

# ಕನ್ನಡ ವಿಶ್ವಕೋಶ

## ಸಂಪುಟ ಮೂರು

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೦

ಕನ್ನಡ ವಿಶ್ವಕೋಶ
ಮೈಸೂರು ಸರ್ಕಾರದ ಉದಾರ ನೆರವಿನಿಂದ ಪ್ರಕಟವಾಗುತ್ತಿದೆ
ಮೈಸೂರು ಸರ್ಕಾರಕ್ಕೆ ನಮ್ಮ ಕೃತಜ್ಞತೆಗಳು

# ಕನ್ನಡ ವಿಶ್ವಕೋಶ

## ಸಂಪುಟ ಮೂರು




ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
೧೯೭೧

KANNADA VISVAKOSA, Vol. III, being the third volume of a 14-volume General Encyclopædia in Kannada, published by the Institute of Kannada Studies, University of Mysore, Mysore. Chief Editor : Dr. H. M. Nayak. First Edition, 1971. Pp. viii + 944 + 13 plates. Printer : Director, Government Press, Bangalore. Colour blocks made by A. K. Viswam, Process Centre, Mysore.





ಈ ಸಂಪುಟದ ಬೆಲೆ ನಲವತ್ತು ರೂಪಾಯಿಗಳು ; ಹದಿನಾಲ್ಕು ಸಂಪುಟಗಳ ಒಟ್ಟು ಬೆಲೆ ಐದುನೂರು ರೂಪಾಯಿಗಳು. ಮುಂಗಡ ಹಣ ನೀಡುವವರಿಗೆ ಮುನ್ನೂರೈವತ್ತು ರೂಪಾಯಿಗಳು. ಇದನ್ನು ನವಂಬರ್ 21, 1972ಕ್ಕೆ ಮೊದಲು ಏಳು ಕಂತುಗಳಲ್ಲಿ ಪಾವತಿ ಮಾಡಬಹುದಾಗಿದೆ.

# ಕನ್ನಡ ವಿಶ್ವಕೋಶ

## ಸಂಪಾದಕ ಮಂಡಲಿ

# ಅರಿಕೆ

ಕನ್ನಡ ವಿಶ್ವಕೋಶದ ಮೂರನೆಯ ಸಂಪುಟವನ್ನು ವಾಚಕರ ಕೈಗೊಪ್ಪಿಸಲು ತುಂಬ ಸಂತೋಷವಾಗುತ್ತದೆ. ಈಗಾಗಲೇ ಪ್ರಕಟವಾಗಿರುವ ಮೊದಲ ಎರಡು ಸಂಪುಟಗಳನ್ನು ಪರಿಶೀಲಿಸಿ ಅನೇಕರು ಅವುಗಳಲ್ಲಿ ಬಿಟ್ಟುಹೋದ ಅಂಶಗಳನ್ನೂ ಉಳಿದುಕೊಂಡ ಅರೆಕೊರೆಗಳನ್ನೂ ನಮ್ಮ ಗಮನಕ್ಕೆ ತಂದಿದ್ದಾರೆ; ಸಂಪುಟಗಳನ್ನು ಉತ್ತಮಪಡಿಸಲು ಅಗತ್ಯವಾದ ಸಲಹೆ ಸೂಚನೆಗಳನ್ನೂ ನೀಡಿದ್ದಾರೆ. ಅವೆಲ್ಲವನ್ನೂ ನಾವು ಕೃತಜ್ಞತೆಯಿಂದ ಸ್ವೀಕರಿಸಿ ಪ್ರಕೃತ ಸಂಪುಟವನ್ನು ಸಾಧ್ಯವಾದಷ್ಟು ಉತ್ತಮಪಡಿಸಲು ಪ್ರಯತ್ನಿಸಿದ್ದೇವೆ. ಇದರ ಫಲವಾಗಿ ಅನೇಕ ಹೊಸ ವಿಷಯಗಳು ಸೇರಿವೆ; ಅನೇಕ ವಿಷಯಗಳು ಮುಖ್ಯವಾಗಿ ತಾಂತ್ರಿಕ ಹಾಗೂ ಭೌಗೋಳಿಕ ವಿಷಯಗಳ ವ್ಯಾಪ್ತಿ ವಿಸ್ತಾರಗೊಂಡಿದೆ; ಬರವಣಿಗೆ ನಿರೂಪಣೆಗಳಲ್ಲಿ ನಿರ್ದಿಷ್ಟತೆ ನಿರ್ದುಷ್ಟತೆಗಳಿಗೆ ಆದ್ಯ ಗಮನ ಕೊಡಲಾಗಿದೆ. ಒಟ್ಟಿನಲ್ಲಿ ಕನ್ನಡ ವಿಶ್ವಕೋಶ ಜಗತ್ತಿನ ಆಧುನಿಕ ವಿಶ್ವಕೋಶಗಳ ಸಾಲಿನಲ್ಲಿ ನಿಲ್ಲಬೇಕೆಂಬ ಮಹದಾಶಯವನ್ನಿಟ್ಟುಕೊಂಡು ನಾವು ಶ್ರಮಿಸಿದ್ದೇವೆ. ಇದನ್ನು ಈಡೇರಿಸುವ ಹೊಣೆ ವಾಚಕರಿಗೂ ಸೇರಿದ್ದು ಎಂಬುದನ್ನು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರ ವಸ್ತುನಿಷ್ಠ ವಿಮರ್ಶೆ ಟೀಕೆಗಳು ಮುಂದಿನ ಸಂಪುಟಗಳನ್ನು ಇನ್ನೂ ಉತ್ತಮಪಡಿಸಲು ನೆರವಾಗುತ್ತವೆ.

ಇಲ್ಲಿನ ಲೇಖನಗಳ ಸಂಗ್ರಹ ಸಂಪಾದನೆ ಮತ್ತು ಪರಿಷ್ಕರಣಗಳ ವಿಷಯದಲ್ಲಿ ಅನುಸರಿಸಿರುವ ವಿಧಾನಗಳನ್ನು ಮೊದಲ ಹಾಗೂ ಎರಡನೆ ಸಂಪುಟಗಳ ಪೀಠಿಕೆಯಲ್ಲಿಯೇ ಸೂಚಿಸಲಾಗಿದೆ. ಅವು ಸಾಮಾನ್ಯವಾಗಿ ವಿಶ್ವಕೋಶದ ಎಲ್ಲ ಸಂಪುಟಗಳಿಗೂ ಅನ್ವಯ ವಾಗುತ್ತವೆ. ಹೊಸದಾಗಿ ಯಾವುದೇ ಮಾರ್ಪಾಡನ್ನು ಸ್ವೀಕರಿಸಿದರೂ ಅದನ್ನು ವಾಚಕರ ಗಮನಕ್ಕೆ ತರಲಾಗುವುದು.

ನಮಗೆ ಅಗತ್ಯವಾದ ಅನೇಕ ಚಿತ್ರಗಳನ್ನು ನಾವು ವಿವಿಧ ಮೂಲಗಳಿಂದ ತೆಗೆದುಕೊಂಡಿದ್ದೇವೆ. ಅದಕ್ಕಾಗಿ ಅನೇಕ ವ್ಯಕ್ತಿಗಳಿಗೆ ಸಂಸ್ಥೆಗಳಿಗೆ ಋಣಿಯಾಗಿದ್ದೇವೆ. ಅದನ್ನು ಆಯಾ ಚಿತ್ರದ ಕೆಳಗೇ ಸೂಚಿಸುವುದು ತಾಂತ್ರಿಕ ಕಾರಣಗಳಿಂದ ಸಾಧ್ಯವಾಗಲಿಲ್ಲ. ಆದರೆ ಸಂಪುಟದ ಕೊನೆಯಲ್ಲಿ ನಮಗೆ ನೆರವಾದ ಎಲ್ಲ ಆಕರಗಳನ್ನೂ ಕೃತಜ್ಞತೆಯಿಂದ ಸ್ಮರಿಸಿದ್ದೇವೆ.

ವಿಶ್ವಕೋಶದ ಮೊದಲನೆಯ ಸಂಪುಟ ಪ್ರಕಟವಾದ ಕೆಲವು ತಿಂಗಳುಗಳಲ್ಲಿಯೇ ಮೈಸೂರು ಸರ್ಕಾರ ತೊಂಬತ್ತು ಲಕ್ಷ ರೂಪಾಯಿಯ ವಿಷಯ ವಿಶ್ವಕೋಶಗಳ (Subject Encyclopædias) ಯೋಜನೆಯೊಂದನ್ನು ಮಂಜೂರು ಮಾಡಿ. ಅದರ ನಿರ್ವಹಣೆಯನ್ನು ಸಹ ಕನ್ನಡ ಅಧ್ಯಯನ ಸಂಸ್ಥೆಗೇ ಒಪ್ಪಿಸಿಕೊಟ್ಟಿದೆಯೆಂಬುದನ್ನು ನಮ್ಮ ವಾಚಕರ ಗಮನಕ್ಕೆ ತರಲು ತುಂಬ ಹರ್ಷವಾಗುತ್ತದೆ. ಸುಮಾರು ಹದಿನೈದು ವರ್ಷಗಳ ಅವಧಿಯಲ್ಲಿ ಮೂವತ್ತು ಸಂಪುಟಗಳಲ್ಲಿ (ವಿಜ್ಞಾನ 16 ; ಮಾನವಿಕಗಳು ಹಾಗೂ ಸಮಾಜವಿಜ್ಞಾನ 14) ವಿಷಯ ವಿಶ್ವಕೋಶಗಳನ್ನು ಪ್ರಕಟಿಸಲು ಯೋಜಿಸಲಾಗಿದೆ. ಈ ಯೋಜನೆಯ ಮೊದಲ ಹಂತವಾಗಿ ಪ್ರಾಣಿವಿಜ್ಞಾನ, ಭೂವಿಜ್ಞಾನ, ಗಣಿತಶಾಸ್ತ್ರ, ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ಹಾಗೂ ಕರ್ಣಾಟಕ — ಈ ವಿಷಯ ಗಳನ್ನು ಕುರಿತ ಸಂಪುಟಗಳ ರಚನೆಯನ್ನು ಈಗ ಎತ್ತಿಕೊಳ್ಳಲಾಗಿದೆ. ಈ ಮಾಲೆಯ ಮೊದಲ ಸಂಪುಟವನ್ನು 1972ರ ಆದಿಭಾಗದಲ್ಲಿ ಪ್ರಕಟಿಸಲು ಉದ್ದೇಶಿಸಲಾಗಿದೆ. ಸಾಮಾನ್ಯವಾಗಿ ವಿಶ್ವಕೋಶದ ಜೊತೆಯಲ್ಲಿಯೇ ವಿಷಯ ವಿಶ್ವಕೋಶಗಳೂ ಸಿದ್ಧಗೊಳ್ಳುತ್ತವೆ. ಆದರೆ ಅವು ವಿಷಯದ ಆಯ್ಕೆ, ನಿರೂಪಣೆ, ತಾಂತ್ರಿಕತೆಗಳ ದೃಷ್ಟಿಯಿಂದ ಸಾಮಾನ್ಯ ವಿಶ್ವಕೋಶದ ಸಂಪುಟಗಳಿಗಿಂತ ತೀರ ಭಿನ್ನ ವಾಗಿರುತ್ತವೆ. ಸಾಮಾನ್ಯ ವಿಶ್ವಕೋಶ ಎಲ್ಲ ವರ್ಗದ ಎಲ್ಲ ಆಸಕ್ತಿಯ ವಾಚಕರನ್ನೂ ಗಮನದಲ್ಲಿಟ್ಟುಕೊಂಡರೆ, ವಿಷಯ ವಿಶ್ವ ಕೋಶಗಳು ಆಯಾ ವಿಷಯಗಳಲ್ಲಿ ಆಸಕ್ತರಾದವರನ್ನು ಪರಿಣತರಾದವರನ್ನು ಮಾತ್ರ ಗಮನದಲ್ಲಿಟ್ಟುಕೊಳ್ಳುತ್ತವೆ. ಎರಡೂ ವಿಶ್ವಕೋಶಗಳ ನಡುವಿನ ಮುಖ್ಯ ಅಂತರ ಇದು. ಕನ್ನಡದ ಅಭಿವೃದ್ಧಿಯಲ್ಲಿ, ಕನ್ನಡನಾಡಿನ ಶಿಕ್ಷಣದ ಸಫಲತೆಯಲ್ಲಿ ಆಸಕ್ತ ರಾದ ಎಲ್ಲರೂ ಈ ಯೋಜನೆಯನ್ನು ಮೆಚ್ಚಿ ಸ್ವಾಗತಿಸುತ್ತಾರೆಂಬುದರಲ್ಲಿ ಸಂದೇಹವಿಲ್ಲ.

ಇಂಥದೊಂದು ಮಹಾಯೋಜನೆಗೆ ಕಾರಣವಾದ ರಾಜ್ಯದ ಹಿಂದಿನ ಮಂತ್ರಿಮಂಡಲಕ್ಕೆ, ಮುಖ್ಯವಾಗಿ ಅಂದಿನ ಮುಖ್ಯ ಮಂತ್ರಿ ಶ್ರೀ ವೀರೇಂದ್ರ ಪಾಟೀಲ, ಶಿಕ್ಷಣ ಸಚಿವ ಶ್ರೀ ಕೆ.ವಿ. ಶಂಕರಗೌಡ ಮತ್ತು ಅರ್ಥಸಚಿವ ಶ್ರೀ ರಾಮಕೃಷ್ಣ ಹೆಗಡೆ ಅವರಿಗೆ ಕನ್ನಡಿಗರು ಚಿರ ಕೃತಜ್ಞರಾಗಿರಬೇಕು. ಕನ್ನಡದ ಅಭಿವೃದ್ಧಿಕಾರ್ಯ ಇದೇ ಬಗೆಯಾಗಿ ಮುಂದುವರಿಯಲೆಂಬುದೇ ನಮ್ಮೆಲ್ಲರ ಹಾರೈಕೆಯಾಗಿದೆ.

ಈ ಸಂಪುಟದ ಮುದ್ರಣಕಾರ್ಯವನ್ನು ಶೀಘ್ರವಾಗಿ ಸುಂದರವಾಗಿ ಮುಗಿಸಿಕೊಡುವಲ್ಲಿ ಸರ್ಕಾರಿ ಮುದ್ರಣಾಲಯದ ಹೊಸ ನಿರ್ದೇಶಕರಾಗಿ ಬಂದಿರುವ ಶ್ರೀ ಬಿ. ಪಿ. ಮಲ್ಲರಾಜೇ ಅರಸ್ ಅವರು ನಮಗೆ ವಿಶೇಷವಾದ ಸಹಕಾರ ನೀಡಿದ್ದಾರೆ. ನಾವು ಕೊಟ್ಟ ತೊಂದರೆಗಳನ್ನೆಲ್ಲ ಸಹಿಸಿಕೊಂಡು ನಮಗೆ ಬೇಕಾದ ಎಲ್ಲ ಅನುಕೂಲತೆಗಳನ್ನೂ ಕಲ್ಪಿಸಿಕೊಟ್ಟಿದ್ದಾರೆ. ಸ್ನೇಹಶೀಲರೂ ಉತ್ಸಾಹಿಗಳೂ ಕಾರ್ಯನಿಷ್ಠರೂ ದಕ್ಷರೂ ಆದ ಅವರ ನೆರವನ್ನು ನಾನು ಸಂತೋಷದಿಂದಲೂ ಕೃತಜ್ಞತೆಯಿಂದಲೂ ಸ್ಮರಿಸುತ್ತೇನೆ. ವಿಶ್ವಕೋಶದ ಮುದ್ರಣಕ್ಕೆ ಶ್ರೀ ಅರಸ್‌ರವರಂಥ ಅನುಭವಿಗಳ ಮಾರ್ಗದರ್ಶನವಿರುವುದು ಹೆಮ್ಮೆಯ ಸಂಗತಿ. ಹಿರಿಯ ಉಪನಿರ್ದೇಶಕ ಶ್ರೀ ಡಿ. ನರಸಿಂಹಯ್ಯ ಅವರೂ ಸಹನಿರ್ದೇಶಕ ಶ್ರೀ ಆರ್. ನಾರಾಯಣ ಅವರೂ ಮುದ್ರಣಾಲಯದ ಕೆಲಸಗಾರರೂ ಎಂದಿನಂತೆ ಈ ಕೆಲಸದಲ್ಲಿ ಒಂದೇ ಸಮನಾದ ತಮ್ಮ ಪ್ರೀತಿ ಶ್ರದ್ಧೆಗಳನ್ನು ತೋರಿಸಿದ್ದಾರೆ; ಶ್ರಮವಹಿಸಿ ದುಡಿದಿದ್ದಾರೆ, ಅವರಿಗೆ ನನ್ನ ಹೃತ್ಪೂರ್ವಕ ವಂದನೆಗಳು ಸಲ್ಲುತ್ತವೆ.

ಈಗ ಸರ್ಕಾರಿ ಮುದ್ರಣಾಲಯಕ್ಕೆ ವಿಶ್ವಕೋಶ ವಿಭಾಗದ ವಿಶೇಷಾಧಿಕಾರಿಗಳಾಗಿರುವ ಶ್ರೀ ಎಂ. ಎ. ಶ್ರೀರಾಮು ಅವರ ಹೆಚ್ಚಿನ ನೆರವೂ ನಮಗೆ ಲಭಿಸಿರುವುದು ತುಂಬ ಹರ್ಷವನ್ನುಂಟುಮಾಡಿದೆ. ವಿಶ್ವಕೋಶದ ಮೊದಲ ಎರಡು ಸಂಪುಟಗಳನ್ನು ಸುಂದರವಾಗಿ ಮುದ್ರಿಸಲು ಕಾರಣರಾದವರು ಅವರು. ಅವರ ಅನುಭವವನ್ನು ಬಳಸಿಕೊಳ್ಳಲು ನಮಗೆ ಸಾಧ್ಯವಾದದ್ದು ಅತ್ಯಂತ ಸಮಾಧಾನದ ವಿಚಾರ.

ಇದೇ ಸಂದರ್ಭದಲ್ಲಿ ಕನ್ನಡ ವಿಶ್ವಕೋಶ ಕಛೇರಿಯ ಹಾಗೂ ಸಂಪಾದಕ ಮಂಡಳಿಯ ಸಹೋದ್ಯೋಗಿಗಳಿಗೆಲ್ಲ ಅವರ ಸತತ ದುಡಿಮೆ ಸಹಕಾರಗಳಿಗಾಗಿ ಕೃತಜ್ಞತೆಗಳನ್ನು ಸೂಚಿಸುತ್ತೇನೆ.

ವಿಶ್ವಕೋಶದ ಮುಂದಿನ ಸಂಪುಟವನ್ನು ಇನ್ನೂ ಉತ್ತಮಪಡಿಸಲು ನೆರವಾಗಬೇಕೆಂದು ನಾನು ವಾಚಕರಲ್ಲಿ ಪ್ರಾರ್ಥಿಸಿಕೊಳ್ಳುತ್ತೇನೆ. ಅವರ ವಿಮರ್ಶೆ ಸಲಹೆಗಳಿಗೆ ಯಾವಾಗಲೂ ನಮ್ಮ ಸ್ವಾಗತವಿದೆ. ಮೊದಲ ಸಂಪುಟದ ಪೀಠಿಕೆಯಲ್ಲಿ ಆಗ ಪ್ರಧಾನ ಸಂಪಾದಕರಾಗಿದ್ದ ಪ್ರೊ. ದೇಜಗೌ ಅವರು ಬರೆದ ಒಂದೆರಡು ಮಾತುಗಳನ್ನು ಇಲ್ಲಿ ಇನ್ನೊಮ್ಮೆ ಉಲ್ಲೇಖಿಸಿದರೆ ತಪ್ಪಲ್ಲವೆಂದು ಭಾವಿಸಿದ್ದೇನೆ :

"ವಿಶ್ವಕೋಶದಲ್ಲಿ ಯಾವ ಅರಕೆ ಕೊರತೆಗಳೂ ಇಲ್ಲವೆಂದು ನಾನು ಹೇಳುತ್ತಿಲ್ಲ. ಮಾನವೀಯ ದೌರ್ಬಲ್ಯಗಳ ಫಲವಾಗಿ ಅಲ್ಲಲ್ಲಿ ದೋಷಗಳು ನುಸುಳಿರಬಹುದು, ಉಳಿದಿರಬಹುದು. ಆದರೆ ಪ್ರಜ್ಞಾಪೂರ್ವಕವಾಗಿ ಅಂಥವುಗಳಿಗೆ ಎಡೆಗೊಟ್ಟಿಲ್ಲವೆಂದು ಹೇಳಬಯಸುತ್ತೇನೆ...ಇಂಥ ಕೋಶದ ಕೆಲಸ ಒಂದು ಸಂಪುಟಕ್ಕೆ ಒಂದು ಮುದ್ರಣಕ್ಕೆ ಮುಗಿಯುವಂಥದೇ ಅಲ್ಲ. ಇದು ಅವಿಚ್ಛಿನ್ನವಾಗಿ ನಡೆಯಬೇಕಾದ ಶಾಶ್ವತ ಕಾರ್ಯ. ಮತ್ತೆ ಮತ್ತೆ ಅವುಗಳನ್ನು ಪರಿಷ್ಕರಿಸಬೇಕಾಗುತ್ತದೆ."

ಪರಿಪೂರ್ಣತೆ ಎನ್ನುವುದು ಬಹುಶಃ ಸಾಧಿಸಲಾಗದ ಆದರ್ಶ. ಅದರ ಕಡೆ ಕೇವಲ ಮಾರ್ಗಕ್ರಮಣ ಮಾಡಬಹುದು; ಅದಕ್ಕೆ ಕೊನೆ ಎಂಬುದಿಲ್ಲ.

ಕನ್ನಡ ಅಧ್ಯಯನ ಸಂಸ್ಥೆ
ಮೈಸೂರು ವಿಶ್ವವಿದ್ಯಾನಿಲಯ
ಮೇ ೧, ೧೯೭೧

ಹಾ. ಮಾ. ನಾಯಕ
ಪ್ರಧಾನ ಸಂಪಾದಕ

# ಮೈಸೂರು ವಿಶ್ವವಿದ್ಯಾನಿಲಯ




# ಕನ್ನಡ ವಿಶ್ವಕೋಶ

## ಸಂಪುಟ ಮೂರು

**ಎರಟೋ:** ಪ್ರಾಚೀನ ಗ್ರೀಕ್ ಪುರಾಣಗಳ ಪ್ರಕಾರ ಒಂಬತ್ತು ಸಾರಸ್ವತ ಕಲಾಭಿಮಾನಿ ದೇವತೆಗಳಲ್ಲೊಬ್ಬಳು. ಈ ದೇವತೆಗಳ ಮೂಲ ಖಚಿತವಾಗಿ ತಿಳಿಯದು. ಆದರೂ ಇವರು ಅತ್ಯಂತ ಪ್ರಾಚೀನರು. ಗ್ರೀಸಿನ ಬೋಯೀಷಿಯದಲ್ಲಿನ ಹೆಲಿಕಾನ್ ಪರ್ವತ ಈ ದೇವತೆಗಳ ಆರಾಧನೆ ಪ್ರಾರಂಭವಾದ ಸ್ಥಳ. ಗಾಯಕರೂ ಕವಿಗಳೂ ಆಗಿದ್ದವರ ಪೋಷಕ ದೇವತೆಗಳೆಂದು ಇವರು ಪ್ರಸಿದ್ಧರಾಗಿದ್ದಾರೆ. ಬರಬರುತ್ತ ಇವರ ಪೋಷಕ ಹಸ್ತ ಇತರ ಕಲೆಗಳನ್ನೂ ವಿಜ್ಞಾನವನ್ನೂ ಬಳಸಿದಂತೆ ಕಾಣುತ್ತದೆ. ಹೋಮರನ ಒಡಿಸ್ಸಿಯ ಕಾಲಕ್ಕಾಗಲೇ ಒಂಬತ್ತು ಕಲಾಭಿಮಾನಿ ದೇವತೆಗಳ ಉಲ್ಲೇಖ ಕಂಡುಬರುತ್ತದೆ. ಇವರೆಲ್ಲರೂ ಜ್ಯೂಸ್ ದೇವನ ಪುತ್ರಿಯರು. ಇವರಲ್ಲಿ ಆರನೆಯವಳೇ ಎರಟೋ. ಈಕೆ ಸೌಂದರ್ಯಾಧಿದೇವತೆ, ಶೃಂಗಾರ ಕಾವ್ಯಕ್ಕೆ ಮಾತೃಪ್ರಾಯಳು. *

**ಎರಡನೆಯ ಮಹಾಯುದ್ಧ:** 1939–1945. ಎಲ್ಲ ಅಂತರರಾಷ್ಟ್ರೀಯ ವ್ಯಾಜ್ಯಗಳನ್ನೂ ಶಾಂತಿಯುತ ಮಾರ್ಗದಿಂದಲೇ ಪರಿಹರಿಸಿಕೊಳ್ಳಬೇಕೆಂದು ಒಂದನೆಯ ಮಹಾಯುದ್ಧಾನಂತರದಲ್ಲಿ ಆಗಿದ್ದ ವರ್ಸೇಲ್ಸ್ ಕೌಲಿನ ಆಶಯವನ್ನು ಉಲ್ಲಂಘಿಸಿ ಬಲಪ್ರಯೋಗದಿಂದ ರಾಜ್ಯ ವಿಸ್ತರಣೆಯ ಕಾರ್ಯದಲ್ಲಿ ತೊಡಗಿದ್ದ ಜರ್ಮನಿ ಇಟಲಿ ಜಪಾನುಗಳನ್ನೆದುರಿಸಿ ಬ್ರಿಟನ್ ಫ್ರಾನ್ಸ್ ಸೋವಿಯತ್ ಒಕ್ಕೂಟ ಅಮೆರಿಕ ಸಂಯುಕ್ತಸಂಸ್ಥಾನಗಳೇ ಮುಂತಾದ ರಾಷ್ಟ್ರಗಳು ನಡೆಸಿದ ಯುದ್ಧ. ಸುಮಾರು ಆರು ವರ್ಷ ಕಾಲ ನಡೆದ ಈ ಯುದ್ಧ ವಿಶ್ವವ್ಯಾಪಿಯಾಗಿ ಪರಿಣಮಿಸಿ ಅಗಾಧ ಸಾವು ನೋವು ಕಷ್ಟ ನಷ್ಟಗಳಲ್ಲಿ ಪರ್ಯವಸಾನವಾಯಿತಲ್ಲದೆ ವಿಶ್ವದ ಆರ್ಥಿಕ ರಾಜಕೀಯ ಸಾಮಾಜಿಕ ವೈಜ್ಞಾನಿಕ ಕ್ಷೇತ್ರಗಳಲ್ಲಿ ಅಗಾಧ ಪರಿವರ್ತನೆಗಳಿಗೂ ಕಾರಣವಾಯಿತೆನ್ನಬಹುದು.

ಈ ಲೇಖನವನ್ನು ಸ್ಥೂಲವಾಗಿ ಈ ರೀತಿ ವಿಂಗಡಿಸಲಾಗಿದೆ: 1 ಉಗಮ, 2 ಯೂರೋಪ್, ಆಫ್ರಿಕ ಮತ್ತು ಪಶ್ಚಿಮ ಏಷ್ಯಗಳಲ್ಲಿ ಯುದ್ಧ, 3 ಚೀನ–ಜಪಾನ್ ಯುದ್ಧ, 4 ಅಟ್ಲಾಂಟಿಕ್ ಸಾಗರ ಮತ್ತು ಐರೋಪ್ಯ ಸಮುದ್ರಗಳ ಮೇಲಿನ ಯುದ್ಧ, 5 ಪೆಸಿಫಿಕ್ ಯುದ್ಧ, 6 ಶಾಂತಿಸ್ಥಾಪನೆ, ಯುದ್ಧದ ಪರಿಣಾಮ, ಯುದ್ಧವೆಚ್ಚ ಇತ್ಯಾದಿ.

ಲೇಖನದ ಕೊನೆಯಲ್ಲಿ ಎರಡನೆಯ ಮಹಾಯುದ್ಧದ ಮುಖ್ಯ ಘಟನೆಗಳ ಪಟ್ಟಿಯೊಂದನ್ನು ಕೊಡಲಾಗಿದೆ.

**ಉಗಮ:** ಎರಡನೆಯ ಮಹಾಯುದ್ಧದ ಕಾರಣಗಳನ್ನು ತಿಳಿಯಬೇಕಾದರೆ 1918ರ ವರ್ಸೇಲ್ಸ್ ಕೌಲಿನ ಅನಂತರದ ಪರಿಸ್ಥಿತಿಯನ್ನು ವಿವೇಚಿಸಬೇಕಾಗುತ್ತದೆ. ವರ್ಸೇಲ್ಸ್ ಕೌಲಿನ ನಿಬಂಧನೆಗಳು, ಅದರ ಮಹತ್ತ್ವ, ನ್ಯೂನತೆ, ಒಂದನೆಯ ಮಹಾಯುದ್ಧದ ವಿಜಯೀರಾಷ್ಟ್ರಗಳು ಸೋತ ಜರ್ಮನಿಯ ಬಗ್ಗೆ ತಳೆದ ಧೋರಣೆ, ಅವು ತಮ್ಮ ಹಿತಾಸಕ್ತಿಗಳನ್ನು ರಕ್ಷಿಸಿಕೊಂಡ ರೀತಿ, ನೂತನ ಯೂರೋಪಿನ ನಿರ್ಮಾಣ, ಪ್ರಪಂಚದಲ್ಲಿ ಶಾಂತಿಸ್ಥಾಪನೆಯ ಪ್ರಯತ್ನ ವಿಫಲವಾದ ಬಗೆ, ಮತ್ತು ಹಿಟ್ಲರನ ಆಕ್ರಮಣಕ್ಕೆ ಅನುವಾಗಿ ಒದಗಿಬಂದ ಅವಕಾಶ—ಇವೆಲ್ಲವನ್ನೂ ಪರಿಶೀಲಿಸುವುದು ಅಗತ್ಯ.

ಎರಡನೆಯ ಮಹಾಯುದ್ಧಕ್ಕೆ ಮುಂಚಿನ ವಿಶ್ವದ ಇತಿಹಾಸದಲ್ಲಿ ಒಂದನೆಯ ಮಹಾಯುದ್ಧವೇ (1914–18) ಅತ್ಯಂತ ಭೀಕರವಾದ ಯುದ್ಧವೆನಿಸಿತ್ತು. ಅದರಲ್ಲಿ ಉಂಟಾದ ಅಪಾರ ಸಾವುನೋವುಗಳನ್ನು ಮನಗಂಡ ರಾಷ್ಟ್ರಗಳು ಯುದ್ಧವನ್ನು ಕೊನೆಗಾಣಿಸಿ, ಜಗತ್ತಿನಲ್ಲಿ ಸ್ಥಿರವಾದ ಶಾಂತಿ ಸ್ಥಾಪಿಸಲು ಉದ್ಯುಕ್ತವಾಗಿದ್ದುವು. ಯೂರೋಪಿನ ನಾಯಕರೂ ರಾಜಕಾರಣಿಗಳೂ ದಾರ್ಶನಿಕರೂ ಕಲೆತು ಸುಭದ್ರತೆ ಶಾಂತಿಗಳ ತಳಹದಿಯ ಮೇಲೆ ನೂತನಸಮಾಜವನ್ನು ರೂಪಿಸಲು ಪ್ರಯತ್ನಪಟ್ಟರು. ಈ ಕಾರ್ಯದಲ್ಲಿ ವಿಶ್ವದ ಎಲ್ಲ ರಾಷ್ಟ್ರಗಳೂ ಮಗ್ನವಾಗಿದ್ದುವು. ಆದರೆ ಈ ಧ್ಯೇಯಸಾಧನೆಯಲ್ಲಿ ಏಕಮುಖತೆ ಕಂಡುಬರಲಿಲ್ಲ. ಯೂರೋಪಿನ ರಾಷ್ಟ್ರಗಳ ನಾಯಕರು ಸಂಕುಚಿತ ಮನೋಭಾವ ತಳೆದು ತಂತಮ್ಮ ದೇಶಗಳ ಹಿತಗಳನ್ನೇ ಪ್ರಧಾನ ಮಾಡಿಕೊಂಡು ಅವುಗಳ ಪ್ರತಿಷ್ಠೆಗಳನ್ನು ಹೆಚ್ಚಿಸುವ ಯೋಜನೆಗಳಲ್ಲಿ ವಿಶೇಷ ಆಸಕ್ತಿ ವಹಿಸಿದ್ದರೇ ವಿನಾ ಸುಭದ್ರ ಶಾಂತಿಯುತ ಸಮಾಜದ ರಚನೆಯಲ್ಲಿ ಯಾವಬಗೆಯ ಆಸಕ್ತಿಯನ್ನಾಗಲಿ ಉತ್ಸಾಹವನ್ನಾಗಲಿ ತೋರಿಸಲಿಲ್ಲ. ಈ ಸಂಕುಚಿತ ಮನೋಭಾವದ ಪ್ರದರ್ಶನದಿಂದಲೇ ಆ ನಾಯಕರು ಕೈಗೊಂಡ ಯೋಜನೆಗಳಾವುವೂ ಫಲಕಾರಿಯಾಗದೆ ಎರಡನೆಯ ಮಹಾಯುದ್ಧ ಅನಿವಾರ್ಯವಾಯಿತು.

ಒಂದನೆಯ ಮಹಾಯುದ್ಧಾನಂತರ ನಾನಾ ಸಮಸ್ಯೆಗಳು ತಲೆದೋರಿದುವು. ವಿಶ್ವಶಾಂತಿಸ್ಥಾಪನೆ ಮತ್ತು ಸುಭದ್ರ ಸಮಾಜ ನಿರ್ಮಾಣದ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿ ಆಗ ಉದ್ಭವಿಸಿದ ಈ ಸಮಸ್ಯೆಗಳು ಅಡಚಣೆಯನ್ನುಂಟುಮಾಡಿದುವು. ಈ ರಾಷ್ಟ್ರಗಳು ತಮ್ಮ ಪರಸ್ಪರ ಸಂಬಂಧದ ವಿಚಾರ

ದಲ್ಲಿ ಹಳೆಯ ವಿಧಾನಗಳನ್ನೇ ಮುಂದುವರಿಸಿಕೊಂಡು ಬಂದುವೇ ಹೊರತು, ಅವುಗಳ ಬದಲು ಹೊಸ ರೀತಿ ನೀತಿಗಳನ್ನು ರೂಪಿಸುವ ಗೋಜಿಗೇ ಹೋಗಲಿಲ್ಲ. ಮುಖ್ಯವಾಗಿ ರಾಷ್ಟ್ರಗಳ ವೈಯಕ್ತಿಕ ಭದ್ರತೆಯ ಪರಿಕಲ್ಪನೆಗೂ ಒಂದನೆಯ ಮಹಾಯುದ್ಧಾನಂತರ ಅಮೆರಿಕಾಧ್ಯಕ್ಷ ವಿಲ್ಸನರು ಪ್ರತಿಪಾದಿಸಿದ ಸಾಮೂಹಿಕ ಭದ್ರತೆಯ



ಯಾಲ್ಟದಲ್ಲಿ ಬೃಹತ್ ತ್ರಿಮೂರ್ತಿ: ಚರ್ಚಿಲ್, ರೂಸ್ವೆಲ್ಟ್, ಸ್ಟಾಲಿನ್

ಪರಿಕಲ್ಪನೆಗೂ ಈ ಎರಡು ಸಿದ್ಧಾಂತಗಳ ತಿಕ್ಕಾಟವೇ ಈ ಸಮಸ್ಯೆಯ ಮೂಲ. ಒಂದನೆಯ ಮತ್ತು ಎರಡನೆಯ ಮಹಾಯುದ್ಧಗಳ ನಡುವಣ ಕಾಲದಲ್ಲಿ ಈ ಎರಡು ತತ್ತ್ವಗಳ ಘರ್ಷಣೆಯ ಪರಿಣಾಮವಾಗಿ ಯೂರೋಪಿನ ರಾಷ್ಟ್ರಗಳು ಆಕ್ರಮಣಕಾರಿ ಧೋರಣೆಯನ್ನು ಮುಂದುವರಿಸಿ ತಾವೇ ಸ್ಥಾಪಿಸಿದ ರಾಷ್ಟ್ರಕೂಟವನ್ನು (ಲೀಗ್ ಆಫ್ ನೇಷನ್ಸ್) ಧಿಕ್ಕರಿಸಿದುವು. ಇಂಥ ಪರಿಸ್ಥಿತಿಯಲ್ಲಿ ಪಾಶ್ಚಾತ್ಯ ಪ್ರಜಾಪ್ರಭುತ್ವ ರಾಷ್ಟ್ರಗಳು ಆಕ್ರಮಣಕಾರಿ ರಾಷ್ಟ್ರಗಳನ್ನು ಎದುರಿಸಲು ವಿಫಲವಾದುವು. ವರ್ಸೇಲ್ಸ್ ಕರಾರಿನ ಪ್ರಕಾರ ಹುಟ್ಟಿಕೊಂಡಿದ್ದ ಅನೇಕ ಸಣ್ಣ ರಾಷ್ಟ್ರಗಳು, ಅವುಗಳಿಂದ ಉದ್ಭವಿಸಿದ ಗಡಿ ಸಮಸ್ಯೆಗಳು, ವಿಜಯೀರಾಷ್ಟ್ರಗಳೇ ಕೌಲಿನ ಪ್ರಣಾಳಿಕೆಯನ್ನು ಪಾಲಿಸದಿದ್ದದ್ದು—ಇವೇ ಜರ್ಮನಿ ಮತ್ತೆ ತಲೆ ಎತ್ತಿ ಪ್ರಬಲವಾಗಲು ಅವಕಾಶ ಮಾಡಿಕೊಟ್ಟಂತಾಯಿತು. ಅಲ್ಲದೆ ಆ ರಾಷ್ಟ್ರದ ನಾಯಕರು ಆಗಿನ ಯೂರೋಪಿನ ಪರಿಸ್ಥಿತಿಯನ್ನು ತಮಗೆ ಬೇಕಾದ ರೀತಿಯಲ್ಲಿ ಅಳವಡಿಸಿಕೊಳ್ಳಲು ಸಾಧ್ಯವಾಯಿತು.

ಇಂಥ ಸನ್ನಿವೇಶವನ್ನುಂಟುಮಾಡಲು ರಷ್ಯ ಮತ್ತು ಮಿತ್ರ ರಾಷ್ಟ್ರಗಳು ಸಾಮೂಹಿಕ ಭದ್ರತೆಯ ವಿಷಯದಲ್ಲಿ ತೋರಿದ ಉದಾಸೀನ ಮನೋಭಾವ, ಅನಾದರಣೆ ಮತ್ತು ಅನಿಶ್ಚಿತತೆಗಳೇ ಕಾರಣವೆನ್ನಬಹುದು. ಯುದ್ಧ ಸನ್ನಿಹಿತವಾದಾಗ, ಪರಿಸ್ಥಿತಿ ಉಲ್ಬಣವಾದಾಗ ಮಾತ್ರವೇ ಆ ರಾಷ್ಟ್ರಗಳು ಒಂದಾಗಲು, ಒಗ್ಗಟ್ಟಿನಿಂದ ಕ್ರಮ ಕೈಗೊಳ್ಳಲು ಪ್ರಯತ್ನಿಸಿದುವು.

ವರ್ಸೇಲ್ಸ್ ಕೌಲಿನಲ್ಲಿ ಆಕ್ರಮಣಕಾರರಿಗೆ ಉತ್ತೇಜನಕಾರಿಯಾದ ಅಂಶಗಳಿದ್ದುವೇ ಎಂಬುದನ್ನು ಈ ಸಂದರ್ಭದಲ್ಲಿ ವಿವೇಚಿಸಬೇಕಾಗಿದೆ. ವರ್ಸೇಲ್ಸ್ ಒಪ್ಪಂದವನ್ನು ರೂಪಿಸಿದ ವಿಜಯೀ ರಾಷ್ಟ್ರಗಳ ನಾಯಕರು ತಮ್ಮ ತಮ್ಮ ರಾಷ್ಟ್ರಗಳ ಸ್ಥಾನಮಾನ, ಪ್ರತಿಷ್ಠೆಗಳನ್ನು ಹೆಚ್ಚಿಸಿಕೊಳ್ಳುವುದರಲ್ಲಿ ಮಗ್ನರಾಗಿ, ಸೋತ ಜರ್ಮನಿಯ ವಿಚಾರದಲ್ಲಿ ಕಠಿಣ ರೀತಿಯಲ್ಲಿ ವರ್ತಿಸಿದ್ದರಿಂದ ಎರಡನೆಯ ಮಹಾಯುದ್ಧದ ಬೀಜವನ್ನು ಅದರಲ್ಲೇ ಬಿತ್ತಿದಂತಾಯಿತೆಂದು ಹೇಳುವವರುಂಟು. ಆದರೆ ಆ ಒಪ್ಪಂದವನ್ನು ಕೂಲಂಕಷವಾಗಿ ವಿಮರ್ಶಿಸಿದರೆ, ವರ್ಸೇಲ್ಸ್ ಕರಾರು ಎರಡನೆಯ ಮಹಾಯುದ್ಧಕ್ಕೆ ನಾಂದಿಯಾಯಿತೆಂದು ಹೇಳುವುದು ಸತ್ಯಕ್ಕೆ ದೂರ ಎಂದು ಹೇಳಬಹುದಾಗಿದೆ. ಬಲಿಷ್ಠ ರಾಷ್ಟ್ರಗಳ ಮಹತ್ವಾಕಾಂಕ್ಷೆ, ತಮ್ಮನ್ನು ತಾವು ಕಾಯ್ದುಕೊಳ್ಳಲಾರದ ಸಣ್ಣ ರಾಷ್ಟ್ರಗಳಿಗೆ ಸಾಮೂಹಿಕ ಬೆಂಬಲದ ಅಭಾವ—ಇವೆಲ್ಲವೂ ಪರಿಸ್ಥಿತಿ ಹದಗೆಡಲು ಕಾರಣ.

ಒಂದನೆಯ ಮಹಾಯುದ್ಧದಲ್ಲಿ ಹೆಚ್ಚಿನ ಹಾನಿ ಹೊಂದಿದ ದೇಶವೆಂದರೆ ಫ್ರಾನ್ಸ್. ಆ ರಾಷ್ಟ್ರ ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡು, ಜರ್ಮನಿಯನ್ನೂ ಬಲಹೀನವನ್ನಾಗಿ ಮಾಡಿ, ಅದು ಯೂರೋಪಿನಲ್ಲಿ ಪುನಃ ಪ್ರಬಲವಾಗದಂತೆ ನೋಡಿಕೊಳ್ಳುವ ಉದ್ದೇಶ ಹೊಂದಿತ್ತು. ಆ ಉದ್ದೇಶದ ಪೂರೈಕೆಗೆ ಬ್ರಿಟನ್ನೂ ಸಹಕರಿಸಲು ಸಿದ್ಧವಿತ್ತು. ಆದರೆ ಜರ್ಮನಿಯ ಬಗ್ಗೆ ಅದು ಉದಾರಭಾವ ತಳೆದಿತ್ತು. ಹೀಗಾಗಿ ಅಮೆರಿಕ ಮತ್ತು ಬ್ರಿಟನ್ನುಗಳಿಂದ ತನ್ನ ಭದ್ರತೆಯ ಬಗ್ಗೆ ಭರವಸೆಗಳು ಬಂದ ಅನಂತರವೇ ಫ್ರಾನ್ಸ್ ಜರ್ಮನಿಯನ್ನು ನಿರ್ಮೂಲಗೊಳಿಸುವ ಪ್ರಯತ್ನವನ್ನು ಕೈ ಬಿಟ್ಟಿತು. ಆದರೆ ಆ ರಾಷ್ಟ್ರಗಳು ತಾವು ಕೊಟ್ಟ ಮಾತಿನಂತೆ ನಡೆದುಕೊಳ್ಳದಿದ್ದಾಗ ಫ್ರಾನ್ಸಿಗೆ ರಾಷ್ಟ್ರಕೂಟದಲ್ಲಿದ್ದ ನಂಬಿಕೆಯೂ ವಿಶ್ವಾಸವೂ ಮಾಸಿಹೋದುವು. ಫ್ರಾನ್ಸಿಗೆ ಸೈನಿಕ ರಕ್ಷಣೆ ದೊರೆಯದಿದ್ದಾಗ, ಮಿಲಿಟರಿ ಒಪ್ಪಂದಕ್ಕೆ ಸಂಯುಕ್ತ ಸಂಸ್ಥಾನ ನಕಾರ ಸೂಚಿಸಿದಾಗ, ವರ್ಸೇಲ್ಸ್ ಕೌಲಿನ ತಳಹದಿಯೇ ಕುಸಿಯಿತೆನ್ನಬಹುದು. ಅಮೆರಿಕದ ಸೆನೇಟ್ ಸಭೆ ವರ್ಸೇಲ್ಸ್ ಕೌಲನ್ನು ಅಂಗೀಕರಿಸದಿದ್ದದ್ದು ಮತ್ತೊಂದು ಪೆಟ್ಟಾಯಿತು. ಕೊನೆಗೆ ಯೂರೋಪಿನಲ್ಲಿ ಶಾಂತಿ ಕಾಪಾಡಿಕೊಂಡು ಬರಲು ಒಂದು ಅಂತರರಾಷ್ಟ್ರೀಯ ಸೇನೆಯನ್ನು ರೂಪಿಸಬೇಕೆಂಬ ಫ್ರಾನ್ಸಿನ ಸೂಚನೆಗೂ ಆ ರಾಷ್ಟ್ರಗಳ ಒಪ್ಪಿಗೆ ದೊರೆಯಲಿಲ್ಲ. ಆದ್ದರಿಂದ ವರ್ಸೇಲ್ಸ್ ಒಪ್ಪಂದದ ವಿಚಾರದಲ್ಲಿ ಫ್ರಾನ್ಸ್ ಹೆಚ್ಚಿನ ಆಸಕ್ತಿ ತೋರಿಸಲಿಲ್ಲ. ಹೆಚ್ಚಿನ ನಷ್ಟ ಹೊಂದದ ಬ್ರಿಟನ್ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನಗಳು ಶಾಂತಿ ಸ್ಥಾಪಿಸುವ ವಿಷಯದಲ್ಲಿ ಮತ್ತು ಅದನ್ನು ಕಾರ್ಯರೂಪಕ್ಕೆ ತರುವ ಅಂತರರಾಷ್ಟ್ರೀಯ ಸಂಸ್ಥೆಯ ಸ್ಥಾಪನೆಯ ಯೋಜನೆಯಲ್ಲಿ ಆಸಕ್ತಿ ತೋರಿಸಿದ್ದರೂ ಆ ಸಂಸ್ಥೆ ಪರಿಣಾಮಕಾರಿಯಾದ ಕಾರ್ಯಕ್ರಮ ಹೊಂದುವುದಕ್ಕೆ ಯಾವ ಮಾರ್ಗವನ್ನೂ ಸೂಚಿಸಲಿಲ್ಲ. ಅಲ್ಲದೆ ಸಂಯುಕ್ತ ಸಂಸ್ಥಾನ ರಾಷ್ಟ್ರಕೂಟದ ಸದಸ್ಯತ್ವವನ್ನೂ ಪಡೆಯದಿದ್ದದ್ದರಿಂದ ಆ ರಾಷ್ಟ್ರದ ಬಗ್ಗೆ ಸಂಶಯ ಇನ್ನೂ ಹೆಚ್ಚಾಯಿತು.



ಅಟ್ಲಾಂಟಿಕ್ ಘೋಷಣೆಗಾಗಿ ರೂಸ್ವೆಲ್ಟ್—ಚರ್ಚಿಲ್ ಸಮಾಗಮ

ಇದರಿಂದ ಬ್ರಿಟನ್ನೂ ಸಂಪ್ರದಾಯವಾದಿ ಧೋರಣೆಯನ್ನೇ ಅನುಸರಿಸಿ ಯೂರೋಪಿನ ರಾಜಕೀಯದಲ್ಲಿ ಆಸಕ್ತಿ ಕಡಿಮೆ ಮಾಡಿಕೊಂಡಿತು. ಆ ವೇಳೆಗಾಗಲೇ ಮತ್ತೆ ತಲೆಯೆತ್ತಿ ಪ್ರಬಲವಾಗುವ ಚಿಹ್ನೆ ತೋರುತ್ತಿದ್ದ ಜರ್ಮನಿಯನ್ನು ಹದ್ದುಬಸ್ತಿನಲ್ಲಿಡಬೇಕೆಂಬ ಫ್ರಾನ್ಸಿನ ಆಶಯಕ್ಕೆ ಬ್ರಿಟನ್ ಅಮೆರಿಕಗಳು ಬೆಂಬಲ

ನೀಡಲಿಲ್ಲ. ಫ್ರಾನ್ಸ್ ಬ್ರಿಟನ್‌ಗಳು ಒಂದಾಗಿ ನಡೆಯುವ ಬದಲು ಇವೇ ಪರಸ್ಪರವಾಗಿ ಸ್ಪರ್ಧಿಸಿದುವು. ಇದರ ಪರಿಣಾಮವಾಗಿ ಬ್ರಿಟನ್ ಫ್ರಾನ್ಸ್‌ಗಳ ನಡುವೆ ಘರ್ಷಣೆ ಉಂಟಾಯಿತು. ಫ್ರಾನ್ಸ್ ಯಾರನ್ನೂ ಲೆಕ್ಕಿಸದೆ ರೂರ್ ಪ್ರದೇಶವನ್ನು ತನ್ನದನ್ನಾಗಿ ಮಾಡಿಕೊಂಡಿತು. ಇದನ್ನು ಗಮನಿಸಿದ ಜರ್ಮನಿಗೆ ವರ್ಸೇಲ್ಸ್ ಕೌಲನ್ನು ಉಲ್ಲಂಘಿಸುವ ಧೈರ್ಯ ಬಂತು.

ವರ್ಸೇಲ್ಸ್ ಕೌಲು ಕರಾಳ ಒಪ್ಪಂದವೆಂದು ಹೇಳಿದವನು ಹಿಟ್ಲರ್. ಆದರೆ ಅದೇ ಮುಂದೆ ಸಂಭವಿಸಿದ ಎಲ್ಲ ಅನರ್ಥಗಳಿಗೂ ಮೂಲವೆಂದು ಹೇಳುವುದು ತಪ್ಪಾಗುತ್ತದೆ. ಏಕೆಂದರೆ ಆ ಒಪ್ಪಂದದ ಅನಂತರವೂ ಜರ್ಮನಿ ಪ್ರಬಲ ರಾಷ್ಟ್ರವಾಗಿಯೇ ಉಳಿಯಿತು. ಅಲ್ಲದೆ ಆ ದೇಶದ ಆರ್ಥಿಕಸ್ಥಿತಿಯನ್ನು ಉತ್ತಮಪಡಿಸುವ ಅವಕಾಶ ಅದರಲ್ಲಿತ್ತು. ಹೊಸ ರಾಷ್ಟ್ರಗಳ ನಿರ್ಮಾಣ ಮತ್ತು ಅವುಗಳ ಭದ್ರತೆಯ ವಿಚಾರದಲ್ಲೂ ವರ್ಸೇಲ್ಸ್ ಕೌಲು ಸರಿಯಾದ ನಿರ್ಧಾರಗಳನ್ನೊಳಗೊಂಡಿತ್ತು. ಆದ್ದರಿಂದ ವರ್ಸೇಲ್ಸ್ ಒಪ್ಪಂದವನ್ನು ವೈರ ಪ್ರಚೋದಕ ಅನ್ಯಾಯಕಾರಿ ಕರಾರೆಂದು ಹೇಳುವುದರಲ್ಲಿ ಸತ್ಯಾಂಶವಿಲ್ಲ. ಆದರೆ ಸೋತ ರಾಷ್ಟ್ರಗಳು ಗೆದ್ದ ರಾಷ್ಟ್ರಗಳಿಗೆ ಯುದ್ಧದ ನಷ್ಟವನ್ನು ಭರ್ತಿಮಾಡಿಕೊಡಬೇಕೆಂಬ ಬಗ್ಗೆ ರಚಿತವಾಗಿದ್ದ ನಿಬಂಧನೆಗಳು ಮಾತ್ರ ವಾಸ್ತವಿಕ ಪರಿಸ್ಥಿತಿಗೆ ಅನುಗುಣವಾಗಿ ಇರಲಿಲ್ಲವೆಂದು ಹೇಳಲೇಬೇಕು. ಈ ಅಂಶವೂ ಜರ್ಮನಿಯಲ್ಲೇ ಉದ್ಭವಿಸಿದ



ಎಲ್ ಆಲಮೇನ್ ಕದನನಾಯಕ ಜನರಲ್ ಮಾಂಟ್ಗುಮರಿ-ಐಸನ್‌ಹೌವರ್ ಜೊತೆಗೆ

ಪರಿಸ್ಥಿತಿಗಳೂ ಆ ದೇಶದ ಹಣದುಬ್ಬರಕ್ಕೆ ಕಾರಣವಾದುವು. ಈ ಆರ್ಥಿಕ ಬಿಕ್ಕಟ್ಟೇ ಯುದ್ಧಾನಂತರ ಜರ್ಮನಿಯಲ್ಲಿ ಸ್ಥಾಪಿತವಾಗಿದ್ದ ಗಣರಾಜ್ಯದ ಪತನಕ್ಕೂ ಕಾರಣವಾಯಿತು. ಈ ಪರಿಸ್ಥಿತಿಯಿಂದ ರೊಚ್ಚಿಗೆದ್ದ ಜರ್ಮನಿಯ ಮಧ್ಯಮವರ್ಗ ಗಣರಾಜ್ಯಸರ್ಕಾರವನು ಉರುಳಿಸಿ, ಜರ್ಮನಿಯ ರಾಜಕೀಯದಲ್ಲಿ ಹಿಟ್ಲರ್ ಪ್ರವೇಶಿಸುವುದಕ್ಕೂ ಅವಕಾಶಮಾಡಿಕೊಟ್ಟಿತು. ವರ್ಸೇಲ್ಸ್ ಕೌಲಿನ ಆರ್ಥಿಕ ನಿಬಂಧನೆಗಳು ಯೂರೋಪಿನಲ್ಲಿ ತೀವ್ರ ಪರಿಣಾಮವನ್ನುಂಟು ಮಾಡಿದುವು. ಮಿತ್ರರಾಷ್ಟ್ರಗಳಲ್ಲಿ ಹೊಂದಾಣಿಕೆಯಿಲ್ಲದ್ದೂ ಆ ಕೌಲಿನ ವಿಧಿಗಳನ್ನು ಪಾಲಿಸದಿದ್ದದ್ದೂ ಅವುಗಳ ಆಚರಣೆಗೆ ಒತ್ತಾಯ ತರದಿದ್ದದ್ದೂ ಈ ಪರಿಣಾಮವನ್ನು ತೀವ್ರತರಗೊಳಿಸಿದುವು.



ಸೈನಿಕ ಕವಾಯತು ವೀಕ್ಷಿಸುತ್ತಿರುವ ಅಡಾಲ್ಫ್ ಹಿಟ್ಲರ್

ವರ್ಸೇಲ್ಸ್ ಒಪ್ಪಂದದ ಲೋಪದೋಷಗಳನ್ನು ಹಿಟ್ಲರ್ ಉತ್ಪ್ರೇಕ್ಷೆ ಮಾಡಿ ತೋರಿಸಿ, ಜರ್ಮನಿಯ ಜನತೆಯಲ್ಲಿ ಮಿತ್ರರಾಷ್ಟ್ರಗಳ ಬಗ್ಗೆ ವೈರ ಮೂಡಿಸಿ ಅಧಿಕಾರ ಗಳಿಸಿದ. ತನ್ನ ಅಧಿಕಾರವನ್ನು ಭದ್ರಗೊಳಿಸುವ ಗುರಿಯಿಂದ ತನ್ನ ಸದುದ್ದೇಶಗಳ ಬಗ್ಗೆ ಹೊರಗಡೆ ಪ್ರಚಾರದಲ್ಲಿ ತೊಡಗಿದ. ಕೊನೆಗೆ ಪರಿಸ್ಥಿತಿ ವಿಷಮಿಸಿ, ವರ್ಸೇಲ್ಸ್ ಒಪ್ಪಂದದ ಮಾರ್ಪಾಡಿನಿಂದಲೂ ಪರಿಹಾರವಾಗದ ಗಾಢ ಸಮಸ್ಯೆಗಳು ತಮ್ಮನ್ನು ಯುದ್ಧದ ಅಂಚಿಗೆ ತಳ್ಳುತ್ತಿವೆಯೆಂಬುದನ್ನು ಮಿತ್ರ ರಾಷ್ಟ್ರಗಳು ಅರಿತುಕೊಂಡದ್ದು ಯುದ್ಧ ಸನ್ನಿಹಿತವಾದಾಗಲೇ. ಆದರೆ ಆ ವೇಳೆಗೆ ಪರಿಸ್ಥಿತಿ ಕೈ ಮೀರಿತ್ತು. ಸಕಾಲಿಕವಾಗಿ ಎಚ್ಚೆತ್ತುಕೊಂಡು ಒಂದಾಗಿ ವರ್ತಿಸದ ತಪ್ಪಿಗಾಗಿ ಈ ರಾಷ್ಟ್ರಗಳು ಭಾರಿಯ ದಂಡ ತೆತ್ತುವು.

ಎರಡನೆಯ ಮಹಾಯುದ್ಧದ ಪ್ರಾರಂಭಕ್ಕೆ ಮೊದಲು ಜರ್ಮನ್ ಜನತೆಯ ಜೀವನಮಟ್ಟ ಬಹಳಮಟ್ಟಿಗೆ ಸುಧಾರಿಸಿತ್ತು. ಹಿಟ್ಲರನ ಆಕ್ರಮಣಕ್ಕೆ ತುತ್ತಾದ ರಾಷ್ಟ್ರಗಳ ಸ್ಥಿತಿಗಿಂತ ಇದು ಉತ್ತಮವಾಗಿತ್ತು. ಆದಾಗ್ಯೂ ಹಿಟ್ಲರ್ ತನ್ನ ಅಪಪ್ರಚಾರಕ್ಕೆ ಈ ವಿಷಯವನ್ನೇ ಆರಿಸಿಕೊಂಡು ಇತರ ರಾಷ್ಟ್ರಗಳನ್ನೂ ಟೀಕಿಸ ತೊಡಗಿದ. ಮೈನ್ ಕಾಂಪ್ಫ್ (ನನ್ನ ಹೋರಾಟ) ಆತ್ಮಕಥೆಯಲ್ಲಿ ಹಿಟ್ಲರ್ ತನ್ನ ಅನುಭವಗಳನ್ನೂ ಜರ್ಮನಿಯ ದುಃಸ್ಥಿತಿಯನ್ನೂ ಅದರ ನಿವಾರಣೋಪಾಯಗಳನ್ನೂ ವಿವರಿಸಿ, ಜರ್ಮನರು ಆರ್ಯರೆಂದೂ ಆರ್ಯತ್ವವನ್ನು ಅವರು ಉಳಿಸಿಕೊಂಡು ಅನಾರ್ಯರನ್ನು ನಾಶಗೊಳಿಸಬೇಕೆಂದೂ ಹೇಳಿದ್ದಲ್ಲದೆ ಇದಕ್ಕೆ ವಿಧಾನಗಳನ್ನೂ ಸೂಚಿಸಿದ. ಇದಲ್ಲದೆ ಜರ್ಮನಿಯ ಗತವೈಭವವನ್ನೂ ಸಮಕಾಲೀನ

ಅವನತಸ್ಥಿತಿಯನ್ನೂ ವರ್ಣಿಸಿ ಇವೆರಡರ ವ್ಯತ್ಯಾಸವನ್ನು ಜನ ಮನಗಾಣುವಂತೆ ಮಾಡಿದ. ತಾನೊಬ್ಬನೇ ಪ್ರಾಮಾಣಿಕ ನಾಯಕನೆಂಬ, ಜರ್ಮನರ ಆಶೆ ಆಕಾಂಕ್ಷೆಗಳನ್ನು ಈಡೇರಿಸುವ ಶಕ್ತಿ ಇರುವುದು ತನಗೊಬ್ಬನಿಗೆ ಮಾತ್ರ ಎಂಬ ನಂಬಿಕೆಯನ್ನು ಜನರಲ್ಲಿ ಮೂಡಿಸಿದ.

ಜರ್ಮನಿ ಆಕ್ರಮಣ ನಡೆಸಿ ಯುದ್ಧ ಆರಂಭಿಸುವುದಕ್ಕೆ ಸೈನಿಕ, ರಾಜಕೀಯ ಅಥವಾ ಆರ್ಥಿಕ ಕಾರಣಗಳಾವುವೂ ಇರಲಿಲ್ಲ. ಹಿಟ್ಲರನ ಹಠಮಾರಿತನ, ಆತನಿಗೆ ಜರ್ಮನರ ಸಂಪೂರ್ಣ ಬೆಂಬಲ, ಜೊತೆಗೆ ಮಿತ್ರರಾಷ್ಟ್ರಗಳ ದೌರ್ಬಲ್ಯ ಮತ್ತು ಉದಾಸೀನ ಮನೋಭಾವ—ಇವು ಯುದ್ಧಕ್ಕೆ ಪೋಷಕವಾದ ಸನ್ನಿವೇಶವನ್ನುಂಟು ಮಾಡಿದುವು. ಜರ್ಮನಿ, ಜಪಾನ್ ಮತ್ತು ಇಟಲಿಗಳು ಎರಡನೆಯ ಮಹಾಯುದ್ಧಕ್ಕೆ ಮೂಲಭೂತವಾಗಿ ಕಾರಣವೆಂಬುದನ್ನು ಯಾರೂ ಮರೆಯುವಂತಿಲ್ಲ.

ಎರಡು ಯುದ್ಧಗಳ ನಡುಗಾಲದಲ್ಲಿ ಪಾಶ್ಚಾತ್ಯ ಪ್ರಜಾಪ್ರಭುತ್ವ ರಾಷ್ಟ್ರಗಳು ನಿಶ್ಶಸ್ತ್ರೀಕರಣದ ಮೂಲಕ ಶಾಂತಿ ಸ್ಥಾಪಿಸುವ ನಂಬಿಕೆ ಹೊಂದಿದ್ದುವು. ನಿಶ್ಶಸ್ತ್ರೀಕರಣ ಸಭೆಗಳು ನಡೆಯುತ್ತಿದ್ದ ಸಮಯದಲ್ಲೇ ಆಕ್ರಮಣಗಳೂ ನಡೆಯುತ್ತಿದ್ದುವು. ಆಕ್ರಮಣಕಾರೀ ರಾಷ್ಟ್ರಗಳು ತಮ್ಮ ಸೇನೆಗಳನ್ನು ಜಮಾಯಿಸಿ, ಶಸ್ತ್ರಾಸ್ತ್ರಗಳನ್ನು ಇಮ್ಮಡಿಗೊಳಿಸಿ ಹೆಚ್ಚಿಸಿಕೊಳ್ಳುತ್ತಿದ್ದ ಕಾಲದಲ್ಲೇ ಪ್ರಜಾಪ್ರಭುತ್ವ ರಾಷ್ಟ್ರಗಳು ನಿಶ್ಶಸ್ತ್ರೀಕರಣದಲ್ಲಿ ನಂಬಿಕೆ ಇಟ್ಟಿದ್ದು ಹಾಸ್ಯಾಸ್ಪದ ಸಂಗತಿಯಾಯಿತು. ವರ್ಸೇಲ್ಸ್ ಒಪ್ಪಂದ ಮತ್ತು ಅದರ ಅನಂತರದ ಒಪ್ಪಂದಗಳೆಲ್ಲವನ್ನೂ ಉಲ್ಲಂಘಿಸುವುದು ಹಿಟ್ಲರನಿಗೆ ಅತಿ ಸುಲಭವಾಯಿತು. 1933ರಲ್ಲಿ ಅಧಿಕಾರ ಬಂದಾಗಿನಿಂದ ಆತ ತನ್ನ ಯೋಜನೆಗಳನ್ನು ಕಾರ್ಯರೂಪಕ್ಕೆ ತರುವುದರಲ್ಲಿ ತೊಡಗಿ, 1936ರಲ್ಲಿ ಒಪ್ಪಂದಗಳನ್ನು ಮುರಿಯಲು ಪ್ರಾರಂಭಿಸಿದ. ಪ್ರಜಾಪ್ರಭುತ್ವ ರಾಷ್ಟ್ರಗಳ ದುರ್ಬಲತೆ, ಅವು ಸರಿಯಾದ ಕಾಲದಲ್ಲಿ ಕಾರ್ಯೋನ್ಮುಖವಾಗದೆ ಇದ್ದದ್ದು ಮತ್ತು ಹಿಟ್ಲರನ ರಾಜತಂತ್ರ—ಇವು ಎರಡನೆಯ ಮಹಾಯುದ್ಧಕ್ಕೆ ಕಾರಣಗಳೆಂದು ಹೇಳಬಹುದಾಗಿದೆ. ಇದರ ಆರಂಭಕ್ಕೆ ಮುಂಚಿನ ಕೆಲವು ಘಟನೆಗಳನ್ನು ಸ್ಥೂಲವಾಗಿ ಪರಿಶೀಲಿಸಬೇಕು.

ಯೂರೋಪಿನಲ್ಲಿ ಹಿಟ್ಲರ್ ಆಕ್ರಮಣ ನೀತಿಯನ್ನನುಸರಿಸುವುದಕ್ಕೆ ಮುಂಚಿನಿಂದಲೇ ಪೂರ್ವದಲ್ಲಿ ಜಪಾನೂ ಇದೇ ಬಗೆಯ ಹಾದಿ ತುಳಿಯಲಾರಂಭಿಸಿತ್ತು. ವಿಶ್ವಶಾಂತಿ ನೆಲಸಬೇಕೆಂದು ಬಾಯಲ್ಲಿ ಹೇಳುತ್ತಿದ್ದರೂ ಶಾಂತಿ ಸಮ್ಮೇಳನಗಳಲ್ಲಿ ಭಾಗವಹಿಸುತ್ತಿದ್ದರೂ ಅದಕ್ಕೆ ರಾಜ್ಯದಾಹ ಹೆಚ್ಚಾಗಿ 1931ರಲ್ಲಿ ಚೀನದ ಮಂಚೂರಿಯದ ಮೇಲೆ ಆಕ್ರಮಣ ನಡೆಸಿತು. ಈ ಆಕ್ರಮಣವೇ ಒಂದು ರೀತಿಯಲ್ಲಿ ಎರಡನೆಯ ಮಹಾಯುದ್ಧದ ಮೊದಲನೆಯ ಗುಂಡೆನ್ನಬಹುದು. ಆದ್ದರಿಂದ ದೂರಪ್ರಾಚ್ಯದಲ್ಲಿನ ವಿದ್ಯಮಾನಗಳನ್ನೂ ಪರಿಶೀಲಿಸುವುದು ಅನಿವಾರ್ಯ. ಆ ಕ್ಷೇತ್ರದಲ್ಲಿ ಜಪಾನ್ ವಹಿಸಿದ ಪಾತ್ರದ ವಿವೇಚನೆಯನ್ನೂ ನಡೆಸಬೇಕಾಗುತ್ತದೆ.

ಯೂರೋಪಿನಲ್ಲಿ ವಿನಾಶಕಾರಕ ಧೋರಣೆ ಅನುಸರಿಸಿದ ಜರ್ಮನಿ ಇಟಲಿಗಳಿಗೆ ಜಪಾನು ಯಾವ ರೀತಿಯಲ್ಲೂ ಕಡಿಮೆಯಾಗಿರಲಿಲ್ಲ. ಹಿಂದುಳಿದ ರಾಷ್ಟ್ರವಾಗಿದ್ದ ಜಪಾನು 20ನೆಯ ಶತಮಾನದ ಆದಿಭಾಗದಲ್ಲಿ ಪ್ರಬಲವಾಗಿ, ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ಪ್ರಮುಖ ಪಾತ್ರ ವಹಿಸಿ, ಸೈನಿಕ ಸಂಪ್ರದಾಯ ಬೆಳೆಸಿಕೊಂಡು, ಸಾಮ್ರಾಜ್ಯದಾಹಕ್ಕೊಳಗಾಗಿತ್ತು. 1894ರಲ್ಲಿ ಚೀನದ ಮೇಲೂ 1904ರಲ್ಲಿ ರಷ್ಯದ ವಿರುದ್ಧವಾಗಿಯೂ ಜಯಪ್ರದವಾಗಿ ಯುದ್ಧ ಮಾಡಿ ತನ್ನ ಪ್ರತಿಷ್ಠೆ ಹೆಚ್ಚಿಸಿಕೊಂಡಿತ್ತು.



ಕ್ಯಾಸಬ್ಲಾಂಕ ಸಮ್ಮೇಳನದಲ್ಲಿ—ರೂಸ್ವೆಲ್ಟ್, ಡ ಗಾಲ್ ಮತ್ತು ಚರ್ಚಿಲ್

ಅಲ್ಲದೆ ಮೊದಲನೆಯ ಮಹಾಯುದ್ಧದಲ್ಲಿ ಮುಖ್ಯ ಪಾತ್ರವಹಿಸಿ ಜರ್ಮನ್ ವಸಾಹತುಗಳ ಮೇಲೆ ಬಲ ಪ್ರಯೋಗಿಸಿ ಮಿತ್ರರಾಷ್ಟ್ರಗಳ ಮೆಚ್ಚುಗೆಗೆ ಪಾತ್ರವಾಗಿ ವರ್ಸೇಲ್ಸ್ ಒಪ್ಪಂದದಲ್ಲಿ ತನಗೆ ಬೇಕಾದ ಸೌಲಭ್ಯಗಳನ್ನೂ ಪಡೆದುಕೊಂಡಿತ್ತು. ಇದರಿಂದ ಉತ್ತೇಜಿತವಾದ ಜಪಾನು ಇಡೀ ಏಷ್ಯವನ್ನೇ ತನ್ನದಾಗಿ ಮಾಡಿಕೊಳ್ಳುವ



ಬ್ರಿಟನಿಗೆ ನೆರವು ನೀಡಬೇಕೆಂದು ಕಾಂಗ್ರೆಸಿಗೆ ರೂಸ್ವೆಲ್ಟ್ ಮನವಿ

ದುರುದ್ದೇಶ ಹೊಂದಿತ್ತು. ಮಂಚೂರಿಯ ಪ್ರಕರಣದಲ್ಲಿ ರಾಷ್ಟ್ರಸಂಸ್ಥೆಯ ದುರ್ಬಲತೆಯನ್ನು ಮನಗಂಡ ಜಪಾನು ತನ್ನ ನೀತಿಯನ್ನು ಮುಂದುವರಿಸಿತು. ಅದಕ್ಕೆ ಯಾವ ಆತಂಕವೂ ಇರಲಿಲ್ಲ. ಆ ಸಂಸ್ಥೆ ಮಧ್ಯಸ್ಥಿಕೆ ವಹಿಸಲು ಯತ್ನಿಸಿದಾಗ ಜಪಾನ್ ಅದರ ಸದಸ್ಯತ್ವವನ್ನು ತ್ಯಜಿಸಿ, ಮಂಚೂರಿಯವನ್ನು ಪೂರ್ಣವಾಗಿ ಕಬಳಿಸಿತು. ಬ್ರಿಟನ್ ಅಮೆರಿಕಗಳು ಸಂಯುಕ್ತವಾಗಿ ಕಾರ್ಯಾಚರಣೆಗೆ ತೊಡಗಬೇಕೆಂಬ ಸಲಹೆ ಕಾರ್ಯರೂಪಕ್ಕೆ ಬರಲಿಲ್ಲ. ಆಗ ಆ ರಾಷ್ಟ್ರಗಳು ತೋರ್ಪಡಿಸಿದ ದೌರ್ಬಲ್ಯ ಅಕ್ಷಮ್ಯವೆನ್ನಬಹುದು.

ಮಂಚೂರಿಯ ಪ್ರಕರಣದಲ್ಲಿ ರಾಷ್ಟ್ರಕೂಟ ತೋರಿಸಿದ ಅಸಹಾಯಕತೆಯನ್ನು ಕಂಡು ಸ್ಫೂರ್ತಿಗೊಂಡ ಇಟಲಿಯ ಮುಸೋಲಿನಿ 1935ರ ಅಕ್ಟೋಬರ್ ತಿಂಗಳಲ್ಲಿ ಆಫ್ರಿಕದ ಅಬಿಸೀನಿಯ ರಾಜ್ಯವನ್ನು ಆಕ್ರಮಿಸಿಕೊಂಡ. ರಾಷ್ಟ್ರಕೂಟದಲ್ಲಿ ಈ ಆಕ್ರಮಣದ ಚರ್ಚೆ ನಡೆಯುತ್ತಿದ್ದಾಗಲೇ ಹಿಟ್ಲರ್ ರೈನ್‌ಲೆಂಡನ್ನು ಆಕ್ರಮಿಸಿಕೊಂಡ. ಈ ಆಕ್ರಮಣ ಪ್ರಕರಣಗಳಲ್ಲಿ ಬ್ರಿಟನ್ನಾಗಲಿ ಫ್ರಾನ್ಸಾಗಲಿ ಯಾವ ಅಡ್ಡಿಯನ್ನುಂಟುಮಾಡುವ ಗೋಜಿಗೂ ಹೋಗಲಿಲ್ಲ. ಕೌಲು ಕರಾರುಗಳ ಪಾವಿತ್ರ್ಯವನ್ನು ಧಿಕ್ಕರಿಸಿ ಮುಂದೆ ಹಿಟ್ಲರ್ ನಡೆಸಲಿದ್ದ ದುರಾಕ್ರಮಣಗಳಿಗೆ

ಇದು ಪೀಠಿಕೆಯಾಯಿತು. ಇದಾದ ಮೇಲೆ 1936ರ ಜುಲೈ ತಿಂಗಳಲ್ಲಿ ಸ್ಪೇನ್ ದೇಶದಲ್ಲಿ ದಂಗೆ ನಡೆದು ಅಂತರ್ಯುದ್ಧ ಪ್ರಾರಂಭವಾದಾಗ, ಯೂರೋಪಿನ ಪ್ರಜಾಪ್ರಭುತ್ವ ರಾಷ್ಟ್ರಗಳ ಸಹಾನುಭೂತಿ ರಿಪಬ್ಲಿಕನ್ ಸರ್ಕಾರದ ಕಡೆ ಇದ್ದಿತಾದರೂ ಅವು ಯಾವುವೂ ಪ್ರತ್ಯಕ್ಷ ಸಹಾಯ ನೀಡಲಿಲ್ಲ. ಇದರಿಂದ ನಿರಂಕುಶ ಪ್ರಭುತ್ವದ ಶಕ್ತಿ ಹೆಚ್ಚಾಗಿ ಪ್ರಜಾಪ್ರಭುತ್ವದ ಶಕ್ತಿ ಕುಗ್ಗಿತು. ಜರ್ಮನಿ ಮತ್ತು ಇಟಲಿಗಳ ಜೊತೆಗೆ ಮತ್ತೊಂದು ರಾಷ್ಟ್ರವನ್ನೂ ಫ್ರಾನ್ಸ್ ಎದುರಿಸಬೇಕಾಯಿತು. ಹಿಟ್ಲರನಿಗೆ ತನ್ನ ಧ್ಯೇಯ ಸಾಧಿಸಲು ಅನುಕೂಲ ವಾತಾವರಣ ಉಂಟಾಯಿತು.



ಬಾಂಬ್ ದಾಳಿಗೆ ತುತ್ತಾದ ಲಂಡನಿನ ಒಂದು ಭಾಗ

ಅನಂತರ ಚೀನದಲ್ಲಿ ಜಪಾನೀ ಆಕ್ರಮಣ ನಡೆಯಿತು. ಇದು ಚೀನದ ಸರಹದ್ದುಗಳನ್ನು ದಾಟಿ ಅಮೆರಿಕನ್ ಹಿತಾಸಕ್ತಿಗಳಿಗೆ ಧಕ್ಕೆ ತಂದಾಗ ಅಮೆರಿಕ ಸಂಯುಕ್ತಸಂಸ್ಥಾನ ಬರೀ ಪ್ರತಿಭಟನಾಪತ್ರವನ್ನು ಕಳುಹಿಸಿತೇ ವಿನಾ ಯಾವ ಉಗ್ರ ಕಾರ್ಯಕ್ರಮವನ್ನೂ ಕೈಗೊಳ್ಳಲಿಲ್ಲ. ಈ ಪ್ರಕರಣಗಳಲ್ಲಿ ಅಮೆರಿಕ ತಾಟಸ್ಥ್ಯನೀತಿ ಅನುಸರಿಸಿದ್ದು ಆಕ್ರಮಣಕಾರಿ ರಾಷ್ಟ್ರಗಳಿಗೆ ಇನ್ನಷ್ಟು ಪ್ರೋತ್ಸಾಹಿಸಿದಂತಾಯಿತು.

ಯೂರೋಪಿನಲ್ಲಿ ಈ ಆಕ್ರಮಣಕಾರರಿಗೆ ಮೊದಲು ಆಹುತಿಯಾದ ದೇಶವೇ ಆಸ್ಟ್ರಿಯ. 1938ರ ಮಾರ್ಚ್ 11ರಂದು ಹಿಟ್ಲರನ ಸೇನೆಗಳು ಆಸ್ಟ್ರಿಯವನ್ನು ಪ್ರವೇಶಿಸಿದುವು. ಅನಂತರ ಹಿಟ್ಲರನ ಕಣ್ಣು ಚೆಕೊಸ್ಲೊವಾಕಿಯದ ಮೇಲೆ ಬಿತ್ತು. ಆಸ್ಟ್ರಿಯದ ಕಡೆಯಿಂದ ಚೆಕೊಸ್ಲೊವಾಕಿಯವನ್ನು ಆಕ್ರಮಿಸಿಕೊಳ್ಳುವುದು ಸುಲಭವಾಗಿತ್ತು. ಈ ಸಣ್ಣ ರಾಷ್ಟ್ರವನ್ನು ರಕ್ಷಿಸುವ ಹೊಣೆ ಹೊತ್ತಿದ್ದ ದೇಶಗಳೆಂದರೆ ಫ್ರಾನ್ಸ್ ಮತ್ತು ಸೋವಿಯತ್ ಒಕ್ಕೂಟ. ಬ್ರಿಟನ್ನೂ ರಕ್ಷಣೆಯ ಜವಾಬುದಾರಿಯಲ್ಲಿ ಪಾಲುಗೊಂಡಿತು. ಆದರೆ ಈ ರಾಷ್ಟ್ರಗಳಾವುವೂ ಚೆಕೊಸ್ಲೊವಾಕಿಯದ ಅಧ್ಯಕ್ಷ ಬೆನೆಷ್ ಮಾಡಿದ ಪ್ರಾರ್ಥನೆಗೆ ಯಾವ ಮನ್ನಣೆಯನ್ನೂ ಕೊಡಲಿಲ್ಲ. ಆಂಗ್ಲೊ–ಫ್ರೆಂಚ್ ಯೋಜನೆಯಂತೆ ಸುಡೇಟನ್ ಪ್ರದೇಶವನ್ನು ಜರ್ಮನಿಗೆ ಒಪ್ಪಿಸಬೇಕೆಂದು ಫ್ರಾನ್ಸ್ ಸಲಹೆಮಾಡಿತು. ಇದರಿಂದ ಆಕ್ರಮಣವನ್ನು ನಿಲ್ಲಿಸಿ, ಶಾಂತಿ ಕಾಪಾಡುವ ಮತ್ತೊಂದು ಸುವರ್ಣಾವಕಾಶವನ್ನು ಮಿತ್ರರಾಷ್ಟ್ರಗಳು ಕಳೆದುಕೊಂಡುವು. ಸ್ವತಃ ಶಾಂತಿಪ್ರಿಯನಾಗಿದ್ದ ಬ್ರಿಟಿಷ್ ಪ್ರಧಾನಿ ಚೇಂಬರ್‌ಲಿನ್ ಹಿಟ್ಲರನನ್ನು ಮ್ಯೂನಿಕ್‌ನಲ್ಲಿ ಭೇಟಿ ಮಾಡಿ ಅವನ ನೀತಿಯನ್ನು ಖಂಡಿಸಿದ. ಆದರೆ ತನಗೆ ರಾಜ್ಯ ವಿಸ್ತರಣೆಯ ಆಸೆಯೇ ಇಲ್ಲವೆಂದು ಹಿಟ್ಲರ್ ಭರವಸೆ ಕೊಟ್ಟಾಗ ಚೇಂಬರ್ಲಿನ್ ಅವನೊಂದಿಗೆ ಒಂದು ಒಪ್ಪಂದ ಮಾಡಿಕೊಂಡ (ಸೆಪ್ಟೆಂಬರ್ 30). ಈ ಸಂಧಾನದಲ್ಲಿ ಸೋವಿಯತ್ ಒಕ್ಕೂಟವನ್ನು ಸೇರಿಸಿಕೊಳ್ಳಲಿಲ್ಲ. ಸುಡೇಟನ್ ಪ್ರದೇಶವನ್ನು ಹಿಟ್ಲರನಿಗೆ ಚೆಕೊಸ್ಲೊವಾಕಿಯ ಒಪ್ಪಿಸಬೇಕೆಂಬ ತೀರ್ಮಾನದಿಂದ ಅವನ ಆಕ್ರಮಣಶೀಲಪ್ರವೃತ್ತಿಗೆ ಬಹುಮಾನ ದೊರಕಿದಂತಾಯಿತೆಂಬುದು ನಿಸ್ಸಂದೇಹ. ಮುಂದೆ ಮ್ಯೂನಿಕ್ ಒಪ್ಪಂದ ತೀವ್ರವಾದ ಟೀಕೆಗೆ ಗುರಿಯಾದರೂ ಚೇಂಬರ್ಲಿನ್ ಬ್ರಿಟನಿಗೆ ಹಿಂತಿರುಗಿದಾಗ ಜನತೆಯಿಂದ ಅವನಿಗೆ ದೊರಕಿದ ಸ್ವಾಗತ ಅಭೂತಪೂರ್ವ. ಆಗ ಹರಡುತ್ತಿದ್ದ ಯುದ್ಧದ ಭೀತಿ ನಿವಾರಿಸಿ ಶಾಂತಿ ನೆಲೆಗೊಳಿಸಲು ಚೇಂಬರ್ಲಿನ್ ಯಾವ ಕ್ರಮವನ್ನಾದರೂ ಕೈಗೊಳ್ಳಲು ತಯಾರಿದ್ದ. ಫ್ರಾನ್ಸ್ ಸಹ ಅದೇ ಧೋರಣೆ ತಳೆದಿತ್ತು. ಅನಿವಾರ್ಯವಾದರೆ ಮಾತ್ರ ಹಿಟ್ಲರನೊಡನೆ ಯುದ್ಧಮಾಡಬೇಕೇ ಹೊರತು ಅಲ್ಪ ವಿಷಯಗಳಿಗೆ ಕೈಯೆತ್ತಬಾರದೆಂಬುದು ಚೇಂಬರ್ಲಿನನ ಅಭಿಪ್ರಾಯವಾಗಿತ್ತು. ಅಲ್ಲದೆ ತಮ್ಮ ದೇಶದ ಹಿತಕ್ಕೆ ಸಂಬಂಧಪಡದ ದೂರ ಪ್ರದೇಶದ ಕಲಹಗಳಲ್ಲಿ ಕೈಹಾಕುವುದು ಕೇವಲ ಹುಚ್ಚುತನವೆಂದು ಆತ ನಂಬಿದ್ದ.

ಆದರೆ ಈ ಶಮನ ನೀತಿಯಿಂದ ಯೂರೋಪಿಗೆ ಶಾಂತಿ ಲಭಿಸಲಿಲ್ಲ. ಇದರ ರುಚಿ ಕಂಡ ಹಿಟ್ಲರ್ ಮ್ಯೂನಿಕ್ ಒಪ್ಪಂದಕ್ಕೆ ಸಹಿಹಾಕಿದ ಆರೇ ತಿಂಗಳೊಳಗಾಗಿ ಚೆಕೊಸ್ಲೊವಾಕಿಯವನ್ನು ಕಬಳಿಸಿದ. ಈ ಆಕ್ರಮಣದಿಂದ ಬ್ರಿಟನ್ ಫ್ರಾನ್ಸ್‌ಗಳ



ದಾಳಿಯಿಂದ ಕುಸಿದ ಮನೆಯಡಿಯಿಂದ ಮಹಿಳೆಯೊಬ್ಬಳ ರಕ್ಷಣೆ

ನಾಯಕರಲ್ಲಿ ಭೀತಿ ಹುಟ್ಟಿತು. ಪೋಲೆಂಡನ್ನು ಆಕ್ರಮಿಸುವುದೇ ಹಿಟ್ಲರನ ಮುಂದಿನ ಗುರಿಯೆಂದು ಅವರಿಗೆ ಮನವರಿಕೆಯಾಗದೆ ಇರಲಿಲ್ಲ. ಆದ್ದರಿಂದ ತಾವು

ಅನುಸರಿಸುತ್ತಿದ್ದ ತಾಟಸ್ಥ್ಯನೀತಿ ತ್ಯಜಿಸಿ, ಪೋಲೆಂಡಿಗೆ ರಕ್ಷಣೆಯ ಭರವಸೆ ನೀಡಿದರು. ಪೂರ್ವದ ಪ್ರಷ್ಯ ಪ್ರದೇಶವನ್ನು ತನ್ನ ಅಧೀನದಲ್ಲಿಟ್ಟುಕೊಳ್ಳಲು ಡ್ಯಾನ್ಜಿಗನ್ನೂ ಅದರ ಸುತ್ತಮುತ್ತಲಿನ ಪ್ರದೇಶವನ್ನೂ ತನಗೆ ಬಿಟ್ಟುಕೊಡಬೇಕೆಂದು ಹಿಟ್ಲರ್ ಪೋಲೆಂಡಿಗೆ ತಿಳಿಸಿದ. ಬಲಿಷ್ಠವಾದ ಜರ್ಮನಿಯೊಂದಿಗೆ ಸೆಣಸಿ ನಿಲ್ಲಲು ಸಾಮರ್ಥ್ಯವಿಲ್ಲದಿದ್ದರೂ ಬ್ರಿಟನ್ ಫ್ರಾನ್ಸ್‌ಗಳ ಭರವಸೆಯಿಂದ ಪೋಲೆಂಡು ಅವನ ಬೇಡಿಕೆಯನ್ನು ತಿರಸ್ಕರಿಸಿತು. ಈ ಮಧ್ಯೆ 1939ರ ಮೇ ತಿಂಗಳಲ್ಲಿ ಜರ್ಮನಿ ಮತ್ತು ಇಟಲಿ ಪರಸ್ಪರ ರಕ್ಷಣಾ ಒಪ್ಪಂದ ಮಾಡಿಕೊಂಡುವು. ಜರ್ಮನಿಯ ವಿರುದ್ಧ ಸಂಯುಕ್ತ ಕಾರ್ಯಾಚರಣೆಯಲ್ಲಿ ತೊಡಗಬೇಕೆಂದು ವಾದಿಸುತ್ತಿದ್ದ ಸೋವಿಯತ್ ವಿದೇಶಾಂಗ ಮಂತ್ರಿ ಲಿಟ್ವಿನಫ್ ರಾಜೀನಾಮೆ ಕೊಟ್ಟದ್ದರಿಂದ ಸೋವಿಯತ್ ಒಕ್ಕೂಟದ ಸಾಮೂಹಿಕ ಕಾರ್ಯಕ್ರಮಕ್ಕೆ ತಿಲಾಂಜಲಿ ಕೊಟ್ಟಂತಾಯಿತು. ಅಲ್ಲದೆ ಮ್ಯೂನಿಕ್ ಒಪ್ಪಂದದ ಸಮಯದಲ್ಲಿ ಬ್ರಿಟನ್ ತನ್ನನ್ನು ನಿರ್ಲಕ್ಷಿಸಿದ್ದನ್ನು ಸೋವಿಯತ್ ಒಕ್ಕೂಟ ಮರೆತಿರಲಿಲ್ಲ. ಆದ್ದರಿಂದ ಯುದ್ಧ ಸನ್ನಿಹಿತವಾದ ಸಮಯದಲ್ಲಿ, 1939ರ ಆಗಸ್ಟ್ 11ರಂದು, ಅದು ಜರ್ಮನಿಯೊಡನೆ ಪರಸ್ಪರ ಅನಾಕ್ರಮಣ ಕರಾರು ಮಾಡಿಕೊಂಡಿತು. ಸೋವಿಯತ್ ಒಕ್ಕೂಟದ ಈ ವರ್ತನೆ ವಿವಾದಾಸ್ಪದ ವಿಚಾರವಾಗಿದೆ. ಅದರ ಸತ್ಯವನ್ನು ಇತಿಹಾಸವೇ ಗುರುತಿಸಬೇಕಾಗಿದೆ.

1917ರ ಕ್ರಾಂತಿಯ ದಿನಗಳಿಂದ ಸೋವಿಯತ್ ಒಕ್ಕೂಟ ಹೊಸ ಸಮಾಜ ಸೃಷ್ಟಿಸುವ ಕಾರ್ಯದಲ್ಲಿ ತೊಡಗಿತ್ತು. ಆದ್ದರಿಂದಲೇ ಅದು ಒಂದನೆಯ ಮಹಾಯುದ್ಧದಿಂದ ನಿರ್ಗಮಿಸಿದ್ದು. ರಷ್ಯದಲ್ಲಿ ಮಾತ್ರವಲ್ಲದೆ ಯೂರೋಪಿನ ಇತರ ರಾಷ್ಟ್ರಗಳಲ್ಲೂ ಈ ಕ್ರಾಂತಿ ಹರಡುವುದೆಂಬ ನಂಬಿಕೆ ಆ ದೇಶದ ನಾಯಕರಿಗಿತ್ತು. ಆದರೆ ಲೆನಿನನ ಈ ಕನಸು ನನಸಾಗಲಿಲ್ಲ. ಅದಕ್ಕೋಸ್ಕರ ಒಂದನೆಯ ಮತ್ತು ಎರಡನೆಯ ಯುದ್ಧಗಳ ನಡುವಿನ ಕಾಲದಲ್ಲಿ ಇತರ ರಾಷ್ಟ್ರಗಳಲ್ಲಿ ಕ್ರಾಂತಿಯ ವಾತಾವರಣ ಮೂಡಿಸುವ ಕಾರ್ಯದಲ್ಲಿ ಅವರು ಮಗ್ನರಾಗಿದ್ದರು. ಆದರೆ ಕ್ರಾಂತಿಯ ತತ್ತ್ವ ಸಾಮೂಹಿಕ ಕಾರ್ಯಾಚರಣೆಗೆ ಅಡ್ಡಿಯುಂಟುಮಾಡಿತು. ಅಲ್ಲದೆ ಪಾಶ್ಚಾತ್ಯ ಪ್ರಜಾಪ್ರಭುತ್ವದ ರಾಷ್ಟ್ರಗಳಲ್ಲಿ ಸಾಮ್ರಾಜ್ಯದಾಹ ಹೆಚ್ಚಾಗಿದೆಯೆಂದು ಸೋವಿಯತ್ ನಾಯಕರು ಹೇಳತೊಡಗಿ, ಜರ್ಮನಿಯ ನಾಜಿಸಂ ಮತ್ತು ಇಟಲಿಯ ಫ್ಯಾಸಿಸಂ ಹಾವಳಿಗಿಂತ ಸಾಮ್ರಾಜ್ಯಶಾಹಿಯೇ ಹೆಚ್ಚು



ಬಾಂಬು ದಾಳಿಯಿಂದ ಬೆದರಿದ ಮಕ್ಕಳು

ಹಾನಿಕರವೆಂದು ಪ್ರಚಾರ ಮಾಡಿದರು. ಸ್ಟಾಲಿನ್ ಒಂದು ಹೆಜ್ಜೆ ಮುಂದೆ ಹೋಗಿ, ಹಿಟ್ಲರ್ ತನ್ನ ಮಿತ್ರನೆಂಬಂತೆ ವ್ಯವಹರಿಸಿದ. ಆ ಸಮಯದಲ್ಲಿ ಜರ್ಮನಿಯನ್ನೆದುರು ಹಾಕಿಕೊಳ್ಳಲು ಆತ ಸಿದ್ಧವಿರಲಿಲ್ಲ. ಹಿಟ್ಲರನ ಸೇನೆಗಳು ರಷ್ಯದ ಕಡೆಗೆ ನುಗ್ಗಿದರೆ ಅದರಿಂದ ತಮಗೆ ಕ್ಷೇಮವೆಂದು ಪಶ್ಚಿಮದ ರಾಷ್ಟ್ರಗಳು ಬಗೆಯುವುವೆಂದೂ ಅವು ತನ್ನ ನೆರವಿಗೆ ಬರಲಾರವೆಂದೂ ಸೋವಿಯತ್ ಒಕ್ಕೂಟ



ವಿಮಾನದಾಳಿಯ ಅನಂತರ ಪುನರಾಗಮನ

ಭಾವಿಸಿತ್ತು. ಹೀಗಾಗಿ ಸೋವಿಯತ್ ಒಕ್ಕೂಟ ಮತ್ತು ಇತರ ರಾಷ್ಟ್ರಗಳು ಯೂರೋಪಿನ ಸಮಸ್ಯೆಗಳ ನಿವಾರಣೆಯಲ್ಲಿ ಒಂದುಗೂಡಲಿಲ್ಲ. ಅವು ತಾಟಸ್ಥ್ಯನೀತಿ ಅನುಸರಿಸಿದುವು. ಆದರೂ ಕೊನೆಯಲ್ಲಿ ಹಾನಿಯುಂಟಾಯಿತು. ಫ್ರಾನ್ಸಿನ ಪತನವಾಯಿತು. ಬ್ರಿಟನ್ ಮತ್ತು ಇಡೀ ನಾಗರಿಕ ಪ್ರಪಂಚವೇ ತೊಂದರೆಗೊಳಗಾಗಬೇಕಾಯಿತು.

ಹಿಟ್ಲರ್ ಈ ವೇಳೆಗೆ ಕೊಬ್ಬಿಕೊಂಡಿದ್ದ. ಜರ್ಮನಿಯ ಗಡಿಗಳು ಹಿಗ್ಗಿ ಸ್ಥಿರಗೊಂಡಿದ್ದುವು. ಆಗ ಆತನ ಮುಂದಿನ ಗುರಿ ಪೋಲೆಂಡಿನ ಆಕ್ರಮಣವೇ ಆಗಿತ್ತು. 1939ರ ಸೆಪ್ಟೆಂಬರ್ ಒಂದರಂದು ಮುಂಜಾವಿನಲ್ಲಿ ಆತ ಅನೇಕ ಕಡೆಗಳಿಂದ ಜರ್ಮನ್ ಸೇನೆಗಳನ್ನು ಆ ರಾಷ್ಟ್ರದೊಳಗೆ ನುಗ್ಗಿಸಿದ. ಆಕ್ರಮಣದ ಎರಡು ದಿನಗಳ ಅನಂತರ ಇಂಗ್ಲೆಂಡ್ ಫ್ರಾನ್ಸ್‌ಗಳು ಜರ್ಮನಿಯ ಮೇಲೆ ಯುದ್ಧ ಘೋಷಿಸಿದುವು. ಆದರೂ ಪ್ರಯೋಜನವಾಗಲಿಲ್ಲ.

**ಯೂರೋಪ್, ಆಫ್ರಿಕ ಮತ್ತು ಪಶ್ಚಿಮ ಏಷ್ಯಗಳಲ್ಲಿ ಯುದ್ಧ:** ಸೆಪ್ಟೆಂಬರ್ 3ರಂದು ಬ್ರಿಟನ್ ಯುದ್ಧ ಘೋಷಿಸಿದಾಗ ಪ್ರಧಾನಮಂತ್ರಿ ಚೇಂಬರ್ಲಿನ್ ಭಾಷಣಮಾಡುತ್ತಾ, 'ದೂರದ ಒಂದು ನಗರಕ್ಕಾಗಿ ನಾವೀಗ ಹೋರಾಟ ನಡೆಸುತ್ತಿಲ್ಲ. ನ್ಯಾಯಕ್ಕೆ ಮತ್ತು ಪ್ರಜಾಸತ್ತೆಯ ಕ್ಷೇಮಕ್ಕೆ ಹೋರಾಡುತ್ತಿದ್ದೇವೆ. ಯೂರೋಪಿನಲ್ಲಿ ಹಿಟ್ಲರಿಸಂ ನಾಶವಾಗುವ ತನಕ ಹೋರಾಡುತ್ತೇವೆ' ಎಂದು ಹೇಳಿದ. ಬ್ರಿಟನಿನ ಸೇನೆ ಫ್ರೆಂಚ್ ಸೇನೆಯೊಡಗೂಡಿ ವ್ಯೂಹವೊಂದನ್ನು ರಚಿಸಿಕೊಂಡಿತು. ಆದರೆ ಪೋಲೆಂಡಿನೊಂದಿಗೆ ಭೂಸಂಪರ್ಕವಿಲ್ಲದಿದ್ದುದರಿಂದ ಅದಕ್ಕೆ ಮಿತ್ರರಾಷ್ಟ್ರಗಳು ಯಾವ ವಿಧದಿಂದಲೂ ಸಹಾಯ ನೀಡಲು ಸಾಧ್ಯವಾಗಲಿಲ್ಲ. ಪೋಲೆಂಡಿನಲ್ಲಿ ಬಲಯುತ ಸೈನ್ಯವೇನೋ ಇತ್ತು. ಆದರೆ ಅಲ್ಲಿನ

ಕೈಗಾರಿಕಾ ಉತ್ಪನ್ನ ಕಡಿಮೆಯಾಗಿದ್ದು ಸೇನೆಗೆ ಹೆಚ್ಚಿನ ಸಾಮಗ್ರಿಗಳನ್ನು ಸರಬರಾಜು ಮಾಡುವ ಸ್ಥಿತಿಯಲ್ಲಿರಲಿಲ್ಲ. ಅಲ್ಲದೆ ಆಧುನಿಕ ಶಸ್ತ್ರಾಸ್ತ್ರಗಳ ಕೊರತೆಯಿತ್ತು. ಆದರೂ ಪೋಲೆಂಡಿನ ನಾಯಕರು ದೇಶದ ಅಶ್ವಸೇನೆಯ ಶಕ್ತಿಯಲ್ಲಿ ನಂಬಿಕೆಯಿಟ್ಟು, ಅದರ ಮೂಲಕ ಜರ್ಮನರ ಸುಸಜ್ಜಿತ ಸೇನೆಯನ್ನು ಎದುರಿಸಿ ಸೋಲಿಸಬಹುದೆಂಬ ಭಾವನೆ ಹೊಂದಿದ್ದರು. ಅಲ್ಲದೆ ಅವರು ಜರ್ಮನಿಯ ವಾಯುಬಲವನ್ನು ಕಡೆಗಣಿಸಿದ್ದರು.



ಗ್ವಾಡಲ್‌ಕನಾಲಿನಲ್ಲಿ ಅಮೆರಿಕನ್ ಸೈನಿಕರು

ಪೋಲಿಷ್ ಸೈನ್ಯವೇನೋ ಯುದ್ಧರಂಗದಲ್ಲಿ ಮಹಾ ಪರಾಕ್ರಮದಿಂದ ಹೋರಾಡಿತು. ಆದರೆ ಪೋಲೆಂಡನ್ನು ರಕ್ಷಿಸುವ ಕಾರ್ಯದಲ್ಲಿ ಸರಿಯಾದ ಕ್ರಮಗಳನ್ನು ಅದರ ದಳಪತಿಗಳು ಕೈಗೊಂಡಿರಲಿಲ್ಲ. ಆದ್ದರಿಂದ ಜರ್ಮನರನ್ನು ತಡೆಗಟ್ಟಬಹುದಾದ ಅನೇಕ ಅವಕಾಶಗಳನ್ನು ಪೋಲೆಂಡ್ ಕಳೆದುಕೊಂಡಿತು. ಸೆಪ್ಟೆಂಬರ್ 3ರ ವೇಳೆಗೆ ಜರ್ಮನರು ಪೋಲೆಂಡಿನ ಮುಖ್ಯ ಪಟ್ಟಣಗಳನ್ನು ವಶಪಡಿಸಿಕೊಂಡಿದ್ದರೂ ಹತ್ತು ದಿನಗಳ ಯುದ್ಧದ ಅನಂತರ ವಾರ್ಸಾ ನಗರ ಜರ್ಮನರ ವಶವಾಯಿತು. ಅದೇ ಸಮಯದಲ್ಲಿ ಪೂರ್ವದಿಂದ ಸೋವಿಯತ್ ಸೇನೆಗಳು ನುಗ್ಗಿ ಪೂರ್ವ ಪೋಲೆಂಡಿನ ಪೂರ್ವಭಾಗವನ್ನು ಆಕ್ರಮಿಸಿಕೊಂಡುವು. ಪೋಲೆಂಡ್ ರಾಷ್ಟ್ರ ಇತ್ತ ಜರ್ಮನಿ ಅತ್ತ ಸೋವಿಯತ್ ಒಕ್ಕೂಟ ಇವೆರಡರ ನಡುವೆ ಹಂಚಿಹೋಯಿತು.

ಪೋಲೆಂಡಿನ ವಿಭಜನೆಯ ಅನಂತರ ಸೋವಿಯತ್ ದೇಶ ಬಾಲ್ಟಿಕ್ ದೇಶಗಳಾದ ಲಿಥುವೇನಿಯ, ಲಾಟ್ವಿಯ, ಎಸ್ಟೋನಿಯಗಳನ್ನು ತನ್ನ ರಕ್ಷಣಾ ವ್ಯವಸ್ಥೆಯಲ್ಲಿ ಸೇರಿಸಿಕೊಂಡು ತನ್ನ ರಕ್ಷಣೆಗೆ ಅಗತ್ಯವಾದ ಭಾಗಗಳನ್ನು ಬಿಟ್ಟುಕೊಡಬೇಕೆಂದು ಫಿನ್‌ಲೆಂಡನ್ನು ಕೇಳಿತು. ಅದಕ್ಕೆ ಫಿನ್‌ಲೆಂಡ್ ಒಪ್ಪಲಿಲ್ಲ. ಆದ್ದರಿಂದ ಸೋವಿಯತ್ ಸೇನೆ ಫಿನ್‌ಲೆಂಡಿಗೆ ನುಗ್ಗಿತು. ಇಂಗ್ಲೆಂಡ್ ಮತ್ತು ಫ್ರಾನ್ಸ್‌ಗಳ ಸಹಾನುಭೂತಿ ಫಿನ್‌ಲೆಂಡ್ ಕಡೆಗಿತ್ತು. ಫಿನ್ನರು ಶೌರ್ಯದಿಂದ ಹೋರಾಡಿದರೂ ಗೆಲ್ಲಲಾಗಲಿಲ್ಲ. 1940ರ ಮಾರ್ಚ್ 13ರಂದು ಫಿನ್ನರು ಶರಣಾಗತರಾಗಿ ಸೋವಿಯತ್ ಷರತ್ತುಗಳನ್ನೆಲ್ಲ ಒಪ್ಪಿದರು.

ದೀರ್ಘಕಾಲದ ಪೂರ್ವಯೋಜನೆಯಿಲ್ಲದೆಯೇ ಹಿಟ್ಲರ್ ನಡೆಸಿದ ಆಕ್ರಮಣವೆಂದರೆ ನಾರ್ವೇ–ಡೆನ್ಮಾರ್ಕ್‌ಗಳ ಮೇಲಿನದು. ಆಗ ನಾರ್ವೇ ತಟಸ್ಥ ರಾಷ್ಟ್ರವಾಗಿತ್ತು. ಜರ್ಮನ್ ಹಡಗುಗಳು ನಾರ್ವೇ ತೀರದಲ್ಲಿ ಸುರಕ್ಷಿತವಾಗಿರಬಹುದೆಂದು ಭಾವಿಸಲಾಗಿತ್ತು. ಆದರೆ ಅದು ವಿದ್ಯಮಾನಗಳ ಮೇಲೆ ಕಣ್ಣಿಟ್ಟಿತ್ತು. ಹಿಟ್ಲರನ ಕೆಲವರು ಸಲಹೆಗಾರರು ನಾರ್ವೆಯ ಆಕ್ರಮಣ ಮಾಡಿಕೊಳ್ಳಬೇಕೆಂದು ಸಲಹೆ ಮಾಡಿದ್ದರು. ಜರ್ಮನಿಯ ಯುದ್ಧಕಾರ್ಯಾಚರಣೆಗೆ ನಾರ್ವೆಯ ನೆರೆಯ ರಾಜ್ಯವಾದ ಸ್ವೀಡನಿನ ಉಕ್ಕು ಅಗತ್ಯವಾಗಿತ್ತು. ನಾರ್ವೇ ಬ್ರಿಟನಿನ ವಶಕ್ಕೇನಾದರೂ ಹೋದರೆ ಈ ಸರಬರಾಜು ತಪ್ಪುವುದೆಂಬ ಅಂಜಿಕೆ ಜರ್ಮನಿಗೆ. ಬ್ರಿಟನು ನಾರ್ವೇ ತೀರದಲ್ಲಿದ್ದ ಜರ್ಮನ್ ಯುದ್ಧ ನೌಕೆಯೊಂದರ ಮೇಲೆರಗಿ ಅದರಲ್ಲಿದ್ದ ಯುದ್ಧ ಕೈದಿಗಳನ್ನು ಬಲವಂತದಿಂದ ವಶಪಡಿಸಿಕೊಂಡಾಗ ನಾರ್ವೇ ತನ್ನ ತಾಟಸ್ಥ್ಯನೀತಿಗೆ ಅನುಗುಣವಾಗಿ ಸುಮ್ಮನಿತ್ತು. ಬ್ರಿಟನಿನ ಕಾರ್ಯಾಚರಣೆಯಿಂದ ರೊಚ್ಚಿಗೆದ್ದ ಹಿಟ್ಲರ್ ನಾರ್ವೇ ಡೆನ್ಮಾರ್ಕುಗಳನ್ನು ಆಕ್ರಮಿಸಬೇಕೆಂದು ತತ್‌ಕ್ಷಣವೇ ತೀರ್ಮಾನಿಸಿದ. ಯಾವ ಸುಳಿವನ್ನೂ ಕೊಡದೆ ಜರ್ಮನ್ ಸೇನೆಗಳು ಈ ದೇಶಗಳನ್ನು ಮುತ್ತಿದುವು. ಯುದ್ಧ ಮಾಡಲಾರದೆ ಡೆನ್ಮಾರ್ಕ್ ಅಧೀನವಾಯಿತು. ನಾರ್ವೆಯ ಅನೇಕ ನಗರಗಳಲ್ಲಿ ಜರ್ಮನ್ ಸೈನಿಕರು ಸೇರಿ ಪಿತೂರಿಗಾರರೊಡನೆ ಕಲೆತು ನಾರ್ವೆಯ ರಕ್ಷಣಾಕ್ರಮವನ್ನು ನಾಶಪಡಿಸಿದರು. ದೇಶಾಭಿಮಾನಿಗಳಾದ ನಾರ್ವೀಜಿಯನರು ಹೋರಾಟ ನಡೆಸಿದರೂ ಪ್ರಯೋಜನವೇನೂ ಆಗಲಿಲ್ಲ. ಮಿತ್ರಪಡೆಗಳ ಸಹಾಯ ಸಮಯಕ್ಕೆ ಸರಿಯಾಗಿ ಒದಗಲಿಲ್ಲ. ಹಿಟ್ಲರ್ ನಾರ್ವೆಯಲ್ಲಿ ಒಂದು ಕೈಗೊಂಬೆ ಸರ್ಕಾರ ರಚಿಸಿ ಮೇಜರ್ ಕ್ವಿಸ್ಲಿಂಗನನ್ನು ಅದರ ಮುಖ್ಯಸ್ಥನಾಗಿ ನೇಮಿಸಿದ. ರಾಷ್ಟ್ರದ್ರೋಹಿ ಕೈಗೊಂಬೆಗಳಿಗೆ ಕ್ವಿಸ್ಲಿಂಗ್‌ಗಳೆಂಬ ಹೆಸರು ಬಂದದ್ದು ಈ ಕ್ವಿಸ್ಲಿಂಗನ ನಡೆವಳಿಕೆಯಿಂದಲೇ. ಜರ್ಮನರು ಹೆಚ್ಚಿನ ಪೂರ್ವಸಿದ್ಧತೆಯಿಲ್ಲದೆ ಆತುರದ ಕ್ರಮವಾಗಿ ನಾರ್ವೆಯನ್ನು ಮುತ್ತದಿದ್ದರೆ ಬಹುಶಃ ಈ ಯುದ್ಧದ ಗತಿಯೇ ಬದಲಾಗುತ್ತಿತ್ತೇನೋ. ತಟಸ್ಥ ರಾಷ್ಟ್ರವೊಂದರ ಆಕ್ರಮಣ ನಡೆಸಿದ ಅಪವಾದವೂ ಅವರ ಅಪರಾಧಗಳ ಪಟ್ಟಿಗೆ ಸೇರಿಕೊಂಡಿದ್ದಷ್ಟೇ ಅಲ್ಲ ; ಜರ್ಮನಿ ಸುಮ್ಮನಿದ್ದು ಮಿತ್ರರಾಷ್ಟ್ರಗಳೇ ನಾರ್ವೆಯನ್ನಾಕ್ರಮಿಸಿಕೊಳ್ಳಲು ಅವಕಾಶ ಕೊಟ್ಟಿದ್ದರೆ ಆಗ ಅದು ತನ್ನ ವಿಮಾನಪಡೆಯ ಸಾಮರ್ಥ್ಯವನ್ನು ಬಳಸಿಕೊಂಡು ಬ್ರಿಟನಿನ ನೌಕಾಪಡೆಯ ಮೇಲೆ ಎರಗಬಹುದಾಗಿತ್ತು. ನಾರ್ವೆಯಲ್ಲಿ ತಮ್ಮ ಆತ್ಮಗೌರವವನ್ನು ಕಳೆದುಕೊಳ್ಳಲೊಲ್ಲದ ಮಿತ್ರರಾಷ್ಟ್ರಗಳು ಅದಕ್ಕಾಗಿ ಬಲು ಹೆಚ್ಚಿನ ಬೆಲೆ ತೆರಬೇಕಾಗುತ್ತಿತ್ತು. ಜರ್ಮನರು ಡೆನ್ಮಾರ್ಕ್ ಹಾಗೂ ದಕ್ಷಿಣ ಸ್ವೀಡನಿನ ಮೂಲಕ ಪ್ರತೀಕಾರಕ್ರಮ ಕೈಕೊಳ್ಳುವುದು ಅಸಾಧ್ಯವೇನೂ ಆಗುತ್ತಿರಲಿಲ್ಲ. ನಾರ್ವೆಗೆ ಯುದ್ಧ ಸರಬರಾಜನ್ನು ಕಡಿದುಹಾಕಿ ಮಿತ್ರರಾಷ್ಟ್ರಗಳನ್ನು ಪೇಚಿನಲ್ಲಿ ಸಿಕ್ಕಿಸುವ ಅವಕಾಶವನ್ನು ಜರ್ಮನಿ ಕಳೆದುಕೊಂಡಿತೆನ್ನಬಹುದು.



ಆಫ್ರಿಕದ ಕದನದಲ್ಲಿ ಜರ್ಮನನೊಬ್ಬನ ಕೈಸೆರೆ

ನಾರ್ವೆಯಲ್ಲಾದ ಪರಾಭವ ಇಂಗ್ಲೆಂಡಿನಲ್ಲಿ ಬಹಳ ಕೋಲಾಹಲವನ್ನುಂಟು ಮಾಡಿತು. ಪಾರ್ಲಿಮೆಂಟಿನ ಒತ್ತಾಯದ ಫಲವಾಗಿ ಚೇಂಬರ್ಲಿನ್ ಚರ್ಚಿಲನಿಗೆ ಬ್ರಿಟನಿನ ಪ್ರಧಾನಿಯ ಪದವಿ ಒಪ್ಪಿಸಿದ. ಪಾರ್ಲಿಮೆಂಟಿನ ಮೂರು ಪಕ್ಷಗಳ ಸಂಮಿಶ್ರ ಸರ್ಕಾರ ರಚಿಸಿ, ಯುದ್ಧವನ್ನು ಯಶಸ್ವಿಯಾಗಿ ಕೊನೆಗೊಳಿಸಬೇಕೆಂದು ಚರ್ಚಿಲ್ ಘೋಷಿಸಿದ ದಿನವೇ (10ನೆಯ ಮೇ 1940) ಹಿಟ್ಲರನೂ ಪಶ್ಚಿಮ ಯೂರೋಪ್

ದಂಡಯಾತ್ರೆ ಪ್ರಾರಂಭಿಸಿದ. ಜರ್ಮನಿಯ ಮಿತ್ರತ್ವದಲ್ಲಿ ನಂಬಿಕೆ ಇಟ್ಟಿದ್ದ ಸಣ್ಣ ರಾಷ್ಟ್ರಗಳಾದ ಹಾಲೆಂಡ್ ಮತ್ತು ಬೆಲ್ಜಿಯಂಗಳ ಮೇಲೆ ವಿಮಾನ ಪಡೆಯ ಮೂಲಕ ಮತ್ತು ಭೂಮಾರ್ಗವಾಗಿ ಆಕ್ರಮಣ ನಡೆಸಿದ. ಆಕ್ರಮಣವೆಲ್ಲವೂ ವಿದ್ಯುದ್ವೇಗದಲ್ಲಿ ಸಂಭವಿಸಿದುವು. ಬೆಲ್ಜಿಯಂ ಮತ್ತು ಹಾಲೆಂಡಿನ ಸೈನ್ಯಗಳು ಒಂದುಗೂಡಬೇಕೆಂಬ, ಫ್ರೆಂಚ್ ಮತ್ತು ಬ್ರಿಟಿಷ್ ಪಡೆಗಳು ಅವುಗಳ ನೆರವಿಗೆ ಹೋಗಬೇಕೆಂಬ ಯೋಜನೆಯನ್ನು ರೂಪಿಸುವ ಮೊದಲೇ ಜರ್ಮನರು ಮುನ್ನುಗ್ಗಿ, ಅಧಿಕ ಪ್ರಮಾಣದಲ್ಲಿ ತಮ್ಮ ಸೈನ್ಯವನ್ನು ಇಳಿಸಿ ಅಲ್ಲಿನ ಮುಖ್ಯಪಟ್ಟಣಗಳನ್ನು ನಾಶಮಾಡಿದರು ; ಹಾಲೆಂಡಿನ ಮಧ್ಯಭಾಗವನ್ನಾಕ್ರಮಿಸಿ ಉತ್ತರ ದಕ್ಷಿಣಭಾಗಗಳನ್ನು ಪ್ರತ್ಯೇಕಿಸಿದರು. ಆಕ್ರಮಣ ನಡೆದ ಕೆಲವು ದಿನಗಳಲ್ಲಿ ಡಚ್ಚರು ಶರಣಾಗತರಾದರು.

ಹಾಲೆಂಡಿನ ಪತನಾನಂತರ ಬೆಲ್ಜಿಯಂ ಕಡೆ ಹಿಟ್ಲರನ ಸೇನೆಗಳು ನುಗ್ಗಿದವು. ಆ ಸೇನೆಗಳನ್ನು ತಡೆಯಲು ಬೆಲ್ಜಿಯಂಗೆ ಸಾಧ್ಯವಾಗಲಿಲ್ಲ. ಫ್ರಾನ್ಸಿನ ಮ್ಯಾಜಿನೊ ರಕ್ಷಣಾ ಸಾಲು ಜರ್ಮನ್ ಗಡಿಯ ಉದ್ದಕ್ಕೂ ಹಬ್ಬಿತ್ತೇ ವಿನಾ ಬೆಲ್ಜಿಯಂ ಗಡಿಯ ತನಕ ಹಬ್ಬಿರಲಿಲ್ಲ. ಜರ್ಮನರು ತಮ್ಮ ವಿಮಾನ ಪಡೆಯಿಂದ ಬೆಲ್ಜಿಯಂ ರಕ್ಷಣಾ ವ್ಯೂಹವನ್ನು ಭೇದಿಸಿ, ಮಿತ್ರರಾಷ್ಟ್ರಗಳ ಪ್ರಯತ್ನವನ್ನು ವಿಫಲಗೊಳಿಸಿದರು. ಅವುಗಳ ಸೇನೆಗಳು ಅಲ್ಲಿಂದ ತಪ್ಪಿಸಿಕೊಳ್ಳುವುದೇ ಅಸಾಧ್ಯದ ಕೆಲಸವಾಯಿತು. ಬೆಲ್ಜಿಯಂ ಸೇನೆ ಸಾಮರ್ಥ್ಯದಿಂದ ಹೋರಾಡಿದರೂ ನಿರ್ನಾಮವಾಗುವ ಸ್ಥಿತಿಗೆ ಬಂದು ಮೇ 27ರಂದು ಜರ್ಮನಿಗೆ ಶರಣಾಗತವಾಗದೆ ಅನ್ಯಥಾ ಮಾರ್ಗವಿರಲಿಲ್ಲ. ಮಿತ್ರಸೇನೆಗಳು ಮುಂದಿನ ದಾರಿ ಕಾಣದೆ ಹಿಮ್ಮೆಟ್ಟಿ ಡನ್‌ಕರ್ಕ್ ರೇವುಪಟ್ಟಣವನ್ನು ಸೇರಿದುವು. ಆಗ ಬ್ರಿಟಿಷ್ ನೌಕೆ ತನಗೆ ಸಾಧ್ಯವಾದ ಹಡಗು ದೋಣಿ ತೆಪ್ಪಗಳನ್ನೆಲ್ಲ ಉಪಯೋಗಿಸಿ, ಯುದ್ಧದಲ್ಲಿ ಸೋತು ಬಳಲಿ ಆಹಾರವಿಲ್ಲದೆ ಕಂಗೆಟ್ಟ ಬ್ರಿಟಿಷ್, ಫ್ರೆಂಚ್ ಮತ್ತು ಇತರ ಸೈನಿಕರನ್ನು ರಕ್ಷಿಸಿ ಬ್ರಿಟನಿಗೆ ಕೊಂಡೊಯ್ದಿತು. ಯುದ್ಧದ ಇತಿಹಾಸದಲ್ಲಿ ಇದೊಂದು ಸಾಹಸದ ಸಾಧನೆ. ಈ ಕಾರ್ಯದಲ್ಲಿ ಸೈನಿಕರನ್ನು ಉಳಿಸಲು ಸಾಧ್ಯವಾಯಿತೇ ವಿನಾ ಯುದ್ಧಸಾಮಗ್ರಿಗಳನ್ನು ತರಲು ಸಾಧ್ಯವಾಗಲಿಲ್ಲ. 700 ಟ್ಯಾಂಕುಗಳನ್ನೂ 2,400 ಫಿರಂಗಿಗಳನ್ನೂ 50,000 ಮೋಟಾರು ವಾಹನ



ಯುದ್ಧದಲ್ಲಿ ಬಳಲಿದ ಸೈನಿಕರ ಒಂದು ತಂಡ

ಗಳನ್ನೂ ಬ್ರಿಟನ್ ಕಳೆದುಕೊಂಡಿದ್ದರಿಂದ ಆದ ನಷ್ಟ ಅಪಾರ. ಈ ಪ್ರಕರಣದಲ್ಲಿ 13,000 ಸೈನಿಕರು ಪ್ರಾಣ ತೆತ್ತರು; ಮತ್ತೆ 40,000 ಜನ ಶತ್ರುವಿನ ಕೈಗೆ ಸಿಕ್ಕಿಬಿದ್ದರು.

ಬೆಲ್ಜಿಯಂ ಜರ್ಮನಿಯ ವಶವಾಗುವ ವೇಳೆಗೆ ಫ್ರಾನ್ಸಿನ ಕಡೆ ಜರ್ಮನರು ನುಗ್ಗಿದ್ದರು. ಅಷ್ಟರೊಳಗಾಗಲೇ ಫ್ರಾನ್ಸ್ ತನ್ನ 30 ಸೈನಿಕ ಪಡೆಗಳನ್ನು ಯುದ್ಧದಲ್ಲಿ ಕಳೆದುಕೊಂಡಿತ್ತು. ಬ್ರಿಟಿಷ್ ಸೈನಿಕರು ಫ್ರಾನ್ಸಿನಲ್ಲಿ ಹೆಚ್ಚಿನ ಪ್ರಮಾಣದಲ್ಲಿರ



ಈನ್ಯೂಜೀನುದಲ್ಲಿ ಜಪಾನೀಯರನ್ನು ಸದೆಬಡಿಯಲು ಹೊಂಚುಹಾಕುತ್ತಿರುವ ಮಿತ್ರ ಸೈನಿಕರು

ಲಿಲ್ಲ. ಇಂಥ ಸಂದಿಗ್ಧ ಸನ್ನಿವೇಶದಲ್ಲಿ ಫ್ರೆಂಚರ ಸೇನಾಪತಿ ಜನರಲ್ ವೇಗಾನ್ ದೇಶದ ಸೈನಿಕ ಬಲವನ್ನು ಕ್ರೋಡೀಕರಿಸಿ, ಅದರ ಸ್ವಲ್ಪ ಭಾಗವನ್ನು ಮ್ಯಾಜಿನೊ ಸಾಲಿನ ರಕ್ಷಣೆಗೆ ಕಾದಿರಿಸಿದ. ಜನರಲ್ ವೇಗಾನ್ ರಣತಂತ್ರದಲ್ಲಿ ನಿಪುಣನೆಂದು ಕೀರ್ತಿ ಪಡೆದಿದ್ದರೂ ಆತನ ವ್ಯೂಹರಚನೆಯಾಗುವ ಮೊದಲೇ ಜರ್ಮನ್ ವಾಹನ ಪಡೆಗಳು ಸೋಮ್ ನದಿಯನ್ನೂ ರೂವಾನ್ ನಗರವನ್ನೂ ತಲಪಿದ್ದುವು. ಸೇನ್ ನದಿಯನ್ನು ದಾಟಿದ್ದು ಜೂನ್ 10ರಂದು. ಆ ಸಮಭೂಮಿಯಲ್ಲಿ ಶತ್ರುಸೇನೆಯನ್ನು ತಡೆಯುವುದು ಅಸಾಧ್ಯವಾಯಿತು. ರಾಜಧಾನಿಯಾದ ಪ್ಯಾರಿಸ್ ಕಡೆ ಧಾವಿಸಲು ಶತ್ರುಸೇನೆಗಳಿಗೆ ಕಷ್ಟವಾಗಲಿಲ್ಲ. ಅಂದೇ ಮುಸೋಲಿನಿ ಫ್ರಾನ್ಸ್ ಮತ್ತು ಇಂಗ್ಲೆಂಡಿನ ಮೇಲೆ ಯುದ್ಧ ಘೋಷಿಸಿ ದಕ್ಷಿಣದ ಮಾರ್ಗವಾಗಿ ಫ್ರಾನ್ಸನ್ನು ಮುತ್ತಿದ. ಜೂನ್ 13ರಂದು ಪ್ಯಾರಿಸನ್ನು ಅರಕ್ಷಿತ ನಗರವೆಂದು ಘೋಷಿಸಲಾಯಿತು. 14ರಂದು ಜರ್ಮನರು ಪ್ಯಾರಿಸ್ ನಗರವನ್ನು ಪ್ರವೇಶಿಸಲು ಏನೂ ತೊಂದರೆಯಾಗಲಿಲ್ಲ. ಫ್ರಾನ್ಸಿನ ಕೀರ್ತಿಪ್ರತಿಷ್ಠೆಗಳು 15 ದಿನಗಳ ಯುದ್ಧದಲ್ಲಿಯೇ ಉಡುಗಿಹೋದುವು. ಈ ಸಮಯದಲ್ಲಿ ಸೈನಿಕದಳಪತಿಗಳ ಬೆಂಬಲ ಪಡೆದ ವೇಗಾನ್ ಜರ್ಮನರೊಡನೆ ಹೋರಾಡಿ ನಾಶವಾಗುವ ಮೊದಲೇ ಶಾಂತಿ ಸಂಧಾನ ಮಾಡುವುದು ಉತ್ತಮ ಮಾರ್ಗವೆಂದು ಮಂತ್ರಿಮಂಡಲಕ್ಕೆ ಒತ್ತಾಯ ಮಾಡಿದ. ಇದಕ್ಕೊಪ್ಪದ ಫ್ರಾನ್ಸಿನ ಪ್ರಧಾನಿ ರೇನೋ ರಾಜಿನಾಮೆಯಿತ್ತ. ಅವನ ಸ್ಥಾನದಲ್ಲಿ ಪೇಟನ್ ಪ್ರಧಾನಿಯಾದ. ವೇಗಾನನ ಸಲಹೆಯನ್ನು ಒಪ್ಪಿ ತಾನು ಸಂಧಾನಕ್ಕಾಗಿ ಸಿದ್ಧವಿರುವುದಾಗಿ ಜೂನ್ 16ರಂದು ಪೇಟನ್ ಸರ್ಕಾರ ತಿಳಿಸಿತು. ಹಿಟ್ಲರನ ಷರತ್ತುಗಳೆಲ್ಲವನ್ನೂ ಪೇಟನನ ಸರ್ಕಾರ ಜೂನ್ 22ರಂದು ಒಪ್ಪಿತು. ಸೋತ ಜರ್ಮನ್ ಪ್ರತಿನಿಧಿಗಳು 1918ರಲ್ಲಿ ಯಾವ ಸ್ಥಳದಲ್ಲಿ ಶರಣಾಗತಿ ಪತ್ರಕ್ಕೆ ಸಹಿ ಹಾಕಿದ್ದರೋ ಅಲ್ಲೇ ಈಗ ಫ್ರೆಂಚ್ ಪ್ರತಿನಿಧಿಗಳು ಶರಣಾಗತಿಯ ಪತ್ರಕ್ಕೆ ರುಜು ಹಾಕಬೇಕಾಯಿತು.

ಫ್ರಾನ್ಸಿನ ಪತನದ ಅನಂತರ ಜರ್ಮನರ ಮುಂದಿನ ಗುರಿ ಬ್ರಿಟನ್ ಎಂದು ಎಲ್ಲರೂ ತಿಳಿದಿದ್ದರು. ಆದರೆ ಆಗ ಹಿಟ್ಲರ್ ಬ್ರಿಟನನ್ನು ವಶಪಡಿಸಿಕೊಳ್ಳುವ ಯಾವ ಯೋಜನೆಯನ್ನೂ ಹೊಂದಿರಲಿಲ್ಲ. ಏಕೆಂದರೆ, ಬ್ರಿಟನಿನ ರಕ್ಷಣಾ ವ್ಯವಸ್ಥೆ ಕುಸಿದಿದ್ದು, ಅದು ಯುದ್ಧ ಮುಂದುವರಿಸುವ ಸ್ಥಿತಿಯಲ್ಲಿರಲಿಲ್ಲವೆಂದೂ ಅಲ್ಲಿನ ಸರ್ಕಾರ ಆದಷ್ಟು ಬೇಗ ಜರ್ಮನರೊಂದಿಗೆ ಒಪ್ಪಂದ ಮಾಡಿಕೊಳ್ಳುವ ಆತುರದಲ್ಲಿದೆಯೆಂದೂ ಹಿಟ್ಲರ್ ತರ್ಕಿಸಿದ್ದ. ಆದ್ದರಿಂದಲೇ ಜರ್ಮನ್ ವಾಯುಪಡೆ ಅತ್ತಕಡೆ ಕಣ್ಣುಹಾಯಿಸಬಾರದೆಂದು ಆಜ್ಞೆ ಮಾಡಿದ್ದ. ಯುದ್ಧ ಮುಂದುವರಿಸುವುದೇ ತನ್ನ ಧ್ಯೇಯವೆಂದು ಬ್ರಿಟಿಷ್ ಪ್ರಧಾನಿ ಚರ್ಚಿಲ್ ಘೋಷಿಸಿದಾಗಲೂ ಹಿಟ್ಲರ್ ಅದನ್ನು ಕೇವಲ ಬೆದರಿಕೆಯ ಕೂಗಾಟವೆಂದೂ ಬ್ರಿಟನಿನ ಅಶಕ್ತತೆಯ ಬಗ್ಗೆ ತನ್ನ ಅಭಿಪ್ರಾಯ ಸರಿಯೆಂದೂ ಸಾರಿದ. ಆದರೆ ಸ್ವಲ್ಪ ಕಾಲದಲ್ಲೇ ಆ ನಂಬಿಕೆ ನಂದಿಹೋಯಿತು. ಸುಮಾರು ಒಂದು ತಿಂಗಳ ಕಾಲ ಹಿಟ್ಲರ್ ಸುಮ್ಮನಿದ್ದ. ಆಮೇಲೆ ನಿಜಸ್ಥಿತಿ ಅರಿವಾಗಿ 1940ರ ಜುಲೈ 2ರಂದು ಬ್ರಿಟನಿನ ಮೇಲೆ ಆಕ್ರಮಣ ನಡೆಸುವ ಕ್ರಮದ ವಿವರವನ್ನು ಮೊದಲ ಬಾರಿಗೆ ತನ್ನ ದಂಡನಾಯಕರೊಡನೆ ಹಿಟ್ಲರ್ ಚರ್ಚಿಸಿದ. ಆಗಸ್ಟ್ ಮಧ್ಯಭಾಗದ ವೇಳೆಗೆ ಸೈನ್ಯ ಸಿದ್ಧವಾಗಿರಬೇಕೆಂದು ಆಜ್ಞೆ ನೀಡಲಾಯಿತು.



ಜರ್ಮನ್ ಶರಣಾಗತಿ (1945ರ ಮೇ 7)

ಜರ್ಮನ್ ಸೇನೆ ಈ ಕಾರ್ಯಾಚರಣೆಯ ಬಗ್ಗೆ ವಿಶೇಷ ತರಬೇತಿ ಪಡೆಯದಿದ್ದರೂ ಬ್ರಿಟನ್ ವಿಸ್ತಾರವಾದ ಸಾಗರ ತೀರವನ್ನು ಹೊಂದಿದ್ದರಿಂದ ಅದನ್ನು ಘಾತಿಸಲು ಉತ್ತಮ ಅವಕಾಶವಿತ್ತು. ಆಕ್ರಮಣಕ್ಕೆ ಮೊದಲು ವಿಮಾನದಾಳಿ ನಡೆಸುವುದು ಜರ್ಮನಿಯ ಉದ್ದೇಶ. ಅದರಂತೆ ಎಡೆಬಿಡದೆ ಜರ್ಮನ್ ವಿಮಾನಗಳು ಇಂಗ್ಲೆಂಡಿನ ಮೇಲೆ ದಾಳಿ ನಡೆಸಿದುವು. 1940ರ ಆಗಸ್ಟ್ 8ರಂದು ಆರಂಭವಾದ ದಾಳಿ ಅಕ್ಟೋಬರ್ ಕೊನೆಯ ತನಕ ನಿಲ್ಲಲಿಲ್ಲ. ಈ ವಿಮಾನಕದನಗಳಲ್ಲಿ ಜರ್ಮನಿಯ ವಿಮಾನಗಳು ವಿಶೇಷ ಸಂಖ್ಯೆಯಲ್ಲಿ ನಾಶವಾದುವು. ಇಂಗ್ಲೆಂಡಿನ ಕಡೆ ಹತರಾದ ವಿಮಾನಚಾಲಕರ ಸಂಖ್ಯೆ 375. ಈ ಕದನದಲ್ಲಿ ಜರ್ಮನಿ ಮತ್ತು ಬ್ರಿಟನ್‌ಗಳ ಬಲಾಬಲಗಳ ಸತ್ತ್ವಪರೀಕ್ಷೆಯಾಗಿ ಇಂಗ್ಲೆಂಡ್ ಉಳಿದುಕೊಂಡಿತು. ಜರ್ಮನಿ ಬಾಂಬಿನ ಮಳೆ ಸುರಿಸಿದಾಗ ಇಂಗ್ಲಿಷರು ತಮ್ಮ ಅಮೂಲ್ಯವಸ್ತುಗಳನ್ನೂ ಹೆಂಗಸರು ಮಕ್ಕಳನ್ನೂ ಸುರಕ್ಷಿತ ಪ್ರದೇಶಗಳಿಗೆ ಸಾಗಿಸಿ ಸತತವಾಗಿ ಬೀಳುತ್ತಿದ್ದ ಬೆಂಕಿಯನ್ನು ಧೈರ್ಯದಿಂದ ಎದುರಿಸಿದರು. ಕಾರ್ಖಾನೆಗಳಲ್ಲಿ ಹರಿಕೇನ್, ಸ್ಪಿಟ್‌ಫೈರ್ ಎಂಬ ಯುದ್ಧವಿಮಾನಗಳನ್ನು ಅವು ತಯಾರಾಗಿ ಸಿದ್ಧವಾಗುತ್ತಿದ್ದಂತೆಯೇ ಹಾರಿಸಿ ಶತ್ರುವಿನ ಉಪದ್ರವವನ್ನು ತಡೆಗಟ್ಟಲಾಯಿತು. ಬ್ರಿಟಿಷರ ಸಂಕಟವೇನೂ ಕಡಿಮೆಯಿರಲಿಲ್ಲ. ಅಪಾರ ನಷ್ಟ, ಆಹಾರದ ಅಭಾವ, ನಿರಂತರ ಸಾವುನೋವು ಈ ಯಾವುದಕ್ಕೂ ಎದೆಗೆಡದೆ ತಮ್ಮ ಒಳಗುದಿಗಳನ್ನು ಬದಿಗೊತ್ತಿ ಐಕಮತ್ಯದಿಂದ ಸೆಣಸಿ ನಿಂತು, ಅಮೆರಿಕ ಸಂಯುಕ್ತಸಂಸ್ಥಾನದಿಂದ ವಿಮಾನ, ಶಸ್ತ್ರಾಸ್ತ್ರ ಮತ್ತು ಆಹಾರ ಪದಾರ್ಥಗಳ ಸಹಾಯ ಪಡೆದು ಜಯಪ್ರದರಾದರು. ಆ ನಾಲ್ಕು ತಿಂಗಳ ವಿಮಾನದಾಳಿಯಲ್ಲಿ ಬ್ರಿಟನಿನ ಜನತೆಗೆ ನರಕದ ಅನುಭವವಾಯಿತು. ಸುಮಾರು 50,000 ಜನ ಸತ್ತರು; ಲಂಡನ್ ನಗರದಲ್ಲಿ ಸುಮಾರು 11 ಲಕ್ಷ ಮನೆಗಳು ನೆಲಸಮವಾದುವು. ಇಷ್ಟು ನಷ್ಟವಾದರೂ ಜರ್ಮನ್ ವಿಮಾನಗಳು ಬ್ರಿಟನಿನ ಕೈಗಾರಿಕಾ ಕೇಂದ್ರಗಳನ್ನು ನಾಶಪಡಿಸುವುದರಲ್ಲಾಗಲಿ ಅದರ ವಾಯುಬಲವನ್ನು ಕುಂಠಿತಗೊಳಿಸುವುದರಲ್ಲಾಗಲಿ ಗಣನೀಯ ಯಶಸ್ಸು ಪಡೆಯಲಿಲ್ಲ.

ಬ್ರಿಟನಿನ ಕದನ ವಿಶ್ವದ ಇತಿಹಾಸದಲ್ಲಿ ಚಿರಸ್ಮರಣೀಯ ಘಟನೆ. ಏಕೆಂದರೆ ಆ ಕದನದಲ್ಲಿ ಜಯಪ್ರದವಾಗಲು ಹಿಟ್ಲರ್ ಅನುಸರಿಸದ ತಂತ್ರವಿಲ್ಲ, ಉಪಯೋಗಿಸದ ಅಸ್ತ್ರವಿಲ್ಲ. ಇಷ್ಟಾದರೂ ಬ್ರಿಟನಿನ ಜನತೆ ಧೃತಿಗೆಡಲಿಲ್ಲ; ಅಪಾರ ಕಷ್ಟ ನಷ್ಟಗಳನ್ನು ಅನುಭವಿಸಿದ್ದರೂ ಶರಣಾಗತವಾಗಲಿಲ್ಲ. ಯುದ್ಧದ ಮೊದಲನೆಯ ಘಟ್ಟ ಮುಗಿದರೂ ಇಂಗ್ಲಿಷರನ್ನು ಸೋಲಿಸುವ ಭರವಸೆ ಹಿಟ್ಲರನಿಗೆ ಉಳಿಯಲಿಲ್ಲ.

ಬ್ರಿಟನ್ ತನ್ನ ದ್ವೀಪದ ರಕ್ಷಣೆಗೆ ತೊಡಗಿದ್ದಾಗ ಉತ್ತರ ಆಫ್ರಿಕದಲ್ಲಿ ಅದರ ಸ್ವಾಸ್ಥ್ಯಗಳನ್ನು ಕಬಳಿಸಬೇಕೆಂದಿದ್ದ ಮುಸೋಲಿನಿ ತನ್ನ ಸೇನೆಯನ್ನು ಈಜಿಪ್ಟಿನ ಕಡೆಗೆ ನುಗ್ಗಿಸಿದ. ಬ್ರಿಟಿಷ್ ಸೋಮಾಲಿ ಲ್ಯಾಂಡ್ ಇಟಲಿಯ ವಶವಾಯಿತು. ಯೂರೋಪಿನಲ್ಲಿ ಆಲ್ಬೇನಿಯವನ್ನು ಆಕ್ರಮಿಸಿ ಗ್ರೀಸ್ ದೇಶದ ಕಡೆಗೆ ನುಗ್ಗಿದಾಗ ಗ್ರೀಸಿನ ಜನತೆ ಶೌರ್ಯದಿಂದ ಹೋರಾಡಿ ಶತ್ರುವನ್ನು ತಡೆದದ್ದೇ ಅಲ್ಲದೆ ಆಲ್ಬೇನಿಯ ಗಡಿ ದಾಟಿಸಿ ಹಿಮ್ಮೆಟ್ಟಿಸಿದರು. ಈಜಿಪ್ಟಿನಲ್ಲಿ ಮಧ್ಯಪ್ರಾಚ್ಯದ ಮಹಾಸೇನಾನಿ ಜನರಲ್ ವೇವೆಲ್ ಇಟಾಲಿಯನರನ್ನು ಎದುರಿಸಲು ತನ್ನ ಸೈನ್ಯವನ್ನು ಸಜ್ಜುಗೊಳಿಸಿದ. ಸುಮಾರು 60 ದಿನಗಳ ಕಾಲ ಸತತವಾಗಿ ನಡೆದ ಕಾರ್ಯಾಚರಣೆಯಲ್ಲಿ ಇಟಾಲಿಯನರು ಸೋತು ಈಜಿಪ್ಟಿನ ಗಡಿ ತ್ಯಜಿಸಿದರು. ಜರ್ಮನ್ ಸೇನಾನಿಗಳೇ ವೇವಲನನ್ನು ಬ್ರಿಟನಿನ ಶ್ರೇಷ್ಠ ದಳಪತಿಯೆಂದು ಹೊಗಳಿದರು. ಅಲ್ಲಿನ ಕಾರ್ಯಾಚರಣೆಯಲ್ಲಿ ಭಾರತೀಯ ಸೈನಿಕರು ಶೌರ್ಯದಿಂದ ಹೋರಾಡಿ ಯಶಸ್ಸುಗಳಿಸಿದ ಕೀರ್ತಿ ಭಾರತೀಯ ಸೈನಿಕರಿಗೂ ಸಲ್ಲುತ್ತದೆ.

ಅತ್ತಕಡೆ ಗ್ರೀಸಿನಿಂದಲೂ ಇತ್ತಕಡೆ ಬ್ರಿಟಿಷ್ ಸೈನ್ಯದಿಂದಲೂ ಪರಾಭವಗೊಂಡ ಮುಸೋಲಿನಿಯ ನೆರವಿಗೆ ಜರ್ಮನಿ ಬಂತು. ಬಲ್ಗೇರಿಯ ಮತ್ತು ರೂಮೇನಿಯ ಆಕ್ರಮಣ ನಡೆಸಿ, ಯೂಗೊಸ್ಲಾವಿಯದ ಮೇಲೆ ಬಿದ್ದು ಅದರ ರಾಜಧಾನಿ ಬೆಲ್‌ಗ್ರೇಡಿನ ಮೇಲೆ ದಾಳಿ ನಡೆಸಿತು. ಆಲ್ಬೇನಿಯದಲ್ಲಿ ಯುದ್ಧ ಮಾಡುತ್ತಿದ್ದ ಗ್ರೀಕರನ್ನು ಎದುರಿಸಿ ಜರ್ಮನರು ಆ ಕಾರ್ಯಾಚರಣೆಯಲ್ಲಿ ಜಯಪ್ರದರಾದರು. ಶೂರ ಗ್ರೀಕ್ ಸೈನ್ಯ ಶರಣಾಗತವಾಯಿತು. ಗ್ರೀಕರ ನೆರವಿಗೆ ಹೋದ ಬ್ರಿಟಿಷ್ ಸೇನೆಯ ಸ್ಥಿತಿ ಶೋಚನೀಯವಾಯಿತು.

ಉತ್ತರ ಆಫ್ರಿಕದಲ್ಲಿ ವೇವೆಲ್ ಜಯಶೀಲನಾಗಿದ್ದರೂ ಅವನಿದ್ದ ಪ್ರದೇಶಗಳ ಹಿಂಭಾಗದಲ್ಲಿ ಇಟಾಲಿಯನ್ ಸೇನೆಗಳು ಇದ್ದೇ ಇದ್ದುವು. ವೇವಲನ ಒಂದು ಪಡೆ ಎರಿಟ್ರಿಯದ ಮೇಲೂ ಇನ್ನೊಂದು ದಕ್ಷಿಣ ಸೋಮಾಲಿಲ್ಯಾಂಡಿನ ಮೇಲೂ ನುಗ್ಗಿ ಇಟಾಲಿಯನ್ ಸೇನೆಗಳಿಗೆ ನಷ್ಟವುಂಟುಮಾಡಿದುವು. ಮುಸೋಲಿನಿಯ ಆಕ್ರಮಣಕ್ಕೆ ತುತ್ತಾಗಿದ್ದ ಇಥಿಯೋಪಿಯ 5 ವರ್ಷಗಳ ಅನಂತರ ವೇವೆಲನ ಕಾರ್ಯಾಚರಣೆಯಿಂದ ವಿಮೋಚನೆಹೊಂದಿತು.

ಉತ್ತರ ಆಫ್ರಿಕದಲ್ಲಿ ಬ್ರಿಟಿಷ್ ಸೇನೆಯ ಸಂಖ್ಯೆ ಕಡಿಮೆಯಾಗಿದ್ದ ಆ ಸಮಯದಲ್ಲಿ ಜರ್ಮನರು ಲಿಬಿಯದಲ್ಲಿ ದೊಡ್ಡ ಟ್ಯಾಂಕುಗಳ ಸೇನೆ ಇಳಿಸಿ, ಸಿಸಿಲಿಯಲ್ಲಿ ದೊಡ್ಡ ವಿಮಾನ ಪಡೆಯನ್ನು ಕೂಡಿಸಿ ದಾಳಿ ನಡೆಸಿದರು. ಈ ಕಾರ್ಯಾಚರಣೆಯಿಂದ ವೇವೆಲನ ಸೇನೆ ಕರಗಿತು. ಬ್ರಿಟಿಷರ ಶ್ರೇಷ್ಠ ದಳಪತಿಗಳು ಜರ್ಮನರ ಸೆರೆಯಾಳುಗಳಾದರು. ಸಿಸಿಲಿಯಿಂದ ಜರ್ಮನ್ ವಿಮಾನಗಳು ದಾಳಿ ನಡೆಸಿದ್ದರಿಂದ ಬ್ರಿಟಿಷ್ ನೌಕೆಗಳು ಆ ಭಾಗದಲ್ಲಿ ಚಲಿಸುವುದೇ ದುಸ್ತರವಾಯಿತು. ಇಷ್ಟಾದರೂ ಮಿತ್ರಪಕ್ಷ ಆಫ್ರಿಕದಲ್ಲಿ ಪಡೆದುಕೊಂಡಿದ್ದ ಪ್ರದೇಶಗಳನ್ನು ಜರ್ಮನಿ ಕಸಿದುಕೊಳ್ಳಲು ಸಾಧ್ಯವಾಗಲಿಲ್ಲ.

ಈ ಮಧ್ಯೆ ಹಿಟ್ಲರ್ ತನ್ನ ಯುದ್ಧನೀತಿಯನ್ನು ಬದಲಾಯಿಸಿದ. ಇಂಗ್ಲೆಂಡನ್ನು ಸೋಲಿಸಲಾರದೆ, ಯೂರೋಪಿನ ಪೂರ್ವ ರಾಷ್ಟ್ರಗಳ ಕಡೆ ತಿರುಗಿ ಸಣ್ಣ ರಾಷ್ಟ್ರಗಳನ್ನು ವಶಪಡಿಸಿಕೊಂಡು ಹಠಾತ್ತನೆ 1941ರ ಜೂನ್ 22ರಂದು ತನ್ನ ಸುಸಜ್ಜಿತ ಸೇನೆಯನ್ನು ಸೋವಿಯತ್ ಒಕ್ಕೂಟದ ಕಡೆಗೆ ತಿರುಗಿಸಿದ. ಅಂದೇ ಚರ್ಚಿಲ್

ಘೋಷಣೆಯೊಂದರಲ್ಲಿ ರಷ್ಯದ ನೆರವಿಗೆ ಬ್ರಿಟನ್ ಸಿದ್ಧವಿರುವುದಾಗಿ ತಿಳಿಸಿ, ಅಮೆರಿಕ ಸಂಯುಕ್ತ ಸಂಸ್ಥಾನವೂ ಅದರ ಬೆಂಬಲಕ್ಕೆ ಬರುವಂತೆ ಮಾಡಿದ.

ಹಿಟ್ಲರ್ ಸೋವಿಯತ್ ಒಕ್ಕೂಟದ ಮೇಲೆ ಅನಿರೀಕ್ಷಿತ ದಾಳಿ ನಡೆಸಿದಾಗ ಇತಿಹಾಸದ ಪಥವೇ ಬದಲಾಯಿತೆನ್ನಬಹುದು. ಹಿಂದೆ ನೆಪೋಲಿಯನ್ ಅನುಭವಿಸಿದ ತೇಜೋವಧೆಯಂತೆ ಹಿಟ್ಲರನಿಗೂ ಅದೇ ರೀತಿಯ ಅನುಭವ ಉಂಟಾಯಿತು. ಹಿಟ್ಲರ್ ತನ್ನ ಸೈನ್ಯವನ್ನು ಪೂರ್ವದ ಕಡೆ ತಿರುಗಿಸಿದಾಗ ಬ್ರಿಟನಿನ ಸ್ಥಿತಿ ಸುಧಾರಿಸಿತೆನ್ನಬಹುದು. ಹಿಟ್ಲರನಾದರೋ ಸೋವಿಯತ್ ದೇಶವನ್ನು ಸೋಲಿಸುವ ಧ್ಯೇಯವನ್ನು ಮೊದಲಿಂದಲೇ ಹೊಂದಿದ್ದ. 1939ರಲ್ಲಿ ಸೋವಿಯತ್ ಒಕ್ಕೂಟದೊಡನೆ ಯುದ್ಧವಿರುದ್ಧ ಒಪ್ಪಂದ ಮಾಡಿಕೊಂಡಿದ್ದು ಕೇವಲ ತಾತ್ಕಾಲಿಕವೆಂದು ಹಿಟ್ಲರ್ ಭಾವಿಸಿದ್ದ. ಏಕೆಂದರೆ ಆತ ಮೊದಲಿಂದಲೂ ಬಾಲ್‌ಷೆವಿಸಂನ ವಿರೋಧಿಯಾಗಿದ್ದು 1939ರ ಅನಂತರದ ಸ್ಟಾಲಿನನ ನಡೆವಳಿಕೆಯ ಬಗ್ಗೆ ಸಂಶಯ ಹೊಂದೇ ಇದ್ದ. ಸೋವಿಯತ್ ಒಕ್ಕೂಟದ ಮೇಲೆ ಯುದ್ಧ ಮಾಡುವ ನಿರ್ಧಾರ ಮಾಡಿ ಸರಿಯಾದ ಸಮಯಕ್ಕಾಗಿ ಕಾಯುತ್ತಿದ್ದ. ಅಂಥ ಸಮಯ 1941ರ ಜೂನ್ 22ರಂದು ಒದಗಿದಾಗ ಹಿಟ್ಲರ್ ಅದರ ಮೇಲೆ ತನ್ನ ಸೇನೆಗಳನ್ನು ನುಗ್ಗಿಸಿದ.

ಸೋವಿಯತ್-ಜರ್ಮನ್ ಯುದ್ಧವನ್ನು ಮಹಾಬಲರ ಯುದ್ಧವೆಂದು ಕರೆಯಲಾಗಿದೆ. ಯುದ್ಧತಂತ್ರದಲ್ಲಿ ನೈಪುಣ್ಯ ಪಡೆದಿದ್ದ, ಅದುವರೆಗೆ ನಡೆದ ಕದನಗಳಲ್ಲಿ ಜಯಶೀಲರಾಗಿದ್ದ ಜರ್ಮನ್ ಸೈನಿಕರಿಗೆ ಸೋವಿಯತ್ ಒಕ್ಕೂಟವನ್ನು ಸೋಲಿಸುವ ಕಾರ್ಯ ಕಷ್ಟವೆನಿಸಲಿಲ್ಲ. ಯುದ್ಧದ ಪ್ರಾರಂಭದಲ್ಲಿ ಅವರ ಕೈಯೇ ಮೇಲಾಗಿತ್ತು. ಹೊರವಲಯದ ಬಾಲ್ಟಿಕ್ ರಾಷ್ಟ್ರಗಳಲ್ಲಿ, ಪೂರ್ವಪೋಲೆಂಡ್ ಮತ್ತು ಬೆಸ್ಸರೇಬಿಯಗಳಲ್ಲಿ ಸೋವಿಯತ್ ಒಕ್ಕೂಟ ನಿರ್ಮಿಸಿಕೊಂಡಿದ್ದ ರಕ್ಷಣಾ ಪಂಕ್ತಿಗಳು ಅಲ್ಲಲ್ಲ ನಡೆದ ಘೋರ ಕಾಳಗಗಳಲ್ಲಿ ಕುಸಿದು ಬಿದ್ದುವು. ಜರ್ಮನ್ ಸೈನಿಕರು ಬಯಲು ಪ್ರದೇಶವಾದ ರಷ್ಯದ ಒಳಪ್ರಾಂತ್ಯಗಳಲ್ಲಿ ಪ್ರಸರಿಸಿ ಕೀಯೆಫ್, ಕಾರ್ಕೊಫ್ ನಗರಗಳನ್ನು ವಶಪಡಿಸಿಕೊಂಡು ಲೆನಿನ್‌ಗ್ರಾಡನ್ನೂ ರಾಜಧಾನಿಯಾದ ಮಾಸ್ಕೋ ನಗರವನ್ನೂ ಸುತ್ತುಗಟ್ಟಿ ದಕ್ಷಿಣದಲ್ಲಿ ಡೊನೆಟ್ಸ್ ನದೀಪಾತ್ರವನ್ನು ವಶಪಡಿಸಿಕೊಂಡು ಡಾನ್ ನದೀತೀರದ ರಾಸ್ಟಾವ್ ನಗರ ಪ್ರವೇಶಿಸಿದರು. ಆದರೆ ಸೋವಿಯತರು ಎದೆಗುಂದಲಿಲ್ಲ. ಶೌರ್ಯದಿಂದ ಕಾದಾಡಿ ರಾಸ್ಟಾವನ್ನು ಮತ್ತೆ ಸ್ವಾಧೀನ ಪಡಿಸಿಕೊಂಡರು. ಆದರೆ ಆ ವೇಳೆಗೆ ಅನೇಕ ಲಕ್ಷ ಚದರ ಮೈಲಿಗಳ ರಷ್ಯನ್ ಭೂಮಿ ಜರ್ಮನರ ವಶವಾಗಿತ್ತು. ಜರ್ಮನರು ಅಗಾಧ ಸಂಖ್ಯೆಯಲ್ಲಿ ಟ್ಯಾಂಕುಗಳನ್ನೂ ವಿಮಾನ ಬಲವನ್ನೂ ಉಪಯೋಗಿಸಿ ಉಕ್ರೇನ್ ಪ್ರದೇಶದತ್ತ ನುಗ್ಗಿದರು. ಕೈಗಾರಿಕಾ ಕೇಂದ್ರವಾದ ಉಕ್ರೇನ್ ಶತ್ರುವಶವಾದದ್ದು ಸೋವಿಯತ್ ಒಕ್ಕೂಟಕ್ಕೊದಗಿದ ದೊಡ್ಡ ವಿಪತ್ತು. ಆ ಪ್ರದೇಶ ಕೈಬಿಟ್ಟದ್ದರಿಂದ ಸೋವಿಯತರು ಯೂರಲ್ ಪ್ರಾಂತ್ಯದ ಕೈಗಾರಿಕೆಗಳನ್ನೂ ಬ್ರಿಟನ್ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನ ಕಳುಹಿಸುತ್ತಿದ್ದ ಯುದ್ಧ ಸಾಮಗ್ರಿಗಳನ್ನೂ ಅವಲಂಬಿಸಬೇಕಾಯಿತು.

ಸೋವಿಯತ್-ಜರ್ಮನ್ ಯುದ್ಧ ಇನ್ನೂ ವಿಸ್ತಾರಗೊಂಡಿತು. ಅತ್ತಕಡೆ ಜಪಾನು ಜರ್ಮನ್ ದಿಗ್ವಿಜಯದಿಂದ ಉತ್ಸಾಹಗೊಂಡು 1941ರ ಡಿಸೆಂಬರ್ 7ರಂದು ಹವಾಯಿ ದ್ವೀಪದಲ್ಲಿನ ಪರ್ಲ್ ಹಾರ್ಬರಿನಲ್ಲಿ ಅಮೆರಿಕದ ದೊಡ್ಡ ನೌಕಾಪಡೆಯ ಮೇಲೆ ಹಠಾತ್ತನೆ ದಾಳಿ ನಡೆಸಿದಾಗ ಅವರ ಅನೇಕ ಹಡಗುಗಳು ನಾಶಗೊಂಡುವು. ಇದರಿಂದ ಅಮೆರಿಕ ಸಂಯುಕ್ತ ಸಂಸ್ಥಾನದ ನೌಕಾಬಲ ಕುಂಠಿತವಾಯಿತೆನ್ನಬಹುದು. ಇದಾದ ಮೂರು ದಿನಗಳ ಅನಂತರ ಬ್ರಿಟಿಷರ ಪ್ರಸಿದ್ಧ ಯುದ್ಧ ನೌಕೆಗಳಾದ ಪ್ರಿನ್ಸ್ ಆಫ್ ವೇಲ್ಸ್ ಮತ್ತು ರಿಪಲ್ಸ್ ಜಪಾನೀಯರ ಬಾಂಬುಗಳಿಗೀಡಾಗಿ ಮುಳುಗಿಹೋದುವು. ಇದರಿಂದ ಪೆಸಿಫಿಕ್ ಮತ್ತು ಆಗ್ನೇಯ ಪ್ರದೇಶಗಳಲ್ಲಿ ಜಪಾನ್ ತನ್ನ ಆಕ್ರಮಣ ನಡೆಸಲು ಸುಲಭವಾಯಿತು. ಹಾಂಗ್‌ಕಾಂಗ್, ಮಲಯ ಮತ್ತು ಸಿಂಗಪುರಗಳು ಒಂದರ ಮೇಲೊಂದರಂತೆ ಜಪಾನೀಯರ ವಶವಾದುವು. ಅಮೆರಿಕ ಸಂಯುಕ್ತ ಸಂಸ್ಥಾನಕ್ಕೆ ಸೇರಿದ್ದ ಫಿಲಿಪೀನ್ ದ್ವೀಪಸಮುದಾಯದಲ್ಲಿ ಜನರಲ್ ಮೆಕಾರ್ಥರನ ನಾಯಕತ್ವದಲ್ಲಿ ಹೋರಾಟ ನಡೆಸಿದರೂ ಅದಕ್ಕೆ ಹೊಸ ಸೇನೆಯ ಬೆಂಬಲ ಬಾರದೆ ಹೋದ ಪ್ರಯುಕ್ತ ಆ ಸೇನೆಯೂ ಶತ್ರುವಿನ ವಶವಾಯಿತು. ಬಂಗಾಲದ ಗಡಿ ತನಕ ಬರ್ಮವನ್ನಾಕ್ರಮಿಸಿ ಬರ್ಮ ರಸ್ತೆ ಹಿಡಿದುಕೊಂಡು ಚೀನವನ್ನು ಬೇರ್ಪಡಿಸಿ, ಅದಕ್ಕೆ ಹೊರಗಿನ ಸಂಪರ್ಕವೇ ಇಲ್ಲದಂತೆ ಮಾಡಿದ ಜಪಾನೀಯರು ತತ್ಕಾಲದಲ್ಲಿ ಅಜೇಯರೆನಿಸಿಕೊಂಡಿದ್ದರು.

ಪರ್ಲ್ ಹಾರ್ಬರ್ ಪ್ರಕರಣದ ಅನಂತರ ಅಮೆರಿಕ ಸಂಯುಕ್ತ ಸಂಸ್ಥಾನ ಯುದ್ಧ ಘೋಷಣೆ ಮಾಡಿದಾಗ, ಜರ್ಮನರ ಜಲಾಂತರ್ಗಾಮಿ ನೌಕೆಗಳ ಹಾವಳಿ ಅಷ್ಟಿಷ್ಟಲ್ಲ. ಅನೇಕ ಜಲಾಂತರ್ಗಾಮಿಗಳು ದೂರದ ಅಮೆರಿಕ ತೀರದ ವರೆಗೂ ಪೂರ್ವದಲ್ಲಿ ಭಾರತದ ವರೆಗೂ ಸಂಚರಿಸಿ ಅನೇಕ ಹಡಗುಗಳನ್ನು ಮುಳುಗಿಸಿದುವು.

ಅತ್ತಕಡೆ ಜರ್ಮನ್-ಸೋವಿಯತ್ ಯುದ್ಧದಲ್ಲಿ ಸೋವಿಯತರು ಚಳಿಗಾಲದ ಅವಕಾಶವನ್ನು ಉಪಯೋಗಿಸಿಕೊಂಡು ಜರ್ಮನರ ಮೇಲೂ ಅವರ ಸಂಚಾರ ವ್ಯವಸ್ಥೆಗಳ ಮೇಲೂ ದಾಳಿ ನಡೆಸಿ ಅಪಾರ ಹಾನಿಯನ್ನುಂಟುಮಾಡಿದರು. ಜರ್ಮನರ ಸೇನೆ ಬಹಳ ಇಕ್ಕಟ್ಟಿನ ಪರಿಸ್ಥಿತಿಯಲ್ಲಿದ್ದಾಗ, ಹಿಟ್ಲರನೇ ಸಮಸ್ತ ಸೇನಾನಾಯಕತ್ವವನ್ನು ವಹಿಸಿಕೊಂಡಿದ್ದರಿಂದ ಅವರಿಗೆ ಸ್ಫೂರ್ತಿ ಬಂದಂತಾಗಿತ್ತು. ಲೆನಿನ್‌ಗ್ರಾಡನ್ನು ವಶಪಡಿಸಿಕೊಳ್ಳುವುದೇ ಜರ್ಮನ್ ಸೇನೆಯ ಗುರಿ. ಭೂಭಾಗದಿಂದ ಎಲ್ಲ ಕಡೆಗಳಿಂದಲೂ ಆ ಪಟ್ಟಣವನ್ನು ಮುತ್ತಿದ್ದರು. ಆಹಾರವಿಲ್ಲದೆ, ಯುದ್ಧ ಸಾಮಗ್ರಿಗಳಿಲ್ಲದೆ ಸತತವಾಗಿ ಜರ್ಮನರ ಫಿರಂಗಿ ಏಟಿಗೆ ತುತ್ತಾಗಿದ್ದ ಲೆನಿನ್‌ಗ್ರಾಡಿನೊಂದಿಗೆ ಸರ್ಕಾರ ನೇರ ಸಂಪರ್ಕ ಬೆಳೆಸಿ, ಆಹಾರ ಮತ್ತು ಯುದ್ಧ ಸಾಮಗ್ರಿಗಳನ್ನು ಸರಬರಾಜುಮಾಡಿದರು.

ಹಿಮಗಾಲ ಕಳೆದಾಗ ಸೋವಿಯತ್ ಸೇನೆಗಳು ಅಪಜಯ ಅನುಭವಿಸಬೇಕಾಯಿತು. 1942ರ ಮೇ ತಿಂಗಳಲ್ಲಿ ಕಾರ್ಕೊಫ್ ನಗರವನ್ನು ಮರಳಿ ಹಿಡಿಯುವ ಪ್ರಯತ್ನವೂ ಫಲಿಸಲಿಲ್ಲ. ದಕ್ಷಿಣದಲ್ಲಿ ಜರ್ಮನರು ಸೆವಾಸ್ಟೊಪೋಲ್ ಕ್ರಿಮಿಯಗಳನ್ನು ವಶಪಡಿಸಿಕೊಂಡು, ತಮ್ಮ ಸ್ಥಾನ ಭದ್ರಗೊಳಿಸಿ, ಡೊನೆಟ್ಸ್ ಮತ್ತು ಡಾನ್ ನದಿಗಳ ಮಧ್ಯ ಪ್ರದೇಶದಲ್ಲಿ ಮುನ್ನುಗ್ಗಿದರು. ಅಲ್ಲಿ ಸೇನೆ ಇಬ್ಭಾಗವಾಯಿತು. ಒಂದು ಭಾಗದ ಗುರಿ ದಕ್ಷಿಣ ಕಾಕಸಸ್ ಆದರೆ ಮತ್ತೊಂದಕ್ಕೆ ವೋಲ್ಗಾ ತೀರದ ಕೈಗಾರಿಕಾನಗರ ಸ್ಟಾಲಿನ್‌ಗ್ರಾಡ್ ಗುರಿ. ಇಲ್ಲಿ ಭಯಂಕರ ಯುದ್ಧವಾಗಿ ಒಂದೊಂದು ಹೆಜ್ಜೆ ಮುಂದುವರಿಯಲೂ ಉಭಯ ಪಕ್ಷಗಳಲ್ಲೂ ಸಾವಿರಾರು ಜನ ಸತ್ತರು. ಎರಡನೆಯ ಮಹಾಯುದ್ಧದಲ್ಲಿ ಸ್ಟಾಲಿನ್‌ಗ್ರಾಡ್ ಯುದ್ಧವೇ ಎರಡನೆಯ ಮಹಾ ಘಟ್ಟ. ಆ ನಗರ ಹಿಟ್ಲರನ ವಶವಾಗಿದ್ದರೆ ಮುಂದೆ ಜರ್ಮನರನ್ನು ತಡೆಯಲು ಸಾಧ್ಯವಾಗುತ್ತಿರಲಿಲ್ಲ. ಸೋವಿಯತರು ಯುದ್ಧ ಮುಂದುವರಿಸಲಾಗುತ್ತಿರಲಿಲ್ಲ. ಜರ್ಮನರು ನಿರಂತರವಾಗಿ ಮುನ್ನುಗ್ಗಿ ಸೂಯೆಜ್ ಕಾಲುವೆಯನ್ನು ವಶಪಡಿಸಿಕೊಂಡು ಭಾರತಕ್ಕೆ ಕೂಡ ಬರಬಹುದಾಗಿತ್ತು. ಯೂರಲ್ ಪರ್ವತಪ್ರದೇಶದ ಕೈಗಾರಿಕೆಗಳೆಲ್ಲ ಅವರ ವಶವಾಗುತ್ತಿದ್ದುವು. ಆದರೆ ಇದೊಂದೂ ಸಾಧ್ಯವಾಗಲಿಲ್ಲ. ಏಕೆಂದರೆ ಸುಸಜ್ಜಿತ ಸೋವಿಯತ್ ಸೇನೆ 5 ತಿಂಗಳ ಸತತ ಕದನದ ಅನಂತರ, ಶತ್ರುವಿಗೆ ಏನೊಂದೂ ಸುಳಿವು ಕೊಡದೆ ವೋಲ್ಗಾ ನದಿ ದಾಟಿ, ಶತ್ರು ಸೇನೆಯನ್ನು ಸುತ್ತುಗಟ್ಟಿ ಹಠಾತ್ತನೆ ಅದರ ಮೇಲೆ ಬಿತ್ತು. ಈ ಆಕ್ರಮಣವನ್ನು ಜರ್ಮನರು ನಿರೀಕ್ಷಿಸಿರಲಿಲ್ಲ. 1943ರ ಜನವರಿ 31ರಂದು ಜರ್ಮನರು ಅಧಿಕ ಸಂಖ್ಯೆಯಲ್ಲಿ ಶರಣಾಗತರಾದರು. ಉಳಿದ ರಂಗಗಳಲ್ಲೂ ಸೋವಿಯತರು ಜಯ ಗಳಿಸಿದರು. ಕಾಕಸಸ್ ಕಡೆಗೆ ನುಗ್ಗಿದ್ದ ಜರ್ಮನ್ ಸೇನೆ ವಿಪತ್ತನ್ನು ಎದುರಿಸಬೇಕಾಯಿತು. ಹೀಗಾಗಿ ಡಾನ್ ಪ್ರದೇಶ, ವೋಲ್ಗಾ ತೀರ ಮತ್ತು ಕಾಕಸಸ್ ಪರ್ವತ ಪ್ರದೇಶಗಳು ಶತ್ರುವಿನಿಂದ ವಿಮೋಚನೆ ಹೊಂದಿದುವು.

ದಕ್ಷಿಣದಲ್ಲಿ ವಿಜಯಿಗಳಾದ ಸೋವಿಯತರು ಉತ್ತರ ಮತ್ತು ಮಧ್ಯ ಪ್ರದೇಶಗಳಲ್ಲೂ ಜಯ ಗಳಿಸಿದರು. ಲೆನಿನ್‌ಗ್ರಾಡ್ ಮತ್ತು ಮಾಸ್ಕೋಗಳಿಗೆ ಸನ್ನಿಹಿತವಾಗಿದ್ದ ಆಕ್ರಮಣ ನಿವಾರಣೆಯಾಯಿತು. ಸ್ಟಾಲಿನ್‌ಗ್ರಾಡಿಗೆ ಒದಗಿದ್ದ ವಿಪತ್ತನ್ನು ನಿವಾರಿಸಿದ ಸೋವಿಯತ್ ಸೇನೆ ಉತ್ತರಕ್ಕೆ ಸರಿದು ಡೊನೆಟ್ಸ್ ನದೀಪಾತ್ರವನ್ನು ಜರ್ಮನರಿಂದ ಕಸಿದುಕೊಂಡಿತು.




ಉತ್ತರ ಆಫ್ರಿಕ ಯುದ್ಧರಂಗ

ಉತ್ತರ ಆಫ್ರಿಕದಲ್ಲೂ ಜರ್ಮನರ ಪ್ರಬಲ ಸೇನಾನಿ ರಾಮೆಲ್ ಮೊದಮೊದಲು ಮಿತ್ರಸೇನೆಗಳನ್ನು ಹಿಮ್ಮೆಟ್ಟಿಸಿ ಇಟಲಿ ಕಳೆದುಕೊಂಡಿದ್ದ ಭೂಭಾಗಗಳನ್ನು ವಶಪಡಿಸಿಕೊಂಡಿದ್ದ. ಆದರೆ 1942ರ ನವೆಂಬರ್ ತಿಂಗಳ ಆದಿಭಾಗದಲ್ಲಿ ನಡೆದ ಎಲ್ ಅಲಮೇನ್ ರಣರಂಗದಲ್ಲಿ ಸೋತು ಹಿಮ್ಮೆಟ್ಟಬೇಕಾಯಿತು. 1943ರ ಜನವರಿ 23ರಂದು ರಾಮೆಲನ ಬೆನ್ನಟ್ಟಿದ್ದ ಬ್ರಿಟಿಷ್ ಸೇನೆಗಳು ಟ್ರಿಪೋಲಿ ನಗರ ಹಿಡಿದುವು. ಅತ್ತ ಮೊರಾಕೋ ಆಲ್ಜೀರಿಯಗಳಿಂದ ಒಳನುಗ್ಗಿದ ಮಿತ್ರ ಸೇನೆಗಳು ಕ್ಯಾಸಬ್ಲಾಂಕ, ರಬಾತ್, ಬರಾನ್, ಆಲ್ಜಿಯರ್ಸ್‌ಗಳನ್ನು ವಶಪಡಿಸಿಕೊಂಡುವು. ಉತ್ತರ ಆಫ್ರಿಕದಲ್ಲಿದ್ದ ಫ್ರೆಂಚ್ ಸೇನೆ ಮಿತ್ರಪಕ್ಷಕ್ಕೆ ಸೇರಿತು. ಮಿತ್ರರಾಷ್ಟ್ರ ಪಡೆಗಳ ದಂಡನಾಯಕ ಐಸನ್‌ಹೌವರ್ ನೇತೃತ್ವದಲ್ಲಿ ಟ್ಯೂನೀಷಿಯವನ್ನು ವಶಪಡಿಸಿಕೊಳ್ಳುವುದೇ ಅವರಿಗಿದ್ದ ಧ್ಯೇಯ. ದೊಡ್ಡ ಪ್ರಮಾಣದಲ್ಲಿ ಹಿಟ್ಲರ್ ಭಾರೀ ಸೇನೆಯನ್ನು ಅದರ ರಕ್ಷಣೆಗೆ ಕಳುಹಿಸಿಕೊಟ್ಟ. ಟ್ಯೂನೀಷಿಯದಲ್ಲಿ ಜರ್ಮನರಿಗೆ ಅನೇಕ ಸೌಲಭ್ಯಗಳು ದೊರೆತಿದ್ದುವು. ರಾಮೆಲ್ ಆ ಪ್ರದೇಶದ ರಕ್ಷಣೆಗಾಗಿ ಹೊಸ ವ್ಯೂಹವೊಂದನ್ನು ಕಟ್ಟಿದ್ದ. ಆದರೆ ರಾಮೆಲ್ ಜರ್ಮನಿಗೆ ಹಿಂತಿರುಗಿದಾಗ ಯುದ್ಧದ ಬಣ್ಣವೇ ಬದಲಾಯಿತು. ಜರ್ಮನ್ ವ್ಯೂಹ ಛಿದ್ರಗೊಂಡು ಎರಡು ಕಡೆಗಳಿಂದ ಮಿತ್ರಸೇನೆಗಳು ಮುನ್ನುಗ್ಗಿ ಬಂದಾಗ, ಮೇ ತಿಂಗಳ 6ನೆಯ ತಾರೀಕು ಜರ್ಮನ್ ಸೈನ್ಯಪಂಕ್ತಿ ಸಂಪೂರ್ಣವಾಗಿ ಮುರಿದು ಮಾರನೆಯ ದಿನ ಟ್ಯೂನಿಸ್ ಮಿತ್ರಪಡೆಗಳ ಕೈವಶವಾಯಿತು. ಅದಾದ ಒಂದು ವಾರದೊಳಗೆ ಉತ್ತರ ಆಫ್ರಿಕದಲ್ಲಿದ್ದ ಸಮಸ್ತ ಶತ್ರು ಸೇನೆ ಕೈಸೆರೆಯಾಯಿತು. ಈ ದಂಡಯಾತ್ರೆಯಲ್ಲಿ ಭಾರತೀಯ ಯೋಧರು ವಹಿಸಿದ ಪಾತ್ರ ಮುಖ್ಯವಾದದ್ದು. ಅವರು ಜಗತ್ತಿನ ಗೌರವಕ್ಕೆ ಪಾತ್ರರಾದರು. ಟ್ಯೂನೀಷಿಯ ಕದನದಲ್ಲಿ ಜಯಗಳಿಸಿದ್ದರಿಂದ ಉತ್ತರ ಆಫ್ರಿಕನ್ ತೀರಪ್ರದೇಶವೆಲ್ಲ ಶತ್ರುಗಳಿಂದ ವಿಮೋಚನೆ ಹೊಂದಿತು. ಮಿತ್ರ ರಾಷ್ಟ್ರಗಳ ನೌಕಾಪಡೆ ಮೆಡಿಟರೇನಿಯನ್ ಸಮುದ್ರದಲ್ಲಿ ಸಾಗಲು ಮುಂದೆ ಯಾವ ತೊಂದರೆಯೂ ಇರಲಿಲ್ಲ.

1943ರ ಜನವರಿ ತಿಂಗಳಲ್ಲಿ ಕ್ಯಾಸಬ್ಲಾಂಕದಲ್ಲಿ ಸೇರಿದ್ದ ಸಮ್ಮೇಳನದಲ್ಲಿ ಚರ್ಚಿಲ್–ರೂಸ್ವೆಲ್ಟರು ಒಂದು ಘೋಷಣೆ ಹೊರಡಿಸಿ ಶತ್ರುರಾಷ್ಟ್ರಗಳ ನಾಯಕರು ಮಾತ್ರವಲ್ಲದೆ ಆ ರಾಷ್ಟ್ರಗಳೂ ಯಾವ ಪರತ್ತೂ ಇಲ್ಲದೆ ಶರಣಾಗತವಾಗಬೇಕೆಂದು ಹೇಳಿದ್ದರು. ಮೊದಲು ಜರ್ಮನಿಯನ್ನು ಗೆದ್ದು ಅನಂತರ ಜಪಾನಿನ ಮೇಲೆ ದಂಡಯಾತ್ರೆ ನಡೆಸಬೇಕೆಂಬುದು ಮಿತ್ರನಾಯಕರ ತೀರ್ಮಾನ; ಆದರೂ ಜಪಾನಿನ ಮೇಲೆ ಉಸ್ತುವಾರಿ ಸಡಿಲಿಸಲಿಲ್ಲ. ಉತ್ತರ ಆಫ್ರಿಕ ಮತ್ತು ಸೋವಿಯತ್ ಕ್ಷೇತ್ರಗಳಲ್ಲಿ ಹೆಚ್ಚಿನ ಚಟುವಟಿಕೆ ಇರಲಿಲ್ಲ.

ಯುದ್ಧದಲ್ಲಿ ಮುಂದಿನ ಪ್ರಕರಣವೆಂದರೆ ಸಿಸಿಲಿಯ ಆಕ್ರಮಣ. 1943ರ ಜುಲೈ 10ರಂದು ಸಿಸಿಲಿಯ ಆಕ್ರಮಣದಲ್ಲಿ ನೌಕೆಗಳೂ ವಿಮಾನಗಳೂ ಭಾಗವಹಿಸಿದ್ದುವು. ಜರ್ಮನರು ಬಹು ಬುದ್ಧಿವಂತಿಕೆಯಿಂದ ಹೋರಾಡಿ ಬ್ರಿಟಿಷರು ಮುಂದುವರಿಯುವುದನ್ನು ತಡೆದರಾದರೂ ಅಮೆರಿಕನರು ದ್ವೀಪದ ಪಶ್ಚಿಮಭಾಗವನ್ನು ಆಕ್ರಮಿಸಿ ಸುಮಾರು ಏಳು ಸಹಸ್ರ ಜರ್ಮನರನ್ನು ಸೆರೆಹಿಡಿದರು. ಆ ದ್ವೀಪದಲ್ಲಿದ್ದ ಎಲ್ಲ ಇಟಾಲಿಯನ್ ಸೈನ್ಯವೂ ಮಿತ್ರ ಸೇನೆಗಳ ಕೈಸೆರೆಯಾಯಿತು. ಸುಮಾರು 38 ದಿನಗಳ ಆಕ್ರಮಣದ ಅನಂತರ ಸಿಸಿಲಿ ಸಂಪೂರ್ಣವಾಗಿ ವಶವಾಯಿತು. ಸಿಸಿಲಿಯಲ್ಲಿ ಪಡೆದ ವಿಜಯದಿಂದ ಮಿತ್ರರಾಷ್ಟ್ರ ಪಡೆಗಳು ಇಟಲಿಯ ಕಡೆ ಮುನ್ನುಗ್ಗುವುದಕ್ಕೆ ಯಾವ ತಡೆಯೂ ಇರಲಿಲ್ಲ. ಇಟಲಿಯ ಫ್ಯಾಸಿಸ್ಟ್ ಆಡಳಿತ ಕುಸಿದು ಮುಸೋಲಿನಿಯ ಸರ್ವಾಧಿಕಾರ ಕೊನೆಗೊಂಡಿದ್ದು ಆಗ. ಇಟಲಿಯ ಮಾರ್ಷಲ್ ಬಾಡಾಲ್ಯೊ ಯುದ್ಧವನ್ನು ಮುಂದುವರಿಸುವೆನೆಂದು ಬಹಿರಂಗವಾಗಿ ಘೋಷಿಸಿದರೂ ಗುಪ್ತವಾಗಿ ಮಿತ್ರ ರಾಷ್ಟ್ರಗಳೊಡನೆ ಸಂಧಾನ ನಡೆಸಿದ. ಇಟಾಲಿಯನರು ಯಾವ ಪರತ್ತೂ ಇಲ್ಲದೆ ಸಂಪೂರ್ಣವಾಗಿ ಶರಣಾಗತರಾದರು.

ಮುಸೋಲಿನಿಯ ಪತನದಿಂದ ಜರ್ಮನಿಗೆ ಪೆಟ್ಟು ಬಿದ್ದಂತಾಯಿತು. ಆದರೆ ಅದರ ಪರಿಣಾಮ ಜರ್ಮನಿಗೆ ಹೆಚ್ಚೇನೂ ಹಾನಿಕರವಾಗಿರಲಿಲ್ಲ. ಆದರೆ ಪೂರ್ವದಲ್ಲಿ ಸೋವಿಯತರು ತಮ್ಮ ಮುನ್ನುಗ್ಗುವಿಕೆಯನ್ನು ಮುಂದುವರಿಸಿದಾಗ, ಜರ್ಮನರು ತಾವು ವಶಪಡಿಸಿಕೊಂಡಿದ್ದ ಪಟ್ಟಣಗಳನ್ನು ಬಿಡಬೇಕಾಯಿತು. ಖರ್ಸ್ಕ್ ನಗರದಲ್ಲಿ ಒಂದು ವಾರ ಕದನ ನಡೆದು ಜರ್ಮನರು ಸಂಪೂರ್ಣ ಸೋತರು. 1944ರ ಆದಿಭಾಗದ ಹೊತ್ತಿಗೆ ಸೋವಿಯತರು ಜರ್ಮನರನ್ನು ಲೆನಿನ್‌ಗ್ರಾಡ್ ಪ್ರಾಂತ್ಯದಿಂದ ಓಡಿಸಿದರು. ಉತ್ತರ ರಂಗದಲ್ಲಿ ಜರ್ಮನ್ ಸೇನಾ ಕೇಂದ್ರವಾದ ನಾವ್‌ಗೊರಾಡ್ ನಗರವೂ ಜರ್ಮನರ ಕೈಬಿಟ್ಟಿತು. ದಕ್ಷಿಣದಲ್ಲಿ ಸೋವಿಯತರು ಪೂರ್ವ ಪೋಲೆಂಡ್ ಗಡಿ ದಾಟಿ ಲುಕ್ ನಗರವನ್ನು ವಶಪಡಿಸಿಕೊಂಡರು. ಕ್ರಿಮಿಯ ಸೋವಿಯತರ ಕೈಸೇರಿದ್ದು ಏಪ್ರಿಲಿನಲ್ಲಿ. ಹೀಗಾಗಿ ಸೋವಿಯತ್ ಸೇನೆ ಎಲ್ಲ ಕ್ಷೇತ್ರಗಳಲ್ಲೂ ಮುಂದುವರಿಯಿತು. ದಕ್ಷಿಣದಲ್ಲಿ ರೂಮೇನಿಯ ಮತ್ತು ಪೋಲೆಂಡ್ ಗಡಿ ದಾಟಿದರಲ್ಲದೆ ಉತ್ತರದಲ್ಲಿ ಎಸ್ತೋನಿಯ ಗಡಿಗೆ ಸಮೀಪದಲ್ಲಿದ್ದರು. ಜರ್ಮನರನ್ನು ಹಿಮ್ಮೆಟ್ಟಿಸಿದರೂ ಸೋವಿಯತರು ಬಿಡಲಿಲ್ಲ. ಅವರನ್ನು ಹಿಂಬಾಲಿಸಿ ರೂಮೇನಿಯ, ಹಂಗರಿ ಮೊದಲಾದ ದೇಶಗಳನ್ನು ಜರ್ಮನರ ಅಧೀನದಿಂದ ತಪ್ಪಿಸಿ ತಮ್ಮ ಕಡೆಗೆ ಸೇರಿಸಿಕೊಂಡರು. 1944ರ ಜೂನಿನಲ್ಲಿ ಬ್ರಿಟಿಷರೂ ಅಮೆರಿಕನರೂ ಯೂರೋಪಿಗೆ ನುಗ್ಗಿ ಪ್ಯಾರಿಸನ್ನು ವಶಪಡಿಸಿಕೊಂಡು ಸೆಪ್ಟೆಂಬರ್ ವೇಳೆಗೆ ಜರ್ಮನಿಯ ಗಡಿ ಮುಟ್ಟಿದರು.




ಜರ್ಮನಿಯ ಆಕ್ರಮಣ

1944 ಅಂತ್ಯವಾಗುವ ಹೊತ್ತಿಗೆ ಜರ್ಮನಿಯ ಸ್ಥಿತಿ ಸಂಪೂರ್ಣ ಕೆಟ್ಟಿತ್ತು. ಅದು ಯೂರೋಪಿನ ಯಾವ ಪ್ರದೇಶದಲ್ಲೂ ನಿಂತು ಹೋರಾಡುವ ಸ್ಥಿತಿಯಲ್ಲಿರಲಿಲ್ಲ. ಸೋವಿಯತ್ ಸೇನೆ ವಾರ್ಸಾ ನಗರವನ್ನು ಹಿಡಿದಿದ್ದು 1945ರ ಜನವರಿ 17ರಂದು. ಆ ತಿಂಗಳ ಅಂತ್ಯಕ್ಕೆ ಲಿಥೂವೇನಿಯ ಜರ್ಮನರಿಂದ ಬಿಡುಗಡೆ ಹೊಂದಿತು. ವಿಮೋಚನೆಗೊಂಡ ಪೋಲೆಂಡಿನಲ್ಲಿ ಸೋವಿಯತರಿಂದ ಒಂದು ಸ್ವತಂತ್ರ ಸರ್ಕಾರ ಸ್ಥಾಪಿತವಾಯಿತು. ಪಶ್ಚಿಮ ದಿಕ್ಕಿನಿಂದ ಮಿತ್ರಸೇನೆಗಳು ಬೆಲ್ಜಿಯಂ ಆಕ್ರಮಿಸಿ ಜರ್ಮನಿಯ ಒಳಹೊಕ್ಕುವು. 1945ರ ಆರಂಭದಲ್ಲಿ ಸೋವಿಯತರು ಜರ್ಮನಿಯೊಳಗೆ ನುಗ್ಗಿದರು. ಕೈಗಾರಿಕಾ ಕೇಂದ್ರ ರೂರ್ ಅವರ ವಶವಾದ್ದು ಏಪ್ರಿಲ್‌ನಲ್ಲಿ. ಏಪ್ರಿಲ್ 13ರಂದು ಅವರು ವಿಯನ್ನವನ್ನು ಹಿಡಿದು ವೇಗದಿಂದ ಮುನ್ನುಗ್ಗಿ 28ರಂದು ಬರ್ಲಿನನ್ನು ಮುತ್ತಿದರು. ಶತ್ರುಗಳ ಕೈಯಲ್ಲಿ ಸಿಕ್ಕಿಬೀಳುವುದು ಖಂಡಿತವೆಂಬುದನ್ನರಿತ ಹಿಟ್ಲರ್ ಏಪ್ರಿಲ್ 30ರಂದು ಆತ್ಮಹತ್ಯೆ

ಮಾಡಿಕೊಂಡ. ಜರ್ಮನಿಯ ಯುದ್ಧ ನಾಯಕರು ಶರಣಾಗತರಾಗಲಾಗಿ ಯುದ್ಧ ಕೊನೆಗೊಂಡಿತು.

ಸ್ವತಂತ್ರ ಫ್ರಾನ್ಸಿನ ಸರ್ಕಾರದ ಮುಖ್ಯಾಧಿಕಾರಿ ಜನರಲ್ ಡ ಗಾಲನ ನೇತೃತ್ವದಲ್ಲಿ ಜರ್ಮನರೊಡನೆ ಹೋರಾಡಲು ಪಣ ತೊಟ್ಟು ಫ್ರೆಂಚ್ ಜನತೆಯೂ ಯೂಗೊಸ್ಲಾವಿಯದ ಮಾರ್ಷಲ್ ಟೀಟೋ ಮತ್ತು ಅವನ ಅನುಯಾಯಿಗಳೂ ಗುಪ್ತ ಸಂಘಗಳೂ ಗೆರಿಲ್ಲಾ ಯೋಧರೂ ಹಿಟ್ಲರನ ಸೋಲಿಗೆ ಕಾರಣರೆಂಬುದನ್ನು ಮರೆಯುವಂತಿಲ್ಲ. ಜರ್ಮನಿಯ ಆಕ್ರಮಣಕ್ಕೊಳಗಾದ ಮೇಲೆ ಯುರೋಪಿನ ಯಾವ ಪ್ರದೇಶದಲ್ಲೂ ಜರ್ಮನ್ ಅಧಿಕಾರಿಗಳಿಗೆ ನೆಮ್ಮದಿ ಇರಲಿಲ್ಲ. ತಾವು ಆಕ್ರಮಿಸಿದ ರಾಷ್ಟ್ರಗಳಲ್ಲಿ ಜನತೆಯ ಸಹಕಾರ ಸಹಾಯಗಳನ್ನು ಪಡೆಯಲು ಜರ್ಮನರು ಎಷ್ಟು ಹೆಣಗಾಡಿದರೂ ಅವರಿಗೆ ಯಾವ, ಯಾರ ಬೆಂಬಲವೂ ಸಿಗಲಿಲ್ಲ. ಈ ಜನತೆಯ ಚಳವಳಿ ಮಿತ್ರ ಸೇನೆಗಳಿಗೆ ಉತ್ತೇಜನಕಾರಿಯಾದ್ದರಿಂದಲೇ ಅವು ಜರ್ಮನಿಯನ್ನು ಸೋಲಿಸಲು ಸಾಧ್ಯವಾಯಿತು.

**ಚೀನ-ಜಪಾನ್ ಯುದ್ಧ** (1937-45) : ಜಪಾನು ಆಧುನಿಕ ರಾಷ್ಟ್ರವಾದ ಮೇಲೆ ತನ್ನ ಸೈನ್ಯವನ್ನು ಹೆಚ್ಚಿಸಿಕೊಂಡು, ಮಿಲಿಟರಿ ಸಂಪ್ರದಾಯ ಬೆಳೆಸಿಕೊಂಡು, ತನಗೆ ಸಮೀಪದಲ್ಲಿದ್ದ ರಾಷ್ಟ್ರಗಳ ಮೇಲೆ ಆಕ್ರಮಣ ಪ್ರಾರಂಭಿಸಿತು. ಆ ಆಕ್ರಮಣನೀತಿಯ ಉದಾಹರಣೆಯಾಗಿ 1894ರಷ್ಟು ಹಿಂದೆಯೇ ನಡೆದ ಚೀನ-ಜಪಾನ್ ಯುದ್ಧವನ್ನೂ 1905ರಲ್ಲಿ ನಡೆದ ರಷ್ಯ-ಜಪಾನ್ ಯುದ್ಧವನ್ನೂ ಉಲ್ಲೇಖಿಸಬಹುದು.

1931ರ ಸೆಪ್ಟೆಂಬರ್ 18ರಂದು ನಡೆದ ಮೂಕ್‌ಡೆನ್ ಘಟನೆಯೇ 1937-45ರ ಚೀನ-ಜಪಾನ್ ಯುದ್ಧಕ್ಕೆ ನಾಂದಿಯಾಯಿತು. ಆಗ ಜಪಾನು ಮೂಕ್‌ಡೆನ್ ಪಟ್ಟಣವನ್ನು ವಶಪಡಿಸಿಕೊಂಡು ಚೀನದ ಕಡೆ ಆಕ್ರಮಣ ನಡೆಸಲು ಹವಣಿಸಿತು. ಮಂಚೂರಿಯ ದುರಾಕ್ರಮಣದ ಬಗ್ಗೆ ರಾಷ್ಟ್ರಕೂಟದ ಮಧ್ಯಸ್ಥಿಕೆ ಮಾಡಬೇಕೆಂದು ಚೀನ ಕೇಳಿಕೊಂಡಿತು. ಆದರೆ ಅದು ಮಂಚೂರಿಯ ಸಮಸ್ಯೆಯನ್ನು ಕೂಲಂಕಷವಾಗಿ ವಿಚಾರಿಸಲು ಒಂದು ಸಮಿತಿಯನ್ನು ನೇಮಿಸಿತೇ ವಿನಾ ಜಪಾನಿನ ಆಕ್ರಮಣ ಧೋರಣೆಯನ್ನು ಖಂಡಿಸಲಿಲ್ಲ. ಅದರ ಸಾಮ್ರಾಜ್ಯಷಾಹಿ ನೀತಿಯನ್ನು ಮೊಟಕು ಮಾಡಲೂ ಯಾವ ಆಸಕ್ತಿಯನ್ನೂ ತೋರಿಸಲಿಲ್ಲ. ಆ ಸಂಸ್ಥೆಯ ಪ್ರಮುಖ ಸದಸ್ಯ ರಾಷ್ಟ್ರಗಳಾದ ಬ್ರಿಟನ್ ಮತ್ತು ಅಮೆರಿಕ ಸಂಯುಕ್ತಸಂಸ್ಥಾನ ಕೂಡ ಅತ್ತ ಕಡೆ ತಮ್ಮ ಗಮನ ಹರಿಸಲಿಲ್ಲ. ಅದರ ದೌರ್ಬಲ್ಯವನ್ನೂ ಬ್ರಿಟನ್ ಮತ್ತು ಅಮೆರಿಕ ಸಂಯುಕ್ತ ಸಂಸ್ಥಾನದ ಔದಾಸೀನ್ಯವನ್ನೂ ಗಮನಿಸಿದ ಜಪಾನೀ ನಾಯಕರು ಆಕ್ರಮಣನೀತಿಯನ್ನು ಮುಂದುವರಿಸಲು ನಿರ್ಧರಿಸಿದರು. ಜಪಾನು ರಾಷ್ಟ್ರಕೂಟದ ಸದಸ್ಯತ್ವವನ್ನು ತ್ಯಜಿಸಿ, ಮಂಚೂರಿಯವನ್ನು ಪೂರ್ಣವಾಗಿ ಆಕ್ರಮಿಸಿ ಅಲ್ಲಿ ಪ್ರಬಲ ಸೇನೆಯೊಂದನ್ನಿರಿಸಿತು. ಈ ಅನ್ಯಾಯದ ಆಕ್ರಮಣವನ್ನು ತಡೆಯಲು ರಾಷ್ಟ್ರಕೂಟ ಯಾವ ಕ್ರಮವನ್ನೂ ಕೈಗೊಳ್ಳಲಿಲ್ಲ.

ಇಷ್ಟಕ್ಕೇ ಜಪಾನ್ ಸುಮ್ಮನಿರಲಿಲ್ಲ. ಅಂತಃಕಲಹಗಳಿಂದ ದುರ್ಬಲವಾಗಿದ್ದ ಚೀನಕ್ಕೆ ಸೇರಿದ ಜಿಹೋಲ್ ಮತ್ತಿತರ ಪ್ರಾಂತ್ಯಗಳನ್ನೂ ಮುಂದಿನ ಎರಡು ಮೂರು ವರ್ಷಗಳಲ್ಲಿ ವಶಪಡಿಸಿಕೊಂಡಿತು. 1937ರ ಜುಲೈ 7ರಂದು ಜಪಾನು ಚೀನದ ಮೇಲೆ ದಂಡಯಾತ್ರೆ ಪ್ರಾರಂಭಿಸಿತು. ಈ ಆಕ್ರಮಣವನ್ನು ತಡೆಯಬೇಕೆಂದು ಚೀನದ ಅಧ್ಯಕ್ಷ ಚಿಯಾಂಗ್ ಕೈ-ಷೇಕ್ ಮಾಡಿದ ಮನವಿಗೆ ರಾಷ್ಟ್ರಕೂಟದಲ್ಲಾಗಲಿ ಇತರ ರಾಷ್ಟ್ರಗಳಲ್ಲಾಗಲಿ ಮನ್ನಣೆ ದೊರೆಯಲಿಲ್ಲ. ಆತ ಮಾಡಿದ ಪ್ರಾರ್ಥನೆ ವ್ಯರ್ಥವಾಯಿತು. ಆದರೂ ಯಾರ ಸಹಾಯವೂ ಇಲ್ಲದೆ ಯುದ್ಧ ಮಾಡಲು ಚಿಯಾಂಗ್ ನಿಶ್ಚಯಿಸಿದ. ಈ ದೃಢ ಸಂಕಲ್ಪದಿಂದಲೇ ಸುಮಾರು 8 ವರ್ಷಗಳ ಕಾಲ ಜಪಾನಿನೊಡನೆ ಸೆಣಸಾಡಲು ಸಾಧ್ಯವಾಯಿತು.




ನಾರ್ಮಂಡಿ ಕದನ

ಸುಮಾರು 3 ತಿಂಗಳಲ್ಲಿ ಚೀನ ಸೋತು ಈ ಯುದ್ಧ ಮುಗಿಯುವುದು ಖಂಡಿತವೆಂದು ಜಪಾನೀ ನಾಯಕರು ಭಾವಿಸಿದ್ದರು. ಆದ್ದರಿಂದ ಜಪಾನಿನ ಸೇನಾನಿಗಳು ಅಲ್ಪಕಾಲದ ಯುದ್ಧಕ್ಕೆ ಸರಿಹೊಂದುವ ಯೋಜನೆ ರೂಪಿಸಿ ಆಕ್ರಮಿತ ಪ್ರದೇಶಗಳಲ್ಲಿ ಚೀನೀಯರ ಸಹಕಾರದಿಂದ ಆಡಳಿತ ವ್ಯವಸ್ಥೆ ಏರ್ಪಡಿಸಲು ಯತ್ನಿಸಿದ್ದರು. ಆದರೆ ಯುದ್ಧ ಆರಂಭವಾದ ಸ್ವಲ್ಪ ಕಾಲದಲ್ಲೇ ಆ ನಂಬಿಕೆ ಮಾಯವಾಗಿ ದೀರ್ಘ ಕಾಲದ ಯುದ್ಧವನ್ನೇ ಮಾಡಬೇಕಾಯಿತು.

ಯುದ್ಧದ ಪ್ರಾರಂಭದಲ್ಲಿ ಜಪಾನೀಯರು ಚೀನದ ಉತ್ತರದಲ್ಲಿ ದಾಳಿ ಆರಂಭಿಸಿದರು. ಚೀನೀಯರು ಅವರ ಮುನ್ನಡೆಯನ್ನು ತಡೆಯುವುದರಲ್ಲಿ ಯಶಸ್ವಿಯಾದರೂ ಕೊನೆಯಲ್ಲಿ ಉತ್ತರ ಪ್ರದೇಶಗಳನ್ನು ಬಿಟ್ಟುಕೊಟ್ಟು ಹಿಂತೆಗೆಯಬೇಕಾಯಿತು. 1937ರ ಆಗಸ್ಟ್ 13ರಂದು ಜಪಾನೀ ಸೇನೆಗಳು ಷಾಂಘೈ ಪಟ್ಟಣವನ್ನು ಮುತ್ತಿದಾಗ ಚೀನೀಯರು ಅದನ್ನು ರಕ್ಷಿಸಲು ಹೋರಾಡಿದರು. ಸುಮಾರು 3 ತಿಂಗಳ ಕಾಲ ಜಪಾನೀಯರ ಭೂ, ನೌಕಾ, ವಾಯು ಸೇನೆಗಳನ್ನು ಸತತವಾಗಿ ಎದುರಿಸಿ ಹೋರಾಡಿದರು. ಆದರೆ ಜಪಾನೀಯರು ಅಧಿಕ ಸಂಖ್ಯೆಯಲ್ಲಿ ಮುನ್ನುಗ್ಗಿದಾಗ ಚೀನೀಯರು ಆ ಪಟ್ಟಣವನ್ನು ತ್ಯಜಿಸಬೇಕಾಯಿತು. ಮುಂದೆ ಪಶ್ಚಿಮ ದಿಕ್ಕಿನಲ್ಲಿ ಮುಂದುವರಿದು ಜಪಾನೀಯರು ರಾಜಧಾನಿ ನ್ಯಾನ್‌ಕಿಂಗನ್ನು ವಶಪಡಿಸಿಕೊಂಡರು. ಕ್ಯಾಂಟನ್ ನಗರ ಕೈಬಿಟ್ಟಿತು. ಸಮುದ್ರ ತೀರದ ಎಲ್ಲ ರೇವು ಪಟ್ಟಣಗಳೂ ಜಪಾನೀಯರ ವಶವಾದುವು. ಜಪಾನ್ ಮುಂದುವರಿದಂತೆಲ್ಲ ಚೀನೀ ಸರ್ಕಾರ ತನ್ನ ಕೇಂದ್ರವನ್ನು ಹಿಂದಕ್ಕೊಯ್ಯುತ್ತ ಕೊನೆಗೆ ಒಳನಾಡಿನಲ್ಲಿದ್ದ ಚುಂಕಿಂಗ್ ನಗರದಲ್ಲಿ

ಸ್ಥಾಪಿಸಿಕೊಂಡಿತು. ಇಂಥ ಸಂದಿಗ್ಧ ಪರಿಸ್ಥಿತಿಯಲ್ಲಿ ರಾಷ್ಟ್ರಕೂಟವಾಗಲಿ ಒಂಬತ್ತು ರಾಷ್ಟ್ರಗಳ ಕರಾರಿಗೆ ಸಹಿ ಹಾಕಿದ್ದ ರಾಷ್ಟ್ರಗಳಾಗಲಿ ಚೀನದ ನೆರವಿಗೆ ಬರಲಿಲ್ಲ. ಇದರಿಂದ ಚೀನೀಯರಿಗೆ ನಿರಾಶೆಯಾದರೂ ಅವರು ಯುದ್ಧ ಮುಂದುವರಿಸುವ ನಿರ್ಧಾರ ಕೈಬಿಡಲಿಲ್ಲ. ಚೀನದ ಜನತೆ ಘೋರ ಕಷ್ಟಕ್ಕೊಳಗಾದರೂ ಶತ್ರುವಿಗೆ ಮಣಿಯದೆ, ಸೋಲನ್ನೊಪ್ಪದೆ ಹೋರಾಟ ಸಾಗಿಸಿತು. ಜಪಾನೀಯರು ನ್ಯಾನ್‌ಕಿಂಗ್ ನಗರದಲ್ಲಿ ಸರ್ಕಾರ ರಚಿಸಿ ಅದರ ಮೂಲಕ ತಮ್ಮ ಪ್ರಭಾವವನ್ನು ಹರಡಲು ಯತ್ನಿಸಿದರು. ಆ ಸರ್ಕಾರದ ಬೆಂಬಲದೊಡನೆ ಚುಂಕಿಂಗ್ ಸರ್ಕಾರವನ್ನು ಛಿದ್ರಗೊಳಿಸುವ ಉದ್ದೇಶದಿಂದ ಇತರ ಪಟ್ಟಣಗಳ ಮೇಲೆ ಬಾಂಬಿನ ದಾಳಿ ನಡೆಸಲು ಪ್ರಾರಂಭಿಸಿದರು.



ಉತ್ತರ ನ್ಯೂಗಿನಿ ತೀರದಲ್ಲಿ ಸತ್ತುಬಿದ್ದಿದ್ದ ಸೈನಿಕರು

1939ರಲ್ಲಿ ಚೀನದ ಪರಿಸ್ಥಿತಿ ಅತ್ಯಂತ ಕಠಿಣವಾಗಿತ್ತು. ರಾಷ್ಟ್ರಕೂಟ ಯಾವ ನಿಶ್ಚಿತ ಧೋರಣೆಯನ್ನೂ ತಳೆದಿರಲಿಲ್ಲ. ಅದರ ಸದಸ್ಯ ರಾಷ್ಟ್ರಗಳು ಜಪಾನ್ ಬಳಸುತ್ತಿದ್ದ ವಿಷವಾಯುವಿನ ವಿರುದ್ಧ ನಿರ್ಣಯಗಳನ್ನು ಅನುಮೋದಿಸಿದುವೇ ವಿನಾ ಮತ್ತಾವ ಸ್ಪಷ್ಟ ನೀತಿಯನ್ನೂ ರೂಪಿಸಲಿಲ್ಲ. ಜಪಾನು ದಕ್ಷಿಣ ಚೀನವನ್ನು ಸುತ್ತುವರಿದು ಹೈನಾನ್ ಮತ್ತಿತರ ದ್ವೀಪಗಳನ್ನು 1939ರ ಮಾರ್ಚ್ ತಿಂಗಳಲ್ಲಿ ವಶಪಡಿಸಿಕೊಂಡಿತು. ಈ ಆಕ್ರಮಣವನ್ನು ಪೆಸಿಫಿಕಿನ ಮ್ಯೂಕ್‌ಡೆನ್ ಘಟನೆ ಎಂದು ಚಿಯಾಂಗ್ ಎಚ್ಚರಿಸಿದರೂ ಪಾಶ್ಚಾತ್ಯ ರಾಷ್ಟ್ರಗಳು ಯಾವ ಕ್ರಮವನ್ನೂ ತೆಗೆದುಕೊಳ್ಳದೆ ಸುಮ್ಮನಿದ್ದುವು.

ಮೊದಲೇ ತಾಮಸವಾಗಿದ್ದ ಪಾಶ್ಚಾತ್ಯ ರಾಷ್ಟ್ರಗಳು ಯೂರೋಪಿನಲ್ಲಿ 1939ರ ಸೆಪ್ಟೆಂಬರಿನಲ್ಲಿ ಎರಡನೆಯ ಮಹಾಯುದ್ಧ ಪ್ರಾರಂಭವಾದಾಗ ಪೂರ್ವದಿಂದ ಮತ್ತಷ್ಟು ದೂರ ಸರಿದುವು. ಜಪಾನನ್ನು ತೃಣೀಕರಿಸುವ ಧೋರಣೆಯನ್ನು ಮಿತ್ರ ರಾಷ್ಟ್ರಗಳು ಮುಂದುವರಿಸಿದ್ದು ಜಪಾನಿಗೆ ಇನ್ನೂ ಪ್ರೋತ್ಸಾಹ ನೀಡಿದಂತಾಯಿತು. 1940ರ ಜೂನ್ 19ರಂದು ಬ್ರಿಟನ್ ಜಪಾನಿನೊಡನೆ ಒಪ್ಪಂದ ಮಾಡಿಕೊಂಡು ಬರ್ಮ ರಸ್ತೆಯನ್ನು ಮುಚ್ಚಿದ್ದರಿಂದ ಚೀನವನ್ನು ಪ್ರತ್ಯೇಕಿಸಿದಂತಾಯಿತು. ಸೆಪ್ಟೆಂಬರ್ 29ರಂದು ಜಪಾನು ಜರ್ಮನಿ ಇಟಲಿಗಳೊಡನೆ ಒಪ್ಪಂದ ಮಾಡಿಕೊಂಡಿತು. ಇದರಿಂದ ಎರಡನೆಯ ಮಹಾಯುದ್ಧಕ್ಕೆ ಜಪಾನು ಇಳಿದಂತಾಯಿತೆನ್ನಬಹುದು. 1941ರ ಏಪ್ರಿಲ್ 13ರಂದು ಜಪಾನು ರಷ್ಯದೊಡನೆ ಯುದ್ಧವಿರುದ್ಧ ಒಪ್ಪಂದ ಮಾಡಿಕೊಂಡಿತು. ಎರಡು ದಿನಗಳ ಅನಂತರ ಅಮೆರಿಕ ಸಂಯುಕ್ತ ಸಂಸ್ಥಾನದ ಅಧ್ಯಕ್ಷ ರೂಸ್‌ವೆಲ್ಟ್ ಹೇಳಿಕೆಯೊಂದನ್ನು ನೀಡಿ ಚೀನಕ್ಕೆ ತನ್ನ ದೇಶದ ನೆರವನ್ನು ಕೊಡುವುದಾಗಿ ವಾಗ್ದಾನ ಮಾಡಿದ.

ಅಮೆರಿಕ ಸಂಯುಕ್ತಸಂಸ್ಥಾನ ಜಪಾನಿನ ಮೇಲೆ ಯುದ್ಧ ಘೋಷಿಸಿದ್ದು ಪರ್ಲ್ ಹಾರ್ಬರ್ ಘಟನೆಯ ಅನಂತರ. ಅದೊಂದು ಅನಿರೀಕ್ಷಿತ ಘಟನೆ. 1941ರ ಡಿಸೆಂಬರ್ 7ರಂದು ಜಪಾನು ಅಮೆರಿಕ ಸಂಯುಕ್ತ ಸಂಸ್ಥಾನದೊಡನೆ ಸಂಧಾನ ನಡೆಸುತ್ತಿದ್ದಾಗಲೇ ಪರ್ಲ್ ಹಾರ್ಬರಿನಲ್ಲಿ ಬಾಂಬ್ ದಾಳಿ ಮಾಡಿದ್ದು ಯುದ್ಧದ ಬಣ್ಣವನ್ನೇ ಬದಲಾಯಿಸಿತೆನ್ನಬಹುದು. ಆಗ ಪ್ರಾಚ್ಯಪ್ರದೇಶದ ಯುದ್ಧವೂ ಮಹಾಯುದ್ಧದಲ್ಲಿ ಲೀನವಾಯಿತು. ಪರ್ಲ್ ಹಾರ್ಬರ್ ಘಟನೆಯ ಮಾರನೆಯ ದಿನ ಜರ್ಮನಿ, ಇಟಲಿ ಮತ್ತು ಜಪಾನ್‌ಗಳ ಮೇಲೆ ಚೀನ ಯುದ್ಧ ಘೋಷಿಸಿತು.

**ಅಟ್ಲಾಂಟಿಕ್ ಸಾಗರ ಮತ್ತು ಐರೋಪ್ಯ ಸಮುದ್ರಗಳ ಮೇಲಿನ ಯುದ್ಧ:** 1939ರ ಸೆಪ್ಟೆಂಬರ್ 3ರಂದು ಬ್ರಿಟನ್ ಜರ್ಮನಿಯ ಮೇಲೆ ಯುದ್ಧ ಘೋಷಿಸಿದಾಗ ಜರ್ಮನಿಯ ನೌಕಾಬಲ ಶಕ್ತಿಯುತವಾಗಿತ್ತು. ಬ್ರಿಟನಿನ ನೌಕಾಪಡೆಯನ್ನು ನಾಶಮಾಡಿ ಅದಕ್ಕೆ ಆಹಾರ ಸಾಮಗ್ರಿಗಳು ತಲಪದಂತೆಮಾಡಿ, ಅದರ ಮೇಲೆ ಆಕ್ರಮಣ ನಡೆಸಬೇಕೆಂದು ಹಿಟ್ಲರ್ ನಿರ್ಧರಿಸಿದ್ದ. ಜರ್ಮನರ ಕಡೆಯ ದೋಣಿಗಳೂ ಜಲಾಂತರ್ಗಾಮಿಗಳೂ ಕಾರ್ಯಾಚರಣೆಗೆ ಸಿದ್ಧವಾಗಿದ್ದುವು. ತನ್ನ ನೌಕೆಯ ಸಹಾಯದಿಂದ



ಪರ್ಲ್ ಹಾರ್ಬರ್ ಮೇಲೆ ಜಪಾನೀ ದಾಳಿ

ಆಹಾರ ಸಾಮಗ್ರಿಗಳ ಸರಬರಾಜಿಗೆ ಅಡ್ಡಿಯಾಗದಂತೆ ನೋಡಿಕೊಳ್ಳುವುದೂ ತನ್ನ ಸೇನೆಗಳನ್ನು ಶತ್ರುವಿನ ವಶದಲ್ಲಿರುವ ಪ್ರದೇಶಗಳಲ್ಲಿ ಇಳಿಸುವುದೂ ಶತ್ರು ಸೇನೆಗಳು ಬ್ರಿಟನಿನ ತೀರದಲ್ಲಿ ಇಳಿಯದಂತೆ ಮಾಡುವುದೂ ಬ್ರಿಟನಿನ ಧ್ಯೇಯಗಳಾಗಿದ್ದುವು. ಆದರೆ ಈ ಎಲ್ಲ ಧ್ಯೇಯಗಳೂ ಏಕಕಾಲದಲ್ಲಿ ಸಾಧ್ಯವಿರಲಿಲ್ಲ.

ಜರ್ಮನ್ ನೌಕಾಪಡೆ ದಕ್ಷಿಣ ಅಟ್ಲಾಂಟಿಕಿನಲ್ಲೂ ಬ್ರಿಟಿಷ್ ನೌಕೆ ಮಾಲ್ಟದಲ್ಲೂ ಇದ್ದುವು. ಯುದ್ಧದ ಮೊದಲ ದಿನಗಳಲ್ಲಿ ಜರ್ಮನ್ ಜಲಾಂತರ್ಗಾಮಿಗಳು ಮಿತ್ರ ರಾಷ್ಟ್ರಗಳ ಪ್ರಯಾಣಿಕ ಜಹಜುಗಳನ್ನೂ ಇತರ ನೌಕೆಗಳನ್ನೂ ಹೆಚ್ಚಿನ ಪ್ರಮಾಣದಲ್ಲಿ ಮುಳುಗಿಸಿ ಅಪಾರ ನಷ್ಟವನ್ನುಂಟುಮಾಡಿದುವು. ಜರ್ಮನಿಯ ದೋಣಿಗಳ ಹಾವಳಿಯಿಂದ ಬ್ರಿಟನಿನ ದೊಡ್ಡ ವಿಮಾನ ವಾಹಕ ನೌಕೆ ಕರೇಜಿಯಸ್ ಮುಳುಗಿತು. ಇದಲ್ಲದೆ ಬ್ರಿಟಿಷರ ನೌಕಾಶ್ರಯವನ್ನೇ ಒಳಹೊಕ್ಕು ರಾಯಲ್ ಓಕ್ ಎಂಬ ಯುದ್ಧನೌಕೆಯನ್ನು ಅಕ್ಟೋಬರ್ 14ರಂದು ಮುಳುಗಿಸಿದ್ದು ಒಂದು ದೊಡ್ಡ ಘಟನೆ.

ತಾನು ಗಳಿಸಿದ ಜಯದಿಂದ ಉತ್ತೇಜಿತವಾದ ಜರ್ಮನಿ ಹೊಸ ಬಗೆಯ ಮೈನ್‌ಗಳನ್ನು ಪ್ರಯೋಗಿಸಲಾಗಿ ನಾಲ್ಕು ದಿನಗಳ ಅವಧಿಯಲ್ಲಿ 15 ಹಡಗುಗಳು ಮುಳುಗಿದುವು. ಮಿತ್ರರಾಷ್ಟ್ರಗಳಿಗೆ ಸೇರಿದ ಅನೇಕ ಯುದ್ಧನೌಕೆಗಳ ನಾಶಕ್ಕೆ ಕಾರಣವಾದ ಜರ್ಮನ್ ನೌಕೆಯೇ ಗ್ರಾಫ್‌ಸ್ಪಿ.

ಬ್ರಿಟನಿನ ನೌಕಾಪಡೆ ನಷ್ಟಹೊಂದಿದಾಗ ಅದು ಸುಮ್ಮನಿರಲಿಲ್ಲ. ಅದು ಜರ್ಮನ್ ಸಬ್‌ಮರೀನ್‌ಗಳ ಆಹುತಿ ತೆಗೆದುಕೊಳ್ಳಲಾರಂಭಿಸಿತು. ದಕ್ಷಿಣ ಅಮೆರಿಕದ ತೀರದ ಬಳಿ ಬ್ರಿಟನಿನ ಮೂರು ಕ್ರೂಯ್‌ಸರ್‌ಗಳು ಜರ್ಮನರ ಗ್ರಾಫ್‌ಸ್ಪಿಯನ್ನು ಪತ್ತೆಹಚ್ಚಿ ಅದನ್ನು ಕದನದಲ್ಲಿ ಊನಗೊಳಿಸಿದುವು. ಆ ಯುದ್ಧ ನೌಕೆ ಕೆಟ್ಟು ಹೋದದ್ದರಿಂದ ಜರ್ಮನ್ ನಾವಿಕರೇ ಅದನ್ನು ಮುಳುಗಿಸ

ಬೇಕಾಯಿತು. ಗ್ರಾಫ್‌ಸ್ಟೀ ನಾಶದಿಂದ ಜರ್ಮನಿಯ ನೌಕಾಬಲಕ್ಕೂ ಅದರ ಪ್ರತಿಷ್ಠೆಗೂ ಬಿದ್ದ ಪೆಟ್ಟು ಅಗಾಧ.

ಅತ್ತ ಕಡೆ ನಾರ್ವೇ ಡೆನ್‌ಮಾರ್ಕ್‌ಗಳ ಮೇಲೆ ಜರ್ಮನಿ ಆಕ್ರಮಣ ನಡೆಸಿದಾಗ ಬ್ರಿಟನ್ ಜರ್ಮನಿಗೆ ಸಮುದ್ರದ ಮೂಲಕ ಸಂಪರ್ಕವಿಲ್ಲದಂತೆ ಕಾವಲು ಏರ್ಪಡಿಸಿತು. 1939ರ ಏಪ್ರಿಲ್ 15ರಂದು ಬ್ರಿಟಿಷ್, ಫ್ರೆಂಚ್ ಮತ್ತು ಪೋಲಿಷ್ ಸೇನೆಗಳು ನಾರ್ವೆಯ ತೀರ ಪ್ರದೇಶದಲ್ಲಿ ಇಳಿಯಲು ಸಾಧ್ಯವಾದದ್ದು ಈ ಕಾವಲಿನಿಂದ. ನಾರ್ವೆಯ ತೀರದಲ್ಲಿ ಬ್ರಿಟಿಷ್ ನೌಕೆ ಯಶಸ್ವಿಯಾಗಿ ಕಾರ್ಯಾಚರಣೆ ನಡೆಸಿ ಜರ್ಮನಿಯ ಯುದ್ಧ ನೌಕೆಗಳನ್ನು ಮುಳುಗಿಸಿತು. ಆದರೆ ನಾರ್ವೆಯನ್ನು ಜರ್ಮನರು ಸ್ವಾಧೀನಪಡಿಸಿಕೊಂಡಾಗ ಜರ್ಮನಿಗೆ ಅಟ್ಲಾಂಟಿಕ್ ತೀರದ ಅನೇಕ ಬಂದರುಗಳ ಮೇಲೆ ಹತೋಟಿ ಸಿಕ್ಕಿತು. ಜಲಾಂತರ್ಗಾಮಿಗಳು ಚಟುವಟಿಕೆಯನ್ನು ತ್ವರಿತಗೊಳಿಸಲು ಅನುಕೂಲವಾದದ್ದು ಈ ಹತೋಟಿಯಿಂದ.

ಭೂಯುದ್ಧಗಳಲ್ಲಿ ಜರ್ಮನಿ ಜಯ ಗಳಿಸಿತ್ತು. 1940ರ ಮೇ 14ರ ವೇಳೆಗೆ ನೆದರ್‌ಲೆಂಡ್ಸನ್ನೂ ನಾಲ್ಕು ದಿನಗಳ ಅನಂತರ ಬ್ರುಸೆಲ್ ಪಟ್ಟಣವನ್ನೂ ಮೇ 28ರಂದು ಬೆಲ್ಜಿಯಂ ದೇಶವನ್ನೂ ಆಕ್ರಮಿಸಿತ್ತು. ಮುಂದಿನ ಸರದಿ ಫ್ರಾನ್ಸಿನದು. ಬ್ರಿಟಿಷ್ ಸೇನೆಗಳು ಪ್ರತ್ಯೇಕಗೊಂಡು ನಾಜ಼ಿ ಪಡೆಗಳನ್ನು ಎದುರಿಸಲಾರದೆ, ತೀರದ ಕಡೆ ಪಲಾಯನ ಮಾಡಿದುವು. ಫ್ರಾನ್ಸಿನ ಬೆಂಬಲವನ್ನು ಕಳೆದುಕೊಂಡ ಬ್ರಿಟಿಷ್ ಸೇನಾಪಡೆ ಸ್ವದೇಶಕ್ಕೆ ಹಿಂತಿರುಗುವುದೇ ಅತ್ಯುತ್ತಮ ಮಾರ್ಗವೆಂದು ನಿರ್ಧರಿಸಿ, ಡನ್‌ಕರ್ಕಿನಿಂದ ವಾಪಸ್ಸು ಹೋದದ್ದೊಂದು ದೊಡ್ಡ ಸಾಹಸ.

ಪಶ್ಚಿಮ ಯುರೋಪಿನ ಮೇಲೆ ತನ್ನ ಆಧಿಪತ್ಯವನ್ನು ಸ್ಥಾಪಿಸಿದ ಜರ್ಮನಿಗೆ ವಿಸ್ತಾರವಾದ ದಕ್ಷಿಣ ಫ್ರಾನ್ಸಿನಿಂದ ಉತ್ತರ ನಾರ್ವೆ ವರೆಗಿನ ಸಾಗರತೀರ ಸಿಕ್ಕಿತು. ಇಂಗ್ಲೆಂಡನ್ನು ಘಾತಿಸಲು ಅನುಕೂಲವಾದದ್ದು ಇದರಿಂದ. 1940ರ ಆಗಸ್ಟ್ ತಿಂಗಳಲ್ಲಿ ಬ್ರಿಟನಿನ ಮೇಲಿನ ಆಕ್ರಮಣ ಸನ್ನಿಹಿತವಾದಾಗ, ಬ್ರಿಟನಿನ ಕದನ ಆರಂಭವಾದಾಗ, ಜರ್ಮನಿಯ ನೌಕಾಬಲ ತನ್ನ ಸಾಮರ್ಥ್ಯವನ್ನು ಪ್ರದರ್ಶಿಸುವುದಕ್ಕೆ ಅವಕಾಶ ಸಿಕ್ಕಿತೆನ್ನಬಹುದು. ಬ್ರಿಟನಿನ ಅನೇಕ ಯುದ್ಧ ನೌಕೆಗಳು ಮುಳುಗಿದ್ದು ಆ ಸಮಯದಲ್ಲೆ.

ಅತ್ತಕಡೆ ಮೆಡಿಟರೇನಿಯನ್ ಸಮುದ್ರದಲ್ಲಿ ಬ್ರಿಟನ್ ಜರ್ಮನಿಯ ಜಲಾಂತರ್ಗಾಮಿಗಳನ್ನು ಮುಳುಗಿಸಿ, ಉತ್ತರ ಆಫ್ರಿಕ ಮತ್ತು ದಕ್ಷಿಣ ಯುರೋಪಿನ ರಾಷ್ಟ್ರಗಳಿಗೆ ಸೇನೆ ಮತ್ತು ಯುದ್ಧ ಸಾಮಗ್ರಿಗಳನ್ನು ಒದಗಿಸುವ ಕಾರ್ಯದಲ್ಲಿ ಮಗ್ನವಾಗಿತ್ತು. ಇಟಲಿಯ ಮುಸೋಲಿನಿ ಈಜಿಪ್ಟಿನ ಕಡೆ ನುಗ್ಗಿದ್ದ. ಯುರೋಪಿನಲ್ಲಿ ಗ್ರೀಸ್ ದೇಶವನ್ನು ಆಕ್ರಮಿಸಿದ್ದ. ಆಗ ಬ್ರಿಟಿಷ್ ನೌಕಾವಿಮಾನಗಳು ಟಾರಾಂಟೊ ಬಂದರಿನಲ್ಲಿ ತಂಗಿದ್ದ 6 ಉತ್ತಮ ವರ್ಗದ ಇಟಾಲಿಯನ್ ಯುದ್ಧ ನೌಕೆಗಳಲ್ಲಿ ಮೂರನ್ನು ಮುಳುಗಿಸಿ, ಮತ್ತೆ ಮೂರನ್ನು ಊನ ಮಾಡಿದುವು. ಇದರಿಂದ ಬ್ರಿಟಿಷ್ ಯುದ್ಧ ನೌಕೆ ಮೆಡಿಟರೇನಿಯನ್ನಿನಲ್ಲಿ ಆತಂಕವಿಲ್ಲದೆ ಸಂಚಾರ ಮಾಡುವಂತಾಯಿತು. ಅಲ್ಲದೆ ಉತ್ತರ ಆಫ್ರಿಕದಲ್ಲಿ ಯುದ್ಧ ಮಾಡುತ್ತಿದ್ದ ಮಿತ್ರರಾಷ್ಟ್ರಗಳ ಸೈನ್ಯಕ್ಕೆ ಅಲ್ಲಿದ್ದ ಬ್ರಿಟಿಷ್ ನೌಕೆ ಸಂಪೂರ್ಣ ಬೆಂಬಲವಿತ್ತದ್ದರಿಂದ ಆಫ್ರಿಕದಿಂದ ಇಟಾಲಿಯನರನ್ನು ಓಡಿಸುವುದು ಸಾಧ್ಯವಾಯಿತು.

ಯುಗೊಸ್ಲಾವಿಯದ ಮೇಲೆ ಆಕ್ರಮಣ ನಡೆಸಿ ಗ್ರೀಕರ ಮೇಲೆ ಬಿದ್ದಾಗ ಆ ಪ್ರದೇಶದಲ್ಲಿ ಕಾರ್ಯಾಚರಣೆಯಲ್ಲಿದ್ದ ಬ್ರಿಟಿಷ್ ನೌಕಾಬಲದಿಂದ ಇಟಲಿಯ ನೌಕಾದಳ ಸಂಪೂರ್ಣವಾಗಿ ಸೋತದ್ದು 1941ರ ಮಾರ್ಚ್ 28ರಂದು. ಆದರೆ ಆಗ ಜರ್ಮನಿಯ ಬಾಂಬರುಗಳ ಉಪಟಳ ಅಸಾಧ್ಯವಾಗಿದ್ದುದರಿಂದ ಬ್ರಿಟಿಷರು ಅನೇಕ ವಿಮಾನವಾಹಕ ನೌಕೆಗಳನ್ನೂ ಯುದ್ಧನೌಕೆಗಳನ್ನೂ ಕಳೆದುಕೊಂಡರು. ಕ್ರೀಟ್ ದ್ವೀಪದ ಕಾರ್ಯಾಚರಣೆಯಲ್ಲೂ ಬ್ರಿಟನ್ ಕಳೆದುಕೊಂಡ ಯುದ್ಧನೌಕೆಗಳು ಅನೇಕ.

ಅಟ್ಲಾಂಟಿಕ್ ಸಾಗರದ ಮೇಲೆ ಬ್ರಿಟಿಷರಿಗೆ ಬರುತ್ತಿದ್ದ ಸಾಮಗ್ರಿಗಳನ್ನು ನಿಲ್ಲಿಸಲು ಜರ್ಮನಿ ತನ್ನ ಕೈಲಾದ್ದನ್ನೆಲ್ಲ ಮಾಡಿತು. ಒಟ್ಟು 1000 ಜಲಾಂತರ್ಗಾಮಿಗಳನ್ನೂ ಇದಕ್ಕಾಗಿ ಬಿಟ್ಟಿತ್ತು. ಅಟ್ಲಾಂಟಿಕ್ ಯುದ್ಧವೆಂದು ಕರೆಯಲಾಗಿರುವ ಸಾಹಸದಲ್ಲಿ ಜರ್ಮನರು ತಮ್ಮ ಪ್ರಚಂಡ ನೌಕೆಯಾದ 'ಬಿಸ್‌ಮಾರ್ಕ್'ನ್ನು ಉಪಯೋಗಿಸಿದರು. ಇದು ಬ್ರಿಟಿಷರ ಯುದ್ಧ ನೌಕೆ 'ಹೂಡ'ನ್ನು ಮುಳುಗಿಸಿತು. ಅದು ಅಪಾರ ನಷ್ಟವನ್ನು ಉಂಟುಮಾಡಿದ ಮೇಲೆ, ಏಕಾಂಗಿಯಾಗಿದ್ದಾಗ, ಬ್ರಿಟಿಷ್ ನೌಕೆಗಳು ಅದನ್ನು ಮುಳುಗಿಸಿದುವು.

1941ರ ಡಿಸೆಂಬರ್ ವೇಳೆಗೆ ಸಂಯುಕ್ತ ಸಂಸ್ಥಾನ ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಸಾಗರಗಳೆರಡರಲ್ಲೂ ಯುದ್ಧ ಮಾಡಬೇಕಾಯಿತು. ಅಟ್ಲಾಂಟಿಕಿನಲ್ಲಿ ಬ್ರಿಟನಿಗೆ ಹೆಚ್ಚಿನ ನೆರವು ನೀಡುವುದೂ ಪೆಸಿಫಿಕ್ ಸಾಗರದಲ್ಲಿ ಜಪಾನಿನೊಡನೆ ಯುದ್ಧ ಮಾಡುವುದೂ ಆಗ ಅದರ ಕಾರ್ಯ ವಿಧಾನ. 1942ರಲ್ಲಿ ತಮ್ಮ ಹಿತಗಳನ್ನು ರಕ್ಷಿಸಿಕೊಳ್ಳುವುದಷ್ಟೇ ಮಿತ್ರ ರಾಷ್ಟ್ರಗಳ ನೀತಿ. ಅಟ್ಲಾಂಟಿಕ್ ಕದನ ವೈಜ್ಞಾನಿಕ ಸಂಶೋಧನೆಗಳ ಮತ್ತು ತಂತ್ರ ಕೌಶಲದ ಯುದ್ಧ. ಜರ್ಮನಿಯ ದೋಣಿಗಳು ಅರಕ್ಷಿತ ಪ್ರದೇಶಗಳಾದ ಮೆಕ್ಸಿಕೋ ಕೊಲ್ಲಿ ಮತ್ತು ಕ್ಯಾರಿಬೀಯನ್ ಸಮುದ್ರಗಳನ್ನು ಪ್ರವೇಶಿಸಿ, ಮಿತ್ರನೌಕೆಗಳನ್ನು ಮುಳುಗಿಸಿದುವು. ಈ ಪೀಡೆಯನ್ನು ನಿವಾರಿಸಲು ಸಾಧ್ಯವಾದದ್ದು 1943ರಲ್ಲಿ. ಜರ್ಮನರು ಜಲಾಂತರ್ಗಾಮಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ತಯಾರಿಸಿದರೆ, ಮಿತ್ರ ರಾಷ್ಟ್ರಗಳು ಬಾಂಬರು ವಿಮಾನಗಳನ್ನು ತಯಾರಿಸಿ ಜರ್ಮನ್ ಕೈಗಾರಿಕಾ ಕೇಂದ್ರಗಳ ಮೇಲೆ ದಾಳಿ ಮಾಡಿದುವು. ಇದರ ಪರಿಣಾಮವಾಗಿ ಸಬ್‌ಮೇರಿನ್‌ಗಳ ತಯಾರಿಕೆ ಕಡಿಮೆಯಾಗತೊಡಗಿತು. ಮಿತ್ರರಾಷ್ಟ್ರಗಳ ಶಕ್ತಿ ಹೆಚ್ಚಿತು. ಯುರೋಪಿನಲ್ಲಿ ಯುದ್ಧದ ಅಂತ್ಯ ಸನ್ನಿಹಿತವಾಗುವ ವೇಳೆಗೆ ಬ್ರಿಟನಿನ ಯುದ್ಧ ನೌಕೆಗಳು ಪೆಸಿಫಿಕ್ ಸಾಗರಕ್ಕೆ ಬಂದು ಅಮೆರಿಕನ್ ನೌಕಾಬಲವನ್ನು ಸೇರಿಕೊಂಡು ಜಪಾನಿನ ವಿರುದ್ಧ ಕಾರ್ಯಾಚರಣೆಯಲ್ಲಿ ತೊಡಗಿದುವು.



ಬರ್ಲಿನಿನ ಮೇಲೆ ವಿಜಯಧ್ವಜ (194[illegible])

**ಪೆಸಿಫಿಕ್ ಯುದ್ಧ :** ಜಪಾನ್ ಯುದ್ಧ ಪ್ರವೇಶ ಮಾಡಿದಾಗ ಹೆಚ್ಚಿನ ಆಸೆ, ಆಕಾಂಕ್ಷೆಗಳೇನನ್ನೂ ಹೊಂದಿರಲಿಲ್ಲ. ಮುಖ್ಯವಾಗಿ ತನ್ನ ಪೂರ್ವ ಏಷ್ಯ ಅಭ್ಯುದಯ ಯೋಜನೆಯ ಪ್ರಕಾರ ಕೊರಿಯ, ಮಂಚೂರಿಯ, ಚೀನ,

ಇಂಡೋ-ಚೀನ, ಮಲಯ, ಬರ್ಮ ಮತ್ತು ಫಿಲಿಪೀನ್ಸನ್ನು ಆಕ್ರಮಿಸುವುದೇ ಜಪಾನಿನ ಆಗಿನ ಧ್ಯೇಯ. ಆ ಸಾಮ್ರಾಜ್ಯವನ್ನು ರಕ್ಷಿಸುವುದಕ್ಕಾಗಿ ಉತ್ತರ ಕ್ಯುರೈಲ್ ದ್ವೀಪಗಳಿಂದ ಹಿಡಿದು ದಕ್ಷಿಣದ ಮಾರ್ಷಲ್ ದ್ವೀಪಗಳ ವರೆಗೆ ರಕ್ಷಣಾವ್ಯೂಹವನ್ನು ರಚಿಸುವುದೇ ಜಪಾನಿನ ನಾಯಕರ ಗುರಿ. ಆದಷ್ಟು ಬೇಗ ಆ ಪ್ರದೇಶವನ್ನು ಆಕ್ರಮಿಸಿ, ಅಮೆರಿಕ ಸಂಯುಕ್ತ ಸಂಸ್ಥಾನದ ಪೆಸಿಫಿಕ್ ಪಡೆಯನ್ನು ನಾಶಮಾಡಿ, ಮಿತ್ರ



ಜಪಾನೀ ಯುದ್ಧನೌಕೆಯೊಂದರ ಅಂತ್ಯ

ರಾಷ್ಟ್ರಗಳು ಒಪ್ಪಂದಕ್ಕೆ ಬರುವಂತೆ ಒತ್ತಾಯಪಡಿಸುವುದೇ ಜಪಾನಿನ ಅಪೇಕ್ಷೆ. ಈ ಗುರಿಯನ್ನು ಸಾಧಿಸಲು ಜಪಾನ್ 1941ರ ಡಿಸೆಂಬರ್ 7ರಂದು ಹವಾಯಿ ದ್ವೀಪದ ಪರ್ಲ್ ಹಾರ್ಬರಿನಲ್ಲಿದ್ದ ಅಮೆರಿಕದ ಪೆಸಿಫಿಕ್ ಸಾಗರದ ನೌಕಾಪಡೆಯ ಮೇಲೆ ಅನಿರೀಕ್ಷಿತ ದಾಳಿ ನಡೆಸಿತು. ಈ ದಾಳಿಯ ಪರಿಣಾಮವಾಗಿ ಅಮೆರಿಕ ಸಂಯುಕ್ತ ಸಂಸ್ಥಾನದ 8 ಯುದ್ಧ ನೌಕೆಗಳ ಪೈಕಿ 5 ನೌಕೆಗಳು ಮುಳುಗಿದುವು. ಉಳಿದ ನೌಕೆಗಳಿಗಾದ ನಷ್ಟವೂ ಅಧಿಕ. ಇದಲ್ಲದೆ ಬೇಕಾದಷ್ಟು ಕ್ರೂಯ್‌ಸರುಗಳೂ ಯುದ್ಧ ವಿಮಾನಗಳೂ ಡಿಸ್ಟ್ರಾಯರುಗಳೂ ನಷ್ಟ ಹೊಂದಿದುವು. ಆದರೆ ಜಪಾನೀಯರು ನಿರೀಕ್ಷಿಸಿದಷ್ಟು ಪ್ರಮಾಣದಲ್ಲಿ ನಷ್ಟವುಂಟಾಗಲಿಲ್ಲ. ಏಕೆಂದರೆ ಹವಾಯಿ ತೀರಪ್ರದೇಶದಲ್ಲಿದ್ದ ಮಿಲಿಟರಿ ಕೇಂದ್ರಗಳಾಗಲಿ ವಿದ್ಯುಚ್ಛಕ್ತಿಯ ಯಂತ್ರ ಸಮುದಾಯವಾಗಲಿ ತೈಲಾಗಾರಗಳಾಗಲಿ ಈ ದಾಳಿಯಲ್ಲಿ ನಾಶವಾಗಲಿಲ್ಲ. ಆದ್ದರಿಂದ ಪರ್ಲ್ ಹಾರ್ಬರಿನ ಘಟನೆ ಸೈನಿಕ ದೃಷ್ಟಿಯಿಂದ ಯಾವ ಮಹತ್ತರ ಸಾಧನೆಯೂ ಆಗಿರಲಿಲ್ಲ. ಇದರಿಂದ ಜಪಾನು ಅಮೆರಿಕ ಸಂಯುಕ್ತ ಸಂಸ್ಥಾನವನ್ನು ಯುದ್ಧದಲ್ಲಿ ಎದುರಿಸಬೇಕಾದ ಪ್ರಸಂಗ ಒದಗಿತು.

ಪರ್ಲ್ ಹಾರ್ಬರಿನ ಘಟನೆಯಾದ ಮೂರು ದಿನಗಳ ಅನಂತರ ಬ್ರಿಟಿಷರ ಪ್ರಸಿದ್ಧ ಯುದ್ಧ ನೌಕೆ ಪ್ರಿನ್ಸ್ ಆಫ್ ವೇಲ್ಸ್ ಮತ್ತು ಕ್ರೂಯ್‌ಸರ್ ರಿಪಲ್ಸನ್ನು ಸಿಂಗಪುರದ ಬಳಿ ಜಪಾನೀಯರು ಮುಳುಗಿಸಿದ್ದರಿಂದ ಬ್ರಿಟಿಷರ ಪ್ರತಿಷ್ಠೆಗೆ ಮತ್ತು ನೌಕಾಬಲಕ್ಕೆ ಒದಗಿದ ನಷ್ಟ ಅಗಾಧ.

ಪೆಸಿಫಿಕಿನ ಎಲ್ಲ ಕ್ಷೇತ್ರಗಳಲ್ಲೂ ಜಪಾನು ಜಯಪ್ರದವಾಯಿತು. ಜಪಾನೀ ಸೇನೆಗಳು 1941ರ ಡಿಸೆಂಬರ್ ವೇಳೆಗೆ ಫ್ರೆಂಚ್ ಇಂಡೋಚೀನದ ಬಂದರುಗಳನ್ನೂ ಉಪಯೋಗಿಸಿಕೊಂಡು, ಥೈಲೆಂಡಿನ ರಾಜಕೀಯದಲ್ಲಿ ಪ್ರವೇಶಿಸಿ, ಬ್ಯಾಂಕಾಕನ್ನು ವಶಪಡಿಸಿಕೊಂಡಿದ್ದುವು. ಜಪಾನೀಯರು ಮುಂದುವರಿದು ಮಲಯದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಬಂದಿಳಿದು ಅದರ ಅರ್ಧಭಾಗವನ್ನು ಆಕ್ರಮಿಸಿಕೊಂಡರು. ಡಿಸೆಂಬರ್ ಅಂತ್ಯದ ವೇಳೆಗೆ ಸಿಂಗಪುರ ಬಿಟ್ಟು ಮಿಕ್ಕೆಲ್ಲ ಪ್ರದೇಶವೂ ಜಪಾನೀಯರ ವಶವಾಗಿತ್ತು. ಇವರ ಹಾವಳಿಯನ್ನು ತಡೆಗಟ್ಟಲು ಅಧ್ಯಕ್ಷ ರೂಸ್‌ವೆಲ್ಟ್ ಮತ್ತು ಬ್ರಿಟಿಷ್ ಪ್ರಧಾನಿ ಚರ್ಚಿಲ್ ಸಭೆ ಸೇರಿ, ಪೆಸಿಫಿಕ್ ಸಾಗರದಲ್ಲಿ ಮತ್ತು ಆಗ್ನೇಯ ಏಷ್ಯದಲ್ಲಿ ಒಂದು ಹೊಸ ರಕ್ಷಣಾ ವ್ಯವಸ್ಥೆ ಸ್ಥಾಪಿಸಿದರು. ಆದರೆ ಆ ವ್ಯವಸ್ಥೆ ರೂಪುಗೊಳ್ಳುವ ಮೊದಲೇ ಜಪಾನೀಯರು ಈಸ್ಟ್ ಇಂಡೀಸಿನ ಮುಖ್ಯ ಪ್ರದೇಶಗಳನ್ನು ವಶಪಡಿಸಿಕೊಂಡಿದ್ದರು. 1942ರ ಫೆಬ್ರುವರಿ 8ರಂದು ಸಿಂಗಪುರ ಶರಣಾಗತವಾಯಿತು. ಅದೇ ತಿಂಗಳು 13ರಂದು ಜಪಾನೀಯರು ಸುಮಾತ್ರದಲ್ಲಿಳಿದರು. ಅವರ ಗಮನ ಪೂರ್ವದ ಕಡೆ ತಿರುಗಿತು. ಆಸ್ಟ್ರೇಲಿಯದ ಡಾರ್ವಿನಿನ ಮೇಲೆ ಅವರು ನಡೆಸಿದ ದಾಳಿಯಿಂದ ಆದ ನಷ್ಟ ಅಪಾರ. ಹೀಗೆ ಬಾಲಿ ಮತ್ತು ಜಾವಾ ಜಪಾನೀಯರ ವಶವಾದುವು. ಫಿಲಿಪೀನ್ಸಿನಲ್ಲಿ ಜನರಲ್ ಮೆಕಾರ್ಥರ ನಾಯಕತ್ವದಲ್ಲಿ ಅಮೆರಿಕನ್ ಸೇನೆ ಶೌರ್ಯದಿಂದ ಹೋರಾಡಿದರೂ ಪ್ರಯೋಜನವಾಗಲಿಲ್ಲ. ಶಾಂತಿಸಾಗರದ ಅನೇಕ ದ್ವೀಪಗಳು ಜಪಾನೀಯರ ವಶವಾದುವು. ಹಿಂದೂ ಸಾಗರದ ಹತೋಟಿ ಪಡೆಯುವ ಉದ್ದೇಶದಿಂದ ಜಪಾನೀಯರು ಅಂಡಮಾನ್ ದ್ವೀಪ ಹಿಡಿದರು.

ಹೀಗೆ ಜಪಾನೀಯರು ಯಾವ ಶಕ್ತಿಗೂ ಜಗ್ಗದೆ ಮುನ್ನುಗ್ಗುತ್ತಿದ್ದ ರೀತಿಯನ್ನು ನೋಡಿ ಕಳವಳಗೊಂಡ ಮಿತ್ರರಾಷ್ಟ್ರಗಳು ತಮ್ಮ ರಕ್ಷಣಾ ವ್ಯವಸ್ಥೆಯನ್ನು ಸುಧಾರಿಸಿ ಹೊಸ ನಮೂನೆಯ ರಕ್ಷಣಾವ್ಯೂಹ ರಚಿಸಿದರು. ಜನರಲ್ ಮೆಕಾರ್ಥರ್ 1942ರ ಏಪ್ರಿಲ್ 18ರಂದು ಆ ವ್ಯವಸ್ಥೆಯ ಅಧಿಕಾರ ವಹಿಸಿಕೊಂಡ. ಅದೇ ದಿನ ಅಮೆರಿಕನ್ ಬಾಂಬರುಗಳು ಟೋಕಿಯೋ ಮೇಲೆ ಬಾಂಬಿನ ಮಳೆಗರೆದುವು. 1942ರ ಮೇ ತಿಂಗಳಲ್ಲಿ ನಡೆದ ಸಮುದ್ರ ಕದನದಲ್ಲೂ ಜೂನಿನಲ್ಲಿ ನಡೆದ ಮಿಡ್‌ವೇ ದ್ವೀಪದ ನೌಕಾ ಕದನದಲ್ಲೂ ಮಿತ್ರರಾಷ್ಟ್ರಗಳ ವಿಮಾನಗಳು ಯಶಸ್ವಿಯಾಗಿ ಕಾರ್ಯನಿರ್ವಹಿಸಿದ್ದರಿಂದ ಜಪಾನಿನ ನೌಕಾಬಲಕ್ಕೆ ಆದ ಘಾಸಿ ಅಷ್ಟಿಷ್ಟಲ್ಲ. ಇದರಿಂದ ಮಿತ್ರರಾಷ್ಟ್ರಗಳ ಕಾರ್ಯಾಚರಣೆ ಇನ್ನೂ ಸುಗಮವಾಗಿ, ಆಸ್ಟ್ರೇಲಿಯಕ್ಕೆ ಸಂಭವಿಸಿದ್ದ ಅಪಾಯ ಕೊನೆಗೊಂಡಿತು. ಭಾರತಕ್ಕೆ ಉಂಟಾಗಿದ್ದ ಆಪತ್ತೂ ನಿವಾರಣೆಯಾಯಿತು. 1942ರ ಆಗಸ್ಟ್ ತಿಂಗಳಲ್ಲಿ ಸಾಲೋಮನ್ ದ್ವೀಪ ಸಮುದಾಯದ ಗ್ವಾಡಲ್‌ಕನಾಲ್‌ನಲ್ಲಿ ಅಮೆರಿಕನ್ ಸೈನ್ಯ ಬಂದಿಳಿದು 1943ರ ಫೆಬ್ರುವರಿಯಲ್ಲಿ ಅದನ್ನು ಪೂರ್ಣ ವಶಪಡಿಸಿಕೊಂಡು ದ್ವೀಪದಿಂದ ದ್ವೀಪಕ್ಕೆ ಮುಂದುವರಿದು ಜಪಾನ್ ಭೂಭಾಗದ ಮೇಲೆಯೂ ಕಾರ್ಯಾಚರಣೆ ಮಾಡಲಾರಂಭಿಸಿದಾಗ ಜಪಾನಿಗೆ ಸೋಲು ಹತ್ತಿರವಾಯಿತೆನ್ನಬಹುದು.

ಮಹಾಯುದ್ಧದ ಪಶ್ಚಿಮ ರಂಗದಲ್ಲಿ ಜರ್ಮನಿ ಸೋತ ಮೇಲೆ ಇನ್ನುಳಿದಿದ್ದ ಶತ್ರುದೇಶವೆಂದರೆ ಜಪಾನ್ ಮಾತ್ರ. 1945ರ ಮೇ ತಿಂಗಳ ವೇಳೆಗೆ ಪೂರ್ವ ಏಷ್ಯ ಮತ್ತು ಪೆಸಿಫಿಕ್ ರಂಗಗಳಲ್ಲಿ ಮಿತ್ರ ಸೇನೆಗಳು ಅಪೂರ್ವ ಪ್ರಗತಿ ಸಾಧಿಸಿದ್ದುವು. 1944ರ ಜುಲೈ–ಆಗಸ್ಟ್ ತಿಂಗಳುಗಳಲ್ಲಿ ಗ್ವಾಮ್ ದ್ವೀಪ ಅಮೆರಿಕನರ ವಶವಾಗಿತ್ತು. ಫಿಲಿಪೀನ್ ದ್ವೀಪಗಳ ಸಮೀಪದಲ್ಲಿ ಚಲಿಸುತ್ತಿದ್ದ ಜಪಾನೀ ಯುದ್ಧ ನೌಕಾಪಡೆಯನ್ನು ಮುಳುಗಿಸಲಾಯಿತು. ಅಕ್ಟೋಬರ್ 23–25ರಲ್ಲಿ ಫಿಲಿಪೀನ್ಸ್ ಬಳಿ ನಡೆದ ಕದನದಲ್ಲಿ ಅನೇಕ ಜಪಾನೀ ಹಡಗುಗಳು ಮುಳುಗಿದುವು.



ಯುದ್ಧದ ಕೊನೆಯ ಆಘಾತ : ನಾಗಸಾಕಿಯ ಮೇಲೆ ಪರಮಾಣುಬಾಂಬು

ಈ ಕಡೆ ಬರ್ಮ ರಂಗದಲ್ಲಿ ಭಾರತೀಯ ಸೈನಿಕರು ಅನೇಕ ನಗರಗಳನ್ನು ಹಿಡಿದರು. ಮಿತ್ರ ಸೇನೆಗಳು ಮೆಕಾರ್ಥರ್ ನೇತೃತ್ವದಲ್ಲಿ ಫಿಲಿಪೀನ್ಸ್‌ನ ರಾಜಧಾನಿ ಮಾನಿಲವನ್ನು ಪ್ರವೇಶಿಸಿದುವು. ಓಕಿನಾವ ಮತ್ತು ಫಿಲಿಪೀನ್ಸ್‌ನಿಂದ ಟೋಕಿಯೋ ನಗರದ ಮೇಲೆ ವಿಮಾನದಾಳಿಗೆ ಕೊನೆಯಿರಲಿಲ್ಲ. ಅತ್ತ ಕಡೆ ಸೋವಿಯತ್ ಜಪಾನ್ ಯುದ್ಧದ ತಾಟಸ್ಥ್ಯ ಕೌಲು ರದ್ದಾಗಿ, ಸೋವಿಯತರು ಜಪಾನಿನ ಮೇಲೆ ಯುದ್ಧವನ್ನು ಘೋಷಿಸಿದಾಗ ಜಪಾನಿಗೆ ವಿಪತ್ತು ಹತ್ತಿರಕ್ಕೆ ಬಂದಿತು. 1945ರ ಜೂನ್–ಜುಲೈ ತಿಂಗಳ ವೇಳೆಗೆ ಲುಸಾನ್ ಮತ್ತು ಓಕಿನಾವ ಸಂಪೂರ್ಣ ವಶವಾಗಿ ಜುಲೈ 5ರ ವೇಳೆಗೆ ಫಿಲಿಪೀನ್ಸ್ ದಂಡಯಾತ್ರೆ ಮುಕ್ತಾಯವಾಯಿತು. ಇಷ್ಟಾದರೂ ಜಪಾನಿನ ನಾಯಕರು ಶರಣಾಗತರಾಗುವ ಸೂಚನೆ ಕಾಣಲಿಲ್ಲ. ಜುಲೈ 17ರಂದು ಜರ್ಮನಿಯ ಪೋಟ್ಸ್‌ಡ್ಯಾಮ್ ನಗರದಲ್ಲಿ ಸ್ಟಾಲಿನ್, ಚರ್ಚಿಲ್ ಮತ್ತು ಅಧ್ಯಕ್ಷ ಟ್ರೂಮನ್ ಸಭೆ ಸೇರಿ ಜರ್ಮನಿಯ ಭವಿಷ್ಯ ನಿರ್ಧರಿಸಿದರು. ಅಲ್ಲದೆ ಪರಾಭವ ಹೊಂದಿದ ಜಪಾನಿಗೆ ಯುದ್ಧ ನಿಲ್ಲಿಸುವ ಸೂಚನೆ ಕಳುಹಿಸಿದರು. ಜಪಾನ್ ಈ ಶಾಂತಿ ಸೂಚನೆಯನ್ನು ನಿರಾಕರಿಸಿತು. ಯೂರೋಪ್ ಯುದ್ಧದಿಂದ ಕೈ ಬಿಡುವು ಮಾಡಿಕೊಂಡಿದ್ದ ಮಿತ್ರ ಪಕ್ಷದವರು ತಮ್ಮ ಸರ್ವಶಕ್ತಿಯನ್ನೂ ಜಪಾನಿನ ಮೇಲೆ ಪ್ರಯೋಗಿಸಲು ಸಿದ್ಧರಿದ್ದರೆಂಬುದನ್ನು ಅದು ಅರಿಯಲಿಲ್ಲ. ಯುದ್ಧ ಕೊನೆಗೊಳಿಸಿ, ಸಾವು ನೋವುಗಳನ್ನು ಕಡಿಮೆಮಾಡುವ ಉದ್ದೇಶದಿಂದ ಅಮೆರಿಕನರು ಪರಮಾಣು ಬಾಂಬನ್ನು 1945ರ ಆಗಸ್ಟ್ 6ರಂದು ಹಿರೋಷಿಮಾ ನಗರದ ಮೇಲೆ ಪ್ರಯೋಗಿಸಿದರು. ಆ ತಿಂಗಳ 9ನೆಯ ತಾರೀಕು ಸೋವಿಯತರು ಮಂಚೂರಿಯ ಗಡಿಯಲ್ಲಿ ಎರಡು ಪಟ್ಟಣಗಳನ್ನು ಹಿಡಿದರು. ಮತ್ತೊಂದು ಪರಮಾಣು ಬಾಂಬು ಅದೇ ದಿನ ನಾಗಸಾಕಿ ಬಂದರಿನ ಮೇಲೆ ಬಿತ್ತು. ಈ ಬಾಂಬಿನ ಪ್ರಯೋಗದಿಂದ ಉಂಟಾದ ಅಪಾರ ಹಾನಿಯನ್ನು ಮನಗಂಡ ಜಪಾನೀ ನಾಯಕರು ಆಗಸ್ಟ್ 10ರಂದು ತಮ್ಮ ಸೋಲನ್ನೊಪ್ಪಿಕೊಂಡರು. 14ರಂದು ಜನರಲ್ ಮೆಕಾರ್ಥರ್ ವಿಧಿಸಿದ ಷರತ್ತುಗಳನ್ನು ಒಪ್ಪಿಕೊಂಡು ಶರಣಾಗತರಾದರು. ಜಪಾನೀ ಶರಣಾಗತಿ ಪತ್ರಕ್ಕೆ ಸಹಿ ಬಿದ್ದದ್ದು ಸೆಪ್ಟೆಂಬರ್ 2ರಂದು. ಅಮೆರಿಕನ್ ಯುದ್ಧ ನೌಕೆ ಮಿಸೂರಿಯಲ್ಲಿ ಪೆಸಿಫಿಕ್ ಸಾಗರದ ಯುದ್ಧದ ಸಮಾಪ್ತಿಯೊಂದಿಗೆ ಎರಡನೆಯ ಮಹಾಯುದ್ಧವೂ ಮುಕ್ತಾಯವಾಯಿತು.




ಎರಡನೆಯ ಮಹಾಯುದ್ಧ ಕಾಲದಲ್ಲಿ ಜಪಾನಿಗೆ ಒಳಪಟ್ಟಿದ್ದ ಪ್ರದೇಶ

**ಶಾಂತಿಸ್ಥಾಪನೆ, ಯುದ್ಧದ ಪರಿಣಾಮ, ಯುದ್ಧವೆಚ್ಚ ಇತ್ಯಾದಿ :** ಸುಮಾರು 6 ವರ್ಷಗಳ ಕಾಲ ಪ್ರಪಂಚದ ಬಹುಭಾಗವನ್ನು ವ್ಯಾಪಿಸಿ ನಡೆದ ಈ ಮಹಾಯುದ್ಧದ ಸಮೀಕ್ಷೆಯಿಂದ ಕೆಲವು ಅಂಶಗಳನ್ನು ಗ್ರಹಿಸಬಹುದು. ಸೈನಿಕ ಬಲದಿಂದ ಮಾತ್ರವೇ ಆಕ್ರಮಣವನ್ನು ತಡೆಯಲು ಸಾಧ್ಯವಿಲ್ಲವೆಂಬುದು ಇದರಿಂದ ವ್ಯಕ್ತವಾದ ಮೊದಲನೆಯ ಅಂಶ. ಜನಸಮುದಾಯ, ವ್ಯಾಪಕ ಪ್ರದೇಶ ಮತ್ತು ಕೈಗಾರಿಕಾ ದಕ್ಷತೆ ಇವು ಆಧುನಿಕ ಯುದ್ಧತಂತ್ರಗಳಿಗೆ ಅಗತ್ಯ. ಇಲ್ಲದಿದ್ದರೆ ದೇಶದ ರಕ್ಷಣೆ ಸಾಧ್ಯವಿಲ್ಲವೆಂಬುದು ಅರ್ಥವಾಯಿತು. ಅಲ್ಲದೆ ಹಣದ ಅಭಾವವಿದ್ದರೆ ದೇಶ ಬಲಯುತವಾಗಲಾರದೆಂಬುದೂ ಖಚಿತವಾಯಿತು.

ಈ ಯುದ್ಧದ ಪರಿಣಾಮವಾಗಿ ವಿಶ್ವದಲ್ಲಿ ಎರಡು ಮಹತ್ತರವಾದ ರಾಜಕೀಯ ಬಣಗಳು ಉಳಿದುವು. ಸೋವಿಯತ್ ಪ್ರಭುತ್ವ ಮತ್ತು ಪಾಶ್ಚಾತ್ಯ ಪ್ರಜಾಪ್ರಭುತ್ವ. ಯುದ್ಧಾನಂತರ ಜರ್ಮನಿ ತನ್ನ ಹಿರಿಮೆಯನ್ನು ಕಳೆದುಕೊಂಡಿತು. 1918ರಲ್ಲಿ ವಿಜಯೀ ರಾಷ್ಟ್ರವಾಗಿದ್ದ ಮತ್ತು 1930ರ ವೇಳೆಗೆ ಪ್ರಪಂಚದ ಪ್ರಮುಖ ರಾಷ್ಟ್ರಗಳಲ್ಲೊಂದಾಗಿದ್ದ ಫ್ರಾನ್ಸಿನ ಶಕ್ತಿ ಉಡುಗಿತು. ಇಟಲಿ ಸಣ್ಣ ರಾಷ್ಟ್ರವಾಗಿ ಉಳಿಯಿತು. ಹೀಗೆ ಯೂರೋಪಿನ ಪ್ರಮುಖ ರಾಷ್ಟ್ರಗಳು ತಮ್ಮ ಪ್ರಾಮುಖ್ಯವನ್ನು ಕಳೆದುಕೊಂಡುವು. ಸೋವಿಯತ್ ಒಕ್ಕೂಟವೊಂದೇ ಪ್ರಬಲ ರಾಷ್ಟ್ರವಾಗಿ ಮುಂದುವರಿಯಿತು. ಅನೇಕ ಐರೋಪ್ಯ ರಾಷ್ಟ್ರಗಳು ಸೋವಿಯತ್ ಶಕ್ತಿಯ ನೆರಳಲ್ಲಿರಬೇಕಾಯಿತು. ಯೂರೋಪು ಎರಡು ಪಂಥಗಳ ಪ್ರಭಾವಕ್ಕೆ ಸಿಕ್ಕಿಬಿದ್ದು ಆರ್ಥಿಕ ಮುಗ್ಗಟ್ಟು ಮತ್ತು ಆಹಾರದ ಅಭಾವ ಸ್ಥಿತಿಯನ್ನು ಎದುರಿಸಬೇಕಾಯಿತು. ಯುದ್ಧದಲ್ಲಿ ಮುಖ್ಯ ಪಾತ್ರ ವಹಿಸಿದ ಮತ್ತೊಂದು ರಾಷ್ಟ್ರವಾದ ಬ್ರಿಟನಿನ ಶಕ್ತಿ ಕುಗ್ಗಿತು. ಯುದ್ಧದ ಅಗಾಧ ವೆಚ್ಚದ ಭಾರದಿಂದ ಬ್ರಿಟನ್ ಎದುರಿಸಬೇಕಾಗಿದ್ದ ಸಮಸ್ಯೆಗಳು ಅಪಾರವಾದುವು.

ಪ್ರಪಂಚದಲ್ಲಿ ಹಿಂದುಳಿದ ದೇಶಗಳು ಮತ್ತು ವಸಾಹತು ಪ್ರದೇಶಗಳಲ್ಲಿ ಜನಜಾಗೃತಿಯುಂಟಾಗಿ ರಾಷ್ಟ್ರೀಯತೆಯ ಭಾವನೆ ಮೂಡಿದ್ದು ಮತ್ತೊಂದು ಪರಿಣಾಮ.

ಎರಡನೆಯ ಮಹಾಯುದ್ಧ ಮಿತ್ರರಾಷ್ಟ್ರಗಳ ದೃಷ್ಟಿಯಲ್ಲಿ ಜಯಪ್ರದವಾಗಿ ಕೊನೆಗೊಂಡದ್ದು ಅಮೆರಿಕ ಸಂಯುಕ್ತಸಂಸ್ಥಾನದ ಅಗಾಧ ಕೈಗಾರಿಕಾ ಮತ್ತು ಸೈನಿಕ ಶಕ್ತಿಯಿಂದ ; ಇದೂ ಸೋವಿಯತ್ ಒಕ್ಕೂಟವೂ ಯುದ್ಧದಲ್ಲಿ ಪ್ರಧಾನ ಪಾತ್ರ ವಹಿಸಿದ್ದರಿಂದ.

ಮಹಾಯುದ್ಧಕ್ಕಾಗಿ ಆದ ವೆಚ್ಚ ಅಪಾರ. ಜಗತ್ತಿನ ಸಂಪತ್ತೆಲ್ಲ ಯುದ್ಧಕ್ಕಾಗಿ, ಯುದ್ಧ ಸಾಮಗ್ರಿಗಳನ್ನು ತಯಾರಿಸುವುದಕ್ಕಾಗಿ, ಯುದ್ಧದ ಅಸ್ತ್ರಗಳನ್ನು ಕಂಡುಹಿಡಿಯುವುದಕ್ಕಾಗಿ ವಿನಿಯೋಗವಾಗಬೇಕಾಯಿತು. ಇದು ಕೇವಲ ಮಹಾಬಲರ ಯುದ್ಧ. ಒಂದು ರೀತಿಯಲ್ಲಿ ವೈಜ್ಞಾನಿಕ ಯುದ್ಧ, ಮನಸ್ಥೈರ್ಯದ ಯುದ್ಧ. ಈ ರೀತಿಯ ಘರ್ಷಣೆಯಲ್ಲಿ ಪ್ರಚಾರದ ಪಾತ್ರ ಹೆಚ್ಚು. ಯುದ್ಧಕಾಲದಲ್ಲಿ ಈ ಪ್ರಚಾರ ನಾನಾ ಮುಖಗಳಲ್ಲಿ ನಡೆದು, ಮಿತ್ರ ಶತ್ರು ರಾಷ್ಟ್ರಗಳಲ್ಲಿ ಹೆಚ್ಚಿನ ವೈಷಮ್ಯವನ್ನುಂಟುಮಾಡಿತಲ್ಲದೆ, ಯುದ್ಧಾನಂತರದಲ್ಲಿ ಮಿತ್ರ ರಾಷ್ಟ್ರಗಳಲ್ಲೆ ವಿರಸ ಮೂಡಿಸಿತು. ಸಮಸ್ಯೆಗಳು ಜಟಿಲವಾಗಿ, ಶಾಂತಿ ಸ್ಥಾಪನೆ ದೂರ ಸರಿಯಿತು. ಯುದ್ಧ ಸಮಯದಲ್ಲಿ, ಹಿಟ್ಲರನನ್ನು ಎದುರಿಸಿ ಜಯಗಳಿಸುವುದರಲ್ಲಿ, ಇದ್ದ ಒಗ್ಗಟ್ಟು ಯುದ್ಧಾನಂತರ ಮಾಯವಾಯಿತು. ಯುದ್ಧದಲ್ಲಿ ಗೆದ್ದರೂ ಶಾಂತಿಯನ್ನು ಸ್ಥಾಪಿಸಲು ಸಾಧ್ಯವಾಗಲಿಲ್ಲ. ಯುದ್ಧ ಮುಗಿದ ಮೇಲೆ ಒಂದು ಬಗೆಯ ಶೀತಲಯುದ್ಧ ಪ್ರಾರಂಭವಾಯಿತೆನ್ನಬಹುದು.

ಈ ಮಹಾಯುದ್ಧದಲ್ಲಿ ರಾಷ್ಟ್ರಗಳು ಮಾಡಿದ ವೆಚ್ಚದ ಬಗ್ಗೆ ನಿಖರವಾಗಿ ವಿವರ ನೀಡುವುದು ಅಸಾಧ್ಯ. ಯುದ್ಧದಲ್ಲಿ ಮಡಿದವರ ಬಗ್ಗೆಯೂ ಸರಿಯಾದ ಅಂಕಿ ಅಂಶಗಳನ್ನು ನೀಡುವುದು ದುಸ್ತರದ ಕೆಲಸ. ಸಾವು ನೋವು ನಷ್ಟಗಳ ಜೊತೆಗೆ ಮಾನವ ಅನುಭವಿಸಿದ ತೊಂದರೆಯನ್ನು ವರ್ಣಿಸುವುದು ಕಷ್ಟ. ಸೈನ್ಯದ ವೆಚ್ಚ, ವಾಯುಬಲ ಮತ್ತು ನೌಕಾಬಲದ ವೆಚ್ಚ ಇವುಗಳ ಜೊತೆಗೆ ಜನರು ಕಳೆದುಕೊಂಡ ಆಸ್ತಿ ಪಾಸ್ತಿ, ನಾಶಗೊಂಡ ಕೈಗಾರಿಕೆಗಳು, ಜನ ಕಳೆದುಕೊಂಡ ಕೆಲಸ—ಇವುಗಳ ನಷ್ಟವನ್ನೂ ಸೇರಿಸಬೇಕು. ಈ ಕೆಳಗೆ ಕೊಟ್ಟಿರುವ ಅಂಕಿ ಅಂಶಗಳು ಸ್ಥೂಲವಾಗಿ ಈ ವೆಚ್ಚದ ವ್ಯಾಪ್ತಿಯನ್ನು ಸೂಚಿಸುತ್ತವೆ.

1 ಮಿತ್ರ ಶತ್ರು ಪಕ್ಷಗಳಲ್ಲಿ ಒಟ್ಟು 57 ರಾಷ್ಟ್ರಗಳು ಯುದ್ಧದಲ್ಲಿ ಭಾಗವಹಿಸಿದ್ದುವು. ಮಿತ್ರರಾಷ್ಟ್ರಗಳ ಕಡೆ ಈ ಯುದ್ಧದ ವೆಚ್ಚದಲ್ಲಿ ಬಹುಭಾಗವನ್ನು ಸಂಯುಕ್ತಸಂಸ್ಥಾನ ಹೊತ್ತಿತ್ತು. ಅದರಲ್ಲಿ ಇತರ ಪಾಲುದಾರ ರಾಷ್ಟ್ರಗಳೆಂದರೆ ಬ್ರಿಟನ್, ಕಾಮನ್‌ವೆಲ್ತ್, ರಷ್ಯ, ಚೀನ, ಮತ್ತು ಫ್ರಾನ್ಸ್. ಅಕ್ಷರಾಷ್ಟ್ರಗಳ ಕಡೆ ಜರ್ಮನಿ, ಇಟಲಿ ಮತ್ತು ಜಪಾನ್.

2 ಯುದ್ಧದಲ್ಲಿ ಸತ್ತವರ ಸಂಖ್ಯೆ ಅಗಾಧ. ಯುದ್ಧದಲ್ಲಿ ಅಮೆರಿಕ ಸಂಯುಕ್ತಸಂಸ್ಥಾನ 2,92,100 ಸೈನಿಕರನ್ನು, ಅಂದರೆ 1940ರ ಜನಗಣತಿಯ ಪ್ರಕಾರ 450ಕ್ಕೆ ಒಬ್ಬನಂತೆ, ಕಳೆದುಕೊಂಡಿತು. ಇತರರ ಪೈಕಿ ಯುದ್ಧರಂಗದಲ್ಲಿ ಮತ್ತು ಯುದ್ಧ ಕೈದಿಗಳಾಗಿ ಸತ್ತವರಲ್ಲಿ ಭೂವಾಯುಪಡೆಯವರು 2,34,874, ನೌಕಾಪಡೆ 36,950, ಅದಕ್ಕೆ ಸಂಬಂಧಪಟ್ಟವರು 19,733, ತೀರ ಪ್ರದೇಶದ ಕಾವಲುಗಾರರು 574.

3 ಬ್ರಿಟನ್ ಮತ್ತು ಕಾಮನ್‌ವೆಲ್ತ್‌ಗಳ ನಷ್ಟ ಹೀಗಿದೆ : ಸತ್ತವರ ಸಂಖ್ಯೆ 5,44,596 ; ಬ್ರಿಟನಿನಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಸಾವು ನೋವು ಉಂಟಾದುವು. ಬ್ರಿಟನಿನಲ್ಲಿ ಸತ್ತವರ ಸಂಖ್ಯೆ 3,97,762. ಅಂದರೆ ಅದರ ಜನಸಂಖ್ಯೆಯಲ್ಲಿ ಪ್ರತಿ 150ಕ್ಕೆ ಒಬ್ಬನಂತೆ.

4 ಸೋವಿಯತ್ ಒಕ್ಕೂಟದಲ್ಲಿ ಸತ್ತವರ ಸಂಖ್ಯೆ 75,00,000 ಅಂದರೆ ಅದರ ಜನಸಂಖ್ಯೆಯಲ್ಲಿ ಪ್ರತಿ 22 ಜನರಲ್ಲಿ ಒಬ್ಬ ಪ್ರಾಣ ತೆತ್ತ.

5 ಫ್ರಾನ್ಸಿನಲ್ಲಿ 2,10,671 ಸೈನಿಕರು ಸತ್ತರು (200 ಜನಕ್ಕೆ ಒಬ್ಬ). ಫ್ರಾನ್ಸಿನ ಇತರ ಪ್ರಜೆಗಳಲ್ಲಿ 1,07,874 ಜನ ಪ್ರಾಣಕಳೆದುಕೊಂಡರು.

6 ಜರ್ಮನಿಯ 28,50,000 ಸೈನಿಕರು ಸತ್ತರು (25ಕ್ಕೆ 1).

7 ಇಟಲಿ 3,00,000 ಸೈನಿಕರನ್ನು ಕಳೆದುಕೊಂಡಿತು (150ಕ್ಕೆ 1).

8 ಸಾವಿನ ಪಟ್ಟಿಯಲ್ಲಿ ಮಿತ್ರ ರಾಷ್ಟ್ರಗಳ ಪೈಕಿ ಚೀನ ಎರಡನೆಯದು. 22,00,000 (200ಕ್ಕೆ 1) ಸೈನಿಕರನ್ನು ಕಳೆದುಕೊಂಡಿತು.

9 ಜಪಾನ್ 15,06,000 ಸೈನಿಕರನ್ನು ಕಳೆದುಕೊಂಡಿತು. (46ಕ್ಕೆ 1).

10 ಯುದ್ಧದಲ್ಲಿ ಮಿತ್ರ ಶತ್ರು ರಾಷ್ಟ್ರಗಳ ಸೈನಿಕರ ಸಾವಿನ ಸಂಖ್ಯೆ ಒಟ್ಟು 1,06,50,000. ಅಕ್ಷ ರಾಷ್ಟ್ರಗಳಲ್ಲಿ ಈ ಸಂಖ್ಯೆ 46,50,000.

11 ಇದಲ್ಲದೆ ಅನೇಕ ಸಣ್ಣ ಪುಟ್ಟ ರಾಷ್ಟ್ರಗಳು ಉದಾ : (ಪೋಲೆಂಡ್) ಹೆಚ್ಚಿನ ಪ್ರಮಾಣದಲ್ಲಿ ಸಾವು ನೋವುಗಳನ್ನನುಭವಿಸಿದುವು.

12 ನಿರಾಶ್ರಿತರ ಸಮಸ್ಯೆ ಉದ್ಭವವಾಗಿ ಅನೇಕ ಸಂಸ್ಥೆಗಳು ಅದರ ನಿವಾರಣೆಗಾಗಿ ಯತ್ನಿಸಿದುವು. ಅಂತರ ರಾಷ್ಟ್ರೀಯ ನಿರಾಶ್ರಿತರ ಸಂಘ 72,800 ನಿರಾಶ್ರಿತರನ್ನು ಅವರವರ ರಾಷ್ಟ್ರಗಳಿಗೆ ಹಿಂದಿರುಗಿಸಿತು. 10,50,000 ನಿರಾಶ್ರಿತರಿಗೆ ಬೇರೆ ಬೇರೆ ರಾಷ್ಟ್ರಗಳಲ್ಲಿ ವಸತಿ ಕಲ್ಪಿಸಲಾಯಿತು. ಇಷ್ಟಾದರೂ ಈ ಸಮಸ್ಯೆ ಸಂಪೂರ್ಣವಾಗಿ ಬಗೆ ಹರಿಯಲಿಲ್ಲ.

13 ದೂರಪ್ರಾಚ್ಯದಲ್ಲಿ ಜಪಾನಿನಿಂದ 10,00,000 ಜನರನ್ನು ಹಿಂತಿರುಗಿಸಲಾಯಿತು. ಜಪಾನಿಗೆ ವಾಪಸು ಕಳಿಸಲಾದವರ ಸಂಖ್ಯೆ 65,50,000.

(ಕೆ.ಟಿ.ಆರ್.)

## ಎರಡನೆಯ ಮಹಾಯುದ್ಧದ ಮುಖ್ಯ ಘಟನೆಗಳು

1–9–1939 : ಜರ್ಮನ್ ಪಡೆಗಳಿಂದ ಪೋಲೆಂಡ್ ಆಕ್ರಮಣ. ಡ್ಯಾನ್ಜಿಗ್ ಮೂಲಕ ಪೂರ್ವ ಪ್ರಷ್ಯದೊಂದಿಗೆ ಸಂಪರ್ಕ ಏರ್ಪಡಿಸಿಕೊಳ್ಳಲು ಪೋಲೆಂಡ್ ಒಪ್ಪಿಗೆ ನೀಡಲಿಲ್ಲವೆಂಬುದು ಈ ಆಕ್ರಮಣಕ್ಕೆ ತತ್‌ಕ್ಷಣದ ಕಾರಣ.

3–9–1939 : ಪೋಲೆಂಡನ್ನು ಆಕ್ರಮಣದಿಂದ ರಕ್ಷಿಸುವ ಉದ್ದೇಶದಿಂದ ಬ್ರಿಟನ್–ಫ್ರಾನ್ಸ್‌ಗಳಿಂದ ಯುದ್ಧ ಘೋಷಣೆ.

17–9–1939 : ಪೂರ್ವದ ಕಡೆಯಿಂದ ಪೋಲೆಂಡಿನ ಆಕ್ರಮಣ.

5–10–1939 : ಪೋಲಿಷ್ ಸೇನೆಯ ಕೊನೆಯ ತುಣುಕಿನ ಶರಣಾಗತಿ. ಜರ್ಮನಿ ಸೋವಿಯತ್ ಒಕ್ಕೂಟಗಳ ನಡುವೆ ಪೋಲೆಂಡಿನ ಹಂಚಿಕೆ.

30–11–1939 : ಸೋವಿಯತ್ ಸೇನೆಗೆ ನೆಲೆಯೂರಲು ಅವಕಾಶ ಕೊಡಲೊಪ್ಪದ ಫಿನ್ಲೆಂಡಿಗೆ ಸೋವಿಯತ್ ಪಡೆಗಳ ಪ್ರವೇಶ.

13–3–1940 : ಸೋವಿಯತ್ ಷರತ್ತುಗಳಿಗೆ ಫಿನ್ಲೆಂಡ್ ಒಪ್ಪಿಗೆ.

ಏಪ್ರಿಲ್ 1940 : ಜರ್ಮನಿಯಿಂದ ನಾರ್ವೇ ಆಕ್ರಮಣ.

10–5–1940 : 1 ಬೆಲ್ಜಿಯಂ ಹಾಲೆಂಡುಗಳ ಸ್ವಾತಂತ್ರ್ಯಭಂಗ. ಮಿಂಚಿನ ಯುದ್ಧದ (ಬ್ಲಿಟ್ಸ್‌ಕ್ರೀಗ್) ಆರಂಭ. ನಾಲ್ಕೇ ದಿನಗಳಲ್ಲಿ ನೆದರ್ಲೆಂಡ್ಸ್, ಮೂರು ವಾರಗಳಲ್ಲಿ ಬೆಲ್ಜಿಯಮ್ ಏಳು ವಾರಗಳಲ್ಲಿ ಫ್ರಾನ್ಸ್ ಪರಾಜಯ.

2 ಬ್ರಿಟಿಷ್ ಪ್ರಧಾನಿ ಚೇಂಬರ್ಲಿನ್ ರಾಜೀನಾಮೆ. ಸಂಮಿಶ್ರ ಸರ್ಕಾರದ ಪ್ರಧಾನಿಯಾಗಿ ಸರ್ ವಿನ್‌ಸ್ಟನ್ ಚರ್ಚಿಲ್ ನೇಮಕ.

27–5–1940 : ಹಿಟ್ಲರನ ಆಕ್ರಮಣವನ್ನೆದುರಿಸಲಾರದ ಬೆಲ್ಜಿಯಂ ಸೇನೆ ಕುಸಿದ ಫಲವಾಗಿ ಸಿಕ್ಕಿಬಿದ್ದ 2,00,000 ಬ್ರಿಟಿಷ್ ಮತ್ತು 1,20,000 ಫ್ರೆಂಚ್ ಸೈನಿಕರನ್ನು ಉತ್ತರ ಫ್ರಾನ್ಸಿನ ಡನ್‍ಕರ್ಕ್ ಬಂದರಿನಿಂದ ತುರ್ತಾಗಿ ವಾಪಸು ಕರೆಸಿಕೊಳ್ಳುವ ಕಾರ್ಯ ಆರಂಭ. 4–6–1940ರ ವರೆಗೆ ನಡೆದ ಈ ವಾಪಸಾತಿ ಕಾರ್ಯಾಚರಣೆ ಎರಡನೆಯ ಮಹಾಯುದ್ಧದ ಸಾಹಸಗಳಲ್ಲೊಂದು. 850 ಚಿಕ್ಕ ದೊಡ್ಡ ನೌಕೆಗಳು ಈ ಕಾರ್ಯ ನಿರ್ವಹಿಸಿದುವು.

10–6–1940 : ಇಟಲಿಯಿಂದ ಯುದ್ಧ ಘೋಷಣೆ.

16–6–1940 : ಪ್ಯಾರಿಸ್ ಆಕ್ರಮಣ.

22–6–1940 : ಫ್ರೆಂಚ್ ಶರಣಾಗತಿ.

10–7–1940 : ಅನಾಕ್ರಮಿತ ಫ್ರೆಂಚ್ ಪ್ರದೇಶದಲ್ಲಿ ಮಾರ್ಷಲ್ ಪೇಟನನಿಂದ ಹಿಟ್ಲರ್ ಪರವಾದ ಸರ್ಕಾರ ಸ್ಥಾಪನೆ. ಪ್ಯಾರಿಸ್ ಆಗ ಜರ್ಮನರ ಆಕ್ರಮಣದಲ್ಲಿದ್ದದ್ದರಿಂದ ವಿಷಿ ಇದರ ರಾಜಧಾನಿ. ಈ ಆಡಳಿತ ನಾಲ್ಕುವರ್ಷ ಇತ್ತು.

10–8–1940 : ಬ್ರಿಟನ್ ಕದನ ಆರಂಭ. ಬ್ರಿಟನಿನ ರೇವು, ಹಡಗು, ಕಾರ್ಖಾನೆ ಮತ್ತು ನಗರಗಳ ಮೇಲೆ ಜರ್ಮನ್ ದಾಳಿ. ಪ್ರಾರಂಭದಲ್ಲಿ ಜರ್ಮನರು 1,350 ಬಾಂಬರುಗಳನ್ನೂ 1,200 ಫೈಟರ್ ವಿಮಾನಗಳನ್ನೂ ಬಳಸಿದರು. ಬ್ರಿಟನಿನ ಆಕ್ರಮಣಕ್ಕೆ ಪೂರ್ವಭಾವಿ ಕ್ರಮವೆಂದು ಜರ್ಮನಿ ಇದರಲ್ಲಿ ತೊಡಗಿತು. 15–9–1940ರಂದು ಈ ಕಾರ್ಯಾಚರಣೆ ಶಿಖರ ಮುಟ್ಟಿತು. ಬ್ರಿಟನನ್ನು ಆಕ್ರಮಿಸುವ ಯೋಜನೆಯನ್ನು ಜರ್ಮನರು ಅನಂತರ ಕೈಬಿಟ್ಟು ಯದ್ವಾತದ್ವಾ ದಾಳಿಯಲ್ಲಿ ತೊಡಗಿದರು. 12 ವಾರಗಳ ಈ ಕದನದಲ್ಲಿ 1,733 ಜರ್ಮನ್ ವಿಮಾನಗಳೂ 915 ಬ್ರಿಟಿಷ್ ವಿಮಾನಗಳೂ ನಾಶವಾದುವು.

ಸೆಪ್ಟೆಂಬರ್–
ಡಿಸೆಂಬರ್ 1940 : ಪೂರ್ವ–ಉತ್ತರ ಆಫ್ರಿಕಗಳಲ್ಲಿ ಇಟಲಿಯ ಆಕ್ರಮಣ ಕಾರ್ಯಾಚರಣೆ.

28–10–1940 : ಇಟಲಿಯಿಂದ ಗ್ರೀಕ್ ಆಕ್ರಮಣ, ಅನಂತರ ಹಿನ್ನಡೆ.

23–11–1940 : ರೂಮೇನಿಯದಲ್ಲಿ ಜರ್ಮನ್ ಸೈನಿಕರು ರಹಸ್ಯವಾಗಿ ನುಸುಳಿಕೊಂಡ ಫಲವಾಗಿ ರೋಂ-ಬರ್ಲಿನ್ ಅಕ್ಷದಲ್ಲಿ ರೂಮೇನಿಯದ ಸೇರ್ಪಡೆ.

ಡಿಸೆಂಬರ್ 1940–
ಫೆಬ್ರುವರಿ 1941 : ಆಫ್ರಿಕದಲ್ಲಿ ಜರ್ಮನಿ ಇಟಲಿಗಳ ವಿರುದ್ಧ ಬ್ರಿಟಿಷ್ ಮರು ಕಾರ್ಯಾಚರಣೆ.

6–4–1941 : ಯುಗೋಸ್ಲಾವ್ ಆಕ್ರಮಣಾರಂಭ.

11–4–1941 : ಹಿಟ್ಲರನ ಪಡೆಗಳ ಮುಂದೆ ಯುಗೋಸ್ಲಾವಿಯದ ಕುಸಿತ. ಗೆರಿಲ್ಲಾ ಕಾರ್ಯಾಚರಣೆ ಮುಂದುವರಿಕೆ.

13–4–1941 : ಜಪಾನ್–ಸೋವಿಯತ್ ತಾಟಸ್ಥ್ಯ ಒಪ್ಪಂದ.

27–5–1941 : ಕ್ರೀಟ್ ದ್ವೀಪದಲ್ಲಿ ಮಿತ್ರಸೇನೆಗಳ ರಕ್ಷಣವ್ಯೂಹದೊಳಕ್ಕೆ ಜರ್ಮನರ ಪ್ರವೇಶ, ಗ್ರೀಸ್ ಪರಾಜಯ.

22–6–1941 : ಜರ್ಮನ್ ಸೈನ್ಯಗಳಿಂದ ಸೋವಿಯತ್ ಆಕ್ರಮಣ ಆರಂಭ. ನಾನಾ ಕ್ಷೇತ್ರಗಳಲ್ಲಿ ಶೀಘ್ರ ಮುನ್ನಡೆ. ಸೋವಿಯತ್ ರಕ್ಷಣಾ ಹೋರಾಟ ವೈಫಲ್ಯ.

(2-12)-8-1941 : ಬ್ರಿಟಿಷ್ ಪ್ರಧಾನಿ ಚರ್ಚಿಲ್ ಮತ್ತು ಅಮೆರಿಕನ್ ಅಧ್ಯಕ್ಷ ರೂಸ್ವೆಲ್ಟರಿಂದ ಅಟ್ಲಾಂಟಿಕ್ ಪ್ರಣಾಳಿಕೆಯ ರಚನೆ. ಘೋಷಣೆ. ಸಮಸ್ತರಿಗೂ ಚತುರ್ವಿಧ ಸ್ವಾತಂತ್ರ್ಯದ ಭರವಸೆ.

15–9–1941 : ಅಟ್ಲಾಂಟಿಕ್ ಪ್ರಣಾಳಿಕೆಯನ್ನು ಸೋವಿಯತ್ ಒಕ್ಕೂಟವೂ ಸೇರಿ ಒಟ್ಟು ಹದಿನೈದು ಮಿತ್ರರಾಷ್ಟ್ರಗಳು ಒಪ್ಪಿವೆಯೆಂದು ಪ್ರಕಟನೆ.

23–11–1941 : ರಾಸ್ಟಾವ್ ಪ್ರದೇಶದಲ್ಲಿ ಜರ್ಮನ್ ಪಡೆ.

7–12–1941 : 1 ಪರ್ಲ್ ಹಾರ್ಬರಿನ ಅಮೆರಿಕನ್ ನೆಲೆಗಳ ಮೇಲೆ ಜಪಾನೀ ದಾಳಿ. ಪೆಸಿಫಿಕ್ ಪ್ರದೇಶಕ್ಕೆ ಮಹಾಯುದ್ಧದ ವಿಸ್ತರಣೆ. ಜಪಾನೀ ಕಾರ್ಯಾಚರಣೆಯ ಫಲವಾಗಿ ಫಿಲಿಪೀನ್ಸ್ ಮಲಯಗಳಿಂದ ಬ್ರಿಟನ್ ಅಮೆರಿಕಗಳ ಪ್ರತ್ಯೇಕತೆ.

2 ಬರ್ಮ ಕಾರ್ಯಾಚರಣೆ ಪ್ರಾರಂಭ. ಭಾರತದ ಮಹಾದಂಡನಾಯಕ ಜನರಲ್ ವೇವೆಲನಿಂದ ಬರ್ಮೀ ರಣರಂಗದ ಹೊಣೆ ನಿರ್ವಹಣೆ.

9–12–1941 : ಸೈಯಾಮ್ ತೀರದಲ್ಲಿ ಜಪಾನ್ ಸೈನಿಕರ ಪದಾಕ್ರಮಣ. ಮಲಯ ಇಂಡೋ–ಚೀನಗಳಲ್ಲಿ ಜಪಾನೀಯರ ಮುನ್ನಡೆ.

10–12–1941 : ಅಮೆರಿಕ ಸಂಯುಕ್ತಸಂಸ್ಥಾನದ ವಿರುದ್ಧ ಜರ್ಮನಿ ಇಟಲಿಗಳ ಯುದ್ಧ ಘೋಷಣೆ.

19–12–1941 : ಜರ್ಮನ್ ಸೇನೆಗಳನ್ನು ಸೋವಿಯತ್ ಜನತೆ ಪರಾಕ್ರಮದಿಂದ ಎದುರಿಸಿದ ಫಲವಾಗಿ ಸ್ವತಃ ಹಿಟ್ಲರನಿಂದ ಯುದ್ಧ ನಿರ್ದೇಶನದ ಹೊಣೆಯ ಸ್ವೀಕಾರ.

2–1–1942 : ಮಾನಿಲ ಬಂದರು ಜಪಾನಿನ ವಶ.

15–2–1942 : ಸಿಂಗಪುರದ ಪತನ. ಜಪಾನಿಗೆ ಜನರಲ್ ಪರ್ಸಿವಲ್‍ನ ಶರಣಾಗತಿ. 70,000 ಬ್ರಿಟಿಷ್ ಆಸ್ಟ್ರೇಲಿಯನ್ ಸೈನಿಕರ ಸೆರೆ.

3–7–1942 : ಸೆವಾಸ್ಟೊಪೋಲ್ ಪತನದೊಂದಿಗೆ ಜರ್ಮನರಿಂದ ಸೋವಿಯತ್ ಒಕ್ಕೂಟದ ಕ್ರಿಮಿಯ ಪ್ರದೇಶದ ಸಂಪೂರ್ಣ ಆಕ್ರಮಣ.

30–6–1942 : ಈಜಿಪ್ಟಿನ ಅಲೆಗ್ಸಾಂಡ್ರಿಯದ ಬಳಿಯ ಎಲ್ ಆಲಮೇನ್‍ನಲ್ಲಿ ಜರ್ಮನ್ ಇಟಾಲಿಯನ್ ಸೇನೆಗಳ ವಿರುದ್ಧ ಮಿತ್ರ ಸೇನೆಗಳ ಕದನ. ಮಾರ್ಷಲ್ ರಾಮೆಲ್ ನೇತೃತ್ವದಲ್ಲಿ ಶತ್ರುಸೇನೆ ನೈಲ್ ಅಭಿಮುಖವಾಗಿ ಮುನ್ನಡೆಯದಂತೆ ಬ್ರಿಟಿಷ್ ಜನರಲ್ ಸರ್ ಆಕಿನ್‍ಲೆಕ್ ನಿರ್ದೇಶನದಲ್ಲಿ ಬ್ರಿಟಿಷ್ ಮತ್ತು ಕಾಮನ್‍ವೆಲ್ತ್ ಸೇನೆಗಳು ಶೌರ್ಯದಿಂದ ಹೋರಾಡಿ ಶತ್ರು ಸೈನ್ಯಗಳನ್ನು ತಡೆಗಟ್ಟಿದ್ದು.

20–7–1942 : ಜರ್ಮನರಿಂದ ರಾಸ್ಟಾವ್ ವಿಜಯ. ಕಾಕಸಸ್ ಎಣ್ಣೆ ಗಣಿಗಳ ಮೇಲೆ ಕಣ್ಣಿಟ್ಟು ಜರ್ಮನ್ ಸೇನೆಯ ಮುನ್ನಡೆಯ ಪ್ರಯತ್ನ.

5–9–1942 : ಸ್ಟಾಲಿನ್‍ಗ್ರಾಡ್ ಕದನ. ಈ ನಗರವನ್ನುಳಿಸಿಕೊಳ್ಳುವುದಕ್ಕಾಗಿ ಸೋವಿಯತ್ ಸೈನಿಕರು ಬೀದಿ ಬೀದಿಯಲ್ಲೂ ಅಸೀಮ ಶೌರ್ಯದಿಂದ ಕಾದಿದರು. ಕ್ರಮೇಣ ಸೋವಿಯತರು ಜರ್ಮನ್ ಸಂಪರ್ಕವನ್ನು ಕಡಿದುಹಾಕಿ ಯುದ್ಧದ ದಿಕ್ಕು ಬದಲಿಸಿದರು. ಆಕ್ರಮಣಕಾರರು ಆಕ್ರಮಣಕ್ಕೊಳಗಾದರು. ಹಿಟ್ಲರನ ಮಹತ್ವಾಕಾಂಕ್ಷೆಗೆ ಸ್ಟಾಲಿನ್‍ಗ್ರಾಡ್ ಗೋರಿಯಾಯಿತು. (ಈಗ ಈ ನಗರದ ಹೆಸರು ವೋಲ್ಗೊಗ್ರಾಡ್).

23–10–1942 : ಎಲ್ ಆಲಮೇನಿನಲ್ಲಿ ಉತ್ತರ ಆಫ್ರಿಕದ ದ್ವಿತೀಯ ಮತ್ತು ನಿರ್ಣಾಯಕ ಕದನ. 4ನೆಯ ನವೆಂಬರಿನ ವರೆಗೆ ನಡೆದ ಈ ಹೋರಾಟದಲ್ಲಿ ಜನರಲ್ ಸರ್ ಬರ್ನಾರ್ಡ್ (ಅನಂತರ ಲಾರ್ಡ್) ಮಾಂಟ್ಗಮರಿಯ ನೇತೃತ್ವದಲ್ಲಿ ಮಿತ್ರಸೇನೆಯ ಸಾಹಸದಿಂದ ಶತ್ರುಸೇನೆ ಅಲ್ಲಿಂದ ಶಾಶ್ವತವಾಗಿ ಕಾಲ್ತೆಗೆಯಿತು.

(14-24)-1-1943 : ಉತ್ತರ ಆಫ್ರಿಕದ ಕ್ಯಾಸಬ್ಲಾಂಕದಲ್ಲಿ ರೂಸ್‍ವೆಲ್ಟ್–ಚರ್ಚಿಲ್ ಸಮಾಗಮ. ಅಂತಿಮವಾಗಿ ಜರ್ಮನಿ ಜಪಾನುಗಳು ಬೇಷರತ್ತಾಗಿ ಶರಣಾಗಲು ಒತ್ತಾಯಪಡಿಸಬೇಕೆಂದು ತೀರ್ಮಾನ. ಸಿಸಿಲಿ ಇಟಲಿಗಳ ಆಕ್ರಮಣಕ್ಕೆ ಸಂಬಂಧಿಸಿದ ತೀರ್ಮಾನವಾದ್ದು ಇಲ್ಲಿಯೇ.

9–2–1943 : ಸೋವಿಯತ್ ಸೇನೆಯಿಂದ ರಾಸ್ಟಾಫ್ ಪುನರಾಕ್ರಮಣ.

25–7–1943 : ಇಟಲಿಯ ದೊರೆ ವಿಕ್ಟರ್ ಎಮಾನ್ಯುಯೆಲ್ ಮತ್ತು ಮಾರ್ಷಲ್ ಬಾಡಾಲ್ಯೊಗಳ ಒತ್ತಾಯದ ಪರಿಣಾಮವಾಗಿ ಮುಸೋಲಿನಿಯ ರಾಜಿನಾಮೆ ; ಆತನ ಬಂಧನ.

23–8–1943 : ಸೋವಿಯತ್ ಕ್ಷೇತ್ರದಿಂದ ವಿಫಲ ಮನೋರಥವಾಗಿ ಹಿನ್ನಡೆಯುತ್ತಿದ್ದ ಜರ್ಮನ್ ಸೇನೆಯನ್ನು ಅಟ್ಟಿಸಿಕೊಂಡು ಹೋದ ಸೋವಿಯತ್ ಸೈನಿಕರಿಂದ ಖಾರ್ಕಾಫ್ ಮತ್ತೆ ವಶ.

3–9–1943 : ಇಟಲಿಯ ಸೋಲೊಪ್ಪಿಗೆ. ಪ್ರತ್ಯೇಕವಾಗಿ ಶಾಂತಿಗೆ ಸಹಿ.

12–9–1943 : ಜರ್ಮನ್ ಪ್ಯಾರಾಷೂಟ್ ಸೈನಿಕರಿಂದ ಮುಸೋಲಿನಿಯ ವಿಮೋಚನೆ. ಜರ್ಮನ್ ಆಕ್ರಮಿತ ಉತ್ತರ ಇಟಲಿಯಲ್ಲಿ ಫ್ಯಾಸಿಸ್ಟ್ ಸರ್ಕಾರ ಸ್ಥಾಪನೆ.

ನವೆಂಬರ್ 1943 : ಕೈರೊ ಟೆಹರಾನ್‌ಗಳಲ್ಲಿ ಮಿತ್ರರಾಷ್ಟ್ರ ಮುಖ್ಯರ ಸಮಾವೇಶ ; ಸಮಾಲೋಚನೆ. ದೂರಪ್ರಾಚ್ಯ ಯುದ್ಧ ಹಾಗೂ ಭಾವೀ ರಾಜಕೀಯ ವ್ಯವಸ್ಥೆಗಳ ಬಗ್ಗೆ ಒಡಂಬಡಿಕೆ. ಬ್ರಿಟನ್ ಅಮೆರಿಕಗಳು ಫ್ರಾನ್ಸಿನಲ್ಲಿ ಜರ್ಮನಿಯ ವಿರುದ್ಧ ಎರಡನೆಯ ಯುದ್ಧಮುಖ ಆರಂಭಿಸುವ ಬಗ್ಗೆ ಸೋವಿಯತ್ ಒಕ್ಕೂಟಕ್ಕೆ ಭರವಸೆ.

1–12–1943 : ಕೈರೊ ಟೆಹರಾನ್ ಒಡಂಬಡಿಕೆಗಳಿಗೆ ಅನುಗುಣವಾಗಿ ಮಿತ್ರ ರಾಷ್ಟ್ರಗಳ ಧೋರಣೆಯ ಪ್ರಕಟನೆ.

6–6–1944 : ಬ್ರಿಟನ್ ಅಮೆರಿಕಗಳಿಂದ ನಾರ್ಮಂಡಿಯ ಆಕ್ರಮಣ. ಯೂರೋಪಿನಲ್ಲಿ ದ್ವಿತೀಯ ಯುದ್ಧಮುಖದ ಆರಂಭ.

20–7–1944 : ಹಿಟ್ಲರನ ಕೊಲೆಗೆ ವಿಫಲ ಪ್ರಯತ್ನ.

25–8–1944 : ಮಿತ್ರಸೈನ್ಯಗಳಿಂದ ಪ್ಯಾರಿಸ್ ವಿಮೋಚನೆ.

(4-11)-2-1945 : ದಕ್ಷಿಣ ಕ್ರಿಮಿಯದ ಯಾಲ್ಟ ನಗರದಲ್ಲಿ ರೂಸ್ವೆಲ್ಟ್ ಸ್ಟಾಲಿನ್ ಚರ್ಚಿಲ್ ಸಮಾಗಮ. ಅಲ್ಲಿ ಕೈಗೊಂಡ ತೀರ್ಮಾನಗಳಿವು: 1 ಜರ್ಮನಿಯ ಸಂಪೂರ್ಣ ಶರಣಾಗತಿಯಾಗುವ ವರೆಗೂ ಯುದ್ಧ ಮುಂದುವರಿಸಿ ಸೋವಿಯತ್ ಒಕ್ಕೂಟ, ಬ್ರಿಟನ್ ಮತ್ತು ಫ್ರಾನ್ಸ್‌ಗಳು ಜರ್ಮನಿಯನ್ನಾಕ್ರಮಿಸಿಕೊಳ್ಳಬೇಕು. 2 ವಿಶ್ವಸಂಸ್ಥೆಯ ಸ್ಥಾಪಕ ರಾಷ್ಟ್ರಗಳ ಸಮ್ಮೇಳನ ಸ್ಯಾನ್ ಫ್ರಾನ್ಸಿಸ್ಕೋದಲ್ಲಿ ನಡೆಯತಕ್ಕದ್ದು. 3 ಜರ್ಮನಿಯ ಶರಣಾಗತಿಯಾದ ಮೂರು ತಿಂಗಳೊಳಗೆ ಜಪಾನಿನ ವಿರುದ್ಧ ಸೋವಿಯತ್ ಒಕ್ಕೂಟ ಯುದ್ಧ ಸಾರಬೇಕು.

12–4–1945 : ಹೃದಯಾಘಾತದಿಂದ ರೂಸ್‌ವೆಲ್ಟ್ ನಿಧನ. ಅಮೆರಿಕ ಸಂಯುಕ್ತಸಂಸ್ಥಾನದ ಅಧ್ಯಕ್ಷನಾಗಿ ಹ್ಯಾರಿ ಟ್ರೂಮನ್ ಅಧಿಕಾರ ಸ್ವೀಕಾರ :

28–4–1945 : 1 ಎಲ್ಬ್ ನದಿಯ ದಂಡೆಯ ಮೇಲೆ ಸೋವಿಯತ್ ಪಡೆಗಳೊಂದಿಗೆ ಮಿತ್ರಸೇನೆಯ ಸಮಾಗಮ. ಸೋವಿಯತ್ ಸೇನೆಯಿಂದ ಬರ್ಲಿನ್ ನಗರದ ಆಕ್ರಮಣ.
2 ಸ್ವಿಟ್ಜರ್ಲೆಂಡಿಗೆ ತಪ್ಪಿಸಿಕೊಂಡು ಹೋಗುತ್ತಿದ್ದ ಮುಸೊಲಿನಿಯ ಸೆರೆ ; ಗುಂಡಿಕ್ಕಿ ಕೊಲೆ. ಮಿಲಾನಿನಲ್ಲಿ ಬಹಿರಂಗವಾಗಿ ಆತನ ದೇಹದ ನೇಣು.

30–4–1945 : ಗುಂಡಿಕ್ಕಿಕೊಂಡು ಹಿಟ್ಲರನ ಆತ್ಮಹತ್ಯೆ. ಅದಕ್ಕೆ ಮುಂಚೆ ಪ್ರೀತಿಯ ಇವಾ ಬ್ರಾನಳೊಂದಿಗೆ ಆತನ ವಿವಾಹ.

3–5–1945 ; ರಂಗೂನಿನ ಪುನರ್ವಶದೊಂದಿಗೆ ಮಿತ್ರಸೇನೆಯ ಮೂರು ವರ್ಷಗಳ ದೀರ್ಘಾವಧಿಯ ಬರ್ಮ ಕಾರ್ಯಾಚರಣೆ ಅಂತ್ಯ. ಭೂ ಯುದ್ಧದಲ್ಲಿ ಜಪಾನೀಯರಿಗೆ ಬಲು ದೊಡ್ಡ ಪರಾಜಯ.

7–5–1945 : ಮಿತ್ರ ಸೇನೆಗಳಿಗೆ ಜರ್ಮನಿಯ ಶರಣಾಗತಿ.

17–7–1945 : 1 ನ್ಯೂ ಮೆಕ್ಸಿಕೋ ಮರುಭೂಮಿಯಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದಿಂದ ಪ್ರಥಮ ಪರಮಾಣು ಬಾಂಬ್ ಪರೀಕ್ಷೆ.
2 ಪೂರ್ವಜರ್ಮನಿಯ ಪೋಟ್ಸ್‌ಡ್ಯಾಮಿನಲ್ಲಿ ಅಧ್ಯಕ್ಷ ಟ್ರೂಮನ್, ಸೋವಿಯತ್ ಪ್ರಧಾನಿ ಸ್ಟಾಲಿನ್, ಬ್ರಿಟಿಷ್ ಪ್ರಧಾನಿ ಚರ್ಚಿಲ್ (ಅನಂತರ ಅಟ್ಲಿ) ಇವರ ಸಮ್ಮೇಳನ. ಜರ್ಮನಿಯ ವಿಭಜನೆ, ಗಡಿ ನಿರ್ಧಾರ ಮುಂತಾದ ವಿಚಾರಗಳನ್ನು ಕುರಿತು ತೀರ್ಮಾನ.

6–8–1945 : ಜಪಾನೀ ನಗರ ಹಿರೋಷಿಮಾದ ಮೇಲೆ ಪ್ರಥಮ ಅಮೆರಿಕನ್ ಪರಮಾಣು ಬಾಂಬ್ ಪತನ. 1,60,000 ಜನರ ಸಾವು ನೋವು.

9–8–1945 : ನಾಗಸಾಕಿಯ ಮೇಲೆ ದ್ವಿತೀಯ ಬಾಂಬಿನ ಪ್ರಯೋಗ.

14–8–1945 : ಜಪಾನಿನ ಶರಣಾಗತಿ. *

**ಎರಾಳೆ ಗಿಡ :** ನೋಡಿ—ಅಜಿರೇಟಂ.

**ಎರಿಕ್ ದಿ ರೆಡ್ :** 950–1003. ಸ್ಕ್ಯಾಂಡಿನೇವಿಯನ್ (ನಾರ್ಸ್) ಪರಿಶೋಧಕ. ಹುಟ್ಟಿದ್ದು ಸ್ಟಾವಾಂಗರಿನ ಸಮೀಪದಲ್ಲಿ. ಎರಿಕ್ ಟೂರ್ ವ್ಯಾಲ್ಡಸನ್ ಎಂಬುದು ಇವನ ನಿಜನಾಮಧೇಯ. ಎರಿಕ್ ದಿ ರೆಡ್ ಎಂಬ ಅಡ್ಡ ಹೆಸರು ಹಾಸ್ಯವಾಗಿ ಇವನಿಗೆ ಅಂಟಿಕೊಂಡಿತು. ಈ ಹೆಸರಿನಿಂದಲೇ ಈತ ಪ್ರಸಿದ್ಧನಾಗಿದ್ದಾನೆ. ಕೊಲೆ ಆಪಾದನೆಯ ಮೇಲೆ ಗಡೀಪಾರಾದ ತಂದೆಯೊಂದಿಗೆ ಇವನೂ ದೇಶಭ್ರಷ್ಟನಾಗಬೇಕಾಯಿತು. ಅನಂತರ ಈತ ಐಸ್ಲೆಂಡಿನಲ್ಲಿ ನೆಲೆಸಿದ. ಜಗಳದಲ್ಲಿ ಭಾಗವಹಿಸಿದನೆಂದು ಅಲ್ಲಿಂದಲೂ ಇವನನ್ನು ಹೊರಹಾಕಲಾಯಿತು. ಪಶ್ಚಿಮದಲ್ಲಿ ಇದೆಯೆಂದು ಹೇಳಲಾಗಿದ್ದ ಹೊಸ ಭೂಮಿಗೆ ಆಗ ಈತ ಪಯಣ ಬೆಳೆಸಿದ ; ಗ್ರೀನ್‌ಲೆಂಡ್ ತಲುಪಿ ಮುಂದುವರಿದು ಇಂದಿನ ಗಾಟ್‌ಹಾಪಿನಲ್ಲಿ ಚಳಿಗಾಲ ದಾಟಿ ಕರಾವಳಿಯ ಪರಿಶೋಧನೆಯಲ್ಲಿ ಮೂರು ವರ್ಷ ಕಳೆದು ಐಸ್ಲೆಂಡಿಗೆ ಮರಳಿ 986ರಲ್ಲಿ ಪ್ರಥಮ ವಲಸೆಗಾರರೊಂದಿಗೆ ಗ್ರೀನ್‌ಲೆಂಡಿಗೆ ಹೋದ. ಈತ ಸಾಯುವುದಕ್ಕೆ ಮುನ್ನ ಇವನ ಮಗ ಲೀಫ್ ಎರಿಕ್‌ಸನ್ ಅಮೆರಿಕದ ಈಶಾನ್ಯ ಕರಾವಳಿ ಪರಿಶೋಧಿಸಿದ. ಎರಿಕ್‌ಸನ್ನನೇ ಉತ್ತರ ಅಮೆರಿಕದ ಪ್ರಥಮ ಐರೋಪ್ಯ ಪರಿಶೋಧಕನೆಂದು ನಂಬಲಾಗಿದೆ. *

**ಎರಿಟ್ರಿಯ :** 1952ರಿಂದ ಇಥಿಯೋಪಿಯದ ಚಕ್ರವರ್ತಿಯ ಅಧೀನದಲ್ಲಿರುವ ಒಂದು ಸ್ವಯಮಾಡಳಿತ ಪ್ರಾಂತ್ಯ. ಹಿಂದೆ ಇಟಲಿಯ ವಸಾಹತು ಆಗಿತ್ತು. ಆಗ್ನೇಯ ಆಫ್ರಿಕದಲ್ಲಿ ಕೆಂಪು ಸಮುದ್ರದ ದಡದ ಮೇಲಿದೆ. ವಾಯವ್ಯದಲ್ಲಿ ಸೂಡಾನ್ ಗಣರಾಜ್ಯವೂ ಆಗ್ನೇಯದಲ್ಲಿ ಹಿಂದೆ ಫ್ರೆಂಚ್ ಸೋಮಾಲಿಲ್ಯಾಂಡ್ ಆಗಿದ್ದ ಪ್ರದೇಶವೂ ದಕ್ಷಿಣದಲ್ಲಿ ಇಥಿಯೋಪಿಯವೂ ಇವೆ. ಉತ್ತರ ಅಕ್ಷಾಂಶ 18°2′ ನಿಂದ 12°42′ ವರೆಗೆ. ಕಸಾರ್ ಭೂಶಿರದಿಂದ ಡುಮ್ಯೆರಾ ಭೂಶಿರದ ವರೆಗೆ ಹಬ್ಬಿರುವ ಇದರ ವಿಸ್ತೀರ್ಣ 1,17,600 ಚ.ಕಿ.ಮೀ. (45,405 ಚ.ಮೈ) ಜನಸಂಖ್ಯೆ 14,22,300 (1962.) ಅಸ್ಮಾರ ರಾಜಧಾನಿ. ಇದು ಸಮುದ್ರ ಮಟ್ಟಕ್ಕಿಂತ 7,752 ಅಡಿ ಎತ್ತರದಲ್ಲಿದ್ದು 1,17,000 ಜನಸಂಖ್ಯೆ ಹೊಂದಿದೆ. ದೇಶದಲ್ಲಿ ನೆಲೆಸಿರುವ 17,500 ಇಟಾಲಿಯನರಲ್ಲಿ ಬಹು ಮಂದಿ ನಗರದಲ್ಲಿದ್ದಾರೆ. ಮುಖ್ಯ ರೇವುಪಟ್ಟಣ ಕೆಂಪುಸಮುದ್ರದ ತೀರದಲ್ಲಿರುವ ಮಸಾವ. ಇಲ್ಲಿಂದ ಅಗೋರ್ಡಾಟ್ ನಗರದ ವರೆಗೆ ಅಸ್ಮಾರದ ಮೂಲಕ ಸಾಗುವ 191 ಮೈಲಿ ದೂರದ ರೈಲು ಮಾರ್ಗವಿದೆ.

ಎರಿಟ್ರಿಯದ ಉತ್ತರ ಭಾಗ ಸೂಡಾನಿನ ಮೈದಾನದಿಂದ ಕೆಂಪು ಸಮುದ್ರದ ಕರಾವಳಿಯ ವರೆಗೆ ಇಥಿಯೋಪಿಯ ಪ್ರಸ್ಥಭೂಮಿಯನ್ನು ಹಾಯ್ದು ಹಬ್ಬಿದೆ. ಎರಿಟ್ರಿಯದ ಸಮುದ್ರ ತೀರದ ಉದ್ದ 670 ಮೈಲಿ. ತೀರದ ಬಯಲು ಪ್ರದೇಶ 10 ರಿಂದ 50 ಮೈಲಿ ಅಗಲ. ಇಲ್ಲಿ ಸೆಕೆ ಹೆಚ್ಚು, ಆರ್ದ್ರತೆಯೂ ಹೆಚ್ಚು ; ಮಳೆ ಅನಿಶ್ಚಿತ. ಈ ಬಯಲಿನಿಂದ ಪಶ್ಚಿಮದ ಪರ್ವತಗಳ ಕಡೆಗೆ ಭೂಮಿ ಏರುತ್ತ ಹೋಗುತ್ತದೆ. ಈ ಪರ್ವತಗಳಲ್ಲಿ ಸೋಯ (9885′) ಅತ್ಯುನ್ನತ ಶಿಖರ. ಉನ್ನತ ಪ್ರದೇಶಕ್ಕೆ ಹೋದಂತೆ ಸಮಶೀತೋಷ್ಣ ವಾಯುಗುಣವನ್ನು ಕಾಣಬಹುದು. ಇಲ್ಲಿ ಬೇಸಗೆಯಲ್ಲಿ ಮಳೆಯಾಗುತ್ತದೆ. ವಾಯವ್ಯದಲ್ಲಿ ಈ ಪ್ರದೇಶ ಸೂಡಾನಿನ ಬೆಂಗಾಡಿನ ಕಡೆಗೆ ಇಳಿಜಾರಾಗಿದೆ.

ಇಲ್ಲಿ ನೀರಾವರಿಯ ಸಹಾಯದಿಂದ ಎತ್ತರಕ್ಕೆ ಅನುಸಾರವಾಗಿ ಉಷ್ಣವಲಯದ ಮತ್ತು ಸಮಶೀತೋಷ್ಣವಲಯದ ಧಾನ್ಯಗಳನ್ನು ಬೆಳೆಯಬಹುದು. ಎತ್ತರ ಪ್ರದೇಶಗಳಲ್ಲಿ ಆಹಾರಧಾನ್ಯ (ಹೆಚ್ಚಾಗಿ ಗೋದಿ), ಕಾಫಿ, ಹೊಗೆಸೊಪ್ಪು, ಹಣ್ಣು, ತರಕಾರಿ—ಇವು ಮುಖ್ಯ ಬೆಳೆಗಳು. ಮಳೆ ಕಡಿಮೆಯಿರುವ ತಗ್ಗಿನ ಪ್ರದೇಶಗಳಲ್ಲಿ ಮರಗೋಂದು, ಎಣ್ಣೆ ಬೀಜಗಳು, ಖರ್ಜೂರ—ಇವು ಮುಖ್ಯ ಉತ್ಪನ್ನಗಳು. ಪಶುಪಾಲನೆಯೂ ನಡೆಯುತ್ತದೆ. ಕಣಿವೆಗಳಲ್ಲಿ ನೀರಾವರಿಯಿಂದ ಹತ್ತಿ ಬೆಳೆಸು

ತ್ತಾರೆ: ಮಸಾವದ ಸುತ್ತಮುತ್ತಲೂ ಇವರ ಬಳಿ ಇರುವ ಡಾಹ್‌ಲಾಕ್ ದ್ವೀಪ ಸ್ತೋಮದಲ್ಲೂ ಮೀನು ಹಿಡಿಯುವುದು ಜನರ ಮುಖ್ಯ ಉದ್ಯೋಗ. ಉಗಾರೋ ಮತ್ತು ಮಸಾವಗಳ ಹತ್ತಿರ ಸ್ವಲ್ಪ ಚಿನ್ನ ದೊರಕಿದೆ. ಕೈಗಾರಿಕೆ ಅತ್ಯಲ್ಪ. ಹತ್ತಿ ಮತ್ತು ಸಿಮೆಂಟ್ ಕಾರ್ಖಾನೆಗಳು ಕೆಲವಿವೆ. ಉಪ್ಪನ್ನೂ ತಯಾರಿಸುತ್ತಾರೆ.

ಎರಿಟ್ರಿಯದ ಪ್ರಸ್ಥಭೂಮಿ ಪ್ರದೇಶದಲ್ಲಿ ಕಾಪ್ಟ್ ಕ್ರೈಸ್ತ ಪಂಗಡದ ಜನರೂ ಉತ್ತರದಲ್ಲಿ ಮತ್ತು ಸಮುದ್ರತೀರದಲ್ಲಿ ಮುಸ್ಲಿಮರೂ ನೈಋತ್ಯ ಭಾಗದಲ್ಲಿ ನೀಗ್ರೊಗಳೂ ಹೆಚ್ಚಾಗಿ ವಾಸಿಸುತ್ತಾರೆ. (ಟಿ. ಇ.ಎಚ್.)

**ಎರಿಡೆನಸ್ :** ಒರೈಯನ್ ಪುಂಜದ ರೀಗಲ್ ನಕ್ಷತ್ರದಿಂದ (ವಿಷುವದಂಶ $\alpha = 5$ ಗಂ 12.1 ಮಿ, ಘಂಟಾವೃತ್ತಾಂಶ, $\delta = -8^\circ\ 15'$) ದಕ್ಷಿಣದ ಪ್ರಥಮ



ಕಾಂತಿವರ್ಗದ ಉಜ್ಜ್ವಲ ನಕ್ಷತ್ರ ಏಕೆರ್ನಾರ್ ($\alpha = 1$ ಗಂ. 35.9ಮಿ. $\delta = -57^\circ\ 29'$) ವರೆಗೆ ವ್ಯಾಪಿಸಿರುವ ದಕ್ಷಿಣಾಕಾಶದ ವಿಶಾಲನಕ್ಷತ್ರಪುಂಜ. 4ನೆಯ ಕಾಂತಿ ವರ್ಗದ ನಕ್ಷತ್ರಗಳೇ (ಎಂದರೆ ಕ್ಷೀಣ ಕಾಂತಿಯ ಅಸ್ಪಷ್ಟನಕ್ಷತ್ರಗಳು) ಮೂವತ್ತಕ್ಕೂ ಮೀರಿ ಇರುವ ಈ ಪುಂಜದಲ್ಲಿ ಪ್ರಾಚೀನ ಬಗೆಗಣ್ಣು ಒಂದು ದೀರ್ಘನದೀಪಾತ್ರವನ್ನೇ ನೋಡಿತು. ಆದ್ದರಿಂದಲೇ ಇದರ ಕೊನೆಯಲ್ಲಿ (ದಕ್ಷಿಣದ ತಗ್ಗಿನಲ್ಲಿ; ಆದ್ದರಿಂದ ನದಿಯ ಮುಖದಲ್ಲಿ) ಇರುವ ಏಕೆರ್ನಾರ್ ($\alpha$-ಎರಿಡೆನಿ) ನಕ್ಷತ್ರಕ್ಕೆ ಆ ಹೆಸರು ಬಂದಿದೆ; ಏಕೆರ್ನಾರ್ ಪದದ ಅರ್ಥ ನದೀಮುಖದ ನಕ್ಷತ್ರವೆಂದು. ಎರಿಡೆನಸನ್ನು ವೈತರಣಿಯೆಂದೂ ಏಕೆರ್ನಾರನ್ನು ವೈತರಣೀಮುಖವೆಂದೂ ಕರೆಯುವುದಿದೆ. ಎರಿಡೆನಸ್ ಪುಂಜದ ಗಡಿಪುಂಜಗಳು ಒರೈಯನ್, (ಮಹಾವ್ಯಾಧ), ಲೀಪಸ್, ಕೊಲಂಬ, ಡೊರಾಡೊ, ರೆಟಿಕ್ಯುಲಂ, ಹೈಡ್ರಸ್, ಫೀನಿಕ್ಸ್, ಸ್ಕಲ್‌ಪ್ಟರ್, ಸಿಟಸ್, ವೃಷಭ. ಬರಿಗಣ್ಣಿಗೆ ಕಾಣುವ ಅತ್ಯಂತ ಉಜ್ಜ್ವಲ ನಕ್ಷತ್ರಗಳಲ್ಲಿ ಸೂರ್ಯನ ಸ್ಥಾನ ಒಂದನೆಯದಾದರೆ ಏಕೆರ್ನಾರಿನದು ಹತ್ತು. ಇದರ ದೂರ ಭೂಮಿಯಿಂದ 70 ಜ್ಯೋತಿರ್ವರ್ಷ. ಎರಿಡೆನಸ್ ಪುಂಜದ $o_2$-ಎರಿಡೆನಿ ಮೂರು ನಕ್ಷತ್ರಗಳಿಂದ ಕೂಡಿದೆ. ಬರಿಗಣ್ಣಿಗೆ ಹಳದಿ ಬಣ್ಣದ ಕುಬ್ಜ ನಕ್ಷತ್ರ ಒಂದು ಮತ್ತು ದೂರದರ್ಶಕಕ್ಕೆ ಕಾಣಿಸುವಂಥ ನಕ್ಷತ್ರಗಳು ಎರಡು.

ಗ್ರೀಕ್ ಪುರಾಣ ಪ್ರಕಾರ ಎರಿಡೆನಸ್ ಒಂದು ನದೀದೇವತೆ.

ಸೂರ್ಯನ ರಥದ ಸಾರಥ್ಯವನ್ನು ವಹಿಸಿದ್ದ ಅಪೊಲೊ ಸ್ವೇಚ್ಛಾನುಸಾರ ಅದನ್ನು ಆಕಾಶದಲ್ಲಿ ಓಡಿಸಿದುದರಿಂದ ಜಗತ್ತಿಗೆ ಘೋರಾಪಾಯ ಸನ್ನಿಹಿತ ವಾಯಿತು. ಆಗ ಜ್ಯೂಸ್ ತನ್ನ ಆಯುಧದಿಂದ ಅಪೊಲೊವಿಗೆ ಹೊಡೆದು ರಥದಿಂದ ಉರುಳಿಸಿದ. ಅಪೊಲೊ ಎರಿಡೆನಸ್ (ಎಂದರೆ ಮೃತ್ಯು ನದಿಗೆ) ಬಿದ್ದ.

ಟೈಕೊಬ್ರಾಹೆ ರಚಿಸಿದ ಕೋಷ್ಟಕದಲ್ಲಿ ಎರಿಡೆನಸ್ ಪುಂಜಕ್ಕೆ ಎರಿಡೆನಸ್ ಪ್ಲೂವಿಯಸ್ ಎಂಬ ಹೆಸರು ಇದೆ. ಉಲುಗ್ ಬೆಗ್ ಮತ್ತು ಟಾಲೆಮಿ ರಚಿಸಿದ ಕೋಷ್ಟಕಗಳಲ್ಲಿ ಇದನ್ನು ನದಿಗಳೆಂದು ಕರೆದಿದೆ. *

**ಎರಿಯೊಕಾರ್ಪಸ್ :** ಕಳ್ಳಿಯ ಒಂದು ಜಾತಿ. ಆಕರ್ಷಕವಾಗಿದ್ದು ಮುಖ್ಯವೆನಿಸಿದೆ. ಇದು ಮೆಕ್ಸಿಕೋ ಮತ್ತು ಟೆಕ್ಸಾಸುಗಳ ಮೂಲವಾಸಿ. ಬೇರು ಬೀಟ್‌ಗೆಡ್ಡೆಯನ್ನು ಹೋಲುತ್ತದೆ. ಬೇರಿನ ಮೇಲು ಭಾಗದಲ್ಲಿ ವಿವಿಧ ಆಕಾರದ ಗಂಟುಗಳಿವೆ. ಗಂಟುಗಳ ಮೇಲೆ ದಪ್ಪವಾದ ತೊಗಟೆಯಿದೆ. ಬಲಿತ ಗಂಟುಗಳು ಸತ್ತುಹೋಗುತ್ತವೆ. ಆದರೆ ಇವುಗಳ ಮೇಲುಭಾಗ ಸುರಳಿಯಾಕಾರದಲ್ಲಿ ಉಳಿದು, ಸತ್ತತೊಗಟೆ ಬಿದ್ದುಹೋಗುತ್ತದೆ. ಬಲಿತ ರಂಧ್ರಗಳಿಂದ (ಏರಿಯೋಲ್ಸ್) ಹೂ ಹೊರಬರುತ್ತದೆ.

ಎರಿಯೊಕಾರ್ಪಸ್ ಫಿಸ್ಸುರೇಟಸ್ ಪ್ರಭೇದದ ಕಾಂಡ ಸುಮಾರು ಐದೂವರೆ ಅಂಗುಲ ಅಗಲವಾಗಿದ್ದು ಗುಂಡಾಗಿರುವ ಬೂದುಬಣ್ಣದ 25-30 ಗಂಟುಗಳಿಂದ ಕೂಡಿದೆ. ಗಂಟಿನ ತಳ ದೋಣಿಯ ಬೆನ್ನಿನಂತಿದೆ. ಕಾಂಡದ ಮೇಲುಭಾಗದಲ್ಲಿ ದಾರದಿಂದ ಕೂಡಿರುವ ತಗ್ಗುಭಾಗವಿದೆ. ಇದರ ಮಧ್ಯದಲ್ಲಿ ಹೂಬಿಡುವ ರಂಧ್ರವಿದೆ.

ಎರಿಯೊಕಾರ್ಪಸ್ ಟ್ರೈಗೋನಸ್ ಪ್ರಭೇದಕ್ಕೆ 2 ಅಂಗುಲ ಉದ್ದದ ತ್ರಿಕೋನಾಕಾರದ ಗಂಟುಗಳಿದ್ದು, ಇವುಗಳ ತುದಿಯಲ್ಲಿ ಮುಳ್ಳಿನ ರಂಧ್ರಗಳಿವೆ. ಸಸ್ಯದ ಮೇಲುಭಾಗದ ತುದಿಯ ಗಂಟುಗಳ ಕಂಕುಳಲ್ಲಿ ಹೂಬಿಡುತ್ತದೆ. ಹೂವಿನ ಜೊತೆಯಲ್ಲಿ ನಿಬಿಡವಾದ ದಾರಗಳು ಹೊರಬಂದಿರುತ್ತವೆ.

ಎರಿಯೊಕಾರ್ಪಸ್ ಸ್ಕ್ಯಾಫರೊಸ್ಟ್ರಸ್ ಪ್ರಭೇದದಲ್ಲಿ ಬೂದುಮಿಶ್ರಿತ ಹಸಿರು ಬಣ್ಣದ, ತ್ರಿಕೋನಾಕಾರದ ಗಂಟುಗಳಿವೆ. ಈ ಸಸ್ಯ ಮೆಕ್ಸಿಕೋದಲ್ಲಿ ಔಷಧಿಯ ಪ್ರಾಮುಖ್ಯ ಪಡೆದಿದೆ.

ಎರಿಯೊಕಾರ್ಪಸ್ ಜಾತಿಯ ಬೆಳೆವಣಿಗೆಗೆ ಹೆಚ್ಚು ಉಷ್ಣತೆ ಮತ್ತು ಧಾರಾಳವಾದ ಬೆಳಕು ಬೇಕಾಗಿರುವುದರಿಂದ ಇದನ್ನು ಮನೆಗಳಲ್ಲಿ ಬೆಳೆಯಲು ಸಾಧ್ಯವಾಗುವುದಿಲ್ಲ. (ಬಿ.ಎಂ.)

**ಎರಿಯೋಪ್ಸ್ :** ಪ್ರಾಚೀನ ಜೀವಕಲ್ಪದ ಉತ್ತರಾರ್ಧದ ಕೊನೆಯಲ್ಲಿದ್ದ ಒಂದು ದ್ವಿಚರ ಪ್ರಾಣಿ. ಸ್ವಲ್ಪಮಟ್ಟಿಗೆ ಮೊಸಳೆಯನ್ನು ಹೋಲುತ್ತಿತ್ತು. ಪಳೆಯುಳಿಕೆಯ ಆಧಾರದಿಂದ ಇದು 5 ಅಡಿಗಳಷ್ಟು ಉದ್ದವಿದ್ದಿರಬೇಕೆಂದು ನಿರ್ಧರಿಸಲಾಗಿದೆ. ಸ್ಟೀಗೊಕಿಫಾಲಿಯ ಗುಂಪಿಗೆ ಸೇರಿದ್ದರಿಂದ ಇದನ್ನು ಸ್ಟೀಗೊಕಿಫಾಲಿಯನ್ ಎಂದು ಕರೆವುದೂ ಉಂಟು. ಬಹುಶಃ ಇದು ಪ್ರಾಚೀನ ಜೀವಕಲ್ಪದ ಪರ್ಮಿಯನ್ ಯುಗದಲ್ಲಿ ಜೀವಿಸಿದ್ದ ಪ್ರಾಣಿಯೆಂದು ವಿಜ್ಞಾನಿಗಳು ಅಭಿಪ್ರಾಯಪಡುತ್ತಾರೆ. ಇದರ ತಲೆಭಾಗ ಮೂಳೆಯ ತಟ್ಟೆಗಳಿಂದ ಕೂಡಿದ್ದು ಚರ್ಮದ ಕವಚದಿಂದ ರಕ್ಷಿಸಲ್ಪಟ್ಟಿತ್ತು. ದೇಹದ ಹೊರಭಾಗ ಹುರುಪೆ ಮತ್ತು ತಟ್ಟೆಗಳಿಂದ ಆವೃತವಾಗಿತ್ತು. ತಲೆಬುರುಡೆಯ ಮೇಲ್ಛಾವಣಿಯಲ್ಲಿ ಪೈನಿಯಲ್ ಕಂಡಿ ತೆರೆದಿದ್ದಿತು. ಇದರ ಅಗಲವಾದ ಬಾಯಲ್ಲಿ ಬುಗುರಿ ಆಕಾರದ ಹಲ್ಲುಗಳಿದ್ದವು. ಅಂಗಾಂಗಗಳು ದುರ್ಬಲವಾಗಿದ್ದ ಕಾರಣ ಈ ಪ್ರಾಣಿ ಜಡಸ್ವಭಾವದ್ದಾಗಿತ್ತು. (ಎಚ್. ಎಸ್. ಎಚ್.)

**ಎರೆಂತಮಮ್ :** ಅಕ್ಯಾಂತೇಸಿ ಕುಟುಂಬಕ್ಕೆ ಸೇರಿದ ಒಂದು ಜಾತಿ. ಉಷ್ಣ ಪ್ರದೇಶಗಳಲ್ಲಿ ಬೆಳೆಯುತ್ತದೆ. ಎರೆಂತಮಮ್ ಎಂದರೆ ಸುಂದರ ಪುಷ್ಪವೆಂದೇ ಅರ್ಥ. ಈ ಸಸ್ಯವನ್ನು ಕುಂಡ, ಅಂಚು, ಕಲ್ಲೇರಿ ಸಸ್ಯಗಳಾಗಿ ಬೆಳೆಸುತ್ತಾರೆ. ಎಲೆಗಳು ಪ್ರಭೇದಗಳಿಗೆ ಅನುಸಾರವಾಗಿ ಕೆಂಪು, ಹಸಿರಿನ ಮೇಲೆ ಬಿಳುಪು ಹಳದಿ ಮತ್ತು ಇತರ ಬಣ್ಣದ ಮಚ್ಚೆಗಳಿಂದ ಕೂಡಿದ್ದು ಬಹಳ ಸುಂದರವಾಗಿ ಕಾಣುತ್ತವೆ.

ಎಲೆಯ ಆಕಾರ ಕರನೆಯಂತೆ. ನಾಳರಚನೆ ಗರಿರೂಪದ್ದು. ಅಂಚು ನಯ ಇಲ್ಲವೆ ಗರಗಸದ ಹಲ್ಲಿನಂತೆ. ಹೂಗೊಂಚಲು ಸ್ಪೈಕ್ ಮಾದರಿಯದು. ತೊಟ್ಟು ಇಲ್ಲವೆ ಇಲ್ಲವೆ ಕಿತ್ತಳೆ. ಹೂವಳಗಳು ಕೂಡಿವೆ. ಹೂವಿನ ಆಕಾರ ಕೊಳವೆಯಂತೆ. ತುದಿ ವಿಶಾಲವಾಗಿ ಹರಡಿ ಐದು ಭಾಗಗಳಾಗಿ ಒಡೆದಿದೆ. ಪುಷ್ಪಪತ್ರ, ಉಪದಳಗಳಿಂದ ಆವೃತ. ಹೂವಳದ ಮೇಲೆ ಅಂಟಿರುವ ಎರಡು ಕೇಸರಗಳಿವೆ. ದೀರ್ಘ

ವೃತ್ತಾಕಾರ ಅಥವಾ ಆಯತಾಕಾರದ ಮೇಲು ಅಂಡಾಶಯ ನಾಲ್ಕು ಬೀಜವಿರುವ ಕ್ಯಾಪ್‌ಸೂಲ್ ಮಾದರಿಯದು. ಕಾಂಡದ ತುಂಡುಗಳಿಂದ ಹೊಸ ಗಿಡಗಳನ್ನು ಪಡೆಯಬಹುದು. ಜೌಗಿಲ್ಲದ ಒಳ್ಳೆಯ ನೆಲದಲ್ಲಿ ಇದು ಚೆನ್ನಾಗಿ ಬೆಳೆಯುತ್ತದೆ. ಅರ್ಧ ನೆರಳಿದ್ದರಂತೂ ಇನ್ನೂ ಹಸನು.

ಎರೆಂತಮಮ್ ಸಿನಬಾರಿನಮ್ ಪ್ರಭೇದ ಸುಮಾರು 2 ಅಡಿ ಎತ್ತರ ಬೆಳೆಯುತ್ತದೆ. ಮೂತ್ರಪಿಂಡಾಕಾರದ ಎಲೆಗಳು ಅತಿ ಹಸಿರು ಬಣ್ಣವಾಗಿದ್ದು ಹಳದಿ ಬಣ್ಣದ ನಾಳಗಳಿಂದ ಕೂಡಿವೆ.

ಎರೆಂತಮಮ್ ಎಲ್ಡೊರ್‍ಯಾಡೊ ಪ್ರಭೇದವೂ 2 ಅಡಿ ಎತ್ತರ ಬೆಳೆಯುತ್ತದೆ. ಹಳದಿ ಮಚ್ಚೆ ಮತ್ತು ಹಸಿರು ನಾಳಗಳಿರುವ ಎಲೆಗಳು ಬಹಳ ಸುಂದರವಾಗಿವೆ.

ಎರೆಂತಮಮ್ ಗೊಲ್ಡಿಯಾನ ಪ್ರಭೇದ ಸುಮಾರು 3 ಅಡಿ ಎತ್ತರ ಬೆಳೆಯುವುದರಿಂದ ಅಲಂಕಾರ ಬೇಲಿಗಳಲ್ಲಿ ಬೆಳೆಸಲು ಯೋಗ್ಯವಾಗಿದೆ.

ಎರೆಂತಮಮ್ ನೊಬಿಲಿಸ್ ಪ್ರಭೇದ 3-4 ಅಡಿ ಎತ್ತರ ಬೆಳೆಯುತ್ತದೆ. ಅತಿ ಹಸಿರಾದ ಎಲೆಗಳಲ್ಲಿ ಹಳದಿ ಬಣ್ಣದ ನಾಳಗಳಿರುವುದರಿಂದ ಬಹಳ ಸುಂದರವಾಗಿ ಕಾಣುತ್ತದೆ.

ಎರೆಂತಮಮ್ ವರ್ ಸಿಕೊಲೊರ್ ಪ್ರಭೇದದ ಎಲೆಗಳಲ್ಲಿ ಬಿಳಿಯ ಮತ್ತು ಹಸಿರು ಬಣ್ಣದ ಮಚ್ಚೆಗಳಿವೆ.

ಎರೆಂತಮಮ್ ಅಟ್ರೊಪರ್‌ಫ್ಯೂರಿಯಮ್ ಪ್ರಭೇದದ ಎಲೆಗಳ ಮೇಲೆ ಕಂಚು ಅಥವಾ ಕಡುಗೆಂಪು ಬಣ್ಣದ ಮಚ್ಚೆಗಳಿವೆ. (ಎಂ.ಎಚ್.ಎಂ.)

**ಎರೆಯಂಗ :** (—ಮರಣ 1099). ಹೊಯ್ಸಳ ಇಮ್ಮಡಿ ವಿನಯಾದಿತ್ಯ (1047–1100) ಮತ್ತು ಆತನ ಪಟ್ಟದರಾಣಿ ಕಳೆಯಬ್ಬರಸಿಯ ಮಗ. ತಂದೆಗಿಂತಲೂ ಮೊದಲೇ ಮರಣಹೊಂದಿದ್ದರಿಂದ ಸಿಂಹಾಸನಕ್ಕೆ ಬರಲಿಲ್ಲ. ಮರಣ ಕಾಲದವರೆಗೂ ಯುವರಾಜನಾಗಿದ್ದ. ಆದರೆ ಆಡಳಿತದಲ್ಲಿ ಸಾಕಷ್ಟು ಪಾಲ್ಗೊಂಡಿದ್ದ. ಮಹಾಮಂಡಲೇಶ್ವರ ಎಂಬ ಬಿರುದಿತ್ತು. ಈತ ಜೈನಮತಾವಲಂಬಿ. ಗುರು ಗೋಪನಂದಿ. ಚಾಲುಕ್ಯ ಸಾಮ್ರಾಟ ಆರನೆಯ ವಿಕ್ರಮಾದಿತ್ಯನಿಗೆ ಎರೆಯಂಗ ಬಲಭುಜದಂತಿದ್ದನೆಂಬುದಾಗಿ ಅನೇಕ ಶಾಸನಗಳಲ್ಲಿ ವರ್ಣಿಸಲಾಗಿದೆ. ಚಾಲುಕ್ಯ ಸೈನ್ಯದ ದಂಡನಾಯಕನಾಗಿ ಮಾಳವ, ಧಾರ ಮುಂತಾದ ರಾಜ್ಯಗಳನ್ನು ಎರೆಯಂಗ ಗೆದ್ದ. ಅನೇಕ ಕೆರೆ ಕಾಲುವೆಗಳನ್ನು ತೋಡಿಸಿದನಲ್ಲದೆ ಜೈನಬಸದಿಗಳನ್ನು ಕಟ್ಟಿಸಿದ. ಈತನಿಗೆ ಏಚಲದೇವಿ (ನೋಡಿ) ಮತ್ತು ಮಹಾದೇವಿ ಎಂಬ ಇಬ್ಬರು ರಾಣಿಯರಿದ್ದರು. ಏಚಲೆಯಲ್ಲಿ ಬಲ್ಲಾಳ I, ಬಿಟ್ಟಿಗ (ವಿಷ್ಣುವರ್ಧನ) ಮತ್ತು ಉದಯಾದಿತ್ಯ ಎಂಬ ಮೂರುಜನ ಗಂಡುಮಕ್ಕಳಾದರು. (ಜಿ.ಆರ್.ಆರ್.)

**ಎರೆಹುಳು :** ಅಕಶೇರುಕ ಪ್ರಪಂಚದ ಮುಖ್ಯವಂಶಗಳಲ್ಲೊಂದಾದ ವಲಯವಂತ ವಂಶದ (ಅನೀಲಿಡ) ಖೀಟೊಪೋಡ ವರ್ಗದ ಗಣಗಳಲ್ಲೊಂದಾದ




ಚಿತ್ರ 1 ಎರೆಹುಳುಗಳ ಮೂರು ಬಗೆಗಳು :
1 ಲುಂಬ್ರಿಕಸ್, 2 ಮೆಗಾಸ್ಕೊಲೆಕ್ಸ್ ಮೌರಿಟಿಯೈ 3 ಫೆರಿಟಿಮ ಪಾಸ್ತುಮ

ಆಲಿಗೋಕೀಟ ಎಂಬ ಗಣಕ್ಕೆ ಸೇರಿದ ಪ್ರಾಣಿ. ಖೀಟ ಎಂದರೆ ಈ ಹುಳುವಿನ ಚಲನಾಂಗಗಳಾದ ಸೀಟೆಗಳೆಂದರ್ಥ. ಎರೆಹುಳುವಿನಲ್ಲಿ ನಾನಾ ಪ್ರಭೇದಗಳಿವೆ. ಲುಮ್‌ಬ್ರಿಕಸ್ ಟೆರೆಸ್ಟ್ರಿಸ್ ಪ್ರಭೇದ ಯೂರೋಪ್ ಮತ್ತು ಉತ್ತರ ಅಮೆರಿಕಗಳಲ್ಲಿದೆ. ಭಾರತದಲ್ಲಿ ಫೆರಿಟೀಮ ಪಾಸ್ತುಮ ಮತ್ತು ಮೆಗಾಸ್ಕೊಲೆಕ್ಸ್ ಎಂಬ ಎರಡು ಪ್ರಭೇದಗಳು ಸಾಮಾನ್ಯವಾಗಿ ಕಂಡುಬರುತ್ತವೆ.



ಚಿತ್ರ 2 ಆಸ್ಟ್ರೇಲಿಯದ ದೈತ್ಯ ಎರೆಹುಳು

ಎರೆಹುಳುವಿನ ತೇವದ ನೆಲದಲ್ಲಿ ವಾಸ. ಏರಿ, ಗದ್ದೆಬದು, ಕೈತೋಟ, ಅಡಕೆ ಮತ್ತು ಬಾಳೆತೋಟ ಹಾಗೂ ತೇವವಿರುವ ಎಲ್ಲ ಭೂಮಿಗಳಲ್ಲೂ ಚಿಕ್ಕ ಚಿಕ್ಕ ಬಿಲಗಳನ್ನು ತೋಡಿಕೊಂಡು ಅದರೊಳಗೆ ವಾಸಿಸುತ್ತದೆ. ಎರೆಹುಳು ಪಕ್ಷಿಗಳಿಗೆ ಉತ್ತಮ ಆಹಾರ. ಈ ಶತ್ರುಗಳಿಂದ ಪಾರಾಗಲು ಇದು ಹಗಲು ಬಿಲಗಳಲ್ಲಿ ಹುದುಗಿದ್ದು ರಾತ್ರಿಯಲ್ಲಿ ಮಾತ್ರ ಹೊರಬರುತ್ತದೆ. ಕೊಳೆಯುತ್ತಿರುವ ಎಲೆ, ಕಾಂಡ, ಹುಲ್ಲು ಇದರ ಪ್ರೀತಿಯ ಆಹಾರ. ಆಹಾರದೊಡನೆ ಮಣ್ಣನ್ನೂ ಸೇವಿಸುತ್ತದೆ. ಎರೆಹುಳುವನ್ನು ಪ್ರಕೃತಿಯ ನೇಗಿಲು ಅಥವಾ ರೈತನ ಗೆಳೆಯ ಎಂದು ಕರೆಯುತ್ತಾರೆ. ಕಾರಣ ತಾನು ವಾಸಿಸುವ ಭೂಮಿಯನ್ನು ಇದು ಫಲವತ್ತಾಗಿಡುತ್ತದೆ. ಬಿಲಗಳನ್ನು ತೋಡುವುದರಿಂದ ಭೂಮಿ ಟೊಳ್ಳಾಗಿ ಗಾಳಿಯಾಡಲು ಅನುಕೂಲವಾಗುತ್ತದೆ. ವಿಸರ್ಜಿಸಿದ ಮಲ ಕಸ್ತೂರಿಮಾತ್ರೆಗಳಂತೆ ಭೂಮಿಯ ಮೇಲೆ ಕುಪ್ಪೆ ಕುಪ್ಪೆಯಾಗಿ ಬಿದ್ದಿರುತ್ತದೆ. ಇದಕ್ಕೆ ಕುಪ್ಪಲು ಮಣ್ಣು ಎಂದು ಹೆಸರು. ಇದು ಅತಿ ಫಲವತ್ತಾಗಿರುತ್ತದೆ. ಗಿಡಗಳ ಬೆಳೆವಣಿಗೆಗೆ ಬೇಕಾದ ಎಲ್ಲ ಲವಣಾಂಶಗಳು ಈ ಮಣ್ಣಿನಲ್ಲಿವೆ. ಡಾರ್ವಿನ್ ಒಂದು ಎಕರೆಯಲ್ಲಿ ವಾಸಿಸುವ ಎರೆಹುಳುಗಳು ಒಂದು ವರ್ಷದಲ್ಲಿ 18 ಟನ್ ಮಣ್ಣನ್ನು ತಿರುವಿಹಾಕುತ್ತವೆ ಎಂದು ಲೆಕ್ಕಾಚಾರ ಮಾಡಿದ್ದಾನೆ.

ಎರೆಹುಳುವಿನ ಬಣ್ಣ ಕಂದುಗೆಂಪು ಅಥವಾ ಮಣ್ಣಿನ ಬಣ್ಣ. ಇದು ಒಂದು ಅಥವಾ ಒಂದೂಕಾಲು ಅಡಿ ಉದ್ದ ಬೆಳೆಯುತ್ತದೆ. ಗಾತ್ರ $\frac{1}{8}$″. ಶರೀರ ದುಂಡಗೆ ದಾರದಂತಿದೆ. ಆಸ್ಟ್ರೇಲಿಯದಲ್ಲಿ ಮೆಗಾಸ್ಕೊಲಿಸ್ಪೈಡಿಸ್ ಆಸ್ಟ್ರಾಲಿಸ್ ಎಂಬ ಎರೆಹುಳು ಇದೆ. ಇದು ಹನ್ನೊಂದರಿಂದ ಹನ್ನೆರಡು ಅಡಿ ಉದ್ದವಿದ್ದು ನೂಲಿನ ಹಗ್ಗದಷ್ಟು ಗಾತ್ರವಿರುತ್ತದೆ. ಇದನ್ನು ರಾಕ್ಷಸ ಎರೆಹುಳು ಎನ್ನುತ್ತಾರೆ. ಇದು ಅಗಲವಾದ ಬಿಲಗಳನ್ನು ತೋಡಿಕೊಂಡು ವಾಸಿಸುತ್ತದೆ. ಬಿಲಗಳ ಬಾಯಿ ಅಗ್ನಿಪರ್ವತದ ಬಾಯಿಯಂತೆ ಕಾಣುತ್ತದೆ. ಈ ಹುಳುಗಳನ್ನು ತಿನ್ನುವ ಒಂದೇ ಒಂದು ಪಕ್ಷಿಯೆಂದರೆ ಅಲ್ಲಿನ ಲಾಫಿಂಗ್ ಕಿಂಗ್ ಫಿಷರ್.

ಎರೆಹುಳುವಿನ ಮೈ ಸದಾ ತೇವವಾಗಿರುತ್ತದೆ. ಮುಂತುದಿ ಮತ್ತು ಹಿಂತುದಿಗಳು ಸ್ವಲ್ಪ ಮಟ್ಟಿಗೆ ಚೂಪಾಗಿರುತ್ತವೆ. ಇದರ ಶರೀರ ಬಹಳ ವಲಯಗಳನ್ನು (ಖಂಡ) ಹೊಂದಿದೆ. ಶರೀರದಲ್ಲಿ ಇಷ್ಟೇ ಖಂಡಗಳಿರಬೇಕೆಂಬ ನಿಯಮವೇನಿಲ್ಲ. ಸಾಮಾನ್ಯವಾಗಿ 100 ರಿಂದ 150 ಖಂಡಗಳಿರಬಹುದು. ಈ ಖಂಡಗಳು ಉಂಗುರದಂತಿದ್ದು ಒಂದರ ಹಿಂದೆ ಒಂದರಂತೆ ಜೋಡಣೆಗೊಂಡಿವೆ. ಶರೀರದ ಮೇಲೆ ತೆಳುವಾದ ಕ್ಯುಟಿಕಲಿನಿಂದಾದ ಪೊರೆಯಿದೆ. ಮುಂದಿನ ಒಂದೆರಡು ಖಂಡಗಳನ್ನು ಬಿಟ್ಟರೆ ಮಿಕ್ಕೆಲ್ಲ ಖಂಡಗಳಲ್ಲೂ ಸೀಟೆಗಳೆಂಬ ಬಿರುಗೂದಲುಗಳಿವೆ. ಇವು ಖಂಡದ ಸುತ್ತಲೂ ಸಾಲಾಗಿ ಜೋಡಣೆಗೊಂಡಿವೆ. ಪ್ರತಿಯೊಂದು ಸೀಟೆಯೂ S ಆಕಾರಕ್ಕಿದ್ದು ತನ್ನದೇ ಆದ ಚೀಲದಲ್ಲಿ ಹುದುಗಿದೆ. ಸೀಟೆಯ ಬುಡದಲ್ಲಿ ಮಾಂಸಖಂಡಗಳಿವೆ. ಇವುಗಳ ಹಿಗ್ಗುವಿಕೆ ಮತ್ತು ಕುಗ್ಗುವಿಕೆಯಿಂದಾಗಿ ಸೀಟೆ ಚಲಿಸುತ್ತದೆ. ಸೀಟೆಯನ್ನು ಚೀಲದೊಳಕ್ಕೆ ಎಳೆದುಕೊಳ್ಳಲು ಮತ್ತು

ಹೊರನೂಕಲು ಈ ಮಾಂಸಖಂಡಗಳು ಸಹಕರಿಸುತ್ತವೆ. ಸೀಟೆಗಳ ಚಲನೆಯಿಂದ ಹುಳು ಚಲಿಸುತ್ತದೆ. ಆದ್ದರಿಂದ ಸೀಟೆಗಳು ಎರೆಹುಳುವಿನ ಚಲನಾಂಗಗಳು.

ಎರೆಹುಳುವಿನ ಶರೀರವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. 1 ಕ್ಲೈಟೆಲಮ್ ಮುಂಭಾಗ. 2 ಕ್ಲೈಟೆಲಮ್ ಭಾಗ. 3 ಕ್ಲೈಟೆಲಮ್ ಹಿಂಭಾಗ. ಚೆನ್ನಾಗಿ ಬೆಳೆದ ಹುಳುವನ್ನು ನೋಡಿದೊಡನೆ ಗುರುತಿಸಲು ಕ್ಲೈಟೆಲಮ್ ಭಾಗ ಬಹಳ ಸಹಕಾರಿಯಾಗಿದೆ. ಶರೀರದ ಮಿಕ್ಕ ಭಾಗಕ್ಕಿಂತ ಈ ಭಾಗ ಉಬ್ಬಿಕೊಂಡಿರುತ್ತದೆ. ಈ ಭಾಗದ ಖಂಡಗಳು ಒಟ್ಟುಗೂಡಿಕೊಂಡಿವೆ.



ಚಿತ್ರ 3 ಎರೆಹುಳುವಿನ ಅಡ್ಡಸೀಳಿಕೆ ನೋಟ :

1 ಮೇಲುರಂಧ್ರ, 2 ಕ್ಯೂಟಿಕಲ್, 3 ಹೊರಚರ್ಮ, 4 ವೃತ್ತಾಕಾರದ ಮಾಂಸಖಂಡಗಳು, 5 ನೀಳಾಕಾರದ ಮಾಂಸಖಂಡಗಳು, 6 ಸಿಲಾಮಿನ ಎಪಿಥೀಲಿಯಂ, 7 ಕರುಳಿನ ಎಪಿಲಿಥೀಲಿಯಂ, 8 ದೇಹಾಂತರವಕಾಶ (ಸೀಲಾಂ), 9 ರಿಟ್ರ್ಯಾಕ್ಟರ್ ಮಾಂಸಖಂಡದ ತುದಿ, 10 ಸೀಟೆಯ ಚೀಲ, 11 ಸೀಟೆಗಳು, 12 ಖಂಡಕ್ಕೆ ಬಂದಿರುವ ನರಗಳು, 13 ನರದ ಪಕ್ಕದಲ್ಲಿರುವ ರಕ್ತನಾಳ, 14 ನರದ ಕೆಳಭಾಗದಲ್ಲಿರುವ ರಕ್ತನಾಳ, 15 ಕರುಳಿನಿಂದ ಕೆಳಗಿರುವ ನರಹುರಿ, 16 ನೆಫ್ರೀಡಿಯದ ಆಲಿಕೆ, 17 ನೆಫ್ರೀಡಿಯ ರಂಧ್ರ, 18 ತಳಭಾಗದ ರಕ್ತನಾಳ, 19 ನೆಫ್ರೀಡಿಯ ನಾಳಗಳು, 20 ಕರುಳು, 21 ನೆಫ್ರೀಡಿಯ ಚೀಲ, 22 ಟಿಫ್ಲೊಸೋಲ್, 23 ಮೇಲುಭಾಗದ ರಕ್ತನಾಳ, 24 ನೀಳಾಕಾರದ ಮಾಂಸಖಂಡಗಳು, 25 ಸ್ಪರ್ಶೇಂದ್ರಿಯ, 26 ಚರ್ಮಗ್ರಂಥಿ.'

ಫೆರಿಟೀಮ ಪ್ರಭೇದದಲ್ಲಿ ಕ್ಲೈಟೆಲಮ್ ಮುಂಭಾಗದಲ್ಲಿ 13 ಖಂಡಗಳಿವೆ. 14, 15 ಮತ್ತು 16 ಖಂಡಗಳು ಒಟ್ಟು ಸೇರಿ ಕ್ಲೈಟೆಲಮ್ ಭಾಗವಾಗಿದೆ. ಮೆಗಾಸ್ಕೊಲೆಕ್ಸ್ ಪ್ರಾಣಿಯಲ್ಲಿ ಕ್ಲೈಟೆಲಮ್ ಮುಂಭಾಗದಲ್ಲಿ 14 ಖಂಡಗಳಿವೆ. 15, 16 ಮತ್ತು 17 ಖಂಡಗಳು ಸೇರಿ ಕ್ಲೈಟೆಲಮ್ ಭಾಗವಾಗಿದೆ. ಅಮೆರಿಕದ ಲುಮ್‍ಬ್ರಿಕಸ್ ಜಾತಿಯಲ್ಲಿ ಕ್ಲೈಟೆಲಮ್ ಮುಂಭಾಗದಲ್ಲಿ 30 ಖಂಡಗಳಿರುತ್ತವೆ. 31ರಿಂದ 37ನೆಯ ಖಂಡಗಳು ಸೇರಿ ಕ್ಲೈಟೆಲಮ್ ಆಗಿದೆ. ಕ್ಲೈಟೆಲಮ್ ಶರೀರದ ಮಿಕ್ಕ ಭಾಗಕ್ಕಿಂತ ದಪ್ಪನಾಗಿರುವುದಕ್ಕೆ ಅದರಲ್ಲಿರುವ ಹೊರಚರ್ಮದ ಪದರಗಳೇ ಕಾರಣ. ಈ ಪದರಗಳು ಒಂದರ ಮೇಲೊಂದರಂತೆ ಜೋಡಿಸಿಕೊಂಡಿವೆ. ಈ ಭಾಗವನ್ನು ಬಿಟ್ಟರೆ ಶರೀರದ ಮಿಕ್ಕ ಭಾಗದಲ್ಲಿ ಹೊರಚರ್ಮದ ಕೋಶಗಳು ಕೇವಲ ಒಂದೇ ಪದರದಲ್ಲಿವೆ. ಕ್ಲೈಟೆಲಮ್ ಭಾಗದಲ್ಲಿ ಅನೇಕ ಗ್ರಂಥಿಗಳು ಇವೆ. ಇವು ಸ್ರವಿಸುವ ಲೋಳೆಯಂತಿರುವ ರಸದಿಂದಾಗಿ ಈ ಭಾಗ ಮಿಕ್ಕ ಭಾಗಕ್ಕಿಂತ ಹೆಚ್ಚು ತೇವವಾಗಿರುತ್ತದೆ. ಶರೀರದ ಮೊದಲ ಖಂಡದಲ್ಲಿ ಬಾಯಿ ಇವೆ. ಇದೊಂದು ದುಂಡನೆಯ ರಂಧ್ರ. ಬಾಯಿಯ ಮುಂದೆ ಮಾಂಸದ ಮುದ್ದೆಯಂಥ ಪ್ರೋಸ್ಟೋಮಿಯಮ್ ಎಂಬ ರಚನೆ ಇದೆ. ಶರೀರದ ಕೊನೆಯ ಖಂಡದಲ್ಲಿ ಗುದದ್ವಾರವಿದೆ.

ಎರೆಹುಳುವಿನ ಶರೀರದ ಮೇಲೆ ಎರಡು ಖಂಡಗಳು ಸಂಧಿಸುವ ಭಾಗದಲ್ಲಿ ಒಂದೊಂದು ರಂಧ್ರವಿದೆ. ಈ ರಂಧ್ರಗಳು ಬೆನ್ನಿನ ಮಧ್ಯರೇಖೆಯ ಮೇಲಿವೆ. ಫೆರಿಟೀಮ ಪ್ರಾಣಿಯಲ್ಲಿ ಈ ರಂಧ್ರಗಳು 12ನೆಯ ಖಂಡದಿಂದ ಹಿಂದಕ್ಕೆ ಪ್ರತಿ ಖಂಡದಲ್ಲೂ ಇವೆ. ಶರೀರದೊಳಗಿರುವ ಒಂದು ರೀತಿಯ ರಸ ಈ ರಂಧ್ರಗಳಿಂದ ಹೊರಬರುತ್ತದೆ. ಇದು ಈ ಪ್ರಾಣಿಯ ಶರೀರವನ್ನು ಸದಾ ತೇವವಾಗಿಟ್ಟಿರುತ್ತದೆ. ಲುಮ್‍ಬ್ರಿಕಸ್ ಪ್ರಾಣಿಯಲ್ಲಿ ಈ ರಂಧ್ರಗಳು 8 ಅಥವಾ 9ನೆಯ ಖಂಡಗಳ ಮಧ್ಯ ಸ್ಥಳದಿಂದ ಪ್ರಾರಂಭವಾಗುತ್ತವೆ. ಈ ರಂಧ್ರಗಳನ್ನು ಬಿಟ್ಟರೆ ಎರೆಹುಳುವಿನ ಪಕ್ಕಗಳಲ್ಲಿ ಸೂಕ್ಷ್ಮವಾದ ಅನೇಕ ರಂಧ್ರಗಳು ಪ್ರತಿ ಖಂಡದಲ್ಲೂ ಇವೆ. ಇವನ್ನು ನೆಫ್ರೀಡಿಯ ರಂಧ್ರಗಳು ಎನ್ನುತ್ತಾರೆ. ಈ ರಂಧ್ರಗಳ ಮೂಲಕ ತ್ಯಾಜ್ಯ ವಸ್ತುಗಳು ಹೊರ ಹೋಗುತ್ತವೆ.

ಫೆರಿಟೀಮ ಪ್ರಾಣಿಯ ತಳಭಾಗದಲ್ಲಿ 5/6, 6/7, 7/8 ಮತ್ತು 8/9 ಖಂಡಗಳು ಸಂಧಿಸುವ ಸ್ಥಳಗಳಲ್ಲಿ ನಾಲ್ಕು ಜೊತೆ ಸ್ಪರ್ಮಥೀಕೆ ರಂಧ್ರಗಳಿವೆ. ಲುಮ್‍ಬ್ರಿಕಸ್‍ನಲ್ಲಿ 9/10 ಮತ್ತು 10/11 ಖಂಡಗಳಲ್ಲಿ ಮಾತ್ರ ಈ ರೀತಿಯ ಎರಡು ಜೊತೆ ರಂಧ್ರಗಳಿವೆ. ಫೆರಿಟೀಮದಲ್ಲಿ 14ನೆಯ ಖಂಡದ ತಳಭಾಗದಲ್ಲಿ ಒಂದು ಸ್ತ್ರೀಜನನೇಂದ್ರಿಯ ರಂಧ್ರವೂ 18ನೆಯ ಖಂಡದಲ್ಲಿ ಒಂದು ಜೊತೆ ಪುರುಷ ಜನನೇಂದ್ರಿಯ ರಂಧ್ರವೂ ಇವೆ. ಲುಮ್‍ಬ್ರಿಕಸ್‍ನಲ್ಲಿ 14ನೆಯ ಖಂಡದ ತಳಭಾಗದಲ್ಲಿ ಒಂದು ಜೊತೆ ಸ್ತ್ರೀಜನನೇಂದ್ರಿಯ ರಂಧ್ರಗಳು, 15ನೆಯ ಖಂಡದ ತಳಭಾಗದಲ್ಲಿ ಒಂದು ಜೊತೆ ಪುರುಷ ಜನನೇಂದ್ರಿಯ ರಂಧ್ರಗಳು ಇವೆ.

ಎರೆಹುಳು ಮುಪ್ಪದರಜೀವಿ. ಶರೀರದ ಅಡ್ಡ ಸೀಳನ್ನು ಪರಿಶೀಲಿಸಿದರೆ ಅದರಲ್ಲಿರುವ ಮಾಂಸಖಂಡಗಳು ಮತ್ತು ಅಂಗಗಳ ಜೋಡಣೆ ತಿಳಿಯುತ್ತದೆ. ಅಡ್ಡಸೀಳು ವೃತ್ತಾಕಾರಕ್ಕಿರುತ್ತದೆ. ಶರೀರದ ಪ್ರಥಮಪದರ ಹೊರಚರ್ಮ. ಇದು ಚಚ್ಚೌಕವಾಗಿರುವ ಕೋಶಗಳಿಂದಾಗಿದೆ. ಈ ಕೋಶಗಳು ಸಾಲಾಗಿ ಒಂದೇ ಪದರದಲ್ಲಿವೆ. ಹೊರಚರ್ಮದ ಮೇಲೆ ಇವುಗಳೇ ಉತ್ಪತ್ತಿಮಾಡಿದ ತೆಳುವಾದ ಕ್ಯುಟಿಕಲ್ ಲೇಪನವಿದೆ. ಹೊರಚರ್ಮದ ತಳಭಾಗದಲ್ಲಿ ಮಾಂಸಖಂಡಗಳ ಪದರಗಳಿವೆ. ಪ್ರಥಮ ಮಾಂಸಖಂಡದ ಪದರ ವೃತ್ತಾಕಾರಕ್ಕಿದೆ. ಎರಡನೆಯ ಪದರ ನೀಳವಾಗಿ ಜೋಡಿಸಿಕೊಂಡಿರುವ ಮಾಂಸಖಂಡಗಳನ್ನೊಳಗೊಂಡಿದೆ. ಹೊರಚರ್ಮ ಮತ್ತು ಮಾಂಸಖಂಡಗಳು ಸೇರಿ ಶರೀರದ ಗೋಡೆಯಾಗಿದೆ. ಶರೀರದ ಗೋಡೆಯಲ್ಲಿ ಅಲ್ಲಲ್ಲಿ ಚಲನಾಂಗಗಳಾದ ಸೀಟೆಗಳು ನಾಟಿಕೊಂಡಂತಿವೆ. ಮಾಂಸಖಂಡಗಳ ಹಿಗ್ಗುವಿಕೆ ಮತ್ತು ಕುಗ್ಗುವಿಕೆಯಿಂದಾಗಿ ಸೀಟೆಗಳು ಚಲಿಸುತ್ತವೆ. ಶರೀರದ ಗೋಡೆಯಿಂದ ಒಳಭಾಗದಲ್ಲಿ ದೇಹಾಂತರಾವಕಾಶವಿದೆ (ಸೀಲಾಮ್). ಇದರ ಸುತ್ತಲೂ ಏಕಪದರದ ಅನುಲೇಪಕ ಅಂಗಾಂಶದ ಕೋಶಗಳಿವೆ. ದೇಹಾಂತರಾವಕಾಶದೊಳಗೆ ಒಂದು ರೀತಿಯ ರಸವಿದೆ. ಈ ರಸದಲ್ಲಿ ವರ್ಣರಹಿತ ಅಮೀಬ ರೀತಿಯ ಕೋಶಗಳಿವೆ. ಶರೀರದ ಮೇಲು ರಂಧ್ರದ ಮೂಲಕ ಈ ರಸ ಕೋಶಗಳ ಸಮೇತ ಹೊರಬರುತ್ತದೆ. ಶರೀರದ ಮೇಲೆ ಕೂರುವ ಬ್ಯಾಕ್ಟೀರಿಯ ಮುಂತಾದ ಜೀವಾಣುಗಳನ್ನು ಈ ಕೋಶಗಳು ತಿಂದು ಹಾಕಿ ಶರೀರವನ್ನು ರಕ್ಷಿಸುತ್ತವೆ. ದೇಹಾಂತರಾವಕಾಶದಲ್ಲಿ ಕತ್ತರಿಜೋಡಣೆಯ ಅನ್ನನಾಳ. ಅದರ ಮೇಲುಭಾಗದಲ್ಲಿ ಹಾಗೂ ತಳಭಾಗದಲ್ಲಿ ರಕ್ತನಾಳಗಳು ಮತ್ತು ನರಹುರಿ, ಜೀರ್ಣಾಂಗದ ಇಕ್ಕೆಲದಲ್ಲಿ ಶುದ್ಧೀಕರಣಾಂಗಗಳಾದ ನೆಫ್ರೀಡಿಯ ಇವು ಇವೆ.

ಎರೆಹುಳುವಿನ ಜೀರ್ಣಾಂಗ ಅತಿಸರಳವಾಗಿ ನಾಳದಂತಿದೆ. ಜೀರ್ಣಾಂಗದ ಮುಂದಿನ ಭಾಗದಲ್ಲಿ ಆಹಾರವನ್ನು ಶೇಖರಿಸಲು ಫ್ಯಾರಿಂಕ್ಸ್ ಎಂಬ ಚೀಲದೋಪಾದಿಯ ಅಂಗ ಮತ್ತು ಆಹಾರವನ್ನು ಅರೆಯಲು ಗಟ್ಟಿಯಾದ ಸ್ನಾಯುಗಳಿಂದಾದ ಗಿಜರ್ಡ್ ಅಂಗ ಇವೆ. ಇವುಗಳು ಬರುವ ಖಂಡಗಳು ಪ್ರತಿ ಪ್ರಭೇದದಲ್ಲಿಯೂ ವಿಭಿನ್ನವಾಗಿವೆ. ಈ ಭಾಗಗಳ ಹಿಂದಿರುವುದು ಕರುಳು.

ಎರೆಹುಳುವಿನ ರಕ್ತ ಕೆಂಪಗಿದೆ. ಇದು ನಾಳಗಳಲ್ಲಿಯೇ ಹರಿಯುತ್ತದೆ. ಈ ಪ್ರಾಣಿಗೆ ಹೃದಯವಿಲ್ಲ. ರಕ್ತವನ್ನು ಶೇಖರಿಸಲು ಮತ್ತು ವಿತರಣೆ ಮಾಡಲು ಪ್ರತ್ಯೇಕ ರಕ್ತನಾಳಗಳಿವೆ.

ಎರೆಹುಳು ತನ್ನ ಚರ್ಮದಿಂದಲೇ ಉಸಿರಾಡುತ್ತದೆ. ಆದ್ದರಿಂದಲೇ ಇದರ ಚರ್ಮ ಸದಾ ತೇವವಾಗಿರುತ್ತದೆ. ರಕ್ತನಾಳಗಳ ಮೂಲಕ ರಕ್ತ ಚರ್ಮಕ್ಕೆ ಪ್ರವಹಿಸುತ್ತದೆ. ಗಾಳಿ ತೇವವಾದ ಚರ್ಮಕ್ಕೆ ಬಡಿದಾಗ ರಕ್ತನಾಳಗಳಲ್ಲಿರುವ ರಕ್ತ ಗಾಳಿಯಲ್ಲಿರುವ ಆಮ್ಲಜನಕವನ್ನು ಹೀರಿಕೊಂಡು ಇಂಗಾಲದ ಡೈಆಕ್ಸೈಡನ್ನು ಹೊರ ಹಾಕುತ್ತದೆ.

ಸಾಮಾನ್ಯವಾಗಿ ಪ್ರತಿಖಂಡದಲ್ಲೂ ನಾಳದಂತಿರುವ ನೆಫ್ರೀಡಿಯಗಳೆಂಬ ಶುದ್ಧೀಕರಣಾಂಗಗಳಿವೆ. ಇವು ತ್ಯಾಜ್ಯವಸ್ತುಗಳನ್ನು ಸಂಗ್ರಹಿಸಿ ನೆಫ್ರೀಡಿಯ ರಂಧ್ರಗಳ ಮೂಲಕ ಹೊರಹಾಕುತ್ತವೆ.

ಎರೆಹುಳುವಿನ ನರಮಂಡಲ ಅತಿಸರಳ. ಶರೀರದ ಮುಂತುದಿಯಲ್ಲಿ ಅನ್ನನಾಳದ ಸುತ್ತಲೂ ಉಂಗುರದೋಪಾದಿಯಲ್ಲಿರುವ ಒಂದು ನರವಲಯ ಇದೆ. ಈ ನರವಲಯದಿಂದ ಅನ್ನನಾಳದ ತಳಭಾಗದಲ್ಲಿ ಶರೀರದುದ್ದಕ್ಕೂ ಒಂದು ನರಹುರಿ ಹುಟ್ಟಿಬಂದಿದೆ. ಈ ನರಹುರಿ ಪ್ರತಿಯೊಂದು ಖಂಡದಲ್ಲೂ ಗಂಟು

ನೋಪಾದಿಯಲ್ಲಿದೆ. ಇಲ್ಲಿಂದ ನರಗಳು ಶರೀರದ ವಿವಿಧ ಭಾಗಗಳಿಗೆ ಹೊರಡುತ್ತವೆ.

ಎರೆಹುಳು ದ್ವಿಲಿಂಗ ಜೀವಿ. ಪುರುಷ ಹಾಗೂ ಸ್ತ್ರೀ ಜನನೇಂದ್ರಿಯುಗಳು ಒಂದೇ ಪ್ರಾಣಿಯಲ್ಲಿವೆ. ಫೆರಿಟೀಮ ಜೀವಿಯಲ್ಲಿ ಪುರುಷ ಜನನೇಂದ್ರಿಯುಗಳಾದ ವೃಷಣಗಳು ಹತ್ತು ಮತ್ತು ಹನ್ನೊಂದನೆಯ ಖಂಡದ ಮೇಲುಗೋಡೆಗೆ ಅಂಟಿಕೊಂಡಿವೆ. ಒಂದೊಂದು ಖಂಡದಲ್ಲೂ ಒಂದೊಂದು ಜೊತೆ ವೃಷಣಗಳಿದ್ದು ಅವು ವೃಷಣಚೀಲಗಳಿಂದ ರಕ್ಷಿಸಲ್ಪಟ್ಟಿವೆ. ಇವುಗಳಿಂದ ಉತ್ಪತ್ತಿಯಾಗುವ ರೇತಸ್ಸು ಸೆಮೈನಲ್ ವೆಸಿಕಲ್‌ಗಳೆಂಬ ಚೀಲಗಳಲ್ಲಿ ಶೇಖರಗೊಂಡು ಬೆಳೆದು ಹೊರಬರುತ್ತವೆ. ಹೊರಬಂದ ರೇತಸ್ಸನ್ನು ಒಂದು ಜೊತೆ ವೃಷಣನಾಳಗಳ ಆಲಿಕೆಗಳು ಸಂಗ್ರಹಿಸಿ ವೃಷಣನಾಳಗಳ ಮೂಲಕ 18ನೆಯ ಖಂಡದಲ್ಲಿರುವ ಪುರುಷ ಜನನೇಂದ್ರಿಯುಗಳ ಮೂಲಕ ಹೊರದೂಡುತ್ತವೆ. ಪುರುಷ ಜನನೇಂದ್ರಿಯುಕ್ಕೆ ಸಂಬಂಧಿಸಿದಂತೆ ಒಂದು ಜೊತೆ ಪ್ರಾಸ್ಟೇಟ್ ಗ್ರಂಥಿಗಳು ಇವೆ. ಇವು 17, 18, 19 ಖಂಡಗಳಲ್ಲಿ ಪಸರಿಸಿವೆ. ಇವು ಉತ್ಪತ್ತಿ ಮಾಡುವ ರಸವೂ ಪುರುಷಜನನೇಂದ್ರಿಯು ರಂಧ್ರದ ಮೂಲಕ ಹೊರಬರುತ್ತದೆ.

ಒಂದು ಜೊತೆ ಸ್ತ್ರೀ ಜನನೇಂದ್ರಿಯುಗಳು (ಅಂಡಾಶಯುಗಳು) 13ನೆಯ ಖಂಡದ ಮೇಲುಗೋಡೆಗೆ ಅಂಟಿಕೊಂಡಿವೆ. ಈ ಅಂಡಾಶಯುಗಳಲ್ಲಿ ಮೊಟ್ಟೆಗಳು ಬೆಳೆದು ಹೊರಬರುತ್ತವೆ. ಇವನ್ನು ಅಂಡಾಶಯು ನಾಳದ ಆಲಿಕೆಗಳು ಸಂಗ್ರಹಿಸಿ, ಅಂಡಾಶಯು ರಂಧ್ರದ ಮೂಲಕ ಹೊರ ಹಾಕುತ್ತವೆ. ಹೀಗೆ ಹೊರಬಂದ ಮೊಟ್ಟೆಗಳು ಕ್ಲೈಟೆಲಮ್‌ನಾಳಕ್ಕೆ ಬೀಳುತ್ತವೆ.

ಸಂಭೋಗಕ್ರಿಯೆಯ ಕಾಲದಲ್ಲಿ ಎರಡು ಎರೆಹುಳುಗಳು ವಿರುದ್ಧ ದಿಕ್ಕಿನಲ್ಲಿ ಒಂದುಗೂಡುತ್ತವೆ. ಹೀಗೆ ಇವು ಒಂದುಗೂಡಿದಾಗ ಒಂದರ ಪುರುಷ ಜನನೇಂದ್ರಿಯುಗಳು ಮತ್ತೊಂದರ ಸ್ಪರ್ಮಥೀಕೆ ರಂಧ್ರಗಳಿಗೆ ಸರಿಯಾಗಿ ಜೋಡಿಸಿಕೊಂಡಿರುವಂತೆ ನೋಡಿಕೊಳ್ಳುತ್ತವೆ. ಪುರುಷಜನನೇಂದ್ರಿಯ ರಂಧ್ರದಿಂದ ಬರುವ ರೇತಸ್ಸುಗಳು ಮತ್ತೊಂದರ ಸ್ಪರ್ಮಥೀಕೆ ರಂಧ್ರವನ್ನು ಪ್ರವೇಶಿಸಿ ಸ್ಪರ್ಮಥೀಕೆ



ಚಿತ್ರ 4 ಎರೆಹುಳುಗಳ ಸಂಭೋಗ

ಚೀಲದೊಳಗೆ ತುಂಬಿಕೊಳ್ಳುತ್ತವೆ. ಎರಡು ಪ್ರಾಣಿಗಳು ತಮ್ಮ ಸ್ಪರ್ಮಥೀಕೆ ಚೀಲಗಳು ರೇತಸ್ಸಿನಿಂದ ತುಂಬಿಕೊಂಡಮೇಲೆ ಬೇರ್ಪಡುತ್ತವೆ. ಹೀಗೆ ಬೇರ್ಪಟ್ಟ ಜೀವಿಯ ಮೊಟ್ಟೆಯನ್ನುಳ್ಳ ಕ್ಲೈಟೆಲಮ್ ಶರೀರದಿಂದ ಸಡಿಲಗೊಳ್ಳುತ್ತದೆ. ಇದು ಸಡಿಲಗೊಂಡಾಗ ಹುಳು ತನ್ನ ಶರೀರವನ್ನು ಹಿಂದಕ್ಕೆಳೆದುಕೊಳ್ಳಲಾರಂಭಿಸುತ್ತದೆ. ಇದರಿಂದಾಗಿ ಕ್ಲೈಟೆಲಮ್ ಮೊಟ್ಟೆಯ ಸಮೇತ ಜಾರಿಕೊಂಡು ಸ್ಪರ್ಮಥೀಕೆ ರಂಧ್ರದ ಬಳಿಗೆ ಬರುತ್ತದೆ. ಇದರ ಬಳಿಗೆ ಬಂದಾಗ ಸ್ಪರ್ಮಥೀಕೆ ಚೀಲಗಳು ಸಂಕುಚಿಸಿ ರೇತಸ್ಸನ್ನು ಹೊರಹಾಕುತ್ತವೆ. ಹೀಗೆ ಹೊರಬಂದ ರೇತಸ್ಸುಗಳು ಕ್ಲೈಟೆಲಮ್‌ನೊಳಕ್ಕೆ ಬಿದ್ದು ಮೊಟ್ಟೆಯೊಡನೆ ಮಿಲನಗೊಳ್ಳುತ್ತವೆ. ಹೀಗೆ ಮೊಟ್ಟೆಗಳು ಕ್ಲೈಟೆಲಮ್‌ನೊಳಗಿದ್ದಾಗಲೇ ಗರ್ಭಧಾರಣೆಯಾಗುತ್ತದೆ. ಗರ್ಭಧರಿಸಿದ ಮೊಟ್ಟೆಗಳ ಸಮೇತ ಕ್ಲೈಟೆಲಮ್ ಬಿದ್ದುಹೋಗುತ್ತದೆ. ಬಿದ್ದುಹೋದ ಈ ಕ್ಲೈಟೆಲಮ್‌ಗೆ ಕಕೂನ್ ಎಂದು ಹೆಸರು. ಇದರೊಳಗಿರುವ ಮೊಟ್ಟೆಗಳು ಬೆಳೆದು ಮರಿಗಳು ಹೊರಬರುತ್ತವೆ. (ಎಲ್.ಎಸ್.ಜಿ.)

**ಎರ್ಗಟ್ :** ಹುಲ್ಲಿನ ಜಾತಿಗೆ ಸೇರಿದ ರೈ, ಬಾರ್ಲಿ, ಓಟ್, ಗೋದಿ ಮುಂತಾದ ಧಾನ್ಯದ ಬೆಳೆಗಳಲ್ಲಿ ತಲೆದೋರಿ ಅವುಗಳ ಕಾಳುಗಳ ಸ್ಥಾನಗಳನ್ನು ಆಕ್ರಮಿಸುವ ಒಂದು ಶಿಲೀಂಧ್ರ. ಈ ಬೆಳೆಗಳಲ್ಲಿ ಒಂದು ವಿಚಿತ್ರ ರೋಗ ಒಮ್ಮೊಮ್ಮೆ ಕಾಣಿಸಿಕೊಳ್ಳುತ್ತದೆ. ಅಂಥ ಗಿಡಗಳಲ್ಲಿ ಧಾನ್ಯದ ಕಾಳುಗಳು ಕಪ್ಪು ಮಿಶ್ರಿತ ಹಸಿರು ಬಣ್ಣದ 1"–1½" ಉದ್ದವುಳ್ಳ ಬಿರುಸಾದ ವಸ್ತುಗಳಾಗಿ ಮಾರ್ಪಾಡು ಹೊಂದುವುವು. ಇವನ್ನೇ ಎರ್ಗಟ್ ಎಂದು ಕರೆಯಲಾಗುತ್ತದೆ. ಈ ರೋಗಕ್ಕೂ ಅದೇ ಹೆಸರಿದೆ. ಎರ್ಗಟ್ ರೋಗ ಕ್ಲಾವಿಸೆಪ್ಸ್ ಪರ್‌ಪೂರಿಯ ಎಂಬ ಬೂಸುಲು ಅಥವಾ ಶಿಲೀಂಧ್ರದಿಂದ ಉಂಟಾಗುತ್ತದೆ. ಈ ರೋಗದ ಕೆಲವು ಅನಿಷ್ಟ ಪರಿಣಾಮಗಳು ಎರ್ಗಟುಗಳು ಕೂಡಿದ ಹಿಟ್ಟಿನಿಂದ ತಯಾರಿಸಿದ ರೊಟ್ಟಿಯನ್ನು ಸೇವಿಸಿದ ಮನುಷ್ಯರಲ್ಲಿಯೂ ಎರ್ಗಟುಗಳು ಕೂಡಿದ ದಂಟು ಮತ್ತು ತೆನೆಗಳನ್ನು ಸೇವಿಸಿದ ದನಕರು ಪ್ರಾಣಿಗಳಲ್ಲಿಯೂ ಕಂಡುಬರುವುವು. ಕ್ಲಾವಿಸೆಪ್ಸ್ ಪರ್‌ಪೂರಿಯ ಎಂಬ ಶಿಲೀಂಧ್ರದಲ್ಲಿ 10–12 ಬಗೆಯ ಪ್ರಭೇದಗಳಿವೆ. ಅವೆಲ್ಲವೂ ಗೋದಿ, ಜೋಳ, ರೈ, ಬಾರ್ಲಿ, ಓಟ್ ಮುಂತಾದ ಧಾನ್ಯಬೆಳೆಗಳ ಮೇಲೆ ಪರತಂತ್ರ ಜೀವಿಗಳಾಗಿ ಬೆಳೆಯುವುದುಂಟು. ಮುಖ್ಯವಾಗಿ ಈ ಶಿಲೀಂಧ್ರ ಧಾನ್ಯದ ಹೂಗಳ ಅಂಡಾಶಯಕ್ಕೇ ಹೆಚ್ಚಾಗಿ ಗಂಟುಬೀಳುವುದು. ಮುಂದೆ ಆ ಬೆಳೆಗಳಲ್ಲಿ ಎರ್ಗಟ್ ಎಂಬ ರೋಗ ಉಂಟಾಗುತ್ತದೆ. ಈ ಶಿಲೀಂಧ್ರ ಧಾನ್ಯಬೆಳೆಗಳಲ್ಲಿ ರೋಗ ಉಂಟುಮಾಡಿ ಬೆಳೆಗಳನ್ನು ಹಾಳುಮಾಡುವುದಕ್ಕಿಂತ, ಅವು ಉತ್ಪಾದಿಸುವ ಒಂದು ಚಿಕ್ಕ ಕಡ್ಡಿಯಂಥ ಸ್ಕ್ಲೀರೋಷಿಯಂ ಅಥವಾ ಎರ್ಗಟ್ ಎಂಬ ರೂಪಾಂತರ ಹೊಂದಿದ ಧಾನ್ಯಫಲದಲ್ಲಿರುವ ವಿಶಿಷ್ಟ ಸಸ್ಯಕ್ಷಾರ (ಆಲ್ಕಲಾಯಿಡ್) ವಸ್ತುವಿಗೇ ಹೆಚ್ಚು ಮಹತ್ತ್ವವಿದೆ.

ಎರ್ಗಟ್ ರೋಗದಿಂದ ಮನುಷ್ಯರಲ್ಲಿ ಆಗುವ ಅನಿಷ್ಟ ಪರಿಣಾಮಗಳು ಹಲವಾರು. ತಲೆಗೂದಲು ಅಕಾಲಿಕವಾಗಿ ಉದುರಿಹೋಗುವುದು ; ಹಲ್ಲು ಬೀಳುವುದು ; ಉಗುರುಕಳಚಿ ಬೀಳುವುದು ; ತೀವ್ರ ಪ್ರಸಂಗಗಳಲ್ಲಿ ಎಲುಬು ಕೊಳೆಯುವುದು ; ಅಂಗಕ್ಷಯ, ಪಾರ್ಶ್ವವಾಯು, ನರಗಳ ದೌರ್ಬಲ್ಯ ಇತ್ಯಾದಿ ವಿಲಕ್ಷಣಗಳು ಕಾಣಿಸಿಕೊಳ್ಳುವುವು. ಇಂಥ ರೋಗಗಳಿಗೆಲ್ಲ ಎರ್ಗಟಿಸಂ ಎನ್ನುವುದುಂಟು. ಪ್ರಾಣಿಗಳಲ್ಲಿ ಉಂಟಾಗುವ ಗಂಡಾಂತರಕಾರಿ ಪರಿಣಾಮಗಳು ಕೂಡ ಹಲವಾರು. ಗೊರಸುಗಳು ಹುಣ್ಣಾಗಿ ಉದುರಿ ಬೀಳುವುದು ; ಬಾಲ, ಕಿವಿ, ಕೊಂಬು ಮುಂತಾದುವು ಕಳಚಿ ಬೀಳುವುದು ಮತ್ತು ಗರ್ಭಪಾತವಾಗಿ ಹುಟ್ಟುವ ಕರುಗಳ ನಾಶ ಮುಂತಾದುವು. ರೋಗಗ್ರಸ್ತ ಭಾಗಗಳಲ್ಲಿ ರಕ್ತನಾಳಗಳು ಆಕುಂಚನಗೊಂಡು ಕೋಶಭಿತ್ತಿಗಳು ಬಿರುಸಾಗುವುದರಿಂದ ರಕ್ತಪೂರೈಕೆ ನಿಂತಾಗ ಅನಿಷ್ಟ ಪರಿಣಾಮಗಳು ಉಂಟಾಗುತ್ತವೆ. ಕೆಲವು ಗಂಡಾಂತರಕಾರಿ ಪರಿಣಾಮಗಳು ಕಂಡುಬಂದರೂ ಈ ಸ್ಕ್ಲೀರೋಷಿಯಂ ಅಥವಾ ಎರ್ಗಟ್ಸ್ ಎಂಬುವುಗಳಿಂದ ಮಾನವನಿಗೆ ವೈದ್ಯಕೀಯ ದೃಷ್ಟಿಯಿಂದ ಅನೇಕ ರೀತಿಯ ಪ್ರಯೋಜನಗಳೂ ಆಗುತ್ತವೆ. ಅವುಗಳಲ್ಲಿ ಕೆಲವು ಬಗೆಯ ಸಸ್ಯಕ್ಷಾರದಂಥ ರಾಸಾಯನಿಕವಸ್ತುಗಳು ಇದ್ದು ಅವು ಸ್ನಾಯುಗಳ ಕ್ರಿಯೆಗಳನ್ನು ನಿಯಂತ್ರಿಸಬಲ್ಲವು. ರಕ್ತಸ್ರಾವ ನಿಲ್ಲಿಸುವುದಕ್ಕೆ ಮತ್ತು ಪ್ರಸವಕಾಲದಲ್ಲಿ ಗರ್ಭಕೋಶ ಆಕುಂಚನಗೊಂಡು ಜನನಕ್ರಿಯೆ ಸರಾಗವಾಗಿ ಕೊನೆಗೊಳ್ಳುವುದಕ್ಕೆ ಪೋಷಕವಾಗುವಂತೆ ಔಷಧಗಳ ರೂಪದಲ್ಲಿ ಬಳಸುವುದುಂಟು.

ಸಸ್ಯಕ್ಷಾರಗಳಲ್ಲಿ ಒಟ್ಟು ಏಳು ಬಗೆ. ಅವುಗಳಲ್ಲಿ ಎರ್ಗಟೊಮಿನ್ ಮತ್ತು ಎರ್ಗಟಾಕ್ಸಿನ್ ಎಂಬುವು ಪ್ರಭಾವಿಯಾದುವು. ಇವೆರಡರ ಜೊತೆಗೆ ಎರ್ಗಟಿನಲ್ಲಿ ಅಸಿಟೈಲ್ ಕೋಲಿನ್ ಎಂಬ ವಸ್ತುವೊಂದು ಇದ್ದು ಅದೇ ಸ್ನಾಯುಗಳ ಆಕುಂಚನಕ್ಕೆ ಮುಖ್ಯ ಕಾರಣವೆನ್ನಲಾಗುತ್ತದೆ.

ಇಟಲಿ, ಆಸ್ಟ್ರೇಲಿಯ ಮುಂತಾದ ಕೆಲವು ದೇಶಗಳಲ್ಲಿಯೂ ಭಾರತದಲ್ಲಿಯೂ ಈ ಕ್ಲಾವಿಸೆಪ್ಸ್ ಎಂಬ ಶಿಲೀಂಧ್ರವನ್ನು ಪ್ರಾಯೋಗಿಕವಾಗಿ ಬೆಳೆಸಿ ಅದರಿಂದ ಎರ್ಗಟನ್ನು ಉತ್ಪಾದಿಸುವ ಪ್ರಯತ್ನಗಳು ಸಾಗಿವೆ. ಹೀಗೆ ರೈ, ಬಾರ್ಲಿ, ಓಟ್, ಮುಂತಾದ ಬೆಳೆಗಳ ಮೇಲೆ ಕೆಲವು ಬೀಜಾಣುಗಳಿಂದ ಕೃತಕವಾಗಿಯೂ ಉದ್ದೇಶಪೂರ್ವಕವಾಗಿಯೂ ರೋಗಲಕ್ಷಣಗಳನ್ನು ಉಂಟುಮಾಡಿ ಆ ಬೆಳೆಗಳಲ್ಲಿ ಕ್ರಮೇಣ ಹೆಚ್ಚೆಚ್ಚು ಸ್ಕ್ಲೀರೋಷಿಯಂ ಅಥವಾ ಎರ್ಗಟ್ ಉತ್ಪತ್ತಿಯಾಗುವಂತೆ ಯೋಜಿಸುತ್ತಾರೆ. ಇದರಿಂದ ಒಂದು ರೀತಿಯಲ್ಲಿ ಎರ್ಗಟಿನ ವ್ಯವಸಾಯವೇ ಒಂದು ಮುಖ್ಯ ಕಸುಬಿನಂತೆ ಆರಂಭವಾಗಿ ಎರ್ಗಟಿನ ಉತ್ಪಾದನೆ ಹೆಚ್ಚುತ್ತಿದೆ. ಮುಂದೆ ಅವನ್ನು ಔಷಧ ಪ್ರಯೋಗಶಾಲೆಗಳಿಗೆ ಕಳುಹಿಸಿ ಅಲ್ಲಿ ಅವುಗಳಿಂದ ಔಷಧ ರೂಪದ ವಿಷವಸ್ತುಗಳನ್ನು ( ಎರ್ಗಟೊಮಿನ್, ಎರ್ಗಟಾಕ್ಸಿನ್ ಇತ್ಯಾದಿ ) ಹೊರತೆಗೆದು ಮಾರಾಟಕ್ಕೆ ಬಿಡುಗಡೆ ಮಾಡುತ್ತಾರೆ.

ಎರ್ಗಟನ್ನು ಧಾನ್ಯಗಳಿಂದ ಬೇರ್ಪಡಿಸಲು ದೊಡ್ಡ ತಟ್ಟೆ ಅಥವಾ ಕಡಾಯಿಗಳಲ್ಲಿ 20% ಉಪ್ಪುನೀರು ಹಾಕಿ ಅದರಲ್ಲಿ ಧಾನ್ಯವನ್ನು ಸುರಿಯುತ್ತಾರೆ. ಕಾಳುಗಳು ನೀರಿನಲ್ಲಿ ಮುಳುಗಿ ತಳಭಾಗದಲ್ಲಿ ಸಂಗ್ರಹಗೊಳ್ಳುತ್ತವೆ. ಆದರೆ ಎರ್ಗಟುಗಳು ನೀರಿನ ಮೇಲೆ ತೇಲುವುದರಿಂದ ಅವನ್ನು ಜಾಲರಿ, ಸೌಟುಗಳಲ್ಲಿ ಹೊರತೆಗೆದು, ಬಿಸಿಲಿನಲ್ಲಿ ಒಣಗಿಸಿ ಅನಂತರ ಸಣ್ಣ ಚೀಲ ಅಥವಾ ಪ್ಯಾಕೆಟುಗಳಲ್ಲಿ ತುಂಬಿ ಕಳುಹಿಸುತ್ತಾರೆ. ಮುಂದೆ ಪ್ರಯೋಗಶಾಲೆಗಳಲ್ಲಿ ಅವುಗಳಿಂದ ಸಸ್ಯಕ್ಷಾರಗಳನ್ನು ಹೊರತೆಗೆಯುತ್ತಾರೆ. (ಎಂ.ಎಸ್.ಎಸ್.ಆರ್.; ಜಿ.ಆರ್.ಸಿ.)

**ಎರ್ಗೋಸ್ಟೀರಾಲ್ :** ಕೀಳ್ತರಗತಿಯ ಸಸ್ಯಗಳಾದ ಶಿಲೀಂಧ್ರ ಬೂಸ್ಟು ಗಳಲ್ಲಿ ದೊರೆಯುವ ಒಂದು ಸ್ಟೀರಾಯ್ಡ್ ಆಲ್ಕೊಹಾಲ್. ಇದನ್ನು ಮೊದಲ ಬಾರಿಗೆ ರೈ ಮತ್ತು ಇನ್ನು ಹಲವು ಧಾನ್ಯಗಳ ಮೇಲೆ ಬರುವ ಎರ್ಗಟ್ ಬೂಸ್ಟಿ ನಿಂದ ಪಡೆದುದರಿಂದ ಈ ಸಂಯುಕ್ತಕ್ಕೆ ಎರ್ಗೋಸ್ಟೀರಾಲ್ ಎಂದು ಹೆಸರಾಯಿತು. ಎರ್ಗೋಸ್ಟೀರಾಲ್ ಮತ್ತು ಅದರ ಕೆಲವು ವ್ಯುತ್ಪನ್ನ (ಡಿರೈವೆಟ್ಟ್ರೂ) ಮತ್ತು ಸಂಬಂಧಿಗಳು ಹಲವು ನಿರ್ದಿಷ್ಟ ತಳಿಯ ಯೀಸ್ಟ್, ಅಸ್ಪರ್‌ಗಿಲಸ್ ಮತ್ತು ಪೆನ್ನಿಲಿನ್ ಬೂಸ್ಟುಗಳಲ್ಲಿ ದೊರೆಯುತ್ತವೆ. ವಾಣಿಜ್ಯ ಪ್ರಮಾಣದ ತಯಾರಿಕೆಗೆ ಇವೇ ಮುಖ್ಯ ಆಕರಗಳು. ಈ ಮುಂದೆ ತೋರಿಸಿರುವ ಎರ್ಗೋಸ್ಟೀರಾಲ್‌ಸಮಘಟಕ ಗಳನ್ನು (ಐಸೋಮರ್ಸ್) ಎರ್ಗೋಸ್ಟೀರಾಲಿನಿಂದ ತಯಾರಿಸಬಹುದು.






ಎರ್ಗೋಸ್ಟೀರಾಲಿನ ರಚನಾರಹಸ್ಯದ ಶೋಧನೆಯಲ್ಲಿ ವಿಂಡಾಸ್ ಮತ್ತು ಆತನ ಸಹೋದ್ಯೋಗಿಗಳ ಕಾಣಿಕೆ ಮುಖ್ಯವಾದುದು. ಇದನ್ನು ಪ್ರಯೋಗ ಶಾಲೆಯಲ್ಲಿಯೂ ಸಂಯೋಜಿಸಲಾಗಿದೆ ಮತ್ತು ಇದರ ಜೈವಿಕ ಉತ್ಪಾದನೆಯ ಬಗೆ ಯನ್ನೂ ಅರಿಯಲಾಗಿದೆ.

ಎರ್ಗೋಸ್ಟೀರಾಲನ್ನು ನಿಯಂತ್ರಿತ ರೀತಿಯಲ್ಲಿ ಅತಿನೇರಳೆ ವಿಸರಣಕ್ಕೆ ಒಳಪಡಿಸಿ ಕ್ಯಾಲ್ಸಿ ಫೆರಾಲ್ ಅಥವಾ ಜೀವಾತು–$D_2$ ಸಂಯುಕ್ತವನ್ನು ತಯಾರಿಸಬಹುದು. ಅಲ್ಪಪ್ರಮಾಣದಲ್ಲಿ ವೈದ್ಯಕೀಯ ಸಂಶೋಧನೆಗಳಲ್ಲೂ ಬಹುಮಟ್ಟಿಗೆ ಜೀವಾತು $D_2$ ತಯಾರಿಸಲೂ ಎರ್ಗೋಸ್ಟೀರಾಲನ್ನು ಉಪಯೋಗಿಸಲಾಗುತ್ತಿದೆ. (ಕೆ.ಟಿ.ಎಸ್.)

**ಎರ್ಸಿಲ್ಯಾ, ಈ ಥೂನ್ಯೀಗಾ, ಅಲೋನ್‌ಸೋ ದಾ :** 1533-1594. ಸ್ಪೇನಿನ ಕವಿ. ಚಿಲಿ ದೇಶವನ್ನು ಸ್ಪೇನಿನ ಸೈನ್ಯಗಳು ಆಕ್ರಮಿ ಸಿದಾಗ ಆ ಯುದ್ಧಗಳಲ್ಲಿ ಭಾಗವಹಿಸಿ ಅದೇ ವಸ್ತುವಿನ ಮೇಲೆ ಲಾ ಅರೌಕಾನಾ ಎಂಬ ಭವ್ಯ ಕಾವ್ಯವನ್ನು ಬರೆದ. ಸ್ಪೇನ್ ರಾಜ್ಯವನ್ನು ವಿಸ್ತರಿಸಿ ಕ್ರೈಸ್ತಮತ ವನ್ನು ಹರಡುವುದು ತನ್ನ ಕರ್ತವ್ಯವೆಂದು ನಂಬಿದ್ದರೂ ಕವಿಗೆ ಅಮೆರಿಕದ ಮೂಲನಿವಾಸಿಗಳಲ್ಲಿ ವಿಶೇಷ ಸಹಾನುಭೂತಿಯಿತ್ತು. ಅವನ ದೃಷ್ಟಿಯಲ್ಲಿ ಅವರು ಉದಾತ್ತ ಅನಾಗರಿಕರು. ರೆಡ್ ಇಂಡಿಯನ್ ವೀರ ಕೌಪಾಲಿಕಾನ್ ಈ ಕಾವ್ಯದ ನಾಯಕ. ಯುದ್ಧದಲ್ಲಿ ರೆಡ್ ಇಂಡಿಯನ್ ಜನರಿಗೆ ಒದಗಿದ ಅಪಜಯ ಮತ್ತು ನಾಯಕನಿಗೆ ಸಂಭವಿಸಿದ ಮರಣದಂಡನೆಯ ಸನ್ನಿವೇಶಗಳು ಹೃದಯವಿದ್ರಾವಕ ವಾಗಿಯೂ ವೀರೋಚಿತವಾಗಿಯೂ ಚಿತ್ರಿತವಾಗಿವೆ. ಪ್ರಕೃತಿ, ಜನಜೀವನ ಮತ್ತು ಯುದ್ಧ ಕೌಶಲಗಳ ವರ್ಣನೆಯಲ್ಲೂ ಉಪಮಾನಗಳಲ್ಲೂ ರೆಡ್ ಇಂಡಿಯನ್ ಜನರ ಪ್ರಪಂಚ ಪ್ರತಿಬಿಂಬಿತವಾಗಿರುವುದು ಕಾವ್ಯದ ಒಂದು ವೈಶಿಷ್ಟ್ಯ. (ಎಂ.ಕೆ.ಕೆ.;ಕೆ.ಆರ್.ಟಿ.)

**ಎರ್ನಾಕುಲಂ :** ಕೇರಳ ರಾಜ್ಯದ ಒಂದು ಪಟ್ಟಣ. ಅದೇ ಹೆಸರಿನ ಜಿಲ್ಲೆಯ ಕೇಂದ್ರ. ಕೊಚ್ಚಿ (ಕೊಚೀನ್) ಬಂದರಿಗೆ ಈಶಾನ್ಯದಲ್ಲಿ 2 ಮೈಲಿ ದೂರದಲ್ಲಿ ಸಮುದ್ರದ ಹಿನ್ನೀರಿನ (ಬ್ಯಾಕ್ ವಾಟರ್) ಮಧ್ಯದಲ್ಲಿದೆ. ಜನಸಂಖ್ಯೆ 1,20,009 (1961). ಕೊಚ್ಚಿ ಮತ್ತು ತಿರುವಾಂಕೂರ್ ಸಂಸ್ಥಾನಗಳು ಸೇರಿ ಒಂದು ರಾಜ್ಯವಾಗುವವರೆಗೂ ಕೊಚ್ಚಿಯ ರಾಜಧಾನಿಯಾಗಿದ್ದು ಅನಂತರ ಉಚ್ಚನ್ಯಾಯಾಲಯದ ಕೇಂದ್ರವಾಯಿತು. ಇಲ್ಲಿ ಕೇರಳ ವಿಶ್ವವಿದ್ಯಾನಿಲಯದಿಂದ ಮಾನ್ಯತೆ ಪಡೆದ ಐದು ಕಾಲೇಜುಗಳಿವೆ. ಸಾಬೂನು, ಎಣ್ಣೆ, ಗ್ಲಿಸರಿನ್, ರೇಷ್ಮೆ ಮುಂತಾದ ಕೈಗಾರಿಕೆಗಳು ಇಲ್ಲಿವೆ. ಮೀನುಗಾರಿಕೆ ಹಾಗೂ ತೆಂಗಿನ ಬೇಸಾಯ ಜನರ ಎರಡು ಪ್ರಮುಖ ಕಸಬುಗಳು. ಇಲ್ಲೊಂದು ಸರ್ಕಾರಿ ಮುದ್ರಣಾಲಯವೂ ಇದೆ. *

**ಎರ್ಬಿಯಮ್ :** ವಿರಳ ಭಸ್ಮಧಾತುಗಳಲ್ಲಿ (ಲ್ಯಾಂಥೆನೈಡ್ಸ್ : ರೇರ್‌ಅರ್ತ್ ಎಲಿಮೆಂಟ್ಸ್) ಒಂದು. ಆವರ್ತಕೋಷ್ಟಕದ 3ನೆಯ ಗುಂಪಿಗೆ ಸೇರಿದೆ. ಇದರ ರಾಸಾಯನಿಕ ಚಿಹ್ನೆ Er, ಪರಮಾಣು ತೂಕ 167.26, ಪರಮಾಣು ಸಂಖ್ಯೆ 68. ಇದರ ಎಲೆಕ್ಟ್ರಾನಿಕ್ ವಿನ್ಯಾಸ $1s^2$ $2s^2$ $2p^6$ $3s^2$ $3p^6$ $3d^{10}$ $4s^2$ $4p^6$ $4d^{10}$ $4f^{12}$ $5s^2$ $5p^6$ $6s^2$. ಲೋಹವಸ್ತುವಾಗಿರುವ ಇದನ್ನು 1843ರಲ್ಲಿ ಸ್ವೀಡನ್ನಿನ ರಸಾಯನ ಶಾಸ್ತ್ರಜ್ಞ ಕಾರ್ಲ್ ಗುಸ್ಟಾವ್ ಮೊಸಾಂಡರ್ (1797–1858) (ನೋಡಿ–ಮೊಸಾಂಡರ್, ಕಾರ್ಲ್ ಗುಸ್ಟಾವ್) ಕಂಡುಕೊಂಡ. ಶುದ್ಧರೂಪದ ಯಿಟ್ರಿಯದ (ಯಿಟ್ರಿಯಂ ಆಕ್ಸೈಡ್ $Y_2O_3$) ಪರೀಕ್ಷೆಯನ್ನು ನಡೆಸುತ್ತಿದ್ದಾಗ ಮತ್ತೆರಡು ವಸ್ತುಗಳ ಆಕ್ಸೈಡು ಗಳಿರುವುದು ಕಂಡುಬಂತು. ಒಂದನ್ನು ಎರ್ಬಿಯಮ್ ಎಂದೂ ಮತ್ತೊಂದನ್ನು ಟೆರ್ಬಿಯಮ್ ಎಂದೂ ಕರೆದ. ಇತರ ಭಸ್ಮಧಾತುಗಳಂತೆಯೇ ಎರ್ಬಿಯಮ್ ಮತ್ತು ಅದರ ಸಂಯುಕ್ತಗಳನ್ನು ಇತರ ಭಸ್ಮಧಾತುಗಳು ಹಾಗೂ ಅವುಗಳ ಸಂಯುಕ್ತಗಳಿಂದ ಬೇರ್ಪಡಿಸುವುದು ಬಹಳ ಕಷ್ಟ. ಪಾಲಿಕ್ರೇಸ್ (ಸು. 7.5% ಎರ್ಬಿಯಮ್ ಆಕ್ಸೈಡ್), ಯೂಕ್ಸೆನೈಟ್ ಮತ್ತು ಗ್ಯಾಡೋಲಿನೈಟುಗಳಲ್ಲಿ ಇದು ದೊರೆಯುತ್ತದೆ. ಸ್ವಾಭಾವಿಕವಾಗಿ ದೊರೆವ ಈ ವಸ್ತುವಿನಲ್ಲಿ $^{162}Er$ (0.136%), $^{164}Er$ (1.56%), $^{166}Er$ (33.41%), $^{167}Er$ (22.94%), $^{168}Er$ (27.07%), $^{170}Er$ (14.88%) ಎಂಬ ಸ್ಥಿರಸಮಸ್ಥಾನಿಗಳು ಸೇರಿರು ತ್ತವೆ.

ಕಳೆದ 20 ವರ್ಷಗಳಲ್ಲಿ ಅಯಾನು ವಿನಿಮಯ ವರ್ಣಲೇಖೀ ಶಾಸ್ತ್ರದಲ್ಲಿ (ಕ್ರೊಮಟಾಗ್ರಫಿ) ಆಗಿರುವ ಪ್ರಗತಿಯಿಂದಾಗಿ ಅಧಿಕ ಪ್ರಮಾಣದಲ್ಲಿ ಎರ್ಬಿಯಮ್ ಸಂಯುಕ್ತಗಳನ್ನು ತಯಾರಿಸುವುದು ಸಾಧ್ಯವಾಗಿದೆ. ಒಂದನ್ನೇ ಅಧಿಕ ಪ್ರಮಾಣ ದಲ್ಲಿ ಬಳಸುವ ಯಾವುದೇ ಕ್ಷೇತ್ರ ಇನ್ನೂ ಮೂಡಿಲ್ಲ.

ನೋಡಿ—ವಿರಳ ಭಸ್ಮಧಾತುಗಳು. *

**ಎರ್ರಗುಡಿ :** ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆಯ ಪತ್ತಿಕೊಂಡ ತಾಲ್ಲೂಕಿ ನಲ್ಲಿರುವ ಒಂದು ಗ್ರಾಮ. ಸಮೀಪದ ಕೆಲವು ಬಂಡೆಗಳಲ್ಲಿ ಅಶೋಕನ ಶಾಸನಗಳು ದೊರಕಿವೆ. ಇವುಗಳ ಭಾಷೆ ಆ ಕಾಲದ ಪ್ರಾಕೃತ. ಲಿಪಿ ಬ್ರಾಹ್ಮೀ. ಅಶೋಕನ ಗೌಣ ಶಿಲಾಶಾಸನಗಳಲ್ಲಿ ಮೊದಲ ಎರಡೂ ಬೃಹದ್ ಶಿಲಾಶಾಸನಗಳಲ್ಲಿ ಮೊದಲ ಹದಿ ಮೂರೂ ಇಲ್ಲಿವೆ. ಅಶೋಕನ ದಕ್ಷಿಣ ರಾಜಧಾನಿಗಳಲ್ಲೊಂದಾದ ಸುವರ್ಣಗಿರಿಯೇ ಈ ಎರ್ರಗುಡಿ ಇರಬಹುದೆಂದು ಕೆಲವು ವಿದ್ವಾಂಸರು ಊಹಿಸುತ್ತಾರೆ. (ಎಸ್.ಎಸ್.)

**ಎರ್ರಾಪ್ರೆಗ್ಗಡ :** ಆಂಧ್ರ ಮಹಾಭಾರತ ಕರ್ತೃಗಳಾದ ಕವಿತ್ರಯರಲ್ಲಿ ಮೂರನೆಯವ. ಗುಂಟೂರು ಜಿಲ್ಲೆಯ ಗುಡ್ಲೂರು ನಿವಾಸಿ. ಹದಿನಾಲ್ಕನೆಯ ಶತಮಾನದ ಪೂರ್ವಾರ್ಧದಲ್ಲಿದ್ದನೆಂದು ವಿದ್ವಾಂಸರ ಅಭಿಮತ. ಶಂಭುದಾಸನೆಂಬ ಹೆಸರೂ ಇತ್ತು. ಈತ ಮಹಾ ಶಿವಭಕ್ತನಾದ ನಿಯೋಗಿಬ್ರಾಹ್ಮಣ. ನನ್ನಯ ಮತ್ತು ತಿಕ್ಕನರು ಬರೆಯದೆ ಉಳಿಸಿದ ಅರಣ್ಯಪರ್ವದ ಭಾಗವನ್ನು ಈತ ನನ್ನಯನ ರೀತಿಯಲ್ಲಿಯೇ ಬರೆದು ಪೂರೈಸಿದ ಪ್ರತಿಭಾಶಾಲಿ. ಲಕ್ಷ್ಮೀನೃಸಿಂಹಪುರಾಣ ಎಂಬ ಒಂದು ಪ್ರಬಂಧಕಾವ್ಯವನ್ನು ಬಹಳ ಅಚ್ಚುಕಟ್ಟಾಗಿ ಬರೆದು ಪ್ರಬಂಧ ಪರಮೇಶ್ವರ ಎಂಬ ಬಿರುದಿಗೆ ಪಾತ್ರನಾದ. ಕವಿಯ ಇನ್ನೊಂದು ಕೃತಿ ಹರಿವಂಶ. ಇದನ್ನು ಅಹೋಬಲ ನಾರಸಿಂಹಸ್ವಾಮಿಗೆ ಸಮರ್ಪಿಸಿದ್ದಾನೆ. ಭಾರತದ ಅನುಬಂಧ ದಂತಿರುವ ಈ ಕಾವ್ಯದಲ್ಲಿ ಶ್ರೀಕೃಷ್ಣನ ಸಮಗ್ರಚರಿತ್ರೆ ಬಂದಿದೆ. ಎರ್ರಾಪ್ರೆಗ್ಗಡನ ಕವಿತಾವೈಭವ ಈ ಕಾವ್ಯದಲ್ಲಿ ಪೂರ್ಣವಾಗಿ ಪ್ರಕಾಶಕ್ಕೆ ಬಂದಿದೆ. ಶ್ರೀಕೃಷ್ಣನ ಬಾಲಲೀಲೆ, ಶೃಂಗಾರ, ರಾಜನೀತಿ, ಶೌರ್ಯ ಮೊದಲಾದ ಗುಣಾತಿಶಯ ಗಳನ್ನು ಲಲಿತಪದಬಂಧುರವಾದ ಸುಂದರ ಶೈಲಿಯಲ್ಲಿ ಹೃದಯಾನಂದಕರವಾಗಿ ಚಿತ್ರಿಸಿದ್ದಾನೆ.

ಈತ ಒಂದು ರಾಮಾಯಣವನ್ನು ಬರೆದನೆಂದು ಹೇಳಿದೆಯಾದರೂ ಆ ಗ್ರಂಥ ಸಿಕ್ಕಿಲ್ಲ. (ಡಿ.ಆರ್.)

**ಎರ್ಲಾಂಗರ್, ಜೋಸೆಫ್:** 1874-1965. ನರಗಳ ನಿಜಗೆಲಸಗಳ ವ್ಯತ್ಯಾಸ ತೋರಿಕೆಯ ಕೃತಿಗಾಗಿ ಗ್ಯಾಸರ್‌ನೊಂದಿಗೆ (ನೋಡಿ —ಗ್ಯಾಸರ್, ಹರ್ಬರ್ಟ್ ಸ್ಪೆನ್ಸರ್) ನೊಬೆಲ್ ಬಹುಮಾನ ಪಡೆದ (1944) ಅಂಗಕ್ರಿಯಾ ವಿಜ್ಞಾನಿ. ಸ್ಯಾನ್ ಫ್ರಾನ್ಸಿಸ್ಕೋನಲ್ಲಿ ಹುಟ್ಟಿ, ಜಾನ್ ಹಾಪ್ಕಿನ್ಸ್ ವಿಶ್ವವಿದ್ಯಾನಿಲಯದ ವೈದ್ಯಶಾಲೆಯಲ್ಲಿ ಪದವೀಧರನಾಗಿ (1899) ಅಂಗಕ್ರಿಯಾ ಪಟು ವಿಲಿಯಂ ಹೊವೆಲ್‌ನೊಂದಿಗೆ ಸೇರಿದ. ರಕ್ತದ ಒತ್ತಡವನ್ನು ಗೆರೆಚಿತ್ರದಲ್ಲಿ ಗುರುತಿಸುವುದನ್ನೂ ಗುಂಡಿಗೆಯಲ್ಲಿ ನರಗಳಲ್ಲಿನ ಸಾಗಣೆಯನ್ನೂ ಕಂಡುಹಿಡಿದು ಬೆಳಕಿಗೆ ಬಂದ. ಮೊದಲು ವಿಸ್ಕಾನ್ಸಿನ್ ವಿಶ್ವವಿದ್ಯಾನಿಲಯದಲ್ಲೂ 1910ರಿಂದ ಮೊದಲಾಗಿ 1946ರಲ್ಲಿ ನಿವೃತ್ತನಾಗುವ ತನಕ ವಾಷಿಂಗ್ಟನ್, ಸೇಂಟ್ ಲೂಯಿ ವಿಶ್ವವಿದ್ಯಾನಿಲಯಗಳಲ್ಲೂ ಅಂಗಕ್ರಿಯಾಶಾಸ್ತ್ರದ ಪ್ರಾಧ್ಯಾಪಕನಾಗಿದ್ದ. ನಾಡಿಯನ್ನು ಕಿವಿಯಿಂದಾಲಿಸಿ ರಕ್ತದ ಒತ್ತಡವನ್ನು ತೋಳಿನಲ್ಲಿ ಅಳೆವ ವಿಧಾನಗಳಲ್ಲಿ ಸದ್ದು ಹುಟ್ಟುವುದರ ತಂತ್ರವನ್ನು ಆಳವಾಗಿ ಪರಿಶೋಧಿಸಿ, ರಕ್ತ ಸುತ್ತಾಟದ ಅಭ್ಯಾಸದಲ್ಲಿ ಆಸಕ್ತನಾಗಿದ್ದ. ವಿದ್ಯುದಂಶ (ಎಲೆಕ್ಟ್ರಾನಿಕ್) ವಿಧಾನಗಳು ಬೆಳಕಿಗೆ ಬಂದುದರಿಂದ ನರಗಳ ಕೆಲಸಗಳಲ್ಲಿ ವಿಶೇಷ ಆಸಕ್ತನಾಗಿದ್ದುದರಿಂದಲೇ ನೊಬೆಲ್ ಬಹುಮಾನ ಬಂದದ್ದು. ಚೋದಿಸುವಷ್ಟು ಬಲವಿಲ್ಲದ ಆವೇಗ (ಸ್ಟಿಮುಲಸ್) ಬಂದಾಗ ನರಗಳಲ್ಲಿ ಆಗುವ ಬದಲಾವಣೆಗಳನ್ನು ಗುರುತಿಸಿ ವಿವರಿಸಿದ. ಮಜ್ಜಿಕಗೂಡಿದ (ಮಯಲಿನೇಟೆಡ್) ನರ ತಂತುಗಳಲ್ಲಿ ಆವೇಗದ ಸಾಗಣೆ, ಒಂದೇ ಸಮನಾಗಿರದೆ ಹೆಜ್ಜೆ ಹೆಜ್ಜೆಗಳಲ್ಲಿರುವುವೆಂಬ ಇಂದಿನ ಕಲ್ಪನೆಗೆ ಮೂಲವಾದ ಮುಮ್ಮೊದಲ ಪ್ರಯೋಗಗಳನ್ನು ನಡೆಸಿದ. (ಡಿ.ಎಸ್.ಎಸ್.)

**ಎಲ್ ಆಲಮೇನ್ :** ಈಜಿಪ್ಟಿನಲ್ಲಿ ಅಲೆಕ್ಸಾಂಡ್ರಿಯ ನಗರದ ಪಶ್ಚಿಮಕ್ಕೆ ಐವತ್ತು ಮೈಲಿ ದೂರದಲ್ಲಿರುವ ಸ್ಥಳ. ಎರಡನೆಯ ಮಹಾಯುದ್ಧದ ಸಮಯದಲ್ಲಿ ಬ್ರಿಟಿಷ್ ಕಾಮನ್‌ವೆಲ್ತಿನ ಎಂಟನೆಯ ಸೇನೆಗೂ ಮಾರ್ಷಲ್ ಎಡ್ವಿನ್ ರಾಮೆಲನ ನೇತೃತ್ವದಲ್ಲಿ ಆಫ್ರಿಕದಲ್ಲಿ ಕಾರ್ಯಾಚರಣೆ ನಡೆಸುತ್ತಿದ್ದ ಜರ್ಮನ್–ಇಟಾಲಿಯನ್ ಸಂಯುಕ್ತ ಪಡೆಗಳಿಗೂ ನಡುವೆ ಇಲ್ಲಿ ಎರಡು ಕದನಗಳು ನಡೆದುವು (1942). ಮೊದಲನೆಯ ಕದನ ನಡೆದದ್ದು ಜೂನ್ 30ರಿಂದ ಜುಲೈ 25ರ ವರೆಗೆ. ಆಗ ಜನರಲ್ ಸರ್ ಕ್ಲಾಡ್ ಆಕಿನ್‌ಲೆಕ್‌ನ ನೇತೃತ್ವದಲ್ಲಿ ಮೊದಲ ಬಾರಿಗೆ ರಾಮೆಲನ ಸೇನೆಯನ್ನು ತಡೆಯಲಾಯಿತು. ಎರಡನೆಯ ಯುದ್ಧ ಅಕ್ಟೋಬರ್ 23ರಂದು ಆರಂಭವಾಗಿ ನವೆಂಬರ್ 4ರಂದು ಕೊನೆಗೊಂಡಿತು. ಈ ಎರಡನೆಯ ಕದನ ನಿರ್ಣಾಯಕವಾದದ್ದು. ಇದರಲ್ಲಿ ಬ್ರಿಟಿಷ್ ಸೇನೆ ಸಂಪೂರ್ಣವಾಗಿ ಮೇಲುಗೈ ಸ್ಥಾಪಿಸಿತಲ್ಲದೆ, ಅನಂತರ ಆಕ್ರಮಣಕಾರರನ್ನು ಅಟ್ಟಿಸಿಕೊಂಡು ಹೋಗಿ ಇಡೀ ಉತ್ತರ ಆಫ್ರಿಕದಿಂದ ಅವರು ಕಾಲ್ತೆಗೆಯುವ ಹಾಗೆ ಮಾಡಿತು. ಎರಡನೆಯ ಕದನದ ಸಮಯದಲ್ಲಿ ಎಂಟನೆಯ ಸೇನೆಯ ದಂಡನಾಯಕನಾಗಿದ್ದವನು ಜನರಲ್ ಸರ್ ಬರ್ನಾಡ್ (ಅನಂತರ ಲಾರ್ಡ್) ಮಾಂಟ್‌ಗಮರಿ.

ನೋಡಿ—ಎರಡನೆಯ ಮಹಾಯುದ್ಧ. (ಎ.ಎನ್.ಎಸ್.ಎಂ.)

**ಎಲ್ ಡೊರಾಡೋ :** ಅಮೆರಿಕ ಸಂಯುಕ್ತಸಂಸ್ಥಾನದ ಅರಕನ್ಸಾಸ್‌ನ ದಕ್ಷಿಣಕ್ಕಿರುವ ನಗರ. ಜನಸಂಖ್ಯೆ 25,290. ರಾಜ್ಯದ ತೈಲಕೇಂದ್ರ. ವ್ಯವಸಾಯೋತ್ಪನ್ನಗಳ ವ್ಯಾಪಾರ ಕೇಂದ್ರ. ಇಲ್ಲಿ ಮರಮುಟ್ಟುಗಳ ಕಾರ್ಖಾನೆಗಳೂ ಹತ್ತಿಯ ಗಿರಣಿಗಳೂ ತೈಲಶುದ್ಧೀಕರಣ ಕೇಂದ್ರಗಳೂ ಎರಕಹೊಯ್ಯುವ ಕಾರ್ಖಾನೆಗಳೂ ಇವೆ. ದನ, ಧಾನ್ಯ, ತೈಲ ಇಲ್ಲಿಂದ ರಫ್ತಾಗುತ್ತವೆ. 1877ರಲ್ಲಿ ಇದನ್ನು ನಗರವಾಗಿ ಪರಿಗಣಿಸಲಾಯಿತು. 1951ರಲ್ಲಿ ನಗರಸಭೆಯೊಂದು ಏರ್ಪಟ್ಟು ನಗರ ವ್ಯವಸ್ಥಾಪಕನೊಬ್ಬ ಇದರ ಆಡಳಿತವನ್ನು ನಡೆಸುತ್ತಿದ್ದ. ಪ್ರಸಿದ್ಧ ಪತ್ರಿಕಾಕರ್ತನೂ ಲೇಖಕನೂ ಆದ ವಿಲಿಯಂ ಅಲೆನ್ ವೈಟ್ ತನ್ನ ಜೀವನದ ಆರಂಭದ ದಿನಗಳನ್ನು ಇಲ್ಲಿ ಕಳೆದ. *

**ಎಲ್ ಸಾಲ್ವಡಾರ್ :** ಮಧ್ಯ ಅಮೆರಿಕದ ಅತಿ ಪುಟ್ಟ ಹಾಗೂ ಅತ್ಯಂತ ಜನಸಾಂದ್ರ ಗಣರಾಜ್ಯ. ಮೇರೆಗಳು : ಉತ್ತರ ಪೂರ್ವಗಳಲ್ಲಿ ಹಾಂಡುರಾಸ್, ದಕ್ಷಿಣದಲ್ಲಿ ಪೆಸಿಫಿಕ್ ಸಾಗರ ಮತ್ತು ಪಶ್ಚಿಮ ವಾಯವ್ಯಗಳಲ್ಲಿ ಗ್ವಾಟೆಮಾಲ. ಮಧ್ಯ ಅಮೆರಿಕನ್ ರಾಷ್ಟ್ರಗಳ ಪೈಕಿ ಕ್ಯಾರಿಬೀಯನ್ ಸಮುದ್ರಕ್ಕೆ ತಾಕಿದಂತಿರದ ದೇಶವಿದೊಂದೇ. ಇದರ ಪೆಸಿಫಿಕ್ ತೀರ 170 ಮೈಲಿ. ಲ್ಯಾಟಿನ್ ಅಮೆರಿಕನ್ ದೇಶಗಳಲ್ಲಿ ಬೇರೆ ಯಾವುದರಲ್ಲೂ ಬೇಸಾಯ ಇಲ್ಲಿನಷ್ಟು ಸಾಂದ್ರವಾಗಿ ನಡೆಯುವುದಿಲ್ಲ. ಪೂರ್ವ ಪಶ್ಚಿಮವಾಗಿ ಇದರ ಉದ್ದ 140 ಮೈಲಿ; ಅಗಲ ದಕ್ಷಿಣೋತ್ತರವಾಗಿ 60 ಮೈಲಿ; ವಿಸ್ತೀರ್ಣ 21,146 ಚ. ಕಿ. ಮೀ. (8,164 ಚ. ಮೈ.). ರಾಜಧಾನಿ ಸಾನ್ ಸಾಲ್ವಡಾರ್.

**ಮೇಲ್ಮೈಲಕ್ಷಣ, ವಾಯುಗುಣ :** ದಕ್ಷಿಣದಲ್ಲಿ ಕಿರಿದಾದ ಕರಾವಳಿ. ಮಗ್ಗುಲಲ್ಲೆ ದಕ್ಷಿಣ ಪರ್ವತಶ್ರೇಣಿ. ಇದರ ಹೆಗಲೇರಿ ನಿಂತ ಜ್ವಾಲಾಮುಖಿಗಳ ಪೈಕಿ ಅತ್ಯಂತ ಎತ್ತರವಾಗಿರುವುದು ಸ್ಯಾಂಟ ಆನ (7950′). ದಕ್ಷಿಣ ಪರ್ವತ ಶ್ರೇಣಿಗೂ ಉತ್ತರದಲ್ಲಿರುವ ಪರ್ವತಸಾಲಿಗೂ ನಡುವೆ ತೊಟ್ಟಿಲಿನಂತೆ ಪ್ರಸ್ಥಭೂಮಿ ಇದೆ. ಲೇಂಪ, ಸಾನ್ ಮಿಗೆಲ್ ನದಿಗಳೂ ಅವುಗಳ ಉಪನದಿಗಳೂ ಆಳವಾದ ಕಮರಿಗಳನ್ನು ಕೊರೆದುಕೊಂಡು ಹರಿಯುತ್ತವೆ.




ಎಲ್ ಸಾಲ್ವಡಾರಿನ ವಾಯುಗುಣ ಎತ್ತರಕ್ಕನುಗುಣವಾಗಿ ವ್ಯತ್ಯಾಸವಾಗುತ್ತದೆ. ಪೆಸಿಫಿಕ್ ಕರಾವಳಿಯಲ್ಲೂ ಅಷ್ಟೇನೂ ಎತ್ತರವಿಲ್ಲದ ಪರ್ವತ ಪ್ರದೇಶದಲ್ಲೂ 25° ಸೆಂ. ನಿಂದ 29° ಸೆಂ. ವರೆಗೆ ಉಷ್ಣತೆ ವ್ಯತ್ಯಾಸವಾಗುತ್ತದೆ. 657 ಮೀ. (2156′) ಎತ್ತರವಿರುವ ಸಾನ್ ಸಾಲ್ವಡಾರಿನಲ್ಲಿ ಮಾರ್ಚಿಯ ಪರಮಾವಧಿ ಉಷ್ಣತೆ 35° ಸೆಂ. ಜನವರಿಯಲ್ಲಿ 14° ಸೆಂ. 4800′ ಎತ್ತರದಲ್ಲಿ ಇದು 17° ಸೆಂ. ನಿಂದ 22° ಸೆಂ. ನಡುವೆ ವ್ಯತ್ಯಾಸವಾಗುತ್ತದೆ.

ಎಲ್ ಸಾಲ್ವಡಾರಿನಲ್ಲಿರುವ ಋತುಗಳು ಎರಡು : ಮೇಯಿಂದ ನವೆಂಬರ್ ವರೆಗೆ ಬೇಸಗೆ-ಮಳೆಗಾಲ. ನವೆಂಬರಿನಿಂದ ಮೇ ವರೆಗೆ ಒಣಹವೆಯ ಚಳಿಗಾಲ. ಪೆಸಿಫಿಕ್ ಕರಾವಳಿಯಲ್ಲಿ ವಾರ್ಷಿಕ ಮಳೆ ಸರಾಸರಿ 1727 ಮಿ. ಮೀ. (68″); ನಡು ಎತ್ತರ ಪ್ರದೇಶದಲ್ಲಿ 1778–2464 ಮಿ. ಮೀ. (70″–97″); ಇನ್ನೂ ಎತ್ತರದಲ್ಲಿ ಇದಕ್ಕೂ ಅಧಿಕವಾಗಿ ಮಳೆ ಬೀಳುತ್ತದೆ. ಆಳದ ಕಣಿವೆಗಳಲ್ಲೂ ಪ್ರಸ್ಥಭೂಮಿಯಲ್ಲೂ ಬೀಳುವ ಮಳೆಯ ಮೊತ್ತ 1143–1524 ಮಿ.ಮೀ. (45″–60″).

**ವ್ಯವಸಾಯ, ಕೈಗಾರಿಕೆ, ವ್ಯಾಪಾರ :** ಒಟ್ಟು ಜನಸಂಖ್ಯೆಯಲ್ಲಿ 2/3 ರಷ್ಟು ಜನ ಕೃಷಿಯನ್ನವಲಂಬಿಸಿದ್ದಾರೆ. ಜ್ವಾಲಾಮುಖಿ ಪ್ರದೇಶ ಫಲವತ್ತಾದದ್ದು. ಮುಖ್ಯ ಆಹಾರ ಬೆಳೆ ಮುಸುಕಿನ ಜೋಳ. ಕಬ್ಬು, ಬತ್ತ, ಗೋದಿಗಳನ್ನೂ ಬೆಳೆಯುತ್ತಾರೆ. ಮುಖ್ಯ ವಾಣಿಜ್ಯ ಬೆಳೆಯೆಂದರೆ ಕಾಫಿ. ಎಲ್ ಸಾಲ್ವಡಾರಿನ ರಫ್ತಿನಲ್ಲಿ 95% ಇದೇ. ವಾಯುಗುಣ, ಭೂಗುಣ, ಕಾರ್ಮಿಕರ ಸರಬರಾಯಿ, ಸಮುದ್ರಕ್ಕೆ ದೂರ—ಮುಂತಾದ ಎಲ್ಲ ದೃಷ್ಟಿಗಳಿಂದಲೂ ಕಾಫಿ ಬೆಳೆಗೆ ಇಲ್ಲಿ ಹೆಚ್ಚು ಅನುಕೂಲವಿದೆ. ಚಿನ್ನ ಬೆಳ್ಳಿಗಳು ಇಲ್ಲಿಯ ಮುಖ್ಯ ಖನಿಜಗಳು. ತಾಮ್ರ, ಕಬ್ಬಿಣ, ಸೀಸ, ತವರ, ಗಂಧಕ, ಪಾದರಸ—ಇವು ಇಲ್ಲಿವೆಯಾದರೂ ಇವನ್ನು ನೆಲದಿಂದ ತೆಗೆಯುತ್ತಿಲ್ಲ. ಎಲ್ ಸಾಲ್ವಡಾರಿನ ಕಾಫಿಗೆ ಅಮೆರಿಕ ಸಂಯುಕ್ತ ಸಂಸ್ಥಾನವೇ ಮುಖ್ಯ ಗ್ರಾಹಕರಾಷ್ಟ್ರ. ಹತ್ತಿ ಜವಳಿ, ಹಿಟ್ಟು, ಮುಟ್ಟುಗಳು, ರಾಸಾಯನಿಕ ಪದಾರ್ಥ—ಇವು ಈ ದೇಶದ ಆಮದುಗಳು.

ಇಲ್ಲಿಯ ಜನಸಂಖ್ಯೆಯಲ್ಲಿ (1966 : 30,95,323) ಸೇಕಡಾ 80 ಮಂದಿ ಸ್ಪ್ಯಾನಿಷ್–ಇಂಡಿಯನ್ ಮಿಶ್ರ (ಮೆಸ್ಟಿಸೊ). ಉಳಿದವರು ಅಚ್ಚ ಇಂಡಿಯನರು, ಬಿಳಿಯರು ಮತ್ತು ನೀಗ್ರೊಗಳು. ರಾಜಧಾನಿಯಲ್ಲದೆ ಇಲ್ಲಿಯ ಇತರ ಪಟ್ಟಣಗಳು : ನೇವಾಸಾನ್ ಸಾಲ್ವಡಾರ್, ಸಾನ್ ಮಿಗೆಲ್ ಮತ್ತು ಸ್ಸಾಕಾಟೇಕೊಲುಕ. ಇಲ್ಲಿನ ಭಾಷೆ ಸ್ಪ್ಯಾನಿಷ್.

**ಸರ್ಕಾರ :** ಅಮೆರಿಕ ಸಂಯುಕ್ತಸಂಸ್ಥಾನದಂತೆ ಇಲ್ಲಿಯ ಸಂವಿಧಾನದಲ್ಲೂ ಅಧಿಕಾರ ಕೇಂದ್ರೀಕೃತವಾಗದಂತೆ ವ್ಯವಸ್ಥೆ ನಿರ್ಮಿಸಲಾಗಿದೆ. ಕಾರ್ಯಾಂಗದ ಅಧಿಕಾರ ಅಧ್ಯಕ್ಷನದು. ಈತನನ್ನು ಐದು ವರ್ಷಗಳಿಗೊಮ್ಮೆ ಆರಿಸಲಾಗುತ್ತದೆ. ಇಲ್ಲಿನ ಶಾಸನಸಭೆಗೆ ಚುನಾವಣೆ ನಡೆಯುವುದು ಎರಡು ವರ್ಷಗಳಿಗೊಮ್ಮೆ. ಎಲ್ ಸಾಲ್ವಡಾರ್ ವಿಶ್ವಸಂಸ್ಥೆಯ, ಅಮೆರಿಕನ್ ರಾಜ್ಯಗಳ ಸಂಘದ (ದಿ ಆರ್ಗನೈಸೇಷನ್ ಆಫ್ ಅಮೆರಿಕನ್ ಸ್ಟೇಟ್ಸ್) ಮತ್ತು ಮಧ್ಯ ಅಮೆರಿಕನ್ ರಾಜ್ಯಗಳ ಸಂಘದ (ಆರ್ಗನೈಸೇಷನ್ ಆಫ್ ಸೆಂಟ್ರಲ್ ಅಮೆರಿಕನ್ ಸ್ಟೇಟ್ಸ್) ಸದಸ್ಯ ರಾಷ್ಟ್ರ.

**ಇತಿಹಾಸ :** ಗ್ವಾಟೆಮಾಲವನ್ನು ಗೆದ್ದ ಸ್ಪ್ಯಾನಿಷ್ ವಲಸೆಗಾರರು ಪೆದ್ರೊ ಆಲ್ವಾರಾದೊನ ನೇತೃತ್ವದಲ್ಲಿ 1524ರಲ್ಲಿ ಇಲ್ಲಿಗೆ ಬಂದು ಇದನ್ನು ಗೆದ್ದು ಮರುವರ್ಷ ಇಲ್ಲಿ ವಸಾಹತು ನಿರ್ಮಿಸಿದರು. ಈ ದೇಶ ಸ್ವತಂತ್ರವಾದದ್ದು ಸೆಪ್ಟೆಂಬರ್ 15, 1821ರಲ್ಲಿ. ಆದರೆ ಅದಾದ ಅನಂತರ ಮೆಕ್ಸಿಕೋ ಚಕ್ರವರ್ತಿ ಆಗಸ್ಟಿನ್ ದ ಈಟೂರ್‌ವೀದ ಎಲ್ ಸಾಲ್ವಡಾರಿಗೆ ಸೈನ್ಯ ಕಳುಹಿಸಿ ಇದನ್ನು ಗೆದ್ದು ವಶಪಡಿಸಿಕೊಂಡ. ತನ್ನನ್ನು ಒಂದು ಸಾರ್ವಭೌಮ ರಾಜ್ಯವೆಂದು ಪರಿಗಣಿಸಿ ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಸೇರಿಸಿಕೊಳ್ಳಬೇಕೆಂದು 1822ರಲ್ಲಿ ಇದು ಆ ದೇಶವನ್ನು ಕೇಳಿಕೊಂಡಿತು. ಆದರೆ ಸಂಯುಕ್ತಸಂಸ್ಥಾನ ಕಾಂಗ್ರೆಸ್ ಈ ಮನವಿಯನ್ನು ಒಪ್ಪಲಿಲ್ಲ. 1823ರಲ್ಲಿ ಈಟೂರ್‌ವೀದನ ಸರ್ಕಾರದ ಪತನವಾದಾಗ ಇದು ಮಧ್ಯ ಅಮೆರಿಕನ್ ರಾಜ್ಯಗಳ ಒಕ್ಕೂಟದಲ್ಲಿ ಸೇರಿತು. ಆಮೇಲೆ ಗ್ವಾಟೆಮಾಲದ ಬೆದರಿಕೆಯಿಂದಾಗಿ ಅಮೆರಿಕನ್ ರಾಜ್ಯಗಳ ಒಕ್ಕೂಟದಿಂದ ಹೊರಬಿದ್ದು ಸ್ವಾತಂತ್ರ್ಯ ಘೋಷಿಸಿಕೊಂಡಿತು (1841).

1800ರಿಂದಲೂ ಈ ದೇಶದಲ್ಲಿ ಆಗಾಗ ಅಧ್ಯಕ್ಷರ ಬದಲಾವಣೆಯೂ ಉದಾರವಾದಿಗಳಿಗೂ ಸಂಪ್ರದಾಯವಾದಿಗಳಿಗೂ ನಡುವೆ ಘರ್ಷಣೆಗಳೂ ನಡೆಯುತ್ತಲೇ ಇವೆ. ಆಂತರಿಕ ಕ್ಷೋಭೆಯಿಂದ ಇದು ಪದೇ ಪದೇ ವಿದೇಶಿ ದಾಳಿಗೆ ಒಳಗಾಯಿತು. 1900ರಿಂದ 1930ರ ಅವಧಿಯಲ್ಲಿ ಶಾಂತ ಪರಿಸ್ಥಿತಿಯಿತ್ತು. ಕಾಫಿ ಉದ್ದಿಮೆ ಬೆಳೆಯಿತು ; ದೇಶ ಸಂಪದ್ಭರಿತವಾಯಿತು.

1931ರಲ್ಲಿ ಜನರಲ್ ಮ್ಯಾಕ್ಸಿಮಿಲಿಯಾನೊ ಫರ್ನಾಂಡೆತ್ ಮಾರ್ಟಿನೆತ್ ಅಧಿಕಾರ ಕಸಿದುಕೊಂಡು 1944ರ ವರೆಗೂ ಆಳಿದ. ಈತ ದಬ್ಬಾಳಿಕೆ ನಡೆಸಿದರೂ ಈ ಕಾಲದಲ್ಲಿ ದೇಶ ಸಂಪದ್ಭರಿತವಾಯಿತು. 1944ರಲ್ಲಿ ಮಾರ್ಟಿನೆತನನ್ನು ಅಧಿಕಾರದಿಂದ ಇಳಿಸಲಾಯಿತಾದರೂ ಅನಂತರದ ರಾಜಕೀಯ ಅಸ್ಥಿರವಾಯಿತೆನ್ನಬಹುದು. 1945ರಲ್ಲಿ ಜನರಲ್ ಸಾಲ್ವಡಾರ್ ಕಾಸ್ಟ್ರೊ ಅಧ್ಯಕ್ಷನಾದ. 1948ರಲ್ಲಿ ಇವನ ಅಧಿಕಾರದ ಅವಧಿ ಮುಗಿದಾಗ ಸಂವಿಧಾನವನ್ನೇ ಬದಲಿಸಿ ತಾನೇ ಶಾಶ್ವತವಾಗಿರಬೇಕೆಂದು ಪ್ರಯತ್ನಿಸಿದ. ಆಗ ಇವನನ್ನು ತಳ್ಳಿ ಬಲಿಷ್ಠ ಗುಂಪೊಂದು ಅಧಿಕಾರಕ್ಕೆ ಬಂತು. ಇದರ ಸದಸ್ಯನಾದ ಮೇಜರ್ ಆಸ್ಕಾರ ಒಸೊರಿಯೊನನ್ನು ಅಧ್ಯಕ್ಷನಾಗಿ ಆಯ್ಕೆ ಮಾಡಲಾಯಿತು. ಈತನೂ ನಿರಂಕುಶನಾದ. 1956ರಲ್ಲಿ ಈತನ ಅನುಯಾಯಿ ಲೆಫ್ಟಿನೆಂಟ್ ಕರ್ನಲ್ ಜೋಸೆ ಮೇರಿಯ ಲೆಮಸನನ್ನು ಅಧ್ಯಕ್ಷನಾಗಿ ಆರಿಸಲಾಯಿತು. ಈತ 1960ರ ವರೆಗೂ ಆಳಿದ. ನಾಗರಿಕ ಮತ್ತು ಸೈನಿಕರ ಸಂಮಿಶ್ರ ಗುಂಪೊಂದು ಈತನನ್ನು ತಳ್ಳಿ ತಾನು ಅಧಿಕಾರಕ್ಕೆ ಬಂತು. ಪ್ರಜಾಸತ್ತಾತ್ಮಕ ಪದ್ಧತಿಯಂತೆ ಚುನಾವಣೆ ನಡೆಸುವುದಾಗಿ ಆಶ್ವಾಸನೆ ನೀಡಿತು. 1961ರಲ್ಲಿ ನಡೆದ ಚುನಾವಣೆಯಲ್ಲಿ ಕರ್ನಲ್ ಜೂಲಿಯೊ ಅಡಾಲ್ಬರ್ಟೊ ರಿವೆರ ಅಧ್ಯಕ್ಷನಾಗಿ ಆಯ್ಕೆಯಾದ. ರಿವೆರನ ಸರ್ಕಾರವೂ ಸೈನ್ಯಾಧೀನವೇ. ಆದರೂ ಈಗ ಹಲವಾರು ರಾಜಕೀಯ ಸುಧಾರಣೆಗಳು ಜಾರಿಗೆ ಬಂದುವು. 1964–66ರಲ್ಲಿ ನಡೆದ ಸ್ಥಳೀಯ ಚುನಾವಣೆಗಳು ಸೈನ್ಯದ ಹಿಡಿತವಿಲ್ಲದೆ ಸ್ವತಂತ್ರ ವಾತಾವರಣದಲ್ಲಿ ನಡೆದುವು. 1967ರಲ್ಲಿ ಕರ್ನಲ್ ಫಿಡೆಲ್ ಸಾಂಚ ಹೆರ್ನಾಂಡ್ಸ್ ಅಧ್ಯಕ್ಷನಾಗಿ ಆಯ್ಕೆಯಾದ.

*

**ಎಲಚಿ :** ಈ ಗಿಡ ರ್ಯಾಮ್ನೇಸಿ ಕುಟುಂಬಕ್ಕೆ ಸೇರಿದ ಬಹುವಾರ್ಷಿಕ ವೃಕ್ಷಜಾತಿಯದು (ಜ಼ಿಜ಼ಿಫಸ್ ಜುಜೂಬ). ಇಂಗ್ಲಿಷ್ ಭಾಷೆಯಲ್ಲಿ ಇದಕ್ಕೆ ಬ್ಯೇರ್ ಫ್ರೂಟ್ ಟ್ರೀ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಬೋರೆ ಎಂಬ ಹೆಸರೂ ಬಳಕೆಯಲ್ಲುಂಟು. ಇದು ಭಾರತ, ಪಾಕಿಸ್ತಾನ, ಬರ್ಮ, ಸಿಲೋನ್, ಚೀನ, ಆಫ್ಘಾನಿಸ್ತಾನ, ಆಸ್ಟ್ರೇಲಿಯ, ಆಫ್ರಿಕಗಳಲ್ಲಿ ಹರಡಿದೆ. ಹುಲ್ಲುಗಾವಲು, ಒಣಬಂಜರು ನೆಲಗಳಲ್ಲಿ ಚೆನ್ನಾಗಿ ಬೆಳೆಯುತ್ತದೆ. ಇದನ್ನು ಅಲಂಕಾರಕ್ಕಾಗೂ ಹಣ್ಣುಗಳಿಗಾಗೂ ಬೆಳೆಸುತ್ತಾರೆ.

ಎಲಚಿ ಮರ 30 ರಿಂದ 50 ಅಡಿಗಳ ಎತ್ತರಕ್ಕೆ ಬೆಳೆಯುವ ಕುಳ್ಳು ಕಾಂಡದ ಮಧ್ಯಮ ಪ್ರಮಾಣದ ವೃಕ್ಷ. ಕಾಂಡ ಕಪ್ಪುಬಣ್ಣದ ತೊಗಟೆಯಿಂದ ಆವೃತವಾಗಿದೆ. ತೊಗಟೆಯ ಮೇಲ್ಗಡೆ ಸೀಳಿಕೆಗಳಿದ್ದು ಒಳಭಾಗ ಕೆಂಪಾಗಿರುತ್ತದೆ.

ರೆಂಬೆಗಳು ತೂಗು ಬಿದ್ದಿರುತ್ತವೆ. ಪತ್ರ ಪುಚ್ಛಗಳು (ಸ್ಟಿಪ್ಯೂಲ್ಸ್) ಮುಳ್ಳುಗಳಾಗಿ ಮಾರ್ಪಟ್ಟು ಒಂದು ನೆಟ್ಟಗೂ ಇನ್ನೊಂದು ಇಳಿಮುಖವಾಗಿಯೂ ಇವೆ. ಸುಮಾರು ಚಕ್ರಾಕಾರವಾಗಿ ಮೂರು ನರಗಳುಳ್ಳ ಎಲೆಗಳ ಕೆಳಭಾಗದಲ್ಲಿ ಬಿಳಿಗೂದಲುಗಳಿವೆ. ಹೂಗಳು ಸಣ್ಣವಾಗಿ ಹಸಿರು ಹಳದಿ ಬಣ್ಣದಿಂದ ಕೂಡಿದ್ದು ಎಲೆಕಂಕುಳ ನಡುವೆ ಮಧ್ಯಾರಂಭಿ ಗೊಂಚಲುಗಳಲ್ಲಿ (ಸೈಮ್ಸ್) ಕಾಣಬರುತ್ತವೆ. ಹಣ್ಣುಗಳು ದುಂಡಾಗಿ ಕಿತ್ತಳೆ ಅಥವಾ ಕೆಂಪು ಬಣ್ಣದಿಂದ ಕೂಡಿದ ಅಷ್ಟಿಫಲಗಳು. ಒಳ ಓಟೆ ಬಹುಗಟ್ಟಿ. ರಾಯ ಬೋರೆ ಎಂಬ ಒಂದು ಜಾತಿ ತಿನ್ನಲು ಯೋಗ್ಯವಾದ ಹಣ್ಣುಗಳನ್ನು ಕೊಡುತ್ತದೆ.

ಈ ಜಾತಿಯ ಹಲವು ಪ್ರಭೇದಗಳನ್ನು ಹಣ್ಣುಗಳಿಗಾಗಿ ಬೆಳೆಸುತ್ತಾರೆ. ಅವುಗಳಲ್ಲಿ ಪಂಜಾಬಿನ ಎಡ್ಜ್‌ವರ್ತ್ ವಿಧದ ಹೈಸುಡ್ರಿ ಎಂಬುದು ಮುಖ್ಯ. ಹಣ್ಣುಗಳು ತಿನ್ನಲು ಚೆನ್ನ. ಹುಳಿ ಸಿಹಿಯಾಗಿವೆ. ಕಾಯಿಗಳನ್ನು ಕೆಲವು ವೇಳೆ ಚಟ್ನಿ, ಉಪ್ಪಿನಕಾಯಿ, ಗೊಜ್ಜು ಮುಂತಾದುವನ್ನು ತಯಾರಿಸಲು ಉಪಯೋಗಿಸುತ್ತಾರೆ. ಸುಮಾರು ಎಪ್ರಿಲ್ ನಿಂದ ಸೆಪ್ಟೆಂಬರ್ ವರೆವಿಗೆ ಹೂ ಕಾಣಿಸಿಕೊಂಡು ಡಿಸೆಂಬರ್‌ನಿಂದ ಮಾರ್ಚ್ ವರೆಗೆ ಹಣ್ಣು ಬಿಡುತ್ತದೆ. ಮರದ ಮುಖ್ಯ ಕಾಂಡ ಗಟ್ಟಿಯಾಗಿರುವುದರಿಂದ ಪೀಠೋಪಕರಣ ಮಾಡುವುದಕ್ಕೂ ವ್ಯವಸಾಯ ಮತ್ತು ಎಂಜಿನಿಯರಿಂಗ್ ಸಲಕರಣೆಗಳನ್ನು ಮಾಡುವುದಕ್ಕೂ ಇದ್ದಿಲು ತಯಾರಿಸುವುದಕ್ಕೂ ಉಪಯೋಗಿಸುತ್ತಾರೆ. ಫ್ರೂಟಿಕೋಸ ಪ್ರಭೇದವನ್ನು ಬೇಲಿಗಾಗಿ ಬೆಳೆಸುತ್ತಾರೆ.

1 ರೆಂಬೆಯ ಒಂದು ಭಾಗ 2 ಹೂ 3 ಹಣ್ಣು

(ಬಿ.ಎಸ್.ಎನ್.ಆರ್.; ಎ.ಕೆ.ಎಸ್.)

**ಎಲಿಜ಼ಬೆತ್ I :** 1533–1603. ಇಂಗ್ಲೆಂಡಿನ ರಾಣಿ. ಎಂಟನೆಯ ಹೆನ್ರಿಗೆ ಎರಡನೆಯ ಹೆಂಡತಿಯಾದ ಆನ್ ಬೂಲಿನಳಲ್ಲಿ ಜನಿಸಿದಳು. ತಂದೆಯಂತೆ ಈಕೆ ದೃಢಕಾಯೆ, ಛಲಗಾರ್ತಿ, ಉತ್ಸಾಹಶೀಲೆ. ಇವಳ ಕ್ರೌರ್ಯ ಮುಂಗೋಪಗಳೂ ತಂದೆಯಿಂದ ಪಡೆದ ಗುಣಗಳು. ಇಂಥ ಗಂಡುಲಕ್ಷಣಗಳೇ ಇವಳಲ್ಲಿ ಹೆಚ್ಚಾಗಿದ್ದರೂ ಹೆಣ್ಣಿನ ಆಕರ್ಷಣೆಯೂ ಇತ್ತು. ತಾಯಿಯಿಂದ ಪಡೆದ ಈ ಗುಣದ ಜೊತೆಗೆ ಆಕೆಯ ಇನ್ನೂ ಕೆಲವು ಗುಣಗಳನ್ನೂ ಎಲಿಜ಼ಬೆತ್ ಪಡೆದಿದ್ದಳು. ಅವಳಿಂದ ಇವಳಿಗೂ ಅಸೂಯೆ, ಸಂಚುಗಾರಿಕೆ, ಅಪ್ರಾಮಾಣಿಕತೆ ಮುಂತಾದವು ದತ್ತವಾಗಿದ್ದುವು. ಹೆನ್ರಿ–ಬೂಲಿನರದು ರಹಸ್ಯವಿವಾಹ. ಎಲಿಜ಼ಬೆತ್‌ಳಿಗೆ ಮೂರು ವರ್ಷವಾಗಿದ್ದಾಗ ತಾಯಿ ಮರಣದಂಡನೆಗೆ ಗುರಿಯಾದಳು. ತಂದೆ ಇನ್ನೊಬ್ಬಳನ್ನು (ಜೇನ್ ಸೇಮೋರ್) ಮದುವೆಯಾದದ್ದರಿಂದ ಇವಳೂ ಇವಳ ಮಲಸೋದರಿಯೂ ನ್ಯಾಯಬಾಹಿರ ಸಂತಾನಗಳೆಂದು ಸಾರಲಾಯಿತು. ಇದರಿಂದ ಎಲಿಜ಼ಬೆತ್ ಏಕಾಂತದಲ್ಲಿ ಬಾಲ್ಯ ಕಳೆದಳು. ಈ ಕಾಲದಲ್ಲಿ ಇವಳಿಗೆ ಅಭಿಜಾತ ಸಾಹಿತ್ಯದಲ್ಲಿ ಒಳ್ಳೆಯ ಶಿಕ್ಷಣವೇನೋ ದೊರಕಿತು. ಗ್ರೀಕ್ ಲ್ಯಾಟಿನ್ ಭಾಷೆಗಳನ್ನು ಚೆನ್ನಾಗಿ ಕಲಿತಳು. ಈಕೆಗೆ ಫ್ರೆಂಚ್, ಇಟಾಲಿಯನ್, ಸ್ಪ್ಯಾನಿಷ್ ಭಾಷೆಗಳ ಪರಿಚಯವೂ ಆಯಿತು.

ತಂದೆ ಸತ್ತಮೇಲೆ ಆರನೆಯ ಎಡ್ವರ್ಡನೂ ಅವನ ಅನಂತರ ಮೇರಿಯೂ ಸಿಂಹಾಸನವೇರಿದಾಗ ಎಲಿಜ಼ಬೆತ್ ಅಜ್ಞಾತಳಾಗಿಯೇ ಉಳಿದಿದ್ದಳು. ಪ್ರಾಟೆಸ್ಟಂಟ್ ಮತ ಪ್ರೇಮಿಯೆಂಬ ಕಾರಣದಿಂದ ಪಿತೂರಿಯ ಸಂಶಯಕ್ಕೆ ಗುರಿಯಾಗಿ ಈಕೆ ಲಂಡನ್ ಗೋಪುರದಲ್ಲಿ ಸೆರೆಯಾಗಿದ್ದಳು. ತಲೆ ಹೋಗದೆ ಉಳಿದುಕೊಂಡದ್ದು ಇವಳ ಅದೃಷ್ಟ. ಕೊನೆಗೆ ಮೇರಿಯೂ ಸತ್ತಾಗ ಎಲಿಜ಼ಬೆತಳಿಗೆ ಒಳ್ಳೆಯ ದಶೆ ಬಂತು. ಸೆರೆ ಅನುಭವಿಸಿದ್ದವಳು ಸಿಂಹಾಸನವನ್ನೇರಿದಳು (1558). ಆಗ ಇವಳಿಗೆ ಇಪ್ಪತ್ತೈದು ವರ್ಷ.

ಎಲಿಜ಼ಬೆತ್ ಅಧಿಕಾರ ವಹಿಸಿದ ಸಮಯದಲ್ಲಿ ರಾಜ್ಯದಲ್ಲಿ ನೆಮ್ಮದಿಯಿರಲಿಲ್ಲ. ಎಂಟನೆಯ ಹೆನ್ರಿ ಮತ್ತು ಆರನೆಯ ಎಡ್ವರ್ಡರ ಮತಸುಧಾರಣೆಗಳು ವಿಫಲವಾದ ಕಾರಣ ಈಕೆ ಪಟ್ಟಕ್ಕೆ ಬಂದಾಗ ತುಂಬ ಗೊಂದಲವಿತ್ತು. 1559ರಲ್ಲಿ ಜಾರಿಗೆ ಬಂದ ಪರಮಾಧಿಕಾರ ಶಾಸನದಿಂದ ಇಂಗ್ಲೆಂಡಿನಲ್ಲಿ ಪೋಪ್ ಅಧಿಕಾರಕ್ಕೆ ಅಡ್ಡಿ ಒದಗಿತು. ಏಕರೂಪತೆಯ ಶಾಸನದ ಮೂಲಕ ಪ್ರಾರ್ಥನೆಯಲ್ಲಿ ಏಕರೂಪತೆ ತರಲು ಯತ್ನಿಸಲಾಯಿತು. ಈ ಎರಡು ಶಾಸನಗಳಿಂದ ರಾಜ್ಯದಲ್ಲಿ ಕ್ರೈಸ್ತಮತದ ಮೇಲೆ ಈಕೆ ಅಧಿಕಾರ ಹೊಂದಿದ್ದರೂ ತನ್ನನ್ನು ಕ್ರೈಸ್ತಮತದ ಸರ್ವಾಧಿಕಾರಿಣಿ ಎಂದು ಕರೆದುಕೊಳ್ಳದೆ ಪ್ರಮುಖ ಕಾರ್ಯನಿರ್ವಾಹಕಿಯೆಂದು ಮಾತ್ರ ಕರೆದುಕೊಂಡಳು. ಅವಳ ಈ ಬದಲಾವಣೆಗಳಿಂದ ಸ್ವದೇಶ ಪರದೇಶಗಳಲ್ಲಿ ವಿರೋಧ ಎದ್ದರೂ ಮತದ ಗೊಂದಲ ಪರಿಸ್ಥಿತಿಯ ನಿವಾರಣೆಯಾಯಿತು. 1559ರ ಈ ಕ್ರಮಗಳು ಆಧುನಿಕ ಇಂಗ್ಲೆಂಡ್-ಸ್ಕಾಟ್ಲೆಂಡುಗಳ ನಿರ್ಮಾಣಕ್ಕೆ ನಾಂದಿಯಾದುವು. ಇವುಗಳ

ಪ್ರಭಾವದಿಂದ ಮತ್ತು ಪರಿಸ್ಥಿತಿಗಳ ಒತ್ತಡದಿಂದ ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡ್‌ಗಳು ತಮ್ಮ ಅಂತಃಕಲಹಗಳಿಂದ ದೂರವಾಗಿ ಪ್ರಾಟೆಸ್ಟಂಟ್ ಮತವನ್ನು ಅವಲಂಬಿಸಿ ಯೂರೋಪಿನ ಕೆಥೊಲಿಕ್ ಪಂಥದ ರಾಜ್ಯಗಳೊಡನೆ ಹೋರಾಡಿದವು. ಆರ್ಥಿಕ ಸ್ಥಿತಿಯನ್ನು ಉತ್ತಮಪಡಿಸಲು ಈಕೆ ದೇಶದಲ್ಲಿ ಕೈಗಾರಿಕೆಯನ್ನು ಪ್ರೋತ್ಸಾಹಿಸಿ, ವಿದೇಶವ್ಯಾಪಾರ ಹೆಚ್ಚಿಸಿ ಹಣದ ಉತ್ಪಾದನೆಯ ಮಾರ್ಗಗಳನ್ನು ತೋರಿಸಿಕೊಟ್ಟಳು. ಇಂಗ್ಲೆಂಡಿನ ನೌಕಾದಳ ಬಲಗೊಂಡಿತು. ಪರಿಶೋಧನೆಯ ಕಾರ್ಯ ಹೆಚ್ಚಿ ಇತರ ನಾಡುಗಳಿಂದ ಐಶ್ವರ್ಯ ಬಂತು. 16ನೆಯ ಶತಮಾನದ ಅಂತ್ಯದ ವೇಳೆಗೆ ಇಂಗ್ಲೆಂಡು ಪ್ರಪಂಚದ ಅತ್ಯಂತ ಶ್ರೀಮಂತ ರಾಷ್ಟ್ರವಾಯಿತು.

ಎಲಿಜಬೆತ್ ರಾಣಿಯಾದ ಕಾಲದಲ್ಲಿ ಯೂರೋಪಿನ ರಾಜಕೀಯ ಪರಿಸ್ಥಿತಿ ತುಂಬ ಹದಗೆಟ್ಟಿತ್ತು. ಫ್ರಾನ್ಸ್ ಮತ್ತು ಸ್ಪೇನುಗಳ ಪ್ರಭಾವ ಹೆಚ್ಚಾಗಿತ್ತು. ರಾಣಿಯಾದ ಮೇಲೆ ಈಕೆ ಮತವಿಚಾರಗಳಲ್ಲಿ ಮಾಡಿದಂತೆ ಇಂಗ್ಲೆಂಡಿನ ರಾಜಕೀಯದಲ್ಲೂ ಸಮಯೋಚಿತವಾದ ಅನೇಕ ಬದಲಾವಣೆಗಳನ್ನು ಮಾಡಿದಳು. ವ್ಯಕ್ತಿಸ್ವಾತಂತ್ರ್ಯ ಮತ್ತು ರಾಷ್ಟ್ರೀಯತೆಗಳೆರಡೂ ಬೆಳೆದುವು. ಎಲಿಜಬೆತ್ ಚಿಕ್ಕಂದಿನಲ್ಲಿ ಅಭ್ಯಸಿಸಿದ ಇಟಾಲಿಯನ್ ಗ್ರಂಥಗಳ ಆಧಾರದಿಂದ ಒಡಂಬಡಿಕೆಯ ರಾಜನೀತಿ ಅನುಸರಿಸಿ ಮಧ್ಯಮ ವರ್ಗದ ಜನತೆಯ ಬೆಂಬಲ ಪಡೆದಳು. ಈಕೆ ಕೊನೆಯ ವರೆಗೂ ಅವಿವಾಹಿತೆಯಾಗೇ ಉಳಿದಳು. ಆದರೂ ಒನಪು ಒಯ್ಯಾರ, ಹಾವಭಾವ, ಕುಶಾಗ್ರಬುದ್ಧಿ—ಇವುಗಳಲ್ಲಿ ಈಕೆ ಕಡಿಮೆಯಲ್ಲ.

ಈಕೆಯ ಪ್ರೇಮಜೀವನ ಕುತೂಹಲಕಾರಿ. ಇವಳ ಅಭಿಮಾನಕ್ಕೆ ಪಾತ್ರರಾದವರು ಅನೇಕ ಮಂದಿ. ಆದರೆ ಯಾರನ್ನೂ ಈಕೆ ಮದುವೆಯಾಗಲಿಲ್ಲ. ಅಂತೂ ಈ ವಿಚಾರವಾಗಿ ಊಹಾಪೋಹಗಳಿಗೆ ಕೊನೆಯೇ ಇಲ್ಲ. ಇದರ ಹಿಂದೆ ಪ್ರಮುಖವಾದ ರಾಜಕೀಯ ಸಾಮಾಜಿಕ ಹಾಗೂ ಮತೀಯ ರಹಸ್ಯಗಳು ತುಂಬಿದ್ದುವು. ಈಕೆಯ ಸಂಪೂರ್ಣ ಸ್ವತಂತ್ರ ಮನೋಭಾವವೂ ಈ ಒಂಟಿಜೀವನಕ್ಕೆ ಕಾರಣ. ತನ್ನ ಮದುವೆಯಿಂದ ಇಂಗ್ಲೆಂಡು ಅಸ್ವತಂತ್ರವಾದೀತೆಂಬ ಭೀತಿ ಈಕೆಗಿತ್ತು.

ಈಕೆಯ ರಾಜ್ಯಾಧಿಕಾರದ ನಲವತ್ತೈದು ವರ್ಷಗಳ ಅವಧಿಯನ್ನು ಚರಿತ್ರಕಾರರು ಎಲಿಜಬೆತ್ ಯುಗವೆಂದು ಕರೆದಿದ್ದಾರೆ. ಇವಳ ಕಾಲದಲ್ಲಿ ಸಾಹಿತ್ಯ ಮತ್ತು ನಾಟಕಕಲೆಗಳ ಪುನರುಜ್ಜೀವನವೂ ಮತಸುಧಾರಣೆಯೂ ಆದ್ದರಿಂದ ಈ ಕಾಲಕ್ಕೆ ಇವಳ ಹೆಸರೇ ಬಂತು. ಮಹಾಕವಿ ಷೇಕ್ಸ್‌ಪಿಯರ್, ಫ್ರಾನ್ಸಿಸ್ ಬೇಕನ್, ಎಡ್ಮಂಡ್ ಸ್ಪೆನ್ಸರ್, ವಾಲ್ಟರ್ ರಾಲಿ ಮೊದಲಾದ ಸಾಹಿತಿಗಳನ್ನು ಪ್ರೋತ್ಸಾಹಿಸಿದಳೆಂದು ಹೇಳಲಾಗಿದೆ. ಈಕೆಗೆ ಸಾಹಿತ್ಯಪ್ರೇಮ ಕಲಾವಂತಿಕೆಗಳಿದ್ದುವಾದರೂ ಆ ಕಾಲದ ಲೇಖಕರೂ ಅಭಿಮಾನಿಗಳೂ ಇವನ್ನು ಅತಿಯಾಗಿ ಉತ್ಪ್ರೇಕ್ಷೆ ಮಾಡಿದ್ದಾರೆ. ಷೇಕ್ಸ್‌ಪಿಯರನ ನಾಟಕಗಳಿಗೆ ಇವಳು ಹೋಗುತ್ತಿದ್ದಳಾದರೂ ಆತನ ಪ್ರತಿಭೆ ಇವಳ ಗಮನ ಸೆಳೆಯಲಿಲ್ಲ.

ಎಲಿಜಬೆತ್ ದಿಟ್ಟ ರಾಣಿ. ತನ್ನ ಆತ್ಮೀಯರೆಲ್ಲರನ್ನೂ ಕಳೆದುಕೊಂಡರೂ ಪರಾವಲಂಬಿಯಾಗಲಿಲ್ಲ. ಕೊನೆಯ ದಿನಗಳನ್ನು ಒಂಟಿಯಾಗಿಯೇ ಕಳೆದು ಕಣ್ಮುಚ್ಚಿದಳು.

ಎಲಿಜಬೆತಳದು ವಿಚಿತ್ರವಾದ ಸ್ವಯಂವಿಶಿಷ್ಟವಾದ ರಾಷ್ಟ್ರಪ್ರೇಮ. ಆ ಕಾಲದ ಬೌದ್ಧಿಕ ಮತೀಯ ಚಳವಳಿಗಳಲ್ಲಿ ಈಕೆಗೆ ಅಷ್ಟೇನೂ ಸಹಾನುಭೂತಿ ಇರಲಿಲ್ಲ. ಅತಿ ಮಡಿಯ ಪ್ರಾಟೆಸ್ಟಂಟ್ ಮನೋಭಾವವನ್ನು ಈಕೆ ಸಹಿಸುತ್ತಿರಲಿಲ್ಲ. ಬಾಲ್ಯದಲ್ಲಿ ಓದಿದ್ದಕ್ಕಿಂತ ಈಕೆ ಹೆಚ್ಚೇನೂ ಕಲಿಯಲಿಲ್ಲ. ಎಲಿಜಬೆತಳ ಜನಪ್ರಿಯತೆ ಅಸಾಧಾರಣ. ದಕ್ಷರಾದವರನ್ನು ಪತ್ತೆಹಚ್ಚಿ ಅವರನ್ನು ತನ್ನ ಸಲಹೆಗಾರರನ್ನಾಗಿ ನೇಮಿಸಿಕೊಳ್ಳುವ ಪ್ರತಿಭೆ ಇವಳಿಗೆ ಯಥೇಚ್ಛವಾಗಿತ್ತು. ಆದರೆ ಇವಳ ಆಳ್ವಿಕೆಯಲ್ಲಿ ಕೆಲವು ಕಪ್ಪು ಮಚ್ಚೆಗಳೂ ಉಂಟು. ಸ್ಕಾಟರ ರಾಣಿ ಮೇರಿಯನ್ನೂ ಇನ್ನೂ ಕೆಲವರನ್ನೂ ಈಕೆ ನಿರ್ದಯೆಯಿಂದ ಕೊಲ್ಲಿಸಿದಳು. ತನ್ನ ಸ್ಥಾನ ಭದ್ರತೆಗಾಗಿ ಈ ಕೊಲೆಗಳು ಅವಶ್ಯವೆಂದು ಇವಳು ಭಾವಿಸಿದ್ದಳು. ಅಸೂಯೆಯೂ ಒಂದು ಕಾರಣವೆನ್ನಬಹುದು. ಆದರೂ ಈಕೆಯ ಆಳ್ವಿಕೆಯ ಕಾಲ ಇಂಗ್ಲೆಂಡಿನ ವೈಭವದ ಕಾಲ.

(ಎಚ್.ಆರ್.ಡಿ.)

**ಎಲಿಜಬೆತ್ II : 1926–** . ಗ್ರೇಟ್ ಬ್ರಿಟನ್ ಮತ್ತು ಉತ್ತರ ಐರ್ಲೆಂಡಿನ ರಾಣಿ. ಆರನೆಯ ಜಾರ್ಜ್ ದೊರೆಯ (ಆಗ ಯಾರ್ಕ್ ಡ್ಯೂಕ್) ಹಿರಿಯ ಪುತ್ರಿ. ಜನನ 1926ರ ಏಪ್ರಿಲ್ 21ರಂದು, ಲಂಡನ್ ನಗರದಲ್ಲಿ. ಈಕೆಯ ಪೂರ್ತಿ ಹೆಸರು ಎಲಿಜಬೆತ್ ಅಲೆಗ್ಸಾಂಡ್ರಾ ಮೇರಿ. ತಾಯಿಯ ನೇತೃತ್ವದಲ್ಲಿ ಈಕೆಯ ವಿದ್ಯಾಭ್ಯಾಸ ನಡೆಯಿತು. ಇತಿಹಾಸ, ಸಂಗೀತಗಳೇ ಅಲ್ಲದೆ ಅನೇಕ ಭಾಷೆಗಳಲ್ಲಿ ಈಕೆಗೆ ಪರಿಶ್ರಮವುಂಟು.

ಎಲಿಜಬೆತಳ ಬಾಲ್ಯದಲ್ಲಿ ಸಂಭವಿಸಿದ ಎರಡು ಮಹತ್ತ್ವದ ಘಟನೆಗಳು ಈಕೆಯ ಬಾಳನ್ನೇ ಅಲ್ಲದೆ ಇಡೀ ರಾಷ್ಟ್ರದ ಹಾಗೂ ವಿಶ್ವದ ಸ್ವರೂಪವನ್ನೇ ಬಹಳ ಮಟ್ಟಿಗೆ ಬದಲಾಯಿಸಿದುವೆನ್ನಬಹುದು. ಈಕೆಯ ದೊಡ್ಡಪ್ಪ ಎಂಟನೆಯ ಎಡ್ವರ್ಡನ ಸಿಂಹಾಸನ ತ್ಯಾಗ (1936) ಮೊದಲನೆಯ ಮುಖ್ಯ ಘಟನೆ. ಇದರಿಂದ ಒಮ್ಮೆಲೇ ಈಕೆಯ ಪ್ರಾಮುಖ್ಯ ಬಹಳ ಹೆಚ್ಚಿತು. ತಂದೆ ಜಾರ್ಜನ ಸಿಂಹಾಸನಾರೋಹಣವಾದಾಗ ಮಗಳು ಎಲಿಜಬೆತ್ ಅದಕ್ಕೆ ಉತ್ತರಾಧಿಕಾರಿಣಿಯಾದಳು.



ಎರಡನೆಯ ಮಹತ್ತ್ವದ ಘಟನೆಯೆಂದರೆ 1939ರಲ್ಲಿ ಆರಂಭವಾದ ಎರಡನೆಯ ಮಹಾಯುದ್ಧ. ಇದರ ಪರಿಣಾಮವಾಗಿ ಬ್ರಿಟಿಷ್ ರಾಜತ್ವದ ಸ್ವರೂಪದಲ್ಲೆ ಮಹತ್ತರ ಬದಲಾವಣೆಗಳಾದುವು. ಆಗ ಈಕೆ ತಂದೆ ತಾಯಿಯರಿಂದ ದೂರ ಇರಬೇಕಾಗಿ ಬಂತು. ಹಿರಿಯರ ಮತ್ತು ಸರ್ಕಾರದ ವಿರೋಧ ಲೆಕ್ಕಿಸದೆ ಸೇನೆಯಲ್ಲಿ ಈಕೆ ವಾಹನ ಚಾಲಕಿಯ ತರಬೇತಿ ಪಡೆದಳು.

1947ರ ಆದಿಭಾಗದಲ್ಲಿ ಎಲಿಜಬೆತ್ ತಂದೆ ತಾಯಿಯರೊಂದಿಗೆ ದಕ್ಷಿಣ ಆಫ್ರಿಕ ಪ್ರವಾಸ ಮಾಡಿದಳು. ಇದೇ ವೇಳೆ ಈಕೆಗೆ 21 ವರ್ಷ ತುಂಬಿತು. ಆ ಸಂದರ್ಭದಲ್ಲಿ ಕಾಮನ್‌ವೆಲ್ತ್ ಒಕ್ಕೂಟವನ್ನುದ್ದೇಶಿಸಿ ಎಲಿಜಬೆತ್ ಮಾಡಿದ ಪ್ರಸಾರ ಭಾಷಣದಲ್ಲಿ ತನ್ನ ಮನೆತನದ ಹಿರಿಯರ ಆದರ್ಶವನ್ನೇ ಅನುಸರಿಸುವ ಆಶಯ ವ್ಯಕ್ತಪಡಿಸಿದಳು. ಅದೇ ವರ್ಷದ ನವೆಂಬರಿನಲ್ಲಿ ಈಕೆಗೆ ಗ್ರೀಸ್ ರಾಜಕುಮಾರ ಫಿಲಿಪ್ ಮೌಂಟ್‌ಬ್ಯಾಟನನೊಂದಿಗೆ ವೆಸ್ಟ್ ಮಿನ್‌ಸ್ಟರ್ ಅಬೆಯಲ್ಲಿ ವಿವಾಹ ನೆರವೇರಿತು. ಅಗ್ಗೆ ಒಂಬತ್ತು ತಿಂಗಳ ಹಿಂದೆ ತಾನೇ ಗ್ರೀಕ್ ಸಿಂಹಾಸನಕ್ಕೆ ತನಗಿದ್ದ ಹಕ್ಕನ್ನು ತ್ಯಜಿಸಿ ಬ್ರಿಟಿಷ್ ಪ್ರಜೆಯಾಗಿದ್ದ ರಾಜಕುಮಾರ ಫಿಲಿಪನಿಗೆ ಆ ಸಂದರ್ಭದಲ್ಲಿ ಎಡಿನ್‌ಬರೊ ಡ್ಯೂಕ್ ಪದವಿ ನೀಡಲಾಯಿತು. (ನೋಡಿ—ಎಡಿನ್‌ಬರೊ ಡ್ಯೂಕ್). ಈ ದಂಪತಿಗಳಿಗೆ ನಾಲ್ವರು ಮಕ್ಕಳಿದ್ದಾರೆ–ಚಾರಲ್ಸ್ (1948), ಆನ್ (1950), ಆಂಡ್ರ್ಯೂ (1960), ಎಡ್ವರ್ಡ್ (1966). ಚಾರಲ್ಸ್‌ನನ್ನು ಯುವರಾಜನನ್ನಾಗಿ ಘೋಷಿಸಲಾಗಿದೆ.

1951ರ ಬೇಸಗೆಯಲ್ಲಿ 6ನೆಯ ಜಾರ್ಜನ ಆರೋಗ್ಯ ಕಳವಳಕರವಾಯಿತು. ಎಲಿಜಬೆತ್ ಕೀನ್ಯದಲ್ಲಿ ಪ್ರವಾಸದಲ್ಲಿದ್ದಾಗ ತಂದೆಯ ಮರಣದ ಸುದ್ದಿ ಬಂತು. ತತ್‌ಕ್ಷಣವೇ ಇಂಗ್ಲೆಂಡಿಗೆ ಮರಳಿದಳು. 1952ರ ಫೆಬ್ರುವರಿ 8ರಂದು ರಾಣಿಯಾದಳು. ಈಕೆಯ ಪಟ್ಟಾಭಿಷೇಕವಾದದ್ದು 1952ರ ನವೆಂಬರ್ 4 ರಂದು–ವೆಸ್ಟ್‌ಮಿನ್‌ಸ್ಟರ್ ಅಬೆಯಲ್ಲಿ.

ಪತ್ರಿಕೆಗಳಲ್ಲೂ ಸಂಪ್ರದಾಯಪ್ರಿಯರಿಂದಲೂ ಬರುವ ಕಟು ವಿಮರ್ಶೆಗಳಿಂದ ವಿಚಲಿತಳಾಗುವುದಿಲ್ಲ. ಎಲಿಜಬೆತ್ ಸ್ನೇಹಮಯಿ, ಒಳ್ಳೆಯ ತಾಯಿ ಮತ್ತು ಪತ್ನಿ.



ಲಾರ್ಡ್ಸ್ ಸಭೆಯಲ್ಲಿ ರಾಣಿ ಎಲಿಜಬೆತ್-II, ಗಂಡ ಮತ್ತು ಮಕ್ಕಳೊಡನೆ

ಬ್ರಿಟಿಷರ ಅಭಿಮಾನ ಗಳಿಸಿದ್ದಾಳೆ. ಸರ್ಕಾರದ ಕಾರ್ಯಗಳಲ್ಲಿ ಈಕೆಗೆ ಹೆಚ್ಚಿನ ಶ್ರದ್ಧೆ ಇದೆ.

(ಬಿ.ಎಸ್.ಎ.)

**ಎಲಿಜಿ :** ಪ್ರಾಚೀನ ಗ್ರೀಕ್ ಸಾಹಿತ್ಯದಲ್ಲಿ ಕಾವ್ಯದ ಒಂದು ಛಂದೋ ರೂಪಕ್ಕೆ ಈ ಹೆಸರಿತ್ತು. 16ನೆಯ ಶತಮಾನದಲ್ಲಿ ಇಂಗ್ಲೆಂಡಿನ ಸಾಹಿತ್ಯಕ್ಕೆ ಈ ಪದ ಬಂದ ಅನಂತರ ಇದಕ್ಕೆ ಶೋಕಗೀತೆ ಎಂಬ ಅರ್ಥ ಬಂದು ಅದೇ ಅರ್ಥ ಈಗಲೂ ಉಳಿದುಕೊಂಡಿದೆ. ಬೇರೆ ಸಾಹಿತ್ಯಗಳಲ್ಲೂ ಅದೇ ಅರ್ಥದಲ್ಲಿ ಈ ಪದ ಬಳಕೆಯಾಗುತ್ತಿದೆ.

ಎಲಿಜಿಯಕ್ ಛಂದಸ್ಸಿನಲ್ಲಿ ಬರೆದ ಯಾವ ಕವಿತೆಗಾದರೂ ಗ್ರೀಕರಲ್ಲಿ ಎಲಿಜಿ ಎಂಬ ಹೆಸರೇ ಸಲ್ಲುತ್ತಿತ್ತು. ಎಲಿಗಾಸ್ ಎಂದರೆ ಕೊಳಲುವಾದನದ ಜೊತೆಗೆ ಹಾಡುವ ಕರುಣರಸಭರಿತ ರಾಗವೆಂಬ ಅರ್ಥವಿತ್ತು. ಆದರೆ ಕರುಣರಸವಿಲ್ಲದಂಥ ಬೇರೆ ಬೇರೆ ಕಾವ್ಯಗಳಿಗೆ ಈ ಹೆಸರು ಪ್ರಾರಂಭಿಕ ಕಾಲದಲ್ಲೂ ಹೇಗೆ ಅಂಟಿಕೊಂಡಿತೆಂಬ ವಿಷಯ ಆಶ್ಚರ್ಯಕರವಾಗಿದೆಯಲ್ಲದೆ ಇಂದಿಗೂ ಬಗೆಹರಿಯದ್ದಾಗಿದೆ. ಹನ್ನೆರಡು ಮಾತ್ರೆಗಳ ಒಂದು ಸಾಲಿಗೆ ಹತ್ತು ಮಾತ್ರೆಗಳ ಒಂದು ಸಾಲು ಸೇರಿ ಎಲಿಜಿಯಕ್ ಛಂದಸ್ಸಾಗುತ್ತಿತ್ತು. ಈ ಛಂದಸ್ಸಿನ ಹಾಡುಗಳಿಗೆ, ಮೊದ ಮೊದಲಿನ ಕವಿತೆಗಳಿಗೆ ಕೊಳಲಿನ ಹಿನ್ನೆಲೆ ಇದ್ದುದರಿಂದ ಎಲಿಜಿಯೆಂಬ ಹೆಸರು ಪ್ರಚಲಿತವಾಗಿರಬೇಕೆಂದು ಊಹೆ.

ಎಫಿಸಸ್ಸಿನ ಕ್ಯಾಲಿನಸ್ (ಕ್ರಿ. ಪೂ. 700) ಇಂಥ ಪದ್ಯವನ್ನು ಮೊದಲ ಬಾರಿಗೆ ಬರೆದ. ಆದರೆ ಇದು ಎಲಿಜಿಯಕ್ ಛಂದಸ್ಸಿನಲ್ಲಿರುವ ವೀರಗಾಥೆ. ಅಟಿಕದ ಅಫಿಡ್ನೇಯ ಕವಿ ಟಿರ್ಟೇಯಸ್ ಎಂಬಾತ (ಕ್ರಿ.ಪೂ. ಸುಮಾರು 600) ರಾಜಕೀಯಕ್ಕೆ ಮತ್ತು ಸಂಗ್ರಾಮಕ್ಕೆ ಸಂಬಂಧಿಸಿದ ಕವಿತೆಗಳಿಗೆ ಎಲಿಜಿ ಎಂಬ ಹೆಸರು ಕೊಟ್ಟ. ಸೋಲನ್ (ಕ್ರಿ.ಪೂ.640–559) ಮತ್ತು ಮೆಗಾರಾದ ಥಿಯೋಗ್ನಿಸ್ (ಕ್ರಿ.ಪೂ.540) ಬರೆದ ಪ್ರೇಮಗೀತೆಗಳಿಗೂ ರಾಜಕೀಯ ಮತ್ತು ವ್ಯಂಗ್ಯ ಕವಿತೆಗಳಿಗೂ ಎಲಿಜಿ ಎಂಬ ಹೆಸರನ್ನೇ ಕೊಟ್ಟಿದ್ದರು. ಮೊತ್ತಮೊದಲ ಬಾರಿಗೆ ಎಲಿಜಿಯಲ್ಲಿ ಶೋಕ ರಸವನ್ನು ತುಂಬಿದವ ಸಿಯೋಸಿನ ಸೈಮನೈಡೀಸ್ (ಕ್ರಿ.ಪೂ.469). ಆದರೂ ಈ ಛಂದಸ್ಸಿನಲ್ಲಿ ಪ್ರೇಮ, ರಾಜಕೀಯ, ಯುದ್ಧ, ವ್ಯಕ್ತಿದ್ವೇಷ, ಪಾಂಡಿತ್ಯ, ವಿರಕ್ತಿ ಮುಂತಾದ ಎಲ್ಲ ವಿಷಯಗಳ ಬಗ್ಗೆಯೂ ಕವಿತೆಗಳು ಹುಟ್ಟಿಕೊಂಡಿದ್ದು, ಅವೆಲ್ಲಕ್ಕೂ ಎಲಿಜಿ ಎಂಬ ಹೆಸರೇ ಅಂಟಿಕೊಂಡಿದೆ. ರೋಮನ್ ಕವಿ ಮಾಂಟಿಯೇನಸ್ (ಕ್ರಿ.ಶ.416) ತಾನು ರೋಮಿನಿಂದ ಫ್ರಾನ್ಸಿಗೆ ಬಂದ ಪ್ರಯಾಣದ ವರ್ಣನೆಯನ್ನು ಎಲಿಜಿಯೆಂದೇ ಕರೆದಿದ್ದಾನೆ. ಆದ್ದರಿಂದ ಪ್ರಾರಂಭದಿಂದಲೂ ಎಲಿಜಿಗೂ ಶೋಕಭಾವಕ್ಕೂ ಯಾವ ಸಂಬಂಧವೂ ಇರಲಿಲ್ಲವೆಂಬುದು ಸ್ಪಷ್ಟ. ಕ್ರಿ.ಪೂ. 7ನೆಯ ಶತಮಾನದಿಂದ ಕ್ರಿ.ಶ. 10ನೆಯ ಶತಮಾನದವರೆಗೆ ಸುಮಾರು 16 ಶತಮಾನಗಳ ಕಾಲದಲ್ಲಿ ಚಾಟೂಕ್ತಿಗಳು, ಪ್ರೇಮಗೀತೆಗಳು, ವೀರಗಾಥೆಗಳು, ಒಗಟುಗಳು, ವ್ಯಕ್ತಿನಿಂದೆ ಮುಂತಾದ ಎಲ್ಲ ವಿಷಯಗಳನ್ನೂ ಒಳಗೊಂಡಿದ್ದು ಎಲಿಜಿ ಬಹಳ ಜನಪ್ರಿಯವಾಗಿತ್ತು. ಓವಿಡ್ (ಕ್ರಿ.ಪೂ. 43—ಕ್ರಿ.ಶ. 18) ಎಲಿಜಿಯಲ್ಲಿ ಹಾಸ್ಯ, ವ್ಯಂಗ್ಯೋಕ್ತಿ ಮತ್ತು ವಿಡಂಬನವನ್ನು ಸಕ್ರಿಯವಾಗಿ ಬಳಸಿದ.

ಶೋಕಗೀತೆಯಾಗಿ ಮೊದಲಬಾರಿ ಬಂದದ್ದೆಂದರೆ ಕ್ರಿ.ಪೂ. 100ರ ಸುಮಾರಿನಲ್ಲಿ ಸಿಸಿಲಿಯಲ್ಲಿದ್ದ ಬಯಾನ್ ಎಂಬ ಗ್ರೀಕ್ ಕವಿ ಬರೆದ ಅಡೋನಿಸ್ (ಲ್ಯಾಮೆಂಟ್ ಫಾರ್ ಅಡೋನಿಸ್). ಇಲ್ಲಿ ಪ್ಯಾಸ್ಟೋರಲ್ ಎಲಿಜಿ (ನಿಸರ್ಗ ಶೋಕಗೀತೆ) ಎಂಬ ಹೊಸರೀತಿಯ ಸಂಪ್ರದಾಯದ ಪ್ರಾರಂಭವಿದೆ. ಮೊದಲಿಗೆ ಸಾವಿನ ಬಗ್ಗೆ ದುಃಖ, ದೇಶಮಾತೆ, ದೇವತೆಗಳು, ಸತ್ತವನ ಸ್ನೇಹಿತರು, ಅವನ ವಿಚಾರಗಳು—ಇವೆಲ್ಲವೂ ಮೆರವಣಿಗೆಯಾಗಿ ಬಂದು ದುಃಖ ಪ್ರದರ್ಶಿತವಾಗುತ್ತದೆ. ಅನಂತರ ಸತ್ತವನ ಗೆಳೆಯನಾದ ಕವಿ ತನ್ನ ವೈಯಕ್ತಿಕ ಸಂಕಟವನ್ನು ತೋಡಿಕೊಳ್ಳುತ್ತಾನೆ. ಆದರೆ ಕೊನೆಯಲ್ಲಿ ಸಾವು ಸೋಲುತ್ತದೆ, ಬದುಕೇ ಗೆಲ್ಲುತ್ತದೆ ಎಂಬ ಆಶಾವಾದವನ್ನು ಪ್ರಕಟಿಸಿ, ಮನಸ್ಸಿಗೆ ಸಮಾಧಾನ ತಂದುಕೊಳ್ಳುತ್ತಾನೆ. ಇದು ಈ ರೀತಿಯ ಕವಿತೆಯ ಚೌಕಟ್ಟು. ಬಯಾನ್ ಸತ್ತ ಅನಂತರ ಆತನ ಬಗ್ಗೆ ಅವನ ಸ್ನೇಹಿತ ಮಾಸ್ಕಸ್ ಇಂಥ ಪ್ಯಾಸ್ಟೋರಲ್ ಎಲಿಜಿಯನ್ನು ರಚಿಸಿದ.

ಇಂಗ್ಲೆಂಡಿಗೆ ಎಲಿಜಿ 16ನೆಯ ಶತಮಾನದಲ್ಲಿ ಮೊದಲು ಕಾಲಿಕ್ಕಿತು. ಆಗಲೇ ಅದಕ್ಕೆ ಚರಮಗೀತೆ, ಮರಣಗೀತೆ ಅಥವಾ ಶೋಕಗೀತೆ ಎಂಬ ತಪ್ಪು ಅರ್ಥ ಕಲ್ಪನೆಯಾಯಿತು. 1576ರಲ್ಲಿ ಗ್ಯಾಸ್ಕಾಯಿನ್ ಕವಿ ಫಿಲೋಮಿನಳ ಗೋಳಾಟ ಎಂಬ ಪದ್ಯ ಬರೆದುದೇ ಮೊದಲ ಇಂಗ್ಲಿಷ್ ಎಲಿಜಿ. ಇಂಗ್ಲಿಷ್ ಭಾಷೆಯಲ್ಲಿ ಅತ್ಯಂತ ಪ್ರಖ್ಯಾತವಾದ ಎಲಿಜಿಗಳು: ಮಿಲ್ಟನನ ಲಿಸಿಡಾಸ್ (17ನೆಯ ಶತಮಾನ), ಗ್ರೇ ಕವಿಯ ಹಳ್ಳಿಯ ಶ್ಮಶಾನದಲ್ಲಿ ಬರೆದ ಎಲಿಜಿ (ಎಲಿಜಿ ರಿಟನ್ ಆನ್ ಎ ಕಂಟ್ರಿ ಚರ್ಚ್‌ಯಾರ್ಡ್, 18ನೆಯ ಶತಮಾನ), ಷೆಲ್ಲಿಯ ಅಡೋನಿಸ್ (19ನೆಯ ಶತಮಾನ), ಆರ್ನಲ್ಡನ ಥರ್ಸಿಸ್ (19ನೆಯ ಶತಮಾನ), ಮತ್ತು ರಾಬರ್ಟ್ ಬ್ರಿಡ್ಜಸ್ ಕವಿಯ ಎಲಿಜಿ (20ನೆಯ ಶತಮಾನ). ಫ್ರೆಂಚ್ ಭಾಷೆಯಲ್ಲಿ ರಾನ್ಸರ್ಡ್ ಲಾಮಾರ್ಟಿನ್ ರಷ್ಯನ್ ಭಾಷೆಯಲ್ಲಿ ಪುಷ್ಕಿನ್, ಮಾಯಾಕೋವ್‌ಸ್ಕಿ ಮುಂತಾದವರೂ ಇಂಥ ಎಲಿಜಿಗಳನ್ನು ಬರೆದಿದ್ದಾರೆ.

ಕನ್ನಡದಲ್ಲಿ ಇಂಥ ಶೋಕಗೀತೆಗಳು ಬಹಳ ಕಡಿಮೆ. ಸಾಲಿ ರಾಮಚಂದ್ರರಾಯರ ತಿಲಾಂಜಲಿ (1932), ಬೇಂದ್ರೆಯವರ ಹಾಡು ಪಾಡು (1946), ಎಸ್. ಅನಂತ ನಾರಾಯಣ ಅವರ ಬಾಡದ ಹೂವು (1946) ಈ ವರ್ಗಕ್ಕೆ ಸೇರಿದುವು.

(ಎಸ್.ಎ.ಎನ್.)

**ಎಲಿಫೆಂಟ :** ಬೊಂಬಾಯಿಯ ಅಪೊಲೊ ಬಂದರಿನಿಂದ ಈಶಾನ್ಯಕ್ಕೆ 7 ಮೈಲಿ ದೂರದಲ್ಲಿ, ಗುಡ್ಡಗಳಿಂದ ಕೂಡಿದ, ಸಮಾರು 4½ಮೈಲಿ ಸುತ್ತಳತೆಯುಳ್ಳ ಒಂದು ದ್ವೀಪ. ಇಲ್ಲಿದ್ದ ಒಂದು ಬೃಹದಾಕಾರದ ಆನೆಯ ವಿಗ್ರಹದಿಂದ ಇದಕ್ಕೆ ಎಲಿಫೆಂಟ ಎಂಬ ಹೆಸರು ಬಂತು. ಈಗ ಈ ವಿಗ್ರಹವನ್ನು ಬೊಂಬಾಯಿಗೆ ಸಾಗಿಸಲಾಗಿದೆ. ಮೊದಲಿನ ಹೆಸರು ಶ್ರೀಪುರಿ. ಘಾರಾಪುರಿ ಎಂಬುದು ಮತ್ತೊಂದು ಹೆಸರು. ಈ ದ್ವೀಪ 8ನೆಯ ಶತಮಾನದವರೆಗೆ ಕೊಂಕಣ ಪ್ರದೇಶ ಮತ್ತು ಪಶ್ಚಿಮ ಭಾರತವನ್ನು ಆಳುತ್ತಿದ್ದ ಮೌರ್ಯ ಸಂತತಿಯ ಒಂದು ಶಾಖೆಯ ದೊರೆಗಳ ಅಧೀನದಲ್ಲಿತ್ತು. ಅನಂತರ ಚಾಲುಕ್ಯ ಪುಲಿಕೇಶಿಯ ಕೈಸೇರಿ, ಕ್ರಮವಾಗಿ ರಾಷ್ಟ್ರಕೂಟರು, ಕಲ್ಯಾಣಿಯ ಚಾಲುಕ್ಯರು, ದೇವಗಿರಿಯ ಯಾದವರು ಮತ್ತು ಅಹಮದಾಬಾದಿನ ಮುಸ್ಲಿಂ ದೊರೆಗಳ ಅಧೀನದಲ್ಲಿದ್ದು 1534ರಲ್ಲಿ ಪೋರ್ಚು ಗೀಸರ ಕೈ ಸೇರಿತು.

1673ರಲ್ಲಿ ಪೋರ್ಚುಗೀಸರು ಈ ಗುಹಾಲಯಗಳನ್ನು ದನದ ದೊಡ್ಡಿಗಳನ್ನಾಗಿ ಮಾಡಿಕೊಂಡಿದ್ದರು. 1682ರಲ್ಲಿ ಮರಾಠರು ಈ ದ್ವೀಪವನ್ನು ವಶಪಡಿಸಿಕೊಂಡರು. 1774ರಲ್ಲಿ ಇದು ಬ್ರಿಟಿಷರ ವಶವಾಯಿತು. ಅನೇಕ ವರ್ಷಗಳ ಕಾಲ ಇಲ್ಲಿ ಬ್ರಿಟಿಷ್ ಸೈನ್ಯದ ಒಂದು ತುಕಡಿ ಇತ್ತು. ಆಗ ರಾಜಕುಮಾರನಾಗಿದ್ದ ಇಂಗ್ಲೆಂಡಿನ ಏಳನೆಯ ಎಡ್ವರ್ಡ್‌ಗೆ ಇಲ್ಲಿ ಒಂದು ಔತಣ ಕೂಟವನ್ನು ಏರ್ಪಡಿಸಿದ್ದರು (1875). 1890ರಲ್ಲಿ ಬೊಂಬಾಯಿನ ಲೋಕೋಪಯೋಗಿ ಇಲಾಖೆ ಇದರ ಮೇಲ್ವಿಚಾರಣೆಯನ್ನು ವಹಿಸಿಕೊಂಡಿತು. 1909ರಲ್ಲಿ ಈ ಗುಹಾಲಯಗಳು ರಕ್ಷಿಸಲ್ಪಟ್ಟ ಪುರಾತನ ಅವಶೇಷಗಳೆಂದು ಪರಿಗಣಿಸಲ್ಪಟ್ಟವು.

**ಪ್ರಾಚೀನ ಅವಶೇಷಗಳು—ವಾಸ್ತುಶಿಲ್ಪ :** ಕ್ರಿ. ಶ. ಸುಮಾರು 3ರಿಂದ 10–11ನೆಯ ಶತಮಾನದವರೆಗೂ ಪ್ರಸಿದ್ಧವೆನಿಸಿ ಮೆರೆದ ಈ ದ್ವೀಪದ ಅನೇಕ ಕಡೆಗಳಲ್ಲಿ ಕಲ್ಲು ಮತ್ತು ಇಟ್ಟಿಗೆಯ ಅಡಿಪಾಯಗಳೂ ಶಿಲ್ಪಗಳೂ ಕಂಡುಬಂದಿವೆ. ಇಲ್ಲಿಯ ಒಂದು ಗುಡ್ಡದ ಮೇಲೆ ಬೌದ್ಧಸ್ತೂಪವೊಂದರ ಅವಶೇಷಗಳಿವೆ. ಆದರೆ ಇವೆಲ್ಲಕ್ಕೂ ಹೆಚ್ಚು ಪ್ರಸಿದ್ಧವಾಗಿರುವುದು ಇಲ್ಲಿಯ ಗುಹಾದೇವಾಲಯಗಳು. ಎಲಿಫೆಂಟದಲ್ಲಿ ಒಟ್ಟು ಆರು ಗುಹೆಗಳಿವೆ. ಇವೆಲ್ಲವೂ ಶೈವಮತಕ್ಕೆ ಸಂಬಂಧಿಸಿದುವು. ಅವುಗಳಲ್ಲಿ ದೊಡ್ಡ ಗುಹೆಯೇ ಅತಿಮುಖ್ಯವಾದುದು. ಉತ್ತರಕ್ಕೆ

ಮುಖ ಮಾಡಿರುವ ಈ ಗುಹೆ ಪೂರ್ಣವಾಗಿ ಕಗ್ಗಲ್ಲಿನದಾಗಿದ್ದು 16 ರಿಂದ 17 ಅಡಿ ಎತ್ತರವಿದೆ. ಒಟ್ಟು ಉದ್ದ 130′. ಅಗಲವೂ ಸುಮಾರು ಅಷ್ಟೇ. ಆದರೆ ತಳವಿನ್ಯಾಸದಲ್ಲಿ ಇದು ಪೂರ್ಣ ಚಚ್ಚೌಕವಾಗಿಲ್ಲ. ಪಶ್ಚಿಮ, ಉತ್ತರ ಮತ್ತು ಪೂರ್ವ ದಿಕ್ಕುಗಳಲ್ಲಿ 54′ ಅಗಲ ಮತ್ತು 16½′ ಉದ್ದದ ಮುಖಮಂಟಪಗಳೂ ದಕ್ಷಿಣದಲ್ಲಿ ಸುಮಾರು ಇಷ್ಟೇ ವಿಸ್ತಾರದ ಹಜಾರದ ಚಾಚೂ ಇವೆ. ಮಧ್ಯದ ಹಜಾರ ಆರು ಕಂಬಗಳ ಆರು ಸಾಲುಗಳಿಂದ ಅಂಕಣಗಳಾಗಿ ವಿಭಾಗಿತವಾಗಿದೆ. ಆದರೆ ಕೆಲವೆಡೆ ಹೊರಗೋಡೆಯನ್ನನುಸರಿಸಿ ಕಂಬಗಳ ಬದಲು ಅರೆಗಂಬಗಳಿವೆಯುಲ್ಲದೆ ಹಜಾರದ ಪಶ್ಚಿಮಕ್ಕೆ ಎಂಟು ಕಂಬಗಳಿರುವ ಜಾಗದಲ್ಲಿ ನಾಲ್ಕುಕಡೆ ದ್ವಾರಗಳಿರುವ ಒಂದು ಗರ್ಭಗೃಹವಿದೆ. ಗರ್ಭಗೃಹದ ಮಧ್ಯದಲ್ಲಿ ಲಿಂಗವೂ ಅದರ ದ್ವಾರಗಳ ಎರಡು ಪಕ್ಕಗಳಲ್ಲಿ ದ್ವಾರಪಾಲಕ ವಿಗ್ರಹಗಳೂ ಇವೆ. ವಿಶಾಲವಾದ ಗೋಡೆಗಳ ಮೇಲೂ ಶಿಲ್ಪಗಳಿವೆ. ಈ ಗುಹೆಯಲ್ಲಿ ಯಾವ ಶಾಸನಗಳೂ ಸಿಕ್ಕಿಲ್ಲವಾದ್ದರಿಂದ, ಇದರ ಕಾಲವನ್ನು ನಿರ್ದಿಷ್ಟವಾಗಿ ಹೇಳುವುದು ಕಷ್ಟ. ಚಚ್ಚೌಕದ ತಳ, ಅಷ್ಟ ಅಥವಾ ಷೋಡಶ ಕೋನಗಳ ಮಧ್ಯಭಾಗ ಮತ್ತು ದುಂಡು ಮೇಲುಭಾಗವಿರುವ ದಪ್ಪಕಂಬಗಳು, ಎಲ್ಲೋರದ ಕೆಲವು ಗುಹೆಗಳನ್ನು ಹೋಲುವ ತಳ ವಿನ್ಯಾಸ, ಶಿಲ್ಪಗಳ ಅಲಂಕರಣ ಶೈಲಿ ಮುಂತಾದುವುಗಳಿಂದ ಈ ಗುಹೆ ಕ್ರಿ.ಶ. 6ರಿಂದ 8ನೆಯ ಶತಮಾನದ ಮಧ್ಯಭಾಗದಲ್ಲಿ ನಿರ್ಮಿತವಾಗಿರಬೇಕೆಂದು ಊಹಿಸಬಹುದು. ಇತರ ಗುಹೆಗಳೂ ಇದೇ ಕಾಲದವೇ. ಆದರೆ ವಿನ್ಯಾಸದಲ್ಲಾಗಲೀ ಶಿಲ್ಪಗಳಲ್ಲಾಗಲೀ ದೊಡ್ಡಗುಹೆಗೆ ಇವು ಸರಿಗಟ್ಟುವುದಿಲ್ಲ.

**ಮೂರ್ತಿಶಿಲ್ಪ :** ಎಲಿಫೆಂಟದ, ಅದರಲ್ಲೂ ಇಲ್ಲಿನ ದೊಡ್ಡ ಗುಹೆಯ, ಶಿಲ್ಪ ದಖನ್ನಿನ ಗುಹಾಶಿಲ್ಪ ಶ್ರೇಣಿಯಲ್ಲಿಯೇ ಅತ್ಯುಚ್ಚಮಟ್ಟದ ಶಿಲ್ಪಗಳಿಗೆ ಪ್ರಸಿದ್ಧವಾಗಿದೆ. ಸಮಕಾಲೀನ ಶಿಲ್ಪದಂತೆ ಇಲ್ಲಿಯವೂ ಬೃಹತ್ ಶಿಲ್ಪಗಳೇ. ಶಿಲ್ಪಗಳು ನೆಲದಿಂದ ಮೇಲಿನವರೆಗೆ ಹನ್ನೆರಡರಿಂದ ಹದಿನೆಂಟು ಅಡಿಗಳ ಎತ್ತರವಿದ್ದರೂ ಉತ್ತಮಭಾವಪ್ರಕಟನೆ, ಅಂಗಾಂಗಗಳ ಸಹಜ ಪ್ರಮಾಣ ಮತ್ತು ನೈಜತೆಯಿಂದ ಕೂಡಿ ಸುಂದರ ಕೃತಿಗಳಾಗಿವೆ. ಈ ಗುಹೆಯಲ್ಲಿ ಶಿಲ್ಪಗಳಿಗೆ ಅಳವಡಿಸಿರುವ ಬೆಳಕು–ನೆರಳಿನ ಸಂಯೋಜನೆ ಇಲ್ಲಿಯ ವೈಶಿಷ್ಟ್ಯ.

ಎಲಿಫೆಂಟದ ಶಿಲ್ಪಗಳೆಲ್ಲವೂ ಶೈವಮತ ಸಂಬಂಧವಾದುವು. ದೊಡ್ಡ ಗುಹೆಯಲ್ಲಿ ಮುಂಬಾಗಿಲಿಗೆ ನೇರ ಎದುರಿನಲ್ಲಿರುವ ಮಹೇಶಮೂರ್ತಿಯೇ ಇಲ್ಲಿಯ ಪ್ರಧಾನಶಿಲ್ಪ. ಗುಹೆಯ ಹಿಂಗೋಡೆಯ ಮೇಲೆ ಮುಂಬಾಗಿಲಿಗೆ ನೇರ ಎದುರಾಗಿ ಕೆತ್ತಲಾಗಿರುವ ಈ ಶಿಲ್ಪ 21′ ಅಗಲವೂ 18′ ಎತ್ತರವೂ ಇದೆ. ಎದೆಯಿಂದ



ಮಹೇಶಮೂರ್ತಿ

ಮೇಲ್ಭಾಗ ಮಾತ್ರವೇ ಇರುವ ಈ ಶಿಲ್ಪದಲ್ಲಿ ಮಹೇಶ ತ್ರಿವದನನಾಗಿದ್ದು ಸೃಷ್ಟಿ, ಸ್ಥಿತಿ, ಲಯಗಳ ಸಮನ್ವಯದ್ಯೋತಕನಾಗಿದ್ದಾನೆ. ದೇವನ ಮೂರು ಮುಖಗಳಲ್ಲಿ ನೇರ ಎದುರಿನಲ್ಲಿರುವುದು ಶಿವನ ತತ್ಪುರುಷ ಅಥವಾ ಮಹಾದೇವತತ್ತ್ವದ ರೂಪ. ದೇವನ ದುಂಡುಮುಖ, ತುಂಬುಗಲ್ಲ, ಆಕೃಷ್ಟ ಚಿಬುಕ ಮತ್ತು ನಿಮೀಲಿತನೇತ್ರಗಳು ಅವನ ಶಾಂತ, ಗಂಭೀರ, ನಿರ್ವಿಕಾರ, ನಿರಾಮಯ ಸ್ವರೂಪವನ್ನು ವ್ಯಕ್ತಪಡಿಸುತ್ತಿವೆ. ಆದರೆ, ವಿಶಾಲವಾದ ಸ್ಕಂಧ, ಸ್ವಲ್ಪವೇ ಉಬ್ಬಿದ ನಯವಾದ ಎದೆ ಮತ್ತು ದಪ್ಪಕಂಠದಿಂದಾಗಿ ಇದೇ ದೇವ ಮಹಾಶಕ್ತಿಯನ್ನೇ ತನ್ನಲ್ಲಿ ಹುದುಗಿಸಿಕೊಂಡಿರುವಂತೆ ಕಾಣಿಸುತ್ತಾನೆ. ಎಡಗೈಯಲ್ಲಿ ಹಿಡಿದಿರುವ ತೊಟ್ಟು ಮೇಲಾದ ಬೀಜಪೂರಕ ಸಾಂಕೇತಿಕವಾಗಿ ಇದಕ್ಕೆ ಹೊಂದಿಕೊಳ್ಳುವಂತಿದೆ. ಮೂರ್ತಿಯ ಮುಖದ ಎರಡು ಕಡೆಗಳಲ್ಲೂ ಇರುವ ದೀರ್ಘ ಕರ್ಣಗಳು, ಮೇಲಿನ ಮಕುಟದ ತಳ ಮತ್ತು ಎದೆಯ ಮೇಲಿನ ಆಭರಣ, ಈ ದೈವಿಕ ಮುಖಕ್ಕೊಂದು ಚೌಕಟ್ಟನ್ನು ಒದಗಿಸಿದಂತಿದ್ದು ಆಕರ್ಷಣೆಯನ್ನು ವೃದ್ಧಿಸಿದೆ. ತಲೆಯ ಮೇಲಿರುವುದು ಜಲಾಮುಕುಟವಾದರೂ ಕೀರ್ತಿ ಮುಖ ಮತ್ತು ವಿವಿಧ ಆಭರಣಗಳಿಂದ ಅಲಂಕೃತವಾಗಿದ್ದು, ಅಲ್ಲಿಯ ಪ್ರತಿ ಅಂಗುಲದಲ್ಲೂ ಕುಸುರಿಯ ಕೌಶಲವನ್ನು ಕಾಣಬಹುದಾಗಿದೆ. ಈ ಅತ್ಯಲಂಕರಣ ನಯವಾದ ಮುಖದ ಸಹಜತೆಯನ್ನು ಎಳ್ಳಷ್ಟೂ ಕುಂದಿಸದೆ, ಮುಖದಲ್ಲಿ ವ್ಯಕ್ತವಾಗಿರುವ ದೈವಿಕ ಕಳೆಯನ್ನೆಲ್ಲ ಕ್ರೋಡೀಕರಿಸಿ ಮೇಲೆದ್ದು ಸುತ್ತಲೂ ಪಸರಿಸುತ್ತಿದೆಯೇನೊ ಎಂಬ ಭಾವವನ್ನು ಹುಟ್ಟಿಸುತ್ತದೆ. ಎಡ ಬಲಗಡೆಯ ಮುಖಗಳು ಒಂದು ಪಕ್ಕಕ್ಕೆ ತಿರುಗಿಕೊಂಡಿರುವಂತೆ ಇವೆ. ಬಲಗಡೆಯ ಮುಖ ಶಿವನ ಅಘೋರ ಅಥವಾ ಭೈರವ ತತ್ತ್ವದ ಪ್ರತಿರೂಪ. ದಪ್ಪ ತುಟಿಗಳು, ತಿರುವಿದ ಮೀಸೆ, ಕೋಪದಿಂದ ಊದಿದಂತಿರುವ ಕಣ್ಣುಗಳು ಮುಂಚಾಚಿದ ಗಡ್ಡವುಳ್ಳ ಚಿಬುಕ ಇವು ಶಿವನ ಘೋರ ರೌದ್ರಭಾವವನ್ನು ತೋರಿಸಿವೆ. ಇವಕ್ಕೆ ಪೂರಕವಾಗಿ ಸರ್ಪ ಮತ್ತು ರುಂಡದಿಂದಲಂಕೃತವಾದ ದಪ್ಪ ಜಟೆಗಳಿಂದ ಹೆಣೆಯಲಾಗಿರುವ ಮುಕುಟ, ಇಳಿಬಿದ್ದ ಜಟೆಗಳು ಇವೆ. ಧರಿಸಿರುವ ಸರ್ಪಾಭರಣ ಮತ್ತು ಬಲಗೈಯಲ್ಲಿ ಹಿಡಿದೆತ್ತಿರುವ ದಪ್ಪ ಸರ್ಪ ಘೋರತೆಯನ್ನು ಮತ್ತಷ್ಟು ವರ್ಧಿಸಿವೆ. ಎಡಭಾಗದಲ್ಲಿರುವ ಮುಖ ತದ್ವಿರುದ್ಧವಾದುದು. ಇದು ವಾಮದೇವ ಅಥವಾ ಉಮಾ ತತ್ತ್ವದ ಪ್ರತೀಕ. ಇಲ್ಲಿ ಕೋಮಲತೆಯೇ ಶಿಲ್ಪವಾಗಿದೆ. ನಯವಾದ ಸ್ವಲ್ಪವೇ ಉಬ್ಬಿದ ಕೆನ್ನೆ, ನೇರ ಎಸಳುಮೂಗು, ದಪ್ಪ ರಾಗಪೂರಿತ ತುಟಿ ಮತ್ತು ನಿಮೀಲಿತ ನೇತ್ರ—ಇವು ಅಪೂರ್ವ ಶೋಭೆಯನ್ನಿತ್ತಿವೆ. ಕಿವಿಯಲ್ಲಿನ ಪತ್ರಾಭರಣ, ಕೆನ್ನೆಯಮೇಲೆ ಇಳಿಬೀಳುತ್ತಿರುವ ಗುಂಗುರು ಕೂದಲು, ಮಣಿಹಾರ, ಪದಕ, ಪುಷ್ಪಗಳಿಂದಲಂಕೃತವಾದ ಮಕುಟ ಮತ್ತು ಕೈಯಲ್ಲಿ ಹಿಡಿದಿರುವ ಕಮಲಗಳು ಈ ಕೋಮಲ ಸೌಂದರ್ಯ ಭಾವವನ್ನು ಮತ್ತಷ್ಟು ಉಕ್ಕಿಸುತ್ತವೆ. ಒಂದೇ ಮೂರ್ತಿಯಲ್ಲಿ ವಿವಿಧ ರಸಭಾವಗಳನ್ನು ಒಂದಕ್ಕೊಂದು ಪೋಷಕವಾಗುವಂತೆ ಸೆರೆಹಿಡಿದಿರುವ ಜಾಣ್ಮೆ, ಶಿಲ್ಪದ ಸ್ಫುಟ ಪ್ರಮಾಣ ಮತ್ತು ಚತುರ ಅಲಂಕರಣದಿಂದಾಗಿ ಈ ಮಹೇಶಮೂರ್ತಿಶಿಲ್ಪ ಲೋಕ ಪ್ರಸಿದ್ಧವಾಗಿದೆ.

ಇಂಥ ಒಂದು ಅಪೂರ್ವ ಶಿಲ್ಪವನ್ನು ಕಡೆಯಲು ಆರಿಸಿರುವ ಸ್ಥಳ ಮತ್ತು ಕೆತ್ತಿರುವ ರೀತಿ ಸಹ ಗಮನಾರ್ಹವಾದುದು. ಹಿಂಭಾಗದ ಗೋಡೆಯಲ್ಲಿ ಸುಮಾರು 10′ ಗಳಷ್ಟು ಒಳಸರಿದಂತಿರುವ 21′ ಅಗಲದ ಕೋಷ್ಠದಲ್ಲಿ ನೆಲದಿಂದ ಮೇಲಿನವರೆಗೂ ಹಬ್ಬಿದಂತೆ ಉಬ್ಬುಶಿಲ್ಪವಾಗಿ ಇದನ್ನು ಕೆತ್ತಲಾಗಿದೆ. ಉಬ್ಬುಶಿಲ್ಪವಾದರೂ ಪೂರ್ಣಶಿಲ್ಪದಂತೆಯೇ ಭಾಸವಾಗುತ್ತದೆ. ಯಾವ ಕೆತ್ತನೆಯೂ ಇಲ್ಲದ ಹಿಂಭಾಗದ ಗೋಡೆ ಶಿಲ್ಪಕ್ಕೆ ಒಂದು ವಿಶಾಲವಾದ ಹಿನ್ನೆಲೆಯನ್ನು ಒದಗಿಸುತ್ತದೆ. ಶಿಲ್ಪ ಗೋಡೆಯಿಂದ ಸ್ವಲ್ಪ ಒಳಸರಿದಂತಿರುವುದರಿಂದ ಇದರ ಮೇಲೆ ಹೆಚ್ಚು ಬೆಳಕು ಬೀಳುವುದಿಲ್ಲ. ಪಕ್ಕದಿಂದ ಕಂಬಗಳ ಮಧ್ಯೆ ತೂರಿಬರುವ ಅಲ್ಪಸ್ವಲ್ಪ ಬೆಳಕು ಸಹ ಶಿಲ್ಪಕ್ಕೆ ಪೂರ್ಣವಾಗಿ ಹರಡದೆ ಮಧ್ಯ ಮುಖದ ಮೇಲಷ್ಟೇ ಕೇಂದ್ರೀಕೃತವಾಗಿ, ಅದರ ಸೌಂದರ್ಯವನ್ನೂ ಪ್ರಭಾವವನ್ನೂ ಆಕರ್ಷಣೆಯನ್ನೂ ಮತ್ತಷ್ಟು ಹೆಚ್ಚಿಸುತ್ತದೆ. ಈ ಶಿಲ್ಪ ಮುಂಬಾಗಿಲಿಗೆ ನೇರ ಎದುರಿಗಿದ್ದರೂ ಅಲ್ಲಿಂದ ಸುಮಾರು 120′ ಗಳಷ್ಟು ಒಳಗಿರುವುದರಿಂದ ಬಿಸಿಲಿನ ಕಾಲದಲ್ಲೂ ಇಲ್ಲಿ ಬೀಳುವ ಬೆಳಕು ಅಷ್ಟು ಪ್ರಖರವಾಗೇನೂ ಇರುವುದಿಲ್ಲ. ಆದರೆ ಈ ಅರೆ ಬೆಳಕಿನ ಸ್ಥಿತಿಯೇ ಈ ಶಿಲ್ಪವನ್ನು ನೋಡುವವರ ಮೇಲೆ ಒಂದು ಅಸಾಧಾರಣ ಪರಿಣಾಮವನ್ನು ಉಂಟುಮಾಡುತ್ತದೆ. ಹೊರ ಬಿಸಿಲಿನಿಂದ ಬಂದು ಬಾಗಿಲ ಬಳಿ ನಿಂತರೆ ಒಳಗೆ ಕಾಣುವುದು ಗಾಢಾಂಧಕಾರ ಅಷ್ಟೇ. ಆದರೆ ದೃಷ್ಟಿಯನ್ನು ಈ ಶಿಲ್ಪದ ದಿಶೆಯಲ್ಲಿ ಸ್ವಲ್ಪಕಾಲ ಕೇಂದ್ರೀಕರಿಸಿದರೆ ಮಸಕು ಮಸಕಾಗಿ ರೂಪಗೊಳ್ಳುತ್ತಿರುವ ಮೂರ್ತಿ ಆಗತಾನೇ ಪೃಥ್ವೀಗರ್ಭದಿಂದ ಎದ್ದುಬರುತ್ತಿರುವುದೋ ಎಂದು ಭಾಸವಾಗುತ್ತದೆ. ಕೆಲವು ಕ್ಷಣದಲ್ಲೇ ಮಹಾದೇವನ ಹಸನ್ಮುಖ ಸ್ಪಷ್ಟವಾಗುತ್ತ ಬರುತ್ತದೆ. ನಿಧಾನವಾಗಿ ದೇವನ ಅಘೋರ, ವಾಮದೇವ ಮುಖಗಳು ಸ್ಫುಟವಾಗಿ ಕಾಣತೊಡಗಿ ಮಹಾದೇವನ ವಿರಾಟಸ್ವರೂಪದ ದರ್ಶನವಾಗುತ್ತದೆ.

ಈ ಮಹಾದೇವನನ್ನು ಸೃಷ್ಟಿಸಿದ ಶಿಲ್ಪಿಯ ಕೌಶಲ ಮತ್ತು ತಪಸ್ಸಿದ್ಧಿ ಇಲ್ಲಿಯ ಇತರ ಶಿಲ್ಪಗಳಲ್ಲೂ ಕಂಡುಬರುತ್ತದೆ. ದ್ವಾರಪಾಲಕ ವಿಗ್ರಹಗಳನ್ನು ಬಿಟ್ಟರೆ ಇಲ್ಲಿಯ ಮುಖ್ಯ ಶಿಲ್ಪಗಳು ಎಂಟು ಮಾತ್ರ. ಇವೆಲ್ಲ ಶಿವಲೀಲಾಮೂರ್ತಿಗಳು.

ಹುಟ್ಟಿದವನು. 17ನೆಯ ಶತಮಾನದಲ್ಲಿ ಇಂಗ್ಲೆಂಡಿನಿಂದ ಬಾಸ್ಟನ್ನಿಗೆ ವಲಸೆ ಹೋಗಿದ್ದರು. ವಿದ್ಯಾಭ್ಯಾಸಕ್ಕಾಗಿ (1906) ಹಾರ್ವರ್ಡ್‌ನಲ್ಲಿ ಸಾಹಿತ್ಯ



ಮತ್ತು ದರ್ಶನಶಾಸ್ತ್ರಗಳನ್ನು ಆಳವಾಗಿ ಅಭ್ಯಾಸ ಮಾಡಿದ. 1915ರಲ್ಲಿ ಪ್ರಯಾಣ ವೇತನ ಸಿಗಲಾಗಿ ಜರ್ಮನಿಗೆ ಹೋಗಿ ಬಂದು ಆಕ್ಸ್‌ಫರ್ಡಿನಲ್ಲಿ ಪುನಃ ದರ್ಶನ ಶಾಸ್ತ್ರದ ವ್ಯಾಸಂಗ ಮಾಡಿದ. ವಿವಾಹವಾಗಿ (1915) ಇಂಗ್ಲೆಂಡಿನಲ್ಲಿ ನೆಲಸಿದ. ಶಾಲಾಧ್ಯಾಪಕನಾಗಿ, ಬ್ಯಾಂಕ್ ಗುಮಾಸ್ತೆಯಾಗಿ ಕೆಲಕಾಲ ಕೆಲಸ ಮಾಡಿದ. ಸಂಕೇತ ಪಂಥದ ಈಗೋಯಿಸ್ಟ್ ಪತ್ರಿಕೆಯ ಸಹಸಂಪಾದಕನಾಗಿ (1917) ದುಡಿದು, ಸಾಹಿತ್ಯ ಮತ್ತು ದರ್ಶನಗಳಿಗೆ ಮೀಸಲಾದ ನಿಯತಕಾಲಿಕವೊಂದನ್ನು ಆರಂಭಿಸಿ ಅದರ ಸಂಪಾದಕನಾಗಿ ಕೆಲಸ ಮಾಡಿದ. ಮೊದಲು ಕ್ರೈಟೀರಿಯನ್ ಎಂದೂ ಅನಂತರ ನ್ಯೂ ಕ್ರೈಟೀರಿಯನ್ ಎಂದೂ ಕರೆಯಲಾದ ಈ ಪತ್ರಿಕೆ ಸುಮಾರು ಹತ್ತು ವರ್ಷಗಳ ಕಾಲ ಬಹು ಪ್ರಸಿದ್ಧವೆನಿಸಿತು. 1925ರಿಂದ ಕೊನೆಯವರೆಗೂ ಫೇಬರ್ ಅಂಡ್ ಫೇಬರ್ ಪ್ರಕಟನಾಲಯದ ನಿರ್ದೇಶಕರಲ್ಲೊಬ್ಬನಾಗಿ ಕೆಲಸ ಮಾಡಿದ. ಎಜ್ರಾ ಪೌಂಡ್ ಮೊದಲಾದ ಫ್ರಾನ್ಸಿನ ಸಂಕೇತ ಪಂಥದ ಕೆಲವರು ಕವಿಗಳಿಂದ ತುಂಬ ಪ್ರಭಾವಿತನಾದ. ಪ್ರಥಮ ಕವನ ದಿ ಲೌವ್ ಸಾಂಗ್ ಆಫ್ ಆಲ್‌ಫ್ರೆಡ್ ಪ್ರುಫ್ರಾಕ್ ಎಂಬ ವಿಡಂಬನ ಕವಿತೆ ಮೊದಲು ಪತ್ರಿಕೆಯಲ್ಲೂ (1915) ಅನಂತರ ಬೇರೆ ಕೆಲವು ಕವನಗಳೊಡನೆ ಪುಸ್ತಕವಾಗಿಯೂ ಪ್ರಕಟವಾಯಿತು (1917). 1919ರಲ್ಲಿ ಪೋಯಮ್ಸ್ ಎಂಬ ಗ್ರಂಥ ಹೊರಬಂತು. ಎಲ್ಲವೂ ಒಟ್ಟಾಗಿ 1920ರಲ್ಲಿ ಪುನರ್ಮುದ್ರಿತವಾದುವು. ಎಲಿಯಟ್‌ನ ಈ ಕವನಗಳಲ್ಲೆಲ್ಲ ಸಮಕಾಲೀನ ನಗರ ಜೀವನದ ಹರಿತವಾದ ವಿಮರ್ಶೆ, ವಿಡಂಬನೆಗಳು ಪಾತ್ರಗಳ ಮೂಲಕ ನಾಟಕೀಯವಾಗಿ ವ್ಯಕ್ತವಾಗಿವೆ. ಈ ವಿಡಂಬನೆ ದಿ ವೇಸ್ಟ್ ಲ್ಯಾಂಡ್‌ನಲ್ಲಿ (1922) ತನ್ನ ಶಿಖರ ಮುಟ್ಟಿದೆ. ಉಜ್ವಲ ಪ್ರತಿಮೆಗಳ ಮಾಲಿಕೆಯ ಮೂಲಕ ಯುದ್ಧೋತ್ತರ ಯೂರೋಪಿನ ಭಗ್ನಜೀವನವನ್ನು ಚಿತ್ರಿಸುವ ಈ ಕವನಕ್ಕೆ 2000 ಡಾಲರುಗಳ ಡಯಲ್ ಬಹುಮಾನ ದೊರೆಯಿತು. ಅರಿಸ್ಟೋಫೆನೀಸನ ಮಾದರಿಯದೆಂದು ಹೇಳಲಾದ ಅಪೂರ್ಣನಾಟಕವೊಂದರ (ಮೆಲೊಡ್ರಾಮ) ಭಾಗಗಳಾದ ದಿ ಹಾಲೊ ಮೆನ್ ಮತ್ತು ಸ್ವೀನಿ ಅಗೊನಿಸ್ಟಸ್ ಎಂಬುವು ಕ್ರೈಟೀರಿಯನ್ ಪತ್ರಿಕೆಯಲ್ಲಿ ಬೆಳಕು ಕಂಡವು. ದಿ ಜರ್ನಿ ಆಫ್ ದಿ ಮಾಗಿ (1917), ಎ ಸಾಂಗ್ ಫಾರ್ ಸಿಮಿಯೋನ್ (1928) ಮತ್ತು ಅನಿಮುಲಾಗಳು (1929) ಪುಸ್ತಕಗಳಲ್ಲಿ ಪ್ರಕಟಗೊಂಡುವು. ಬಾಳಿನ ಒಳಿತು ಕೆಡಕುಗಳ ಬಗ್ಗೆ ಮತ್ತು ಶ್ರದ್ಧೆ ನಷ್ಟತೆಗಳ ಮೂಲಕ ಪ್ರಸ್ತುತ ಜೀವನದ ಪಾಳು ಭೂಮಿಯಿಂದ ಪಾರಾಗುವ ಬಗ್ಗೆ ಕವಿ ನಡೆಸಿರುವ ದೀರ್ಘ ಚಿಂತನೆ ಆಷ್ ವೆಡ್‌ನೆಸ್‌ಡೆ (1930) ಕವನದಲ್ಲಿ ಕಲಾತ್ಮಕವಾಗಿ ರೂಪುಗೊಂಡಿದೆ. ಬೇರೆ ಬರೆದಿಟ್ಟ ಕೆಲವು ಪದ್ಯದ ತುಣುಕುಗಳನ್ನು ಒಟ್ಟಿಗೆ ಪರಿಭಾವಿಸಿದಾಗ ಬೇರೊಂದು ಅರ್ಥ ಹೊಳೆದು ಈ ಕವನ ರೂಪುಗೊಂಡಿತು. ರೋಮನ್ ಕೆಥೊಲಿಕ್ ಧರ್ಮಕ್ಕೆ ಸೇರಿದ ಎಲಿಯಟ್ ತಾನು ಸಾಹಿತ್ಯದಲ್ಲಿ ಪ್ರಾಚೀನ ಸಂಪ್ರದಾಯದವನೆಂದೂ ರಾಜಕೀಯದಲ್ಲಿ ರಾಜಪಕ್ಷದವನೆಂದೂ ಧರ್ಮದಲ್ಲಿ ರೋಮನ್ ಕೆಥೊಲಿಕನೆಂದೂ ಸಾರಿದ. ಈ ಘೋಷಣೆಗೆ ಮುಂಚೆ ಬಂದ ಕವನಗಳು ಇದರ ಪೂರ್ವಭಾವಿ ಸಿದ್ಧತೆ ಎಂಬಂತಿವೆ. ದಿ ಲೌವ್ ಸಾಂಗ್ ಆಫ್ ಆಲ್ಫ್ರೆಡ್ ಪ್ರುಫ್ರಾಕ್ ಮತ್ತು ದಿ ವೇಸ್ಟ್ ಲ್ಯಾಂಡ್‌ಗಳು ಧರ್ಮಸಂಪ್ರದಾಯಗಳಿಲ್ಲದ ಸಮಾಜದಲ್ಲಿ ಜೀವನ ವಿಫಲತೆ ನಿರಾಶೆಗಳಿಗೆ ಹೇಗೆ ಬಲಿಯಾಗುತ್ತದೆಂಬುದನ್ನು ತೋರಿಸುತ್ತವೆ. ಪರೋಕ್ಷವಾಗಿ ಸೂಚಿಸಿದ ಜಗತ್ತಿನ ಚಿತ್ರ ದಿ ವೇಸ್ಟ್ ಲ್ಯಾಂಡ್‌ನಲ್ಲಿದೆ. ಫೋರ್ ಕ್ವಾರ್ಟೆಟ್ಸ್ ಎಲಿಯಟ್ಟನ ಕಾವ್ಯಸಿದ್ಧಿಯ ನಿದರ್ಶನವೆನ್ನಬಹುದು. ಕವಿಯ ಪೂರ್ವಜರಿಗೆ ಸಂಬಂಧಿಸಿದ್ದು ಕವಿಗೆ ಧ್ಯಾನವಸ್ತುಗಳಾದ ನಾಲ್ಕು ಪ್ರದೇಶಗಳ ಹೆಸರನ್ನು ಈ ಕೃತಿಯ ನಾಲ್ಕು ಭಾಗಗಳಿಗೆ ಕೊಡಲಾಗಿದೆ. ಮಾನವ ಜೀವನದಲ್ಲಿ ಕಾಲದ ಅರ್ಥ ಮತ್ತು ನಿತ್ಯತೆಗೆ ಅದರೊಡನಿರುವ ಸಂಬಂಧವನ್ನು ಕುರಿತು ಎಲಿಯಟ್ ಸಂಯಮ ಪೂರ್ಣವಾದ ಚಿಂತನೆ ನಡೆಸಿರುವುದು ಈ ಕೃತಿಯಲ್ಲಿ ಕಾಣುತ್ತದೆ. ಗತಪರಂಪರೆಯ ಪುನರ್ಶೋಧನೆ ಮತ್ತು ಅದರೊಡನೆ ಸ್ನೇಹಸ್ಥಾಪನೆಗೆ ನಡೆಸಿದ ಚತುರ್ಯಾತ್ರೆಗಳೆಂದು ವಿಮರ್ಶಕರು ಇದನ್ನು ಬಣ್ಣಿಸಿದ್ದಾರೆ.

ಎಲಿಯಟ್ಟನ ಬೃಹತ್ ಸಾಧನೆಗಳ ದೃಷ್ಟಿಯಿಂದ ಗೌಣವಾದರೂ ಪ್ರಕೃತ ಹೆಸರಿಸಲು ಯೋಗ್ಯವಾದ ಗ್ರಂಥವೆಂದರೆ ಓಲ್ಡ್ ಪೋಸಮ್ಸ್ ಬುಕ್ ಆಫ್ ಪ್ರಾಕ್ಟಿಕಲ್ ಕ್ಯಾಟ್ಸ್ (1939). ಇದರಲ್ಲಿ ಮಕ್ಕಳಿಗಾಗಿ ಬಹು ಸುಲಭ ಶೈಲಿಯಲ್ಲಿ ಬರೆದ ಕವನಗಳಿವೆ.

ಎಲಿಯಟ್‌ನ ಮೊದಲ ಕವನಗಳು ರಮ್ಯ ಕಾವ್ಯಪಂಥದಿಂದ ತೀರ ಭಿನ್ನವಾದ ಹಾದಿಯನ್ನು ಹಿಡಿದಿದ್ದು ಹೊಸ ಕಾವ್ಯವಿಧಾನವನ್ನೇ ರೂಪಿಸಿದುವು. ಅತಿ ಬಳಕೆಯಿಂದ ನಿರ್ಜೀವವಾಗಿದ್ದ ಕಾವ್ಯ ಭಾಷೆಯನ್ನು ಎಲಿಯಟ್ ಹೊಸ ರಚನೆ ಮತ್ತು ಪ್ರತಿಮೆಗಳ ಬಳಕೆಯಿಂದ ವೀರ್ಯವತ್ತಾಗಿ ಮಾಡಿ ಅದರ ಅಭಿವ್ಯಕ್ತಿಯನ್ನೇ ತಿದ್ದಿದ. ತಾನೇ ರೂಪಿಸಿದ ವಿಮರ್ಶಾ ಸೂತ್ರಗಳಿಗೆ ಮಾದರಿಯೆಂಬಂತೆ ಕಾವ್ಯರಚನೆ ಮಾಡಿದ. ಸಮಕಾಲೀನ ಸಾಹಿತ್ಯ ಇವನ ಕೃತಿಗಳಿಂದ ತೀರ ಪ್ರಭಾವಿತವಾಗಿದೆ. ಎಲಿಯಟ್‌ನ ಎಲ್ಲ ಕವನಗಳೂ ಪರಂಪರೆ, ಧರ್ಮ, ಜೀವನಗಳ ಮೌಲ್ಯಗಳನ್ನು ಆಧರಿಸಿ ಸೃಷ್ಟಿಸಿದ ಕಲಾತ್ಮಕ ಕೃತಿಗಳಾಗಿದ್ದು ಇಂಗ್ಲಿಷ್ ಸಾಹಿತ್ಯಕ್ಕೆ ಅಮೂಲ್ಯ ಕೊಡುಗೆಗಳಾಗಿವೆ.

ಸಾಹಿತ್ಯಕ್ಕೆಂದು ಎಲಿಯಟ್‌ನಿಗೆ ನೊಬೆಲ್ ಪುರಸ್ಕಾರ ಕೊಡಲಾಯಿತು (1948). ಅದೇ ವರ್ಷ ಆರ್ಡರ್ ಆಫ್ ಮೆರಿಟ್ ಪುರಸ್ಕಾರವೂ ದೊರೆಯಿತು. ಹಾರ್ವರ್ಡ್, ಯೇಲ್, ಪ್ರಿನ್ಸ್‌ಟನ್, ಕೇಂಬ್ರಿಜ್, ಎಡಿನ್‌ಬರೊ, ಬ್ರಿಸ್ಟಲ್, ಲೀಡ್ಸ್ ಮೊದಲಾದ ವಿಶ್ವವಿದ್ಯಾನಿಲಯಗಳು ಇವನಿಗೆ ಡಾಕ್ಟರೇಟ್ ಪದವಿಯಿತ್ತು ಗೌರವಿಸಿದುವು.

(ಎಚ್.ಎಸ್.ಎಲ್.)

ಇಪ್ಪತ್ತನೆಯ ಶತಮಾನದ ನಾಲ್ಕನೆಯ ದಶಕದಲ್ಲಿ ಇಂಗ್ಲೆಂಡಿನಲ್ಲಿ ಪುನರುಜ್ಜೀವನಗೊಂಡ ಪದ್ಯನಾಟಕಗಳ ಕ್ಷೇತ್ರದಲ್ಲಿ ಪ್ರಧಾನ ಪಾತ್ರ ಎಲಿಯಟ್‌ನದು. ಪದ್ಯನಾಟಕಗಳ ವೈಶಿಷ್ಟ್ಯವನ್ನು ಎಲಿಯಟ್ ಹಲವು ಪ್ರಬಂಧಗಳಲ್ಲಿ ವಿಮರ್ಶಿಸಿದ್ದಾನಲ್ಲದೆ ತನ್ನ ಉದ್ದೇಶ, ಮಾರ್ಗ ಮತ್ತು ಪ್ರಯೋಗಗಳನ್ನೂ ಪೃಥಕ್ಕರಿಸಿದ್ದಾನೆ. ಎ ಡಯಲಾಗ್ ಆನ್ ಡ್ರಮೆಟಿಕ್ ಪೊಯಟ್ರಿ, ಆನ್ ಪೊಯಟ್ರಿ ಅಂಡ್ ಪೊಯಟ್ಸ್, ಪೊಯಟ್ರಿ ಅಂಡ್ ಡ್ರಾಮ ಎಂಬ ವಿಮರ್ಶೆಗಳಲ್ಲೂ ಈತ ಮಾಡಿದ ಒಂದು ರೇಡಿಯೋ ಭಾಷಣ (1936) ಮತ್ತು ಎಲಿಜಬೆತ್ ಯುಗದ ನಾಟಕಕಾರರ ಮೇಲಿನ ಪ್ರಬಂಧಗಳಲ್ಲೂ—ಈ ಬಗ್ಗೆ ಎಲಿಯಟ್ಟನಿಗಿದ್ದ ಧೋರಣೆಯನ್ನು ಕಾಣಬಹುದು. ನಾಟಕಕ್ಕೆ ಪದ್ಯಮಾಧ್ಯಮ ಅಲಂಕಾರಕ್ಕೆಂದು ಕೃತಕವಾಗಿ ತೊಡಿಸಿದ ಒಡವೆಯಲ್ಲ. ನಾಟಕದ ಕ್ರಿಯೆಯ ಕ್ರಮಕ್ಕೆ (ಪ್ಯಾಟರ್ನ್) ಗಹನತೆಯನ್ನು ನೀಡಬಲ್ಲ ಇನ್ನೊಂದು ಕ್ರಮವನ್ನು ಸೂಚಿಸುವುದೇ ಪದ್ಯಮಾಧ್ಯಮದ ಸಾರ್ಥಕ್ಯ. ಈ ಎರಡು ಕ್ರಮಗಳೂ ಒಂದರೊಡನೊಂದು ಬೆಸೆದುಕೊಂಡಿರಬೇಕು ಎಂಬುದು ಈತನ ದೃಷ್ಟಿ. ಎಲಿಯಟ್‌ನ ಪದ್ಯನಾಟಕಗಳು ಈ ದೃಷ್ಟಿಯ ಅಭಿವ್ಯಕ್ತಿ ಎನ್ನಬಹುದು.

ಸ್ವೀನಿ ಅಗೊನಿಸ್ಟಸ್ (1932) ಮತ್ತು ದಿ ರಾಕ್ (1934) ಎಂಬೆರಡು ಕೃತಿಗಳು ಈ ಕ್ಷೇತ್ರದಲ್ಲಿ ಪ್ರಯೋಗಗಳು. ಎಲಿಯಟ್‌ನ ಕೈ ಪದ್ಯನಾಟಕಗಳನ್ನು ಬರೆಯುವುದರಲ್ಲಿ ಪಳಗಿರುವುದು ಮರ್ಡರ್ ಇನ್ ದಿ ಕೆಥೆಡ್ರಲ್‌ನಲ್ಲಿ (1935)

ನಿಸ್ಸಂದೇಹವಾಗಿ ಕಾಣುತ್ತದೆ. ಕ್ಯಾಂಟರ್‌ಬರಿ ಉತ್ಸವದ ಸಮಯದಲ್ಲಿ ಅಭಿನಯಕ್ಕಾಗಿ ರಚಿಸಿದ ಈ ಕೃತಿಯಲ್ಲಿ ಧಾರ್ಮಿಕ ವಿಧಿಯ ವಾತಾವರಣವನ್ನು ಅದ್ಭುತವಾಗಿ ಬಳಸಿಕೊಂಡಿದ್ದಾನೆ, ನಾಟಕಕಾರ. 1170ರಲ್ಲಿ ರಾಜಭಟರಿಂದ ಸಂತ ಥಾಮಸ್ ಬೆಕೆಟ್ ಕೊಲೆಯಾದುದು ನಾಟಕದ ಕಥಾವಸ್ತು. ದೇವಾಲಯದಲ್ಲಿ ಅಭಿನಯಿಸಲೆಂದೇ ರಚಿತವಾದ ಈ ಕೃತಿಯಲ್ಲಿ ಪ್ರೇಕ್ಷಕರು ನಾಟಕದ ಕ್ರಿಯೆಯಲ್ಲಿ—ಧಾರ್ಮಿಕ ವಿಧಿಯಲ್ಲಿ ಭಾಗವಹಿಸುವಂತೆ ಭಾಗಿಗಳಾಗಿ ರಸಾತ್ಮಕ ಅನುಭವವನ್ನು ಪಡೆಯುತ್ತಾರೆ. ಭಾಷೆಯ ಗಾಂಭೀರ್ಯ ಮತ್ತು ಬಿಗುಮಾನ ಇದಕ್ಕೆ ಹೊಂದಿಕೊಳ್ಳುತ್ತದೆ. ಇದರ ಮುಂದಿನ ನಾಟಕ ದಿ ಫ್ಯಾಮಿಲಿ ರೀಯೂನಿಯನ್ (1939) ಎಂಬುದು ನಾಟಕಕಾರನ ಸಮಕಾಲೀನ ಭಾಷೆಯನ್ನಾಡುವ ಸಮಕಾಲೀನ ಜನರನ್ನು ಕುರಿತ ನಾಟಕ. ಇದರ ನಾಯಕ ತರುಣ ಶ್ರೀಮಂತ ಹ್ಯಾರಿ, ಲಾರ್ಡ್ ಮಾನ್‌ಚೆನ್ಸಿ ತನ್ನ ಹೆಂಡತಿಯನ್ನು ಕೊಲೆಮಾಡಿರುವನೆಂಬ ನಂಬಿಕೆಯಿಂದ ಜೀವನದಲ್ಲಿ ಬೇಸರಗೊಂಡಿದ್ದಾನೆ. ಪ್ರಾಚೀನ ಗ್ರೀಕರ ನಾಟಕಗಳಲ್ಲಿನಂತೆ ಪ್ರತೀಕಾರ ದೇವತೆಗಳು ಅವನನ್ನು ಬೆನ್ನಟ್ಟುತ್ತಾರೆ. ತನ್ನ ಚಿಕ್ಕಮ್ಮ ಅಗಾಥಳಿಂದ ಅವನಿಗೆ ಇವರು ಪರಿಶುದ್ಧತೆಯ ದೇವತೆಗಳು ಅಹುದು ಎನ್ನುವ ಅರಿವಾಗುತ್ತದೆ. ಇಲ್ಲಿ ಸಾಮಾನ್ಯ ಜನದ ವ್ಯವಹಾರಜಗತ್ತನ್ನೂ ಅಗಾಥಳ ಆಧ್ಯಾತ್ಮಿಕ ಜಗತ್ತನ್ನೂ ಸೃಷ್ಟಿಸುತ್ತಾನೆ, ಎಲಿಯಟ್. ಹಾಗೆ ಮಾಡುವಲ್ಲಿ ಶೈಲಿಯ ಶ್ರೀಮಂತಿಕೆಯನ್ನೂ ಕಾವ್ಯಗುಣವನ್ನೂ ಕಡಿಮೆ ಮಾಡುತ್ತಾನೆ. ಪಾಪ ಕೃತ್ಯಕ್ಕಿಂತ ಪಾಪದ ಅರಿವನ್ನು ನಿರೂಪಿಸಲು ಹೊರಟುದರಿಂದ ಇಲ್ಲಿ ಕ್ರಿಯೆ ತಕ್ಕಷ್ಟು ನಿಷ್ಕೃಷ್ಟವಾಗಿಲ್ಲ. ದಿ ಕಾಕ್‌ಟೇಲ್ ಪಾರ್ಟಿಯಲ್ಲಿ (1951) ಒಬ್ಬರಿಂದೊಬ್ಬರು ದೂರವಾದ ಗಂಡ ಹೆಂಡತಿಯರು ಮನೋರೋಗವೈದ್ಯನೊಬ್ಬನ ಮಾರ್ಗದರ್ಶನದಿಂದ ಮತ್ತೆ ಒಟ್ಟಾಗಿ ಬಾಳಲು ಕಲಿಯುತ್ತಾರೆ. ಇಬ್ಬರೂ ತಮ್ಮ ಕನಸುಗಳನ್ನು ಬಿಟ್ಟು ತಮ್ಮ ವ್ಯಕ್ತಿತ್ವಗಳ ಮಿತಿಯಲ್ಲಿ ಬಾಳುವುದನ ರಿತರೆ ತೃಪ್ತಿಯನ್ನು ಕಂಡುಕೊಳ್ಳಬಹುದೆಂಬ ಅರಿವು ಬರುತ್ತದೆ. ಈ ನಾಟಕ ಫ್ಯಾಮಿಲಿ ರೀಯೂನಿಯನ್‌ಗಿಂತ ಯಶಸ್ವಿ ಎನಿಸಿದೆ. ನಾಟಕಕಾರ ಪ್ರೇಕ್ಷಕರ ಆಸಕ್ತಿಯನ್ನು ಉಳಿಸಿಕೊಂಡು ಬರುವ ಮತ್ತು ಅವರನ್ನು ವಿನೋದಗೊಳಿಸಬಲ್ಲ ಘಟನೆಗಳೊಂದಿಗೆ ಸಮಕಾಲದ ಜೀವನದ ಸಮಸ್ಯೆಗಳ ಗಂಭೀರ ಪೃಥಕ್ಕರಣೆಯನ್ನು ಬೆರೆಸುವುದರಲ್ಲಿ ಯಶಸ್ವಿಯಾಗಿದ್ದಾನೆ. ನಾಯಕ ಭಗವದಿಚ್ಛೆಯನ್ನೂ ಸೂಚಿಸುತ್ತಾನೆ. ಧಾರ್ಮಿಕ ವಿಧಿಗಳ ವಾತಾವರಣವನ್ನು ಇಲ್ಲಿಯೂ ಕಾಣಬಹುದು. ಈ ಕಥೆಯ ಮೂಲ ಯುರಿಪಿಡೀಸ್‌ನ ಆಲ್ಸೆಸ್ಟಿಸ್ ಎಂದು ಎಲಿಯಟ್ ಹೇಳಿದ್ದಾನೆ. ಇದರಲ್ಲಿ ಅಲ್ಲಲ್ಲಿ ಹೃದಯಸ್ಪರ್ಶಿಯಾದ ವಾಗ್ಮಿತೆಯುಳ್ಳ ಭಾಗಗಳುಂಟು. ಶೈಲಿ ಸಮಕಾಲೀನ ವಿದ್ಯಾವಂತರ ದೈನಿಕ ಜೀವನದ ಭಾಷೆಗೆ ಬಹುದೂರವಿಲ್ಲ. ದಿ ಕಾನ್ಫಿಡೆನ್ಷಿಯಲ್ ಕ್ಲರ್ಕ್‌ನ (1953) ವಸ್ತು ಜಟಿಲವಾದುದು. ತನ್ನ ತಂದೆ ಯಾರೆಂದು ಅರಿಯದ ಯುವಕ ಕಾಲ್‌ಬಿ ಸಿಮ್‌ಕಿನ್ಸ್ ಇದರ ಕೇಂದ್ರ ವ್ಯಕ್ತಿ. ಕಥೆಯ ತಿರುವುಗಳು ಪ್ರೇಕ್ಷಕರ ಆಸಕ್ತಿಯನ್ನು ಉಳಿಸಿಕೊಳ್ಳುತ್ತವೆ. ಕಾಲ್‌ಬಿಗೆ ಕಡೆಯಲ್ಲಿ ಆಯ್ಕೆಯ ಸ್ವಾತಂತ್ರ್ಯ ಲಭಿಸುತ್ತದೆ—ತನ್ನ ತಂದೆ ಎಂದು ತಾನು ಭಾವಿಸಿದ್ದ ಶ್ರೀಮಂತನ ಜೀವನ ರೀತಿಯನ್ನೇ ಅನುಸರಿಸಿ ಅದು ತನ್ನ ಪ್ರವೃತ್ತಿಗೆ ವಿರುದ್ಧವಾಗಿದ್ದರೂ ಐಶ್ವರ್ಯಪದವಿ ಸುಖಗಳನ್ನು ಖಂಡಿತಮಾಡಿಕೊಳ್ಳಬಹುದು ಇಲ್ಲವೆ ಬಡ ಸಂಗೀತಗಾರನೊಬ್ಬನ ಮಾರ್ಗವನ್ನನುಸರಿಸಿ ತನ್ನ ಪ್ರವೃತ್ತಿಯ ಬಯಕೆಯನ್ನು ತೃಪ್ತಿಪಡಿಸಬಹುದು. ಈ ನಾಟಕದ ರಚನೆಯಲ್ಲಿ ಯುರಿಪಿಡೀಸನ ಐಯಾನ್‌ನ ಪ್ರಭಾವ ಕಾಣುತ್ತದೆ. ಎಲಿಯಟ್‌ನ ಕಡೆಯ ನಾಟಕ ದಿ ಎಲ್‌ಡರ್ ಸ್ಟೇಟ್ಸ್‌ಮನ್ (1958). ಇದರಲ್ಲಿನ ಕೇಂದ್ರ ವ್ಯಕ್ತಿ ಲಾರ್ಡ್ ಕ್ಲೀವರ್‌ಟನ್. ಇತರ ನಾಟಕಗಳಲ್ಲಿನಂತೆ ಇಲ್ಲೂ ಭೂತಕಾಲದ ಘಟನೆಗಳು ವರ್ತಮಾನದ ಬಾಳನ್ನು ಸುಡಲು ಬರುತ್ತವೆ. ಆದರೆ ಕ್ಲೀವರ್‌ಟನ್ ತನ್ನ ಅಂತಃಸಾಕ್ಷಿಯನ್ನು ಶುದ್ಧಗೊಳಿಸಿಕೊಂಡ ಅನಂತರ ಭೂತಕಾಲ ಅವನನ್ನು ಏನೂ ಮಾಡಲಾರದು. ಕಲೋನಸ್‌ನಲ್ಲಿ ಈಡಿಪಸ್ ಎಂಬ ಸೊಫೋಕ್ಲೀಸ್‌ನ ನಾಟಕದ ಪ್ರಭಾವ ಇಲ್ಲಿ ತೋರುತ್ತದೆ.

ಕಟ್ಟುನಿಟ್ಟಿನ ವಾಸ್ತವಿಕತೆ ನಾಟಕದ ಶಕ್ತಿಯನ್ನೂ ಸೂಚ್ಯಾರ್ಥವನ್ನೂ ಅನಗತ್ಯವಾಗಿ ಮಿತಿಗೊಳಿಸುವುದೆಂದು ಭಾವಿಸಿದ ಎಲಿಯಟ್‌ನ ಪ್ರಯೋಗಗಳು ವಿಶೇಷ ಪ್ರಭಾವವನ್ನು ಬೀರಿದುವು. ಈ ಕೃತಿಗಳಲ್ಲಿ ಗ್ರೀಕ್ ನಾಟಕಗಳ ಪ್ರಭಾವದೊಡನೆ ಕ್ರೈಸ್ತಮತದ ಅಂಶ ಬೆರೆತಿದೆ. ಕ್ರಿಯೆ ಎರಡು ಹಂತಗಳಲ್ಲಿ ಸಾಗುವುದೆನ್ನುವುದಕ್ಕಿಂತ ಎರಡು ಜಗತ್ತುಗಳ ಅರಿವನ್ನು ಉಂಟುಮಾಡಬಲ್ಲುದು ಎಂದು ಹೇಳುವುದು ಸರಿಯಾಗುತ್ತದೆ. ಪದ್ಯಮಾಧ್ಯಮದ ಬಳಕೆಯ ಪ್ರಯೋಗಗಳು ಕುತೂಹಲಕಾರಿಯಾಗಿವೆ. (ಎಲ್.ಎಸ್.ಎಸ್.)

ಎಲಿಯಟ್ ಕವಿಯಾಗಿ, ನಾಟಕಕಾರನಾಗಿ ಖ್ಯಾತಿಪಡೆದಿರುವುದು ಮಾತ್ರವಲ್ಲದೆ ವಿಮರ್ಶಕನಾಗಿಯೂ ಸಮಾಜ ಸಂಸ್ಕೃತಿಗಳಿಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಕುರಿತ ಚಿಂತನಾಸಕ್ತ ಲೇಖಕನಾಗಿಯೂ ಖ್ಯಾತಿಪಡೆದಿದ್ದಾನೆ. ಇವನ ವಿಮರ್ಶಾತ್ಮಕ ಪ್ರಬಂಧಗಳ ಪ್ರಥಮ ಸಂಗ್ರಹ ದಿ ಸೇಕ್ರೆಡ್ ವುಡ್ ಹೊರಬಿದ್ದುದು 1920ರಲ್ಲಿ. ಹದಿನೇಳನೆಯ ಶತಮಾನದ ಇಂಗ್ಲಿಷ್ ಕಾವ್ಯದ ಕೆಲವು ಅಂಶಗಳನ್ನು ವಿಷಯವಾಗುಳ್ಳ ಮೂರು ಪ್ರಬಂಧಗಳು ಹೋಮೇಜ್ ಟು ಡ್ರೈಡನ್ ಎಂಬ ಹೆಸರಿನ ಪುಸ್ತಕದಲ್ಲಿ 1924ರಲ್ಲಿ ಪ್ರಕಟವಾದುವು. ಈ ಲೇಖನಗಳೆಲ್ಲ ಸಾಹಿತ್ಯವಿಮರ್ಶೆಯ ಮೇಲೂ ಸಾಹಿತಿಗಳ ಮೇಲೂ ಪ್ರಭಾವ ಬೀರಿದುವು. ಅನಂತರವೂ ಎಲಿಯಟ್ ವಿಮರ್ಶಾತ್ಮಕ ಲೇಖನಗಳನ್ನು ಬರೆಯುತ್ತಲೇ ಇದ್ದ. 1932ರಲ್ಲಿ ಹೊರಬಿದ್ದ ಅವನ ಸೆಲೆಕ್ಟೆಡ್ ಎಸ್ಸೇಸ್ ಎಂಬ ಸಂಗ್ರಹದಲ್ಲಿ ಇವನ ಅತ್ಯುತ್ತಮ ಲೇಖನಗಳು ಕೆಲವಿದ್ದುವು. ಟ್ರೆಡಿಷನ್ ಅಂಡ್ ದಿ ಇಂಡಿವಿಡ್ಯುಯಲ್ ಟ್ಯಾಲೆಂಟ್ (ಸಂಪ್ರದಾಯ ಮತ್ತು ವೈಯಕ್ತಿಕ ಪ್ರತಿಭೆ), ದಿ ಯೂಸ್ ಆಫ್ ಪೊಯಟ್ರಿ ಅಂಡ್ ದಿ ಯೂಸ್ ಆಫ್ ಕ್ರಿಟಿಸಿಸಮ್ (ಕಾವ್ಯದ ಮತ್ತು ವಿಮರ್ಶೆಯ ಉಪಯೋಗ) ಮೊದಲಾದ ಲೇಖನಗಳು ವಿಶೇಷವಾಗಿ ಹೆಸರಾಂತಿವೆ. ಎಲಿಯಟ್ ಕ್ಲಾಸಿಕಲ್ ಪಂಥದ ಸಾಹಿತ್ಯವನ್ನು ಮೆಚ್ಚಿಕೊಂಡಿದ್ದವ. ರಮ್ಯಕಾವ್ಯದ ಅತಿರೇಕಗಳನ್ನು ಕಂಡರೆ ಇವನಿಗೆ ಆಗದು. ಅದೇ ರೀತಿ ಮಿಲ್ಟನ್ ಕವಿಯ ಕ್ಲಿಷ್ಟಪದ ಪ್ರಯೋಗವೂ ಇವನ ಆಕ್ಷೇಪಣೆಗೆ ಪಾತ್ರವಾಯಿತು. ಅಸಹಜವೂ ಅತಿಪಾಂಡಿತ್ಯಮಯವೂ ಆದ ಶಬ್ದಪ್ರಯೋಗವನ್ನು ಈತ ಖಂಡಿಸಿದ. ಕಾವ್ಯ ಸಮಕಾಲೀನ ಆಡುಮಾತಿಗೆ ಆದಷ್ಟು ಸಮೀಪವಾಗಿರಬೇಕೆನ್ನುವುದು ಈತನ ಮತ. ತನ್ನ ಕಾವ್ಯದಲ್ಲೂ ಇಂಥ ಭಾಷೆಯನ್ನು ಬಳಸಿ ಇವನು ಅದ್ಭುತ ಫಲಗಳನ್ನು ಸಾಧಿಸಿದ. ಸಾಹಿತ್ಯದಲ್ಲಿ ಭಾವ ಮತ್ತು ಆಲೋಚನೆಗಳ ಸಾಹಚರ್ಯ ಅಗತ್ಯವೆಂಬ ಇವನ ಅಭಿಪ್ರಾಯವೂ ಈ ಪ್ರಬಂಧಗಳಲ್ಲಿ ಪ್ರಖರವಾಗಿ ವ್ಯಕ್ತವಾಗಿದೆ. ಆಧುನಿಕ ಯುಗದ ಜೀವನ ಜಟಿಲವಾಗಿರುವುದರಿಂದ ಕವಿಯೂ ಅದಕ್ಕೆ ತಕ್ಕ ಮತ್ತು ಅದನ್ನು ಪ್ರತಿಬಿಂಬಿಸುವ ಪದಸಂಪತ್ತನ್ನು ರೂಪಿಸಿಕೊಳ್ಳಬೇಕೆಂಬುದು ಇವನ ಅಭಿಪ್ರಾಯವಾಗಿತ್ತು.

ಉತ್ತಮ ಸಾಹಿತ್ಯಮೌಲ್ಯಗಳ ಪ್ರಸಾರದಲ್ಲಿ ಆಸಕ್ತನಾಗಿದ್ದಂತೆಯೇ ಎಲಿಯಟ್ ಸಾರ್ವಜನಿಕ ಸಂಸ್ಕೃತಿಯ ಉದ್ಧಾರ ಕಾರ್ಯದಲ್ಲೂ ಶ್ರದ್ಧೆಹೊಂದಿದ್ದ. ಈತ ಬ್ರಿಟಿಷ್ ಪ್ರಜೆಯಾಗಿ ಚರ್ಚ್ ಆಫ್ ಇಂಗ್ಲೆಂಡಿನ ಸದಸ್ಯನಾದ ಮೇಲೆ ಸಾಮಾಜಿಕ ಮತ್ತು ಸಾಂಸ್ಕೃತಿಕ ಸಮಸ್ಯೆಗಳಲ್ಲೂ ಆಸಕ್ತನಾದ. ಈ ಕ್ಷೇತ್ರಗಳಲ್ಲಿ ಇವನ ಅಭಿಪ್ರಾಯಗಳು ಕ್ರೈಟೀರಿಯನ್ ಎಂಬ ಪತ್ರಿಕೆಯಲ್ಲಿ ಪ್ರಕಟವಾದುವು. ಆಫ್ಟರ್ ಸ್ಟ್ರೇಂಜ್ ಗಾಡ್ಸ್ (ವಿಚಿತ್ರ ದೇವರುಗಳ ಅನುಸರಣೆ, 1934), ದಿ ಐಡಿಯ ಆಫ್ ಎ ಕ್ರಿಶ್ಚಿಯನ್ ಸೊಸೈಟಿ (ಕ್ರೈಸ್ತ ಸಮಾಜದ ಆದರ್ಶಕಲ್ಪನೆ, 1939) ಎಂಬ ಪ್ರಬಂಧಗಳು ಪ್ರಸಿದ್ಧವಾಗಿವೆ. ಇವುಗಳಲ್ಲೆಲ್ಲ ಎಲಿಯಟ್ ತನ್ನ ಕಾಲದಲ್ಲಿ ಜನಪ್ರಿಯವಾಗಿದ್ದ ವಿಚಾರಸರಣಿಗೆ ವಿರುದ್ಧವಾದ ಅಭಿಪ್ರಾಯವನ್ನು ವ್ಯಕ್ತಪಡಿಸಿ ಜನರಲ್ಲಿ ಹಿಂದಿರುತ್ತಿದ್ದಷ್ಟು ಮಟ್ಟದ ಸಂಸ್ಕೃತಿ ಮತ್ತು ಸಂವೇದನಶಕ್ತಿ ಇಲ್ಲವೆಂದೂ ಅವುಗಳ ಪುನರುದ್ಧಾರ ಅಗತ್ಯವೆಂದೂ ವಾದಿಸಿದ. ಪರಿಣಾಮವಾಗಿ ಇವನು ಪ್ರಗತಿ ವಿರೋಧಿಯೆಂಬ ಆಪಾದನೆಗೂ ಗುರಿಯಾದ. ಆದರೆ ಇವನು ವೇಸ್ಟ್ ಲ್ಯಾಂಡ್ ಮೊದಲಾದ ಕವಿತೆಗಳಲ್ಲಿ ವ್ಯಕ್ತಪಡಿಸಿದ ಭಾವಗಳಿಗೂ ಈ ಪ್ರಬಂಧಗಳಲ್ಲಿ ಪ್ರತಿಪಾದಿಸಿರುವ ಅಭಿಪ್ರಾಯಗಳಿಗೂ ಸಾದೃಶ್ಯವಿರುವುದನ್ನು ಮರೆಯುವಂತಿಲ್ಲ. (ಎಂ.ಆರ್.)

**ಎಲಿಯಟ್, ಸರ್ ವಾಲ್ಟರ್ :** 1803–1887. ಭಾರತೀಯ ಸಂಸ್ಕೃತಿ ಶಾಸ್ತ್ರಜ್ಞನಾದ ಈತ ಪ್ರಾರಂಭದಲ್ಲಿ ಐ.ಸಿ.ಎಸ್. ಅಧಿಕಾರಿಯಾಗಿ ಭಾರತಕ್ಕೆ ಬಂದ (1821), ಮದರಾಸಿನ ಗವರ್ನರ್ ಲಾರ್ಡ್ ಎಲ್‌ಫಿನ್‌ಸ್ಟನ್‌ಗೆ ಕಾರ್ಯದರ್ಶಿಯಾಗಿ ಕೆಲಸಮಾಡಿದ. ಭಾರತದ ಪ್ರಾಚೀನ ಸಂಸ್ಕೃತಿಯ ಬಗ್ಗೆ ಅಮಿತವಾದ ಆಸಕ್ತಿ ಇತ್ತಾಗಿ ತನ್ನ ಕಚೇರಿಯ ಗುಮಾಸ್ತನ ಸಹಾಯದಿಂದ ಪ್ರಾಚೀನ ಲಿಪಿಗಳ ಅಧ್ಯಯನ ನಡೆಸಿ ಪುರಾತನ ಶಾಸನಗಳನ್ನು ಓದತೊಡಗಿದ. ಅನಂತರ ಭಾರತದ ಪ್ರಾಚೀನ ನಾಣ್ಯಗಳ ವಿಚಾರವಾಗಿ ಪರಿಶೋಧನೆ ಪ್ರಾರಂಭಿಸಿ, ಕಾಯಿನ್ಸ್ ಆಫ್ ಸೌತ್ ಇಂಡಿಯ ಎಂಬ ಗ್ರಂಥ ರಚಿಸಿದ. ಈ ಗ್ರಂಥ ಇಂಟರ್‌ನ್ಯಾಷನಲ್ ನ್ಯುಮಿಸ್‌ಮ್ಯಾಟಾ ಓರಿಯಂಟ್ಯಾಲಿಯ ಗ್ರಂಥದ ಒಂದು ಭಾಗವಾಗಿದೆ. 1877ರಲ್ಲಿ ರಾಯಲ್ ಏಷ್ಯಾಟಿಕ್ ಸೊಸೈಟಿಯ ಫೆಲೊ ಆಗಿ ಚುನಾಯಿತನಾದ. ಇವನ ಪರಿಶೋಧನ ಲೇಖನಗಳನ್ನು ಇಂಡಿಯನ್ ಆಂಟಿಕ್ವರಿ, ಜರ್ನಲ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ, ಜರ್ನಲ್ ಆಫ್ ದಿ ಎತ್ನಾಲಾಜಿಕಲ್ ಸೊಸೈಟಿ ಮುಂತಾದ ಪ್ರಕಟನೆಗಳಲ್ಲಿ ಕಾಣಬಹುದು. (ಎ.ಬಿ.ಎಚ್.)

**ಎಲಿವೇಟರುಗಳು :** ತೂಕದ ವಸ್ತುಗಳನ್ನು ಎತ್ತರಕ್ಕೂ ತಗ್ಗಿಗೂ ನಿರ್ಧಾರಿತ ಭೂಲಂಬ ಪಥದಲ್ಲಿ ಹೊತ್ತು ಸಾಗಿಸುವ ಯಂತ್ರಗಳು. ಎತ್ತಿಗೆ ಯಂತ್ರಗಳು (ನೋಡಿ) ಸಹ ತೂಕವಸ್ತುಗಳ ಸಾಗಾಣಿಕೆಗೋಸ್ಕರವೇ ಇರುವವಾದರೂ ಅವು ವಸ್ತುಗಳನ್ನು ಹಿಡಿದುಕೊಂಡು ಅಥವಾ ನೇತಾಡಿಸುತ್ತ ಸ್ಥಾನಾಂತರಿಸುತ್ತವೆ. ಎಲಿವೇಟರುಗಳ ಚಲನೆ ವಿಚ್ಛಿನ್ನ—ಏಕಪ್ರಕಾರ ಚಲನೆಯಿಂದ ಗುರಿ ತಲುಪುವುದಿಲ್ಲ. ಕಚೇರಿ, ಕಾರ್ಖಾನೆ, ಭೂತಳಗಣಿ, ಮಹಾಸೌಧ ಮುಂತಾದ

ಎಡೆಗಳಲ್ಲಿ ಜನರನ್ನು ಒಂದು ಅಂತಸ್ತಿನಿಂದ ಇನ್ನೊಂದು ಅಂತಸ್ತಿಗೆ ಒಯ್ಯುವ ಉತ್ಥಾನ ಯಂತ್ರಗಳು (ಲಿಫ್ಟ್ಸ್) ಸಹ ಎಲಿವೇಟರುಗಳೇ. ಆದರೆ ಇಲ್ಲಿ ಚಲನೆ ಏಕಪ್ರಕಾರವಾಗಿದೆ. ಕ್ರಿ.ಪೂ. 236ರಲ್ಲಿ ರೋಮನ್ ಚಕ್ರಾಧಿಪತ್ಯದಲ್ಲಿ ಎಲಿವೇಟರಿನ ಬಳಕೆ ಇದ್ದುದಕ್ಕೆ ದಾಖಲೆ ಇದೆ. ಅಂದು ಬಳಸಿದ್ದು ಮನುಷ್ಯನ ಸ್ನಾಯು ಶಕ್ತಿ; ಇಂದು ಅದರ ಹಲವಾರು ಪಟ್ಟು ಶಕ್ತಿಯನ್ನು ವಿದ್ಯುಚ್ಛಕ್ತಿ ಒದಗಿಸುತ್ತಿದೆ. (ಟಿ.ಟಿ.)

**ಎಲುಗಟ್ಟು, ಅಕಶೇರುಕಗಳ :** ಸ್ನಾಯುಗಳಿಗೆ ಆಸರೆಯಾಗಿ, ಸರಿ ಸುಮಾರು ದೃಢವಾಗಿ, ದೇಹದ ಒಳಗೆ ಇರುವ ಚೌಕಟ್ಟಿನ ಹೆಸರು ಎಲುಗಟ್ಟು. ಎಲುಬುಗಳ ಜೋಡಣೆ ಎಲುಗಟ್ಟು ಎಂದಿಟ್ಟು ಕೊಂಡರೆ ಇದು ಕಶೇರುಕಗಳ ವಿಶಿಷ್ಟ ಗುಣವಾಗುತ್ತದೆ. ಕಾರಣ, ಎಲುಬುಗಳು ಆ ಪ್ರಾಣಿಗಳಿಗೆ ಮಾತ್ರ ಸೀಮಿತ. ಅಕಶೇರುಕಗಳಲ್ಲಿ ಎಲುಬುಗಳಿಲ್ಲ. ಆದರೆ ಎಲುಬುಗಳ ಕ್ರಿಯೆಯನ್ನು ಆಯಾ ಅಕಶೇರುಕ ಪ್ರಾಣಿಯ ಜೀವನಕ್ರಮಕ್ಕೆ ಸಹಾಯಕವಾಗಿ ನಿರ್ವಹಿಸಬಲ್ಲ ರಚನೆಯನ್ನು ಅಕಶೇರುಕಗಳ ಎಲುಗಟ್ಟು (ಸ್ಕೆಲಿಟನ್ ಆಫ್ ಇನ್ವರ್ಟಿಬ್ರೇಟ್ಸ್) ಎಂದು ಕರೆಯುವುದು ವಾಡಿಕೆ. ಶರೀರದ ಆಕಾರವನ್ನು ಕಾಪಾಡಿಕೊಳ್ಳಲು ನಾನಾರೀತಿಯ, ಅಸ್ಥಿಗೆ ಹೋಲಿಸಬಹುದಾದ ರಚನೆಗಳನ್ನು ಅಕಶೇರುಕಗಳು ಬೆಳೆಸಿ ಕೊಂಡಿರುವುದನ್ನು ಕಾಣಬಹುದು. ಬಹಳ ಅಕಶೇರುಕಗಳಲ್ಲಿ ಇಂಥ ಗಟ್ಟಿಯ ವಸ್ತುಗಳೂ ಇಲ್ಲ. ಇಂಥವು ನಮ್ಮ ಶರೀರದ ಆಕಾರವನ್ನು ಕಾಯ್ದಿಡಲು ಶರೀರ ದೊಳಗಿನ ನೀರನ್ನೇ ಆಶ್ರಯಿಸಬೇಕಾಗುತ್ತದೆ. ಜೀವಕೋಶಗಳಲ್ಲಿರುವ ನೀರು ಮತ್ತು ಇತರ ಭಾಗಗಳಲ್ಲಿರುವ ನೀರಿನ ಒತ್ತಡದಿಂದಾಗಿ ಆಕಾರ ಉಳಿದಿರುವುದು. ಕಂಬಳಿಹುಳು ಇದಕ್ಕೊಂದು ಉತ್ತಮ ನಿದರ್ಶನ. ಶರೀರದ್ರವಗಳ ಜೊತೆಗೆ ಮಾಂಸಖಂಡಗಳನ್ನು ಕೂಡ ನಾವು ಇಲ್ಲಿ ಗಣನೆಗೆ ತಂದುಕೊಳ್ಳಬೇಕು. ಈ ಪ್ರಾಣಿಗಳ ಚರ್ಮದ ತಳದಲ್ಲಿ ಗಟ್ಟಿಮುಟ್ಟಾದ ಮಾಂಸಖಂಡಗಳಿವೆ. ಇವುಗಳ ಕುಗ್ಗುವಿಕೆ ಮತ್ತು ಹಿಗ್ಗುವಿಕೆಯಿಂದ ಪ್ರಾಣಿಯ ಚಲನೆ ಸಾಧ್ಯವಾಗುತ್ತದೆ.

ಅಕಶೇರುಕ ಪ್ರಪಂಚದಲ್ಲಿ ಅಸ್ಥಿಗೆ ಹೋಲಿಸಬಹುದಾದ ರಚನೆಗಳನ್ನು ಏಕ ಕೋಶಪ್ರಾಣಿಗಳಲ್ಲಿಯೂ ಕಾಣಬಹುದು. ಅಮೀಬದಲ್ಲಿ ಮಾತ್ರ ಇಂಥ ರಚನೆ ಇಲ್ಲ. ಆದರೆ ಇದೇ ವಂಶಕ್ಕೆ ಸೇರಿದ ಎಲ್ಫೀಡಿಯಾ ಪ್ರಾಣಿಯಲ್ಲಿ ಗಟ್ಟಿಮುಟ್ಟಾದ ಲವಣಮಿಶ್ರಿತ ಅಸ್ಥಿರಚನೆ ಇದೆ. ಮತ್ತೆ ಕೆಲವು ಪ್ರಾಣಿಗಳಿಗೆ ಮರಳುಮಿಶ್ರಿತ ಅಸ್ಥಿರಚನೆಗಳಿವೆ. ಇಂಥ ರಚನೆಗಳು ಶರೀರವನ್ನು ರಕ್ಷಿಸುತ್ತವೆ. ಈ ಅಸ್ಥಿರಚನೆ ಪ್ರಾಣಿಯ ಶರೀರದ ಹೊರಭಾಗದಲ್ಲಾಗಬಹುದು ಅಥವಾ ಒಳಭಾಗದಲ್ಲಾಗ ಬಹುದು.

ಸ್ಪಂಜುಪ್ರಾಣಿಗಳಲ್ಲಿ ಕೂಡ ಗಟ್ಟಿಯಾಗಿರುವ ಲವಣಮಿಶ್ರಿತ ರಚನೆಗಳಿವೆ. ಇವು ಅತಿಸೂಕ್ಷ್ಮವಾಗಿದ್ದು ಮುಳ್ಳುಗಳನ್ನು ಹೋಲುತ್ತವೆ. ಇವು ಉತ್ಪತ್ತಿ ಸುವ ಈ ಒಳ ಅಸ್ಥಿ ಸುಣ್ಣ ಸ್ಪಾಂಜಿನ್ ಗಾಜಿನಂಥ ವಸ್ತುಗಳಿಂದಾಗುತ್ತದೆ. ಈ ರಚನೆಗಳು ಶರೀರಕ್ಕೆ ಆಸರೆಯನ್ನೊದಗಿಸುತ್ತವೆ. ಪ್ರತ್ಯೇಕವಾಗಿರುವ ಜೀವ ಕೋಶಗಳಿಂದಲೇ ಅಸ್ಥಿರಚನೆ ಹುಟ್ಟಿಬರುತ್ತದೆ.

ಕುಟುಕು ಕೋಶವಂಶದ ಪ್ರಾಣಿಗಳಲ್ಲಿ ಹವಳದ ಹುಳುಗಳು ತಮ್ಮ ದೇಹ ಗಳಲ್ಲಿರುವ ಜೀವಕೋಶಗಳಿಂದ ಗಟ್ಟಿಮುಟ್ಟಾದ ಅಸ್ಥಿಯನ್ನು ಉತ್ಪತ್ತಿಸುತ್ತವೆ. ಇವುಗಳ ಉತ್ಪನ್ನಗಳಿಂದ ಹವಳದ ಗುಡ್ಡಗಳು ಮತ್ತು ಹವಳದ್ವೀಪಗಳೇ ಹುಟ್ಟು ತ್ತವೆ. ಆಲ್ಸಿಯೋನಿಯಂ ಪ್ರಾಣಿಯಲ್ಲಿ ಲವಣಮಿಶ್ರಿತ ದಾರಗಳು ಮತ್ತು ಮುಳ್ಳಿನಂಥ ರಚನೆಗಳನ್ನು ಒಳಗೊಂಡಿರುವ ಒಳ ಅಸ್ಥಿ ಇದೆ. ಹವಳದ ಗುಡ್ಡ ಗಳನ್ನು ನಿರ್ಮಿಸುವ ಪ್ರಾಣಿಗಳಲ್ಲಿ ಹೊರಚರ್ಮದ ಕೋಶಗಳಿಂದ ಅಸ್ಥಿ ಹುಟ್ಟುತ್ತದೆ. ಈ ಕೋಶಗಳಿಂದ ಉತ್ಪನ್ನವಾಗುವ ಬಟ್ಟಲಿನಂಥ ಅಸ್ಥಿರಚನೆಯೊಳಗೆ ಪ್ರಾಣಿ ಹುದುಗಿಕೊಳ್ಳುತ್ತದೆ. ಸಾವಿರಾರು ಪ್ರಾಣಿಗಳು ಒಟ್ಟುಗೂಡಿ ಸಂಘಜೀವನವನ್ನು ನಡೆಸುತ್ತಿರುವ ಭಾಗಗಳಲ್ಲಿ ಉತ್ಪತ್ತಿಯಾಗುವ ಅಸ್ಥಿರಚನೆಗಳಿಂದ ಹವಳದ ಗುಡ್ಡಗಳೇ ನಿರ್ಮಾಣವಾಗುತ್ತವೆ.

ಸಂಧಿಪದಿಗಳ ವಂಶದ ಪ್ರಾಣಿಗಳಲ್ಲಿ ಹೊರ ಅಸ್ಥಿರಚನೆ ಬಹಳ ಚೆನ್ನಾಗಿ ಬೆಳೆ ದಿರುತ್ತದೆ. ಇವುಗಳ ಶರೀರದ ಮೇಲಿರುವ ಗಟ್ಟಿಯಾದ ಹೊದಿಕೆ ಖೈಟಿನ್ ಎಂಬ ವಸ್ತುವಿನಿಂದಾದದ್ದು. ರಾಸಾಯನಿಕವಾಗಿ ನೈಟ್ರೊಜನ್ ಇರುವ ಶರ್ಕರಗಳು ಮತ್ತು ಇವುಗಳ ಜೊತೆಗೆ ಪ್ರೋಟೀನುಗಳು ಸೇರಿ ಖೈಟಿನ್ ಆಗುತ್ತದೆ. ಖೈಟಿನಿನಿಂದ ಕ್ಯೂಟಿಕಲ್ ಎಂಬ ವಸ್ತು ಹುಟ್ಟುತ್ತದೆ. ಇದು ಬಹಳ ಗಟ್ಟಿ. ಜಿಂಕೆ, ಮಿಡತೆ ಮುಂತಾದವುಗಳಲ್ಲಿ ಈ ರೀತಿಯ ಕ್ಯೂಟಿಕಲ್ ಹೊದಿಕೆಯನ್ನು ಕಾಣಬಹುದು. ಸಂಧಿಪದಿಗಳ ಶರೀರದ ಖಂಡಗಳ ಮೇಲೆ ಈ ಕ್ಯೂಟಿಕಲ್ ವಸ್ತುವಿನ ತಟ್ಟೆಗಳು ಜೋಡಿಸಿಕೊಂಡಿರುವುದನ್ನು ಕಾಣುತ್ತೇವೆ. ಹೀಗೆ ಖಂಡಗಳ ಮೇಲಿರುವ ತಟ್ಟೆಗಳು ಒಂದರೊಡನೊಂದು ತೆಳುವಾದ ಪೊರೆಯ ಸಹಾಯದಿಂದ ಸಂಬಂಧ ಕಲ್ಪಿಸಿಕೊಂಡಿವೆ.

ಸಿಗಡಿ, ಏಡಿ, ಲಾಬ್ಸ್ಟರ್ ಮುಂತಾದುವುಗಳ ಹೊರ ಅಸ್ಥಿಯಲ್ಲಿ ಕ್ಯೂಟಿಕಲಿ ನೊಡನೆ ಸುಣ್ಣದ ಲವಣಗಳೂ ಸೇರಿಕೊಂಡಿದ್ದು ಅದು ಅತಿ ಗಟ್ಟಿಯಾಗುವಂತೆ ಮಾಡುತ್ತವೆ. ಇವುಗಳ ವದನಾಂಗಗಳು ಅತಿಗಟ್ಟಿಯಾದ ಸ್ಕ್ಲಿರೋಟಿನ್ ಎಂಬ ವಸ್ತುವಿನಿಂದಾಗಿವೆ. ಸಂಧಿಪದಿಗಳ ಎಲುಗಟ್ಟು ಕೇವಲ ಶರೀರ ರಕ್ಷಣೆಯನ್ನೇ ಅಲ್ಲದೆ ಶರೀರದಲ್ಲಿರುವ ನೀರು ಹೊರ ಹೋಗದಂತೆ ರಕ್ಷಿಸುತ್ತದೆ. ಆದ್ದರಿಂದ ಈ ಕ್ಯೂಟಿಕಲ್ ಕವಚದ ಮೇಲೆ ಒಂದು ರೀತಿಯ ಮೇಣದಂಥ ವಸ್ತುವನ್ನು ಇವು ಉತ್ಪಾದಿಸಿಕೊಳ್ಳುತ್ತವೆ. ಚರ್ಮದಲ್ಲಿರುವ ಗ್ರಂಥಿಗಳು ಇದನ್ನು ಉತ್ಪಾದಿಸುವುವು.

ಮೃದ್ವಂಗಿಗಳ ವಂಶದಲ್ಲಿಯೂ ಅಸ್ಥಿರಚನೆಗಳು ಹೇರಳವಾಗಿವೆ. ಕಪ್ಪೆಚಿಪ್ಪಿನ ಹುಳು, ಶಂಖದ ಹುಳುಗಳು, ಕವಡೆ ಮುಂತಾದ ಪ್ರಾಣಿಗಳ ಶರೀರದ ಮೇಲೆ ಅತಿ ಗಟ್ಟಿಯಾದ ಸುಣ್ಣಮಿಶ್ರಿತ ಲವಣಗಳಿಂದಾದ ರಕ್ಷಾಕವಚಗಳಿವೆ. ಕವಚ ಈ ಪ್ರಾಣಿಗಳಿಗೆ ರಕ್ಷಣೆಯನ್ನೊದಗಿಸುತ್ತದೆ. ಪ್ರಾಣಿ ಸತ್ತಮೇಲೆಯೂ ಕವಚಗಳು ಬಹಳ ಕಾಲ ಉಳಿದಿರುತ್ತವೆ. ಶಂಖು, ಶಂಖುವಿನಂತೆ ಇರುವ ಬಸವನ ಹುಳುವಿನ ಗುಳ್ಳೆಗಳು, ಕವಚಗಳು ಮುಂತಾದವನ್ನು ಮನುಷ್ಯ ಬಳಸುತ್ತಿರುವುದನ್ನು ಕಾಣ ಬಹುದು. ಈ ಹೊರ ಅಸ್ಥಿರಚನೆಗಳು ಚರ್ಮದ ಹೊದಿಕೆಯಾದ ಮ್ಯಾಂಟಲ್ ಎಂಬ ಅಂಗದಿಂದ ಹುಟ್ಟುತ್ತವೆ. ಇಲ್ಲಿ ಉತ್ಪತ್ತಿಯಾಗುವ ಲವಣ ವಸ್ತುಗಳು ಗಟ್ಟಿಯಾಗಿ ಹೊರ ಅಸ್ಥಿ ರಚನೆಯಾಗುತ್ತದೆ. ಕೆಲವು ಮೃದ್ವಂಗಿಗಳಲ್ಲಿ ಇಂಥ ಅಸ್ಥಿರಚನೆಗಳು ಶರೀರದ ಒಳಗೂ ಇದೆ. ಕಟಲ್‌ಮೀನು, ಲಾಲಿಗೊ ಮುಂತಾದ ಪ್ರಾಣಿಗಳಲ್ಲಿ ಅಸ್ಥಿರಚನೆಗಳು ಒಳಗಿವೆ.

ಎಕಿನೋಡರ್ಮೇಟ ಅಥವಾ ಕಂಟಕಚರ್ಮಿಗಳಲ್ಲಿಯೂ ಅಸ್ಥಿರಚನೆಗಳಿವೆ. ಹೊರಚರ್ಮದ ತಳದಲ್ಲಿ ತಟ್ಟೆಗಳಂಥ ರಚನೆಗಳನ್ನು ಇವು ಉತ್ಪಾದಿಸಿಕೊಳ್ಳುತ್ತವೆ. ಆದ್ದರಿಂದ ಇವುಗಳ ಚರ್ಮ ಒರಟಾಗಿ ಗಟ್ಟಿಯಾಗಿರುತ್ತದೆ. ಕೆಲವು ಬಾರಿ ಈ ಅಸ್ಥಿರಚನೆಗಳು ಬಹಳ ಗಟ್ಟಿಯಾಗಿದ್ದು ಟೆಸ್ಟ್ ಅಥವಾ ಥೀಕಗಳೆಂಬ ಪಟ್ಟಿಗಳಂಥ ರಚನೆಗಳನ್ನು ಕೊಡುತ್ತವೆ. ಶರೀರದ ಮೇಲೆ ಮುಳ್ಳುಗಳಂಥ ಬೆಳವಣಿಗೆಗಳು ಕೂಡ ಉಂಟು. ಹೀಗಿದ್ದರೂ ಕೂಡ ಅಕಶೇರುಕಗಳಲ್ಲಿರುವ ಈ ಎಲುಗಟ್ಟನ್ನು ಕಶೇರುಕಗಳ ಎಲುಗಟ್ಟಿಗೆ ಯಾವ ವಿಧದಲ್ಲಿಯೂ ಹೋಲಿಸಲಾಗುವುದಿಲ್ಲ. ಕಶೇರುಕಗಳಲ್ಲಿ ಎಲುಗಟ್ಟು ಶರೀರಕ್ಕೆ ಆಸರೆ ಮತ್ತು ರಕ್ಷಣೆಯನ್ನೊದಗಿಸುವಂತೆಯೇ ಅಕಶೇರುಕಗಳಲ್ಲಿರುವ ಎಲುಗಟ್ಟು ಇವುಗಳ ಶರೀರ ರಕ್ಷಣೆಗೆ ಸಹಾಯಕವಾಗಿವೆ. ಈ ರೀತಿಯ ಎಲುಗಟ್ಟು ಒಂದೊಂದು ವಂಶದ ಅಕಶೇರುಕಗಳಲ್ಲಿ ಒಂದೊಂದು ರೀತಿಯಲ್ಲಿದೆ. (ಎಲ್.ಎಸ್.ಜಿ.)

**ಎಲುಗಟ್ಟು, ಕಶೇರುಕಗಳ :** ಬಹಳ ಪ್ರಾಣಿಗಳಲ್ಲೂ ಕಶೇರುಕಗಳಲ್ಲೂ ಮೈಯ ಸಾಮಾನ್ಯ ಆಕಾರವನ್ನು ಉಳಿಸಿಕೊಂಡಿರಲು ಕೆಲವು ಊತಕಗಳು ಒಂದು ಗೂಡಿ ಗಟ್ಟಿಯಾಗಿರುವ ರಚನೆಯ ಕಟ್ಟು (ಸ್ಕೆಲಿಟನ್). ಸತ್ತಮೇಲೆ ಉಳಿದೆಲ್ಲ ಮೆತುವಾದ ಭಾಗಗಳೂ ಹಾಳುಗೆಟ್ಟರೂ ಇದು ಮಾತ್ರ ಒಂದಷ್ಟು ಕಾಲ ಉಳಿದಿರು ವುದು. ಮೇಲ್ತರದ ಕಶೇರುಕಗಳ ಎಲುಗಟ್ಟಿನಲ್ಲಿ ಎಲುಬುಗಳು ಕೂಡಿಕೊಂಡು ಇನ್ನಷ್ಟು ಗಡುಸಾಗಿರುತ್ತದೆ. ಪ್ರಾಣಿಗಳ ಆಕಾರ, ಗಾತ್ರಗಳಿಗೆ ಬಹುಮಟ್ಟಿಗೆ ಇದೇ ಕಾರಣ. ಒಳಗಿರುವ ಜೀವಾಳದ ಅಂಗಗಳಿಗೆ ಕಾಪು ಒದಗಿಸುವುದು ಇನ್ನೊಂದು ಅನುಕೂಲ. ಸ್ನಾಯುಗಳ ಚಲನೆಗೆ ಸನ್ನೆಗಳಾಗುವ ಭಾಗಗಳಿವೆ. ಸುಣ್ಣಾಂಶಕ್ಕೆ ಮೂಳೆಗಳೇ ತೌರು. ಹಲವಾರು ಅಕಶೇರುಕ ಪ್ರಾಣಿಗಳಲ್ಲಿ ಕಾಪಿಡಲೂ ಊರೆ ಕೊಡಲೂ ಹೊರಚಿಪ್ಪು (ಎಕ್ಸೊಸ್ಕೆಲಿಟನ್) ಇದ್ದರೆ ಕಶೇರುಕಗಳಲ್ಲಿ ಒಳಗಿನ ಎಲು ಗಟ್ಟೂ ಬಹಳ ಮಾರ್ಪಡಿಸಿರುವ ಇಲ್ಲವೇ ಪೂರ್ತಿ ಅಣಗಿರುವ ಹೊರಚಿಪ್ಪು ಉಗುರು, ಕೂದಲು, ಹಲ್ಲುಗಾಜು (ಎನಾಮೆಲ್)—ಇವುಗಳ ರೂಪದಲ್ಲಿ ಉಳಿದಿರು ವುದು.

ಬೆನ್ನೆಲುಬಿನ ಕಂಬ : ದಪ್ಪನೆಯ ಹಿಂಪುಟಿಕ ಬೆನ್ನೆಲುನಡುವಣ ಬಟ್ಟುಗಳು (ಡಿಸ್ಕಸ್) ಮತ್ತಿತರ ತಂತುಗಟ್ಟುಗಳಿಂದ (ಲಿಗಮೆಂಟ್ಸ್) ಒಂದಕ್ಕೊಂದು ಕೂಡಿರುವ ಬೆನ್ನೆಲುಬುಗಳ ನೆಟ್ಟನೆಯ ಸಾಲು (ವರ್ಟಿಬ್ರಲ್ ಕಾಲಂ). ಇದನ್ನು ನಟ್ಟೆಲುಬು, ಮಟ್ಟೆಲುಬು, ನಿಟ್ಟೆಲುಬು, ಬೆನ್ನುಕಂಬ ಎನ್ನುವುದೂ ಉಂಟು. ಮುಖ್ಯವಾಗಿ ಇದು ಮುಂಡ, ಕೊರಳುಗಳ ಹಿಂಭಾಗದ ನಡುವೆ ಇದ್ದು ಇದರ ಮೇಲ್ಗಡೆ ತಲೆ ಬುರುಡೆ ಕುಳಿತಿರುವುದು. ಇವಿಷ್ಟೂ ಸೇರಿದರೆ ಅಚ್ಚಿನ (ಅಕ್ಸಿಯಲ್) ಎಲುಗಟ್ಟು ಆಗುವುದು. ಸಾಮಾನ್ಯವಾಗಿ ಒಂದೊಂದು ಬೆನ್ನೆಲುಬಲ್ಲೂ ಮುಂದುಗಡೆ ದಪ್ಪ ನೆಯ ಕಾಯವೂ (ಬಾಡಿ) ಹಿಂದುಗಡೆ ನರದ ಕಮಾನೂ (ನ್ಯೂರಲ್ ಆರ್ಚ್) ಇರುವುವು.

ಬೆನ್ನೆಲುನಡುವಣ ಬಟ್ಟುಗಳೊಂದಿಗೆ ಕಾಯಗಳು ಒಂದರ ಮೇಲೊಂದು ಜೋಡಿಸಿರುವುದರಿಂದ ಅವು ಮೈ ಭಾರ ಹೊರುವ ಕಂಬದಂತಿರುವುವು. ಒರಸೆ ಯಲ್ಲಿರುವ ಬೆನ್ನೆಲುಬಿನ ಕಾಯಗಳಿಗೂ ನರದ ಕಮಾನಿಗೂ ನಡುವೆ ಬೆನ್ನೆಲುಬಿನ ಕಂಬದ ಎರಡು ಪಕ್ಕಗಳಲ್ಲೂ ಬೆನ್ನುಹುರಿಗೆ ಸಂಬಂಧಿಸಿರುವ ಜೋಡಿ ನರಗಳು

ಹೊರಬೀಳುತ್ತವೆ. ಈ ನರದ ಕಮಾನುಗಳು ಬೆನ್ನುಹುರಿಯನ್ನೂ ಕೆಳಗಿನ ಬೆನ್ನುಹುರಿಯ ನರಗಳನ್ನೂ ಕೊಂಚಮಟ್ಟಿಗೆ ಕಾಪಿಡುತ್ತವೆ. ಒಂದೊಂದು ನರದ ಕಮಾನಿನಲ್ಲೂ ಉರುಯಾಕಾರದ ಎರಡು ತೊಟ್ಟುಗಾಲುಗಳು (ಪೆಡಿಕಲ್ಸ್), ಹಿಂದುಗಡೆ ನಡುವೆ ಒಂದಾಗುವ ಎರಡು ರೇಕುಪರೆಗಳು (ಲೆಮೈನ), ತೊಟ್ಟುಗಾಲು ಮತ್ತು ರೇಕುಪರೆ ಸೇರುವೆಡೆಯಲ್ಲಿ ಅಡ್ಡನೆಯ ಚಾಚು, ಕೀಲುಗೂಡಿಸುವ ಚಾಚುಗಳು (ಪ್ರೋಸೆಸಸ್) ಇವೆ. ಮೇಲಿನ ಕೆಳಗಿನ ಕೀಲುಗೂಡಿಸುವ ಚಾಚುಗಳ ನಡುವೆ ಕೀಲೋಳಿನ (ಸೈನೋವಿಯಲ್) ಕೀಲುಗಳಿವೆ. ಮುಳ್ಳಿನ ಚಾಚುಗಳ ಸಾಲು ಹಿಂದುಗಡೆ ನಟ್ಟನಡುವೆ ಇರುವುದೇ ಬೆನ್ನೆಲುಬಿನ ಕಂಬವನ್ನು ಮುಟ್ಟಿದಾಗ ಕೈಗೆ ತಾಕುವುದು.

ಎಳೆಮಗುವಿನ ಬೆನ್ನೆಲುಬಿನ ಕಂಬದಲ್ಲಿರುವ 33 ಬಿಡಿಯಾಗಿರುವ ಬೆನ್ನೆಲುಬುಗಳಲ್ಲಿ ಕೆಲವು ದೊಡ್ಡವರಾದ ಮೇಲೆ ಒಂದುಗೂಡಿ ಬಿಡಿಯಾದವು ಕೇವಲ 26 ಉಳಿಯುತ್ತವೆ. ಬೆನ್ನೆಲುಬುಗಳು ಇರುವೆಡೆಯಂತೆ, ಕೊರಳಿನ (ಸರ್ವೈಕಲ್), ಎದೆಗೂಡಿನ (ತೊರ್‍ಯಾಸಿಕ್), ಸೊಂಟದ (ಲಂಬಾರ್), ಪಾವನಿಯ (ಸೇಕ್ರಲ್) ಕೋಕೆಲುವಿನ (ಕಾಕ್ಸಿಜಯಲ್) ಬೆನ್ನೆಲುಬುಗಳೆಂದು ಹೆಸರಾಗಿದೆ. ಎಳೆಮಗುವಿನಲ್ಲಿ ಪಾವನಿಯವು ಐದೂ ಕೋಕೆಲುವಿನವು ನಾಲ್ಕೂ ಇದ್ದುವು. ದೊಡ್ಡವರಲ್ಲಿ ಒಂದೊಂದೇ ಇರುತ್ತವೆ. ಅಲ್ಲದೆ ಕೊರಳಿನವು 7, ಎದೆಗೂಡಿನವು 12, ಸೊಂಟದವು 5 ಇರುತ್ತವೆ.

ಬೆನ್ನೆಲುಬುಗಳು : ಅಡ್ಡನೆಯ ಚಾಚುಗಳಲ್ಲಿ ಒಂದೊಂದು ಕೊರೆಗಂಡಿ (ಫೋರಮನ್) ಇರುವವೇ ಕೊರಳಿನ ಬೆನ್ನೆಲುಬುಗಳು. 7ನೆಯದನ್ನು ಬಿಟ್ಟರೆ, ಮಿದುಳಿನ




ಚಿತ್ರ 1 ಬೆನ್ನೆಲುಬಿನ ಕಂಬದ ಮೂರು ನೋಟಗಳು

ಒಂದು ಭಾಗಕ್ಕೆ ರಕ್ತ ಒದಗಿಸುವ ಬೆನ್ನೆಲುಬಿನ ಧಮನಿ ಇವುಗಳ ಮೂಲಕ ಮೇಲಕ್ಕೆ ಸಾಗುತ್ತದೆ. ಒಂದನೆಯ ಬೆನ್ನೆಲುಬಾದ ಎಲುಮೇರುವಿನಲ್ಲಿ (ಅಟ್ಲಾಸ್) ಮಾತ್ರ ಕಾಯವಿರದೆ ಉಂಗುರ ರೂಪದಲ್ಲಿದೆ. ಇದರ ಇಬ್ಬದಿಗಳೂ ದಪ್ಪನಾಗಿದ್ದು ಮೇಲುಗಡೆ ತಲೆಬುರುಡೆಯ ಹೆಡತಲೆಯ (ಆಕ್ಸಿಪಿಟಲ್) ಮೂಳೆಯೊಂದಿಗೂ ತಳಗಡೆ 2ನೆಯ ಬೆನ್ನೆಲುಬೊಂದಿಗೂ ಕೀಲುಗೂಡುವುದು. 2ನೆಯ ಬೆನ್ನೆಲುಬಿನ ಕಾಯದ ಮೇಲೆ ದಪ್ಪ ಗೂಟದಂತಿರುವ ಹಲ್ಲುತೆರ ಚಾಚೂ ಇದೆ. ತಲೆಯನ್ನು ಪಕ್ಕಗಳಿಗೆ ತಿರುಗಿಸಿದಾಗ ಎಲುಮೇರು ಸುತ್ತ ತಿರುಗಲು ಈ ಚಾಚು ತಿರುಗಣೆಯಾಗಿದೆ. ಎದೆಗೂಡಿನ ಮೊದಲಿನ 9 ಬೆನ್ಮೂಳೆಗಳ ಕಾಯಗಳ ಇಬ್ಬದಿಗಳಲ್ಲೂ ಪಕ್ಕೆಲುಬುಗಳ ತಲೆಗಳು ಕೂಡುವ ಸಣ್ಣ ಕೀಲುಮೊಗಗಳಿವೆ (ಫೇಸೆಟ್ಸ್). ಸೊಂಟದ ಬೆನ್ನೆಲುಬುಗಳ ಅಡ್ಡನೆಯ ಚಾಚುಗಳಲ್ಲಿ ಕೊರೆಗಂಡಿಗಳೂ ಇಲ್ಲ. ಪಕ್ಕೆಲುಬುಗಳು ಕೂಡುವ ಕೀಲುಮೊಗಗಳೂ ಇಲ್ಲ. ಇಡೀ ಮುಂಡದ ಭಾರವನ್ನೆಲ್ಲ ಹೊರಲೋಸುಗ ಇವುಗಳ ಕಾಯಗಳು ದಪ್ಪತಿಯಾಗಿವೆ.

5 ಬೆನ್ನೆಲುಬುಗಳು ಒಂದುಗೂಡಿ ತ್ರಿಕೋಣಾಕಾರ ತಳೆದಿರುವುದು ಪಾವನಿ (ಸೇಕ್ರಂ) ಮೂಳೆ. ಇಬ್ಬದಿಗಳಲ್ಲೂ ಎರಡೆರಡು ಟೊಂಕೆಲುಬುಗಳೊಂದಿಗೆ ಸೇರಿ ಕಿಳ್ಗುಳಿಯ ನಡುಕಟ್ಟು (ಪೆಲ್ವಿಕ್ ಗರ್ಡಲ್) ಆಗಿದೆ. ಪಾವನಿ ಮೂಳೆ ಮುಂದುಗಡೆ ಕುಳಿಯಾಗಿದ್ದು, ಮೂಲದ 5 ಮೂಳೆಗಳ ಗುರುತಿನ ಅಡ್ಡಗೆರೆಗಳು ಕಾಣುವುವು. ಎರಡು ಪಕ್ಕಗಳಲ್ಲೂ ಇರುವ ಕಂಡಿಗಳಲ್ಲಿ ಇರುವ ಪಾವನಿಯ 4 ನರಗಳ ಮುಂದಣ ಕವಲುಗಳು ತೂರುತ್ತವೆ. ಉಬ್ಬಿರುವ ಹಿಂಭಾಗದಲ್ಲಿ 4 ಮುಳ್ಳಿನ ಚಾಚುಗಳನ್ನು ಕೊಂಚವಾಗಿ ಗುರುತಿಸಬಹುದು. ಹಿಂದಣ 4 ಕಂಡಿಗಳಲ್ಲಿ ಪಾವನಿಯ ನರಗಳ ಹಿಂದಣ ಕವಲುಗಳು ಸಾಗುತ್ತವೆ. ಈ ಕಂಡಿಗಳ ಆಚೆ ಪಕ್ಕದ ಭಾಗಕ್ಕೆ ಮಗ್ಗುಲಿನ ಪಿಂಡಿ (ಲ್ಯಾಟರಲ್ ಮಾಸ್) ಎಂದಿದೆ. ಆಯಾ ಪಕ್ಕಗಳ ಟೊಂಕೆಲುಬೊಂದಿಗೆ (ಇಲಿಯಂ) ಕೀಲುಗೂಡಲು ದೊಡ್ಡ ಒರಟು ಕೀಲುಮೊಗವಿದೆ. ಬೇರೆ ಸಸ್ತನಿಗಳವಕ್ಕಿಂತಲೂ ಮಾನವನ ಪಾವನಿ ಅಗಲವಾಗಿದ್ದು ನೆಟ್ಟಗೆ ನಡೆವಾಗಿನ ಮೈಭಾರವನ್ನು ಇಡೀ ಬೆನ್ನೆಲುಬಿನ ಕಂಬದ ಮೂಲಕ ಹೊರಲು ತಕ್ಕಹಾಗಿದೆ. ಹೆಣ್ಣಿನ ಪಾವನಿ ಗಂಡಿನದಕ್ಕಿಂತಲೂ ಅಗಲವಾಗಿರುವುದರಿಂದ ಇಡೀ ಕಿಳ್ಗುಳಿಯ ಒಳ ಅಳತೆ ಹೆಚ್ಚಾಗಿರುವುದು. 4 ಬೆನ್ನೆಲುಬುಗಳು ಒಂದುಗೂಡಿ ಆಗಿರುವ ಕೋಕಿಲು (ಕಾಕ್ಸಿಕ್ಸ್) ಸಾಮಾನ್ಯವಾಗಿ ಬಾಲದಂತೆ ಪಾವನಿಯ ಕೆಳಕೊನೆಗೆ ಕೀಲುಗೂಡಿರುತ್ತದೆ.

ಇಡೀ ಬೆನ್ನೆಲುಬಿನ ಕಂಬ : ಬೆನ್ನೆಲುಬುಗಳನ್ನು ಇರುವೆಡೆಗಳಲ್ಲಿ ಇರಿಸಿಡಲು ಬಲವಾದ ತಂತುಗಟ್ಟುಗಳಿವೆ. ಬೆನ್ನೆಲುನಡುವಣ ಬಿಲ್ಲೆಗಳು, ಕಾಯಗಳ ನಡುವಣ ಬಟ್ಟುಗಳು ಹಿಂದಣ ಅಲ್ಲದೆ ಮುಂದಣ ನೀಳವಾದ ತಂತುಗಟ್ಟುಗಳು (ಲಿಗಮೆಂಟ್ಸ್) ರೇಕುಪರೆಗಳ ನಡುವಣ ಹಳದಿ ತಂತುಗಟ್ಟು ಇವು ಮುಖ್ಯವಾದುವು. ಮೇಲಿನ ಕೊನೆಯಿಂದ ಕೆಳಕೊನೆಯ ತನಕ ಬೆನ್ನೆಲುಬಿನ ಕಂಬ ಹೇಗೆಂದರೆ ಹಾಗೆ ಬಾಗುವ ಬೆನ್ನೆಲುಬುಗಳ ಕಾಯಗಳ ನಡುವೆ ಮೆತ್ತನೆಯ ಬೆನ್ನೆಲುನಡುವಣ ಬಟ್ಟುಗಳಿವೆ. ಒಂದೊಂದು ಬಟ್ಟಿನಲ್ಲೂ ನಟ್ಟನಡುವೆ ತಂತುಮೆಲ್ಲೆಲುಬಿನ (ಫೈಬ್ರೊ ಕಾರ್ಟಿಲೇಜ್) ನ್ಯೂಕ್ಲಿಯಸಿನ ಪಪ್ಪ (ನ್ಯೂಕ್ಲಿಯಸ್ ಪಲ್ಪೋಸಸ್) ಇದೆ. ಬೆನ್ನೆಲುಬುಗಳ ಕಾಯಗಳನ್ನು ಒಂದಕ್ಕೊಂದು ಬಿಗಿಯಾಗಿ ಕಟ್ಟುವುದು ಈ ತಂತುಮೆಲ್ಲೆಲುಬು. ನ್ಯೂಕ್ಲಿಯಸಿನ ಪಪ್ಪ ಅರೆದ್ರವವಾಗಿದ್ದು ಒತ್ತಡ ಪೆಟ್ಟುಗಳನ್ನು ತಡೆದು ಒಂಗುವಂತಿರುವುದು. ಈ ಒತ್ತಡ, ಪೆಟ್ಟು ತಡೆಯಲಾರದಂತಾದರೆ ತಂತುಮೆಲ್ಲೆಲುಬು ಬಿರಿದು ಸೀಳಿ ನ್ಯೂಕ್ಲಿಯಸಿನ ಪಪ್ಪ ಹೊರಟುಕೊಂಡು ಬೆನ್ನುಹುರಿಯನ್ನು ಒತ್ತಿ ಬೆನ್ನು ವಿಪರೀತ ನೋವಿಡುವುದು. ಇದಕ್ಕೆ ಜಾರಿದ ಬಟ್ಟು ಎಂದು ಹೆಸರು. ಬೆನ್ನೆಲುಬಿನ ಕಂಬ, ಇಡೀ ಎಲುಗಟ್ಟಿನ ನಡುಗಡೆಯ ಅಚ್ಚಿನಂತಿದ್ದು ತಲೆ, ಮುಂಡಗಳ ಭಾರವನ್ನೇ ಅಲ್ಲದೆ ಕೈಗಳದನ್ನೂ ಹೊರುತ್ತದೆ. ಈ ಕಂಬವನ್ನು ಆಡಿಸುವ ಸ್ನಾಯುಗಳವೊಂದಿಗೆ ತಲೆ, ತೋಳುಗಳವೂ ಇದಕ್ಕೆ ತಗುಲಿಕೊಂಡಿವೆ.

ನಿಂತಿರುವ ನೇರ ನಿಲುವಿನಲ್ಲಿ ಬೆನ್ನೆಲುಬಿನ ಕಂಬದಲ್ಲಿ ಸಾಮಾನ್ಯವಾಗಿ ಮೈಯ ಹಿಂದು ಮುಂದಣ ಸಮತಲದಲ್ಲಿ ಕೆಲವು ಕೊಂಕುಗಳಿರುತ್ತವೆ. ಅಡ್ಡನೆಯ ಸಮತಲದಲ್ಲೂ ಕೆಲವಿವೆ. ಆಗತಾನೇ ಹುಟ್ಟಿದ ಹಸುಗೂಸಿನ ಬೆನ್ನೆಲುಬಿನ ಕಂಬದಲ್ಲಿ ಮುಂದುಗಡೆ ಎರಡು ತಗ್ಗುಗಳಿದ್ದು ಪಾವನಿ ಬೆನ್ನೆಲುಬಿನ ಬಳಿ ಸೇರುತ್ತವೆ. ಕೂಸು ತಲೆ ಎತ್ತುವಂತಾದಾಗ ಮುಂದಕ್ಕೆ ಉಬ್ಬುವ ಕೊಂಕು ಕೊರಳಲ್ಲಿ ಆಗುವುದು. ಎಳೆಕೂಸು ನಡೆವಂತಾದಾಗ ಸೊಂಟದಲ್ಲೂ ಹೀಗೇ ಮುಂದಕ್ಕೆ ಉಬ್ಬಿಕೊಳ್ಳುವುದು. ಆದ್ದರಿಂದಲೇ ಬೆಳೆದವರು, ನೆಟ್ಟ ನಿಲುವಿನಲ್ಲಿ ನಡೆವಾಗ ಬೆನ್ನೆಲುಬಿನ ಕಂಬದಲ್ಲಿ ಒಂದಾದ ಮೇಲೊಂದರಂತೆ ಉಬ್ಬುತಗ್ಗುಗಳಿರುತ್ತವೆ. ಈ ಕೊಂಕುಗಳಿಂದ ಪಾವನಿಯ ಮೇಲಿನ ಭಾರ ಹೊರಲು ಸ್ನಾಯುಗಳ ಪಾತ್ರ ತೀರ ಕಡಿಮೆಯಾಗಿರುವುದು. ಪಕ್ಕಕ್ಕೆ ಓಲುವ ಕೊಂಕುಗಳು ಎಲ್ಲರಲ್ಲೂ ಕಂಡುಬರವು. ಬಲಗೈಯನ್ನು ಹೆಚ್ಚು ವಾಡಿಕೆಯಾಗಿ ಬಳಸುವುದರಿಂದ ಬಲಕ್ಕೆ ಕೊಂಚ ಉಬ್ಬಿರಬಹುದು.

ಬೆನ್ನೆಲುಬಿನ ಕಂಬದಲ್ಲಿ ಮೂರು ಚಲನೆಗಳು ಸಾಧ್ಯ. ಹಿಂದಕ್ಕೂ ಮುಂದಕ್ಕೂ ಬಾಗುವುದು ; ಪಕ್ಕಗಳಿಗೆ ಬಾಗುವುದು, ಬೆನ್ನೆಲುಬುಗಳ ಕಾಯಗಳ ಮೇಲೆ ನೆಟ್ಟಗೆ ಸುತ್ತುತಿರುಗುವುದು. ಬೆನ್ನೆಲುಬಿನ ಕಂಬದ ಬೇರೆ ಬೇರೆ ಮಟ್ಟಗಳಾದ ಕೊರಳು, ಎದೆಸೊಂಟಗಳ ನಡುವೆ, ಸೊಂಟ ಪಾವನಿ ಕೂಡುವೆಡೆಗಳಲ್ಲಿ ಚಲನೆ ಬಹಳ. ಕೀಲುಗೂಡಿಸುವ ಚಾಚುಗಳ ಕೀಲುಗಳ ಸಮತಲಗಳು ಬೆನ್ನೆಲುನಡುವಣ ಬಟ್ಟುಗಳ ಹಿಗ್ಗುವ ಗುಣ, ಸ್ನಾಯು ತಂತುಗಟ್ಟುಗಳ ಪುಟಿಯುವ ಗುಣ ಇವು ಈ ಚಲನೆ

ಗಳಿಗೆ ಮಿತಿಗಳು. ಪಕ್ಕೆಲುಬುಗಳು ಅಡ್ಡಿಯಾಗುವುದರಿಂದ ಎದೆಗೂಡಿನಲ್ಲಿ ಬೆನ್ನೆಲುಬಿನ ಕಂಬದ ಚಲನೆಗೆ ಹೆಚ್ಚು ಮಿತಿಗಳಿವೆ.

ಎದೆಗೂಡಿನ ಎಲುಗಟ್ಟು: ಎದೆಚಕ್ಕೆ (ಸ್ಟರ್ನಂ), ಪಕ್ಕೆಲುಬುಗಳೊಂದಿಗಿನ ಮೆಲ್ಲೆಲುಬುಗಳೂ ಎದೆಗೂಡಿನ ಬೆನ್ನೆಲುಬುಗಳೂ ಇದರಲ್ಲಿದೆ. ಬೆನ್ನೆಲುಬುಗಳ ಕಾಯಗಳ ನೆಟ್ಟ ಸಾಲು ಎದೆಗೂಡೊಳಕ್ಕೆ ಮುಂಚಾಚಿರುವುದರಿಂದ ಇಬ್ಬದಿಯಲ್ಲೂ ಹಳ್ಳವಾಗಿದೆ.

ಮೇಲಿನ ಕೈಪಿಡಿಗ (ಮೆನುಬ್ರಿಯಂ), ನಡುವಣ ಕಾಯ, ಕೆಳಗಣ ಕೂರಸಂದ (ಕ್ಸೈಫಾಯ್ಡ್) ಹೀಗೆ ಎದೆಚಕ್ಕೆಯಲ್ಲಿ 3 ಭಾಗಗಳಿವೆ. ಎಳೆಯರಲ್ಲಿನ ಇದರ ಕಾಯದಲ್ಲಿ 4 ಬಿಡಿ ಭಾಗಗಳಿದ್ದ ಗುರುತಿನ ಅಡ್ಡಗೆರೆಗಳು ಹಿಂದೂ ಮುಂದೂ ಕಾಣುತ್ತವೆ. ಮೇಲಿನ 7 ಪಕ್ಕೆಲುಬುಗಳೊಂದಿಗೆ ಕೀಲುಗೂಡಲು ಪಕ್ಕಗಳ ಅಂಚುಗಳಲ್ಲಿ 7 ಕಚ್ಚುಗಳಿವೆ (ನಾಚಸ್). ಕೈಪಿಡಿಗದ ಮಗ್ಗಲುಗಳಲ್ಲಿ ಕೀಲಿಕ (ಕ್ಲಾವಿಕಲ್) ಮೂಳೆಗಳು ಕೂಡಲು ಹಳ್ಳಗಳಿವೆ. ಕೂರಸಂದ ಚಾಚು ತೀರ ವಯಸ್ಸಾಗುವ ತನಕ ಮೆಲ್ಲೆಲುಬಾಗೆ ಉಳಿದಿರುವುದು.

ಎದೆಗೂಡಿನ ಬೆನ್ನೆಲುಬುಗಳೊಂದಿಗೆ ಕೀಲುಗೂಡುವ, ಪಕ್ಕೆಲುಬುಗಳ 12 ಜೋಡಿಗಳು ಬಹಳ ಎಲುಗಟ್ಟುಗಳಲ್ಲಿರುವುವು. ಕೆಲವೇಳೆ, ಪಕ್ಕೆಲುಬುಗಳು ಕೊರಳಲ್ಲೂ ಸೊಂಟದಲ್ಲೂ ಇರಬಹುದು. ಬೆನ್ನೆಲುಬಿನ ಕಂಬದಿಂದ ಪಕ್ಕೆಲುಬುಗಳು ಮೊದಲು ಹಿಂದಕ್ಕೂ ಆಮೇಲೆ ಮುಂದಕ್ಕೆ ಕೆಳಗಡೆಗೂ ಸಾಗಿ ಇನ್ನೂ ಕೆಳಮಟ್ಟದಲ್ಲಿರುವ ಪಕ್ಕೆಲುಬಿನ ಮೆಲ್ಲೆಲುಬುಗಳೊಂದಿಗೆ ಕೂಡಿಕೊಳ್ಳುತ್ತವೆ. ಮೊದಲ 7 ಪಕ್ಕೆಲುಬುಗಳ ನಿಜವಾದ ಪಕ್ಕೆಲುಬುಗಳಾಗಿ ಹೀಗಿರುವುವು. ಹೀಗೆ ಮುಂಗೊನೆಗಳು ಪಕ್ಕೆಲುಬಿನ ಮೆಲ್ಲೆಲುಬೊಂದಿಗೆ ಸೇರದೆ ಹಾಗೇ ಉಳಿದಿರುವ ಕೆಳಗಿನ ಹುಸಿ ಪಕ್ಕೆಲುಬುಗಳು 8, 9, 10ನೆಯ ಪಕ್ಕೆಲುಬುಗಳು, ಎದೆ ಚಕ್ಕೆಯನ್ನು ನೇರವಾಗಿ ಬಿಡಿಯಾಗಿ ಕೂಡದೆ ಮೇಲಿನ ಮೆಲ್ಲೆಲುಬೊಂದಿಗೆ ಕೂಡಿಕೊಳ್ಳುತ್ತವೆ. 11, 12ನೆಯುವು ಯಾವುದನ್ನೂ ಸೇರದೆ ಇರುವುದರಿಂದ ತೇಲುವ ಪಕ್ಕೆಲುಬುಗಳು ಎನಿಸಿವೆ. ಒಂದು ಮಾದರಿ ಪಕ್ಕೆಲುಬಿನಲ್ಲಿ ತಲೆ, ಕತ್ತು, ಕಾವುಗಳಿವೆ (ಷ್ಯಾಫ್ಟ್). ಅಕ್ಕಪಕ್ಕದ ಎರಡು ಬೆನ್ನೆಲುಬುಗಳ ಕಾಯಗಳೊಂದಿಗೆ ತಲೆ ಕೀಲುಗೂಡುತ್ತದೆ. ಬೆನ್ನೆಲುಬಿನ ಅಡ್ಡನೆಯ ಚಾಚಿನೊಂದಿಗೆ ಕೀಲುಗೂಡುವ ಪಕ್ಕೆಲುಬಿನ ಒಂದು ಗುಬಟಿಗೂ (ಟ್ಯೂಬರ್ಕಲ್) ತಲೆಗೂ ನಡುವೆ ಮೋಟಾಗಿ ದಪ್ಪನಾದ ಕತ್ತು ಇದೆ. ಇದರಾಚೆ ಎದೆಗೂಡಿನ ಸುತ್ತ ಬಾಗುವ ಕಾಂಡವಿದೆ. ಒಳಗಡೆ ಕೆಳ ಅಂಚಿನಲ್ಲಿ ನರ, ರಕ್ತನಾಳಗಳು ಸಾಗಲು ಉದ್ದಕ್ಕೂ ತಗ್ಗು ಇದೆ.










ಚಿತ್ರ 2 ಬೆನ್ನೆಲುಬುಗಳಲ್ಲಿ ಮೂರು ಮಾದರಿಗಳು

ಕೈಕಾಲುಗಳಎಲುಗಟ್ಟು: ಸಾಮಾನ್ಯ ಜೋಡಣೆಯಲ್ಲಿ ಕೈಕಾಲುಗಳು ಒಂದನ್ನೊಂದು ಹೋಲಿದರೂ ರಚನೆಯ ವಿವರದಲ್ಲೂ ಮುಂಡಕ್ಕೆ ತಗುಲಿಕೊಂಡಿರುವ ರೀತಿಯೂ ಇವುಗಳ ನಿಜಗೆಲಸಗಳೂ ಬೇರೆ ಬೇರೆ. ಮೈ ಭಾರ ಹೊರುವ ಹೊಣೆಯಿರದೆ, ಕೈಗಳು ಕೇವಲ ಹಿಡಿದುಕೊಳ್ಳುವ ಅಂಗಗಳಾಗಿವೆ. ನಡಿಗೆಯಲ್ಲಿ ಮೈಯನ್ನು ಮುಂದೂಡುವುದೇ ಅಲ್ಲದೆ, ಮುಂದಕ್ಕೆ ಬಿದ್ದು ಹೋಗದ ಹಾಗೂ ಕಾಲುಗಳು ನಿಲ್ಲಿಸುವ ಅಂಗಗಳಾಗಿವೆ. ಕೈಕಾಲುಗಳು ನಡುಕಟ್ಟುಗಳ (ಗರ್ಡ್ಲ್‌ಸ್) ಮೂಲಕ ಅಚ್ಚಿನ ಎಲುಗಟ್ಟಿಗೆ ತಗುಲಿಕೊಂಡಿವೆ. ಮೇಲಿನದು ಹೆಗಲಿನ ನಡುಕಟ್ಟು, ಕೆಳಗಿನದು ಕಿಳ್ಳುಳಿಯ (ಪೆಲ್ವಿಕ್) ನಡುಕಟ್ಟು. ಹೆಗಲದಲ (ಸ್ಕ್ಯಾಪುಲ), ಕೀಲಕಗಳಿರುವ ಮೇಲಿನದು ಬಹುಮಟ್ಟಿಗೆ ಎದೆಗೂಡಿನ ಮೇಲೆ ಆಡುವಂತಿರುವುದು. ಅಲ್ಲದೆ ಕೈ ತೋಳು ಕೂಡ ನಡುಕಟ್ಟಿನ ಮೇಲೆ ಬಹುಮಟ್ಟಿಗೆ ಎಲ್ಲ ದಿಕ್ಕುಗಳಲ್ಲೂ ಆಡಿಸುವಂತಿರುತ್ತದೆ. ಇದರ ಚಲನೆಗಳಿಗೆ ಬೇರೆ ಬೇರೆ ಹೆಸರುಗಳಿವೆ. ಮುಂಚಾಚುವುದು ಮಡಿಸಿಕೆ (ಫ್ಲೆಕ್ಷನ್); ಹಿಂಚಾಚುವುದು ಚಾಚಿಕೆ (ಎಕ್ಸ್‌ಟೆನ್ಷನ್); ಅವಯುವವನ್ನು ಮುಂಡದ ನಡುಗಡೆಗೆ ತಂದರೆ ಒಳಸರಿಕೆ (ಅಡಕ್ಷನ್); ಮುಂಡದಿಂದ ದೂರಕ್ಕೆ ಸರಿಸುವುದು ದೂರಸರಿಕೆ (ಅಬ್ಡಕ್ಷನ್); ಎಡ, ಬಲಗಳಿಗೆ ಅವಯುವವನ್ನು ತಿರುಗಿಸುವುದು (ರೊಟೇಷನ್); ಕೊನೆಯದಾಗಿ, ಇವೆಲ್ಲ ಚಲನೆಗಳನ್ನೂ ಸೇರಿಸಿ ಸುತ್ತಲೂ ಆಡಿಸುವುದು, ಸುತ್ತಿರುಗಣೆ (ಸರ್ಕಂಡಕ್ಷನ್). ಎದೆಗೂಡಿನ ಎಲುಗಟ್ಟಿಗೂ ಈ ನಡುಕಟ್ಟಿಗೂ ಇರುವ ಒಂದೇ ಒಂದು ಸಂಬಂಧ ಕೀಲಕ ಮೂಳೆ. ಇದು ಎದೆಚಕ್ಕೆಯ ಕೈಪಿಡಿಗದ ಪಕ್ಕಕ್ಕೆ ಕೀಲುಗೂಡಿಸುವುದು.

ಪಾವನಿ ಮೂಳೆಯೊಂದಿಗೆ ಕೂಡಿ ಭದ್ರವಾಗಿರುವ ಕಿಳ್ಳುಳಿಯ ನಡುಕಟ್ಟಾಗಿರುವ ರೊಂಡಿಯೆಲುಬೊಂದಿಗೆ ಕಾಲುಗಳು ಕೀಲುಗೂಡುತ್ತವೆ. ಪಾವನಿ ಮೂಳೆ ಮೇಲೆ ಬೀಳುವ ಮುಂಡದ ಭಾರವನ್ನೆಲ್ಲ ರೊಂಡಿಯೆಲುಬಿನ ಮೂಲಕ ತೊಡೆಲುಬಿನ (ಫಿಮರ್) ಅರೆಗುಂಡು ತಲೆಗೆ ಸಾಗಿಸುತ್ತದೆ. ಇದರ ಎದುರಾಗಿ ಕಾಲುಗಳ ಚಲನೆಯ ಬಲವನ್ನು ಇದೇ ಕಿಳ್ಳುಳಿಯ ನಡುಕಟ್ಟು ಮುಂದಕ್ಕೆ ಸಾಗಿಸುವುದು. ಹೆಗಲಿನ ಕೀಲಲ್ಲಿದ್ದ ಹಾಗೇ ರೊಂಡಿ ಕೀಲಲ್ಲೂ ಕಾಲು ಹಲವು ದಿಕ್ಕುಗಳಲ್ಲಿ ಆಡುವುದಾದರೂ ಇದಕ್ಕೆ ಕೊಂಚ ಮಿತಿಯಿದೆ.

ಕೈಕಾಲುಗಳಲ್ಲಿ ಒಂದೊಂದರಲ್ಲೂ, ಹತ್ತಿರದ, ನಡುವಣ, ದೂರಂಚಿನ (ಪೆರಿಫೆರಲ್) ಭಾಗಗಳಿವೆ. ಹತ್ತಿರದ ತುಂಡಿನಲ್ಲಿ ಒಂದು ನೀಳ ಮೂಳೆಯಿದೆ. ಕೈಯಲ್ಲಿರುವುದು ತೋಳ್ಮೂಳೆ (ಹ್ಯೂಮೆರಸ್), ಕಾಲಲ್ಲಿ ತೊಡೆಲುಬು.

ನಡುವಣ ತುಂಡಿನಲ್ಲಿ ಎರಡು ಮೂಳೆಗಳಿವೆ. ಮುಂದೋಳಲ್ಲಿ ಆರೆಲು (ರೇಡಿಯಸ್), ಮೊಣೆಲುಬು (ಅಲ್ನ); ಕಾಲಲ್ಲಿ ಕಣಕಾಲೆ (ಟಿಬಿಯ), ಸೂಚಿಲುಕ (ಫಿಬುಲ). ಹತ್ತಿರದ ತುಂಡಿಗೂ ನಡುವಣ ತುಂಡಿಗೂ ನಡುವೆ ಕೀಲುವೊಳೆ ಕುತ್ತಿಯಂತಿದೆ (ಹಿಂಜ್). ಮೇಲಿನ ಅವಯುವದ್ದು ಮೊಣಕೈಗೀಲು, ಕೆಳಗಿನದು ಮಂಡಿಕೀಲು. ಪೂರ್ತಿ ಚಾಚಿನದಾಗಿದ್ದನ್ನು ಬಿಟ್ಟರೆ ಮಂಡಿಯಲ್ಲಿ ಕಾಲನ್ನು ಒಂದಿಷ್ಟು ಸುತ್ತಿರುಗಿಸಬಹುದಾದರೂ ಮೊಣಕೈ ಕೀಲಿನಲ್ಲಿ ಅಷ್ಟೊಂದು ಸಾಧ್ಯವಿಲ್ಲ. ನಡುವಣ ತುಂಡಿನ ಎರಡು ಮೂಳೆಗಳ ಚಲನೆ ಕೈಕಾಲುಗಳಲ್ಲಿ ಬೇರೆ ಬೇರೆ. ಮುಂದೋಳಲ್ಲಿನ ಆರೆಲು, ಮೊಣೆಲುಬುಗಳ ನಡುವೆ ಬೋರಲಾಗಿಸುವುದೂ (ಪ್ರೋನೇಷನ್) ಅಂಗತ್ತನಾಗಿಸುವುದೂ (ಸೂಪಿನೇಷನ್) ಆಗುವುದಾದರೂ. ಕಾಲಿನಲ್ಲಿ ಹಾಗೆ ಸುತ್ತಿರುಗಿಸುವಂತಿಲ್ಲ.

ಕೈ, ಪಾದಗಳೇ ಎರಡೂ ಅವಯುವಗಳ ಕೊನೆಯ ತುಂಡುಗಳು. 1 ಸಣ್ಣ ಮೂಳೆಗಳ ಸಾಲುಗಳಾಗಿ ಮಣಿಕಟ್ಟಿನಲ್ಲಿ ಮುಂಗೈಯೆಲುಬುಗಳು (ಕಾರ್ಪಲ್ ಬೋನ್ಸ್), ಹರಡಿನಲ್ಲಿ ಮುಂಗಾಲೆಲುಬುಗಳು (ಟಾರ್ಸಸ್); 2 ಉದ್ದನೆಯ ಮೂಳೆಗಳು ಕೈಯಲ್ಲಿ ಅಂಗೈಯೆಲುಬುಗಳೂ (ಮೆಟಕಾರ್ಪಲ್ಸ್) ಪಾದದಲ್ಲಿ ಅಂಗಾಲೆಲುಬುಗಳೂ (ಮೆಟಟಾರ್ಪಲ್ಸ್); 3 ಸಾಮಾನ್ಯವಾಗಿ ಬೆಟ್ಟು, ಬೆರಳು ಎನಿಸಿಕೊಳ್ಳುವವೂ ಇವುಗಳಲ್ಲಿವೆ. ಮುಂದೋಳಿನ ಆರೆಲು ಮೊಣೆಲುಬುಗಳೊಂದಿಗೆ ಮಣಿಕಟ್ಟಿನ ಮುಂಗೈಯೆಲುಬುಗಳು ಕೀಲುಗೂಡಿ ಅಡ್ಡನೆಯ ಅಚ್ಚಿನಲ್ಲಿ, ಅಂದರೆ ಮಣಿಕಟ್ಟು ಮಡಿಸುವ ಚಾಚುವ ಚಲನೆಗಳು ಸಾಧ್ಯ. ಇವುಗಳೊಂದಿಗೆ ಅಂಗೈಯನ್ನು ಒಳಸರಿಸುವುದೂ ದೂರಸರಿಸುವುದೂ ಆಗುವುದು. ಹರಡಿನಲ್ಲಿ ಮುಂಗಾಲೆಲುಬುಗಳು ಕಣಕಾಲೆ, ಸೂಚಿಲುಕ ಮೂಳೆಗಳೊಂದಿಗೆ ಕೂಚುವ ಕೀಲಿನಲ್ಲಿ ಕೇವಲ ಮಡಿಸುವುದು ಚಾಚುವುದಕ್ಕೆ ಮಾತ್ರ ಮಿತಿಗೊಂಡಿದೆ. ಪಾದದಲ್ಲಿ ಕೆಲವು ಅಂಗಾಲೆಲುಬುಗಳ ನಡುವೆ ಒಂದಿಷ್ಟು ಚಲನೆ ಆಗಬಹುದು. ಪಾದದ ತಳವನ್ನು ಒಳಮೊಗವಾಗುವಂತೆ ತಿರುಗಿಸುವುದಕ್ಕೆ ಒಳತಿರುವು (ಇನ್‌ವರ್ಷನ್) ಎಂದೂ ಹೊರಮೊಗವಾಗುವುದಕ್ಕೆ ಹೊರತಿರುವು (ಎವರ್ಷನ್) ಎಂದೂ ಇವೆ. ಈ ತಿರುವುಗಳಿಂದ ನೆಲದ ಸೊಟ್ಟುಗಳಿಗೆ ತಕ್ಕಂತೆ ಪಾದದ ತಳ ಹೊಂದಿಕೊಳ್ಳುವಂತಿರುತ್ತದೆ.

ಕೈಕಾಲುಗಳ ಬೆರಳುಗಳ ಚಲನೆಗಳು ಬಹುಮಟ್ಟಿಗೆ ಒಂದೇ ತೆರನು. ಆದರೆ ಹೆಬ್ಬೆರಳಿನ ಅಂಗೈಯೆಲುಬಿಗೂ ಮಣಿಕಟ್ಟಿನ ಒಂದು ಮುಂಗೈಯೆಲುಬಿಗೂ ನಡುವಣ ಕೀಲಿನಲ್ಲಿ ಸುತ್ತಿರುಗಿಸುವಂತಿದೆ. ಕಾಲಿನ ಹೆಬ್ಬೆಟ್ಟಿನಲ್ಲಿ ಹೀಗೆ ಮಾಡುವಂತಿಲ್ಲ. ಒಟ್ಟಿನಲ್ಲಿ ಕೈಯಲ್ಲಿನ ಬೆರಳುಗಳಲ್ಲಿನಷ್ಟು ಸರಾಗ ಚಲನೆಗಳು ಪಾದದಲ್ಲಿ ಸಾಧ್ಯವಿಲ್ಲ.

ಮೇಲಿನ ಅವಯುವ: ಹೆಗಲಲ್ಲಿರುವ ಕೀಲಿಕ, ಹೆಗಲದಲ (ಸ್ಕ್ಯಾಪುಲ), ತೋಳೆಲುಬು, ಮುಂದೋಳಿನ ಆರೆಲು, ಮೊಣೆಲುಬುಗಳೂ ಕೈಯಲ್ಲಿ ಹಲವು ಸಣ್ಣ ಮೂಳೆಗಳು ಇದರಲ್ಲಿವೆ.

ಕೀಲಿಕ : ಈ ಕೊರಳೆಲುಬು (ಜತ್ರು) ಎದೆಚಕ್ಕೆಯ ಮೇಲ್ಕೊನೆಯಿಂದ ಅಡ್ಡನಾಗಿದ್ದು ಹೆಗಲದಲದ ತೀರ ಆಚಿನ ಚಾಚು, ಹೆಗಲ್ಕೊನೆಯಲ್ಲಿ (ಅಕ್ರೋಮಿಯಾನ್) ಕೀಲುಗೂಡುವುದು. ಇದು ವಿಶಿಷ್ಟವಾದ ಆಕಾರದಲ್ಲಾಗಿದೆ. ಹೆಂಗಸರಲ್ಲಿ




ಚಿತ್ರ 3 ಮಾನವನ ಎಲುಗಟ್ಟು

ಕೋಮಲವಾಗಿದ್ದರೂ, ಒಳ್ಳೆಯ ಕಟ್ಟುಮಸ್ತಾಗಿರುವ ಗಂಡಸರಲ್ಲಿ ಜೋರಾಗಿರುವುದು. ಇದರ ಆಚೆ ಕೊನೆ ಚಪ್ಪಟೆಯಾಗಿದೆ. ಇದರ ಈಚೆ ಕೊನೆ, ಎದೆಚಕ್ಕೆ ಒಂದನೆಯ ಪಕ್ಕೆಲುಬು ಇವುಗಳ ನಡುವೆ ಬಲವಾದ ತಂತುಗಟ್ಟುಗಳು ಬಿಗಿದಿವೆ. ಕೀಲಿಕದ ಕಾವಿಗೆ ಹೆಗಲಿನ ನಡುಕಟ್ಟಿನ ಸ್ನಾಯುಗಳು ತಗುಲಿಕೊಂಡಿರುತ್ತವೆ.

ಹೆಗಲದಲ : ಎದೆಯ ಹಿಂದುಗಡೆ 2ನೆಯದರಿಂದ 8ನೆಯ ಪಕ್ಕೆಲುಬುಗಳ ನಡುವಣ ಮಟ್ಟದಲ್ಲಿರುವ ಈ ಚಪ್ಪಟೆ ಮೂಳೆ ತ್ರಿಕೋನಾಕಾರದಲ್ಲಿದೆ. ಹಳ್ಳವಾಗಿರುವ ಇದರ ಮುಂದಣ ಮೇತಲ ಪಕ್ಕೆಲುಬುಗಳ ಕಡೆಗಿದೆ. ಇರದ ಹಿಂದಣ ಮೇತಲದಲ್ಲಿ ಐಮೂಲೆಯಾಗಿ ದೊಡ್ಡ ಏಣಾದ ಮುಳ್ಳುಚಾಚು(ಸ್ಪೈನ್) ಇರುವುದರಿಂದ, ಮುಳ್ಳುಚಾಚುಮೇಲಣ (ಸುಪ್ರಸ್ಪೈನಸ್), ಮುಳ್ಳುಚಾಚು ಕೆಳಗಣ (ಇನ್‌ಫ್ರಸ್ಪೈನಸ್) ತಗ್ಗುಗಳಾಗಿವೆ (ಫಾಸ). ತೋಳನ್ನು ತಿರುಗಿಸುವ ಸ್ನಾಯುಗಳು ಈ ಮುಳ್ಳುಚಾಚಿಗೂ, ಇವೆರಡು ತಗ್ಗುಗಳಿಗೂ ತಗುಲಂಟಿವೆ. ಮುಳ್ಳುಚಾಚು ಮುಂದಕ್ಕೆ ಕಮಾನಾಗಿ ಚಾಚಿಕೊಂಡು ಅಗಲನ್ನೆಯ ಹೆಗಲ್ಕೊನೆಯಾಗುತ್ತದೆ. ತೋಳನ್ನು ಆಡಿಸುವಾಗ ಹೆಗಲನ್ನು ಹಿಡಿದಿಡಲೋ ಆಡಿಸಲೋ ಇರುವ ಸ್ನಾಯುಗಳು ಹೆಗಲಗಲದ ಅಂಚುಗಳಿಗೆ ತಗುಲಿಕೊಂಡಿರುವುವು. ಹೆಗಲದಲದ ಮೂರು ಕೋನಗಳಲ್ಲಿ ಹೊರಗಿನದರಲ್ಲಿ ದಪ್ಪನಾಗಿ ಆಳವಿಲ್ಲದ ಕುಳಿಯಿಂದ (ಗ್ಲಿನಾಯ್ಡ್) ತಗ್ಗು ಇರುವುದು. ತೋಳ್ಮೂಳೆಯ ಗುಂಡುತಲೆ ಈ ತಗ್ಗಿನೊಂದಿಗೆ ಕೂಡಿಯೇ ಹೆಗಲಿನ ಕೀಲು ಆಗಿರುತ್ತದೆ. ಕುಳಿಯಿಂದ ತಗ್ಗಿನ ಮೇಲೆ ತೂಗುವಂತೆ ಕೊಕ್ಕಂದ ಚಾಚು (ಕೊರನಾಯ್ಡ್ ಪ್ರೋಸೆಸ್) ಇದೆ.

ತೋಳ್ಮೂಳೆ : ಮಾದರಿಯಾದ ನೀಳ ಮೂಳೆಯಾದ್ದರಿಂದ ಇದಕ್ಕೂ ಒಂದು ಕಾವು, ಎರಡು ಹಿಗ್ಗಿದ ಕೊನೆಗಳಿವೆ. ಮೇಲೆ ಕೊನೆಯ ಅರೆಗೋಳಾಕಾರದ ತಲೆಯ ನುಣ್ಣನೆ ಮೇತಲ ಹೆಗಲದಲದ ಕುಳಿಯಿಂದ ತಗ್ಗಿನೊಂದಿಗೆ ಕೀಲುಗೂಡುವುದು. ತಲೆಯೂ ಕಾವೂ ಒಂದಾಗುವೆಡೆಯಲ್ಲಿರುವ ಎರಡು ಗುಬಟುಗಳಿಗೆ ಹೆಗಲದಲದ ತಗ್ಗುಗಳಿಂದ ಬರುವ ಸುತ್ತಿರುಗಿಸುವ ಸ್ನಾಯುಗಳು ತಗುಲಂಟಿರುವುವು. ಈ ಗುಬಟುಗಳ ನಡುವೆ ಇರುವ ತೋಡಿನಲ್ಲಿ (ಗ್ರೂವ್) ಇತ್ತಲೆಗದ (ಬೈಸೆಪ್ಸ್) ಉದ್ದನೆಯ ಕಂಡರ (ಟೆಂಡನ್) ಆಡುವುದು. ತೋಳ್ಮೂಳೆಯ ಕಾವಿನ ಮೇಲ್ಗಡೆ ಅಡ್ಡ ಕೊಯ್ತದಲ್ಲಿ ಮೂರು ಪಕ್ಕೆಗಳಿರುವಂತೆ ಕಂಡರೂ ಕೆಳಗಡೆ ಚಪ್ಪಟೆಯಾಗಿ ಹಿಗ್ಗಿದಂತಿರುವುದು. ಕಾವಿನ ಹಿಂದುಗಡೆ ಸುತ್ತಸುತ್ತುವ ಆಳವಿಲ್ಲದ ಒಂದು ತೋಡಿನಲ್ಲಿ ಆರೆಲುವಿನ (ರೇಡಿಯಲ್) ನರ ಸಾಗುತ್ತದೆ. ಕೆಳಕೊನೆಯ ಹೊರ ಪಕ್ಕದ ಕೀಲುಗೂಡುವ ಜಾಗವಾದ ಎಲುದಲಿ (ಕ್ಯಾಪಿಟುಲಂ) ಆರೆಲುವಿನ ತಲೆಯೊಂದಿಗೂ ಒಳಪಕ್ಕದ ಎಲುಕಪ್ಪಿ (ಟ್ರೊಕ್ಲಿಯ) ಮೊಣೆಲುಬೊಂದಿಗೂ ಕೀಲುಗೂಡುತ್ತವೆ. ಕೆಳ ಕೊನೆಯ ಕೀಲುಗೂಡದ ಭಾಗಗಳಲ್ಲಿ ಎರಡು ಬದಿಗಳಲ್ಲೂ ಒಂದೊಂದು ಮೇಲೆಲುಗೆಣ್ಣುಗಳಿವೆ (ಎಪಿಕಾಂಡೈಲ್ಸ್). ಇವುಗಳ ಮೇಲುಗಡೆ ಎಲುಗೆಣ್ಣು ಮೇಲಣ ಏಣುಗಳಿವೆ (ಸುಪ್ರಕಾಂಡೈಲಾರ್ ರಿಡ್ಜಸ್). ಮುಂದೋಳನ್ನು ಬೋರಲು ಹಾಕುವ ಅದನ್ನೂ ಬೆರಳುಗಳನ್ನೂ ಮಡಿಸುವ ಸ್ನಾಯುಗಳು ಒಳಪಕ್ಕದ ಮೇಲೆಲುಗೆಣ್ಣು, ಏಣುಗಳಿಗೆ ತಗುಲಂಟಿರುವುವು. ಹಾಗೇ ಮುಂದೋಳನ್ನು ಅಂಗತ್ತನಾಗಿಸುವ ಮಣಿಕಟ್ಟು, ಬೆರಳುಗಳನ್ನು ಹಿಂಬಾಗಿಸುವ ಸ್ನಾಯುಗಳು ಆಚೆಪಕ್ಕದ ಮೇಲೆಲುಗೆಣ್ಣು, ಏಣುಗಳಿಗೆ ಅಂಟಿಕೊಂಡಿರುತ್ತದೆ.

ಆರೆಲು : ಮುಂದೋಳಿನ ಹೊರಪಕ್ಕದಲ್ಲಿರುವ ನೀಳಮೂಳೆ. ಇದರ ಮೇಲ್ಕೊನೆಯಾದ ತಲೆ, ಬಟ್ಟಿನ ರೂಪದಲ್ಲಿದ್ದು ತೋಳ್ಮೂಳೆಯೊಂದಿಗೂ ಅದರ ಅಂಚು ಮೊಣೆಲುಬೊಂದಿಗೂ ಕೀಲುಗೂಡುವುದು. ತಲೆಯ ಕೆಳಗೆ ಕೊರಳಿದೆ. ಇದರ ಕೆಳಗಿರುವ ಗುಂಡುಬ್ಬಿಗೆ ಇತ್ತಲೆಗ ಸ್ನಾಯು ತಗುಲಂಟಿದೆ. ಮಣಿಕಟ್ಟು, ಬೆರಳುಗಳನ್ನು ಆಡಿಸುವ ಸ್ನಾಯುಗಳು ಆರೆಲುವಿನ ಕಾವಿಗೆ ತಗುಲಂಟಿದೆ. ಮುಂದೋಳಿನ ಮುಂದಣ, ಹಿಂದಣ ರಚನೆಗಟ್ಟುಗಳನ್ನು ಬೇರ್ಪಡಿಸುವಂತಿರುವ ಎಲುನಡುವಣ (ಇಂಟರಾಸಿಯಸ್) ಪದರ, ಆರೆಲುವಿನ ಚೂಪಾದ ಒಳ ಅಂಚಿನುದ್ದಕ್ಕೂ ತಗುಲಿರುವುದು. ಇದರ ಎರಡು ತಲಗಳಲ್ಲೂ ಸ್ನಾಯುಗಳು ತಗುಲಂಟಿರುತ್ತವೆ. ಈ ಮೂಳೆಯ ಕೆಳಗಿನ ಕೊನೆ ಮೇಲಿನದಕ್ಕಿಂತಲೂ ಬಲು ದಪ್ಪ. ಮೊನೆಯಾದ ಚಾಚು ಹೊರಂಚಿಂದ ಕೆಳಕ್ಕೆ ಬಾಚಿರುವುದು. ಇದರ ಒಳಪಕ್ಕ ನುಣುಪಾಗಿದ್ದು ಮೊಣೆಲುಬಿನ ಕೆಳಕೊನೆಯಾದ ತಲೆಯೊಂದಿಗೂ ಉಳಿದ ಕೆಳಪಕ್ಕ ಮಣಿಕಟ್ಟಿನ ಎರಡು ಮುಂಗೈಯೆಲುಬುಗಳೊಂದಿಗೂ ಕೀಲುಗೂಡುವುವು.

ಮೊಣೆಲುಬು : ಮುಂದೋಳಿನ ಒಳಪಕ್ಕದಲ್ಲಿನ ನೀಳಮೂಳೆ. ಇದರ ಮೇಲಿನ ಕೊನೆಯ ಎರಡು ಬಲವಾದ ನುಣುಪಾದ ಚಾಚುಗಳ ನಡುವೆ ಎಲುಕಪ್ಪಿಯ ಕಚ್ಚು ಇದ್ದು, ತೋಳ್ಮೂಳೆಯೊಂದಿಗೆ ಕೀಲುಗೂಡುತ್ತದೆ. ಇವರಲ್ಲಿ ಕೆಳಗಿನ ಕೊಕ್ಕಂದ (ಕೊರೆಕಾಯ್ಡ್) ಚಾಚು ಒರಟು. ಮುಂದೋಳನ್ನು ಬಲವಾಗಿ ತೋಳಿನ ಮೇಲೆ ಮಡಿಸುವ ತೋಳು ಸ್ನಾಯು ಇಲ್ಲಿ ತಗುಲಂಟಿದೆ. ಮುಂದೋಳನ್ನು ಜೋರಾಗಿ ನೀಟುವ ಸ್ನಾಯುವಾದ ಮೂದಲೆಗ (ಟ್ರೈಸೆಪ್ಸ್) ಹಿಂದುಗಡೆ ತುದಿ ಮೇಲಿರುವ ಮೊಣಕೊನೆ (ಓಲಿಕ್ರೇನನ್) ಚಾಚಿಗೆ ಹಿಂದಿನಿಂದ

ತಗುಲಂಟಿರುವುದು. ಮಣಿಕಟ್ಟು, ಬೆರಳುಗಳನ್ನು ಆಡಿಸುವ ಮುಂದೋಳನ್ನು ಬೋರಲಾಗೂ ಅಂಗತ್ತನಾಗೂ ಹಾಕಿಸುವ ಸ್ನಾಯುಗಳು ತಗುಲಿಕೊಳ್ಳಲು, ಮೊಣೆಲುಬಿನ ಕಾವಿನಲ್ಲಿ 3 ಪಕ್ಕಗಳಿವೆ. ಮೊನಚಾದ ಆಚೆಪಕ್ಕದ ಅಂಚಿನುದ್ದಕ್ಕೂ ಎಲುನಡುವಣ ಪದರ ಅಂಟಿರುತ್ತದೆ. ಮೇಲಿನ ಕೊನೆಗಿಂತ, ಕೆಳಗಿನದು ತೀರ ಸಣ್ಣದು. ಇದಕ್ಕೂ ಒಂದು ಕಂಬದಂಡ (ಸ್ಟೈಲಾಯ್ಡ್) ಚಾಚು ಇದೆ. ಇದರ ಹೊರಪಕ್ಕ ಅರೆಲುವಿನೊಂದಿಗೆ ಕೀಲುಗೂಡುತ್ತದೆ. ಇದರ ಕೆಳಪಕ್ಕ ತಂತು ಮೆಲ್ಲೆಲುಬಿಗೆ ತಾಕಿರುವುದು. ಮೊಣಕೈ ಕೀಲಿನಲ್ಲಿ ಅರೆಲುವಿಗಿಂತ ಮೊಣೆಲುಬಿನ ಪಾತ್ರವೇ ದೊಡ್ಡದು. ಹಾಗೇ ಮಣಿಕಟ್ಟಿನೊಂದಿಗೆ ಕೀಲುಗೂಡುವಾಗ ಅರೆಲುವಿನ ಪಾತ್ರ ಹಿರಿಯದು. ಮಣಿಕಟ್ಟನ್ನು ತಿರುವಿದಾಗ, ಸುಮ್ಮನಿರುವ ಮೊಣೆಲುಬಿನ ಸುತ್ತಲೂ ಅರೆಲು ಸುತ್ತುವುದು. ಅಂಗೈ ಮುಂದಕ್ಕೆ ತೋರುತ್ತಿರುವಾಗ ಅರೆಲು, ಮೊಣೆಲುಬು ಎರಡೂ ಸಮದೂರದಲ್ಲಿರುವುವು. ಅಂಗೆ ತಿರುವಿಹಾಕಿದರೆ ಮೊಣೆಲುಬಿನ ಮೇಲೆ ಅರೆಲು ಕೋಸೆಯಾಗಿ ಬೀಳುವುದು.

ಕೈ : ಮಣಿಕಟ್ಟು, ಅಂಗೈ, ಬೆರಳುಗಳು ಇದರಲ್ಲಿವೆ. ಮಣಿಕಟ್ಟಿನ 8 ಸಣ್ಣ ಮುಂಗೈ ಎಲುಬುಗಳು 2 ಸಾಲುಗಳಲ್ಲಿವೆ. 5 ಅಂಗೈ ಎಲುಬುಗಳೂ ಪುಟಾಣಿ ನೀಳ ಮೂಳೆಗಳೇ. ಹೆಬ್ಬೆರಳಿನದೇ ಬಲು ಸಣ್ಣದು. ಉಳಿದವನ್ನು ಬಿಟ್ಟು ಪಕ್ಕಕ್ಕೆ ಬಾಗಿರುವುದು. ಅಂಗೈ ಎಲುಬುಗಳು ಮಣಿಕಟ್ಟಿನ ಕೆಳಸಾಲಿನ 4 ಮುಂಗೈ ಎಲುಬೊಂದಿಗೂ ಬೆರಳಿನ ಹತ್ತಿರದ ಎಲುವೆರಳೊಂದಿಗೂ (ಫೆಲ್ಯಾಂಕ್ಸ್) ಕೀಲುಗೂಡುತ್ತವೆ. ಹೆಬ್ಬೆರಳಲ್ಲಿ 2 ಎಲುವೆರಳುಗಳೂ ಉಳಿದ ತೋರು, ನಡು, ಉಂಗುರ, ಕಿರು ಬೆರಳುಗಳಲ್ಲಿ ಮೂರು ಮೂರೂ ಇವೆ. ಒಂದೊಂದು ಎಲುವೆರಳೂ ಪುಟ್ಟ ನೀಳ ಮೂಳೆ. ಮಣಿಕಟ್ಟಿನಲ್ಲಿರುವ ಮುಂಗೈ ಎಲುಬುಗಳು ಒಂದರೊಡನೊಂದು ಬಲವಾಗಿ ಬಿಗಿದಂತಿದ್ದರೂ ಒಂದಿಷ್ಟು ಚಲನೆ ಆಗುವಂತಿದೆ. ಮಣಿಕಟ್ಟಿನ ಅಂಗೈಪಕ್ಕ, ಹಳ್ಳವಾಗಿ ಒಂದು ಬಲವಾದ ತಂತುಗಟ್ಟು ಮೇಲೇ ಹಾದು ಇದನ್ನು ಸುರಂಗವಾಗಿಸಿದೆ. ಬೆರಳುಗಳಿಗೆ ಹೋಗುವ ರಕ್ತನಾಳಗಳು, ನರಗಳು, ಕಂಡರಗಳು ಈ ಸುರಂಗದಲ್ಲಿ ಸಾಗುವುವು–ಹೆಬ್ಬೆರಳಿನ ಹಲತೆರನ ಚಲನೆಗಳು ಮಾನವನ ಬಲು ಹೆಚ್ಚಿನ ಗುಣ.

ಕೆಳಗಿನ ಅವಯವ : ಇದರಲ್ಲಿ ಕೊಂಡಿಮೂಳೆ, ತೊಡೆಲುಬು ಮಂಡಿಚಿಪ್ಪು, ಕಣಕಾಲೆ (ಟಿಬಿಯ), ಸೂಜಿಲುಕ (ಫೆಬುಲ), ಪಾದದ ಹಲವು ಮೂಳೆಗಳೂ ಇವೆ.



ಚಿತ್ರ 4 ಕೊಂಡಿಯೆಲುಬುಗಳೂ ಪಾವನಿಯೂ ಕೂಡಿ ಆಗಿರುವ ಕಿಳ್ಗುಳಿಗಳು. ಮೇಲಿನದು ಗಂಡಸಿನದು, ಕೆಳಗಿನದು ಹೆಂಗಸಿನದು.

ಕಿಳ್ಗುಳಿಯ ಪಕ್ಕ, ಮುಂಗೋಡೆಗಳಾಗುವ ದೊಡ್ಡ ಡೊಂಕು ಮೂಳೆ ರೊಂಡಿಮೂಳೆ. ಎಳೆತನದಲ್ಲಿ ಬೇರೆ ಬೇರೆಯಾಗಿರುವ ಟೊಂಕೆಲುಬು (ಐಲಿಯಂ), ಕುಂಡೆಲುಬು (ಇಸ್ಕಿಯಂ), ಗುಂಜೆಲುಬುಗಳು (ಪ್ಯೂಬಿಸ್) 18–20 ವರ್ಷಗಳ ವಯಸ್ಸಿಗೆ ಒಂದುಗೂಡುತ್ತವೆ. ಇವು ಮೂರೂ ಕೂಡುವೆಡೆ, ತೊಡೆಲುಬಿನ ಇಡೀ ಗುಂಡುತಲೆ ಕೂಡುವಂತೆ ಒರಳಂತಿರುವ, ಎಲುಗುಂದಣ (ಅಸಿಟ್ಯಾಬುಲಂ) ಇದೆ. ಎಲುಗುಂದಣದ ಮೇಲ್ಗಡೆ ಹೊರಚಾಚಿಕೊಂಡಿರುವುದು ಟೊಂಕೆಲುಬು, ಕೆಳಗಿರುವುದು ಕುಂಡೆಲುಬು, ಮುಂದಕ್ಕೆ ಒಳ ಚಾಚಿರುವುದು ಗುಂಜೆಲುಬು. ಈ ಮೂರು ಮೂಳೆಗಳ ನಡುವೆ ಕಂಡಿತಡೆಕ (ಆಬ್ಟ್ಯುರೇಟರ್) ತೂರುಗಂಡಿ (ಫೋರಮನ್) ಇದೆ.

ಕಿಳ್ಗುಳಿ : ರೊಂಡಿಮೂಳೆಗಳು ಮುಂದುಗಡೆ ಕೂಡೇಣಲ್ಲೂ (ಸಿಂಫೈಸಿಸ್) ಹಿಂದುಗಡೆ ಪಾವನಿ ಪಕ್ಕಗಳಲ್ಲೂ ಕೀಲುಗೂಡುವುದರಿಂದ ಕಿಬ್ಬೊಟ್ಟೆಯಲ್ಲಿರುವ ಎಲುಗಟ್ಟಾದ ಕಿಳ್ಗುಳಿಯ ನಡುಕಟ್ಟು ಆಗುವುದು. ಕಿಬ್ಬೊಟ್ಟೆ ಅಂದರೆ, ಈ ಎಲುಬುಗಳ ನಡುವಣ ಪೊಳ್ಳೇ ಹೊರತು ಅದರ ಸುತ್ತಣ ಮೂಳೆಯಲ್ಲ. ಕಿಳ್ಗುಳಿಯಲ್ಲಿ ಹಿರಿಯ ಹುಸಿ ಭಾಗ, ಕಿರಿಯ ದಿಟ ಭಾಗಗಳಿವೆ. ದಿಟ ಕಿಳ್ಗುಳಿಗೆ




ಚಿತ್ರ 5 ರೊಂಡಿಯೆಲುಬಿನ ಹೊರ, ಒಳಪಕ್ಕಗಳು

ಮೇಲಣ ಕಂಡಿ, ಪೊಳ್ಳು, ಕೆಳಗಣ ಕಂಡಿಗಳಿವೆ. ಹೆರಿಗೆ ಮುಂಚೆ ಪಿಂಡಗೂಸಿನ (ಫೀಟಸ್) ತಲೆ ಕೆಳಗಿಳಿವುದು ದಿಟ ಕಿಳ್ಗುಳಿಯೊಳಕ್ಕೇ. ದಿಟ ಕಿಳ್ಗುಳಿಯ ಮೇಲಿರುವ ಹುಸಿ ಕಿಳ್ಗುಳಿ ಅಗಲವಾಗಿದ್ದು ಟೊಂಕೆಲುವಿನ ತಗ್ಗುಗಳು ಎರಡು ಪಕ್ಕಗಳಲ್ಲಿವೆ. ನೆಟ್ಟಗೆ ನಿಂತುಕೊಂಡಿರುವಾಗ, ಕಿಳ್ಗುಳಿ ಸಹಜವಾಗಿ ಮುಂದಕ್ಕೆ ಇಳಿಜಾರಾಗುವಂತೆ ಬಾಗಿರುವುದರಿಂದ, ಪಾವನಿಯ ಮೇಲಿನ ಅಂಚು ಗುಂಜೆಲುವಿನ ಕೂಡೇಣಿಗೂ ಎತ್ತರದಲ್ಲಿರುತ್ತದೆ.

ಹೆಣ್ಣಿನ ಕಿಳ್ಗುಳಿಗೂ ಗಂಡಿನದಕ್ಕೂ ಹಲವು ವ್ಯತ್ಯಾಸಗಳಿವೆ. ಹೆಣ್ಣಿನಲ್ಲಿ ಮೂಳೆಗಳು ನುಣುಪಾಗಿ ಕೋಮಲವಾಗಿದ್ದು, ಸ್ನಾಯುಗಳು ತಗುಲಿಕೊಳ್ಳುವ ಏಣುಗಳು, ಚಾಚುಗಳು ಅಷ್ಟಾಗಿ ಎದ್ದುಕಾಣುತ್ತಿರವು. ಆಳ ಕಡಿಮೆ, ದಿಟ ಕಿಳ್ಗುಳಿಯ ಒಳಗಂಡಿ ಇನ್ನೂ ಗುಂಡಗೂ ಗುಂಜೆಲುಗಳಿಂದಾದ ಕೆಳಗಿನ ಕಮಾನು ಇನ್ನೂ ಅಗಲಕ್ಕೂ ಇರುವುವು. ಕುಂಡೆಲುಗಳ ಗುಂಡುಬ್ಬುಗಳು, ಹೆರಿಗೆಯಲ್ಲಿ ಪಿಂಡಗೂಸು ಹೊರಬೀಳಲು ಅಡ್ಡಿಯಾಗದಂತೆ ಇನ್ನೂ ದೂರದೂರ ಇವೆ. ಎಲುಗುಂದಣವೂ ಚಿಕ್ಕದು. ಒಟ್ಟಿನಲ್ಲಿ ಇಡೀ ಕಿಳ್ಗುಳಿಯ ಅಡ್ಡಗಲ ಹೆಚ್ಚಿರುವುದರಿಂದಲೇ ಹೆಣ್ಣಿನ ಪಿರ್ರೆಗಳು ದೊಡ್ಡವು. ಕಿಳ್ಗುಳಿಯ ಒಳಗಿನ ಅಳವು ಹೆಚ್ಚಿರುವುದರಿಂದ, ಬಸುರಿನಲ್ಲಿ ಗರ್ಭಕೋಶ ದೊಡ್ಡದಾಗಿ ಬೆಳೆಯಲು ಅನುಕೂಲಕರ.

ಟೊಂಕೆಲುಬಿನ ಕೆಳಗಿನ ಸಣ್ಣ ಭಾಗ ಎಲುಗುಂದಣದಲ್ಲಿ ಸೇರಿದೆ. ಅಗಲದ ತಟ್ಟೆಯಂತಿರುವ ಮೇಲಿನ ಭಾಗದ ಹೊರ ಅಂಚು ಉಬ್ಬೇಣು (ಕ್ರೆಸ್ಟ್) ಎನಿಸಿಕೊಳ್ಳುತ್ತದೆ. ಕಿಬ್ಬದಿ ಕೆಳಗಡೆ ಇದನ್ನು ಮೈಮೇಲೆ ಮುಟ್ಟಲು ಸಿಗುವುದು. ಹೊಟ್ಟೆ ಗೋಡೆಯ ಅಗಲವಾದ ಸ್ನಾಯುಗಳು ನೆಲೆಯೂರುವುದು ಇಲ್ಲೇ. ಟೊಂಕೆಲುಬಿನ ಹೊರ ಪಕ್ಕದಲ್ಲಿ ಕುಂಡಿಯ ಸ್ನಾಯುಗಳು ಕೂಡಂಟಿವೆ. ಒಳಪಕ್ಕದ ಮುಂಭಾಗ ತಗ್ಗಾಗಿದ್ದು, ತೊಡೆಯನ್ನು ಮಡಿಸುವ ಟೊಂಕೆಲು ಸ್ನಾಯು ಕೂಡಂಟಿರುವುದು. ಹಿಂದುಗಡೆ L ಆಕಾರದ ಒರಟು ಭಾಗ ಪಾವನಿಯೊಂದಿಗೆ ಗಟ್ಟಿಯಾಗಿ ಕೀಲುಗೂಡುವುದು.

ಗುಂಜೆಲುವಿನಲ್ಲಿ ನಡುವೆ ಕಾಯವೂ ಎರಡು ಕವಲುಗಾಲೂ (ರೇಮೈ) ಇರುವುದರಿಂದ ∩ ಆಕಾರದಲ್ಲಿದೆ. ಎರಡು ಪಕ್ಕಗಳ ಗುಂಜೆಲುಗಳೂ ಕೂಡೇಣಿನಲ್ಲಿ ಕೂಡುವೆಡೆ ಇದರ ಕಾಯ ಚಪ್ಪಟೆಯಾಗಿರುತ್ತದೆ. ಮೇಲಿನ ಕವಲುಗಾಲು ಹಿಂದಕ್ಕೆ ಹೋಗಿ ಟೊಂಕೆಲುವನ್ನೂ ಕೆಳಗಿನದು ಕುಂಡೆಲುಬಿನದರೊಂದಿಗೂ ಸೇರಿಕೊಳ್ಳುತ್ತವೆ.

ಹೆಚ್ಚು ಕಡಿಮೆ U ಆಕಾರದಲ್ಲಿರುವ ಕುಂಡೆಲುಬಿನ ಮೇಲಿನ ಕೊನೆ ಎಲುಗುಂದಣದಲ್ಲಿ ಕೂಡುವುದು. ಕೆಳ ಭಾಗ ಗುಂಜೆಲುವೊಂದಿಗೆ ಕೂಡಿ ಕಂಡಿತಡೆಕ ತೂರುಗಂಡಿಯ (ಆಬ್ಟುರೇಟರ್ ಫೋರಮನ್) ಕೆಳ ಅಂಚಾಗುವುದು. ಇದರ ಎರಡು ಕವಲುಗಾಲುಗಳಿಗೂ ತೊಡೆಯನ್ನು ನಡುಗಡೆಗೆಳೆವ ಸ್ನಾಯು ಅಂಟಿರುತ್ತದೆ. ಮೇಲಿನ ಹಿಂದಣ ಭಾಗ ದಪ್ಪನಾಗಿದ್ದು ಹಿಂತೊಡೆಯ (ಹ್ಯಾಮ್‌ಸ್ಟ್ರಿಂಗ್) ಬಲವಾದ ಸ್ನಾಯುಗಳು ಕೂಡಂಟಿರುವುವು. ಕುಂಡೆಲುಬಿನ ಮುಳ್ಳು ಚಾಚುರೊಂಡಿಯ ಹಿರಿಯ ಕಚ್ಚನ್ನೂ (ಗ್ರೇಟ್ ಸಯಾಟಿಕ್ ನಾಚ್) ಕಿರಿಯ ಕಚ್ಚನ್ನೂ ಬೇರ್ಪಡಿಸುವುದು. ನೆಲದ ಮೇಲೆ ಕುಳಿತಾಗ ಕುಂಡೆಲುಬಿನ ಹಿಂದುಗಡೆಯಿರುವ ಗುಂಡುಬ್ಬು (ಟ್ಯೂಬರಾಸಿಟಿ) ನೆಲಕ್ಕೂರುವುದು.

ತೊಡೆಲುಬು : ಇದರಷ್ಟು ಉದ್ದದ ಮೂಳೆ ಮೈಯಲ್ಲಿ ಇನ್ನೊಂದಿಲ್ಲ. ಇದರ ಮೇಲಿನ ಕೊನೆಯ ಅರೆಗೋಳಾಕಾರದ ನುಣುಪಾದ ತಲೆ ಎಲುಗುಂದಣದ ಗುಳಿಯೊಂದಿಗೆ ಕೀಲುಗೂಡುತ್ತದೆ. ತಲೆಗೂ ಕಾವಿಗೂ ನಡುವೆ ಕೆಳಕ್ಕೂ ಹೊರಕ್ಕೂ ಚಾಚಿರುವ ಕೊರಳಿದೆ. ಕೊರಳಿಗೂ ಕಾವಿಗೂ ನಡುವೆ ಚಾಚುಗಳಾಗಿರುವ ಎರಡು ತಿರುಗಾಲಿಗಳಿವೆ (ಟ್ರೊಕ್ಯಾಂಟರ್ಸ್). ಆಚೆ ಪಕ್ಕದ ಹಿರಿಯ ತಿರುಗಾಲಿಗೆ ತೊಡೆಯನ್ನು ತಿರುಗಿಸುವ ಸ್ನಾಯುಗಳೂ ಒಳಬದಿಯ ಕಿರಿಯದಕ್ಕೆ ತೊಡೆಯನ್ನು ಮಡಿಸುವ ಸ್ನಾಯುವೂ ತಗುಲಂಟಿವೆ. ಬೆಳೆದವರಲ್ಲಿ ತೊಡೆಲುಬಿನ ಕೊರಳು ಸಮತಲಕ್ಕೆ ಸುಮಾರು 35° ಕೋನದಲ್ಲಿ ಬಾಗಿರುವುದು. ಕಾವಿನ ನಡುಭಾಗ ಕಬ್ಬಿನ ಜಲ್ಲೆಯಂತೆ ದುಂಡಗಿದ್ದು ಮೇಲೂ ಕೆಳಗೂ ದಪ್ಪಗಿರುತ್ತದೆ. ಇದರ ಮುಂದೂ ಪಕ್ಕಗಳಲ್ಲೂ ತೊಡೆಯನ್ನು ಚಾಚುವ ಸ್ನಾಯುಗಳು ತಗುಲಿಕೊಂಡಿವೆ. ಹಿಂದುಗಡೆ ಮೂಳೆಯುದ್ದಕ್ಕೂ ಇರುವ ನೀಳ ಏಣು ದರಕುವಳಿಗೆ (ಲೀನಿಯ ಆಸ್ಪೆರ) ತೊಡೆಯ ಒಳಸರಿಕ ಸ್ನಾಯುಗಳು ತಗುಲಂಟಿವೆ. ಕಣಕಾಲೆ ಮೂಳೆಯ ಮೇಲಿನ ತಲದೊಂದಿಗೆ ಕೀಲುಗೂಡಿ ಮುಂಡಿಯಲ್ಲಿ ಮಡಿಸುವಂತೆ ತೊಡೆಲುಬಿನ ಕೆಳಕೊನೆಯಲ್ಲಿ ಅಗಲವಾದ ನುಣುಪಾದ ಕೀಲುಗೂಡುವ ತಲವಿರುವುದು. ಇದರ ಮುಂದಿನ ತಗ್ಗಿನಲ್ಲಿ, ಮಂಡಿಚಿಪ್ಪು ಮೇಲಕ್ಕೂ ಕೆಳಕ್ಕೂ ಆಡುವಂತಿರುವುದು. ಕೆಳಗಿನ ಹಿಂದಿನ ಭಾಗಗಳ ನಡುವೆ ಇರುವ ಆಳದ ತಗ್ಗಿನಲ್ಲಿ ಮಂಡಿಕೀಲಿನ ಚಲನೆಯನ್ನು ಮಿತಿಯಲ್ಲಿ ಹಿಡಿದಿಡುವ ಶಿಲುಬಿಕ (ಕ್ರೂಸಿಯೇಟ್) ತಂತುಗಟ್ಟುಗಳಿವೆ. ತಗ್ಗಿನ ಪಕ್ಕಗಳಲ್ಲಿರುವ ಒಂದೊಂದು ಎಲುಗೆಣ್ಣೂ (ಕಾಂಡೈಲ್) ಕಣಕಾಲೆಯವೊಂದಿಗೆ ಕೀಲುಗೂಡುವುದು.

ಮಂಡಿಚಿಪ್ಪು : ಕಾಲನ್ನು ನೇರವಾಗಿ ನೀಟುವ ದೊಡ್ಡ ಸ್ನಾಯುಗಳ ಕಂಡರದಲ್ಲೇ ಬೆಳೆದಿರುವ ಸಾಸಿವಂದ (ಸೆಸೆಮಾಯ್ಡ್) ಮೂಳೆಯಾಗಿ, ಚಪ್ಪಟೆಯಾಗಿ ಮುಮ್ಮೂಲೆ ಆಕಾರದಲ್ಲಿದೆ. ಇದರ ಹಿಂಭಾಗ ನುಣುಪಾಗಿದ್ದು ತೊಡೆಲುಬಿನ ಕೆಳಕೊನೆಯ ಮುಂಭಾಗದೊಂದಿಗೆ ಕೀಲುಗೂಡುವುದು. ಬಲವಾದ ಕಂಡರದ ತಂತುಗಳು ಅಂಟಿರುವುದರಿಂದ ಮುಂಭಾಗವೂ ಪಕ್ಕಗಳೂ ಒರಟಾಗಿವೆ.

ಕಣಕಾಲೆ : ಕೆಳಕಾಲಿನ ಎರಡು ಮೂಳೆಗಳಲ್ಲಿ ಒಳ ಪಕ್ಕದಲ್ಲಿ ದಪ್ಪನಾದ ಕಣಕಾಲಿನ ಮೂಳೆಯದು. ನಿಂತಿರುವಾಗ ಇದು ತೊಡೆಲುಬಿನ ಮೂಲಕ ಬೀಳುವ ಮೈಭಾರವನ್ನು ಪಾದಕ್ಕೆ ಸಾಗಿಸುವುದು. ಮೇಲಿನ ಕೊನೆಯಾದ ಚಪ್ಪನೆಯ ತಲೆಯಲ್ಲಿ ಚಪ್ಪಟೆಯಾಗಿ ಅಗಲಕ್ಕಿರುವ ಎರಡು ಎಲುಗೆಣ್ಣುಗಳು, ತೊಡೆಲುಬಿನ ಎಲುಗೆಣ್ಣುಗಳೊಂದಿಗೆ ಕೀಲುಗೂಡುತ್ತವೆ. ಹೊರ ಪಕ್ಕದ್ದರ ತಳದಲ್ಲಿ ಸೂಚಿಲುಕದ ತಲೆಯೊಂದಿಗೆ ಕೀಲುಗೂಡಲು ಒಂದು ಸಣ್ಣ ಎಲುವೊಗವಿದೆ. ಎಲುಗೆಣ್ಣುಗಳ ನಡುವೆ ತರಕಲಾಗಿ ಎದ್ದಿರುವ ಬುಗುಡಿಗೆ (ಎಮಿನೆನ್ಸ್) ಕೀಲೊಳಗಿನ ಶಿಲುಬಿಕ ತಂತುಗಟ್ಟುಗಳೂ ಮಂಡಿ ಕೀಲೊಳಗಿರುವ ಮಂಡಿಚಿಪ್ಪಿನ ಚಂದ್ರಬಟ್ಟಿನಂತೆ (ಮೆನಿಸ್ಕಸ್) ಇರುವ ಮೆಲ್ಲೆಲುಬುಗಳೂ ಬಲವಾಗಿ ತಗುಲಿಕೊಂಡಿವೆ. ಎಲುಗೆಣ್ಣುಗಳು ಚಪ್ಪಟೆ ಆಗಿರುವುದರಿಂದ ತೊಡೆಲುಬು ಜಾರದಂತೆ ಈ ಮೆಲ್ಲೆಲುಬುಗಳು ಸಿಂಬೆಗಳ ಹಾಗಿರುವುವು. ಕಣಕಾಲೆಯ ಕಾವಿಗೆ 3 ಪಕ್ಕಗಳಿವೆ. ಚರ್ಮದ ಕೆಳಗೆ ಕೈಗೆ ಸಿಗುವಂತಿರುವ ಇದರ ಒಳ ಪಕ್ಕವೇ ಕಣಕಾಲು. ಪಾದವನ್ನು ಆಡಿಸುವ ಸ್ನಾಯುಗಳು ಇದರ ಹಿಂದಣ, ಹೊರ ಪಕ್ಕಗಳಿಗೆ ಕೂಡಂಟಿವೆ. ಮುಂದಣ ಅಂಚೂ ಚೂಪಾದ ಏಣು. ಇದರ ಮೇಲ್ಕೊನೆಯಲ್ಲಿರುವ ಗುಬಟಿಗೆ ಬಲವಾಗಿ ನೀಟುವ ಕಾಲಿನ ಸ್ನಾಯುಗಳ ದಪ್ಪನೆಯ ಕಂಡರ ಕೂಡಂಟಿದೆ. ಹೊರ ಪಕ್ಕದ ಅಂಚಿಗೆ ಎಲುನಡುವಣ ಪದರ ಅಂಟಿದೆ. ಕಣಕಾಲೆಯ ಕೆಳಕೊನೆ ಮೇಲಿನದರಷ್ಟು ದಪ್ಪವಲ್ಲ. ಹರಡಿನ ಎಲುದಾಳದೊಂದಿಗೆ (ಟ್ಯಾಲಸ್) ಕೀಲುಗೂಡುವುದು. ಒಳ ಪಕ್ಕದ ಬಡಿಗುಬಟಾಗಿ (ಮ್ಯಾಲಿಯೋಲಸ್) ಮುಂದೆ ಸಾಗಿ ಹರಡಿನ ಒಳ ಪಕ್ಕದಲ್ಲಿ ಕೈಗೆ ಸಿಗುವ ಗೆಣ್ಣಾಗಿರುತ್ತದೆ.

ಸೂಚಿಲುಕ : ಕೆಳಕಾಲಿನ ಹೊರಪಕ್ಕದ ಸ್ನಾಯುಗಳ ಆಳದಲ್ಲಿ, ತೆಳುವಾಗಿ ನುಗ್ಗೆ ಕಡ್ಡಿಯಂತಿದೆ. ಮೇಲಿನ ಕೊನೆ ಕಣಕಾಲೆಯ ಹೊರ ಪಕ್ಕದ ಎಲುಗೆಣ್ಣೊಂದಿಗೆ ಕೀಲುಗೂಡುವುದು. ನಾಲ್ಕೂ ಪಕ್ಕಗಳಿರುವ ಕಾವಿಗೆ ಹಲವು ಸ್ನಾಯುಗಳು ತಗುಲಿಕೊಂಡಿರುತ್ತವೆ. ಒಳಪಕ್ಕದ ಏಣೊಂದಕ್ಕೆ ಎಲುನಡುವಣ ಪದರ ಅಂಟಿರುತ್ತದೆ. ಕೆಳ ಕೊನೆ ಮಾತ್ರ ಬಲವಾದ ಹೊರ ಪಕ್ಕದ ಬಡಿಗುಬಟಾಗಿ ಹರಡಿನ ಆಚೆ ಪಕ್ಕದಲ್ಲಿ ಉಬ್ಬಿ ಕಾಣುವುದು. ಇದರ ಒಳಪಕ್ಕ ಎಲುದಾಳದೊಂದಿಗೆ ಕೀಲುಗೂಡುವುದು.

ಪಾದ : ಮುಂಗಾಲೆಲುಬುಗಳು (ಟಾರ್ಸಸ್), ಅಂಗಾಲೆಲುಬುಗಳು (ಮೆಟಟಾರ್ಸಲ್ಸ್), 5 ಬಿಡಿ ಬೆಟ್ಟುಗಳೂ ಇಲ್ಲವೇ ಕಾಲೆಲುವೆರಳುಗಳೂ ಇದರಲ್ಲಿವೆ. ಕಾಲಿನ ಹೆಬ್ಬೆಟ್ಟು ಕೈಯ ಹೆಬ್ಬೆರಳನ್ನು ಹೋಲುವುದಾದರೂ ಚಲನೆಗೆ ಮಿತಿಯಿದೆ. ಹರಡಿನ 7 ಮುಂಗಾಲೆಲುಬುಗಳು 3 ಸಾಲುಗಳಲ್ಲಿವೆ. ಮೇಲಿನ ಸಾಲಿನಲ್ಲಿ ಎಲುದಾಳ (ಟ್ಯಾಲಸ್), ಎಲುಮಡಗಳೂ (ಕ್ಯಾಲ್ಕೇನಿಯಸ್), ನಡು ಸಾಲಿನಲ್ಲಿ ಕಿರಿಯೋಡವೂ (ನೆವಿಕ್ಯುಲಾರ್), ಮೂರನೆಯ ಸಾಲಿನಲ್ಲಿ ಮೇಕುರೂಪಿ (ಕ್ಯೂನಿಫಾರಂ) ಮೂಳೆಗಳು, ಘನಾಕಾರಿ (ಕ್ಯುಬಾಯ್ಡ್) ಮೂಳೆಯೂ ಇವೆ. ಮುಂಗಾಲೆಲುಬುಗಳು ಸಣ್ಣ ಘನಾಕಾರದವು. ಅಂಗಾಲಿನ, ಮೇಲಿನ ಪಕ್ಕಗಳಿಗೆ ತಂತುಗಟ್ಟುಗಳು ತಗುಲಂಟುವುದರಿಂದ ಒರಟಾಗಿರುತ್ತವೆ. ಆದರೆ ಎಲುದಾಳ ಮಾತ್ರ ಕೆಳಕಾಲಿನ ಎರಡು ಮೂಳೆಗಳು, ಎಲುಮಡದ ನಡುವೆ ನುಣುಪಾಗಿ ಕೀಲುಗೂಡುವುದು. ಹೊರಗಾಣುವ ಹಿಮ್ಮಡಿಯ ಉಬ್ಬಿನಲ್ಲಿ ಮುಖ್ಯವಾಗಿ ಎಲುಮಡದ ಹಿಂಚಾಚಿರುವುದು. ಇದರ ಹೊರತಾಗಿ ಮುಂಗಾಲೆಲುಬುಗಳೂ ಹಿಂದೂ ಮುಂದೂ ಕೀಲುಗೂಡುವಂತೆ ನುಣುಪಾಗಿರುವುವು. ಅಂಗಾಲೆಲುಬುಗಳೂ ಎಲುವೆರಳುಗಳೂ ಕೈಯಲ್ಲಿ ಇರುವ ಹಾಗೇ ಇರುತ್ತವೆ.

ಸಾಸಿವಂದ ಮೂಳೆಗಳು : ಮೇಲಿನವೇ ಅಲ್ಲದೆ, ಕೈಯಲ್ಲೂ ಪಾದದಲ್ಲೂ ಸ್ನಾಯುಗಳ ಕಂಡರಗಳ ನಡುವೆ ಸಾಸಿವಂದ ಮೂಳೆಗಳೆಂಬ ಕೆಲವು ಮಿಗಿಲಾದ ಮೂಳೆಗಳು ಬೆಳೆದಿರುತ್ತವೆ. ಮಂಡಿಚಿಪ್ಪು ಈ ತೆರನ ಮೂಳೆಯ ಒಳ್ಳೆಯ ಉದಾಹರಣೆ.

ಪಿಂಡದಲ್ಲಿ ವಿಕಾಸ : ಎಲುಗಟ್ಟಿನ ವಿಕಾಸಕ್ಕೆ ಪಿಂಡದ ನಡುನನೆ ಚರ್ಮವೇ (ಮೀಸೊಡರ್ಮ್) ಮೂಲ. ಹೊರನನೆಚರ್ಮ (ಎಕ್ಟೊಡರ್ಮ್) ಒಳನನೆ ಚರ್ಮಗಳ (ಎಂಡೊಡರ್ಮ್) ಇಪ್ಪದರದ ಬಟ್ಟಿನಂತಿರುವ 15 ದಿನಗಳ ಪಿಂಡದ ಹಿಂಭಾಗದಲ್ಲಿ ಹೊರನನೆ ಚರ್ಮದ ಜೀವಕಣಗಳು ಗುಣಿತವಾಗಿ ಉದ್ದನೆಯ ಗಂಟು ಕಾಣಿಸಿಕೊಳ್ಳುತ್ತದೆ. ಮುಂದೆ ಇದೇ ಬೆಂಬೀವಿಗೂ (ನೋಟೊಕಾರ್ಡ್) ನಡುನನೆ ಚರ್ಮಕ್ಕೂ ಮೂಲವಾಗುವ ಆದಿಯ ಪಟ್ಟೆ (ಪ್ರಿಮಿಟಿವ್ ಸ್ಟ್ರೀಕ್). ಕೆಳಮಟ್ಟದ ಕಶೇರುಕಗಳ ಪಿಂಡಗಳಲ್ಲಿನ ನನೆಕಣಕಂಡಿಗೆ (ಬ್ಲಾಸ್ಟೊಪೋರ್) ಇದು ಸಮಾನಾಂಗ. ಈ ಪಟ್ಟಿಯ ಮುಂದಿನ ಕೊನೆಯಲ್ಲಿನ (ಹೆನ್ಸನ್ನನ) ಗಂಟಿನಿಂದ ಉರುಳೆಯಾಕಾರದ ಜೀವಕಣ ರಾಸಿಯೇ ಬೆಂಬೀವು ಆದಾಗ ತಲೆ ಯಾವುದೆಂದು ನಿರ್ಧರವಾಯಿತೆನ್ನಬಹುದು. ವಿಕಾಸವಾಗುತ್ತಿರುವ ಕೇಂದ್ರದ ನರದ ಮಂಡಲದ ತಳದಲ್ಲಿ ಈ ಬೆಂಬೀವು ಇದ್ದುಕೊಂಡು ಬೆಳೆಯುತ್ತಿರುವ ಪಿಂಡಕ್ಕೆ ಊರೆ ಕೊಡುವುದು.

ಚೊರಮೀನಿನ (ಷಾರ್ಕ್) ತೆರನ ಮೀನುಗಳಲ್ಲಿ ಬೆಂಬೀವಿನ ಸುತ್ತಲೂ ಮೆಲ್ಲೆಲುಬಿನ ಬೆನ್ನೆಲುಬುಗಳು ಬೆಳೆದು ಅದನ್ನು ಒಂದಿಷ್ಟು ಇರುಕಿಸುತ್ತವೆ ಎನ್ನಬಹುದು. ಇಷ್ಟಾದರೂ ಬೆನ್ನೆಲುಬುಗಳೊಳಗೆ ಇಡೀ ಬೆಂಬೀವು ಉಳಿದೇ ಇರುತ್ತದೆ. ಆದರೆ ಮೇಲ್ತರದ ಕಶೇರುಕಗಳಲ್ಲಿ ಬೆಂಬೀವು ತತ್ಕಾಲದ ರಚನೆಯಾಗಿದ್ದು, ಆಮೇಲೆ ಬೆನ್ನೆಲುಬುಗಳ ಕಾಯಗಳಲ್ಲೂ ಬೆನ್ನೆಲುನಡುವಣ ಬಟ್ಟುಗಳ ಪುಪ್ಪುಸಗಳಲ್ಲೂ ಪುಟಾಣಿ ತೂತಾಗಿ ಉಳಿದಿರಬಹುದು.

ಬೆಂಬೀವು ವಿಕಾಸವಾಗುತ್ತಿರುವಾಗ ಆದಿಯ ಪಟ್ಟೆಯ ಪಕ್ಕಗಳಿಂದ ಜೀವಕಣಗಳು ವೆಗ್ಗಳಿಸಿ ನಡುನನೆ ಚರ್ಮದ ಪದರವಾಗಿ, ಕೊನೆಗೆ ಹೊರನನೆ ಚರ್ಮ, ಒಳನನೆ ಚರ್ಮಗಳ ನಡುವೆ ಸೇರಿಕೊಳ್ಳುತ್ತವೆ. ನಡುನನೆ ಚರ್ಮದ ಪದರ ಬರುಬರುತ್ತ ಮೂರು ರಾಸಿಗಳಾಗಿ ವಿಂಗಡವಾಗುತ್ತವೆ. ನಡುನನೆ ಚರ್ಮದ ಪಿಂಡ ಖಂಡಗಳು (ಸೋಮೈಟ್ಸ್), ಮೈಗೋಡೆ ಮತ್ತು ಕರುಳುಗಳು, ಮೂತ್ರ ಮಂಡಲಗಳು ಇವುಗಳಿಂದ ಏಳುವುವು.

ಕಶೇರುಕಗಳಲ್ಲಿ, ಬೆಂಬೀವಿಂದ ನಡುನನೆಚರ್ಮದ ವಿಕಾಸ ಹೆಚ್ಚೇಕೆಂಬ ವಿಚಾರ. ತಲೆಬುರುಡೆ, ಬೆನ್ನೆಲುಬೂ ಅವೊಂದಿಗಿನ ಬೇರೆ ರಚಗಟ್ಟುಗಳೂ ಪಿಂಡಖಂಡದ ಒಂದು ಭಾಗದಿಂದಲೂ ಕೈ ಕಾಲುಗಳ ಎಲುಗಟ್ಟು ಪಕ್ಕದ ಪದರದಿಂದಲೂ ಏಳುತ್ತವೆ.

ಒಂದೊಂದು ಪಿಂಡಖಂಡವೂ ಮೂರು ಪದರಗಳಲ್ಲಿ ವಿಕಾಸವಾಗುವುದು. ಮೇಲ್ಮೇಲಿರುವ ಮುಂದೆ ಚರ್ಮವಾಗುವ ಚರ್ಮಪಡಿ (ಡರ್ಮಟೋಂ) ಮೊದಲಿನದು. ಹೊರಪಕ್ಕದ ಆಳದಲ್ಲಿರುವ ತುಂಡಾದ, ಮುಂದೆ ಸ್ನಾಯುಗಳಾಗುವ ಸ್ನಾಯುಪಡಿ (ಮಯೊಟೋಂ) ಎರಡನೆಯದು. ಒಡಲೆಡೆಯ ತುಂಡಾದ ಗಡುಸುಪಡಿ (ಸ್ಕ್ಲೀರೊಟೋಂ) ಮೂರನೆಯದು. ಪಿಂಡಖಂಡದ ಒಂದೊಂದು ಜೊತೆಯಿಂದಲೂ ಗಡುಸುಪಡಿಯ ಜೀವಕಣಗಳು ಒಳಸರಿದು ನಡುಗೆರೆಯಲ್ಲಿ ಒಂದುಗೂಡಿ ಬೇಬೀವಿನ ಸುತ್ತ ಸುತ್ತಿಕೊಂಡು ಬೆನ್ನು ಕಡೆ ನರದ ನಾಳಿಯಿಂದ (ನ್ಯೂರಲ್ ಟ್ಯೂಬ್). ಒಡಲ ಕಡೆ ಮಹಾಧಮನಿಯಿಂದ (ಅಯೋರ್ಟ) ಬೇರ್ಪಡಿಸುತ್ತವೆ. ಗಡುಸುಪಡಿಯ ಊತಕ ಮೊದಲಿನಂತೆ ತುಂಡು ತುಂಡಾಗೇ ಇದ್ದು ಮುಂದೆ ಬೆನ್ನೆಲುಬಿನ ಕಾಯವಾಗುತ್ತದೆ. ಸ್ನಾಯುಪಡಿಗಳ ನಡುವೆ ಇದರ ಪಕ್ಕಗಳಲ್ಲಿಂದ ಹೊರಟಿಕೊಳ್ಳುವ ಚಾಚುಗಳೇ ಮುಂದೆ ಪಕ್ಕೆಲುಬುಗಳಾಗುವುವು. ಆದರೆ ಮುಂದೆ ಪಕ್ಕೆಲುಬುಗಳ ವಿಕಾಸ ಆಗುವುದು ಎದೆಗೂಡಿನ ಮಟ್ಟದಲ್ಲಿ ಮಾತ್ರ. ಉಳಿದೆಡೆಗಳಲ್ಲಿ ನೆಪಮಾತ್ರಕ್ಕೆ ಉಳಿಯುತ್ತವೆ. ಪಿಂಡಗೂಸಿನಲ್ಲಿ 7ನೆಯ ವಾರದ ಹೊತ್ತಿಗೇ ಬೆನ್ನೆಲುಬುಗಳು ಮೆಲ್ಲೆಲುಬುಗಳಾಗಿರುತ್ತವೆ. ಇನ್ನೆರಡು ವಾರಗಳಲ್ಲಿ ಎಲುಮೊಳೆತದ (ಆಸಿಫಿಕೇಷನ್) ಕೇಂದ್ರಗಳು ತಲೆದೋರಿ ಬರುಬರುತ್ತ ಮೆಲ್ಲೆಲುಬೆಲ್ಲ ಎಲುಬಾಗಿ ಮಾರ್ಪಡುತ್ತದೆ. ಪಕ್ಕೆಲುಬುಗಳ ಬೆಳೆವ ಮುಂಗೊನೆಗಳ ಮೆಲ್ಲೆಲುಬಿಂದ ಎದೆ ಚಕ್ಕೆಯ ಕಡ್ಡಿ ಬೆಳೆದು ಮುಂದೆ ಆದೇ ಎದೆಚಕ್ಕೆ ಆಗುತ್ತದೆ.

ಪಿಂಡದ 5ನೆಯ ವಾರದ ಹೊತ್ತಿಗೆ ಕೈಕಾಲುಗಳ ಎಲುಗಟ್ಟು ಅಡಿಯ ಅವಯವ ಮೊಳಕೆಯ ನಡುರಚಾಂಶದ (ಮೀಸೆಂಕೈಮಲ್) ತಿರುಳಿನಲ್ಲಿ ತುಂಡಾಗದ ನಡುನನೆ ಚರ್ಮದಿಂದಲೇ ವಿಕಾಸವಾಗುತ್ತದೆ. ನಡುರಚಾಂಶ ಗಟ್ಟಿಬಿದ್ದು ಮುಂದಿನ ಮುಂದಿನ ಅವಯುವದ ಮೂಳೆಗಳೇಳುವುವು. 7ನೆಯ ವಾರದಲ್ಲಿ ನಡುರಚಾಂಶವೇ ಮುಂದಿನ ಮೂಳೆಗಳ ಮೆಲ್ಲೆಲುಬುಗಳಾಗಿರುವುವು. ಮುಂದೆ ಎಲುಬಾಗಿ ಬದಲಾದ ಮೇಲಿನ ಆಕಾರ, ಗಾತ್ರಗಳಿಗೆ ಬಹುಮಟ್ಟಿಗೆ ಈ ಮೆಲ್ಲೆಲುಬುಗಳೇ ಕಾರಣ. ಹಾಗೇ, ಕೈ ಕಾಲುಗಳ ವಿಕಾಸಕ್ಕೆ ಮುಂಚೆಯೇ ಹೆಗಲಿನ, ಟೊಂಕದ ನಡುಕಟ್ಟುಗಳು ಮೊಳೆಯುತ್ತವೆ. ಇದರಲ್ಲಿ ಹೆಗಲಿನದೇ ಮೊದಲ ಮೊಳೆತ. ಮೈಗೆ ಹತ್ತಿರದಲ್ಲಿರುವ ಮೂಳೆಗಳು ಮೊದಲು ಕುಡಿಯಿಡುತ್ತವೆ.

ಎಲುಮೊಳೆತ : ಮೆಲ್ಲೆಲುಬೊಳಗೋ ಪದರ ನಡುವೆಯೋ ಆಗಬಹುದು, ಇವೆರಡು ಮೊಳೆತಗಳೂ ಒಂದೇ ರೀತಿ. ಏಕೆಂದರೆ, ಇದರಲ್ಲಿ ಪಾಲ್ಗೊಳ್ಳುವ ಜೀವಕಣಗಳು ಒಂದೇ ಬಗೆಯವು. ತಲೆಬುರುಡೆಯ ಕೆಲವನ್ನೂ ಕೀಲಿಕವನ್ನೂ ಬಿಟ್ಟರೆ, ಎಲುಗಟ್ಟಿನ ಎಲ್ಲ ಮೂಳೆಗಳೂ ಮೊದಲು ಮೆಲ್ಲೆಲುಬಾಗಿದ್ದುದರಲ್ಲೇ ಎಲುಬು ಮೊಳೆಯುತ್ತದೆ. ಇಲ್ಲಿ ಮೆಲ್ಲೆಲುಬು ನೇರವಾಗಿ ಎಲುಬಾಗಿ ಮಾರ್ಪಡದೆ, ಮೆಲ್ಲೆಲುಬಲ್ಲಿ ಸುಣ್ಣಗೂಡಿ, ಸವೆಗೋರಿ (ಎರೋಷನ್) ಎಲುಬಿನ ಮರುಜೋಡಣೆಯಾಗುವುದು. ಇಷ್ಟಾದರೂ, ವಯಸ್ಸಾದರೂ ಕೆಲವು ಮೆಲ್ಲೆಲುಬುಗಳು ಎಲುಬಾಗದೆ ಹಾಗೇ ಉಳಿದಿರುತ್ತವೆ. (ಎಂ. ಡಿ. ಆರ್.; ಡಿ. ಎಸ್. ಎಸ್.)

**ಪ್ರಾಣಿಗಳಲ್ಲಿ (ಕಶೇರುಕಗಳು) ಎಲುಗಟ್ಟು :** ಕಶೇರುಕಗಳಲ್ಲಿ ಎಲುಗಟ್ಟಿನ ಬೆಳವಣಿಗೆ ಅಕಶೇರುಕಗಳಿಗಿಂತ ವಿಭಿನ್ನರೀತಿಯದು. ಈ ವಂಶದ ಜೀವಿಗಳ ಎಲುಗಟ್ಟು ಭ್ರೂಣ ಬೆಳವಣಿಗೆಯ ಕಾಲದಲ್ಲಿ ಮಧ್ಯದರ್ಮದಿಂದ (ಮಿಸೊಡರ್ಮ್) ಹುಟ್ಟಿಬರುತ್ತದೆ. ಇದು ಬೆಳೆದು ಬರುವ ರೀತಿಗಳನ್ನು ಎಲ್ಲ ಕಶೇರುಕಗಳ ಭ್ರೂಣಾಭ್ಯಾಸದಿಂದ ಅರಿತುಕೊಳ್ಳಬಹುದು. ಕಶೇರುಕಗಳಲ್ಲಿ ಎಲುಗಟ್ಟು ಮೂರು ಹಂತಗಳಲ್ಲಿದೆ. ಕೆಳದರ್ಜೆಯ ಕಶೇರುಕಗಳಾದ ಆಂಫಿಯಾಕ್ಸಿಸ್, ಬೆಲನೊಗ್ಲಾಸಸ್ ಮತ್ತು ಅಸಿಡಿಯಾಗಳ ಎಲುಗಟ್ಟನ್ನು ನೊಟೊಕಾರ್ಡ್ ಎಂದು ಕರೆಯುತ್ತೇವೆ. ಇದು ಜೀರ್ಣಾಂಗಗಳಿಂದ ಮೇಲುಭಾಗದಲ್ಲಿದೆ; ಇದರ ಹುಟ್ಟು ಪ್ರತ್ಯೇಕವಾದ ಒಂದು ಅಂಗಾಂಶದಿಂದ (ನೊಟೊಕಾರ್ಡಿನ ಅಂಗಾಂಶವೆಂದೇ ಹೆಸರು). ಬೆಲನೊಗ್ಲಾಸಸ್ ಜೀವಿಯಲ್ಲಿ ನೊಟೊಕಾರ್ಡ್ ಶರೀರದ ಮುಂದಿನ ತುದಿಯಲ್ಲಿದೆ. ಅಸೀಡಿಯಗಳಲ್ಲಿ ಇದು ಇರುವುದೇ ಇಲ್ಲ. ಆದರೆ ಇವುಗಳ ಲಾರ್ವಗಳಲ್ಲಿ ಮಾತ್ರ ನೊಟೊಕಾರ್ಡ್ ಬೆಳೆಯುತ್ತದೆ. ಇವುಗಳ ಬಾಲದಲ್ಲಿ ಮಾತ್ರ ರೂಪಾಂತರ ಪರಿವರ್ತನೆಗೊಂಡಾಗ ಈ ನೊಟೊಕಾರ್ಡ್ ಕರಗಿಹೋಗುತ್ತದೆ. ಇದು ಕಶೇರುಕಗಳ ಎಲುಗಟ್ಟಿನ ಬೆಳವಣಿಗೆಯ ಪ್ರಥಮ ಹಂತ.

ಇವುಗಳಿಗಿಂತ ಮುಂದುವರಿದ ಸೈಕ್ಲೊಸ್ಟೊಮ್ಯಾಟ ಪ್ರಾಣಿಗಳಲ್ಲಿಯೂ ನೊಟೊಕಾರ್ಡಿನ ಬೆಳವಣಿಗೆಯನ್ನು ಕಾಣುತ್ತೇವೆ. ಇವುಗಳಲ್ಲಿ ನೊಟೊಕಾರ್ಡ್ ಮತ್ತು ಅದರ ಮೇಲಿರುವ ಕವಚ ಪ್ರಾಣಿಗಳ ಜೀವಪರ್ಯಂತ ಇರುವುದು ಕಂಡುಬರುತ್ತದೆ. ಆದರೆ ಇದರ ನೊಟೊಕಾರ್ಡಿನ ಮೇಲೆ ಮೃದ್ವಸ್ಥಿಯಿಂದಾದ ನರದ ಕಮಾನುಗಳಿವೆ. ಕೆಲವು ಅಸ್ಥಿಮತ್ಸ್ಯಗಳಲ್ಲಿ ಅಂದರೆ ಆಸಿಪೆನ್‌ಸರ್ ಮೀನಿನಲ್ಲಿ ವಯಸ್ಕ ಜೀವಿಗಳಲ್ಲಿಯೂ ನೊಟೊಕಾರ್ಡ್ ಉಳಿದುಬಂದಿರುವುದು ಕಾಣುತ್ತದೆ. ಇದರ ನೊಟೊಕಾರ್ಡಿನ ಮೇಲೆ ತಂಪುಗಳನ್ನೊಳಗೊಂಡಿರುವ ಕವಚವೂ ಅದರ ಮೇಲೆ ಮೃದ್ವಸ್ಥಿಯಿಂದಾದ ನರದ ಕಮಾನು ಮತ್ತು ರಕ್ತನಾಳದ ಕಮಾನುಗಳೂ ಇವೆ. ಸೈಕ್ಲೊಸ್ಟೊಮುಗಳನ್ನುಳಿದು ಮುಂದುವರಿದಿರುವ ಮತ್ಸ್ಯವರ್ಗದ ಪ್ರಾಣಿಗಳಲ್ಲಿ ನೊಟೊಕಾರ್ಡ್ ಮಾಯವಾಗಿ ಕೋಮಲಾಸ್ಥಿ ಮತ್ತು ನಿಜಾಸ್ಥಿಗಳು ಬೆಳೆದಿರುವುದು ಕಾಣುತ್ತದೆ. ಕಶೇರುಕಗಳ ವಿಕಾಸದ ಹಾದಿಯಲ್ಲಿ ಕೋಮಲಾಸ್ಥಿ ಬೆಳವಣಿಗೆ ಎರಡನೆಯ ಹಂತ ಮತ್ತು ನಿಜಾಸ್ಥಿ ಬೆಳವಣಿಗೆ ಮೂರನೆಯ ಹಂತ. ಕೋಮಲಾಸ್ಥಿ ಮೊದಲು ಹುಟ್ಟಿತೋ ಅಥವಾ ನಿಜಾಸ್ಥಿ ಮೊದಲು ಹುಟ್ಟಿತೊ ಎಂಬ ಬಗ್ಗೆ ವಾದ ವಿವಾದಗಳಿವೆ. ಇದಿನ್ನೂ ತೀರ್ಮಾನವಾಗದಿರುವ ವಿಚಾರ.

ಷಾರ್ಕ್ ಮೀನು ರೇಮೀನುಗಳು ಮತ್ತು ಅವುಗಳ ಸಂಬಂಧಿಗಳಲ್ಲಿ ಎಲುಗಟ್ಟು ಕೋಮಲಾಸ್ಥಿಯಿಂದಾಗಿದೆ. ಆದರೆ ಭ್ರೂಣ ಬೆಳವಣಿಗೆಯ ಕಾಲದಲ್ಲಿ ಇವುಗಳಲ್ಲಿಯೂ ನೊಟೊಕಾರ್ಡ್ ಬೆಳೆದುಕೊಳ್ಳುತ್ತದೆ. ಮುಂದೆ ಭ್ರೂಣ ಬೆಳೆದಂತೆ ನೊಟೊಕಾರ್ಡ್ ಮಾಯವಾಗಿ ಅದರ ಸ್ಥಾನವನ್ನು ಕೋಮಲಾಸ್ಥಿ ಆಕ್ರಮಿಸುತ್ತದೆ. ಕೋಮಲಾಸ್ಥಿಯಲ್ಲಿ ಕಾಂಡ್ರಿಸ್ ಎಂಬ ರಾಸಾಯನಿಕವಸ್ತುವಿದೆ. ಅಸ್ಥಿ ಮತ್ಸ್ಯಗಳಲ್ಲಿ ಕಶೇರು ಪೂರ್ಣವಾಗಿ ಮೂಳೆ ಅಥವಾ ನಿಜಾಸ್ಥಿಯಿಂದಲೇ ಆಗಿದೆ. ಇದು ಕೋಮಲಾಸ್ಥಿಗಿಂತ ವಿಭಿನ್ನವಾಗಿದ್ದು ಮೂಳೆ ಸುಣ್ಣ ಮತ್ತು ರಂಜಕದ ಲವಣಗಳನ್ನೊಳಗೊಂಡಿರುತ್ತದೆ. ಇವುಗಳ ರೆಕ್ಕೆಗಳಲ್ಲಿರುವ ರಚನೆಗಳು ಕೂಡ ಮೂಳೆಯಿಂದಲೇ ಆಗಿವೆ. ಮತ್ಸ್ಯವರ್ಗದ ಕಶೇರುಮಣಿಗಳ ಮೇಲೆ ನರದ ಕಮಾನು ಮತ್ತು ರಕ್ತನಾಳದ ಕಮಾನುಗಳಿರುವುದರಿಂದ ನರಹುರಿ ಮತ್ತು ರಕ್ತನಾಳಗಳಿಗೆ ರಕ್ಷಣೆಯೊದಗುತ್ತದೆ. ಕಮಾನುಗಳು ಒಂದರ ಹಿಂದೆ ಒಂದರಂತೆ ಜೋಡಿಸಿಕೊಂಡ ಒಂದು ನಾಳದಂತೆಯೇ ಇರುವ ಸ್ಥಳಾವಕಾಶಗಳನ್ನು ಕಲ್ಪಿಸಿ ಕೊಡುತ್ತವೆ. ಕಶೇರುವಿನ ಮೇಲೆ ಇರುವ ನಾಳದೊಳಗೆ ನರಹುರಿ ಇದೆ. ಕಶೇರುವಿನ ಕೆಳಗಿರುವ ನಾಳದಲ್ಲಿ ರಕ್ತನಾಳವಿದೆ.

ದ್ವಿಚರಿ ವರ್ಗದ ಪ್ರಾಣಿಗಳ ಎಲುಗಟ್ಟಿನಲ್ಲಿ ನಿಜಾಸ್ಥಿ ಮತ್ತು ಕೋಮಲಾಸ್ಥಿಗಳೆರಡೂ ಇವೆ. ಕಶೇರುಕಗಳಲ್ಲಿ ಕಶೇರುಮಣಿಗಳ ಉಗಮ ಭ್ರೂಣದಲ್ಲಿರುವ ಖಂಡಗಳಿಗನುಸಾರವಾಗಿದೆ. ಕಶೇರುಮಣಿಯ ಪೂರ್ಣ ಬೆಳವಣಿಗೆಯಾದ ಮೇಲೆ ಒಂದು ಕಶೇರುಮಣಿಗೂ ಮತ್ತೊಂದು ಕಶೇರುಮಣಿಗೂ ಸಂಬಂಧ ಕಲ್ಪಿಸಲು ಬೇಕಾದ ರಚನೆಗಳು ಕಶೇರುಮಣಿಯಲ್ಲಿಯೇ ಹುಟ್ಟುತ್ತವೆ. ಕಶೇರುವಿನಲ್ಲಿರುವ ಪ್ರಥಮ ಕಶೇರುಮಣಿಯೊಡನೆ ತಲೆಯ ಬುರುಡೆ ಕೀಲಿಸಿಕೊಳ್ಳುತ್ತದೆ. ಪ್ರಥಮ ಕಶೇರುಮಣಿಗಳ ಹಿಂದಿರುವ ಕಶೇರುಮಣಿಗಳಿಗೆ ಕುತ್ತಿಗೆಯ ಕಶೇರುಮಣಿಗಳೆಂದು ಹೆಸರು. ಇವುಗಳ ಸಂಖ್ಯೆ ಪ್ರತಿವರ್ಗದ ಜೀವಿಗಳಲ್ಲಿ ಬದಲಾಗುತ್ತದೆ. ಸಸ್ತನಿಗಳಲ್ಲಿ ಸಾಮಾನ್ಯವಾಗಿ 7 ಕುತ್ತಿಗೆಯ ಕಶೇರುಮಣಿಗಳಿವೆ. ಆದರೆ ಇದೇ ವರ್ಗಕ್ಕೆ ಸೇರಿದ ಸ್ಲಾತ್‌ಪ್ರಾಣಿಗಳಲ್ಲಿ ಇವುಗಳ ಸಂಖ್ಯೆ ಬೇರೆಯಲ್ಲ. ಮೂರು ಬೆರಳಿರುವ ಸ್ಲಾತ್ ಪ್ರಾಣಿಯಲ್ಲಿ ಇವುಗಳ ಸಂಖ್ಯೆ 9 ಅಥವಾ 10. ಒಂದೇ ಬೆರಳಿರುವ ಸ್ಲಾತಿನಲ್ಲಿ 6. ಪಕ್ಷಿಗಳ ಕುತ್ತಿಗೆಯ ಕಶೇರುಮಣಿಗಳಲ್ಲಿಯೂ ಈ ವ್ಯತ್ಯಾಸಗಳನ್ನು ಕಾಣಬಹುದು. ಕುತ್ತಿಗೆಯ ಚಲನೆಗೆ ತಕ್ಕಂತೆ ಇವುಗಳಲ್ಲಿ ಕಶೇರುಮಣಿಗಳ ಸಂಖ್ಯೆಯಲ್ಲಿ ವ್ಯತ್ಯಾಸಗಳಿವೆ. ಹಂಸದಲ್ಲಿ 25 ಕಶೇರುಮಣಿಗಳಿವೆ.

ಸರೀಸೃಪಗಳು, ಪಕ್ಷಿಗಳು ಮತ್ತು ಸಸ್ತನಿಗಳ ಎಲುಗಟ್ಟು ಪೂರ್ಣವಾಗಿ ನಿಜಾಸ್ಥಿಯಿಂದಲೇ ಆಗಿದೆ. ಕೋಮಲಾಸ್ಥಿ ಕೇವಲ ಕೀಲುಗಳಲ್ಲಿ ಹೊರಕಿವಿಯಲ್ಲಿ ಶ್ವಾಸನಾಳ ಮುಂತಾದ ಭಾಗಗಳಿಗೆ ಮೀಸಲಾಗಿದೆ. ಸರೀಸೃಪಗಳಿಂದ ಪ್ರಾರಂಭವಾಗಿ ಸಸ್ತನಿಗಳವರೆಗೆ ಬೆನ್ನೆಲುಬಿನ ಕೆಲವು ಮೂಳೆಗಳಲ್ಲಿ ಬಗ್ಗರಿ ಮೂಳೆಗಳ ಬೆಳವಣಿಗೆಯನ್ನು ಕಾಣಬಹುದು. ಕುತ್ತಿಗೆಯಿಂದ ಕೆಳಗಿರುವ ಭಾಗದಲ್ಲಿರುವ ಕೆಲವು ಕಶೇರುಮಣಿಗಳಿಂದ ಹೊರಟಿರುವ ಬೆಳವಣಿಗೆಗಳ ಜೊತೆಗೆ ಈ ಬಗ್ಗರಿ ಮೂಳೆಗಳು ಸೇರಿಕೊಂಡಿರುವುದರಿಂದ ಎದೆಯ ಭಾಗಕ್ಕೆ ಪೂರ್ಣ ರಕ್ಷಣೆಯೊದಗುತ್ತದೆ. ಶ್ವಾಸಕೋಶಗಳು ಮತ್ತು ಹೃದಯಕ್ಕೆ ಇವುಗಳಿಂದ ರಕ್ಷಣೆ ಸಿಕ್ಕಿದೆ. ಈ ಬಗ್ಗರಿ ಮೂಳೆಗಳಿಂದ ಉಸಿರಾಟಕ್ಕೂ ಬಹಳ ಸಹಾಯವಾಗಿದೆ.

ಬೆನ್ನುಮೂಳೆಗೆ ಸೊಂಟದ ಮೂಳೆಗಳು ಕೀಲಿಸಿಕೊಂಡಿವೆ. ಪಕ್ಷಿಗಳಲ್ಲಿ ಸೊಂಟದ ಮೂಳೆಗಳು ಸಂಪೂರ್ಣವಾಗಿ ಬೆನ್ನು ಮೂಳೆಯೊಡನೆ ಬೆರೆತುಹೋಗಿ ಸಿನ್‌ಸೇಕ್ರಮ್ ಎಂಬ ಹೊಸಭಾಗವೇ ಆಗಿದೆ. ಸೊಂಟದ ಮೂಳೆಗಳಿಗೆ ಕಾಲುಗಳು ಕೀಲಿಸಿಕೊಂಡಿದೆ. ಕೆಲವು ಸರೀಸೃಪಗಳ ಬಾಲದ ಭಾಗದಲ್ಲಿರುದ ಕಶೇರುಮಣಿಗಳಲ್ಲಿರುವ ರಕ್ತನಾಳದ ಕಮಾನುಗಳು ಬೇರ್ಪಟ್ಟಿವೆ. ಈ ಮೂಳೆಗಳಿಗೆ ಚವರಾನ್ ಮೂಳೆಗಳೆಂದು ಹೆಸರು. ಇಂಥವನ್ನು ಮೊಸಳೆಯ ಬಾಲದಲ್ಲಿ ನೋಡಬಹುದು. ಪಕ್ಷಿಗಳಲ್ಲಿ ಬಾಲದ ಕಶೇರುಮಣಿಗಳೆಲ್ಲವೂ ಒಂದು ಗೂಡಿ ಪೈಗೋಸ್ಟೈಲ್ ರಚನೆಯನ್ನು ಕೊಟ್ಟಿವೆ. ಇದು ಬಾಲಕ್ಕೆ ಆಸರೆಯನ್ನೊದಗಿಸುತ್ತದೆ.

ಭುಜದ ಮೂಳೆಗಳು ಕಶೇರುವಿನೊಡನೆ ಕೀಲಿಸಿಕೊಂಡಿರುವುದಿಲ್ಲ. ಬದಲಾಗಿ ಇವು ಎದೆಯ ಮೂಳೆಗಳೊಡನೆ ಸಂಬಂಧ ಕಲ್ಪಿಸಿಕೊಂಡಿವೆ. ಈ ಭುಜದ

ಮೂಳೆಗಳಿಗೆ ಕೈಗಳು ಕೀಲಿಸಿಕೊಳ್ಳುತ್ತವೆ. ಪಕ್ಷಿಗಳಲ್ಲಿ ಎದೆಯ ಮೂಳೆ ತ್ರಿಕೋನಾಕೃತಿಯಲ್ಲಿರುವ ಕೀಲ್ ಎಂಬ ಭಾಗವನ್ನು ಬೆಳೆಸಿಕೊಂಡಿದೆ. ಈ ಭಾಗಕ್ಕೆ ಹಾರಲು ಸಹಾಯಕವಾಗಿರುವ ಮಾಂಸಖಂಡಗಳು ಅಂಟಿಕೊಂಡಿವೆ.

ಸಸ್ತನಿಗಳ ಕಶೇರುಮಣಿಗಳ ಮಧ್ಯೆ ಕೋಮಲಾಸ್ಥಿಯಿಂದಾದ ತಟ್ಟೆಗಳಿವೆ. ಇವುಗಳ ಬಾಲದಲ್ಲಿರುವ ಕಶೇರುಮಣಿಗಳ ಸಂಖ್ಯೆ ವ್ಯತ್ಯಾಸಗೊಳ್ಳುತ್ತದೆ. ಬಾವಲಿಗಳಲ್ಲಿ ಬಾಲದ ಕಶೇರುಮಣಿಯಿಲ್ಲ. ಆದರೆ ಪಂಗೊಲಿನ್ ಪ್ರಾಣಿಯಲ್ಲಿ 49 ಕಶೇರುಮಣಿಗಳಿವೆ. ಹೀಗೆ ಕಶೇರುವಿನಲ್ಲಿರುವ ಮಣಿಗಳ ಸಂಖ್ಯೆ ಕೆಲವು ಪ್ರಭೇದಗಳಲ್ಲಿ ಬದಲಾಗುತ್ತದೆ.

ಸಸ್ತನಿಗಳ ಎದೆಯ ಮೂಳೆ ನಾನಾ ಭಾಗಗಳಿಂದಾಗಿದೆ. ಇದರಲ್ಲಿ ಪ್ರೀಸ್ಟೆರ್ನಮ್ ಮೀಸೊಸ್ಟೆರ್ನಮ್ ಕ್ಸಿಫಿಸ್ಟೆರ್ನಮ್ ಎಂಬ ಭಾಗಗಳಿವೆ. ಈ ಎದೆಯ ಮೂಳೆಗೆ ಬಗ್ಗರಿ ಮೂಳೆಗಳು ಕೀಲಿಸಿಕೊಳ್ಳುತ್ತವೆ. (ಎಲ್. ಎಸ್. ಜಿ.)

**ಎಲುಚಿಕಿತ್ಸೆ :** ಎಲ್ಲ ರೋಗಗಳಿಗೂ ಕೀಲುಗಳಲ್ಲೊ ಅವುಗಳ ಸುತ್ತುಮುತ್ತಲೊ ಏನಾದರೂ ಆಯ ತಪ್ಪಿರುವುದೇ ಕಾರಣವೆಂದುಕೊಂಡು, ಮದ್ದುಗಳ ನೆರವಿಲ್ಲದೆ ಕೇವಲ ಕೈಪಾಟಿಂದ (ಮೆನಿಪ್ಯುಲೇಷನ್) ಸರಿಪಡಿಸುವ ಒಂದು ಬಗೆಯ ಅಮೆರಿಕದ ಚಿಕಿತ್ಸಾಪದ್ಧತಿ (ಆಸ್ಟಿಯೊಪತಿ). ಈ ಕಲ್ಪನೆಗೆ ಮೂಲ ಕಾರಣನಾದ ಆಂಡ್ರೂ ಥಾಮಸ್ ಸ್ಟಿಲ್ಲನ ಅಭಿಪ್ರಾಯದಲ್ಲಿ ಮದ್ದುಗಳು ವಿಷಕರ, ಅಲ್ಲದೆ ಮೂಳೆ, ಸ್ನಾಯು, ಕೀಲು, ತಂತುಗಟ್ಟು (ಲಿಗಮೆಂಟ್) ಮತ್ತಿತರ ಯಾವುದೇ ಊತಕದಲ್ಲಿ ರೋಗದ ಅಂಗಾಂಶಗಾಯ (ಲೀಷನ್) ತೋರಬಹುದು. ಪೆಟ್ಟು, ಗಾಯ, ಒತ್ತರ, ಸೊಂಕುಗಳಿಂದಲೊ ಇನ್ನೆಲ್ಲೊ ರೋಗವೆದ್ದುದರ ಹಿಮ್ಮುರಿಗೆಯಾಗೊ (ರಿಫ್ಲೆಕ್ಸ್‌ಲಿ), ಕೇವಲ ನರಬೇನೆಯ ಪರಿಣಾಮವಾಗೊ ಹೀಗಾಗಬಹುದು. ಇದರಿಂದ, ಒಂದೆಡೆ ಹಿಡಿದುಕೊಂಡಂತೆ ಬಿಗುವಾಗಿ, ಆ ಭಾಗದ ಕೆಲಸ ಕುಂದಿ, ಇಲ್ಲವೇ ಅಕ್ಕಪಕ್ಕಗಳ ಊತಕಗಳಲ್ಲಿ ರಕ್ತದ ಹರಿವು ನಿಧಾನವಾಗಿ, ಆಮ್ಲ ರಕ್ತವಾಗಿ (ಅಸಿಡೀಮಿಯ) ಹತ್ತಿರ ಇರುವ ನರಗಳನ್ನು ಕೆರಳಿಸುವುದು. ಇದರಿಂದಾಗಿ ಆ ನರಗಳು ಹೋಗಿ ಸೇರುವ ದೂರದ ಅಂಗಗಳಿಗೂ ರಕ್ತ ಹರಿವು ತಗ್ಗಿ ತೊಂದರೆಯಾಗುತ್ತದೆ. ಕರುಳುವಾಳುರಿತ (ಅಪೆಂಡಿಸೈಟಿಸ್) ಆಗುವುದು ಒಂದು ಉದಾಹರಣೆ. ಕೀಲುಗಳು ಆಯ ತಪ್ಪಿದಾಗ (ಸಬ್‌ಲಕ್ಸೇಷನ್) ಉಂಟಾಗುವ ಅಂಗಾಂಶಗಾಯಗಳ ದೆಸೆಯಿಂದ ಸೊಂಕುಗಳನ್ನು ಎದುರಿಸಲು ಮೈ ತನ್ನವೇ ಆದ ಜೀವವಿಷರೋಧಕಗಳು (ಆಂಟಿಟಾಕ್ಸಿನ್ಸ್) ಮತ್ತು ರೋಧವಸ್ತುಗಳನ್ನು (ಆಂಟಿಬಾಡೀಸ್) ತಯಾರಿಸಿಕೊಳ್ಳುವ ಬಲಕ್ಕೆ ಅಡ್ಡಿಯಾಗುತ್ತದೆ. ಇವೆಲ್ಲವನ್ನೂ ಸರಿಪಡಿಸಬೇಕಾದರೆ ದೇಹವನ್ನು ಸಮಸ್ಥಿತಿಗೆ ತಂದು ಅದು ಮತ್ತೆ ತನ್ನ ಕೆಲಸಗಳನ್ನು ನಿರ್ವಹಿಸುವಂತೆ ಮಾಡಬೇಕು. ಇದು ಬರಿಯ ಕೈಗಳಿಂದ ಕೈಗೊಳ್ಳುವ ಕೈಪಾಟಿನಿಂದ ಸಾಧ್ಯ ಎನ್ನುವುದು ಸ್ಟಿಲ್ಲನ ಮತ (1874).

ಇತ್ತೀಚೆಗೆ ಈ ಚಿಕಿತ್ಸಾ ಪದ್ಧತಿಯಲ್ಲಿ ಸಾಕಷ್ಟು ಬದಲಾವಣೆಗಳಾಗಿವೆ. ಬಹುಮಟ್ಟಿಗೆ ಎಲ್ಲ ರೋಗಗಳಿಂದಲೂ ತೇರ್ಗಡೆಯಾಗುವ ಬಲ ಮೈಗೆ ಇದೆಯೆಂದೂ ಭೌತಿಕ, ರಾಸಾಯನಿಕ, ಪೋಷಕ ಅಂಶಗಳು ಆರೋಗ್ಯದ ಮಟ್ಟದ ಮೇಲೆ ಪರಿಣಾಮ ಬೀರುವುವೆಂದೂ ಅನೇಕ ರೋಗಗಳಲ್ಲಿ ಮದ್ದು, ಶಸ್ತ್ರವೈದ್ಯ ಆಗಬೇಕೆಂದೂ ಈ ಪದ್ಧತಿಯವರು ಈಗ ಒಪ್ಪಿಕೊಂಡರೂ ಅವರ ಅಂಗಾಂಶಗಾಯಗಳ ಹುಟ್ಟಿನ ಕಲ್ಪನೆ ಮಾತ್ರ ಬದಲಾಗಿಲ್ಲ. ಇವನ್ನು ಸ್ಟಿಲ್ ಮೊದಲು ಒಪ್ಪಿರಲಿಲ್ಲ. ಬೆನ್ನೆಲುಬುಗಳ ನಡುವಣ ಕೀಲುಗಳ ಅರೆಕೀಲ್ತಪ್ಪಿಕೆಗಳು ಘನದರ್ಶಕ (ಸ್ಟೀರಿಯೊಸ್ಕೋಪಿಕ್) ಎಕ್ಸ್‌ಕಿರಣ ಪರೀಕ್ಷೆಗಳಲ್ಲಿ ಕಂಡರೂ ಅವು ತೀರ ಸಾಮಾನ್ಯ, ಶಸ್ತ್ರಕ್ರಿಯೆಗೆ ತಕ್ಕವಲ್ಲ, ಅವುಗಳಿಂದ ಯಾರೂ ಸಾಯುವುದೂ ಇಲ್ಲ. ಮುಖ್ಯವಾಗಿ ಬೆನ್ನೆಲುಬಿನ ಕೀಲುಗಳಲ್ಲೂ ಅವುಗಳ ಸುತ್ತಲೂ ಅಲ್ಲಲ್ಲಿ ನೋವು, ಕೋಮಲತೆ, ಸ್ನಾಯು ಸೆಡೆತ, ಚಲನೆ ಮಿತಿಗೊಂಡಿರಬಹುದು. ಎಷ್ಟೊ ವೇಳೆ ದೂರದ ಅಂಗಗಳಲ್ಲಿ ಏರುಪೇರು ಮಾಡುವಂತಿದ್ದರೂ ಇವು ಕೇವಲ ರೋಗ ಲಕ್ಷಣಗಳೇ ಹೊರತು, ಇವೇ ರೋಗಗಳಲ್ಲ. ಇನ್ನೆಲ್ಲೂ ಗೊತ್ತಾದ ರೋಗ ಕಾಣದಿದ್ದರೂ ಬಹಳ ಮಂದಿಯಲ್ಲಿ ಕೂಡಲೇ ಶಾಶ್ವತ ಅಥವಾ ತಾತ್ಕಾಲಿಕ ಶಮನಕ್ಕಾಗಿ ಬರೀ ಕೈಪಾಟನ್ನೇ ಬಳಸಬಹುದು. ಮಿತಿಮೀರಿ ಚಿಕಿತ್ಸೆ ಮಾಡುವುದು ಬೇಕಿಲ್ಲವಾದರೂ ಕೈಪಾಟು ಕೈಗೊಳ್ಳುವುದೂ ತರವಲ್ಲ. ಮೈಯಲ್ಲಿ ಇನ್ನೆಲ್ಲಾದರೂ ಗೊತ್ತಾದ ರೋಗವಿದ್ದು ಈ ಲಕ್ಷಣಗಳು ಕಂಡುಬಂದರೆ, ಕೈಪಾಟು ಆಗಲೇಬೇಕೆಂದಿಲ್ಲ. ಇದನ್ನು ಮಾಡಿದಾಗಲೂ ಎಂದಿನ ವೈದ್ಯಚಿಕಿತ್ಸೆಯ ವಿಧಾನಗಳ ಜೊತೆಗೆ ಇದು ಇರುವುದೇ ಹೊರತು ಅದರ ಬದಲಾಗಿ ಅಲ್ಲ. ಎಲ್ಲ ರೋಗಗಳೂ ಈ ಪದ್ಧತಿಯಿಂದಲೇ ಖಂಡಿತವಾಗಿ ವಾಸಿಯಾಗುವುವೆಂಬ ಸ್ಟಿಲ್ಲನ ಹಳೆಯ ಕಲ್ಪನೆ ಈಗ ಉಳಿದಿಲ್ಲ.

ಮೊಟ್ಟಮೊದಲು ಸ್ಟಿಲ್ 1874ರ ಜೂನ್ 22ರಲ್ಲಿ ತನ್ನ ಕಲ್ಪನೆಯನ್ನು ಸಾರಿ ಹೇಳಿದರೂ ಅಮೆರಿಕದ ಒಂದು ಎಲುಚಿಕಿತ್ಸೆಯ ಶಾಲೆ ತೆರೆದುದು 1892ರಲ್ಲಿ. 1964ರ ಹೊತ್ತಿಗೆ ಇಡೀ ಅಮೆರಿಕದ ಸಂಸ್ಥಾನಗಳಲ್ಲಿ 6 ಶಾಲೆಗಳಿದ್ದವು. ಎಂದಿನ ವೈದ್ಯಶಾಸ್ತ್ರ ಶಾಲೆಗಳ ಹಾಗೇ ಇವೂ ವೈದ್ಯಪಾಠಗಳು, ಶಿಕ್ಷಣ, ಪರೀಕ್ಷೆಗಳನ್ನು ನಡೆಸುತ್ತಿರುವುದರ ಜೊತೆಗೆ ಎಲುಚಿಕಿತ್ಸಕ ಅಂಗಾಂಶಗಾಯ, ಕೈಪಾಟಿನ ರೋಗ ಚಿಕಿತ್ಸೆಗಳನ್ನೂ ಹೇಳುತ್ತಿರುವವರಷ್ಟೆ. ಕೆಲವು ಶಾಲೆಗಳಲ್ಲಂತೂ ಇಷ್ಟೂ ನಡೆಯದು. ಬ್ರಿಟನಿನಲ್ಲಿ 2 ಶಿಕ್ಷಣ ಕೇಂದ್ರಗಳಿವೆ. ಲಂಡನಿನ ಎಲುಚಿಕಿತ್ಸೆಯ ಕಾಲೇಜಿನಲ್ಲಿ, ಒಂದೂ ಕಾಲು ವರ್ಷಗಳ ಶಿಕ್ಷಣಕ್ಕೆ ವೈದ್ಯ ಪದವೀಧರರು ಮಾತ್ರ ಸೇರಬಹುದಾದರೂ ಎಲುಚಿಕಿತ್ಸೆಯ ಬ್ರಿಟಿಷ್ ಶಾಲೆಯಲ್ಲಿ, 4–5 ವರ್ಷಗಳ ತರಬೇತಿಗೆ ಬೇರೆಯವರೂ ಸೇರಬಹುದು. ಇವೆರಡರಲ್ಲೂ ಎಲುಚಿಕಿತ್ಸೆಯ ವಿಚಾರವಾಗಿ ಗಮನ ಕೊಡುವುದು ಹೆಚ್ಚು. ಲಂಡನ್ ಶಾಲೆ ಅಮೆರಿಕದ ಎಲುಚಿಕಿತ್ಸೆ ಸಂಘಕ್ಕೆ ಸೇರಿದ್ದೆಂದು ಹೇಳಿಕೊಳ್ಳುತ್ತದೆ. ಇನ್ನೊಂದು ಗ್ರೇಟ್ ಬ್ರಿಟನಿನ ಎಲುಚಿಕಿತ್ಸಕಸಂಘದ ಮೇಲ್ವಿಚಾರಣೆಯಲ್ಲಿದೆ. ಎಲುಚಿಕಿತ್ಸಕರ ಒಂದು ಮಂಡಲಿಯೂ ನೋಂದಣಿಯೂ (ರಿಜಿಸ್ಟರ್) ಇವೆ. ಬಹುಪಾಲು ಲಂಡನ್ ಶಾಲೆಯಲ್ಲೇ ಕಲಿತ ಬಹಳ ಮಂದಿ ಎಲುಚಿಕಿತ್ಸಕರು ಫ್ರಾನ್ಸಿನಲ್ಲಿದ್ದಾರೆ. ಹೀಗೆ, ಆಸ್ಟ್ರೇಲಿಯ, ನ್ಯೂಜಿ಼ಲೆಂಡ್, ವೆಸ್ಟ್ ಇಂಡೀಸ್, ಭಾರತ, ದಕ್ಷಿಣ ಆಫ್ರಿಕಗಳಲ್ಲೂ ಅಲ್ಲಲ್ಲಿ ಈ ಚಿಕಿತ್ಸಾ ವಿಧಾನ ಅನುಸರಣೆಯಲ್ಲಿದೆ. (ಎಂ. ಓ.)

**ಎಲುನೇರ್ಪಿಕ ಶಸ್ತ್ರವೈದ್ಯ :** ಶಸ್ತ್ರ, ಸಲಕರಣೆಗಳ ಬಳಕೆಯ ವಿಧಾನಗಳಿಂದ, ಕೈಕಾಲುಗಳು, ಬೆನ್ನುಗಂಬ ಮತ್ತಿತರ ಆ ತೆರನ ರಚನೆಗಳ ರೂಪ, ನಿಜಗೆಲಸಗಳನ್ನು ಪರೀಕ್ಷಿಸಿ, ಇರುವವನ್ನು ಉಳಿಸಿಕೊಂಡು, ಕೆಟ್ಟಿದ್ದರೆ ಸಹಜ ಸ್ಥಿತಿಗೆ ತಂದು ಸರಿಯಾಗಿ ಬೆಳೆಯಬಿಡುವ, ಶಸ್ತ್ರವೈದ್ಯವಿಜ್ಞಾನದ ಒಂದು ವಿಭಾಗ (ಆರ್ಥೊಪೀಡಿಕ್ ಸರ್ಜರಿ). ಮೊಟ್ಟಮೊದಲು, ಕೇವಲ ಮಕ್ಕಳಲ್ಲಿ ಅಂಗಾಂಗಗಳು, ಅವಯವಗಳ ಸೊಟ್ಟುಗಳು ಆಗದಂತೆ ತಡೆದು, ಆಗಿರುವವನ್ನು ನೇರ್ಪಡಿಸುವ ಶಾಸ್ತ್ರಕ್ಕೆ ಗ್ರೀಕ್ ಪದ ಆರ್ಥೊ (ನೆಟ್ಟನೆ) ಪೆಯ್ಸ್‌ನಿಂದ (ಮಗು) ಆರ್ಥೊಪೀಡಿಕ್ಸ್ ಬರಲು ಕಾರಣವಾಗಿತ್ತು. ಆದರೆ ಈಗ ಇದರ ಹರವು ವಯಸ್ಸು ಅಂಗಗಳ ಮಿತಿಯನ್ನು ದಾಟಿದ್ದರೂ ಪ್ಯಾರಿಸ್ ವಿಶ್ವವಿದ್ಯಾನಿಲಯದ ವೈದ್ಯಶಾಸ್ತ್ರ ಪ್ರಾಧ್ಯಾಪಕ ನಿಕೊಲಾಸ್ ಆಂಡ್ರೆ ಕೊಟ್ಟ (1741) ಈ ಹಳೆಯ ಹೆಸರೇ ಉಳಿದಿದೆ. ಮಕ್ಕಳ ಕೈಕಾಲುಗಳ ಸೊಟ್ಟು, ಊನಗಳನ್ನು ಸರಿಪಡಿಸಲೋಸುಗವೇ ಒಂದು ಸಂಸ್ಥೆ ಮೊದಲು ಹುಟ್ಟಿಕೊಂಡಿದ್ದು ಸ್ವಿಟ್ಜರ್ಲೆಂಡಿನಲ್ಲಿ, 18ನೆಯ ಶತಮಾನದಲ್ಲಿ. ಇದಾದ ಮೇಲೆ, ಕೀಲುಗಳ ರಚನೆಯ ತಿಳಿವಳಿಕೆಯನ್ನು ಹೆಚ್ಚಿಸಿ ವಿಲಿಯಂ ಹಂಟರ್ ಕೀರ್ತಿವಂತನಾದ. ಇವನ ತಮ್ಮ ಜಾನ್ ಹಂಟರ್ ಕೂಡ ಸ್ನಾಯುಗಳ ನಿಜಗೆಲಸ, ಮೂಳೆಯ ಬೆಳೆವಣಿಗೆ, ವಿಕಾಸಗಳನ್ನೂ ವಿವರಿಸಿದ. ಎಲುನೇರ್ಪಿಕೆಯ ಪಾಲನೆಯಲ್ಲಿ ಬಲು ಮುಖ್ಯವೆಂದು ಎಷ್ಟೋ ಕಾಲದಿಂದಲೂ ನಂಬಿ ಕೊಡುತ್ತಿದ್ದ ವಿಶ್ರಾಂತಿಗೆ ಬಹುಮಟ್ಟಿಗೆ ಕಾರಣ ವಿಶ್ರಾಂತಿ ಮತ್ತು ನೋವುಗಳನ್ನು ಕುರಿತು ಜಾನ್ ಹಿಲ್ಟನ್ (1804–1878) ಬರೆದ ಪುಸ್ತಕ. ಕೆಲವೇಳೆ ಕೈಕಾಲುಗಳು ನಿಡುಗಾಲ ಹಿಡಿದುಕೊಂಡಿರುವುದನ್ನು ಸುಲಭವಾಗಿ ಬಿಡಿಸಲು ನೆರವಾಗುವಂತೆ ಕಂಡರಗಳನ್ನು (ಟೆಂಡನ್ಸ್) ಕೊಯ್ದು ಸೀಳಿ ಬಿಡಿಸುವ ಕಂಡರಕೊಯ್ಸೀಳಿಗೆಯ (ಟೀನಾಟೊಮಿ) ವಿಧಾನವನ್ನು ಜಾರಿಗೆ ತಂದವ ಜರ್ಮನಿಯ ಶಸ್ತ್ರವೈದ್ಯ ಸ್ಟ್ರೋಮೆಯರ್ (1804–1876). ಅರನಾರಿಯಾಗಿ (ಪ್ಯಾರಲೈಸ್ಡ್) ಸೊಟ್ಟಗಿದ್ದ ತನ್ನ ಪಾದವನ್ನು ನೆಟ್ಟಗೆ ಮಾಡಿಸಿಕೊಳ್ಳಲು ಇದೇ ಶಸ್ತ್ರವೈದ್ಯನಲ್ಲಿಗೆ, ಮುಂದೆ ಇಂಗ್ಲೆಂಡಿನಲ್ಲಿ ಎಲುನೇರ್ಪಿಕ ಶಸ್ತ್ರವೈದ್ಯನಾಗಿ ಹೆಸರು ಪಡೆದ, ವಿಲಿಯಂ ಜೆ. ಲಿಟ್ಲ್ ಹೋಗಿದ (1836). ಕಾಲುಗಳ ನೀಳ ಮೂಳೆಗಳ ಮುರಿಕೆಗಳ (ಫ್ರಾಕ್ಚರ್ಸ್) ಚಿಕಿತ್ಸೆಯಲ್ಲಿ ಈಗಲೂ ಬಳಕೆಯಲ್ಲಿರುವ ತಾಮಸ್ ದಬ್ಬೆಪಟ್ಟಿಯನ್ನು (ಸ್ಪ್ಲಿಂಟ್ಸ್) ತಯಾರಿಸಿದ್ದಲ್ಲದೆ, ಇನ್ನೂ ಎಷ್ಟೊ ವಿಷಯಗಳನ್ನು ಲಿಟ್ಲ್ ಕಂಡುಹಿಡಿದ. ಇಂದಿನ ಎಲುನೇರ್ಪಿಕ ಶಸ್ತ್ರವೈದ್ಯಶಾಸ್ತ್ರಕ್ಕೆ ಸರ್ ರಾಬರ್ಟ್ ಜೋನ್ಸನ (1858–1933) ಸಾಧನಗಳೇ ಅಡಿಗಲ್ಲು ಎನ್ನಬಹುದು. ಇವನಲ್ಲಿ ಕಲಿತ ಬಹಳ ಮಂದಿ ಪ್ರಪಂಚದ ಎಲ್ಲೆಡೆಗಳಲ್ಲೂ ಇವನ ಮೇಲ್ವಿಚಾರಣೆಯಲ್ಲೇ ಎಲುನೇರ್ಪಿಕ ಕೇಂದ್ರಗಳನ್ನೂ ಗುಣಪಡಿಸುವ ಯಂತ್ರಾಗಾರಗಳನ್ನೂ (ವರ್ಕ್‌ಷಾಪ್ಸ್) ತೆರೆದರು. ಕೈಕಾಲುಗಳ ಎಲುಮುರಿಕೆಗಳ; ವಿಪರೀತ ಪೆಟ್ಟಾದವುಗಳ ಚಿಕಿತ್ಸೆಯಲ್ಲಿ ದಬ್ಬೆಪಟ್ಟಿಗಳನ್ನು ಹಾಕಿ ಕಟ್ಟುವುದರೊಂದಿಗೆ ಶಸ್ತ್ರವೈದ್ಯದ ವಿಧಾನಗಳು ಜಾರಿಗೆ ಬಂದುದು ಬಲುಮಟ್ಟಿಗೆ ಪ್ರಪಂಚದ ಮೊದಲನೆಯ ಯುದ್ಧವೂ ಜೋನ್ಸನ ಮುಂದಾಳ್ತನವೂ ಕಾರಣ.

ಮೂಳೆಗಳು, ಕೀಲುಗಳನ್ನು ನೇರ್ಪಡಿಸುವಾಗ, ನಾಟಿಹಾಕಬೇಕಾದ ಮೂಳೆಯನ್ನು ಸರಿಯಾದ ಆಕಾರ, ಗಾತ್ರ, ಅಳತೆಗಳಿಗೆ ರೋಗಿಯ ಬೇರೆ ಭಾಗಗಳಿಂದ ಕೊಯ್ದು ತೆಗೆವುದು ಒಂದು ಮುಖ್ಯ ವಿಧಾನ. ಕೈಯಿಂದ ಕೊಯ್ದರೆ ಅಕ್ಕಪಕ್ಕದ ಊತಕಗಳಿಗೆ ಹಾನಿಯಾಗಿ ಅಡ್ಡಾದಿಡ್ಡಿಯಾಗಿ ಚೂರಾಗುತ್ತಿತ್ತು. ಇದಕ್ಕಾಗಿ ವಿದ್ಯುತ್ತಿನ ಚಾಲಕಯಂತ್ರವನ್ನು ಅಮೆರಿಕದಲ್ಲಿ ಎಫ್. ಎಚ್. ಆಲ್ಬೀ (1876–1945) ಕಂಡುಹಿಡಿದುದು (1909) ಒಂದು ಮುನ್ನಡೆ. ಎಳೆಯರಲ್ಲಿ, ಜ್ವರ ಬಂದು ಕೈಕಾಲು ಬೆಳೆಯದೆ ನಿಸ್ಸತ್ತ್ವಗೊಳ್ಳುವ ನರೆಮಜ್ಜೆಯುರಿತದ (ಪೋಲಿಯೊಮೈಲೈಟಿಸ್) ಮಕ್ಕಳ ಪಾಲನೆ, ಬೆನ್ನುಗಂಬದ ಸೊಟ್ಟುಗಳ ಹೆಚ್ಚಿನ ತಿಳಿವಳಿಕೆ, ಚಿಕಿತ್ಸೆ ವಿಧಾನಗಳನ್ನು ಜಾರಿಗೆ ತಂದವ ರಾಬರ್ಟ್ ಲೊವೆಟ್ (1859–1924). ಪಾದಗಳ ಸೊಟ್ಟುಗಳನ್ನೂ ಸಡಿಲವಾದ ಕೀಲುಗಳನ್ನು ಬಿಗಿಪಡಿಸುವ ಚಿಕಿತ್ಸೆಗಳನ್ನೂ ಮೈಕೇಲ್

ಹೋಕ್ (1824–1944) ತೋರಿಸಿಕೊಟ್ಟ. ಹೀಗೇ ವಿಲ್ಲಿಸ್ ಕ್ಯಾಂಪ್‌ಬೆಲ್ ಕೂಡ ಹೆಚ್ಚಿನ ತಂತ್ರಗಳು, ವಿಧಾನಗಳಿಗೂ ಕಾರಣನಾದ. ರೋಗ ಹತ್ತಿದ, ಡೊಂಕಾದ ಬೆನ್ನುಗಂಬದ ನೇರ್ಪಡಿಕೆ, ಮತ್ತಿತರ ಮುಖ್ಯ ಶಸ್ತ್ರಕ್ರಿಯಾ ವಿಧಾನಗಳನ್ನು ತಂದವ ರಸೆಲ್ ಹಿಬ್ಸ್ (1869–1932).

ಉದ್ದೇಶ: ಊನಗಳೂ ಸೊಟ್ಟುಗಳೂ ಆಗುವುದನ್ನು ತಡೆವುದೂ, ಆಗಿದ್ದರೆ ಸರಿಪಡಿಸುವುದೂ ಈಗಿನ ಕಾಲದ ಎಲುನೇರ್ಪಿಕ ಶಸ್ತ್ರವೈದ್ಯದಲ್ಲಿ ಮುಖ್ಯವೆನಿಸಿವೆ. ಆದ್ದರಿಂದ ಇದರಲ್ಲಿ ನಿರೋಧಕ ಅಲ್ಲದೆ ಮರು ರೂಪಿಕ (ರೀಕನ್‌ಸ್ಟ್ರಕ್ಟಿವ್) ಎಂಬ ಎರಡು ವಿಭಾಗಗಳಿವೆ. ಸೊಟ್ಟುಗಳು ತಲೆಮೊರೆಗುಣದಿಂದಲೋ ಹುಟ್ಟಿದ ಮೇಲೋ ಆಗಿರಬಹುದು. ತಲೆಮೊರೆಯಿಂದ ಬಂದವು ಮೂರು ಬಗೆಯವು: ಬಸುರಿಯಲ್ಲಿನ (ಮೂಳೆ ಮುರಿಕೆಯಂತೆ) ಪಿಂಡಗೂಸಿನ (ಫೀಟಸ್) ಬೆಳವಣಿಗೆಯಲ್ಲಿ ಅಡಚಣೆ ಆಗಿರಬಹುದು; (ಸೊಂಟಗೀಲಿನ ಕೀಲ್ತಪ್ಪಿಕೆಯಂತೆ) ತಲತಲಾಂತರವಾಗಿ ಬಂದಿರಬಹುದು; (ನಾಲ್ಕು ಕಾಲುಗಳ ಪ್ರಾಣಿಯಿಂದ ಇಗ್ಗಾಲುಗಳ ಮೇಲೆ ಅಡ್ಡಾಡುವ ಜೀವಿಯಾದುದರ ಫಲವಾಗಿ ಬೆನ್ನುಗಂಬದ ಸೊಂಟದ ಭಾಗದಲ್ಲಿ ಕಾಣುವ ಅಸಹಜತೆಗಳಂತೆ) ಮಾನವ ಕುಲದ ವಿಕಾಸಕ್ಕೆ ತಕ್ಕಹಾಗೆ ಬದಲಾವಣೆಗಳಾಗಿರ ಬಹುದು. ಮಾನವನ ಬೆನ್ನುಗಂಬದಲ್ಲಿ ವಿಕಾಸದ ಎಷ್ಟೊ ಬದಲಾವಣೆ ಆಗಿಬಿಟ್ಟಿರು ವುದರಿಂದ ಕೆಲವು ವಿಕಾರಗಳು ಆಗಾಗ್ಗೆ ಕಂಡುಬರುವುವು. ಹುಟ್ಟಿನಿಂದಲೇ ಕಂಡು ಬರುವ ಸೊಟ್ಟುಗಳು ಎಲ್ಲವನ್ನೂ ಇಂದಿನ ತಿಳಿವಳಿಕೆಯ ಮೇರೆಗೆ ಈ ಗುಂಪುಗಳಲ್ಲಿ ಸದ್ಯಕ್ಕೆ ವಿಂಗಡಿಸಲಾಗದಿದ್ದರೂ ತಿಳಿವು ಹೆಚ್ಚಾದಂತೆಲ್ಲ ಮುಂದೆ ಸಾಧ್ಯವಾಗಬಹುದು. ಹುಟ್ಟಿದಾಗ ಇರುವ ಸೊಟ್ಟುಗಳನ್ನು ತಡೆಯಲಾಗದು ಎನಿಸಿದರೂ ಈಲಾದ ಪ್ರಾಣಿ ಗಳಿಗೆ ಕೆಲವು ಅಂಶಗಳಲ್ಲಿ ಕೊರೆಯಲಾಗಿರುವ ಉಣಿಸುಗಳನ್ನು ತಿನ್ನಿಸಿ ಮಾಡಿದ ಪ್ರಯೋಗಗಳಿಂದ, ಪಿಂಡದ ಬೆಳವಣಿಗೆಯ ಮೇಲೂ ಉಣಿಸಿದ ಪ್ರಭಾವ ಇರುವುದು ಕಂಡುಬರುತ್ತದೆ.

ಬೆಳವಣಿಗೆ ಕುಂದುವುದರಿಂದಲೂ ಎಷ್ಟೊ ಸೊಟ್ಟುಗಳು ಆಗಬಹುದು. ಕೈ ಕಾಲುಗಳ ನೀಳವಾದ ಒಂದು ಮೂಳೆ, ಉದ್ದಕ್ಕೂ ಒಂದೇ ಮೊಳಕೆಯಿಂದ ಬೆಳೆವು ದಿಲ್ಲ. ನಡುವಣ ಮುಖ್ಯ ಭಾಗಕ್ಕೂ ಮೂಳೆಯ ಕೊನೆಗಳಿಗೂ ನಡುವೆ ಮೆಲ್ಲೆ ಲುಬು (ಕಾರ್ಟಿಲೇಜ್) ಇರುವುದು. ಮೂಳೆಗಳು ಬೆಳೆದಂತೆಲ್ಲ ಈ ಮೆಲ್ಲೆಲುಬು ಕರಗಿ, ಎಲ್ಲ ಭಾಗಗಳೂ ಒಂದುಗೂಡಿ ಒಂದೇ ಮೂಳೆಯಾಗುತ್ತದೆ. ಈ ಬೇರೆ ಯಾಗಿರುವ ಮೂಳೆ ಕೊನೆಗಳಲ್ಲಿರುವ ಮೊಳಕೆಗಳಿಗೆ ಮೇಲೆಲುಮೊಳೆಗಳು (ಎಪಿಫೈಸಸ್) ಎಂದಿದೆ. ಇವುಗಳ ಬೆಳೆತದಲ್ಲಿ ಹಲವು ಅಡಚಣೆಗಳಾಗಬಹುದು. ಹೀಗಾದಾಗ, ಕೀಲುಗಳ ಮೇಲು ತಳಗಳಲ್ಲಿ ಸೊಟ್ಟುಗಳಾಗಿ, ಮುಂದೆ ನೋವು ಕೊಡುತ್ತವೆ. ಹಿಂದಿನ ಕಾಲದಲ್ಲಿ, ಕೀವುಟ್ಟಿಸುವ ಜೀವಾಣುಗಳಿಂದ ಕೀಲುಗಳಲ್ಲಿ ವಿಪರೀತ ಸೋಂಕುಗಳು ಹತ್ತಿ, ಕೀಲುಸೊಟ್ಟಾಪಟ್ಟೆಯಾಗಿ ಊನವಾಗುತ್ತಿದ್ದುವು. ಇಂದಿನ ಸಲ್ಫೋನೆಮೈಡುಗಳು, ಪೆನಿಸಿಲಿನ್ ತೆರನ ಮದ್ದುಗಳ ಚಿಕಿತ್ಸೆಯಿಂದ ಬಹುಮಟ್ಟಿಗೆ ಇವುಗಳ ಸೊಲ್ಲಡಗಿದೆ. ಸೊಟ್ಟುಗಳು, ಊನಗಳೂ ಆಗಲು ನರೆಮಜ್ಜೆ ಯುರಿತ ಇನ್ನೊಂದು ಮುಖ್ಯ ಕಾರಣ. ಇದರೆದುರಾಗಿ ಈಗ ಒಳ್ಳೆಯ ಲಸಿಕೆಗಳು ದೊರೆತಿರುವ ಕಾರಣ, ಇದನ್ನೂ ಬಹುಮಟ್ಟಿಗೆ ಬರದಂತೆ ತಡೆಗಟ್ಟಬಹುದು,

ಮೂಳೆಗಳು, ಕೀಲುಗಳು, ಸ್ನಾಯುಗಳು, ಕಂಡರಗಳು ಚರ್ಮ ಇವಕ್ಕೆ ಗಾಯ ಪೆಟ್ಟುಗಳು ಆದಮೇಲೂ ಸೊಟ್ಟುಗಳೂ ಊನಗಳೂ ಆಗಬಹುದು. ಇವುಗಳಲ್ಲಿ ಯಾವೊಂದಕ್ಕೆ ಪೆಟ್ಟುಬಿದ್ದರೂ ಚೆನ್ನಾಗಿ ಸರಿಪಡಿಸದಿದ್ದಲ್ಲಿ, ಮುಂದೆ ಸೊಟ್ಟೋ ಊನವೋ ಆಗಿ ಉಳಿಯಬಹುದು. ಕಾಲಿನ ಮೂಳೆ ಮುರಿದ ಮೇಲೆ ಅದರ ಚೂರುಗಳು ಸೊಟ್ಟನಾಗಿ ಕೂಡಿಕೊಳ್ಳಲು ಬಿಟ್ಟರೆ, ಸೊಟ್ಟಸೊಟ್ಟನಾಗಿ ಕಾಲು, ಹೆಜ್ಜೆಹಾಕಬೇಕಾಗುವುದಲ್ಲದೆ, ಮುರಿಕೆಯಾದ ಜಾಗದ ಹತ್ತಿರದ ಕೀಲಲ್ಲೂ ತೊಂದರೆ ಯಾಗುತ್ತದೆ. ಇದೇ ತೆರನಾಗಿ, ಹರಡಿನ ಬಳಿಯ ಮೂಳೆಗಳು ಮುರಿದ ಮೇಲೆ ಬೇಗನೆ ಎಂದಿನಂತೆ ಸರಿಯಾಗಿ ಕೂಡಿಸದಿದ್ದಲ್ಲಿ ಕೀಲಿನ ಮೇಲು ತಳಗಳು ಅಲ್ಲಲ್ಲಿ ಸವೆದುಹೋಗಿ ಗಾಯಪೆಟ್ಟಿನ ಕೀಲುರಿತವಾಗಿ (ಅರ್ಥ್‌ರೈಟಿಸ್) ಸೊಟ್ಟಗಾಗುತ್ತದೆ ಪೆಟ್ಟು ಬಿದ್ದಿರುವ ಸ್ನಾಯುಗಳು, ಕಂಡರಗಳನ್ನು ಸರಿಯಾಗಿ ನೋಡಿಕೊಳ್ಳದಿದ್ದರೆ ಒಂದು ಅವಯವದ, ಅಂಗದ ನಿಜಗೆಲಸದ ಸಮತೋಲ ತಪ್ಪಿ, ಸೊಟ್ಟೊ ಊನವೂ ಆಗುವುವು. ಇದೇ ರೀತಿಯಲ್ಲಿ ಸುಟ್ಟಗಾಯ ವಾಸಿಯಾದಂತೆಲ್ಲ ದೊಡ್ಡವಾಗಿ ಕಟ್ಟುವ ಕಲೆ ಕೀಲಿನ ಒಂದು ಪಕ್ಕದ ಮೆತುಭಾಗಗಳೆಲ್ಲ ಬಿಗುವಾಗಿ ಸುಕ್ಕುಗಟ್ಟಿ ಆತಲೀಸದಂತೆ ಹಿಡಿದಿಟ್ಟು ಊನಗೊಳಿಸುತ್ತದೆ. ಇವುಗಳಲ್ಲೆಲ್ಲ, ಆದಷ್ಟೂ ಕಡಿಮೆ ಸೊಟ್ಟು ಉಳಿದು, ಅವರ ನಿಜಗೆಲಸಕ್ಕೆ ಅಡ್ಡಿ ಇರದಂತೆ ಬೇಗನೆ ಸಾಕಷ್ಟು ಚಿಕಿತ್ಸೆ ಕೈಗೊಳ್ಳುವುದೇ ಬಲು ಒಳ್ಳೆಯ ನಿರೋಧ.

ನೋಡಿ—ಎಲುಬಿನ ರೋಗಗಳು, ಗಾಯಗಳು; ಎಲುಮುರಿಕೆಗಳು, ಕೀಲ್ತಪ್ಪಿಕೆಗಳು; ಕೀಲುಗಳ, ತಂತುಗಟ್ಟುಗಳ ರೋಗಗಳು, ಊನಗಳು.

**ಕೈಗೊಳ್ಳುವ ಕ್ರಮಗಳು, ವಿಧಾನಗಳು:** ಹಿಂದಿನ ಕಾಲದ ಎಲುನೇರ್ಪಿಕ ಶಸ್ತ್ರವೈದ್ಯದಲ್ಲಿ, ಬಹುಮಟ್ಟಿಗೆ ಕೆಟ್ಟಿರುವ ಭಾಗಗಳನ್ನು ಅಲುಗಾಡದಂತೆ ಇರಿಸಲು ಭಾರವಾದ ಬಿಗುಪಟ್ಟಿಗಳು, ದಬ್ಬೆಪಟ್ಟಿಗಳು ಮತ್ತಿತರ ವಿಧಾನಗಳೇ ಚಿಕಿತ್ಸೆ ಆಗಿ ದ್ದುವು. ಆದರೆ ಇಂದಿನ ಈ ಶಸ್ತ್ರವೈದ್ಯದಲ್ಲಿ, ಇರುವ ಸೊಟ್ಟುಗಳನ್ನು ಬೇಗನೆ ಚುರುಕಾಗಿ ಸರಿಪಡಿಸಿ, ಮುಂದೆ ಸೊಟ್ಟುಗಳು, ಊನಗಳು ಆಗುವುದನ್ನು ತಡೆವ ಶಸ್ತ್ರಕ್ರಿಯಾವಿಧಾನಗಳು ಬಳಕೆಯಲ್ಲಿವೆ. ಇಷ್ಟೇ ಅಲ್ಲದೆ, ಶಸ್ತ್ರವೈದ್ಯ ಚಿಕಿತ್ಸೆಯೊಂದಿಗೆ, ರಸಾಯನರೋಗ ಚಿಕಿತ್ಸೆ (ಕೀಮೊತೆರಪಿ) ಪೂರಾರಕ್ತ, ಕೆಲವೇಳೆ ರಕ್ತದ ಬದಲಿವಸ್ತುಗಳು, ಅರಿವಳಿಕೆಯ (ಅನೀಸ್ತಿಸಿಯ) ಸುಧಾರಿಸಿದ ವಿಧಾನಗಳು, ಇವೆಲ್ಲ ಇರುವುದರಿಂದ ಬಹಳ ಚೂರುಚೂರಾಗಿರುವ ಭಾಗಗಳನ್ನು ಮೊದಲೇ ಸರಿ ಪಡಿಸುವುದೂ ಈಗ ಕೈಗೂಡಬಹುದು. ಪ್ರಪಂಚದ ಎರಡನೆಯ ಯುದ್ಧದಲ್ಲಿನ ಎಲುನೇರ್ಪಿಕ ಶಸ್ತ್ರವೈದ್ಯದ ಸಾಧನಗಳೇ ಇದರ ಸಾಕ್ಷಿ.

ಬೆನ್ನುಗಂಬದ, ಕೈಕಾಲುಗಳ ಮರುರೂಪಿಕ ಶಸ್ತ್ರವೈದ್ಯದಲ್ಲಿ ಎಲುಮುರಿಕೆಗಳು ಕೂಡ ದಾದಾಗಲೂ ಸೊಟ್ಟನಾಗಿ ಕೂಡಿರುವಾಗಲೂ ಶಸ್ತ್ರವೈದ್ಯದಿಂದ ಈಗ ಸಫಲ ಚಿಕಿತ್ಸೆ ಕೈಗೊಳ್ಳಬಹುದು. ಮೂಳೆಗಳ ನಾಟಿಗಳು ಹೇರಳವಾಗಿ ಬಳಕೆಯಾಗುತ್ತಿವೆ. ಬಗೆ ಬಗೆಯ ಕೆಲಸಗಳಿಗಾಗಿ ಈ ವಿಧಾನದಲ್ಲಿ ಮೂಳೆ ನಾಟಿಹಾಕುವ ಹಲತೆರನ ತಂತ್ರಗಳಿವೆ.

ಕಂಡರಗಳನ್ನು ಸರಿಪಡಿಸಲು ನಾಟಿ ಹಾಕಬಹುದು. ಇಲ್ಲವೇ ಬೇರೆಡೆ ಇರುವು ದನ್ನು ಇಲ್ಲಿ ತಂದು ನಾಟಿ ನೆಡಬಹುದು. ಕೈಯಲ್ಲಿ ಸ್ನಾಯುಸುತ್ತಿನ (ಮಸ್ಕ್ಯು ಲೊಸ್ಪೈರಲ್) ನರ ಸರಿಪಡಿಸಲಾರದಷ್ಟು ಹಾಳಾಗಿದ್ದರೂ ಕೈಯನ್ನು ಬಹುಮಟ್ಟಿಗೆ ಎಂದಿನಹಾಗೇ ಬಳಸುವಂತೆ, 2–3 ಕಂಡರಗಳನ್ನು ನಾಟಿ ಹಾಕಬಹುದು. ಅಪಾರ ಗಾಯಕಲೆಗಳ ಬಿಗಿವ ಸುಕ್ಕುಗಳನ್ನು ಸರಿಪಡಿಸುವುದರಲ್ಲಿ ಚರ್ಮದ ನಾಟಿ ಹಾಕು ವುದು ಮರುರೂಪಕ ಶಸ್ತ್ರವೈದ್ಯದ ದೊಡ್ಡ ಮುನ್ನಡೆ.

ಉದ್ದದಲ್ಲಿ ವಿಪರೀತ ವ್ಯತ್ಯಾಸಗಳಿದ್ದು ಕೈಕಾಲುಗಳು ಕೆಲಸಕ್ಕೆ ಬಾರದಾದರೆ, ಇನ್ನೂ ಊನವಾಗುವಂತಾದರೆ ಕಾಲುಗಳ ಉದ್ದವನ್ನು ಸಮಗೊಳಿಸುವ ಶಸ್ತ್ರ ಕ್ರಿಯೆಯ ವಿಧಾನಗಳಿವೆ. ಮೋಟಾಗಿರುವುದನ್ನು ಉದ್ದ ಚಾಚಿಯೋ ಉದ್ದನೆ ಯದನ್ನು ಮೊಟಕುಮಾಡಿಯೋ ಉದ್ದವಾಗಿರುವುದರ ಬೆಳೆತವನ್ನು ಕುಂದಿಸಿಯೋ ಸರಿಪಡಿಸಬಹುದು. ಮುರಿದ ಮೂಳೆಗಳ ಕೊನೆಗಳನ್ನು ಒಳಗೇ ಒಂದುಗೂಡಿ ಸಿಟ್ಟಿರುವಂತೆ ಲೋಹಗಳನ್ನು ತಯಾರಿಸುವುದರಲ್ಲಿ ಅನೇಕ ಎಲುನೇರ್ಪಿಕ ಶಸ್ತ್ರ ವೈದ್ಯರು ಆಸಕ್ತರಾಗಿದ್ದರು. ಊತಕಗಳಲ್ಲಿ ಹಾಕಿ ಮೂಳೆಗಳನ್ನು ಬಿಗಿದ ಮೇಲೆ ಯಾವ ಪ್ರತಿಕ್ರಿಯೆಯನ್ನೂ ತೋರದ, ಬಲವಾದ ಲೋಹಗಳು ಈಗ ಬಳಕೆಗೆ ಬಂದಿವೆ. ಅಂಥವು ಕೈಗೆ ಬಂದಮೇಲೆ, ಅವನ್ನು ಬಳಸುವ ಸಾಧನಗಳೂ ಸಲ ಕರಣೆಗಳೂ ಚೆನ್ನಾಗುತ್ತಿವೆ.

ಎಲುಗಟ್ಟಿನ ಎಷ್ಟೊ ರೋಗಗಳು ಚೆನ್ನಾಗಿ ಗೊತ್ತಾಗಿ, ಇತರ ಅಂಗಗಳೊಂದಿ ಗಿನ ಸಂಬಂಧಗಳೂ ಹೊರಬೀಳುತ್ತಿವೆ. ಉಪಗುರಾಣಿಕ (ಪ್ಯಾರತೈರಾಯ್ಡ್) ಗ್ರಂಥಿ ಮತ್ತಿತರ ಒಳಸುರಿಕ ಗ್ರಂಥಿಗಳಲ್ಲಿ ಗಂತಿಗಳು ಎದ್ದುದರ ಫಲವಾಗಿ ಕೊರೆಯು ಬೇನೆಗಳೂ ಮೂಳೆರೋಗಗಳೂ ಬರುಬರುತ್ತ ಚೆನ್ನಾಗಿ ಗೊತ್ತಾಗುತ್ತಿವೆ. ಇವಕ್ಕಾಗಿ ಇನ್ನೂ ಒಳ್ಳೆಯ ಚಿಕಿತ್ಸೆಯ ಸಾಧನಗಳೂ ದೊರೆಯುತ್ತಿವೆ. ಬಗೆಬಗೆಯ ಕೀಲುರಿತ ಗಳಿಂದ ಆಗುವ ಸೊಟ್ಟುಗಳ ನಿರೋಧ ಎಷ್ಟು ಮುಖ್ಯವೆಂದು ಮನದಟ್ಟಾಗುತ್ತಿವೆ. ಇದರಿಂದಾಗಿ, ಮುಂದುವರಿದ ನಾಡುಗಳಲ್ಲಿ ಸೊಟ್ಟ ಕೈಕಾಲುಗಳವರು ಕಡಿಮೆ ಯಾಗುತ್ತಿರುವರು.

ಮೂಳೆಗಳ ವಿಷಮ ಗಂತಿಗಳ (ಮೆಲಿಗ್ನೆಂಟ್ ಟ್ಯೂಮರ್ಸ್), ಸ್ನಾಯ ಗಳ, ಕಂಡರಗಳ ಗಂತಿಗಳ ವಿಚಾರವಾದ ತಿಳಿವಳಿಕೆ ಹೆಚ್ಚುತ್ತಿದೆ. ಎಳೆಯದರಲ್ಲೇ ಇವನ್ನು ಕಂಡುಕೊಂಡು, ಶಸ್ತ್ರಕ್ರಿಯೆಗಳನ್ನೊ ಎಕ್ಸ್‌ಕಿರಣ ಚಿಕಿತ್ಸೆಯನ್ನೊ ಮಾಡುವುದ ರಿಂದ, ಬಹಳ ರೋಗಿಗಳಿಗೆ ಆರಾಮವಾಗಿದೆ. ಎಷ್ಟೊ ರೋಗಿಗಳ ಪ್ರಾಣ ಉಳಿದಿದೆ. ಮೂಳೆಗಂತಿ ಮತ್ತಿತರ ಏಡಿಗಂತಿಗಳಿಗೆ (ಕ್ಯಾನ್ಸರ್) ಚಿಕಿತ್ಸೆಯಾಗಿ ಕೊನೆಗೆ ಯಾವುದೋ ಒಂದು ಮದ್ದು ತಯಾರಾಗಿ ಬರಬಹುದು.

ಕೈಕಾಲುಗಳ ತುಂಡರಿಕೆಯ (ಆಂಪ್ಯುಟೇಷನ್) ವಿಧಾನಗಳ, ಕೃತಕ ಕೈಕಾಲುಗಳ ಮಾದರಿಗಳ ಸುಧಾರಣೆಗಳಿಂದ ಅದರಿಂದಾಗುವ ಊನಗಳು ತೀರ ತಗ್ಗಿವೆ. ಪ್ಲಾಸ್ಟಿಕ್ ತುಂಡರಿಕೆಯಲ್ಲಿ ಸುಧಾರಣೆಗಳಿಂದ ಇದು ಕೈಗೂಡಿದೆ. ತುಂಡರಿಸಿದ ಕೈಕಾಲುಗಳು ತುದಿಯ ಮೋಟಿನಲ್ಲಿ (ಸ್ಟಂಪ್) ಕಂಡರಕಗಳು, ಸ್ನಾಯುಗಳನ್ನು ತಗುಲಿಸುವುದರಿಂದ ಕೃತಕ ಕೈಗಳನ್ನೂ ಆಡಿಸುವಂತೆ ಮಾಡಬಹುದು (ನೋಡಿ—ತುಂಡಂಕೆ, ನ್ಯೂನ ಪೂರಣಶಾಸ್ತ್ರ)

ಹಿಂದೆ ಎಲುನೇರ್ಪಿಕ ಶಸ್ತ್ರವೈದ್ಯರು ಬಲವಂತವಾಗಿ ಸೂಚಿಸುತ್ತಿದ್ದಂತೆ ತಿಂಗಳು ಗಳವರೆಗೆ ಹಾಸಿಗೆ ಹಿಡಿದಿದ್ದರಿಂದ ಎಷ್ಟೋ ಬಾರಿ ಕಡುಕಾದ್ದು ಮನದಟ್ಟಾದ್ದರಿಂದ, ಬೆನ್ನುಗಂಬ, ಕೈಕಾಲುಗಳು ರೋಗಗಳ, ಗಾಯ ಪೆಟ್ಟುಗಳ ಚಿಕಿತ್ಸೆಗಾಗಿ ಈಗಿನ ರೋಗಿಗಳು ಆಸ್ಪತ್ರೆಯಲ್ಲಿರುವ ದಿನಗಳು ಮೊಟಕಾಗಿವೆ. (ಪಿ.ಎಸ್.ಎಸ್.)

**ಎಲುಬಿನ ರೋಗಗಳು, ಗಾಯಗಳು :** ಹುಟ್ಟುತ್ತಲೇ ಆಗಿ ಬರುವ ಕುಂದುಗಳ, ಜೀವವಸ್ತುಕರಣದ (ಮೆಟಬಾಲಿಕ್) ಏರುಪೇರುಗಳು ಸೋಂಕುಗಳು, ಗಂತಿಗಳು (ಟ್ಯೂಮರ್ಸ್), ಇಲ್ಲವೇ ಎಲುಮುರಿಕೆಗಳಿಂದ ಎಲುಬಿನ ರೋಗಗಳೂ ಗಾಯಗಳೂ ಆಗಬಹುದು.

ಹುಟ್ಟಿನಿಂದಲೇ ಬಂದ ಕುಂದುಗಳು : ಗೊತ್ತಾದ ಕಾರಣವಿಲ್ಲದೆಯೆ ಎಲುಬುಗಳು ಇಲ್ಲವಾಗುವುದು, ಒಂದಿರಬೇಕಾದೆಡೆ ಎರಡಿರುವುದು, ಎಡೆ ತಪ್ಪಿರುವುದು, ಇಲ್ಲವೇ ಎಲುಗಟ್ಟಿನ (ಸ್ಕೆಲಿಟಲ್) ಊತಕಗಳ ಒಂದು ಭಾಗದ ಸೊಟ್ಟಿನಿಂದ ಹಿಡಿದು ರಚನೆ ಪೂರಾ ಕೆಡುವ ತನಕ, ಹುಟ್ಟಿನಿಂದ ಬಂದ ಕುಂದುಗಳಿರಬಹುದು. ಗರ್ಭಕೋಶದ ಪಿಂಡದ ಬೆಳೆವಣಿಗೆಯ ಮೊದಲ ತಿಂಗಳಲ್ಲಿ ಹೀಗಾಗುವುವು. ಮೆಲ್ಲೆಲುಬಿನ ವಿಕಾಸ ಕೆಟ್ಟಿದ್ದರೆ, ನೀಳ ಮೂಳೆಗಳ ಉದ್ದುದ್ದ ಬೆಳೆವಣಿಗೆ ಯಾವಾಗಲೂ ಕುಂಟುವುದು. ಲಟ್ಟಗಾಲು (ಕ್ಲಬ್‌ಫುಟ್) ತೆರನ ಸೊಟ್ಟುಗಳು ಪಿಂಡದ ಮೊದಲು 3 ತಿಂಗಳಲ್ಲಿ ತಲೆದೋರುತ್ತವೆ. ಅಲ್ಲದೆ ಹುಟ್ಟಿದಾಗಲೆ ಸೊಟ್ಟುಗಳು ಕಾಣದಿದ್ದರೂ ಆಮೇಲಾದರೂ ತಲೆದೋರಬಹುದು. ದಪ್ಪ ತಲೆ, ದೊಡ್ಡ ಮುಂಡ, ಮೋಟು ಕೈಕಾಲುಗಳ ಗುಜ್ಜಾರಿಗಳೇ ಹೀಗಾಗುವುದರ ಉದಾಹರಣೆ. ಸಣ್ಣ ಪೆಟ್ಟು ತಗುಲಿದರೇ ಸುಲಭವಾಗಿ ಮೂಳೆಗಳು ಒಡೆಬಿರಿವ ಅರೆಬರೆ ಎಲುಜನನವೆಂಬ (ಆಸ್ಟಿಯೊಜನಿಸಿಸ್ ಇಂಪರ್ಫೆಕ್ಟ) ರೋಗದಲ್ಲೂ ಎಲುಬಿನೊಳಗಿರಬೇಕಾದ ರಕ್ತ ತಯಾರಿಸುವ ಮಜ್ಜೆಯ ಬದಲಾಗಿ ಇಡೀ ಮೂಳೆಯಲ್ಲಿ ಹಾಲುಗಲ್ಲಿನಂತೆ ಗಡುಸಾಗಿ ದಟ್ಟವಾಗಿ ಬೆಳೆವ ಎಲುಕಲ್ಲು ಬೇನೆಯಲ್ಲೂ (ಆಸ್ಟಿಯೊಪೆಟ್ರೋಸಿಸ್), ಮೂಳೆಯ ಬದಲಾಗಿ ಮೆತುವಾದ ತಂತುವಿನ ಊತಕ ಇರುವ ತಂತುವಿನ ಊತಕತಿಬೆಳೆತದಲ್ಲೂ (ಫೈಬ್ರಸ್ ಡಿಸ್‌ಪ್ಲೇಸಿಯ) ಎಲುಬಿನ ರಚನೆಯ ಕುಂದುಗಳು ಕಾಣುತ್ತವೆ.

ಎಲುಮೆಲ್ಲೆಲುಬೇನೆಗಳಲ್ಲಿ (ಆಸ್ಟಿಯೊಕಾಂಡ್ರೋಸಸ್) ಮೂಳೆ ಬೆಳೆವ ಕೇಂದ್ರಗಳಾದ ಮೇಲೆಲುಮೊಳೆಗಳ (ಎಪಿಫೈಸಸ್) ಮೂಳೆ ಮೊಳಕೆ ಏಕೋ ಸತ್ತಿರುವಂತೆ ಕಾಣುವುದು. ಲೆಗ್–ಪರ್ತಿಗಳ ರೋಗದಲ್ಲಿ, ತೊಡೆಮೂಳೆಯ ಮೇಲ್ಕೊನೆಯ ಮೇಲೆಲುಮೊಳೆಯಲ್ಲಿ ಹೀಗಾಗುವುದು ಬಲು ಸಾಮಾನ್ಯ. ಈ ಸತ್ತ ಮೂಳೆಗಳಿರುವ ಭಾಗಗಳಿಗೆ ಒತ್ತರದಿಂದ ಅಪಾಯವಾಗದಂತೆ ಕಾಪಾಡಿದರೆ, ಹೊಸ ಮೂಳೆ ಬೆಳೆದುಕೊಂಡು ಕಾಲು ಚೆನ್ನಾಗುವುದೆಂದು ಎದುರುನೋಡಬಹುದು. ಬೆಳೆಯುತ್ತಿರುವ ಹುಡುಗರಲ್ಲಿ ಕಾಣುವ ಮೂಳೆ ಬೆಳೆತದ ಇನ್ನೊಂದು ತೊಂದರೆಯೂ ಟೊಂಕಗೀಲನ್ನೇ ಕಾಡುತ್ತದೆ. ಕೆಲವೇಳೆ, ಮೇಲೆಲುಮೊಳೆಯ ಮೆಲ್ಲೆಲುಬಿನ ಹತ್ತಿರದಲ್ಲಿ ತೊಡೆಯೆಲುಬಿನ ಕತ್ತಿನ ಮೇಲಕ್ಕೆ ಇಡೀ ಮೇಲೆಲುಮೊಳೆ ಜಾಗ ಬಿಟ್ಟು ಕದಲುವುದು. ಮೇಲೆಲುಮೊಳೆ ಹೀಗೆ ಜಾರಿಳಿವ ಮೇಲೆಲುಮೊಳೆಲಯನವೆಂಬ (ಎಪಿಫೈಸಿಯೊಲೈಸಿಸ್) ರೋಗವನ್ನು ಎಳೆಯದರಲ್ಲೇ ಕಂಡುಕೊಂಡರೆ ಚಿಕಿತ್ಸೆ ಸರಳವೇ. ಆದರೆ ವೈದ್ಯನಲ್ಲಿಗೆ ಬರುವ ಹೊತ್ತಿಗೆ ಎದ್ದು ಕಾಣುವಂತೆ ಸೊಟ್ಟಗಾಗಿದ್ದರೆ, ದೊಡ್ಡ ಶಸ್ತ್ರಕ್ರಿಯೆಯಿಂದಲೇ ಸರಿಪಡಿಸಬೇಕಾಗುತ್ತದೆ. (ನೋಡಿ—ಎಲುಬು ; ಎಲುನೇರ್ಪಿಕ ಶಸ್ತ್ರವೈದ್ಯ.)

ಜೀವವಸ್ತುಕರಣದ ಏರುಪೇರುಗಳು : ಮೈಯಲ್ಲಿ ಮೂಳೆಗಳು ಸತ್ತಗೂಟಗಳಂತಿರದೆ ಬದುಕಿರುತ್ತವೆ. ಎಡೆಬಿಡದೆ ಒಂದೆಡೆ ಮೂಳೆ ಹಾಳಾಗುತ್ತಿದ್ದರೆ ಇನ್ನೊಂದೆಡೆ ಅದೇ ಹೊತ್ತಿನಲ್ಲಿ ಹೊಸ ಮೂಳೆ ಚುರುಕಾಗಿ ಬೆಳೆಯತ್ತಿರುವುದು. ಆರೋಗ್ಯವಂತನಲ್ಲಿ ಇವೆರಡು ಕೆಲಸಗಳೂ ಸಮುಸಮನಾಗಿರುತ್ತವೆ. ಅವು ಹೊತ್ತಿರುವ, ಊರೆಕೊಡುವ ಊತಕಗಳ ಆರೋಗ್ಯವೇ ಮೂಳೆಗಳಲ್ಲೂ ಕಾಣುತ್ತದೆ. ಆದ್ದರಿಂದ ಒಬ್ಬನ ಜೀವವಸ್ತುಕರಣವನ್ನು ಕೆಡಿಸುವ ಯಾವ ರೋಗವೇ ಆಗಲಿ ಎಲುಗಟ್ಟಿನ ಮೇಲೂ ಅದರ ಪ್ರಭಾವ ತೋರುವುದು. ಸಿ, ಡಿ ಜೀವಾತುಗಳ ಕೊರೆಯಾಗಿದ್ದರೆ, ಕ್ರಮವಾಗಿ ನೀಚಗೊರೆ (ಸ್ಕರ್ವಿ), ಎಲುಮುರುಟೂ (ರಿಕೆಟ್ಸ್) ಕಾಣಿಸಿಕೊಳ್ಳುವುವು. ಗುರಾಣಿಕ (ತೈರಾಯ್ಡ್), ಬದಿಗುರಾಣಿಕ, (ಪ್ಯಾರತೈರಾಯ್ಡ್) ಗ್ರಂಥಿ, ಮೂತ್ರಪಿಂಡ, ಜಠರಗರುಳಿನ ನಾಳಿ (ಟ್ರಾಕ್ಟ್) ಅಡ್ರಿನಲ್ ಗ್ರಂಥಿಗಳ, ಅಷ್ಟೇ ಏನು ಮೈಯಲ್ಲಿನ ಯಾವುದೇ ಅಂಗ, ಮಂಡಲಗಳ, ಕೆಲಸಗೆಟ್ಟರೂ ಮೂಳೆಗಳಲ್ಲಿ ಕೂಡ ಬದಲಾವಣೆಗಳನ್ನು ಕಾಣಬಹುದು. ಕಬ್ಬಿನ ಜಲ್ಲೆಯಂತೆಯೊ ಮೋಟು ದೊಣ್ಣೆಯ ಹಾಗೊ ಬೆಳೆಯಬಹುದು. ಈ ರೋಗಗಳ ಮೂಲ ಕಾರಣಕ್ಕೆ ತಕ್ಕ ಚಿಕಿತ್ಸೆ ಕೈಗೊಂಡರೆ ಮೂಳೆ ರೋಗವೂ ಕಳೆಯುತ್ತದೆ.

ಆದರೆ, ಮೈಕಟ್ಟಿನಲ್ಲಿ ಕಂಡ ಹಾಗೇ ಏರುಪೇರು ಆದ ಹೊರತು, ಎಲುಗಟ್ಟಿನ ಸಹಜ ನಿಜಗೆಲಸಗಳು ಕೇವಲ ಆಹಾರದಿಂದ ಕೆಡವು. ಮರುರಚನೆಗೂ ಹಾಳುಗೆಡವುವುದಕ್ಕೂ ನಡುವಣ ಪರಿಮಾಣ ಬರುಬರುತ್ತ ಬದಲಾದ ಹಾಗೆಲ್ಲ ಕೊನೆಗೆ ಉಳಿವ ಮೂಳೆಯ ಮೊತ್ತವೇ ಕಡಿಮೆ ಆಗುವುದನ್ನು ಬಿಟ್ಟರೆ, ಮೂಳೆಗೆ ವಯಸ್ಸು ಏನೂ ತಟ್ಟದು. ಮೂಳೆಯ ರಾಸಾಯನಿಕ ಸಂಯೋಜನೆ ಒಂದೇ ಸಮನಾಗಿದ್ದರೂ ಇಡೀ ಎಲುಗಟ್ಟು ಹಗುರವೂ ಕೋಮಲವೂ ಆಗುವುದು. ಇದರಿಂದಲೇ ವಯಸ್ಸಾದವರ ಮೂಳೆಗಳು ಸುಲಭವಾಗಿ ಲೊಟಕ್ಕೆಂದು ಮುರಿವುವು: ಆದರೂ ಅವಷ್ಟಕ್ಕವೇ ಸಾಕಷ್ಟು ಸರಿಹೋಗುತ್ತವೆ.

ಸೋಂಕುಗಳು : ಯಾವ ಸೋಂಕುಕಾರಕದಿಂದಲಾದರೂ ಆಗುವುದಾದರೂ ಕೀವುಹುಟ್ಟಿಸುವ ಜೀವಾಣುಗಳು, ಇಲ್ಲವೇ ಕ್ಷಯದ ದಂಡಾಣುಜೀವಿಗಳಿಂದ (ಬೆಸಿಲೈ) ಸೋಂಕು ಹತ್ತುವುದೇ ಸಾಮಾನ್ಯ. ಪೆನಿಸಿಲಿನ್, ಸಲ್ಫೋನೇಮೈಡುಗಳ ತೆರನ ಮದ್ದುಗಳು 1940ರ ಸುಮಾರಿಗೆ ಬಳಕೆಗೆ ಬರುವತನಕ ಮಕ್ಕಳಲ್ಲಿ ಮೂಳೆಗಳೊಳಗೆ ಕೀವು ಸೇರಿಬಿಟ್ಟು ಎಲುಮಜ್ಜೆಯುರಿತ (ಆಸ್ಟಿಯೊಮಯಲೈಟಿಸ್) ಆಗುತ್ತಿದ್ದುದು ಸಾಮಾನ್ಯವಾಗಿತ್ತು. ಮೈಯಲ್ಲಿ ಕಿವಿ, ಮೂಗು, ಹಲ್ಲು, ಮತ್ತೆಲ್ಲಾದರೂ ಕುರು ಎದ್ದಿದ್ದರಿಂದ ಅಲ್ಲಿನ ರೋಗಾಣುಗಳು ರಕ್ತದ ಹರಿವಿನ ಮೂಲಕ ಮೂಳೆಗಳಿಗೆ ಹೋಗಿ ನೆಲೆಸಿ ಕೂರಾದ (ಅಕ್ಯೂಟ್) ಎಲುಮಜ್ಜೆಯುರಿತ ಆಗುವುದು ಆಮೇಲೆ ಬಹುಮಟ್ಟಿಗೆ ನಿಂತೇಹೋಯಿತು. ಇಷ್ಟಾದರೂ ಅಲ್ಲಿಗೂ ಹಾಗೆ ಎಲುಬಿನಲ್ಲಿ ಕೀವುಗೂಡಿದರೂ ಮಗುವಿನ ಜೀವಕ್ಕಾಗಲಿ ಕೈಕಾಲುಗಳಿಗಾಗಲಿ ಹಿಂದಿನ ಕಾಲದ ಹಾಗೆ ಯಾವ ತಾಕು ತೊಡಕಿನ ಅಪಾಯವೂ ಇಲ್ಲದಂತೆ ಈಗ ಸುಲಭವಾಗಿ ವಾಸಿಮಾಡಬಹುದು.

ಕ್ಷಯ : ಮೂಳೆಗಳಿಗೆ ಹತ್ತಿದರೂ ಗುಣಪಡಿಸಲು ಈಗ ಸ್ಟ್ರೆಪ್ಟೊಮೈಸಿನ್, ಐಸೊನಿಯಜೈಡ್ ತೆರನ ಮದ್ದುಗಳಿರುವುದು ಮಹಾ ವರವೆನಿಸಿದೆ. ಮೈಯಲ್ಲಿ ಪುಪ್ಪುಸ, ಹಾಲುರಸ (ಲಿಂಫ್) ಗ್ರಂಥಿಗಳ ತೆರನ ಇನ್ನಾವುದೊ ಅಂಗದಲ್ಲಿ ನೆಲೆಸಿರುವ ಕ್ಷಯದ ಸೋಂಕೇ ಮೂಳೆಗೆ ಮರುಚಲದ್ದಾಗಿ (ಸೆಕೆಂಡರಿ) ಹರಡಿಕೊಳ್ಳುವುದರಿಂದ ಇಡೀ ರೋಗಿಯ ಆರೋಗ್ಯ ಚೆನ್ನಾಗಿ ನೋಡಿಕೊಳ್ಳುವುದು ಮುಖ್ಯ. ರೋಗಿಯ, ಅವನ ಸುತ್ತಮುತ್ತಲಿನ ಜನರ ಪುಪ್ಪುಸಗಳ ಆಳವಾದ ಪರೀಕ್ಷೆಯಾಗಬೇಕು.

ಮೂಳೆಯಲ್ಲಿ ಒಂಟಿಯಾಗಿ ಕುರು ಏಳುವುದು ಕೆಲವೆಳೆ ಕಂಡಾಗ ಶಸ್ತ್ರಕ್ರಿಯೆಯಿಂದ ತೂತಿಟ್ಟು ಕೀವು ಹೊರಡಿಸಬಹುದಾದರೂ ಹತ್ತಿರದ ಕೀಲಿನಲ್ಲಿ ಕ್ಷಯ ಇರುವುದರಿಂದ ಮೂಳೆಗೂ ಹರಡಿಕೊಂಡು ಕ್ಷಯದ ಎಲುಮಜ್ಜೆಯುರಿತ ಆಗುವುದೇ ಸಾಮಾನ್ಯ. ಬಲು ಸಾಮಾನ್ಯವಾಗಿ ಬೆನ್ನುಮೂಳೆಗಳು, ಟೊಂಕದ ಕೀಲು, ಮೊಣಕಾಲು; ಕೈಬೆರಳ ಕೀಲುಗಳಲ್ಲಿ ಕ್ಷಯ ಹತ್ತುವುದು ಸಾಮಾನ್ಯವಾದರೂ ಯಾವ ಜಾಗವೂ ಕ್ಷಯಕ್ಕೆ ಹೊರತಲ್ಲ. ಹಿಂದಿನ ಕಾಲದಲ್ಲಿ ಮೂಳೆಗಳು, ಕೀಲುಗಳ ಕ್ಷಯರೋಗಕ್ಕೆ ಒಳ್ಳೆಯ ಆಹಾರ, ತಂಪು ಹವ, ಬೆಳಗಿನ ಎಳೆಬಿಸಿಲುಗಳಿಂದ ಚಿಕಿತ್ಸೆ ಮಾಡಲು, ದೂರದ ಆರೋಗ್ಯಾಲಯಗಳಲ್ಲಿ ಮುಖ್ಯವಾಗಿ ಯೂರೋಪಿನಲ್ಲಿ ತಿಂಗಳುಗಟ್ಟಳೆ ರೋಗಿಗಳನ್ನು ಇರಿಸುತ್ತಿದ್ದರು.

ರೋಗವನ್ನು ತಡೆಗಟ್ಟಿ, ರೋಗಿ ಬೇಗನೆ ಚೇತರಿಸಿಕೊಳ್ಳಲು ಅನುಕೂಲಿಸಲು, ಕ್ಷಯ ಹತ್ತಿ ನೆಲೆಸಿರುವ ಅಂಗಭಾಗಗಳನ್ನೇ ಶಸ್ತ್ರಕ್ರಿಯೆಯಿಂದ ಕಿತ್ತೆಸೆವುದು 1920ರ ಸುಮಾರಿಗೆ ಜಾರಿಗೆ ಬಂತು. ರೋಗಿಯ ಸಾಮಾನ್ಯ ಆರೋಗ್ಯ ಸಾಕಷ್ಟು ಸುಧಾರಿಸಿದ ಕೂಡಲೆ ಖಚಿತವಾಗಿ ಶಸ್ತ್ರಕ್ರಿಯೆಯಿಂದ ಚಿಕಿತ್ಸೆ ನಡೆಸುವುದೇ ಸರಿಯೆಂಬ ನಂಬಿಕೆ ಅಮೆರಿಕದಲ್ಲಿ ಬಲವಾಗಿತ್ತು. ಅಂದರೆ, ಕ್ಷಯ ಹತ್ತಿದ ಭಾಗವನ್ನು ಕಿತ್ತು ಬಿಸಾಡಿ, ಕೀಲುಗಳು ಆಡದಂತೆ ಗಡುಸಾಗಿ ಕೂಡಿಸುವಂತಾಗುತ್ತಿತ್ತು. (ನೋಡಿ—ಕ್ಷಯ).

ಗಂತಿಗಳು : ಮೂಳೆಗಳಲ್ಲಿ ಏಳುವುದು ಬೇರೆ ಅಂಗಗಳಲ್ಲಿ ಆಗುವಷ್ಟು ಸಾಮಾನ್ಯವಲ್ಲ. ಏಳುವ ಗಂತಿಗಳೂ ಬಹುಪಾಲು ಮೆಲುಪಿನವು (ಬಿನೈನ್) ; ಆದ್ದರಿಂದ ಶಸ್ತ್ರಕ್ರಿಯೆಗೆ ಮಣಿಯುತ್ತವೆ. ಏಡಿಗಂತಿ (ಕ್ಯಾನ್ಸರ್) ಎಂದಿಗೂ ಮೂಳೆಯಲ್ಲಿ ಮೊದಲು ಏಳದಿದ್ದರೂ ಪುಪ್ಪುಸ, ಮುನ್ನಿಲುಗ (ಪ್ರಾಸ್ಟೇಟ್), ಗರ್ಭಕೋಶ, ತರಡು, ಕರುಳ, ಮೊಲೆ ಮತ್ತಿತರ ಅಂಗಗಳಿಂದ ಬಂದವು ಇಲ್ಲಿಗೂ ಹರಡಿ ಊನಗೊಳಿಸಿ ತಡೆಯಲಾರದ ನೋವು ಕೊಡುತ್ತವೆ. ಹೀಗಾದಾಗ, ಗುಣಪಡಿಸುವ ಚಿಕಿತ್ಸೆಯೇ ಇಲ್ಲ. ಆದರೂ ರೋಗಿಯ ಜೀವವನ್ನು ಕೆಲಕಾಲವಾದರೂ ಉಳಿಸಿ ಶಮನಗೊಳಿಸಬಹುದು. ಎಷ್ಟೋವೇಳೆ ಮೂಳೆಯಲ್ಲಿ ಏಡಿಗಂತಿ ಇರುವುದು ಗೊತ್ತಾದಾಗಲೇ ಮತ್ತಾವ ಅಂಗದಲ್ಲೋ ಏಡಿಗಂತಿಯಮೂಲ ಇರಬಹುದೆಂದು ಹುಡುಕಬೇಕಾಗುತ್ತದೆ. ಮೂಳೆಗಳಲ್ಲೇ ಏಳುವ ಏಡಿಗಂತಿ ತೆರನ ಗಂತಿಗಳೇ ಬೇರೆ ಇವೆ. ಇವಕ್ಕೆ ಮಾಂಸಗಂತಿಗಳೆಂದು (ಸಾರ್ಕೋಮಾಸ್) ಹೆಸರಿದೆ. ಮುಖ್ಯವಾಗಿ ತಂತುವಿನ, ಮೂಳೆಯ, ಮೆಲ್ಲೆಲುಬಿನ ಊತಕಗಳಲ್ಲಿ ಇವು ಏಳುವುದರಿಂದ ಮೂರುಬಗೆಗಳನ್ನು ಗುರುತಿಸಬಹುದು. ಎಳೆಯದಲ್ಲೇ ಕಂಡುಕೊಂಡು ಬುಡಮಟ್ಟ ಕೊಯ್ದು ತೆಗೆದುಹಾಕುವುದೇ ಇವನ್ನು ಪೂರ್ತಿ ವಾಸಿ ಮಾಡುವ ಉಪಾಯ. ಕೆಲವೇಳೆ ಕೈಯನ್ನೊ ಕಾಲನ್ನೊ ತುಂಡರಿಸಬೇಕಾಗುತ್ತದೆ. ಆದರೂ ಗಂತಿ ಎದ್ದ ಭಾಗವನ್ನು ಮಾತ್ರ ತೆಗೆದು ಆ ಜಾಗಕ್ಕೆ ಇನ್ನೊಂದೆಡೆಯಿಂದ ತೆಗೆದ ಆರೋಗ್ಯದ ಮೂಳೆ ತುಂಡನ್ನು ನಾಟಿ ಹಾಕಿ ಸರಿಪಡಿಸಬಹುದು. ಶಸ್ತ್ರಕ್ರಿಯೆಗೆ ಎಟುಕದ ಜಾಗಗಳಲ್ಲಿನ ಈ ಗಂತಿಗಳ ಚಿಕಿತ್ಸೆಗಾಗಿ ರಸಾಯನರೋಗಚಿಕಿತ್ಸೆ (ಕೀಮೊತೆರಪಿ), ಸಮಸ್ಥಾನಿಗಳೇ (ಐಸೊಟೋಪ್ಸ್

ಮುಂತಾದುವನ್ನು ಕೊಟ್ಟರೆ ಕೊಂಚವಾದರೂ ಅಣಗಿಸಬಹುದು. (ನೋಡಿ—ಏಡಿಗಂತಿ; ಗಂತಿ).

ಎಲುಮುರಿಕೆಗಳು : ಮೂಳೆಗಳಿಗಾಗುವ ಬಲು ಸಾಮಾನ್ಯ ಬಗೆಯ ಗಾಯಗಳು. ಸಾಕಷ್ಟು ಬಲವಾದ ಪೆಟ್ಟು ತಾಕಿದರೆ ಮಾತ್ರ ಎಲು ಮುರಿಯುತ್ತದೆ. ಆದರೆ, ರೋಗ ಹತ್ತಿ ಮೆತುವಾಗಿದ್ದರೆ, ವಯಸ್ಸಾಗಿ ಗರಗಾಗಿದ್ದರೆ ಸಣ್ಣಪುಟ್ಟ ಪೆಟ್ಟುಗಳಿಗೋ ರೋಗದ ದೆಸೆಯಿಂದ ಅವಷ್ಟಕ್ಕವೆ ಕಾರಣವಿಲ್ಲದೆಯೋ ಮುರಿಯಬಹುದು. ಮೂಳೆ ಮುರಿದು ಸುತ್ತಲೂ ಮೆತ್ತನೆಯ ಊತಕಗಳಿಗೂ ಗಾಯವಾಗಿ ಹರಿದು ಕಿತ್ತು ಗಾಳಿಗೊಡ್ಡುವಂತಾದರೆ, ತೆರೆದ ಇಲ್ಲವೇ ಕಲೆತ (ಕಾಂಪೌಂಡ್) ಎಲುಮುರಿಕೆ ಎನಿಸುವುದು. ಇಲ್ಲವಾದರೆ, ಅದು ಮುಚ್ಚಿದ ಸರಳ ಎಲುಮುರಿಕೆ. ಎಲುಮುರಿಕೆಯನ್ನು ಕಂಡುಕೊಳ್ಳುವುದು ಸಾಮಾನ್ಯವಾಗಿ ಕಷ್ಟವಲ್ಲ. ಎಷ್ಟೋ ವೇಳೆ ಬರಿಯ ಕಣ್ಣಿಗೇ ಕಾಣುವುದು. ಆದರೆ, ಯಾವ ಯಾವ ಭಾಗ, ಎಲ್ಲಿ ಎಷ್ಟರ ಮಟ್ಟಿಗೆ ಮುರಿದಿದೆ ಎಂಬ ವಿವರಗಳು ಸರಿಯಾಗಿ ಗೊತ್ತಾಗುವುದು ಎಕ್ಸ್ ಕಿರಣ ಚಿತ್ರಗಳನ್ನು ತೆಗೆದಾಗಲೇ. (ನೋಡಿ—ಎಲುಮುರಿಕೆಗಳು. ಕೀಲ್ತಪ್ಪಿಕೆಗಳು)

ಮೈಯಲ್ಲಿ ಮೊದಲಿದ್ದ ಹಾಗೇ ಆದಮಟ್ಟಿಗೆ ಕೂಡಿಸಿ, ಮೂಳೆಗಳು ಚೆನ್ನಾಗಿ ಕೂಡಿಕೊಳ್ಳುವ ತನಕ ಹಾಗೇ ಹಿಡಿದಿಡುವುದೇ ಯಾವ ಎಲುಮುರಿಕೆಗಾದರೂ ಕೈಗೊಳ್ಳಬೇಕಾದ ಚಿಕಿತ್ಸೆ. ಎಲ್ಲೆಡೆಗಳಲ್ಲೂ ಎಲ್ಲರಲ್ಲೂ ಇದು ಕೈಗೂಡದು. ರೋಗಿಯ ಆರೋಗ್ಯ, ವಯಸ್ಸು, ಮುರಿದಿರುವ ಭಾಗ ಮುಂತಾದುವಕ್ಕೆ ತಕ್ಕಂತೆ ಇರುವುದು.

ಬೆಳೆದಿರುವವರಿಗಿಂತಲೂ ಮಕ್ಕಳಲ್ಲಿ ಎಲುಮುರಿಕೆಗಳು ಬಲು ಸುಲಭವಾಗಿ ಕೂಡಿಕೊಂಡು ವಾಸಿಯಾಗುವುದೇನೋ ನಿಜವೆ. ಇದರ ಜೊತೆಗೆ ಮಗು ಇನ್ನೂ ಬೆಳೆವುದರಿಂದ ಮುರಿಕೆಯಿಂದಾದ ಸೊಟ್ಟು ಕೂಡ ಬರಬರುತ್ತ ಸರಿಹೋಗುತ್ತದೆ. ಆದ್ದರಿಂದ ಬೆಳೆದವರಿಗಿಂತಲೂ ಮಕ್ಕಳಲ್ಲಿ ಮುರಿದ ಭಾಗಗಳನ್ನು ಅಷ್ಟು ಚೆನ್ನಾಗಿ ಕೂಡಿಸಲು ಹೆಚ್ಚಿನ ಶ್ರಮ ಬೇಕಿಲ್ಲ. ಅಲ್ಲದೆ ಅಷ್ಟು ದಿನಗಳೂ ಹಾಸಿಗೆಯಲ್ಲಿ ಅಲುಗಾಡದಂತೆ ಕಟ್ಟಿಹಾಕಿಡಬೇಕಿಲ್ಲ. ಜೊತೆಗೆ, ಹಾಗೆ ಇರಿಸಿದರೂ ಮಕ್ಕಳ ಕೀಲುಗಳು ಗಡುಸಾಗಿ ಹಿಡಿದುಕೊಳ್ಳವು. ಇನ್ನೊಂದೆಡೆಯಲ್ಲಿ ಕೈಕಾಲುಗಳ ಮೂಳೆಗಳಲ್ಲಿ ಬೆಳೆವ ಕೇಂದ್ರಗಳಾದ ಮೇಲೆಲುಮೊಳೆಯ ಬಿಲ್ಲೆಗೆ ಮುರಿಕೆಯಿಂದ ಏನಾದರೂ ಅಪಾಯವಾದರೆ, ಮೂಳೆ ಉದ್ದನಾಗಿ ಬೆಳೆವುದೇ ಕುಂದಬಹುದು, ಇಲ್ಲವೇ ನಿಂತು ಹೋಗಿ ಮೋಟಾಗಬಹುದು. ಕೆಲವೇಳೆ, ಎಲುಮುರಿಕೆಯಿಂದ ಹತ್ತಿರದ ಮೇಲೆಲುಮೊಳೆಯ ಚೋದನೆಯಾಗಿ ಮೂಳೆ ಇನ್ನೂ ಉದ್ದನಾಗಿ ಬೆಳೆದು, ಕೈಕಾಲು ನೀಳವಾಗುವುದುಂಟು. ಸರಿಯಾದ ಶಸ್ತ್ರಕ್ರಿಯಾವಿಧಾನಗಳಿಂದ ಈ ನೀಳ್ತನ, ಮೋಟುತನಗಳನ್ನು ಸರಿಪಡಿಸಬಹುದು.

ಬೆಳೆದವರಲ್ಲಿ ಒಂದು ದೊಡ್ಡ ಮೂಳೆ ಮುರಿದಾಗ ಕೈಗೊಳ್ಳುವ ಚಿಕಿತ್ಸೆ ಕ್ರಮವೇ ಬೇರೆ. ಮಣಿಕಟ್ಟಲ್ಲಿರುವ ಸಣ್ಣ ಮೂಳೆಗಳು ಮುರಿದಿದ್ದರೆ ಸುಮ್ಮನೆ ಸರಿಯಾಗಿ ನೀವಿ ಕೂಡಿಸಿ ಪ್ಯಾರಿಸ್ಸಿನ ಗಚ್ಚುಸರಿಯಲ್ಲಿ (ಪ್ಲಾಸ್ಟರ್ ಆಫ್ ಪ್ಯಾರಿಸ್) ಇರಿಸಿದರೆ ಸಾಕು. ಇದಾಗದಿದ್ದರೆ, ಮೂಳೆಯ ಕೊನೆಗಳು ಒಂದರ ಮೇಲೊಂದು ಕೂರದಂತೆ ಎಳೆದಿಡಬಹುದು. ರೋಗಿಗೆ ಶಸ್ತ್ರಕ್ರಿಯೆ ನಡೆಸಿ, ಮುರಿದ ಮೂಳೆಯ ಚೂರುಗಳನ್ನು ಒಟ್ಟಿಗೆ ಸರಿಯಾಗಿ ಜೋಡಿಸಿ ಲೋಹದ ಸಾಧನಗಳಿಂದ ಬಿಗಿಸುವುದರಿಂದ, ಇನ್ನೂ ಬೇಗನೆ, ಅಪಾಯವಿರದಂತೆ, ಕಡಿಮೆ ಕಾಲದಲ್ಲಿ ಹೆಚ್ಚಿನ ಖರ್ಚಿಲ್ಲದೆ ಮಾಡಬಹುದು. ಎಲುಮುರಿಕೆಯಿಂದ ಯಾವ ಕೀಲೊಳಗಾದರೂ ಅಪಾಯವಾಗಿದ್ದಲ್ಲಿ, ಸರಿಯಾಗಿ ಜೋಡಿಸಬೇಕಾದರೆ ಕೊಯ್ದು ತೆರೆದಿಡುವ ಶಸ್ತ್ರಕ್ರಿಯೆಯೇ ಆಗಬೇಕು. ಇದಕ್ಕೆ ವಿಶೇಷ ಶಸ್ತ್ರವೈದ್ಯಪಟುವೇ ಆಗಬೇಕು. ಹೇಗೆ, ಏನು ಮಾಡಬೇಕೆಂಬುದನ್ನು ಒಬ್ಬೊಬ್ಬ ರೋಗಿಯಲ್ಲೂ ನಿರ್ಧರಿಸಿಕೊಳ್ಳಬೇಕು. ಮುರಿದ ಒಂದು ಎಲುಬನ್ನು ಗಚ್ಚುಸರಿಯಲ್ಲಿ ಇರಿಸಿದರೆ, ಇನ್ನೊಂದಕ್ಕೆ ತೂಕ ಹಾಕಿ ಎಳೆದಿಟ್ಟು ಮತ್ತೊಂದಕ್ಕೆ ಹೆಚ್ಚಿನ ಅಂಗಸಾಧನೆಗಳನ್ನು ನಿಯಮಿಸಿ ಎಂದಿನಂತೆ ಆಡುವಂತೆ ಮಾಡಬೇಕಾಗುತ್ತದೆ. ಇಷ್ಟೆಲ್ಲ ಮಾಡಿದರೂ ಪರಿಸರ ಕೂಡ ಎಲ್ಲವೂ ಚೆನ್ನಾಗಿದ್ದರೂ ಕೆಲವೇಳೆ ಮೂಳೆಗಳು ಕೂಡುವುದು ನಿಧಾನವಾದರೆ, ಇಲ್ಲವೇ ಕೂಡದೆ ಉಳಿದರೆ, ಆಗ ಶಸ್ತ್ರವೈದ್ಯ ಮತ್ತೆ ಕೈಹಾಕಿ ಮೂಳೆ ಬೆಳೆವಂತೆ ಜೋಡಿಸಲು ಮೂಳೆಚೂರನ್ನು ನಾಟಿ ಹಾಕಬಹುದು. (ಡಿ.ಎಸ್.ಎಸ್.)

**ಎಲುಬು :** ಮೈ ಅಂಗಗಳಿಗೆ ಊರೆಕೊಡುವ ಊತಕಗಳಲ್ಲೆಲ್ಲ (ಟಿಷ್ಯೂಸ್) ಬಲು ಗಡುಸಾಗಿರುವ, ಜೀವಕಣಗಳ ನಡುವಣ ವಸ್ತುವಿನಲ್ಲಿ ಕವಲೊಡೆವ ಜೀವಕಣಗಳಿರುವ, ಕೂಡಿಸುವ ಊತಕದ ಬಲು ವಿಶೇಷೀಕರಿತ, ದಟ್ಟವಾದ ರೂಪ. ಮೂಳೆ ಎಂದೂ ಹೆಸರಿದೆ. ಕೀಲುಗಳನ್ನು ಮಡಿಸಿ, ಚಾಚಿಸುವ ಸ್ನಾಯುಗಳನ್ನು ಒಂದೆಡೆ ಭದ್ರವಾಗಿ ಹಿಡಿದಿಡಸಲೂ ನೆರವಾಗುವುದಲ್ಲದೆ, ಕೈಕಾಲುಗಳನ್ನು ಮೀಟಿಕೊಂಡು ಆಡ್ಡಾಡಲೂ ಇವು ಸನ್ನೆಗಳಾಗಿರುವುವು. ಮೆತುವಾದ ಜೈವಿಕ ಮಾತೃಕದಲ್ಲಿ (ಮ್ಯಾಟ್ರಿಕ್ಸ್) ಮುಖ್ಯವಾಗಿ ಸುಣ್ಣಾಂಶ, ಫಾಸ್ಫೇಟ್, ಕಾರ್ಬೊನೇಟುಗಳಿರುವ ಸಮ್ಮಿಶ್ರ ಖನಿಜ ಸೇರಿ ಕೊಂಡಿರುವುದೇ ಎಲುಬು ಅಷ್ಟು ಗಡುಸಾಗಿರಲು ಕಾರಣ. ಇದೂ ಒಂದು ಬಗೆಯ ಸುಣ್ಣಗೂಡಿಕೆ. ಸಡಿಲವಾದ ಕೂಡಿಸುವ ಊತಕದಲ್ಲಿ ಇರಬೇಕಾದ ಜೀವಕಣಗಳೆಲ್ಲ ಮೂಳೆಯ ಊತಕದಲ್ಲಿ ಇಲ್ಲವಾದರೂ ಇದರವೇ ಬೇರೆ ಜೀವಕಣಗಳಿವೆ. ಊತಕವಾಗಿರುವ ಮೂಳೆಗೆ, ಸುಣ್ಣಾಂಶ, ಫಾಸ್ಫೇಟುಗಳ ಕೂಡಿಡಿಕೆ, ಜೀವವಸ್ತುಕರಣಗಳಿಗೆ (ಮೆಟಬಾಲಿಸಂ) ಬಹುಮಟ್ಟಿಗೆ ಸಂಬಂಧವಿರುವ ಕೆಲವು ಮುಖ್ಯ ನಿಜಗೆಲಸಗಳಿವೆ. ಒಂದೊಂದು ಮೂಳೆಯೂ ಕೀಲುಗಳೊಂದಿಗೆ ಸೇರಿ ಬಹುಪಾಲು ಕಶೇರುಕಗಳ ಮೈಕಟ್ಟಿನ ರಚನೆಗೆ ಮೂಲವಾದ ಎಲುಗಟ್ಟು



ಚಿತ್ರ 1 ತೊಡೆ ಎಲುಬಿನ ಮೇಲಿನ ಕೊನೆಯ ಸೀಳುಕೊಯ್ತ

(ಸ್ಕೆಲಿಟನ್) ಆಗುತ್ತದೆ. ರಕ್ತ ತಯಾರಿಸುವ ಊತಕವಾದ ಎಲುಬು ಮಜ್ಜೆ (ಬೋನ್ ಮ್ಯಾರೊ) ಮೂಳೆಗಳ ಒಳಗಣ ಪೊಳ್ಳಿನಲ್ಲಿ ಇಲ್ಲವೆ ಕುಸುರಿಯಲ್ಲಿದೆ (ಮೆಡುಲ). ಮಿದುಳು, ಬೆನ್ನುಹುರಿ, ಗುಂಡಿಗೆ, ಪುಪ್ಪುಸಗಳ ತೆರನ ಜೀವಾಳದ ಅಂಗಗಳಿಗೆ ಪೆಟ್ಟುಗಳು ತಾಕದಂತೆ ಮೂಳೆಗಳು ಕಾಪಿಡುತ್ತವೆ.

ಬದುಕಿರುವವನ ಮೂಳೆಯಲ್ಲೂ ಜೀವವಿರುವುದರಿಂದ, ರಕ್ತನಾಳಗಳು, ಹಾಲುರಸ (ಲಿಂಫ್) ನಾಳಗಳು, ನರಗಳು ಇದರಲ್ಲೂ ಇರುತ್ತವೆ. ಬೇರೆ ಅಂಗಗಳಿಗೆ ಹತ್ತಿದ ಹಾಗೆ ಇದಕ್ಕೂ ರೋಗ ಹತ್ತಬಹುದು. ಮುರಿದರೆ ವಾಸಿಯಾಗುತ್ತದೆ. ಮುರಿದ ಮೂಳೆ ಸೊಟ್ಟನಾಗಿ ಕೂಡಿಕೊಂಡರೆ, ಮೊದಲಿನ ಹಾಗೆ ಭಾರ ಹೊರಲು ಅನುಕೂಲಿಸುವಂತೆ ಒಳಗಿನ ರಚನೆಯಲ್ಲಿ ಬಹುಮಟ್ಟಿಗೆ ಬದಲಾಗುತ್ತದೆ. ಒಂದು ಹಲ್ಲನ್ನು ಕಿತ್ತುಹಾಕಿದರೆ, ಬರಿದಾದ ಹಲ್ಲುಗೂಡಿನ ಗೋಡೆಗಳು ಹೋಗುವ ಹಾಗೆ, ಕೆಲಸಕ್ಕೆ ಬಾರದ ಮೂಳೆ ಕರಗಿ ಹೋಗುವುದು. ಹಾಗೆ ಹೆಚ್ಚಿನ ಭಾರ ಹೊರಬೇಕಾದರೆ, ಇನ್ನೂ ದಪ್ಪನಾಗಿ ಬಲಗೊಳ್ಳುವುದು.

**ರಚನೆ :** ಮೂಳೆಯ ನಡುಭಾಗವಾದ ಕಾವು (ಷ್ಯಾಫ್ಟ್) ಇಲ್ಲವೇ ಒಳ ಎಲುಮೊಳೆಗಳು (ಡಯಫೈಸಸ್) ದಟ್ಟವಾದ ಮೂಳೆಯಿಂದಲೂ ಹಿಗ್ಗಿದ ಕೊನೆಗಳು ಇಲ್ಲವೇ ಮೇಲೆಲುಮೊಳೆಗಳು (ಎಪಿಫೈಸಸ್) ಸಾಧಾರಣವಾಗಿ ಸ್ಪಂಜಿನಲ್ಲಿನ ತೆರನ ಕಮಾನುಗಳಿರುವ ಮೂಳೆಯೊಂದಿಗೆ ದಟ್ಟವಾದ ಮೂಳೆಯ, ತೆಳುವಾದ, ಹೊರ ಪದರ ಇಲ್ಲವೇ ರಗಟೆಯಿಂದಲೂ (ಕಾರ್ಟೆಕ್ಸ್) ಕೂಡಿದೆ. ಮೂಳೆಯಲ್ಲಿ ಸೊಂಕು ಹೋಗುವುದು ಸಾಮಾನ್ಯವಾಗಿ ಒಳಎಲುಮೊಳೆ, ಮೇಲೆಲುಮೊಳೆಗಳ ನಡುವೆ. ಮೂಳೆಗಳ ಕಾವುಗಳ ಮೇಲೆ ಬೀಳುವ, ಭಾರ ಒತ್ತರಗಳನ್ನು ಕೀಲುಗಳಿಗೆ ವರ್ಗಾಯಿಸಲು ಈ ರಚನೆ ಅನುಕೂಲಕರ. ಇವೆರಡರ ನಡುವೆ ಸ್ಪಂಜಿನಂತಿರುವ ಹ್ಯಾವರ್ಸಿಯನ್ ಮಂಡಲವಿದೆ.

ಮೂಳೆಯ ರಚನೆಯಲ್ಲಿ, ಹ್ಯಾವರ್ಸಿಯನ್ ಮಂಡಲ ಇಲ್ಲವೇ ಎಲುಉರುಳೆ (ಆಸ್ಟಿಯೋನ್) ಒಂದು ಘಟಕ. ಸಾಮಾನ್ಯವಾಗಿ ಮೂಳೆಯಲ್ಲಿ ಉದ್ದುದ್ದನಾಗಿರುವ ಸೊಟ್ಟ ಉರುಳೆಯಾಕಾರವಾಗಿ ಕವಲೊಡೆವ, ಕಿರುಗಾತ್ರದ, ದಪ್ಪಗೋಡೆಗಳೂ ಒಂದೊ ಹೆಚ್ಚಿಗೊ ಸಣ್ಣ ರಕ್ತನಾಳಗಳನ್ನು ಸಾಗಿಸುವ ಇಕ್ಕಟ್ಟಿನ ಸಾಗಾಲುವೆಯೂ

ಇರುವ ಮಂಡಲವಿದು. ಎಲುಉರುಳಿಗಳ ಗೋಡೆಗಳು ಸುರುಳಿಸುತ್ತುವ ಪದರಗಳಿಂದಾಗಿವೆ. ಈ ಘಟಕದ ರೂಪ, ರಚನೆಗಳಿಗೆ ತಂತುಕ ಪ್ರೋಟೀನಾದ




ಚಿತ್ರ 2 ತೋಳ್ಮೂಳೆಯ ಒಂದು ಅರೆಪಾಲಿನ ಸೀಳುಕೊಯ್ತು

ಅಂಟುಜನಕವೇ (ಕೊಲ್ಲೇಜನ್) ಕಾರಣ. ಮೂಳೆಯ ಜೈವಿಕ ವಸ್ತುವಿನ ಕೊಬ್ಬು ತೆಗದು ಒಣಗಿಸಿದ ತೂಕದ 90%ಕ್ಕೂ ಹೆಚ್ಚಿನ ಭಾಗ ಈ ಅಂಟುಜನಕವೇ. ಇದನ್ನು ನೀರಲ್ಲಿ ಕುದಿಸಿದರೆ, ಅಂಟು ಇಲ್ಲವೇ ಜೆಲಟಿನ್ ದೊರೆಯುತ್ತದೆ. ನಡುವಣ ಸಾಗಾಲುವೆಯ ಸುತ್ತಲೂ ಜೋಡಿಸಿರುವುದರೊಂದಿಗೆ, ಅದರ ತುಂಬ ಎಲ್ಲೆಲ್ಲೂ ಕಿರಿಸಾಗಾಲುವೆಗಳ (ಕೆನಾಲಿಕ್ಯುಲೈ) ಜಾಲರಚನೆಯಿಂದ ಒಂದಕ್ಕೊಂದು ಕೂಡಿರುವ ಜೀವಕಣಗಳಿರುವ ಸಣ್ಣ ತೆರಪುಗಳು ಇಲ್ಲವೇ ಬಿಡುತಿಗಳು (ಲ್ಯಾಕ್ಯುನೆ), ರಕ್ತದಿಂದ ಬಂದ ದ್ರವಗಳು ಮೂಳೆಯ ಊತಕವನ್ನು ಸೇರಿ ಪಾಲಿಸುವ ದಾರಿಗಳು.

ಮೇಲ್ಲೆಲುವೊಳೆಯ ಕೀಲೊಳಗಿನ ಭಾಗದ ಮೇಲೆ ಗಾಜುತೆರನ ಮೆಲ್ಲೆಲುಬಿನ ಪದರ ಇರುವುದು. ಕೀಲುಗಳಲ್ಲಿ ಮೂಳೆಗಳ, ಒಂದು ಇನ್ನೊಂದರ ಮೇಲಿನ ಒತ್ತಡ, ಪೆಟ್ಟು, ಸವೆತಗಳನ್ನು ತಡೆವ ರಚನೆ ಈ ಪದರವೇ. ವಯಸ್ಸಾದಾಗ, ಗಾಯವಾಗಿಯೊ ಸವೆದೊ ಹೋದರೆ, ಎಲುಗೀಲುರಿತವಾಗಲು (ಆಸ್ಟಿಯೊ ಆರ್‌ತ್ರೈಟಿಸ್) ಇದೇ ಕಾರಣ.

**ಎಲುಬಿನ ಜೀವಕಣಗಳು :** ಮೂಳೆಯಲ್ಲಿರುವ ಒಂದೊಂದು ಜೀವ ಕಣಕ್ಕೂ ಗೊತ್ತಾದ ಬೇರೆ ಬೇರೆ ಕೆಲಸಗಳಿವೆ. ಮೂಳೆಯ ಮೇಲುತಳದ (ಸರ್ಫೇಸ್) ದಟ್ಟ ರಗಟೆಯಲ್ಲಿರುವ, ಎಲುನನೆಕಣಗಳು (ಆಸ್ಟಿಯೊಬ್ಲಾಸ್ಟ್ಸ್) ಮೂಳೆಯನ್ನು ರೂಪಿಸುತ್ತವೆ. ಬಿಡುತಿಗಳಲ್ಲಿರುವ ಎಲುಕಣಗಳು (ಆಸ್ಟಿಯೊ ಸೈಟ್ಸ್) ಮೂಳೆಯನ್ನು ಬದುಕಿಸಿಡುವುವು. ಎಲುಬುಗಳ ಮೇಲುತಲಗಳಲ್ಲಿರುವ ಎಲುತಪಕಗಳು (ಆಸ್ಟಿಯೊಕ್ಲಾಸ್ಟ್ಸ್) ಎಲುಬನ್ನು ಹಾಳುಗೆಡವಿ ಹೀರಿ ಇಮರಿಸುತ್ತವೆ. ಈ ಜೀವಕಣಗಳೆಲ್ಲ ಒಂದೇ ಮೂಲದಿಂದ ಹುಟ್ಟುವುದರಿಂದ ಒಂದಕ್ಕೊಂದು ಸಂಬಂಧಿಸಿವೆ. ಮೂಳೆಗಳ ಸುತ್ತಲೂ ಮೂಳೆಸುತ್ತುಪೊರೆ (ಪೆರಿಯಾಸ್ಟಿಯಂ) ಇರುವುದು. ಕಡಿಮೆ ತೂಕದೊಂದಿಗೆ ಹೆಚ್ಚು ಬಲಗೊಡುವ. ಮೂಳೆ ಮಜ್ಜೆಯ ಪೊಳ್ಳುಗಳ ಒಳಗೆಲ್ಲ ಅದೇತೆರನ ಪದರ. ಮೂಳೆಯೊಳಪೊರೆ (ಎಂಡಾಸ್ಟಿಯಂ) ಇದೆ. ಸಹಜವಾಗಿ ಎಲುಗಟ್ಟು ಬೆಳೆವಾಗಲೂ ಗಾಯ, ಪೆಟ್ಟುಗಳು ತಗುಲಿದಾಗಲೂ ಎಲುಮುರಿಕೆಗಳು ಕೂಡಿಕೊಂಡು ಮಾಯುವಾಗಲೂ ಇವೆರಡು ಪೊರೆಗಳ ಜೀವ ಕಣಗಳಿಗೆ ಎಲುಬನ್ನು ತಯಾರಿಸುವ ಬಲವಿರುವುದು. ಇವು ಮೂಳೆಯನ್ನು ತಯಾರಿಸುತ್ತಿರುವಾಗ, ಎಲುನನೆಕಣಗಳ ರೂಪ ನಿಜಗೆಲಸಗಳನು ಎತ್ತಿಕೊಳ್ಳುತ್ತವೆ.

**ಊತಕಾಂತರದ ವಸ್ತು :** ಮೂಳೆಯಲ್ಲಿ ಹೆಚ್ಚಾಗಿರುವ, ಜೀವಕಣ ನಡುವಣ, ಊತಕಾಂತರದ (ಇಂಟರ್‌ಸ್ಟಿಷಿಯಲ್) ಭಾಗವೆಲ್ಲ ಸುಣ್ಣಗೂಡಿದ ಅಂಟುಜನಕ ತೆರನ ಪದಾರ್ಥ. ಮೂಳೆಯ ಗಡಸುತನಕ್ಕೂ ಬಾಗುವ ಗುಣಕ್ಕೂ ಇದೇ ಮುಖ್ಯ ಕಾರಣ. ಜೈವಿಕ ಜಾಲರಚನೆ ಇಲ್ಲವೇ ಮಾತೃಕವೂ ಖನಿಜಗಳ ಅಜೈವಿಕ ಭಾಗವೂ ನೀರೂ ಊತಕಾಂತರದ ವಸ್ತುವಿನಲ್ಲಿವೆ. ಜೈವಿಕ ಮಾತೃಕದಲ್ಲಿ ಮುಖ್ಯವಾಗಿ ಅಂಟುಜನಕ ತಂತುಗಳೂ ಆಧಾರವಸ್ತುವೂ (ಗ್ರೌಂಡ್ ಸಬ್‌ಸ್ಟೆನ್ಸ್) ಇರುವುವು. ಸಾಮಾನ್ಯ ಬೆಳಕಿನ ಸೂಕ್ಷ್ಮದರ್ಶಕ ಎಷ್ಟೇ ಬಲವಾಗಿದ್ದರೂ ಮೂಳೆಯ ಊತಕಾಂತರ ವಸ್ತು ಬರಿಗಾಜಿನಂತೆ ಒಂದೇ ತೆರನಾಗಿ ಕಾಣುವುದು. ಆದರೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಇನ್ನೂ ವಿಪರೀತ ದೊಡ್ಡದು ಮಾಡಿ ನೋಡಿದರೆ ಅಂಟುಜನಕ ತಂತುಗಳು ಇರುವುದು ಕಣ್ಣಿಗೆ ಬೀಳುತ್ತವೆ. ತಂತುಗಳ ಉದ್ದಕ್ಕೂ ಜೋಡಿ ಅಡ್ಡ ಪಟ್ಟೆಗಳು ಕ್ರಮವಾಗಿರುವುವು. ಈ ತಂತುಗಳ ನಡುವೆ ಮೂಳೆಯ ಖನಿಜದ ಹರಳುಗಳೂ ಅರೆದ್ರವವಾದ ಆಧಾರ ವಸ್ತು ಇಲ್ಲವೆ ಗಚ್ಚು (ಸಿಮೆಂಟ್) ವಸ್ತುವೂ ತುಂಬಿವೆ.

ಎಲುಬಿನ ಲವಣವೆಂಬ ಕ್ಯಾಲ್ಸಿಯಂ ಫಾಸ್ಫೇಟ್, ಮುಖ್ಯವಾಗಿ ತೀರ ಕಿರಿಯ ರೂಪದಲ್ಲಿರುವ, ಕಷ್ಟದಿಂದ ಕರಗುವ ಹರಳುಗಳು. ಆರು ಮೊಗದ ತೆಳು ಹರಳುಗಳಿವು. ತಂತುಗಳ ನೇರ ದಿಕ್ಕಿನಲ್ಲಿ ಈ ಹರಳುಗಳು ಉದ್ದುದ್ದನಾಗಿ ಅಂಟುಜನಕ ತಂತುಗಳ ಸುತ್ತಲೂ ಕ್ರಮವಾಗಿ ಜೋಡಿಸಿದಂತಿರುತ್ತವೆ. ಈ ಹರಳುಗಳು ಇರುವೆಡೆಗಳೇ ತುಂತುಗಳಲ್ಲಿ ಕಾಣುವ ಅಡ್ಡಪಟ್ಟೆಗಳು. ಅಂದರೆ, ತಂತುಗಳಲ್ಲಿ ಕೆಲವು ಗೊತ್ತಾದ ವಿಶೇಷ ಗುಣಗಳು ಹರಳುಗಳ ರೂಪಿಕೆ, ಬೆಳೆತಗಳ ಜಾಗಗಳನ್ನು ನಿರ್ಧರಿಸುತ್ತವೆ. ಎಲುಬಿನ ಲವಣದ ಹರಳಿನ ರಾಸಾಯನಿಕ ರಚನೆ ಹೀಗಿದೆ: $3Ca_3(PO_4)_2Ca(OH)_2$ (ಹೈಡ್ರಾಕ್ಸಿ ಅಪಟೈಟು). ಎಕ್ಸ್‌ಕಿರಣ ರೋಹಿತದಲ್ಲಿ (ಸ್ಪೆಕ್ಟ್ರೊಸ್ಕೋಪ್) ಕಾಣುವ ಜೋಡಣೆ ಕ್ರಮಕ್ಕೆ ಇದರ ರಚನೆಯೇ ಕಾರಣ. ಇಡೀ ಮೂಳೆ ಒಂದೇ ಗಟ್ಟಿಯಂತಿರದೆ, ಇಟ್ಟಿಗೆ, ಗಾರೆಗಳಿಂದ ಕಟ್ಟಿದಂತಿದೆ. ಹೈಡ್ರಾಕ್ಸಿ ಅಪಟೈಟಿನ ಹರಳುಗಳೇ ಇಟ್ಟಿಗೆಗಳು. ಮುಖ್ಯವಾಗಿ ಸಿಟ್ರೇಟು, ಕಾರ್ಬೊನೇಟುಗಳೇ ಗಾರೆ. ಇವುಗಳ ನಡುವೆ ಬೇರೆ ಅಯಾನುಗಳು ಬೆರತಿವೆ. ಹರಳುಗಳ ನಡುವೆ ಅಂಟುಜನಕ ತಂತುಗಳು ಬಿಗುವುಕೊಡುವ ನಾರುಗಳಂತಿರುತ್ತವೆ.

**ಮೂಳೆಬೆಳೆತ :** ಪಿಂಡಗೂಸಲ್ಲೂ (ಫೀಟಸ್) ಹುಟ್ಟಿದ ಮೇಲೂ ಕೂಡಿಸುವ ಊತಕದ ಬದಲಾವಣೆಯಿಂದಲೇ ಮೂಳೆ ಹುಟ್ಟುವುದು. ಮೂಳೆ ಆಗುವ ಮುಂಚೆ ಮೆಲ್ಲೆಲುಬಿನ ಅಡಿಗಟ್ಟು ಆಗಬಹುದು. ಇಲ್ಲವೇ ತಂತುಕ (ಫೈಬ್ರಸ್) ಊತಕದಿಂದಲೇ ನೇರವಾಗಿ ಬದಲಾಗುತ್ತದೆ. ಹಾಗೆ ಕೂಡಿಸುವ ಊತಕವಾದ ಮೆಲ್ಲೆಲುಬಿನ ಜಾಗದಲ್ಲಿ ಮೂಳೆ ಹುಟ್ಟುವುದಾದರೆ ಅದು ಮೆಲ್ಲೆಲುಬೊಳಗಿನ ಎಲುವೊಳೆತ (ಆಸಿಫಿಕೇಷನ್). ಆದರೆ ಮೆಲ್ಲೆಲುಬು ನಡುವೆ ಬರದೆ ಈ ಬದಲಾವಣೆ



ಚಿತ್ರ 3 ಅಂಟುಜನಕ ಕಿರುತಂತುಗಳನ್ನು ಬಿಡಿಸಿ, 34,000ರಷ್ಟು ದೊಡ್ಡದಾಗಿ ತೋರಿಸಿದೆ

ನೇರವಾಗಿದ್ದರೆ ಅದು ಪದರದೊಳಗಿನ ಎಲುವೊಳೆತ. ಮಗುವಿನ ಬೆಳವಣಿಗೆಯಲ್ಲೂ ಎಲುಮುರಿಕೆಗಳು ವಾಸಿಯಾಗುವಾಗಲೂ ಇವೆರಡು ರೂಪಗಳನ್ನೂ ಕಾಣಬಹುದು.

ಮೆಲ್ಲೆಲುಬಲ್ಲೇ ತಯಾರಾಗುವ ಮೂಳೆಗಳಲ್ಲಿ ಬೆಳೆವ ಕಾಲದುದ್ದಕ್ಕೂ ಒಂದು ಪಾಲು ಮೆಲ್ಲೆಲುಬು ಮೇಲೆಲುವೊಳೆಯ ಮೆಲ್ಲೆಲುಬಾಗಿ ಉಳಿವುದು. ಈ

ಮೆಲ್ಲೆಲುಬು ಬೆಳೆಯುತ್ತಲೇ ಇದ್ದು. ಇದರ ಬದಲು ಮೂಳೆ ಎಡೆಬಿಡದೆ ಬೆಳೆಯುವುದರಿಂದ ಮೂಳೆಗಳು ಉದ್ದವಾಗುತ್ತವೆ. ಸುತ್ತಲೂ ಇರುವ ಊತಕ




ಚಿತ್ರ 4 ಎಲುಬಿನಲ್ಲಿ ಹ್ಯಾವರ್ಸಿಯನ್ ಮಂಡಲದ ರೂಪಿಕೆ

ಗಳೊಂದಿಗೆ ಮೆಲ್ಲೆಲುಬೂ ಬೆಳೆವುದನ್ನು ಬೆಳವಣಿಗೆಯ ಉಪಕರಣ ಎನ್ನುವುದುಂಟು. ಇದು ಚುರುಕಾಗಿರುವ ತನಕ ಮೂಳೆ ಉದ್ದನಾಗಿ ಬೆಳೆಯುತ್ತ ಹೋಗುವುದು. ಇದು ನಿಂತರೆ, ಸಾಮಾನ್ಯವಾಗಿ, 16-18ರ ವಯಸ್ಸಿಗೆ ಬೆಳೆತವೂ ನಿಲ್ಲುವುದು. ಮೂಳೆ ದಪ್ಪನಾಗಿ ಬೆಳೆವ ವಿಧಾನವೇ ಬೇರೆ. ಇದರಲ್ಲಿ ಒಂದೇ ಸಮನಾಗಿ ಮಜ್ಜೆಯ ಪೊಳ್ಳಿನ ಒಳಗಿನಿಂದಲೇ ಹೀರಿ ಕರಗಿಸುತ್ತ, ಹೊರಗಿನ ಮೂಳೆಸುತ್ತ ಪೊರೆಯ ಮೇಲೆ ಕೂಡಿಕೊಳ್ಳುತ್ತ, ಹೊರಗೂ ಒಳಗೂ ಹೊಸ ಮೂಳೆ ತಯಾರಾಗುತ್ತ ಬರುವುದು.

ಸಾಮಾನ್ಯವಾಗಿ, ಮಾತೃಕದ ಅಂಟುಜನಕದ ತಂತುಗಳು ಬೆಳೆಯುತ್ತಿರುವಾಗಲೆ ಜೈವಿಕ ಮೂಳೆ ಮಾತೃಕದಲ್ಲಿ ಮೂಳೆ ಖನಿಜ ಕೂಡಿಕೊಳ್ಳುತ್ತ ಮೂಳೆಯ ಊತಕದಲ್ಲಿ ಸುಣ್ಣಗೂಡುತ್ತದೆ. ಸುಣ್ಣಗೂಡಿಕೆಗೆ ಕೆಲವು ಚೋದನಿಕ (ಹಾರ್ಮೋನಲ್) ಮತ್ತಿತರ ತಾವಿನ (ಲೋಕಲ್) ಸ್ಥಿತಿಗಳಿರಬೇಕು. ಸುಣ್ಣಗೂಡುವೆಡೆಯಲ್ಲಿ ಸಾಕಷ್ಟು ಮಟ್ಟಗಳಲ್ಲಿ ಬೇಕಿರುವ ಖನಿಜಗಳ ಪೂರೈಕೆ, ಸಾಗಣೆಗೂ ಒದಗಣೆಗೂ ಚೋದನಿಕಗಳು ಕಾರಣ. ಸುಣ್ಣಗೂಡಿಸುವ, ಸುಣ್ಣಗೂಡಿಸದ ಊತಕದ ವ್ಯತ್ಯಾಸ ತೋರುವುವು ಆ ತಾವಿನ ಸ್ಥಿತಿಗಳು. ಇವುಗಳಲ್ಲಿ ಒಂದಕ್ಕೊಂದು ಸಂಬಂಧಿಸಿದ ಅಂಶಗಳು ಹಲವಾರು ಸೇರಿರುವುದರಿಂದ ಇದನ್ನು ತಾವಿನ ಯಾಂತ್ರಿಕತೆ ಎನ್ನುವುದೇ ಸರಿ. ಒಟ್ಟಿನಲ್ಲಿ, ಸುಣ್ಣಗೂಡಿಕೆಯನ್ನು ಹರಳುರೂಪಿಕೆ, ಬೆಳೆತ ಎನ್ನಬಹುದು.

**ನಿಜಗೆಲಸ :** ಎಲುಬಿನ ಲವಣ ಸುಲಭವಾಗಿ ಕರಗದಿರುವುದು ದೊಡ್ಡ ವಿಶೇಷ. ಮೂಳೆಯ ಖನಿಜದ ಸೇರಿಕೆಗೊಂದೇ ಅಲ್ಲದೆ, ಮೂಳೆಯ ರಚನೆಗೂ ಗಡಸುತನಕ್ಕೂ ಅನುಕೂಲ. ಅಷ್ಟೇ ಅಲ್ಲದೆ, ಎಲುಗಟ್ಟು, ಮೈಯಲ್ಲಿನ ದ್ರವಗಳ ನಡುವೆ ಖನಿಜಗಳ ಸಮತೋಲ ಇರಿಸಲೂ ಇದು ಬಲು ಮುಖ್ಯ. ಒಟ್ಟಿನಲ್ಲಿ, ಬೆಳೆದವರಲ್ಲಿ ಸುಣ್ಣಾಂಶ ಒಳಸೇರುವುದೂ ಹೊರಬೀಳುವುದೂ ಸಮನಾಗಿದ್ದು, ಸಹಜವಾಗೇ ಸುಣ್ಣಾಂಶದ ಸಮತೋಲದಲ್ಲಿರುವುದು. ಮೂಳೆಯ ಖನಿಜ ವಿನಿಮಯ ಎಡೆಬಿಡದೆ ನಡೆಯುತ್ತಲೇ ಇರುತ್ತದೆ. ಮೈಯಲ್ಲಿನ ಸುಣ್ಣಾಂಶದ ದಾಸ್ತಾನು ಬಹುಮಟ್ಟಿಗೆ ಮೂಳೆಗಳಲ್ಲೇ ಇರುವುದರಿಂದ, ಸುಣ್ಣಾಂಶದ ಸಮತೋಲವೆಂದರೆ ಕೂಡಿಡುವ ಅಲ್ಲದೆ ಮೂಳೆ ಖನಿಜ ಕರಗಿಸುವ ವೇಗಗಳು ಸಮನಾಗಿರಬೇಕು.

ರಕ್ತರಸದಲ್ಲಿನ (ಪ್ಲಾಸ್ಮ) ಸುಣ್ಣಾಂಶದ ಅಯಾನಿನ ಸಾಂದ್ರತೆಯ ಸಮನಿಲುವಿನ (ಹೋಮಿಯೊಸ್ಟ್ಯಾಟಿಕ್) ಹತೋಟಿಯಲ್ಲಿ, ರಕ್ತಕ್ಕೂ ಮೂಳೆಗಳಿಗೂ ನಡುವೆ ಎರಡು ದಿಕ್ಕುಗಳಲ್ಲೂ ಸುಣ್ಣಾಂಶದ ಅಯಾನುಗಳ ವರ್ಗಾವಣೆಯ ಹತೋಟಿ ಬಲು ಮುಖ್ಯ. ಗುಂಡಿಗೆ, ನರ, ಸ್ನಾಯುಗಳ ಮಂಡಲಗಳು ಸರಿಯಾಗಿ ಕೆಲಸಮಾಡಲೂ ರಕ್ತದ ಗರಣೆ ಗಟ್ಟಿಕೆ, ಹೀಗೇ ಇಡೀ ಜೀವಕ್ಕೆ ಸುಮಾರಾಗಿ ಒಂದೇ ಸಮನಾದ ಮಟ್ಟದಲ್ಲಿ ಈ ಸಾಂದ್ರತೆಯನ್ನು ಉಳಿಸಿಕೊಂಡಿರಲೇಬೇಕು. ಗುರಾಣಿಕ (ಥೈರಾಯ್ಡ್) ಗ್ರಂಥಿಯ ಹಿಂಬದಿಯಲ್ಲಿ ಹೂತಂತಿರುವ ನಾಲ್ಕು ಪುಟಾಣಿಗಾತ್ರದ ಬದಿ ಗುರಾಣಿಕ (ಪ್ಯಾರಥೈರಾಯ್ಡ್) ಗ್ರಂಥಿಗಳು ಇದನ್ನು ನಿಯಂತ್ರಿಸುವುವು.

ಪ್ರಾಣಿಯ ಬಾಳಿನುದ್ದಕ್ಕೂ ನಡೆಯುತ್ತಿರುವ, ಹ್ಯಾವರ್ಸಿಯನ್ ಮಂಡಲಗಳ ಮರುರೂಪಿಕೆಗೂ ರಕ್ತ, ಮೂಳೆಗಳ ನಡುವೆ ಸುಣ್ಣಾಂಶದ ವಿನಿಮಯದ ಹತೋಟಿಗೂ ನಿಕಟ ಸಂಬಂಧವಿದೆ. ದಟ್ಟವಾದ ಮೂಳೆಯ ಒಳಗೆಲ್ಲ ಸುರಂಗಗಳಾಗಿ, ಆಮೇಲೆ ಅವುಗಳಲ್ಲಿ ಸುರಂಗದ ಗೋಡೆಗಳ ಮೇಲೆ ಏಕಕೇಂದ್ರೀಯ (ಕಾನ್‌ಸೆಂಟ್ರಿಕ್) ತೆಳುಪದರಗಳು (ಲ್ಯಾಮೆಲ್ಲೆ) ಎಂದಿನ ಸಣ್ಣ ಹ್ಯಾವರ್ಸಿಯನ್ ಸಾಗಾಲುವೆ ಮಾತ್ರ ಉಳಿವತನಕ ಕೂಡುತ್ತ ಹೊಸ ಹ್ಯಾವರ್ಸಿಯನ್ ಮಂಡಲಗಳು ತುಂಬಿಕೊಳ್ಳುತ್ತವೆ. ಹೀಗೆ ಹೊಸ ರಚನೆ ಆಗುತ್ತಿರುವಾಗ, ಬೆಳೆಯುತ್ತಿರುವ ಮೂಳೆ ಚುರುಕಾಗಿದ್ದು ತಿಂಗಳುಗಟ್ಟಲೆ ರಕ್ತದ ಪೂರೈಕೆಯನ್ನು ಪಡೆಯುತ್ತಿರುವುದು. ಈ ಒಂದು ಚುರುಕು ಗೆಲಸ ಬಿಟ್ಟರೆ, ದಟ್ಟವಾದ ಮೂಳೆ ಖನಿಜದಿಂದ ಪೂರ ತುಂಬಿಕೊಂಡು ಜಡವಾಗಿ ಚುರುಕಿಲ್ಲದೆ ಬಿದ್ದಿರುವುದು. ವಯಸ್ಸಾದವರಲ್ಲೂ ಹಾಗೇ ಹೊಸ, ಪ್ರತಿಕ್ರಿಯೆ ತೋರುವ ಮೂಳೆಯನ್ನು ಎಡೆಬಿಡದೆ ಪೂರೈಸುವುದಲ್ಲದೆ ಮರುರೂಪಿಕೆ ಮೈಗೆ ಬೇಕಾದಾಗ ಸುಣ್ಣಾಂಶವನ್ನು ರಕ್ತಕ್ಕೆ ಕೊಡಬಲ್ಲುದು.

ಒಟ್ಟಿನಲ್ಲಿ, ಮೂಳೆಯನ್ನು ಹೀರಿ ಕರಗಿಸುವುದು (ರಿಸಾರ್ಪ್‌ಷನ್) ಎಂದರೆ ಸಿಕ್ಕುಸಿಕ್ಕಾದ ರಚನೆಯನ್ನು, ಅದರ ಕೊನೆಯ ಉತ್ಪನ್ನಗಳು ರಕ್ತದ ಹರಿವಿನಲ್ಲಿ ಸೇರಿದರೆ ಕಣ್ಣಿಗೆ ಕಾಣದಾಗುವಂತೆ ಕರಗಿಸುವುದು. ಇದು ಯಾವಾಗಲೂ ಮೂಳೆಯ ಹೊರ ತಲದಿಂದ ಆರಂಭವಾಗಿ ಒಳಗಡೆಗೆ ಸಾಗುತ್ತದೆ. ಆಳದ ಪದರಗಳಲ್ಲಿ ಎಂದಿಗೂ ಮೊದಲಾಗದು. ಊತಕಾಂತರವಾಗಿ ಮೂಳೆ ಹೀರಿಕರಗುವುದೂ ಇಲ್ಲ. ಹೊಸ ಮೂಳೆ ರಚನೆಯೂ ಹೀರಿ ಕರಗುವುದೂ ಒಂದಕ್ಕೊಂದು ಪೂರಕಗಳು. ಮೂಳೆ ಬೆಳೆಯಲೂ ಮೇಲಿಂದ ಮೇಲೆ ಹೊಸದಾಗಿ ತಯಾರಾಗಲು ಇವೆರಡೂ ಆಗುತ್ತಿರಲೇಬೇಕು. ಖನಿಜಗೂಡಿರುವ ಮೂಳೆಯ ಊತಕವನ್ನು ಒಡೆಕೆಡವಿ ಮೂಳೆಯಿಂದ ರಕ್ತದೊಳಕ್ಕೆ ಸುಣ್ಣಾಂಶ ಹಿಂತಿರುಗಿಸುವ, ಬದಿಗುರಾಣಿಕ ಗ್ರಂಥಿಗಳ ಹತೋಟಿಯಲ್ಲಿ ಮೂಳೆಯ ಹೀರಿಕರಗಣೆ ಕೊಂಚಮಟ್ಟಿಗಿದೆ. ಮೂಳೆಯ ಹೀರಿಕರಗಣೆಯಿಂದ ಇನ್ನೂ ಒಂದು ನಿಜಗೆಲಸ ಕೈಗೂಡುತ್ತದೆ. ಹ್ಯಾವರ್ಸಿಯನ್ ಮಂಡಲ ಮರುಜೋಡಣೆಯೊಂದಿಗೆ ಮೂಳೆಯ ಬೆಳೆತವೂ ಮರುರೂಪಿಕೆಯೂ ಆಗುವುವು. ಆದರೆ, ಇಲ್ಲಿ ಹೀರಿಕರಗಣೆಯ ಕೆಲಸಕ್ಕೂ ಬದಿಗುರಾಣಿಕದ ಚಟುವಟಿಕೆಗೂ ಸಂಬಂಧವಿಲ್ಲ ಅಷ್ಟೆ.




ಚಿತ್ರ 5 48 ತಾಸುಗಳಲ್ಲಿ ವಾಸಿಯಾಗುತ್ತಿರುವ ಒಂದು ಪಕ್ಕೆಲುಬಿನ ಎಲುಮುರಿಕೆಯ ಕೊಯ್ತು

**ವಿಕಿರಣಶಕ್ತ ಧಾತುಗಳು :** ರೇಡಿಯಂ, ಸ್ಟ್ರಾಂಷಿಯಂ ತೆರನ ವಿಕಿರಣ ಶಕ್ತ ಧಾತುಗಳು (ರೇಡಿಯೊ ಆಕ್ಟಿವ್ ಎಲಿಮೆಂಟ್ಸ್) ಮೈಒಳಹೊಕ್ಕರೆ ಅವು ಬಹುಮಟ್ಟಿಗೆ ಮೂಳೆಗಳಲ್ಲಿ ನೆಲೆಸುವುದೇ ಹೆಚ್ಚು. ಅಲ್ಲದೆ ವರ್ಷಗಳವರೆಗೆ ಅವು ಅಲ್ಲೆ ಉಳಿದುಕೊಂಡರೆ ಮೂಳೆಯೊಳಗಣ ಮಜ್ಜೆಗೂ ಕೊನೆಗೆ ಮೂಳೆಗೂ ಹಾನಿಕರ. ಮೂಳೆಗಳಲ್ಲಿ ರೇಡಿಯಂ ಬಹುಕಾಲ ನೆಲೆನಿಂತ್ತರೆ ಒಳಗೇ ಹುಟ್ಟುತ್ತಿರುವ ವಿಕಿರಣತೆಯಿಂದ ಆಗುವ ಕೆಡಕುಗಳಲ್ಲಿ ಮೂಳೆಯ ವಿಷಮುಗಂತಿಯಾದ ಮಾಂಸಗಂತಿ (ಸಾರ್ಕೋಮ) ಆಗುವುದೂ ಒಂದು. ನೋಡಿ : ಎಲುಗಟ್ಟು, ಕಶೇರುಕಗಳ ; ಎಲುಬಿನ ರೋಗಗಳು, ಗಾಯಗಳು; ಎಲುಬುಮಜ್ಜೆ. (ಎಚ್.ಕೆ.ಎಸ್.ಎಂ.; ಡಿ.ಎಸ್.,ಎಸ್.)

**ಎಲುಬು ಮಜ್ಜೆ :** ಮೈಯಲ್ಲಿನ ರಕ್ತನಾಳಗಳಲ್ಲಿ ಹರಿವ ರಕ್ತದಲ್ಲಿ ಹಾಲುರಸಕಣ (ಲಿಂಫೊಸೈಟ್) ಒಂದನ್ನು ಬಿಟ್ಟು ಉಳಿದ ಎಲ್ಲ ಬಗೆಯ ರಕ್ತಕಣಗಳೂ ಚಪ್ಪಟಿಕಗಳೂ (ಪ್ಲೇಟಿಲೆಟ್ಸ್) ತಯಾರಾಗುವ, ಮೂಳೆಗಳ ಒಳಗಿನ ಪೊಳ್ಳುಗಳಲ್ಲಿರುವ ಊತಕವಾದ ಮಜ್ಜೆ (ಮ್ಯಾರೊ). ಹಾಲುರಸಕಣಗಳು ಮಾತ್ರ ಹಾಲುರಸದ ಊತಕದಲ್ಲಿ ತಯಾರಾಗುವುವು. ಹುಟ್ಟಿದ ಹಸುಗೂಸಿನ ತೂಕದಲ್ಲಿ ಸುಮಾರು 2.3% ಪಾಲು ಎಲುಬು ಮಜ್ಜೆ ಇರುತ್ತದೆ. ಬೆಳೆದಿರುವವರಲ್ಲಿ, ಇದರ ಎರಡರಷ್ಟಾಗಿರಬಹುದು. ಇದರ ಘನಅಳತೆ ಕೂಡ 65 ಮಿ. ಲೀ. ಇದ್ದುದು, 1.6—3.7 ಲೀಟರುಗಳಷ್ಟಕ್ಕೆ ಏರುವುದು. ಸಾಧಾರಣವಾಗಿ, ಹೆಂಗಸಿಗಿಂತಲೂ ಗಂಡಸರಲ್ಲೇ ಇವರ ಘನಅಳತೆ ಹೆಚ್ಚು.

ಮಜ್ಜೆಯಲ್ಲಿ ಕೊಬ್ಬಿನ ಊತಕ ಹೆಚ್ಚಾಗಿದ್ದರೆ ಹಳದಿಯಾಗೂ ರಕ್ತ ತಯಾರಿಕ ಊತಕ ಹೆಚ್ಚಾಗಿದ್ದರೆ ಕೆಂಪಗೂ ತೋರುವುದು. ಹುಟ್ಟಿದಾಗಿನಿಂದ ಸುಮಾರು ಏಳನೆಯ ವಯಸ್ಸಿನ ತನಕ ಮೈಯಲ್ಲಿನ ಎಲುಬು ಮಜ್ಜೆಯೆಲ್ಲ ಕೆಂಪಗೇ ಇರುತ್ತದೆ. ಆಮೇಲೆ ಬರುಬರುತ್ತ ಕೊಬ್ಬುಗೂಡುತ್ತ ಹೋಗುತ್ತದೆ. ಬೆಳೆದವರಲ್ಲಿ, ತಲೆಬುರುಡೆ, ಎದೆಚಕ್ಕೆ, ಪಕ್ಕೆಲುಬುಗಳು ಕೊರಳೆಲುಬು, ಬೆನ್ನುಗಂಬ, ತೊಡೆಮೂಳೆ ಅಲ್ಲದೆ ತೋಳಿನ ಮೇಲ್ಕೊನೆಗಳಲ್ಲಿ ಮಾತ್ರ ಕೆಂಪು ಮಜ್ಜೆ ಇರುವುದು. ವಿಪರೀತ ಸೆಕೆಯ ಹವ, ರಕ್ತಸುರಿತಗಳ ತೆರನ ಹಲವು ತುರ್ತಿನ ಹೊತ್ತುಗಳಲ್ಲಿ ಹಳದಿ ಮಜ್ಜೆ ಕೂಡ ಕೆಂಪಾಗಬಹುದು. ಎಲುಬು ಮಜ್ಜೆಯಲ್ಲಿ ರಕ್ತ ತಯಾರಿಸುವ ಚಟುವಟಿಕೆ ಹೆಚ್ಚಿದಾಗಲೂ ಅಷ್ಟೆ.

ಬಲೆ ಹೆಣೆದಂತಿರುವ ನವಿಜಾಲಕ (ರೆಟಿಕ್ಯುಲಾರ್) ತಂತುಗಳಿಗೆ ನವಿಜಾಲಕ ಜೀವಕಣಗಳು ಅಡ್ಡಚಾಚಿ ಸ್ಪಂಜಂತಾಗಿರುವುದನ್ನು ಸೂಕ್ಷ್ಮದರ್ಶಕದಲ್ಲಿ ನೋಡಬಹುದು. ಎಲುಬು ಮಜ್ಜೆಯ ತುಂಬ ಇವೆರಡು ರಚನೆಗಳೇ ಎಲ್ಲೆಲ್ಲೂ ಕಾಣಬರುತ್ತವೆ. ನವಿಜಾಲಕ ಜೀವಕಣಗಳಲ್ಲಿ, ನೆಲೆಸಿದ ನಿಡುತೀನಿಕಣಗಳು (ಮ್ಯಾಕ್ರೊಫೇಜಸ್), ಮೂಲರೂಪದ ನವಿಜಾಲಕ ಕಣಗಳೆಂಬ ಎರಡು ಬಗೆಗಳಿವೆ. ಈ ನೆಲೆಸಿದ ನಿಡುತೀನಿಕಣಗಳು ರಕ್ತದ ಹರಿವಿನಿಂದ ಸಣ್ಣಪುಟ್ಟ ಚೂರು ವಸ್ತುಗಳನ್ನು ಎತ್ತಿಕೊಂಡು ಕಬಳಿಸುತ್ತವೆ. ಮೂಲರೂಪದ ನವಿಜಾಲಕ ಕಣಗಳೇ ನಿಡುತೀನಿಕಣಗಳಾಗಿ ಬದಲಾಗಬಲ್ಲವು, ಇಲ್ಲವೇ ಸಾಧಾರಣ ರಕ್ತದ ಕಣಗಳಾಗಿ ಬೆಳೆಯಬಲ್ಲವು. ಎಲುಬು ಮಜ್ಜೆಯ ರಚನಾಂಶದಲ್ಲಿ ಕೊಬ್ಬಿನ ಜೀವಕಣಗಳು ಹೆಚ್ಚಿದ್ದಾಗಲೇ ಹಳದಿಯಾಗಿ ತೋರುವುದು. ಕೆಂಗಣಗಳೆಂಬ (ಎರಿತ್ರೊಸೈಟ್ಸ್) ಬಲಿತ ಕೆಂಪು ರಕ್ತಕಣಗಳು, ಹರಳುಗೂಡಿದ (ಗ್ರಾನ್ಯುಲೇಟೆಡ್) ಬಿಳಿರಕ್ತಕಣಗಳಾದ ಹರಳುಕಣಗಳೂ (ಗ್ರಾನ್ಯುಲೊಸೈಟ್ಸ್), ಇವೆಲ್ಲದರ ಎಳಸಿನ ರೂಪಗಳೂ ಈ ತಂತುಗಳ, ಜೀವಕಣಗಳ ಬಲೆಯಲ್ಲಿ ಇರುತ್ತವೆ. ಕೆಲವರು ಮಜ್ಜೆಮೊಳೆಕಣವೆಂದೂ (ಮಯೆಲೊಬ್ಲಾಸ್ಟ್), ಇತರರು ಹಾಲುರಸಮೊಳೆಕಣವೆಂದೂ (ಲಿಂಫೊಬ್ಲಾಸ್ಟ್) ಕರೆವ ಒಂದೇ ತಾಯಿಕಣದಿಂದ, ಕೆಂಪು ರಕ್ತಕಣಗಳ ಅಲ್ಲದೆ ಹರಳುಕಣಗಳ ಕಣಸರಣಿಗಳೂ ಹುಟ್ಟುತ್ತವೆ. ರಕ್ತದ ಹುಟ್ಟಿನ ಇಬ್ಬಗೆಯ ಕಲ್ಪನೆಯಂತೆ, ಮಜ್ಜೆತೆರ (ಮಯೆಲಾಯ್ಡ್) ಕಣಗಳನ್ನು ತಯಾರಿಸುವ ತಾಯಿಕಣವೇ ಬೇರೆ, ಹಾಲುರಸಕಣಗಳನ್ನು ಹುಟ್ಟಿಸುವ ಮೂಲಕಣವೇ) ಬೇರೆ. ಆದರೆ, ಎಲುಬು ಮಜ್ಜೆಯ ಮೂಲಕಣವೂ ಹಾಲುರಸಕಣಗಳೂ ರೂಪ, ನಿಜಗೆಲಸಗಳಲ್ಲಿ ಬೇರೆ ಬೇರೆ ಆಗಿರುವುದನ್ನು ಯಾರೂ ತೋರಿಸಿಲ್ಲ. ಅಲ್ಲದೆ, ಹಾಲುರಸ ಮೊಳೆಕಣ ಎನ್ನಿಸಿಕೊಂಡಿರುವುದಕ್ಕೂ ಹಾಲುರಸಕಣಕ್ಕೂ ಯಾವ ಹೆಚ್ಚಿನ ವ್ಯತ್ಯಾಸಗಳೂ ಇಲ್ಲ. ಒಂದರ ಇಲ್ಲವೇ ಒರುಕುಲದ (ಮಾನೊಫೈಲೆಟಿಕ್) ವಾದಿಗಳ ಅಭಿಪ್ರಾಯದಲ್ಲಿ ಮೂಲಕಣಗಳಿಗೆ ಮಜ್ಜೆಮೊಳೆಕಣ ಹಾಲುರಸಮೊಳೆಕಣಗಳೆಂಬ ಬೇರೆ ಹೆಸರುಗಳೇ ಬೇಕಿಲ್ಲ. ಅವುಗಳ ಬದಲಾಗಿ ಅವನ್ನು ಸುಮ್ಮನೆ ರಕ್ತಮೊಳೆಕಣ (ಹೀಮೊಸೈಟೊಬ್ಲಾಸ್ಟ್) ಎಂದರೆ ಸಾಕು.

ಎಲುಬು ಮಜ್ಜೆ ಮೂಲಕಣ ಕೆಂಪುರಕ್ತಕಣವಾಗಿ ಬೆಳೆದಂತೆಲ್ಲ ಅದರ ಕಣರಸದಲ್ಲಿ ( ಸೈಟೊಪ್ಲಾಸ್ಮ್ ) ರಕ್ತಬಣ್ಣಕ (ಹೀಮೊಗ್ಲಾಬಿನ್) ಕೂಡಿಕೊಳ್ಳುತ್ತ ಹೋಗುವುದು. ಕೆಂಪು ರಕ್ತಕಣದ ತಾಯಿಕಣದಲ್ಲಿ ನ್ಯೂಕ್ಲೀಯಿಕಾಮ್ಲ, ರಕ್ತಬಣ್ಣಕ ಎರಡೂ ಇದ್ದು, ಬರುಬರುತ್ತ ನ್ಯೂಕ್ಲೀಯಿಕಾಮ್ಲದ ಬದಲಾಗಿ ರಕ್ತಬಣ್ಣಕವೇ ತುಂಬ ತುಂಬಿಕೊಳ್ಳುತ್ತದೆ. ಅದೇ ಹೊತ್ತಿನಲ್ಲಿ ನಡುಬೀಜದ (ನ್ಯೂಕ್ಲಿಯಸ್) ಬಣ್ಣವೇರಿ, ದುಂಡಗಾಗಿ ಕೊನೆಗುಳಿದ ಜೀವಕಣ ಸಮನನೆಕಣ (ನಾರ್ಮೊಬ್ಲಾಸ್ಟ್) ಎನಿಸಿಕೊಳ್ಳುವುದು. ಇದರಲ್ಲಿರುವ ನಡುಬೀಜವನ್ನು ಹೊರದೂಡಿಯೊ ಕರಗಿಸಿಯೊ ಮಾಮೂಲಿನ ನಡುಬೀಜವಿರದ ಕೆಂಪು ರಕ್ತಕಣವಾಗುತ್ತದೆ.

ಹಾಗೆಯೇ ಎಲುಬು ಮಜ್ಜೆಯ ಮೂಲಕಣದ ಕಣರಸದಲ್ಲಿ ಹರಳುಗಳು ಹುಟ್ಟಿಕೊಂಡು, ನಡುಬೀಜದಲ್ಲೂ ಒಂದಿಷ್ಟು ಬದಲಾವಣೆಗಳಾಗಿ ಹರಳುಕಣಗಳು ತಯಾರಾಗುತ್ತವೆ. ಕೊನೆಗೆ ತಯಾರಾಗುವ ರಕ್ತದ ಬಿಳಿಕಣದ ಗುಣಲಕ್ಷಣಗಳಿಗೆ ತಕ್ಕ ಹಾಗೆ ಅದರ ಹರಳುಗಳು (ಆಮ್ಲದ, ಮಾರಾಮ್ಲದ ಬಣ್ಣ ವಸ್ತುಗಳು ಹತ್ತದ) ಬಣ್ಣವೇರದ (ಕೆಂಪಾಗಿರುವ ಆಮ್ಲ ಬಣ್ಣವಸ್ತು ಅಂಟುವ) ಕೆಂಪಾನುರಾಗಿಕ (ಇಯೋಸಿನೊಫೈಲ್), (ಮೆಥಿಲೀನ್ ನೀಲಿ ತೆರನ ಮಾರಾಮ್ಲ ಬಣ್ಣವಸ್ತು ಹಿಡಿವ) ಮಾರಾಮ್ಲಾನುರಾಗಿಕ (ಬೇಸೊಫೈಲ್) ಬಗೆಗಳಲ್ಲಿ ಇರುವುವು. ಹರಳುಗೂಡಿದ ಬಿಳಿಕಣಗಳು ಬಲಿವ ಮುಂಚಿನ ಈ ಎಳಸಿನ ರೂಪಗಳಿಗೆ ಮಜ್ಜೆಕಣಗಳು (ಮಯೆಲೊಸೈಟ್ಸ್) ಎಂಬ ಹೆಸರಿದೆ.

ರಕ್ತದ ಈ ಜೀವಕಣಗಳಿಗೂ ಕೊಬ್ಬಿನ ಜೀವಕಣಗಳಿಗೂ ನಡುವೆ ತೋರ ನಡುಬೀಜಕಣಗಳಿವೆ (ಮೆಗಕ್ಯಾರಿಯೊಸೈಟ್ಸ್). ಬಲು ದೊಡ್ಡ ಗಾತ್ರದ ಈ ಜೀವಕಣಗಳ ಜೀವಿರಸದ (ಪ್ರೋಟೊಪ್ಲಾಸ್ಮ್) ಸಣ್ಣ ಚೂರುಗಳೇ ರಕ್ತದ ಚಪ್ಪಟಿಕಗಳಾಗುತ್ತವೆಂಬ ನಂಬಿಕೆ ಇದೆ.

ಹೊಸದಾಗಿ ತಯಾರಾದ ಜೀವಕಣಗಳು ಸೇರಿದ ರಕ್ತ ಧಮನಿಗಳ ಮೂಲಕ ಎಲುಬು ಮಜ್ಜೆ ಸೇರುತ್ತದೆ. ಅಲ್ಲಿಂದ ಮುಂದೆ ತೆಳು ಗೋಡೆಗಳಿರುವ ದೊಡ್ಡ ನಾಳಗುಳಿಗಳ (ಸೈನುಸಾಯ್ಡ್ಸ್) ಮೂಲಕ ಸಿರಗಳೊಳಕ್ಕೆ (ವೆಯ್ನ್ಸ್) ರಕ್ತ ಹರಿವುದು. ಈ ನಾಳಗುಳಿಗಳ ಗೋಡೆಯಾಗಿರುವ ಒಳಪೊರೆಯ ಒಳಪೊರೆ ಎಂದಿನಂತಿರದೆ, ನಿಡುತೀನಿಕಣದಂತೆ ಕಬಳಿಸುವ ನವಿರುಜಾಲಕ ಕಣಗಳಂತಿರುತ್ತವೆ. ಈ ಜೀವಕಣಗಳು ಈ ಗೋಡೆಯಿಂದ ಬಿಡಿಸಿಕೊಂಡು, ದುಂಡಗಾಗಿ ಬಿಡಿಯಾದ ನಿಡುತೀನಿಕಣಗಳಾಗಿ ನಾಳಗುಳಿಯೊಳಗೆ ಸೇರಿಕೊಳ್ಳಬಲ್ಲುವು.

ಮಾನವನಲ್ಲಿ ರಕ್ತನಾಳಗಳಾಚೆ ರಕ್ತ ಹುಟ್ಟುತ್ತಿರುವುದಾದರೂ ಹಕ್ಕಿಗಳು, ಹಾವುಗಳಲ್ಲಿ ಕೆಂಪು ರಕ್ತ ಕಣಗಳು ರಕ್ತನಾಳಗಳೊಳಗೂ ಹರಳು ಕಣಗಳು ಅವುಗಳ ಹೊರಗೂ ತಯಾರಾಗುತ್ತವೆ. ಜೀವಿವಿಕಾಸದಲ್ಲಿ, ಕಪ್ಪೆಗಳ ತೆರನ ಇಜ್ಜೀವಿಗಳಲ್ಲಿ (ಆಂಫಿಬಿಯನ್ಸ್) ಬಾಲವಿಲ್ಲದವಲ್ಲಿ ಎಲುಬು ಮಜ್ಜೆ ಮೊದಲು ಕಂಡುಬರುತ್ತದೆ. ಕೆಳಮಟ್ಟದ ಕಶೇರುಕ ಪ್ರಾಣಿಗಳಲ್ಲಿ, ತೊರಳೆ, ಮೂತ್ರಪಿಂಡ, ಗುಂಡಿಗೆ ಕರುಳುಗಳು, ಲಿಂಗದವೇ ಮುಂತಾದ ಗ್ರಂಥಿಗಳ ಲೋಳೆಪೊರೆಗಳ ತೆರನ ಬಗೆಬಗೆಯ ಅಂಗಗಳಲ್ಲಿ ರಕ್ತ ತಯಾರಾಗುವುದು. (ನೋಡಿ—ಎಲುಬು). ಈಲಿಯಲ್ಲಿರುವ ರಕ್ತಕೊರೆ (ಅನೀಮಿಯ) ಅಂಶವೊಂದು ಕೆಂಪು ರಕ್ತಕಣಗಳು ಬಲಿವುದನ್ನು ನಿಯಂತ್ರಿಸುತ್ತದೆ. ಈಲಿಯಿಂದ ಈ ಅಂಶ ಹೊರಬೀಳದಿದ್ದರೆ ಕೆಂಪು ರಕ್ತಕಣಗಳು ಹುಟ್ಟದಂತಾಗಿ, ಕೇಡಿನ (ಪನೀಸಿಯಸ್) ರಕ್ತ ಕೊರೆ ಏಳುವುದು. ಆಗ ರಕ್ತಕೊರೆ ರೋಧಕ ಅಂಶವನ್ನು ಕೊಡುತ್ತಲೇ ಇದ್ದರೆ, ಮತ್ತೆ ರಕ್ತಕಣಗಳು ಬಲಿತು ಹುಟ್ಟುತ್ತಿರುತ್ತವೆ. ಪರ್ವತಗಳ ಎತ್ತರದ ಏರಿನಲ್ಲಿ ಆಗುವಂತೆ ಉಸಿರಲ್ಲಿ ಆಮ್ಲಜನಕದ ಪ್ರಮಾಣ ತಗ್ಗಿದರೆ ಕೆಂಪು ರಕ್ತಕಣಗಳು ಹೆಚ್ಚು ಹೆಚ್ಚಾಗಿ ತಯಾರಾಗುತ್ತವೆ. ಕೋಬಾಲ್ಟ್ ತೆರನ ಕೆಲವು ರಾಸಾಯನಿಕಗಳಿಂದಲೂ ಹೀಗಾಗುವುದು. ಕೆಲವು ರೋಗಗಳಲ್ಲಿ ಎಲುಬು ಮಜ್ಜೆಯಲ್ಲಿ ಬಹಳ ಬದಲಾವಣೆಗಳಾಗುವುವು. ರಕ್ತದ ಕೆಲವು ರೋಗಗಳನ್ನು ಕಂಡುಕೊಳ್ಳಲು ಎದೆಚಕ್ಕೆಯಲ್ಲಿ (ಸ್ಟರ್ನಂ) ತೂತಿಟ್ಟು ಜೀಕಳಿಯಿಂದ (ಸಿರಿಂಜ್) ಒಳಗಿನ ಎಲುಬು ಮಜ್ಜೆಯನ್ನು ಈಚೆಗೆ ತೆಗೆವುದಕ್ಕೆ ಎದೆಚಕ್ಕೆಯ ತೂತುವೆ (ಸ್ಟರ್ನಲ್ ಪಂಕ್ಚರ್) ಎಂದು ಹೆಸರಿದೆ. ನೋಡಿ—ರಕ್ತಕೊರೆ ; ರಕ್ತದ ತಾರುಮಾರುಗಳು.

ಎಕ್ಸ್ ಕಿರಣಗಳು, ಪರಮಾಣು ಬಾಂಬ್ ಸಿಡಿತವೇ ಮುಂತಾದ ಎಲ್ಲ ತೆರನ ವಿಕಿರಣತೆಯಿಂದಲೂ ಎಲುಬು ಮಜ್ಜೆಗೆ ಹಾನಿಯಾಗಿ ರಕ್ತದ ಜೀವಕಣಗಳ ಹುಟ್ಟು ಅಣಗುತ್ತ ಹೋಗುವುದು. ಆರೋಗ್ಯದ ಎಲುಬು ಮಜ್ಜೆ ಜೀವಕಣಗಳನ್ನೂ ತೊರಳೆ ಇತಹ ತೆರನ ಅಂಗಗಳ ಸಾರಕಗಳನ್ನೂ ಹಾಗೆ ವಿಕಿರಣತೆಗೆ ಒಡ್ಡಿದ್ದವರಿಗೆ ಕೊಟ್ಟರೆ, ಎಲುಬುಮಜ್ಜೆ ಮತ್ತಿತರ ರಕ್ತ ಹುಟ್ಟಿಸುವ ಅಂಗಗಳು ಚೇತರಿಸಿಕೊಳ್ಳುವುದು ಪ್ರಾಣಿಗಳ ಮೇಲಿನ ಪ್ರಯೋಗಗಳಲ್ಲಿ ಕಂಡುಬಂದಿದೆ. ಅಲ್ಲದೆ ವಿಕಿರಣತೆಯ ಪ್ರಭಾವವನ್ನೂ ಇದು ಎದುರಿಸುತ್ತದೆ. ನೋಡಿ—ಎಲುಬಿನ ರೋಗಗಳು, ; ಗಾಯುಗಳು ರಕ್ತ ; ಹಾಲುರಸ, ಹಾಲುರಸ ಮಂಡಲ. (ಡಿ.ಎಸ್.ಎಸ್.

**ಎಲುಬು ಮೀನುಗಳು :** ಮೀನುಗಳಲ್ಲಿನ ಎರಡು ವರ್ಗಗಳಲ್ಲೊಂದು (ಆಸ್ಟೈಕ್ತಿಸ್). ಇನ್ನೊಂದು ವರ್ಗದವು ಕೋಮಲಾಸ್ಥಿ ಮೀನುಗಳು (ಕಾಂಡ್ರಿಕ್ತಿಸ್). ಇಂದು ಜೀವಿಸಿರುವ ಮೀನುಗಳಲ್ಲಿ ಅನೇಕ ಜಾತಿಯವು ಎಲುಬು ಮೀನುಗಳೇ ಆಗಿವೆ. ಇವುಗಳಿಗೆ ಕಾಸ್ಮಾಯ್ಡ್ ಅಥವಾ ಗನಾಯ್ಡ್ ಬಗೆಯ ಹುರುಪೆಗಳಿವೆ. ಬಾಲದ ರೆಕ್ಕೆ ಸಮಲಾಂಗೂಲ ಅಥವಾ ದ್ವಿಪಾರ್ಶ್ವ ಸಮಲಾಂಗೂಲ ಬಗೆಯದಾಗಿರುತ್ತದೆ. ರೆಕ್ಕೆಯ ಕಡ್ಡಿಗಳು ಮೂಳೆಯದಾಗಿರುತ್ತವೆ. ಕಿವಿರು ತಂತುಗಳನ್ನು ಒಂದು (ತೆಳುವಾದ) ಪೊರೆ ಮುಚ್ಚಿರುತ್ತದೆ. ಈ ಪೊರೆಯನ್ನು ಅಪಕ್ಯುಲಂ ಅಥವಾ ಕಿವಿರು ಕವಚ ಎಂದು ಕರೆಯುತ್ತಾರೆ. ಕೆಳದವಡೆ ಅನೇಕ ಮೂಳೆಗಳಿಂದ ಮಾಡಲ್ಪಟ್ಟಿರುತ್ತದೆ. ಗರ್ಭಾಂಕುರತೆ ಸಾಮಾನ್ಯವಾಗಿ ದೇಹದೊಳಗಾಗದೆ ಹೊರಾವರಣದಲ್ಲೇ ಆಗುತ್ತದೆ. ಅಂಡಾಶಯದ ಜೊತೆಗೇ ಅಂಡನಳಿಕೆಗಳು ಅವಿರತವಾಗಿರುತ್ತವೆ.

ಕೆಲವು ವರ್ಷಗಳ ಹಿಂದೆ, ಎಲುಬು ಮೀನುಗಳು ಶಾರ್ಕ್ ಮಾದರಿಯ ಮೀನುಗಳಿಂದ ಉದ್ಭವಿಸಿರಬಹುದೆಂದೂ ಆದ್ದರಿಂದ ಇವುಗಳ ಎಲುಬು ಒಂದು

ಹೊಸ ಗಳಿಕೆ ಎಂದೂ ನಂಬಿದ್ದರು. ಆದರೆ ಆ ರೀತಿಯಾಗದೆ ಎಲುಬು ಮೀನುಗಳಲ್ಲಿ ಎಲುಬು, ಆಸ್ಟ್ರಕೋಡರ್ಮ್ ಮತ್ತು ಪ್ಲಾಕೋಡರ್ಮ್ ಮೀನುಗಳಲ್ಲಿದ್ದ ಹಾಗೆ



ಚಿತ್ರ 1 ಆಂಟಿನೇರಿಯಸ್ (ಗಾಳದ ಮೀನು)

ಆದಿಯಿಂದಲೂ ಇದ್ದು, ಉಳಿದುಕೊಂಡು ಬಂದಿರುವುದಲ್ಲದೆ ಕ್ರಮೇಣ ಅವುಗಳ ನವೀನ ಕಾರ್ಯಾಚರಣೆಗೆ ಹೊಂದಿಕೊಂಡಿದೆ ಎಂದು ಈಗಿನ ಪ್ರಾಣಿಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ.

ಈ ಮೀನುಗಳಿಗೆ ಬಹು ಪ್ರಾಚೀನವಾದ ಇತಿಹಾಸವಿದೆ. ಇವು ಡಿವೋನಿಯನ್ ಕಾಲದಲ್ಲೇ ಇದ್ದುವೆಂಬುದಕ್ಕೆ ಪಳೆಯುಳಿಕೆಗಳ ಆಧಾರವಿದೆ. ಆದ್ದರಿಂದ ಎಲುಬು ಮೀನುಗಳು ಶಾರ್ಕ್ ಮೀನುಗಳಿಗಿಂತಲೂ ಹಳೆಯವು. ಮಧ್ಯ ಡಿವೋನಿಯನ್ ಕಾಲಕ್ಕೇ ಎಲುಬು ಮೀನುಗಳು ಸಿಹಿ ನೀರಿನಲ್ಲಿ ಪ್ರಧಾನವಾದ ಪ್ರಾಣಿಗಳಾಗಿದ್ದು ಪೇಲಿಯೊಜ಼ೋಯಿಕ್ ಉತ್ತರಾರ್ಧದ ಅಂತ್ಯದಲ್ಲಿ ಹೆಚ್ಚಿನ ಜಾತಿಗಳು ಮತ್ತು ಪ್ರಭೇದಗಳನ್ನೊಳಗೊಂಡು ಬಹಳ ಹೆಚ್ಚಿನ ಸಂಖ್ಯೆಯಲ್ಲಿದ್ದುವು. ಮೀಸೊಜ಼ೋಯಿಕ್ ಕಾಲದಲ್ಲಿ ಅವು ಸಮುದ್ರಗಳಿಗೆಲ್ಲ ವಲಸೆ ಹೋಗಿ ನೆಲೆಸಲಾರಂಭಿಸಿದುದರಿಂದ ಸಮುದ್ರವೇ ಅವುಗಳ ಮುಖ್ಯ ಸ್ಥಾನವಾಯಿತು.

ಶ್ವಾಸಕೋಶಗಳು ಎಲ್ಲ ಪ್ರಾಚೀನ ಎಲುಬು ಮೀನುಗಳಲ್ಲೂ ಇದ್ದಂತೆ ಕಾಣುತ್ತದೆ. ಆದರೆ ನವೀನ ಎಲುಬು ಮೀನುಗಳಲ್ಲಿ ಅಂಥ ರಚನೆಗಳು ಸಾಮಾನ್ಯವಾಗಿ ಕಂಡುಬಂದಿಲ್ಲ. ಒಂದುವೇಳೆ ಅಂಥವು ಇದ್ದಲ್ಲಿ ಅವು ಗಾಳಿಯ ಕೋಶಗಳಾಗಿ ಮಾರ್ಪಾಡು ಹೊಂದಿವೆ. ಋತುಗಳನ್ನನುಸರಿಸಿ ಸಿಹಿನೀರಿನ ಕೆರೆಕುಂಟೆಗಳು ಬತ್ತಿದಾಗ, ಶ್ವಾಸಕೋಶಗಳು ಈ ಮೀನುಗಳಿಗೆ ಉಸಿರಾಡಲು ಸಹಾಯಕವಾಗಿದ್ದು ಅವು ಜೀವಂತವಾಗಿರುವುದಕ್ಕೆ ಅನುಕೂಲ ಒದಗಿಸುತ್ತಿದ್ದುವೆಂದು ಕಾಣುತ್ತದೆ. ಪ್ರಾಚೀನ ಎಲುಬು ಮೀನುಗಳು ವಾಸವಾಗಿದ್ದ ಸಿಹಿನೀರಿನ ಕೆರೆಕುಂಟೆಗಳು ಆಗಾಗ್ಗೆ ಬತ್ತಿಹೋಗುತ್ತಿದ್ದಿರಬೇಕು. ವಾತಾವರಣ ಬದಲಾದ ಅನಂತರ ಕೆಲವು ಜೀವಂತವಾಗಿದ್ದ ಎಲುಬು ಮೀನುಗಳು ಸಮುದ್ರವನ್ನು ಸೇರಿದಮೇಲೆ ಶ್ವಾಸಕೋಶ ತನ್ನ ಪ್ರಾಧಾನ್ಯವನ್ನು ಕಳೆದುಕೊಂಡಿತು.

ಈ ವರ್ಗವನ್ನು ಎರಡು ಉಪವರ್ಗಗಳನ್ನಾಗಿ ವಿಂಗಡಿಸಲಾಗಿದೆ : ಉಪವರ್ಗ 1 : ಕೊಯನಿಕ್ಥಿಸ್, ಉಪವರ್ಗ 2 : ಆಕ್ಟಿನೊಟೆರಿಜಿಯೈ.

**ಕೊಯನಿಕ್ಥಿಸ್ :** ಈ ಉಪ ವರ್ಗದ ಮೀನುಗಳಿಗೆ ಮೂಗಿನ ಹೊಳ್ಳೆಗಳು ಒಳಗಿದ್ದು ಶ್ವಾಸಕೋಶಗಳ ಸಹಾಯದಿಂದ ಉಸಿರಾಡಲು ಅನುಕೂಲವಿದೆ. ಡಿವೋನಿಯನ್ ಕಾಲದಿಂದಲೂ ಕಂಡುಬಂದಿರುವ ಈ ಜಾತಿಯ ಮೀನುಗಳಿಗೆ ವಿಕಾಸದಲ್ಲಿ ಬಹು ಪ್ರಾಮುಖ್ಯವಿದೆ. ಅನೇಕ ಪ್ರಾಣಿಶಾಸ್ತ್ರಜ್ಞರು ಈ ವರ್ಗದ ಒಂದು ಗುಂಪಿನ ಮೀನುಗಳಿಂದಲೇ ದ್ವಿಚರ ಪ್ರಾಣಿಗಳು ಹುಟ್ಟಿಕೊಂಡುವೆಂದು ಹೇಳುತ್ತಾರೆ. ಆಸ್ಟಿಕ್ಥಿಸ್ ವರ್ಗದ ಆಕ್ಟಿನೊಟೆರಿಜಿಯೈ ಉಪವರ್ಗದ ಮೀನುಗಳಿಗಿಂತಲೂ ವಿಕಾಸದಲ್ಲಿ ಈ ಮೀನುಗಳು ಬಹು ಮುಂದಿವೆ ಎಂಬುದಕ್ಕೆ ಆಧಾರಗಳು ದೊರತಿಲ್ಲ. ಕೊಯನಿಕ್ಥಿಸ್ ಮೀನುಗಳು ಸಂಖ್ಯೆಯಲ್ಲಿ ಸಾಕಾದಷ್ಟಿದ್ದರೂ ಪ್ರಭೇದಗಳು ಮಾತ್ರ ಕೆಲವು. ಈ ಉಪವರ್ಗದಲ್ಲಿ ಎರಡು ಗಣಗಳಿವೆ : ಗಣ 1 ಕ್ರಾಸೊಟೆರಿಜಿಯೈ, ಗಣ 2 ಡಿಪ್ನಾಯ್.

ಕ್ರಾಸೊಟೆರಿಜಿಯೈ : ಡಿವೋನಿಯನ್ ಕಾಲದಲ್ಲೇ ಈ ಜಾತಿಯ ಮೀನುಗಳ ಸಂಖ್ಯೆ ಬಹು ಅಧಿಕವಾಗಿತ್ತು. ದ್ವಿಚರ ಪ್ರಾಣಿಗಳಿಗೆ ಮತ್ತು ತನ್ಮೂಲಕ ಮತ್ತೆಲ್ಲ ಕಶೇರು ಮಣಿಸ್ತಂಭ ಪ್ರಾಣಿಗಳಿಗೆ ಪಿತೃಶ್ರೇಣಿಗಳಾಗಿದ್ದ ಈ ಮೀನುಗಳಿಗೆ ಪಳೆಯುಳಿಕೆಯ ಶಾಸ್ತ್ರದಲ್ಲಿ ಒಂದು ವಿಶಿಷ್ಟ ಸ್ಥಾನವಿದೆ. ಇವುಗಳ ಜೋಡಿ ಈಜು ರೆಕ್ಕೆಯ ಬುಡದಲ್ಲಿ ಒಂದು ಬಗೆಯ ಮಾಂಸದ ಪಟಲವಿರುತ್ತಿತ್ತು. ಈ ಪಟಲಕ್ಕೆ ಮೂಳೆಯ ಆಧಾರವಿತ್ತು. ಈ ಗುಣವನು ಪರಿಶೀಲಿಸಿದರೆ ಇತರ ಭೂಚರ ಕಶೇರುಕಗಳಿಗೆ ಇದೇ ರೀತಿಯ ಸಾಮ್ಯವಿರುವುದು ಕಂಡುಬರುತ್ತದೆ. ಬಹುಶಃ ಅಸ್ಥಿಯ ಆಧಾರವಿದ್ದ ಮಾಂಸದ ಪಟಲ ರೆಕ್ಕೆಯ ತಳಭಾಗದಲ್ಲಿದ್ದುದರಿಂದಲೇ ಈ ಮೀನುಗಳು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ವಲಸೆ ಹೋಗಲು ಸಹಾಯವಾಗುತ್ತಿತ್ತೆಂದು ಕಾಣುತ್ತದೆ. ಈ ಜಾತಿಯ ಮೀನುಗಳಿಗೆ ಪೈನಿಯಲ್ ರಂಧ್ರ ಪರೈಟಲ್ ಮೂಳೆಗಳ ಮಧ್ಯದಲ್ಲಿರುವುದು ಕಂಡುಬಂದಿದೆ. ಹಲ್ಲುಗಳಿಗೆ ಸುತ್ತು ಸುತ್ತಾದ ರಚನೆ ಇದೆ. ಈ ಗಣದಲ್ಲಿ ಎರಡು ಜಾತಿಯ ಮೀನಿನ ಗುಂಪುಗಳಿವೆ. 1 ಆಸ್ಟಿಯೊಲೆಪಿಡ್ ಜಾತಿ 2 ಸಿಲಕಾಂತ್ ಜಾತಿ. ಆಸ್ಟಿಯೊಲೆಪಿಡ್ ಮೀನುಗಳು ಡಿವೋನಿಯನ್ ಮತ್ತು ಪರ್ಮಿಯನ್ ಕಾಲಗಳಲ್ಲಿ ಜೀವಿಸಿದ್ದುವು. ಈ ಸಣ್ಣ ಗುಂಪಿನ ಮೀನುಗಳಿಗೆ ದ್ವಿಚರ ಪ್ರಾಣಿಗಳ ಅನೇಕ ಗುಣಗಳಿವೆ. ಅಷ್ಟೊಂದು ಸಾಮ್ಯವಿರುವುದರಿಂದಲೇ ದ್ವಿಚರ ಪ್ರಾಣಿಗಳು ಈ ಮೀನುಗಳಿಂದ ಹುಟ್ಟಿಕೊಂಡಿರಬಹುದು ಎಂದು ಊಹಿಸಲಾಗಿದೆ. ಆಸ್ಟಿಯೋಲೆಪಿಸ್ ಮ್ಯಾಕ್ರೊಲೆಪಿಡೊಟಸ್ ಮೀನು ಈ ಗುಂಪಿನಲ್ಲಿ ಗೊತ್ತಾದ ಮೊಟ್ಟಮೊದಲನೆಯ ಪ್ರಭೇದ. ಈ ಮೀನಿನಿಂದ ಈ ಗುಂಪಿನ ಮುಖ್ಯ ಗುಣಗಳನ್ನೂ ವಿಶಿಷ್ಟ ಗುಣಗಳನ್ನೂ ತಿಳಿಯಬಹುದು. ಆದಿಯ ಅಕ್ಟಿನೊಟೆರಿಜಿಯೈ ಮೀನುಗಳೊಡನೆ ಹೋಲಿಸಿದರೆ ಈ ಗುಂಪಿನ ಮೀನುಗಳಲ್ಲಿ ಅನೇಕ ಸಾಮಾನ್ಯ ಅಂಶಗಳಲ್ಲದೆ ಕೆಲವು ಮೂಲಭೂತ ಅಂಶಗಳಾದ ಒಳಮೂಗಿನ ಹೊಳ್ಳೆ, ಕಾಸ್ಮಾಯ್ಡ್ ಹುರುಪೆಗಳ ರಚನೆ ಮತ್ತು ತಲೆಯ ಮೂಳೆಗಳಲ್ಲಿ ವ್ಯತ್ಯಾಸಗಳಿದ್ದುವು. ಇವುಗಳಲ್ಲಿ ಒಂದು ರೆಕ್ಕೆಯ ಬದಲು ಎರಡು ಮೇಲು ರೆಕ್ಕೆಗಳಿದ್ದು ಸಣ್ಣ ಕಣ್ಣುಗಳ ರಚನೆ ಮತ್ತು ಜೋಡು ಈಜು ರೆಕ್ಕೆಗಳು ಆರ್ಕಿಟೆರಿಜಿಯಂ ರೀತಿಯವಾಗಿದ್ದು ಒಂದೇ ಒಂದು ಬುಡದ ಮೂಳೆ ಭುಜಕಟಿ ಬಂಧದೊಡನೆ ಕೀಲಿನಂತಿತ್ತು. ಹಲ್ಲುಗಳೂ ಸಾಮಾನ್ಯ ರೀತಿಯಲ್ಲಿರದೆ ತಿರುಪಿನಂತೆ ಸುತ್ತು ಸುತ್ತಾಗಿದ್ದುವು. ಈ ಗುಣಲಕ್ಷಣಗಳು ಈ ಗುಂಪಿನ ಕೆಲವು ಮೊದಲಿನ ಪ್ರಾಣಿಗಳಿಂದ ಚತುಷ್ಪಾದಿಗಳಿಗೆ ನಡೆದು ಬಂದಿವೆ. ಇದನ್ನು ಆದಿ ದ್ವಿಚರಿಗಳಲ್ಲಿ ಕಾಣಬಹುದು.

ಸಿಲಕಾಂತ್ ಮೀನುಗಳು : ಇವು ಕಾರ್ಬೊನಿಫೆರಸ್ ಕಾಲದಲ್ಲಿ ಅಂತ್ಯಗೊಂಡುವು ಎಂದು ಬಹಳ ದಿನಗಳವರೆಗೂ ವಿಜ್ಞಾನಿಗಳು ತಿಳಿದುಕೊಂಡಿದ್ದರು. ಆದರೆ ಇತ್ತೀಚೆಗೆ 1939 ರಲ್ಲಿ ಈ ಗುಂಪಿಗೆ ಸೇರಿದ ಒಂದು ಜೀವಂತವಾದ ಮೀನು ಸಿಕ್ಕಿತು. ಇದಕ್ಕೆ ಲ್ಯಾಟಿಮೀರಿಯ ಎಂದು ಹೆಸರು. ಮುಂದೆ 1952ರಲ್ಲಿ ಇನ್ನೊಂದು ಮೀನು ಸಿಕ್ಕಿ ಅದರ ರಚನೆಯನ್ನು ತಿಳಿದುಕೊಳ್ಳುವುದಕ್ಕೆ ಸಾಧ್ಯವಾಯಿತು. ಈ ಮೀನಿನಲ್ಲಿ ಅದರ ಗತಕಾಲದ ಅನೇಕ ಗುಣಗಳು ಕಂಡುಬಂದಿರುವುದರಿಂದ ಅದಕ್ಕೆ ಜೀವಂತ ಪಳೆಯುಳಿಕೆ ಎಂದು ಕರೆಯುತ್ತಾರೆ. ಸಿಲಕಾಂತ್ ಮೀನುಗಳು ಮೂಲದಲ್ಲಿ ಸಿಹಿನೀರಿನ ವಾಸಿಗಳು. ಅವುಗಳ ಒಂದು ಗುಂಪು ಸಾಗರವನ್ನು ಸೇರಿ ಅಲ್ಲಿನ ವಾಸಕ್ಕೆ ಅಭ್ಯಾಸ ಮಾಡಿಕೊಂಡುವು. ಇವುಗಳ ಪಳೆಯುಳಿಕೆಗಳು ಸಿಹಿನೀರು ಮತ್ತು ಉಪ್ಪುನೀರಿನ ನಿಕ್ಷೇಪಗಳಲ್ಲಿ ಸಿಕ್ಕಿವೆ. ಲ್ಯಾಟಿಮೀರಿಯ ಮೀನಿನ ಗುಣಲಕ್ಷಣಗಳು ಈಗ ಅದಷ್ಟು ವಿಶದವಾಗಿ ತಿಳಿದಿದೆ. ಈಜು ರೆಕ್ಕೆ, ಬಾಲದರೆಕ್ಕೆ, ಮತ್ತು ಈಜುಚೀಲ (ಕೋಶ)—ಇವುಗಳ ರಚನೆಯಲ್ಲಿ ವಿಶೇಷ ಗುಣಲಕ್ಷಣಗಳಿವೆ. ಈಗ ಈ ಗುಂಪು ಸಿಲಕಾಂತಿಡೆ ಕುಟುಂಬದಿಂದ ಉಳಿದಿದೆ.



ಚಿತ್ರ 2 ಲ್ಯಾಟಿಮೀರಿಯ (ಸಿಲಕಾಂತ್ ಮೀನು)

ಡಿಪ್ನಾಯ್ : ಈ ಮೀನುಗಳನ್ನು ಶ್ವಾಸಕೋಶದ ಮೀನುಗಳೆಂದು ಸಾಮಾನ್ಯವಾಗಿ ಕರೆಯುತ್ತಾರೆ. ಇವು ನೀರಿನಲ್ಲಲ್ಲದೆ ನೀರಿನ ಹೊರಗಡೆಯೂ ಉಸಿರಾಡಬಲ್ಲವಾದ್ದರಿಂದ ಇವುಗಳಿಗೆ ದ್ವಿಶ್ವಾಸಿಗಳು ಎಂಬ ಹೆಸರು ಬಂದಿದೆ. ಇವು ಕಿವಿರುಗಳಿಂದಲೂ ಶ್ವಾಸಕೋಶಗಳಿಂದಲೂ ಸಂದರ್ಭಕ್ಕನುಸಾರವಾಗಿ ಉಸಿರಾಡುತ್ತವೆ; ಕೆರೆಕುಂಟೆ ಮತ್ತು ಜೌಗು ಪ್ರದೇಶಗಳಲ್ಲಿ ಜೀವಿಸುತ್ತವೆ. ಡಿವೋನಿಯನ್ ಕಾಲದಲ್ಲಿ ಹೇರಳವಾಗಿದ್ದು ವಿಶ್ವವ್ಯಾಪಿಗಳಾಗಿದ್ದ ಈ ಗುಂಪಿನ ಮೀನುಗಳು ಆ ಕಾಲದಲ್ಲೇ ಕೆಲವು ವಿಶೇಷ ಗುಣಗಳನ್ನು ಹೊಂದಿದ್ದುವು. ಈಗ ಈ ಮೀನುಗಳು ಸಂಖ್ಯೆ ಮತ್ತು ವ್ಯಾಪ್ತಿ ಬಲು ಕಡಿಮೆಯಾಗಿವೆ. ಆಸ್ಟೇಲಿಯದ

ಕ್ವೀನ್ಸ್‌ಲೆಂಡಿನಲ್ಲಿ ನಿಯೊಸೆರಟೊಡಸ್, ಆಫ್ರಿಕದಲ್ಲಿ ಪ್ರೊಟಾಪ್ಟರಸ್ ಮತ್ತು ದಕ್ಷಿಣ ಅಮೆರಿಕದಲ್ಲಿ ಲೆಪಿಡೊಸೈರನ್ ಜಾತಿಯ ಮೀನುಗಳು ಮಾತ್ರ ಇಂದು



ಚಿತ್ರ 4 ನಿಯೊಸೆರಟೊಡಸ್ (ಡಿಪ್ನಾಯ್ ಮೀನು)

ಜೀವಂತವಾಗಿವೆ. ಈ ಆಧುನಿಕ ಮೀನುಗಳಲ್ಲಿ ಸೈಕ್ಲಾಯಿಡ್ ಹುರುಪೆಗಳಿವೆ. ತಲೆಬುರುಡೆಯಲ್ಲಿ ಎಲುಬಿನ ತಟ್ಟೆಗಳು ಕಡಿಮೆಯಾಗಿವೆ. ಹಲ್ಲುಗಳು ಕೂಡಿಕೊಂಡು ದೊಡ್ಡ ತಟ್ಟೆಗಳಂತಿವೆ. ಡಿಪ್ನಾಯ್ ಮೀನುಗಳಲ್ಲಿ ಕೆಲವು ವಿಶೇಷ ಗುಣಗಳಿದ್ದು ಮೂಳೆ ಮೀನುಗಳ ಕೆಲವು ಗುಣಗಳೂ ದ್ವಿಚರಿ ಪ್ರಾಣಿಗಳ ಕೆಲವು ಗುಣಗಳೂ ಇವೆ. ಕರುಳಿನಲ್ಲಿರುವ ಸುರುಳಿಯ ಕವಾಟ, ಕ್ಲೋಯೆಕ ಮತ್ತು ಹೃದಯದ ಭಾಗವಾದ ಕೋನಸ್ ಆರ್ಟೀರಿಯೊಸಸ್‌ನಲ್ಲಿನ ಕವಾಟಗಳೂ ಮತ್ತು ಕುಗ್ಗಿರುವ ಆದ್ಯಮೃದ್ವಸ್ಥಿಯ ಪಟ್ಟೆ—ಇವು ಈ ಮೀನುಗಳ ಕೆಲವು ಮೂಲಗುಣಗಳು. ದ್ವಿಚರಿ ಪ್ರಾಣಿಗಳು ಈ ಡಿಪ್ನಾಯ್ ಮೀನುಗಳಿಂದಲೇ ವಿಕಸಿತವಾದುವು ಎಂದು ಹಿಂದಿನ ಪಳೆಯುಳಿಕೆಯ ಶಾಸ್ತ್ರಜ್ಞರು ತಿಳಿದಿದ್ದರು. ಆದರೆ ಕೆಲವು ಮುಖ್ಯ ಪಳೆಯುಳಿಕೆಗಳು ಸಿಕ್ಕಿದ ಮೇಲೆ ಆ ಅಭಿಪ್ರಾಯವನ್ನು ಬದಲಾಯಿಸಬೇಕಾಯಿತು. ದ್ವಿಚರಿಪ್ರಾಣಿಗಳು ಮತ್ತು ಡಿಪ್ನಾಯ್ ಮೀನುಗಳು ಒಳಮೂಗು ಹೊಳ್ಳೆಗಳನ್ನೂ ಅಸ್ಥಿಯ ಆಧಾರವಿದ್ದ ಬುಡ ಪಟಲಗಳನ್ನೂ ಹೊಂದಿದ್ದ ಜೋಡಿ ಈಜುರೆಕ್ಕೆಯ ಪ್ರಾಚೀನ ಕಾಲದ ಆಸ್ಟಿಯೋಲೆಪಿಡ್ ಬುಡಕಟ್ಟಿನ ಮೀನುಗಳಿಂದ ವಿಕಸಿತವಾಗಿವೆ ಎಂದು ಅಭಿಪ್ರಾಯ ಪಡಲಾಗಿದೆ.

ಈಗ ಜೀವಂತವಾಗಿರುವ ಡಿಪ್ನಾಯ್ ಮೀನುಗಳ ಗುಂಪನ್ನು ಎರಡು ಉಪಗಣಗಳನ್ನಾಗಿ ವಿಂಗಡಿಸಿದೆ.

ಉಪಗಣ 1 ಮಾನೋನ್ಯೂಮೊನ : ಈ ಗುಂಪಿನ ಮೀನುಗಳಲ್ಲಿ ಒಂದು ಶ್ವಾಸಕೋಶವಿದೆ. ಈಜುರೆಕ್ಕೆಗಳು ಅವುಗಳ ಕಡ್ಡಿಗಳಿಂದ ಪ್ರಬಲವಾಗಿವೆ. ಉದಾಹರಣೆ ನಿಯೊಸೆರೊಟೊಡಸ್. ಈ ಮೀನು ಸುಮಾರು 4′–5′ ಉದ್ದ ಬೆಳೆಯುತ್ತದೆ. ವಾಸ ಕೆರೆಕುಂಟೆಗಳಲ್ಲಿ. ಚಲನೆ ನಿಧಾನ.

ಉಪಗಣ 2 ಡೈನ್ಯೂಮೊನ : ಈ ಗುಂಪಿನ ಮೀನುಗಳಲ್ಲಿ ಎರಡು ಶ್ವಾಸಕೋಶಗಳಿವೆ. ಈಜುರೆಕ್ಕೆಗಳ ಕಡ್ಡಿಗಳು ಕೆಲವು ಮೀನುಗಳಲ್ಲಿರುವುದಿಲ್ಲ, ಇದ್ದರೆ ಒಂದೇ ಕಡೆ ಇರುತ್ತವೆ. ಆದ್ದರಿಂದ ಈಜುರೆಕ್ಕೆಗಳು ಅಷ್ಟು ಪ್ರಬಲವಾಗಿರುವುದಿಲ್ಲ. ಉದಾಹರಣೆ ಪ್ರೊಟೊಪ್ಟರಸ್. ಈ ಮೀನು ಸುಮಾರು 6′ ಉದ್ದ ಬೆಳೆಯುತ್ತದೆ. ಅನನುಕೂಲವಾದ ವಾತಾವರಣದ ಋತುಗಳಲ್ಲಿ ಇದು ತೇವದ ಭೂಮಿಯಲ್ಲಿ ಸುಮಾರು 2′ ಕೆಳಕ್ಕೆ ನಳಿಗೆಯಾಕಾರದ ಪ್ರದೇಶವನ್ನು ಅನುಗೊಳಿಸಿ ಈ ಕೋಣೆಗೆ ತನ್ನ ದೇಹದಿಂದ ಬರುವ ಅಂಟನ್ನು ಬಳಿದು ಅದು ಆರಿದ ಮೇಲೆ ತನ್ನ ದೇಹವನ್ನು ಸುರುಳಿಸುತ್ತಿ ಅಲ್ಲಿ ಮಲಗುತ್ತದೆ. ಇದಕ್ಕೆ ಬೇಸಗೆಯ ನಿದ್ದೆ ಎಂದು ಹೇಳುತ್ತಾರೆ. ಹೊರಗಿನ ವಾತಾವರಣ ಸರಿಯಿದ್ದಾಗ ಈ ಕೋಣೆಯಿಂದ ಹೊರಬಂದು ಯಥಾಪ್ರಕಾರ ನೀರಿನಲ್ಲಿ ಈಜುತ್ತದೆ.

ಲೆಪಿಡೊಸೈರನ್ ಈ ಗುಂಪಿನ ಇನ್ನೊಂದು ಉದಾಹರಣೆ.

**ಆಕ್ಟಿನೊಟೆರಿಜಿಯೈ** : ಈ ಉಪವರ್ಗದ ಮೀನುಗಳಲ್ಲಿ ರೆಕ್ಕೆಗಳಿಗೆ ಕೆಲವು ಸಣ್ಣ ಕಡ್ಡಿಗಳು ಆಧಾರವಾಗಿರುವುದರಿಂದ ಇವನ್ನು ಕಡ್ಡಿ ರೆಕ್ಕೆ ಮೀನುಗಳೆಂದು ಸಾಮಾನ್ಯವಾಗಿ ಕರೆಯುವರು. ಈ ಗುಂಪಿನಲ್ಲಿ ಸಮುದ್ರದಲ್ಲಿ ಸಾಮಾನ್ಯವಾಗಿ ಸಿಕ್ಕುವ ಎಲ್ಲ ಮೀನುಗಳನ್ನೂ ಸಿಹಿ ನೀರಿನ ಅನೇಕ ಜಾತಿಯ ಮೀನುಗಳನ್ನೂ ಸೇರಿಸಲಾಗಿದೆ. ಅಲ್ಲದೆ ಈ ಗುಂಪಿನಲ್ಲಿ ವಿಚಿತ್ರವಾದ ಹಾಗೂ ಪ್ರಾಚೀನ ಕಾಲದ ಗುಣಗಳುಳ್ಳ ಕೆಲವು ಗೆನಾಯ್ಡ್ ಮೀನುಗಳೂ ಸೇರಿವೆ.

ಪ್ರಥಮವಾಗಿ ಗೊತ್ತಾದ ಆಕ್ಟಿನೊಟೆರಿಜಿಯೈ ಮೀನುಗಳು ಮಧ್ಯ ಡಿವೋನಿಯನ್ ಕಾಲದಲ್ಲಿ ಸಿಹಿನೀರಿನಲ್ಲಿ ವಾಸವಾಗಿದ್ದುವು. ಆಶ್ಚರ್ಯಕರವಾದ ವಿಚಾರವೆಂದರೆ ಡಿವೋನಿಯನ್ ಕಾಲದ ಪೂರ್ವಾರ್ಧದಲ್ಲಿ ಕೇವಲ ಕೆಲವೇ ಅಸ್ಪಷ್ಟವಾದ ಎಲುಬು ಮೀನುಗಳ ಪಳೆಯುಳಿಕೆಗಳು ಕಂಡುಬಂದರೂ ಮಧ್ಯ ಡಿವೋನಿಯನ್ ಕಾಲದ ಹೊತ್ತಿಗೆ ಅವುಗಳ ಸಂಖ್ಯೆ ಹೆಚ್ಚಾಗಿ ವಿವಿಧ ಜಾತಿ ಮತ್ತು ಪ್ರಭೇದಗಳ ಸಂಖ್ಯೆಯೂ ಹೆಚ್ಚಾಯಿತು. ಆಗ ಸಿಹಿ ನೀರಿನಲ್ಲಿ ವಾಸಿಸುವ ಮೀನುಗಳೇ ಹೆಚ್ಚಾಗಿದ್ದುವು.

ಕ್ರಾಸೊಟೆರಿಜಿಯೈ ಮತ್ತು ಆಕ್ಟಿನೊಟೆರಿಜಿಯೈ ಗುಂಪಿನ ಮೀನುಗಳ ಹತ್ತಿರದ ಸಂಬಂಧಿಗಳು ಮತ್ತು ಇವುಗಳಿಗೆ ಜನ್ಮವಿತ್ತ ಪೂರ್ವಿಕರು ಯಾವುವು ಎಂಬುದು ಸರಿಯಾಗಿ ಗೊತ್ತಿಲ್ಲ. ಸೈಲೂರಿಯನ್ ಉತ್ತರಾರ್ಧದಲ್ಲಿ ಅಥವಾ ಡಿವೋನಿಯನ್ ಪೂರ್ವಾರ್ಧದಲ್ಲಿ ಜೀವಿಸಿದ್ದ ಯಾವುದೋ ಕೆಲವು ಮೀನುಗಳು ಈ ಎರಡು ಗುಂಪುಗಳ ಆದಿ ಮೀನುಗಳಾಗಿರಬೇಕು. ಮಧ್ಯ ಡಿವೋನಿಯನ್ ಕಾಲದ ಹೊತ್ತಿಗೆ ಈ ಗುಂಪಿನ ಮೀನುಗಳು ತಮ್ಮವೇ ಆದ ಗುಣಲಕ್ಷಣಗಳಿಂದ ರೂಪಗೊಂಡು ಬೇರೆ ಬೇರೆ ಗುಂಪುಗಳಾಗಿದ್ದುವು. ಕಡ್ಡಿರೆಕ್ಕೆ ಮೀನುಗಳು ಮೊದಲಲ್ಲಿ ಕ್ರಾಸೊಟೆರಿಜಿಯೈ ಮೀನುಗಳಿಗಿಂತ ಅಪೂರ್ವವಾಗಿದ್ದರೂ ಈಗ ಇವು ಅತಿ ಸಾಮಾನ್ಯವಾದ ಕಶೇರುಕಗಳಾಗಿವೆ.

ಆದಿಯ ಕಡ್ಡಿರೆಕ್ಕೆ ಮೀನುಗಳ ದೇಹದ ಮೇಲೆ ಹುರುಪೆಗಳು ಹೇರಳವಾಗಿದ್ದುವು. ದೇಹ ನೀಳವಾಗಿರಲಿಲ್ಲ. ಚಲನೆ ಬಲು ನಿಧಾನವಾಗಿತ್ತು.

ನವೀನ ಕಡ್ಡಿರೆಕ್ಕೆ ಮೀನುಗಳಲ್ಲಿ ಒಳಗಿನ ಮೂಗಿನ ಹೊಳ್ಳೆಗಳಿಲ್ಲ. ಜೋಡಿ ಈಜು ರೆಕ್ಕೆಗಳಿಗೆ ಮಾಂಸದ ಪಟಲಗಳಿಲ್ಲ. ಆದರೆ ಈ ಭಾಗಗಳಲ್ಲಿ ಸಣ್ಣ ಸಣ್ಣ ಅಸ್ಥಿಗಳಿಂದ ಆಧಾರ ದೊರೆತಿದೆ. ರೆಕ್ಕೆಯ ಬಲೆ ಕೊಂಬಿನ ಗುಣವುಳ್ಳ ಸಣ್ಣ ಕಡ್ಡಿಗಳಿಂದ ಆಧರಿತವಾಗಿದೆ. ಈ ಗುಂಪಿನ ಮೀನುಗಳಿಗೆ ಗನಾಯ್ಡ್ ರೀತಿಯ ಹುರುಪೆಗಳಿವೆ. ಈ ಗುಣಲಕ್ಷಣ ಈ ಗುಂಪನ್ನು ಗುರುತಿಸಲು ಆಧಾರ. ಅನೇಕ ಜಾತಿಗಳಲ್ಲಿ ಈ ಹುರುಪೆಗಳ ಕೆಲವು ಮೂಲವಸ್ತುಗಳು ನಶಿಸಿ ಮಾರ್ಪಾಟಾಗಿವೆ. ಇನ್ನೂ ಕೆಲವು ಜಾತಿಗಳಲ್ಲಿ ಇವು ತೆಳುವಾಗಿರಬಹುದು ಅಥವಾ ಇಲ್ಲದೆ ಇರಬಹುದು. ಬಾಲದ ರೆಕ್ಕೆ ಮೊದಲು ಭಿನ್ನ ಲಾಂಗೂಲವಾಗಿದ್ದು ಅನಂತರ ಸಮಲಾಂಗೂಲ ಸ್ಥಿತಿ ಮತ್ತು ಕೆಲವು ವೇಳೆ ದ್ವಿಪಾರ್ಶ ಸಮಲಾಂಗೂಲ ಸ್ಥಿತಿ ವಿಕಾಸಗೊಂಡಿತು. ಕಿವಿರು ತಂತುರಚನೆಯನ್ನು ಹೊಂದಿದೆ. ಹೃದಯದಲ್ಲಿ ಕೋನಸ್ ಆರ್ಕ್ಟೀರಿಯೋಸಸ್ಸಿಗೆ ಬದಲಾಗಿ ಬಲ್ಬಸ್ ಆರ್ಕ್ಟೀರಿಯೋಸಸ್ ಇದ್ದು ಕೋನಸ್ ಒಂದು ಅಥವಾ ಎರಡು ಸಾಲಿನ ಕವಾಟಗಳಾಗಿ ಮಾರ್ಪಾಟಾಗಿದೆ.

ಎಲುಬು ಮೀನುಗಳು ಬೆಳೆವಣಿಗೆಯಲ್ಲಿ ಬಹಳ ದೊಡ್ಡ ಪ್ರಮಾಣವನ್ನು ಮುಟ್ಟದಿದ್ದರೂ ಕಾಂಡ್ರೋಸ್ಟೈ ಗುಂಪಿನ ಆಸಿಪೆನ್ಸರ್ ಹೂಸೋ ಎಂಬ ಮೀನು ಸುಮಾರು 24′ ಉದ್ದವಾಗಿದ್ದು 2000 ಪೌಂಡಿನಷ್ಟು ತೂಗುತ್ತದೆ. ಕೆಲವು ಎಲುಬು ಮೀನುಗಳಂತೂ ಶಾರ್ಕ್ ಮೀನುಗಳಷ್ಟೇ ಅಪಾಯಕಾರಿಗಳು.

ಈ ಉಪವರ್ಗವನ್ನು ಮೂರುಗಣಗಳನ್ನಾಗಿ ವಿಂಗಡಿಸಿದೆ.

ಗಣ 1 ಕಾಂಡ್ರೊಸ್ಟೈ: ಈ ಮೀನುಗಳಲ್ಲಿ ತಲೆಯ ಮೇಲೆ ತೆಳುವಾದ ಚರ್ಮದ ಫಲಕಗಳಿವೆ. ಅಸ್ಥಿಪಂಜರ ಮೃದ್ವಸ್ಥಿಯದು. ಶಾಶ್ವತವಾದ ಆದ್ಯಮೃದ್ವಸ್ಥಿಯ ಪಟ್ಟಿ ಇದೆ.

ಭಿನ್ನಲಾಂಗೂಲ ರೀತಿಯ ಬಾಲದ ರೆಕ್ಕೆ ಇದೆ. ಕಿವಿರು ರಂಧ್ರಗಳು ೫ ಜೊತೆ. ಗಾಳಿಯ ಕೋಶ ಹೊಟ್ಟೆಯ ಮೇಲ್ಭಾಗದಲ್ಲಿದೆ. ಕರುಳಿನಲ್ಲಿ ಸುರುಳಿಗೆ ಕವಾಟವಿದೆ. ಈ ಗುಂಪಿನ ಮೀನುಗಳು ಪೇಲಿಯೋಜೋಯಿಕ್ ಕಾಲದಲ್ಲಿ ಬಹಳ ಸಂಖ್ಯೆಯಲ್ಲಿದ್ದು ಇವುಗಳಲ್ಲಿ ಅನೇಕ ಜಾತಿಗಳಿದ್ದವು. ಈ ಗುಂಪನ್ನು ಪೇಲಿಯೋನಿಸಿಡ್



ಚಿತ್ರ 3 ಲೇಬಿಯೊ (ಗೆಂಡೆ ಮೀನು)

ಗುಂಪು ಎಂದು ಕರೆಯುತ್ತಾರೆ. ಇವು ಸಿಹಿನೀರಿನಲ್ಲಿ ಜೀವಿಸುವ ಸಣ್ಣ ಮೀನುಗಳು. ಬಾಲದ ರೆಕ್ಕೆ ಭಿನ್ನಲಾಂಗೂಲದ ರೀತಿಯದಾಗಿತ್ತು. ಹುರುಪೆಗಳು ಗನಾಯ್ಡ್ ರೀತಿಯವು. ಇವು ಕಾರ್ಬೋನಿಫೆರಸ್ ಕಾಲದಲ್ಲಿ ಅಭಿವೃದ್ಧಿಯ ಶಿಖರವನ್ನು ಮುಟ್ಟಿ ಟ್ರಯಾಸಿಕ್ ಕಾಲದಲ್ಲಿ ಕ್ಷೀಣಿಸಿ ಹೋಗಿ ಕೇವಲ ಕೆಲವೇ ಜಾತಿಯ ಕ್ಷೀಣ ಜೀವಿಗಳು ಉಳಿದಿವೆ. ಉದಾ : ಆಸಿಪೆನ್ಸರ್ (ಸ್ಟರ್ಜಿಯನ್), ಪಾಲಿಫ್ಟೆರಸ್.

ಗಣ 2 ಹೊಲೊಸ್ಟೈ : ಈ ಗುಂಪಿನ ಮೀನುಗಳ ಗುಣಲಕ್ಷಣಗಳನ್ನು ಪರಿಶೀಲಿಸಿದರೆ ಇವು ಕಾಂಡ್ರೊಸ್ಟೈ ಮೀನುಗಳಿಗಿಂತ ಹೆಚ್ಚು ವಿಕಸಿತವಾದವು ಎಂದು ತಿಳಿಯುತ್ತದೆ. ಮಾಕ್ಸಿಲ್ಲ ರಚನೆಯಲ್ಲಿ ಸಾಮ್ಯ ರೂಪಾಂತರ ಇದೆ ; ಮತ್ತು ಕಿವಿರು ಕವಚ

ಮತ್ತು ಕಣ್ಣುಗೂಡಿನ ಪೂರ್ವ ಪ್ರದೇಶಗಳಲ್ಲೂ ಬದಲಾವಣೆ ಇದೆ. ಇವುಗಳ ಹುರುಪೆಗಳು ರಚನೆಯಲ್ಲಿ ಮಾರ್ಪಾಡಾಗಿ ತೆಳುವಾಗಿವೆ.



ಚಿತ್ರ 5 ಹೀರುಬಟ್ಟಲು ಮೀನು (ಸಕ್ಕರ್ ಮೀನು)

ಗಣ 3 ಟೀಲಿಯೊಸ್ಟೈ : ಆಕ್ಟಿನೊಟೆರಿಜಿಯೈ ವರ್ಗದ ಈ ಗುಂಪು ವಿಕಾಸ ದೃಷ್ಟಿಯಲ್ಲಿ ಬಹಳ ಅಭಿವೃದ್ಧಿ ಹೊಂದಿದೆ. ಇವು ವಾಣಿಜ್ಯ ದೃಷ್ಟಿಯಿಂದಲೂ ಬಹಳ ಮುಖ್ಯವಾದುವು. ಈ ಗುಂಪಿನಲ್ಲಿ 25 ಸಾವಿರಕ್ಕೂ ಹೆಚ್ಚಿನ ಪ್ರಭೇದಗಳಿವೆ. ಇವು ಎಲ್ಲ ಸಾಗರಗಳ ಆಳಗಳಲ್ಲೂ ಶೀತವಲಯ ಸಮುದ್ರಗಳಲ್ಲೂ ಎಲ್ಲ ಸಿಹಿನೀರಿನ ಪ್ರದೇಶಗಳಲ್ಲೂ ಇವೆ.

ಈ ಗುಂಪಿನಲ್ಲಿ ಆಹಾರವಾಗಿ ಉಪಯೋಗಿಸುವ ಮೀನುಗಳು ಅನೇಕವಿವೆ.

ನಿಜವಾದ ಟೀಲಿಯೊಸ್ಟೈಮೀನುಗಳು ಜುರಾಸಿಕ್ ಕಾಲದ ಪೂರ್ವಾರ್ಧದಲ್ಲಿ ಕಾಣಿಸಿಕೊಂಡವು ; ಕ್ರಿಟೇಷಿಯಸ್ ಕಾಲದ ಸಮುದ್ರದಲ್ಲಿ ಅವು ಹೇರಳವಾಗಿದ್ದುವು. ಸಮುದ್ರದಲ್ಲೇ ಉದ್ಭವಿಸಿದುವು ಎಂದು ಪರಿಗಣಿಸಲಾಗಿದ್ದರೂ ದಾಖಲೆಗಳು ಸಾಕಾದಷ್ಟು ದೊರೆತಿಲ್ಲ. ಟರ್ಷಿಯರಿ ಕಾಲದ ಮೊದಲಲ್ಲಿ ಅವು ಹೇರಳವಾಗಿ ಪ್ರಸರಿಸಿದುವು. ಈ ಮೀನುಗಳು ವಿಕಾಸದ ಪೂರ್ತಿ ಉಬ್ಬರವನ್ನು ಇನ್ನೂ ಮುಟ್ಟಿಲ್ಲ. ಟೀಲಿಯಾಸ್ಟ್ ಮೀನುಗಳ ಗುಂಪು ಅನೇಕ ವಾತಾವರಣಗಳಿಗೆ ಹೊಂದಿಕೊಂಡು ಕೆಲವು ರಚನೆಗಳಲ್ಲಿ ಮಾರ್ಪಾಟು ಹೊಂದಿ ಸಣ್ಣ ಸಣ್ಣ ಗುಂಪುಗಳಾಗಿ ಕಾಣಿಸಿಕೊಂಡಿವೆ. ಈ ಮೀನುಗಳಲ್ಲಿ ಅಸ್ಥಿಪಂಜರ ಬಹಳವಾಗಿ ಅಸ್ಥಿಗತವಾಗಿದೆ. ಬಾಲದ ರೆಕ್ಕೆ ಅನೇಕ ವೇಳೆ ದ್ವಿಪಾರ್ಶ್ವ ಸಮಲಾಂಗೂಲ ರೀತಿಯದಾಗಿಯೂ ಕೆಲವು ವೇಳೆ ಸಮಲಾಂಗೂಲ ರೀತಿಯದಾಗಿಯೂ ಇದೆ. ಹುರುಪೆಗಳು ಸೈಕ್ಲಾಯ್ಡ್ ಅಥವಾ ಟಿನಾಯ್ಡ್ ರೀತಿಯವು. ಕಿವಿರು ಕವಚ ತಪ್ಪದೇ ಇದೆ. ಕಿವಿರುಗಳು ತಂತುಗಳ ರೂಪದಲ್ಲಿವೆ. ಅನೇಕ ವೇಳೆ ಗಾಳಿಯ ಕೋಶವಿರುತ್ತದೆ. ಕರುಳಿನಲ್ಲಿ ಸುರುಳಿಯ ಕವಾಟವಿಲ್ಲ. ಜನನ ಗ್ರಂಥಿಗಳು ಅವುಗಳ ನಳಿಕೆಗಳೊಂದಿಗೆ ಅವಿರತವಾಗಿವೆ. ವೃಷಣಗಳು ಮೂತ್ರಪಿಂಡಗಳಿಂದ ಬೇರೆಯಾಗಿವೆ. ಮೊಟ್ಟೆಗಳು ಗಾತ್ರದಲ್ಲಿ ಸಣ್ಣವಾದರೂ ಅತ್ಯಧಿಕ ಸಂಖ್ಯೆಯಲ್ಲಿವೆ. ಲಾರ್ವ ಸ್ಥಿತಿ ಉಂಟು. ಈ ಮೀನುಗಳ ವರ್ಗೀಕರಣದಲ್ಲಿ ಕೆಲವು ಹೊರರಚನೆಯ ಗುಣಲಕ್ಷಣಗಳನ್ನು ಗಣನೆಗೆ ತೆಗೆದುಕೊಂಡಿದ್ದಾರೆ. 1 ಎರಡನೆಯ ಜೋಡಿ ಈಜು ರೆಕ್ಕೆಗಳು ಇರುವ ಸ್ಥಳ. 2 ಬಾಯಿ ಅಗಲಿಸುವುದಕ್ಕೆ ಕಾರಣವಾದ ಪ್ರಿಮ್ಯಾಕ್ಸಿಲ್ಲ ಮತ್ತು ಮ್ಯಾಕ್ಸಿಲ್ಲಗಳ ಸಂಬಂಧ. 3 ಮೇಲಿನ, ಗುದ ಮತ್ತು ಜೋಡು ಈಜುರೆಕ್ಕೆಗಳಲ್ಲಿನ ಮುಳ್ಳುಗಳು ಹಾಗೂ ಅವುಗಳ ರಚನೆ.

ಈ ಗುಂಪಿನ ವರ್ಗೀಕರಣದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಒಂದು ವರ್ಗೀಕರಣದ ಪ್ರಕಾರ ಇದರಲ್ಲಿ ಆರು ಗಣಗಳಿವೆ :

ಗಣ 1 ಐಸೊಸ್ಪಾಂಡೈಲಿ : ಇದರಲ್ಲಿ ಕೆಲವು ಪ್ರಾಚೀನ ಮೀನುಗಳನ್ನು ಸೇರಿಸಲಾಗಿದೆ. ಇವು ಹೊಲೊಸ್ಟೈ ಮೀನುಗಳನ್ನು ಹೋಲುತ್ತವೆ. ರೆಕ್ಕೆಗಳಲ್ಲಿ



ಚಿತ್ರ 6 ಚೇಳು ಮೀನು (ಸೈಲುರಾಯ್ಡಿಯ)

ಮುಳ್ಳುಗಳಿರುವುದಿಲ್ಲ. ಅನೇಕ ಜಾತಿಯ ಸಾರ್ಡಿನ್ ಮೀನು, ಹಿಲ್ಸ ಮೀನು, ಟ್ರೌಟ್ ಮೀನು, ಚಪ್ಪಲು ಮೀನು—ಈ ಗುಂಪಿನಲ್ಲಿ ಇವು ಮುಖ್ಯವಾದುವು. ಇವಲ್ಲದೆ ಕೆಲವು ಸಮುದ್ರ ತಳದಲ್ಲಿ ಜೀವಿಸುವ ಮೀನುಗಳೂ ಸೇರಿವೆ. ಟ್ರೌಟ್ ಮೀನು ಭಾರತದ್ದಲ್ಲದಿದ್ದರೂ ನೀಲಗಿರಿಬೆಟ್ಟಗಳಲ್ಲಿ ಇವನ್ನು ಸಾಕಲಾಗುತ್ತಿದೆ.

ಗಣ 2 ಆಸ್ಟೆರಿಯೊಫೈಸಿ : ಸಿಹಿನೀರಿನಲ್ಲಿ ವಾಸಿಸುವ ಬಹಳ ಮುಖ್ಯವಾದ ಮೀನುಗಳನ್ನು ಈ ಗುಂಪಿನಲ್ಲಿ ಸೇರಿಸಲಾಗಿದೆ. ಇವುಗಳಲ್ಲಿ ಎರಡನೆಯ ಜೋಡಿ ಈಜು ರೆಕ್ಕೆಗಳು ಹೊಟ್ಟೆಯ ತಳಭಾಗದಲ್ಲಿವೆ. ಈ ಗಣದ ಸೈಪ್ರಿನಾಯ್ಡಿಯ ಗುಂಪಿನಲ್ಲಿ ಆಹಾರಯೋಗ್ಯವಾದ ಗೆಂಡೆ ಮೀನುಗಳು (ಕಾರ್ಪ್) ಮುಖ್ಯ. ಇವುಗಳಲ್ಲಿ ಜಾಗ್ರತೆಯಾಗಿ ದೊಡ್ಡದಾಗಿ ಬೆಳೆಯುವ ಜಾತಿಯವು ಯಾವುವೆಂದರೆ ಕಟ್ಲ, ಲೇಬಿಯೊ (ರೋಹು), ಸಿರೈನ (ಮ್ರಿಗಾಲ್), ಗೆಂಡೆ (ಬಾರ್ಬಸ್ ಕರ್ನಾಟಿಕಸ್), ಅರ್ಜ (ಸಿರೈನ ಜಾತಿ). ಗೆಂಡೆ ಮೀನುಗಳಿಗೆ ಹಲ್ಲಿಲ್ಲ. ಇವು ಸಸ್ಯಾಹಾರಿಗಳು. ಭಾರತದಲ್ಲಿ ಈಗ ಕೆಲವು ವರ್ಷಗಳಿಂದ ಮುಖ್ಯವಾದ ಗೆಂಡೆಗಳ ಸಂವರ್ಧನೆ ವೈಜ್ಞಾನಿಕ ರೀತಿಯಲ್ಲಿ ಆಗುತ್ತಿದೆ. ಆಸ್ಟೆರಿಯೊಫೈಸಿಯ ಇನ್ನೊಂದು ಗುಂಪು ಮೀಸೆಮೀನು (ಸೈಲುರಾಯ್ಡಿಯ). ಇವುಗಳಿಗೆ ಬಾಯಿಯ ಸುತ್ತಲೂ ಉದ್ದನೆಯ ಮೀಸೆಗಳಿವೆ. ಇವಕ್ಕೆ ಹಲ್ಲುಗಳಿವೆ. ಇವು ಮಾಂಸಾಹಾರಿಗಳು. ಹುರುಪೆಗಳು ಇರುವುದಿಲ್ಲ. ಆಣೆಮೀನು (ಕ್ಲೇರಿಯಾಸ್), ಚೇಳುಮೀನು (ಹೆಟರೊನ್ಯೂಸ್ಟೆಸ್), ಬಾಳೆಮೀನು (ವಲ್ಲಾಗೊ) ಇವು ತಿನ್ನಲು ಯೋಗ್ಯವಾದುವು.

ಗಣ 3 ಏಪೊಡಿಸ್ : ದೇಹ ನೀಳವಾಗಿ ಹಾವಿನ ರೀತಿ ಇರುವುದರಿಂದ ಇವುಗಳಿಗೆ ಹಾವು ಮೀನುಗಳೆಂದು (ಈಲ್) ಹೆಸರು. ಸಮುದ್ರವಾಸಿಗಳಾದರೂ ಕೆಲವು



ಚಿತ್ರ 7 ಕುಚ್ಚು ಮೀನು (ಓಫಿಕೆಫಾಲಸ್)

ತಮ್ಮ ಯೌವನಾವಸ್ಥೆಯನ್ನು ಸಿಹಿ ನೀರಿನಲ್ಲಿ ಕಳೆಯುತ್ತವೆ. ಜೋಡಿ ಈಜುರೆಕ್ಕೆಗಳಿಲ್ಲ. ಕೆಲವಲ್ಲಿ ಹುರುಪೆಗಳಿರುತ್ತವೆ. ಇವು ಮಾಂಸಾಹಾರಿಗಳು. ಉದಾಹರಣೆ : ಮುರಿನ, ಆಂಗ್ವಿಲ್ಲ ಮತ್ತು ಓಫಿಕ್ಥಿಸ್.

ಗಣ 4 ಹೆಟರೋಮಿ : ಸಮುದ್ರದಾಳದಲ್ಲಿ ಜೀವಿಸುವ ಕೆಲವು ಮೀನುಗಳು ಈ ಗುಂಪಿಗೆ ಸೇರಿವೆ. ಇವುಗಳ ತಲೆ ದೇಹ ಮತ್ತು ಬಾಲ ಇವು ಉದ್ದವಾಗಿವೆ. ಉದಾಹರಣೆ : ನೋಟೋಕ್ಯಾಂತಸ್, ಹೊಲೊಸಾರಸ್.

ಗಣ 5 ಮಿಸಿಕ್ಥಿಸ್ : ಈ ಗುಂಪಿನ ಮೀನುಗಳಲ್ಲಿ ಆಹಾರಯೋಗ್ಯವಾದ, ಪುಷ್ಟವಾದ ಮೀನುಗಳು ಅಷ್ಟಿಲ್ಲವಾದರೂ ಅವುಗಳಲ್ಲಿ ಕೆಲವು ವಿಶೇಷ ಗುಣಗಳಿವೆ. ಸೊಳ್ಳೆಯ ಮರಿಗಳನ್ನು ತಿನ್ನುತ್ತವಾದ ಕಾರಣ ಸಣ್ಣ ಮೀನುಗಳಾದ ಗ್ಯಾಂಬುಸಿಯ, ಹಾಪ್ಲೊಕೈಲಸ್ ಮುಂತಾದವನ್ನು ಕೆರೆಕುಂಟೆಗಳಲ್ಲಿ ಬಿಡುತ್ತಾರೆ. ಬಾಂಬೆಡಕ್ ಮೀನನ್ನು (ಹರ್ಪೊಡಾನ್) ತಿನ್ನಲು ಉಪಯೋಗಿಸುತ್ತಾರೆ. ಬಿಲೋನ್ ಮೀನಿನಲ್ಲಿ ಎರಡು ದವಡೆಗಳೂ ಕೊಕ್ಕಿನ ರೀತಿಯಲ್ಲಿ ಉದ್ದವಾಗಿವೆ. ಹೆಮಿರ್ಯಾಂಪಸ್ ಮೀನಿನಲ್ಲಿ ಕೆಳದವಡೆ ಮಾತ್ರ ಮೇಲುದವಡೆಗಿಂತ ಉದ್ದವಾಗಿದೆ. ಹಾರುವ ಮೀನುಗಳಲ್ಲಿ ಒಂದಾದ ಸಿಪ್ಸಲ್ಯೂರಸಿನಲ್ಲಿ ಮೊದಲಿನ ಜೋಡಿ ಈಜುರೆಕ್ಕೆಗಳು ಮಾರ್ಪಾಡಾಗಿ ಬಹಳ ದೊಡ್ಡವಾಗಿದ್ದು ನೀರಿನ ಮೇಲೆ ಸ್ವಲ್ಪದೂರ ಹಾರುವುದಕ್ಕೆ ಅನುಕೂಲವಾಗಿವೆ. ಕುದುರೆಮೀನು (ಹಿಪ್ಪೊಕ್ಯಾಂಪಸ್) ಮತ್ತು ಕೊಳವೆ ಮೀನುಗಳಲ್ಲಿ (ಸಿನ್ಯಾತಸ್) ಹುರುಪೆಗಳು ಮಾರ್ಪಾಡಾಗಿ ದೇಹ ಸ್ವಲ್ಪ ಗಟ್ಟಿಯಾಗಿದೆ.

ಗಣ 6 ಅಕ್ಯಾಂತೊಟೆರಿಜಿಯೈ : ಈ ಮೀನುಗಳಲ್ಲಿ ಒಂಟಿ ರೆಕ್ಕೆಗಳ ಮುಂದಿನ ರೆಕ್ಕೆ ಕಡ್ಡಿಗಳು ಮುಳ್ಳುಗಳಾಗಿ ಮಾರ್ಪಾಡಾಗಿವೆ. ಎರಡನೆಯ ಜೋಡಿ ಈಜು ರೆಕ್ಕೆಗಳು ಹೊಟ್ಟೆಯ ಬಹು ಮುಂದಿವೆ. ಈ ಗುಂಪಿನಲ್ಲಿ ಅನೇಕ ಸಮುದ್ರ ಮೀನುಗಳೂ ಕೆಲವು ಸಿಹಿನೀರಿನ ಮೀನುಗಳೂ ಸೇರಿವೆ. ಮುಳ್ಳು ಪ್ರಬಲವಾಗಿರುವ ಪರ್ಚ್ ಮೀನುಗಳು (ಎಟ್ರೊಪ್ಲಸ್), ದೇಹ ನೀಳವಾಗಿರುವ ರಿಬ್ಬನ್ ಮೀನು (ಟ್ರೈಕಿಯೂರಸ್), ತೆಳುವಾಗಿ ಆಳವಾಗಿರುವ ದೇಹವುಳ್ಳ ಏಂಜೆಲ್ ಮೀನು (ಟೆರೊಫಿಲ್ಲಂ), ಗಟ್ಟಿ ದೇಹದ ಪೆಟ್ಟಿಗೆಮೀನು ಮತ್ತು ಹಸುಮೀನು (ಆಸ್ಟ್ರೇಸಿಯಾನ್), ದೇಹ ಎರಡು ಕಣ್ಣುಗಳನ್ನು ಒಂದೇ ಕಡೆ ಹೊಂದಿರುವ ಚಪ್ಪಟೆ (ಸೋಲ್) ಮೀನು (ಪ್ಲೂರೊನೆಕ್ಟಿಸ್, ಸಿನಾಪ್ಟ), ಸಾಮಾನ್ಯವಾಗಿ ಗೂಡುಕಟ್ಟುವ ಸೂರ್ಯಮೀನು (ಆರ್ತೊಗೊರಿಸ್ಕಸ್), ಗಾಳದಂಥ ರೆಕ್ಕೆ

ಕಡ್ಡಿಗಳಿರುವ ಗಾಳದ ಮೀನುಗಳು (ಅಂಟೆನೇರಿಯಸ್), ಹೀರುಬಟ್ಟಲಂತಿರುವ ಮೇಲುರೆಕ್ಕೆಗಳನ್ನುಳ್ಳ ಮತ್ತು ಬೇರೆ ಪ್ರಾಣಿಗಳಿಗೆ ಅಥವಾ ಹಡಗುಗಳಿಗೆ ಅಂಟಿಕೊಂಡು ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಪ್ರಯಾಣ ಬೆಳೆಸುವ ಹೀರುಬಟ್ಟಲು ಮೀನು (ಪಿಕಿನಸ್), ಗೂಡು ಕಟ್ಟಿ ಮೊಟ್ಟೆ ಮರಿಗಳನ್ನು ಕಾಪಾಡುವ ಗೌರಿ ಮೀನು (ಆಸ್ಫ್ರೊನೀಮಸ್ ಗೌರಾಮಿ), ಮೇಲುರೆಕ್ಕೆ ಮತ್ತು ಅದರ ಮುಳ್ಳಿನಲ್ಲಿ ವಿಷದ ಗ್ರಂಥಿಗಳನ್ನುಳ್ಳ ಚೇಳು ಮೀನುಗಳು (ಸ್ಕಾರ್ಪೀನಿಡೆ), ಗೋಲದ ಮೀನು (ಟೆಟ್ರಡಾನ್), ಮುಳ್ಳುಮೀನು (ಡಯೊಡಾನ್) ಇದೇ ಗುಂಪಿಗೆ ಸೇರಿವೆ. ತಿನ್ನಲು ಯೋಗ್ಯವಾದ ಹೂಮೀನು, ಕೊರವ ಮತ್ತು ಕುಚ್ಚು ಮೀನುಗಳು (ಒಫಿಕೆಫಾಲಸ್ ಜಾತಿ) ಸಿಹಿನೀರಿನಲ್ಲಿ ವಾಸಿಸುತ್ತವೆ. ಇವುಗಳಲ್ಲಿ ಗಾಳಿಯನ್ನು ಸೇವಿಸಲು ವಿಶೇಷ ಅಂಗಗಳಿರುವುದರಿಂದ ಇವು ನೀರಿನ ಹೊರಗಡೆ ಕೆಲವು ಕಾಲ ಜೀವಿಸಬಲ್ಲುವು. ಹೇರಳವಾಗಿ ಸಿಗುವ ಬಂಗಡೆ ಮೀನು (ರಾಸ್ಟ್ರಲಗರ್ ಕನಗೂರ್ತ) ಸಮುದ್ರವಾಸಿ. ಇದು ಮೈಸೂರು ಮೀನುಗಾರಿಕೆಯಲ್ಲಿ ಬಹಳ ಮುಖ್ಯವಾದುದು. ಇವಲ್ಲದೆ ಇನ್ನೂ ಅನೇಕ ಪ್ರಭೇದಗಳು ಈ ಗುಂಪಿಗೆ ಸೇರಿವೆ.

ನೋಡಿ—ಮೀನುಗಳು ; ಮೃದ್ವಸ್ಥಿ ಮೀನುಗಳು. (ಎಚ್.ಪಿ.ಎ.)

**ಎಲುಬುಶಾಸ್ತ್ರ :** ಮೂಳೆಗಳ, ಎಲುಗಟ್ಟಿನ (ಸ್ಕೆಲಿಟನ್), ಒಟ್ಟಾರೆ ಇಲ್ಲವೆ ಬಿಡಿಯಾಗಿ ತೀರ ಕಿರಿಯ ರಚನೆಯನ್ನೂ ತಿಳಿಸಿಕೊಡುವ ಅಂಗರಚನಾಶಾಸ್ತ್ರದ ವಿಭಾಗ (ಆಸ್ಟಿಯಾಲಜಿ). ಮುಖ್ಯವಾಗಿ ಇದರಲ್ಲಿ ಮೂಳೆಗಳ ರೂಪ, ಆಕಾರ, ಗಾತ್ರ, ಬೆಳೆವಣಿಗೆಯ ಕ್ರಮ, ಇತರ ಊತಕಗಳೊಂದಿಗಿರುವ ಸಂಬಂಧ, ನಿಜಗೆಲಸ ಇವನ್ನು ವಿವರಿಸಲಾಗಿದೆ. ನೋಡಿ—ಎಲುಬು ; ಎಲುಗಟ್ಟು, ಕಶೇರುಕಗಳ ; (ಡಿ.ಎಸ್.ಎಸ್.)

**ಎಲುಮುರಿಕೆಗಳು, ಕೀಲ್ತಪ್ಪಿಕೆಗಳು :** ಮುರಿದುಹೋಗುವುದೂ ಕೀಲು ತಪ್ಪುವುದೂ ಮೂಳೆಗಳಿಗೆ ಆಗುವ ಸಾಮಾನ್ಯ ಗಾಯಗಳು. ಮೂಳೆ ಒಂದೇ ಸಮನಾಗಿರುವುದು ಎಲ್ಲಿಯಾದರೂ ತಪ್ಪಿದ್ದರೆ ಎಲುಮುರಿಕೆ (ಫ್ರಾಕ್ಚರ್) ಎನಿಸಿಕೊಳ್ಳುತ್ತದೆ, ಮೇಲಿನ ಚರ್ಮ ಬಿರಿಯದೆಯೇ ಆದ ಎಲುಮುರಿಕೆ ಸರಳವೆಂದೂ ಚರ್ಮಕ್ಕೆ ಗಾಯವಾಗಿ ಮುರಿದ ಮೂಳೆ ತುಂಡುಗಳ ಕೊನೆಗಳು ಹೊರಗಣ ಗಾಳಿಗೆ ಸೋಕುವಂತಿದ್ದರೆ ಕಲೆತದ್ದೆಂದೂ (ಕಾಂಪೌಂಡ್) ಹೆಸರಿದೆ. ಎಲುಮುರಿಕೆ ಆಕಾರಕ್ಕೆ ತಕ್ಕಂತೆ, ಸುರುಳಿಯ, ಅಡ್ಡಡ್ಡನೆಯ, ಉದ್ದುದ್ದನೆಯ, ಕೋಸೆಯ ಸೊಟ್ಟಪಟ್ಟ ಬಗೆಯುವು ವಿಂಗಡವಾಗುತ್ತವೆ. ಸರಳ ಎಲುಮುರಿಕೆಯಲ್ಲಿ ಸೋಂಕು ಹತ್ತುವಂತಿರದು. ಹೊರಗಾಳಿ ಸೋಕುವಂತಿದ್ದರೆ ಸೋಂಕು ಒಳ ಹೊಗುವುದು ಸುಲಭ. ಗಾಯವಾದ ಮೇಲೆ, ಮೂಳೆ ಚೂರುಗಳ ಕೊನೆಗಳ ಜೋಡಣೆಗೆ ತಕ್ಕಂತೆ, ಪೂರ್ತಿ, ಅರೆಬರೆ, ಹಸೀಕಡ್ಡಿ (ಗ್ರೀನ್–ಸ್ಟಿಕ್), ತಾಟಿಕೊಂಡ (ಇಂಪ್ಯಾಕ್ಟೆಡ್) ನುಗ್ಗುನುರಿದ (ಕಮ್ಮಿನ್ಯುಟೆಡ್), ತಾಕುತೊಡಕಾದ (ಕಾಂಪ್ಲಿಕೇಟೆಡ್) ಮುರಿಕೆಗಳು ಏರ್ಪಡುತ್ತವೆ, ಮೂಳೆ ಮುರಿದು ಎರಡು ಬಿಡಿಯಾದ ತುಂಡುಗಳಾಗದೆ ಸುಮ್ಮನೆ ಬಾಗಿದ್ದರೆ ಅರೆಬರೆ, ಹಸಿಕಡ್ಡಿ ಮುರಿಕೆಯೆಂದೂ ಎರಡು ತುಂಡುಗಳಾಗಿದ್ದರೆ ಪೂರ್ತಿ ಮುರಿಕೆ ಎಂದೂ ಇದೆ. ಗಾಯದ ರಭಸದಿಂದ ಮುರಿಕೆಯ ತುಂಡುಗಳ ಕೊನೆಗಳು ಒಂದರೊಡನೊಂದು ಸಿಕ್ಕಿಕೊಂಡಿರುವುದು ತಾಟಿಕೊಂಡ ಮುರಿಕೆ. ಮುರಿದು ಮೂರಕ್ಕೂ ಹೆಚ್ಚು ಚೂರುಗಳಾಗಿರುವುದೇ ನುಗ್ಗುನುರಿದ ಮುರಿಕೆ. ಎಲುಮುರಿಕೆಯೊಂದಿಗೆ ಅಕ್ಕಪಕ್ಕಗಳ ನರಗಳು, ಒಳಾಂಗಗಳು, ರಕ್ತನಾಳ ಮೊದಲಾದವಕ್ಕೂ ಹಾನಿಯಾಗಿರುವುದೇ ತಾಕುತೊಡಕಿನ ಮುರಿಕೆ. ರೋಗ ಹತ್ತಿ ಬಡಕಲಾಗಿರುವ ಮೂಳೆಗೆ ಕೊಂಚ ಪೆಟ್ಟು ತಗುಲಿದರೂ ಮುರಿವುದು ರೋಗದ (ಪ್ಯಾತಲಾಜಿಕಲ್) ಎಲುಮುರಿಕೆ.

ಕೀಲಲ್ಲಿ ಕೂಡಿರುವ ಮೂಳೆಗಳ ಕೊನೆಗಳು ಕೀಲನ್ನು ಬಿಟ್ಟು ಒಂದಕ್ಕೊಂದರ ಸಂಬಂಧ ತಪ್ಪಿರುವುದೇ ಕೀಲ್ತಪ್ಪಿಕೆ (ಡಿಸ್‌ಲೊಕೇಷನ್). ಸರಳ ಕೀಲ್ತಪ್ಪಿಕೆಯಲ್ಲಿ ಮೂಳೆ ಕೊನೆಗಳು ಗಾಳಿಗೊಡ್ಡಿರವು. ಆದರೆ ಚರ್ಮಕ್ಕೆ ಪೆಟ್ಟು, ಗಾಯಗಳಾಗಿಯೊ ಕೀಲ್ತಪ್ಪಿದಾಗ ಮೂಳೆಯ ಚೂಪು ಕೊನೆಗಳು ಜೋರಾಗಿ ಚರ್ಮದಲ್ಲಿ ತೂರಿದ್ದರಿಂದಲೊ ಅವು ಗಾಳಿಗೊಡ್ಡಿದ್ದರೆ ಕಲೆತದಕೀಲ್ತಪ್ಪಿಕೆ. ಕೆಲವೇಳೆ ಹುಟ್ಟಿನಿಂದಲೇ ಬರುವ ಕೀಲ್ತಪ್ಪಿಕೆ ಆಗ ಹುಟ್ಟಿದ ಕೂಸಿನಲ್ಲೇ ಕೀಲಿನ ರಚನೆಯಲ್ಲಿ ಕುಂದಾಗಿ ಕಾಣಿಸಿಕೊಳ್ಳುತ್ತದೆ. ಗಾಯದಿಂದ ಆಮೇಲೆ ಆದುದು, ಗಳಿಸಿದ (ಅಕ್ವೈರ್ಡ್) ಕೀಲ್ತಪ್ಪಿಕೆ. ಮೇಲಿಂದ ಮೇಲೆ ಒಂದೇ ಕೀಲಲ್ಲಿ ಕೀಲ್ತಪ್ಪಿಕೆ ಆಗುತ್ತಿರುವುದು ಮರುಕಳಿಕ (ರೆಕರೆಂಟ್) ಇಲ್ಲವೇ ಅಭ್ಯಾಸದ (ಹೆಬಿಚ್ಯುಯಲ್) ಕೀಲ್ತಪ್ಪಿಕೆ. ಕೀಲಿನ ಸುತ್ತ ಇರುವ ಕೀಲ್ಗವಚ, ತಂತುಗಟ್ಟುಗಳು (ಕ್ಯಾಪ್ಸೂಲ್, ಲಿಗಮೆಂಟ್ಸ್) ಸಡಿಲ ಬೀಳುವುದರಿಂದ ರೋಗದ ಕೀಲ್ತಪ್ಪಿಕೆ ಆಗುವುದು. ಕೀಲ್ತಪ್ಪಿಸುವ ಪೆಟ್ಟು, ಗಾಯಗಳಿಂದ ಅದೇ ಹೊತ್ತಿನಲ್ಲಿ ಕೀಲಿನ ಒಂದೋ ಇನ್ನೂ ಹೆಚ್ಚೋ ಮೂಳೆಗಳೂ ಮುರಿದಿದ್ದರೆ ಎಲುಮುರಿಕೆ-ಕೀಲ್ತಪ್ಪಿಕೆ ಎನಿಸುವುದು.

**ಕಾರಣಗಳು :** ಸಾಕಷ್ಟು ಬಲವಾದ ಪೆಟ್ಟು, ಗಾಯಗಳಿಂದ ಎಲುಬು ಮುರಿಯುವುದು. ಮುಂದೋಳಿಗೆ ಏಟು ತಗಲಿ ಮುರಿವಂತೆ, ನೇರವಾದ ಹೊರಗಿನ ಗಾಯಗಳಲ್ಲಿ ಪೆಟ್ಟು ತಾಕಿದೆಡೆಯಲ್ಲೇ ಮೂಳೆ ಮುರಿಯುತ್ತದೆ. ಮರದ ಇಲ್ಲವೇ ಮಹಡಿಯ ಎತ್ತರದಿಂದ ಇದ್ದಕಿದ್ದ ಹಾಗೆ ಆಕಸ್ಮಾತ್ತಾಗಿ ಕೆಳಬೀಳುವಾಗ ಕೈ ನೀಡಿ ಊರುವಂತಾದಾಗ, ಪೆಟ್ಟು ಕೈಗೇ ತಾಗಿದರೂ ಏಟಿನ ಬಲ ದೂರದ ತೋಳಿಗೆ ತಾಕಿ ಮುರಿವಂತೆ, ಬಳಸಾಗೂ ಎಲುಬು ಮುರಿಯಬಹುದು. ಮುರಿದ ಮೂಳೆಯ ಕೊನೆಗಳಿಗೆ ತಗುಲಿಕೊಂಡಿರುವ ಸ್ನಾಯುಗಳ ಎಳೆತವೇ ಎದೆಗೂಡಿನ ಇಲ್ಲವೇ ಒಡಲಿನ ಒಳಾಂಗಗಳ ಗಾಯಗಳಿಗೆ ಕಾರಣ, ಪಕ್ಕೆಲುಬು ಮುರಿದಾಗ ಈಲಿಗೊ ಪುಪ್ಪುಸಗಳಿಗೊ ಗಾಯವಾಗುವುದು ಇದರ ಒಂದು ಉದಾಹರಣೆ.

ಎಳೆಗೂಸುಗಳು, ಮಕ್ಕಳಲ್ಲಿ ಸಾಕಷ್ಟು ಬಲಿಯದಿರುವುದರಿಂದಲೂ ವಯಸ್ಸಾದವರಲ್ಲೂ ಅದರಲ್ಲೂ ಹೆಂಗಸರಲ್ಲಿ, ಮೂಳೆ ಬಡಕಲಾಗಿರುತ್ತದೆ, ಬೇರೊಂದು ಅಂಗದಲ್ಲಿದ್ದು ಏಡಿಗಂತಿ (ಕ್ಯಾನ್ಸರ್) ಬಲು ಸಾಮಾನ್ಯವಾಗಿ ಮೂಳೆಗಳಿಗೆ ಹರಡಿಕೊಳ್ಳುವಂತೆ, ಎಲುಗಟ್ಟಿಗೂ (ಸ್ಕೆಲಿಟನ್) ಹತ್ತುವ ಅನೇಕ ರೋಗಗಳು ಮೂಳೆಗಳಲ್ಲಿ ತ್ರಾಣವಿಲ್ಲದಂತೆ ಮಾಡುವುವು. ಹಾಗಾಗಿದ್ದಾಗ. ಮೂಳೆ ಮುರಿಯಲು ಸಣ್ಣ ಪೆಟ್ಟೇ ಸಾಕಾಗುತ್ತದೆ. ಅಭ್ಯಾಸವಿಲ್ಲದ ಅಸಹಜ ಒತ್ತರ ಮೂಳೆಯ ಮೇಲೆ ಬಿದ್ದರೆ, ದಣಿವಿನ (ಫೆಟೀಗ್) ಎಲುಮುರಿಕೆ ಆಗುವುದು. ತಾಸುಗಟ್ಟಳೆ ನಿಂತು ಇರುವಾಗ, ಬಲು ದೂರ ನಡೆದಾಗಲೂ ಹೀಗಾಗಬಹುದು. ಸೈನಿಕರಲ್ಲಿ ಹೀಗಾಗುವುದಕ್ಕೆ ನಡೆಯ ಎಲುಮುರಿಕೆ ಎಂದಿದೆ.

ಕೀಲಿನ ಬಲುಮೆಗೆ ಕಾರಣವಾಗಿ ಕೀಲನ್ನು ಕೂಡಿಸಿ ಹಿಡಿದಿಡುವ ತಂತುಗಟ್ಟುಗಳು, ಸ್ನಾಯುಗಳು, ಕೀಲ್ಗವಚಗಳನ್ನು ಒಡೆವಷ್ಟು ಜೋರಿನ ಪೆಟ್ಟಿನಿಂದ ಕೀಲು ತಪ್ಪುತ್ತದೆ. ನೀಳ ಮೂಳೆಯ ಉದ್ದಕ್ಕೂ ಬಲವಾದ ಒತ್ತರಬಿದ್ದು, ಕೀಲಿನ ಸುತ್ತ ಇರುವ ಊತಕಗಳನ್ನೂ ಹರಿದು ಮೂಳೆಯ ಕೊನೆ ತೂರುವುದರಿಂದ, ಚೆನ್ನಾಗಿರುವ ಕೀಲೂ ಸಾಮಾನ್ಯವಾಗಿ ತಪ್ಪುವುದು. ನೇರವಾಗಿ ಕೀಲಿಗೇ ಏಟು ಬಿದ್ದರೂ ಕೀಲ್ತಪ್ಪಬಹುದು.

ಕೀಲಿಗೆ ಹಿಂದೆಂದೋ ಗಾಯವಾಗಿ ಇಲ್ಲವೆ ಅದರ ಸುತ್ತಣ ಊತಕಗಳಿಗೆ ಏಟು ತಗುಲಿ ಸರಿಯಾಗಿ ವಾಸಿಯಾಗದಿದ್ದರೆ, ಮತ್ತೆಮತ್ತೆ ಕೀಲ್ತಪ್ಪುವುದೇ ಮರುಕಳಿಕ ಕೀಲ್ತಪ್ಪಿಕೆಗೆ ಕಾರಣ. ಆಮೇಲೆ ಆಗಾಗ್ಗೆ ಕೀಲ್ತಪ್ಪಲು ಹೆಚ್ಚು ಬಲವೇ ಬೇಕಿರದು. ಹಗರಿನ ಕೀಲಿನಲ್ಲಿ ತಪ್ಪಿಕೆಯಾಗಿ ಅರೆಬರೆ ಗುಣವಾಗಿದ್ದರೆ ಕೈ ಹಿಡಿದು ಸುಮ್ಮನೆ ಎಳೆದರೂ ತಲೆಯಿಂದ ಮೇಲಕ್ಕೆ ತೋಳನ್ನು ಎತ್ತಿದರೂ ಸುಲಭವಾಗಿ ಕೀಲ್ತಪ್ಪುವುದು ಇದರ ಉದಾಹರಣೆ. ಕೀಲ್ಗವಚದ ಬಲಗುಂದಿಸುವ, ಕೀಲನ್ನು ಕೆಡಿಸುವ ರೋಗಗಳಲ್ಲಿ ರೋಗದ ಕೀಲ್ತಪ್ಪಿಕೆ ಕೊಂಚ ಬಲದಿಂದಲೇ ಆಗುತ್ತದೆ.

**ಲಕ್ಷಣಗಳು :** ಏಟು ಹೇಗೆ ಯಾವುದರಿಂದ ಬಿತ್ತು, ಎಲ್ಲಿಗೆ ತಗಲಿತು ಎಂಬ ವಿಷಯಗಳು, ಆಗಿರುವ ಗಾಯಗಳು, ರೋಗಿಯ ನೋವು, ಅನುಭವ ಲಕ್ಷಣಗಳು, ಕಣ್ಣಿಗೆ ಕಾಣುವ ಗಾಯಗಳು, ಎಕ್ಸ್‌ಕಿರಣ ಪರೀಕ್ಷೆಗಳು ಮುಂತಾದವುಗಳಿಂದ ಎಲುಮುರಿಕೆಗಳು ಕೀಲ್ತಪ್ಪಿಕೆಗಳನ್ನು ತಿಳಿಯಬಹುದು. ಗಾಯ, ಪೆಟ್ಟು ಹೇಗಾಯಿತೆಂದು ಗೊತ್ತಾದರೆ, ಎಲುಮುರಿಕೆ, ಕೀಲ್ತಪ್ಪಿಕೆ ಎಲ್ಲೆಲ್ಲಿ ಆಗಿರುವುದೆಂದು ಗುರುತಿಸಲು ಅನುಕೂಲ. ಅದರಲ್ಲೂ ಎಳೆಯ ಮಕ್ಕಳಿಗೆ ನೋವು ಎಲ್ಲಿ ಹೆಚ್ಚಾಗಿರುವುದೆಂದು ತಿಳಿಸಲು ತಿಳಿಯದು. ಸಣ್ಣ ಏಟಿಗೇ ಹೀಗಾಗಿದ್ದರೆ, ಅದರ ಹಿನ್ನೆಲೆಯಲ್ಲಿರುವ ರೋಗವನ್ನು ಪತ್ತೆ ಹಚ್ಚಲು ನೆರವಾಗುವುದು. ಮೂಳೆ ಮುರಿದಿದ್ದರೆ, ಕೀಲ್ತಪ್ಪಿದ್ದರೆ ಸಾಮಾನ್ಯವಾಗಿ, ಹಾಗಾಗಿರುವ ಎಡೆಯಲ್ಲಿ ಮಾತ್ರ ನೋವು ಕಂಡು, ಮುಟ್ಟಿದರೆ ಕೋಮಲವಾಗಿರುವುದು. ಪೆಟ್ಟು ಬಿದ್ದಿರುವ ಕೈಕಾಲನ್ನು ಬಳಸಹೋದರೆ ಕರಕರ ಸದ್ದಾಗುವುದು, ಇಲ್ಲವೇ ಗಾಯಗೊಂಡ ಕೈಕಾಲನ್ನು ಬಳಸದಂತಾಗಿರುವುದು. ಪೆಟ್ಟಾದ ಭಾಗ ಸೊಟ್ಟಗಿರುವುದೂ ಮುರಿದೆಡೆ ಊತ, ಮೇಲಿನ ಚರ್ಮದ ಬಣ್ಣದಲ್ಲಿ ಬದಲಾವಣೆ, ಮೂಳೆ ಅಸಹಜವಾಗಿ ಜಾಗಿರುವಿಕೆ, ಪೆಟ್ಟಾದ ಮೂಳೆಯ ಬಲವನ್ನು ಪರೀಕ್ಷಿಸಿದಾಗ ಪೆಟ್ಟಾದ ಕಡೆ ಕರಕರ ತಾಕುವ ಅರಿವಾಗುವುದೂ ಬಲು ಸಾಮಾನ್ಯವಾಗಿ ಎದ್ದುಕಾಣುವ ಅಂಗ ಲಕ್ಷಣಗಳು. ಆದರೆ, ತಾಟಿಕೊಂಡ ಎಲುಮುರಿಕೆಯಲ್ಲಿ ಅಲುಗಾಡಿಸಿದರೆ ಮುರಿದ ಕೊನೆಗಳು ಉಜ್ಜುವುದೂ ಇಲ್ಲ, ಕರಕರ ಸದ್ದು ಬರುವುದೂ ಇಲ್ಲ.

ಪೆಟ್ಟಾದ ಕೀಲು ಸೊಟ್ಟನಾಗಿ ತೋರುವಿಕೆ, ಕೀಲು ಸುತ್ತಲೂ ಊತಕಗಳ ಊತ, ಕೀಲುಮೇಲಿನ ಚರ್ಮದ ಬಣ್ಣಗೆಡಿಕೆ, ಕೀಲ್ತಪ್ಪಿದ ಕೀಲನ್ನು ಬಳಸಲಾಗದಿರುವಿಕೆ, ಕೀಲನ್ನು ಆಡಿಸದಂತಿರುವಿಕೆ—ಇವೆಲ್ಲ ಕೀಲ್ತಪ್ಪಿರುವ ಕೀಲಲ್ಲಿ ಕಂಡುಬರುತ್ತವೆ. ಎಲುಮುರಿಕೆ, ಕೀಲ್ತಪ್ಪಿಕೆಗಳನ್ನು ಕಂಡುಕೊಳ್ಳಲು ಮುಂದಿನಿಂದಲೂ ಪಕ್ಕಗಳಿಂದಲೂ ತೆಗೆದ ಎಕ್ಸ್‌ಕಿರಣ ಚಿತ್ರಗಳು ನೆರವಾಗುವುವಲ್ಲದೆ, ಅವುಗಳ ಬಗೆ, ಗಾಯದ ಹರವು ಇವೆಲ್ಲ ತಿಳಿಯುವುದರಿಂದ ಚಿಕಿತ್ಸೆ ಹೇಗಿರಬೇಕೆಂದೂ ಕೇವಲ ಹೊರಗಿನ ಪರೀಕ್ಷೆಗಿಂತಲೂ ಚೆನ್ನಾಗಿ ಸೂಚಿಸುವುವು. ಗಾಯ, ಪೆಟ್ಟುಗಳ ಜೋರು, ರೋಗಿಯ ವಯಸ್ಸು, ಆರೋಗ್ಯಗಳಿಗೆ ತಕ್ಕ ಹಾಗೆ ಸೊಕ್ಕೆ (ಷಾಕ್) ಆಗಿ ರೋಗಿ ಸುಸ್ತಾಗುವುದುಂಟು.

**ವಾಸಿಯಾಗುವಿಕೆ :** ಎಲುಮುರಿಕೆಗಳ ಕಾರಣ ಏನೇ ಇರಲಿ, ಅವು ಮಾಯುವ ಬಗೆ ಮಾತ್ರ ಒಂದೇ. ಬಲು ಬೇಗನೆ ಮುರಿದ ಕೊನೆಗಳಿಗೆ ಅಡ್ಡನಾಗಿ ಚಾಚಿ, ಮುರಿದ ತುಂಡುಗಳನ್ನು ಒಂದುಗೂಡಿಸುವ ಹೊಸ ಊತಕವನ್ನು ಗಾಯಗೊಂಡ ಮೂಳೆ ಕೂಡಲೆ ತಯಾರಿಸುತ್ತದೆ. ಮಾಯುವಾಗ ಮೊದಮೊದಲಲ್ಲಿ ಈ ಊತಕ ನಯ ಗಾರೆಯಷ್ಟು ಮೆತುವಾಗಿದ್ದು ಸುಲಭವಾಗಿ ಕೆಡಿಸುವಂತಿರುವುದು. ಬರಬರುತ್ತ ಮೈಯಲ್ಲಿನ ಮೂಳೆಯ ಖನಿಜಗಳು ಈ ಹೊಸ ಊತಕದಲ್ಲಿ ಸೇರಿಕೊಂಡು ಗಡುಸುಗಟ್ಟಿಸಿ ಮುರಿದಿರುವ ಚೂರುಗಳನ್ನು ಗಟ್ಟಿಯಾಗಿ ಒಂದರೊಡನೊಂದು ಅಂಟಿಸುತ್ತವೆ. ಗೋಟುಮೂಳೆ (ಕ್ಯಾಲಸ್) ಎಂಬ ಈ ಹೊಸ ಊತಕದಲ್ಲಿ ಖನಿಜಗಳಿರುವುದರಿಂದ, ಆಗತಾನೆ ತೆಗೆದ ಎಕ್ಸ್‌ಕಿರಣ ಚಿತ್ರದಲ್ಲಿ ಮಸಕಾಗಿ ಕಾಣಬರುತ್ತದೆ. ವಾಸಿಯಾದಂತೆಲ್ಲ ಇನ್ನೂ ಮುಂದೆ ಇದೇ ಬೆಳೆದ ಮೂಳೆಯಾಗಿ ಬದಲಾಗುವುದು. ಗೋಟುಮೂಳೆ ಎಂದಿನ ಮೂಳೆಯಂತಾದ ಹಾಗೆಲ್ಲ ಮುರಿದ ಎಲುಬಿನ ತುಂಡುಗಳ ಕೂಡಿಕೆ ಇನ್ನೂ ಬಿಗುವಾಗಿ, ಕೊನೆಗೆ ಮುರಿದ ಭಾಗವೂ ಸೇರಿ ಇಡೀ ಒಂದೇ ಮೂಳೆಯಾಗಿಬಿಡುತ್ತದೆ.

ಗಾಯದ ಬಗೆ, ಆಳ, ಹರವು, ಊತಕಗಳ ನಾಶಗಳಂತೆ, ಎಲುಮುರಿಕೆ ಮಾಯುವುದರಲ್ಲಿ ಹಲವಾರು ಅಂಶಗಳಿವೆ. ಏಟು, ಗಾಯ ಜೋರಾಗಿದ್ದರೆ ಎಲುಮುರಿಕೆಯೊಂದಿಗೆ ಅದಕ್ಕೆ ಒದಗಿಸುತ್ತಿದ್ದ ರಕ್ತದ ಪೂರೈಕೆ ಕಡಿದೇ ಹೋಗಬಹುದು. ಆಗ ಮುರಿದ ಮೂಳೆ ವಾಸಿಯಾಗುವಂತೆ ಹೊಸ ನೇರ್ಪಿಕ ಊತಕಗಳನ್ನು ಹುಟ್ಟಿಸಲಾರದು. ಮುರಿದ ಮೂಳೆ ತುಂಡುಗಳ ಕೊನೆಗಳು ಮತ್ತೆ ಸರಿಗೂಡದಿದ್ದರೆ, ಸರಿಯಾಗಿ ಜೋಡಿಸುವ ಹೊಸ ಊತಕ ಬಿಟ್ಟಿರುವ ಜಾಗವನ್ನು ತುಂಬಿ ವಾಸಿಮಾಡಲು ಎಷ್ಟೋ ಅನುಕೂಲ. ಮೂಳೆ ತುಂಡುಗಳ ನಡುವೆ, ಸ್ನಾಯು, ಕಂಡರಗಳ (ಟೆಂಡನ್ಸ್) ತೆರನ ಊತಕ ಅಡ್ಡಬಿದ್ದರೆ, ತೆಗೆದುಹಾಕಬೇಕು. ಮುರಿದ ತುಂಡುಗಳು ಕೂಡಿಕೊಳ್ಳಬೇಕಾದರೆ, ಮೂಳೆ ಮೇಲೆ ಬೀಳುವ ಭಾರಕ್ಕೆ ತಕ್ಕಂತೆ 4ರಿಂದ 10 ವಾರಗಳ ತನಕ ಅಲುಗಾಡದಂತೆ ಇರಿಸಬೇಕು. ಮೂಳೆಗಳನ್ನು ಒಂದು ಬಾರಿ ಒಂದು ನಿಲುವಿನಲ್ಲಿ ಜೋಡಿಸಿಟ್ಟ ಮೇಲೆ ಆಗಾಗ್ಗೆ ಕದಲಿಸದೆ ಹಾಗೇ ಇರಿಸದಿದ್ದರೆ, ಹೊಸದಾಗಿ ತಯಾರಾದ ಗೋಟುಮೂಳೆ ಹಾಳಾಗಿ ಮೂಳೆ ತುಂಡುಗಳನ್ನು ಒಂದುಗೂಡಿಸಲಾರದು. ಮೂಳೆಯ ಕೊನೆಗಳು ಒಂದುಗೂಡುವ ಮುನ್ನವೇ ಅಲುಗಾಡದೆ ಇರಿಸುವ ಸಲಕರಣೆಯನ್ನು ತೆಗೆದುಹಾಕಿಬಿಟ್ಟರೆ, ಅಲ್ಲಾಟದಿಂದ ಗೋಟುಮೂಳೆಯ ಬಲಗುಂದಿ ಮೂಳೆಯ ಕೊನೆಗಳು ಮತ್ತೆ ದೂರ ಸರಿವುವು.

ಮುರಿದ ಎಲುಬುಗಳನ್ನು ಸರಿಯಾಗಿ ಜೋಡಿಸಿಟ್ಟು, ಸಾಕಷ್ಟು ಎಚ್ಚರದಿಂದ ಅಲುಗಾಡದೆ ಇರಿಸಿದರೂ ಮುರಿದೆಡೆಯಲ್ಲಿ ಸೋಂಕು ಸೇರಿಬಿಟ್ಟಿತೆಂದರೆ, ಹೊಸ ಸರಿಪಡಕ ಗೋಟುಮೂಳೆ ಊತಕವನ್ನು ಹಾಳುಗೆಡವಿ, ಮಾಯುವುದನ್ನು ನಿಧಾನಗೊಳಿಸಬಹುದು ಇಲ್ಲವೇ ತೀರ ಅಡ್ಡಿಯೇ ಆಗಬಹುದು. ಎಲುಮುರಿಕೆ ಮಾಯುವುದರಲ್ಲಿ ಹಿಂದೆ ಬಲು ಮುಖ್ಯ ಎನಿಸಿದ್ದ ವಯಸ್ಸು, ಉಣಿಸು, ಆರೋಗ್ಯ, ಜೀವಾತುಗಳು, ಕುಲ ಇವುಗಳ ಪಾತ್ರ ಈಗ ಅಷ್ಟು ಮುಖ್ಯವಲ್ಲ ಎನಿಸಿದೆ. ಬೆಳೆದವರಿಗಿಂತ ಮಕ್ಕಳಲ್ಲಿ ಎಲುಬು ಬೇಗನೆ ಕೂಡಿಕೊಳ್ಳುವುದಾದರೂ ಮಾಯುವುದಕ್ಕೆ ಮುಪ್ಪು ಅಡಚಣೆಯೂ ಅಲ್ಲ, ಕಷ್ಟಕೊಡುವುದೂ ಇಲ್ಲ.

ಕೀಲ್ತಪ್ಪಿಕೆಗಳಲ್ಲಿ, ಮೂಳೆಗಳನ್ನು ಕೀಲಿನಲ್ಲಿ ಚೆನ್ನಾಗಿ ಹಿಡಿದಿರುವ ಸ್ನಾಯುಗಳು, ತಂತುಗಟ್ಟುಗಳು, ಕಂಡರಗಳು ಕೀಲ್ಗವಚಗಳಿಗೂ ಗಾಯವಾಗಿರುವುದು. ಮೆತುವಾದ ಈ ಊತಕಗಳ ಹರಿದ ಅಂಚುಗಳ ನಡುವೆ ವಾಸಿಯಾಗುವಾಗ ಕಲೆಗಟ್ಟುತ್ತವೆ. ಮೂಳೆಗಳು ಮತ್ತೆ ಸರಿಯಾದ ಜಾಗದಲ್ಲಿ ಇರಲಿ, ಇಲ್ಲದಿರಲಿ ಇವು ಕೂಡಿಕೊಳ್ಳಲು ಅಡ್ಡಿಯೇ ಇಲ್ಲ. ಮುರಿದ ಮೂಳೆಗಳಿಗಿಂತಲೂ ಗಾಯಗೊಂಡ ಕೀಲಿನ ಊತಕಗಳು ಬೇಗನೆ ಮಾಯುತ್ತವೆ.

ಮೇಲಿನ ಎರಡು ವಿಧಾನಗಳಿಂದಲೂ ಎಲುಮುರಿಕೆ, ಕೀಲ್ತಪ್ಪಿಕೆಗಳು ಮಾಯುತ್ತವೆ.

**ಚಿಕಿತ್ಸಾ ಕ್ರಮ :** ಎಲುಮುರಿಕೆ, ಕೀಲ್ತಪ್ಪಿಕೆಗಳ ಚಿಕಿತ್ಸೆ ಕೈಗೊಳ್ಳುವಾಗ ಹಲವಾರು ಅಂಶಗಳನ್ನು ಗಮನಿಸಬೇಕು. ರೋಗಿಯ ವಯಸ್ಸು, ಆರೋಗ್ಯದ ಮಟ್ಟ, ಕಸಬು, ಜೊತೆಗೇ ಆಗಿರುವ ಗಾಯಗಳು, ಎಲುಮುರಿಕೆಯ ಬಗೆ, ಆಗಿರುವ ಜಾಗ—ಇವನ್ನೆಲ್ಲ ಲೆಕ್ಕಿಸಬೇಕು.

ಕೀಲ್ತಪ್ಪಿಕೆ, ಎಲುಮುರಿಕೆ ಆಕಸ್ಮಿಕವಾಗಿ ಆಗಿದ್ದರೆ, ವಿಪರೀತವಾಗಿ ರಕ್ತ ಸುರಿವುದನ್ನು ಕಟ್ಟುಪಟ್ಟಿಗಳನ್ನೋ (ಬ್ಯಾಂಡೇಜಸ್) ತಿರುಚೊತ್ತನ್ನೋ (ಟೂರ್ನಿಕೆ) ಬಿಗಿಸಿ ತುರ್ತಾಗಿ ನಿಲ್ಲಿಸಿ. ಗಾಯವಾಗಿ ಹರಿದಿರುವ ಚರ್ಮದ ಮೇಲೆ ಚೊಕ್ಕವಾದ ಕಟ್ಟುಪಟ್ಟಿ ಸುತ್ತಿ, ಗಾಯವಾದ ಕೈಕಾಲುಗಳನ್ನು ನೆಟ್ಟಗಿರಿಸಲು ಯತ್ನಿಸದೆ, ಇರುವ ಹಾಗೇ ಎಲುಮುರಿದ ಜಾಗದ ಮೇಲ್ಗಡೆಯ ಕೆಳಗಡೆಯ ಕೀಲುಗಳು ಕೂಡ ಆಡಿಸಲಾಗದ ಹಾಗೆ ಮೆತ್ತೆಗಳನ್ನು ಜೋಡಿಸಿರುವ ದಬ್ಬೆಪಟ್ಟಿಗಳಿಂದ ಕಟ್ಟಿಟ್ಟು, ವೈದ್ಯಪಾಲನೆ ದೊರೆವಲ್ಲಿಗೆ ಮೆಲ್ಲನೆ ಸಾಗಿಸಬೇಕು.

ಮುರಿದು ಜಾಗ ಬಿಟ್ಟಿರುವ ಎಲುಬಿನ ತುಂಡುಗಳನ್ನು ಮತ್ತೆ ಸರಿಯಾಗಿ ಜೋಡಿಸಿಟ್ಟು, ಮಾಯುವ ತನಕ ಅವುಗಳ ಕೊನೆಗಳು ಅಲುಗಾಡದಂತೆ ನೋಡಿಕೊಳ್ಳುವುದೇ ಸರಳ ಎಲುಮುರಿಕೆಯ ಚಿಕಿತ್ಸೆ. ಮುರಿದರೂ ಎಲುಬಿನ ಕೊನೆಗಳು ಅವುಗಳ ಜಾಗದಿಂದ ಕದಲದಿರುವ ಸಣ್ಣ ಎಲುಮುರಿಕೆಗಳಿಗೆ ಸರಿಪಡಿಸುವುದೇನೂ ಬೇಕಿರದು. ಅರೆಬರೆ ಎಲುಮುರಿಕೆಗಳು, ಮಕ್ಕಳಲ್ಲಾಗುವ ಬಹು ಪಾಲು ಎಲುಮುರಿಕೆಗಳು, ಬಲವಾದ ಸ್ನಾಯುಗಳು ತಗುಲಿಕೊಂಡಿರದ ಮೂಳೆಯ ಮುರಿಕೆಗಳನ್ನು ಕೇವಲ ಕೈಪಾಟಿಂದಲೇ ಸರಿಜೋಡಿಸಬಹುದು. ಮೂಳೆಯ ಮುರಿಕೆಯಾದ ಇಕ್ಕಡೆಗಳಲ್ಲೂ ಒಂದು ಕೈಯಿಂದ ಹಿಡಿದುಕೊಂಡು, ಸರಿಯಾದ ಜಾಗದಲ್ಲಿ ಕೂರುವಂತೆ ಕೈಗಳಿಂದ ನೀವಬೇಕು.

ಬಲವಾದ ಸ್ನಾಯುಗಳು ತಗುಲಿಕೊಂಡಿರುವ ಮೂಳೆಗಳ ಇಲ್ಲವೇ ಬಲು ಚೂರುಚೂರಾಗಿರುವ ಎಲುಮುರಿಕೆಯನ್ನು ಸರಿಜೋಡಿಸಲು ಬಹಳ ಪಾಲನೆ, ಎಚ್ಚರಗಳಿರಬೇಕು. ಜೋರಾಗಿ ಎಳೆವ ಸ್ನಾಯುಗಳಿಂದ, ಮುರಿದ ಮೂಳೆಯ ತುಂಡುಗಳ ಕೊನೆಗಳು ದೂರದೂರ ಸರಿಯಬಹುದು. ಆಗ, ಮುರಿದ ಕೊನೆಗಳನ್ನು ಸರಿಜೋಡಿಸಿಟ್ಟು, ಸ್ನಾಯುಗಳ ಎಳೆತದ ಎದುರುವರ್ತಿಸಲು ಗಾಯಗೊಂಡ ಅವಯವವನ್ನು ಒಂದೇ ಸಮನಾಗಿ ಎಳೆದಿಡಬೇಕು. ಅವಯವದ ಕೊನೆಗೆ ಗೊತ್ತಾದ ಭಾರದ ಮಣ್ಣಿನ ಚೀಲಗಳನ್ನೋ ತೂಕದ ಬಟ್ಟುಗಳನ್ನೋ ತಗುಲಿಹಾಕಿ, ಗುರುತ್ವಕ್ಕೆ ಎದುರಾಗಿ ಎಳೆಯುತ್ತಿರುವಂತೆ ತೂಗಬಿಡುವುದೇ ಎಳೆತದ (ಟ್ರಾಕ್ಷನ್) ವಿಧಾನದ ಚಿಕಿತ್ಸೆ. ಭಾರವನ್ನು ಅಂಟುಪಟ್ಟಿಗಳು, ದಾರಗಳಿಂದ ಚರ್ಮಕ್ಕೆ ಅಂಟಿಸಿ, ಇಲ್ಲವೇ ಕೆಳಗಣ ಮೂಳೆಯಲ್ಲಿ ಲೋಹದ ಕಂಬಿ ತೂರಿಸಿ ಹಾಕಿಡಬಹುದು. ಕೆಲವೇಳೆ, ಕೊಂಚ ಕಾಲದ್ದಾದರೆ, ಕೈಗಳಿಂದ ಎಳೆದಿಟ್ಟರೆ ಸಾಕಾಗುವುದು. ಭಾರವನ್ನು ತೆಗೆದರೂ ಮುರಿದ ಮೂಳೆ ತುಂಡುಗಳ ಕೊನೆಗಳು ಇರಿಸಿದಲ್ಲೇ ಇರುವಂತೆ ವಾಸಿಯಾಗುವ ತನಕ ಈ ಎಳೆತವನ್ನು ಇಟ್ಟಿರಬೇಕು. ಕೆಲವು ಎಲುಮುರಿಕೆಗಳನ್ನು ಕೈಪಾಟಿಂದಾಗಲೀ ಎಳೆದಿಡುವುದರಿಂದಾಗಲೀ ಸರಿಪಡಿಸುವುದಾಗದು. ಬಲು ಜೋರಾಗಿ ಏಟು ಬಿದ್ದು ಸಿಡಿದಂತಾದ ಮೂಳೆ ತುಂಡುಗಳ ನಡುವೆ ಸ್ನಾಯು ತೆರನ ಊತಕಗಳು ತೆಗೆದುಹಾಕಲಾಗದಷ್ಟು ಆಳವಾಗಿ ಸೇರಿಬಿಟ್ಟಿದ್ದರೆ ಹೀಗಾಗುವುದು. ಆಗ ಒಳಗೆ ನಂಜು ಸೇರದಂತೆ ಎಚ್ಚರದಿಂದ ನೋಡಿಕೊಂಡು ಶಸ್ತ್ರಕ್ರಿಯೆಯಿಂದ ಮೂಳೆಯನ್ನು ಮತ್ತೆ ಸರಿಜೋಡಿಸಿ, ಹಲವಾರು ವಿಧಾನಗಳಲ್ಲಿ ಒಂದನ್ನು ಬಳಸಿ ಅಲುಗಾಡದಂತೆ ಇರಿಸಬೇಕಾಗುತ್ತದೆ.

ಸಣ್ಣ ಎಲುಮುರಿಕೆಗಳಿಗೆ ಸರಳ ಕಟ್ಟುಪಟ್ಟಿಗಳು, ತೂಗಾಸರೆಗಳಲ್ಲಿ (ಸ್ಲಿಂಗ್ಸ್) ಇರಿಸಿದ್ದರೆ ಸಾಕು. ಸರಿಜೋಡಿಸಲು ಕೈಪಾಟು ಬೇಕಾಗುವ ಎಲುಮುರಿಕೆಗಳನ್ನು ದಬ್ಬೆಪಟ್ಟಿಗಳಿಂದಲೊ ಪ್ಯಾರಿಸ್ಸಿನ ಗಚ್ಚುಗಿರಿಯ ಸುರುಳಿಗಳಿಂದ ಮಾಡಿದ ಅಚ್ಚುಗಳಲ್ಲೊ ಅಲುಗಾಡದಿರಿಸಬೇಕು. ಅವಯವವನ್ನು ಸರಿಯಾದ ಇರವಿನಲ್ಲಿ ಹಿಡಿದುಕೊಂಡು ಅಚ್ಚನ್ನು ಹಾಕಬೇಕು. ಗಚ್ಚುಗಿರಿ ಒಣಗಿ ಗಟ್ಟಿಯಾದ ಮೇಲೆ, ಗಾಯವಾದ ಅವಯವವನ್ನು ಕಾಪಿಡಲು ತೂಗಾಸರೆಗಳು, ಊರುಗೋಲುಗಳು, ಬೆತ್ತಗಳನ್ನೂ ರೋಗಿ ಬಳಸಬಹುದು. ಮೂಳೆಯ ಕೊನೆಗಳನ್ನು ಎಳೆದಿಟ್ಟಾಗ ಪಕ್ಕಗಳಿಗೆ ಹೊರಳದಂತೆ ಇರಿಸಲು ಉಸುಬಿನ ಚೀಲಗಳು, ತೂಗಾಸರೆಗಳು ಮತ್ತು ಅಚ್ಚುಗಳನ್ನು ಬಳಸಬಹುದು. ಶಸ್ತ್ರಕ್ರಿಯೆ ಆಗಬೇಕಾದ ಎಲುಮುರಿಕೆಗಳಲ್ಲಿ ಎಷ್ಟೋ ವೇಳೆ, ಲೋಹದ ಮೊಳೆಗಳು, ಸೂಜಿಗಳು, ತಂತಿಗಳು, ತಿರುಪುಗಳು, ಕಂಬಿಗಳು, ತಗಡು ಪಟ್ಟಿಗಳಿಂದ ಒಳಗೇ ಬಿಗಿಸುವುದುಂಟು. ಹಾಗೆ ಮಾಡಿದಾಗ, ಕೆಲವೇಳೆ ಹೊರಗೆ ದಬ್ಬೆಪಟ್ಟಿಗಳಾಗಲೀ ಅಚ್ಚುಗಳಾಗಲೀ ಬೇಕಿರದು. ಕೆಲವೇಳೆ ಕೊಂಚವಾಗಿ ಕೈಕಾಲು ಆಡಿಸಲೂ ಬಹುದು.

ಮೂಳೆಯ ಬಲವನ್ನು ಮೆಲ್ಲಗೆ ಅಮುಕಿ ಇಲ್ಲವೇ ಎಕ್ಸ್‌ಕಿರಣಗಳಿಂದ ಪರೀಕ್ಷಿಸಿದಾಗ ಗೋಟುಮೂಳೆ ಹೊರಗಣ ಆಸರೆಯ ನೆರವಿಲ್ಲದೆಯೆ ಮುರಿದ ಮೂಳೆ ಸರಿಗೂಡಿದಷ್ಟು ಬಲವಾಗುವ ತನಕ ಹಾಗೇ ಅಲುಗಾಡದಂತೆ ಇರಿಸಿರಬೇಕು. ತೂಗಾಸರೆಗಳು, ಅಚ್ಚುಗಳನ್ನು ತೆಗೆದುಬಿಟ್ಟ ಮೇಲೂ ಇನ್ನಷ್ಟು ಮಾಯುವ ತನಕ ಗಾಯಗೊಂಡ ಕೈಕಾಲನ್ನು ಬಳಸುವಂತಿಲ್ಲ.

ಸಾಕಷ್ಟು ವಾಸಿಯಾದ ಮೇಲೆ, ಗಾಯಗೊಂಡ ಕೈಕಾಲುಗಳಲ್ಲಿ ಬಲ ಬರುವಂತೆ ಮೆಲ್ಲನೆ ಅಂಗಸಾಧನೆಗಳನ್ನು ಮೊದಲು ಮಾಡಿದರೆ ಗಾಯಗೊಂಡವ ಆದಷ್ಟು ಬೇಗನೆ ಬಲು ಕಡಿಮೆ ಊನವೊಂದಿಗೆ ಕೆಲಸಕ್ಕೆ ಹಿಂತಿರುಗಬಹುದು. ಆಗ, ಅರೆಬರೆ ವಾಸಿಯಾಗಿರುವ ಮುರಿದ ಮೂಳೆಯನ್ನು ಕಾಪಿಡಲು, ತೆಗೆದು ಮುಚ್ಚುವ ಅಚ್ಚುಗಳು, ತೆಗೆಯಬಹುದಾದ ದಬ್ಬೆಪಟ್ಟಿಗಳು, ಊರುಗೋಲುಗಳು, ಬೆತ್ತಗಳು, ನಡೆಕೋಲುಗಳು, ಬಿಸಿನೀರಿನ ಕೊಳಗಳು, ತೂಗಾಸರೆಗಳು, ಬಿಗುಪಟ್ಟಿಗಳು

ಒಳ್ಳೆಯ ಸಾಧನಗಳು. ಇವುಗಳ ಬಳಕೆಯಿಂದ ಅವಯುವದಲ್ಲಿ ರಕ್ತದ ಸುತ್ತಾಟ ಚೆನ್ನಾಗಿದ್ದು, ಸ್ನಾಯುಗಳೂ ಬಡಕಲಾಗದಿರುವುವು. ಕೀಲುಗಳು ಬಿಗಿಹಿಡಿವುದೂ ತಗ್ಗುವುದು. ನೋವು ಕೊಡುವ ಯಾವ ಬಲವಾದ ಅಂಗಸಾಧನೆಯೂ ಕೂಡದು. ಗೋಟುಮೂಳೆ ಪೂರ್ತಿಯಾಗಿ ಮೂಳೆಯಂತೆ ಬದಲಾಗಿ, ಎಲುಮುರಿಕೆ ಚೆನ್ನಾಗಿ ಕೂಡಿಕೊಂಡು ಎಲುಬಾದ ಮೇಲೆ ಕೈಕಾಲು ಪೂರ್ತಿ ಆಡಿಸಲು ಒಪ್ಪಬಹುದು. ಬೇಕೆನಿಸಿದರೆ, ಎಲುಮುರಿಕೆ ಚೆನ್ನಾಗಿ ವಾಸಿಯಾದ ಮೇಲೆ, ಶಸ್ತ್ರಕ್ರಿಯೆಯಿಂದ ಒಳಗೇ ಹಾಕಿರಿಸಿದ ಲೋಹದ ಸಾಧನಗಳನ್ನು ಮತ್ತೆ ಶಸ್ತ್ರಕ್ರಿಯೆಯಿಂದ ತೆಗೆದು ಹಾಕಬಹುದು. ಈಗಿನ ಕಾಲದ ವಿಶಿಷ್ಟ ಲೋಹದ ಬಳಕೆಯಿಂದ ಹೀಗೆ ಮಾಡ ಬೇಕಿಲ್ಲ.

ಸರಳ ಎಲುಮುರಿಕೆಗಳಿಗಿಂತ ಕಲೆತದವಕ್ಕೆ ಚಿಕಿತ್ಸೆ ಮಾಡುವುದು ತೊಡಕಿನದು. ಚರ್ಮದಲ್ಲಾದ ಗಾಯದಿಂದ ಸೊಂಕು ಒಳನುಗ್ಗಿ ನೆಲೆಸುತ್ತದೆ. ಮುರಿದ ಮೂಳೆಯ ಕೊನೆಗಳಿಗೆ ಈ ಸೊಂಕು ಹೊಕ್ಕಿತೆಂದರೆ, ಹೊಸ ಎಲುಬು ತಯಾರಿಸುವ ಗೋಟುಮೂಳೆಯೇ ಹುಟ್ಟದೆ ಎಲುಮುರಿಕೆ ಮಾಯದಂತಾಗುತ್ತದೆ. ಸೊಂಕನ್ನು ಪೂರ್ತಿ ಹೋಗಲಾಡಿಸಿದ ಹೊರತು ಮೂಳೆಯಂತೂ ಕೂಡಿಕೊಳ್ಳುವುದೇ ಇಲ್ಲ.

ಕಲೆತ ಎಲುಮುರಿಕೆಯಾದ ಕೆಲವೇ ತಾಸುಗಳಲ್ಲಿ ರೋಗಿಯನ್ನು ಕಡಂರೆ, ಕೂಡಲೇ ಶಸ್ತ್ರಕ್ರಿಯೆ ಕೈಗೊಳ್ಳಬೇಕಾಗುತ್ತದೆ. ಮುರಿದ ಮೂಳೆಯನ್ನು ಆಗ ಸರಿಜೋಡಿಸಿ ಒಳಗೆಲ್ಲೂ ಸೊಂಕು ನೆಲೆಸದಂತೆ ಮಾಡಲು ಸೊಂಕಿಗೆ ಒಡ್ಡಿ ಕೆಟ್ಟಿರುವ ಸುತ್ತಮುತ್ತಲ ಎಲ್ಲ ಊತಕಗಳನ್ನೂ ಕತ್ತರಿಸಿ ಹಾಕಿಬಿಡಬೇಕು. ಆ ಮೇಲೆ ಗಾಯವನ್ನು ಹೊಲೆಯಬಹುದು ಇಲ್ಲವೇ ಅದರ ಮೇಲೆ ಹೆಚ್ಚು ತೆರವು ಬಿಟ್ಟಿದ್ದರೆ ಚರ್ಮ ನಾಟಿ ಹಾಕಬಹುದು. ಇದಾದ ಮೇಲೆ ದಬ್ಬೆಪಟ್ಟಿಗಳನ್ನೊ ಅಚ್ಚುಗಳನ್ನೊ ಹಾಕಿ ಅಲುಗಾಡದಂತೆ ಇರಿಸಬೇಕು. ಸೊಂಕು ಹತ್ತದಂತೆ ನೋಡಿಕೊಳ್ಳಲು ಮದ್ದುಗಳನ್ನೂ ಸೆಟೆಬೇನೆ (ಟೆಟನಸ್) ಬರದಂತೆ ರೋಧರಸಿಕೆಯನ್ನೂ (ಆಂಟಿ ಸೀರಂ) ಕೊಡಬೇಕು.

ಈ ಮುನ್ನೆಚ್ಚರಿಕೆಗಳು ಸಫಲವಾಗದಿದ್ದರೆ, ಚಿಕಿತ್ಸೆ ಮಾಡುವ ಮೊದಲೇ ಸೊಂಕು ಹತ್ತಿಬಿಟ್ಟಿದ್ದರೆ, ಸೊಂಕನ್ನು ಹೋಗಲಾಡಿಸಲು ಚಿಕಿತ್ಸೆ ಮೊದಲು ಆಗಬೇಕು. ಆಮೇಲೆ ಎಲುಮುರಿಕೆಯನ್ನು ಸರಿಪಡಿಸುವುದು. ಎಷ್ಟೊ ವೇಳೆ ಎಲುಮುರಿಕೆಯೊಂದಿಗಿನ ಸೊಂಕನ್ನು ಹೋಗಲಾಡಿಸುವುದೆಂದರೆ, ನಿಡುಗಾಲದ, ಕಷ್ಟವಾದ, ಕಟ್ಟುನಿಟ್ಟಿನ ಕೆಲಸ. ಆಗ ಮುರಿದ ಮೂಳೆ ಕೊನೆಗಳನ್ನು ಆದಷ್ಟು ಚೆನ್ನಾಗಿರಿಸಿಟ್ಟು ಹೊರ ಸೊಂಕು ಇನ್ನು ಒಳ ನುಗ್ಗದಂತೆ ಮುಚ್ಚಿಟ್ಟು ಮುಂದಿನ ಚಿಕಿತ್ಸೆ ಮಾಡಬೇಕು. ಸೊಂಕೆಲ್ಲ ಕಳೆಯಿತೆಂದರೆ, ಇದನ್ನು ಸರಳ ಎಲುಮುರಿಕೆ ಯಷ್ಟು ಸುಲಭವಾಗಿ ಚಿಕಿತ್ಸೆ ಮಾಡಬಹುದು.

ಎಲುಮುರಿಕೆ ಕೀಲಿನೊಳಕ್ಕೂ ಹರಡಿ ಕೀಲಿನ ನುಣುಪಾದ ಮೇಲುತಳಗಳನ್ನು ಹಾಳುಗೆಡವಿದ್ದರೆ ಇನ್ನೂ ತೊಡಕಿದ್ದಂತೆ. ಗಾಯದಿಂದ ಮೇಲುತಳ ಒರಟಾಗಿ ಅಡ್ಡಾದಿಡ್ಡಿಯಾಗಿ ವಾಸಿಯಾದರೆ, ಆಮೇಲೆ ಕೀಲು ಆಡಿಸದಂತಾಗಿ ನೋಯು ತ್ತಿರುತ್ತವೆ. ಕೀಲಿನ ಮೇಲುತಳಗಳನ್ನು ಕೈಪಾಟಿನಿಂದಲೊ, ಎಳೆದಿಡುವುದ ರಿಂದಲೊ ಎಂದಿನಂತೆ ಸರಿಜೋಡಿಸಲಾಗದಿದ್ದರೆ ಶಸ್ತ್ರಕ್ರಿಯೆ ಆಗಲೇಬೇಕಾಗುವುದು.

ಸರಳ ಕೀಲ್ತಪ್ಪಿಕೆಗಳನ್ನು ಕೈಪಾಟಿನಿಂದಲೇ ಸರಿಗೂಡಿಸಬಹುದು ; ಕೆಲವು ಬಾರಿ ಎಳೆದಿಡಬೇಕಾಗಬಹುದು. ಕೀಲ್ತಪ್ಪಿಕೆಯನ್ನು ಸರಿಪಡಿಸಿದ ಮೇಲೆ, ಕೀಲಿನ ಸುತ್ತಲೂ ಗಾಯ ಚೆನ್ನಾಗಿ ಮಾಯುವ ತನಕ ಆ ಕೀಲನ್ನು ಕಟ್ಟುಪಟ್ಟಿಗಳು, ತೂಗಾಸರೆಗಳು, ದಬ್ಬೆಪಟ್ಟಿಗಳು, ಅಚ್ಚುಗಳಲ್ಲಿ ಅಲುಗಾಡದಂತೆ ಇರಿಸಬೇಕು. ಆಮೇಲೆ ಕೀಲನ್ನು ಮೆಲ್ಲಗೆ ಆಡಿಸಲು ಯತ್ನಿಸಬಹುದು. ನೋವಾಗುವುದಾದರೆ, ಬಲವಂತದಿಂದ ಕೀಲನ್ನು ಆಡಿಸಬಾರದು. ನೋವಿರದೆಯೇ ಕೊಂಚವಾದರೂ ಕೀಲು ಆಡುವ ತನಕ ಆ ಅವಯುವವನ್ನು ಕೆಲಸಕ್ಕೆ ಬಳಸಕೂಡದು.

ಕಲೆತ ಕೀಲ್ತಪ್ಪಿಕೆಗಳಿಗೂ ಕಲೆತ ಎಲುಮುರಿಕೆಯ ಚಿಕಿತ್ಸೆಯ ವಿಧಾನಗಳೇ ಸಾಕಾಗುತ್ತವೆ. ಮರುಕಳಿಕ ಇಲ್ಲವೇ ಹುಟ್ಟಿಂದಲೇ ಬಂದ ಕೀಲ್ತಪ್ಪಿಕೆಗಳನ್ನು ಸರಿಪಡಿಸಲು ಕೆಟ್ಟಿರುವ ಕೀಲುಗಳ ಮರುರೂಪಿಕ ಶಸ್ತ್ರವೈದ್ಯವೇ ಬೇಕಾಗುತ್ತದೆ. (ನೋಡಿ—ಎಲುನೇರ್ಪಿಕ ಶಸ್ತ್ರವೈದ್ಯ).

ಎಲುಮುರಿಕೆ ಕೀಲ್ತಪ್ಪಿಕೆಗಳು ವಿಪರೀತ ಗಾಯ, ಪೆಟ್ಟುಗಳಿಂದಾಗುತ್ತವೆ. ಹೀಗೆ ಸಿಕ್ಕಾಪಟ್ಟೆ ಒಡೆದಿರುವ ಮೂಳೆ ಕೊನೆಗಳ ನಡುವೆ ಚೂರುಗಳು ಬಿಡಿಯಾಗಿ ಬಿದ್ದು ಸಿಕ್ಕಿಕೊಂಡಿರುತ್ತವೆ. ಆಗ ಕೀಲ್ತಪ್ಪಿಕೆಯನ್ನು ಸರಿಪಡಿಸುವ ಮೊದಲು ಈ ಬಿಡಿ ಚೂರುಗಳನ್ನು ಶಸ್ತ್ರಕ್ರಿಯೆಯಿಂದ ತೆಗೆದುಹಾಕಬೇಕು. ಇಷ್ಟೆಲ್ಲ ಮಾಡಿ ಸರಿಗೂಡಿಸಿದರೂ ಪೂರ್ತಿ ವಾಸಿಯಾಗಲು ಸರಳ ಕೀಲ್ತಪ್ಪಿಕೆಗಿಂತಲೂ ಹೆಚ್ಚು ಕಾಲ ಹಿಡಿಯುತ್ತದೆ.

**ತಾಕುತೊಡಕುಗಳು :** ಎಲುಮುರಿಕೆಯಿಂದೇಳುವ ತೊಡಕುಗಳಲ್ಲಿ ಮುಖ್ಯ ವಾದುವು ಮಾಯದಿರುವಿಕೆ, ಅವಯುವ ಬಳಸಲಾರದಂತೆ ಮೂಳೆ ಕೊನೆಗಳು ಕೂಡಿರುವಿಕೆ, ಮೂಳೆಗಳು ಚೆನ್ನಾಗಿ ಕೂಡಿಕೊಂಡಿದ್ದರೂ ಅದರ ಬಳಕೆಗೆ ಅಡ್ಡಿ ಯಾಗಿರುವಿಕೆ. ಮುರಿದ ಮೂಳೆ ಮಾಯದಿರಲು ಕಾರಣಗಳು ಹಲವಾರು. ಸಾಕಷ್ಟು ಅಲುಗಾಡದಂತೆ ಇರಿಸಿಕೆ, ಸೊಂಕು, ಮೂಳೆಯೆಲ್ಲ ಚೂರುಚೂರಾಗೊ, ವಿಪರೀತ ಗಾಯವಾಗೊ, ಬಹುಪಾಲು ಮೂಳೆಗೆ ಸಾಕಷ್ಟು ರಕ್ತ ಒದಗಣೆ ತಪ್ಪು ವುದು. ಕೆಲವು ವೇಳೆಗಳಲ್ಲಿ ಮುರಿದ ಮೂಳೆ ಕೂಡಿಕೊಳ್ಳದೆ ಹಾಗೇ ಉಳಿವುದಕ್ಕೆ ಕಾರಣವೇ ಗೊತ್ತಾಗದು.

ಸಾಮಾನ್ಯವಾಗಿ ಮೂಳೆಯನ್ನು ಮತ್ತೆ ಸರಿಜೋಡಿಸದಿದ್ದರೆ, ಅದು ಸೊಟ್ಟನಾಗಿ ಕೂಡಿಕೊಂಡು ಕೈಕಾಲು ಸೊಟ್ಟನಾಗೇ ಉಳಿವುದು. ಗಾಯ, ಪೆಟ್ಟುಗಳಿಂದ ಅವಯು ವದ ಬಹುಪಾಲು ಮೂಳೆಯೇ ಹಾಳಾಗಿ ಬಿಟ್ಟರೂ ಹೀಗೇ ಸೊಟ್ಟನಾಗುವುದು. ಆಗ ಅವಯುವವನ್ನು ಉಳಿಸಿಕೊಳ್ಳಬೇಕಾದರೆ ಸೊಟ್ಟಗಿರುವುದನ್ನು ಒಪ್ಪಿಕೊಳ್ಳಲೇಬೇಕು. ಮಕ್ಕಳಲ್ಲಿ ಮೂಳೆ ಬೆಳೆವ ಕೇಂದ್ರಗಳಿಗೆ ಪೆಟ್ಟಾದರೂ ಮುಂದೆ ಆ ಭಾಗ ಸೊಟ್ಟನಾಗೇ ಬೆಳೆಯುತ್ತದೆ.

ಅಪಾರವಾಗಿ ಮುರಿದಿರುವುದರಿಂದ ಚೆನ್ನಾಗಿ ವಾಸಿಯಾಗುವಂತೆ ಬಹಳ ಕಾಲ ಅಲುಗಾಡದಂತೆ ಇರಿಸಿಕೆ, ಕಲೆತ ಎಲುಮುರಿಕೆಗಳಲ್ಲಿ ಸೊಂಕು ಸೇರಿಬಿಟ್ಟು ವಾಸಿ ಯಾದಾಗ ಬೆಳೆದ ದಪ್ಪನೆಯ ಕಲೆಗಟ್ಟು (ಸ್ಕಾರ್), ಇಲ್ಲವೆ ಅವಯುವವನ್ನು ಅಲು ಗಾಡದಂತೆ ಇರಿಸಿದಾಗ ಗಾಯ ಮಾಯುವುದರಿಂದೆದ್ದ ದಟ್ಟನೆಯ ಕಲೆಗಟ್ಟು—ಇವು ಎಲುಮುರಿಕೆ ಚೆನ್ನಾಗಿ ವಾಸಿಯಾದರೂ ಅವಯುವವನ್ನು ಬಳಸಲಾಗದಂತೆ ಆಗುವ ಸಾಮಾನ್ಯ ಕಾರಣಗಳು. ಕೀಲುಗಳು ಕೇವಲ ಸಣ್ಣ ಏಟುಗಳಿಂದಲೇ ಗಡಸಾಗಿಬಿಡ ಬಹುದು. ಇದರ ಕಾರಣ ತಿಳಿದಿಲ್ಲ.

ಕೀಲಿನಲ್ಲಿ ನೋವೂ ಕೀಲು ಗಡುಸಾಗುವುದೂ ಕೀಲ್ತಪ್ಪಿಕೆ ಮರುಕಳಿಸುವುದೂ ಕೀಲ್ತಪ್ಪಿಕೆಯ ಮುಖ್ಯ ತೊಡಕುಗಳು. ಕೀಲ್ತಪ್ಪಿಕೆಯನ್ನು ಸರಿಪಡಿಸದಿದ್ದರೆ, ಗಾಯದಿಂದ ಸರಿಪಡಿಸಲಾಗದಷ್ಟು ಹಾನಿಯಾಗುವುದು, ಮಾಯುವಾಗ, ಅಲು ಗಾಡದೆ ಇರಿಸಿದ್ದಾಗ ಕೀಲಿನ ಸುತ್ತ ಆಗುವ ಬಲು ದಪ್ಪನೆಯ ಕಲೆಗಟ್ಟೂ ಈ ನೋವು, ಗಡುಸುತನಗಳಿಗೆ ಕಾರಣ. ಕೀಲಿನ ಸುತ್ತಮುತ್ತಣ ಊತಕಗಳ ಗಾಯ ಚೆನ್ನಾಗಿ ವಾಸಿಯಾಗದಿದ್ದರೆ, ಕೀಲಿನ ಕೂಡಿಸುವ ಮೇಲುತಳಗಳು ಹಾಳಾಗಿದ್ದರೆ ಕೀಲ್ತಪ್ಪಿಕೆ ಮರುಕಳಿಸುವುದು.

**ಮೂಳೆ ನಾಟಿಕೆ:** ಮುರಿದ ಮೂಳೆಯ ಕೊನೆಗಳು ಸರಿಯಾಗಿ ಕೂಡಿ ಕೊಳ್ಳದಿದ್ದಾಗ ಅವಕ್ಕೆ ಅಡ್ಡನಾಗಿ ಒಂದೆರಡು ಬೇರೆಡೆಯ ಮೂಳೆ ಚೂರುಗಳನ್ನು ಇರಿಸುವ, ನಡುವೆ ತುಂಬುವ ಶಸ್ತ್ರಕ್ರಿಯಾವಿಧಾನವಿದು. ಈ ತೆರಪಿನಲ್ಲಿ ಮೂಳೆ ಕೊನೆಗಳು ಒಂದುಗೂಡುವಂತೆ ಗೋಟುಮೂಳೆ ಬೆಳೆಸಲು ಇವು ನೆರವಾಗುತ್ತವೆ. ಇನ್ನೊಬ್ಬರ, ಪ್ರಾಣಿಯ, ಇಲ್ಲವೇ ಮೂಳೆ ಭಂಡಾರದಿಂದ ತಂದ ಮೂಳೆಗಿಂತಲೂ ರೋಗಿಯದನ್ನೇ ಇನ್ನೊಂದು ಅಂಗದಿಂದ ತೆಗೆದು ನಾಟಿ ಹಾಕಿದರೆ ಚೆನ್ನಾಗಿ ಕೂಡಿ ಕೊಳ್ಳುವುದು. ಮೂಳೆಯ ಬಹುಪಾಲು ಹಾಳಾಗಿ ಹೋಗಿದ್ದರೂ ಸೊಟ್ಟುಗಳನ್ನು ಸರಿಪಡಿಸಲಾಗದಿದ್ದರೂ ಬೇರಾವ ಬಗೆಗಳಿಂದಲೂ ಮೂಳೆ ಕೂಡಿಕೊಳ್ಳುವ ಸಂದರ್ಭ ಕಾಣದಿದ್ದರೂ ಮೂಳೆಯ ನಾಟಿ ಹಾಕಬೇಕಾಗುತ್ತದೆ.

(ಬಿ.ಎಚ್‌ಎ., ಡಿ.ಎಸ್.ಎಸ್.)

**ಎಲುಮುರುಟು :** ಎಳೆಯರ, ಮಕ್ಕಳ ಮೂಳೆಗಳಲ್ಲಿ ಸುಣ್ಣಾಂಶ ಸಾಕಷ್ಟು ಕೂಡಿಕೊಳ್ಳದೆ, ಮೂಳೆಗಳು ಬೆಳೆವಾಗ ಮುರುಟಿಕೊಂಡು ಸೊಟ್ಟನಾಗುವ ರೋಗ (ರಿಕೆಟ್ಸ್). ಮುಟ್ಟುದೋಷ, ಬಾಲಗ್ರಹ ಎಂದೂ ಕರೆಯುವುದಿದೆ. ಮಗುವಿಗೆ ವರ್ಷ ತುಂಬುವ ಮೊದಲೊ ಮರು ವರ್ಷದಲ್ಲೊ ಕಾಣಿಸಿಕೊಳ್ಳುವುದು ಸಾಮಾನ್ಯ. ಕೆಲವು ಕೊಬ್ಬಿನ ಆಹಾರ ವಸ್ತುಗಳಲ್ಲೂ ಹೇರಳವಾಗಿ ಎಳೆ ಬಿಸಿಲಲ್ಲೂ ಇರುವ ಅತಿ ನೇರಿಳೆ (ಅಲ್ಟ್ರವಯೊಲೆಟ್) ಕಿರಣಗಳ ಪ್ರಭಾವದಿಂದ ಚರ್ಮದ ತಳದಲ್ಲಿ ತಯಾ ರಾಗುವ, ಡಿ ಜೀವಾತಿನ ಕೊರೆಯಿಂದ ಈ ರೋಗ ಕಾಣಿಸಿಕೊಳ್ಳುತ್ತದೆ. ಉಷ್ಣ ವಲಯದಲ್ಲಿ ಬಹುಮಟ್ಟಿಗೆ ಎಲ್ಲರೂ ದೇಹವನ್ನು ಬಿಸಿಲಿಗೊಡ್ಡುವುದರಿಂದ ಅಷ್ಟಾಗಿಲ್ಲ. ಮೀನು ತಿನ್ನುವವರಲ್ಲೂ ಅಷ್ಟೆ.

ಒಂಬತ್ತು ತಿಂಗಳು ತುಂಬುವ ಮುನ್ನವೇ ಹುಟ್ಟುವ, ಬಲುಜೋರಾಗಿ ಬೆಳೆವ ಮಕ್ಕಳಲ್ಲಿ ಎಲುಮುರುಟಾಗಬಹುದು. ಮೊದಮೊದಲು ಮಗು ಚಡಪಡಿಸುತ್ತವೆ. ಅದರಲ್ಲೂ ರಾತ್ರಿಹೊತ್ತು ಮಲಗಿರುವಾಗ ಮಗುವಿನ ತಲೆಯಂತೂ ಬಲು ಬೆವರಿ ನೆನೆಯುತ್ತದೆ. ಕೈಕಾಲು, ಹೊಟ್ಟೆಗಳಲ್ಲಿ ಬಿಗುವಿರುವುದಿಲ್ಲ. ಕೂರುವುದು, ತೆವಳಿಕೆ, ನಡಿಗೆಗಳು ಕಷ್ಟ, ನಿಧಾನ. ಹಲ್ಲು ಹುಟ್ಟುವುದೂ ತಡ. ಮೊದಲ ಕೆಲವು ತಿಂಗಳುಗಳಲ್ಲಿ ತಲೆಬರುಡೆಯ ಮೂಳೆಗಳು ಮೆತ್ತಗಿರುತ್ತವೆ. ನೀಳ ಮೂಳೆಗಳ ಕೊನೆಗಳು, ಮೇಲೆಲುಮೂಳೆಯ ಮೆಲ್ಲೆಲುಬುಗಳು (ಎಪಿಫೈಸಿಯಲ್ ಕಾರ್ಟಿಲೇಜಸ್) ದಪ್ಪನಾಗಿ ಬೆಳೆವುದರಿಂದ, ಪಕ್ಕೆಲುಬಿನ ಮೆಲ್ಲೆಲುಬೊಂದಿಗೆ ಕೂಡುವೆಡೆಯ ಪಕ್ಕೆಲುಬು ಕೊನೆಗಳೂ ದಪ್ಪನಾಗಿರುವುದು ಸಾಮಾನ್ಯ. ನೀಳ ಮೂಳೆಗಳ ಎಕ್ಸ್‌ಕಿರಣ

ಪರೀಕ್ಷೆ, ರಕ್ತದಲ್ಲಿನ ಸುಣ್ಣಾಂಶ, ರಂಜಕಗಳ ಮಟ್ಟಗಳನ್ನು ನೋಡುವುದರಿಂದಲೂ ಈ ರೋಗವನ್ನು ಖಚಿತಪಡಿಸಬಹುದು.

ಎಳೆಯುದರಲ್ಲೇ ಚಿಕಿತ್ಸೆ ಮಾಡದಿದ್ದರೆ, ಮೈ ಮೂಳೆಗಳು ಬಗೆಬಗೆಯಾಗಿ ಅಂಕುಡೊಂಕಾಗುತ್ತವೆ. ತೋಳುಗಳಿಗಿಂತಲೂ ಕಾಲುಗಳು ಹೆಚ್ಚು ಸೊಟ್ಟಗೆ ಮೈಭಾರದಿಂದ ಬಾಗುವುದರಿಂದ ಮಂಡಿಗಳು ಒಂದಕ್ಕೊಂದು ತಾಕುವಂತಾಗಿ ಅಟ್ಟೆಗಾಲು, ಪಂಗಡಕಾಲು (ಬೋ-ಲೆಗ್, ನಾಕ್-ನೀ) ಆಗುತ್ತವೆ. ಮಗು ನಡೆವ ಮುನ್ನವೇ ಕಾಲುಗಳು ಹೀಗೆ ಬಾಗುವುವಲ್ಲದೆ, ಆಮೇಲೆ ನಡೆವಾಗ ಇನ್ನಷ್ಟು ಬಗ್ಗುತ್ತವೆ. ಹೆಣ್ಣುಗೂಸಲ್ಲಿ ಕಿಳ್ಗುಳಿ (ಪೆಲ್ವಿಸ್) ಮೂಳೆ ಹೀಗೆ ಸೊಟ್ಟಗಾದರೆ, ಮುಂದೆ ದೊಡ್ಡವಳಾದ ಮೇಲೆ ಹೆರಿಗೆಗೆ ಕಷ್ಟವಾಗಬಹುದು. ಚಿಕಿತ್ಸೆಯೇ ಇಲ್ಲವಾದರೆ, ರೋಗ ಕಳೆದು ಸೊಟ್ಟಗಿರುವ ಮೂಳೆಗಳೇ ಗಡುಸಾಗಿಬಿಡುತ್ತವೆ. ಎದೆಗೆಮ್ಮು, ಪುಪ್ಪುಸಗಳುರಿತ (ಬ್ರಾಂಕೊನ್ಯುಮೋನಿಯ), ವಾಂತಿ, ಉಚ್ಚಾಟ, ಸ್ನಾಯು ನಿತ್ರಾಣ, ಈಲಿ ತೊರಳೆಗಳು ದಪ್ಪನಾಗುವುದು, ರಕ್ತಕೊರೆ, ಇವೆಲ್ಲ ಎಲುಮುರುಟೊಂದಿಗೆ ಆಗುವ ತಾಕುತೊಡಕುಗಳು. ರಕ್ತದಲ್ಲಿ ಸುಣ್ಣಾಂಶದ ಕೊರೆಯಾಗಿ, ಕೈಅಂಗಾಲುಗಳಲ್ಲಿ ಎಡೆಸೆಳವು (ಟೆಟನಿ), ಕೆಲವೇಳೆ ಸೆಳವು (ಮೂರ್ಛೆ) ಕಾಣಿಸಿಕೊಳ್ಳುತ್ತವೆ.

ಮಕ್ಕಳ ಎಲುಮುರುಟು ಚಿಕಿತ್ಸೆಗಾಗಿ, ಸಾರಕಗಳು, ವಿಕಿರಣಕ್ಕೊಡ್ಡಿದ ಎರ್ಗೊಸ್ಟಿರಾಲ್, ಚೊರ ಮೀನಿನ ಈಲಿ ಎಣ್ಣೆ (ಷಾರ್ಕ್ ಲಿವರ್ ಆಯಿಲ್), ಅತಿ ನೇರಿಳೆ ಕಿರಣಗಳಿಗೊಡ್ಡಿಕೆಗಳ ರೂಪದಲ್ಲಿ ಡಿ ಜೀವಾತನ್ನು ಕೊಡಬಹುದು. ಕೆಲವೇಳೆ ಸಮತೋಲ ಆಹಾರದಲ್ಲಿ ಇದು ಸಾಕಷ್ಟಿರುವುದು. ನೀಚಗೊರೆ (ಸ್ಕರ್ವಿ), ಒಡಲ ಬೇನೆ (ಸೀಲಿಯಕ್ ಡಿಸೀಸ್), ಮೂತ್ರಪಿಂಡದ ಸೋಲುವೆ ರೋಗಗಳಲ್ಲಿ, ಎಲುಮುರುಟು ತಾಕುತೊಡಕಾಗಿ ಕಾಣುವುದೂ ಉಂಟು. ಈ ಕೆಲವೇಳೆ ಡಿ ಜೀವಾತನ್ನು ಎಷ್ಟು ಕೊಟ್ಟರೂ ವಾಸಿಯಾಗದ ಎಲುಮುರುಟಿಗೆ ಕಾರಣಗೊತ್ತಿಲ್ಲ.

**ಎಲುಕಳಲು:** ಬೆಳೆದವರಲ್ಲಿನ ಎಲುಮುರುಟು ರೋಗವೇ ಎಲುಕಳಲು (ಆಸ್ಟಿಯೊಮೆಲೇಷಿಯ) ರೋಗ. ದೊಡ್ಡವರಲ್ಲಿ ಡಿ ಜೀವಾತು ಕೊರೆಯಾದರೆ, ಬೆಳೆದಿರುವ ಮೂಳೆಗಳು ಬರುಬರುತ್ತ ಮೆತ್ತಗಾಗುತ್ತವೆ. ಎಷ್ಟು ದಿನಗಳಾದರೂ ಬಿಸಿಲು ಕಾಣದೆ ಒಳಗೇ ಪರದೆ ಹಿಂದೆ ಇರುವ ಮುಸ್ಲಿಂ ಹೆಂಗಸರಲ್ಲಿ ಎಲುಕಳಲು ಆಗುವುದು ಹೆಚ್ಚು. ಗಂಡಸರಲ್ಲಿ ಅಷ್ಟಾಗಿ ಕಾಣದೆ, ಹೆಂಗಸರಲ್ಲಿ, ಬಹುವಾಗಿ ಬಸುರಿನಲ್ಲೂ ಹಾಲೂಡಿಸುತ್ತಿರುವಾಗಲೂ ಜೋರಾಗುವುದು. ಪಿಂಡದಲ್ಲಿ ಬೆಳೆಯುತ್ತಿರುವ ಕೂಸು, ಬಸುರಿಯಲ್ಲಿರುವ ಸುಣ್ಣಾಂಶದಲ್ಲಿ ತನಗೆ ಬೇಕಾಗುವಷ್ಟನ್ನು ಎತ್ತಿಕೊಂಡು ಬಿಡುವುದರಿಂದ ಬಸುರಿಯಲ್ಲಿ ಇದರ ಕೊರೆಯಾಗಿ ಹಲ್ಲುಗಳೂ ಕೆಡುತ್ತವೆ. ಪುಷ್ಟಿಗೆಟ್ಟ ಹೆಂಗಸರು ಹೆಚ್ಚು ಮಕ್ಕಳನ್ನು ಹೆರುವುದರಿಂದಲೂ ಹೀಗಾಗುವುದು. ಮೈಯಲ್ಲಿ, ಮೂಳೆಗಳಲ್ಲಿ ಸುಣ್ಣಾಂಶ ತೀರ ಕಡಿಮೆ ಆಗಿಬಿಟ್ಟು, ಮೆತ್ತಗಾಗಿ ಸುಲಭವಾಗಿ ಮುರಿದುಹೋಗುವುವು. ಸೊಟ್ಟಸೊಟ್ಟ ಆಗುವುದರಿಂದ ಬಲು ನೋವಿಡುತ್ತವೆ. ಮೀನಿನ ಈಲಿ ಎಣ್ಣೆ, ಸುಣ್ಣದ ಫಾಸ್ಫೇಟುಗಳಿಂದ ಚಿಕಿತ್ಸೆ ಮಾಡಬಹುದಾದರೂ ಬಲು ಬಲವಾದ ಅಚ್ಚ ಡಿ ಜೀವಾತಾದ ಕ್ಯಾಲ್ಸಿಫೆರಾಲನ್ನು ಕೊಡುವುದೇ ಸುಲಭ. ಕೆಲವರಲ್ಲಿ ಉಚ್ಚಾಟ ಮತ್ತಿತರ ಕಾರಣಗಳಿಂದ ಸುಣ್ಣಾಂಶ ರಕ್ತಗತವಾಗದೆ ಮಲದಲ್ಲಿ ಹಾಗೇ ಹೊರಬೀಳುವುದರಿಂದಲೂ ಹೀಗಾಗಬಹುದು.

ನೋಡಿ—ಜೀವಾತುಗಳು. (ಕೆ.ಎಸ್.ಎಸ್‌ಎಚ್.)

**ಎಲುಸಿಂಗಮೋರೆ:** ಮೊಗದ ಎಲುಬುಗಳು, ಕೆಲವೇಳೆ ತಲೆಯವೂ ಅತಿಯಾಗಿ ಬೆಳೆದುಕೊಂಡು ಆ ಭಾಗಗಳ ಮಲೆತವಾಗಿ (ಹೈಪರ್ ಟ್ರೊಫಿ), ಮೋರೆ ಸಿಂಹದ ಹಾಗೆ ಕಾಣಿಸುವ ಒಂದು ಅಸಾಧಾರಣ, ಆದರೆ ಮಾರಕವಲ್ಲದ ರೋಗ. (ಡಿ.ಎಸ್.ಎಸ್.)

**ಎಲೆ:** ಕಾಂಡದ ಮೇಲೆ ಹಸಿರಾಗಿ ಬೆಳೆಯುವ ಎಲ್ಲ ಸಸ್ಯಭಾಗಗಳನ್ನೂ ವಾಡಿಕೆಯಾಗಿ ಎಲೆ ಎಂದು ಕರೆಯುತ್ತಾರೆ. ಆದರೆ ಎಲೆಯಂತೆ ತೋರದ ಇನ್ನೂ ಅನೇಕ ಭಾಗಗಳೂ ಎಲೆಗಳೇ ಆಗಿವೆಯೆಂದು ಸಂಶೋಧನೆಗಳಿಂದ ತಿಳಿಯಬಂದಿದೆ. ಗೆಡ್ಡೆಯ ಮೇಲಿನ ಪದರಗಳು, ಹೂವಿನ ಕೆಲ ಭಾಗಗಳು ಇದಕ್ಕೆ ಒಳ್ಳೆಯ ಉದಾಹರಣೆ. ಪಾಚಿಯಂಥ ಗೌಣಸಸ್ಯದಲ್ಲಿ ಎಲೆ ಕಾಂಡ ಬೇರುಗಳನ್ನು ಪ್ರತ್ಯೇಕವಾಗಿ ಕಾಣುವುದು ಅಸಾಧ್ಯ. ಕೋಲುಗಳ್ಳಿಯಲ್ಲಿನ ಎಲೆಗಳು ಆಗಲೇ ಬಿದ್ದುಹೋಗಿರುತ್ತವೆ. ಪಾಪಾಸುಕಳ್ಳಿಯಲ್ಲಿ ಹಸ್ತದಂತೆ ದಪ್ಪನಾಗಿರುವ ಭಾಗ ಎಲೆಯಂತೆ ಕಂಡರೂ ಅದು ಎಲೆಯಲ್ಲ, ಅದು ಅದರ ಕಾಂಡ. ಆ ಹಸ್ತದ ಮೇಲೆ ಚೂಪಾಗಿ ನಿಮಿರಿ ನಿಂತಿರುವ ಮುಳ್ಳುಗಳೇ ಗಿಡದ ಎಲೆಗಳು.

ಎಲೆಗಳು ಕಾಂಡ ಅಥವಾ ಅದರ ಕವಲುಗಳ ಮೇಲೆ ತೆಳುವಾಗಿ, ಅಗಲವಾಗಿ ಇದ್ದು ಗಿಣ್ಣುಗಳಿರುವ ಜಾಗದಲ್ಲಿ ಉದ್ಭವಿಸುವುವು. ಕಾಂಡಕ್ಕೂ ಎಲೆಗಳಿಗೂ ಇರುವ ಮೇಲುಗಡೆಯ ಕೊಂಕುಳಲ್ಲಿ (ಆಕ್ಸಿಲ್) ಒಂದೊಂದು ಎಲೆ ಮೊಗ್ಗು ಇರುತ್ತದೆ. ಇದರ ಬೆಳೆವಣಿಗೆಯಿಂದ ಕಾಂಡದ ಹೊಸಕೊನೆಗಳು ಉತ್ಪತ್ತಿಯಾಗುವುವು. ಕೊನೆ ಬೆಳೆದಂತೆ ಎಳೆಯ ಎಲೆಗಳು ಮೇಲಾಗಿ ಹಳೆಯ ಎಲೆಗಳು ಕೆಳಗಾಗುತ್ತವೆ. ಕಾಂಡಗಳ ಮೇಲೆ ಈ ರೀತಿ ಎಲೆಗಳು ಇರುವುದನ್ನು ಊರ್ಧ್ವ ವೃದ್ಧಿ (ಆಕ್ರೊಪೆಟಲ್ ಸಕ್ಸೆಷನ್) ಎನ್ನುತ್ತಾರೆ. ಎಲೆ ಉತ್ಪತ್ತಿಯಾಗುತ್ತಿರುವಾಗ, ಅದು ತನ್ನ ತುದಿಯಲ್ಲಿ ಮೊದಲು ಸ್ವಲ್ಪ ಬೆಳೆಯುತ್ತದೆ. ಕೆಲವು ಜರಿಗಿಡಗಳಲ್ಲಿ ಬಹು ಕಾಲ ಈ ರೀತಿಯ ಬೆಳೆವಣಿಗೆಯನ್ನು ಕಾಣಬಹುದು. ಉದಾ: ಲೈಗೋಡಿಯಂ. ಅನಂತರ ಅದು ತನ್ನ ಬುಡದಲ್ಲಿಯೂ ಸಾಧಾರಣವಾಗಿ ಮಧ್ಯ ಪ್ರದೇಶದಲ್ಲಿಯೂ ವೃದ್ಧಿಯಾಗುತ್ತದೆ. ಏಕದಳ ಸಸ್ಯಗಳಲ್ಲಿ, ಎಲೆ ಬುಡದಲ್ಲಿ ಬಹುಕಾಲ ಬೆಳೆಯುತ್ತದೆ. ಆಮೇಲೆ, ಎಲೆಗಳು ತಮ್ಮೊಳಗೆ ಹೊಸ ಜೀವಕೋಶಗಳನ್ನು ನಿರ್ಮಿಸದೆ ಕೇವಲ ಗಾತ್ರದಲ್ಲಿ ದೊಡ್ಡವಾಗುತ್ತವೆ.




ಚಿತ್ರ 1 ಸಾಧಾರಣ ಎಲೆ

1 ತೊಟ್ಟು, 2 ಎಲೆಯ ಅಂಚು, 3 ಲೆಮ್ಮೆನ, 4 ಎಲೆಯ ತುದಿ, 5 ನಾಳಗಳು, 6 ಕಂಕುಳ ಮೊಗ್ಗು, 7 ವೃಂತ ಪರ್ಣಗಳು.

ಸರಳವಾದ ವಿಕಾಸವನ್ನು ಹೊಂದಿರುವ ಥ್ಯಾಲೋಫೈಟ ಎನ್ನುವ ಒಂದು ದೊಡ್ಡ ಗುಂಪಿನ ಸಸ್ಯಗಳಲ್ಲಿ ಸರಿಯಾದ ರೀತಿಯ ಎಲೆಗಳಾಗಲಿ, ಕಾಂಡವಾಗಲಿ ಸಾಧಾರಣವಾಗಿ ಕಂಡುಬರುವುದಿಲ್ಲ. ಈ ಗುಂಪಿಗಿಂತ ಹೆಚ್ಚು ವಿಕಾಸವನ್ನು ತೋರಿಸುವ ಬ್ರಯೊಫೈಟ ಗುಂಪಿನ ಹಾವಸೆಗಳಲ್ಲಿ ಕಾಣಬರುವ ಎಲೆಗಳೇ ಅತ್ಯಂತ ಸರಳವೂ ಸೂಕ್ಷ್ಮವೂ ಆದ ಎಲೆಗಳು. ಇವು ಒಂದು ಜೀವಕೋಶದಷ್ಟು ಮಾತ್ರ ದಪ್ಪನಾಗಿರುವುವು. ಆದರೆ ಒಂದು ವಿಶೇಷ ಜಾತಿಯ ತಾವರೆಯಾದ ವಿಕ್ಟೋರಿಯ ರೀಜಿಯ ಎಂಬ ಅಮೆರಿಕದ ಗಿಡದ ಎಲೆ ಎರಡು ಮೀಟರಿನಷ್ಟು ಅಗಲವಾಗಿರಬಹುದು.

**ಎಲೆಗಳ ರಚನೆ:** ದಾಸವಾಳದಂಥ ಒಂದು ಸಾಮಾನ್ಯರೀತಿಯ ಎಲೆಗೆ ಒಂದು ಬುಡವೂ ಒಂದು ತೊಟ್ಟೂ ಒಂದು ಪತ್ರ ಭಾಗವೂ ಇವೆ. ಬುಡದ ಇಕ್ಕೆಲದಲ್ಲೂ ವೃಂತಪರ್ಣಗಳು (ಸ್ಟಿಪ್ಯೂಲ್) ಕಾಣಬರುತ್ತವೆ. ಪತ್ರದ ಉದ್ದಕ್ಕೂ ಮಧ್ಯದಲ್ಲಿ ಒಂದು ದೊಡ್ಡ ನಾಳವೂ ಇದರ ಎರಡು ಕಡೆಗಳಲ್ಲಿಯೂ ಸಣ್ಣ ನಾಳಗಳೂ ಇವುಗಳ ಕವಲುಗಳೂ ಇರುವುವು. ಎಲಚಿಯಂಥ ಎಲೆಗಳಲ್ಲಿ, ಮೂರು ಮುಖ್ಯವಾದ ನಾಳಗಳಿರುತ್ತವೆ. ಇಂಥ ಎಲೆಗೆ ಮಲ್ಟಿಕಾಸ್ಟೇಟ್ ಎನ್ನುವರು. ಕಾವಿನ ಒಳಗೂ ನಾಳಗಳಿದ್ದು, ಇವು ಕಾಂಡದಲ್ಲಿರುವ ನೀರಿನ ಮತ್ತು ಆಹಾರದ ಕೊಳವೆಗಳ ಸಮೂಹವನ್ನು ಸೇರಿಕೊಳ್ಳುತ್ತವೆ. ಎಲೆಯ ನಾಳಸಮೂಹ ದ್ವಿದಳ ಸಸ್ಯಗಳಲ್ಲಿ ಬಲೆಯ ರೂಪದಲ್ಲಿಯೂ ಏಕದಳಸಸ್ಯಗಳಲ್ಲಿ ಸಮಾನಾಂತರವಾಗಿಯೂ ಜರಿಗಿಡಗಳಲ್ಲಿ ಕವಲೊಡೆಯುವ ರೀತಿಯಲ್ಲಿಯೂ ಇರುತ್ತದೆ. ಆದರೆ ಈ ಸೂತ್ರಕ್ಕೆ ವಿರೋಧವಾಗಿ ಕೆಸವಿನ ದಂಟು ಮುಂತಾದ ಏಕದಳ ಸಸ್ಯಗಳಲ್ಲಿ ಬಲೆಯ ರೀತಿಯ ನಾಳಜಾಲವೂ ಸುರಹೊನ್ನೆಯಂಥ ದ್ವಿದಳ ಸಸ್ಯಗಳಲ್ಲಿ ಸಮಾನಾಂತರ ರೀತಿಯ ನಾಳಸಮೂಹವೂ ಇರುವುದುಂಟು. ಗೊಡ್ಡೀಚಲಿನ (ಸೈಕಾಸ್) ಪತ್ರ ಭಾಗಗಳಲ್ಲಿ ಮಧ್ಯದ ನಾಳ ಎಡಬಲಕ್ಕೆ ಕವಲೊಡೆಯುವುದೇ ಇಲ್ಲ. ಹರಳೆಲೆಯಲ್ಲಿ, ಮುಖ್ಯವಾದ ನಾಳಗಳು ಹಸ್ತದ ಬೆರಳುಗಳನ್ನು ಹೋಲುವ ರೀತಿಯಲ್ಲಿ ಇರುತ್ತವೆ. ನಾಳಸಮೂಹಗಳಿಂದ ಎಲೆಯ ಹಸಿರು ಜೀವಕಣಗಳಿಗೆ ನೀರೂ ಲವಣಗಳೂ ಒದಗುವುದಲ್ಲದೆ, ಇವುಗಳಲ್ಲಿ ಉತ್ಪತ್ತಿಯಾಗುವ ಸಕ್ಕರೆಯನ್ನು ಗಿಡದ ಇತರ ಭಾಗಗಳಿಗೆ ಸಾಗಿಸಲು ಸಾಧ್ಯವಾಗುತ್ತದೆ. ಅಲ್ಲದೆ, ನಾಳ ಸಮೂಹಗಳು ಎಲೆಯ ರಚನೆಗೆ ಆಧಾರವಾಗಿದ್ದು, ತೆಳುವಾಗಿದ್ದರೂ ಅವು ಗಾಳಿಯ ಹೊಡೆತವನ್ನು ತಡೆಯುವ ಶಕ್ತಿಯನ್ನು ಕೊಡುತ್ತವೆ. ಆದರೆ ಬಾಳೆಯ ಎಲೆಯ ಅಂಚಿನಲ್ಲಿ ಈ ತರಹ ರಚನೆ ಇಲ್ಲದ ಕಾರಣ ಅದು ಬೇಗನೆ ಹರಿದುಹೋಗುತ್ತದೆ.

ಕೆಲವು ಎಲೆಯ ಮೈಮೇಲೆ ಕೂದಲುಗಳೂ ಹೂವರ್ಚಿಯಲ್ಲಿರುವಂತೆ ಸಣ್ಣಸಣ್ಣ ಪೊರೆಗಳೂ ಇರುವುದುಂಟು. ಇವುಗಳಿಂದ ಎಲೆಗಳ ಆವಿ ಹೊರಹೊಮ್ಮುವಿಕೆ

ಸ್ವಲ್ಪ ಮಟ್ಟಿಗೆ ಕಡಿಮೆಯಾಗಬಹುದು. ಎಲೆಯ ಅಂಚಿನಲ್ಲಿ ಮುಳ್ಳುಗಳಿದ್ದು (ಉಮ್ಮತ್ತಿ) ಅಥವಾ ಎಲೆಯ ವೃಂತಪರ್ಣಗಳು ಮುಳ್ಳುಗಳಾಗಿದ್ದು (ಎಲಚಿ) ಅಥವಾ ಪೂರ್ಣ ಎಲೆಯೇ ಮುಳ್ಳಿನ ರೀತಿಯಲ್ಲಿದ್ದು (ಪಾಪಾಸುಕಳ್ಳಿ) ಆಡು ಮುಂತಾದ ಪ್ರಾಣಿಗಳಿಂದ ಈ ಗಿಡಗಳಿಗೆ ರಕ್ಷಣೆಯನ್ನು ದೊರಕಿಸುತ್ತದೆ. ನಿಂಬೆ, ನಾಗದಾಳಿ, ಯೂಕಲಿಪ್ಟಸ್, ವೀಳೆಯದೆಲೆ, ಕರಿಬೇವಿನ ಸೊಪ್ಪು ಮುಂತಾದ ಗಿಡಗಳ ಎಲೆಗಳಲ್ಲಿ ತೈಲವಿರುತ್ತದೆ.

ಅಲ್ಲದೆ, ಮುಟ್ಟಿನೋಡುವುದಕ್ಕೆ ಕೆಲವು ಎಲೆಗಳು ಮೃದುವಾಗಿಯೂ ಮತ್ತೆ ಕೆಲವು ಚರ್ಮದ ಹಾಗೆಯೂ ಇನ್ನು ಕೆಲವು ಸುಲಭವಾಗಿ ಪುಡಿಯಾಗುವ ಹಾಗೆಯೂ (ಪಾರಿಜಾತ) ಇರುವುವು. ದೊಡ್ಡಪತ್ರೆ ಎಲೆ ತುಂಬ ರಸವತ್ತಾಗಿರುತ್ತದೆ. ಕ್ಷೀಣ ಎಲೆಗಳು ಪೊರೆಯಂತೆ ಇರುವುದೂ ಉಂಟು.

**ಎಲೆಯ ಬಗೆಗಳು :** ಎಲೆಯ ಪತ್ರಗಳಲ್ಲಿ ಸರಳ ಪತ್ರವೆಂದೂ ಭಿನ್ನಪತ್ರವೆಂದೂ (ಕಾಂಪೌಂಡ್) ಎರಡು ಬಗೆಯುಂಟು. ಆದರೆ ಕೆಲವು ಸರಳ ಪತ್ರಗಳಲ್ಲಿನ ಭಾಗಗಳು ಅರ್ಧ ಮಾತ್ರ ಕತ್ತರಿಸಲ್ಪಟ್ಟಂತೆ ಇರಬಹುದು (ಹರಳೆಲೆ). ಭಿನ್ನಪತ್ರಗಳ ಉಪಪತ್ರಗಳು ಮತ್ತೊಂದು ಸಲ ಭಿನ್ನವಾಗಿದ್ದು, ದ್ವಿಭಿನ್ನಪತ್ರಗಳಾಗಬಹುದು (ಗೋಲ್ಡ್ ಮೊಹರ್). ಹೆಚ್ಚಾಗಿ ಭಿನ್ನವಾದ ಪತ್ರಗಳನ್ನು ನಾವು ನುಗ್ಗೆ ಗಿಡದಲ್ಲಿ ಕಾಣಬಹುದು. ಮೇಲೆ ಹೇಳಿರುವ ಎರಡು ಉದಾಹರಣೆಗಳಲ್ಲಿ ಉಪಪತ್ರಗಳು ಗರಿಯ ಮಾದರಿಯಲ್ಲಿ ಹೊಂದಿಕೊಂಡಿರುತ್ತವೆ. ಎಲೆಯ ತುದಿಯ ಮಧ್ಯದಲ್ಲಿ ಉಪಪತ್ರವಿದ್ದರೆ ಅದಕ್ಕೆ ಇಂಪ್ಯಾರಿಪಿನ್ನೇಟ್(ಬೇವು) ಎಂದೂ ಹಾಗಿಲ್ಲದಿದ್ದರೆ ಪ್ಯಾರಿಪಿನ್ನೇಟ್ (ಹುಣಿಸೆ) ಎಂದೂ ಕರೆಯುತ್ತಾರೆ. ಬೂರುಗದ ಮರದಲ್ಲಿರುವ ಭಿನ್ನ ಪತ್ರಗಳು ಹಸ್ತದ ಮಾದರಿಯವು. ಭಿನ್ನಪತ್ರದ ಮಧ್ಯದ ಅಕ್ಷಕ್ಕೆ ರೇಕಿಸ್ ಎಂದು ಹೆಸರು. ಕಿತ್ತಲೆ ಎಲೆಯಲ್ಲಿ ಒಂದೇ ಉಪಪತ್ರವಿರುವ ಭಿನ್ನಪತ್ರ ಉತ್ಪತ್ತಿಯಾಗಿರುವುದು ಒಂದು ವಿಶೇಷ. ಭಿನ್ನಪತ್ರಗಳು ಗಾಳಿಯ ಹೊಡೆತದಿಂದ ಬೇಗ ಹರಿಯವು. ಅಲ್ಲದೆ ಪತ್ರಗಳ ನಡುನಡುವೆ ಹೆಚ್ಚಿನ ಗಾಳಿ ಮತ್ತು ಬೆಳಕು ಆಡುವ ಸಾಧ್ಯತೆ ಹೆಚ್ಚು. ಭಾರತದ ಕಾಡಿನ ಕೆಲವು ಮರಗಳಲ್ಲಿ ಒಂದೇ ಒಂದು ಭಿನ್ನಪತ್ರ ನಾಲ್ಕೈದು ಅಡಿಗಳಷ್ಟು ಉದ್ದವಿದ್ದು, ಅದರ ಉಪ ಪತ್ರಗಳು ಅಂಗೈ ಅಷ್ಟು ಅಗಲವಾಗಿರುವುದುಂಟು. ಇಂಥ ಸಂದರ್ಭದಲ್ಲಿ ಆ ದೊಡ್ಡ ಭಿನ್ನಪತ್ರವನ್ನು ಒಂದು ಕಾಂಡದ ಕೊಂಬೆಯೆಂದು ತಪ್ಪಾಗಿ ಭಾವಿಸಬಹುದು. ಆದರೆ ಆ ಎಲೆಯ ತುದಿಯಲ್ಲಿ ಎಲೆ ಮೊಗ್ಗು ಇರುವುದಿಲ್ಲ. ಉಪಪತ್ರ ಕೊಂಕುಳಲ್ಲಿಯೂ ಎಲೆಮೊಗ್ಗು ಇರುವುದಿಲ್ಲ. ಎಲ್ಲ ಉಪ ಪತ್ರಗಳೂ ಒಂದೇ ದಿಕ್ಕಿನಲ್ಲಿ ಹರಡಿಕೊಂಡಿರುವುವು. ಆ ದೊಡ್ಡ ಎಲೆಯ ಬುಡದ ಕೊಂಕುಳಲ್ಲಿ ಮಾತ್ರ ಎಲೆ ಮೊಗ್ಗು ಇರುತ್ತದೆ.

ಚಿತ್ರ 2 ಏಕದಳ ಸಸ್ಯದ ಎಲೆ. 1 ಕಾಂಡ 2 ಆರಿಕಲ್, 3 ಲಿಗ್ಯೂಲ್, 4 ಲೆಮ್ಮೆನ, 5 ಎಲೆಯ ಬುಡ.

**ಎಲೆಗಳಲ್ಲಿ ವೈವಿಧ್ಯ :** ಎಲೆಯ ಪತ್ರದ ಭಾಗ (ಅಥವಾ ಉಪಪತ್ರ) ನಾನಾ ಆಕಾರಗಳನ್ನು ಹೊಂದಿರುತ್ತದೆ. ಸೂಜಿಯಂತೆ ಉದ್ದನಾದ ಪಟ್ಟಿಯಂತೆ (ಹುಲ್ಲು), ಭರ್ಜಿಯಂತೆ (ಕಣಗಿಲೆ,), ಉದ್ದವಾದ ಕೊಳವೆಯಂತೆ (ಈರುಳ್ಳಿ), ಹೃದಯದಂತೆ (ವೀಳೆಯದ ಎಲೆಬಳ್ಳಿ), ಬಾಣದ ಅಲುಗಿನಂತೆ (ಕೆಸವಿನ ದಂಟು), ವೃತ್ತಾಕಾರದಲ್ಲಿ (ತಾವರೆ), ಮೂತ್ರ ಪಿಂಡದಂತೆ (ಒಂದೆಲಗ), ಆಯತವಾಗಿ (ಬಾಳೆ), ಅಂಡಾಕಾರವಾಗಿ (ಆಲ)—ಹೀಗೆ ನಾನಾ ಬಗೆಯ ಆಕಾರಗಳನ್ನು ನೋಡಬಹುದು. ಬೀಜ ಮೊಳೆತು ಸಸಿಯಾದಾಗ ಕಾಂಡದ ಮೊದಲನೆಯ ಎಲೆಗಳು ಆಕಾರದಲ್ಲಿ ಸರಳವಾಗಿದ್ದು, ಅನಂತರ ಹುಟ್ಟುವ ಎಲೆಗಳಿಗಿಂತ ಬೇರೆ ತರಹ ಇರುವುದನ್ನು ಅವರೆ ಮುಂತಾದ ಗಿಡಗಳಲ್ಲಿ ಕಾಣಬಹುದು. ಯೂಕಲಿಪ್ಟಸ್ ಗಿಡ ಎಳೆಯದಾಗಿರುವಾಗ ಎಲೆಗಳು ಅಗಲವಾಗಿದ್ದು ಗಿಡ ಬಲಿತಂತೆ, ಉದ್ದವಾಗಿ ಕುಡುಗೋಲಿನ ಆಕಾರವನ್ನು ತಾಳುತ್ತವೆ. ಹಲಸಿನ ಮರದ ಎಲೆಗಳು ವಿವಿಧ ಆಕಾರಗಳಲ್ಲಿರುತ್ತವೆ. ನೀರಿನಲ್ಲಿ ಅರ್ಧ ಮುಳುಗಿ ಬೆಳೆಯುವ ಲಿಮ್ನೊಫೈಲ ಮುಂತಾದ ಗಿಡಗಳಲ್ಲಿ, ಮುಳುಗಿರುವ ಎಲೆಗಳು ಬಹಳ ಛಿದ್ರವಾಗಿ ಮೇಲಿರುವ ಎಲೆಗಳು ಅಗಲವಾಗಿಯೇ ಉಳಿಯುವುವು. ಈ ರೀತಿಗೆ ಹೆಟಿರೊಫಿಲಿ ಎಂದು ಕರೆಯುತ್ತಾರೆ. ಸೆಲಾಜಿನೆಲ್ಲ ಗಿಡದಲ್ಲಿ ದೊಡ್ಡ ಎಲೆಗಳ ಸಾಲೂ ಚಿಕ್ಕ ಎಲೆಗಳ ಸಾಲು ಇವೆ; ಇದಕ್ಕೆ ಅನೈಸೋಫಿಲಿ ಎಂದು ಹೆಸರು.

ಎಲೆಯ ಅಂಚಿನಲ್ಲೂ ವೈವಿಧ್ಯವುಂಟು. ಹಲ್ಲಿನಂತೆಯೂ ಗರಗಸದ ಅಂಚಿನಂತೆಯೂ ಮುಳ್ಳಿನಂತೆಯೂ ಕಮಾನುಗಳಂತೆಯೂ (ಒಂದೆಲಗ) ಅಲೆಗಳೋಪಾದಿಯಲ್ಲಿಯೂ (ಅಶೋಕ) ಇರುವುದುಂಟು. ಆದದ್ದರಿಂದ ಆಯಾ ಎಲೆಯ ಮಾದರಿಯಿಂದ ಹಲವು ಸಸ್ಯಗಳನ್ನು ಗುರುತಿಸಬಹುದು.

**ಎಲೆತೊಟ್ಟು :** ಕೆಲವು ತೆಂಗಿನ ಜಾತಿಯ ಗಿಡದಲ್ಲಿ 15 ಅಡಿಯಷ್ಟು ಉದ್ದದ ತೊಟ್ಟು ಇರುವುದುಂಟು. ನಿಂಬೆಯ ಎಲೆಯಲ್ಲಿ ತೊಟ್ಟಿಗೆ ರೆಕ್ಕೆಗಳು ಅಗಲವಾಗಿ ಬೆಳೆದಿರುವುವು. ಆಸ್ಟ್ರೇಲಿಯದ ಜಾಲಿಗಿಡಗಳಲ್ಲಿ, ಎಲೆತೊಟ್ಟು ಅಗಲವಾಗಿದ್ದು, ಎಲೆ ಪತ್ರದ ಕೆಲಸವನ್ನೇ ಮಾಡುತ್ತದೆ. ಇದಕ್ಕೆ ಫಿಲ್ಲೋಡ್ ಎಂದು ಹೆಸರು, ಇದು ಸೂರ್ಯನ ಬೆಳಕಿಗೆ ತನ್ನ ಅಂಚನ್ನು ತೋರಿಸುವುದು. ಈ ಎಲೆಯ ಭಿನ್ನಪತ್ರದ ಇತರ ಭಾಗಗಳು ಬೇಗನೆ ಉದುರಿ ಹೋಗುವುವು. ಸಾರಸೆನಿಯ ಎನ್ನುವ ಕೀಟಾಹಾರಿ ಸಸ್ಯದಲ್ಲಿ ಎಲೆತೊಟ್ಟು ಹೂಜಿಯ ಆಕಾರದಲ್ಲಿದೆ. ಟ್ರೋಪಿಯೋಲಂ ಗಿಡದಲ್ಲಿನ ತೊಟ್ಟು ಸುಲಿಬಳ್ಳಿಯಂತೆ ಇರುವುದು. ಎಲೆತೊಟ್ಟಿನ ಬುಡದಲ್ಲಿ ಉಬ್ಬಿದ್ದರೆ ಆ ಭಾಗಕ್ಕೆ ಪಲ್ವೈನಸ್ ಎಂದು ಹೆಸರು. ಹರಳು ಮುಂತಾದ ಎಲೆಗಳ ಕಾವು ಪತ್ರದ ಮಧ್ಯಭಾಗದಲ್ಲಿ ಸೇರಿಕೊಂಡಿದೆ. ಮುಟ್ಟಿದರೆ ಮುನಿಯಲ್ಲಿ ಈ ಪಲ್ವೈನಸಿನ ಸಹಾಯದಿಂದ ಎಲೆಯ ಭಾಗಗಳು ಚಲಿಸುವುವು. ಇದರಂತೆಯೆ ಬಯೋಫೈಟಂ ಸಸ್ಯದ ಎಲೆಗಳೂ ಮುಟ್ಟಿದರೆ ಅಥವಾ ಶಾಖವನ್ನು ತೋರಿಸಿದರೆ, ಮುಚ್ಚಿಕೊಳ್ಳುವುವು. ಆದರೆ ಡೆಸ್ಮೋಡಿಯಂ ಗೈರಾನ್ಸಿನ (ಟೆಲಿಗ್ರಾಫ್ ಸಸ್ಯ) ಎಲೆಯ ಉಪಪತ್ರಗಳು ತಮ್ಮಷ್ಟಕ್ಕೇ ತಾವೇ ಸದಾ ಚಲಿಸುತ್ತಿರುವುವು. ಮತ್ತೆ ಕೆಲವು ಗಿಡಗಳ ಉಪಪತ್ರಗಳು ರಾತ್ರಿಯಾಗುತ್ತಲೇ ಮುಚ್ಚಿಕೊಂಡು, ನಿದ್ರಿಸುವಂತೆ ತೋರುವುವು. ಜಾನ್ ಗೋಟು ಬೆಡ್ ಎಟ್ ನೂನ್ ಎಂದು ಕರೆಯುವ ಇಂಗ್ಲೆಂಡಿನ ಸಸ್ಯದಲ್ಲಿ ಈ ರೀತಿ ಮಧ್ಯಾಹ್ನದ ತಾಪಕ್ಕೆ ಉಪಪತ್ರಗಳು ಮುಚ್ಚಿಕೊಳ್ಳುವುವಂತೆ. ಆದರೆ ಅಮೆರಿಕದ ಹುಲ್ಲುಗಾವಲಿನಲ್ಲಿ ಬೆಳೆಯುವ ಸಿಲ್ಫಿಯಂ ಎಂಬ ಗಿಡದ ಎಲೆಗಳು ಮಧ್ಯಾಹ್ನದ ಸೂರ್ಯನ ಕಡೆಗೆ ತಮ್ಮ ಅಂಚನ್ನೇ ತೋರಿಸಿಟ್ಟುಕೊಂಡು ಬಿಸಿಲಿನ ತಾಪದಿಂದ ಪಾರಾಗುವುವಂತೆ.



ವಿವಿಧ ಮಾದರಿಯ ನಾಲ್ಕು ಎಲೆಗಳು

**ಎಲೆಯ ಬುಡ :** ಇದು ಹುಲ್ಲು, ಕೊತ್ತಂಬರಿ ಜಾತಿಗಳ ಎಲೆಗಳಲ್ಲಿ ಕೊಳವೆಯಂತೆ ಇರುವುದು. ಹುಲ್ಲು, ಶುಂಠಿ, ಸೆಲಾಜಿನೆಲ್ಲ, ಗಿಡಗಳ ಎಲೆಗಳಲ್ಲಿ ಲಿಗ್ಯೂಲ್ ಎಂದು ಕರೆಯುವ ನಾಲಗೆಯಂಥ ಚಿಕ್ಕ ಭಾಗ ಎಲೆಯ ಬುಡದಲ್ಲಿ ಬೆಳೆದಿರುವುದು ಒಂದು ವಿಶೇಷವಾಗಿದೆ.

**ಎಲೆಗಳಲ್ಲಿ ಮಾರ್ಪಾಟು :** ಎಲೆಯ ಭಾಗಗಳು ಬಹುವಾಗಿ ಮಾರ್ಪಾಟು ಹೊಂದಿ, ಕೆಲವು ವಿಶೇಷ ಕಾರ್ಯಗಳನ್ನು ಮಾಡಬೇಕಾದ ಸಂದರ್ಭಗಳೂ ಇವೆ. ಬೀಜದಳಗಳನ್ನೂ ಹೂವಿನ ದಳಗಳನ್ನೂ ಮಾರ್ಪಾಡಾದ ಎಲೆಗಳೆಂದು ಭಾವಿಸುವರು.

**ಎಲೆಮುಳ್ಳುಗಳು ಮತ್ತು ಸುಳಿಬಳ್ಳಿಗಳು :** ವೃಂತಪರ್ಣಗಳು ಎಲಚಿಯಲ್ಲಿ ಮುಳ್ಳಿನಂತೆಯೇ ಇದ್ದು, ಆಡು ಮುಂತಾದ ಪ್ರಾಣಿಗಳ ಬಾಯಿಗೆ ಗಿಡ ತುತ್ತಾಗದಂತೆ ರಕ್ಷಣೆ ನೀಡುವುವು. ಪಾಪಾಸುಕಳ್ಳಿಯಲ್ಲಂತೂ ಎಲೆಗಳೇ ದಪ್ಪ ಮುಳ್ಳುಗಳಾಗಿ ರಕ್ಷಣೆ ನೀಡುತ್ತವೆ. ಒಂದು ಜಾತಿಯ ಜಾಲಿಗಿಡದಲ್ಲಿ ವೃಂತಪರ್ಣಗಳು ಟೊಳ್ಳಾಗಿದ್ದು ಇರುವೆಗಳಿಗೆ ಆಶ್ರಯಕೊಡುತ್ತವೆ. ಈ ಎಲೆಗಳ ತೊಟ್ಟಿನ ಮೇಲೂ ಇತರ ಕಡೆಗಳಲ್ಲಿಯೂ ಒಂದು ತರಹ ಆಹಾರ ಉತ್ಪತ್ತಿಯಾಗಿ, ಇರುವೆಗಳಿಗೆ ಒದಗುವುದು. ಇರುವೆಗಳಿಗೂ ಎಲೆಗಳಿಗೂ ಇರುವ ಇಂಥ ಪರಸ್ಪರ ಸಂಬಂಧಕ್ಕೆ ಮರ್ಮಿಕೋಫೈಲಿ ಎನ್ನುತ್ತಾರೆ. ಬಟಾಣಿಯಲ್ಲಿ ವೃಂತಪರ್ಣಗಳು ಅಗಲವಾಗಿ

ಬೆಳೆದು ಎಲೆಯ ಪತ್ರಭಾಗದ ಕೆಲಸಗಳನ್ನು ಮಾಡುತ್ತವೆ. ಎಲೆಯ ತುದಿಯೇ ನುಲಿಬಳ್ಳಿಯಾಗಿರುವುದನ್ನು ಗ್ಲೋರಿಯೋಸ ಗಿಡದಲ್ಲಿ ಕಾಣಬಹುದು. ಅರಳಿ ಎಲೆಯ ತುದಿ ಚೂಪಾಗಿ ಎಳೆದಂತೆ ಇದ್ದು, ಮಳೆಯ ನೀರು ಅಲ್ಲಿಂದ ಹರಿದು ಹೋಗಲು ಅನುಕೂಲವಾಗಿರುವುದರಿಂದ ಅದನ್ನು ಡ್ರಿಪ್‌ಟಿಪ್ ಎನ್ನುವರು. ಬಟಾಣಿ, ಬಿಗ್ನೋನಿಯಗಳಲ್ಲಿ ಭಿನ್ನಪತ್ರದ ಉಪಪತ್ರಗಳು ನುಲಿಬಳ್ಳಿಗಳಾಗಿ ಮಾರ್ಪಾಡಾಗಿವೆ. ಸ್ಮಯ್‌ಲ್ಯಾಕ್ಸ್‌ನಲ್ಲಿ ವೃಂತಪರ್ಣಗಳೇ ನುಲಿಬಳ್ಳಿಗಳಾಗಿವೆ.

**ಕ್ಷೀಣ ಎಲೆಗಳು :** ಶುಂಠಿ ಮುಂತಾದ ನೆಲದೊಳಗೆ ಬೆಳೆಯುವ ಕಾಂಡಗಳಲ್ಲಿಯೂ ಪೈನಸ್, ಸೈಕಾಸ್, ಸರ್ವೆ (ಕ್ಯಾಸ್ಯುಯರೈನ) ಗಳಲ್ಲಿಯೂ ಪೂರ್ಣ ಪರಾವಲಂಬಿ ಗಿಡಗಳಲ್ಲಿಯೂ (ಆಕಾಶಬಳ್ಳಿ) ಇವು ಇರುವುವು. ಸಾಧಾರಣವಾಗಿ ಇವುಗಳಲ್ಲಿ ಹರಿತ್ತು ಇಲ್ಲ. ಎಲೆ ಮೊಗ್ಗುಗಳನ್ನು ವಾತಾವರಣದ ವ್ಯತ್ಯಾಸಗಳಿಂದ ರಕ್ಷಿಸುವ ಕಾರ್ಯವನ್ನು ಇವು ಮಾಡುವುವು. ಆದರೆ ನೀರುಳ್ಳಿಯಂಥ ಗೆಡ್ಡೆಗಳಲ್ಲಿ ಇವು ಆಹಾರವನ್ನು ಸಂಗ್ರಹಿಸಿಟ್ಟಿರುವುವು.

ಬ್ರಯೋಫಿಲ್ಲಂ, ಬೆಗೋನಿಯಗಳ ಎಲೆಯ ಚೂರುಗಳನ್ನು ಭೂಮಿಯಲ್ಲಿ ನೆಟ್ಟು ಹೊಸ ಗಿಡಗಳನ್ನು ಬೆಳೆಸಬಹುದು. ಈ ಎಲೆಗಳು ಹೀಗೆ ನಿರ್ಲಿಂಗ ರೀತಿಯಲ್ಲಿ ವಂಶೋತ್ಪತ್ತಿ ಮಾಡಲು ಸಹಾಯಕವಾಗಿವೆ. ಇನ್ನೊಂದು ತರದ ನಿರ್ಲಿಂಗ ರೀತಿಯಲ್ಲಿ ವಂಶೋತ್ಪತ್ತಿ ಮಾಡುವ ಬೀಜಗಳು (ಸ್ಪೋರ್ಸ್) ಜರೀಗಿಡದ ಎಲೆಗಳಲ್ಲಿನ ಸಣ್ಣ ಚೀಲಗಳಲ್ಲಿ (ಸ್ಪೊರ್ರ್ಯಾಂಜಿಯ) ಹೇರಳವಾಗಿ ಬೆಳೆಯುವುವು.

**ಬೀಜಗಳಲ್ಲಿರುವ ಎಲೆಗಳು :** ಮೊಳಕೆಯಲ್ಲಿನ ಬೀಜದಳಗಳನ್ನು ಎಲೆಗಳೆನ್ನುತ್ತಾರೆ. ಸಾಕಷ್ಟು ದಪ್ಪನಾಗಿದ್ದಾಗ (ಅವರೆ) ಅವೇ ಸಸಿಯ ಬೆಳೆವಣಿಗೆಗೆ ಆಹಾರವಾಗುತ್ತವೆ. ಅವು ತೆಳುವಾಗಿದ್ದರೆ ಸುತ್ತಲಿನ ಆಹಾರವನ್ನು ಹೀರಿಕೊಂಡು ಬೆಳೆಯುತ್ತವೆ (ಹರಳು). ಅನಂತರ ಈ ಎಲೆಗಳು ಕೆಲವು ಕಾಲ ಭೂಮಿಯ ಮೇಲೆ ಬೆಳೆದು ತಮ್ಮ ಕಾರ್ಯವನ್ನು ನಿರ್ವಹಿಸಬಹುದು. ಆದರೆ ಬಟಾಣಿ, ಕಡಲೆಗಳಲ್ಲಿ ಬೀಜದಳಗಳು ಭೂಮಿಯ ಒಳಗೇ ಉಳಿಯುವುವು. ಇದರಂತೆಯೆ ಮುಸುಕಿನ ಜೋಳದಲ್ಲಿಯೂ ಬೀಜದಳ ಭೂಮಿಯ ಒಳಗೇ ಇರುತ್ತದೆ (ಹೈಪೊಜಿಯಲ್). ಇದು ಏಕದಳ ಸಸ್ಯ. ಹೀಗೆ, ಹೂ ಬಿಡುವ ಗಿಡಗಳನ್ನು ಏಕದಳ ಸಸ್ಯಗಳನ್ನಾಗಿ, ದ್ವಿದಳ ಸಸ್ಯಗಳನ್ನಾಗಿ ವಿಂಗಡಿಸಲು ಮುಖ್ಯವಾಗಿ ಈ ಬೀಜದಳಗಳ ಸಂಖ್ಯೆಯೇ ನೆರವಾಗುತ್ತದೆ.

ಹೂಗೊಂಚಲುಗಳ ನಡುವೆ ಬೆಳೆದಿರುವ ಎಲೆಗಳಿಗೆ ಬ್ರ್ಯಾಕ್ಟುಗಳು ಎಂದು ಹೆಸರು. ಇವು ಹೂವಿನ ಬುಡದಲ್ಲಿಯೂ ಇನ್ನೂ ಚಿಕ್ಕದಾಗಿರುವ ಬ್ರ್ಯಾಕ್ಟಿಯೋಲುಗಳು ಹೂವಿನ ಎರಡು ಪಕ್ಕದಲ್ಲಿಯೂ ಇರಬಹುದು. ಇವುಗಳಿಂದ ಮೊಗ್ಗುಗಳಿಗೆ ಕೊಂಚ ರಕ್ಷಣೆ ದೊರೆಯುತ್ತದೆ. ಕೆಲವು ಗಿಡಗಳಲ್ಲಿ ಈ ಬ್ರ್ಯಾಕ್ಟುಗಳೂ ಬಣ್ಣಗಳಿಂದ ಕೂಡಿರುವುದುಂಟು (ಪಾಯಿನ್‌ಸೆಟಿಯಾ ಮತ್ತು ಬೋಗಾನ್‌ವಿಲಿಯ).

ಹೂಜಿಗಿಡ (ನೆಪೆಂತೆಸ್) ಮುಂತಾದ ಕೀಟಾಹಾರಿ ಸಸ್ಯಗಳಲ್ಲಿ, ಎಲೆಗಳು ಒಂದು ವಿಶೇಷ ರೀತಿಯಲ್ಲಿ ಆಹಾರವನ್ನು ಒದಗಿಸಿಕೊಳ್ಳುವುದಕ್ಕೋಸ್ಕರ ಮಾರ್ಪಾಡಾಗಿವೆ. ಡಿಸ್ಕಿಡಿಯ ಎನ್ನುವ ಅಪ್ಪುಗಿಡದಲ್ಲಿ ಕೆಲವು ಎಲೆಗಳು ಹೂಜಿಯಂತೆ ಮಾರ್ಪಾಟಾಗಿವೆ. ಈ ಹೂಜಿಗಳಲ್ಲಿ ನೀರೂ ಕಸವೂ ಸ್ವಲ್ಪ ಮಣ್ಣೂ ಸೇರಿಕೊಂಡಿರುತ್ತವೆ. ಕೆಲವು ಬೇರುಗಳು ಇವುಗಳಲ್ಲಿ ಬೆಳೆದುಕೊಂಡು ಬಂದು, ತಮಗೆ ಆವಶ್ಯಕವಾದ ಪದಾರ್ಥಗಳನ್ನು ಹೀರಿಕೊಳ್ಳುವುವು.

**ಮೊಗ್ಗಿನ ಅವಸ್ಥೆಯಲ್ಲಿ ಎಲೆಗಳು :** ಎಲೆಗಳು ಎಳೆಯವಾಗಿರುವಾಗ ಮೊಗ್ಗಿನಲ್ಲಿರುವ ಅಲ್ಪಸ್ಥಳದಲ್ಲಿಯೇ ನಾನಾ ರೀತಿಯಲ್ಲಿ, ಪರಸ್ಪರ ಸಂಬಂಧವಿರುವಂತೆ ಜೋಡಿಸಿಕೊಂಡಿರುವುದಕ್ಕೆ ವರ್ನೇಷನ್ ಎಂದು ಹೆಸರು. ಇವುಗಳನ್ನು ಮೊಗ್ಗುಗಳ ಅಡ್ಡ ಸೀಳಿಕೆಯಲ್ಲಿ ಕಾಣಬಹುದಾಗಿದೆ. ಒಂದು ಎಲೆಯ ಅಂಚು ಮತ್ತೊಂದರ ಅಂಚನ್ನು ಮುಚ್ಚದಿರಬಹುದು. ಇಲ್ಲವೆ ಒಂದು ಎಲೆ ಹೊರಗೂ ಮತ್ತೊಂದು ಒಳಗೂ ಇದ್ದು ಉಳಿದ ಎಲೆಗಳು ಒಂದನ್ನೊಂದು ಒಂದು ಕಡೆಯ ಅಂಚನ್ನು ಮುಚ್ಚುವಂತಿರಬಹುದು. ಎಲೆಗಳು ತಿರುಚಿಕೊಂಡಿರುವುದೂ ಉಂಟು. ಕೆಲವು ವೇಳೆ ಎಲೆಗಳು ಒಂದನ್ನೊಂದು ಪೂರ್ತಿ ಮುಚ್ಚಿರುವ ಮಾದರಿಗಳೂ ಇವೆ. ಸಾಮಾನ್ಯವಾಗಿ ಪ್ರತಿಯೊಂದು ಎಲೆಯೂ ತನ್ನ ಅಕ್ಷದ ಮೇಲೆ ಮಡಿಚಿಕೊಂಡಿರುತ್ತದೆ.

**ಎಲೆಯ ಒಳರಚನೆ :** ಎಲೆಯ ಮುಖ್ಯ ಕಾರ್ಯ ದ್ಯುತಿಸಂಶ್ಲೇಷಣ. ಆದ್ದರಿಂದ ಎಲೆಯ ಆಕಾರದಂತೆ ಒಳರಚನೆಯೂ ಈ ಕಾರ್ಯಕ್ಕೆ ಬಹು ಅಂದವಾಗಿ ಹೊಂದಿಕೊಂಡಿರುತ್ತದೆ. ಒಂದು ಸಾಮಾನ್ಯವಾದ ಎಲೆ ಒಂದು ಸೀಸದ ಕಡ್ಡಿಯ ಗೀಟಿನಷ್ಟು ಮಾತ್ರ ದಪ್ಪಗಿದ್ದರೂ ಅದರಲ್ಲಿ 7-8 ಜೀವಕೋಶಗಳ ಪದರಗಳಾದರೂ ಇರುವುವು. ಎಲೆಯ ಮೇಲಿನ ಮತ್ತು ಕೆಳಗಡೆಯ ಚರ್ಮಗಳ ಮೇಲೆ ಒಂದು ತರಹ ಮೇಣದಂಥ ಪದಾರ್ಥ (ಕ್ಯುಟಿನ್) ಹರಡಿಕೊಂಡಿರುತ್ತದೆ. ಎಲೆ ಬೇಗ ಒಣಗದಂತೆ ಇದು ಕಾಪಾಡುತ್ತದೆ. ಎಲೆಯ ಮಧ್ಯಭಾಗದಲ್ಲಿರುವ ಜೀವಕೋಶಗಳು ಎರಡು ಬಗೆಯುವು. ಮೇಲಿನ ಅರ್ಧದಷ್ಟು ಇವುಗಳಲ್ಲಿ ಕಂಬದೋಪಾದಿಯಲ್ಲಿದ್ದು ಹರಿತ್ತಿನ ಕಣಗಳಿಂದ ಹೆಚ್ಚಾಗಿ ತುಂಬಿರುತ್ತವೆ. ಈ ಭಾಗವೇ ದ್ಯುತಿಸಂಶ್ಲೇಷಣ ಮಾಡುವುದರಲ್ಲಿ ಮುಖ್ಯಪಾತ್ರವನ್ನು ಹೊಂದಿದೆ. ಇದರ ಕೆಳಭಾಗದ ಜೀವಕೋಶಗಳ ಮಧ್ಯೆ ಗಾಳಿ ಇರಲು ಹೆಚ್ಚು ಅವಕಾಶವಿದ್ದು, ಇದು ಸ್ಪಂಜಿನೋಪಾದಿಯಲ್ಲಿರುವುದು. ಇದರಿಂದ ಆವಿ ಹೊರಹೊಮ್ಮುವಿಕೆ ಹೆಚ್ಚಾಗಿ ಆಗುವುದು. ಈ ಎರಡು ತರಹದ ಅಂಗಾಂಶಗಳ ಮಧ್ಯೆ ನಾಳಗಳು ಇರುತ್ತವೆ. ಈ ನಾಳಗಳಿಂದ ತೆಳುವಾಗಿರುವ ಎಲೆಗೆ ಆಧಾರವೂ ನೀರು, ಲವಣ ಸಕ್ಕರೆಗಳನ್ನು ಸಾಗಿಸಲು ಮಾರ್ಗವೂ ಒದಗುವುವು. ಅನಿಲಗಳು ಎಲೆಯ ಒಳಗೂ ಹೊರಗೂ ಸಂಚರಿಸಲು ಸಾವಿರಾರು ಪತ್ರರಂಧ್ರಗಳು (ಸ್ಟೊಮೇಟ) ಕೆಳಚರ್ಮದಲ್ಲಿರುವುವು. ಒಂದು ಚದುರ ಮಿಲಿಮೀಟರಿನಷ್ಟು ಜಾಗದಲ್ಲಿ ಸಾಮಾನ್ಯವಾಗಿ ಇಂಥ 300 ರಂಧ್ರಗಳು ಇರುವುವು. ಪ್ರತಿ ರಂಧ್ರವೂ ಎರಡು ರಕ್ಷಕ ಜೀವಕೋಶಗಳ ಮಧ್ಯೆ ಇರುತ್ತದೆ.



ಚಿತ್ರ 8 ಎಲೆಗಳ ಜೋಡಣೆಯ ವೈವಿಧ್ಯ : ಅಭಿಮುಖ ಜೋಡಣೆ—ಎಕ್ಕದ ಗಿಡದಲ್ಲಿ

**ಪತ್ರರಂಧ್ರಗಳು ತೆರೆಯುವ ಅಥವಾ ಮುಚ್ಚುವ ಬಗೆ :** ರಕ್ಷಕ ಜೀವಕೋಶಗಳಲ್ಲಿ ಮಾತ್ರ ಹರಿತ್ತಿನ ಕಣಗಳು ಇರುತ್ತವೆಯಲ್ಲದೆ ಹೊರ ಚರ್ಮದ ಇತರ ಜೀವಕೋಶಗಳಲ್ಲಿರುವುದಿಲ್ಲ. ಆದ್ದರಿಂದ ಈ ರಕ್ಷಕ ಜೀವಕೋಶಗಳಲ್ಲಿ ಹಗಲು ದ್ಯುತಿಸಂಶ್ಲೇಷಣವಾದಾಗ ಸಕ್ಕರೆ ಉತ್ಪತ್ತಿಯಾಗುವುದು. ಆಗ ಇವುಗಳ ಅಕ್ಕಪಕ್ಕದ ಜೀವಕೋಶಗಳಿಂದ ನೀರು ಈ ರಕ್ಷಕ ಜೀವಕೋಶಗಳೊಳಗೆ ವಿನಿಮಯ ಕಾರ್ಯದಿಂದ (ಆಸ್ಮಾಸಿಸ್) ತುಂಬಿಕೊಳ್ಳುವುದು, ಹೀಗಾದಾಗ, ಇವುಗಳ ಮಧ್ಯೆ ಇರುವ ರಂಧ್ರ ಅಗಲವಾಗಿ ತೆರೆಯುವುದು. ಅಂತೆಯೆ ರಕ್ಷಕ ಜೀವಕೋಶಗಳಲ್ಲಿ ಪಿಷ್ಟ ತಯಾರಾಗಿ ನೀರು ಕಡಿಮೆಯಾದಾಗ ರಂಧ್ರ ಮುಚ್ಚಿಕೊಳ್ಳುವುದು. ಏಕೆಂದರೆ, ರಕ್ಷಕ ಜೀವಕೋಶಗಳ ಆವರಣದಲ್ಲಿ ಕೆಲವು ಭಾಗಗಳು ಮಾತ್ರ ತೆಳುವಾಗಿದ್ದು, ಸ್ಥಿತಿ ಸ್ಥಾಪಕತ್ವವನ್ನು ಹೊಂದಿರುವುವು.

**ಎಲೆಗಳ ಬಣ್ಣಗಳು :** ಎಲೆಗಳು ಹಸಿರಾಗಿ ಕಾಣುವುದಕ್ಕೆ ಅವುಗಳಲ್ಲಿರುವ ಹರಿತ್ತೇ ಕಾರಣ. ಈ ಹರಿತ್ತು ಎಲೆಯ ಜೀವಕೋಶಗಳಲ್ಲಿರುವ ಹರಿತ್ತಿನ ಕಣಗಳಲ್ಲಿ (ಕ್ಲೋರೊಪ್ಲಾಸ್ಟ್) ಮಾತ್ರ ಇರುತ್ತದೆ. ಗ್ರಾನ ಎನ್ನುವ ಕೆಲವು ಭಾಗಗಳಲ್ಲಿ ಮಾತ್ರ ಹರಿತ್ತು ತುಂಬಿರುತ್ತದೆ. ಹರಿತ್ತಿನ ಕಣಗಳ ಬಣ್ಣ ರಹಿತ ಭಾಗಕ್ಕೆ ಸ್ಟ್ರೋಮ ಎಂದು ಹೆಸರು. ಗ್ರಾನಗಳಲ್ಲಿ ಹರಿತ್ತು, ಜಿಡ್ಡು ಮತ್ತು ಸಸಾರಜನಕ ಪದಾರ್ಥಗಳು ಪದರಗಳಾಗಿ ಜೋಡಣೆಗೊಂಡಿವೆ. ಈಚೆಗೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದ ಸಹಾಯದಿಂದ ಇದನ್ನು ಕಂಡುಹಿಡಿದಿರುತ್ತಾರೆ. ಹರಿತ್ತಿನ ಕಣಗಳು ಜೀವರಸದೊಡನೆ ಚಲಿಸುವುದನ್ನು ವ್ಯಾಲಿಸ್‌ನೇರಿಯ ಗಿಡದ ಎಲೆಗಳಲ್ಲಿ ನೋಡಬಹುದು. ಬೆಳಕಿನ ತೀಕ್ಷ್ಣತೆಯನ್ನು ತಪ್ಪಿಸಿಕೊಳ್ಳಲು, ಹರಿತ್ತಿನ ಕಣಗಳು ಜೀವಕೋಶದ ಮೇಲ್ಭಾಗವನ್ನು ಬಿಟ್ಟು ಇಕ್ಕೆಲಗಳಲ್ಲಿಯೂ ಒಟ್ಟುಗೂಡುವುದನ್ನು ಬೇರೆ ಕೆಲವು ಗಿಡದ ಎಲೆಯಲ್ಲಿ ನೋಡಬಹುದು. ಎಲೆಯನ್ನು ನೀರಿನಲ್ಲಿ ಕುದಿಸಿ, ಮದ್ಯಸಾರದಲ್ಲಿ ಹಾಕಿದರೆ, ಹರಿತ್ತೆಲ್ಲವೂ ಕರಗಿ ಈಚೆಗೆ ಬರುವುದು. ನಾವು ಸಾಧಾರಣವಾಗಿ ಹರಿತ್ತು ಎಂದು ಕರೆಯುವ ಪದಾರ್ಥದಲ್ಲಿ ಎರಡು ಬಗೆಗಳಿವೆ. ಅಲ್ಲದೆ ಹಳದಿಯ ಬಣ್ಣದ ಕ್ಸಾಂತೋಫಿಲ್ ಮತ್ತು ಕೆಂಪು ಬಣ್ಣದ ಕೆರೊಟೀನ್ ಎಂಬ ಬಣ್ಣದ ಪದಾರ್ಥವೂ ಮಿಶ್ರಣರೂಪದಲ್ಲಿರುತ್ತವೆ.

ಕ್ಲೋರೊಫಿಲ್ ಎ—$C_{55}\ H_{72}O_5\ N_4\ Mg$

ಕ್ಲೋರೊಫಿಲ್ ಬಿ—$C_{55}\ H_{70}\ O_6\ N_4\ Mg$

ಕೆರೊಟೀನ್ —$C_{40}\ H_{56}$

ಕ್ಸಾಂತೋಫಿಲ್ —$C_{40}\ H_{56}\ O_2$

ಆದರೆ ದ್ಯುತಿಸಂಶ್ಲೇಷಣ ಕಾರ್ಯಕ್ಕೆ ಮೊದಲ ಎರಡು ಬಣ್ಣದ ಪದಾರ್ಥಗಳೇ ಸಾಕು. ಎಲೆಯಲ್ಲಿ ಹರಿತ್ತು ಉತ್ಪತ್ತಿಯಾಗಬೇಕಾದರೆ, ಅದಕ್ಕೆ ಬೆಳಕೂ ಕಬ್ಬಿಣ, ಮೆಗ್ನೀಸಿಯಂ ಮುಂತಾದವೂ ಅತ್ಯಾವಶ್ಯಕ. ಹಳೆಯ ಎಲೆಗಳಲ್ಲಿ ಕ್ಲೋರೊ

ಫಿಲ್ಲುಗಳು ಕಡಿಮೆಯಾಗಿ ಹಳದಿಯ ಕ್ಸಾಂತೊಫಿಲ್ಲಿನ ಪ್ರಮಾಣ ಹೆಚ್ಚುವುದು. ಚಳಿಗಾಲದಲ್ಲಿ ಉದುರುವುದಕ್ಕೆ ಮುಂಚೆ ಸಮಶೀತೋಷ್ಣವಲಯದ ಗಿಡಗಳ ಎಲೆಗಳು ಕೆಂಪುಬಣ್ಣದ ಅಂಥೋಸಯನಿನನ್ನು ತಮ್ಮ ಜೀವಕೋಶದ ಮಧ್ಯದಲ್ಲಿರುವ ರಸದಲ್ಲಿ ಸಂಗ್ರಹಿಸುವುವು. ಅನಂತರ ಕಂದುಬಣ್ಣದ ಟ್ಯಾನಿನುಗಳೂ ಹೆಚ್ಚಾಗಿ ಉತ್ಪತ್ತಿಯಾಗುವುವು. ಅನೇಕ ಜಾತಿಯ ಗಿಡಗಳಲ್ಲಿ ಹರಿತ್ತು ಎಲೆಯ ಕೆಲವು ಭಾಗಗಳಲ್ಲಿ ಮಾತ್ರ ಇರುತ್ತದೆ. ಇದು ಅವುಗಳ ಹುಟ್ಟುಗುಣ. ಹರಿತ್ತನ್ನು ತಯಾರಿಸುವ ಶಕ್ತಿಯನ್ನು ಕಳೆದುಕೊಂಡ ಬಣ್ಣರಹಿತ ಸಸಿಗಳು (ಅಲ್ಬಿನೋಸ್) ಬೇಗ ಸಾಯಬೇಕಾಗುತ್ತವೆ.

**ದ್ಯುತಿಸಂಶ್ಲೇಷಣೆ :** ಗಿಡದ ಎಲೆಗಳು ಹಗಲಿನಲ್ಲಿ ಸೂರ್ಯರಶ್ಮಿಯ ಸಹಾಯದಿಂದ ಗಾಳಿಯಲ್ಲಿನ ಇಂಗಾಲಾಮ್ಲವನ್ನು ಬಳಸಿಕೊಂಡು ನೀರಿನೊಂದಿಗೆ ಶರ್ಕರ ಪಿಷ್ಟಾದಿಗಳನ್ನು ತಯಾರು ಮಾಡುವ ವಿಧಾನಕ್ಕೆ ಈ ಹೆಸರಿದೆ. (ನೋಡಿ— **ದ್ಯುತಿಸಂಶ್ಲೇಷಣೆ**). ಇಲ್ಲಿ ದ್ಯುತಿಸಂಶ್ಲೇಷಣೆಯಿಂದ ಜಗತ್ತಿಗಾಗುವ ಉಪಕಾರಗಳನ್ನು ಮಾತ್ರ ತಿಳಿಸಿದೆ. ನಮ್ಮ ಚಟುವಟಿಕೆಗಳಿಗೆ ಅಗತ್ಯವಾದ ಶಕ್ತಿಗೆ ಆಹಾರವೇ ಮೂಲ. ಅಂಥ ಆಹಾರ ತಯಾರಿಕೆಯಲ್ಲಿ ಹರಿತ್ತಿನ ಪಾತ್ರ ಬಹು ಮುಖ್ಯವಾದುದು. ಅಲ್ಲದೆ ಪುರಾತನ ಕಾಲದ ಸಸ್ಯಗಳು ಈ ಕಾರ್ಯದ ಮೂಲಕ ಸಂಗ್ರಹಿಸಿದ ಸೂರ್ಯನ ಶಕ್ತಿಯೇ ನಾವು ಈಗ ಬಳಸುವ ಕಲ್ಲಿದ್ದಲು, ಪೆಟ್ರೋಲ್ ಮುಂತಾದುವುಗಳಲ್ಲಿ ಅಡಗಿರುತ್ತದೆ. ಇವುಗಳ ಬಳಕೆ ಯಂತ್ರಯುಗದ ಶ್ರೇಯಸ್ಸಿಗೆ ಆಧಾರವಾಗಿದೆ. ಹಾಗೂ ಪಟ್ಟಣಗಳಲ್ಲಿ ಹೆಚ್ಚಾಗಿ ಇಂಗಾಲದ ಡೈಆಕ್ಸೈಡೂ ಇತರ ಅನಾರೋಗ್ಯಕರವಾದ ಅನಿಲಗಳೂ ಉತ್ಪತ್ತಿಯಾಗುತ್ತವೆ. ಗಿಡಮರಗಳು, ದ್ಯುತಿಸಂಶ್ಲೇಷಣೆಯಲ್ಲಿ ಆಮ್ಲಜನಕವನ್ನು ಉತ್ಪತ್ತಿಮಾಡಿ, ವಾಯುವನ್ನು ಶುದ್ಧಿಗೊಳಿಸಿರುವುದರಿಂದ ಈ ಕಾರಣದಿಂದಲೂ ಮರಗಳನ್ನು ಬೆಳೆಸುವುದು ಅತ್ಯಾವಶ್ಯಕವಾಗಿದೆ. ಪ್ರತಿವರ್ಷವೂ ದ್ಯುತಿಸಂಶ್ಲೇಷಣೆಯಿಂದ ತಯಾರಾಗುವ ಸಾವಯುವ ಪದಾರ್ಥಗಳು, ಪ್ರಪಂಚದಲ್ಲಿರುವ ಎಲ್ಲ ಹೊಲಗದ್ದೆ, ಫ್ಯಾಕ್ಟರಿ ಮುಂತಾದವುಗಳಲ್ಲಿ ಉತ್ಪತ್ತಿಯಾಗುವ ಪದಾರ್ಥಗಳ ಪ್ರಮಾಣಕ್ಕಿಂತ




ಚಿತ್ರ 4 ಎಲೆಗಳ ಜೋಡಣೆಯ ವೈವಿಧ್ಯ : ಪರ್ಯಾಯ ಜೋಡಣೆ —ದಾಸವಾಳ ಗಿಡದಲ್ಲಿ

100ರಷ್ಟು ಹೆಚ್ಚಾಗಿರುತ್ತದೆ. ಈ ಕಾರ್ಯದಲ್ಲಿ ಸಸ್ಯಗಳು 470 ಬಿಲಿಯನ್ ಟನ್ನುಗಳಷ್ಟು ಸಾವಯವ ಪದಾರ್ಥಗಳನ್ನು ತಯಾರಿಸುವುದರಲ್ಲಿ, 690 ಬಿ.ಟನ್ನು ಇಂಗಾಲದ ಡೈಆಕ್ಸೈಡನ್ನೂ 280 ಬಿ.ಟನ್ನು ನೀರನ್ನೂ ಉಪಯೋಗಿಸಿಕೊಂಡು, 500 ಬಿ.ಟನ್ನು ಆಮ್ಲಜನಕವನ್ನೂ ಈಚೆಗೆ ಬಿಡುತ್ತವೆ. ದ್ಯುತಿಸಂಶ್ಲೇಷಣೆಯಿಲ್ಲದಿದ್ದರೆ ಗಾಳಿಯಲ್ಲಿ ಇಷ್ಟು ಆಮ್ಲಜನಕವಿರುತ್ತಿರಲಿಲ್ಲ.

**ಎಲೆಗಳಲ್ಲಿ ಉಸಿರಾಟ :** ಹಗಲು ಹೊತ್ತಿನಲ್ಲಿ ಎಲೆಗಳು ಹೆಚ್ಚು ರಭಸದಿಂದ ದ್ಯುತಿಸಂಶ್ಲೇಷಣೆಯನ್ನು ಮಾಡುವುದರಿಂದ, ಎಲೆಗಳು ಉಸಿರಾಡುತ್ತಿದ್ದರೂ ಅದು ಗೋಚರವಾಗುವುದಿಲ್ಲ. ಆದರೆ ರಾತ್ರಿ ಹೊತ್ತಿನಲ್ಲಿ ಎಲೆಗಳ ಉಸಿರಾಟವೊಂದೇ ನಡೆಯುವುದರಿಂದ, ಆಗ ಅವು ಇಂಗಾಲದ ಡೈಆಕ್ಸೈಡನ್ನು ತಮ್ಮ ರಂಧ್ರಗಳಿಂದ ಈಚೆಗೆ ಬಿಡುವುದು ಹೆಚ್ಚು ಸ್ಪಷ್ಟವಾಗಿ ಗೋಚರಿಸುತ್ತದೆ. ಸೂರ್ಯನ ಬೆಳಕು ಬೆಳಗಿನ ಜಾವದಲ್ಲಿ ಇನ್ನೂ ಕಡಿಮೆಯಾಗಿರುವಾಗ ಉಸಿರಾಡುವಿಕೆಯಿಂದ ಹೊರಗೆ ಬರುವ ಇಂಗಾಲದ ಡೈಆಕ್ಸೈಡ್ ದ್ಯುತಿಸಂಶ್ಲೇಷಣೆಗೆ ಮಾತ್ರ ಸಾಕಾಗುವಷ್ಟಿರುತ್ತದೆ.

ದ್ಯುತಿಸಂಶ್ಲೇಷಣೆ ಆಹಾರವನ್ನು ತಯಾರುಮಾಡುವ ಕಾರ್ಯವಾದರೆ, ಉಸಿರಾಡುವ ಕಾರ್ಯ ಆಹಾರವನ್ನು ವಿಭಜನೆಮಾಡಿ ಅದರಿಂದ ಶಕ್ತಿಯನ್ನು ಬಿಡುಗಡೆ ಮಾಡುವ ಕಾರ್ಯವಾಗಿದೆ. ಹೀಗೆ ಇವೆರಡು ಕಾರ್ಯಗಳೂ ಒಂದಕ್ಕೊಂದು ವಿರೋಧವಾದುವು.

**ಆವಿ ಹೊರಹೊಮ್ಮುವಿಕೆ :** ಎಲೆಗಳ ರಚನೆ ದ್ಯುತಿಸಂಶ್ಲೇಷಣೆಗೆ ಮುಖ್ಯವಾಗಿ ಹೊಂದಿಕೊಂಡಿರುವುದರಿಂದ, ಇವುಗಳಿಂದ ಆವಿ ಹೊರಹೊಮ್ಮಬೇಕಾಗಿರುವುದು ಅನಿವಾರ್ಯ. ಆದರೆ, ಆವಿ ಹೊರಹೊಮ್ಮುವಿಕೆ ಹೆಚ್ಚಾದರೆ, ಗಿಡ ಬಾಡಿಹೋಗಿ ಅಪಾಯಕ್ಕೆ ತುತ್ತಾಗಬಹುದು. ಬಿಸಿಲು, ಉಷ್ಣತೆ ಮತ್ತು ಗಾಳಿ ಹೆಚ್ಚಾಗಿದ್ದು, ಭೂಮಿಯಲ್ಲಿ ನೀರು ಕಡಿಮೆ ಇರುವ ಪ್ರದೇಶಗಳಲ್ಲಿ ಈ ಅಪಾಯ ಹೆಚ್ಚಾಗಿರುವುದು. ಅಲ್ಲಿ ಬೆಳೆಯುವ ಗಿಡಗಳಿಗೆ ಕ್ಸೀರೋಫೈಟ್ಸ್ ಎನ್ನುತ್ತಾರೆ. ಇದರಲ್ಲಿ ಎಲೆಯ ಮೇಲೂ ಕೆಳಗೂ ಮೇಣದಂಥ ವಸ್ತು ದಪ್ಪನಾಗಿ ಹರಡಿಕೊಂಡಿದೆ. ಬ್ರೆಜಿಲ್ ದೇಶದ (ಕಾರ್ನುಕೋಪಿಯ) ಮೇಣದ ಮರದ ಎಲೆಗಳಿಂದ ಮೇಣವನ್ನು ಸಂಗ್ರಹಿಸುತ್ತಾರೆ. ಹೊರಚರ್ಮವೂ ಅನೇಕ ಪದರಗಳಿಂದ ಕೂಡಿದೆ. ರಕ್ಷಕಜೀವಕೋಶಗಳು ಗುಳಿಗಳಲ್ಲಿ ಅಡಗಿವೆ. ಈ ಗುಳಿಗಳಲ್ಲಿ ಕೂದಲು ತುಂಬಿಕೊಂಡಿದೆ. ಎಲೆಯಲ್ಲಿ ಒಳಗೆ ಕಂಬದಂಥ ಜೀವಕೋಶಗಳು ಹೆಚ್ಚಾಗಿದ್ದು, ಇವು ದಟ್ಟವಾಗಿ ಜೋಡಣೆಗೊಂಡಿವೆ. ಸ್ಪಂಜಿನಂತಿರುವ ಜೀವಕೋಶಗಳು ಅಲ್ಪ ಪ್ರಮಾಣದಲ್ಲಿವೆ. ಈ ತರಹ ವಿಶೇಷ ರಚನೆಯಿಂದ, ಈ ಎಲೆಗಳು ಆವಿ ಹೊರಬೀಳುವ ಪ್ರಮಾಣವನ್ನು ನಿಯಂತ್ರಿಸಿಕೊಳ್ಳುತ್ತವೆ. ಕೆಲವು ಜಾತಿಯ ಹುಲ್ಲಿನಲ್ಲಿ, ಮಧ್ಯಾಹ್ನ ವೇಳೆಯಲ್ಲಿ ಎಲೆ ಸುರುಳಿಯಂತೆ ಸುತ್ತಿಕೊಳ್ಳುವುದರಿಂದಲೂ ಇದೇ ಪರಿಣಾಮವಾಗುವುದು ಕೆಲವು ಗಿಡಗಳಲ್ಲಿ ಎಲೆಗಳೇ ಬಹಳ ಚಿಕ್ಕವಾಗಿರಬಹುದು ; ಬೇಗ ಉದುರಿಹೋಗಬಹುದು ; ಮತ್ತೆ ಕೆಲವು ಗಿಡಗಳ ಎಲೆಗಳು ಮಳೆಯಾದಾಗ ಹೆಚ್ಚಾಗಿ ನೀರನ್ನು ಸಂಗ್ರಹಿಸಿಟ್ಟುಕೊಳ್ಳುತ್ತವೆ (**ಕತ್ತಾಳೆ**).

ನೆರಳಿನಲ್ಲಿ ಬೆಳೆಯುವ ಗಿಡಗಳ ಎಲೆಗಳಾದರೂ ಅಗಲವಾಗಿ ತೆಳುವಾಗಿದ್ದು, ಮೇಲಿರುವ ಮೇಣದ ಪೊರೆ ಬಹಳ ತೆಳ್ಳಗಿರುತ್ತದೆ.

ನೀರಿನಲ್ಲಿ ಬೆಳೆಯುವ ಗಿಡಗಳ ಎಲೆಗಳಲ್ಲಿ ವಾಯು ಹೆಚ್ಚಾಗಿ ಸಂಗ್ರಹವಾಗಲು ಅನುಕೂಲವಾಗುವಂಥ ರಚನೆ ಇದೆ. ಎಲೆ ತೇಲುತ್ತಿದ್ದರೆ, ರಂಧ್ರಗಳು ಮೇಲುಭಾಗದ ಚರ್ಮದಲ್ಲಿಯೇ ಇರುವುವು. ಮುಳುಗಿರುವ ಎಲೆಗಳಲ್ಲಿ ರಂಧ್ರಗಳೇ ಇರುವುದಿಲ್ಲ. ಅಲ್ಲದೆ ಈ ಎಲೆಗಳು ಬಹುವಾಗಿ ಚೂರು ಚೂರಾಗಿರುತ್ತವೆ.

ನೀರು ಹೆಚ್ಚಾಗಿ ದೊರೆಯುವ ತಂಪು ಜಾಗದಲ್ಲಿ ಬೆಳೆಯುವ ಕೆಸವಿನದಂಟು, ಟ್ರೋಪಿಯೋಲಂ ಮುಂತಾದ ಗಿಡಗಳಲ್ಲಿ ನೀರು ಆವಿಯ ರೂಪದಲ್ಲಿಲ್ಲದೆ, ತನ್ನ ದ್ರವರೂಪದಲ್ಲಿಯೇ ಹೊರಹೊಮ್ಮುತ್ತದೆ. ಇದು ಎಲೆಗಳ ಮುಖ್ಯ ನಾಳಗಳ ತುದಿಯಲ್ಲಿರುವ ಕೆಲವು ಜೀವಕೋಶಗಳ ಮೂಲಕ ಈಚೆಗೆ ಬರುವುದು. ಕೆಲವು ವೇಳೆ, ಒಂದು ನಿಮಿಷಕ್ಕೆ ನೂರುತೊಟ್ಟುಗಳು ಬೀಳಬಹುದು. ರಾತ್ರಿ ಉದ್ದವಾಗಿದ್ದು, ನೆಲದಲ್ಲಿ ನೀರು ಹೆಚ್ಚಾಗಿದ್ದರೆ, ಮರುದಿವಸ ಮಂಜಿನ ಹನಿಯಂತೆ ಹುಲ್ಲಿನ ಎಲೆಯ ತುದಿಯಲ್ಲಿ ಈ ರೀತಿ ನೀರು ಹೊರಹೊಮ್ಮುವುದು. ಈ ಕಾರ್ಯಕ್ಕೆ ಉಗುಳುವಿಕೆ (ಗಟ್ಟೇಷನ್) ಎಂದು ಹೆಸರು.

**ಎಲೆ ಉದುರುವಿಕೆ :** ಎಲೆಗಳು ಬೇಗನೆ ಉದುರಬಹುದು ಅಥವಾ ಒಂದು ಋತುವಿನ ಕೊನೆಯಲ್ಲಿ ಉದುರಬಹುದು. ಚಳಿಗಾಲಕ್ಕೆ ಮುಂಚೆ ಸಮಶೀತೋಷ್ಣವಲಯಗಳಲ್ಲಿ ಅನೇಕ ಗಿಡಗಳು ತಮ್ಮ ಎಲೆಗಳನ್ನು ಕಳೆದುಕೊಳ್ಳುವುವು. ಏಕೆಂದರೆ, ಆಗ ಆ ಗಿಡಗಳು ಎಂದಿನಂತೆ ಹೆಚ್ಚು ನೀರನ್ನು ಹೀರಿಕೊಳ್ಳುವುದು ಕಷ್ಟವಾಗುವುದು. ಆದರೆ ಕೆಲವು ಗಿಡಗಳಲ್ಲಿ ಎಲೆಗಳು ಬಹಳ ಕಾಲವಿದ್ದು ಏಕಕಾಲದಲ್ಲಿ ಎಲ್ಲ ಉದುರುವುದಿಲ್ಲ. ಉದುರುವುದಕ್ಕೆ ಮುಂಚೆ ಎಲೆಗಳು ಹಳದಿ, ಕೆಂಪು ಬಣ್ಣಗಳಿಗೆ ತಿರುಗಿ,

ತಮ್ಮಲ್ಲಿರುವ ಸಾರವನ್ನು ಕಾಂಡಕ್ಕೆ ಕೊಟ್ಟುಬಿಡುವುವು. ಅಂಥ ಎಲೆಯ ಬುಡದಲ್ಲಿ, ಒಂದು ಹೊಸ ತರಹ ಜೀವಕೋಶಗಳ ಪದರ ಅಡ್ಡವಾಗಿ ಬೆಳೆದುಕೊಂಡು ಬರುತ್ತದೆ. ಅನಂತರ ಈ ಪದರದಲ್ಲಿ ತಕ್ಕಷ್ಟು ಶಕ್ತಿ ಇಲ್ಲದಂತಾಗಿ ಎಲೆ ಉದುರಲು ಅನುಕೂಲವಾಗುತ್ತದೆ, ಗಾಳಿಯಿಂದ ಎಲೆಯ ಮಧ್ಯದ ನಾಳ ಮುರಿಯುವುದೇ ತಡ, ಎಲೆ ಉದುರುತ್ತದೆ. ಸತ್ತ ಕೊಂಬೆಗಳಿಂದ ಎಲೆಗಳು ಈ ರೀತಿ ಉದುರುವುದಿಲ್ಲ. ಎಲೆ ಉದುರಿದ ಜಾಗದಲ್ಲಿ, ಬುಡದಲ್ಲಿ ಕಾರ್ಕ್ ಎಂಬ ಅಂಗಾಂಶ ಉತ್ಪತ್ತಿಯಾಗಿರುವುದರಿಂದ, ಇಲ್ಲಿ ಯಾವ ಗಾಯವೂ ಉಂಟಾಗದಂತೆ ರಕ್ಷಣೆ ಇರುತ್ತದೆ. ಆದರೆ ಓಕ್‌ನಂಥ ಮರಗಳಲ್ಲಿ ಸತ್ತ ಎಲೆಗಳು ಬಹಳ ಕಾಲ ಗಿಡಕ್ಕೆ ಅಂಟಿಕೊಂಡಿರುವುವು.

**ಎಲೆಗಳ ವಿಕಾಸ :** ಬಹು ಪುರಾತನ ಡಿವೋನಿಯನ್ ಕಾಲದ ರೈನಿಯ ಮುಂತಾದ ಗಿಡಗಳ ಅವಶೇಷಗಳಿಂದ ತೋರಿ ಬರುವಂತೆ, ಆದಿಕಾಲದ ಸಸ್ಯಗಳಲ್ಲಿ ಎಲೆಗಳೇ ಇರಲಿಲ್ಲ. ಅವುಗಳ ಕೆಲಸವನ್ನು ಕಾಂಡದ ಕವಲುಗಳೇ ಮಾಡಬೇಕಾಗಿತ್ತು. ಅನಂತರದ ವಿಕಾಸದಲ್ಲಿ ಕಾಂಡಗಳ ಮೇಲೆ ಸಣ್ಣ ಸಣ್ಣ ಎಲೆಗಳು ಉದ್ಭವಿಸಿದುವು—ಎಂಬುದು ಕೆಲವರ ಮತ. ಕಾಂಡದ ಸಣ್ಣ ಸಣ್ಣ ಕೊಂಬೆಗಳೇ ಅಗಲವಾಗುತ್ತ ಬಂದು, ಉದ್ದವಾಗಿ ಬೆಳೆಯುವುದನ್ನು ನಿಲ್ಲಿಸಿ, ಎಲೆಗಳಾಗಿ ಮಾರ್ಪಾಡಾದುವು ಎಂಬುದು ಮತ್ತೆ ಕೆಲವರ ವಾದ. ದೊಡ್ಡ ಎಲೆಗಳ ಉತ್ಪತ್ತಿಯ ವಿಕಾಸ ಈ ರೀತಿಯಲ್ಲಿ ಕಾಂಡದ ಕವಲು ಕೊನೆಗಳ ಜೋಡಣೆಯಿಂದ ಆಯಿತೆಂಬುದನ್ನು ಅನೇಕರು ಒಪ್ಪಿರುವರು. ಆದರೆ ಸಣ್ಣ ಎಲೆಗಳ ವಿಕಾಸ ಮುಂಚೆ ಏನೂ ಬೆಳೆಯದೇ ಇದ್ದ ಕಾಂಡದ ಮೇಲ್ಮೈಯ ಮೇಲೆ, ಹೊಸದಾಗಿ ಉದ್ಭವಿಸಿದುದರಿಂದ ಆಯಿತೆಂದು ಕೆಲವರು ವಾದಿಸುವರು.



ಚಿತ್ರ 5 ಎಲೆಗಳ ಜೋಡಣೆಯ ವೈವಿಧ್ಯ: ಸುತ್ತು ಜೋಡಣೆ—ಕಣಗಿಲೆ ಗಿಡದಲ್ಲಿ

**ಎಲೆಗಳ ಉಪಯೋಗಗಳು :** ಹಲವು ಎಲೆಗಳನ್ನು ತರಕಾರಿಯಾಗಿ ಉಪಯೋಗಿಸುತ್ತೇವೆ. ಕರಿಬೇವು, ಕೊತ್ತಂಬರಿ, ಪುದೀನ ಮುಂತಾದುವು ಆಹಾರಕ್ಕೆ ತಕ್ಕ ವಾಸನೆಯನ್ನು ಕೊಟ್ಟು, ಜೀರ್ಣಶಕ್ತಿಯನ್ನೂ ಹೆಚ್ಚಿಸುವುವು. ಟೀ ಗಿಡದ ಎಲೆಗಳನ್ನು ಪಾನೀಯಕ್ಕೆ ಬಳಸುವುದು ಸಾಮಾನ್ಯವಾಗಿದೆ. ಹೊಗೆಸೊಪ್ಪು, ಗಾಂಜಾ ಮುಂತಾದ ಎಲೆಗಳನ್ನು ಹೊಗೆಬತ್ತಿಯಾಗಿ ಸೇವಿಸುತ್ತಾರೆ. ವೀಳೆಯದೆಲೆಗಳಿಗೆ ಸಮಾಜದಲ್ಲಿರುವ ಪ್ರಾಮುಖ್ಯ ಎಲ್ಲರಿಗೂ ತಿಳಿದಿದೆ. ಬಾಳೆ, ಮುತ್ತುಗ ಕಂಚುವಾಳ—ಇವುಗಳನ್ನು ಊಟಮಾಡಲು ತಟ್ಟೆಗೆ ಬದಲು ಉಪಯೋಗಿಸುತ್ತೇವೆ. ಕತ್ತಾಳೆ, ಬಾಳೆಗಳಿಂದ ಬರುವ ನಾರನ್ನು ದಾರದಂತೆ ಉಪಯೋಗಿಸುತ್ತಾರೆ. ಇಷ್ಟಲ್ಲದೆ, ಅನೇಕ ಜಾತಿಯ ಗಿಡಗಳ ಎಲೆಗಳನ್ನು ಔಷಧಿಯಾಗಿ ಎಲ್ಲ ದೇಶಗಳಲ್ಲಿಯೂ ಬಳಸುತ್ತಾರೆ. ಬೆಲ್ಲಡೋನ, ಡಿಜಿಟ್ಯಾಲಿಸ್, ಅಟ್ರೋಪೀನ್ ಮುಂತಾದುವು ಪರ್ಣಜನ್ಯ ಔಷಧಿಗಳೇ. ಯೂಕಲಿಪ್ಟಸ್ ಮತ್ತು ಮಜ್ಜಿಗೆ ಹುಲ್ಲಿನಿಂದ ಎಣ್ಣೆಯನ್ನು ತೆಗೆಯುವರು. ಅಲ್ಲದೆ ಎಲೆಯ ಹರಿತ್ತನ್ನು ದಂತಧಾವನ ಸರಿಗಳಲ್ಲೂ ಕೆಲವು ಪದಾರ್ಥಗಳಿಗೆ ಬಣ್ಣ ಕಟ್ಟುವುದಕ್ಕೂ ಉಪಯೋಗಿಸುವುದುಂಟು. ಹೊಂಗೆ, ಗ್ಲಿರಿಸಿಡಿಯ ಎಲೆಗಳು ಒಳ್ಳೆಯ ಹಸಿರುಗೊಬ್ಬರವಾಗುವುದು. ಹಬ್ಬದ ದಿವಸಗಳಲ್ಲಿ ಮಾವಿನ ಎಲೆಗಳಿಂದ ಮನೆಗೆ ತೋರಣವನ್ನು ಕಟ್ಟುತ್ತೇವೆ. ಉಗಾದಿ ಹಬ್ಬದಲ್ಲಿ ಬೇವಿಗೆ ಪ್ರಾಧಾನ್ಯವಿದೆ.

**ಎಲೆಗಳ ವಿನ್ಯಾಸ :** ಕಾಂಡದ ಮೇಲಿರುವ ಎಲೆಗಳು ಕೆಳಗಿನ ಎಲೆಗಳನ್ನು ಪೂರ್ತಿ ಮುಚ್ಚಿಕೊಂಡರೆ ಆ ಎಲೆಗಳಿಗೆ ದ್ಯುತಿಸಂಶ್ಲೇಷಣೆಗೆ ಅಗತ್ಯವಾದ ಬೆಳಕು ದೊರೆಯದೆ ಹಾನಿಯಾಗುತ್ತದೆ. ಆದುದರಿಂದ ಎಲೆಗಳು ಕಾಂಡದ ಮೇಲೆ ಒಂದು ನಿರ್ದಿಷ್ಟವಾದ ರೀತಿಯಲ್ಲಿ ಬೆಳೆದು ಎಲ್ಲ ಎಲೆಗಳಿಗೂ ತಕ್ಕಷ್ಟು ಬೆಳಕು ದೊರಕುವಂತೆ ಜೋಡಣೆಗೊಂಡಿರುತ್ತವೆ. ಎಲೆಗಳ ಜೋಡಣೆಯ ಈ ವಿನ್ಯಾಸಕ್ಕೆ ಸಂಯೋಜನೆ (ಫಿಲ್ಲೊಟ್ಯಾಕ್ಸಿ) ಎಂದು ಹೆಸರು. ಕೆಲವು ಗಿಡಗಳಲ್ಲಿ ಕಾಂಡ ಚಿಕ್ಕದಾಗಿದ್ದು, ಎಲೆಗಳೆಲ್ಲ ನೆಲದ ಮೇಲೆಯೇ ಹರಡಿಕೊಂಡಿರುವುವು. ಸೆಂಪರ್‌ವೈವಂ ಮುಂತಾದ ಗಿಡಗಳಲ್ಲಿ ಎಲೆಗಳು ಹೂವಿನ ದಳಗಳೋಪಾದಿಯಲ್ಲಿ ಕಾಣುತ್ತವೆ.

ಒಂದು ಗಿಣ್ಣಿನಲ್ಲಿ ಎರಡು ಎಲೆಗಳಿದ್ದರೆ, ಅದಕ್ಕೆ ಅಭಿಮುಖ ಜೋಡಣೆ ಎನ್ನುವರು. ಎಲೆಗಳು ಅಭಿಮುಖವಾಗಿದ್ದು, ಎರಡೇ ಸಾಲುಗಳಲ್ಲಿರಬಹುದು ಅಥವಾ ನಾಲ್ಕು ಸಾಲುಗಳಲ್ಲಿರಬಹುದು (ಎಕ್ಕ). ದ್ವಿದಳ ಸಸ್ಯಗಳ ಸಸಿಗಳಲ್ಲಿ ಎರಡು ಬೀಜದಳಗಳೂ ಯಾವಾಗಲೂ ಅಭಿಮುಖವಾಗಿಯೇ ಇರುವುವು. ಕಾಫಿ ಗಿಡದ ಕುಟುಂಬದ (ರೂಬಿಯೇಸಿ) ಎಲೆಗಳೂ ಹೀಗೆಯೇ ಇರುವುವು.

ಒಂದೇ ಗಿಣ್ಣಿನಲ್ಲಿ ಎರಡಕ್ಕಿಂತ ಹೆಚ್ಚಾಗಿ ಎಲೆಗಳು ಇದ್ದರೆ ಅದಕ್ಕೆ ವರ್ತುಳ ವಿನ್ಯಾಸ (ಹೋರ್ಲ್ಡ್) ಎನ್ನಬಹುದು (ಕಣಗಿಲೆ).

ಒಂದು ಗಿಣ್ಣಿನಿಂದ ಒಂದು ಎಲೆಮಾತ್ರ ಉದ್ಭವಿಸಿದರೆ ಅದು ಪರ್ಯಾಯ ವಿನ್ಯಾಸವಾಗುತ್ತದೆ (ಆಲ್ಟರ್‌ನೇಟ್). ಉದಾಹರಣೆಗೆ ಆಲ, ಕಂಚುವಾಳ. ಎಲೆಯ ಮೇಲಿನ ಗಿಣ್ಣಿನ ಅಥವಾ ಕೆಳಗಿನ ಗಿಣ್ಣಿನ ಎಲೆ ಇದರ ಎದುರು ದಿಕ್ಕಿನಲ್ಲಿರುತ್ತದೆ. ಈ ವಿನ್ಯಾಸ ಒಂದು ಸೂತ್ರವನ್ನು ಅವಲಂಬಿಸಿದೆ. ಹುಲ್ಲಿನಲ್ಲಿರುವಂತೆ, ಕಾಂಡದ ಒಂದು ಸುತ್ತಿನಲ್ಲಿ ಎರಡು ಎಲೆಗಳಿದ್ದು ಒಟ್ಟು ಉದ್ದದ ಎರಡು ಸಾಲುಗಳಿರುತ್ತವೆ. ಇದನ್ನು $\frac{1}{2}$ ವಿನ್ಯಾಸವೆನ್ನುವರು. ಜೊಂಡುಗಿಡದಲ್ಲಿ (ಸೈಪೆರಸ್) $\frac{1}{3}$ ವಿನ್ಯಾಸವಿರುತ್ತದೆ. ಇವೆರಡು ವಿನ್ಯಾಸಗಳ ಅಂಶಗಳನ್ನೂ ಛೇದಗಳನ್ನು ಕೂಡಿದರೆ 2/5 ವಿನ್ಯಾಸವಾಗುವುದು. ಉದಾ : ಹೂವರ್ಚಿಗಿಡ. ಇನ್ನೂ ಮುಂದುವರಿದ ವಿನ್ಯಾಸವೆಂದರೆ ಪ್ಲಾಂಟಾಗೊ ಗಿಡದಲ್ಲಿರುವಂತೆ $\frac{1+2}{3+5}=\frac{3}{8}$ ಅನೇಕವೇಳೆ, ಎಲೆಗಳ ತೊಟ್ಟುಗಳು ತಿರುವಿಕೊಂಡಿರುವುದರಿಂದ, ಅವುಗಳ ವಿನ್ಯಾಸವನ್ನು ಸರಿಯಾಗಿ ಕಂಡು ಹಿಡಿಯಲು ಕಷ್ಟವಾಗುವುದು. ಗಿಡದ ಎಲೆಗಳು ಸಾಧ್ಯವಾದಷ್ಟು ಒಂದನ್ನು ಮತ್ತೊಂದು ಮುಚ್ಚದಂತೆ ಇದ್ದು ಬೆಳಕನ್ನು ಸಂಪೂರ್ಣವಾಗಿ ಉಪಯೋಗಿಸಿಕೊಳ್ಳುವಂತಿರಬೇಕು ಎಂಬುದನ್ನು ಆಗಲೇ ತಿಳಿಸಿದೆ. ಇದಕ್ಕಾಗಿಯೋ ಎನ್ನುವಂತೆ ಕೆಲವು ಗಿಡಗಳಲ್ಲಿ ಎಲೆತೊಟ್ಟುಗಳು ಉದ್ದವಾಗುತ್ತ ಬಂದಿವೆ. ಉದಾಹರಣೆಗೆ ಅಕ್ಯಾಲಿಫದಲ್ಲಿರುವ ಮೊಸೈಕ್ ರೀತಿ. (ಕೆ.ಎಲ್.ಎಂ.)

**ಪಿಡುಗುಗಳು :** ಪೈರಿಗೆ ಹೇಗೋ ಹಾಗೆ ಗಿಡದ ಎಲ್ಲ ಭಾಗಗಳನ್ನು ಕೊರೆದು ಎಲೆ ತಿನ್ನುವ ಹುಳು, ಕೀಟಗಳಿವೆ. ಮಿಡತೆ, ಚಿಟ್ಟೆಗಳು, ಕಂಬಳಿ ಹುಳುಗಳು, ಕೊಂಡಿ ಹುಳು, ಜೀರುಂಡೆ, ಕಣಜದ ಹುಳು—ಮುಂತಾದವು ಎಲೆಯನ್ನು ಸಂಪೂರ್ಣವಾಗಿ ಅಥವಾ ಭಾಗಶಃ ಕೊರೆದುಹಾಕುತ್ತವೆ. ಈ ಪಿಡುಗಿನಿಂದ ಗಿಡವನ್ನು ರಕ್ಷಿಸಲು ಅನೇಕ ರಾಸಾಯನಿಕ ಮದ್ದುಗಳಿವೆ. ಇಂಥ ಹುಳುಕೀಟಗಳ ವಿವರಗಳನ್ನೂ ಆಯಾ ಹುಳುಕೀಟಗಳ ಶೀರ್ಷಿಕೆಯಲ್ಲಿ ಕೊಟ್ಟಿದೆ. (ಎಂ.ಎಚ್.)

## ಎಲೆಕೋಸು :

ಬ್ರಾಸಿಕ ಓಲರೇಸಿಯ ಜಾತಿಯ ಗಿಡಗಳ ಎಲೆಗಂಟಿನ ಭಾಗವನ್ನು ಈ ಹೆಸರಿಂದ ಕರೆಯುತ್ತೇವೆ (ಕ್ಯಾಬೇಜ್). ಇದು ಒಂದು ಜನಪ್ರಿಯ ತರಕಾರಿ. ಆಹಾರವನ್ನು ಸಂಗ್ರಹಿಸಿ ಕೊಂಡಿರುವ ಇದರ ಬಿಳಿಯ ಎಲೆಗಳು ಒಂದರ ಮೇಲೊಂದು ಕವುಚಿಕೊಂಡು ಗೆಡ್ಡೆಯ ರೂಪವನ್ನು ತಾಳಿರುತ್ತವೆ. ಈ ಗೆಡ್ಡೆಯೇ ಹುಳಿ, ಪಲ್ಯ ಇತ್ಯಾದಿ ಅಡಿಗೆಗಳಿಗೆ ಬಳಸುವ ತರಕಾರಿ. ವಿಶೇಷವಾಗಿ ಯೂರೋಪ್ ಮತ್ತು ಏಷ್ಯ ಖಂಡಗಳ ತೀರ ಪ್ರದೇಶಗಳಲ್ಲಿ ಬಹು ಹಿಂದಿನಿಂದಲೂ ವ್ಯವಸಾಯದಲ್ಲಿದೆ. ಹಸಿಯ ಕೋಸಿನಲ್ಲಿ ಎ, ಬಿ ಮತ್ತು ಸಿ ಜೀವಾತುಗಳಿವೆ. ಸಿ ಜೀವಾತುವಂತೂ ಅತಿ ಹೆಚ್ಚಾಗಿದೆ.



ಚಿತ್ರ 1 ಎಲೆಕೋಸಿನ ಬೀಜತೆನೆಗಳು.

ಕೋಸನ್ನು ಬೇಯಿಸಿದರೆ ಬಿ ಮತ್ತು ಬಿ$_2$ ಅಂಶಗಳು ನಾಶವಾಗಿ ಎ ಮತ್ತು ಸಿ ಗಳು ಅತ್ಯಲ್ಪ ಪ್ರಮಾಣದಲ್ಲಿ ಉಳಿಯುತ್ತವೆ. ಆದ್ದರಿಂದ ಕೋಸನ್ನು ಹಸಿಯಾಗಿ ಅಥವಾ ಅರೆಬೇಯಿಸಿ ಉಪಯೋಗಿಸಬೇಕು. ಪಾಶ್ಚಾತ್ಯರಲ್ಲಿ ಬೇಯಿಸದೆ ತಿನ್ನುವ ಪದ್ಧತಿಹೆಚ್ಚು. ಹೊರಭಾಗದ ಹಸಿರು ಎಲೆಗಳಲ್ಲಿ ಇರುವಷ್ಟು ಎ ಅಂಶ ಒಳಭಾಗದ ಎಲೆಗಳಲ್ಲಿ ಇಲ್ಲ.



ಚಿತ್ರ 2 ಎಲೆಕೋಸು

ಕೋಸು ಜಾತಿಯ ಗಿಡಗಳ ಬೆಳೆವಣಿಗೆಗೆ ಜೌಗು ಪ್ರದೇಶಕ್ಕಿಂತ ಮರಳು ಮಿಶ್ರವಾದ ಕೆಬ್ಬೆ ನೆಲ ಅಥವಾ ಗೋಡು ಮಣ್ಣಿನ ಭೂಮಿ ಉತ್ತಮ. ನೀರು ನಿಲ್ಲದೆ ಇಂಗಿ ಹೋಗುವ ಭೂಮಿಯಲ್ಲಿ ಚೆನ್ನಾಗಿ ಬೆಳೆಯುತ್ತದೆ. ಭೂಮಿಯನ್ನು ಒಂದು ಅಡಿಯಷ್ಟು ಆಳವಾಗಿ ಅಗೆದು ಮಣ್ಣಿನ ಹೆಂಟೆಗಳನ್ನು ಪುಡಿಮಾಡಬೇಕು. ಚೆನ್ನಾಗಿ ಕೊಳೆತ ಕೊಟ್ಟಿಗೆ ಗೊಬ್ಬರವನ್ನು ಒಂದು ಸಾವಿರ ಚದರ ಅಡಿಗಳಿಗೆ ಒಂದು ಗಾಡಿಯಂತೆ ಅಥವಾ ಎಕರೆಗೆ 15 ಮಣದಂತೆ ಹಾಕಿ ಭೂಮಿಯನ್ನು ಸಿದ್ಧಪಡಿಸಬೇಕು. ಒಟ್ಟಲು ಪಾತಿಗಳಲ್ಲಿ ಬೀಜವನ್ನು ತೆಳುವಾಗಿ ಬಿತ್ತಿ ಸಸಿಗಳು ಮೂರು ನಾಲ್ಕು ಅಂಗುಲ ಬೆಳೆದು ನಾಲ್ಕರಿಂದ ಆರು ಎಲೆಗಳು ಕಾಣಿಸಿಕೊಂಡ ಕೂಡಲೆ ಜಾಗರೂಕತೆಯಿಂದ ತೆಗೆದು, ಸಿದ್ಧಪಡಿಸಿದ ಭೂಮಿಯಲ್ಲಿ ನೆಡಬೇಕು. ಸಾಲಿನಿಂದ ಸಾಲಿಗೆ ಎರಡಡಿ ಅಂತರ ಬಿಟ್ಟು ಸಸಿಯಿಂದ ಸಸಿಗೆ ಒಂದೂವರೆ ಅಡಿ ಅಂತರದಲ್ಲಿ ಒಂದೊಂದಾಗಿ ನೆಡಬೇಕು. ಬೇಸಗೆಯಲ್ಲಿ ನಾಲ್ಕು ದಿನಗಳಿಗೊಮ್ಮೆ ನೀರನ್ನು ಹಾಕಬೇಕು. ಇದಕ್ಕೆ ಮೀನಿನ ಗೊಬ್ಬರವನ್ನು ಉಪಯೋಗಿಸುವುದು ಒಳ್ಳೆಯದು. ಅದರಿಂದ ಗೆಡ್ಡೆಗಳು ದೊಡ್ಡವಾಗಿಯೂ ರುಚಿಕರವಾಗಿಯೂ ಆಗುತ್ತವೆ. ಈ ಗೊಬ್ಬರವನ್ನು ಎಕರೆಗೆ ನಾಲ್ಕು ಸಾವಿರದಿಂದ ಐದು ಸಾವಿರ ಪೌಂಡುಗಳಷ್ಟು ಉಪಯೋಗಿಸಬೇಕು. ಒಟ್ಟಲು ಪಾತಿಯಿಂದ ಎಳೆ ಸಸಿಗಳನ್ನು ಬದಲಾಯಿಸುವಾಗ ತಂಪಾದ ಸಂಜೆಯಲ್ಲಿ, ಬೇರು ಮತ್ತು ಸ್ವಲ್ಪ ಮಣ್ಣಿನ ಸಹಿತವಾಗಿ ಸಸಿಗಳನ್ನು ತೆಗೆದು ಹೊಸ ಪಾತಿಗಳಲ್ಲಿ ನೆಟ್ಟು ನೀರನ್ನು ಒದಗಿಸಬೇಕು. ಹಣ್ಣೆಲೆಗಳನ್ನು ಆಗಾಗ್ಗೆ ತೆಗೆಯಬೇಕು. ಆಗಾಗ್ಗೆ ಮಣ್ಣನ್ನು ಕೆದಕಿ ಕಳೆ ತೆಗೆಯಬೇಕು. ಮಳೆ ಬಂದಾಗ ಸಸಿಗಳಿಗೆ ಅಪಾಯವಾಗದಿರುವಂತೆ ಮಾಡಲು ಸಸಿಗಳನ್ನು ಬದುಗಳ ಮೇಲೆ ನೆಡುವುದು ಉತ್ತಮ. ಸಸಿಗಳು ಒಂದು ಅಡಿಯಷ್ಟು ಎತ್ತರ ಬೆಳೆದಾಗ ಬುಡದ ಮಣ್ಣನ್ನು ಕೆದಕಿ, ಬುಡದ ಸುತ್ತಲೂ ಗೋಪುರದಂತೆ ಮಣ್ಣನ್ನು ಏರಿ ಹಾಕಬೇಕು. ಬಿತ್ತನೆ ಮಾಡಿದ ಮೂರರಿಂದ ಮೂರುವರೆ ತಿಂಗಳಲ್ಲಿ ಕೋಸುಗೆಡ್ಡೆಗಳು ಕೊಯ್ಲಿಗೆ ಸಿದ್ಧವಾಗುತ್ತವೆ. ಮೈಸೂರು ರಾಜ್ಯದಲ್ಲಿ ಜೂನಿನಿಂದ ಡಿಸೆಂಬರ್‌ವರೆವಿಗೂ ಬಿತ್ತನೆ ಮಾಡಬಹುದು. ಒಂದು ಔನ್ಸ್ ಬೀಜದಿಂದ ಸುಮಾರು ಎರಡು ಸಾವಿರ ಸಸಿಗಳು ಆಗುತ್ತವೆ. ಎಕರೆಗೆ $\frac{1}{2}$ ಪೌಂಡು ಬೀಜ ಬೇಕಾಗುವುದು. ಒಂದು ಎಕರೆ ವಿಸ್ತೀರ್ಣ ಭೂಮಿಯಲ್ಲಿ ಹದಿಮೂರು ಸಾವಿರ ಪೌಂಡುಗಳಷ್ಟು ಕೋಸನ್ನು ಬೆಳೆಯಬಹುದು.

ಕೋಸಿನಲ್ಲಿ ಜಾಗ್ರತೆ ಫಲ ಬಿಡುವ ನಿಧಾನವಾಗಿ ಫಲಬಿಡುವ ಎಂಬ ಎರಡು ಬಗೆಗಳಿವೆ. ಸಕ್ಕರೆ ಎಲೆ ಎಂಬುದು ಮತ್ತೊಂದು ವಿಧದ ಕೋಸು. ಡ್ರಂಹೆಡ್ ಎಂಬ ಜಾತಿಯ ಕೋಸಿನ ಎಲೆಗಳು ಸಿಹಿಯಾಗಿರುತ್ತವೆ. ಕೆಂಪು ಕೋಸನ್ನು ಉಪ್ಪಿನಕಾಯಿಗೆ ಉಪಯೋಗಿಸುತ್ತಾರೆ.

ಎಲೆಕೋಸಿಗೆ ಅನೇಕ ವಿಧವಾದ ಕೀಟಗಳು ಮುತ್ತುತ್ತವೆ. ರೆಕ್ಕೆ ಹುಳುಗಳೂ ಅವುಗಳ ಮರಿಗಳೂ ಕ್ಯಾಟರ್‌ಪಿಲ್ಲರ್ ಈ ಬೆಳೆಗೆ ಮಾರಕವಾಗಿ ಪರಿಣಮಿಸುತ್ತವೆ. ಮುಂಜಾನೆಯಲ್ಲಿ ಫಾಲಿಡಾಲ್ ಸಿಂಪಡಿಸುವುದರಿಂದ ಹುಳುಗಳ ಹಾವಳಿಯನ್ನು ತಡೆಯಬಹುದು. ನೋಡಿ—ಕೋಸು ; ಗೆಡ್ಡೆಕೋಸು ; ಹೂಗೋಸು ; (ಎನ್.ಆರ್.ಪಿ.)

**ಎಲೆಕ್ಟ್ರಕಾಂಪ್ಲೆಕ್ಸ್ :** ನೋಡಿ—ಈಡಿಪಸ್ ಕಾಂಪ್ಲೆಕ್ಸ್.

**ಎಲೆಕ್ಟ್ರಾನ್ :** ಏಕಮಾನ ವಿದ್ಯುದಂಶವಿರುವ ಒಂದು ಮೂಲಭೂತ ಕಣ. ಇದರ ಜೀವಿತಕಾಲ ಅನಂತ. ಇದೇ ಮೊದಲು ಪತ್ತೆಯಾದ ಒಳಪರಮಾಣಿಕ (ಸಬ್‌ಆಟಾಮಿಕ್) ವಸ್ತುಘಟಕ. ಇದರ ಅನ್ವೇಷಣೆಯೊಂದಿಗೆ ಆಧುನಿಕ ಭೌತಶಾಸ್ತ್ರದ ಉದಯವಾಯಿತೆಂದು ಹೇಳಬಹುದು. ವಿದ್ಯುದ್ವಿಭಜನ ನಿಯಮಗಳನ್ನು ಫ್ಯಾರಡೆ ಮಂಡಿಸಿದ ಮೇಲೆ ವಿದ್ಯುತ್ತಿನ ಕಣಸ್ವಭಾವ ನಿಸ್ಸಂಶಯವಾಗಿ ವೇದ್ಯವಾಯಿತು. ದ್ರಾವಣದಲ್ಲಿ ವಿದ್ಯುದ್ವಿಭಜನೀಯವು ಅಯಾನುಗಳಾಗಿ ಒಡೆಯುತ್ತದೆ. ಈ ಅಯಾನುಗಳು ಹೊತ್ತಿರುವ ವಿದ್ಯುದಂಶ ಅವಿಭಾಜ್ಯವಾದ ಏಕಕ ಇಲ್ಲವೇ ಅದರ ಅಪವರ್ತ್ಯ. ಯಾವ ಧಾತುವೇ ಆಗಲಿ ಅದರ ಒಂದು ಗ್ರಾಂ ಪರಮಾಣುವಿನಲ್ಲಿರುವ ಪರಮಾಣುಗಳ ಸಂಖ್ಯೆ ಒಂದೇ. ಇದರ ಹೆಸರು ಅವೊಗ್ಯಾಡ್ರೋ ಸಂಖ್ಯೆ (N). ಆದ್ದರಿಂದ ಒಂದು ಗ್ರಾಂ ಪರಮಾಣು ಮಾನೊವೇಲೆಂಟ್ ವಸ್ತು ಬಿಡುಗಡೆಯಾಗಬೇಕಾದರೆ ದ್ರಾವಣದ ಮೂಲಕ ಹರಿಯುವ ವಿದ್ಯುತ್ ಯಾವಾಗಲೂ ಒಂದೇ ಮೌಲ್ಯದ್ದಾಗಿರಬೇಕು. ಈ ವಿದ್ಯುನ್ಮೌಲ್ಯಕ್ಕೆ ಫ್ಯಾರಡೆ(F) ಎಂದು ಹೆಸರು. ಏಕ ವಿದ್ಯುದಂಶ($e$) ಆಗಿದ್ದರೆ

$$Ne = F \qquad \dots (1)$$

ಎಂದು ಬರೆದು N ಮತ್ತು F ಗೊತ್ತಿರುವಾಗ $e$ ಯನ್ನು ಗಣಿಸಬಹುದು. 1891ರಲ್ಲಿ ಜಾನ್ಸ್ಟನ್ ಸ್ಟೋನಿ ಎಂಬಾತ ಏಕವಿದ್ಯುದಂಶಕ್ಕೆ ಎಲೆಕ್ಟ್ರಾನ್ ಎಂದು ಹೆಸರಿಟ್ಟ. ಆಗ ಎಲೆಕ್ಟ್ರಾನ್ ಒಳಪರಮಾಣಿಕ ಕಣವೆಂಬುದು ತಿಳಿದಿರಲಿಲ್ಲ; ಅದನ್ನು ಬೇರ್ಪಡಿಸುವುದೂ ಸಾಧ್ಯವಾಗಿರಲಿಲ್ಲ.

ಮ್ಯಾಸನ್ ಎಂಬ ಅಷ್ಟೇನೂ ಪ್ರಸಿದ್ಧನಲ್ಲದ ಫ್ರೆಂಚ್ ವಿಜ್ಞಾನಿ ಮೊಟ್ಟಮೊದಲು ದೊಡ್ಡ ವಿಭವ ಪ್ರೇರಕ ಸುರುಳಿಯ ಸಹಾಯದಿಂದ ಭಾಗಶಃ ನಿರ್ವಾತಗೊಂಡ ಗಾಜಿನ ಪಾತ್ರೆಯಲ್ಲಿ ವಿದ್ಯುದ್ವಿಸರ್ಜನೆಯನ್ನು ಕಳುಹಿಸಿದ (1853). ಇದು ಗಾಳಿಯಲ್ಲಿ ಸಂಭವಿಸುವ ವಿಸರ್ಜನೆಯ ರೀತಿ ಇರದೆ ಗಾಜಿನ ಪಾತ್ರೆಯನ್ನು ಪ್ರಭೆಯಿಂದ (ಗ್ಲೋ) ತುಂಬಿತು. ಇದಾದ ಕೆಲವು ವರ್ಷಗಳ ಮೇಲೆ ಗೈಸ್ಲರ್ ಎಂಬ ಜರ್ಮನ್ ಗಾಜು ಊದುಗಾರ ಗಾಳಿಯ ವಿಸರ್ಜನೆಯ ಕೊಳವೆಗಳನ್ನು ನಿರ್ಮಿಸಿ ಮಾರಾಟಕ್ಕೆ ಒದಗಿಸಿದ. ಅನೇಕ ಸಂಶೋಧನಾಗಾರಗಳು ಈ ಕೊಳವೆಗಳನ್ನು ಕೊಂಡು ಪ್ರಯೋಗಗಳಿಗೂ ಪ್ರದರ್ಶನಕ್ಕೂ ಉಪಯೋಗಿಸತೊಡಗಿದರು. ಹಿಟ್ಟಾರ್ಫ್ ಎಂಬಾತ ಸುಧಾರಿಸಿದ ನಿರ್ವಾತ ಪಂಪುಗಳನ್ನು ಉಪಯೋಗಿಸಿ ವಿಸರ್ಜನ ಕೊಳವೆಯಲ್ಲಿ ಒಂದು ವಿದ್ಯುದ್ದ್ವಾರದ ಬಳಿ ಕಪ್ಪು ಪ್ರದೇಶವಿರುವುದನ್ನು ಒತ್ತಡ ಕಡಿಮೆಯಾದಂತೆ ಈ ಪ್ರದೇಶ ಬೆಳೆಯುವುದನ್ನೂ ಅವಲೋಕಿಸಿದ (1869).




ಚಿತ್ರ 1 ವಿಸರ್ಜನ ಕೊಳವೆ ಮತ್ತು ಅದಕ್ಕೆ ಸಂಬಂಧಿಸಿದ ಉಪಕರಣಗಳು. 1 ವಿಸರ್ಜನ ಕೊಳವೆ, 2 ಕ್ಯಾಥೋಡ್, 3 ಆನೋಡ್, 4 ಪಾದರಸ ಆವಿತಡೆ, 5 ದ್ರವಗಾಳಿ, 6 ದಿವಾರ್ ಪಾತ್ರೆ, 7 ಯಾಂತ್ರಿಕ ತೈಲರೇಚಕ, 8 ಪಾದರಸ, 9 ಪಾದರಸ ಆವಿರೇಚಕ 10 ವಿದ್ಯುತ್‌ಕೋಶಕ್ಕೆ, 11 ಪ್ರೇರಕ ಸುರುಳಿ, 12 ಕಿಡಿಗಿಂಡಿ

ಚಿತ್ರ 1ರಲ್ಲಿ ವಿಸರ್ಜನ ಕೊಳವೆ ಮತ್ತು ಅದಕ್ಕೆ ಸಂಬಂಧಪಟ್ಟ ಉಪಕರಣಗಳನ್ನು ತೋರಿಸಿದೆ. ವಿಸರ್ಜನ ಕೊಳವೆಯ ಉದ್ದ ಮತ್ತು ಒಳವ್ಯಾಸ ಕ್ರಮವಾಗಿ 150

ಸೆಂ. ಮತ್ತು 4 ಸೆಂ. ಇದಕ್ಕೆ ಪಾದರಸ ವಿಸರಣ ಪಂಪ್ ಮತ್ತು ಯಾಂತ್ರಿಕ ನಿರ್ವಾತ ಪಂಪುಗಳೊಂದಿಗೆ ಸಂಪರ್ಕವಿದೆ. ಪಾದರಸದ ಆವಿ ವಿಸರ್ಜನೆ ಕೊಳವೆಗೆ ಹೋಗದಂತೆ ಬೋನು (ಟ್ರ್ಯಾಪ್) ತಡೆಯುತ್ತದೆ. ಆವಿ ಇದರಲ್ಲಿ ಘನಿಸುತ್ತದೆ. ಪಂಪುಗಳು ಕೆಲಸಮಾಡಿದಂತೆ ವಿಸರ್ಜನ ಕೊಳವೆಯಲ್ಲಿ ಒತ್ತಡ ಕಡಿಮೆಯಾಗುತ್ತದೆ. ಕೊಳವೆಯಲ್ಲಿ ಒತ್ತಡ ವಾಯುಮಂಡಲದ ಒತ್ತಡದ $10^{-3}$ ಭಾಗವಾದಾಗ 10,000 ಅಥವಾ 15,000 ವೋಲ್ಟ್ ವಿಭವಾಂತರ (ಪೊಟೆನ್ಷಿಯಲ್ ಡಿಫರೆನ್ಸ್) ಕೊಳವೆಯಲ್ಲಿ ವಿಸರ್ಜನೆಯನ್ನು ಕಳುಹಿಸುತ್ತದೆ. ವಿಸರ್ಜನೆ ಕ್ಯಾಥೋಡಿನಿಂದ ಹುಯಿಲಿನಂತೆ ಹೊರಚಿಮ್ಮಿ ಆನೋಡನ್ನು ತಲುಪುತ್ತದೆ. ಒತ್ತಡ 5 ಮಿ.ಮಿ.ಗೆ ಬಂದಾಗ ವಿಸರ್ಜನೆ ಕೊಳವೆಯನ್ನೆಲ್ಲ ಪ್ರಭೆಯಿಂದ ತುಂಬುತ್ತದೆ. ಇದರ ಬಣ್ಣ ನಸುಗೆಂಪು. ವಿಸರ್ಜನೆಯ ಬಣ್ಣ ಕೊಳವೆಯಲ್ಲಿರುವ ಅನಿಲದ ಸ್ವಭಾವಕ್ಕೆ ಅನುಗುಣವಾಗಿ ಬೇರೆ ಬೇರೆಯದಾಗಿರುತ್ತದೆ. ಕೊಳವೆಯಲ್ಲಿನ ಒತ್ತಡ 2 ಮಿ.ಮಿ.ಗೆ ಬಂದಾಗ ಕ್ಯಾಥೋಡಿನ ಸಮೀಪದಲ್ಲಿ ಒಂದು ಕಪ್ಪು ಪ್ರದೇಶ ಕಾಣಿಸಿಕೊಳ್ಳುತ್ತದೆ. ಇದರ ಹೆಸರು ಫ್ಯಾರಡೆ ಕಪ್ಪು ಪ್ರದೇಶ. ಕ್ಯಾಥೋಡಿನ ಪಕ್ಕದ ನಸುನೀಲಿ ಪ್ರಭೆಯನ್ನು ಋಣಪ್ರಭೆ ಎಂದೂ ಮತ್ತು ಉದ್ದವಾದ ನಸುಗೆಂಪು ಪ್ರಭೆಯನ್ನು ಧನಸ್ತಂಭ (ಪಾಸಿಟಿವ್ ಕಾಲಂ) ಎಂದೂ ಕರೆಯುತ್ತಾರೆ. ಒತ್ತಡ ಇನ್ನೂ ಕಡಿಮೆಯಾದರೆ ಕ್ಯಾಥೋಡ್ ಪ್ರಭೆ ಕ್ಯಾಥೋಡಿನಿಂದ ಬೇರ್ಪಡುತ್ತದೆ ಮತ್ತು ಅದಕ್ಕೂ ಕ್ಯಾಥೋಡಿಗೂ ಮಧ್ಯೆ ಬೇರೊಂದು ಕಪ್ಪು ಪ್ರದೇಶ ಕಾಣಿಸಿಕೊಳ್ಳುತ್ತದೆ. ಇದರ ಹೆಸರು ಕ್ರೂಕ್ಸ್ ಕಪ್ಪು ಪ್ರದೇಶ. ಈಗ ಫ್ಯಾರಡೆ ಕಪ್ಪು ಪ್ರದೇಶ ಇನ್ನೂ ದೊಡ್ಡದಾಗಿರುತ್ತದೆ ಮತ್ತು ಧನಸ್ತಂಭ ಸ್ತರಗಳಾಗಿ ಒಡೆದಿರುತ್ತದೆ. ಒತ್ತಡ 0.01 ಮಿ.ಮೀ.ಗೆ ಬಂದಾಗ ಕ್ರೂಕ್ಸ್ ಕಪ್ಪು ಪ್ರದೇಶ ಬೆಳೆದು ಇಡೀ ವಿಸರ್ಜನ ಕೊಳವೆಯನ್ನು ತುಂಬುತ್ತದೆ. ಈ ಹಂತದಲ್ಲಿ ಕ್ಯಾಥೋಡಿನ ಎದುರು ಭಾಗದ ಗಾಜಿನ ಗೋಡೆ ಹಸಿರು ಬಣ್ಣದಿಂದ ಹೊಳೆಯುತ್ತದೆ.

ಗಾಜಿನ ಗೋಡೆಯ ಹಸಿರು ಬಣ್ಣದ ಹೊಳಪು ಕ್ಯಾಥೋಡಿನಿಂದ ಹೊರಹೊಮ್ಮಿ ಆನೋಡಿನ ಕಡೆಗೆ ಧಾವಿಸುವ ಅಗೋಚರ ಕಿರಣಗಳಿಂದಾದುದೆಂದು ತಿಳಿಯಲು ಬಹಳಕಾಲ ಬೇಕಾಗಲಿಲ್ಲ. ಆದ್ದರಿಂದ ಈ ಕಿರಣಗಳನ್ನು ಕ್ಯಾಥೋಡ್ ಕಿರಣಗಳೆಂದು ಕರೆದರು. ಇವುಗಳ ಸ್ವಭಾವದ ಬಗ್ಗೆ ವೈಚಾರಿಕ ಗೊಂದಲವೇ ಉಂಟಾಯಿತು. ಇವನ್ನು ಅತಿ ಅನಿಲ ಅವಸ್ಥೆ ಎಂದು ಕ್ರೂಕ್ಸ್ ನಂಬಿದರೆ ಇವು ಜಡವಸ್ತುವಿನ ನಾಲ್ಕನೆಯ ಅವಸ್ಥೆ ಎಂದು ಹಿಟ್ಟಾರ್ಫ್ ಬಗೆದ. ಇವು ಅಲೆಗಳೇ ಅಥವಾ ಕಣಗಳೇ ಎಂಬ ವಿವಾದ ಇತ್ತು. ಒಂದಾದು ಮೇಲೊಂದು ನಡೆದ ವ್ಯವಸ್ಥಿತ ಪ್ರಯೋಗಗಳು ಇವು ಋಣ ವಿದ್ಯುದಂಶವುಳ್ಳ ಕಣಗಳೆಂಬುದನ್ನು ತೋರಿಸಿದುವು.



ಚಿತ್ರ 2 ವಿಸರ್ಜನೆಯ ವಿವಿಧ ಹಂತಗಳು.
1 ವಿಸರ್ಜನ ಹುಯಿಲು, 2 ನಸುಗೆಂಪು ಪ್ರಭೆ, 3 ಋಣಪ್ರಭೆ, 4 ಧನಕಂಬ, 5 ಫ್ಯಾರಡೆ ಕಪ್ಪುಪ್ರದೇಶ, 6 ಸ್ತರಗಳು, 7 ಕ್ರೂಕ್ಸ್ ಕಪ್ಪುಪ್ರದೇಶ.

ಕ್ಯಾಥೋಡ್ ಕಿರಣಗಳು ಸರಳರೇಖೆಯಲ್ಲಿ ಚಲಿಸುತ್ತವೆಂದು ಹಿಟ್ಟಾರ್ಫ್ ತೋರಿಸಿದ (1869). ಚಿತ್ರ 3ರಲ್ಲಿ ಹಿಟ್ಟಾರ್ಫನ ಪ್ರಯೋಗದ ನಿರೂಪಣೆಯನ್ನು ಕಾಣಬಹುದು. ಕ್ಯಾಥೋಡಿಗೆ ಎದುರಾಗಿರುವ ಅಲ್ಯೂಮಿನಿಯಂ ಬಿಲ್ಲೆಯ ಸ್ಪಷ್ಟ ಛಾಯೆ ಗಾಜಿನ ಗೋಡೆಯ ಮೇಲೆ ಬಿದ್ದಿದೆ. ಇದು ಕ್ಯಾಥೋಡ್ ಕಿರಣಗಳು ಸರಳರೇಖೆಯಲ್ಲಿ ಪ್ರಸಾರವಾಗದಿದ್ದರೆ ಸಾಧ್ಯವಾಗದು.

1870ರಲ್ಲಿ ಕ್ರೂಕ್ಸನು ಕ್ಯಾಥೋಡ್ ಕಿರಣಗಳಿಗೆ ಸಂವೇಗ (ಮೊಮೆಂಟಂ) ಮತ್ತು ಚಲನಶಕ್ತಿ (ಕೈನೆಟಿಕ್ ಎನರ್ಜಿ) ಇವೆ ಎಂಬುದನ್ನು ತೋರಿಸಿದ. ಈ ಪ್ರಯೋಗದ ನಿರೂಪಣೆ ಚಿತ್ರ 4ರಲ್ಲಿದೆ. ಕ್ಯಾಥೋಡಿನಿಂದ ಹೊರಹೊಮ್ಮಿದ ಕಿರಣಗಳು ಸಮಾನಾಂತರವಾಗಿರುವ ಮಟ್ಟ ಸರಳಿನ ಮೇಲಿಟ್ಟಿರುವ ಉರುಳು ಸೂಜಿಯ ಎಲೆಗಳಿಗೆ ತಾಗುತ್ತದೆ. ಆಗ ಸೂಜಿ ಸರಳುಗಳ ಮೇಲೆ ಉರುಳುತ್ತದೆ. ಇದು ಕ್ಯಾಥೋಡ್ ಕಿರಣಗಳಿಗೆ ಸಂವೇಗ ಮತ್ತು ಚಲನಶಕ್ತಿ ಇಲ್ಲದಿದ್ದರೆ ಆಗುವುದಿಲ್ಲ.

1895ರಲ್ಲಿ ಜೀನ್‌ಪೆರಿನ್ ಎಂಬಾತ ಕ್ಯಾಥೋಡ್ ಕಿರಣಗಳಿಗೆ ಋಣ ವಿದ್ಯುದಂಶವಿದೆ ಎಂಬುದನ್ನು ತೋರಿಸಿದ. ಚಿತ್ರ 5ರಲ್ಲಿ ಪೆರಿನಿನ ಉಪಕರಣವನ್ನು ಕಾಣಬಹುದು. ಕ್ಯಾಥೋಡ್ ಕಿರಣಗಳು ಆನೋಡಿನಲ್ಲಿರುವ ರಂಧ್ರವನ್ನು ಹಾಯ್ದು ಹೊರಬಂದಾಗ ಅವು ಚಲಿಸುವ ದಿಕ್ಕಿಗೆ ಲಂಬವಾಗಿ ವರ್ತಿಸುವ ಕಾಂತ ಕ್ಷೇತ್ರವನ್ನು ಸೇರುತ್ತದೆ. ಅಲ್ಲಿ ಅವು ವೃತ್ತಾಕಾರವಾಗಿ ಬಾಗಿ ಫ್ಯಾರಡೆ ಬಟ್ಟಲಿಗೆ ಬರುತ್ತವೆ. ಫ್ಯಾರಡೆ ಬಟ್ಟಲಿಗೆ ಒಂದು ಚತುರ್ಥೀಯ ವಿದ್ಯುನ್ಮಾಪಕದೊಂದಿಗೆ (ಕ್ವಾಡ್ರಂಟ್ ಎಲೆಕ್ಟ್ರೋಮೀಟರ್) ಸಂಪರ್ಕವಿದೆ. ಈ ಮಾಪಕ ಕ್ಯಾಥೋಡ್ ಕಿರಣಗಳಿಗೆ ಋಣ ವಿದ್ಯುದಂಶವಿರುವುದನ್ನು ತೋರಿಸುತ್ತದೆ. ಋಣ ವಿದ್ಯುದಂಶವುಳ್ಳ ಈ ಕಿರಣಗಳು ವಿದ್ಯುತ್ ಕ್ಷೇತ್ರದಲ್ಲೂ ಬಾಗುತ್ತವೆ.



ಚಿತ್ರ 3. ಕ್ಯಾಥೋಡ್ ಕಿರಣಗಳ ಸರಳ ರೇಖಾ ಪ್ರಸಾರವನ್ನು ತೋರಿಸುವ ಕ್ರೂಕ್ಸ್ ವಿಸರ್ಜನ ಕೊಳವೆ.
1 ಕ್ಯಾಥೋಡ್ ಕಿರಣಗಳು, 2 ವಸ್ತು, 3 ನೆರಳು, 4 ಕೀಲು.



ಚಿತ್ರ 4. ಕ್ಯಾಥೋಡ್ ಕಿರಣಗಳಿಗಿರುವ ಸಂವೇಗ ಮತ್ತು ಚಲನಶಕ್ತಿಯ ನಿರೂಪಣೆ.

ಕ್ಯಾಥೋಡ್ ಕಿರಣಗಳು ಕಾಂತ ಮತ್ತು ವಿದ್ಯುತ್ ಕ್ಷೇತ್ರಗಳಲ್ಲಿ ಬಾಗುವುದನ್ನು ಗಮನಿಸಿದ ಥಾಮ್ಸನ್ ಅವುಗಳ ಸಾಪೇಕ್ಷ ವಿದ್ಯುದಂಶ $\frac{e}{m}$ನ್ನು ಅಳೆದನು (1897). ಇಲ್ಲಿ $e$ ವಿದ್ಯುದಂಶ ಮತ್ತು $m$ ಜಡದ್ರವ್ಯರಾಶಿ. ಚಿತ್ರ 6ರಲ್ಲಿ ಥಾಮ್ಸನ್ನನ ಉಪಕರಣವನ್ನು ನೋಡಬಹುದು. ವೇಗೋತ್ಕರ್ಷಗೊಂಡ ಕ್ಯಾಥೋಡ್ ಕಿರಣಗಳು A ಮತ್ತು B ಗಳಲ್ಲಿರುವ ರಂಧ್ರಗಳ ಮೂಲಕ ಹಾಯ್ದು ಒಂದು ದೂಲದಂತೆ (ಬೀಮ್) ಪ್ರತಿದೀಪ್ತಶೀಲ (ಫ್ಲೋರೊಸೆಂಟ್) ತೆರೆ S ಮೇಲೆ ಬೀಳುತ್ತದೆ. ಅಲ್ಲಿ ಆ ದೂಲದ ಅಡ್ಡಕೊಯ್ತಕ್ಕೆ (ಕ್ರಾಸ್ ಸೆಕ್ಷನ್) ಅನುಗುಣವಾಗಿ ಪ್ರಭಾಬಿಂದು $P_1$ ಮೂಡುತ್ತದೆ.



ಚಿತ್ರ 5. ಪೆರಿನನ ಉಪಕರಣ.
1 ಭೂಮಿಗೆ, 2 ವಿದ್ಯುತ್ಮಾಪಕಕ್ಕೆ, 3 ಫ್ಯಾರಡೆ ಬಟ್ಟಲು.

ಈಗ D ಮತ್ತು E ತಟ್ಟೆಗಳ ಮಧ್ಯೆ ವಿಭವಾಂತರ (ಪೊಟೆನ್ಷಿಯಲ್ ಡಿಫರೆನ್ಸ್) ವರ್ತಿಸುವಂತೆ ಮಾಡಿದರೆ ಪ್ರಭಾಬಿಂದು $P_2$ ರ ಕಡೆಗೆ ಇಳಿಯುತ್ತದೆ. F ಮತ್ತು G ಗಳು ಒಂದು ಜೊತೆ ಹೆಲ್ಮೋಟ್ಜ್ ಸುರುಳಿಗಳು (ಕಾಯಿಲ್ಸ್). ಇವುಗಳ ವ್ಯಾಸ D ಮತ್ತು E ಗಳ ಉದ್ದಕ್ಕೆ ಸಮಾನ. ಇವುಗಳಲ್ಲಿರುವ ಒಂದನ್ನು ಕೊಳವೆಯ




ಚಿತ್ರ 6 (a) ಥಾಮ್ಸನನ ಉಪಕರಣ, (b) ಕ್ಯಾಥೋಡ್ ಕಿರಣಗಳು ವಿದ್ಯುತ್ ಕ್ಷೇತ್ರದಲ್ಲಿ ಬಾಗುವ ನಿರೂಪಣೆ. ಚಿತ್ರದಲ್ಲಿ S ಎಂಬುದು ಪ್ರತಿದೀಪ್ತಿಶೀಲತೆರೆ.

ಮುಂಭಾಗದಲ್ಲೂ ಇನ್ನೊಂದನ್ನು ಹಿಂಭಾಗದಲ್ಲೂ ಅಳವಡಿಸಿದೆ. ಸುರುಳಿಗಳಲ್ಲಿ ವಿದ್ಯುತ್ ಹರಿದಾಗ ಹುಟ್ಟುವ ಕಾಂತಕ್ಷೇತ್ರದ ದಿಕ್ಕು ಕ್ಯಾಥೋಡ್ ಕಿರಣಗಳ ಚಲನ ದಿಕ್ಕಿಗೆ ಲಂಬವಾಗಿರುವುದು. ಕಾಂತಕ್ಷೇತ್ರದ ದಿಕ್ಕು ಓದುಗನ ಕಡೆಗಿದ್ದರೆ ಕ್ಯಾಥೋಡ್ ಕಿರಣಗಳು ಮೇಲೆ ಬಾಗುತ್ತವೆ. ಸಾಪೇಕ್ಷ ವಿದ್ಯುದಂಶವನ್ನು ಅಳೆಯಬೇಕಾದರೆ ಎರಡು ಪ್ರಯೋಗಗಳನ್ನು ನಡೆಸಬೇಕು. ಒಂದನೆಯ ಪ್ರಯೋಗದಲ್ಲಿ D ಮತ್ತು E ಗಳ ಮಧ್ಯೆ ವರ್ತಿಸುವ ವಿದ್ಯುತ್ ಕ್ಷೇತ್ರಬಲದ E ಮತ್ತು ಕಾಂತಕ್ಷೇತ್ರಕ್ಕೆ ಬಲ B ಗಳನ್ನು ಪ್ರಭಾಬಿಂದು ಸ್ಥಳಾಂತರಗೊಳ್ಳದಂತೆ ಸರಿದೂಗಿಸಬೇಕು. ಆಗ

$$v = \frac{E}{B} \qquad \dots (2)$$



ಚಿತ್ರ 7 ಕ್ಯಾಥೋಡ್ ಕಿರಣಗಳು ಕಾಂತಕ್ಷೇತ್ರದಲ್ಲಿ ಬಾಗುವ ನಿರೂಪಣೆ.

ಎಂದು ಬರೆಯಬಹುದು. ಇಲ್ಲಿ $v$ ಕ್ಯಾಥೋಡ್ ಕಿರಣಗಳ ವೇಗ. ಎರಡನೆಯ ಪ್ರಯೋಗದಲ್ಲಿ ಕಾಂತಕ್ಷೇತ್ರವನ್ನು ಅಳಿಸಿ ಕ್ಯಾಥೋಡ್ ಕಿರಣಗಳು ವಿದ್ಯುತ್ ಕ್ಷೇತ್ರದಲ್ಲಿ ಬಾಗುವುದನ್ನು ಅಳೆಯಬೇಕು. ಚಿತ್ರ 6(b) ಮತ್ತು ಸಮೀಕರಣ (2)ರ ನೆರವಿನಿಂದ

$$\frac{e}{m} = \frac{2HE}{lLB^2} \qquad \dots (3)$$

ಎಂದು ಬರೆಯಬಹುದು. ವಿಸರ್ಜನ ಕೊಳವೆಯಲ್ಲಿ ಬೇರೆ ಬೇರೆ ಅನಿಲಗಳನ್ನು ತುಂಬಿ ಮತ್ತು ಬೇರೆ ಬೇರೆ ಲೋಹಗಳ ಕ್ಯಾಥೋಡುಗಳನ್ನು ಉಪಯೋಗಿಸಿ $e/m$ ಬೆಲೆಯನ್ನು ಥಾಮ್ಸನ್ ನಿರ್ಧರಿಸಿದ. ಆತನ ಅಂತಿಮ ಲೆಕ್ಕಾಚಾರದಂತೆ $e/m = 1.77 \times 10^7$ emu/ಗ್ರಾಂ. ಕ್ಯಾಥೋಡ್ ಕಿರಣಗಳ ಸ್ವಭಾವ ವಿಸರ್ಜನ ಕೊಳವೆಯಲ್ಲಿರುವ ಅನಿಲವನ್ನಾಗಲಿ ಕ್ಯಾಥೋಡಿನ ವಸ್ತುವನ್ನಾಗಲಿ ಅವಲಂಬಿಸಿರುವುದಿಲ್ಲ.

ಥಾಮ್ಸನ್ನನ ಪ್ರಯೋಗಗಳನ್ನು ಅರ್ಥಮಾಡಿಕೊಳ್ಳಬೇಕಾದರೆ ಕ್ಯಾಥೋಡ್ ಕಿರಣಗಳನ್ನು ಋಣ ವಿದ್ಯುದಂಶವುಳ್ಳ ಕಣಗಳ ಸಾಮೂಹಿಕ ಚಲನೆಯೆಂದು ಭಾವಿಸಬೇಕಾದುದು ಅನಿವಾರ್ಯ. ಆದರೂ ಅವುಗಳ ವಿದ್ಯುದಂಶವನ್ನು ಪ್ರತ್ಯೇಕವಾಗಿ ಅಳೆಯದೆ ಈ ತೀರ್ಮಾನವನ್ನು ಮುಟ್ಟುವುದಕ್ಕಾಗುವುದಿಲ್ಲ. ಥಾಮ್ಸನ್ ಕೆಲಸ ಮಾಡುತ್ತಿದ್ದ ಕಡೆಯೇ ಇದ್ದ ಟೌನ್ಸೆಂಡ್ ಎಂಬಾತ ಕ್ಯಾಥೋಡ್ ಕಿರಣಗಳ ವಿದ್ಯುದಂಶವನ್ನು ಪ್ರತ್ಯೇಕವಾಗಿ ಅಳೆಯಲು ನೀರಿನ ಆವಿಯಿಂದ ಪರ್ಯಾಪ್ತವಾದ (ಸ್ಯಾಚುರೇಟೆಡ್) ಗಾಳಿಯಲ್ಲಿ ಅಯಾನುಗಳ ಮೇಲೆ ಹನಿಗಳು ಮೂಡಿ ಬೆಳೆಯುವ ಮೋಡಗಳನ್ನು ಉಪಯೋಗಿಸಿದ. ಪ್ರತಿ ಅಯಾನಿನ ಮೇಲೆ ಒಂದೊಂದು ಹನಿ ಮೂಡಿದೆಯೆಂದೂ ಒಂದೇ ಏಕ ವಿದ್ಯುದಂಶವಿದೆಯೆಂದೂ ಆತ ಭಾವಿಸಿದ. ಈ ಹನಿಗಳು ಗುರುತ್ವಾಕರ್ಷಣೆಯಿಂದ ಗಾಳಿಯಲ್ಲಿ ಕೆಳಗೆ ಬೀಳುವಾಗ ಸ್ಟೋಕ್ಸ್ ನಿಯಮವನ್ನು ಅನುಸರಿಸುತ್ತವೆ. ಇದರಿಂದ ಪ್ರತಿ ಹನಿಯ ತೂಕವನ್ನು ಗೊತ್ತು ಮಾಡಬಹುದು. ಟೌನ್ಸೆಂಡನು ಮೋಡದಲ್ಲಿದ್ದ ನೀರಿನ ತೂಕವನ್ನು ಕಂಡುಹಿಡಿದು ಒಟ್ಟು ಹನಿಗಳ ಲೆಕ್ಕಹಾಕಿದ. ಮೋಡದಲ್ಲಿದ್ದ ವಿದ್ಯುತ್ತನ್ನು ಅಳೆದು $e$ ಬೆಲೆಯನ್ನು ಗೊತ್ತುಮಾಡಿದ. ಆತನಿಗೆ ದೊರೆತ $e$ ಮೌಲ್ಯ $3 \times 10^{-10}$ರಿಂದ $5 \times 10^{-10}$ esu ಆಗಿತ್ತು. ಇಂಥವೇ ಪ್ರಯೋಗಗಳಿಂದ ಥಾಮ್ಸನ್ ಪಡೆದ ಬೆಲೆ $6.5 \times 10^{-10}$ esu ಆಗಿತ್ತು.

ಅಯಾನುಗಳ ಮೇಲಿರುವ ವಿದ್ಯುದಂಶ ಕ್ಯಾಥೋಡ್ ಕಿರಣಗಳು ಹೊತ್ತಿರುವ ವಿದ್ಯುದಂಶಕ್ಕೆ ಸರಿಸಾಟಿಯೆಂದು ಥಾಮ್ಸನ್ ಭಾವಿಸಿದ. $e = 4.0 \times 10^{-10}$ esu ಮತ್ತು $e/m = 1.77 \times 10^{-7}$ esu ಎಂದಿಟ್ಟುಕೊಂಡರೆ ಎಲೆಕ್ಟ್ರಾನಿನ ಜಡ ದ್ರವ್ಯ ರಾಶಿ $7.5 \times 10^{-28}$ ಗ್ರಾಂ ಆಗುತ್ತದೆ. ಈ ಕಣಗಳನ್ನು ಮೂಲ ಪರಮಾಣುಗಳೆಂದು (ಪ್ರೈಮಾರ್ಡಿಯಲ್ ಆಟಂಸ್) ಥಾಮ್ಸನ್ ಕರೆದ. ಇವು ಹೊತ್ತಿರುವ ವಿದ್ಯುದಂಶವನ್ನು ಸ್ಟೋನಿ ಎಂಬಾತನ ಅರ್ಥದಲ್ಲಿ ಬ್ರಿಟಿಷ್ ವಿಜ್ಞಾನಿಗಳು ಬಹಳ ಕಾಲದವರೆಗೆ ಎಲೆಕ್ಟ್ರಾನ್ ಎಂದು ಕರೆಯುತ್ತಿದ್ದರು. ಆದರೆ ಲೊರೆಂಟ್ಸ್ ಈ ಕಣಗಳನ್ನೇ ನೇರವಾಗಿ ಎಲೆಕ್ಟ್ರಾನ್ ಎಂದು ಕರೆದ.

ಪರಮಾಣುಗಳಲ್ಲಿ ಬಂಧಿತವಾಗಿರುವ ಎಲೆಕ್ಟ್ರಾನುಗಳ ಸಾಪೇಕ್ಷ ವಿದ್ಯುದಂಶವನ್ನು ಸಹ ಅಳೆಯಬಹುದು. ಕಾಂತಕ್ಷೇತ್ರದಲ್ಲಿರುವ ಆಕರದಿಂದ ಬರುವ ಬೆಳಕಿನ ರೋಹಿತವನ್ನು ಜೀಮನ್ ಪರೀಕ್ಷಿಸಿದಾಗ ವಿಶಿಷ್ಟ ಗೆರೆಗಳು ಒಡೆದು ಬೇರ್ಪಟ್ಟಿರುವುದನ್ನು ಕಂಡ (1896). ಈ ಗೆರೆಗಳ ಅಂತರ ಕಾಂತಕ್ಷೇತ್ರದಲ್ಲಿ ಬಲ ಹೆಚ್ಚಿದಂತೆಲ್ಲ ಹೆಚ್ಚುತ್ತದೆ. ಪರಮಾಣುಗಳಲ್ಲಿ ಬಂಧಿತವಾಗಿರುವ ಎಲೆಕ್ಟ್ರಾನುಗಳ ಸ್ಪಂದನದ ಮೇಲೆ ಕಾಂತಕ್ಷೇತ್ರ ಬೀರುವ ಪರಿಣಾಮದಿಂದಲೇ ವಿಶಿಷ್ಟ ಗೆರೆಗಳು ಒಡೆಯುವುದೆಂದು ಲೊರೆಂಟ್ಸ್ ಸೈದ್ಧಾಂತಿಕವಾಗಿ ತೋರಿಸಿದ. ಅದರ ಪ್ರಕಾರ

$$\frac{e}{m} = \frac{2\pi}{B}\Delta v \qquad \dots (4)$$

ಎಂದು ಬರೆಯಬಹುದು. ಇಲ್ಲಿ B ಕಾಂತ ಕ್ಷೇತ್ರದ ಬಲ, $\Delta v$ ಕಾಂತ ಕ್ಷೇತ್ರದ ದಿಕ್ಕಿಗೆ ಸಮಾನಾಂತರವಾಗಿ ನೋಡಿದಾಗ ಕಾಣುವ ಹೊಸ ಗೆರೆಗಳಿರುವ ಕಂಪನಾಂಕಗಳ ವ್ಯತ್ಯಾಸ. B ಮತ್ತು $\Delta v$ ಗಳನ್ನು ಪ್ರಯೋಗದಿಂದ ತಿಳಿದು $\frac{e}{m}$ನ್ನು ಗಣಿಸಬಹುದು. ಜೀಮನ್ ಪಡೆದ ಬೆಲೆ $1.6 \times 10^7$ emu/ಗ್ರಾಂ. ಇದು ಥಾಮ್ಸನ್ನನ ಬೆಲೆಗೆ ಅತಿ ಸಮೀಪವಾಗಿದ್ದು ಕ್ಯಾಥೋಡ್ ಕಣಗಳು ಒಳ ಪರಮಾಣಿಕ ಘಟಕಗಳಾದ ಎಲೆಕ್ಟ್ರಾನುಗಳೇ ಎಂಬುದನ್ನು ದೃಢೀಕರಿಸುತ್ತದೆ.

ಟೌನ್ಸೆಂಡ್ ಮತ್ತು ಥಾಮ್ಸನ್ ಅವರ ಪ್ರಯೋಗಗಳಿಂದ ದೊರೆತ ಎಲೆಕ್ಟ್ರಾನಿನ ವಿದ್ಯುದಂಶದ ಮೌಲ್ಯ ನಿಖರವಾದುದಲ್ಲ. ವಿಲ್ಸನ್ನನು ಮೇಘ ಮಂದಿರದ (ಕ್ಲೌಡ್ ಚೇಂಬರ್) ನೆರವಿನಿಂದ ವಿದ್ಯುದಂಶವನ್ನು ಅಳೆದ (1903). ಈತನ ಪ್ರಯೋಗದಲ್ಲಿ ವಿದ್ಯುದಂಶವನ್ನು ಹೊತ್ತ ನೀರಿನ ಹನಿಗಳನ್ನೇ ಅವಲೋಕಿಸುವುದು ಸಾಧ್ಯವಿತ್ತು. ಆದರೆ ಪ್ರಯೋಗದ ಸಮಯದಲ್ಲಿ ಹನಿಗಳ ಗಾತ್ರ ಸ್ಥಿರವಾಗಿರುವುದಿಲ್ಲ. ನೀರು




ಚಿತ್ರ 8 ಮಿಲಿಕನನ ಉಪಕರಣ.

1 ಮೊನೊಮಾಪಕ, 2 ಎಣ್ಣೆ ತೊಟ್ಟಿ 3 ನಿರ್ವಾತ ಪಂಪಿಗೆ, 4 ಆಟಮೈಸರ್, 5 ಎಕ್ಸ್-ಕಿರಣ ಉತ್ಪಾದಕ, 6 ಚಾಪದೀಪ, ಮತ್ತು M. N. ಹಿತ್ತಾಳೆಯ ತಟ್ಟೆಗಳು.

ಆವಿಯಾಗುತ್ತಿರುತ್ತದೆ. ಈ ಕಾರಣದಿಂದ ವಿಲ್ಸನ್ ಬೆಲೆಗಳು $2\times10^{-10}$ ನಿಂದ $4\times10^{-10}$ esu ದವರೆಗೆ ಹರಡಿದ್ದವು.

ವಿಲ್ಸನ್ನನ ಪ್ರಯೋಗಗಳಲ್ಲಿದ್ದ ಎಲ್ಲ ನ್ಯೂನತೆಗಳನ್ನೂ ನಿವಾರಿಸಿ ಎಲೆಕ್ಟ್ರಾನಿನ ವಿದ್ಯುದಂಶವನ್ನು ಅಳೆದಾತ ಮಿಲಿಕನ್. ಈತನ ಉಪಕರಣವನ್ನು ಚಿತ್ರ 8ರಲ್ಲಿ ನೋಡಬಹುದು. ಉಪಕರಣದ ಮುಖ್ಯ ಭಾಗಗಳೆಂದರೆ M ಮತ್ತು N ಹಿತ್ತಾಳೆ ತಟ್ಟೆಗಳು. ಅವುಗಳ ಅಂತರ 1.49174 ಸೆಂ. ಮೀ. N ಭೂಮಿಯೊಂದಿಗೆ ಸಂಪರ್ಕ ಹೊಂದಿದೆ. ತಟ್ಟೆಗಳ ಮಧ್ಯೆ 10,000 ವೋಲ್ಟ್ ವಿಭವಾಂತರವನ್ನು ಆರೋಪಿಸಬಹುದು. ಇವು ಇರುವ ಲೋಹಮಂದಿರ ಎಣ್ಣೆಯ ತೊಟ್ಟಿಯಲ್ಲಿ ಮುಳುಗಿದೆ. ಈ ಮಂದಿರದಲ್ಲಿ ಒತ್ತಡವನ್ನು ಬೇಕಾದ ಹಾಗೆ ಕಡಿಮೆ ಮಾಡಬಹುದು. M ಮಧ್ಯದಲ್ಲಿ ಒಂದು ಸಣ್ಣ ರಂಧ್ರವಿದೆ. A ಒಂದು ಆಟಮೈಸರ್. ಇದರ ಸಹಾಯದಿಂದ ಎಣ್ಣೆಯ ಸಣ್ಣ ಸಣ್ಣ ಬಿಂದುಗಳನ್ನು M ಮೇಲೆ ಸಿಂಪಡಿಸಬಹುದು. ಇವುಗಳಲ್ಲಿ ಕೆಲವು ಮಧ್ಯದಲ್ಲಿರುವ ರಂಧ್ರದ ಮೂಲಕ ಹಾಯ್ದು ಕೆಳಗೆ ಬರುತ್ತವೆ. ಇವು ಉಜ್ಜುವಿಕೆಯಿಂದ ಒಂದು ಅಥವಾ ಹೆಚ್ಚು ವಿದ್ಯುತ್ ಏಕಮಾನಗಳನ್ನು ಪಡೆದಿರುತ್ತವೆ. ಚಾಪ (ಆರ್ಕ್) ದೀಪದಿಂದ ಇವನ್ನು ಬೆಳಗಬಹುದು. ತಟ್ಟೆಗಳ ಮಧ್ಯೆ ವಿದ್ಯುತ್ ಕ್ಷೇತ್ರವಿಲ್ಲದಿದ್ದರೆ ತೈಲಬಿಂದುಗಳು ಗುರುತ್ವಾಕರ್ಷಣೆಯಿಂದ ಕೆಳಗೆ ಬೀಳುತ್ತವೆ. ವಿದ್ಯುತ್ ಕ್ಷೇತ್ರವನ್ನು ಬೇಕಾದ ಹಾಗೆ ಇರುವಂತೆಯೂ ಇಲ್ಲದಂತೆಯೂ ಮಾಡುತ್ತ ಒಂದು ಬಿಂದು ತಟ್ಟೆಗಳ ಮಧ್ಯೆ ಗಂಟೆಗಟ್ಟಲೆ ಮೇಲೆ ಕೆಳಗೆ ಚಲಿಸುತ್ತಿರುವಂತೆ ಮಾಡಬಹುದು. ಇದನ್ನು ಒಂದು ದೂರದರ್ಶಕದಲ್ಲಿ ನೋಡಿದರೆ ಮಿನುಗುವ ನಕ್ಷತ್ರದಂತೆ ಕಾಣುತ್ತದೆ. ದೂರದರ್ಶಕದ ವೀಕ್ಷಣ ಕ್ಷೇತ್ರದಲ್ಲಿ ಎರಡು ಅಡ್ಡ ಕೂದಲುಗಳಿವೆ. ಬಿಂದು ಒಂದು ಕೂದಲಿನಿಂದ ಇನ್ನೊಂದು ಕೂದಲನ್ನು ತಲುಪಲು ಬೇಕಾಗುವ ಕಾಲವನ್ನು ನಿಖರವಾಗಿ ಗೊತ್ತು ಮಾಡಬಹುದು. ಚಿತ್ರ 9ರಲ್ಲಿ ಅಡ್ಡಕೂದಲುಗಳನ್ನು ಕಾಣಬಹುದು. ಅಡ್ಡಕೂದಲುಗಳ ಮಧ್ಯೆ ತೈಲಬಿಂದುವಿನ ಚಲನೆ ಸ್ಟೋಕ್ಸ್ ನಿಯಮದಂತೆ ನಡೆಯುತ್ತದೆಂದು ಭಾವಿಸಿದರೆ



ಚಿತ್ರ 9 ಅಡ್ಡಕೂದಲುಗಳ ನಡುವೆ ಚಲಿಸುವ ತೈಲ ಬಿಂದು.

$$e=\frac{6\pi\eta a}{E}\ (v_1+v_2) \qquad \dots(5)$$

ಎಂದು ಬರೆಯಬಹುದು. ಇಲ್ಲಿ E ವಿದ್ಯುತ್ ಕ್ಷೇತ್ರದ ಬಲ, $\eta$ ಗಾಳಿಯ ಸ್ನಿಗ್ಧತಾ ನಿಯತಾಂಕ, $a$ ಬಿಂದುವಿನ ತ್ರಿಜ್ಯ, $v_1$ ಮತ್ತು $v_2$ ಬಿಂದು ಕೆಳಗೆ ಮತ್ತು ಮೇಲೆ ಚಲಿಸುವ ವೇಗಗಳು. ತೈಲ ಬಿಂದುವಿನ ಮೇಲಿದ್ದ ವಿದ್ಯುದಂಶದ ಮೌಲ್ಯವನ್ನು ಎಕ್ಸ್‌ಕಿರಣಗಳ ಸಹಾಯದಿಂದ ವ್ಯತ್ಯಾಸಮಾಡಿ $(v_1+v_2)$ ರಲ್ಲಾಗುವ ವ್ಯತ್ಯಾಸವನ್ನು ಮಿಲಿಕನ್ ನೋಡಿದ. ಈ ವ್ಯತ್ಯಾಸ ಯಾವಾಗಲೂ ಒಂದು ಕನಿಷ್ಠ ಮೌಲ್ಯದ ಅಪವರ್ತ್ಯವಾಗಿತ್ತು. ಇದರಿಂದ ವಿದ್ಯುತ್ತಿನ ಕಣಸ್ವಭಾವ ನಿಸ್ಸಂಶಯವಾಗಿ ಗೋಚರಿಸುತ್ತದೆ. ಮುಂದಿನ ಪಟ್ಟಿ ಇದನ್ನು ಮನದಟ್ಟು ಮಾಡುತ್ತದೆ.

ಬೀಳುವ ಸರಾಸರಿ ವೇಗ $v_1=0.01985$ ಸೆಂ. ಮೀ. ಸೆ.$^{-1}$

| ಪ್ರಯಾಣ | ಏರುವ ಕಾಲ | ಏರುವ ವೇಗ $v_2$ | $v_1+v_2$ | $n$ | $\frac{v_1+v_2}{n}$ |
|---|---|---|---|---|---|
| 2 | 21.86 | 0.04675 | 0.06660 | 5 | 0.01332 |
| 1 | 30.55 | 0.03345 | 0.05330 | 4 | 0.01333 |
| 3 | 50.72 | ... | ... | ... | ... |
| 6 | 50.29 | ... | ... | ... | ... |
| 7 | 50.25 | ... | ... | ... | ... |
| 8 | 50.39 | ... | ... | ... | ... |
| 9 | 40.70 | ... | ... | ... | ... |
| ಸರಾಸರಿ | 50.13 | 0.02039 | 0.04024 | 3 | 0.01341 |
| 4 | 148.63 | ... | ... | ... | ... |
| 5 | 147.46 | ... | ... | ... | ... |
| 10 | 146.41 | ... | ... | ... | ... |
| ಸರಾಸರಿ | 147.50 | 0.00693 | 0.02678 | 2 | 0.01339 |

ಬಿಂದುಗಳ ತ್ರಿಜ್ಯ ಕಡಿಮೆಯಾದಂತೆ ಸ್ಟೋಕ್ಸ್ ನಿಯಮ ಸಮಂಜಸವಾಗಿ ಪಾಲಿತವಾಗುವುದಿಲ್ಲ. ವಿಲ್ಸನ್ ಇದನ್ನು ಗಮನಿಸಿ ತಕ್ಕ ಪರಿಹಾರವನ್ನು ಕಂಡುಕೊಂಡ. 1906ರಿಂದ ಒಂದು ದಶಕ ಪರ್ಯಂತ ನಡೆಸಿದ ಪ್ರಯೋಗಗಳ ಫಲವಾಗಿ ಅವನು ಎಲೆಕ್ಟ್ರಾನಿನ ವಿದ್ಯುದಂಶ $e=(4.770\pm0.0005)\times10^{-10}$ esu ಎಂದು ನಿರ್ಧರಿಸಿದ.

ಎಕ್ಸ್ ಕಿರಣಗಳ ತರಂಗಾಂತರವನ್ನು ಪ್ರತಿಫಲನರೇಖಾಪಟಲದ ಸಹಾಯದಿಂದ ಕಂಡುಹಿಡಿಯಬಹುದು. ಈ ಬೆಲೆ ಅತಿ ನಿಖರವಾದದ್ದು. ಇದರಿಂದ ಸ್ಫಟಿಕಗಳ ಲ್ಯಾಟಿಸ್ ದೂರವನ್ನು ನಮನ ಪ್ರಯೋಗಗಳನ್ನು ನಡೆಸಿ ಲೆಕ್ಕ ಹಾಕಬಹುದು. ಒಮ್ಮೆ ಲ್ಯಾಟಿಸ್ ದೂರ ತಿಳಿದರೆ ಒಂದು ಗ್ರಾಂ ಅಣು ಸ್ಫಟಿಕದಲ್ಲಿರುವ ಅಣುಗಳ ಸಂಖ್ಯೆಯನ್ನು ಕಂಡುಹಿಡಿಯಬಹುದು. ಉದಾಹರಣೆಗೆ ಸೋಡಿಯಂ ಕ್ಲೋರೈಡ್ ತೆಗೆದುಕೊಂಡರೆ

$$N=\frac{M}{2d^3\rho} \qquad \dots(6)$$

ಎಂದು ಬರೆಯಬಹುದು. ಇಲ್ಲಿ N ಅವೊಗ್ಯಾಡ್ರೊ ಸಂಖ್ಯೆ, M ಸೋಡಿಯಂ ಕ್ಲೋರೈಡಿನ ಅಣುತೂಕ, $d$ ಲ್ಯಾಟಿಸ್ ದೂರ ಮತ್ತು $\rho$ ಸಾಂದ್ರತೆ. ಒಂದು ಸೋಡಿಯಂ ಕ್ಲೋರೈಡ್ ಅಣುವಿನಲ್ಲಿ 2 ಪರಮಾಣುಗಳಿರುವುದರಿಂದ ಕೆಳಗೆ 2 ಇದೆ. N ತಿಳಿದರೆ ಫ್ಯಾರಡೆಯಿಂದ $e$ ಯನ್ನು ಗಣಿಸಬಹುದು.

$$e=\frac{F}{N} \qquad \dots(7)$$

ಎಕ್ಸ್‌ಕಿರಣಗಳ ಎಲೆಕ್ಟ್ರಾನಿನ ವಿದ್ಯುದಂಶದ ಮೌಲ್ಯ $e=4.802\times10^{-10}$ esu ಇದು ತೈಲಬಿಂದು ಮೌಲ್ಯಕ್ಕಿಂತ ಸ್ವಲ್ಪ ಹೆಚ್ಚಾಗಿದೆ. ಆದರೆ ಈ ಬೆಲೆಯೇ ಹೆಚ್ಚು ನಿಖರವಾದದ್ದು. ಕಾರಣ ಇಲ್ಲಿ ಉಪಯೋಗಿಸಿರುವ ಎಲ್ಲ ಪರಿಮಾಣಗಳೂ ಹೆಚ್ಚು ನಿಖರವಾಗಿ ಗೊತ್ತಿರುವುವು. ಇದರಿಂದ ತೈಲಬಿಂದುವಿನ ಮೌಲ್ಯವನ್ನು ಪರಿಷ್ಕರಿಸುವುದು ಅನಿವಾರ್ಯವಾಯಿತು. ಶಿಬ ಎಂಬ ವಿಜ್ಞಾನಿ ತೈಲಬಿಂದು ಮತ್ತು ಎಕ್ಸ್ ಕಿರಣಗಳ ಮೌಲ್ಯಗಳಲ್ಲಿರುವ ವ್ಯತ್ಯಾಸಕ್ಕೆ ವಿಲ್ಸನ್ ಉಪಯೋಗಿಸಿದ ಗಾಳಿಯ ಸ್ನಿಗ್ಧತಾನಿಯತಾಂಕದಲ್ಲಿದ್ದ ಲೋಹವೇ ಕಾರಣವೆಂದು ತಿಳಿಸಿ ಅದನ್ನು ಸರಿಪಡಿಸಿದ. ಎಲೆಕ್ಟ್ರಾನಿನ ವಿದ್ಯುದಂಶ ಮತ್ತು ಸಾಪೇಕ್ಷ ವಿದ್ಯುದಂಶ ತಿಳಿದ ಮೇಲೆ ಅದರ ಜಡಮಾನವನ್ನು ಗಣಿಸಬಹುದು. ಇದು $9.1\times10^{-28}$ ಗ್ರಾಂ,

ಎಲೆಕ್ಟ್ರಾನಿನ ವಿದ್ಯುದಂಶ ಮತ್ತು ಜಡಮಾನ ತಿಳಿದ ಮೇಲೆ ಅದರ ರಚನೆಯನ್ನು ತಿಳಿಯಬಯಸುವುದು ಸ್ವಾಭಾವಿಕ. ಎಲೆಕ್ಟ್ರಾನಿನ ಜಡಮಾನ ಅದರ

ವಿದ್ಯುದಂಶದಿಂದಲೇ ವ್ಯಕ್ತವಾಗುವುದೆಂದು ಭಾವಿಸಿದರೆ ಅದರ ಗಾತ್ರವನ್ನು ಗಣಿಸಬಹುದು. ಒಂದು ಎಲೆಕ್ಟ್ರಾನ್ $v$ ವೇಗದಿಂದ ಚಲಿಸುತ್ತಿದ್ದರೆ ಅದರ ಚಲನಶಕ್ತಿಯನ್ನು

$$\frac{1}{2}\, mv^2 = \mu\, \frac{e^2v^2}{3a} \qquad \ldots \quad (8)$$

ಎಂದು ಬರೆಯಬಹುದು. ಇಲ್ಲಿ $m$ ವಿದ್ಯುದಂಶದಿಂದ ವ್ಯಕ್ತವಾದ ಜಡಮಾನ, $\mu$ ಸುತ್ತಿನ ಪ್ರದೇಶದ ಪಾರಗಮ್ಯತೆ (ಪರ್ಮಿಯಬಿಲಿಟಿ), $a$ ಎಲೆಕ್ಟ್ರಾನಿನ ತ್ರಿಜ್ಯ. ಗಾಳಿಯ ಅಥವಾ ನಿರ್ವಾತದ $\mu = 1$. ಆಗ

$$a = \frac{2e^2}{3m} \qquad \ldots \quad (9)$$

$e$ ಮತ್ತು $m$ ಗಳಿಗೆ ಗೊತ್ತಿರುವ ಬೆಲೆಗಳನ್ನು ಆದೇಶಿಸಿದರೆ

$a = 1.875 \times 10^{-13}$ ಸೆಂ. ಆಗುತ್ತದೆ.

ನೇರವಾಗಿ ಎಲೆಕ್ಟ್ರಾನಿನ ತ್ರಿಜ್ಯವನ್ನು ಗಣಿಸಬೇಕಾದರೆ ಎಲೆಕ್ಟ್ರಾನ್-ಎಲೆಕ್ಟ್ರಾನ್ ಸಂಘರ್ಷಣ ಪ್ರಯೋಗಗಳನ್ನು ನಡೆಸಬೇಕು. ಇವು ನಿರೀಕ್ಷಿತ ಫಲವನ್ನು ಕೊಡಬೇಕಾದರೆ ಎಲೆಕ್ಟ್ರಾನುಗಳ ಚಲನಶಕ್ತಿ 0.51 MeV ನಷ್ಟಾದರೂ ಇರಬೇಕು. ಆದರೆ ಇಂಥ ಪ್ರಸಂಗಗಳಲ್ಲಿ ಎಲೆಕ್ಟ್ರಾನುಗಳು ತರಂಗಗಳಂತೆ ವರ್ತಿಸುತ್ತದೆ. 0.51 MeV ಚಲನಶಕ್ತಿಯ ಎಲೆಕ್ಟ್ರಾನುಗಳ ತರಂಗಾಂತರ ಸುಮಾರು $2 \times 10^{-10}$ ಸೆಂ. ಇದು ಎಲೆಕ್ಟ್ರಾನುಗಳ ತ್ರಿಜ್ಯಕ್ಕಿಂತ ಸಾವಿರಪಾಲು ಹೆಚ್ಚಾಗಿದೆ. ಸಂಘರ್ಷಣ ಪ್ರಯೋಗಗಳು ತರಂಗಗಳ ಪ್ರತಿಕ್ರಿಯೆ (ಇಂಟರ‍್ಯಾಕ್ಷನ್) ಪ್ರಯೋಗಗಳಾಗುತ್ತವೆ. ಎಲೆಕ್ಟ್ರಾನನ್ನು ಬಿಂದು ವಿದ್ಯುದಂಶವೆಂದು ಪರಿಗಣಿಸಿ ಸಂದರ್ಭಕ್ಕೆ ತಕ್ಕಂತೆ ಅದರ ಗುಣವಿಶೇಷಗಳನ್ನು ವಿವರಿಸುವುದೇ ಸೂಕ್ತ.

ಎಲೆಕ್ಟ್ರಾನಿನ ಭ್ರಮಣೆ (ಸ್ಪಿನ್) ಮತ್ತು ಕಾಂತ ಭ್ರಮಣಾಂಕಗಳು : ಪರಮಾಣು ರೋಹಿತಸೂಕ್ಷ್ಮರಚನೆಯನ್ನು ವಿವರಿಸಲು ಎಲೆಕ್ಟ್ರಾನಿಗೆ ಭ್ರಮಣೆ (ಸ್ಪಿನ್) ಮತ್ತು ಕಾಂತ ಭ್ರಮಣಾಂಕಗಳಿವೆಯೆಂದು ಭಾವಿಸುವುದು ಅಗತ್ಯ ಎಂದು ಉಲೆನ್‌ಬೆಕ್ ಮತ್ತು ಗೌಡ್ಸ್‌ಮಿತ್ ಅವರು ಗಣನೆಗಳ ಆಧಾರದಿಂದ ತಿಳಿಸಿದರು (1925). ಭ್ರಮಣೆ ಸದಿಶ ಪರಿಮಾಣ. ಅದನ್ನು S ಎಂದಿಟ್ಟುಕೊಂಡು ಅದರ ವರ್ಗಮಾನವನ್ನು $\mathrm{S.S} = \mathrm{S}\,(\mathrm{S}+1)\frac{h}{2\pi}$ ಎಂದು ಬರೆಯಬಹುದು. ಯಾವುದಾದರೂ ಒಂದು ದಿಶೆಯಲ್ಲಿ, ಉದಾಹರಣೆಗೆ Z-ದಿಶೆಯಲ್ಲಿ, ಅದರ ಘಟಕ $\mathrm{S}_z = m_s\frac{h}{2\pi}$ ಇಲ್ಲಿ $m_s = \pm\frac{1}{2}$.

ಭ್ರಮಣಾಧಾರಿತ ಕಾಂತ ಭ್ರಮಣಾಂಕ $\mu = -\frac{e}{m}\mathrm{S}$. Z-ದಿಶೆಯಲ್ಲಿ ಇದರ ಘಟಕ $\mu_z = m_s\frac{e}{m}\frac{h}{2\pi}$ ಇದನ್ನು ಒಂದು ಬೋರ್ ಮ್ಯಾಗ್ನಟಾನ್ ಎಂದು ಕರೆಯುತ್ತಾರೆ. ಇದರ ಮೌಲ್ಯ $0.92732 \times 10^{-23}$ ಆಂಪೇರ್-ಮೀಟರ್$^2$.

ಭ್ರಮಣೆಯನ್ನು ಸಾಮಾನ್ಯವಾಗಿ ಭ್ರಮಣ ಪರಿಮಾಣವೆಂದು ಪರಿಗಣಿಸುವುದು ವಾಡಿಕೆ. ಎಲೆಕ್ಟ್ರಾನ್ ಅದರ ಜಡಮಾನ ಕೇಂದ್ರದಿಂದ ಹಾದುಹೋಗುವ ಅಕ್ಷದ ಮೇಲೆ ಭ್ರಮಣಿಸುತ್ತಿದೆಯೆಂದು ತಿಳಿದು ಗಣಿಸುವ ಗೈರೋಕಾಂತ ಪ್ರಮಾಣ (ಕಾಂತ ಭ್ರಮಣಾಂಕಕ್ಕೂ ಭ್ರಮಣ ಪರಿಮಾಣಕ್ಕೂ ಇರುವ ಪ್ರಮಾಣ) ನಿಜವಾದ ಮೌಲ್ಯದ ಅರ್ಧದಷ್ಟಿದೆ. ಅದೂ ಅಲ್ಲದೆ ಅಭಿಜಾತ (ಕ್ಲಾಸಿಕಲ್) ಮಿತಿಯಲ್ಲಿ $\frac{h}{2\pi} \rightarrow 0$. ಆದ್ದರಿಂದ ಎಲೆಕ್ಟ್ರಾನ್ ಭ್ರಮಣೆಯನ್ನು ಅದರ ಶಕಲ (ಕ್ವಾಂಟಂ) ಗುಣವೆಂದು ತಿಳಿಯುವುದು ಸೂಕ್ತ. ಅದಕ್ಕೆ ಅಭಿಜಾತ ಉಪಮೆಯನ್ನೊದಗಿಸಲು ಮಾಡುವ ಯತ್ನ ವ್ಯರ್ಥ. ಭ್ರಮಣೆಯ ಜೊತೆಗೆ ಹೊಂದಿಕೊಂಡಿರುವ ಗುಣ ಕಾಂತ ಭ್ರಮಣಾಂಕ.

ಎಲೆಕ್ಟ್ರಾನಿನ ಡಿರಾಕ್ ಸಮೀಕರಣ : ವಿದ್ಯುತ್‌ಕಾಂತ ಕ್ಷೇತ್ರದಲ್ಲಿ ಎಲೆಕ್ಟ್ರಾನಿನ ವರ್ತನೆಯನ್ನು ವಿವರಿಸಲು ಡಿರಾಕ್ ಒಂದು ಹೊಸ ಸಮೀಕರಣವನ್ನು ಮಂಡಿಸಿದ (1928). ಈ ಸಮೀಕರಣ ಎಲೆಕ್ಟ್ರಾನಿನ ತರಂಗಗುಣವನ್ನು ಒಳಗೊಂಡಿರಬೇಕಾದುದಲ್ಲದೆ ಸಾಪೇಕ್ಷೀಯವಾಗಿ ಅಚರವಾಗಿಯೂ (ರಿಲೆಟಿವಿಸ್ಟಿಕ್ ಇನ್‌ವೇರಿಯೆನ್ಸ್) ಇರಬೇಕು. ಈ ಎರಡನೆಯ ಅಗತ್ಯವೆಂದರೆ ವಿಶಿಷ್ಟ ರಿಲೆಟಿವಿಟಿ ಸಿದ್ಧಾಂತದಂತೆ ಆಕಾಶ ಮತ್ತು ಕಾಲದ ನಿರ್ದೇಶಕಗಳನ್ನು ಲೊರೆಂಟ್ಸ್ ಸ್ಥಾನಪಲ್ಲಟನಕ್ಕೆ ಒಳಪಡಿಸಿದರೆ ಸಮೀಕರಣದ ಸ್ವರೂಪ ಬದಲಾಗದೆ ಇರಬೇಕು. ಇದಾದರೆ ಜಡಮಾನದಲ್ಲಾಗುವ ವ್ಯತ್ಯಾಸವೂ ಸೇರಿಕೊಂಡಂತಾಗುತ್ತದೆ.

ಸಾಪೇಕ್ಷ ಅಚರತ್ವದಿಂದ ಎರಡು ಅನಿರೀಕ್ಷಿತ ತೀರ್ಮಾನಗಳು ವ್ಯಕ್ತವಾದುವು. ಮೊದಲನೆಯದು, ಎಲೆಕ್ಟ್ರಾನಿಗೆ ಭ್ರಮಣೆ $\frac{h}{4\pi}$ ಮತ್ತು ಕಾಂತ ಭ್ರಮಣಾಂಕ ಒಂದು ಬೋರ್ ಮ್ಯಾಗ್ನಟಾನ್ ಇರಬೇಕೆಂಬುದು. ಎರಡನೆಯದು ಸಂವೇಗ P ಆಗಿರುವ ಎಲೆಕ್ಟ್ರಾನಿನ ಶಕ್ತಿ ಐಗನ್ ಮೌಲ್ಯಗಳು $\pm(P^2c^2 + m^2c^4)^{\frac{1}{2}}$ ಎಂದು. ಇಲ್ಲಿ $c$ ಬೆಳಕಿನ ವೇಗ. ಋಣ ಶಕ್ತಿ ಮೌಲ್ಯವುಳ್ಳ ಎಲೆಕ್ಟ್ರಾನಿಗೆ ಸ್ವಾಭಾವಿಕವಾದ ಅಸ್ತಿತ್ವವಿಲ್ಲ ; ಎಲೆಕ್ಟ್ರಾನುಗಳು ಋಣಶಕ್ತಿ ಸ್ತರಗಳಿಗೆ ಸ್ಥಿತ್ಯಂತರಗೊಳ್ಳುವುದಕ್ಕಾಗುವುದಿಲ್ಲ. ಕಾರಣ ಎಲ್ಲ ಋಣಶಕ್ತಿ ಸ್ತರಗಳು ಎಲೆಕ್ಟ್ರಾನುಗಳಿಂದ ತುಂಬಿಬಿಟ್ಟಿವೆ ಎಂದು ಡಿರಾಕ್ ಹೇಳುತ್ತಾನೆ. ಈ ಪರಿಕಲ್ಪನೆಯಂತೆ ನಿರ್ವಾತ ಋಣಶಕ್ತಿ ಸ್ತರಗಳನ್ನು ತುಂಬಿರುವ ಎಲೆಕ್ಟ್ರಾನುಗಳ ಅಸೀಮಸಾಗರ. ಆದರೆ ಸಾಕಷ್ಟು ಶಕ್ತಿ ದೊರೆತರೆ ಋಣಶಕ್ತಿ ಸ್ತರದಿಂದ ಎಲೆಕ್ಟ್ರಾನ್ ಮೇಲೆ ಬರುತ್ತದೆ. ಆಗ ಋಣಶಕ್ತಿ ಸಾಗರದಲ್ಲಿ ಒಂದು ಗುಳ್ಳೆಯಂಥ ರಂಧ್ರ ಹುಟ್ಟಿಕೊಳ್ಳುತ್ತದೆ. ಇದರ ವಿದ್ಯುದಂಶ ಎಲೆಕ್ಟ್ರಾನಿನ ವಿದ್ಯುದಂಶದಷ್ಟೆ ಇದ್ದು ಚಿಹ್ನೆಯಲ್ಲಿ ಮಾತ್ರ ವಿರುದ್ಧವಾಗಿರುತ್ತದೆ. ಈ ಕಾರಣದಿಂದ ಅದರ ಕಾಂತ ಭ್ರಮಣಾಂಕದ ಚಿಹ್ನೆ ಎಲೆಕ್ಟ್ರಾನಿನ ಕಾಂತ ಭ್ರಮಣಾಂಕದ ಚಿಹ್ನೆಗೆ ವಿರುದ್ಧವಾಗಿರುತ್ತದೆ. ಭ್ರಮಣ ಚಿಹ್ನೆಯಲ್ಲಿ ಬದಲಾವಣೆ ಇಲ್ಲ. ಆಂಡ್ರಸನ್ ಕಾಸ್ಮಿಕ್ ಕಿರಣಗಳ ಸಂಶೋಧನೆಯಲ್ಲಿ ಕಂಡುಹಿಡಿದ (1932) ಕಣ ಈ ಡಿರಾಕ್ ರಂಧ್ರದ ಎಲ್ಲ ಗುಣಗಳನ್ನೂ ಹೊಂದಿತ್ತು. ಇದನ್ನು ಪಾಸಿಟ್ರಾನ್ ಎಂದು ಕರೆಯುತ್ತಾರೆ. ಪಾಸಿಟ್ರಾನ್ ಅನ್ವೇಷಣೆ ಮಾಡಿದ ಮೇಲೆ ಡಿರಾಕ್ ಸಮೀಕರಣಕ್ಕೆ ಭದ್ರವಾದ ಅಡಿಪಾಯ ಸಿಕ್ಕಿತು. ಎಲೆಕ್ಟ್ರಾನ್ ಮತ್ತು ಪಾಸಿಟ್ರಾನ್ ಒಂದನ್ನೊಂದು ಸಂಧಿಸಿದರೆ ಪರಸ್ಪರ ನಾಶವಾಗುತ್ತವೆ ಮತ್ತು ಆಗ ಬಿಡುಗಡೆಯಾಗುವ ಜಡಮಾನಶಕ್ತಿ ಎರಡು ಅಥವಾ ಮೂರು ಫೋಟಾನುಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ. ನಾಶಹೊಂದಿದ ಕಣಗಳ ಚಲನಶಕ್ತಿ ಫೋಟಾನುಗಳ ರೂಪದಲ್ಲಿ ಕಾಣಿಸಿಕೊಳ್ಳುತ್ತದೆ ಮತ್ತು ಅದು ಫೋಟಾನುಗಳ ಶಕ್ತಿಯಲ್ಲಿ ಸೇರಿರುತ್ತದೆ.

ಎಲೆಕ್ಟ್ರಾನ್ ವಿದ್ಯುತ್ಕಾಂತೀಯ ಕ್ಷೇತ್ರದ ಆಕರ. ಇದು ಸದಾ ತೋರಿಕೆ ಫೋಟಾನುಗಳನ್ನು ಸುತ್ತಿನ ಕ್ಷೇತ್ರದೊಂದಿಗೆ ವಿನಿಮಯ ಮಾಡಿಕೊಳ್ಳುತ್ತ ಮಿಡಿಯುತ್ತಿರುತ್ತದೆ. ಈ ಪ್ರಕ್ರಿಯೆಯನ್ನು ಗಣನೆಗೆ ತೆಗೆದುಕೊಂಡರೆ ಎಲೆಕ್ಟ್ರಾನಿನ ಕಾಂತ ಭ್ರಮಣಾಂಕವನ್ನು

$$\mu = \left(1 + \frac{\alpha}{2\pi} - 0.327\,\frac{\alpha^2}{\pi^2}\right)\mu_B \qquad \ldots \quad (10)$$

ಎಂದು ಬರೆಯಬಹುದು. ಇಲ್ಲಿ $\alpha$ ಸೂಕ್ಷ್ಮ ರಚನ ನಿಯತಾಂಕ ಮತ್ತು $\mu_B$ ಬೋರ್ ಮ್ಯಾಗ್ನಟಾನ್. $\alpha/2\pi$ ಪದವನ್ನು ಸ್ವಿಂಗರನೂ ಮುಂದಿನದನ್ನು ಸಾಮರ್‌ಫೆಲ್ಡನೂ ಪಡೆದಿದ್ದಾರೆ. ವಿಲ್ಕನ್‌ಸನ್ ಮತ್ತು ಕ್ರೇನ್ ಅವರು ಎಲೆಕ್ಟ್ರಾನುಗಳನ್ನು ಕಾಂತ ಶೀಶೆಯಲ್ಲಿ ಹಿಡಿದು ಅವುಗಳ ಸೈಕ್ಲೊಟ್ರಾನ್ ಪಥೀ ಕಂಪನಾಂಕ ಮತ್ತು ಭ್ರಮಣ ಅಯನಾಂಶಿಕ ಕಂಪನಾಂಕಗಳನ್ನು ಹೋಲಿಸಿ ಎಲೆಕ್ಟ್ರಾನಿನ ಕಾಂತ ಭ್ರಮಣಾಂಕ $\mu = 1.0011596\mu_B$ ಎಂದು ತೋರಿಸಿದರು. ಇದು ಸಮೀಕರಣ (10)ರ ಬೆಲೆಗೆ ಸರಿಯಾಗಿದೆ.

(ಎಸ್.ಎಚ್.)

**ಎಲೆಕ್ಟ್ರಾನ್ ದೃಕ್‌ಶಾಸ್ತ್ರ :** ಎಲೆಕ್ಟ್ರಾನ್ ದೂಲಗಳ ಪ್ರಸಾರವನ್ನು ವಿವರಿಸುವ ಭೌತಶಾಸ್ತ್ರದ ವಿಭಾಗ. 1926ರಲ್ಲಿ ಬುಷ್ ಎಂಬಾತ ಎಲೆಕ್ಟ್ರಾನ್ ಮಸೂರಗಳ ಕ್ರಿಯೆಯನ್ನು ಸೈದ್ಧಾಂತಿಕವಾಗಿ ವಿವರಿಸಿದ ಮೇಲೆ ಈ ಶಾಸ್ತ್ರದ ಬೆಳವಣಿಗೆ ಪ್ರಾರಂಭವಾಯಿತು.

ಕನಿಷ್ಠ ಕ್ರಿಯೆ ಮತ್ತು ಫರ್ಮನ ನಿಯಮಗಳನ್ನು ಒಟ್ಟಿಗೆ ಪರೀಕ್ಷಿಸಿದರೆ ಸಂವೇಗ (ಮೊಮೆಂಟಂ) ಮತ್ತು ವಕ್ರೀಭವನ ಸೂಚ್ಯಂಕ ಕ್ರಮವಾಗಿ ಗತಿಶಾಸ್ತ್ರ ಮತ್ತು ದೃಕ್‌ಶಾಸ್ತ್ರದಲ್ಲಿ ಸಮಾನಪಾತ್ರಗಳನ್ನು ನಿರ್ವಹಿಸುವುದು ತಿಳಿಯುತ್ತದೆ. ಎಲೆಕ್ಟ್ರಾನ್ ಒಂದು ಕ್ಷೇತ್ರದಿಂದ ಇನ್ನೊಂದು ಕ್ಷೇತ್ರಕ್ಕೆ ಹಾದುಹೋಗುವುದನ್ನು ಚಿತ್ರ 1ರಲ್ಲಿ ತೋರಿಸಿದೆ. ಕನಿಷ್ಠ ಕ್ರಿಯೆ ನಿಯಮದಂತೆ ಚಿತ್ರದ ಜ್ಯಾಮಿತಿಯನ್ನನುಸರಿಸಿ,

$$\delta\left(P_1\sqrt{x_1^2 + y_1^2} + P_2\sqrt{x_2^2 + y_2^2}\right) = 0 \qquad \ldots \quad (1)$$

ಎಂದು ಬರೆಯಬಹುದು. ಅನಂತರ

$$\frac{\sin i}{\sin r} = \frac{P_2}{P_1} \qquad \ldots \quad (೨)$$

ಎಂದು ಬರೆಯುವುದು ಸುಲಭ. $i$ ಮತ್ತು $r$ ಪತನಕೋನ ಮತ್ತು ವಕ್ರೀಭವನಕೋನ. $P_2$ ಮತ್ತು $P_1$ ಕ್ಷೇತ್ರ (2) ಮತ್ತು (1) ರಲ್ಲಿ ಕ್ರಮವಾಗಿ ಎಲೆಕ್ಟ್ರಾನಿನ ಸಂವೇಗ




ಚಿತ್ರ 1 ಬೇರೆ ಬೇರೆ ವಿಭವವಿರುವ ಎರಡು ಕ್ಷೇತ್ರಗಳಲ್ಲಿ ಎಲೆಕ್ಟ್ರಾನಿನ ಪಥ ನಿರೂಪಣೆ

$\eta_1$ ಮತ್ತು $\eta_2$ ಗಳು ಕ್ರಮವಾಗಿ ಕ್ಷೇತ್ರ (1) ಮತ್ತು (2)ರ ವಕ್ರೀಭವನ ಸೂಚಿಗಳಾದರೆ ಫರ್ಮ ನಿಯಮದಂತೆ $\frac{\sin i}{\sin r} = \frac{\eta_2}{\eta_1}$ ... (3)

ಎಂದು ತೋರಿಸಬಹುದು, ಸಮೀಕರಣ (2) ಮತ್ತು (3) ಸಂವೇಗ ಮತ್ತು ವಕ್ರೀಭವನ ಸೂಚಿಗಳಿಗಿರುವ ಸಾಮ್ಯವನ್ನು ತೋರಿಸುತ್ತವೆ.

ಗಾಜು, ನೀರು ಮುಂತಾದ ಪಾರದರ್ಶಕಗಳು ಬೆಳಕಿನ ದೂಲಗಳನ್ನು ಬಾಗಿಸುವಂತೆ ಸ್ಥಿರ ವಿದ್ಯುತ್ ಮತ್ತು ಕಾಂತಕ್ಷೇತ್ರಗಳು ಎಲೆಕ್ಟ್ರಾನ್ ದೂಲಗಳನ್ನು ಬಾಗಿಸುತ್ತವೆ.




ಚಿತ್ರ 2 ಅಕ್ಷಸಮವುಳ್ಳ ಸ್ಥಿರವಿದ್ಯುತ್‌ಬಲ ಕ್ಷೇತ್ರದಲ್ಲಿ ಎಲೆಕ್ಟ್ರಾನಿನ ಪಥ

ಅಕ್ಷಸಮವಿರುವ ಸ್ಥಿರ ವಿದ್ಯುತ್ ಕ್ಷೇತ್ರ ಎಲೆಕ್ಟ್ರಾನ್ ಮಸೂರದಂತೆ ವರ್ತಿಸುತ್ತದೆ. ಈ ಮಾತಿನ ಯಾಥಾರ್ಥ್ಯವನ್ನು ತಿಳಿಯಲು ಚಿತ್ರ 2ರಲ್ಲಿ ನಿರೂಪಿಸಿರುವ ಎಲೆಕ್ಟ್ರಾನಿನ ಚಲನೆಯನ್ನು ಗಮನಿಸಬೇಕು. ವಿಭವದ ವ್ಯತ್ಯಾಸ $0<z<l$ ಮಿತಿಯಲ್ಲಿ ಮಾತ್ರ ಆಗುತ್ತದೆ. ಇದರಿಂದ ಹೊರಗೆ ಎರಡೂ ಕಡೆಯಲ್ಲಿ ಎಲೆಕ್ಟ್ರಾನುಗಳು ಸರಳರೇಖೆಯಲ್ಲಿ ಚಲಿಸುತ್ತವೆ. ಕೋನ $\alpha$ದ ಮೌಲ್ಯ ಬಹಳ ಕಡಿಮೆಯಾಗಿದ್ದರೆ

$$r'' + \frac{\Phi'}{2\Phi} r' + \frac{\Phi''}{4\Phi} r = 0 \quad \ldots \quad (4)$$

ಎಂದು ಬರೆಯಬಹುದು. ಅಕ್ಷಕ್ಕೆ ಅತಿ ಸಮೀಪದಲ್ಲಿ ಹಾಯುವ ಎಲೆಕ್ಟ್ರಾನುಗಳ ಪಥವನ್ನು ಈ ಸಮೀಕರಣ ವಿವರಿಸುತ್ತದೆ. ಆದ್ದರಿಂದ ಇದನ್ನು ಉಪಾಕ್ಷ ಸಮೀಕರಣ ಎಂದು ಕರೆಯುತ್ತಾರೆ. $Z=0$ ಆದಾಗ $r=r_o$ ಮತ್ತು $r'=r_o'$ ಆದರೆ

$$r = r_o\, P(z) + r_o'\, Q(z) \quad \ldots \quad (5)$$

ಎಂದು ಬರೆಯಬಹುದು. ಇಲ್ಲಿ $P(z)$ ಮತ್ತು $Q(z)$ ಗಳು $z$ನ ಉತ್ಪನ್ನಗಳು.

ಈಗ ಮಸೂರದ ಕೆಲಸವನ್ನು ತಿಳಿಯುವುದು ಸುಲಭ. ಚಿತ್ರ 3ರಲ್ಲಿ ಪಥ




ಚಿತ್ರ 3 ಸ್ಥಿರವಿದ್ಯುತ್ ಮಸೂರದ ಕಾರ್ಯ ನಿರೂಪಣೆ

(1) ಮತ್ತು (2) ನ್ನು ಗಮನಿಸಿ ಪಥ (1) ಕ್ಕೆ ಸಂಬಂಧಿಸಿದಂತೆ ಸಮೀಕರಣ (5) ನ್ನು $r=yP(z)$ ... (6)

ಎಂದೂ ಪಥ (2)ಕ್ಕೆ ಸಂಬಂಧಿಸಿದಂತೆ ಅದನ್ನು

$$r = (y + r_o' z_o)\, P(z) + r_o'\, Q(z) \quad \ldots \quad (7)$$

ಎಂದೂ ಬರೆಯಬಹುದು. (6) ಮತ್ತು (7) ರ ಬಲಪಕ್ಷಗಳನ್ನು ಸಮೀಕರಿಸಿ

$$yP(z_i) = (y + r_o' z_o)\, P(z_i) + r_o'\, Q(z_i) \quad \ldots \quad (8)$$

ಎಂದು ಬರೆಯಬಹುದು. (8) ರಿಂದ

$$Z_o P(z_i) + Q(z_i) = 0 \quad \ldots \quad (9)$$

ಎಂದು ಬರೆಯಬಹುದು. ಇದು $z_i$ ಎರಡನೆ ಪಥದ ಓಟವನ್ನು ಅವಲಂಬಿಸಿಲ್ಲವೆಂದು ಸ್ಪಷ್ಟವಾಗಿ ತಿಳಿಸುತ್ತದೆ. A ಯಿಂದ ಹೊರಡುವ ಎಲ್ಲ ದೂಲಗಳೂ




ಚಿತ್ರ 4 ಏಕರಂಧ್ರ ಮಸೂರ

ಅವುಗಳ ಓಟಗಳೂ ಬೇರೆ ಬೇರೆಯಾಗಿದ್ದರೂ ಪ್ರತಿಬಿಂಬಕ್ಷೇತ್ರದಲ್ಲಿ $zi$ ಬಳಿ ಸಂಧಿಸುತ್ತವೆ. ವಸ್ತು ಕ್ಷೇತ್ರದ ಪ್ರತಿಬಿಂದುವಿಗೂ ತಕ್ಕಂತೆ ಪ್ರತಿಬಿಂಬಕ್ಷೇತ್ರದಲ್ಲಿ ಒಂದು ಬಿಂದು ಮೂಡುತ್ತದೆ ಲಂಬನ $\frac{y_i}{y} = P\ (z_i)$, $z_i$ಯನ್ನು ಮಾತ್ರ ಅವಲಂಬಿಸಿರುವುದರಿಂದ ಅಕ್ಷಕ್ಕೆ ಲಂಬವಾಗಿರುವ ಯಾವುದೇ ಎರಡು ಅನುವರ್ತಿ (ಕಾಂಜುಗೇಟ್) ಸಮತಳಗಳಲ್ಲಿ ಅದು ಸ್ಥಿರಮೌಲ್ಯವನ್ನು ಹೊಂದಿರುತ್ತದೆ.

ಅಕ್ಷಸಮ ಸ್ಥಿರ ವಿದ್ಯುತ್ ಕ್ಷೇತ್ರಗಳು ಎಲೆಕ್ಟ್ರಾನ್ ಮಸೂರಗಳಂತೆ ವರ್ತಿಸುವುದರಿಂದ ವಿವಿಧ ಎಲೆಕ್ಟ್ರೋಡುಗಳ ಜೋಡಣೆಯಿಂದ ಬೇಕಾದ ಮಸೂರಗಳನ್ನು ಮಾಡಿಕೊಳ್ಳಬಹುದು.

(i) ಏಕರಂಧ್ರಮಸೂರ. ಅತಿ ಸಾಮಾನ್ಯವಾದ ಮಸೂರವೆಂದರೆ ಎರಡು ವಿಭವ ಕ್ಷೇತ್ರಗಳನ್ನು ಬೇರ್ಪಡಿಸುವ ಒಂದು ವಾಹಕ ತಟ್ಟೆಯಲ್ಲಿನ ರಂಧ್ರ. ಇದರ ರಚನೆ ಮತ್ತು ಕೆಲಸವನ್ನು ವಿಶೇಷವಾಗಿ ಅಭ್ಯಾಸಮಾಡಿರುವ ಡೇವಿಸನ್ ಮತ್ತು ಕ್ಯಾಲ್ಬಿಕ್ ಅವರು ಮಸೂರದ ನಾಭಿ ದೂರ ಎಂದು ತೋರಿಸಿದ್ದಾರೆ. $V_g$, $V_1'$ ಮತ್ತು $V_2'$ ಗಳು ವೋಲ್ಟಿನಲ್ಲಿ ವಿಭವದ ಮೌಲ್ಯಗಳು.

$$f = \frac{4V_g}{V_2'-V_1'} \quad \dots (10)$$




ಚಿತ್ರ 5 ಒಂದೇ ವ್ಯಾಸವುಳ್ಳ ಕೊಳವೆ ಮಸೂರದ ನಾಭಿಗುಣಗಳು $(V_1 < V_2)$

(ii) ಕೊಳವೆ ಮಸೂರ. ಒಂದೇ ಅಕ್ಷವುಳ್ಳ ಬೇರೆ ಬೇರೆ ವಿಭವಗಳಲ್ಲಿರುವ ಎರಡು ಕೊಳವೆಗಳು ಮಸೂರದಂತೆ ವರ್ತಿಸುತ್ತವೆ. ಇದರಲ್ಲಿ ಎರಡನೆಯ ನಾಭಿದೂರ $f_2$ ಯಾವಾಗಲೂ $Z_2$ ಕ್ಕಿಂತ ಹೆಚ್ಚಾಗಿರುತ್ತದೆ. ಎರಡನೆಯ ಪ್ರಮುಖಬಿಂದು $H_2$ ಕೊಳವೆಗಳ ಮಧ್ಯದ ಸಮತಲಕ್ಕೆ ಎಡಭಾಗದಲ್ಲಿರುತ್ತದೆ. $V_2$ ಹೆಚ್ಚಾದರೆ $f_2$ ಕಡಿಮೆಯಾಗುತ್ತದೆ. ಕೊಳವೆ ಮಸೂರಗಳನ್ನು ಎಲೆಕ್ಟ್ರಾನ್ ದೃಗುಪಕರಣಗಳಲ್ಲಿ ವಿಶೇಷವಾಗಿ ಬಳಸುತ್ತಾರೆ.

(iii) ಏಕವಿಭವ ಮಸೂರ (ಯೂನಿಪೊಟೆನ್ಷಿಯಲ್ ಲೆನ್ಸ್). ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳಿಗೆ ಬಹುಮುಖ್ಯವಾಗಿ ಬೇಕಾದ ಮಸೂರ ಇದು. ಇದರಲ್ಲಿ ಮೂರು ಏಕಾಕ್ಷಿ ರಂಧ್ರಗಳಿವೆ. ಹೊರಗಿನ ರಂಧ್ರಗಳ ವಿಭವ ಒಂದೇ ಮೌಲ್ಯದ್ದಾಗಿರುತ್ತದೆ. ಮಧ್ಯ ರಂಧ್ರದ ವಿಭವ ಇದಕ್ಕಿಂತ ಹೆಚ್ಚಾಗಿರಲಿ ಅಥವಾ ಕಡಿಮೆಯಾಗಿರಲಿ ಏಕವಿಭವ ಮಸೂರ ಯಾವಾಗಲೂ ಅಭಿಸರಿಸುವ (ಕನ್ವರ್ಜಿಂಗ್) ಮಸೂರದಂತೆಯೇ ವರ್ತಿಸುತ್ತದೆ. ಇದರ ರಚನೆಯನ್ನು ಚಿತ್ರ 6ರಲ್ಲಿ ನೋಡಬಹುದು.



ಚಿತ್ರ 6 ಏಕವಿಭವ ಮಸೂರ

ಏಕವಿಭವ ಮಸೂರದ ನಾಭಿದೂರದ ಮೇಲೆ ಪ್ರಭಾವ ಬೀರುವ ಪ್ರಾಚಲಗಳು (ಪ್ಯರಾಮೀಟರ್ಸ್) ಒಳಗಿನ ರಂಧ್ರದ ವ್ಯಾಸ, ಎಲೆಕ್ಟ್ರೋಡುಗಳಿಗಿರುವ ದೂರ ಮತ್ತು ಮಧ್ಯದ ಎಲೆಕ್ಟ್ರೋಡಿನ ದಪ್ಪ. ಹೊರಗಿನ ರಂಧ್ರಗಳ ವ್ಯಾಸದ ಪ್ರಭಾವ ಅಷ್ಟಿಲ್ಲ. ಒಳಗಿನ ರಂಧ್ರದ ವ್ಯಾಸ ಕಡಿಮೆಯಾದಂತೆ ನಾಭಿದೂರ ಕೂಡ ಕಡಿಮೆಯಾಗುತ್ತದೆ.

ಅಕ್ಷಸಮಾಂಗ ಸ್ಥಿರ ವಿದ್ಯುತ್ ಕ್ಷೇತ್ರಗಳಂತೆ ಅಕ್ಷಸಮಾಂಗಕಾಂತಕ್ಷೇತ್ರಗಳೂ ಎಲೆಕ್ಟ್ರಾನ್ ಮಸೂರಗಳಂತೆ ವರ್ತಿಸುತ್ತವೆ. ಸ್ಥಿರ ವಿದ್ಯುತ್ ಕ್ಷೇತ್ರದಲ್ಲಿ ಎಲೆಕ್ಟ್ರಾನನ್ನು ಬಾಗಿಸುವ ಬಲ ಕ್ಷೇತ್ರದ ದಿಕ್ಕಿನಲ್ಲಿ ವರ್ತಿಸುತ್ತದೆ. ಆದರೆ ಕಾಂತಕ್ಷೇತ್ರದಲ್ಲಿ ಇದು ಎಲೆಕ್ಟ್ರಾನಿನ ಚಲನೆಯ ದಿಕ್ಕು ಮತ್ತು ಕ್ಷೇತ್ರದ ದಿಕ್ಕುಗಳನ್ನೊಳಗೊಂಡ ಸಮತಲಕ್ಕೆ ಲಂಬವಾಗಿರುತ್ತದೆ. ಈ ಕಾರಣದಿಂದ ಕಾಂತಮಸೂರದಿಂದ ಮೂಡುವ ಪ್ರತಿಬಿಂಬ 180° ಗಳಿಗಿಂತ ಹೆಚ್ಚಾಗಿ ತಿರುಗುತ್ತದೆ. ಇದನ್ನು ಚಿತ್ರ 7ರಲ್ಲಿ ನೋಡಬಹುದು.




ಚಿತ್ರ 7 ಕಾಂತಮಸೂರದಿಂದ ಪ್ರತಿಬಿಂಬ ಮೂಡುವ ಬಗೆ

ಕಾಂತ ಮಸೂರದಲ್ಲಿ ಪ್ರತಿಬಿಂಬ 180° ಗಿಂತ ಹೆಚ್ಚು ತಿರುಗುವುದನ್ನೂ ಗಮನದಲ್ಲಿಟ್ಟುಕೊಂಡರೆ

$$r'' = -\frac{eH_z^2 r}{8mc^2V} \quad \dots (11)$$

$$\theta'_i = \sqrt{\frac{e}{8mc^2V}}\ H_z \quad \dots (12)$$

ಎಂದು ಬರೆಯಬಹುದು. ಇಲ್ಲಿ $\dot{z} = \sqrt{\frac{2eV}{m}}$ ಎಂಬ ಸಾಮ್ಯವನ್ನು ಉಪಯೋಗಿಸಿಕೊಂಡಿದೆ. $m$ ಎಲೆಕ್ಟ್ರಾನಿನ ಜಡಮಾನ, V ಎಲೆಕ್ಟ್ರಾನ್ ಹಾಯ್ದು ಬಂದಿರುವ ವಿಭವಾಂತರ. ಸಾಮಾನ್ಯವಾಗಿ ಬಳಸುವ ಕಾಂತ ಮಸೂರಗಳಲ್ಲಿ ಕ್ಷೇತ್ರದ ಹಂಚಿಕೆ ಗಂಟೆಯ ಆಕೃತಿಯಲ್ಲಿರುತ್ತದೆ. ಚಿತ್ರ 8ರಲ್ಲಿ ಇಂಥ ಹಂಚಿಕೆಯನ್ನು ನೋಡಬಹುದು. ಇದನ್ನು ಸಮೀಕರಣದ ರೂಪದಲ್ಲಿ

$$H\ (z) = \frac{H_o\ (z)}{1+\left(\frac{z}{a}\right)^2} \quad \dots (13)$$

ಎಂದು ಬರೆಯಬಹುದು. ಇಷ್ಟಾದರೆ ಸಮೀಕರಣ (11) ರಿಂದ

$$r = r_o P(z) + r_o' Q(z) \quad \ldots (14)$$

ಎಂದು ಬರೆಯಬಹುದು. ಇದನ್ನು ಸಮೀಕರಣ (5)ರೊಂದಿಗೆ ಹೋಲಿಸಿ ನೋಡಿದರೆ ಕಾಂತಕ್ಷೇತ್ರ ಸ್ಥಿರವಿದ್ಯುತ್ ಕ್ಷೇತ್ರದಂತೆಯೇ ಮಸೂರದ ಕೆಲಸ ಮಾಡು




ಚಿತ್ರ 8 ಗಂಟೆಯ ಆಕೃತಿಯ ಕಾಂತಕ್ಷೇತ್ರ. ಚಿತ್ರದಲ್ಲಿ D ರಂಧ್ರದ ವ್ಯಾಸ S ಧ್ರುವ ತುಂಡುಗಳ ಮಧ್ಯದ ಅಂತರ

ತ್ತದೆಂಬುದು ಮನದಟ್ಟಾಗುತ್ತದೆ. ನಾಭಿದೂರ ಮಸೂರದ ವ್ಯಾಪ್ತಿ $l$ ಗಿಂತ ಹೆಚ್ಚಾಗಿರುವ ಸನ್ನಿವೇಶವನ್ನು ಗಮನದಲ್ಲಿಟ್ಟುಕೊಂಡು

$$\frac{1}{f} = \frac{0.022}{V} \int_0^l H_z^2 \, dz \quad \ldots (15)$$

$$\theta_i = \frac{0.149}{\sqrt{V}} \int_0^l H_z \, dz \quad \ldots (16)$$

ಎಂದು ತೋರಿಸಬಹುದು. ಇಂಥ ಮಸೂರಗಳನ್ನು ತೆಳುಮಸೂರಗಳೆಂದು ಕರೆಯುತ್ತಾರೆ.

ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳಲ್ಲಿ ಕಾಂತಮಸೂರಗಳ ಉಪಯೋಗವೇ ಹೆಚ್ಚು. ಮೃದು ಕಬ್ಬಿಣದ ದಪ್ಪ ಹೊದಿಕೆಯುಳ್ಳ ತಾಮ್ರದ ತಂತಿಯ ಕೊಳವೆ ಸಿಂಬಿಗಳು ಅವುಗಳಲ್ಲಿ ವಿದ್ಯುತ್ ಪ್ರವಹಿಸಿದಾಗ ಕಾಂತ ಮಸೂರಗಳಂತೆ ವರ್ತಿಸುತ್ತವೆ. ವಿದ್ಯುತ್ ಪ್ರವಾಹದ ಪ್ರಮಾಣವನ್ನು ಹೆಚ್ಚು ಕಡಿಮೆ ಮಾಡುವುದರಿಂದ ನಾಭಿದೂರವನ್ನು ಹೆಚ್ಚು ಕಡಿಮೆ ಮಾಡಬಹುದು. ಕಾಂತಕ್ಷೇತ್ರ ಒಂದು ನಿರ್ದಿಷ್ಟ ಪರಿಮಿತಿಯಲ್ಲಿ ವರ್ತಿಸುವಂತೆ ಮಾಡಲು ಮೃದುಕಬ್ಬಿಣದ ಹೊದಿಕೆಯಲ್ಲಿ ಸಂದುಗಳನ್ನು ಕತ್ತರಿಸಿರುತ್ತಾರೆ. ಈ ಸಂದಿನ ರಚನೆ, ಅದರ ಅಗಲ ಮತ್ತು ಸಿಂಬಿಯ ವ್ಯಾಸ ಕಾಂತಕ್ಷೇತ್ರದ ಬಲ ಮತ್ತು ವ್ಯಾಪ್ತಿಯ ಮೇಲೆ ಹೆಚ್ಚು ಪರಿಣಾಮವನ್ನು ಬೀರುತ್ತವೆ. ಚಿತ್ರ 9 (a) ಮತ್ತು (b) ಗಳು ಹೆಚ್ಚು ನಾಭಿದೂರ ಮತ್ತು ಕಡಿಮೆ ನಾಭಿದೂರದ ಕಾಂತ ಮಸೂರಗಳನ್ನು ತೋರಿಸುತ್ತವೆ.

**ಪ್ರತಿಬಿಂಬದ ದೋಷಗಳು :** ಕಾಂತ ಮತ್ತು ಸ್ಥಿರ ವಿದ್ಯುತ್ ಕ್ಷೇತ್ರಗಳು ಎಲೆಕ್ಟ್ರಾನ್ ಮಸೂರಗಳಂತೆ ವರ್ತಿಸುವುದನ್ನು ತಿಳಿಯಲು ಉಪಾಕ್ಷ ದೂಲಗಳನ್ನು ಮಾತ್ರ ಗಮನದಲ್ಲಿಟ್ಟುಕೊಳ್ಳಲಾಗಿದೆ. ಈ ಸ್ಥಿತಿ ಇಲ್ಲದಿದ್ದರೆ ಪ್ರತಿಬಿಂಬದಲ್ಲಿ ಅನೇಕ ದೋಷಗಳಿರುತ್ತವೆ. ದ್ಯುತಿ ಮಸೂರಗಳಿಂದ ಮೂಡುವ ಪ್ರತಿಬಿಂಬದಲ್ಲಿನ ಐದು ದೋಷಗಳೂ ಸ್ಥಿರ ವಿದ್ಯುತ್ ಮಸೂರದಿಂದ ಮೂಡುವ ಪ್ರತಿಬಿಂಬದಲ್ಲಿರುತ್ತವೆ. ಇವುಗಳಲ್ಲದೆ ಕಾಂತಮಸೂರಗಳಿಂದ ಮೂಡುವ ಪ್ರತಿಬಿಂಬದಲ್ಲಿ ಬೇರೆ ದೋಷಗಳೂ ಇರುತ್ತವೆ. ಹೆಚ್ಚಿನ ದೋಷಗಳು ಪ್ರತಿಬಿಂಬ ತಿರುಗುವುದರಿಂದ ಹುಟ್ಟಿಕೊಳ್ಳುತ್ತವೆ.




ಚಿತ್ರ 9 (a) ಹೆಚ್ಚು ನಾಭಿದೂರದ ಕಾಂತಮಸೂರ (b) ಕಡಿಮೆ ನಾಭಿದೂರದ ಕಾಂತಮಸೂರ

1 ಗೋಳವಿಪಥನ : ಅಕ್ಷದಿಂದ ಹೆಚ್ಚು ದೂರದಲ್ಲಿ ಮಸೂರವನ್ನು ತಲುಪುವ ಎಲೆಕ್ಟ್ರಾನುಗಳು ಹೆಚ್ಚು ಬಾಗುತ್ತವೆ. ಆದ್ದರಿಂದ ಅಕ್ಷದ ಮೇಲಿನ ಒಂದು ಬಿಂದು ಬಲಗಡೆ ಪ್ರತಿಬಿಂಬದಲ್ಲಿ ವೃತ್ತವಾಗಿ ಹರಡಿಕೊಳ್ಳುತ್ತದೆ. ಇದರ ತ್ರಿಜ್ಯ($\Delta r_i$), $\alpha^3$ಗೆ ಸರಿಗಟ್ಟಿ ವ್ಯತ್ಯಾಸವಾಗುತ್ತದೆ. ವಸ್ತುವಿನ ಪ್ರತಿಯೊಂದು ಬಿಂದುವೂ ಹೀಗೆ ಪ್ರತಿಬಿಂಬದಲ್ಲಿ ವಿಸ್ತೃತ ವೃತ್ತವಾಗಿ ಹರಡಿಕೊಳ್ಳುತ್ತದೆ. ಈ ದೋಷವನ್ನು ಗೋಳವಿಪಥನ ಎನ್ನುತ್ತಾರೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳಲ್ಲಿ ಬಳಸುವ ಕಾಂತ ಮತ್ತು ಸ್ಥಿರವಿದ್ಯುತ್ ಮಸೂರಗಳು ಅಭಿಸರಿಸುವ (ಕನ್ವರ್ಜಿಂಗ್) ಮಸೂರಗಳಾದ್ದರಿಂದ ಗೋಳವಿಪಥನವನ್ನು ಸಂಪೂರ್ಣವಾಗಿ ನಿವಾರಿಸಲು ಆಗುವುದೇ ಇಲ್ಲ. ಇದು ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ವಿಘಟನ ಸಾಮರ್ಥ್ಯವನ್ನು ನಿಯಂತ್ರಣಗೊಳಿಸುತ್ತದೆ.




ಚಿತ್ರ 10 ಗೋಳವಿಪಥನ




ಚಿತ್ರ 11 ಕೋಮ ದೋಷದ ನಿರೂಪಣೆ

2 ಕೋಮ : ಇದು ಎರಡನೆಯ ದೋಷ. ಅಕ್ಷಕ್ಕೆ ದೂರವಾಗಿರುವ ಪ್ರತಿಯೊಂದು ಬಿಂದು ಪ್ರತಿಬಿಂಬದಲ್ಲಿ ಧೂಮಕೇತು ರೂಪ ತಾಳುವುದರಿಂದ ಈ

ದೋಷಕ್ಕೆ ಕೋಮ ಎಂದು ಹೆಸರು ಬಂದಿದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ಕೋಮ ಅಷ್ಟು ಪ್ರಮುಖವಾದ ದೋಷವಲ್ಲ. ಪ್ರತಿಬಿಂಬೀಕರಣಗೊಳ್ಳುವ ವಸ್ತು ಅಕ್ಷದ ಅತಿ ಸಮೀಪದ ಪ್ರದೇಶಕ್ಕೆ ಸೀಮಿತಗೊಂಡಿರುತ್ತದೆ.




ಚಿತ್ರ 12 (a). ಪಿನ್‌ವಿಕೃತ

3 ವಿಕೃತ(ಡಿಸ್ಟಾರ್ಶನ್) : ಅಕ್ಷದಿಂದ ತ್ರಿಜ್ಯದಲ್ಲಿ ದೂರಹೋದಂತೆ ಪ್ರತಿಬಿಂಬದ ಲಂಬನ ಹೆಚ್ಚು ಇಲ್ಲವೆ ಕಡಿಮೆಯಾಗುವ ಸಾಧ್ಯತೆಯಿದೆ. ಇದನ್ನು ಅನುಸರಿಸಿ ಕ್ರಮವಾಗಿ ಪಿನ್ ವಿಕೃತ ಮತ್ತು ಪಿಪಾಯಿ ವಿಕೃತಗಳುಂಟಾಗುತ್ತವೆ ಕಾಂತ ಮಸೂರಗಳಲ್ಲಿ ಇವುಗಳೊಂದಿಗೆ ತಿರುಗು ವಿಕೃತವೂ ಇರುತ್ತದೆ. ಈ ದೋಷಗಳು ಎಲೆಕ್ಟ್ರಾನ್ ಸೂಕ್ಷ್ಮ ದರ್ಶಿಯ ಪ್ರತಿಬಿಂಬಗಳಲ್ಲಿ ಕಾಣಿಸಿಕೊಳ್ಳುತ್ತವಾದರೂ ಅವುಗಳಿಂದ ಅಂಥ ತೊಂದರೆ ಏನೂ ಆಗುವುದಿಲ್ಲ.



ಚಿತ್ರ 12 (b). ಪಿಪಾಯಿ ವಿಕೃತ

4 ಅಸ್ಟಿಗ್ಮ್ಯಾಟಿಸಮ್: ಅಕ್ಷದಿಂದ ದೂರವಿರುವ ಒಂದು ವಸ್ತುಬಿಂದುವಿನಿಂದ ಹೊರಟ ಎಲೆಕ್ಟ್ರಾನುಗಳು ಪ್ರತಿಬಿಂಬ ಮೂಡುವಲ್ಲಿ ಪರಸ್ಪರ ಲಂಬವಾಗಿರುವ




ಚಿತ್ರ 13 ಬಿಂದುವಿನ ಅಸ್ಟಿಗ್‌ಮ್ಯಾಟಿಕ್ ಪ್ರತಿಬಿಂಬ

ಎರಡು ಗೆರೆಗಳ ಮೇಲೆ ಬಂದು ಸೇರುತ್ತವೆ. ಸ್ಪಷ್ಟವಾದ ಪ್ರತಿಬಿಂಬಬಿಂದು ಯಾವ ಗೆರೆಯ ಮೇಲೂ ಕಾಣುವುದಿಲ್ಲ. ಈ ದೋಷವನ್ನು ಅಸ್ಟಿಗ್ಮ್ಯಾಟಿಸಮ್ ಎನ್ನುತ್ತಾರೆ. ಇದರ ಪರಿಣಾಮವೆಂದರೆ ಪ್ರತಿಬಿಂಬತಲದಲ್ಲಿ ಗೊಂದಲಪಡಿಸುವ ವೃತ್ತ. ಅಕ್ಷದಿಂದ ವಸ್ತುಬಿಂದು ದೂರವಾದಷ್ಟೂ ಈ ಗೊಂದಲವೃತ್ತ ದೊಡ್ಡದಾಗುತ್ತದೆ. ಅಕ್ಷದ ಮೇಲೆ ಇಂಥ ಗೊಂದಲವೃತ್ತ ಮೂಡುವುದಿಲ್ಲ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ಈ ದೋಷ ಗಣನೀಯವಾದುದಲ್ಲ.

5 ವರ್ಣವಿಪಥನ (ಕ್ರೊಮ್ಯಾಟಿಕ್ ಅಬೆರೇಷನ್) : ಭರ ಎಲೆಕ್ಟ್ರಾನ್ ಮತ್ತು ಮಂದ ಎಲೆಕ್ಟ್ರಾನುಗಳು ಒಂದೇ ನಾಭಿಗೆ ಬರುವುದಿಲ್ಲ. ಆದ್ದರಿಂದ ಒಂದೇ ಬಿಂದುವಿನಿಂದ ಹೊರಡುವ ಬೇರೆ ಬೇರೆ ವೇಗದ ಎಲೆಕ್ಟ್ರಾನುಗಳು ಆ ಬಿಂದುವಿನ




ಚಿತ್ರ 14 ವರ್ಣವಿಪಥನ ದೋಷದ ನಿರೂಪಣೆ

ಪ್ರತಿಬಿಂಬವನ್ನು ಹರಡುತ್ತವೆ. ಈ ದೋಷವನ್ನು ವರ್ಣವಿಪಥನ ಎನ್ನುತ್ತಾರೆ. ಕಾಂತಮಸೂರದಲ್ಲಿ ಪ್ರತಿಬಿಂಬ ತಿರುಗುವುದರಿಂದ ವರ್ಣೀಯ (ಕ್ರೊಮ್ಯಾಟಿಕ್) ತಿರುಗುದೋಷವೂ ಕಾಣಿಸಿಕೊಳ್ಳುತ್ತದೆ. ಈ ದೋಷಗಳನ್ನು ಕಡಿಮೆಮಾಡಲು ಎಲೆಕ್ಟ್ರಾನುಗಳ ವೇಗೋತ್ಕರ್ಷಕ್ಕೆ ಉಪಯೋಗಿಸುವ ವಿಭವಾಂತರದಲ್ಲಿ ವ್ಯತ್ಯಾಸವಾಗದಂತೆ ನೋಡಿಕೊಳ್ಳಬೇಕು.

6 ಕ್ಷೇತ್ರದ ವಕ್ರತೆ : ಮಸೂರದಲ್ಲಿ ಎಲ್ಲ ಭಾಗಗಳ ನಾಭಿದೂರ ಒಂದೇ ಆಗಿರುವುದಿಲ್ಲ. ಆದ್ದರಿಂದ ಒಂದು ಸಮತಲದ ಪ್ರತಿಬಿಂಬ ವಕ್ರವಾಗುತ್ತದೆ.




ಚಿತ್ರ 15 ಕ್ಷೇತ್ರದ ವಕ್ರತೆ




ಚಿತ್ರ 16 ಪ್ರದೇಶ ವಿದ್ಯುತ್ ಅಂಕದ ಪರಿಣಾಮ

ಈ ದೋಷವನ್ನು ಕ್ಷೇತ್ರದ ವಕ್ರತೆ ಎನ್ನುತ್ತಾರೆ. ವಸ್ತುವಿನ ವಿಸ್ತಾರ ಹೆಚ್ಚಾದರೆ ವಕ್ರತೆಯೂ ಹೆಚ್ಚಾಗುತ್ತದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ಈ ದೋಷ ತೀರ ಕಡಿಮೆ.

7 ಆಕಾಶ ವಿದ್ಯುದಂಶದ ಪರಿಣಾಮ (ಸ್ಪೇಸ್ ಚಾರ್ಜ್ ಎಫೆಕ್ಟ್) : ಎಲೆಕ್ಟ್ರಾನುಗಳು ಪರಸ್ಪರ ವಿಕರ್ಷಣಗೊಳ್ಳುತ್ತವೆ. ಆದ್ದರಿಂದ ಒಂದು ಎಲೆಕ್ಟ್ರಾನ್ ದೂಲ ಮುಂಬರಿದಂತೆಲ್ಲ ವಿಸ್ತಾರವಾಗುತ್ತ ಹೋಗುತ್ತದೆ. ಇದನ್ನು ಚಿತ್ರ 16ರಲ್ಲಿ ಕಾಣಬಹುದು. ಹೆಚ್ಚು ಎಲೆಕ್ಟ್ರಾನ್ ಸಾಂದ್ರತೆಯಿರುವ ದೂಲಗಳಲ್ಲಿ ಹರಡುವಿಕೆ ಹೆಚ್ಚಾಗಿರುತ್ತದೆ. ಈ ದೋಷವನ್ನು ಆಕಾಶ ವಿದ್ಯುದಂಶದ ಪರಿಣಾಮ ಎನ್ನುತ್ತಾರೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳಲ್ಲಿ ಎಲೆಕ್ಟ್ರಾನುಗಳ ವೇಗ ಹೆಚ್ಚಾಗಿರುವುದರಿಂದಲೂ ದೂಲಗಳಲ್ಲಿ ಸಾಂದ್ರತೆ ಕಡಿಮೆಯಿರುವುದರಿಂದಲೂ ಈ ದೋಷ ಅಷ್ಟಾಗಿ ಕಾಣಿಸಿಕೊಳ್ಳುವುದಿಲ್ಲ. (ಎಸ್.ಎಚ್.)

**ಎಲೆಕ್ಟ್ರಾನ್ ನಮನ :** ಎಲೆಕ್ಟ್ರಾನ್ ದೂಲಗಳು ತರಂಗ ಚಲನೆಯ ಗುಣವನ್ನು ಪ್ರದರ್ಶಿಸುವ ಒಂದು ಘಟನೆ (ಎಲೆಕ್ಟ್ರಾನ್ ಡಿಫ್ರ್ಯಾಕ್ಷನ್). ವ್ಯತಿಕರಣ, ನಮನ ಮತ್ತು ಧ್ರುವೀಕರಣಗಳನ್ನು ವಿವರಿಸುವಾಗ ಬೆಳಕನ್ನು ವಿದ್ಯುತ್ಕಾಂತ ತರಂಗಗಳ ಪ್ರಸಾರವೆಂದೂ ದ್ಯುತಿವಿದ್ಯುತ್ ಕ್ರಿಯೆ ಮತ್ತು ಕಾಂಪ್ಟನ್ ಕ್ರಿಯೆಗಳನ್ನು ವಿವರಿಸುವಾಗ ಫೋಟಾನುಗಳ ಚಲನೆಯೆಂದೂ ಭಾವಿಸಬೇಕಾಗುತ್ತದೆ. ಫೋಟಾನುಗಳು ಬೆಳಕಿನ ಕಣಗಳು. ಇವುಗಳಿಗಿರುವ ತರಂಗ-ಕಣ ದ್ವೈತಗುಣದಂತೆ ಭೌತಕಣಗಳಿಗೂ ತರಂಗ-ಕಣ ದ್ವೈತಗುಣವಿದೆಯೆಂದು ಲೂಯಿ ಡಿಬ್ರಾಯಿ ಸೈದ್ಧಾಂತಿಕ ಆಧಾರದ ಮೇಲೆ ಸೂಚಿಸಿದ (1924). ಈ ಸೂಚನೆಯಂತೆ ಒಂದು ಕಣದ ಸಂವೇಗಕ್ಕೂ ಅದರ ತರಂಗಾಂತರಕ್ಕೂ ಇರುವ ಸಂಬಂಧವನ್ನು

$$\lambda = \frac{h}{P} \qquad \ldots(1)$$

ಎಂದು ಬರೆಯಬಹುದು. ಇಲ್ಲಿ $\lambda$ ಕಣದ ತರಂಗಾಂತರ, P ಅದರ ಸಂವೇಗ ಮತ್ತು $h$ ಪ್ಲಾಂಕನ ನಿಯತಾಂಕ. ಅತಿ ನಿಧಾನವಾಗಿ ಚಲಿಸುವ ಒಂದು ದೂಳಿನ ಕಣದ ತರಂಗಾಂತರ ಕೂಡ ಸಮೀಕರಣ (1)ರ ಪ್ರಕಾರ $10^{-8}$Åಗಿಂತ ಕಡಿಮೆ ಇರುತ್ತದೆ. ಯಾವುದೇ ಭೌತರಚನೆಯ ಅಡ್ಡಗಲವಾದರೂ ಇದಕ್ಕಿಂತ ಹೆಚ್ಚಾಗಿರುವುದರಿಂದ ನಮನ ಪ್ರಯೋಗಗಳಿಂದ ಡಿಬ್ರಾಯಿಯ ಸೂಚನೆಯನ್ನು ಸ್ಥಿರಪಡಿಸಲು ತತ್‌ಕ್ಷಣ ಸಾಧ್ಯವಾಗಲಿಲ್ಲ.

ಎಲೆಕ್ಟ್ರಾನುಗಳ ಜಡಮಾನ $9.1\times10^{-28}$ ಗ್ರಾಂ. 10 ವೋಲ್ಟ್ ವಿಭವಾಂತರದ ಮೂಲಕ ಹಾಯ್ದು ಬಂದರೆ ಅವುಗಳ ಸಂವೇಗ (ಮೊಮೆಂಟಂ) $1.7\times10^{-19}$ ಗ್ರಾಂ-ಸೆಂ.ಮೀ.-ಸೆ.$^{-1}$ ಆಗುತ್ತದೆ. ಇಷ್ಟು ಸಂವೇಗವಿರುವ ಕಣಗಳ ತರಂಗಾಂತರ 3·9Å. ಸ್ಫಟಿಕಗಳ ಒಳ ಸಮತಲದೂರ ಸಾಮಾನ್ಯವಾಗಿ ಈ ಪ್ರಮಾಣದಲ್ಲಿ ಇರುತ್ತದೆ. ಆದ್ದರಿಂದ ಸ್ಫಟಿಕಗಳ ನೆರವಿನಿಂದ ಎಲೆಕ್ಟ್ರಾನ್ ನಮನ ಪ್ರಯೋಗಗಳನ್ನು ಮಾಡುವುದು ಸಾಧ್ಯವಾಯಿತು.



ಚಿತ್ರ 1 (a) ನಿಕ್ಕಲ್ ಸ್ಫಟಿಕ, (b) ಒಂದು ಕರ್ಣಕ್ಕೆ ಲಂಬವಾಗಿ ಕತ್ತರಿಸಿರುವ ಸಮತಲವುಳ್ಳ ಅದೇ ಸ್ಫಟಿಕ

1927ರಲ್ಲಿ ಡೇವಿಸನ್ ಮತ್ತು ಜರ್ಮರ್ ಎಂಬುವರು ಎಲೆಕ್ಟ್ರಾನ್ ನಮನ ಪ್ರಯೋಗಗಳನ್ನು ಯಶಸ್ವಿಯಾಗಿ ನಡೆಸಿದರು. ನಿಕ್ಕಲ್ ಸ್ಫಟಿಕದ ರಚನೆ ಅವರ ಪ್ರಯೋಗಗಳಿಗೆ ಸಹಕಾರಿಯಾಯಿತು. ಇದು ಮುಖಮಧ್ಯ ಘನ ಸ್ಫಟಿಕ (ಫೇಸ್ ಸೆಂಟರ್ಡ್ ಕ್ಯೂಬಿಕ್ ಕ್ರಿಸ್ಟಲ್). ಇದರ ಘಟಕಕೋಶದ ಎಂಟು ಮೂಲೆಗಳಲ್ಲೂ ಮತ್ತು ಪ್ರತಿಮುಖದ ಮಧ್ಯದಲ್ಲೂ ಪರಮಾಣುಗಳಿವೆ. ಘಟಕಕೋಶದ ಅಂಚಿನ ದೂರ 3·51Å. ಇದನ್ನು ಚಿತ್ರ 1 (a)ಯಲ್ಲಿ ತೋರಿಸಿದೆ. ಹಾಗೆಯೇ 1 (b)ಯಲ್ಲಿ ಒಂದು ಕರ್ಣಕ್ಕೆ ಲಂಬವಾಗಿ ಕತ್ತರಿಸಿರುವ ಸಮತಲವನ್ನು ನೋಡಬಹುದು. ಇದರಲ್ಲಿ ಒಂದು ಪರಮಾಣು ಶ್ರೇಣಿಗೂ ಇನ್ನೊಂದು ಪರಮಾಣು ಶ್ರೇಣಿಗೂ ಇರುವ ಅಂತರ 2·15 Å. ಇದನ್ನು ರೇಖಾಂತರ $d=2.15$ Å ಇರುವ ಒಂದು ಸಮತಲ ರೇಖಾಪಟಲವೆಂದು ಪರಿಗಣಿಸಬಹುದು. ಇದರ ಮೇಲೆ ತ್ರಿಕೋನದ ಯಾವುದಾದರೂ ಒಂದು ಬಾಹುವಿಗೆ ಪತನ ಸಮತಲ ಲಂಬವಾಗಿರುವಂತೆ ಎಲೆಕ್ಟ್ರಾನುಗಳು ಬಿದ್ದರೆ ಅವು ನಮನಗೊಳ್ಳುತ್ತವೆ. ಇದು ಅನುಸರಿಸುವ ಸಂಬಂಧವನ್ನು

$$d\sin\theta = n\lambda \qquad \ldots(2)$$

ಎಂದು ಬರೆಯಬಹುದು. ಇಲ್ಲಿ $\theta$ ನಮನ ಮತ್ತು ಪತನದೂಲಗಳ ಮಧ್ಯೆ ಏರ್ಪಡುವ ಕೋನ, $n$ ಒಂದು ಪೂರ್ಣಾಂಕ.



ಚಿತ್ರ 2 C ಟಂಗ್‌ಸ್ಟನ್ ತಂತು, Ni ನಿಕ್ಕಲ್ ಸ್ಫಟಿಕ, D ಮಧ್ಯೆ ರಂಧ್ರವಿರುವ ತೆರೆ, P ದರ್ಶಕ, M ಮಾಪಕ

ಡೇವಿಸನ್ ಮತ್ತು ಜರ್ಮರ್ ಅವರ ಪ್ರಯೋಗದ ಉಪಕರಣಗಳನ್ನು ಚಿತ್ರ 2ರಲ್ಲಿ ನೋಡಬಹುದು. ಕಾದ ಟಂಗ್‌ಸ್ಟನ್ ತಂತುವಿನಿಂದ ಹೊರಹೊಮ್ಮಿದ ಎಲೆಕ್ಟ್ರಾನುಗಳು ವೇಗೋತ್ಕರ್ಷಗೊಂಡು ನಿಕ್ಕಲ್ ಸ್ಫಟಿಕದ ಮೇಲೆ ಬೀಳುತ್ತವೆ. ಸ್ಫಟಿಕದಲ್ಲಿ ನಮನಗೊಂಡ ಎಲೆಕ್ಟ್ರಾನುಗಳು ತೆರೆಯಲ್ಲಿರುವ ರಂಧ್ರದ ಮೂಲಕ ದರ್ಶಕವನ್ನು ತಲಪುತ್ತವೆ. ಇವುಗಳ ಸಂಖ್ಯೆಗಳಿಗೆ ಅನುಗುಣವಾಗಿ ಮಾಪಕ (ಮೀಟರ್) ವಾಚಕವನ್ನು (ರೀಡಿಂಗ್) ತೋರಿಸುತ್ತದೆ. ಸ್ಫಟಿಕದಲ್ಲಿ ಯಾವ ಕಾರಣಕ್ಕಾದರೂ ಶಕ್ತಿಯನ್ನು ಕಳೆದುಕೊಂಡ ಎಲೆಕ್ಟ್ರಾನುಗಳು ದರ್ಶಕವನ್ನು ತಲಪದಂತೆ ತಡೆಯಲು ಅದಕ್ಕೆ ಋಣ ವಿಭವವನ್ನು ಆರೋಪಿಸಲಾಗಿದೆ.

54 ವೋಲ್ಟ್ ಎಲೆಕ್ಟ್ರಾನುಗಳು ನಮನಗೊಂಡಾಗ ದರ್ಶಕವನ್ನು ತಲಪುವ ಎಲೆಕ್ಟ್ರಾನುಗಳ ಸಂಖ್ಯೆ $N(\theta)$ ಮತ್ತು $\theta$ಗಳಿಗಿರುವ ಸಂಬಂಧವನ್ನು ಚಿತ್ರ 3ರಲ್ಲಿರುವ ರೇಖಾಚಿತ್ರ (ಗ್ರಾಫ್) ತೋರಿಸುತ್ತದೆ. 50° ಯಲ್ಲಿ ಒಂದು ಶೃಂಗವಿದೆ. 54 ವೋಲ್ಟ್ ವಿಭವಾಂತರದ ಮೂಲಕ ಹಾಯ್ದು ಬರುವ ಎಲೆಕ್ಟ್ರಾನುಗಳ ತರಂಗಾಂತರ ಸಮೀಕರಣ (1)ರ ಪ್ರಕಾರ 1·67 Å. ಸಮೀಕರಣ (2)ರ ಪ್ರಕಾರ ಇದು 1·65 Å ಆಗುತ್ತದೆ. ಈ ಎರಡು ಬೆಲೆಗಳು ಒಂದಕ್ಕೊಂದು ಅತಿ ಸಮೀಪದಲ್ಲಿದ್ದು ಡಿಬ್ರಾಯಿಯ ಸೂಚನೆಯನ್ನು ಸಮರ್ಥಿಸುತ್ತವೆ.



ಚಿತ್ರ 3 ನಿಕ್ಕಲ್ ಸ್ಫಟಿಕದಲ್ಲಿ ಚದರಿದ ಎಲೆಕ್ಟ್ರಾನುಗಳ ಕೋನೀಯ ಹಂಚಿಕೆ

ಜಿ. ಪಿ. ಥಾಮ್ಸನ್ನನು ಸ್ಫಟಿಕಗಳ ಮೂಲಕ ಹಾಯುವ ಎಲೆಕ್ಟ್ರಾನುಗಳ ನಮನ ಪ್ರಯೋಗವನ್ನು ಮಾಡಿದ (1928). ಸ್ಫಟಿಕಗಳ ಒಳಸಮತಲ ದೂರ ಮತ್ತು ಓರೆಕೋನಗಳಿರುವ ಸಂಬಂಧವನ್ನು ಬ್ರ್ಯಾಗ್ ನಿಯಮ ಕೊಡುತ್ತದೆ. ಈ

ನಿಯಮದ ಜ್ಯಾಮಿತಿಕ ನಿರೂಪಣೆಯನ್ನು ಚಿತ್ರ 4ರಲ್ಲಿ ನೋಡಬಹುದು. $d$ ಅಂತರದಲ್ಲಿರುವ ಮಟ್ಟ ಗೆರೆಗಳು ಸ್ಫಟಿಕದ ಸಮತಲಗಳನ್ನು ಪ್ರತಿನಿಧಿಸುತ್ತವೆ. $I_1$ ಮತ್ತು




ಚಿತ್ರ 4 ಬ್ರ್ಯಾಗ್ ನಿಯಮದ ಜ್ಯಾಮಿತಿಕ ನಿರೂಪಣೆ

$I_2$ ಎಲೆಕ್ಟ್ರಾನ್ ಪತನದೂಲಗಳು (ಇನ್ಸಿಡೆಂಟ್ ಬೀಮ್ಸ್). ಅವು A ಮತ್ತು B ಯಲ್ಲಿರುವ ಪರಮಾಣುಗಳಿಗೆ ತಾಗಿ ಚದರುತ್ತವೆ. ಬ್ರ್ಯಾಗ್ ನಿಯಮಕ್ಕೆ ಅನುಗುಣವಾಗಿ ಓರೆಕೋನ ಇದ್ದರೆ ಚದರಿದ ದೂಲಗಳು ಸ್ಫಟಿಕ ಸಮತಲಗಳಿಗೆ ಪತನ ದೂಲಗಳಂತೆಯೆ ಕೋನಗಳನ್ನುಂಟುಮಾಡುತ್ತವೆ. $R_1$ ಮತ್ತು $R_2$ ಚದರಿದ ದೂಲಗಳು. ಈ ದೂಲಗಳಿಗಿರುವ ದಾರಿ ವ್ಯತ್ಯಾಸ FBH. ರಚನಾತ್ಮಕ ವ್ಯತಿಕರಣ ಸಂಭವಿಸಬೇಕಾದರೆ

$$\mathrm{FBH} = n\lambda \qquad \ldots(3)$$

ಆಗಬೇಕು. ಚಿತ್ರದ ಜ್ಯಾಮಿತಿಯಿಂದ

$$\mathrm{FBH} = \mathrm{EB} = 2d\sin\theta \qquad \ldots(4)$$

ಎಂದಾಗುತ್ತದೆ. ಈಗ ಬ್ರ್ಯಾಗ್ ನಿಯಮದ ಸಮೀಕರಣ ರೂಪವನ್ನು

$$2d\sin\theta = n\lambda \qquad \ldots(5)$$

ಎಂದು ಬರೆಯಬಹುದು. ಎಲೆಕ್ಟ್ರಾನುಗಳಿಗೆ ಸಂಬಂಧಿಸಿದಂತೆ ಓರೆಕೋನ ಬಹಳ ಕಡಿಮೆ ಇರುತ್ತದೆ. ಆದ್ದರಿಂದ (5)ನ್ನು

$$2d\theta = n\lambda \qquad \ldots(6)$$

ಎಂದು ಬರೆಯಬಹದು.

ಬ್ರ್ಯಾಗ್ ನಿಯಮಕ್ಕೆ ಸರಿಯಾಗಿ ಮಾಲಿಕೊಂಡಿರುವ ಸಮತಲಗಳುಳ್ಳ ಒಂದು ಏಕಸ್ಫಟಿಕದ ಮೇಲೆ ಪತನವಾಗುವ ಎಲೆಕ್ಟ್ರಾನುಗಳು ಪ್ರತಿಫಲನಗೊಂಡು ಮಾದರಿಗೆ ಸ್ವಲ್ಪ ದೂರದಲ್ಲಿ ಬೊಟ್ಟನ್ನು ಮೂಡಿಸುತ್ತವೆ. ಹಾಗಲ್ಲದೆ ಅವು ಸಣ್ಣಸಣ್ಣ ಸ್ಫಟಿಕಗಳ ಸಮೂಹದ ಮೂಲಕ ಹಾಯ್ದರೆ ಅಡ್ಡಾದಿಡ್ಡಿಯಾಗಿ ಮಾಲಿಕೊಂಡಿರುವ ಸಹಸ್ರಾರು ಸಮತಲಗಳಿಂದ ಬ್ರ್ಯಾಗ್ ಪ್ರತಿಫಲನಗೊಂಡು ಟೊಳ್ಳು ಬುಗರಿಯ ಆಕಾರದಲ್ಲಿ ಹೊರಕ್ಕೆ ಬರುತ್ತವೆ. ಅವುಗಳಿಗೆ ಅಡ್ಡವಾಗಿ ಒಂದು ಫೋಟೋಗ್ರಫಿ ತಟ್ಟೆಯನ್ನು ಇಟ್ಟರೆ ಅದರ ಮೇಲೆ ವೃತ್ತಗಳು ಮೂಡುತ್ತವೆ. ಇದನ್ನು ಚಿತ್ರ 5 ರಲ್ಲಿ ಕಾಣಬಹುದು. D ವೃತ್ತದ ವ್ಯಾಸ ಮತ್ತು L ಮಾದರಿಗೂ ತಟ್ಟೆಗೂ ಇರುವ ದೂರ ಆಗಿದ್ದರೆ ಸಮೀಕರಣ (6) ರಿಂದ




ಚಿತ್ರ 5 ತೆಳುಪೊರೆಯ ಮೂಲಕ ಎಲೆಕ್ಟ್ರಾನುಗಳು ಹಾಯುವಾಗ ಸಂಭವಿಸುವ ನಮನ ನಮೂನೆ

$$d = \frac{n\lambda \mathrm{L}}{\mathrm{D}} \qquad \ldots(7)$$

ಎಂದು ಬರೆಯಬಹುದು. $n$ ತಿಳಿದಿದ್ದರೆ $d$ ತಿಳಿಯುತ್ತದೆ.

ಥಾಮ್ಸನ್ನನ ಉಪಕರಣಗಳನ್ನು ಚಿತ್ರ 6ರಲ್ಲಿ ನೋಡಬಹುದು. ವಿಸರ್ಜನ ಕೊಳವೆಯಲ್ಲಿ ಎಲೆಕ್ಟ್ರಾನುಗಳು ಉತ್ಪತ್ತಿಯಾಗಿ B ಮೂಲಕ ಹಾಯುತ್ತವೆ. B ಯು




ಚಿತ್ರ 6 ಥಾಮ್ಸನ್ನನ ಉಪಕರಣ : A ವಿಸರ್ಜನ ಕೊಳವೆ, B ಸೂಕ್ಷ್ಮ ಕೊಳವೆ, $S_1$ ಲೋಹದ ಪೊರೆ, S² ತೆರೆ, P ಛಾಯಾಚಿತ್ರದ ತಟ್ಟೆ

ಹಿಂಬದಿಯಲ್ಲಿ ಸ್ವಲ್ಪ ದೂರಕ್ಕೆ ಲೋಹದ ಪೊರೆ ಇದೆ. ಇದ್ದು ಸಣ್ಣ ಸಣ್ಣ ಸ್ಫಟಿಕಗಳ ಸಮುಚ್ಚಯ. ಫೋಟೋಗ್ರಫಿ ತಟ್ಟೆಯನ್ನು ಕೆಳಕ್ಕೆ ಜಾರಿಸುವುದಕ್ಕೆ ಮುಂಚೆ ಎಲೆಕ್ಟ್ರಾನ್ ನಮನ ನಮೂನೆಯನ್ನು ಪ್ರತಿದೀಪ್ತಶೀಲ (ಫ್ಲೂರಸೆಂಟ್) ತೆರೆಯಮೇಲೆ ನೋಡಬಹುದು. ಈ ನಮೂನೆ ಎಲೆಕ್ಟ್ರಾನ್ ನಮನದಿಂದ ಹುಟ್ಟಿದುದೆಂಬುದನ್ನು ಖಚಿತಪಡಿಸಲು ಥಾಮ್ಸನ್ ಕಾಂತಕ್ಷೇತ್ರದಲ್ಲಿ ಎಲೆಕ್ಟ್ರಾನುಗಳನ್ನು ಬಾಗಿಸಿ ತತ್ಫಲವಾಗಿ ನಮೂನೆ ಸ್ಥಳಾಂತರಗೊಳ್ಳುವುದನ್ನು ತೋರಿಸಿದ. ಚಿತ್ರ 7ರಲ್ಲಿ ತೆಳುವಾದ ಚಿನ್ನದ ಹಾಳೆಯ ಮೂಲಕ 30 kV ಎಲೆಕ್ಟ್ರಾನುಗಳು ಹಾಯುವುದರಿಂದ ಮೂಡಿದ ನಮನ



ಚಿತ್ರ 7 30 kV ಎಲೆಕ್ಟ್ರಾನುಗಳು ಚಿನ್ನದ ತೆಳು ಹಾಳೆಯ ಮೂಲಕ ಹಾಯುವಾಗ ಮೂಡುವ ನಮನ ನಮೂನೆ

ನಮೂನೆಯನ್ನು ನೋಡಬಹುದು. ಮಧ್ಯದ ಬಿಳಿಬೊಟ್ಟು ನಮನಗೊಳ್ಳದೆ ಇರುವ ಎಲೆಕ್ಟ್ರಾನುಗಳಿಗೆ ಸಂಬಂಧಿಸಿದುದು. ಮುಂದೆ ಬರೆದಿರುವ ಪಟ್ಟಿಯಲ್ಲಿ ಅಲ್ಯೂಮಿನಿಯಂ, ಚಿನ್ನ ಮತ್ತು ಪ್ಲಾಟಿನಂ ಲೋಹಗಳ ಒಳಸಮತಲ ದೂರಗಳ ಹೋಲಿಕೆಯನ್ನು ಕೊಟ್ಟಿದೆ. ಎಕ್ಸ್‌ಕಿರಣ ನಮನ ಮೌಲ್ಯಗಳು ಎಲೆಕ್ಟ್ರಾನ್ ನಮನ ಮೌಲ್ಯಗಳಿಗೆ ತೀರಾ ಹತ್ತಿರವಿದ್ದು ಎಲೆಕ್ಟ್ರಾನುಗಳ ತರಂಗಸ್ವಭಾವವನ್ನು ಸ್ಪಷ್ಟವಾಗಿ ತೋರಿಸುತ್ತವೆ.

ಎಕ್ಸ್‌ಕಿರಣ ಮತ್ತು ಎಲೆಕ್ಟ್ರಾನ್ ನಮನ ಪ್ರಯೋಗಗಳಿಂದ ಒದಗಿದ ಒಳಸಮತಲ ದೂರಗಳು

| ಲೋಹ | ಎಕ್ಸ್‌ಕಿರಣ ಅಂತರ (Å) | ಎಲೆಕ್ಟ್ರಾನ್ ದೂಲ ಅಂತರ (Å) |
|---|---|---|
| ಅಲ್ಯೂಮಿನಿಯಂ | 4.046 | 4.03 |
| ಚಿನ್ನ | 4.060 | 4.09 |
| ಪ್ಲಾಟಿನಂ | 3.910 | 3.89 |

1928ರಲ್ಲಿ ಇಂಥವೇ ಪ್ರಯೋಗಗಳನ್ನು ಕಿಕೂಚಿ ನಡೆಸಿದ. ಅಭ್ರುಕದ ತೆಳುವಾದ ಏಕಸ್ಫಟಿಕ ಹಾಳೆಗಳ ಮೂಲಕ 10 ರಿಂದ 85 kV ಎಲೆಕ್ಟ್ರಾನುಗಳನ್ನು ಹಾಯಿಸಿ ಅವುಗಳ ನಮನವನ್ನು ಪರಿಕ್ಷಿಸಿದ. ಚಿತ್ರ 8ರಲ್ಲಿ 68 kV ಎಲೆಕ್ಟ್ರಾನುಗಳನ್ನು



ಚಿತ್ರ 8 ತೆಳು ಅಭ್ರುಕದ ಹಾಳೆಯಿಂದ ಉಂಟಾದ 68 kV ಎಲೆಕ್ಟ್ರಾನುಗಳ ನಮನ ನಮೂನೆ

ಕಿಕೂಚಿ ಅಭ್ರುಕದ ತೆಳುವಾದ ಹಾಳೆಯ ಮೂಲಕ ಹಾಯಿಸಿ ಫೋಟೋ ತೆಗೆದಿರುವ ನಮನ ನಮೂನೆಯನ್ನು ಕಾಣಬಹುದು.

ಎಲೆಕ್ಟ್ರಾನುಗಳ ನಮನ ಎಕ್ಸ್‌ಕಿರಣಗಳ ನಮನದಂತೆಯೇ ಸ್ಫಟಿಕಗಳ ಆಂತರಿಕ ರಚನೆಯನ್ನು ತಿಳಿಯಲು ಸಹಾಯಕವಾಗಿದೆ. ಇದರ ಜೊತೆಗೆ ಸೈದ್ಧಾಂತಿಕವಾಗಿ ಇದು ತರಂಗಬಲವಿಜ್ಞಾನದ (ವೇವ್ ಮೆಕಾನಿಕ್ಸ್) ಬೆಳವಣಿಗೆಗೆ ಭದ್ರವಾದ ಅಡಿಪಾಯವನ್ನು ಹಾಕಿದೆ. (ಎಸ್‌ಎ.ಎಚ್.)

**ಎಲೆಕ್ಟ್ರಾನ್ ವೋಲ್ಟ್ :** ಶಕ್ತಿಯ ಒಂದು ಏಕಮಾನ. ಕಣಗಳ ಚಲನಶಕ್ತಿ (ಕೈನೆಟಿಕ್ ಎನರ್ಜಿ) ಹಾಗೂ ಜಡಮಾನಗಳನ್ನು (ಮಾಸಸ್) ಅಳೆಯಲು ಈ ಏಕಮಾನವನ್ನು ಉಪಯೋಗಿಸುತ್ತಾರೆ. ಒಂದು ವೋಲ್ಟ್ ವಿಭವಾಂತರದ ಮೂಲಕ ಎಲೆಕ್ಟ್ರಾನಿನ (ವಿದ್ಯುದಂಶ $\pm_e$ ಇರುವ ಕಣದ) ಚಲನಶಕ್ತಿಯಲ್ಲಿ ಉಂಟಾಗುವ ಹಾಯುವಲಂಬನ (ಮ್ಯಾಗ್ನಿಫಿಕೇಷನ್) ಒಂದು ಎಲೆಕ್ಟ್ರಾನ್ ವೋಲ್ಟ್ (eV). ಇದು $1.602 \times 10^{-12}$ ಎರ್ಗಿಗೆ ಸಮ. ಇದರ ಗುಣ್ಯಗಳನ್ನು ಉಪಯೋಗಿಸುವುದು ವಾಡಿಕೆ.

1 ಕಿಲೊ ಎಲೆಕ್ಟ್ರಾನ್ ವೋಲ್ಟ್ (KeV) $= 10^3$eV

1 ಮಿಲಿಯನ್ ಎಲೆಕ್ಟ್ರಾನ್ ವೋಲ್ಟ್ (MeV) $= 10^6$ eV $= 10^3$KeV

1 ಬಿಲಿಯನ್ ಎಲೆಕ್ಟ್ರಾನ್ ವೋಲ್ಟ್ (BeV) $= 10^9$eV. ಇದನ್ನು ಗಿಗ ಎಲೆಕ್ಟ್ರಾನ್ ವೋಲ್ಟ್ ಎಂದು ಕರೆಯುತ್ತಾರೆ. (GeV $= 10^3$ MeV) ಈ ಮಾನದಲ್ಲಿ ಒಂದು ಪ್ರೋಟಾನಿನ ಜಡಮಾನ 938·256 MeV. ಒಂದು ನ್ಯೂಟ್ರಾನಿನ ಜಡಮಾನ 939·550 MeV. ಒಂದು ಎಲೆಕ್ಟ್ರಾನಿನ ಜಡಮಾನ 0·511 MeV, ಸಾಮಾನ್ಯವಾಗಿ ಕಣಗಳ ಜಡಮಾನಗಳನ್ನು ಎಲೆಕ್ಟ್ರಾನಿನ ಜಡಮಾನದ ಗುಣ್ಯದಲ್ಲಿ ಕೊಡುತ್ತಾರೆ. ಆದ್ದರಿಂದ ಯಾವ ಕಣದ ಜಡಮಾನವನ್ನಾದರೂ ಸುಲಭವಾಗಿ ಶಕ್ತಿಏಕಮಾನಗಳಲ್ಲಿ ಬರೆಯಬಹುದು. ಉದಾಹರಣೆಗೆ $\pi^{\pm}$ ಮೆಸಾನಿನ ಜಡಮಾನ 273 $m_e$. ಇಲ್ಲಿ $m_e$ ಎಲೆಕ್ಟ್ರಾನಿನ ಜಡಮಾನ. ಆದ್ದರಿಂದ $\pi^{\pm}$ ಮೆಸಾನಿನ ಜಡಮಾನ 139·503 MeV ಎಂದು ಬರೆಯಬಹುದು. (ಎಸ್‌ಎ.ಎಚ್.)

**ಎಲೆಕ್ಟ್ರಾನ್ ಸೂಕ್ಷ್ಮದರ್ಶಿ :** ಎಲೆಕ್ಟ್ರಾನುಗಳ ನೆರವಿನಿಂದ ಸೂಕ್ಷ್ಮ ವಸ್ತುಗಳ ಬಹು ವಿಸ್ತೃತವಾದ ಛಾಯಾಚಿತ್ರಗಳನ್ನು ಪಡೆಯಲು ಉಪಯೋಗಿಸುವ ಉಪಕರಣ (ಎಲೆಕ್ಟ್ರಾನ್ ಮೈಕ್ರೊಸ್ಕೋಪ್). ದ್ಯುತಿ ಸೂಕ್ಷ್ಮದರ್ಶಿಯ ರಚನೆ ಮತ್ತು ಉಪಯೋಗದಲ್ಲಿ ಸುಮಾರು 300 ವರ್ಷಗಳ ಅವಧಿಯಲ್ಲಿ ನಡೆದ ಸುಧಾರಣೆಯನ್ನು ಮೀರಿಸುವಂಥದನ್ನು ಎಲೆಕ್ಟ್ರಾನ್ ಸೂಕ್ಷ್ಮದರ್ಶಿ ಕೇವಲ 15 ವರ್ಷಗಳಲ್ಲೆ ಸಾಧಿಸಿತು. ಇಷ್ಟು ತ್ವರಿತಗತಿಯಿಂದ ನಡೆದ ಸಂಶೋಧನೆಯೇ ಈ ಉಪಕರಣದ ವೈಜ್ಞಾನಿಕ ಪ್ರಾಮುಖ್ಯಕ್ಕೆ ಹಿಡಿದ ಕನ್ನಡಿ.

**ಇತಿಹಾಸ :** ಎಲೆಕ್ಟ್ರಾನುಗಳು ತರಂಗಗಳಂತೆ ವರ್ತಿಸುತ್ತವೆಂದು ಲೂಯಿ ಡಿಬ್ರಾಯಿ ಸೈದ್ಧಾಂತಿಕವಾಗಿ ತೋರಿಸಿದ (1924). ಆ ಸಿದ್ಧಾಂತದಂತೆ 60,000 kV ವಿಭವಾಂತರದಿಂದ ವೇಗೋತ್ಕರ್ಷಗೊಂಡ ಎಲೆಕ್ಟ್ರಾನುಗಳ ತರಂಗಾಂತರ 0.05 Å. ಇದು ಸಾಮಾನ್ಯ ಬೆಳಕಿನ ತರಂಗಾಂತರದಲ್ಲಿ 1/100,000 ಪಾಲು ಮಾತ್ರ. ಇದರಿಂದ ಎಲೆಕ್ಟ್ರಾನುಗಳು ಮೂಡಿಸುವ ಛಾಯಾಚಿತ್ರಗಳಲ್ಲಿ 10 Å ಅಂತರವುಳ್ಳ ಸೂಕ್ಷ್ಮ ರಚನೆ ಕೂಡ ಪ್ರಕಟವಾಗುವ ಸಾಧ್ಯತೆಯನ್ನು ಸ್ಪಷ್ಟವಾಗಿ ಕಾಣಬಹುದು.

ಎಲೆಕ್ಟ್ರಾನ್ ದೂಲಗಳನ್ನು ಬೆಳಕಿನಂತೆ ಉಪಯೋಗಿಸಲು ತಕ್ಕ ಮಸೂರಗಳು ಬೇಕು. ಗಾಜಿನ ಮಸೂರಗಳು ಬೆಳಕಿನ ದೂಲಗಳನ್ನು ನಾಭಿಸುವಂತೆ ಅಕ್ಷಸಮವಿರುವ ಸ್ಥಿರ ವಿದ್ಯುತ್ ಮತ್ತು ಕಾಂತಕ್ಷೇತ್ರಗಳು ಎಲೆಕ್ಟ್ರಾನುಗಳನ್ನು ನಾಭಿಸುತ್ತವೆಂದು ಬುಷ್ ತೋರಿಸಿದ್ದಾನೆ. 1932ರಲ್ಲಿ ಅರ್ನೆಸ್ಟ್ ಬ್ರೂಕ್ ಮತ್ತು ಎಚ್. ಜೊಹಾನ್‌ಸನ್ ಅವರು 300ವೋಲ್ಟ್ ಎಲೆಕ್ಟ್ರಾನ್ ದೂಲಗಳಿಂದ ಕಾದ ಕ್ಯಾಥೋಡಿನ ಛಾಯಾಚಿತ್ರವನ್ನು ತೆಗೆದರು. ಅದೇ ವರ್ಷ ಎಂ. ನಾಲ್ ಮತ್ತು ಅರ್ನೆಸ್ಟ್ ರುಸ್ಕ ಅವರು ತುಂಡು ಕಾಂತ ಮಸೂರಗಳನ್ನು ಅಳವಡಿಸಿ ನಿರ್ಮಿಸಿದ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಿಂದ ವಿಸರ್ಜನ ಕೊಳವೆಯ ಎಲೆಕ್ಟ್ರಾನ್ ಆಕರಗಳ ಛಾಯಾಚಿತ್ರವನ್ನು ತೆಗೆದರು. ಅವರು ಭರ ಎಲೆಕ್ಟ್ರಾನ್ ದೂಲಗಳನ್ನು ಉಪಯೋಗಿಸುವ ಸೂಕ್ಷ್ಮದರ್ಶಿಯ ವಿಘಟನ ಸಾಮರ್ಥ್ಯ ದ್ಯುತಿಸೂಕ್ಷ್ಮದರ್ಶಿಗಳ ವಿಘಟನಸಾಮರ್ಥ್ಯಕ್ಕಿಂತ ಬಹಳಷ್ಟು ಹೆಚ್ಚಾಗಿರುತ್ತದೆಂದು ಸಾರಿದರು. ಪ್ರೇಷಣ ಎಲೆಕ್ಟ್ರಾನುಗಳಿಂದ ಉತ್ಕೃಷ್ಟವಾದ ಛಾಯಾಚಿತ್ರಗಳನ್ನು ಪಡೆಯಲು ಅನುಕೂಲವಾದ ಸೂಕ್ಷ್ಮದರ್ಶಿಯ ರಚನೆಯನ್ನು 1934ರಲ್ಲಿ ರುಸ್ಕ ವಿವರಿಸಿದ. ಇದಾದ ತರುಣದಲ್ಲೇ ಬೆಲ್ಜಿಯಮಿನಲ್ಲಿ ಮಾರ್ಟನ್ ಎಂಬಾತ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯನ್ನು ಜೀವಶಾಸ್ತ್ರ ಸಂಶೋಧನೆಗೆ ಉಪಯೋಗಿಸಿದ.

ಈ ಯಾವ ಮುಂಚಿನ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳೂ ದ್ಯುತಿಸೂಕ್ಷ್ಮದರ್ಶಿಗಳಿಗಿಂತ ಉತ್ತಮವಾಗಿರಲಿಲ್ಲ. 1935ರಲ್ಲಿ ಡ್ರೀಸ್ಟ್ ಮತ್ತು ಮುಲ್ಲರ್ ಅವರು ರುಸ್ಕನ ಸಲಹೆಯಂತೆ ತಮ್ಮ ಸೂಕ್ಷ್ಮದರ್ಶಿಯಲ್ಲಿ ಮಾರ್ಪಾಡುಮಾಡಿ ಮೊದಲಬಾರಿಗೆ ದ್ಯುತಿ ಸೂಕ್ಷ್ಮದರ್ಶಿಯ ವಿಘಟನ ಸಾಮರ್ಥ್ಯವನ್ನು ಮೀರಿ ಮುಂದೆ ಹೋದರು. ಕ್ರೌಸ್ ಎಂಬಾತ ರುಸ್ಕನ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಿಂದ ವಿವಿಧ ವಸ್ತುಗಳ ಛಾಯಾಚಿತ್ರಗಳನ್ನು ತೆಗೆದ. ಅತಿ ತೆಳುವಾದ ಮಾದರಿಗಳು ಎಲೆಕ್ಟ್ರಾನ್ ಆಘಾತಕ್ಕೆ ಸಿಕ್ಕಿ ಛಿದ್ರವಾಗಿಬಿಡಬಹುದೆಂಬ ಹಿಂದಿನ ಭೀತಿ ಕ್ರೌಸನ ಸಂಶೋಧನೆಗಳ ಫಲವಾಗಿ ದೂರವಾಯಿತು.

1938ರಲ್ಲಿ ವಾನ್ ಬೋರಿಸ್ ಮತ್ತು ರುಸ್ಕ ಅವರು ಜರ್ಮನಿಯ ಸೀಮನ್ ಮತ್ತು ಹಲ್ಸ್‌ಕೆ ಕಂಪನಿಯವರಿಗಾಗಿ ಪ್ರಯೋಗಶಾಲೆಯಲ್ಲಿ ಉಪಯೋಗಿಸಬಹುದಾದ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ರಚನೆಯನ್ನು ಸಿದ್ಧಪಡಿಸಿದರು. ಈ ಕಂಪನಿ ತಯಾರಿಸಿದ ಸೂಕ್ಷ್ಮದರ್ಶಿಗಳ ವಿಘಟನಸಾಮರ್ಥ್ಯ 100 Å ಆಗಿತ್ತು. 1939ರಲ್ಲಿ ಪ್ರಿಬಸ್ ಮತ್ತು ಹಿಲಿಯರ್ ಅವರು ಟೊರೊಂಟೋದಲ್ಲಿ ಸ್ವತಂತ್ರವಾಗಿ ಕಾಂತ ಮಸೂರಗಳನ್ನುಳ್ಳ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯನ್ನು ನಿರ್ಮಿಸಿದರು.

ಈ ಪ್ರಾರಂಭಿಕ ಸಂಶೋಧನೆಗಳಾದ ಅನಂತರ ಬಹುಬೇಗ ಪರಿಷ್ಕೃತ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳು ಮಾರುಕಟ್ಟೆಗೆ ಬಂದುವು. ಹ್ಯಾನ್ಸ್ ಮ್ಹಲ್ ಎಂಬಾತ ಜರ್ಮನಿಯ ಬೇರೊಂದು ಕಂಪನಿಗಾಗಿ ಸ್ಥಿರ ವಿದ್ಯುತ್ ಮಸೂರಗಳುಳ್ಳ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯನ್ನು ನಿರ್ಮಿಸಿದ. ವಾನ್ಸ್ ಎಂಬಾತ ಎಲೆಕ್ಟ್ರಾನಿಕವಾಗಿ ನಿಯಂತ್ರಣಗೊಂಡ ಶಕ್ತಿ ಪೂರೈಕೆಗಳನ್ನು (ಎಲೆಕ್ಟ್ರಾನಿಕಲಿ ಕಂಟ್ರೋಲ್ಡ್ ಪವರ್ ಸಪ್ಲೈ) ಬಳಸಿದ ಕಾಂತ ಉಪಕರಣವನ್ನು ಅಮೆರಿಕದ ರೇಡಿಯೋ ಕಾರ್ಪೊರೇಷನ್ನಿಗಾಗಿ ಸಿದ್ಧಪಡಿಸಿದ. 1940ರಲ್ಲಿ ಅದೇ ಕಂಪನಿ (RCA) 24 Å ವಿಘಟನ ಸಾಮರ್ಥ್ಯವಿರುವ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯನ್ನು ಮಾರುಕಟ್ಟೆಗೆ ತಂದಿತು. ರುಸ್ಕ ಮತ್ತು ಬೋರಿಸ್ ಅವರು

ಸುಧಾರಿಸಿದ ಸೀಮನ್ ಕಂಪನಿಯ ಸೂಕ್ಷ್ಮದರ್ಶಿ 22 Å ವಿಘಟನ ಸಾಮರ್ಥ್ಯವನ್ನು ಸಾಧಿಸಿತ್ತು. ಅಮೆರಿಕ, ಇಂಗ್ಲೆಂಡ್ ಮತ್ತು ರಷ್ಯಗಳಲ್ಲಿ ಈಗ ಉತ್ಪಾದನೆಗೊಳ್ಳುತ್ತಿರುವ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳು ಸೈದ್ಧಾಂತಿಕ ಮಿತಿಯನ್ನೇ ಮುಟ್ಟಿವೆ.

**ವಿಘಟನಸಾಮರ್ಥ್ಯ:** ಬರಿಕಣ್ಣಿನಿಂದ 0·2 ಮಿ. ಮೀ. ಗಿಂತ ಕಡಿಮೆ ಅಂತರದಲ್ಲಿರುವ ಎರಡು ಬಿಂದುಗಳನ್ನು ಪ್ರತ್ಯೇಕ ಬಿಂದುಗಳಂತೆ ಕಾಣುವುದಕ್ಕಾಗುವುದಿಲ್ಲ. ಈ ಅಂತರಕ್ಕಿಂತ ಇನ್ನೂ ಕಡಿಮೆ ದೂರದಲ್ಲಿರುವ ಸೂಕ್ಷ್ಮವಸ್ತುಗಳನ್ನು ಅವುಗಳ ರಚನೆಗೆ ಕುಂದು ಬಾರದಂತೆ ತೋರಿಸುವ ಕೆಲಸ ಸೂಕ್ಷ್ಮದರ್ಶಿಯದು. ದ್ಯುತಿ ಸೂಕ್ಷ್ಮದರ್ಶಿಗಳು 1000 Å ಗಿಂತ ಕಡಿಮೆ ಅಂತರವುಳ್ಳ ರಚನಾ ವಿವರಣೆಯನ್ನು ತೋರಿಸಲಾರವು. (1 Å $=10^{-8}$ ಸೆಂ.ಮೀ.) ಅಂದರೆ ಯಾವುದೇ ವಸ್ತುವಿನ ಪ್ರತಿಬಿಂಬವನ್ನು 2000 ಕ್ಕಿಂತ ಹೆಚ್ಚು ಲಂಬಿಸಲು ಅವುಗಳಿಂದ ಆಗುವುದಿಲ್ಲ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳಾದರೋ 2,00,000 ದಷ್ಟು ಲಂಬನವನ್ನು ಸಾಧಿಸಬಲ್ಲವು. 1970ರಲ್ಲಿ ಚಿಕಾಗೊ ವಿಶ್ವವಿದ್ಯಾಲಯದ ಆಲ್ಬರ್ಟ್ ಕ್ರಿವೆ ಎಂಬಾತ ಮೊದಲಬಾರಿಗೆ ಅಣುಗಳಲ್ಲಿರುವ ಪರಮಾಣುಗಳ (ಯುರೇನಿಯಂ ಮತ್ತು ಪಲೋನಿಯಂ) ಛಾಯಾಚಿತ್ರವನ್ನು ತೆಗೆಯಲು ಸಮರ್ಥನಾದ. ಈತ ಉಪಯೋಗಿಸಿದ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ಲಂಬನಸಾಮರ್ಥ್ಯ 5,000,000.




ಚಿತ್ರ 1

ಸೂಕ್ಷ್ಮದರ್ಶಿಯ ವಿಘಟನಸಾಮರ್ಥ್ಯ ಅದರ ದ್ಯುತಿಕೊರತೆಯನ್ನೇ (ಆಪ್ಟಿಕಲ್ ಇಂಪರ್ಫೆಕ್ಷನ್) ಅವಲಂಬಿಸಿರುವುದಿಲ್ಲ. ಇದನ್ನು ಗ್ರಹಿಸಲು ಸ್ವಪ್ರಕಾಶಿಯಾದ ಒಂದು ಬಿಂದುವಿನ ಪ್ರತಿಬಿಂಬವನ್ನು ನೋಡಬೇಕು. ಪ್ರತಿಬಿಂಬ ವಿಸ್ತೃತವಾದ ಒಂದು ಬಿಂದು ಮಾತ್ರ ಆಗಿಲ್ಲ. ಅದರ ಸುತ್ತ ಪ್ರಭಾವಲಯಗಳಿವೆ. ಇದಕ್ಕೆ ಕಾರಣ ಬೆಳಕಿನ ನಮನ. ಬೆಳಕಿನ ನಮನದಿಂದ ಮೂಡಿರುವ ಪ್ರತಿಬಿಂಬ ರಚನೆಯನ್ನು ಚಿತ್ರ 1 ರಲ್ಲಿ ನೋಡಬಹುದು. ನಮನ ರಚನೆಯ ಮೊದಲ ಕನಿಷ್ಠ ಕಿಂಡಿಯ ಬಳಿ ತೋರಿಸುವ ಕೋನ $\theta$ ಆದರೆ

$$\sin\theta = \frac{1.22\,\lambda_i}{2\rho} \qquad \ldots \quad (1)$$

ಎಂದು ಬರೆಯಬಹುದು. $\lambda_i$ ಪ್ರತಿಬಿಂಬ ಕ್ಷೇತ್ರದಲ್ಲಿ ಬೆಳಕಿನ ತರಂಗಾಂತರ ಮತ್ತು $\rho$ ಕಿಂಡಿಯ ತ್ರಿಜ್ಯ. ಈಗ ಚಿತ್ರವನ್ನು ನೋಡಿ

$$\frac{\Delta r_i}{S_i} = \frac{1.22\,\rho_i}{2\rho} \qquad \ldots \quad (2)$$

ಎಂದು ಬರೆಯಬಹುದು. M ಲಂಬನವಾದರೆ $\Delta r_i$ಗೆ ಸಂಬಂಧಿಸಿದ ಬಿಂದುವಿನ ತ್ರಿಜ್ಯ $\Delta r_o = \Delta r_i/\mathrm{M}$. ವಸ್ತುಬಿಂದುವಿನ ತ್ರಿಜ್ಯ $\Delta r_o$ ಗಿಂತ ಕಡಿಮೆಯಾದರೂ ಅದರ ಪ್ರಮುಖ ಪ್ರತಿಬಿಂಬದ ತ್ರಿಜ್ಯ $\Delta r_i$ ಆಗುತ್ತದೆ. ಅನಂತರ ಆಬೆ ಸೈನ್ ನಿರ್ಬಂಧವನ್ನು ಉಪಯೋಗಿಸಿ

$$\Delta r_o = \frac{n_i \times 0.61\lambda_i}{n_o \sin\alpha_o} \qquad \ldots \quad (3)$$

ಎಂದು ತೋರಿಸಬಹುದು. $n_i$ ಸರಿಸುಮಾರಾಗಿ 1ಕ್ಕೆ ಸಮ. $n_o$ ವಸ್ತು ಕ್ಷೇತ್ರದ ವಕ್ರೀಭವನ ಸೂಚ್ಯಂಕ. $\Delta r_o$ ಯನ್ನೆ ಉಪಕರಣದ ವಿಘಟನ ಎಂದು ತಿಳಿಯಬಹುದು. ಈ ಉಪಕರಣದಿಂದ $\Delta r_o$ ಗಿಂತ ಕಡಿಮೆ ಅಂತರದಲ್ಲಿರುವ ರಚನಾ ವಿವರಣೆಯನ್ನು ತಿಳಿಯುವುದು ಸಾಧ್ಯವಿಲ್ಲ. $n_o\sin\alpha_o$ ಯನ್ನು ಸಂಖ್ಯಾಕಿಂಡಿ (ನ್ಯೂಮರಿಕಲ್ ಅಪೆರ್ಚರ್) ಎನ್ನುತ್ತಾರೆ. $\Delta r_o$ಯನ್ನು ಕಡಿಮೆ ಮಾಡಲು ಸಂಖ್ಯಾಕಿಂಡಿಯನ್ನು ಹೆಚ್ಚು ಮಾಡಬೇಕು ಮತ್ತು $\lambda_i$ ಯನ್ನು ಕಡಿಮೆ ಮಾಡಬೇಕು. ದ್ಯುತಿ ಸೂಕ್ಷ್ಮದರ್ಶಿಯಲ್ಲಿ ಸಂಖ್ಯಾಕಿಂಡಿಯನ್ನು 1.4 ಕ್ಕಿಂತ ಹೆಚ್ಚು ಮಾಡುವುದು ಅಸಾಧ್ಯ. ಅತಿ ಕಡಿಮೆ ತರಂಗಾಂತರದ ಕಿರಣಗಳು ಎಂದರೆ ಅತಿನೇರಳೆ ಕಿರಣಗಳು. ಎಕ್ಸ್‌ಕಿರಣಗಳ ತರಂಗಾಂತರ ಇನ್ನೂ ಕಡಿಮೆಯಾಗಿದ್ದರೂ ಅವನ್ನು ಸೂಕ್ಷ್ಮದರ್ಶಿಯಲ್ಲಿ ಉಪಯೋಗಿಸಲು ಅನುಕೂಲವಾಗುವಂಥ ಮಸೂರಗಳಿಲ್ಲ. ಈ ಕಾರಣಗಳಿಂದ ದ್ಯುತಿ ಸೂಕ್ಷ್ಮದರ್ಶಿಗಳಲ್ಲಿ $\Delta r_o$ ಒಂದು ಸಾವಿರ ಆಂಗ್‌ಸ್ಟ್ರಾಮ್ ಏಕಮಾನಗಳಿಗಿಂತ ಕಡಿಮೆಯಾಗುವುದು ಸಾಧ್ಯವಿಲ್ಲ.

ಎಲೆಕ್ಟ್ರಾನಿನ ಜಡಮಾನ ಮತ್ತು ವೇಗ ಕ್ರಮವಾಗಿ $m$ ಮತ್ತು $v$ ಆದರೆ ಅದರ ತರಂಗಾಂತರ

$$\lambda = \frac{h}{mv} \qquad \ldots \quad (4)$$

ಎಂದು ತೋರಿಸಬಹುದು. $h$ ಪ್ಲಾಂಕನ ನಿಯತಾಂಕ. ಎಲೆಕ್ಟ್ರಾನುಗಳು V ವೋಲ್ಟುಗಳ ವಿಭವಾಂತರದ ಮೂಲಕ ವೇಗೋತ್ಕರ್ಷಗೊಂಡಿದ್ದರೆ

$$\lambda = \frac{12{\cdot}3}{\sqrt{\mathrm{V}}}\ \text{Å} \qquad \ldots \quad (5)$$

ಎಂದೂ ಬರೆಯಬಹುದು. ಈ ಸಮೀಕರಣ $\mathrm{V} < 20{,}000$ ವೋಲ್ಟ್ ಆಗಿದ್ದರೆ ಮಾತ್ರ ಸರಿ. ಇದಕ್ಕೂ ಹೆಚ್ಚಾದರೆ

$$\lambda = \frac{12.3}{(\mathrm{V}+10^{-6}\,\mathrm{V}^2)^{\frac{1}{2}}}\ \text{Å} \qquad \ldots \quad (6)$$

ಎಂದು ಬರೆಯಬೇಕಾಗುತ್ತದೆ. ಎಲೆಕ್ಟ್ರಾನ್ ಮಸೂರಗಳಲ್ಲಿ Vಯನ್ನು 10–100 kVಗಳ ವರೆಗೆ ವ್ಯತ್ಯಾಸ ಮಾಡಬಹುದು. ಅಂದರೆ ಎಲೆಕ್ಟ್ರಾನುಗಳ ತರಂಗಾಂತರವನ್ನು 0.123—0.0537Å ವರೆಗೆ ವ್ಯತ್ಯಾಸಮಾಡಬಹುದೆಂದಾಯಿತು. ಇದರಿಂದ $\Delta r_o$ ಯನ್ನು ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ಬೇಕಾದ ಹಾಗೆ ಕಡಿಮೆ ಮಾಡಬಹುದೆನಿಸುತ್ತದೆ. ಆದರೆ $\alpha_o$ ಯನ್ನು ಹೆಚ್ಚಿಸುವುದಕ್ಕಾಗುವುದಿಲ್ಲ. ಇದು ಹೆಚ್ಚಾದರೆ ಗೋಳವಿಪಥನ ಹೆಚ್ಚುತ್ತದೆ. ಈ ದೋಷವೇ ಮುಖ್ಯವಾಗಿ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ವಿಘಟನಸಾಮರ್ಥ್ಯವನ್ನು ಸೀಮಿತಗೊಳಿಸುವ ಅಂಶ. ಇದಕ್ಕೆ ಸಂಬಂಧಪಟ್ಟಂತೆ $\Delta r_s$ ಸೂಕ್ಷ್ಮದರ್ಶಿಯ ವಿಘಟನವಾದರೆ

$$\Delta r_s = C_s \alpha_o^{3} \qquad \ldots \quad (7)$$

ಎಂದು ತೋರಿಸಬಹುದು. $C_s$ ಗೋಳ ವಿಪಥನ ಸೂಚಿ. ಸಮೀಕರಣ (3) ರಿಂದ

$$\Delta r_s = \frac{0.61\lambda_o}{\alpha_o} \qquad \ldots \quad (8)$$

ಎಂದು ಬರೆದು $\alpha_o = \left(\dfrac{0.61\ \lambda_o}{C_s}\right)^{\frac{1}{4}}$ ಎಂದು ತಿಳಿಯಬಹುದು. ಇಲ್ಲಿ $n_i$ ಸರಿಸುಮಾರಾಗಿ 1ಕ್ಕೆ ಸಮ.

$\dfrac{\lambda_i}{n_i} = \lambda_o$ ಮತ್ತು $\sin\alpha_o = \alpha_o$. ಅನಂತರ ಸಮೀಕರಣ (7) ರಿಂದ

$$\Delta r_s = \mathrm{A} C_s^{\frac{1}{4}} \lambda_o^{\frac{3}{4}} \qquad \ldots \quad (9)$$

ಎಂದು ತೋರಿಸಬಹುದು. ನಿಯಂತಾಂಕ A ಸರಿಸುಮಾರಾಗಿ 0.6—0.7, $C_s = 3.3$ ಮಿ.ಮೀ. ಇರುವ ಮಸೂರವನ್ನು ಉಪಯೋಗಿಸುವ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ವಿಘಟನ 6.5Å. ಇಲ್ಲಿ ಉಪಕರಣದ ವ್ಯವಸ್ಥೆಯಲ್ಲಿರಬಹುದಾದ ಲೋಪದೋಷಗಳನ್ನು ಗಣನೆಗೆ ತೆಗೆದುಕೊಂಡಿಲ್ಲ. ಆದ್ದರಿಂದ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ವಿಘಟನ 8 – 10 Å ಎಂದುಕೊಳ್ಳಬಹುದು. ಗೋಳವಿಪಥನವನ್ನು ಕಡಿಮೆ ಮಾಡುವುದು ಮತ್ತು ಇನ್ನೂ ಹೆಚ್ಚು ವೇಗದ ಎಲೆಕ್ಟ್ರಾನುಗಳನ್ನು ಉಪಯೋಗಿಸುವುದು ಆಗುವುದೇ ಇಲ್ಲವೆನ್ನುವುದು ಸರಿಯಾದುದಲ್ಲ. ಇತ್ತೀಚಿನ ಬೆಳವಣಿಗೆಗಳು ಅಂಥ ಸಾಧ್ಯತೆಯನ್ನು ತೋರಿಸಿವೆ. ವಸ್ತುಗಳನ್ನು ಮಾಲಿಸಿ ಬೆಳಗುವುದರಿಂದ ವಿಘಟನ ಮಿತಿಯನ್ನು 2.06Å

ಗಳಿಗೆ ತರಬಹುದು. ಚಿತ್ರ 2ರಲ್ಲಿ ಜಪಾನಿನ ಹಿಟಾಚಿ ಕಂಪನಿಯ ಸೂಕ್ಷ್ಮದರ್ಶಿಯಿಂದ ತೆಗೆದ ಛಾಯಾಚಿತ್ರದಲ್ಲಿ 2.06Å ಅಂತರದಲ್ಲಿರುವ ಚಿನ್ನದ ಪರಮಾಣುಗಳ ಸಾಲುಗಳನ್ನು ನೋಡಬಹುದು.



ಚಿತ್ರ 2 ಚಿನ್ನದ ಏಕಸ್ಫಟಿಕ (200) ಸಮತಲಗಳು

**ಕಾಂತ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳು :** ಕಾಂತ ಮಸೂರಗಳನ್ನು ಅಳವಡಿಸಿರುವ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳು ಹೆಚ್ಚು ಸಂಖ್ಯೆಯಲ್ಲಿವೆ. ಇಂಥ ಒಂದು ಸೂಕ್ಷ್ಮದರ್ಶಿಯನ್ನು ಚಿತ್ರ 3ರಲ್ಲಿ ಚಿತ್ರಿಸಿದೆ. ವಿದ್ಯುತ್ ಪ್ರವಾಹದಿಂದ ಕಾದ ತಲೆಪಿನ್ನಿನ ಆಕಾರದಲ್ಲಿರುವ ಟಂಗ್‌ಸ್ಟನ್ ತಂತು ಎಲೆಕ್ಟ್ರಾನುಗಳ ಆಕರ. ಇದು ರಕ್ಷಾಕವಚದೊಂದಿಗೆ 40–100 kV ಋಣ ವಿಭವದಲ್ಲಿರುತ್ತದೆ. ರಕ್ಷಾಕವಚದಲ್ಲಿರುವ ಕಿಂಡಿ ಸ್ಥಿರ ವಿದ್ಯುತ್ ಮಸೂರದಂತೆ ವರ್ತಿಸಿ ಆನೋಡಿನ ಹಿಂದೆ ಕಡಿಮೆ ವ್ಯಾಸವಿರುವ ಕ್ರಾಸ್ ಓವರನ್ನು ಮೂಡಿಸುತ್ತದೆ. ಆನೋಡಿನಿಂದ ಮುಂದೆ ಹೋಗುವ ಎಲೆಕ್ಟ್ರಾನುಗಳ ಸಂಖ್ಯೆ ಬಲು ಕಡಿಮೆ.

ಸಂಕ್ಷಿಪ್ತಕ ಮಸೂರದಲ್ಲಿ ವಿದ್ಯುತ್ ಪ್ರವಾಹವನ್ನು ನಿಯಂತ್ರಿಸುವುದರ ಮೂಲಕ ವಸ್ತುವಿನ ಮೇಲೆ ಬೀಳುವ ಎಲೆಕ್ಟ್ರಾನುಗಳ ಸಾಂದ್ರತೆಯನ್ನು ಬೇಕಾದ ಹಾಗೆ ಕಡಿಮೆ ಮಾಡಬಹುದು. ಇಲ್ಲಿ ಕಿಂಡಿಯ ವಿಸ್ತಾರ 0.1–0.5 ಮಿ.ಮೀ. ನಷ್ಟು ಇರುವುದು ಸಾಮಾನ್ಯ. ವಸ್ತುವಿನ ಮೂಲಕ ಹಾಯುವ ಎಲೆಕ್ಟ್ರಾನುಗಳಲ್ಲಿ ಕೆಲವು ಚದರುತ್ತವೆ. ಚದರುವ ಎಲೆಕ್ಟ್ರಾನುಗಳ ಸಂಖ್ಯೆ ವಸ್ತುವಿನ ಗಾತ್ರವನ್ನವಲಂಬಿಸಿರುತ್ತದೆ. ಚದರಿಕೆಯ ಅಸಮತೆಯಿಂದಲೆ ಪ್ರತಿಬಿಂಬದಲ್ಲಿ ವ್ಯತ್ಯಾಸ ಕಾಣಿಸಿಕೊಳ್ಳುವುದು. ಹೆಚ್ಚು ಜಡಮಾನವಿರುವ ಕಡೆಯಲ್ಲಿ ಹೆಚ್ಚು ಎಲೆಕ್ಟ್ರಾನುಗಳು ಚದರುತ್ತವೆ. ಇದಕ್ಕೆ ಸರಿಯಾಗಿ ಬಿಂಬಗ್ರಾಹಿತಟ್ಟೆಯ (ಫೋಟೊಗ್ರಫಿಕ್ ಪ್ಲೇಟ್) ಮೇಲೆ ಬೀಳುವ ಎಲೆಕ್ಟ್ರಾನುಗಳ ಸಂಖ್ಯೆ ಕಡಿಮೆಯಾಗುತ್ತದೆ. ಆದ್ದರಿಂದ ವಸ್ತು ರಚನೆಗೆ ವಿರುದ್ಧವಾದ ಗುಪ್ತ ಪ್ರತಿಬಿಂಬ (ಲೇಟೆಂಟ್ ಇಮೇಜ್) ಬಿಂಬಗ್ರಾಹಿತಟ್ಟೆಯಲ್ಲಿ ಮೂಡುತ್ತದೆ.

ವಸ್ತುಮಸೂರದ ಕಿಂಡಿ 10–100$\mu$ಗಳ ($1\mu = 10^{-6}$ಮೀ.) ವರೆಗಿದೆ. ಆದ್ದರಿಂದ ಚದರಿದ ಹೆಚ್ಚು ಎಲೆಕ್ಟ್ರಾನುಗಳು ಮುಂದೆ ಹೋಗುವುದಿಲ್ಲ. ವಸ್ತು ಮಸೂರ ಪ್ರತಿಬಿಂಬದ ಲಂಬನವನ್ನು 100× ನಿಂದ 300× ವರೆಗೆ ಹೆಚ್ಚಿಸಬಹುದು. ಮಧ್ಯಸ್ಥ ಪ್ರತಿಬಿಂಬವನ್ನು ಎರಡುಸಾರಿ ಮರುಲಂಬನಗೊಳಿಸುವುದು ವಾಡಿಕೆ. ಮಧ್ಯಸ್ಥ ಹಾಗೂ ಅಂತಿಮ ಪ್ರತಿಬಿಂಬಗಳನ್ನು ಕಣ್ಣಿನಿಂದ ನೋಡಲು ಅನುಕೂಲವಾಗುವಂತೆ ಪ್ರತಿದೀಪ್ತಶೀಲ (ಫ್ಲೂರಸೆಂಟ್) ತೆರೆಗಳಿವೆ. ಇದರಿಂದ ಪ್ರತಿಬಿಂಬದಲ್ಲಿ ಕಾಣುವ ಅನೇಕ ದೋಷಗಳನ್ನು ನಿವಾರಿಸಲು ಸಹಾಯವಾಗುತ್ತದೆ.

ತಲೆಪಿನ್ನಿನಿಂದ ಸಂಕ್ಷಿಪ್ತಕ ಮಸೂರಕ್ಕೆ 15 ಸೆಂ. ಮೀ. ಅಲ್ಲಿಂದ ವಸ್ತುಮಸೂರಕ್ಕೆ ಸುಮಾರು ಅಷ್ಟೇ ದೂರವಿರುವುದು ಸಾಮಾನ್ಯ. ವಸ್ತುಮಸೂರದಿಂದ ಬಿಂಬಗ್ರಾಹಿತಟ್ಟೆಗೆ 100 ಸೆಂ. ಮೀ. ಇರುತ್ತದೆ. ಇವೆಲ್ಲ ಇರುವ ಕೋಣೆಯಲ್ಲಿ ಗಾಳಿಯ ಒತ್ತಡ $10^{-4}$ ಮಿ. ಮೀ. ಪಾದರಸಕ್ಕಿಂತ ಹೆಚ್ಚಾಗಿರಬಾರದು. ಕಾರಣ ಹಾಗಿದ್ದರೆ ಎಲೆಕ್ಟ್ರಾನುಗಳು ಗಾಳಿಯ ಅಣುಗಳಿಗೆ ತಾಗಿ ನಷ್ಟವಾಗುತ್ತವೆ.

ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ಬಹುಮುಖ್ಯಭಾಗ ವಸ್ತು ಮಸೂರ. ಇದೇ ವಿಘಟನ ಮತ್ತು ಪ್ರತಿಬಿಂಬದ ವ್ಯತ್ಯಾಸವನ್ನು ನಿರ್ಣಯಿಸುವ ಸಾಧನ. ವಸ್ತು




ಚಿತ್ರ 3 ಕಾಂತ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ನಕಾಶೆ.
1 ಋಣ ಪ್ರೇರಣೆ, 2. ತಂತು, 3. ಕ್ರಾಸ್ ಓವರ್, 4. ಸಂಕ್ಷಿಪ್ತಕ ಮಸೂರ, 5. ಸಂಕ್ಷಿಪ್ತಕ ಕಿಂಡಿ, 6. ವಸ್ತು, 7. ವಸ್ತು ಮಸೂರ, 8. ವಸ್ತು ಕಿಂಡಿ, 9. ಮಧ್ಯಸ್ಥ ಪ್ರೊಜೆಕ್ಟರ್, 10. ಮಧ್ಯಸ್ಥ ಪ್ರತಿಬಿಂಬ, 11. ಮಧ್ಯಸ್ಥ ನೋಡುವ ತೆರೆ, 12. ಪ್ರೊಜೆಕ್ಟರ್ ಮಸೂರ, 13. ಅಂತಿಮ ಪ್ರತಿಬಿಂಬ, 14. ಅಂತಿಮ ನೋಡುವ ತೆರೆ, 15. ಬಿಂಬಗ್ರಾಹಿ ತಟ್ಟೆ, 16. ರಕ್ಷಾ ಕವಚ, 17. ಆನೋಡ್.

ಸಾಮಾನ್ಯವಾಗಿ ಧ್ರುವ ತುಂಡುಗಳ ರಂಧ್ರಕ್ಕಿಂತ ದೊಡ್ಡದಾಗಿರುತ್ತದೆ. ಇದನ್ನು ಚಿತ್ರ 4ರಲ್ಲಿ ನೋಡಬಹುದು. ವಸ್ತುವನ್ನು A ಅಥವಾ Bಯಲ್ಲಿ ಬೇಕಾದ ಹಾಗೆ ಇಡಬಹುದು. ಎರಡು ಜಾಗಗಳಲ್ಲಿಯೂ ಕೆಲವು ಅನುಕೂಲ ಮತ್ತು ಪ್ರತಿಕೂಲಗಳಿವೆ. ಕಾಂತ ಗುಣವಿರುವ ವಸ್ತುವಾದರೆ ಅದನ್ನು Aಯಲ್ಲಿ ಇಡುವುದು ಉತ್ತಮ. ಆಗ ಮಸೂರದ ಕಾಂತಕ್ಷೇತ್ರ ಅದರ ಮೇಲೆ ಹೆಚ್ಚು ಪ್ರಭಾವವನ್ನು ಬೀರುವುದಿಲ್ಲ. Bಯಲ್ಲಿ ವಸ್ತುವನ್ನು ಇಡುವುದು ಸುಲಭ. ನೂಕು ತೊಲೆಯ (ಪುಶ್ ರಾಡ್) ಮೇಲೆ ಅದನ್ನಿಟ್ಟು ಸರಿಯಾದ ಜಾಗಕ್ಕೆ ಸರಿಸಬಹುದು. ಇದಲ್ಲದೆ ಇನ್ನೂ ಒಂದು ಅನುಕೂಲವಿದೆ. ಹೆಚ್ಚು ವಿಘಟನೆ ಬೇಕಾದರೆ $C_s$ ಕಡಿಮೆ ಇರಬೇಕು. $C_s$ ಕಡಿಮೆ ಆಗಬೇಕಾದರೆ ನಾಭಿದೂರ ಕಡಿಮೆ




ಚಿತ್ರ 4 A, B ವಸ್ತು ಇರಬಹುದಾದ ಸ್ಥಳಗಳು.

ಆಗಬೇಕು. ವಸ್ತುವನ್ನು Aಯಲ್ಲಿಟ್ಟರೆ ನಾಭಿದೂರವನ್ನು ಹೆಚ್ಚಿಸಬೇಕಾಗುತ್ತದೆ. ನಾಭಿದೂರ ಹೆಚ್ಚಾದರೂ ಪ್ರಯೋಜನವಿದೆ. ಆಗ ಪ್ರತಿಬಿಂಬದ ವಿಭೇದ ಚೆನ್ನಾಗಿರುತ್ತದೆ.

ವಸ್ತು ಮೊದಲ ನಾಭಿ ಬಿಂದುವಿನ ಹಿಂದೆ ಅತಿ ಸಮೀಪದಲ್ಲೇ ಇರುತ್ತದೆ. ಆದ್ದರಿಂದ ಅದರ ಪ್ರತಿಬಿಂಬ ಮುಂದೆ ಹೆಚ್ಚು ದೂರದಲ್ಲಿ ಮೂಡುವುದು. ಪ್ರತಿಬಿಂಬಕ್ಕೆ ಕಾರಣವಾದ ಎಲೆಕ್ಟ್ರಾನುಗಳು ಅಕ್ಷಕ್ಕೆ ಸಮಾನಾಂತರವಾಗಿಯೇ ಚಲಿಸುತ್ತವೆ. ಚದರಿದ ಎಲೆಕ್ಟ್ರಾನುಗಳನ್ನು ವಸ್ತು ಕಿಂಡಿ ತಡೆಯುತ್ತದೆ. ಈ ಎಲೆಕ್ಟ್ರಾನುಗಳನ್ನು ತಡೆಯದೆ ಹೋದರೆ ಅವು ಬಿಂಬಗ್ರಾಹಿತಟ್ಟೆಯ ಮೇಲೆ ವಸ್ತುವಿನ ಪ್ರತಿಬಿಂಬಕ್ಕೆಸಂಬಂಧವಿಲ್ಲದ ಕಡೆ ಬೀಳುತ್ತವೆ. ಆಗ ಪ್ರತಿಬಿಂಬ ಮಸುಕಾಗುತ್ತದೆ. 2 ಅಥವಾ 3 ಮಿ. ಮೀ. ನಾಭಿದೂರವಿರುವ ಮಸೂರಗಳಲ್ಲಿ 25–50$\mu$ ವಿಸ್ತಾರವಿರುವ ಕಿಂಡಿಗಳಿರುತ್ತವೆ. ಈ ಕಿಂಡಿ ಸ್ವಚ್ಛವಾಗಿರಬೇಕು. ಹಾಗಿಲ್ಲದಿದ್ದರೆ ಎಲೆಕ್ಟ್ರಾನುಗಳ ಘರ್ಷಣೆಗೆ ಗುರಿಯಾಗಿ ಅಯಾನೀಕರಣಗೊಂಡು ಎಲೆಕ್ಟ್ರಾನುಗಳ ಪಥವನ್ನು ಹಾಳುಮಾಡುತ್ತದೆ.




ಚಿತ್ರ 5 ವಸ್ತುಕಿಂಡಿಯ ಸ್ಥಳ

ವಸ್ತುಮಸೂರದಲ್ಲಿ ಕಾಂತಕ್ಷೇತ್ರ ಅಕ್ಷಸಮತೆಯನ್ನು ಹೊಂದಿಲ್ಲದಿದ್ದರೆ ಪ್ರತಿಬಿಂಬದಲ್ಲಿ ದೋಷ ಕಾಣಿಸಿಕೊಳ್ಳುತ್ತದೆ. ಕಾಂತಕ್ಷೇತ್ರದ ಅಕ್ಷಸಮತೆಯನ್ನು ಕಾಪಾಡಲು ಕಬ್ಬಿಣದ ಸ್ಕ್ರೂಗಳನ್ನು ಉಪಯೋಗಿಸುತ್ತಾರೆ. ಈ ಸ್ಕ್ರೂಗಳ ಸಂಖ್ಯೆ, ಜಾಗ ಮತ್ತು ಗಾತ್ರಗಳನ್ನು ಬೇಕಾದ ಹಾಗೆ ವ್ಯತ್ಯಾಸ ಮಾಡುವುದರಿಂದ ಕಾಂತ ಕ್ಷೇತ್ರದ ಅಕ್ಷಸಮತೆಯನ್ನು ಸ್ಥಾಪಿಸಬಹುದು.




ಚಿತ್ರ 6 ಸ್ಥಿರವಿದ್ಯುತ್ ಸೂಕ್ಷ್ಮದರ್ಶಿಯ ನಕಾಶೆ
1 ತಂತು, 2 ಹೆಚ್ಚು ವಿಭವ ಆಕರದ ಋಣ ಧ್ರುವಕ್ಕೆ, 3 ಆನೋಡ್ ಕಿಂಡಿ, 4 ವಸ್ತು, 5 ವಸ್ತುಕ, 6 ಪ್ರೊಜೆಕ್ಟರ್, 7 ಫ್ಲೂರಸೆಂಟ್ ತೆರೆ, 8 ಗ್ರಿಡ್.




ಚಿತ್ರ 7 ಪ್ರತಿಫಲನ ಸೂಕ್ಷ್ಮದರ್ಶಿಯ ಬಿಂಬೀಕರಣ ಕ್ರಿಯೆಯ ಲಾಕ್ಷಣಿಕ ನಕಾಶೆ
1 ವಸ್ತು, 2 ಕಾಂತವಸ್ತುಮಸೂರ, 3 ಪ್ರತಿಫಲನ ದೂರ.

**ಸ್ಥಿರವಿದ್ಯುತ್ ಸೂಕ್ಷ್ಮದರ್ಶಿ :** ಸ್ಥಿರವಿದ್ಯುತ್ ಸೂಕ್ಷ್ಮದರ್ಶಿ ರಚನೆ ಮತ್ತು ಪ್ರತಿಬಿಂಬೀಕರಣದಲ್ಲಿ ಕಾಂತ ಸೂಕ್ಷ್ಮದರ್ಶಿಯನ್ನೇ ಹೋಲುತ್ತದೆ. ರಕ್ಷಾ ಕವಚದ ವಿಭವ ತಂತುವಿಗೆ ಸಂಬಂಧಪಟ್ಟಂತೆ 200 ವೋಲ್ಟ್ ಋಣಮೌಲ್ಯದಲ್ಲಿರುತ್ತದೆ. ವಸ್ತುಮಸೂರ ಮತ್ತು ಪ್ರೊಜೆಕ್ಟರುಗಳೆರಡೂ ಏಕವಿಭವ ಮಸೂರಗಳು. ಇವುಗಳಲ್ಲಿ ಎಲೆಕ್ಟ್ರೋಡುಗಳು ಪರಸ್ಪರ ಹತ್ತಿರವಿರುವುದರಿಂದ ವಿದ್ಯುತ್‌ಕುಸಿತ ಸಂಭವಿಸುವುದು ಸಾಮಾನ್ಯ. ಇದನ್ನು ತಪ್ಪಿಸಬೇಕಾದರೆ ಎಲೆಕ್ಟ್ರೋಡುಗಳು ಮೊನಚಾದ ಭಾಗಗಳಿಲ್ಲದೆ ಸ್ವಚ್ಛವಾಗಿರಬೇಕು. ಮಸೂರ ಕ್ರೋಮ್-ನಿಕ್ಕಲ್ ಉಕ್ಕಿನದಾಗಿದ್ದರೆ ಸೆಂ. ಮೀ. ಗೆ. 275 kV ವಿಭವಾಂತರವಿದ್ದರೂ ಕುಸಿತ ಸಂಭವಿಸುವುದಿಲ್ಲ. ಅಲ್ಯೂಮಿನಿಯಂ ಮತ್ತು ಹಿತ್ತಾಳೆಯನ್ನು ಉಪಯೋಗಿಸಿದರೆ ಈ ಸಂಖ್ಯೆ ಕ್ರಮವಾಗಿ 163 ಮತ್ತು 110 kV ಗಳಿಗಿಳಿಯುತ್ತದೆ. ವಸ್ತುಮಸೂರಗಳ ನಾಭಿದೂರ 3-5 ಮಿ.ಮೀ. ಇರುವುದು ಸಾಮಾನ್ಯ. ಆನೋಡ್ ಮತ್ತು ಉಳಿದೆರಡು ಮಸೂರಗಳ ಹೊರ ಎಲೆಕ್ಟ್ರೋಡುಗಳ ವಿಭವ ಭೂಮಟ್ಟದಲ್ಲಿರುತ್ತದೆ. ತಂತು ಮತ್ತು ಉಳಿದೆರಡು ಮಧ್ಯ ಎಲೆಕ್ಟ್ರೋಡುಗಳು ಒಂದೇ ಋಣವಿಭವದಲ್ಲಿರುತ್ತವೆ.

ಸ್ಥಿರವಿದ್ಯುತ್ ಸೂಕ್ಷ್ಮದರ್ಶಿಗಳೊಂದಿಗೆ ಕೆಲಸ ಮಾಡುವುದು ಸುಲಭ. ಇಲ್ಲಿ ಒಂದು ವಿಭವವನ್ನು ಸ್ಥಾಪಿಸಿದರೆ ಸಾಕು. ಕಾಂತ ಸೂಕ್ಷ್ಮದರ್ಶಿಯಲ್ಲಾದರೆ ಪ್ರತಿ ಮಸೂರಗಳ ಸುರುಳಿಯಲ್ಲಿ ಪ್ರವಹಿಸುವ ವಿದ್ಯುತ್ತನ್ನು ನಿಯಂತ್ರಿಸಬೇಕು. ಮತ್ತೆ ಸ್ಥಿರವಿದ್ಯುತ್ ಸೂಕ್ಷ್ಮದರ್ಶಿಯಲ್ಲಿ ಪ್ರತಿಬಿಂಬ ತಿರುಗುವುದಿಲ್ಲ.

**ಸ್ಫುರಣ ಸೂಕ್ಷ್ಮದರ್ಶಿ :** ಚಾರಿತ್ರಿಕವಾಗಿ ನೋಡುವುದಾದರೆ ಸ್ಫುರಣ ಸೂಕ್ಷ್ಮದರ್ಶಿಯೇ ಮೊದಲು ನಿರ್ಮಾಣವಾದ ಎಲೆಕ್ಟ್ರಾನ್ ಸೂಕ್ಷ್ಮದರ್ಶಿ. ಬ್ರೂಕೆ ಮತ್ತು ಜೊಹಾನ್‌ಸನ್ ಅವರು ಕಾದ ಕ್ಯಾಥೋಡಿನ ಛಾಯಾಚಿತ್ರವನ್ನು ತೆಗೆದುದು ಇಂಥ ಸೂಕ್ಷ್ಮದರ್ಶಿಯ ನೆರವಿನಿಂದಲೇ. ಈ ಸೂಕ್ಷ್ಮದರ್ಶಿಯ ವಿಘಟನ ಸಾಮರ್ಥ್ಯ ಕಡಿಮೆ. ಆದರೂ ಇವುಗಳ ಉಪಯೋಗವನ್ನು ಅಲ್ಲಗಳೆಯುವಂತಿಲ್ಲ. ಪ್ರತಿಬಿಂಬವನ್ನು ತೆಗೆಯಬೇಕಾದ ಪ್ರದೇಶವನ್ನು ಎಲೆಕ್ಟ್ರಾನ್ ಘಟ್ಟಣೆಯಿಂದ ಕಾಯಿಸುತ್ತಾರೆ. 2000° ಸೆಂ. ಗಿಂತ ಹೆಚ್ಚು ಉಷ್ಣತೆಯವರೆಗೂ ಹೋಗಬಹುದಾದ ಸೂಕ್ಷ್ಮದರ್ಶಿಗಳಿವೆ.

**ಪ್ರತಿಫಲನ ಸೂಕ್ಷ್ಮದರ್ಶಿ :** ದಪ್ಪವಾದ ಮತ್ತು ಅಪಾರದರ್ಶಕ ವಸ್ತುಗಳ ಸೂಕ್ಷ್ಮರಚನೆಯನ್ನು ಪರೀಕ್ಷಿಸಲು ಪ್ರತಿಫಲನ ಸೂಕ್ಷ್ಮದರ್ಶಿಯನ್ನು ಉಪಯೋಗಿಸುತ್ತಾರೆ. ಚಿತ್ರ 7ರಲ್ಲಿ ಪ್ರತಿಫಲನ ಸೂಕ್ಷ್ಮದರ್ಶಿಯ ಬಿಂಬೀಕರಣ ಕ್ರಿಯೆಯ ನಿರೂಪಣೆಯಿದೆ. ಎಲೆಕ್ಟ್ರಾನುಗಳು ಪತನಗೊಳ್ಳುವ ಓರೆಕೋನ ಕಡಿಮೆಯಾಗಿದ್ದರೆ ಒಳ್ಳೆಯ ಸೂಕ್ಷ್ಮಚಿತ್ರಣ ದೊರೆಯುತ್ತದೆ. ಲೋಹಗಳ ಮೇಲ್ಮೈ ಪರೀಕ್ಷೆಗೆ ಇದು ಉಪಯುಕ್ತವಾದ ಉಪಕರಣ. ಅಲೋಹಗಳ ಪರೀಕ್ಷೆಗೆ ಇದು ಉಪಯುಕ್ತವಾದುದಲ್ಲ. ಪಡಿಯಚ್ಚಿನ ವಿಧಾನ (ರೆಪ್ಲಿಕ ಮೆಥೆಡ್) ರೂಢಿಗೆ ಬಂದ ಮೇಲೆ ಈ ಸೂಕ್ಷ್ಮದರ್ಶಿಯ ಬಳಕೆ ತಗ್ಗಿದೆ.

**ಅಯಾನು ಸೂಕ್ಷ್ಮದರ್ಶಿಗಳು :** ಸ್ಥಿರವಿದ್ಯುತ್ ಸೂಕ್ಷ್ಮದರ್ಶಿಯಲ್ಲಿ ವಿಭವಗಳ ಚಿಹ್ನೆಯನ್ನು ಬದಲಾಯಿಸಿದರೆ ಅಯಾನುಗಳನ್ನೇ ವಸ್ತುಗಳ ಸೂಕ್ಷ್ಮರಚನೆಯ ಪರೀಕ್ಷೆಗೆ ಉಪಯೋಗಿಸಬಹುದು. ಅಯಾನುಗಳ ಡಿಬ್ರಾಯಿ ತರಂಗಾಂತರ ಬಹಳಷ್ಟು ಕಡಿಮೆಯಾಗಬಲ್ಲದು. ಆದ್ದರಿಂದ ಅಯಾನು ಸೂಕ್ಷ್ಮದರ್ಶಿಯ ವಿಘಟನಸಾಮರ್ಥ್ಯ 1Åಗಿಂತ ಕಡಿಮೆಯಾಗಬಹುದು. ಚಿತ್ರ 8ರಲ್ಲಿ ಲಿಥಿಯಂ ಅಯಾನು ಸೂಕ್ಷ್ಮದರ್ಶಿಯಲ್ಲಿ ತೆಗೆದ ZnO ಸ್ಫಟಿಕಗಳ ಛಾಯಾಚಿತ್ರವನ್ನು ನೋಡ



ಚಿತ್ರ 8 ಲಿಥಿಯಂ ಅಯಾನು ZnO ಸ್ಫಟಿಕಗಳ ಛಾಯಾಚಿತ್ರ

ಬಹುದು. ಇಲ್ಲಿ ಸಾಧಿಸಿರುವ ವಿಘಟನೆ 500Å. ಅಯಾನು ಸೂಕ್ಷ್ಮದರ್ಶಿಯ ವಿಘಟನಸಾಮರ್ಥ್ಯ ಸೈದ್ಧಾಂತಿಕವಾಗಿ ಬಹಳ ಆಶಾದಾಯಕವಾಗಿದ್ದರೂ ವಾಸ್ತವ ರಚನೆ ಆ ಮಿತಿಯನ್ನು ಮುಟ್ಟಿಲ್ಲ. ಪ್ರೋಟಾನುಗಳ ಸೂಕ್ಷ್ಮದರ್ಶಿಯ ವಾಸ್ತವ ವಿಘಟನೆ 300Åಗಳನ್ನು ದಾಟಿಲ್ಲ. ಭಾರಪ್ರೋಟಾನುಗಳು ಬೀಜಕ್ರಿಯೆ (ನ್ಯೂಕ್ಲಿಯರ್ ಆಕ್ಷನ್) ಯನ್ನು ಉಂಟುಮಾಡುವುದೂ ಅವುಗಳ ಉಪಯೋಗಕ್ಕೆ ಅಡ್ಡಿಯಾಗುತ್ತದೆ.

**ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ಉಪಯೋಗದಲ್ಲಿ ಬಳಸುವ ತಂತ್ರಗಳು :** ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ಉಪಯೋಗದ ಬಗ್ಗೆ ಕೆಲವು ಕಾಲ ತೀವ್ರತರವಾದ ಸಂಶಯಗಳೇ ಇದ್ದುವು. ನಿರ್ವಾತ ಜಲಶೋಷಣೆ (ಡೆಸಿಕೇಶನ್) ಮತ್ತು ಎಲೆಕ್ಟ್ರಾನ್ ಘರ್ಷಣೆಯಿಂದ ಸಂಭವಿಸಬಹುದಾದ ತೊಂದರೆಗಳ ಕಲ್ಪನೆಯಲ್ಲಿ ಜೀವಶಾಸ್ತ್ರ ವಿಜ್ಞಾನಿಗಳಿಗೆ ಮತ್ತು ಪ್ರತಿಫಲನಗೊಂಡ ಎಲೆಕ್ಟ್ರಾನುಗಳಿಂದ ಪ್ರತಿಬಿಂಬಗಳನ್ನು ಮೂಡಿಸುವುದರಲ್ಲಿರುವ ತೊಂದರೆಗಳಿಂದ ಭೌತವಿಜ್ಞಾನಿಗಳಿಗೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಿಂದ ಯಾವ ಪ್ರಯೋಜನವೂ ಆಗದಿರಬಹುದೆಂಬ ನಿರಾಶೆಯಿತ್ತು. ಪಡಿಯಚ್ಚು ವಿಧಾನ ಘನವಸ್ತುಗಳ ಮೇಲ್ಮೈ ಪರೀಕ್ಷೆಗೆ ಸಹಕಾರಿಯಾಗಿರುವುದರಿಂದ ಪ್ರತಿಫಲನ ಸೂಕ್ಷ್ಮದರ್ಶಿಯ ಸಮಸ್ಯೆಗಳು ಎದುರಾಗಲೇ ಇಲ್ಲ. ಕಡಿಮೆ ಚದರಿಕೆ ಸಾಮರ್ಥ್ಯವಿರುವ ವಸ್ತುಗಳ ವಿಭೇದದ ಮಿತಿಯನ್ನು ನೆರಳು ಎರಕ (ಶ್ಯಾಡೊ ಕ್ಯಾಸ್ಟಿಂಗ್) ಮತ್ತು ಅಭಿರಂಜನ (ಸ್ಟೇನಿಂಗ್) ತಂತ್ರಗಳು ನಿವಾರಿಸಿವೆ. ಪಡಿಯಚ್ಚು ವಿಧಾನ ನೀರಿರುವ ವಸ್ತುಗಳ ಸೂಕ್ಷ್ಮರಚನೆಯ ಪರೀಕ್ಷೆಗೂ ಸಹಕಾರಿಯಾಗುತ್ತದೆ. $\mu/20$ರಷ್ಟು ತೆಳುವಾದ ಪೊರೆಗಳನ್ನು ಕತ್ತರಿಸಿ ತೆಗೆಯುವುದು ಸಾಧ್ಯವಿದೆಯಾಗಿ ಈಗ ಹಿಂದಿನ ಕಷ್ಟಗಳಿಲ್ಲ.

ನಿರ್ವಾತ ಬಾಷ್ಪೀಕರಣ (ವ್ಯಾಕೂಂ ಎವಾಪೊರೇಷನ್) : ಈ ಕ್ರಿಯೆಗೆ ಉಪಯೋಗಿಸುವ ಉಪಕರಣದ ಚಿತ್ರ 9ರಲ್ಲಿ ತೋರಿಸಿದೆ. ವಸ್ತುಗಳನ್ನು ನಿರ್ವಾತದಲ್ಲಿ ಬಾಷ್ಪೀಕರಿಸುವ ಸಂದರ್ಭಗಳು ಅನೇಕಸಾರಿ ಬಂದೊದಗುತ್ತವೆ.




ಚಿತ್ರ 9 ವಸ್ತುಗಳನ್ನು ನಿರ್ವಾತದಲ್ಲಿ ಬಾಷ್ಪೀಕರಿಸಲು ಉಪಯೋಗಿಸುವ ಸಾಧನ.
1 ಗ್ಯಾಸ್ಕೆಟ್ 2 ಅಡಿತಟ್ಟೆ 3 ರೇಚಕಗಳಿಗೆ 4 ಗಂಟಾಪಾತ್ರೆ

ನಿರ್ವಾತವನ್ನುಂಟುಮಾಡಲು ಸಾಮಾನ್ಯವಾಗಿ ರೋಟರಿ ಪಂಪಿನಿಂದ ಬೆಂಬಲಗೊಂಡ ವಿಸರಣ ಪಂಪನ್ನು ಉಪಯೋಗಿಸುತ್ತಾರೆ. ಗಂಟಾಪಾತ್ರೆಯೊಳಗಿನ ಒತ್ತಡ ಬಾಷ್ಪೀಕರಣಗೊಂಡ ಪರಮಾಣುಗಳ ಸರಾಸರಿ ಸ್ವಚ್ಛಂದ ದಾರಿ (ಮೀನ್ ಫ್ರೀ ಪಾತ್) ಅವುಗಳು ಹಾಯಬೇಕಾದ ದೂರಕ್ಕಿಂತ ಹೆಚ್ಚಾಗಲು ಅನುವಾಗುವಂತಿರಬೇಕು. $10^{-4}$ ಮಿ.ಮೀ. ಪಾದರಸ ನಿರ್ವಾತವಿದ್ದರೆ ಇದು ಸಾಧ್ಯ. ಚಿನ್ನ, ಪೆಲೇಡಿಯಂ ಮುಂತಾದ ಧಾತುಗಳ ತುಣುಕುಗಳನ್ನು ಶಂಖದ ಆಕಾರದಲ್ಲಿರುವ ಟಂಗ್‌ಸ್ಟನ್ ಸುರುಳಿಯಲ್ಲಿಟ್ಟು ಕಾಯಿಸಿ ಬಾಷ್ಪೀಕರಣಗೊಳಿಸಬಹುದು. ಪ್ಲಾಟಿನಂ ಟಂಗ್‌ಸ್ಟನ್ನಿನೊಂದಿಗೆ ಬೆರೆತು ಅದನ್ನು ಕತ್ತರಿಸುತ್ತದೆ. ಆದ್ದರಿಂದ ಪ್ಲಾಟಿನಮನ್ನು ಬಾಷ್ಪೀಕರಿಸುವಾಗ ತೀರ ತೆಳುವಾದ ಅದರ ತಂತಿಯನ್ನು ಟಂಗ್‌ಸ್ಟನ್ ತಂತಿಯಮೇಲೆ ಸುತ್ತಿ ಕಾಯಿಸಬೇಕಾಗುತ್ತದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ಉಪಯೋಗಕ್ಕಾಗಿ ಹೀಗೆ ಬಾಷ್ಪೀಕರಣ ಮಾಡಬೇಕಾದ ವಸ್ತುಗಳ ಪ್ರಮಾಣ 5 ಮಿ.ಗ್ರಾಂ ಗಿಂತ ಹೆಚ್ಚಾಗಿರುವುದಿಲ್ಲ.

ಬಾಷ್ಪೀಕರಣಗೊಂಡ ಪರಮಾಣುಗಳು ನೇರವಾಗಿ ಚಲಿಸುತ್ತ ಅವಕ್ಕೆ ಅಡ್ಡವಾದ ಪ್ರದೇಶದ ಮೇಲೆ ಬಿದ್ದು ತೆಳುವಾದ ಪೊರೆಗಳನ್ನು ಸೃಷ್ಟಿಸುತ್ತವೆ. ಇಂಥ ಪೊರೆಗಳು ಗಂಟಾಪಾತ್ರೆಯ ಒಳಮೈಮೇಲೂ ಬೆಳೆಯುತ್ತದೆ. ಗಂಟಾಪಾತ್ರೆಯನ್ನು ತೆಗೆದಮೇಲೆ ಈ ಪೊರೆಗಳು ಒಳಮೈನಿಂದ ಬೇರ್ಪಟ್ಟು ಗಾಳಿಯಲ್ಲಿ ತೇಲುತ್ತವೆ. ಅವು ಶ್ವಾಸಕೋಶಗಳಿಗೆ ಹೋಗಿ ಅಪಾಯವನ್ನು ಉಂಟುಮಾಡುವ ಸಾಧ್ಯತೆಯಿರುವುದ

ರಿಂದ ನಿರ್ವಾತ ಬಾಷ್ಪೀಕರಣದಲ್ಲಿ ತೊಡಗಿರುವ ಜನ ಎಚ್ಚರಿಕೆ ವಹಿಸುವುದು ತೀರ ಆವಶ್ಯಕ.



ಚಿತ್ರ 10 ಜಾಲಂದ್ರ

**ಮಾದರಿಯ ಆಧಾರಗಳು :** ಚಿತ್ರ 10ರಲ್ಲಿ ವಿದ್ಯುತ್ ಗಿಲಾವಿನ ನಿಕ್ಕಲ್ ಅಥವಾ ತಾಮ್ರದ ಜಾಲಂದ್ರವನ್ನು ನೋಡಬಹುದು. 3%ರಷ್ಟು ಕಲೋಡಿಯನ್ ಇರುವ ಅಮೈಲ್ ಅಸಿಟೇಟನ್ನು ನೀರಿನ ಮೇಲೆ ಹಾಕಿದರೆ ಅದು ತೆಳುವಾದ ಪೊರೆಯಂತೆ ಹರಡಿಕೊಳ್ಳುತ್ತದೆ. ಈ ಪೊರೆಯನ್ನು ಜಾಲಂದ್ರಕ್ಕೆ ಹೊದಿಸಿ ಅದನ್ನು ಮಾದರಿಯ ಮೌಂಟ್ ಆಗಿ ಉಪಯೋಗಿಸುತ್ತಾರೆ. ಒಮ್ಮೊಮ್ಮೆ ದೃಢವಾದ ಪೊರೆಗಳು ಬೇಕಾಗುತ್ತವೆ. ಸಿಲಿಕಾನ್ ಆಕ್ಸೈಡ್ ಅಥವಾ ಇಂಗಾಲವನ್ನು ನಿರ್ವಾತ ಗಂಟಾಪಾತ್ರೆಯಲ್ಲಿ ಬಾಷ್ಪೀಕರಿಸಿ ಅದು ಕಲೋಡಿಯನ್ ಪೊರೆಯಮೇಲೆ ಶೇಖರವಾಗುವಂತೆ ಮಾಡುವುದರಿಂದ ದೃಢವಾದ ಪೊರೆಗಳನ್ನು ಸಿದ್ಧಪಡಿಸಿಕೊಳ್ಳಬಹುದು. ಕಲೋಡಿಯನ್ ಪೊರೆ ಹಾಗೇ ಇದ್ದರೂ ಬಾಧಕವಿಲ್ಲ. ಅದು ಬೇಕಿಲ್ಲವೆಂದಾಗ ಜಾಲಂದ್ರವನ್ನು ಅಸಿಟೋನಿನಲ್ಲಿ ಅದ್ದಿ ಅದನ್ನು ಕರಗಿಸಬಹುದು.

**ಸಾಮಾನ್ಯ ಮಾದರಿಗಳ ತಯಾರಿಕೆ :** ಕಣಗಳ ರೂಪದಲ್ಲಿರುವ ವಸ್ತುಗಳನ್ನು ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ನೋಡಬೇಕಾದರೆ ಅವನ್ನು ನೀರಿನಲ್ಲಿ ಕದಡಬೇಕು. ಅನಂತರ ಒಂದು ತೊಟ್ಟು ಈ ಕಲಾಯಿಡಲ್ ದ್ರಾವಣವನ್ನು ಪೊರೆ ಜಾಲಂದ್ರದ ಮೇಲೆ ಹರಡಿ ಒದಗಿಸಬೇಕು. ಒಮ್ಮೊಮ್ಮೆ ಮಾದರಿಗಳನ್ನು ರಾಸಾಯನಿಕ ಶುದ್ಧಿಗೂ ಒಳಪಡಿಸಬೇಕಾಗುತ್ತದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ಉಪಯೋಗಿಸಲು ಯೋಗ್ಯವಾದ ಮಾದರಿಯನ್ನು ಒಂದೇ ಪ್ರಯತ್ನದಲ್ಲಿ ಸಿದ್ಧಪಡಿಸುವುದು ಕಷ್ಟ.

ಮೆಗ್ನೀಸಿಯಂ, ಕ್ಯಾಡ್ಮಿಯಂ, ಸತು ಮತ್ತು ಮಾಲಿಬ್ಡಿನಂ ಧಾತುಗಳ ಆಕ್ಸೈಡ್ ಹೊಗೆಯನ್ನು ಪೊರೆಯಿಲ್ಲದ ಜಾಲಂದ್ರದ ಮೇಲೆ ಹಿಡಿಯಬಹುದು. ಕಣಗಳು ತಂತಿಗೆ ಅಂಟಿಕೊಂಡು ಹೊರಚಾಚಿರುತ್ತವೆ. ಇವನ್ನು ನೇರವಾಗಿ ಛಾಯಾಚಿತ್ರೀಕರಿಸಬಹುದು.

ಲೋಹದ ತೆಳುವಾದ ಪೊರೆಗಳನ್ನು ತಯಾರಿಸಲು ರಾಸಾಯನಿಕ ಕಡೆತ (ಕೆಮಿಕಲ್ ಎಚ್ಚಿಂಗ್) ಮತ್ತು ವಿದ್ಯುದ್ವಿಭಜನ ಮಾರ್ಗಗಳನ್ನು ಆಶ್ರಯಿಸಬೇಕಾಗುತ್ತದೆ.

**ನೆರಳು ಎರಕ (ಶ್ಯಾಡೋ ಕ್ಯಾಸ್ಟಿಂಗ್) :** ಇದನ್ನು ಮಾಡುವ ವಿಧಾನವನ್ನು ಚಿತ್ರ 11ರಲ್ಲಿ ನೋಡಬಹುದು. ವಿದ್ಯುತ್ ಪ್ರವಾಹದಿಂದ ಕಾದ ತಂತಿಯ ಸುರುಳಿಯಲ್ಲಿರುವ ಲೋಹ ಬಾಷ್ಪೀಕರಣಗೊಂಡು ದೂರದಲ್ಲಿರುವ ಮಾದರಿಯ ಮೇಲೆ ಬೀಳುತ್ತದೆ. ಚಿತ್ರದ ಜ್ಯಾಮಿತಿಯನ್ನನುಸರಿಸಿ

$$l = \frac{h}{\tan\theta} \qquad \ldots \quad (10)$$

$$t = \frac{M \sin\theta}{4\pi R^2 \rho} \qquad \ldots \quad (11)$$

$$t_1 = \frac{M \cos\theta}{4\pi R^2 \rho} \qquad \ldots \quad (12)$$




ಚಿತ್ರ 11 ನೆರಳು ಏಕೀಕರಣ ವಿಧಾನ

ಎಂದು ಬರೆಯಬಹುದು. ಇಲ್ಲಿ $M$ ಬಾಷ್ಪೀಕರಣಗೊಂಡ ಲೋಹದ ಒಟ್ಟು ಜಡಮಾನ ಮತ್ತು $\rho$ ಅದರ ಸಾಂದ್ರತೆ. ಈ ಸಮೀಕರಣಗಳನ್ನು ನೇರವಾಗಿ ಲೆಕ್ಕಾಚಾರಕ್ಕಾಗಿ ಉಪಯೋಗಿಸುವುದು ಸರಿಯಲ್ಲ. ಸಮಯಕ್ಕೆ ತಕ್ಕಂಥ ಮಾರ್ಪಾಟುಗಳನ್ನು ಮಾಡಿಕೊಳ್ಳಬೇಕಾಗುತ್ತದೆ. ಉದಾಹರಣೆಗೆ, ಸಮೀಕರಣ (2)ರಿಂದ ಬಲಭಾಗವನ್ನು ವಿಲಿಯಂ ಮತ್ತು ಬಾಕಸ್ ಅವರಂತೆ $\frac{3}{4}$ ರಿಂದ ಗುಣಿಸಬೇಕಾಗುತ್ತದೆ.

ನೆರಳು ಎರಕ ಮಾದರಿಗಳ ಧನಮುದ್ರಿಕೆಗಳಲ್ಲಿ ನೆರಳು ಬೆಳಕಾಗಿಯೂ ಲೋಹವಿರುವ ಜಾಗ ಕಪ್ಪಾಗಿಯೂ ಕಾಣುತ್ತವೆ. ಇದು ಸಾಮಾನ್ಯವಾದ ಸ್ಥಿತಿಗೆ ವ್ಯತಿರಿಕ್ತವಾದುದು. ಆದ್ದರಿಂದ ಇಂಥ ಸೂಕ್ಷ್ಮ ಚಿತ್ರಣಗಳನ್ನು ಮಾಧ್ಯಮಿಕ ಧನ ಪಾರದರ್ಶಗಳಿಂದ ಋಣ ಮುದ್ರಿಕೆಗಳಂತೆ ಅಚ್ಚುಹಾಕುತ್ತಾರೆ. ಚಿತ್ರ 12 (A) ಮತ್ತು (B)




ಚಿತ್ರ 12 ಧನಮುದ್ರಿಕೆ ಮತ್ತು ಋಣಮುದ್ರಿಕೆಗಳನ್ನು ಕ್ರಮವಾಗಿ A ಮತ್ತು B ಗಳಲ್ಲಿ ತೋರಿಸಿದೆ (ಕ್ರೋಮಿಯಂ ನೆರಳು ಎರಕ)

ಗಳಲ್ಲಿ ಮೊಟ್ಟೆಯ ಆಲ್ಬುಮಿನ್ ಲೇಪನಗೊಂಡ ಕಲೋಡಿಯನ್ ಪೊರೆಯ ಮೇಲಿರುವ ಇಂಗಾಲದ ಕಣಗಳ ಧನ ಮತ್ತು ಋಣಮುದ್ರಿಕೆಗಳನ್ನು ಕಾಣಬಹುದು. ನೆರಳಿನ ಹೊರಗಿರುವ ಜಾಗದಲ್ಲಿ ಆಲ್ಬುಮಿನ್ ಅಣುಗಳ ಗುಂಪುಗಳನ್ನು ಗುರುತಿಸಬಹುದು.

ನೆರಳು ಎರಕಕ್ಕೆ ಸಾಮಾನ್ಯವಾಗಿ ಕ್ರೋಮಿಯಮ್, ನಿಕ್ಕಲ್, ಜರ್ಮೇನಿಯಂ ಮ್ಯಾಂಗನೀಸ್, ಪೆಲೇಡಿಯಂ, ಪ್ಲಾಟಿನಂ ಮತ್ತು ಯುರೇನಿಯಮ್ ಲೋಹಗಳನ್ನು ಉಪಯೋಗಿಸುತ್ತಾರೆ.

**ಮೇಲ್ಮೈ ಪಡಿಯಚ್ಚುಗಳು :** ಪ್ರತಿಫಲನ ಮತ್ತು ಪ್ರೇಷಕ ತಂತ್ರದಿಂದ ಪರೀಕ್ಷಿಸಲು ಸಾಧ್ಯವಿಲ್ಲದ ದಪ್ಪ ಮಾದರಿಗಳ ಪಡಿಯಚ್ಚಿನ ಸೂಕ್ಷ್ಮಚಿತ್ರಣ ತೆಗೆಯುವುದು ಸುಲಭ. ನಿರ್ವಾತದಲ್ಲಿ ನಿಜಸ್ಥಿತಿಯನ್ನು ಕಳೆದುಕೊಳ್ಳುವ ವಸ್ತುಗಳ ಪೃಥಕ್ಕರಣಕ್ಕೂ ಈ ವಿಧಾನ ಸಹಾಯಕವಾಗಿದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳು ಉಪಯೋಗಕ್ಕೆ ಬಂದ ಮೊದಲ ದಶಕದಲ್ಲಿ ಲೋಹಗಳ ಕಡೆದ (ಎಚ್ಡ್) ಮೇಲ್ಮೈ ಪರೀಕ್ಷೆಗೆ ಇದು ಅತಿ ಮುಖ್ಯವಾದ ವಿಧಾನವಾಗಿತ್ತು.

ಋಣ ಪಡಿಯಚ್ಚುಗಳು (ನೆಗೆಟಿವ್ ರೆಪ್ಲಿಕಾಸ್) : ಋಣಪಡಿಯಚ್ಚುಗಳಲ್ಲಿ ಮಾದರಿಯ ಉಬ್ಬು ತಗ್ಗುಗಳಿಗೆ ಬದಲಾಗಿ ತಗ್ಗು ಉಬ್ಬುಗಳಿರುತ್ತವೆ. ಮಂದವಾದ ಫಾರ್ಮ್ವಾರ್ ಅಥವಾ ಕಲೋಡಿಯನ್ ದ್ರಾವಣವನ್ನು ಮಾದರಿಗೆ ಸವರಿ







ಚಿತ್ರ 13 ಮೇಲಿನದು ಋಣಪಡಿಯಚ್ಚು ತಂತ್ರ, ಕೆಳಗಿನದು ಧನಪಡಿಯಚ್ಚು ತಂತ್ರ

ಅದು ಒಣಗಿದ ಮೇಲೆ ಪೊರೆಯನ್ನು ಎಬ್ಬಿದರೆ ಋಣ ಪಡಿಯಚ್ಚು ಸಿದ್ಧವಾಗುತ್ತದೆ. ಈ ಕೆಲಸದ ನಿರೂಪಣೆಯನ್ನು ಚಿತ್ರ 13ರಲ್ಲಿ ನೋಡಬಹುದು. ಋಣಪಡಿಯಚ್ಚನ್ನು ಜಾಲಂಧ್ರದ ಮೇಲಿಟ್ಟು ಸೂಕ್ಷ್ಮಚಿತ್ರಣ ತೆಗೆಯುತ್ತಾರೆ.

ಧನಪಡಿಯಚ್ಚು : ಧನಪಡಿಯಚ್ಚು ವಸ್ತುವಿನ ಮೇಲ್ಮೈನಂತೆಯೇ ಇರುತ್ತದೆ. ಮೊದಲು ಋಣಪಡಿಯಚ್ಚನ್ನು ತೆಗೆದು ಅನಂತರ ಅದರಿಂದ ಧನಪಡಿಯಚ್ಚನ್ನು ಪಡೆಯುತ್ತಾರೆ. ಈ ತಂತ್ರದ ನಿರೂಪಣೆಯನ್ನು ಚಿತ್ರ 13ರಲ್ಲಿ ಕಾಣಬಹುದು. ಋಣಪಡಿಯಚ್ಚನ್ನು ಕರಗಿಸಿ ಧನಪಡಿಯಚ್ಚನ್ನು ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ಉಪಯೋಗಿಸಬಹುದು.

ಬಾಷ್ಪೀಕೃತ ಪಡಿಯಚ್ಚುಗಳು : ತೆಳುವಾದ ಪಾಲಿಥೀನ್ ಹಾಳೆಯನ್ನು ಕಾಯಿಸಿ ಮಾದರಿಯ ಮೇಲೆ ಮೋಲ್ಡ್ ಮಾಡಿ ಋಣಪಡಿಯಚ್ಚನ್ನು ಪಡೆಯಬೇಕು. ಅದರ ಮೇಲೆ ನಿರ್ವಾತ ಗಂಟಾಪಾತ್ರೆಯಲ್ಲಿ ಸಿಲಿಕವನ್ನು ಬಾಷ್ಪೀಕರಿಸಿ ಹಾಯಿಸಿದರೆ ಧನ ಪಡಿಯಚ್ಚು ದೊರೆಯುತ್ತದೆ. ಈ ವಿಧಾನ ಲೋಹ, ಹಲ್ಲು ಮತ್ತು ತಂತುಗಳ ಪರೀಕ್ಷಣಕ್ಕೆ ಬಲು ಸಹಕಾರಿಯಾಗಿದೆ.

ಅಭಿರಂಜನತಂತ್ರ (ಸ್ಟೇನಿಂಗ್ ಟೆಕ್ನೀಕ್) : ಚದರಿಕೆ ಸಾಮರ್ಥ್ಯ ಕಡಿಮೆ ಇರುವ ಕಡಿಮೆ ತೂಕದ ಮತ್ತು ಪರಮಾಣುಗಳಿಂದ ರಚಿತವಾದ ವಸ್ತುಗಳ ಸೂಕ್ಷ್ಮಚಿತ್ರಣದಲ್ಲಿ ವಿಭೇದವನ್ನು (ಕಾಂಟ್ರಾಸ್ಟ್) ಹೆಚ್ಚಿಸಲು ಕೆಲವು ರಾಸಾಯನಿಕ ವಸ್ತುಗಳನ್ನು ಉಪಯೋಗಿಸುತ್ತಾರೆ. ಇವುಗಳ ಚದರಿಕೆ ಸಾಮರ್ಥ್ಯ ಹೆಚ್ಚು. ಸಾಮಾನ್ಯವಾಗಿ ಇವು ಭಾರವಾದ ಲೋಹಗಳ ಸಂಯುಕ್ತಲವಣಗಳು. ಇವನ್ನು ಎಲೆಕ್ಟ್ರಾನ್ ಅಭಿರಂಜಕಗಳೆಂದು ಕರೆಯುತ್ತಾರೆ. ಅಭಿರಂಜಕಗಳಲ್ಲಿ ಎರಡು ವಿಧ. ಧನಾಭಿರಂಜಕ ಮತ್ತು ಋಣಾಭಿರಂಜಕ.

ಧನಾಭಿರಂಜಕ : ಧನಾಭಿರಂಜಕಗಳು ರಾಸಾಯನಿಕವಾಗಿ ಅಂಟಿಕೊಳ್ಳುತ್ತವೆ. ವಿಶೇಷವಾಗಿ ಉಪಯೋಗದಲ್ಲಿರುವ ಧನಾಭಿರಂಜಕ ಫಾಸ್ಫೊಟಂಗ್‌ಸ್ಟಿಕ್ ಆಮ್ಲ ಮತ್ತು ಅದರ ಲವಣಗಳು. ಪ್ರೋಟೀನ್ ಪ್ಯಾರಮಿಯೋಸಿನ್ ಎಕ್ಸ್‌ಕಿರಣಗಳ ಸಮನ ನಮೂನೆಯನ್ನು ಅರ್ಥಮಾಡಿಕೊಳ್ಳಲು ಅದರ ಎಲೆಕ್ಟ್ರಾನ್ ಸೂಕ್ಷ್ಮಚಿತ್ರಣ ತೆಗೆದಾಗ ಯಾವ ಆಂತರಿಕ ರಚನೆಯೂ ಕಾಣಲಿಲ್ಲ. ಆದರೆ ಫಾಸ್ಫೊಟಂಗ್‌ಸ್ಟಿಕ್ ಆಮ್ಲ ಅಭಿರಂಜಕವನ್ನು ಉಪಯೋಗಿಸಿದ ಮೇಲೆ ಆಂತರಿಕರಚನೆ ಸ್ಪಷ್ಟವಾಗಿ




ಚಿತ್ರ 14 A ಫಾಸ್ಫೊಟಂಗ್‌ಸ್ಟಿಕ್ ಆಮ್ಲದಿಂದ ಅಭಿರಂಜಕಗೊಂಡ ಪ್ಯಾರಮಿಯೊಸಿನ್ ತಂತು. B ಇದರ ಜ್ಯಾಮಿತಿ.

ಕಾಣಿಸಿತು. ಇದನ್ನು ಚಿತ್ರ 14ರಲ್ಲಿ ನೋಡಬಹುದು. ಯುರಾನಿಲ್ ಅಸಿಟೇಟ್, ನ್ಯೂಕ್ಲಿಯಿಕ್ ಆಮ್ಲ, ಆಸ್ಮಿಯಮ್ ಟೆಟ್ರಾಕ್ಸೈಡ್ ಮತ್ತು ಪ್ಲಾಟಿನಮ್ ಟ್ರೈಕ್ಲೋರೈಡುಗಳು ($PtCl_3$) ಬೇರೆ ಮುಖ್ಯ ಧನಾಭಿರಂಜಕಗಳು.

ಋಣಾಭಿರಂಜಕ : ಋಣಾಭಿರಂಜಕಗಳು ರಾಸಾಯನಿಕ ಕ್ರಿಯೆಯನ್ನುಂಟು ಮಾಡುವುದಿಲ್ಲ. ಅವು ವಸ್ತುಕಣಗಳ ಸಂದುಗಳಲ್ಲಿ ಸೇರಿ ಹೊರಮೈ ರೇಖೆ ಚೆನ್ನಾಗಿ ಕಾಣುವಂತೆ ಮಾಡುತ್ತವೆ. ಥ್ಯಾಲಿಯಂ ಕಾರ್ಬೋನೇಟ್, ಕ್ಯಾಡ್ಮಿಯಂ, ಬೆಳ್ಳಿಯ ನೈಟ್ರೇಟ್ ಮತ್ತು ಸೋಡಿಯಂ ಟಂಗ್‌ಸ್ಟೇಟ್ ಮುಖ್ಯವಾದ ಋಣಾಭಿರಂಜಕಗಳು.

ಮಾದರಿ ಮತ್ತು ಅಭಿರಂಜಕಗಳು ಎಲೆಕ್ಟ್ರಾನುಗಳನ್ನು ಚದರಿಸಲು ಕ್ರಮವಾಗಿ ಕಡಿಮೆ ಮತ್ತು ಹೆಚ್ಚು ಸಾಮರ್ಥ್ಯವನ್ನು ಹೊಂದಿರುವುದರಿಂದ ಛಾಯಾಚಿತ್ರದಲ್ಲಿ ವಿಭೇದ ಮೂಡುತ್ತದೆ.

**ಪ್ರತಿಬಿಂಬೀಕರಣ :** ದೃಕ್ ಸೂಕ್ಷ್ಮದರ್ಶಿಯ ಪ್ರತಿಬಿಂಬದಲ್ಲಿ ಉಂಟಾಗುವ ವಿಭೇದಕ್ಕೆ ಕಾರಣ ಬೆಳಕು ಮಾದರಿಯ ಮೂಲಕ ಹಾಯುವಾಗ ಸಂಭವಿಸುವ ಹೀರಿಕೆ. ಹೆಚ್ಚು ಸಾಂದ್ರತೆ ಇರುವಲ್ಲಿ ಹೀರಿಕೆ ಹೆಚ್ಚು ; ಆ ಭಾಗ ಛಾಯಾಚಿತ್ರದಲ್ಲಿ ಕಪ್ಪಾಗಿ ಕಾಣುತ್ತದೆ. ಕಡಿಮೆ ಸಾಂದ್ರತೆ ಇರುವಲ್ಲಿ ಹೀರಿಕೆ ಕಡಿಮೆ : ಅಂಥ ಭಾಗ ಛಾಯಾಚಿತ್ರದಲ್ಲಿ ಬಿಳುಪಾಗಿ ಕಾಣುತ್ತದೆ. ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ಪ್ರತಿಬಿಂಬದಲ್ಲಿ ಉಂಟಾಗುವ ವಿಭೇದಕ್ಕೆ ಕಾರಣ ಎಲೆಕ್ಟ್ರಾನುಗಳು ಮಾದರಿಯ ಮೂಲಕ ಹಾಯುವಾಗ ಸಂಭವಿಸುವ ಚದರಿಕೆ. ಹೆಚ್ಚು ಸಾಂದ್ರತೆ ಇರುವಲ್ಲಿ ಎಲೆಕ್ಟ್ರಾನುಗಳ ಚದರಿಕೆ ಹೆಚ್ಚು ; ಆ ಭಾಗ ಛಾಯಾಚಿತ್ರದಲ್ಲಿ ಕಪ್ಪಾಗಿ ಕಾಣುತ್ತದೆ. ಕಡಿಮೆ ಸಾಂದ್ರತೆ ಇರುವಲ್ಲಿ ಎಲೆಕ್ಟ್ರಾನುಗಳ ಚದರಿಕೆ ಕಡಿಮೆ; ಅಂಥ ಭಾಗ ಛಾಯಾಚಿತ್ರದಲ್ಲಿ ಬಿಳುಪಾಗಿ ಕಾಣುತ್ತದೆ. ಚದರಿದ ಎಲೆಕ್ಟ್ರಾನುಗಳು ಬಿಂಬ ಗ್ರಾಹಿತಟ್ಟೆಯನ್ನು ತಲುಪದಂತೆ ಮಾಡಲು ಸಂದರ್ಭೋಚಿತವಾಗಿ ಕಿಂಡಿಗಳನ್ನು ಅಳವಡಿಸಲಾಗುತ್ತದೆ. ಕಡಿಮೆ ಕೋನದಲ್ಲಿ ಚದುರಿದ ಎಲೆಕ್ಟ್ರಾನುಗಳು ಛಾಯಾಚಿತ್ರದಲ್ಲಿ ಹಿನ್ನೆಲೆ ಮಸುಕನ್ನು ಮೂಡಿಸುತ್ತವೆ.

ರೇಖಾವಳಿ ಪರಿಣಾಮ (ಕಾಂಟೂರ್ ಫಿನಾಮಿನನ್) : ಚಿಕ್ಕ ಬೆಳಗು ಕಿಂಡಿಯಿರುವ ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯ ಛಾಯಾಚಿತ್ರಗಳಲ್ಲಿ ವಸ್ತುಮಸೂರ ನಿಜ ನಾಭಿಯಿಂದ ಹೊರಗಿದ್ದರೆ ಫ್ರೆನೆಲ್ ನಮೂನೆಯ ಪಟ್ಟಿಗಳು ಕಾಣಿಸಿಕೊಳ್ಳುತ್ತವೆ. ಇದನ್ನು ರೇಖಾವಳಿ ಪರಿಣಾಮ ಎಂದು ಕರೆಯುತ್ತಾರೆ. ಚಿತ್ರ 15 ರಲ್ಲಿ

$$x < \frac{\lambda}{2\alpha_c} \qquad \dots (13)$$

ಆದರೆ ಕಾಣಿಸುವಂಥ ಪಟ್ಟಿಗಳು ಮೂಡುತ್ತವೆ. ಇಲ್ಲಿ $2\alpha_c = \frac{d}{a}$ ಮತ್ತು $\lambda$ ಎಲೆಕ್ಟ್ರಾನ್ ತರಂಗಾಂತರ. ವಸ್ತುವಿನ ಅಂಚು ಸಾಭಿಗೊಂಡಿದ್ದರೆ ಫ್ರೆನೆಲ್ ಪಟ್ಟಿಗಳು ಕಾಣಿಸುವುದಿಲ್ಲ.

ಸಣ್ಣ ಕಣಗಳ ಇಲ್ಲವೆ ಕಿಂಡಿಗಳ ಸುತ್ತ ಮೂಡುವ ರೇಖಾವಳಿಗಳು ಸೂಕ್ಷ್ಮದರ್ಶಿ ಸರಿಯಾಗಿ ನಾಭಿಗೊಂಡಿದೆಯೋ ಇಲ್ಲವೋ ಎಂಬುದನ್ನು ತಿಳಿಯಲು ಸಹಾಯಕ ವಾಗುತ್ತವೆ.




ಚಿತ್ರ 15 ಅಪಾರದರ್ಶಕ ಅಂಚಿನಲ್ಲಿ ಎಲೆಕ್ಟ್ರಾನಿನ ಫ್ರೆನಲ್ ನಮನ

ಸ್ಫಟಿಕ ವಸ್ತುಗಳ ಸೂಕ್ಷ್ಮ ಚಿತ್ರದಲ್ಲಿ ಅನೇಕ ಸಾರಿ ವಸ್ತುಗಳ ಛಾಯಾಚಿತ್ರದಂತೆಯೆ ಇರುವ ಬಿಳುಪು ಪ್ರದೇಶಗಳು ಕಾಣಿಸುವುದುಂಟು. ಇವು ಬ್ರ್ಯಾಗ್ ಪ್ರತಿಫಲನದಿಂದ ಹುಟ್ಟುತ್ತವೆ. ಇಂಥ ಒಂದು ಸೂಕ್ಷ್ಮಚಿತ್ರಣವನ್ನು ಚಿತ್ರ 16ರಲ್ಲಿ ನೋಡಬಹುದು. ವಸ್ತು ಮಸೂರದಲ್ಲಿ ಬ್ರ್ಯಾಗ್ ಪ್ರತಿಫಲನಗೊಂಡ ಎಲೆಕ್ಟ್ರಾನುಗಳನ್ನು ತಡೆಯಲು ಸರಿಯಾದ ಕಿಂಡಿಯಿದ್ದರೆ ಬಿಳುಪುಪ್ರದೇಶಗಳು ಮೂಡುವುದಿಲ್ಲ.

ಪುನರಾವರ್ತಿತ ರಚನೆಗಳ ಎಲೆಕ್ಟ್ರಾನ್ ಪ್ರತಿಬಿಂಬಗಳು (ಎಲೆಕ್ಟ್ರಾನ್ ಇಮೇಜಸ್ ಆಫ್ ಪೀರಿಯಾಡಿಕ್ ಸ್ಟ್ರಕ್ಚರ್ಸ್): ಹೆಚ್ಚು ವಿಘಟನ ಸಾಮರ್ಥ್ಯವಿರುವ(10Å) ಎಲೆಕ್ಟ್ರಾನ್ ಸೂಕ್ಷ್ಮದರ್ಶಿಗಳು 1955ರಲ್ಲಿ ಉಪಯೋಗಕ್ಕೆ ಸಿದ್ಧವಾಗಲಾಗಿ ಸ್ಫಟಿಕಗಳ ಪರಮಾಣು ರಚನೆಯನ್ನು ನೇರವಾಗಿ ನೋಡುವುದು ಸಾಧ್ಯವಾಯಿತು. ಪುನರಾವರ್ತಿತ ರಚನೆಯನ್ನು ಮೊದಲು ನೋಡಿದವ ಮೆಸ್ಟರ್.

ನೇರದೂಲದೊಂದಿಗೆ ಒಂದು ಅಥವಾ ಹೆಚ್ಚು ನಮನದೂಲಗಳು ವ್ಯತಿಕರಣಗೊಂಡು ಪ್ರತಿಬಿಂಬ ಮೂಡಿದರೆ ಪುನರಾವರ್ತಿತ ರಚನೆ ಕಾಣಿಸಿಕೊಳ್ಳುತ್ತದೆ. ಬೇಕಾದ ನಮನದೂಲಗಳನ್ನು ಮಸೂರದ ಹಿಂದಿನ ನಾಭಿತಲದಲ್ಲಿ ಸರಿಯಾದ ವ್ಯಾಸವಿರುವ ಕಿಂಡಿಯನ್ನು ಅಳವಡಿಸುವುದರಿಂದ ಪಡೆಯಬಹುದು. ನೇರ ದೂಲಕ್ಕೆ $\alpha$ ಕೋನವನ್ನು ಏರ್ಪಡಿಸುವ ನಮನ ದೂಲವಿದ್ದರೆ $d=\frac{\lambda}{\alpha}$ ಅಂತರವುಳ್ಳ ಪಟ್ಟಿಗಳು ಮೂಡುತ್ತವೆ. ಇಲ್ಲಿ $d$ ಸ್ಫಟಿಕತಲಗಳಿಗಿರುವ ಅಂತರ ಮತ್ತು $\lambda$ ತರಂಗಾಂತರ. ಸ್ಫಟಿಕತಲಗಳ ಛಾಯಾಚಿತ್ರವನ್ನು ತೆಗೆಯಬೇಕಾದರೆ ಆವಶ್ಯಕವಾಗಿ ಬ್ರ್ಯಾಗ್ ಪ್ರತಿಫಲನ ಆಗಬೇಕು. ಒಂದಕ್ಕಿಂತ ಹೆಚ್ಚು ನಮನದೂಲಗಳು ಸೇರಿದರೆ ಎರಡು ಆಯದ ಪುನರಾವರ್ತಿತ ರಚನೆ ಮೂಡುತ್ತದೆ. ಇಂಥ ರಚನೆಗಳ ವಿವರಣೆ ಕಠಿಣ.

ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯಲ್ಲಿ ಲೋಹಗಳಂಥ ಸಾಮಾನ್ಯ ಸ್ಫಟಿಕಗಳ ಪುನರಾವರ್ತಿತ ರಚನೆಯನ್ನು ನೋಡುವುದು ಕಷ್ಟ. ಆದರೆ ಪರೋಕ್ಷವಾಗಿ ಅದನ್ನು ಮಾಡಬಹುದೆಂದು ಹಾಷಿಮಟೊ ಮತ್ತು ಉಯೇಡ ಮತ್ತು ಪಾಷ್ಲಿ ಅವರು ತೋರಿಸಿದರು. ಒಂದರ ಮೇಲೊಂದು ಏರಿಸಿದ ಸ್ಫಟಿಕಗಳಿಂದ ಪಡೆಯಬಹುದಾದ ಮಾಯ್ರೆ ನಮೂನೆಗಳನ್ನು ಸ್ಥಳಭ್ರಂಶ (ಡಿಸ್‌ಲೊಕೇಶನ್) ಮತ್ತು ಲ್ಯಾಟಿಸ್ ಕೊರತೆಗಳ (ಲ್ಯಾಟಿಸ್ ಇಂಪರ್ಫೆಕ್ಷನ್) ವಿಶ್ಲೇಷಣೆಗಾಗಿ ಉಪಯೋಗಿಸಬಹುದು.

ಮಾಯ್ರೆ ನಮೂನೆಗಳು : ಎರಡು ರೇಖಾಪಟಲಗಳನ್ನು ಒಂದರ ಮೇಲೊಂದು ಏರಿಸಿ ಒರಟು ರೇಖಾಪಟಲ ಅಥವಾ ಮಾಯ್ರೆ ನಮೂನೆಗಳನ್ನು ಪಡೆಯುವ ದೃಕ್ ತಂತ್ರವನ್ನು ಸ್ಫಟಿಕಗಳ ಎಲೆಕ್ಟ್ರಾನ್ ಸೂಕ್ಷ್ಮಚಿತ್ರಣ ತೆಗೆಯುವಾಗಲೂ ಬಳಸಬಹುದು.



ಚಿತ್ರ 16 ಸತು ಆಕ್ಸೈಡ್ (ZnO) ಸ್ಫಟಿಕಗಳ ಎಲೆಕ್ಟ್ರಾನ್ ಮೈಕ್ರೊಗ್ರಾಫ್ (ಬಿಳಿ ಪ್ರದೇಶಗಳು ಕಾಣುತ್ತವೆ)

ಚಿತ್ರ 17 (a) ಮತ್ತು (b) ಮಾಯ್ರೆ ನಮೂನೆಗಳನ್ನು ರಚಿಸುವ ಎರಡು ವಿಧಾನಗಳನ್ನು ಸೂಚಿಸುತ್ತವೆ. ಎರಡು ರೇಖಾಪಟಲಗಳನ್ನು ಸಮಾನಾಂತರವಾಗಿ ಒಂದರ




ಚಿತ್ರ 17 (a) ಸಮಾನಾಂತರ ಮಾಯ್ರೆ ನಮೂನೆಯ ರಚನೆ
(b) ತಿರುವು ಮಾಯ್ರೆ ನಮೂನೆಯ ರಚನೆ

ಮೇಲೊಂದು ಏರಿಸಿ ಛಾಯಾಚಿತ್ರ ತೆಗೆದರೆ ಸಮಾನಾಂತರ ಮಾಯ್ರೆ ನಮೂನೆ ಮೂಡುತ್ತದೆ. ಹಾಗಲ್ಲದೆ ಒಂದರ ಮೇಲೊಂದು ಓರೆಯಾಗಿ ಏರಿಸಿ ಛಾಯಾಚಿತ್ರ ತೆಗೆದರೆ ತಿರುವು ಮಾಯ್ರೆ ನಮೂನೆ ಮೂಡುತ್ತದೆ. ಇದೇ ರೀತಿಯ ಪರಿಣಾಮವನ್ನು ಎರಡು ತೆಳುವಾದ ಸ್ಫಟಿಕಗಳನ್ನು ಒಂದರ ಮೇಲೊಂದು ಏರಿಸಿ ಎಲೆಕ್ಟ್ರಾನ್ ಸೂಕ್ಷ್ಮಚಿತ್ರಣ ತೆಗೆದು ಪಡೆಯಬಹುದು. ಮಾಯ್ರೆ ನಮೂನೆಯಲ್ಲಿ ಬೇರೆ ಬೇರೆ ಸ್ಫಟಿಕಗಳಲ್ಲಿರುವ ಅಂತರಕ್ಕಿಂತ ಹೆಚ್ಚು ಅಂತರ ಇರುವುದರಿಂದ ಅದು ಪ್ರತಿಬಿಂಬದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಸಮಾನಾಂತರ ಮಾಯ್ರೆ ನಮೂನೆಯ ಅಂತ

$$D=\frac{d_1 d_2}{d_1-d_2} \quad \ldots \quad (14)$$

ಎಂದು ಕರೆಯಬಹುದು. $(d_1d_2) < < d_1$ ಅಥವಾ $d_2$. ಆಗ $D > > d_1$ ಅಥವಾ $d_2$. ಮಾಯ್ರೆ ಲಂಬನ $M$ ಆದರೆ $D = Md_2$ ಎಂದು ಬರೆಯಬಹುದು. ಹೀಗೆ $d_2$ ಅಂತರವಿರುವ ತಲಗಳನ್ನು $Md_2$ ಅಂತರವಿರುವ ತಲಗಳೆಂಬಂತೆ ಛಾಯಾಚಿತ್ರ ತೆಗೆಯಬಹುದು. ತಿರುವು ಮಾಯ್ರೆ ನಮೂನೆಯ ಅಂತರ

$$D = \frac{d}{2\sin\alpha/2} \qquad \ldots (15)$$

ಎಂದು ಬರೆಯಬಹುದು. $\alpha$ ಕಡಿಮೆಯಿದ್ದರೆ $D = \frac{d}{\alpha}$ ಎಂದೆ ಬರೆಯಬಹುದು. ಇಲ್ಲಿ



ಚಿತ್ರ 18 ಪೆಲೇಡಿಯಂ ಮತ್ತು ಚಿನ್ನದ (111) ದಿಗ್‌ವಿನ್ಯಾಸ ತಲಗಳ ಸಮಾನಾಂತರ ಮಾಯ್ರೆ ನಮೂನೆ

ಮಾಯ್ರೆ ಲಂಬನ $\frac{1}{\alpha}$. ಚಿತ್ರ 18ರಲ್ಲಿ ಪೆಲೇಡಿಯಂ ಮತ್ತು ಚಿನ್ನದ (111) ದಿಗ್ವಿನ್ಯಾಸ ತಲಗಳ ಸಮಾನಾಂತರ ಮಾಯ್ರೆ ನಮೂನೆಯನ್ನು ನೋಡಬಹುದು.

ಲ್ಯಾಟಿಸ್ ಕೊರತೆಯಿಲ್ಲದ ಮತ್ತು ಲ್ಯಾಟಿಸ್ ಕೊರತೆಯಿರುವ ಸ್ಫಟಿಕಗಳ ಮಾಯ್ರೆ ನಮೂನೆಯಲ್ಲಿ ಲ್ಯಾಟಿಸ್ ಕೊರತೆ ಲಂಬಿತವಾಗಿ ಕಾಣುತ್ತದೆ. ಎಲೆಕ್ಟ್ರಾನ್ ದೂಲದ ತೀವ್ರತೆಯನ್ನು ಹೆಚ್ಚಿಸಿ ಸ್ಫಟಿಕಗಳನ್ನು ಕಾಯಿಸಬಹುದಾದ್ದರಿಂದ ಲ್ಯಾಟಿಸ್ ಕೊರತೆಗಳು ಜಾರುತಲದಲ್ಲಿ ಚಲಿಸುವುದನ್ನು ನೇರವಾಗಿ ನೋಡಬಹುದು. ಇಂಥ ಪ್ರಯೋಗಗಳನ್ನು ಮೊದಲು ನಡೆಸಿದಾತ ಹಿರ್ಷ್.

ಕಿಕೂಚಿ ಗೆರೆಗಳು ಮತ್ತು ಬ್ಯಾಂಡುಗಳು: ಅನೇಕಸಾರಿ ಏಕಸ್ಫಟಿಕಗಳ ಎಲೆಕ್ಟ್ರಾನ್ ಸೂಕ್ಷಚಿತ್ರಣಗಳಲ್ಲಿ ಬಿಂದುಗಳ ಜೊತೆಗೆ ವಿಚಿತ್ರ ನಮೂನೆಯ ಗೆರೆಗಳೂ ಮೂಡುತ್ತವೆ. ಈ ಗೆರೆಗಳನ್ನು ಕಿಕೂಚಿ ಗೆರೆಗಳು (ಕಿಕೂಚಿ 1928) ಎಂದು ಕರೆಯುತ್ತಾರೆ. ಇವು ಸ್ಫಟಿಕದಲ್ಲಿ ಎಲೆಕ್ಟ್ರಾನುಗಳು ಪುಟಿತ ಮತ್ತು ಪುಟಿತವಲ್ಲದ (ಇಲಾಸ್ಟಿಕ್ ಅಂಡ್ ಇನ್‌ಇಲಾಸ್ಟಿಕ್) ಚದರಿಕೆಯಿಂದ ಹುಟ್ಟುತ್ತವೆ. ಸ್ಫಟಿಕದ ದಿಗ್ವಿನ್ಯಾಸವನ್ನು ವ್ಯತ್ಯಾಸ ಮಾಡಿದರೆ ಬಿಂದುಗಳು ಸ್ಥಳಾಂತರಗೊಳ್ಳುವುದಿಲ್ಲ. ಕೆಲವು ಕ್ಷೀಣಿಸಿ ಕಾಣೆಯಾಗುತ್ತವೆ. ಮತ್ತೆ ಕೆಲವು ಹುಟ್ಟಿ ಕಾಣಿಸಿಕೊಳ್ಳುತ್ತವೆ. ಕಿಕೂಚಿ ಗೆರೆಗಳು ಸ್ಫಟಿಕಕ್ಕೆ ಭದ್ರವಾಗಿ ಅಂಟಿಕೊಂಡಿರುವಂತೆ ಚಲಿಸುತ್ತವೆ. ಈ ಚಲನೆಯನ್ನು ಅನುಸರಿಸಿ ಸ್ಫಟಿಕದ ದಿಗ್ವಿನ್ಯಾಸವನ್ನು ಗೊತ್ತುಮಾಡಬಹುದು.

ಸಾಮಾನ್ಯ ಲೆಕ್ಕಾಚಾರದಂತೆ ಕಿಕೂಚಿ ಗೆರೆಗಳು ಕಾಣಬೇಕಾದಲ್ಲಿ ಬ್ಯಾಂಡುಗಳು ಕಾಣುವುದು ಅಪೂರ್ವವೇನಲ್ಲ. ಈ ಬ್ಯಾಂಡುಗಳ ಉತ್ಪತ್ತಿಯನ್ನು ತಿಳಿಯಲು ಕಿಕೂಚಿ ಗೆರೆಗಳ ಉತ್ಪತ್ತಿಗೆ ಕೊಡುವ ಕಾರಣವನ್ನು ನಂಬಿದರೆ ಆಗುವುದಿಲ್ಲ. ಅದಕ್ಕೆ ಗತಿಸಿದ್ಧಾಂತವನ್ನು ಆಶ್ರಯಿಸಬೇಕು ಮತ್ತು ಸಮೀಕರಣಗಳಲ್ಲಿ ಹೀರಿಕೆಪದ (ಟರ್ಮ್) ಒಂದನ್ನು ಸೇರಿಸಬೇಕು. ಚಿತ್ರ 19ರಲ್ಲಿ ಕಿಕೂಚಿ ಗೆರೆ ಮತ್ತು ಬ್ಯಾಂಡುಗಳನ್ನು ನೋಡಬಹುದು.

ಪ್ರಭಾಕ್ಷೇತ್ರ ಮತ್ತು ಕಾಳಕ್ಷೇತ್ರ ಪ್ರತಿಬಿಂಬಗಳು : ಎಲೆಕ್ಟ್ರಾನ್ ಸೂಕ್ಷ್ಮದರ್ಶಿಯು ವಸ್ತುಮಸೂರದ ಕಿಂಡಿ ಬ್ರ್ಯಾಗ್ ಪ್ರತಿಫಲನಗಳನ್ನು ತಡೆದಾಗ ಮೂಡುವ



ಚಿತ್ರ 19 ಕಿಕೂಚಿ ಗೆರೆಗಳು ಮತ್ತು ಬ್ಯಾಂಡುಗಳು



ಚಿತ್ರ 20 ಕಲಾಯ್‌ಡಲ್ ಚಿನ್ನದ ಮುದ್ದೆಗಳ ಪ್ರಭಾಕ್ಷೇತ್ರ (A) ಮತ್ತು ಕಾಳಕ್ಷೇತ್ರದ (B) ಛಾಯಾಚಿತ್ರಗಳು

ಪ್ರತಿಬಿಂಬವನ್ನು ಪ್ರಭಾಕ್ಷೇತ್ರ ಪ್ರತಿಬಿಂಬ ಎಂದು ಕರೆಯುತ್ತಾರೆ. ಇದು ನೇರ ದೂಲಗಳಿಂದ ಹುಟ್ಟಿದುದು. ಕಿಂಡಿಯ ಜಾಗವನ್ನು ಬದಲಾಯಿಸಿಯೊ ಇಲ್ಲವೆ ಎಲೆಕ್ಟ್ರಾನ್ ಆಕರವನ್ನು ಬೇಕಾದ ಹಾಗೆ ವಾಲಿಸಿಯೋ ಬಿಂ ನಮೂನ ದೂಲಗಳಿಂದಲೇ ಪ್ರತಿಬಿಂಬವನ್ನು ಮೂಡಿಸಬಹುದು. ಇಂಥ ಪ್ರತಿಬಿಂಬವನ್ನು ಕಾಳಕ್ಷೇತ್ರ ಪ್ರತಿಬಿಂಬ ಎಂದು ಕರೆಯುತ್ತಾರೆ. ಕಲಾಯ್‌ಡಲ್ ಚಿನ್ನದ ಮುದ್ದೆಗಳ ಪ್ರಭಾಕ್ಷೇತ್ರ ಮತ್ತು ಕಾಳಕ್ಷೇತ್ರ ಛಾಯಾಚಿತ್ರಗಳನ್ನು ಚಿತ್ರ 20 (A) ಮತ್ತು (B) ಗಳಲ್ಲಿ ಕಾಣಬಹುದು. ಅಸ್ಫಟಿಕ ವಸ್ತುಗಳ ಇಂಥ ಛಾಯಾಚಿತ್ರಗಳು ಅಷ್ಟು ಉಪಯುಕ್ತವಾದುವಲ್ಲ. ಸ್ಫಟಿಕ ವಸ್ತುಗಳ ಕಾಳಕ್ಷೇತ್ರ ಪ್ರತಿಬಿಂಬಗಳು ಪ್ರಭಾಕ್ಷೇತ್ರ



ಚಿತ್ರ 21 ದೆಹಲಿಯ ರಾಷ್ಟ್ರೀಯ ಭೌತ ಪ್ರಯೋಗಾಲಯದಲ್ಲಿ ಸ್ಥಾಪಿಸಲಾಗಿರುವ ಫಿಲಿಪ್ಸ್ ಎಲೆಕ್ಟ್ರಾನ್ ಸೂಕ್ಷ್ಮದರ್ಶಿ 200

ಪ್ರತಿಬಿಂಬಗಳಿಗಿಂತ ವಿಶ್ಲೇಷಣೆಗೆ ಅನುಕೂಲವಾಗಿರುತ್ತವೆ. ಚಿತ್ರ 20 (B) ಯಲ್ಲಿ ಸ್ಫಟಿಕಗಳು ಎದ್ದು ಕಾಣುವುದನ್ನು ನೋಡಬಹುದು. ಇವು (A)ಯಲ್ಲಿ ಕಾಣುವುದಿಲ್ಲ.

(ಎಸ್.ಎ.ಎಚ್.)

**ಎಲೆಕ್ಟ್ರಾನ್ ಸ್ಫುರಣ:** ಒಂದು ವಸ್ತುವಿನಿಂದ ಎಲೆಕ್ಟ್ರಾನ್ ಬಿಡುಗಡೆಯಾಗುವ ಕ್ರಿಯೆ (ಎಲೆಕ್ಟ್ರಾನ್ ಎಮಿಶನ್). ವಸ್ತುವಿನಲ್ಲಿರುವ ಎಲೆಕ್ಟ್ರಾನ್ ಶಕ್ತಿ ನಿರ್ವಾತ ಅಥವಾ ಗಾಳಿಯಲ್ಲಿರುವ ಒಂದು ಸ್ಥಿರ ಎಲೆಕ್ಟ್ರಾನಿನ ಶಕ್ತಿಗಿಂತ ಕಡಿಮೆ ಆಗಿರುವುದರಿಂದ ಯಾವ ವಸ್ತುವಿನಿಂದಲೂ ಎಲೆಕ್ಟ್ರಾನು ಅದೇ ಅದಾಗಿ ಹೊರ ಬರುವುದಿಲ್ಲ. ಅದು ವಸ್ತುವಿನಿಂದ ಬಿಡುಗಡೆಯಾಗಿ ಹೊರಗೆ ಬರಬೇಕಾದರೆ ಶಕ್ತಿಯ ಪೂರೈಕೆಯಾಗಬೇಕು. ಇದು ಮುಂದೆ ತೋರಿಸಿರುವ ಹಲವಾರು ರೀತಿಗಳಲ್ಲಾಗಬಹುದು.

1 ಉಷ್ಣ ಅಯಾನಿಕ ಸ್ಫುರಣ: ಒಂದು ವಸ್ತುವನ್ನು ಕಾಯಿಸಿದರೆ ಅದರ ಪರಮಾಣುಗಳು ಹೆಚ್ಚು ವೈಶಾಲ್ಯದಿಂದ ಕಂಪಿಸುತ್ತವೆ. ಕಂಪನಶಕ್ತಿಯನ್ನು ಹೀರಿಕೊಂಡ ಎಲೆಕ್ಟ್ರಾನುಗಳು ಹೊರಗೆ ಬರುತ್ತವೆ.

2 ದ್ಯುತಿ ವಿದ್ಯುತ್ಕ್ರಿಯೆ: ಫೋಟಾನುಗಳಿಂದ ಬೆಳಗಿದ ವಸ್ತುಗಳು ಎಲೆಕ್ಟ್ರಾನುಗಳನ್ನು ಹೊರದೂಡುತ್ತವೆ. ಫೋಟಾನುಗಳ ಶಕ್ತಿ ಪ್ರತಿ ವಸ್ತುವಿನ ಗುಣಕ್ಕೆ ತಕ್ಕಂತೆ ಒಂದು ಕನಿಷ್ಠ ಮಿತಿಗಿಂತ ಹೆಚ್ಚಾಗಿರಬೇಕು. ಆಷ್ಟೆ. ಫೋಟಾನಿನ ಶಕ್ತಿಯನ್ನು ಹೀರಿಕೊಂಡ ಎಲೆಕ್ಟ್ರಾನ್ ಹೊರಕ್ಕೆ ಬರುತ್ತದೆ.

3 ದ್ವಿತೀಯ ಸ್ಫುರಣ: ವಿದ್ಯುದಂಶವಿರುವ ಕಣಗಳಿಂದ ವಸ್ತುಗಳನ್ನು ಘಟ್ಟಿಸಿದರೆ ಎಲೆಕ್ಟ್ರಾನುಗಳು ಹೊರಕ್ಕೆ ಬರುತ್ತವೆ. ಇಲ್ಲಿ ಕಣಗಳ ಶಕ್ತಿ ಭಾಗಶಃ ಎಲೆಕ್ಟ್ರಾನುಗಳಿಗೆ ಒದಗುತ್ತದೆ.

4 ಕ್ಷೇತ್ರ ಸ್ಫುರಣ ಅಥವಾ ಶೀತ ಸ್ಫುರಣ: ಪ್ರಬಲವಾದ ವಿದ್ಯುತ್ ಕ್ಷೇತ್ರದಲ್ಲಿರುವ ವಸ್ತುಗಳಿಂದ ಎಲೆಕ್ಟ್ರಾನುಗಳು ಹೊರಗೆ ಬರುತ್ತವೆ. ವಿದ್ಯುತ್ ಕ್ಷೇತ್ರದ ಪ್ರಚೋದನೆಯಿಂದ ಎಲೆಕ್ಟ್ರಾನುಗಳಿಗೆ ಬೇಕಾದ ಶಕ್ತಿಯ ಪೂರೈಕೆಯಾಗುತ್ತದೆ.

ಅಯಾನೀಕರಣ ಮತ್ತು ಕಾಂಪ್ಟನ್ ಕ್ರಿಯೆಗಳಲ್ಲೂ ಎಲೆಕ್ಟ್ರಾನುಗಳು ಹೊರಗೆ ಬರುತ್ತವೆ. ಆದರೆ ಈ ಕ್ರಿಯೆಗಳನ್ನು ಎಲೆಕ್ಟ್ರಾನ್ ಸ್ಫುರಣ ಎಂದು ಕರೆಯುವುದಿಲ್ಲ.

(ಎಸ್.ಎ.ಎಚ್.)

**ಎಲೆಕ್ಟ್ರಾನಿಕ್ ನಕಾಶೆ ಕೆತ್ತನೆ:** ವಿದ್ಯುತ್ ಪ್ರಕಾಶದ ಕೋಶಗಳು ಮೂಲಪ್ರತಿಯಿಂದ ಪ್ರತಿಫಲಿತವಾದ ಅಥವಾ ಪ್ರಸರಿಸಲ್ಪಟ್ಟ ಕಿರಣಗಳನ್ನು ಉಪಯೋಗಿಸಿಕೊಂಡು ಕೆತ್ತುವ ಸಾಧನಕ್ಕೆ ಶಕ್ತಿಯನ್ನು ಕೊಟ್ಟು, ಆದರ ಅಡಿಯಲ್ಲಿರುವ ಲೋಹದ ಅಥವಾ ಲೆಪ್ಪದ ಫಲಕದ ಮೇಲೆ ನೇರವಾಗಿ ನಡೆಸುವ ಕ್ರಿಯೆ (ಎಲೆಕ್ಟ್ರಾನಿಕ್ ಎನ್‌ಗ್ರೇವಿಂಗ್). ಇತರ ವಿಧಾನಗಳ ಸ್ಥೂಲ ಕಲ್ಪನೆ ಇದ್ದರೆ ಎಲೆಕ್ಟ್ರಾನಿಕ್ ನಕಾಶೆ ಕೆತ್ತನೆಯಲ್ಲಿರುವ ಸೂಕ್ಷ್ಮ ಸುಧಾರಣೆ ತಿಳಿಯುತ್ತದೆ. ಲಿಪಿ ಮುದ್ರಣ (ಲೆಟರ್ ಪ್ರೆಸ್) ಇಂಥ ಒಂದು ಇತರ ವಿಧಾನ. ಈ ವಿಧಾನದಿಂದ ಚಿತ್ರಗಳನ್ನು ಮುದ್ರಿಸಲು ಉಬ್ಬು ಶಿಲ್ಪದ ಅಚ್ಚಿನ ಮೈಯುಳ್ಳ ಮುದ್ರಾಫಲಕಗಳಿರಬೇಕು. ಸಾಧಾರಣವಾಗಿ ರೂಢಿಯಲ್ಲಿರುವ ಸಾಂಪ್ರದಾಯಿಕ ಪದ್ಧತಿಯಲ್ಲಿ, ಒಂದು ಆಮ್ಲದ ಸಹಾಯದಿಂದ ಅಚ್ಚಾಗದ ಭಾಗವನ್ನು ಹಲವಾರು ಹಂತಗಳಲ್ಲಿ ಕೊರೆದು ಆಮ್ಲನಿರೋಧ ಬಿಂಬದ ಸಹಾಯದಿಂದ ಅಚ್ಚಾಗುವ ಭಾಗವನ್ನು ಸಂರಕ್ಷಿಸಿ ಈ ಫಲಕಗಳನ್ನು ತಯಾರಿಸಲಾಗುವುದು. ಉತ್ತಮವಾದ ಮುದ್ರಾಫಲಕಗಳನ್ನು ತಯಾರಿಸುವ ಮತ್ತು ಅನೇಕ ಅನುಕೂಲತೆಗಳನ್ನೊಳಗೊಂಡಿರುವ ಪೌಡರ್ ರಹಿತ ಕೊರೆಯುವಿಕೆ (ಪೌಡರ್‌ಲೆಸ್ ಎಚ್ಚಿಂಗ್) ಹಾಗೂ ಎಲೆಕ್ಟ್ರಾನಿಕ್ ಕೆತ್ತನೆ (ಎನ್‌ಗ್ರೇವಿಂಗ್) ಮುಂತಾದ ನವೀನ ಪದ್ಧತಿಗಳು ಬಳಕೆಗೆ ಬಂದಿರುವ ಪ್ರಯುಕ್ತ ಈ ಸಾಂಪ್ರದಾಯಿಕ ಪದ್ಧತಿ ಕ್ರಮೇಣ ಕ್ಷೀಣಿಸುತ್ತಿದೆ. ಮೂಲ ಚಿತ್ರಗಳ, ಅದರಲ್ಲೂ ವರ್ಣರಂಜಿತ ಚಿತ್ರಗಳ, ಪ್ರತಿಯ ಪುನರುತ್ಪಾದನೆಯನ್ನು ಶೀಘ್ರವಾಗಿ, ಮತ್ತು ಚೊಕ್ಕವಾಗಿ ತಯಾರಿಸುವ ದೃಷ್ಟಿಯಿಂದ ಎಲೆಕ್ಟ್ರಾನಿಕ್ ನಕಾಶೆ ಕೆತ್ತನೆ ಬಹಳ ಉಪಯುಕ್ತವಾಗಿದೆ. ಈ ಪದ್ಧತಿಯಲ್ಲಿ ಲೋಹದ ಮೇಲೆ ಬಿಂಬವನ್ನು ಛಾಯಾಗ್ರಹಣ ಮಾಡುವುದರ ಬದಲು ಮೂಲಪ್ರತಿಯ ಬಹಳ ಕಿರಿದಾದ ಭಾಗವನ್ನು ಮಾತ್ರ ಒಂದು ಬಾರಿಗೆ ಬೆಳಕಿಗೆ ಒಡ್ಡಲಾಗುತ್ತದೆ. ಈ ಬಗೆಯ ಕಿರಿದಾದ ಪ್ರತಿಫಲಿತವಾದ ಅಥವಾ ಪ್ರಸರಿಸಲ್ಪಟ್ಟ ಬೆಳಕಿನ ಕಿರಣಗಳನ್ನು ದ್ಯುತಿವಿದ್ಯುತ್‌ಕೋಶಗಳು (ಫೋಟೋ ಎಲೆಕ್ಟ್ರಿಕ್ ಸೆಲ್ಸ್) ಸ್ವೀಕರಿಸುತ್ತವೆ. ಪತನ ಬೆಳಕಿನ ಪ್ರಮಾಣಕ್ಕನುಸಾರವಾದ ವಿದ್ಯುತ್ ಪ್ರವಾಹವನ್ನುಂಟುಮಾಡುವ ಸಾಮರ್ಥ್ಯ ಕೋಶಗಳಿಗೆ ಇದೆ. ಇದರಿಂದಾಗಿ ಮೂಲ ಚಿತ್ರದ ಶ್ವೇತವರ್ಣದಿಂದ ತೊಡಗಿ ಕಪ್ಪುವರ್ಣದವರೆಗಿನ ಎಲ್ಲ ಅಂತರಗಳ ಮೇಲೆಯೂ ಬೆಳಕಿನ ಕಿರಣವನ್ನು ಹಾಯಿಸಿದಾಗ ಅಂಥ ಶ್ವೇತವರ್ಣ ಮತ್ತು ಕಪ್ಪು ವರ್ಣಗಳ ನಡುವಣ ವರ್ಣಾಂತರಗಳ ರೀತ್ಯ ದ್ಯುತಿವಿದ್ಯುತ್ ಕೋಶದಲ್ಲಿನ ವಿದ್ಯುತ್ ಪ್ರವಾಹದಲ್ಲಿ ವ್ಯತ್ಯಾಸವುಂಟಾಗುವುದು. ಈ ವಿದ್ಯುತ್ ಪ್ರವಾಹದ ಪ್ರಮಾಣವನ್ನು ಅನುಸರಿಸುವ ಕೆತ್ತುವ ಸಾಧನ ಆದರ ಅಡಿಯಲ್ಲಿರುವ ಫಲಕದ ಮೇಲೆ ಅತಿ ಸೂಕ್ಷ್ಮ ಹಾಗೂ ವಿಭಿನ್ನ ಗಾತ್ರದ ರಂಧ್ರಗಳನ್ನು ಕೊರೆಯುವುದು. ಕಿರಿದಾದ ಬೆಳಕಿನ ಕಿರಣ

ವನ್ನು ಮೂಲಪ್ರತಿಯ ಪ್ರತಿಯೊಂದು ಭಾಗದ ಮೇಲೆಯೂ ಸರಳರೇಖೆಯಲ್ಲಿ ಪ್ರಸರಿಸಲಾಗುವುದು. ಇದಕ್ಕೆ ಕ್ರಮವೀಕ್ಷಣೆ (ಸ್ಕ್ಯಾನಿಂಗ್) ಎಂದು ಹೆಸರು.

ಕ್ಲಿಸ್ಕೊಗ್ರಾಫ್ ಎಂಬ ಯಂತ್ರ ಎಲೆಕ್ಟ್ರಾನಿಕ್ ನಕಾಶೆ ಕೆತ್ತನೆಯಲ್ಲಿ ಪ್ರಸಿದ್ಧವಾಗಿರುವ ಯಂತ್ರಗಳಲ್ಲಿ ಒಂದು. ಈ ಯಂತ್ರವಲ್ಲಿ ಬೆಳಕಿನ ಕಿರಣಗಳು ಸ್ಥಾಯಿಯಾಗಿದ್ದು ಚಿತ್ರದ ನಕಲು ಸಮತಲವಾಗಿ ಹಿಂದಕ್ಕೂ ಮುಂದಕ್ಕೂ ಚಲಿಸುತ್ತದೆ. ಹೀಗೆ ಹಾದು ಹೋದ ಪ್ರತಿರೇಖೆಯ ಕೊನೆಯಲ್ಲಿ ಬೆಳಕಿನ ಕಿರಣ ಅಂಥ ಎಡೆಯಾಟಕ್ಕೆ ಲಂಬವಾದ ದಿಕ್ಕಿನಲ್ಲಿ ಸ್ವಲ್ಪಮಟ್ಟಿಗೆ ಚಲಿಸುವುದು. ಆ ಕೂಡಲೆ ಮೂಲಪ್ರತಿಯ ಎಡೆಯಾಟ ಪುನಃ ಪ್ರಾರಂಭವಾಗುವುದು. ಈ ಕ್ರಿಯೆ ಸ್ವಯಂಚಾಲಿತವಾಗಿ ಕ್ರಮವೀಕ್ಷಣೆಯ ಕೆಲಸ ಪೂರ್ಣಗೊಳ್ಳುವವರೆವಿಗೂ ನಡೆಯುವುದು. ಅಂತೆಯೇ, ಕೆತ್ತನೆಯ ಸಾಧನದ ಕೆಳಗೆ ಇಟ್ಟ ಲೋಹದ ಅಥವಾ ಲೆಪ್ಪದ ಫಲಕವೂ ಚಿತ್ರದ ಪ್ರತಿಯೊಂದಿಗೆ ಹಿಂದಕ್ಕೂ ಮುಂದಕ್ಕೂ ಚಲಿಸುವುದು. ಕೆತ್ತನೆಯ ಸಾಧನಕ್ಕೆ ಒಂದು V ಆಕಾರದ ಕಂಟಿಕೆಯನ್ನು (ಸ್ಟೈಲಸ್) ಅಳವಡಿಸಿರುತ್ತದೆ. ವಿದ್ಯುತ್ ಪ್ರಕಾಶದ ಕೋಶಗಳಿಂದ ಬರುವ ವಿದ್ಯುತ್ ಕಂಪನಗಳು ಕಂಟಿಕೆಯನ್ನು ಸಂಚಾಲಿಸಿದಾಗ ಅದು ಕೆಳಗಿರುವ ಫಲಕದ ಮೇಲೆ ನಿಯತಕಾಲಿಕವಾಗಿ ಕೆತ್ತನೆ ಮಾಡುತ್ತದೆ. ಅಂಥ ಪ್ರತಿಯೊಂದು ಕೆತ್ತನೆಯ ಆಳವೂ ವಿದ್ಯುತ್‌ಕೋಶದಿಂದ ಬರುವ ವಿದ್ಯುತ್‌ಪ್ರವಾಹಕ್ಕೆ ಅನುಗುಣವಾಗಿರುತ್ತದೆ. ವಿಶೇಷ ಗಾತ್ರದ ಕಂಟಿಕೆ ವಜ್ರಾಕಾರದ ರಂಧ್ರವನ್ನು ಕೆತ್ತುತ್ತದೆ. ಈ ರೀತಿ ಫಲಕದ ಮೇಲೆ ಪರಿಣಮಿಸುವ ರಂಧ್ರದ ಅಗಲ ಕಂಟಿಕೆ ಫಲಕದಲ್ಲಿ ಎಷ್ಟು ಆಳಕ್ಕೆ ಹೋಗುವುದೊ ಅದನ್ನು ಅವಲಂಬಿಸಿದೆ.

ಒಂದು ಅಂಗುಲದಷ್ಟು ಅಗಲದಲ್ಲಿ ನೂರಾರು ಸಾಲು ರಂಧ್ರಗಳನ್ನು ಈ ಯಂತ್ರ ಕೆತ್ತಬಲ್ಲುದು. ಇದರ ಅಣುವಿದ್ಯುತ್ ಘಟಕ ದ್ಯುತಿ ವಿದ್ಯುತ್ ಸಂಕೇತಗಳನ್ನು ಬೇಕಾದ ಪ್ರಮಾಣಕ್ಕೆ ಗಾತ್ರ ವ್ಯತ್ಯಾಸ ಮಾಡಬಲ್ಲುದು; ಮತ್ತು ಆ ಪ್ರಯುಕ್ತ ಮೂಲಪ್ರತಿಯ ಛಾಯಾ ಹಾಗೂ ಅತ್ಯುಜ್ಜ್ವಲ (ಹೈಲೈಟ್) ಭಾಗಗಳಲ್ಲಿನ ಭೇದ ಕಡಿಮೆಯಾಗಿದ್ದರೆ ಆ ನ್ಯೂನತೆಯನ್ನು ಸಹ ಸರಿಪಡಿಸಿ ಬೇಕಾದ ಛಾಯೆಗಳನ್ನೂ ಅರ್ಧ ಛಾಯಾ ಭಾಗಗಳನ್ನೂ ಅತ್ಯುಜ್ಜ್ವಲ ಭಾಗಗಳನ್ನೂ ಒಳಗೊಂಡ ಫಲಕವನ್ನು ಕೊಡಬಲ್ಲುದು.

ಈ ಯಂತ್ರಗಳಲ್ಲಿ ಕೆಲವಕ್ಕೆ ಸಮತಟ್ಟಾದ ಪ್ರತಿಫಲಿಸುವ ಚಿತ್ರಪಟಲಗಳೇ ಬೇಕು. ಮತ್ತೆ ಕೆಲವಕ್ಕೆ ಪಾರದರ್ಶಕ ಚಿತ್ರಪಟಲಗಳೇ ಬೇಕು. ಇನ್ನು ಕೆಲವು ಯಂತ್ರಗಳು ಈ ಎರಡು ವಿಧದ ಚಿತ್ರಪಟಲಗಳನ್ನೂ ಉಪಯೋಗಿಸಬಲ್ಲುವು. ಚಿತ್ರದ ಮೂಲಪ್ರತಿಗಿಂತ ಚಿಕ್ಕದಾದ ಹಾಗೂ ದೊಡ್ಡದಾದ ನಕಾಶೆ ಕೆತ್ತನೆ ಫಲಕಗಳನ್ನು ಉತ್ಪಾದಿಸುವ ಯಂತ್ರಗಳೂ ಇವೆ. ಕ್ಲಿಸ್ಕೊಗ್ರಾಫ್ ಯಂತ್ರಗಳ ಗುಂಪಿನಲ್ಲಿ ಇತ್ತೀಚೆಗೆ ವಾಡಿಕೆಗೆ ಬಂದಿರುವ ವೇರಿಯೊಕ್ರೋಮೋಗ್ರಾಫ್ ಯಂತ್ರ ಈ ತೆರನಾದ ಚಿತ್ರವನ್ನು ಮೂಲಕ್ಕಿಂತ 20 ಪಾಲು ವಿಸ್ತರಿಸಬಲ್ಲುದಷ್ಟೇ ಅಲ್ಲದೆ ಒಂದು ಅಂಗುಲದಷ್ಟು ಪ್ರದೇಶದಲ್ಲಿ 500ರಿಂದ 1500ರ ವರೆಗೆ ಸಾಲುಗಳನ್ನು ಉಂಟುಮಾಡಲೂ ಬಲ್ಲುದು. ಇಷ್ಟೇ ಅಲ್ಲ, ತ್ರಿವರ್ಣ ಅಥವಾ ನಾಲ್ಕು ವರ್ಣಗಳಲ್ಲಿ ಮುದ್ರಿಸಲು ಬೇಕಾಗುವ 3 ಅಥವಾ 4 ನಕಾಶೆ ಕೆತ್ತನೆಗಳನ್ನು ಒಂದೇ ಮೂಲಪ್ರತಿಯಿಂದ ಏಕಕಾಲದಲ್ಲಿ ಉತ್ಪಾದಿಸುವ ಯಂತ್ರಗಳೂ ಇವೆ. ವೇರಿಯೊ ಕ್ಲಿಸ್ಕೊಗ್ರಾಫ್ ಎಂಬ ಯಂತ್ರದಲ್ಲಿ ನಕಾಶೆ ಕೆತ್ತನೆ ಮಾಡಿದ ಫಲಕವನ್ನಾಗಲೀ ವರ್ಣ ಪರಿಷ್ಕರಣ ಮಾಡಿದ ಮತ್ತು ಹಾಫ್‌ಟೋನ್ ಸ್ಕ್ರೀನ್ ಮಾಡಿದ ಋಣ ಅಥವಾ ಧನ ಚಿತ್ರವನ್ನಾಗಲೀ ಉತ್ಪಾದಿಸಬಹುದು. ಈ ಬಗೆಯ ಯಂತ್ರಗಳಲ್ಲಿ ಹೀಲಿಯೋ ಕ್ಲಿಸ್ಕೊಗ್ರಾಫ್ ಯಂತ್ರವನ್ನುಳಿದು ಮಿಕ್ಕೆಲ್ಲ ಯಂತ್ರಗಳೂ (ಮೂಲ ಪ್ರತಿಯನ್ನು ಸಮತಟ್ಟಾಗಿಯೇ ಆಗಲಿ ಅಥವಾ ವರ್ತುಲಾಕಾರದಲ್ಲಿಯೇ ಆಗಲಿ ತೆಗೆದುಕೊಳ್ಳುವಂಥ ಯಂತ್ರಗಳಲ್ಲಿ) ಇದುವರೆಗೆ ತೆಗೆದುಕೊಳ್ಳಬಲ್ಲ ಅತ್ಯಂತ ಹೆಚ್ಚಿನ ಅಳತೆಯ ಮೂಲಪ್ರತಿಯೆಂದರೆ 18″×14″ ಇರುವಂಥದು; ಮತ್ತು ಇವುಗಳಿಂದ ಪಡೆಯಬಹುದಾದ ನಕಾಶೆ ಕೆತ್ತನೆ ಮಾಡಿರುವ ಫಲಕಗಳ ಅಳತೆ ಸುಮಾರು 17″×13″.

ಬಣ್ಣದ ನಕಾಶೆ ಕೆತ್ತನೆ : ಮೇಲೆ ವಿವರಿಸಿದ ಯಂತ್ರಗಳ ಪೈಕಿ ಕೆಲವಲ್ಲಿ ತ್ರಿವರ್ಣ ಅಥವಾ ನಾಲ್ಕು ವರ್ಣಗಳ ನಕಾಶೆ ಕೆತ್ತನೆ ಮಾಡಿದ ಅಚ್ಚಿನ ಫಲಕಗಳನ್ನು ಉತ್ಪಾದಿಸಿ 3 ಅಥವಾ 4 ಬಣ್ಣಗಳ ಶಾಯಿಗಳನ್ನು ಬಳಸಿ ವರ್ಣರಂಜಿತ ಚಿತ್ರಗಳನ್ನು ಮುದ್ರಿಸಬಹುದು. ಇವು ಮೂಲತಃ ಎಲೆಕ್ಟ್ರಾನಿಕ್ ಕೆತ್ತನೆ ಯಂತ್ರಗಳೇ ಆಗಿದ್ದರೂ ಇವುಗಳಲ್ಲಿ ವರ್ಣಪರಿಷ್ಕರಣ ಮಾಡುವ ಕೆಲವು ಸೌಲಭ್ಯಗಳಿವೆ.

ಉದಾಹರಣೆಗೆ, ಕಲರ್ ಕ್ಲಿಸ್ಕೊಗ್ರಾಫ್ ಯಂತ್ರದಲ್ಲಿ ಪ್ರತಿಯೊಂದು ಬಣ್ಣದ ಫಲಕವನ್ನು ತಯಾರಿಸುವಲ್ಲಿಯೂ ಎರಡು ಪ್ರತ್ಯೇಕ ವರ್ಣಶೋಧಕಗಳನ್ನು ಉಪಯೋಗಿಸಬೇಕು. ಮಜೆಂಟ ಬಣ್ಣದ ಫಲಕವನ್ನು ತಯಾರಿಸುವಲ್ಲಿ ಮೂಲಪ್ರತಿಯ ಮೇಲೆ ಪತನವಾದ ಬೆಳಕಿನ ಕಿರಣವನ್ನು ಎರಡು ದ್ಯುತಿ ವಿದ್ಯುತ್ ಕೋಶಗಳಿಂದ ಗ್ರಹಿಸಲಾಗುತ್ತದೆ. ಇವುಗಳಲ್ಲಿ ಒಂದು ಹಸಿರು ಶೋಧಕದ ಮೂಲಕ ಹಾದು ಬಂದ ಬೆಳಕನ್ನೂ ಮತ್ತೊಂದು ಕೆಂಪು ಶೋಧಕದ ಮೂಲಕ ಹಾದು ಬಂದ ಬೆಳಕನ್ನೂ ಗ್ರಹಿಸುತ್ತವೆ. ಹಸಿರುಶೋಧಕ ದ್ಯುತಿ ವಿದ್ಯುತ್‌ಕೋಶದಿಂದ ಬರುವ ಸಂಕೇತವು ಪರಿಷ್ಕೃತವಲ್ಲದ ಮಜೆಂಟ ಬಣ್ಣದ ಸಹಜ (ಧನ) ಚಿತ್ರ ಸಂಬಂಧಿಯಾಗಿರುತ್ತದೆ; ಮತ್ತು ಕೆಂಪುಶೋಧಕ ದ್ಯುತಿ ವಿದ್ಯುತ್ ಕೋಶದಿಂದ ಬರುವ ಸಂಕೇತವು ಸೂಕ್ತ ರೀತಿಯ ಅಣುವಿದ್ಯುತ್ (ಎಲೆಕ್ಟ್ರಾನಿಕ್) ಮಾರ್ಪಾಟು ಹೊಂದಿದ ಅನಂತರ ಸೈಯಾನ್ ವಿಷಮ (ಋಣ) ಚಿತ್ರ ಸಂಬಂಧಿಯಾಗಿರುತ್ತದೆ. ಈ ಎರಡೂ ಸಂಕೇತಗಳನ್ನು ಒಂದು ಗಾತ್ರ ವ್ಯತ್ಯಾಸ ಮಾಡುವ ಮಾಡ್ಯುಲೇಟರಿನಲ್ಲಿ ಸಂಯೋಜಿಸಿ ಅದರಿಂದ ಬರುವ ಸಂಕೇತವನ್ನು ಕೆತ್ತನೆ ಸಾಧನೆಗೆ ಪ್ರವಹಿಸಲಾಗುತ್ತದೆ. ಇದರಿಂದ ಉತ್ಪಾದಿಸಿದ ಫಲಕ ವರ್ಣಪರಿಷ್ಕೃತವಾದ ಮಜೆಂಟ ಬಣ್ಣದ ಹಾಫ್‌ಟೋನ್ ಅಚ್ಚಿನ ಪಡಿಯಾಗಿರುತ್ತದೆ. ಸೈಯಾನ್ ಮತ್ತು ಹಳದಿ ಹಾಫ್‌ಟೋನ್ ಅಚ್ಚಿನ ಪಡಿಗಳನ್ನೂ ಈ ರೀತಿಯಲ್ಲಿಯೇ ಆದರೆ ಬೇರೆ ಬಣ್ಣದ ಶೋಧಕಗಳನ್ನು ಉಪಯೋಗಿಸಿ ತಯಾರಿಸಲಾಗುವುದು.

ಈ ವಿಧಾನದಲ್ಲಿ ವರ್ಣಪರಿಷ್ಕರಣ ಮಾಡುವ ರೀತಿ ಫೋಟೊಗ್ರಾಫಿಕ್ ಮಾಸ್ಕಿಂಗ್ ವಿಧಾನದಲ್ಲಿ ಅನುಸರಿಸುವ ರೀತಿಯನ್ನು ಸ್ವಲ್ಪಮಟ್ಟಿಗೆ ಹೋಲುತ್ತದೆ. ಆದರೆ ಅಣುವಿದ್ಯುತ್ ವಿಧಾನದಲ್ಲಿ ಕೆಲವು ಹೆಚ್ಚು ಸೌಲಭ್ಯಗಳಿರುವ ಪ್ರಯುಕ್ತ ಈ ವಿಧಾನ ಹೆಚ್ಚು ಅನುಕೂಲಕರವಾಗಿದೆ. ಮೂಲಚಿತ್ರ ಹೇಗೇ ಇದ್ದರೂ ತಕ್ಕಂಥ ವರ್ಣ ಪರಿಷ್ಕಾರವನ್ನು ಕೊಡಬಲ್ಲ ಅನುಕೂಲತೆಯೇ ಇವುಗಳಲ್ಲಿ ಅತ್ಯಂತ ಮುಖ್ಯವಾದದ್ದು. ಅಷ್ಟೇ ಅಲ್ಲದೆ ನಕಾಶೆ ಕೆತ್ತನೆ ಮಾಡುವ ಮೊದಲೇ ಯಾವುದೇ ಭಾಗಕ್ಕೆ ಸಂಬಂಧಿಸಿದಂತೆ ಕೆತ್ತಲಾಗುವ ಪ್ರತಿಯೊಂದು ಫಲಕದಲ್ಲಿ ಉಂಟಾಗಬಹುದಾದ ಚುಕ್ಕೆಯ ಪ್ರಮಾಣವನ್ನು ಮೊದಲಲ್ಲಿಯೇ ನಿರ್ದಿಷ್ಟಗೊಳಿಸಬಹುದು.

ವರ್ಣ ಕ್ಲಿಸ್ಕೊಗ್ರಾಫ್ ಯಂತ್ರದ ಬೆಲೆ ಇತರ ನಕಾಶೆ ಕೆತ್ತನೆ ಮಾಡುವ ಯಂತ್ರಗಳ ಬೆಲೆಗಳಿಗಿಂತ ಕಡಿಮೆ. ಈ ಯಂತ್ರದಿಂದ ಲಭಿಸುವ ವರ್ಣ ಪರಿಷ್ಕರಣ ಮೂಲಚಿತ್ರದ ನಿಜವಾದ ವರ್ಣಕ್ಕೆ ಸರಿಸುಮಾರು 90%ಸಮನಾಗಿರುತ್ತದೆ. 100%ಪಾಲು ವರ್ಣ ಪರಿಷ್ಕರಣವನ್ನು ಕೊಡಬಲ್ಲ ಯಂತ್ರಗಳೂ ಇವೆ.

(ಡಿ.ಎಸ್.)

**ಎಲೆಕ್ಟ್ರಾನಿಕ್ ವರ್ಣವೀಕ್ಷಕಗಳು :** ನಕಾಶೆ ಕೆತ್ತನೆಯಲ್ಲಿ (ಎನ್‌ಗ್ರೇವಿಂಗ್) ಎಲೆಕ್ಟ್ರಾನಿಕ್ ನಕಾಶೆ ಕೆತ್ತನೆ ಸಾಧನೆಗಳಂತೆಯೇ ಇರುವ, ಆದರೆ ಅಂತಿಮ ಉತ್ಪನ್ನವಾಗಿ ನಕಾಶೆ ಕೆತ್ತಿದ ಫಲಕದ ಬದಲು ಸ್ಕ್ರೀನ್ ಮಾಡಲ್ಪಟ್ಟ ಅಥವಾ ನಿರಂತರ ಟೋನ್ ಫೋಟೊಗ್ರಾಫಿಕ್ ಫಿಲಂ ಅಥವಾ ಫಲಕ ನೀಡುವ ಸಾಧನಗಳು (ಎಲೆಕ್ಟ್ರಾನಿಕ್ ಕಲರ್ ಸ್ಕ್ಯಾನರ್ಸ್). ಹೀಗಾಗಿ ಇವು ಸಾಂಪ್ರದಾಯಿಕ ಲಿಪಿ ಮುದ್ರಣ ಕ್ಷೇತ್ರಕ್ಕಿಂತ ಲಿಥೊ ಮತ್ತು ಗ್ರವ್ಯೂರ್ ಫಲಕ ತಯಾರಿಕೆಯ ಕ್ಷೇತ್ರದಲ್ಲಿ ಬಹಳ ಉಪಯೋಗಕರವಾಗಿವೆ. ಪೌಡರ್‌ರಹಿತ ಕೊರೆತ (ಎಚ್ಚಿಂಗ್) ಮತ್ತು ಇತರ ಸುಧಾರಿತ ಪದ್ಧತಿಗಳಿಂದ ಚಿತ್ರಗಳನ್ನು ಕೆತ್ತಿ ಲಿಪಿಮುದ್ರಣ ರೋಟರಿ ಯಂತ್ರಗಳಲ್ಲಿ ಮುದ್ರಿಸುವುದೇ ಆದರೆ ಆಗಲೂ ಈ ಯಂತ್ರಗಳು ಅಷ್ಟೇ ಉಪಯುಕ್ತವಾಗುತ್ತವೆ. ಉದಾಹರಣೆಗೆ ಈ ಯಂತ್ರದಲ್ಲಿ ಪಡೆದ ಸ್ಕ್ರೀನ್ ಮಾಡಿದ ವರ್ಣ ಪ್ರತ್ಯೇಕಿಕರಣಗಳನ್ನು (ಕಲರ್ ಸೆಪರೇಷನ್ಸ್) ಬೇಕಾದಲ್ಲಿ ಅಚ್ಚು ವಸ್ತುವಿನೊಡನೆ (ಟೈಪ್ ಮ್ಯಾಟರ್) ಸಿಲಿಂಡರ್ ಮೇಲೆ ಮುದ್ರಿಸಿ ಆ ಸಿಲಿಂಡರನ್ನು ಡಾ ಕೊರೆತ (ಎಚ್ಚಿಂಗ್) ಯಂತ್ರದಲ್ಲಿ ಒಂದೇ ಬಾರಿಗೆ ಕೆತ್ತನೆ ಮಾಡಿ ಮುದ್ರಣಕ್ಕೆ ಸಜ್ಜುಗೊಳಿಸಬಹುದು.

ವೇರಿಯೊ-ಕ್ಲಿಸ್ಕೊಗ್ರಾಫ್ ಯಂತ್ರ ವರ್ಣವೀಕ್ಷಕಗಳ ವರ್ಗಕ್ಕೆ ಸಹ ಸೇರುತ್ತದೆ. ಕಾರಣ, ಲಿಪಿ ಮುದ್ರಣ ಪಡಿಯಚ್ಚುಗಳನ್ನು (ಬ್ಲಾಕ್ಸ್) ಕೆತ್ತನೆಮಾಡುವುದರ ಜೊತೆಗೆ ಅದು ನಿರಂತರ ಟೋನ್ ಅಥವಾ ಸ್ಕ್ರೀನ್ ಮಾಡಿದ ಋಣಗಳನ್ನು (ನೆಗೆಟಿವ್ಸ್) ಅಥವಾ ಧನಗಳನ್ನೂ (ಪಾಸಿಟಿವ್ಸ್) ತಯಾರಿಸಬಲ್ಲುದು. ಕೇವಲ ವರ್ಣವೀಕ್ಷಕಗಳಂತೆ ಮಾತ್ರ ಕಾರ್ಯವೆಸಗುವ ಸರಳವಾದ, ಆದರೆ ವಿಶೇಷವಾಗಿ ಅದೇ ಕಾರ್ಯಕ್ಕೆ ಮಾತ್ರ ನಿರ್ಮಿಸಲ್ಪಟ್ಟಿರುವ ಯಂತ್ರಗಳೂ ಹಲವಿವೆ. ಇವುಗಳ ಪೈಕಿ ವರ್ಣನಕಾಶೆ (ಕಲರ್ ಗ್ರಾಫ್) ಎಂಬುದು ಒಂದು. ಇದರಲ್ಲಿ ಪೂರ್ಣವಾಗಿ ವರ್ಣಪರಿಷ್ಕೃತವಾದ ಧನಗಳನ್ನು ಉತ್ಪಾದಿಸಬಹುದು. ಇದು ಒಂದೇ ವರ್ಣರಂಜಿತ ಮೂಲಪ್ರತಿಯೊಡನೆ ನೇರವಾಗಿ ಪ್ರವರ್ತಿಸಲಾರದು. ಮೂರು ಸರಳವಾದ ವರ್ಣ ವಿಭಾಜಕ ಋಣಗಳನ್ನು ಅಳವಡಿಸಿ ಕೊಟ್ಟಾಗ ಮಾತ್ರ ತನ್ನ ಕಾರ್ಯವನ್ನು ಮಾಡಬಲ್ಲುದು. ಮತ್ತು ಏಕಕಾಲದಲ್ಲಿ ಎಲ್ಲ ಮೂರು ಅಥವಾ ನಾಲ್ಕು ವರ್ಣ ಪರಿಷ್ಕೃತ ಧನಗಳನ್ನು ತಯಾರಿಸಬಲ್ಲುದು.

(ಡಿ.ಎಸ್.)

**ಎಲೆಕ್ಟ್ರಾನಿಕ್ಸ್ :** ನಿರ್ವಾತ, ಅನಿಲ ಮತ್ತು ಅರ್ಧವಾಹಕ ವಿದ್ಯುದ್ವಾಹಕಗಳ ಮೂಲಕ ಎಲೆಕ್ಟ್ರಾನುಗಳ ಹರಿಯುವಿಕೆಯ ತತ್ತ್ವಗಳ ಆಧಾರದ ಮೇಲೆ ರೂಪಗೊಂಡಿರುವ ಶಾಸ್ತ್ರ; ಎಲೆಕ್ಟ್ರಿಕಲ್ ಎಂಜಿನಿಯರಿಂಗಿನ ಒಂದು ವಿಶಿಷ್ಟ ವಿಭಾಗ. ವಿದ್ಯುತ್ ಮೋಟಾರು, ತಾಪಪ್ರಭಾದೀಪ (ಇನ್‌ಕ್ಯಾಂಡೆಸೆಂಟ್ ಲ್ಯಾಂಪ್) ಮೊದ

ಲಾದುವುಗಳ ವಿವರಗಳು ಎಲೆಕ್ಟ್ರಾನಿಕ್ಸ್ ವಿಭಾಗಕ್ಕೆ ಸೇರುವುದಿಲ್ಲ. ಕಾರಣ, ಇಲ್ಲಿ ಎಲೆಕ್ಟ್ರಾನುಗಳು ನಿರ್ವಾತ, ಅನಿಲ ಅಥವಾ ಅಪೂರ್ಣ ವಿದ್ಯುದ್ವಾಹಕಗಳ ಮೂಲಕ ಹರಿಯುವುದಿಲ್ಲ ; ಬದಲಾಗಿ ಉತ್ತಮ ವಿದ್ಯುದ್ವಾಹಕಗಳ ಮೂಲಕ ಹರಿಯುತ್ತವೆ. ನಿರ್ವಾತ ನಳಿಗೆ, ಅನಿಲಪೂರಿತ ನಳಿಗೆ, ಟ್ರಾನ್ಸಿಸ್ಟರ್ ಮೊದಲಾದುವುಗಳು ಎಲೆಕ್ಟ್ರಾನಿಕ್ಸ್ ವಿಭಾಗಕ್ಕೆ ಸೇರುತ್ತವೆ. ಕಾರಣ, ಇಲ್ಲಿ ಎಲೆಕ್ಟ್ರಾನುಗಳು ನಿರ್ವಾತ, ಅನಿಲ ಇಲ್ಲವೇ ಅಪೂರ್ಣ ವಿದ್ಯುದ್ವಾಹಕಗಳ ಮೂಲಕ ಹರಿಯುತ್ತವೆ.

ಬೆಳವಣಿಗೆಯ ವಿವಿಧ ಹಂತಗಳು : ವಿದ್ಯುತ್ಪ್ರವಾಹ ಕಾಂತಕ್ಷೇತ್ರವನ್ನು ಉಂಟು ಮಾಡುತ್ತದೆಂದು ಡೆನ್ಮಾರ್ಕಿನ ಎಚ್.ಸಿ. ಎರ್‌ಸ್ಟೆಡ್ ಎಂಬ ವಿಜ್ಞಾನಿ ತೋರಿಸಿಕೊಟ್ಟ (1820). ಚಲನೆಯಲ್ಲಿರುವ ಅಯಸ್ಕಾಂತದ ಬಳಿಯಿರುವ ವಿದ್ಯುದ್ವಾಹಕದಲ್ಲಿ ವಿದ್ಯುತ್ ಉತ್ಪಾದನೆಯಾಗುವುದೆಂದು ಬ್ರಿಟಿಷ್ ವಿಜ್ಞಾನಿ ಮೈಕೆಲ್ ಫ್ಯಾರಡೆ ಪ್ರಕಟಿಸಿದ (1831). ವಿದ್ಯುಚ್ಛಕ್ತಿ ಮತ್ತು ಕಾಂತತತ್ತ್ವಗಳನ್ನು ಕುರಿತು ಆಗ ದೊರೆತಿದ್ದ ಆಧಾರಗಳಿಂದ ಬ್ರಿಟಿಷ್ ಭೌತಶಾಸ್ತ್ರಜ್ಞ ಜೇಮ್ಸ್ ಕ್ಲಾರ್ಕ್ ಮ್ಯಾಕ್ಸ್‌ವೆಲ್ ವಿದ್ಯುತ್ಕಾಂತ ತರಂಗಗಳ ಅಸ್ತಿತ್ವವನ್ನು ಸೂಚಿಸಿದ (1864). ವಿದ್ಯುತ್ಪ್ರವಾಹ ಅನಿಲಗಳ ಮೂಲಕ ಹರಿಯಬಲ್ಲದೆಂದು ಥಾಮಸ್ ಅಲ್ವ ಎಡಿಸನ್ ತೋರಿಸಿಕೊಟ್ಟ (1883). ವಿದ್ಯುತ್ಕಾಂತ ತರಂಗಗಳ ರೂಪದಲ್ಲಿ ಶಕ್ತಿ ಆಕಾಶದ ಮೂಲಕ ಹರಿಯುವುದೆಂದು ಜರ್ಮನ್ ಭೌತವಿಜ್ಞಾನಿ ಹೀನರಿಚ್ ಹರ್ಟ್ಸ್ ಪ್ರಯೋಗ ಮೂಲಕ ತೋರಿಸಿ (1887) ಮ್ಯಾಕ್ಸ್‌ವೆಲ್ಲನ ವೈಜ್ಞಾನಿಕ ಊಹೆ ಸತ್ಯವೆಂದು ಸಾರಿದ. ಹರ್ಟ್ಸ್‌ನ ಪ್ರಯೋಗದಲ್ಲಿ ಶಕ್ತಿ ವಿಸರಣೆಗೊಂಡ ದೂರ ಕೆಲವೇ ಅಡಿಗಳಾದರೂ ಯಾವುದೇ ವಾಹಕದ ಸಹಾಯವಿಲ್ಲದೆ ರೇಡಿಯೊ ಅಲೆಗಳು ಸ್ಥಳಾಂತರಗೊಳ್ಳಬಹುದೆಂಬುದು ವಿದಿತವಾಯಿತು. ವಿದ್ಯುತ್ಕಾಂತ ತರಂಗಗಳು ದೃಷ್ಟಿಗೆ ಅಗೋಚರವಾದರೂ ಅವು ಬೆಳಕಿನ ವೇಗದಲ್ಲಿ ಚಲಿಸುತ್ತವೆಂದು ಹರ್ಟ್ಸ್ ತೋರಿಸಿಕೊಟ್ಟ. ರೇಡಿಯೊ ತರಂಗಗಳು ಮತ್ತು ಬೆಳಕಿನ ತರಂಗಗಳು ವಿದ್ಯುತ್ಕಾಂತ ತರಂಗಗಳ ಎರಡು ವಿವಿಧ ರೂಪಗಳು. ವಿದ್ಯುತ್ಕಾಂತ ತರಂಗಗಳಲ್ಲಿ ಶಕ್ತಿ ವಿದ್ಯುತ್ ಮತ್ತು ಕಾಂತತ್ವದ ರೂಪದಲ್ಲಿರುತ್ತದೆ. ಮುಂದೆ ರಾಂಟ್‌ಜನ್ ಎಂಬಾತ ಎಕ್ಸ್‌ಕಿರಣಗಳನ್ನು ಕಂಡುಹಿಡಿದ (1895). ಅದೇ ವರ್ಷ ಮಾರ್ಕೊನಿ ದೂರಸಂಪರ್ಕಕ್ಕಾಗಿ ಉದ್ದವಾದ ಸರಿಗೆಯ ಆಂಟೆನದ ಒಂದು ರೇಡಿಯೊ ಮಾದರಿಯನ್ನು ನಿರ್ಮಿಸಿದ. 1901ರಲ್ಲಿ ಅವನು ಅಟ್ಲಾಂಟಿಕ್ ಸಾಗರದ ಒಂದು ಅಂಚಿನಿಂದ ಇನ್ನೊಂದು ಅಂಚಿಗೆ ತಂತಿವಿರಹಿತ ಪ್ರಸಾರವನ್ನು ಕಳಿಸಲು ಸಮರ್ಥನಾದ. ಅಲ್ಲಿಂದೀಚೆಗೆ ರೇಡಿಯೊ ವಿಧಾನದಲ್ಲಾದ ತೀವ್ರವಾದ ಪ್ರಗತಿಗೆ ನಿರ್ವಾತ ನಳಿಗೆಗಳ ಬಳಕೆ ಮತ್ತು ಆವಿಷ್ಕಾರಗಳು ಕಾರಣ. ಫ್ಲೆಮಿಂಗ್ ಎಂಬಾತ ಡಯೋಡನ್ನು ಕಂಡುಹಿಡಿದ (1905). ವಿದ್ಯುತ್ ಸಂಕೇತಗಳನ್ನು ವರ್ಧಿಸುವಂಥ ಆಡಿಯೋನ್ ನಳಿಗೆಗಳನ್ನು ಫೋರೆಸ್ಟ್ ಎಂಬಾತ ತಯಾರಿಸಿದ (1906). 1920ರಲ್ಲಿ ಅಮೆರಿಕದ ಪಿಟ್ಸ್‌ಬರ್ಗಿನಲ್ಲಿ ಕ್ರಮಬದ್ಧವಾದ ರೇಡಿಯೊ ಪ್ರಸಾರ ಪ್ರಾರಂಭವಾಯಿತು. ವ್ಯವಸ್ಥಿತವಾದ ಟೆಲಿವಿಷನ್ ಪ್ರಸಾರ 1945ರಲ್ಲಿ ಕಾಣಿಸಿಕೊಂಡಿತು. ಅಪೂರ್ಣ ವಿದ್ಯುದ್ವಾಹಕಗಳ ತತ್ತ್ವ 1930ರಲ್ಲೇ ಪ್ರತಿಪಾದಿಸಲ್ಪಟ್ಟಿದ್ದರೂ ಟ್ರಾನ್ಸಿಸ್ಟರಿನ ಉದಯವಾದದ್ದು 1948ರಲ್ಲಿ. ಟ್ರಾನ್ಸಿಸ್ಟರಿನ ಸಂಶೋಧನೆ ಎಲೆಕ್ಟ್ರಾನಿಕ್ಸ್ ಕ್ಷೇತ್ರದಲ್ಲೇ ಒಂದು ಮೈಲಿಗಲ್ಲು. ಈ ಸಂಶೋಧನೆಯ ಕೀರ್ತಿ ಜೆ. ಬಾರ್ಡೀನ್ ಮತ್ತು ಡಬ್ಲ್ಯು. ಎಚ್. ಬ್ರೇಟನ್ ಎಂಬುವರಿಗೆ ಸಲ್ಲುತ್ತದೆ. ಕ್ರಿಯಾವಿಶೇಷಗಳ ಒಂದು ವಿಹಂಗಮ ನೋಟ ಹೀಗಿದೆ :

ರೆಕ್ಟಿಫಿಕೇಶನ್ : ಪರ್ಯಾಯ ಪ್ರವಾಹವನ್ನು ಏಕಮುಖ ಪ್ರವಾಹವನ್ನಾಗಿ ಪರಿವರ್ತಿಸುವ ಕಾರ್ಯ.

ವರ್ಧನೆ : ದುರ್ಬಲವಾದ ವಿದ್ಯುತ್ ಸಂಕೇತಗಳನ್ನು ಪ್ರಬಲಗೊಳಿಸಿ ಬಳಕೆಗೆ ಯೋಗ್ಯವಾಗುವಂತೆ ಮಾಡುವ ಕ್ರಿಯೆ (ಆಂಪ್ಲಿಫಿಕೇಶನ್).

ಆಂದೋಳನ : ಹೆಚ್ಚು ಆವರ್ತಸಂಖ್ಯೆ (ಫ್ರೀಕ್ವೆನ್ಸಿ) ಇರುವ ಪರ್ಯಾಯ ಪ್ರವಾಹದ ಉತ್ಪಾದನೆ (ಆಸಿಲೇಷನ್). ಒಂದು ವರ್ಧಕದ ಕೊಡುಗೆಯ ಒಂದಂಶವನ್ನು ಅದಕ್ಕೆ ಮರಳಿ ಒದಗಿಸಿ ಅದು ಸ್ವಪೋಷಕವಾಗುವಂತೆ ಮಾಡುವುದು ಆಂದೋಳನದ ವಿಧಾನ.

ಆವರ್ತಸಂಖ್ಯೆ ಪರಿವರ್ತನೆ : ಒಂದು ಆವರ್ತಸಂಖ್ಯೆ ಇರುವ ತರಂಗವನ್ನು ಇನ್ನೊಂದು ಆವರ್ತಸಂಖ್ಯೆಯ ತರಂಗದೊಡನೆ ಬೆರೆಸಿದಾಗ ದೊರೆಯುವ ಉತ್ಪನ್ನದಲ್ಲಿ, ಆ ಎರಡು ಆವರ್ತಸಂಖ್ಯೆಗಳ ವ್ಯತ್ಯಾಸದಷ್ಟು ಆವರ್ತಸಂಖ್ಯೆ ಇರುವ ವಿಶೇಷಗಳು ಉತ್ಪನ್ನವಾದ ಹೊಸತರಂಗದಲ್ಲೂ ಕಂಡುಬರುತ್ತವೆ.

ಮಾಡ್ಯುಲೇಶನ್ : ವಿದ್ಯುತ್ಕಾಂತ ತರಂಗಗಳ ಮೂಲಕ ಒಂದೆಡೆಯಿಂದ ಇನ್ನೊಂದೆಡೆಗೆ ಸಮಾಚಾರವನ್ನು ಪ್ರಸರಿಸಲು ಶ್ರವ್ಯ ತರಂಗಗಳನ್ನು ಬಳಸುವಂತಿಲ್ಲ. ಈ ರೀತಿಯ ಪ್ರಸಾರಕ್ಕೆ ರೇಡಿಯೊ ತರಂಗಗಳ ಬಳಕೆ ಅನಿವಾರ್ಯ. ಹೆಚ್ಚು ಆವರ್ತಸಂಖ್ಯೆ ಇರುವ ರೇಡಿಯೊ ತರಂಗವನ್ನು ಸಮಾಚಾರಗರ್ಭಿತವಾದ ಶ್ರವ್ಯ ತರಂಗವಾಹಕದಂತೆ ಮಾಡಬೇಕಾಗುವುದು. ವಾಹಕ ತರಂಗದ ಪರಿಮಾಣವನ್ನು ಅಥವಾ ಆವರ್ತಸಂಖ್ಯೆಯನ್ನು ಶ್ರವ್ಯ ತರಂಗದ ಪರಿಳಿತಕ್ಕನುಗುಣವಾಗಿ ಮಾರ್ಪಡಿಸುವ ಕ್ರಿಯೆಯೇ ಮಾಡ್ಯುಲೇಶನ್. ಹೀಗೆ ಮಾಡ್ಯುಲೇಶನ್ ಮಾಡಲ್ಪಟ್ಟ ವಾಹಕತರಂಗವನ್ನು ಏರಿಯಲಿನಿಂದ ಬಿತ್ತರಿಸಲಾಗುವುದು.

ಡಿಮಾಡ್ಯುಲೇಶನ್ : ಮಾಡ್ಯುಲೇಶನ್‌ಗೊಂಡ ವಾಹಕ ತರಂಗದಿಂದ ಶ್ರವ್ಯ ತರಂಗವನ್ನು ಮರಳಿ ಪಡೆಯುವ ಕ್ರಿಯೆ.

ಪ್ರಭಾಚಿತ್ರ ಉತ್ಪನ್ನ (ಲೈಟ್ ಇಮೇಜ್ ಪ್ರೊಡಕ್ಷನ್) : ಎಲೆಕ್ಟ್ರಾನುಗಳು ಎಲೆಕ್ಟ್ರಾನ್ ಕಿರಣನಳಿಗೆಯ ಪ್ರತಿದೀಪ್ತಶೀಲ ತೆರೆಯನ್ನು (ಫ್ಲೂರಸೆಂಟ್ ಸ್ಕ್ರೀನ್) ಸ್ಪರ್ಶಿಸಿದಾಗ ಆ ಸ್ಪರ್ಶಸ್ಥಾನದಿಂದ ಬೆಳಕಿನ ವಿಸರ್ಜನೆಯಾಗುತ್ತದೆ. ಯಾವುದೊಂದು ತರಂಗದ ಸ್ವರೂಪಚಿತ್ರ ಅಥವಾ ಇನ್ನಾವುದೇ ದೃಶ್ಯಚಿತ್ರಗಳನ್ನು ತೆರೆಯ ಮೇಲೆ ಮೂಡಿಸಲು ಕ್ಯಾಥೋಡ್ ಕಿರಣ ನಳಿಗೆಗಳು ಉಪಯೋಗವಾಗುತ್ತವೆ.

ದ್ಯುತಿವಿದ್ಯುತ್‌ಕ್ರಿಯೆ (ಫೋಟೊ ಎಲೆಕ್ಟ್ರಿಕ್ ಆಕ್ಷನ್) : ಕೆಲವು ವಸ್ತುಗಳ ಮೇಲ್ಮೈಯನ್ನು ಬೆಳಕಿನ ಕಿರಣಗಳು ಸ್ಪರ್ಶಿಸಿದಾಗ ಆ ವಸ್ತುವಿನಿಂದ ಎಲೆಕ್ಟ್ರಾನುಗಳ ವಿಸರ್ಜನೆಯಾಗುತ್ತದೆ. ಇವು ಪ್ರವಾಹರೂಪದಲ್ಲಿ ಹರಿಯುತ್ತವೆ. ಇದರ ಪ್ರಮಾಣ ಬೆಳಕಿನ ಆವರ್ತಸಂಖ್ಯೆ ಮತ್ತು ಅದರ ತೀಕ್ಷ್ಣತೆಯನ್ನು ಅವಲಂಬಿಸಿದೆ. ಈ ತತ್ತ್ವವನ್ನು ಬಳಸಿ ಕಾರ್ಯನಿರ್ವಹಿಸುವ ನಳಿಗೆಗಳಿಗೆ ದ್ಯುತಿವಿದ್ಯುತ್ ನಳಿಗೆಗಳೆಂದು ಹೆಸರು.

ಎಲೆಕ್ಟ್ರಾನಿಕ್ಸಿನ ಬಳಕೆ : ಎಲೆಕ್ಟ್ರಾನಿಕ್ಸಿನ ತತ್ತ್ವ ಮತ್ತು ಗುಣ ವಿಶೇಷಗಳನ್ನು ಆಧರಿಸಿ ತಯಾರಿಸಿದ ಸಾಧನಗಳ ವೈವಿಧ್ಯ ಅಸಂಖ್ಯಾತ. ವಿದ್ಯುತ್ತಿನ ಬಳಕೆಯ ಕ್ಷೇತ್ರವನ್ನು ಸ್ಥೂಲವಾಗಿ ಸಂಪರ್ಕ (ಕಮ್ಯೂನಿಕೇಶನ್), ಕೈಗಾರಿಕಾ ನಿಯಂತ್ರಣ, ಬೆಳಕು ಪಡೆಯುವಿಕೆ ಮತ್ತು ಉಪಕರಣಗಳು ಎಂಬ ಭಾಗಗಳಾಗಿ ವಿಭಾಗಿಸಬಹುದು.

ಸಂಪರ್ಕ ವಿಭಾಗದಲ್ಲಿ ಎಲೆಕ್ಟ್ರಾನಿಕ್ಸ್ ಉಪಕರಣಗಳ ಬಳಕೆ ಅತ್ಯಧಿಕವಾಗಿದೆ. ಶ್ರವ್ಯ, ರೇಡಿಯೊ, ಟೆಲಿವಿಷನ್, ರಾಡರ್ ಮೊದಲಾದುವು ಈ ಪ್ರಮುಖ ಉಪವಿಭಾಗಗಳು.

ಕಳೆದ ದಶಕದಿಂದ ಕೈಗಾರಿಕಾಕ್ಷೇತ್ರದಲ್ಲಿ ಎಲೆಕ್ಟ್ರಾನಿಕ್ಸಿನ ಬಳಕೆ ಬಲುವಾಗಿ ವಿಸ್ತರಿಸಿದೆ. ಪರ್ಯಾಯ ಪ್ರವಾಹದಿಂದ ಏಕಮುಖ ಪ್ರವಾಹದ ಉತ್ಪಾದನೆ ಏಕಪ್ರಮುಖ ಪ್ರವಾಹದಿಂದ ಪರ್ಯಾಯ ಪ್ರವಾಹದ ಉತ್ಪಾದನೆ, ಆವರ್ತಸಂಖ್ಯೆಯ ಪರಿವರ್ತನೆ, ಸ್ವಯಂಚಾಲಿತ ನಿಯಂತ್ರಣ, ಮೋಟಾರುಗಳ ವೇಗನಿಯಂತ್ರಣ, ಏಕಮುಖ ಮತ್ತು ಪರ್ಯಾಯ ಪ್ರವಾಹೋತ್ಪಾದಕಗಳ ಒತ್ತಡ ನಿಯಂತ್ರಣ, ಕಿಡಿವಿರಹಿತ ತೆರೆ-ಮುಚ್ಚು ಗುಂಡಿಗಳು (ಆನ್-ಆಫ್ ಸ್ವಿಚುಗಳು) ವಿದ್ಯುತ್ ಬೆಸುಗೆಯ ಕಾಲಾವಧಿ ನಿಯಂತ್ರಣ, ಬೆಳಕಿನ ನಿಯಂತ್ರಣ, ಉಷ್ಣತಾ ನಿಯಂತ್ರಣ ಮೊದಲಾದುವು ಔದ್ಯೋಗಿಕ ಕ್ಷೇತ್ರದಲ್ಲಿ ಎಲೆಕ್ಟ್ರಾನಿಕ್ಸಿನ ಉಪಯೋಗದ ಕೆಲವು ಉದಾಹರಣೆಗಳು.

ಬೆಳಕನ್ನುಂಟುಮಾಡಲು ಮತ್ತು ಅದನ್ನು ನಿಯಂತ್ರಿಸಲು ಎಲೆಕ್ಟ್ರಾನಿಕ್ಸ್ ಸಾಧನಗಳು ಅತ್ಯಾವಶ್ಯಕ. ನಿಯಾನ್ ನಳಿಗೆಗಳು, ಸೋಡಿಯಂ ಅನಿಲದೀಪಗಳು ಮರ್ಕ್ಯುರಿ ಅನಿಲದೀಪಗಳು ಮತ್ತು ಪ್ರತಿದೀಪ್ತಶೀಲ ದೀಪಗಳು ಎಲೆಕ್ಟ್ರಾನಿಕ್ಸಿನ ಬಳಕೆಯ ಉತ್ತಮ ನಿದರ್ಶನಗಳು.

ಎಲೆಕ್ಟ್ರಾನಿಕ್ಸಿನ ಉಪಕರಣಗಳನ್ನು ಉಪಯೋಗಿಸಿ ಬಲುಬೇಗ ಮತ್ತು ಸೂಕ್ಷ್ಮವಾಗಿ ವಿದ್ಯುತ್ ಮತ್ತಿತರ ಪ್ರಮಾಣಗಳನ್ನು ಅಳೆಯುವುದು ಸಾಧ್ಯ. ಒತ್ತಡ, ಪ್ರವಾಹ, ವಿದ್ಯುತ್, ಆವರ್ತಸಂಖ್ಯೆ ನಿರೋಧ ಮೊದಲಾದ ವಿದ್ಯುತ್ ಪ್ರಮಾಣಗಳನ್ನು ಕಾಲಾವಧಿ, ವೇಗ ದೂರ, ಬೆಳಕಿನ ತೀಕ್ಷ್ಣತೆ ಮೊದಲಾದ ಅವಿದ್ಯುತ್ ಪ್ರಮಾಣಗಳನ್ನೂ ಅಳೆಯಬಹುದು. ಎಲೆಕ್ಟ್ರಾನಿಕ್ ಗಣಕಯಂತ್ರಗಳನ್ನು ಬಳಸಿ ಗಣಿತದ ಹಲವು ಕ್ಲಿಷ್ಟ ಸಮಸ್ಯೆಗಳನ್ನು ಬಹಳ ಸುಲಭವಾಗಿ ಬಿಡಿಸಬಹುದು. (ಕೆ.ಸಿ.ಜಿ.)

**ಎಲೆಕ್ಟ್ರೊ ಎನ್ಸೆಫಲೋಗ್ರಫಿ :** ಮಿದುಳಿನ ವಿದ್ಯುತ್ಸಂಬಂಧ ಚಟುವಟಿಕೆಗಳನ್ನು ಲೇಖಿಸುವ ಮತ್ತು ಅವನ್ನು ಅರ್ಥವಿಸುವ ತಂತ್ರ (ವಿದ್ಯುನ್ಮಸ್ತಿಷ್ಕ ಲೇಖನ). ಈ ತಂತ್ರದಲ್ಲಿ ಉಪಯೋಗಿಸುವ ಯಂತ್ರದ ಹೆಸರು ಎಲೆಕ್ಟ್ರೊ ಎನ್ಸೆಫಲೋಗ್ರಾಫ್ (ವಿದ್ಯುನ್ಮಸ್ತಿಷ್ಕ ಲೇಖ).

ಪ್ರಾಣಿಗಳ ಜೀವಕ್ರಿಯೆಗಳೆಲ್ಲವುಗಳ ಹಿಂದೆಯೂ ಒಂದಲ್ಲ ಒಂದು ವಿಧವಾದ ವಿದ್ಯುತ್ಕ್ರಿಯೆ ಇದೆ ಎಂಬುದನ್ನು ಕೇಟನ್ ಮೊಟ್ಟಮೊದಲು ಸ್ಥೂಲವಾಗಿ ತೋರಿಸಿದ(1874). ಮುಂದೆ 1890ರಲ್ಲಿ ಬೆಕ್ ಎಂಬಾತ ನಾಯಿಯ ಮಿದುಳಿನಲ್ಲಿ ಸತತವಾಗಿ ವಿದ್ಯುಚ್ಛಕ್ತಿ ಉತ್ಪಾದನೆಯಾಗುತ್ತಿರುತ್ತದೆ, ಅಲ್ಲದೇ ಅದರ ಕಣ್ಣುಗಳಿಗೆ ಬೀಳುವ ನೋಟ ಬದಲಾದಂತೆ ಬೆಳಕಿನ ತೀಕ್ಷ್ಣತೆ ಹೆಚ್ಚು ಕಡಿಮೆಯಾದಂತೆ ಮಿದುಳಿನ ವಿದ್ಯುತ್ಕ್ರಿಯೆಯಲ್ಲಿಯೂ ಹೆಚ್ಚು ಕಡಿಮೆಗಳು ಕಂಡುಬರುತ್ತವೆಂದು ತೋರಿಸಿದ. ಆದರೆ ಪ್ರಯೋಗಗಳನ್ನು ಜರ್ಮನಿಯ ಕಾಫ್‌ಮನ್ 1912ರಲ್ಲಿ ಪುನಃ ಸಮರ್ಥನೆ ಮಾಡುವವರೆಗೆ ಇವು ವೈದ್ಯರ ಮತ್ತು ಇತರ ವಿಜ್ಞಾನಿಗಳ

ಗಮನಕ್ಕೆ ಬಂದಂತೆ ಕಾಣುವುದಿಲ್ಲ. ಅಲ್ಲಿಂದ 12 ವರ್ಷಗಳು ಕಳೆದ ಮೇಲೆ 1924ರಲ್ಲಿ ಬರ್ಗರ್ ಎಂಬ ಮತ್ತೊಬ್ಬ ಜರ್ಮನ್ ವೈದ್ಯಶಾಸ್ತ್ರಜ್ಞ ಮನುಷ್ಯನ ಮಿದುಳಿನ ವಿದ್ಯುತ್ಕ್ರಿಯೆಗಳನ್ನು ನಿರೂಪಿಸುವ ಸಾಹಸದ ಕೆಲಸಕ್ಕೆ ಕೈಹಾಕಿದ. ಆರೇಳು ವರ್ಷಗಳ ಈತನ ನಿರಂತರ ಶ್ರಮದ ಪರಿಣಾಮವಾಗಿ ಮಾನವನ ಮಿದುಳಿನ ಹಲವಾರು ಚಿತ್ತಪ್ರವೃತ್ತಿಗಳನ್ನು ಪ್ರತಿಬಿಂಬಿಸುವ ನೂರಾರು ವಿದ್ಯುತ್ಕ್ರಿಯಾಚಿತ್ರ ನಿರೂಪಣೆಗಳು ಪ್ರಕಟವಾದುವು. ಆದರೆ ಈ ಚಿತ್ರನಿರೂಪಣಗಳನ್ನಾಗಲಿ ಅವುಗಳಿಂದ ಬರ್ಗರ್ ಸಾಧಿಸಿದ ತೀರ್ಮಾನಗಳನ್ನಾಗಲಿ ಆಗಿನ ವೈದ್ಯವಿದ್ವಾಂಸರು ವಿಶ್ವಾಸದಿಂದ ಸ್ವಾಗತಿಸಲಿಲ್ಲ. ಇದಕ್ಕೆ ಎದೆಗುಂದದೆ ಬರ್ಗರ್ ತನ್ನ ಅನ್ವೇಷಣೆಗಳನ್ನು ಮುಂದುವರಿಸಿದ. ಈತನ ಶ್ರಮಕ್ಕೆ ಮನ್ನಣೆ 1924ರಲ್ಲಿ ದೊರೆಯಿತು. ಆ ವರ್ಷ ಇಂಗ್ಲೆಂಡಿನ ಪ್ರಮುಖ ವೈದ್ಯಶಾಸ್ತ್ರಜ್ಞ ಏಡ್ರಿಯನ್ ಎಂಬಾತ ಬರ್ಗರನ ವಿದ್ಯುತ್ಕ್ರಿಯಾನಿರೂಪಣೆಗಳು ತೀರ ನಿರರ್ಥಕಗಳಲ್ಲ, ಅವುಗಳ ವ್ಯಾಸಂಗದಿಂದ ಮಾನವನ ಮಿದುಳುರೋಗಗಳ ನಿದಾನ, ಚಿಕಿತ್ಸೆಗಳಿಗೆ ಅಲ್ಪಸ್ವಲ್ಪ ಅನುಕೂಲವಾದೀತು, ಇಂಥ ಪ್ರಯೋಗಗಳನ್ನು ತಿರಸ್ಕರಿಸುವ ಮುನ್ನ ಅವನ್ನು ಕೂಲಂಕಷವಾಗಿ ಪರೀಕ್ಷಿಸಬೇಕಾದದ್ದು ವೈದ್ಯವಿಜ್ಞಾನಿಗಳ ಕರ್ತವ್ಯ ಎಂಬ ತನ್ನ ಅಭಿಪ್ರಾಯವನ್ನು ಪ್ರಕಟಿಸಿ ಬರ್ಗರನನ್ನು ಅಭಿನಂದಿಸಿದ. ಅಂದಿನಿಂದ ಈ ಶಾಖೆ ಹಲವು ದಿಕ್ಕುಗಳಲ್ಲಿ ಬೆಳೆಯುತ್ತ ಬಂದಿದೆ.

ಮಿದುಳು ಕೋಟ್ಯನುಕೋಟಿ ನರ್ವ್‌ಸೆಲ್ಲುಗಳ, ಅಂದರೆ ರಜ್ಜುಕೋಶಗಳ ಮತ್ತು ಆ ಅಸಂಖ್ಯಾತ ರಜ್ಜುಕೋಶಗಳನ್ನು ಒಂದಕ್ಕೊಂದನ್ನು ಪರಸ್ಪರ ಕೂಡಿಸಿರುವ ಅಸಂಖ್ಯಾತ ರಜ್ಜುಗಳ ಅಥವಾ ನರಗಳ ವ್ಯವಸ್ಥೆ. ಪ್ರತಿಯೊಂದು ರಜ್ಜುಕೋಶವೂ ಒಂದು ಪುಟ್ಟ ವಿದ್ಯುತ್ಕೋಶ, ಅಂದರೆ ನಾವು ಟಾರ್ಚ್‌ಲೈಟಿನಲ್ಲಿ ಉಪಯೋಗಿಸುವಂಥ ಸೆಲ್. ಟಾರ್ಚ್‌ಲೈಟಿನ ವಿದ್ಯುತ್ಕೋಶಕ್ಕೂ ಮಿದುಳಿನ ರಜ್ಜುಕೋಶಕ್ಕೂ ಇರುವ ವ್ಯತ್ಯಾಸ ಈ ಲೇಖನದ ದೃಷ್ಟಿಯಿಂದ ಇಷ್ಟೇ : ಟಾರ್ಚ್‌ಲೈಟಿನ ವಿದ್ಯುತ್ಕೋಶದ ಶಕ್ತಿ ಒಂದು ವೋಲ್ಟಿನ ಹಲವಾರು ಲಕ್ಷಾಂಶಗಳಷ್ಟು ಮಾತ್ರ. ಇನ್ನೊಂದು ವ್ಯತ್ಯಾಸವೂ ಇದೆ. ಟಾರ್ಚ್‌ಲೈಟಿನ ವಿದ್ಯುಚ್ಛಕ್ತಿ ಹೆಚ್ಚು ಕಡಿಮೆ ಏಕರೀತಿಯಾಗಿರುತ್ತದೆ. ರಜ್ಜುಕೋಶದ ವಿದ್ಯುತ್ತು ಚಂಚಲ. ರಜ್ಜುಕೋಶ ಜೀವಂತವಾಗಿರುವಷ್ಟು ಕಾಲ ಅದರ ವಿದ್ಯುತ್ತು ವಿರಾಮವಿಲ್ಲದೆ ಏರಿ ಇಳಿದು ಏರುತ್ತಿರುತ್ತದೆ.

ಈ ಏರಿಳಿತಗಳನ್ನು ಚಿತ್ರಿಸುವ ವಿಧಾನ ಹೀಗೆ. ತಿರುಪು ಹಿಡಿಗಳಿರುವ ಬೆಳ್ಳಿಯ ಎರಡು ಬಿಲ್ಲೆಗಳನ್ನು ಒಬ್ಬ ಮನುಷ್ಯನ ತಲೆಯ ಮೇಲೆ ಬಿಗಿಸಿಟ್ಟರೆ, ಆ ಬಿಲ್ಲೆಗಳ ಕೆಳಗಿರುವ ಮಿದುಳಿನ ಪ್ರಾಂತದ ರಜ್ಜುಕೋಶಗಳು ಉತ್ಪತ್ತಿಮಾಡುವ ವಿದ್ಯುಚ್ಛಕ್ತಿ ಬಿಲ್ಲೆಗಳನ್ನು ಪ್ರವೇಶಿಸುತ್ತದೆ. ಆದರೆ ಮೇಲೆ ತಿಳಿಸಿರುವಂತೆ ಈ ವಿದ್ಯುತ್ತು ಅತಿ ಕ್ಷೀಣ ಶಕ್ತಿಯುದಾದ್ದರಿಂದ ಅದನ್ನು ವಿದ್ಯುದ್ವರ್ಧಕಗಳಿಂದ ವರ್ಧಿಸಬೇಕಾದದ್ದು ಅತ್ಯವಶ್ಯ. ವಿದ್ಯುದ್ವರ್ಧಕಗಳು ವಿಶೇಷ ರೀತಿಯವಾಗಿರಬೇಕು. ಏಕೆಂದರೆ ಇವುಗಳ ವರ್ಧಕ ಸಾಮರ್ಥ್ಯ ಹತ್ತಿಪ್ಪತ್ತು ಲಕ್ಷಗಳಷ್ಟಾದರೂ ಇರಬೇಕಾಗುತ್ತದೆ. ಇದಕ್ಕಿಂತ ಮುಖ್ಯವಾಗಿ ರಜ್ಜುಕೋಶಗಳು ಉತ್ಪತ್ತಿಸುವ ವಿದ್ಯುತ್ತಿನ ಏರಿಳಿತಗಳ ರೂಪವನ್ನು ಕಿಂಚಿತ್ತೂ ವಿರೂಪಮಾಡದೆ ಇವು ಈ ಅಗಾಧ ಪ್ರಮಾಣದಲ್ಲಿ ವರ್ಧಿಸಬೇಕು. ಹೀಗೆ ವರ್ಧನಗೊಂಡ ಪ್ರವಾಹವನ್ನು ಪ್ರವಾಹಮಾಪಕ (ಗ್ಯಾಲ್ವನೊಮೀಟರ್) ಒಂದರ ತುದಿಗಳಿಗೆ ಹರಿಸಿದರೆ ಆಗ ಮಾಪಕದ ಮುಳ್ಳು ಪ್ರವಾಹಕ್ಕನುಗುಣವಾಗಿ ಕಂಪಿಸುತ್ತದೆ. ಮುಳ್ಳಿನ ಬದಲು ಒಂದು ಲೇಖನಿಯನ್ನು ಪ್ರವಾಹಮಾಪಕಕ್ಕೆ ಜೋಡಿಸಿದರೆ ಮತ್ತು ಲೇಖನಿಯ ಕೆಳಗೆ ಒಂದು ಕಾಗದದ ಹಾಳೆಯನ್ನು ಸಮವೇಗದಲ್ಲಿ ಸರಿಯುವಂತೆ ಏರ್ಪಡಿಸಿದರೆ ಲೇಖನಿ ರಜ್ಜುಕೋಶಗಳ ವಿದ್ಯುತ್ತಿನ ವೃದ್ಧಿಕ್ಷಯಗಳ ರೂಪವನ್ನು ಕಾಗದದ ಮೇಲೆ ಬರೆಯುತ್ತದೆ.

ಹೀಗೆ ಬರೆದ ರೇಖಾಚಿತ್ರ ಎರಡು ಬಿಲ್ಲೆಗಳ ಸಮೀಪದಲ್ಲಿರುವ ಮಿದುಳಿನ ಭಾಗ ಮಾತ್ರದ ವಿದ್ಯುತ್ಕ್ರಿಯಾಚಿತ್ರ. ಮಿದುಳಿನ ಎಲ್ಲ ಭಾಗಗಳ ವಿದ್ಯುತ್ಕ್ರಿಯಾಚಿತ್ರ ನಮಗೆ ಬೇಕಾದರೆ ತಲೆಯ ಮೇಲೆಲ್ಲ ನಾವು 20–30 ಬಿಲ್ಲೆಗಳ ಜಾಲವನ್ನು ಬಂಧಿಸಿ ಅವುಗಳಲ್ಲೆರಡನ್ನು ಒಂದೊಂದು ವಿದ್ಯುದ್ವರ್ಧಕಕ್ಕೆ ಸೇರಿಸಿ ಆ ವಿದ್ಯುದ್ವರ್ಧಕಗಳೊಂದೊಂದಕ್ಕೂ ಬೇರೆ ಬೇರೆ ಲೇಖನಿಗಳನ್ನು ಜೋಡಿಸಬೇಕು. ಆಗ ಮಿದುಳಿನ ವಿವಿಧ ಭಾಗಗಳ ವಿದ್ಯುತ್ಕ್ರಿಯಾಚಿತ್ರಗಳನ್ನು ಲೇಖನಿಗಳು ಏಕಕಾಲದಲ್ಲಿಯೆ ಸರಿಯುತ್ತಿರುವ ಹಾಳೆಯ ಮೇಲೆ ಬರೆಯುತ್ತವೆ. ಇಂಥ ಯಂತ್ರವೇ ವಿದ್ಯುನ್ಮಸ್ತಿಷ್ಕ ಲೇಖಿ—ಎಲೆಕ್ಟ್ರೊ ಎನ್‌ಸೆಫಲೋಗ್ರಾಫ್. ಈ ಯಂತ್ರ ಬರೆಯುವ ರೇಖಾಚಿತ್ರ ವ್ಯೂಹಕ್ಕೆ ಎಲೆಕ್ಟ್ರೊ ಎನ್‌ಸೆಫಲೋಗ್ರಾಂ ಅಂದರೆ ವಿದ್ಯುನ್ಮಸ್ತಿಷ್ಕ ಲೇಖನ ಎಂದು ಹೆಸರು. ಈ ಎರಡು ಹೆಸರುಗಳೂ ನಾಲಗೆಯನ್ನು ತೊಡರಿಸುವಂಥವೇ ಆದ್ದರಿಂದ ಎರಡನ್ನೂ ಸಂಕ್ಷೇಪವಾಗಿ ಇಇಜಿ (ಅಥವಾ ವಿಮಲೇ) ಎಂಬ ಒಂದೇ ಸಂಕೇತ ನಾಮದಿಂದ ಕರೆಯುವುದು ರೂಢಿಯಾಗಿದೆ.

ಈಗಿನ ಕಾಲದಲ್ಲಿ ಎಂಟಕ್ಕಿಂತ ಕಡಿಮೆ ಸಂಖ್ಯೆಯ ವರ್ಧಕಗಳಿರುವ ಇಇಜಿಗಳನ್ನು ಬಳಸುತ್ತಿರುವುದು ವಿರಳ. ಇಂಥ ಇಇಜಿಗಳನ್ನು ಎಂಟು ನಾಲೆಗಳ ಇಇಜಿ ಎಂದು ಕರೆಯುತ್ತಾರೆ. ಹನ್ನೆರಡು ಹದಿನಾರು ನಾಲೆಗಳ ಇಇಜಿಗಳೂ ಉಪಯೋಗದಲ್ಲಿದೆ. ಈ ಯಂತ್ರಗಳು ಚಿತ್ರಿಸುವುದು ಅಕ್ಷರಶಃ ನಮ್ಮ ಹಣೆಯಬರೆಹವನ್ನು !




ಚಿತ್ರ 1 A. ಶ್ರವಣವಿಷಯಜ್ಞನೊಬ್ಬನ ಇಇಜಿ. 0 ಎಂದು ಗುರುತಿಸಿರುವ ಕ್ಷಣದಲ್ಲಿ ಈತ ಕಣ್ಣು ತೆರೆದ. ಇದರ ಪರಿಣಾಮವಾಗಿ ಹರಿದ ವಿದ್ಯುತ್ತಿನ ಪ್ರವಾಹವನ್ನು 1—8 ನಾಲೆಗಳು ತೋರಿಸಿವೆ. ಆದರೆ ಎಂಟು ನಾಲೆಗಳಲ್ಲಿಯೂ ಲೇಖನದ ತಾಳ 0ಯ ಎರಡು ಪಕ್ಕಗಳಲ್ಲಿಯೂ ಅಂದರೆ ಕಣ್ಣುಮುಚ್ಚಿದ್ದಾಗ ಹೇಗೋ ತೆರೆದಾಗಲೂ ಹಾಗೆಯೇ ಏಕರೀತಿಯಾಗಿದೆ. ದಶತಾಳಗೀತ ಹುಟ್ಟಿಯೇ ಇಲ್ಲ.

B. ಸಾಮಾನ್ಯ ವಿಷಯಜ್ಞನೊಬ್ಬನ ಇಇಜಿ. ಇಲ್ಲಿ 0ಯ ಎಡಗಡೆ ಅಂದರೆ ಕಣ್ಣುಮುಚ್ಚಿದ್ದಾಗ ದಶತಾಳಗೀತ ಎದ್ದು ಕಾಣುತ್ತಿದೆ. 0ಯ ಬಲಗಡೆ ದಶತಾಳಗೀತ ಅಳಿಸಿ ಹೋಗುತ್ತಿದೆ. (ಈ ಲೇಖನಗಳ ಪಕ್ಕದಲ್ಲಿ ತಲೆಯ ಮೇಲ್ಭಾಗವನ್ನು ರೇಖಾಚಿತ್ರವಾಗಿ ಸೂಚಿಸಿದೆ.) ಮೂಗು, ಕಿವಿಗಳನ್ನು ಗಮನಿಸಿ. ಈ ರೇಖಾಚಿತ್ರದಲ್ಲಿ ಗುರುತಿಸಿರುವ 1, 2............7, 8 ಎಂಬ ಮಿದುಳಿನ ಭಾಗಗಳಲ್ಲಿ ಹುಟ್ಟಿದ ವಿದ್ಯುತ್ತನ್ನು ಲೇಖನದ 1, 2............7 8ರ ಗೀಟುಗಳು ಅಲೆಯ ರೂಪದಲ್ಲಿ ಚಿತ್ರಿಸಿವೆ. ಎಂಟು ಲೇಖನಗಳ ಮೇಲಿನ ಮತ್ತು ಕೆಳಗಿನ ರೇಖೆಗಳಲ್ಲಿ ಕಾಣುವ ಏರುಗಳು ಸೆಕೆಂಡುಗಳನ್ನು ಎಣಿಸುತ್ತವೆ.

ಎಲೆಕ್ಟ್ರೊ ಎನ್ಸೆಫಲೊಗ್ರಫಿ ಚಿತ್ರಿಸುವ ರೇಖಾವ್ಯೂಹವನ್ನು ಸಹ ಸಂಕ್ಷೇಪವಾಗಿ ಈಇಜಿ ಎಂದೇ ಕರೆಯುವೆವು. ಕಣ್ಣುಮುಚ್ಚಿಕೊಂಡು ನಿಶ್ಚಿಂತನಾಗಿ ಮಲಗಿರುವ ಮನುಷ್ಯನೊಬ್ಬನ ತಲೆಯ ಹಿಂಭಾಗದಿಂದ ಹುಟ್ಟಿ ಬಂದ ಈಇಜಿಗಳು ಸಾಮಾನ್ಯವಾಗಿ ಸುಸ್ಪಷ್ಟಾಕಾರದ ತರಂಗಗಳ ರೂಪ ತಾಳುತ್ತವೆ. ಇವುಗಳ ಆವರ್ತಸಂಖ್ಯೆ




ಚಿತ್ರ 2 ದೃಷ್ಟಿ ವಿಷಯಜ್ಞನೊಬ್ಬನ ಇಇಜಿ. S ನ ಎರಡು ಪಕ್ಕಗಳಲ್ಲಿಯೂ ಅಂದರೆ ಕಣ್ಣುಗಳನ್ನು ತೆರೆದಿದ್ದಾಗ ಮತ್ತು ಮುಚ್ಚಿಕೊಂಡಿದ್ದಾಗ ದಶತಾಳಗೀತ ಏಕರೀತಿಯಲ್ಲಿ ನುಡಿಯುತ್ತಿದೆ.

ಸೆಕೆಂಡೊಂದಕ್ಕೆ 10ರ ಸುಮಾರಿನಲ್ಲಿರುತ್ತದೆ. ಕಣ್ಣುಮುಚ್ಚಿಕೊಂಡಿರುವ ಮನುಷ್ಯ ಕಣ್ಣುತೆರೆದಕೂಡಲೆ ಅಥವಾ ಮುಚ್ಚಿಕೊಂಡಿದ್ದರೂ ಲೆಕ್ಕಮಾಡಲು ತೊಡಗಿದರೆ ಇಲ್ಲವೇ ಯಾವ ವಿಷಯವಾಗಿಯಾಗಲಿ ಚಿಂತನೆಮಾಡತೊಡಗಿದರೆ ಈ ತರಂಗಗಳು ಮಾಯವಾಗಿ ಅವುಗಳ ಸ್ಥಾನದಲ್ಲಿ ಸೆಕೆಂಡಿಗೆ 20–25ರ ಅನಿರ್ದಿಷ್ಟಾಕಾರದ ಅಲೆಗಳು ($\beta$ ತರಂಗಗಳು) ರೂಪುಗೊಳ್ಳುತ್ತವೆ.

ತಲೆಯ ಹಿಂಭಾಗದಲ್ಲಿರುವುದು ನಮ್ಮ ಮಿದುಳಿನ ದೃಷ್ಟಿಕೇಂದ್ರ. ನಾವು ಕಣ್ಣುಮುಚ್ಚಿಕೊಂಡು ಶಾಂತಚಿತ್ತರಾಗಿರುವಾಗ ದೃಷ್ಟಿಕೇಂದ್ರದ ರಜ್ಜುಕೋಶಗಳು ನಮ್ಮ ಕಣ್ಣುಗಳು ನೋಡಬೇಕಾದದ್ದು ಏನನ್ನು ಎಂಬುದನ್ನು ಹುಡುಕುತ್ತ ಇರುತ್ತವೆ, ಹೀಗೆ ಹುಡುಕುವಾಗ ಸೆಕೆಂಡಿಗೆ ಹತ್ತು ತಾಳದ ಗೀತವನ್ನು ($\alpha$ ರಿದಂ) ಹಾಡುತ್ತಿರುತ್ತವೆ. ಕಣ್ಣಿಗೆ ಯಾವುದಾದರೊಂದು ನೋಟ ಸಿಕ್ಕಿದ ಕೂಡಲೇ ಹುಡುಕುವುದು ನಿಂತುಹೋಗಿ ಮನಸ್ಸು ನೋಟದಲ್ಲಿ ನಿಲ್ಲುತ್ತದೆ; ಹತ್ತು ತಾಳದ ಗೀತ ಅಡಗಿ ಹೋಗುತ್ತದೆ. ಆದ್ದರಿಂದ ಈ ದಶತಾಳಗೀತವನ್ನು ದೃಷ್ಟ್ಯಾಕಾಂಕ್ಷೆಯ ಗೀತ ಎಂದು ಕರೆಯಬಹುದು.

ಆದರೆ ಕೆಲವರು ಕಣ್ಣುಮುಚ್ಚಿಕೊಂಡಿರಲಿ ತೆರೆದಿರಲಿ ಈ ದಶತಾಳಗೀತ ಅವರ ಈಇಜಿಯಲ್ಲಿ ರೂಪುಗೊಳ್ಳುವುದೇ ಇಲ್ಲ. ಇಂಥವರು ತಮ್ಮ ಮನಸ್ಸಿನಲ್ಲಿಯೇ ಯಾವಾಗಲೂ ಚಿತ್ರಗಳನ್ನು ಕಾಣುತ್ತಿರುತ್ತಾರೆ. ಇವರು ಯಾವ ಮಾತನ್ನು ಕೇಳಿದರೂ ಅದರ ಚಿತ್ರ ಅವರ ಕಣ್ಣ ಮುಂದೆ ನಿಂತಂತಿರುತ್ತದೆ. ಇಂಥವರನ್ನು ದೃಷ್ಟಿ ವಿಷಯಜ್ಞರು ಎಂದು ಕರೆಯಬಹುದು.

ಇದಕ್ಕೆ ಪ್ರತಿಯಾಗಿ ಮತ್ತೆ ಕೆಲವರ ದಶತಾಳಗೀತ ಅಳಿಸಿಹೋಗುವುದೇ ಇಲ್ಲ. ಕಣ್ಣು ತೆರೆದಿದ್ದಾಗ, ವಿಚಾರಪರವಾಗಿದ್ದಾಗ ಕೂಡ ಇವರ ರಜ್ಜುಕೋಶಗಳು ಸೆಕೆಂಡಿಗೆ ಹತ್ತುತಾಳ ಹಾಕುತ್ತಲೇ ಇರುತ್ತವೆ. ಇವರ ದೃಷ್ಟ್ಯಾಕಾಂಕ್ಷೆಗೆ ವಿರಾಮವೇ ಇಲ್ಲ. ಇಂಥವರನ್ನು ಶ್ರವಣ ವಿಷಯಜ್ಞರು ಅಥವಾ ಸ್ಪರ್ಶ ವಿಷಯಜ್ಞರು ಎಂದು ಕರೆಯಬಹುದು. ಸಾಮಾನ್ಯ ಜನಸಮುದಾಯದಲ್ಲಿ ನೂರಕ್ಕೆ ಇಪ್ಪತ್ತು ಮಂದಿ ದೃಷ್ಟಿ ವಿಷಯಜ್ಞರು, ಇಪ್ಪತ್ತು ಮಂದಿ ಶ್ರವಣ ವಿಷಯಜ್ಞರು, ಉಳಿದ ಅರುವತ್ತು ಮಂದಿ ಸಾಮಾನ್ಯ ವಿಷಯಜ್ಞರು ಇರುವುದಾಗಿ ಕಂಡುಬಂದಿದೆ (ಚಿತ್ರ 1, 2, 3.)

ಕೆಲವರ ಗಂಡಸ್ಥಳದಿಂದ ಹುಟ್ಟಿಬಂದ ಈಇಜಿಯಲ್ಲಿ ಸೆಕೆಂಡಿಗೆ ಐದಾರರ ಸಂಖ್ಯೆಯ ತರಂಗಗಳು ಒಂದೊಂದು ಸಲ ಕಾಣಿಸಿಕೊಳ್ಳುತ್ತವೆ. ಇವರು ಭಾವೋದ್ರಿಕ್ತರಾದಾಗ, ಇವರಿಗೆ ಸಿಟ್ಟುಬಂದಾಗ ಈ ಐದು ತಾಳದ ಗೀತ ($\theta$ ರಿದಂ) ಸಾಮಾನ್ಯವಾಗಿ ಹೊರಡುತ್ತದೆ. ಇವರು ಸಮಾಧಾನರಾದಾಗ ಈ ಗೀತ ಮಾಯವಾಗುತ್ತದೆ. ಆದ್ದರಿಂದ ಪಂಚತಾಳಗೀತ ಸುಖಾಕಾಂಕ್ಷೆಯ ಗೀತ. ಜಿತೇಂದ್ರಿಯನ ಗಂಡಸ್ಥಳ ಪಂಚತಾಳಗೀತವನ್ನು ಎಂದೆಂದೂ ಹಾಡುವುದಿಲ್ಲ.

ಮತ್ತೆ ಕೆಲವರಲ್ಲಿ ಆಗಾಗ್ಗೆ ಸೆಕೆಂಡಿಗೆ ಮೂರರ ಸುಮಾರಿನ ಮಂದ್ರ ತರಂಗಗಳು ಕಾಣಿಸಿಕೊಳ್ಳುತ್ತವೆ. ಅಂಥವರು ಅಪಸ್ಮಾರ ರೋಗಿಗಳು; ಕಡೆಯ ಪಕ್ಷ ಸುಪ್ತ ಅಪಸ್ಮಾರ ರೋಗಿಗಳಾದರೂ ಆಗಿರುತ್ತಾರೆ. ಮೂರು ತಾಳದ ಗೀತ ($\delta$ ರಿದಂ) ರಜ್ಜುಕೋಶಗಳ ಅವನತ ಸ್ಥಿತಿಯನ್ನೂ ಅನಾರೋಗ್ಯ ಸ್ಥಿತಿಯನ್ನೂ ಸೂಚಿಸುತ್ತದೆ. ಎರಡು ಮೂರು ವರ್ಷಗಳೊಳಗಿನ ಮಕ್ಕಳ ಮತ್ತು ಪೂರ್ಣ ನಿದ್ರಾವಸ್ಥೆಯಲ್ಲಿರುವ ಆರೋಗ್ಯವಂತರ ಈಇಜಿಗಳಲ್ಲಿಯೂ ಮೂರರ ತರಂಗಗಳು ಕಾಣುತ್ತವೆ. ಒಟ್ಟಿನಲ್ಲಿ ತ್ರಿತಾಳಗೀತೆಯನ್ನು ಮರಣಗೀತೆ ಅಥವಾ ಲಯಗೀತೆ ಎಂದು ಕರೆಯಬಹುದು.




ಚಿತ್ರ 3 A. ನಿದ್ರಿಸುತ್ತಿರುವವನ ಇಇಜಿ. B. ದ್ಯುತಿಜನಿತ ಅಪಸ್ಮಾರವನ್ನು ಚಿತ್ರಿಸಿರುವ ಇಇಜಿ. ರೋಗಿಯ ಕಣ್ಣುಗಳ ಮೇಲೆ ಆವರ್ತವಾಗಿ ಬೀಳುವ ಬೆಳಕು, ಕತ್ತಲೆಗಳು ಪ್ರಭಾವಿದ್ಯುತ್ಕೋಶದ (P) ಮೇಲೂ ಬೀಳುವಂತೆ ಮಾಡಿದೆ. ಈ ಕೋಶದಲ್ಲಿ ಬೆಳಕಿನ ಕಾಂತಿಗನುಗುಣವಾಗಿ ಹುಟ್ಟುವ ವಿದ್ಯುತ್ತನ್ನು ಎಂಟನೆಯ ನಾಲೆಗೊಯ್ಯುದೆ. ಬೆಳಕು ಸೆಕೆಂಡೊಂದಕ್ಕೆ 10 ಸಲದಂತೆ ಕಣ್ಣ ಮೇಲೆ ಬಿದ್ದಾಗ ಎಲ್ಲ ನಾಲೆಗಳಲ್ಲಿಯೂ (1—7)ರ ವರೆಗೆ ವಿದ್ಯುತ್ತಿನ ತಳಮಳ ಎದ್ದಿರುವುದನ್ನು ಕಾಣಬಹುದು.

ಈ ವಿದ್ಯುದ್ರೂಪಗಳನ್ನು ದಶತಾಳಗೀತೆ, ಪಂಚತಾಳಗೀತೆ, ತ್ರಿತಾಳಗೀತೆ ಎಂದು ಕರೆದಿರುವುದು ಸಂಪೂರ್ಣವಾಗಿ ಆಲಂಕಾರಿಕ ದೃಷ್ಟಿಯಿಂದಲ್ಲ. ಏಕೆಂದರೆ ಇಇಜಿಯ ವಿದ್ಯುದ್ವರ್ಧಕದಿಂದ ಹೊರಬಿದ್ದ ವಿದ್ಯುತ್ಪ್ರವಾಹವನ್ನು ಪ್ರವಾಹಮಾಪಕದಲ್ಲಿ ಹರಿಯಿಸುವುದರ ಬದಲು ಲೌಡ್‌ಸ್ಪೀಕರ್ ಅಥವಾ ಪ್ರಬಲವಾಚಿಯಲ್ಲಿ ಹರಿಯಿಸಿದರೆ ಗೀತಗಳು ನಮಗೆ ಹತ್ತು, ಐದು, ಮೂರು ತಾಳಗಳಾಗಿ ಅಸಂದಿಗ್ಧವಾಗಿ ಕೇಳಿಬರುತ್ತವೆ.

ಸಾಮಾನ್ಯಸ್ಥಿತಿಯಲ್ಲಿರುವಾಗ ಜನಗಳ ಇಇಜಿಗಳನ್ನು ಬರೆಸುವುದರ ಜೊತೆಗೆ ಅವರ ದೃಷ್ಟಿಕೇಂದ್ರಗಳನ್ನೋ ಶ್ರವಣಕೇಂದ್ರಗಳನ್ನೋ ವಿಶೇಷವಾಗಿ ಉದ್ದೀಪನಗೊಳಿಸಿ ಇಇಜಿಗಳನ್ನು ಬರೆಸಿದರೆ ಅವರ ವ್ಯಕ್ತಿತ್ವ ಮತ್ತಷ್ಟು ಸ್ಪಷ್ಟವಾಗಿ ಹೊರಬೀಳುತ್ತದೆ. ಬಹುಜನರ ಲೇಖನಗಳು ಹೀಗೆ ಉದ್ದೀಪನಗೊಂಡಾಗಲೂ ಏನೂ ಬದಲಾವಣೆಯನ್ನು ತೋರುವುದಿಲ್ಲ. ಆದರೆ ಕೆಲವರು ಎಲ್ಲ ವಿಧದಲ್ಲಿಯೂ ಆರೋಗ್ಯವಂತರಾಗಿಯೇ ಕಂಡರೂ ಅವರ ಕಣ್ಣಮೇಲೆ ಆವರ್ತವಾಗಿ ಬೆಳಕು, ನೆರಳು, ಬೆಳಕು, ನೆರಳುಗಳು ಒಂದು ಗೊತ್ತಾದ ತಾಳದಲ್ಲಿ—ಸಾಮಾನ್ಯವಾಗಿ ದಶತಾಳದಲ್ಲಿ—ಬಿದ್ದಾಗ ಅವರ ಇಇಜಿ ಒಂದು ದೊಡ್ಡ ತಳಮಳವನ್ನೇ ಬಿರುಗಾಳಿಯನ್ನೇ ಚಿತ್ರಿಸುತ್ತದೆ. (ಚಿತ್ರ 3). ಇಂಥವರು ದ್ಯುತಿಜನಿತ ಅಪಸ್ಮಾರ ರೋಗಿಗಳು (ಫೋಟೊಜೆನಿಕ್ ಎಪಿಲೆಪ್ಟಿಕ್ಸ್). ಇವರು ದಟ್ಟವಾದ ಗಿಡಮರಗಳಿರುವ ರಸ್ತೆಯಲ್ಲಿ ವಾಹನಗಳಲ್ಲಿ ವೇಗವಾಗಿ ಹೋಗುತ್ತಿರುವಾಗ ಸೂರ್ಯನ ಬೆಳಕು ಮರಗಳ ಎಲೆಗಳ ಸಂದುಗಳಿಂದ ಆವರ್ತಕಾಂತಿ ಇವರ ರಜ್ಜುಕೋಶಗಳ ತಾಳಗತಿಗೆ ಸಮವಾದರೆ, ಹಾಗೇ ಅದೇ ಆವರ್ತದಲ್ಲಿ ಬೆಳಕು ಕಣ್ಣಮೇಲೆ ಬೀಳುತ್ತಿರುವಷ್ಟು ಕಾಲವೂ ಇವರಿಗೆ ತಮ್ಮ ಇಂದ್ರಿಯಗಳ ಮೇಲಿರುವ ಹತೋಟಿ ತಪ್ಪಿಹೋಗುತ್ತದೆ. ಇವರು ನಷ್ಟಪ್ರಜ್ಞರಾಗುತ್ತಾರೆ. ದ್ಯುತಿಜನಿತ ಅಪಸ್ಮಾರ ರೋಗಿಗಳು ಪ್ರಾಯಶಃ ನಮ್ಮ ಜನಸಂಖ್ಯೆಯಲ್ಲಿ ಇನ್ನೂರಕ್ಕೆ ಒಬ್ಬರಿಗಿಂತ ಕಡಿಮೆ ಇದ್ದಾರೆ. ಇದೇ ರೀತಿಯಲ್ಲಿ ಧ್ವನಿಜನಿತ ಅಪಸ್ಮಾರ ರೋಗಿಗಳೂ (ಆಡಿಯೊಜೆನಿಕ್ ಎಪಿಲೆಪ್ಟಿಕ್ಸ್ ) ಇರುವುದುಂಟು. ಇವರ ಸಂಖ್ಯೆ ಎಂಟುನೂರಕ್ಕೆ ಒಬ್ಬರಿಗಿಂತಲೂ ಕಡಿಮೆ ಇರಬೇಕು. ಹಾಗೆಯೇ ಕೆಲವು ಜಾತಿಯ ಶ್ರವಣ ಭ್ರಾಂತರ ಕಣ್ಣಮೇಲೆ ಆವರ್ತಕಾಂತಿ ಬಿದ್ದಾಗ ಅವರ ಇಇಜಿಗಳು ಒಂದು ವಿಚಿತ್ರ ರೀತಿಯಲ್ಲಿ ದ್ಯುತಿ ಸ್ಪಂದನಗಳನ್ನು ಅನುಸರಿಸುವಂತೆ ಈಚಿನ ಕೆಲವು ಅನ್ವೇಷಣೆಗಳಿಂದ ಕಂಡುಬಂದಿದೆ. ಮಂದಬುದ್ಧಿಗಳ ಇಇಜಿಗಳಲ್ಲಿ ಸುಮಾರು ಅರ್ಧ ಮಿನಿಟಿನ ಅವಧಿಯ ಲೇಖನ ನೋಡಿದರೆ ಸಾಕು, ಅವರ ಇಇಜಿಯ ವ್ಯಕ್ತಿ ವೈಶಿಷ್ಟ್ಯ ಪತ್ತೆಯಾಗುತ್ತದೆ. ಸಾಮಾನ್ಯ ಬುದ್ಧಿವಂತರ ಇಇಜಿಗಳ ವೈಶಿಷ್ಟ್ಯವನ್ನು ಗುರುತಿಸಬೇಕಾದರೆ ನಾಲ್ಕೈದು ಮಿನಿಟುಗಳ ಲೇಖನವನ್ನಾದರೂ ಪರೀಕ್ಷಿಸಬೇಕಾಗುತ್ತದೆ. ಮೇಧಾವಿಗಳ ಇಇಜಿಗಳ ವ್ಯಕ್ತಿ ವೈಶಿಷ್ಟ್ಯ ಮನದಟ್ಟಾಗಬೇಕಾದರೆ 30–40 ಮಿನಿಟುಗಳ ಲೇಖನವನ್ನು ಶೋಧಿಸಬೇಕಾಗುತ್ತದೆ.

ಮುಖ್ಯವಾಗಿ ಇಇಜಿಯ ಲಿಪಿಗಳಲ್ಲಿ ಅಡಗಿರುವ ರಹಸ್ಯಗಳಲ್ಲಿ ನೂರರಲ್ಲೊಂದು ಭಾಗವನ್ನು ಕೂಡ ನಾವಿನ್ನೂ ಹೊರಗೆಡಹಿಲ್ಲವೆಂಬುದನ್ನು ಮರೆಯಬಾರದು. ಇದೇ ಅಭಿಪ್ರಾಯವನ್ನೆ ಇಂಗ್ಲೆಂಡಿನ ಸುಪ್ರಸಿದ್ಧ ಶರೀರಶಾಸ್ತ್ರಜ್ಞ, ಅದರಲ್ಲಿಯೂ ವಿಶೇಷವಾಗಿ ರಜ್ಜುಶಾಸ್ತ್ರದಲ್ಲಿ ನಿಷ್ಣಾತನಾಗಿದ್ದ ಸರ್ ಚಾರ್ಲ್ಸ್ ಷೆರಿಂಗ್‌ಟನ್ ರೂಪಕದ ಸುಂದರ ಭಾಷೆಯಲ್ಲಿ ಹೀಗೆ ಹೇಳಿದ್ದಾನೆ—ನಮ್ಮ ಮಿದುಳು ಒಂದು ಐಂದ್ರಜಾಲಿಕ ಮಗ್ಗದಂತೆ ಇದೆ ; ಮಗ್ಗದಲ್ಲಿ ಥಳಥಳಿಸುವ ಲಾಳಿಗಳು ಕ್ಷಣಕ್ಷಣವೂ ಕರಗಿ ಅಳಿಸಿಹೋಗುತ್ತಿರುವ ಅದೆಷ್ಟೋ ಮಾದರಿ ನವುರುಬಟ್ಟೆಗಳನ್ನು ನೇಯುತ್ತಿವೆ; ಪ್ರತಿಯೊಂದು ಮಾದರಿಯೂ ಅರ್ಥಪೂರ್ಣವಾಗಿದ್ದರೂ ಯಾವುದೊಂದೂ ಶಾಶ್ವತವಲ್ಲ. ಹೀಗೆ ಅರ್ಥಪೂರ್ಣವಾಗಿದ್ದರೂ ನಮಗೆ ಅರ್ಥ ತೋರುತ್ತಿಲ್ಲದಿರುವ ಕೊರತೆಯನ್ನು ನೀಗಿಸುವುದಕ್ಕೆಂದೇ ಪ್ರಪಂಚದ ಹಲವಾರು ಸಂಸ್ಥೆಗಳು ಅನ್ವೇಷಣೆ ನಡೆಸುತ್ತಿವೆ. ಅವುಗಳಲ್ಲಿ ಬೆಂಗಳೂರಿನ ಆಲ್ ಇಂಡಿಯ ಇನ್‌ಸ್ಟಿಟ್ಯೂಟ್ ಆಫ್ ಮೆಂಟಲ್ ಹೆಲ್ತ್ ಅಂದರೆ ಅಖಿಲಭಾರತ ಮಾನಸಾರೋಗ್ಯ ಸಂಸ್ಥೆಯೂ ಒಂದು. (ಆರ್.ಎಲ್.ಎನ್.)

**ಎಲೆಕ್ಟ್ರೊಕಾರ್ಟಿಕೋಗ್ರಾಂ :** ತಲೆಯ ನೆತ್ತಿವಲಯದ ಎರಡು ಬಿಂದುಗಳ ವಿದ್ಯುದ್ವಿಭವಗಳಲ್ಲಿ ಕಾಲಕಾಲಕ್ಕೆ ಉಂಟಾಗುವ ಬದಲಾವಣೆಗಳನ್ನು ಚಿತ್ರಿಸುವ ಗ್ರಾಫ್ ಇಇಜಿ ; ಮಿದುಳಿನ ಮೇಲೆಯೇ ಎಲೆಕ್ಟ್ರೋಡುಗಳನ್ನು ಇಟ್ಟು ತರಂಗಗಳನ್ನು ದಾಖಲಿಸಿದಾಗ ದೊರೆಯುವ ಗ್ರಾಫಿನ ಹೆಸರು ಎಲೆಕ್ಟ್ರೊಕಾರ್ಟಿಕೋಗ್ರಾಂ. ಮಿದುಳಿನ ಶಸ್ತ್ರಚಿಕಿತ್ಸೆಯ ಸಂದರ್ಭಗಳಲ್ಲಿ ಮಾತ್ರ ಇದು ಸಾಧ್ಯ. ಮಿದುಳಿನ ವಿದ್ಯುತ್ಕ್ರಿಯೆ ಅತಿಸೂಕ್ಷ್ಮ ವೋಲ್ಟೇಜಿನದು (0.00001—0.0002 ವೋಲ್ಟ್). ಅದರ ಆವರ್ತ ಸಂಖ್ಯೆ ಕಡಿಮೆ, ಸೆಕೆಂಡಿಗೆ 1—100.

ಕ್ಯಾಟನ್ ಎಂಬಾತ ಪ್ರಾಣಿಮಿದುಳಿನ ವಿದ್ಯುದ್ವಿಭವಗಳನ್ನು 1875 ರಲ್ಲಿಯೇ ಪ್ರಾಯೋಗಿಕವಾಗಿ ಪ್ರದರ್ಶಿಸಿದರೂ ಮನುಷ್ಯನ ಮಿದುಳಿನ ವಿದ್ಯುತ್ಕ್ರಿಯೆಯ ಪ್ರದರ್ಶನ ನಡೆದದ್ದು ಈಚೆಗೆ (1929), ಬರ್ಗರ್ ಎಂಬಾತನಿಂದ. ಆಡ್ರಿಯನ್ ಮತ್ತು ಮ್ಯಾಥ್ಯೂಸ್ ಇದನ್ನು ಸ್ಥಿರೀಕರಿಸಿದರು (1924). ಅಪಸ್ಮಾರವನ್ನು ಕುರಿತ ತಮ್ಮ ವರದಿಗಳನ್ನು ಗಿಬ್ಸ್, ಡೇರಿನ್ ಮತ್ತು ಲೆನಾಕ್ಸ್ 1935 ರಲ್ಲೂ ಜ್ಯಾಸ್ಪರ್ ಒಂದು ವರ್ಷದ ತರುವಾಯವೂ ಪ್ರಸಿದ್ಧಿಸಿದರು. ತಲೆಬುರುಡೆಯೊಳಗೆ ವ್ರಣಗಳಿರುವಾಗ ಇಇಜಿಯಲ್ಲಿ ಆಗುವ ವ್ಯತ್ಯಾಸಗಳನ್ನು ಫೋರೆಸ್ಟರ್ ಮತ್ತು ಆಲ್ಟೆನ್ ಬರ್ಗರ್ 1935ರಲ್ಲಿ ಪ್ರದರ್ಶಿಸಿದರು. 1938ರಿಂದೀಚೆಗೆ ದ್ವಿತೀಯ ಜಾಗತಿಕ ಸಮರದ ಚಿಕಿತ್ಸಕ ಸಮಸ್ಯೆಗಳ (ಕ್ಲಿನಿಕಲ್ ಪ್ರಾಬ್ಲೆಮ್ಸ್) ಪರಿಶೀಲನೆಯಿಂದಲೂ ಕೇಸ್, ಬ್ಯೂಸಿ, ಹಿಲ್ ಮತ್ತು ಪಾರ್ ಅದರಲ್ಲೂ ವಿಶೇಷವಾಗಿ ಬಾಗ್ಚಿ ಇವರ ಸಂಶೋಧನಾತ್ಮಕ ಲೇಖನಗಳಿಂದಲೂ ಇಇಜಿಯ ಉಪಯೋಗ ಕ್ರಮೇಣ ವೃದ್ಧಿಗೊಂಡಿದೆ. ಭಾರತದ ಬಸು. ಕೆ. ಬಾಗ್ಚಿಯವರು ಇತ್ತೀಚಿನವರೆಗೆ ಮಿಶಿಗನ್ ವಿಶ್ವವಿದ್ಯಾನಿಲಯದಲ್ಲಿ ಇಇಜಿ ಪ್ರಾಧ್ಯಾಪಕರಾಗಿದ್ದರು. ಈ ಕ್ಷೇತ್ರದಲ್ಲಿ ಅವರ ಕೊಡುಗೆ ಅಪಾರವಾದದ್ದು.

ವಿಧಾನ : ಹೆಚ್ಚಿನ ಸಂಸ್ಥೆಗಳಲ್ಲಿ ಬಹುದಿಕ್ಕಿನ ಬಹುನಾಲೆಯ ಇಇಜಿಗಳನ್ನು ಮಿದುಳಿನ ವಿದ್ಯುತ್ಕ್ರಿಯೆಗಳನ್ನು ದಾಖಲಿಸಲು ಉಪಯೋಗಿಸುತ್ತಾರೆ. ಲೋಹ ಬಿಲ್ಲೆಗಳಿಂದ ಅಥವಾ ಬೆಳ್ಳಿಯ ಕ್ಲೋರೈಡಿನ ಮೇಲೆ ತೇವಪೂರಿತ ಮೆತ್ತೆಗಳಿಂದ ಮಾಡಿದ ಎಲೆಕ್ಟ್ರೋಡುಗಳನ್ನು ತಲೆಯ ವಿವಿಧ ಭಾಗಗಳಲ್ಲಿ ಇಡಲಾಗುವುದು. ತರುವಾಯ ಯಾವುದೇ ಎರಡು ಎಲೆಕ್ಟ್ರೋಡುಗಳ ವಿದ್ಯುದ್ವಿಭವಗಳಲ್ಲಿ ಕಾಲಕಾಲಕ್ಕೆ ಉಂಟಾಗುವ ಬದಲಾವಣೆಗಳನ್ನು ಗ್ರಾಫ್ ವಿಧಾನದಿಂದ ಚಿತ್ರಿಸುತ್ತಾರೆ.

ಮಿದುಳಿನ ವಿಭವಗಳ ಸ್ವಭಾವ : ಮಿದುಳಿನ ಅನೈಚ್ಛಿಕ ಕ್ರಿಯೆಗಳ ಸ್ವಭಾವ ವಿವರವಾಗಿ ಇನ್ನೂ ತಿಳಿದಿಲ್ಲ. ಬಿಡಿ ನ್ಯೂರಾನುಗಳಲ್ಲಿ ಒಂದೊಂದರ ವಿದ್ಯುದ್ವಿಸರ್ಜನೆಗಳ ಆಕಾಶೀಯ (ಸ್ಪೇಶಿಯಲ್) ಹಾಗೂ ಕಾಲೀಯ (ಟೆಂಪೊರಲ್) ಮೊತ್ತಗಳ ಪರಿಣಾಮವಾದ ಘಟನೆಯೇ ಮಿದುಳಿನ ಅನೈಚ್ಛಿಕ ಪರ್ಯಾಯ ವಿಭವಸೂಚಕ ತರಂಗಗಳೆಂದು ಪರಿಗಣಿಸಲಾಗಿದೆ. ಇಂದು ಚಿಕಿತ್ಸಾವಿಧಾನದಲ್ಲಿ ಉಪಯೋಗಿಸುತ್ತಿರುವ ಇಇಜಿ ಪ್ರಾಯಶಃ ಬಹುಸಂಖ್ಯೆಯ ಕಾರ್ಟಿಕಲ್ ನ್ಯೂರಾನುಗಳ ಸಂಗ್ರಹಣೆಯಿಂದ ದಾಖಲಿಸುವುದು. ಭಿನ್ನ ಆವರ್ತಸಂಖ್ಯೆಗಳಲ್ಲಿರುವ (ಫ್ರೀಕ್ವೆನ್ಸೀಸ್) ಅನಿರ್ದಿಷ್ಟ ಸಂಖ್ಯೆಯ ಮತ್ತು ಅನಿರ್ದಿಷ್ಟ ಗುಂಪುಗಳ ಕ್ರಿಯೆಯನ್ನು ಇಂಥ ದಾಖಲೆ ಸೂಚಿಸುತ್ತದೆ. ಕೆಲವೊಂದು ಗುಂಪುಗಳು ಪ್ರಕ್ರಿಯೆಯನ್ನು ಪ್ರಕಟಿಸದೆಯೂ ಇರಬಹುದು. ಇದು ಹೇಗಿದ್ದರೂ ಹಲವಾರು ಗುಂಪುಗಳ ಕ್ರಿಯೆಗಳ ಸಮಗ್ರ ಮೊತ್ತವೆ ಈ ದಾಖಲೆ. ಇಇಜಿ ವ್ಯಕ್ತಪಡಿಸುವ ಕ್ರಿಯೆಗಳ ವ್ಯಾಪ್ತಿ ಬಲು ವಿಶಾಲವಾಗಿದೆ—ಅದು ಸೆಕೆಂಡಿಗೆ 1—50 ಅಥವಾ 100 ಅಥವಾ ಹೆಚ್ಚೂ ಇರಬಹುದು. ಆವರ್ತಸಂಖ್ಯೆಯನ್ನು ಈ ಕೆಳಗಿನಂತೆ ವಿಭಾಗಿಸಿದೆ—

| | | | |
|---|---|---|---|
| 1 | ಆಲ್ಫಾ | ($\alpha$) | 8–13 ಸೆಕೆಂಡಿಗೆ |
| 2 | ಬೀಟ | ($\beta$) | 15–50 ಸೆಕೆಂಡಿಗೆ |
| 3 | ಥೀಟ | ($\theta$) | 4–7 ಸೆಕೆಂಡಿಗೆ |
| 4 | ಡೆಲ್ಟ | ($\delta$) | 1–3 ಸೆಕೆಂಡಿಗೆ |

ಆವರ್ತಸಂಖ್ಯೆ–ವೋಲ್ಟೇಜ್ ಸಂಬಂಧಾನುಸಾರ ಇಇಜಿಯನ್ನು ವರ್ಗೀಕರಿಸಲಾಗಿದೆ. ವೋಲ್ಟೇಜ್ ಮತ್ತು ರೂಪಿಕೆ (ಪ್ಯಾಟರ್ನ್) ಮುಖ್ಯವಾದವಾದರೂ ಆವರ್ತಸಂಖ್ಯೆಯೇ ಪ್ರಧಾನ ಪ್ರಾಚಲ (ಪ್ರಿನ್ಸಿಪಲ್ ಪ್ಯರಾಮೀಟರ್).

ಸಹಜ (ನಾರ್ಮಲ್) ಇಇಜಿ : ಜಿಬ್ಸ್ ಎಂಬಾತ ಸಹಜಸ್ಥಿತಿಯ 1000 ತರುಣರ ದಾಖಲೆ ಚಿತ್ರಿಸಿದ. ಅವನ ತೀರ್ಮಾನಗಳು ಈ ಕೆಳಗಿನಂತಿವೆ : 75% ಸಹಜ ಜನರಲ್ಲಿ 8·5—12/ಸೆಕಂಡ್ ವ್ಯಾಪ್ತಿಯಲ್ಲಿ ಆಲ್ಫಕ್ರಿಯೆಯಿತ್ತು ; ಮತ್ತು 11% ಜನರಲ್ಲಿ ಅತಿವೇಗದ ನಿಮ್ನ(ಲೋ) ವೋಲ್ಟೇಜ್ ರೂಪಿಕೆ ಇತ್ತು. ಇವೆರಡನ್ನೂ ಸಹಜ ರೂಪಿಕೆಗಳೆಂದು ಸ್ವೀಕರಿಸಲಾಯಿತು. ಉಳಿದ 14% ಈ ಸ್ಥಿತಿಗಿಂತ ವಿಚಲಿತ




ಚಿತ್ರ 4 ದಶತಾಳಗೀತ (ನಾರ್ಮಲ್)




ಚಿತ್ರ 5 ಅಸಾಮಾನ್ಯಗೀತ. ಏಕತಾಳ ದ್ವಿತಾಳ ಅಥವಾ ತ್ರಿತಾಳಗೀತ 1ನೆಯ ಮತ್ತು 2ನೆಯ ಪಾದದಲ್ಲಿ. 3ನೆಯ ಪಾದ ದಶತಾಳಗೀತ. (ವಿ.ಸೂ. ಎಡಿಗಂತಿಯ ಮೇಲೆ ಬೆಳ್ಳಿಯ ಬಿಲ್ಲೆ ಇಟ್ಟಕಾರಣ ಗೀತಗಳ ಬದಲಾವಣೆ. ಇದು ಎಡಿಗಂತಿಯ ಸ್ಥಾನ ನಿರ್ಧಾರಣಕ್ಕೆ ಅನುಕೂಲ.

ರಾಗಿದ್ದರೂ ಆ ವ್ಯಕ್ತಿಗಳು ಯಾರೂ ಯಾವ ನರವ್ಯಾಧಿಯಿಂದಲೂ ನರಳುತ್ತಿದ್ದಂತೆ ತೋರಲಿಲ್ಲ,

ಮಕ್ಕಳ ದಾಖಲೆಗಳು ವಯಸ್ಕರವುಗಳಿಗಿಂತ ಭಿನ್ನವಾಗಿವೆ. ಅವರಲ್ಲಿ ತರಂಗಗಳು ಸಾಮಾನ್ಯವಾಗಿ ನಿಧಾನ; ಮಗು ಬೆಳೆಯುತ್ತಿದ್ದಂತೆ ಇವು ಬದಲಾಗಿ ಅದು ಯುವಕನಾಗುವ ವೇಳೆಗೆ ಸಹಜ ರೂಪಿಕೆಗಳಾಗುತ್ತವೆ.

ಅನ್ವಯಗಳು : ಅಂತಃಕರೋಟಿವ್ರಣ (ಇಂಟ್ರಾಕ್ರ್ಯಾನಿಯಲ್ ನಿಯೋಪ್ಲಾಸಮ್ಸ್) ಮಿದುಳಿನ ವ್ರಣಗಳ—ಅದರಲ್ಲೂ ಪ್ರಧಾನ ಮಸ್ತಿಷ್ಕದ ಭಾಗಗಳಲ್ಲಿ (ಸೆರೆಬ್ರಲ್ ಹೆಮಿಸ್ಫಿಯರ್) ತಲೆದೋರುವವುಗಳ — ಸಮೀಪದಲ್ಲಿ ಮಂದ ವಿದ್ಯುತ್ಕ್ರಿಯೆ ಇರುವುದನ್ನು ತೋರಿಸಬಹುದು. ಇಂಥ ಅನ್ವೇಷಣೆಯಲ್ಲಿ 25% ಅಂಚು ದೋಷವಿದೆ (ಮಾರ್ಜಿನ್ ಎರರ್) ; 75% ಅನ್ವೇಷಣೆಗಳಲ್ಲಿ ವ್ರಣಗಳ ಸ್ಥಾನ ನಿರ್ಧರಣ ನಿಷ್ಕೃಷ್ಟವಾಗಿತ್ತು. ಆದ್ದರಿಂದ ಮಿದುಳ ವ್ರಣವಿರುವಂಥ ಒಬ್ಬ ವ್ಯಕ್ತಿಯ ಇಇಜಿ ಸಹಜರೂಪಿಕೆಯನ್ನೇ ತೋರಿಸಬಹುದು ; ಎಂದಮಾತ್ರಕ್ಕೆ ಆತನಿಗೆ ಕರೋಟಿ ವ್ರಣ ಇಲ್ಲವೇ ಇಲ್ಲ ಎಂದು ತೀರ್ಮಾನಿಸಲು ಈ ಪ್ರಯೋಗವನ್ನು ಆಧರಿಸುವುದು ಸಾಧುವಲ್ಲ. ಚಿಕಿತ್ಸಕ ಮುಂತಾದ ಇತರ ಪುರಾವೆಗಳೊಡನೆ ಹೋಲಿಸಿ ಯುಕ್ತ ತೀರ್ಮಾನಕ್ಕೆ ಬರಲು ಇದೊಂದು ಉಪಯುಕ್ತ ವಿಧಾನವೆಂದು ಪರಿಗಣಿಸಬೇಕಷ್ಟೆ. (ಎಂ.ಪಿ.ಪಿ)

**ಎಲೆಕ್ಟ್ರೊ ಟೈಪುಗಳು :** ಮುದ್ರಣ ಕ್ರಿಯೆಯಲ್ಲಿ ಅನುಸರಿಸುವ ಒಂದು ವಿಧಾನ. ತತ್ತ್ವಶಃ ಎಲೆಕ್ಟ್ರೊ ಟೈಪುಗಳು ಒಂದು ಮೂಲ ಲಿಪಿ ಮುದ್ರಣ (ಲೆಟರ್ ಪ್ರೆಸ್—ಅಕ್ಷರಗಳ ಮೊಳೆಗಳನ್ನು ಜೋಡಿಸಿ ಉಬ್ಬಿರುವ ಭಾಗಗಳಿಗೆ ಮಸಿ ಲೇಪಿಸಿ ಮುದ್ರಿಸುವ ಸಾಂಪ್ರದಾಯಿಕ ವಿಧಾನವೇ ಲಿಪಿ ಮುದ್ರಣ). ಮುದ್ರಣ ಅಚ್ಚಿನ ಹಲಗೆಯಿಂದ ಪಡೆದ ಎರಕದ ಅಚ್ಚಿನ (ಮೌಲ್ಡ್) ಮೇಲೆ ವಿದ್ಯುಚ್ಛಕ್ತಿಯ ಸಹಾಯದಿಂದ ಶೇಖರಿಸಲ್ಪಟ್ಟ ತಾಮ್ರದ ಚಿಪ್ಪುಗಳೇ ಎಲೆಕ್ಟ್ರೊ ಟೈಪುಗಳು. ಮುದ್ರಣ ಫಲಕಗಳ ಪ್ರತಿರೂಪಗಳ (ಡ್ಯೂಪ್ಲಿಕೇಟ್ ಪ್ಲೇಟ್ಸ್) ತಯಾರಿಕೆಯಲ್ಲಿ ಸ್ಟೀರಿಯೊ ಫಲಕಗಳು ಮೊದಲನೆಯ ವಿಧಾನವಾದರೆ ಎಲೆಕ್ಟ್ರೊ ಟೈಪುಗಳು ಎರಡನೆಯ ವಿಧಾನ. ಇದು ಸ್ಟೀರಿಯೊ ಟೈಪ್ ವಿಧಾನಕ್ಕಿಂತಲೂ ಹೆಚ್ಚು ನಿಧಾನವಾದ ಮತ್ತು ಹೆಚ್ಚು ವೆಚ್ಚದ ವಿಧಾನ. ಆದರೆ ತುಂಬ ಉತ್ತಮ ವರ್ಗದ ಫಲಕಗಳ ಪ್ರತಿರೂಪಗಳನ್ನು ಇದು ನೀಡುತ್ತದೆ. ಎಲೆಕ್ಟ್ರೊಗಳು ಬಹಳ ಹೆಚ್ಚು ಪ್ರತಿಗಳನ್ನು ಕೊಡುತ್ತವಲ್ಲದೆ ಮುದ್ರಣದಲ್ಲಿ ಬಹು ಸೂಕ್ಷ್ಮ ವಿವರಗಳನ್ನು ಚೊಕ್ಕಟವಾಗಿ ಉತ್ಪಾದಿಸಬಲ್ಲುವು. ಅಷ್ಟೇ ಅಲ್ಲದೆ, ಅತಿ ಸೂಕ್ಷ್ಮ ಹಾಫ್‌ಟೋನ್ ಬಿಂದುಗಳನ್ನೊಳಗೊಂಡ ಚಿತ್ರಗಳನ್ನೂ ಅಂದವಾಗಿ ಉತ್ಪಾದಿಸಬಲ್ಲುವು.

ಎಲೆಕ್ಟ್ರೊ ಟೈಪುಗಳನ್ನು ತಯಾರಿಸುವ ವಿಧಾನವನ್ನು ಮೂರು ಮುಖ್ಯ ಭಾಗಗಳಾಗಿ ವಿಂಗಡಿಸಬಹುದು : 1 ಎರಕದ ಅಚ್ಚು (ಮೌಲ್ಡ್) ಮಾಡುವುದು ; 2 ವಿದ್ಯುಲ್ಲೇಪಿತ ಲೋಹವನ್ನು ಎರಕದ ಅಚ್ಚಿನ ಮೇಲೆ ಕ್ರೋಡೀಕರಿಸುವುದು ; 3 ಲೋಹದ ಚಿಪ್ಪಿನ ಹಿಂಬದಿಯ ನಿರ್ಮಾಣ ಮತ್ತು ಒಪ್ಪ ಮಾಡುವುದು.

ವಿದ್ಯುತ್ ಎರಕದ ಅಚ್ಚು : ಅಚ್ಚು ಎರಕ ಮಾಡಲು ಮೂರು ಬಗೆಯ ಪದಾರ್ಥಗಳನ್ನು ಬಳಸುವರು :

1 ಉಷ್ಣಲೆಪ್ಪದ ಎರಕದ ಅಚ್ಚು (ಥರ್ಮೊ ಪ್ಲಾಸ್ಟಿಕ್ ಮೌಲ್ಡ್) : ಮೂಲವಾದ ಲಿಪಿ ಮುದ್ರಣದ ಅಚ್ಚಿನ ಹಲಗೆಯನ್ನು ಎಚ್ಚರಿಕೆಯಿಂದ ತಯಾರಿಸಿ, ಅದಕ್ಕೆ ಮಸಿಯನ್ನು ತೆಳುವಾಗಿ ಸವರಬೇಕು. ಹೈಡ್ರಾಲಿಕ್ ಪ್ರೆಸ್ಸಿನ ಕಾದ ಹಲಗೆಯ ಮೇಲೆ ಆ ಅಚ್ಚಿನ ಹಲಗೆಯನ್ನಿರಿಸಿ ಅದರ ಮೇಲೆ 0.03″ ಗಾತ್ರದ ಉಷ್ಣಲೆಪ್ಪದ ಹಾಳೆಯನ್ನು (ಪಿ.ವಿ.ಸಿ. ಕೊಪಾಲಿಮರ್) ಇಟ್ಟು 120° –180° ಸೆಂ. ವರೆಗೆ ಕಾಯಿಸಿ ವೃತ್ತಪತ್ರಿಕೆಯ ಕಾಗದ ಅಥವಾ ಒಂದು ಬ್ಲಾಂಕೆಟನ್ನು ಅದರ ಮೇಲಿರಿಸಿ ಒತ್ತಡವನ್ನು ಕೊಡಬೇಕು. ಈ ಸಂಯೋಜನೆಯನ್ನು ಅನಂತರ ನೀರಿನಿಂದ ತಣ್ಣಗಿಸಿದ ನೀರೊತ್ತಡದ ಸಾಧನಕ್ಕೆ ವರ್ಗಾಯಿಸಿ ಅದನ್ನು ಒತ್ತಡದಲ್ಲಿ ಶೈತ್ಯಗೊಳಿಸಬೇಕು. ಉಷ್ಣಲೆಪ್ಪದ ಎರಕಗಳ ಸಾಮಗ್ರಿಗಳಿಂದ ಲಭಿಸುವ ಒಂದು ದೊಡ್ಡ ಅನುಕೂಲವೆಂದರೆ ಇದು ಉತ್ತಮಗುಣದ ಮುದ್ರಣವನ್ನು ಕೊಡುವುದು ; ಮತ್ತು ಇದನ್ನು ಪುನಃ ಎರಕ ಮಾಡಲು ಉಪಯೋಗಿಸಬಹುದು.

2 ಟೆನಪ್ರೇಟ್ : ಉತ್ತಮ ಬಗೆಯ ರಬ್ಬರಿನ ಒಂದು ಅಂಟು ಪದಾರ್ಥದಿಂದ ಇದನ್ನು ಮಾಡಿದೆ. ಇದಕ್ಕೆ ಬಲು ತೆಳ್ಳನೆಯ (0.005″) ಅಲ್ಯೂಮಿನಿಯಮ್ ಹಾಳೆಯ ಆಧಾರವನ್ನು ಹಿಂಬದಿಯಲ್ಲಿ ಕೊಟ್ಟಿದೆ. ಇದನ್ನು ಕೊಠಡಿಯ ಉಷ್ಣತೆಯಲ್ಲಿ ಅಚ್ಚಿನ ಹಲಗೆಯ ಮೇಲಿರಿಸಿ ಒಂದು ತೆಳುವಾದ ರಬ್ಬರ್ ಹಾಳೆಯ ಅಥವಾ ವೃತ್ತಪತ್ರಿಕೆಯ ಕಾಗದದ ಅಡಿಯಲ್ಲಿ ಹೈಡ್ರಾಲಿಕ್ ಪ್ರೆಸ್ಸಿನಲ್ಲಿ ಒತ್ತುವ ಮೂಲಕ ಬೇಕಾದ ಎರಕದ ಅಚ್ಚು ದೊರೆಯುವುದು.

3 ಸೀಸದ ಫಲಕ : ಅಚ್ಚಿನ ಹಲಗೆಯ ಮೇಲೆ 0.04″ ದಪ್ಪದ ಸೀಸದ ಫಲಕವನ್ನಿಟ್ಟು ಅದರ ಮೇಲೆ ಚದರ ಅಂಗುಲಕ್ಕೆ 3–5 ಟನ್ನುಗಳಷ್ಟು ಒತ್ತಡ ಉಂಟಾಗುವಂತೆ ಒತ್ತಬೇಕು. ಆಗ ಅದು ಸೀಸದ ಫಲಕದ ಒಂದು ಅಚ್ಚಾಗಿ ಪರಿಣಮಿಸುತ್ತದೆ. ಅದನ್ನು ಈಗ ನೇರವಾಗಿ ವಿದ್ಯುಲ್ಲೇಪಿತ ತೊಟ್ಟಿಗೆ ವರ್ಗಾಯಿಸಬಹುದು. ಮಿಕ್ಕೆರಡು ಸಂದರ್ಭಗಳಲ್ಲಿ ಎರಕದ ಅಚ್ಚಿನ ಮೇಲ್ಮೈ ವಿದ್ಯುದ್ವಾಹಕವಲ್ಲವಾದ ಕಾರಣ ಕೆಲವು ಸಿದ್ಧತೆಗಳಾಗಬೇಕು. ಸೀಸದ ಅಥವಾ ಇತರ ವಿದ್ಯುದ್ವಾಹಕ ಪಟ್ಟಿಗಳನ್ನು ಬಂಧಿಸಬೇಕು. ಅನಂತರ ಆ ಎರಕದ ಅಚ್ಚನ್ನು ಒಂದು ಶುದ್ಧಿಕಾರಕ ವಸ್ತುವಿನಿಂದ ಉಜ್ಜಿ ನೀರಿನಲ್ಲಿ ಜಾಲಾಡಿ ತೊಳೆಯಬೇಕು. ತರುವಾಯ ಸ್ಟ್ಯಾನಸ್ ಕ್ಲೋರೈಡ್ ದ್ರಾವಣದಲ್ಲಿ ಮುಳುಗಿಸಿ ಸೂಕ್ಷ್ಮಗೊಳಿಸಿ ಮತ್ತೆ ನೀರಿನಲ್ಲಿ ಜಾಲಾಡಿ ತೊಳೆದು ಅದರ ಮೇಲ್ಮೈಯ ಮೇಲೆ ಅಮೋನಿಯೇಟೆಡ್ ಸಿಲ್ವರ್ ನೈಟ್ರೇಟ್ ದ್ರಾವಣವನ್ನು ಮತ್ತು ಒಂದು ಅಪಕರ್ಷಣಕಾರಿ ದ್ರಾವಣವನ್ನು (ಹೈಡ್ರೊಜನ್) ಎರಡು ಹೊಳ್ಳೆಗಳುಳ್ಳ ಸೀರ್ಪನಿ ಯಂತ್ರದ (ಸ್ಪ್ರೇಗನ್) ಸಹಾಯದಿಂದ ಸಿಂಪಡಿಸಬೇಕು. ಆಗ ಒಂದು ರಾಸಾಯನಿಕ ಲೇಪವಾಗಿ ಬೆಳ್ಳಿಯ ತೆಳುಪೊರೆ ಉಂಟಾಗುವುದು. ಅನಂತರದಲ್ಲಿ ಇದನ್ನು ವಿದ್ಯುಲ್ಲೇಪನ ಮಾಡುವ ತೊಟ್ಟಿಗೆ ವರ್ಗಾಯಿಸಬಹುದು.



ಚಿತ್ರ 1 ವಿದ್ಯುಲ್ಲೇಪನ ತೊಟ್ಟಿ— ವಾಯುಸಂಮರ್ದಕ ವ್ಯವಸ್ಥೆಯೊಂದಿಗೆ

**ವಿದ್ಯುಲ್ಲೇಪನ (ಎಲೆಕ್ಟ್ರೊ ಡಿಪಾಸಿಷನ್) :** ಈ ಕಾರ್ಯವಿಧಾನದಲ್ಲಿ ಒಂದು ನಿಕ್ಕಲ್ ತೊಟ್ಟಿ, ಒಂದು ತಾಮ್ರದ ತೊಟ್ಟಿ, ಒಂದು ವಿದ್ಯುತ್ ಪರಿವರ್ತಕ ಅಥವಾ ಸಮಕಾರಕ ಮತ್ತು ಒಂದು ವಾಯುಸಂಮರ್ದಕ—ಇವಿಷ್ಟು ಸಲಕರಣೆಗಳು ಬೇಕಾಗುತ್ತವೆ. ವಿದ್ಯುಲ್ಲೇಪನಕ್ಕಾಗಿ ಎರಕದ ಅಚ್ಚನ್ನು ತೊಟ್ಟಿಯ ಋಣವಿದ್ಯುತ್ ಧ್ರುವಕ್ಕೆ (ಕ್ಯಾಥೋಡ್) ಬಂಧಿಸಬೇಕು. 0.010″—0.015″ ನಷ್ಟು ದಪ್ಪನಾದ ತಾಮ್ರದ ಲೇಪವನ್ನು ಪಡೆಯಲು $1\frac{1}{2}$–3 ಗಂಟೆಗಳ ವರೆಗೆ ಕಾಲಾವಕಾಶ ಬೇಕು. ನಿಕ್ಕಲಿನ ನೇರ ಕಾರ್ಯವಿಧಾನದಲ್ಲಿ ಮೊದಲು ನಿಕ್ಕಲ್ ಸಲ್ಫೇಟ್ ದ್ರಾವಣದ ತೊಟ್ಟಿಯಲ್ಲಿ ಎರಕದ ಅಚ್ಚನ್ನಿರಿಸಿ 0.002″ ನಷ್ಟು ದಪ್ಪನಾದ ನಿಕ್ಕಲ್ ಲೇಪವನ್ನು ಪಡೆಯಬೇಕು. ಅನಂತರದಲ್ಲಿ ತಾಮ್ರದ ವಿದ್ಯುಲ್ಲೇಪನಕ್ಕಾಗಿ ಕಾಪರ್ ಸಲ್ಫೇಟ್ ಮತ್ತು ಸಲ್ಫ್ಯೂರಿಕ್ ಆಮ್ಲಗಳ ದ್ರಾವಣದ ತೊಟ್ಟಿಯಲ್ಲಿರಿಸಬೇಕು. ವಿದ್ಯುಲ್ಲೇಪನ ಕಾರ್ಯವನ್ನು ಶೀಘ್ರಗೊಳಿಸಲು ದ್ರಾವಣವನ್ನು ಕಾಯಿಸಬೇಕು ಮತ್ತು ಸಂಮರ್ದಿತ ಗಾಳಿಯ ಸಹಾಯದಿಂದ ದ್ರಾವಣವನ್ನು ಸ್ವಲ್ಪಮಟ್ಟಿಗೆ ಕಲಕಬೇಕು. ಲೇಪನದಲ್ಲಿ ಎಷ್ಟು ಕಡಿಮೆ ವೋಲ್ಟೇಜನ್ನು ಉಪಯೋಗಿಸಿದರೆ ಅಷ್ಟು ಹಸನಾದ ತಾಮ್ರದ ಲೇಪ ದೊರೆಯುವುದು. ಸಾಮಾನ್ಯವಾಗಿ ಮೊದಲಲ್ಲಿ ಸೂಕ್ಷ್ಮವಾದ ಮತ್ತು ತೆಳುವಾದ ತಾಮ್ರದ ಲೇಪವನ್ನು ಕೊಟ್ಟು ಅನಂತರದಲ್ಲಿ ಅದರ ಮೇಲೆ ದಪ್ಪನಾದ ಲೇಪವನ್ನು ಕೊಡುವುದು ವಾಡಿಕೆ. ಈ ರೀತಿಯಲ್ಲಿ ಹೊಸದಾಗಿ ಲೇಪಿತವಾದ ತಾಮ್ರದ ಮೇಲ್ಮೈಯ ಉತ್ಕರ್ಷಣೆಯನ್ನು ತಡೆಯುವುದಕ್ಕಾಗಿ ಅದರ ಮೇಲೆ ವಿದ್ಯುತ್ತಿನ ಸಹಾಯದಿಂದ ಅತ್ಯಂತ ತೆಳುವಾದ ತವರದ ಲೇಪನ ಮಾಡಬೇಕು ; ಅಥವಾ ಉಷ್ಣದ ಸಹಾಯದಿಂದ ತವರದ ತೆಳುವಾದ ರೇಖೆಯನ್ನು ಬೆಸುಗೆ ಮಾಡಬೇಕು. ಇದು ತಾಮ್ರದ ತೆಳು ಪೊರೆ ಮತ್ತು ಅದರ ಹೊರಮೈ ನಿರ್ಮಿಸುವ ಲೋಹಗಳ ಮಧ್ಯೆ ಒಳ್ಳೆಯ ಬಂಧಕವಾಗಿಯೂ ಪರಿಣಮಿಸುತ್ತದೆ. ಅನಂತರದಲ್ಲಿ ತಾಮ್ರದ ತೆಳು ಪೊರೆಯನ್ನು ಎರಕದ ಅಚ್ಚಿನಿಂದ ಬೇರ್ಪಡಿಸಿ ಸೀಸದ ಮಿಶ್ರಲೋಹವನ್ನು ಅದರ ಹೊರಮೈಗೆ ಹೊದಿಸಿ ಲೋಹದ ಹೊರಮೈಯುಳ್ಳ ವಿದ್ಯುತ್ ಅಚ್ಚು ಫಲಕವನ್ನು ಪಡೆಯಲಾಗುವುದು. ಈ ರೀತಿಯಲ್ಲಿ ಹೊದಿಸಿದ ಸೀಸದ ಹೊರಮೈ ತಾಮ್ರದ ಅಚ್ಚಿನ ವರೆಗೆ ಸುದೃಢವಾದ



ಚಿತ್ರ 2 ಹೈಡ್ರಾಲಿಕ್ ಪ್ರೆಸ್ ಮತ್ತು ಮುದ್ರಣ ಫಲಕವನ್ನು ಕಾಯಿಸುವ ಸಲಕರಣೆ

ರಕ್ಷಣೆಯನ್ನು ಕೊಡುವುದಲ್ಲದೆ ಅದನ್ನು ತಟ್ಟಲು ಮತ್ತು ಪರಿಭ್ರಮಣ ರೀತ್ಯ ಬಾಗಿಸಲು ಅನುಕೂಲವಾಗುವಂತೆ ಮೃದುವಾಗಿಯೂ ಇರುತ್ತದೆ. ಸೀಸದ ಹೊರಮೈ ಹೊದಿಸಲು 1 ಓಪನ್ ಪ್ಯಾನ್, 2 ಪ್ರೆಶ್ಶರ್ ಕ್ಯಾಸ್ಟರ್, 3 ಕ್ಯಾಸ್ಟಿಂಗ್‌ಬಾಕ್ಸ್, 4 ಸೆಂಟ್ರಿಫ್ಯೂಗಲ್ ಕ್ಯಾಸ್ಟಿಂಗ್ (ರೋಟರಿ ಪ್ಲೇಟುಗಳಿಗಾಗಿ)—ಇವೇ ಮುಂತಾದ ಕಾರ್ಯವಿಧಾನಗಳು ಬಳಕೆಯಲ್ಲಿವೆ.




ಚಿತ್ರ 3 ವಿದ್ಯುಲ್ಲೇಪನಕ್ಕೆ ತಯಾರಿಸಿರುವ ಪ್ಲಾಸ್ಟಿಕ್ ಮೌಲ್ಡ್

1. ಬೇಕಲೈಟ್ ಹಾಳೆ ; 2. ತಾಮ್ರದ ಕಂಬಿ ; 3. ಹಿತ್ತಾಳೆಯ ಚಿಮಟ ;
4. ಬೆಳ್ಳಿಯ ಪೊರೆ ಇಲ್ಲದ ಭಾಗ ; 5. ಬೆಳ್ಳಿಯ ಪೊರೆ ಇರುವ ಭಾಗ : 6. ರಬ್ಬರ್ ಪಟ್ಟಿ

ಲೋಹವನ್ನು ಹೊದಿಸಿದ ಎಲೆಕ್ಟ್ರೊಟೈಪುಗಳ ಮುದ್ರಣದ ಔನ್ನತ್ಯದಲ್ಲಿ (ಪ್ರಿಂಟಿಂಗ್ ಹೈಟ್) ವ್ಯತ್ಯಾಸಗಳಿರುವ ಸಂಭವವಿದೆಯಾದ್ದರಿಂದ ಅವನ್ನು ಸೂಕ್ತವಾಗಿ ತಟ್ಟಿ ಪರಿಷ್ಕರಿಸುವುದು ಆವಶ್ಯಕ. ಅಂಥ ವ್ಯತ್ಯಾಸಗಳನ್ನು—1 ಕೈಯಿಂದ ಅಥವಾ ಪ್ರೀಸ್ಲ್ಯಾಬಿಂಗ್ ಸಲಕರಣೆಗಳಿಂದ ಸಮಮಟ್ಟ ಮಾಡುವುದು, 2 ಒಪ್ಪ ಮಾಡಿದಾಗಿನ ಮಂದಕ್ಕಿಂತ 0.03″ ಹೆಚ್ಚಾಗಿರುವಂತೆ ಪ್ರಥಮತಃ ಹಿಂಭಾಗವನ್ನು ಸಮಮಟ್ಟ ಮಾಡುವುದು, 3 ತಗ್ಗಾದ ಭಾಗಗಳನ್ನು ಪತ್ತೆಮಾಡಿ ಫಲಕದ ಹಿಂಬದಿಯಲ್ಲಿ ಗುರುತು ಮಾಡುವುದು, 4 ಅಂಥ ತಗ್ಗಾದ ಜಾಗಗಳನ್ನು ವಿಶೇಷ ತೆರದ ಬಡಿಗೆಯಿಂದ ಹಿಂಭಾಗದಿಂದ ತಟ್ಟಿ ಉನ್ನತಗೊಳಿಸುವುದು, 5 ಅಂತಿಮವಾಗಿ ಸರಿಯಾದ ವೃಂದಕ್ಕೆ ಸಮ ಮಟ್ಟಗೊಳಿಸಿ ಮೃದುವಾಗಿ ತಟ್ಟಿ ಒಪ್ಪ ಮಾಡುವುದು—ಇವೇ ಮುಂತಾದ ಕಾರ್ಯ ವಿಧಾನಗಳಿಂದ ಸರಿಪಡಿಸಲಾಗುವುದು.

ತಾಮ್ರದ ಪೊರೆಯ ಹಿಂಬದಿಯಲ್ಲಿ ಗೊತ್ತಾದ ಗಾತ್ರಕ್ಕೆ ಸೀಸದ ಮಿಶ್ರಲೋಹವನ್ನು ಹೊದಿಸಲು ವಿದ್ಯುಲ್ಲೇಪನ ಮಾಡುವುದೂ ರೂಢಿಯಲ್ಲಿದೆ. ಈ ಸಂದರ್ಭದಲ್ಲಿ ಫಲಕವನ್ನು ತಟ್ಟಿ ಸಮಮಟ್ಟಕ್ಕೆ ತರುವ ಆವಶ್ಯಕತೆ ಇಲ್ಲ. ಇಂಥ ಫಲಕದ ಹೆಸರು ಬ್ಲಾಕ್‌ಮೋರ್ ಫಲಕ.

ಕೆಲವು ವೇಳೆ ತಾಮ್ರದ ಚಿಪ್ಪಿನ ಹಿಂಬದಿಯಲ್ಲಿ ಒಂದು ಲೆಪ್ಪದ ಸಾಮಗ್ರಿಯನ್ನು ಹೊದಿಸಲಾಗುವುದು. ಲೆಪ್ಪ ಹೊದಿಸಿದ (ಪ್ಲಾಸ್ಟಿಕ್ ಬ್ಯಾಕ್ಡ್) ಎಲೆಕ್ಟ್ರೊಟೈಪುಗಳೆಂದು ಇವುಗಳ ಹೆಸರು. ಅಂಥ ಒಂದು ಉತ್ಪನ್ನವನ್ನು ಕಾಲೇಜ್ ಎಲೆಕ್ಟ್ರೊಟೈಪು ಎಂದು ಕರೆಯುತ್ತಾರೆ. ಈ ವಿಧಾನದಲ್ಲೂ ಮಾಮೂಲು ವಿಧಾನವನ್ನನುಸರಿಸಿ ತಯಾರಿಸಿದ ತಾಮ್ರದ ಪೊರೆಯನ್ನೇ ಉಪಯೋಗಿಸುತ್ತಾರೆ. ಅದರ ಹಿಂಬದಿಯಲ್ಲಿ ಬಲವಾಗಿ ಅಂಟುವಂತೆ ಮಾಡುವುದಕ್ಕಾಗಿ—1 ಒಂದು ಒರಟಾದ ತಾಮ್ರದ ವಿದ್ಯುಲ್ಲೇಪನ ಅಥವಾ 2 ಉತ್ಕರ್ಷಣ ಅಥವಾ 3 ತವರದ ವಿದ್ಯುಲ್ಲೇಪನ—ಮಾಡಲಾಗುವುದು. ಎರಕದ ಅಚ್ಚಿಗೆ ಇನ್ನೂ ಅಂಟಿರುವ ತಾಮ್ರದ ಪೊರೆಯನ್ನು ಒಣಗಿಸಿ ಒಂದು ನಿರ್ವಾತ ಪೀಠದ (ವ್ಯಾಕ್ಯೂಮೇಟೆಡ್) ಮೇಲೆ ವೃತ್ತ ಪತ್ರಿಕೆಯ ಕಾಗದದ ಒಂದು ಹಾಳೆಗೆ ಅಂಟಿಸಿಡಬೇಕು (ಟೇಪ್ಡ್). ಕಲಸಿದಾಗ ವೇಗವಾಗಿ ಗಡಸಾಗುವ ಗುಣವುಳ್ಳ ಎರಡು ರಾಳಗಳನ್ನು ಒಂದು ಗೊತ್ತಾದ ಪ್ರಮಾಣದಲ್ಲಿ ಮಿಶ್ರಣಮಾಡಿ ತಾಮ್ರದ ಫಲಕದ ಹಿಂಬದಿಯಲ್ಲಿ ಸವರಿ ಅಂಚುಗಳಲ್ಲಿರಿಸಿರುವ ಅಳತೆ ಕಡ್ಡಿಗಳ ಮಟ್ಟಕ್ಕೆ ಸರಿಯಾಗಿ ಸಮ ಮಟ್ಟಗೊಳಿಸಬೇಕು. ಅನಂತರದಲ್ಲಿ ನಿರ್ವಾತತೆಯನ್ನು ಸಡಿಲಿಸಿ ಫಲಕವನ್ನು ಪೀಠದಿಂದಿಳಿಸಿ ಒಣಗುವುದಕ್ಕೆ ಇಡಬೇಕು. ಮಿತವಾದ ಉಷ್ಣತೆಯಲ್ಲಿ ಇದು ಒಣಗಲು 1–2 ಗಂಟೆಗಳ ಕಾಲ ಬೇಕಾಗುವುದು. ಅನಂತರ ತಳದಲ್ಲಿರುವ ವೃತ್ತ ಪತ್ರಿಕೆಯ ಕಾಗದದ ಸಮೇತ ಒಂದು ಘಟ್ಟಿಸುವ (ಮಿಲ್ಲಿಂಗ್) ಯಂತ್ರದ ನಿರ್ವಾತ ಪೀಠಕ್ಕೆ ವರ್ಗಾಯಿಸಿ ಪ್ರಥಮವಾಗಿ ಒಂದು ತೆಳುವಾದ ಪದರವನ್ನು ಕತ್ತರಿಸಿ ತೆಗೆಯುವರು. ಇದಾದ ಅನಂತರ ಎರಕದ ಅಚ್ಚನ್ನು ಎಲೆಕ್ಟ್ರೊ ಫಲಕದಿಂದ ಬಾಗಿಸಿ ಬೇರ್ಪಡಿಸುವರು. ಆ ಮೇಲೆ ಸರಿಯಾದ ಗಾತ್ರಕ್ಕೆ ಮಿಲ್ಲಿಂಗ್ ಮಾಡುವರು. ಈ ಮುದ್ರಣ ಫಲಕವನ್ನು ಸಮತಲವಾದ ಅಚ್ಚಿನ ಪೀಠವುಳ್ಳ (ಫ್ಲ್ಯಾಟ್ ಬೆಡ್) ಮುದ್ರಣ ಯಂತ್ರದಲ್ಲಿ ಸಮತಲ ರೂಪದಲ್ಲಿಯಾಗಲಿ ಅಥವಾ ಒಂದು ಕಂಸದ ಆಕಾರಕ್ಕೆ ಸುಲಭವಾಗಿ ಬಗ್ಗಿಸಿ ರೋಟರಿ ಯಂತ್ರದ ಉರುಳೆಯ ಫಲಕವನ್ನಾಗಿಯಾಗಲಿ ಉಪಯೋಗಿಸಬಹುದು.

ಮತ್ತೊಂದು ವಿಧಾನವೆಂದರೆ, ಒಂದು ಅಲ್ಯೂಮಿನಿಯಮ್ ರೇಕಿನ ಹಾಗೂ ಎರಕದ ಅಚ್ಚಿನಿಂದ ಬೇರ್ಪಡಿಸಿದ ತಾಮ್ರದ ಪೊರೆಯ ಮಧ್ಯೆ ಉಷ್ಣಲೆಪ್ಪದ ಅಥವಾ ಉಷ್ಣದಿಂದ ಹದವಾಗುವ ರಾಳಗಳನ್ನು ಹರಡಿ ಉಷ್ಣವನ್ನೊಡ್ಡಿ ಒತ್ತಡದಿಂದ ಅವನ್ನು ಅಂಟಿಸುವುದರಿಂದುಂಟಾಗುವ ವಿದ್ಯುದಚ್ಚಿನ ಫಲಕಗಳು. ಇವನ್ನು ಲ್ಯಾಮಿನೇಟೆಡ್ ಪ್ಲಾಸ್ಟಿಕ್ ಎಲೆಕ್ಟ್ರೊ ಟೈಪುಗಳೆಂದು ಕರೆಯುತ್ತಾರೆ. (ಡಿ.ಎಸ್.)

**ಎಲೆಕ್ಟ್ರೊಫಾರಿಸಿಸ್ :** ವಿದ್ಯುತ್ಪ್ರವಾಹವನ್ನು ತರಲದಲ್ಲಿ (ಫ್ಲೂಯಿಡ್) ಹರಿಸುವುದರ ಮೂಲಕ ಅದರಲ್ಲಿರುವ ಕಲಿಲ ಕಣಗಳ (ಕಲಾಯಿಡಲ್ ಪಾರ್ಟಿಕಲ್ಸ್) ಸಾಗಣೆ (ವಿದ್ಯುತ್‌ಕ್ಷೇತ್ರ ಚಲನೆ). ಇದೊಂದು ವಿದ್ಯುದ್ರಾಸಾಯನಿಕ ಕ್ರಿಯೆ. ಆವೆ ಮಣ್ಣು (ಕೊಜೆಮಣ್ಣು–ಕ್ಲೇ) ನೀರಲ್ಲಿ ಹರಡಿ ನಿಂತಿರುವಾಗ ಅದರಲ್ಲಿ ವಿದ್ಯುತ್ತನ್ನು ಹರಿಸಿದರೆ ಮಣ್ಣಿನ ಕಣಗಳು ಧನಧ್ರುವಕ್ಕೆ (ಪಾಸಿಟಿವ್ ಎಲೆಕ್ಟ್ರೋಡ್) ಸಾಗುವುದನ್ನು ರೂಯಸ್ ಕಂಡುಹಿಡಿದ (1807). ಈ ಕ್ರಿಯೆಯನ್ನು ಎಲೆಕ್ಟ್ರೊಫಾರಿಸಿಸ್ ಎಂದು ಕರೆಯಲಾಯಿತು. ಋಣ ವಿದ್ಯುದಂಶವಿರುವ ಕಣಗಳು ಧನಧ್ರುವದೆಡೆಗೂ ಧನ ವಿದ್ಯುದಂಶವಿರುವ ಕಣಗಳು ಋಣ ಧ್ರುವದೆಡೆಗೂ ಚಲಿಸುವುದನ್ನು ಹಲವು ದಶಕಗಳ ತರುವಾಯ ಕಂಡುಹಿಡಿಯಲಾಯಿತು. ಈ ಕ್ರಿಯೆಗಳನ್ನು ಕ್ರಮವಾಗಿ ಅನಾಫಾರಿಸಿಸ್ ಮತ್ತು ಕ್ಯಾಟಾಫಾರಿಸಿಸ್ ಎಂದು ಕರೆದರು. ಚಲನೆಯ ವೇಗ ಕಣಗಳ ಆಕಾರ ಮತ್ತು ಅಳತೆಯನ್ನು ಅವಲಂಬಿಸಿರುವುದು ಮಾತ್ರವಲ್ಲದೆ ಅವುಗಳ ಮೇಲಿರುವ ವಿದ್ಯುದಂಶದ (ಎಲೆಕ್ಟ್ರಿಕ್ ಚಾರ್ಜ್) ಪ್ರಮಾಣವನ್ನು ಕೂಡ ಅವಲಂಬಿಸಿದೆ. ಈ ವಿಚಾರ ತಿಳಿದ ಮೇಲೆ ಒಂದು ಮಿಶ್ರಣದಲ್ಲಿರುವ ಬೇರೆ ಬೇರೆ ವಸ್ತುಗಳನ್ನು ಬೇರ್ಪಡಿಸಲು ಸಾಧ್ಯವೆಂದು ಕಂಡುಹಿಡಿಯಲಾಯಿತು. ಕಣಗಳ ಮೇಲಿರುವ ವಿದ್ಯುದಂಶ ಅವುಗಳ ಸ್ವಾಭಾವಿಕ ಗುಣದಿಂದ ಬರಬಹುದು ; ಅಥವಾ ನೀರಲ್ಲಿರುವ ಅಯಾನುಗಳು ಕಣಗಳ ಮೇಲೆ ಸೇರುವುದರಿಂದಲೂ ಬರಬಹುದು.

ನೀರಲ್ಲಿ ಹರಡಿರುವ ಕಣಗಳು ಧ್ರುವಗಳೆಡೆಗೆ ಸಾಗುವ ವೇಗವನ್ನು ಕಂಡುಹಿಡಿಯಲು ಮೂರು ವಿಧಾನಗಳಿವೆ. ಒಂದನೆಯದಾಗಿ, ಸೂಕ್ಷ್ಮದರ್ಶಕದ ಮುಖಾಂತರ ನೋಡುವ ಕ್ರಮ. ಇದರಿಂದ ರಕ್ತಕಣಗಳು, ಬ್ಯಾಕ್ಟೀರಿಯ ಮತ್ತು ಕೆಲವು ಪ್ರೋಟೀನ್ ಅಣುಗಳು ಇತರ ಪದಾರ್ಥಗಳ ಮೇಲೆ ಸೇರಿ ಚಲಿಸುವುದನ್ನು ನೋಡಬಹುದು. ಎರಡನೆಯದಾಗಿ, ಕಣಗಳ ರಾಶಿಗಳು ಚಲಿಸುವಾಗ ಅವುಗಳ ಮೇರೆಯನ್ನು ನೋಡಿ ತಿಳಿಯುವ ಕ್ರಮ. ಇದರಲ್ಲಿ ಚಲನೆಯಲ್ಲಿರುವ ಕಣಗಳನ್ನು ನೋಡುವ ಅಗತ್ಯ ಇಲ್ಲ. ನೊಬೆಲ್ ಬಹುಮಾನ ಪಡೆದ ಟಿಸೆಲಿಯಸ್ ಮತ್ತು ಆತನ ಸಹವರ್ತಿಗಳು ಈ ಕ್ರಮವನ್ನು ಪ್ರಯೋಗಿಸಿ ಹಲವು ವಿಧವಾದ ಇತರ ಸಂಶೋಧನೆಗಳನ್ನು ನಡೆಸಿರುವರು. ಮೂರನೆಯದಾಗಿ, ವಸ್ತುಗಳ ಕಣಗಳು ಮತ್ತು ಅಯಾನುಗಳು ಸ್ವಾಭಾವಿಕವಾಗಿ ಕಾಗದಗಳ ಮತ್ತು ಪಿಷ್ಟ ಪದಾರ್ಥಗಳ ಮೇಲೆ ಬೇರ್ಪಡಿಸಲ್ಪಡುವ ವಿಧಾನವನ್ನು ಉಪಯೋಗಿಸುವ ಕ್ರಮ. ಈ ಕ್ರಮದಲ್ಲಿ ವಿದ್ಯುತ್ಪ್ರವಾಹದ ಅಗತ್ಯ ಇಲ್ಲ.

ಮನುಷ್ಯನ ದೇಹದಲ್ಲಿರುವ ಪ್ರೋಟೀನುಗಳನ್ನು ಕಂಡುಹಿಡಿಯಲು ಎಲೆಕ್ಟ್ರೊಫಾರಿಸಿಸ್ ಬಹು ಪ್ರಮುಖ ವಿಧಾನ. ಹಲವು ರೋಗಗಳ ಕಾರಣಗಳನ್ನು ಈ ವಿಧಾನದಿಂದ ಕಂಡುಹಿಡಿಯಲು ಸಾಧ್ಯವಿದೆ.

ವಿದ್ಯುದಂಶಪೂರಿತ ವಸ್ತುಗಳ ಕಣಗಳನ್ನು ಧ್ರುವಗಳ ಮೇಲೆ ಲೇಪಿಸುವಂತೆ ಮಾಡಲೂ ಸಾಧ್ಯವಿದೆ. ವಿದ್ಯುತ್ಪ್ರವಾಹದಿಂದ ಲೋಹಗಳನ್ನು ಹೇಗೆ ಲೇಪಿಸಲು ಸಾಧ್ಯವೋ ಅದೇ ರೀತಿ ಕಣರೂಪದಲ್ಲಿ ನೀರಿನಲ್ಲಿ ಹರಡಿರುವ ಪದಾರ್ಥಗಳನ್ನು ಲೋಹಗಳ ಮೇಲೆ ಲೇಪಿಸಲು ಸಾಧ್ಯವಿದೆ. ಇದಕ್ಕೆ ಎಲೆಕ್ಟ್ರೊಫಾರೆಟಿಕ್ ಲೇಪನವೆಂದು (ಡಿಪಾಸಿಷನ್) ಹೆಸರು. ಬಲು ತೆಳ್ಳಗಾದ ಲೇಪನವನ್ನು ಈ ವಿಧಾನದಿಂದ ಪಡೆಯುವುದು ಮಾತ್ರವಲ್ಲದೆ ಬೇಕಾದಷ್ಟೇ ದಪ್ಪವನ್ನು ಪಡೆಯಲು ಸಾಧ್ಯವಿದೆ. ರಬ್ಬರ್ ಹಾಲಿನಿಂದ (ರಬ್ಬರ್‌ಲ್ಯಾಟೆಕ್ಸ್) ರಬ್ಬರನ್ನು ಬೇರ್ಪಡಿಸಲು ಸಾಧ್ಯವಿದೆಯೆಂದು ತಿಳಿದಿದ್ದರಿಂದ ರಬ್ಬರ್ ಕೈಚೀಲ ತಯಾರಿಸುವ ಕ್ರಮವನ್ನೂ ಕಂಡು ಹಿಡಿಯಲಾಯಿತು. ಅಮೆರಿಕದಲ್ಲಿ ಕಾರಿಗೆ ಬಣ್ಣಹಚ್ಚಲು ಎಲೆಕ್ಟ್ರೊಫಾರೆಟಿಕ್ ಕ್ರಮವನ್ನು ಉಪಯೋಗಿಸುತ್ತಾರೆ.

ಎಲೆಕ್ಟ್ರೊಫಾರಿಸಿಸ್ ವಿಧಾನದಿಂದ 1–20 ಮೈಕ್ರಾನ್ (ಒಂದು ಮಿಲಿಮೀಟರಿನ ಸಾವಿರದ ಒಂದನೆಯ ಅಂಶ) ಪ್ರಮಾಣದ ಕಣಗಳನ್ನು ನೀರಿನಿಂದ ಬೇರ್ಪಡಿಸಲು ಆಗುತ್ತದೆ. ಪದಾರ್ಥಗಳ ಕಣಗಳನ್ನು ತಯಾರಿಸಲು ಹಲವು ವಿಧಾನಗಳಿವೆ. ಸೋಸಣೆಯಿಂದ (ಸೀವಿಂಗ್) ಬಂದ ಪದಾರ್ಥಗಳನ್ನು ಗೋಲಿ ಗಿರಣಿಯಲ್ಲಿ (ಬಾಲ್ ಮಿಲ್) ಇನ್ನೂ ಅರೆಯುವುದರಿಂದ ಅವನ್ನು ದ್ರವಪದಾರ್ಥಗಳಲ್ಲಿ ಹರಡಬಹುದು. ನೀರು ಮಾತ್ರವಲ್ಲದೆ ಇತರ ದ್ರವಪದಾರ್ಥಗಳನ್ನೂ ಉಪಯೋಗಿಸಬಹುದು. ಅಸಿಟೋನ್, ಈಥೈಲ್ ಆಲ್ಕೊಹಾಲ್ ಇತ್ಯಾದಿ ದ್ರವಗಳನ್ನು ಉಪಯೋಗಿಸಿ ಅಯಾನುಗಳನ್ನು ಕೊಡುವ ಅಮೋನಿಯಮ್ ಹೈಡ್ರಾಕ್ಸೈಡ್, ಸಿಟ್ರಿಕ್ ಆಮ್ಲ ಇತ್ಯಾದಿಗಳನ್ನು ಸ್ವಲ್ಪಮಟ್ಟಿಗೆ ಸೇರಿಸುವುದರ ಮುಖಾಂತರ ಹರಡಿಕೆ ಯಶಸ್ವಿಯಾಗುತ್ತದೆ. ಇಂಥ ಹರಡಿಕೆಯಿಂದ ಮಾಡತಕ್ಕ ಲೇಪನಗಳು ಬಹಳ ಗಟ್ಟಿಯಾಗಿ ಒಟ್ಟಿಕೊಂಡಿರುತ್ತವೆ.

ಬೇರೆ ಬೇರೆ ಪದಾರ್ಥಗಳನ್ನು ಲೇಪನಮಾಡುವುದು ಮಾತ್ರವಲ್ಲದೆ ಲೋಹಗಳ ತುಣುಕುಗಳನ್ನೂ ಕೂಡ ಲೇಪನಮಾಡಲು ಸಾಧ್ಯವಿದೆ. ಹರಡಿಕೊಂಡಿರುವ ಎರಡು ವಸ್ತುಗಳನ್ನು ದ್ರವದಿಂದ ಅದೇ ಪ್ರಮಾಣದಲ್ಲಿ ಲೇಪನಮಾಡಬಹುದು. ನೀರಿನಿಂದ ಪದಾರ್ಥಗಳನ್ನು ಲೇಪಿಸಲು ಸಾಮಾನ್ಯ 15 ವೋಲ್ಟುಗಳು ಬೇಕಾದರೆ ಇತರ ದ್ರವಗಳಿಂದ ಬೇರ್ಪಡಿಸಲು 100–2500 ವೋಲ್ಟುಗಳು ಬೇಕಾದೀತು. ಅಲ್ಯೂಮಿನಿಯಂ ಲೋಹದ ತುಣುಕುಗಳನ್ನು ಕಬ್ಬಿಣದ ಮೇಲೆ ಲೇಪಿಸಿ ಅನಂತರ ಬಿಸಿಮಾಡಿ ಅದು ಅಂಟುವಂತೆ ಮಾಡುವ ಕ್ರಮವೂ ಇದೆ. (ಎಚ್.ಎ.ಕೆ.ಯು.)

**ಎಲೆತೋಟ :** ವೀಳೆಯದೆಲೆಯ ಬಳ್ಳಿಗಳನ್ನು ಬೆಳೆಸುವ ತೋಟವನ್ನು ಎಲೆತೋಟವೆನ್ನುತ್ತಾರೆ. ಮೆಣಸಿನಂತೆ ವೀಳೆಯದೆಲೆಯ ಬಳ್ಳಿಯನ್ನೂ ಅಧಿಕ ಪ್ರಮಾಣದಲ್ಲಿ ತೋಟಗಳಲ್ಲಿ ಬೆಳೆಸುತ್ತಾರೆ. ಇದರ ವ್ಯವಸಾಯ ಮತ್ತು ಉಪಯೋಗ ವಿಷ್ಯದಲ್ಲಿ ಪ್ರಾಚೀನಕಾಲದಿಂದಲೂ ಇದೆ. ಇದರ ಮೂಲಸ್ಥಾನ ಮಲೇಸಿಯ ಎಂದು ಹೇಳಲಾಗಿದೆ. ಭಾರತ, ಸಿಂಹಳ, ಮಲಯಗಳಲ್ಲಿಯೂ ತಾಂಬೂಲ ಚರ್ವಣ ಬಹು ಹಳೆಯ ಸಂಪ್ರದಾಯ. ಇಲ್ಲಿನ ಸಾಮಾಜಿಕ ಹಾಗೂ ಧಾರ್ಮಿಕ ಆಚಾರಗಳಲ್ಲೂ ತಾಂಬೂಲಕ್ಕೆ ಅಗ್ರಸ್ಥಾನವಿರುವುದು ಕಂಡುಬಂದಿದೆ. (ನೋಡಿ—ತಾಂಬೂಲ).



ಬಿಳಿ ಎಲೆಗೆ ಪ್ರಸಿದ್ಧವೆನಿಸಿರುವ ಮೈಸೂರಿನ ಒಂದು ಎಲೆತೋಟ

ವೀಳೆಯದೆಲೆಯನ್ನು ಭಾರತ ದೇಶದ ಎಲ್ಲ ಪ್ರಾಂತ್ಯಗಳಲ್ಲೂ ಮೈಸೂರು ರಾಜ್ಯದ ಮೈದಾನ ಪ್ರದೇಶಗಳಲ್ಲಿ ವಿಶೇಷವಾಗಿಯೂ ಬೆಳೆಸುತ್ತಾರೆ. ಬೆಂಗಳೂರು, ಚಿತ್ರದುರ್ಗ, ಮೈಸೂರು, ಮಂಡ್ಯ, ಹಾಸನ, ಧಾರವಾಡ ಮುಂತಾದ ಜಿಲ್ಲೆಗಳ ಎಲೆ ಹೆಸರು ಪಡೆದಿದೆ. ಇತರ ಜಿಲ್ಲೆಗಳಲ್ಲಿ ಇದರ ವ್ಯವಸಾಯ ಗಣನೀಯ ಪರಿಮಾಣದಲ್ಲಿಲ್ಲ.

ನೆಲದಲ್ಲಿ ತೇವಾಂಶವಿದ್ದು ಹವೆ ಶುಷ್ಕವಾಗಿರುವಲ್ಲಿ ಎಲೆ ಸೊಗಸಾಗಿ ಬೆಳೆಯುತ್ತದೆ. ಹದಿನೈದು ಅಂಗುಲದಿಂದ ಮೂವತ್ತು ಅಂಗುಲ ಮಳೆ ಬೀಳುವ ಪ್ರದೇಶಗಳು ಎಲೆಯ ಬೇಸಾಯಕ್ಕೆ ಉತ್ತಮ. ಸಾಮಾನ್ಯವಾಗಿ ಕಡಿಮೆ ಮಳೆ ಬೀಳುವ ಪ್ರದೇಶಗಳಲ್ಲಿ ನೀರಾವರಿ ಅನುಕೂಲ ಇರಬೇಕು. ಇದು ಒಣಹವೆಯಲ್ಲಿ ಚೆನ್ನಾಗಿ ಬೆಳೆಯುತ್ತದಾದರೂ ಭೂಮಿಯಲ್ಲಿ ತೇವಾಂಶ ಚೆನ್ನಾಗಿರಬೇಕು. ಸೂರ್ಯನ ತಾಪವನ್ನು ಇದು ತಡೆಯುವುದಿಲ್ಲ. ಆದ್ದರಿಂದ ನೆರಳು ಅತ್ಯಾವಶ್ಯಕ. ಇದು ಬಳ್ಳಿಯಾಗಿರುವುದರಿಂದ ಹಬ್ಬುವುದಕ್ಕೆಂದು ನೆಟ್ಟ ಮರಗಳು ನೆರಳನ್ನು ಒದಗಿಸುತ್ತವೆ. 15°–25° ಸೆಂ. ಉಷ್ಣತೆ ಇದಕ್ಕೆ ಸರಿಯಾದುದು. ಅಲ್ಲದೆ ಎಲೆ ವ್ಯವಸಾಯ ಬಹು ನಾಜೂಕಿನ ಕೆಲಸ. ನೆಲ, ನೀರು, ಬಿಸಿಲು, ಗೊಬ್ಬರ, ಕಟಾವು—ಇತ್ಯಾದಿಯಾಗಿ ಎಲ್ಲ ಅಂಶಗಳಲ್ಲೂ ಬಹು ಎಚ್ಚರಿಕೆಯಿಂದಿರಬೇಕಾಗುತ್ತದೆ.

ಆಳವಾದ ಜೌಗಿಲ್ಲದ ಕಪ್ಪು ಮಣ್ಣು ಎಲೆಯ ತೋಟಮಾಡಲು ಉತ್ಕೃಷ್ಟವಾದ್ದು. ದೀರ್ಘ ಕಾಲದ ಬೆಳೆಯಾದ್ದರಿಂದ ಹೆಚ್ಚು ಫಲವತ್ತಾದ ಮಣ್ಣು ಬೇಕು. ಸಸ್ಯಗಳಿಂದ ಕೊಳೆತು ಹೆಚ್ಚು ಫಲವತ್ತಾಗಿರುವ ಕೆಂಪು ಗೋಡು ಭೂಮಿ ಚೆನ್ನಾಗಿ ಫಸಲನ್ನು ಕೊಡುತ್ತದೆ. 6 ರಿಂದ 7ರ ವರೆಗೆ ಪಿ. ಎಚ್. ಉಳ್ಳ ಮಣ್ಣು ಸರಿಹೊಂದುತ್ತದೆ. ಮಣ್ಣಿಗೆ ತೇವಾಂಶವನ್ನು ಚೆನ್ನಾಗಿ ತಡೆದು ಇಟ್ಟುಕೊಳ್ಳುವ ಶಕ್ತಿ ಇರಬೇಕು. ನೀರು ಹೆಚ್ಚು ಬೇಕಿದ್ದರೂ ಬುಡದಲ್ಲಿ ನಿಲ್ಲಬಾರದು. ಬಿದ್ದ ನೀರು ಬಸಿದು ಹೋಗಲು ಅನುಕೂಲವಾಗುವಂತೆ ಇಂಗು ಕಾಲುವೆಗಳನ್ನು ತೆಗೆಯಬೇಕು.

ಬಳ್ಳಿಯನ್ನು ಹಂಬುಗಳಿಂದ ವೃದ್ಧಿ ಮಾಡುತ್ತಾರೆ. ಸಾಮಾನ್ಯವಾಗಿ ಮುಂಗಾರು ಮಳೆಯ ಮಧ್ಯದಲ್ಲಿ ಹಂಬು ನೆಡುವುದು ವಾಡಿಕೆ. ಸುಮಾರು ಒಂದು ವರ್ಷ ವಯಸ್ಸಾಗಿದ್ದು ಚೆನ್ನಾಗಿ ಬಲಿತಿರುವ ಹಂಬುಗಳನ್ನು ಸುಮಾರು 3 ಅಡಿಗಳಷ್ಟು ಉದ್ದ ಗೆಣ್ಣುಗಳು ಬರುವಂತೆ ಕತ್ತರಿಸಿಕೊಂಡು ನೆಡಬೇಕು.

ವೀಳೆಯದೆಲೆಯ ಹಂಬುಗಳಲ್ಲಿರುವ ಜಾತಿಗಳನ್ನು ಇದುವರೆಗೆ ವೈಜ್ಞಾನಿಕ ರೀತಿಯಿಂದ ವಿಂಗಡಿಸಿಲ್ಲ. ಎಲೆಯ ರುಚಿ, ವಾಸನೆ, ಕಟುತ್ವ, ಗಾತ್ರ ಇವುಗಳ ಮೇಲೆ ಕರಿಎಲೆ, ನಾಗವಲ್ಲಿ ಎಲೆ, ಅಂಬಾಡಿ ಎಲೆ, ಮದ್ರಾಸು ಎಲೆ, ಕಣಿಗ ಎಲೆ—ಎಂದು ಸ್ಥೂಲವಾಗಿ ವಿಂಗಡಿಸಲಾಗಿದೆ.

ಕರಿಎಲೆ ಜಾತಿ ಮೈಸೂರು ದೇಶದಲ್ಲಿ ಅದರಲ್ಲೂ ತರೀಕೆರೆ, ಶಿವಮೊಗ್ಗ, ಹಾಸನ, ಅಜ್ಜಂಪುರ ಮತ್ತು ಮಲೆನಾಡಿನ ಇತರ ಭಾಗಗಳಲ್ಲಿ ಹೆಚ್ಚಿನ ಬೇಸಾಯದಲ್ಲಿದೆ. ಇಳುವರಿ ಚೆನ್ನಾಗಿದೆ. ಇತರ ಜಾತಿಗಳಿಗಿಂತ ಕಪ್ಪಗಿರುವುದರಿಂದ ಇದಕ್ಕೆ ಈ ಹೆಸರು. ಈ ಜಾತಿಯ ತೊಟ್ಟು ಉದ್ದ. ಎಳೆಯದಾಗಿದ್ದಾಗ ಎಲೆ ಹೆಚ್ಚು ಕಾರವಾಗಿರುತ್ತದೆ. ಬಲಿತಾಗ ಬಹು ಒರಟು. ಇದನ್ನು ಹೆಚ್ಚು ದಿವಸ ಇಡಬಹುದು. ಬೇರೆ ಜಾತಿಯ ಎಲೆಗಳಿಗಿಂತ ಇದರ ಬೆಲೆ ಕಡಿಮೆ.

ನಾಗವಲ್ಲಿ ಎಲೆಯನ್ನು ಏಲಕ್ಕಿ ಎಲೆ ಎಂದೂ ಕರೆಯುತ್ತಾರೆ. ಎಲೆ ಗಾತ್ರದಲ್ಲಿ ಚಿಕ್ಕದಾಗಿದ್ದು ನಾಗರಹಾವಿನ ಹೆಡೆಯನ್ನು ಹೋಲುತ್ತದೆ. ಈ ಎಲೆ ಕಾರವಾಗಿಲ್ಲ. ಸ್ವಲ್ಪ ಸಿಹಿಯಾಗಿದೆ. ಬಹು ಮೃದು. ಬಣ್ಣ ಬಿಳುಪಿನಿಂದ ಕೂಡಿದ ತಿಳಿ ಹಸಿರು.

ಮೈಸೂರಿನ ಸುತ್ತಮುತ್ತ ಈ ಜಾತಿಯನ್ನು ಹೆಚ್ಚಾಗಿ ಬೆಳೆಸುತ್ತಾರೆ. ಇಳುವರಿ ಕಡಿಮೆ. ಆದರೂ ಈ ಎಲೆಗೆ ಒಳ್ಳೆಯ ಬೆಲೆ ಇದೆ.

ಅಂಬಾಡಿ ಎಲೆಗೆ ಕರ್ಪೂರದ ವಾಸನೆ ಇದೆ. ಬಣ್ಣ ತೆಳುಹಸಿರು. ಅಗಲ ಕಡಿಮೆ. ಉದ್ದ ಹೆಚ್ಚು. [ಸ್ವ]ಸ್ವಲ್ಪ ಒರಟು. ಹೆಚ್ಚು ದಿವಸ ಇಡಬಹುದು. ತಿಂದಾಗ ಬಾಯಲ್ಲಿ ಚರಟು ಉಳಿಯುತ್ತದೆ. ಮಲೆನಾಡು ಪ್ರದೇಶಗಳಲ್ಲಿ ಇದರ ಬೇಸಾಯ ಹೆಚ್ಚಾಗಿದೆ.

ಮದ್ರಾಸು ಎಲೆ ಅದರ ಹೆಸರೇ ಸೂಚಿಸುವಂತೆ ಮದ್ರಾಸ್ ಪ್ರಾಂತ್ಯದಲ್ಲಿ ಹೆಚ್ಚಾಗಿ ಬೆಳೆಯುತ್ತದೆ. ಹೆಚ್ಚು ದಿನ ಇಟ್ಟರೂ ಎಲೆ ಬಾಡದು. ಜಾತಿ ಉತ್ತಮವಾದ್ದರಿಂದ ಹೆಚ್ಚಿನ ಬೆಲೆಯೂ ಬೇಡಿಕೆಯೂ ಇದೆ.



ಎಲೆಹಂಬು. ಆಸರೆಗಿಡಕ್ಕೆ ಹಂಬು ಹಬ್ಬಿದಂತೆಲ್ಲ ನಾರಿನಿಂದ ಅದನ್ನು ಗಿಡಕ್ಕೆ ಕಟ್ಟಿ ಎಬ್ಬಿಸುತ್ತಾರೆ

ವೀಳೆಯದೆಲೆಯ ಹಂಬನ್ನು ಬೆಳೆಸುವ ಮೊದಲು ಭೂಮಿಯನ್ನು ಚೆನ್ನಾಗಿ ಹದ ಮಾಡಬೇಕು. ಬೇಸಗೆ ಬರುವ ಮೊದಲೆ ನೆಲವನ್ನು ಆಳವಾಗಿ ಅಗೆದು ಬಿಸಿಲಿನ ತಾಪಕ್ಕೆ ಬಿಡಬೇಕು. ಮುಂಗಾರು ಮಳೆಯ ಪ್ರಾರಂಭದಲ್ಲಿ ಹೆಂಟೆಗಳನ್ನು ಚೆನ್ನಾಗಿ ಪುಡಿ ಮಾಡಿ ಮಟ್ಟಸಮಾಡಬೇಕು. ಗರಿಕೆ, ಕಳೆ, ಕಲ್ಲು ಇತ್ಯಾದಿಗಳನ್ನು ತೆಗೆದುಹಾಕಿ ಶುದ್ಧಮಾಡಬೇಕು. ಭದ್ರವಾದ ಬೇಲಿಯನ್ನು ಸಿದ್ಧ ಮಾಡಬೇಕು. ನೀರಾವರಿಗೋಸ್ಕರ ಬಾವಿ ಮತ್ತು ಕಾಲುವೆಗಳನ್ನು ಮಾಡಬೇಕು. ತೋಟದ ಸುತ್ತಲೂ ಗಾಳಿತಡೆಯನ್ನು ನಿರ್ಮಿಸಬೇಕು.

ಮೊದಲು ಹಂಬುಗಳನ್ನು ಹಬ್ಬಿಸಲು ಅಗಸೆ, ಬೂರುಗ, ನುಗ್ಗೆ, ಪಾರಿಜಾತ ಮುಂತಾದ ಬೀಜಗಳನ್ನು ಸಾಲುಗಳಲ್ಲಿ ನೆಡುವುದರಿಂದ ಬೇಸಾಯ ಪ್ರಾರಂಭವಾಗುತ್ತದೆ. ಬೀಜಗಳನ್ನು ಬಿತ್ತನೆ ಮಾಡುವುದಕ್ಕೆ ಮುಂಚೆ ಅನುಕೂಲತೆಗೆ ತಕ್ಕ ಹಾಗೆ ಮೂರು ಅಡಿ ಅಗಲದ ಉದ್ದನೆಯ ಪಾತಿಗಳನ್ನು ಮಾಡಬೇಕು. ಪ್ರತಿ ಎರಡು ಪಾತಿಗಳಿಗೆ ನಡುವೆ ಎರಡು ಅಡಿ ಅಗಲವಿರುವ ಜೌಗು ಕಾಲುವೆಗಳನ್ನು ಉದ್ದಕ್ಕೂ ಮಾಡಬೇಕು. ಅನಂತರ ನಾಲ್ಕು ಅಡಿ ಅಂತರದಲ್ಲಿ ಸಾಲುಗಳಾಗಿ ನೆರಳಿನ ಮರಗಳನ್ನು ಎಬ್ಬಿಸಬೇಕು. ಅಗಸೆ, ಬೂರುಗ, ನುಗ್ಗೆ, ಪಾರಿಜಾತ, ಹಾಲಿವಾಣ ಇವು ಒಳ್ಳೆಯ ನೆರಳು ಕೊಡುವ ಮರಗಳು. ಅನೇಕ ವೇಳೆ ಬೆಳೆದ ಅಡಕೆ ಮತ್ತು ತೆಂಗುಗಳಿಗೂ ಬಳ್ಳಿಯನ್ನು ಹಬ್ಬಿಸುವುದುಂಟು. ಎರಡು ಅಥವಾ ಮೂರು ತಿಂಗಳಲ್ಲಿ ನೆರಳು ಗಿಡಗಳು ನಾಲ್ಕು ಅಥವಾ ಐದು ಅಡಿಗಳಷ್ಟು ಎತ್ತರಕ್ಕೆ ಬೆಳೆಯುತ್ತವೆ. ಇವುಗಳ ಮಧ್ಯದಲ್ಲಿನ ಪಾತಿಯಲ್ಲಿ ಆಗಸ್ಟ್ ತಿಂಗಳಲ್ಲಿ ಹಂಬುಗಳ ತುಂಡುಗಳನ್ನು ನೆಡುವುದು ವಾಡಿಕೆ. ಸಾಲಿನಲ್ಲಿ ಒತ್ತಾಗಿರುವ ಸಸಿಗಳನ್ನು ಕಿತ್ತುಹಾಕಬೇಕು. ಅಂಟುಗಳು ಚಿಗುರುವ ವರೆಗೆ ನೀರು ಹೊತ್ತು ಹಾಕುವುದು ಅಗತ್ಯ. ಸರಿಯಾದ ನೆರಳನ್ನೂ ಒದಗಿಸಬೇಕು.

ಅನಂತರವೂ ಕಾಲಕ್ಕೆ ಸರಿಯಾಗಿ ನೀರು ಹಾಯಿಸುವುದು ಮುಖ್ಯ. ಕಳೆ ಕಿತ್ತು ಸ್ವಚ್ಛ ಮಾಡುವುದರಿಂದ ತೋಟಕ್ಕೆ ರೋಗಗಳು ಹರಡುವ ಸಂಭವ ಕಡಿಮೆಯಾಗುತ್ತದೆ. ತುಂಬ ನೆರಳು ಕಟ್ಟಿರುವಲ್ಲಿ ಹೆಚ್ಚಿನ ರೆಂಬೆಗಳನ್ನು ಕತ್ತರಿಸಿ ಹಾಕಬೇಕು. ಉತ್ತಮ ಫಸಲನ್ನು ಪಡೆಯಲು ಪ್ರತಿ ಎರಡು ತಿಂಗಳಿಗೊಮ್ಮೆ ಪಾತಿ ಒಂದಕ್ಕೆ ಒಂದು ಮಂಕರಿಯಷ್ಟು ಚೆನ್ನಾಗಿ ಕೊಳೆತ ಗೊಬ್ಬರವನ್ನು ಹಾಕಬೇಕು. ವರ್ಷಕ್ಕೊಂದುಸಾರಿ ಹೆಚ್ಚು ಬೆಳೆದಿರುವ ಹಂಬುಗಳನ್ನು ಸುತ್ತಿ ಪಕ್ಕದ ಪಾತಿಗಳಿಗೆ ಬದಲಾಯಿಸಬೇಕು. ಸುತ್ತಿದ ಹಂಬುಗಳನ್ನು ಪಾತಿಯಲ್ಲಿಟ್ಟು ಸರಿಯಾಗಿ ನಿಲ್ಲುವಂತೆ ಮಣ್ಣು ಉಂಡೆಗಳನ್ನು ಇಡಬೇಕು. ಅನಂತರ ಅವು ಬೆಳೆದಂತೆಲ್ಲ ಆಶ್ರಯದ ಮರಗಳಿಗೆ ಕಟ್ಟಬೇಕು. ಹಂಬು ಇಳಿಸುವಾಗ ಅದರ ಪಕ್ಕದ ರೆಂಬೆಗಳನ್ನು ಕತ್ತರಿಸಿ ಹಾಕಬೇಕು.

ಸಾಮಾನ್ಯವಾಗಿ ಎಲೆ ಬಳ್ಳಿಯನ್ನು ಮಿಶ್ರಬೆಳೆಯಾಗಿ ಬೆಳೆಯುತ್ತಾರೆ. ಜೌಗು ಕಾಲುವೆ ಮತ್ತು ದೊಡ್ಡ ಅಥವಾ ಮುಖ್ಯ ಕಾಲುವೆಗಳ ನಡುವೆ ಹಂಬು ನೆಡುತ್ತಾರೆ. ಪರಂಗಿಯನ್ನು ಕೂಡ ಇದೇ ರೀತಿ ಬೆಳೆಸಬಹುದು. ನೆರಳು ಮತ್ತು ಆಶ್ರಯಕ್ಕಾಗಿ ನೆಟ್ಟ ನುಗ್ಗೆ ಅಥವಾ ಅಗಸೆ ಮರಗಳು ಫಲವನ್ನು ಕೊಡುವುದರಿಂದ ಅವನ್ನು ಸಹ ಮಿಶ್ರಬೆಳೆ ಎಂದೇ ಕರೆಯಬಹುದು. ಎಲೆ ಹಂಬು ನೆಟ್ಟ ಹೊಸದರಲ್ಲಿ ಸೌತೆ, ಹುರುಳಿ ಮುಂತಾದುವನ್ನು ಬೆಳೆಯಬಹುದು. ಅದರ ಹಂಬು ದೊಡ್ಡದಾದಮೇಲೆ ಬಾಳೆ, ಪರಂಗಿ ಮತ್ತು ಅಡಕೆಯನ್ನು ಬಿಟ್ಟು ಮತ್ತೆ ಯಾವ ಮಿಶ್ರ ಬೆಳೆಯನ್ನೂ ತೆಗೆಯಲು ಸಾಧ್ಯವಿಲ್ಲ.



ಎಲೆಹುಳುಗಳಿನಿಂದ ಎಲೆ ಚಿವುಟ [illegible]

ಎಲೆ ಎರಡು ತಿಂಗಳಿಗೆ ಒಂದಾವರ್ತಿ ಕುಯ್ಲಿಗೆ ಬರುತ್ತದೆ. ಹದವಾದ ಎಲೆಗಳನ್ನು ಮಾತ್ರ ಚಾಕುವಿನಿಂದ ಕುಯ್ದು ಜೋಡಿಸಿ ಕಟ್ಟುಗಳಾಗಿ ಕಟ್ಟುತ್ತಾರೆ. ಹೆಬ್ಬೆರಳಿನ ತುದಿಗೆ ಲೋಹದ ಉಗುರನ್ನು ಹಾಕಿಕೊಂಡು ಎಲೆಗಳನ್ನು ಚಿವುಟಿ ತೆಗೆಯುವುದೂ ಉಂಟು. ಇಂಥ ಲೋಹದ ಉಗುರನ್ನು ಎಲೆಯುಗುರು ಎನ್ನುತ್ತಾರೆ. ನೇರ ಉಗುರುಗಳಿಂದಲೇ ಚಿವುಟಿದರೆ ಬಳ್ಳಿಗೆ ನಂಜಾಗುತ್ತದೆ. ಎಲೆ ಬಿಡಿಸುವವರನ್ನು ಉಗುರರು ಎಂದೇ ಕರೆಯುತ್ತಾರೆ.



ವೀಳೆಯದೆಲೆಯ ಮೂರು ಬಗೆಗಳು. ಎಡಗಡೆಯದು ಮೈಸೂರು ಚಿಗುರು, ಮಧ್ಯದ್ದು ಕರಿ ಎಲೆ, ಬಲಗಡೆಯದು ಅಂಬಾಡಿ ಎಲೆ

ಚೆನ್ನಾಗಿ ಬೇಸಾಯ ಮಾಡಿದ ತೋಟ ವರ್ಷಕ್ಕೆ ಎಕರೆ ಒಂದಕ್ಕೆ ಸುಮಾರು ಎರಡು ಲಕ್ಷ ಎಲೆಗಳನ್ನು ಕೊಡುತ್ತದೆ. ಆಗಾಗ ನೆಲಕ್ಕೆ ಊರುತ್ತಿದ್ದರೆ ಚೆನ್ನಾಗಿ ಬೆಳೆದ ಹಂಬು ಅರುವತ್ತು ವರ್ಷ ಫಲಕೊಡುತ್ತದೆಂದು ಬೇಸಾಯಗಾರರ ಅಭಿಪ್ರಾಯ.

ವೀಳೆಯದೆಲೆಗೆ ಸಾಮಾನ್ಯವಾಗಿ ಬರುವ ರೋಗವೆಂದರೆ ಬೂದಿರೋಗ. ಅದು ಬಂದಾಗ ಎಲೆಗಳ ಕೆಳಗಡೆ ಬೂದಿಗಟ್ಟಿದಂತಾಗಿ ಎಲೆಗಳು ಹಳದಿ ಬಣ್ಣಕ್ಕೆ ತಿರುಗಿ ಉದುರಿಹೋಗುತ್ತವೆ. ಇದನ್ನು ತಡೆಯಲು ಗಂಧಕದ ಪುಡಿಯನ್ನು ಎರಚಬೇಕು; ರೋಗ ಹರಡದಂತೆ ತೋಟವನ್ನು ಸ್ವಚ್ಛವಾಗಿಟ್ಟಿರಬೇಕು.

ಎರೆಹುಳು ಭೂಮಿಯಲ್ಲಿ ತೂತುಗಳನ್ನು ಕೊರೆದು ನೀರು ನಿಲ್ಲುವಂತೆ ಮಾಡುವುದರಿಂದ ಜೌಗು ಹಿಡಿದು ಹಂಬುಗಳು ಸಾಯುತ್ತವೆ. ಕೆಲವು ಸಾರಿ, ಎರೆಹುಳುಗಳು ನೆಲದಂತೆ ಹಂಬುಗಳನ್ನೂ ಕೊರೆಯಬಹುದು. ಗೆಮ್ಯಾಕ್ಸೀನ್ ಪುಡಿಯನ್ನು ರಂಧ್ರಗಳ ಒಳಗಡೆ ಹೋಗುವಂತೆ ಮಾಡಿ ಹುಳುಗಳನ್ನು ಕೊಲ್ಲಬೇಕು.

ಎಲೆತೋಟ ಬಹು ಲಾಭದಾಯಕವಾದ ಉದ್ಯಮ. ಬೆಳೆದ ಎಲೆಯಲ್ಲಿ ಬಹುಪಾಲು ದೇಶೀಯ ಮಾರುಕಟ್ಟೆಯಲ್ಲೇ ಖರ್ಚಾಗುತ್ತದೆ. ಸ್ವಲ್ಪ ಭಾಗ ರಫ್ತಾಗುವುದೂ ಉಂಟು. ಭಾರತ ತಾನು ಬೆಳೆದ ಎಲೆಯನ್ನು ಯುನೈಟೆಡ್ ಕಿಂಗ್‌ಡಮ್, ಕೀನ್ಯ, ಏಡನ್, ಪೂರ್ವ ಪಾಕಿಸ್ತಾನ, ಬಹ್ರೇನ್ ದ್ವೀಪಗಳು, ಕುವಾಯಿತ್, ನೇಪಾಳ ಮತ್ತು ಇತರ ಸ್ಥಳಗಳಿಗೆ ರಫ್ತುಮಾಡುತ್ತದೆ. ಸಾವಿರ ರೂಪಾಯಿ ಮೊತ್ತದಲ್ಲಿ ನೋಡಿದರೆ 1962–63ರಿಂದ 1966–67ರ ವರೆಗಿನ ರಫ್ತು ವ್ಯಾಪಾರದ ಮೌಲ್ಯ ಕ್ರಮವಾಗಿ 199·8, 272·8, 411·4, 539·0, 150·2.

ಎಲೆಯ ಲಕ್ಷಣಗಳು, ಉಪಯೋಗಗಳು : ತಾಂಬೂಲದೊಡನೆಯೊ ಹಾಗೆಯೊ ಸೇವಿಸಿದಾಗ ವೀಳೆಯದೆಲೆ ಮುಖಕ್ಕೆ ಸುವಾಸನೆಯನ್ನು ಕೊಡುತ್ತದೆ. ಜೀರ್ಣಶಕ್ತಿಯನ್ನು ಹೆಚ್ಚಿಸುತ್ತದೆ. ನರಗಳನ್ನು ಉತ್ತೇಜಿಸುತ್ತದೆ. ತಿಂದ ಆಹಾರ ಜೀರ್ಣಿಸಲು ಸಹಾಯಮಾಡುತ್ತದೆ. ಕಫ, ಕೆಮ್ಮು ಮೊದಲಾದ ಗಂಟಲ ಮತ್ತು ಎದೆಯ ರೋಗಗಳನ್ನು ಶಮನಮಾಡುತ್ತದೆ. ಎಲೆಗಳಿಂದ ಬೆಚ್ಚಾರ (ಪೌಲ್ಟೀಸ್) ಮಾಡಿ ಕುರು ಮೊದಲಾದ ಚರ್ಮರೋಗಗಳಿದ್ದ ಎಡೆಗೆ ಕಟ್ಟುತ್ತಾರೆ. ಹೊಸ ಎಲೆಯಲ್ಲಿ ಈ ಅಂಶಗಳಿವೆ : (ಸೇಕಡಾ) ತೇವ 85·4; ಪ್ರೋಟೀನು 3·1; ಕೊಬ್ಬು 0·8 ; ಶರ್ಕರ ಪಿಷ್ಟಾದಿಗಳು 6·1 ; ನಾರು 2.3; ಖನಿಜ ವಸ್ತು 2·3 ; ಕ್ಯಾಲ್ಸಿಯಂ 230 ಮಿ. ಗ್ರಾಂ ; ರಂಜಕ 40 ಮಿ. ಗ್ರಾಂ ; ಕಬ್ಬಿಣ 7 ಮಿ. ಗ್ರಾಂ ; ಅಯಾನೀಕೃತವಾಗಬಲ್ಲ ಕಬ್ಬಿಣ 3·5 ಮಿ. ಗ್ರಾಂ ; ಕೆರೊಟೀನ್ 9·600 ಐ. ಯು. ; ತಯಾಮಿನ್ $70\mu g$ ; ರೈಬೊಫ್ಲೇವಿನ್ $30\mu g$ ; ನಿಕೋಟಿನಿಕ್ ಆಮ್ಲ 0·7 ಮಿ. ಗ್ರಾಂ. ಸಿ ಜೀವಾತು 5 ಮಿ. ಗ್ರಾಂ./100 ಗ್ರಾಂ ; ಅಯೊಡೀನ್ 3.4 ಮಿ.ಗ್ರಾಂ./100 ಗ್ರಾಂ ; ಪೊಟ್ಯಾಸಿಯಂ ನೈಟ್ರೇಟ್ 0·26—0.42%. ಬೊಂಬಾಯಿಯ ಎಲೆಗಳಲ್ಲಿ ಈ ಅಂಶಗಳಿವೆ: ಗ್ಲೂಕೋಸ್ 1·4–3·2 ; ಸುಕ್ರೋಸ್ 0·6–2·5 ; ಪಿಷ್ಟ 1·0–1·2 ; ತೈಲಾಂಶ 0·8–1·8 ; ಟ್ಯಾನಿನ್ 1·0–1·3%.

ಭಾರತದ ರಫ್ತು ವ್ಯಾಪಾರ
(ಸಾವಿರ ಕಿಲೋ ಗ್ರಾಂಗಳಲ್ಲಿ)

| ದೇಶಗಳು | 1962–63 | 1963–64 | 1964–65 | 1965–66 | 1966–67 |
|---|---|---|---|---|---|
| ಸಂಯುಕ್ತ ರಾಷ್ಟ್ರ | 16·2 | 28·9 | 67·8 | 38·9 | 6·6 |
| ಕೀನ್ಯ | 33·7 | 32·6 | 53·9 | 30·6 | 13·5 |
| ಏಡನ್ | 19·1 | 24·3 | 38.2 | 27·4 | 3·1 |
| ಪೂರ್ವ ಪಾಕಿಸ್ತಾನ | 12·3 | 2·0 | 6·9 | 1·00 | 1·2 |
| ಬಹ್ರೇನ್ ದ್ವೀಪಗಳು | 7·8 | 8·3 | 7·3 | 4·3 | 2·4 |
| ಕುವಾಯಿತ್ | 7·1 | 11·3 | 12.7 | 9·8 | 3·0 |
| ನೇಪಾಳ | 1·4 | 1·00 | 1·00 | 54·6 | 10·8 |
| ಇತರೆ | 19.1 | 21·9 | 28·4 | 29·7 | 12·0 |

ಎಲೆಯಲ್ಲಿನ ತೈಲಾಂಶವನ್ನು ಪ್ರತ್ಯೇಕಿಸಿ ಅನೇಕ ಔಷಧಗಳಲ್ಲಿ ಬಳಸುತ್ತಾರೆ. ಎಲೆಗಳನ್ನು ಎಣ್ಣೆ, ಬೆಣ್ಣೆ ಇತ್ಯಾದಿಗಳೊಡನೆ ಹಾಕಿ ಕಾಯಿಸಿದಾಗ ಜಿಡ್ಡಿನಲ್ಲಿರುವ ಕಮಟುನಾತ ಮಾಯವಾಗಿ ಶುಭ್ರವಾಗುತ್ತದೆ. (ಡಿ.ಎಂ.)

**ಎಲೆನ್‌ಬರೊ, ಎಡ್ವರ್ಡ್ ಲಾ, ಲಾರ್ಡ್ :** 1790–1871. ಇಂಗ್ಲಿಷ್ ರಾಜಕಾರಣಿ. ಲಾರ್ಡ್ ಆಕ್‌ಲೆಂಡನ ಅನಂತರ ಭಾರತದ ಗವರ್ನರ್ ಜನರಲ್ ಆಗಿದ್ದ (1842–44). ಒಂದನೆಯ ಬ್ಯಾರನ್ ಎಲೆನ್‌ಬರೋಗೆ ಈತ ಹಿರಿಯ ಪುತ್ರ. ಈಟನಿನಲ್ಲೂ ಕೇಂಬ್ರಿಜಿನ ಸೇಂಟ್ ಜಾನ್ಸ್ ಕಾಲೇಜಿನಲ್ಲೂ ವಿದ್ಯಾರ್ಜನೆ ಮಾಡಿದ ಮೇಲೆ 1813ರಲ್ಲಿ ಈತ ಬ್ರಿಟನಿನ ಕಾಮನ್ಸ್ ಸಭಾ ಪ್ರವೇಶಮಾಡಿದ. ಈತನ ತಂದೆ ಮರಣಿಸಿದಾಗ (1818) ಇವನಿಗೆ ಲಾರ್ಡ್ಸ್ ಸಭಾ ಸದಸ್ಯತ್ವ ಲಭ್ಯವಾಯಿತು. ಹತ್ತು ವರ್ಷಗಳ ಅನಂತರ (1828) ಈತ ಲಾರ್ಡ್ ಪ್ರಿವಿ ಸೀಲ್ ಆದ. 1828–30ರ ಅವಧಿಯಲ್ಲಿ ಈತ ಭಾರತ ನಿಯಂತ್ರಣ ಬೋರ್ಡಿನ ಅಧ್ಯಕ್ಷನಾದಾಗಿನಿಂದ ಇವನಿಗೂ ಭಾರತಕ್ಕೂ ಸಂಬಂಧ ಬೆಳೆಯಲಾರಂಭಿಸಿತೆನ್ನಬಹುದು.

ಆಗ ಭಾರತವಿನ್ನೂ ಈಸ್ಟ್ ಇಂಡಿಯ ಕಂಪನಿಯ ಆಡಳಿತದಲ್ಲಿತ್ತು. ಭಾರತದ ಆಡಳಿತದಲ್ಲಿ ಸರ್ಕಾರದ ಹತೋಟಿ ಹೆಚ್ಚಾಗಿರಬೇಕೆಂಬುದು ಈತನ ಅಭಿಪ್ರಾಯವಾಗಿತ್ತು. ಬ್ರಿಟನಿನಿಂದ ಅಲೆಗ್ಸಾಂಡ್ರಿಯಕ್ಕೂ ಕೆಂಪು ಸಮುದ್ರದ ಮೂಲಕವಾಗಿ ಬೊಂಬಾಯಿಗೂ ಜಹಜು ಸಂಚಾರ ಏರ್ಪಡಿಸಬೇಕೆಂಬುದಾಗಿ ಈತ ವಾದಿಸಿದ. ಭಾರತೀಯರ ತೆರಿಗೆಯ ಭಾರ ಇಳಿಸಿ ಅವರ ಉತ್ಪಾದನಶಕ್ತಿ ಹೆಚ್ಚಿಸಬೇಕು. ಭಾರತ ಆರ್ಥಿಕವಾಗಿ ಅಭಿವೃದ್ಧಿಹೊಂದಿದಷ್ಟೂ ಬ್ರಿಟನಿಗೆ ಅದು ಕೈಗಾರಿಕೆಗಳಿಗೆ ಅಗತ್ಯವಾದ ಸಾಮಗ್ರಿ ಸರಬರಾಜು ಮಾಡಬಲ್ಲುದಲ್ಲದೆ ಬ್ರಿಟನಿನ

ಕೈಗಾರಿಕೆಗಳಿಗೆ ಮಾರುಕಟ್ಟೆಯಾಗಿಯೂ ಪರಿಣಮಿಸುವುದು—ಎಂಬುದು ಈತನ ನಂಬಿಕೆ. ಪಾಶ್ಚಾತ್ಯಶಿಕ್ಷಣ ಪಡೆದ ಭಾರತೀಯರನ್ನು ಹೆಚ್ಚು ಹೆಚ್ಚಾಗಿ ಆಡಳಿತದಲ್ಲಿ ಸೇರಿಸಿಕೊಳ್ಳಬೇಕೆಂಬುದು ಆಗ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ವಿಲಿಯಂ ಬೆಂಟಿಂಕನ ಅಭಿಪ್ರಾಯವಾಗಿತ್ತು. ಇದು ಈತನಿಗೂ ಸಮ್ಮತವಾಗಿತ್ತು.

ಮುಂದೆ ಈತನೇ ಭಾರತದ ಗವರ್ನರ್ ಜನರಲ್ ಆಗಿ ನೇಮಕಗೊಂಡಾಗ ತನ್ನ ಅಭಿಪ್ರಾಯಗಳನ್ನೆಲ್ಲ ಕಾರ್ಯರೂಪಕ್ಕೆ ತರಲೆತ್ನಿಸಿದ. ಈತ ಗವರ್ನರ್ ಜನರಲ್ ಆದಾಗ ಭಾರತದಲ್ಲಿದ್ದ ಬ್ರಿಟಿಷ್ ಸರ್ಕಾರಕ್ಕೂ ಆಫ್ಘಾನಿಸ್ತಾನಕ್ಕೂ ನಡುವೆ ಯುದ್ಧ ನಡೆಯುತ್ತಿತ್ತು. ಅಲ್ಲಿಂದ ಈತ ಸೇನೆಯನ್ನು ಹಿಂದಕ್ಕೆ ಕರೆಸಿ ಅದನ್ನು ಸಿಂಧೂ ಪ್ರದೇಶಕ್ಕೆ ನುಗ್ಗಿಸಿದ. ಅಲ್ಲಿನ ಅಮೀರರಿಗೆ ಸೋಲಾಗಿ ಸಿಂಧೂ ಪ್ರಾಂತ್ಯ ಬ್ರಿಟಿಷ್ ಭಾರತದ ಭಾಗವಾಯಿತು. ಮಹಾರಾಜ ಸಿಂಧಿಯನೂ ಪರಾಜಿತನಾದ. ಗ್ವಾಲಿಯರ್ ಬ್ರಿಟಿಷ್ ಆಶ್ರಿತ ಸಂಸ್ಥಾನವಾಯಿತು.

ಲಾರ್ಡ್ ಎಲೆನ್‌ಬರೋನ ಛಲವೂ ಅಹಂಕಾರವೂ ಆತುರದ ಕ್ರಮಗಳೂ ಕಂಪನಿಯ ನಿರ್ದೇಶಕ ಮಂಡಲಿಗೆ ಹಿಡಿಸಲಿಲ್ಲ. ತತ್ಫಲವಾಗಿ ಈತ ಶೀಘ್ರದಲ್ಲೇ ಇಂಗ್ಲೆಂಡಿಗೆ ವಾಪಸು ಹೋಗಬೇಕಾಯಿತು. ಆದರೂ ಭಾರತದ ವ್ಯವಹಾರಗಳ ಮೇಲೆ ಈತನ ಪ್ರಭಾವ ಇದ್ದೇ ಇತ್ತು. 1857ರ ಬಂಡಾಯದ ಅನಂತರ ಭಾರತದ ಹೊಸ ಆಡಳಿತ ವ್ಯವಸ್ಥೆಯ ಯೋಜನೆಯನ್ನು ರಚಿಸದವನೀತನೇ. ಅಯೋಧ್ಯೆಯ ವಿಷಯವಾಗಿ ಲಾರ್ಡ್ ಕ್ಯಾನಿಂಗ್ ಮಾಡಿದ್ದ ಘೋಷಣೆಯ ಬಗ್ಗೆ ಈತ ಮಾಡಿದ ಕಟು ಟೀಕೆಯಿಂದಾಗಿ ಅಸಮಾಧಾನವೇರ್ಪಟ್ಟು ರಾಜಕೀಯದಿಂದ ಈತ ಅಂತಿಮವಾಗಿ ನಿರ್ಗಮಿಸಬೇಕಾಯಿತು. ಭಾರತದ ಲೋಕಸೇವೆಗೆ ಅಭ್ಯರ್ಥಿಗಳನ್ನು ಸ್ಪರ್ಧಾಪರೀಕ್ಷೆಯ ಮೂಲಕ ಆಯ್ಕೆ ಮಾಡಬೇಕೆಂಬ ಯೋಜನೆಯನ್ನು ಈತ ವಿರೋಧಿಸಿದ್ದ. ಈತ ಪಕ್ಕಾ ಸಾಮ್ರಾಜ್ಯವಾದಿ. (ಎಸ್.ಎ.ಡಿ.)

**ಎಲೆಹುಳು :** ಫಿಲ್ಲಿಡಿಡೆ ವಂಶಕ್ಕೆ ಸೇರಿದ ಒಂದು ಹುಳು (ಲೀಫ್ ಇನ್ಸೆಕ್ಟ್; ವಾಕಿಂಗ್ ಲೀಫ್). ನೋಡಲು ಹಸಿರು ಎಲೆಯಂತೆ ಇದೆ. ಕಡ್ಡಿಹುಳುಗಳ



ಎಲೆಯಂತೆಯೇ ಕಾಣುವ ಎಲೆಹುಳು

ಹತ್ತಿರದ ಸಂಬಂಧಿ. ಕುಳಿತಾಗ ಬೆನ್ನನ್ನು ಮುಚ್ಚಿರುವ ಇದರ ಎರಡು ರೆಕ್ಕೆಗಳು ಸಂಪೂರ್ಣವಾಗಿ ಎಲೆಯನ್ನು ಹೋಲುತ್ತವೆ. ಹೆಣ್ಣಿನ ಹಿಂದಿನ ರೆಕ್ಕೆಗಳು ಹಾರಲು ಉಪಯುಕ್ತವಾಗಿಲ್ಲ. ಗಂಡಿನಲ್ಲಿ ಎಲೆರೆಕ್ಕೆ ಸಣ್ಣನಾಗಿದ್ದು ಹಿಂದಿನ ರೆಕ್ಕೆಗಳು ಹಾರಲನುಕೂಲವಾಗುವಂತೆ ಚೆನ್ನಾಗಿ ಬೆಳೆದಿವೆ. ಮರಿ ಕೆಂಪಗಿದ್ದು ಎಲೆ ತಿನ್ನುತ್ತ ತಿನ್ನುತ್ತ ಹಸಿರು ಬಣ್ಣಕ್ಕೆ ತಿರುಗುತ್ತದೆ. ಕೇವಲ ಹಸಿರನ್ನು ತಿನ್ನುತ್ತವಾದ್ದರಿಂದ ಹಸಿರು ಗಿಡಮರಗಳಲ್ಲೇ ಇರುತ್ತವಾಗಿ ಈ ಹುಳುಗಳ ಬಣ್ಣ ಮತ್ತು ಆಕಾರ ಇವಕ್ಕೆ ಸಾಕಷ್ಟು ರಕ್ಷಣೆ ಕೊಡುತ್ತವೆ. ಕಡ್ಡಿಹುಳುಗಳಲ್ಲಿರುವಂತೆ ಇವುಗಳ ತತ್ತಿಗಳೂ ಬೀಜಗಳನ್ನು ಹೋಲುತ್ತವೆ. ಇದರಿಂದ ತತ್ತಿಗಳಿಗೂ ರಕ್ಷಣೆ ಒದಗುತ್ತದೆ. ಭಾರತದಲ್ಲಲ್ಲದೆ ಪೂರ್ವದ ಫಿಜಿ ದ್ವೀಪಗಳವರೆಗೂ ಇವುಗಳ ವ್ಯಾಪ್ತಿಯನ್ನು ಕಾಣಬಹುದು. ಎಲೆಹುಳುಗಳಲ್ಲಿ ಮೂರು ಜಾತಿಗಳನ್ನೂ ಇಪ್ಪತ್ತು ಪ್ರಭೇದಗಳನ್ನೂ ಗುರುತಿಸಲಾಗಿದೆ.

ಒಂಟಿ ಹುಳುವಿನ (ಪ್ರೇಯಿಂಗ್ ಮ್ಯಾಂಟಿಸ್) ಕೆಲವು ಪ್ರಭೇದಗಳಲ್ಲೂ ರೆಕ್ಕೆಯ ಬಣ್ಣ ಮತ್ತು ಆಕಾರ ಸ್ವಲ್ಪಮಟ್ಟಿಗೆ ಎಲೆಯನ್ನು ಹೋಲುವುದನ್ನು ಗಮನಿಸಬಹುದು. ನೋಡಿ—ಅನುಕರಣೆ[2]. *

**ಎಲ್ಕ್ ಸಾರಗ :** ಚಿಗರೆಗಳಲ್ಲೆಲ್ಲ ಅತಿದೊಡ್ಡ ಗಾತ್ರದ ಪ್ರಾಣಿ. ಸರ್ವಸ್ ಜಾತಿಗೆ ಸೇರಿದ ಈ ಪ್ರಾಣಿಯನ್ನು ಅಮೆರಿಕದಲ್ಲಿ ಮೂಸು (ಮೂಸ್) ಎಂದೂ ಯೂರೋಪಿನಲ್ಲಿ ಕೆಂಪು ಚಿಗರೆ ಎಂದೂ ಕಾಶ್ಮೀರದಲ್ಲಿ ಜಿಂಕೆಯೆಂದೂ ಹಿಮಾಲಯದಲ್ಲಿ ಸೌ ಎಂದೂ ಕರೆಯುತ್ತಾರೆ. ಉತ್ತರ ಅಮೆರಿಕದಲ್ಲಿ ಇದನ್ನು ವಾಪಿಟಿ ಎನ್ನುವರು. ಎಲ್ಕ್ ಎನ್ನುವುದು ಯೂರೋಪಿನ ಹೆಸರು. ಮೂಸುವನ್ನು ಬಿಟ್ಟರೆ



ಅಮೆರಿಕದ ಎಲ್ಕ್

ಅಮೆರಿಕದ ಎಲ್ಕ್ ಅತಿ ದೊಡ್ಡ ಪ್ರಾಣಿ. ತೋಳಿನ ಮಟ್ಟದಿಂದ ಲೆಕ್ಕ ಹಾಕಿದರೆ ಚೆನ್ನಾಗಿ ಬೆಳೆದ ಎಲ್ಕು 5′ 4″ ಎತ್ತರವಿದ್ದು 700–1000 ಪೌಂಡು ತೂಕವಿರುತ್ತದೆ. ಚೆನ್ನಾಗಿ ಬೆಳೆದ ಕೊಂಬುಗಳು 5′ ಪಸರಿಸಿರುತ್ತವೆ. ಇದರ ಕಾಲುಗಳು ಉದ್ದ, ಕೊರಳು ಮೋಟಕು. ಮೇಲೊಸಡು ಗ್ರಾಹಕಶಕ್ತಿಯುಳ್ಳದ್ದಾಗಿ ನೇತು ಬಿದ್ದಿರುತ್ತದೆ. ಕಿವಿಗಳು ಉದ್ದನಾಗಿ ಜೋತುಬಿದ್ದಿರುತ್ತವೆ. ನೋಡಲು ಪ್ರಾಣಿ ಅಷ್ಟೇನೂ ಚನ್ನವಲ್ಲ. ಗಂಡಿನ ಕೂದಲು ಉದ್ದ, ಒರಟು, ಸ್ವಲ್ಪ ಪೆಡಸು.

ಈ ಮೃಗ ಜೌಗುಪ್ರದೇಶದಲ್ಲಾಗಲಿ, ಕುರುಚಲು ಅಥವಾ ದಟ್ಟ ಕಾಡಿನಲ್ಲಾಗಲಿ ಹಾಯಾಗಿರಬಲ್ಲುದು. ಕಾಡಿನ ಮತ್ತು ಜೌಗಿನ ಯಾವ ಅಡಚಣೆಗಳೂ ಇದಕ್ಕೆ ಲೆಕ್ಕವಿಲ್ಲ. ಶೀತಕಾಲದ ಅನ್ನಾಭಾವಕ್ಕೂ ಇದು ಹೆದರದು. ಆದ್ದರಿಂದ ತನ್ನ ಮೇಲೆ ಬೀಳಲು ಬರುವ ತೋಳ, ಲಿಂಕ್ಸ್, ಕರಡಿಗಳು ಮತ್ತು ಗ್ಲಟನ್ ಮುಂತಾದ ಪ್ರಾಣಿಗಳಿಂದಲೂ ಮನುಷ್ಯನಿಂದಲೂ ಇದು ಅತಿ ಜಾಣತನದಿಂದ ತಪ್ಪಿಸಿಕೊಳ್ಳುತ್ತದೆ. ತನ್ನ ಏಕಾಂತಭಂಗವನ್ನು ಇದು ಸಹಿಸದು. ಸುತ್ತುಗಟ್ಟಿದಾಗ ದಿಗ್ಭ್ರಮೆಗೊಳ್ಳುತ್ತದೆ. ವ್ಯವಸಾಯದ ಒತ್ತುವರಿ ಆದಂತೆಲ್ಲ ಈ ಪ್ರಾಣಿ ಮಾಯವಾಗುತ್ತಿದೆ.

ಯೂರೋಪ್ ಖಂಡದಲ್ಲಿ ಇದು ಸ್ಕ್ಯಾಂಡಿನೇವಿಯ, ಪೂರ್ವಪ್ರಷ್ಯ ಮತ್ತು ರಷ್ಯದ ಕೆಲವು ಭಾಗಗಳಲ್ಲಿದೆ. ಅಮೆರಿಕದಲ್ಲಿ ಅಲಾಸ್ಕದ ಹತ್ತಿರ ಸಿಕ್ಕುತ್ತದೆ. ಉದ್ದನಾದ ಕಾಲು ಮತ್ತು ಚಿಕ್ಕ ಕತ್ತು ಇರುವುದರಿಂದ ನೆಲದ ಮೇಲಿನ ಹುಲ್ಲನ್ನು ಮೇಯಲಾರದು. ಕೇವಲ ಮರದ ಕೆಳಗಿನ ಎಲೆ ಕೊನೆಗಳು, ಹೂವರುಗಳ ತುದಿಗಳು ಮತ್ತು ಉದ್ದವಾಗಿ ಬೆಳೆಯುವ ಹುಲ್ಲುಗಳನ್ನು ಮಾತ್ರ ಮುಟ್ಟಬಲ್ಲುದು. ಬರ್ಚ್, ವಿಲ್ಲೊ, ಆಸ್ಪೆನ್, ಪಾಪ್ಲರ್ ಮರಗಳ ಎಲೆ, ಕುಡಿ, ಕಲ್ಲುಹೂ ಮತ್ತು ಪಾಚಿ—ಇವು ಇವರ ಮುಖ್ಯ ಆಹಾರ. ಬೇಸಗೆಯಲ್ಲಿ. ಮುಖ್ಯವಾಗಿ [illegible]. ಇದು ಜೌಗು

ಗುಂಡಿಗಳ ಕೆಸರಿನಲ್ಲಿ ಆಳಕ್ಕೆ ಮುಳುಗಿ ಅಲ್ಲಿ ಬೆಳೆದಿರುವ ಸಾರವತ್ತಾದ ನೀರಿನ ಗಿಡಗಳನ್ನು ಮೇಲೆತ್ತಿ, ಬೇರು ಸಹಿತ ಅವನ್ನು ಕೀಳಲು ನೀರಿನೊಳಕ್ಕೆ ಆಗಾಗ ತಲೆಯನ್ನು ಮುಳುಗಿಸುತ್ತ ಕಾಲ ಕಳೆಯುತ್ತದೆ.

ಎಲ್ಕ್ ಸಾರಗ ಎಷ್ಟು ಬಲಿಷ್ಠವೋ ಅಷ್ಟು ಧೈರ್ಯಶಾಲಿ. ಇದರ ಮೊನಚಾದ ಗೊರಸುಗಳು ಕೊಂಬುಗಳಿಗಿಂತ ಭಯಂಕರವಾದ ಆಯುಧ. ಎರಡನ್ನೂ ಅದು ತುಂಬ ಕೌಶಲದಿಂದ ಉಪಯೋಗಿಸಬಲ್ಲುದು.

ಗಂಡು ಪಾಪಿಟಿ ತನ್ನ ಸುತ್ತ ಹೆಣ್ಣು ಜಿಂಕೆಗಳ ಒಂದು ಗುಂಪನ್ನು ಇಟ್ಟುಕೊಂಡು ಗುಂಪಿನ ಸ್ವಾಮ್ಯಕ್ಕಾಗಿ ಹೊಡೆದಾಡುತ್ತದೆ. ಅದೇ ಮುಸು ತನ್ನ ಏಕಾಕಿ ಸಂಗಾತಿಯೊಡನೆ ಸಂಸಾರ ಮಾಡುತ್ತದೆ.



ಯೂರೋಪಿನ ಎಲ್ಕ್

ಮೇ ತಿಂಗಳಲ್ಲಿ ಒಂದೊ ಅಥವಾ ಎರಡೊ ಮರಿಗಳು ಹುಟ್ಟುತ್ತವೆ ; ಈಯುವುದಕ್ಕೆ ಮೊದಲು ಹೆಣ್ಣುಗಳು ಕೆರೆಯ ಅಥವಾ ನದಿಯ ನಡುಗಡ್ಡೆ, ಜೌಗು ಮುಂತಾದ ದುರ್ಗಮ ಪ್ರದೇಶಗಳನ್ನು ಹುಡುಕಿಕೊಳ್ಳುತ್ತವೆ. ಹುಟ್ಟಿದ ಕೆಲವೇ ತಾಸುಗಳಲ್ಲಿ ಮರಿ ಸ್ವತಂತ್ರವಾಗಿ ಓಡಾಡುತ್ತ ತಾಯನ್ನು ಹಿಂಬಾಲಿಸುತ್ತದೆ. (ಎ.)

**ಎಲ್ಗಿನ್, ಲಾರ್ಡ್ I :** 1811–63. ಸ್ಕಾಟ್ಲೆಂಡಿನ ಎಲ್ಗಿನ್ ಮತ್ತು ಕಿಂಕಾರ್ಡೀನ್ ಅರ್ಲ್‌ಗಳ (ಶ್ರೀಮಂತರ) ಸಾಲಿನಲ್ಲಿ ಎಂಟನೆಯವ ; ಜೇಮ್ಸ್ ಇವನ ಸ್ವಂತನಾಮ. ಈತ ಸಮರ್ಥ ಆಡಳಿತಗಾರ. ಲಾರ್ಡ್ ಕ್ಯಾನಿಂಗನ ತರುವಾಯ ಭಾರತದ ವೈಸರಾಯ್ ಆಗಿದ್ದ (ಮಾರ್ಚ್ 1862–ನವೆಂಬರ್ 1863). ಮುಂದೆ ಇವನ ಮಗನೂ ಭಾರತದ ವೈಸರಾಯಿಯಾದ್ದರಿಂದ ಈತನನ್ನು 1ನೆಯ ಲಾರ್ಡ್ ಎಲ್ಗಿನ್ ಎಂದು ಕರೆಯಲಾಗಿದೆ. ಲಂಡನಿನಲ್ಲಿ ಜನಿಸಿ, ಈಟನಿನಲ್ಲೂ ಕ್ರೈಸ್ಟ್ ಚರ್ಚ್ ಕಾಲೇಜಿನಲ್ಲೂ ವಿದ್ಯೆ ಗಳಿಸಿದ. ಈತ ಗ್ಲಾಡ್‌ಸ್ಟನನ ಸಮಕಾಲೀನ. ಸರ್ ರಾಬರ್ಟ್ ಪೀಲ್ ಬ್ರಿಟನಿನ ಪ್ರಧಾನ ಮಂತ್ರಿಯಾಗಿದ್ದಾಗ ಜಮೈಕದ ಗವರ್ನರಾಗಿ ನೇಮಕವಾದ (1842). ಗುಲಾಮಗಿರಿ ರದ್ದಾಗಿದ್ದದ್ದರಿಂದ ಅಲ್ಲಿ ಉದ್ಭವಿಸಿದ್ದ ವಿಶೇಷ ಪರಿಸ್ಥಿತಿಯಲ್ಲಿ ಯಶಸ್ವಿಯಾಗಿ ಆಡಳಿತ ನಿರ್ವಹಿಸಿ, ನೀಗ್ರೊಗಳ ಬಾಳು ಉತ್ತಮಗೊಳಿಸುವ ಕ್ರಮ ಕೈಕೊಂಡ.

1846ರಲ್ಲಿ ಕೆನಡದ ಗವರ್ನರ್ ಜನರಲ್ ಹುದ್ದೆ ಈತನಿಗೆ ದೊರಕಿತು. ಅಲ್ಲೂ ಉತ್ತಮ ವಾತಾವರಣವಿರಲಿಲ್ಲ. ಅಲ್ಲಿನ ಬ್ರಿಟಿಷ್ ಹಾಗೂ ಫ್ರೆಂಚ್ ನಿವಾಸಿಗಳ ವೈರ ಬೆಳೆದಿತ್ತು. ಅವರ ಸ್ವಾತಂತ್ರ್ಯಾಕಾಂಕ್ಷೆಯನ್ನೂ ಕಡೆಗಣಿಸುವಂತಿರಲಿಲ್ಲ. ಇಂಥ ಪರಿಸ್ಥಿತಿಯಲ್ಲಿ ಈತ ತಳೆದ ಸಹಾನುಭೂತಿಯುತ ಧೋರಣೆಯಿಂದಾಗಿ ಅಲ್ಲೂ ಒಳ್ಳೆಯ ಹೆಸರು ಪಡೆದ. ಎಲ್ಗಿನಿನ ಬ್ಯಾರನ್ ಪದವಿ ಈತನಿಗೆ ಲಭ್ಯವಾಯಿತು.

1855ರಲ್ಲಿ ಲಾರ್ಡ್ ಪಾಮರ್‌ಸ್ಟನನ ಸರ್ಕಾರದಲ್ಲಿ ಇವನಿಗೆ ಸಚಿವನಾಗುವ ಅವಕಾಶವಿತ್ತು. ಆದರೆ ಆ ಆಹ್ವಾನವನ್ನು ಈತ ನಿರಾಕರಿಸಿದ. ಮುಂದೆ ಚೀನದಲ್ಲಿ ಸಂಭವಿಸಿದ ದುರ್ಘಟನೆಯಿಂದಾಗಿ ಅಲ್ಲಿಗೆ ಸೈನ್ಯದೊಂದಿಗೆ ಹೊರಟ. ನಡುವೆ ಭಾರತದ ಕರೆ ಬಂತು. ಆಗ ವೈಸ್‌ರಾಯಿಯಾಗಿದ್ದ ಲಾರ್ಡ್ ಕ್ಯಾನಿಂಗ್ ಈತನ ಮಿತ್ರ. 1857ರ ಬಂಡಾಯವನ್ನಡಗಿಸಲು ಅವನ ನೆರವಿಗೆ ಈತನ ಸೇನೆ ಧಾವಿಸಿತು. ಅನಂತರ ಈತ ಚೀನ-ಜಪಾನುಗಳೊಂದಿಗೆ ಚೌಕಾಯಿಷಿ ಮಾಡಿ ಬ್ರಿಟಿಷರಿಗೆ ನಾನಾ ಸವಲತ್ತುಗಳನ್ನು ಗಿಟ್ಟಿಸಿಕೊಂಡ. ಇವನ ಸಾಮ್ರಾಜ್ಯಷಾಹಿ ಮನೋಭಾವ ಬಯಲಿಗೆ ಬಂದದ್ದು ಆಗ.

ಆ ವೇಳೆಗೆ ಭಾರತದ ಆಡಳಿತ ಈಸ್ಟ್ ಇಂಡಿಯ ಕಂಪನಿಯಿಂದ ಬ್ರಿಟಿಷ್ ಸರ್ಕಾರದ ವಶಕ್ಕೆ ಬಂದಿತ್ತು. 1858ರ ಕಾಯಿದೆಗೆ ಅನುಗುಣವಾಗಿ ಬ್ರಿಟಿಷ್ ಸರ್ಕಾರದಿಂದ ನೇರವಾಗಿ ನೇಮಕಗೊಂಡ ಪ್ರಥಮ ವೈಸರಾಯ್ ಈತ. ಹೊಸ ವ್ಯವಸ್ಥೆಯನ್ನು ಊರ್ಜಿತಗೊಳಿಸುವ ಕೆಲಸದಲ್ಲಿ ಈತ ಉದ್ಯುಕ್ತನಾಗಿದ್ದ. ವಾಯುವ್ಯ ಗಡಿನಾಡಿನಲ್ಲಿ ಎದ್ದ ದಂಗೆಯನ್ನಡಗಿಸುವ ಕಾರ್ಯದಲ್ಲಿ ಇವನ ಸಜ್ಜಾದ ಉಕ್ಕಿನ ಕೈ ಮುಂದಾಯಿತು. ಎಂಟು ತಿಂಗಳ ವೈಸರಾಯ್‌ಗಿರಿಯಲ್ಲಿನ ದೊಡ್ಡ ಘಟನೆಯೆಂದರೆ ಇದೊಂದೇ. ಭಾರತದಲ್ಲಿ ಇವನ ಆಡಳಿತದ ಬಣ್ಣದ ಅರಿವಾಗುವ ಮುನ್ನವೇ ಈತ ಹೃದಯಾಘಾತದಿಂದ ಸತ್ತ. ಧರ್ಮಶಾಲಾದಲ್ಲಿ ಇವನನ್ನು ಹೂಳಲಾಯಿತು. (ಬಿ.ಎಸ್.ಎಚ್.)

**ಎಲ್ಗಿನ್, ಲಾರ್ಡ್ II :** 1849–1917. ಎಲ್ಗಿನ್ ಮತ್ತು ಕಿಂಕಾರ್ಡೀನ್‌ಗಳ ಎಂಟನೆಯ ಅರ್ಲನ ಮಗ, ಒಂಬತ್ತನೆಯ ಅರ್ಲ್. ಹೆಸರು ವಿಕ್ಟರ್ ಅಲೆಗ್ಸಾಂಡರ್. 1894 ರಿಂದ 1899ರವರೆಗೆ ಭಾರತದ ವೈಸ್‌ರಾಯ್ ಆಗಿದ್ದ. ಈತನ ತಂದೆಯೂ ಭಾರತದ ವೈಸ್‌ರಾಯ್ ಆಗಿದ್ದದ್ದರಿಂದ ಈತ ಎರಡನೆಯ ಲಾರ್ಡ್ ಎಲ್ಗಿನ್ ಎನಿಸಿಕೊಂಡಿದ್ದಾನೆ. ಈತನೂ ಈಟನ್ ಆಕ್ಸ್‌ಫರ್ಡ್‌ಗಳಲ್ಲಿ ವಿದ್ಯೆ ಗಳಿಸಿದ. ತಂದೆಯಂತೆ ದಕ್ಷನೇನೂ ಅಲ್ಲ. ಈತನ ಅಧಿಕಾರದ ಕಾಲದಲ್ಲಿ ಎರಡು ಮಹಾ ದುರ್ಘಟನೆಗಳು ಒದಗಿದುವು : ಒಂದು, ಬೊಂಬಾಯಿಯಲ್ಲಿ 1896ರಲ್ಲಿ ತಲೆದೋರಿದ ಪ್ಲೇಗು ಜಾಡ್ಯ; ಇನ್ನೊಂದು, ಇಡೀ ಭಾರತದಲ್ಲಿ ಸಂಭವಿಸಿದ ಭೀಕರ ಕ್ಷಾಮ (1896-97). ಎಲ್ಗಿನನ ಸರ್ಕಾರ ಇವೆರಡರ ವಿರುದ್ಧ ಯಾವ ಪರಿಣಾಮಕಾರಿ ಕ್ರಮವನ್ನೂ ಕೈಕೊಳ್ಳಲಿಲ್ಲ. ಬ್ರಿಟಿಷ್ ಭಾರತದಲ್ಲೇ ಸುಮಾರು ಹತ್ತು ಲಕ್ಷ ಮಂದಿ ಸತ್ತರು. ಪ್ಲೇಗ್ ಜಾಡ್ಯವನ್ನೆದುರಿಸುವ ನೆವದಲ್ಲಿ ಸರ್ಕಾರ ಕೈಕೊಂಡ ಉಗ್ರಕ್ರಮಗಳು ಜನರಿಗೆ ಹಿಡಿಸಲಿಲ್ಲ. ಭಾರತೀಯರ ಮರ್ಯಾದೆಗೆ ಭಂಗ ತರುವ ವರ್ತನೆಯಿಂದ ಮುಳಿದ ಪುಣೆಯ ಜನ ಇಬ್ಬರು ಬ್ರಿಟಿಷ್ ಅಧಿಕಾರಿಗಳನ್ನು ಕೊಂದರು. ಈ ಘಟನೆ ರಾಜಕೀಯ ಬಣ್ಣ ತಳೆಯಿತು.

ಎಲ್ಗಿನನ ವೈಸ್‌ರಾಯಿಗಿರಿಯಲ್ಲಿ ಇನ್ನೂ ಅನೇಕ ಅನಾಹುತಗಳು ಸಂಭವಿಸಿದುವು. ಬ್ರಿಟಿಷ್ ಸರ್ಕಾರದ ಹಣಕಾಸಿನ ನೀತಿ ಭಾರತೀಯರ ಹಿತಕ್ಕೆ ವಿರೋಧವಾಗಿ ತ್ತೆಂಬುದು ಬಯಲಿಗೆ ಬಂದದ್ದು ಆಗ. 1895ರ ಆಯ-ವ್ಯಯದ ಕೊರತೆ ತುಂಬುವ ನೆವದಿಂದ ಸರ್ಕಾರ ಆಗ ಭಾರತದ ಆಮದು ವಸ್ತುಗಳ ಮೇಲೆ ಸೇಕಡಾ 5ರ ಸುಂಕ ವಿಧಿಸಿತು. ಆದರೆ ಲ್ಯಾಂಕಷೈರಿನಿಂದ ಭಾರತಕ್ಕೆ ಬರುತ್ತಿದ್ದ ಹತ್ತಿಯ ಬಟ್ಟೆಗೆ ಮಾತ್ರ ಈ ಸುಂಕದಿಂದ ವಿನಾಯಿತಿಯಿತ್ತು. ಬ್ರಿಟಿಷ್ ತಯಾರಿಕೆದಾರರ ಬಗ್ಗೆ ತೋರಿದ ಈ ಪಕ್ಷಪಾತದಿಂದ ಭಾರತದಲ್ಲಿ ಉಂಟಾದ ಅಸಮಾಧಾನವನ್ನು ನಿವಾರಿಸಲೋ ಎಂಬಂತೆ ಆ ಪದಾರ್ಥಗಳ ಮೇಲೂ ಸುಂಕ ಜಾರಿಗೆ ತರಲಾಯಿತಾದರೂ ಭಾರತೀಯ ಜವಳಿಯ ಮೇಲೆ ಇದೇ ಪ್ರಮಾಣದ ಪ್ರತಿಸುಂಕ ವಿಧಿಸಿದಾಗ ಬ್ರಿಟಿಷ್ ಸರ್ಕಾರದ ಕುಟಿಲನೀತಿ ಸ್ಪಷ್ಟವಾಯಿತೆನ್ನಬಹುದು. ಭಾರತದ ಹತ್ತಿಜವಳಿ ಕೈಗಾರಿಕೆಯನ್ನು ಬೆಳೆಯಗೊಡಬಾರದೆಂಬುದೇ ಇದರ ಹಿಂದಿದ್ದ ಉದ್ದೇಶ.

ವಾಯುವ್ಯ ಗಡಿನಾಡಿನಲ್ಲಿ ಲಾರ್ಡ್ ಎಲ್ಗಿನನ ಸರ್ಕಾರ ಅನಾವಶ್ಯಕವಾಗಿ ಗೊಂದಲವನ್ನುಂಟುಮಾಡಿತು. ಚಿತ್ರಾಲಿನ ಸಿಂಹಾಸನಕ್ಕೆ ಯಾರು ಬರಬೇಕೆಂಬ ಬಗ್ಗೆ ಸರ್ಕಾರ ಬಾಯಿಹಾಕಿದ್ದರಿಂದ ಅಲ್ಲಿ ಉದ್ಭವಿಸಿದ ಅಸಮಾಧಾನವನ್ನಡಗಿಸಲು ಭಾರತದ ಬ್ರಿಟಿಷ್ ಸೇನೆ ಅಲ್ಲಿಗೆ ನುಗ್ಗಿತು. ಇದರಿಂದ ನೆರೆಯ ಜನರೂ ದಂಗೆಯೆದ್ದರು. ಎರಡು ಯುದ್ಧಗಳು ನಡೆದುವು. 1898ರಲ್ಲಿ ಬ್ರಿಟಿಷ್ ಸರ್ಕಾರ ಕೊನೆಗೆ ಜಯಗಳಿಸಿತಾದರೂ 1857ರ ಅನಂತರ ಸರ್ಕಾರ ಎದುರಿಸಿದ ದೊಡ್ಡ ಗಂಡಾಂತರಗಳಲ್ಲಿ ಇದೂ ಒಂದು.

ಲಾರ್ಡ್ ಎಲ್ಗಿನ್ ಆಡಂಬರಪ್ರಿಯನಾಗಿರಲಿಲ್ಲ. ಆದರೆ ಈತನ ಆಡಳಿತ ಜಯಪ್ರದವಾಗಲಿಲ್ಲ. ಭಾರತದ ರಾಜಕೀಯ ಸುಧಾರಣೆಗಳ ಬಗ್ಗೆ ಲಾರ್ಡ್ ಮಾರ್ಲೆ ನೀಡಿದ ಸಲಹೆಗಳನ್ನು ವಿರೋಧಿಸಿದವರ ಪೈಕಿ ಇವನೂ ಒಬ್ಬ. *

**ಎಲ್ಡೊರಾಡೊ :** ಚಿನ್ನದ ಮನುಷ್ಯ ಎಂಬ ಅರ್ಥ ಬರುವ ಈ ಶಬ್ದ ಅಮೆರಿಕದ ಕೊಲಂಬಿಯದ ಬೊಗೊಟ ಬಳಿಯ ಇಂಡಿಯನ್ ನಗರವೊಂದರ ನಾಯಕನ ಹೆಸರಾಗಿತ್ತು. ಪರ್ವದಿನಗಳಲ್ಲಿ ಆತ ಮೈತುಂಬ ಸ್ವರ್ಣಧೂಳಿ ಲೇಪಿಸಿಕೊಂಡು ಬತ್ತಲೆಯಾಗಿ ಸರೋವರದಲ್ಲಿ ಧುಮಿಕಿ ಮೀಯುತ್ತಿದ್ದನೆಂದು ಪ್ರತೀತಿ. ಆತನ ಪ್ರಜೆಗಳು ನೀರಿಗೆ ಒಡವೆಗಳನ್ನೂ ಸ್ವರ್ಣದ ವಸ್ತುಗಳನ್ನೂ ಹಾಕುತ್ತಿದ್ದರು. ಈ ದಂತಕಥೆಯನ್ನು ಕೇಳಿದ ಸ್ಪ್ಯಾನಿಷರು ಪೆರುವಿನಿಂದಲೂ ಜರ್ಮನರು ವೆನಿಜ್ವೇಲದಿಂದಲೂ ಆ ಸ್ವರ್ಣಪುರುಷನನ್ನು ಅನ್ವೇಷಿಸುತ್ತ ಇಲ್ಲಿಗೆ ಬಂದರು. ಆದರೆ ಆತ

ಕಾಣಸಿಗಲಿಲ್ಲ. ಸ್ಪ್ಯಾನಿಷರು ಸುತ್ತಿನ ಪ್ರದೇಶವನ್ನೆಲ್ಲ ಜಯಿಸಿದರು. ಅನ್ವೇಷಣೆ ಸಲ್ಲದೆ ಮುಂದುವರಿಯಿತು. ಇಲ್ಲೆಲ್ಲ ಚಿನ್ನದ ಆಸೆಯಿಂದ ಅಲೆದಾಡಿ ನೆಲವನ್ನು ಗೆದ್ದು ಕೊಂಡ ಪಾಶ್ಚಾತ್ಯರು ಇಡೀ ಪ್ರದೇಶವನ್ನೇ ಎಲ್ಡೊರಾಡೊ ಎಂದು ಕರೆದರು. ಬ್ರೆಜ಼ಿಲಿನವರು ರಚಿಸಿದ ನಕ್ಷೆಯಲ್ಲಿ ಎಲ್ಡೊರಾಡೊವೂ ಸ್ಥಾನ ಪಡೆಯಿತು. ಚಿನ್ನ ಇದೆಯೆಂದು ನಂಬಲಾಗಿದ್ದ ಇಂಥ ಮಿಥ್ಯಾ ಪ್ರದೇಶಗಳು ಅನೇಕ. ಅಪ್ರಯಾಸವಾಗಿ ಶೀಘ್ರಸಂಪತ್ತು ದೊರಕಬಹುದಾದ ಪ್ರದೇಶವನ್ನು ಎಲ್ಡೊರಾಡೋ ಎಂದು ಕರೆಯುವುದು ವಾಡಿಕೆಯಾಗಿದೆ. ಸಾಹಿತ್ಯದಲ್ಲೂ ಇದು ಸ್ಥಾನ ಪಡೆದಿದೆ (ಉದಾ: ಮಿಲ್ಟನನ ಪ್ಯಾರಡೈಸ್ ಲಾಸ್ಟ್ ; ವಾಲ್ಟೇರನ ಕ್ಯಾಂಡಿಡೆ). *

**ಎಲ್ಬ್ :** ಮಧ್ಯ ಯೂರೋಪಿನ ಒಂದು ಮುಖ್ಯ ನದಿ. ಬೊಹೀಮಿಯ ಪೀಠಭೂಮಿಯಲ್ಲಿ ಹುಟ್ಟಿ, ಚೆಕೋಸ್ಲವಾಕಿಯ ಮತ್ತು ಜರ್ಮನಿಗಳಲ್ಲಿ ಹರಿದು ಹ್ಯಾಂಬರ್ಗಿನಲ್ಲಿ ಉತ್ತರ ಸಮುದ್ರ ಸೇರುವ ಈ ನದಿಯ ಉದ್ದ 683 ಮೈ. ಮೊದಲು ಇದು ದಕ್ಷಿಣಾಭಿಮುಖವಾಗಿ ಹರಿಯುತ್ತದೆ. 4600′ ಎತ್ತರದಿಂದ 700′ ಎತ್ತರದ ಇಳಿಜಾರು ನೆಲಕ್ಕೆ ಧುಮುಕಿ, ಪಾರ್ಡುಬಿಟ್ಸೆ ಬಳಿ ಪಶ್ಚಿಮದ ಕಡೆ ತಿರುಗಿ, ಬೊಹೀಮಿಯದ ಅತ್ಯಂತ ವಿಶಾಲ ಹಾಗೂ ಫಲವತ್ತಾದ ಬಯಲನ್ನು ಪ್ರವೇಶಿಸುತ್ತದೆ. ಅನಂತರ ವಾಯುವ್ಯಾಭಿಮುಖವಾಗಿ ಹರಿಯುವ ಈ ನದಿಗೆ ಮೆಲ್ನಿಕ್ ಮತ್ತು ಲಿಟೊಮೆರಿಸ್ ಬಳಿ ಕ್ರಮವಾಗಿ ವಲ್ಟಾವ ಮತ್ತು ಏಗರ್ ಉಪನದಿಗಳು ಬಂದು ಸೇರುತ್ತವೆ. ಬೊಹೀಮಿಯವನ್ನು ಬಿಡುವುದಕ್ಕೆ ಮುಂಚೆ, ಎಟ್ಸ್‌ಗೆಬಿರ್ಜೆ ಪರ್ವತಾವಳಿಗಳಲ್ಲಿನ ಆಳವಾದ ಪ್ರಪಾತಗಳನ್ನು ಹಾಯ್ದು ಹೋಗುತ್ತದೆ. ಇದುವರೆಗೆ ಚೆಕೋಸ್ಲವಾಕಿಯದಲ್ಲಿ ಕ್ರಮಿಸಿದ ನದಿ ಅನಂತರ ಜರ್ಮನಿಯಲ್ಲಿ ಹರಿಯುತ್ತದೆ.

ಡ್ರೆಸ್‌ಡೆನ್‌ನಿಂದ ಉತ್ತರ ಸಮುದ್ರ ಸೇರುವ ವರೆಗೆ ಈ ನದಿ ಹರಿಯುವ ಪ್ರದೇಶ ಸಮುಮಟ್ಟವಾದದ್ದು. ಆಗ ಸಾಮಾನ್ಯವಾಗಿ ಇದರ ದಿಕ್ಕು ವಾಯುವ್ಯ. ತಿರುವು ಮುರಿವಾಗಿ ಸಾಗುವ ಈ ನದಿ ಮುಂದೆ ಹರಿಯುವುದು ಹಿಮಚಲನೆಯಿಂದುಂಟಾದ, ಪ್ರಾಚೀನ ನದೀಕೊಳ್ಳಗಳ ಹಾದಿಯಲ್ಲಿ. ಇದನ್ನು ಕೂಡಿಕೊಳ್ಳುವ ಎರಡು ನದಿಗಳು ಮೂಲ್ಡೆ ಮತ್ತು ಜ಼ಾಲೆ. ಇವು ಲೈಪ್‌ಸಿಗ್ ಕೈಗಾರಿಕಾವಲಯಕ್ಕೆ ಮಾತೃರೂಪದಂತಿವೆ. ಮ್ಯಾಗ್ಡೆಬರ್ಗ್‌ನಿಂದ ಹ್ಯಾಂಬರ್ಗ್ ವರೆಗೆ ನದಿಯ ಎರಡೂ ದಡಗಳು ಜೌಗು ಪ್ರದೇಶಗಳಿಂದ ಕೂಡಿವೆ. ಆದರೆ ನೀರನ್ನು ಹೊರ ತೆಗೆದು ಹುಲ್ಲುಗಾವಲುಗಳನ್ನು ನಿರ್ಮಿಸಿರುವುದರಿಂದ ಇಲ್ಲಿ ಸಾಮಾನ್ಯ ಜನವಸತಿಯುಂಟು. ಅನೇಕ ಕಾಲುವೆಗಳ ಮುಖಾಂತರ ಇದಕ್ಕೂ ಇತರ ನದಿಗಳಿಗೂ ಸಂಪರ್ಕ ಕಲ್ಪಿಸಲಾಗಿದೆ.

ಎಲ್ಬ್ ನದಿ ಸಮುದ್ರ ಸೇರುವ ಎಡೆಯಿಂದ ಒಳಕ್ಕೆ 85 ಮೈಲಿ ದೂರದಲ್ಲಿರುವ ಜಂಟಿ ಬಂದರುಗಳೇ ಹ್ಯಾಂಬರ್ಗ್ ಮತ್ತು ಆಲ್ಟೊನ. ಈ ಬಳಿಯಲ್ಲಿ ಎಲ್ಬಿನಿಂದ ಹೊರಟು ಬಾಲ್ಟಿಕ್ ಸಮುದ್ರ ಸೇರುವ ಕೀಲ್ ಕಾಲುವೆ ಇದೆ.

ಈ ನದಿಯ ಜಲಾನಯನ ಪ್ರದೇಶ 56,000 ಚ. ಮೈ. ಸರಾಸರಿಯಲ್ಲಿ ಸೆಕಂಡಿಗೆ 24,000 ಘನ ಅಡಿ ನೀರು ಈ ನದಿಯಲ್ಲಿ ಹರಿಯುತ್ತದೆ. ಇದು ಪರಿಮಾಣದಲ್ಲಿ ರೈನ್ ನದಿಯ ⅓ರಷ್ಟು. ಈ ನದಿಯ ಕೆಳಭಾಗ ಚಳಿಗಾಲದಲ್ಲಿ ಹೆಪ್ಪುಗಟ್ಟುತ್ತದೆ. (ಕೆ.ಆರ್.ಆರ್.)

**ಎಲ್ಬ :** ಇಟಲಿಯ ಪಶ್ಚಿಮ ತೀರದಲ್ಲಿರುವ ಒಂದು ದ್ವೀಪ. ಟಸ್ಕನಿ ಪ್ರದೇಶದ ಲೆಗ್‌ಹಾರನಿನ ಒಂದು ಭಾಗ. ವಿಸ್ತೀರ್ಣ 86 ಚ. ಮೈ. ಜನಸಂಖ್ಯೆ 26,888 (1961). ಪಶ್ಚಿಮ ಭಾಗದಲ್ಲಿ ಅಭ್ರಕ, ಪ್ರಶಸ್ತ ಬೆಣಚುಕಲ್ಲು ಮತ್ತು ಸುಣ್ಣಕಲ್ಲಿನ ನಿಕ್ಷೇಪಗಳೂ ಕಬ್ಬಿಣ ಮತ್ತು ಮ್ಯಾಂಗನೀಸ್ ಗಣಿಗಳೂ ಇವೆ.

ಇಲ್ಲಿಯ ಹಿತಕರವಾದ ವಾತಾವರಣದಿಂದಾಗಿ ಎಲ್ಲ ರೀತಿಯ ಸಸ್ಯವರ್ಗ ಬೆಳೆಯಲು ಅನುಕೂಲವಾಗಿದೆ. ಆಲಿವ್ ಮರಗಳು, ದ್ರಾಕ್ಷಿ ಬಳ್ಳಿಗಳು ಹೇರಳ. ಇಲ್ಲಿಯ ಕಬ್ಬಿಣದ ಅದುರಿಗೆ ಇಟ್ರುಸ್ಕನ್ ಸಂಸ್ಕೃತಿಯ ಅವಶೇಷಗಳ ಹೋಲಿಕೆಯಿರುವುದರಿಂದ ಎಲ್ಬ ಆ ಸಂಸ್ಕೃತಿಯ ಪ್ರಮುಖ ಕೇಂದ್ರವಾಗಿತ್ತೆಂದು ಊಹೆ. ಮಧ್ಯಯುಗದಲ್ಲಿ ಇದನ್ನು ಪೀಸ಼ ಜನ ಆಳುತ್ತಿದ್ದರು. ಇದು 1399 ರಲ್ಲಿ ಪಿಯಾಂಬಿನೋದ ಡ್ಯೂಕರ ಕೈಯಲ್ಲೂ 1548 ರಲ್ಲಿ ಫ್ಲಾರೆನ್ಸಿನ ಒಂದನೆಯ ಕಾಸಿಮೊ ಕೈಯಲ್ಲೂ 1595 ರಿಂದ 1709ರ ವರೆಗೆ ಸ್ಪೇನಿನ ವಶದಲ್ಲೂ ಇದ್ದು ಅನಂತರ ನೇಪಲ್ಸಿನವರ ಅಧೀನಕ್ಕೆ ಬಂತು. 1802ರಲ್ಲಿ ಇದನ್ನು ಫ್ರಾನ್ಸ್ ಗೆದ್ದಿತು. 1814 ರಲ್ಲಿ ಒಂದನೆಯ ನೆಪೋಲಿಯನ್ ರಾಜ್ಯಭ್ರಷ್ಟನಾಗಿ ಎಲ್ಬಕ್ಕೆ ಬಂದ. ಅನಂತರ ಇದೊಂದು ಸ್ವತಂತ್ರ ಸಂಸ್ಥಾನವಾಗಿ ಪರಿವರ್ತನೆ ಹೊಂದಿತು. ನೆಪೋಲಿಯನನೇ ಇದರ ರಾಜ್ಯಸೂತ್ರಗಳನ್ನು ನಡೆಸುತ್ತಿದ್ದ. ಅವನ ಅನಂತರ 1860 ರಲ್ಲಿ ಇದು ಮತ್ತೆ ಇಟಲಿಯ ವಶವಾಯಿತು.

ಪಾರ್ಟೊಫೇರ್‍ರಾಯೋ ಮುಖ್ಯ ಪಟ್ಟಣ ಹಾಗೂ ಬಂದರು. ಇದು ನೆಪೋಲಿಯನನ ಮುಖ್ಯ ಠಾಣ್ಯವಲ್ಲದೆ ಅವನ ಬೇಸಗೆಯ ತಂಗುದಾಣವೂ ಆಗಿತ್ತು. ಆತ ಬಳಸುತ್ತಿದ್ದ ಕಟ್ಟಡಗಳೂ ಸುಂದರವಾದ ಚಿತ್ರಗಳ ಶಾಲೆಯೂ ಇಲ್ಲಿವೆ. *

**ಎಲ್ಮ್ ಗಿಡ :** ಅಲ್ಮೇಸಿ ಕುಟುಂಬಕ್ಕೆ ಸೇರಿದ ಅಲ್ಮಸ್ ಜಾತಿಯ ಒಂದು ಗಿಡ. ಈ ಜಾತಿಯಲ್ಲಿ ಸುಮಾರು 16 ಪ್ರಭೇದಗಳಿವೆ. ಇವು ಉತ್ತರಗೋಳದ



ಸಮಶೀತೋಷ್ಣ ಪ್ರದೇಶಗಳ ಬೆಟ್ಟಗುಡ್ಡಗಳಲ್ಲೂ ಉಷ್ಣ ಪ್ರದೇಶಗಳ ಎಲೆ ಉದುರುವ ಕಾಡುಗಳಲ್ಲೂ ಬೆಳೆಯುತ್ತವೆ. ಅಲ್ಮಸ್ ಇಂಟೆಗ್ರಿಫೋಲಿಯ ಅಥವಾ



ಎಡಗಡೆಯದು ಗಂಡು ಹೂಗೊಂಚಲು, ಮಧ್ಯದ್ದು ರೆಂಬೆ, ಬಲಗಡೆಯದು ಹೆಣ್ಣು ಹೂಗೊಂಚಲು

ಹೋಲೋಪ್ಟೀಲಿಯ ಇಂಟೆಗ್ರಿಫೋಲಿಯ ಎಂಬ ಪ್ರಭೇದವನ್ನು ಇಂಡಿಯನ್ ಎಲ್ಮ್ ಎಂದೂ ಕನ್ನಡದಲ್ಲಿ ತಪ್ಸಿಮರ ಎಂದೂ ಕೊಡವ ಭಾಷೆಯಲ್ಲಿ ಕಲಾವ್ರಿ

ಎಂದೂ ಕರೆಯುತ್ತಾರೆ. ಸಂಸ್ಕೃತದಲ್ಲಿ ಇದನ್ನು ಚಿರಬಿಲ್ವ ಎಂದು ಹೇಳುತ್ತಾರೆ. ಇದು ಹಿಮಾಲಯದ ಬೆಟ್ಟಗಳಲ್ಲಿ 2,000′ಗಳ ಮೇಲ್ಪಟ್ಟದ ಪ್ರದೇಶಗಳಲ್ಲೂ ಮಧ್ಯ ಭಾರತ ಮತ್ತು ಇತರ ಕಡೆಗಳಲ್ಲೂ ಬೆಳೆಯುತ್ತದೆ. ಅಲ್ಮಸ್ ಕಾಂಪೆಸ್ಟ್ರಿಸ್ ಎಂಬುದನ್ನು ಇಂಗ್ಲಿಷ್ ಎಲ್ಮ್ ಎಂದು ಕರೆಯುತ್ತಾರೆ, ಇದನ್ನು ಇಂಗ್ಲೆಂಡಿನಲ್ಲಿ ಉದ್ಯಾನ, ಹುಲ್ಲುಗಾವಲುಗಳಲ್ಲಲ್ಲದೆ ಬೇಲಿಗಿಡವಾಗಿಯೂ ಬೆಳೆಸುತ್ತಾರೆ. ಇದರಲ್ಲಿ ಕೊಂಬೆಗಳಿಂದ ಮಾತ್ರ ವ್ಯವಸಾಯ ಸಾಧ್ಯ. ಅಲ್ಮಸ್ ಸಟೈವ ಎಂಬುದನ್ನು ಕಿರು ಎಲೆಗಳ ಎಲ್ಮ್ ಎಂದೂ ಅಲ್ಮಸ್ ನೈಟೆನ್ಸನ್ನು ನುಣುಪೆಲೆಗಳ ಎಲ್ಮ್ ಎಂದೂ ಅಲ್ಮಸ್ ಗ್ಲಾಬ್ರವನ್ನು ವಿಚ್ ಎಲ್ಮ್ ಎಂದೂ ಕರೆಯುತ್ತಾರೆ. ಹಾಗೆಯೇ ಡಚ್ ಎಲ್ಮ್ (ಅಲ್ಮಸ್ ಹಾಲೆಂಡಿಕ), ಕಾರ್ನಿಷ್ ಎಲ್ಮ್ (ಅಲ್ಮಸ್ ಮೈನರ್). ಅಮೆರಿಕನ್ ಎಲ್ಮ್ (ಅಲ್ಮಸ್ ಅಮೆರಿಕಾನ) ಎಂಬವೂ ಎಲ್ಮ್‌ಗಿಡಗಳ ಗುಂಪಿಗೆ ಸೇರಿವೆ.

ಎಲ್ಮ್ ಗಿಡದಲ್ಲಿ ಹೂಗಳು ಗೊಂಚಲುಗೊಂಚಲಾಗಿ ಬಿಡುತ್ತವೆ. ಹೂಗಳ ಪುಷ್ಪಪತ್ರಗಳಿಗೂ ದಳಗಳಿಗೂ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ. ಅಂಡಾಶಯ ಎರಡು ಕಾರ್ಪೆಲ್ಲುಗಳಿಂದ ಕೂಡಿದ ಸಂಯುಕ್ತ ರೂಪದ್ದು.

ಇಂಡಿಯನ್ ಎಲ್ಮ್ ಗಿಡದ ಬೀಜಗಳಿಂದ ಒಂದು ವಿಧವಾದ ಎಣ್ಣೆಯನ್ನು ತೆಗೆಯುತ್ತಾರೆ. ಮರ ತಿಳಿಹಳದಿ ಮಿಶ್ರಿತ ಬೂದು ಬಣ್ಣವಾಗಿದೆ. ಚೇಗು ಇಲ್ಲ. ಮರವನ್ನು ವಾಣಿಜ್ಯ ಭಾಷೆಯಲ್ಲಿ ಕಂಜಿ ಎಂದು ಕರೆಯುತ್ತಾರೆ. ಮರ ಮನೆ ಕಟ್ಟುವುದಕ್ಕೂ ಗಾಡಿಗಳನ್ನು ತಯಾರಿಸುವುದಕ್ಕೂ ಕೆತ್ತನೆ ಕೆಲಸಕ್ಕೂ ಬರುತ್ತದೆ. ಕೆಲವು ಕಡೆಗಳಲ್ಲಿ ಸೌದೆಗೂ ಇದ್ದಲು ತಯಾರಿಸುವುದಕ್ಕೂ ಇದನ್ನು ಉಪಯೋಗಿಸುತ್ತಾರೆ. (ಎಂ ಸಿ.ಆರ್.)

**ಎಲ್ಯಟ್, ಸರ್ ಥಾಮಸ್ :** 1490–1546. ಇಂಗ್ಲೆಂಡಿನ ರಾಯಭಾರ ಕುಶಲಿ, ವಿದ್ವಾಂಸ, ಲೇಖಕ, ನಿಘಂಟುಕಾರ. ನ್ಯಾಯಮೂರ್ತಿಯೊಬ್ಬನ ಮಗನಾಗಿ ಜನಿಸಿದ ಈತ ಖಾಸಗಿಯಾಗಿ ವಿದ್ಯಾಭ್ಯಾಸ ಪಡೆದು ನಾನಾ ಹುದ್ದೆಗಳಲ್ಲಿದ್ದು ಆಕ್ಸ್‌ಫರ್ಡ್‌ಷೈರ್ ಮತ್ತು ಬರ್ಕ್‌ಷೈರ್‌ಗಳ ಷೆರೀಫನಾದ (1527). 1530ರಲ್ಲಿ ಈತನಿಗೆ ನೈಟ್ ಪದವಿ ದೊರಕಿತು. ಮುಂದಿನ ಎರಡು ವರ್ಷಗಳ ಕಾಲ ಈತ ಸ್ಪೇನಿನ ಐದನೆಯ ಚಾರಲ್ಸನ ಆಸ್ಥಾನದಲ್ಲಿ ಇಂಗ್ಲೆಂಡಿನ ಎಂಟನೆಯ ಹೆನ್ರಿಯ ರಾಯಭಾರಿಯಾಗಿದ್ದ. 1535ರಲ್ಲಿ ಮತ್ತೆ ಆ ಹುದ್ದೆಯಲ್ಲಿದ್ದನೆಂದೂ ಕಾಣುತ್ತದೆ.

ಇಂಗ್ಲೆಂಡಿನ ಮಾನವಹಿತಜ್ಞರ (ಹ್ಯೂಮನಿಸ್ಟ್ಸ್) ಪೈಕಿ ಎಲ್ಯಟನೂ ಒಬ್ಬ. ಅಭಿಜಾತ ನೀತಿಬೋಧಕರ ಸಿದ್ಧಾಂತಗಳನ್ನು ತನ್ನ ದೇಶಬಾಂಧವರಲ್ಲಿ ಪ್ರಚುರಪಡಿಸುವುದರಲ್ಲಿ ಈತ ನಿರತನಾಗಿದ್ದ; ಈ ಉದ್ದೇಶದಿಂದಲೇ ಐಸಾಕ್ರಟೀಸ್ ಮತ್ತು ಪ್ಲೂಟಾರ್ಕರ ಕೃತಿಗಳನ್ನು ಆಂಗ್ಲೀಕರಿಸಿದ. ದಿ ಬ್ಲೋಕ್ ನೇಮ್ಡ್ ದಿ ಗವರ್ನರ್ ಈತನ ಅತ್ಯಂತ ಪ್ರಸಿದ್ಧ ಕೃತಿ. ಇದು ಪ್ಲೇಟೋ, ಅರಿಸ್ಟಾಟಲ್, ಸಿಸರೋ, ಕ್ವಿಂಟಿಲ್ಯನ್, ಪ್ಲೂಟಾರ್ಕ್ ಮುಂತಾದವರ ಅಭಿಜಾತ ಕೃತಿಗಳ ಸಾರಸಂಗ್ರಹವಾಗಿದೆ.

ಎಲ್ಯಟನ ಚಿಂತನದಲ್ಲಿ ಅವನ ಸ್ವಂತದ್ದೇನೂ ಅಷ್ಟಾಗಿ ಇಲ್ಲ. ಆದರೆ ಆಗಿನ ಕಾಲದಲ್ಲಿ ಇಂಗ್ಲೆಂಡಿನಲ್ಲಿ ಸ್ವಂತಿಕೆಗೆ ಅಷ್ಟಾಗಿ ಬೆಲೆ ಇರಲಿಲ್ಲ. ಅಭಿಜಾತ ಸಾಹಿತ್ಯವೇ ನಿಜವಾದ ಜ್ಞಾನದ ಗಣಿ; ಸಮಕಾಲೀನ ಬರ್ಬರತನವನ್ನು ಹೋಗಲಾಡಿಸಲು ಅದೊಂದು ಸಂಜೀವಿನಿ—ಎಂಬ ಭಾವನೆ ಇದ್ದ ಕಾಲದಲ್ಲಿ ಎಲ್ಯಟ್ ಬದುಕಿದ್ದ. ಸ್ವಾತಂತ್ರ್ಯ, ಪ್ರಜಾಪ್ರಭುತ್ವ, ಶ್ರೀಮಂತ ಪ್ರಭುತ್ವ, ಸಮಾಜನಿಷ್ಠೆ, ಉಪಕೃತಿ ಮುಂತಾದ ಅರ್ಥಗಳುಳ್ಳ ಪದಗಳನ್ನು ಇಂಗ್ಲಿಷಿನಲ್ಲಿ ಬಳಕೆಗೆ ತಂದವನು ಎಲ್ಯಟ್. ನೀತಿಬೋಧೆಯ ಕಾರ್ಯದಲ್ಲಿ ಅವನಿಗೆ ಈ ಶಬ್ದಗಳು ಅನುವಾಗಿ ಒದಗಿಬಂದುವು. ಈತ ಲ್ಯಾಟಿನ್ ನಿಘಂಟೊಂದನ್ನು ರಚಿಸಿದ್ದಾನೆ (1538). *

**ಎಲ್ಯಾಟೆರಿಯಂ :** ಎಕ್ಬಾಲಿಯಂ ಎಲ್ಯಾಟೆರಿಯಂ ಎಂಬ ಮೆಡಿಟರೇನಿಯನ್ ಪ್ರದೇಶದ ಸರ್ಪಸುತು ಬಳ್ಳಿಯಿಂದ ತೆಗೆದ ಬೂದು ಛಾಯೆಯ ಹಸಿರು ಬಣ್ಣದ ಕಪಿ ಪದಾರ್ಥ. ಇದು ಭೇದಿ ಮಾಡಿಸುವ ಔಷಧಿ. ಆಲ್ಕೊಹಾಲಿನಲ್ಲಿ ಇದನ್ನು ಸಂಸ್ಕರಿಸಿ ಎಲ್ಯಾಟೆರಿನನ್ನು ಪಡೆಯುತ್ತಾರೆ. ಈ ಎಲ್ಯಾಟೆರಿನಿನಲ್ಲಿ $\alpha$–ಮತ್ತು $\beta$–ಎಲ್ಯಾಟೆರಿನುಗಳೆರಡೂ ಇರುತ್ತವೆ. ಎಲ್ಯಾಟೆರಿನಿನ ಕರಗುವ ಬಿಂದು 220° ಸೆಂ. ಇದರಿಂದ ಮಾನವನ ಶರೀರದ ಮೇಲೆ ಯಾವ ಪ್ರಭಾವವೂ ಇಲ್ಲ. ಎಲ್ಯಾಟೆರಿನಿನ ಕರಗುವ ಬಿಂದು ಬಹು ಕೆಳಗಿರುತ್ತದೆ. ಅದಕ್ಕೆ ವಿರೇಚಕ ಗುಣವಿದೆ. ಮಾರುಕಟ್ಟೆಯ ಎಲ್ಯಾಟೆರಿನಿನಲ್ಲಿ 60%–80% ಭಾಗ ಕ್ರಿಯಾಶಕ್ತವಲ್ಲದ ಎಲ್ಯಾಟೆರಿನ್ನೇ ಇರುತ್ತದೆ. (ಎಂ.ಆರ್.ಆರ್.)

**ಎಲ್ಯಾಟೊಸ್ಟೆಮ :** ಅರ್ಟಿಕೇಸಿ ಕುಂಟುಂಬಕ್ಕೆ ಸೇರಿದ ಒಂದು ಸಸ್ಯಜಾತಿ. ಉಷ್ಣ ಹಾಗೂ ಉಪೋಷ್ಣವಲಯಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುವ ಇದರಲ್ಲಿ ಸುಮಾರು 120 ಪ್ರಭೇದಗಳಿವೆ. ಭಾರತದಲ್ಲಿ ಸುಮಾರು 29 ಪ್ರಭೇದಗಳು ಬೆಳೆಯುತ್ತವೆ. ಇವುಗಳಲ್ಲಿ ಮುಖ್ಯವಾದ ಎ. ಸೆಸೈಲ್ ಎಂಬುದು ಹಿಮಾಲಯ. ಅಸ್ಸಾಂ ಮತ್ತು ನೀಲಗಿರಿ ಬೆಟ್ಟಗಳಲ್ಲಿ 4000′—8000′ ಎತ್ತರದ ಪ್ರದೇಶಗಳಲ್ಲಿ ಬೆಳೆಯುವುದು.

ಇದು ಒಂದು ಮೂಲಿಕೆ. ಚಿಕ್ಕದಾಗಿದ್ದಾಗ ನೆಲದ ಮೇಲೆಯೇ ಹರಡಿಕೊಂಡಂತಿದ್ದರೂ ಕ್ರಮೇಣ, ಯಾವುದಾದರೂ ಆಸರೆ ಸಿಕ್ಕಿದರೆ, ಬಳ್ಳಿಯಂತೆ ಹಬ್ಬಿ 8′ ಎತ್ತರಕ್ಕೆ ಬೆಳೆಯ ಬಲ್ಲುದು. ಎಲೆಗಳು ಸರಳ. ಅವುಗಳ ತೊಟ್ಟು ಚಿಕ್ಕವು. ಆಕಾರ ಭಲ್ಲೆಯಂತೆ. ಅಂಚು ಗರಗಸದ ಹಲ್ಲಿನಂತೆ.

ಇದರ ಎಲೆಗಳಿಂದ ತಯಾರಿಸಿದ ಬೆಚ್ಚಾರವನ್ನು (ಪೋಲ್ಟೀಸ್) ಉದರ ಸಂಬಂಧಿ ವ್ಯಾಧಿಗಳ ನಿವಾರಣೆಗೆ ಉಪಯೋಗಿಸುತ್ತಾರೆ. *

**ಎಲ್ಯಾಸ್ಟೊಮರ್ :** ರಬ್ಬರಿನ ಗುಣಗಳಿರುವ ಸಂಯೋಜಿತ ವಸ್ತು. ಇದರ ವಸ್ತುಗಳಿಗೆ ರಬ್ಬರಿನ ಪ್ರಧಾನ ಲಕ್ಷಣವಾದ ಸ್ಥಿತಿಸ್ಥಾಪಕತೆ ಇದೆ. ನಿರ್ದಿಷ್ಟ ಸಂದರ್ಭಗಳಲ್ಲಿ ರಬ್ಬರಿಗಿಂತ ಇವುಗಳ ಉಪಯುಕ್ತತೆ ಹೆಚ್ಚು. 1930ರಿಂದಲೂ ಇವು ಮಾರುಕಟ್ಟೆಯಲ್ಲಿವೆ. ಆದರೆ ಎಲ್ಯಾಸ್ಟೊಮರುಗಳ ಉತ್ಪಾದನೆಯಲ್ಲಿ ಸ್ಪಷ್ಟ ಏರಿಕೆಯಾದದ್ದು ಎರಡನೆಯ ಮಹಾಯುದ್ಧದ ತರುವಾಯ. ಅಮೆರಿಕ ಸಂಯುಕ್ತ ಸಂಸ್ಥಾನಗಳು, ಜರ್ಮನಿ, ಕೆನಡ ಮತ್ತು ರಷ್ಯಗಳು ಇವನ್ನು ಉತ್ಪಾದಿಸುವ ಪ್ರಮುಖ ದೇಶಗಳು.

ರಬ್ಬರಿನಂಥ ವಸ್ತುಗಳನ್ನು ಸಂಯೋಜಿಸಬಹುದೆಂಬ ತತ್ತ್ವ ಇತ್ತೀಚಿನ ಶೋಧವೇನೂ ಅಲ್ಲ. 1879ರಲ್ಲಿಯೇ ಫ್ರಾನ್ಸಿನ ಜಿ. ಬೂಕಾರ್ಟೆ ಐಸೊಪ್ರೀನ್ ಮತ್ತು ಹೈಡ್ರೊಕ್ಲೋರಿಕಾಮ್ಲದ ವರ್ತನೆಯಿಂದ ಅಂಥದೊಂದು ವಸ್ತುವನ್ನು ತಯಾರಿಸಿದ್ದ. ಪ್ರಾಯಶಃ ಈ ಕ್ರಿಯೆ ನಡೆದಾಗ ಐಸೊಪ್ರೀನಿನ ಒಂದು ಭಾಗ ವಾಯುಮಂಡಲದ ಆಕ್ಸಿಜನ್ನಿನಿಂದ ಪೆರಾಕ್ಸೈಡಿಗೆ ಉತ್ಕರ್ಷಿತವಾಗಿತ್ತೆಂದು ತೋರುತ್ತದೆ. ಅದು ಬಹ್ವಂಗೀಕರಣ ಕ್ರಿಯೆಗೆ (ಪಾಲಿಮರೈಸ್ಲೇಷನ್) ವೇಗವರ್ಧಕವಾಗಿ ಪರಿಣಮಿಸಿರಬೇಕು. ಮೊದಲನೆಯ ಮಹಾಯುದ್ಧದ ಕಾಲದಲ್ಲಿ ಜರ್ಮನಿ 2.3 ಡೈಮೀಥೈಲ್ ಬ್ಯೂಟಾಡಯೀನಿನ ಬಹ್ವಂಗೀಕರಣದಿಂದ ಸಹಸ್ರಾರು ಟನ್ನುಗಳಷ್ಟು ಮೀಥೈಲ್ ರಬ್ಬರನ್ನು ತಯಾರಿಸಿಕೊಂಡಿತೆಂದು ವರದಿಯಾಗಿದೆ.

ಸಾರ್ವಜನಿಕ ಉಪಯೋಗಕ್ಕಾಗಿ ಮಾರುಕಟ್ಟೆಗೆ ಬಿಡುಗಡೆಯಾದ ಮೊದಲ ಎಲ್ಯಾಸ್ಟೊಮರ್ ಎಂದರೆ ಥಯೊಕೋಲ್. ಇದರ ಶೋಧವಾದದ್ದು 1930ರಲ್ಲಿ. ಮರುವರ್ಷ ನಿಯೋಪ್ರೀನ್ ಹುಟ್ಟಿತು. 1940ರ ಸುಮಾರಿಗೆ ಜರ್ಮನಿ, ರಷ್ಯ ಮತ್ತು ಅಮೆರಿಕ ದೇಶಗಳು ಇತರ ಎಲ್ಯಾಸ್ಟೊಮರುಗಳ ಪತ್ತೆಯನ್ನು ಪ್ರಕಟಿಸಿದುವು. ಎರಡನೆಯ ಮಹಾಯುದ್ಧದ ಆದಿಭಾಗದಲ್ಲಿ ಅಮೆರಿಕ ಸಂಯುಕ್ತಸಂಸ್ಥಾನಗಳಿಗೆ ದೂರಪ್ರಾಚ್ಯದಿಂದ ರಬ್ಬರಿನ ಪೂರೈಕೆ ನಿಂತಿತು. ಇದು ಎಲ್ಯಾಸ್ಟೊಮರುಗಳ ಶೋಧಕ್ಕೆ ಪ್ರೇರಕವಾಯಿತು. 1943ರಲ್ಲಿ ಜಿ ಆರ್ ಎಸ್ (ಗವರ್ನಮೆಂಟ್ ರಬ್ಬರ್-ಸ್ಟೈರೀನಿನಿಂದ) ಎಂಬ ವಸ್ತು ರೂಪುಗೊಂಡಿತು. ಇಂದಿಗೂ ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಿ ಬಲು ಬಳಕೆಯಲ್ಲಿರುವ ರಬ್ಬರ್ ಇದೇ.

ನೈಸರ್ಗಿಕ ರಬ್ಬರನ್ನು ಎಲ್ಯಾಸ್ಟೊಮರುಗಳು ಸರಿಗಟ್ಟಲಾರವು. ಕೆಲವು ಸಂದರ್ಭಗಳಲ್ಲಿ ಮಾತ್ರ ಅವು ಹೆಚ್ಚು ಉಪಯುಕ್ತವೆಂಬುದು ಮುಂದೆ ಸೂಚಿಸಿರುವ ಉದಾಹರಣೆಗಳಿಂದ ಗೊತ್ತಾಗುತ್ತದೆ. ರಬ್ಬರಿನ ತುಂಡೊಂದನ್ನು ಜಗ್ಗಿ ಎಳೆದರೆ ಉಷ್ಣ ಹುಟ್ಟುವುದು (ಜೂಲ್ ಪರಿಣಾಮ). ಸಂಯೋಜಿತ ರಬ್ಬರಿಗೆ ಉಷ್ಣವಾಹಕ ಶಕ್ತಿ ಕಡಿಮೆ. ಹೀಗಾಗಿ ದೊಡ್ಡ ಸಾರಿಗೆ ಟ್ರಕ್ಕುಗಳು ಮತ್ತು ಬಸ್ಸುಗಳ ಟೈರುಗಳಲ್ಲಿ ಚಲನಕಾಲದಲ್ಲಿ ಹುಟ್ಟಿದ ಉಷ್ಣ ವ್ಯಯವಾಗದೆ ಅಲ್ಲೇ ಉಳಿಯುವುದು. ಇದರಿಂದ ಟೈರಿನಲ್ಲಿ ಬಿರುಕುಂಟಾಗಿ ಒಡೆಯುವುದು. ನೈಸರ್ಗಿಕ ರಬ್ಬರಿನಲ್ಲಿ ಉಷ್ಣೋತ್ಪತ್ತಿಯಾಗುವುದು ಕಡಿಮೆ. ಆದ್ದರಿಂದ ದೊಡ್ಡ ಸಾರಿಗೆ ವಾಹನಗಳ ಟೈರುಗಳಿಗೆ ಅದನ್ನೇ ಬಳಸುವುದು ಕ್ಷೇಮ. ಆದರೆ ಸಣ್ಣ ವಾಹನಗಳ ಟೈರುಗಳನ್ನು ಎಲ್ಯಾಸ್ಟೊಮರುಗಳಿಂದ ಮಾಡಲು ಅಡ್ಡಿಯಿಲ್ಲ. ಏಕೆಂದರೆ ಭಾರ ಒತ್ತಡಗಳು ಅಷ್ಟಿಲ್ಲದಿರುವುದರಿಂದ ಹುಟ್ಟುವ ಉಷ್ಣದ ಪ್ರಮಾಣ ಅಲ್ಪ. ಅದೂ ಬೇಗ ವ್ಯಯವಾಗಿ ಟೈರನ್ನು ಘಾಸಿಪಡಿಸುವ ಸಂಭವ ಕಡಿಮೆ. ಸಂಯೋಜಿತ ರಬ್ಬರಿಗಿಂತ ಪ್ರಕೃತಿದತ್ತ ರಬ್ಬರಿಗೆ ಹಿಸ್ಟೆರಿಸಸ್ ಮೌಲ್ಯವೂ ಕಡಿಮೆ. ಇದು ಮಹತ್ತ್ವದ ವಿಷಯ. ರಬ್ಬರಿಗೆ ಸ್ಥಿತಿಸ್ಥಾಪನಶಕ್ತಿಯಿರುವುದು ನಿಜ. ಆದರೆ ರಬ್ಬರಿನ ತುಂಡೊಂದನ್ನು ಎಳೆದು ಬಿಟ್ಟರೆ, ಅದರ ಉದ್ದ ಹಿಂದಿನಷ್ಟೇ ಇರದೆ ಸ್ವಲ್ಪ ವ್ಯತ್ಯಾಸವಿರುತ್ತದೆ ಎಂದು ಪ್ರಯೋಗಗಳಿಂದ ದೃಢಪಟ್ಟಿದೆ. ಈ ದೋಷಕ್ಕೆ ಹಿಸ್ಟೆರಿಸಿಸ್ ಎನ್ನುತ್ತಾರೆ. ಈ ಅವಗುಣ ಕಡಿಮೆಯಾಗಿರುವುದು ಅಪೇಕ್ಷಣೀಯ.

ಸಂಯೋಜಿತ ರಬ್ಬರಿನ ಉತ್ತಮಕಾರ್ಯನಿರ್ವಹಣೆಗೆ ಹಲವು ನಿದರ್ಶನಗಳಿವೆ. ವಲ್ಕನೈಸ್ ಮಾಡಿದ ನೈಜರಬ್ಬರು ಕೆಲವು ತೈಲಗಳು ಮತ್ತು ಲೀನಕಾರಿಗಳ ಸಂಪರ್ಕದಲ್ಲಿ ವಿಪರೀತ ಉಬ್ಬುವುದು. ಆದರೆ ಎಲ್ಯಾಸ್ಟೊಮರುಗಳಿಗೆ ಈ ಗುಣವಿಲ್ಲ. ಒಂದು ವೇಳೆ ಗಾತ್ರವರ್ಧನೆಯಾದರೂ ಅದು ಅಲ್ಪ. ಎರಡನೆಯದಾಗಿ ಚಲನೆಯಲ್ಲಿ ಉದ್ಭವಿಸುವ ಘರ್ಷಣೆ ಮತ್ತು ವಿದ್ಯುದ್ರಾವಕ ಶಕ್ತಿಗಳನ್ನು ತಡೆಗಟ್ಟುವ ಸಾಮರ್ಥ್ಯ ಅವಕ್ಕಿವೆ. ಟೈರುಗಳನ್ನು ಪುನಶ್ಚೇತನಗೊಳಿಸುವ ಹೊಸ ನಮೂನೆಯ ಕುಲುಮೆ ಇಂಗಾಲದ (ಫರ್ನೇಸ್ ಕಾರ್ಬನ್) ಶೋಧವಾಗಿದೆ. ಅದನ್ನು

ಅಳವಡಿಸಿದ ವಲ್ಕೊಲಾನ್, ಕೆಮಿಗೆಮ್-ಎಸ್‌ಎಲ್ ಮತ್ತು ಜಿಆರ್‌ಎಸ್ ಎಲ್ಯಾಸ್ಟೊಮರುಗಳಿಂದ ಮಾಡಿದ ಟೈರುಗಳು ನೈಸರ್ಗಿಕ ರಬ್ಬರಿನ ಟೈರುಗಳಿಗಿಂತ ಹೆಚ್ಚು ಕಾಲ ಬಾಳುತ್ತವೆ. ಇದು ಅನುಭವವೇದ್ಯ ಸಂಗತಿ. ಅಲ್ಲದೆ ನೈಜರಬ್ಬರಿಗಿಂತ ಬ್ಯೂಟೈಲ್ ರಬ್ಬರಿನ ಮೂಲಕ ಗಾಳಿ ಹಾಯಲು ಹತ್ತುಪಟ್ಟು ಕಷ್ಟವಾಗುತ್ತದೆ. ಆದ್ದರಿಂದ ಮೋಟಾರ್ ವಾಹನಗಳ ಒಳ ಟ್ಯೂಬುಗಳನ್ನು ತಯಾರಿಸಲು ಇದು ಯೋಗ್ಯವಾಗಿದೆ.

ವಲ್ಕನೈಸಾದ ರಬ್ಬರು ಬಹುಬೇಗ ಹೊತ್ತಿ ಉರಿಯುವುದು. ಆದರೆ ನಿಯೊಪ್ರೀನ್, ಕೊರೊಸೀಲ್ ಮತ್ತು ಈಚಿನ ಶೋಧವಾದ ಕೆಲ್‌ಎಫ್‌ಎಲ್ಯಾಸ್ಟೊಮರುಗಳು ದಹನವಿರೋಧಿಗಳು. ಬಣ್ಣವಿಲ್ಲದಿರುವುದು ಎಲ್ಯಾಸ್ಟೊಮರುಗಳ ಇನ್ನೊಂದು ವೈಶಿಷ್ಟ್ಯ. ತತ್ಫಲವಾಗಿ ಇವು ಇತರ ಬಣ್ಣಗಳನ್ನು ಸುಲಭವಾಗಿ ಗ್ರಹಿಸುತ್ತವೆ. ಆದ್ದರಿಂದ ಟೈರುಗಳನ್ನು ರೂಪಿಸುವಾಗ ವಿವಿಧ ಬಣ್ಣಗಳನ್ನು ಕೂಡಿಸಲು ಅನುಕೂಲವಾಗುತ್ತದೆ. ನೈಜರಬ್ಬರಿನ ಟೈರುಗಳಿಗೆ ಇಂಗಾಲ ಕದಡಿಸಿ ಕಪ್ಪು ಬಣ್ಣ ಮಾತ್ರ ಕೊಡಬಹುದು. $-25°$ ಸೆಂ.ನಲ್ಲಿ ಸಾಮಾನ್ಯ ರಬ್ಬರು ಗಟ್ಟಿಯಾಗಿಬಿಡುತ್ತದೆ. $120°$ ಸೆಂ. ಮೀರಿದಾಗ ಅದನ್ನು ಬಳಸುವಂತಿಲ್ಲ. ಈ ನಿಟ್ಟಿನಲ್ಲಿ ಸಿಲಿಕೋನ್ ರಬ್ಬರುಗಳು ಮೇಲು. $-55°$ರಿಂದ $260°$ ಸೆಂ. ವರೆಗಿನ ಉಷ್ಣತಾಮಿತಿಯಲ್ಲೂ ಅವು ತಮ್ಮ ಪ್ರಧಾನ ರಬ್ಬರಿನ ಲಕ್ಷಣಗಳನ್ನು ಕಾಪಾಡಿಕೊಂಡು ಬರುತ್ತವೆ. ರಬ್ಬರೂ ಕೆಲವು ಎಲ್ಯಾಸ್ಟೊಮರುಗಳೂ ವಲ್ಕನೈಸ್ ಮಾಡಿದಮೇಲೆಯೂ ವಾಯುಮಂಡಲದಲ್ಲಿರುವ ಓಜೋನಿನ ಸಂಪರ್ಕದಲ್ಲಿ ನಾಶಹೊಂದುತ್ತವೆ. ಹಿಗ್ಗಿದ ಸ್ಥಿತಿಯಲ್ಲಂತೂ ಅವುಗಳಿಗೆ ಓಜೋನ್ ಮಾರಕವಾಗುತ್ತದೆ. ವಲ್ಕೊಲಾನ್, ಕೆಮಿಗಮ್-ಎಸ್‌ಎಲ್, ಹೈಪಲಾನ್ ಮತ್ತು ಕೆಲ್‌ಎಫ್ ಮಾತ್ರ ಓಜೋನಿನ ಸಂಪರ್ಕದಲ್ಲಿ ಸ್ಥಿರವಾಗಿರುವುವು. ಬ್ಯೂಟೈಲ್ ನಿಯೊಪ್ರೀನ್ ಮತ್ತು ಥಯೊಕೋಲ್ ಮಾತ್ರ ಓಜೋನಿನ ಪ್ರಭಾವಕ್ಕೆ ಸ್ವಲ್ಪ ಮಣಿಯುವುದುಂಟು.

ರಬ್ಬರನ್ನು ಓಜೋನಿನಿಂದ ರಕ್ಷಿಸುವ ವಸ್ತುಗಳನ್ನು ಈಚೆಗೆ ರೂಪಿಸಲಾಗಿದೆ. ಇವುಗಳಿಗೆ ಓಜೋನ್ ವಿರೋಧಿಗಳು (ಆಂಟಿಓಜೋನೆಂಟ್ಸ್) ಎಂದು ಹೆಸರು. ಮೇಣದೊಂದಿಗೆ 1:4 ಫಿನಲೀನ್ ಡೈ ಅಮೀನ್ ವ್ಯುತ್ಪನ್ನಗಳನ್ನು ರಬ್ಬರಿನ ಮೂಲ ಮಿಶ್ರಣಕ್ಕೆ ಕೂಡಿಸಿದರೆ ಓಜೋನ್ ನಿರೋಧಕ ಗುಣ ಪ್ರಾಪ್ತವಾಗುತ್ತದೆ.

ಬ್ಯೂನಾ ಮತ್ತು ಬ್ಯೂಟೈಲ್ ರಬ್ಬರುಗಳ ತಯಾರಿಕೆಗೆ ಮೊದಲು ಬ್ಯೂಟಾಡಯೀನ್ ಮಾಡಿಕೊಳ್ಳಬೇಕು. ನೈಸರ್ಗಿಕ ರಬ್ಬರಿನ ಮೂಲ ಘಟಕವಾದ ಐಸೊಪ್ರೀನ್



ಎಲ್ಯಾಸ್ಟೊಮರುಗಳ ಸಂಯೋಜನೆಗೆ ಅಗತ್ಯವಾದ ಮೂಲ ಪದಾರ್ಥಗಳು ಬಹ್ವಂಗೀಕರಣಾಂಗಗಳು (ಪಾಲಿಮರೈಸೇಷನ್ ಯೂನಿಟ್ಸ್) ಮತ್ತು ಫಲಿತ ಎಲ್ಯಾಸ್ಟೊಮರಿನ ವ್ಯವಹಾರ ನಾಮಗಳನ್ನು ಇಲ್ಲಿ ಪಟ್ಟಿಮಾಡಲಾಗಿದೆ.

| ಕಚ್ಚಾ ಪದಾರ್ಥಗಳು | ಬಹ್ವಂಗೀಕರಣಾಂಗ | ವ್ಯವಹಾರ ನಾಮಗಳು |
|---|---|---|
| 1 ಬ್ಯೂಟಾಡಯಿನ್ + ಸ್ಟೈರೀನ್ | $-CH_2-CH=CH-CH_2-CH_2-CH(C_6H_4)-$ | ಜಿಆರ್‌ಎಸ್ ಅಥವಾ ಬ್ಯೂನಾ-ಎಸ್ |
| 2 ಐಸೊಬ್ಯುಟಿಲೀನ್ + ಐಸೊಪ್ರೀನ್ | $-CH_2-C(CH_3)_2-CH_2-C(CH_3)=CH-CH_2-$ | ಜಿಆರ್‌ಐ, ಬ್ಯೂಟೈಲ್ |
| 3 ಕ್ಲೋರೋಪ್ರೀನ್ | $-CH_2-C(Cl)=CH-CH_2-$ | ನಿಯೊಪ್ರೀನ್, ಡ್ಯೂಪ್ರೀನ್, ಜಿಆರ್‌ಎಮ್ |
| 4 ಬ್ಯೂಟಾಡಯಿನ್ + ಅಕ್ರಿಲೊನೈಟ್ರೀಲ್ | $-CH_2-CH=CH-CH_2-CH_2-CH(CN)-$ | ಬ್ಯೂನಾ-ಎನ್, ಕೆಮಿಗಮ್, ಬ್ಯೂಟಾಪ್ರೀನ್, ಪ್ಯಾರಾಕ್ರಿಲ್ |
| 5 ಸೋಡಿಯಂ ಪಾಲಿಸಲ್ಫೈಡ್ + ಸಾವಯವ ಡೈ ಕ್ಲೋರೈಡ್ | $-CH_2-CH_2-S(=S)-S(=S)-$ | ಥಯೊಕೋಲ್—ಎ (ಸೋಡಿಯಂ ಟೆಟ್ರ ಸಲ್ಫೈಡ್ ಮತ್ತು ಎಥಿಲೀನ್ ಡೈಕ್ಲೋರೈಡಿನಿಂದ ಲಭ್ಯವಾದ ಬಹ್ವಂಗೀಕರಣಾಂಗವನ್ನು ಸೂಚಿಸಲಾಗಿದೆ) |
| 6 ಡೈಮೀಥೈಲ್ ಸೈಲಾಕ್ಸೇನ್ | $-Si(CH_3)_2-O-Si(CH_3)_2-O-Si(CH_3)_2-O-$ | ಸಿಲಿಕೋನ್ ರಬ್ಬರುಗಳು |

ಇದರಲ್ಲಿರುವ ಮೀಥೈಲ್ ಗ್ರೂಪಿನ ಬದಲು ಒಂದು ಹೈಡ್ರೊಜನ್ ಪರಮಾಣು ವಿದ್ದರೆ ಬ್ಯೂಟಾಡಯಿನ್ ($CH_2=CH-CH=CH_2$) ಆಗುತ್ತದೆ. ಇದನು ಪೆಟ್ರೋಲಿಯಂ ವಿಭಜನೆಯಿಂದಾಗಲೀ ಅಸಿಟಲೀನಿನಿಂದಾಗಲೀ ತಯಾರಿಸುವುದು ವಾಡಿಕೆ. ಎಥಿಲೀನ್ ಮತ್ತು ಬೆಂಜೀನಿನ ಸಂಯೋಜನೆಯಿಂದ ಸ್ಟೈರೀನ್ ತಯಾರಿಸ




ಚಿತ್ರ 1

ಬಹುದು. ಸ್ಟೈರೀನ್ ಮತ್ತು ಬ್ಯೂಟಾಡಯಿನ್ ಕೂಡಿ ಬ್ಯೂನಾ-ಎಸ್ ರಬ್ಬರ್ ಉಂಟಾಗುತ್ತದೆ.







ಉಳಿದ ಎಲ್ಲ ಎಲ್ಯಾಸ್ಟೊಮರುಗಳಿಗಿಂತ ಬ್ಯೂನಾ-ಎಸ್ ನೈಸರ್ಗಿಕ ರಬ್ಬರನ್ನು ಹೆಚ್ಚು ಹೋಲುವುದರಿಂದ ಮೋಟಾರು ಟೈರುಗಳನ್ನು ಮಾಡಲು ಇದನ್ನೇ ವಿಶೇಷ ವಾಗಿ ಉಪಯೋಗಿಸುತ್ತಾರೆ.

ಅಕ್ರಿಲೊ ನೈಟ್ರೀಲ್ ತಯಾರಿಸಲು ಎರಡು ವಿಧಾನಗಳಿವೆ. ಚಿತ್ರ 2 ರಲ್ಲಿ ಕಾಣಿಸಿರುವ ಅಕ್ರಿಲೊನೈಟ್ರೀಟನ್ನು ಟ್ಯೂಟಾಡಯಿನಿನೊಡನೆ ಕೂಡಿಸಿ ಸಹಬಹ್ವಂಗೀಕರಣ ಕ್ರಿಯೆಗೆ (ಕೋಪಾಲಿಮರೈಸೇಷನ್)ಗುರಿಪಡಿಸಿದರೆ ಬ್ಯೂನಾ-ಎನ್ ಲಭಿಸುವುದು.







ಇದಕ್ಕೆ ಪೆಟ್ರೋಲಿಯಂ ವ್ಯುತ್ಪನ್ನಗಳ ಲೀನಕಾರಿ ಪ್ರಭಾವವನ್ನು ಎದುರಿಸುವ ಶಕ್ತಿಯಿದೆ. ಆದ್ದರಿಂದ ಪೆಟ್ರೋಲ್ ಒದಗಿಸುವ ಕೊಳಾಯಿಗಳು, ಕೇಬಲ್ ಹೊದಿಕೆಗಳು ಮೊದಲಾದುವನ್ನು ಮಾಡಲು ಬ್ಯೂನಾ-ಎನ್ ಎಲ್ಯಾಸ್ಟೊಮರ್ ಉಪಯೋಗಿಸುತ್ತಾರೆ.




ಚಿತ್ರ 2

ಪೆಟ್ರೋಲಿಯಂ ವಿಭಜನೆಯಿಂದ ಲಭ್ಯವಾದ ಐಸೊಬ್ಯುಟಿಲೀನನ್ನು ಬ್ಯೂಟಾಡಯಿನಿನೊಡನೆ ಬಹ್ವಂಗೀಕರಿಸಿದಾಗ ಬ್ಯುಟೈಲ್ ರಬ್ಬರು ದೊರೆಯುತ್ತದೆ.







ನೈಜರಬ್ಬರಿನಂತೆ ಇದಕ್ಕೂ ಸಹ ಪೆಟ್ರೋಲಿಯಂ ವ್ಯುತ್ಪನ್ನಗಳ ಲೀನಕಾರಿ ಪ್ರಭಾವವನ್ನು ಎದುರಿಸುವ ಸಾಮರ್ಥ್ಯ ಅಷ್ಟಾಗಿಲ್ಲ. ಆದರೆ ಬೆಳಕು ಮತ್ತು ಆಕ್ಸಿಜನ್ನಿನ ಪ್ರಭಾವವನ್ನು ಸಹಿಸಬಲ್ಲುದು. ಇದರ ಮೂಲಕ ಅನಿಲಗಳು ಹಾಯಲಾರವು. ಟೈರುಗಳು ಟ್ಯೂಬುಗಳು ಮತ್ತು ಹಬೆಯ ವಾಹಕ ನಳಿಗೆಗಳನ್ನು ಮಾಡಲು ಇದು ಅನುಕೂಲ. ವೇಗವರ್ಧಕದ ಸಂಪರ್ಕದಲ್ಲಿ ಅಸಿಟಲೀನಿನ ಎರಡು ಅಣುಗಳು ಕೂಡಿ ವೀನೈಲ್ ಅಸಿಟಲೀನ್ ಆಗುತ್ತದೆ. ಕ್ಯುಪ್ರಸ್ ಮತ್ತು ಪೊಟ್ಯಾಸಿಯಂ ಕ್ಲೋರೈಡುಗಳನ್ನು ಅಮೋನಿಯಂ ಕ್ಲೋರೈಡ್ ದ್ರಾವಣದಲ್ಲಿ ವಿಲೀನಗೊಳಿಸಿ ವೇಗವರ್ಧನಕ್ಕೆ ಉಪಯೋಗಿಸುತ್ತಾರೆ. ಉಷ್ಣತೆಯನ್ನು 55°—65° ಸೆಂ. ಮಿತಿಯಲ್ಲಿಡಬೇಕು. ಕ್ರಿಯೆ ನಡೆಯಲು ತಾಮ್ರದ ಪಾತ್ರೆ ಅಗತ್ಯ.



ಕ್ಯುಪ್ರಸ್ ಕ್ಲೋರೈಡಿನ ದ್ರಾವಣವನ್ನು ವೇಗವರ್ಧಕವಾಗಿಟ್ಟುಕೊಂಡು ಉಷ್ಣತೆಯನ್ನು 35°—45° ಸೆಂ. ಮಿತಿಯಲ್ಲಿ ನಿಯಂತ್ರಿಸಿ ತಣ್ಣಗಿರುವ ಹೈಡ್ರೊಕ್ಲೋರಿಕಾಮ್ಲವನ್ನು ಸೇರಿಸಿದರೆ ವೀನೈಲ್ ಅಸಿಟಲೀನ್ ಕ್ಲೋರೊಪ್ರೀನ್ ಆಗಿ ಪರಿವರ್ತಿತವಾಗುವುದು.



ಕ್ಲೊರೊಪ್ರೀನ್ ಬಹ್ವಂಗೀಕರಿಸಿ ನಿಯೊಪ್ರೀನ್ ಕೊಡುತ್ತದೆ.



ಇದರ ಉತ್ಪಾದನೆ ದುಬಾರಿ. ಕೇವಲ ಉಷ್ಣದಿಂದ ಇದು ವಲ್ಕನೈಸಾಗುತ್ತದೆ. ಆದರೆ ಲೋಹದ ಆಕ್ಸೈಡುಗಳನ್ನು ಸೇರಿಸಿದರೆ ವಲ್ಕನೈಸೇಷನ್ ಕ್ರಿಯೆ ತ್ವರಿತಗೊಳ್ಳುವುದು. ಮೆದುವಾದ ರಬ್ಬರನ್ನು ಮಾತ್ರ ಇದರಿಂದ ಮಾಡಲು ಸಾಧ್ಯ. ಎಣ್ಣೆಗಳು ಮತ್ತು ತೀಕ್ಷ್ಣ ಸ್ವಭಾವದ ಅನಿಲಗಳನ್ನು ಒಯ್ಯುವ ಕೊಳಾಯಿಗಳನ್ನು ತಯಾರಿಸಲು ಈ ರಬ್ಬರು ಪ್ರಶಸ್ತವಾಗಿದೆ.

ರಬ್ಬರಿನ ಗುಣವಿರುವ ಅನೇಕ ಸಾವಯವ ಪಾಲಿಸಲ್ಫೈಡುಗಳಿವೆ. ಬ್ಯೂನಾ ಮತ್ತು ಬ್ಯೂಟೈಲ್ ಎಲ್ಯಾಸ್ಟೊಮರುಗಳು ಸಹ ಬಹ್ವಂಗೀಕಾರಿಗಳಾದರೆ, ನಿಯೊಪ್ರೀನ್ ಕೇವಲ ಬಹ್ವಂಗೀಕಾರಿ. ಆದರೆ ಈ ಪಾಲಿಸಲ್ಫೈಡ್ ಎಲ್ಯಾಸ್ಟೊಮರುಗಳು ಸಾಂದ್ರೀಕರಣ ಬಹ್ವಂಗೀಕರಣದಿಂದಾದವು (ಕಂಡೆನ್ಸೇಷನ್ ಪಾಲಿಮರೈಸೇಷನ್). ಅಂದರೆ ಮೂಲ ಪದಾರ್ಥಗಳು ಸಂಯೋಜಿಸಿದಾಗ ಕ್ರಿಯೆಯಲ್ಲಿ ಬೇರೊಂದು ವಸ್ತು ಕಳೆಯುವ ಸಂದರ್ಭವಿದು. ಇದಕ್ಕೆ ಥಯೊಕೋಲ್-ಬಿ ಉತ್ತಮ ನಿದರ್ಶನ. ಪೆಟ್ರೋಲಿಯಂ ವ್ಯುತ್ಪನ್ನಗಳಿಂದ ಪಡೆದ ಡೈಕ್ಲೋರೋ ಡೈ ಈಥೈಲ್ ಈಥರನ್ನು ಸೋಡಿಯಂ ಟೆಟ್ರಸಲ್ಫೈಡಿನೊಡನೆ ಬಹ್ವಂಗೀಕರಿಸಿ ಥಯೊಕೋಲ್-ಬಿ ಮಾಡುತ್ತಾರೆ.



ಚಿತ್ರ 3

ಥಯೊಕೋಲ್ ರಬ್ಬರನ್ನು ವಲ್ಕನೈಸ್ ಮಾಡಲು ಲೋಹದ ಆಕ್ಸೈಡುಗಳನ್ನು ಉಪಯೋಗಿಸುತ್ತಾರೆ. ನಿಯೊಪ್ರೀನಿನಂತೆ ಇದು ಸಹ ಮೆದುವಾದ ವಸ್ತು. ಪೆಟ್ರೋಲ್, ಎಣ್ಣೆಗಳು, ಬೆಂಜೀನ್ ಮೊದಲಾದ ಲೀನಕಾರಿಗಳು ಇದರ ಮೇಲೆ ಯಾವ ಪರಿಣಾಮವನ್ನೂ ಉಂಟುಮಾಡುವುದಿಲ್ಲ. ಆದ್ದರಿಂದ ಪೆಟ್ರೋಲ್‌ವಾಹಕ ಕೊಳಾಯಿಗಳು ಮತ್ತು ಕೇಬಲ್ ಹೊದಿಕೆಗಳನ್ನು ಇದರಿಂದ ಮಾಡಬಹುದೇ ವಿನಾ ಮೋಟಾರ್ ಟೈರುಗಳನ್ನಲ್ಲ.

ಕ್ಲೋರೊಟ್ರೈಫ್ಲೋರೋ ಎಥಿಲೀನ್ ಮತ್ತು ವಿನಿಲಿಡೀನ್ ಫ್ಲೋರೈಡ್ ಕೂಡಿದಾಗ ಕೆಲ್‌ಎಫ್ ಎಲ್ಯಾಸ್ಟೊಮರ್ ದೊರೆಯುತ್ತದೆ. ಇದು ಫ್ಯೂಮಿಂಗ್ ನೈಟ್ರಿಕಾಮ್ಲದ ವರ್ತನೆಯನ್ನು 140 ದಿವಸಗಳ ಕಾಲ ಸಹಿಸಬಲ್ಲದು.

ಪ್ರಕೃತಿದತ್ತವಾದ ರಬ್ಬರಿನಲ್ಲಿರುವ ಸಿಸ್-ಪಾಲಿಐಸೊಪ್ರೀನ್ ಹೈಡ್ರೊಕಾರ್ಬನ್ನನ್ನು ಸಂಯೋಜಿಸಲಾಗಿದೆ. ಇದಕ್ಕೆ ಅಮೆರಿಪೋಲ್-ಎಸ್‌ಎನ್ ಎಂದು ಹೆಸರು. ತಯಾರಿಕಾ ವಿವರಗಳು ಉದ್ಯಮ ರಹಸ್ಯವಾದ್ದರಿಂದ ಅಲಭ್ಯ. (ಎಚ್.ಜಿ.ಎಸ್.)

**ಎಲ್ಯೂಟ್ರಿಯೇಷನ್ :** ನೀರನ್ನು ಉಪಯೋಗಿಸಿ ಒಂದು ಗೊತ್ತಾದ ಪ್ರಮಾಣದ ಪದಾರ್ಥವನ್ನು ಸಂಪೂರ್ಣವಾಗಿ ವಿಂಗಡಿಸುವ ಕ್ರಮಕ್ಕೆ ಸಾಮಾನ್ಯವಾಗಿ ಇರುವ ಹೆಸರು. ಇದರಿಂದ ಆ ಪದಾರ್ಥದ ವಿವಿಧ ಕಣಗಳ ಗಾತ್ರಗಳನ್ನು, ಮುಖ್ಯವಾಗಿ ಅತಿ ಸಣ್ಣ ಜರಡಿಗಿಂತ ಚಿಕ್ಕದಾದ ಕಣಗಳ ಗಾತ್ರಗಳನ್ನು ನಿರ್ಧರಿಸಲು ಸಾಧ್ಯವಾಗುತ್ತದೆ. ಆಂಡ್ರ್ಯೂಸ್ ಕೈನೆಟಿಕ್ ಎಲ್ಯೂಟ್ರಿಯೇಷನ್, ಶುಷ್ಕ ಎಲ್ಯೂಟ್ರಿಯೇಷನ್ ಮತ್ತು ರೋಲರ್ ಕಣಗಾತ್ರ ವಿಭಾಜಕ (ರೋಲರ್ ಪಾರ್ಟಿಕಲ್ ಸೈಜ್ ಅನಲೈಸರ್)—ಇವು ಇದರಲ್ಲಿ ಕೆಲವು ವಿಧಾನಗಳು. ಅದಿರುಗಳನ್ನು ಸಾಂದ್ರೀಕರಿಸುವುದರಲ್ಲಿ ಇವು ಬಹು ಮುಖ್ಯವಾದ ಮಾರ್ಗಗಳು. (ಎಂ.ಆರ್.ಆರ್.)

**ಎಲ್ಲ ಅಥವಾ ಏನೂ ಇಲ್ಲ ಎಂಬ ನಿಯಮ:** ಅಂಗಕ್ರಿಯಾಶಾಸ್ತ್ರದಲ್ಲಿ, ನರ, ಸ್ನಾಯುಗಳ ತೆರನ ಉದ್ರೇಕಗೊಳ್ಳುವ ಊತಕಗಳಲ್ಲಿ ಚೋದನೆಯ ಎದುರಾಗಿ ಮಾರುವರ್ತನೆ ಆಗುವ ಸಂದರ್ಭಗಳ ಒಂದು ನಿಯಮ (ಆಲ್ ಆರ್ ನನ್ ಲಾ). ವಿದ್ಯುತ್ತಿನ ಆಗವಣೆಯ ಸೊಕ್ಕೆಯಿಂದ (ಇಂಡಕ್ಷನ್ ಷಾಕ್) ಒಂದು ಸ್ನಾಯು ಅದರ ಜೋರಿಗೆ ತಕ್ಕಂತೆ ಕುಗ್ಗುತ್ತದೆ, ಇಲ್ಲವಾದರೆ ತೆಪ್ಪನಿರುತ್ತದೆ. ಆಗುವುದಾದರೆ, ಸ್ನಾಯುವಿನ ಆಗಿನ ಸ್ಥಿತಿಯಲ್ಲಿ ಎಷ್ಟೇ ಬಲವಾದ ಚೋದನೆಯೇ ಆಗಲಿ ಸಾಧ್ಯವಿರುವಷ್ಟೂ ದೊಡ್ಡದಾಗಿ, ಬಲವಾಗಿ ಕುಗ್ಗುವುದೆಂದು ಮೊದಲು (1871) ಗುಂಡಿಗೆಯ ಸ್ನಾಯುವಿನ ವಿಚಾರವಾಗಿ ಹೇಳಿದವ ಬೌಡಿಚ್. ಆಗಿನ ಕಾಲಕ್ಕೆ ಈ ನಿಯಮ ಕೇವಲ ಗುಂಡಿಗೆಗೆ ಮಾತ್ರ ಹೇಳಬಹುದೇ ಹೊರತು ಉಳಿದ ಸ್ನಾಯುಗಳು ನರಗಳ ತೆರನ ಊತಕಗಳಿಗಲ್ಲವೆಂಬ ನಂಬಿಕೆಯಿತ್ತು. ಎಷ್ಟು ಕಡಿಮೆ ಬಲದ ಚೋದನೆಯಿಂದಾದರೂ ಎಲುಗಟ್ಟಿನ (ಸ್ಕೆಲಿಟಲ್) ಸ್ನಾಯುಗಳನ್ನು ಕೊಂಚವಾದರೂ ಕುಗ್ಗಿಸಬಹುದೆಂಬ ಕಲ್ಪನೆಯಿತ್ತು. ಸ್ನಾಯು, ನರಗಳಲ್ಲಿ ನೂರಾರು ಸಾವಿರಾರು ತಂತುಗಳು ಇರುವುದೇ ಈ ಕಲ್ಪನೆಗೆ ಆಧಾರ. ಆದರೆ ಎಲುಗಟ್ಟಿನ ಸ್ನಾಯುಗಳ, ನರಗಳ ಒಂದೊಂದು ತಂತುವೂ ಒಂದು ಬಲದ ಚೋದನೆಯಿಂದ ಕುಗ್ಗುತ್ತದೆ. ಇಲ್ಲವಾದರೆ ಏನೇನೂ ಕುಗ್ಗದೆಂದು ಈಗ ಗೊತ್ತಾಗಿದೆ. ಮಾರುವರ್ತನೆಯ ಪ್ರಮಾಣ ಹೆಚ್ಚು ಕಡಿಮೆ ಆಗುವುದೇ ಇಲ್ಲವೆಂದು ಇದರ ಅರ್ಥವಲ್ಲ. ಊತಕದ ಸ್ಥಿತಿಗೆ ತಕ್ಕಂತೆ ಅದರ ಮಾರುವರ್ತಿಸುವ ನಿಜಗೆಲಸವೂ ಇರುವುದು. ಹಿಂದಿನ ಮಾರುವರ್ತನೆಯಿಂದ ಚೇತರಿಸಿಕೊಳ್ಳುತ್ತಿರುವ ಹೊತ್ತಿನಲ್ಲಿ ನೀಡಿದ ಚೋದನೆಗೆ ಮಾರುವರ್ತನೆ ಎಂದಿಗಿಂತಲೂ ಕಡಿಮೆಯೇ. ಚೋದನೆ ಸಾಕಷ್ಟಿದ್ದರೆ, ಅದರ ಬಲಕ್ಕೂ ಮಾರುವರ್ತನೆಯ ಪ್ರಮಾಣಕ್ಕೂ ಸಂಬಂಧವಿರದು. ವಿಶೇಷೀಕರಿತ ಊತಕಗಳಾದ ಗುಂಡಿಗೆಯ, ಎಲುಗಟ್ಟಿನ ಸ್ನಾಯುಗಳಲ್ಲಿ, ನರಗಳಲ್ಲಿ ಬಟ್ಟೆನಲ್ಲಿ ನಿಜಗೆಲಸದ ಮಾರು ವರ್ತನೆ ಒಂದೇ ತೆರನಾಗಿ ಇರುವುದೆಂದು ಈ ನಿಜಸಂಗತಿಗಳು ತೋರುತ್ತವೆ. ಹೀಗಾಗುವುದರ ಸರಿಯಾದ ಕಾರಣ ಗೊತ್ತಿಲ್ಲವಾದರೂ ಇರುವ ಬಲವೆಲ್ಲ ಒಂದೇ ಬಾರಿಗೆ ಕಳೆವಂತೆ ಮಾಡುವ ಸಿಡಿತಕ್ಕೆ ಹೋಲಿಸಬಹುದಷ್ಟೆ. (ಡಿ.ಎಸ್.ಎಸ್.)

**ಎಲ್ಲ ದರ್ಜೆಗಳು :** ಕಾಳಗವೆಸಗುವ ಎಲ್ಲ ಯೋಧರಿಗೂ ರಕ್ಷಣ ಬಲಗಳಲ್ಲಿ ಬಳಸುವ ಸಾಮಾನ್ಯ ಹೆಸರು (ಆಲ್ ರ್‍ಯಾಂಕ್ಸ್). ರಕ್ಷಣ ಬಲಗಳಲ್ಲಿ ಕಾಳಗವೆಸಗುವವರು (ಕಾಂಬಟೆಂಟ್ಸ್) ಮತ್ತು ಕಾಳಗವೆಸಗದವರು (ನಾನ್-ಕಾಂಬಟೆಂಟ್ಸ್) ಎಂಬ ಎರಡು ಪ್ರಧಾನವರ್ಗಗಳಿವೆ. ಬಾಣಸಿಗರು, ಮೋಚಿ, ದರ್ಜಿ, ನಾಪಿತ ಮುಂತಾದ ವಿವಿಧ ಸೇವಾ ವರ್ಗದವರು, ಗುಮಾಸ್ತರು, ವಿವಿಧ ಮತಗಳ ಪುರೋಹಿತರು ಎರಡನೆಯ ವರ್ಗಕ್ಕೆ ಸೇರಿದವರು. ಕಾಳಗದ ಸ್ಥಳ, ಉದ್ದೇಶ, ಸ್ವಭಾವ ಮುಂತಾದವನ್ನು ಅನುಸರಿಸಿ ರಕ್ಷಣ ಬಲಗಳಲ್ಲಿ ಮೂರು ವಿಭಾಗಗಳಿವೆ : ಸೈನ್ಯ (ನೆಲ), ನೌಕೆ(ಜಲ), ವಿಮಾನ(ಗಾಳಿ). ಇವೆಲ್ಲವುಗಳಲ್ಲಿಯೂ ಎರಡು ಮುಖ್ಯ ಅಂತಸ್ತಿನ ದರ್ಜೆಗಳಿವೆ: ಕಮಿಷನ್ ನೀಡಿದ ಅಧಿಕಾರಿಗಳು (ಕಮಿಷನ್ಡ್ ಆಫಿಸರ್ಸ್), ಕಮಿಷನ್ ನೀಡದ ಅಧಿಕಾರಿಗಳು (ನಾನ್‌ಕಮಿಷನ್ಡ್ ಆಫಿಸರ್ಸ್). ಸೈನ್ಯದಲ್ಲಿ ಮಾತ್ರ ಮೂರನೆಯದೂ ಒಂದು ಅಂತಸ್ತು ಇದೆ—ಕಿರಿಯ ಕಮಿಷನ್ ನೀಡಿದ ಅಧಿಕಾರಿಗಳು (ಜೂನಿಯರ್ ಕಮಿಷನ್ಡ್ ಆಫಿಸರ್ಸ್) ಎಂಬ ಒಂದು ದರ್ಜೆ ಮೇಲೆ ಹೇಳಿದ ಎರಡು ಅಂತಸ್ತುಗಳ ನಡುವೆ ಇದೆ. ಈ ದರ್ಜೆಗಳ ಸಂಕ್ಷೇಪರೂಪಗಳು ಐಸಿಓ (ಇಂಡಿಯನ್ ಕಮಿಷನ್ಡ್ ಆಫಿಸರ್ಸ್), ಜೆಸಿಓ (ಜೂನಿಯರ್ ಕಮಿಷನ್ಡ್ ಆಫಿಸರ್ಸ್), ಎನ್‌ಸಿಓ (ನಾನ್‌ಕಮಿಷನ್ಡ್ ಆಫಿಸರ್ಸ್). ಒಂದೊಂದು ವಿಭಾಗದ ಸಮವಸ್ತ್ರದ ಬಣ್ಣ

ಇಂಡಿಯನ್ ಕಮಿಷನ್ಡ್ ಆಫಿಸರ್ಸ್

ಸೈನ್ಯ | ನೌಕೆ | ವಿಮಾನ


ಫೀಲ್ಡ್ ಮಾರ್ಷಲ್


ಅಡ್ಮಿರಲ್ ಆಫ್ ಫ್ಲೀಟ್


ಮಾರ್ಷಲ್ ಆಫ್ ದಿ ಏರ್‌ಫೋರ್ಸ್


ಲೆಫ್ಟಿನೆಂಟ್ ಕರ್ನಲ್


ಕಮಾಂಡರ್


ವಿಂಗ್ ಕಮಾಂಡರ್


ಜನರಲ್


ಅಡ್ಮಿರಲ್


ಏರ್ ಚೀಫ್ ಮಾರ್ಷಲ್


ಮೇಜರ್


ಲೆಫ್ಟಿನೆಂಟ್ ಕಮಾಂಡರ್


ಸ್ಕ್ವಾಡ್ರನ್ ಲೀಡರ್


ಲೆಫ್ಟಿನೆಂಟ್ ಜನರಲ್


ವೈಸ್ ಅಡ್ಮಿರಲ್


ಏರ್ ಮಾರ್ಷಲ್


ಕ್ಯಾಪ್ಟನ್


ಲೆಫ್ಟಿನೆಂಟ್


ಫ್ಲೈಟ್ ಲೆಫ್ಟಿನೆಂಟ್


ಮೇಜರ್ ಜನರಲ್


ರೇರ್ ಅಡ್ಮಿರಲ್


ಏರ್ ವೈಸ್ ಮಾರ್ಷಲ್


ಲೆಫ್ಟಿನೆಂಟ್


ಸಬ್ ಲೆಫ್ಟಿನೆಂಟ್


ಫ್ಲೈಯಿಂಗ್ ಆಫಿಸರ್


ಬ್ರಿಗೇಡಿಯರ್


ಕಮ್ಮೊಡೋರ್


ಏರ್ ಕಮ್ಮೊಡೋರ್


ಸೆಕೆಂಡ್ ಲೆಫ್ಟಿನೆಂಟ್


ಆಫಿಸರ್


ಪೈಲಟ್ ಆಫಿಸರ್


ಕರ್ನಲ್


ಕ್ಯಾಪ್ಟನ್


ಗ್ರೂಪ್ ಕ್ಯಾಪ್ಟನ್

ಜೂನಿಯರ್ ಕಮಿಷನ್ಡ್ ಆಫಿಸರ್ಸ್-ಸೈನ್ಯ


ಸುಬೆದಾರ್ ಮೇಜರ್


ಸುಬೇದಾರ್


ನಾಯಬ್ ಸುಬೆದಾರ್

| ಸೈನ್ಯ | ನೌಕೆ | ವಿಮಾನ |
|---|---|---|
| ಇಂಡಿಯನ್ ಕಮಿಷನ್ಡ್ ಆಫಿಸರ್ಸ್ | ಇಂಡಿಯನ್ ಕಮಿಷನ್ಡ್ ಆಫಿಸರ್ಸ್ | ಇಂಡಿಯನ್ ಕಮಿಷನ್ಡ್ ಆಫಿಸರ್ಸ್ |
| ಜನರಲ್ | ಅಡ್ಮಿರಲ್ | ಏರ್ ಚೀಫ್ ಮಾರ್ಷಲ್ |
| ಲೆಫ್ಟಿನೆಂಟ್ ಜನರಲ್ | ವೈಸ್ ಅಡ್ಮಿರಲ್ | ಏರ್ ಮಾರ್ಷಲ್ |
| ಮೇಜರ್ ಜನರಲ್ | ರೇರ್ ಅಡ್ಮಿರಲ್<br>ಕಮ್ಮೊಡೋರ್ ಫಸ್ಟ್‌ಕ್ಲಾಸ್ | ಏರ್ ವೈಸ್ ಮಾರ್ಷಲ್ |
| ಬ್ರಿಗೇಡಿಯರ್ | ಕಮ್ಮೊಡೋರ್ ಸೆಕೆಂಡ್ ಕ್ಲಾಸ್ | ಏರ್ ಕಮ್ಮೊಡೋರ್ |
| ಕರ್ನಲ್ | ಕ್ಯಾಪ್ಟನ್ | ಗ್ರೂಪ್ ಕ್ಯಾಪ್ಟನ್ |
| ಲೆಫ್ಟಿನೆಂಟ್ ಕರ್ನಲ್ | ಕಮಾಂಡರ್ | ವಿಂಗ್ ಕಮಾಂಡರ್ |
| ಮೇಜರ್ | ಲೆಫ್ಟಿನೆಂಟ್ ಕಮಾಂಡರ್ | ಸ್ಕ್ವಾಡ್ರನ್ ಲೀಡರ್ |
| ಕ್ಯಾಪ್ಟನ್ | ಲೆಫ್ಟಿನೆಂಟ್ | ಫ್ಲೈಟ್ ಲೆಫ್ಟಿನೆಂಟ್ |
| ಲೆಫ್ಟಿನೆಂಟ್ | ಸಬ್ ಲೆಫ್ಟಿನೆಂಟ್ | ಫ್ಲೈಯಿಂಗ್ ಆಫಿಸರ್ |
| ಸೆಕೆಂಡ್ ಲೆಫ್ಟಿನೆಂಟ್ | | ಪೈಲಟ್ ಆಫಿಸರ್ |
| ಜೂನಿಯರ್ ಕಮಿಷನ್ಡ್ ಆಫಿಸರ್ಸ್ | ನಾನ್‌ಕಮಿಷನ್ಡ್ ಆಫಿಸರ್ಸ್ | ನಾನ್‌ಕಮಿಷನ್ಡ್ ಆಫಿಸರ್ಸ್ |
| ಸುಬೆದಾರ್ ಮೇಜರ್ | ಮಾಸ್ಟರ್ ಚೀಫ್ ಪೆಟಿ ಆಫಿಸರ್ ಫಸ್ಟ್ ಕ್ಲಾಸ್ | ಮಾಸ್ಟರ್ ವಾರಂಟ್ ಆಫಿಸರ್ |
| ಸುಬೆದಾರ್ | ಮಾಸ್ಟರ್ ಚೀಫ್ ಪೆಟಿ ಆಫಿಸರ್ ಸೆಕೆಂಡ್ ಕ್ಲಾಸ್ | ವಾರಂಟ್ ಆಫಿಸರ್ |
| ನಾಯಬ್ ಸುಬೆದಾರ್ | ಚೀಫ್ ಪೆಟಿ ಆಫಿಸರ್ | ಫ್ಲೈಟ್ ಸಾರ್ಜೆಂಟ್ |
| ನಾನ್ ಕಮಿಷನ್ಡ್ ಆಫಿಸರ್ಸ್ | | |
| ವಾರಂಟ್ ಆಫಿಸರ್ | | |
| ಬೆಟಾಲಿಯನ್ ಹವಲ್ದಾರ್ ಮೇಜರ್ | ಪೆಟಿ ಆಫಿಸರ್ | ಸಾರ್ಜೆಂಟ್ |
| ಬೆಟಾಲಿಯನ್ ಕ್ವಾರ್ಟರ್ ಮಾಸ್ಟರ್ ಹವಲ್ದಾರ್ | | |
| ಕಂಪನಿ ಕ್ವಾರ್ಟರ್ ಮಾಸ್ಟರ್ ಹವಲ್ದಾರ್ | | ಕಾರ್ಪೊರಲ್ |
| ಹವಲ್ದಾರ್ | ಲೀಡಿಂಗ್ ಸೀಮ್ಯಾನ್ | ಲೀಡಿಂಗ್ ಏರ್‌ಕ್ರಾಫ್ಟ್ಸ್ ಮ್ಯಾನ್ |
| ನಾಯಕ್ | ಸೀಮ್ಯಾನ್ ಕ್ಲಾಸ್ I | |
| ಲ್ಯಾನ್ಸ್‌ನಾಯಕ್ | ಸೀಮ್ಯಾನ್ ಕ್ಲಾಸ್ II | ಏರ್‌ಕ್ರಾಫ್ಟ್ಸ್ ಮ್ಯಾನ್ ಕ್ಲಾಸ್ I |
| ಸಿಪಾಯಿ | ಸೇಲರ್ | ಏರ್‌ಕ್ರಾಫ್ಟ್ಸ್ ಮ್ಯಾನ್ ಕ್ಲಾಸ್ II |

ಒಂದೊಂದು. ಸೈನ್ಯದ್ದು, ಆಲಿವ್ ಹಸಿರು (ಆಲಿವ್ ಗ್ರೀನ್ ಸಂಕ್ಷೇಪ ರೂಪ ಓಜಿ), ನೌಕೆಯದು ಬಿಳಿ, ವಿಮಾನದ್ದು ಖಾಕಿ. ಇಷ್ಟುಮಾತ್ರವಲ್ಲ ಒಂದೊಂದು ಅಂತಸ್ತಿನವರನ್ನೂ ಆ ಅಂತಸ್ತಿನಲ್ಲಿ ಅವರ ಸ್ಥಾನವನ್ನೂ ಗುರುತಿಸಲು ಅನುಕೂಲವಾಗುವಂತೆ ವಿಶಿಷ್ಟ ಭುಜ ಅಥವಾ ಕಂಕಣ ತೊಡುಗೆಗಳನ್ನು ಅಧಿಕಾರಿಗಳು ( ಸಮವಸ್ತ್ರಧಾರಿಗಳಾಗಿರುವಾಗ ) ಧರಿಸಲೇಬೇಕು. ಇವುಗಳ ವಿವರಗಳನ್ನು ಚಿತ್ರದಲ್ಲಿ ತೋರಿಸಿದೆ.

ರಕ್ಷಣ ಬಲಗಳ ಮೂರು ವಿಭಾಗಗಳ ಸಮಾನ ದರ್ಜೆಗಳನ್ನು 98ನೆಯ ಪುಟದ ಪಟ್ಟಿಯಲ್ಲಿ ಬರೆದಿದೆ. (ಎ.ಎನ್‌.ಎಸ್‌.ಎಂ.)

**ಎಲ್ಲಮ್ಮ :** ಬೆಳಗಾಂ ಜಿಲ್ಲೆಯ ಪರಸ್‌ಗಡ ತಾಲ್ಲೂಕಿಗೆ ಸೇರಿರುವ ಸವದತ್ತಿಯಲ್ಲಿರುವ ಒಂದು ಪ್ರಸಿದ್ಧ ದೇವತೆ.

ಧಾರ್ಮಿಕವಾಗಿ, ಪ್ರಚಲಿತವಿರುವ ಒಂದು ಆಧಾರದಮೇರೆಗೆ ಎಲ್ಲಮ್ಮನ ದೇವಸ್ಥಾನ ಸುಮಾರು 2,000 ವರ್ಷಗಳಷ್ಟು ಪ್ರಾಚಿನವಾದದ್ದು. ಆದಿಯಿಂದಲೂ ರೇಣುಕೆಯ ಆವಾಸಸ್ಥಾನವಾಗಿರುವಂಥದು. ಆದರೆ ಈ ವಿಷಯದಲ್ಲಿ ಒಮ್ಮತವಿಲ್ಲ. ಶಂ. ಬಾ. ಜೋಷಿ ಹಾಗೂ ಬೆಟಗೇರಿ ಕೃಷ್ಣಶರ್ಮ ಮುಂತಾದ ವಿದ್ವಾಂಸರು ಈಗಿರುತ್ತಿರುವ ಎಲ್ಲಮ್ಮನ ದೇವಸ್ಥಾನ ಅಷ್ಟೊಂದು ಪ್ರಾಚೀನವಾದುದಲ್ಲವೆಂದೂ ಜೈನವಾಸ್ತುಶಿಲ್ಪದ ವಿಶಿಷ್ಟಾಂಶಗಳಿಂದೊಡಗೂಡಿರುವ ಆ ಗುಡಿಯಲ್ಲಿ ಪ್ರತಿಷ್ಠಾಪಿತಳಾಗಿರುವ ದೇವತೆ ಎಲ್ಲಮ್ಮನಲ್ಲ, ಪದ್ಮಪುಷ್ಪಪಾಣಿಯಾಗಿರುವ ಯಕ್ಷಿ ಪದ್ಮಾವತಿ ದೇವಿಯೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಜೊತೆಗೆ ಈಗ್ಗೆ ಕೆಲವು ವರ್ಷಗಳ ಹಿಂದೆ ಆ ಮೂಲ ಜೈನ ಬಸದಿಯ ದ್ವಾರದ ಮೇಲಿದ್ದ ಜಿನಮೂರ್ತಿಯನ್ನು ಈಚೆಗೆ ಕೆತ್ತಿ ಹಾಕಿರುವ ಗಮನಾರ್ಹ ಸಂಗತಿಯನ್ನೂ ಹೊರಗೆಡವಿದ್ದಾರೆ.

ಕ್ರಿ. ಶ. 1514ರ ಸುಮಾರಿನಲ್ಲಿ ಸವದತ್ತಿ ಪ್ರಾಂತ್ಯದಲ್ಲಿ ಪ್ರಬಲನಾಗಿದ್ದ ಬಾಗಿ ಬೊಮ್ಮಪ್ಪನಾಯ್ಕನೆಂಬಾತ ಈಗಿನ ಎಲ್ಲಮ್ಮನ ಗುಡಿಯ ದಕ್ಷಿಣಕ್ಕಿರುವ ನಗಾರಖಾನೆಯನ್ನು ಕಟ್ಟಿಸಿದ್ದರ ಬಗೆಗೆ ತಾನು ಹಾಕಿಸಿದ ಶಾಸನದಲ್ಲಿ ಆ ದೇವತೆಯನ್ನು ಜತ್ತಕ ಎಂದು ಕರೆದಿರುವುದು ಮತ್ತೊಂದು ಮುಖ್ಯಾಂಶ. ಯಕ್ಷಿಣಿ > ಜಕ್ಕಿಣಿ > ಜತ್ತಕ್ಕ > ಜತ್ತಕ—ಹೀಗೆ ಜನರ ಬಾಯಲ್ಲಿ ರೂಪಾಂತರಗೊಂಡಿರಬಹುದಾದ ಆ ದೇವತೆ ಮೂಲತಃ ಜೈನ ದೇವತೆಯೇ ಆಗಿರಬೇಕೆಂದೂ ಕಾಲಕ್ರಮೇಣ ಅದು ವೈದಿಕ ದೇವತೆಯಾಗಿ ಪರಿವರ್ತಿತವಾಗಿರಬಹುದೆಂದೂ ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆದರೆ ಈಗ ಮಾತ್ರ ಆ ದೇವತೆ ಶುದ್ಧ ಹಿಂದೂ ದೇವಿಯಾಗಿದ್ದಾಳೆ. ಪೂಜಾರಿಗಳು, ಆಡಳಿತವರ್ಗದವರೆಲ್ಲ ವೀರಶೈವರು.

ನಂಬಿ ನೆಚ್ಚಿ ನಡೆದುಕೊಳ್ಳುವ ಭಕ್ತಾದಿಗಳಿಗೆ ಇಷ್ಟಾರ್ಥಗಳನ್ನು ಕೊಡುವಳೆಂದು ಹೆಸರಾಗಿರುವ ಎಲ್ಲಮ್ಮನಿಗೆ ಎಲ್ಲ ಜಾತಿ ಮತ ಪಂಥದಲ್ಲೂ ಭಕ್ತವರ್ಗವಿದೆ. ನನ್ನ ಕ್ಷೇತ್ರಕ್ಕೆ ಯಾವತ್ತು ಹೊಸ ಭಕ್ತಾದಿಗಳು ಬರುವುದಿಲ್ಲವೋ ಆ ದಿನದಿಂದಲೇ ನಾನು ಅಲ್ಲಿಲ್ಲವೆಂದು ತಿಳಿಯಿರಿ——ಎಂದು ದೇವಿ ಸತ್ಯಕ್ಕ (ಎಲ್ಲಮ್ಮನ ಇನ್ನೊಂದು ಹೆಸರು) ಭಾಷೆ ಕೊಟ್ಟಿದ್ದಾಳೆಂಬುದು ಜನರ ನಂಬಿಕೆ. ಆದ್ದರಿಂದಲೇ ಪ್ರತಿದಿನವೂ ನೂರಾರು ಜನ ಬರುತ್ತಿರುತ್ತಾರೆ. ಪ್ರತಿ ಮಂಗಳವಾರ ಶುಕ್ರವಾರಗಳಂದು ವಿಶೇಷ ಪೂಜೆ ಪುನಸ್ಕಾರಗಳಾಗುವುದರಿಂದ ಜನಸಂದಣಿಯೂ ಹೆಚ್ಚುತ್ತದೆ. ಪ್ರತಿ ಹುಣ್ಣಿಮೆಯ ದಿನವಂತೂ ದೊಡ್ಡ ಜಾತ್ರೆಯೇ ಆಗುತ್ತದೆ; ಬನಾತನ ಹುಣ್ಣಿಮೆಯಿಂದ (ಭಾರತ ಹುಣ್ಣಿಮೆ) ಒಂದು ತಿಂಗಳವರೆಗೆ ವಾರ್ಷಿಕ ಜಾತ್ರೆ ನಡೆಯುತ್ತದೆ. ಆ ಸಮಯದಲ್ಲೆ ಕನಿಷ್ಠ ಎರಡು ಲಕ್ಷ ಜನ ಸೇರುತ್ತಾರೆಂದು ಅಂದಾಜು ಮಾಡಲಾಗಿದೆ.

ಪೌರಾಣಿಕವಾಗಿಯೂ ಆ ಕ್ಷೇತ್ರದೇವತೆಯನ್ನು ಕುರಿತು ಭಿನ್ನಾಭಿಪ್ರಾಯಗಳಿವೆ. ಭಾಗವತ, ಹರಿವಂಶ ಮುಂತಾದ ವೈದಿಕ ಪುರಾಣಗಳ ಪ್ರಕಾರ ವಿಷ್ಣುವಿನ ಪರಶುರಾಮಾವತಾರದಲ್ಲಿ ಆತನಿಗೆ ಆ ಜನ್ಮವಿತ್ತ ತಾಯಿ ರೇಣುಕೆಯೇ ಸವದತ್ತಿಯ ಎಲ್ಲಮ್ಮ. ತಂದೆ ಜಮದಗ್ನಿಯ ಆಜ್ಞೆಯಂತೆ ತಾಯಿಯ ತಲೆ ಕಡಿದ ಆತ ತನ್ನ ತಾಯನ್ನು ಮತ್ತೆ ಬದುಕಿಸಿಕೊಳ್ಳಲು ವರಪಡೆದ. ಮತ್ತೊಂದು ಕಥೆಯಂತೆ ಕಾರ್ತವೀರ್ಯನಿಗೆ ಸೋದರಿ ಈ ರೇಣುಕೆ. ಮಗುದೊಂದರ ಪ್ರಕಾರ ಆತ ಅಳುಪಿ ವರಿಸಬಯಸಿದ ಋಷಿಪತ್ನಿ ರೇಣುಕೆ ಆಕೆ.

ಅನೂಚಾನವಾಗಿ ನಡೆದುಬಂದ ಮೂಲ ಸಂಪ್ರದಾಯ, ಪರಂಪರಾಗತ ಆಚಾರ ವಿಚಾರಗಳಿಗೆ ಜೀವಂತ ಸಾಕ್ಷಿ ನುಡಿಯುವ ಜಾನಪದದಲ್ಲಿ ರೂಢಿಯಲ್ಲಿರುವ ಕಥೆಗಳ ಪ್ರಕಾರ, ರೇಣುಕ ರಾಜನ ಮಗಳೇ ರೇಣುಕೆ. ಜಮದಗ್ನಿಯ ಧರ್ಮಪತ್ನಿ. ಒಂದು ದಿನ ಪೂಜಾವಿಧಿಗಳಿಗೆ ನೀರು ತಂದುಕೊಡಲು ತಡಮಾಡಿದಾಗ ಆಕೆಗೆ ತೊನ್ನಿಯಾಗೆಂದು ಋಷಿ ಶಾಪಕೊಟ್ಟ. ಆಕೆ ಆ ಶಾಪದಿಂದ ದುಃಖಿತೆಯಾಗಿ ತೊಳಲಿ ಅಂಡಲೆಯುತ್ತ ಸವದತ್ತಿಯ ಈಗಿನ ಜೋಗುಳ ಬಾವಿಯ ಹತ್ತಿರವಿರುವ ಮರದ ಕೋಟೆಗೆ ಬಂದು ನೋಡಿದಾಗ ಎಕ್ಕಯ್ಯ, ಜೋಗಯ್ಯ ಎಂಬಿಬ್ಬರು ಘನಸಿದ್ಧರ ದರ್ಶನವಾಯಿತು. ತನ್ನ ದುಃಸ್ಥಿತಿಯನ್ನೆಲ್ಲ ಅವರಿಗೆ ಭಯಭಕ್ತಿಯಿಂದ ನಿವೇದಿಸಿಕೊಂಡಾಗ ಅವರು ಜೋಗುಳ ಬಾವಿಯಲ್ಲಿ ಮಿಂದು, ಅಲ್ಲಿರುವ ಆರೆಯ ಮೇಲೆ ಅರೆದ ಅರಿಸಿಣವನ್ನು ಮೈಗೆಲ್ಲ ತೊಡೆದುಕೊಂಡರೆ ತೊನ್ನು ರೋಗ ಹೋಗುತ್ತದೆ ಎಂದು ಹಿತವಚನ ನುಡಿದರು. ಆಕೆ ಹಾಗೆ ಮಾಡಿದಾಗ ತೊನ್ನೆಲ್ಲ ಮಾಯವಾಯಿತಲ್ಲದೆ ಅವಳ ದೇಹಕಾಂತಿ ನೂರ್ಮಡಿಸಿತು. ಅತ್ಯಂತ ಹರ್ಷ ಹಾಗೂ ಉತ್ಸಾಹದಿಂದ ಹಿಂದುರುಗಿ ಬಂದು ಎಕ್ಕಯ್ಯ ಜೋಗಯ್ಯರ ಹೆಸರು ಶಾಶ್ವತವಾಗಲೆಂದೂ ಜೋಗುಳ ಬಾವಿಗೆ ಎಲ್ಲ ದುಷ್ಟ ರೋಗನಿವಾರಕ ಶಕ್ತಿ ತುಂಬಿಬರಲೆಂದೂ ಹಾರೈಸಿ ತನ್ನ ಗಂಡನ ಬಳಿಗೆ ಹೋಗಿ ಸುಖವಾಗಿರತೊಡಗಿದಳು. ಅವಳು ಹೊಕ್ಕು ಊರ್ಜಿತಗೊಳಿಸಿದ ಸವದತ್ತಿಯ ಆ ಪ್ರದೇಶವೇ ಮುಂದೆ ಎಲ್ಲಮ್ಮನ ಆವಾಸ ಸ್ಥಾನವಾಯಿತು, ಪವಿತ್ರ ಕ್ಷೇತ್ರವಾಯಿತು.



ಎಲ್ಲಮ್ಮ ದೇವಾಲಯ

ಮತ್ತೊಂದು ಜನಪದ ಕಥೆಯ ಮೇರೆಗೆ ಒಮ್ಮೆ ಕಾರ್ತವೀರ್ಯಾರ್ಜುನ ತನ್ನ ಪ್ರೇಯಸಿಯರೊಂದಿಗೆ ಜಲಕ್ರೀಡೆಯಾಡುತ್ತಿದ್ದುದನ್ನು ಕಂಡ ರೇಣುಕೆಯ ಮನಸ್ಸು ವಿಚಲಿತವಾಯಿತು. ಒಂದು ಹುಣ್ಣಿಮೆಯ ದಿನ ಕಾರ್ತವೀರ್ಯ ಜಮದಗ್ನಿಯನ್ನು ಕೊಂದ. ಆದ್ದರಿಂದಲೇ ಅದು ರಂಡೆ ಹುಣ್ಣಿಮೆಯಾಯಿತು. ಆದರೆ ಸ್ವರ್ಗದಿಂದ ಅಮೃತಕಲಶ ತಂದು ಆತನನ್ನು ಬದುಕಿಸಿದ್ದು ಇನ್ನೊಂದು ಹುಣ್ಣಿಮೆಯ ದಿನವೇ. ಆಗ ರಂಡೆಯಾಗಿದ್ದ ಎಲ್ಲಮ್ಮ ಮತ್ತೆ ಮುತ್ತೈದೆಯಾದಳಾದ್ದರಿಂದ ಅದು ಮುತ್ತೈದೆ ಹುಣ್ಣಿಮೆಯಾಯಿತು. ಈ ಎರಡು ಹುಣ್ಣಿಮೆಗಳಲ್ಲೂ ಅದ್ದೂರಿಯಾದ ಉತ್ಸವಗಳಾಗುತ್ತವೆ. ರಂಡೆ ಹುಣ್ಣಿಮೆಯಂದು ದೇವತೆಯ ಕೈಬಳೆಗಳನ್ನೆಲ್ಲ ಒಡೆದು ತೆಗೆದುಹಾಕಿ ಮುತ್ತೈದೆ ಹುಣ್ಣಿಮೆ ದಿನ ಮತ್ತೆ ಕೈತುಂಬ ಹೊಸಬಳೆ, ಕರಿಮಣಿ, ಇತ್ಯಾದಿ ಮಂಗಳವಸ್ತು ಒಡವೆಗಳಿಂದ ದೇವತೆಯನ್ನು ಅಲಂಕರಿಸುತ್ತಾರೆ. ತಂದೆಯ ಆಜ್ಞೆಯಂತೆ ಪರಶುರಾಮ ರೇಣುಕೆಯ ಶಿರವನ್ನು ಕಡಿಕಡಿದಂತೆ ತಲೆ ಚಿಗುರುತ್ತಲೇ ಹೋಯಿತಂತೆ. ಆದ್ದರಿಂದ ಹಾಗೆ ಪ್ರತಿಯೊಂದು ಕಡಿತದಿಂದಲೂ ಸಿಡಿದುಬಂದ ಉಗ್ರದೇವತೆಗಳೇ ಪ್ಲೇಗು, ಸಿಡುಬು, ಕಾಲರಾ ಮುಂತಾದ ಮಾರಿರೋಗಗಳು. ರೋಸಿಹೋದ ರೇಣುಕೆ ಗುಡ್ಡದ ಎಲ್ಲಮ್ಮನಾಗಿ ಅಲ್ಲಿ ಬಂದು ನೆಲೆಸಿದಳು;

ತನ್ನ ಗಂಡ ಮಕ್ಕಳಿಂದ ದೂರವಿರಬಯಸಿದಳು. ಆದ್ದರಿಂದಲೇ ಜಮದಗ್ನಿ ಹಾಗೂ ಪರಶುರಾಮರ ಗುಡಿಗಳು ಎಲ್ಲಮ್ಮನ ಗುಡಿಯಿಂದ ದೂರ ದೂರ ಇವೆ. ತಾಯಿಯ ಮೇಲೆ ಕೊಡಲಿ ಎತ್ತಿದ ತಪ್ಪಿಗೆ ಪ್ರಾಯಶ್ಚಿತ್ತರೂಪವಾಗಿ ನಿರಂತರವಾಗಿ ತಾಯಿ ಎಲ್ಲಮ್ಮನ ಸ್ತುತಿ ಮಾಡುತ್ತಲೇ ಇದ್ದಾನಂತೆ, ಪರಶುರಾಮ. ಆದರೆ ಆಕೆ ಅದನ್ನು ಕೇಳಿಸಿಕೊಳ್ಳುವುದಿಲ್ಲವಂತೆ!

ಜನಪದದಲ್ಲಿ ರೂಢಮೂಲ ನಂಬಿಕೆಯಾಗಿ ಬೆಳೆದು ಆಚರಣೆಯಲ್ಲಿರುವ ಈ ಕಥೆಗಳಲ್ಲಿ ಕ್ವಚಿತ್ತಾಗಿ ಐತಿಹಾಸಿಕ, ಪೌರಾಣಿಕ ಸಂಗತಿಗಳು ವಿಚಿತ್ರವಾಗಿ ಹೆಣೆದು ಕೊಂಡಿರುವುದರ ಸುಳಿವನ್ನು ಕಾಣಬಹುದಾಗಿದೆ. ವೀರಶೈವರು ತಮ್ಮದೇ ಆದ ರೀತಿಯಲ್ಲಿ ಎಲ್ಲಮ್ಮನ ಕಥೆಕಟ್ಟಿ ಹೇಳಿರುವುದನ್ನು ಗಮನಿಸಬೇಕು. ಆ ಪ್ರಕಾರ, ಒಂದಾನೊಂದು ಕಾಲದಲ್ಲಿ ಉಗುರುಗೊಳ್ಳ ಗ್ರಾಮದಲ್ಲಿ ಶ್ರೀಮಂತ ವೀರಶೈವ ಗೃಹಸ್ಥನೊಬ್ಬನಿದ್ದ. ಆತನ ಮಗಳೇ ಎಲ್ಲಮ್ಮ. ಬೆಳೆಯುವ ಕಾಲಕ್ಕೆ ಆಕೆಗೆ ತೊನ್ನು ಹತ್ತಿತು. ಯಾರೂ ಮದುವೆಯಾಗಬಯಸಲಿಲ್ಲ. ಹೀಗಿರುವಲ್ಲಿ ಸವದತ್ತಿಗೆ ಹೋದಾಗ ಗುಡ್ಡದಲ್ಲಿ ಎಕ್ಕಯ್ಯ ಜೋಗಯ್ಯರ ಪಾದುಕೆಯ ಮೇಲಿನ ಮಳೆನೀರು ಬಿದ್ದಕ್ಷಣವೇ ತೊನ್ನು ಮಾಯವಾಯಿತು. ಆಗ ಆಕೆ ಸಿದ್ಧರ ಧ್ಯಾನದಲ್ಲಿ ಅಲ್ಲೇ ಕುಳಿತಳು. ಕೊನೆಗೆ ಪ್ರತ್ಯಕ್ಷರಾದ ಅವರು ಎಲ್ಲ ರೀತಿಯ ಯಂತ್ರ ಮಂತ್ರ ರಸವಿದ್ಯೆಗಳನ್ನು ಹೇಳಿಕೊಟ್ಟರಲ್ಲದೆ, ಶಿವಪಂಚಾಕ್ಷರಿ ಮಂತ್ರವನ್ನೂ ಆಕೆಗೆ ಉಪದೇಶಿಸಿದರು. ನೀನು ಮಾಯಕಾತಿಯಾಗು, ಭಕ್ತಜನ ಜಗವನ್ನು (ಅಲಂಕೃತ ಬಿಂದಿಗೆ) ಹೊತ್ತು ಕುಣಿಯುತ್ತ ನಿನ್ನಲ್ಲಿಗೆ ಬರುವಂತಾಗಲಿ ಎಂದು ಆಶೀರ್ವದಿಸಿ ಅಲ್ಲೇ ಅಂತರ್ಧಾನವಾದರು. ಅಂದಿನಿಂದ ಎಲ್ಲಮ್ಮ ಸತ್ಯಕ್ಕನೆಂಬ ಅನ್ವರ್ಥಕ ಹೆಸರಿನಿಂದ ಅಲ್ಲೇ ನೆಲೆಸಿ ಭಕ್ತರ ಇಷ್ಟಾರ್ಥಗಳನ್ನು ನೆರವೇರಿಸುತ್ತ ಬರುತ್ತಿದ್ದಾಳೆ. ಆ ಸಿದ್ಧರು ಪ್ರತ್ಯಕ್ಷರಾದ ಕಿಚ್ಚಿನಕುಂಡವೇ ರೋಗನಾಶಿನಿಯಾದ ಈಗಿನ ಜೋಗುಳ ಬಾವಿ; ಜೋಗಪ್ಪ ಜೋಗಮ್ಮರ ವೇಷಭೂಷಣಗಳನ್ನು ಧರಿಸಿಕೊಂಡು, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಜಗ ಹೊತ್ತುಕೊಂಡು ಕುಣಿಯುತ್ತ ಬರುವ ಎಲ್ಲಮ್ಮನ ಭಕ್ತರನ್ನು ಬಿಜಾಪುರ, ಬೆಳಗಾಂ ಹಾಗೂ ಧಾರವಾಡ ಜಿಲ್ಲೆಗಳಲ್ಲಿ ಸಾವಿರಾರು ಸಂಖ್ಯೆಯಲ್ಲಿ ಕಾಣಬಹುದು.

ಸಾಮಾಜಿಕ ಹಾಗೂ ನೈತಿಕ ದೃಷ್ಟಿಯಿಂದ ಕೂಡ ಎಲ್ಲಮ್ಮ ತುಂಬ ಪ್ರಭಾವ ಬೀರಿದ ಶಕ್ತಿಯಾಗಿದ್ದಾಳೆ. ಅನೇಕ ಜಾತಿಯವರು—ಹೆಚ್ಚಾಗಿ ಹರಿಜನರು—ಎಲ್ಲಮ್ಮನ ಭಕ್ತರಾಗಿ, ಜೋಗಯ್ಯನೋ ಜೋಗಮ್ಮನೋ ಆಗಿ ದೀಕ್ಷೆಪಡೆದು ಕೊಳ್ಳುತ್ತಾರೆ. ಅವರು ಶಾಸ್ತ್ರೋಕ್ತವಾಗಿ ಮದುವೆಯಾಗುವಂತಿಲ್ಲ; ದೇವದಾಸಿಯರಂತೆ ನಡೆದುಕೊಳ್ಳಲು ಅವಕಾಶವಿದೆ.

ಇಷ್ಟರಮಟ್ಟಿಗೆ ಜನಮನದಲ್ಲಿ ಬೇರೂರಿ ಬೆಳೆದಿರುವ ಪರಂಪರಾಗತ ನಂಬಿಕೆ, ಭಕ್ತಿಗಳ ಸಂಕೇತವಾಗಿ ಬಹು ಹಿಂದಿನಿಂದಲೂ ಬೆನ್ನುಸಿಡಿಯಾಡುತ್ತಿದ್ದುದೂ ಉಗ್ರಕೊಂಡ ಹಾಯುತ್ತಿದ್ದುದೂ ರೂಢಿಯಲ್ಲಿತ್ತು. ಈಗ ಉತ್ತರ ಕರ್ನಾಟಕದಲ್ಲಿ ಮಾತ್ರವಲ್ಲದೆ ದಕ್ಷಿಣ ಕರ್ನಾಟಕದ ಅನೇಕ ಕಡೆಗಳಲ್ಲಿ ಎಲ್ಲಮ್ಮನ ದೇವಸ್ಥಾನಗಳಿವೆ. ತುಮಕೂರು ಜಿಲ್ಲೆಯ ಕುಣಿಗಲಿನಿಂದ ಆರು ಮೈಲಿ ದೂರದಲ್ಲಿರುವ ಗುನ್ನಾಗರೆ ಎಂಬ ಗ್ರಾಮದಲ್ಲಿ ಪ್ರತಿವರ್ಷವೂ ಎಲ್ಲಮ್ಮ ದೇವತೆಯ ಜಾತ್ರೆ ನಡೆದು ಬೆನ್ನುಸಿಡಿ, ಕೊಂಡಹಾಯುವುದು ಮುಂತಾದವಲ್ಲ ನಡೆಯುತ್ತವೆ ಎಂಬುದು ಗಮನಾರ್ಹ ಸಂಗತಿ. ಆದರೆ ಈ ಎಲ್ಲಮ್ಮನ ಪೂಜಾರಿಗಳು ಎಲೆ ಬಣಜಿಗರಾದರೂ ಬೆನ್ನುಸಿಡಿ ಆಡುವವರು ಮಾತ್ರ ಇಲ್ಲೂ ಹರಿಜನರೇ ಎಂಬುದು ಮುಖ್ಯಾಂಶ.

ಸವದತ್ತಿ (ನೋಡಿ) ಕ್ಷೇತ್ರ ತುಂಬ ರಮಣೀಯವಾದ ಪ್ರವಾಸಿ ಕೇಂದ್ರವೂ ಆಗಿದೆ. ಗುಡ್ಡಗಳ ಸಾಲಿನಿಂದ, ಪಕ್ಕದಲ್ಲೇ ಬೆಳೆದ ತೆಂಗು, ಬಾಳೆ, ಕಬ್ಬಿನ ತೋಟಗಳಿಂದ ಆಕರ್ಷಕವಾಗಿರುವ ಇದು ಧಾರವಾಡದಿಂದ ಉತ್ತರಕ್ಕೆ 23 ಮೈಲಿ ದೂರದಲ್ಲಿದೆ. ಬೆಳಗಾವಿಯಿಂದ 50 ಮೈಲಿ ಪೂರ್ವಕ್ಕಿದೆ. ರೈಲು ಪ್ರಯಾಣದ ಸೌಲಭ್ಯವಿಲ್ಲ. ಆದರೆ ಬಸ್ಸುಗಳು ಸಾಕಷ್ಟು ಓಡುತ್ತವೆ. ನೀರು ವಸತಿಗೃಹದ ವ್ಯವಸ್ಥೆಯೂ ಈಚೆಗೆ ಸುಧಾರಿಸಿದೆ. (ಎಸ್. ಟಿ.)

**ಎಲ್ಲಿಸ್, ಫ್ರಾನ್ಸಿಸ್ ವೈಟ್ :** 1780–1819. 1796ರಲ್ಲಿ ಕಂದಾಯ ಇಲಾಖೆಯ ಅಧಿಕಾರಿಯಾಗಿ ಭಾರತಕ್ಕೆ ಬಂದು ದಕ್ಷಿಣ ಭಾರತದ ಭಾಷೆ, ಚರಿತ್ರೆ, ಪ್ರಾಚೀನತೆ, ಸಂಸ್ಕೃತಿ ಮುಂತಾದುವನ್ನು ಅರಿಯುವುದರಲ್ಲಿ ಉಳಿದ ಜೀವಮಾನವನ್ನೇ ಕಳೆದ ವ್ಯಕ್ತಿ. 20 ವರ್ಷಗಳ ಈ ಅವಧಿಯಲ್ಲಿ ತನ್ನ ಬಿಡುವಿನ ಸಮಯವನ್ನು ಈತ ಸಂಸ್ಕೃತ ಮತ್ತು ದಕ್ಷಿಣ ಭಾರತದ ವಿವಿಧ ಭಾಷೆಗಳ ವೈಚಿತ್ರ್ಯಗಳನ್ನು ವೈಶಿಷ್ಟ್ಯಗಳನ್ನು ಕಲಿತು ಅರ್ಥಮಾಡಿಕೊಳ್ಳುವುದರಲ್ಲಿಯೇ ಕಳೆದ. ಆ ಬಗ್ಗೆ ದೊರೆಯುವ ಎಲ್ಲ ಸಾಮಗ್ರಿಯನ್ನೂ ಸಂಗ್ರಹಿಸಿದ. ಪರಿಶೋಧನೆ, ಪರಿಶೀಲನೆ ಸಮರ್ಪಕವಾದಾಗ ಹೊರತು ಏನನ್ನೂ ಪ್ರಕಟಿಸಬಾರದೆಂದು ತಡೆಹಿಡಿದನಾದರೂ ಆತ ಸಂಗ್ರಹಿಸಿದ ವಿಷಯ ಅಗಾಧ, ಅಮೂಲ್ಯ. ಸಂಗ್ರಹಿಸಿದ್ದ ಮೂಲ ಸಾಮಗ್ರಿಯನ್ನು ಹಾಗೆಯೇ ಕೋಶರೂಪದಲ್ಲಿ ಪ್ರಕಟಿಸಿದ್ದರೂ ಅದು ಆಧುನಿಕ ಭಾಷಾಶಾಸ್ತ್ರದಲ್ಲಿ ನಿಗೂಢವಾಗುಳಿದಿರುವ ಎಷ್ಟೋ ವಿಷಯಗಳ ಮೇಲೆ ಬೆಳಕು ಚೆಲ್ಲುತ್ತಿತ್ತು. ತನ್ನ ಸಂಶೋಧನಾ ವಿಷಯದ ಬಗ್ಗೆ ಇನ್ನೂ ಹೆಚ್ಚಿನ ವಿವರಗಳನ್ನು ತಿಳಿಯಬೇಕೆಂದು, ದಕ್ಷಿಣ ಭಾರತದ ಅಥೆನ್ಸ್ ಎಂದು ಪ್ರಖ್ಯಾತವಾಗಿರುವ ಮಧುರೆಗೆ ಬಂದು ಆ ಜಿಲ್ಲೆಯಲ್ಲಿ ಆಗ ಕಲೆಕ್ಟರ್ ಆಗಿದ್ದ ರೌಸ್ ಪೀಟರನ ಜೊತೆಯಲ್ಲಿ ತಂಗಿದ್ದವನು ಒಂದು ದಿನ ಅದೇ ಪ್ರಾಂತ್ಯದಲ್ಲಿರುವ ರಾಮನಾಡಿಗೆ ಸಂತೋಷ ಪ್ರವಾಸಕ್ಕೆ ಹೋಗಿದ್ದಾಗ ಆಕಸ್ಮಾತ್ತಾಗಿ ವಿಷವನ್ನು ಸೇವಿಸಿ ಮಾರ್ಚಿ 10ರಂದು ಅಸುನೀಗಿದ. ಹೀಗೆ ಎಲ್ಲಿಸ್ ಅಕಾಲ ಮೃತ್ಯುವಿಗೆ ಈಡಾದದ್ದು ದ್ರಾವಿಡ ಭಾಷೆ ಮತ್ತು ಸಾಹಿತ್ಯಕ್ಕೆ ತುಂಬಲಾಗದ ಹಾನಿ. ಅಡಕ್ಕಿ ಸುಬ್ಬರಾವು ಎಂಬ ವಿದ್ವಾಂಸ ತಾನು ಬರೆದ ಸೆಲೆಕ್ಷನ್ ಆಫ್ ಸ್ಟೋರೀಸ್ ಅಂಡ್ ರೆವಿನ್ಯೂ ಪೇಪರ್ಸ್ ಇನ್ ದಿ ಕರ್ಣಾಟಕ ಲ್ಯಾಂಗ್ವೇಜ್ ಎಂಬ ಪುಸ್ತಕವನ್ನು ಎಲ್ಲಿಸ್‌ನ ಜ್ಞಾಪಕಾರ್ಥಕವಾಗಿ ಅವನಿಗೆ ಅರ್ಪಿಸಿದ್ದಾನೆ. ಆತ ಸತ್ತಾಗ ಆತನಲ್ಲಿದ್ದ ಚರ ಆಸ್ತಿಯನ್ನೆಲ್ಲ ಮಧುರೆ ಮತ್ತು ಮದ್ರಾಸುಗಳಲ್ಲಿ ಹರಾಜಿನ ಮೂಲಕ ಮಾರಲಾಯಿತು. ಹೀಗಾಗುವಾಗ ಆತ ಬರೆದಿಟ್ಟಿದ್ದ ಅನೇಕ ಲೇಖನಗಳು ಕಳೆದುಹೋದುವು, ಇಲ್ಲವೆ ನಾಶವಾದುವು. (ತಿಂಗಳುಗಟ್ಟಲೆ ಪೀಟರನ ಮನೆಯಲ್ಲಿ ಒಲೆ ಹಚ್ಚಲಿಕ್ಕೆ ಅವನ್ನು ಬಳಸಲಾಯಿತೆಂದು ಇತ್ತೀಚೆಗೆ ತಿಳಿದುಬಂದಿದೆ).

ಅತ್ಯಂತ ಸಮರ್ಥ; ದಕ್ಷಿಣ ಭಾರತದ ಅಧ್ಯಯನ, ಅದರ ಚರಿತ್ರೆ ಮತ್ತು ಭಾಷೆಗಳ ವಿಷಯದಲ್ಲಿ ಬಳಲದೆ, ಬೇಸರಪಡದೆ, ಸಂತತವಾಗಿ ಸಂಶೋಧನೆಯನ್ನು ನಡೆಸಿದವ; ಪ್ರಾಚೀನ–ಅರ್ವಾಚೀನ, ದೇಶೀಯ–ಐರೋಪ್ಯ ವಿಷಯಗಳ ಬಗ್ಗೆ ವಿಸ್ತೃತವಾದ ಜ್ಞಾನವನ್ನು ಪಡೆದವ; ನಿಖರವಾದ ನ್ಯಾಯತೀರ್ಮಾನ ಮತ್ತು ಉತ್ತಮ ಅಭಿರುಚಿಯ ಸಂಕೇತದಂತಿದ್ದವ—ಎಂದು ಮದ್ರಾಸ್ ಲಿಟರರಿ ಸೊಸೈಟಿ ಪತ್ರಿಕೆ ಅವನನ್ನು ಕೊಂಡಾಡಿದೆ.

ಬಂಗಾಲದ ಮುಖ್ಯ ನ್ಯಾಯಾಧೀಶನಾಗಿದ್ದ ಸರ್ ಚಾರಲ್ಸ್ ಗ್ರೆ ಹಿಂದೂ ನ್ಯಾಯದ ಬಗ್ಗೆ ಲಿಟರರಿ ಸೊಸೈಟಿ ಸಭೆಯಲ್ಲಿ ಓದಿದ ಲೇಖನವನ್ನು ಎಲ್ಲಿಸ್ ಪರಿಶೀಲಿಸಿದ್ದ. ಇದಕ್ಕಾಗಿ ಎಲ್ಲಿಸ್‌ನಿಂದ ತಯಾರಿಸಲ್ಪಟ್ಟ ಮೂಲಸಾಮಗ್ರಿ 500 ಪುಟಗಳಷ್ಟಾಗುತ್ತವೆ. ಆದರೆ ಅದೆಲ್ಲವೂ ಕೊನೆಯವರೆಗೂ ಕರಡುಪ್ರತಿಯಾಗಿಯೇ ಉಳಿಯಿತು.

ಮಲಬಾರ್ ಮತ್ತು ಕೆನರ ಜಿಲ್ಲೆಗಳಲ್ಲಿ ಮಿರಾಸಿ ಹಕ್ಕಿನ ಬಗ್ಗೆ ತಲೆದೋರಿದ್ದ ವಿವಾದಕ್ಕೆ ಸಂಬಂಧಿಸಿದಂತೆ 1812ರಲ್ಲಿ ಮದ್ರಾಸು ಸರ್ಕಾರ ಆಯಾ ಜಿಲ್ಲೆಗಳಲ್ಲಿದ್ದ ಅಧಿಕಾರಿಗಳಿಗೆ ಅಲ್ಲಿನ ಮಿರಾಸಿ ಪದ್ಧತಿಯ ಬಗ್ಗೆ ವರದಿ ಮಾಡಬೇಕೆಂದು ಪ್ರಶ್ನಮಾಲಿಕೆಯೊಂದನ್ನು ಕಳುಹಿಸಿಕೊಟ್ಟಾಗ ಎಲ್ಲಿಸ್ ಕೇವಲ ಪ್ರೆಸಿಡೆನ್ಸಿಯ ಕಲೆಕ್ಟರಾಗಿದ್ದು ತನಗೆ ನೇರ ಸಂಬಂಧಪಡದಿದ್ದರೂ ಸಿದ್ಧಪಡಿಸಿ ಕೊಟ್ಟಿರುವ ಉತ್ತರಗಳನ್ನು ಕಂಡು ಸರ್ಕಾರ ಕೂಡಲೇ ಆ ಉತ್ತರಗಳನ್ನೆಲ್ಲ ಅಚ್ಚು ಮಾಡುವಂತೆ ಆಜ್ಞೆನೀಡಿತು. ಮಿರಾಸಿ ಹಕ್ಕಿಗೆ ಸಂಬಂಧಿಸಿದಂತೆ ಸುಮಾರು ಹದಿನೇಳು ಪ್ರಶ್ನೆಗಳಿಗೆ ಆತ ಉತ್ತರಕೊಟ್ಟಿದ್ದಾನೆ. ಕೊಟ್ಟ ಉತ್ತರಗಳು ಪೂರ್ಣವಾಗಿವೆ. ನಿರ್ದುಷ್ಟವಾಗಿವೆ. ದೃಷ್ಟಾಂತಗಳು ನಾಡಿನ ಸಾಹಿತ್ಯ ಮತ್ತು ಇತಿಹಾಸಗಳಿಂದ ಆಯ್ಕೆಯಾಗಿವೆ. ಈ ಪುಸ್ತಕ ಇಂದಿಗೂ ಪ್ರಮಾಣಗ್ರಂಥವೆಂದು ಪರಿಗಣಿಸಲ್ಪಟ್ಟಿದೆ.

ತಮಿಳಿನಲ್ಲಿ ನೈತಿಕಗ್ರಂಥವೆಂದು ಪ್ರಸಿದ್ಧವಾಗಿರುವ ಕುಱಳ್ ಗ್ರಂಥದ ಅರ್ಥ ವಿವರಣೆ ಎಲ್ಲಿಸ್‌ನ ಇನ್ನೊಂದು ಶ್ರೇಷ್ಠವಾದ ಕೆಲಸ. ಅವನು ಕುಱಳ್ ಗ್ರಂಥದ ಮೊದಲ ಭಾಗದ ದ್ವಿಪದಿಗಳನ್ನು ಸರಳರಗಳೆಯ ಛಂದಸ್ಸಿನಲ್ಲಿ ಅನುವಾದ ಮಾಡಿರುವುದಲ್ಲದೆ, ವಿಮರ್ಶಾತ್ಮಕವಾದ ವಿವರಣೆಯನ್ನೂ ನೀಡಿದ್ದಾನೆ. ಹೀಗೆ ಮಾಡುವಾಗ ತನ್ನ ವಿವರಣೆಗಾಗಿ ಶ್ರೇಷ್ಠರೆನಿಸಿದ ದೇಶೀಯ ವಿದ್ವಾಂಸರ ಪುಸ್ತಕಗಳಿಂದ ಅನೇಕ ದೃಷ್ಟಾಂತಗಳನ್ನು ಕೊಟ್ಟಿದ್ದಾನೆ. ಇದರಿಂದಾಗಿ ಅದರಲ್ಲಿ ಅಮೂಲ್ಯವಾದ ವಿವರಣೆಗಳು, ದಂತಕಥೆಗಳು, ಆಗಿನ ತಾತ್ತ್ವಿಕ ಪದ್ಧತಿಗಳು, ಜನತೆಯ ವಿವಿಧ ರೀತಿ–ನೀತಿಗಳು ವೇದ್ಯವಾಗುತ್ತವೆ. ಆತ ಮದ್ರಾಸನ್ನು ಬಿಡುವ ವೇಳೆಗೆ ಕುಱಳ್ ಗ್ರಂಥದ ಮೊದಲ ಭಾಗದ ಹದಿನೆಂಟು ಅಧ್ಯಾಯಗಳಿಗೆ ಸರಳಾನುವಾದ, ಟೀಕೆ–ಟಿಪ್ಪಣಿಗಳನ್ನು ಬರೆದಿದ್ದ. ಅದರಲ್ಲಿ ಸುಮಾರು 304 ಪುಟಗಳನ್ನೊಳಗೊಂಡ ಹದಿಮೂರು ಅಧ್ಯಾಯಗಳು ಮಾತ್ರ ಯಾವ ತಾರೀಖು ಅಥವಾ ಶಿರೋನಾಮೆಯೂ ಇಲ್ಲದೆ ಅಚ್ಚಾಗಿವೆ.

ಫ್ರಾನ್ಸಿಸ್ ವೈಟ್ ಎಲ್ಲಿಸ್ ಇನ್ನೂ ಕೆಲವು ಸಣ್ಣಪುಟ್ಟ ಲೇಖನಗಳನ್ನು ಬಿಟ್ಟು ಹೋಗಿದ್ದಾನೆ. ಫೋರ್ಟ್ ಸೇಂಟ್ ಜಾರ್ಜ್ ಕಾಲೇಜಿನ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ತಮಿಳು, ತೆಲುಗು, ಮಲೆಯಾಳಂ ಮತ್ತು ಪ್ರಾಯಶಃ ಕನ್ನಡ ಭಾಷೆಗಳ ಮೇಲೆ ಲೇಖನಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಮಲೆಯಾಳಂ ಭಾಷೆಯ ಬಗ್ಗೆ ಬರೆದ ಲೇಖನದ ಕೆಲವು ಪ್ರತಿಗಳು ಸಿಕ್ಕುತ್ತವೆ. ಡಿಸರ್ಟೇಷನ್ ಆನ್ ಮಲಯಾಳಂ ಲ್ಯಾಂಗ್ವೇಜ್ ಎಂಬುದು ಇಂಡಿಯನ್ ಆಂಟಿಕ್ವೆರಿಯಲ್ಲಿ

ಅಚ್ಚಾಗಿದೆ. ತೆಲುಗಿನ ಬಗ್ಗೆ ಈತ ಬರೆದ ಒಂದು ಲೇಖನವನ್ನು ಎ. ಡಿ. ಕ್ಯಾಂಪ್‌ಬೆಲ್ ತನ್ನ ತೆಲುಗು ವ್ಯಾಕರಣದ (1816) ಮುನ್ನುಡಿಯಾಗಿ ಸೇರಿಸಿಕೊಂಡು ಅಚ್ಚುಹಾಕಿಸಿದ್ದಾನೆ. ಆ ಕಾಲೇಜಿನ ಅನುಪಯುಕ್ತ ಕಾಗದಗಳ ರಾಶಿಯ ಮಧ್ಯೆ ದೊರೆತ ಕೊಚ್ಚಿನ್ನಿನ ಜ್ಯೂಯಿಷ್ ಕಾಪರ್ ಪ್ಲೇಟಿನ ಅನುವಾದ ಮದ್ರಾಸ್ ಲಿಟರರಿ ಜರ್ನಲ್ಲಿನಲ್ಲಿ ಅಚ್ಚಾಗಿದೆ.

ಅದೇ ಕಾಗದದ ರಾಶಿಯ ಮಧ್ಯದಲ್ಲಿ ದಕ್ಷಿಣಭಾರತದ ಕವಿಗಳ ಗ್ರಂಥಗಳಿಂದ ಆಯ್ದ ಲಕ್ಷ್ಯಪದ್ಯಗಳನ್ನು ಒಳಗೊಂಡಿದ್ದು ತಮಿಳು ಛಂದಸ್ಸಿಗೆ ಸಂಬಂಧಪಟ್ಟ ಎರಡು ಗ್ರಂಥಗಳ ಕರಡು ಪ್ರತಿಗಳು ವಾಲ್ಟರ್ ಎಲಿಯಟ್ಟನಿಗೆ ದೊರೆತಿವೆ. ರೆವರೆಂಡ್ ಟಿ. ಬ್ರದರ್‌ಟನ್‌ನಂಥ ವಿದ್ವಾಂಸರು ಈ ಗ್ರಂಥಪ್ರತಿಗಳನ್ನು ನೋಡಿ ಶ್ಲಾಘಿಸಿದ್ದಾರೆ. ಸುಮಾರು ನೂರು ಪುಟಗಳನ್ನೊಳಗೊಂಡ ಈ ಕರಡು ಪ್ರತಿಗಳು ಸಹಜವಾಗಿಯೇ ಅಪೂರ್ಣವಾಗಿವೆ. ಮಾಡರ್ನ್ ಇಮಿಟೇಷನ್ ಆಫ್ ವೇದಾಸ್– ಎಂಬ ಎಲ್ಲಿಸನ ಇನ್ನೊಂದು ಲೇಖನ ಏಷ್ಯಾಟಿಕ್ ರಿಸರ್ಚಸ್‌ನಲ್ಲಿ ಪ್ರಕಟವಾಗಿದೆ.

ಒಟ್ಟಿನಲ್ಲಿ ತಾನು ಕೈಕೊಂಡ ಕಾರ್ಯಕ್ಷೇತ್ರದಲ್ಲಿ, ಸರ್ಕಾರಿ ಕೆಲಸದ ಜೊತೆಗೆ, ಇಷ್ಟು ನಿಷ್ಠೆ, ಶ್ರದ್ಧೆ, ತಲ್ಲೀನತೆಯಿಂದ ದುಡಿದು ತನ್ನ ಬಹುಮುಖ ಪ್ರತಿಭೆಯನ್ನು ಮೆರೆದ ಎಲ್ಲಿಸ್ ಪ್ರಪ್ರಥಮವಾಗಿ ದ್ರಾವಿಡಭಾಷೆಗಳು ಸಂಸ್ಕೃತಜನ್ಯವಲ್ಲವೆಂದೂ ಸ್ವತಂತ್ರವರ್ಗಕ್ಕೆ ಸೇರಿದ ಭಾಷೆಗಳೆಂದೂ ಸಾರಿ ಅವುಗಳ ಸ್ವತಂತ್ರ ಅಸ್ತಿತ್ವವನ್ನು ರೂಪಿಸಿ ದ್ರಾವಿಡ ಭಾಷಾವಿಜ್ಞಾನದ ಆದ್ಯಪ್ರವರ್ತಕನೆನಿಸಿದ್ದಾನೆ. (ಬಿ.ಎಸ್.ಸಿ.)

**ಎಲ್ಲಿಸ್, ಹೆನ್ರಿ ಹ್ಯಾವಲಾಕ್ :** 1859–1939. ಇಂಗ್ಲೆಂಡಿನ ವೈದ್ಯ. ಮಾನವನ ಲೈಂಗಿಕ ವರ್ತನೆಯ ಆಳವಾದ ಅಧ್ಯಯನಮಾಡಿ ಪ್ರಸಿದ್ಧನಾದವ. 1859ರ ಫೆಬ್ರವರಿ ತಿಂಗಳ ಎರಡನೆಯ ತಾರೀಖು ಕ್ರಾಯ್‌ಡನ್‌ನಲ್ಲಿ ಜನ್ಮತಳೆದ. ತಂದೆ ಕಡಲನಾವಿಕ. ಹಾಗಾಗಿ ತುಂಬ ಚಿಕ್ಕವಯಸ್ಸಿನಿಂದಲೇ ಸಮುದ್ರಯಾನ ಮಾಡ ತೊಡಗಿದ. ಏಳು ವರ್ಷದವನಿದ್ದಾಗ ತಂದೆ ಇವನನ್ನು ತನ್ನ ಹಡಗಿನಲ್ಲಿ ಪ್ರಪಂಚ ಪರ್ಯಟನೆಗೆ ಕರೆದೊಯ್ದ. ಆದರೆ ಎಲ್ಲಿಸ್‌ಗೆ ನಾವಿಕನಾಗುವ ಇಷ್ಟ ಇರಲಿಲ್ಲ.

ತುಂಬ ಚಿಕ್ಕವಯಸ್ಸಿನಲ್ಲೇ ಪುಸ್ತಕಗಳನ್ನು ಓದುವ ಚಟ ಅಂಟಿಕೊಂಡಿತು. ಹನ್ನೆರಡನೆಯ ವಯಸ್ಸಿನಲ್ಲಿ ಅನೇಕ ಇಂಗ್ಲಿಷ್ ಕವಿಗಳ ಕೃತಿಗಳನ್ನು ಓದ ತೊಡಗಿದ. ಸ್ವತಃ ಬರವಣಿಗೆಯನ್ನೂ ಪ್ರಾರಂಭಿಸಿದ. ಹೂವಿನ ಮೇಲೊಂದು ಪುಸ್ತಕವನ್ನೂ ಅನೇಕ ಪ್ರಬಂಧಗಳನ್ನೂ ಬರೆದ. ಹದಿನಾರನೆಯ ವಯಸ್ಸಿಗೆ ಶಾಲೆಯ ಶಿಕ್ಷಣವನ್ನು ಮುಗಿಸಿಕೊಂಡ ಮೇಲೆ ಕೆಲವು ಕಾಲ ಸಿಡ್ನಿಯ ಶಾಲೆಯೊಂದ ರಲ್ಲಿ ಅಧ್ಯಾಪಕನಾಗಿ ಕೆಲಸಮಾಡಿದ. ಆಮೇಲೆ ಸ್ವಲ್ಪ ಸಮಯ ಖಾಸಗಿ ಅಧ್ಯಾಪಕ ನಾಗಿ ಪಾಠ ಹೇಳಿದ. ಹೀಗೆ ನಾಲ್ಕು ವರ್ಷ ನ್ಯೂಸೌತ್‌ವೇಲ್ಸ್‌ನಲ್ಲಿ ಅಧ್ಯಾಪಕ ನಾಗಿ ಕೆಲಸಮಾಡಿದ ಮೇಲೆ ವೈದ್ಯಶಾಸ್ತ್ರವನ್ನು ಓದಲು ನಿರ್ಧರಿಸಿ, ಇಂಗ್ಲೆಂಡಿಗೆ ಹಿಂತಿರುಗಿ ಲಂಡನ್ನಿನ ಸೇಂಟ್ ಥಾಮಸ್ ಆಸ್ಪತ್ರೆಗೆ ಸೇರಿದ. ಏಳು ವರ್ಷಗಳ ಅಧ್ಯಯನ ಆದ ಅನಂತರ ವೈದ್ಯನಾದ. ಇದೇ ಅವಧಿಯಲ್ಲಿ ಸಾಹಿತ್ಯ, ಸಂಗೀತ, ಸಮಾಜವಿಜ್ಞಾನ, ಪುರಾಣಗಳು, ತತ್ತ್ವಶಾಸ್ತ್ರ, ಇತಿಹಾಸ ಮೊದಲಾದ ಅನೇಕ ಕ್ಷೇತ್ರ ಗಳಲ್ಲಿ ಪಾಂಡಿತ್ಯವನ್ನು ಗಳಿಸಿಕೊಂಡ. 1889ರಲ್ಲಿ ಎಂ.ಡಿ. ಪದವಿಯನ್ನು ಪಡೆದ. 1891ರಲ್ಲಿ ಎಡಿತ್ ಲೀಸ್ ಎಂಬವಳನ್ನು ಮದುವೆಯಾದ.

ಖಾಸಗಿ ವೈದ್ಯನಾಗಿ ಕೆಲಸ ಪ್ರಾರಂಭಮಾಡಿದ ಕೆಲವು ದಿವಸಗಳಲ್ಲೇ ಅದನ್ನು ಬಿಟ್ಟುಕೊಟ್ಟು ಬರವಣಿಗೆಗೆ ತನ್ನ ಸಮಯವನ್ನು ಮೀಸಲಿಟ್ಟ. ಮನುಷ್ಯನ ಕಾಮವರ್ತನೆಯಲ್ಲಿ ವೈಜ್ಞಾನಿಕ ಆಸಕ್ತಿ ತಳೆದದ್ದು ತುಂಬಾ ಚಿಕ್ಕವಯಸ್ಸಿ ನಲ್ಲೇ. ಹದಿನಾರು ವರ್ಷದ ಹುಡುಗನಾಗಿದ್ದಾಗಲೇ ಮನುಷ್ಯನ ಕಾಮಜೀವನ ವನ್ನು ವಸ್ತುನಿಷ್ಠವಾಗಿ, ವೈಜ್ಞಾನಿಕವಾಗಿ ಅಧ್ಯಯನ ಮಾಡಬೇಕೆಂದು ನಿರ್ಧರಿ ಸಿದ್ದ. ಈ ನಿರ್ಧಾರದ ಮೂಲಕಾರಣ ಕಾಮಪ್ರವೃತ್ತಿಯ ಬಗೆಗೆ ಅವನ ಮತ್ತು ಅವನ ಶತಮಾನದ ಅಜ್ಞಾನವೇ. ಆ ಕಾಲದ ಇತರ ಹುಡುಗರಂತೆಯೇ ಎಲ್ಲಿಸ್‌ಗೆ ಹದಿನಾರನೆಯ ವಯಸ್ಸಿನಲ್ಲಿ ಲೈಂಗಿಕತೆಯ ಬಗೆಗೆ ಹೆಚ್ಚೇನೂ ಗೊತ್ತಿರದೆ ಮನುಷ್ಯನ ಈ ಹುಟ್ಟುಗುಣ, ಈ ಸಹಜವರ್ತನೆ, ಈ ಅನಿವಾರ್ಯ ಪ್ರವರ್ತನೆ ಅವನಿಗೆ ಒಂದು ನಿಗೂಢವಾದ ಸಮಸ್ಯೆಯಾಗಿತ್ತು. ಬಹುಶಃ ಮಡಿವಂತಿಕೆಯ ಸಂಪ್ರ ದಾಯ ಅತ್ಯಂತ ಪ್ರಬಲವಾಗಿದ್ದ ಹತ್ತೊಂಬತ್ತನೆಯ ಶತಮಾನದ ಇಂಗ್ಲೆಂಡಿನಲ್ಲಿ ಇದೇನೂ ವಿಶೇಷವಾಗಿರಲಿಲ್ಲ. ಆದರೆ ವೈಜ್ಞಾನಿಕ ಕುತೂಹಲ ಮತ್ತು ನಡೆವಳಿಕೆ ಯಲ್ಲಿ ತನ್ನ ಕಾಲದವರಿಗಿಂತ ಬಹಳಷ್ಟು ಮುಂದಿದ್ದ ಎಲ್ಲಿಸ್‌ಗೆ ಮಾತ್ರ ಇದು ಸಹ್ಯ ವಾಗಲಿಲ್ಲ. ಲೈಂಗಿಕತೆಯ ಮೇಲೆ ಏನಾದರೂ ವೈಜ್ಞಾನಿಕವಾದ ತಿಳಿವಳಿಕೆ ದೊರೆ ಯುತ್ತದೆಯೋ ಎಂದು ಹಾತೊರೆದ. ಆತನಿಗೆ ಅದು ಎಲ್ಲೂ ಸಿಗಲಿಲ್ಲ. ಅದರ ಬದಲು ಕಾಮಜೀವನದ ಬಗೆಗೆ ಕೆಟ್ಟ ಸಂಕೋಚ, ನಾಚಿಕೆಗೇಡಿನ ಮುಚ್ಚುಮರೆ, ಭಯಂಕರ ಮಡಿವಂತಿಕೆ, ಅಗಾಧವಾದ ಅಜ್ಞಾನ, ದಂಗುಬಡಿಸುವ ಮೂಢನಂಬಿಕೆ ಗಳು, ಆಧಾರವಿಲ್ಲದ ಸುಳ್ಳು ಸಿದ್ಧಾಂತಗಳು, ಅರ್ಥಹೀನವಾದ ಉಪದೇಶಾಮೃತ ಗಳೇ ಕಂಡುವು. ಇದನ್ನು ನೋಡಿ, ಅನುಭವಿಸಿದ ಎಲ್ಲಿಸ್ ಮಾನವನ ಕಾಮಜೀವ ನದ ವಾಸ್ತವಿಕ ಅಂಶಗಳನ್ನು ಕಂಡುಹಿಡಿಯುವುದೇ ತನ್ನ ಜೀವನದ ಉದ್ದೇಶ ವಾಗಬೇಕೆಂದು ನಿರ್ಧರಿಸಿಕೊಂಡ. ಎಲ್ಲಿಸನ ಜೀವನ ಮತ್ತು ಕೃತಿಗಳನ್ನು ಪರಿ ಶೀಲಿಸಿದರೆ, ಬಹುಶಃ ಆತ ತನ್ನ ಉದ್ದೇಶವನ್ನು ಬಲು ಸಮರ್ಥವಾಗಿ ನೆರವೇರಿಸಿ ಕೊಂಡು ಸಾರ್ಥಕವಾದ ಬದುಕನ್ನು ನಡೆಸಿದನೆಂದೇ ಹೇಳಬೇಕು.

ಹ್ಯಾವಲಾಕ್ ಎಲ್ಲಿಸ್ 1894ರಲ್ಲಿ ಮ್ಯಾನ್ ಅಂಡ್ ವುಮನ್ ಎಂಬ ಪುಸ್ತಕ ವನ್ನು ಪ್ರಕಟಿಸಿದ. ಇದರಲ್ಲಿ ಆತ ಹೆಣ್ಣು ಮತ್ತು ಗಂಡಿನ ಶರೀರ ರಚನೆ, ಮತ್ತು ಅವುಗಳ ಮುಖ್ಯ ವ್ಯತ್ಯಾಸಗಳನ್ನು ದೀರ್ಘವಾಗಿ ವಿಶ್ಲೇಷಿಸಿದ್ದಾನೆ. ಅಲ್ಲದೆ ಹೆಣ್ಣು ಗಂಡಿನ ಬೆಳವಣಿಗೆಯ ವಿಶಿಷ್ಟ ಕ್ರಮಗಳು, ಜ್ಞಾನೇಂದ್ರಿಯಗಳ, ಭಾವಪ್ರತಿಕ್ರಿಯೆ ಗಳ ಬೆಳವಣಿಗೆ, ಜೀರ್ಣಾಂಗಗಳು ಮತ್ತು ಒಳಸುರಿತಗಳು, ಹೆಣ್ಣಿನ ವಿಶಿಷ್ಟ ಜೈವಿಕ ಕ್ರಿಯೆಯಾದ ಮುಟ್ಟು—ಇವೆಲ್ಲದರ ಬಗ್ಗೆ ಬರೆದ. ಹೆಣ್ಣು ಗಂಡುಗಳು ಬೇರೆ ಬೇರೆ, ಆದರೆ ಸರಿಸಮ. ಇಬ್ಬರೂ ಭಿನ್ನ ಪ್ರಕೃತಿಯವರೇ ಹೊರತು ಇವರಲ್ಲಿ ಮೇಲುಕೀಳುಗಳಿಲ್ಲ—ಎಂಬ ಧೋರಣೆಯನ್ನು ಎಲ್ಲಿಸ್ ತನ್ನ ಈ ಕೃತಿಯಲ್ಲಿ ವ್ಯಕ್ತ ಪಡಿಸಿದ.

ಇದಾದ ಮೇಲೆ ಎಲ್ಲಿಸ್ ಕಾಮವಿಕಾರಗಳ ಮೇಲೆ ಅನೇಕ ಅಧ್ಯಯನಗಳನ್ನು ನಡೆಸಿದ. ಅವನ ಬರೆಹಗಳಲ್ಲೆಲ್ಲ ಪ್ರಸಿದ್ಧವಾದವು ಇವೇ. ಕಾಮವಿಕಾರಗಳ ಮೇಲಿನ ಅವನ ಅಧ್ಯಯನಗಳೆಲ್ಲ ಈಗ ಸ್ಟಡೀಸ್ ಇನ್ ದಿ ಸೈಕಾಲಜಿ ಆಫ್ ಸೆಕ್ಸ್ ಎಂಬ ಹೆಸರಿನಲ್ಲಿ ಪ್ರಕಟವಾಗಿವೆ. ಇವು ಏಳು ಬೃಹತ್ ಸಂಪುಟಗಳಲ್ಲಿದ್ದು ಲೇಖಕನ ಮೂವತ್ತು ವರ್ಷಗಳ ಜೀವನಾನುಭವಗಳನ್ನೂ ವ್ಯಾಸಂಗದ ಸಾರವನ್ನೂ ಒಳಗೊಂಡಿವೆ. ಇದು ಮತ್ತು ಈತನ ವರ್ಲ್ಡ್ ಆಫ್ ಡ್ರೀಮ್ಸ್ (1911) ಎಂಬ ಗ್ರಂಥಗಳನ್ನು ಫ್ರಾಯ್ಡ್ ಬಹಳ ಮೆಚ್ಚಿದ್ದಾನೆ. ಎಲ್ಲಿಸ್ ಮಾಡಿದ ಮೊದಲ ಅಧ್ಯ ಯನವೆಂದರೆ ಸಲಿಂಗರತಿಯ (ಹೋಮೊ ಸೆಕ್ಷುಯಾಲಿಟಿ) ಮೇಲೆ ; ಆದರೆ ಆ ಕಾಲ ದಲ್ಲಿ ಇಂಗ್ಲೆಂಡಿನಲ್ಲಿ ಇದನ್ನು ಪ್ರಕಟಿಸುವುದು ಸುಲಭವಾಗಲಿಲ್ಲ. ವೈದ್ಯಕೀಯ ಪುಸ್ತಕಗಳನ್ನು ಪ್ರಕಟಿಸಿದ ಸಂಸ್ಥೆಗಳು ಈ ಪುಸ್ತಕವನ್ನು ತೆಗೆದುಕೊಳ್ಳಲಿಲ್ಲ. ಕೊನೆಗೆ ಲಂಡನ್ನಿನಲ್ಲಿ ವಾಸವಾಗಿದ್ದ ಜರ್ಮನನೊಬ್ಬ ಇದನ್ನು ಪ್ರಕಟಿಸಿದ. ಆದರೆ ಸ್ವಲ್ಪ ದಿನಗಳಲ್ಲೇ ಈ ವ್ಯಕ್ತಿ ಭಾರಿ ಕೇಡಿಗನೆಂದೂ ಸಂಭಾವಿತನ ಸೋಗು ಹಾಕಿ ಬದುಕುತ್ತಿದ್ದ ವಂಚಕನೆಂದೂ ಗೊತ್ತಾಯಿತು. ಸಲಿಂಗರತಿಯ ಮೇಲಿನ ಈ ಪುಸ್ತಕ ಪ್ರಕಟವಾದ ಸ್ವಲ್ಪ ದಿನಗಳಲ್ಲೇ ಒಂದು ಸಾರ್ವಜನಿಕ ಸಂಸ್ಥೆಯಲ್ಲಿ ಪೋಲೀಸರ ಕೈಗೆ ಸಿಕ್ಕು ಅಶ್ಲೀಲವೆಂಬ ಕಾರಣಕ್ಕಾಗಿ ನ್ಯಾಯಸ್ಥಾನದ ವಿಚಾರಣೆಗೆ ಗುರಿಯಾಯಿತು. ಆದರೆ ಹೇಗೋ ಎಲ್ಲಿಸ್‌ನನ್ನು ಮಾತ್ರ ಪೋಲೀಸರು ಪೀಡಿಸಲಿಲ್ಲ. ಈ ಪುಸ್ತಕ ಅಶ್ಲೀಲ, ವಿಕೃತ, ಅವೈಜ್ಞಾನಿಕವೆಂದು ನ್ಯಾಯಸ್ಥಾನ ಘೋಷಿಸಿತು. ಪೋಲೀಸರು ಪುಸ್ತಕವನ್ನು ಪ್ರಕಟಿಸಿದ ಜರ್ಮನ್ ಕೇಡಿಗನನ್ನು ಬಹಳ ಕಷ್ಟಪಟ್ಟು ಹಿಡಿದರು. ಆದರೆ ಆತ ನ್ಯಾಯಸ್ಥಾನಕ್ಕೆ ಹೋಗುವ ಮೊದಲೇ ಆತ್ಮಹತ್ಯೆ ಮಾಡಿಕೊಂಡ.

ತನ್ನ ವೈಜ್ಞಾನಿಕ ಬರೆಹಕ್ಕೆ ಸಿಕ್ಕಿದ ಇಂಥ ಸ್ವಾಗತದಿಂದ ಮನನೊಂದ ಎಲ್ಲಿಸ್ ಮುಂದೆ ತನ್ನ ಯಾವ ಪುಸ್ತಕವನ್ನೂ ಇಂಗ್ಲೆಂಡಿನಲ್ಲಿ ಪ್ರಕಟಿಸಲಿಲ್ಲ. ಆದರೆ ಅಮೆ ರಿಕದ ಕಂಪನಿಯೊಂದು ಕೂಡಲೇ ಅವನ ಪುಸ್ತಕಗಳನ್ನು ಪ್ರಕಟಿಸಲು ಮುಂದಾ ಯಿತು. ಅನಂತರ ಅವನ ಎಲ್ಲ ಪುಸ್ತಕಗಳನ್ನೂ ಈ ಕಂಪನಿ ಪ್ರಕಟಿಸಿತು. 1939ರಲ್ಲಿ ಎಲ್ಲಿಸ್ ತೀರಿಕೊಳ್ಳುವ ಹೊತ್ತಿಗೆ ಅವನ ಕೃತಿ ಪ್ರಪಂಚದಾದ್ಯಂತ ಪ್ರಸಿದ್ಧ ವಾಗಿತ್ತು. ಆದರೆ ಎಲ್ಲಿಸ್ ಮಾತ್ರ ಪ್ರಾರಂಭದಲ್ಲಿ ತನ್ನ ಈ ವೈಜ್ಞಾನಿಕ ಆಸಕ್ತಿ ಯಿಂದಾಗಿ ಸಾಕಷ್ಟು ಕಷ್ಟವನ್ನೇ ಅನುಭವಿಸಬೇಕಾಯಿತು.

ಅನೇಕ ಬಗೆಯ ಕಾಮವಿಕಾರಗಳ ಬಗ್ಗೆ ಎಲ್ಲಿಸ್ ಬರೆದಿದ್ದಾನೆ. ಇವನ ಬರೆಹದ ಒಂದು ಒಳ್ಳೆಯ ಅಂಶವೆಂದರೆ, ಆವರೆಗೆ ದೊರೆಯದಿದ್ದ ದೀರ್ಘವಾದ ರೋಗ ಸಂಗತಿಗಳನ್ನು ಕೊಟ್ಟಿರುವುದೇ ಆಗಿದೆ. ಈತ ಮುಖ್ಯವಾಗಿ ಸಲಿಂಗರತಿ, ಬದಲು ಡಿಗೆ (ಟ್ರಾನ್ಸ್‌ವೆಸ್ಟಿಸಮ್), ಸೇಡುಗಾಮ (ಸ್ಯಾಡಿಸಮ್), ಸಂಕಟಕಾಮ (ಮ್ಯಾಸೊ ಫಿಸಮ್) ಇತ್ಯಾದಿಗಳ ಬಗ್ಗೆ ಬರೆದಿದ್ದಾನೆ. ಎಲ್ಲಿಸ್‌ನ ಪ್ರಕಾರ ಮನುಷ್ಯನ ಕಾಮಪ್ರವೃತ್ತಿ ಅವನ ಸಹಜ ಪ್ರವೃತ್ತಿಗಳಲ್ಲೆಲ್ಲ ಮುಖ್ಯವಾದದ್ದು. ಆದರೆ ಮನುಷ್ಯನ ಎಲ್ಲ ಚಟುವಟಿಕೆಯ ಮೂಲ ಕಾಮವೆಂಬ ಫ್ರಾಯ್ಡನ ಅಭಿಪ್ರಾಯ ವನ್ನು ಎಲ್ಲಿಸ್ ಅನುಮೋದಿಸಲಿಲ್ಲ. ಜೀವನದ ಸಂಕೀರ್ಣವಾದ, ವೈವಿಧ್ಯಮಯ ವಾದ ವ್ಯಾಪಾರವನ್ನು ಯಾವುದಾದರೊಂದು ಅಂಶಕ್ಕೆ ಭಟ್ಟಿ ಇಳಿಸಬಹುದೆಂದು ಎಲ್ಲಿಸ್ ನಂಬಿರಲಿಲ್ಲ. ಹಾಗಿದ್ದರೂ ಮನುಷ್ಯನ ಎಲ್ಲ ಸಹಜ ಪ್ರವೃತ್ತಿಗಳಲ್ಲಿ ಕಾಮ ಬಲು ಅರ್ಥಪೂರ್ಣವಾದ, ಆಳವಾದ, ಬದುಕಿನ ಬಹಳಷ್ಟು ಚಟುವಟಿಕೆಗಳಿಗೆ ವಿಶೇಷ ಮಹತ್ತ್ವವನ್ನು ಕೊಡುವ ಶಕ್ತಿಯೆಂಬುದು ಎಲ್ಲಿಸ್‌ನ ಕಲ್ಪನೆ.

ಕಾಮವಿಕಾರಗಳ ಬಗ್ಗೆ ಎಲ್ಲಿಸ್‌ನ ಒಟ್ಟು ದೃಷ್ಟಿಕೋನ ಜೀವವಿಜ್ಞಾನದಿಂದ ಪ್ರಭಾವಿತವಾದದ್ದು. ಆತ ಫ್ರಾಯ್ಡನಂತೆ ಮಾನಸಿಕ ಅಂಶಗಳಿಗೆ ಹೇಳಿಕೊಳ್ಳ ಬಹುದಾದಂಥ ಪ್ರಾಮುಖ್ಯ ಕೊಡಲಿಲ್ಲ. ಎಲ್ಲ ಬಗೆಯ ಕಾಮವಿಕಾರಗಳಿಗೂ

ಮೂಲವಾಗಿ ಶರೀರ ಪ್ರಕೃತಿಯ ದೋಷಗಳಿರುತ್ತವೆ. ಈ ದೋಷ ಬಹು ಮಟ್ಟಿಗೆ ಅನುವಂಶಿಕವಾಗಿ ಬಂದದ್ದು ಎಂಬುದು ಅವನ ಅಭಿಪ್ರಾಯ. ಆದ್ದರಿಂದ ಕಾಮವಿಕಾರಗಳು ವಿಕೃತ ಪ್ರತಿಕ್ರಿಯೆಗಳಾದರೂ ಇವು ಹುಟ್ಟಿನಿಂದಲೇ ಪಡೆದು ಬಂದವು ; ಅಥವಾ ಹುಟ್ಟಿದಮೇಲೆ ಶಾರೀರಿಕ ಕ್ರಿಯೆಯಲ್ಲಾಗುವ ತಾರುಮಾರುಗಳ ಪ್ರತಿಫಲವಾಗಿ ಕಾಣಿಸಿಕೊಳ್ಳುವಂಥವು. ಪರಿಣಾಮವಾಗಿ ಈ ಬಗೆಯ ವಿಕಾರಗಳನ್ನು ಉಂಟು ಮಾಡುವುದರಲ್ಲಿ ಪರಿಸರದ ಅನುಭವಗಳು ಅಷ್ಟು ಪ್ರಮುಖವಲ್ಲ ಎಂಬುದು ಎಲ್ಲಿಸ್‌ನ ನಂಬಿಕೆಯಾಗಿತ್ತು. ಇದಲ್ಲದೆ, ಸಹಜವಾಗಿಯೇ ನೋವು ಮತ್ತು ಹಿಂಸೆಯ ಅಂಶಗಳು ಕಾಮ ಒತ್ತರದೊಡನೆ ಬೆರೆತಿರುವುದರಿಂದ ಸೇಡುಗಾಮ ಮತ್ತು ಸಂಕಟಕಾಮದ ಹುಟ್ಟನ್ನು ಕೂಡ ಎಲ್ಲಿಸ್ ಜೀವದಂಶಗಳಲ್ಲೇ ಕಾಣಲು ಪ್ರಯತ್ನಿಸಿದ.

ಎಲ್ಲಿಸ್‌ನ ಅಧ್ಯಯನ ಬಹುಮುಖ್ಯವಾದುದು. ದಿ ಕ್ರಿಮಿನಲ್ (1899) ಎಂಬ ಈತನ ಗ್ರಂಥ ಕೊಲೆ ದರೋಡೆಗಳ ಬಗ್ಗೆ ಬ್ರಿಟನ್ನಿನಲ್ಲಿ ಮೊದಲ ಬಾರಿ ಮಾಡಿದ ಮಾನಸಿಕ ವಿಶ್ಲೇಷಣೆಯಾಗಿದೆ. ಎ ಸ್ಟಡಿ ಆಫ್ ದಿ ಬ್ರಿಟಿಷ್ ಜೀನಿಯಸ್ (1904) ಎಂಬುದು ಮೇಧಾಶಕ್ತಿಗೂ ಆನುವಂಶೀಯತೆಗೂ ಇರುವ ಸಂಬಂಧದ ವಿಶ್ಲೇಷಣೆಗೆ ಮೀಸಲಾಗಿರುವ ಪುಸ್ತಕ. ಅಫರ್‌ಮೇಷನ್ಸ್ (1898), ದಿ ಸೋಲ್ ಆಫ್ ಸ್ಪೇನ್ (1908), ಸೆಕ್ಸ್ ಇನ್ ರಿಲೇಷನ್ ಟು ಸೊಸೈಟಿ (1910), ಇಂಪ್ರೆಷನ್ಸ್ ಅಂಡ್ ಕಾಮೆಂಟ್ಸ್ (1914–24), ದಿ ಡಾನ್ಸ್ ಆಫ್ ಲೈಫ್ (1923), ದಿ ನ್ಯೂ ಸ್ಪಿರಿಟ್ (1926), ಮ್ಯಾರಿಯೇಜ್ ಟುಡೆ ಅಂಡ್ ಟುಮಾರೊ (1929)—ಇವು ಈತನ ಇತರ ಪುಸ್ತಕಗಳು. ಈತನ ಶೈಲಿ ಸರಳ, ಸುಂದರವಾದುದು. ಬುದ್ಧಿ ತೀಕ್ಷ್ಣವಾದುದು. ಎಲ್ಲ ಕೃತಿಗಳಲ್ಲೂ ಮಾನವನ ಲೋಪದೋಷಗಳ ಬಗ್ಗೆ ಈತನಿಗಿದ್ದ ಸಹಾನುಭೂತಿ ಎದ್ದು ತೋರುತ್ತದೆ.

ಎಲ್ಲಿಸ್‌ನ ಬರೆಹದ ಪ್ರಾಮುಖ್ಯ ಈಗ ಮುಖ್ಯವಾಗಿ ಐತಿಹಾಸಿಕ ಮಹತ್ತ್ವದ್ದಾಗಿದೆ. ಅವನ ಸಿದ್ಧಾಂತಗಳು ಅನೇಕ ಬಗೆಯ ಆಕ್ಷೇಪಣೆಗಳಿಗೆ ಗುರಿಯಾಗಿವೆ. ಕಾಮವಿಕಾರಗಳು ಮುಖ್ಯವಾಗಿ ವ್ಯಕ್ತಿಯ ಶರೀರ ಪ್ರಕೃತಿಯನ್ನವಲಂಬಿಸಿದ ಅಥವಾ ಹುಟ್ಟನೊಡನೆ ಪಡೆದು ಬಂದ ತಾರುಮಾರುಗಳು ಎಂಬ ದೃಷ್ಟಿಕೋಣಕ್ಕೆ ಆಧುನಿಕ ಸಂಶೋಧನೆಗಳಿಂದ ಹೇಳಿಕೊಳ್ಳುವಂಥ ಪುಷ್ಟಿ ದೊರೆತಿಲ್ಲ. ಕಲಿಕೆಯ ಮತ್ತು ಪರಿಸರದ ಅಂಶಗಳು ಕೂಡ ಈ ರೀತಿಯ ವಿಕಾರಗಳಿಗೆ ತಕ್ಕಮಟ್ಟಿಗೆ ಕಾರಣಗಳಾಗಬಹುದು ಎಂಬುದಕ್ಕೆ ಈಗ ಸಾಕಷ್ಟು ಆಧಾರಗಳಿವೆ. ಹೀಗೆ ಎಲ್ಲಿಸ್‌ನ ಸಿದ್ಧಾಂತಗಳು ಆಕ್ಷೇಪಣೆಗೆ ಗುರಿಯಾದರೂ ಈತ ಕಾಮಜೀವನದ ವೈಜ್ಞಾನಿಕ ಅಧ್ಯಯನಕ್ಕೆ ಕೈಹಾಕಿದವರಲ್ಲಿ–ಅದೂ ಮಡಿವಂತಿಕೆಯ ಹತ್ತೊಂಬತ್ತನೆಯ ಶತಮಾನದಲ್ಲಿ—ಮೊದಲಿಗನಾಗಿದ್ದಾನೆ. ಆದ್ದರಿಂದ ಮನುಷ್ಯನ ವರ್ತನೆಯ ನಿಗೂಢ ಅಂಶಗಳನ್ನು, ಸಹಜ ಪ್ರೇರಣೆಗಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಮಾಡಿದ ವಿಜ್ಞಾನಿಗಳಲ್ಲಿ ಗಣನೀಯನಾಗಿದ್ದಾನೆ. (ಎಂ.ಎನ್.ಎಚ್.; ಎಸ್.ಕೆ.ಆರ್.)

**ಎಲ್ಲೋರ :** ಮಹಾರಾಷ್ಟ್ರದಲ್ಲಿ ಗೋದಾವರಿಯ ಉಪನದಿಯೊಂದರ ದಂಡೆಯ ಮೇಲೆ, ಅಜಂತದಿಂದ ನೈಋತ್ಯದಲ್ಲಿ 40 ಮೈಲಿಗಳ ದೂರದಲ್ಲೂ ಔರಂಗಾಬಾದಿನಿಂದ ವಾಯುವ್ಯದಲ್ಲಿ 16 ಮೈಲಿಗಳ ದೂರದಲ್ಲೂ ಇರುವ ಪ್ರಸಿದ್ಧ ಸ್ಥಳ. ಬೌದ್ಧ, ಹಿಂದೂ ಮತ್ತು ಜೈನಮತಗಳಿಗೆ ಸೇರಿದ 34 ಗುಹೆಗಳೂ ಒಂದೇ ಕಲ್ಲಿನಲ್ಲಿ



ಘೃಷ್ಣೇಶ್ವರ ದೇವಾಲಯ



ತೀನ್-ತಾಲ್ (12ನೆಯ ಗುಹೆ)

ಕಡೆಯಲಾಗಿರುವ ದ್ರಾವಿಡ ಶೈಲಿಯ ಸುಪ್ರಸಿದ್ಧ ಕೈಲಾಸ ದೇವಾಲಯವೂ ಇರುವ ಈ ಊರು ಭಾರತೀಯ ಕಲೆಯ ಮುಖ್ಯ ಕೇಂದ್ರಗಳಲ್ಲೊಂದಾಗಿದೆ. ಇಲ್ಲಿನ ಇಳಿಜಾರಾದ ಬೆಟ್ಟದ ಪಶ್ಚಿಮದ ಅಂಚಿನಲ್ಲಿ ಕಡೆದಿರುವ ಗುಹಾಂತರ ದೇವಾಲಯಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಬಹುದು. ದಕ್ಷಿಣದಲ್ಲಿರುವ 12 ಗುಹೆಗಳು ಬೌದ್ಧಧರ್ಮಕ್ಕೂ ಮಧ್ಯದ 17 ಗುಹೆಗಳು ಹಿಂದೂಧರ್ಮಕ್ಕೂ ಉತ್ತರದ ಅಂಚಿನ 5 ಗುಹೆಗಳು ಜೈನಧರ್ಮಕ್ಕೂ ಸೇರುತ್ತವೆ.

ಕ್ರಿ.ಶ. 350–650ರ ಮಧ್ಯದಲ್ಲಿ ನಿರ್ಮಿತವಾದ ಬೌದ್ಧಚೈತ್ಯವಿಹಾರಗಳಲ್ಲಿ ಎರಡು ಗುಂಪುಗಳಿದ್ದು ಮೊದಲ ಐದು ಗುಹೆಗಳು ದೇರ್ವಾರ ಗುಂಪಿಗೂ ಉಳಿದ ಏಳು ಎರಡನೆಯ ಗುಂಪಿಗೂ ಸೇರುತ್ತವೆ. ಮೊದಲ ಗುಂಪಿನ ಗುಹೆಗಳಲ್ಲಿ ಮಹಾನ್‌ವಾಡ ಎಂಬ ಕಂಬಗಳಿಂದ ಕೂಡಿದ್ದ ವಿಶಾಲ ಹಜಾರವನ್ನು ಪ್ರಾರ್ಥನಾ ಮಂದಿರವಾಗಿ ಬಳಸುತ್ತಿದ್ದರು. ಎರಡನೆಯ ಗುಂಪಿನ ಚೈತ್ಯ ಮಂದಿರದಲ್ಲಿ ಪ್ರಾರ್ಥನೆ ನಡೆಯುತ್ತಿತ್ತು. ಈ ಎಲ್ಲ ಗುಹೆಗಳು ಒಂದಂತಸ್ತಿನವುಗಳಾಗಿದ್ದು ಕೈಸಾಲೆ, ಕಂಬಗಳಿಂದ ಕೂಡಿದ್ದ ಹಜಾರ ಮತ್ತು ಚೈತ್ಯ ಅಥವಾ ಗರ್ಭಗುಡಿಯನ್ನೊಳಗೊಂಡಿರುತ್ತಿದ್ದುವು. ಎರಡನೆಯ ಗುಂಪಿನ ಬೌದ್ಧಗುಹೆಗಳಲ್ಲಿ ವಿಶಾಲವಾದ ವಿಹಾರಗಳಿದ್ದು ಸುಂದರ ಚೈತ್ಯಗಳೂ ಇರುತ್ತಿದ್ದುವು. ಮುಂಭಾಗದಲ್ಲಿ ದೊಡ್ಡ ಪ್ರಾಂಗಣಗಳಿರುತ್ತಿದ್ದವು. ಅವುಗಳಲ್ಲಿ 3 ಗುಹೆಗಳು ಮೂರಂತಸ್ತಿನ ನಿರ್ಮಾಣಗಳಾಗಿವೆ. ತೀನ್‌ತಾಲ್ ಅಥವಾ ಮೂರಂತಸ್ತಿನ ಭವನವೆಂದು ಹೆಸರಾದ 12ನೆಯ ಗುಹೆ ಗಮನಾರ್ಹವಾಗಿದೆ. ಸುಮಾರು 40 ಭಿಕ್ಷುಗಳ ವಸತಿಗೆ ಅನುಕೂಲವಿರುವ ಈ ಗುಹೆಯ ಹಜಾರ ಇನ್ನೂ ಅಧಿಕ ಸಂಖ್ಯೆಯ ಭಿಕ್ಷುಗಳು ಪ್ರಾರ್ಥನೆ ಧರ್ಮೋಪದೇಶಗಳಿಗಾಗಿ



ದುರ್ಗಾ (ಕೈಲಾಸ)

ಇಲ್ಲಿನ ಹಿಂದೂ ದೇವಾಲಯಗಳಲ್ಲೆಲ್ಲ ಅಮೋಘವಾದುದು ರಾಷ್ಟ್ರಕೂಟ ದೊರೆ ಮೊದಲನೆಯ ಕೃಷ್ಣನ (ಕ್ರಿ.ಶ. 756-775) ಆಶ್ರಯದಲ್ಲಿ ನಿರ್ಮಿಸಲ್ಪಟ್ಟು ಶಿವನ ವಾಸಸ್ಥಾನವಾದ ಕೈಲಾಸಪರ್ವತದ ಪ್ರತೀಕವಾಗಿ ಒಂದೇ ಶಿಲೆಯಲ್ಲಿ ಕಡೆಯಲಾಗಿರುವ ಕೈಲಾಸ ದೇವಾಲಯ. ಇದನ್ನು ಅತ್ಯಮೋಘವಾದ ಧಾರ್ಮಿಕ ಸಾಧನೆಯೆಂದೂ ಮಾನವನ ಮನಸ್ಸು ಹೃದಯ ಮತ್ತು ಕರಗಳು ಒಂದು ಉದಾತ್ತ ಧ್ಯೇಯ ಸಾಧನೆಗೆ ಒಮ್ಮುಖವಾಗಿ ಶ್ರಮಿಸಿರುವುದರ ನಿದರ್ಶನವೆಂದೂ ಪರ್ಸಿ ಬ್ರೌನ್ ಶ್ಲಾಘಿಸಿದ್ದಾನೆ. 25′ ಎತ್ತರದ ಜಗತಿಯ ಮೇಲೆ ಇರುವ 150′+100′ ವಿಶಾಲವಾದ ಈ ಮಂದಿರ ಆನೆ ಮತ್ತು ಸಿಂಹಗಳ ಸಾಲುಗಳಿಂದಲಂಕೃತವಾಗಿದೆ. ಎರಡಂತಸ್ತಿನ ಗುಡಿಗೆ ಸೇರಿದಂತೆ ಸಣ್ಣ ದೇವತಾ ಗೃಹಗಳೂ ವಿಹಾರಗಳೂ ಇದ್ದು ಹೊರಭಾಗದ ಮಹಾದ್ವಾರದೊಂದಿಗೆ ಕಲ್ಲಿನ ಸೇತುವೆಯ ಮೂಲಕ ಸಂಪರ್ಕ ಪಡೆದಿದೆ. 95 ಅಡಿಗಳೆತ್ತರದ ಈ ದೇವಾಲಯದ ವಿಮಾನದಲ್ಲಿ ಮೂರಂತಸ್ತುಗಳಿವೆ. ಗೋಡೆಗಳ ಮೇಲೆ ರಾಮಾಯಣದ ದೃಶ್ಯಗಳನ್ನು ಕೆತ್ತಲಾಗಿದೆ. ಮುಂಭಾಗದಲ್ಲಿ 50 ಅಡಿಗಳೆತ್ತರದಲ್ಲಿ ನಂದೀ ಮಂಟಪವೂ ಅದರ ಇಕ್ಕೆಲಗಳಲ್ಲಿ ಧ್ವಜಸ್ತಂಭಗಳೂ ನಿರ್ಮಿತವಾಗಿವೆ. ಕೈಲಾಸ ದೇವಾಲಯದಿಂದ ಉತ್ತರಕ್ಕೆ $1\frac{1}{2}$ ಮೈಲಿಗಳ ದೂರದಲ್ಲಿರುವ, ಪ್ರಾಯಶಃ 9ನೆಯ ಶತಮಾನದಲ್ಲಿ ನಿರ್ಮಿತವಾದ, 5 ಜೈನಗುಹೆಗಳಲ್ಲಿ ಮುಖ್ಯವಾದುವು ಇಂದ್ರಸಭಾ ಮತ್ತು ಜಗನ್ನಾಥ ಗುಹೆಗಳು. (ಬಿ.ಕೆ.ಜಿ. ; ಕೆ.ಎಸ್.ಎಸ್.)

**ಎಲ್ಲೋರದ ಮೂರ್ತಿಶಿಲ್ಪ:** ಚಿತ್ರಕಲೆಗೆ ಅಜಂತದಂತೆ, ಶಿಲ್ಪಕಲೆಗೆ ಎಲ್ಲೋರ ಪ್ರಸಿದ್ಧವಾಗಿದೆ. ಬೌದ್ಧ ಗುಹೆಗಳೆಲ್ಲ (1 ರಿಂದ 12) ಮಹಾಯಾನ ಪಂಥಕ್ಕೆ ಸೇರಿದವಾಗಿರುವುದರಿಂದ ವಿವಿಧ ಭಂಗಿಗಳಲ್ಲಿರುವ ವಿವಿಧ ರೀತಿಯ ಬುದ್ಧ ಪ್ರತಿಮೆಗಳು ಇಲ್ಲಿ ಕಾಣಸಿಗುತ್ತವೆ. ಇವುಗಳಲ್ಲಿ ಹತ್ತನೆಯ (ವಿಶ್ವಕರ್ಮ) ಗುಹೆ ಬಿಟ್ಟು ಮಿಕ್ಕೆಲ್ಲವೂ ವಿಹಾರಗಳಾದರೂ ಸಮಕಾಲೀನ ವಾಸ್ತು ಪದ್ಧತಿಯಲ್ಲಿ ರೂಢ ಸೇರಲನುಕೂಲವಾಗಿತ್ತು. ಚೈತ್ಯಗೃಹದಲ್ಲಿ ಕುಳಿತಿರುವ ಬುದ್ಧ ಮತ್ತು ಇತರ ಮೂರ್ತಿಗಳಿವೆ. ಬೌದ್ಧ ಗುಹೆಗಳಲ್ಲೊಂದಾದ ವಿಶ್ವಕರ್ಮ (10ನೆಯದು) ಗುಹೆ ಸಮಕಾಲೀನ ಅಜಂತದ ಚೈತ್ಯವಿಹಾರಗಳನ್ನು ಹೋಲುತ್ತದೆ.

ಏಳನೆಯ ಶತಮಾನದ ಅಂತ್ಯ ಮತ್ತು ಎಂಟನೆಯ ಶತಮಾನಗಳಲ್ಲಿ ಬೌದ್ಧಮತ ಕ್ಷೀಣಿಸುತ್ತಿದ್ದಾಗ ಹಿಂದೂಗಳ ಕಾರ್ಯರಂಗ ಇಲ್ಲಿ ಬೆಳೆಯಲಾರಂಭಿಸಿತು. ಬೌದ್ಧ ವಾಸ್ತುಶಿಲ್ಪಗಳ ಮಾದರಿಯಲ್ಲೇ ಆದರೂ ತಮ್ಮ ಸಂಪ್ರದಾಯಕ್ಕನುಸಾರವಾಗಿ ಮಾರ್ಪಡಿಸಿಕೊಂಡ ಈ ಗುಹೆಗಳಲ್ಲಿ 14ನೆಯ ರಾವಣ್–ಕಾ-ಖಾಇ, 15ನೆಯ ದಶಾವತಾರ, 16ನೆಯ ಕೈಲಾಸ, 21ನೆಯ ರಾಮೇಶ್ವರ ಮತ್ತು 29ನೆಯ ದುಮಾರ್ ಲೇನಾ ಅಥವಾ ಸೀತೆಯ ಸ್ನಾನದ ಗುಹೆಗಳು ಮುಖ್ಯವಾದುವು. ಕ್ರಮಾಗತವಾಗಿ ಬದಲಾವಣೆ ಹೊಂದುತ್ತಿದ್ದ ಈ ಗುಹಾಶೈಲಿಗಳಲ್ಲಿ ಮೊದಲನೆಯ ಗುಂಪಿಗೆ ಸೇರುವ ದಶಾವತಾರ ಗುಹೆ ಬೌದ್ಧಗುಹೆಗಳನ್ನು ಹೋಲುತ್ತದೆ. ಪ್ರದಕ್ಷಿಣ ಪಥವಿರುವ ರಾಮೇಶ್ವರ ಮತ್ತು ರಾವಣ್-ಕಾ-ಖಾಇ ಎರಡನೆಯ ಹಂತವನ್ನೂ ಶಿಲುಬೆಯಾಕೃತಿಯ ತಳಕಟ್ಟಿನ ಮಧ್ಯದಲ್ಲಿ ಗರ್ಭಗುಡಿಯಿರುವ ಮತ್ತು ಒಂದಕ್ಕಿಂತಲೂ ಹೆಚ್ಚು ಪ್ರವೇಶದ್ವಾರಗಳಿರುವ ದುಮಾರ್‌ಲೇನಾ ಗುಹೆ ಮೂರನೆಯ ಹಂತವನ್ನೂ ಕೊನೆಯದಾಗಿ ಗುಹೆಯ ಬದಲು ಕಟ್ಟಿದ ಭವನವನ್ನು ಹೋಲುವ, ಒಂದೇ ಕಲ್ಲಿನಲ್ಲಿ ಕೊರೆಯಲಾದ ಕೈಲಾಸ ದೇವಾಲಯ ನಾಲ್ಕನೆಯ ಹಂತವನ್ನೂ ಸೂಚಿಸುತ್ತವೆ. ರಾವಣ್-ಕಾ-ಖಾಇ ಗುಹೆಯ ದಕ್ಷಿಣದ ಗೋಡೆಯ ಮೇಲೆ ಮಹಿಷಾಸುರಮರ್ದಿನಿ, ತಾಂಡವನೃತ್ಯ, ಮಗ್ನಶಿವ, ಕೈಲಾಸಪರ್ವತವನ್ನೆತ್ತುತ್ತಿರುವ ರಾವಣ, ಪಗಡೆಯಾಟದಲ್ಲಿ ತೊಡಗಿರುವ ಶಿವ ಪಾರ್ವತಿ ಮುಂತಾದ ಸುಂದರ ಶೈವಶಿಲ್ಪಗಳೂ ಉತ್ತರದ ಗೋಡೆಯ ಮೇಲೆ ದುರ್ಗೆ, ಲಕ್ಷ್ಮಿ, ವರಾಹ, ಲಕ್ಷ್ಮೀನಾರಾಯಣ ಮುಂತಾದ ವೈಷ್ಣವಶಿಲ್ಪಗಳೂ ಇವೆ. ಹೊರಭಾಗದಲ್ಲಿ ಗಣಪತಿ, ಸಪ್ತಮಾತೃಕೆಯರ ಶಿಲ್ಪಗಳಿವೆ. ದಶಾವತಾರ ಗುಹೆಯಲ್ಲೂ ಅನೇಕ ಉತ್ತಮ ದೇವತಾ ಮೂರ್ತಿಗಳನ್ನು ಕಡೆದಿದ್ದಾರೆ.



ರಾಮೇಶ್ವರ ಗುಹೆಯ (21ನೆಯದು) ವರಾಂಡದ ಮುಂಭಾಗ



ಗಿರಿಜಾಕಲ್ಯಾಣ



ಗಜಾಸುರಸಂಹಾರ ಮೂರ್ತಿ (ಕೈಲಾಸ)



ಜೈನ ದೇವತೆ



ಎಲ್ಲೋರ ಗುಹೆ 12 (ತೀನ್-ತಾಲ್) ಸಪ್ತಮಾನುಷ ಬುದ್ಧ ಶಿಲ್ಪಗಳು



ವಜ್ರಪಾಣಿ ದ್ವಾರಪಾಲ (ತೀನ್-ತಾಲ್)

ವಾಗಿದ್ದಂತೆ, ಬುದ್ಧಮೂರ್ತಿಗಾಗಿಯೇ ಒಂದು ವಿಶೇಷ ಗರ್ಭಗೃಹವಿರುತ್ತದೆ. ಅಲ್ಲದೆ ಹಜಾರದ ಭಿತ್ತಿಗಳ ಮೇಲೆ ವಿಶಾಲ ಸ್ಥಳ ದೊರಕಿದಲ್ಲಿ ಬುದ್ಧ ಮತ್ತು



ವಿಶ್ವಕರ್ಮನ ಗುಹೆ

ಇತರ ಬೌದ್ಧ ಪರಿವಾರ ದೇವತೆಗಳನ್ನು ಕೆತ್ತಲು ಉಪಯೋಗಿಸಿಕೊಂಡಿರುವುದು ಇಲ್ಲಿಯ ವೈಶಿಷ್ಟ್ಯ. ಈ ಗುಹೆಗಳು ಸಾಮಾನ್ಯವಾಗಿ ಮಹಾಯಾನ ಪಂಥದವು ಗಳೆಂದು ಪ್ರಸಿದ್ಧವಾಗಿದ್ದರೂ ಇಲ್ಲಿಯ ಶಿಲ್ಪಗಳಲ್ಲಿ ಈ ಪಂಥದಿಂದಲೇ ಕ್ರಮೇಣ ಬೆಳೆದ ತಂತ್ರಯಾನ ಪಂಥದಿಂದ ವಿಶೇಷವಾಗಿ ಪ್ರಚಲಿತಗೊಂಡ ಬೌದ್ಧ ಪರಿವಾರ ದೇವತೆಗಳೂ ಬಹುವಾಗಿರುವುದು ಗಮನಾರ್ಹ. ಕೆಲವು ರೀತಿಯ ಬುದ್ಧಮೂರ್ತಿ ಗಳಲ್ಲದೆ, ವಿವಿಧ ಅವಲೋಕಿತೇಶ್ವರ (ಮಂಜುಶ್ರೀ) ಮತ್ತು ಶಕ್ತಿದೇವತೆಗಳೂ ಇಲ್ಲಿವೆ. ಇವುಗಳಲ್ಲಿ ಅನೇಕ ಗುಹೆಗಳಲ್ಲಿ ಕಾಣಬರುವ ಷಡಕ್ಷರೀ ಲೋಕೇಶ್ವರ, ರಕ್ತಲೋಕೇ ಶ್ವರ, ಲೋಕನಾಥ, ಸ್ಥಿರಚಕ್ರ, ಸಿದ್ಧೈಕವೀರ, ವಜ್ರಪಾಣಿ, ಜ್ಞಾನಕೇತು, ಜಂಭಲ, ತಾರಾ, ಪಾಂಡಾರಾ, ಜಾಂಗುಲೀ, ವಸುಧಾರಾ, ಚುಂಡಾ, ಮಹಾಮಾಯೂರೀ, ಸರಸ್ವತೀ, ಹಾರೀತೀ, ಪಂಚಿಕಾ ಮುಂತಾದುವನ್ನು ವಿಶೇಷವಾಗಿ ಹೆಸರಿಸಬಹುದು. ಈ ವಿಗ್ರಹಗಳು ಒಂಟಿಯಾಗಿಯೂ ಹಲವು ಗುಂಪುಗಳಲ್ಲೂ ಇವೆ. ಎಲ್ಲೋರದ ಬೌದ್ಧ ಶಿಲ್ಪಗಳು ಬಹುಮಟ್ಟಿಗೆ ಬೃಹದ್ಗಾತ್ರದವೇ. ಇವೆಲ್ಲವೂ ಕ್ರಿ. ಶ. ಸುಮಾರು 6ರಿಂದ 8ನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದವಾದ್ದರಿಂದ ಗುಪ್ತ ಶೈಲಿಯಿಂದ ಪ್ರಭಾವಿತವಾದ ಅಜಂತ ಶಿಲ್ಪಶೈಲಿಯೇ ಇದ್ದರೂ ಅಲ್ಲಲ್ಲಿ ತತ್ಕಾಲೀನ ದಖನೀ ಶಿಲ್ಪಶೈಲಿಯ ಪ್ರಭಾವವೂ ಕಂಡುಬರುತ್ತದೆ. ಅಜಂತ ಶಿಲ್ಪಗಳಿಗಿಂತ ಎಲ್ಲೋರ ಶಿಲ್ಪಗಳು ಸ್ವಲ್ಪ ಕೆಳ ಮಟ್ಟದವೇ ಎಂದು ಹೇಳಬಹುದು. ಶಿಲ್ಪ ವಸ್ತು ಬಹುಮಟ್ಟಿಗೆ ದೇವ ದೇವತೆಗಳಿಗೆ ಸೀಮಿತವಾಗಿದ್ದು, ಬೌದ್ಧಾಗಮಿಕ ಸೂತ್ರಗಳ ಕಟ್ಟಿನೊಳಗೇ ಇರಬೇಕಾಗಿದ್ದುದರಿಂದ, ಅವುಗಳ ರೂಪಣೆಯಲ್ಲಿ ಶಿಲ್ಪಿಯ ಸ್ವಪ್ರತಿಭೆ ಮತ್ತು ವಿವಿಧ ರಸಭಾವ ನಿರೂಪಣೆಗಳಿಗೆ ಅಷ್ಟಾಗಿ ಅವಕಾಶವೊದಗಿಲ್ಲ. ಮೂರ್ತಿಗಳೆಲ್ಲ ಶಾಂತ, ಗಂಭೀರ ಮುಖಮುದ್ರೆಯಲ್ಲಿದ್ದು, ಇವುಗಳಲ್ಲಿ ಒಂದು ರೀತಿಯ ಅಸಹಜ ಏಕರೂಪತೆ ಕಾಣಿಸಿಕೊಂಡಿದೆ. ಆದರೂ ಆಗಮಸೂತ್ರಗಳ ಕಟ್ಟಿನಿಂದ ಹೊರತಾದ ಕೆಲವು ಉಪವಿಗ್ರಹಗಳ ರೂಪಣೆ ಮತ್ತು ಅಲಂಕರಣಗಳಲ್ಲಿ ಶಿಲ್ಪಿಯ ಜಾಣ್ಮೆಯನ್ನು ಕಾಣಬಹುದಾಗಿದೆ.

10ನೆಯ (ವಿಶ್ವಕರ್ಮ) ಗುಹೆಯಲ್ಲಿ ಸ್ತೂಪದ ಮೇಲೆ ಕೆತ್ತಿರುವ ಬುದ್ಧ ವಿಗ್ರಹ ಎಲ್ಲೋರ ಬೌದ್ಧಶಿಲ್ಪಕ್ಕೆ ಉತ್ತಮ ಉದಾಹರಣೆ. ಸಿಂಹಾಸನದ ಮೇಲೆ ಪ್ರಲಂಬ ಪಾದನಾಗಿ ಕುಳಿತಿರುವ ಬುದ್ಧನ ಈ ಮೂರ್ತಿ ಧರ್ಮಚಕ್ರ ಪ್ರವರ್ತನವನ್ನು ಪ್ರತೀಕರಿಸುತ್ತದೆ. ಮೂರ್ತಿ ಅಂತರ್ಮುಖಿಯಾಗಿ ತೋರಿಸಲ್ಪಟ್ಟಿದ್ದರೂ ಅಜಂತ ಮತ್ತಿತರೆಡೆಯಲ್ಲಿರುವ ಇದೇ ರೀತಿಯ ಮೂರ್ತಿಗಳಲ್ಲಿರುವ ಸಾತ್ತ್ವಿಕ ಗಾಂಭೀರ್ಯ ಇಲ್ಲಿ ಎದ್ದು ಕಾಣುವುದಿಲ್ಲ. ನಿರೂಪಣದಲ್ಲಿ ಗಾತ್ರವಷ್ಟೇ ಪ್ರಧಾನವಾಗಿ ಕಾಣುತ್ತದೆ. ಆದರೆ ಪಕ್ಕದ ಅನುಚರ ವಿಗ್ರಹಗಳು ಇದಕ್ಕಿಂತಲೂ ಉತ್ತಮವಾಗಿವೆ. ಮೇಲಿನ ಗಂಧರ್ವ ಭಕ್ತರ ಶಿಲ್ಪಗಳು ಚಿಕ್ಕವಾಗಿದ್ದರೂ ಸಂದರ್ಭೋಚಿತವಾಗಿ ಭಕ್ತಿಭಾವ ಪೂರಿತವಾಗಿವೆ. ಇಲ್ಲಿನ ಬೌದ್ಧಶಿಲ್ಪಗಳಲ್ಲಿ ಕಂಡುಬರುವ ವಿಭಿನ್ನ ಭಾವಗಳ ಅಭಾವಕ್ಕೆ 12ನೆಯ ಗುಹೆಯಲ್ಲಿರುವ ಬುದ್ಧ ವಿಗ್ರಹಗಳ ಸಾಲನ್ನು ಉದಾಹರಿಸ ಬಹುದು. ಮೂರ್ತಿರಚನೆಯಲ್ಲಿ ಅಂಗಾಂಗಗಳ ಸಹಜ ಪ್ರಮಾಣವನ್ನು ಅನುಸರಿಸಿ ಸ್ವಲ್ಪಮಾತ್ರ ಅಲಂಕರಣದಿಂದ ಉತ್ತಮ ಶಿಲ್ಪಗಳನ್ನು ಸಮಕಾಲೀನ ಶಿಲ್ಪಿ ರೂಪಿಸ ಬಲ್ಲವನಾಗಿದ್ದನೆಂಬುದನ್ನು ಅದೇ 12ನೆಯ ಗುಹೆಯಲ್ಲಿರುವ ದ್ವಾರಪಾಲಕ ವಜ್ರ ಪಾಣಿಯ ಮೂರ್ತಿಯಲ್ಲಿ ಕಾಣಬಹುದು. ಹಾಗೆಯೇ ಅದೇ 12ನೆಯ ಗುಹೆಯಲ್ಲಿ ರುವ ಪ್ರಜ್ಞಾಪಾರಮಿಕ, 6ನೆಯ ಗುಹೆಯಲ್ಲಿರುವ ಮಹಾಮಾಯೂರಿಯೂ ಒಳ್ಳೆಯ ಶಿಲ್ಪಗಳು.

ಬೌದ್ಧ ಗುಹೆಗಳಿಂದ ಹಿಂದೂ ಗುಹೆಗಳಿಗೆ ಬಂದರೆ ಒಂದು ಹೊಸ ವಾತಾವರಣ ವನ್ನು ಹೊಕ್ಕಂತಾಗುತ್ತದೆ. ಅಲ್ಲಿನಂತೆ ಇಲ್ಲೂ ಬೃಹದ್ ಶಿಲ್ಪಗಳೇ ವಿಶೇಷವಾಗಿವೆ. ಗುಹೆಗಳ ಭಿತ್ತಿಗಳಲ್ಲಿ ಒಂದೊಂದು ಶಿಲ್ಪವೂ ನೆಲದಿಂದ ಮೇಲಿನವರೆಗೆ ಎಂಟು ಹತ್ತು ಅಡಿಗಳ ಎತ್ತರ ಹಬ್ಬಿ ಎರಡು ಪಕ್ಕಗಳಲ್ಲೂ ಗೋಡೆಯಿಂದ ಹೊರಬರುವ ಅರೆಗಂಬ (ಪಿಲಾಸ್ಟರ್)ಗಳಿಂದ ಸೀಮಿತಗೊಂಡು ದೊಡ್ಡ ಪಟ್ಟಿಕೆಗಳ (ಪ್ಯಾನಲ್) ರೀತಿಯಲ್ಲಿ ರುತ್ತದೆ. ಕೈಲಾಸ ದೇವಾಲಯದಲ್ಲಿ ಗೋಡೆಗಳಲ್ಲಿರುವ ವಿಶಾಲವಾದ ಕೋಷ್ಠಗಳು ಶಿಲ್ಪಗಳಿಗೆ ಉಪಯೋಗಿಸಲ್ಪಟ್ಟಿವೆ. ಪುರಾಣಗಳಿಂದ ಆರಿಸಿದ ನರಸಿಂಹಾವತಾರ, ತ್ರಿವಿಕ್ರಮಾವತಾರ, ವರಾಹಾವತಾರ, ಅಂಧಕಾಸುರ ಮರ್ದನ, ಗಜಾಸುರ ಮರ್ದನ, ತ್ರಿಪುರ ದಹನ, ಗಿರಿಜಾಕಲ್ಯಾಣ ಮುಂತಾದ ವೈಷ್ಣವ ಶೈವ ಕಥೆಗಳೇ ಈ ಶಿಲ್ಪಗಳ ಮುಖ್ಯವಸ್ತುಗಳು. ಇವುಗಳ ನಿರೂಪಣೆಯಲ್ಲಿ ಒಂದು ಮುಖ್ಯ ಮೂರ್ತಿಯನ್ನು ದೊಡ್ಡದಾಗಿ ಅದರ ಸಂಬಂಧದ ಇತರ ಮೂರ್ತಿಗಳನ್ನು ಸ್ವಲ್ಪ ಚಿಕ್ಕದಾಗಿ ಕೆತ್ತಿದ್ದರೂ ಅದರದರ ಸಂದರ್ಭ ಸಹಜಭಾವದೊಡನೆ ಪ್ರಭಾವಪೂರ್ಣವಾಗಿ ವ್ಯಕ್ತಗೊಂಡಿದ್ದು ಒಂದೊಂದು ಶಿಲ್ಪವೂ ನಾಟಕದ ಸ್ತಬ್ಧದೃಶ್ಯದಂತೆ (ಟ್ಯಾಬ್ಲೋ) ಭಾಸವಾಗುತ್ತದೆ. ವಿಶಾಲವಾದ ಎದೆ, ತುಂಬಿದ ದೇಹ, ನೀಳವಾದ ಆದರೂ ಭಾರ ಮತ್ತು ಸೌಷ್ಠವತೆ ಯಿಂದ ಕೂಡಿದ ಅಂಗಾಂಗಗಳು, ಅಸೀಮ ಶಕ್ತಿಯನ್ನು ವ್ಯಕ್ತಪಡಿಸುವ ಮುಖಚರ್ಯೆ ಮತ್ತು ಅಂಗಭಂಗಿಗಳು ಎಲ್ಲೋರದ ಹಿಂದೂ ಶಿಲ್ಪದ ವೈಶಿಷ್ಟ್ಯ. ಈ ಶಿಲ್ಪಗಳಲ್ಲಿ ಅಲಂಕರಣಕ್ಕಿಂತ ಭಾವನಿರೂಪಣೆಯೇ ಪ್ರಧಾನ. ಪುರಾಣಗಳಿಂದ ಆಯ್ದ ಕಥೆಗಳೇ ಶಿಲ್ಪವಸ್ತುವಾದ್ದರಿಂದ, ಶಿಲ್ಪದಲ್ಲಿ ವಿವಿಧ ರಸ ಭಾವ ಪ್ರಕಟಣೆಗಿರುವ ಅಗಾಧ ಅವಕಾಶವನ್ನು ಇಲ್ಲಿನ ಶಿಲ್ಪಿಗಳು ಸಾರ್ಥಕಪಡಿಸಿಕೊಂಡಿದ್ದಾರೆ.

ಕೈಲಾಸ ದೇವಾಲಯದಲ್ಲಿರುವ ಗಜಾಸುರಮರ್ದನ ಮೂರ್ತಿ ಇಲ್ಲಿಯ ಒಂದು ಉತ್ತಮ ಶಿಲ್ಪ. ಆವೇಶಪೂರಿತವಾದ ಶಿವ ತನ್ನ ಅಗಾಧಶಕ್ತಿ, ಕ್ರೋಧವನ್ನೆಲ್ಲ ನೇರವಾಗಿ ಅಸುರನೆಡೆಗೆ ಕಾರುತ್ತ ಭಯಂಕರನಾಗಿದ್ದಾನೆ. ಆದರೆ ಈ ರೌದ್ರತೆ ಯಿಂದ ಪಕ್ಕದಲ್ಲಿರುವ ಪಾರ್ವತಿ ಬೆದರಿ ಎದೆಯ ಮೇಲೆ ಕೈಯಿಟ್ಟು ಕುಳಿತಿದ್ದರೂ ಪೂರ್ತಿಯಾಗಿ ಧೃತಿಗೆಟ್ಟಿಲ್ಲ. ರುದ್ರ ಶಿವನಾಗುವನೆಂಬ ಆತ್ಮವಿಶ್ವಾಸ ಅವಳ ಮುಖ ದಲ್ಲಿ ಎದ್ದು ಕಾಣುತ್ತಿದೆ. ಪಾರ್ವತಿಯ ಪಕ್ಕದಲ್ಲಿರುವ ಚಾಮರಧಾರಿಯಾದರೊ ಹೆಚ್ಚುಕಡಿಮೆ ನಿರ್ವಿಕಾರಿ. ಶಿವನ ಲೀಲೆಗಳಲ್ಲಿ ಇಂಥವೆಷ್ಟೋ ಎಂಬ ಭಾವ ಅವನಲ್ಲಿ ಸ್ಪಷ್ಟವಾಗಿದೆ. ಇದೇ ರೀತಿ ಯಲ್ಲಿ ಅದೇ ಕೈಲಾಸ ದೇವಾಲಯದಲ್ಲಿರುವ ಮಹಿಷಮರ್ದಿನಿ ಶಿಲ್ಪದಲ್ಲಿ ದೇವಿಯ ವೀರಕ್ರೋಧ, ಅಸುರನ ಪ್ರತಿಭಟನೆ, ಪರಾಜಿತರ ಆರ್ದ್ರತೆ, ದೇವತೆಗಳ ಅಚ್ಚರಿ, ಸಂತಸ—ಎಲ್ಲವೂ ಪರಿಣಾಮಕಾರಿಯಾಗಿ ರೂಪಿತವಾಗಿರುವುದನ್ನು ಕಾಣಬಹುದು. ಹಾಗೆಯೇ ಅಲ್ಲಿನ ನರಸಿಂಹ ಶಿಲ್ಪದಲ್ಲಿ ನರಸಿಂಹನ ಭಯಂಕರ ಕ್ರೋಧ, ಅಸುರನ ತತ್ತಾತ್ಸಾರ, ಅಸುರನ ಅಸಹಾಯಕ ಸ್ಥಿತಿ, ಪ್ರಾಯಶಃ ಪ್ರಹ್ಲಾದನ ಶರಣಾಗತಿ ಎಲ್ಲವೂ ಮೇಲೆದ್ದು ಕಾಣುತ್ತವೆ. ಉಗ್ರಶಿಲ್ಪಿಗಳನ್ನು ರೂಪಿಸುವುದರಲ್ಲೆ ಎಲ್ಲೋರದ ಶಿಲ್ಪ ಬಹು ಕುಶಲ. ಕಲ್ಯಾಣ, ಸುಂದರ,



ಮಹಾಮಾಯೂರೀ ಶಿಲ್ಪ



ನರಸಿಂಹ (ಕೈಲಾಸ)



ಇಂದ್ರಸಭಾ : ಬ್ರಾಹ್ಮೀ ಮತ್ತು ಸುಂದರಿಯೊಡಗೂಡಿದ ಗೊಮ್ಮಟೇಶ್ವರ



ಹೊರಗೋಡೆಯ ತಳದಲ್ಲಿನ ಆನೆಸಾಲು



ಕೈಲಾಸನಾಥ ದೇವಾಲಯದ ಒಂದು ದೃಶ್ಯ

ಮತ್ತಿತರ ಸೌಮ್ಯ ಸಂದರ್ಭಗಳನ್ನು ಕಡೆಯುವುದರಲ್ಲೂ ಶಿಲ್ಪಿಯ ಜಾಣ್ಮೆ ಹೊರ ಹೊಮ್ಮದಿಲ್ಲ. ನಾಲ್ಕಾರು ಗುಹೆಗಳಲ್ಲಿ ಕೈಲಾಸದ ಮೇಲೆ ಶಿವ ಪಾರ್ವತಿಯರು ವಿನೋದಾಸಕ್ತರಾಗಿರುವಂತೆ ಕೆತ್ತಲಾದ ಶಿಲ್ಪಗಳ ಕೆಳಭಾಗದಲ್ಲಿ ಅತಿಸಪಸೇಯ ಮೊದ್ದು ನಂದಿಯನ್ನು ಕೀಟಲೆ ಮಾಡುತ್ತ ಹಲವು ಚೆಲ್ಲಾಟಗಳಲ್ಲಿ ಆಸಕ್ತರಾಗಿರುವ ಶಿವಗಣಗಳು ಬಹು ನಗುವನ್ನು ತರುತ್ತವೆ. ಎಲ್ಲೋರದ ಸ್ತ್ರೀಶಿಲ್ಪ ಬಹು ವಿಶಿಷ್ಟ ವಾದುದು. ಇವು ಅಷ್ಟಾಗಿ ಪ್ರಧಾನ ಶಿಲ್ಪಗಳಾಗಿ ಕಂಡುಬರದೆ, ಇತರ ಶಿಲ್ಪ ಗಳೊಡನೆ ಅಳವಡಿಸಲ್ಪಟ್ಟಿದ್ದರೂ ಬಹು ಸುಂದರವಾಗಿ ರೂಪಿತವಾಗಿವೆ. ಆಗತಾನೇ ಮಿಂದೆದ್ದು ಬರುತ್ತಿರುವಂತಿರುವ ಯಮುನೆಯ ಒಂದು ಮೋಹಕಶಿಲ್ಪ ಸೀತಾ–ಕಾ–ನಾನಿ ಗುಹೆಯಲ್ಲಿದೆ. ಸುಮಾರು ಅದೇ ರೀತಿಯ ಗಂಗೆಯ ಶಿಲ್ಪವೊಂದು ರಾಮೇಶ್ವರ ಗುಹೆಯಲ್ಲಿದೆ.

ಎಲ್ಲೋರ ಜೈನ ಗುಹೆಗಳಲ್ಲಿ ಕಾಣುವ ಶಿಲ್ಪಗಳ ವಸ್ತು ಬೌದ್ಧ ಗುಹೆಗಳಲ್ಲಿ ನಂತೆಯೆ ದೇವದೇವತೆಗಳ ವಿಗ್ರಹಗಳಿಗೆ ಸೀಮಿತವಾದುದು. ಅನೇಕ ತೀರ್ಥಂಕರರು, ಯಕ್ಷ–ಯಕ್ಷಿಯರು, ಗೊಮ್ಮಟ ಮುಂತಾದ ಮೂರ್ತಿಗಳು ಇಲ್ಲಿವೆ. ಕಾಲದಲ್ಲಿ ಇವು ಹಿಂದೂ ಶಿಲ್ಪಗಳಿಗಿಂತ ಸ್ವಲ್ಪ ಈಚಿನವು. ಈ ಶಿಲ್ಪಗಳು ಪ್ರಮಾಣ, ರೀತಿ ಮುಂತಾದುವುಗಳಲ್ಲಿ ಹಿಂದೂ ಶಿಲ್ಪಗಳನ್ನೇ ಅನುಕರಿಸಿವೆ. ಆದರೆ ಶಿಲ್ಪವಸ್ತು ಶಾಸ್ತ್ರದ ಕಟ್ಟಿನಿಂದ ಸೀಮಿತವಾಗಿರುವುದರಿಂದ ವಿವಿಧ ಭಾವನಿರೂಪಣೆಗೆ ಅಷ್ಟಾಗಿ ಅವಕಾಶವೊದಗಿಲ್ಲ. ಬೌದ್ಧಶಿಲ್ಪಗಳಂತೆ ಇಲ್ಲೂ ತದೇಕ ಸೌಮ್ಯ–ಗಂಭೀರ ಭಾವವಷ್ಟೇ ಪ್ರಕಟಗೊಂಡಿದೆ. ಆದರೆ ಈ ಕುಂದನ್ನು ಶಿಲ್ಪಿ ಹೆಚ್ಚಿನ ಅಲಂಕರಣ ವನ್ನು ಒದಗಿಸುವುದರಲ್ಲಿ ಭಾಗಶಃ ನಿವಾರಿಸಿಕೊಂಡಿದ್ದಾನೆ. ಆದರೆ ಈ ಅಲಂಕರಣವೇ ಶಿಲ್ಪದ ವೈಭವವನ್ನು ಸ್ವಲ್ಪಮಟ್ಟಿಗೆ ಕಡಿಮೆ ಮಾಡಿದೆಯೇನೋ ಎನ್ನಿಸುತ್ತದೆ. ಜೈನ ಶಿಲ್ಪಕ್ಕೆ 32ನೆಯ ಗುಹೆಯಲ್ಲಿರುವ ಗೊಮ್ಮಟೇಶ್ವರ ಮತ್ತು ಸಿದ್ಧೈಕಿಯ ಮೂರ್ತಿಗಳು ಒಳ್ಳೆಯ ಉದಾಹರಣೆಗಳು. (ಎಸ್.ಎಸ್.)

**ಎಲ್ಸ್‌ವರ್ತ್, ಲಿಂಕನ್:** 1880–1951. ಅಮೆರಿಕದ ಪರಿಶೋಧಕ. ಜನನ ಇಲಿನಾಯ್‌ನ ಚಿಕಾಗೊದಲ್ಲಿ (1880). ಕೊಲಂಬಿಯ ಮತ್ತು ಯೇಲ್‌ಗಳಲ್ಲಿ ಇವನ ವಿದ್ಯಾಭ್ಯಾಸ ನಡೆಯಿತು. ರೈಲುಮಾರ್ಗ ನಿರ್ಮಾಣದಲ್ಲಿ ಮೋಜಣಿದಾರ ಮತ್ತು ಎಂಜಿನಿಯರ್ ಆಗಿ ಕೆಲಸಮಾಡಿದ. ಅನಂತರ ವಾಯುವ್ಯ ಕೆನಡದಲ್ಲಿ ಗಣಿ ಎಂಜಿನಿಯರ್ ಆಗಿಯೂ ಅನ್ವೇಷಕನಾಗಿಯೂ ಸೇವೆ ಸಲ್ಲಿಸಿದ. ಆರ್ಕ್‌ಟಿಕ್ ಪ್ರದೇಶದ (ಉತ್ತರ ಮೇರುವಲಯ) ಮೇಲಣ ವಿಮಾನ ಹಾರಾಟಗಳನ್ನು ನಡೆಸಿದ ರೋಲ್ಡ್ ಆಮುಂಡ್‌ಸನ್ನನ ಸಹವರ್ತಿ ಮತ್ತು ಆರ್ಥಿಕ ಬೆಂಬಲಿಗನಾಗಿದ್ದ. 1925ರಲ್ಲಿ ಇವರಿಬ್ಬರೂ ಸ್ಪಿಟ್ಸ್‌ಬರ್ಗನ್ನಿನಿಂದ ಉತ್ತರ ಅಕ್ಷಾಂಶ 87° 43′ಯ ವರೆಗೂ ವಿಮಾನ ಹಾರಾಟ ನಡೆಸಿದರು. ಸ್ಪಿಟ್ಸ್‌ಬರ್ಗನ್ನಿನಿಂದ ಉತ್ತರ ಮೇರುವಿನ ಮೂಲಕ ಅಲಾಸ್ಕಕ್ಕೆ ನಡೆದ (1926) ಹಾರಾಟದಲ್ಲಿ ಈತ ಸಹಚಾಲಕ. ಗ್ರಾಫ್ ಜೆಪ್ಪೆಲಿನ್ ಎಂಬ ವಿಮಾನದಲ್ಲಿ ಫ್ರಾನ್ಸ್ ಜೋಸೆಫ್‌ಲ್ಯಾಂಡ್‌ನಿಂದ ನಾರ್ದರ್ನ್ ಲ್ಯಾಂಡ್‌ಗಳ ವರೆಗೆ ನಡೆಸಿದ ಹಾರಾಟದಲ್ಲಿ (1931) ವೀಕ್ಷಕನಾಗಿದ್ದ. 1935ರಲ್ಲಿ ಪ್ರಥಮ ಬಾರಿಗೆ ಈತ ಅಂಟಾರ್ಕ್‌ಟಿಕ್ ಪ್ರದೇಶದ ಮೇಲೆ ಹಾರಾಟ ನಡೆಸಿದ. ಹಿಂದೂಸಾಗರದ ಕಡೆಯಿಂದ ಅಂಟಾರ್ಕ್‌ಟಿಕ ಪ್ರದೇಶದ ಒಳಭಾಗವನ್ನು ಈತ ಪ್ರವೇಶಿಸಿದ್ದು 1939ರಲ್ಲಿ. ಇದರಿಂದಾಗಿ ಹಿಂದೆಂದೂ ಕಂಡರಿಯದಿದ್ದ 81,000 ಚ. ಮೈಲಿಯಷ್ಟು ಭೂಪ್ರದೇಶವನ್ನು ಈತ ಕಂಡ. ಅವರ್ ಪೋಲಾರ್ ಫ್ಲೈಟ್ (1925) ಮತ್ತು ಫಸ್ಟ್ ಕ್ರಾಸಿಂಗ್ ಆಫ್ ದಿ ಪೋಲಾರ್ ಸೀ (1927) ಎಂಬುವು ಎಲ್ಸ್‌ವರ್ತ್ ಮತ್ತು ಆಮುಂಡ್‌ಸನ್ನರು ಒಟ್ಟಾಗಿ ಬರೆದ ಗ್ರಂಥಗಳು. ಸ್ವಂತ ಕೃತಿಗಳಾದ ಸರ್ಚ್ (1932), ಎಕ್ಸ್‌ಪ್ಲೋರಿಂಗ್ ಟುಡೆ (1935) ಮತ್ತು ಬಿಯಾಂಡ್ ಹೊರೈಜನ್ಸ್ (1938) ಎಂಬುವುಗಳಲ್ಲಿ ತನ್ನ ಅನುಭವಗಳನ್ನು ಈತ ಚಿತ್ರಿಸಿದ್ದಾನೆ.*

**ಎಲ್ವಿನ್, ವೆರಿಯರ್:** 1902–1964. ಭಾರತಕ್ಕೆ ಒಬ್ಬ ಕ್ರೈಸ್ತ ಪಾದ್ರಿ ಯಾಗಿ ಬಂದು, ಚರ್ಚನ್ನು ತ್ಯಜಿಸಿ ಗುಡ್ಡಗಾಡುಗಳಲ್ಲಿ ನೆಲೆಸಿ ಗಿರಿಜನರ ಜೀವನವನ್ನು ಅರಿತು ಅವರನ್ನು ಕುರಿತಂತೆ ಅನೇಕ ಗ್ರಂಥಗಳನ್ನು ಬರೆದು ಅವರ ಮೇಲ್ಮೆಗೆ ಅವಿಶ್ರಾಂತವಾಗಿ ದುಡಿದ ಮಹನೀಯ. ಮಹಾತ್ಮ ಗಾಂಧಿಯ ಪ್ರೀತಿ ಮತ್ತು ಮನ್ನಣೆಗೆ ಪಾತ್ರರಾಗಿದ್ದುದಲ್ಲದೆ ಪಂಡಿತ್ ಜವಹರಲಾಲ್ ನೆಹರೂ ಅವರಿಂದ ತಮ್ಮ ಕಾರ್ಯನೀತಿಗೆ ಸಂಪೂರ್ಣವಾಗಿ ಬೆಂಬಲ ಪಡೆದವರು.

ಎಲ್ವಿನ್ ಮಾನವಶಾಸ್ತ್ರದಲ್ಲಿ ಶಾಸ್ತ್ರೀಯ ತರಬೇತನ್ನು ಹೊಂದಿರಲಿಲ್ಲವಾದರೂ ಅವರ ಆಳವಾದ ಸಂಶೋಧನೆಗಳು ವಿಶ್ವಮಾನವಶಾಸ್ತ್ರಜ್ಞರ ಪಂಕ್ತಿಯಲ್ಲಿ ಅವರಿಗೆ ಒಂದು ವಿಶಿಷ್ಟಸ್ಥಾನವನ್ನು ದೊರಕಿಸಿಕೊಟ್ಟಿವೆ. ಅವರ ಪಾಂಡಿತ್ಯ ಕೇವಲ ಪುಸ್ತಕ ರಚನೆಗೆ ಸೀಮಿತವಾಗದೆ ಜೀವನದಲ್ಲಿ ಪ್ರತಿಫಲಿಸಿತ್ತು.

ವೆರಿಯರ್ ಎಲ್ವಿನ್ ಇಂಗ್ಲೆಂಡಿನ ಕೆಂಟ್ ಪ್ರಾಂತ್ಯದ ಡೋವರ್ ಎಂಬ ಊರಿನಲ್ಲಿ 1902ನೆಯ ಇಸವಿ ಆಗಸ್ಟ್ 29ರಂದು ಜನಿಸಿದರು. ತಂದೆ ಎಡ್ಮಂಡ್ ಹೆನ್ರಿ ಎಲ್ವಿನ್. ಸುಧಾರಿತ ಕ್ರೈಸ್ತ ಧರ್ಮದ ಬಿಷಪ್ ಆಗಿದ್ದ ಆತನಿಗೆ ಮಾನವ ಶಾಸ್ತ್ರದಲ್ಲಿ ಆಸಕ್ತಿಯಿತ್ತು. ಪಶ್ಚಿಮ ಆಫ್ರಿಕಕ್ಕೆ ಪಾದ್ರಿಯಾಗಿ ಹೋಗಿ ಅಲ್ಲಿ ಗಿರಿ ಜನರಲ್ಲಿ ನಿಕಟ ಸಂಬಂಧವನ್ನಿಟ್ಟುಕೊಂಡಿದ್ದು ಆಫ್ರಿಕದಲ್ಲಿಯೇ ತನ್ನ ಮೂವತ್ತೆಂಟ



ಎಲ್ವಿನ್ ದಂಪತಿಗಳು

ನೆಯ ವಯಸ್ಸಿನಲ್ಲಿ ಹಳದಿಜ್ವರದಿಂದ ಮೃತನಾದ. ಆಗ ವೆರಿಯರ್ ಎಲ್ವಿನ್ ಏಳು ವರ್ಷದ ಬಾಲಕ. ತಂದೆಯಿಲ್ಲದ ಮನೆಯಲ್ಲಿ ಬಡತನದ ಮಧ್ಯೆ ಆತ ಬೆಳೆದ. ಸುಶಿಕ್ಷಿತಳೂ ಧರ್ಮಿಷ್ಠಳೂ ಆದ ತಾಯಿಯ ಪ್ರಭಾವ ಎಲ್ವಿನ್ನರ ಜೀವನದ ಮೇಲೆ ತೀವ್ರ ಪರಿಣಾಮ ಮಾಡಿತು. ಚೆಲ್ಟೆನ್‌ಹ್ಯಾಂನಲ್ಲಿದ್ದ ಡೀನ್‌ಕ್ಲೋಸ್ ಎಂಬ ಶಾಲೆಯಲ್ಲಿ ಇವರ ವಿದ್ಯಾಭ್ಯಾಸ ಆಯಿತು. ಅದು ಹೆಚ್ಚಾಗಿ ಧಾರ್ಮಿಕ ವಿಷಯಗಳನ್ನು ಬೋಧಿಸುವ ಶಾಲೆ. ಮೊದಲಿನಿಂದಲೂ ಎಲ್ವಿನ್ನರಿಗೆ ಸಾಹಿತ್ಯದಲ್ಲಿ ವಿಶೇಷವಾದ ಆಸಕ್ತಿ. 'ಸಮನ್ವಯ ಮಾಡಲಾರದ ಎರಡು ಪ್ರಪಂಚಗಳಲ್ಲಿ ನಾನಿದ್ದೆ. ಸಾಂಪ್ರದಾಯಿಕ ಕ್ರೈಸ್ತಮತ ಬೋಧೆ, ಹಾಗೂ ವರ್ಡ್ಸ್‌ವರ್ತ್ ಕವಿಯ ರಹಸ್ಯಯುತ ಸರ್ವದೇವತಾರಾಧನೆ ಎರಡೂ ಒಂದರ ಪಕ್ಕದಲ್ಲೊಂದು ನಿಂತಿದ್ದುವು'—ಎಂದು ಅವರು ತಮ್ಮ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾರೆ.

ಎಲ್ವಿನ್ ಹತ್ತೊಂಬತ್ತನೆಯ ವಯಸ್ಸಿನಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಲು ಆಕ್ಸ್‌ಫರ್ಡಿಗೆ ಹೋಗಿ ಐದು ವರ್ಷ ಅಲ್ಲೇ ವಿದ್ಯಾರ್ಥಿಯಾಗಿದ್ದರು. ಮರ್ಟನ್ ಕಾಲೇಜಿನಲ್ಲಿ ಓದುತ್ತಿದ್ದಾಗ ಷೇಕ್ಸ್‌ಪಿಯರನನ್ನು ಅಭ್ಯಾಸ ಮಾಡಿದವರಿಗೆಂದಿದ್ದ ಮೂರು ಸಾವಿರ ರೂಪಾಯಿಗಳ ಬಹುಮಾನವನ್ನು ಪಡೆದರು. ಮೂರು ವರ್ಷ ಇಂಗ್ಲಿಷ್ ಸಾಹಿತ್ಯವನ್ನೂ ಎರಡು ವರ್ಷ ಮತಧರ್ಮಶಾಸ್ತ್ರವನ್ನೂ ಅಭ್ಯಾಸಮಾಡಿ ಪದವೀಧರರಾದ ಮೇಲೆ ಕ್ರಾಂತಿಯ ಕಾವ್ಯ (ಪೊಯಟ್ರಿ ಆಫ್ ರೆವಲ್ಯೂಷನ್) ಎಂಬ ಪ್ರಬಂಧಕ್ಕೆ ಮ್ಯಾಥ್ಯೂ ಆರ್ನಲ್ಡ್ ಬಹುಮಾನ ಬಂತು. ಅನಂತರ ವೈಕ್ಲಿಫ್ ಹಾಲ್ ಎಂಬ ಕಾಲೇಜಿನಲ್ಲಿ ಉಪ-ಪ್ರಿನ್ಸಿಪಾಲರ ಹುದ್ದೆ ದೊರೆಕಿತು. ಒಂದು ವರ್ಷದ ಅನಂತರ ಅಭಿಪ್ರಾಯ ಭೇದದಿಂದಾಗಿ ಕೆಲಸಕ್ಕೆ ರಾಜೀನಾಮೆ ಕೊಡಬೇಕಾದ ಸಂದರ್ಭ ಬಂತು. ಆಮೇಲೆ ಧಾರ್ಮಿಕ ಶ್ರದ್ಧೆ ಮತ್ತು ಅನು ಕಂಪಗಳು ಅವರ ಗಮನವನ್ನು ಭಾರತದ ಕಡೆ ಸೆಳೆದುವು. 'ನನ್ನ ಮನೆತನದವ ರಿಗೂ ಇಂಡಿಯಕ್ಕೂ ಹಳೆಯ ಸಂಬಂಧವಿತ್ತು. ಇದಕ್ಕಿಂತ ಹೆಚ್ಚಾಗಿ ನನ್ನಲ್ಲಿದ್ದ ಏನೋ ಒಂದು ಶಕ್ತಿ ನನ್ನನ್ನು ಆ ಕಡೆ ನೂಕುತ್ತಿತ್ತು. ನನ್ನ ಪೂರ್ವಿಕರು ಇಂಡಿಯದಲ್ಲಿ ಹಣವನ್ನು ಸಂಪಾದಿಸಿದ್ದರು. ನನ್ನ ದೇಶದವರು ಇಂಡಿಯಕ್ಕೆ ಹೋಗಿ ಅದನ್ನು ಶೋಷಿಸಿ, ಅದರ ಮೇಲೆ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದ್ದರು. ಈ ಕಾರಣ ಅದರ ಪ್ರಾಯಶ್ಚಿತ್ತಕ್ಕಾಗಿ ನಾನು ಇಂಡಿಯಾಕ್ಕೂ ಹೋಗಬೇಕೆನ್ನಿಸಿತು. ನನ್ನ ಮನೆತನದವರಲ್ಲಿ ಒಬ್ಬರಾದರೂ ಇಂಡಿಯದಿಂದ ತರುವುದನ್ನು ಬಿಟ್ಟುಕೊಡು ವುದಕ್ಕಾಗಿ ಅಲ್ಲಿ ಹೋಗಬೇಕೆನ್ನಿಸಿತು. ಹೋಗಿ ಬಡವರನ್ನು ಆಳುವ ಬದಲು ಅವರ ಸೇವೆ ಮಾಡಬೇಕು ಮತ್ತು ಆ ದೇಶದಲ್ಲಿ ಐಕ್ಯವಾಗಬೇಕು ಎಂದು ಅನ್ನಿಸಿತು. —ಎಂದು ತಮ್ಮ ಆತ್ಮಕಥೆಯಲ್ಲಿ ಎಲ್ವಿನ್ ತಿಳಿಸಿದ್ದಾರೆ. ಈ ಮಾತಿನ ಸಂಪೂರ್ಣ ಸತ್ಯತೆಗೆ ಅವರ ಜೀವನವೇ ಸಾಕ್ಷಿ. ಆಕ್ಸ್‌ಫರ್ಡಿನಲ್ಲಿದ್ದ ಸದವಕಾಶವನ್ನು ಬಿಟ್ಟು ಭಾರತಕ್ಕೆ ಹೋಗುವಂತೆ ಪ್ರೇರಿಸಿದ್ದು ಈ ಅರ್ಪಣ ಮನೋಧರ್ಮವೇ.

ಎಲ್ವಿನ್ ಕ್ರೈಸ್ತಪಾದ್ರಿಯಾಗಿ ಪೂನಾದಲ್ಲಿದ್ದ ಕ್ರೈಸ್ತ ಸೇವಾಸಂಘವೆಂಬ ಆಶ್ರಮಕ್ಕೆ ಬಂದು ಸೇರಿದರು (1926). ಸ್ವಲ್ಪ ಕಾಲದಲ್ಲೆ ಆ ಆಶ್ರಮದ ಮುಖ್ಯಸ್ಥ ಜಾಕ್ ವಿನ್ ಸ್ಲೋ ಅಧಿಕಾರವನ್ನು ಎಲ್ವಿನ್ನರಿಗೆ ವಹಿಸಿ ಇಂಗ್ಲೆಂಡಿಗೆ ತೆರಳಿದ. ಭಾರತದ

ಸ್ವಾತಂತ್ರ್ಯ ಹೋರಾಟದಲ್ಲಿ ಎಲ್ವಿನ್ನರಿಗೆ ಸಂಪೂರ್ಣ ಸಹಾನುಭೂತಿಯಿತ್ತು. ಆದ್ದರಿಂದ ತಮ್ಮ ಕ್ರೈಸ್ತ ಸೇವಾಸಂಘದ ಆಶ್ರಮದ ಮೇಲೆ ಕ್ರಾಂತಿಕಾರಕವಾದ ತ್ರಿವರ್ಣ ಧ್ವಜವನ್ನು ಅವರು ಹಾರಿಸಿದರು. ಸುಭಾಷ್‌ಚಂದ್ರ ಬೋಸ್ ಮತ್ತು ಸರ್ದಾರ್ ಪಟೇಲರ ಸಂಗಡ ನಿಕಟ ಸಂಬಂಧವನ್ನು ಬೆಳೆಸಿದರು. 1928ರಿಂದ 1930ರ ವರೆಗೆ ಗಾಂಧೀಜಿ ಸಂಗಡ ಹತ್ತಿರದ ಸಂಪರ್ಕವನ್ನಿಟ್ಟುಕೊಂಡು ಅವರ ಆಶ್ರಮಕ್ಕೆ ಆಗಾಗ ಹೋಗಿಬರುತ್ತಿದ್ದರು. ಗಾಂಧೀಜಿಯ ವಾತ್ಸಲ್ಯ ಮತ್ತು ಅಭಿಮಾನವನ್ನು ಎಲ್ವಿನ್ ಸಂಪೂರ್ಣವಾಗಿ ಪಡೆದಿದ್ದರು. ಮೀರಾಬೆನ್ ತಮ್ಮ ಮಗಳಾಗಿರುವಂತೆ ಎಲ್ವಿನ್ ತಮ್ಮ ಮಗ—ಎಂದು ಗಾಂಧೀಜಿ ಹೇಳಿದ್ದುಂಟು.

ಇದೇ ಕಾಲದಲ್ಲಿ ಸುಸಂಸ್ಕೃತರೂ ವಿದ್ಯಾವಂತರೂ ಆದ ಶ್ಯಾಮರಾವ್ ಹಿವಾಲೆ ಎಂಬವರು ಪೂನಾಕ್ಕೆ ಬಂದರು. ಅವರು ಎಲ್ವಿನ್ನರ ನೆಚ್ಚಿನ ಸ್ನೇಹಿತರಾಗಿ ಬಹು ದಿನಗಳವರೆಗೆ ಅವರ ಚಟುವಟಿಕೆಗಳಲ್ಲಿ ಸಹಭಾಗಿಗಳಾಗಿದ್ದರು. ಗಾಂಧೀಜಿಯವರ ಪ್ರಭಾವಕ್ಕೊಳಗಾದ ಮೇಲೆ ಎಲ್ವಿನ್ನರಿಗೆ ಒಂದು ಹಳ್ಳಿಯಲ್ಲಿ ಜೀವಿಸಿ ಜನಸಾಮಾನ್ಯರಂತೆ ಬಾಳುವ ಇಚ್ಛೆಯುಂಟಾಯಿತು. ಅದರಲ್ಲೂ ಪರಿಜನರೊಂದಿಗೆ ಇರುವ ಅಭಿಲಾಷೆಯಾಯಿತು. 1930ರಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲರ ಆಹ್ವಾನದಂತೆ ಗುಜರಾತಿನ ಕರನಿರಾಕರಣೆಯ ಚಳವಳಿಯ ವಿಷಯವಾಗಿ ಪೋಲೀಸರ ದೌರ್ಜನ್ಯದ ಬಗ್ಗೆ ವಿಚಾರಣೆ ನಡೆಸಿ ಒಂದು ವರದಿಯನ್ನು ಸಿದ್ಧಪಡಿಸಿದರು. ಅದು ಗುಜರಾತಿನ ಹಾಳೂರು ಎಂಬ ಹೆಸರಿನಲ್ಲಿ ಒಂದು ಸಣ್ಣ ಪುಸ್ತಕದ ರೂಪದಲ್ಲಿ ಪ್ರಕಟವಾಯಿತು. ಸರ್ದಾರ್ ಪಟೇಲರು ಎಲ್ವಿನ್ನರನ್ನು ಗಿರಿಜನರ ಕಡೆಗೆ ಆಸಕ್ತಿ ವಹಿಸುವಂತೆ ಪ್ರೇರೇಪಿಸಿದರು. 1931ರಿಂದ ಅವರ ಕಡೆಯ ದಿನಗಳವರೆಗೆ ಎಲ್ವಿನ್ನರು ಅವಿಶ್ರಾಂತವಾಗಿ ಗಿರಿಜನರ ಉನ್ನತಿಗೆ ದುಡಿದರು. 1932ರಲ್ಲಿ ಶ್ಯಾಮರಾಯರ ಸಂಗಡ ಮಧ್ಯಪ್ರಾಂತ್ಯದಲ್ಲಿ ಗೋಂಡ ಜನರ ಸಣ್ಣ ಹಳ್ಳಿಯಾದ ಕರಂಜಿಯ ಎಂಬ ಗ್ರಾಮದಲ್ಲಿ ನೆಲೆಸಿದರು. 1936ರಲ್ಲಿ ಅವರು ಸಂಪೂರ್ಣವಾಗಿ ಚರ್ಚಿನ ಸಂಬಂಧವನ್ನು ಕಡಿದುಹಾಕಿ ಸಮಾಜ ಕಾರ್ಯಕರ್ತರಾದರು. ಅವರು ಸ್ಥಾಪಿಸಿದ ಆಶ್ರಮದಲ್ಲಿ ಆಸ್ಪತ್ರೆ, ಶಾಲೆ, ಅತಿಥಿಗೃಹ ಮತ್ತು ಕುಷ್ಠರೋಗಿಗಳಿಗೆ ಮೀಸಲಾದ ಗುಡಿಸಲು—ಮೊದಲಾದುವುಗಳಿದ್ದುವು. ಕರಂಜಿಯದ ಅನುಭವಗಳನ್ನು ಲೀವ್ಸ್ ಆಫ್ ದಿ ಜಂಗಲ್ (ಕಾಡಿನ ಎಲೆಗಳು) ಎಂಬ ಗ್ರಂಥದಲ್ಲಿ ವಿವರಿಸಿರುವರು. ಈ ಪುಸ್ತಕಕ್ಕೆ ಫ್ರಾನ್ಸಿನ ಸುಪ್ರಸಿದ್ಧ ಸಾಹಿತಿಯಾದ ರೊಮೇನ್ ರೋಲಾನ್ ಮುನ್ನುಡಿ ಬರೆದಿದ್ದಾರೆ. ಹೀಗೆ ಎಲ್ವಿನ್ನರು ತಮ್ಮ ಜೀವನವೆಲ್ಲವನ್ನೂ ಗಿರಿಜನರ ಅಧ್ಯಯನದಲ್ಲಿ ಕಳೆದರು. ಅವರು ಪಠಾಣ್‌ಘರಿನ ಗೋಂಡ ಜನಾಂಗದ ಹುಡುಗಿಯೊಬ್ಬಳನ್ನು ಮದುವೆಯಾದರು. ಆಕೆಯ ಹೆಸರು ಲೀಲಾ. ಗಂಡನಿಗೆ ಆಕೆ ಪ್ರತಿಯೊಂದು ವಿಧದಲ್ಲಿಯೂ ಸಹಾಯಕಳಾಗಿದ್ದಳು. ಎಲ್ವಿನ್ನರಿಗೆ ಮೂರು ಗಂಡುಮಕ್ಕಳು. ಅವರ ಸಾಂಸಾರಿಕ ಜೀವನ ಬಹುವಾಗಿ ಆನಂದಮಯವಾಗಿತ್ತೆಂದು ಅವರೇ ಹೇಳಿದ್ದಾರೆ.

ಎಲ್ವಿನ್ನರು ಭಾರತಕ್ಕೆ ಬಂದಾಗ ಅವರಿಗೆ ವಿದ್ವತ್ತಿನ ಜೀವನ ದೂರವಾದಂತೆ ತೋರಿತಾದರೂ ಅವರ ಮೊದಲ ಹದಿನಾಲ್ಕು ವರ್ಷಗಳ ಸಂಶೋಧನೆಗಾಗಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯ ಅವರಿಗೆ ಡಿ.ಎಸ್‌ಸಿ. ಪ್ರಶಸ್ತಿ ಕೊಟ್ಟು ಗೌರವಿಸಿತು, ವಿದ್ವಜ್ಜೀವನದಲ್ಲಿ ತಮಗಿರುವ ಉತ್ಸುಕತೆಯನ್ನು ಅವರು ಹಲವು ಬಾರಿ ತಮ್ಮ ಆತ್ಮಕಥೆಯಲ್ಲಿ ತಿಳಿಸಿರುವರು. 'ನಾನು ಮುಖ್ಯವಾಗಿ ಪಂಡಿತ, ಸಂಶೋಧನೆ ಮಾಡುವ ಮನುಷ್ಯ' ಎಂದು ಹೇಳಿಕೊಂಡಿರುವರು.

ಎಲ್ವಿನ್ನರು ಜನರಲ್ಲಿ ಬೆರೆತು ಅವರನ್ನು ಅರ್ಥಮಾಡಿಕೊಂಡು ಹಲವಾರು ಗ್ರಂಥಗಳನ್ನು ರಚಿಸಿದರು. ದಿ ಬೈಗಾ ಎಂಬ ಗ್ರಂಥವನ್ನು ಬರೆಯಬೇಕಾದರೆ ಅವರು ಆ ಜನರ ಕೂಡ ಏಳು ವರ್ಷಗಳಿದ್ದರು. ಹಾಗೆ ಆಗೇರಿಯ ಜನಾಂಗದವರ ವಿಚಾರ ಬರೆಯಲು ಅವರ ಕೂಡ ಹತ್ತು ವರ್ಷಗಳ ನಿಕಟವಾದ ಸಂಬಂಧವನ್ನು ಹೊಂದಿದ್ದರು. ಮಹಾಕೋಸಲದ ಜನಪದ ಕಥೆಗಳ ಛತ್ತೀಸ್‌ಘರ್‌ನ ಜನಪದ ಗೀತೆಗಳು ಎಂಬ ಪುಸ್ತಕಗಳು ಹತ್ತು ವರ್ಷಗಳ ಅಧ್ಯಯನದ ಫಲ. ಜನಗಳನ್ನು ಅರ್ಥ ಮಾಡಿಕೊಂಡಂತೆ ಎಲ್ವಿನ್ ಅವರಲ್ಲಿ ತಲ್ಲೀನರಾಗುತ್ತಿದ್ದರು. 'ನನಗೆ ಮಾನವಶಾಸ್ತ್ರವೆಂದರೆ ಹೊರಗಡೆಯ ಕೆಲಸ ಅಷ್ಟೇ ಅಲ್ಲ; ನನ್ನ ಬಾಳೇ ಅದಾಗಿತ್ತು. ಜನರ ಮಧ್ಯೆ ನೆಲೆಸಿ, ಅವರೊಡನೆ ಬಾಳಿ, ಹೊರಗಿನವನೊಬ್ಬ ಎಷ್ಟರಮಟ್ಟಿಗೆ ಅವರೊಡನೆ ಬೆರೆಯಬಹುದೋ ಅಷ್ಟರಮಟ್ಟಿಗೆ ಬೆರೆತು ಹಲವಾರು ಗ್ರಂಥಗಳನ್ನು ಬರೆಯುವುದು ನನ್ನ ಕ್ರಮವಾಗಿತ್ತು' ಎಂಬುದಾಗಿ ಅವರೊಂದು ಕಡೆ ಬರೆದಿದ್ದಾರೆ. ಜನರ ಅಥವಾ ಸಮಾಜದ ಪುರೋಭಿವೃದ್ಧಿಯನ್ನು ಮನಸ್ಸಿನಲ್ಲಿಟ್ಟುಕೊಂಡು ಸಂಶೋಧನೆ ಮಾಡಿದರೆ, ಸಂಶೋಧನೆಯ ಮಟ್ಟ ತಗ್ಗುತ್ತದೆಂದು ಅವರು ಭಾವಿಸಿರಲಿಲ್ಲ. ಆದ್ದರಿಂದಲೇ ಅವರು ತಮ್ಮ ಸಂಶೋಧನೆಯ ಆಧಾರದ ಮೇಲೆ ಗಿರಿಜನರ ಅಭಿವೃದ್ಧಿಯ ನೀತಿಗಳನ್ನು ಸೂಚಿಸುತ್ತಿದ್ದರು.

ಎಲ್ವಿನ್ನರನ್ನು ಒರಿಸ್ಸ ಸರ್ಕಾರ 1944ನೆಯ ಇಸವಿಯಲ್ಲಿ ಗೌರವ ಮಾನವಶಾಸ್ತ್ರಜ್ಞರಾಗಿ ನೇಮಕ ಮಾಡಿತು. ಆಮೇಲೆ ಅವರು ಎರಡು ವರ್ಷ ಕಲ್ಕತ್ತೆಯಲ್ಲಿ ಭಾರತ ಸರ್ಕಾರದ ಮಾನವಶಾಸ್ತ್ರ ಇಲಾಖೆಯ ನಿರ್ದೇಶಕ ಡಾ॥ ಬಿ. ಸಿ. ಗುಹಾರವರ ಸಂಗಡ ಇದ್ದು ಅನಂತರ ಅಲ್ಲಿಂದ ಹಿಂತಿರುಗಿದರು. ಎರಡು ವರ್ಷಗಳಾದ ಅನಂತರ ಭಾರತ ಸರ್ಕಾರ ಅವರನ್ನು ನಿರ್ದೇಶಕರ ಕೆಲಸಕ್ಕೆ ಆಹ್ವಾನಿಸಿತಾದರೂ ಅವರು ಅದನ್ನು ಒಪ್ಪಲಿಲ್ಲ.

ಎಲ್ವಿನ್ನರು 1952ರಲ್ಲಿ ಭಾರತ ಸರ್ಕಾರದ ಕೋರಿಕೆಯಂತೆ ಇಂಡಿಯನ್ ಫ್ರಾಂಟಿಯರ್ ಅಡ್‌ಮಿನಿಸ್‌ಟ್ರೇಟಿವ್ ಸರ್ವಿಸ್ಸಿನ ಆಯ್ಕೆಯ ಸಮಿತಿಯ ಸದಸ್ಯರಾಗಿದ್ದರು. ಅನಂತರ ಪಂಡಿತ ನೆಹರೂರವರ ಅಭಿಲಾಷೆಯಂತೆ ನೀಫ (ಭಾರತದ ಈಶಾನ್ಯ ಗಡಿ ಪ್ರದೇಶ)ಆಡಳಿತದಲ್ಲಿ ಭಾಗವಹಿಸಿ ಆದಿವಾಸಿಗಳ ಬಗ್ಗೆ ಸಲಹೆಗಾರರಾದರು. ಮೊದಲು ಅವರನ್ನು ಮಾನವಶಾಸ್ತ್ರ ಸಲಹೆಗಾರರೆಂದು (ಆಂಥ್ರೊಪೊಲಾಜಿಕಲ್ ಕನ್ಸಲ್‌ಟೆಂಟ್) ಕರೆಯಲಾಯಿತು. ಒಂದು ವರ್ಷದ ಅನಂತರ ಗಿರಿಜನರಿಗೆ ಸಂಬಂಧಪಟ್ಟ ಸಲಹೆಗಾರರೆಂದು (ಅಡ್ವೈಸರ್ ಫಾರ್ ಟ್ರೈಬಲ್ ಅಫೇರ್ಸ್) ಕರೆಯಲಾಯಿತು. 1954ರಲ್ಲಿ ಅಸ್ಸಾಂ ಸರ್ಕಾರ ಎಲ್ವಿನ್ನರನ್ನು ಭಾರತದ ಪ್ರಜೆ ಎಂದು ಅಂಗೀಕರಿಸಿತು. ಅಲ್ಲಿಗೆ ಅವರ ಬಹುದಿನಗಳ ಅಭಿಲಾಷೆ ನೆರವೇರಿತು. ಅವರು ನೀಫ ವಿಚಾರವಾಗಿ ಕೆಲವು ಪುಸ್ತಕಗಳನ್ನು ಪ್ರಕಟಿಸಿದರು. ಗಿರಿಜನರ ಉಪಯೋಗಕ್ಕೆಂದು ಅವರಿಗೆ ತಿಳಿಯಬಹುದಾದ ರೀತಿಯಲ್ಲಿ ಗಾಂಧೀಜಿಯವರನ್ನು ಕುರಿತು ಬರೆದ ಗ್ರಂಥ ಬಹು ಸೊಗಸಾಗಿದೆ. ಆಮೇಲೆ ನಾನೂರು ಸಣ್ಣ ಕಥೆಗಳೊಳಗೊಂಡ ನೀಫಾದ ಕಟ್ಟುಕಥೆಗಳು ಎಂಬ ಪುಸ್ತಕವನ್ನು ಪ್ರಕಟಿಸಿದರು. ಇಂಡಿಯನ್ ನಾರ್ತ್ ಈಸ್ಟರ್ನ್ ಫ್ರಾಂಟಿಯರ್ ಇನ್ ದಿ ನೈನ್‌ಟೀಂತ್ ಸೆಂಚ್ಯುರಿ ಎಂಬ ಪುಸ್ತಕವನ್ನು ರಚಿಸಿದರು. ಇದರಲ್ಲಿ ಪ್ರವಾಸಿಗಳು, ಪಾದ್ರಿಗಳು ಮತ್ತು ಆಡಳಿತಗಾರರು ಆ ನಾಡಿನ ಬಗ್ಗೆ ತಿಳಿಸಿದ ಸ್ವಾರಸ್ಯವಾದ ವಿಷಯಗಳನ್ನು ಸಂಗ್ರಹಿಸಲಾಗಿದೆ. ಗಿರಿಜನರ ಕಲೆಯ ಬಗ್ಗೆ ನೀಫಾದ ಕಲೆ ಎಂಬ ಪುಸ್ತಕವನ್ನು ಬರೆದರು. ಬಹಳ ಜನ ಓದಿ ಮೆಚ್ಚಿದ ಪುಸ್ತಕವೆಂದರೆ ಎ ಫಿಲಾಸಫಿ ಫಾರ್ ನೀಫ (ನೀಫಾಕ್ಕೊಂದು ತತ್ತ್ವ). ಅನಂತರ ಎಲ್ವಿನ್ನರು ನಾಗಾಲ್ಯಾಂಡಿನ ಇತಿಹಾಸವನ್ನು ಕುರಿತು ಬರೆದ ಪುಸ್ತಕಕ್ಕೆ ರಾಷ್ಟ್ರಾಧ್ಯಕ್ಷರ ಬಹುಮಾನ ಬಂತು. ಎಲ್ವಿನ್ನರ ಕಾರ್ಯಕ್ಷೇತ್ರ ವಿಶಾಲವಾಯಿತು. ಅವರನ್ನು ಮಣಿಪುರ ಮತ್ತು ತ್ರಿಪುರಗಳಿಗೆ ಆದಿವಾಸಿಗಳ ಗೌರವ ಸಲಹೆಗಾರನನ್ನಾಗಿ ನೇಮಿಸಲಾಯಿತು.

1959ರಲ್ಲಿ ಗೃಹಮಂತ್ರಿಗಳಾದ ಗೋವಿಂದ ವಲ್ಲಭ ಪಂತರು ಎಲ್ವಿನ್ನರನ್ನು ಪಂಚವಾರ್ಷಿಕ ಯೋಜನೆಯಲ್ಲಿ ಗಿರಿಜನರಿರುವ ಸಾಮೂಹಿಕ ಅಭಿವೃದ್ಧಿ ಕ್ಷೇತ್ರಗಳ ವಿಚಾರವಾಗಿ ನಿಯೋಜಿತವಾದ ಒಂದು ಸಮಿತಿಯ ಅಧ್ಯಕ್ಷರನ್ನಾಗಿ ನೇಮಿಸಿದರು. 1960ರ ಮಾರ್ಚಿ ತಿಂಗಳಲ್ಲಿ ಐನೂರೈವತ್ತು ಪುಟಗಳನ್ನೊಳಗೊಂಡ ವರದಿಯನ್ನು ಎಲ್ವಿನ್ ಪಂತರಿಗೆ ಒಪ್ಪಿಸಿದರು. ಇದರಲ್ಲಿ ಗಿರಿಜನರ ವಿಚಾರವಾಗಿ ಅವರ ಅಭಿವೃದ್ಧಿಯ ನಾನಾಮುಖಗಳನ್ನು ಚರ್ಚಿಸಿ ಸಲಹೆಗಳನ್ನು ಕೊಡಲಾಗಿತ್ತು. ಗಿರಿಜನರನ್ನು ಒಲಿಸಿಕೊಳ್ಳಲು ಬೇಕಾದ ಮೂಲ ತತ್ತ್ವಗಳು ಎಂಬ ಪೀಠಿಕೆಯ ಭಾಗದಲ್ಲಿ ಗಿರಿಜನರಿಗೆ ಹೇಗೆ ಹಣವನ್ನು ವೆಚ್ಚಮಾಡಬೇಕು ಎನ್ನುವುದನ್ನು ಪ್ರಮುಖವಾಗಿ ಚರ್ಚಿಸಲಾಗಿತ್ತು. ಗಿರಿಜನರ ವಿಚಾರವಾಗಿ ಅನುಸರಿಸಬೇಕಾದ ನೀತಿಗೆ ಹೆಚ್ಚು ಗಮನ ಕೊಟ್ಟು ಅಮೂಲ್ಯವಾದ ಸಲಹೆಗಳನ್ನು ಮಾಡಲಾಗಿತ್ತು. ಈ ವರದಿಯ ಸಲಹೆಗಳ ಬಹು ಭಾಗವನ್ನು ಭಾರತದ ಸರ್ಕಾರ ಒಪ್ಪಿತು. 1960ರಲ್ಲಿ ಎಲ್ವಿನ್ನರನ್ನು ಅನುಸೂಚಿತ ಜಾತಿ ಮತ್ತು ಅನುಸೂಚಿತ ಆದಿಮಜನರ ಕಮಿಷನ್ನಿನ ಸದಸ್ಯರಾಗಿ ನೇಮಿಸಲಾಯಿತು. ಎಲ್ವಿನ್ 1961ರಲ್ಲಿ ಸರ್ದಾರ್ ವಲ್ಲಭಭಾಯಿ ಪಟೇಲರ ಸ್ಮಾರಕ ಭಾಷಣಗಳನ್ನು ಮಾಡಿದರು. ಪ್ರೇಮದ ತತ್ತ್ವ (ಎ ಫಿಲಾಸಫಿ ಆಫ್ ಲವ್) ಎಂಬುದೇ ಅವರ ಭಾಷಣಗಳ ವಿಷಯ.

1961ನೆಯ ವರ್ಷದ ಜನವರಿ ಇಪ್ಪತ್ತಾರನೆಯ ತಾರೀಖಿನಂದು ಭಾರತ ಸರ್ಕಾರ ಪದ್ಮಭೂಷಣ ಎಂಬ ಪ್ರಶಸ್ತಿಯನ್ನಿತ್ತು ಎಲ್ವಿನ್ನರನ್ನು ಸನ್ಮಾನಿಸಿತು.

ಸಾವಿರದೊಂಬೈನೂರ ಅರವತ್ತನೆಯ ವರ್ಷದಿಂದಲೇ ಎಲ್ವಿನ್ನರ ಆರೋಗ್ಯ ಕೆಟ್ಟಿತ್ತು. ಆದರೂ ಅದನ್ನು ಲೆಕ್ಕಿಸದೆ ಅವರು ಆದಿವಾಸಿಗಳ ಅಭಿವೃದ್ಧಿಗೆ ದುಡಿಯುತ್ತಿದ್ದರು. 1964ರ ಫೆಬ್ರವರಿ 21ನೆಯ ತಾರೀಖಿನ ಸಂಜೆ ಇಂದಿರಾ ಗಾಂಧಿಯವರನ್ನು ನೋಡಿ ಅವರ ಸಂಗಡ ತಮ್ಮ ಮುಂದಿನ ಕಾರ್ಯಕ್ರಮಗಳನ್ನು ಚರ್ಚಿಸಿದರು. ಮಾರನೆಯ ದಿನ ದೆಹಲಿಯಲ್ಲಿ ಅವರು ಮೃತರಾದರು. ಅವರ ಮೃತ್ಯುವಿನಿಂದ ಮಾನವಶಾಸ್ತ್ರಕ್ಕೆ ಬಹಳ ದೊಡ್ಡ ನಷ್ಟವಾಯಿತು. ಅದರಲ್ಲೂ ಭಾರತಕ್ಕೆ, ಗಿರಿಜನರಿಗೆ ಆದ ನಷ್ಟ ಅಪಾರ.

ಆದಿವಾಸಿಗಳೆಂದರೆ ತೊಂದರೆ ಕೊಡುವ ಕ್ರೂರ ಜನರೆಂಬ ಅಭಿಪ್ರಾಯವಿತ್ತು. ನರಬಲಿ ಕೊಡುವ, ಮನುಷ್ಯರನ್ನು ಬೇಟೆಯಾಡುವ ಭಯಂಕರ ಮಾನವರೆಂದು ಜನ ಅವರನ್ನು ದೂರ ಇರಿಸಿದ್ದರು. ಅವರು ಭಿನ್ನರೀತಿಯ ಮನುಷ್ಯರು, ಸ್ವಲ್ಪ

ಕರುಣೆಗೆ ಅರ್ಹರೇ ಹೊರತು ಸಮಾಜದಲ್ಲಿ ಗೌರವಕ್ಕೆ ಪಾತ್ರರಲ್ಲ ಎಂಬ ಅಭಿಪ್ರಾಯ ಸಾರ್ವತ್ರಿಕವಾಗಿತ್ತು. ಅವರ ಬಗ್ಗೆ ಸರಿಯಾದ ರೀತಿಯಲ್ಲಿ ವರ್ತಿಸಿ ಅವರನ್ನು ಗೌರವ ವಿಶ್ವಾಸಗಳಿಂದ ಕಾಣಬೇಕಾದ ಅಗತ್ಯವನ್ನು ಎಲ್ವಿನ್ನರು ಎಲ್ಲರಿಗೂ ಅರಿವು ಮಾಡಿದರು.

ಗಿರಿಜನರಲ್ಲಿರುವ ವೈವಿಧ್ಯವನ್ನು ಕಾಪಾಡುವುದು ಅಗತ್ಯ. ಅವರ ಸಂಸ್ಕೃತಿ, ಅವರ ಕಲೆ ಬಹಳ ಅಮೂಲ್ಯವಾದುವು. ಅವನ್ನು ಗೌರವಿಸಬೇಕು. ಅವರು ಈ ದೇಶದ ಪ್ರಜೆಗಳೆಂಬ ಭಾವನೆಯನ್ನು ಬೆಳಸಬೇಕು. ಗಿರಿಜನರು ತಮ್ಮ ವೈಶಿಷ್ಟ್ಯ, ಜೀವನದ ಆನಂದಗಳನ್ನು ಉಳಿಸಿಕೊಳ್ಳಲು ಸಹಾಯಮಾಡುವುದು ಅಗತ್ಯ. ಅವರಿಗೆ ಅನ್ನ ಆರೋಗ್ಯ, ಸಂಚಾರ ಸೌಲಭ್ಯ, ತಿಳಿವಳಿಕೆ ನಾಗರಿಕತೆಗಳ ಅಗತ್ಯವಿದೆ. ಅವನ್ನೊದಗಿಸಿ ಅವರ ಸಂಸ್ಕೃತಿಯನ್ನು ರಕ್ಷಿಸಿ ಪೋಷಿಸುವ ಅಗತ್ಯವೂ ಇದೆ—ಇದು ಎಲ್ವಿನ್ನರ ಸಂದೇಶ.

ವೆರಿಯರ್ ಎಲ್ವಿನ್ನರು ಅನೇಕ ಗ್ರಂಥಗಳನ್ನು, ಸಂಶೋಧನ ಲೇಖನಗಳನ್ನು ಬರೆದಿರುವರು. ಅವರ ಪುಸ್ತಕಗಳಲ್ಲಿ ಕೆಲವು ಏಕವಿಷಯಕ ನಿಬಂಧಗಳಿವೆ (ಮಾನೊಗ್ರ್ಯಾಫ್ಸ್), ಇವು ಗಿರಿಜನರನ್ನು ಕುರಿತು ಬರೆದವು. ಇವುಗಳಲ್ಲದೆ ಎರಡು ಕಾದಂಬರಿಗಳನ್ನು ಬರೆದಿರುವರು. ಅವರ ಪುಸ್ತಕಗಳಲ್ಲಿ ಮುಖ್ಯವಾದವು ಈ ಕೆಲವು : ದಿ ಬೈಗ (1939); ದಿ ಅಗಾರಿಯ (1942); ಮರಿಯ ಮರ್ಡರ್ ಅಂಡ್ ಸೂಯಿಸೈಡ್ (1943); ಫೋಕ್ ಸಾಂಗ್ಸ್ ಆಫ್ ಛತ್ತೀಸ್‌ಘರ್ (1946); ದಿ ಮುರಿಯ ಅಂಡ್ ದೇರ್ ಗೌಟಲ್ (1947); ದಿ ಟ್ರೈಬಲ್ ಆರ್ಟ್ ಆಫ್ ಮಿಡ್ಲ್ ಇಂಡಿಯ (1951); ದಿ ರಿಲಿಜನ್ ಆಫ್ ಆನ್ ಇಂಡಿಯನ್ ಟ್ರೈಬ್ (1955); ಮಿಕ್ಸ್ ಆಫ್ ದಿ ನಾರ್ತ್ ಈಸ್ಟರ್ನ್ ಫ್ರಾಂಟಿಯರ್ ಆಫ್ ಇಂಡಿಯ (1959); ದಿ ಲೀವ್ಸ್ ಫ್ರಾಂ ದಿ ಜಂಗಲ್ (1958); ದಿ ಆರ್ಟ್ ಆಫ್ ದಿ ನಾರ್ತ್ ಈಸ್ಟರ್ನ್ ಫ್ರಾಂಟಿಯರ್ ಆಫ್ ಇಂಡಿಯ (1959); ಎ ಫಿಲಾಸಫಿ ಫಾರ್ ನೀಫ (1961); ಎ ಫಿಲಾಸಫಿ ಆಫ್ ಲವ್ (1962).

1964ರಲ್ಲಿ ಪ್ರಕಟವಾದ ದಿ ಟ್ರೈಬಲ್ ವರ್ಲ್ಡ್ ಆಫ್ ವೆರಿಯರ್ ಎಲ್ವಿನ್ ಎಂಬುದು ಎಲ್ವಿನ್ನರ ಆತ್ಮಕಥೆ. ಫುಲ್‌ಮಟ್ ಆಫ್ ದಿ ಹಿಲ್ಸ್ (1937), ಎ ಕ್ಲೌಡ್ ದಟ್ ಈಸ್ ಡ್ರ್ಯಾಗೂನಿಷ್ (1938)—ಎಂಬುವು ವನ್ಯಜೀವನವನ್ನು ವಸ್ತುವನ್ನಾಗುಳ್ಳ ಎರಡು ಕಾದಂಬರಿಗಳು. ದಿ ಕಿಂಗ್‌ಡಂ ಆಫ್ ದಿ ಯಂಗ್ ಎಂಬುದು ದಿ ಮುರಿಯ ಅಂಡ್ ದೇರ್ ಗೌಟಲ್ ಎಂಬುದರ ಸಂಗ್ರಹ. ಶ್ಯಾಮರಾವ್ ಹಿವಾಲೆಯವರೊಂದಿಗೆ ಎಲ್ವಿನ್ ಎರಡು ಗ್ರಂಥಗಳನ್ನು ರಚಿಸಿದ್ದಾರೆ; ಸಾಂಗ್ಸ್ ಆಫ್ ದಿ ಫಾರೆಸ್ಟ್ (1935), ದಿ ಫೋಕ್ ಸಾಂಗ್ಸ್ ಆಫ್ ಮೈಕಲ್ ಹಿಲ್ಸ್ (1944).

ತಮ್ಮ ಸಂಶೋಧನಗಳಿಂದಾಗಿ ಎಲ್ವಿನ್ನರು ದಿ ವೆಲ್‌ಕಮ್ ಮೆಡಲ್ (1943), ಎಸ್. ಸಿ. ರಾಯ್ ಮೆಡಲ್ (1945), ರಿವರ್ಸ್ ಮೆಮೋರಿಯಲ್ ಮೆಡಲ್ (1948), ಆನನ್ ಡೇಲ್ ಮೆಡಲ್ (1952), ದಾದಾಭಾಯ್ ನವ್ರೋಜಿ ಪ್ರೈಸ್ (1961) ಮೊದಲಾದ ಪದಕ, ಪಾರಿತೋಷಕಗಳನ್ನು ಪಡೆದಿದ್ದಾರೆ.

ಎಲ್ವಿನ್ನರು ತಮ್ಮ ಪುಸ್ತಕಗಳಲ್ಲಿ ಏನನ್ನು ಬರೆದರೋ ಆ ತತ್ತ್ವಗಳನ್ನು ಕಾರ್ಯರೂಪಕ್ಕೆ ತರಲು ಕೊನೆಯ ವರೆಗೂ ಶ್ರಮಿಸಿದರು. ತಮ್ಮ ಮೂವತ್ತು ವರ್ಷಗಳಿಗೂ ಮೇಲ್ಪಟ್ಟ ಸೇವಾಜೀವನದಲ್ಲಿ ಭಾರತದ ಗಿರಿಜನರ ಅಭಿವೃದ್ಧಿಗೆ ಶ್ರಮಿಸಿದರು. ಭಾರತದ ಗೃಹಮಂತ್ರಿಗಳಾಗಿದ್ದ ಗೋವಿಂದ ವಲ್ಲಭ ಪಂತರು ಎಲ್ವಿನ್ನರ ಕಾರ್ಯಗಳ ಬಗ್ಗೆ ಹೇಳಿದ ಮಾತುಗಳು ಅವರು ಸಲ್ಲಿಸಿದ ಮಹತ್ಕಾರ್ಯಗಳನ್ನು ತಿಳಿಸುತ್ತವೆ: 'ಗಿರಿಜನರ ವಿಚಾರವಾಗಿ ಸಾರ್ವತ್ರಿಕವಾದ ಒಳ್ಳೆಯ ಅಭಿಪ್ರಾಯ ಬರುವಂತೆ ಇಡೀ ದೇಶದಲ್ಲಿ ದೊಡ್ಡ ಕೆಲಸ ಮಾಡಿದವರು ಡಾ. ಎಲ್ವಿನ್ ಅವರು. ಆದಿವಾಸಿಗಳು ಕೇವಲ ಹಿಂದುಳಿದವರಲ್ಲ, ಅವರಲ್ಲಿ ಕಲೆ, ಸಂಸ್ಕೃತಿ ಇವೆ ಎಂಬುದನ್ನು ಅವರು ತೋರಿಸಿಕೊಟ್ಟಿದ್ದಾರೆ. ಅವರು ಹೀಗೆ ಮಾಡಿದ್ದರಿಂದ ದೇಶದ ಧೋರಣೆಯನ್ನು ರೂಢಿಸಿದಂತಾಯಿತು.' (ಎಚ್.ಎಂ.ಎಸ್.)

**ಎಲ್‌ವುಡ್, ಚಾರಲ್ಸ್ ಎ :** 1873-1946. ಅಮೆರಿಕ ಸಂಯುಕ್ತ ಸಂಸ್ಥಾನದ ಮನೋವೈಜ್ಞಾನಿಕ ಸಮಾಜಶಾಸ್ತ್ರ ಪ್ರವರ್ತಕ. ಜನನ—ನ್ಯೂಯಾರ್ಕಿನ ದಕ್ಷಿಣಕ್ಕೆ ಸುಮಾರು ಹದಿನಾರು ಮೈಲಿ ದೂರದಲ್ಲಿರುವ ಆಗ್ಡೆನ್ಸ್‌ಬರ್ಗ್‌ನಲ್ಲಿ, 1873ರ ಜನವರಿ 26ರಂದು. ಅಲ್ಲಿನ ಫ್ರಿ ಆಕೆಡಮಿಯಲ್ಲಿ ಚಿಕ್ಕಂದಿನ ವಿದ್ಯಾಭ್ಯಾಸ. ಅನಂತರ ಈತ ನ್ಯಾಯಶಾಸ್ತ್ರದ ಅಧ್ಯಯನ ಮಾಡುವ ಉದ್ದೇಶದಿಂದ ಕಾರ್ನೆಲ್ ವಿಶ್ವವಿದ್ಯಾಲಯವನ್ನು ಸೇರಿದ. ಅಲ್ಲಿ ಇವನಿಗೆ ಸುಪ್ರಸಿದ್ಧ ಸಮಾಜಶಾಸ್ತ್ರಜ್ಞ ಎಡ್ವರ್ಡ್ ಎ. ರಾಸನ ಪರಿಚಯವಾಯಿತು. ಆಗತಾನೇ ಆತ ತನ್ನ ಪಾಂಡಿತ್ಯವೃತ್ತಿಯ ಆರಂಭದೆಸೆಯಲ್ಲಿದ್ದು, ಅರ್ಥಶಾಸ್ತ್ರದ ಅಧ್ಯಾಪಕನಾಗಿದ್ದ. ರಾಸನ ಪ್ರಭಾವದಿಂದ ಎಲ್‌ವುಡ್‌ನ ಜೀವನದ ಗತಿಯೇ ಬದಲಾಯಿತು. ನ್ಯಾಯಶಾಸ್ತ್ರಾಭ್ಯಾಸದ ಯೋಚನೆ ಬಿಟ್ಟು ಈತ ಸಮಾಜವಿಜ್ಞಾನವನ್ನಭ್ಯಸಿಸುವ ಮನಸ್ಸು ಮಾಡಿದ. ಸಮಾಜಶಾಸ್ತ್ರ ಅರ್ಥಶಾಸ್ತ್ರಗಳಲ್ಲಿ ವಿಶೇಷ ಜ್ಞಾನ ಸಂಪಾದಿಸಿಕೊಂಡ. ಜೊತೆಗೆ ಸಂಖ್ಯಾಶಾಸ್ತ್ರ, ಜನಾಂಕಶಾಸ್ತ್ರ (ಡಿಮಾಗ್ರಫಿ), ರಾಜ್ಯಶಾಸ್ತ್ರಗಳನ್ನೂ ಅಧ್ಯಯನ ಮಾಡಿದ. ಈ ನಾನಾ ಶಾಸ್ತ್ರಗಳನ್ನು ಈತನಿಗೆ ಬೋಧಿಸಿದವರೆಲ್ಲ ಸಮಾಜ ಸುಧಾರಣೆಯಲ್ಲಿ ಒಲವುಳ್ಳವರಾಗಿದ್ದದ್ದರಿಂದ ಎಲ್‌ವುಡ್‌ನೂ ಇದೇ ಬಗೆಯ ಒಲವು ತಳೆದುಕೊಂಡ. ಜನಸಾಮಾನ್ಯರ ಸ್ಥಿತಿ ಸುಧಾರಣೆಯೇ ಸಮಾಜವಿಜ್ಞಾನದ ಗುರಿಯಾಗಿರಬೇಕೆಂಬುದಾಗಿ ಇವನಿಗೆ ಮನವರಿಕೆಯಾಯಿತು. ಈತ ಪದವೀಧರನಾದದ್ದು ಇದೇ ಕಾಲದಲ್ಲಿ (1896).

ಅನಂತರ ಎಲ್‌ವುಡ್ ಷಿಕಾಗೋ ವಿಶ್ವವಿದ್ಯಾಲಯಕ್ಕೆ ಹೋಗಿ ಅಲ್ಲಿ ಥಾಮಸ್, ಮೀಡ್, ಡ್ಯೂಯಿ ಇವರಲ್ಲಿ ಅಧ್ಯಯನ ಮುಂದುವರಿಸಿದ. ಸಾಮಾಜಿಕ ಮನಶ್ಶಾಸ್ತ್ರ, ವ್ಯಾವಹಾರಿಕತತ್ತ್ವಶಾಸ್ತ್ರ, ಸಮಾಜ ಸುಧಾರಣೆ—ಮುಂತಾದವು ಈತನ ವಿಶೇಷ ಸಂಶೋಧನೆಯ ವಿಷಯಗಳಾದುವು. 1897–98ರಲ್ಲಿ ಬರ್ಲಿನ್ ವಿಶ್ವವಿದ್ಯಾಲಯದಲ್ಲಿ ಐತಿಹಾಸಿಕ ಮತ್ತು ಸುಧಾರಣೆಯ ಅರ್ಥಶಾಸ್ತ್ರ, ತತ್ತ್ವಶಾಸ್ತ್ರ, ನೀತಿಶಾಸ್ತ್ರ—ಇವನ್ನು ಅಭ್ಯಾಸಮಾಡಿ ಮತ್ತೆ ಚಿಕಾಗೋಗೆ ಬಂದು ತನ್ನ ಪ್ರೌಢ ಪ್ರಬಂಧವಾದ ಸಂ ಪಾಲೆಗೊಮೆನ ಟು ಸೋಷಿಯಲ್ ಸೈಕಾಲೊಜಿಯನ್ನು ಸಿದ್ಧಪಡಿಸಿದ (1899). ಅಮೆರಿಕನ್ ಜರ್ನಲ್ ಆಫ್ ಸೋಷಿಯಾಲೊಜಿಯಲ್ಲಿ ಪ್ರಕಟವಾದ ಈ ಪ್ರಬಂಧ ಶುದ್ಧ ಮನಶ್ಶಾಸ್ತ್ರ ತತ್ತ್ವಗಳ ಆಧಾರದ ಮೇಲೆ ಸಾಮಾಜಿಕ ಮನಶ್ಶಾಸ್ತ್ರದ ಪ್ರಥಮ ಪ್ರತಿಪಾದನೆ ಎನ್ನಬಹುದು.

ಮಿಸೂರಿ ವಿಶ್ವವಿದ್ಯಾಲಯದಲ್ಲಿ ಹೊಸದಾಗಿ ಸ್ಥಾಪಿತವಾದ ಸಮಾಜಶಾಸ್ತ್ರ ಪ್ರಾಧ್ಯಾಪಕ ಹುದ್ದೆಯಲ್ಲಿ ಎಲ್‌ವುಡ್ ನೇಮಕವಾದ (1900). ಅಲ್ಲೇ ಮೂವತ್ತು ವರ್ಷಕಾಲ ಇದ್ದು, ಸಮರ್ಥ ಶಿಷ್ಯರನೇಕರನ್ನು ತಯಾರಿಸಿದ. ಇವರ ಪೈಕಿ ರಾಯಿಟರ್, ಬರ್ನಾರ್ಡ್, ಬ್ಲೂಮರ್ ಇವರು ಮುಖ್ಯರು. ಎಲ್‌ವುಡ್ ಈ ವಿಶ್ವವಿದ್ಯಾಲಯವನ್ನು ಸೇರಿದಾಗ ಸಮಾಜಶಾಸ್ತ್ರವನ್ನು ಅಧ್ಯಯನಕ್ಕಾಗಿ ಆಯ್ಕೆಮಾಡಿಕೊಂಡಿದ್ದವರು ಸುಮಾರು ಮೂವತ್ತು ಮಂದಿ ಮಾತ್ರ. ಇವನು ಈ ವಿಶ್ವವಿದ್ಯಾಲಯವನ್ನು ಬಿಡುವ ವೇಳೆಗೆ ಇಲ್ಲಿ 1,500 ವಿದ್ಯಾರ್ಥಿಗಳಿಗೆ ಅಧ್ಯಯನಸೌಲಭ್ಯವಿತ್ತು. ಡ್ಯೂಕ್ ವಿಶ್ವವಿದ್ಯಾಲಯದಲ್ಲಿ ಸಮಾಜಶಾಸ್ತ್ರದ ಇಲಾಖೆಯೊಂದನ್ನು ಹೊಸದಾಗಿ ತೆರೆದು ಅಭಿವೃದ್ಧಿ ಪಡಿಸಬೇಕೆಂದು ಆ ವಿಶ್ವವಿದ್ಯಾಲಯದಿಂದ 1930ರಲ್ಲಿ ಬಂದ ಆಹ್ವಾನದಂತೆ ಈತ ಅಲ್ಲಿಗೆ ಹೋಗಿ, ತನ್ನ ಅಂತ್ಯಕಾಲದವರೆಗೂ ಅಲ್ಲೇ ಇದ್ದ.

ಎಲ್‌ವುಡ್ 1912ರಲ್ಲಿ ಪ್ರಕಟಿಸಿದ ಸೋಷಿಯಾಲೊಜಿ ಇನ್ ಇಟ್ಸ್ ಸೈಕೊಲಾಜಿಕಲ್ ಆಸ್ಪೆಕ್ಟ್ಸ್ ಎಂಬುದು ಮನೋವೈಜ್ಞಾನಿಕ ಸಮಾಜಶಾಸ್ತ್ರದ ಕ್ಷೇತ್ರದಲ್ಲೊಂದು ಮಹತ್ತ್ವದ ಗ್ರಂಥ. ಮಾನವ ವರ್ತನೆಗೆ ಮನೋವೈಜ್ಞಾನಿಕ ವ್ಯಾಖ್ಯಾನದ ಪ್ರಯತ್ನವಾಗಿರುವ ಈ ಗ್ರಂಥದಲ್ಲಿ ವಿಕಾಸವಾದ, ಪ್ರಾಣಿಶಾಸ್ತ್ರ, ನರರೋಗಶಾಸ್ತ್ರ, ಕ್ರಿಯಾತ್ಮಕ ಮನಶ್ಶಾಸ್ತ್ರ, ಸಾಮಾಜಿಕ ಮನಶ್ಶಾಸ್ತ್ರ ಮುಂತಾದ ನಾನಾ ಕ್ಷೇತ್ರಗಳ ಸಂಗಮವಾಗಿದೆ. ಈಗ ಎಲ್‌ವುಡ್‌ನ ಗ್ರಂಥವನ್ನೂ ಮೀರಿಸಿದ ಕೃತಿಗಳು ಹಲವಾರಿವೆಯಾದರೂ ಆಗಿನ ಕಾಲದಲ್ಲಿ ಈ ಕ್ಷೇತ್ರದಲ್ಲಿ ಇದನ್ನು ಸರಿಗಟ್ಟುವ ಗ್ರಂಥ ಇನ್ನೊಂದಿರಲಿಲ್ಲ.

ಒಂದನೆಯ ಮಹಾಯುದ್ಧದ ಕಾಲದಿಂದೀಚೆ ಎಲ್‌ವುಡ್ ಧಾರ್ಮಿಕ ಹಾಗೂ ಸಾಂಸ್ಕೃತಿಕ ವಿಚಾರಗಳಲ್ಲಿ ಹೆಚ್ಚು ಆಸಕ್ತಿ ತಳೆದ. ಇವುಗಳ ಅಂತರಂಗಗಳನ್ನು ಬೆದಕಿ ನೋಡುವ ಪ್ರಸಕ್ತಿ ಬೆಳೆಯಿತು. ಆದ್ದರಿಂದ 1917ರಲ್ಲಿ ಇಂಟ್ರೊಡಕ್ಷನ್ ಟು ಸೋಷಿಯಲ್ ಸೈಕಾಲೊಜಿಯನ್ನೂ 1925ರಲ್ಲಿ ಸೈಕಾಲೊಜಿ ಆಫ್ ಹ್ಯೂಮನ್ ಸೊಸೈಟಿಯನ್ನೂ ಈತ ಬರೆದ. ಈ ಪುಸ್ತಕಗಳು ಈತನ ಹಿಂದಿನ ಪುಸ್ತಕದಷ್ಟು ಮಹತ್ತ್ವದವೆನ್ನಲಾಗುವುದಿಲ್ಲ.1927ರಲ್ಲಿ ಎಲ್‌ವುಡ್ ಬರೆದ ಕಲ್ಚರಲ್ ಎವಲ್ಯೂಷನ್; ಎ ಸ್ಟಡಿ ಆಫ್ ಸೋಷಿಯಲ್ ಆರಿಜಿನ್ ಅಂಡ್ ಡೆವಲಪ್‌ಮೆಂಟ್ ಎಂಬ ಪುಸ್ತಕದಲ್ಲೂ ಸಾಂಸ್ಕೃತಿಕ, ಮಾನವಶಾಸ್ತ್ರದ ಪ್ರಾಮುಖ್ಯದ ಪ್ರತಿಪಾದನೆಯಿದೆ. ಸಾಮಾಜಿಕ ಪ್ರಕ್ರಿಯೆಗಳನ್ನು ಸಾಂಸ್ಕೃತಿಕ ಧಾರ್ಮಿಕ ದೃಷ್ಟಿಯಿಂದ ನೋಡುವ ಈ ಅಭ್ಯಾಸವನ್ನು ಎಲ್‌ವುಡ್ ತನ್ನ ಕೊನೆಗಾಲದವರೆಗೂ ಉಳಿಸಿಕೊಂಡಿದ್ದ. ಈ ಬಗ್ಗೆ ಇನ್ನೊಂದು ಉದ್ಗ್ರಂಥವನ್ನೇ ಬರೆದು ಸಿದ್ಧಪಡಿಸಿದ್ದ. ಆದರೆ ಅದು ಪ್ರಕಟವಾಗಲಿಲ್ಲ.

1933ರಲ್ಲಿ ಪ್ರಕಟವಾದ ಮೆಥಡ್ಸ್ ಇನ್ ಸೋಷಿಯಾಲೊಜಿ, ಎ ಕ್ರಿಟಿಕಲ್ ಸ್ಟಡಿ ಎಂಬುದು ಇನ್ನೊಂದು ಗಮನಾರ್ಹ ಗ್ರಂಥ. ಸಮಾಜಶಾಸ್ತ್ರ ಕ್ಷೇತ್ರದಲ್ಲಿ ಆ ಕಾಲದಲ್ಲಿ ಪ್ರಚಲಿತವಿದ್ದ ಕೆಲವು ಅಪಾಯಕಾರಿ ಪ್ರವೃತ್ತಿಗಳನ್ನು ಎಲ್‌ವುಡ್ ಇಲ್ಲಿ ಎತ್ತಿ ತೋರಿಸಿದ್ದಾನೆ. ಸಮಾಜ ಸುರಕ್ಷೆ ಮತ್ತು ಸಾಮಾಜಿಕ ಮೌಲ್ಯಗಳ ನಿರಾಕರಣೆ, ಸಮಾಜಶಾಸ್ತ್ರದ ಅಧ್ಯಯನಕ್ಕೆ ಪ್ರಾಕೃತಿಕ ವಿಜ್ಞಾನ ವಿಧಾನಗಳ ಅನ್ವಯ ಮುಂತಾದವು ಸಮಾಜಶಾಸ್ತ್ರದ ನಿಜವಾದ ಸ್ವರೂಪವನ್ನು ಮುಸಕುಮಾಡುವುವೆಂದು ಎಲ್‌ವುಡ್ ಈ ಪುಸ್ತಕದಲ್ಲಿ ಎಚ್ಚರಿಸಿದ್ದಾನೆ.

1910ರಲ್ಲಿ ಎಲ್‌ವುಡ್ ಸಮಾಜಶಾಸ್ತ್ರವನ್ನು ಕುರಿತು ಬರೆದ ಪಠ್ಯ ಪುಸ್ತಕ ಆ ಬಗೆಯ ಪುಸ್ತಕಗಳಲ್ಲಿ ಬಲು ಪ್ರಸಿದ್ಧವಾದದ್ದು. ಎಲ್‌ವುಡ್‌ನಿಗೆ ಪ್ರಾಯೋಗಿಕ ಸಮಾಜಶಾಸ್ತ್ರದಲ್ಲಿ ಎಷ್ಟೊಂದು ಆಸಕ್ತಿಯಿತ್ತೆಂಬುದನ್ನು ಇದು ತೋರಿಸುತ್ತದೆ. ಅನಂತರ ಎಲ್‌ವುಡ್ ಈ ಬಗೆಯ ಅನೇಕ ಪಠ್ಯ ಪುಸ್ತಕಗಳನ್ನು ಬರೆದ. ಸಾಮಾಜಿಕ

ನೀತಿಶಾಸ್ತ್ರದಲ್ಲಿ ಈತ ತಳೆದಿದ್ದ ಆಸಕ್ತಿಯ ಫಲವಾಗಿ ಈ ಬಗ್ಗೆಯೂ ಅನೇಕ ಪುಸ್ತಕಗಳನ್ನು ಬರೆದ. ಬಾಲ್ಯದ ಧಾರ್ಮಿಕ ಅನುಭವಗಳಿಂದಾಗಿ ಈತನ ದೃಷ್ಟಿಯಲ್ಲಿ ಕ್ರೈಸ್ತಧರ್ಮಕ್ಕೆ ಹೆಚ್ಚಿನ ಪ್ರಾಶಸ್ತ್ಯವಿತ್ತು. ಧರ್ಮಪುನರ‍್ರಚನೆ, ಕ್ರೈಸ್ತಧರ್ಮ ಮತ್ತು ಸಮಾಜವಿಜ್ಞಾನ ಮುಂತಾದ ವಿಚಾರಗಳನ್ನು ಕುರಿತು ಎಲ್‌ವುಡ್ ಬರೆದ ಪುಸ್ತಕಗಳು ಬಲು ಜನಪ್ರಿಯವಾದವು.

ಅನಾರೋಗ್ಯದ ನಿಮಿತ್ತ ಎಲ್‌ವುಡ್ 1927ರಲ್ಲಿ ಮಿಸೂರಿ ವಿಶ್ವವಿದ್ಯಾಲಯದಿಂದ ರಜೆ ಪಡೆದು ಫ್ರಾನ್ಸ್, ಇಟಲಿ, ಆಸ್ಟ್ರಿಯ ಮುಂತಾದ ದೇಶಗಳಲ್ಲಿ ಸಂಚರಿಸಿ, ಅಲ್ಲಿಯ ಸಮಾಜಶಾಸ್ತ್ರಜ್ಞರ ಪರಿಚಯ ಮಾಡಿಕೊಂಡ. ಇದರಿಂದ ಇವನ ಅನುಭವ ಹೆಚ್ಚು ಆಳವಾಯಿತು. 1935ರಲ್ಲಿ ಈತ ವಿಶ್ವಸಮಾಜಶಾಸ್ತ್ರಜ್ಞರ ಸಂಸ್ಥೆಯ ಅಧ್ಯಕ್ಷನಾಗಿ ಚುನಾಯಿತನಾದ.

ವಿಶ್ವದ ಎಲ್ಲ ದೇಶಗಳ ಸುರಕ್ಷತೆ ಆವಶ್ಯಕವೆಂದೂ ಅಂತರರಾಷ್ಟ್ರೀಯ ಸಂಸ್ಥೆಗಳು ಇದಕ್ಕಾಗಿ ಶ್ರಮಿಸಬೇಕೆಂದೂ ಎಲ್‌ವುಡ್ ತನ್ನ ಕೊನೆಯ ದಿನಗಳಲ್ಲಿ ಸಾರಿದ. ಜನರೆಲ್ಲ ವಿದ್ಯಾವಂತರೂ ನಿಪುಣರೂ ದಾರಿದ್ರ್ಯದೂರರೂ ಆದಾಗ ಮಾತ್ರವೇ ಸುರಕ್ಷತೆ ಭದ್ರತೆಗಳು ಸಾಧ್ಯವೆಂಬುದು ಈತನ ದೃಢ ನಂಬಿಕೆಯಾಗಿತ್ತು. ಯುದ್ಧದಿಂದ ವಿಶ್ವದ ಹಿತಕ್ಕೆ ಧಕ್ಕೆಯೊದಗುವುದೆಂದೂ ಯುದ್ಧಕ್ಕೆ ಅಮೆರಿಕ ಪ್ರಚೋದನೆ ನೀಡಬಾರದೆಂದೂ ಎಲ್‌ವುಡ್ ವಿಶ್ರಾಂತ ಪ್ರಾಧ್ಯಾಪಕನಾಗಿ 1945ರಲ್ಲಿ ಸಾರಿದ. ಎಲ್‌ವುಡ್ ಕಾಲವಾದದ್ದು 1946ರ ಸೆಪ್ಟೆಂಬರ್ 25ರಂದು.

ಅಮೆರಿಕನ್ ಸಮಾಜಶಾಸ್ತ್ರಜ್ಞರ ಪೈಕಿ ಎಲ್‌ವುಡ್ ವಿಶಿಷ್ಟ ಸ್ಥಾನ ಗಳಿಸಿಕೊಂಡಿದ್ದಾನೆ. ಮನಶ್ಶಾಸ್ತ್ರಕ್ಕೂ ಸಮಾಜಶಾಸ್ತ್ರಕ್ಕೂ ಸ್ಥಿರವಾದ ಸೇತುವೆ ನಿರ್ಮಿಸಿದವ ಎಲ್‌ವುಡ್ ಎನ್ನಬಹುದು. ಈ ಎರಡು ವಿಷಯಗಳಲ್ಲೂ ತಕ್ಕಮಟ್ಟಿನ ಸಾಮರ್ಥ್ಯ ಗಳಿಸಿಕೊಂಡಿದ್ದ ಎಲ್‌ವುಡ್ ಈ ಕೆಲಸವನ್ನು ಇತರ ಎಲ್ಲರಿಗಿಂತ ಹೆಚ್ಚು ಸಮರ್ಪಕವಾಗಿ ಮಾಡಿದ. ಸಮಾಜ ಸುಧಾರಣೆ ಸುರಕ್ಷೆಗಳಲ್ಲೂ ಇವನಿಗೆ ಹೆಚ್ಚಿನ ಆಸಕ್ತಿಯಿತ್ತು. ಸಾಮಾಜಿಕ ನಿರ್ದೇಶನದಲ್ಲಿ ಆಧುನಿಕ ಧರ್ಮ ಹೆಚ್ಚಿನ ಪಾತ್ರವಹಿಸಬೇಕೆಂಬುದು ಇವನ ನಂಬಿಕೆ. ವಿಶ್ವಸಂಸ್ಥೆಯ ಮೂಲಕ ವಿಶ್ವಶಾಂತಿ ಸ್ಥಾಪನೆ ಮಾಡದೆ ಶಾಶ್ವತ ಪ್ರಜಾಪ್ರಭುತ್ವವಾದಿ ಸಮಾಜದ ಸ್ಥಾಪನೆಯಾಗಲಿ ಸಾಮಾಜಿಕ ಆದರ್ಶರಾಜ್ಯದ ರಚನೆಯಾಗಲಿ ಸಾಧ್ಯವಿಲ್ಲವೆಂದು ಎಲ್‌ವುಡ್ ದೃಢವಾಗಿ ನಂಬಿದ್ದ. (ಕೆ.ಎನ್.ಎ.)

**ಎವನ್ಸ್, ಮೇರಿ ಆನ್ :** ನೋಡಿ—ಎಲಿಯಟ್, ಜಾರ್ಜ್.

**ಎವರೆಸ್ಟ್ ಶಿಖರ :** ಜಗತ್ತಿನಲ್ಲಿ ಅತ್ಯುನ್ನತ ಪರ್ವತಶಿಖರ, 29,028′ (8,848 ಮೀಟರುಗಳು). ಪೂರ್ವ ನೇಪಾಳದ ಪೂರ್ವ ಹಿಮಾಲಯಗಳಲ್ಲಿ, ನೇಪಾಳ–ಟಿಬೆಟುಗಳ ಎಲ್ಲೆಯಲ್ಲಿ 28° ಉತ್ತರ ಅಕ್ಷಾಂಶ, 86°58′ ಪೂರ್ವ ರೇಖಾಂಶಗಳ ಸಂಧಿಸ್ಥಾನದಲ್ಲಿ ಇದೆ. ಮೊಟ್ಟಮೊದಲು ಗುರುತಿಸಿದ್ದು 1856ರಲ್ಲಿ, ತ್ರಿಕೋನಕಲ್ಪ ವಿಧಾನದಿಂದ. ಭಾರತದ ಸರ್ವೇಯರ್ ಜನರಲ್ ಆಗಿ ಭಾರತದ ಸರ್ವೆ ಇಲಾಖೆಗೆ ಅಪಾರ ಸೇವೆ ಸಲ್ಲಿಸಿದ್ದ ಸರ್ ಜಾರ್ಜ್ ಎವರೆಸ್ಟ್ ಎಂಬಾತನ (1790–1866) ಹೆಸರನ್ನು ಈ ಶಿಖರಕ್ಕೆ ಇಡಲಾಯಿತು. ಹೆಸರಿಸಿದ್ದು 1863ರಲ್ಲಿ. ಟಿಬೆಟ್ ಭಾಷೆಯಲ್ಲಿ ಈ ಶಿಖರದ ಹೆಸರು ಚೊಮೊಲುಂಗ್ಮ. ಅರ್ಥ ದೇವಿ ಭೂಮಾತೆ. ಇದರ ಅರ್ವಾಚೀನ ಭಾರತೀಯ ನಾಮಧೇಯ ಗೌರೀಶಂಕರ.

ಕಣ್ಣು ಕೋರೈಸುವ ಶ್ವೇತ ಹಿಮ, ಕೃಷ್ಣ ಶಿಲೆಯ ಒತ್ತುಗೋಡೆಗಳು, 11,000′ ಗಳಿಗಿಂತಲೂ ಎತ್ತರವಾದ ಕಡಿದಾದ ಶಿಲಾಪ್ರಪಾತಗಳು ಈ ಶಿಖರಪೀಠವನ್ನು ಚಿತ್ತಾಕರ್ಷಕವಾಗಿ ಮಾಡಿವೆ. ಆದರೆ ಎವರೆಸ್ಟ್ ಶಿಖರ ಆ ಸಾಲಿನ ಇತರ ಶಿಖರಗಳಷ್ಟು ವೈಶಿಷ್ಟ್ಯಪೂರ್ಣವಾಗಿಲ್ಲ. ಇದೊಂದು ಮುದ್ದೆಮುದ್ದೆಯಾದ ಪಿರಮಿಡಿನಂತಿದೆ. ಜಲಜ ಹಾಗೂ ನೈಸ್ ಶಿಲೆಯ ಪೀಠದ ಮೇಲೆ ಪರ್ಮೊ ಕಾರ್ಬೊನಿಫೆರಸ್ ಯುಗದ ಸುಣ್ಣಕಲ್ಲು ಮಿಶ್ರದ ನೈಸ್ ಹಾಗೂ ಪದರುಗಲ್ಲುಗಳಿಂದ ಶಿಖರಪೀಠ ನಿರ್ಮಾಣವಾಗಿದೆ. ಓಡೆಲ್ ಮತ್ತು ವೇಗರ್ ಎಂಬುವರು ಈ ಶಿಖರ ಆಂತರಿಕ ಘರ್ಷಣೆಗಳಿಂದ ಲಂಬವಾಗಿ ಮೇಲೆತ್ತಲ್ಪಟ್ಟು ಇಂದಿನ ರೂಪ ಪಡೆದಿದೆಯೆಂದು ತಿಳಿಸುತ್ತಾರೆ. ಬೇರೆ ಕೆಲವರು ವಿಜ್ಞಾನಿಗಳು ಈ ಶಿಖರ ನ್ಯಾಪೆ ರೀತಿಯಲ್ಲಿ ನಿರ್ಮಾಣವಾಗಿ ಹಿಮಸಂಚಯನಗಳಿಂದ ಬೇರೆಯಾಗಿ, ಇಂದಿನ ರೂಪ ಪಡೆದಿದೆಯೆಂದು ತಿಳಿಸುತ್ತಾರೆ. ಆಂತರಿಕ ಘರ್ಷಣೆ ಇನ್ನೂ ಮುಂದುವರಿಯುತ್ತಿದ್ದು, ಪ್ರತಿವರ್ಷವೂ ಶಿಖರದ ಎತ್ತರ ಹೆಚ್ಚಾಗುತ್ತಿದೆಯೆಂದೂ ಅವರ ಅಭಿಪ್ರಾಯ

ಎವರೆಸ್ಟಿನ ಹಿಮನದಿಗಳು ಸ್ಯಾಂಗ್ ಪೊ (ಬ್ರಹ್ಮಪುತ್ರಾ) ನದಿಯ ದಕ್ಷಿಣದಲ್ಲಿನ ಹಿಮಾಲಯದ ಆಚೆ ಪಕ್ಕದಲ್ಲಿನ ನೆತ್ತಿಯ ಕಣಿವೆಗಳ (ಘಾಟಿ) ಮೇಲೆಲ್ಲ ಹರಡಿ ಹೋಗಿದ್ದುವೆಂದು ನಂಬಲಾಗಿದೆ. ಈಗಿರುವ ಹಿಮನದಿಗಳಲ್ಲಿ ರಂಗ್‌ಬಕ್ ಮುಖ್ಯವಾದುದು. ಇದು ಎವರೆಸ್ಟಿನಿಂದ ಉತ್ತರದ ಕಡೆಗೆ ಹರಿಯುತ್ತದೆ. 12 ಮೈಲಿ ಉದ್ದವಾಗಿದ್ದು, 22,000′ ಎತ್ತರದಿಂದ 16,500′ ತಗ್ಗಿಗೆ ಹರಿಯುವ ಇದು ಪರ್ವತದ ಅಕ್ಷರೇಖೆಗೆ ಸರಿಯಾಗಿ ಅಡ್ಡಹಾಯುತ್ತದೆ.

ಶಿಖರದ ಸುತ್ತಮುತ್ತಣ ಪ್ರದೇಶದಲ್ಲಿ 15,000′ಗಳ ವರೆಗೆ ಅತ್ಯಂತ ಕಡಿಮೆ ಪ್ರಮಾಣದಲ್ಲಿನ ವ್ಯವಸಾಯ, ಪಶುಪಾಲನೆ ಸಾಧ್ಯ. ವರ್ಷದಲ್ಲಿ ಹೆಚ್ಚು ಕಾಲ ಹಿಮಾಚ್ಛಾದಿತವಾದ ಈ ಪ್ರದೇಶದಲ್ಲಿ ಜನಜೀವನ ಬಲು ಕಷ್ಟಕರವಾದುದು. ಸದಾ ಹಿಮದಿಂದ ತುಂಬಿರುವ ಈ ಪರ್ವತ ಶಿಖರದ ಮೂಲಶಿಲೆ ಅಥವಾ ಭೂಭಾಗವನ್ನು ಕಾಣಲಾಗುವುದಿಲ್ಲ. ಇಲ್ಲಿನ ಜನರ ಆಹಾರ ಟ್ಸಂಬ ಎನ್ನುವ ಬಾರ್ಲಿ ಗಂಜಿ, ಹುಳಿ ಹತ್ತಿಸಿದ ಬೀರ್, ಕಮಟು ವಾಸನೆಯ ಬೆಣ್ಣೆ ಮತ್ತು ಉಪ್ಪು ಮಿಶ್ರಣದ ಟೀ. ಪ್ರಕೃತಿ ವಿಕೋಪ ಇಲ್ಲಿ ಸರ್ವೇಸಾಮಾನ್ಯ. ಹೀಗಾಗಿ ಇಲ್ಲಿನ ಮಾನವ ಮತಧರ್ಮಗಳ ಮರೆ ಹೊಕ್ಕರೆ ಆಶ್ಚರ್ಯವಿಲ್ಲ. ಶಿಲೆ, ಹಿಮ, ಸದಾ ಬೀಸುವ ಗಾಳಿ, ಒಂಟಿತನ —ಇವು ಈ ಭಾವನೆಯನ್ನು ಹೆಚ್ಚಿಸುತ್ತವೆ. ಇಲ್ಲಿ ಸಸ್ಯ ಹಾಗೂ ಪ್ರಾಣಿ ಸಮೂಹ ವಿರಳ. ಸಸ್ಯವರ್ಗ 17,000′ ಗಳ ವರೆಗೆ ಮಾತ್ರ ಕಂಡು ಬರುತ್ತದೆ. ಅಲ್ಲಿವಾಂಚೆಗೆ



ನೈಋತ್ಯ ದಿಕ್ಕಿನಿಂದ ಎವರೆಸ್ಟ್ ಶಿಖರದ ನೋಟ. ಶಿಖರ ಎಡಗಡೆಯಿದು

ಇಲ್ಲ. ಮಿಡತೆಗಳು 18,000'ಗಳ ವರೆಗೂ ಸೊಣಗಳು 21,900' ಗಳವರೆಗೂ ಕಂಡುಬರುತ್ತವೆ. ಎವರೆಸ್ಟ್ ಪರ್ವತಾರೋಹಿಗಳನ್ನು ಅನುಸರಿಸುತ್ತ ಕೆಂಪು ಕಾಲಿನ ಕಾಗೆಗಳು 27,000'ಗಳ ವರೆಗೂ ಹೋಗಬಲ್ಲವು. ಅಲ್ಲಿಂದಾಚೆ ನಿರ್ಜೀವ ಹಿಮಾಚ್ಛಾದಿತ ವಸ್ತುಗಳು.

ಎವರೆಸ್ಟ್ ಶಿಖರವನ್ನು ತಲಪಲು ಮಾನವ ಮಾಡಿದ ಸಾಹಸಗಳನ್ನು ಕುರಿತ ವಿವರಗಳಿಗೆ ನೋಡಿ—ಎವರೆಸ್ಟ್ ಶಿಖರಾರೋಹಣ. (ಕೆ.ಆರ್.ಆರ್.)

**ಎವರೆಸ್ಟ್ ಶಿಖರಾರೋಹಣ :** ಪೃಥ್ವಿಯ ಗಾತ್ರವನ್ನು ಅಳೆಯಲು ಮಾನದಂಡದಂತೆ ನಿಂತಿರುವ ಜಗತ್ತಿನ ಅತ್ಯುನ್ನತ ಶಿಖರ ಎವರೆಸ್ಟ್ ಮಾನವನ ಸಾಹಸಪ್ರಿಯತೆಗೆ ನಿರಂತರ ಪಂಥಾಹ್ವಾನವನ್ನೊಡ್ಡಿದೆ. ಸುಮಾರು 1,550 ಮೈಲಿಗಳಷ್ಟು ಉದ್ದ 200 ಮೈಲಿಗಳಷ್ಟು ಅಗಲವಾಗಿ ಭಾರತದ ಉತ್ತರ ಮೇರೆಯಲ್ಲಿ ವ್ಯಾಪಿಸಿರುವ ಹಿಮಾಲಯ ಪರ್ವತಶ್ರೇಣಿಯ ಒಂದೊಂದು ಶಿಖರದ ಆರೋಹಣವೂ ಒಂದೊಂದು ಸಾಹಸದ ಪ್ರತೀಕ. ಇವುಗಳಿಗೆ ಕಲಶಪ್ರಾಯವಾದದ್ದು ಎವರೆಸ್ಟ್ ಶಿಖರಾರೋಹಣ.

**ಇತಿಹಾಸ :** 1845ರಲ್ಲಿ ವೆಲ್ಷ್ ಎಂಬಾತ ಧವಳಗಿರಿಯ ಎತ್ತರವನ್ನು (26,862') ನಿಗದಿಮಾಡುವವರೆಗೆ ಆಂಡೀಸ್ ಪರ್ವತದಲ್ಲಿರುವ 20,703'ಗಳ ಚೀಂಬೊರಾಸೋ ಜಗತ್ತಿನ ಅತ್ಯಂತ ಎತ್ತರವಾದ ಪರ್ವತಶಿಖರವೆಂದು ಭಾವಿಸಲಾಗಿತ್ತು. ಧವಳಗಿರಿಯ ತರುವಾಯ 28,146' ಎತ್ತರದ ಕಾಂಚನಗಂಗಾ ಅಗ್ರಸ್ಥಾನವನ್ನು ಪಡೆಯಿತು. ಇನ್ನೂ ಎತ್ತರದ ಶಿಖರವನ್ನು 1852ರಲ್ಲಿ ಪತ್ತೆ ಮಾಡಿದರು. ಅದು ಸರ್ವೆ ಆಫ್ ಇಂಡಿಯ ಭೂಪಟದಲ್ಲಿ ಗುರುತಿಸಿರುವ ಶಿಖರ XV. ಮುಂದೆ ಸುಮಾರು ಹತ್ತು ವರ್ಷಗಳ ಮೇಲೆ ಹಾಕಿದ ಲೆಕ್ಕಾಚಾರದ ಆಧಾರದ ಮೇಲೆ ಈ ಶಿಖರದ ಎತ್ತರ 29,002' ಎಂದು ನಿರ್ಧರಿಸಿದರು. ಇದನ್ನು ಯಶಸ್ವಿಯಾಗಿ ಗಳಿಸಿದ ಕೀರ್ತಿ ಸರ್ವೆ ಆಫ್ ಇಂಡಿಯದ ನೌಕರನಾಗಿದ್ದ ರಾಧಾನಾಥ್ ಎಂಬ ಭಾರತೀಯನಿಗೆ ಸಲ್ಲುತ್ತದೆ. ಸ್ವಲ್ಪ ಕಾಲಾನಂತರ ಇದರ ಎತ್ತರ 29,146' ಗಳೆಂದರು. ಆದರೆ 1950ರಿಂದೀಚೆಗೆ ಮಾಡಿದ ಅಳತೆಗಳಿಂದ ಈ ಶಿಖರದ ಎತ್ತರ 29,028' ಗಳೆಂದು ನಿಖರವಾಗಿ ತಿಳಿದಿದೆ. ಶಿಖರ XVರ ಸ್ಥಳೀಯ ಹೆಸರನ್ನು ತಿಳಿಯಲು ಮಾಡಿದ ಪ್ರಯತ್ನಗಳು ವಿಫಲವಾದ್ದರಿಂದ ಇದರ ಅಳತೆಗಳನ್ನು ಮಾಡಿದ ಸರ್ವೇಯರ್ ಜನರಲ್ ಜಾರ್ಜ್ ಎವರೆಸ್ಟನ ಹೆಸರನ್ನೇ ಆ ಶಿಖರಕ್ಕಿಟ್ಟು ಎವರೆಸ್ಟ್ ಎಂದರು. ಕಾಲಕ್ರಮದಲ್ಲಿ ಅದಕ್ಕಿದ್ದ ಅನೇಕ ಸ್ಥಳೀಯ ಹೆಸರುಗಳೂ ತಿಳಿದು ಬಂದುವು. ಅವುಗಳಲ್ಲಿ ಚೊಮೊಲುಂಗ್ಮ ಎಂಬುದು ಟಿಬೆಟ್ ಭಾಷೆಯಲ್ಲೂ ಸಾಗರ್‌ಮಾತಾ ಎಂಬುದು ನೇಪಾಳೀ ಭಾಷೆಯಲ್ಲೂ ಗೌರೀಶಂಕರ ಎಂಬುದು ಭಾರತೀಯ ಸಂಪ್ರದಾಯದಲ್ಲೂ ರೂಢಿಯಲ್ಲಿದೆ. ಈ ಪ್ರಖ್ಯಾತ ಶಿಖರ ಟಿಬೆಟ್ ಮತ್ತು ನೇಪಾಳಗಳ ಗಡಿಗಳಲ್ಲಿದ್ದು ಉತ್ತರ ಭಾಗಗಳು ಟಿಬೆಟ್ಟಿಗೂ ದಕ್ಷಿಣ ಭಾಗಗಳು ನೇಪಾಳಕ್ಕೂ ಸೇರಿವೆ. ಎವರೆಸ್ಟ್ ಶಿಖರದ ಎತ್ತರ ದಾಖಲೆಯಾಗುತ್ತಿದ್ದಂತೆ ವಿಶ್ವದ ನಾನಾ ಭಾಗಗಳಲ್ಲಿದ್ದ ಪರ್ವತಾರೋಹಿಗಳ ಗಮನ ಇದರತ್ತ ಸೆಳೆಯಲ್ಪಟ್ಟಿತು. ಇದರಲ್ಲಿ ಬ್ರಿಟಿಷ್ ಪರ್ವತಾರೋಹಿಗಳು ಎವರೆಸ್ಟನ್ನು ತಮ್ಮ ಗುರಿಯನ್ನಾಗಿ ಮಾಡಿಕೊಂಡರು.

**ಆರೋಹಣ ಪ್ರಯತ್ನಗಳು :** 1907ಕ್ಕೆ ಮೊದಲೇ ಎವರೆಸ್ಟಿಗೆ ದಾರಿಯೊಂದನ್ನು ಶೋಧಿಸಲು ಮತ್ತು ಸಾಧ್ಯವಾದರೆ ಶಿಖರದ ನೆತ್ತಿಯನ್ನು ಹತ್ತಲು ಒಂದು ಯಾತ್ರಾತಂಡವನ್ನು ಕಳುಹಿಸಬೇಕೆಂಬ ಸಲಹೆಯನ್ನು ಬ್ರಿಗೇಡಿಯರ್ ಜನರಲ್ ಬ್ರೂಸ್ ಎಂಬಾತ ಬ್ರಿಟಿಷ್ ಸರ್ಕಾರದ ಮುಂದಿಟ್ಟ. ರಾಜಕೀಯ ಕಾರಣಗಳಿಂದ ಆತನ ಸಲಹೆ ಕಾರ್ಯಗತವಾಗಲಿಲ್ಲ. ಕೊನೆಗೆ ಪ್ರಥಮ ಜಾಗತಿಕ ಸಮರಾನಂತರ ಸರ್ ಫ್ರಾನ್ಸಿಸ್ ಯಂಗ್‌ಹಸ್ಬೆಂಡ್ ಮತ್ತು ಕರ್ನಲ್ ಹೋವರ್ಡ್ ಬ್ಯೂರಿ ಎಂಬಿಬ್ಬರ ಸತತ ಪ್ರಯತ್ನಗಳಿಂದ ಎವರೆಸ್ಟಿನ ಉತ್ತರ ಭಾಗಗಳ ಪರಿಶೋಧನೆಗೆ ಟಿಬೆಟ್ಟಿನ ಧರ್ಮಗುರು ದಲಾಯಿಲಾಮರಿಂದ ಅನುಮತಿ ದೊರೆಯಿತು (1920). 1921ರ ಮೇ ತಿಂಗಳಿನಲ್ಲಿ ಎಂಟು ಮಂದಿ ಬ್ರಿಟಿಷ್ ಪರ್ವತಾರೋಹಿಗಳ ಒಂದು ತಂಡ ಕರ್ನಲ್ ಹೋವರ್ಡ್ ಬ್ಯೂರಿಯ ನಾಯಕತ್ವದಲ್ಲಿ ಎವರೆಸ್ಟಿನ ಉತ್ತರ ಭಾಗಗಳ ಪರಿಶೀಲನೆಗಾಗಿ ಬಂತು. ಡಾರ್ಜಿಲಿಂಗಿನಿಂದ ಹೊರಟು ಟಿಬೆಟ್ ಮೂಲಕ ಹಾದು ಹೋಗಬೇಕಾದ ಪ್ರಯಾಣ ಬಲು ಪ್ರಯಾಸಕರವಾದದ್ದು. ನಡೆಯಬೇಕಾದ ದೂರ ಸುಮಾರು ಮುನ್ನೂರು ಮೈಲಿಗಳು. ತೆಗೆದುಕೊಳ್ಳುವ ಕಾಲ 5–6 ವಾರಗಳು. ಈ ಪರಿಶೋಧನಾ ಯಾತ್ರೆಯ ಒಂದು ತಂಡ ಜಾರ್ಜ್ ಲೇ ಮ್ಯಾಲರಿ ಎಂಬ ಖ್ಯಾತ ಪರ್ವತಾರೋಹಿಯ ನಾಯಕತ್ವದಲ್ಲಿ ರಾಂಗ್‌ಬಕ್ ಹಿಮಪ್ರಪಾತದ ಮೂಲಕ ಮುಂದುವರಿದು ಉತ್ತರದ ಮೆಳ್ಳುಣಿವೆಯನ್ನು (ನಾರ್ತ್ ಕೋಲ್) ಮುಟ್ಟುವುದರಲ್ಲಿ ಯಶಸ್ವಿಯಾಯಿತು. ಇದರ ಎತ್ತರ ಸಮುದ್ರ ಮಟ್ಟದಿಂದ 23,000'. ಈ ಯಾತ್ರೆಯಿಂದ ಲಭಿಸಿದ ಅನುಭವ ಮತ್ತು ವಿವರಗಳು ಅತ್ಯಮೂಲ್ಯವಾದವು. ಸಮುದ್ರ ಮಟ್ಟದಿಂದ ಅತಿ ಎತ್ತರ ಪ್ರದೇಶಗಳಿಗೆ ಹೋದಾಗ ಮಾನವನ ದೇಹ ಮತ್ತು ಮನಸ್ಸಿನ ಮೇಲೆ ಆಗುವ ಪರಿಣಾಮಗಳು, ಅಲ್ಲದೆ ಅವನ್ನು ತಡೆದುಕೊಳ್ಳಲು ಮಾನವನಿಗಿರುವ ಚೈತನ್ಯಗಳು ಪ್ರಕಾಶಕ್ಕೆ ಬಂದುವಲ್ಲದೆ ಉತ್ತರದ ಏಣಿನ (ನಾರ್ತ್ ರಿಜ್) ಮೂಲಕ ಶಿಖರಕ್ಕೆ ಮಾರ್ಗವನ್ನು ಬಿಡಿಸಿರಬಹುದೆಂದೂ ತಿಳಿಯಲಾಯಿತು.

1922ರಲ್ಲಿ ಜನರಲ್ ಬ್ರೂಸ್ ಎಂಬಾತನ ನಾಯಕತ್ವದಲ್ಲಿ ಎರಡನೆಯ ಬ್ರಿಟಿಷ್ ತಂಡವೊಂದು ಆರೋಹಣ ಪ್ರಯತ್ನವನ್ನು ಕೈಗೊಂಡು ಬಲುಮಟ್ಟಿಗೆ ಪ್ರಗತಿ ಸಾಧಿಸಿತು. ಫಿಂಚ್ ಮತ್ತು ಬ್ರೂಸ್ ಎಂಬುವರು 25,500' ಗಳಲ್ಲಿದ್ದ Vನೆಯ ಶಿಬಿರದಿಂದ ಎವರೆಸ್ಟ್ ಶಿಖರದ ನೆತ್ತಿಯನ್ನು ಮುಟ್ಟಲು ಪ್ರಯತ್ನಿಸಿದರು. ಆದರೆ ಆಯಾಸದಿಂದ ಬಳಲಿ 27,300'ಗಳಿಗಿಂತ ಮೇಲೆ ಹೋಗಲು ಸಾಧ್ಯವಾಗಲಿಲ್ಲ. ಈ ಯಾತ್ರೆಯಲ್ಲಿ ಮೊಟ್ಟಮೊದಲ ಬಾರಿಗೆ ಆಕ್ಸಿಜನನ್ನು ಬಳಸಲಾಯಿತು. ದುರದೃಷ್ಟದಿಂದ, ಹಿಮಾಲಯದ ಇತಿಹಾಸದಲ್ಲೇ ಭೀಕರವಾದ ದುರ್ಘಟನೆಯೊಂದು ಈ ಸಾಹಸದಲ್ಲಿ ಸಂಭವಿಸಿತು. ಮೂರನೆಯ ಶಿಬಿರದಿಂದ ಮೇಲಕ್ಕೆ ಸಾಗುತ್ತಿದ್ದ ಹೊರೆಯಾಳುಗಳ ಮೇಲೆ ಒಂದು ಭಯಂಕರ ನೀರ್ಗಲ್ಲಿನ ರಾಶಿ (ಅವಲಾಂಚ್) ಕುಸಿದು ಏಳು ಜನ ಶರ್ಪಾಗಳು ಅದರಡಿಯಲ್ಲಿ ಜೀವಂತ ಸಮಾಧಿಗೊಂಡರು.

1924ರಲ್ಲಿ ಅತ್ಯುತ್ತಮ ಪರ್ವತಾರೋಹಿಗಳ ಮತ್ತೊಂದು ತಂಡ ಜನರಲ್ ಬ್ರೂಸನ ನಾಯಕತ್ವದಲ್ಲಿ ಬಂದಿತು. ಆದರೆ ನಾಯಕನಿಗೆ ವಿಷಮಶೀತಜ್ವರ ಬಂದು ತಂಡ ಹಿಂತಿರುಗಬೇಕಾದ ಸಂದರ್ಭ ಒದಗಿತು. ಆಗ ಉಪನಾಯಕ ಕರ್ನಲ್ ನಾರ್ಟನ್ ನಾಯಕತ್ವವನ್ನು ವಹಿಸಿಕೊಂಡ. ಜೂನ್ 3ನೆಯ ತಾರೀಖು ಈಶಾನ್ಯದ ಭುಜದ ಮೇಲೆ (ನಾರ್ತ್ ಈಸ್ಟ್ ಶೋಲ್ಡರ್) 26,800'ಗಳ ಎತ್ತರದಲ್ಲಿನ ಆರನೆಯ ಶಿಬಿರದಿಂದ ಸಾಮರ್‌ವೆಲ್ ಮತ್ತು ನಾರ್ಟನ್ ಆಕ್ಸಿಜನ್ ನೆರವನ್ನು ಪಡೆಯದೇ ಶಿಖರದ ನೆತ್ತಿಯನ್ನು ಮುಟ್ಟಲು ಪ್ರಯತ್ನಿಸಿದರು. ಸಾಮರ್‌ವೆಲಿಗೆ ಗಂಟಲಿನ ಬಾಧೆ ಉಲ್ಬಣಗೊಂಡು ಹೆಚ್ಚು ದೂರ ಹೋಗಲು ಸಾಧ್ಯವಾಗದೆ 27,500'ಗಳಿಂದ ಶಿಬಿರಕ್ಕೆ ಮರಳಿದ. ಏಕಾಂಗಿಯಾಗಿಯೇ ಪ್ರಯತ್ನವನ್ನು ಮುಂದುವರಿಸಿದ ನಾರ್ಟನ್ 28,126'ಗಳನ್ನು ಏರಿದ. ಈಗಾಗಲೇ ಅವನಿಗೆ ಆಕ್ಸಿಜನ್ ಅಭಾವದಿಂದ ದೃಷ್ಟಿ ಭ್ರಮಣವಾಗಿ ಒಂದೇ ವಸ್ತು ಎರಡಾಗಿ ಕಾಣಿಸಲು ಮೊದಲಾಗಿತ್ತು. ಕ್ಷೇಮವಾಗಿ ಹಿಂತಿರುಗುವ ದೃಷ್ಟಿಯಿಂದ ಆತನನ್ನು ಬಲವಂತವಾಗಿ ಮರಳಿಸಲಾಗಿತ್ತು. ಸಾಕಷ್ಟು ವೇಳೆಯಿದ್ದಿದ್ದರೆ ಬಹುಶಃ ಆತ ಶಿಖರವನ್ನು ತಲುಪುತ್ತಿದ್ದನೋ ಏನೋ. ಆದರೂ ಆಕ್ಸಿಜನ್ ನೆರವನ್ನು ಪಡೆಯದೇ 28,126'ಗಳ ಔನ್ನತ್ಯವನ್ನು ತಲಪಿದ ನಾರ್ಟನನ ಸಾಹಸ ಅಭಿನಂದನೀಯವಾದುದು. ಎವರೆಸ್ಟ್ ನೆತ್ತಿಯನ್ನು ಆಕ್ಸಿಜನ್ ನೆರವಿಲ್ಲದೇ ಏರಬಹುದೆಂದು ನಾರ್ಟನನ ಅಭಿಮತ. ಈ ತಂಡಕ್ಕೆ ಮತ್ತೊಂದು ಮಹಾ ದುರಂತ ಕಾದಿತ್ತು. ಜೂನ್ 7ನೆಯ ತಾರೀಖು ಮ್ಯಾಲರಿ ಮತ್ತು ಅರ್ವಿನ್ನರು ಆಕ್ಸಿಜನ್ ನೆರವಿನಿಂದ ಮತ್ತೊಂದು ಆರೋಹಣ ಪ್ರಯತ್ನವನ್ನು ಮಾಡಿದರು. 28,000'ಗಳ ಎತ್ತರದಲ್ಲಿ ಶಿಖರದ ಕಡೆಗೆ ಇವರಿಬ್ಬರೂ ಉತ್ತಮ ಗತಿಯಲ್ಲಿ ಸಾಗುತ್ತಿದ್ದುದನ್ನು ಓಡೆಲ್ ಎಂಬಾತ ಕಂಡ. ಅದೇ ಅವರಿಬ್ಬರ ಅಂತಿಮ ದರ್ಶನ. ಒಂದು ಮೋಡದ ಹಿಂದೆ ಅವರು ಮರೆಯಾದರು. ಮುಂದೇನಾಯಿತೋ ತಿಳಿಯಲಿಲ್ಲ. ಅವರು ಶಿಖರವನ್ನು ಮುಟ್ಟಿದರೇ ಇಲ್ಲವೇ ಎಂಬುದು ಸಂದೇಹವಾಗಿಯೇ ಉಳಿದಿದೆ. ಮ್ಯಾಲರಿ ಅಥವಾ ಅರ್ವಿನ್ನರ ಮಂಜುಗೊಡಲಿಯೊಂದು (ಐಸ್ ಆಕ್ಸ್) ಮಾತ್ರ 1933ರ ಯಾತ್ರಾ ತಂಡದವರಿಗೆ ಸಿಕ್ಕಿತು.

ಎವರೆಸ್ಟ್ ಆರೋಹಣ ಪ್ರಯತ್ನಗಳಲ್ಲಿ ಉಂಟಾದ ಅಪಾರ ಪ್ರಾಣಹಾನಿಗಳಿಂದ ವ್ಯಾಕುಲಗೊಂಡ ದಲಾಯಿಲಾಮಾ ಮುಂದಿನ ಯಾತ್ರೆಗಳಿಗೆ ಅನುಮತಿಯನ್ನು ಕೊಡಲು ನಿರಾಕರಿಸಿದರು. ಆದ್ದರಿಂದ ಸುಮಾರು 6–7 ವರ್ಷಗಳ ವರೆಗೆ ಯಾವ ಪ್ರಯತ್ನವೂ ನಡೆಯಲಿಲ್ಲ. ಲಾಮಾರ ಮನವೊಲಿಸಲು ಮಾಡಿದ ನಿರಂತರ ಪ್ರಯತ್ನಗಳ ಫಲವಾಗಿ 1932ರಲ್ಲಿ ಕೆಲವು ಶರತ್ತುಗಳ ಮೇಲೆ ಆರೋಹಣ ಪ್ರಯತ್ನಕ್ಕೆ ಅನುಮತಿ ಸಿಕ್ಕಿತು.

1933ರಲ್ಲಿ ಹ್ಯೂರಟ್ಲೆಜ್ ಎಂಬಾತನ ನಾಯಕತ್ವದಲ್ಲಿ 14 ಜನರ ಬ್ರಿಟಿಷ್ ತಂಡವೊಂದು ಆರೋಹಣ ಪ್ರಯತ್ನಮಾಡಿತು. ಈ ತಂಡದಲ್ಲಿ ಸ್ಮಿತ್, ಷಿಪ್ಟನ್ನರಂಥ ಉತ್ತಮ ಪರ್ವತಾರೋಹಿಗಳಲ್ಲದೆ 1922ರ ತಂಡದ ಸಿ. ಜಿ. ಕ್ರಾಫರ್ಡ್ ಕೂಡ ಇದ್ದ. 27,400'ಗಳ ಎತ್ತರದಲ್ಲಿದ್ದ ಆರನೆಯ ಶಿಬಿರದಿಂದ ಶಿಖರದ ನೆತ್ತಿಯನ್ನು ಮುಟ್ಟಲು ಮಾಡಿದ ಎರಡು ಪ್ರಯತ್ನಗಳೂ ನಿರರ್ಥಕವಾದುವು. ಮೊದಲನೆಯ ತಂಡದ ವಿನ್‌ಹ್ಯಾರಿಸ್ ಮತ್ತು ವೇಜರ್ ಜೊತೆಗೆ ಎರಡನೆಯ ತಂಡದ ಸ್ಮಿತ್ ಮತ್ತು ಷಿಪ್ಟನ್ ಇವರಿಗೆ 1922ರಲ್ಲಿ ನಾರ್ಟನ್ ಮುಟ್ಟಿದ್ದ ಎತ್ತರ 28,126' ಗಳಿಗಿಂತ ಮುಂದೆ ಹೋಗಲು ಸಾಧ್ಯವಾಗಲಿಲ್ಲ. ಈ ಯಾತ್ರೆಯಲ್ಲಿ ಎರಡನೆಯ ತಂಡದ ಸ್ಮಿತ್ ಏಕಾಂಗಿಯಾಗಿ ಮುಂದುವರಿಯಲು ಪ್ರಯತ್ನಿಸಿ 28,100'ಗಳಿಂದ

ಹಿಂತಿರುಗುತ್ತಿದ್ದಾಗ ಅವನಿಗಾದ ಅನುಭವ ಭಯಂಕರ ಹಾಗೂ ರೋಮಾಂಚಕವಾಗಿತ್ತು. ಆತ ಒಬ್ಬನೇ ಇದ್ದರೂ ಹಗ್ಗದ ಇನ್ನೊಂದು ಕೊನೆಯಲ್ಲಿ ಸಂಗಾತಿಯೊಬ್ಬ ಅನುಸರಿಸಿ ಬರುತ್ತಿರುವಂತೆ ಭಾಸವಾಯಿತು. ಆಗಾಗ್ಗೆ ಅವನು ತನ್ನ ಅದೃಶ್ಯ ಸಂಗಾತಿಯೊಡನೆ ಏನೋ ಗೊಣಗುಟ್ಟಿಕೊಂಡು ಮಾತನಾಡುತ್ತಿದ್ದ. ವಿಶ್ರಾಂತಿಗಾಗಿ ಕುಳಿತಾಗ ಚಾಕಲೇಟನ್ನು ಎರಡು ಭಾಗಮಾಡಿ ಈ ಸಂಗಾತಿಗೆ ನೀಡಲು ತಿರುಗಿದಾಗ ಯಾರೂ ಇಲ್ಲದ್ದನ್ನು ಕಂಡು ಅವನಿಗೆ ಅಚ್ಚರಿಯಾಯಿತು. ಇಂಥ ಅನೇಕ ವಿಚಿತ್ರ ಅನುಭವಗಳನ್ನು ಆತ ವರದಿ ಮಾಡಿದ್ದಾನೆ. ಆಕ್ಸಿಜನ್ನಿನ ಅಭಾವದಿಂದ ಆಗುವ ಭ್ರಮೆಗಳಲ್ಲಿ ಇದು ಮತ್ತೊಂದು. ಇದಕ್ಕೆ ಮನೋವಿಕಲ್ಪ (ಹೆಲ್ಲೂಸಿನೇಷನ್) ಎನ್ನುತ್ತಾರೆ. ಆ ವರ್ಷ ಮುಂಗಾರು ಮಾರುತಗಳು ಈ ವೇಳೆಗಾಗಲೇ ಪ್ರಾರಂಭವಾದ್ದರಿಂದ ಎವರೆಸ್ಟ್ ಅಜೇಯವಾಗಿಯೇ ಉಳಿಯಿತು.

ಇದೇ ವರ್ಷದ ಏಪ್ರಿಲ್ ತಿಂಗಳಿನಲ್ಲಿ ರಾಯಲ್ ಜಿಯೋಗ್ರಾಫಿಕಲ್ ಸೊಸೈಟಿಯಿಂದ ನಿಯೋಜಿತವಾಗಿದ್ದ ಎರಡು ವಿಮಾನಗಳು ಮೊಟ್ಟಮೊದಲ ಬಾರಿಗೆ ಎವರೆಸ್ಟ್ ಮೇಲೆ ಹಾರಾಡಿ ಬಹಳ ಉಪಯುಕ್ತವಾದ ಛಾಯಾಚಿತ್ರಗಳನ್ನು ತೆಗೆದುವು.

1935ರಲ್ಲಿ ಮಾರಿಸ್ ವಿಲ್ಸನ್ ಎಂಬ 37 ವರ್ಷದ ಇಂಗ್ಲಿಷ್ ಯುವಕ ಸ್ವಂತ ವಿಮಾನ ಸಮೇತ ಭಾರತಕ್ಕೆ ಬಂದ. ಅವನ ಉದ್ದೇಶ ವಿಮಾನದಲ್ಲಿ ಹಾರಿ ಎವರೆಸ್ಟ್ ಶಿಖರದ ಮೇಲೆ ಇಳಿಯಬೇಕೆಂದು. ಆದರೆ ಸರ್ಕಾರ ಅವನ ವಿಮಾನಕ್ಕೆ ಮುಟ್ಟುಗೋಲು ಹಾಕಿತು. ಆದರೂ ಎದೆಗುಂದದೆ ಮೂವರು ಶರ್ಪಾಗಳೊಡನೆ ಛದ್ಮವೇಷದಲ್ಲಿ ಆತ ಟಿಬೆಟನ್ನು ಪ್ರವೇಶಿಸಿದ. ಮಂಜಿನಲ್ಲಿ ಒಂದು ಹೆಜ್ಜೆಯನ್ನು ಕತ್ತರಿಸಲೂ ಅವನಿಗೆ ಬಾರದು. ಆದರೂ ಏಕಾಂಗಿಯಾಗಿ ಎವರೆಸ್ಟ್ ಶಿಖರವನ್ನು ಹತ್ತಲು ಪ್ರಯತ್ನಿಸಿದ. ಅವನ ಹುಚ್ಚು ಪ್ರಯತ್ನವನ್ನು ಮನಗಂಡ ಶರ್ಪಾಗಳು ವಾಪಸ್ಸು ಹೊರಟು ಬಂದರು. ಆದರೂ ಮೂರು ವಾರಗಳ ಉಪವಾಸ ವ್ರತವನ್ನು ಮಾಡಿ ಸಿದ್ಧಿಪಡೆದು ತನ್ನ ಪ್ರಯತ್ನವನ್ನು ಮುಂದುವರಿಸಲು ಆತ ನಿರ್ಧರಿಸಿದ. ಆದರೆ ಅವನದು ಅರ್ಥಹೀನ ಸಾಹಸ. ನಿಸರ್ಗದ ದೈತ್ಯಬಲಗಳ ವಿರುದ್ಧ ಸೆಣಸಾಟ ಹುಚ್ಚುತನ. ಅವನಿಗೆ ಉತ್ತರ ಮೇಲ್ಕಣಿವೆಯನ್ನು ಸಹ ತಲಪಲಾಗಲಿಲ್ಲ. ಗುಡಾರದಲ್ಲಿ ಮಲಗಿದ್ದಾಗ ಚಳಿಯಿಂದಲೇ ಸತ್ತುಹೋದ. ಅವನ ಹುಚ್ಚು ಕನಸು ಕನಸಾಗಿಯೇ ಉಳಿಯಿತು. ಆತನ ಮೃತ ಶರೀರ 1935ರ ಯಾತ್ರಾತಂಡದವರಿಗೆ ದೊರೆಯಿತು.

1935ರ ಚಳಿಗಾಲದಲ್ಲಿ ಎರಿಕ್ ಷಿಪ್ಟನ್ನನ ನಾಯಕತ್ವದಲ್ಲಿ ಆರು ಮಂದಿ ಪರ್ವತಾರೋಹಿಗಳ ತಂಡವೊಂದು ಎವರೆಸ್ಟ್ ಮೇಲಿನ ಹಿಮ ಮತ್ತು ಮಂಜಿನ ಸ್ಥಿತಿಯನ್ನು ಪರೀಕ್ಷಿಸಲೂ ಸಾಧ್ಯವಾದರೆ ಪಶ್ಚಿಮದ ಬಾಣಲೆ (ವೆಸ್ಟರ್ನ್ ಬೇಸಿನ್) ಮತ್ತು ಪಶ್ಚಿಮದ ಏಣನ್ನು ಪರಿಶೀಲಿಸಲೂ ಯತ್ನಿಸಿತು. ಆದರೆ ವಿಪರೀತ ಚಳಿಗಾಳಿಗಳಿಂದ 21,000′ ಗಳಿಗಿಂತ ಮೇಲಿನ ಮಂಜಿನ ಸ್ಥಿತಿಯನ್ನು ಅರಿಯಲು ಅವರಿಗೆ ಸಾಧ್ಯವಾಗಲಿಲ್ಲ.

1936ರ ಚಳಿಗಾಲದಲ್ಲಿ ಮಾಡಿದ ಮತ್ತೊಂದು ಪ್ರಯತ್ನ ವಿಫಲವಾಯಿತು. ಅದರ ನಾಯಕ ರಟ್ಲೆಜ್. ಚಳಿಗಾಲದಲ್ಲಿ ಉತ್ತರ ಭಾಗದಿಂದ ಎವರೆಸ್ಟನ್ನು ಏರುವುದು ಸಾಧ್ಯವೇ ಇಲ್ಲವೆಂದು ತಂಡ ಹಿಂತಿರುಗಿತು. ಆದರೆ ಬರುವಾಗ ಉತ್ತರದ ಮೇಲ್ಕಣಿವೆಯ ಪಶ್ಚಿಮ ಭಾಗಗಳನ್ನು ಶೋಧಿಸಿ ಆ ಭಾಗದಿಂದ ಎವರೆಸ್ಟನ್ನು ಹತ್ತಲು ಸಾಧ್ಯತೆ ಇದೆ ಎಂಬುದನ್ನು ಕಂಡುಕೊಂಡಿತು.

1938ರಲ್ಲಿ ಟಿಲ್‌ಮನ್ನನ ನಾಯಕತ್ವದಲ್ಲಿ ಉತ್ತರಭಾಗದಿಂದ ಅಂತಿಮ ಪ್ರಯತ್ನವೊಂದು ನಡೆಯಿತು. ಕೊರೆಯುವ ಚಳಿ, ಹಿಮದಿಂದ ಕೂಡಿದ ಬಿರುಗಾಳಿಗಳು ಈ ಆರು ಜನರ ತಂಡವನ್ನು ನಿರ್ದಾಕ್ಷಿಣ್ಯವಾಗಿ ಹಿಮ್ಮೆಟ್ಟಿದುವು. ಉತ್ತರದ ಕಡೆಯಿಂದ ಶಿಖರ ಕೈಗೆಟುಕಲಾರದೆಂಬ ನಿರ್ಧಾರದೊಡನೆ ತಂಡದವರು ಹಿಂತಿರುಗಿದರು.

ಈ ಮಧ್ಯೆ ಎರಡನೆಯ ಮಹಾಯುದ್ಧ ಪ್ರಾರಂಭವಾಗಿ ಸುಮಾರು ಹದಿಮೂರು ವರ್ಷಕಾಲ ಪರ್ವತಾರೋಹಣ ಕಾರ್ಯಕ್ರಮಗಳಿಗೆ ತಡೆಯುಂಟಾಯಿತು. ಅನಂತರ ರಾಜಕೀಯ ಕ್ಷೇತ್ರಗಳಲ್ಲಿ ಉಂಟಾದ ಬದಲಾವಣೆಗಳು ಮತ್ತು ಚೀನೀಯರಿಂದ ಟಿಬೆಟ್ ಆಕ್ರಮಣ ಮುಂತಾದುವು ಪರ್ವತಾರೋಹಣದಲ್ಲೂ ಬದಲಾವಣೆಗಳನ್ನು ತಂದುವು. ಕಮ್ಯೂನಿಸ್ಟ್ ಚೀನದ ಸರ್ಕಾರ ಎವರೆಸ್ಟಿನ ಉತ್ತರ ದ್ವಾರವನ್ನು ಪರಕೀಯರಿಗೆ ಅಪ್ರವೇಶ್ಯವೆಂದು ವಿಧಿಸಿತು. ಭಾರತಕ್ಕೆ ಸ್ವಾತಂತ್ರ್ಯ ಬಂದು, ಭಾರತ–ನೇಪಾಳಗಳ ರಾಜಕೀಯ ಸಂಬಂಧ ನಿಕಟವಾದಾಗ ನೇಪಾಳ ಸರ್ಕಾರ ಎವರೆಸ್ಟ್ ಆರೋಹಣ ಪ್ರಯತ್ನಗಳಿಗಾಗಿ ದಕ್ಷಿಣದ ಮಾರ್ಗವನ್ನು ತೆರೆಯಲು ಒಪ್ಪಿಕೊಂಡಿತು.

**ದಕ್ಷಿಣಭಾಗದಿಂದ ಆರೋಹಣ ಪ್ರಯತ್ನಗಳು:** 1950ರಲ್ಲಿ ಬ್ರಿಟಿಷ್ ಯಾತ್ರಾತಂಡವೊಂದು ಎರಿಕ್ ಷಿಪ್ಟನ್ನನ ನಾಯಕತ್ವದಲ್ಲಿ ಎವರೆಸ್ಟಿನ ದಕ್ಷಿಣದಿಂದ ಮಾರ್ಗವೊಂದನ್ನು ಶೋಧಿಸಲು ಆಗಮಿಸಿತು. ಈ ತಂಡ ನೇಪಾಳದ ಜಯನಗರ, ನಾಮ್ಚೆ ಬಜಾರ್, ಸೊಲೋ ಖುಂಬುಗಳ ಮಾರ್ಗವಾಗಿ ಮುಂದುವರಿದು ಖುಂಬು ಹಿಮಪ್ರಪಾತವನ್ನು (ಗ್ಲೇಸಿಯರ್) ಶೋಧಿಸಿತು. ಟಿಲ್‌ಮನ್ ಮತ್ತು ಹೂಸ್ಟನ್ನರು ಇನ್ನೂ ಮುಂದುವರಿದು ಮಂಜಿನ ಅಬ್ಬಿಯ (ಐಸ್ ಫಾಲ್) ಬುಡವನ್ನು ತಲಪಿದರು. ಇದರ ಮೇಲ್ಭಾಗದಲ್ಲೇ ಪಶ್ಚಿಮ ಬಾಣಲೆ ಎಂಬ ಹೆಸರಿನ ಹಿಮ ಪ್ರಪಾತವಿದೆ (ಅಪ್ಪರ್ ಗ್ಲೇಸಿಯರ್).

1951ರಲ್ಲಿ ಮತ್ತೊಂದು ಬ್ರಿಟಿಷ್ ಸಂಶೋಧನಾತಂಡ ಮಂಜಿನ ಅಬ್ಬಿಯ ಮೇಲ್ಭಾಗದ ವರೆಗೆ ಮಾರ್ಗವನ್ನು ಮಾಡುವುದರಲ್ಲಿ ಯಶಸ್ವಿಯಾಯಿತು. ಆದರೆ ಅಬ್ಬಿಯ ನೆತ್ತಿಯಲ್ಲಿದ್ದ ಒಂದು ಭಾರಿ ಬಿರುಕು (ಕ್ರೆವಿಸ್) ಇವರ ಪ್ರಗತಿಗೆ ತಡೆಯೊಡ್ಡಿತು. ಈ ಬಿರುಕಿನ ಅಗಲ ಸುಮಾರು 100 ಗಜಗಳು. ಈ ಭಾರೀ ಬಿರುಕನ್ನು ದಾಟಲು ಸೂಕ್ತವಾದ ಸಲಕರಣೆಗಳಿಲ್ಲದೆ ತಂಡದವರು ಹಿಂತಿರುಗಿದರು.

ಈ ಬಾರಿ ಸ್ವಿಸ್ ಜನ ಎವರೆಸ್ಟ್ ಸ್ಪರ್ಧೆಯಲ್ಲಿ ಭಾಗವಹಿಸಲು ಮುಂದೆಬಂದರು. 1952ರ ವಸಂತಮಾಸದಲ್ಲಿ ಸ್ವಿಸ್ ಪರ್ವತಾರೋಹಿಗಳ ತಂಡವೊಂದು ಡಾ. ವಿಸ್ ಡುನಾಂಟ್ ಎಂಬಾತನ ನಾಯಕತ್ವದಲ್ಲಿ ದಕ್ಷಿಣದ ಮಾರ್ಗವಾಗಿ ಎವರೆಸ್ಟ್ ಆರೋಹಣ ಮಾಡಲು ಹಿಮಾಲಯಕ್ಕೆ ಬಂತು. ಈ ಯಾತ್ರೆಯಲ್ಲಿ ಎವರೆಸ್ಟ್ ವೀರ ತೇನ್‌ಸಿಂಗ್ ಹೊರೆಯಾಳುಗಳ ಸರದಾರನಾಗಿದ್ದ. ಬ್ರಿಟಿಷರ ಶೋಧನೆಯ (1951) ಫಲಿತಾಂಶಗಳು ಈತನಿಗೆ ಬಹಳ ಉಪಯೋಗಕ್ಕೆ ಬಂದುವು. ಸ್ವಿಸ್ಸರು 16,600′ಗಳಲ್ಲಿ ಮೂಲ ಶಿಬಿರವನ್ನೂ 17,200′ಗಳಲ್ಲಿ ಒಂದನೆಯ ಶಿಬಿರವನ್ನೂ ಅಬ್ಬಿಯ ಮಧ್ಯಭಾಗದಲ್ಲಿ ಎರಡನೆಯ ಶಿಬಿರವನ್ನೂ ಸ್ಥಾಪಿಸಿದರು. 1951ರಲ್ಲಿ ಕಂಡಿದ್ದ ದೊಡ್ಡ ಬಿರುಕನ್ನು ಇವರು ಯಶಸ್ವಿಯಾಗಿ ದಾಟಿದರು. ಅನಂತರ ಮೊಟ್ಟಮೊದಲ ಬಾರಿಗೆ ಪಶ್ಚಿಮದ ಬಾಣಲೆಯಲ್ಲಿ ನಾಲ್ಕನೆಯ ಶಿಬಿರವನ್ನು ಸ್ಥಾಪಿಸಿ ಕಡಿದಾದ ಲೋತ್ಸೆ ಮುಖವನ್ನು ಹತ್ತಿ ದಕ್ಷಿಣದ ಮೇಲ್ಕಣಿವೆಯ ಮೇಲೆ (27,550′) ಏಳನೆಯ ಶಿಬಿರವನ್ನು ಸ್ಥಾಪಿಸಿದರು. ಇಲ್ಲಿಂದ ಲ್ಯಾಂಬರ್ಟ್ ಮತ್ತು ತೇನ್‌ಸಿಂಗರು ಆಕ್ಸಿಜನ್ ನೆರವಿನಿಂದ ಶಿಖರದ ನೆತ್ತಿಯನ್ನು ಮುಟ್ಟಲು ಪ್ರಯತ್ನ ಮಾಡಿದರು. ವಾಯುದೇವನ ಕೃಪೆಯಾಗಲಿಲ್ಲ. ಜೊತೆಗೆ ಆಕ್ಸಿಜನ್ ಉಪಕರಣಗಳು ಕೆಲಸಮಾಡಲಿಲ್ಲ. ಹೀಗಾಗಿ ಅವರು 28,215′ಗಳಿಂದ ಹಿಮ್ಮೆಟ್ಟಬೇಕಾಯಿತು. ಆದರೂ ಇದು ಹಿಂದೆ ಯಾವ ಮಾನವನೂ ತುಳಿದಿರಲಾರದ ಎತ್ತರ. ಹಿಮವ್ರಣಗಳಿಂದ ಎರಡು ಕಾಲುಗಳ ಮುಂಭಾಗಗಳನ್ನು ಕಳೆದುಕೊಂಡಿದ್ದ ಲ್ಯಾಂಬರ್ಟ್ ಮತ್ತು ತೇನ್‌ಸಿಂಗ್ ಸಾಧಿಸಿದ ಈ ಸಾಹಸ ಅಸಾಧಾರಣವಾದದ್ದು. ಹಿಮಮಾರುತದ ದೆಸೆಯಿಂದ ಎರಡನೆಯ ತಂಡದ ಪ್ರಯತ್ನವೂ ವಿಫಲವಾಯಿತು.

ಅದೇ ವರ್ಷದ ಶರತ್ಕಾಲದಲ್ಲಿ ಡಾ. ಗ್ರೇಬ್ರಿಯಲ್ ಚೆವಲಿ ಎಂಬಾತನ ನಾಯಕತ್ವದಲ್ಲಿ ಬಂದ ಮತ್ತೊಂದು ಸ್ವಿಸ್ ತಂಡ ಶರತ್ಕಾಲದ ಚಳಿಯಿಂದ (–40° ಸೆಂ.) 26,575′ಗಳಿಗಿಂತ ಮೇಲಕ್ಕೆ ಹೋಗಲಾಗದೆ ವಿಫಲಗೊಂಡಿತು.

**ಎವರೆಸ್ಟ್ ಒಲಿಯಿತು:** 1953 ಎವರೆಸ್ಟ್ ಶಿಖರವನ್ನು ಕಂಡುಹಿಡಿದ ನೂರನೆಯ ವರ್ಷ; ಪರ್ವತಾರೋಹಣ ಇತಿಹಾಸದಲ್ಲಿ ಸುವರ್ಣಾಕ್ಷರಗಳಲ್ಲಿ ಬರೆದಿಡ



ಎವರೆಸ್ಟ್ ಶಿಖರಾರೋಹಣಕ್ಕೆ (1953) ಹಿಲ್ಲೇರಿ ಮತ್ತು ತೇನ್‌ಸಿಂಗ್ ಹಿಡಿದ ಮಾರ್ಗದ ಅಂತಿಮ ಘಟ್ಟ

ಬೇಕಾದ ವರ್ಷ. ಮೇ ತಿಂಗಳ 29ನೇ ತಾರೀಖು 11–30 ಗಂಟೆಯಲ್ಲಿ ಎಡ್ಮಂಡ್ ಹಿಲ್ಲೇರಿ ಮತ್ತು ತೇನ್‌ಸಿಂಗ್ ನಾರ್ಗೆ ಜಗತ್ತಿನ ಗೋಪುರದ ತುದಿಯಾದ ಎವರೆಸ್ಟ್ ಅಗ್ರಭಾಗದಲ್ಲಿ ಏರಿ ನಿಲ್ಲುವ ಪ್ರಯತ್ನದಲ್ಲಿ ಜಯಶೀಲರಾದರು. ಮಾನವನ ಕನಸು ನನಸಾಯಿತು. ಶಿಖರವನ್ನು ಏರಿದ ನ್ಯೂಜಿ಼ಲೆಂಡಿನ ಎಡ್ಮಂಡ್ ಹಿಲ್ಲೇರಿ ಮತ್ತು ಭಾರತದ ತೇನ್‌ಸಿಂಗ್ ನಾರ್ಗೆ ಎಂಬುವರು ಕರ್ನಲ್‌ಜಾನ್ ಹಂಟರನ ನೇತೃತ್ವದಲ್ಲಿ ಆಗಮಿಸಿದ್ದ ಬ್ರಿಟಿಷ್ ಆರೋಹಣ ತಂಡದ ಸದಸ್ಯರು.

ಮನುಷ್ಯ ಎವರೆಸ್ಟನ್ನು ಜಯಿಸಿದ ಎನ್ನುವ ಮಾತು ಧಾರ್ಷ್ಟ್ಯದ ಸಂಕೇತ. ತನ್ನ ಅನೇಕಾನೇಕ ಪ್ರಯತ್ನಗಳ ಸಫಲತೆಯ ಪರಿಣಾಮವಾಗಿ ಈ ದುರ್ಗಮ ಔನ್ನತ್ಯದ ಮೇಲೆ ಆತ ಕಾಲಿಡಲು ಸಮರ್ಥನಾದ ಎಂಬುದಷ್ಟೇ ಸತ್ಯ. ಎವರೆಸ್ಟ್ ಆರೋಹಣ ದಲ್ಲಿ ಮನುಷ್ಯ ಯಶಸ್ವಿಯಾದರೂ ಆ ಶಿಖರ ತನ್ನ ಪ್ರಾಮುಖ್ಯವನ್ನು ಕಳೆದುಕೊಳ್ಳ ಲಿಲ್ಲ. 1952ರಲ್ಲಿ ಸೋತು ಹಿಂತಿರುಗಿದ್ದ ಸ್ವಿಸ್ಸರು ಪುನಃ 1956ರಲ್ಲಿ ಬಂದರು. ಈ ಬಾರಿ ಡಾ. ಆಲ್ಬರ್ಟ್ ಎಗ್ಲರನ ನಾಯಕತ್ವದಲ್ಲಿ ಇಬ್ಬಿಬ್ಬರ ಎರಡು ತಂಡಗಳು ಎವರೆಸ್ಟನ್ನು ಜಯಪ್ರದವಾಗಿ ಹತ್ತಿದುವು.

1960ರಲ್ಲಿ ಚೀನಿ ಪರ್ವತಾರೋಹಿ ತಂಡದ ಮೂವರು ಸದಸ್ಯರು ಉತ್ತರ ಭಾಗದಿಂದ ಎವರೆಸ್ಟನ್ನು ಹತ್ತಿರುವುದಾಗಿ ವರದಿಯಾಗಿದೆ. ಆದರೆ ಸೂಕ್ತವಾದ ಆಧಾರಗಳಿಲ್ಲದೆ ಅವರ ಹೇಳಿಕೆಗೆ ಬೆಲೆ ಸಿಕ್ಕಿಲ್ಲ.

1963ರಲ್ಲಿ ನಾರ್ಮನ್ ಜಿ. ಡಿರೆನ್ ಫರ್ತನ ನಾಯಕತ್ವದಲ್ಲಿ ಅಮೆರಿಕದ ಪರ್ವತಾರೋಹಿಗಳ ತಂಡವೊಂದು ಎವರೆಸ್ಟ್ ಆರೋಹಣಕ್ಕಾಗಿ ಬಂತು. ಈ ಯಾತ್ರೆಯ ಆರುಮಂದಿ ಮೂರು ತಂಡಗಳಲ್ಲಿ ಶಿಖರವನ್ನು ತಲಪುವುದರಲ್ಲಿ ಜಯ ಶೀಲರಾದರು. ಅದರಲ್ಲಿ ಒಂದು ತಂಡದವರು ಆವರೆಗೆ ಯಾರೂ ಮೆಟ್ಟದಿದ್ದ ಪಶ್ಚಿಮ ಚಡಾವಿನಿಂದ ಎವರೆಸ್ಟನ್ನು ಏರಿದರು. ಮೇ ಒಂದನೆಯ ತಾರೀಖು ಭಾರತದ ನವಾಂಗ್‌ಗೊಂಬು ಮತ್ತು ಜೇಮ್ಸ್ ಡಬ್ಲ್ಯೂ. ವಿಟ್ಟಕರ್ ದಕ್ಷಿಣ ಮಾರ್ಗದಿಂದ ಶಿಖರಾರೋಹಣ ಮಾಡಿದರೆ ಲೂಥರ್ ಜಿ. ಜರ್‌ಸ್ಟಡ್, ಬ್ಯಾರಿ ಬಿಶಪ್ ಮತ್ತು ಅನ್‌ಸೋಲ್ಡ್, ಹಾರ್ನ್ಸ್ ಬೀನ್ ಎಂಬುವರು ಕ್ರಮವಾಗಿ ದಕ್ಷಿಣ ಮತ್ತು ಪಶ್ಚಿಮ ಮಾರ್ಗಗಳಿಂದ ಏಕಕಾಲದಲ್ಲಿ ಹತ್ತಿದರು.

**ಭಾರತೀಯರಿಂದ ಎವರೆಸ್ಟ್ ಆರೋಹಣ ಪ್ರಯತ್ನಗಳು :** 1953ರ ಮಹಾಸಾಧನೆ, ವಿಶೇಷವಾಗಿ ಭಾರತದ ತೇನ್‌ಸಿಂಗನಿಂದ ಎವರೆಸ್ಟ್ ಶಿಖರಾ ರೋಹಣ, ಭಾರತದ ಯುವಕರಲ್ಲಿ ನವೋತ್ಸಾಹವನ್ನು ತುಂಬಿತು.

1957ರಲ್ಲಿ ಮುಂಬಯಿಯ ಕೇಕಿ ಬುನ್‌ಶಾ ಎಂಬ ಉತ್ಸಾಹೀತರುಣ ವಕೀಲನ ನಾಯಕತ್ವದಲ್ಲಿ ಹೊರಟ ಪ್ರಥಮ ಭಾರತೀಯ ತಂಡ ಪ್ರಪಂಚದ ಉನ್ನತ ಶಿಖರ ಗಳಲ್ಲಿ ಆರನೆಯದಾದ ಜೋವೊಯು ಶಿಖರವನ್ನು ಜಯಪ್ರದವಾಗಿ ಹತ್ತಿತು. ಇದರಿಂದ ಸ್ಫೂರ್ತಿಪಡೆದು ಭಾರತ ಪರ್ವತಾರೋಹಣ ಸಂಸ್ಥೆ (ಇಂಡಿಯನ್ ಮೌಂಟನೀರಿಂಗ್ ಫೌಂಡೇಶನ್) ಅಸ್ತಿತ್ವಕ್ಕೆ ಬಂದು 1960ರಲ್ಲಿ ಎವರೆಸ್ಟ್ ಶಿಖರಾ ರೋಹಣಕ್ಕಾಗಿ ಭಾರತೀಯರ ತಂಡವೊಂದನ್ನು ಕಳುಹಿಸಲು ತೀರ್ಮಾನಿಸಿತು.

1960ರಲ್ಲಿ ಮೊಟ್ಟಮೊದಲ ಬಾರಿಗೆ ಸಂಪೂರ್ಣ ಭಾರತೀಯರದೇ ಆದ ಪರ್ವತಾರೋಹಿಗಳ ತಂಡವೊಂದು ಎವರೆಸ್ಟ್ ಶಿಖರವನ್ನು ಹತ್ತಲು ಮುನ್ನಡೆ ಯಿತು. ಹಿಮಾಲಯ ಪರ್ವತಾರೋಹಣ ಶಿಕ್ಷಣ ಕೇಂದ್ರದ (ಹಿಮಾಲಯನ್ ಮೌಂಟನೀರಿಂಗ್ ಇನ್ಸ್‌ಟಿಟ್ಯೂಟ್, ಡಾರ್ಜೀಲಿಂಗ್) ಪ್ರಿನ್ಸಿಪಾಲ್ ಬ್ರಿ. ಗ್ಯಾನ್‌ಸಿಂಗ್ ಇದರ ನಾಯಕ. ಈ ಯಾತ್ರೆಯ ಮೂವರು ಪರ್ವತಾರೋಹಿಗಳಾದ ನರೇಂದ್ರ ಕುಮಾರ್, ಸೋನಾಮ್ ಗ್ಯಾಟ್ಸೊ ಮತ್ತು ನವಾಂಗ್‌ಗೊಂಬು ದಕ್ಷಿಣ ಏಣಿನ ಮೂಲಕ ಶಿಖರವನ್ನು ಏರಲು ಪ್ರಯತ್ನಿಸಿ ಶಿಖರ ಕೇವಲ 700′ಗಳ ಸಮೀಪದಲ್ಲಿ ದ್ದಾಗ ಕೆಟ್ಟ ಹವೆಯಿಂದ ಜರ್ಝರಿತರಾಗಿ ಹಿಂತಿರುಗಿದರು. ಆಗ ಇವರು ಮುಟ್ಟಿದ್ದ ಎತ್ತರ 28,300′ ಗಳು. ಈ ಯಾತ್ರೆಯಲ್ಲಿ ಬಳಸಲಾದ ಉಪಕರಣಗಳಲ್ಲಿ ಹೆಚ್ಚು ಭಾಗ ಭಾರತದಲ್ಲೇ ತಯಾರು ಮಾಡಲ್ಪಟ್ಟವು.

1962ರಲ್ಲಿ ಮೇಜರ್ ಜಾನ್ ಡೈಯಾಸ್ ಎಂಬಾತನ ನಾಯಕತ್ವದಲ್ಲಿ ಮತ್ತೊಂದು ಆರೋಹಣ ಪ್ರಯತ್ನ ನಡೆಯಿತು. ಈ ಬಾರಿ ಎಂ. ಎಸ್. ಕೊಹ್ಲಿ, ಸೋನಾಮ್ ಗ್ಯಾಟ್ಸೊ ಮತ್ತು ಹರಿದಾಂಗ್ ಇವರು 28,600′ ಗಳವರೆಗೆ ಹತ್ತಿ ಶಿಖರ ಕೇವಲ 400′ಗಳಷ್ಟು ಹತ್ತಿರವಿದ್ದಾಗ ವಾಯುದೇವನ ಕೃಪೆ ಸಿಗದೆ ಹಿಂತಿರುಗಿದರು. ಆದರೆ ಈ ಮೂರು ಜನರ ತಂಡ 27,000′ಗಳಲ್ಲಿದ್ದ ಕೊನೆಯ ಶಿಬಿರದಲ್ಲಿ ಮೂರು ರಾತ್ರಿಗಳು ತಂಗಿ ದಾಖಲೆ ಸ್ಥಾಪಿಸಿತು.

ಎರಡು ಬಾರಿ ಸೋಲನ್ನನುಭವಿಸಿದರೂ ಭಾರತೀಯ ಪರ್ವತಾರೋಹಿಗಳ ಉತ್ಸಾಹಕ್ಕೆ ಚ್ಯುತಿಯಾಗಲಿಲ್ಲ. 1965ರಲ್ಲಿ ಕಮ್ಯಾಂಡರ್ ಕೊಹ್ಲಿಯವರ ನಾಯಕತ್ವ ದಲ್ಲಿ ಮತ್ತೊಂದು ಪೂರ್ಣಸಜ್ಜಿತ ತಂಡ ಎವರೆಸ್ಟ್ ಆರೋಹಣ ಪ್ರಯತ್ನಮಾಡಿತು. ಮೇಜರ್ ಎನ್. ಕುಮಾರ್ ಈ ತಂಡದ ಉಪನಾಯಕ. ಈ ಸಾಹಸಿಗಳ ತಂಡದ ಒಂಬತ್ತು ಆರೋಹಿಗಳು ನಾಲ್ಕು ಗುಂಪುಗಳಲ್ಲಿ ಶಿಖರದ ಮೇಲೆ ಹತ್ತಿ ವಿಶ್ವದಾಖಲೆ ಸ್ಥಾಪಿಸಿದರು. ಆರೋಹಣದ ಕ್ರಮ ಹೀಗಿತ್ತು ಮೇ 20 ನವಾಂಗ್ ಗೊಂಬು ಮತ್ತು ಕ್ಯಾ. ಚೀಮ ; ಮೇ 22 ಸೋನಾಮ್ ಗ್ಯಾಟ್ಸೋ ಮತ್ತು ಸೋನಾಮ್ ವಾಂಗ್ಯಾಲ್ ; ಮೇ 24 ಸಿ. ಪಿ. ವೊಹ್ರ ಮತ್ತು ಆಂಗ್‌ಕಾಮಿ ; ಮೇ 29 ರಾವತ್, ಕ್ಯಾ. ಅಲ್ಲು ವಾಲಿಯಾ ಮತ್ತು ಫುದೋರ್ಜಿ. ಈ ಯಾತ್ರೆ ಯಲ್ಲಿ ನವಾಂಗ್‌ಗೊಂಬು ಪ್ರಪಂಚದಲ್ಲಿ ಎವರೆಸ್ಟನ್ನು ಎರಡು ಬಾರಿ ಹತ್ತಿದ ಏಕೈಕ ವ್ಯಕ್ತಿಯಾದ.

1970ರ ಮೇ ತಿಂಗಳಲ್ಲಿ ಜಪಾನ್ ಪರ್ವತಾರೋಹಿಗಳ ಯಾತ್ರೆಯೊಂದು ಹಿಮಾಲಯಕ್ಕೆ ಬಂದು ಅನೇಕ ಶಿಖರಗಳನ್ನು ಹತ್ತಿತು. ಅದರಲ್ಲಿ ಒಂದು ತಂಡ ಎವರೆಸ್ಟನ್ನು ಹತ್ತಿದ್ದಲ್ಲದೆ ತಂಡದಲ್ಲಿದ್ದ ವಿಶ್ವವಿಖ್ಯಾತ ಸ್ಕೀಯಿಂಗ್ ಪಟುವೊಬ್ಬ ಎವರೆಸ್ಟಿನ ಇಳಿಜಾರಿನ ಮೇಲೆ ಸ್ಕೀಯಿಂಗ್ ಮಾಡಿಕೊಂಡು ಇಳಿದು ಸಾಹಸ ಪ್ರದರ್ಶನ ಮಾಡಿದ.

**ಎವರೆಸ್ಟಿನ ಪ್ರಾಮುಖ್ಯ :** ನಿಸರ್ಗದ ದೈತ್ಯಶಕ್ತಿಯ ಪ್ರತೀಕ ಎವರೆಸ್ಟ್ ಎಂದಾದರೆ ಬುದ್ಧಿಶಕ್ತಿಯ ಪ್ರತೀಕ ಮನುಷ್ಯ,ಉದ್ದೇಶಪೂರ್ವಕವಾದ ನಿರಂತರ ಪ್ರಯ ತ್ನದಫಲ ಎವರೆಸ್ಟ್ ಶಿಖರಾರೋಹಣ. ಎಷ್ಟೇ ತಂಡಗಳು ಎಷ್ಟೆ ಸಲ ಈ ಶಿಖರ ವನ್ನು ಏರಬಹುದು. ಆದರೆ ಯಾರಿಗೂ ಅದರ ಪೂರ್ಣ ಪರಿಚಯವಾಗುವಂತಿಲ್ಲ. ಆದ್ದರಿಂದ ಒಂದೊಂದು ಕಾಲದವರೂ ಈ ಅನುಭವವನ್ನು ಪುನಃ ಪುನಃ ಹೊಸ ತಾಗಿಯೇ ಪಡೆಯಬೇಕು. ಹೀಗೆ ಪಡೆಯುವ ಹಾದಿಯಲ್ಲಿ ಹಿಂದಿನವರು ನಡೆದು ಬಂದ ದಾರಿಯಲ್ಲಿ ಗಳಿಸಿದ ಅನುಭವ ಬಹಳ ಸಹಾಯಕವಾಗುವುದು. ಸ್ತೋಮಪ್ರಜ್ಞೆ ಯಿಂದ ನಿಸರ್ಗದ ಬಲಗಳಿಗೆ ಅನುವರ್ತಿಯಾಗಿ ಮುನ್ನಡೆದರೆ ಯಾವ ಸವಾಲೂ ಅಜೇಯವಲ್ಲ—ಎನ್ನುವುದಕ್ಕೆ ಎವರೆಸ್ಟ್ ಶಿಖರಾರೋಹಣ ಒಂದು ನಿದರ್ಶನ.

(ವಿ.ಜಿ.ಆರ್.)

**ಎವೆಯೂತ :** ಕೆಲವು ಸಸ್ಯಗಳಲ್ಲಿ, ಅದರಲ್ಲೂ ಬೀಜೋತ್ಪತ್ತಿಯುಳ್ಳವು ಗಳಲ್ಲಿ, ಆಗುವ ತರುವಾಯದ (ಸೆಕಂಡರಿ) ಬೆಳೆವಣಿಗೆಯಲ್ಲಿ ಸಸ್ಯದ ವಿವಿಧ ಭಾಗಗಳಿಗೆ ನೀರನ್ನೊದಗಿಸುವ ಕ್ಸೈಲಂ ಪೇರೆಂಖೈಮ ಜೀವಕೋಶಗಳಲ್ಲುಂಟಾಗುವ ಊತಗಳು (ಟೈಲೋಸಿಸ್). ಈ ಊತಗಳು ಟ್ರೇಕಿಯ ಜೀವಕೋಶದ ಬಹುಪಾಲು ಭಾಗವನ್ನು ಆಕ್ರಮಿಸಿಕೊಂಡು ನೀರು ಮತ್ತು ಇತರ ಲವಣಾಂಶಗಳ ವಹನವನ್ನು ತಡೆಯುತ್ತವೆ. ಸಾಮಾನ್ಯವಾಗಿ ಇವು ಆನುಷಂಗಿಕ ಕ್ಸೈಲಂನಲ್ಲಿ ಕಂಡುಬರುತ್ತವೆ. ಕ್ಸೈಲಂ ಪೇರೆಂಖೈಮ ಜೀವಕೋಶದ ಕಣಬೀಜ ಹಾಗೂ ಇತರ ವಸ್ತುಗಳು ಈ ಊತದೊಳಕ್ಕೆ ಹರಿದುಹೋಗುತ್ತವೆ. ಎವೆಯೂತದ ಗೋಡೆ ತುಂಬ ತೆಳುವಾಗಿದ್ದು ಮೃದುವಾಗಿರುತ್ತದೆ ; ದಪ್ಪನಾಗಿರುವುದು ಅಪರೂಪ. ಸಾಮಾನ್ಯವಾಗಿ ಹೂ ಬಿಡುವ ಸಸ್ಯಗಳಲ್ಲಿ ಬಣ್ಣವಿರುವ ಜೇಗುಭಾಗದಲ್ಲಿ ಇಂಥ ಊತಗಳು ಕಂಡು ಬರುತ್ತವೆ. ಇದರಿಂದಾಗಿ ವಯಸ್ಸು ಹೆಚ್ಚಿದಂತೆಲ್ಲ ಮರದ ವಿವಿಧ ಭಾಗಗಳ ಸುತ್ತಳತೆ ದೊಡ್ಡದಾಗುತ್ತ ಹೋಗುತ್ತದೆ.

( ಬಿ.ಪಿ.)

**ಎಸೆತಗಳು :** ದೈಹಿಕ ಚಟುವಟಿಕೆಗಳಲ್ಲಿ ಒಂದು ಪ್ರಮುಖ ವಿಭಾಗ. ಎಸೆತಗಳಲ್ಲಿ ಗುಂಡು ಎಸೆತ, ಸರಪಳಿಯ ಗುಂಡು ಎಸೆತ, ತಟ್ಟೆ ಎಸೆತ ಮತ್ತು ಭರ್ಜಿ ಎಸೆತ ಎಂಬ ಭಾಗಗಳಿವೆ.

ಈ ಪಂದ್ಯಗಳಿಗೆ ಯೋಗ್ಯವಾದ ಗಾತ್ರ ಮತ್ತು ತೂಕವುಳ್ಳ ಗುಂಡುಗಳನ್ನೂ ದಪ್ಪ ಮತ್ತು ಉದ್ದವುಳ್ಳ ಭರ್ಜಿಗಳನ್ನೂ ಸಿದ್ಧಮಾಡಿರುತ್ತಾರಲ್ಲದೆ ಅನೇಕ ಅಂತರ ರಾಷ್ಟ್ರೀಯ ನಿಯಮಾವಳಿಗಳನ್ನೂ ಮಾಡಿದ್ದಾರೆ. ಹಿಂದಿನ ಕಾಲದಲ್ಲಿ ಕಲ್ಲುಗುಂಡು ಗಳನ್ನು ಎಸೆಯುವುದು ಒಂದು ಆಟವಾಗಿತ್ತು. ಭರ್ಜಿಯನ್ನು ಆಟಕ್ಕೂ ಬೇಟೆಗೂ ದೂರದಿಂದ ಎಸೆಯುತ್ತಿದ್ದರು.

**ಗುಂಡು ಎಸೆತ :** ಒಂದು ವೃತ್ತದೊಳಗೆ ನಿಂತು ಗುಂಡನ್ನು ಎಸೆಯಬೇಕು. ಈ ವೃತ್ತ 2.135 ಮೀ. ಅಥವಾ 7′ ಸುತ್ತಳತೆದಾಗಿರುತ್ತದೆ. ಸುತ್ತಳತೆಯ ಮುಂಭಾಗದಲ್ಲಿ ಕಾಲ್‌ತಡೆಯ ಫಲಕ (ಬೋರ್ಡ್) ಇರುತ್ತದೆ. ಗುಂಡಿನ ತೂಕ ಪುರುಷರಿಗಾದರೆ 16 ಪೌಂಡು ; ಸ್ತ್ರೀಯರಿಗಾದರೆ 8 ಪೌಂಡು 13 ಔನ್ಸ್. ಸುತ್ತಳತೆ ಪುರುಷರಿಗೆ 110–130 ಮಿ.ಮೀ ; ಸ್ತ್ರೀಯರಿಗೆ 95–110 ಮಿ.ಮೀ. ಗುಂಡನ್ನು ಒಂದೇ ಕೈಯಲ್ಲಿ ಹಿಡಿದು ಭುಜದ ಮೇಲ್ಭಾಗದಿಂದ ಎಸೆಯಬೇಕು. ಎಸೆಯುವಾಗ ಕೈ ಭುಜಕ್ಕಿಂತ ಕೆಳಗಿಳಿಯಬಾರದು, ಮೊಣಕೈ ಭುಜದ ಹಿಂಭಾಗಕ್ಕೆ ಬರಬಾರದು. ಎಸೆದ ಅನಂತರ ವೃತ್ತದ ಹಿಂಭಾಗದ ಅರ್ಧದಿಂದ ಹೊರಗೆ ಬರಬೇಕು. ಎಸೆದ ಗುಂಡು ಗೊತ್ತಾದ ಅವಕಾಶದೊಳಕ್ಕೆ ಬೀಳಬೇಕು. ಎಸೆಯುವಾಗ ಕೈ ಮತ್ತು ನೆಲದ ನಡುವಿನ ಕೋನ 45° ಇರಬೇಕು. ಗುಂಡನ್ನು ತೀರ ಎತ್ತರ ಒಗೆಯಬಾರದು. ಒಗೆದ ಮೇಲೆ ವೃತ್ತದ ಹೊರಭಾಗವನ್ನು ಮುಟ್ಟಬಾರದು.

**ಸರಪಳಿಯ ಗುಂಡು :** ಇಲ್ಲೂ ವೃತ್ತ 2.135 ಮೀ ಅಥವಾ 7′ ಸುತ್ತಳತೆಯ ದಾಗಿರಬೇಕು. ಎಸೆಯುವಾಗ ಕೈಚೀಲಗಳನ್ನು ಉಪಯೋಗಿಸಬಹುದು. ಎಸೆಯು ವುದಕ್ಕೆ ಮೊದಲು ಗುಂಡು ನೆಲದಮೇಲೆ ಉರುಳಬಹುದು. ಎಸೆಯುವ ವೇಳೆ

ಯಲ್ಲಿ ಗುಂಡು ನೆಲಕ್ಕೆ ತಗುಲಬಾರದು. ಹಾಗೇನಾದರೂ ತಗುಲಿದರೆ ಎಸೆವಾತನಿಗಿರುವ ಮೂರು ಅವಕಾಶಗಳಲ್ಲೊಂದು ಇಲ್ಲದಾಗುತ್ತದೆ. ಮಿಕ್ಕ ನಿಯಮಗಳು ಸಾಮಾನ್ಯ ಗುಂಡು ಎಸೆತದಂತೆ. ಇರುವ ಮೂರು ಅವಕಾಶಗಳಲ್ಲಿ ಎಸೆವಾತನಿಗೆ ಅನುಕೂಲವಾದದ್ದನ್ನು ಮಾತ್ರ ಪರಿಗಣಿಸುವರು.

**ಭರ್ಜಿ ಎಸೆತ:** ಈ ಎಸೆತಕ್ಕೆ 36.5 ಮೀ. ಅಥವಾ 120′ ಓಡಿಬರುವ ಅವಕಾಶವಿರಬೇಕು. ಈ ಅವಕಾಶವನ್ನು 2″ ಅಥವಾ 5 ಸೆಂ.ಮೀ. ಅಗಲವಿರುವ 2 ಸಮಾನಾಂತರ ರೇಖೆಗಳಿಂದ ಗುರುತಿಸಿರಬೇಕು. ಈ ಸಮಾನಾಂತರ ರೇಖೆಗಳ ಮಧ್ಯದ ಅಂತರ 4 ಮೀ. ಅಥವಾ 13′1.5″.

ಈ ಎಸೆತವನ್ನು ಒಂದು ವೃತ್ತದ ಅಥವಾ ಕಂಸದ ಹಿಂಭಾಗದಿಂದ ಮಾಡಬೇಕು. ಈ ಕಂಸ 8 ಮೀ. ಅಥವಾ 26′3″ ತ್ರಿಜ್ಯದ್ದಾಗಿರುತ್ತದೆ. ಈ ಗುರುತನ್ನು ಮರದ ಪಟ್ಟಿಯಿಂದಾಗಲಿ, 7 ಸೆಂ. ಮೀ. ಅಥವಾ 2.75″ ಅಗಲವುಳ್ಳ, ಬಿಳಿಬಣ್ಣ ಬಳಿದು ನೆಲದ ಮಟ್ಟದಲ್ಲಿ ಹೂತಿರುವ ಪಟ್ಟಿಯಿಂದಾಗಲಿ ಮಾಡಿರುತ್ತಾರೆ. ಈ ಕಂಸದಿಂದ ಲಂಬಕೋನಗಳಲ್ಲಿ ಮತ್ತು ಓಟದ ಸಮಾನಾಂತರ ರೇಖೆಗಳಿಗೆ ಸಮನಾಗಿ ಗೆರೆಗಳಿರುತ್ತವೆ. ಈ ಗೆರೆಗಳು 1.50 ಮೀ. ಅಥವಾ 5′ ಉದ್ದ ಮತ್ತು 7 ಸೆಂ. ಅಥವಾ 2.75″ ಅಗಲವಿರುತ್ತವೆ.

ಭರ್ಜಿಯನ್ನು ಗೊತ್ತಾದ ಹಿಡಿತದಲ್ಲಿ ಹಿಡಿಯಬೇಕು. ಕೈಗೆತ್ತಿಕೊಂಡಮೇಲೆ ಗೊತ್ತಾದ ಭಾಗದಲ್ಲಲ್ಲದೆ ಎಲ್ಲಂದರಲ್ಲಿ ಅದರ ತುದಿಯನ್ನು ಊರುವಂತಿಲ್ಲ.



ಭರ್ಜಿ ಎಸೆತ

ಪುರುಷರು ಬಳಸುವ ಭರ್ಜಿಯ ತೂಕ 800 ಗ್ರಾಂ. (1 ಪೌಂ. 2.218 ಔ.), ಉದ್ದ 260-270 ಸೆಂ. ಮೀ. (8′6¼″ – 8′10¼″); ಸ್ತ್ರೀಯರು ಬಳಸುವ ಭರ್ಜಿಯ ತೂಕ 600 ಗ್ರಾಂ. (1 ಪೌಂ. 5.163 ಔ.), ಉದ್ದ 220 ಸೆಂ.ಮೀ. 230 ಸೆಂ.ಮೀ. (7′2½″ – 7′6½″).

ಎಸೆತದ ನಿಯಮಗಳು ಗುಂಡಿನ ಎಸೆತದಲ್ಲಿದ್ದಂತೆ.

**ತಟ್ಟೆ ಎಸೆತ:** ಈ ತಟ್ಟೆ ಮರದಿಂದ ಮಾಡಿದ್ದಾದರೆ ಸುತ್ತಲೂ ಲೋಹದಪಟ್ಟಿ ಇರಬೇಕು. ಪುರುಷರ ತಟ್ಟೆಯ ತೂಕ 2 ಕಿ. ಗ್ರಾಂ. (4 ಪೌಂ. 6.547 ಔನ್ಸ್.), ಸುತ್ತಳತೆ 219-221 ಮಿ.ಮೀ. (8⅝″ – 8⅝″), ಮಧ್ಯಭಾಗದ ದಪ್ಪ 44-46 ಮಿ.ಮೀ. (1¾″ – 1⅞″) ಸ್ತ್ರೀಯರ ತಟ್ಟೆಯ ತೂಕ 1 ಕಿ.ಗ್ರಾಂ. (2 ಪೌಂ. 3.274 ಔನ್ಸ್), ಸುತ್ತಳತೆ 50 ಮಿ. ಮೀ. (2″ – 2¼″), ಮಧ್ಯಭಾಗದ ದಪ್ಪ 37–39 ಮಿ. ಮೀ. (1½″ – 1⅝″) ವರೆಗಿರಬೇಕು.



ತಟ್ಟೆ ಎಸೆತ

ಈ ತಟ್ಟೆಯನ್ನು 2.50 ಮೀ. (8′ 2.5″) ಸುತ್ತಳತೆಯ ವೃತ್ತದಿಂದ ಎಸೆಯಬೇಕು.

ಇತರ ನಿಯಮಗಳು ಗುಂಡಿನ ಎಸೆತದಂತೆ. ಈ ಅಭ್ಯಾಸಗಳಿಂದ ದೇಹಬಲದ ಜೊತೆಗೆ ಎಸೆತದ ಜಾಣ್ಮೆಯೂ ಪರೀಕ್ಷಿತವಾಗುತ್ತದೆ.

ಈ ಪಂದ್ಯಾಟಗಳಲ್ಲಿ 1969ರ ಮಾರ್ಚ್ 31ರ ವರೆಗಿನ ಕೆಲವು ದಾಖಲೆಗಳು ಹೀಗಿವೆ.



ತಟ್ಟೆ ಎಸೆವವ : ಮೈರೋನನ ಕೃತಿ. ರೋಮಿನ ರಾಷ್ಟ್ರೀಯ ವಸ್ತುಸಂಗ್ರಹಾಲಯ

ಎಸೆತಗಳು (31–3–1969) : ಮೀಟರುಗಳಲ್ಲಿ

| ಆಟದ ವಿವರ | ಮೈಸೂರು | ಭಾರತ | ಏಷ್ಯ | ವಿಶ್ವ |
|---|---|---|---|---|
| 8 ಪೌಂ. ಗುಂಡೆಸೆತ | 10.13 | 12.83 | 14.48 | 19.61 |
| ತಟ್ಟೆ ಎಸೆತ | 33.34 | 39.76 | 47.58 | 62.54 |
| ಭರ್ಜಿ ಎಸೆತ | 32.48 | 47.38 | 49.44 | 62.40 |

(ಬಿ.ಎಲ್.ಆರ್.)

**ಎಸ್ಕಿಮೋ :** ಪೂರ್ವದಲ್ಲಿ ಗ್ರೀನ್‌ಲೆಂಡ್ ಮತ್ತು ಲ್ಯಾಬ್ರಡಾರ್‌ಗಳಿಂದ ಹಿಡಿದು ಪಶ್ಚಿಮದಲ್ಲಿ ಬೇರಿಂಗ್ ಸಮುದ್ರದ ವರೆಗೂ ಬೇರಿಂಗ್ ಜಲಸಂಧಿಯ ಸಮೀಪದ ಸೈಬೀರಿಯನ್ ಪ್ರದೇಶದಲ್ಲೂ ಇರುವ 6,000 ಮೈಲಿಗಳ ಉತ್ತರ ಕರಾವಳಿಯುದ್ದಕ್ಕೂ ವಾಸಿಸುವ ಜನ. ಹಡ್‌ಸನ್ ಕೊಲ್ಲಿ ಮತ್ತು ದಕ್ಷಿಣ ಅಲಾಸ್ಕದ ಮೂಲನಿವಾಸಿಗಳಾದ ಇವರು ಕಾಲಕ್ರಮದಲ್ಲಿ ಪೂರ್ವ ಮತ್ತು ಪಶ್ಚಿಮ ಕರಾವಳಿ ಪ್ರದೇಶಗಳಲ್ಲಿ ಹಬ್ಬಿದರು. ವಿಶ್ವಜನಾಂಗಗಳ ಇತಿಹಾಸದಲ್ಲಿ ವಿಶಿಷ್ಟಸ್ಥಾನ ಪಡೆದಿರುವ ಈ ಜನರ ಸಂಸ್ಕೃತಿ, ಭಾಷೆ ಮತ್ತು ಭೌತಲಕ್ಷಣಗಳು ಇತ್ತೀಚಿನ ವರೆಗೂ ಈ ವಿಸ್ತಾರ ಪ್ರದೇಶದ ಉದ್ದಕ್ಕೂ ಒಂದೇ ರೀತಿಯಾಗಿದ್ದುವು. ಇಷ್ಟೊಂದು ವಿಸ್ತಾರವಾದ ಭೂಪ್ರದೇಶವನ್ನು ಇವರು ಆವರಿಸಿಕೊಂಡಿದ್ದರೂ ಇವರ ಸಂಖ್ಯೆ ಅರುವತ್ತು ಸಾವಿರವನ್ನೂ ಮೀರಿಲ್ಲದಿರುವುದು ಆಶ್ಚರ್ಯಕರ. ಯಾವ ಕಾಲದಲ್ಲೂ ಇವರ ಸಂಖ್ಯೆ ಇದಕ್ಕಿಂತ ಹೆಚ್ಚಿರಲಿಲ್ಲವೆಂದು ಹೇಳಲಾಗಿದೆ. ಐರೋಪ್ಯರಿಂದ ಬಳುವಳಿಯಾಗಿ ಬಂದ ಸಿಡುಬು, ದಡಾರ, ಇನ್‌ಫ್ಲುಯೆಂಜಗಳಿಂದ ಜನ ಒಟ್ಟೊಟ್ಟಿಗೆ ಸತ್ತರೂ ಹೀಗೆ ತೆರವಾದ ಜನಸಂಖ್ಯೆ ಮತ್ತೆ ಮತ್ತೆ ಕೂಡಿಕೊಂಡಿದೆ. ಈಚೆಗೆ ಇದು ಶೀಘ್ರವಾಗಿ ಬೆಳೆಯುತ್ತಿದೆ.

ಎಸ್ಕಿಮೋ ಭಾಷೆಯಲ್ಲಿ ಅಮೆರಿಕನ್ ಎಸ್ಕಿಮೋಗಳಿಗೆ ಇನ್ಯುಯಿಟ್‌ಗಳೆಂದೂ ಏಷ್ಯನ್ ಎಸ್ಕಿಮೋಗಳಿಗೆ ಯುಯಿಟ್‌ಗಳೆಂದೂ ಹೆಸರು. ಅಲಾಸ್ಕದ ನೈಋತ್ಯಕ್ಕಿರುವ ಅಲ್ಯೂಷನ್ ದ್ವೀಪಗಳಲ್ಲಿ ವಾಸಿಸುವ ಜನ ಅಲ್ಯೂಷನರು. ಇವರನ್ನು ಬೇರೆ ಜನಾಂಗದವರೆಂದು ಪರಿಗಣಿಸಲಾಗಿದೆ. ಇನ್ಯುಯಿಟ್ ಅಥವಾ ಯುಯಿಟ್ ಎಂದರೆ ಮನುಷ್ಯ ಎಂದು ಅರ್ಥ. ಎಸ್ಕಿಮೋ ಎಂಬುದು ಅವಹೇಳನ ಶಬ್ದ. ಹಸಿಮಾಂಸ ಭಕ್ಷಕ ಎಂಬರ್ಥ ಬರುವ ಈ ಹೆಸರಿನಿಂದ ಇವರನ್ನು ಕೆನಡದ ಆಲ್ಗೋಂಕ್ವಿನ್ ಇಂಡಿಯನರು ಕರೆಯುತ್ತಿದ್ದರಂತೆ. ಈ ಹೆಸರನ್ನು ಬಳಕೆಗೆ ತಂದವನು ಕ್ರೈಸ್ತಪಾದ್ರಿ ಬೀರ್ಡ್—ಹದಿನೇಳನೆಯ ಶತಮಾನದಲ್ಲಿ.

ಎಸ್ಕಿಮೋ ಜನರ ಶರೀರ ಲಕ್ಷಣಗಳಲ್ಲಿ ಏಕರೂಪತೆ ಕಂಡುಬರುವುದಿಲ್ಲ. ಲ್ಯಾಬ್ರಡಾರ್ ಮತ್ತು ಗ್ರೀನ್‌ಲೆಂಡಿನ ಎಸ್ಕಿಮೋಗಳಿಗಿಂತ ಅಮೆರಿಕನ್ ಉತ್ತರ ಕರಾವಳಿಯ ಮತ್ತು ಗ್ರೀನ್‌ಲೆಂಡಿನ ಪೂರ್ವತೀರದ ಎಸ್ಕಿಮೋಗಳೂ ಇವರಿಗಿಂತ ಅಲಾಸ್ಕದವರೂ ಹೆಚ್ಚು ಎತ್ತರವಾಗಿದ್ದಾರೆ. ಅಂತೂ ಇವರ ಸರಾಸರಿ ಎತ್ತರ 5′2″–5′ 6″ ಕಪಾಲ ಸೂಚ್ಯಂಕ (ಸಿಫಾಲಿಕ್ ಇಂಡೆಕ್ಸ್) 74 ರಿಂದ 82. ಇವರು ಇಂಡಿಯನ್ ಜನಾಂಗದವರಿಗಿಂತ ಭಿನ್ನ. ಇವರಲ್ಲಿ ಮಂಗೋಲಾಯಿಡ್ ಲಕ್ಷಣಗಳೇ ಹೆಚ್ಚಾಗಿವೆ. ಅವರಂತೆ ಇವರ ಕೈ ಪಾದಗಳೂ ಬಹಳ ಸಣ್ಣ. ಇವರ ಮುಂಭಾಗದ ಹಲ್ಲುಗಳು ಎಲೆಗುದ್ದಲಿಯ ಆಕಾರದಲ್ಲಿರುತ್ತವೆ. ಹಳದಿ ಬಣ್ಣದ ಚರ್ಮ, ಅಗಲವಾದ ಮುಖ, ಕಿರಿದಾದರೂ ಎತ್ತರವಾದ ಮೂಗು, ದಪ್ಪನೆಯ ತುಟಿ, ನೇರವಾದ ಕಪ್ಪುಕೂದಲು, ಕುರುಚಲು ಗಡ್ಡ—ಇವು ಎಸ್ಕಿಮೋಗಳ ಇತರ ಶಾರೀರಿಕ ಲಕ್ಷಣಗಳು. ಇವರ ಆಯುಃಪರಿಮಾಣ ಕಡಿಮೆ. ಅರುವತ್ತು ವರ್ಷದ ಅನಂತರ ಎಸ್ಕಿಮೋಗಳು ಜೀವಿಸುವುದು ಬಲು ವಿರಳ.

ಆಚಾರ ವ್ಯವಹಾರ ಮತ್ತು ಭಾಷೆಗಳ ಆಧಾರದ ಮೇಲೆ ಇವರನ್ನು ಅಲಾಸ್ಕ, ಸೈಬೀರಿಯ, ವಿಕ್ಟೋರಿಯ ಮತ್ತು ಕಾರೊನೇಷನ್ ಖಾರಿಯ ಪ್ರದೇಶ, ಬೂತಿಯ ಫೀಲಿಕ್ಸ್ ಪರ್ಯಾಯದ್ವೀಪ, ಮೆಕೆಂಜ಼ಿ ನದಿ ಹಾಗೂ ಹರ್ಷಲ್ ದ್ವೀಪದ ಪ್ರದೇಶ, ಗ್ರೀನ್‌ಲೆಂಡ್, ಲ್ಯಾಬ್ರಡಾರ್, ಮೆಲ್‌ವಿಲ್ ಪರ್ಯಾಯದ್ವೀಪ ಮತ್ತು ಸೌಥಾಂಪ್ಟನ್ ಎಸ್ಕಿಮೋಗಳೆಂದು ಒಂಬತ್ತು ಬಗೆಯಾಗಿ ವಿಂಗಡಿಸಬಹುದು. ಈ ಒಂದೊಂದು ವಿಭಾಗದಲ್ಲಿಯೂ ಬೇರೆ ಬೇರೆ ಕುಲಸಂಬಂಧವಾದ ಅನೇಕ ಪಂಗಡಗಳಿವೆ.

ಭೌಗೋಳಿಕ ಅಂಶಗಳು ಮಾನವನ ಜನಜೀವನವನ್ನು ಹೇಗೆ ರೂಪಿಸುತ್ತವೆ ಎಂಬುದಕ್ಕೆ ಎಸ್ಕಿಮೋಗಳು ಉತ್ತಮ ನಿದರ್ಶನ. ಇವರು ವರ್ಷಕ್ಕೆ ಆರರಿಂದ ಒಂಬತ್ತು ತಿಂಗಳ ಕಾಲ ಹಿಮುಗಡ್ಡೆಗಳ ಅಡಿಯಲ್ಲಿ ಉಡುಗಿ ಮಲಗುವ, ಅಂಥ ನೆಲದ ಮೇಲೆ ವಾಸಿಸುವ ಛಲಗಾರರಾಗಿರಬೇಕು, ಕುಶಲಮತಿಗಳೂ ಆಗಿರಬೇಕು. ಇಲ್ಲಿನ ಪರಿಸರಕ್ಕೆ ತಕ್ಕಂತೆ ಇವರು ವಸತಿಸೌಕರ್ಯ, ಆಹಾರ ಸಂಪಾದನೆಯ ವಿಧಾನ ಮುಂತಾದವನ್ನು ಕಲ್ಪಿಸಿಕೊಳ್ಳುವುದು ಅನಿವಾರ್ಯ. ಉತ್ತರ ಪ್ರದೇಶದಲ್ಲಿ ಜೀವಿಸುವ ಸೀಲ್, ಮೀನು ಮುಂತಾದವು ಇವರ ಮುಖ್ಯ ಆಹಾರ. ಈ ಪ್ರಾಣಿಗಳ ಬೇಟೆ ಮುಖ್ಯ ಕಸುಬು. ಎರಡು ಹಲಗೆಗಳನ್ನು ಸೇರಿಸಿ ರಚಿಸಿದ ಕೈಯಾಕ್ ಎಂಬ ದೋಣಿಯಲ್ಲಿ ಕುಳಿತು ಇವರು ಜಲಚರಗಳನ್ನು ಹಿಡಿಯುತ್ತಾರೆ. ಸೀಲ್ ಹಿಮವಾಸಿಪ್ರಾಣಿ. ಅದು ಉಸಿರಾಡಲು ತಲೆಯೆತ್ತುವುದನ್ನೆ ಎಸ್ಕಿಮೋಗಳು ಕಾಯುತ್ತಿದ್ದು ಅದರ ಮೇಲೆ ಮೊನಚಾದ ಆಯುಧ ಎಸೆದು ಅದನ್ನು ಕೊಲ್ಲುತ್ತಾರೆ. ಈ ಮೊನಚಾದ ಆಯುಧಗಳು ಹಿಮದಲ್ಲಿ ಹೂತುಹೋಗದಿರುವಂತೆ ಅವುಗಳಿಗೆ ಗಾಳಿತುಂಬಿದ ಸಣ್ಣ ಸಣ್ಣ ಚರ್ಮ ಚೀಲಗಳನ್ನು ಕಟ್ಟಿರುತ್ತಾರೆ. ಚಳಿಗಾಲದಲ್ಲಿ ಹತ್ತಾರು ಸಂಸಾರಗಳ ಜನ ಒಂದೆಡೆ ಸೇರಿ ಬೇಟೆಯಾಡು




ವುದೂ ವಸಂತ ಋತುವಿನಲ್ಲಿ ಪ್ರಾಣಿಗಳನ್ನು ಹುಡುಕಿಕೊಂಡು ಹೋಗುವುದೂ ಇವರ ಅಭ್ಯಾಸ. ಉಡುಗೆ ತೊಡುಗೆಗಳಿಗೆ ಉಪಯೋಗವಾಗುವ ಕ್ಯಾರಿಬೂ ಎಂಬ ಹಿಮಸಾರಂಗದ ಚರ್ಮಕ್ಕಾಗಿ ಬೇಸಗೆಯಲ್ಲಿ ಅದನ್ನು ಹುಡುಕಿಕೊಂಡು ದೂರ



ಕುಸುರಿ ಕೆಲಸ ಮಾಡಿದ ದಂತವಸ್ತುಗಳು

ಪ್ರದೇಶಗಳ ವರೆಗೂ ಸಂಚಾರ ಕೈಕೊಳ್ಳುವುದುಂಟು. ಚದರಿದ್ದ ಸಂಸಾರಗಳೆಲ್ಲ ಚಳಿಗಾಲ ಬರುವುದರೊಳಗಾಗಿ ಒಂದುಗೂಡುತ್ತವೆ. ಪ್ರತಿವರ್ಷವೂ ಇವರದು ಇದೇ ಪರಿಪಾಟಿ. ಭೂಪ್ರದೇಶದ ಪ್ರಾಣಿಗಳನ್ನು ಬೇಟೆಯಾಡಲು ಇವರು ಉಪಯೋಗಿಸುವ ಉಪಕರಣಗಳೆಂದರೆ ಬಿಲ್ಲು, ಬಾಣ ಮತ್ತು ಚರ್ಮದ ಬಲೆ. ಬೇಟೆಯ ಕಾಲದಲ್ಲಿ ಜೊತೆಯಲ್ಲಿ ಬರುವ ನಾಯಿಗಳು ನೆಲದಲ್ಲಿ ಹೂತುಕೊಂಡ ಪ್ರಾಣಿಗಳನ್ನು ಹುಡುಕಲು ಬಹಳ ಸಹಾಯಮಾಡುತ್ತವೆ.

ಎಸ್ಕಿಮೋಗಳು ವಾಸಮಾಡುವ ಮನೆಗಳೂ ವೈಶಿಷ್ಟ್ಯಪೂರ್ಣ. ಬೇಸಗೆಯಲ್ಲಿ ಸೀಲ್ ಅಥವಾ ಜಿಂಕೆಯ ಚರ್ಮದ ಗುಡಾರಗಳಲ್ಲಿ ಇವರ ವಾಸ. ಆದರೆ ಇವರ ಚಳಿಗಾಲದ ಮನೆಗಳು ಬಗೆಬಗೆಯಾಗಿರುತ್ತವೆ. ಪಶ್ಚಿಮ ಆರ್ಕ್ಟಿಕ್ ಪ್ರದೇಶದಲ್ಲಿರುವ ನದಿಗಳು ತಮ್ಮ ಪ್ರವಾಹದಲ್ಲಿ ಮರದ ದಿಮ್ಮಿಗಳನ್ನು ಹೊತ್ತು ತರುವುದರಿಂದ, ಅಲ್ಲಿನ ಎಸ್ಕಿಮೋಗಳು ಅವನ್ನು ಉಪಯೋಗಿಸಿಕೊಂಡು ಮರದ ಹಲಗೆಗಳಿಂದ ಮನೆಗಳನ್ನು ಕಟ್ಟಿಕೊಂಡು ಅವುಗಳ ಚಾವಣಿಗಳ ಮೇಲೆ ಹುಲ್ಲುಬೆಳೆಸುತ್ತಾರೆ. ಮರದ ದಿಮ್ಮಿಗಳು ದೊರಕದೆ ಇರುವ ಪ್ರದೇಶದಲ್ಲಿ ಕಲ್ಲಿನಿಂದ ಮನೆಕಟ್ಟಿ ತಿಮಿಂಗಿಲದ ಮೂಳೆಗಳಿಂದ ಮೇಲ್ಚಾವಣಿ ನಿರ್ಮಿಸುತ್ತಾರೆ. ಕೆನಡದ ಎಸ್ಕಿಮೋಗಳು ಗಟ್ಟಿಯಾದ ಮಂಜಿನ ಗಡ್ಡೆಯ ತುಂಡುಗಳನ್ನು ಇಟ್ಟಿಗೆಗಳಂತೆ ಒಂದರಮೇಲೊಂದು ಇಟ್ಟು ವೃತ್ತಾಕಾರದ ಮನೆ ನಿರ್ಮಿಸುತ್ತಾರೆ. ಇದಕ್ಕೆ ಇಗ್ಲೂ ಎಂದು ಹೆಸರು. ನೆಲಕ್ಕೆ ಹಿಮಸಾರಂಗದ ಚರ್ಮ ಹಾಸುವುದರಿಂದ ಬೆಚ್ಚಗಿರುತ್ತದೆ. ಬೇಸಗೆಯಲ್ಲಿ ಮಂಜು ಕರಗಿ ಹರಿದ ಪ್ರವಾಹ ಮನೆಯೊಳಗೆ ನುಗ್ಗುವ ಮುನ್ನವೇ ಇದನ್ನು ಬಿಟ್ಟು ಚರ್ಮದ ಗುಡಾರಕ್ಕೆ ಹೊರಟು ಹೋಗುತ್ತಾರೆ. ಪ್ರಾಣಿಯ ಕೊಬ್ಬನ್ನೋ ಯಾವುದಾದರೂ ಇಂಧನದ ಕಲ್ಲನ್ನೋ ಉರಿಸಿ ದೀಪಮಾಡಿಕೊಳ್ಳಲಾಗುತ್ತದೆ. ಆಹಾರ ಬೇಯಿಸಲೂ ಇದು ಉಪಯುಕ್ತ. ಇದು ಒದಗದಾಗ ಇವರು ಒಣಗಿದ ಅಥವಾ ಹಿಮದಲ್ಲಿ ಹೆಪ್ಪುಗಟ್ಟಿಸಿದ ಆಹಾರ ತಿನ್ನುತ್ತಾರೆ. ಬಲು ಅನಿವಾರ್ಯವಾದಾಗ ಮಾತ್ರ ಹಸಿಯ ಮಾಂಸ ಭಕ್ಷಿಸಬೇಕಾಗುತ್ತದೆ. ಇದು ಇವರಿಗೆ ಅಷ್ಟೇನೂ ಇಷ್ಟವಿಲ್ಲ. ಆದ್ದರಿಂದ ಹಸಿಮಾಂಸಭಕ್ಷಕರೆಂಬ ಅರ್ಥಬರುವ ಎಸ್ಕಿಮೋ ಶಬ್ದದ ಬಳಕೆಗೆ ಇವರ ಅಭ್ಯಂತರವುಂಟು.

ಸಾಮಾನ್ಯವಾಗಿ ಕ್ಯಾರಿಬೂ ಪ್ರಾಣಿಯ ತುಪ್ಪಟದಿಂದ ಹೊಲಿದು ಸಿದ್ಧಪಡಿಸಿದ ಚಲ್ಲಣ, ಮೇಲಂಗಿ, ಟೋಪಿ ಮತ್ತು ಪಾದರಕ್ಷೆ—ಇವು ಎಸ್ಕಿಮೋ ಉಡುಗೆ ತೊಡುಗೆ. ಇವು ಇವರನ್ನು ಬೆಚ್ಚಗಿಡುತ್ತವೆ. ಸ್ತ್ರೀ ಪುರುಷರಿಗೆ ಉಡುಗೆ ತೊಡುಗೆಯಲ್ಲಿ ಹೆಚ್ಚು ವ್ಯತ್ಯಾಸವೇನೂ ಕಾಣಬರುವುದಿಲ್ಲ. ಸ್ತ್ರೀಯರ ಉಡುಪನ್ನು ಪುರುಷರ ಉಡುಪಿಗಿಂತ ಸ್ವಲ್ಪ ಭಿನ್ನವಾದ ರೀತಿಯಲ್ಲಿ ಹೊಲಿಯಲಾಗಿರುತ್ತದೆ. ಉಡುಪಿಗೆ ಒಂದರ ಮೇಲೊಂದರಂತೆ ತುಪ್ಪಟಗಳ ಎರಡು ಪದರಗಳಿರುತ್ತವೆ. ಮೊದಲನೆಯ ಪದರದಲ್ಲಿ ತುಪ್ಪಟದ ಭಾಗ ಮೈಗೆ ಅಂಟಿಕೊಂಡಂತೆಯೂ ಎರಡನೆಯ ಪದರದಲ್ಲಿ ತುಪ್ಪಟದ ಭಾಗ ಹೊರಭಾಗಕ್ಕೆ ಬರುವಂತೆಯೂ ಹೊಲಿದಿರುತ್ತಾರೆ. ಶರೀರದ ಶಾಖವನ್ನು ಕಾಪಾಡಲು ಇದೊಂದು ಒಳ್ಳೆಯ ಮಾರ್ಗ. ಆಭರಣ ಧರಿಸುವುದೂ ಅದಕ್ಕಿಂತ ಹೆಚ್ಚಾಗಿ ತಮ್ಮ ಮುಖಕ್ಕೆ ಹಚ್ಚೆ ಹುಯ್ಯಿಸಿಕೊಳ್ಳುವುದೂ ಹೆಂಗಸರಿಗೆ ಹಿಂದಿನಿಂದಲೂ ಪ್ರಿಯ.

ಎಸ್ಕಿಮೋಗಳಲ್ಲಿ ಸುವ್ಯವಸ್ಥಿತ ಸಾಮಾಜಿಕ ಪದ್ಧತಿಗಳೇನೂ ಇದ್ದಂತೆ ಕಾಣಬರುವುದಿಲ್ಲ. ಬಲಿಷ್ಠ ವ್ಯಕ್ತಿಯನ್ನು ಹಳ್ಳಿಯ ಮುಖಂಡನೆಂದು ಪರಿಗಣಿಸುತ್ತಿದ್ದರೂ ಅವನ ಮಾತಿಗೆ ಅಷ್ಟೇನೂ ಬೆಲೆಯಿರುತ್ತಿರಲಿಲ್ಲ. ಹಳ್ಳಿಯ ಭೂಮಿ ಎಲ್ಲರಿಗೂ ಸೇರಿತ್ತು. ಏಕಸ್ವಾಮ್ಯವಿರಲಿಲ್ಲ. ಯಾವನಾದರೂ ಒಬ್ಬನಿಗೆ ಒಂದು ದಿನ ಬೇಟೆ ಸಿಗದಿದ್ದರೆ ಅವನಿಗೂ ಅವನ ಸಂಸಾರಕ್ಕೂ ಆಹಾರ ಒದಗಿಸುವುದು

ಇತರರ ಕರ್ತವ್ಯವಾಗಿತ್ತು. ಬೇಟೆ, ಮತ್ತು ಮೀನುಗಾರಿಕೆ ಪುರುಷರ ಮುಖ್ಯ ಕೆಲಸ; ಅಡಿಗೆ ಮಾಡುವುದೂ ಬಟ್ಟೆ ಹೊಲಿಯುವುದೂ ಸ್ತ್ರೀಯರ ಕರ್ತವ್ಯ. ಈ ಶ್ರಮ ವಿಭಾಗದಿಂದ ಒಬ್ಬರ ಸಹಾಯವಿಲ್ಲದೆ ಇನ್ನೊಬ್ಬರು ಬದುಕುವುದು ಕಷ್ಟವಾಗಿತ್ತು. ಆದ್ದರಿಂದ ವಿಧುರರೂ ವಿಧವೆಯರೂ ಬದುಕಲು ಮದುವೆಯಾಗಲೇಬೇಕಾಗಿತ್ತು. ಏಕಪತ್ನೀತ್ವ ಮತ್ತು ಏಕಪತಿತ್ವವೇ ಸಾಮಾನ್ಯವಾಗಿತ್ತು. ವೃದ್ಧರನ್ನೂ ಅನಾಥರನ್ನೂ ಅವರ ಬಂಧುಗಳು ನೋಡಿಕೊಳ್ಳುತ್ತಿದ್ದರು. ಸಾಮಾನ್ಯವಾಗಿ ಎಸ್ಕಿಮೋಗಳು ಶಾಂತಿಪ್ರಿಯರು, ವಿಧೇಯರು, ಸತ್ಯಸಂಧರು, ಕಷ್ಟಸಹಿಷ್ಣುಗಳು. ವಿರಾಮ ಕಾಲದಲ್ಲಿ ಇವರು ಸಂಗೀತ, ನೃತ್ಯ ಹಾಗೂ ಮನೋರಂಜನೆಯ ಆಟಗಳಲ್ಲಿ ನಿರತರಾಗುತ್ತಿದ್ದರು.

ಇವರೆಲ್ಲ ಈಗ ಹೆಚ್ಚು ಕಡಿಮೆ ಕ್ರೈಸ್ತರಾಗಿದ್ದಾರಾದರೂ ಇವರು ತಮ್ಮ ಹಳೆಯ ಮತೀಯ ನಂಬಿಕೆಗಳನ್ನು ಉಳಿಸಿಕೊಂಡಿದ್ದಾರೆ. ಇವು ಅಮೆರಿಕನ್ ಇಂಡಿಯನ್ ಜನರ ನಂಬಿಕೆಗಳನ್ನೆ ಹೋಲುತ್ತವೆ. ಅಲ್ಲಲ್ಲಿ ಕೆಲವು ಸ್ಥಳೀಯ ಬದಲಾವಣೆಗಳನ್ನು ಕಾಣಬಹುದು. ಜೀವ ನಿರ್ಜೀವ ವಸ್ತುಗಳಲ್ಲೆಲ್ಲ ಆತ್ಮನಿರುತ್ತಾನೆಂಬುದು ಇವರ ಮುಖ್ಯ ನಂಬಿಕೆ. ತೋರ್ನ್ನರ್ಸ್ಸುಕ್ ಶ್ರೇಷ್ಠ ದೇವತೆ. ಇವನ ಆಶ್ರಯದಲ್ಲಿ ತೋರ್ನ್ನರ್ತ್ ಎಂಬ ಇತರ ಅಧಿದೇವತೆಗಳಿರುತ್ತಾರೆ. ಆಹಾರಗಳನ್ನು ಕೊಡುವ ಸ್ತ್ರೀ ದೇವತೆಯಾದ ಸೆಡ್ನ ಸಮುದ್ರದಲ್ಲಿ ವಾಸಿಸುತ್ತಾಳೆಂದು ಕೆಲವರೂ ಆಕೆಯ ಹೆಸರು ಅರ್ನಕ್ನಗ್ಸಕ್ ಎಂದು ಮತ್ತೆ ಕೆಲವರೂ ಭಾವಿಸುತ್ತಾರೆ. ಈ ದೇವತೆ ಸಮುದ್ರದಲ್ಲಿ ಅಲೆಗಳನ್ನು ಸೃಷ್ಟಿಸುತ್ತಾಳೆ. ಕುಲದ ಕಟ್ಟಳೆಗಳನ್ನು ಮುರಿದವರಿಗೆ ಬೇಟೆಯಲ್ಲಿ ಸಮುದ್ರ ಪ್ರಾಣಿಗಳು ಸಿಕ್ಕದಂತೆ ಮಾಡುವವಳು ಈಕೆ. ಸಮುದ್ರ ಪ್ರಾಣಿಗಳೆಲ್ಲ ಈಕೆಯ ಕೈಬೆರಳುಗಳು. ಆದ್ದರಿಂದ ಈ ಸಮುದ್ರದೇವತೆಯ ಕೋಪಕ್ಕೆ ಯಾರೂ ಗುರಿಯಾಗದಂತೆ ನೋಡಿಕೊಳ್ಳುವುದು ಪುರೋಹಿತನ (ಅಂಗಕಾಕ್) ಕರ್ತವ್ಯ. ಎಸ್ಕಿಮೋಗಳ ಕೆಲವು ಕುಲಗಳ ಜನ ಮನುಷ್ಯನ ದೇಹದಲ್ಲಿ ಎರಡು ಆತ್ಮಗಳಿವೆಯೆಂದು ಭಾವಿಸುತ್ತಾರೆ. ದೇಹಿಯ ಮರಣಾನಂತರ ಈ ಆತ್ಮಗಳಲ್ಲೊಂದು ಆಕಾಶಕ್ಕೋ ಪಾತಾಳಕ್ಕೋ ಹೋಗಿ ಅಲ್ಲಿ ವಾಸಿಸುವ ಇತರ ಆತ್ಮಗಳನ್ನು ಸೇರುತ್ತದೆ. ಮತ್ತೊಂದು ಆತ್ಮ ದೇಹದಲ್ಲಿಯೇ ಉಳಿದಿರುತ್ತದೆ ; ಅಥವಾ ತಾತ್ಕಾಲಿಕವಾಗಿ ಇನ್ನೊಂದು ಎಳೆ ಮಗುವಿನ ಶರೀರಕ್ಕೆ ಹೋಗುತ್ತದೆ. ಕಣ್ಣಿಗೆ ಕಾಣುವ ಪ್ರತಿಯೊಂದು ವಸ್ತುವಿಗೂ ಒಬ್ಬ ದೇವತೆಯುಂಟು. ಅದರ ಸಹಾಯವಿಲ್ಲದೆ ಆ ವಸ್ತು ತಮಗೆ ದೊರೆಯಲಾರದೆಂಬುದು ಎಸ್ಕಿಮೋಗಳ ನಂಬಿಕೆ. ಆದ್ದರಿಂದ ಪ್ರತಿಯೊಂದು ದೇವತೆಯನ್ನೂ ಒಂದಲ್ಲ ಒಂದು ಬಗೆಯಿಂದ ಸಂತುಷ್ಟಿಗೊಳಿಸುವುದೇ ಎಸ್ಕಿಮೋಗಳ ಆದ್ಯ ಕರ್ತವ್ಯ. ಇದಕ್ಕಾಗಿ ಅವರು ಪುರೋಹಿತನ ನೆರವು ಪಡೆಯುತ್ತಿದ್ದರು. ಈತನಿಗೆ ದೇವತೆಗಳೊಡನೆ ಮಾತನಾಡುವ ಶಕ್ತಿಯಿದೆಯೆಂದು ನಂಬಲಾಗಿತ್ತು. ಈತ ಸಾಮಾನ್ಯ ಜನಕ್ಕೆ ಅರ್ಥವಾಗದ ಎಸ್ಕಿಮೋ ಭಾಷೆಯ ಮಂತ್ರಗಳನ್ನು ಪಠಿಸಿ ದೇವತೆಗಳೊಡನೆ ಸಖ್ಯ ಏರ್ಪಡಿಸಬಲ್ಲವ. ಆದ್ದರಿಂದ ಪುರೋಹಿತನಿಗೆ ಸಮಾಜದಲ್ಲಿ ಮುಖ್ಯ ಸ್ಥಾನವಿತ್ತು.

ಪಶ್ಚಿಮ ಮತ್ತು ಪೂರ್ವ ಗ್ರೀನ್‌ಲೆಂಡ್‌ಗಳಲ್ಲಿ ಡೆನ್ಮಾರ್ಕಿನ ಪಾದ್ರಿಗಳೂ ಲಾಬ್ರಡಾರಿನಲ್ಲಿ ಮೊರೇವಿಯದ ಪಾದ್ರಿಗಳೂ ಅಲಾಸ್ಕದಲ್ಲಿ ರಷ್ಯನ್ ಪಾದ್ರಿಗಳೂ ಎಸ್ಕಿಮೋ ಜನರನ್ನು ಕ್ರೈಸ್ತಮತಕ್ಕೆ ಪರಿವರ್ತಿಸುವ ಕಾರ್ಯದಲ್ಲಿ ನಿರತರಾಗಿದ್ದಾರೆ. ಇವರ ಪ್ರಭಾವಕ್ಕೆ ಹೆಚ್ಚಾಗಿ ಒಳಗಾಗದ ಕಡೆಗಳಲ್ಲಿ ಎಸ್ಕಿಮೋಗಳು ತಮ್ಮ ಮತ ಧರ್ಮಗಳನ್ನು ಈಗಲೂ ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬರುತ್ತಿದ್ದಾರೆ.

(ಎ.ವಿ.ಎನ್.)

**ಪ್ರಾಗಿತಿಹಾಸ :** ಇತ್ತೀಚೆಗೆ ದೊರಕಿರುವ ಅನೇಕ ಆಧಾರಗಳ ಪ್ರಕಾರ ಎಸ್ಕಿಮೋ ಸಂಸ್ಕೃತಿ ಏಷ್ಯನ್ ಮೂಲಕ್ಕೇ ಸೇರಿದ್ದು ಬೇರಿಂಗ್ ಜಲಸಂಧಿಯ ಮಾರ್ಗವಾಗಿ ಕ್ರಮೇಣ ಉತ್ತರ ಅಮೆರಿಕವನ್ನು ಪ್ರವೇಶಿಸಿತೆಂದು ಖಚಿತವಾಗಿದೆ. ಈ ವಲಸೆಯ ಕಾರ್ಯ ಕ್ರಿ. ಪೂ. 6–5ನೆಯ ಸಹಸ್ರಮಾನಗಳಲ್ಲಿ ಪ್ರಾರಂಭವಾಯಿತು. ಈ ಸಂಸ್ಕೃತಿ ಸೈಬೀರಿಯ–ಅಲಾಸ್ಕಗಳಲ್ಲಿ ಕಂಡುಬರುವ ಡೆನ್‌ಬಿಗ್ ಸಂಸ್ಕೃತಿಗೆ ಸಂಬಂಧಿಸಿದ್ದರೂ ಉತ್ತರ ಅಮೆರಿಕದ ಅಲಾಸ್ಕ, ಗ್ರೀನ್‌ಲೆಂಡ್ ಮತ್ತಿತರ ಪ್ರದೇಶಗಳಲ್ಲಿ ದೊರಕಿರುವ ಅತ್ಯಂತ ಪುರಾತನ ಎಸ್ಕಿಮೋ ಅವಶೇಷಗಳು ಇಂಗಾಲ ಕಾಲ ನಿರ್ಣಯ ರೀತ್ಯಾ ಕ್ರಿಸ್ತ ಪೂರ್ವ ಕೆಲವು ಶತಮಾನಗಳಿಗೆ ಮಾತ್ರ ನಿರ್ದೇಶಿತವಾಗಿದೆ.

ಅತ್ಯಂತ ಹಳೆಯ ಎಸ್ಕಿಮೋ ಸಂಸ್ಕೃತಿ ಉಮ್‌ನಾಕ್ ದ್ವೀಪದ ನೆಲೆಯೊಂದರಲ್ಲಿ ಬೆಳಕಿಗೆ ಬಂದು ಅದರ ಹೆಚ್ಚಿನ ವಿವರಗಳು ದಕ್ಷಿಣ ಅಲಾಸ್ಕದ ಕುಕ್ ಕೊಲ್ಲಿ ಮತ್ತು ಪ್ರಿನ್ಸ್ ವಿಲಿಯಮ್‌ಗಳಲ್ಲಿನ ಮಾಹಿತಿಗಳಿಂದ ತಿಳಿದುಬಂದಿವೆ ಪೂರ್ವೈತಿಹಾಸಿಕ ದಕ್ಷಿಣ ಅಲಾಸ್ಕ ಮತ್ತು ಅಲ್ಯೂಷನ್ ದ್ವೀಪಗಳ ಸಂಸ್ಕೃತಿಗಳು ಎಸ್ಕಿಮೋ ಸಂಸ್ಕೃತಿಗಳ ಗುಂಪಿಗೆ ಸೇರಿದ್ದರೂ ಅಲಾಸ್ಕದ ಇತರ ಪ್ರದೇಶಗಳ ಸಂಸ್ಕೃತಿಗಳಿಂದ ಭಿನ್ನವಾಗಿದ್ದುವು. ಜನಭರಿತ ಪ್ರದೇಶದ ಸಂಸ್ಕೃತಿ ಸ್ಥಿರವಾಗಿತ್ತು. ಆದರೆ ಬೇರಿಂಗ್ ಜಲಸಂಧಿಯ ಪ್ರದೇಶದಲ್ಲಿ ಅಡಿಗಡಿಗೆ ಅದರ ರೂಪ ರೇಖೆಗಳು ಬದಲಾಗುತ್ತಿದ್ದುವು. ಇಲ್ಲಿ ಇಪಿಯುಟಾಕ್ ಪ್ರದೇಶದ ಜನರ ಸಂಸ್ಕೃತಿಯ ತಳಹದಿಯ ಮೇಲೆ ದಕ್ಷಿಣ ಅಲಾಸ್ಕದ ಸಂಸ್ಕೃತಿಯ ಪ್ರಭಾವ ಬೆಳೆಯಿತು. ಇದರೊಂದಿಗೆ ಪುನಕ್ ಸಂಸ್ಕೃತಿಯ ಅಂಶಗಳೂ ಮಿಳಿತವಾಗಿದ್ದುವು.

ಪಶ್ಚಿಮ ಹಾಗೂ ಉತ್ತರ ಅಲಾಸ್ಕದಲ್ಲಿನ ಇತಿಹಾಸಪೂರ್ವ ಎಸ್ಕಿಮೋ ಸಂಸ್ಕೃತಿಯ ಬೆಳೆವಣಿಗೆಯಲ್ಲಿ ಮೂರು ಹಂತಗಳನ್ನು ಕಾಣಬಹುದು. ಮೊಟ್ಟಮೊದಲಿಗೆ ಇಲ್ಲಿ ಹಳೆಯ ಬೇರಿಂಗ್ ಸಮುದ್ರದ ಲಕ್ಷಣಗಳೂ ಅನಂತರ ಕ್ರಮವಾಗಿ ಇಪಿಯುಟಾಕ್, ಬಿರ್ನಿಕ್ ಮತ್ತು ಪುನಕ್ ಅಂಶಗಳೂ ಕಂಡುಬಂದವು. ಹಳೆಯ ಬೇರಿಂಗ್ ಸಮುದ್ರ ಸಂಸ್ಕೃತಿಯ ಮಾಹಿತಿಗಳೂ ಇಲ್ಲಿನ ಲಿಟ್ಲ್ ಡೈಯೊಮೀಡ್ ದ್ವೀಪದಲ್ಲಿ ದೊರಕಿವೆ. ಸೆಂಟ್ ಲಾರೆನ್ಸ್ ದ್ವೀಪದಲ್ಲಿ ನಡೆದ ಸಂಶೋಧನೆಗಳಿಂದ ಇದು ಖಚಿತವಾಗಿದೆ. ಇದಾದ ಅನಂತರ ಕೆನಡದ ಥ್ಯೂಲೀ ಸಂಸ್ಕೃತಿಗೆ ಸಮಾನವಾದ ಸಂಸ್ಕೃತಿ ಇಲ್ಲಿ ಬೆಳೆಯಿತು. ಹಳೆಯ ಬೇರಿಂಗ್ ಸಂಸ್ಕೃತಿಯ ಮೊದಲ ಹಂತವಾದ ಓಕ್‌ವಿಕ್ ಸಂಸ್ಕೃತಿ ಕ್ರಿ. ಪೂ. 500–400 ವರ್ಷಗಳಷ್ಟು ಹಿಂದಿನದು. ಪುನಕ್ ಸಂಸ್ಕೃತಿ ಕ್ರಿ. ಶ. 550–1250ರದೆಂದು ನಿರ್ಧರಿಸಲಾಗಿದೆ. ಈ ಸಂಸ್ಕೃತಿಯ ಕಾಲದಲ್ಲಿ ಜನ ಕಡಲತೀರದ ಜೀವನರೀತಿಗೆ ಹೊಂದಿಕೊಂಡಿದ್ದು ಸೀಲ್, ತಿಮಿಂಗಲ ಮುಂತಾದ ಜಲಚರಗಳ ಮತ್ತು ಪಕ್ಷಿಗಳ ಬೇಟೆಯನ್ನೆ ಅವಲಂಬಿಸಿದ್ದರು. ಈ ಜನರ ವಾಸದ ಮನೆಗಳು ಆಯಾಕಾರ. ಅವಕ್ಕೆ ಇಕ್ಕಟ್ಟಾದ ಬಾಗಿಲು. ಇವು ಭೂ ಮಟ್ಟದಿಂದ ಅರ್ಧಭಾಗ ಕೆಳಗಿರುತ್ತಿದ್ದುವು. ಇವರ ಮುಖ್ಯ ಆಯುಧೋಪಕರಣಗಳು ಕಲ್ಲಿನವು. ಇವರು ಮಡಿಕೆ ಕುಡಿಕೆಗಳನ್ನೂ ಹಣತೆಯನ್ನೂ ಉಪಯೋಗಿಸುತ್ತಿದ್ದರು. ಇದು ಎಸ್ಕಿಮೋ ಸಂಸ್ಕೃತಿಗಳಲ್ಲಿ ಅತ್ಯಂತ ಹಳೆಯದಾದರೂ ಇಪಿಯುಟಾಕ್ ಸಂಸ್ಕೃತಿಯ ಕಲೆಯ ವಿನಾ ಉಳಿದೆಲ್ಲಕ್ಕಿಂತಲೂ ಇದೇ ಹೆಚ್ಚು ಮುಂದುವರಿದಿತ್ತು.

ಅನಂತರದ ಪುನಕ್ ಸಂಸ್ಕೃತಿ ಹಳೆಯ ಬೇರಿಂಗ್ ಸಮುದ್ರದ ಮತ್ತು ಸೈಬೀರಿಯದ ಸಂಸ್ಕೃತಿಗಳ ಪ್ರಭಾವಗಳಿಂದ ಕೂಡಿತ್ತು. ಅಲಾಸ್ಕದ ಪಾಯಿಂಟ್ ಹೋಪ್, ಕೊಟ್‌ಸೆಬ್ಯೂ ಮತ್ತು ಸ್ಯೂಯರ್ಡ್ ಪರ್ಯಾಯದ್ವೀಪಗಳಲ್ಲಿ ಈ ಸಂಸ್ಕೃತಿ ಇಪಿಯುಟಾಕ್ ಸಂಸ್ಕೃತಿಯೊಂದಿಗೆ ಮಿಳಿತವಾಗಿದೆ. ಹಳೆಯ ಬೇರಿಂಗ್ ಸಮುದ್ರದ ಸಂಸ್ಕೃತಿಯ ದ್ವಿತೀಯ ಮತ್ತು ತೃತೀಯ ಸಾಂಸ್ಕೃತಿಕ ಹಂತಗಳ ಅವಶೇಷಗಳು ಸೈಬೀರಿಯ ತೀರಪ್ರದೇಶ, ಸೆಂಟ್ ಲಾರೆನ್ಸ್ ಮತ್ತು ಡೈಯೊಮೀಡ್ ದ್ವೀಪ ಪ್ರದೇಶಗಳಲ್ಲಿ ದೊರಕಿವೆ. ಅಲಾಸ್ಕದಲ್ಲಿ ಇಪಿಯುಟಾಕ್ ಸಂಸ್ಕೃತಿಯ ಅವಶೇಷಗಳು ಪಾಯಿಂಟ್ ಹೋಪ್‌ನಲ್ಲಿ ಮಾತ್ರ ದೊರಕಿವೆ. ಪುನಕ್ ಸಂಸ್ಕೃತಿಯ ಅವಶೇಷಗಳು ಸೆಂಟ್ ಲಾರೆನ್ಸ್, ಡೈಯೊಮೀಡ್, ಈಶಾನ್ಯ ಸೈಬೀರಿಯ, ಅಲಾಸ್ಕದ ಆರ್ಕ್‌ಟಿಕ್ ತೀರದ ಪ್ರಿನ್ಸ್ ಆಫ್ ವೇಲ್ಸ್ ಭೂಶಿರ ಮುಂತಾದ ಪ್ರದೇಶಗಳಲ್ಲಿ ಕಂಡುಬಂದಿವೆ.

ಪಾಯಿಂಟ್ ಹೋಪ್ ಭೂಶಿರದಲ್ಲಿ ಕಂಡುಬಂದ ಇಪಿಯುಟಾಕ್ ಸಂಸ್ಕೃತಿಯ ಕಾಲ 9–10ನೆಯ ಶತಮಾನಗಳೆಂದು ನಿರ್ಧರಿಸಿರುವುದರಿಂದ ಹಲವು ಸಮಸ್ಯೆಗಳು ಕಂಡುಬಂದಿವೆ. ಹಳೆಯ ಬೇರಿಂಗ್ ಸಮುದ್ರದ ಮತ್ತು ಇಲ್ಲಿನ ಸಂಸ್ಕೃತಿಗಳಿಗಿರುವ ಹೋಲಿಕೆಗಳಿಂದ ಇದನ್ನು 2–3ನೆಯ ಶತಮಾನಗಳದೆಂದು ಊಹಿಸುವುದು ಸಮಂಜಸವಾಗಿ ಕಾಣುತ್ತದೆ. ಈ ಸಂಸ್ಕೃತಿಗೆ ಸೇರಿದ ದಂತ, ಕೊಂಬು ಮತ್ತು ಎಲುಬಿನ ಆಯುಧಗಳು ಇತರ ಎಸ್ಕಿಮೋ ಸಂಸ್ಕೃತಿಗಳ ಆಯುಧಗಳಿಗಿಂತಲೂ ಪ್ರಮುಖವಾಗಿವೆ. ಎಲುಬಿನ ಆಯುಧಗಳ ಮೇಲಿರುವ ಕಲೆ, ಇವರ ಶವಸಂಸ್ಕಾರ ಪದ್ಧತಿ, ಮತೀಯಾಚರಣೆ ಮುಂತಾದವುಗಳಲ್ಲಿ ಇವರು ಕಬ್ಬಿಣ ಯುಗದ ಸೈಬೀರಿಯನ್ ಸಂಸ್ಕೃತಿಯ ಜನರನ್ನು ಹೋಲುತ್ತಾರೆ. ಈ ಸಂಸ್ಕೃತಿಗೆ ಸೇರಿದ ಕಲ್ಲಿನಾಯುಧಗಳು ಇನ್ನೂ ಪುರಾತನವಾದ ಸೈಬೀರಿಯದ- ನವಶಿಲಾಯುಗದ ಆಯುಧಗಳನ್ನು ಹೋಲುತ್ತವೆ. ಇಪಿಯುಟಾಕ್ ಸಂಸ್ಕೃತಿಯಲ್ಲಿ ಎಸ್ಕಿಮೋ ಸಂಸ್ಕೃತಿಗಳ ಮುಖ್ಯ ಚಿಹ್ನೆಗಳಾದ ಸ್ಲೆಜ್ ಗಾಡಿಗಳು, ಈಟಿಗಾಳ, ಬಿಲ್ಲಿನಾಕಾರದ ಬೈರಿಗೆ, ಮಣ್ಣಿನ ಪಾತ್ರೆ, ಹಣತೆ ಮತ್ತು ನಯಗೊಳಿಸಿದ ಬಳಪದ ಕಲ್ಲಿನಾಯುಧಗಳು ಸಿಕ್ಕಿಲ್ಲ. ಈ ಸಂಸ್ಕೃತಿಯನ್ನೇ ಹೋಲುವ ಇಪಿಯುಟಾಕ್ ಸಮೀಪ ಸಂಸ್ಕೃತಿಯಲ್ಲಿ ಕೊನೆಯ ಮೂರು ರೀತಿಯ ಅವಶೇಷಗಳೇನೋ ದೊರಕಿವೆ. ಬ್ರಿಸ್ಟಲ್ ಕೊಲ್ಲಿ ಕುಸ್‌ಕೊಕ್ವಿಮ್ ಮತ್ತು ನಾರ್ಟನ್‌ಸೌಂಡ್ ಪ್ರದೇಶಗಳಲ್ಲಿ ದೊರಕಿರುವ ಈ ಸಂಸ್ಕೃತಿಯ ಅವಶೇಷಗಳು ಇಂಗಾಲ ಕಾಲ ನಿರ್ಣಯ ವಿಧಾನದ ಪ್ರಕಾರ ಕ್ರಿ. ಪೂ. 300ರಿಂದ ಕ್ರಿ. ಶ. 300ರ ನಡುವಣ ಕಾಲದವೆಂದು ಹೇಳಲಾಗಿದೆ.

ಥ್ಯೂಲೀ ಸಂಸ್ಕೃತಿ ಕೆನಡ–ಗ್ರೀನ್‌ಲೆಂಡ್ ಪ್ರದೇಶಗಳಲ್ಲಿ ಕಂಡುಬರುವ ಮುನ್ನ ಆ ಪ್ರದೇಶಗಳಲ್ಲಿ ಡಾರ್ಸೆಟ್ ಸಂಸ್ಕೃತಿ ನೆಲೆಸಿತ್ತು. ಈ ಸಂಸ್ಕೃತಿ ಆರ್ಕ್‌ಟಿಕ್ ತೀರ ಪ್ರದೇಶದಲ್ಲಿ ನ್ಯೂ ಫೌಂಡ್‌ಲೆಂಡಿನಿಂದ ಪೂರ್ವ ಗ್ರೀನ್‌ಲೆಂಡಿನ ವರೆಗೂ ಹಬ್ಬಿತ್ತು. ಈ ಸಂಸ್ಕೃತಿಗೆ ಸೇರಿದ ಈಟಿಗಾಳ, ಚಾಕು, ಹಣತೆ, ಕಲ್ಲಿನಾಯುಧಗಳು ಮತ್ತು ದಂತದ ಕೆತ್ತನೆ ವಸ್ತುಗಳು ಥ್ಯೂಲೀ ಸಂಸ್ಕೃತಿಯ ವಸ್ತುಗಳಿಗಿಂತ ನಯ

ವಾಗಿದ್ದುವು. ಈ ಸಂಸ್ಕೃತಿಯ ಜನಕ್ಕೆ ಥ್ಯೂಲೀ ಸಂಸ್ಕೃತಿಯವರು ಬಳಸುತ್ತಿದ್ದ ನಾಯಿ ಹೂಡಿದ ಸ್ಲೆಜ್‌ಗಾಡಿ, ಬಿಲ್ಲಿನಾಕಾರದ ಬೈರಿಗೆ, ಎಲುಬಿನಿಂದ ಮಾಡಿದ ಬಾಣದ ಮೊನೆ ಮುಂತಾದವುಗಳ ಉಪಯೋಗ ಗೊತ್ತಿರಲಿಲ್ಲ, ಡಾರ್ಸೆಟ್ ಸಂಸ್ಕೃತಿಯ ಹಲವಾರು ಆಯುಧೋಪಕರಣಗಳ ಪ್ರಭಾವ ಅನಂತರಕಾಲದ ಎಸ್ಕಿಮೋಗಳ ಆಯುಧಗಳ ಮೇಲೆ ಕಂಡುಬರುತ್ತದೆ. ಕೆಲ ಕಾಲ ಡಾರ್ಸೆಟ್ ಮತ್ತು ಥ್ಯೂಲೀ ಸಂಸ್ಕೃತಿಗಳು ಒಟ್ಟಿಗೆ ನೆಲೆಸಿದ್ದು ಅನಂತರ ಡಾರ್ಸೆಟ್ ಸಂಸ್ಕೃತಿ ಕಣ್ಮರೆಯಾಗಿ ಥ್ಯೂಲೀ ಸಂಸ್ಕೃತಿ ಪ್ರಬಲವಾಯಿತು. ಇದು ಸುಮಾರು ಕ್ರಿ.ಪೂ. 750 ರಲ್ಲಿ ಇದ್ದುದಾಗಿ ತಿಳಿದುಬಂದಿದೆ. ಡಾರ್ಸೆಟ್ ಸಂಸ್ಕೃತಿಯನ್ನೇ ಹೋಲುವ ಸಾರ್‌ಕ್ವಾಕ್ ಎಂಬ ಸಂಸ್ಕೃತಿಯ ಅವಶೇಷಗಳು (ಕ್ರಿ. ಪೂ. 600) ಕೆನಡದ ಆರ್ಕ್‌ಟಿಕ್‌ನಲ್ಲಿ ಕಂಡುಬಂದಿದ್ದರೂ ಇದರ ಬಗ್ಗೆ ಹೆಚ್ಚಿನ ವಿವರಗಳು ಗೊತ್ತಾಗಿಲ್ಲ.

ಈ ಪ್ರದೇಶದ ಮತ್ತೊಂದು ಪುರಾತನ ಸಂಸ್ಕೃತಿಯಾದ ಡೆನ್‌ಬಿಗ್ ಸಂಸ್ಕೃತಿ ಡಾರ್ಸೆಟ್ ಸಂಸ್ಕೃತಿಯೊಂದಿಗೂ ಎಸ್ಕಿಮೋ ಪೂರ್ವದ ಸಂಸ್ಕೃತಿಗಳೊಂದಿಗೂ ಹೋಲಿಕೆ ಪಡೆದಿದೆ. ಅದೂ ಈ ಸಂಸ್ಕೃತಿಗಳ ಮೇಲೆ ತಕ್ಕಮಟ್ಟಿನ ಪ್ರಭಾವ ಬೀರಿದಂತೆ ಕಾಣುತ್ತದೆ. ಕ್ರಿ. ಪೂ. 3100–1600ದಷ್ಟು ಹಳೆಯದಾದ ಈ ಸಂಸ್ಕೃತಿಯ ಅಂಶಗಳು ಇಪಿಯುಟಾಕ್ ಸಂಸ್ಕೃತಿಯಲ್ಲೂ ಕಂಡುಬರುತ್ತವೆ. (ಬಿ.ಕೆ.ಜಿ)

**ಕಲೆ :** ಪ್ರಾಗಿತಿಹಾಸಕಾಲದಿಂದ ಇಂದಿನ ವರೆಗೂ ಎಸ್ಕಿಮೋಗಳು ಕಲಾ ಪರಂಪರೆಯನ್ನು ಬೆಳೆಸಿಕೊಂಡು ಬಂದಿದ್ದಾರೆ. ಆಚಾರ ವ್ಯವಹಾರಗಳಲ್ಲಿ ಭಿನ್ನತೆಯಿರುವಂತೆ ಎಸ್ಕಿಮೋಗಳ ಕಲೆಯಲ್ಲೂ ಸ್ಥಳೀಯ ವೈವಿಧ್ಯಗಳು ಕಾಣಬರುತ್ತವೆ. ಉತ್ತರ ಅಲಾಸ್ಕದ ಬೇರಿಂಗ್ ಕೊಲ್ಲಿಗೆ ಸಮೀಪದ ಪ್ರದೇಶದಲ್ಲಿ ಆಹಾರ ಸಮೃದ್ಧವಾಗಿದ್ದು ಎಸ್ಕಿಮೋಗಳು ಹೆಚ್ಚು ಸಮಯವನ್ನು ಕಲಾ ಸೃಷ್ಟಿಗಾಗಿ ಬಳಸಲು ಅವಕಾಶವಿದ್ದದ್ದರಿಂದ ಪ್ರಾಚೀನ ಬೇರಿಂಗ್ ಸಮುದ್ರದ ಎಸ್ಕಿಮೋಗಳು ಪ್ರಾಗಿತಿಹಾಸ ಕಾಲದಿಂದ ಉತ್ತಮ ಕಲಾಕೃತಿಗಳನ್ನು ಸೃಷ್ಟಿಸಿದ್ದಾರೆ. ಓಕ್ವಿಕ್, ಪುನಕ್, ಸೆಂಟ್ ಲಾರೆನ್ಸ್ ಮುಂತಾದ ಕಡೆಗಳಲ್ಲಿ ನಡೆದ ಉತ್ಖನನಗಳು ಕ್ರಿ. ಪೂ. ಮೂರನೆಯ ಸಹಸ್ರಮಾನಕ್ಕೆ ಸೇರಬಹುದಾದ ಕಲಾವಿಶೇಷಗಳನ್ನು ಬೆಳಕಿಗೆ ತಂದಿವೆ. ಈಟಿ ಗಾಳಗಳು, ಒರೆಯುವ ಆಯುಧಗಳು, ಚಾಕುಗಳ ಹಿಡಿಗಳು ಮತ್ತು ಮೀನು ಹಿಡಿಯಲು ಉಪಯೋಗಿಸುವ ಬೆಂಡುಗಳು ಇವುಗಳ ಮೇಲೆ ವಿವಿಧ ಆಕಾರಗಳ ಕೆತ್ತನೆಯ ಕೆಲಸಗಳನ್ನು ಮಾಡಲಾಗಿದೆ. ಇವುಗಳಲ್ಲಿ ಕೆಲವು ವಿವಿಧ ಪ್ರಾಣಿಗಳ ಚಿತ್ರಗಳೆಂಬುದು ಸುಲಭವಾಗಿ ಗೊತ್ತಾಗುತ್ತದೆ. ದಂತದ ಈಟಿಗಾಳಗಳ ಮೇಲೆ ಕೆತ್ತಲಾಗಿರುವ ಪ್ರಾಣಿಗಳ ಚಿತ್ರಗಳು ಬಹು ನಾಜೂಕಾಗಿವೆ. ಅವುಗಳ ಕಣ್ಣು, ಕಿವಿ, ಮೂಗು, ಹಲ್ಲು ಮೊದಲಾದ ಅಂಗಗಳನ್ನು ಚಿತ್ರಿಸುವಲ್ಲಿ ಚಿತ್ರಕಾರನ ಕುಶಲತೆ ಎದ್ದು ಕಾಣುತ್ತದೆ. ಈ ಕಾಲದ ಚಿತ್ರಗಳಲ್ಲಿ ಪದೇ ಪದೇ ಕಾಣಬರುವ ಚಿತ್ರವೆಂದರೆ ರೆಕ್ಕೆಯಿರುವ ಪ್ರಾಣಿಯದು. ಇದರಲ್ಲಿ ರೆಕ್ಕೆಯ ಎರಡು ಭಾಗಗಳಲ್ಲೂ ಕಾಣಬರುವ ಪ್ರಮಾಣೌಚಿತ್ಯ ಗಮನಾರ್ಹವಾದದ್ದು. ಅಲಾಸ್ಕದ ಪುನಕ್ ದ್ವೀಪದಲ್ಲಿ ದೊರಕಿರುವ ದಂತದ ಶಿಲ್ಪಗಳು ಆ ಕಾಲದ ಶಿಲ್ಪ ಶೈಲಿಗೆ ಉತ್ತಮ ಸಾಕ್ಷಿಗಳಾಗಿವೆ. ಪ್ರಮಾಣ ಮೀರಿದ ಸ್ತನಗಳು, ನಿತಂಬ ಮುಂತಾದವುಗಳಿಂದ ಇವು ಕಾಮದೇವತೆಯ ಶಿಲ್ಪಗಳೆಂದು ಸುಲಭವಾಗಿ ಊಹಿಸಬಹುದು. ದಕ್ಷಿಣ ಅಲಾಸ್ಕದ ಬ್ರಿಸ್ಟಲ್ ಖಾರಿ, ಅಲ್ಯೂಷನ್ ಮತ್ತು ಕೋಡಿಯೂಕ್ ದ್ವೀಪಗಳು, ಕುಕ್ ಖಾರಿ, ವಿಲಿಯಂ ಸೌಂಡ್ ಮುಂತಾದ ಕಡೆಗಳಲ್ಲಿ ದೊರಕಿರುವ ಪ್ರಾಗೈತಿಹಾಸಿಕ ಅವಶೇಷಗಳಿಂದ ಈ ಎಸ್ಕಿಮೋಗಳು ವಿಶೇಷವಾಗಿ ಸಮುದ್ರದ ಪ್ರಾಣಿಗಳ ಮತ್ತು ಪಕ್ಷಿಗಳ ರೇಖಾಚಿತ್ರಗಳನ್ನೂ ವರ್ಣಚಿತ್ರಗಳನ್ನೂ ಮೂಳೆಯ ಆಯುಧಗಳ ಮೇಲೆ ಬರೆಯುತ್ತಿದ್ದರೆಂದು ಗೊತ್ತಾಗುತ್ತದೆ. ಈಟಿ, ಚಾಕು ಮುಂತಾದವುಗಳ ಮೇಲೆ ಪ್ರಾಣಿಗಳ ಚಿತ್ರಗಳನ್ನು ಬರೆದರೆ ಆ ಪ್ರಾಣಿಗಳು ಬೇಗ ಈ ಆಯುಧಗಳ ಏಟಿಗೆ ಸಿಕ್ಕಿ ಸಾಯುತ್ತವೆ ಎಂಬ ನಂಬಿಕೆ ಇದ್ದಿರಬೇಕು.

ಕೆನಡ ಮತ್ತು ಗ್ರೀನ್‌ಲೆಂಡಿನ ಎಸ್ಕಿಮೋಗಳ ಪ್ರಾಗೈತಿಹಾಸಿಕ ಕಲೆಗಳಲ್ಲಿ ಮುಖ್ಯವಾದದ್ದು ಶಿಲ್ಪ. ಪ್ರಾಣಿಗಳ ಮತ್ತು ಮಾನವನ ಶಿಲ್ಪಗಳನ್ನು ಇವರು ದಂತ, ಮೂಳೆ ಮತ್ತು ಮರಗಳಲ್ಲಿ ರೂಪಿಸಿದ್ದಾರೆ. ಇವುಗಳಲ್ಲಿ ವಿಶೇಷವಾಗಿ ಜೀವಂತ ಲಕ್ಷಣಗಳು ಕಾಣಬರುತ್ತವೆ. ಡಾರ್ಸೆಟ್ ಸಂಸ್ಕೃತಿಯ (ಕ್ರಿ. ಶ. ಏಳನೆಯ ಶತಮಾನ) ಶಿಲ್ಪಗಳಲ್ಲಿ ಅಗಲವಾದ ಮತ್ತು ದುಂಡಾದ ಮುಖ, ಚಪ್ಪಟೆ ಮೂಗು ಮತ್ತು ಅಗಲಬಾಯಿ—ಇವು ಮುಖ್ಯ ಲಕ್ಷಣಗಳು. ಒಂದಕ್ಕಿಂತಲೂ ಹೆಚ್ಚು ತಲೆ ಮುಖಗಳನ್ನುಳ್ಳ ಮರದ ಶಿಲ್ಪಗಳು ಕೆನಡ ಮತ್ತು ಗ್ರೀನ್‌ಲೆಂಡಿನ ಅಗೆತಗಳಲ್ಲಿ ದೊರಕಿವೆ.

ಸಮಕಾಲೀನ ಎಸ್ಕಿಮೋ ಕಲೆಯಲ್ಲಿ ವಿಕಾಸಹೊಂದಿದ ಪ್ರಾಗೈತಿಕಹಾಸಿಕ ಪರಂಪರೆಯನ್ನೇ ಕಾಣಬಹುದು. ಆಯುಧಗಳ ಮೇಲೆ, ಪೆಟ್ಟಿಗೆಗಳ ಮೇಲೆ ದಂತದ ಕೆತ್ತನೆಯ ಕೆಲಸ ವಿಶೇಷವಾಗಿ ಕಾಣಬರುತ್ತದೆ. ಶಿಲ್ಪಗಳಲ್ಲಿ ಬಹು ಮುಖ್ಯವಾದವು ದಂತದಿಂದ ಮತ್ತು ಮರದಿಂದ ಮಾಡಲಾದವು. ಆದರೆ ಅಲಾಸ್ಕ ಎಸ್ಕಿಮೋಗಳ ಉನ್ನತ ಮಟ್ಟದ ಕಲೆಯನ್ನು ನೃತ್ಯದಲ್ಲಿ ಬಳಸಲಾಗುವ ವಿವಿಧ ವರ್ಣಗಳ ಮುಖವಾಡಗಳಲ್ಲಿ ಕಾಣಬಹುದು. ಕ್ಯಾರಿಬೂ ಪ್ರಾಣಿಯ ಚರ್ಮವನ್ನು ಆಕಾರಕ್ಕೆ ತಕ್ಕಂತೆ ಕತ್ತರಿಸಿ, ಕೆಂಪು, ಕಪ್ಪು, ನೀಲಿ ಮತ್ತು ಬಿಳಿಯ ಬಣ್ಣಗಳಿಂದ ಕಣ್ಣು, ಮೂಗು, ಬಾಯಿ ಮುಂತಾದವನ್ನು ಚಿತ್ರಿಸಿ ಅದರ ಸುತ್ತಲೂ ಪಕ್ಷಿಯ ಗರಿಗಳನ್ನು ಕಟ್ಟಿ ಮುಖವಾಡಗಳನ್ನು ತಯಾರಿಸುತ್ತಿದ್ದರು. ಮರದಿಂದ ಮಾಡಿದ ಮುಖವಾಡಗಳೂ ಬಳಕೆಯಲ್ಲಿದ್ದುವು. ಗ್ರೀನ್‌ಲೆಂಡ್ ಕೆನಡಗಳ ಎಸ್ಕಿಮೋಗಳ ಸಮಕಾಲೀನ ಕಲೆಯಲ್ಲಿ ವಿಶೇಷವೇನೂ ಕಾಣಬರುವುದಿಲ್ಲ. ಇಲ್ಲಿಯೂ ಆಯುಧಗಳ ಮೇಲಿನ ರೇಖಾಚಿತ್ರ, ದಂತದ ಶಿಲ್ಪಗಳು ಮತ್ತು ಮರದ ಶಿಲ್ಪಗಳನ್ನು ಕಾಣಬಹುದು. ಶಿಲ್ಪಗಳಲ್ಲಿನ ಮುಖಲಕ್ಷಣಗಳೂ ಉಡುಗೆತೊಡುಗೆಗಳೂ ಎಸ್ಕಿಮೋಗಳ ನಿಜ ಜೀವನವನ್ನು ಪ್ರತಿಬಿಂಬಿಸುತ್ತವೆಯೆಂಬುದು ಗಮನಾರ್ಹ. ಆದಿಮಾನವ ಕಲೆಯಲ್ಲಿ ಎಸ್ಕಿಮೋ ಕಲೆಯ ಸ್ಥಾನ ವಿಶಿಷ್ಟವಾದದ್ದು. (ಎ.ವಿ.ಎನ್.)

**ಎಸ್ಕಿಮೋ ಭಾಷೆ :** ಕೆನಡ, ಗ್ರೀನ್‌ಲೆಂಡ್. ಅಲಾಸ್ಕ ಪರ್ವತ, ಸೋವಿಯತ್ ಸೈಬೀರಿಯ ಮುಂತಾದ ಉತ್ತರ ಧ್ರುವದ ಸಮೀಪವಿರುವ ಪ್ರದೇಶಗಳಲ್ಲಿ ವಾಸಿಸುವ ಎಸ್ಕಿಮೋ ಜನರು ಮಾತಾಡುವ ಭಾಷೆ. ಅಲಾಸ್ಕ ಪರ್ವತ, ಕಮ್ಯಾಂಡರ್ ದ್ವೀಪ ಹಾಗೂ ಅಲ್ಯೂಷನ್ ದ್ವೀಪಗಳಲ್ಲಿ ಬಳಕೆಯಲ್ಲಿರುವ ಅಲ್ಯೂಟ್ ಭಾಷೆಯೂ ಈ ಪರಿವಾರಕ್ಕೆ ಸೇರುತ್ತದೆ. ಭೌಗೋಳಿಕವಾಗಿ ಬಹು ದೊಡ್ಡ ಪ್ರದೇಶದಲ್ಲಿ ಚದರಿ ಹೋಗಿದ್ದರೂ ಈ ಭಾಷೆಗಳಲ್ಲಿ ಪ್ರಭೇದಗಳು ಬಹಳ ಕಡಿಮೆಯಿರುವುದು ಗಮನಾರ್ಹವಾಗಿದೆ. ಎಸ್ಕಿಮೋ ಭಾಷೆಯಲ್ಲಿ ಮುಖ್ಯವಾಗಿ ಪೂರ್ವದ ಎಸ್ಕಿಮೋ ಮತ್ತು ಪಶ್ಚಿಮದ ಎಸ್ಕಿಮೋ ಎಂಬ ಎರಡು ಪ್ರಭೇದಗಳನ್ನು ಗುರುತಿಸಬಹುದು.

1814ರಲ್ಲಿ ಡೇನಿಷ್ ಭಾಷಾ ವಿಜ್ಞಾನಿಯಾದ ರಾಸ್ಕ್ ಎಂಬಾತ ಎಸ್ಕಿಮೋ ಮತ್ತು ಅಲ್ಯೂಟ್ ಭಾಷೆಗಳಲ್ಲಿನ ಸಾಮ್ಯಗಳನ್ನು ಕಂಡುಹಿಡಿದು ಅವು ಒಂದೇ ಪರಿವಾರಕ್ಕೆ ಸೇರಿದವೆಂದು ಅಭಿಪ್ರಾಯಪಟ್ಟ. ಮುಂದೆ 20ನೆಯ ಶತಮಾನದಲ್ಲಿ ನಡೆದ ಸಂಶೋಧನೆಗಳೂ ಈ ಭಾವನೆಗೆ ಪುಷ್ಟಿಯನ್ನಿತ್ತವು. ಆದರೂ ಹಲಕೆಲವು ವಿದ್ವಾಂಸರು ಈ ಭಾಷೆಗಳನ್ನು ಇಂಡೋ ಯೂರೋಪಿಯನ್ ಮತ್ತು ಯೂರಲ್-ಆಲ್ಟಾಯಿಕ್ ಗುಂಪುಗಳ ಜೊತೆ ಸೇರಿಸುವ ಪ್ರಯತ್ನವನ್ನೂ ಮಾಡಿದ್ದಾರೆ.

ನಮಗೆ ತಿಳಿದಮಟ್ಟಿಗೆ ಈ ಭಾಷೆಗಳನ್ನಾಡುವವರ ಸಂಖ್ಯೆ ಹೀಗಿದೆ. ಎಸ್ಕಿಮೋ ಭಾಷೆ ಸೈಬೀರಿಯದಲ್ಲಿ 1,000, ಅಲಾಸ್ಕದಲ್ಲಿ 16,000, ಕೆನಡದಲ್ಲಿ 10,000 ಗ್ರೀನ್‌ಲೆಂಡಿನಲ್ಲಿ 25,000. ಅಲ್ಯೂಟ್ ಭಾಷೆ ಅಲ್ಯೂಷನ್ ದ್ವೀಪಗಳಲ್ಲಿ ಸುಮಾರು 6,000.

ಈ ಭಾಷೆಗಳ ಪ್ರಧಾನ ವೈಶಿಷ್ಟ್ಯವೆಂದರೆ ಅವುಗಳ ರಚನೆ ಶ್ಲಿಷ್ಟ ಯೋಗಾತ್ಮಕವಾಗಿದ್ದು ಒಂದೇ ಶಬ್ದ ತನ್ನಲ್ಲಿ ಸೇರಿಕೊಂಡಿರುವ ಪ್ರತ್ಯಯಗಳ ಆಧಾರದ ಮೇಲೆ ಇಡೀ ವಾಕ್ಯದ ಅರ್ಥವನ್ನೇ ಕೊಡುವ ಸಾಮರ್ಥ್ಯವನ್ನು ಪಡೆದಿದೆ. ಒಂದು ನಾಮಧಾತುವಿಗೆ ಮುನ್ನೂರಕ್ಕಿಂತಲೂ ಹೆಚ್ಚು ರೂಪಗಳು ಹಾಗೂ ಒಂದು ಕ್ರಿಯಾಧಾತುವಿಗೆ ಒಂದು ಸಾವಿರಕ್ಕಿಂತಲೂ ಹೆಚ್ಚು ರೂಪಗಳಿವೆಯೆಂದರೆ ಈ ಭಾಷೆಗಳ ಪದಗಳು ಸಂಸ್ಕೃತ ಹಾಗೂ ಗ್ರೀಕ್ ಭಾಷೆಗಳ ಪದಗಳಿಗಿಂತಲೂ ಹೆಚ್ಚಿನ ರೂಪ ವೈವಿಧ್ಯಗಳನ್ನು ಹೊಂದಿವೆ ಎಂದು ತಿಳಿಯಬಹುದು. ರಚನೆಯಲ್ಲಿ ಇಂಥ ರೂಪಗಳು ಸಂಸ್ಕೃತ, ಗ್ರೀಕ್ ಭಾಷೆಗಳಿಗಿಂತ ಜಟಿಲವಾಗಿ ಕಂಡರೂ ಪದಾಂತ್ಯ ಪ್ರತ್ಯಯಗಳಲ್ಲಿ ಆಕೃತಿ ವೈವಿಧ್ಯ ಕಡಿಮೆ ಇರುವುದರಿಂದ ಸ್ವಲ್ಪ ಸರಳವಾಗಿಯೇ ಇವೆಯೆನ್ನಬಹುದು. ಏಕವಚನ, ದ್ವಿವಚನ, ಬಹುವಚನಗಳೆಂಬ ಮೂರು ವಚನಗಳಿವೆ. ಉದಾ : ಎಸ್ಕಿಮೋ ಭಾಷೆಯಲ್ಲಿ ಇಗ್ಲು–ಒಂದು ಮನೆ. ಇಗ್ಲುಕ್–ಎರಡು ಮನೆಗಳು, ಇಗ್ಲುತ್–ಎರಡಕ್ಕಿಂತ ಹೆಚ್ಚು ಮನೆಗಳು. ನಾಮಪದಕ್ಕೆ ಕ್ರಿಯಾಪದದೊಡನಿರುವ ಅನೇಕ ರೀತಿಯ ಸಂಬಂಧಗಳನ್ನು ಸೂಚಿಸುವಂಥ ಮತ್ತು, ಇಂದ, ಗೆ, ಮೂಲಕ, ಒಡನೆ, ಅಂತೆ, ಅಲ್ಲಿ ಮುಂತಾದ ವಿವಿಧ ಅರ್ಥಗಳನ್ನು ಸೂಚಿಸುವಂಥ ವಿಭಕ್ತಿ ಪ್ರತ್ಯಯಗಳಿವೆ. ವಿಭಕ್ತಿ ಮತ್ತು ವಚನ ಪ್ರತ್ಯಯಗಳಲ್ಲದೆ ಸರ್ವನಾಮದೊಡನೆ ಸಂಬಂಧವನ್ನು ಸೂಚಿಸುವ ಪ್ರತ್ಯಯಗಳೂ ಇವೆ. ಉದಾ : ಇಗ್ಲುಗ–ನನ್ನ ಮನೆ, ಇಗ್ಲುಜ್ನಿ–ನಿನ್ನ ಮನೆ, ಇಗ್ಲುಅ–ಅವನ ಮನೆ, ಇಗ್ಲುನಿ–ಅವನ ಸ್ವಂತ ಮನೆ ಇತ್ಯಾದಿ. ಕ್ರಿಯಾಪ್ರಕಾರಗಳೂ ಹಲವಾರು. ಸೂಚಕ, ಪ್ರಶ್ನಾರ್ಥಕ, ವಿಧ್ಯರ್ಥಕ, ಸಂಭಾವನಾರ್ಥಕ ಮುಂತಾದ ಪ್ರಭೇದಗಳೂ ಕರ್ತೃಸೂಚಕ ಮತ್ತು ಕರ್ಮಸೂಚಕ ಕೃದಂತಗಳೂ ಇವೆ. ಕ್ರಿಯಾಪದದ ಕೊನೆಯಲ್ಲಿ ಬರುವ ಸರ್ವನಾಮ ಸೂಚಕ ಪ್ರತ್ಯಯಗಳೂ ನಾಮಪದಾಂತ್ಯದಲ್ಲಿ ಬರುವ ಸರ್ವನಾಮ ಸೂಚಕ ಪ್ರತ್ಯಯಗಳೂ ಒಂದೇ ಆಗಿವೆ. ಕ್ರಿಯಾಂತ್ಯ ಪ್ರತ್ಯಯಗಳು ಕರ್ತೃ ಕರ್ಮಗಳೆರಡನ್ನು ಸೂಚಿಸುತ್ತವೆ. ಉದಾ : ತಕುವಗ–ನಾನು ಅದನ್ನು ನೋಡುತ್ತೇನೆ. ತಕುವಗ್ನಿ–ನೀನು ಅದನ್ನು ನೋಡುತ್ತಿ,

ಇತ್ಯಾದಿ. ಪ್ರತ್ಯಯಗಳೆಲ್ಲ ಧಾತುವಿನ ಮುಂದೆ ಜೋಡಿಸಲ್ಪಡುವುದರಿಂದ ಈ ಭಾಷೆಗಳಲ್ಲಿ ಉಪಸರ್ಗಗಳಾಗಲಿ ಅಂತಃ ಪ್ರತ್ಯಯಗಳಾಗಲಿ ಧಾತುಗಳ ಆಂತರಿಕ ಪರಿವರ್ತನೆಯಾಗಲಿ ಕಂಡು ಬರುವುದಿಲ್ಲ. ಸಂಖ್ಯಾಗಣನೆಯಲ್ಲಿ ಬೇರೆ ಬೇರೆ ಬೆರಳುಗಳ ಉಪಯೋಗ ಕಂಡು ಬರುತ್ತದೆ. ಉದಾ: ಎರಡನೆಯ ಕೈಯಲ್ಲಿ ಒಂದು–ಆರು. ಮೊದಲನೆಯ ಕಾಲಿನಲ್ಲಿ ಎರಡು–ಹನ್ನೆರಡು ಇತ್ಯಾದಿ.

ಈ ಭಾಷೆಗಳಲ್ಲಿ ಮುಖ್ಯವಾಗಿ ಇ, ಉ, ಆ ಎಂಬ ಮೂರು ಸ್ವರಗಳೂ ಹದಿಮೂರು ವ್ಯಂಜನಗಳೂ ಇವೆ. ಕೆಲವು ಪ್ರಭೇದಗಳಲ್ಲಿ ವ್ಯಂಜನಗಳ ಸಂಖ್ಯೆ ಇಪ್ಪತ್ತರವರೆಗೆ ಇರುತ್ತದೆ. ಇ ಮತ್ತು ಉ ಪರಿಸರಕ್ಕನುಗುಣವಾಗಿ ಎ ಒ ಎಂಬ ಧ್ವನಿರೂಪಗಳನ್ನು ಪಡೆಯುತ್ತವೆ. ಪ, ತ, ಕ ಮತ್ತು ಕ಼ (ಪಶ್ಚತಾಲವ್ಯ) ಎಂಬ ಅಘೋಷ ಸ್ಪರ್ಶ ವ್ಯಂಜನಗಳೂ ವ, ಯ, ಲ, ಸ ಹಾಗೂ ಗ಼ (ಪಶ್ಚತಾಲವ್ಯ) ಎಂಬ ಘೋಷ ಸಂಘರ್ಷಗಳೂ ಮ, ನ, ಙ ಎಂಬ ಅನುನಾಸಿಕಗಳೂ ಇವೆ. ಕೆಲವು ಪ್ರಭೇದಗಳಲ್ಲಿ ಘೋಷ-ಅಘೋಷ ವ್ಯತ್ಯಾಸವೂ ಸ-ಹಗಳ ವಿಕಲ್ಪ ರೂಪಗಳೂ ಚ–ಸಗಳ ವಿಕಲ್ಪ ರೂಪಗಳೂ ಕಂಡುಬರುತ್ತವೆ. ವರ್ಣಗಳ ಧ್ವನಿರೂಪಗಳೂ ಪರಿಸರಕ್ಕನುಸಾರವಾಗಿ ತುಂಬ ವ್ಯತ್ಯಾಸ ಹೊಂದುವುದು ಈ ಭಾಷೆಗಳ ಒಂದು ಮುಖ್ಯ ವೈಶಿಷ್ಟ್ಯ. ಮೊದಲು ಚಿತ್ರಲಿಪಿಯ ಮೂಲಕ ಬರೆಯಲ್ಪಡುತ್ತಿದ್ದ ಈ ಭಾಷೆಗಳಿಗೆ ಈಗ ಲ್ಯಾಟಿನ್ ಮತ್ತು ರಷ್ಯನ್ ಲಿಪಿಗಳನ್ನು ಬಳಸುತ್ತಾರೆ. (ಯು.ಪಿ.ಯು.)

**ಎಸ್ಕೋಲ್ಟ್‌ಜಿಯ :** ಪಪಾವರೇಸಿ ಜಾತಿಯ, ಬಹು ಸುಲಭವಾಗಿ ಬೆಳೆಯುವ ವಾರ್ಷಿಕ ಹೂಗಿಡ. 1′–1½′ ಎತ್ತರ ಬೆಳೆಯುತ್ತದೆ. ಮಡಿಗಳಲ್ಲಿ ಕುಂಡಗಳಲ್ಲಿ ಬೆಳೆಯುತ್ತಾರೆ. ಎಲೆಗಳ ಮೈ ಬಹಳ ಒಡಕಾಗಿರುತ್ತದೆ. 4″–6″



ಎಸ್ಕೋಲ್ಟ್‌ಜಿಯ ಕ್ಯಾಲಿಫೋರ್ನಿಕ

ಸುತ್ತಳತೆಯುಳ್ಳ ತಟ್ಟೆಯ ಆಕಾರದ ಹೂಗಳು ಬೆಳಗಿನಲ್ಲಿ ಮಾತ್ರ ಅರಳಿ ದೀರ್ಘ ಕಾಲ ಇರುತ್ತವೆ. ವ್ಯವಸಾಯಕ್ಕೆ, ಹಗುರವಾದ ಮರಳು ಮಿಶ್ರಿತ ಮಣ್ಣು ಬೇಕು. ಬೀಜಗಳನ್ನು ನೇರವಾಗಿ ಬಿತ್ತನೆ ಮಾಡಿ 8″-10″ ಅಂತರಗಳಿಗೊಂದು ಸಸಿಯನ್ನು ಬಿಟ್ಟು ಉಳಿದವನ್ನು ಕಿತ್ತು ಹಾಕಬೇಕು. ನಾಲ್ಕು ತಿಂಗಳಲ್ಲಿ ಹೂ ಬರುತ್ತದೆ. ಚಳಿಗಾಲದಲ್ಲಿ, ವರ್ಷಕ್ಕೊಮ್ಮೆ ಹೂ ಬಿಡುತ್ತದೆ.

ಒಂದು ಪ್ರಭೇದವಾದ ಕ್ಯಾಲಿಫೋರ್ನಿಯನ್ ಪಾಪಿ (ಎಸ್ಕೋಲ್ಟ್‌ಜಿಯ ಕ್ಯಾಲಿಫೋರ್ನಿಕ) ಉತ್ತರ ಅಮೆರಿಕದಲ್ಲಿ ಹೇರಳವಾಗಿ, ತಾನೇ ತಾನಾಗಿ ಬೆಳೆಯುತ್ತದೆ. ಕಸಿ ಗಿಡದ ಹೂಗಳಿಂದ ಸುಗಂಧ ಸಾರವನ್ನು ತೆಗೆಯುತ್ತಾರೆ. ಕ್ಯಾಲಿಫೋರ್ನಿಯನ್ ಪಾಪಿ ಎಂಬ ಸುಗಂಧ ಬಹು ಜನಪ್ರಿಯವಾಗಿದೆ. (ಕೆ.)

**ಎಸ್ಟರ್ :** ನೀರು ಅಥವಾ ಆಮ್ಲ ಅಥವಾ ಕ್ಷಾರದೊಡನೆ ಕ್ರಿಯೆ ಎಸಗಿ ಆಲ್ಕೊಹಾಲ್ ಮತ್ತು ಒಂದು ಆಮ್ಲವನ್ನು (ಕ್ಷಾರ ಬಳಸಿದಾಗ ಆಮ್ಲದ ಒಂದು ಲವಣವನ್ನು) ಕೊಡುವ ಒಂದು ಸಂಯುಕ್ತ. ಇದರ ವಿಪರ್ಯಯ ಕ್ರಿಯೆಯಲ್ಲಿ ಆಲ್ಕೊಹಾಲ್ ಮತ್ತು ಆಮ್ಲ ಕ್ರಿಯೆ ಎಸಗಿ ನೀರಿನ ಅಂಶ ನಷ್ಟವಾಗಿ ಎಸ್ಟರ್ ಉತ್ಪನ್ನವಾಗುವುದು. ಆದ್ದರಿಂದ ಎಸ್ಟರ್ ಆಲ್ಕೊಹಾಲ್ ಮತ್ತು ಆಮ್ಲದ ವ್ಯುತ್ಪನ್ನ. ಇದನ್ನು ತಯಾರಿಸಲು ಇತರ ವಿಧಾನಗಳೂ ಇವೆ. ಎಸ್ಟರಿನ ತಯಾರಿಕೆಯಲ್ಲಿ ಬಳಸುವ ಆಮ್ಲಗಳು ನಿರವಯವ ಅಥವಾ ಸಾವಯವ ಆಮ್ಲಗಳಾಗಿರಬಹುದು. ಅಂತೆಯೇ ಎಸ್ಟರಿನಲ್ಲಿ ಭಿನ್ನ ಪ್ರಭೇದಗಳಿವೆ.

ನಿರವಯವ ಆಮ್ಲ ಎಸ್ಟರುಗಳು : ಆಕ್ಸಿಜನ್ ಇರುವ ಖನಿಜಾಮ್ಲಗಳೊಡನೆ (ಮಿನರಲ್ ಆಸಿಡ್ಸ್) ಆಲ್ಕೊಹಾಲುಗಳು ವರ್ತಿಸಿದಾಗ ಎಸ್ಟರುಗಳು ದೊರೆಯುತ್ತವೆ. ಈ ಬಗೆಯ ಎಸ್ಟರುಗಳಲ್ಲಿ ಸಲ್ಫೇಟುಗಳು, ನೈಟ್ರೇಟುಗಳು ಮತ್ತು ಫಾಸ್ಫೇಟುಗಳು ಮುಖ್ಯವಾದುವು. ಅವುಗಳ ನಿರ್ಮಾಣದ ಬಗೆಯನ್ನು ಮುಂದಿನ ಸಮೀಕರಣಗಳು ಸೂಚಿಸುತ್ತವೆ.



$$2CH_3OH + HOSO_2OH \rightleftharpoons (CH_3O)_2SO_2 + 2H_2O$$

ಮೆಥನಾಲ್ ಸಲ್ಫ್ಯೂರಿಕ್ ಆಮ್ಲ ಡೈಮಿಥೈಲ್ ಸಲ್ಫೇಟ್



$$\begin{array}{l} CH_2—OH \\ | \\ CH—OH \\ | \\ CH_2—OH \end{array} + 3HNO_3 \longrightarrow \begin{array}{l} CH_2—ONO_2 \\ | \\ CH—ONO_2 \\ | \\ CH_2—ONO_2 \end{array} + 3H_2O$$

ನೈಟ್ರಿಕ್ ಆಮ್ಲ

ಗ್ಲಿಸರಾಲ್ ಗ್ಲಿಸರಿಲ್ ಟ್ರೈ ನೈಟ್ರೇಟ್ (ನೈಟ್ರೊ ಗ್ಲಿಸರಿನ್)

ಆಲ್ಕೀನುಗಳು ಸಲ್ಫ್ಯೂರಿಕ್ ಆಮ್ಲದೊಡನೆ ಸಂಕಲನಗೊಂಡಾಗಲೂ ಸಲ್ಫೇಟ್ ಎಸ್ಟರುಗಳು ಉತ್ಪತ್ತಿಯಾಗುತ್ತವೆ.



$$CH_2{=}CH_2 \longrightarrow CH_3—CH_2—OSO_2—OH$$

ಇಥಲೀನ್ ಈಥೈಲ್ ಮಾನೊಸಲ್ಫೇಟ್

ಡೈಮೀಥೈಲ್ ಮತ್ತು ಡೈ ಈಥೈಲ್ ಸಲ್ಫೇಟುಗಳು ಇತರ ಸಂಯುಕ್ತಗಳಿಗೆ, ಮೀಥೈಲ್ ಮತ್ತು ಈಥೈಲ್ ಪುಂಜಗಳನ್ನು ಸೇರಿಸಲು ಉಪಯೋಗಿಸುವ ಪರಿವರ್ತಕಗಳು (ರೀಏಜೆಂಟ್ಸ್).

ನೈಟ್ರೊ ಗ್ಲಿಸರಿನ್ ಎಂದು ಪರಿಚಿತವಾಗಿರುವ ಗ್ಲಿಸರಿಲ್ ಟ್ರೈ ನೈಟ್ರೇಟ್ ಎಸ್ಟರ್ ಡೈನಮೈಟ್ ತಯಾರಿಕೆಗೆ ಬೇಕಾಗಿರುವ ಸ್ಫೋಟಕ.

ಫಾಸ್ಫಾರಿಕ್ ಆಮ್ಲದ ಎಸ್ಟರುಗಳ ನಿರ್ಮಾಣ ಮತ್ತು ವಿಭಜನೆಗಳು ಅನೇಕ ಜೀವ ರಾಸಾಯನಿಕ (ಬಯೊಕೆಮಿಕಲ್) ಸಂಯೋಜನೆಗಳಲ್ಲಿ ಕಂಡುಬರುತ್ತವೆ. ಹಿರಿಯ ಅಣುತೂಕದ ಆಲ್ಕೊಹಾಲುಗಳ ಸಲ್ಫೋನೇಟ್ ಎಸ್ಟರುಗಳು ಲೋಹ ಲವಣಗಳೇ ಕೃತಕ ಮಾರ್ಜಕ ವಸ್ತುಗಳು (ಡಿಟರ್ಜೆಂಟ್ಸ್). ಗಡಸು ನೀರಿನಲ್ಲೂ ಧಾರಾಳವಾಗಿ ನೊರೆ ಕೊಡುವುದು ವೈಶಿಷ್ಟ್ಯ. ಆದ್ದರಿಂದ ಇವುಗಳ ಉಪಯೋಗ ಈಚೆಗೆ ಹೆಚ್ಚುತ್ತಿದೆ.

ಸಾವಯವ ಆಮ್ಲ ಎಸ್ಟರುಗಳು : ಅಧಿಕ ಸಂಖ್ಯೆಯ ಎಸ್ಟರುಗಳನ್ನು ಕೃತಕವಾಗಿ ತಯಾರಿಸಲಾಗುತ್ತಿದ್ದರೂ ಪ್ರಕೃತಿಯಲ್ಲಿ ಅನೇಕ ಎಸ್ಟರುಗಳು ದೊರೆಯುತ್ತವೆ. ಅನೇಕ ಹಣ್ಣು ಹೂವುಗಳ ಮಾಧುರ್ಯ ಸುಗಂಧಗಳಿಗೆ ಎಸ್ಟರುಗಳೇ ಕಾರಣ. ದ್ರಾಕ್ಷಿ, ಅನಾನಸ್ ಹಣ್ಣುಗಳಲ್ಲಿ ಈಥೈಲ್ ಅಸಿಟೇಟ್ ; ಸೇಬು, ಬಾಳೆಹಣ್ಣುಗಳಲ್ಲಿ ಅಮೈಲ್ ಅಸಿಟೇಟ್; ಪೆಪ್ಪರಮಿಂಟ್ ತೈಲದಲ್ಲಿ ಮೆಂಥೈಲ್ ಅಸಿಟೇಟ್ ; ಲವಂಗದಲ್ಲಿ ಮೆಂಥೈಲ್ ಬೆಂಜೋಯೇಟ್ ; ಶೇವಂತಿಗೆಯಲ್ಲಿ ಮೀಥೈಲ್ ಅಂಥ್ರಾನಿಲೇಟ್ ಮೊದಲಾಗಿ ಸುಗಂಧ ಮಧುರ ದ್ರವ್ಯಗಳನ್ನು ನೀಡುವ ಎಲ್ಲ ಹಣ್ಣು ಹೂವುಗಳಲ್ಲೂ ಹಲವು ಎಸ್ಟರುಗಳಿದ್ದೇ ಇವೆ. ಇವನ್ನು ಅವುಗಳ ಆಕರಗಳಿಂದ ಬೇರ್ಪಡಿಸಲು ಒತ್ತುವಿಕೆ (ಪ್ರೆಸ್ಸಿಂಗ್) ಆಸವೀಕರಣ (ಡಿಸ್ಟಿಲ್ಲೇಷನ್) ಅಥವಾ ಲೀನಕಾರೀ ಸಂಸ್ಕರಣ (ಸಾಲ್ವೆಂಟ್ ಎಕ್ಸ್‌ಟ್ರಾಕ್ಷನ್) ವಿಧಾನಗಳನ್ನು ಉಪಯೋಗಿಸಲಾಗುತ್ತದೆ. ಹೀಗೆ ಸುಗಂಧ, ಮಾಧುರ್ಯಗಳಿಗೆ ಕಾರಣವಾದ ಎಸ್ಟರುಗಳು ಸಾಮಾನ್ಯ ಮತ್ತು ಕಿರಿಯ ಅಣುತೂಕದವು. ಹಿರಿಯ ಅಣುತೂಕದ ಆಮ್ಲಗಳ ಉತ್ಪನ್ನ ಎಸ್ಟರುಗಳಲ್ಲಿ ಸುವಾಸನೆಯಾಗಲಿ ಸುಗಂಧವಾಗಲಿ ಇರುವುದಿಲ್ಲ. ಈ ಬಗೆಯ ಅನೇಕ ಎಸ್ಟರುಗಳ ಮಿಶ್ರಣವೇ ಎಣ್ಣೆ, ಕೊಬ್ಬುಗಳು. ಇನ್ನೂ ಹೆಚ್ಚು ಅಣುತೂಕದ ಎಸ್ಟರುಗಳು ಪ್ರಾಣಿ ಸಸ್ಯಜನ್ಯ ಮೇಣಗಳಲ್ಲಿವೆ.

ಪ್ರಕೃತಿಯಲ್ಲಿ ದೊರೆಯುವ ಎಲ್ಲ ಬಗೆಯ ಎಸ್ಟರುಗಳನ್ನೂ ಸುಲಭವಾಗಿ ಆಮ್ಲ, ಆಲ್ಕೊಹಾಲುಗಳಿಂದ ಪ್ರಯೋಗಶಾಲೆಯಲ್ಲಿ ತಯಾರಿಸಬಹುದು. ಅಷ್ಟೇ ಅಲ್ಲದೆ ಪ್ರಕೃತಿಯಲ್ಲಿ ದೊರೆಯದ ಅಸಂಖ್ಯಾತ ಎಸ್ಟರುಗಳನ್ನೂ ಸಂಯೋಜಿಸಲಾಗಿದೆ.

ಎಸ್ಟರಿಫಿಕೇಷನ್ ಅಥವಾ ಎಸ್ಟರುಗಳ ತಯಾರಿಕೆ : ಎಸ್ಟರುಗಳ ತಯಾರಿಕೆಯ ಹಲವು ಮುಖ್ಯ ವಿಧಾನಗಳನ್ನು ಮುಂದೆ ವಿವರಿಸಿದೆ.

1 ಆಲ್ಕೊಹಾಲ್ ಮತ್ತು ಆಮ್ಲಗಳು ವೇಗವರ್ಧಕವೊಂದರ ಸಂಪರ್ಕದಲ್ಲಿ ನೇರ ಸಂಯೋಗದಿಂದ ಎಸ್ಟರುಗಳಾಗಿ ಪರಿವರ್ತಿತವಾಗುತ್ತವೆ. ಇದರಲ್ಲಿ ಹೈಡ್ರೊಜನ್ ಕ್ಲೋರೈಡ್ ಅಥವಾ ಪ್ರಬಲ ಸಲ್ಫ್ಯೂರಿಕ್ ಆಮ್ಲ ಸಾಮಾನ್ಯವಾಗಿ ಬಳಸುವ ವೇಗವರ್ಧಕಗಳು. ಈಚೆಗೆ ಆಮ್ಲಗುಣವನ್ನುಳ್ಳ ಥಯೋನಿಲ್ ಕ್ಲೋರೈಡ್, ಸಲ್ಫ್ಯೂರಿಕ್ ಕ್ಲೋರೈಡ್, ಬೆಂಜೀನ್ ಸಲ್ಫೋನಿಕ್ ಆಮ್ಲ, ಪ್ಯಾರಟಾಲುಯೀನ್ ಸಲ್ಫ್ಯೂನಿಕ್ ಆಮ್ಲ ಮೊದಲಾದುವನ್ನು ಅನೇಕ ಎಸ್ಟರುಗಳ ತಯಾರಿಕೆಯಲ್ಲಿ ಉಪಯೋಗಿಸಲಾಗುತ್ತಿದೆ.



ಇದೊಂದು ವಿಪರ್ಯಯ (ರಿವರ್ಸಿಬಲ್) ಕ್ರಿಯೆಯಾದ್ದರಿಂದ ಎಸ್ಟರಿನ ನಿರ್ಮಾಣ ಇಲ್ಲಿ ಸಂಪೂರ್ಣವಾಗಿ ಆಗದು. ಕ್ರಿಯೆಯ ಸಮತೋಲ ಎಸ್ಟರ್ ನಿರ್ಮಾಣದ ಪರವಾಗಿ ಇರಬೇಕಾದರೆ ಆಮ್ಲದ ಆಲ್ಕೊಹಾಲಿನ ಪ್ರಮಾಣ ಅಧಿಕವಾಗಿರಬೇಕು; ಅಲ್ಲದೇ ಉತ್ಪನ್ನವಸ್ತುಗಳಾದ ನೀರು ಮತ್ತು ಎಸ್ಟರುಗಳಲ್ಲಿ ಒಂದನ್ನಾದರೂ ನಿರ್ಮಾಣವಾದಂತೆಲ್ಲ ಕ್ರಿಯಾಮಿಶ್ರಣದಿಂದ ಹೊರ ತೆಗೆಯುತ್ತಿರಬೇಕು. ಈ ಪರಿಸ್ಥಿತಿಯಲ್ಲಿ ವಿಪರ್ಯಯ ಕ್ರಿಯಾವೇಗ ಕಡಿಮೆಯಾಗಿ ಎಸ್ಟರಿನ ನಿರ್ಮಾಣ ಕಾರ್ಯ ತ್ವರಿತಗೊಳ್ಳುತ್ತದೆ.

ಪ್ರೈಮರಿ ಮತ್ತು ಸೆಕೆಂಡರಿ ಆಲ್ಕೊಹಾಲುಗಳನ್ನು ಬಳಸಿ ಎಸ್ಟರುಗಳನ್ನು ತಯಾರಿಸುವಾಗ ಆಲ್ಕೊಹಾಲ್ ಹೈಡ್ರೊಜನ್ನನ್ನೂ ಆಮ್ಲ ಹೈಡ್ರೊಕ್ಸಿಲ್ ಪುಂಜವನ್ನೂ ಒದಗಿಸಿ ನೀರಿನ ಒಂದು ಅಣುವನ್ನು ಉತ್ಪತ್ತಿ ಮಾಡುತ್ತವೆ. ಆದರೆ ಟರ್ಷಿಯರಿ ಆಲ್ಕೊಹಾಲ್ ಬಳಸಿದಾಗ ಹೈಡ್ರಾಕ್ಸಿಲ್ ಪುಂಜ ಆಲ್ಕೊಹಾಲಿನಿಂದಲೂ ಹೈಡ್ರೊಜನ್ನಿನ ಒಂದು ಪರಮಾಣು ಆಮ್ಲದಿಂದಲೂ ಬರುತ್ತವೆ.





2 ಆಮ್ಲಗಳಿಗೆ ಬದಲಾಗಿ ಆಮ್ಲ ಅನ್‌ಹೈಡ್ರೈಡ್ ಆಮ್ಲಹ್ಯಾಲೈಡ್, ಅಮೈಡ್ ಮತ್ತು ಸಯನೈಡ್ ಅಥವಾ ನೈಟ್ರೇಟುಗಳನ್ನು ಎಸ್ಟರಿಫಿಕೇಷನ್ನಿಗೆ ಉಪಯೋಗಿಸಬಹುದೆಂಬುದನ್ನು ಮುಂದಿನ ಸಮೀಕರಣಗಳಿಂದ ತಿಳಿಯಬಹುದು.



ಅಥವಾ







3 ಆಮ್ಲ ಲವಣಗಳಿಂದ ಎಸ್ಟರುಗಳನ್ನು ತಯಾರಿಸಲು ಎರಡು ಬಗೆಯ ವಿಧಾನಗಳನ್ನು ಅನುಸರಿಸಬಹುದು. ಮೊದಲ ವಿಧಾನದಲ್ಲಿ ಥಯೋನಿಲ್ ಕ್ಲೋರೈಡ್ ಮತ್ತು ಆಲ್ಕೊಹಾಲನ್ನೂ ಎರಡನೆಯ ವಿಧಾನದಲ್ಲಿ ಆಲ್ಕೈಲ್ ಹ್ಯಾಲೈಡುಗಳನ್ನೂ ಬಳಸುತ್ತಾರೆ. ಈ ಕ್ರಿಯೆಗಳನ್ನು ಮುಂದಿನ ಸಮೀಕರಣಗಳು ಸೂಚಿಸುತ್ತವೆ.







4 ಮೀಥೈಲ್ ಎಸ್ಟರುಗಳನ್ನು ಮಾತ್ರ ತಯಾರಿಸಲು ಡೈ ಆಜೋ ಮೀಥೇನ್ ಎಂಬ ಪರಿವರ್ತಕವನ್ನು ಅನೇಕ ಸಂದರ್ಭಗಳಲ್ಲಿ ಉಪಯೋಗಿಸಲಾಗುತ್ತದೆ.



5 ಅಮೈಡುಗಳನ್ನು ಆಲ್ಕೊಹಾಲೀಕರಣಕ್ಕೆ (ಆಲ್ಕೊಹಾಲೈಸಿಸ್) ಒಳಪಡಿಸಿದಾಗ ಎಸ್ಟರುಗಳ ಉತ್ಪತ್ತಿಯಾಗುತ್ತದೆ.



6 ಹಲವು ವಿಶಿಷ್ಟ ವೇಗವರ್ಧಕಗಳ ಸಂಪರ್ಕದಲ್ಲಿ ಆಲ್ಕೊಹಾಲುಗಳಿಂದ ಹೈಡ್ರೊಜನ್ ನಿವಾರಣೆ (ಡೀಹೈಡ್ರೊಜಿನೇಷನ್) ಮಾಡಿ ಎಸ್ಟರುಗಳನ್ನು ತಯಾರಿಸಬಹುದು.



7 ಇದೇ ರೀತಿ ಪ್ರತ್ಯೇಕ ಮತ್ತು ವಿಶಿಷ್ಟ ವಿಧಾನಗಳನ್ನು ಅನುಸರಿಸಿ ಆಲ್ಡಿಹೈಡುಗಳನ್ನೂ ಎಸ್ಟರುಗಳಾಗಿ ಪರಿವರ್ತಿಸಬಹುದು.



8 ಕೀಟೀನ್ ಸಂಯುಕ್ತದಿಂದ ಅಸಿಟಿಕ್ ಆಮ್ಲದ ಎಸ್ಟರುಗಳನ್ನು ತಯಾರಿಸಬಹುದು.



9 ಆಮ್ಲ ಅಥವಾ ಕ್ಷಾರ ವೇಗವರ್ಧಕಗಳ ನೆರವಿನಿಂದ ಎಸ್ಟರುಗಳಲ್ಲಿನ ಆಲ್ಕೊಹಾಲ್ ಮೂಲದ ಪುಂಜವನ್ನು ಮತ್ತೊಂದು ಪುಂಜದಿಂದ ಪಲ್ಲಟಿಸಿ ಹೊಸ ಎಸ್ಟರನ್ನು ನಿರ್ಮಿಸಬಹುದು. ಈ ಬಗೆಯ ಕ್ರಿಯೆಯ ಹೆಸರು ಎಸ್ಟರ್ ವಿನಿಮಯ ಕ್ರಿಯೆ (ಎಸ್ಟರ್ ಇಂಟರ್‌ಚೇಂಜ್.)



ಗುಣಲಕ್ಷಣಗಳು : ಎಸ್ಟರುಗಳು ಬಲುಮಟ್ಟಿಗೆ ದ್ರವಗಳು. ಬಲು ಹಿರಿಯ ಅಣುತೂಕದ ಹಲವು ಎಸ್ಟರುಗಳು ಘನವಸ್ತುಗಳು. ಇವುಗಳ ಕರಗುವ ಬಿಂದು ಸಹ ಅಷ್ಟೇನೂ ಹೆಚ್ಚಿರುವುದಿಲ್ಲ. ಆಲ್ಕೊಹಾಲ್ ಮತ್ತು ಆಮ್ಲಗಳಲ್ಲಿರುವ ಹೈಡ್ರೊಜನ್ ಬಂಧ ಎಸ್ಟರುಗಳಲ್ಲಿ ಇಲ್ಲವಾದ್ದರಿಂದ ಸಮಾನ ಅಣುತೂಕದ ಆಮ್ಲ, ಆಲ್ಕೊಹಾಲುಗಳ ಕರಗುವ ಬಿಂದುಗಳಿಗಿಂತಲೂ ಎಸ್ಟರಿನ ಕರಗುವ ಬಿಂದು ಮತ್ತು ಕುದಿಯುವ ಬಿಂದುಗಳು ಕಡಿಮೆಯಿರುವುದು ಸಹಜವೇ ಆಗಿದೆ.

ಎಸ್ಟರುಗಳ ರಾಸಾಯನಿಕ ಲಕ್ಷಣಗಳನ್ನು ಪರಿಶೀಲಿಸುವಾಗ ಇವು ಆಮ್ಲ ಮತ್ತು ಆಲ್ಕೊಹಾಲುಗಳ ಉತ್ಪನ್ನಗಳು ಮತ್ತು ಕಾರ್ಬೊನಿಲ್ ಪುಂಜವುಳ್ಳ ಸಂಯುಕ್ತಗಳು ಎಂಬುದನ್ನು ನೆನಪಿನಲ್ಲಿಟ್ಟಿರಬೇಕು.

1 ಎಸ್ಟರುಗಳ ಜಲ ವಿಶ್ಲೇಷಣೆ ಆಮ್ಲ ಮತ್ತು ಆಲ್ಕೊಹಾಲುಗಳನ್ನು ಒದಗಿಸುತ್ತದೆ.



ಇದು ಎಸ್ಟರ್ ತಯಾರಿಕೆಯ ವಿಪರ್ಯಯ ಕ್ರಿಯೆ. ವೇಗವರ್ಧಕಗಳ ನೆರವಿಲ್ಲದೆ ಕ್ರಿಯೆ ಬಲು ನಿಧಾನವಾಗಿ ನಡೆಯುತ್ತದೆ. ಆದರೆ ಆಮ್ಲ ಅಥವಾ ಕ್ಷಾರಗಳ ಸಂಪರ್ಕದಲ್ಲಿ ಸಾಕಷ್ಟು ವೇಗವಾಗಿ ನಡೆಯುತ್ತದೆ. ಕ್ಷಾರವನ್ನು ಬಳಸಿದಾಗ ಉತ್ಪತ್ತಿಯಾದ ಆಮ್ಲದೊಡನೆ ಅದು ವರ್ತಿಸಿ ಲವಣವನ್ನು ನೀಡುತ್ತದೆ. ಸಾಬೂನು ತಯಾರಿಸುವಾಗ ಈ ಕ್ರಿಯೆ ನಡೆಯುವುದರಿಂದ ಅದನ್ನು ಸಾಬೂನೀಕರಣಕ್ರಿಯೆ (ಸಪೋನಿಫಿಕೇಷನ್) ಎನ್ನುವರು. ಒಂದು ಅಣುತೂಕದಷ್ಟು ಕ್ಷಾರ ವಸ್ತುವಿನೊಡನೆ ಸಂಪೂರ್ಣವಾಗಿ ವರ್ತಿಸಬಲ್ಲ ಎಸ್ಟರಿನ ತೂಕಕ್ಕೆ ಎಸ್ಟರಿನ ಸಾಬೂನೀಕರಣಾಂಕ ಎಂದು ಹೆಸರು.

2 ಕ್ಷಾರ ವಸ್ತು ಅಮೋನಿಯ ಆಗಿದ್ದಲ್ಲಿ ಕ್ರಿಯೆ ಅಮೋನಿಯ ವಿಶ್ಲೇಷಣೆ (ಅಮೊನೊಲಿಸಿಸ್) ಎನ್ನಿಸಿಕೊಳ್ಳುತ್ತದೆ. ಆಗ ವ್ಯುತ್ಪನ್ನ ಲವಣವಾಗಿರದೆ ಅಮೈಡ್ ಆಗಿರುತ್ತದೆ.



3 ನೀರಿನೊಡನೆ ವರ್ತಿಸುವಂತೆಯೇ ಎಸ್ಟರುಗಳು ಆಮ್ಲದ ಸಂಪರ್ಕದಲ್ಲಿ ಆಲ್ಕೊಹಾಲುಗಳೊಡನೆ ವರ್ತಿಸಬಲ್ಲುವು. ಆಗ ಹೊಸ ಎಸ್ಟರ್ ಮತ್ತು ಆಲ್ಕೊಹಾಲುಗಳು ದೊರೆಯುತ್ತವೆ. ಈ ಕ್ರಿಯೆ ಎಸ್ಟರ್ ವಿನಿಮಯ ಅಥವಾ ಆಲ್ಕೊಹಾಲ್ ವಿಶ್ಲೇಷಣೆ (ಆಲ್ಕೋಹಾಲಿಸಿಸ್) ಅಥವಾ ಸ್ಥಾನಾಂತರ ಎಸ್ಟರಿಫಿಕೇಷನ್ (ಟ್ರಾನ್ಸ್ ಎಸ್ಟರಿಫಿಕೇಷನ್) ಎನ್ನಿಸಿಕೊಳ್ಳುತ್ತದೆ.



ಈ ಎಸ್ಟರುಗಳಿಗೆ ಹೈಡ್ರೊಜನನ್ನು ಸೇರಿಸಿದಾಗ ಅಥವಾ ಅವನ್ನು ಅಪಕರ್ಷಿಸಿದಾಗ ಆಲ್ಕೊಹಾಲುಗಳು ಉಂಟಾಗುತ್ತವೆ. ಈ ಬಗೆಯ ಅಪಕರ್ಷಣಕ್ಕೆ ಸೂಕ್ತ ವೇಗವರ್ಧಕಗಳ ಸಂಪರ್ಕದಲ್ಲಿ ಹೈಡ್ರೊಜನನ್ನಾಗಲೀ ಇತರ ಅಪಕರ್ಷಣಕಾರಿಗಳನ್ನಾಗಲೀ ಬಳಸಬಹುದು. ಜಲಜನಕೀಕರಣ ಮಾಡುವಾಗ ಪ್ಲಾಟಿನಂ, ಪೆಲೇಡಿಯಂ, ರುಥೇನಿಯಂ, ತಾಮ್ರ, ರ್ಹೋಡಿಯಂ ಮೊದಲಾದ ಅನೇಕ ವೇಗವರ್ಧಕಗಳನ್ನು ಬಳಸಲಾಗುತ್ತದೆ. ಸಾಮಾನ್ಯವಾಗಿ ಬಳಸುವ ಅಪಕರ್ಷಣಕಾರಿಗಳೆಂದರೆ ಸೋಡಿಯಂ ಆಲ್ಕೊಹಾಲ್ ಮಿಶ್ರಣ ಅಥವಾ ಲಿಥಿಯಂ ಅಲ್ಯೂಮಿನಿಯಂ ಹೈಡ್ರೈಡ್, ಸೋಡಿಯಂ ಬೊರೋ ಹೈಡ್ರೈಡ್‌ಗಳಂಥ ಲೋಹ ಹೈಡ್ರೈಡುಗಳು





5 ಎಸ್ಟರುಗಳು ಗ್ರಿನಾರ್ಡ್ ಸಂಯುಕ್ತಗಳೊಡನೆ ವರ್ತಿಸಿದಾಗ ದೊರೆಯುವ ಅಸ್ಥಿರ ಆರ್ಗ್ಯಾನೋ ಲೋಹ ಸಂಯುಕ್ತಗಳ ಜಲವಿಶ್ಲೇಷಣೆ ಟರ್ಷಿಯರಿ ಆಲ್ಕೊಹಾಲುಗಳನ್ನು ಒದಗಿಸುತ್ತದೆ. ಈ ಕ್ರಿಯೆಯಲ್ಲಿ ಕೀಟೋನುಗಳು ಮಧ್ಯವರ್ತಿಗಳೆಂದು ತಿಳಿದು ಬಂದಿದೆ.





6 300° ಸೆಂ. ಗಿಂತಲೂ ಹೆಚ್ಚು ಉಷ್ಣತೆಗೆ ಆಲ್ಕೊಹಾಲುಗಳ ಎಸ್ಟರುಗಳನ್ನು ಒಳಪಡಿಸಿದಾಗ ಆಲ್ಕೀನುಗಳು ದೊರೆಯುತ್ತವೆ.

$$R\text{-}CO\text{-}O\text{-}CH_2.\,CH_2\text{-}R' \longrightarrow R\text{-}COOH + R'CH=CH_2$$

**ಹಲವು ವಿಶಿಷ್ಟ ಎಸ್ಟರುಗಳು ಮತ್ತು ಪಾಲಿ ಎಸ್ಟರುಗಳು :** ಕೆಲವು ಆಮ್ಲಗಳಲ್ಲಿ ಎರಡು ಕಾರ್ಬಾಕ್ಸಿಲ್ ಪುಂಜಗಳು (ರ್‍ಯಾಡಿಕಲ್) ಇರುವುದುಂಟು. ಅವುಗಳಲ್ಲಿ ಒಂದು ಮಾತ್ರ ಎಸ್ಟರಾಗಿ ಇನ್ನೊಂದು ಪುಂಜ ಮುಕ್ತಸ್ಥಿತಿಯಲ್ಲಿದ್ದರೆ ಅದು ಅರ್ಧ ಎಸ್ಟರ್ ಇವು ಎಸ್ಟರ್ ಮತ್ತು ಆಮ್ಲದ ಗುಣಗಳೆರಡನ್ನೂ ಪಡೆದಿರುತ್ತವೆ.

ಒಂದು ಸಂಯುಕ್ತದಲ್ಲಿ ಆಮ್ಲ, ಆಲ್ಕೊಹಾಲ್ ಪುಂಜಗಳೆರಡೂ ಇದ್ದು ಇವುಗಳ ಪರಸ್ಪರ ಸಂಯೋಗದಿಂದ ದೊರೆಯುವ ಎಸ್ಟರೇ, ಚಕ್ರೀಯ ಎಸ್ಟರ್ (ಸೈಕ್ಲಿಕ್ ಎಸ್ಟರ್) ಅಥವಾ ಲ್ಯಾಕ್ಟೋನ್. ಲ್ಯಾಕ್ಟೋನಿನ ಕಾರ್ಬೊನಿಲ್ ಪುಂಜ ಮತ್ತು ಆಕ್ಸಿಜನ್ನಿನ ನಡುವಿರುವ ಪರಮಾಣುಗಳ ಸಂಖ್ಯೆಯನ್ನು ಅನುಸರಿಸಿ ಅವನ್ನು $\beta, \gamma, \delta$ ಲ್ಯಾಕ್ಟೋನುಗಳೆಂದು ಕರೆಯಲಾಗುತ್ತದೆ.




ಮೇಲೆ ತೋರಿಸಿರುವ $\beta$ ಲ್ಯಾಕ್ಟೋನ್ ಹೈಡ್ರಾಕ್ಸಿ ಪ್ರೋಪಿಯೋನಿಕ್ ಆಮ್ಲದ ವ್ಯುತ್ಪನ್ನವಾದ್ದರಿಂದ $\beta$ ಪ್ರೋಪಿಯೋನಿಕ್ ಲ್ಯಾಕ್ಟೋನ್ ಎನ್ನಿಸಿಕೊಳ್ಳುತ್ತದೆ. ಈ ಸಂಯುಕ್ತ ಅಸ್ಥಿರ ಚೌಕ ಅಣುರಚನೆಯನ್ನು ಪಡೆದಿರುವುದರಿಂದ ಪಟುವಾಗಿದ್ದು ಆಮ್ಲಗಳ ಸಂಪರ್ಕ ಪಾಲಿ ಎಸ್ಟರ್‌ಪಾಲಿಮರ್ ಆಗಿ ಪರಿವರ್ತಿತವಾಗುತ್ತದೆ.




$\gamma$–ಮತ್ತು $\delta$–ಲ್ಯಾಕ್ಟೋನುಗಳು ಈ ಬಗೆಯಾಗಿ ಪಾಲಿ ಎಸ್ಟರುಗಳಾಗದಿರಲು ಇವು ತಕ್ಕ ಮಟ್ಟಿಗೆ ಸ್ಥಿರ ಸಂಯುಕ್ತಗಳಾಗಿರುವುದೆ ಕಾರಣ. ವೃತ್ತದಲ್ಲಿ ಐದು ಅಥವಾ ಆರು ಪರಮಾಣುಗಳನ್ನುಳ್ಳ ಲ್ಯಾಕ್ಟೋನುಗಳಲ್ಲಿ ಬಂಧಾಂತರ ಕೋನ ವಿಕಾರ (ಆಂಗ್ಯುಲರ್ ಸ್ಟ್ರೈನ್) ಬಲು ಕಡಿಮೆ. $\varepsilon$ ಅಥವಾ ಅದಕ್ಕೂ ಮುಂದಿನ ಹೈಡ್ರಾಕ್ಸಿ ಆಮ್ಲಗಳು ಲ್ಯಾಕ್ಟೋನುಗಳಾಗಿ ಪರಿವರ್ತಿತವಾಗದೆ, ನೇರವಾಗಿ ಪಾಲಿ ಎಸ್ಟರುಗಳಾಗುತ್ತವೆ.



ಇನ್ನೊಂದು ಬಗೆಯ ಪಾಲಿ ಎಸ್ಟರುಗಳನ್ನು ಪಾಲಿ ಆಮ್ಲ ಮತ್ತು ಪಲಿ ಆಲ್ಕೊಹಾಲುಗಳ ಸಂಯೋಜನೆಯಿಂದ ತಯಾರಿಸಬಹುದು. ಇವುಗಳಲ್ಲಿ ಮುಖ್ಯವಾದುವು ಗ್ಲಿಸರಾಲ್ ಮತ್ತು ಆರ್ಥೋಫ್ಥ್ಯಾಲಿಕ್ ಆಮ್ಲಗಳಿಂದ ದೊರೆಯುವ ಗ್ಲಿಪ್ಟಾಲ್ ಹಾಗೂ ಎಥಿಲಿನ್ ಗ್ಲೈಕಾಲ್ ಮತ್ತು ಟೆರೆಫ್ಥ್ಯಾಲಿಕ್ ಆಮ್ಲಗಳ ಸಂಯೋಜನೆಯಿಂದ ದೊರೆಯುವ ಟೆರೀನ್ ಟೆರಿಲೀನ್ ಅಥವಾ ಡೇಕ್ರಾನ್ ಎಂದೆನ್ನಿಸಿಕೊಳ್ಳುವ ಕೃತಕ ಎಳೆ.







**ಉಪಯೋಗಗಳು :** ಹೂ ಹಣ್ಣುಗಳಲ್ಲಿ ದೊರೆಯುವ ಕಡಿಮೆ ಅಣು ತೂಕದ ಅನೇಕ ಸಹಜ ಎಸ್ಟರುಗಳನ್ನೂ ಕೃತಕವಾಗಿ ತಯಾರಿಸಿದ ಅವುಗಳ ಸಂಬಂಧಿಗಳನ್ನೂ ಸುಗಂಧ ಮಧುರ ದ್ರವ್ಯ ಉದ್ದಿಮೆಗಳಲ್ಲಿ ಉಪಯೋಗಿಸಲಾಗುತ್ತಿದೆ. ಎಣ್ಣೆ ಕೊಬ್ಬುಗಳನ್ನು ಆಹಾರವಾಗಿಯೂ ಸಾಬೂನು ತಯಾರಿಕೆಯಲ್ಲೂ ಉಪಯೋಗಿಸುತ್ತಿದ್ದೇವೆ. ಕೃತಕ ಮಾರ್ಜಕಗಳಿಗೆ ಬೇಕಾಗುವ ಹಿರಿಯ ತೂಕದ ಆಲ್ಕೊಹಾಲುಗಳ ತಯಾರಿಕೆಗೂ ಎಣ್ಣೆ ಕೊಬ್ಬುಗಳೇ ಮೂಲವಸ್ತುಗಳು. ಎಸ್ಟರ್ ವ್ಯುತ್ಪನ್ನಗಳಾದ ಕೃತಕ ಮಾರ್ಜಕಗಳ ಉಪಯುಕ್ತತೆ ದಿನೇದಿನೇ ಹೆಚ್ಚುತ್ತಿದೆ. ಕೃತಕ ಎಳೆಯಾದ ಟೆರೀನ್ ಪಾಲಿ ಎಸ್ಟರ್ ಇಂದು ಸರ್ವಜನಪ್ರಿಯವಾಗಿ ವಸ್ತ್ರ ಉದ್ದಿಮೆಯಲ್ಲಿ ಪ್ರಮುಖಪಾತ್ರ ವಹಿಸುತ್ತಿದೆ. ಗ್ಲಿಪ್ಟಾಲ್ ಮತ್ತು ಅದರಂಥ ಇನ್ನೂ ಹಲವು ಪಾಲಿ ಎಸ್ಟರ್ ಪ್ಲಾಸ್ಟಿಕುಗಳ ಉಪಯೋಗ ಹಲವಾರು.

ಅನೇಕ ಸ್ಯಾಲಿಸಿಲೇಟ್, ಬೆಂಜೋಯೇಟುಗಳು ಮತ್ತು ಅವುಗಳ ವ್ಯುತ್ಪನ್ನಗಳಿಗೆ ಔಷಧರಂಗದಲ್ಲೇ ವಿವಿಧ ರೀತಿಯ ಉಪಯೋಗಗಳಿವೆ. ಮೀಥೈಲ್ ಫಾರ್ಮೇಟ್ ಒಂದು ಕ್ರಿಮಿನಾಶಕ. ಈಥೈಲ್ ಅಸಿಟೇಟ್, ಪ್ರೊಪೈಲ್ ಅಸಿಟೇಟ್ ಮತ್ತು ಬ್ಯೂಟೈಲ್ ಅಸಿಟೇಟುಗಳು ಸಾರ್ವತ್ರಿಕ ಲೀನಕಾರಿಗಳಾಗಿ (ಸಾಲ್ವೆಂಟ್ಸ್) ಉಪಯೋಗಕ್ಕೆ ಬರುತ್ತವೆ. ಈಥೈಲ್ ಅಸಿಟೇಟ್ ಬಹುಶಃ ಎಸ್ಟರುಗಳಲ್ಲೆಲ್ಲ ಅತ್ಯಂತ ಪರಿಚಿತವಾದದ್ದು ಮತ್ತು ಅದರ ಉಪಯೋಗ ಮಧುರ ದ್ರವ್ಯಗಳಲ್ಲಿ, ಸುಗಂಧ ದ್ರವ್ಯದ ಉದ್ದಿಮೆಯಲ್ಲಿ, ಕರ್ಪೂರ, ಮರಗಳ ಎಣ್ಣೆ ಅಂಟುಗಳು ಹಲವು ಬಗೆಯ ಪ್ಲಾಸ್ಟಿಕ್ಕುಗಳೇ ಮೊದಲಾದ ಅನೇಕ ವಸ್ತುಗಳ ಲೀನಕಾರೀ ಸಂಸ್ಕರಣಗಳಲ್ಲಿ ಇದೆ. ಕೃತಕ ಚರ್ಮ, ಸೆಲ್ಯುಲಾಯ್ಡ್ ಸಾಮಗ್ರಿಗಳು, ಮಸಿ, ಪಾಲಿಶುಗಳೇ ಮೊದಲಾದುವುಗಳ ತಯಾರಿಕೆಗಳಲ್ಲಿ ಲೀನಕಾರಿಯಾಗಿಯೂ ಈಥೈಲ್ ಅಸಿಟೇಟನ್ನು ಉಪಯೋಗಿಸಲಾಗುತ್ತದೆ.

ಈಥೈಲ್ ಅಸಿಟೋ ಅಸಿಟೇಟ್ ಎಂಬ ಎಸ್ಟರ್ ಅನೇಕ ಸಾವಯವ ಸಂಶ್ಲೇಷಣೆಗಳಲ್ಲಿ ಉಪಯುಕ್ತವಾಗಿದೆ. ಅನೇಕ ವರ್ಣದ್ರವ್ಯಗಳು, ಆಂಟಿ ಪೈರೀನ್, ಅಮೈನೋ ಪೈರೀನ್, ಅಟಾಟ್ರಿನ್, ಥಯಮಿನ್ ಮತ್ತು ಪೈರಜ಼ೊಲೋನ್ ಗುಂಪಿಗೆ ಸೇರಿದ ಅನೇಕ ಔಷಧ ದ್ರವ್ಯಗಳ ತಯಾರಿಕೆಯಲ್ಲಿ ಈ ಎಸ್ಟರನ್ನು ಉಪಯೋಗಿಸಲಾಗುತ್ತದೆ. (ಕೆ.ಟಿ.ಎಸ್.)

**ಎಸ್ಟೋನಿಯ:** ಸೋವಿಯತ್ ಒಕ್ಕೂಟದ ಗಣರಾಜ್ಯಗಳಲ್ಲೊಂದು. ಎಸ್ಟೋನಿಯನ್ ಸೋವಿಯತ್ ಸಮಾಜವಾದೀ ಗಣರಾಜ್ಯ. ಸುಮಾರು 57°50′ ಉತ್ತರ ಅಕ್ಷಾಂಶದಿಂದ 59°75′ ಉತ್ತರ ಅಕ್ಷಾಂಶದ ವರೆಗೂ 22° ಪೂರ್ವ ರೇಖಾಂಶದಿಂದ 28°10′ ಪೂರ್ವ ರೇಖಾಂಶದ ವರೆಗೂ ಹರಡಿದೆ. ಉತ್ತರದಲ್ಲಿ ಫಿನ್ಲೆಂಡ್ ಖಾರಿ, ಪಶ್ಚಿಮದಲ್ಲಿ ಬಾಲ್ಟಿಕ್ ಸಮುದ್ರ, ಪೂರ್ವದಲ್ಲಿ ಪೈಪೂಸ್ ಸರೋವರ, ಪ್ಸ್ಕಾಫ್ ಸರೋವರ ಮತ್ತು ರಷ್ಯನ್ ಸೋವಿಯತ್ ಗಣರಾಜ್ಯ, ದಕ್ಷಿಣದಲ್ಲಿ ಲ್ಯಾಟ್ವಿಯ ಇವುಗಳ ನಡುವೆ ಇರುವ ಈ ರಾಜ್ಯ ಬಾಲ್ಟಿಕ್ ಪ್ರದೇಶದ ಮೂರು ಗಣರಾಜ್ಯಗಳ ಪೈಕಿ ಅತ್ಯಂತ ಚಿಕ್ಕದು. (ಉಳಿದೆರಡು ಲಿಥುವೇನಿಯ ಮತ್ತು ಲ್ಯಾಟ್ವಿಯ.) ಪ್ರಧಾನ ಭೂ ಭಾಗದೊಂದಿಗೆ ಪಶ್ಚಿಮದಲ್ಲಿನ 818 ದ್ವೀಪಗಳೂ ಈ ದೇಶಕ್ಕೆ ಸೇರಿವೆ. ಇವುಗಳಲ್ಲಿ ಮುಖ್ಯವಾದವು ಸೆರ್ಮಿಮ (ಅಸ್ಸೆಲ್) (101 ಚ.ಮೈ.) ಹೀಯೂಮಾ (ಡೇಗೋ) (373 ಚ.ಮೈ.), ಮುಹುಮಾ ಮತ್ತು ವೊರ್ಮ್ಸಿ. ರಾಜ್ಯದ ವಿಸ್ತೀರ್ಣ 18,357 ಚ.ಮೈ.ಗಳಿದ್ದುದು 1946ರ ಅನಂತರ 17,413 ಚ.ಮೈ. ಆಯಿತು. ವಿಸ್ತೀರ್ಣದ ದೃಷ್ಟಿಯಿಂದ ಈ ರಾಜ್ಯದ ಸಮುದ್ರತೀರ ಅಧಿಕ ಉದ್ದವೆಂದೇ ಹೇಳಬೇಕು.

ಈ ರಾಜ್ಯದ ಉತ್ತರಾರ್ಧದಲ್ಲೂ ದ್ವೀಪಗಳಲ್ಲೂ ಸಿಲ್ಯೂರಿಯನ್ ಕಾಲದ ಡೊಲೊಮೈಟ್ ಮತ್ತು ಸುಣ್ಣಕಲ್ಲು ಶಿಲೆಗಳೂ ದಕ್ಷಿಣದಲ್ಲಿ ಡಿವೊನಿಯನ್ ಕಾಲದ ಮರಳುಕಲ್ಲುಗಳೂ ಇವೆ. ದೇಶದಾದ್ಯಂತ ಹೇರಳವಾಗಿ ಹಿಮಚಲನೆಗಳಿಂದ ಸಂಭವಿಸಿದ ಸಂಚಯನಗಳುಂಟು. ಇವು ದಕ್ಷಿಣದಲ್ಲಿ ಹೆಚ್ಚು ಒತ್ತು.

ಹಿಮಚಲನೆಯಿಂದಾದ ಸರೋವರಗಳು ಸುಮಾರು 1,500ಕ್ಕೂ ಅಧಿಕವಾಗಿವೆ. ಮಧ್ಯ ಮತ್ತು ದಕ್ಷಿಣಗಳಲ್ಲಿ ಇವನ್ನು ಹೆಚ್ಚಾಗಿ ಕಾಣಬಹುದು. ಇವುಗಳಲ್ಲಿ ವೋರ್ಟ್ಸ್–ಜಾರು ಅತ್ಯಂತ ದೊಡ್ಡದು.

**ನೇಲ್ಮೈಲಕ್ಷಣ:** ಇದು ಉತ್ತರ ಯೂರೋಪಿನ ಮಹಾ ಮೈದಾನದ ಒಂದು ಭಾಗ. ಎಸ್ಟೋನಿಯದ ಬಹು ಭಾಗ ಸಮುದ್ರ ಮಟ್ಟದಿಂದ 300 ಅಡಿಗಳಿಗೂ ಕಡಿಮೆ. ಆಗ್ನೇಯದಲ್ಲಿ ಅಲ್ಲಲ್ಲಿ ಸ್ವಲ್ಪ ಎತ್ತರದ ಪ್ರದೇಶಗಳನ್ನು ಕಾಣಬಹುದು. ಮುನಮಗಿ (1040′) ಎಸ್ಟೋನಿಯದ ಅತ್ಯಂತ ಎತ್ತರ ಶಿಖರ. ಉತ್ತರ ಮತ್ತು ಪೂರ್ವ ಪ್ರದೇಶಗಳು ತಗ್ಗು ಬಯಲುಗಳು. ಇವು ಸಮುದ್ರ ಮಟ್ಟದಿಂದ 80′–150′ ಎತ್ತರದಲ್ಲಿವೆ.

ಈ ದೇಶದ ಎಲ್ಲ ನದಿಗಳೂ ಚಿಕ್ಕವು. ಇವುಗಳಲ್ಲಿ ಪ್ರವಾಹ ಇದ್ದೇ ಇರುತ್ತದೆ. ಇವು ಮೂರು ಬಗೆ: 1 ಫಿನ್ಲೆಂಡ್ ಖಾರಿ ಸೇರುವ ನದಿಗಳು: ಪಿರಿಟ, ನಾರ್ವ. ಇವು ಜಲಪಾತಗಳಿಂದ ಕೂಡಿವೆ. 2 ರೀಗಾ ಖಾರಿ ಸೇರುವ ನದಿಗಳು: ಪಾರ್ನು, ಕಸರಿ. 3 ಪೈಪೂಸ್ ಸರೋವರವನ್ನು ಸೇರುವ ನದಿಗಳು: ಎಮಜೋಗಿ, ಒಹೆಂಡು.

ಎಸ್ಟೋನಿಯದ ಸಮುದ್ರತೀರಗಳಲ್ಲಿ ಸಾಗರಿಕ ವಾಯುಗುಣವೂ ಒಳಭಾಗಗಳಲ್ಲಿ ಖಂಡಾಂತರ ವಾಯುಗುಣವೂ ಕಂಡುಬರುತ್ತವೆ. ಸರಾಸರಿ ಉಷ್ಣತೆ 63° (ಜುಲೈ) ಮತ್ತು 23° (ಫೆಬ್ರುವರಿ). ಎಸ್ಟೋನಿಯ ಸಣ್ಣ ದೇಶವಾದರೂ ಉಷ್ಣತೆಯ ವ್ಯತ್ಯಾಸಗಳು ಅಧಿಕ. ವಾಯವ್ಯ ಮಾರುತಗಳಿಂದ ಇಲ್ಲಿ ಮಳೆಯಾಗುತ್ತದೆ. ಬೇಸಗೆಯಲ್ಲಿ ಪರಿಸರಣ ಮಳೆ ಸಾಮಾನ್ಯ. ಮಳೆಯ ವಾರ್ಷಿಕ ಸರಾಸರಿ 24″. ಹಿಮ ಬೀಳುವುದು ಹೆಚ್ಚು. ಚಳಿಗಾಲದಲ್ಲಿ ಒಳಭಾಗಗಳಲ್ಲಿ 10″ ದಪ್ಪನಾಗಿ ಹಿಮ ಬೀಳುವುದುಂಟು. ಉತ್ತರ ತೀರದಲ್ಲಿ ವರ್ಷಕ್ಕೆ 130–145 ದಿನಗಳ ಕಾಲ ಹಿಮ ಕವಿದಿರುತ್ತದೆ. ಪಶ್ಚಿಮದಲ್ಲಿ ಈ ಅವಧಿ 50–70 ದಿನ.

ಒಂದನೆಯ ಮಹಾಯುದ್ಧಕ್ಕೆ ಮುಂಚೆ ದೇಶದ 1/4 ಭಾಗ ಕಾಡುಗಳಿಂದ ಕೂಡಿತ್ತು. ಇವುಗಳಲ್ಲಿ 70% ಎಲೆ ಮೊನಚಿನವು. ಸ್ಪ್ರೂಸ್, ಪೈನ್ ಮರಗಳು ಮುಖ್ಯವಾದವು. ಭೂ ಸುಧಾರಣೆಯ ಪರಿಣಾಮವಾಗಿ ಕಾಡುಗಳನ್ನು ಬಹುತೇಕ ಕಡಿಯಲಾಗಿದೆ. ಈಗ ಅಲ್ಲಲ್ಲಿ ಓಕ್ ಮರದ ಕಾಡುಗಳಿವೆ.

**ವ್ಯವಸಾಯ, ಕೈಗಾರಿಕೆ ಇತ್ಯಾದಿ:** ಎಸ್ಟೋನಿಯದಲ್ಲೂ ಡೆನ್ಮಾರ್ಕಿನಂತೆ ಮಿಶ್ರವ್ಯವಸಾಯ ಸಾಮಾನ್ಯ. 1919ರಲ್ಲಿ ಆದ ಸುಧಾರಣೆಯ ಪರಿಣಾಮವಾಗಿ ಭೂಮಿ ಸಾಮಾನ್ಯ ಜನತೆಯ ಕೈಸೇರಿತು. 1939ರ ಹೊತ್ತಿಗೆ ಸರಾಸರಿ 56 ಎಕರೆ ವಿಸ್ತಾರದ 1,39,984 ಹಿಡುವಳಿಗಳಿದ್ದುವು. ಅನಂತರ ಇವುಗಳ ಸಂಖ್ಯೆ 88,000ಕ್ಕೆ ಇಳಿಯಿತು. 1949ರಿಂದೀಚೆಗೆ ಸಾಮೂಹಿಕ ವ್ಯವಸಾಯ ರೂಢಿಗೆ ಬಂದು, ಕೃಷಿಯ ನೆಲವನ್ನೆಲ್ಲ ಕಾಲ್‌ಖಾಜ್‌ಗಳನ್ನಾಗಿ (ಸಾಮೂಹಿಕ ಭೂಮಿ) ವಿಂಗಡಿಸಲಾಯಿತು. 1935ರಲ್ಲಿ ಇವುಗಳ ಸಂಖ್ಯೆ 1,137. ರೈ, ಗೋದಿ, ತೋಕೆಗೋದಿ, ಆಲೂಗೆಡ್ಡೆ, ಅಗಸೆಗಳು ಮುಖ್ಯ ಬೆಳೆಗಳು. ಹಿಂದೆ ಈ ರಾಜ್ಯ ಆಹಾರ ಧಾನ್ಯಗಳನ್ನು ಆಮದು ಮಾಡಿಕೊಳ್ಳುತ್ತಿತ್ತು. ಈಗ ಇದು ಹೆಚ್ಚುವರಿ ದೇಶ. ಪಶುಪಾಲನೆಯೂ ಸಾಮಾನ್ಯ. ಮಹಾಯುದ್ಧದ ಸಮಯದಲ್ಲಿ ಈ ಕಸಬಿಗೆ ಧಕ್ಕೆ ತಗುಲಿತಾದರೂ ಎರಡನೆಯ ಪಂಚವಾರ್ಷಿಕ ಯೋಜನೆಯಲ್ಲಿ (1951–55) ಇದು ಮತ್ತೆ ಮೊದಲಿನ ಸ್ಥಾನ ಪಡೆಯಿತು. ದನಕರು, ಹಂದಿ, ಕುರಿ, ಕುದುರೆ, ಕೋಳಿಗಳು ಮುಖ್ಯ ಪ್ರಾಣಿಗಳು. ಬೆಣ್ಣೆ, ಗಿಣ್ಣು, ಘನೀಕರಿಸಿದ ಹಾಲು ಮುಂತಾದವುಗಳ ವಾರ್ಷಿಕ ಉತ್ಪನ್ನ 10 ಲಕ್ಷ ಟನ್ನುಗಳಿಗಿಂತಲೂ ಹೆಚ್ಚು. ಸಮುದ್ರತೀರದಲ್ಲಿ ಮೀನುಗಾರಿಕೆ ಒಂದು ಮುಖ್ಯ ಕಸಬು. ಇದನ್ನು ಆಧುನಿಕಗೊಳಿಸಲಾಗಿದೆ. ಕೆಲವು ಕಡೆ ತುಪ್ಪುಳು ಚರ್ಮ ತಯಾರಿಕೆಯೂ ಉಂಟು.

ಕೈಗಾರಿಕೆಗಳಿಗೆ ಅಗತ್ಯವಾದ ಶಕ್ತಿ ಸಾಧನೆಗಳು ಇಲ್ಲಿ ಹೇರಳ. ನ್ಯಾಫ್ತ, ಪೆಟ್ರೋಲಿಯಂ ಮೊದಲಾದ ಜಲಜನಕ ಇಂಗಾಲ ಸಂಯುಕ್ತ ಪದರಗಲ್ಲುಗಳು ಉತ್ತರ ಹಾಗೂ ಪೂರ್ವಭಾಗಗಳಲ್ಲಿ ಹರಡಿವೆ. ಈ ಜೇಡಿ ಪದರಗಲ್ಲುಗಳಿಂದ ಪೆಟ್ರೋಲಿಯಂ, ಮೃದುಚಾಲಕ ಎಣ್ಣೆಗಳು, ರಾಳ ಮತ್ತು ಕಲ್ಲರಗುಗಳನ್ನು ಹೊರತೆಗೆಯಲಾಗುತ್ತದೆ. 1955ರಲ್ಲಿ 8,10,000 ಟನ್ ಎಣ್ಣೆ ತಯಾರಿಕೆಯ ಗುರಿ ಇದ್ದು ಅದನ್ನು ಸಾಧಿಸಲಾಯಿತು. ಕೋಹ್‌ಟ್ಲಾ ಜಾರ್ವೆ ಮುಖ್ಯ ತೈಲ ಶೋಧನ ಕೇಂದ್ರ. ಅಲ್ಲಿಂದ 100 ಮೈಲಿ ದೂರದಲ್ಲಿರುವ ಲೆನಿನ್‌ಗ್ರಾಡಿಗೆ 1948ರಲ್ಲೂ ಟ್ಯಾಲಿನಿಗೆ 1953ರಲ್ಲೂ ಎಣ್ಣೆ ಸಾಗಿಸಲು ಕೊಳವೆ ಹಾಕಲಾಯಿತು. ಜಲವಿದ್ಯುತ್ತಿನ ಉತ್ಪಾದನೆಯೂ ಈಚೆಗೆ ಅಧಿಕಗೊಂಡಿದೆ. (1949ರಲ್ಲಿ 25 ಕೋಟಿ KWH). ಎಲ್ಲಮಾ, ಪಾರ್ನು ಇವು ಉಷ್ಣ ವಿದ್ಯುತ್ ತಯಾರಿಕೆಯ ಕೇಂದ್ರಗಳು. ಟ್ಯಾಲಿನ್ ರಂಜಕ ಮತ್ತು ಲವಣಗಳ ಕೈಗಾರಿಕಾ ಕೇಂದ್ರ. ಹತ್ತಿ ಜವಳಿ ಈ ದೇಶದ ಮುಖ್ಯ ಕೈಗಾರಿಕೆ. ಇದಕ್ಕೆ ನಾರ್ವ ಮುಖ್ಯ ಕೇಂದ್ರ. ಇದಲ್ಲದೆ ರೇಯಾನ್, ಅಗಸೆ, ಉಣ್ಣೆ ಮತ್ತು ಸೆಣಬಿನ ಗಿರಣಿಗಳೂ ಇಲ್ಲುಂಟು. ಉತ್ತರದಲ್ಲಿ ಮರ ಕೊಯ್ಯುವ ಕೈಗಾರಿಕೆ ಮುಖ್ಯ. ಇದರೊಂದಿಗೆ ಅಲ್ಲಲ್ಲಿ ಸಿಮೆಂಟ್, ಗಾಜು, ಜಿಪ್ಸಂ ಕಾರ್ಖಾನೆಗಳೂ ಬೆಳೆದಿವೆ.

ಎಸ್ಟೋನಿಯ ಸಣ್ಣ ದೇಶವಾದರೂ ಇಲ್ಲಿನ ಸಂಚಾರ ಮಾರ್ಗ ಚೆನ್ನಾಗಿ ಬೆಳೆದಿದೆ. (ರೈಲುಮಾರ್ಗ 1,702 ಕಿ.ಮೀ. ರಸ್ತೆ 21,500 ಕಿ.ಮೀ.) ಪಲ್‌ಡಿಸ್ಕಿ ಪಾರ್ನು ಮುಖ್ಯ ಬಂದರುಗಳು.

ಎಸ್ಟೋನಿಯದ ಜನಸಂಖ್ಯೆ 11,96,791 (1959). 56% ಮಂದಿ ಪಟ್ಟಣಿಗರು. ಇವರ ಪೈಕಿ ಅಧಿಕ ಸಂಖ್ಯೆಯ ಜನ ಉತ್ತರ ತೀರದ ಪಟ್ಟಣಗಳಾದ ಟ್ಯಾಲಿನ್ (2,81,714) ಮತ್ತು ಟಾರ್ಟುಗಳಲ್ಲಿ (74,263) ವಾಸಿಸುತ್ತಾರೆ. ಎಸ್ಟೋನಿಯದ ಜನರ ಪೈಕಿ ಸುಮಾರು 73% ಎಸ್ಟೋನಿಯನ್ನರು. ಇವರು ಫಿನ್ನರ ಸಂಬಂಧಿಗಳು. ಉಳಿದವರಲ್ಲಿ ರಷ್ಯನರು (22%) ಮುಖ್ಯ. ಫಿನ್, ಉಕ್ರೇನಿಯನ್, ಬೆಲೊರಷ್ಯನ್, ಜ್ಯೂ ಜನ ಇತರರು. ಈ ದೇಶದ ವ್ಯಾಪಾರ ಹೆಚ್ಚಾಗಿ ರಷ್ಯದೊಂದಿಗೆ ನಡೆಯುತ್ತಿತ್ತು. 1919–39ರ ಅವಧಿಯಲ್ಲಿ ಗ್ರೇಟ್ ಬ್ರಿಟನ್ ಮತ್ತು ಜರ್ಮನಿಗಳೊಂದಿಗೆ ವ್ಯಾಪಾರ ಬೆಳೆಯಿತು. ಎರಡನೆಯ ಮಹಾಯುದ್ಧದ ಅನಂತರ ಮತ್ತೆ ರಷ್ಯದೊಂದಿಗೆ ವ್ಯಾಪಾರ ಸಂಬಂಧ ಅಧಿಕವಾಗಿದೆ. (ಕೆ.ಆರ್.ಆರ್.)

**ಇತಿಹಾಸ:** ಎಸ್ಟೋನಿಯದ ಇತಿಹಾಸ ಸುಮಾರು ಎರಡು ಸಾವಿರ ವರ್ಷಗಳಷ್ಟು ಪುರಾತನವಾದದ್ದು. ಒಂದನೆಯ ಶತಮಾನದಲ್ಲಿ ಬದುಕಿದ್ದ ರೋಮನ್ ಇತಿಹಾಸಕಾರ ಟೌಸಿಟಸನ ಕೃತಿಯೊಂದರಲ್ಲಿ ಪ್ರಪ್ರಥಮವಾಗಿ ಎಸ್ಟೋನಿಯದ ಉಲ್ಲೇಖವಿದೆ.

ಇತಿಹಾಸಕಾರರಿಗೆ ತಿಳಿದಿರುವ ಮಟ್ಟಿಗೆ ಈ ದೇಶದ ಜನ ಮೊಟ್ಟಮೊದಲ ಬಾರಿಗೆ ಆಕ್ರಮಣಕ್ಕೆ ತುತ್ತಾದದ್ದು ಒಂಬತ್ತನೆಯ ಶತಮಾನದಲ್ಲಿ. ಆಗ ಜೈತ್ರಯಾತ್ರೆಯಲ್ಲಿ ನಿರತರಾಗಿದ್ದ ವೈಕಿಂಗರು ಈ ನಾಡಿನ ಮೂಲಕ ಹಾದು ಹೋದರಂತೆ. ಈ ಆಕ್ರಮಣಕಾರರು ಯೋಧರು ಮಾತ್ರವೇ ಆಗಿರಲಿಲ್ಲ:

ವರ್ತಕರೂ ಆಗಿದ್ದರು. ಆದ್ದರಿಂದ ಎಸ್ಟೋನಿಯನರು ಇವರಿಂದ ಅನೇಕ ವಿಚಾರಗಳನ್ನು ಕಲಿತರು.

ಎಸ್ಟೋನಿಯನರು ಆಗ ಕ್ರೈಸ್ತರಾಗಿರಲಿಲ್ಲ. 11, 12ನೆಯ ಶತಮಾನಗಳಲ್ಲಿ ಡೇನರೂ ಸ್ವೀಡರೂ ಇವರನ್ನು ಕ್ರೈಸ್ತಮತಕ್ಕೆ ಪರಿವರ್ತಿಸಲು ಪ್ರಯತ್ನಿಸಿ ವಿಫಲರಾದರು. ಸುಮಾರು ಇದೇ ಕಾಲಕ್ಕೆ ರಷ್ಯನರು ಈ ದೇಶದ ಮೇಲೆ 13 ಸಾರಿ ದಂಡಯಾತ್ರೆ ಮಾಡಿದರಾದರೂ ಇದನ್ನು ಸಂಪೂರ್ಣವಾಗಿ ವಶಪಡಿಸಿಕೊಳ್ಳಲಾಗಲಿಲ್ಲ.

ಜರ್ಮನಿಯ ಹೋಲ್‌ಸ್ಟೈನ್ ಪ್ರದೇಶದ ಪಾದ್ರಿ ಮೈನ್‌ಹಾರ್ಡ್ 12ನೆಯ ಶತಮಾನದಲ್ಲಿ ಎಸ್ಟೋನಿಯದ ನೆರೆನಾಡುಗಳಲ್ಲಿ ಕ್ರೈಸ್ತಮತ ಪ್ರಚಾರದಲ್ಲಿ ತೊಡಗಿದ. ಇವನ ಅನಂತರ ಬಂದ ಬರ್ಟೋಲ್ಡ್ ಈ ಕೆಲಸಕ್ಕೆ ಕತ್ತಿ ಬಳಸಿದ. ಇದಕ್ಕೆ ದಂಡವಾಗಿ ಈತ ಕದನವೊಂದರಲ್ಲಿ ತಲೆ ಒಪ್ಪಿಸಬೇಕಾಯಿತು.

ಆಮೇಲೆ ಬಂದ ಪಾದ್ರಿ ಬಲುಮೆಯ ಬದಲು ಒಲುಮೆಯ ಮಾರ್ಗ ಹಿಡಿದ. ಅಲ್ಲಿನ ಜನರಿಂದ ಕೋಟೆ ಕೊತ್ತಲ ಕಟ್ಟಿಸಿ ಅವರನ್ನೇ ಸೈನ್ಯಕ್ಕೆ ಸೇರಿಸಿಕೊಂಡು ಅವರಿಂದಲೇ ವಸಾಹತು ನಿರ್ಮಿಸಿದ. ಈತ ಎಸ್ಟೋನಿಯಕ್ಕೂ ಮುಂದುವರಿದ. ಮತದ ಹೆಸರಿನಲ್ಲಿ ಜರ್ಮನಿಯಿಂದ ಪ್ರವಾಹದಂತೆ ಮುನ್ನುಗ್ಗುತ್ತಿದ್ದ ಯೋಧರ ಮುಂದೆ ಎಸ್ಟೋನಿಯನರು ತಣ್ಣಗಾದರು. ಇದೇ ವೇಳೆಗೆ ನೆರೆಯ ರಷ್ಯದ ದೊರೆಗಳೂ ಇಲ್ಲಿಗೆ ನುಗ್ಗಿದರು. ಡೆನ್ಮಾರ್ಕಿನ ದೊರೆಯೂ ದಂಡೆತ್ತಿ ಬಂದ. ಹೀಗೆ ಎಸ್ಟೋನಿಯದ ನೆಲ ಹಲವರ ಪಾಲಾಯಿತು. ಎಸ್ಟೋನಿಯನರು ಊಳಿಗದಾಳುಗಳಾದರು.

15ನೆಯ ಶತಮಾನದ ವೇಳೆಗೆ ದಕ್ಷಿಣದಲ್ಲಿ ಪೋಲೆಂಡ್ ಲಿಥುವೇನಿಯಗಳೂ ಪೂರ್ವದ ಮಸ್ಕೊವಿಯೂ ಎಸ್ಟೋನಿಯದ ಮೇಲೆ ಪ್ರಭಾವ ಬೀರಲಾರಂಭಿಸಿದುವು. ನಾಲ್ಕನೆಯ ಐವಾನ್ ದಿ ಟೆರಿಬಲ್ (1530–84) ಎಸ್ಟೋನಿಯವನ್ನಾಕ್ರಮಿಸಿದ. ಮುಂದೆ ರಷ್ಯನರನ್ನು ಸೋಲಿಸಿ ಸ್ವೀಡರು ಬಂದರು.

ಪದೇ ಪದೇ ಸಂಭವಿಸುತ್ತಿದ್ದ ಯುದ್ಧಗಳ ಫಲವಾಗಿ ಎಸ್ಟೋನಿಯದ ಬೆಳೆವಣಿಗೆಯಾಗಲಿಲ್ಲ. ಎಷ್ಟೋ ನೆಲ ಪಾಳು ಬಿದ್ದಿತ್ತು. ಜರ್ಮನ್ ಶ್ರೀಮಂತರು ಇದರ ಮೇಲೆ ತಮ್ಮ ಒಡೆತನ ಸ್ಥಾಪಿಸಿದರು. ಸ್ವೀಡಿಷ್ ದೊರೆಗಳು ಇವರನ್ನು ಹತೋಟಿಗೆ ತರಲು ಯತ್ನಿಸುತ್ತಿದ್ದರು.

ಹದಿನೆಂಟನೆಯ ಶತಮಾನದಲ್ಲಿ ರಷ್ಯದ ಜ಼ಾರ್ ಪೀಟರ್ ಕೊನೆಗೂ ಈ ದೇಶವನ್ನು ಸಂಪೂರ್ಣವಾಗಿ ಗೆದ್ದ. ಇಡೀ ಬಾಲ್ಟಿಕ್ ಪ್ರದೇಶವೇ ರಷ್ಯದ ಅಧೀನವಾಯಿತು. ಮುಂದಿನ ಕೆಲವು ದಶಕಗಳಲ್ಲಿ ಎಸ್ಟೋನಿಯದಲ್ಲಿ ಅನೇಕ ಭೂ ಸುಧಾರಣೆಗಳು ಜಾರಿಗೆ ಬಂದು ರೈತರ ಸ್ಥಿತಿ ಸ್ವಲ್ಪ ಉತ್ತಮಗೊಂಡಿತು. ಕೈಗಾರಿಕೆಗಳು ಬೆಳೆದುವು. ಅಕ್ಷರಸ್ಥರ ಸಂಖ್ಯೆಯೂ ಹೆಚ್ಚಿತು. ಕ್ರಮೇಣ ಎಸ್ಟೋನಿಯದ ಜನರಲ್ಲಿ ಜಾಗೃತಿಯುಂಟಾಯಿತು.

1905ರಲ್ಲಿ ರಷ್ಯದಲ್ಲಿ ಸಂಭವಿಸಿದ ಕ್ರಾಂತಿ ಆ ದೇಶದ ಎಲ್ಲೆಯನ್ನು ದಾಟಿ ಎಸ್ಟೋನಿಯವನ್ನೂ ತಲಪದಿರಲಿಲ್ಲ. ಇಲ್ಲಿನ ಜನ ಸಂಘಟಿತರಾಗಿ ಸ್ವಾಯತ್ತೆಯ ಬೇಡಿಕೆ ಮುಂದಿಟ್ಟರು. 1917ರ ಕ್ರಾಂತಿಯ ಫಲವಾಗಿ ಎಸ್ಟೋನಿಯಕ್ಕೆ ಸ್ವಯಂ ಆಡಳಿತದ ಸ್ಥಾನ ಲಭಿಸಿತು. ಒಂದನೆಯ ಮಹಾಯುದ್ಧದ ಕಾಲದಲ್ಲಿ ಜರ್ಮನರ ಆಕ್ರಮಣಕ್ಕೊಳಗಾಗಿದ್ದ ಎಸ್ಟೋನಿಯ ಆ ಯುದ್ಧಾಂತ್ಯದಲ್ಲಿ ವಿಮೋಚನೆ ಹೊಂದಿತಾದರೂ ಮುಂದೆ ರಷ್ಯದ ಕೆಂಪು ಸೇನೆ ಈ ದೇಶವನ್ನು ಪ್ರವೇಶಿಸಿತು. 1920ರಲ್ಲಿ ಶಾಂತಿಯ ಕೌಲಿಗೆ ಸಹಿಯಾದರೂ ಎಸ್ಟೋನಿಯಕ್ಕೆ ನೆಮ್ಮದಿ ಉಳಿಯಲಿಲ್ಲ. 1940ರ ಆಗಸ್ಟಿನಲ್ಲಿ ಇದು ಗಣರಾಜ್ಯವಾಗಿ ಸೋವಿಯತ್ ಒಕ್ಕೂಟಕ್ಕೆ ಸೇರಿತು.

ಆದರೆ ಬಹುಕಾಲ ಈ ಸ್ಥಿತಿ ಮುಂದುವರಿಯಲಿಲ್ಲ. ಮರುವರ್ಷ ಇಲ್ಲಿಗೆ ಜರ್ಮನರು ನುಗ್ಗಿದರು. ಯುದ್ಧದ ಕೊನೆಯ ಘಟ್ಟದಲ್ಲಿ ಜರ್ಮನರು ಹಿನ್ನಡೆದಾಗ ಎಸ್ಟೋನಿಯದ ಭವಿಷ್ಯ ಮತ್ತೆ ಸೋವಿಯತ್ ಒಕ್ಕೂಟಕ್ಕೆ ಹಸ್ತಾಂತರವಾಯಿತೆನ್ನಬಹುದು. ಈಗ ಇದು ಈ ಒಕ್ಕೂಟದ ಒಂದು ಗಣರಾಜ್ಯವಾಗಿ ಮುಂದುವರಿಯುತ್ತಿದೆ. *

**ಎಸ್‌ನಿನ್, ಎಸ್. ಎ :** 1895–1925. ಸೋವಿಯತ್ ದೇಶದ ಕವಿ. ಸರ್ಗಿ ಅಲೆಕ್ಸಾಂಡ್ರೊವಿಚ್ ಎಸ್‌ನಿನ್ ಇವನ ಪೂರ್ಣ ಹೆಸರು. ಒಮ್ಮೆ ಗಾರ್ಕಿ ಇವನನ್ನು ಪುಷ್ಕಿನನ ಅನಂತರ ಬಂದ ಅತ್ಯಂತ ಶ್ರೇಷ್ಠ ಕವಿ ಎಂದು ಪ್ರಶಂಸಿಸಿದ್ದಾನೆ. ವಿದ್ಯೆ ಸಂಸ್ಕಾರಗಳಿಲ್ಲದ ಬಡರೈತ ಕುಟುಂಬದಲ್ಲಿ ಹುಟ್ಟಿದ್ದರೂ ಈತ ರಷ್ಯನ್ ಜಾನಪದ ಸಾಹಿತ್ಯವನ್ನು ಚೆನ್ನಾಗಿ ಅರಿತಿದ್ದ. 1916ರಲ್ಲಿ ಬರೆದ ಮೊಟ್ಟ ಮೊದಲ ಕವನ ಸಂಗ್ರಹ ಇವನ ಚಿಂತನೆ ಹಾಗೂ ದೇಶಪ್ರೇಮದ ಪ್ರತೀಕವಾಗಿದೆ. ರಷ್ಯನ್ ಕ್ರಾಂತಿಯನ್ನು ಕಳಕಳಿಯಿಂದ ಸ್ವಾಗತಿಸಿದ ಈತ 1919ರಲ್ಲಿ ಎಜ್ರಾ ಪೌಂಡನ ಪ್ರತಿಮಾವಾದದಿಂದ (ಇಮೇಜಿಸಂ) ಪ್ರಭಾವಿತನಾಗಿ ಪ್ರತಿಮಾವಾದಿಗಳ ಪಂಥವೊಂದನ್ನು ಸ್ಥಾಪಿಸಿದ. ರಷ್ಯನ್ ಕ್ರಾಂತಿ ವಿಫಲವಾದಾಗ ನಿರಾಶೆ ಹೊಂದಿ ಮಾಸ್ಕೋಗೆ ತೆರಳಿ ಅಲ್ಲಿ ಸ್ವೇಚ್ಛಾಚಾರಿ ಜೀವನ ನಡೆಸಿದ. ಮಾಸ್ಕೋ ನಗರದ ಕುಡಿತದ ಅಂಗಡಿಗಳನ್ನು ಚಿತ್ರಿಸುವ ಕವನಗಳಲ್ಲಿ, ಪುಂಡನ ತಪ್ಪೊಪ್ಪಿಗೆ ಎಂಬ ಕವನದಲ್ಲಿ ದುರಂತಪ್ರಜ್ಞೆ ಇದೆ. ಹೊಸ ಸೋವಿಯತ್ ದೇಶ ನಿರ್ಮಿಸಿದ ಆದರ್ಶ ಗ್ರಾಮವಾಗಲಿ ಸದ್ದುಗದ್ದಲ ತುಂಬಿದ ಮಹಾನಗರವಾಗಲಿ ಇವನಿಗೆ ಶಾಂತಿ, ಸಮಾಧಾನಗಳನ್ನು ನೀಡಲಿಲ್ಲ. ಇಸಾಡೊರ ಡಂಕನಳೊಂದಿಗೆ ಮಾಡಿಕೊಂಡ ಬೇಜವಾಬ್ದಾರಿಯುತವಾದ ವಿವಾಹ ಇವನ ಬಾಳನ್ನು ಮತ್ತಷ್ಟು ಹದಗೆಡಿಸಿತು. ಪೌರಸ್ತ್ಯ ದೇಶಗಳಲ್ಲಿ ಪ್ರವಾಸ ಕೈಕೊಂಡಾಗ ಬರೆದ ಪರ್ಷಿಯನ್ ರೂಢಿಗಳನ್ನುಳ್ಳ ಸರಳ ರಮ್ಯ ಕವನಗಳೂ ಇವನಿಗೆ ತೃಪ್ತಿ ನೀಡಲಿಲ್ಲ. ನಿರಾಶೆಯಿಂದ ಈತ ಆತ್ಮಹತ್ಯೆ ಮಾಡಿಕೊಂಡ. (ಎಚ್‌.ಕೆ.ಆರ್‌.)

**ಎಸ್ಪರ್‌ಸನ್, ಆಟೊ :** 1860–1943. ಡೆನ್ಮಾರ್ಕ್ ದೇಶದ ಪ್ರಖ್ಯಾತ ಭಾಷಾವಿಜ್ಞಾನಿ. ಭಾಷಾಶಾಸ್ತ್ರದ ಅಧ್ಯಯನಕ್ಕೆ ತನ್ನ ಜೀವನವನ್ನೇ ಮುಡಿಪಾಗಿಟ್ಟ ಈತ ಡೆನ್ಮಾರ್ಕಿನ ರಾನ್‌ಡರ್ಸ್ ಪಟ್ಟಣದಲ್ಲಿ 1860ನೆಯ ಜುಲೈ 16ರಂದು ಜನ್ಮಧಾರಣೆ ಮಾಡಿದ. ಈತನ ಆಡುಮಾತು ಡಚ್ ಭಾಷೆ ; ಈತ ಪರಿಶೋಧನೆಗೆ ಕೈಕೊಂಡ ವಿಷಯ ಆಂಗ್ಲಭಾಷೆ ಮತ್ತು ವ್ಯಾಕರಣ. ಇವುಗಳಲ್ಲಿ ಅತ್ಯಂತ ಶ್ರೇಷ್ಠಮಟ್ಟದ ಅಧಿಕಾರವುಳ್ಳ ವ್ಯಕ್ತಿ ಎಂದು ಪರಿಗಣಿಸಲ್ಪಟ್ಟಿದ್ದ. ಯೂರೋಪಿನಲ್ಲಿ ಆಧುನಿಕ ಪದ್ಧತಿಯಲ್ಲಿ ಭಾಷಾ ಬೋಧನೆ ಮಾಡಬೇಕೆಂಬ ಒಂದು ರೀತಿಯ ಚಳವಳಿಯನ್ನೇ ಆರಂಭಿಸಿ ಯಶಸ್ವಿಯಾದ. ಧ್ವನಿವಿಜ್ಞಾನ, ಭಾಷಾವಿಜ್ಞಾನ, ಆಂಗ್ಲಭಾಷಾ ಚರಿತ್ರೆಗಳ ಬೆಳೆವಣಿಗೆ, ಅಂತರರಾಷ್ಟ್ರೀಯ ಭಾಷಾ ಚಳವಳಿ—ಮುಂತಾದ ಕಾರ್ಯಕ್ಷೇತ್ರಗಳಲ್ಲಿ ದುಡಿದಿದ್ದಾನೆ.

1893ರಲ್ಲಿ ಕೋಪೆನ್‌ಹೇಗೆನ್ ವಿಶ್ವವಿದ್ಯಾನಿಲಯದಲ್ಲಿ ಆಂಗ್ಲಭಾಷಾ ಪ್ರಾಧ್ಯಾಪಕ ಪದವಿಯನ್ನು ಸ್ವೀಕರಿಸಿದ. ನ್ಯೂಯಾರ್ಕಿನ ಕೊಲಂಬಿಯ ವಿಶ್ವವಿದ್ಯಾನಿಲಯದಲ್ಲಿ 1909–10ರ ವರೆಗೆ ವಿಶೇಷ ಉಪನ್ಯಾಸಗಳನ್ನು ನಡೆಸಿದ. ಆಗಾಗ ಇಂಗ್ಲೆಂಡಿಗೂ ಹೋಗಿ ಅಲ್ಲೂ ಪ್ರೌಢಪ್ರವಚನಗಳನ್ನು ಮಾಡಿದ. ಅಲ್ಲಿಂದೀಚೆಗೆ ತನ್ನ ವಿಶ್ವವಿದ್ಯಾನಿಲಯದಲ್ಲಿಯೇ ನೆಲೆಸಿ ಅನೇಕ ಗ್ರಂಥಗಳನ್ನು ರಚಿಸಿದ. ಜನರಲ್ಲಿ ನಿತ್ಯ ಬಳಕೆಯಲ್ಲಿರುವ ಭಾಷೆಯನ್ನು ಆಧಾರವಾಗಿಟ್ಟುಕೊಂಡು ಭಾಷೆಯನ್ನು ಬೋಧಿಸಬೇಕೆಂಬ ತತ್ತ್ವವನ್ನು ಪ್ರತಿಪಾದಿಸಿ ಆ ಕಾರ್ಯದಲ್ಲಿ ಸಕ್ರಿಯ ಪಾತ್ರ ವಹಿಸಿದ.

ಈತ ಬರೆದಿರುವ ಗ್ರಂಥಗಳು ಮತ್ತು ಲೇಖನಗಳ ಸಂಖ್ಯೆ ಸುಮಾರು 400. ಅವುಗಳಲ್ಲಿ ಬಹು ಮುಖ್ಯವಾದ ಗ್ರಂಥಗಳು : 1 ಇಂಗ್ಲಿಷ್ ಭಾಷೆಯ ಬೆಳೆವಣಿಗೆ ಮತ್ತು ರಚನೆ (ಗ್ರೋತ್ ಅಂಡ್ ಸ್ಟ್ರಕ್ಚರ್ ಆಫ್ ಇಂಗ್ಲಿಷ್ ಲ್ಯಾಂಗ್ವೇಜ್. 1905). 2 ಭಾಷೆಯಲ್ಲಿ ಪ್ರಗತಿ (ಪ್ರೋಗ್ರೆಸ್ ಇನ್ ಲ್ಯಾಂಗ್ವೇಜ್. 1894). 3 ಜರ್ಮನ್ ಭಾಷೆಯಲ್ಲಿ ಬರೆದಿರುವ ಲಾರ್ಬುಶ್ ಡರ್ ಫೋನೆಟಿಕ್ (1904) ಎಂಬುದು ಸಾಮಾನ್ಯ ಧ್ವನಿವಿಜ್ಞಾನದ ವಿಷಯವನ್ನು ವೈಜ್ಞಾನಿಕ ರೀತಿಯಲ್ಲಿ ವಿವರಿಸುವ ದೀರ್ಘವೂ ಉತ್ತಮವೂ ಆದ ಪುಸ್ತಕ. 4 ಶಿಕ್ಷಾಶಾಸ್ತ್ರ (ಫೋನೆಟಿಕ್ಸ್. 1899). 5 ಭಾಷೆ, ಅದರ ಮೂಲ, ಸ್ವಭಾವ ಮತ್ತು ಬೆಳೆವಣಿಗೆ (ಲ್ಯಾಂಗ್ವೇಜ್, ಇಟ್ಸ್ ನೇಚರ್, ಡೆವಲಪ್‌ಮೆಂಟ್ ಅಂಡ್ ಆರಿಜಿನ್. 1922). 6 ವ್ಯಾಕರಣಶಾಸ್ತ್ರದ ತತ್ತ್ವ (ದಿ ಫಿಲಾಸಫಿ ಆಫ್ ಗ್ರ್ಯಾಮರ್. 1924). 7 ಏಳು ಸಂಚಿಕೆಗಳಲ್ಲಿ ಬರೆದಿರುವ, ವಿಶ್ವಕೋಶದಂತಿರುವ ಆಧುನಿಕ ಇಂಗ್ಲಿಷ್ ವ್ಯಾಕರಣ ಪುಸ್ತಕಗಳು (ಮಾಡರ್ನ್ ಇಂಗ್ಲಿಷ್ ಗ್ರ್ಯಾಮರ್. 1909). ಈ ಗ್ರಂಥಗಳಲ್ಲಿ ಅನೂಚಾನವಾಗಿ ನಡೆದು ಬಂದ ಸಂಪ್ರದಾಯಬದ್ಧವಾದ ಜಿಗುಟು ನಿಯಮಗಳ ಮಧ್ಯದಲ್ಲಿ ಸೆರೆಸಿಕ್ಕಿದ್ದ ಲ್ಯಾಟಿನ್ ವ್ಯಾಕರಣಗಳ ಪದ್ಧತಿಯನ್ನು ಖಂಡಿಸಿ, ಅವುಗಳ ವೈಜ್ಞಾನಿಕತೆಯನ್ನು ಅಲ್ಲಗಳೆದಿರುವುದಲ್ಲದೆ ವ್ಯಾಕರಣವೂ ಒಂದು ರೀತಿಯಲ್ಲಿ ಸಂಬಂಧಾತ್ಮಕವಾದುದು ಹಾಗೂ ಪ್ರಗತಿಶೀಲವಾದುದು ಎಂಬುದನ್ನು ನಿರೂಪಿಸಿದ್ದಾನೆ. ಈ ಗ್ರಂಥಗಳಲ್ಲಿ ಆತ ಅನುಸರಿಸಿರುವ ಮಾರ್ಗವೂ ನಿರೂಪಿಸಿರುವ ವಿಷಯಗಳೂ ಶಾಸ್ತ್ರೀಯವಾದ ವಿಚಾರ ಪದ್ಧತಿಯೂ ಹೊಸದಾಗಿ ಸೂಚಿಸಿರುವ ಅಂಶಗಳೂ ಎಲ್ಲ ಭಾಷೆಗಳಿಗೂ ಸಾಮಾನ್ಯವಾಗಿ ಅನ್ವಯಿಸುತ್ತವೆ. ಅವುಗಳ ಅಭ್ಯಾಸದಿಂದ ಉಂಟಾಗುವ ಹೊಸ ದೃಷ್ಟಿ ನಮ್ಮ ಭಾಷಾ ಚರಿತ್ರೆ, ವ್ಯಾಕರಣಗಳ ಕ್ರಮವನ್ನು ತಿರುಗಿ ವಿಮರ್ಶೆ ಮಾಡುವ ಪ್ರೇರಣೆಯನ್ನು ಮೂಡಿಸುತ್ತದೆ. ಇವಲ್ಲದೆ ಈತ 8 ಅನಲಿಟಿಕ್ ಸಿಂಟ್ಯಾಕ್ಸ್ (1937), 9 ಎಸೆನ್ಷಿಯಲ್ಸ್ ಆಫ್ ಗ್ರ್ಯಾಮರ್, 10 ಲಿಂಗ್ವಿಸ್ಟಿಕ, 11 ಹೌ ಟು ಟೀಚ್ ಎ ಫಾರಿನ್ ಲ್ಯಾಂಗ್ವೇಜ್, 12 ಎನ್ ಇಂಟರ್ ನ್ಯಾಷನಲ್ ಲ್ಯಾಂಗ್ವೇಜ್, 13 ಮ್ಯಾನ್‌ಕೈಂಡ್, ನೇಷನ್ ಅಂಡ್ ಇಂಡಿವಿಜುಯಲ್—ಮೊದಲಾದ ಗ್ರಂಥಗಳನ್ನು ಬರೆದಿದ್ದಾನೆ.

ಈತ ವೈಯಾಕರಣಿಯೇನೋ ಅಹುದಾದರೂ ಒಣ ವೈಯಾಕರಣಿಯಲ್ಲ. ಭಾಷೆಯನ್ನು ಸುಲಭವಾಗಿ ಕಲಿಯುವುದಕ್ಕೆ ಉತ್ಕೃಷ್ಟವಾದ ಮಾರ್ಗ ಯಾವು

ದೆಂಬುದನ್ನು ಕಂಡುಹಿಡಿಯುವುದು ಈತನ ಉದ್ದೇಶವಾಗಿತ್ತು. ಇದಕ್ಕಾಗಿ ಈತ ಭಾಷೆಯ ಮೂಲವನ್ನೂ ಬೆಳೆವಣಿಗೆಯನ್ನೂ ಬೆದಕಲು ಹೊರಟ. ತನ್ನ ಜೀವನದ ಆರಂಭದೆಶೆಯಲ್ಲಿ ಡಾರ್ವಿನ್ನನ ವಿಕಾಸವಾದದಿಂದ ಪ್ರಭಾವಿತನಾಗಿದ್ದಂತೆ ಕಂಡು ಬರುತ್ತದೆ. ಆದರೆ ಕಾಲಾನಂತರದಲ್ಲಿ ಅದರ ಪ್ರಭಾವದಿಂದ ಮುಕ್ತನಾಗಿ ಮಗು ಕಲಿಯುವ ಭಾಷೆಯ ಅವಸ್ಥೆಗಳನ್ನು ವಿಶ್ಲೇಷಿಸಿ ಆ ಮೂಲಕ ಭಾಷೆಯ ಹುಟ್ಟನ್ನು ಕಂಡುಹಿಡಿಯುವ ಪ್ರಯತ್ನವನ್ನು ಈತ ಮಾಡಿದ. ಅನಂತರ ಭಷಾಬೋಧನೆಯ ಕ್ರಮವನ್ನು ಸೂಚಿಸಿದ. ಡೆನ್ಮಾರ್ಕ್ ದೇಶದ ಭಾಷಾ ಬೋಧನೆಯ ಕ್ರಮವೆಲ್ಲ ಎಸ್ಪರ್ಸನ್ ಸೂಚಿಸಿದ ಮಾರ್ಗದಲ್ಲಿಯೆ ಇಂದು ನಡೆಯುತ್ತಿದೆ.

ಫಿಲಾಸಫಿ ಆಫ್ ಗ್ರ್ಯಾಮರ್ ಎಂಬ ಗ್ರಂಥದಲ್ಲಿ ಈತ ತನಗೆ ಪರಿಚಯವಿದ್ದ ಐರೋಪ್ಯ ಭಾಷೆಗಳ ವ್ಯಾಕರಣಗಳನ್ನೆಲ್ಲ ಸಮಷ್ಟಿದೃಷ್ಟಿಯಿಂದ ನೋಡಿ ವ್ಯಾಕರಣ ಶಾಸ್ತ್ರದ ಜೀವವೇನೆಂಬುದನ್ನು ನಿರೂಪಿಸಿದ್ದಾನೆ. ಪ್ರತಿಯೊಂದು ಭಾಷೆಯನ್ನಾಡುವ ಜನರ ಮನೋಧರ್ಮ ಅವರವರ ವ್ಯಾಕರಣಗಳಲ್ಲಿ ಅಡಕವಾಗಿದೆ. ಮನುಷ್ಯನ ಬುದ್ಧಿ ಕಾಲದೇಶಗಳ ತಡೆಯಿಲ್ಲದೆ ಭಾಷೆಯ ಬೆಳೆವಣಿಗೆಯಲ್ಲಿ ಅನುಸರಿಸಿರುವ ಕ್ರಮ ಸಾಮಾನ್ಯವಾಗಿ ಒಂದೇ ರೀತಿಯದು ಎಂದು ಇಲ್ಲಿ ಈತ ತೋರಿಸಿದ್ದಾನೆ. ಭಾಷೆಯ ಚರಿತ್ರೆಯನ್ನು ಬುದ್ಧಿಯ ಚರಿತ್ರೆಯೆಂದೂ ಹೇಳಬಹುದು. ಯಾವುದಾದರೂ ಭಾಷೆಯ ವ್ಯಾಕರಣ ರಚನೆಗೆ ಸಾಮಾನ್ಯವಾಗಿ ಗ್ರಾಂಥಿಕ ಪ್ರಯೋಗಗಳನ್ನು ಆಧಾರವಾಗಿಟ್ಟುಕೊಳ್ಳುವುದು ರೂಢಿಯಾಗಿದೆ. ವ್ಯವಹಾರದಲ್ಲಿಲ್ಲದ ಭಾಷೆಯ ವಿಷಯದಲ್ಲಿ ಇದು ಸರಿಯಾದರೂ ಅದು ಜೀವಂತವಾಗಿದ್ದಲ್ಲಿ, ಅಂದರೆ ವ್ಯವಹಾರಿಕವಾಗಿದ್ದಲ್ಲಿ ಅದರ ಆ ಸ್ವರೂಪವನ್ನು ಅವಶ್ಯವಾಗಿ ಗಮನಿಸಬೇಕೆಂದು ಎಸ್ಪರ್ಸನ್ ಒತ್ತಿ ಹೇಳಿದ್ದಾನೆ. ಇಂದು ನಡೆಯುತ್ತಿರುವ ವ್ಯತ್ಯಾಸಗಳೂ ಹಿಂದೆ ನಡಿದಿರುವುವೂ ಯಾವುದಾದರೂ ನಿಯಮಗಳಿಗೆ ಒಳಪಟ್ಟಿರಬೇಕೆಂಬ ಅಂಶ ಖಚಿತವಾಗಿ ಈ ಗ್ರಂಥದಿಂದ ತಿಳಿಯುತ್ತದೆ. ಇದರಿಂದ ವ್ಯಾಕರಣ ರಚನೆಗೆ ಇದು ಬಹಳ ಸಹಾಯಕರ. ವ್ಯಾಕರಣದಲ್ಲಿ ಒಂದು ಭಾಷೆಯ ಲಕ್ಷಣವನ್ನು ಹೇಳುವುದು ಮುಖ್ಯವಾದರೂ ಕಲಿಯುವವನ ದೃಷ್ಟಿಯಿಂದಲೂ ಅದನ್ನು ರಚಿಸಬೇಕು. ಅದು ಅವನಿಗೆ ಕ್ಲೇಶವಿಲ್ಲದ ಮಾರ್ಗವನ್ನು ಕಾಣಿಸಬೇಕು. ಸಾಮಾನ್ಯ ಲಕ್ಷಣಗಳನ್ನು ಬೇಸರಗೊಳಿಸದೆ ಸಂದೇಹಕ್ಕೆ ಅವಕಾಶವಿಲ್ಲದಂತೆ ತಿಳಿಸಬೇಕು. ಒಬ್ಬನ ಮಾತೃಭಾಷೆಯ ವ್ಯಾಕರಣದ ಅಭ್ಯಾಸದಲ್ಲಿಯೇ ಅವನಿಗೆ ಇತರ ಭಾಷೆಗಳ ವ್ಯಾಕರಣಗಳ ಸಾಮಾನ್ಯ ಪದ್ಧತಿಯೂ ಹಸ್ತಗತವಾಗುವಂತಿರಬೇಕು—ಇವೇ ಮುಂತಾದ ಹಲವು ತತ್ತ್ವಗಳ ಪ್ರತಿಪಾದನೆ ಈ ಗ್ರಂಥದಲ್ಲಿದೆ. ವ್ಯಾಕರಣಶಾಸ್ತ್ರದಲ್ಲಿ ಹೊಸ ಮಾರ್ಗ ಉಂಟೆಂಬುದು ಇದರಿಂದ ವ್ಯಕ್ತವಾಗುತ್ತದೆ. ಅದನ್ನು ಕಾಲಕಾಲಕ್ಕೆ ವಿಮರ್ಶೆಗೆ ಒಳಪಡಿಸಿ ತಿದ್ದುವ ಆವಶ್ಯಕತೆ ಇದ್ದೇ ಇದೆ. ಈ ಗ್ರಂಥವೊಂದರಿಂದಲೇ ಆತನ ವ್ಯಕ್ತಿತ್ವವನ್ನು ಮನಗಾಣಬಹುದು. ಇದು ಎಸ್ಪರ್ಸನ್ನನ ಪರಿಣತ ವಿದ್ವತ್ತಿನ ಫಲವಾಗಿದೆ. ಇಷ್ಟೇ ಅಲ್ಲದೆ ಇನ್ನೂ ಅನೇಕ ಗ್ರಂಥಗಳಲ್ಲಿ ಭಾಷೆಯ ವಿವಿಧ ಕ್ಷೇತ್ರಗಳಲ್ಲಿ ಪ್ರವೇಶಿಸಿ ಭಾಷಾವಿಜ್ಞಾನದ ಸರ್ವತೋಮುಖವಾದ ಬೆಳೆವಣಿಗೆಗೆ ಈತ ಕಾರಣನಾಗಿದ್ದಾನೆ. ಪ್ರಸಿದ್ಧ ಭಾಷಾವಿಜ್ಞಾನಿಗಳು ಈತನ ಪುಸ್ತಕಗಳನ್ನು ಆಗಾಗ್ಗೆ ಆಧಾರಗ್ರಂಥಗಳಾಗಿ ಉದಾಹರಿಸುತ್ತಿದ್ದಾರೆ. ಭಾಷೆ ಮತ್ತು ಭಾಷಾ ವಿಜ್ಞಾನಗಳ ಮತ್ತು ಭಾಷಾ ಬೋಧನೆಯ ಬಗ್ಗೆ ಎಸ್ಪರ್‌ಸನ್ ಮಾಡಿರುವ ಕೆಲಸ ಬಹು ಮಹತ್ತ್ವದ್ದು. (ಬಿ.ಎನ್.ಸಿ.)

**ಎಸ್ಪರ್ಯಾಂಟೊ :** ಯೂರೋಪಿನ ಅನೇಕ ಭಾಷೆಗಳ ಆಧಾರದ ಮೇಲೆ ನಿರ್ಮಿತವಾದ ಒಂದು ಅಂತರರಾಷ್ಟ್ರೀಯ ಭಾಷೆ. ಪ್ರಪಂಚಕ್ಕೆಲ್ಲ ಒಂದು ಭಾಷೆಯಿದ್ದರೆ ಒಳ್ಳೆಯದು, ಅದರಿಂದ ಮಹತ್ತ್ವದ ಪ್ರಯೋಜನಗಳಾಗುತ್ತವೆ ಎಂಬ ಉದ್ದೇಶದಿಂದ ಕಲ್ಪಿತವಾದ ಭಾಷೆಗಳಲ್ಲಿ ಇದೂ ಒಂದು. ಬೇರೆ ಬೇರೆ ಭಾಷೆಗಳಿಂದ ತೆಗೆದುಕೊಂಡ ಅಂಶಗಳು ಇದರಲ್ಲಿ ತುಂಬ ಇವೆ. ಮೂಲ ಪದಗಳು ಹೆಚ್ಚಾಗಿಲ್ಲದಿದ್ದರೂ ಪ್ರತ್ಯಯಗಳ ನೆರವಿನಿಂದ ಹೇರಳವಾಗಿ ಹೊಸ ಹೊಸ ಶಬ್ದಗಳನ್ನು ಸೃಷ್ಟಿಸಿಕೊಳ್ಳಬಹುದು. ಈ ಭಾಷೆಯಲ್ಲಿ ಕೃತಕವಾದ ಅಂಶಗಳೂ ಇಲ್ಲದಿಲ್ಲ. ಇಂಡೋ–ಯೂರೋಪಿಯನ್ ಭಾಷೆಗಳನ್ನೇ ಸಂಪೂರ್ಣವಾಗಿ ಅವಲಂಬಿಸಿರುವ ಇದರಲ್ಲಿ ಅರ್ಧಕ್ಕೂ ಹೆಚ್ಚು ಲ್ಯಾಟಿನ್ ಅಂಶಗಳಿವೆ. ಮಿಕ್ಕ ಅಂಶಗಳಲ್ಲಿ ಹೆಚ್ಚು ಪಾಲು ಜರ್ಮ್ಯಾನಿಕ್ ಮೂಲದವು.

ಎಸ್ಪರ್ಯಾಂಟೊ ಭಾಷೆಗೆ ವ್ಯಾಕರಣವಿದ್ದು ಅದರಲ್ಲಿ ಅಪವಾದಗಳಿಲ್ಲದ ಹದಿನಾರು ನಿಯಮಗಳಿವೆ. ಎಲ್ಲ ನಾಮಪದಗಳೂ–o ಯಿಂದ ಅಂತ್ಯಗೊಳ್ಳುತ್ತವೆ. ಬಹುವಚನವಾದರೆ -oj ಆಗುತ್ತದೆ ; ಗುಣವಾಚಕಗಳೆಲ್ಲ -*a* ದಿಂದ ಕೊನೆಯಾಗುತ್ತವೆ ; ಅವುಗಳ ಬಹುವಚನ -aj ; ಹೀಗೆ ಭಾಷೆಯ ರಚನೆ ಸರಳವಾಗಿದೆ. ಈ ಭಾಷೆಗೆ ರೋಮನ್ ಲಿಪಿಯನ್ನೇ ಬಳಸಲಾಗಿದೆ. ಆದರೆ ಅದು ಧ್ವನ್ಯಾತ್ಮಕವಾಗಿದೆ. ಅದರ ಫಲವಾಗಿ ಬಳಕೆಯಲ್ಲಿರುವ ರೋಮನ್ ಲಿಪಿಯಲ್ಲಿ ಕೆಲವು ಸಣ್ಣಪುಟ್ಟ ಮಾರ್ಪಾಡುಗಳಾಗಿವೆ.

ಎಸ್ಪರ್ಯಾಂಟೊ ಭಾಷೆಯನ್ನು ನಿರ್ಮಿಸಿದವ ರಷ್ಯದ ಒಬ್ಬ ವೈದ್ಯ ಡಾ. ಲಾಜ಼ರಸ್ ಲುಡ್ವಿಗ್ ಜ಼ಮೆನ್‌ಹಾಫ್ (1859–1917). ಈತ ಯೂರೋಪಿನ ಪ್ರಮುಖ ಭಾಷೆಗಳೆಲ್ಲವನ್ನೂ ಬಲ್ಲವನಾಗಿದ್ದ. 1887ರಲ್ಲಿ 'ಅಂತರರಾಷ್ಟ್ರೀಯ ಭಾಷೆ' ಎಂಬ ಪುಸ್ತಿಕೆಯನ್ನು ಡಾ. ಎಸ್ಪರ್ಯಾಂಟೊ ಎಂಬ ಗುಪ್ತನಾಮದಲ್ಲಿ ಪ್ರಕಟಿಸಿದ. ಎಸ್ಪರ್ಯಾಂಟೊ ಎಂದರೆ ಆಶಾವಾದಿ ಎಂದು ಅರ್ಥ. ಒಂದು ಜಗತ್ತಿಗೆ ಒಂದು ಭಾಷೆ ಇರಬೇಕು ಎಂಬುದು ಜ಼ಮೆನ್‌ಹಾಫ್‌ನ ಹಂಬಲವಾಗಿತ್ತು. ಆತ ಅದನ್ನು ಈಡೇರಿಸುವ ಕನಸು ಕಂಡ. ಈ ಉದ್ದೇಶದಿಂದ ತಾನು ನಿರ್ಮಿಸಿದ ಭಾಷೆಗೆ, ತಾನು ಬಳಸಿಕೊಂಡಿದ್ದ ಹೆಸರನ್ನೆ ಇಟ್ಟ.

ಆರಂಭದ ವರ್ಷಗಳಲ್ಲಿ ಈ ಭಾಷೆ ರಷ್ಯ, ಜರ್ಮನಿ, ಅಮೆರಿಕ ಸಂಯುಕ್ತ ಸಂಸ್ಥಾನ ಮೊದಲಾದ ದೇಶಗಳಲ್ಲಿ ನಿಧಾನವಾಗಿ ಪ್ರಚಾರಕ್ಕೆ ಬಂತು. ಈಗ ಲೋಕದ ಅನೇಕ ಕಡೆ ಪ್ರಸರಿಸಿದೆ. 1889ರಷ್ಟು ಹಿಂದೆಯೆ ಜರ್ಮನಿಯಲ್ಲಿ ಈ ಭಾಷೆಯ ಪತ್ರಿಕೆಯೊಂದು ಆರಂಭವಾಯಿತು. ಈ ಶತಮಾನದ ಆರಂಭದಲ್ಲಿ ಎಸ್ಪರ್ಯಾಂಟೊ ಚಳವಳಿ ಪ್ರಬಲವಾಯಿತು. ಅನೇಕ ಸಂಘ ಸಂಸ್ಥೆಗಳು ಈ ಭಾಷೆಯ ಪ್ರಚಾರಕ್ಕೆಂದೇ ಅಸ್ತಿತ್ವಕ್ಕೆ ಬಂದುವು. ಜಗತ್ತಿನಾದ್ಯಂತ ಸಾವಿರಾರು ಪುಸ್ತಕಗಳು ಎಸ್ಪರ್ಯಾಂಟೊ ಭಾಷೆಯಲ್ಲಿ ಪ್ರಕಟವಾಗಿವೆ. 65ಕ್ಕಿಂತಲೂ ಹೆಚ್ಚು ಭಾಷೆಗಳಿಂದ ಗ್ರಂಥಗಳು ಅನುವಾದಗೊಂಡಿವೆ. ನೂರಕ್ಕೂ ಹೆಚ್ಚು ನಿಯತ ಕಾಲಿಕಗಳು ಪ್ರಕಟವಾಗುತ್ತಿವೆ. ಅನೇಕ ರೇಡಿಯೋ ಕೇಂದ್ರಗಳು ಈ ಭಾಷೆಯಲ್ಲಿ ಕಾರ್ಯಕ್ರಮ ನಡೆಸಿಕೊಡುತ್ತಿವೆ. ಕೆನಡ ಮತ್ತು ಅಮೆರಿಕೆಯ ಹದಿನೈದಕ್ಕೂ ಹೆಚ್ಚಿನ ಕಾಲೇಜು ಹಾಗೂ ವಿಶ್ವವಿದ್ಯಾನಿಲಯಗಳಲ್ಲಿ ಎಸ್ಪರ್ಯಾಂಟೊ ಬೋಧನ ವಿಷಯವಾಗಿದೆ. ಹಲವು ಕುಟುಂಬಗಳಲ್ಲಿ ಇದನ್ನು ಮನೆಮಾತಾಗಿ ಸ್ವೀಕರಿಸಿರುವ ಉದಾಹರಣೆಗಳೂ ಇವೆ. ಒಂದನೆಯ ಮತ್ತು ಎರಡನೆಯ ಮಹಾಯುದ್ಧಗಳ ಕಾಲದಲ್ಲಿ ಎಸ್ಪರ್ಯಾಂಟೊವನ್ನು ತೀವ್ರ ಪ್ರಚಾರಮಾಧ್ಯಮವನ್ನಾಗಿಯೂ ಬಳಸಲಾಗಿತ್ತು. ಈ ಭಾಷೆಯ ನಿರ್ಮಾಪಕ ಹೊಸ ಹೊಸ ಪದಗಳನ್ನು ಸ್ವೀಕರಿಸಲು ಸಮ್ಮತಿಸಿದ್ದನೆ ಹೊರತು, ನಿಯಮಗಳನ್ನು ಬದಲಿಸಲು, ಸರಳಗೊಳಿಸಲು ಅಪೇಕ್ಷಿಸಿರಲಿಲ್ಲ. ಆದರೆ ಎಸ್ಪರ್ಯಾಂಟೊ ನಿಯಮಗಳನ್ನು ಇನ್ನೂ ಸುಲಭಗೊಳಿಸುವ ಪ್ರಯತ್ನಗಳು ನಡೆದೇ ಇವೆ. ಅದರ ಫಲವಾಗಿ ಕಾಲಕಾಲಕ್ಕೆ ಬೇರೆ ಭಾಷೆಗಳೇ ತಲೆ ಎತ್ತುವ ಅವಕಾಶವಿದೆ. ಇಡೊ ಇಂಥದೊಂದು ಭಾಷೆ.

ನಿರ್ಮಿತ ಭಾಷೆಗಳಲ್ಲೆಲ್ಲ ಎಸ್ಪರ್ಯಾಂಟೊ ನಿರ್ವಿವಾದವಾಗಿ ಅತ್ಯಂತ ಯಶಸ್ವಿಯಾದ, ಜನಪ್ರಿಯವಾದ ಭಾಷೆ. ಸರಳತೆ, ಸಂಕ್ಷಿಪ್ತತೆ, ಸೌಲಭ್ಯ ಹಾಗೂ ಕ್ರಮಬದ್ಧತೆಗಳೇ ಈ ಭಾಷೆಯ ಮುಖ್ಯ ಸೂತ್ರಗಳು. ನೋಡಿ —**ಅಂತರರಾಷ್ಟ್ರೀಯ ಭಾಷೆ.** (ಎ.ಜಿ.)

**ಎಸ್ಪೋಸ್ಟೊ :** ಸುಂದರವಾದ ಒಂದು ಕಳ್ಳಿಜಾತಿ, ಪೆರು ಮತ್ತು ಎಕ್ವಡಾರ್‌ಗಳ ಮೂಲವಾಸಿ. ಪೆರು ದೇಶದ ಸಸ್ಯಶಾಸ್ತ್ರಜ್ಞನಾದ ನಿಕೊಲಾಸ್ ಇ. ಎಸ್ಪೋಸ್ಟೊ ಎಂಬುವನ ಜ್ಞಾಪಕಾರ್ಥವಾಗಿ ಈ ಹೆಸರು. ಗಿಡದ ಮೇಲೆ ಉಣ್ಣೆಯಂತಿರುವ ಬಿಳಿಯ ಬಣ್ಣದ ನಾರು ಇರುವುದರಿಂದ ಸುಂದರವಾಗಿ ಕಾಣುತ್ತದೆ. ಮನೆಗಳಲ್ಲಿ ಇದನ್ನು ಅಲಂಕಾರ ಸಸ್ಯವಾಗಿ ಬೆಳೆಸುತ್ತಾರೆ. ಬೆಳೆದ ಗಿಡ ಸುಮಾರು 3 ಅಡಿ ಎತ್ತರವಿರುತ್ತದೆ. ಮೇಲು ಭಾಗ 20 ರಿಂದ 25 ದಿಣ್ಣೆಗಳಿಂದ ಕೂಡಿದ್ದು ಹಿಮಬಿಳುಪಿನ ನಾರಿನಿಂದ ಆವೃತವಾಗಿದೆ. ಗಂಟುಗಳಲ್ಲಿ ದೃಢವಾದ ಮುಳ್ಳುಗಳಿವೆ. ಚಕ್ರಾಕಾರದ ನಸುಗೆಂಪು ಬಣ್ಣದ ಹೂಗಳು ಪ್ರತಿನಿತ್ಯ ಕಾಣಿಸಿಕೊಳ್ಳುತ್ತವೆ. ಅಂಡಾಶಯ ಬಹು ಸಣ್ಣ ಬಿಲ್ಲೆಗಳಿಂದ ಆವೃತವಾಗಿದ್ದು, ಇವುಗಳ ಕಂಕುಳಲ್ಲಿ ಉದುರಿ ಹೋಗುವ ಬಿಳಿಯ ಬಣ್ಣದ ನಾರುಗಳಿವೆ. ಹೆಚ್ಚು ರಸದಿಂದ ಕೂಡಿರುವ ಬಿಳುಪು ಅಥವಾ ಕೆಂಪು ಬಣ್ಣದ ಹಣ್ಣಿನಲ್ಲಿ ಕಪ್ಪಾದ ಬೀಜಗಳಿವೆ. (ಬಿ.ಎ.ಸಿ.)

**ಎಸ್ಮಾರ್ಕ್, ಜೊಹಾನ್ ಫ್ರೀಡ್ರೀಕ್ ಆಗಸ್ಟ್ ವಾನ್ :** 1823–1908. ಕಾಳಗ ಕಳದಲ್ಲಿ ಮೊದಲ ನೆರವಿನ ಕಟ್ಟುಪಟ್ಟಿಯ (ಫಸ್ಟ್ ಎಯ್ಡ್ ಬ್ಯಾಂಡೇಜ್) ಬಳಕೆ ಜಾರಿಗೆ ತಂದು, ಸೇನೆಯ ಶಸ್ತ್ರವೈದ್ಯದಲ್ಲಿ ಹೆಸರಾಗಿದ್ದ ಜರ್ಮನಿಯ ಶಸ್ತ್ರವೈದ್ಯ. ಕೀಲ್, ಗಾಟಿಂಜನ್ ವಿಶ್ವವಿದ್ಯಾನಿಲಯಗಳಲ್ಲಿ ವೈದ್ಯ ಪದವಿಧರನಾಗಿ (1848), ಡೆನ್ಮಾರ್ಕಿನೊಡನೆ ನಡೆದ ಯುದ್ಧದಲ್ಲಿ ಸೇರಿದ್ದಾಗ ಡೇನರ ಸೆರೆಗೆ ಸಿಕ್ಕಿದ್ದ. ಯುದ್ಧ ಮುಗಿದ ಮೇಲೆ ಕೀಲಿಗೆ ಹಿಂದಿರುಗಿ ಶಸ್ತ್ರವೈದ್ಯ ಪ್ರಾಧ್ಯಾಪಕನಾದ (1857). ಡೆನ್ಮಾರ್ಕ್, ಆಸ್ಟ್ರಿಯ, ಫ್ರಾನ್ಸ್‌ಗಳ ಎದುರು ನಡೆದ ಕದನಗಳಲ್ಲಿ ಸುಮಾರು 6-7 ವರ್ಷ ಸರ್ಜನ್ ಜನರಲ್‌ನ ಪದವಿಯಲ್ಲಿ ಸೇನಾಸೇವೆಯಲ್ಲಿದ್ದ. ಅವಯವ ಒಂದರ ತುದಿಯಿಂದ ಮುಂಡದ ಕಡೆಗೆ, ಹಿಗ್ಗುವ ಅಗಲದ ಕಟ್ಟುಪಟ್ಟಿಯನ್ನು ಬಿಗಿಯಾಗಿ ಸುತ್ತುತ್ತಾ ಬಂದಾಗ ಅದರಲ್ಲಿನ ರಕ್ತವೆಲ್ಲ ಕಳೆದಂತಾಗಿಸುವುದೇ ಎಸ್ಮಾರ್ಕ್‌ನ ಕಟ್ಟುಪಟ್ಟಿಯ ಉಪಯೋಗ. ಆಮೇಲೆ ಒಂದು ತಿರುಚೊತ್ತನ್ನು (ಟೂರ್ನಿಕೆ) ಬಿಗಿದ ಮೇಲೆ, ಕಟ್ಟುಪಟ್ಟಿಯನ್ನು ಬಿಚ್ಚಿದರೂ ಅವಯವಕ್ಕೆ ರಕ್ತ ಹಿಂದಿರುಗದು. ಆಗ ಶಸ್ತ್ರಕ್ರಿಯೆ ಮಾಡುವುದು ಸುಲಭ. ಈ ವಿಧಾನವನ್ನು

ಎಸ್ಮಾರ್ಕ್ ಯುದ್ಧಕಾಲದಲ್ಲಿ (1873) ಕಂಡುಹಿಡಿದ. ಸೇನೆಯಲ್ಲಿ ಕೈಗೊಳ್ಳಬೇಕಾದ ಶಸ್ತ್ರಕ್ರಿಯಾ ವಿಧಾನಗಳನ್ನು ಪುಸ್ತಕದಲ್ಲಿ ವಿವರವಾಗಿ ಬರೆದ. ಮೊದಲ ನೆರವನ್ನು ಕೊಡುವ ತರಬೇತುಶಾಲೆಗಳನ್ನು ಸೈನಿಕರ ಮತ್ತು ಖಾಸಗಿ ಜನರ ಉಪಯೋಗಕ್ಕಾಗಿ ತೆರೆದ. ಮೊದಲ ನೆರವಿನ ಅವನ ಕೈಪಿಡಿಗಳು ಒಳ್ಳೆಯವೆಂದು ಹೆಸರಾಗಿದ್ದವು. ಚಕ್ರವರ್ತಿ ಇಮ್ಮಡಿ ವಿಲಿಯಂನ ರಾಜಕುಮಾರಿಯನ್ನು ಮದುವೆಯಾದ ಮೇಲೆ ಅವನಿಗೆ ರಾಜಮನ್ನಣೆ ಸಿಕ್ಕಿತು (1877). (ಡಿ.ಎಸ್.ಎಸ್.)

**ಎಹ್‌ರೆನ್‌ಬರ್ಗ್, ಇಲ್ಯ ಗ್ರಿಗೊರ್‌ಯೆವಿಚ್ :** 1891–1967. ರಷ್ಯದ ಕಾದಂಬರಿಕಾರ ಮತ್ತು ವಿಡಂಬನಕಾರ. ಹುಟ್ಟಿದ್ದು ಯೆಹೂದ್ಯ ಕುಟುಂಬದಲ್ಲಿ. 1910ರಲ್ಲಿ ಸಾಹಿತ್ಯರಚನೆಗೆ ಕೈಹಾಕಿದ. 1917ರಲ್ಲಿ ಬಾಲ್‌ಷೆವಿಕ್ ಪಂಗಡಕ್ಕೆ ವಿರೋಧಿಯಾಗಿದ್ದವನು ಕೆಲ ಕಾಲಾನಂತರ ಅದೇ ಪಂಗಡವನ್ನು ಸೇರಿ ಪ್ಯಾರಿಸಿಗೆ ಹೋದ. ಇಲ್ಲಿ ಸಂಕೇತವಿಧಾನದ ಕಲೆಗಾರರ ಪರಿಚಯವಾಯಿತು. ಅಲ್ಲಿದ್ದಾಗ ಜ್ಯೂಲಿಯ ಜ್ಯೂರೆನ್‌ಷಿಯೋ ಮತ್ತು ಅವನ ಶಿಷ್ಯರ ಅಸಾಧಾರಣ ಸಾಹಸಗಳು ಎಂಬ ತೀಕ್ಷ್ಣವಾದ ವಿಡಂಬನ ಗ್ರಂಥವನ್ನು ರಚಿಸಿ (1930) ಸಮಕಾಲೀನ ನಾಗರಿಕತೆಯನ್ನು ಹಾಸ್ಯ ಮಾಡಿದ. ಇದೇ ಇವನ ಅತ್ಯುತ್ತಮ ಕೃತಿ ಎಂದು ಕೆಲವರ ಅಭಿಪ್ರಾಯ. ಈತ ಜನಪ್ರಿಯ ಪತ್ರಿಕಾ ಲೇಖಕನೂ ಆಗಿದ್ದ. ಪ್ರೊಟೊಕ್ಕಿ ಕಿರುದಾರಿಯಲ್ಲಿ (1941) ಎಂಬ ಕಾದಂಬರಿಯಲ್ಲಿ ಕರುಣರಸವೇ ಪ್ರಧಾನವಾಗಿದೆ. ಅವ್ಯವಸ್ಥೆಯಿಂದ ಹೊರಕ್ಕೆ (1933) ಎಂಬುದು ತನ್ನ ಜಗತ್ತಿನಿಂದ ದೂರನಾದ ಬೌದ್ಧಿಕ ವ್ಯಕ್ತಿಯ ಅಂತರಂಗದ ಸಂಕಟವನ್ನು ನಿರೂಪಿಸುತ್ತದೆ. ರಷ್ಯದ ಕೈಗಾರಿಕಾ ಯೋಜನೆಯಿಂದ ಹೊಸದೊಂದು ಜಗತ್ತು ಸೃಷ್ಟಿಯಾಗುತ್ತದೆ ಎನ್ನುವ ನೀತಿಯನ್ನು ಇದು ಸಾರುತ್ತದೆ. ಪಕ್ಷದ ನಿಯಮಗಳಿಗೆ ಬದ್ಧವಾಗಿ ತಯಾರಾದ ರಷ್ಯನ್ ಸಾಹಿತ್ಯ ತನ್ನ ಸತ್ತ್ವವನ್ನು ಕಳೆದುಕೊಂಡಿದೆ ಎಂದು ಸ್ಟ್ಯಾಲಿನ್ನನ ಯುಗದ ಅನಂತರ ಟೀಕೆ ಮಾಡಿದವರಲ್ಲಿ ಈತ ಪ್ರಮುಖ. ಅದುವರೆಗೆ ಸ್ಟ್ಯಾಲಿನ್ ಮತ್ತು ಕಮ್ಯುನಿಸ್ಟ್ ವರ್ಗದ ತೀವ್ರ ಪಕ್ಷಪಾತಿಯಾಗಿದ್ದ ಈತ 'ಸಾಮಾಜಿಕ ಪುನರ್‌ರಚನೆಗಳನ್ನು ನಿರೂಪಿಸುವುದು ಸಾಹಿತ್ಯಕ್ಕೆ ಮುಖ್ಯವಲ್ಲ, ಮಾನವ ವ್ಯಕ್ತಿಗಳ ಒಳಜಗತ್ತನ್ನು ಅದು ಸೃಷ್ಟಿಸಬೇಕು' ಎಂದು ಸಾರಿ, ಇಂಥ ಪುಸ್ತಕಗಳನ್ನು ಅಪ್ಪಣೆಯ ಪ್ರಕಾರ ರಚಿಸಲು ಸಾಧ್ಯವಿಲ್ಲ; ಇವು ತಾವೇ ಸೃಷ್ಟಿಯಾಗಬೇಕು. ಆನ ಕರಿನೀನವನ್ನು ಬರೆಯುವಂತೆ ಟಾಲ್‌ಸ್ಟಾಯ್‌ಗೆ ಅಪ್ಪಣೆ ಕೊಡುವುದನ್ನು ಊಹಿಸಲು ಸಾಧ್ಯವೇ?'—ಎಂದು ಪ್ರಶ್ನಿಸಿದ. ಸ್ಟ್ಯಾಲಿನನ ಕಾಲದ ಅನಂತರ ರಷ್ಯದಲ್ಲಿ ಕಂಡುಬಂದ ಹೊಸ ವಾತಾವರಣದಲ್ಲಿ ಸೃಷ್ಟಿಯಾದ ಕಾದಂಬರಿಗಳಲ್ಲಿ ಇವನ ಹಿಮದ ಕರಗುವಿಕೆ ( 1954) ಮುಖ್ಯವಾದುದು. ಇದರ ತಾತ್ಪರ್ಯ ಇಷ್ಟು: ವ್ಯಕ್ತಿತ್ವಕ್ಕೆ ಮಹತ್ತ್ವ ನೀಡಬೇಕು. ರಾಗದ್ವೇಷಗಳನ್ನು ನಿಯಮಗಳಿಗನುಗುಣವಾಗಿ ವಿಭಾಗಿಸಿ ನಿರೂಪಿಸುವುದು ಸಾಧ್ಯವಿಲ್ಲ. ಪ್ರೇಮ, ಅನುಕಂಪ, ಭಯ, ಅಸೂಯೆ ಇವನ್ನು ಅನುಭವಿಸಿ ಅರಿಯಬೇಕು. ಈ ಕಿರುಕಾದಂಬರಿಯಲ್ಲಿ ಪ್ರತಿ ಪಾತ್ರದ ಒಳ ಜಗತ್ತೇ ವಸ್ತು; ಒಂದೊಂದು ಪಾತ್ರದ ದೃಷ್ಟಿಯಿಂದ ಒಂದೊಂದು ಪ್ರಸಂಗವನ್ನು ನಿರೂಪಿಸಲಾಗಿದೆ. ಈ ಕಾದಂಬರಿಯ ಮುಂದಿನ ಭಾಗ ವಸಂತ. ಈ ಕಾದಂಬರಿಯಲ್ಲಿ ಸ್ಟ್ಯಾಲಿನ್ ಅನಂತರದ ಯುಗದ ಪ್ರಗತಿಯಲ್ಲಿ ಕವಿ ವಿಶ್ವಾಸ ಸೂಚಿಸುತ್ತಾನೆ. ತನ್ನ ಆತ್ಮವೃತ್ತದಲ್ಲಿ 1951ರ ದಶಕದ ಉತ್ತರಾರ್ಧದ ವರೆಗಿನ ಕಾಲವನ್ನು ಚಿತ್ರಿಸುತ್ತಾನೆ. (ಎಲ್.ಎಸ್.ಎಸ್.)

**ಎಳಂದೂರು ಹರೀಶ್ವರ :** 1606. ವೀರಶೈವ ಕವಿ. ಮೈಸೂರು ಜಿಲ್ಲೆಯ ಎಳಂದೂರು ಸಿಂಹಾಸನಾಧೀಶ್ವರನಾದ ಗುರು ಹರೀಶ್ವರದೇವರ ಮೊಮ್ಮಗ, ತೋಂಟದಾರ್ಯನ ಮಗ. ಪ್ರಭುದೇವರ ಪುರಾಣ ಇವನ ಕಾವ್ಯ. ಇದು ವಿವಿಧ ಷಟ್ಪದಿಗಳಲ್ಲಿ ರಚಿತವಾಗಿದೆ. 9 ಸಂಧಿ, 1497 ಪದ್ಯಗಳಿರುವ ಈ ಕೃತಿಯಲ್ಲಿ ಅಲ್ಲಮ ಪ್ರಭುದೇವರ ಸಮಗ್ರಚರಿತ್ರೆ ನಿರೂಪಿತವಾಗಿದೆ. ಕಾವ್ಯದ ಬಂಧ ಪ್ರೌಢವಾಗಿದೆ. ಕವಿಯೇ ಇದನ್ನು ಪ್ರಾಸರತ್ನಾಕರ ಎಂದು ಕರೆದಿದ್ದಾನೆ. ಲೌಕಿಕ ಪಾರಮಾರ್ಥಿಕ ಉದಾಹರಣೆಗಳಿಂದ ಚರಿತ್ರೆಯನ್ನು ಅತ್ಯಂತ ರಸವತ್ತಾದ ಕಾವ್ಯವನ್ನಾಗಿ ಮಾಡಿದ್ದಾನೆ. ತನ್ನ ಗ್ರಂಥವನ್ನು ವಿಶ್ವಾವಸು ಜ್ಯೇಷ್ಠ ಶುದ್ಧ ಪಾಡ್ಯದಲ್ಲಿ ಆರಂಭಿಸಿ ಪರಾಭವ ಜ್ಯೇಷ್ಠ ಶುದ್ಧ ಬಹುಳ ದಶಮಿಯಲ್ಲಿ ಮುಗಿಸಿದಂತೆ ಹೇಳಿದ್ದಾನೆ. ಇದರಿಂದ ಈತನ ಕಾಲವನ್ನು ಕ್ರಿ.ಶ. 1486 ಎಂದು ಕೆಲವರೂ ಕ್ರಿ.ಶ. 1606 ಎಂದು ಮತ್ತೆ ಕೆಲವರೂ ಹೇಳುತ್ತಾರೆ,

ಕಾವ್ಯ ಪ್ರಾರಂಭದಲ್ಲಿ ಪರಮೇಶ್ವರ, ವೃಷಭ, ಭೃಂಗೀಶ, ವೀರಭದ್ರ, ಸೊನ್ನಲಿಗೆಯ ರಾಮ, ತೋಂಟದ ಸಿದ್ಧಲಿಂಗಯತಿ, ಕೊಟ್ಟೂರ ಬಸವೇಶ್ವರ, ಗುರುಸಿದ್ಧವೀರ—ಇವರನ್ನು ಕವಿ ಸ್ತುತಿಸಿದ್ದಾನೆ. ತನ್ನ ಗುರುವಾದ ಸಿದ್ಧವೀರೇಶ್ವರ ಪ್ರಭು ಕೃತಿಯನ್ನು ರಚಿಸಲು ಆಶೀರ್ವದಿಸಲೆಂದು ಬೇಡಿದ್ದಾನೆ. ಕಾವ್ಯಮಧ್ಯದಲ್ಲಿ ಕೆಲವೆಡೆ ತನ್ನನ್ನು ಹರೀಶ್ವರ ದೇವ, ಹರಿದೇವ, ಹರೀಶ್ವರಾಚಾರ್ಯ ಎಂದು ಕರೆದುಕೊಂಡಿದ್ದಾನೆ. ಪೂರ್ವ ಕವಿಗಳಲ್ಲಿ ಕೆರೆಯ ಪದ್ಮರಸ, ಪಾಲ್ಕುರಿಕೆ ಸೋಮನಾಥ, ಪಂಡಿತದೇವ, ಗುಬ್ಬಿಯ ಮಲ್ಲಣ್ಣ, ಜಕ್ಕಣಾರ್ಯ, ಮಯೂರ, ಬಲ್ಲಟ, ಭವಭೂತಿ, ಬಿಲ್ಹಣ, ಮಲ್ಹಣ, ಹಂಪೆಯ ಹರಿದೇವ—ಇವರನ್ನು ಸ್ತುತಿಸಿದ್ದಾನೆ. (ಎಸ್.ಬಿ.ಎಸ್.)

**ಎಟುತ್ತಚ್ಛನ್:** ಹದಿನೇಳನೆಯ ಶತಮಾನ. ಮಲೆಯಾಳಂ ಭಾಷೆಯಲ್ಲಿ ಇಂದಿಗೂ ಬಹುಜನಪ್ರಿಯವಾಗಿರುವ ರಾಮಾಯಣ ಮಹಾಭಾರತಗಳನ್ನು ಬರೆದಿರುವ ಪ್ರಸಿದ್ಧ ಕವಿ. ತುಂಜತ್ತು ಎಟುತ್ತಚ್ಛನ್ ಈತನ ಪೂರ್ವ ನಾಮ. ಈತನ ಶೈಲಿಯಲ್ಲಿ ಒಂದು ರೀತಿಯ ಸುವರ್ಣ ಮಾಧ್ಯಮ ಕಾಣುತ್ತದೆ. ತನ್ನ ಹಿಂದೆ, ಎಂದರೆ ಹದಿನಾರನೆಯ ಶತಮಾನದಲ್ಲಿ, ಕವಿಗಳು ತೀರ ಮಲೆಯಾಳದ ಸೊಗಡನ್ನುಳ್ಳ ಜಾನಪದ ಗೀತ ಮಾದರಿಗಳಲ್ಲಿ ಬರೆಯುತ್ತಿದ್ದರು. ಇಲ್ಲವೆ ಸಂಸ್ಕೃತ ಪದ ವೃತ್ತ ಭೂಯಿಷ್ಠವಾದ ಮಣಿಪ್ರವಾಳ ಶೈಲಿಯಲ್ಲಿ ಬರೆಯುತ್ತಿದ್ದರು. ಆದರೆ ಎಟುತ್ತಚ್ಛನ್ ಮಲೆಯಾಳ ಮತ್ತು ಸಂಸ್ಕೃತಗಳ ಹಾಳತವಾದ ಮಿಶ್ರಣವನ್ನು ದ್ರಾವಿಡ ಧಾಟಿಗಳಿಗೆ ಹೊಂದಿಸುವ ಪ್ರಯೋಗವನ್ನು ಯಶಸ್ವಿಯಾಗಿ ಮಾಡಿದ್ದಾನೆ. ಕೇರಳದ ಜಾನಪದ ಗೀತೆಗಳಾದ ವಡಕ್ಕನ್ ಪಾಟ್ಟುಗಳು (ಬಡಗಣ ಗೀತೆಗಳು) ಈತನ ಮೇಲೆ ಸಾಕಷ್ಟು ಪ್ರಭಾವ ಬೀರಿವೆ.

ಈತನ ರಾಮಚರಿತಂ ಕಾವ್ಯ ಭಕ್ತಿಸಾಹಿತ್ಯದ ಮೇರುಕೃತಿಯಾಗಿಯೇ ಇಂದಿಗೂ ಉಳಿದಿದೆ. ತನ್ನ ಹೃದಯದಲ್ಲಿ ಉಕ್ಕುತ್ತಿದ್ದ ಭಕ್ತಿಭಾವವನ್ನು ಪ್ರಕಟಪಡಿಸಲು ಅದಕ್ಕೆ ಅನುಯೋಜ್ಯವಾದ ಇತಿವೃತ್ತಗಳನ್ನು ಅಧ್ಯಾತ್ಮರಾಮಾಯಣದಲ್ಲೂ ಮಹಾಭಾರತದಲ್ಲೂ ಕಂಡುಕೊಂಡು, ಮೂಲಗ್ರಂಥಗಳನ್ನು ಅವಲಂಬಿಸಿ ಸ್ವಕೀಯವೂ ಸ್ವತಂತ್ರವೂ ಆದ ರೀತಿಯಲ್ಲಿ ನೂತನ ಗ್ರಂಥಗಳನ್ನು ಈ ಕವಿ ರಚಿಸಿದ್ದಾನೆ. ಭಕ್ತಿದ್ಯೋತಕವಾದ ಭಾಗಗಳಂತೂ ಗಾನಯೋಗ್ಯವಾಗಿದ್ದು ಮೈಮರೆಸುವಂತಿವೆ. ಭಕ್ತಿಪ್ರಸ್ಥಾನ, ಕಿಳಿಪಾಟ್ಟು ಪ್ರಸ್ಥಾನಗಳನ್ನು ಪುನರುದ್ಧರಿಸಿದವನೆಂದು ಸಾಹಿತ್ಯ ಚರಿತ್ರೆಯಲ್ಲಿ ಈತ ಖ್ಯಾತನಾಗಿದ್ದಾನೆ. ಭಕ್ತಸಾಹಿತ್ಯದಲ್ಲಿ ಈತನಿಗೆ ತುಳಸೀದಾಸ, ಜಯದೇವ ಮೊದಲಾದ ಮಹಾಕವಿಗಳೊಡನೆ ಸಮಾನಪಟ್ಟವಿದೆಯೆಂದಲ್ಲಿ ಅತಿಶಯೋಕ್ತಿಯಾಗದು.

ರಾಮಾಯಣ, ಮಹಾಭಾರತಗಳಲ್ಲದೆ ಇನ್ನೂ ಕೆಲವು ಕೃತಿಗಳನ್ನು ಈತ ಬರೆದನೆನ್ನಲಾಗಿದೆ. ಅವುಗಳ ಪೈಕಿ ಮಲೆಯಾಳ ಭಾಗವತದ ಮೊದಲಿನ ಒಂಬತ್ತು ಸ್ಕಂಧಗಳು, ಉತ್ತರ ರಾಮಾಯಣ, ಹರಿನಾಮ ಕೀರ್ತನಂ, ಚಿಂತಾರತ್ನಂ–ಈ ಕೃತಿಗಳನ್ನು ಅವನವೆಂದು ಹೇಳಬಹುದು. ಆದರೆ ಇವಾವುವೂ ರಾಮಯಣ, ಮಹಾಭಾರತಗಳ ಮಟ್ಟಕ್ಕೆ ಮುಟ್ಟುವಂಥವಲ್ಲ. ಭಾಗವತಂ ಕಿಳಿಪಾಟ್ಟು, ರಾಮಾಯಣಂ ಇರುಪತ್ತಿನಾಲು ವೃತ್ತಂ, ದೇವೀಮಾಹಾತ್ಮ್ಯಂ ಮುಂತಾದವನ್ನು ಈತನೇ ಬರೆದನೆಂಬ ವಿಷಯದಲ್ಲಿ ಅಭಿಪ್ರಾಯಭೇದವಿದೆ. ಅಧ್ಯಾತ್ಮ ರಾಮಾಯಣದಲ್ಲಿ ತತ್ತ್ವೋಪದೇಶಕ್ಕೂ ಭಾಗವತದಲ್ಲಿ ಕೃಷ್ಣಪಾರಮ್ಯ ಸ್ಥಾಪನೆಗೂ ಕವಿ ಆದ್ಯಗಮನವಿತ್ತಿದ್ದಾನೆ.

ಮಲೆಯಾಳಂ ಭಾಷೆಗೆ ಒಂದು ಲಿಪಿಸಮುಚ್ಚಯವನ್ನು ಒದಗಿಸಿದ ಕೀರ್ತಿಯನ್ನೂ ಎಟುತ್ತಚ್ಛನಿಗೆ ಕೆಲವರು ವಿದ್ವಾಂಸರು ಆರೋಪಿಸಿದ್ದಾರೆ. ಈತನ ಕೃತಿಗಳ ಮೂಲಕ ಮಲೆಯಾಳಂ ಭಾಷೆಯ ಸಾಹಿತ್ಯಕ್ಕೆ ಉಂಟಾದ ಅಭಿವೃದ್ಧಿಯನ್ನು ಅನುಲಕ್ಷಿಸಿ ಇಂಥ ವಾದ ಹುಟ್ಟಿಕೊಂಡಿದೆಯೆಂದು ಹೇಳಬಹುದು, ಅಷ್ಟೆ. (ಕೆ.ಕೆ.ಎಸ್.)

**ಎಳೆಗಳು :** ಉಡುಪಿನ ಸಕಲ ಪ್ರಕಾರಗಳಲ್ಲಿಯೂ ಬಳಸಲಾಗುವ ನೈಸರ್ಗಿಕ ಮತ್ತು ಕೃತಕ ರಚನೆಗಳು (ಫೈಬರ್ಸ್). ಎಳೆ ಹೇಗೋ ಬಟ್ಟೆ ಹಾಗೆ ಎಂಬ ರೂಢಿಯ ಮಾತು ಬಟ್ಟೆಯ ಬಾಳ್ವಿಕೆ, ಹಿತ, ಅಂದಗಳಲ್ಲೆಲ್ಲ ಎಳೆಯ ಪಾತ್ರವನ್ನು ಎತ್ತಿಹಿಡಿದಿದೆ. ವಸ್ತ್ರೋದ್ಯಮದಲ್ಲಿ ಅಲ್ಲದೆ ಇತರ ರಂಗಗಳಲ್ಲಿಯೂ ಎಳೆಗಳಿಗೆ ಉಪಯೋಗ ಉಂಟು. ಎಳೆಗಳ ಆಕರಗಳನ್ನು ಅವಲಂಬಿಸಿ ಎಳೆಗಳನ್ನು ಮೂರು ವಿಭಾಗಗಳಾಗಿ ವಿಂಗಡಿಸಬಹುದು—1 ನೈಸರ್ಗಿಕ, 2 ಅರ್ಧ ಕೃತಕ ಅಥವಾ ಪರಿವರ್ತಿತ, 3 ಪೂರ್ಣ ಕೃತಕ.

ಹತ್ತಿ, ರೇಷ್ಮೆ, ಉಣ್ಣೆ ಮೊದಲಾದವು ನೈಸರ್ಗಿಕ ಎಳೆಗಳ ಆಕರಗಳು. ರೇಯಾನ್ ಒಂದು ಬಗೆಯ ಪರಿವರ್ತಿತ ಎಳೆ. ನೈಸರ್ಗಿಕ ಆಕರಗಳಾದ ಸೆಲ್ಯುಲೋಸ್ ಅಥವಾ ಜೀವಜನ್ಯ ಸಸಾರಜನಕಗಳನ್ನು ಯಾವುದಾದರೊಂದು ಲೀನಕಾರಿಯಲ್ಲಿ ವಿಲೀನಮಾಡಿ ದೊರೆಯುವ ದ್ರಾವಣದಿಂದ ಎಳೆಗಳನ್ನೆಳೆಯುವುದರಿಂದ ಪರಿವರ್ತಿತ ಎಳೆಗಳು ದೊರೆಯುತ್ತವೆ. ನೈಲಾನ್, ಟೆರಿಲೀನ್, ಆರ್ಲಾನ್ ಮೊದಲಾದ ಹೆಸರುಗಳಿಂದ ಪರಿಚಿತವಾಗಿರುವ ಅನೇಕ ಸರಪಳಿ ಪಾಲಿಮರುಗಳು ಕೃತಕ ಎಳೆಗಳೆನ್ನಿಸಿಕೊಳ್ಳುತ್ತವೆ.

ಮೇಲೆ ಉದಾಹರಿಸಿದ ಎಳೆಗಳೆಲ್ಲವೂ ಆರ್ಗ್ಯಾನಿಕ್ ಬಗೆಯವು. ಇನಾರ್ಗ್ಯಾನಿಕ್ ವಸ್ತುಗಳೂ ಎಳೆಗಳ ರೂಪದಲ್ಲಿರಬಹುದು. ಕಲ್ನಾರು ಮತ್ತು ಆ ಬಗೆಯ ಅನೇಕ ಸಿಲಿಕೇಟುಗಳು ನಿಸರ್ಗದಲ್ಲಿ ಎಳೆಗಳ ರೂಪದಲ್ಲಿರುತ್ತವೆ; ಇಲ್ಲವೇ ಅವನ್ನು ಅನಂತರ ಎಳೆಗಳಾಗಿ ಪರಿವರ್ತಿಸಬಹುದು. ಉಕ್ಕು, ಅನೇಕ ಲೋಹಗಳು, ಸಿಲಿಕ ಮತ್ತು ಗಾಜುಗಳನ್ನೂ ಎಳೆಗಳಾಗಿ ಪರಿವರ್ತಿಸಬಹುದು.

**ಎಳೆಗಳ ಗುಣಲಕ್ಷಣಗಳು :** ಎಳೆಗಳ ರಚನೆಯನ್ನು ಮೊಟ್ಟಮೊದಲು ಪರೀಕ್ಷಿಸಲಾಗುತ್ತದೆ: ರೇಷ್ಮೆಯನ್ನುಳಿದ ಸಹಜ ಎಳೆಗಳಲ್ಲಿ ಈ ಪ್ರತಿ ಎಳೆಯ ಉದ್ದ ಪರಿಮಿತಿ ಮತ್ತು ಕೇವಲ ಹಲವು ಅಂಗುಲಗಳಷ್ಟಿರುತ್ತದೆ. ಈ ಬಗೆಯ ಎಳೆಗಳ ನಯವೂ (ಫೈನ್‌ನೆಸ್) ಪರಿಮಿತ. ಕೃತಕ ಎಳೆಗಳನ್ನು ಅಪರಿಮಿತ ಉದ್ದದ ಅವಿಚ್ಛಿನ್ನ ತಂತುಗಳಾಗಿ ಪಡೆಯಬಹುದು. ಅಷ್ಟೇ ಅಲ್ಲದೆ ಅವನ್ನು ನೈಸರ್ಗಿಕ ಎಳೆಗಳಿಗಿಂತಲೂ ನಯವಾದ ತಂತುಗಳಾಗಿ ಪಡೆಯಬಹುದು.

ಅಡ್ಡಕೊಯ್ತಗಳ ಪರಿಶೀಲನೆಯಿಂದ ಒಂದೊಂದು ಎಳೆಯ ರಚನೆಯೂ ಒಂದೊಂದು ಬಗೆ ಎಂದು ತಿಳಿದಿದೆ. ನೈಲಾನ್ ಮತ್ತು ಹಲವು ಬಗೆಯ ರೇಯಾನು ಗಳ ಅಡ್ಡಕೊಯ್ತ ವರ್ತುಲಾಕಾರ; ರೇಷ್ಮೆಯ ಎಳೆಗಳ ಅಡ್ಡಕೊಯ್ತ ತ್ರಿಕೋನಾ ಕಾರ; ಲಿನನ್ ಬಟ್ಟೆಯನ್ನು ತಯಾರಿಸಲಾಗುವ ಅಗಸೆ ನಾರಿನ ಅಡ್ಡಕೊಯ್ತ ಪಂಚ ಬಾಹು ಆಕಾರ; ಹತ್ತಿಯ ಎಳೆ ಪೊಳ್ಳಾದ ಪಟ್ಟಿ ಆಕಾರ. ಹೀಗೆ ವಿವಿಧ ಎಳೆಗಳ ಅಡ್ಡಕೊಯ್ತಗಳಿಗೆ ವಿವಿಧ ಆಕಾರಗಳಿರುವುದರಿಂದ ಅಡ್ಡಕೊಯ್ತಗಳ ಪರೀಕ್ಷೆಯಿಂದ ಎಳೆಗಳನ್ನು ಗುರುತು ಹಿಡಿಯಬಹುದು. ಇಂಥ ಪರೀಕ್ಷೆಯಲ್ಲಿ ಸೂಕ್ಷ್ಮದರ್ಶಕದ ನೆರವು ಅನಿವಾರ್ಯ.

ಯಾವುದೊಂದು ಬಗೆಯ ಅಡ್ಡಕೊಯ್ತ ಏಕಪ್ರಕಾರವಾಗಿರಬೇಕಾದುದರ ಅಗತ್ಯ ನೂಲುವಾಗ, ನೇಯುವಾಗ, ಹೆಣೆಯುವಾಗ ಮತ್ತು ಬಣ್ಣಹಾಕುವಾಗ ಕಂಡುಬರು ತ್ತದೆ. ಉತ್ಪನ್ನ ತಯಾರಿಸಿದಾಗ ಅದರ ಒಪ್ಪ ಮತ್ತು ಅದರ ಹೊರಸ್ವರೂಪ ಗಳು ಎಳೆಗಳ ಏಕಪ್ರಕಾರತೆಯನ್ನು ಅವಲಂಬಿಸಿರುತ್ತದೆ.

ಯಾವ ಬಳಕೆಗೆ ಯಾವ ಎಳೆಯನ್ನುಪಯೋಗಿಸಬೇಕೆಂದು ನಿರ್ಧರಿಸುವಾಗ ಹಲವು ಯಾಂತ್ರಿಕ ಗುಣಗಳ ಪರಿಶೀಲನೆ ಅಗತ್ಯ. ಧಾರಣ ಸಾಮರ್ಥ್ಯ (ಟೆನ್ಸೈಲ್ ಸ್ಟ್ರೆಂತ್), ಆಘಾತ ನಿರೋಧಶಕ್ತಿ (ಇಂಪ್ಯಾಕ್ಟ್ ರೆಸಿಸ್ಟೆನ್ಸ್), ಶ್ರಮನಿರೋಧಶಕ್ತಿ (ಫೆಟೀಗ್ ರೆಸಿಸ್ಟೆನ್ಸ್), ಘರ್ಷಣಶಕ್ತಿ (ಅಬ್ರೇಶನ್ ರೆಸಿಸ್ಟೆನ್ಸ್), ಸ್ಥಿತಿಸ್ಥಾಪಕತೆ, ಮೃದುತ್ವ ಇತ್ಯಾದಿ ಈ ಗುಣಗಳು. ಇವನ್ನು ನೈಸರ್ಗಿಕ ಸ್ಥಿತಿಯಲ್ಲಿದ್ದಾಗ ಎಳೆಗಳು ಬಾಗಿದಾಗ, ತಿರುಚಿದಾಗ, ಒದ್ದೆಯಾದ ಸ್ಥಿತಿಯಲ್ಲಿದ್ದಾಗ ಅಳೆಯಲಾಗುತ್ತದೆ.

ಉಷ್ಣ, ವಿದ್ಯುತ್ ಮತ್ತು ದೃಗ್ ಲಕ್ಷಣಗಳನ್ನೂ ಪರಿಶೀಲಿಸುವುದುಂಟು. ಉಣ್ಣೆಯಂಥ ಹಲವು ಎಳೆಗಳು ಕಡಿಮೆ ವಿದ್ಯುದ್ವಾಹಕಗಳು. ಅವುಗಳಿಂದಾದ ಉಡುಪುಗಳು ಶರೀರದ ಉಷ್ಣ ನಷ್ಟವನ್ನು ತಡೆಯಬಲ್ಲವು. ಯಾವ ಬಗೆಯ ಎಳೆಯೇ ಆಗಲಿ ಅದನ್ನು ಉಡುಪುಗಳನ್ನು ತಯಾರಿಸಲು ಉಪಯೋಗಿಸಬೇಕಾದರೆ ಅದರ ಕರಗುವ ಬಿಂದು ಮತ್ತು ಮೆದು ಬಿಂದುಗಳು ಸಾಕಷ್ಟು ಹೆಚ್ಚಿರಬೇಕು. ಉಷ್ಣತೆ ಕಡಿಮೆಯಾದಂತೆ ಎಳೆಯ ಗುಣಲಕ್ಷಣಗಳಲ್ಲಿ ತೀವ್ರ ವ್ಯತ್ಯಾಸವಾಗಬಾರದು. ಉಡುಪಿಗಾಗಿ ಉಪಯೋಗಿಸುವ ಎಳೆಗಳಲ್ಲಿ ವಿದ್ಯುದ್ವಾಹಕತೆ ಹೆಚ್ಚಿರಬಾರದು. ದೃಗ್ ಲಕ್ಷಣಗಳಲ್ಲಿ ಹೊಳಪು ಎಳೆಯ ಆಕಾರವನ್ನು ಮಾತ್ರವಲ್ಲದೆ, ಎಳೆಯ ತಯಾರಿಕೆ ಮತ್ತು ಸಂಸ್ಕರಣ ವಿಧಾನಗಳನ್ನು ಸಹ ಅವಲಂಬಿಸಿರುತ್ತದೆ.

ಉಡುಪಿಗಾಗಿ ಉಪಯೋಗಿಸುವ ಎಳೆಗಳು ರಾಸಾಯನಿಕವಾಗಿ ಆದಷ್ಟು ನಿರೋಧಶಕ್ತಿಯನ್ನು ಪಡೆದಿರುವುದು ಉತ್ತಮ. 60°–80° ಸೆಂ. ಉಷ್ಣತೆ ಯಲ್ಲಿರುವ ತೆಳು ಆಮ್ಲ ದ್ರಾವಣಗಳು, ಸಾಮಾನ್ಯ ಸಾವಯುವ ಲೀನಕಾರಿಗಳು, ಆಕ್ಸಿಜನ್ ನೀರು—ಇವುಗಳೊಡನೆ ವರ್ತಿಸಿರುವಂತಿರಬಾರದು. ಬೂಷ್ಟು ಮೊದ ಲಾದುವನ್ನು ತಕ್ಕಮಟ್ಟಿಗೆ ಪ್ರತಿಬಂಧಿಸಬೇಕು. ಬಣ್ಣಗಳನ್ನು ಸಾಕಷ್ಟು ಸುಲಭ ವಾಗಿ ಹಿಡಿಯುವಂತಿರಬೇಕು. ಬೇಕಿರುವ ಎಲ್ಲ ಗುಣಗಳನ್ನೂ ಪಡೆದಿರುವ ಎಳೆ ಗಳಿಲ್ಲ. ಆದ್ದರಿಂದ ಸಂದರ್ಭಗಳಿಗನುಗುಣವಾಗಿ ಯಾವ ಲಕ್ಷಣಗಳು ಅಪೇಕ್ಷಿತವೋ ಆ ಲಕ್ಷಣಗಳನ್ನುಳ್ಳ ಎಳೆಗಳನ್ನು ಆರಿಸಬೇಕಾಗುತ್ತದೆ. ಸಾಮಾನ್ಯವಾಗಿ ನೈಸರ್ಗಿಕ ಎಳೆಗಳು ಲೀನಕಾರಿಗಳನ್ನು ನಿರೋಧಿಸಿದರೂ ಅವುಗಳಿಗೆ ಆಮ್ಲ ನಿರೋಧಶಕ್ತಿ ಇರುವುದಿಲ್ಲ. ಕೃತಕ ಎಳೆಗಳಲ್ಲಿ ಹಲವಕ್ಕೆ ಆಮ್ಲ ನಿರೋಧಶಕ್ತಿ ಇದೆ. ಆದರೆ ಲೀನಕಾರಿಗಳಲ್ಲಿ ಸುಲಭವಾಗಿ ಲೀನವಾಗುತ್ತದೆ. ಕೃತಕ ಎಳೆಗಳ ಮೇಲೆ ಬೂಷ್ಟು ಬರುವ ಸಂಭವ ಕಡಿಮೆ. ಸಹಜ ಬಣ್ಣಹಾಕುವುದು ಬಲು ಸುಲಭ. ಕೃತಕ ಎಳೆ ಗಳಿಗಾಗಿ ಹಲವು ವಿಶಿಷ್ಟ ರೀತಿಯ ಬಣ್ಣಗಳನ್ನೇ ತಯಾರಿಸಬೇಕಾಯಿತು, ಆದರೆ ಹಲವು ಪಾಲಿ ಅಮೈಡ್, ಪಾಲಿ ಯುರೆಥೇನ್ ಮತ್ತು ಪಾಲಿ ಅಕ್ರಿಲೋನೈಟ್ರಿಲ್ ಮತ್ತು ಪಾಲಿ ಎಸ್ಟರ್ ಎಳೆಗಳು ಅನೇಕ ಅಪೇಕ್ಷಿತ ಗುಣಗಳನ್ನು ಪಡೆದಿವೆ. ತಯಾ ರಿಕೆಯ ವಿಧಾನಗಳಲ್ಲಿ ಸೂಕ್ತ ಬದಲಾವಣೆಗಳನ್ನು ಮಾಡಿ ಎಲ್ಲ ಅಪೇಕ್ಷಿತ ಗುಣ ಗಳನ್ನೂ ಪಡೆದಿರುವ ಕೃತಕ ಎಳೆಗಳನ್ನು ತಯಾರಿಸಲು ಸಾಧ್ಯವಾಗಬಹುದೆಂದು ನಂಬಲಾಗಿದೆ.

ಎಳೆಗಳಲ್ಲಿ ಕೆಲವು ಭಾಗಗಳಲ್ಲಿ ಅಣುಜೋಡಣೆ ಒಂದು ನಿರ್ದಿಷ್ಟ ನಿಯತ ಕ್ರಮ ದಲ್ಲಿ ಆಗಿರುವುದುಂಟು. ಆ ಭಾಗಗಳನ್ನು ಕ್ರಿಸ್ಟಲೈಟುಗಳೆಂದು ಕರೆಯಲಾಗುತ್ತದೆ ಮತ್ತು ಎಕ್ಸ್‌ಕಿರಣ ಪರೀಕ್ಷೆಯಿಂದ ಎಳೆಗಳಲ್ಲಿ ಕ್ರಿಸ್ಟಲೈಟುಗಳ ಅಂಶವೆಷ್ಟೆಂದು ತಿಳಿಯಬಹುದು. ಉಣ್ಣೆ, ಸೆಲ್ಯುಲೋಸ್ ಅಸಿಟೇಟುಗಳಲ್ಲಿ ಕ್ರಿಸ್ಟಲೈಟುಗಳ ಅಂಶ ಕಡಿಮೆ. ಆದರೆ ರೇಷ್ಮೆ, ಸೆಣಬಿನ ಎಳೆ, ಲಿನನ್ ಹಾಗೂ ಹಲವು ಬಗೆಯ ನೈಲಾನು ಮತ್ತು ರೇಯಾನುಗಳಲ್ಲಿ ಕ್ರಿಸ್ಟಲೈಟುಗಳ ಅಂಶ 80%ಕ್ಕಿಂತಲೂ ಹೆಚ್ಚಿರಬಹುದು. ಸೂಕ್ತ ರೀತಿಯಲ್ಲಿ ಎಳೆಗಳನ್ನು ಎಳೆಯುವುದರಿಂದ ಕ್ರಿಸ್ಟಲೈಟುಗಳ ವಿನ್ಯಾಸ (ಓರಿಯೆಂಟೇಶನ್) ಏಕಮುಖವಾಗಿರುವಂತೆ ಮಾಡಬಹುದು. ಹೀಗೆಮಾಡಿ ದಾಗ ಧಾರಣ ಸಾಮರ್ಥ್ಯ ಹೆಚ್ಚುತ್ತದೆ. ಆದರೆ ಈ ಬಗೆಯ ಎಳೆಯ ಸ್ಥಿತಿ ಸ್ಥಾಪಕತೆ, ಘರ್ಷಣ ನಿರೋಧಶಕ್ತಿ ಮತ್ತು ಬಣ್ಣಹೀರುವ ಶಕ್ತಿಗಳು ಕಡಿಮೆ ಯಿರುತ್ತವೆ.

**ನೈಸರ್ಗಿಕ ಎಳೆಗಳು :** ಇವನ್ನು ಸ್ಥೂಲವಾಗಿ ಸಸ್ಯಜನ್ಯ ಮತ್ತು ಪ್ರಾಣಿ ಜನ್ಯ ಎಂದು ವಿಭಾಗಿಸಬಹುದು. ಸಾಮಾನ್ಯವಾಗಿ ಸಸ್ಯಜನ್ಯ ಎಳೆಗಳು ಸೆಲ್ಯು ಲೋಸ್ ಅಣುಗಳಿಂದಲೂ ಪ್ರಾಣಿಜನ್ಯ ಎಳೆಗಳು ಸಸಾರಜನಕ ಅಣುಗಳಿಂದಲೂ ಕೂಡಿ ಆಗಿರುತ್ತವೆ. ಸಸ್ಯಜನ್ಯ ಎಳೆಗಳಲ್ಲಿ ಹಲವು ಒರಟು ಮತ್ತೆ ಹಲವು ಮೃದು ವಾಗಿಯೂ ನುಣುಪಾಗಿಯೂ ಇರುತ್ತವೆ. ತೆಂಗಿನನಾರು, ಮನಿಲ್ಲಾ ಹೆಂಪ್ ಎನ್ನಿಸಿ ಕೊಳ್ಳುವ ಫಿಲಿಪ್ಪೈನಿನ ಅಭಾಕ, ದಕ್ಷಿಣ ಅಮೆರಿಕದ ಮಾರಿಷಸ್, ಆಫ್ರಿಕ ಮತ್ತು ದಕ್ಷಿಣ ಅಮೆರಿಕದ ಅನೇಕ ಭಾಗಗಳಲ್ಲಿ ದೊರೆಯುವ ಸಿಸಾಲ್ ಮೊದಲಾದುವುಗಳು ಒರಟು ಎಳೆಗಳು. ಇವನ್ನು ಸಾಮಾನ್ಯವಾಗಿ ಉಡುಪಿಗಾಗಿ ಬಳಸಲಾಗುವುದಿಲ್ಲ. ಆದರೆ ಇವುಗಳ ಧಾರಣ ಸಾಮರ್ಥ್ಯವೇ ಮೊದಲಾದ ಉತ್ತಮ ಗುಣಲಕ್ಷಣಗಳ ದೆಸೆ ಯಿಂದ, ಹಗ್ಗ, ಹುರಿಗಳಿಗಾಗಿ, ಒರಟು ಕಾಲೊರಸುವ ಚಾಪೆಗಳು ಉಜ್ಜುವ ಬ್ರಷ್ಷು ಗಳು, ಸೋಫ ಮೊದಲಾದ ಆಸನಗಳಲ್ಲಿ ಸ್ಪ್ರಿಂಗುಗಳ ಮಧ್ಯೆ ತುಂಬುವ ವಸ್ತುಗಳಾಗಿ ಇವನ್ನು ಉಪಯೋಗಿಸಲಾಗುತ್ತದೆ. ನಮ್ಮ ದೇಶದಲ್ಲಿ ದೊರೆಯುವ ಒರಟು ಎಳೆ ಯೆಂದರೆ ತೆಂಗಿನ ನಾರೊಂದೇ.

ಮೃದು ಎಳೆಗಳಲ್ಲಿ ಹತ್ತಿ, ಲಿನನ್ ಮತ್ತು ಸೆಣಬಿನ ಎಳೆಗಳು ಮುಖ್ಯವಾದುವು. ಇವನ್ನು ಒಂದೊಂದಾಗಿ ಮುಂದೆ ಪರಿಶೀಲಿಸಲಾಗಿದೆ.

ಹತ್ತಿಯ ಗಿಡವನ್ನು ನೆಟ್ಟ ವರ್ಷವೊಂದರೊಳಗೆ ಫಸಲು ದೊರೆಯುತ್ತದೆ. ಯಾಂತ್ರಿಕವಾಗಿ ಅಥವಾ ಯಂತ್ರಗಳ ನೆರವಿಲ್ಲದೆ ಹತ್ತಿಯ ತೊಳೆಗಳನ್ನು ಆರಿಸ ಲಾಗುತ್ತದೆ. ಬಲಿತು ಪಕ್ವವಾಗಿ ಒಡೆದ ಕಾಯಿಯಿಂದ ಬಂದ ಹತ್ತಿ ಮಾತ್ರ ಉತ್ತಮವಾದುದು. ಅಪಕ್ವ ಕಾಯಿಯಿಂದ ಬಂದ ಹತ್ತಿ ಅನುಪಯುಕ್ತ. ಪಕ್ವ ಹತ್ತಿಯಲ್ಲಿ ಸಹಜವಾಗಿರುವ ಎಳೆಗಳಲ್ಲಿ ತಿರುಚುಗಳಿರುತ್ತವೆ. ಇವು ನೂಲನ್ನು ನೂಲುವಾಗ ಅನುಕೂಲವಾಗುವಂತೆ ಮಾಡುತ್ತವೆ. ಜಿನ್ ಯಂತ್ರಗಳನ್ನುಪಯೋಗಿಸಿ ಬೀಜ, ಎಲೆ ಮುಂತಾದ ಅನಪೇಕ್ಷಿತ ವಸ್ತುಗಳನ್ನು ಹೀಗೆ ಆರಿಸಿದ ಹತ್ತಿಯಿಂದ ಬೇರ್ಪಡಿಸಲಾಗುತ್ತದೆ. ಈ ಹತ್ತಿಯನ್ನು ಅನಂತರ ಹಲವು ಹಂತಗಳಲ್ಲಿ ನೂಲನ್ನೆಳೆಯಲು ಉಪಯೋಗಿಸಲಾಗುತ್ತದೆ.

ಹತ್ತಿ ಸ್ವಚ್ಛ ಬಿಳಿಯಿರುವುದು ಅಪೂರ್ವ. ಬೆಳೆಯುವ ವಾತಾವರಣಕ್ಕೆ ಅನು ಗುಣವಾಗಿ ತೆಳುಹಳದಿ, ತೆಳು ಕಂದು ಅಥವಾ ತೆಳುನೀಲಿ ಬಣ್ಣವಿರುವುದು ಕಂಡು ಬಂದಿದೆ. ಎಳೆಗಳ ಸರಾಸರಿ ಉದ್ದಕ್ಕೆ ಅನುಗುಣವಾಗಿ ಹತ್ತಿಯನ್ನು ವರ್ಗೀಕರಿಸ ಬಹುದು. 1.125 ಅಂಗುಲಕ್ಕಿಂತ ಉದ್ದದ ಎಳೆಗಳನ್ನುಳ್ಳ ದೀರ್ಘಸ್ಟೇಪಲ್‌ಹತ್ತಿ ಅತ್ಯುತ್ತಮವಾದುದು. 0.875–1.125 ಅಂಗುಲ ಎಳೆ ಉದ್ದದ ಹತ್ತಿ ಮಧ್ಯಮ ದರ್ಜೆಯದು. 0.875 ಅಂಗುಲಕ್ಕಿಂತ ಕಡಿಮೆ ಎಳೆ ಉದ್ದದ ಕಿರುಸ್ಟೇಪಲ್ ಹತ್ತಿ ಕೀಳು ದರ್ಜೆಯದು.

ಹತ್ತಿಯಲ್ಲಿನ ಮುಖ್ಯ ರಾಸಾಯನಿಕ ವಸ್ತು ಸೆಲ್ಯುಲೋಸ್ (94%). ಉಳಿದ ಇತರ ವಸ್ತುಗಳಲ್ಲಿ ಮುಖ್ಯವಾದುದು ಎಳೆಗಳನ್ನು ಒಟ್ಟಾಗಿ ಹಿಡಿಯಲು ಸಹಾಯಕವಾಗಿರು ವುದು ಒಂದು ಬಗೆಯ ಮೇಣ. ನೂಲನ್ನೆಳೆಯುವಾಗ ಈ ಮೇಣ ಸಹಾಯಕ ವಾಗುತ್ತದೆ.

ಲಿನನ್ ಎಳೆಗಳು ಒಂದು ಬಗೆಯ ಅಗಸೆಯ ಗಿಡದ ನಾರಿನಿಂದ ತಯಾರಾಗುತ್ತವೆ. ಗಿಡಗಳು ಪೂರ್ಣವಾಗಿ ಬೆಳೆದು ನಿಂತಮೇಲೆ ಒಟ್ಟು ಗಿಡವನ್ನೇ ಕೊಯ್ಲುಮಾಡಿ ಬೀಜ ಎಲೆಗಳನ್ನು ಬೇರ್ಪಡಿಸಿ, ಕಾಂಡಗಳನ್ನು ಕಟ್ಟುಗಳನ್ನಾಗಿ ಕಟ್ಟಿ ಹವೆಯಲ್ಲಿ ಅಥವಾ ನೀರಿನಲ್ಲಿ ನೆನೆಸಲಾಗುತ್ತದೆ. ಆಗ ಕಾಂಡದಲ್ಲಿ ಎಳೆಗಳನ್ನು ಒಟ್ಟಾಗಿ ಹಿಡಿದಿರುವ ಅಂಟು ಪದಾರ್ಥ ನಷ್ಟವಾಗಿ ಎಳೆಗಳು ಮಾತ್ರ ಉಳಿಯುತ್ತವೆ. ಹೀಗೆ ದೊರೆತ ಎಳೆಗಳನ್ನು ಬಾಚಣಿಗೆಯಂಥ ಉಪಕರಣಗಳಿಂದ ಬಾಚಿ ನೇರ ಮಾಡಿಕೊಂಡು ನೂಲೆಳೆಯಲಾಗುತ್ತದೆ. ಈ ನೂಲನ್ನೂ ಹತ್ತಿಯ ನೂಲಿನಂತೆಯೇ ನೇಯ ಬಹುದು ಮತ್ತು ಹೊಳಪಿಗಾಗಿ ಸಂಸ್ಕರಿಸಬಹುದು. ಲಿನನ್ನಿನಲ್ಲಿಯೂ ಮುಖ್ಯ ರಾಸಾಯನಿಕ ವಸ್ತು ಸೆಲ್ಯುಲೋಸ್.

ಸೆಣಬಿನ ಎಳೆ ಹತ್ತಿ ಮತ್ತು ಲಿನನ್ನುಗಳಷ್ಟು ಮೃದುವಾದುದಲ್ಲ. ಎಳೆಗಳನ್ನು ಲಿನನ್ ಎಳೆಗಳನ್ನು ತಯಾರಿಸಿದಂತೆಯೇ ಸೆಣಬಿನ ಗಿಡಗಳನ್ನು ಸಂಸ್ಕರಿಸಿ ಪಡೆದು ಅನಂತರ ನೂಲಲಾಗುತ್ತದೆ. ಹತ್ತಿ ಮತ್ತು ಲಿನನ್ ನೂಲುಗಳಿಗಿಂತ ಹೀಗೆ ಒದಗಿದ ನೂಲು ದಪ್ಪವಾಗಿರುತ್ತದೆ. ಇದನ್ನು ಗೋಣಿಯ ಚೀಲ, ಗಟ್ಟಿದಾರ, ಬಲೆಗಳು

ಹುರಿಗಳು ಮೊದಲಾದುವನ್ನು ತಯಾರಿಸಲು ಉಪಯೋಗಿಸುತ್ತಾರೆ. ಎಳೆಗಳ ಮುಖ್ಯ ರಾಸಾಯನಿಕವಸ್ತು ಸೆಲ್ಯುಲೋಸ್.

ಸೆಣಬಿನ ಜಾತಿಗೆ ಸೇರಿದ ಸನ್ ಹೆಂಪ್ ಎಂಬ ಗಿಡದಲ್ಲಿಯೂ ಸೆಲ್ಯುಲೋಸ್ ಎಳೆಗಳಿರುತ್ತವೆ. ಆದರೆ ಇವನ್ನು ನೂಲುವುದಕ್ಕಿಂತಲೂ ಹೆಚ್ಚಾಗಿ ವಿಶಿಷ್ಟ ದರ್ಜೆಯ ಕಾಗದಗಳನ್ನು ತಯಾರಿಸಲು ಉಪಯೋಗಿಸಲಾಗುತ್ತದೆ.

ಜಪಾನ್ ಮತ್ತು ದಕ್ಷಿಣ ಏಷ್ಯ, ಯುರೋಪುಗಳಲ್ಲಿ ಬೆಳೆಯುವ ರಿಯಾ ಎಂಬ ಪೊದೆಯೊಂದರಿಂದ ತಯಾರಿಸಲಾಗುವ ರೇಮೀ ಎಂಬ ನೂಲು ಬಲುಮಟ್ಟಿಗೆ ಲಿನನನ್ನು ಹೋಲುತ್ತದೆ. ಈ ಎಳೆಗಳ ಹೊಳಪು, ಸಾಮರ್ಥ್ಯಗಳು ಲಿನನಿಗಿಂತಲೂ ಉತ್ತಮವಾದುದು. ಇದರ ಸಂಸ್ಕರಣ ಹೆಚ್ಚು ವೆಚ್ಚದ ಕ್ರಿಯೆ. ಚೀನದಲ್ಲಿ ಮಾತ್ರ ಇದನ್ನು ಈಗ ತಯಾರಿಸಲಾಗುತ್ತಿದೆ. ಬಟ್ಟೆ, ದಾರಗಳನ್ನು ಮಾತ್ರವಲ್ಲದೆ, ಬಲೆಗಳನ್ನು ತಯಾರಿಸಲೂ ಇದನ್ನು ಉಪಯೋಗಿಸಬಹುದು.

ಬಹುತೇಕ ಎಲ್ಲ ಸಸ್ಯಜನ್ಯ ಎಳೆಗಳಲ್ಲೂ ಮುಖ್ಯ ರಾಸಾಯನಿಕ ವಸ್ತು ಸೆಲ್ಯುಲೋಸ್. ಸೆಲ್ಯುಲೋಸಿನ ಬೃಹದಣುಗಳು ಸಾವಿರಾರು ಸೆಲ್ಲೊ ಬಯೋಸ್ ಎಂಬ ಅಣುಗಳು ಕೂಡಿ ಆಗಿವೆ. ಸೆಲ್ಲೊ ಬಯೋಸ್ ಅಣುವೊಂದು ಎರಡು ಬೀಟ ಗ್ಲೂಕೋಸ್ ಅಣುಗಳು ಈಥರ್ ಬಂಧದ ಮೂಲಕ ಸೇರಿ ಆಗಿರುತ್ತದೆ. ಅನೇಕ ಸೆಲ್ಲೊಬಯೋಸ್ ಅಣುಗಳು ನಿರ್ದಿಷ್ಟ ರೀತಿಯಲ್ಲಿ (ನೇರ ಸರಣಿಯಲ್ಲಿ) ಈಥರ್ ಬಂಧಗಳ ಮೂಲಕ ಸೇರಿ ಸೆಲ್ಯುಲೋಸ್ ಬೃಹದಣುವೊಂದರ ಸೃಷ್ಟಿಯಾಗುತ್ತದೆ. ಸೆಲ್ಯುಲೋಸಿನ ಅಣುಗಾತ್ರ ಆಕಾರ ಮತ್ತು ಸಂಸ್ಕರಣಗಳನ್ನು ಅವಲಂಬಿಸಿದೆ.

ಹತ್ತಿ ಮತ್ತು ಲಿನನ್ ಎಳೆಗಳಿಂದಾದ ಬಟ್ಟೆಗಳನ್ನು ಚೆಲುವೆ ಕ್ರಿಯೆಗೆ (ಬ್ಲೀಚಿಂಗ್) ಒಳಪಡಿಸಿ ಶುದ್ಧ ಬಿಳಿ ಬಣ್ಣದ ಬಟ್ಟೆಗಳನ್ನು ಪಡೆಯಬಹುದು. ಸಾರಗುಂದಿದ (ಡೈಲ್ಯೂಟ್) ಕ್ಷಾರ ದ್ರಾವಣದಲ್ಲಿ ಅದ್ದಿ ತೆಗೆಯುವ ಮರ್ಸರಿಕರಣ (ಮರ್ಸರೈಸೇಶನ್) ಎಂಬ ಸಂಸ್ಕರಣದಿಂದ ಬಟ್ಟೆಯ ಧಾರಣ ಸಾಮರ್ಥ್ಯ ಮತ್ತು ಹೊಳಪು ಹೆಚ್ಚುತ್ತವೆ. ಹೊಳಪನ್ನು ಹೆಚ್ಚಿಸಲು ಬಟ್ಟೆಯನ್ನು ಎರಡು ಬಿಸಿ ರೋಲರುಗಳ ಮಧ್ಯೆ ಹೋಗುವಂತೆ ಮಾಡಬಹುದು. ಈ ಸಂಸ್ಕರಣಕ್ಕೆ ಕ್ಯಾಲೆಂಡರಿಂಗ್ ಎಂದು ಹೆಸರು.

ಪ್ರಾಣಿಜನ್ಯ ಎಳೆಗಳಲ್ಲಿ ರೇಷ್ಮೆ ಮತ್ತು ಉಣ್ಣೆಗಳು ಮುಖ್ಯವಾದುವು. ರೇಷ್ಮೆಯ ಹುಳುವಿನ ಮೊಟ್ಟೆಗಳು ಒಡೆದಾಗ ಹೊರಬರುವ 2–3 ಮಿ.ಮೀ. ಉದ್ದದ ಹುಳುಗಳು ಮಲ್ಬೆರಿ (ಹಿಪ್ಪನೇರಳೆ) ಎಲೆಗಳನ್ನು ತಿಂದು 5–10 ಸೆಂ. ಮೀ. ನಷ್ಟು ಉದ್ದ ಬೆಳೆಯುತ್ತವೆ. ಹೀಗೆ ಪ್ರೌಢಾವಸ್ಥೆಯನ್ನು ಪಡೆದ ಹುಳು ತನ್ನ ತಲೆಯ ಬಳಿಯಿರುವ ತಂತುಕದಂಥ ರಂಧ್ರದಿಂದ ರಸವೊಂದನ್ನು ಹೊರಚೆಲ್ಲುತ್ತದೆ. ಈ ರಸ ಗಾಳಿಯ ಸಂಪರ್ಕಕ್ಕೆ ಬಂದ ಕೂಡಲೇ ಗಟ್ಟಿಯಾಗಿ ಎಳೆಯಾಗುತ್ತದೆ. ಹೀಗೆ ಅಖಂಡವಾದ ಎಳೆಯಿಂದ ತನ್ನನ್ನೇ ಸುತ್ತುವರಿದುಕೊಂಡು ನಾಲ್ಕೈದು ದಿವಸಗಳಲ್ಲಿ ತನ್ನ ಕಾಯಾಂತರಣ ಅಥವಾ ರೂಪಾಂತರಣಕ್ಕೆ ಬೇಕಾಗುವ ನಿದ್ರೆಗೆ ಆವಶ್ಯಕವಾದ ಕಕೂನ್ ಅಥವಾ ಕೋಶವನ್ನು ಸಿದ್ಧಮಾಡಿಕೊಳ್ಳುತ್ತದೆ. ಪೂರ್ಣ ಕಾಲಾವಕಾಶ ಕೊಟ್ಟಲ್ಲಿ ಕ್ಷಾರವಸ್ತುವನ್ನು ಒಸರಿಸಿ ಕಕೂನಿನ ಭಾಗವೊಂದನ್ನು ನಾಶಮಾಡಿ ರೂಪಾಂತರ ಹೊಂದಿದ ಚಿಟ್ಟೆ ಹೊರಬರುತ್ತದೆ. ಆದರೆ ಚಿಟ್ಟೆಯಾಗುವ ಮೊದಲೇ ಕಕೂನಿನಿಂದ ರೇಷ್ಮೆಯ ಎಳೆಯನ್ನು ಪಡೆಯಲಾಗುತ್ತದೆ. ಕಕೂನುಗಳನ್ನು ಬಿಸಿ ನೀರಿನಲ್ಲಿಟ್ಟಾಗ ಅದರಲ್ಲಿನ ಸೆರಿಸಿನ್ ಎಂಬ ಅಂಟುಪದಾರ್ಥ ನೀರಿನಲ್ಲಿ ಸ್ವಲ್ಪ ಮಟ್ಟಿಗೆ ಲೀನವಾಗಿ, ಫೈಬ್ರಾಯ್ನ್ ಎಂಬ ಉಳಿದ ಭಾಗ ಮೆದುವಾಗಿ ಅದರಿಂದ ಎಳೆಗಳನ್ನು ಅಖಂಡವಾಗಿ ಎಳೆಯಲು ಸಾಧ್ಯವಾಗುತ್ತದೆ. ರೇಷ್ಮೆಯ ಒಂಟಿ ಎಳೆ ಬಲು ಸೂಕ್ಷ್ಮ; ಮತ್ತು ಅದರಲ್ಲಿ ಅಷ್ಟು ಬಲವಿರುವುದಿಲ್ಲ. ಆದ್ದರಿಂದ ಹೆಚ್ಚು ಎಳೆಗಳನ್ನು ಕೂಡಿಸಿ ತಿರುವುಗಳನ್ನು ಕೊಟ್ಟು ನೂಲನ್ನು ತಯಾರಿಸಲಾಗುತ್ತದೆ. ನೂಲಿನಲ್ಲಿನ ಎಳೆಗಳ ಸಂಖ್ಯೆ ಮತ್ತು ಪ್ರತಿ ಅಂಗುಲಕ್ಕೆ ಕೊಡಲಾಗುವ ತಿರುವುಗಳ ಸಂಖ್ಯೆಯನ್ನನುಸರಿಸಿ ನೂಲುಗಳನ್ನು ಕ್ರೇಪ್, ಜಾರ್ಜೆಟ್ ಮೊದಲಾಗಿ ವಿವಿಧ ಹೆಸರುಗಳಿಂದ ಕರೆಯಲಾಗುತ್ತದೆ. ಕಚ್ಚಾ ರೇಷ್ಮೆಯ ನೂಲಿನಲ್ಲಿ ಮುಕ್ಕಾಲು ಭಾಗದಷ್ಟು ಫೈಬ್ರಾಯ್ನ್ ಮತ್ತು ಉಳಿದ ಕಾಲುಭಾಗದಷ್ಟು ಸೆರಿಸಿನ್ ಇರುತ್ತದೆ. ಸೆರಿಸಿನ್ ರೇಷ್ಮೆಯ ಎಳೆ ಮಂಕಾಗಿ ಕಾಣುವಂತೆ ಮಾಡುವುದಾದರೂ ಎಳೆಗಳನ್ನು ಕೀಟಗಳಿಂದ ರಕ್ಷಿಸುವುದಕ್ಕಾಗಿ ನೇಯುವ ಸಮಯದವರೆವಿಗೆ ಸೆರಿಸಿನನ್ನು ಹಾಗೆಯೇ ಬಿಟ್ಟಿರಲಾಗುತ್ತದೆ. ಸೆರಿಸಿನ್ ಕಳೆದುಕೊಂಡ ರೇಷ್ಮೆಯ ಎಳೆಗೆ ಸಾಕಷ್ಟು ಹೊಳಪಿದ್ದರೂ ವಿವಿಧ ಸಂಸ್ಕರಣಗಳಿಂದ ಅದರ ಹೊಳಪು, ನಯ ಮತ್ತು ಧಾರಣ ಸಾಮರ್ಥ್ಯಗಳು ಹೆಚ್ಚುವಂತೆ ಮಾಡಲಾಗುತ್ತದೆ.

ಮತ್ತೊಂದು ಪ್ರಾಣಿಜನ್ಯ ಎಳೆಯಾದ ಉಣ್ಣೆಗೆ ಕುರಿಗಳ ತುಪ್ಪಟವೇ (ಫ್ಲೀಸ್) ಆಕರ. ಇದು ಚರ್ಮದ ಕೆಳಭಾಗದ ಗ್ರಂಥಿಗಳಲ್ಲಿ ದ್ರವವಾಗಿ ತಯಾರಾಗಿ ಹೊರಬಂದು ಕೂಡಲೇ ಘನೀಭವಿಸಿ ತುಪ್ಪಟವಾಗುತ್ತದೆ. ಕುರಿಯ ಮೈಮೇಲಿನಿಂದ ಕತ್ತರಿಸಿ ತುಪ್ಪಟ ಅಥವಾ ಉಣ್ಣೆಯ ಎಳೆಗಳನ್ನು ಪಡೆದು ನೂಲು ತಯಾರಿಸಬಹುದು. ಈ ಎಳೆಯಲ್ಲಿನ ಮುಖ್ಯ ಸಂಯುಕ್ತ ಕೆರಾಟಿನ್ ಎಂಬ ಪ್ರೋಟೀನ್.

ಉಣ್ಣೆ ಮತ್ತು ರೇಷ್ಮೆಗಳಲ್ಲಿನ ಮುಖ್ಯ ಸಂಯುಕ್ತಗಳು ಸಸಾರಜನಕ ಅಥವಾ ಪ್ರೋಟೀನುಗಳ ಗುಂಪಿಗೆ ಸೇರಿದವು. ಅನೇಕ ಅಮೈನೋ ಆಮ್ಲಗಳು ಒಂದಕ್ಕೊಂದು ಅಮೈಡ್ ಬಂಧಗಳ ಮೂಲಕ ಕೂಡಿಕೊಂಡು ಪ್ರೋಟೀನುಗಳ ಸೃಷ್ಟಿಯಾಗುತ್ತದೆ. ಉಣ್ಣೆ ಮತ್ತು ರೇಷ್ಮೆಗಳೆರಡೂ ಪ್ರೋಟೀನ್ ಎಳೆಗಳೇ ಆದರೂ ಅವುಗಳ ಗುಣಗಳಲ್ಲಿ ಬಹಳ ವೈವಿಧ್ಯವಿದೆ.

ರೇಷ್ಮೆಯ ಎಳೆಗಳು ಸೂಕ್ಷ್ಮವೂ ಬಲಯುತವೂ ಆದುವು. ರೇಷ್ಮೆಯ ನೂಲನ್ನು ಎಳೆದು ಎಳೆಗಳು ಒಂದೇ ದಿಕ್ಕಿನಲ್ಲಿ ನಿಲ್ಲುವಂತೆ ಮಾಡಿ ನೂಲಿನ ಶಕ್ತಿಯನ್ನು ಹೆಚ್ಚಿಸಬಹುದು. ರೇಷ್ಮೆ ಉಣ್ಣೆಗಿಂತ ಹೆಚ್ಚು ಉಷ್ಣತೆಯನ್ನು ತಡೆಯಬಲ್ಲುದಾದರೂ ಹೆಚ್ಚು ಉಷ್ಣತೆಯಲ್ಲಿ (110° ಸೆಂ.) ಅದು ಹಳದಿಬಣ್ಣ ತಾಳುತ್ತದೆ. ಅದಕ್ಕಿಂತ ಹೆಚ್ಚಿನ ಉಷ್ಣತೆಯಲ್ಲಿ ಅಥವಾ ಅತಿನೇರಿಳೆ ಕಿರಣಗಳ ಸನ್ನಿಧಿಯಲ್ಲಿ ಪ್ರೋಟೀನ್ ಅಣುಗಳು ವಿಭಜನೆಗೊಳಗಾಗಿ ಎಳೆಗಳ ಅನೇಕ ಗುಣಗಳು ನಾಶವಾಗುತ್ತವೆ. (ನೋಡಿ—ಉಣ್ಣೆ).

**ಖನಿಜ ಮತ್ತು ಲೋಹಗಳ ಎಳೆಗಳು :** ಕಲ್ನಾರು ಒಂದು ಬಗೆಯ ಖನಿಜ ಎಳೆ. ಇದು ಮೆಗ್ನೀಷಿಯಂ ಮತ್ತು ಕ್ಯಾಲ್ಸಿಯಂ ಸಿಲಿಕೇಟುಗಳ ಮಿಶ್ರಣ. ಹಲವು ಬಾರಿ ಖನಿಜದಲ್ಲಿ ಕಬ್ಬಿಣ, ಅಲ್ಯೂಮಿನಿಯಂ ಮತ್ತು ಇತರ ಲೋಹಗಳ ಅದಿರುಗಳೂ ಬೆರೆತಿರುತ್ತವೆ. ಪ್ರಕೃತಿಯಲ್ಲಿ ಎಳೆಗಳಾಗಿ ದೊರೆಯುವ ಈ ಖನಿಜ ಉಷ್ಣ ಮತ್ತು ವಿದ್ಯುತ್ ನಿರೋಧಿ. ಈಗೀಗ ಕೆಲವು ವರ್ಗಗಳಿಂದ ಉತ್ತಮ ದರ್ಜೆಯ ಕಲ್ನಾರಿನಿಂದ ಅಗ್ನಿಶಾಮಕದಳದವರು ಧರಿಸಲು ಅಗ್ನಿನಿರೋಧಕ ಉಡುಪುಗಳನ್ನೂ ರಂಗಸ್ಥಳ ಮತ್ತಿತರ ಎಡೆಗಳಲ್ಲಿ ಉಪಯೋಗಿಸಬಹುದಾದ ತೆರೆಗಳನ್ನೂ ತಯಾರಿಸುತ್ತಿದ್ದಾರೆ.

ತನ್ಯತೆ (ಡಕ್ಟಿಲಿಟಿ) ಇರುವ ಅನೇಕ ಲೋಹಗಳಿಂದ ಸೂಕ್ಷ್ಮ ಎಳೆಗಳನ್ನು ಪಡೆಯಬಹುದು. ನಮ್ಮ ದೇಶದಲ್ಲಿ ಇಂಥ ಬೆಳ್ಳಿ, ಬಂಗಾರದ ಎಳೆಗಳು ಬಹುಕಾಲದಿಂದಲೂ ಆಕರ್ಷಕ ಜರತಾರಿಯಾಗಿ ಉಪಯೋಗದಲ್ಲಿವೆ. ಇವು ಅಲಂಕಾರಕ್ಕಲ್ಲದೆ ಮತ್ತಾವ ರೀತಿಯಲ್ಲೂ ಅಷ್ಟಾಗಿ ಉಪಯೋಗಕ್ಕೆ ಬಾರವು. ಸೂಕ್ಷ್ಮ ಕಸೂತಿಗಳಲ್ಲಿ ಮಲಿನಗೊಂಡಾಗ ಇವನ್ನು ತೊಳೆದು ಶುದ್ಧೀಕರಿಸುವುದು ಕಷ್ಟದ ಕೆಲಸ. ಈ ಸಂಕಷ್ಟದಿಂದ ಪಾರಾಗಲು ಹೊಸ ವಿಧಾನಗಳನ್ನು ಯೋಜಿಸಲಾಗಿದೆ. ಲೋಹದ ತೆಳುಪದರವೊಂದನ್ನು ಅತಿ ತೆಳ್ಳಗಿನ ಪಾರದರ್ಶಕ ಮೈಲಾರ್ ಎಂಬ ಪಾಲಿ ಎಸ್ಟರ್ ಹಾಳೆಗಳ ಮಧ್ಯೆ ಇಟ್ಟು ಸೂಕ್ತ ಅಂಟೊಂದನ್ನು ಉಪಯೋಗಿಸಿ ಪ್ಲಾಸ್ಟಿಕ್ ರಕ್ಷಿತ ಲೋಹದ ಹಾಳೆಯನ್ನು ತಯಾರಿಸಲಾಗುತ್ತಿದೆ. ಈ ಹಾಳೆಗಳಿಂದ ತಯಾರಿಸಿದ ಎಳೆಗಳನ್ನು ನೇಯಲು ಉಪಯೋಗಿಸಬಹುದು ಅಲ್ಲದೆ ಬಟ್ಟೆಗಳನ್ನು ಒಗೆಯುವಾಗ ಈ ಎಳೆಗಳಿಗೆ ಏನೂ ಅಪಾಯವಾಗದು. ಇಂಥ ಸಂಕೀರ್ಣ ಲೋಹದ ಹಾಳೆಗಳಿಗೆ ಮುಖ್ಯವಾಗಿ ಅಲ್ಯೂಮಿನಿಯಂ ಲೋಹವನ್ನು ಉಪಯೋಗಿಸಲಾಗುತ್ತದೆ. ಇತರ ಲೋಹಗಳಂತೆ ಕಾಣುವ ಕೃತಕ ಜರಿಯನ್ನು ತಯಾರಿಸುವಾಗ ಉಪಯೋಗಿಸುವ ಅಂಟಿಗೆ ಬೇಕಾದ ಬಣ್ಣಗಳನ್ನು ಸರಿಯಾದ ಪ್ರಮಾಣದಲ್ಲಿ ಬೆರೆಸಲಾಗುತ್ತದೆ. ಹೀಗೆ ಮಾಡಿ ಎಲ್ಲ ಬಗೆಯ ಬಣ್ಣಗಳನ್ನುಳ್ಳ ಹೊಳೆವ ಕೃತಕ ಜರತಾರಿಗಳನ್ನು ತಯಾರಿಸಬಹುದು.

**ಪರಿವರ್ತಿತ ಎಳೆಗಳು :** ಸಹಜ ಸೆಲ್ಯುಲೋಸನ್ನು ಉಪಯುಕ್ತ ಎಳೆಗಳಾಗಿ ಪರಿವರ್ತಿಸಬಹುದು. ಹೀಗೆ ದೊರೆವ ಪರಿವರ್ತಿತ ಸೆಲ್ಯುಲೋಸಿನ ಎಳೆ ರೇಯಾನ್ ಎಂದೆನ್ನಿಸಿಕೊಳ್ಳುತ್ತದೆ. ರೇಯಾನ್ ತಯಾರಿಕೆಯ ವಿಧಾನಗಳಲ್ಲಿ ಪ್ರಕೃತಿಯಿಂದ ಸಂಗ್ರಹಿಸಿದ ಸೆಲ್ಯುಲೋಸನ್ನು ನಿರ್ದಿಷ್ಟ ರಾಸಾಯನಿಕ ವಸ್ತುಗಳಿಂದ ಸಂಸ್ಕರಿಸಿ ಸೆಲ್ಯುಲೋಸ್ ಒಳಗೊಂಡ ದ್ರಾವಣವನ್ನು ಪಡೆಯಲಾಗುತ್ತದೆ. ಈ ದ್ರಾವಣವನ್ನು ಸಣ್ಣ ರಂಧ್ರವೊಂದರ ಮೂಲಕ ಎಳೆದು, ಎಳೆಯುವಾಗ ಅಥವಾ ಅನಂತರ ಸೆಲ್ಯುಲೋಸ್ ಪುನಃ ಘನೀಭೂತವಾಗುವಂತೆ ಮಾಡಿದರೆ ಸೆಲ್ಯುಲೋಸ್ ಎಳೆ ದೊರೆಯುತ್ತದೆ. ರೇಯಾನ್ ತಯಾರಿಕೆಗೆ ಮೂರು ಮುಖ್ಯ ವಿಧಾನಗಳಿವೆ.

ಇಂದು ಹೆಚ್ಚು ಉಪಯೋಗದಲ್ಲಿಲ್ಲದ ನೈಟ್ರೋ ಸೆಲ್ಯುಲೋಸ್ ವಿಧಾನದಲ್ಲಿ ನೂಲಲು ಯೋಗ್ಯವಲ್ಲದ ಹತ್ತಿಯನ್ನು ನೈಟ್ರಿಕ್ ಮತ್ತು ಸಲ್ಫ್ಯೂರಿಕ್ ಆಮ್ಲಗಳ ಮಿಶ್ರಣದಲ್ಲಿ ಲೀನಮಾಡಿದಾಗ ನೈಟ್ರೋ ಸೆಲ್ಯುಲೋಸ್ ದೊರೆಯುತ್ತದೆ. ಇವನ್ನು ಆಲ್ಕೊಹಾಲ್ ಈಥರ್ ಮಿಶ್ರಣಗಳಲ್ಲಿ ಲೀನಮಾಡಿ ದೊರೆಯುವ ದ್ರಾವಣವನ್ನು ತಂತುಕಗಳ ಮೂಲಕ ಹಾಯಿಸಿದಾಗ, ಲೀನಕಾರಿಗಳು ಅನಿಲಗಳಾಗಿ ನಷ್ಟವಾಗಿ ನೈಟ್ರೋಸೆಲ್ಯುಲೋಸ್ ಎಳೆ ದೊರೆಯುತ್ತವೆ. ಇವನ್ನು ಸೋಡಿಯಂ ಹೈಡ್ರೊ ಸಲ್ಫೈಡ್ ದ್ರಾವಣದಲ್ಲಿ ಹಾಯಿಸಿ ಸೆಲ್ಯುಲೋಸ್ ಎಳೆಗಳನ್ನು ಪಡೆಯಲಾಗುತ್ತದೆ.

ಹೆಚ್ಚು ಬಳಕೆಯಲ್ಲಿರುವ ವಿಸ್ಕೋಸ್ ವಿಧಾನದಲ್ಲಿ, ವಸ್ತ್ರೋದ್ಯಮದಲ್ಲಿ ಉಪಯೋಗಿಸಲಾಗದೆ ಮಿಕ್ಕ ಕೀಳು ದರ್ಜೆಯ ಹತ್ತಿಯ ಭಾಗ ಮತ್ತುಅಥವಾ ಕಾಗದದ ತಯಾರಿಕೆಯಲ್ಲಿ ಉಪಯೋಗಿಸುವಂಥ ನಾನ್‌ಸೆಲ್ಯುಲೋಸ್‌ರಹಿತ ಮರದ ತಿಳ್ಳುಗಳನ್ನು (ವುಡ್‌ಪಲ್ಪ್ ಡಿವಾಯಿಡ್ ಆಫ್ ನಾನ್ ಸೆಲ್ಯುಲಾಸಿಕ್ಸ್) ಮೊದಲು

ಕ್ಷಾರ ದ್ರಾವಣದಲ್ಲಿ ನೆನೆಸಿಟ್ಟು ಕ್ಷಾರ ಸೆಲ್ಯುಲೋಸನ್ನು ತಯಾರಿಸಲಾಗುತ್ತದೆ. ಈ ಕ್ಷಾರ ಸೆಲ್ಯುಲೋಸನ್ನು ಸಣ್ಣ ಸಣ್ಣ ತುಂಡುಗಳಾಗಿ ಮುರಿದು ನಿಯಂತ್ರಿತ ಉಷ್ಣತೆ ಮತ್ತು ಆರ್ದ್ರತೆಗಳ ವಾತಾವರಣದಲ್ಲಿ ಹಲವು ದಿವಸಗಳಿಟ್ಟು ಅನಂತರ ಇಂಗಾಲದ ಡೈ ಸಲ್ಫೈಡ್ ವರ್ತಿಸುವಂತೆ ಮಾಡಿದಾಗ ಸೆಲ್ಯುಲೋಸ್ ಕ್ಸಾಂಥೇಟ್ ದೊರೆಯುತ್ತದೆ. ಇದನ್ನು ಸಾರಗುಂದಿದ (ಡೈಲ್ಯೂಟ್) ಸೋಡಿಯಂ ಹೈಡ್ರಾಕ್ಸೈಡ್ ದ್ರಾವಣದಲ್ಲಿ ಲೀನಮಾಡಿದಾಗ ಜೇನುತುಪ್ಪದಂತೆ ಮಂದವಾದ ವಿಸ್ಕೋಸ್ ದ್ರಾವಣ ದೊರೆಯುತ್ತದೆ. ಈ ದ್ರಾವಣವನ್ನು ತಂತುಕಗಳ ಮೂಲಕ ಸಲ್ಫ್ಯೂರಿಕ್ ಆಮ್ಲದ ಮೂಲಕ ಹಾಯಿಸಿ ದೊರೆಯುವ ಎಳೆಗಳನ್ನು, ಆಮ್ಲವನ್ನು ನಿವಾರಿಸುವುದಕ್ಕಾಗಿ ನೀರಿನ ಮೂಲಕ ಹಾಯಿಸಿದಾಗ ಶುದ್ಧ ಸೆಲ್ಯುಲೋಸ್ ಎಳೆಗಳು ದೊರೆಯುತ್ತವೆ.

ಮೂರನೆಯದಾದ ಕ್ಯುಪ್ರಮೋನಿಯಂ ವಿಧಾನದಲ್ಲಿ ಮೊದಲು ಹತ್ತಿಯ ತಿರುಳು ಮತ್ತು ಉಳಿಕೆಗಳನ್ನು (ವೇಸ್ಟ್)ಸೋಡಿಯಂ ಹೈಡ್ರಾಕ್ಸೈಡ್ ದ್ರಾವಣದಲ್ಲಿ ಬೇಯಿಸಿ ಅನಂತರ ಚೆಲುವೆ ಕ್ರಿಯೆಗೆ ಒಳಗು ಮಾಡಿದಾಗ ದೊರೆಯುವ ತಿಳ್ಳನ್ನು (ಪಲ್ಪ್) ಒಣಗಿಸಲಾಗುತ್ತದೆ. ತಾಮ್ರದ ಆಕ್ಸೈಡನ್ನು ಅಮೋನಿಯ ದ್ರಾವಣದಲ್ಲಿ ಲೀನಮಾಡಿದಾಗ ದೊರೆಯುವ ಕ್ಯುಪ್ರಮೋನಿಯಂ ಹೈಡ್ರಾಕ್ಸೈಡ್ ದ್ರಾವಣದಲ್ಲಿ ಒಣತಿಳ್ಳನ್ನು ಲೀನಮಾಡಲಾಗುತ್ತದೆ. ಹೀಗೆ ದೊರೆತ ಸೆಲ್ಯುಲೋಸ್ ದ್ರಾವಣವನ್ನು ತಂತುಕಗಳ ಮೂಲಕ ಹಾಯಿಸಿದಾಗ ಉತ್ಪತ್ತಿಯಾಗುವ ಎಳೆಗಳನ್ನು ನೀರಿನಲ್ಲಿ ಹಾಯಿಸಿ ತೊಳೆದು, ಎಳೆತ ತಿರುಚುವಿಕೆಗಳಿಂದ ಬಲಪಡಿಸಿ ಅನಂತರ ಸಾರಗುಂದಿದ ಸಲ್ಫ್ಯೂರಿಕ್ ಆಮ್ಲದ ಮೂಲಕ ಹಾಯಿಸಲಾಗುತ್ತದೆ. ಹೀಗೆ ದೊರೆತ ಕ್ಯುಪ್ರಮೋನಿಯಂ ರೇಯಾನ್ ಎಳೆಗಳನ್ನು ಉತ್ತಮ ದರ್ಜೆಯ ಅತಿತೆಳ್ಳನೆಯ ವಸ್ತ್ರಗಳನ್ನು ನೇಯಲು ಉಪಯೋಗಿಸಬಹುದು.

ಅಸಿಟೇಟ್ ಎಳೆಯೆಂದು ಹೆಸರು ಪಡೆದಿರುವ ಅರ್ಧ ಕೃತಕ ಎಳೆಯಾದ ಸೆಲ್ಯುಲೋಸ್ ಅಸಿಟೇಟಿಗೆ ಸಹ ರೇಯಾನ್ ತಯಾರಿಕೆಗೆ ಬೇಕಾಗುವ ಸೆಲ್ಯುಲೋಸೇ ಆಕರ. ಹತ್ತಿಯ ಉಳಿಕೆ ಮತ್ತು ಶುದ್ಧೀಕರಿಸಿದ ಮರದ ತಿಳ್ಳುಗಳನ್ನು ನಿಯಂತ್ರಿತ ಉಷ್ಣತೆಯ ವಾತಾವರಣದಲ್ಲಿ ಅಸಿಟಿಕ್ ಆಮ್ಲದಲ್ಲಿ ಹಲವಾರು ದಿವಸಗಳವರೆಗೆ ನೆನೆಸಿಡಲಾಗುತ್ತದೆ. ಈ ಸೆಲ್ಯುಲೋಸನ್ನು ಅಸಿಟಿಕ್ ಅನ್ ಹೈಡ್ರೈಡಿನೊಡನೆ ವರ್ತಿಸುವಂತೆ ಮಾಡಿದಾಗ ಮಂದ ದ್ರವದ ರೂಪದಲ್ಲಿ ಸೆಲ್ಯುಲೋಸ್ ಅಸಿಟೇಟ್ ದೊರೆಯುತ್ತದೆ. ಹಲವು ಕಾಲಾನಂತರ ಈ ದ್ರವವನ್ನು ನೀರಿನಲ್ಲಿ ಹಾಯಿಸಿದಾಗ ಸೆಲ್ಯುಲೋಸ್ ಅಸಿಟೇಟಿನ ತೆಳು ಚಕ್ಕೆ ಅಥವಾ ಹಲ್ಲೆಗಳು ದೊರೆಯುತ್ತವೆ. ಇವನ್ನು ಪೂರ್ಣವಾಗಿ ಒಣಗಿಸಿ ಅನಂತರ ಅಸಿಟೋನ್ ದ್ರವದಲ್ಲಿ ಲೀನಮಾಡಿ ಲೀನಭಾಗವನ್ನು ಶೋಧಿಸಿ ಬೇರ್ಪಡಿಸಿ ದೊರೆಯುವ ಶುದ್ಧ ಬಿಳಿಯ ಮರದ ದ್ರಾವಣವನ್ನು ತಂತುಕಗಳ ಮೂಲಕ ಬಿಸಿಗಾಳಿಯ ವಾತಾವರಣಕ್ಕೆ ಹೊರತಳ್ಳಲಾಗುತ್ತದೆ. ಅಲ್ಲಿ ಅಸಿಟೋನ್ ಹವೆಯಾಗಿ ನಷ್ಟವಾಗಿ ಹೊಳೆಯುವ ಸೆಲ್ಯುಲೋಸ್ ಅಸಿಟೇಟಿನ ಎಳೆಗಳು ದೊರೆಯುತ್ತವೆ. ಬಹುವಾದ ಹೊಳಪು ಬೇಡವಾಗಿದ್ದರೆ, ತಂತುಕಗಳ ಮೂಲಕ ಹಾಯಿಸುವ ಮೊದಲು ದ್ರಾವಣಕ್ಕೆ ಟೈಟಾನಿಯಂ ಆಕ್ಸೈಡ್ ಸೇರಿಸಲಾಗುತ್ತದೆ.

ಅಸಿಟೇಟ್ ಎಳೆಗಳು ಪೂರ್ಣ ಕೃತಕ ಮತ್ತು ಪರಿವರ್ತಿತ ಎಳೆಗಳಿಗೆ ಮಧ್ಯಮ ಬಗೆಯವು. ಗುಣಲಕ್ಷಣಗಳಲ್ಲಿ ಅಸಿಟೇಟ್ ಎಳೆಗಳು ಬಲುಮಟ್ಟಿಗೆ ಕೃತಕ ಎಳೆಗಳನ್ನು ಹೋಲುತ್ತವೆ. ಉಷ್ಣ ಪ್ರಯೋಗದಿಂದ ಈ ಬಟ್ಟೆಗಳು ಮೆದುವಾಗುತ್ತವೆ. ಹೀಗೆ ಆದಾಗ ಒತ್ತಡವನ್ನು ಒದಗಿಸುವುದರಿಂದ ಅವುಗಳಿಗೆ ಬೇಕಾದ ಆಕಾರ ಕೊಡಬಹುದು. ಈ ಉಷ್ಣಸುನಮ್ಯತಾ (ಥರ್ಮೋಪ್ಲಾಸ್ಟಿಸಿಟಿ) ಗುಣ ಉಡುಪುಗಳಲ್ಲಿ ಬಲು ಉಪಯುಕ್ತ. ಬಟ್ಟೆಗಳ ಮೇಲೆ ಉಷ್ಣ ಉಬ್ಬಚ್ಚಿನಿಂದ (ಹೀಟ್ ಎಂಬಾಸ್ಸಿಂಗ್) ಚಿತ್ರ, ನಕ್ಷೆಗಳನ್ನು ಮೂಡಿಸಬಹುದು. ಮಡಿಕೆಗಳು ಮತ್ತು ನೆರಿಗೆಗಳು ಉಷ್ಣ ಪ್ರಯೋಗ ಮತ್ತು ಒತ್ತಡಗಳಿಂದ ಶಾಶ್ವತವಾಗಿ ಉಳಿಯುವಂತೆ ಮಾಡಬಹುದು. ಹಲವು ರಾಸಾಯನಿಕ ಸಂಸ್ಕರಣಗಳಿಂದ ಅಸಿಟೇಟ್ ವಸ್ತ್ರಗಳಿಗೆ ಜಲವಿಕರ್ಷಣ (ವಾಟರ್ ರಿಪೆಲ್ಲೆಂಟ್) ಶಕ್ತಿಯನ್ನು ನೀಡಬಹುದು. ಇಂಥ ಜಲವಿಕರ್ಷಕ ಬಟ್ಟೆಗಳನ್ನು ಮಳೆಯಲ್ಲಿ ಧರಿಸುವ ಉಡುಪುಗಳ ತಯಾರಿಕೆಯಲ್ಲಿ ಉಪಯೋಗಿಸಬಹುದು.

**ಕೃತಕ ಎಳೆಗಳು :** ಇಂದು ಮಾರುಕಟ್ಟೆಯಲ್ಲಿ ಸುಮಾರು ಅರುವತ್ತು ಬಗೆಯ ಕೃತಕ ಎಳೆಗಳು ಇವೆ. ಮುಂದಿನ ಕೆಲವು ವರ್ಷಗಳಲ್ಲಿ ಇನ್ನೂ ಹಲವನ್ನು ಪರೀಕ್ಷಿಸಬಹುದು. ಎಲ್ಲ ಕೃತಕ ಎಳೆಗಳೂ ವಿವಿಧ ಬಗೆಯ ಪಾಲಿಮರುಗಳಾಗಿದ್ದು (ಬಹ್ವಂಗಗಳು) ರಾಸಾಯನಿಕವಾಗಿ ಎಲ್ಲ ವಿಧಗಳಲ್ಲಿಯೂ ಪ್ಲಾಸ್ಟಿಕುಗಳೆಂದು ಪರಿಗಣಿಸಬಹುದು. ನೈಸರ್ಗಿಕ ಎಳೆಗಳಲ್ಲಿರುವಂತೆಯೆ, ಸರಳ ಸಂಯುಕ್ತಗಳ ಅನೇಕ ಅಣುಗಳು ಸರಪಳಿಯಂತೆ ಪರಸ್ಪರ ಕೂಡಿಕೊಂಡು ಎಳೆಗಳ ಸರಪಳಿ ಪಾಲಿಮರುಗಳಾಗುತ್ತವೆ. ರಚನೆಯಲ್ಲಿ ಹೋಲಿಕೆಗಳನ್ನು ತೋರಿಸಲು ಕೆಲವು ನೈಸರ್ಗಿಕ ಮತ್ತು ಕೃತಕ ಎಳೆಗಳ ರಾಸಾಯನಿಕ ರಚನೆಗಳನ್ನು ಸ್ಥೂಲವಾಗಿ ಮುಂದೆ ತೋರಿಸಿದೆ.

ಗ್ಲೂಕೋಸ್ + ಗ್ಲೂಕೋಸ್ → ಸೆಲ್ಲೊಬಯೋಸ್ (CB)

-(CB)-(CB)-(CB)-(CB)–ಹತ್ತಿ ಮತ್ತು ರೇಯಾನ್ ಎಳೆಗಳು

R-CONH-R-CONH-R-CONH-R- ಉಣ್ಣೆ ಮತ್ತು ರೇಷ್ಮೆಯ ಎಳೆಗಳು

HOOC-R-CONH-R-NHCO-R-CONH-ನೈಲಾನ್ ಎಳೆ

HOOC-R-COO-R-OCO-R-COO-R-OCO- ಪಾಲಿ ಎಸ್ಟರ್ ಎಳೆ

ನಮಗೆ ಈ ವರೆಗೆ ತಿಳಿದಿರುವ ಎಲ್ಲ ಕೃತಕ ಎಳೆಗಳ ವಿಚಾರವನ್ನೂ ಪೂರ್ಣವಾಗಿ ಇಲ್ಲಿ ವಿವರಿಸಲು ಸಾಧ್ಯವಿಲ್ಲ. ಹಲವು ಮುಖ್ಯ ಮತ್ತು ಪರಿಚಿತ ಎಳೆಗಳನ್ನು ಮಾತ್ರ ಮುಂದೆ ವಿವೇಚಿಸಲಾಗಿದೆ.

ನೈಲಾನ್ : ಕೃತಕ ಎಳೆಗಳಲ್ಲಿ ಮೊಟ್ಟ ಮೊದಲನೆಯದು. ಇದನ್ನು ಮೊದಲ ಬಾರಿಗೆ ಅಮೆರಿಕದ ಡು ಪಾಂಟ್ ಕಂಪನಿ ತಯಾರಿಸಿತು. ರೇಷ್ಮೆ ಮತ್ತು ಉಣ್ಣೆಗಳಂತೆ ನೈಲಾನ್ ಸಹ ಪಾಲಿ ಅಮೈಡ್ ಎಂದರೆ ಅನೇಕ ಅಮೈಡ್ ಪುಂಜಗಳು ಕೂಡಿ ಆಗಿದೆ. ರೇಷ್ಮೆ ಅಥವಾ ಉಣ್ಣೆಗಳ ಎಳೆಗಳು ಪ್ರೋಟೀನುಗಳಾಗಿದ್ದು ಅವುಗಳ ಸರಳ ಘಟಕಗಳು (ಸಿಂಪಲ್ ಯೂನಿಟ್ಸ್) ಅಮೈನೋ ಆಮ್ಲಗಳು. ಆದರೆ ನೈಲಾನ್ ಎಳೆಗಳು ದ್ವಿಪ್ರತ್ಯಾಮ್ಲೀಯ ಆಮ್ಲ (ಡೈಬೇಸಿಕ್ ಆಸಿಡ್) ಮತ್ತು ದ್ವಿಯಾಮ್ಲೀಯ (ಡೈಆಸಿಡಿಕ್) ಅಮೈನ್ ಅಣುಗಳ, ಮುಂದೆ ತೋರಿಸಿರುವ ಸಂಯೋಜನೆಯಂಥ ಅನಂತ ಸಂಯೋಜನೆಗಳಿಂದ ಆಗಿವೆ.

$$\text{HOOC-R-COOH} + \text{H}_2\text{N-R}'\text{-NH}_2 + \text{HOOC-R-COOH}$$
$$\rightarrow \text{HOOC-R-CONH-R}'\text{-NHCO-R-COOH}$$

ಅಡಿಪಿಕ್ ಆಮ್ಲ ಮತ್ತು ಹೆಕ್ಸ್ ಮೆಥಿಲೀನ್ ಡೈ ಅಮೈನುಗಳು ಒಂದರೊಡನೊಂದು ಸರಳ ರೀತಿಯಲ್ಲಿ ವರ್ತಿಸಿದಾಗ ದೊರೆಯುವುದು ಅಮೈಡ್ ನೈಲಾನ್ ಲವಣ. ನೈಲಾನ್ ಲವಣವನ್ನು ನೀರಿನಲ್ಲಿ ಲೀನಮಾಡಿ ದ್ರಾವಣವನ್ನು ಸಾಂದ್ರೀಕರಿಸಿ ಸಾರ (ಕಾನ್‌ಸೆಂಟ್ರೇಟೆಡ್) ದ್ರಾವಣವನ್ನು ಉಷ್ಣ ಮತ್ತು ಒತ್ತಡಗಳಿಗೆ ಒಳಪಡಿಸಿದಾಗ ನೈಲಾನ್ ಲವಣದ ಅಣುಗಳು ಒಂದರೊಡನೊಂದು ಸೇರಿ ಸರಪಳಿ ಪಾಲಿಮರಿನ ಬೃಹದಣುಗಳಾಗುತ್ತವೆ. ಹೀಗೆ ದೊರೆತ ಪಾಲಿಮರ್ ಅಥವಾ ಪ್ಲಾಸ್ಟಿಕನ್ನು ಉಷ್ಣದಿಂದ ಮೆದುವಾಗುವಂತೆ ಮಾಡಿ ನೀಳ ಗಂಡಿಗಳ ಮೂಲಕ ನೀರಿನ ತುಂತುರಿಗೆ ಎದುರಾಗಿ ಹೊರಚೆಲ್ಲುವಂತೆ ಮಾಡಲಾಗುತ್ತದೆ. ಆಗ ನೈಲಾನ್ ಪುನಃ ಘನ ರೂಪಕ್ಕೆ ತಿರುಗುತ್ತದೆ. ಹೀಗೆ ದೊರೆತ ಪಟ್ಟಿಗಳ ರೂಪದಲ್ಲಿರುವ ನೈಲಾನನ್ನು ಯಂತ್ರಗಳಿಂದ ಚಿಕ್ಕ ಚಿಕ್ಕೆಗಳಾಗಿ ಕತ್ತರಿಸಲಾಗುತ್ತದೆ.

ಚಿಕ್ಕೆ ನೈಲಾನನ್ನು ಉಷ್ಣದಿಂದ ಕರಗಿಸಿ ದ್ರವ ನೈಲಾನನ್ನು ತಂತುಕಗಳಲ್ಲಿ ಹಾಯಿಸಿದಾಗ ಬಲು ಸೂಕ್ಷ್ಮವಾದ ನೈಲಾನ್ ಎಳೆಗಳು ದೊರೆಯುತ್ತವೆ. ಈ ಬಗೆಯ ಹಲವಾರು ಎಳೆಗಳನ್ನು ಕೂಡಿಸಿ ತಿರುಚಿದಾಗ ನೈಲಾನ್ ನೂಲು ದೊರೆಯುತ್ತದೆ. ಈ ನೂಲಿನಲ್ಲಿ ನೈಲಾನ್ ಅಣುಗಳು ಏಕಮುಖವಾಗಿ ಇರುವುದಿಲ್ಲವಾದ್ದರಿಂದ ನೂಲಿನ ಬಲ ಬಲು ಕಡಿಮೆ. ಎಳೆತದಿಂದ ಅಣುಗಳು ಏಕಮುಖವಾಗುವಂತೆ ಮಾಡಿ ನೂಲಿನ ಬಲವನ್ನು ಹೆಚ್ಚಿಸಬಹುದು. ಹೀಗೆ ಮಾಡಿದಾಗ ನೈಲಾನಿಗೆ ಹೊಳಪು ಮತ್ತು ಪಾರದರ್ಶಕತ್ವವೂ ದೊರೆಯುತ್ತವೆ.

ನೈಲಾನ್ ಉಷ್ಣಸುನಮ್ಯ (ಥರ್ಮೋಪ್ಲಾಸ್ಟಿಕ್). ಇದರ ಅರ್ಥ ಉಷ್ಣವನ್ನು ಒದಗಿಸಿದಾಗ ನೈಲಾನ್ ಮೆದುವಾಗುತ್ತದೆ. ಆದ್ದರಿಂದ ಉಷ್ಣ ಉಬ್ಬಚ್ಚಿನಿಂದ ಬಟ್ಟೆಗಳ ಮೇಲೆ ಚಿತ್ರ, ನಕ್ಷೆಗಳನ್ನು ಮೂಡಿಸಬಹುದು : ಮತ್ತು ಆವಶ್ಯಕವಾದ ಮಡಿಕೆ ಆಕಾರಗಳು ಶಾಶ್ವತವಾಗಿ ಉಳಿಯುವಂತೆ ಮಾಡಬಹುದು. ವಿಶಿಷ್ಟ ಸಂಸ್ಕರಣಗಳಿಂದ ನೈಲಾನ್ ಬಟ್ಟೆಗೆ ಜಲವಿಕರ್ಷಣಾ ಶಕ್ತಿಯನ್ನೂ ನೀಡಬಹುದು. ನೈಲಾನನ್ನು ಕೇವಲ ಉಡುಪುಗಳಿಗೆ ಮಾತ್ರವೇ ಉಪಯೋಗಿಸುತ್ತಿಲ್ಲ. ವಿಶಿಷ್ಟ ರೀತಿಯ ಬಲು ಬಲಯುತವಾದ ನೈಲಾನನ್ನು ಟೈರುಗಳಲ್ಲಿ ಒಳಪೊದಿಕೆಗಾಗಿ ಅಧಿಕ ಪ್ರಮಾಣದಲ್ಲಿ ಉಪಯೋಗಿಸಲಾಗುತ್ತದೆ.

ಪಾಲಿ ಎಸ್ಟರು : ಟೆರಿಲೀನ್, ಟೆರೀನ್, ಡೆಕ್ರಾನ್ ಮೊದಲಾಗಿ ಹಲವು ಹೆಸರುಗಳಿಂದ ಪರಿಚಿತವಾಗಿರುವ ಈ ಎಳೆಯನ್ನು ಮೊದಲ ಬಾರಿಗೆ ತಯಾರಿಸಿದ ಕೀರ್ತಿ ಇಂಗ್ಲೆಂಡಿನ ಇಂಪೀರಿಯಲ್ ಕೆಮಿಕಲ್ ಇಂಡಸ್ಟ್ರೀಸ್ ಸಂಸ್ಥೆಗೆ ಸಲ್ಲುತ್ತದೆ. ಹೆಸರೇ ತಿಳಿಸುವಂತೆ ಅನೇಕ ಎಸ್ಟರ್ ಪುಂಜಗಳನ್ನುಳ್ಳ ಬೃಹದಣುಗಳ ಸರಪಳಿ ಪಾಲಿಮರ್ ಪಾಲಿಎಸ್ಟರ್.

ಟೆರಿಥ್ಯಾಲಿಕ್ ಆಮ್ಲ ಮತ್ತು ಎಥಿಲೀನ್ ಗ್ಲೈಕಾಲುಗಳನ್ನು ಆಮ್ಲವೇಗವರ್ಧಕವೊಂದರ ಸನ್ನಿಧಿಯಲ್ಲಿ ಉಷ್ಣಕ್ಕೆ ಒಳಗುಮಾಡಿದಾಗ ಪಾಲಿಎಸ್ಟರ್ ಪಿಂಗಾಣಿಯಂಥ ಗಡುತರವಾದ ಘನವಸ್ತುವಿನ ರೂಪದಲ್ಲಿ ದೊರೆಯುತ್ತದೆ. ಹೀಗೆ ದೊರೆತ ಕರಡು ಪಾಲಿ ಎಸ್ಟರನ್ನು ಉಷ್ಣದಿಂದ ಕರಗಿಸಿ ಮೆದುಮಾಡಿ ತಂತುಕಗಳ ರಂಧ್ರಗಳ ಮೂಲಕ ಹಾಯಿಸಿದಾಗ ಸೂಕ್ಷ್ಮವಾದ ಪಾಲಿಎಸ್ಟರ್ ಎಳೆಗಳು ದೊರೆ

ಯುತ್ತವೆ. ಈ ರೀತಿ ದೊರೆತ ಎಳೆಗಳಲ್ಲಿ ಅಣುಗಳು ಏಕಮುಖವಾಗಲು ಎಳೆಗಳನ್ನು ಎಳೆತಕ್ಕೆ ಒಳಪಡಿಸಿ ಅವುಗಳ ಬಲವೃದ್ಧಿ ಮಾಡಬಹುದು. ಹೀಗೆ ಬಲಯುತವಾದ ಪಾಲಿಎಸ್ಟರ್ ಬಹಳ ಬಾಳಿಕೆ ಬರುತ್ತದೆ. ಪಾಲಿಎಸ್ಟರ್ ಬಟ್ಟೆಯಲ್ಲಿ ಕಲ್ಮಷ, ದೂಳು ಮೊದಲಾದುವುಗಳು ಸುಲಭವಾಗಿ ಸೇರುವುದಿಲ್ಲವಾದ್ದರಿಂದ - ಇದನ್ನು ಒಗೆಯುವುದು ಬಹು ಸುಲಭ. ಸೂಕ್ಷ್ಮ ಎಳೆಗಳ ಹೊಳಪೂ ಸಾಕಷ್ಟಿದ್ದು ಉಷ್ಣ ಸುನಮ್ಯತೆಯನ್ನೂ ಪಡೆದಿರುವುದರಿಂದ ಪಾಲಿಎಸ್ಟರ್ ಬಹು ಜನಪ್ರಿಯತೆಯನ್ನು ಗಳಿಸಿದೆ.

ಅಕ್ರಿಲಿಕ್ ಎಳೆಗಳು : ಆರ್ಲಾನ್ ಮತ್ತು ಅಕ್ರಿಲಾನುಗಳೆರಡೂ ಪಾಲಿ ಅಕ್ರಿಲೋ ನೈಟ್ರಿಲ್ ಬೃಹದಣುಗಳ ಸರಪಳಿ ಪಾಲಿಮರುಗಳಿಂದ ಕೂಡಿ ಆದ ಎಳೆಗಳು. ಎಥಿಲೀನ್ ಮೂಲ ಸಂಯುಕ್ತದಿಂದ ತಯಾರಿಸಲಾದ ಅಕ್ರಿಲೋ ನೈಟ್ರಿಲನ್ನು ಪಾಲಿಮರೈಸೇಷನ್ ಕ್ರಿಯೆಗೆ ಒಳಪಡಿಸಿದಾಗ ಪಾಲಿ ಅಕ್ರಿಲೋ ನೈಟ್ರಿಲ್ ಘನರೂಪದಲ್ಲಿ ದೊರೆಯುತ್ತದೆ. ಕರಡು ಅಕ್ರಿಲೋ ನೈಟ್ರಿಲನ್ನು ಸೂಕ್ತ ಲೀನಕಾರಿಯೊಂದರಲ್ಲಿ ಲೀನಮಾಡಿ ದೊರೆತ ದ್ರಾವಣವನ್ನು ತಂತುಕಗಳ ಮೂಲಕ ಹಾಯಿಸಿ ಸೂಕ್ಷ್ಮ ಎಳೆಗಳನ್ನು ಪಡೆಯಲಾಗುತ್ತದೆ. ಈ ಬಗೆಯ ಎಳೆಗಳನ್ನೂ ಎಳೆತಕ್ಕೊಳಪಡಿಸಿ ಅಣುಗಳು ಏಕಮುಖವಾಗುವಂತೆ ಮಾಡಿ ಎಳೆಗಳು ಬಲಯುತವಾಗುವಂತೆ ಮಾಡಲಾಗುತ್ತದೆ.

ಈ ಎಳೆಗಳು ಬಲು ಉಷ್ಣಸುನಮ್ಯತೆಯನ್ನು ಪಡೆದಿರುವುದರಿಂದ ಮಡಿಕೆ, ನೆರಿಗೆಗಳು ಶಾಶ್ವತವಾಗಿ ಉಳಿಯುವಂತೆ ಮಾಡಬಹುದು ಮತ್ತು ಉಷ್ಣ ಉಬ್ಬಚ್ಚಿನ ಮೂಲಕ ಚಿತ್ರ ನಕಾಶೆಗಳನ್ನು ಮೂಡಿಸಬಹುದು. ನಿರ್ದಿಷ್ಟ ರಾಸಾಯನಿಕ ಸಂಸ್ಕರಣಗಳಿಂದ ಈ ಬಗೆಯ ಬಟ್ಟೆಗಳಿಗೆ ಜಲವಿಕರ್ಷಣ ಶಕ್ತಿಯನ್ನು ನೀಡಬಹುದಾದ್ದರಿಂದ ಅಧಿಕ ಪ್ರಮಾಣದಲ್ಲಿ ಇವನ್ನು ಮಳೆಯುಡುಪುಗಳನ್ನು ತಯಾರಿಸಲು ಉಪಯೋಗಿಸಲಾಗುತ್ತಿದೆ.

ಇತರ ಅಕ್ರಿಲಿಕ್ ಎಳೆಗಳಲ್ಲಿ ವೆರೆಲ್ ಮತ್ತು ಕ್ರೆಸ್ಲಾನುಗಳನ್ನು ಹೆಸರಿಸಬಹುದು. ಡೊ ಕೆಮಿಕಲ್ ಕಂಪನಿ ತಯಾರಿಸಿರುವ ಜೆಫ್ರಾನ್ ಅಕ್ರಿಲೊ ನೈಟ್ರಿಲ್ ಮತ್ತು ಇನ್ನು ಹಲವು ಪಾಲಿಮರುಗಳು ಕೂಡಿ ಆದ ಮಿಶ್ರ ಎಳೆ. ಇದನ್ನು ಸುಧಾರಿತ ಅಕ್ರಿಲಿಕ್ ಎಳೆ ಎಂದೆನ್ನಬಹುದು. ಅಕ್ರಿಲಿಕ್ ಎಳೆಗಳಿಗೆ ಬಣ್ಣ ಕೊಡುವುದು ಕಷ್ಟ. ಆದರೆ ಸುಧಾರಿತ ಅಕ್ರಿಲಿಕ್ ಆದ ಜೆಫ್ರಾನ್ ಸುಲಭವಾಗಿ ಬಣ್ಣ ತಳೆಯುತ್ತದೆ. ಜೆಫ್ರಾನ್ ಸಹ ಇತರ ಅನೇಕ ಕೃತಕ ಎಳೆಗಳಂತೆ ಉಷ್ಣ ಸುನಮ್ಯ. ಆದ್ದರಿಂದ ಮಡಿಕೆ, ನೆರಿಗೆಗಳನ್ನು ಶಾಶ್ವತವಾಗಿ ತಳೆಯಬಹುದು. ಈ ಎಳೆ ತಕ್ಕಮಟ್ಟಿಗೆ ನೀರನ್ನೂ ಹೀರಿಕೊಳ್ಳಬಲ್ಲುದು.

ಡಾರ್ವಾನ್ : ವಿನೈಲಿಡೀನ್ ಡೈ ನೈಟ್ರೈಲ್ ಅಣುಗಳಿಂದಾದ ಪಾಲಿಮರ್ ಎಳೆ ಡಾರ್ವಾನ್. ಇದನ್ನು ತಯಾರಿಸಲು ಬೇಕಾಗುವ ಮೂಲ ಸಂಯುಕ್ತವಾದ ಅಸಿಟಾಕ್ಸಿ ಡೈ ಸಯನೋ ಈಥೇನನ್ನು ಹೈಡ್ರೊಜನ್ ಸಯನೈಡ್ ಮತ್ತು ಅಸಿಟಿಕ್ ಆನ್ ಹೈಡ್ರೈಡುಗಳ ಸಂಯೋಜನೆಯಿಂದ ಪಡೆಯಲಾಗುತ್ತದೆ. ಅಸಿಟಾಕ್ಸಿ ಡೈ ಸಯನೋ ಈಥೇನನ್ನು ನಿರ್ದಿಷ್ಟ ರೀತಿಯಲ್ಲಿ ಉಷ್ಣಕ್ಕೆ ಒಳಪಡಿಸಿದಾಗ ವಿನೈಲಿಡೀನ್ ಡೈ ನೈಟ್ರೈಲ್ ದೊರೆಯುತ್ತದೆ. ಇದನ್ನು ವಿನೈಲ್ ಅಸಿಟೇಟಿನೊಡನೆ ಪಾಲಿಮರೈಸೇಷನ್ ಕ್ರಿಯೆಗೆ ಒಳಪಡಿಸಿದಾಗ ದೊರೆಯುವ ಸಹ ಪಾಲಿಮರನ್ನು (ಕೊ-ಪಾಲಿಮರ್) ಸೂಕ್ತ ಲೀನಕಾರಿಯೊಂದರಲ್ಲಿ ಲೀನಮಾಡಿ ದ್ರಾವಣವನ್ನು ತಂತುಕಗಳ ಮೂಲಕ ಹಾಯಿಸಿ ಡಾರ್ವಾನ್ ಎಳೆಗಳನ್ನು ಪಡೆಯಲಾಗುತ್ತದೆ. ಡಾರ್ವಾನ್ ಸಹ ಉಷ್ಣಸುನಮ್ಯ ಎಳೆ. ಉಣ್ಣೆಯ ಎಳೆಗಳಂತೆ ಇರುವ ದಪ್ಪ ಡಾರ್ವಾನ್ ಎಳೆಗಳನ್ನು ತಯಾರಿಸಬಹುದಾದ್ದರಿಂದ ಇವನ್ನು ಉಣ್ಣೆಗೆ ಬದಲಾಗಿ ಹಲವು ಎಡೆಗಳಲ್ಲಿ ಉಪಯೋಗಿಸಬಹುದು.

ಎಳೆ ಗಾಜು (ಫೈಬರ್ ಗ್ಲಾಸ್) : ಸಾಮಾನ್ಯವಾಗಿ ನಾವು ನೋಡುವ ಗಾಜು ಗಡಸು ಮತ್ತು ಬಗ್ಗಿಸಲಾರದಂತಹುದು. ಆದರೆ ಗಾಜಿನಿಂದ ಸೂಕ್ಷ್ಮ ಎಳೆಗಳನ್ನು ತಯಾರಿಸಿ ಉತ್ತಮ ಪಾರದರ್ಶಕ ಮತ್ತು ಅಪಾರದರ್ಶಕ ಬಟ್ಟೆಗಳನ್ನು ತಯಾರಿಸಬಹುದು. ಸೂಕ್ಷ್ಮ ಪರೀಕ್ಷೆ ಮಾಡದೆ ಗಾಜಿನೆಳೆಯ ಬಟ್ಟೆ ಮತ್ತು ರೇಷ್ಮೆಯ ಬಟ್ಟೆಗಳಿಗಿರುವ ವ್ಯತ್ಯಾಸವನ್ನು ಕಂಡುಹಿಡಿಯುವುದು ಕಷ್ಟ. ರೇಷ್ಮೆಯ ಎಳೆಗಳೊಡನೆ ಬೆರೆತ ಗಾಜಿನೆಳೆಯ ವಸ್ತ್ರವನ್ನು ಮೊದಲಬಾರಿಗೆ ಸುಮಾರು ಎಂಬತ್ತು ವರ್ಷಗಳ ಹಿಂದೆಯೇ ತಯಾರಿಸಲಾಗಿದ್ದರೂ ಈ ಬಟ್ಟೆ ಗಡುಸಾಗಿದ್ದು, ಮಡಚಿಡಲು ಸಹ ಸಾಧ್ಯವಾಗುತ್ತಿರಲಿಲ್ಲವಾದ್ದರಿಂದ ವಸ್ತ್ರೋದ್ಯಮದಲ್ಲಿ ಆಗಲೇ ಗಾಜು ಕಾಲಿಡಲು ಸಾಧ್ಯವಾಗಲಿಲ್ಲ. ಆದರೂ ಪ್ರಯೋಗಗಳು ಮುಂದುವರಿದು ಮೊದಲ ಮಹಾಯುದ್ಧದ ವೇಳೆಯಲ್ಲಿ ಕಲ್ನಾರಿನ ಅಭಾವದಿಂದ ಪಾರಾಗಲು ಜರ್ಮನಿಯಲ್ಲಿ ಗಾಜಿನೆಳೆಗಳನ್ನು ಉಷ್ಣ ನಿರೋಧಕ, ವಿದ್ಯುನ್ನಿರೋಧಕಗಳಾಗಿ ಕಲ್ನಾರಿಗೆ ಬದಲಾಗಿ ಉಪಯೋಗಿಸಲು ಸಾಧ್ಯವಾಯಿತು. ಇಂದಿನ ಸೂಕ್ಷ್ಮ, ಮೃದು ಮತ್ತು ಹೇಗೆ ಬೇಕಾದರೂ ಬಗ್ಗಿಸಲಾಗುವ ವಸ್ತ್ರೋದ್ಯಮದಲ್ಲಿ ಉಪಯೋಗಿಸಲಾಗುವಂಥ ಎಳೆಯನ್ನು ಅಲ್ಪ ವೆಚ್ಚದಲ್ಲಿ ಮೊದಲ ಬಾರಿಗೆ 1931ರಲ್ಲಿ ಅಮೆರಿಕದ ಓವೆನ್ಸ್-ಇಲಿನಾಯ್ಸ್ ಗ್ಲಾಸ್ ಕಂಪನಿಯಲ್ಲಿ ತಯಾರಿಸಲಾಯಿತು. 1938ರಲ್ಲಿ ಈ ಬಗೆಯ ಗಾಜಿನೆಳೆ ವಸ್ತ್ರೋದ್ಯಮದಲ್ಲಿ ಕಾಲಿಟ್ಟಿತು.

ಗಾಜಿನೆಳೆಯ ತಯಾರಿಕೆಗೆ ವಿಶಿಷ್ಟ ರೀತಿಯ ಗಾಜು ಅಗತ್ಯ. ಸಿಲಿಕ (ಮರಳು), ಸುಣ್ಣಕಲ್ಲು, ಸೋಡಿಯಂ ಕಾರ್ಬೊನೇಟ್ ಮತ್ತು ಬೋರಾಕ್ಸುಗಳನ್ನು ನಿರ್ದಿಷ್ಟ ಪ್ರಮಾಣದಲ್ಲಿ ಬೆರೆಸಿ ಅತಿ ನಿಖರ ನಿಯಂತ್ರಣವುಳ್ಳ ಕುಲುಮೆಗಳಲ್ಲಿ 1370° ಸೆಂ. ಉಷ್ಣತೆಯಲ್ಲಿ ಕಾಯಿಸಿದಾಗ ಈ ವಿಶಿಷ್ಟ ರೀತಿಯ ಗಾಜು ದೊರೆಯುತ್ತದೆ. ಇದರಿಂದ ಸಣ್ಣ ಗೋಲಿಗಳನ್ನು ಮಾಡಿ ಪರೀಕ್ಷಿಸಿದ ಮೇಲೆ ಇವನ್ನು ಪುನಃ ಸಣ್ಣ ಕುಲುಮೆಗಳಲ್ಲಿ ಕಾಯಿಸಿ ವಿಶಿಷ್ಟ ರೀತಿಯ ತಂತುಕಗಳ ಮೂಲಕ ಹಾಯಿಸಿ ಗಾಜಿನೆಳೆಗಳನ್ನು ಪಡೆಯಲಾಗುತ್ತದೆ. ಒಂದೊಂದು ತಂತುಕದಲ್ಲಿಯೂ ಸುಮಾರು 200 ಸೂಕ್ಷ್ಮವಾದ ರಂಧ್ರಗಳಿರುತ್ತವೆ. ಇವುಗಳಿಂದ ಬರುವ ಸೂಕ್ಷ್ಮ ಎಳೆಗಳನ್ನು ಕೂಡಲೇ ಅತಿವೇಗದಿಂದ ಒಟ್ಟಾಗಿ ಎಳೆತಕ್ಕೊಳಪಡಿಸಿದಾಗ ಅವುಗಳ ದಪ್ಪ ಕಡಿಮೆಯಾಗಿ ಬಲವೃದ್ಧಿಯಾಗುತ್ತದೆ. ಅನಂತರ ಹಲವು ಎಳೆಗಳನ್ನು ಒಟ್ಟಾಗಿ ತಿರುಚಿ ನೂಲು ತಯಾರಿಸಲಾಗುತ್ತದೆ. ಈ ನೂಲನ್ನು ಬಾಗಿಲ ತೆರೆ, ರಂಗಸ್ಥಳ ತೆರೆಗಳನ್ನು ನೇಯಲು ಉಪಯೋಗಿಸಬಹುದು.

ಮತ್ತೊಂದು ವಿಧಾನದಲ್ಲಿ ತಂತುಕದಿಂದ ಹೊರಬಂದ ಗಾಜಿನೆಳೆಗಳಿಗೆ ಎದುರಾಗಿ ಗಾಳಿಯ ಪ್ರವಾಹವನ್ನೇರ್ಪಡಿಸುವುದರಿಂದ ಗಾಜು 8"–15" ಉದ್ದದ ಸೂಕ್ಷ್ಮ ಎಳೆಗಳಾಗಿ ಮಾರ್ಪಡುತ್ತದೆ. ಈ ಸೂಕ್ಷ್ಮ ಎಳೆಗಳು ಮೊದಲು ಘರ್ಷಣ ನಿರೋಧಕ ಪೊಂದರ ತುಂತುರು ಮತ್ತು ಅನಂತರ ಹದವಾದ ಬೆಂಕಿಯಲ್ಲಿ ಹಾದು ತಿರುಗುತ್ತಿರುವ ಪೀಪಾಯಿ ಒಂದರ ಮೇಲೆ ಬಿದ್ದು ಹತ್ತಿಯಂತೆ ಮೃದುವಾದ ಬಲೆಯಾಗಿ ಮಾರ್ಪಡುತ್ತವೆ. ಹತ್ತಿಯಂಥ ಈ ಎಳೆಗಳ ಸಮೂಹವನ್ನು ಒಟ್ಟುಗೂಡಿಸಿ ನೈಸರ್ಗಿಕ ಎಳೆಗಳನ್ನು ನೂಲುವಂತೆಯೇ ನೂತು ಎಳೆಗಳನ್ನು ತಯಾರಿಸಲಾಗುತ್ತದೆ.

ಗಾಜಿನ ಎಳೆಗಳಿಂದ ತಯಾರಾದ ಬಟ್ಟೆಯನ್ನು ಬಲಗೊಳಿಸಲು ಅಧಿಕ ಉಷ್ಣಕ್ಕೆ ಅದನ್ನು ಒಳಪಡಿಸಬೇಕು. ಈ ವಸ್ತ್ರಕ್ಕೆ ವಿಶಿಷ್ಟ ರೀತಿಯ ಬಣ್ಣಗಳನ್ನು ಕೊಡಬಹುದು; ಮತ್ತು ಘರ್ಷಣರಕ್ಷಣ ಲೇಪಗಳನ್ನು ಕೊಡಬಹುದು. ಸೂಕ್ತ ಲೇಪಗಳಿಂದ ವಸ್ತ್ರದ ಇತರ ಗುಣಗಳನ್ನೂ ಬೇಕಾದಂತೆ ತಕ್ಕಮಟ್ಟಿಗೆ ಮಾರ್ಪಡಿಸಬಹುದು.

ಗಾಜಿನ ಎಳೆಯ ವಸ್ತ್ರಗಳು ನುಣುಪಾಗಿರುವುದರಿಂದ ಕಲ್ಮಷಗಳು ಸುಲಭವಾಗಿ ಒಳಸೇರವು. ಆದ್ದರಿಂದ ಇವನ್ನು ಕೇವಲ ಒಂದು ಒದ್ದೆಬಟ್ಟೆಯಿಂದ ಒರೆಸಿ ನಿರ್ಮಲಗೊಳಿಸಬಹುದು. ಹಲವು ಬಾರಿ ನೀರಿನಲ್ಲಿ ಅಥವಾ ಸಾಬೂನು ನೀರಿನಲ್ಲಿ ಕೇವಲ ಅದ್ದಿತೆಗೆದರೂ ಸಾಕು. ಸಾಮಾನ್ಯ ಉಷ್ಣದಿಂದ ಇವಕ್ಕೆ ಏನೂ ಹಾನಿಯಾಗದು; ಬೆಳಕು ಯಾವ ಪರಿಣಾಮವನ್ನೂ ಉಂಟುಮಾಡದು; ಕ್ರಿಮಿಕೀಟಗಳು ಬಟ್ಟೆಗಳ ಮೇಲೆ ದಾಳಿ ಮಾಡುವುದಿಲ್ಲ. ಅನೇಕ ಸಂದರ್ಭದಲ್ಲಿ ಗಾಜಿನೆಳೆಯ ವಸ್ತ್ರಗಳಿಗಿಂತ ಉತ್ತಮ ವಸ್ತ್ರ ಇನ್ನೊಂದಿಲ್ಲ. ಈಗೀಗ ಉಡುಪುಗಳನ್ನೂ ಗಾಜಿನೆಳೆಯ ವಸ್ತ್ರಗಳಿಂದ ತಯಾರಿಸಲು ಪ್ರಯತ್ನಿಸಲಾಗುತ್ತಿದೆ.

ಮಿಶ್ರ ನೂಲುಗಳು : ಸಾಮಾನ್ಯವಾಗಿ ನೈಸರ್ಗಿಕ ಮತ್ತು ಕೃತಕ ಎಳೆಗಳ ಗುಣಲಕ್ಷಣಗಳಲ್ಲಿ ಹಲವು ಮುಖ್ಯ ವ್ಯತ್ಯಾಸಗಳನ್ನು ಸುಲಭವಾಗಿ ಕಾಣಬಹುದು. ಉಷ್ಣಸುನಮ್ಯತೆ, ಕ್ರಿಮಿ ನಿರೋಧತೆ ಮತ್ತು ಉತ್ತಮ ಬಾಳಿಕೆಗಳು ಕೃತಕ ಎಳೆಗಳ ಉತ್ತಮಗುಣಗಳು. ಆದರೆ ನೈಸರ್ಗಿಕ ಎಳೆಗಳು ನೀರನ್ನು ಸುಲಭವಾಗಿ ಹೀರಬಲ್ಲವು; ಸುಲಭವಾಗಿ ಬಣ್ಣ ತಳೆಯಬಲ್ಲವು. ಸಾವಯವ ಲೀನಕಾರಿಗಳಲ್ಲಿ ಲೀನವಾಗುವುದಿಲ್ಲ, ಮತ್ತು ಸಾಕಷ್ಟು ಉಷ್ಣವನ್ನು ತಡೆಯಬಲ್ಲುವು, ನೈಸರ್ಗಿಕ ಮತ್ತು ಕೃತಕ ಎಳೆಗಳೆರಡರ ಗುಣಗಳನ್ನೂ ಪಡೆದಿರುವ ಯಾವ ಎಳೆಯೂ ಇಲ್ಲ. ಆದರೆ ಒಂದಕ್ಕಿಂತ ಹೆಚ್ಚು ಎಳೆಗಳಿಂದ ಕೂಡಿದ ಮಿಶ್ರ ನೂಲುಗಳನ್ನು ತಯಾರಿಸುವುದರ ಮೂಲಕ ತಕ್ಕಮಟ್ಟಿಗೆ ಅನೇಕ ಬಗೆಯ ಅಪೇಕ್ಷಿತ ಗುಣಗಳನ್ನೂ ಉಳ್ಳ ಬಟ್ಟೆಗಳನ್ನು ತಯಾರಿಸಲು ಸಾಧ್ಯವಾಗಿದೆ.

ನೈಲಾನ್ ಹತ್ತಿಯ ಮಿಶ್ರ ನೂಲಿಗೆ ಹತ್ತಿಯ ಎಳೆಗಿಂತಲೂ ಹೆಚ್ಚು ಧಾರಣ ಸಾಮರ್ಥ್ಯ ಇದೆ. ಈ ನೂಲಿನಿಂದ ತಯಾರಿಸಿದ ಬಟ್ಟೆಗಳು [illegible] ಪಡೆದಿದ್ದು ಹತ್ತಿಯ ಬಟ್ಟೆಗಳಿಗಿಂತ ಹಗುರವಾಗಿರುತ್ತವೆ. ಇವು ಹತ್ತಿಯ ಬಟ್ಟೆಯಷ್ಟು ಬೇಗ ಮಲಿನವಾಗುವುದಿಲ್ಲ. ಈ ಬಟ್ಟೆಗಳು ಸುಲಭವಾಗಿ ಸುಕ್ಕಾಗದಂತೆ ನೈಲಾನ್ ಮಿಶ್ರಣ ತಡೆಯುತ್ತದೆ. ಹತ್ತಿಯ ಅಂಶವೂ ಬಟ್ಟೆಗಳಿಗೆ ಹಲವು ಅಪೇಕ್ಷಿತ ಗುಣಗಳನ್ನು ನೀಡುತ್ತದೆ. ಈ ಬಗೆಯ ಬಟ್ಟೆಯಲ್ಲಿರುವ ಮೃದುತ್ವ ಕೇವಲ ನೈಲಾನಿನಿಂದಾದ ಬಟ್ಟೆಗಳಲ್ಲಿರದು. ಈ ಬಟ್ಟೆ ಹತ್ತಿಯ ಬಟ್ಟೆಗಳಷ್ಟಲ್ಲವಾದರೂ ಸಾಕಷ್ಟು ತೇವವನ್ನು ಹೀರಿಕೊಳ್ಳಬಲ್ಲುದು.

ನೈಲಾನ್ ಉಣ್ಣೆಯ ಮಿಶ್ರಣ ಹಗುರವಾದರೂ ಹೆಚ್ಚು ಬಾಳಿಕೆ ಬರುವ ಬೆಚ್ಚನೆಯ ಬಟ್ಟೆಗಳನ್ನು ನೀಡುತ್ತದೆ. ಈ ಬಗೆಯ ಬಟ್ಟೆ ಉಣ್ಣೆಎಳೆಯ ಉಷ್ಣಬಂಧಕ (ಹೀಟ್ ರಿಟೆನ್ಷನ್), ನೈಲಾನಿನ ನಯ, ಸುಕ್ಕನ್ನು ನಿರೋಧಿಸುವ ಶಕ್ತಿಗಳನ್ನು ಪಡೆದಿರುತ್ತದೆ. ನೈಲಾನ್ ರೇಷ್ಮೆಯ ಮಿಶ್ರಣದಲ್ಲಿ ತೇವವನ್ನು ಹೀರುವ ಶಕ್ತಿಯನ್ನು ರೇಷ್ಮೆಯೂ ಸುಕ್ಕನ್ನು ನಿರೋಧಿಸುವ ಶಕ್ತಿಯನ್ನು ಮತ್ತು ಧಾರಣ ಸಾಮರ್ಥ್ಯವನ್ನು ನೈಲಾನೂ ನೀಡುತ್ತವೆ. ನೈಲಾನ್ ರೇಯಾನ್ ಮಿಶ್ರಣ ಬಲು ಮಟ್ಟಿಗೆ ನೈಲಾನ್ ರೇಷ್ಮೆಯ ಮಿಶ್ರಣವನ್ನು ಹೋಲುತ್ತದೆ. ನೈಲಾನ್ ಆರ್ನೆಲ್ ಮಿಶ್ರಣವನ್ನು ಉತ್ತಮದರ್ಜೆಯ ಗ್ಯಾಬರ್ಡಿನ್ ಬಟ್ಟೆಗಳನ್ನು ತಯಾರಿಸಲು ಉಪಯೋಗಿಸಲಾಗುತ್ತದೆ.

65% ಪಾಲಿ ಎಸ್ಟರನ್ನು ಪಡೆದಿರುವ ಪಾಲಿ ಎಸ್ಟರ್ ಹತ್ತಿಯ ಮಿಶ್ರಣ **ಟೆರಿಕಾಟ್** ಎಂದು ಬಹು ಜನಪ್ರಿಯವಾಗಿದೆ. ನೈಲಾನ್ ಹತ್ತಿಯ ಮಿಶ್ರಣದಲ್ಲಿಯಂತೆ ಇದರಲ್ಲಿ ಪಾಲಿ ಎಸ್ಟರ್ ಧಾರಣ ಸಾಮರ್ಥ್ಯ, ಬಾಳಿಕೆ, ಸುಕ್ಕಿಗೆ ನಿರೋಧತೆಯನ್ನು ನೀಡಿ ಉಡುಪಿನ ಮಡಿಕೆ, ನೆರಿಗೆಗಳು ಬೇಗ ಕೆಡದಿರುವಂಥ ಸಾಮರ್ಥ್ಯ ಒದಗಿಸುತ್ತದೆ. ಮೃದುತ್ವವನ್ನೂ ನೀರನ್ನು ಹೀರಬಲ್ಲ ಶಕ್ತಿಯನ್ನೂ ಹತ್ತಿ ನೀಡುತ್ತದೆ. ಪಾಲಿ ಎಸ್ಟರ್ ಉಣ್ಣೆಯ ಮಿಶ್ರಣವುಳ್ಳ ಬಟ್ಟೆಗಳಲ್ಲಿ ಉಷ್ಣ ಪ್ರತಿಬಂಧಕ ಶಕ್ತಿಯನ್ನು ಉಣ್ಣೆಯೂ ಬಾಳಿಕೆಯನ್ನು ಮತ್ತು ಮಡಿಕೆಗಳು ಉಳಿಯುವ ಶಕ್ತಿಯನ್ನು ಪಾಲಿ ಎಸ್ಟರೂ ನೀಡುತ್ತವೆ.

ಇದೇ ಬಗೆಯಾಗಿ ಬಟ್ಟೆಗಳ ಗುಣಗಳನ್ನು ಮಾರ್ಪಡಿಸಲು, ನಮಗೆ ಸಾಧ್ಯವಾದಷ್ಟು ಮಟ್ಟಿಗೆ ಅಪೇಕ್ಷಿತ ಗುಣಗಳನ್ನು ಪಡೆದಿರುವ ಬಟ್ಟೆಗಳನ್ನು ಪಡೆಯಲು ಸೂಕ್ತ ರೀತಿಯ ಎಳೆಗಳ ಮಿಶ್ರಣಗಳನ್ನು ತಯಾರಿಸಬಹುದು. ಹೀಗೆಂದ ಮಾತ್ರಕ್ಕೆ ಯಾವ ಎಳೆಯೊಡನೆ ಯಾವ ಎಳೆಯನ್ನಾಗಲೀ ಯಾವ ಪ್ರಮಾಣದಲ್ಲಿಯಾಗಲೀ ಉಪಯೋಗಿಸಬಹುದೆಂದು ತಿಳಿಯಲಾಗದು. ಮಿಶ್ರಣದ ರೀತಿ, ಪ್ರಮಾಣಗಳು ಸರಿಯಾಗಿಲ್ಲದಿದ್ದಲ್ಲಿ ಬಟ್ಟೆ ಉತ್ತಮವಾಗಿರದು. ಕೃತಕ ನೈಸರ್ಗಿಕ ಎಳೆಗಳ ಮಿಶ್ರಣದಲ್ಲಿ ಪ್ರಮಾಣಗಳು ಸರಿಯಾಗಿಲ್ಲದಿದ್ದಲ್ಲಿ ಸಾಮಾನ್ಯವಾಗಿ ಹೆಚ್ಚು ಧಾರಣ ಸಾಮರ್ಥ್ಯವನ್ನುಳ್ಳ ಕೃತಕ ಎಳೆಗಳು ನೈಸರ್ಗಿಕ ಎಳೆಗಳನ್ನು ಕತ್ತರಿಸುತ್ತವೆ. ಸೂಕ್ತ ಸಂಸ್ಕರಣಗಳಿಗೆ ಒಳಪಡಿಸದಿದ್ದಲ್ಲಿ ಹತ್ತಿಯಂಥ ನೈಸರ್ಗಿಕ ಎಳೆಗಳು ಸೇದುತ್ತವೆ. ಆದರೆ ಅದೇ ದರದಲ್ಲಿ ಕೃತಕ ಎಳೆ ಸೇದದಿರುವುದರಿಂದ ಇಂಥ ಮಿಶ್ರಣದಿಂದ ತಯಾರಿಸಿದ ಬಟ್ಟೆಗಳು ವಿಚಿತ್ರ ಮತ್ತು ಅಸಹ್ಯ ಆಕಾರಗಳನ್ನು ತಳೆಯುತ್ತವೆ. ಆದ್ದರಿಂದ ಸೂಕ್ತ ಮಿಶ್ರಣಗಳ ಬಗ್ಗೆ ನಿರ್ಣಯಗಳಿಗೆ ಬರಲು ಅನೇಕ ಪ್ರಯೋಗ, ಪರೀಕ್ಷೆಗಳು ಅಗತ್ಯ. ಪ್ರಯೋಗಶಾಲೆ, ಪರೀಕ್ಷಾಲಯಗಳಿಂದ ಅಂಗೀಕರಿಸಲ್ಪಟ್ಟು ಹೊರಬಂದ ಮಿಶ್ರಣಗಳು ಸಾಮಾನ್ಯವಾಗಿ ಯಾವೊಂದು ಎಳೆಯಿಂದಾದ ಬಟ್ಟೆಗಳಿಗಿಂತಲೂ ಹೆಚ್ಚು ಅಪೇಕ್ಷಿತ ಗುಣಗಳನ್ನು ಪಡೆದಿದ್ದು ಹೆಚ್ಚು ಉಪಯುಕ್ತತೆಯನ್ನು ಪಡೆದಿರುತ್ತವೆ. ಕೃತಕ ಎಳೆಗಳಲ್ಲಿರುವ ಉಷ್ಣಸುನಮ್ಯತೆ ಮತ್ತು ಕಲ್ಮಷಗಳನ್ನು ದೂರೀಕರಿಸುವ ಗುಣಗಳು ಈಗಿನ ಉಡುಪುಗಳಲ್ಲಿ ಅತ್ಯಪೇಕ್ಷಿತ ಗುಣಗಳಾಗಿವೆ. ಕೃತಕ ಎಳೆಗಳನ್ನುಳ್ಳ ಮಿಶ್ರಣಗಳೂ ಸಾಕಷ್ಟು ಮಟ್ಟಿಗೆ ಈ ಗುಣಗಳನ್ನು ಪಡೆದಿರುವುದರಿಂದ ವಸ್ತ್ರಜಗತ್ತಿನಲ್ಲಿ ಇವು ಪ್ರಮುಖ ಸ್ಥಾನ ಪಡೆಯುವಂತೆ ಮಾಡಿವೆ. (ಕೆ.ಟಿ.ಎಸ್.)

**ಎಳೆಗೂಸಿನ ಈಲಿಯ ಅರಿಶಿನಾರಿಗೆ :** ಭಾರತದಲ್ಲಿ, ಮುಖ್ಯವಾಗಿ ದಕ್ಷಿಣ ನಾಡುಗಳಲ್ಲಿ ಎಳೆಗೂಸುಗಳಿಗೆ ಆಗಾಗ್ಗೆ ಜ್ವರ ಬಂದೊ ಉಚ್ಚಾಟವಾಗೊ, ಗೊತ್ತಾದ ಕಾರಣವಿಲ್ಲದೆ ಈಲಿ ನಿಧಾನವಾಗಿ ಕೆಡುತ್ತ ದೊಡ್ಡದಾಗಿ ನಾರಿನಂತಾಗಿ ಹೊಟ್ಟೆ ಉಬ್ಬರಿಸಿಕೊಂಡು, ಕೆಲವೇಳೆ ಕಾಮಾಲೆಯಾಗಿ, ಬಹಳ ಕೂಸುಗಳಲ್ಲಿ ಕೊನೆಗೆ ಮಾರಕವಾಗುವ ಬೇರೂರುವ ರೋಗ (ಇನ್‌ಫೆಂಟೈಲ್ ಪೈರಾಲಿಸಿಸ್). ಮೊಟ್ಟಮೊದಲು ಈ ರೋಗವನ್ನು ವಿವರಿಸಿದಾತ ಡಾ. ಸೆನ್ (1887). ಈಲಿಯಲ್ಲಿನ ಜೀವಕಣಗಳ ಅನುವಳಿಕೆಯಾಗಿ (ಡೀಜನರೇಷನ್) ಮತ್ತೆ ಬೆಳೆದು ನಾರಿನಂತಾಗಿ ಅದರ ರಚನೆಯೇ ಹಾಳಾಗುವುದಕ್ಕೆ ಅರಿಶಿನಾರಿಗೆ (ಸಿರೋಸಿಸ್) ಎಂದಿದೆ.

ಕಾರಣಗಳು : ಒಂದರಿಂದ ಮೂರನೆಯ ವರ್ಷಗಳಲ್ಲಿ ಬಡವ ಬಲ್ಲಿದ, ಗಂಡು ಹೆಣ್ಣು ಎಂಬ ವ್ಯತ್ಯಾಸಗಳಿಲ್ಲದೆ, ಕೆಲವು ತಲೆಮಾರುಗಳಲ್ಲಿ ಈ ರೋಗ ಬರುವಂತೆ ತೋರುವುದು. ಕಾರಣ ಸರಿಯಾಗಿ ತಿಳಿದಿಲ್ಲ. ಎಳೆಗೂಸಿನ ಉಣಿಸು, ಜೀವವಸ್ತು ಕರಣದ (ಮೆಟಬಾಲಿಕ್) ಅಂಶ, ಜಠರದಲ್ಲಿ ಹುಟ್ಟಿ ಈಲಿಯನ್ನು ಕೆಡಿಸುವ ಕೆರಳಿಕ ಅಂಶ, ತಾಯ ಆಹಾರದಿಂದ ಹುಟ್ಟಿ ಬಸುರಲ್ಲೂ ಆಮೇಲೆ ಹಾಲೂಡಿಸುವಾಗಲೂ ಎಳೆಗೂಸಿಗೆ ಸಾಗುವ ವಿಷಕರ ಅಂಶ ಇವುಗಳಲ್ಲಿ ಯಾವುದಾದರೂ ಕಾರಕ ಆಗಿರಬಹುದೆಂಬ ಶಂಕೆಯಿದೆ. ಆದರೆ, ಉಣಿಸಿನಲ್ಲಿ ಆ ತೆರನ ಕೆಡುಕಿನ ವಸ್ತು ಇಲ್ಲಿನ ತನಕ ಯಾವುದೂ ಸಿಕ್ಕಿಲ್ಲ. ತೀರ ಬಡತನದಲ್ಲಿ ಬೆಳೆವ ಎಳೆಗೂಸಿನಲ್ಲಿ ಉಣಿಸು ಕೊರೆಯಾಗಿ ಕ್ವಾಷಿಯಾರ್ಕರ್ ರೋಗ ಬಂದು ಈಲಿ ದೊಡ್ಡದಾಗುವುದಾದರೂ ಆ ಮಕ್ಕಳಲ್ಲಿ ಈ ಅರಿಶಿನಾರಿಗೆ ಕಂಡುಬರದು. ಇನ್ನೂ ಹೆಚ್ಚಿನದಾಗಿ, ಯಾವುದೊ ಸೋಂಕು ಕಾರಕವನ್ನೆಲು ಬಲವಾದ ಅನುಮಾನಗಳೂ ಇವೆ. ಆಗಾಗ್ಗೆ ಜ್ವರ, ಉಚ್ಚಾಟ, ಉಸಿರ್ನಾಳ ಪುಪ್ಪುಸಗಳ ಬೇನೆಗಳ ಕಾಟ ; ಜ್ವರ ಬಂದಾಗ ಬಿಳಿರಕ್ತ ಕಣಗಳ ಹೆಚ್ಚಳ ; ಹೆತ್ತವಳ ಮಾಸಿನ ಮೂಲಕ ಸಾಗಿಬರುವ ಒಂದು ವಿಷಕಣದಿಂದ (ವೈರಸ್) ಈಲಿಯುರಿತವಾಗುವುದು (ಹೆಪಟೈಟಿಸ್)—ಹೀಗಾದಾಗ ಅರಿಶಿನಾರಿಗೆ ಕಂಡುಬಂದಿದೆ. ಅರಿಶಿನಾರಿಗೆ ಆಗಿರುವ ಎಳೆಗೂಸುಗಳ ಮಲದಲ್ಲಿ ಸೋಸಿಹೋಗುವ ಕಾರಕಗಳನ್ನು ಬಿಳಿ ಇಲಿಗಳಿಗೆ ಚುಚ್ಚಿದಾಗ ಅವಕ್ಕೆ ಅರಿಶಿನಾರಿಗೆ ಆಗಿದೆ. ಒಟ್ಟಿನಲ್ಲಿ ಬಹಳ ಎಳೆಗೂಸುಗಳಲ್ಲಿ ಈಲಿಯ ಅರಿಶಿನಾರಿಗೆ ಆಗಲು ಹಲವಾರು ಕಾರಕಗಳೇ ಇರಬಹುದಾದರೂ ಅವುಗಳ ನಿಜವಾದ ಪಾತ್ರ, ಒಂದರೊಡನೊಂದರ ಸಂಬಂಧ ಇವಾವುದೂ ಇನ್ನೂ ಖಚಿತವಾಗಿ ತಿಳಿದಿಲ್ಲ. ವಿಷಕಣದಿಂದ ಹತ್ತುವ ಸೋಂಕು, ತಲೆಮೊರೆ ಗುಣ, ಜೀವಿವಿಷಗಳು ಮುಖ್ಯ ಎನ್ನಬಹುದು.

ರೋಗ ಪ್ರಭಾವ : ರೋಗದ ಎಳಸಿನಲ್ಲಿ, ಈಲಿಯ ಜೀವಕಣಗಳಿಗೆ ಅಷ್ಟಿಷ್ಟು ಹಾನಿಯಾಗಿರುತ್ತದೆ. ಹಾನಿಗೊಂಡ ಜೀವಕಣಗಳು ಅಲ್ಲಲ್ಲೇ ಗುಂಪುಗಟ್ಟಿರಬಹುದು. ಇಲ್ಲವೇ ಈಲಿಯಲ್ಲಿ ಎಲ್ಲೆಲ್ಲೂ ಇರಬಹುದು. ಯಾವ ಹಂತದಲ್ಲೇ ಆಗಲಿ ಕೊಬ್ಬಿನ ಜೀವಕಣಗಳು ಕಂಡುಬರವು. ಈಲಿಯ ವಿಶೇಷ ಜೀವಕಣಗಳ ಬದಲಾಗಿ ಸಾಮಾನ್ಯವಾದವು ಅಲ್ಲಲ್ಲಿ ನುಗ್ಗಿ ಪಸರಿಸಿರುತ್ತವೆ. ಅನುವಳಿದು (ಡಿಜನರೇಟೆಡ್) ಹಾಳಾದ ಜೀವಕಣಗಳ ಜಾಗದಲ್ಲಿ ನಾರಿನಂತಿರುವ ತಂತುಕ (ಫೈಬ್ರಸ್) ಊತಕ ಸೇರಿಕೊಳ್ಳುತ್ತದೆ. ಇದು ಹುಸಿ ಕಿರಿಹಾಲೆ (ಲಾಬ್ಯೂಲ್) ತೆರನೊ ಬಲೆ ತೆರನೊ ಇರುತ್ತದೆ. ಇವುಗಳ ನಡುವೆ ಸಿಕ್ಕಿಕೊಂಡ ಈಲಿಯ ಜೀವಕಣಗಳು ಸೊಟ್ಟಾಪಟ್ಟೆ ಆಗುತ್ತವೆ. ಧಮನಿಗಳಿಗೆ (ಆರ್ಟರೀಸ್) ಆತಂಕವಾಗದು. ತೂರುಗೊಂದಿಯ ಸಿರಗಳಲ್ಲಿ (ಪೋರ್ಟಲ್ ವೆಯ್ನ್ಸ್) ಒತ್ತಡವೇರುವುದರಿಂದ ಅನ್ನನಾಳದ ಕೆಳಕೊನೆಯಲ್ಲಿ ಸಿರಗಳು ಊದಿಕೊಂಡು ಬಿರಿದಾಗ ರಕ್ತವಾಂತಿ ಆಗಬಹುದು. ಹಾಗೆ ಹೊಕ್ಕುಳ ಸುತ್ತ ಹೊಟ್ಟೆ ಮೇಲೆ ಸಿರಗಳು ಊದಿಕೊಂಡು ತಿರಿಗಟ್ಟುತ್ತವೆ.

ಲಕ್ಷಣಗಳು : ಈ ರೋಗ ಎಂದಿನಿಂದ ತಲೆದೋರಿತೆಂದು ಹೇಳಲಾಗದಷ್ಟು ಒಳಗೊಳಗೇ ಬಲಿಯುತ್ತ ಬರುವುದು. ಸಾಮಾನ್ಯವಾಗಿ ಹೆತ್ತವರು ಚೆನ್ನಾಗಿ ನೋಡಿಕೊಳ್ಳುತ್ತಿರುವ ಎಳೆಗೂಸಿಗೆ ಸಣ್ಣಜ್ವರ ಬಂದು ಇಳಿಯುತ್ತದೆ. ಆದರೆ, ಭೇದಿ, ಕೆಮ್ಮು. ಜ್ವರಗಳೊಂದಿಗೆ ಕೂಸು ಮತ್ತೆ ಮತ್ತೆ ಹಾಸಿಗೆ ಹಿಡಿಯುತ್ತದೆ. ಮೇಲಿಂದ ಮೇಲೆ ಹೀಗಾಗುತ್ತ ಬಂದಂತೆಲ್ಲ ಕೂಸು ಸಣಕಲಾಗುತ್ತ ಹೊಟ್ಟೆ ದಪ್ಪವಾಗಿ, ಲವಲವಿಕೆ ಕುಂದುತ್ತ, ಹಸಿವಿಲ್ಲದೆ ರಚ್ಚೆ ಹಿಡಿವುದನ್ನು ತಾಯಿ ಗುರುತಿಸಿ ವೈದ್ಯರಿಗೆ ತೋರಿಸುವ ಹೊತ್ತಿಗೆ ಬಲಗಡೆ ಪಕ್ಕೆಲುಬಿನ ಕೆಳಗೆ ಒಂದೆರಡು ಅಂಗುಲಗಳಷ್ಟು ಬೆಳೆದು ಈಲಿ ದೊಡ್ಡದಾಗಿರುವುದು. ಇದರೊಂದಿಗೇ ತೊರಳೆ (ಪ್ಲೀಹ) ಕೂಡ ಊದಿರಬಹುದು.

ಕೆಲವೇ ವಾರಗಳಲ್ಲಿ ಎಳೆಗೂಸಿನ ಆರೋಗ್ಯ ತೀರ ಕೆಟ್ಟು, ಆಗಾಗ್ಗೆ ಜ್ವರ ಕಾಣಿಸಿಕೊಂಡು ಹೊಟ್ಟೆಯಲ್ಲಿ ತುಸು ನೀರ್ಗೂಡಿ, ಈಲಿ ತೊರಳೆಗಳು ಮತ್ತೂ ಗಡುಸಾಗಿ ನಾರಾಗುತ್ತವೆ. ಈಲಿಯಲ್ಲಿ ರಕ್ತ ಹರಿವಿಗೆ ತಡೆಯಾಗುವುದರಿಂದ ಹೊಟ್ಟೆಯ ಮೇಲೆ ಹೊಕ್ಕುಳಸುತ್ತ ಸಿರಗಳು ಹಿಗ್ಗಿ, ಮೈಚರ್ಮ, ಕಣ್ಣು ಕೊಂಚ ಹಳದಿಬಣ್ಣಕ್ಕೆ ತಿರುಗಬಹುದು. ಮಲ ಬಿಳಿಚಿಕೊಂಡು ಉಚ್ಚೆ ಹಳದಿಯಾಗುವುದು. ರಕ್ತಕೊರೆಯಾಗಿ (ಅನೀಮಿಯ), ಬಿಳಿರಕ್ತಕಣಕೊರೆಯಾಗಿ ರಕ್ತದಲ್ಲಿನ ಚಪ್ಪಟಿಕಗಳ (ಪ್ಲೇಟೆಲೆಟ್ಸ್) ಕೊರತೆಯಿಂದ ಚರ್ಮದಡಿ ರಕ್ತ ಜಿನುಗಿ ನೀಲಿ ಕಲೆಗಳೇಳುತ್ತವೆ.

ಕೊನೆಯ ಹಂತವಾಗಿ, ಹೊಟ್ಟೆಯಲ್ಲಿ ವಿಪರೀತ ನೀರ್ದುಂಬಿಕೊಂಡು, ಹೊಕ್ಕುಳು ಹೊರಮಗುಚಿಕೊಂಡು ಕೈ, ಕಾಲು ಮೊಗಗಳ ಉಬ್ಬರವಾಗಿ, ಈಲಿ ಒರಟೊರಟೂ ಹಿರಿಹಿಗ್ಗಿ ಬಲುಗಡುಸೂ ನಾರೂ ಆಗಿ, ತೊರಳೆಯೂ ಇನ್ನಷ್ಟು ದೊಡ್ಡದಾಗುವುದು. ಉಬ್ಬಸ, ಅರವೆ (ಅಜೀರ್ಣ), ಆಗಾಗ್ಗೆ ರಕ್ತವಾಂತಿ ಆಗುತ್ತ, ಈಲಿಯ ಮಯಕವಾಗಿ (ಹೆಪ್ಯಾಟಿಕ್ ಕೋಮ) ನಿಧಾನವಾಗಿ ಒಂದು ದಿನ ಕೂಸು ಅಸು ನೀಗುವುದು.

ಚಿಕಿತ್ಸೆ : ತೀರ ಎಳಸಿನಲ್ಲೇ ರೋಗವನ್ನು ಕಂಡುಕೊಂಡರೆ, ವಾಸಿಯಾಗಬಹುದು. ಈಲಿ ದೊಡ್ಡದಾಗಿರುವುದನ್ನು ಗುರುತಿಸಿದರೆ ಮಾತ್ರ ಇದು ಸಾಧ್ಯ. ಈಲಿಯಲ್ಲಿ ಒಂದು ಸಣ್ಣ ತೂತುಸೂಜಿಯನ್ನು ತೂರಿಸಿ ಈಲಿಯ ಬಲು ಸೂಕ್ಷ್ಮ ಚೂರನ್ನು ಮಾದರಿಯಾಗಿ ಹೊರತೆಗೆದು ತಪಾಸುಮಾಡಿ ರೋಗವನ್ನು ಖಚಿತಪಡಿಸಲೂಬಹುದು. ನಿಜವಾದ ಕಾರಣವೇ ಗೊತ್ತಿಲ್ಲವಾದ್ದರಿಂದ, ಖಚಿತ ರೋಗಕ್ಕೆ ಮದ್ದುಗಳೇ ಇಲ್ಲ. ಆದರೆ, ಎಳೆಗೂಸಿಗೆ ಸಾಕಷ್ಟು ಶಮನ ಕೊಡಲು ಕೆಲವು ಕ್ರಮಗಳನ್ನು ಕೈಗೊಳ್ಳಬಹುದು. ಕೂಸು ಆದಷ್ಟೂ ಹಾಯಾಗಿ ಮಲಗಿರಬೇಕು. ಉಣಿಸಿನಲ್ಲಿ ಪಥ್ಯವಿಲ್ಲವಾದರೂ ಪ್ರೋಟೀನುಗಳನ್ನು ಹೆಚ್ಚಾಗಿ ನೀಡಬೇಕು. ಜೀವಾತುಗಳು ಸಾಕಷ್ಟಿರಬೇಕು. ಉಪ್ಪು, ಕೊಬ್ಬು ಕಡಿಮೆ ಮಾಡಬೇಕು.

ಸೋಂಕುಗಳು ತಲೆದೋರಿದರೆ ಜೀವಿವಿರೋಧಕಗಳನ್ನು (ಆಂಟಿಬಯೊಟಿಕ್ಸ್) ಕೊಡಬೇಕು. ಉಚ್ಚಾಟ ಆಗುತ್ತಿದ್ದರೆ, ಮದ್ದುಗಳಿಂದ ತಡೆಯಬಹುದು. ಹೊಟ್ಟೆ ಉಬ್ಬರ ಬಲುಹೆಚ್ಚಿ ಏರುಸಿರು ಉಬ್ಬಸವಾಗಿದ್ದರೆ ಹೊಟ್ಟೆಯಲ್ಲಿ ನೀರು ಕೂಡಿಕೊಂಡಂತೆಲ್ಲ ತೂತುಸೂಜಿ ಹಾಕಿ ತೆಗೆದುಹಾಕಬೇಕು. ಕಾರ್ಟಿಸೋನ್ ತೆರನ ಮದ್ದುಗಳನ್ನು ಕೊಡುತ್ತಿರುವ ತನಕ ಈಲಿ ನಾರುಗಟ್ಟದು. (ನೋಡಿ—ಈಲಿ: ಪಿತ್ತಕೋಶ, ಪಿತ್ತನಾಳ, ಈಲಿಯ ರೋಗಗಳು) (ಪಿ.ಸಿ.ಬಿ.; ಎ.ಎಸ್‌ಎ.)

**ಎಳೆಯರ ಅರನಾರಿ:** ನೋಡಿ--ಪೋಲಿಯೋಮಯಲೈಟಿಸ್.

**ಎಳೆಗೂಸುಗಳ ಪಾಲನೆ:** ಮಗುವನ್ನು ಸಲಹುವುದು ಅತ್ಯಂತ ಜವಾಬ್ದಾರಿಯುತವಾದ ಹಾಗೂ ಕಷ್ಟದ ಕೆಲಸ. ಇದರ ಪೂರ್ಣ ಹೊಣೆಯಿರುವುದು ಕಂದನಿಗೆ ಜನ್ಮಕೊಟ್ಟ ತಾಯಿಗೆ ಮಾತ್ರ. ಏನೂ ಅರಿಯದ ಮುಗ್ಧ ಮಗುವನ್ನು ಬೆಳೆಸಿ ದೊಡ್ಡವನನ್ನಾಗಿ ಮಾಡುವುದರಲ್ಲಿ ತಾಯಿಗೆ ಅಪೂರ್ವ ಆನಂದವಿರುತ್ತದೆ. ಮಗುವನ್ನು ದೈಹಿಕವಾಗಿ ಹಾಗೂ ಮಾನಸಿಕವಾಗಿ ಆರೋಗ್ಯವಂತನನ್ನಾಗಿ ಬೆಳೆಸುವುದು ಆರೈಕೆಯ ಮೂಲ ತಿರುಳು. ಇದನ್ನು ಯಶಸ್ವಿಯಾಗಿ ನಿರ್ವಹಿಸಲು ತಾಯಿಗೆ ತುಂಬ ಆತ್ಮವಿಶ್ವಾಸವಿರಬೇಕು. ಈ ದೃಢತೆಯನ್ನು ಆಕೆ ಸಂಪಾದಿಸಬೇಕಾದರೆ ಆರೈಕೆಯ ಶಾಸ್ತ್ರೀಯಜ್ಞಾನದ ಅರಿವು ಮೊದಲ ಹೆಜ್ಜೆ. ಹಿರಿಯರ ಹಾಗೂ, ಅನುಭವಿಕರ ಮಾತುಗಳಿಗೆ ಕಿವಿಗೊಟ್ಟು, ಅದರಲ್ಲಿ ತನಗೆ ಉಪಯುಕ್ತವಾಗುವಂಥವನ್ನು ಬಳಸಿಕೊಳ್ಳುವುದು ಎರಡನೆಯ ಹೆಜ್ಜೆ.

ಹಸುಗೂಸಿಗೆ ಮುಖ್ಯವಾಗಿ ಬೇಕಾಗಿರುವುದು ತಾಯಿಯ ಪ್ರೀತಿ ಮತ್ತು ಆರೈಕೆ. ಬೆಳವಣಿಗೆಗೆ ಅಗತ್ಯವಾದುದು ಆಹಾರ ಮತ್ತು ಪೌಷ್ಟಿಕಾಂಶಗಳು. ಮಗುವಿನ ಆರೋಗ್ಯ ಕಾಪಾಡುವ ಸಾಧನಗಳೂ ತಾಯಿಯಾದವಳಿಗೆ ತಿಳಿದಿರಬೇಕು. ರೋಗರುಜಿನಗಳು ಬಾರದಂತೆ ಆಕೆ ಮುಂಜಾಗ್ರತೆ ಕ್ರಮಗಳನ್ನು ಕೈಗೊಳ್ಳಬೇಕಲ್ಲದೆ ರೋಗ ನಿದಾನವನ್ನೂ ಅರಿತಿರಬೇಕು. ಮಗು ಸೌಹಾರ್ದಭಾವದಿಂದಲೂ ಶಿಸ್ತು ವಿಧೇಯತೆಗಳಿಂದಲೂ ನಡೆದುಕೊಳ್ಳುವಂತೆ ಆಕೆ ಶಿಕ್ಷಣ ನೀಡಬೇಕು. ಆದರೂ ಮಗುವಿಗೆ ತನ್ನ ವ್ಯವಹಾರಗಳಲ್ಲಿ ಪೂರ್ಣ ಸ್ವಾತಂತ್ರ್ಯವಿರುವಂತೆ ನೋಡಿಕೊಳ್ಳಬೇಕು. ಇಂಥ ಮಕ್ಕಳು ನಾಳಿನ ಸತ್ಪ್ರಜೆಗಳಾಗುತ್ತಾರೆ.

ಮಗುವಿನ ವಯೋಮಾನವನ್ನನುಸರಿಸಿ ಆರೈಕೆಯ ಹಂತಗಳನ್ನು ಮೂರಾಗಿ ವಿಂಗಡಿಸಬಹುದು. 1 ಮಗುವಿನ ಮೊದಲ ಆರುತಿಂಗಳು, 2 ಆರು ತಿಂಗಳಿಂದ ವರ್ಷದವರೆಗೆ, 3 ಒಂದು ವರ್ಷದಿಂದ ಎರಡು ವರ್ಷಗಳವರೆಗೆ.

ಮಗುವಿನ ಮೊದಲ ಆರುತಿಂಗಳು : ಈ ಅವಧಿಯಲ್ಲಿ ಮಗು, ತನ್ನೆಲ್ಲ ಪೂರೈಕೆಗಳಿಗೆ ತಾಯಿಯನ್ನೇ ಅವಲಂಬಿಸುತ್ತದೆ. ಆಗ ಅದರ ಹೊಟ್ಟೆಗೆ ಆಹಾರವೆಂದರೆ ತಾಯ ಹಾಲು ಇಲ್ಲವೆ ಹೊಯ್‌ಹಾಲು. ತಾಯಿಯ ತೋಳಿನ ಆಶ್ರಯ ಕಂದನಿಗೆ ದೊಡ್ಡ ಆಧಾರ. ಮಗು ಅಸಹಾಯಕವಾಗಿ ಕಂಡರೂ ತನಗೆ ಬೇಕಾದುದೆಲ್ಲವನ್ನೂ ಖಂಡಿತ ದೊರಕಿಸಿಕೊಳ್ಳುತ್ತದೆ. ಹಸಿವಾದಾಗ ಅಳುತ್ತದೆ. ಮುಖದ ಮೇಲೆ ಬಟ್ಟೆಯೆಳೆದುಕೊಂಡು ಉಸಿರು ಕಟ್ಟಿದರೆ ಚೀರುತ್ತದೆ. ಅದನ್ನು ಕೇಳಿದೊಡನೆ ತಾಯಿ ಎಲ್ಲಿದ್ದರೂ ಓಡಿಬರಬೇಕಾಗುತ್ತದೆ.

ಎಳೆಯ ಮಗುವಿಗೆ ತಾಯ ಹಾಲು ಅತ್ಯಂತ ಪುಷ್ಟಿದಾಯಕವೂ ಆರೋಗ್ಯಕರವಾದುದೂ ಆಗಿದೆ. ಇದು ಶುಚಿಯಾದುದೂ ಹೌದು. ತಾಯಿಗೆ ನಿಜವಾದ ಹಾಲು ಬರುವ ಮುಂಚೆ, ಒಂದು ಬಗೆಯ ಹಳದಿ ದ್ರವ ಮೊಲೆಯಿಂದ ಒಸರುತ್ತದೆ. ಇದರಲ್ಲಿ ಮಗುವನು ಹಲವಾರು ಅಂಟುಜಾಡ್ಯಗಳಿಂದ (ದಡಾರ, ಚರ್ಮರೋಗ ಮತ್ತು ನಾಯಿಕೆಮ್ಮು) ತಪ್ಪಿಸುವ ಪ್ರತ್ಯಂಶಗಳು ಇವೆ. ತಾಯ ಹಾಲು ಮಗುವಿಗೆ ಸುಲಭವಾಗಿ ಜೀರ್ಣವಾಗುತ್ತದೆ. ಈ ಹಾಲು ಕುಡಿಯುವ ಮಕ್ಕಳಲ್ಲಿ ಅಜೀರ್ಣ, ಭೇದಿ ಆಗುವುದು ಕಡಿಮೆ. ಮಗು ಹುಟ್ಟಿದ ಮೂರನೆಯ ದಿನದಿಂದ ತಾಯಿ ಹಾಲು ಕೊಡುತ್ತಾಳೆ. ಮೊದಲು ಮೂರು ಗಂಟೆಗಳಿಗೊಂದಾವರ್ತಿ ಹಾಲು ಕೊಡಬಹುದು. ಮಗುವಿಗೆ ಮೂರುತಿಂಗಳಾಗುವ ಹೊತ್ತಿಗೆ ನಾಲ್ಕು ಗಂಟೆಗೊಮ್ಮೆ ಕೊಟ್ಟರೆ ಸಾಕು. ಕೆಲವು ಮಕ್ಕಳು ಈ ರೂಢಿಗೆ ಚೆನ್ನಾಗಿ ಹೊಂದಿಕೊಳ್ಳುತ್ತವೆ. ಮತ್ತೆ ಕೆಲವಕ್ಕೆ ಈ ಲೆಕ್ಕಾಚಾರ ಒಗ್ಗುವುದೇ ಇಲ್ಲ. ಇಂಥ ಮಕ್ಕಳು ಹಸಿವೆಯಾಗಿ ಅತ್ತಾಗಲೆಲ್ಲ ಹಾಲು ಕೊಡಬಹುದು. ಮೊಲೆಹಾಲು ಮಗುವಿಗೆ ಸಾಕಾಗದಿದ್ದರೆ ಹೊಯ್ ಹಾಲನ್ನು ಕೊಡಬಹುದು. ಒಳ್ಳೆಯ ಹಸುವಿನ ಹಾಲು ಸಿಕ್ಕಿದರೆ ಅದನ್ನೇ ಮಗುವಿಗೆ ಕೊಡಬಹುದು. ಇಲ್ಲದಿದ್ದರೆ ಡಬ್ಬದ ಹಾಲಿನ ಪುಡಿಯಿಂದ ಹಾಲು ತಯಾರಿಸಿ ಮಗುವಿಗೆ ನೀಡಬಹುದು. ಒಂದು ಔನ್ಸ್ ನೀರಿಗೆ ಒಂದು ಚಮಚ ಹಾಲಿನ ಪುಡಿಯನ್ನು ಹಾಕಬೇಕು. ಮಗುವಿಗೆ ನಾಲ್ಕು ಔನ್ಸ್ ಹಾಲು ತಯಾರಿಸಬೇಕಾಗಿದ್ದರೆ ಕುದಿಸಿದ ನಾಲ್ಕು ಔನ್ಸ್ ನೀರನ್ನು ಇನ್ನೊಂದು ಲೋಟದಲ್ಲಿರಿಸಿಕೊಂಡು ಆ ನೀರನ್ನು ಸ್ವಲ್ಪ ಸ್ವಲ್ಪವಾಗಿ ಪುಡಿಗೆ ಹಾಕಿ ಹದವಾಗಿ ಕಲಕಿ, ಅನಂತರ ಉಳಿದ ನೀರನ್ನು ಸುರಿಯಬಹುದು. ಹಾಲನ್ನು ಕುಡಿಸುವ ಕುಪ್ಪಿ ಮತ್ತು ರಬ್ಬರಿನ ಮೊಲೆ ತೊಟ್ಟುಗಳನ್ನು ಕುದಿಯುವ ನೀರಿನಲ್ಲಿ ತೊಳೆದು ಶುಚಿಯಾಗಿರಿಸಿಕೊಳ್ಳಬೇಕು. ಮಗು ಹಾಲು ಕುಡಿದಾದ ಮೇಲೆ ಬೆನ್ನು ನೀವಿ ತೇಗು ಬರಿಸಿ, ಒಳ ಸೇರಿದ ವಾಯುವನ್ನು ಹೊರಗೆ ಹಾಕಬೇಕು. ಮಗುವಿಗೆ ನಾಲ್ಕುತಿಂಗಳಾಗುವ ಹೊತ್ತಿಗೆ ಬರಿಯ ಹಾಲೊಂದೇ ಸಾಕಾಗುವುದಿಲ್ಲ. ಅದಕ್ಕಿಂತ ಶಕ್ತಿಯುತವಾದ ಹಾಗೂ ರುಚಿಕರವಾದ ಆಹಾರ ಬೇಕು. ಈ ವಯಸ್ಸಿನಲ್ಲಿ ದ್ವಿದಳ ಧಾನ್ಯಗಳಿಂದ ತಯಾರಿಸಲಾದ ಫ್ಯಾರೆಕ್ಸಿನಂಥ ಆಹಾರವನ್ನು ತುಸುಗಟ್ಟಿಯಾಗಿ ಮಾಡಿ ಮಗುವಿಗೆ ತಿನ್ನಿಸಬಹುದು. ರಾಗಿ, ಗೋಧಿಗಳ ಅಂಬಲಿಗಳನ್ನೂ ಅನ್ನದಿಂದ ತಯಾರಿಸುವ ಮಣ್ಣಿಯನ್ನೂ ಕೊಡಬಹುದು. ಮಗುವಿಗೆ ಒಂದು ತಿಂಗಳಾಗುವ ಹೊತ್ತಿಗೆ ಕಿತ್ತಳೆ ಅಥವಾ ಮೂಸಂಬಿ ರಸವನ್ನು ಆರಂಭಿಸಬೇಕು. ಇದರಿಂದ ಮಗುವಿಗೆ ಮಲಬದ್ಧತೆಯ ಕಾಟ ತಪ್ಪುತ್ತದೆ. (ಎ.ಎಸ್.)

ಹೊಯ್ ಹಾಲು : ತಾಯ ಹಾಲಲ್ಲದೆ ಬೇರೆ ಆಹಾರವನ್ನು ಮಗುವಿಗೆ ಕೊಟ್ಟಾಗ ಅದನ್ನು ಕೃತಕ ಆಹಾರಪೋಷಣೆ ಎನ್ನುತ್ತಾರೆ. ಹಸು, ಎಮ್ಮೆ, ಮೇಕೆ, ಕತ್ತೆಗಳ ಹಾಲನ್ನು ಬಳಸುವ ಕ್ರಮ ಇದೆ. ಆದರೆ ರೂಢಿಯಲ್ಲಿ ಹಸುವಿನ ಹಾಲನ್ನು ಬಳಸುತ್ತಾರೆ. ಈಚೆಗೆ ಡಬ್ಬಿ ಹಾಲುಗಳನ್ನು ಉಪಯೋಗಿಸುತ್ತಿದ್ದಾರೆ. ಇವುಗಳಲ್ಲಿ ಮುಖ್ಯವಾದುವು : 1 ಹಸುವಿನ ಹಾಲು, 2 ಒಣಹಾಲು—ಪೂರ್ಣಕೆನೆ ಮತ್ತು ಅರ್ಧಕೆನೆ—ಹೀಗೆ ಎರಡು ವಿಧ, 3 ಘನೀಕರಿಸಿದ ಹಾಲು, 4 ಸರಿದೂಗಿಸಿದ ಹಾಲು—ಅಂದರೆ, ಆಮ್ಲೀಕರಣ, ಕ್ಷಾರೀಕರಣ ಮತ್ತು ಕಿಣ್ವೀಕರಣ ಮೊದಲಾದ ಅನೇಕ ಕ್ರಮಗಳಿಂದ ಹಾಲು ಸುಲಭವಾಗಿ ಜೀರ್ಣವಾಗುವಂತೆ ಮಾಡಿದ್ದು, 5 ಎದೆಹಾಲನ್ನು ಹೋಲುವಂತೆ ತಯಾರಿಸಿದ ಹಸುವಿನ ಹಾಲು, 6 ಸಾರ ಹೆಚ್ಚಿಸಿದ ಹಾಲುಗಳು.

ಭಾರತದಲ್ಲಿ ಸಾಮಾನ್ಯವಾಗಿ ಕೃತಕ ಆಹಾರ ಪೋಷಣೆಗೆ ಹಸುವಿನ ಹಾಲು ಮತ್ತು ಈಚೆಗೆ ಅಮೂಲ್ ಡಬ್ಬಿ ಹಾಲು ಬಳಕೆಯಲ್ಲಿವೆ.

ಒಂದು ಪೌಂಡ್ ತೂಕದ ದೇಹಕ್ಕೆ ದಿನವೊಂದಕ್ಕೆ 2½ ಔನ್ಸ್ (50 ಕೆಲೊರಿ) ಹಾಲು ಬೇಕಾಗಬಹುದು. ಎರಡು ವರ್ಷ ತುಂಬುವ ವರೆಗೂ ಇದೇ ಲೆಕ್ಕಾಚಾರ ಸರಿಯಾಗುತ್ತದೆ.

ಈ ಪ್ರಮಾಣವನ್ನು ಲೆಕ್ಕಮಾಡುವ ವಿಧಾನಗಳು ಹೀಗಿವೆ :

| | | |
|---|---|---|
| ಹಸುವಿನ ಹಾಲು ಅಥವಾ ಕೆನೆತೆಗೆಯದ ಹಾಲು | | 20 ಕೆ./ಔನ್ಸ್ |
| ಅರ್ಧ ಕೆನೆತೆಗೆದ ಹಾಲು | ... | 15 " |
| ಪೂರ್ಣ ಕೆನೆತೆಗೆದ ಹಾಲು | ... | 10 " |
| ತಲೆ ಸವರಿದ ಒಂದು ಚಮಚ ಸಕ್ಕರೆ | ... | 15 " |

ಗಟ್ಟಿ ಹಾಲನ್ನು ನೀರು ಬೆರೆಸಿ ತೆಳ್ಳಗೆ ಮಾಡುವಾಗ—

| | | ಹಾಲಿನ ಭಾಗ | | ನೀರಿನ ಭಾಗ |
|---|---|---|---|---|
| ಒಂದು ತಿಂಗಳ ವರೆಗೆ | ... | 1 | ... | 1 |
| ಒಂದರಿಂದ ಎರಡು ತಿಂಗಳ ವರೆಗೆ | ... | 2 | ... | 1 |
| 2–3 ತಿಂಗಳ ವರೆಗೆ | ... | 3 | ... | 1 |
| 3–4 ತಿಂಗಳ ವರೆಗೆ | ... | 4 | ... | 1 |
| 4–5 ತಿಂಗಳ ವರೆಗೆ | ... | 5 | ... | 1 |

ಈ ಪ್ರಮಾಣಗಳನ್ನು ಗಮನಿಸಬಹುದು. ಐದು ತಿಂಗಳ ಅನಂತರ ಅಪ್ಪಟ ಹಾಲನ್ನು ಕೊಡಬಹುದು.

ಹಾಲಿಗೆ ಬೆರೆಸಲು ಸಾಧಾರಣ ಕಬ್ಬಿನ ಸಕ್ಕರೆ ಸಾಕಷ್ಟು ಒಳ್ಳೆಯದು. ಸಾಮಾನ್ಯವಾಗಿ ನಾಲ್ಕು ತಿಂಗಳ ವರೆಗೆ ಮೂರು ಔನ್ಸ್ ಹಾಲಿಗೆ ಒಂದು ಚಮಚ ಸಕ್ಕರೆಯನ್ನೂ ಅನಂತರ ನಾಲ್ಕು ಔನ್ಸ್ ಹಾಲಿಗೆ ಒಂದು ಚಮಚ ಸಕ್ಕರೆಯನ್ನೂ ಹಾಕಬಹುದು.

ಮೂರು ತಿಂಗಳ ವರೆಗೆ ಮೂರು ಗಂಟೆಗಳ ಅಂತರದಲ್ಲಿ ದಿನಕ್ಕೆ ಆರು ಬಾರಿ ಅನಂತರ ನಾಲ್ಕುಗಂಟೆಗಳಿಗೊಮ್ಮೆ ಐದು ಬಾರಿ ಹೊಯ್ ಹಾಲು ಹಾಕಬಹುದು.

ಹನ್ನೆರಡು ವಾರಗಳ ಮಗುವಿನ ತೂಕ ಬಹುಶಃ ಹತ್ತು ಪೌಂಡು ಇರಬಹುದು. ಆದ್ದರಿಂದ ದಿನದ ದ್ರವದ ಆವಶ್ಯಕತೆ $2\frac{1}{2} \times 10 = 25$ ಔನ್ಸುಗಳು. ಮೂರು ತಿಂಗಳ ತನಕ ಹಾಲಿಗೆ ನೀರು ಬೆರೆಸುವುದರಿಂದ 3:1 ಅಂದರೆ ಆರು ಔನ್ಸ್ ನೀರು ಮತ್ತು 19 ಔನ್ಸ್ ಹಾಲಿರುತ್ತದೆ.

10 ಪೌಂಡಿನ ಮಗುವಿಗೆ ಬೇಕಾಗುವ ಕೆಲೊರಿಗಳು $10 \times 50$ ಆಗಿರುವುದರಿಂದ ಸಂಮಿಶ್ರಣ ಈ ರೀತಿಯಿರುತ್ತದೆ.

| | | | | |
|---|---|---|---|---|
| ಹಾಲು | 19 | ಔನ್ಸುಗಳು | 380 | ಕೆಲೊರಿ |
| ನೀರು | 6 | ,, | ... | |
| ಸಕ್ಕರೆ | 8 | ಚಮಚಗಳು | 120 | ಕೆಲೊರಿ |
| ಒಟ್ಟು | 25 | ಔನ್ಸುಗಳು | 500 | ಕೆಲೊರಿಗಳು |

(ಪಿ.ಸಿ.ಬಿ.)

ಮಗುವಿಗೆ ದಿನವೂ ಸ್ನಾನಮಾಡಿಸುವ ಪದ್ಧತಿ ಉಷ್ಣದೇಶವಾದ ಭಾರತದಲ್ಲಿ ಒಳ್ಳೆಯದು. ಸ್ನಾನಕ್ಕೆ ಮುಂಚೆ ಮಗುವಿಗೆ ಕೊಬ್ಬರಿ ಎಣ್ಣೆಯನ್ನೊ ಹರಳೆಣ್ಣೆಯನ್ನೊ ಹಚ್ಚಬಹುದು. ಇದರಿಂದ ಮಗುವಿನ ಮೈಕೈನೋವು ಕಡಿಮೆಯಾಗುವುದಲ್ಲದೆ, ಚರ್ಮವ್ಯಾಧಿಗಳು ಮಿತಗೊಳ್ಳುತ್ತವೆ. ಎಣ್ಣೆಯನ್ನು ಕಿವಿ, ಮೂಗು, ಕಣ್ಣುಗಳಿಗೆ ಹಾಕಬಾರದು. ತಾಯಿ ಅಥವಾ ದಾದಿ ಮಗುವನ್ನು ಕಾಲಮೇಲೆ ಮಲಗಿಸಿಕೊಂಡು ಮೀಯಿಸುವುದು ರೂಢಿ. ಎರೆಯುವ ನೀರು ತುಂಬ ಬಿಸಿಯಾಗಿರಬಾರದು. ತೀರ ತಣ್ಣಗೂ ಇರಬಾರದು. ಹದವಾದ ನೀರು ಯೋಗ್ಯ. ಎಣ್ಣೆ ತೆಗೆಯಲು ಸೋಪನ್ನೊ ಕಡಲೆ ಅಥವಾ ಹೆಸರುಹಿಟ್ಟನ್ನೊ ಬಳಸಬಹುದು. ಸ್ನಾನದ ಬಳಿಕ ಮಗುವಿನ ಮೈಕೈ ಚೆನ್ನಾಗಿ ಒರೆಸಿ, ಮೈ, ಕಂಕಳು, ಕತ್ತು ಹಾಗೂ ತೊಡೆಯ ಸಂದಿಗಳಿಗೆ ಹೇರಳವಾಗಿ ಪೌಡರ್ ಹಾಕಬೇಕು. ಪೌಡರ್ ಬೆವರನ್ನು ಹೀರುವುದಲ್ಲದೆ, ಚರ್ಮ ಬಿರಿಯುವುದನ್ನು ತಪ್ಪಿಸುತ್ತದೆ.

ಮಗುವಿನ ಉಡುಪು ಸ್ವಲ್ಪ ಅಳ್ಳಕವಾಗಿರುವುದು ಒಳ್ಳೆಯದು. ಬೇಸಗೆಯಲ್ಲಿ ತೆಳ್ಳಗಿನ ಅಂಗಿಯೇ ಸಾಕು, ಚಳಿಗಾಲದಲ್ಲ ಬೆಚ್ಚಗಿನ ಉಣ್ಣೆಯ ಬಟ್ಟೆಗಳು ಯೋಗ್ಯ. ಸದಾ ಕೈ ತುಂಬ ಸ್ವೆಟರ್, ಟೊಪ್ಪಿಗಳನ್ನು ಕಟ್ಟುವ ಅಗತ್ಯವಿಲ್ಲ.

ಹೊಕ್ಕಳುಬಳ್ಳಿ ಸಾಧಾರಣವಾಗಿ ಎಂಟನೆಯ ದಿನ ಉದುರಿ ಹೋಗುತ್ತದೆ. ಅದು ಉದುರಿದ ಜಾಗ ಸ್ವಲ್ಪ ದಿನ ಹಸಿಯಾಗಿರುವುದರಿಂದ, ಸ್ನಾನವಾದ ಮೇಲೆ, ಹೊಕ್ಕಳಿಗೆ ಸ್ವಲ್ಪ ಸ್ಪಿರಿಟ್ ಹಚ್ಚಿ, ಸ್ವಚ್ಛಮಾಡಿ ಬೋರಿಕ್ ಪೌಡರು ಹಾಕಿ ಒಂದು ಬಟ್ಟೆಯನ್ನು ಕಟ್ಟಬೇಕು.

ಎಳೆಯ ಮಗುವಿಗೆ ಸಾಧಾರಣವಾಗಿ ಉಂಟಾಗುವುದು ಅಜೀರ್ಣ ವಾಂತಿ ಮತ್ತು ಭೇದಿ. ಅಜೀರ್ಣವಾದಾಗ ಅಥವಾ ಹೊಟ್ಟೆಯಲ್ಲಿ ವಾಯು ತುಂಬಿಕೊಂಡಾಗ ಮಗು ಕೈಕಾಲುಗಳನ್ನು ಬಡಿಯುತ್ತ ಚೀರಿ ಅಳಲಾರಂಭಿಸುತ್ತದೆ. ಹೂಸು ಬಿಡುತ್ತದೆ. ಹೊಟ್ಟೆ ಉಬ್ಬರಿಸಿಕೊಂಡು ಗಟ್ಟಿಯಾಗಿರುತ್ತದೆ. ಇದನ್ನು ತಪ್ಪಿಸಲು ಈ ಮೊದಲೆ ಹೇಳಿದಂತೆ ಮಗುವಿಗೆ ಹಾಲು ಕುಡಿಸಿದ ಒಡನೆಯೇ ತೇಗು ಬರಿಸಿ ವಾಯುವನ್ನು ಹೊರ ಹಾಕುವುದು ಒಂದು ಉಪಾಯ. ಒಂದು ಚಮಚ ಗ್ರೈಪ್‌ವಾಟರನ್ನು ಬಿಸಿ ನೀರಿನಲ್ಲಿ ಬೆರೆಸಿ ಕುಡಿಸಿ ಹೊಟ್ಟೆಗೆ ತುಸು ಶಾಖ ಕೊಡಬೇಕು.

ಕಕ್ಕಿದ ಮಗು ದಕ್ಕುತ್ತದೆ ಎಂದು ಹಿರಿಯರು ಅನ್ನುತ್ತಾರೆ. ಆದ್ದರಿಂದ ಮಕ್ಕಳು ವಾಂತಿ ಮಾಡುವುದು ಸಾಮಾನ್ಯವಾದ ವಿಷಯ ಎಂದಾಯಿತು. ಮಗು ದಿನಕ್ಕೆ ಒಂದೆರಡು ಬಾರಿ ವಾಂತಿ ಮಾಡಿದರೆ ಗಾಬರಿಯಿಲ್ಲ. ಆದರೆ ಕುಡಿದದ್ದನ್ನೆಲ್ಲ ಪ್ರತಿ ಬಾರಿಯೂ ವಾಂತಿ ಮಾಡಿದಾಗ ವೈದ್ಯರ ಸಲಹೆ ಕೇಳುವುದು ಒಳ್ಳೆಯದು.

ಭೇದಿಯಾಗುವ ಮಗುವಿಗೆ ಸುಲಭವಾಗಿ ಜೀರ್ಣಿಸುವಂಥ ಆಹಾರ ಕೊಡಬೇಕು, ಗ್ಲೂಕೋಸ್ ನೀರು, ಸೇಬುಹಣ್ಣಿನ ರಸ, ತೆಳ್ಳಗಿನ ಹಾಲು ಯೋಗ್ಯವಾದುವು.

ಮಗುವಿಗೆ ಎರಡು ತಿಂಗಳಾದೊಡನೆ ದಾಕು ಹಾಕಿಸಬೇಕು. ಮೂರು ನಾಲ್ಕು ತಿಂಗಳುಗಳಿಗೆ ಕ್ರಮವಾಗಿ ತಿಂಗಳಿಗೊಂದರಂತೆ ಟ್ರಿಪಲ್ ಆಂಟಿಜೆನ್ ಚುಚ್ಚುಮದ್ದು ಕೊಡಿಸಬೇಕು. ಚರ್ಮರೋಗ, ವಾಯುರೋಗ ಮತ್ತು ನಾಯಿ ಕೆಮ್ಮು ಮಗುವಿಗೆ ಬಾರದಂತೆ ಇದು ರಕ್ಷಿಸುತ್ತದೆ.

ಆರು ತಿಂಗಳಿಂದ ವರ್ಷದ ವರೆಗೆ : ಮಗುವಿಗೆ ಐದು ತಿಂಗಳು ತುಂಬಿ ಆರರಲ್ಲಿ ಬೀಳುವ ಹೊತ್ತಿಗೆ ಅದರ ತೂಕ ಇಮ್ಮಡಿಸುತ್ತದೆ. ಆಗಿನ ಮಾನಸಿಕ ಬೆಳವಣಿಗೆಯೂ ಗಮನಾರ್ಹ. ಮಗು ತನ್ನ ತಾಯಿ ತಂದೆಗಳನ್ನು ಗುರುತಿಸುತ್ತದೆ. ಮಾತನಾಡಿಸಿದರೆ ಅರ್ಥವಾದಂತೆ ನಗುತ್ತದೆ. ಆಟಿಕೆ ಕೊಟ್ಟರೆ ಕೈಯಲ್ಲಿರಿಸಿಕೊಂಡು ಆಡಿಸುತ್ತದೆ.

ನಾಲ್ಕು ತಿಂಗಳ ಹೊತ್ತಿಗೆ ಮಗು ಮಗುಚಿಕೊಳ್ಳಬಹುದು. ಬಳಿಕ ಒಂದೆರಡು ತಿಂಗಳಲ್ಲೆ ಮುಂದೆ ಸರಿದು ಆರು ತಿಂಗಳು ತುಂಬುವ ಹೊತ್ತಿಗೆ ಅಂಬೆಗಾಲಿಕ್ಕುತ್ತದೆ. ಎಂಟು ತಿಂಗಳಿಗೆ ಕುಳಿತು ಹತ್ತರಿಂದ ವರ್ಷದೊಳಗೆ ನಡೆದಾಡಬಹುದು. ಸಾಧಾರಣವಾಗಿ ಎಂಟು ತಿಂಗಳಿಗೆ ಮಗುವಿಗೆ ಹಲ್ಲು ಮೊಳೆಯಲಾರಂಭವಾಗುತ್ತದೆ. ಹಲ್ಲುಗಳು ಚೆನ್ನಾಗಲು ಕ್ಯಾಲ್ಸಿಯಂ, ಫಾಸ್ಫರಸ್, ಸಿ ಮತ್ತು ಡಿ ಜೀವಾತು ಅಗತ್ಯ. ಈ ಅವಧಿಯಲ್ಲಿ ಮಗು ಕೈಗೆ ಸಿಕ್ಕಿದ ವಸ್ತುಗಳನ್ನು ಕಚ್ಚಬಹುದು. ವಿನಾಕಾರಣ ಚಂಡಿ ಹಿಡಿಯಬಹುದು. ಆಗ ಅದನ್ನು ಹೆಚ್ಚು ಪ್ರೀತಿಯಿಂದ ನೋಡಿಕೊಳ್ಳಬೇಕು.

ಆರು ತಿಂಗಳು ತುಂಬಿದ ಮಗು ಗಟ್ಟಿ ಆಹಾರವನ್ನು ಇಷ್ಟಪಡುತ್ತದೆ. ಫಾರೆಕ್ಸ್, ಅಂಬಲಿ, ಮಣ್ಣಿಗಳ ಜೊತೆಗೆ ಸೇಬುಹಣ್ಣನ್ನು ಬೇಯಿಸಿ ಕೊಡಬಹುದು. ತರಕಾರಿಗಳನ್ನು ಬೇಯಿಸಿ ಚೆನ್ನಾಗಿ ಹಿಸುಕಿ ದಿನಕ್ಕೊಮ್ಮೆ ನೀಡಿದರೆ ಮಗು ಪ್ರೀತಿಯಿಂದ ತಿನ್ನುತ್ತದೆ. ಎಂಟು ತಿಂಗಳ ಮಗುವಿಗೆ ಮೃದುವಾದ ಅನ್ನಕ್ಕೆ ಸ್ವಲ್ಪ ಉಪ್ಪು ಮತ್ತು ತುಪ್ಪ ಹಾಕಿ ಕೊಡಬಹುದು. ಅಥವಾ ತಿಳಿಸಾರು ಅನ್ನ ಇಲ್ಲವೆ ಮೊಸರನ್ನು ನೀಡಬಹುದು.

ಪೋಲಿಯೊ ಮೈಲೈಟಿಸ್ ಎಂಬ ಮಕ್ಕಳ ಪಾರ್ಶ್ವವಾಯು ಬಾರದಂತೆ ಮಗುವಿಗೆ ಆರು ತಿಂಗಳಾದೊಡನೆ ಪೋಲಿಯೊ ತೊಟ್ಟುಗಳನ್ನು ಕೊಡಿಸಬೇಕು. ಆರು ವಾರಕ್ಕೊಂದರಂತೆ ಮೂರುಬಾರಿ ಈ ತೊಟ್ಟುಗಳು ಅಗತ್ಯ. ಇದಾದೊಡನೆ ಕ್ಷಯ ರೋಗದ ವಿರುದ್ಧ ಬಿಸಿಜಿ ಚುಚ್ಚುಮದ್ದು ಕೊಡಿಸಬೇಕು. ಇಲ್ಲಿಗೆ ಮಗುವಿಗೆ ಕೊಡಿಸಬೇಕಾದ ಚುಚ್ಚುಮದ್ದುಗಳೆಲ್ಲ ಮುಗಿಯುತ್ತವೆ.

ಒಂದು ವರ್ಷದಿಂದ ಎರಡರ ವರೆಗೆ : ಒಂದು ವರ್ಷದ ಮಗುವಿಗೆ ತನ್ನದೇ ಆದ ವ್ಯಕ್ತಿತ್ವವಿದೆ. ಅದಕ್ಕೆ ಮನ ಬಂದ ಕಡೆ ನಡೆಯಲು ಬರುತ್ತದೆ. ತನ್ನದೇ ಆದ ಇಷ್ಟ ಅನಿಷ್ಟಗಳೂ ಅದಕ್ಕೆ ಇವೆ. ತಂದೆ ತಾಯಿಗಳನ್ನು ಅನುಕರಿಸಿ ಎಲ್ಲ ಕಾರ್ಯಗಳನ್ನು ಕಲಿಯುವ ಚುರುಕುತನ ಕೂಡ ಅದಕ್ಕುಂಟು. ಈ ಆಸೆಗೆ ಮಾತಾಪಿತೃಗಳು ಪ್ರೋತ್ಸಾಹ ನೀಡಬೇಕು.

ಮಗುವಿನ ಕಲ್ಪನಾಶಕ್ತಿ ಈಗ ಬೆಳೆಯುತ್ತಿದೆ. ಇಲ್ಲದ್ದನ್ನು ಊಹಿಸಿ ಭಯಪಡುವ ಅವಸ್ಥೆಯೂ ಉಂಟು. ಗರಿಗಳು, ಎಲೆಗಳು, ಹರಿದಾಡುವ ಜಿರಳೆಗಳು ಇವನ್ನು ಕಂಡರೆ ಮಗುವೀಗೀಗ ಅಂಜಿಕೆ. ತಾಯಿ ಅವುಗಳಿಂದ ಅಪಾಯವಿಲ್ಲ ಎಂಬುದನ್ನು ಮಗುವಿಗೆ ಮನದಟ್ಟು ಮಾಡಿಸಿ ಆತ್ಮವಿಶ್ವಾಸವನ್ನು ತುಂಬಬೇಕು. ತನ್ನ ಕಣ್ಣಿಗೆ ಕಂಡವಸ್ತುಗಳನ್ನೆಲ್ಲ ಮಗು ಪರೀಕ್ಷಿಸಲು ಯತ್ನಿಸುತ್ತದೆ. ಆಗ ಅದರ ಕುತೂಹಲ ತಣಿಸುವುದು ಒಳ್ಳೆಯದು. ಆದರೆ ಅಪಾಯಕಾರೀ ವಸ್ತುಗಳಾದ ಸ್ಟವ್, ಸ್ವಿಚ್, ಇಸ್ತ್ರಿಪೆಟ್ಟಿಗೆ ಇಂಥವುಗಳಿಂದ ಅದನ್ನು ದೂರವಿಡಬೇಕು. ಸುಲಭ ಮಾರ್ಗವೆಂದರೆ ಬಿಸಿ ಇತ್ಯಾದಿಗಳನ್ನು ಮುಟ್ಟಿಸಿ ತೋರಿಸುವುದು ಒಳ್ಳೆಯದು. ಇದು ಸುಡುತ್ತದೆ ಎಂದು ತಿಳಿದ ಮೇಲೆ ಮಗು ಒಲೆಯ ಹತ್ತಿರ ಹೋಗುವುದಿಲ್ಲ. ಮಗುವಿನ ಪ್ರಶ್ನೆಗಳಿಗೆ ತಂದೆ ತಾಯಿ ಬೇಸರವಿಲ್ಲದೆ ಉತ್ತರಿಸಬೇಕು. ಇದರಿಂದ ಅದರ ಬುದ್ಧಿಶಕ್ತಿ ಅರಳುತ್ತದೆ. ಈ ವಯಸ್ಸಿನಲ್ಲಿ ಮಗುವಿಗೆ ಸಾಕಷ್ಟು ಶಬ್ದಗಳನ್ನು ಉಚ್ಚರಿಸಲು, ಬಳಸಿ ಮಾತನಾಡಲು ಕಲಿಸಬೇಕು. ಕೈಕೆಲಸದ ಜಾಣ್ಮೆಯಕಡೆ ಮನಸ್ಸು ಒಲಿಯುವಂತೆ ಮಾಡಬೇಕು. ಕುತೂಹಲಗಳನ್ನು ತಣಿಸಬೇಕು. ತರ್ಕಬದ್ಧವಾಗಿ ಆಲೋಚನೆ ಮಾಡುವುದನ್ನು ಕಲಿಸಬೇಕು. ಓಡಾಡುವ ಕಂದನಿಗೆ ಸರಳ ಆಟಿಕೆಗಳೇ ಇಷ್ಟ. ಅವುಗಳ ಜೊತೆ ತಾನು ಆಡುವುದಲ್ಲದೆ ನೆರೆಹೊರೆಯ ಮಕ್ಕಳಲ್ಲೂ ಅವನ್ನು ಹಂಚಿಕೊಂಡು ಆಡಿದರೆ ಚೆನ್ನು ಎಂಬ ಭಾವನೆಯನ್ನು ಮಗುವಿನಲ್ಲಿ ಎಳೆತನದಿಂದ ಬೆಳೆಸಿದರೆ ಒಳ್ಳೆಯದು. ತನ್ನ ಕೈಗೆ ಸಿಕ್ಕ ಆಟಿಕೆಗಳನ್ನು, ಇತರ ಪದಾರ್ಥಗಳನ್ನು ಹರಿಯುವ, ಮುರಿಯುವ, ಬಡಿದು ಶಬ್ದಮಾಡುವ , ಎಸೆಯುವ, ನೆಕ್ಕಿ ನೋಡುವ, ಮತ್ತೆ ಜೋಡಿಸುವ ಆಸೆ ಮಗುವಿನಲ್ಲಿ ವಿಪರೀತವಾಗಿರುತ್ತದೆ. ಸಾಧ್ಯವಾದ ಮಟ್ಟಿಗೂ ಹಿರಿಯರು ಅದಕ್ಕೆ ಅಡ್ಡಿ ಬರಬಾರದು. ಅಪಾಯವಾಗದಂತೆ ಮಾತ್ರ ನೋಡಿಕೊಳ್ಳುತ್ತಿರಬೇಕು. ಹೀಗೆ ಮಾಡುವುದರಿಂದ ಮಗುವಿಗೆ ಆತ್ಮವಿಶ್ವಾಸ ಹೆಚ್ಚುತ್ತದೆ.

ಒಂದು ವರ್ಷದ ಮಗುವಿಗೆ ಮಲ ಮತ್ತು ಮೂತ್ರಗಳನ್ನು ತನಗೆ ಇಷ್ಟಬಂದಾಗ ಮಾಡುವ ಹತೋಟಿಯಿಲ್ಲ. ಏಕೆಂದರೆ ಅದರ ನರಮಂಡಲ ಇನ್ನೂ ಪೂರ್ಣ ಬೆಳವಣಿಗೆಯಾಗಿರುವುದಿಲ್ಲ. ಈ ಅವಧಿಯಲ್ಲಿ ಅದು ತನ್ನ ಚಡ್ಡಿಯಲ್ಲೆ ಮಲಮೂತ್ರಗಳನ್ನು ಮಾಡಿಕೊಳ್ಳಬಹುದು.

ಅದರ ಅರಿವಿಲ್ಲದೆಯೆ ಈ ಕ್ರಿಯೆಗಳು ನಡೆಯುವುದರಿಂದ ಅದಕ್ಕಾಗಿ ಮಗುವನ್ನು ಹೀಯಾಳಿಸಬಾರದು, ಬಯ್ಯಬಾರದು. ನಿಯಮಿತ ವೇಳೆಗೆ, ನಿಶ್ಚಿತ ಸ್ಥಳದಲ್ಲಿ ಮಗು ಮಲಮೂತ್ರಗಳನ್ನು ಮಾಡುವಂತೆ ಸಹನೆಯಿಂದ ತಾಯಿ ಹೇಳಿಕೊಡಬೇಕು. ಎರಡು ವರ್ಷ ವಯಸ್ಸಾಗುವ ವೇಳೆಗೆ ನರಮಂಡಲವನ್ನು ಪೂರ್ಣವಾಗಿ ತನ್ನ ಹತೋಟಿಯಲ್ಲಿರಿಸಿಕೊಳ್ಳಲು ಮಗು ಕಲಿಯುತ್ತದೆ.

ಮಗುವಿನ ದೈಹಿಕ ಆರೋಗ್ಯದಷ್ಟೇ ಮುಖ್ಯವಾದ್ದು ಅದರ ನಡವಳಿಕೆ ಮತ್ತು ವಿಧೇಯತೆ. ತಾಯಿಯ ನಡತೆ, ನೆರೆಹೊರೆಯವರೊಂದಿಗೆ ಆಕೆಯ ವರ್ತನೆ ಇವನ್ನು ಮಗು ಅನುಕರಿಸುತ್ತದೆ. ಆದ್ದರಿಂದ ತಾಯಿ ಒಳ್ಳೆಯವಳಾದರೆ ಮಗುವೂ ಯೋಗ್ಯ ನಡವಳಿಕೆ ಕಲಿಯುತ್ತದೆ. ಆಜ್ಞೆಮಾಡುವುದರಿಂದ ಮಗು ವಿಧೇಯತೆಯನ್ನು ಕಲಿಯುವುದಿಲ್ಲ. ಉಪಾಯವಾಗಿ, ಸ್ನೇಹಪೂರ್ಣವಾಗಿ ಸ್ಥಿರತೆಯಿಂದ ತಾಯಿ ವರ್ತಿಸಿದರೆ, ಮಗು ಕಲಿಯುವುದು ಸುಲಭವಾಗುತ್ತದೆ. ನೆರೆ ಮಕ್ಕಳೊಂದಿಗೆ ಸ್ನೇಹಸೌಹಾರ್ದ ಭಾವನೆಗಳು ಬೆಳೆಯುವಂತೆ ಆಕೆ ಪ್ರೋತ್ಸಾಹಿಸಬೇಕು. ಪ್ರತಿ ತಪ್ಪಿಗೂ ಏಟುಕೊಡುವುದರಿಂದ ಮಗು ಹಠಮಾರಿಯಾಗುತ್ತದೆ ತೀರ ಅಗತ್ಯವಿದ್ದಾಗ ಮಾತ್ರ ಮಗುವನ್ನು ಶಿಕ್ಷಿಸಲು ತಾಯಿತಂದೆ ಹಿಂದೆಮುಂದೆ ನೋಡಬಾರದು.

ಮಕ್ಕಳಿಗೆ ಸಾಮಾನ್ಯವಾಗಿ ಬರುವ ಕಾಯಿಲೆಗಳೆಂದರೆ ನೆಗಡಿ, ಕೆಮ್ಮು, ಜ್ವರ ಭೇದಿ, ವಾಂತಿ—ಇವು. ಸೋಂಕು ರೋಗಗಳಾದ ದಡಾರ, ಗಣಜಲೆ, ಕೆನ್ನೆಬಾವು ಇವುಗಳೂ ಸಾಧಾರಣವಾಗಿ ಈ ವಯೋಮಾನದಲ್ಲಿ ಕಾಣಿಸಿಕೊಳ್ಳಬಹುದು. ಈ

ಕಾಯಿಲೆಗಳಿಗೆ ತಂದೆ ತಾಯಿ ಚಿಕಿತ್ಸೆ ಮಾಡಲು ಹೋಗಬಾರದು. ಅಗತ್ಯ ಕಂಡೊಡನೆ ಮಗುವನ್ನು ವೈದ್ಯರಲ್ಲಿಗೆ ಒಯ್ಯಬೇಕು.

ಕಾಯಿಲೆಯಾದಾಗ ಮಗುವನ್ನು ಗಲಾಟೆಯಿಲ್ಲದ, ಚೆನ್ನಾಗಿ ಗಾಳಿ ಬೆಳಕು ಬರುವಂಥ ಕೊಠಡಿಯಲ್ಲಿರಿಸಬೇಕು. ಸುಲಭವಾಗಿ ಜೀರ್ಣಿಸುವ ಗಂಜಿ, ಹಣ್ಣಿನ ರಸ, ಗ್ಲೂಕೋಸ್ ನೀರು, ಹಾಲು—ಇವನ್ನು ಕೊಡಬೇಕು. ಮಗುವಿಗೆ ಬೇಸರವಾಗದಂತೆ ಅದು ಮಲಗಿದ್ದಲ್ಲೇ ಕಥೆ ಹೇಳಬಹುದು, ಆಟಿಕೆಗಳನ್ನು ಕೊಡಬಹುದು. ಈ ಬಗೆಯ ಸ್ನೇಹ ವರ್ತನೆಯಿಂದ, ವೈದ್ಯರ ಸರಿಯಾದ ಚಿಕಿತ್ಸೆಯಿಂದ ಮಗು ಬೇಗ ಗುಣಹೊಂದುತ್ತದೆ.

ಹೀಗೆ ಹಸುಗೂಸನ್ನು ದೊಡ್ಡದನ್ನಾಗಿ ಮಾಡುವುದು ಬಹು ಹಿರಿಯ ಜವಾಬ್ದಾರಿ. ಆರೈಕೆ ಯೋಗ್ಯವಾಗಿದ್ದರೆ ಮಾತ್ರ ಮಗು ದೈಹಿಕವಾಗಿ ಮಾನಸಿಕವಾಗಿ ಒಳ್ಳೆಯ ಪ್ರಜೆಯಾಗಿ ಬೆಳೆಯುತ್ತದೆ. ಮಗುವಿನ ಮುಂದಿನ ಎಲ್ಲ ಪ್ರಗತಿಗೂ ಅಗತ್ಯವಾದ ತಳಹದಿ ಅದರ ಮೊದಲ ಎರಡು ವರ್ಷಗಳ ಜೀವನವನ್ನವಲಂಬಿಸಿದೆಯಾಗಿ ಆ ವಯಸ್ಸು ಬರುವವರೆಗೆ ಮಕ್ಕಳನ್ನು ಸರಿಯಾಗಿ ಸಾಕುವ ಕೆಲಸ ನಿಜಕ್ಕೂ ಶ್ರಮಸಾಧ್ಯವಾದುದು. ಬಹು ಮುಖ್ಯವಾದುದು. (ಎ.ಎನ್.)

**ಎಳ್ಳು :** ಪಿಡಾಲಿಯೇಸಿ ಕುಟುಂಬಕ್ಕೆ ಸೇರಿದ ಸಿಸ್ಸಾಮಮ್ ಇಂಡಿಕಮ್ ಎಂಬ ಏಕವಾರ್ಷಿಕ ಸಸ್ಯಪ್ರಭೇದ. ಮಾನವ ಮೊಟ್ಟ ಮೊದಲು ಬೆಳೆದ ಎಣ್ಣೆ ಬೀಜದ ಬೆಳೆಗಳಲ್ಲಿ ಒಂದಾಗಿದೆ. ಎಳ್ಳಿನ ಬೆಳೆಯಲ್ಲಿ ಭಾರತಕ್ಕೆ ಮೊದಲ ಸ್ಥಾನ. ಚೀನಕ್ಕೆ ಎರಡನೆಯದು. ಏಷ್ಯದ ಇತರ ದೇಶಗಳಲ್ಲಿ ಅಂದರೆ ಸಯಾಮ್, ಇಂಡೊಚೀನ, ಫಾರ್ಮೊಸ, ಜಪಾನ್, ಪ್ಯಾಲೆಸ್ಟೈನ್, ಟರ್ಕಿ ಮತ್ತು ಯುರೋಪಿನ ಮೆಡಿಟರೇನಿಯನ್ ಭಾಗಗಳಲ್ಲಿ, ರಷ್ಯ, ಬ್ರೆಜಿಲ್, ಅರ್ಜೆಂಟೀನ, ಮೆಕ್ಸಿಕೋ ಮತ್ತು ಆಫ್ರಿಕ ಖಂಡಗಳಲ್ಲೂ ಎಳ್ಳನ್ನು ಬೆಳೆಸುತ್ತಾರೆ. ಈ ಸಸ್ಯದ ಮೂಲದ ವಿಚಾರದಲ್ಲಿ ಭಿನ್ನಾಭಿಪ್ರಾಯಗಳಿವೆ. ಇದು ಭಾರತದ ಮೂಲನಿವಾಸಿಯೆಂದು ಕೆಲವರೂ ಪೂರ್ವ ಆಫ್ರಿಕದ ಮೂಲನಿವಾಸಿಯೆಂದು ಇನ್ನು ಕೆಲವರೂ ವಾದಿಸುವರು. ವೇದಗಳಲ್ಲಿ ತಿಲಪದದ ಪ್ರಯೋಗ, ಪೂರ್ವ ಅಪರ ಕರ್ಮಗಳಲ್ಲಿ ತಿಲದ ಪ್ರಾಮುಖ್ಯ ಕಂಡುಬಂದಿದೆ. ಹೇಗೇ ಆಗಲಿ ಅದು ಕ್ರಮ ಕ್ರಮವಾಗಿ ಉಷ್ಣವಲಯ ಮತ್ತು ದಕ್ಷಿಣ ಸಮಶೀತೋಷ್ಣವಲಯಗಳಲ್ಲಿ ಹರಡಿತೆಂದು ನಂಬಲಾಗಿದೆ. ಬೆಳೆಯ ಅವಧಿ ಎರಡೂವರೆಯಿಂದ ಆರು ತಿಂಗಳ ವರೆಗೆ. ಗಿಡ ಸುಮಾರು ಎರಡರಿಂದ ಐದು ಅಡಿ ಎತ್ತರಕ್ಕೆ ನೇರವಾಗಿ ಬೆಳೆಯುತ್ತದೆ. ರೆಂಬೆಗಳು ಅನೇಕ. ಮೊಟ್ಟೆಯಾಕಾರದ ಅಥವಾ ಭರ್ಜಿ ಆಕಾರದ ಎಲೆಗಳು ಕಾಂಡದ ಕೆಳಭಾಗದಲ್ಲಿ ಅಭಿಮುಖ ಜೋಡಣೆಯಿಂದ ಕೂಡಿರುತ್ತವೆ. ಮೇಲ್ಭಾಗದಲ್ಲಿ ಪರ್ಯಾಯ ಜೋಡಣೆ ಕಂಡುಬರುತ್ತದೆ. ಬಿತ್ತನೆಯಾದ ಆರು ವಾರಗಳಲ್ಲಿ ಒಂದರಿಂದ ಮೂರು ಆಕರ್ಷಕ ಬಿಳಿಯ ಹೂಗಳು ಮೂಡುತ್ತವೆ. ಹೂವಿನಲ್ಲಿ ದಳಗಳು ಕೂಡಿಕೊಂಡು ಕೊಳವೆಯೋಪಾದಿಯಲ್ಲಿದ್ದು ತುದಿಯಲ್ಲಿ ಹರಡಿಕೊಂಡಿರುತ್ತದೆ. ಬಣ್ಣ ಬಿಳಿಯಾದರೂ ಬಿಳಿಯಿಂದ ದಟ್ಟ ನೀಲಿಯ ವರೆಗೆ ಬಣ್ಣ ವ್ಯತ್ಯಾಸ ಕಂಡುಬರುತ್ತದೆ. ಕೇಸರಗಳು ನಾಲ್ಕು. ಅವುಗಳಲ್ಲಿ ಎರಡು ಚಿಕ್ಕವು, ಎರಡು ದೊಡ್ಡವು. ಅಂಡಾಶಯ ಉಚ್ಚಸ್ಥಾನದ್ದಾಗಿದ್ದು ಇಬ್ಭಾಗದ ಎರಡು ಜೋಡಣೆಗಳಿಂದ ಕೂಡಿದೆ. ಕಾಯಿ ಸಂಪುಟ (ಕ್ಯಾಪ್ಸೂಲ್) ಮಾದರಿಯದು. ಆಕಾರ ನೀಳ ಚತುರ್ಭುಜಾಕೃತಿ. ಉದ್ದ ಒಂದರಿಂದ ಎರಡು ಇಂಚು. ಸುತ್ತಳತೆ ಅರ್ಧದಿಂದ ಒಂದು ಇಂಚು. ಒಳಗೆ ಎರಡು ಕೋಣೆಗಳಿದ್ದು ಅನಂತರ ನಾಲ್ಕಾಗುತ್ತವೆ. ಬೀಜ ಗಾತ್ರದಲ್ಲಿ ಚಿಕ್ಕವಾದರೂ ಪ್ರತಿ ಕಾಯಲ್ಲೂ ಅಧಿಕ ಸಂಖ್ಯೆಯಲ್ಲಿರುತ್ತವೆ. ಆಕಾರ ಚಪ್ಪಟೆ, ಬಣ್ಣ ಅನೇಕ, ಬಿಳುಪು, ಮಾಸಲು ಬಿಳುಪು, ಸ್ವಲ್ಪ ಕಪ್ಪು, ಕಂದು ಕಪ್ಪು ಹೀಗೆ ಬೇರೆ ಬೇರೆ ಪ್ರಭೇದದ ಬೇರೆ ಬೇರೆ ತಳಿಗಳು ಬೇರೆ ಬೇರೆ ಬಣ್ಣ ಹೊಂದಿರುತ್ತವೆ.


ಎಳ್ಳಿನಗಿಡ
ಒಳಚಿತ್ರ : ಕಾಯಿಯ ಒಳನೋಟ

ಮೈಸೂರು ರಾಜ್ಯದಲ್ಲಿ ಫೆಬ್ರುವರಿಯಿಂದ ಮಾರ್ಚ್ ವರೆಗೆ ನೀರಾವರಿಯಿಂದ ಬಿತ್ತನೆ ಮಾಡುವುದನ್ನು ಕಾರು ಎಳ್ಳು ಎಂದು ಕರೆಯುತ್ತಾರೆ. ಇದು ಸ್ವಲ್ಪ ಕಂದು ಬಣ್ಣದ ಬೀಜದ ತಳಿ. ಕಪ್ಪು ಬಣ್ಣದವೂ ಇವೆ. ಪ್ರಮುಖ ತಳಿಗಳ ಬೀಜಗಳನ್ನು ಜೂನ್ ಅಥವಾ ಜುಲೈ ಮಧ್ಯದಲ್ಲಿ ಬಿತ್ತಿ ಅಕ್ಟೋಬರ್ ಅಥವಾ ನವಂಬರ್ ತಿಂಗಳಲ್ಲಿ ಒಕ್ಕಣೆ ಮಾಡುತ್ತಾರೆ. ಇವು ಕಂದು ಮತ್ತು ಕಪ್ಪು ಬೀಜಗಳುಳ್ಳ ತಳಿಗಳು. ಬಿಳಿಯ ಮತ್ತು ಮಾಸಲು ಬಿಳಿಯ ಜಾತಿಯನ್ನು ಸೆಪ್ಟೆಂಬರಿನಲ್ಲಿ ಬಿತ್ತಿ ಡಿಸೆಂಬರಿನಲ್ಲಿ ಒಕ್ಕಣೆ ಮಾಡುತ್ತಾರೆ. ಎಳ್ಳಿನ ಬೀಜದಲ್ಲಿ ಸೇಕಡ ನಲವತ್ತೈದರಿಂದ ಅರವತ್ತುಮೂರು ಭಾಗ ಎಣ್ಣೆ, ಹದಿನಾರರಿಂದ ಮೂವತ್ತೆರಡು ಭಾಗ ಸಾರಜನಕ ಇದೆ. ಭಾರತದಲ್ಲಿ ಹುರಿದ ಅಥವಾ ಹಸಿಯ ಎಳ್ಳು ಬೀಜವನ್ನು ಅನೇಕ ಸಿಹಿ ತಿಂಡಿಗೆ ಉಪಯೋಗಿಸುತ್ತಾರೆ. (ಜಿ.ಬಿ.;ಡಿ.ಜಿ.)

ಎಳ್ಳಿನ ಎಣ್ಣೆಯನ್ನು ಹೆಚ್ಚಾಗಿ ಅಡಿಗೆಗೆ ಉಪಯೋಗಿಸುತ್ತಾರೆ. ಎಣ್ಣೆ ಬೇಗ ಕಮಟು ಹಿಡಿಯದು. ಕಟುವಾದ ಯಾವ ವಾಸನೆಯೂ ಇಲ್ಲ. ತನ್ನೊಡನೆ ಬೆರೆತ ಇತರ ವಸ್ತುಗಳ ಪರಿಮಳವನ್ನು ಇದು ಸುಲಭವಾಗಿ ಹೀರಿಕೊಳ್ಳುತ್ತದೆ. ಕಿತ್ತಳೆ, ನಿಂಬೆ, ಮಲ್ಲಿಗೆ ಮತ್ತು ಇತರ ಹೂವಿನ ಸುಗಂಧವನ್ನು ತಯಾರಿಸಲು ಇದನ್ನು ಮಾಧ್ಯಮವಾಗಿ ಬಳಸುತ್ತಾರೆ. ಯೂರೋಪಿನಲ್ಲಿ ಆರು ಲೀಟರ್ ಎಣ್ಣೆಗೆ ಒಂದು ಕಿ.ಗ್ರಾಂ ಹೂವನ್ನು ಬೆರೆಸಿ, ನಲವತ್ತು ಗಂಟೆ ಇಟ್ಟು ಸುಗಂಧವನ್ನು ತಯಾರಿಸುತ್ತಾರೆ. ಎಳ್ಳು ಎಣ್ಣೆಯನ್ನು ಆಲಿವ್ ಎಣ್ಣೆಯ ಜೊತೆ ಬೆರೆಸಿ ಮಾರುವುದೂ ಉಂಟು. ವನಸ್ಪತಿ, ಕೃತಕ ತುಪ್ಪ, ಸಾಬೂನು ಮತ್ತು ಅನೇಕ ಔಷಧಿಗಳಿಗೂ ಇದನ್ನು ಉಪಯೋಗಿಸುತ್ತಾರೆ. ಎಣ್ಣೆಯಲ್ಲಿ ಸಂಪೂರ್ಣ ಆಮ್ಲಗಳು (ಸ್ಯಾಚುರೇಟೆಡ್ ಆಸಿಡ್ಸ್) 12%, ಅಸಂಪೂರ್ಣ ಆಮ್ಲಗಳು 81%, ಇತರ ವಸ್ತುಗಳು 1.7% ಇರುತ್ತವೆ. ಲಿನೋಲೀಯಿಕ್ ಮತ್ತು ಒಲೀಯಿಕ್ ಆಮ್ಲಗಳೇ ಪ್ರಧಾನ. 0·1 ಗ್ರಾಮು ಪುಡಿ ಮಾಡಿದ ಸಕ್ಕರೆ ಮತ್ತು 100 ಮಿಲಿಲೀಟರ್ ಮದ್ಯಸಾರ ಬೆರೆಸಿ, 0.1 ಮಿಲಿಲೀಟರ್ ಮಿಶ್ರಣಕ್ಕೆ 10 ಮಿ.ಲಿ. ಹೈಡ್ರೋಕ್ಲೋರಿಕ್ ಆಮ್ಲ ಮತ್ತು 10 ಮಿ.ಲಿ. ಎಣ್ಣೆ ಹಾಕಿ ಕಲಕಿದರೆ ಕಡು ಕೆಂಪು ಬಣ್ಣ ಬರುತ್ತದೆ. ಇದಕ್ಕೆ ನೀರು ಬೆರೆಸಿದರೂ ಬಣ್ಣ ನಷ್ಟವಾಗುವುದಿಲ್ಲ. ಈ ರೀತಿ ಎಳ್ಳೆಣ್ಣೆಯನ್ನು ಸುಲಭವಾಗಿ ಗುರುತಿಸಬಹುದು. ಇತರ ಯಾವ ಎಣ್ಣೆಗಳಿಗೂ ಈ ಬಣ್ಣ ಅಂಟುವುದಿಲ್ಲ. ಇದಕ್ಕೆ ಬೊಡಾಯಿನ್ ಟೆಸ್ಟ್ ಎಂದು ಹೆಸರು. ಎಳ್ಳು ಹಿಂಡಿ ಜಾನುವಾರುಗಳಿಗೆ ಒಳ್ಳೆಯ ಮೇವು; ನೆಲಕ್ಕೆ ಒಳ್ಳೆಯ ಗೊಬ್ಬರ. (ವೈ.ಎಸ್.ಎಲ್.)

ಎಳ್ಳು ಬೆಳೆಗೆ ಆಂಟಿಗ್ಯಾಸ್ಟರ್ ಕ್ಯಾಟೆಲನಾಲಿಸ್ ಎಂಬ ಕಂಬಳಿ ಹುಳುಗಳು ಹತ್ತಿ ಎಲೆಗಳನ್ನು ತಿಂದು ಕಾಂಡ ಮತ್ತು ಕಾಯಿಗಳನ್ನು ಹಾಳುಮಾಡುತ್ತವೆ. ಆಸ್ಪೆನೊಡೈಲಿಯ ಸಿಸ್ಸೆಮಿ ಕೀಟದ ಚಿಟ್ಟೆ ಹೂವಿನ ಮೊಗ್ಗನ್ನು ತಿಂದು ಹಾಕುತ್ತದೆ. ಇವುಗಳ ಜೊತೆಗೆ ರಸ ಕುಡಿಯುವ ಬಲ್ಬ್ ಮತ್ತು ಎಫಿಡ್ಡುಗಳೂ ಬೆಳೆ ಹಾಳು ಮಾಡುತ್ತವೆ. ಎಲೆಗಳಿಗೆ ಸರ್ಕೊಸ್ಪೊರ ಎಂಬ ಬೂಷ್ಟು ರೋಗ ಬಂದರೆ ಬೂದು ಬಣ್ಣದ ಅಥವಾ ಕಪ್ಪು ಕಂದು ಬಣ್ಣದ ಮಚ್ಚೆಗಳು ಕಾಣಿಸಿಕೊಳ್ಳುತ್ತವೆ. ಈ ರೋಗ ತಗುಲಿದರೆ ಬೆಳೆಗೆ ತೀರ ಹಾನಿಯಾಗುವುದು. ಕೆಲವು ರಾಸಾಯನಿಕ ಕ್ರಿಮಿನಾಶಕಗಳಿಂದ ಈಚೆಗೆ ಈ ಪಿಡುಗುಗಳನ್ನು ಹತೋಟಿಗೊಳಿಸಲಾಗಿದೆ. (ಜಿ.ಬಿ.)



ಕನ್ನಡ ವರ್ಣಮಾಲೆಯ ಹತ್ತನೆಯ ಅಕ್ಷರ. ದೀರ್ಘಸ್ವರ. ಪ್ರಾಚೀನತಮ ಬ್ರಾಹ್ಮೀ ಲಿಪಿಯಲ್ಲಿ ಈ ಅಕ್ಷರ ಒಂದು ತ್ರಿಕೋಣದಂತೆ ಇದ್ದು ಕ್ರಿ.ಶ. ಎರಡನೆಯ ಶತಮಾನದ ಹೊತ್ತಿಗೆ ತ್ರಿಕೋಣದ ಮೂಲೆಗಳು ದುಂಡಗಾದುವು. ಕದಂಬರ ಕಾಲದಲ್ಲಿ ಕೆಳಗಿನ ಒಳಭಾಗ ವೃತ್ತಾಕಾರದಂತಾಗಿ ಚೌಕತಲೆಯ ತಲೆಕಟ್ಟು ಸ್ಪಷ್ಟವಾಗಿ ಕಾಣುತ್ತದೆ. ಕ್ರಿ.ಶ. ಒಂಬತ್ತನೆಯ ಶತಮಾನದಲ್ಲಿ ಕೆಳಗಿನ ವೃತ್ತಾಕಾರದಲ್ಲಿ ಬದಲಾವಣೆಗಳುಂಟಾಗಿ ಅಕ್ಷರ ಈಗಿರುವ ರೂಪವನ್ನು ಹೋಲುತ್ತದೆ. ಹದಿಮೂರನೆಯ ಶತಮಾನದಲ್ಲಿ ವೃತ್ತ ಮಾರ್ಪಟ್ಟು ಒಂದು ಸಣ್ಣ ಕೊಂಡಿಯಂತೆ ಬದಲಾಗುತ್ತದೆ. ಇದೇ ಪ್ರವೃತ್ತಿ ಮುಂದುವರಿದು ಈಗಿರುವ ರೂಪವನ್ನು ತಳೆಯುತ್ತದೆ.

- ಅಶೋಕ ಕ್ರಿ.ಪೂ. ೩ನೆಯ ಶತಮಾನ
- ಶಾತವಾಹನ ಕ್ರಿ.ಶ. ೨ನೆಯ ಶತಮಾನ
- ಕದಂಬ ಕ್ರಿ.ಶ. ೫ನೆಯ ಶತಮಾನ
- ಗಂಗ ಕ್ರಿ.ಶ. ೬ನೆಯ ಶತಮಾನ
- ಬಾದಾಮಿ ಚಾಳುಕ್ಯ ಕ್ರಿ.ಶ. ೬ನೆಯ ಶತಮಾನ
- ರಾಷ್ಟ್ರಕೂಟ ಕ್ರಿ.ಶ. ೯ನೆಯ ಶತಮಾನ
- ಕಲ್ಯಾಣ ಚಾಳುಕ್ಯ ಕ್ರಿ.ಶ. ೧೧ನೆಯ ಶತಮಾನ
- ಹೊಯ್ಸಳ ಕ್ರಿ.ಶ. ೧೩ನೆಯ ಶತಮಾನ
- ವಿಜಯನಗರ ಕ್ರಿ.ಶ. ೧೫ನೆಯ ಶತಮಾನ
- ಮೈಸೂರು ಅರಸರು ಕ್ರಿ.ಶ. ೧೮ನೆಯ ಶತಮಾನ

ಉಚ್ಚಾರಣೆಯಲ್ಲಿ ವ್ಯತ್ಯಾಸವಿದ್ದರೂ ಎಕಾರ ಏಕಾರಗಳ ಚಾಕ್ಷುಷರೂಪ ಮಾತ್ರ ಬಹಳ ಕಾಲ ಒಂದೇ ಆಗಿತ್ತೆಂದು ತೋರುತ್ತದೆ. ಈ ಅಕ್ಷರ ಪೂರ್ವ ಅಗೋಲ ಅರ್ಧ ಸಂವೃತ ದೀರ್ಘಸ್ವರವನ್ನು ಸೂಚಿಸುತ್ತದೆ. ವ್ಯಂಜನದೊಂದಿಗೆ ಸೇರಿದಾಗ ಎ ವರ್ಣ ಪಡೆಯುತ್ತಿದ್ದ ರೂಪಾದಿ ವಿವರಗಳಿಗೆ ನೋಡಿ—ಎ. (ಎ.ವಿ.ಎನ್.)

**ಏಂಜೆಲ್ ಮೀನು :** ಅನೇಕ ಬೇರೆ ಬೇರೆ ಮೀನು ಜಾತಿಗಳನ್ನು ಸೂಚಿಸುವ ಸಾಮಾನ್ಯ ಹೆಸರು. ಕೀಟೋಡಾನ್ಟಿಡೆ ಕುಟುಂಬಕ್ಕೆ ಸೇರಿದ ಅತ್ಯಂತ ರಮಣೀಯವಾದ ಈ ಮೀನುಗಳು ಉಷ್ಣವಲಯದ ಸಮುದ್ರವಾಸಿಗಳು. ಪಕ್ಕದಿಂದ ಪಕ್ಕಕ್ಕೆ ಚಪ್ಪಟೆಯಾದ ದೇಹವನ್ನುಳ್ಳ ಈ ಕುಟುಂಬದ ಮೀನುಗಳು ಸಾಧಾರಣವಾಗಿ ಉದ್ದದಲ್ಲಿ 15–20 ಸೆಂ.ಮೀ. ಗಿಂತ ಹೆಚ್ಚಾಗಿರುವುದಿಲ್ಲ. ಕೆಲವು ಪ್ರಭೇದಗಳು 60 ಸೆಂ.ಮೀ. ನಷ್ಟು ಬೆಳೆಯಬಹುದು.

ಮತ್ಸ್ಯಶಾಸ್ತ್ರಜ್ಞರಲ್ಲಿ ಕೆಲವರು ಕೀಟೋಡಾನ್ಟಿಡೆ ಕುಟುಂಬವನ್ನು ಏಂಜೆಲ್ ಮೀನುಗಳೆಂದೂ ಬಟರ್‌ಫ್ಲೈ (ಚಿಟ್ಟೆ) ಮೀನುಗಳೆಂದೂ ವಿಭಾಗಮಾಡುವರು. ಪೂರ್ವ ಆಪರ್‌ಕ್ಯುಲಂ ಮೂಳೆಯ ಕೆಳ ಅಂಚಿನಲ್ಲಿ ಗಟ್ಟಿಯಾದ ಮುಳ್ಳು ಇರುವುದು ಏಂಜೆಲ್ ಮೀನು ; ಇಲ್ಲದ್ದು ಬಟರ್‌ಫ್ಲೈ ಮೀನು.

ಸಿಕ್‌ಲಿಡೆ ಕುಟುಂಬಕ್ಕೆ ಸೇರಿದ್ದು ದಕ್ಷಿಣ ಅಮೆರಿಕದ ಸಿಹಿನೀರು ವಾಸಿಗಳಾದ ಮೂರು ಟೆರೊಫಿಲ್ಲಂ ಪ್ರಭೇದಗಳನ್ನೂ ಮೃದ್ವಸ್ಥಿ ಮತ್ಸ್ಯಗಳಾದ ಸ್ಕೇಟ್ (ಸ್ಕ್ವಾಟಿನ ಸ್ಕ್ವಾಟಿನ) ಗಳನ್ನೂ ಏಂಜೆಲ್ ಮೀನುಗಳೆಂದೇ ಹೇಳುವರು.

ಏಂಜೆಲ್ ಮೀನುಗಳು ಹೆಸರೇ ಸೂಚಿಸುವಂತೆ ಅಪ್ಸರೆಯರಂತೆ ಬಲು ಸುಂದರ. ವಿವಿಧ ವರ್ಣ ಮತ್ತು ಮಾಟಗಳಲ್ಲಿರುವ ಇವನ್ನು ಅನೇಕ ಮತ್ಸ್ಯಸಂಗ್ರಹಾಲಯಗಳಲ್ಲೂ ಮನೆಗಳಲ್ಲೂ ಪ್ರೀತಿಯಿಂದ ಸಾಕುತ್ತಾರೆ.

ನೋಡಿ—ಚಿಟ್ಟೆ ಮೀನುಗಳು. (ಸಿ.ಜಿ.ಕೆ.)

**ಏಂಜೆಲಿಕ :** ಕೊತ್ತುಂಬರಿ ಬಳಗಕ್ಕೆ (ಅಂಬೆಲಿಫೆರಿ) ಸೇರಿದ, ಗಿಡ್ಡದಾದ ಬಹುವಾರ್ಷಿಕ, ಸುಗಂಧಸಸ್ಯ. ಸಿರಿಯ ಇದರ ತವರೂರು. ದಿವ್ಯವಾದ, ಅತಿಮಾನುಷ ಗುಣಗಳನ್ನು ಹೊಂದಿರುವುದರಿಂದ ಇದಕ್ಕೆ ಏಂಜೆಲಿಕ ಎಂಬ ಹೆಸರು. ಬೇರು ಮತ್ತು ಫಲಗಳನ್ನು ಒಣಗಿಸಿ ಕೇಕ್, ರೊಟ್ಟಿ, ಕ್ಯಾಂಡಿ ಮತ್ತು ಅನೇಕ ಲೋಕಪ್ರಸಿದ್ಧ ಮಾದಕಪಾನೀಯಗಳಿಗೆ ಮನಮೋಹಕ, ಆಕರ್ಷಕ, ಸುವಾಸನೆ ನೀಡಲು ಉಪಯೋಗಿಸುತ್ತಾರೆ. ಸಸ್ಯ ದಟ್ಟ ಹಸಿರುಬಣ್ಣದಿಂದ ಕೂಡಿರುವುದರಿಂದ ಎಳೆಯ ಕುಡಿಗಳನ್ನು ಶೀತಲೀಕರಿಸಿ ಕೇಕುಗಳಿಗೆ ಅಂದ ಕೊಡಲು ಬಳಸುತ್ತಾರೆ. ಬಟ್ಟಿ ಇಳಿಸಿ ತೆಗೆದ ತೈಲವನ್ನು ಔಷಧಿ, ಸುಗಂಧ ತೈಲಗಳ ತಯಾರಿಕೆಯಲ್ಲಿ ಬಳಸಲಾಗುತ್ತಿದೆ. 1500 ವರ್ಷಗಳಿಗೂ ಮುಂಚೆಯೇ ಇದರ ಪ್ರಯೋಜನವನ್ನು ಜನ ಕಂಡುಕೊಂಡಿದ್ದರೆಂಬುದಕ್ಕೆ ದಾಖಲೆಗಳಿವೆ. (ಎ.ಬಿ.)

**ಏಂಟಿಲಿಯ :** ಖಗೋಳದ ದಕ್ಷಿಣಾರ್ಧದಲ್ಲಿರುವ ನಕ್ಷತ್ರಪುಂಜ. ಕಣ್ಣಿಗೆ ಕಾಣಿಸುವಂತೆ ಅಷ್ಟೇನೂ ಗಮನಾರ್ಹವಾಗಿಲ್ಲ. ಇದರ ವ್ಯಾಪ್ತಿಯ ವಿವರಗಳು : ವಿಷುವದಂಶ 9 ಗಂ. 25 ಮಿ.–11 ಗಂ. 5 ಮಿ. ಘಂಟಾವೃತ್ತಾಂಶ 24°ದ–40°ದ. *

**ಏಕ ಅಕ್ಷೀಯ ಹರಳುಗಳು :** ಚತುರ್ಮುಖ (ಟೆಟ್ರಗೋನಲ್) ಮತ್ತು ಷಣ್ಮುಖ (ಹೆಕ್ಸಗೋನಲ್) ವರ್ಗಗಳಿಗೆ ಸೇರಿದ ಹರಳುಗಳನ್ನು ಏಕ ಅಕ್ಷೀಯವೆನ್ನುತ್ತಾರೆ. ಇವುಗಳಲ್ಲಿ ಒಟ್ಟು ಮೂರು ಅಥವಾ ನಾಲ್ಕು ಅಕ್ಷಗಳಿದ್ದು, ಅವುಗಳಲ್ಲಿ ಎರಡು ಅಥವಾ ಮೂರು ಸಮನಾದ ಸಮತಲ ಸ್ಫಟಿಕಾಕ್ಷಗಳಾಗಿರುತ್ತವೆ. ಮೂರನೆಯ ಅಥವಾ ನಾಲ್ಕನೆಯ ಅಕ್ಷ ಅಸಮವಾಗಿದ್ದು, ಸಮತಲ ಸಪಾಟಕ್ಕೆ ಸಮಕೋನದಲ್ಲಿರುತ್ತದೆ. ಇದರಿಂದ ಈ ವರ್ಗದ ಹರಳುಗಳಲ್ಲಿ ಬೆಳಕಿನ ಕಿರಣಗಳು ಎಲ್ಲ ದಿಕ್ಕುಗಳಲ್ಲೂ ಒಂದೇ ವೇಗದಲ್ಲಿ ಚಲಿಸುವುದಿಲ್ಲ.

ಈ ಹರಳುಗಳಲ್ಲಿ ಹಾದುಹೋಗುವ ಬೆಳಕು ಎರಡು ಕಿರಣಗಳಾಗಿ ಭಾಗವಾಗುತ್ತದೆ. ಒಂದೇ ಪತನ ಕಿರಣದಿಂದುಂಟಾದ ಎರಡು ಕಿರಣಗಳಲ್ಲೊಂದು ಸಮತಲ ಅಕ್ಷಗಳ ಸಪಾಟದಲ್ಲಿ ಸ್ಪಂದಿಸುತ್ತದೆ. ಪ್ರಸಾರದ ದಿಕ್ಕು ಯಾವುದಾದರೂ ಈ ಕಿರಣಕ್ಕೆ ಒಂದೇ ರೀತಿಯ ವೇಗವಿರುತ್ತದೆ. ಇದರಿಂದ ಈ ಕಿರಣಕ್ಕೆ ಒಂದು ನಿರ್ದಿಷ್ಟವಾದ ಭಂಗಸೂಚಕವೂ ಗೋಳಾಕೃತಿಯ ತರಂಗಮುಖವೂ ಇವೆ. ಇದನ್ನೇ ಸಾಧಾರಣ ಕಿರಣವೆನ್ನುವುದು.

ಮತ್ತೊಂದು ಮೊದಲ ಕಿರಣಕ್ಕೆ ಸಮಕೋನದಲ್ಲಿ ಯಾವಾಗಲೂ ನೇರ ಸಪಾಟದಲ್ಲಿ ನೀಳ ಸ್ಫಟಿಕಾಕ್ಷಕ್ಕೆ ಸಮಾಂತರವಾಗಿ ಸ್ಪಂದಿಸುತ್ತದೆ. ಇದರ ವೇಗ ಹರಳಿನಲ್ಲಿ ವಿವಿಧ ದಿಕ್ಕುಗಳಲ್ಲಿ ಚಲಿಸಿದಂತೆ ವ್ಯತ್ಯಾಸಗೊಳ್ಳುತ್ತದೆ. ಇದರಿಂದ ಈ ಕಿರಣಕ್ಕೆ ಒಂದು ನಿರ್ದಿಷ್ಟವಾದ ಭಂಗಸೂಚಕವಿರದೆ ಅಂಡಾಕೃತಿಯ ತರಂಗ ಮುಖ ಮಾತ್ರ ಇದೆ. ಇದನ್ನು ಅಸಾಧಾರಣ ಕಿರಣವೆನ್ನುತ್ತಾರೆ.

ಏಕ ಅಕ್ಷೀಯ ಹರಳುಗಳಲ್ಲಿ ಸಾಧಾರಣ ಹಾಗೂ ಅಸಾಧಾರಣ ಕಿರಣಗಳು ವಿವಿಧ ವೇಗಗಳಲ್ಲಿ ಚಲಿಸುವುವಾದರೂ ನೀಳ ಸ್ಫಟಿಕಾಕ್ಷಕ್ಕೆ ಸಮಾಂತರವಾಗಿ ಚಲಿಸುವಾಗ ಮಾತ್ರ ಒಂದೇ ವೇಗಗತಿಯಲ್ಲಿರುತ್ತವೆ. ಈ ಕಾರಣ ಒಂದೇ ಭಂಗ ಸೂಚಕವಿದ್ದು, ದ್ವಿರಶ್ಮಿಭಂಗಕ್ಕೆ ಅವಕಾಶವಿರುವುದಿಲ್ಲ. ದ್ವಿರಶ್ಮಿಭಂಗವಿಲ್ಲದ ಈ ಅಕ್ಷವನ್ನೇ ದ್ಯುತಿ ಅಕ್ಷವೆನ್ನುವುದು (ಆಪ್ಟಿಕ್ ಆಕ್ಸಿಸ್). ಇಂಥ ದ್ಯುತಿ ಅಕ್ಷ ಈ ದ್ಯುತಿವರ್ಗದ ಹರಳುಗಳಲ್ಲಿ ಒಂದೇ ಒಂದು. ಈ ಕಾರಣ ಇವುಗಳನ್ನು ಏಕ ಅಕ್ಷೀಯವೆನ್ನುತ್ತಾರೆ.

ಏಕ ಅಕ್ಷೀಯ ಹರಳುಗಳಲ್ಲಿ ಸಾಧಾರಣ ಹಾಗೂ ಅಸಾಧಾರಣ ರಶ್ಮಿಗಳ ಪರಸ್ಪರ ವೇಗದ ಆಧಾರದ ಮೇಲೆ ಎರಡು ವರ್ಗಗಳಿವೆ. ಬೆಣಚುಗಲ್ಲು (ಕ್ವಾರ್ಟ್ಸ್) ಜಿರ್‌ಕಾನ್ ಮುಂತಾದ ಖನಿಜಗಳಲ್ಲಿ ಸಾಧಾರಣ ರಶ್ಮಿಯ ವೇಗ ಅಸಾಧಾರಣ ರಶ್ಮಿಯ ವೇಗಕ್ಕಿಂತ ಹೆಚ್ಚಾಗಿರುವುದರಿಂದ ಅವುಗಳನ್ನು ಧನಸ್ಫಟಿಕಗಳೆಂದೂ ಕ್ಯಾಲ್ಸೈಟ್, ಅಪಟೈಟ್ ಮುಂತಾದ ಖನಿಜಗಳಲ್ಲಿ ಸಾಧಾರಣ ರಶ್ಮಿಯ ವೇಗ ಅಸಾಧಾರಣ ರಶ್ಮಿಯ ವೇಗಕ್ಕಿಂತ ಕಡಿಮೆಯಾಗಿರುವುದರಿಂದ ಅವನ್ನು ಋಣಸ್ಫಟಿಕಗಳೆಂದೂ ಕರೆಯುತ್ತಾರೆ. (ಎಂ.ಎನ್.ವಿ.)

**ಏಕಕಗಳು ಮತ್ತು ಆಯಾಮಗಳು :** ಭೌತಮಾಪನದ ಹಿನ್ನೆಲೆಯಲ್ಲಿರುವ ಮೂಲ ಪರಿಕಲ್ಪನೆಗಳು (ಯೂನಿಟ್ಸ್ ಅಂಡ್ ಡೈಮೆನ್ಷನ್ಸ್). ಪ್ರತಿಯೊಂದು ಭೌತಮಾಪನವೂ ಒಂದೇ ಸ್ವಭಾವದ ಎರಡು ಪರಿಮಾಣಗಳ ತುಲನೆಯನ್ನು ಅವಲಂಬಿಸಿದೆ. ಒಂದು ಕೋಲಿನ ಉದ್ದವನ್ನು ಇನ್ನೊಂದು ಕೋಲಿನ ಉದ್ದದಿಂದ ಅಳೆಯಬೇಕು ; ಒಂದು ವಸ್ತುವಿನ ತೂಕವನ್ನು ಇನ್ನೊಂದು ವಸ್ತುವಿನ ತೂಕದಿಂದ ಅಳೆಯಬೇಕು—ಇತ್ಯಾದಿ. ಸಾರ್ವಜನಿಕ ಜೀವನದಲ್ಲಿಯೂ ವೈಜ್ಞಾನಿಕಾನ್ವೇಷಣೆಗಳಲ್ಲಿಯೂ ಒಂದೇ ವಸ್ತುವನ್ನು ಕುರಿತು ಹಲವಾರು ಜನರ ಅಳತೆಗಳು ಒಂದೇ ಫಲಿತಾಂಶವನ್ನು ಕೊಡಬೇಕಾದದ್ದು ಅನಿವಾರ್ಯ. ಆದ್ದರಿಂದ ಇಲ್ಲಿ ಒಂದು ಶಿಷ್ಟ ಏಕಕದ (ಸ್ಟ್ಯಾಂಡರ್ಡ್ ಯೂನಿಟ್) ಅಗತ್ಯವಿದೆ. ಅಳತೆಯ ಸ್ವರೂಪವನ್ನು (ಉದ್ದ, ಉಷ್ಣತೆ, ಕಾಲ ಇತ್ಯಾದಿ) ಅವಲಂಬಿಸಿ ಬೇರೆ ಬೇರೆ ಏಕಕಗಳು (ಏಕಮಾನಗಳು) ಬೇಕಾಗುತ್ತವೆ. ಇವನ್ನು ಅಂತರರಾಷ್ಟ್ರೀಯ ಒಪ್ಪಂದದ ಮೇರೆಗೆ ಸರಕಾರಗಳ ಶಾಸನಗಳ ಪ್ರಕಾರ ವಿಧಿಸಬಹುದು ಅಥವಾ ವಿಜ್ಞಾನಿಗಳ ಅನುಮೋದನೆ ಪ್ರಕಾರ ನಿರ್ಧರಿಸಬಹುದು. ತತ್ತ್ವಶಃ ಏಕಕಗಳ ಆಯ್ಕೆ ಸ್ವೇಚ್ಛೆಯಂತಿದೆ ಎಂಬುದು ಗಮನಾರ್ಹ.

ಒಂದು ಭೌತಪರಿಮಾಣದ ಅಳತೆ ಎರಡು ಅಂಶಗಳನ್ನು ವಿಶದೀಕರಿಸಬೇಕು—ಬಳಸಿರುವ ಏಕಕ, ಇದರೊಡನೆ ಪರಿಮಾಣದ ತುಲನೆ. ಒಂದು ಸರಳರೇಖೆಯ ಉದ್ದ 3 ಮೀಟರುಗಳು ಎನ್ನುವಾಗ ಮೀಟರ್ ಎಂಬುದು ಶಿಷ್ಟ ಏಕಕ, ಇದರೊ

ಡನೆ ಹೋಲಿಸಿದಾಗ ಸರಳರೇಖೆಯ ಉದ್ದ 3. ಆದ್ದರಿಂದ ಪ್ರತಿಯೊಂದು ಅಳತೆಯಲ್ಲೂ ಮೊದಲಿನ ಅಂಶ ಒಂದು ಸಂಖ್ಯೆ ಎರಡನೆಯ ಅಂಶ ಈ ಸಂಖ್ಯೆಯ ವಿವರಣೆ. ವಿವರಣೆ ಏಕಕವನ್ನು ಸೂಚಿಸುತ್ತದೆ. ಇದನ್ನೇ ಸಾಂಕೇತಿಕವಾಗಿ

ಅಳತೆಯ ಪರಿಮಾಣ$=$(ಸಂಖ್ಯೆ)$\times$ (ಏಕಕ) ಎಂದು ನಿರೂಪಿಸಬಹುದು.

ಒಂದೇ ಏಕಕದಲ್ಲಿ ಬರೆಯಬಹುದಾದ ಎರಡು ಪರಿಮಾಣಗಳ ಭೌತ ಆಯಾಮಗಳು ಸಮಾನ ಎನ್ನುತ್ತೇವೆ. ಎರಡು ಭಿನ್ನಕ್ಷೇತ್ರಗಳ ವಿಸ್ತೀರ್ಣಗಳನ್ನು ಭಿನ್ನ ಏಕಕಗಳಲ್ಲಿ ನಿರೂಪಿಸಿರಬಹುದು ; ಆದರೆ ಅಂತಿಮವಾಗಿ ಅವನ್ನು ಒಂದೇ ಏಕಕಕ್ಕೆ ಪರಿವರ್ತಿಸುವುದು ಸಾಧ್ಯವಿದೆ. ಆದ್ದರಿಂದ ಆ ಕ್ಷೇತ್ರಗಳು ಸಮಾನ ಆಯಾಮದವು. ಒಂದು ಕ್ಷೇತ್ರದ ವಿಸ್ತೀರ್ಣ ಮತ್ತು ಒಂದು ಘನದ ಘನಗಾತ್ರ ಇವನ್ನು ನಿರೂಪಿಸುವ ಏಕಕಗಳನ್ನು ಒಂದೇ ಏಕಕಕ್ಕೆ ಪರಿವರ್ತಿಸುವುದು ಅಸಾಧ್ಯ. ಆದ್ದರಿಂದ ಕ್ಷೇತ್ರ ಮತ್ತು ಘನಗಳ ಆಯಾಮಗಳು ಸಮಾನವಾಗಿಲ್ಲ.

2 ಗಜ$=$6 ಅಡಿಗಳು$=$72 ಇಂಚುಗಳು ಎಂಬ ಉದಾಹರಣೆಯನ್ನು ಪರಿಶೀಲಿಸಿದಾಗ ಏಕಕ ಬದಲಾದಂತೆ ಸಂಖ್ಯೆ ಬದಲಾಗುತ್ತದೆಂದು ತಿಳಿಯುತ್ತದೆ. ಇಷ್ಟು ಮಾತ್ರವಲ್ಲ, ಏಕಕದ ಗಾತ್ರ ದೊಡ್ಡದಾದಂತೆ ಸಂಖ್ಯೆ ಚಿಕ್ಕದಾಗುವುದು, ಏಕಕದ ಗಾತ್ರ ಚಿಕ್ಕದಾದಂತೆ ಸಂಖ್ಯೆ ದೊಡ್ಡದಾಗುವುದು ಆದ್ದರಿಂದ ಏಕಕ ಮತ್ತು ಸಂಖ್ಯೆಗಳು ಪರಸ್ಪರ ವಿಲೋಮಾನುಪಾತದಲ್ಲಿವೆ ಎಂದು ತಿಳಿಯುತ್ತದೆ. ಇನ್ನೂ ಒಂದು ವಿಚಾರ ಗೊತ್ತಾಗುವುದು. ಒಂದು ರೇಖೆಯ ಅಡಿಗಳಲ್ಲಿನ ಉದ್ದಕ್ಕೂ ಇಂಚುಗಳಲ್ಲಿನ ಉದ್ದಕ್ಕೂ ಇರುವ ಪ್ರಮಾಣ ಇಂಚಿನ ಉದ್ದಕ್ಕೂ ಅಡಿಯ ಉದ್ದಕ್ಕೂ ಇರುವ ಪ್ರಮಾಣದಷ್ಟೇ ಆಗಿದೆ. ಮೇಲಿನ ಉದಾಹರಣೆಯ ಪ್ರಕಾರ

$$\frac{6}{72}=\frac{1}{12}$$

AB, CD ಎಂಬ ಎರಡು ಅಸಮಾನ ಸರಳರೇಖೆಗಳನ್ನು (ಆಯಾಮಗಳು ಸಮಾನ) ಮೊದಲು ಸೆಂಟಿಮೀಟರುಗಳಲ್ಲಿ ಅಳೆದು ಫಲಿತಾಂಶಗಳ ಪ್ರಮಾಣ ಕಂಡುಹಿಡಿಯಬೇಕು. ತರುವಾಯ ಇಂಚುಗಳಲ್ಲಿ ಅಳೆದು ಫಲಿತಾಂಶಗಳ ಪ್ರಮಾಣವನ್ನು ಕಂಡುಹಿಡಿಯಬೇಕು. ಇವೆರಡೂ ಸಮಾನವಾಗಿರುತ್ತವೆ. ಸಮಾನ ಆಯಾಮಗಳ ಎರಡು ಭಿನ್ನವಸ್ತುಗಳನ್ನು ಅಳೆಯಬಹುದಾದ ವಿವಿಧ ಏಕಕಗಳೆಲ್ಲವೂ ಅನುಪಾತದಲ್ಲಿವೆ ಎಂದು ಇದರಿಂದ ಗೊತ್ತಾಗುವುದು. ಈ ಪ್ರಮಾಣ ಯಾವುದೇ ಏಕಕದ ಗಾತ್ರವನ್ನು ಅವಲಂಬಿಸಿಲ್ಲ. ಇದಕ್ಕೆ ಪರಸ್ಪರ ಪ್ರಮಾಣ ನಿರಪೇಕ್ಷ ತತ್ತ್ವ (ಪ್ರಿನ್ಸಿಪಲ್ ಆಫ್ ಅಬ್ಸೊಲ್ಯೂಟ್ ಸಿಗ್ನಿಫಿಕೆನ್ಸ್ ಆಫ್ ರಿಲೇಟಿವ್ ಮ್ಯಾಗ್ನಿಟ್ಯೂಡ್ಸ್) ಎಂದು ಹೆಸರು.

ಏಕಕಗಳ ಮತ್ತು ಆಯಾಮಗಳ ವಿಶ್ಲೇಷಣೆ ಭೌತಪರಿಮಾಣಗಳ ಅಳತೆಯ ಅಧ್ಯಯನವನ್ನೊಳಗೊಂಡ ಒಂದು ವಿಧಾನ. ಇದರ ಮುಖ್ಯ ಉಪಯೋಗಗಳೆಂದರೆ ಗಣಿತರೀತ್ಯಾ ಉತ್ತರ ದೊರೆಯುವುದು ಅಸಾಧ್ಯವೆನಿಸುವಂಥ ಕ್ಲಿಷ್ಟ ಸಮಸ್ಯೆಗಳಲ್ಲಿನ ಪರಿಮಾಣಗಳ ನಡುವೆ ಸಾಧ್ಯವಾಗಬಹುದಾದಂಥ ಸಂಬಂಧ ಮತ್ತು ಅದರ ಪರಿಮಿತಿಗಳನ್ನು ತಿಳಿಸುವುದು, ದೊಡ್ಡ ಯಂತ್ರಗಳು ಕೆಲಸಮಾಡುವ ರೀತಿಯನ್ನು ಮಾದರಿ ಪ್ರಯೋಗಗಳಿಂದ ತಿಳಿಯುವುದು, ಭೌತಪರಿಮಾಣಗಳ ಮೌಲ್ಯವನ್ನು ಒಂದು ಅಳತೆ ಪದ್ಧತಿಯಿಂದ ಮತ್ತೊಂದು ಅಳತೆ ಪದ್ಧತಿಗೆ ಸರಿಯಾಗಿ ಬದಲಾಯಿಸುವುದು, ಸಮೀಕರಣಗಳು ಸರಿಯೋ ತಪ್ಪೋ ಎಂದು ತಾಳೆ ನೋಡುವುದು, ಭೌತಪರಿಮಾಣಗಳ ವ್ಯಾಖ್ಯೆಗಳನ್ನು ಸಂಕ್ಷಿಪ್ತವಾಗಿ ಪಟ್ಟಿಮಾಡುವುದು ಇತ್ಯಾದಿ. ಈ ವಿಧಾನ ಬಲು ಸರ್ವವ್ಯಾಪಿ ಮತ್ತು ಸರಳ. ಇದನ್ನು ಪ್ರತಿಪಾದಿಸಿದ ಮೊದಲಿಗರಲ್ಲಿ ಒಬ್ಬನಾದ ಲಾರ್ಡ್ ರ್‍ಯಾಲಿ ಇದಕ್ಕೆ ಕೊಟ್ಟ ಹೆಸರು ರೂಪಸಾದೃಶ್ಯ ತತ್ತ್ವ (ಪ್ರಿನ್ಸಿಪಲ್ ಆಫ್ ಸಿಮಿಲಿಟ್ಯೂಡ್).

ಆಯಾಮ ಎಂದರೆ ಜ್ಯಾಮಿತಿಯಲ್ಲಿ ಒಂದು ನಿರ್ದಿಷ್ಟ ದಿಕ್ಕಿನಲ್ಲಿ ಅಳೆದ ಪರಿಮಾಣ. ಉದಾಹರಣೆಗೆ ವ್ಯಾಸದ ಮೇಲೆ, ವಸ್ತುವಿನ ಅಂಚಿನಲ್ಲಿ, ಪ್ರಧಾನಾಕ್ಷದ ಮೇಲೆ ಇತ್ಯಾದಿ. ಬಿಂದುವಿಗೆ ಆಯಾಮವಿಲ್ಲ (ಅಂದರೆ ಅದರ ಆಯಾಮ 0) ಗೆರೆಯ ಆಯಾಮ 1, ತಲದ ಆಯಾಮ 2, ಘನದ ಆಯಾಮ 3 ಎಂದು ಪರಿಗಣಿಸುತ್ತೇವೆ. ಉದ್ದ, ವಿಸ್ತೀರ್ಣ, ಘನಗಾತ್ರಗಳನ್ನು ಕ್ರಮವಾಗಿ ಉದ್ದದ 1ನೆಯ ಘಾತ [$L^1$], 2ನೆಯ ಘಾತ [$L^2$], 3ನೆಯ ಘಾತಗಳಾಗಿ [$L^3$] ನಿರೂಪಿಸುವುದರಿಂದ ಇವುಗಳಿಗೆ ಕ್ರಮವಾಗಿ ಉದ್ದದ 1, 2, 3 ಆಯಾಮಗಳಿವೆ ಎಂದು ಹೇಳುತ್ತೇವೆ. ಹೀಗೆಯೇ ಭೌತಶಾಸ್ತ್ರದಲ್ಲಿ ಅನೇಕ ಕಡೆ ಉದ್ದ (L), ಜಡಮಾನ (M), ಕಾಲ (T) ಮತ್ತು ಇತರ ಜನ್ಯಪರಿಮಾಣಗಳ ಆಯಾಮಗಳನ್ನು ಉಪಯೋಗಿಸುತ್ತೇವೆ.

ಆಯಾಮವೇನೆಂಬುದನ್ನು ಈ ರೀತಿ ಅರ್ಥ ಮಾಡಿಕೊಳ್ಳಬಹುದು. ಒಂದು ವಿವೃತರೇಖೆಯನ್ನು (ಸರಳ ರೇಖೆಯೂ ವಕ್ರರೇಖೆಯೂ ಅಡಕವಾಗಿವೆ), ಅದರ ಮೇಲೆ ಗುರುತಿಸಿರುವ ಒಂದು ಬಿಂದುವಿನಿಂದ, ಎರಡು ವಿಭಾಗಗಳಾಗಿಸಬಹುದು. ರೇಖೆಯ ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ಈ ಗಡಿಬಿಂದುವನ್ನು ದಾಟದೇ ಹೋಗಲಾಗುವುದಿಲ್ಲ. ಇಂಥವುಗಳಿಗೆ ವಿವೃತರೇಖೆಗಳೆಂದು ಹೆಸರು. ಆಯಾಮರಹಿತ ಬಿಂದುವಿನಿಂದ ರೇಖೆ ವಿಭಾಗಿಸಲ್ಪಡುವುದರಿಂದ ಅದರ ಆಯಾಮ ಒಂದು ಎಂದು ಪರಿಗಣಿಸುತ್ತೇವೆ. ಆದರೆ ಒಂದು ತಲವನ್ನು ಬಿಂದು ಅಥವಾ ಬಿಂದುಗಳಿಂದ ವಿಭಾಗಿಸಲು ಆಗುವುದಿಲ್ಲ. ಏಕೆಂದರೆ ಆ ತಲದ ಒಂದು ಭಾಗದಿಂದ ಮತ್ತೊಂದು ಭಾಗಕ್ಕೆ ಆ ಬಿಂದುಗಳನ್ನು ದಾಟದೆಯೇ ಅವನ್ನು ಬಳಸಿಕೊಂಡು ಹೋಗಬಹುದು. ಒಂದು ಸೂಕ್ತವಾದ ಸಂವೃತರೇಖೆಯನ್ನು (ಕ್ಲೋಸ್ಡ್ ಕರ್ವ್) ಎಳೆದು ತಲದ ಒಂದು ವಿಭಾಗದಿಂದ ಮತ್ತೊಂದು ವಿಭಾಗಕ್ಕೆ ಆ ರೇಖೆಯನ್ನು ದಾಟದೇ ಹೋಗಲು ಆಗದಂತೆ ಮಾಡಬಹುದು. ಆಯಾಮರಹಿತ ಬಿಂದುವಿನಿಂದ ವಿಭಾಗಿಸಲಾಗದೆ ಆದರೆ ಒಂದು ಆಯಾಮವಿರುವ ರೇಖೆಯಿಂದ ವಿಭಾಗಿಸಲಾಗುವ ತಲದ ಆಯಾಮ ಎರಡು ಎಂದುಕೊಳ್ಳಬಹುದು. ಹೀಗೆ ಎರಡು ಆಯಾಮವಿರುವ ತಲದಿಂದ ಮಾತ್ರ ವಿಭಾಗಿಸಲ್ಪಡುವ ಘನಾಕೃತಿಯ ಆಯಾಮ ಮೂರು ಎನ್ನುತ್ತೇವೆ. ಈ ಆಯಾಮಗಳು ಧನಪೂರ್ಣಾಂಕಗಳೆಂಬುದನ್ನು ಗಮನಿಸಬೇಕು.

ನಾವು ಮೂರಕ್ಕಿಂತ ಹೆಚ್ಚು ಆಯಾಮವಿರುವ ಆಕಾಶವನ್ನು (ಸ್ಪೇಸ್) ಸ್ಪಷ್ಟವಾಗಿ ಮನಸ್ಸಿನಲ್ಲಿ ಚಿತ್ರಿಸಿಕೊಳ್ಳಲಾಗದಿದ್ದರೂ ಬೀಜಜ್ಯಾಮಿತಿಯಲ್ಲಿ $n$ ಆಯಾಮಗಳಿರುವ ಆಕಾಶಗಳ ವಿಶ್ಲೇಷಣೆಯನ್ನು ಮಾಡಬಹುದು. ಮೂರಕ್ಕಿಂತ ಹೆಚ್ಚಿನ ಆಯಾಮಗಳಿರುವ ಇಂಥ ಆಕಾಶಗಳಲ್ಲಿ ಜನರ ಆಸಕ್ತಿಯನ್ನು ಹೆಚ್ಚಾಗಿ ಕೆರಳಿಸಿರುವುದು ಆಲ್ಬರ್ಟ್ ಐನ್‌ಸ್ಟೈನನ ರಿಲೆಟಿವಿಟಿ ಸಿದ್ಧಾಂತ. ಇದರಲ್ಲಿ ನಾಲ್ಕು ಆಯಾಮಗಳಿರುವ ಆಕಾಶವನ್ನು ಕಲ್ಪಿಸಿಕೊಳ್ಳಲಾಗಿದೆ—ಉದ್ದ, ಅಗಲ, ಎತ್ತರ ಎಂಬ ಮೂರು ಆಯಾಮಗಳ ಜೊತೆಗೆ ಕಾಲ ಎಂಬುದು ನಾಲ್ಕನೆಯ ಆಯಾಮ. ಇದೇ ಅಲ್ಲದೆ ಬೇರೆ ಹೆಚ್ಚು ಆಯಾಮಗಳಿರುವ ಆಕಾಶಗಳ ಸಾಧ್ಯತೆ ಇದೆಯೆಂದು ತೋರಿಸಲಾಗಿದೆ. ಅನಂತ ಆಯಾಮಗಳ ಆಕಾಶದ ಅಧ್ಯಯನ ಮಾಡಿದ್ದಾರೆ. ನೋಡಿ—ಅತ್ಯಾಕಾಶಗಳು.

ಆಯಾಮ ವಿಶ್ಲೇಷಣೆ ಮುಖ್ಯವಾಗಿ ಅಳತೆ ಪದ್ಧತಿಗಳ ಲಕ್ಷಣಗಳನ್ನು ಅವಲಂಬಿಸಿದೆ. ಅಳತೆ ಪದ್ಧತಿಯ ಮುಖ್ಯ ಉದ್ದೇಶ ನಿಖರ ವಿವರ ನಿರೂಪಣೆ. ಬೇರೆ ಎಲ್ಲ ಅಳತೆ ಪದ್ಧತಿಗಳಿಗಿಂತ ಅತಿ ಉತ್ತಮವಾದದ್ದು ಸೂಚ್ಯಸಂಖ್ಯೆಗಳಿಂದ (ಅಸೈನ್ಡ್ ನಂಬರ್ಸ್) ವಿವರಿಸುವ ಪದ್ಧತಿ. ಒಂದು ನಿರ್ದಿಷ್ಟ ಅಳತೆಯೆಂದರೆ ಒಂದು ನಿರ್ದಿಷ್ಟ ಭೌತಕ್ರಿಯೆಯಿಂದ ಪಡೆದ ಸಂಖ್ಯೆ. ಉದಾಹರಣೆಗೆ ಉದ್ದದ ಅಳತೆಯನ್ನು ತೆಗೆದುಕೊಳ್ಳೋಣ. ಒಂದು ಮೀಟರ್ ಕೋಲನ್ನು ಒಂದು ವಸ್ತುವಿನ ಮೇಲೆ ಕೊನೆಯಿಂದ ಕೊನೆಗೆ ಎಷ್ಟು ಸಾರಿ ಇಡಬಹುದು ಎಂದು ಕಂಡುಹಿಡಿದಾಗ ಬರುವ ಸಂಖ್ಯೆಯನ್ನು ಅದರ ಉದ್ದ (ಮೀಟರುಗಳಲ್ಲಿ) ಎಂದು ಕರೆಯಬಹುದು. ಈ ರೀತಿಯ ಭೌತಕ್ರಿಯೆಯಿಂದ ಬರುವುದಕ್ಕೆ ಮಾತ್ರ ಉದ್ದ ಎನ್ನುತ್ತೇವೆ. ಇಲ್ಲಿ ನಾವು ಮೀಟರ್ ಎಂಬ ಶಿಷ್ಟ ಏಕಕವನ್ನು (ಸ್ಟ್ಯಾಂಡರ್ಡ್ ಯೂನಿಟ್) ಉಪಯೋಗಿಸಿದೆವು. ಶಿಷ್ಟ ಏಕಕವನ್ನು ನಿರ್ಧರಿಸಲು ಯಾವ ನಿಯಮವೂ ಇಲ್ಲ. ಉದ್ದವನ್ನು ಗಜಗಳಲ್ಲೊ ಮೀಟರುಗಳಲ್ಲೊ ಮೈಲಿಗಳಲ್ಲೊ ಜ್ಯೋತಿರ್ವರ್ಷಗಳಲ್ಲೊ ಮತ್ತಿತರ ಯಾವುದೇ ಅನುಕೂಲವಾದ ಏಕಕದಿಂದಲೋ ಅಳೆಯಬಹುದು. ಹೀಗೆ ಬೇರೆ ಬೇರೆ ಏಕಕಗಳಿಂದ ಅಳೆದಾಗ ಗಮನಿಸಬೇಕಾದ ಮುಖ್ಯ ಅಂಶ ಈ ಹಿಂದೆ ಹೇಳಿದಂತೆ ಸೂಚಕಸಂಖ್ಯೆ.

ಪ್ರತಿಯೊಂದು ಭೌತಪರಿಮಾಣಕ್ಕೂ ಅದಕ್ಕೆ ಸೂಕ್ತವಾದ ಮಾನವನ್ನೇ ಉಪಯೋಗಿಸುತ್ತೇವೆ. ಉದಾಹರಣೆಗೆ ಉದ್ದವನ್ನು ಗ್ರಾಂಗಳಲ್ಲಾಗಲಿ ತೂಕವನ್ನು ಮೈಲಿಗಳಲ್ಲಾಗಲಿ ಕಾಲವನ್ನು ಲೀಟರುಗಳಲ್ಲಾಗಲಿ ಹೇಳುವುದಿಲ್ಲ. ಏಕೆಂದರೆ ಅವು ಬೇರೆ ಬೇರೆ ಗುಣಲಕ್ಷಣಗಳಿರುವ ಪರಿಮಾಣಗಳು. ಇಂಥವನ್ನು ಅಳೆಯುವ ಭೌತಕ್ರಿಯೆಗಳು ಆಯಾ ಮೂಲಪರಿಮಾಣವನ್ನು ಅನುಸರಿಸಿ ಬೇರೆಬೇರೆ ರೀತಿಯದಾಗಿರುತ್ತವೆ. ಭೌತವಿಜ್ಞಾನದ ಬಲಪ್ರಕರಣ ವಿದ್ಯುತ್‌ಪ್ರಕರಣ ಮುಂತಾದ ಬೇರೆ ಬೇರೆ ಪ್ರಕರಣಗಳಲ್ಲಿ ಸ್ವಲ್ಪ ಪರಿಮಾಣಗಳನ್ನು ಮೂಲಪರಿಮಾಣಗಳೆಂದೂ ಮಿಕ್ಕವನ್ನು ಜನ್ಯಪರಿಮಾಣಗಳೆಂದೂ ಪರಿಗಣಿಸುತ್ತೇವೆ. ಬಲಪ್ರಕರಣದಲ್ಲಿ ಸಾಮಾನ್ಯವಾಗಿ ಉದ್ದ, ಜಡಮಾನ ಮತ್ತು ಕಾಲವನ್ನು ಮೂಲಪರಿಮಾಣಗಳಾಗಿ ಪರಿಗಣಿಸುತ್ತೇವೆ. ಏಕೆಂದರೆ ಅವುಗಳ ಏಕಕಗಳನ್ನು ಸ್ವೇಚ್ಛೆಯಂತೆ ಆರಿಸಬಹುದು ಮತ್ತು ಆ ಏಕಕಗಳ ಸಹಾಯದಿಂದ ಅಳತೆ ಮಾಡಬಹುದು. ವೇಗ, ಬಲ, ಸಂವೇಗ (ಮೊಮೆಂಟಂ) ಮುಂತಾದುವನ್ನು ಜನ್ಯಪರಿಮಾಣಗಳು ಎನ್ನುತ್ತೇವೆ. ಇವನ್ನು ಮೂಲ ಅಳತೆಗಳ ಸಂಯೋಜನೆಯಿಂದ ಅಳೆಯಬಹುದು. ಉದಾಹರಣೆಗೆ ಒಂದು ವಸ್ತುವಿನ ಸ್ಥಳಾಂತರವನ್ನು ಅದು ಚಲಿಸಲು ತೆಗೆದುಕೊಳ್ಳುವ ಕಾಲದಿಂದ ಭಾಗಿಸಿ ಅದರ ಸರಾಸರಿವೇಗವನ್ನು ಕಂಡುಹಿಡಿಯಬಹುದು. ಮೂಲಪರಿಮಾಣಗಳನ್ನೂ ಜನ್ಯಪರಿಮಾಣಗಳನ್ನೂ ಅಷ್ಟೊಂದು ನಿರ್ದಿಷ್ಟವಾಗಿ ಬೇರ್ಪಡಿಸಲು ಆಗು

ವುದಿಲ್ಲ. ಆಯಾ ಸಮಸ್ಯೆಗೆ ಅನುಕೂಲವಾಗಿ ಮೂಲಪರಿಮಾಣಗಳನ್ನು ಆರಿಸ ಬಹುದು ; ಅದಕ್ಕೆ ಯಾವ ನಿಯಮವೂ ಇಲ್ಲ.

ಆಯಾಮ ಸೂತ್ರಗಳು (ಡೈಮೆನ್ಷನಲ್ ಫಾರ್ಮ್ಯುಲಾಸ್) : $\xi, \eta, \zeta$ ಎಂಬ ಮೂರು ಮೂಲ ಪರಿಮಾಣಗಳ $\phi(\xi, \eta, \zeta)$ ಎಂಬ ಜನ್ಯಪರಿಮಾಣವನ್ನು ಪರಿಶೀಲಿಸೋಣ ; ಎಂದರೆ $\phi(\xi, \eta, \zeta)$ ಆ ಮೂರು ಮೂಲ ಪರಿಮಾಣಗಳ ಒಂದು ಉತ್ಪನ್ನ (ಫಂಕ್ಷನ್) ಉದಾಹರಣೆಗೆ $\xi$ ಉದ್ದ, $\eta$ ಜಡಮಾನ, $\zeta$ ಕಾಲ ಆಗಿದ್ದರೆ ವೇಗ ಎಂಬ ಜನ್ಯಪರಿಮಾಣ $\phi(\xi, \eta, \zeta) = \dfrac{\xi}{\zeta}$ ಆಗುತ್ತದೆ.

ಈಗ $\xi, \eta, \zeta$ ಗಳನ್ನು ಅಳೆಯುವ ಏಕಕಗಳ ಗಾತ್ರಗಳನ್ನು ಕ್ರಮವಾಗಿ ಮೊದಲಿನದರ $\dfrac{1}{\alpha}$, $\dfrac{1}{\beta}$, $\dfrac{1}{\gamma}$ ದಷ್ಟು ಮಾಡಿದರೆ, ಆ ಮೂಲಪರಿಮಾಣಗಳನ್ನು ಅಳೆಯುವ ಸಂಖ್ಯೆಗಳು $\alpha\xi, \beta\eta, \gamma\zeta$ ಆಗುತ್ತವೆ. ಆಗ ಜನ್ಯಪರಿಮಾಣ $\phi(\alpha\xi, \beta\eta, \gamma\zeta)$ ಆಗುತ್ತದೆ. ಏಕಕಗಳ ಗಾತ್ರ ಬದಲಾವಣೆಯಿಂದಲೇ ಜನ್ಯಮಾನಗಳನ್ನು ಪಡೆಯುವ ನಿಯಮ ಅಥವಾ ಸೂತ್ರ ಬದಲಾಗಬಾರದು.

ಆ ಜನ್ಯಪರಿಮಾಣದ $\phi(\xi_1, \eta_1, \zeta_1)$ ಮತ್ತು $\phi(\xi_2, \eta_2, \zeta_2)$ ಎಂಬ ಎರಡು ಬೇರೆ ಬೇರೆ ಮೌಲ್ಯಗಳನ್ನು ಪರಿಗಣಿಸೋಣ. ಪರಸ್ಪರ ಪ್ರಮಾಣ ನಿರಪೇಕ್ಷ ನಿಯಮದ ಪ್ರಕಾರ

$$\frac{\phi(\xi_1, \eta_1, \zeta_1)}{\phi(\xi_2, \eta_2, \zeta_2)} = \frac{\phi(\alpha\xi_1, \beta\eta_1, \gamma\zeta_1)}{\phi(\alpha\xi_2, \beta\eta_2, \gamma\zeta_2)}$$

$$\therefore\ \phi(\alpha\xi_1, \beta\eta_1, \gamma\zeta_1) = \phi(\alpha\xi_2, \beta\eta_2, \gamma\zeta_2).\ \frac{\phi(\xi_1, \eta_1, \zeta_1)}{\phi(\xi_2, \eta_2, \zeta_2)}$$

ಈಗ $\beta$ ಮತ್ತು $\gamma$ ಗಳನ್ನು ಸ್ಥಿರಾಂಕಗಳೆಂದು ಭಾವಿಸಿ ಈ ಸಮೀಕರಣವನ್ನು $\alpha$ ವನ್ನು ಕುರಿತು ಆಂಶಿಕವಾಗಿ ಅವಕಲನಿಸಿದರೆ

$$\xi_1\phi'(\alpha\xi_1, \beta\eta_1, \gamma\zeta_1) = \xi_2\phi'(\alpha\xi_2, \beta\eta_2, \gamma\zeta_2).\ \frac{\phi(\xi_1, \eta_1, \zeta_1)}{\phi(\xi_2, \eta_2, \zeta_2)}$$

ಗುಣಕ $\alpha, \beta, \gamma$ ಗಳು 1ಕ್ಕೆ ಸಮನಾದರೆ ಆಗ

$$\frac{\xi_1\phi'(\xi_1, \eta_1, \zeta_1)}{\phi(\xi_1, \eta_1, \zeta_1)} = \frac{\xi_2\phi'(\xi_2, \eta_2, \zeta_2)}{\phi(\xi_2, \eta_2, \zeta_2)}$$

ಆದ್ದರಿಂದ $\xi\ \dfrac{\phi'(\xi, \eta, \zeta)}{\phi(\xi, \eta, \zeta)} = \kappa$, ಒಂದು ಸ್ಥಿರಾಂಕ.

$$\therefore\ \xi\ \frac{\phi'}{\phi} = \kappa$$

$$\therefore\ \frac{\xi}{\phi}\ \frac{d\phi}{d\xi} = \kappa$$

$$\therefore\ \kappa\ \frac{d\xi}{\xi} = \frac{d\phi}{\phi}$$

$$\therefore\ \kappa \log \xi = \log \kappa' \phi$$

ಎಂದರೆ, $\phi = A\,\xi^a$ ರೂಪದಲ್ಲಿದೆ. ಇಲ್ಲಿ $a$ ಒಂದು ಸ್ಥಿರಾಂಕ ; A ಸಾಮಾನ್ಯವಾಗಿ $\xi, \eta$ ಗಳ ಉತ್ಪನ್ನ. ಇದೇ ಪ್ರಕಾರ $\phi = B\eta^b$, $\phi = C\zeta^c$. $\phi$ಯ ಇವೆಲ್ಲ ಉತ್ತರಗಳೂ ತಾಳೆಯಾಗಬೇಕಾದರೆ $\phi = \lambda\xi^a\eta^b\zeta^c$ ಆಗಬೇಕು. ಇಲ್ಲಿ $\lambda, a, b, c$ ಎಲ್ಲವೂ ಸ್ಥಿರಾಂಕಗಳು.

ಹೀಗೆ ಪರಸ್ಪರ ಪ್ರಮಾಣ ನಿರಪೇಕ್ಷ ತತ್ತ್ವಕ್ಕೆ ಅನುಗುಣವಾಗಿರುವ ಪ್ರತಿಯೊಂದು ಜನ್ಯಪರಿಮಾಣವನ್ನೂ ಮೂಲ ಪರಿಮಾಣಗಳ ಘಾತಗಳ ಗುಣಲಬ್ಧವನ್ನಾಗಿ ಬರೆಯಬಹುದು. ಇಂಥ ಸೂತ್ರದ ಹೆಸರು ಆ ಜನ್ಯಮಾನದ ಆಯಾಮಸೂತ್ರ. $a, b, c$ ಗಳು ಪೂರ್ಣಾಂಕಗಳೇ ಆಗಿರಬೇಕಾಗಿಲ್ಲ, ಧನ ಚಿಹ್ನೆಯವೂ ಆಗಿರಬೇಕಾಗಿಲ್ಲ. ಈ ಜಿಜ್ಞಾಸೆ ಮೂರಕ್ಕಿಂತ ಹೆಚ್ಚಾಗಿ ಮೂಲ ಪರಿಮಾಣಗಳಿರುವ ಸಮಸ್ಯೆಗೂ ಕೂಡ ಅನ್ವಯಿಸುತ್ತದೆ. ಮೇಲಿನ ಪ್ರಮೇಯದ ವಿಲೋಮವೂ ಸರಿ ಎಂದು ತೋರಿಸಬಹುದು. ಅಂದರೆ, ಜನ್ಯಪರಿಮಾಣದ ಆಯಾಮ ಸೂತ್ರವನ್ನು ಮೂಲಪರಿಮಾಣಗಳ ಘಾತಗಳ ಗುಣಲಬ್ಧವನ್ನಾಗಿ ಬರೆದರೆ ಆಗ ಆ ಜನ್ಯಪರಿಮಾಣಕ್ಕೂ ಮೂಲ ಪರಿಮಾಣಗಳಿಗೆ ಅನ್ವಯಿಸಿದಂತೆ ಪರಸ್ಪರ ಪ್ರಮಾಣ ನಿರಪೇಕ್ಷ ತತ್ತ್ವ ಅನ್ವಯಿಸುತ್ತದೆ.

ಉದಾಹರಣೆಗೆ ಜನ್ಯಪರಿಮಾಣದ ಆಯಾಮ ಸೂತ್ರ $\phi = CML^2T^{-2}$ ಆಗಿರಲಿ M, L, Tಗಳನ್ನು ಅಳೆಯುವ ಏಕಕಗಳನ್ನು ಕ್ರಮವಾಗಿ $\dfrac{1}{a}$, $\dfrac{1}{b}$, $\dfrac{1}{c}$ ಗಳಷ್ಟು ಮಾಡಿ ಜನ್ಯಪರಿಮಾಣದ ಎರಡು ಭಿನ್ನ ಮೌಲ್ಯಗಳನ್ನು ಪರಿಶೀಲಿಸಿದರೆ

$\dfrac{C\,(aM_1)\,(bL_1)^2\,(cT_1)^{-2}}{C\,(aM_2)\,(bL_2)^2\,(cT_2)^{-2}}$ ದೊರೆಯುವುದು. ಇದು

$\dfrac{C\,M_1\,L_1^2\,T_1^{-2}}{C\,M_2\,L_2^2\,T_2^{-2}}$ ಗೆ ಸಮಾನವೆಂಬುದು ಸ್ಪಷ್ಟ.

ಈ ವಿಶ್ಲೇಷಣೆಯಲ್ಲಿ ಜನ್ಯಪರಿಮಾಣಗಳಲ್ಲಿನ ಎಲ್ಲ ಪರಿಮಾಣಗಳ ಅಳತೆಗಳನ್ನೂ ಎಲ್ಲ ಹಂತಗಳಲ್ಲೂ ಒಂದೇ ಏಕಕ ಪದ್ಧತಿಯಲ್ಲಿ ಮಾಡಿರಬೇಕು ಎಂಬ ಅಂಶವನ್ನು ಗಮನಿಸಬೇಕು. ಉದಾಹರಣೆಗೆ ವೇಗೋತ್ಕರ್ಷ ಎಂದರೆ ವೇಗ ಬದಲಾವಣೆಯ ದರ,

[ವೇಗೋತ್ಕರ್ಷ] = $[(V_2 - V_1)\ T^{-1}]$

ಇಲ್ಲಿ ವೇಗ $V_1$ ಇದ್ದುದು T ಕಾಲದಲ್ಲಿ $V_2$ ಆಯಿತು ಎಂದರ್ಥ. ಆದ್ದರಿಂದ ಆಯಾಮ ಸೂತ್ರಗಳಲ್ಲಿ ಚೌಕ ಆವರಣ ಚಿಹ್ನೆಯನ್ನುಪಯೋಗಿಸುತ್ತೇವೆ. [ವೇಗೋತ್ಕರ್ಷ] ಎಂದರೆ ವೇಗೋತ್ಕರ್ಷದ ಆಯಾಮಗಳು ಎಂದರ್ಥ. ಆಯಾಮಸೂತ್ರದಲ್ಲಿ ನಾವು ಎರಡು ವೇಗಗಳ ವ್ಯತ್ಯಾಸವನ್ನು ತೆಗೆದುಕೊಂಡೆವು ಎನ್ನುವುದು ಬೇಕಾಗಿಲ್ಲ. ವೇಗವನ್ನು ಅಳೆಯುವ ವಿಧಾನ ವೇಗೋತ್ಕರ್ಷದಲ್ಲಿ ಸೇರಿದೆ ಎಂದು ತಿಳಿದರೆ ಸಾಕು. ಆದ್ದರಿಂದ ಇನ್ನೂ ಸರಳವಾಗಿ

[ವೇಗೋತ್ಕರ್ಷ] = $[V\ T^{-1}]$

ಎಂದು ಬರೆಯಬಹುದು. ಹೀಗೆ ಬರೆಯಬೇಕಾದರೆ ಆದಿವೇಗ $V_1$ ಮತ್ತು ಅಂತ್ಯವೇಗ $V_2$ ಎರಡನ್ನೂ ಒಂದೇ ಏಕಕದಲ್ಲಿ ಅಳೆದಿರಬೇಕು. ಆದರೆ $[V] = [LT^{-1}]$ ಆದ್ದರಿಂದ [ವೇಗೋತ್ಕರ್ಷ] = $[LT^{-1}\ T^{-1}] = [LT^{-2}]$ ಎಂದು ಸಹ ಬರೆಯಬಹುದು. ಒಂದೇ ಏಕಕ ಪದ್ಧತಿಯನ್ನು ಎಲ್ಲ ಹಂತಗಳಲ್ಲೂ ಉಪಯೋಗಿಸುವುದರಿಂದ $T^{-1}\ T^{-1}$ ಅನ್ನು $T^{-2}$ ಎಂದು ಬರೆಯಬಹುದು. ಆದ್ದರಿಂದ [ವೇಗೋತ್ಕರ್ಷ] = $[L\ T^{-2}]$ ಎಂದು ಸರಳರೀತಿಯಲ್ಲಿ ಬರೆಯಬಹುದು. ಈಗ $[VT^{-1}]$ ಅಥವಾ $[LT^{-2}]$ ವೇಗೋತ್ಕರ್ಷದ ಆಯಾಮಗಳು. ಅದೇ ರೀತಿ ಬಲದ $[MLT^{-2}]$ ಆಯಾಮಗಳು.

ಬಲಪ್ರಕರಣದ ಕೆಲವು ಜನ್ಯಪರಿಮಾಣಗಳ ಆಯಾಮಸೂತ್ರಗಳು ಈ ರೀತಿ ಇವೆ.

| ಭೌತ ಪರಿಮಾಣ | ಆಯಾಮಸೂತ್ರ |
|---|---|
| ಜಡಮಾನ ... ... | $[M]$ |
| ಉದ್ದ ... ... | $[L]$ |
| ಕಾಲ ... ... | $[T]$ |
| ವಿಸ್ತೀರ್ಣ ... ... | $[L^2]$ |
| ಘನಗಾತ್ರ ... ... | $[L^3]$ |
| ಸಾಂದ್ರತೆ = ಜಡಮಾನ / ಘನಗಾತ್ರ ... ... | $[ML^{-3}]$ |
| ವೇಗ = ದೂರ / ಕಾಲ ... ... | $[LT^{-1}]$ |
| ವೇಗೋತ್ಕರ್ಷ = ವೇಗ ಬದಲಾವಣೆ / ಕಾಲ ... | $[LT^{-2}]$ |
| ಬಲ = ಜಡಮಾನ × ವೇಗೋತ್ಕರ್ಷ ... | $[MLT^{-2}]$ |
| ಒತ್ತಡ = ಬಲ / ವಿಸ್ತೀರ್ಣ ... ... | $[ML^{-1}T^{-2}]$ |
| ಕಾರ್ಯ = ಬಲ × ದೂರ ... ... | $[ML^2T^{-2}]$ |
| ಸಾಮರ್ಥ್ಯ = ಕಾರ್ಯ / ಕಾಲ ... ... | $[ML^2T^{-3}]$ |
| ಚಲನಶಕ್ತಿ = ½ ಜಡಮಾನ × (ವೇಗ)² ... | $[ML^2T^{-2}]$ |
| ಬಲದ ಭ್ರಮಣಾಂಕ = ಬಲ × ದೂರ ... | $[ML^2T^{-2}]$ |
| ಸಂವೇಗ = ಜಡಮಾನ × ವೇಗ ... | $[MLT^{-1}]$ |
| ಪ್ರವಾಹ ನಿರೋಧಕತ್ವ = (ಬಲ / ವಿಸ್ತೀರ್ಣ) / (ವೇಗ / ದೂರ) | $[ML^{-1}T^{-1}]$ |

ಈ ಮೇಲಿನ ಪಟ್ಟಿಯಲ್ಲಿ ಉದ್ದ (L), ಜಡಮಾನ (M) ಮತ್ತು ಕಾಲ (T) ಗಳನ್ನು ಮೂಲ ಪರಿಮಾಣಗಳಾಗಿ ಪರಿಗಣಿಸಿದೆ. ಕಾರ್ಯ, ಚಲನಶಕ್ತಿ, ಬಲದ ಭ್ರಮಣಾಂಕ—ಇವೆಲ್ಲ ಸಮಾನ ಆಯಾಮದವು ಎಂದು ಸುಲಭವಾಗಿ ತಿಳಿಯುತ್ತದೆ.

ಈ ಪಟ್ಟಿಯನ್ನು ಬೇರೆ ಪ್ರಕರಣಗಳಿಗೆ ಅಂದರೆ ವಿದ್ಯುತ್ ಪ್ರಕರಣ, ಕಾಂತ ಪ್ರಕರಣ ಮುಂತಾದುವಕ್ಕೆ ವಿಸ್ತರಿಸಲು ಈ ಕೆಳಗಿನ ಎರಡು ಮಾರ್ಗ ಗಳುಂಟು.

1 ಬೇರೆ ಯಾವ ಹೊಸ ಮೂಲಪರಿಮಾಣವನ್ನೂ ತೆಗೆದುಕೊಳ್ಳದೆ ಪ್ರತಿ ಯೊಂದು ಪರಿಮಾಣವನ್ನೂ M,L,T ಎಂಬ ಮೂರೇ ಮೂಲ ಪರಿಮಾಣಗಳ ಆಯಾಮಸೂತ್ರಗಳನ್ನಾಗಿ ಬರೆಯುವುದು. ಉದಾಹರಣೆಗೆ ಕೂಲಾಂಬ್ ನಿಯಮದ ಪ್ರಕಾರ

$$\text{ಬಲ} = \left(\frac{\text{ವಿದ್ಯುದಂಶ}}{\text{ದೂರ}}\right)^2$$

$$\therefore \text{ವಿದ್ಯುದಂಶ (ಚಾರ್ಜ್)} = \text{ದೂರ} \times \sqrt{\text{ಬಲ}}$$

$$= \left[ L\sqrt{MLT^{-2}} \right] = \left[ M^{\frac{1}{2}} L^{\frac{3}{2}} T^{-1} \right]$$

$$\text{ವಿದ್ಯುದ್ವಿಭವ (ಪೊಟೆನ್ಷಿಯಲ್)} = \left[ M^{\frac{1}{2}} L^{\frac{1}{2}} T^{-1} \right]$$

$$\text{ವಿದ್ಯುತ್ಪ್ರವಾಹ (ಕರೆಂಟ್)} = \left[ M^{\frac{1}{2}} L^{\frac{3}{2}} T^{-2} \right]$$

$$\text{ವಿದ್ಯುತ್ಕ್ಷೇತ್ರ (ಫೀಲ್ಡ್)} = \left[ M^{\frac{1}{2}} L^{-\frac{1}{2}} T^{-1} \right]$$

$$\text{ವಿದ್ಯುನ್ನಿರೋಧ (ರೆಸಿಸ್ಟೆನ್ಸ್)} = \left[ L^{-1} T \right]$$

ಇಲ್ಲಿ ವಿದ್ಯುದವಾಹಕ ಸ್ಥಿರಾಂಕವನ್ನು (ಡೈಎಲೆಕ್ಟ್ರಿಕ್ ಕಾನ್‌ಸ್ಟೆಂಟ್) 1 ಎಂದು ಪರಿಗಣಿಸಿದೆ. ಈ ಸೂತ್ರಗಳಲ್ಲಿ ಘಾತಗಳು ಪೂರ್ಣಾಂಕಗಳಲ್ಲ.

2 ಇದರ ಬದಲು L,M,Tಗಳ ಜೊತೆಗೆ ವಿದ್ಯುದಂಶ Qವನ್ನೂ ಒಂದು ಮೂಲಪರಿಮಾಣವನ್ನಾಗಿ ಪರಿಗಣಿಸಿ ಸೂತ್ರಗಳನ್ನು ಬರೆದರೆ ಈ ರೀತಿ ಸರಳ ವಾಗಿರುತ್ತವೆ.

$$\text{ವಿದ್ಯುದ್ವಿಭವ} = \left[ ML^2 T^{-2} Q^{-1} \right]$$
$$\text{ವಿದ್ಯುತ್ಪ್ರವಾಹ} = \left[ Q T^{-1} \right]$$
$$\text{ವಿದ್ಯುತ್ಕ್ಷೇತ್ರ} = \left[ M L T^{-2} Q^{-1} \right]$$
$$\text{ವಿದ್ಯುನ್ನಿರೋಧ} = \left[ ML^2 T^{-1} Q^{-2} \right]$$

ಆದ್ದರಿಂದ ಈ ಮೊದಲೇ ಹೇಳಿರುವಂತೆ ಮೂಲಪರಿಣಾಮಗಳ ಆಯ್ಕೆಗೆ ನಿಯಮವೇನೂ ಇಲ್ಲ. ಬಲಪ್ರಕರಣದಲ್ಲಿ M,L,T ಎಂಬ ಮೂರು ಮೂಲ ಪರಿಮಾಣಗಳ ಜೊತೆಗೆ ಬಲ Fಅನ್ನೂ ಮೂಲಪರಿಮಾಣವನ್ನಾಗಿ ಪರಿಗಣಿಸಿದರೆ ನ್ಯೂಟನ್ನನ ಎರಡನೆಯ ನಿಯಮವನ್ನು $F = kma$ ಎಂದು ಬರೆಯಬಹುದು. ಇಲ್ಲಿ $[k] = [M^{-1} L^{-1} T^2 F]$. ಆದ್ದರಿಂದ $k=1$ ಇದ್ದ ಮೊದಲಿನ ಏಕಕ ಪದ್ಧತಿಯ ಬದಲು k ಗೆ ಬೇರೆ ಮೌಲ್ಯವಿರುವ ಇನ್ನೊಂದು ಏಕಕ ಪದ್ಧತಿಯನ್ನು ರಚಿಸಬಹುದು.

ವ್ಯಾಖ್ಯೆಯ ನಿರೂಪಣೆ : ಆಯಾಮಸೂತ್ರಗಳು ಜನ್ಯಪರಿಮಾಣಗಳ ವ್ಯಾಖ್ಯೆಯ ಸಂಕ್ಷಿಪ್ತಲಿಪಿ ಎನ್ನಬಹುದು. ಆಯಾಮಸೂತ್ರಕ್ಕೂ ವ್ಯಾಖ್ಯೆಗೂ ಯಾವಾಗಲೂ ಸಿಥಿರವಾದ ಪರಸ್ಪರ ಸಂಬಂಧವಿದೆಯೆಂದೇನೂ ಇಲ್ಲ. ಉದಾಹರಣೆಗೆ ಶಕ್ತಿ ಮತ್ತು ಬಲದ ಭ್ರಮಣಾಂಕ (ಮೊಮೆಂಟ್) ಇವೆರಡಕ್ಕೂ $[ML^2 T^{-2}]$ ಎಂಬ ಒಂದೇ ಆಯಾಮ ಸೂತ್ರವಿದೆ. ಆದರೂ ಸಾಮಾನ್ಯವಾಗಿ ಆಯಾಮಸೂತ್ರಕ್ಕೂ ಲಕ್ಷಣ ನಿರೂಪಣೆಗೂ ನಿಕಟಸಂಬಂಧವಿರುತ್ತದೆ.

ಭೂಮಿಯ ಗುರುತ್ವಾಕರ್ಷಣೆಯ ದೆಸೆಯಿಂದ ಒಂದು ವಸ್ತು ನಿಶ್ಚಲಸ್ಥಿತಿ ಯಿಂದ ಬೀಳುತ್ತಿರುವುದನ್ನು ಪರಿಗಣಿಸೋಣ.

ಕೆಳಕ್ಕೆ ಚಲಿಸಿದ ದೂರ $= 16 \times$ (ಚಲಿಸಿದ ಕಾಲ)$^2$

ಅಂದರೆ, $s = 16t^2$

ಕೆಳಕ್ಕೆ ಚಲಿಸುವ ವೇಗ$= 32 \times$ (ಚಲಿಸಿದ ಕಾಲ)

ಅಂದರೆ $v = 32t$.

ಈ ಎರಡು ಸಮೀಕರಣಗಳಲ್ಲಿ ಅಡಿ, ಪೌಂಡ್ ಮತ್ತು ಸೆಕೆಂಡನ್ನು ಮೂಲ ಏಕಕಗಳಾಗಿ ಪರಿಗಣಿಸಿ ಮಾಡಿದ ಅನೇಕ ಪ್ರಯೋಗಗಳ ವಿವರಗಳೆಲ್ಲ ಅಡಕವಾಗಿವೆ. ಈ ಸಮೀಕರಣಗಳ ಸಹಾಯದಿಂದ ಕಾಲ, ದೂರ, ವೇಗ ಇವುಗಳಲ್ಲಿ ಯಾವುದಾ ದರೂ ಒಂದು ತಿಳಿದಿದ್ದರೆ ಮತ್ತೆರಡರ ಮೌಲ್ಯವನ್ನು ಪ್ರಯೋಗ ಮಾಡದೆಯೇ ಗಣಿಸಬಹುದು. ಆದರೆ ಸೆಂಟಿಮೀಟರ್, ಗ್ರಾಂ, ಸೆಕೆಂಡುಗಳನ್ನು ಮೂಲ ಏಕಕಗಳಾಗಿ ಉಪಯೋಗಿಸಿದರೆ ಈ ಸಮೀಕರಣಗಳು ತಪ್ಪಾಗುತ್ತವೆ. ಹೀಗಾಗ ಬಾರದಿತ್ತು ಎಂದು ನಮಗನ್ನಿಸುತ್ತದೆ. ಸರಿಯಾಗಿ ಗಮನಿಸಿದರೆ ಕೆಳಕ್ಕೆ ಚಲಿಸಿದ ದೂರ ಚಲಿಸಿದ ಕಾಲದ ವರ್ಗಕ್ಕೆ ಸರಳ ಪ್ರಮಾಣದಲ್ಲಿದೆ ಎಂದು ತಿಳಿಯಬಹುದು. ಇಲ್ಲಿ ಪ್ರಮಾಣಾನುಗುಣ ಸ್ಥಿರಾಂಕ ಏಕಮಾನ ಪದ್ಧತಿಯನ್ನು ಅವಲಂಬಿಸಿರುತ್ತದೆ. ಆದರೆ ಪರಸ್ಪರ ಪ್ರಮಾಣ ನಿರಪೇಕ್ಷ ನಿಯಮಕ್ಕೆ ಅನುಸಾರವಾಗಿ ನಾವೂ ಈ ಸ್ಥಿರಾಂಕಕ್ಕೆ ಆಯಾಮಸೂತ್ರಗಳನ್ನು ಕೊಟ್ಟರೆ ಈ ತೊಂದರೆಯನ್ನು ತಪ್ಪಿಸಬಹುದು. ಭೂಮಿಯ ಗುರುತ್ವಾಕರ್ಷಣೆ $g =$ ಸ್ಥಿರಾಂಕ ಎಂದು ಪರಿಗಣಿಸಿದರೆ ಈ ಸಮೀಕರಣ ಗಳು $s = \frac{1}{2}gt^2$, $v = gt$ ಆಗುತ್ತವೆ.

ಈಗ ಸಮೀಕರಣಗಳು ಯಾವುದೇ ಏಕಕ ಪದ್ಧತಿಗೂ ಸರಿಹೊಂದುತ್ತವೆ. ಹೀಗೆ ಏಕಕಪದ್ಧತಿಯನ್ನು ಅವಲಂಬಿಸಿದ ಸಮೀಕರಣಗಳನ್ನು ಸಂಪೂರ್ಣ ಸಮೀಕರಣಗಳು (ಕಂಪ್ಲೀಟ್ ಇಕ್ವೇಷನ್ಸ್) ಎನ್ನುತ್ತೇವೆ.

ಸಂಪೂರ್ಣ ಸಮೀಕರಣದಲ್ಲಿರುವ ಸ್ಥಿರಾಂಕಗಳಿಗೆ ಆಯಾಮ ಸೂತ್ರಗಳಿವೆ. ಉದಾಹರಣೆಗೆ $[g]$ ಗೆ $[LT^{-2}]$. ಅವುಗಳ ಮೌಲ್ಯ ಏಕಕಪದ್ಧತಿಯನ್ನು ಅವಲಂಬಿಸಿರುತ್ತದೆ. ಇಂಥ ಸ್ಥಿರಾಂಕಗಳನ್ನು ಆಯಾಮಸ್ಥಿರಾಂಕ ಎನ್ನುತ್ತೇವೆ.

ಈಗ ವಿಜ್ಞಾನ ಯಾವ ಮಟ್ಟದಲ್ಲಿದೆಯೆಂದರೆ ಸಾಮಾನ್ಯವಾಗಿ ಎಲ್ಲ ಸಮಸ್ಯೆ ಗಳಿಗೂ ಸಂಪೂರ್ಣ ಸಮೀಕರಣಗಳು ತಿಳಿದಿವೆ. ಆದ್ದರಿಂದಲೇ ಆಯಾಮ ಸೂತ್ರಗಳು ಭೌತ ಪರಿಮಾಣಗಳ ವಿವರ ಪಟ್ಟಿ ಮಾಡಲು ಸಂಕ್ಷಿಪ್ತ ಲಿಪಿಯಾಗಿ ಉಪಯೋಗವಾಗುತ್ತವೆ.

ಆಯಾಮ ಸಮಘಾತೀಯತೆ ಮತ್ತು $\pi$ ಪ್ರಮೇಯ (ಡೈಮೆನ್ಷನಲ್ ಹೊಮೆಜಿ ನೈಟಿ ಅಂಡ್ $\pi$ ಥಿಯೊರಂ) : ಒಂದು ನಿರೂಪಣೆಯ ಅಥವಾ ಸಂಖ್ಯಾ ಸಮು ದಾಯದ ಅಥವಾ ಸಮೀಕರಣದ ಪ್ರತಿಯೊಂದು ಪದದ ಆಯಾಮವೂ ಸಮವಾದರೆ ಆ ನಿರೂಪಣೆ ಆಯಾಮ ಸಮಘಾತೀಯವಾಗಿದೆ' ಎನ್ನುತ್ತೇವೆ. ಉದಾಹರಣೆಗೆ $v = u + at$ ಸಮೀಕರಣದ ಪದಗಳಿಗೆ ಆಯಾಮಸೂತ್ರ ಅನ್ವಯಿಸಿದರೆ

$$[LT^{-1}] = [LT^{-1}] + [LT^{-2}T]$$

ಆಗುತ್ತದೆ. ಇದರಲ್ಲಿ ಪ್ರತಿಯೊಂದು ಪದದ ಆಯಾಮವೂ $[LT^{-1}]$. ಆದ್ದರಿಂದ ಈ ಸಮೀಕರಣದಲ್ಲಿ ಆಯಾಮ ಸಮಘಾತೀಯತೆ ಇದೆ.

$x_1, x_2, x_3, \ldots x_n$ ಎಂಬ $n$ ಭೌತ ಪರಿಮಾಣಗಳ ನಡುವೆ $\phi(x_1, x_2, \ldots, x_n) = 0$ ಎಂಬ ಒಂದೇ ಒಂದು ಸಂಪೂರ್ಣ ಸಮೀಕರಣ ಸಾಧ್ಯವೆಂದು ಕೊಳ್ಳೋಣ. ಈ $x_1, x_2, x_3, \ldots, x_n$ಗಳಲ್ಲಿ ಕೆಲವು ಭೌತಪರಿಮಾಣಗಳೂ ಮತ್ತೆ ಉಳಿದವು ಆಯಾಮ ಸ್ಥಿರಾಂಕಗಳೂ ಆಗಿರಬಹುದು. ಆದರೆ ಅವೆರಡಕ್ಕೂ ಆಯಾಮ ಸೂತ್ರಗಳಿರುವುದರಿಂದ ನಮ್ಮ ಈ ವಿಶ್ಲೇಷಣೆಗೆ ಅವೆರಡೂ ಒಂದೇ. ಈ ಎಲ್ಲ $n$ ಭೌತ ಪರಿಮಾಣಗಳೂ $\alpha, \beta, \gamma, \ldots$ ಎಂಬ ಒಟ್ಟು $m$ ಸಂಖ್ಯೆಯ ಮೂಲ ಪರಿಮಾಣಗಳ ಜನ್ಯಪರಿಮಾಣಗಳಾಗಿರಲಿ. $\phi$ ಸಮೀಕರಣವನ್ನು $F(\pi_1, \pi_2, \ldots, \pi_{n-m}) = 0$ ಎಂಬ ರೂಪದಲ್ಲಿ ಬರೆಯಬಹುದು. ಇಲ್ಲಿ $\pi_1, \pi_2, \ldots, \pi_{n-m}$ ಗಳಲ್ಲಿ ಪ್ರತಿಯೊಂದೂ $x_1, x_2, \ldots, x_n$ರ ಘಾತ ಗುಣಲಬ್ಧಗಳಾಗಿ ಆಯಾಮರಹಿತವಾಗಿರಬೇಕು. ಈ ಪ್ರಮೇಯವನ್ನು $\pi$ ಪ್ರಮೇಯ ವೆನ್ನುತ್ತಾರೆ. ಇದನ್ನು ಅನ್ವಯಿಸಲು ಈ ಪರಿಮಾಣಗಳ ನಡುವೆ ಒಂದೇ ಒಂದು ಉತ್ಪನ್ನ (ಫಂಕ್ಷನಲ್) ಸಂಬಂಧ ಇರಬೇಕು. ಅಂದರೆ ಆ ಸಮೀಕರಣದಲ್ಲಿ ಆಯಾಮ ಸಮಘಾತೀಯತೆ ಇರಬೇಕು. ಮತ್ತು ಈ ಉತ್ಪನ್ನದ ಪ್ರತಿಯೊಂದು ಪದವೂ ($\pi$ಗಳು) ಆಯಾಮರಹಿತವಾಗಿರಬೇಕು. ಈ ಉತ್ಪನ್ನ ಹೀಗೇ ಇರ ಬೇಕೆಂದೇನೂ ನಿಯಮವಿಲ್ಲ ಮತ್ತು ಈ $(n-m)$ ಸಂಖ್ಯೆಯ $\pi$ ಗಳನ್ನು ಹೀಗೇ ಬರೆಯಬೇಕೆಂದೇನೂ ನಿಯಮವಿಲ್ಲ. ಅಂದರೆ $\pi$ ಗಳು ಪರಸ್ಪರಾವಲಂಬಿಗಳಾಗಿ ಇರ ಬಾರದು; ಅಂದರೆ ಒಂದು $\pi$ ಯನ್ನು ಬೇರೆ $\pi$ ಗಳ ಘಾತಗಳಾಗಿಯೋ ಗುಣಲಬ್ಧ ವಾಗಿಯೋ ಬರೆಯಲು ಸಾಧ್ಯವಿರಬಾರದು.

ಆಯಾಮ ವಿಶ್ಲೇಷಣೆ : ಆಯಾಮ ವಿಶ್ಲೇಷಣೆಯ ಮತ್ತು ಪ್ರಮೇಯದ ಉಪಯೋಗಗಳಲ್ಲಿ ಅತಿ ಮುಖ್ಯವಾದದ್ದೆಂದರೆ ಗಣಿತರೀತ್ಯಾ ಉತ್ತರ ದೊರೆಯು ವುದು ಅಸಾಧ್ಯವೆನಿಸುವಷ್ಟು ಕ್ಲಿಷ್ಟವಾದ ಸಮಸ್ಯೆಗಳಲ್ಲಿ ಒಂದು ಉತ್ತರ ದೊರಕಿಸು ವುದು.

ಇಲ್ಲಿ $m$ನ ಸಂಖ್ಯೆ ಇಷ್ಟೇ ಇರಬೇಕೆಂದೇನೂ ಇಲ್ಲ. ಎಷ್ಟೋ ಸಮಸ್ಯೆಗಳಲ್ಲಿ $m$ನ ಸಂಖ್ಯೆಯನ್ನು ಹೆಚ್ಚಿಸುವುದರಿಂದ $n-m$ ಕಡಿಮೆಯಾಗಿ ಹೆಚ್ಚು ವಿವರಗಳು ತಿಳಿಯು

ತ್ತವೆ. ಆದರೆ ಸಾಮಾನ್ಯವಾಗಿ $m$ಅನ್ನು ಹೆಚ್ಚಿಸುವುದರಿಂದ ಆಗುವ ಅನುಕೂಲವನು ಆದರಿಂದಲೇ ಉದ್ಭವಿಸುವ ಆಯಾಮ ಸ್ಥಿರಾಂಕ ತೊಡೆದು ಹಾಕುತ್ತದೆ. ಈ ಆಯಾಮ ವಿಶ್ಲೇಷಣೆಯನ್ನು ಭೌತ ಸಮಸ್ಯೆಗಳಿಗೆ ಹೇಗೆ ಉಪಯೋಗಿಸಬೇಕೆಂದು ತಿಳಿಯಲು ಸಾಕಷ್ಟು ಅನುಭವ ಇರಬೇಕು; ಮತ್ತು ಆ ಸಮಸ್ಯೆಗಳಿಗೆ ಸಂಬಂಧಪಟ್ಟ ವಿಷಯಗಳ ಬಗ್ಗೆ ಆದಷ್ಟೂ ವಿವರಗಳು ತಿಳಿದಿರಬೇಕು. (ಟಿ.ಎನ್.ಎಸ್.)

**ಏಕಕಾಲೀನ ಶಿಲೆಗಳು :** ಭೂ ಇತಿಹಾಸದ ಒಂದೇ ಕಾಲಕ್ಕೆ ಸೇರಿದ ಶಿಲೆಗಳು (ಕಂಟೆಂಪೊರೇನಿಯಸ್ ರಾಕ್ಸ್). ಜೀವಾವಶೇಷಗಳ ಅಭ್ಯಾಸದಿಂದ ಜಲಜಶಿಲಾ ಸಮುದಾಯದ ಕಾಲವನ್ನು ನಿರ್ಣಯಿಸುವ ಕ್ರಮ ರೂಢಿಗೆ ಬಂದಿದೆ. ಒಂದೊಂದು ಕಾಲದ ಜೀವಿಗಳಿಗೂ ಇತರ ಕಾಲಗಳಿಂದ ಭಿನ್ನವಾದ ವೈಶಿಷ್ಟ್ಯವಿರುವುದರಿಂದ ಅವುಗಳ ಅವಶೇಷಗಳಲ್ಲಿಯೂ ಈ ವೈಶಿಷ್ಟ್ಯ ಉಳಿದಿರುವುದು. ಇದರ ಪರಿಣಾಮವಾಗಿ ಜಲಜ ಶಿಲಾಸಮುದಾಯದ ಕಾಲನಿರ್ಣಯ ಶಾಸ್ತ್ರೀಯವಾಗಿ ಸಾಧ್ಯವಾಗುತ್ತದೆ. ಜೀವಕೋಟಿ ಭೂ ಇತಿಹಾಸದ ಉದ್ದಕ್ಕೂ ಕಾಲಕಾಲಕ್ಕೆ ಬದಲಾವಣೆಗೊಂಡು ಮುನ್ನಡೆದ ಸಂಗತಿ ಯೂರೋಪ್ ಖಂಡದ ಜಲಜಶಿಲಾ ಪರಂಪರೆಯ ಸಂಶೋಧನೆಯಿಂದ ಮೊದಲಬಾರಿಗೆ ವ್ಯಕ್ತವಾಯಿತು. ಆಗ ಭೂ ವಿಜ್ಞಾನಿಗಳು ಭೂ ಇತಿಹಾಸದ ಪ್ರತಿ ಕಾಲದಲ್ಲಿಯೂ ಪ್ರಪಂಚದ ನಾನಾಭಾಗಗಳಲ್ಲಿನ ಜೀವರಾಶಿಯಲ್ಲಿ ಏಕರೂಪತೆ ಇದ್ದಿರಬೇಕೆಂದೂ ಅವುಗಳ ಮುನ್ನಡೆಯೂ ಒಂದೇ ರೀತಿಯಲ್ಲಿ ಸಾಗಿರಬೇಕೆಂದೂ ಅಭಿಪ್ರಾಯಪಟ್ಟರು. ಎರಡು ಪ್ರದೇಶಗಳ (ಅವು ಎಷ್ಟೇ ದೂರದಲ್ಲಿದ್ದರೂ) ಶಿಲಾವರ್ಗಗಳಲ್ಲಿ ಒಂದೇ ರೀತಿಯ ಅಥವಾ ಸರಿಸುಮಾರು ಒಂದೇ ರೀತಿಯ ಜೀವಾವಶೇಷಗಳು ಇದ್ದರೆ ಆ ಶಿಲೆಗಳು ಒಂದೇ ಕಾಲದಲ್ಲಿ ನಿಕ್ಷೇಪಗೊಂಡಿರುತ್ತವೆಂಬ ಅಭಿಪ್ರಾಯಕ್ಕೆ ಬಂದರು. ಇವೇ ಏಕಕಾಲೀನ ಶಿಲಾವರ್ಗಗಳು. ಈ ದಾರಿಯಲ್ಲಿ ನಡೆದ ಸಂಶೋಧನೆ ಜಿಜ್ಞಾಸೆಗಳ ಫಲಿತಾಂಶವಾಗಿ ಶಿಲಾವರ್ಗಗಳು ಈ ಕೆಳಗಿನ ನಿಯಮಗಳಿಗೆ ಒಳಪಟ್ಟರೆ ಅವನ್ನು ಏಕಕಾಲೀನ ಶಿಲೆಗಳು ಎನ್ನುತ್ತಾರೆ. 1 ಆ ಶಿಲಾವರ್ಗಗಳಲ್ಲಿ ಒಂದೇ ರೀತಿಯ ಅಥವಾ ಸುಮಾರು ಒಂದೇ ರೀತಿಯ ಜೀವಾವಶೇಷಗಳಿರಬೇಕು. 2 ಅವು ನಿಕ್ಷೇಪಗೊಂಡ ಪ್ರದೇಶಗಳು ಒಂದೇ ಭೌಗೋಳಿಕ ಪ್ರಾಂತ್ಯಕ್ಕೆ ಸೇರಿದ್ದು, ಪರಸ್ಪರ ಅತಿದೂರದಲ್ಲಿರಕೂಡದು. 3 ಆ ಪ್ರದೇಶಗಳಲ್ಲಿ ಏಕರೀತಿಯ ವಾತಾವರಣ ಇದ್ದಿರಬೇಕು. (ಡಿ.ಆರ್.)

**ಏಕತಳಿ ಸಂತಾನೋತ್ಪಾದನೆ :** ಸಾಕುಪ್ರಾಣಿಗಳ ಉತ್ಪಾದನೆಯಲ್ಲಿ, ಅಂದರೆ ಹಾಲಿನ ಉತ್ಪಾದನೆಗೆ ಬೇಕಾದ ಹಸುಗಳನ್ನು ತಯಾರುಮಾಡುವುದರಲ್ಲಿಯೂ ಉಣ್ಣೆ ಮತ್ತು ಆಹಾರ ತಯಾರಿಕೆಗೆ ಬೇಕಾದ ಕುರಿ, ಮೇಕೆ, ಕೋಳಿ ಮತ್ತು ಹಂದಿಗಳ ಉತ್ಪಾದನೆಯಲ್ಲಿಯೂ ಬಳಕೆಯಲ್ಲಿರುವ ಮೂರು ತಳಿಯೆಬ್ಬಿಕೆ ವಿಧಾನಗಳಲ್ಲೊಂದು (ಲೈನ್ ಬ್ರೀಡಿಂಗ್). ಉಳಿದೆರಡೆಂದರೆ ಒಳತಳಿ ಸಂತಾನೋತ್ಪಾದನೆ (ಇನ್ ಬ್ರೀಡಿಂಗ್), ಅಡ್ಡತಳಿಯೆಬ್ಬಿಕೆ (ಕ್ರಾಸ್ ಬ್ರೀಡಿಂಗ್).

ತಂದೆಯಿಂದ ಮಗಳನ್ನು ಪಡೆದು ಅದರಲ್ಲಿ ಬಂದ ಹೆಣ್ಣು ಸಂತತಿಯನ್ನು ಪುನಃ ಮುಂಚಿನ ಹೋರಿಗೂ ಅಥವಾ ತಾಯಿಯನ್ನು ಮಗನಿಗೂ ಅದರಲ್ಲಿ ಬಂದ ಗಂಡು ಸಂತತಿಯನ್ನು ಪುನಃ ಅದೇ ತಾಯಿಗೂ ಜೋಡಿಸಿ ತಳಿಗಳನ್ನು ಪಡೆಯುವುದೇ ಏಕತಳಿ ಸಂತಾನೋತ್ಪತ್ತಿ ವಿಧಾನ. ಗಂಡಿನಿಂದ ಬಂದ ಸಾಲನ್ನೇ ಇಟ್ಟುಕೊಂಡು ವಾಡಿಕೆಯಂತೆ ಒಂದೇ ಸಾಲಿನಲ್ಲಿ ಬಂದ ಸಂಬಂಧಿಕರೊಡನೆ ಕೂಡಿಸಿ ಸಂತತಿಯನ್ನು ವೃದ್ಧಿಪಡಿಸುವ ವ್ಯವಸ್ಥೆಯಿದು. ಇದರಲ್ಲಿ ನಮಗೆ ಬೇಕಾದ ಗುಣಗಳನ್ನು ಮುಂದಿನ ಸಂತತಿಗಳಲ್ಲಿ ಕಾಣಬರುವಂತೆ ಮಾಡಬಹುದಾಗಿದೆ. ಸ್ಥೂಲವಾಗಿ ಈ ಕ್ರಮ ಒಳತಳಿ ಸಂತಾನೋತ್ಪತ್ತಿ ಕ್ರಮವನ್ನೇ ಹೋಲುತ್ತದೆ. ಆದರೆ ಅವೆರಡಕ್ಕೂ ಮುಖ್ಯವಾದ ಒಂದು ವ್ಯತ್ಯಾಸ ಉಂಟು. ಒಳತಳಿ ಸಂತಾನೋತ್ಪತ್ತಿ ವಿಧಾನದಲ್ಲಿ ಹತ್ತಿರ ಸಂಬಂಧಿಕರೊಡನೆ ಜೋಡಿ ಮಾಡಿಸಿ ತಳಿಗಳನ್ನು ಪಡೆಯುತ್ತಾರೆ ನಿಜ. ಉದ್ದೇಶ ವಂಶದ ಗುಣಲಕ್ಷಣಗಳು ಮುಂದಿನ ಪೀಳಿಗೆಗೆ ಉಳಿದು ಬರಲಿ ಎಂಬುದೇ. ಆದರೆ ತಂದೆಯನ್ನು ಮಗಳು ಮೊಮ್ಮಗಳಿಗೂ ತಾಯನ್ನು ಮಗ ಮೊಮ್ಮಗನಿಗೂ ಅಕ್ಕತಂಗಿಯರನ್ನು ಅಣ್ಣತಮ್ಮಂದಿರಿಗೂ ಜೋಡಿಮಾಡಿದಾಗ ಪೀಳಿಗೆಯ ಒಳ್ಳೆಯ ಗುಣಗಳೊಂದಿಗೆ ಬೇಡದ ಅವಗುಣಗಳೂ ನಡೆದುಬರುವ ಸಂಭವ ಹೆಚ್ಚು. ಇದನ್ನು ಏಕತಳಿ ಸಂತಾನೋತ್ಪತ್ತಿ ವಿಧಾನದಲ್ಲಿ ತಡೆಗಟ್ಟಲಾಗಿದೆ. ಹೀಗೆ ಏಕತಳಿ ಸಂತಾನೋತ್ಪಾದನೆ ಒಳತಳಿ ಸಂತಾನೋತ್ಪಾದನೆಯ ಒಂದು ತರದ ವಿಶಿಷ್ಟ ವ್ಯವಸ್ಥೆ. ಈ ಕ್ರಮವನ್ನು ಯಾವಾಗಲೂ ಒಳ್ಳೆ ಜಾತಿಯ ಶುದ್ಧವಾದ ಹಿಂಡುಗಳಲ್ಲೇ ಅನುಸರಿಸಬೇಕು. ಇಲ್ಲವಾದಲ್ಲಿ ಪೀಳಿಗೆಯ ಕೆಟ್ಟ ಗುಣಗಳು ಮುಂದಿನ ಎಲ್ಲ ತಲೆಗಳಲ್ಲೂ ಕಂಡುಬಂದು ಇಡೀ ಹಿಂಡೇ ಕೆಟ್ಟುಹೋಗಬಹುದು.

ನೋಡಿ— ಅಡ್ಡತಳಿಯೆಬ್ಬಿಕೆ ; ಒಳತಳಿ ಸಂತಾನೋತ್ಪಾದನೆ. (ವಿ.ಆರ್.ವಿ.ಎಚ್.)

**ಏಕತೆಗಳು :** ನಾಟಕದಲ್ಲಿ ಕಾಲ, ಸ್ಥಳ ಮತ್ತು ಘಟನಾವಳಿಗೆ ಸಂಬಂಧಿಸಿ ಇರಬೇಕಾದುವು. ಮೂರು ಏಕತೆಗಳು, ನಾಟಕದ ಏಕತೆಗಳು ಎಂದೂ ಹೆಸರುಂಟು (ದಿ ಯೂನಿಟೀಸ್). ಫ್ರೆಂಚರಲ್ಲಿ ಲೆಸ್ ಯೂನಿತೆ ಸ್ಕ್ಯಾಲಿಜೆರಿಯೆನ್ ಎಂಬ ನಾಮಧೇಯ ಸರ್ವಸಾಮಾನ್ಯವಾಗಿ ರೂಢಿಯಲ್ಲಿತ್ತು. 1561ರಲ್ಲಿ ಒಂದು ಕಾವ್ಯ ವಿಚಾರಣೆಯ ಗ್ರಂಥವನ್ನು ಪ್ರಕಟಿಸಿದ ಇಟಲಿಯ ಜೆ.ಸಿ. ಸ್ಕ್ಯಾಲಿಜರನಿಂದ ಏಕತೆಗಳ ವಿಧಿ ಏರ್ಪಟ್ಟಿತೆಂದು ಫ್ರೆಂಚರ ನಂಬಿಕೆ. ನಾಟಕದ ಕಥೆ ವಾಸ್ತವಿಕ ಸತ್ಯವೋ ಎಂಬಂತೆ ತೋರಿ ಬರಬೇಕು—ಎಂದು ನುಡಿದು ಸ್ಕ್ಯಾಲಿಜರ್ ಏಕತೆಗಳ ಕಡೆಗೆ ಬೆರಳು ಕೊಂಕಿಸಿದನೇ ಹೊರತು ಸ್ಪಷ್ಟವಾಗಿ ಸೂತ್ರಗೈಯಲಿಲ್ಲ. ಹಾಗೆ 1570ರಲ್ಲಿ ಶಾಸನ ಉಚ್ಚರಿಸಿದಾತ ಇಟಲಿಯ ಕ್ಯಾಸಲ್ ವೆಟ್ರೊ. 1572ರಲ್ಲಿ ಫ್ರೆಂಚ್ ನಾಟಕಕರ್ತ ಜೀನ್ ದ ಲ ಟೇಯ್ಯ ನಾಟಕಕ್ಕೆ ಕಾಲದ ಏಕತೆ, ಸ್ಥಳದ ಏಕತೆ, ಘಟನಾವಳಿಯ ಏಕತೆ—ಮೂರೂ ಅತ್ಯಗತ್ಯವೆಂದು ನೇಮಿಸಿದ. ಅಲ್ಲಿಂದ ಸುಮಾರು ಇನ್ನೂರೈವತ್ತು ಸಂವತ್ಸರ ಪೂರ್ತಿ ಅವುಗಳ ಆಧಿಪತ್ಯ ಒಂದೇ ಸಮನೆ ನಡೆಯಿತು.

ಏಕತೆಗಳ ಅರ್ಥವಿವರಣೆ ಹೀಗೆ : 1 ನಾಟಕದಲ್ಲಿ ಜರುಗುವ ಕಥೆ ತೆಗೆದುಕೊಳ್ಳುವ ಸಮಯ 24 ಗಂಟೆಗಳ ಒಂದು ದಿವಸವನ್ನು ಮೀರಬಾರದು. 2 ಎಲ್ಲ ಘಟನೆಗಳೂ ಒಂದೇ ಸನ್ನಿವೇಶದಲ್ಲಿ ಅಥವಾ ಒಂದು ಜಾಗದ ಹತ್ತಿರ ಹತ್ತಿರ ನಡೆಯತಕ್ಕದ್ದು; ಸ್ಥಳಾಂತರ ಆಗಕೂಡದು. 3 ನಾಟಕದಲ್ಲಿ ಹಲವು ಘಟನೆಗಳು ಬಂದರೂ ಅದೆಲ್ಲ ಒಟ್ಟುಗೂಡಿ ಒಂದೇ ಘಟನಾವಳಿಯಾಗಿರಬೇಕು; ಅಪ್ರಕೃತವಾದ ಯಾವೊಂದು ಸಂಗತಿಗೂ ಕಥಾಸಂವಿಧಾನದಲ್ಲಿ ಪ್ರವೇಶವಿರಕೂಡದು.

ಏಕತೆಗಳ ವಿಧಿ ಇಟಲಿಯ ಹೊಸ ಹುಟ್ಟಿನ ವಿಮರ್ಶಕರಿಂದ ಸ್ವಕಪೋಲ ಕಲ್ಪಿತವಾದುದಲ್ಲ; ರೂಪಕ ವಿಮರ್ಶೆಯ ಪ್ರತಿಷ್ಠಾಪಕನಾದ ಅರಿಸ್ಟಾಟಲನ ಕಾವ್ಯ ಮೀಮಾಂಸೆಯ ಮೇಲೆ ಅವರು ತಪ್ಪು ನೆಪ್ಪಾಗಿ ಮಾಡಿದ ವ್ಯಾಖ್ಯಾನದ ಫಲ. ಅರಿಸ್ಟಾಟಲನ ಬರೆವಣಿಗೆಯಲ್ಲಿ ಖಚಿತವಾಗಿ ನಿರೂಪಿತವಾಗಿರುವುದು ರೂಪಕದ ಕಥಾವಸ್ತುವಿನ ಏಕತೆ ಒಂದೆ. ಅವನ ಹೇಳಿಕೆ ಹೀಗಿದೆ : ನಾಟಕದ ಕಥೆ ಒಂದೇ ಘಟನಾವಳಿಯಾಗಿರತಕ್ಕದ್ದು; ಅದರ ಬಿಡಿ ಪ್ರಸಂಗಗಳನ್ನು ಎಷ್ಟು ಅಚ್ಚುಕಟ್ಟಾಗಿ ಹೊಸೆದಿರಬೇಕೆಂದರೆ ಅವುಗಳಲ್ಲಿ ಒಂದನ್ನು ತೆಗೆದು ಹಾಕಿದರೂ ಅಥವಾ ಅದು ಇರುವ ಸ್ಥಾನವನ್ನು ಬದಲಾಯಿಸಿದರೂ ಪೂರ್ತಿ ಕಥೆಯೇ ರೂಪಳಿದು ಕೆಟ್ಟು ಹೋಗಬೇಕು. ಕಾಲದ ಏಕತೆಯನ್ನು ಆತ ಎಲ್ಲಿಯೂ ಕಡ್ಡಾಯವಾಗಿ ವಿಧಿಸಿಲ್ಲ. 5ನೆಯ ಅಧ್ಯಾಯದಲ್ಲಿ ನಾಟಕದ ಘಟನಾವಳಿಗೆ ಸಾಧಾರಣವಾಗಿ ಹಿಡಿಯುವ ಕಾಲಾವಧಿಯನ್ನು ಸೂಚಿಸುವ ವಾಕ್ಯವೊಂದಿದೆ : ಸೂರ್ಯನ ಒಂದು ಪರಿವರ್ತನದೊಳಗೆ ಅಡಕವಾಗುವುದು ರುದ್ರ ನಾಟಕದ ಪ್ರಯತ್ನ; ಆ ಮಿತಿಗಿಂತ ಹೆಚ್ಚಾದರೆ ಎಲ್ಲೊ ಅತ್ಯಲ್ಪ ಹೆಚ್ಚಾಗುತ್ತದೆ. ಸ್ಥಳದ ಏಕತೆಯನ್ನು ಅರಿಸ್ಟಾಟಲ್ ಎಲ್ಲಿಯೂ ಹೆಸರಿಸಿಯೇ ಇಲ್ಲ. ಗಂಭೀರ ನಾಟಕದ ಘಟನಾವಳಿಗಳು ಭವ್ಯ ಕಾವ್ಯದ ಘಟನಾವಳಿಗಳಂತೆ ವಿಶಾಲವಾದುವಲ್ಲ; ಚಿಕ್ಕವು. ಅವಕ್ಕೆ ಸಂಕುಚಿತ ಮೇರೆಗಳುಂಟು—ಇತ್ಯಾದಿ ವಾಕ್ಯಗಳನ್ನು ಸ್ಥಳ ಸೂಚನೆಯೆಂದು ತಿಳಿಯಲಾಗುವುದಿಲ್ಲ. ತಿಳಿದರೂ ಅವಕ್ಕೆ ಸೂತ್ರದ ವೈಖರಿ ಇಲ್ಲ. ನಿಜಾಂಶ ಇಂತಿದ್ದರೂ ಇಟಲಿಯ ಪಂಡಿತರು ಮೂರು ಏಕತೆಗಳನ್ನು ಶಾಸ್ತ್ರೀಯವಾಗಿ ವಿಧಾಯಕ ಮಾಡಿದರು. ಫ್ರಾನ್ಸಿನಲ್ಲಿ ಅವಕ್ಕೆ ರಾಜಾಜ್ಞೆಗೆ ಸದೃಶವಾದ ಗೌರವ ದೊರಕಿತು. ಸೂರ್ಯನ ಒಂದು ಪರಿವರ್ತನ ಎಂದರೆ ಒಂದು ಹಗಲು ಅಥವಾ 12 ಗಂಟೆಗಳು ಎಂದೂ ಸ್ಥಳದ ಏಕತೆಯೆಂದರೆ ಒಂದೇ ಹೊರ ಅಂಗಳ, ಒಂದೇ ಹಜಾರ ಅಥವಾ ಒಂದೇ ಕೊಠಡಿ ಎಂದು ಅರ್ಥವೆಂದೂ ಅಲ್ಲಿನ ಕೆಲವು ವಿದ್ವಜ್ಜನರ ಮೊಂಡಾಟ. ಇನ್ನು ಕೆಲವರು 24 ಗಂಟೆ ಅಥವಾ 36 ಗಂಟೆ ಆಗಬಹುದೆಂದೂ ಕಾರ್ಯಕ್ಷೇತ್ರ ಒಂದೇ ಊರಾದರೆ ಸಾಕೆಂದೂ ಔದಾರ್ಯ ತೋರಿದರು. ಏಕತೆಗಳ ನಿಯಮದಿಂದ ನಾಟಕಕಾರ ಕಾರ್ನೀಲ್ ಬಹು ತ್ರಾಸಗೊಂಡ. ಆದರೆ ರಾಸೀನ್ ಅವು ಮೂರನ್ನೂ ಅಚ್ಚುಕಟ್ಟಾಗಿ ಅನುಸರಿಸಿದ. ಅದರಿಂದ ಅವನ ನಾಟಕಗಳಲ್ಲಿ ಸಹಜತೆ, ಸಮಂಜಸತ್ವಗಳಿಗೆ ಏನೂ ಕುಂದುಬಂದಿಲ್ಲ.

16, 17ನೆಯ ಶತಮಾನದ ಇಂಗ್ಲೆಂಡ್ ಮತ್ತು ಸ್ಪೇನ್ ದೇಶಗಳಲ್ಲಿ ಆ ನಿಯಮಕ್ಕೆ ಕವಿಗಳು ಅಷ್ಟಾಗಿ ತಲೆ ಬಾಗಲಿಲ್ಲ. ಸಿಡ್ನಿ, ಬೆನ್ ಜಾನ್ಸನ್ ಇತ್ಯಾದಿ ವಿಮರ್ಶಕರ ಗರ್ಜನೆ ಇದ್ದರೂ ಮಾರ್ಲೊ, ಷೇಕ್ಸ್‌ಪಿಯರ್, ಲೋಪ್ ಡ ವೀಗ, ಕಾಲ್ಡೆರನ್ ಮೊದಲಾದ ಮಹಾ ಕವಿಗಳು ಧಾರಾಳಚಿತ್ತವೃತ್ತಿಯಿಂದಲೇ ಕೃತಿ ರಚನೆಗೈದರು. ಅವರ ರೂಪಕದ ಪ್ರಮುಖ ಲಾಂಛನ ವೈಶಾಲ್ಯ, ವೈವಿಧ್ಯ; ಆದರೂ ಕಲೆ ಎಂದೆಂದೂ ಮರ್ಯಾದೆಯೀಯುವ ಸಂವಿಧಾನದ ಏಕತೆಯನ್ನು ಅವರು ಕೈಬಿಟ್ಟಿಲ್ಲ.

ನಾಟಕ ಎಷ್ಟೇ ಆದರೂ ನಾಟಕ ಮಂದಿರದಲ್ಲಿ ಮೂರು ನಾಲ್ಕು ಗಂಟೆಗಳ ಅವಧಿಯಲ್ಲಿ ನಟರ ಅಭಿನಯದ ಮೂಲಕ ಜರುಗಿ, ಪ್ರೇಕ್ಷಕ ಸಂದೋಹಕ್ಕೆ ಹರ್ಷೋಲ್ಲಾಸವನ್ನಿತ್ತು, ಮುಗಿದು ಹೋಗುವ ಮಿಶ್ರ ಕಲೆಯ ವ್ಯಾಪಾರ. ಆದ್ದರಿಂದ ಅದು ಕಾದಂಬರಿ, ಭವ್ಯಕಾವ್ಯಗಳಂತೆ ನಿಧಾನವಾಗಿ ಹೆಚ್ಚು ಸ್ವಾತಂತ್ರ್ಯದಿಂದ ನಡೆಯುವಂತಿಲ್ಲ. ಯುಕ್ತ ನಿಯಮಗಳ ಹದ್ದಿನಲ್ಲಿ ಅದು ಇದ್ದೇ ಇರತಕ್ಕದ್ದು; ಇಲ್ಲದಿದ್ದರೆ ಅದರಿಂದ ರಸಭಂಗ ಖಂಡಿತ. ಏಕತೆಯೆಂಬ ಮಾತನ್ನು ನಟರಾಗಲಿ

ನಾಟಕಕಾರನಾಗಲಿ ಅಲ್ಲಗಳೆದರೆ ಕಷ್ಟ; ಎಂದರೆ ಏಕತೆಯನ್ನು ವಿಶಾಲಾರ್ಥದಲ್ಲಿ ಗ್ರಹಿಸತಕ್ಕದ್ದು. ಒಂದೇ ಕಥೆಯಿಂದ ಕಟ್ಟಿದ ಈಸ್ಕಿಲಸ್‌ನ ಆಗಮೆಮ್ನಾನ್‌ನಲ್ಲೂ ಏಕತೆಯಿದೆ; ನಾಲ್ಕು ಕಥೆಗಳನ್ನು ಒಟ್ಟುಗೂಡಿಸಿ ಕಟ್ಟಿದ ಷೇಕ್ಸ್‌ಪಿಯರನ ಮರ್ಚೆಂಟ್ ಆಫ್ ವೆನಿಸ್‌ನಲ್ಲೂ ಏಕತೆಯಿದೆ.

ಈಚೆಗೆ ಕೆಲವು ವಿದ್ವಾಂಸರು ಆ ಮೂರು ಏಕತೆಗಳಿಗಿಂತಲೂ ತೋಚಿಕೆಯ ಅಥವಾ ಪರಿಣಾಮದ ಏಕತೆ (ಯೂನಿಟಿ ಆಫ್ ಇಂಪ್ರೆಷನ್) ಹೆಚ್ಚಾದುದು, ಅಗತ್ಯವಾದುದು ಎಂದಿದ್ದಾರೆ. ನಾಟಕ ನಡೆಯುತ್ತ ನಡೆಯುತ್ತ ಕಡೆಗೆ ನೋಟಕನ ಮನಸ್ಸಿನಲ್ಲಿ ಮುದ್ರಿತವಾಗಿ ಉಳಿದು ನಿಲ್ಲುವ ಪರಿಣಾಮ ಏಕಮುಖದ್ದಾಗಿರಬೇಕು. ಅದು ಸರಿ. ಆದರೆ ಅದನ್ನು ರೂಪಕಕ್ಕೆ ಮಾತ್ರ ಏತಕ್ಕೆ ಮೀಸಲಿಡಬೇಕು? ಎಲ್ಲ ಸಾಹಿತ್ಯ ಪ್ರಕಾರಗಳಿಗೂ ಅದನ್ನು ಹೊಂದಿಸುವುದು ನ್ಯಾಯವೆಂದು ತೋರುತ್ತದೆ.

(ಎಸ್.ವಿ.ಆರ್.)

**ಏಕತ್ವವಾದ :** ಪಾಶ್ಚಾತ್ಯ ಮತ್ತು ಪೌರಸ್ತ್ಯ ತತ್ತ್ವಶಾಸ್ತ್ರ ಚರಿತ್ರೆಯಲ್ಲಿ ಮುಖ್ಯವಾದ ಮತ್ತು ಪ್ರಬಲವಾದ ಒಂದು ತತ್ತ್ವ ಪಂಥ, (ಮಾನಿಸಂ). ಸತ್ ಒಂದೇ ಎಂಬುದು ಈ ವಾದದ ತಿರುಳು. ಸತ್ ಒಂದಲ್ಲ ಎರಡು ಎಂಬ ದ್ವೈತವಾದಕ್ಕೂ ಅನೇಕ ಎಂಬ ಬಹುತ್ವವಾದಕ್ಕೂ ಪ್ರತಿಯಾದದ್ದು ಈ ಏಕತ್ವವಾದ. ಇದು ಎರಡು ಬಗೆಯಾಗಿದೆ. ಸತ್ ಭೌತಸ್ವರೂಪ ಉಳ್ಳದ್ದು ಎಂಬುದು ಒಂದು ಬಗೆಯದು. ಅದು ಚೇತನ ಸ್ವರೂಪವಾದದ್ದು ಎಂಬುದು ಎರಡನೆಯ ಬಗೆಯದು. ಸತ್ ಜೀವಸ್ವರೂಪ ಉಳ್ಳದ್ದು ಎಂಬ ವಾದವನ್ನು ಎರಡನೆಯದರಲ್ಲೇ ಸೇರಿಸುವುದುಂಟು. ಭೌತಏಕತ್ವವಾದವಾಗಲಿ, ಚೈತನ್ಯಏಕತ್ವವಾದವಾಗಲಿ ಕೆಲವು ಒಳ ಭೇದಗಳನ್ನು ಪಡೆದೇ ಇರುತ್ತದೆ. ಏಕತ್ವವಾದಕ್ಕೆ ಬಹುಮುಖಗಳಿವೆ. ಕೆಲವರು ಈ ಒಂದಾದ ಸತ್ ಭಿನ್ನತೆ ಇಲ್ಲದ್ದು, ಬೆಳವಣಿಗೆ ಇಲ್ಲದ್ದು ಎಂದು ವಾದಿಸುತ್ತಾರೆ. ಮತ್ತೆ ಕೆಲವರು ಅದು ಭೇದಸಹಿತವಾದ್ದು, ಬೆಳವಣಿಗೆಯುಳ್ಳದ್ದು ಎಂದು ವಾದಿಸುತ್ತಾರೆ. ಇನ್ನೂ ಕೆಲವರು ಸತ್ ರೂಪರಹಿತ, ಭೇದರಹಿತ ಒಂದೆಂದೂ ಪ್ರಪಂಚದಲ್ಲಿ ಕಾಣುವ ಎಲ್ಲ ಭೇದಗಳೂ ಬದಲಾವಣೆಗಳೂ ಮಿಥ್ಯಾ ರೂಪವಾದುವೆಂದೂ ವಾದಿಸುತ್ತಾರೆ.

ಪೌರಸ್ತ್ಯ ತತ್ತ್ವಶಾಸ್ತ್ರಚರಿತ್ರೆಯಲ್ಲಿ ಏಕತ್ವವಾದ ಬಹಳ ಹಿಂದೆ ಋಗ್ವೇದ ಕಾಲದಲ್ಲೇ ಕಂಡುಬರುತ್ತದೆ. ಈ ವಾದ ಉಪನಿಷತ್ತುಗಳಲ್ಲಿ ವಿಸ್ತಾರವಾಗಿ, ಹಲವು ವಿಧವಾಗಿ ಪ್ರಕಟವಾಗಿದೆ. ಬುದ್ಧ ಅದ್ವಯವಾದಿ ಎಂದು ಅಮರದಲ್ಲಿ ಹೇಳಿದೆ. ಬೌದ್ಧ ತತ್ತ್ವದ ಒಂದು ಮುಖ್ಯ ಬೆಳವಣಿಗೆಯಾದ ಮಾಧ್ಯಮಿಕ ದರ್ಶನ ಅದ್ವೈತ ಪರವಾದದ್ದೆಂದು ಹೇಳಲು ಪ್ರಬಲ ಕಾರಣಗಳಿವೆ. ಬ್ರಹ್ಮಸೂತ್ರದಲ್ಲಿ ಹಲವು ಬಗೆಯ ಏಕತ್ವವಾದಗಳ ವಿವರಣೆ ಇದೆ. ಗೌಡಪಾದನ ಮಾಂಡೂಕ್ಯಕಾರಿಕೆ ನಿಸ್ಸಂದೇಹವಾಗಿ ಏಕತ್ವವಾದವನ್ನು ಘೋಷಿಸುತ್ತದೆ. ಶಂಕರಾಚಾರ್ಯರ ಅದ್ವೈತ ವಾದವಂತೂ ಪ್ರಖ್ಯಾತವಾದದ್ದು. ಅದು ಇಂದಿನವರೆಗೂ ಭಾರತದಲ್ಲೂ ಪಾಶ್ಚಾತ್ಯ ದೇಶಗಳಲ್ಲೂ ವಿರಾಜಿಸುತ್ತಿದೆ. ಭೌತ ಏಕತ್ವವಾದ ಭಾರತದಲ್ಲಿ ಅಷ್ಟು ಪ್ರಬಲವಾದ ವಾದವೆಂದು ಹೇಳಲಾಗುವುದಿಲ್ಲ. ಆ ವಾದ ಪಾಶ್ಚಾತ್ಯ ದೇಶಗಳಲ್ಲಿ ಬೆಳೆದಷ್ಟು ಹುಲುಸಾಗಿ ಬೆಳೆಯದಿದ್ದರೂ ಒಂದು ಕಾಲದಲ್ಲಿ ಚಾರ್ವಾಕ ದರ್ಶನದಲ್ಲದು ಸ್ಪಷ್ಟವಾಗಿ ಕಾಣುತ್ತದೆ.

ಪಾಶ್ಚಾತ್ಯ ತತ್ತ್ವಶಾಸ್ತ್ರಚರಿತ್ರೆಯಲ್ಲಿ ಏಕತ್ವವಾದದ ಸ್ಪಷ್ಟವಾದ ಘೋಷಣೆ ಕಾಣಬರುವುದು ಗ್ರೀಕ್ ತತ್ತ್ವಜ್ಞನಾದ ಪಾರ್ಮನಿಡೀಸನ ಸೂತ್ರಪ್ರಾಯವಾದ ಹೇಳಿಕೆಗಳಲ್ಲಿ. ಇಲ್ಲಿ ಕಾಣುವುದು ಸತ್ ಒಂದೇ ಎಂಬ ಸಿದ್ಧಾಂತ. ಈ ಒಂದಾಗಿರುವ ಸತ್ ಚೇತನ ಸ್ವರೂಪವೇ ಭೌತಸ್ವರೂಪವೇ, ಈ ಒಂದಾದ ಚಿರವಾದ ಸತ್ತಿಗೂ ಲೋಕದಲ್ಲಿ ಕಾಣುವ ಭಿನ್ನತೆಗೂ ಬದಲಾವಣೆಗಳಿಗೂ ಏನು ಸಂಬಂಧ–ಎಂಬ ಪ್ರಶ್ನೆಗಳಿಗೆ ಅವನ ವಚನಗಳಲ್ಲಿ ನೇರವಾದ ಉತ್ತರ ದೊರೆಯುವುದಿಲ್ಲ. ಈ ಪ್ರಶ್ನೆಗಳನ್ನು ಎತ್ತಿದವ ಪ್ಲೇಟೊ. ಭಿನ್ನತೆಯನ್ನು ಏಕತೆಯೊಡನೆ, ಚೇತನಸ್ವರೂಪವಾದದ್ದನ್ನು ಅಚೇತನದೊಡನೆ, ಚಿರವಾದದ್ದನ್ನು ಬದಲಾವಣೆಯೊಂದಿಗೆ ಸಮನ್ವಯ ಮಾಡಲು ಪ್ಲೇಟೊ ತನ್ನ ಸಂವಾದಗಳಲ್ಲಿ ಬಹು ಪ್ರಕಾರವಾಗಿ ಪ್ರಯತ್ನಿಸಿದ್ದಾನೆ. ಅಲ್ಲಿ ನಿರೂಪಿತವಾಗಿರುವ ನಿಗೂಢ (ಮಿಸ್ಟಿಕ್) ತತ್ತ್ವವೊಂದನ್ನು ತಾನು ಅವಲಂಬಿಸುತ್ತಿದ್ದರೂ ಬರೆವಣಿಗೆಯ ಮೂಲಕ ಎಂದೆಂದಿಗೂ ಅದನ್ನು ಪ್ರಕಟಿಸುವುದಿಲ್ಲವೆಂದು ಆತ ಹೇಳಿದ್ದಾನೆ. ಒಂದು ನಿಗೂಢ ತತ್ತ್ವಸಂಸ್ಥೆಯ ಮುಖ್ಯರಲ್ಲಿ ಆತ ಒಬ್ಬನೆಂದು ಇತರರ ಹೇಳಿಕೆಗಳಿಂದಲೂ ಸ್ಪಷ್ಟವಾಗುತ್ತದೆ. ಪ್ಲೇಟೊ ಬೌದ್ಧಿಕ ಏಕತ್ವ (ರ್‍ಯಾಷನಲ್ ಮಾನಿಸಂ) ತಾತ್ತ್ವಿಕನಲ್ಲದೆ, ನಿಗೂಢ ಏಕತ್ವತಾತ್ತ್ವಿಕ (ಮಿಸ್ಟಿಕಲ್ ಮಾನಿಸ್ಟ್) ಕೂಡ ಆಗಿದ್ದನೆಂದು ಹೇಳಲು ಸಾಕಾದಷ್ಟು ಕಾರಣಗಳಿವೆ. ಇವನ ಅನಂತರದ ಪ್ಲಾಟೈನಸ್ ತನ್ನ ನಿಗೂಢತತ್ತ್ವ ಪ್ರತಿಪಾದನೆಗಾಗಿ ಪ್ಲೇಟೊವನ್ನು ವಿಶೇಷವಾಗಿ ಆಶ್ರಯಿಸಿರುವುದು ಆ ಕಾರಣಗಳಲ್ಲಿ ಮುಖ್ಯವಾದದ್ದು. ಆಧುನಿಕರಲ್ಲಿ ಏಕತ್ವವಾದದ ಮುಖ್ಯ ಪ್ರತಿಪಾದಕರು ಬೆನಡಿಕ್ಟ್ ಸ್ಪಿನೋಜ಼ ಮತ್ತು ತದನಂತರದ ಜರ್ಮನ್ ತಾತ್ತ್ವಿಕ ಹೆಗೆಲ್. ಇವನ ಆಂಗ್ಲೇಯ ಅನುಯಾಯಿಗಳಲ್ಲಿ ಎಫ್. ಎಚ್. ಬ್ರಾಡ್ಲೆ ಪ್ರಸಿದ್ಧನಾದವ. ಪಾಶ್ಚಾತ್ಯ ಏಕತ್ವವಾದಿಗಳಲ್ಲಿ ಅರ್ನೆಸ್ಟ್ ಹೆಗಲ್, ಕಾರಲ್ ಮಾರ್ಕ್ಸ್ ಪ್ರಖ್ಯಾತರು. ಭೌತ ಏಕತ್ವವಾದದ ಒಂದು ಹೊಸ ರೂಪ ಈಗ ರಷ್ಯ ದೇಶದಲ್ಲಿ ವಿರಾಜಿಸುತ್ತಿದೆ.

ಏಕತ್ವತತ್ತ್ವದ ಮುಖ್ಯ ಅಂಶ ಇದು. ಇದರ ತಳಹದಿಯಾದ ಭಾವನೆ ಸತ್; ಸತ್ಯ ಸ್ವರೂಪವಾದದ್ದು. ಸತ್ಯ ಎಂದರೆ ಸ್ವತಃ ಅಸಂಗತವಲ್ಲದ್ದು, ಅವಿರೋಧವಲ್ಲದ್ದು, ಸ್ವಸಂಗತವಾದದ್ದು, ಸ್ವಸಂಪೂರ್ಣವಾದುದ್ದು, ಅವಿಭಾಜ್ಯವಾದ ಒಕ್ಕಟ್ಟುಳ್ಳದ್ದು, ಸರ್ವವ್ಯಾಪಕವಾದದ್ದು, ಎಲ್ಲಕ್ಕೂ ಆಧಾರವಾದದ್ದು. ಈ ಭಾವನೆಯನ್ನು ಎಲ್ಲ ಏಕತ್ವವಾದಿಗಳೂ ಒಪ್ಪುತ್ತಾರೆ. ಆದರೆ ಇದರ ಸ್ವರೂಪವೇನು ? ಏಕೈಕವಾಗಿರುವ ಸತ್ ಭೌತವಾದುದೇ ಜೀವರೂಪವಾದುದೇ ? ಇದು ಭಿನ್ನತೆ ಇಲ್ಲದ, ಬದಲಾವಣೆ ಇಲ್ಲದ, ಬೆಳವಣಿಗೆ ಇಲ್ಲದ, ಕಾಲದೇಶಗಳಿಲ್ಲದ, ಸರಳ ಸಾಮಾನ್ಯವೇ ? ಅಥವಾ ವೈವಿಧ್ಯ ಸಹಿತವಾದ ಬೆಳವಣಿಗೆಯುಳ್ಳ ಒಂದೇ ? ಒಂದೇ ಆಗಿಯೂ ವೈವಿಧ್ಯದಿಂದ ಕೂಡಿದ್ದರೆ, ಬದಲಾವಣೆಗಳಿಂದ ಕೂಡಿದ್ದರೆ, ಸಾಮಾನ್ಯಕ್ಕೂ ವೈಶಿಷ್ಟ್ಯಕ್ಕೂ, ಸ್ಥಿರತೆಗೂ ಬದಲಾವಣೆಗೂ ಏನು ಸಂಬಂಧ ?—ಈ ಮುಂತಾದ ಪ್ರಶ್ನೆಗಳು ಉದ್ಭವಿಸುತ್ತವೆ. ಈ ಪ್ರಶ್ನೆಗಳಿಗೆ ಏಕತ್ವವಾದಿಗಳು ವಿಧವಿಧವಾದ ಉತ್ತರಗಳನ್ನು ಕೊಟ್ಟಿರುತ್ತಾರೆ. ಈ ಉತ್ತರಗಳು ಭಿನ್ನ ಸಿದ್ಧಾಂತಗಳಾಗಿ ಪರಿಣಮಿಸಿವೆ. ಇವನ್ನು ಸಂಕ್ಷೇಪವಾಗಿ ಪರಿಶೀಲಿಸಬಹುದು.

**ಭೌತ ಏಕತ್ವವಾದ :** ಈ ವಾದವನ್ನು ಚರಿತ್ರೆಯ ದೃಷ್ಟಿಯಿಂದ ಮೂರು ಹಂತಗಳಲ್ಲಿ ವಿವೇಚಿಸಿದೆ. ಮೊದಲನೆಯದು ಪ್ರಾಕ್ತನರದು. ಥಾಲೀಸ್ ಎಂಬ ಗ್ರೀಕ್ ತಾತ್ತ್ವಿಕ ಎಲ್ಲಕ್ಕೂ ಮೂಲವಾದ ವಸ್ತು ಅಪ್, ಅಂದರೆ ನೀರು ಎಂದು ವಾದಿಸಿದ. ಅನ್ಯಾಕ್ಸಿಮೈನೀಸ್ ಎಲ್ಲಕ್ಕೂ ಮೂಲಭೂತವಾದದ್ದು ವಾಯು ಎಂದು ವಾದಿಸಿದ. ಅವನ ತರುವಾಯದ ಅನ್ಯಾಕ್ಸಿಮೆಂಡರ್ ಎಲ್ಲಕ್ಕೂ ಮೂಲಭೂತವಾದದ್ದು ಅಗ್ನಿ ಎಂದು ವಾದಿಸಿದ. ವೇದದ ಕಾಲದಲ್ಲೂ ಇದೇ ವಿಧವಾದ ವಾದಗಳು ಕಾಣಬರುತ್ತವೆ. ಕೆಲವರು ಎಲ್ಲಕ್ಕೂ ಮೂಲಭೂತವಾದದ್ದು ಆಕಾಶ ಎಂದು ವಾದಿಸಿದರು. ಹೀಗೆ ಕ್ರಮಕ್ರಮವಾಗಿ ಸ್ಥೂಲವಾದ ಭೌತವಸ್ತುವಿನಿಂದ ಹೆಚ್ಚು ಹೆಚ್ಚು ಸೂಕ್ಷ್ಮವಾದ ಭೌತವಸ್ತು ಎಲ್ಲಕ್ಕೂ ಮೂಲವೆಂಬ ತತ್ತ್ವವಿವೇಚನೆ ಬೆಳೆಯಿತು. ಹೀಗೆ ಒಬ್ಬೊಬ್ಬರೂ ಒಂದೇ ವಸ್ತುವಿನಿಂದ ಎಲ್ಲವೂ ಹುಟ್ಟಿದ್ದು ಎಂದು ವಾದಿಸಿದರೂ ಅವು ಭಿನ್ನಗುಣಗಳುಳ್ಳವಾದುದರಿಂದ ಅವುಗಳ ಭಿನ್ನತೆಯನ್ನು ಇಲ್ಲವೆನ್ನಲಾಗುವುದಿಲ್ಲ. ನೀರು ನೀರೆ, ಗಾಳಿ ಗಾಳಿಯೆ, ಬೆಂಕಿ ಬೆಂಕಿಯೆ. ದೊಡ್ಡದಾದರೂ ಸಣ್ಣದಾದರೂ ಅದು ತನ್ನ ಸ್ವಭಾವವನ್ನು ಬಿಟ್ಟು ಕೊಡುವುದಿಲ್ಲ.

ನೀರು, ಗಾಳಿ, ಅಗ್ನಿ, ಆಕಾಶ ಇವೆಲ್ಲವೂ ಭೌತವಾದುವು. ಈ ಒಂದೊಂದು ಬೇರೆ ಬೇರೆ. ಒಂದರೊಡನೆ ಇನ್ನೊಂದು ಕಲೆಯುವ ಹಾಗಿಲ್ಲ. ಈ ಒಂದೊಂದೂ ಅನೇಕವಾಗಿ ವಿಭಾಜ್ಯವಾಗಬಲ್ಲಂಥವು. ಒಂದು ತೊಟ್ಟು ನೀರಿನಲ್ಲಿ ನೂರಾರು ನೀರಿನ ಕಣಗಳಿವೆ. ಒಂದು ಸೂಜಿಯ ಕಣ್ಣಿನಲ್ಲಿರುವ ಗಾಳಿಯಲ್ಲಿ ನೂರಾರು ಗಾಳಿಯ ಕಣಗಳಿವೆ, ಒಂದು ಬೆಂಕಿಕಡ್ಡಿಯ ಉರಿಯಲ್ಲಿ ನೂರಾರು ಬೆಂಕಿಯ ಕಿಡಿಗಳಿವೆ. ಒಂದು ಇರುವೆ ನಿಲ್ಲುವಷ್ಟು ಸ್ಥಳದಲ್ಲಿ ಅನೇಕಾನೇಕ ಚುಕ್ಕೆಗಳನ್ನು ಸೇರಿಸಬಹುದು. ಈ ವಿಶ್ವವನ್ನು ವಿಭಜಿಸುತ್ತ ಹೋದರೆ ಅಂತಿಮದಲ್ಲಿ ನಮಗೆ ದೊರೆಯುವುದು ಅಗಣಿತವಾದ ಬಗೆಬಗೆಯ ಕಣಗಳು. ಮನೆ ಇಟ್ಟಿಗೆಗಳಿಂದ ಆಗಿರುವಂತೆ ಈ ವಿಶ್ವವೂ ವಿವಿಧವಾದ ಅಣುಗಳು ಸೇರಿ ಆದದ್ದು. ಆದ್ದರಿಂದ ಈ ವಿಶ್ವಕ್ಕೆ ಅಂತಿಮ ತಳಹದಿ ಈ ಅಣುಗಳು. ಇವೇ ಸತ್ತಿನ ಅಂತಿಮ ವಸ್ತುಗಳು. ಆದ್ದರಿಂದ ಅಂತಿಮದಲ್ಲಿ ಈ ವಿಶ್ವ ಏಕಪ್ರಕಾರವಾದ ಒಂದೇ ಒಂದು ಪದಾರ್ಥವಲ್ಲ. ಅದು ಅನೇಕಾನೇಕ ಪ್ರತ್ಯೇಕವಾದ ಅಣುಗಳ ಸಮುದಾಯ. ಭಿನ್ನಗುಣಗಳುಳ್ಳ ಅನೇಕ ವಸ್ತುಗಳೇ ಈ ವಿಶ್ವಕ್ಕೆ ಮೂಲಕಾರಣಗಳು—ಎಂದು ಡಿಮಾಕ್ರಿಟಸ್ ಮೊದಲಾದ ಭೌತ ಬಹುತ್ವವಾದಿಗಳು ವಾದಿಸಿದರು.

ಏಕತ್ವವಾದಿಗಳು ಈ ವಾದವನ್ನು ಎದುರಿಸಬೇಕಾಯಿತು. ಅದಕ್ಕೆ ಅವರು ಹೊಸದೊಂದು ತರ್ಕಸರಣಿಯನ್ನು ಹಿಡಿದರು. ಅದರ ಮುಖ್ಯಾಂಶ ಇದು : ನಾವು ತತ್ತ್ವಜ್ಞರಾಗಿ ಹುಡುಕುತ್ತಿರುವುದು ವಿಶ್ವದ ಅಂತಿಮ ಕಾರಣವನ್ನು. ಅಣುಗಳು ವಿಶ್ವಕ್ಕೆ ಅಂತಿಮ ಕಾರಣಗಳೆಂದು ನೀವು ಹೇಳುತ್ತೀರಿ. ಅಂತಿಮ ಎಂಬ ಪದವನ್ನು ಅರ್ಥಮಾಡಿಕೊಳ್ಳದೆ ಉಪಯೋಗಿಸುತ್ತಿದ್ದೀರಿ. ಅಂತಿಮ ವಸ್ತು ಎಂದರೆ ಕಾರಣ ಎಂದಲ್ಲಿ ಎಲ್ಲಕ್ಕೂ ಅದು ಕಾರಣವಾಗಿರಬೇಕು. ಅದಕ್ಕೆ ಬೇರೆ ಕಾರಣವಿಲ್ಲದಿರಬೇಕು. ಅದು ಎಲ್ಲವನ್ನೂ ಒಳಗೊಂಡಿರಬೇಕು. ಅದರ ಹೊರಗೆ ಬೇರೆ ಏನೂ ಇರಕೂಡದು. ಅದು ಅಮಿತವಾಗಿರಬೇಕು. ಅನಂತವಾಗಿರಬೇಕು. ಪರಮವಾಗಿರಬೇಕು. ನಾವು ನೋಡಿದ ನೀರು, ಗಾಳಿ, ಬೆಂಕಿ ಯಾವುದೇ ಆಗಲಿ ಮಿತಿಯುಳ್ಳವು. ಅಂಥ ಮಿತಿಯುಳ್ಳದ್ದು ಪರಮವಾಗಲಾರದು, ಸ್ವತಂತ್ರವಾಗಲಾರದು. ಗಾಳಿಯ ಹೊರಗೆ ಅದಕ್ಕೆ ತಡೆಯಾಗಿ ಘನ ಪದಾರ್ಥಗಳಿವೆ. ಬೆಂಕಿಯ

ಹೊರಗೆ ನೀರಿದೆ. ಬೆಂಕಿಯ ಮೇಲೆ ನೀರು ಬಿದ್ದರೆ ಅದು ಆರಿಹೋಗುತ್ತದೆ. ನೀರನ್ನು ಬೆಂಕಿಯಿಂದ ಕಾಯಿಸಿದರೆ ಅದು ಅನಿಲ ರೂಪದ್ದಾಗುತ್ತದೆ. ಹೀಗೆ ಒಂದು ಇನ್ನೊಂದರ ಸ್ವಭಾವ ತಾನೇ ತಾನಾಗಿ ಉಳಿಯದಂತೆ ಮಾಡುತ್ತದೆ. ಆದ್ದರಿಂದ ಇವುಗಳಲ್ಲಿ ಯಾವುದೊಂದೂ ಅಂತಿಮದಲ್ಲಿ ತಾನೇತಾನಾಗಿ ಉಳಿಯಲಾರದು. ಭಿನ್ನತೆ ಇದ್ದೆಡೆ ಪರಸ್ಪರ ಘರ್ಷಣೆ, ಪರಸ್ಪರ ವಿನಾಶ ಅನಿವಾರ್ಯ. ಅಂತಿಮ ವಸ್ತು ಎಂದರೆ ಅದು ಅವಿರೋಧವುಳ್ಳದ್ದಾಗಿರಬೇಕು. ಅದಕ್ಕೆ ಹೊರಗೆ ಬೇರೆ ಯಾವುದೂ ಇಲ್ಲವಾಗಿರಬೇಕು. ಅದು ಎಲ್ಲವನ್ನೂ ಒಳಗೊಂಡ ವಸ್ತುವಾಗಿರಬೇಕು. ಅಂಥ ವಸ್ತು ಹುಟ್ಟೂ ಸಾವೂ ಇಲ್ಲದ ಸ್ಥಿರಚಿರವಸ್ತುವಾಗಿರಬೇಕು. ಅಂಥ ವಸ್ತು ಒಂದಲ್ಲದೆ ಹಲವಾಗಲಾರದು. ಭೂಮಿ, ನೀರು, ಗಾಳಿ, ಬೆಂಕಿ, ಆಕಾಶ, ಎಲ್ಲವೂ ಒಂದೇ ವಸ್ತುವಿನಿಂದ ಬಂದು, ಒಂದೇ ವಸ್ತುವಿನಲ್ಲಿ ಲೀನವಾಗಬೇಕು. ಈ ಭೌತವಸ್ತುಗಳ ತಳಹದಿಯಾಗಿ ಒಂದೇ ಭೌತವಸ್ತು ಪರಮವಾಗಿರಬಲ್ಲದ್ದು. ಸ್ವಸಂಗತವಾದದ್ದೆ ಸತ್. ಒಂದಲ್ಲದ್ದು ಸ್ವಸಂಗತವಾಗಲಾರದು. ಈ ಒಂದಾದ ಭೌತವಸ್ತುವೇ ಮೂಲಪ್ರಕೃತಿ. ಆ ಪ್ರಕೃತಿ ಒಂದೇ. ಅದು ಸರ್ವವ್ಯಾಪಕ ಸಮಸ್ತವನ್ನೂ ಒಳಗೊಂಡದ್ದು. ಚಿರವಾದದ್ದು. ಅನಂತವಾದದ್ದು. ಅನಾದಿಯಾದದ್ದು. ಈ ವಾದ ಭೌತವಾದದ ಎರಡನೆಯ ರೂಪ, ಎಲ್ಲವೂ ಭೌತವಾದ ಪ್ರಕೃತಿಗೆ ಅಧೀನ ಎಂಬ ವಾದಕ್ಕೆ ಪ್ರತಿಯಾಗಿ ಒಂದು ಪ್ರಶ್ನೆ ತಲೆದೋರುತ್ತದೆ. ಪ್ರಕೃತಿ ಇಂಥದು ಎಂದು ನಾವು ಹೇಳಲು ನಮಗೆ ಸಾಧ್ಯವಾದದ್ದು ಅರಿವಿನ ಪ್ರಭಾವದಿಂದ. ಈ ಅರಿವು ಇರವಿನಿಂದ ಪ್ರತ್ಯೇಕ. ಅದು ಇದೆ ಎಂದು ಸಿದ್ಧವಾಗಬೇಕಾದರೆ ತಿಳಿಯುವ ಚೈತನ್ಯ ಅದಕ್ಕೆ ಆಧಾರ. ನಮಗೆ ಮೊದಲು, ನೇರವಾಗಿ, ಬೇರೆಯ ವಿಷಯದ ಸಹಾಯವಿಲ್ಲದೆ ತಿಳಿಯುವುದೆಂದರೆ ನಾನು ಅರಿಯುವವನು ಎಂಬ ಚೇತನ. ನಾನು ಇದ್ದೇನೆ ಎಂದು ಹೇಳಬೇಕಾದರೆ ನನ್ನ ತಿಳಿವು ಆ ಇರವಿಗೆ ಆಧಾರ. ನಾನು ಉಳಿದೆಲ್ಲದರ ಇರವಿನ ವಿಚಾರವಾಗಿ ಸಂಶಯಪಡಬಹುದು, ಇಲ್ಲವೆಂದು ಹೇಳಬಹುದು. ಆದರೆ ನನ್ನ ತಿಳಿವನ್ನೇ ನಾನು ಇಲ್ಲವೆನ್ನುವ ಹಾಗಿಲ್ಲ. ಆ ತಿಳಿವು ಸ್ವತಃಸಿದ್ಧ. ಆ ತಿಳಿವು ಇರವಿಗೆ ಆಧಾರವಾದ್ದರಿಂದ ಜಡವಸ್ತುವಿನ ಇರವಿಗೆ ಚೇತನ ಅಗತ್ಯವಾಗುತ್ತದೆ. ತಿಳಿವಿಲ್ಲದೆ ತಿಳಿಯಬಹುದಾದ ವಸ್ತುವಿರಲಾರದು. ಆದ್ದರಿಂದ ಭೌತವಸ್ತುವಿನ ಅಸ್ತಿತ್ವ ತಿಳಿವಿನಿಂದಲೇ ಏರ್ಪಡಬೇಕಾದುದರಿಂದ ಇರವು ಅರಿವಿಗೆ ಅಧೀನ. ಅರಿವೇ ಎಲ್ಲ ಇರವಿನ ಅಂತಿಮ, ಪರಮ–ಆಧಾರ — ಎಂಬ ಚೇತನಾದ್ವೈತವಾದ ಈ ಭೌತಾದ್ವೈತಕ್ಕೆ ಪ್ರತಿವಾದವಾಗಿ ನಿಲ್ಲುತ್ತದೆ.

ಏಕತ್ವ ಭೌತವಾದ ಇನ್ನೊಂದು ಬಗೆಯ ಆಕ್ಷೇಪಕ್ಕೆ ಒಳಪಡುತ್ತದೆ. ಭೌತವಸ್ತು ಕೇವಲ ಜಡವಾದದ್ದು. ಪ್ರಪಂಚವಾದರೋ ಚಟುವಟಿಕೆಯಿಂದ ತುಂಬಿತುಳುಕಾಡುತ್ತಿದೆ. ಅದು ಕೇವಲ ಯಾಂತ್ರಿಕವಾದದ್ದಲ್ಲ, ಗೊತ್ತುಗುರಿ ಇಲ್ಲದ್ದಲ್ಲ. ಈ ವಿಶ್ವದಲ್ಲಿರುವ ಒಂದೊಂದು ವಸ್ತುವೂ ಒಂದು ಗುರಿಯ ಕಡೆಗೆ ಧಾವಿಸುತ್ತದೆ. ಅದರಲ್ಲಿ ಕ್ರಮವಿದೆ. ಉದಾಹರಣೆಗಾಗಿ ಉಪ್ಪಿನ ದ್ರವವನ್ನು ತೆಗೆದುಕೊಳ್ಳೋಣ. ಅದು ಆವಿಯಾದಂತೆಲ್ಲ ಚತುರಸ್ರವಾದ ಹರಳುಗಳು ಸ್ಫುಟಗೊಳ್ಳುತ್ತವೆ, ಪುಟಗೊಳ್ಳುತ್ತವೆ. ಒಂದು ಬೀಜ ಸಸಿಯಾಗಿ, ಕ್ರಮವಾಗಿ ಕೊಂಬೆಗಳಾಗಿ ಕವಲೊಡೆದು ಎಲೆಗಳಾಗಿ ಬೆಳೆಯುತ್ತದೆ. ಅನಂತರ ಹೂ ಬಿಡುತ್ತದೆ. ಹೂ ಕಾಯಾಗಿ ಹಣ್ಣಾಗುತ್ತದೆ. ಉಪ್ಪಿನ ದ್ರವದ ಗುರಿ ಚಚ್ಚೌಕವಾದ ಹರಳುಗಳಾಗುವುದು. ಬೀಜದ ಗುರಿ ಗಿಡವಾಗಿ ಬೆಳೆದು ಹಣ್ಣು ಬಿಡುವುದು. ಹೀಗೆ ಪ್ರಪಂಚದಲ್ಲಿ ವಸ್ತುಗಳು ಜಡವಾಗಿರದೆ, ಚಟುವಟಿಕೆಯಿಂದ ಒಂದು ಗುರಿ ಮುಟ್ಟುತ್ತವೆ. ಚಟುವಟಿಕೆಯಿಂದ ಗುರಿ ಮುಟ್ಟುವುದಕ್ಕೆ ಚೇತನದ ಪ್ರಭಾವದಿಂದ ಸಾಧ್ಯವೇ ಹೊರತು, ಕೇವಲ ಅಚೇತಸ ವಸ್ತುವಿನಿಂದ ಸಾಧ್ಯವಿಲ್ಲ, ಎಂಬುದು ಭೌತವಾದಕ್ಕೆ ಇನ್ನೊಂದು ಪ್ರಬಲ ಆಕ್ಷೇಪ.

ಈ ಆಕ್ಷೇಪಗಳನ್ನು ಭೌತವಾದದ ಮೂರನೆಯ ರೂಪವಾಗಿರುವ ಆಧುನಿಕ ಭೌತವಾದ ಪರಿಹರಿಸಲು ಪ್ರಯತ್ನಿಸಿದೆ. ಈ ಭೌತವಾದಕ್ಕೆ ಡಯಲೆಕ್ಟಿಕ್ ಮೆಟೀರಿಯಲಿಸಂ ಎಂದು ಹೆಸರು. ಇದನ್ನು ಪ್ರತಿಪಾದಿಸಿದವ ಕಾರ್ಲ್ ಮಾರ್ಕ್ಸ್. ಆಧುನಿಕ ಭೌತವಾದಕ್ಕೆ ವಿಜ್ಞಾನ ಆಧಾರ. ವೈಜ್ಞಾನಿಕ ಭೌತವಾದ ಅರಿವು ಇಲ್ಲವೆಂದು ಹೇಳುವುದಿಲ್ಲ. ಅರಿವಿನ ಗುಣವನ್ನು ಅಲ್ಲಗಳೆಯುವುದಿಲ್ಲ. ಬುದ್ಧಿಯನ್ನು ತಿರಸ್ಕರಿಸುವುದಿಲ್ಲ. ಅದನ್ನು ಪುರಸ್ಕರಿಸುತ್ತದೆ. ಅದರ ವಾದ ಇಷ್ಟು. ತಿಳಿವು, ಇದ್ದದ್ದನ್ನು ತಿಳಿಯಬಲ್ಲದ್ದೇ ಹೊರತು, ಅದು ಇರವನ್ನು ಹುಟ್ಟಿ ಹಾಕಲಾರದು, ಹಾಗೆ ಅರಿವು ಇರವನ್ನು ಸೃಷ್ಟಿಸಬಹುದಾದರೆ, ಮಂತ್ರಿಸಿದರೆ ಮಾವಿನಕಾಯಿ ಆಗಬೇಕು. ನಾವು ಏನನ್ನಾದರೂ ತಿಳಿಯಬೇಕಾದರೆ ತಿಳಿಯಬೇಕಾದುದರ ಜಾಡನ್ನು ಹಿಡಿದುಹೋಗಬೇಕು. ಸತ್ತನ್ನು ತಿಳಿಸುವುದು ಸತ್ಯ ; ಸತ್ಯ ಸತ್ತಿನ ಅನುಯಾಯಿ. ಸತ್ ಸತ್ಯದ ಅನುಯಾಯಿ ಅಲ್ಲ. ವಿಜ್ಞಾನ ಸತ್ತನ್ನು ಅನುಸರಿಸುವುದರಿಂದಲ್ಲವೆ ಅದು ಅಷ್ಟು ಪ್ರಬಲವಾಗಿ ಬೆಳೆದಿರುವುದು ? ಸತ್ತಿನ ಮಾರ್ಗವನ್ನು ಅನುಸರಿಸದೆ ಕೇವಲ ಆಲೋಚನೆಯನ್ನೇ ನಂಬಿದರೆ, ಕೇವಲ ಭಾವನೆಗಳಿಂದಲೇ ಸತ್ತನ್ನು ಸ್ಥಾಪಿಸಹೊರಟರೆ, ಆ ನಂಬಿಕೆ ಮಿಥ್ಯವಾಗುತ್ತದೆ, ಬರಡಾಗುತ್ತದೆ. ಮಾನವ ತನ್ನ ಭಾವನೆಗಳೇ ಎಲ್ಲಕ್ಕೂ ಮೂಲ ಎಂಬ ಅಭಿಮಾನವನ್ನು ಹೊಂದಿದ್ದರಿಂದ ಅವನು ಪ್ರಗತಿ ಪಡೆಯಲಿಲ್ಲ ; ಹಸಿವಿನಿಂದ, ದೌರ್ಬಲ್ಯದಿಂದ ನರಳುವಂತಾದ. ಪ್ರಕೃತಿಯನ್ನು ನಂಬಿ ಪ್ರಕೃತಿಯನ್ನು ಅನುಸರಿಸಿದ ವಿಜ್ಞಾನದ ಪರಿಣಾಮವಾಗಿ ಮಾನವ ಹೆಚ್ಚು ಸಂಪತ್ತನ್ನು ಗಳಿಸಿ, ಹಸಿವು, ಕಾಯಿಲೆ, ದೌರ್ಬಲ್ಯವನ್ನು ನೀಗಲು ಸಾಧ್ಯವಾಗಿದೆ, ಹೆಚ್ಚು ಕಾಲ ಬದುಕಲು ಸಾಧ್ಯವಾಗಿದೆ.

ವಿಜ್ಞಾನ ಮತ್ತೊಂದು ವಿಧದಲ್ಲಿ ಮಾನವನ ಮಿಥ್ಯಾ ಅಥವಾ ಅಂಧಾಭಿಮಾನವನ್ನು ಕರಗಿಸಿದೆ. ಆಧುನಿಕ ಪರಿಣಾಮವಾದದ ಪ್ರಕಾರ, ಮಾನವ ಹುಟ್ಟಿದ್ದು ಈಚೆಗೆ. ಪುರಾತನವಾದ ಸೂರ್ಯ ಚಂದ್ರಾದಿಗಳೊಡನೆ ಹೋಲಿಸಿದರೆ ಮಾನವ ನಿನ್ನೆ ಹುಟ್ಟಿದ ಶಿಶು. ಅರಿವು, ಬುದ್ಧಿ ಹುಟ್ಟುವುದಕ್ಕೆ ಭೌತವಾದ ದೇಹರಚನೆ ಮತ್ತು ಅದರ ಕ್ರಿಯೆಗಳು ಆಧಾರ. ಅರಿವು ಪ್ರಕೃತಿಯ ಮೂಲಕ್ರಿಯೆಯ ಒಂದು ಉಪವ್ಯಾಪಾರ (ಬೈಪ್ರಾಡಕ್ಟ್) ಅಥವಾ ಉಪವಿಕಾರ (ಎಪಿಫಿನಾಮೆನನ್) ಎಂದು ಹಕ್ಸ್‌ಲೆ, ಹರ್ಬರ್ಟ್ ಸ್ಪೆನ್‌ಸರ್ ಮುಂತಾದ ವೈಜ್ಞಾನಿಕ ತಾತ್ತ್ವಿಕರು ವಾದಿಸಿರುತ್ತಾರೆ. ವೈದ್ಯರು ಜ್ಞಾನಪಲ್ಲಟವಾಗುವುದಕ್ಕೆ, ಜ್ಞಾನ ತಪ್ಪುವುದಕ್ಕೆ ಶರೀರದಲ್ಲಾಗುವ ಕೆಲವು ಬದಲಾವಣೆಗಳು ಕಾರಣವೆಂದೂ ಮಿದುಳಿಗೆ ಅಗತ್ಯವಾದ ಆಮ್ಲಜನಕದ ಸರಬರಾಯಿ ನಿಂತರೆ ಅರಿವು ನಿಂತು ಹೋಗುವುದೆಂದೂ ಪ್ರಾಯೋಗಿಕವಾಗಿ ಸ್ಥಾಪಿಸಿದ್ದಾರೆ. ಅಲ್ಲದೆ ಪ್ರಪಂಚದ ವಸ್ತುಗಳಲ್ಲಿ ಹೊಸ ಹೊಸ ರಚನೆಗೆ ಈ ಅರಿವು ಕಾರಣವಲ್ಲ. ಅರಿವೇನಿದ್ದರೂ ಹಿಂದೆ ಈ ರೀತಿ ಇದ್ದದ್ದು ಅನಂತರ ಈ ರೀತಿಯಾಗಿ ಪರಿವರ್ತನೆಯಾಗಿದೆ ಎಂದು ತಿಳಿಸುತ್ತದೆಯೇ ಹೊರತು ಆ ಪರಿವರ್ತನೆಗೆ ಕಾರಣವಾಗುವುದಿಲ್ಲ. ವಸ್ತುಗಳನ್ನು ಅರಿತ ಮಾತ್ರದಿಂದ ಅವುಗಳಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಕಾರ್ಯವೇನಿದ್ದರೂ ಭೌತ ಸತ್ತಿನ ಕಾರ್ಯ, ಸತ್ತಿನಲ್ಲಿ ಇಲ್ಲದ ಕಾರ್ಯ ಬೇರೆ ಎಲ್ಲಿಂದಲೂ ಬರಲು ಸಾಧ್ಯವಿಲ್ಲ. ಇಲ್ಲದ್ದರಿಂದ, ಅಸತ್ತಿನಿಂದ ಇರವು ಬಂದಿದೆ ಎಂದು ಹೇಳುವುದು ಅಸಂಗತ ಪ್ರಲಾಪವಾಗುತ್ತದೆ.

ಜಲಜನಕ, ಆಮ್ಲಜನಕ ಇವೆರಡೂ ಸೇರಿ ಎರಡರಿಂದಲೂ ಭಿನ್ನವಾದ ನೀರು ಹುಟ್ಟುವುದಿಲ್ಲವೆ, ಅವೆರಡರಲ್ಲೂ ಇಲ್ಲದ್ದು ಈಗ ನೀರಾಗಿ ಹೊಸದಾಗಿ ಹುಟ್ಟಿಲ್ಲವೆ —ಎಂದು ಕೇಳಬಹುದು.

ಅದಕ್ಕೆ ಭೌತಪರಿಣಾಮವಾದಿಗಳ ಉತ್ತರ ಇದು. ದ್ರವರೂಪ ಆಮ್ಲಜನಕದಲ್ಲಾಗಲಿ, ಜಲಜನಕದಲ್ಲಾಗಲಿ ಇಲ್ಲ. ಅದು ನಿಜ. ಆದರೆ ನೀರಾಗುವ ಶಕ್ತಿ ಅವೆರಡೂ ಪ್ರತ್ಯೇಕವಾಗಿ ಇರುವಾಗ ಇರುವುದಿಲ್ಲ. ಅವುಗಳಲ್ಲಿ ರಜೋಗುಣ ಹೆಚ್ಚಾಗಿ ತಮೋಗುಣ ಕಡಿಮೆಯಾಗಿರುವವರೆಗೂ ಅವು ಹಾಗೆಯೇ ಇರಬೇಕಾಗುತ್ತದೆ. ಆದರೆ ಅವುಗಳಲ್ಲಿ ತಮೋಗುಣವಿಲ್ಲದಿಲ್ಲ. ಯಾವ ವಸ್ತುವನ್ನು ತೆಗೆದುಕೊಂಡರೂ ಅದರಲ್ಲಿ ತಮೋಗುಣ ಇರುತ್ತದೆ. ರಜೋಗುಣವೂ ಇರುತ್ತದೆ. ಜಡವಾಗಿ ಒಂದು ಕಡೆ ಬಿದ್ದಿರುವ ಕಲ್ಲುಬಂಡೆ ಕೇವಲ ತಮಸ್ಸಿನ ಮುದ್ದೆಯಾಗಿ ಕಾಣುತ್ತದೆ. ಆದರೂ ಅದರಲ್ಲಿ ಚಲನೆ ಇದೆ. ಹಾಗೆಯೇ ತುಂಬ ಚಟುವಟಿಕೆಯಾಗಿರುವ ಗಾಳಿಯಲ್ಲಿರುವ ಒಂದು ಆಮ್ಲಜನಕದ ಅಣುವಿನಲ್ಲೂ ಸಾಂದ್ರತೆ ಇದೆ. ಆ ಸಾಂದ್ರತೆ ಇಲ್ಲದಿದ್ದರೆ ಆ ಅಣು ಪ್ರತ್ಯೇಕವಾದ ಅಣುವಾಗಿ ಇರಲು ಸಾಧ್ಯವೇ ಇಲ್ಲ. ಕಲ್ಲುಬಂಡೆ ಹೇಗೆ ಇತರ ವಸ್ತುಗಳು ತನ್ನೊಳಕ್ಕೆ ಪ್ರವೇಶಮಾಡದಂತೆ ತಡೆದಿರುತ್ತದೆಯೊ ಹಾಗೆ ಆಮ್ಲಜನಕದ ಕಣವೂ ಇತರ ಕಣಗಳು ಅದರೊಳಗೆ ಪ್ರವೇಶ ಮಾಡದಂತೆ ತಡೆದು ನಿಲ್ಲಿಸುವ ಸಾಂದ್ರ ಸ್ವಭಾವವನ್ನೂ ಪಡೆದಿರುತ್ತದೆ. ಯಾವ ವಸ್ತುವೇ ಆಗಲಿ ತಾನು ತಾನಾಗಿ ಇರುವವರೆಗೂ ಇಂಥ ಸಾಂದ್ರತೆಯನ್ನು ಪಡೆದೇ ಇರುತ್ತದೆ. ಒಂದು ವಸ್ತುವಿಗೂ ಇನ್ನೊಂದು ವಸ್ತುವಿಗೂ ಇರುವ ಭೇದಕ್ಕೆ ಅದರ ಸಾಂದ್ರತೆ ಅಂದರೆ ತಮೋಗುಣದ ಮತ್ತು ರಜೋಗುಣದ ಪ್ರಮಾಣಭೇದಗಳು ಕಾರಣಗಳು. ಪ್ರತಿಯೊಂದು ವಸ್ತುವೂ ಈ ಎರಡು ದ್ವಂದ್ವಗಳ ಮಿಶ್ರಣ. ಒಂದೊಂದು ವಸ್ತುವೂ ಈ ಎರಡು ಗುಣಗಳನ್ನೂ ಬೇರೆ ಬೇರೆ ಪ್ರಮಾಣಗಳಲ್ಲಿ ಪಡೆದಿರುವುದಲ್ಲದೆ, ಅವೆರಡನ್ನೂ ಒಂದು ಸಮಸ್ಥಿತಿಗೆ ತರಬಲ್ಲ ಸತ್ತ್ವಗುಣವನ್ನೂ ಪಡೆದಿರುತ್ತದೆ. ಈ ಸಮಸ್ಥಿತಿ ವಸ್ತುಗಳ ಸಾಮಾನ್ಯ ಸ್ಥಿತಿ. ಈ ಮೂರು ಗುಣಗಳು ಎಲ್ಲದರಲ್ಲೂ ಇರುತ್ತವೆ. ಇದು ಇಡೀ ಪ್ರಕೃತಿಯ ಮೂಲತತ್ತ್ವ. ಭಿನ್ನತೆಯನ್ನು ಒಳಗೊಂಡ ಏಕತೆ ಪ್ರಕೃತಿಯ ಸ್ವರೂಪ. ಭೂಮಿಯಂತೆ ದೊಡ್ಡದಾಗಲಿ ಒಂದು ಗುಲಗಂಜಿಯಂತೆ ಚಿಕ್ಕದಾಗಲಿ, ಅದು ಈ ತತ್ತ್ವಕ್ಕೆ ಒಳಪಟ್ಟೇ ಇರುತ್ತದೆ. ಈ ಮೂರು ಗುಣಗಳಿಲ್ಲದ ವಸ್ತುವೇ ಇಲ್ಲ. ಅವು ಕಾರಣ ದೆಶೆಯಲ್ಲಾಗಲಿ, ಕಾರ್ಯ ದೆಶೆಯಲ್ಲಾಗಲಿ, ಈ ಗುಣಗಳನ್ನು ಪಡೆದೇ ಇರುತ್ತವೆ. ಅಲ್ಲದೆ ಕಾರ್ಯವಲ್ಲದ ಕಾರಣವೂ ಕಾರಣವಲ್ಲದ ಕಾರ್ಯವೂ ಇರುವುದಿಲ್ಲ. ಸದಾ ಬದಲಾಯಿಸುತ್ತಿರುವುದು ಪ್ರಕೃತಿಯ ಸ್ವಭಾವವಾದುದರಿಂದ, ಯಾವುದೊಂದೂ ಕಾರ್ಯವಿಲ್ಲದ ಕಾರಣವಾಗಿ ಇರಲಾರದು. ಈ ವಿಶ್ವದ ಒಂದೊಂದೂ ಪರಿಣಾಮ ಹೊಂದುತ್ತಲೇ ಇರುತ್ತದೆ. ಸತ್ ಯಾವಾಗಲೂ ಕಾರ್ಯರೂಪವೇ ಪರಿಣಾಮಕಾರಿಯೇ. ಆದರೆ

ಯಾವ ಪರಿಣಾಮವೂ ಕೇವಲ ಪುನಃಶ್ಚರಣೆಯಲ್ಲ. ಯಾವುದೊಂದೂ ಆ ಸ್ಥಿತಿಯಲ್ಲಿ ಎಲ್ಲ ಕಾಲಕ್ಕೂ ಹಾಗೆಯೇ ಉಳಿದಿರುವುದಿಲ್ಲ. ಪ್ರತಿಯೊಂದು ವಸ್ತುವೂ ಸದಾ ಪರಿಣಾಮಗೊಳ್ಳುತ್ತಾದ್ದರಿಂದ ಅದರ ಮುಖದ ಮೇಲೆ ನವತ್ವದ ಮೆರುಗು ಅಚ್ಚಳಿಯದೆ ಇರುತ್ತದೆ. ಒಂದು ಕಲ್ಲಿನ ಹರಳಾಗಲಿ, ಸ್ಫಟಿಕವಾಗಲಿ, ಗಿಡವಾಗಲಿ, ಕ್ರಿಮಿಯಾಗಲಿ ಯಾವುದೊಂದೂ ಎರಡು ಕ್ಷಣಕಾಲ ಒಂದೇ ಸಮನಾಗಿ ನಿಂತಿರುವುದಿಲ್ಲ; ತಾನೇ ತಾನಾಗಿ ಪ್ರತ್ಯೇಕವಾಗಿಯೂ ಇರುವುದಿಲ್ಲ. ಇತರ ಪದಾರ್ಥಗಳ ಕೇವಲ ಬಹಿರಂಗ ಸಂಸರ್ಗದಿಂದಲೊ ಅವುಗಳ ಅಂತರಂಗರೂಪವಾದ ಸಮವಾಯೀಕರಣದಿಂದ ತನ್ನೊಳಕ್ಕೆ ಹೀರಿಕೊಳ್ಳುವುದರ ಮೂಲಕವೊ ಅವನ್ನು ಅದು ತನ್ನ ಹೊರಗೂ ಒಳಗೂ ಪ್ರತಿಫಲಿಸುತ್ತದೆ. ಆದ್ದರಿಂದ ಪ್ರತಿಯೊಂದೂ ತನ್ನದೇ ಆದ ನವತ್ವವನ್ನೂ ವೈಶಿಷ್ಟ್ಯವನ್ನೂ ಪಡೆದಿರುತ್ತದೆ. ಆದರೆ ಈ ವೈಶಿಷ್ಟ್ಯಕ್ಕೆ ತಾನಲ್ಲದೆ ಇತರ ಕಾರಣಗಳೂ ಉಂಟು. ಆ ವೈಶಿಷ್ಟ್ಯ ಎರಡರ ಅಭಿವ್ಯಕ್ತಿ. ಅಭಿವ್ಯಕ್ತವಾದ ಆ ಪರಿಣಾಮದಲ್ಲಿ ಎರಡೂ ಭಾಗಿಗಳು. ಎರಡರ ತಾದಾತ್ಮ್ಯವೇ ಆ ಅಭಿವ್ಯಕ್ತಿ. ಆದ್ದರಿಂದ ಅವೆರಡರ ಸೇರಿಕೆಯಾದ ಕಾರ್ಯರೂಪದಲ್ಲಿ ಅವೆರಡೂ ಅಂತರ್ಗತವಾಗಿವೆ. ಈ ದೃಷ್ಟಿಯಿಂದ ಕಾರ್ಯದಲ್ಲಿ ಕಾರಣವೂ ಕಾರಣದಲ್ಲಿ ಕಾರ್ಯವೂ ಅಂತರ್ಗತ. ಈ ಕಾರ್ಯಕಾರಣ ಸಂಬಂಧ, ಕಾರಣವೂ ಕಾರ್ಯವೂ ಒಂದೇ ಎಂಬ ಸತ್ಕಾರ್ಯವಾದವೂ ಅಲ್ಲ, ಕಾರಣದಲ್ಲಿ ಕಾರ್ಯವಿಲ್ಲ ಎಂಬ ಅಸತ್ ಕಾರ್ಯವಾದವೂ ಅಲ್ಲ. ಇದು ಸದಸದ್ ಕಾರ್ಯವಾದ. ಕಾರ್ಯ ಕಾರಣದಿಂದ ಏಕತೆಯಿಲ್ಲದ ಅತ್ಯಂತ ಭಿನ್ನತೆಯೂ ಅಲ್ಲ, ಭಿನ್ನತೆ ಇಲ್ಲದ ಐಕ್ಯೈಕತೆಯೂ ಅಲ್ಲ. ಅದು ಭಿನ್ನಾಭಿನ್ನ. ಎಲ್ಲ ಸತ್ತಿನ ಸ್ವಭಾವವೇ ಈ ಭಿನ್ನಾಭಿನ್ನತೆಯಾದ್ದರಿಂದ, ಈ ಹೊಸ ಭೌತತತ್ತ್ವ ಸತ್ತಾದ್ವೈತದ ಸತ್ಕಾರ್ಯವಲ್ಲ. ಆ ಸತ್ತಾದ್ವೈತದಲ್ಲಿ ಕಾರ್ಯ ಕಾರಣ ಒಂದೇ ಎಂಬ ಭಾವನೆ ಇರುತ್ತದೆ. ಬದಲಾವಣೆ ಕೇವಲ ಮಿಥ್ಯೆ ಎಂದು ಆ ವಾದ ಎಣಿಸುತ್ತದೆ. ಈ ಹೊಸ ಭೌತ ಏಕತ್ವವಾದದ ಪ್ರಕಾರ, ಸತ್ ಎಲ್ಲ ಕಾಲದಲ್ಲೂ ಭಿನ್ನತೆಯಿಂದ ಕೂಡಿದ ಏಕತೆಯ ರೂಪದಿಂದಲೇ ಇರುತ್ತದೆ. ಭಿನ್ನತೆ, ಬದಲಾವಣೆಗಳಿಲ್ಲದ ಏಕತೆ ಎಂದಿಗೂ ಇಲ್ಲ, ಯಾವುದರಲ್ಲಿಯೂ ಇಲ್ಲ. ಎಲ್ಲ ಕಾರ್ಯ ರೂಪಗಳಿಗೂ ಕಾರಣರೂಪಗಳಿಗೂ ಸಮಾನವಾದ ಸ್ವಭಾವ ಇದು. ಅಲ್ಲದೆ ಈ ತತ್ತ್ವ ಯಾವುದೂ ಕೇವಲ ಕಾರಣರೂಪವಾಗಿಯೇ ಅಥವಾ ಕೇವಲ ಕಾರ್ಯ ರೂಪವಾಗಿಯೇ ಇರಬಹುದೆಂಬುದನ್ನು ನಿರಾಕರಿಸುತ್ತದೆ. ಸತ್ ಸದಾ ಕಾರ್ಯಕಾರಣ ರೂಪವೇ. ಈಗ ಕಾರ್ಯವೆಂದು ನಾವು ಎಣಿಸುವುದು ಅದಕ್ಕಿಂತ ಹಿಂದೆ ಕಾರಣ ರೂಪದಲ್ಲಿತ್ತು. ಈಗ ಕಾರಣರೂಪದಲ್ಲಿರುವುದು ಮುಂದಿನ ಕಾರ್ಯರೂಪಕ್ಕೆ ಕಾರಣವಾಗುತ್ತದೆ.

ಯಾವ ವಸ್ತುವೇ ಆಗಲಿ ಅದು ಹಿಂದಿನದನ್ನು ತನ್ನೊಳಕ್ಕೆ ಎಳೆದುಕೊಂಡೇ ಸೆಳೆದುಕೊಂಡೇ ಸೇರಿಸಿಕೊಂಡೇ ಇಂದಿನದಾಗುವುದು. ಇಂದಿನದೆಂಬುದು ನಿನ್ನೆಯದರ ಭವಿಷ್ಯ. ಇಂದಿನದು ಭೂತಭವಿಷ್ಯಗಳು ಸಂಧಿಸುವ ಕೇಂದ್ರ. ಹಿಂದಿನದು ಮುಂದಿನದಕ್ಕೆ ನೂಕು ಕೊಡುತ್ತದೆ. ಮುಂದಿನದು ಹಿಂದಿನದನ್ನು ಎಳಕೊಳ್ಳುತ್ತದೆ. ಮುಂದಿನದರಲ್ಲಿ ಹಿಂದಿನದೂ ಇದೆ, ಹಿಂದಿನದರಲ್ಲಿ ಮುಂದಿನದೂ ಇದೆ. ಒಂದನ್ನೊಂದು ಬಿಟ್ಟರೆ ಎರಡೂ ಕುಸಿದು ಬೀಳುತ್ತವೆ. ಈ ತ್ರಿಕಾಲಸಾಮರಸ್ಯವನ್ನು ಬಿಟ್ಟು ಚಲನೆಯಾಗಲಿ, ಚಲನೆಯನ್ನು ಬಿಟ್ಟು ವಸ್ತುವಾಗಲಿ ಇರುವುದಿಲ್ಲ.

ಹಿಂದಿನ ಭೌತವಾದಕ್ಕೂ ಈ ಹೊಸ ಭೌತವಾದಕ್ಕೂ ವ್ಯತ್ಯಾಸವಿರುವುದು ಇಲ್ಲಿ. ಚಲನೆ ಇಲ್ಲದ ಭೌತವಸ್ತುವಿದೆ, ಭೌತವಸ್ತುವಿನಿಂದ ಪ್ರತ್ಯೇಕವಾದ ಚಲನೆ ಇದೆ, ವಸ್ತುಚಲನೆಗಳಿಂದ ಪ್ರತ್ಯೇಕವಾಗಿ ದಿಕ್ ಮತ್ತು ಕಾಲಗಳು ಇವೆ, ಆಕಾಶವೆಂಬ ಖಾಲಿ ಜಾಗದಲ್ಲಿ ಅದಕ್ಕೆ ಬಾಹಿರವಾದ ವಸ್ತು ಇದೆ, ಕಾಲವೆಂಬ ಇನ್ನೊಂದು ವಸ್ತುವಿನಲ್ಲಿ ಅದರಿಂದ ಹೊರತಾದ ಚಲನೆ ಇದೆ. ಹೀಗೆ ಒಂದಕ್ಕೊಂದು ಆಂತರಿಕ ಸಂಬಂಧವಿಲ್ಲದ ಭೌತವಸ್ತು, ಚಲನೆ, ಆಕಾಶ, ಕಾಲ ಇವುಗಳ ಸಂಸರ್ಗವೇ ಈ ವಿಶ್ವವೆಂದು ಹಳೆಯ ಭೌತವಾದ ಎಣಿಸಿತ್ತು. ಈಗಿನ ಹೊಸ ಭೌತವಾದದ ಪ್ರಕಾರ ಅವು ಯಾವುದೊಂದೂ ಹೊರಚ್ಚಾಗಿ, ಪ್ರತ್ಯೇಕವಾಗಿ, ಒಂದಕ್ಕೊಂದು ಬಾಹಿರವಾಗಿ ಇರುವುದಿಲ್ಲ. ಚಲನೆಯನ್ನೊಳಗೊಳ್ಳದ ಭೌತವಸ್ತುವಿಲ್ಲ ; ಆಕಾಶ ಮತ್ತು ಕಾಲವನ್ನೊಳಗೊಳ್ಳದ ವಸ್ತುವಾಗಲಿ ಚಲನೆಯಾಗಲಿ ಇಲ್ಲ ; ಭಿನ್ನತೆ ಇಲ್ಲದ ಏಕಪ್ರಕಾರತೆಯೂ ಏಕತೆ ಇಲ್ಲದ ಭಿನ್ನತೆಯೂ ಇಲ್ಲ. ಈ ವಿಶ್ವ ಯಾವ ಕಾಲದಲ್ಲೂ ತಾನೇ ತಾನಾಗಿ ಇರಬಲ್ಲ, ಒಂದಕ್ಕೊಂದು ಬಾಹಿರವಾದ, ಏಕಾಕಿಯಾದ, ಅಂಟಿಲ್ಲದ ಸಂಬಂಧಗಳಿಲ್ಲದೆ ಸರಳರೂಪವಾಗಿ ಇರಲಿಲ್ಲ. ಹಾಗೆ ಈಗಲೂ ಇಲ್ಲ, ಮುಂದೆಯೂ ಇರುವುದಿಲ್ಲ. ಈ ವಿಶ್ವ ಎಲ್ಲ ಕಾಲದಲ್ಲೂ ದೇಶ, ಕಾಲ, ಚಲನೆಗಳ ಆಂತರಿಕ ಸಂಬಂಧವನ್ನು ಒಳಗೊಂಡ ಭಿನ್ನಾಭಿನ್ನವಸ್ತು.

ಈ ಹೊಸ ಭೌತವಾದವನ್ನು ಹಳೆಯದಾದ ಅವಿಚಾರರಮಣೀಯ ಭೌತವಾದದಿಂದ ಪ್ರತ್ಯೇಕಿಸಲು ಅದನ್ನು ವಿಚಾರರಮಣೀಯವಾದವೆಂದು ಮಾರ್ಕ್ಸ್, ಎಂಜೆಲ್ , ಲೆನಿನ್ನರು ಕರೆದಿರುತ್ತಾರೆ. ಇದು ಹಳೆಯಕಾಲದ ಅಶಿಕ್ಷಿತ ಚಾರ್ವಾಕವಾದವಲ್ಲ, ಭಾರತೀಯರು ಹಿಂದೆ ಗುರುತಿಸಿದ್ದ ಸುಶಿಕ್ಷಿತ ಚಾರ್ವಾಕವಾದ. ಈ ವಾದವನ್ನು ಮಾರ್ಕ್ಸ್ ಮೊಟ್ಟಮೊದಲಿಗೆ ಸೂಚಿಸಿದನಾದರೂ ಅದು ಅಷ್ಟು ಮೈ ತುಂಬಿಕೊಂಡಿರಲಿಲ್ಲ. ಲೆನಿನ್‌ನಲ್ಲಿ ಅದು ಸ್ವಲ್ಪ ಮೈ ತುಂಬಿದೆ. ಲೆನಿನ್ನನಿಂದ ಈಚೆಗೆ, ಬೆಳೆದ ವಿಜ್ಞಾನವನ್ನೂ ಮಾರ್ಕ್ಸ್‌ನ ವಾದಕ್ಕೆ ಇತರ ತಾತ್ತ್ವಿಕರು ಎತ್ತಿದ ಆಕ್ಷೇಪಗಳನ್ನೂ ಗಣನೆಗೆ ತೆಗೆದುಕೊಂಡು, ಹೊಸ ವಿಜ್ಞಾನಕ್ಕೆ ಹೊಂದುಕೊಳ್ಳುವಂತೆಯೂ ಮಾರ್ಕ್ಸ್‌ನ ತತ್ತ್ವದಲ್ಲಿ ಕಾಣುವ ಅಸ್ಪಷ್ಟತೆಯನ್ನು ಹೋಗಲಾಡಿಸುವಂತೆಯೂ ಇಂದಿನ ವೈಚಾರಿಕಭೌತವಾದ ರೂಪುಗೊಳ್ಳುತ್ತಿದೆ. ಆ ವಿಚಾರವಾದ ಚಾರಿತ್ರಿಕವಾದವಾದುದರಿಂದ ಭವಿಷ್ಯದೃಷ್ಟಿಯಷ್ಟೇ (ಫ್ಯೂಚರಿಸಂ) ಸಂಪ್ರದಾಯದ ದೃಷ್ಟಿಯೂ (ಟ್ರೆಡಿಷನಲಿಸಂ) ಮುಖ್ಯವೆಂದು ಎಣಿಸುತ್ತದೆ. ಈ ಹೊಸಭೌತವಾದ ಇಂದು ತಾನು ಪ್ರತಿಪಾದಿಸುತ್ತಿರುವ ತತ್ತ್ವವೇ ಕೊನೆಯ ಮಾತೆಂದು ಪರಿಗಣಿಸಿರುವುದಿಲ್ಲ. ಅದನ್ನು ಮೀರಿಸುವ, ಅದಕ್ಕಿಂತ ವಿಹಿತವಾದ ಮತ್ತು ಸುಂದರವಾದ ಭೌತವಾದಗಳು ಹುಟ್ಟಲೇಬೇಕು, ಹುಟ್ಟಿಯೇ ಹುಟ್ಟುತ್ತವೆ—ಎಂದು ಸಾರುತ್ತಿದೆ. ಆದ್ದರಿಂದ ಈಗಿರುವ ಭೌತವಾದ ಸದ್ಯದಲ್ಲಿ ಸಮರ್ಪಕವೆಂದು ತಿಳಿಯಬೇಕೇ ಹೊರತು ಹೊಸ ವಿವೇಚನೆ, ಹೊಸ ಜೀವನಕ್ಕೆ ಅವಕಾಶವೇ ಇಲ್ಲದಷ್ಟು ಪರಿಪೂರ್ಣವೆಂದು ತಿಳಿಯಲಾಗದು. ಪ್ರತಿಯೊಂದು ಕಾಲದ ಜನರೂ ತಮ್ಮ ಸ್ಥಿತಿಗೆ ತಕ್ಕಂತೆ ವಿವೇಚನೆ ನಡೆಸುತ್ತಲೇ ಇರಬೇಕು. ಏಕೆಂದರೆ ಹಿಂದಿನವರು ಹಾಗೆ ವಿವೇಚನೆ ನಡೆಸಿದ್ದುದರಿಂದಲೇ ಅವರು ತಮ್ಮ ಬಾಳನ್ನು ರೂಪಿಸಿಕೊಂಡದ್ದು. ನಮ್ಮ ಬಾಳನ್ನು ರೂಪಿಸಿಕೊಳ್ಳುವುದು ನಮ್ಮ ಪಾಲಿಗೆ ಬಂದ ಜವಾಬ್ದಾರಿ. ಯಾವ ಕಾಲದವರೂ ಈ ಜವಾಬ್ದಾರಿಯನ್ನು ಬಿಟ್ಟುಕೊಡಲಾಗದು. ಈ ಜವಾಬ್ದಾರಿಯ ಅರಿವಿಲ್ಲದ ಜನರ ಜೀವನ ಹುರುಳಿಲ್ಲದ ಜಳ್ಳು ಜೀವನವಾಗಿ ಪರಿಣಮಿಸುತ್ತದೆ.

ಡಯಲೆಕ್ಟಿಕ್ ಎಂಬ ಪದದ ಅರ್ಥವನ್ನು ಸೂಚಿಸಿದಲ್ಲದೆ ಭೌತವಾದದ ವಿವೇಚನೆ ಪೂರ್ಣವಾಗುವುದಿಲ್ಲ. ಈ ಪದ ಪಾಶ್ಚಾತ್ಯ ತತ್ತ್ವಶಾಸ್ತ್ರದಲ್ಲಿ ತುಂಬ ಪ್ರಭಾವಶಾಲಿಯಾದುದು. ಇದು ಹುಟ್ಟಿದ್ದು ಪ್ಲೇಟೊವಿನ ಚಿತ್ ಪ್ರಧಾನವಾದ ತತ್ತ್ವದಲ್ಲಿ. ಡಯಲೆಕ್ಟಿಕ್ ಎಂದರೆ ಬಹುಮುಖವಾದ ವಿಮರ್ಶೆ. ಏಕಪ್ರಕಾರ ಒಂದೇ ಸರಣಿಯಲ್ಲಿ ಆಲೋಚನೆಯನ್ನು ನಡೆಸಿದರೆ ಆಲೋಚನೆ ಗೊಡ್ಡುಬೀಳುತ್ತದೆ. ವಿಚಾರ ಹುಟ್ಟುವುದಕ್ಕೆ ಎರಡು ಪಕ್ಷಗಳಾದರೂ ಇರಬೇಕು. ಮನುಷ್ಯ ಏಕಾಕಿಯಲ್ಲ, ಸಮಾಜಜೀವಿ. ಇಬ್ಬರಿಲ್ಲದೇ ಮನುಷ್ಯಜನ್ಮವೇ ಅಸಾಧ್ಯ. ಹೆಣ್ಣೂ ಆಲೋಚಿಸಬೇಕು, ಗಂಡೂ ಆಲೋಚಿಸಬೇಕು. ತಮ್ಮ ಸ್ಥಿತಿಗತಿ, ದೇಹಧರ್ಮ, ಮನೋಧರ್ಮಗಳನ್ನು ದೃಷ್ಟಿಯಲ್ಲಿಟ್ಟುಕೊಂಡು ಆಲೋಚಿಸಬೇಕು. ತನ್ನತನವನ್ನು ಯಾರೂ ನಿರಾಕರಿಸಲಾಗುವುದೂ ಇಲ್ಲ, ನಿರಾಕರಿಸಬೇಕಾದ ಅಗತ್ಯವೂ ಇಲ್ಲ. ನಮ್ಮನ್ನು ನಾವು ಬಿಟ್ಟರೆ, ನಮ್ಮಿಂದ ನಾವು ದೂರಸರಿದುಬಿಟ್ಟರೆ, ನಮ್ಮನ್ನು ನಾವು ರಕ್ಷಿಸಿಕೊಳ್ಳದಿದ್ದರೆ, ನಮ್ಮಿಂದ ನಾವು ಸುಖ ದೊರಕಿಸಿಕೊಳ್ಳಲಾಗದಿದ್ದರೆ, ಬೇರೆ ಯಾರಿಂದಲೂ ಅವರು ಎಷ್ಟೇ ಸಮರ್ಥರಾದರೂ—ರಕ್ಷಣೆ ಇಲ್ಲ, ಬಿಡುಗಡೆ ಇಲ್ಲ, ಸೌಖ್ಯವಿಲ್ಲ. ನಮ್ಮನ್ನು ನಾವು ನಿರಾಕರಿಸಲಾಗದಿದ್ದರೆ ಇತರರೂ ತಮ್ಮನ್ನು ತಾವು ನಿರಾಕರಿಸಲಾಗುವುದಿಲ್ಲ. ಈ ಮುಖ್ಯ ಅಂಶವನ್ನು ಗ್ರಹಿಸಿದರೆ ಒಂದು ಸಾರ್ವತ್ರಿಕ ತತ್ತ್ವ ದೊರೆತಂತಾಗುತ್ತದೆ. ಪ್ರತಿಯೊಬ್ಬರೂ ತಮ್ಮ ಕಾಲುಗಳ ಮೇಲೆ ನಿಲ್ಲಬೇಕು. ಇತರರನ್ನೂ ಹಾಗೆಯೆ ತಮ್ಮ ಕಾಲಿನ ಮೇಲೆ ನಿಲ್ಲಲು ಅವಕಾಶ ಕೊಡಬೇಕು. ಹಾಗಾದರೆ ಇಬ್ಬರಲ್ಲೂ ಸಾಮರಸ್ಯ ಕುದುರುತ್ತದೆ. ಮನುಷ್ಯಜೀವನಕ್ಕೆ ಹೊಂದುವ ಈ ತತ್ತ್ವ ಎಲ್ಲಕ್ಕೂ ಅನ್ವಯವಾಗುತ್ತದೆ. ಈ ವಿಶ್ವದಲ್ಲಿ ಪ್ರತಿಯೊಂದು ವಸ್ತುವೂ ತನ್ನತನವನ್ನು ಪಡೆದಿರುತ್ತದೆ. ಪ್ರತಿಯೊಂದು ವಸ್ತುವು ಅದೇ ವಿಧವಾದ ತನ್ನತನವನ್ನು ಪಡೆದ ಇತರ ವಸ್ತುಗಳೊಡನೆ ಸಂಬಂಧ ಪಡೆದಿರುತ್ತದೆ. ಪ್ರತಿಯೊಂದು ವಸ್ತುವೂ ಶಕ್ತಿಪುಂಜವಾಗಿದೆ. ಅದು ಬೆಳೆಯುವ ವಸ್ತು. ಆದರೆ ಈ ಒಂದೊಂದರ ಬೆಳವಣಿಗೆಯೂ ಇತರ ವಸ್ತುಗಳ ಬೆಳವಣಿಗೆಗೆ ಸಾಪೇಕ್ಷವಾಗಿರುತ್ತದೆ. ಒಂದನ್ನು ಬಿಟ್ಟು ಇನ್ನೊಂದು ಬೆಳೆಯುವಂತಿಲ್ಲ. ಆದ್ದರಿಂದ ಯಾವ ವಸ್ತುವು ಬೆಳೆಯಬೇಕಾದರೂ ತನ್ನತನವನ್ನು ಬಿಡುವಂತಿಲ್ಲ. ಇತರ ವಸ್ತುಗಳೊಡನೆ ಸಂಬಂಧವನ್ನೂ ಬಿಡುವಂತಿಲ್ಲ, ವಸ್ತು ವಸ್ತುವಿಗೆ ಇರುವ ಭೇದವನ್ನೂ ಸಂಬಂಧವನ್ನೂ ನಿರಾಕರಿಸಲಾಗುವುದಿಲ್ಲ. ವಸ್ತುಸ್ಥಿತಿ ಹೀಗಿರುವುದರಿಂದ ಒಂದಕ್ಕೊಂದು ಪ್ರತಿಯಾಗಿ ನಿಲ್ಲುವುದು, ಅನಿವಾರ್ಯ. ಇವುಗಳ ಘರ್ಷಣೆ ಅನಿವಾರ್ಯ. ಅಂತೆಯೆ ಘರ್ಷಣೆಯನ್ನು ಮೆಟ್ಟಿ ಸಮರಸ ಸಂಬಂಧವನ್ನು ಕುದುರಿಸುವುದೂ ಅಷ್ಟೇ ಅನಿವಾರ್ಯ. ವಿಶ್ವ ಬೆಳೆಯುತ್ತಿರುವುದಕ್ಕೆ ಈ ಘರ್ಷಣೆ ಒಂದು ರೆಕ್ಕೆಯಾದರೆ ಸಾಮರಸ್ಯ, ಹೊಂದಿಕೆ ಇನ್ನೊಂದು ರೆಕ್ಕೆ. ಈ ವಿಶ್ವಕ್ರಿಯೆಯ ಸಾರ್ವತ್ರಿಕ ಸ್ವರೂಪ ದ್ವಂದ್ವದಿಂದ ನಿರ್ದ್ವಂದ್ವವನ್ನು ಕುದುರಿಸುವುದು. ಈ ಬೆಳವಣಿಗೆಯ ರೀತಿಯನ್ನೇ ಮಾರ್ಕ್ಸ್ ಮತ್ತು ಲೆನಿನ್ ಡಯಲೆಕ್ಟಿಕಲ್ ಪ್ರೋಸೆಸ್ ಎಂದು ಕರೆದಿರುವುದು. ಈ ತತ್ತ್ವವೇ ವಿಶ್ವಕ್ರಿಯೆಯ ಭೌತವಸ್ತುಗಳ, ಸಸ್ಯಗಳ, ಪ್ರಾಣಿಗಳ—ಹೀಗೆ, ಎಲ್ಲದರ ಕ್ರಿಯೆಯ ಮರ್ಮವನ್ನೂ ತೆರೆದು ತೋರಿಸುವ ಬೀಗದ ಕೈ.

ವಿಶ್ವವು ಬೆಳೆದು ನವನವೋನ್ಮೇಷಕವಾಗುತ್ತಿದೆ. ಹೊಸ ಬೆಲೆಗಳು ಹುಟ್ಟುತ್ತಿವೆ. ವಿಷಮ ಸ್ಥಿತಿಯಿಂದ ಸಮಸ್ಥಿತಿ ಹುಟ್ಟುತ್ತಿದೆ. ಕಾಲಾಂತರದಲ್ಲಿ ಅಸಮಸ್ಥಿತಿ ಉದ್ಭವಿಸಬಹುದು. ವಿಶ್ವದ ಬೆಳವಣಿಗೆ ಏಕಪ್ರಕಾರವಾದದ್ದಲ್ಲ, ಅನೇಕ ಪ್ರಕಾರವಾದದ್ದು. ಅದರದು ಎಂದೆಂದಿಗೂ ಮುಗಿಯದ ಚರಿತ್ರೆ.

ಹೊಸಭೌತವಾದಿಗಳ ಈ ಡಯಲೆಕ್ಟಿಕ್ ಕ್ರಮಕ್ಕೆ ಹೆಗೆಲ್ಲನ ಡಯಲೆಕ್ಟಿಕ್ ಮುಖ್ಯವಾದ ಪ್ರಚೋದನೆ. ಹೊಸಭೌತವಾದಿಗಳು ಅದನ್ನು ಮಾರ್ಪಡಿಸಿ ಭೌತವಾದಕ್ಕೆ ಹೊಂದಿಸಿಕೊಂಡಿದ್ದಾರೆ. ಹೆಗೆಲ್ ಇರವು ಅರಿವು ಒಂದೇ, ಇರವು ಚಿದ್ರೂಪವಾದದ್ದು—ಎಂಬ ತತ್ತ್ವವನ್ನು ತನ್ನ ತತ್ತ್ವದ ಆಧಾರಪ್ರತಿಜ್ಞೆಯಾಗಿ ಅಂಗೀಕರಿಸಿದ. ಭೌತವಸ್ತು ಅಂತಿಮವಾಗಿ ಮಿಥ್ಯೆ ಎಂದು ಸಿದ್ಧಾಂತ ಮಾಡಿದ. ಪರಮಚೈತನ್ಯವೇ ಪರಮ ಸತ್. ಅದರಲ್ಲಿ ಎಲ್ಲವೂ ಸಮರಸವಾಗುತ್ತದೆ. ಉಳಿದೆಲ್ಲವೂ ಬದಲಾಯಿಸುತ್ತಿದ್ದರೂ ಅದು ಮಾತ್ರ ಬದಲಾಯಿಸುವುದಿಲ್ಲ. ಉಳಿದೆಲ್ಲವೂ ಅಪರಿಪೂರ್ಣವಾದುದರಿಂದ ಅವುಗಳಲ್ಲಿ ಪರಸ್ಪರ ಗೊಂದಲ, ತಿಕ್ಕಾಟ, ಅನಿವಾರ್ಯ. ಚಿದ್ರೂಪವಾದ ಸತ್ ಪರಿಪೂರ್ಣವಾದುದರಿಂದ, ಅದರಲ್ಲಿ ಗೊಂದಲವಿಲ್ಲ, ತಿಕ್ಕಾಟವಿಲ್ಲ. ಚರಿತ್ರೆ ಇರುವುದು ಲೋಕವಸ್ತುಗಳಿಗೇ ಹೊರತು ಈ ಅಲೌಕಿಕ ಚೈತನ್ಯಕ್ಕಲ್ಲ. ಇದಕ್ಕೆ ಹುಟ್ಟಿಲ್ಲ, ಸಾವಿಲ್ಲ, ಬೆಳವಣಿಗೆ ಇಲ್ಲ. ಸಾವಿರ ಚರಿತ್ರೆಗಳನ್ನು ಒಳಗೊಂಡಿದ್ದರೂ ಇದು ಮಾತ್ರ ಚರಿತ್ರೆಗೆ ಒಳಪಟ್ಟದ್ದಲ್ಲ. ದ್ವಂದ್ವ ವಿಶ್ವಕರ್ಮವೇ ಹೊರತು ವಿಶ್ವಾತೀತವಾದ ಪರಮ ಸತ್ ನಿರ್ದ್ವಂದ್ವವಾದದ್ದು—ಎಂಬುದು ಹೆಗೆಲ್ಲನ ಅಂತಿಮ ಸಿದ್ಧಾಂತ.

ಡಯಲೆಕ್ಟಿಕ್ ಭೌತವಾದಿಗಳು ಚೈತನ್ಯ ಪರಮವೆಂಬುದನ್ನು ಒಪ್ಪುವುದಿಲ್ಲ. ಬದಲಾವಣೆ ಇಲ್ಲದ, ಘರ್ಷಣೆಯನ್ನು ಒಳಗೊಳ್ಳದ, ಭೌತರೂಪವಿಲ್ಲದ ಸ್ವಪರಿಪೂರ್ಣವಾದ ಸತ್ ಇದೆ ಎಂದು ಹೇಳುವುದು ಅವಾಸ್ತವಿಕ, ಕೇವಲ ಕಟ್ಟು ಕಥೆ, ಮಿಥ್ಯಾಭಾವನೆ. ಇರುವುದೆಲ್ಲ ಅಪೂರ್ಣವೇ. ಅದು ಅಪೂರ್ಣವಾದ ಸದ್ಯಸ್ಥಿತಿಯಿಂದ, ಕಾಲಗತಿಯಿಂದ ಆ ಗತಿಯನ್ನು ಪೂರೈಸುವ ಸದ್ಯದ ತಾತ್ಕಾಲಿಕವಾದ ಪೂರ್ಣತೆಯನ್ನು ಮುಟ್ಟುತ್ತದೆಯೇ ಹೊರತು, ಸಾರ್ವಕಾಲಿಕ ಪೂರ್ಣತೆ ಎಂದೆಂದಿಗೂ ಇಲ್ಲ, ಎಲ್ಲಿಯೂ ಇಲ್ಲ. ಇಲ್ಲಿಗೆ ಪೂರ್ಣತೆ ಮುಟ್ಟಿದೆ, ಇನ್ನು ಮಾಡಬೇಕಾದ್ದೇನೂ ಇಲ್ಲವೆಂದು ಈ ಲೋಕದಲ್ಲಿರುವ ಯಾವ ವಸ್ತುವನ್ನು ಕುರಿತಾಗಲಿ, ಯಾವ ವ್ಯಕ್ತಿಯನ್ನು ಕುರಿತಾಗಲಿ ಹೇಳುವಂತಿಲ್ಲ. ಸಾರ್ವಕಾಲಿಕ ನಿವೃತ್ತಿ ಎಲ್ಲೂ ಇಲ್ಲ. ಸರ್ವಕಾಲಕ್ಕೂ ನಿವೃತ್ತಿ ಪಡೆದ ಪರಮ ಚಿತ್ ಇದೆ ಎಂಬುದು ಪೌರಾಣಿಕ ಕಥೆ, ವಾಸ್ತವಕ್ಕಿಂತ ಬಹುದೂರವಾದದ್ದು. ಈ ವಿಶ್ವಕ್ರಿಯೆ ಮುಗಿದ ಯುದ್ಧವೂ ಅಲ್ಲ, ಮುಗಿದ ಶಾಂತಿಯೂ ಅಲ್ಲ. ನಿವೃತ್ತಿ, ಶಾಂತಿ, ಸೌಖ್ಯ ಮುಂತಾದ ಎಲ್ಲ ಬೆಲೆಗಳೂ ಸದ್ಯದ ನಿವೃತ್ತಿ, ಸದ್ಯದ ಶಾಂತಿ, ಸದ್ಯದ ಸೌಖ್ಯ. ಸದ್ಯಸ್ಥಿತಿಯಿಂದ ಸದ್ಯಸ್ಥಿತಿಗೆ ಹಾಯುವುದೇ ಇಲ್ಲಿ ಇರುವುದೆಲ್ಲದರ ಸಾರ್ವತ್ರಿಕ, ಸಾರ್ವಕಾಲಿಕ ಪಥ. ಈ ಪಥ ಕೊನೆಮೊದಲಿಲ್ಲದ್ದು. ಈ ವಿಶ್ವ ತೆರೆದ ವಿಶ್ವ. ಅದಕ್ಕೆ ಅನಂತ ಭೂತವಿದ್ದಂತೆಯೇ ಅನಂತ ಭವಿಷ್ಯವೂ ಇದೆ, ಅನಂತ ವರ್ತಮಾನವೂ ಇದೆ. ಇಲ್ಲಿಗೆ ಎಲ್ಲವೂ ಮುಗಿಯಿತು, ಬ್ರಹ್ಮಾಂಡ ಇಲ್ಲಿಗೆ ಕೊನೆ ಮುಟ್ಟಿತು, ಇನ್ನೇನನ್ನು ಮಾಡಬೇಕಾದ್ದಿಲ್ಲ ಎಂದು ಕೈಕಟ್ಟಿಕೊಂಡು ಕುಳಿತುಕೊಳ್ಳುವ ಮನೋಧರ್ಮವನ್ನು ಈ ಹೊಸ ಭೌತವಾದ ಖಂಡಿಸುತ್ತದೆ. ಈ ವಿಶ್ವ ಅನಂತವಾಗಿ ವಿಸ್ತರಿಸುತ್ತಿರುವ ವಿಶ್ವ, ಅನಂತವಾಗಿ ತೆರೆದ ವಿಶ್ವ—ಎಂಬುದು ಈ ತತ್ತ್ವದ ಮುಖ್ಯ ಅಂಶ.

ಈ ಹೊಸ ತತ್ತ್ವ ಚಿದದ್ವೈತ ಮನೋಭಾವವನ್ನು ಅಕರ್ಮಭಾವವೆಂದೂ ಕರ್ಮದಿಂದ ದೂರಸರಿಯುವ ಮನೋಭಾವವೆಂದೂ ಆಲಸಿಕೆಯ ಮನೋಭಾವವೆಂದೂ ದುಡಿಮೆಯಿಂದ ಹಿಂಜರಿದು, ಹಗಲಗನಸನ್ನು ಕಾಣುವ ಮನೋಭಾವವೆಂದೂ ಹಲವು ವಿಧವಾಗಿ ಹಳಿಯುತ್ತದೆ. ಈ ಭೌತವಾದ ಜಪಿಸುವ ಮಂತ್ರ ಇದು : ದೈವವನ್ನು ಒತ್ತಿಳ್ಳಿ ಆತ್ಮಪೌರುಷದಿಂದ ಬಾಳು ; ನಮ್ಮೆಲ್ಲರ ಆಲಸಿಕೆಗೂ ಕ್ರಿಯೆ ಇಲ್ಲದ, ಕರ್ಮವಿಲ್ಲದ, ಪ್ರಪಂಚದಿಂದ ದೂರವಾಗಿ ಹೊರತಾಗಿ ತಾನೇ ತಾನಾಗಿ ಇರುವ ದೈವವಿದೆಯೆಂಬ ನಂಬಿಕೆ ಕಾರಣ. ನಿಜವಾದ ಕರ್ಮ ಯೋಗ ನಮ್ಮದಾಗಬೇಕು. ಸದಾ ಕರ್ಮ ಮಾಡುವುದರಿಂದಲೇ ಜೀವನ ಹಸನಾಗುವುದು. ಈ ಕರ್ಮಕ್ಕೆ ಕಾರಣ ಭೌತವಸ್ತು, ಆಹಾರ. ನಮ್ಮ ಶೀಲ ಸದ್ಗುಣಗಳನ್ನು ಒರೆಹಚ್ಚಿ ನೋಡಬೇಕಾದರೆ, ಯಾರನ್ನೂ ದಂಡಿಸದೆ ಯಾರ ಅನ್ನವನ್ನೂ ಕಿತ್ತುಕೊಳ್ಳದೆ ನಾವು ಹೇಗೆ ಬಾಳುತ್ತೇವೆ ಎಂಬುದನ್ನು ಪರೀಕ್ಷಿಸಬೇಕು. ಅನ್ನಕ್ಕಾಗಿ ದುಡಿಯುತ್ತೇವೆ. ಈ ಅನ್ನಪ್ರಾಯವಾದ ವಿಶ್ವದಲ್ಲಿರುವ ಸಮಸ್ತ ವಸ್ತುಗಳನ್ನೂ ಗೌರವಿಸಿ, ಅವು ಸಾರ್ವತ್ರಿಕವಾದುವು, ನಮ್ಮ ಖಾಸಗಿ ಸ್ವತ್ತಲ್ಲ—ಎಂದು ಭಾವಿಸಿ, ಅವನ್ನು ಪೋಲುಮಾಡದೆ, ಅವು ವರ್ಧಿಸುವಂತೆ ಮಾಡಿ, ಹೆಚ್ಚಿಸಿದ್ದನ್ನು ಎಲ್ಲರೂ ಹಂಚಿಕೊಂಡು, ಯಾರು ಯಾರನ್ನೂ ಆಳಾಗಿ, ತೊತ್ತಾಗಿ ಎಣಿಸದೆ ಭೋಗಿಸುವುದನ್ನು ಕಲಿಯುವುದೇ, ಕಲಿಸುವುದೇ ಈ ತತ್ತ್ವದ ಧರ್ಮ.

ಈ ಹೊಸ ಭೌತಾದ್ವೈತ ತತ್ತ್ವಕ್ಕೆ ಇಂದಿನ ಹೊಸ ಚಿದದ್ವೈತದ ಉತ್ತರ ಇದು. ನಾವು ಯಾವುದನ್ನು ಚಿತ್ ಎಂದು ಕರೆಯುತ್ತೇವೆಯೊ ಅದನ್ನು ನೀವು ಭೌತವಸ್ತುವೆಂದು ಕರೆಯುತ್ತೀರಿ. ನಾವು ಹಿಂದಿನ ಭೌತವಾದವನ್ನು ಖಂಡಿಸಿದಂತೆಯೆ ನೀವೂ ಖಂಡಿಸುತ್ತೀರಿ. ಭೌತವಸ್ತು ಕೇವಲ ಜಡವಸ್ತುವಲ್ಲ, ಯಾಂತ್ರಿಕವಲ್ಲ. ಅದು ಸೃಷ್ಟ್ಯಾತ್ಮಕವಾದದ್ದು, ನವನವೋನ್ಮೇಷವಾದದ್ದು ಎಂದು ಹೇಳುತ್ತೀರಿ, ಅದು ಮಿತಿ ಇಲ್ಲದ್ದು ಅನಂತವಾದದ್ದು ಎಂದು ಹೇಳುತ್ತೀರಿ. ಈ ಸೃಷ್ಟ್ಯಾತ್ಮಕ ಲಕ್ಷಣವುಳ್ಳದ್ದು, ನವೋನ್ಮೇಷವಾದದ್ದು ಚೇತನಕ್ಕೆ ಒಪ್ಪುವ ಲಕ್ಷಣಗಳೇ ಹೊರತು, ಭೌತವಸ್ತುವಿಗೆ ಒಪ್ಪತಕ್ಕವಲ್ಲ. ಅಲ್ಲದೆ ಚಿದದ್ವೈತಿಗಳು ಎಲ್ಲರೂ ಭೌತವಸ್ತುವೂ ಮಾನವ ಆತ್ಮವೂ ಅತ್ಯಂತ ಭಿನ್ನವೆಂಬ ದ್ವೈತವಾದಿಗಳಾಗಬೇಕಾಗಿಲ್ಲ. ಚೇತನವನ್ನು ಕೇವಲ ಮಾನವನ ಕ್ರಿಯೆಗೆ ಮಾತ್ರ ಕ್ಲುಪ್ತಗೊಳಿಸಬೇಕಾಗಿಲ್ಲ. ಮಾನವನಲ್ಲಿರುವ ಚೇತನವೂ ಪ್ರಕೃತಿಯಲ್ಲಿರುವ ಚೇತನವೂ ಒಂದೇ ಚಿತ್ತಿನ ಭಿನ್ನರೂಪಗಳು. ಅವೆರಡಕ್ಕೂ ಭೇದವೂ ಇದೆ, ಅಭೇದವೂ ಇದೆ. ನೀವು ಪರಿಣಾಮವಾದವನ್ನು ಒಪ್ಪುತ್ತೀರಿ. ಭೇದಾಭೇದವಾದವನ್ನೊಪ್ಪದಿದ್ದರೆ ಪರಿಣಾಮವಾದ ಅರ್ಥಹೀನವಾಗುತ್ತದೆ. ಪ್ರಕೃತಿಯಲ್ಲಿ ಚಿದಂಶವಿಲ್ಲದೆ, ಇದ್ದಕ್ಕಿದ್ದಂತೆಯೇ ಚೇತನ ಸ್ವಭಾವ ಹುಟ್ಟುವುದು ಅಸಂಗತ, ಅಸಾಧ್ಯ. ಕೇವಲ ಸತ್ಕಾರ್ಯವಾದವನ್ನು ಒಪ್ಪಿದರೆ ಮಾನವ ಚೈತನ್ಯವೂ ಪ್ರಕೃತಿಯಲ್ಲಿರುವ ಚೇತನವೂ ಭೇದರಹಿತವಾದ ಒಂದೇ ಎಂದು ಹೇಳಬೇಕಾಗುತ್ತದೆ. ಅದು ಅಸಂಗತ. ಮನುಷ್ಯ ವ್ಯಾಪಾರ ಮತ್ತು ಮೃಗಗಳ ವ್ಯಾಪಾರ, ಸಸ್ಯಗಳ ವ್ಯಾಪಾರ ಎಲ್ಲವೂ ಒಂದೇ ಆಗಲಾರವು. ಇದು ವಾಸ್ತವ ಅನುಭವಕ್ಕೆ ವಿರುದ್ಧ. ಹಾಗೆಯೇ ಅಸತ್ಕಾರ್ಯವಾದವೂ ಅಸಂಗತ. ಕಾರ್ಯ ಕೇವಲ ಇಲ್ಲದ್ದರಿಂದ ಹುಟ್ಟಿತೆಂದು ಹೇಳಬೇಕಾಗುತ್ತದೆ. ಮಾನವನ ಚೈತನ್ಯ ವಿಶ್ವದ ಎಲ್ಲದರಲ್ಲೂ ಇರುವ ಚೇತನದ ಒಂದು ಹೊಸರೂಪ, ಆ ಚೇತನದ ಒಂದು ಅಂಶ. ಮಾನವ ಹುಟ್ಟುವುದಕ್ಕೆ ಹಿಂದಿನ ಜೀವಿಯಲ್ಲಿ ಯಾವ ಬಗೆಯಾದ ಚೇತನವೂ ಇಲ್ಲದಿದ್ದ ಪಕ್ಷದಲ್ಲಿ, ಮಾನವನಲ್ಲಿ ಅದು ತೋರುವುದು ಕೇವಲ ಅಸಂಭವ.

ಡಯಲೆಕ್ಟಿಕಲ್ ಭೌತವಾದ ಕೇವಲ ಏಕರೂಪವಾದ ದ್ವೈತದಿಂದ ಭಿನ್ನವೆಂದು ಹೇಳಿಕೊಳ್ಳಬಹುದೇ ಹೊರತು ಭೇದಾಭೇದವನ್ನು ಒಳಗೊಂಡ ಪರಿಣಾಮರೂಪದ ಶಕ್ತಿವಿಶಿಷ್ಟಾದ್ವೈತಕ್ಕೂ ಅದಕ್ಕೂ ಭೇದ ತುಂಬ ಕಡಿಮೆ. ಡಯಲೆಕ್ಟಿಕಲ್ ಭೌತವಾದದ ಭೌತವಸ್ತು ಸೃಷ್ಟ್ಯಾತ್ಮಕವಾದದ್ದು, ಪ್ರಕೃತಿ ನವನವೋನ್ಮೇಷಶಾಲಿಯಾದದ್ದು. ಎಂದಮೇಲೆ ಅದಕ್ಕೂ ಭೇದ ಸಹಿತವಾದ, ಕಾಲದೇಶಸ್ವರೂಪಿಯಾದ ಶಕ್ತಿಯ ಪರಿಣಾಮವೇ ಈ ವಿಶ್ವ ಎಂದು ಹೇಳುವ ಶಕ್ತಿವಿಶಿಷ್ಟಾದ್ವೈತಕ್ಕೂ ತತ್ತ್ವದಲ್ಲಿ ಭೇದವಿಲ್ಲ. ರಷ್ಯದ ತಾತ್ತ್ವಿಕರು ಭಾರತೀಯ ಶಕ್ತಿತತ್ತ್ವವನ್ನು ಪರಿಚಯಮಾಡಿಕೊಂಡರೆ ಆಗ ತಮ್ಮ ತತ್ತ್ವಕ್ಕೆ ಆಧಾರವಾದ ತತ್ತ್ವವನ್ನು ಭೌತವಸ್ತುವೆಂದು ಕರೆಯುವುದಕ್ಕಿಂತ ಶಕ್ತಿ ಎಂದು ಕರೆಯುವುದು ಹೆಚ್ಚು ಸಮಂಜಸವೆಂದು ಮನಗಾಣಬಹುದು. ಅನ್ನದಿಂದ ಪ್ರಾಣ, ಪ್ರಾಣದಿಂದ ಮನಸ್, ಮನಸ್ಸಿನಿಂದ ವಿಜ್ಞಾನ, ವಿಜ್ಞಾನದಿಂದ ಆನಂದ, ಇವೆಲ್ಲವೂ ಭೇದಾಭೇದವುಳ್ಳ ಚೇತನಾತ್ಮಕವಾದ ಶಕ್ತಿಯ ಕ್ರಮವಾದ ಅಂತಸ್ತುಗಳು.

ಭಾರತೀಯ ಏಕತ್ವವಾದ ವಿಷಯದ ವಿವರಗಳಿಗೆ ನೋಡಿ—**ಅದ್ವೈತ ; ಭೇದಾಭೇದವಾದ ; ಶಕ್ತಿ ವಿಶಿಷ್ಟಾದ್ವೈತ.** (ಜಿ.ಎಚ್.; ಎಸ್.ಎಸ್.ಆರ್.)

**ಏಕದೇವತಾವಾದ :** ಜಗತ್ಕಾರಣನಾದ ಈಶ್ವರನೊಬ್ಬನೇ ದೇವನೆಂದು ಪ್ರತಿಪಾದಿಸುವ ತತ್ತ್ವ (ಮಾನೊಥೀಯಿಸಂ). ಮಾನವ ತನ್ನನ್ನು ಮೀರಿದ ಅದ್ಭುತ ಶಕ್ತಿಯನ್ನು ಮೊದಮೊದಲು ಬೇರೆ ಬೇರೆ ರೂಪಗಳಲ್ಲಿ ಕಂಡು ಅವನ್ನು ಆರಾಧಿಸತೊಡಗಿದಾಗ ಬಹುದೇವತಾತತ್ತ್ವ ರೂಪತಾಳಿ ಕ್ರಮೇಣ ದೇವತೆಗಳಿಗೆಲ್ಲ ಒಡೆಯ ಒಬ್ಬನೇ ಎಂಬ ಭಾವನೆ ಬೆಳೆಯಿತೆಂದು ಹೇಳಬಹುದು.

ಐತಿಹಾಸಿಕ ದೃಷ್ಟಿಯಿಂದ ಪರಿಶೀಲಿಸಿದರೆ, ಮುಖ್ಯವಾದ ಮತಧರ್ಮಗಳೆಲ್ಲವೂ ಬಹುದೇವತಾತತ್ವವನ್ನು ನಿರಾಕರಿಸಿ ಏಕದೇವತಾತತ್ತ್ವದಿಂದ ಪ್ರಾಮುಖ್ಯಕ್ಕೆ ಬಂದಿವೆ ಎನ್ನಬಹುದು. ಮತಧರ್ಮದ ವಿಕಾಸದ ಮೊದಲನೆಯ ಘಟ್ಟದಲ್ಲಿ ಪ್ರಕೃತಿಯ ಶಕ್ತಿಗಳನ್ನು ಆರಾಧಿಸುವುದು ಪ್ರಾಚೀನ ಅನಾಗರಿಕ ಜನಗಳಲ್ಲಿ ಸಾಧಾರಣವಾಗಿತ್ತು. ಮೊದಮೊದಲು ಮಾನವನಿಗೆ ಅರಿವಾದ ಶಕ್ತಿಗಳು ಸೂರ್ಯ, ಚಂದ್ರ, ಅಗ್ನಿ, ಹರಿಯುವ ಪ್ರವಾಹ, ಮಳೆ ಸುರಿಸುವ ಆಕಾಶ—ಇತ್ಯಾದಿಗಳು. ಜೀವನದ ಮೇಲೆ ಅತ್ಯಂತ ಪರಿಣಾಮಕಾರಿಯಾಗಿ ಪ್ರಭಾವವನ್ನು ಬೀರಿದ ಈ ಶಕ್ತಿಗಳಿಗೆ ಹೆಸರುಗಳನ್ನು ಕೊಟ್ಟು ದೇವತೆಗಳೆಂದು ಕರೆಯಲಾಯಿತು. ಪ್ರಕೃತಿಪೂಜೆ, ಜೀವನಕ್ಕೆ ಸಹಾಯಕವಾಗಿರುವ ಪ್ರಾಣಿಗಳ ಪೂಜೆ, ಕಣ್ಮರೆಯಾದ ಹಿರಿಯರ (ಪಿತೃ) ಪೂಜೆ ಇವು ಆಚರಣೆಯಲ್ಲಿದ್ದುವು. ಯುದ್ಧಗಳಲ್ಲಿ ಗೆಲುವು ಸೋಲುಗಳು ದೇವತೆಗಳಿಂದ ಉಂಟಾಗುತ್ತವೆ ಎಂಬ ನಂಬಿಕೆಯೂ ಉಂಟಾಯಿತು.

ಪ್ರಾಚೀನ ಸಂಸ್ಕೃತಿಗಳಲ್ಲಿ (ಉದಾಹರಣೆ, ಗ್ರೀಕರಲ್ಲಿ ಮತ್ತು ಆರ್ಯರಲ್ಲಿ) ಇಂಥ ಬಹುದೇವತಾ ಪೂಜೆಯನ್ನು ಕಾಣಬಹುದು.

ಬಹುದೇವತಾತತ್ತ್ವ ಕ್ರಮೇಣ ಏಕದೇವತಾತತ್ತ್ವದ ಕಡೆಗೆ ಸಾಗಿದ ಕಾರಣಗಳನ್ನು ಮಾನವಶಾಸ್ತ್ರಜ್ಞರು ಸಂಶೋಧಿಸಿದ್ದಾರೆ. ಚಿಕ್ಕ ಪುಟ್ಟ ಗುಂಪುಗಳನ್ನು ಕಟ್ಟಿಕೊಂಡು ಅಲೆದಾಡುತ್ತಿದ್ದ ಮಾನವ ನದೀಬಯಲುಗಳಲ್ಲಿ ನೆಲಸಿ ಕ್ರಮೇಣ ದೇಶಗಳನ್ನು ಕಟ್ಟಿಕೊಂಡು ವಾಸಿಸುವಾಗ ಅವನ ಬುದ್ಧಿ ವಿಕಾಸವಾಗಲು ಅವಕಾಶವಾಯಿತು. ಅವನ ದೃಷ್ಟಿ ವಿಶಾಲವಾಯಿತು. ಚಿಕ್ಕ ಚಿಕ್ಕ ಗುಂಪಿನ ದೇವತೆಗಳು ಒಂದೇ ನಾಗರಿಕತೆಯಲ್ಲಿ ಸೇರಿಹೋದರು. ಅವರನ್ನು ತಾರತಮ್ಯ ಭಾವನೆಯಿಂದ ಕಂಡು ಅವರಲ್ಲಿ ಒಂದು ಅಂತಸ್ತಿನ ವ್ಯವಸ್ಥೆಯನ್ನು ಮಾಡಲಾಯಿತು. ಒಬ್ಬನೇ ಒಡೆಯನನ್ನು ಇತರ ದೇವತೆಗಳು ಅನುಸರಿಸಬೇಕು ಎಂಬ ಭಾವನೆ ಉದಯವಾಯಿತು. ಎಲ್ಲರಿಗಿಂತ ಹಿರಿಯ ದೇವತೆಯ ಭಾವನೆಯೇ ಸರ್ವೇಶ್ವರನ ಭಾವನೆಯ ವಿಕಾಸಕ್ಕೆ ಅಂದರೆ ಏಕದೇವತಾತತ್ತ್ವಕ್ಕೆ ಪ್ರಧಾನ ಕಾರಣವಾಯಿತು.

ಯುದ್ಧದಲ್ಲಿ ಜಯಿಸಿದವರ ದೇವತೆಗಳಿಗೆ ಸೋತವರ ದೇವತೆಗಳು ಅಧೀನರಾದಂತೆ ಭಾವಿಸಲಾಯಿತು. ಕುಟುಂಬ ದೇವತೆಗಿಂತ ದೇಶದ ದೇವತೆಗಳಿಗೆ ಹೆಚ್ಚು ಪ್ರಾಧಾನ್ಯ ಕೊಡಲಾಯಿತು. ಕುಟುಂಬ ಜೀವನದ ಭಾವನೆಯಿಂದ ದಂಪತಿ ದೇವತೆಗಳ ಕಲ್ಪನೆಯಾಯಿತು. ಪತಿದೇವತೆಗೆ ಹೆಚ್ಚು ಪ್ರಾಧಾನ್ಯ ಬಂತು. ಭೂಮಿದೇವತೆಗಳಿಗಿಂತ ಆಕಾಶದೇವತೆಗಳಿಗೆ ಹೆಚ್ಚು ಶಕ್ತಿಯಿದೆ ಎಂದು ಭಾವಿಸಲಾಯಿತು. ಹೀಗೆ ಶಕ್ತಿಯ ತಾರತಮ್ಯ ಭಾವನೆಯಿಂದ ಸರ್ವೇಶ್ವರನ ಭಾವನೆ ಬೆಳೆಯುತ್ತ ಬಂತು.

ಸೃಷ್ಟಿಯಲ್ಲಿನ ಋತುನಿಯಮ, ಕಾಲನಿಯಮಗಳನ್ನು ಗುರುತಿಸಿದ ಮೇಲೆ ಸೃಷ್ಟಿಕರ್ತನೊಬ್ಬನಿರಬೇಕೆಂಬ ಕಲ್ಪನೆ ಉದಯಿಸಿತು. ಇವಕ್ಕೆಲ್ಲ ಒಡೆಯನಾದವ ಸೃಷ್ಟಿಪಾಲಕನೂ ಆಗಿರಬೇಕು ಎಂಬ ಭಾವನೆಯಿಂದ ಅವನ ಪೂಜೆಗೆ ಹೆಚ್ಚು ಪ್ರೋತ್ಸಾಹ ದೊರಕಿತು.

ಮಾನವನ ಜನನಮರಣಗಳ ಸಮಸ್ಯೆಯಿಂದ ಇಹ, ಪರಲೋಕಗಳ ಕಲ್ಪನೆ, ಅವುಗಳ ಅಧಿಕಾರಿಯ ಭಾವನೆ, ತಲೆದೋರಿತು. ಜರೆ, ರುಜೆರ, ಮರಣಾದಿ ನೋವುಗಳಿಂದ ಪಾರಾಗುವ ಬಗೆಯೇನು ಎಂದು ಮಾನವ ಚಿಂತಿಸತೊಡಗಿ ತನ್ನ ಮೊರೆಯನ್ನು ಕೇಳಿ ಶಾಂತಿಯನ್ನು ಕೊಡುವ ಸರ್ವೇಶ್ವರನೊಬ್ಬನಿರಲೇಬೇಕೆಂದು ಹೃದಯಾಂತರಾಳದಲ್ಲಿ ಕಂಡುಕೊಂಡ. ಈ ಪ್ರಕಾರ ಮತಧರ್ಮಗಳ ಉದಯವಾಯಿತು. ಯೆಹೂದೀ, ಕ್ರೈಸ್ತ, ಮಹಮ್ಮದೀಯ ಮುಂತಾದ ಮತಗಳು ರೂಪತಾಳಿದುವು. ಮಾನವರೆಲ್ಲರೂ ಭಗವಂತನ ಮಕ್ಕಳೆಂಬ ಭಾವನೆಯನ್ನು ಪ್ರಚಾರ ಮಾಡಿದುವು.

ಭಾರತದಲ್ಲೂ ಬಹುದೇವತಾತತ್ತ್ವಕ್ಕೆ ವೇದಗಳ ಕಾಲದಿಂದೀಚೆಗೆ ಮನ್ನಣೆ ಕಡಿಮೆಯಾಗುತ್ತ ಬಂದು ಏಕದೇವತಾತತ್ತ್ವ ಹರಡಿದೆ. ಉಪನಿಷತ್ತುಗಳು ಪರಬ್ರಹ್ಮನೊಬ್ಬನ ಸ್ವರೂಪವನ್ನೇ ವಿಸ್ತಾರವಾಗಿ ಚರ್ಚಿಸಿವೆ. ವೇದಗಳ ಇಂದ್ರಾದಿ ದೇವತೆಗಳಿಗೆ ಅಲ್ಲಿ ಮನ್ನಣೆ ಇಲ್ಲ. ಉಪನಿಷತ್ತುಗಳಿಂದ ಏಕತ್ವವಾದವನ್ನೂ ದ್ವೈತ, ವಿಶಿಷ್ಟಾದ್ವೈತಗಳ ಏಕದೇವತಾತತ್ತ್ವವನ್ನೂ ಮತಾಚಾರ್ಯರು ಹೊರಗೆಡಹಿದ್ದಾರೆ. ವಿಷ್ಣು ಸರ್ವೋತ್ತಮತ್ವವನ್ನೂ ಶಿವಸರ್ವೋತ್ತಮತ್ವವನ್ನೂ ಸಾರುವ, ವೈಷ್ಣವ ಮತ್ತು ಶೈವ ಸಂಪ್ರದಾಯಗಳು ಭಾರತದಲ್ಲಿ ಹರಡಿವೆ. ಜೀವಾತ್ಮರೆಲ್ಲರೂ ಪರಬ್ರಹ್ಮನಿಂದಲೇ ಸೃಷ್ಟಿಸಲ್ಪಟ್ಟು ಅವನಿಂದಲೇ ಮುಕ್ತರಾಗುವರೆಂದು ಹೇಳುವ ಹಿಂದೂಮತದಲ್ಲಿ ಬಹುದೇವತಾತತ್ತ್ವವಿದೆಯೆಂದು ಹೇಳುವುದು ತಪ್ಪು. ಅವತಾರಗಳನ್ನು ಕೂಡ ವಿಷ್ಣುವಿನ ಅಥವಾ ಈಶ್ವರನ ಅಂಶಗಳ ವ್ಯಕ್ತರೂಪಗಳೆಂದು ಹೇಳುವುದರಿಂದ ಎಷ್ಟು ದೇವತೆಗಳನ್ನು ಪೂಜಿಸಿದರೂ ಹಿಂದೂಮತ ಏಕದೇವತಾ ತತ್ತ್ವವನ್ನೇ ಪ್ರತಿಪಾದಿಸುತ್ತದೆ. (ಎಸ್.ಎಸ್.ಆರ್.)

**ಏಕನಾಥ :** ಸು. 1548. ಮಹಾರಾಷ್ಟ್ರದ ಪ್ರಸಿದ್ಧ ಸಂತರಲ್ಲಿ ಪ್ರಮುಖ. ಜ್ಞಾನದೇವನಾದ ಮೇಲೆ ಆತನಂತೆ ದೇಶದಲ್ಲೆಲ್ಲ ವಿಖ್ಯಾತನಾದ ಯಶಸ್ಸು ಏಕನಾಥನದು. ಆತನಂತೆ ಈತನೂ ಜನರ ಭಾಷೆಯಲ್ಲಿ ವೇದಾಂತರಹಸ್ಯವನ್ನೂ ಜ್ಞಾನಸಾರವನ್ನೂ ಭಾಗವತಧರ್ಮವನ್ನೂ ಪ್ರಚಾರಮಾಡುವುದರಲ್ಲಿ ಜೀವಮಾನವನ್ನು ಕಳೆದವ.

ಈತನ ಅಡ್ಡ ಹೆಸರು ಪೈಠಣಕರ. ಈತನ ಗುರು ದತ್ತಾತ್ರೇಯನ ಅವತಾರವೆಂದು ಪ್ರಸಿದ್ಧನಾದ ಗಾಣಗಾಪುರದ ನರಸಿಂಹ ಸರಸ್ವತಿಯ ಶಿಷ್ಯ ಜನಾರ್ದನ ಸ್ವಾಮಿ.

ವಿಜಯನಗರದ ಕೃಷ್ಣದೇವರಾಯ ಪಂಢರಾಪುರದಿಂದ ವಿಟ್ಠಲನ ಮೂರ್ತಿಯನ್ನು ತನ್ನ ರಾಜಧಾನಿಗೆ ಒಯ್ದು ಅಲ್ಲಿ ಪ್ರತಿಷ್ಠೆಮಾಡಿಸಿದ್ದ. ಅದನ್ನು ತಿರುಗಿ ಪಂಢರಾಪುರಕ್ಕೆ ತಂದು ಕೀರ್ತಿವಂತನಾದ ಭಾನುದಾಸನ ವಂಶಜನೇ ಏಕನಾಥ. ಏಕನಾಥನ ತಂದೆ ಸೂರ್ಯನಾರಾಯಣ, ತಾಯಿ ರುಕ್ಮಿಣಿ. ಹಂಪೆಯಲ್ಲಿ ವಿಜಯವಿಟ್ಠಲನ ಗುಡಿ ಈಗಲೂ ಇದೆಯಾದರೂ ಅಲ್ಲಿ ಯಾವ ಮೂರ್ತಿಯೂ ಇಲ್ಲ.

ಏಕನಾಥ ತನ್ನ ಗುರುವಾದ ಜನಾರ್ದನ ಸ್ವಾಮಿಯಲ್ಲಿ ಜ್ಞಾನೇಶ್ವರೀ, ಅಮೃತಾನುಭವ ಗ್ರಂಥಗಳ ಅಭ್ಯಾಸಮಾಡಿದ. ದೇವಘಡದ ಬೆಟ್ಟದಲ್ಲಿ ಆರುವರ್ಷ ತಪಸ್ಸನ್ನು ಮಾಡಿದ. ಸಾಕ್ಷಾತ್ಕಾರ ಪಡೆದ. ದೇವಘಡಕ್ಕೆ ಒಮ್ಮೆ ವೈರಿಗಳು ಮುತ್ತಿದಾಗ ಜನಾರ್ದನಸ್ವಾಮಿ ಧ್ಯಾನಸ್ಥನಿದ್ದ. ಏಕನಾಥ ಕುದುರೆಯನ್ನು ಹತ್ತಿ, ಯುದ್ಧಮಾಡಿ ವೈರಿಗಳನ್ನು ಓಡಿಸಿದ. ಮುಂದೆ ಗುರುವಿನ ಅಪ್ಪಣೆಯಂತೆ ಪೈಠಣಕ್ಕೆ ಬಂದು, ಗಿರಿಜಾಬಾಯಿ ವಿಜಾಪುರ ಎಂಬ ತರುಣಿಯನ್ನು ಲಗ್ನವಾದ. ಪ್ರಪಂಚವನ್ನೂ ಪರಮಾರ್ಥವನ್ನೂ ಕೂಡಿಯೇ ಸಾಧಿಸಿದ.

ಏಕನಾಥನಿಗೆ ದೀನದಲಿತರಲ್ಲಿ, ಶೂದ್ರಾದಿಗಳಲ್ಲಿ ಅಪಾರ ಕರುಣೆ ಇತ್ತು. ತಂದೆಯ ಶ್ರಾದ್ಧದ ಕಾಲಕ್ಕೆ ಬ್ರಾಹ್ಮಣರಿಗಿಂತ ಮುಂಚೆ ಹಸಿದ ಹೊಲೆಯರಿಗೆ ಅನ್ನ ಬಡಿಸಿದ ಧೀರನೀತ. ಪೂಜೆಗೆ ತಂದ ಗಂಗಾಜಲವನ್ನು ನೀರಡಿಸಿದ ಕತ್ತೆಗೆ ಕುಡಿಸಿದ ಅಂತಃಕರುಣಿ ಈತ. ಚೋರರನ್ನು, ಜಾರರನ್ನು, ವೇಶ್ಯೆಯರನ್ನು ಉದ್ಧರಿಸಿದ ಕುಶಲಮತಿ. ಜ್ಞಾನಮದಾಂಧನಾದ ತನ್ನ ಮಗ ಹರಿಪಂಡಿತನ ಕಣ್ಣು ತೆರೆಯಿಸಿದ. ಸಂಸಾರ ಮಾಡಿಯೂ ಪರಮಾರ್ಥವನ್ನು ಸಾಧಿಸುವ ಬಗೆಯನ್ನು ಬೋಧಿಸಿದ. ಎಲ್ಲ ಪ್ರಾಣಿಗಳಲ್ಲಿ ಪರಮಾತ್ಮನನ್ನು ಕಾಣುವುದೇ ಭಕ್ತಿ ಎಂಬುದು ಈತನ ಉಪದೇಶ. ಅನುತಾಪವೇ ಆತ್ಮಾನಂದಕ್ಕೆ ಕಾರಣ, ಭಕ್ತನಿಗಿಂತ ದೇವ ಕಿರಿಯ—ಎಂಬ ಮಾತುಗಳನ್ನು ಮತ್ತೆ ಮತ್ತೆ ಹೇಳಿ ಧ್ಯಾನವೊಂದೇ ದೇವ ಸಾಕ್ಷಾತ್ಕಾರಕ್ಕೆ ಇರುವ ಮಾರ್ಗ ಎಂದು ಏಕನಾಥ ಸಾಧಿಸಿದ್ದಾನೆ.

ಮರಾಠೀಸಾಹಿತ್ಯಕ್ಕೆ ಏಕನಾಥನ ಅಮೋಘ ಕಾಣಿಕೆಯೆಂದರೆ ಭಾಗವತ ಪುರಾಣದ ಹನ್ನೊಂದನೆಯ ಸ್ಕಂದದ ವಿಸ್ತೃತ ಪದ್ಯ ವಿವರಣೆ. ಇದು 20,000 ಓವಿಗಳನ್ನೊಳಗೊಂಡಿದೆ. ಓವಿ ಎಂಬುದು ಮರಾಠಿ ಜಾನಪದ ಗೀತೆಯ ಹೆಸರು. ಮರಾಠಿಯಲ್ಲಿ ಇಷ್ಟು ಹೃದಯಂಗಮವಾಗಿಯೂ ವಿಸ್ತೃತವಾಗಿಯೂ ಇರುವ ಮಹಾರಚನೆಗಳು ಏಕನಾಥನಿಗೆ ಪೂರ್ವದಲ್ಲಿ ಇರಲಿಲ್ಲ. ಏಕನಾಥನ ಜ್ಞಾನದ ತೇಜವನ್ನೂ ಭಾಷಾ ಸೌಷ್ಠವವನ್ನೂ ಪ್ರಾಸಾದಿಕ ಕವಿತ್ವವನ್ನೂ ಮುಕ್ತಕಂಠದಿಂದ ಮರಾಠೀಸಾಹಿತ್ಯ ವಿಮರ್ಶಕರು ಕೊಂಡಾಡಿದ್ದಾರೆ. ಈತನ ಭಕ್ತಿ ನಿರ್ಭರತೆಯಂತೂ ಅಸಾಧಾರಣವಾದುದು. ಅಲ್ಲದೆ ಜ್ಞಾನದೇವನ ಜ್ಞಾನೇಶ್ವರೀ ಗ್ರಂಥವನ್ನು ಏಕನಾಥ ಪರಿಷ್ಕರಿಸಿ ಸಂಪಾದಿಸಿದ್ದಾನೆ.

ಏಕನಾಥ ಜನಸಾಮಾನ್ಯರಿಗೆ ತಿಳಿಯುವಂತೆ ಮರಾಠಿಯಲ್ಲೇ ರುಕ್ಮಿಣೀ ಸ್ವಯಂವರವೆಂಬ ಹದಿನೆಂಟು ಅಧ್ಯಾಯಗಳ ಪೌರಾಣಿಕ ಕಾವ್ಯವನ್ನು ರಚಿಸಿದ್ದಾನೆ. ಇದರಲ್ಲಿ 7,000 ಓವಿಗಳಿವೆ. ಕೃಷ್ಣ ರುಕ್ಮಿಣಿಯರ ವಿವಾಹವೆಂದರೆ ಜೀವಾತ್ಮ–ಪರಮಾತ್ಮರ ಐಕ್ಯವೆಂಬ ವೇದಾಂತ ಸೂಕ್ಷ್ಮವನ್ನು ಉದ್ದಕ್ಕೂ ಸಾಂಕೇತಿಕವಾಗಿ ಸೂಚಿಸಿರುವುದು ಇಲ್ಲಿಯ ವಿಶೇಷ. ಪ್ರಹ್ಲಾದ ಚರಿತ್ರ, ಶುಕಾಷ್ಟಕ ಮುಂತಾದ ಚಿಕ್ಕ ಪೌರಾಣಿಕ ಆಖ್ಯಾನಗಳನ್ನೂ ಏಕನಾಥ ಮರಾಠಿಯಲ್ಲಿ ಸುಂದರವಾಗಿ ರಚಿಸಿದ್ದಾನೆ. ಸ್ವಾತ್ಮಸುಖ ಎಂಬುದು ಈತನ ಅದ್ವೈತ ವೇದಾಂತ ವಿಷಯದ ರಚನೆ. ಭಾವಾರ್ಥ ರಾಮಾಯಣ, ಬಾಲಕ್ರೀಡಾ, ಭಾಗವತಚತುಃಶ್ಲೋಕೀ ವ್ಯಾಖ್ಯಾನ ಇತ್ಯಾದಿ ಇನ್ನೂ ಹಲವಾರು ರಚನೆಗಳಿವೆ. ಓವಿ ಹಾಗೂ ಅಭಂಗಗಳ ಮೇಲೆ ಏಕನಾಥನ ಪ್ರಭುತ್ವ ಅದ್ವಿತೀಯ.

ಮರಾಠೀ ಸಾಹಿತ್ಯದಲ್ಲಿ ಹೀಗೆ ಏಕನಾಥನ ವ್ಯಕ್ತಿತ್ವ ಅಜರಾಮರವಾಗಿದೆ. ಆತನ ಪ್ರಭಾವ ಮುಂದಿನ ಕವಿಗಳ ಮೇಲೆ ಅಗಾಧವಾಗಿ ಆದುದನ್ನು ಮರೆಯುವಂತಿಲ್ಲ. ಸಾಧು ಸಂತರ ಬೋಧನೆಗಳು ಹೇಗೋ ಹಾಗೆ ಅವರ ವ್ಯಕ್ತಿತ್ವದ ಬಗೆಗೆ ಜನರ ಮನಸ್ಸಿನಿಂದ ಎಂದೂ ದೂರವಾಗದಂಥ ಪವಾಡ ಕಥೆಗಳು ನೂರಾರು ಜನಜನಿತವಾಗಿ ಬಂದಿವೆ; ಭಕ್ತವಿಜಯವೇ ಮುಂತಾದ ಗ್ರಂಥಗಳಾಗಿ ಮಾರ್ಪಟ್ಟಿವೆ. ಇಂದಿಗೂ ಇವುಗಳ ಪ್ರವಚನ ವಾಚನಗಳಲ್ಲಿ ಭಾವುಕರಿಗೆ ಆಸಕ್ತಿಯಿರುವುದನ್ನು ನೋಡಬಹುದು. (ಕೆ.ಕೆ. ; ಎಂ.ಎ.)

**ಏಕಪಾತ್ರಾಭಿನಯ :** ಒಬ್ಬನೇ ನಟ ರಂಗಭೂಮಿಯ ಮೇಲೆ ಬಂದು ಇಡೀ ಕಥೆಯನ್ನು ನಿರ್ವಹಿಸುವುದು. ಕಥೆಯಲ್ಲಿ ಒಂದೇ ಪಾತ್ರವಿರಬಹುದು ಇಲ್ಲವೇ ಅನೇಕ ಪಾತ್ರಗಳಿರಬಹುದು. ಸಾಮಾನ್ಯವಾಗಿ ನಾಟಕದಲ್ಲಿ ಒಬ್ಬನಿಗಿಂತ ಹೆಚ್ಚು ಜನ ನಟರು ಇರುತ್ತಾರಾದರೂ ಒಬ್ಬನೇ ನಟನಿಂದ ನಿರ್ವಹಿಸಲ್ಪಡುವ ಕೆಲವು ನಾಟಕಗಳು ಹಿಂದಿನಿಂದಲೂ ಇದ್ದಂತೆ ಕಾಣುತ್ತದೆ. ಭಾರತೀಯ ಪರಂಪರೆಯಲ್ಲಿ ಏಕಪಾತ್ರಾಭಿನಯ ನಾಟ್ಯಕಲೆಯ ಒಂದು ಅಧಿಕೃತ ಪ್ರಕಾರವಾಗಿತ್ತು. ಸ್ಥೂಲವಾಗಿ ಹೇಳುವುದಾದರೆ ಭರತನಾಟ್ಯ, ಕೂಚಿಪುಡಿ ಮೊದಲಾದ ನೃತ್ಯಗಳು ಇಂಥ ಏಕಪಾತ್ರಾಭಿನಯದ ಪ್ರಕಾರಕ್ಕೆ ಸೇರಿದ್ದಾಗಿವೆ. ರಾಮಾಯಣ ಇಲ್ಲವೆ ಭಾಗವತದ ಕಥೆಗಳನ್ನು ಒಬ್ಬನೇ ಕಲಾವಿದ—ಕಥೆಯ ಪಾಠವನ್ನು ಒಮ್ಮೊಮ್ಮೆ ಹಿನ್ನೆಲೆಯಲ್ಲಿ ಇರಿಸಿಕೊಳ್ಳದೆಯೂ—ಪ್ರದರ್ಶಿಸುತ್ತಾನೆ. ಏಕಪಾತ್ರಾಭಿನಯ ಬರೀ ನೃತ್ಯಕ್ಕೆ ಸೀಮಿತವಾಗಿಲ್ಲ. ಭಾರತೀಯ ನಾಟಕದಲ್ಲೂ ಇದು ಪ್ರಾಚೀನಕಾಲದಿಂದಲೂ ಕಂಡುಬರುತ್ತಿದೆ. ಭಾರತೀಯಪರಂಪರೆಯ ನಾಟಕಕಲೆಯನ್ನು ಪ್ರತಿಷ್ಠಿತಗೊಳಿಸಿದ ಭರತಮುನಿಯ ನಾಟ್ಯಶಾಸ್ತ್ರ ದಶರೂಪಕಗಳನ್ನು (ಹತ್ತು ಬಗೆಯ ನಾಟಕ) ಹೆಸರಿಸಿದೆ. ಅವುಗಳಲ್ಲಿ ಭಾಣ ಎಂಬುದು, ಕೆಲವೊಮ್ಮೆ ವೀಥೀ ಎಂಬುದು ಒಂದೇ

ಅಂಕದ ರೂಪಕಗಳು. ಇದರಲ್ಲಿ ಭಾಣ ಎಂಬುದು ಏಕಹಾರ್ಯ ಎಂದರೆ ಒಂದೇ ಪಾತ್ರವುಳ್ಳದ್ದು. ಆದರೆ ವೀಥೀ ಎಂಬುದು ಏಕಹಾರ್ಯಾ ದ್ವಿಹಾರ್ಯಾ ವಾ ಎಂದರೆ ಒಂದು, ಅಥವಾ ಕೆಲವೊಮ್ಮೆ ಎರಡು ಪಾತ್ರಗಳನ್ನುಳ್ಳದ್ದು. ಭಾಣದಲ್ಲಿ ಇನ್ನೊಬ್ಬರ ಮಾತುಗಳನ್ನು, ಆಕಾಶಪುರುಷರ (ಎಂದರೆ ರಂಗಸ್ಥಳದಲ್ಲಿ ಕಾಣದವರ) ಮಾತುಗಳನ್ನು ಅಂಗವಿಕಾರಗಳಿಂದ, ಅಭಿನಯದಿಂದ ಈ ಏಕಪಾತ್ರವೆ ಸೂಚಿಸುತ್ತದೆ. ಭಾಣ ಮತ್ತು ವೀಥೀಗಳೆರಡರಲ್ಲೂ ಶೃಂಗಾರರಸವೇ ಪ್ರಧಾನ ಎಂಬುದು ಗಮನಾರ್ಹವಾಗಿದೆ.

ನಾಟ್ಯಶಾಸ್ತ್ರದಲ್ಲಿಯ ಈ ಏಕಪಾತ್ರಾಭಿನಯದ ರೂಪಕಗಳು ಭಾರತೀಯ ರಂಗಭೂಮಿಯಲ್ಲಿ ಪ್ರಚುರಗೊಂಡು ಉಳಿದವೊ ಇಲ್ಲವೊ ಎಂದು ಹೇಳಲು ಸಾಕಷ್ಟು ಆಧಾರಗಳಿಲ್ಲ. ಆದರೆ ಭಾರತದಲ್ಲಿ ನಡೆದುಬಂದ ಹರಿಕಥೆ ಅಥವಾ ಕೀರ್ತನ ಕಲೆಯನ್ನು ನೋಡಿದರೆ ಈ ಏಕಪಾತ್ರಾಭಿನಯಪ್ರಕಾರದ ಜನಪ್ರಿಯತೆ ಸ್ಪಷ್ಟವಾಗಿ ಕಂಡುಬರುವುದು. ಇಲ್ಲಿ ಕೀರ್ತನಕಾರ ತನ್ನ ಕಥೆಯಲ್ಲಿ ಸಂದರ್ಭೋಚಿತ ವಾಗಿ ಬರುವ ಎಲ್ಲ ಪಾತ್ರಗಳನ್ನೂ ತನ್ನೊಬ್ಬನ ಅಂಗವಿಕಾರಗಳಿಂದ, ಅಭಿನಯದಿಂದ, ಮಾತಿನಿಂದ ನಟಿಸಿ ಚಿತ್ರಿಸುತ್ತಾನೆ.

ಆಧುನಿಕ ಭಾರತೀಯ ರಂಗಭೂಮಿಯ ಮೇಲೆ ಏಕಪಾತ್ರಾಭಿನಯ ಪ್ರಕಾರಗಳು ಕಂಡುಬರುವುದಿಲ್ಲ. ಆದರೂ ಭಾರತದ ಕೆಲವು ರಾಜ್ಯಗಳಲ್ಲಿ ಪಾಶ್ಚಾತ್ಯ ರಂಗ ಭೂಮಿಯ ಪ್ರಭಾವದಿಂದ ಇಂಥ ಪ್ರಯೋಗಗಳು ನಡೆದಿವೆ. ಪಾಶ್ಚಾತ್ಯರಲ್ಲಿ ವಿವಿಧ ವಿನೋದ ರಂಗಭೂಮಿ ಎಂಬಲ್ಲಿ (ವೆರೈಟಿ ಥಿಯೇಟರ್) ಈ ಏಕಪಾತ್ರಾಭಿನಯ ಕಂಡುಬರುವುದು. ಆದರೆ ಇಲ್ಲಿ ಅದು ನಾಟಕಕ್ಕಿಂತ ವಿನೋದಕ್ಕೆ ಪ್ರಾಧಾನ್ಯ ಕೊಡುತ್ತದೆ. ದೃಷ್ಟಾಂತಕ್ಕೆ ಒಬ್ಬನೇ ಒಬ್ಬ ನಟ ಬೇರೆ ಬೇರೆ ಸನ್ನಿವೇಶಗಳನ್ನು ಚಿತ್ರಿಸಿ ಅಲ್ಲಿ ಸಾಂದರ್ಭಿಕವಾದ ಪಾತ್ರಗಳನ್ನು ತಾನೇ ನಿರ್ವಹಿಸುತ್ತಾನೆ. ಸಾಮಾನ್ಯ ವಾಗಿ ಸಾಮಾಜಿಕ ಇಲ್ಲವೇ ರಾಜಕೀಯ ಸಮಸ್ಯೆಗಳ ವ್ಯಂಗ್ಯಟೀಕೆ ಇದರಲ್ಲಿರುತ್ತದೆ.

ಕಳೆದ ಕೆಲವು ವರ್ಷಗಳಿಂದ ಮಹಾರಾಷ್ಟ್ರದ ರಂಗಭೂಮಿಯ ಮೇಲೆ ಏಕ ಪಾತ್ರಾಭಿನಯದ ಮೂರೋ ನಾಲ್ಕೋ ಪ್ರಯೋಗಗಳು ನಡೆದಿವೆ. ಇವುಗಳಲ್ಲಿ ಎರಡು ವಿಧಗಳನ್ನು ಕಾಣಬಹುದು. ಒಂದು, ಅನೇಕ ನಟರು ಕೂಡಿ ಆಡುವ ಇಡಿಯ ನಾಟಕವನ್ನು ಒಬ್ಬನೇ ನಟ (ಇಲ್ಲವೆ ನಟಿ) ಆಡುವುದು. ಇನ್ನೊಂದು ಪಾಶ್ಚಾತ್ಯರಲ್ಲಿನಂತೆ ಹಾಸ್ಯ ಟೀಕಾತ್ಮಕ ಸನ್ನಿವೇಶಗಳನ್ನು ರಚಿಸಿ ಒಬ್ಬನೇ ನಟ ನಟಿಸಿ ತೋರಿಸುವುದು.

ಒಟ್ಟಾರೆ ಹೇಳುವುದಾದರೆ ನಾಟಕದ ರಚನೆಯಲ್ಲಾಗಲಿ ನಟನ ವಿವಿಧ ನೈಪುಣ್ಯ ದಲ್ಲಾಗಲಿ ಮೇಲ್ಮಟ್ಟವನ್ನು ಅಪೇಕ್ಷಿಸುವ ಈ ಏಕಪಾತ್ರಾಭಿನಯ ಭಾರತದ ಇಂದಿನ ರಂಗಭೂಮಿಯಲ್ಲಿ ಮೂಡಿಬಂದಿಲ್ಲ. ಆದರೂ ನಾಟ್ಯಶಾಸ್ತ್ರ, ಹರಿಕಥೆ ಮತ್ತು ಅಷ್ಟಾವಧಾನದಂಥ ಪ್ರಕಾರಗಳನ್ನು ನೋಡಿದರೆ ಇದು ಮುಂಚಿನಿಂದಲೂ ಮನ್ನಣೆ ಪಡೆದ ಒಂದು ರೂಪಕ ಎಂದು ಹೇಳಬಹುದು. (ಏ.ಆರ್‌ಏ.)

**ಏಕಪ್ರಕಾರತಾವಾದ :** ಭೂಮಿಯ ಹೊರಪದರದಲ್ಲೂ ಒಳ ಭಾಗದಲ್ಲೂ ಆಗುತ್ತಿರುವ ವ್ಯತ್ಯಾಸಗಳು ಕೇವಲ ಆಕಸ್ಮಿಕವಲ್ಲ; ಅವು ಭೂಚರಿತ್ರೆಯ ಉದ್ದಕ್ಕೂ ಒಂದು ನಿಯಮಕ್ಕೆ ಅನುಸಾರವಾಗಿ ಏಕಪ್ರಕಾರವಾಗಿ ನಡೆಯುತ್ತ ಬಂದಿವೆ ಎಂಬ ವಾದ (ಯೂನಿಫಾರ್ಮಿಟೇರಿಯಾನಿಸಂ). ಇದನ್ನು ಜೇಮ್ಸ್ ಹಟ್ಟನ್ ಎಂಬ ಭೂವಿಜ್ಞಾನಿ 1788ರಲ್ಲಿ ಮಂಡಿಸಿದ. ಈ ವಾದಕ್ಕೆ ಸರ್ ಚಾರಲ್ಸ್ ಲಯೆಲ್ ಎಂಬ ವಿಖ್ಯಾತ ಭೂವಿಜ್ಞಾನಿ ಯೂನಿಫಾರ್ಮಿಟೇರಿಯಾನಿಸಂ (ಏಕಪ್ರಕಾರತಾವಾದ) ಎಂದು ಹೆಸರಿಟ್ಟ.

ಪ್ರತಿದಿವಸ ಉಂಟಾಗುವ ಉಷ್ಣತೆಯ ಏರಿಳಿತ, ನೀರಿನ ಹರಿವು, ಸಾಗರಗಳ ಬಡಿತ, ವಿವಿಧ ರಾಸಾಯನಿಕಗಳ ಕ್ರಿಯೆಗಳು, ಅಖಿಲ ಪ್ರಾಣಿವರ್ಗದ ಚಟುವಟಿಕೆ ಗಳು—ಇವೆಲ್ಲವುಗಳ ಸಮಗ್ರ ಪರಿಣಾಮವಾಗಿ ಭೂಮಿಯಲ್ಲಿ ವ್ಯತ್ಯಾಸಗಳು ನಿರಂತರವಾಗಿ ಸಂಭವಿಸುತ್ತವೆ. ಉದಾಹರಣೆಗೆ 250 ವರ್ಷಗಳಲ್ಲಿ ಲಂಡನ್ನಿನ ಸೇಂಟ್ ಪಾಲ್ ಕಟ್ಟಡದ ಹೊರಮೈಯಲ್ಲಿ ಸರಾಸರಿ ಅರ್ಧ ಅಂಗುಲದಷ್ಟು ಶಿಲಾ ಪದರ ಸವೆದುಹೋಗಿದೆ ಎಂದು ಅಂದಾಜು ಮಾಡಲಾಗಿದೆ. ಇದು ನಿಧಾನ ವಾಗಿಯೂ ಸತತವಾಗಿಯೂ ಭೂಮಿಯ ಮೇಲೆ ನಡೆಯುವ ಕಾರ್ಯಗಳಿಂದ ಆಯಿತು ಎನ್ನುವುದು ಖಚಿತವಾಗಿದೆ. ಪ್ರಕೃತಿ ವ್ಯಾಪಾರ ಇದೇ ರೀತಿ ನಡೆಯು ತ್ತಿದ್ದರೆ, ಕೋಟಿ ವರ್ಷಗಳಲ್ಲಿ ಒಂದು ಪ್ರದೇಶದ ಗುಡ್ಡಗಳೂ ಬೆಟ್ಟಗಳೂ ನೆಲಸಮವಾಗುವುದು ಅಸಾಧ್ಯವೇನಲ್ಲ. ಭೂವಿಜ್ಞಾನ ದೃಷ್ಟಿಯಲ್ಲಿ ಒಂದು ಕೋಟಿ ವರ್ಷ ಚಿಕ್ಕಅವಧಿ. ಭೂಮಿಯ ಪ್ರಾಯ $5\times10^9$ ವರ್ಷಗಳು ಎಂದಾಗ 1 ಕೋಟಿ ವರ್ಷಗಳು ($10^7$) ಎಷ್ಟು ಚಿಕ್ಕ ಅವಧಿ ಎಂದು ಊಹಿಸಬಹುದು. ಈ ಅಗಾಧ ಕಾಲದಲ್ಲಿ ಮೇಲೆ ವಿವರಿಸಿರುವ ಎಲ್ಲ ಕಾರಣಗಳಿಂದಾಗಿ ಭೂಮಿಯ ಹೊರಮೈಯ ರೂಪದಲ್ಲಿಯೂ ಭೂ ಜಲಭಾಗಗಳ ಹರವಿನಲ್ಲಿಯೂ ಅನೇಕ ವ್ಯತ್ಯಾಸಗಳಾಗಿವೆ. ಭೂಮಿಯ ಮೇಲ್ಭಾಗದಲ್ಲಿ ಎಡೆಬಿಡದೆ ಒಂದೇ ಸಮನಾಗಿ ನಡೆಯುವ ಇಂಥ ಕಾರ್ಯಗಳೇ ಈ ಬಗೆಯ ವ್ಯತ್ಯಾಸಗಳಿಗೆ ಕಾರಣಗಳಾಗಿವೆ.

ಭೂಚರಿತ್ರೆಯ ಅಗಾಧಕಾಲವನ್ನೂ ಅದರ ಪಾತ್ರವನ್ನೂ ಮೊಟ್ಟಮೊದಲು ಸರಿಯಾಗಿ ಅರ್ಥಮಾಡಿಕೊಂಡವ ಆಧುನಿಕ ಭೂವಿಜ್ಞಾನದ ಪಿತಾಮಹನಾದ ಇಂಗ್ಲೆಂಡಿನ ಜೇಮ್ಸ್ ಹಟ್ಟನ್ (1726–97). 1785ರಲ್ಲಿ ಆತ ಎಡಿನ್‌ಬರೋವಿನ ರಾಯಲ್ ಸೊಸೈಟಿಯ ಮುಂದೆ ಥಿಯೊರಿ ಆಫ್ ದಿ ಅರ್ತ್ ಎಂಬ ಗ್ರಂಥವನ್ನು ಮಂಡಿಸಿದ. ಇಂದಿನ ಬೆಟ್ಟಗಳು ಮತ್ತು ಪರ್ವತಗಳು ಅವಿರತವಾಗಿ ನಡೆಯುತ್ತಿ ರುವ ಭೂವ್ಯಾಪಾರ ಕರ್ತೃಗಳ ತೇಮಾನದ ಪರಿಣಾಮದಿಂದ ಉಂಟಾದುವೆಂಬು ದನ್ನು ಆತ ತನ್ನ ಗ್ರಂಥದಲ್ಲಿ ಸ್ಥಾಪಿಸಿದ್ದಾನೆ. ಆತನಿಗೆ ಮೊದಲು ಯಾರೂ ಈ ವಿವರ ಗಳನ್ನು ಸರಿಯಾಗಿ ತಿಳಿಸಿರಲಿಲ್ಲ ಮತ್ತು ಸಕಾರಣವಾಗಿ ವಿವರಿಸಿರಲಿಲ್ಲ. ಪ್ರಕೃತಿಯಲ್ಲಿ ನಡೆಯುವ ಎಲ್ಲ ವ್ಯತ್ಯಾಸಗಳೂ ಇದ್ದಕ್ಕಿದ್ದಂತೆ ಹಠಾತ್ತಾಗಿ ವಿಪ್ಲವಗಳ ದೆಸೆಯಿಂದ ಉಂಟಾಗುತ್ತವೆ ಎಂಬ ಭಾವನೆ ಹಟ್ಟನನ ಕಾಲದಲ್ಲೂ ಮತ್ತು ಅದಕ್ಕೆ ಮುಂಚೆಯೂ ಇತ್ತು. ಇದಕ್ಕೆ ವಿಪ್ಲವವಾದ (ಕ್ಯಾಟಸ್ಟ್ರೋಫಿಸಂ) ಎಂದು ಹೆಸರು. ಆದರೆ ಇಂದು ಏಕಪ್ರಕಾರತಾವಾದವೇ ಭೂವಿಜ್ಞಾನದ ಒಂದು ಮೂಲಭೂತ ತತ್ತ್ವವಾಗಿದೆ. (ಎಂ.ಆರ್.ಎಸ್.)

**ಏಕಮಾನ ವ್ಯವಸ್ಥೆಗಳು :** ಭೌತ ಪರಿಮಾಣಗಳನ್ನು ಅಳೆಯಲು ಮತ್ತು ಭೌತನಿಯಮಗಳನ್ನೂ ಫಲಿತಾಂಶಗಳನ್ನೂ ಅಡಕವಾಗಿ ನಿರೂಪಿಸಲು ಬಳಸುವ ಏಕಕಗಳ (ಏಕಮಾನಗಳ) ಸಮುದಾಯಗಳು (ಸಿಸ್ಟಮ್ಸ್ ಆಫ್ ಯೂನಿಟ್ಸ್). ಎರಡು ಸದೃಶ ಪರಿಮಾಣಗಳ ತುಲನೆಯೇ ಅಳತೆಯ ಮೂಲಸೂತ್ರ. ಇವೆರಡ ರಲ್ಲಿ ಒಂದನ್ನು ಸಂದರ್ಭೋಚಿತವಾಗಿ ಆರಿಸಿದರೆ (ಆಗ ಅದು ಏಕಕವಾಗು ತ್ತದೆ) ಇನ್ನೊಂದು ಈ ಏಕಕದ ಅಪವರ್ತ್ಯ ಅಥವಾ ಭಿನ್ನರಾಶಿ ಆಗುತ್ತದೆ. ಏಕಕದ ಆಯ್ಕೆ ತತ್ತ್ವಶಃ ಸ್ವೇಚ್ಛೆಯಂತಾದರೂ ಅಂತರರಾಷ್ಟ್ರೀಯವಾಗಿಯೂ ವಿಜ್ಞಾನಿಗಳ ಕ್ಷೇತ್ರಗಳಲ್ಲಿಯೂ ಇದರಲ್ಲಿ ಒಂದು ನಿಷ್ಕೃಷ್ಟತೆ ಬಂದಿದೆ. ಹೀಗಲ್ಲ ದಿದ್ದರೆ ಎಲ್ಲ ವ್ಯವಹಾರಗಳಲ್ಲಿಯೂ ಗೊಂದಲ ಉಂಟಾಗುತ್ತಿತ್ತು.

ಒಂದು ಊರಿನಿಂದ ಇನ್ನೊಂದು ಊರಿಗೆ ಇರುವ ದೂರವೆಷ್ಟು ಎನ್ನುವ ಪ್ರಶ್ನೆಗೆ 80 ಕಿ. ಮೀ.ಗಳು ಅಥವಾ 50 ಮೈಲಿಗಳು ಎನ್ನುವಾಗ ಕಿ. ಮೀ. ಅಥವಾ ಮೈಲಿ ನಾವು ಬಳಸಿರುವ ಏಕಕ. ಬೆಳಕು ಸೂರ್ಯನಿಂದ ಭೂಮಿಗೆ ಬರಲು ಸುಮಾರು 8 ಮಿನಿಟುಗಳನ್ನು ತೆಗೆದುಕೊಳ್ಳುತ್ತದೆ ಎನ್ನುವಲ್ಲಿ ಮಿನಿಟು ಎಂಬುದು ನಾವು ಬಳಸಿರುವ ಏಕಕ. ಈ ಉದಾಹರಣೆಗಳಲ್ಲಿ ಏಕಕ ಎಲ್ಲರೂ ಒಪ್ಪಿರುವಂಥ ಒಂದು ಅನುಕೂಲವಾದ ಸ್ವೇಚ್ಛಾ ಆಯ್ಕೆ.

ದೈನಂದಿನ ವ್ಯವಹಾರದಲ್ಲಿಯೂ ಎಲ್ಲ ವೈಜ್ಞಾನಿಕ ವ್ಯವಹಾರಗಳಲ್ಲಿಯೂ ಮೊದಲು ಎದುರಾಗುವ ಭೌತಪರಿಣಾಮಗಳು ಉದ್ದ (ಅಗಲ, ಎತ್ತರ, ಆಳ, ದೂರ ಎಲ್ಲವೂ ಈ ಭಾವನೆಯಲ್ಲಿ ಅಧ್ಯಾಹಾರ), ತೂಕ ಮತ್ತು ಕಾಲ. ಇವು ಅಳತೆಯ ಮೂಲಮಾನಗಳು. ಕಾರಿನ ವೇಗ ಸೆಕೆಂಡಿಗೆ 30 ಅಡಿಗಳು ಎನ್ನುವಾಗ, ಭೂಮಿಯ ದ್ರವ್ಯಮಾನ $5.98\times10^{27}$ ಗ್ರಾಂಗಳು ಎಂದು ತಿಳಿಸುವಾಗ, ಭೂಮಿಯಿಂದ ಪ್ರಾಕ್ಸಿಮಾ ಸೆಂಟಾರಿ ನಕ್ಷತ್ರದ ದೂರ 4.3 ಜ್ಯೋತಿರ್ವರ್ಷಗಳೆಂದು ಹೇಳುವಾಗ ಇವೇ ಮೂರು ಅಳತೆಯ ಮೂಲಮಾನಗಳು ವಿವಿಧರೀತಿಗಳಲ್ಲಿ ಜೋಡಣೆಗೊಂಡಿವೆ ಎಂಬುದು ಸ್ಪಷ್ಟ (ನೋಡಿ—ಏಕಕಗಳು ಮತ್ತು ಆಯಾಮಗಳು).

ಮೂಲಮಾನಗಳನ್ನು ನಿಗದಿಸುವ ಕಾರ್ಯ ಸುಮಾರು 150 ವರ್ಷಗಳ ಹಿಂದೆಯೇ ಪ್ರಾರಂಭವಾಯಿತು. ಇವನ್ನು ಸುಲಭವಾಗಿ ನಿರೂಪಿಸಲು ಅನುಕೂಲಿ ಸುವಂತೆ ಬಂದ ಹಲವಾರು ವ್ಯವಸ್ಥೆಗಳಲ್ಲಿ ಮುಖ್ಯವಾದವು ಎರಡು : ಬ್ರಿಟಿಷ್ ಅಥವಾ ಎಫ್‌ಪಿಎಸ್ (ಫುಟ್–ಪೌಂಡ್–ಸೆಕೆಂಡ್) ವ್ಯವಸ್ಥೆ ; ಫ್ರೆಂಚ್ ಅಥವಾ ಮೆಟ್ರಿಕ್ ಅಥವಾ ಸಿಜಿಎಸ್ (ಸೆಂಟಿಮೀಟರ್–ಗ್ರಾಂ–ಸೆಕೆಂಡ್) ವ್ಯವಸ್ಥೆ. ಎಫ್‌ಪಿಎಸ್ ವ್ಯವಸ್ಥೆಯಲ್ಲಿ ಉದ್ದದ ಏಕಕ ಅಡಿ (ಫುಟ್) ತೂಕದ ಏಕಕ ಪೌಂಡ್. ಸಿಜಿಎಸ್ ವ್ಯವಸ್ಥೆಯಲ್ಲಿ ಅವು ಕ್ರಮವಾಗಿ ಸೆಂಟಿಮೀಟರ್ ಮತ್ತು ಗ್ರಾಂ. ಎರಡು ವ್ಯವಸ್ಥೆಗಳಲ್ಲೂ ಕಾಲದ ಏಕಕ ಸೆಕೆಂಡ್. ಸಿಜಿಎಸ್‌ನ್ನು ಎಂಕೆಎಸ್ (ಮೀಟರ್–ಕಿಲೋಗ್ರಾಂ–ಸೆಕೆಂಡ್) ವ್ಯವಸ್ಥೆ ಎಂದೂ ಕರೆಯುವುದುಂಟು. ಈ ವ್ಯವಸ್ಥೆಯಲ್ಲಿ ಎಲ್ಲವೂ ಹತ್ತರ ಅಪವರ್ತ್ಯಗಳಾಗಿರುವುದರಿಂದ ಇದನ್ನು ದಶಕ ವ್ಯವಸ್ಥೆ ಎಂದು ಸಹ ಕರೆಯುತ್ತಾರೆ.

ಉದ್ದದ ಅಳತೆ : ಬ್ರಿಟಿಷ್ ವ್ಯವಸ್ಥೆಯಲ್ಲಿ ಉದ್ದವನ್ನಳೆಯುವುದು ಅಡಿಗಳಲ್ಲಿ. ಲಂಡನ್ ಪಟ್ಟಣದಲ್ಲಿರುವ ಬೋರ್ಡ್ ಆಫ್ ಟ್ರೇಡ್ ಎಂಬ ಸಂಸ್ಥೆಯಲ್ಲಿ ಒಂದು ಕಂಚಿನ ಸಲಾಕಿ ಇಟ್ಟಿದ್ದಾರೆ. ಇದರ ಪ್ರತಿ ಒಂದು ಕೊನೆಯಲ್ಲಿ ಒಂದು ಚಿನ್ನದಪಟ್ಟಿ ಇದೆ. ಅದರ ಮೇಲೆ ಒಂದನ್ನೊಂದು ಕತ್ತರಿಸುವ ಎರಡು ಸರಳರೇಖೆಗಳಿವೆ. ಇವು ಛೇದಿಸುವ ಬಿಂದುಗಳ ನಡುವೆ 62° ಫ್ಯಾ. ಉಷ್ಣತೆಯಲ್ಲಿ, ಇರುವ ದೂರವನ್ನು ಗಜ (ಯಾರ್ಡ್) ಎಂದು ಹೇಳುತ್ತಾರೆ. ಈ ಉದ್ದದ ಮೂರನೆ ಒಂದು

1 ನಿರಪೇಕ್ಷ ಏಕಕ ವ್ಯವಸ್ಥೆಗಳು

| ಪರಿಮಾಣ | ಸಂಬಂಧದ ವಿವರ | ಏಕಕಗಳು | | |
|---|---|---|---|---|
| | | ಎಂಕೆಎಸ್ | ಸಿಜಿಎಸ್ | ಎಫ್‌ಪಿಎಸ್ |
| ಉದ್ದ L | ಮೂಲಮಾನ | m | cm | ಅಡಿ (ft) |
| ದ್ರವ್ಯಮಾನ *m* | ಮೂಲಮಾನ | kg | *g* | ಪೌಂಡ್ ದ್ರವ್ಯಮಾನ (lbm) |
| ಕಾಲ *t* | ಮೂಲಮಾನ | sec | sec | sec |
| ವೇಗ *v* | $\frac{L}{t}$ | m/sec | cm/sec | ft/sec |
| ವೇಗೋತ್ಕರ್ಷ *a* | $\frac{v}{t}$ | $m/sec^2$ | $cm/sec^2$ | $ft/sec^2$ |
| ಬಲ F | *ma* | 1 ನ್ಯೂಟನ್ $=1kg—m/sec^2$ | 1 ಡೈನ್ $=1–g=cm/sec^2$ | 1 ಪೌಂಡಲ್ $=1lbm–ft/sec^2$ |
| ಕಾರ್ಯ W | FL | 1 ಜೌಲ್=1 ನ್ಯೂಟನ್–m. | 1 ಎರ್ಗ್=1 ಡೈನ್–cm | ಪೌಂಡಲ್–ಅಡಿ |
| ಸಾಮರ್ಥ್ಯ P | $\frac{W}{t}$ | 1 ವಾಟ್=1 ಜೌಲ್/sec | ಎರ್ಗ್/sec | ft–poundal/sec |
| ಸಂವೇಗ *p* | *mv* | kg–m/sec | *g*–cm/sec | lbm–ft/sec |

2 ಗುರುತ್ವಾಕರ್ಷಣೀಯ ಏಕಕ ವ್ಯವಸ್ಥೆಗಳು

| ಪರಿಮಾಣ | ಸಂಬಂಧದ ವಿವರ | ಏಕಕಗಳು | |
|---|---|---|---|
| | | ಸಿಜಿಎಸ್ | ಎಫ್‌ಪಿಎಸ್ |
| ಉದ್ದ L | ಮೂಲಮಾನ | cm | ಅಡಿ (ft) |
| ಬಲ F | ಮೂಲಮಾನ | ಗ್ರಾಂ–ಬಲ (*gf*) | ಪೌಂಡ್ ಬಲ (lbf) |
| ಕಾಲ *t* | ಮೂಲಮಾನ | ಸೆಕೆಂಡ್ (sec) | ಸೆಕೆಂಡ್ (sec) |
| ದ್ರವ್ಯಮಾನ *m* | $\frac{F}{a}$ | $gf–sec^2/cm$ | ಸ್ಲಗ್ |
| ವೇಗ *v* | $\frac{L}{t}$ | cm/sec | ft/sec |
| ವೇಗೋತ್ಕರ್ಷ *a* | $\frac{v}{t}$ | $cm/sec^2$ | $ft/sec^2$ |
| ಕಾರ್ಯ W | FL | cm–*gf* | ಅಡಿ–ಪೌಂಡ್ ಬಲ (ft–lbf) |
| ಸಾಮರ್ಥ್ಯ P | W/*t* | cm–*gf*/sec | ft–lbf/sec |
| ಸಂವೇಗ *p* | *mv* | *gf*–sec | ಸ್ಲಗ್–ಅಡಿ/ಸೆಕೆಂಡ್ |

ಭಾಗವೇ ಒಂದು ಅಡಿ. ಇದು ಶಿಷ್ಟ ಏಕಕ. ಮೆಟ್ರಿಕ್ ವ್ಯವಸ್ಥೆಯಲ್ಲಿ ಉದ್ದವನ್ನು ಮೀಟರುಗಳಲ್ಲೂ ಸೆಂಟಿಮೀಟರುಗಳಲ್ಲೂ ಅಳೆಯುತ್ತಾರೆ. 1 ಮೀಟರಿಗೆ ನೂರು ಸೆಂಟಿಮೀಟರುಗಳು. ಮೀಟರಿನ ಉದ್ದ ಎಷ್ಟಾಗುತ್ತದೆಂದು ವಿಜ್ಞಾನಿಗಳು ಬಲು ಸಂಶೋಧನೆ ನಡೆಸಿದರು. ಕೊನೆಗೆ 1875ರಲ್ಲಿ ಈ ರೀತಿ ನಿರ್ಣಯ ಮಾಡಿದರು—ಪ್ಲಾಟಿನಂ ಮತ್ತು ಇರಿಡಿಯಂ ಲೋಹಗಳ ಮಿಶ್ರಲೋಹದ ಕಂಬಿಯೊಂದರಲ್ಲಿ ಗುರುತಿಸಲಾದ ಎರಡು ಅತ್ಯಂತ ಸೂಕ್ಷ್ಮ ಗೆರೆಗಳ ನಡುವೆ 0° ಸೆಂ. ಉಷ್ಣತೆಯುಲ್ಲಿರುವ ದೂರವೇ ಮೀಟರ್. ಈ ಕಂಬಿಯನ್ನು (ಸಲಾಕಿ) ಪ್ಯಾರಿಸ್‌ನಗರದ ಸೆವ್ರೆಸ್ ಪಟ್ಟಣದ ಅಂತರರಾಷ್ಟ್ರೀಯ ತೂಕ ಮತ್ತು ಅಳತೆಗಳ ಸಂಸ್ಥೆಯಲ್ಲಿಟ್ಟು ಕಾಪಾಡಿಕೊಂಡು ಬಂದಿದ್ದಾರೆ. ಇದು ಮೀಟರಿನ ಅಧಿಕೃತ ಉದ್ದ. ಇದು ಮೆಟ್ರಿಕ್ ವ್ಯವಸ್ಥೆಯಲ್ಲಿ ಉದ್ದದ ಶಿಷ್ಟ ಏಕಕ.

ತೂಕದ ಅಳತೆ : ಬ್ರಿಟಿಷ್ ವ್ಯವಸ್ಥೆಯಲ್ಲಿ ತೂಕವನ್ನು ಪೌಂಡುಗಳಲ್ಲಿ ಅಳೆಯುತ್ತಾರೆ. P.S. 1844 ಎಂದು ಗುರುತಿಸಿರುವ ಪ್ಲಾಟಿನಂ ಲೋಹದ ಚೂರಿನ ತೂಕಕ್ಕೆ 1 ಪೌಂಡ್ ಎಂದಿದ್ದಾರೆ. ಮೆಟ್ರಿಕ್ ವ್ಯವಸ್ಥೆಯಲ್ಲಿ ತೂಕವನ್ನು ಗ್ರಾಂಗಳಲ್ಲಿ ಹೇಳುತ್ತಾರೆ. 1 ಕಿಲೋಗ್ರಾಂನ ಸಾವಿರದ ಒಂದನೇ ಭಾಗವೇ ಒಂದು ಗ್ರಾಂ. ಪ್ಲಾಟಿನಂ–ಇರಿಡಿಯಂ ಮಿಶ್ರಲೋಹದ ಸಿಲಿಂಡರಿನ ತೂಕವೇ 1 ಕಿಲೋಗ್ರಾಂ.

ಕಾಲದ ಅಳತೆ : ಎರಡು ವ್ಯವಸ್ಥೆಗಳಲ್ಲೂ ಕಾಲದ ಅಳತೆ ಸೆಕೆಂಡುಗಳಲ್ಲಿ. ಒಂದು ಸರಾಸರಿ ಸೌರದಿವಸದ (ಮೀನ್ ಸೋಲಾರ್ ಡೇ) ಎಂಬತ್ತಾರು ಸಾವಿರದ ನಾನೂರನೇ ಒಂದು ಭಾಗವನ್ನು ಸೆಕೆಂಡ್ ಎಂದು ಕರೆದಿದ್ದಾರೆ. (1/86,400).

ಬ್ರಿಟಿಷ್ ಹಾಗೂ ಮೆಟ್ರಿಕ್ ವ್ಯವಸ್ಥೆಗಳಿಗೆ ಸಂಬಂಧವಿದೆ. ಒಂದೇ ಅಳತೆಯನ್ನು ಬ್ರಿಟಿಷ್ ಏಕಕಗಳಲ್ಲಿಯೂ ಮೆಟ್ರಿಕ್ ಏಕಕಗಳಲ್ಲಿಯೂ ಕಂಡುಹಿಡಿದರೆ

ಅವುಗಳಿಗಿರುವ ಸಂಬಂಧ ಗೊತ್ತಾಗುವುದು. ಹೀಗೆ ಮಾಡಿದಮೇಲೆ 1 ಪೌಂಡಿಗೆ 453.56 ಗ್ರಾಂಗಳೆಂದೂ 1 ಮೀಟರಿಗೆ 39.37 ಅಂಗುಲಗಳೆಂದೂ ಹೇಳಿದ್ದಾರೆ (ಒಂದು ಅಡಿಯ 12ನೇ ಒಂದು ಭಾಗ ಒಂದು ಅಂಗುಲ). ಉದಾಹರಣೆಗೆ ಬ್ರಿಟಿಷ್ ವ್ಯವಸ್ಥೆಯಲ್ಲಿ ಘನಗಾತ್ರದ ಅಳತೆ ಘನ ಅಡಿಗಳಲ್ಲೂ ಮೆಟ್ರಿಕ್ ಪದ್ಧತಿಯಲ್ಲಿ ಘನಸೆಂಟಿಮೀಟರುಗಳಲ್ಲೂ ಇದೆ. ಒಂದು ಘನ ಅಡಿಯನ್ನು ಘನಸೆಂಟಿಮೀಟರುಗಳಲ್ಲೂ ಹೇಳಬಹುದು.

ಗಣನೆಗಳಿಗೆ ಬ್ರಿಟಿಷ್ ವ್ಯವಸ್ಥೆಯು ಮೆಟ್ರಿಕ್ ವ್ಯವಸ್ಥೆಯಷ್ಟು ಸುಲಭ ಇಲ್ಲದಿರುವುದರಿಂದ ಮೆಟ್ರಿಕ್ ವ್ಯವಸ್ಥೆಯೇ ಈಗ ಹೆಚ್ಚು ಉಪಯೋಗದಲ್ಲಿದೆ. ಭಾರತ ದೇಶದ ಎಲ್ಲೆಡೆಗಳಲ್ಲಿಯೂ ಈ ವ್ಯವಸ್ಥೆಯನ್ನೇ ಅಧಿಕೃತವಾಗಿ ಅನುಸರಿಸಲಾಗುತ್ತಿದೆ.

ಕೆಲವು ಏಕಕ ವ್ಯವಸ್ಥೆಗಳ ವಿನಿಮಯ ಸಂಬಂಧಗಳನ್ನು 145ನೆಯ ಪುಟದ ಪಟ್ಟಿಗಳಲ್ಲಿ ತೋರಿಸಿದೆ. (ಬಿ.ಜಿ.ಆರ್.)

**ಏಕಮುಖ ವಿದ್ಯುಜ್ಜನಕ :** ಏಕಮುಖ ವಿದ್ಯುತ್ಪ್ರವಾಹವನ್ನೂ ವೋಲ್ಟೇಜನ್ನೂ ಆವರ್ತನೆಯಿಂದ ಪೂರೈಸುವ ವಿದ್ಯುದ್ಯಂತ್ರ (ಡೈರೆಕ್ಟ್ ಕರೆಂಟ್ ಜನರೇಟರ್). ವಿದ್ಯುತ್ಕೋಶಗಳಿಂದ, ಉಷ್ಣಶಕ್ತಿಯಿಂದ, ಬೆಳಕಿನ ಶಕ್ತಿಯಿಂದ ಪಡೆದ ಪರ್ಯಾಯ ವಿದ್ಯುತ್ಪ್ರವಾಹವನ್ನು ಏಕಮುಖಪ್ರವಾಹವಾಗಿ ಪರಿವರ್ತಿಸುವುದರಿಂದಲೂ ವಿದ್ಯುದ್ಯಂತ್ರಗಳ ನೆರವಿನಿಂದಲೂ ಏಕಮುಖ ವಿದ್ಯುತ್ತನ್ನು ಪಡೆಯಬಹುದು. ಇವುಗಳ ಪೈಕಿ ಕೊನೆಯದನ್ನುಳಿದು ಮಿಕ್ಕವು ಅಧಿಕ ಪರಿಮಾಣದ ಪ್ರವಾಹೋತ್ಪಾದನೆಯ ದೃಷ್ಟಿಯಿಂದ ಗಮನಾರ್ಹಗಳಲ್ಲ. ಆದ್ದರಿಂದ ಈ ಲೇಖನದಲ್ಲಿ ವಿದ್ಯುದ್ಯಂತ್ರ ಕ್ರಿಯೆಯಿಂದ ಏಕಮುಖ ಪ್ರವಾಹೋತ್ಪಾದನೆಯನ್ನು ವಿವರಿಸಿದೆ.

ಏಕಮುಖ ಪ್ರವಾಹದ ವಿದ್ಯುಜ್ಜನಕ (ಡಿಸಿ ಜನರೇಟರ್) : ಇದರಲ್ಲಿ ಸ್ಥಿರ ಭಾಗ ಮತ್ತು ಆವರ್ತಕ ಎಂಬ ಎರಡು ವಿಶಿಷ್ಟ ಅಂಗಗಳಿವೆ. ದಂಡದ ಮೇಲೆ ಕೂರಿಸಿರುವ ಆವರ್ತಕ ಸ್ಥಿರಭಾಗದ ಒಳಗಡೆ ತಿರುಗುತ್ತದೆ. ಸ್ಥಿರಭಾಗ ಚಲಿಸದ ಸ್ಥಾಯಿ ಅಂಗ. ಇದು ಉರುಳೆಯ ಆಕೃತಿಯಲ್ಲಿದೆ. ಎರಕದ ಕಬ್ಬಿಣ ಅಥವಾ ಎರಕದ ಉಕ್ಕಿನಿಂದ ಇದನ್ನು ಮಾಡಿರುತ್ತಾರೆ. ಒಳಭಾಗದಲ್ಲಿ ವಿದ್ಯುತ್ ಧ್ರುವಗಳನ್ನು ಜೋಡಿಸಲಾಗುತ್ತದೆ. ಉರುಳೆಯ ಆಕೃತಿಯ ಈ ಚೌಕಟ್ಟಿಗೆ ನೊಗ (ಯೋಕ್) ಎಂದು ಹೆಸರು. ಇದು ವಿದ್ಯುತ್ ಧ್ರುವಗಳನ್ನು ಆಧರಿಸುತ್ತದೆ ಮತ್ತು ಕಾಂತ ಅಭಿವಾಹಕ್ಕೆ (ಮ್ಯಾಗ್ನೆಟಿಕ್ ಫ್ಲಕ್ಸ್) ವಾಹಕ. ವಿದ್ಯುತ್ ಧ್ರುವಗಳನ್ನು ಮತ್ತು ನೊಗವನ್ನು ಒಂದಾಗಿ ಎರಕ ಹೊಯ್ದು ಮಾಡಿದೆ ಅಥವಾ ಅಗುಳಿ ಮತ್ತು ಹಲ್ಲು ಚಕ್ರಗಳನ್ನು ಉಪಯೋಗಿಸಿ ಸೇರಿಸಿದೆ. ವಿದ್ಯುತ್ ಧ್ರುವಗಳು ಅನುಕ್ರಮವಾಗಿ ಉತ್ತರ ಮತ್ತು ದಕ್ಷಿಣವಾಗುವಂತೆ ಧ್ರುವಗಳ ಸುತ್ತಲೂ ವಿದ್ಯುತ್ ಸುರುಳಿಯನ್ನು ಸುತ್ತಿದೆ.

ಆವರ್ತಕ : ಆವರ್ತಕದ ಎರಡು ಮುಖ್ಯ ಅಂಗಗಳು ಮೆತು ಕಬ್ಬಿಣದ ಪಟ್ಟಿ ಮತ್ತು ಪರಿವರ್ತಕ (ಕಾಮ್ಯುಟೇಟರ್). ಉರುಳೆಯ ಆಕೃತಿಯ ಸ್ಥಿರಭಾಗದ ಒಳಗಡೆ ಈ ಪಟ್ಟಿಯ ನಡುವಿನ ಎಡೆ ಅತ್ಯಲ್ಪ ಪ್ರಮಾಣದ್ದು. ತನಗೆ ಆಧಾರವಾದ ಕಾಂಡದೊಡನೆ ಪಟ್ಟಿ ತಿರುಗುತ್ತದೆ. ಪಟ್ಟಿಯ ಹೊರಮೈಯಲ್ಲಿ ಉದ್ದುದ್ದಕ್ಕೂ ಆಯತಾಕಾರದ ಸೀಳು ಕಂಡಿಗಳಿವೆ. ಇವುಗಳಲ್ಲಿ ವಿದ್ಯುದ್ವಾಹಕಗಳನ್ನು ಇಟ್ಟಿದೆ. ಕಂಡಿಗಳಲ್ಲಿ ಒಂದರ ಮೇಲೆ ಒಂದರಂತೆ ಎರಡು ಮೂರು ವಾಹಕಗಳೂ ಅವುಗಳ ಸುತ್ತ ವಿದ್ಯುನ್ನಿರೋಧಕಗಳೂ ಇವೆ. ಮೆತು ಕಬ್ಬಿಣದ ಪಟ್ಟಿ ತೆಳ್ಳಗಿನ ತಗಡುಗಳನ್ನು ಒಟ್ಟು ಸೇರಿಸಿ ಕೂಡಿಸುತ್ತದೆ. ಈ ತಗಡುಗಳ ಮಧ್ಯೆ ಅನುಕ್ರಮವಾಗಿ ಕೆಲವು ಎಡೆಗಳನ್ನು ಬಿಟ್ಟಿದೆ. ಇವುಗಳಿಂದಾಗಿ ಪಟ್ಟಿಯಲ್ಲಿ ವಾಯುದ್ವಾರಗಳು ಉಂಟಾಗುತ್ತವೆ. ಇವುಗಳ ಮೂಲಕ ಪ್ರವಹಿಸುವ ವಾಯು ವಾಹಕಗಳನ್ನು ತಣ್ಣಗಿಡಲು ಸಹಾಯಕವಾಗುವುದು.



ಚಿತ್ರ 1 ಚಿತ್ರದ ಮಧ್ಯಭಾಗದಲ್ಲಿ ರೋಟರನ್ನೂ, ಅದರ ಸುತ್ತಲಿನ ಭಾಗದಲ್ಲಿ ಸ್ಟೇಟರ್, ವಿದ್ಯುತ್ ಧ್ರುವಗಳು ಮತ್ತು ನೊಗಗಳನ್ನೂ ತೋರಿಸಿದೆ.

ಪರಿವರ್ತಕ (ಕಾಮ್ಯುಟೇಟರ್) : ಮೆತು ಕಬ್ಬಿಣದ ಪಟ್ಟಿಯನ್ನು ಜೋಡಿಸಿದ ಕಾಂಡದ ಮೇಲೆಯೇ ಪರಿವರ್ತಕವನ್ನು ಜೋಡಿಸಿದೆ. ಆದರೆ ಪರಿವರ್ತಕದ ವ್ಯಾಸ ಪಟ್ಟಿಯ ವ್ಯಾಸಕ್ಕಿಂತ ಕಡಿಮೆ. ಉರುಳೆಯ ಆಕೃತಿಯ ಹೊರಮೈಯ ಮೇಲೆ ತಾಮ್ರದ ಚಿಕ್ಕ ಚಿಕ್ಕ ತಗಡುಗಳನ್ನು (ಸ್ಟ್ರಿಪ್ಸ್) ಹಾಸಿದೆ. ಇವುಗಳ ಮಧ್ಯೆ ವಿದ್ಯುನ್ನಿರೋಧಕವಿದೆ. ತಾಮ್ರದ ತಗಡುಗಳನ್ನು ಕಬ್ಬಿಣದ ಪಟ್ಟಿಯ ವಾಹಕಗಳಿಗೆ ಸೇರಿಸಿರುತ್ತಾರೆ. ಪರಿವರ್ತಕದ ತಾಮ್ರದ ತಗಡುಗಳಿಗೆ ತಾಕಿಕೊಂಡು ಹೊರಮೈಯಲ್ಲಿ ಇಂಗಾಲದ ವಿದ್ಯುತ್ಕೂರ್ಚಗಳಿವೆ(ಬ್ರಷಸ್). ಪ್ರತಿಯೊಂದು ವಿದ್ಯುತ್ಕೂರ್ಚದ ಅಗಲ ಸುಮಾರು 2–3 ಪಟ್ಟಿಗಳಷ್ಟು. ಸಾಮಾನ್ಯವಾಗಿ ಇವುಗಳ ಸಂಖ್ಯೆ ಆ ವಿದ್ಯುಜ್ಜನಕದ ವಿದ್ಯುತ್ ಧ್ರುವಗಳ ಸಂಖ್ಯೆಗೆ ಸಮ. ವಿದ್ಯುತ್ಕೂರ್ಚಗಳು ಕಬ್ಬಿಣದ ಪಟ್ಟಿಯಲ್ಲಿರುವ ಪ್ರವಾಹವನ್ನು ಶೇಖರಿಸುತ್ತವೆ. ಮೇಲಿರುವ ಎಗರು ಪಟ್ಟಿಯನ್ನು ಉಪಯೋಗಿಸಿ ವಿದ್ಯುತ್ಕೂರ್ಚ ಪರಿವರ್ತಕದ ಮೇಲೆ ಹೇರುವ ವೋಲ್ಟೇಜನ್ನು ವ್ಯತ್ಯಾಸ ಮಾಡಬಹುದು. ಸ್ಥಿರವಾದ ಭಾಗದ ವಿದ್ಯುತ್ ಧ್ರುವಗಳಿಗೆ ಸುತ್ತಿರುವ ಸುರುಳಿಗಳ ಮೂಲಕ ಏಕಮುಖ ಪ್ರವಾಹವನ್ನು ಹರಿಸಿದಾಗ ವಿದ್ಯುತ್ ಪ್ರವಾಹ ಉತ್ಪತ್ತಿಯಾಗುತ್ತದೆ. ಮೆತು ಕಬ್ಬಿಣದ ಪಟ್ಟಿಯನ್ನು ಬಾಹ್ಯ ಶಕ್ತಿಯನ್ನು ಉಪಯೋಗಿಸಿ ತಿರುಗಿಸಿದಾಗ ವಾಹಕಗಳಲ್ಲಿ ವೋಲ್ಟೇಜ್ ಉತ್ಪನ್ನವಾಗಿ ಅದು ವಿದ್ಯುತ್ಕೂರ್ಚಗಳಲ್ಲಿ ಕಾಣಿಸಿಕೊಳ್ಳುತ್ತದೆ. ಅವುಗಳ ನಡುವೆ ಒಂದು ಬಾಹ್ಯನಿರೋಧವನ್ನು ಸೇರಿಸಿದಾಗ ಕಬ್ಬಿಣದ ಪಟ್ಟಿಯಿಂದ ವಿದ್ಯುತ್ ಪ್ರವಾಹ ಹರಿಯುತ್ತದೆ.

ಉತ್ಪನ್ನವಾದ ವೋಲ್ಟೇಜಿನ ಸೂತ್ರ : ಒಂದು ವಿದ್ಯುಜ್ಜನಕದಲ್ಲಿ ಉತ್ಪನ್ನವಾದ ವೋಲ್ಟೇಜನ್ನು ಕೆಳಗಣ ಸೂತ್ರದಿಂದ ತಿಳಿಯಬಹುದು.

$$\Sigma = \frac{\phi Z N}{60} \frac{P}{P'}$$ ವೋಲ್ಟ್. ಇಲ್ಲಿ $\phi =$ ಅಭಿವಾಹ (ಫ್ಲಕ್ಸ್) ವೀಬರುಗಳಲ್ಲಿ. $Z =$ ಕಬ್ಬಿಣದ ಪಟ್ಟಿಯಲ್ಲಿರುವ ವಾಹಕಗಳ ಸಂಖ್ಯೆ. $N =$ ತಿರುಗುವಿಕೆಯ ವೇಗ (ಮಿನಿಟಿಗೆ ಸುತ್ತುಗಳು). $P =$ ಧ್ರುವಗಳ ಸಂಖ್ಯೆ. $P' =$ ಸಮಾನಾಂತರ ಪಥಗಳ ಸಂಖ್ಯೆ ; ಇದು ಸುರುಳಿಯ (ವೈಂಡಿಂಗ್) ರೀತಿಯನ್ನವಲಂಬಿಸಿದೆ. ವೇವ್‌ವೈಂಡಿಂಗಿಗೆ $P' = 2$, ಲೇಪ್ ವೈಂಡಿಂಗಿಗೆ $P' = P$.

ಡಿಸಿ ಜನರೇಟರುಗಳ ವಿಶಿಷ್ಟ ಗುಣಗಳು : ಕ್ಷೇತ್ರ ಸುರುಳಿ ಮತ್ತು ಆರ್ಮೇಚರ್ ಸುರುಳಿಗಳನ್ನು ಸೇರಿಸುವ ಕ್ರಮಕ್ಕೆ ಅನುಗುಣವಾಗಿ ಡಿಸಿ ಜನರೇಟರುಗಳನ್ನು ಈ ವಿಧವಾಗಿ ವಿಂಗಡಿಸಬಹುದು : 1 ಬಾಹ್ಯ ಪ್ರಚೋದಿತ (ಸೆಪರೇಟ್ಲಿ ಎಕ್ಸೈಟೆಡ್), 2 ಶ್ರೇಣಿ (ಸೀರೀಸ್), 3 ಶಂಟ್, 4 ಸಮ್ಮಿಶ್ರ (ಕಾಂಪೌಂಡ್). ಬಾಹ್ಯ ಪ್ರಚೋದಿತ ಡಿಸಿ ಜನರೇಟರುಗಳಲ್ಲಿ, ಕ್ಷೇತ್ರ ಸುರುಳಿ ಬೇರೆಯೇ ಆದ ಕ್ರಮ ಪ್ರವಾಹದ ಮೂಲದಿಂದ ಪ್ರಚೋದಿಸಲ್ಪಡುತ್ತದೆ.

ಸ್ವಪ್ರಚೋದಿತ (ಸೆಲ್ಫ್ ಎಕ್ಸೈಟೆಡ್) ಡಿಸಿ ಜನರೇಟರುಗಳಲ್ಲಿ ಶ್ರೇಣಿ, ಶಂಟ್ ಮತ್ತು ಸಮ್ಮಿಶ್ರ ಎಂದು ಮೂರು ವಿಧಗಳಿವೆ. ಇವುಗಳಲ್ಲಿ ಕ್ಷೇತ್ರ ಸುರುಳಿಯನ್ನು ಆರ್ಮೇಚರ್ ಸುರುಳಿಗೆ ಸೇರಿಸುತ್ತಾರೆ. ಶ್ರೇಣಿ ಜನರೇಟರುಗಳಲ್ಲಿ ಎರಡೂ ಸುರುಳಿಗಳನ್ನು ಶ್ರೇಣಿಯಲ್ಲಿ ಸೇರಿಸುತ್ತಾರೆ. ಶಂಟ್ ಜನರೇಟರುಗಳಲ್ಲಿ ಎರಡೂ ಸುರುಳಿಗಳನ್ನು ಸಮಾನಾಂತರವಾಗಿ ಸೇರಿಸುತ್ತಾರೆ. ಸಮ್ಮಿಶ್ರ ಜನರೇಟರಿನ ಧ್ರುವಗಳಲ್ಲಿ ಪ್ರತ್ಯೇಕವಾದ ಎರಡು ಸುರುಳಿಗಳಿವೆ. ಅವುಗಳಲ್ಲಿ ಒಂದು ಸುರುಳಿ ಶ್ರೇಣಿಯಲ್ಲೂ ಇನ್ನೊಂದು ಸಮಾನಾಂತರವಾಗಿಯೂ ಆರ್ಮೇಚರ್ ಸುರುಳಿಯೊಂದಿಗೆ ಸೇರಿಸಲ್ಪಡುತ್ತವೆ. ಶಂಟ್ ಸುರುಳಿಯವನ್ನು ಶ್ರೇಣಿ ಸುರುಳಿಯ ಬಳಿಕ ಸೇರಿಸಿದ್ದರೆ ಅದನ್ನು ಲಾಂಗ್ ಶಂಟ್ ಎಂದೂ ಮೊದಲೇ ಸೇರಿಸಿದ್ದರೆ ಷಾರ್ಟ್‌ಶಂಟ್ ಎಂದೂ ಕರೆಯುತ್ತಾರೆ. ವಿವಿಧರೀತಿಯ ಸೇರಿಸುವಿಕೆಗಳನ್ನು ಚಿತ್ರ 2ರಲ್ಲಿ ಕಾಣಬಹುದು.



ಚಿತ್ರ 2 ಏಕಮುಖ ವಿದ್ಯುಜ್ಜನಕದ ಸುರುಳಿಗಳ ವಿವಿಧ ಸೇರಿಕೆಗಳು

ಒಂದು ಡಿಸಿ ಜನರೇಟರಿನ ಯೋಗ್ಯತೆಯನ್ನು ಅದರ ಸ್ವಭಾವ ರೇಖೆಗಳಿಂದ ತಿಳಿಯಬಹುದು.

ಕಾಂತಸ್ವಭಾವ ರೇಖೆ (ಮ್ಯಾಗ್ನೆಟಿಕ್ ಕ್ಯಾರೆಕ್ಟೆರಿಸ್ಟಿಕ್) ಅಥವಾ ಹೊರೆ ವಿರಹಿತ ಸಂತೃಪ್ತ ರೇಖೆ (ನೋ ಲೋಡ್ ಸ್ಯಾಚುರೇಶನ್ ಕರ್ವ್) : 1 ಇದು ಕ್ಷೇತ್ರ ಸುರುಳಿಯಲ್ಲಿ ಹರಿಯುವ ಪ್ರವಾಹ ಮತ್ತು ಆರ್ಮೇಚರಿನಲ್ಲಿ ಕಾಣಿಸಿಕೊಳ್ಳುವ ವಿದ್ಯುತ್ ವೋಲ್ಟೇಜುಗಳ ನಡುವಣ ಸಂಬಂಧವನ್ನು ಸೂಚಿಸುವ ರೇಖೆ.

2 ಬಾಹ್ಯಸ್ವಭಾವ ರೇಖೆ (ಎಕ್ಸ್‌ಟರ್ನಲ್ ಕ್ಯಾರೆಕ್ಟೆರಿಸ್ಟಿಕ್) ಅಥವಾ ಹೊರೆ ಸ್ವಭಾವ ರೇಖೆ (ಲೋಡ್ ಕ್ಯಾರೆಕ್ಟೆರಿಸ್ಟಿಕ್) : ಒಂದು ಡಿಸಿ ವಿದ್ಯುಜ್ಜನಕದಿಂದ ವಿದ್ಯುತ್ ಪ್ರವಾಹ ಯಾವ ಉಪಕರಣಕ್ಕೆ ಹರಿಯುವುದೋ ಅದನ್ನು ಹೊರೆ (ಲೋಡ್) ಎಂದು ಕರೆಯುತ್ತಾರೆ. ಹೊರೆಯ ಮೂಲಕ ಹರಿಯುವ ಪ್ರವಾಹ ಮತ್ತು ಹೊರೆಯಲ್ಲಿರುವ ವೋಲ್ಟೇಜುಗಳ ಸಂಬಂಧವನ್ನು ಸೂಚಿಸುವ ರೇಖೆಯೇ ಬಾಹ್ಯ ಸ್ವಭಾವರೇಖೆ.

3 ಆಂತರಿಕ ಸ್ವಭಾವ ರೇಖೆ (ಇಂಟರ್ನಲ್ ಕ್ಯಾರೆಕ್ಟೆರಿಸ್ಟಿಕ್) ಅಥವಾ ಸಂಪೂರ್ಣ ಸ್ವಭಾವ ರೇಖೆ (ಟೋಟಲ್ ಕ್ಯಾರೆಕ್ಟೆರಿಸ್ಟಿಕ್) : ಇದು ಹೊರೆಯ ಮೂಲಕ ಹರಿಯುವ ಪ್ರವಾಹ ಮತ್ತು ವಿದ್ಯುಜ್ಜನಕದಲ್ಲಿ ಪ್ರೇರಿತವಾದ ವೋಲ್ಟೇಜುಗಳ ನಡುವಣ ಸಂಬಂಧವನ್ನು ನಿರೂಪಿಸುವ ರೇಖೆ.







ಚಿತ್ರ 3 ಸ್ವಭಾವರೇಖೆಯನ್ನು ಪಡೆಯುವ ವಿಧಾನ

ಕಾಂತಸ್ವಭಾವ ರೇಖೆ : ಇದನ್ನು ಪಡೆಯಲು ಕ್ಷೇತ್ರವನ್ನು ಆರ್ಮೇಚರಿನಿಂದ ಪ್ರತ್ಯೇಕಿಸಿರಬೇಕು. ಕ್ಷೇತ್ರ ಸುರುಳಿಯೊಡನೆ ಶ್ರೇಣಿಯಲ್ಲಿ ಒಂದು ಪ್ರವಾಹಮಾಪಕ (ಆಮೀಟರ್) ಮತ್ತು ವಿದ್ಯುತ್ ಪ್ರವಾಹ ಬಲ ನಿಯಂತ್ರಕವನ್ನು (ರ್‍ಹಿಯೋಸ್ಟ್ಯಾಟ್) ಸೇರಿಸಿ ಇದಕ್ಕೆ ಒಂದು ವಿದ್ಯುನ್ಮೂಲವನ್ನು ಸೇರಿಸಬೇಕು. ಆರ್ಮೇಚರನ್ನು ಒಂದೇ ವೇಗದಲ್ಲಿ ತಿರುಗಿಸಬೇಕು. ರ್‍ಹಿಯೊಸ್ಟ್ಯಾಟನ್ನು ನಿಯಂತ್ರಿಸುವುದರ ಮೂಲಕ ಕ್ಷೇತ್ರ ಪ್ರವಾಹವನ್ನು ನಿಧಾನವಾಗಿ ಶೂನ್ಯದಿಂದ ಏರಿಸಬೇಕು. ಆರ್ಮೇಚರಿನಲ್ಲಿ ಕಾಣಿಸಿಕೊಳ್ಳುವ ವೋಲ್ಟೇಜನ್ನು ವೋಲ್ಟ್‌ಮಾಪಕದಿಂದ ಅಳೆಯಬಹುದು. ಪ್ರವಾಹಮಾಪಕ ಮತ್ತು ವೋಲ್ಟ್‌ಮಾಪಕಗಳ ಓದಿಕೆಗಳನ್ನು (ರೀಡಿಂಗ್ಸ್) ಚೌಕುಳಿಕಾಗದದ ಮೇಲೆ ಚಿತ್ರ 4ರಲ್ಲಿ ತೋರಿಸಿದಂತೆ ಸ್ವಭಾವ ರೇಖೆಯಾಗಿ ಚಿತ್ರಿಸಬಹುದು.




ಚಿತ್ರ 4 ಕಾಂತಸ್ವಭಾವರೇಖೆ

ಕ್ಷೇತ್ರದಲ್ಲಿ ಪ್ರವಾಹ ಶೂನ್ಯವಾಗಿರುವಾಗಲೂ ಅಲ್ಪಪ್ರಮಾಣದಲ್ಲಿ ಕಾಂತತ್ವದ ಉಳಿಕೆ (ರೆಸಿಡ್ಯುಯಲ್ ಮ್ಯಾಗ್ನೆಟಿಸಂ) ಇರುತ್ತದೆ. ಇದರಿಂದಾಗಿ ಆರ್ಮೇಚರಿನಲ್ಲಿ ಅತ್ಯಲ್ಪ ಪ್ರಮಾಣದಲ್ಲಿ ವಿದ್ಯುತ್ ವೋಲ್ಟೇಜ್ ಕಾಣಿಸಿಕೊಳ್ಳುತ್ತದೆ. ಕ್ಷೇತ್ರ ಪ್ರವಾಹ ಅಧಿಕವಾದಂತೆ ಅಭಿವಾಹ (ಫ್ಲಕ್ಸ್) ಮತ್ತು ಆದರೊಡನೆ ವೋಲ್ಟೇಜು ಅಧಿಕವಾಗುತ್ತವೆ. ಕ್ಷೇತ್ರ ಪ್ರವಾಹವನ್ನು ಅಧಿಕಗೊಳಿಸುತ್ತ ಹೋದಂತೆ ಅದರಂತೆಯೇ ಅಭಿವಾಹ ಕೂಡ ಅಧಿಕವಾಗುವುದಿಲ್ಲ. ಕಾರಣ, ಒಂದು ಮಿತಿಯ ಬಳಿಕ ಧ್ರುವಗಳು ಪೂರ್ತಿ ತುಂಬಿರುತ್ತವೆ. ಹೀಗಾದ ಬಳಿಕ ಅಭಿವಾಹ ಮತ್ತು ವೋಲ್ಟೇಜುಗಳು ಹೆಚ್ಚು ಬದಲಾಣೆಯಾಗುವುದಿಲ್ಲ.

ಹೊರೆ ಸ್ವಭಾವ ರೇಖೆ : ಒಂದು ವಿದ್ಯುಜ್ಜನಕದಲ್ಲಿ ನಿಶ್ಚಿತ ವೋಲ್ಟೇಜ್ ಕಾಣಿಸಿಕೊಂಡ ಬಳಿಕ ಅದಕ್ಕೆ ಹೊರೆಯನ್ನು ಹೇರಬಹುದು. ಹೊರೆಯನ್ನು ಅಧಿಕಗೊಳಿಸಿದಂತೆ ಹೊರೆ ಪ್ರವಾಹವೂ ಹೆಚ್ಚಾಗುತ್ತದೆ ಮತ್ತು ಅದರೊಡನೆ ವೋಲ್ಟೇಜು ವ್ಯತ್ಯಾಸ ಹೊಂದುತ್ತದೆ. ವೋಲ್ಟೇಜ್ ಮತ್ತು ಹೊರೆ ಪ್ರವಾಹಗಳೊಳಗಣ ಸಂಬಂಧ ಹೊರೆ ಸ್ವಭಾವರೇಖೆಯೆನಿಸುವುದು. ಬಾಹ್ಯ ಪ್ರಚೋದಿತ ವಿದ್ಯುಜ್ಜನಕದ ಸ್ವಭಾವ ರೇಖೆಗಳನ್ನು ಚಿತ್ರ 6ರಲ್ಲಿ ತೋರಿಸಿದೆ.







ಚಿತ್ರ 5 ಬಾಹ್ಯಪ್ರಚೋದಿತ ವಿದ್ಯುಜ್ಜನಕ

ಕ್ಷೇತ್ರದಲ್ಲಿ ಸೇರಿಸಿರುವ ರ್‍ಹಿಯೊಸ್ಟ್ಯಾಟನ್ನು ನಿಯಂತ್ರಿಸಿ ಆರ್ಮೇಚರಿನಲ್ಲಿ ನಿಯಂತ್ರಿತ ವೋಲ್ಟೇಜನ್ನು ಉಂಟುಮಾಡಬೇಕು. ಬಳಿಕ ನಿಧಾನವಾಗಿ ವಿದ್ಯುಜ್ಜನಕದ ಮೇಲೆ ಹೊರೆ ಹೇರಿದಾಗ ಹೊರೆ ಪ್ರವಾಹ ಹೆಚ್ಚಾಗುತ್ತದೆ. ಪ್ರವಾಹ ಹೆಚ್ಚಾದಂತೆ ವೋಲ್ಟೇಜ್ ಇಳಿಕೆ (ಡ್ರಾಪ್) ಹೆಚ್ಚಾಗುತ್ತದೆ. ಹಾಗಾಗಿ ಪ್ರವಾಹ ಹೆಚ್ಚಾದಂತೆ ಹೊರೆಯ ವೋಲ್ಟೇಜ್ ಕಡಿಮೆಯಾಗುತ್ತದೆ. ಇದು ವಕ್ರರೇಖೆ 1ರಲ್ಲಿ (ಚಿತ್ರ 6) ಸೂಚಿತವಾಗಿದೆ. ಪ್ರೇರಿತ ವೋಲ್ಟೇಜ್ ಸ್ಥಿರವಾಗಿರಬೇಕು. ಕಾರಣ ಕ್ಷೇತ್ರಪ್ರವಾಹ ಸ್ಥಿರವಾಗಿರುವುದರಿಂದ ಪ್ರೇರಿತ ವೋಲ್ಟೇಜೂ ಸ್ಥಿರವಾಗಿರಬೇಕೆಂದು ಎನಿಸಬಹುದು. ಆದರೆ ಹೊರೆಯನ್ನು ಹೇರಿದಂತೆ ಆರ್ಮೇಚರ್ ಪ್ರತಿಕ್ರಿಯೆಯಿಂದಾಗಿ ಕ್ಷೇತ್ರ ದುರ್ಬಲವಾಗುತ್ತದೆ ಮತ್ತು ಇದರಿಂದಾಗಿ ಪ್ರೇರಿತ ವೋಲ್ಟೇಜ್ ಕಡಿಮೆಯಾಗುತ್ತದೆ. ಇದು ವಕ್ರರೇಖೆ 2ರಲ್ಲಿ ಸೂಚಿತವಾಗಿದೆ. ವಿದ್ಯುಜ್ಜನಕದ ಅಂತಿಮದಲ್ಲಿನ (ಟರ್ಮಿನಲ್) ವೋಲ್ಟೇಜ್ ಸ್ಥಿರವಾಗಬೇಕೆಂದಿದ್ದಾಗಲೆಲ್ಲ ಬಾಹ್ಯ ಪ್ರಚೋದಿತ ವಿದ್ಯುಜ್ಜನಕವನ್ನು ಉಪಯೋಗಿಸುತ್ತಾರೆ. ಕ್ಷೇತ್ರ ಮತ್ತು ಆರ್ಮೇಚರುಗಳು ಪ್ರತ್ಯೇಕವಾಗಿರುವುದರಿಂದ ಇದನ್ನು ವಿಧಿಮಂಡಲಗಳಲ್ಲೂ (ಕಂಟ್ರೋಲ್ ಸರ್ಕ್ಯೂಟ್ಸ್) ಬಳಸುತ್ತಾರೆ.




ಚಿತ್ರ 6 ಬಾಹ್ಯಪ್ರಚೋದಿತ ವಿದ್ಯುಜ್ಜನಕದ ಭಾರಸ್ವಭಾವ ರೇಖೆಗಳು

ಶಂಟ್ ವಿದ್ಯುಜ್ಜನಕ : ಫೀಲ್ಡ್ ಮತ್ತು ಆರ್ಮೇಚರುಗಳನ್ನು ಸಮಾನಾಂತರವಾಗಿ ಸೇರಿಸಲಾಗಿರುವ ವಿದ್ಯುಜ್ಜನಕ. ಇದರಲ್ಲಿ ಬಾಹ್ಯ ಚಾಲಕದ (ಎಕ್ಸ್‌ಟರ್ನಲ್ ಪ್ರೈಮ್ ಮೂವರ್) ಮೂಲಕ ಆರ್ಮೇಚರನ್ನು ನಿಶ್ಚಿತ ವೇಗದಲ್ಲಿ ತಿರುಗಿಸಲಾಗುತ್ತದೆ. ಅಲ್ಪಪರಿಮಾಣದ ಕಾಂತತ್ವದ ಉಳಿಕೆಯಿಂದಾಗಿ (ರೆಸಿಡ್ಯುಯಲ್

ಮ್ಯಾಗ್ನೆಟಿಸಂ) ಆರ್ಮೇಚರಿನಲ್ಲಿ ಅಲ್ಪ ಪರಿಮಾಣದಲ್ಲಿ ವಿದ್ಯುತ್ ವೋಲ್ಟೇಜ್ ಕಾಣಿಸಿಕೊಳ್ಳುವುದು. ಆರ್ಮೇಚರ್ ಮಂಡಲ (ಆರ್ಮೇಚರ್ ಸರ್ಕ್ಯೂಟ್ಸ್) ಮತ್ತು ಕ್ಷೇತ್ರ ಮಂಡಲಗಳು (ಫೀಲ್ಡ್ ಸರ್ಕ್ಯೂಟ್ಸ್) ಸೇರಿ ಒಂದು ಸಂವೃತಮಂಡಲವನ್ನು (ಕ್ಲೋಸ್ಡ್ ಸರ್ಕ್ಯೂಟ್) ಉಂಟುಮಾಡುವುದರಿಂದ ಇದರಲ್ಲಿ ಅಲ್ಪ ಪರಿಮಾಣದ ಪ್ರವಾಹ ಹರಿಯುವುದು. ಕ್ಷೇತ್ರದ ಮೂಲಕ ಹರಿಯುವ ಈ ಪ್ರವಾಹ ಕಾಂತ ಶಕ್ತಿಯ ಉಳಿಕೆಯನ್ನು ಬಲಗೊಳಿಸುವಂತೆ ಕ್ಷೇತ್ರವನ್ನು ಸೇರಿಸಲಾಗುವುದು. ಇದರಿಂದಾಗಿ ಪ್ರೇರಿತ ವೋಲ್ಟೇಜ್ ಹೆಚ್ಚುವುದು ; ಪ್ರವಾಹ ಅಧಿಕವಾಗುವುದು ಮತ್ತು ಹೀಗಾಗಿ ಅಭಿವಾಹ (ಫ್ಲಕ್ಸ್) ಅಧಿಕವಾಗುವುದು. ಮೇಲಿನ ಕ್ರಿಯೆಯ ಪುನರಾವೃತ್ತಿಯಿಂದಾಗಿ ಕ್ಷೇತ್ರಮಂಡಲ ಸಂತೃಪ್ತ (ಸ್ಯಾಚುರೇಟೆಡ್) ಆಗುವವರೆಗೆ ವೋಲ್ಟೇಜ್ ಏರುತ್ತ ಹೋಗುವುದು.

ಬಾಹ್ಯ ವಿಶಿಷ್ಟ ಗುಣರೇಖೆಗಳು (ಎಕ್ಸ್‌ಟರ್ನಲ್ ಕ್ಯಾರೆಕ್ಟೆರಿಸ್ಟಿಕ್ಸ್) : ಈಗ ವಿದ್ಯುಜ್ಜನಕಕ್ಕೆ ಹೊರೆಯನ್ನು (ಲೋಡ್) ಕೊಡಲಾಗುವುದು ಮತ್ತು ಇದನ್ನು ಕ್ರಮೇಣ ಹೆಚ್ಚುಮಾಡಲಾಗುವುದು. ಹೊರೆಯಿಂದಾಗಿ ಹರಿಯುವ ಪ್ರವಾಹ ಆರ್ಮೇಚರಿನ ಮೂಲಕ ಹರಿದು ಅಲ್ಲೇ ವೋಲ್ಟೇಜಿನ ಇಳಿತವನ್ನು ಉಂಟುಮಾಡುತ್ತದೆ. ಆದ್ದರಿಂದ ಹೊರೆ ಅಧಿಕವಾದಂತೆ ಆರ್ಮೇಚರಿನ ಅಂತಿಮ (ಟರ್ಮಿನಲ್) ವೋಲ್ಟೇಜ್ ಕೆಳಗಿಳಿಯುತ್ತದೆ. ಕಡಿಮೆಯಾದ ಈ ಅಂತಿಮ ವೋಲ್ಟೇಜ್ ಕ್ಷೇತ್ರದ ಅಂತಿಮ ವೋಲ್ಟೇಜೂ ಆಗಿರುವುದರಿಂದ ಕ್ಷೇತ್ರದ ಪ್ರವಾಹವೂ ಅದರೊಂದಿಗೆ ಪ್ರೇರಿತ ವೋಲ್ಟೇಜೂ ಕಡಿಮೆಯಾಗುವುವು. ಇದರಿಂದಾಗಿ ಅಂತಿಮ ವೋಲ್ಟೇಜ್ ಮತ್ತೂ ಕಡಿಮೆಯಾಗುತ್ತದೆ. ಈ ಎರಡೂ ಕಾರಣಗಳಿಂದಾಗಿ ವೋಲ್ಟೇಜ್ ಚಿತ್ರ 7ರಲ್ಲಿ ಚಿತ್ರಿಸಿರುವಂತೆ ಅಧಿಕ ಪ್ರಮಾಣದಲ್ಲಿ ಕಡಿಮೆಯಾಗುತ್ತದೆ (AB),




ಚಿತ್ರ 7

ಹೊರೆಯನ್ನು ಇನ್ನೂ ಅಧಿಕಗೊಳಿಸಿದಂತೆಲ್ಲ ಅಂತಿಮವೋಲ್ಟೇಜ್ ಕಡಿಮೆಯಾಗುತ್ತ ಹೋಗಿ ಅಭಿವಾಹದ ಇಳಿತದಿಂದಾಗಿ ಒಮ್ಮಿಂದೊಮ್ಮೆ ಪ್ರೇರಿತ ವೋಲ್ಟೇಜಿನ ಇಳಿತ ವಿದ್ಯುಜ್ಜನಕ ಹೊರೆಯನ್ನು ಸಹ ತಡೆಯಲು ಅಸಮರ್ಥವಾಗುವಷ್ಟು ಹೆಚ್ಚಾಗುವುದು. ಆಗ ಪ್ರವಾಹ ಒಮ್ಮಿಂದೊಮ್ಮೆ ಕಡಿಮೆಯಾಗುತ್ತ ಹೋಗಿ ವಿದ್ಯುಜ್ಜನಕ ಒಂದಿಷ್ಟು ಪ್ರವಾಹವನ್ನೂ ಹರಿಸದಮಟ್ಟಿಗೆ ಬರುವುದು, ಇದನ್ನು BCಯಲ್ಲಿ ಚಿತ್ರಿಸಲಾಗಿದೆ.

ಬಾಹ್ಯವಿಶಿಷ್ಟಗುಣರೇಖೆಗಳಿಗೆ ಆರ್ಮೇಚರಿನ ನಿರೋಧವನ್ನು (ರೆಸಿಸ್ಟೆನ್ಸ್) ಸೇರಿಸುತ್ತ ಹೋದರೆ (ಚಿತ್ರ 8ರಲ್ಲಿ ತೋರಿಸಿದಂತೆ) ಅಂತರ್ ವಿಶಿಷ್ಟ ಗುಣರೇಖೆಗಳು ಸಿಗುವುವು.

ಶಂಟ್ ವಿದ್ಯುಜ್ಜನಕಕ್ಕೆ ಅನ್ವಯಿಸುವ ಕೆಲವು ಸೂತ್ರಗಳು ಈ ರೀತಿಯಾಗಿವೆ :

$$I_a = I_lL + I_{sh}$$

$$I_{sh} = V/Rsh$$

$$E = V + I_a R_a$$

ಶ್ರೇಣಿ ವಿದ್ಯುಜ್ಜನಕ (ಸೀರಿಸ್ ಜನರೇಟರ್) : ಈ ವಿಧದ ವಿದ್ಯುಜ್ಜನಕದಲ್ಲಿ ಆರ್ಮೇಚರ್ ಮತ್ತು ಕ್ಷೇತ್ರಗಳು ಶ್ರೇಣಿಯಲ್ಲಿರುತ್ತವೆ. ಬಾಹ್ಯ ಚಾಲಕವೊಂದರ ಮೂಲಕ ಆರ್ಮೇಚರನ್ನು ನಿಶ್ಚಿತ ವೇಗದಲ್ಲಿ ತಿರುಗಿಸಿದಾಗ ಕಾಂತತ್ವದ ಉಳಿಕೆಯಿಂದಾಗಿ ಅತ್ಯಲ್ಪ ಪರಿಮಾಣದ ವೋಲ್ಟೇಜ್ ಆರ್ಮೇಚರಿನ ಅಂತಿಮದಲ್ಲಿ (ಟರ್ಮಿನಲ್) ಕಾಣಿಸಿಕೊಳ್ಳುವುದು.




ಚಿತ್ರ 8. $I_a$ ಆರ್ಮೇಚರ್ ಪ್ರವಾಹ, $I_{sh}$ ಶಂಟ್‌ಫೀಲ್ಡ್ ಪ್ರವಾಹ, $I_l$ ಭಾರ-ಪ್ರವಾಹ, V ಅಂತಿಮ ಒತ್ತಡ.

ಈಗ ಆರ್ಮೇಚರಿನ ಅಂತಿಮಕ್ಕೆ ಹೊರೆಯನ್ನು ಸೇರಿಸಿದಾಗ ಮೇಲೆ ಹೇಳಿದ ಅತ್ಯಲ್ಪ ಪರಿಮಾಣದ ವೋಲ್ಟೇಜಿಗೆ ಅನುಗುಣವಾಗಿ ಪ್ರವಾಹ ಹರಿಯುವುದು ; ಈ ಪ್ರವಾಹ ಕ್ಷೇತ್ರದ ಮೂಲಕ ಹರಿಯುವುದರಿಂದ ಅದು ಪ್ರೇರಿತ ವೋಲ್ಟೇಜನ್ನು ಹೆಚ್ಚಿಸುವುದು. ಪ್ರೇರಿತ ವೋಲ್ಟೇಜ್ ಮತ್ತು ಹೊರಗೆ ಹರಿಯುವ ಪ್ರವಾಹ ಇವುಗಳೊಳಗೆ ಒಂದು ಸಮತೋಲನ ಬರುವವರೆಗೆ ವೋಲ್ಟೇಜ್ ಹೆಚ್ಚುವುದು. ಹೊರೆಯನ್ನು ಹೆಚ್ಚಿಸಿದಾಗ ಅದರೊಡನೆ ವೋಲ್ಟೇಜೂ ಹೆಚ್ಚುವುದು. ಕಾಂತವಲಯ ಸಂತೃಪ್ತ ಆಗುವವರೆಗೆ ಈ ಕ್ರಿಯೆ ಮುಂದುವರಿಯುವುದು. ಈ ಸ್ಥಿತಿಯಲ್ಲಿ ಹೊರೆಪ್ರವಾಹದ (ಲೋಡ್ ಕರೆಂಟ್) ಹೆಚ್ಚಳ ವೋಲ್ಟೇಜನ್ನು ಹೆಚ್ಚಿಸಲಾರದು. ಹೊರೆಯನ್ನು ಇನ್ನೂ ಹೆಚ್ಚಿಸಿದಾಗ ಪ್ರೇರಿತ ವೋಲ್ಟೇಜ್ ಸ್ಥಿರವಾಗಿರುವುದರಿಂದ ಅಂತಿಮ ವೋಲ್ಟೇಜ್ ಕಡಿಮೆಯಾಗುವುದು. ವೋಲ್ಟೇಜ್ ಎಷ್ಟು ವೇಗವಾಗಿ ಕಡಿಮೆಯಾಗುವುದೆಂದರೆ ಈಗ ಹೊರೆಪ್ರವಾಹ ಹೆಚ್ಚುಕಡಿಮೆ ಸ್ಥಿರವಾಗಿರುತ್ತದೆ. ವಿಶಿಷ್ಟಗುಣರೇಖೆ ಚಿತ್ರ 10ರಲ್ಲಿ ಸೂಚಿತವಾಗಿದೆ. ಆರ್ಮೇಚರ್ ಮತ್ತು ಶ್ರೇಣಿ ಕ್ಷೇತ್ರದ ನಿರೋಧದಿಂದಾಗಿ ಉಂಟಾದ ವೋಲ್ಟೇಜಿನ ಇಳಿತವನ್ನು ಬಾಹ್ಯ ರೇಖೆಗಳಿಗೆ ಸೇರಿಸುತ್ತ ಹೋದರೆ ಅಂತರ್ ವಿಶಿಷ್ಟ ಗುಣ ರೇಖೆಗಳು ಸಿಗುವುವು. ಶ್ರೇಣಿ ವಿದ್ಯುಜ್ಜನಕದಲ್ಲಿ



ಚಿತ್ರ 9




ಚಿತ್ರ 10

$V = E - I(R_a + R_{se})$, $R_{se}$ = ಶ್ರೇಣಿ ಕ್ಷೇತ್ರದ ನಿರೋಧತೆ.

ಸಮ್ಮಿಶ್ರ ವಿದ್ಯುಜ್ಜನಕ (ಕಾಂಪೌಂಡ್ ಜನರೇಟರ್) : ಇದರಲ್ಲಿ ಶಂಟ್ ಮತ್ತು ಶ್ರೇಣಿ ಎಂಬ ಎರಡು ಕ್ಷೇತ್ರಗಳಿವೆ. ಪ್ರತಿಯೊಂದು ಧ್ರುವದಲ್ಲೂ ಬೇರೆಬೇರೆಯಾದ

ಶ್ರೇಣಿ ಮತ್ತು ಶಂಟ್ ಸುರುಳಿಗಳಿವೆ. ಇವುಗಳಲ್ಲಿ ಒಂದು ಆರ್ಮೇಚರಿಗೆ ಶ್ರೇಣಿಯಲ್ಲೂ ಇನ್ನೊಂದು ಸಮಾಂತರವಾಗಿಯೂ ಸೇರಿಸಲ್ಪಟ್ಟಿವೆ. ಇದರ ವಿಶಿಷ್ಟಗುಣಗಳು ಶಂಟ್ ಮತ್ತು ಶ್ರೇಣಿ ಜನರೇಟರಿನ ಗುಣಗಳಿರಡರ ನಡುವೆ ಇವೆ. ಶಂಟ್ ಕ್ಷೇತ್ರದಿಂದಾಗಿ ಹೊರೆಯಿಲ್ಲದಿದ್ದಾಗ ಅಂತಿಮ ವೋಲ್ಟೇಜ್ ನಿಶ್ಚಿತ ವೋಲ್ಟೇಜಿಗೆ (ರೇಟೆಡ್ ವೋಲ್ಟೇಜ್) ಸಮವಿರುತ್ತದೆ. ಹೊರೆಯನ್ನು ಸೇರಿಸಿದಾಗ ಶಂಟ್ ಸುರುಳಿಯಿಂದಾಗಿ ವೋಲ್ಟೇಜ್ ಕಡಿಮೆಯಾಗಲು ಮತ್ತು ಶ್ರೇಣಿ ಸುರುಳಿಯಿಂದಾಗಿ ಹೆಚ್ಚಾಗಲು ಎಳಸುತ್ತದೆ. ಶ್ರೇಣಿ ಸುರುಳಿ ಶಂಟ್ ಸುರುಳಿಗಿಂತ ಪ್ರಬಲವಾಗಿದ್ದರೆ ಹೊರೆ ಹೆಚ್ಚಾದಂತೆ ವೋಲ್ಟೇಜ್ ಕಡಿಮೆಯಾಗುತ್ತದೆ (ಆದರೆ ಶಂಟ್ ವಿದ್ಯುಜ್ಜನಕದಲ್ಲಿ ಕಡಿಮೆಯಾಗುವಷ್ಟು ಕಡಿಮೆಯಾಗುವುದಿಲ್ಲ). ಶ್ರೇಣಿ ಸುರುಳಿ ಶಂಟ್ ಸುರುಳಿಗಿಂತ ಪ್ರಬಲವಾಗಿದ್ದರೆ ಹೊರೆ ಹೆಚ್ಚಾದಂತೆ ವೋಲ್ಟೇಜ್ ಹೆಚ್ಚಾಗುವುದು. ಶಂಟ್ ಮತ್ತು ಶ್ರೇಣಿಗಳೊಳಗೆ ಒಂದು ಸಮತೋಲನವನ್ನು ಸಾಧಿಸಿದರೆ ಆಗ ಎಲ್ಲ ಹೊರೆಯಲ್ಲೂ ವೋಲ್ಟೇಜ್ ಒಂದೇ ಸಮನಾಗಿರುವುದು. ವಿಶಿಷ್ಟಗುಣರೇಖೆಗಳು ಕೆಳಗೆ ಕಾಣಿಸಿದಂತಿವೆ.




ಚಿತ್ರ 11

ಶಂಟ್ ವಿದ್ಯುಜ್ಜನಕದ ವೋಲ್ಟೇಜ್ ನಿಯಂತ್ರಣ (ವೋಲ್ಟೇಜ್ ರೆಗ್ಯುಲೇಶನ್) ಹೆಚ್ಚಿರುವುದರಿಂದ ಇದು ಪ್ರವಾಹ ಮಂಡಲಗಳಲ್ಲಿ (ಪವರ್ ಸರ್ಕ್ಯೂಟ್ಸ್) ಅನುಪಯುಕ್ತ. ಆದರೆ ಇದನ್ನು ವಿಧಿಮಂಡಲಗಳಲ್ಲಿ (ಕಂಟ್ರೋಲ್ ಸರ್ಕ್ಯೂಟ್ಸ್) ಉಪಯೋಗಿಸಬಹುದು. ಶ್ರೇಣಿ ವಿದ್ಯುಜ್ಜನಕವನ್ನು ವೋಲ್ಟೇಜ್ ನಿಯಂತ್ರಕ (ವೋಲ್ಟೇಜ್ ರೆಗ್ಯುಲೇಟರ್) ಅಥವಾ ವರ್ಧಕವಾಗಿ (ಬೂಸ್ಟರ್) ಉಪಯೋಗಿಸಬಹುದು. ಅದನ್ನು ಸ್ಥಿರ ಪ್ರವಾಹ (ಕಾನ್‌ಸ್ಟೆಂಟ್ ಕರೆಂಟ್) ವಿದ್ಯುಜ್ಜನಕವಾಗಿಯೂ ಉಪಯೋಗಿಸಬಹುದು. ವೋಲ್ಟೇಜನ್ನು ಬೇಕಾದಂತೆ ನಿಯಂತ್ರಿಸಬಹುದಾದ್ದರಿಂದ ಸಮ್ಮಿಶ್ರ ವಿದ್ಯುಜ್ಜನಕಗಳನ್ನು ಪ್ರವಾಹ ಮಂಡಲಗಳಲ್ಲಿ ಹೆಚ್ಚಾಗಿ ಉಪಯೋಗಿಸಲಾಗುತ್ತಿದೆ. ಪ್ರವಾಹ ಮಂಡಲಗಳಲ್ಲಿ ಪ್ರತ್ಯೇಕ ಪ್ರಚೋದಿತ ವಿದ್ಯುಜ್ಜನಕಗಳನ್ನು ಉಪಯೋಗಿಸಬಹುದು. ಇವನ್ನು ಆಲ್ಟರ್ನೇಟರುಗಳ ಪ್ರಚೋದಕಗಳಾಗಿಯೂ ಉಪಯೋಗಿಸಬಹುದು.

ಸಮಾಂತರ ಕ್ರಿಯೆ (ಪ್ಯಾರಲಲ್ ಆಪರೇಶನ್) : ಎರಡು ಅಥವಾ ಹೆಚ್ಚು ವಿದ್ಯುಜ್ಜನಕಗಳನ್ನು ಸಮಾಂತರವಾಗಿ ಉಪಯೋಗಿಸಬಹುದು. ಸಮಾಂತರ ಕ್ರಿಯೆಗೆ ವೋಲ್ಟೇಜ್ ಮತ್ತು ಚಿಹ್ನೆಗಳು ಒಂದೇ ಆಗಿರಬೇಕು. ಹೀಗೆ ಅವನ್ನು ಒಳಪಡಿಸಿದಾಗ ಅವು ಸ್ವೀಕರಿಸುವ ಹೊರೆಯ ಅಂಶಗಳು ಆಯಾ ವಿದ್ಯುಜ್ಜನಕದ ಬಾಹ್ಯಗುಣರೇಖೆಗಳಿಗೆ ಅನುಗುಣವಾಗಿವೆ. ಎರಡೂ ವಿದ್ಯುಜ್ಜನಕಗಳ ಅಂತಿಮ ವೋಲ್ಟೇಜುಗಳು ಸಮವಿರುವುದರಿಂದ ಅಧಿಕ ವೋಲ್ಟೇಜಿನ ಆರ್ಮೇಚರಿನಿಂದ ಕಡಿಮೆ ವೋಲ್ಟೇಜಿನ ಆರ್ಮೇಚರಿಗೆ ಪ್ರವಾಹ ಹರಿಯುವುದರ ಮೂಲಕ ಸಮತೋಲನ ಉಂಟಾಗುತ್ತದೆ. ಎರಡೂ ಬಾಹ್ಯಗುಣರೇಖೆಗಳು ಒಂದೇ ತೆರನಾಗಿದ್ದರೆ ಆಗ ಸಮಾಂತರ ಕಾರ್ಯ ಆದರ್ಶಪ್ರಾಯವಾಗುವುದು ಮತ್ತು ಹೊರೆ ಸಮಸಮವಾಗಿ ಹಂಚಿಹೋಗುವುದು.

ಆರ್ಮೇಚರ್ ಪ್ರತಿಕ್ರಿಯೆ : ಧ್ರುವಗಳ ಕಾಂತತ್ವದ ಮೇಲೆ ಆರ್ಮೇಚರಿನಲ್ಲಿ ಪ್ರವಾಹ ಹರಿಯುವಾಗ ಉಂಟಾಗುವ ಕಾಂತತ್ವ ಉಂಟುಮಾಡುವ ಪರಿಣಾಮವನ್ನು ಆರ್ಮೇಚರ್ ಪ್ರತಿಕ್ರಿಯೆ ಎಂದು ಕರೆಯುತ್ತಾರೆ. ಇದರಿಂದಾಗಿ ಧ್ರುವಗಳ ಕಾಂತಶಕ್ತಿಯು ಕೆಲವಂಶ ನಾಶವಾಗುತ್ತದೆ. ಮತ್ತು ಉಳಿದ ಅಂಶ ತನ್ನ ಮೂಲ ಸ್ಥಾನದಿಂದ ಚದರಿಸಲ್ಪಡುತ್ತದೆ.

ಪರಿವರ್ತನೆ (ಕಾಮ್ಯುಟೇಷನ್) : ಆರ್ಮೇಚರಿನ ಯಾವೊಂದು ಸುರುಳಿ ಧನಧ್ರುವದ ಕ್ಷೇತ್ರದಲ್ಲಿದ್ದಾಗ ವೋಲ್ಟೇಜ್ ಒಂದು ದಿಕ್ಕಿನಲ್ಲೂ ಋಣಧ್ರುವದ ಕ್ಷೇತ್ರದಲ್ಲಿದ್ದಾಗ ಇನ್ನೊಂದು ದಿಕ್ಕಿನಲ್ಲೂ ಕಾಣಿಸಿಕೊಳ್ಳುತ್ತದೆ. ಇದು ದ್ವಿಮುಖ ಅಥವಾ ವ್ಯತ್ಯಮ ಪ್ರವಾಹದ ವೋಲ್ಟೇಜ್. ಆದರೆ ಹೊರೆಯ ಮೂಲಕ ಹರಿಯುವ ಪ್ರವಾಹ ಏಕಮುಖವಾಗಿರುವಂತೆ ಮಾಡಲು ಪರಿವರ್ತಕವನ್ನು (ಕಾಮ್ಯುಟೇಟರ್) ಆರ್ಮೇಚರಿಗೆ ಹೊಂದಿಸುತ್ತಾರೆ. ಹೀಗೆ ಆರ್ಮೇಚರಿನಲ್ಲಿ ವೋಲ್ಟೇಜ್ ದ್ವಿಮುಖವಾಗಿ ಉಂಟಾದರೆ ಪ್ರವಾಹ ಹೊರೆಯ ಮೂಲಕ ಏಕಮುಖವಾಗಿ ಹರಿಯುವಂತೆ ಮಾಡುವುದರ ಹೆಸರು ಪರಿವರ್ತನೆ (ಕಾಮ್ಯುಟೇಷನ್).

ಡಿಸಿ ಮೋಟಾರ್ : ಎಂದರೆ ಏಕಮುಖ ಮೋಟಾರ್. ಈ ಮೊದಲು ವಿವರಿಸಿದ ಏಕಮುಖ ವಿದ್ಯುಜ್ಜನಕಗಳ (ಡಿಸಿ ಜನರೇಟರ್ಸ್) ಆರ್ಮೇಚರಿಗೆ ಕ್ರಮ ಪ್ರವಾಹದ ಹೊರೆಯನ್ನು ಹೇರಿದಾಗ ಅವು ಮೋಟಾರುಗಳಾಗಿ ಕ್ರಿಯೆ ಎಸಗುತ್ತವೆ. ಅಂದರೆ ಅವುಗಳಿಂದ ಯಾಂತ್ರಿಕಶಕ್ತಿ ಉತ್ಪಾದನೆ ಆಗುವುದು. (ಎಂ.ಎಚ್.ಡಿ.)

ಪ್ರಾರಂಭಕ : ಜಡಸ್ಥಿತಿಯಲ್ಲಿರುವ ಒಂದು ಏಕಮುಖ ವಿದ್ಯುತ್ ಪ್ರವಾಹ ಮೋಟಾರಿಗೆ(ಡಿಸಿ ಮೋಟಾರ್) V ವೋಲ್ಟ್ ವಿದ್ಯುತ್ ವೋಲ್ಟೇಜನ್ನು ಅಳವಡಿಸಿದರೆ ಅದರಲ್ಲಿ ಅಧಿಕ ಪ್ರಮಾಣದ ವಿದ್ಯುತ್ ಪ್ರವಾಹ ಹರಿಯುತ್ತದೆ. ಕಾರಣ, ಮೋಟಾರ್ ಜಡಸ್ಥಿತಿಯಲ್ಲಿರುವಾಗ ಅದರ $E_b$, ವಿರೋಧಿ ವಿದ್ಯುತ್ ವಾಹಕ ಬಲ ಉತ್ಪತಿಯಾಗಲಾರದು. ಆದ್ದರಿಂದ ವಿದ್ಯುತ್ ಪ್ರವಾಹದ ಪ್ರಮಾಣ $\frac{V}{r_a}$ ಆಗಿರುತ್ತದೆ. ಇದು ಮೋಟಾರಿನಲ್ಲಿ ಸಾಧಾರಣವಾಗಿ ಹರಿಯಬೇಕಾದ $I_f$ amps ಗಿಂತ ಬಹಳ ಹೆಚ್ಚು. ಉದಾಹರಣೆಗೆ, 50 ಅಶ್ವಸಾಮರ್ಥ್ಯ 220 ವೋಲ್ಟ್ ಡಿಸಿ ಮೋಟಾರಿಗೆ ಅಳವಡಿಸಬೇಕಾದ ವೋಲ್ಟೇಜ್ $V = 220$ ವೋಲ್ಟುಗಳು ಮೋಟಾರಿನ ನಿರೋಧ (ರೆಸಿಸ್ಟೆನ್ಸ್) $r_a = 0.2$ ಓಮ್.

ಆಗ $I_m = \frac{V}{r_a} = 1100$ amps. ಮೋಟಾರಿನ ಸಾಮಾನ್ಯ ಪ್ರವಾಹ

$$I_f = \frac{50 \times 746}{220} = 169.5 \text{ amps.}$$

ಆದ್ದರಿಂದ ನಾವು ಮೋಟಾರನ್ನು ಚಲನೆ ಮಾಡಬೇಕಾದಾಗ ಅದರ ವಿದ್ಯುತ್ ಪ್ರವಾಹ ಬೇಕಾದ ಪ್ರಮಾಣದಲ್ಲಿರುವಂತೆ ತಕ್ಕ ಉಪಕರಣವನ್ನು ಅಳವಡಿಸಬೇಕು.




ಚಿತ್ರ 12

ಇದರ ಹೆಸರು ಪ್ರಾರಂಭಕ (ಸ್ಟಾರ್ಟರ್). ಚಿತ್ರ 12ರಲ್ಲಿ ಶಂಟ್ ಮೋಟಾರಿನ ಪ್ರಾರಂಭಕವನ್ನು ಕಾಣಬಹುದು. $r_1, r_2, r_3, \ldots$ ಇತ್ಯಾದಿಗಳು ನಿರೋಧಕಗಳು. H ಕೈಯ್ಯ ಮೂಲಕ ಒಂದು ವಿದ್ಯುತ್ ತಂತಿಯನ್ನು ಅಳವಡಿಸಿದೆ. ಇದು off ಸ್ಥಳದಲ್ಲಿರುವಾಗ ಮೋಟಾರು ಜಡಸ್ಥಿತಿಯಲ್ಲೂ on ಸ್ಥಳದಲ್ಲಿದ್ದಾಗ ಪೂರ್ಣ ಚಲನೆಯಲ್ಲೂ ಇರುತ್ತದೆ. ಮೋಟಾರನ್ನು ಚಲನೆಗೆ ತರಬೇಕಾದಲ್ಲಿ H ಕೈಯನ್ನು ಮೊದಲು 1ನೆಯ ಗುಂಡಿಯ ಮೇಲೆ ತಳ್ಳಿ ಸ್ವಲ್ಪ ಕಾಲಾನಂತರ 2ನೆಯ ಗುಂಡಿಗೆ ತಳ್ಳಿ ಕ್ರಮೇಣ

on ಸ್ಥಳಕ್ಕೆ ತರಬೇಕು. ಒಂದು ಮೃದುಕಬ್ಬಿಣದ ಚೂರು D ಯನ್ನು H ಗೆ ಜೋಡಿಸಿರುತ್ತದೆ. H ಕೈಗೆ S ಎಂಬ ಒಂದು ಸ್ಪ್ರಿಂಗ್ ಜೋಡಣೆಯಾಗಿರುತ್ತದೆ. H ಕೈ on ಸ್ಥಳದಲ್ಲಿರುವಾಗ ಈ ಸ್ಪ್ರಿಂಗು ಅದನ್ನು off ಸ್ಥಳಕ್ಕೆ ತರಲು ಎಳೆಯುತ್ತಿರುತ್ತದೆ. ಆದರೆ NV ಅಯಸ್ಕಾಂತ Hಗೆ ಜೋಡಿಸಿರುವ D ಯನ್ನು ಆಕರ್ಷಿಸಿ ಹಿಡಿದು H ಕೈ off ಸ್ಥಳಕ್ಕೆ ಹೋಗದಂತೆ ತಡೆದಿರುತ್ತದೆ. ಮೋಟಾರಿನ ಅಯಸ್ಕಾಂತದಲ್ಲಿ ಹರಿಯುವ ವಿದ್ಯುಚ್ಛಕ್ತಿ NV ಅಯಸ್ಕಾಂತದಲ್ಲಿಯೂ ಹರಿಯುತ್ತಿರುತ್ತದೆ. ಯಾವುದೇ ಆಕಸ್ಮಿಕ ಕಾರಣಕ್ಕಾಗಿ ಮೋಟಾರಿನ ವೋಲ್ಟೇಜ್ V ತಪ್ಪಿದಲ್ಲಿ NV ಯ ಆಕರ್ಷಣ ಬಲ ಇಲ್ಲವಾಗಿ H ಕೈ off ಸ್ಥಳಕ್ಕೆ ಧಾವಿಸುತ್ತದೆ. ಹೀಗೆ ಧಾವಿಸದೆ H ಕೈ on ಸ್ಥಳದಲ್ಲೇ ನಿಂತ ಪಕ್ಷಕ್ಕೆ ಪುನಃ V ವೋಲ್ಟೇಜ್ ಬಂದಾಗ ಮೋಟಾರಿಗೆ ಅಪಾಯ ಸಂಭವಿಸುತ್ತದೆ ಮತ್ತು ಯಾವುದೇ ಕಾರಣಕ್ಕಾಗಿ ಮೋಟಾರಿನ ಅಯಸ್ಕಾಂತದ ವಿದ್ಯುತ್ ಪ್ರವಾಹ ಕಡಿಮೆಯಾಗಿ ಮೋಟಾರಿನ ವೇಗ ಬಹಳ ಜಾಸ್ತಿಯಾದಾಗ್ಯೂ NVಯ ಆಕರ್ಷಣ ಬಲ ಕಡಿಮೆಯಾಗಿ H ಕೈ off ಸ್ಥಳಕ್ಕೆ ಧಾವಿಸಿ ಮೋಟಾರನ್ನು ನಿಲ್ಲಿಸುತ್ತದೆ. ಈ ಕಾರಣಗಳಿಗಾಗಿ S ಸ್ಪ್ರಿಂಗ್, D ಕಬ್ಬಿಣ ಮತ್ತು NV ಅಯಸ್ಕಾಂತಗಳನ್ನು ಅಳವಡಿಸಿರುತ್ತದೆ. OL ಎಂಬ ಇನ್ನೊಂದು ಅಯಸ್ಕಾಂತವನ್ನೂ ಅಳವಡಿಸಿದೆ. ಇದರಲ್ಲಿ ಮೋಟಾರಿನ ಆರ್ಮೆಚರಿನಲ್ಲಿ ಹರಿಯುವ ವಿದ್ಯುತ್ ಪ್ರವಾಹ ಹರಿಯುತ್ತದೆ. ಯಾವ ಕಾರಣದಿಂದಾಗಲಿ ಮೋಟಾರಿನಲ್ಲಿ ನಿರ್ಬಂಧಿಸಿರುವುದಕ್ಕಿಂತ (ಅಂದರೆ $I_f$ ಗಿಂತ) ಜಾಸ್ತಿ ಪ್ರಮಾಣದ ವಿದ್ಯುತ್ ಪ್ರವಾಹ ಹರಿಯಲು ತೊಡಗಿದರೆ OL ಅಯಸ್ಕಾಂತದ ಆಕರ್ಷಣ ಬಲ ಜಾಸ್ತಿಯಾಗಿ ಅದು R ಮೃದು ಕಬ್ಬಿಣದ ತುಂಡನ್ನು ಎಳೆದು C ಗುಂಡಿಗೆ ತಗಲುವಂತೆ ಮಾಡುತ್ತದೆ. ಈ ರೀತಿ ಆದಾಗ NVಯಲ್ಲಿ ಹರಿಯುವ ವಿದ್ಯುತ್ ಪ್ರಮಾಣದ ಬಹು ಭಾಗ PQCB ಮಾರ್ಗವಾಗಿ ಹೋಗುತ್ತದೆ. ಇದರಿಂದ NVಯ ಆಕರ್ಷಣಬಲ ಕಡಿಮೆಯಾಗಿ H ಕೈ off ಸ್ಥಳಕ್ಕೆ ಹೋಗುವುದರಿಂದ ಮೋಟಾರಿಗೆ ಅಧಿಕ ವಿದ್ಯುತ್ ಪ್ರವಾಹದಿಂದ ಒದಗಬಹುದಾದ ಆಪತ್ತನ್ನು OL ಅಯಸ್ಕಾಂತ ಸ್ವಯಂಚಾಲಿತವಾಗಿ ತಪ್ಪಿಸುತ್ತದೆ. ಈ ರೀತಿಯಾಗಿ ಅಳವಡಿಸಿರುವ ಉಪಕರಣಗಳ ಸಮೂಹದ ಹೆಸರು ಪ್ರಾರಂಭಕ.



ಚಿತ್ರ 13

ಚಿತ್ರ 13ರಲ್ಲಿ ಶ್ರೇಣಿ ಮೋಟಾರಿನ ಪ್ರಾರಂಭಕದಲ್ಲಿ NV ಅಯಸ್ಕಾಂತವನ್ನು ಅಳವಡಿಸಿದೆ. ಇದು ಶಂಟ್ ಮೋಟಾರಿನ ಪ್ರಾರಂಭಕದಲ್ಲಿ ವರ್ಣಿಸಿರುವ ರೀತಿಯಲ್ಲೇ ಕೆಲಸಮಾಡಿ ವೋಲ್ಟೇಜ್ ಇಲ್ಲದಿರುವಾಗ ಮೋಟಾರನ್ನು ನಿಲ್ಲಿಸುತ್ತದೆ. ಚಿತ್ರ 14ರಲ್ಲಿ ಇದೇ ಪ್ರಾರಂಭಕದಲ್ಲಿ OL ಅಯಸ್ಕಾಂತವನ್ನು ಅಳವಡಿಸುವ ರೀತಿ ತೋರಿಸಿದೆ. ಇದು



ಚಿತ್ರ 14

ಶಂಟ್ ಮೋಟಾರಿನಲ್ಲಿ ತಿಳಿಸಿದಂತೆ ವಿದ್ಯುತ್ ಪ್ರವಾಹದ ಪ್ರಮಾಣ ಸಂಯೋಜಿತ ಮಟ್ಟಕ್ಕಿಂತಲೂ ಅಧಿಕವಾದಾಗ ಮೋಟಾರಿಗೆ ವಿದ್ಯುತ್ ಸರಬರಾಜನ್ನು ನಿಲ್ಲಿಸುತ್ತದೆ.
(ಎಂ.ಡಿ.ಕೆ.)

**ಏಕಮುಖ ವಿದ್ಯುದ್ಯಂತ್ರ ಪರೀಕ್ಷೆಗಳು :** ವಿದ್ಯುದ್ಯಂತ್ರಗಳ ಪರೀಕ್ಷೆ ಅವುಗಳ ತಯಾರಿಕೆಯ ಕೊನೆಯ ಹಂತ. ಉದ್ದೇಶಿತಕಾರ್ಯನಿರ್ವಹಣ ಸಾಮರ್ಥ್ಯ ಅವುಗಳಿಗಿದೆಯೇ ಎಂಬುದನ್ನು ತಿಳಿಯಲು ಈ ಪರೀಕ್ಷೆಗಳು ಅವಶ್ಯ. ಎಂಜಿನಿಯರ್ ಬರೆದುಕೊಟ್ಟ ಆಲೇಖ್ಯ ಮತ್ತು ರಚನಾವಿಧಾನಕ್ಕನುಗುಣವಾಗಿ ತಯಾರಿಸಿದ ಈ ಯಂತ್ರಗಳನ್ನು ಕ್ಷೇತ್ರಪರೀಕ್ಷೆಗೆ (ಫೀಲ್ಡ್ ಟೆಸ್ಟ್) ಕಳಿಸುವ ಮೊದಲು ಯಂತ್ರದ ಮುಖ್ಯ ಭಾಗಗಳು, ಧ್ರುವಗಳು (ಪೋಲ್ಸ್), ದಂಡ (ಷಾಫ್ಟ್) ಧಾರಕಗಳು (ಬೇರಿಂಗ್ಸ್) ಮತ್ತು ಯಂತ್ರದಲ್ಲಿ ಬಳಸಿರುವ ಅವಾಹಕಗಳ ಪ್ರತಿರೋಧ (ಇನ್ಸುಲೇಷನ್ ರೆಸಿಸ್ಟೆನ್ಸ್) ಇವನ್ನು ನೋಡಿರಬೇಕು. ಅನಂತರ ಅವು ಪರೀಕ್ಷೆಗೆ ಅರ್ಹವಾಗುತ್ತವೆ. ಒಂದು ಯಂತ್ರದ ದಕ್ಷತೆಯನ್ನು ಅಳೆಯುವುದರ ಮೂಲಕ ಅದರ ಕಾರ್ಯನಿರ್ವಹಣೆಯ ಬಗ್ಗೆ ಒಂದು ನಿರ್ಧಾರಕ್ಕೆ ಬರಬಹುದು. ಯಂತ್ರದಿಂದ ದೊರೆಯುವ ಸಾಮರ್ಥ್ಯ (ಔಟ್‌ಪುಟ್ ಪವರ್) ಮತ್ತು ಯಂತ್ರಕ್ಕಾಗಿ ವ್ಯಯಿಸಿದ ಸಾಮರ್ಥ್ಯ ಇವುಗಳ ಪ್ರಮಾಣ ಅದರ ದಕ್ಷತೆ. ಇದನ್ನು ಕಂಡುಹಿಡಿಯುವಾಗ ಮುಖ್ಯವಾಗಿ ಯಂತ್ರದಲ್ಲಿ ಉಪಯೋಗಿಸಲಾಗಿರುವ ಕಬ್ಬಿಣ, ತಾಮ್ರದಿಂದಾದ ನಷ್ಟಗಳು ಹಾಗೂ ಘರ್ಷಣದಿಂದ ಮತ್ತು ಕಾಂತತ್ವದಿಂದಾದ ನಷ್ಟಗಳನ್ನು ಗಣನೆಗೆ ತೆಗೆದುಕೊಳ್ಳಬೇಕು.

ಏಕಮುಖ ವಿದ್ಯುದ್ಯಂತ್ರಗಳನ್ನು ಪರೀಕ್ಷೆ ಮಾಡಲು ಐದು ವಿಧಾನಗಳನ್ನು ಅನುಸರಿಸುತ್ತಾರೆ.

1 ಗತಿಪ್ರತಿಬಂಧಕ ಪರೀಕ್ಷೆ (ಬ್ರೇಕ್ ಟೆಸ್ಟ್) : ಸಣ್ಣ ಏಕಮುಖ ವಿದ್ಯುತ್ ಮೋಟಾರನ್ನು ಪರೀಕ್ಷಿಸಲು ಇದೊಂದು ನೇರ ವಿಧಾನ. ನೀರಿನಿಂದ ತಂಪಿಸುವ ಒಂದು ರಾಟೆ. ಇದನ್ನು ಒಂದು ಸಣ್ಣ ಮೋಟಾರಿನ ದಂಡದ ಮೇಲೆ ನಿಲ್ಲಿಸಿದೆ. ರಾಟೆಯಲ್ಲಿ ಗತಿಪ್ರತಿಬಂಧವನ್ನು ಉಂಟುಮಾಡಿ ಯಂತ್ರದ ಮೇಲೆ ಉಂಟಾದ ಹೊರೆಯನ್ನು (ಲೋಡ್) ಯಂತ್ರ ತನ್ನ ಸಾಮರ್ಥ್ಯವಿರುವಷ್ಟು ವಿದ್ಯುತ್ಪ್ರವಾಹವನ್ನು ಪಡೆಯುವವರೆಗೂ ಅಳವಡಿಸುತ್ತಾರೆ. ರಾಟೆಯ ಮೇಲೆ ಉಪಯೋಗಿಸಲಾದ ಪಟ್ಟಿಯ (ಬೆಲ್ಟ್) ಬಿಗಿ ಹಾಗೂ ಜಾರುವ ಭಾಗಗಳಲ್ಲುಂಟಾದ ಎಳೆತಗಳಲ್ಲಿನ (ಟೆನ್ಷನ್ಸ್) ವ್ಯತ್ಯಾಸದ ಸಹಾಯದಿಂದ ಮೋಟಾರಿನಿಂದೊದಗುವ ಸಾಮರ್ಥ್ಯವನ್ನು ನಿರ್ಧರಿಸುತ್ತಾರೆ. ಇಲ್ಲಿ $W_1 =$ ಇಳಿಬಿಡಲಾದ ತೂಕ (ಕಿಲೋಗ್ರಾಂಗಳಲ್ಲಿ), $W_2 =$ ಎಗರು ತ್ರಾಸಿನ ಓದಿಕೆ (ಕಿಲೋಗ್ರಾಂಗಳಲ್ಲಿ). N = ಮೋಟಾರಿನ ವೇಗ (RPM ಗಳಲ್ಲಿ), R = ರಾಟೆಯ ತ್ರಿಜ್ಯ (ಮೀಟರುಗಳಲ್ಲಿ). ಗಣನೆಯ ಪ್ರಕಾರ ಲಭ್ಯ ಸಾಮರ್ಥ್ಯ (ಔಟ್‌ಪುಟ್) $= 2\pi RN(W_1 - W_2) \times 9.81$ ವಾಟುಗಳು. ಯಂತ್ರಕ್ಕೆ ಒದಗಿಸಿದ ವೋಲ್ಟೇಜ್ V ಇದ್ದು ಯಂತ್ರಪಡೆದ ವಿದ್ಯುತ್ I ಇದ್ದಾಗ ನಾವು ವ್ಯಯಿಸಿದ ಸಾಮರ್ಥ್ಯ (ಇನ್‌ಪುಟ್) = VI ವಾಟುಗಳು.




ಚಿತ್ರ 1

$$\text{ಆಗ ದಕ್ಷತೆ (ಸೇಕಡಾ)} = \frac{2\pi RN\,(W_1 - W_2)\,9.81}{VI}$$

ದೊಡ್ಡ ಮೋಟಾರುಗಳನ್ನು ಪರೀಕ್ಷಿಸಲು ಈ ಪರೀಕ್ಷೆ ಸಹಾಯವಾಗುವುದಿಲ್ಲ. ಏಕೆಂದರೆ ನಾವು ವ್ಯಯಿಸಿದ ಸಾಮರ್ಥ್ಯ ನಷ್ಟವಾಗುವುದಲ್ಲದೇ ಪರೀಕ್ಷೆಗೆ ಬೇಕಾದ ಅನುಕೂಲಗಳಿರುವುದಿಲ್ಲ.

2 ಸ್ವಿನ್‌ಬರ್ನ್‌ನ ಪರೀಕ್ಷೆ : ಶಂಟ್ ಮತ್ತು ಸಮ್ಮಿಶ್ರ (ಕಾಂಪೌಂಡ್) ಯಂತ್ರಗಳನ್ನು ಪರೀಕ್ಷಿಸಲು ಈ ವಿಧಾನ ಸಹಕಾರಿ. ಯಂತ್ರದ ಮೇಲೆ ಯಾವ ಹೊರೆಯೂ

ಇಲ್ಲದಾಗ ಅದನ್ನು ಓಡಿಸಿ ಈ ಪರೀಕ್ಷೆ ನಡೆಸುತ್ತಾರೆ. ಇದನ್ನು ನಡೆಸಲು ಒಂದು ನಿಬಂಧನೆ ಎಂದರೆ ಪರೀಕ್ಷೆಗೊಳಗಾದ ಯಂತ್ರಗಳಲ್ಲಿ ಅಭಿವಾಹಗಳು (ಫ್ಲಕ್ಸಸ್) ಸ್ಥಿರವಾಗಿರಬೇಕು. ಈ ಪರೀಕ್ಷೆಯಿಂದ ಯಂತ್ರದಲ್ಲಿ ಉಂಟಾಗುವ ನಷ್ಟಗಳನ್ನು ಗೊತ್ತುಮಾಡಿ, ಈ ತಿಳಿವಳಿಕೆಯಿಂದ ಯಂತ್ರದ ದಕ್ಷತೆಯನ್ನು ನಿರ್ಧರಿಸಬಹುದು. ಈ ವಿಧಾನದ ಒಂದು ಅನುಕೂಲವೆಂದರೆ ನಾವು ಯಂತ್ರಕ್ಕಾಗಿ ವ್ಯಯಿಸುವ ಸಾಮರ್ಥ್ಯ ಅಲ್ಪ. ಇದರಿಂದಾಗಿ ದೊಡ್ಡ ಯಂತ್ರಗಳನ್ನು ಪರೀಕ್ಷೆ ಮಾಡಬಹುದು. ಗೊತ್ತು ಮಾಡುವ ನಷ್ಟಗಳು ಸ್ಥಿರವಾದ್ದರಿಂದ ಯಂತ್ರದ ಮೇಲೆ ಬೇರೆ ಬೇರೆ ಹೊರೆಗಳಿದ್ದಾಗ ಅದರ ದಕ್ಷತೆಯನ್ನು ನಿರ್ಧರಿಸಬಹುದು.

3 ವೇಗಾಪಕರ್ಷಕ ಪರೀಕ್ಷೆ (ರಿಟಾರ್ಡೇಷನ್ ಟೆಸ್ಟ್) : ಶಂಟ್ ಮೋಟಾರು ಗಳ ಮತ್ತು ಏಕಮುಖ ವಿದ್ಯುಜ್ಜನಕಗಳ ಪರೀಕ್ಷೆಯಲ್ಲಿ ಈ ವಿಧಾನದ ಬಳಕೆಯಿದೆ. ಇಲ್ಲಿ ಘರ್ಷಣದಿಂದಾದ ನಷ್ಟ ಹಾಗೂ ಕಾಂತತ್ವದಿಂದಾದ ನಷ್ಟಗಳನ್ನು ಗೊತ್ತುಮಾಡು ತ್ತಾರೆ. ಈ ಪರೀಕ್ಷೆ ನಡೆಸಲು ಯಂತ್ರವನ್ನು ಅದರ ಸಾಧಾರಣ ವೇಗಕ್ಕಿಂತ ಹೆಚ್ಚು ವೇಗದಲ್ಲಿ ಓಡಿಸಿ ಅದರ ಆರ್ಮೆಚರಿನ ಕಡೆಯಲ್ಲಿ ವಿದ್ಯುತ್ಪ್ರವಾಹವನ್ನು ನಿಲ್ಲಿ ಸುತ್ತಾರೆ. ಆಗ ಅದರ ವೇಗ ಕಡಿಮೆಯಾಗುತ್ತದೆ. ಅದರ ಚಲನಶಕ್ತಿಯನ್ನು (ಕೈನೆಟಿಕ್ ಎನರ್ಜಿ) ನಷ್ಟಗಳನ್ನು ಕಂಡುಹಿಡಿಯಲು ಬಳಸುತ್ತಾರೆ. ಅನಂತರ ತಾಮ್ರದಿಂದಾದ ನಷ್ಟಗಳನ್ನು (ಗೊತ್ತಾದ ಹೊರೆಯಲ್ಲಿ) ಗಣನೆಗೆ ತೆಗೆದುಕೊಂಡು ದಕ್ಷತೆಯನ್ನು ಗೊತ್ತುಮಾಡುತ್ತಾರೆ.

4 ಹಾಪ್‌ಕಿನ್‌ಸನ್ನನ ಪರೀಕ್ಷೆ : ಈ ಪರೀಕ್ಷಾವಿಧಾನವನ್ನು ಹೆಚ್ಚು ಸಾಮರ್ಥ್ಯ ವುಳ್ಳ ಎರಡು ಸಮಾನ ಶಂಟ್ ಮೋಟಾರುಗಳನ್ನು ಪರೀಕ್ಷಿಸಲು ಉಪಯೋಗಿ ಸುತ್ತಾರೆ. ಎರಡು ಮೋಟಾರುಗಳಲ್ಲಿ ಒಂದನ್ನು ವಿದ್ಯುತ್ ಮೋಟಾರ್ ಆಗಿ ಓಡುವಂತೆಯೂ ಇನ್ನೊಂದನ್ನು ವಿದ್ಯುಜ್ಜನಕವಾಗಿ ಓಡುವಂತೆಯೂ ಸಮಾಂತರ ಸಂಬಂಧದಲ್ಲಿ ಜೋಡಿಸುತ್ತಾರೆ (ಕನೆಕ್ಟೆಡ್ ಇನ್ ಪ್ಯಾರಲಲ್). ವಿದ್ಯುತ್ ಮೋಟಾರು ವಿದ್ಯುಜ್ಜನಕ ಓಡಲು ಸಾಮರ್ಥ್ಯ ಒದಗಿಸಿ ಕೊಡುತ್ತದೆ. ವಿದ್ಯುಜ್ಜನಕ ದಲ್ಲಿ ಉತ್ಪತ್ತಿಯಾದ ವಿದ್ಯುಚ್ಛಕ್ತಿಯನ್ನು ವಿದ್ಯುತ್ ಮೋಟಾರಿನಲ್ಲಿ ಬಳಸಲಾಗುವುದು. ಪ್ರಧಾನ ತಂತಿಗಳಿಂದ (ಮೆಯಿನ್ ಲೈನ್ಸ್) ಒದಗಿದ ಪ್ರವಾಹ ಸಾಮರ್ಥ್ಯ ನಷ್ಟಗಳನ್ನು ಮಾತ್ರ ಗಣನೆಗೆ ತೆಗೆದುಕೊಳ್ಳಲಾಗುವುದು. ಈ ನಷ್ಟಗಳು ಎರಡು ಯಂತ್ರಗಳಿಗೂ ಸಮಾನವಾಗಿ ಹಂಚಲ್ಪಟ್ಟು ಅವೆರಡರ ದಕ್ಷತೆಗಳನ್ನೂ ನಿರ್ಧರಿಸಲು ಸಹಾಯವಾಗುತ್ತದೆ. ದೊಡ್ಡ ಯಂತ್ರಗಳ ಪರೀಕ್ಷೆಗೆ ಇದು ಸುಲಭದ ವಿಧಾನ. ಇದು ಪೂರ್ಣ ಹೊರೆಯ ಸ್ಥಿತಿಯಲ್ಲಿ ದಕ್ಷತೆ ಕೊಡುವುದಲ್ಲದೆ ಉಷ್ಣತೆಯಲ್ಲುಂಟಾದ ಏರಿಕೆಯನ್ನು ನಿರ್ಧರಿಸುತ್ತದೆ. ಈ ಪರೀಕ್ಷೆಯನ್ನು ಹಾಪ್‌ಕಿನ್‌ಸನ್ ಎಂಬಾತ ಮೊದಲು ಬಳಕೆಗೆ ತಂದುದರಿಂದ ಆತನ ಹೆಸರೇ ಇದಕ್ಕೆ ಬಂದಿದೆ. ಇದನ್ನು ಬ್ಯಾಕ್-ಟು-ಬ್ಯಾಕ್ ಪರೀಕ್ಷೆ ಎಂದೂ ಕರೆಯುತ್ತಾರೆ.

5 ಕ್ಷೇತ್ರ ಪರೀಕ್ಷೆ : ಸಾಗಾಣಿಕೆಯಲ್ಲಿ ಬಳಸುವ ಟ್ರಾಮ್ ಕಾರುಗಳಲ್ಲಿ ಸಾಮಾನ್ಯ ವಾಗಿ ಎರಡು ಏಕಮುಖ ಶ್ರೇಣಿ ವಿದ್ಯುತ್ ಮೋಟಾರುಗಳನ್ನು ಬಳಸುತ್ತಾರೆ. ಇಂಥ ಶ್ರೇಣಿ ಮೋಟಾರುಗಳ ಪರೀಕ್ಷೆಗೆ ಕ್ಷೇತ್ರ ಪರೀಕ್ಷೆ ಒಂದು ಸುಲಭ ವಿಧಾನ. ಎರಡು ಸಮಾನ ಮೋಟಾರುಗಳ ಕ್ಷೇತ್ರಗಳನ್ನು ಒಂದಕ್ಕೊಂದು ಅಂಟಿಕೊಂಡಂತೆ ಜೋಡಿಸಿ ಪರೀಕ್ಷೆಗೊಳಪಡಿಸುತ್ತಾರೆ. ಮೊದಲನೆಯ ಯಂತ್ರ ಮೋಟಾರಾಗಿ ಓಡಿ ಎರಡನೆಯದು ವಿದ್ಯುಜ್ಜನಕವಾಗಿ ಓಡುತ್ತದೆ. ಎರಡನೆಯ ಯಂತ್ರದಿಂದ ಒದಗಿದ




ಚಿತ್ರ 2 M, M–ಮೋಟಾರುಗಳು, R–ಪ್ರತಿರೋಧ.

ಸಾಮರ್ಥ್ಯ ಅದಕ್ಕೆ ಸಂಬಂಧಿಸಿದ ಪ್ರತಿರೋಧದಲ್ಲಿ (R) ವ್ಯಯವಾಗುತ್ತದೆ. ಈ ರೀತಿಯ ಜೋಡಣೆಯಿಂದ ಯಂತ್ರದಲ್ಲಿನ ನಷ್ಟಗಳು ಸಮಾನವಾಗಿ ಎರಡು ಯಂತ್ರಕ್ಕೂ ಹಂಚಲ್ಪಡುತ್ತವೆ. ಇದರಿಂದ ಯಂತ್ರಗಳ ದಕ್ಷತೆ ನಿರ್ಧರಿಸಲು ಸಾಧ್ಯ.

ಮೇಲೆ ತಿಳಿಸಿದ ಪರೀಕ್ಷೆಗಳು ಸಾಮಾನ್ಯವಾಗಿ ಬಳಕೆಯಲ್ಲಿವೆ. ಕೆಲವು ವಿಶೇಷ ಯಂತ್ರಗಳಿಗೆ ಅಲ್ಲಿನ ಸ್ಥಿತಿಗನುಸಾರವಾಗಿ ಇತರ ಪರೀಕ್ಷೆಗಳನ್ನು ಮಾಡಬೇಕಾಗುತ್ತದೆ. ಏಕಮುಖ ವಿದ್ಯುದ್ಯಂತ್ರಗಳಲ್ಲಿ ವಿದ್ಯುತ್ಪ್ರವಾಹ ಕ್ರಮವಾದ್ದರಿಂದ ಅವುಗಳ ಪರೀಕ್ಷೆಗಳು ಅಷ್ಟು ಕಠಿಣವಲ್ಲ. ನಿರ್ಧರಿಸಬೇಕಾದ ಅಂಶಗಳು ಸಂಖ್ಯೆಯಲ್ಲಿ ಕಡಿಮೆ ಇವೆ. (ಬಿ.ಜಿ.ಆರ್.)

**ಏಕರೂಪ ಶಬ್ದಗಳು :** ಭಾಷೆಯಲ್ಲಿ ಕಾಣಬರುವ ಒಂದೇ ಉಚ್ಚಾರಣೆಯ ಅಥವಾ ಒಂದೇ ಲಿಖಿತರೂಪದ ಆದರೆ ಅರ್ಥಭೇದವುಳ್ಳ ಪದಗಳನ್ನು ಏಕರೂಪ ಶಬ್ದಗಳು ಅಥವಾ ಸಮಾನ ರೂಪದ ಪದಗಳು ಎನ್ನುತ್ತಾರೆ (ಹೋಮೋನಿಮ್ಸ್). ಉದಾಹರಣೆಗೆ, ವರ್ಣ ಎಂಬ ರೂಪಕ್ಕೆ ಬಣ್ಣ, ಜಾತಿ ಎಂಬೆರಡು ಅರ್ಥಗಳೂ ದ್ವಿಜ ಎಂಬ ಪದಕ್ಕೆ ಬ್ರಾಹ್ಮಣ, ಹಲ್ಲು ಮತ್ತು ಹಕ್ಕಿ ಎಂಬ ಮೂರು ಅರ್ಥಗಳೂ ಇವೆ. ಹಿಂದಿನ ಭಾರತೀಯ ಶಬ್ದಕೋಶಗಳಲ್ಲಿ ಈ ಬಗೆಯ ಪದಗಳನ್ನು ನಾನಾರ್ಥವುಳ್ಳ ಪದ ಗಳೆಂದು ಕರೆದಿದ್ದಾರೆ. ಅಂದರೆ, ಒಂದೇ ಪದಕ್ಕೆ ಪರಿಸರಣ (ಕಾಂಟೆಕ್ಸ್ಟ್) ಭೇದದಿಂದ ಬೇರೆ ಬೇರೆ ಅರ್ಥಸೂಚಕ ಶಕ್ತಿ ಇದೆಯೆಂದು ಹಿಂದಿನವರ ತಿಳಿವಳಿಕೆಯಾಗಿತ್ತು. ಆದರೆ, ನಿಜಕ್ಕೂ ಇವು ಸಮಾನ ರೂಪದ, ಅರ್ಥಭೇದವಿರುವ ಎರಡು ಮೂರು ಬೇರೆ ಬೇರೆ ಪದಗಳು.

ಈ ಬಗೆಯ ಜೋಡಿ ಪದಗಳಲ್ಲಿ (ಎರಡಕ್ಕಿಂತ ಹೆಚ್ಚು ಪದಗಳೂ ಈ ಜೋಡಿ ಗಳಲ್ಲಿರಬಹುದು) ಒಂದು ನಾಮವಾಚಕವಾಗಿಯೂ ಇನ್ನೊಂದು ಕ್ರಿಯಾವಾಚಕ ವಾಗಿಯೂ ಇರಬಹುದು. ಹಾಗಿದ್ದಲ್ಲಿ ಅವುಗಳ ಪ್ರಯೋಗ ಭೇದದಿಂದ ವ್ಯವ ಹಾರದಲ್ಲಿ ತೊಂದರೆಯೆನಿಸುವುದಿಲ್ಲ (ಉದಾ : ಸೇರು–ಅಳತೆಯ ಒಂದು ಪ್ರಮಾಣ ; ತಲಪುವುದು). ಎರಡು ಪದಗಳೂ ನಾಮವಾಚಕಗಳಾಗಿಯೊ ಕ್ರಿಯಾವಾಚಕಗಳಾಗಿಯೊ ಇರಬಹುದು (ಉದಾ : ಹದ್ದು–ಒಂದು ಹಕ್ಕಿ; ಗಡಿ ).

ಭಾಷಾ ಬೆಳೆವಣಿಗೆಯ ಯಾವುದೇ ಕಾಲದಲ್ಲಿನ ಭಿನ್ನಾರ್ಥಕ ಎರಡು ಅಥವಾ ಹೆಚ್ಚಿನ ಪದಗಳ ಲಿಖಿತರೂಪ ಅಥವಾ ಉಚ್ಚಾರಣೆಯ ರೂಪ ಒಂದೇ ಆಗಿ ಕಂಡು ಬಂದರೂ ಅವು ಭಿನ್ನ ಮೂಲದಿಂದ ಬಂದವುಗಳಾಗಿರುತ್ತವೆ. ಹೀಗೆ ಒಂದು ಕಾಲದಲ್ಲಿ ಭಿನ್ನರೂಪದ ಪದಗಳಾಗಿದ್ದು ಇನ್ನೊಂದು ಕಾಲದಲ್ಲಿ ಸಮಾನರೂಪದ ಪದಗಳಾಗಿ ಮಾರ್ಪಡಲು ಭಾಷೆಯಲ್ಲುಂಟಾಗುವ ಧ್ವನಿ ಪರಿಣಾಮಗಳೇ ಕಾರಣ ವೆನ್ನಬಹುದು. ಹಳಗನ್ನಡದ ಅಱಿ=ತಿಳಿ ಮತ್ತು ಅರಿ=ಕತ್ತರಿಸು ಎಂಬ ಎರಡು ಪದಗಳೂ ಈಗ ಅರಿ ಎಂಬ ರೂಪದಲ್ಲಿ ಕಂಡುಬರುತ್ತವೆ. ಱಕಾರವು ರಕಾರವಾಗಿ ಪರಿವರ್ತಿತವಾದ್ದರಿಂದ ಭಿನ್ನರೂಪದಲ್ಲಿದ್ದ ಪದಗಳು ಸಮಾನರೂಪವನ್ನು ತಾಳಿದುವು.

ಬರೆವಣಿಗೆ ಮತ್ತು ಉಚ್ಚಾರಣೆ ಎರಡರಲ್ಲೂ ಸಮಾನರೂಪದ ಪದಗಳಿರುವಂತೆ ಬರೆವಣಿಗೆಯಲ್ಲಿ ಮಾತ್ರ ಸಮಾನರೂಪವಿದ್ದು ಉಚ್ಚಾರಣೆ ಯಲ್ಲಿ ಭೇದವಿರುವ ಪದಗಳೂ ಉಂಟು. ಲಿಖಿತ ರೂಪದಲ್ಲಿ ವ್ಯತ್ಯಾಸ ವಿಲ್ಲದ ತಂದೆ ಎಂಬ ಜೋಡಿ ಪದಗಳಲ್ಲಿ (ಒಂದು ನಾಮವಾಚಕ, ಇನ್ನೊಂದು ಕ್ರಿಯಾ ವಾಚಕ) ಒಂದರ ಮೊದಲ ಸ್ವರ ಕೆಲವರ ಉಚ್ಚಾರಣೆಯಲ್ಲಿ ವಿವೃತ ಸ್ವರ (ಓಪನ್ ಓವೆಲ್) ವಾಗಿಯೂ ಇನ್ನೊಂದರ ಮೊದಲ ಸ್ವರ ಸಂವೃತ ಸ್ವರ (ಕ್ಲೋಸ್ಡ್ ಓವೆಲ್) ವಾಗಿಯೂ ಕಾಣಬರುತ್ತದೆ. ಇನ್ನು ಕೆಲವರ ಉಚ್ಚಾರಣೆಯಲ್ಲಿ ಈ ಎರಡು ಸಂದರ್ಭಗಳಲ್ಲೂ ವಿವೃತ ಸ್ವರದ ಪ್ರಯೋಗವಿದೆ. ಇಲ್ಲಿ ತಂದೆ ಎಂಬ ಸಮಾನರೂಪದ ಜೋಡಿಪದಗಳೆರಡರಲ್ಲೂ ಮೊದಲ ಸ್ವರ ವಿವೃತ ಸ್ವರವಾಗಿರುವ ಉಪಭಾಷೆಯಲ್ಲಿ ಮಾತ್ರ ಈ ಪದಗಳು ಸಮಾನರೂಪದ ಪದಗಳೆನ್ನಿಸಿಕೊಳ್ಳುತ್ತವೆ. ಉಚ್ಚಾರಣೆಯಲ್ಲಿ ಭೇದವಿಲ್ಲದ ಜೋಡಿ ಪದಗಳಿಗೇ ಸಮಾನರೂಪದ ಪದಗಳು ಎನ್ನುವ ಪಾರಿಭಾಷಿಕ ಶಬ್ದವನ್ನು ಮೀಸಲಾಗಿಟ್ಟುಕೊಂಡು ಬರೆವಣಿಗೆಯಲ್ಲಿ ಮಾತ್ರ ಭೇದವಿಲ್ಲದ ಪದಗಳನ್ನು ಲಿಖಿತ ಸಮಾನ ರೂಪದ ಪದಗಳೆನ್ನಬಹುದು (ಹೋಮೊಗ್ರಾಫ್).

ಭಿನ್ನರೂಪದಲ್ಲಿದ್ದ ಪದಗಳು ಧ್ವನಿ ಪರಿಣಾಮದಿಂದ ಸಮಾನರೂಪದ ಪದಗಳಾಗು ವಂತೆಯೇ ಸಮಾನರೂಪದ ಜೋಡಿಪದಗಳಲ್ಲಿ ವ್ಯವಹಾರದಲ್ಲಿ ಕಷ್ಟವೆಂದು ತೋರಿ ದಾಗ ಧ್ವನಿ ಪರಿಣಾಮಗಳಿಂದ ಒಂದು ಪದದ ರೂಪ ಮಾತ್ರ ಬದಲಾವಣೆಯಾಗಿ ಇನ್ನೊಂದು ಹಾಗೇ ಉಳಿದು ಅವೆರಡೂ ಭಿನ್ನ ರೂಪದ ಪದಗಳಾಗುವುದೂ ಉಂಟು. ಪದಾದಿಯಲ್ಲಿನ ಪಕಾರ ನಡುಗನ್ನಡದಲ್ಲಿ (ಸುಮಾರು 10ನೆಯ ಶತ ಮಾನದಲ್ಲಿ) ಹಕಾರವಾಗಿ ಪರಿವರ್ತಿತವಾಯಿತು. ಈ ಧ್ವನಿ ಪರಿಣಾಮದಿಂದ ಸಮಾನರೂಪದ ಪಾಲು (ಹಿಸ್ಸೆ ; ಹಾಲು) ಎಂಬ ಜೋಡಿಪದಗಳಲ್ಲಿ ಒಂದರ ರೂಪ ಹಾಗೇ ಉಳಿದು (ಹಿಸ್ಸೆ ಎಂಬರ್ಥದ ಪದ) ಇನ್ನೊಂದರ ರೂಪ ಹಾಲು ಎಂದಾಯಿತು. ಹಾಗೆಯೇ ಹಾಡು (ದುಃಸ್ಥಿತಿ ; ಹಾಡು) ಎಂಬ ಜೋಡಿ ಪದಗಳಲ್ಲೊಂದು ಹಾಗೇ ಉಳಿದು ಇನ್ನೊಂದರ ರೂಪ ಹಾಡಾಗಿ ಪರಿವರ್ತಿತ ವಾಯಿತು.

ಸಮಾನ ರೂಪದ ಜೋಡಿಪದಗಳಲ್ಲಿ ಯಾವ ಅರ್ಥದ ಪದ ಹಾಗೇ ಉಳಿ ಯುತ್ತದೆ ಮತ್ತು ಯಾವ ಅರ್ಥದ ಪದ ಪರಿವರ್ತನೆ ಹೊಂದುತ್ತದೆಂಬುದನ್ನು ಧ್ವನಿ ಪರಿಣಾಮಗಳಾಗುವ ಮುಂಚೆ ಹೇಳಲು ಬರುವುದಿಲ್ಲ. ಸಮಾನ ರೂಪದ

ಜೋಡಿ ಪದಗಳಲ್ಲೆಲ್ಲ ಧ್ವನಿ ಪರಿಣಾಮದಿಂದಾಗಿ ಒಂದರ ರೂಪ ಬದಲಾಯಿಸಿ ಅವು ಭಿನ್ನ ರೂಪದ ಪದಗಳಾಗುವುದಿಲ್ಲವೆನ್ನುವುದಕ್ಕೆ ಭಾಷೆಯಲ್ಲಿ ಯಾವುದೇ ಕಾಲದಲ್ಲೂ ಸಮಾನ ರೂಪದ ಪದಗಳು ಉಳಿದು ಬರುವುದೇ ನಿದರ್ಶನ. ಸಾಕಷ್ಟು ಅರ್ಥ ಭೇದವುಳ್ಳ ಮತ್ತು ಅತಿ ಭಿನ್ನ ಪ್ರಸಾರದ ಸಮಾನ ರೂಪದ ಪದಗಳು ಬಹುಕಾಲ ಭಾಷೆಯಲ್ಲಿ ಉಳಿದು ಬರುವುದು ಸಾಧ್ಯ.

ಶ್ಲೇಷೆ (ಪನ್) ಇರುವಂತೆ ಕಾವ್ಯ ರಚಿಸಲು ಈ ರೀತಿಯ ಸಮಾನ ರೂಪದ ಪದಗಳು ಸಹಾಯಕಾರಿಯಾಗಿವೆ. ಇಂಥ ಕಾವ್ಯ ರಚನೆ ಸಂಸ್ಕೃತದಲ್ಲಿ ಹೇರಳ ವಾಗಿದೆ. ಕನ್ನಡದಲ್ಲಿ ಕೂಡ ಶ್ಲೇಷೆಯನ್ನುಪಯೋಗಿಸಿ ಕೊಂಡು ಸಾಕಷ್ಟು ಕಾವ್ಯ ರಚನೆಯಾಗಿದೆ. ಪಂಪಭಾರತದ ಈ ಪದ್ಯವನ್ನು ಇಲ್ಲಿ ಉದಾಹರಣೆಯಾಗಿ ಕೊಡಬಹುದು. ಕುವಳಯಬಾಂಧವನೆಸೆವನೆ । ಕುವಳಯಮಂ ಬೆಳಗಿ ಕುವಳಯಂ ಪೊಱಗೆನೆ ಪಾಂ ॥ ಡವರೆ ಪೊಱಗಾಗೆನಿನಗೀ । ಕುವಳಯಪತಿಯೆಂಬ ಪೆಂಪೊಡಂ ಬಡೆ ನೃಪತೀ ॥

ಸಮಾನಾರ್ಥಕ ಆದರೆ ಭಿನ್ನರೂಪದ ಪದಗಳಿಗೂ (ಸಿನೊನಿಂಸ್) ಸಮಾನ ರೂಪದ ಆದರೆ ಭಿನ್ನಾರ್ಥಕ ಪದಗಳಿಗೂ ವ್ಯತ್ಯಾಸವಿರುವುದನ್ನಿಲ್ಲಿ ಗಮನಕ್ಕೆ ತಂದು ಕೊಳ್ಳಬಹುದು. ಮನುಷ್ಯ, ಮನುಜ, ನರ ಹಾಗೂ ಸ್ತ್ರೀ, ಅಬಲೆ, ನಾರೀ —ಇವು ಭಿನ್ನರೂಪದ, ಸಮಾನಾರ್ಥಕ ಪದಗಳು. ಅಂದರೆ, ಕೆಲವಾರು ಪರಿಸರಣ ಗಳಲ್ಲಿ ಈ ಗುಂಪಿನ ಪದಗಳಲ್ಲಿ ಯಾವುದೇ ಒಂದನ್ನು ಉಪಯೋಗಿಸಬಹುದು. ನಿಜಕ್ಕೂ, ಈ ಪದಗಳಲ್ಲಿ ಯಾವುದೇ ಎರಡರ ಪ್ರಸಾರ ಒಂದೇ ಆಗಿರುವುದಿಲ್ಲ. ಈ ಪದಗಳ ಅರ್ಥವ್ಯಾಪ್ತಿಯಲ್ಲಿ ಅಂತರವಿದೆ.

ಕೆಲವೊಮ್ಮೆ ಒಂದೇ ಪದವನ್ನು, ಆ ಪದ ಸೂಚಿಸುವ ವಸ್ತುವಿನ ಸಾದೃಶ್ಯವಿರು ವೆಡೆಗಳಲ್ಲಿ ಕೂಡ ಬಳಸಿರುವುದು ಕಂಡುಬರುತ್ತದೆ. ಕುರ್ಚಿಯ ಕಾಲುಗಳು, ಸೂಜಿಯ ಕಣ್ಣು, ಬಾಚಣಿಗೆಯ ಹಲ್ಲುಗಳು, ಗಡಿಯಾರದ ಕೈಗಳು, ಗಂಟೆಯ ನಾಲಗೆ ಇತ್ಯಾದಿ ಶಬ್ದಗಳಲ್ಲಿ ಕಾಲು, ಕಣ್ಣು, ಹಲ್ಲು, ಕೈ ಮತ್ತು ನಾಲಗೆ ಈ ಬಗೆಯ ಪ್ರಯೋಗಕ್ಕೆ ಸೇರಿವೆ. ಮನುಷ್ಯನ ಕಾಲುಗಳು ಮತ್ತು ಕುರ್ಚಿಯ ಕಾಲುಗಳು ಎಂಬಲ್ಲಿನ ಕಾಲು ಸಮಾನರೂಪದ ಭಿನ್ನಾರ್ಥಕ ಜೋಡಿಪದವಲ್ಲ. ಸಮಾನರೂಪ ವಿರುವುದೇನೋ ನಿಜ. ಆದರೆ ಇದು ಒಂದೇ ಪದವಾಗಿದ್ದು ಅರ್ಥದಲ್ಲಿ ಸ್ವಲ್ಪ ವಿಸ್ತಾರ ಉಂಟಾಗಿದೆ ಎನ್ನಬಹುದು. ಇಂಥ ಪ್ರಯೋಗಗಳನ್ನು ಆಲಂಕಾರಿಕ ಪ್ರಯೋಗಗಳು (ಮೆಟಫಾರಿಕಲ್ ಯೂಸೇಜ್) ಎನ್ನುತ್ತಾರೆ. (ಎಚ್.ಎಸ್.ಎ.)

**ಏಕಲವ್ಯ :** ದ್ರೋಣಾಚಾರ್ಯರ ಶಿಷ್ಯರಲ್ಲೊಬ್ಬ. ಧನುರ್ವಿದ್ಯೆಯಲ್ಲಿ ನಿಷ್ಣಾತ ನಾದವ. ಹಿರಣ್ಯಧನುವೆಂಬ ಬೇಡನ ಸಾಕುಮಗ. ದ್ರೋಣಾಚಾರ್ಯರಲ್ಲಿ ಧನು ರ್ವಿದ್ಯೆಯನ್ನು ಕಲಿಯಬೇಕೆಂಬ ಅಭಿಲಾಷೆಯಿಂದ ಬಂದು ಬೇಡಿ, ತಿರಸ್ಕೃತನಾದರೂ ಹತಾಶನಾಗದೆ ಮಣ್ಣಿನಿಂದ ದ್ರೋಣಾಚಾರ್ಯರ ಪ್ರತಿಮೆಯನ್ನು ಮಾಡಿ ಅತ್ಯಂತ ಭಕ್ತಿಯಿಂದ ಅದಕ್ಕೆ ಗುರುಸೇವೆಯನ್ನು ಸಲ್ಲಿಸಿ ಬಿಲ್ಲುಗಾರಿಕೆಯನ್ನು ಕಲಿಯುತ್ತ ಅದರಲ್ಲಿ ಅನ್ಯಾದೃಶವಾದ ನೈಪುಣ್ಯವನ್ನು ಸಂಪಾದಿಸಿದ. ಆತನಿಗೆ ಶಬ್ದವೇದಿತ್ವವೂ ಸಾಧಿಸಿತು.

ಒಂದು ದಿನ ಬೇಟೆಯಾಡಲು ಬಂದ ಕುರುಪಾಂಡವರ ನಾಯಿ ಏಕಲವ್ಯನನ್ನು ಅಟ್ಟಿಕೊಂಡು ಹೋಗಲಾಗಿ ತನ್ನ ಕೈಚಳಕದಿಂದ ಏಕಲವ್ಯ ಬೊಗಳುತ್ತಿದ್ದ ನಾಯ ಬಾಯಲ್ಲಿ ಏಳು ಬಾಣಗಳನ್ನು ನಾಟಿಸಿದ. ಇಂಥ ಚಮತ್ಕಾರವನ್ನೆಸಗಿದ ಬಿಲ್ಲು ಗಾರನ ಹಸ್ತಲಾಘವಕ್ಕೆ ಎಲ್ಲರೂ ಬೆರಗಾದರು. ಅರ್ಜುನನಿಗಂತೂ ತನ್ನನ್ನು ಮೀರಿಸುವ ಬಿಲ್ಲುಗಾರನಿದ್ದಾನಲ್ಲ ಎಂಬ ಬೇಗುದಿಯುಂಟಾಯಿತು. ಅರ್ಜುನನಿಗೆ ಮಾತುಕೊಟ್ಟ ದ್ರೋಣಾಚಾರ್ಯರು ಏಕಲವ್ಯನಿದ್ದೆಡೆಗೆ ಬಂದು ಬಲಗೈ ಹೆಬ್ಬೆರಳನ್ನು ಗುರುದಕ್ಷಿಣೆಯನ್ನಾಗಿ ಬೇಡಲು, ಸ್ವಲ್ಪವೂ ಹಿಂದೆಮುಂದೆ ನೋಡದೆ ಪರಿಶುದ್ಧ ಭಕ್ತಿಭಾವದಿಂದ ಏಕಲವ್ಯ ತನ್ನ ಹೆಬ್ಬೆರಳನ್ನು ಕತ್ತರಿಸಿಕೊಟ್ಟ. ಹೆಬ್ಬೆರಳು ಹೋದರೂ ಬಿಲ್ಲುಗಾರಿಕೆಯ ಅಭ್ಯಾಸವನ್ನು ಮಾತ್ರ ಆತ ಬಿಡಲಿಲ್ಲ. ಇವನ ಮಗ ಕೇತುಮಂತನನ್ನು ಭಾರತಯುದ್ಧದಲ್ಲಿ ಭೀಮಸೇನ ಕೊಂದ. ಇವನಾದರೋ ದುರ್ಯೋಧನನ ಪರವಾಗಿ ಭಾರತಯುದ್ಧದಲ್ಲಿ ಹೋರಾಡಿ ಶ್ರೀಕೃಷ್ಣನಿಂದ ಹತ ನಾದ. ಏಕಲವ್ಯನ ಹೆಸರು ಗುರುಭಕ್ತಿಗೂ ಧನುರ್ವಿದ್ಯೆಗೂ ಪ್ರಖ್ಯಾತವಾಗಿದೆ.

ಏಕಲವ್ಯನ ಈ ಕಥೆ ಕನ್ನಡದ ಮೂವರು ಪ್ರಸಿದ್ಧ ಲೇಖಕರಿಗೆ ರೂಪಕಸಾಮಗ್ರಿ ಯನ್ನೊದಗಿಸಿದೆ. ಕೈಲಾಸಂ ಅವರು ಪರ್ಪಸ್ ಮತ್ತು ಫುಲ್‌ಫಿಲ್‌ಮೆಂಟ್ ಎಂಬ ಎರಡು ನಾಟಕಗಳನ್ನು ರಚಿಸಿದ್ದಾರೆ. ಕುವೆಂಪು ಅವರು ತಮ್ಮ ಬೆರಳ್‌ಗೆ ಕೊರಳ್ ಎಂಬ ನಾಟಕದಲ್ಲಿ ಬೆರಳನ್ನು ಬೇಡಿದ ದ್ರೋಣರು ಹೇಗೆ ಕರ್ಮಫಲ ವಾಗಿ ತಮ್ಮ ಕೊರಳನ್ನು ಅರ್ಪಿಸಿದರು ಎಂಬ ವಸ್ತುವನ್ನು ಬಹು ಗಂಭೀರವಾಗಿ ಚಿತ್ರಿಸಿದ್ದಾರೆ. ಹಾಗೆಯೇ ಗೋವಿಂದ ಪೈಗಳು ಇದೇ ವಸ್ತುವನ್ನಾಧಾರವಾಗುಳ್ಳ ಹೆಬ್ಬೆರಳು ಎಂಬ ನಾಟಕವನ್ನು ರಚಿಸಿದ್ದಾರೆ. (ಎಸ್.ಎಸ್.ಬಿ.)

**ಏಕವೇಗದ ಮೋಟಾರ್ :** ಪೂರೈಕೆ ಮಾಡಿದ ಪ್ರತ್ಯಾವರ್ತೀ ವಿದ್ಯುತ್ಪ್ರವಾಹದ (ಆಲ್ಟರ್ನೇಟಿಂಗ್ ಕರೆಂಟ್, ಎಸಿ) ಆವರ್ತಸಂಖ್ಯೆಗೆ (ಫ್ರೀಕ್ವೆನ್ಸಿ) ಅನುಗುಣವಾದ ಸ್ಥಿರ ಏಕವೇಗದಿಂದ ಕ್ರಿಯೆ ಎಸಗುವ ಒಂದು ಎಸಿ ಮೋಟಾರ್ (ಸಿಂಕ್ರನಸ್ ಮೋಟಾರ್). ವಿದ್ಯುಚ್ಛಕ್ತಿಯನ್ನು ಯಾಂತ್ರಿಕಶಕ್ತಿಯನ್ನಾಗಿ ಪರಿವರ್ತನೆ ಮಾಡಲು ಉಪಯೋಗಿಸುವ ಮೋಟಾರುಗಳಲ್ಲಿ ಏಕವೇಗದ ಮೋಟಾರ್ ಬಲು ಮುಖ್ಯ. ಎಸಿ ಪ್ರವಾಹವನ್ನು ವೈಂಡಿಂಗುಗಳ ಮೂಲಕ ಕಬ್ಬಿಣದ ಅಂತರಕದ (ಕೋರ್) ಸುತ್ತಲೂ ಹರಿಯುವಂತೆ ಮಾಡಿದರೆ ಪ್ರತ್ಯಾವರ್ತಿಸುವ ಕಾಂತ ಅಭಿವಾಹ (ಮ್ಯಾಗ್ನೆಟಿಕ್ ಫ್ಲಕ್ಸ್) ಉಂಟಾಗುವುದು. ಏಕಾವಸ್ಥೆಯ (ಸಿಂಗಲ್ ಫೇಸ್) ಪ್ರವಾಹವನ್ನು ಉಪ ಯೋಗಿಸಿದಾಗ ಏಕಾವಸ್ಥೆಯ ಅಭಿವಾಹವಾಗುತ್ತದೆ. 90° ಅಂತರದ ಎರಡು ಅವಸ್ಥೆಯ ಪ್ರವಾಹಗಳ ಅಥವಾ 120° ಅಂತರದ ಮೂರು ಅವಸ್ಥೆಯ ಪ್ರವಾಹಗಳ ಉಪಯೋಗದಿಂದ ಆವರ್ತಕಾಂತಕ್ಷೇತ್ರ (ರೊಟೇಟಿಂಗ್ ಮ್ಯಾಗ್ನೆಟಿಕ್ ಫೀಲ್ಡ್) ಉದ್ಭವಿಸುವುದು. ಒಂದು ದೃಷ್ಟಿಯಿಂದ ನೋಡಿದರೆ ಒಂದೇ ಅವಸ್ಥೆಯ ಕಾಂತ ಕ್ಷೇತ್ರವನ್ನು ಸಹ ಪರಸ್ಪರ ವ್ಯತಿರಿಕ್ತ ದಿಕ್ಕುಗಳಲ್ಲಿ ತಿರುಗುವ ಎರಡು ಆವರ್ತ ಸದಿಶ





ಚಿತ್ರ 1

ಗಳ (ರೊಟೇಟಿಂಗ್ ವೆಕ್ಟರ್ಸ್) ಪರಿಣಾಮವೆಂದು ಹೇಳಬಹುದು. ಹೇಗೆಂದರೆ ಏಕಾವಸ್ಥೆಯ ಮೋಟಾರುಗಳನ್ನು ಈ ಎರಡು ದಿಕ್ಕುಗಳ ಪೈಕಿ ಯಾವ ದಿಕ್ಕಿನಲ್ಲಿ ಬೇಕಾದರೂ ತಿರುಗುವಂತೆ ಮಾಡಬಹುದು. ಇದು ಚಿತ್ರ 1ರಿಂದ ಸ್ಪಷ್ಟವಾಗು ತ್ತದೆ. ಆದ್ದರಿಂದ ಏಕವೇಗದ ಮೋಟಾರುಗಳನ್ನು ಒಂದು, ಎರಡು ಅಥವಾ ಮೂರು ಅವಸ್ಥೆಗಳಿಗೆ ಅನುಗುಣವಾಗಿ ತಯಾರಿಸುವರು.

ಏಕವೇಗದ ಯಂತ್ರಗಳು ಮೂರು ಅಂಗಗಳನ್ನು ಒಳಗೊಂಡಿವೆ : ಕಾಂತಮಂಡಲ (ಮ್ಯಾಗ್ನೆಟಿಕ್ ಸರ್ಕ್ಯೂಟ್), ವಿದ್ಯುನ್ಮಂಡಲ ಮತ್ತು ಯಾಂತ್ರಿಕ ಅಂಗಗಳು. ಕಾಂತ ಮಂಡಲ ಉತ್ತರ–ದಕ್ಷಿಣ ಧ್ರುವಗಳ ಜೊತೆಗಳನ್ನೊಳಗೊಂಡಿವೆ. ಅಲ್ಲದೆ ಇವುಗಳ ಅಭಿವಾಹಗಳು ಒಂದೆಡೆಯಿಂದ ಇನ್ನೊಂದೆಡೆಗೆ ನಿರ್ದಿಷ್ಟವಾದ ರೀತಿ ಯಲ್ಲಿಯೂ ಸುಲಭವಾಗಿಯೂ ಹಾಯ್ದು ಹೋಗುವುದಕ್ಕೋಸ್ಕರ ನಿಮ್ನ ಕಾಂತ ನಿರೋಧಕದ (ಲೋ ರೆಲಕ್ಟೆನ್ಸ್) ಪಥವನ್ನು ನಿರ್ಮಿಸಿರುತ್ತಾರೆ. ಈ ಧ್ರುವಗಳು ಸಾಮಾನ್ಯವಾಗಿ ಭ್ರಾಮಕದ (ರೋಟರ್) ಮೇಲಿವೆ. ಧ್ರುವಗಳನ್ನು ಬಹಿರ್ಗತ (ಸೇಲಿಯಂಟ್) ಮತ್ತು ಅಂತರ್ಗತ (ನಾನ್‌ಸೇಲಿಯಂಟ್) ಎಂಬ ಎರಡು ವಿಧಗಳಲ್ಲಿ ನಿರ್ಮಿಸಬಹುದು. ಕಡಿಮೆ ವೇಗದ ಮೋಟಾರುಗಳಲ್ಲಿ ಬಹಿರ್ಗತವಾಗಿಯೂ ಇರುತ್ತವೆ. ಪ್ರತಿಯೊಂದು ಉತ್ತರಧ್ರುವದಿಂದ ಹೊರಬಿದ್ದ ಅಭಿವಾಹವೂ ಸ್ಟೇಟರಿನ ಮೂಲಕವಾಗಿ ಹೋಗಿ ದಕ್ಷಿಣ ಧ್ರುವವನ್ನು ಸೇರುತ್ತದೆ.

ವಿದ್ಯುನ್ಮಂಡಲದಲ್ಲಿ ಎರಡು ಶಾಖೆಗಳಿವೆ : ಸ್ಟೇಟರಿನಲ್ಲಿ ಅಡಗಿದ ವೈಂಡಿಂಗು ಗಳನ್ನು ಒಳಗೊಂಡ ಎಸಿ ಶಾಖೆ, ಮತ್ತು ರೋಟರಿನ ಧ್ರುವಗಳ ಮೇಲೆ ಸುತ್ತಿರುವ ಡಿಸಿ ಪ್ರವಾಹದ ಶಾಖೆ.

ಕೊನೆಯದಾಗಿ ಯಾಂತ್ರಿಕ ಅಂಗಗಳೆಂದರೆ ಮೋಟಾರಿನ ಲೋಹಮಯ ಹೊದಿಕೆ, ಭ್ರಾಮಕದ ಧಾರಕಗಳು (ಬೇರಿಂಗ್ಸ್) ಪೀಠಗಳು, ಭೂಫಲಕ (ಬೆಡ್ ಪ್ಲೇಟ್)—ಇವೇ ಮುಖ್ಯವಾದುವು.

ಸಮಾನವೇಗ : ಏಕವೇಗದ ಮೋಟಾರುಗಳ ವೇಗ ವಿದ್ಯುಚ್ಛಕ್ತಿಯ ಆವರ್ತಸಂಖ್ಯೆ ಮತ್ತು ಧ್ರುವಗಳ ಜೊತೆಗಳ ಸಂಖ್ಯೆ ಇವುಗಳಿಂದ ನಿಗದಿ ಮಾಡಲ್ಪಡುತ್ತದೆ.

ಈ ವೇಗಕ್ಕೆ ಏಕವೇಗ (ಸಿಂಕ್ರನಸ್ ಸ್ಪೀಡ್) ಎಂದು ಹೆಸರು. ಇದರ ದರವನ್ನು ಎಂದರೆ ಮಿನಿಟಿಗೆ ಪೂರ್ಣ ಪರಿಭ್ರಮಣೆಗಳು (rpm–ರಿವೊಲ್ಯೂಷನ್ಸ್ ಪರ್ ಮಿನಿಟ್)—ಈ ರೀತಿಯಾಗಿ ನಿಷ್ಕರ್ಷೆ ಮಾಡಬಹುದು.

$$\text{ಏಕವೇಗದ rpm} = \frac{60 \times \text{ಆವರ್ತಸಂಖ್ಯೆ}}{\text{ಧ್ರುವಗಳ ಜೊತೆಗಳ ಸಂಖ್ಯೆ}}$$

ಭ್ರಾಮಕ ಮತ್ತು ಸ್ಟೇಟರ್ : ಈ ಭಾಗಗಳ ರಚನೆಯಲ್ಲಿ ಏಕವೇಗ ಮೋಟಾರುಗಳು ಎಸಿ ಆಲ್ಟರ್ನೇಟರುಗಳನ್ನು ಹೋಲುತ್ತವೆ. ಆದರೆ ಈ ಮೋಟಾರುಗಳ ಧ್ರುವಗಳ ಮುಖಗಳಲ್ಲಿ ತಾಮ್ರದ ಸಲಾಕಿಗಳಿಂದ ತಯಾರಿಸಿದ ಧ್ರುವಮುಖ (ಪೋಲ್ ಫೇಸ್) ವೈಂಡಿಂಗುಗಳನ್ನು ಹುದುಗಿಸಲಾಗಿದೆ.

ಭ್ರಾಮಕದ ಮುಖ್ಯ ವಿಭಾಗಗಳು : ದಂಡ (ಶಾಫ್ಟ್), ಸ್ಪೈಡರ್ ಮತ್ತು ಧ್ರುವಗಳು. ದಂಡ ಸಶಕ್ತ ಉಕ್ಕಿನಿಂದ ತಯಾರಾದದ್ದು. ಸ್ಪೈಡರಿನ ರಚನೆ ಸಾಮಾನ್ಯವಾಗಿ ಉಕ್ಕಿನ ಎರಕದಿಂದ. ಇದನ್ನು ದಂಡದ ಮೇಲೆ ಕೀಲಿಗಳಿಂದಲೂ (ಕೀ) ಮತ್ತು ಸಂಕುಚನೆಯ (ಶ್ರಿಂಕಿಂಗ್) ಅಥವಾ ಬೋಲ್ಟುಗಳ ಮೂಲಕವಾಗಿಯೂ ಭದ್ರಪಡಿಸಿರುತ್ತಾರೆ. ಧ್ರುವಗಳನ್ನು ಉತ್ತಮ ಕಾಂತ ಗುಣಗಳ ವಿಶೇಷ ಉಕ್ಕಿನ ತಗಡುಗಳಿಂದ ನಿರ್ಮಿಸಿ ಒಟ್ಟುಗೂಡಿಸಿ ಸ್ಪೈಡರಿನಲ್ಲಿ ಕೆತ್ತಲ್ಪಟ್ಟಿರುವ ಸಂಧಿಗಳ ಮೇಲೆ ಕೀಲಿಗಳ ಸಹಾಯದಿಂದ ಭದ್ರವಾಗಿ ಕೂಡಿಸಿರುತ್ತಾರೆ. ಅತಿ ಚಿಕ್ಕ ಮೋಟಾರುಗಳಲ್ಲಿ ಧ್ರುವಗಳು ಮತ್ತು ಸ್ಪೈಡರುಗಳನ್ನು ಏಕಭಾಗವಾಗಿ ಎರಕ ಹೊಯ್ದಿರುತ್ತಾರೆ. ಅಥವಾ ಧ್ರುವಗಳನ್ನು ಸ್ಪೈಡರಿನ ಮೇಲೆ ಸಣ್ಣ ಸಣ್ಣ ದಿಣ್ಣೆಗಳಂತೆ ಕೆತ್ತಿರುತ್ತಾರೆ. ಇದರ ವೈಶಿಷ್ಟ್ಯವೇನೆಂದರೆ ಸ್ಟೇಟರಿನ ಪ್ರವಾಹದ ಪ್ರತಿಕ್ರಿಯಾ ಘಟಕದ (ರೀಆಕ್ಟಿವ್ ಕಾಂಪೊನೆಂಟ್) ದೆಸೆಯಿಂದ ಈ ದಿಣ್ಣೆಗಳಿಗೆ ಕಾಂತತೆ ಉಂಟಾಗಿ ಧ್ರುವಗಳಾಗುವುವು. ಇವಕ್ಕೆ ಡಿಸಿ ಪ್ರವಾಹವ ವೈಂಡಿಂಗುಗಳು ಬೇಕಾಗುವುದಿಲ್ಲ. ಆದರೆ ದೊಡ್ಡ ಮೋಟಾರುಗಳ ಧ್ರುವಗಳು ಪ್ರತ್ಯೇಕವಾದ ಡಿಸಿ ಪ್ರವಾಹದ ಸಹಾಯದಿಂದ ಮಾತ್ರ ಸಮರ್ಪಕವಾಗಿ ಕೆಲಸ ಮಾಡಲು ಸಾಧ್ಯ.

ಸ್ಟೇಟರಿನ ಆಂತರಕವನ್ನು ಸಿಲಿಕನ್ ಮಿಶ್ರಿತವಾದ ವಿಶೇಷ ತರಗತಿಯ ಉಕ್ಕಿನ ಪಟ್ಟಿಕೆಗಳಿಂದ (ಲ್ಯಾಮಿನೇಶನ್ಸ್) ಮಾಡಿರುತ್ತಾರೆ. ಈ ಪಟ್ಟಿಕೆಗಳನ್ನು ರೋಧನ (ಇನ್ಸುಲೇಷನ್) ವಸ್ತುವಾದ ಫ್ಲಾಷ್ ಎನಾಮಲಿನಿಂದ ಸವರಿರುತ್ತಾರೆ. ಈ ರೀತಿಯಲ್ಲಿ ತಯಾರಿಸಿದ ಪಟ್ಟಿಕೆಗಳನ್ನು ಉಪಯೋಗಿಸುವುದರಿಂದ ಸ್ಟೇಟರಿನಲ್ಲಿ ಐರನ್ ನಷ್ಟಗಳು ಬಹಳ ಕಡಿಮೆಯಾಗುತ್ತವೆ. ಮತ್ತು ಮೋಟಾರಿನ ದಕ್ಷತೆ ಹೆಚ್ಚಾಗಲು ಸಾಧ್ಯವಾಗುತ್ತದೆ. ಈ ಪಟ್ಟಿಕೆಗಳನ್ನು ಗಟ್ಟಿಮುಟ್ಟಾದ ಉಕ್ಕಿನ ಹೊರಚೌಕಟ್ಟಿನಲ್ಲಿ ಬಿಗಿಯಾಗಿ ಸ್ಥಾಪಿಸಿರುತ್ತಾರೆ. ಮಟ್ಟವಾಗಿ ಯಂತ್ರದಿಂದ ಹತ್ತರಿ ಹಿಡಿದ ಲೋಹದ ಭೂಫಲಕದ ಮೇಲೆ ಈ ಚೌಕಟ್ಟನ್ನು ಮತ್ತು ಭಾರವಾಹಕಗಳ ಪೀಠಗಳನ್ನು ಆಯಾ ಸ್ಥಳಗಳಲ್ಲಿ ಭದ್ರವಾಗಿ ಕೂಡಿಸಿರುತ್ತಾರೆ.

ಟಾರ್ಕಿನ ಉತ್ಪತ್ತಿ : ಸ್ಟೇಟರಿನಿಂದ ಉಂಟಾದ ಆವರ್ತ ಕ್ಷೇತ್ರದ ಉತ್ತರ–ದಕ್ಷಿಣ ಧ್ರುವಗಳನ್ನು ಭ್ರಾಮಕದ ದಕ್ಷಿಣ–ಉತ್ತರ ಧ್ರುವಗಳು ಅನುಕ್ರಮವಾಗಿ ಹಿಂಬಾಲಿಸಿ ತಿರುಗುತ್ತವೆ. ಆದರೆ ತಟಸ್ಥವಾಗಿದ್ದಾಗ ಮೊಟ್ಟಮೊದಲು ತಿರುಗಿಸುವುದಕ್ಕೆ ಒಂದು ಪ್ರಾರಂಭಿಕ ಟಾರ್ಕ್ ಬೇಕು. ಇದನ್ನು ಮೇಲೆ ಹೇಳಿದ ಧ್ರುವಮುಖ ವೈಂಡಿಂಗುಗಳು ಒದಗಿಸುತ್ತವೆ. ಈ ವೈಂಡಿಂಗುಗಳ ತಾಮ್ರದ ಸಲಾಕಿಗಳಲ್ಲಿ ಪ್ರಯುಕ್ತವಾದ (ಇನ್‌ಡ್ಯೂಸ್ಡ್) ವಿದ್ಯುತ್ಪ್ರವಾಹಗಳ ಮಂಡಲಗಳು ಆವರ್ತ ಕ್ಷೇತ್ರವನ್ನು ಹಿಂಬಾಲಿಸಲು ಯತ್ನಿಸುವುದರಿಂದ ಮೋಟಾರನ್ನು ತಿರುಗಿಸುವುದಕ್ಕೆ ಸಾಕಾದಷ್ಟು ಟಾರ್ಕ್ ಉತ್ಪತ್ತಿಯಾಗುತ್ತದೆ. ಒಂದು ಸಾರಿ ಭ್ರಾಮಕ ಸಮವೇಗವನ್ನು ಪಡೆದ ಕೂಡಲೆ ಧ್ರುವಮುಖಗಳಲ್ಲಿನ ಪ್ರವಾಹ ನಿಂತುಹೋಗುತ್ತದೆ. ಆದರೆ ಇದಕ್ಕೆ ಸ್ವಲ್ಪ ಮುಂಚಿತವಾಗಿಯೇ ಧ್ರುವಗಳಿಗೆ ಪ್ರದೀಪನವನ್ನು ಒದಗಿಸುವುದರಿಂದ ಧ್ರುವಗಳಿಗೆ ಹೆಚ್ಚು ಕಾಂತಬಲ ಉಂಟಾಗಿ ಅವು ಮೋಟಾರ್ ನಿಂತುಬಿಡದಂತೆ ಸುತ್ತಲಾರಂಭಿಸುತ್ತವೆ.

ಹೀಗೆ ತಿರುಗುತ್ತಿರುವ ಮೋಟಾರ್ ಹೊರಗಿನ ಹೊರೆಗಳನ್ನು (ಮೆಕ್ಯಾನಿಕಲ್ ಲೋಡ್ಸ್) ತಿರುಗಿಸುವುದಕ್ಕೆ ಮೊದಲು ಮಾಡಿದಾಗ ಮೋಟಾರಿನಲ್ಲಿನ ಟಾರ್ಕ್ ತಾನಾಗಿಯೇ ಹೆಚ್ಚಾಗುತ್ತದೆ. ಆದರೆ ಹೀಗಾಗುವಾಗ ಇಂಡಕ್ಷನ್ ಮೋಟಾರುಗಳಂತೆ ಅಲ್ಲದೇ ಇದರ ವೇಗವೇನೂ ಕಡಿಮೆಯಾಗುವುದಿಲ್ಲ. ಮೋಟಾರು ಸಮವೇಗದಲ್ಲಿಯೇ ಓಡುತ್ತಿರುತ್ತದೆ. ಆದರೆ ಅದರ ಧ್ರುವಗಳು ಮಾತ್ರ ಕ್ಷೇತ್ರಕ್ಕೆ ಸ್ವಲ್ಪ ಹಿಂಜರಿದು ತಿರುಗುತ್ತಿರುತ್ತವೆ.

ಆದರೆ ಮೋಟಾರಿನ ಟಾರ್ಕ್ ಹೀಗೆ ಹೆಚ್ಚುವುದಕ್ಕೆ ಒಂದು ಮಿತಿಯಿದೆ. ಹೊರಗಿನ ಹೊರೆ ಹೆಚ್ಚಿದಂತೆ ಇದು ಮೊದ ಮೊದಲು ಹೆಚ್ಚುತ್ತ ಹೋಗುತ್ತದೆ. ಆದರೆ ಅತಿ ಹೆಚ್ಚಿನ ಹೊರೆ ಬಂದಾಗ ಕಡಿಮೆಯಾಗತೊಡಗುವುದು. ಹೀಗಾಗಿ ಸಮವೇಗತ್ವ ಕೆಡುವುದರಿಂದ ಮೋಟಾರ್ ನಿಂತುಬಿಡುವುದು. ಈ ರೀತಿಯಲ್ಲಿ ಮೋಟಾರ್ ತಿರುಗುವಿಕೆಯಿಂದ ಹೊರಬೀಳುವುದರಿಂದ ಇದಕ್ಕೆ ನಿಷ್ಪತನ ಟಾರ್ಕ್ (ಪುಲ್ ಔಟ್ ಟಾರ್ಕ್) ಎಂದು ಹೆಸರಾಗಿದೆ.

ಕ್ರಿಯಾ ವಿಧಾನ : ಸಾಧಾರಣವಾಗಿ ಏಕವೇಗ ಮೋಟಾರುಗಳ ಕ್ರಿಯಾ ವಿಧಾನವನ್ನು ಇಲ್ಲಿ ತೋರಿಸಿರುವ ಸದಿಶ ಚಿತ್ರದಿಂದ (ಚಿತ್ರ 2) ನಮೂದಿಸುವುದು ವಾಡಿಕೆ. ಆದರೆ ಈ ಚಿತ್ರ ಬಹಿರ್ಗತ ಧ್ರುವಗಳನ್ನು ಹೊಂದಿರುವ ಏಕವೇಗ ಮೋಟಾರುಗಳಿಗೆ ಸರಿಯಾಗಿ ಅನ್ವಯಿಸುವುದಿಲ್ಲ. ಇಂಥ ಮೋಟಾರುಗಳ ಸದಿಶ ಚಿತ್ರವನ್ನು ಬರೆಯುವಾಗ ಬ್ಲಾಂಡೆಲ್ ದ್ವಿಪ್ರತಿಕ್ರಿಯಾ ವಿಧಾನವನ್ನು (ಟೂ ರೀಆಕ್ಷನ್ ಥಿಯೊರಿ) ಅನುಸರಿಸಬೇಕಾಗುತ್ತದೆ.




ಚಿತ್ರ 2 A ಸರಬರಾಯಿ ವೋಲ್ಟೇಜ್, B ಚಾಲಕದ ಬಾಹ್ಯ ವೋಲ್ಟೇಜ್, C ಪರಿಣಾಮೀ ವೋಲ್ಟೇಜ್, D ಚಾಲಕದ ಧಾರೆ

ಇದರ ಪ್ರಕಾರ ಮೋಟಾರಿನ ಪ್ರವಾಹ ಎರಡು ಭಾಗಗಳಾಗಿ ವಿಂಗಡಿಸಲ್ಪಡುತ್ತದೆ ; ಸರಳಾಕ್ಷ ಮತ್ತು ಚತುಷ್ಕಾಕ್ಷ ವಿಭಾಗಗಳೆಂದು (ಡೈರೆಕ್ಟ್ ಆಕ್ಸಿಸ್ ಅಂಡ್ ಕ್ವಾಡ್ರೇಚರ್ ಆಕ್ಸಿಸ್) ಇವುಗಳ ಹೆಸರು. ಸರಳಾಕ್ಷ ವಿಭಾಗದ ಅಕ್ಷ ಧ್ರುವದ ಮಧ್ಯ ರೇಖೆಯನ್ನು ಹೊಂದಿಕೊಳ್ಳುತ್ತದೆ. ಚತುಷ್ಕಾಕ್ಷ ವಿಭಾಗದ ಅಕ್ಷ ಉತ್ತರ-ದಕ್ಷಿಣ ಧ್ರುವಗಳ ಮಧ್ಯದಲ್ಲಿರುವ ಸಮಭಾಜಕ ರೇಖೆಯಾಗಿರುತ್ತದೆ. ಮೊದಲಿನ ವಿಭಾಗ ಧ್ರುವಗಳ ಕಾಂತ ಬಲವನ್ನು ನೇರವಾಗಿ ಹೆಚ್ಚು ಅಥವಾ ಕಡಿಮೆ ಮಾಡುತ್ತದೆ. ಎರಡನೆಯ ಭಾಗ ಈ ಬಲವನ್ನು ಅಡ್ಡಮಾರ್ಗವಾಗಿ ಸೆಳೆಯುತ್ತದೆ.

ಸಮವೇಗೀಕರಣ ಸಾಮರ್ಥ್ಯ (ಸಿಂಕ್ರನೈಸಿಂಗ್ ಪವರ್) : ಮೇಲೆ ವಿವರಿಸಿದಂತೆ ಮೋಟಾರಿನ ಧ್ರುವಗಳು ಸ್ವಲ್ಪ ಹಿಂಜರಿಯುವುದರಿಂದ ಟಾರ್ಕ್ ಬೆಳೆದು ಅವನ್ನು ಮುಂದೆ ಸೆಳೆಯುತ್ತದೆ. ಇದೇ ರೀತಿ ಯಂತ್ರಹೊರೆ ಸ್ವಲ್ಪ ಕಡಿಮೆಯಾದಾಗ ಧ್ರುವಗಳು ಮುಂದೋಡಲು ಪ್ರಯತ್ನಿಸಿ ಮತ್ತೆ ಇದೇ ಕಾರಣದಿಂದ ಹಿಂದಕ್ಕೆ ಸೆಳೆಯಲ್ಪಡುತ್ತವೆ. ಹೀಗೆ ಮೋಟಾರನ್ನು ಒಂದೇ ಸಮನಾದ ವೇಗದಲ್ಲಿರುವಂತೆ ಮಾಡುವುದಕ್ಕೆ ಸಾಕಾಗುವಷ್ಟು ವಿದ್ಯುಚ್ಛಕ್ತಿ ಸರಬರಾಜಿನ ತಂತಿಗಳಿಂದ (ಲೈನ್ಸ್) ಒದಗುತ್ತದೆ. ಇದಕ್ಕೆ ಸಮವೇಗೀಕರಣ ಸಾಮರ್ಥ್ಯ ಎನ್ನುತ್ತಾರೆ.

ಅವಸ್ಥಾಂದೋಲನ (ಫೇಸ್ ಸ್ವಿಂಗಿಂಗ್) ಅಥವಾ ಹಂಟಿಂಗ್ : ಮೋಟಾರ್ ತಿರುಗಿಸುತ್ತಿರುವ ಹೊರೆ ಥಟ್ಟನೆ ಬಿಟ್ಟುಹೋದರೆ ಅಥವಾ ಕಡಿಮೆಯಾದರೆ ಮೋಟಾರಿನೊಳಗಿನ ಸೆಳೆತಕ್ಕೆ ಇದ್ದಕ್ಕಿದ್ದ ಹಾಗೆ ತಡೆ ಕಡಿಮೆಯಾಗುವುದು. ಆಗ ಮೋಟಾರ್ ಸಮವೇಗಕ್ಕಿಂತ ಹೆಚ್ಚು ವೇಗದಲ್ಲಿ ಓಡಲು ಪ್ರಯತ್ನಿಸುವುದು. ಆಗ ಸಮವೇಗೀಕರಣ ಸಾಮರ್ಥ್ಯ ಬೆಳೆದು ಅದನ್ನು ಹಿಂದೆ ಸೆಳೆಯುವುದು. ಹಠಾತ್ತನೆ ಬಂದ ಈ ಹಿಂದೆಳೆತದಿಂದ ಮೋಟಾರಿನ ವೇಗ ಸಮವೇಗಕ್ಕಿಂತ ಕಡಿಮೆಯಾಗತೊಡಗುವುದು. ಆಗ ಮತ್ತೆ ಸಮವೇಗೀಕರಣ ಸಾಮರ್ಥ್ಯ ಉಂಟಾಗಿ ಅದನ್ನು ಮುಂದಕ್ಕೆಳೆಯುವುದು. ಈ ರೀತಿ ಪೈಪೋಟಿಯ ದೆಸೆಯಿಂದ ಮೋಟಾರಿನ ವೇಗದಲ್ಲಿ ಆಂದೋಲನ ಅಥವಾ ಹಂಟಿಂಗ್ (ಶಿಕಾರಿ) ಉಂಟಾಗುತ್ತದೆ. ಈ ವಿಧದ ಆಂದೋಲನವನ್ನು ತಡೆಗಟ್ಟುವುದರಲ್ಲಿ ಧ್ರುವಗಳ ಮುಖ ವೈಂಡಿಂಗುಗಳು ಅತಿ ಮುಖ್ಯ ಪಾತ್ರವನ್ನು ವಹಿಸುತ್ತವೆ. ಆಂದೋಲನದ ಚಲನಶಕ್ತಿ ಈ ಮುಖ ವೈಂಡಿಂಗುಗಳಲ್ಲಿ ಪ್ರವಾಹದ ರೂಪದಲ್ಲಿ ಹರಿದು ಬೇಗ ಖರ್ಚಾಗಿ ಹೋಗುವುದರಿಂದ ಆಂದೋಲನ ನಿಂತುಹೋಗಲು ಸಾಧ್ಯವಾಗುತ್ತದೆ. ಆದ್ದರಿಂದ ಈ ಮುಖ ವೈಂಡಿಂಗುಗಳಿಗೆ ಡ್ಯಾಂಪರ್ ವೈಂಡಿಂಗುಗಳೆಂಬ ಹೆಸರು ಬಂದಿದೆ.

ಸ್ಪಂದಿಸುವ ಹೊರೆಗಳು (ಪಲ್ಸೇಟಿಂಗ್ ಲೋಡ್ಸ್) : ಏಕವೇಗದ ಮೋಟಾರುಗಳ ಹೊರೆಗಳು ಪಂಪುಗಳಾಗಲೀ ಕಂಪ್ರೆಸರ್ ಅಥವಾ ಮತ್ತಿತರ ತರಹದ ಸ್ಪಂದಕ ಗುಣವುಳ್ಳ ಭಾಗಗಳಾಗಲೀ ಆಗಿದ್ದರೆ ಮೇಲೆ ಹೇಳಿದ ಕಾರಣಗಳಿಂದ ಎಡೆಬಿಡದೆ ಆಂದೋಲನಗಳುಂಟಾಗಿ ಅನಾವಶ್ಯಕವಾಗಿ ವಿದ್ಯುಚ್ಛಕ್ತಿಯ ನಷ್ಟವುಂಟಾಗುವುದಲ್ಲದೆ

ಡ್ಯಾಂಪರ್ ವೈಂಡಿಂಗುಗಳು ಹೆಚ್ಚು ಬಿಸಿಯಾಗುವುದರಿಂದ ಮೋಟಾರಿಗೆ ಹಾನಿಯುಂಟಾಗಬಹುದು. ಆದ್ದರಿಂದ ಈ ವಿಧದ ಹೊರೆಯನ್ನು ತಿರುಗಿಸುವಾಗ ಹಾಗೆ ತಿರುಗತಕ್ಕ ಭಾಗಗಳ ಜಡತ್ವದ (ಇನರ್ಷಿಯ) ಅಂಕಿಗಳನ್ನು ಲಕ್ಷಿಸಬೇಕು. ಇವು ಸಾಲದಿದ್ದರೆ ಗತಿನಿಯಂತ್ರಕ ಗಾಲಿಯ (ಫ್ಲೈವೀಲ್) ಉಪಯೋಗದ ಮೂಲಕ ಇದನ್ನು ಸಾಕಾಗುವಷ್ಟು ಹೆಚ್ಚಿಸಬೇಕು. ಈ ಸಂದರ್ಭದಲ್ಲಿ ಗಮನಿಸಬೇಕಾದ ಮತ್ತೊಂದು ಬಹು ಮುಖ್ಯ ಅಂಶವಿದೆ. ಅದು ಮೋಟಾರಿನ ಹೊರೆಗಳ ಸ್ಪಂದನದ ಆವರ್ತಸಂಖ್ಯೆ ಮೋಟಾರ್ ಮತ್ತು ಅದನ್ನು ನಡೆಸುತ್ತಿರುವ ವಿದ್ಯುತ್ಪಥದ ಸ್ವಾಭಾವಿಕ ಆವರ್ತಸಂಖ್ಯೆಯ (ನ್ಯಾಚ್ಯುರಲ್ ಫ್ರೀಕ್ವೆನ್ಸಿ) ಸಮೀಪದಲ್ಲಿದ್ದರೆ ಅಂಥ ಸಂದರ್ಭಗಳಲ್ಲಿ ಅಪಾಯಕರವಾದ ಅನುನಾದ (ರೆಸೊನೆನ್ಸ್) ಉಂಟಾಗಬಹುದು. ವಿಶೇಷವಾಗಿ ಇಂಥ ಸನ್ನಿವೇಶಗಳು ಕಂಪ್ರೆಸರುಗಳನ್ನು ಚಲಿಸುತ್ತಿರುವಾಗ ಉದ್ಭವಿಸುವುವು. ಆದ್ದರಿಂದ ಆ ಸಂದರ್ಭಗಳನ್ನು ಜಾಗರೂಕತೆಯಿಂದ ವಿಮರ್ಶೆ ಮಾಡಬೇಕು. ಈ ವಿಷಯದಲ್ಲಿ ಅಮೆರಿಕ ಸಂಯುಕ್ತಸಂಸ್ಥಾನದ ಎ.ಎಸ್.ಎ. ಸಂಸ್ಥೆ ಉಪಯುಕ್ತವಾದ ಕೆಲವು ಸೂತ್ರಗಳನ್ನು ಗೊತ್ತುಮಾಡಿದೆ. ಅವುಗಳ ಸಹಾಯದಿಂದ ಸ್ವಾಭಾವಿಕ ಆವರ್ತಸಂಖ್ಯೆ, ಕಂಪ್ರೆಸರ್ ಫ್ಯಾಕ್ಟರ್ ಮುಂತಾದ ಅಂಕಿಗಳನ್ನು ನಿಷ್ಕರ್ಷಿಸಿ ಗತಿನಿಯಂತ್ರಕ ಗಾಲಿಯ ತೂಕ ಮತ್ತು ವ್ಯಾಸ ಎಷ್ಟಿರಬೇಕೆಂಬುದು ನಿಶ್ಚಯಿಸಲು ಸಾಧ್ಯವಾಗುತ್ತದೆ.

V ರೇಖೆಗಳು : ಏಕವೇಗದ ಮೋಟಾರಿನ ಒಂದು ವಿಶೇಷ ಗುಣವೇನೆಂದರೆ ಅದರ ಸಾಮರ್ಥ್ಯ ಗುಣಕವನ್ನು (ಪವರ್ ಫ್ಯಾಕ್ಟರ್) ನೂರಕ್ಕೆ ನೂರರಷ್ಟು ಉತ್ತಮವಾಗಿ ಮಾಡಲು ಸಾಧ್ಯವಿದೆ. ವಸ್ತುತಃ ಅದರ ಸಾಮರ್ಥ್ಯಗುಣಕವನ್ನು ಎಷ್ಟು ಬೇಕಾದರಷ್ಟು ಅಗ್ರಗಾಮಿಯನ್ನಾಗಲಿ ಅನುಗಾಮಿಯನ್ನಾಗಲಿ ಮಾಡಬಹುದು. ಉದಾಹರಣೆಗೆ, 500 ಕಿಲೋವಾಟುಗಳಷ್ಟು ಹೊರೆಯನ್ನು ತಿರುಗಿಸುತ್ತಿರುವ ಒಂದು ಮೋಟಾರಿನ ಪ್ರದೀಪನವನ್ನು ಸ್ವಲ್ಪ ಪ್ರಮಾಣದಲ್ಲಿ ಇಟ್ಟಿದ್ದರೆ ಮೋಟಾರಿನ ಆರ್ಮೆಚರಿನ ಪ್ರವಾಹ ಬಹಳ ಅನುಗಾಮಿಯಾಗಿಯೂ ಹೆಚ್ಚು ಪ್ರಮಾಣದ್ದಾಗಿಯೂ ಇರುತ್ತದೆ. ಆದರೆ ಪ್ರದೀಪನವನ್ನು ಕ್ರಮೇಣ ಹೆಚ್ಚಿಸುತ್ತ ಹೋದರೆ ಮೊದಲು ಮೊದಲು ಸಾಮರ್ಥ್ಯಗುಣಕ ಹೆಚ್ಚುತ್ತದೆ ಮತ್ತು ಆರ್ಮೆಚರ್ ಪ್ರವಾಹ ಕಡಿಮೆಯಾಗುತ್ತದೆ. ಆದರೆ ಅದರ ಸಾಮರ್ಥ್ಯ ಗುಣಕ ನೂರಕ್ಕೆ ನೂರರಷ್ಟು ಉತ್ತಮವಾದಾಗ, ಅಂದರೆ 1.0 ಆದಾಗ, ಪ್ರದೀಪನವನ್ನು ಮತ್ತಷ್ಟು ಹೆಚ್ಚು ಮಾಡಿದರೆ ಆರ್ಮೆಚರ್ ಪ್ರವಾಹ ಅಗ್ರಗಾಮಿಯಾಗತೊಡಗಿ ಹೆಚ್ಚುವುದು ಮತ್ತು ಸಾಮರ್ಥ್ಯ ಗುಣಕ ಅಗ್ರಗಾಮಿತೆಯ ದಿಕ್ಕಿನಲ್ಲಿ 1.0 ಗಿಂತ ಕೆಳಗಿಳಿಯುತ್ತ ಬರುವುದು. ಈ ಪ್ರಯೋಗಗಳ ಫಲಿತಾಂಶಗಳನ್ನು ಗ್ರಾಫಿನ ಮೂಲಕ ನಮೂದಿಸಿದಾಗ V ಅಕ್ಷರದ ಆಕೃತಿಯ ರೇಖೆಗಳು ದೊರೆಯುತ್ತವೆ. ಈ ರೇಖೆಗಳನ್ನು V ರೇಖೆಗಳು ಎಂದು ಕರೆಯುತ್ತಾರೆ.




ಚಿತ್ರ 3

ಔದ್ಯಮಿಕ ಉಪಯೋಗಗಳು : ಕೈಗಾರಿಕೆಯ ಉದ್ಯಮಗಳಲ್ಲಿ ಏಕವೇಗದ ಮೋಟಾರುಗಳು ಅಧಿಕ ವ್ಯಾಪ್ತಿ ಪಡೆದಿವೆ. ಅದರಲ್ಲಿಯೂ ಸಹ ನಿಯಮಿತವಾಗಿ ಒಂದೇ ವೇಗದಲ್ಲಿ ಓಡಬೇಕಾದ ಯಂತ್ರಗಳಿದ್ದೆಡೆಯಲ್ಲಿ ಇವುಗಳಿಗೇ ಮಾನ್ಯತೆ ಹೆಚ್ಚು. ಇದಕ್ಕೆ ಮುಖ್ಯ ಕಾರಣಗಳೆಂದರೆ ಇವು ಸಾಮಾನ್ಯವಾಗಿ ಇಂಡಕ್ಷನ್ ಮೋಟಾರುಗಳಿಗಿಂತ ಬೆಲೆಯಲ್ಲಿ ಕಡಿಮೆ ಮತ್ತು ಸಾಮರ್ಥ್ಯ ಗುಣಕದಲ್ಲಿಯೂ ದಕ್ಷತೆಯಲ್ಲಿಯೂ ಹೆಚ್ಚು. ಇವುಗಳಿಗೆ ಬೇಕಾಗುವ ನೆಲದಳತೆ ಇಂಡಕ್ಷನ್ ಮೋಟಾರುಗಳಿಗಿಂತ ಸಾಧಾರಣವಾಗಿ ಕಡಿಮೆ. ಆದರೆ ಪ್ರದೀಪನಕ್ಕಾಗಿ ಹೊರಗಿನ ಆಲ್ಟರ್ನೇಟರುಗಳು ಬೇಕಾಗುವುದರ ದೆಸೆಯಿಂದ ಈ ಮೋಟಾರುಗಳ ಉದ್ದಳತೆ ಹೆಚ್ಚು.

ಚಾಲನೆಯ ವಿಧಾನಗಳು (ಸ್ಟಾರ್ಟಿಂಗ್ ಮೆಥಡ್ಸ್) : ಮೇಲೆ ನಮೂದಿಸಿದಂತೆ ಏಕವೇಗದ ಮೋಟಾರುಗಳನ್ನು ತಿರುಗಿಸಲು ಅವುಗಳ ಡ್ಯಾಂಪರ್ ವೈಂಡಿಂಗುಗಳ ಸಹಾಯದಿಂದ ಇಂಡಕ್ಷನ್ ಮೋಟಾರುಗಳಂತೆಯೇ ತಿರುಗಿಸಲು ಉಪಕ್ರಮಿಸಬೇಕು. ಆದರೆ ಹೀಗೆ ಮಾಡುವುದಕ್ಕೆ ಮುಂಚೆ ಧ್ರುವಗಳ ಡಿಸಿ ವೈಂಡಿಂಗುಗಳನ್ನು ನಿರೋಧಕದ (ರೆಸಿಸ್ಟೆನ್ಸ್) ಮೂಲಕ ಲಘುಮಂಡಲಗೊಳಿಸಬೇಕಾಗುತ್ತದೆ (ಷಾರ್ಟ್ ಸರ್ಕ್ಯೂಟ್). ಕಾರಣ, ಮೊದಲನೆಯದಾಗಿ ಡಿಸಿ ವೈಂಡಿಂಗುಗಳಲ್ಲಿ ಉದ್ಭವಿಸಬಹುದಾದ ಹೆಚ್ಚು ಪ್ರಮಾಣದ ಪ್ರಯುಕ್ತ (ಇಂಡ್ಯೂಸ್ಡ್) ಎಸಿ ವೋಲ್ಟೇಜುಗಳನ್ನು ತಡೆದು ಹಿಡಿಯಬೇಕಾದ್ದು ಅತ್ಯಾವಶ್ಯಕ ; ಎರಡನೆಯದಾಗಿ, ಡಿಸಿ ವೈಂಡಿಂಗುಗಳಲ್ಲಿಯೂ ಎಸಿ ಪ್ರವಾಹವನ್ನು ಈ ರೀತಿಯಾಗಿ ಹರಿಯುವಂತೆ ಮಾಡಿದರೆ ರೋಟರಿನ ಮೇಲೆ ಉಂಟಾಗುವ ಟಾರ್ಕ್ ಮತ್ತಷ್ಟು ಹೆಚ್ಚುವುದರಿಂದ ಮೋಟಾರನ್ನು ತಿರುಗಿಸುವುದರಲ್ಲಿ ಸಹಾಯವಾಗುವುದು.

ಸಣ್ಣ ಮೋಟಾರುಗಳನ್ನು ತಿರುಗಿಸುವಾಗ ನೇರವಾಗಿ ಎಸಿ ತಂತಿಗಳಿಂದಲೇ (ಮೆಯಿನ್ಸ್) ಚಲನಗೊಳಿಸಬಹುದು. ಆದರೆ ದೊಡ್ಡ ಮೋಟಾರುಗಳನ್ನು ತಿರುಗಿಸುವುದಕ್ಕಾಗಿ ಪ್ರಾರಂಭಕಗಳು (ಸ್ಟಾರ್ಟರುಗಳು) ಬೇಕಾಗುತ್ತವೆ. ಒಂದು ತರಹದ ಪ್ರಾರಂಭಕದಲ್ಲಿ ಆಟೋಟ್ರಾನ್ಸ್‌ಫಾರ್ಮರುಗಳನ್ನು ಉಪಯೋಗಿಸಿ ಮೊದಲಿಗೆ ವೋಲ್ಟೇಜನ್ನು ಕಡಿಮೆಮಾಡಿ ಚಾಲನ ಪ್ರವಾಹ ಬಹಳ ದೊಡ್ಡದಾಗಿ ಬೆಳೆಯದಂತೆ ತಡೆಯಲ್ಪಡುತ್ತದೆ. ಕಾರ್ನ್‌ಡಾರ್ಫರ್ ವಿಧಾನದಲ್ಲಿ ಹೆಜ್ಜೆಗಳುಳ್ಳ (ಟ್ಯಾಪ್ ಚೇಂಜಿಂಗ್) ಆಟೋಟ್ರಾನ್ಸ್‌ಫಾರ್ಮರುಗಳನ್ನು ಉಪಯೋಗಿಸಿ ವೋಲ್ಟೇಜಿನ ಪರಿಪೂರ್ಣಪ್ರಭಾವ ಕ್ರಮೇಣ ಮೋಟಾರಿಗೆ ಒದಗುವಂತೆ ಮಾಡಿರುತ್ತಾರೆ. ದೊಡ್ಡ ಯಂತ್ರಗಳಲ್ಲಿ ಒತ್ತು ಗುಂಡಿಗಳ (ಪುಷ್ ಬಟನ್ಸ್) ಮೂಲಕ ಈ ಎಲ್ಲ ಕೆಲಸಗಳೂ ತಾವಾಗಿಯೇ ನೆರವೇರುವಂತೆ ಮಾಡಿರುತ್ತಾರೆ.

ಇನ್ನೊಂದು ತರಹದ ಯಂತ್ರದಲ್ಲಿ ಪ್ರತಿಕಾರಕ ಕುಂಡಲಗಳ (ರಿಆಕ್ಟೆನ್ಸ್ ಕಾಯಿಲ್ಸ್) ಮೂಲಕ ವೋಲ್ಟೇಜನ್ನು ಕಡಿಮೆಮಾಡಿ ಮೋಟಾರ್ ಸಮಾನವೇಗವನ್ನು ಮುಟ್ಟಿದ ಅನಂತರ ಆ ಕುಂಡಲಗಳನ್ನು ಬೇರ್ಪಡಿಸಲಾಗುತ್ತದೆ.

ಕೆಲವು ಸಂದರ್ಭಗಳಲ್ಲಿ ಮೋಟಾರ್ ದೊಡ್ಡದಾಗಿದ್ದರೂ ಅದು ತಿರುಗಿಸುವ ಯಂತ್ರದ ಹೊರೆ ಮೊದಲು ಬಹಳ ಕಡಿಮೆಯಾಗಿದ್ದು ಅಮೇಲೆ ಹೆಚ್ಚುತ್ತದೆ. ಉದಾಹರಣೆಗೆ ಡಿಸಿ ಆಲ್ಟರ್ನೇಟರುಗಳನ್ನು ತಿರುಗಿಸುವ ಎಸಿ ಮೋಟಾರುಗಳು. ಈ ಸಂದರ್ಭಗಳಲ್ಲಿ ಬ್ಯಾಟರಿಯಿಂದ ಓಡುವ ಒಂದು ಸಣ್ಣ ಡಿಸಿ ಮೋಟಾರಿನ ಚಾಲಕದ ಮೂಲಕ ಎಸಿ ಮೋಟಾರನ್ನು ತಿರುಗುವಂತೆ ಮಾಡಿ ಸಮವೇಗಕ್ಕೆ ತರಬಹುದು. ಅನಂತರ ಎಸಿ ವೋಲ್ಟೇಜಿನ ಮೂಲಕ ಮೋಟಾರ್ ಓಡಲಾರಂಭಿಸುತ್ತದೆ. ಮತ್ತೆ ಕೆಲವು ಸನ್ನಿವೇಶಗಳಲ್ಲಿ ಮೋಟಾರ್ ತಿರುಗುವುದಕ್ಕೆ ಮೊದಲಿನಿಂದಲೇ ಹೆಚ್ಚಿನ ಹೊರೆ ಅದರ ದಂಡಕ್ಕೆ ಬಿಗಿಯಲ್ಪಟ್ಟಿರಬಹುದು. ಇಂಥ ಸಂದರ್ಭಗಳಲ್ಲಿ ಚಾಲನ ಪ್ರವಾಹ ಅತಿ ಹೆಚ್ಚಾಗದಂತೆ ತಡೆಯುವ ಸಲುವಾಗಿ ಕ್ಲಚ್ಚುಗಳನ್ನು ಉಪಯೋಗಿಸುತ್ತಾರೆ. ಇವು ಸ್ವಯಂ ಪ್ರೇರಿತವಾದ ಕೇಂದ್ರಾಪಗಾಮಿ (ಸೆಂಟ್ರಿಫ್ಯೂಗಲ್) ವೈದ್ಯುತಿಕ ಅಥವಾ ದ್ರವಚಾಲಕ (ಹೈಡ್ರಾಲಿಕ್) ಕ್ಲಚ್ಚುಗಳಾಗಿರಬಹುದು; ಅಥವಾ ಕೈಯಿಂದಲೇ ಚಲಿಸುವ ಕ್ಲಚ್ಚುಗಳಾಗಿಯೂ ಇರಬಹುದು.

ವಿಶಿಷ್ಟರೀತಿಯ ಉಪಯೋಗಗಳು : ಒಂದು ಏಕವೇಗದ ಮೋಟಾರನ್ನು ಕೆಲವು ಸಾರಿ ಬೇರೆ ಬೇರೆ ವೇಗಗಳಲ್ಲಿ ಓಡತಕ್ಕಂತೆ ಮಾಡಬೇಕಾಗಿ ಬರುತ್ತದೆ. ಸ್ಟೇಟರಿನಲ್ಲಿರುವ ವೈಂಡಿಂಗುಗಳ ಕುಂಡಲಗಳನ್ನು (ಕಾಯಿಲ್ಸ್) ಎರಡು ಭಾಗಗಳಲ್ಲಿ ರಚಿಸಿ ಆ ಭಾಗಗಳು ಎರಡು ರೀತಿಯಲ್ಲಿ ಸಂಯೋಗಿಸುವಂತೆ ಮಾಡುವುದರಿಂದ ಮತ್ತು ಪ್ರದೀಪನವರ್ತನಗಳನ್ನು ಎರಡು ಭಾಗಗಳಲ್ಲಿ ಸುತ್ತಿ ಎರಡು ವಿಧಗಳಲ್ಲಿ ಸೇರುವಂತೆ ಮಾಡುವುದರಿಂದಲೂ ಒಂದೇ ಮೋಟಾರ್ ಎರಡು ವೇಗಗಳಲ್ಲಿ ಓಡುವಂತಾಗುತ್ತದೆ. ಈಚಿನ ವರ್ಷಗಳಲ್ಲಿ ಪಂಪ್ಡ್ ಸ್ಟೋರೇಜ್ ಪದ್ಧತಿಯ ವಿದ್ಯುದಾಗಾರಗಳು ಹೆಚ್ಚು ಬಳಕೆಗೆ ಬರುತ್ತಿರುವುದರಿಂದ ಈ ತರಹದ ದ್ವಿಭಿನ್ನವೇಗದ ಏಕವೇಗ ಮೋಟಾರುಗಳನ್ನು ಉಪಯೋಗಿಸತೊಡಗಿದ್ದಾರೆ. ಈ ಆಗಾರಗಳಲ್ಲಿ ಸಾಮಾನ್ಯವಾಗಿ ಒಂದೇ ಯಂತ್ರವನ್ನು ಆಲ್ಟರ್ನೇಟರಾಗಿಯೂ ಮೋಟಾರಾಗಿಯೂ ಉಪಯೋಗಿಸುವುದು ರೂಢಿಯಲ್ಲಿದೆ. ಮೋಟಾರಾಗಿ ಓಡುವಾಗ ಅದರ ವೇಗ ಆಲ್ಟರ್ನೇಟರ್ ಆಗಿದ್ದಾಗಿಗಿಂತ 20ರಷ್ಟು ಹೆಚ್ಚಾಗಿರಬೇಕಾಗಿ ಬರುತ್ತದೆ. ಆದ್ದರಿಂದ 10 ಧ್ರುವಗಳುಳ್ಳ ಆಲ್ಟರ್ನೇಟರನ್ನು 8 ಧ್ರುವಗಳುಳ್ಳ ತಿರುಗುವಂತೆ ಮಾಡುವುದರಿಂದ ಪಂಪನ್ನು ಚಲಾಯಿಸಲು ಸಾಧ್ಯವಾಗುತ್ತದೆ.

ಇನ್ನೊಂದು ಬಹಳ ಮುಖ್ಯವಾದ ವಿಶೇಷ ಉಪಯೋಗವೇನೆಂದರೆ ಏಕವೇಗದ ಮೋಟಾರುಗಳಿಗೆ ಹೆಚ್ಚು ಪ್ರದೀಪನವನ್ನುಂಟುಮಾಡಿ ಕಂಡೆನ್ಸರಿನಂತೆ ಉಪಯೋಗಿಸಬಹುದು. ಹೀಗೆ ಉಪಯೋಗಿಸತಕ್ಕ ಯಂತ್ರವನ್ನು ಏಕವೇಗ ಕಂಡೆನ್ಸರ್ (ಸಿಂಕ್ರನಸ್ ಕಂಡೆನ್ಸರ್) ಎಂದು ಕರೆಯುತ್ತಾರೆ. ಬಹಳ ಉದ್ದನೆಯ ಮತ್ತು ಬಹಳ ಹೆಚ್ಚು ವೋಲ್ಟೇಜಿನ ವಾಹಕ ತಂತಿಗಳಿಗೆ (ಟ್ರಾನ್ಸ್‌ಮಿಷನ್ ಲೈನ್ಸ್) ಈ

ವಿಧದ ಕಂಡೆನ್ಸರುಗಳ ಆವಶ್ಯಕತೆ ಇದೆ. ಈಗಿನ ಕಾಲದಲ್ಲಿ ಈ ವಿಧದ ಕಂಡೆನ್ಸರುಗಳನ್ನು ಒಂದು ಲಕ್ಷ ಕೆ.ವಿ.ಎ.ಗಳ ಸಾಮರ್ಥ್ಯದವರೆಗೂ ತಯಾರು ಮಾಡುತ್ತಾರೆ. ಇವು ಬಿಸಿಲು ಮಳೆಗಾಳಿಗಳನ್ನು ಸಹಿಸುವಂತೆ ನಿರ್ಮಿಸಲ್ಪಟ್ಟು ಕಟ್ಟಡದ ಹೊರಗಡೆಯೇ ಕೆಲಸಮಾಡುವಂತೆ ತಯಾರಾಗಿರುತ್ತವೆ. ಇನ್ನೊಂದು ವಿಶೇಷ ವೇನೆಂದರೆ ಈ ಯಂತ್ರಗಳೊಳಗೆ ಗಾಳಿಯ ಬದಲಾಗಿ ಹೈಡ್ರೊಜನ್ ಅನಿಲವನ್ನು ಉಪಯೋಗಿಸುತ್ತಾರೆ. ಹೈಡ್ರೊಜನ್ನಿನ ಉಷ್ಣವಹನತೆ (ಥರ್ಮಲ್ ಕಂಡಕ್ಟಿವಿಟಿ) ಗಾಳಿಗಿಂತ ಏಳರಷ್ಟು ಹೆಚ್ಚಾಗಿರುವುದರಿಂದ ಈ ವಿಧದ ಮೋಟಾರುಗಳು ತಂಪಾಗಿ ಕೆಲಸ ಮಾಡುತ್ತವೆ; ಮತ್ತು ಈ ಕಾರಣದಿಂದ ಅವು, ಅವಶ್ಯಬಂದಾಗ, ಅತಿ ಹೆಚ್ಚು ಹೊರೆಗಳನ್ನು ವಹಿಸಲು ಸಾಧ್ಯವಾಗುತ್ತದೆ. ಇಷ್ಟೇ ಅಲ್ಲದೆ ಹೈಡ್ರೊಜನ್ ಗಾಳಿಗಿಂತ ಹಗುರವಾಗಿರುವುದರಿಂದ ಈ ಮೋಟಾರುಗಳಲ್ಲಿ ಉಂಟಾಗುವ ವಾಯು ನಷ್ಟಗಳು (ವಿಂಡೇಜ್ ಲಾಸಸ್) ಬಹಳ ಕಡಿಮೆ. ಆದರೆ ಹೈಡ್ರೊಜನ್ನಿನ ಜೊತೆಗೆ ಗಾಳಿ ಬೆರೆತರೆ ಆಸ್ಫೋಟನೆಯಾಗುವ ಅಪಾಯವಿರುವುದರಿಂದ ಈ ರೀತಿಯ ಮೋಟಾರುಗಳಲ್ಲಿ ಹೈಡ್ರೊಜನ್ನಿನ ಪ್ರಮಾಣ 95%ಕ್ಕಿಂತ ಕಡಿಮೆ ಆಗದಂತೆ ಬಹಳ ಜಾಗರೂಕತೆಯ ಏರ್ಪಾಡುಗಳು ಅಗತ್ಯ. ಆಧುನಿಕ ವ್ಯವಹಾರದಲ್ಲಿ ಸುಮಾರು 20,000 ಕಿಲೋವಾಟುಗಳಿಗಿಂತ ದೊಡ್ಡ ಮತ್ತು ಹೆಚ್ಚುವೇಗದ ಮೋಟಾರುಗಳಲ್ಲಿ ಮಾತ್ರ ಹೈಡ್ರೊಜನ್ನಿನ ಉಪಯೋಗ ಪ್ರಚುರವಾಗಿದೆ, (ಎಂ.ವಿ.ಎಸ್.ಎಂ.)

**ಏಕವ್ಯಕ್ತಿಸಂಸ್ಥೆ :** ಒಬ್ಬ ವ್ಯಕ್ತಿಯೇ ಉದ್ಯಮಕ್ಕೆ ಅಗತ್ಯವಾದ ಬಂಡವಾಳ ಒದಗಿಸಿಕೊಂಡು ಹೊಣೆ ಹೊತ್ತು ನಿರ್ವಹಿಸುವ ವ್ಯವಹಾರ ಸಂಸ್ಥೆ (ಸೋಲ್ ಟ್ರೇಡಿಂಗ್ ಕನ್ಸರ್ನ್). ವ್ಯವಹಾರ ಸಂಘಟನೆಯ ಇತಿಹಾಸದಲ್ಲಿ ಇದು ಅತ್ಯಂತ ಪ್ರಾಚೀನ ಪ್ರಭೇದ; ಅತ್ಯಂತ ಸಹಜ. ಈ ಸಂಸ್ಥೆಯ ಮಾಲೀಕನೊಬ್ಬನೇ. ಅವನಿಗೆ ಅವನೇ ಯಜಮಾನ. ತನಗಾಗಿ ತಾನೇ ಇದನ್ನು ನಡೆಸುತ್ತಾನೆ. ಏನು ಮಾಡಬೇಕೆಂಬ ಬಗ್ಗೆ ತೀರ್ಮಾನ ಕೈಕೊಳ್ಳುವವನೂ ತೀರ್ಮಾನವನ್ನು ಕಾರ್ಯಗತಗೊಳಿಸುವವನೂ ಸ್ವತಃ ಈತನೇ. ತನ್ನ ವ್ಯವಹಾರದ ಎಲ್ಲ ಹೊಣೆಯೂ ಎಲ್ಲ ಲಾಭ ನಷ್ಟಗಳೂ ಇವನವೇ.

ಈತ ಸ್ವತಃ ತಂದ ಬಂಡವಾಳ ವ್ಯಾಪಾರಕ್ಕೆ ಸಾಲದಿದ್ದ ಪಕ್ಷದಲ್ಲಿ ಇತರರಿಂದ ಸಾಲದ ರೂಪದಲ್ಲಿ ತರಬಹುದಷ್ಟೆ. ಇವನೇ ತನ್ನ ಉದ್ಯಮದ ಸರ್ವಾಧಿಕಾರಿ, ಸಂಘಟಕ ಮತ್ತು ಆಡಳಿತಗಾರ. ಸಂಸ್ಥೆಯ ಅವನತಿ-ಅಭಿವೃದ್ಧಿಯೆಲ್ಲ ಈತನದೇ. ಈತನ ಚಾತುರ್ಯ ಹಾಗೂ ಈತ ಕೈಕೊಳ್ಳುವ ಸೂಕ್ತ ನಿರ್ಣಯಗಳನ್ನೇ ಅದು ಅವಲಂಬಿಸಿರುತ್ತದೆ.

ಈ ಸಂಸ್ಥೆಯ ಬಂಡವಾಳ ಸಣ್ಣ ಪ್ರಮಾಣದಲ್ಲಿರುವುದರಿಂದಲೂ ವ್ಯಾಪಾರದ ಕಷ್ಟನಷ್ಟಗಳ ಹೊಣೆ ಹೆಚ್ಚಾಗಿರುವುದರಿಂದಲೂ ಆವಶ್ಯಕತೆಗೆ ಅನುಗುಣವಾಗಿ ವ್ಯಾಪಾರದ ಧ್ಯೇಯವನ್ನು ಬದಲಾಯಿಸುವ ಅನುಕೂಲ ಇರುವುದರಿಂದಲೂ ಈ ಬಗೆಯ ಸಂಘಟನೆ ಸಣ್ಣ ಉದ್ಯಮಗಳಿಗೆ ಸೀಮಿತಗೊಂಡಿದೆ. ಬಟ್ಟೆ, ಪಾನ್ ಮತ್ತು ದಿನಸಿ ಅಂಗಡಿಗಳೂ ದಳ್ಳಾಳಿ, ವಕೀಲಿ, ವೈದ್ಯಕೀಯ ಸಂಸ್ಥೆಗಳೂ ಏಕವ್ಯಕ್ತಿ ಉದ್ಯಮದ ಉದಾಹರಣೆಗಳು.

ಏಕವ್ಯಕ್ತಿಸಂಸ್ಥೆಯ ಆಸ್ತಿ ಮತ್ತು ಜವಾಬ್ದಾರಿಗಳಿಗೂ ಅದರ ಯಜಮಾನನ ಸ್ವಂತ ಆಸ್ತಿ-ಹೊಣೆಗಳಿಗೂ ಯಾವ ವಿಧವಾದ ಭೇದವೂ ಇಲ್ಲ. ಆದಕಾರಣ ಸಂಸ್ಥೆ ತನ್ನ ಸಾಲ ತೀರಿಸಲು ಅಶಕ್ತವಾಗಿದ್ದರೆ ಅದನ್ನು ತೀರಿಸುವ ಹೊಣೆಯನ್ನು ಯಜಮಾನನೇ ಹೊರಬೇಕು. ಸಂಸ್ಥೆಯ ಸಾಲಗಳಿಗೆ ಮಾಲೀಕನ ಸ್ವಂತ ಆಸ್ತಿಯೂ ಈಡಾಗುತ್ತದೆ. ಅಂತೆಯೇ ಮಾಲೀಕನ ಸಾಲಿಗರು ತಮಗೆ ಬರಬೇಕಾದ ಸಾಲದ ವಸೂಲಿಗಾಗಿ ಸಂಸ್ಥೆಯ ಆಸ್ತಿಯ ಮೇಲೂ ಕ್ರಮ ಜರುಗಿಸಬಹುದಾಗಿದೆ. ಸಂಸ್ಥೆಯ ನಷ್ಟಗಳಿಗೆಲ್ಲ ಮಾಲೀಕನೇ ವೈಯಕ್ತಿಕವಾಗಿ ಅಪಾರ ಹೊಣೆಗಾರ. ಇದು ಅಮಿತ ಜವಾಬ್ದಾರಿ.

ಏಕವ್ಯಕ್ತಿ ಉದ್ಯಮಸಂಸ್ಥೆಯಲ್ಲಿ ಕೆಲವು ಅನುಕೂಲಗಳುಂಟು. ಇದನ್ನು ಪ್ರಾರಂಭಿಸಲು ಸ್ಥಾನಿಕ ಸಂಸ್ಥೆಗಳಿಂದ ಪರವಾನೆ ಪಡೆಯುವುದರ ಹೊರತಾಗಿ ಬೇರೆ ಯಾವ ಬಗೆಯ ಕಾನೂನಿನ ವಿಧಿಗಳನ್ನೂ ಅನುಸರಿಸಬೇಕಾಗಿಲ್ಲ. ಕಂಪನಿಗಳಂತೆ ಇದನ್ನು ನೋಂದಣಿ (ರಿಜಿಸ್ಟರ್) ಮಾಡಿಸಬೇಕಾಗಿಲ್ಲ. ಅಂದರೆ ಯಾವಾಗ ಬೇಕಾದರೂ ಸುಲಭವಾಗಿ ವ್ಯಾಪಾರ ಪ್ರಾರಂಭಿಸಲೂಬಹುದು ಮತ್ತು ಮುಕ್ತಾಯ ಮಾಡಲೂಬಹುದು.

ಸಂಸ್ಥೆಯ ಮಾಲೀಕನಿಗೂ ಗ್ರಾಹಕರಿಗೂ ನಿಕಟ ಸಂಪರ್ಕ ಇರುವುದರಿಂದ ಗ್ರಾಹಕರ ಆವಶ್ಯಕತೆಗಳನ್ನು ಕೂಡಲೆ ತಿಳಿದುಕೊಂಡು ಅವನ್ನು ಕೂಡಲೆ ಪೂರೈಸುವುದು ಸಾಧ್ಯ. ಇದರಿಂದ ಉದ್ಯಮಿ ಅವರ ವಿಶ್ವಾಸಕ್ಕೆ ಪಾತ್ರನಾಗುವುದಲ್ಲದೆ ಹೆಚ್ಚು ಹೆಚ್ಚು ಲಾಭ ಪಡೆಯಲೂ ಸಹಾಯವಾಗುತ್ತದೆ.

ಉದ್ಯಮಿಯೇ ಸರ್ವಾಧಿಕಾರಿಯಾಗಿರುವುದರಿಂದ ವ್ಯಾಪಾರದಲ್ಲಿ ಬರಬಹುದಾದಂಥ ಸಮಸ್ಯೆಗಳನ್ನು ನಿವಾರಿಸಲು ಯಾರದೇ ಸಮ್ಮತಿಗೆ ದಾರಿ ಕಾಯದೆ ತಾನೇ ತೀವ್ರವಾಗಿ ತೀರ್ಮಾನ ಕೈಗೊಳ್ಳುತ್ತಾನೆ. ಎಂದರೆ ಆವಶ್ಯಕತೆಗೆ ಅನುಗುಣವಾಗಿ ವ್ಯಾಪಾರದ ಧ್ಯೇಯ ಧೋರಣೆಗಳನ್ನು ತಕ್ಷಣವೇ ಬದಲಾಯಿಸಬಹುದು.

ಯಜಮಾನ ತನ್ನ ಸಂಸ್ಥೆಯನ್ನು ಅಭಿವೃದ್ಧಿಪಡಿಸಲು ಸ್ವತಃ ಆಸಕ್ತಿ ವಹಿಸಿ ಎಲ್ಲ ಕಾರ್ಯಗಳನ್ನೂ ನಡೆಸಿಕೊಂಡು ಹೋಗುವುದರಿಂದ ಯಶಸ್ಸು ಬಹುತೇಕ ಸ್ವತಃಸಿದ್ಧ.

ಇಂಥ ಸಂಸ್ಥೆಯು ವಿಚಾರಗಳನ್ನಾಗಲಿ ಅಥವಾ ಲೆಕ್ಕಗಳನ್ನಾಗಲಿ ಸಾರ್ವಜನಿಕರ ಅವಗಾಹನೆಗಾಗಿ ಪ್ರಕಟ ಪಡಿಸಬೇಕೆಂದು ಯಾವ ಕಾಯಿದೆಯೂ ಇಲ್ಲದಿರುವುದರಿಂದ ಈತ ವ್ಯಾಪಾರದ ಮರ್ಮವನ್ನು ಗೋಪ್ಯವಾಗಿ ಇಟ್ಟುಕೊಳ್ಳಬಹುದು. ಇದು ವ್ಯಾಪಾರಾಭಿವೃದ್ಧಿಗೆ ಸಹಾಯಕ.

ಸಂಸ್ಥೆಯ ಎಲ್ಲ ಕಾರ್ಯಗಳನ್ನೂ ತಾನೇ ನಡೆಸಿಕೊಂಡು ಹೋಗುವುದರಿಂದಲೂ ಉದ್ಯಮ ಸಣ್ಣ ಪ್ರಮಾಣದಲ್ಲಿ ಇರುವುದರಿಂದಲೂ ದೊಡ್ಡ ಉದ್ಯಮ ಸಂಸ್ಥೆಯಲ್ಲಿ ತಗಲುವ ಮೇಲ್ವಿಚಾರಣೆಯ ಖರ್ಚು ಇದಕ್ಕೆ ತಗಲುವುದಿಲ್ಲ. ಆದ್ದರಿಂದ ಪೈಪೋಟಿಯ ದರದಲ್ಲಿ ಸರಕುಗಳನ್ನು ಮಾರಿ ಹೆಚ್ಚಿನ ಲಾಭ ಸಂಪಾದಿಸುವುದು ಸಾಧ್ಯ.

ಸಂಸ್ಥೆಯ ಅಭಿವೃದ್ಧಿಗಾಗಿ ಈತ ಬ್ಯಾಂಕಿನಿಂದಲೂ ಸ್ನೇಹಿತರಿಂದಲೂ ಇತರರಿಂದಲೂ ಸಾಲ ಪಡೆಯಬಹುದು. ಸಂಸ್ಥೆಯ ಆಸ್ತಿಯಿಂದ ಸಾಲ ತೀರಿಸಲು ಸಾಧ್ಯವಿಲ್ಲವಾದರೆ ಯಜಮಾನನೇ ತೀರಿಸುವುದರಿಂದಲೂ ಸಂಸ್ಥೆಯ ಅಭಿವೃದ್ಧಿಯಲ್ಲಿ ಮಾಲೀಕನ ವೈಯಕ್ತಿಕ ಆಸಕ್ತಿ ಇರುವುದರಿಂದಲೂ ಸಾಲಿಗರಿಗೆ ಸಾಕಷ್ಟು ಭರವಸೆಯಿರುತ್ತದೆ. ಸಾಲ ಸುಲಭವಾಗಿ ದೊರಕುತ್ತದೆ. ಸಂಸ್ಥೆಯ ಲಾಭಕ್ಕೆಲ್ಲ ಇವನೊಬ್ಬನೆ ಭೋಕ್ತೃ.

ಈ ಸಂಸ್ಥೆಗೆ ಆನುವಂಶಿಕ ವ್ಯಾಪಾರಸಂಸ್ಥೆ ಅಥವ ಕೌಟುಂಬಿಕ ವ್ಯಾಪಾರ ಸಂಸ್ಥೆ ಎಂದೂ ಹೆಸರುಂಟು. ಅಂದರೆ ಯಜಮಾನ ಸತ್ತರೆ, ಮನೋವಿಕಲ್ಪ ಹೊಂದಿದರೆ ಅಥವಾ ಅಸ್ವಸ್ಥನಾದರೆ ಸಂಸ್ಥೆಯನ್ನು ಮುಚ್ಚದೆ ಅವನ ವಂಶದವರೋ ಕುಟುಂಬದವರೋ ಮುಂದುವರಿಸಿಕೊಂಡು ಹೋಗುತ್ತಾರೆ. ಕಂಪನಿ, ಪಾಲುದಾರಿಕೆ ಮುಂತಾದವನ್ನು ಕಾನೂನಿಗೆ ಅನುಸಾರ ಮುಚ್ಚಿಸುವಂತೆ ಇದನ್ನು ಮುಚ್ಚಿಸಲು ಸಾಧ್ಯವಿಲ್ಲ.

ಏಕವ್ಯಕ್ತಿಸಂಸ್ಥೆಯ ಇನ್ನೊಂದು ಅನುಕೂಲವೆಂದರೆ ಅನುಭವದ ಗಳಿಕೆ. ಈ ಸಂಸ್ಥೆಯ ಬೆಳವಣಿಗೆಯೊಂದಿಗೆ ಇದರ ಮಾಲೀಕನೂ ಬೆಳೆಯುತ್ತಾನೆ. ವ್ಯಾಪಾರದ ಅನುಭವಗಳನ್ನು ಚೆನ್ನಾಗಿ ಅರಿತುಕೊಳ್ಳುತ್ತಾನೆ. ಆದ್ದರಿಂದ ದೊಡ್ಡ ದೊಡ್ಡ ಉದ್ಯಮಗಳನ್ನು ಪ್ರಾರಂಭಿಸಿ ಬೆಳೆಸಲು ಇದು ನಾಂದಿ. ಸ್ವತಂತ್ರ ಮನೋವೃತ್ತಿಯನ್ನೂ ಕಾರ್ಯನಿಷ್ಠೆಯನ್ನೂ ಆತ್ಮವಿಶ್ವಾಸ, ಸಂತೃಪ್ತಿ ಮುಂತಾದ ಗುಣಗಳನ್ನೂ ಬೆಳೆಸಿ ವ್ಯಕ್ತಿತ್ವದ ವಿಕಾಸಕ್ಕೆ ಇದು ಕಾರಣವಾಗುತ್ತದೆ.

ಈ ಸಂಸ್ಥೆಯಲ್ಲಿ ಅನೇಕ ಪ್ರತಿಕೂಲಗಳೂ ಉಂಟು. ಮೊದಲನೆಯದಾಗಿ ಬಂಡವಾಳದ ಕೊರತೆ. ಒಬ್ಬ ವ್ಯಕ್ತಿ ತರುವ ಬಂಡವಾಳ ಅಲ್ಪ; ದೊಡ್ಡ ಉದ್ಯಮಕ್ಕೆ ಸಾಕಾಗುವುದಿಲ್ಲ. ಇತರ ಮೂಲಗಳಿಂದ ಈತ ಪಡೆಯಬಹುದಾದ ನೆರವಿಗೂ ಮಿತಿಯುಂಟು. ಒಬ್ಬ ವ್ಯಕ್ತಿಯನ್ನೇ ನಂಬಿ ಹೆಚ್ಚು ಹಣ ಕೊಡುವುದೂ ಅನೇಕ ವೇಳೆ ಕಠಿಣವೇ. ಕಡಿಮೆ ಬಂಡವಾಳದಿಂದ ಸಂಸ್ಥೆಯ ಅಭಿವೃದ್ಧಿ ಕುಂಠಿತವಾಗುವುದಲ್ಲದೆ ಯಜಮಾನನ ಆದಾಯವೂ ಕಡಿಮೆಯಾಗುತ್ತದೆ.

ಸಂಸ್ಥೆ ಹೆಚ್ಚಿನ ನಷ್ಟಹೊಂದಿ, ತನ್ನ ಸಾಲ ತೀರಿಸಲು ಸಾಕಷ್ಟು ಆಸ್ತಿ ಇಲ್ಲದಿದ್ದರೆ ಮಾಲೀಕನ ಸ್ವಂತ ಆಸ್ತಿಯೂ ಕರಗಬಹುದು. ಈ ಅಮಿತ ಜವಾಬ್ದಾರಿಯಿಂದ ಮಾಲೀಕನ ಸ್ಥೈರ್ಯ ಉಡುಗಬಹುದು. ಈ ಭಯದ ಹಿನ್ನೆಲೆಯಲ್ಲಿ ಆತನ ಸಾಹಸ ಪ್ರವೃತ್ತಿ ಮೊಟಕಾಗಬಹುದು.

ಸಂಸ್ಥೆ ಅಭಿವೃದ್ಧಿ ಹೊಂದಿ ಅನೇಕ ಶಾಖೆಗಳಿಂದ ಕೂಡಿದ್ದರೆ ಆಗ ಒಬ್ಬನೇ ಯಜಮಾನ ಎಲ್ಲ ಶಾಖೆಗಳ ಕಾರ್ಯಗಳನ್ನೂ ಸುಸೂತ್ರವಾಗಿ ನಿರ್ವಹಿಸಿಕೊಂಡು ಹೋಗಲು ಸಾಧ್ಯವಾಗದೆ ಸಂಸ್ಥೆ ಅವನತಿ ಹೊಂದಬಹುದು. ಅಲ್ಲದೆ ವ್ಯಾಪಾರದ ಚತುರತೆ, ಸಾಕಷ್ಟು ಬಂಡವಾಳ ಎರಡೂ ಇರುವ ವ್ಯಕ್ತಿಗಳು ಬಹಳ ವಿರಳ. ವ್ಯಾಪಾರದ ಕುಶಲತೆಯನ್ನು ತಿಳಿಯದ ವ್ಯಕ್ತಿ ಎಷ್ಟೇ ಬಂಡವಾಳ ಹಾಕಿ ವ್ಯಾಪಾರ ನಡೆಸಿದರೂ ನಷ್ಟ ಅನುಭವಿಸುವುದು ಖಂಡಿತ. ಅಂಥವ ದಿವಾಳಿಯಾದರೂ ಆಶ್ಚರ್ಯವಿಲ್ಲ.

ಏಕವ್ಯಕ್ತಿ ಉದ್ಯಮ ಶಾಶ್ವತವೇನೂ ಅಲ್ಲ. ಸಂಸ್ಥೆಯ ಒಡೆಯ ಸಾವಿಗೋ ಹುಚ್ಚಿಗೋ ಕಾಯಿಲೆಗೋ ಈಡಾದರೆ ಸಂಸ್ಥೆಯನ್ನು ಮುಚ್ಚಲೇಬೇಕಾದ ಸಂದರ್ಭವೂ ಒದಗಬಹುದು. ಆತನ ಕುಟುಂಬದವರೋ ಉತ್ತರಾಧಿಕಾರಿಗಳೋ ಅದನ್ನು ನಡೆಸಿಕೊಂಡು ಹೋಗಬಲ್ಲರೆಂಬ ಭರವಸೆಯೇನೂ ಇಲ್ಲ.

ಏಕವ್ಯಕ್ತಿಸಂಸ್ಥೆಯ ಗಾತ್ರ ಕಿರಿದಾದ್ದರಿಂದ ದೊಡ್ಡ ಪ್ರಮಾಣದ ವಹಿವಾಟಿನಿಂದ ಸಿಗಬಹುದಾದ ರಿಯಾಯಿತಿಗಳು ಈ ಉದ್ಯಮಿಗೆ ದೊರಕಲಾರವು. ಈ ಕಾರಣದಿಂದ ಈತ ತನ್ನ ಸರಕುಗಳನ್ನು ಹೆಚ್ಚಿನ ಬೆಲೆಗೆ ಮಾರಬೇಕಾಗಬಹುದು. ಇದರಿಂದ

ಗಿರಾಕಿಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಆಕರ್ಷಿಸಲಾಗುವುದಿಲ್ಲ. ಆಧುನಿಕ ಸೌಲಭ್ಯಗಳೂ ಸಲಕರಣೆಗಳೂ ಶ್ರಮವಿಭಜನೆಯ ಅನುಕೂಲಗಳೂ ಸಣ್ಣ ಸಂಸ್ಥೆಗೆ ಲಭ್ಯವಿಲ್ಲ.

ಇಷ್ಟೆಲ್ಲ ಅನನುಕೂಲಗಳಿದ್ದರೂ ಏಕವ್ಯಕ್ತಿಸಂಸ್ಥೆಗಳು ಇಂದಿಗೂ ಬಹು ಸಂಖ್ಯೆಯಲ್ಲಿವೆ. ಇದಕ್ಕೆ ಕಾರಣಗಳಿಲ್ಲದೆ ಇಲ್ಲ. ಚಿಲ್ಲರೆ ಮಾರಾಟಕ್ಕೆ ಈ ಬಗೆಯ ಸಂಸ್ಥೆಗಳು ಸೂಕ್ತ. ಕೆಲವು ವ್ಯವಹಾರಗಳಲ್ಲಿ ಗ್ರಾಹಕನಿಗೂ ವ್ಯಾಪಾರಿಗೂ ನಡುವೆ ಅತ್ಯಂತ ನಿಕಟ ಸಂಪರ್ಕವಿರಬೇಕು. ವಕೀಲ-ಕಕ್ಷಿಗಾರ, ವೈದ್ಯ–ರೋಗಿ, ಇವರಲ್ಲಿ ನಿಕಟ ಸಂಪರ್ಕ ಇಲ್ಲದಿದ್ದ ಪಕ್ಷದಲ್ಲಿ ಗ್ರಾಹಕರ ಮನೋಭಾವವನ್ನರಿತು ಅವರ ಆಶಯಗಳನ್ನು ಪೂರ್ಣಗೊಳಿಸಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಇಂಥ ಉದ್ಯಮಗಳಲ್ಲೆಲ್ಲ ಏಕಮೇವ ಒಡೆತನ ಸಂಸ್ಥೆಯೇ ಅತ್ಯಂತ ಯೋಗ್ಯ. ಬೆಳ್ಳಿ–ಬಂಗಾರ, ಷೇರು ಮುಂತಾದ ವ್ಯವಹಾರಗಳಲ್ಲಿ, ಬೆಲೆಗಳಲ್ಲಿ ಬಹಳ ಏರಿಳಿತಗಳಾಗುವುದರಿಂದ ಶೀಘ್ರ ನಿರ್ಣಯದ ಆವಶ್ಯಕತೆ ಇರುತ್ತದೆ. ಇಂಥಲ್ಲೂ ಏಕವ್ಯಕ್ತಿ ಉದ್ಯಮವೇ ಹೆಚ್ಚು ಯಶಸ್ವಿಯಾಗುತ್ತದೆನ್ನಬಹುದು. ಬಂಡವಾಳ ಕಡಿಮೆಯಾಗಿಯೂ ಹಳ್ಳಿಗಳು ಹೆಚ್ಚಾಗಿಯೂ ಇರುವ ಭಾರತದಂಥ ದೇಶದಲ್ಲಿ ಏಕವ್ಯಕ್ತಿ ಉದ್ಯಮ ಸಂಸ್ಥೆಗಳ ಕ್ಷೇತ್ರ ವಿಸ್ತಾರವಾಗಿದೆ; ಅವಕಾಶಗಳೂ ಹೇರಳವಾಗುಂಟು. (ಪಿ.ಪಿ.ಎನ್.)

**ಏಕಶಿಲಾನಗರಿ :** ನೋಡಿ—ವರಂಗಲ್ಲು.

**ಏಕಶೃಂಗಿ :** ಒಂದು ಕೊಂಬಿನ ಕಾಲ್ಪನಿಕ ಪ್ರಾಣಿ (ಯೂನಿಕಾರನ್). ಇದರ ತಲೆ ಮತ್ತು ದೇಹ ಕುದುರೆಯಂತಿದ್ದು ಹಿಂಗಾಲುಗಳು ಜಿಂಕೆಯ ಕಾಲಿನಂತಿವೆ. ಬಾಲ ಸಿಂಹದ ಬಾಲದಂತೆ. ಕುದುರೆಯ ಬಾಲದಂತೆ ಚಿತ್ರಿತವಾಗಿರುವುದೂ ಉಂಟು. ಹೋತನಂತೆ ಗಡ್ಡವಿದೆ. ಹಣೆಯಲ್ಲಿ ತಿರುಚಿಕೊಂಡು ನೇರಚಾಚಿರುವ ಒಂದು ಕೊಂಬಿದೆ. ಈ ಪ್ರಾಣಿ ಶೌಚಗುಣದ ಪ್ರತೀಕವಾಗಿತ್ತು. ಶುದ್ಧ ಕನ್ಯೆಗಲ್ಲದೆ ಬೇರಾರಿಗೂ ವಶವಾಗುತ್ತಿರಲಿಲ್ಲ. ಭಾರತದಲ್ಲಿನ ಕೆಲವು ಬಿಳಿಕತ್ತೆಗಳಿಗೆ ಏಕಶೃಂಗವಿತ್ತೆಂದು ಟೆಸಿಯಸ್ ತಿಳಿಸುತ್ತಾನೆ. ಇದರ ಕೊಂಬಿನಿಂದಾದ ಪಾನಪಾತ್ರೆ ವಿಷಾಪಹಾರಿಯೆಂದೂ ಅವನ ಹೇಳಿಕೆ. ಏಕಶೃಂಗಿಗಳಾದ ಓರಿಕ್ಸ್ ಮತ್ತು ಭಾರತದ ಕತ್ತೆಗಳ ವಿಷಯವನ್ನು ಅರಿಸ್ಟಾಟಲ್ ಪ್ರಸ್ತಾಪಮಾಡಿದ್ದಾನೆ. ಪ್ಲಿನಿ ಕೂಡ ಈ ಎರಡರ ಜೊತೆಗೆ ಒಂದು ಕೊಂಬಿನ ಭಾರತದ ಎತ್ತಿನ ವಿಷಯವನ್ನು ತಿಳಿಸಿದ್ದಾನೆ. ಟೆಸಿಯಸ್‌ನನ್ನು ಉದ್ಧರಿಸುತ್ತ ಭಾರತದಲ್ಲಿ ಒಂದು ಕೊಂಬಿನ ಕುದುರೆಯೂ ಇತ್ತೆಂದು ತಿಳಿಸಿದ್ದಾನೆ. ಬೈಬಲ್ಲಿನಲ್ಲಿ ಇಂಥದೊಂದು ಪ್ರಾಣಿಯ ಉಲ್ಲೇಖವಿದೆ.



ಏಕಶೃಂಗಿಯ ವಿಷಪರಿಹಾರಕ ಗುಣದಲ್ಲಿ ನಂಬಿಕೆ ಇದ್ದ ಮಧ್ಯಯುಗದವರು ತಮ್ಮ ಪಾನಪಾತ್ರೆಗಳ ಮೇಲೆ ಅದರ ಚಿತ್ರ ಬಿಡಿಸುತ್ತಿದ್ದರು. ಈ ಪರಿಪಾಟಿ ಎರಡನೆಯ ಚಾರಲ್ಸನ ಕಾಲದವರೆಗೂ ಪ್ರಚಲಿತವಾಗಿತ್ತು. ರಾಜಭೋಜನವನ್ನು ಪರೀಕ್ಷಿಸಲು ಫ್ರಾನ್ಸಿನವರು 1789ರ ವರೆಗೂ ಏಕಶೃಂಗಿಯ ಕೊಂಬಿನಿಂದ ಮಾಡಿದ ಒಂದು ವಸ್ತುವನ್ನು ಬಳಸುತ್ತಿದ್ದರು. ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡಿನ ರಾಜಲಾಂಛನಗಳಲ್ಲಿ ಏಕಶೃಂಗಿಯ ಚಿತ್ರವಿದೆ.

ಮೆಕ್ಸಿಕೋದ ಒಂದು ಗಿಡಕ್ಕೆ ಏಕಶೃಂಗಿ ಎಂಬ ಹೆಸರಿದೆ. ಇವನ್ನು ಭೂತದ ಕೈ ಎಂದೂ ಕರೆಯುತ್ತಾರೆ. ಮಾರ್ಟಿನಿಯೇಸಿ ಕುಟುಂಬಕ್ಕೆ ಸೇರಿದ ಈ ಗಿಡದ ಕಾಯಿ ಬಾಗಿರುವ ಕೊಂಬಿನಂತಿದ್ದು ತೊಟ್ಟಿನಿಂದ ಕೆಳಗೆ ನೇತುಬಿದ್ದಿರುತ್ತದೆ.

ನರ್‌ವ್ಹಾಲ್ ಎಂಬ ತಿಮಿಂಗಿಲ ಒಂದಕ್ಕೆ ಮೂತಿಯ ತುದಿಯಲ್ಲಿ ಈಟಿಯಂಥ ಮೂಳೆಯೊಂದಿದೆ. ಇದು ಶೀತವಲಯದ ಸಮುದ್ರಗಳಲ್ಲಿ ವಾಸಿಸುತ್ತದೆ. ಇದರ



ಶರೀರ 20 ಅಡಿ ಉದ್ದ. ಮೂತಿಯಲ್ಲಿನ ಶೃಂಗ 9 ಅಡಿಗಳವರೆಗೂ ಬೆಳೆಯಬಲ್ಲುದು. ಈ ತಿಮಿಂಗಿಲದ ಮೂಳೆಗಳೇ ಏಕಶೃಂಗಿಯ ಕಲ್ಪನೆಗೆ ಕಾರಣವಾಗಿರಬಹುದೆಂದು ಹೇಳಲಾಗಿದೆ. (ಎಲ್.ಎಸ್.ಜಿ.)

**ಏಕಸಮ ಸಂಭವ ವಿತರಣೆ:** ಪ್ರತಿಯೊಂದು ಸರಳ ಘಟನೆಗೂ (ಸಿಂಪಲ್ ಈವೆಂಟ್) ಒಂದೇ ಸಮನಾದ ಸಂಭಾವ್ಯತೆಯನ್ನು (ಪ್ರಾಬೆಬಿಲಿಟಿ) ಇತ್ತರೆ ದೊರೆಯುವ ಸಂಭವ ವಿತರಣೆ (ಯೂನಿಫಾರಂ ಪ್ರಾಬೆಬಿಲಿಟಿ ಡಿಸ್ಟ್ರಿಬ್ಯೂಷನ್). ಇದು ಯಾದೃಚ್ಛಿಕ ಚರದ (ರ್‍ಯಾಂಡಂ ವೇರಿಯಬಲ್) ಅತಿ ಸರಳ ವಿತರಣೆಗಳಲ್ಲೊಂದು. ಒಂದು ಚೀಲದಲ್ಲಿ 1,2,3... ಎಂಬ ಅಂಕಿಗಳನ್ನು ಬರೆದಿಟ್ಟ $N$ ಟಿಕೆಟ್ಟುಗಳಿವೆ; ಒಂದು ಟಿಕೆಟ್ಟನ್ನು ಯಾದೃಚ್ಛಿಕವಾಗಿ ತೆಗೆದರೆ ದೊರೆಯುವ ಟಿಕೆಟ್ಟಿನ ಸಂಖ್ಯೆಯನ್ನು $X$ ಎಂದು ಕರೆಯೋಣ. ಯಾದೃಚ್ಛಿಕವಾಗಿ ತೆಗೆಯುವುದು ಎಂದರೆ ಪ್ರತಿಯೊಂದು ಟಿಕೆಟ್ಟನ್ನು ಆರಿಸುವ ಸಂಭಾವ್ಯತೆ ಸಮವಾಗಿರಬೇಕು. $X$ನ ಬೆಲೆಯನ್ನು $x$ ಎಂದೂ ಇದರ ಸಂಭಾವ್ಯತೆಯನ್ನು $P(X=x)$ ಎಂದೂ ಸೂಚಿಸಿದರೆ $X$ನ ಸಂಭವ ವಿತರಣೆಯನ್ನು ಹೀಗೆ ನಿರೂಪಿಸಬಹುದು.

$$\begin{array}{lccccc} x: & 1 & 2 & 3 & \ldots\ldots & N \\ P(X=x): & \frac{1}{N} & \frac{1}{N} & \frac{1}{N} & \ldots\ldots & \frac{1}{N} \end{array}$$

ಇಲ್ಲಿ $X=1,\ X=2,\ .\ \ldots,\ X=N$ ಎಂಬವನ್ನು ಸರಳ ಘಟನೆಗಳು ಎಂದು ಪರಿಗಣಿಸಿದರೆ ಮೇಲೆ ನಮೂದಿಸಿರುವ ವಿತರಣೆಯನ್ನು $1,2,3,\ldots\ldots\ldots,N$ ಪೂರ್ಣಾಂಕಗಳ ಮೇಲೆ ಏಕಸಮ ವಿತರಣೆ ಎನಿಸಲಾಗುವುದು. ಏಕಸಮ ವಿತರಣೆಯ ಸ್ತಂಭಚಿತ್ರ (ಹಿಸ್ಟೋಗ್ರಾಂ) ಆಯದ ರೂಪದಲ್ಲಿರುವುದರಿಂದ ಇದಕ್ಕೆ ಆಯಾಕಾರದ ವಿತರಣೆ (ರೆಕ್ಟಾಂಗ್ಯುಲರ್ ಡಿಸ್ಟ್ರಿಬ್ಯೂಷನ್) ಎಂಬ ಹೆಸರೂ ಉಂಟು.

ಮೊದಲನೆಯ ಬಹುಮಾನ 2.5 ಲಕ್ಷರೂಪಾಯಿ ಇರುವ ಒಂದು ಲಾಟರಿಯಲ್ಲಿ 10 ಲಕ್ಷ ಟಿಕೆಟ್ಟುಗಳ ಮಾರಾಟವಾಗುತ್ತದೆ. ಪ್ರತಿ ಟಿಕೆಟ್ಟಿಗೂ ಸಮಾನ ಸಂಭಾವ್ಯತೆಯನ್ನು ಕೊಡಲಾಗುವುದು. ಆದ್ದರಿಂದ ಬಹುಮಾನ ಪಡೆದ ಸಂಖ್ಯೆಯ ಸಂಭವ ವಿತರಣೆ ಏಕಸಮ ವಿತರಣೆಯಾಗಿರುವುದು.

$X$ನ ಗಣಿತ ನಿರೀಕ್ಷೆ (ಮ್ಯಾಥಮ್ಯಾಟಿಕಲ್ ಎಕ್ಸ್‌ಪೆಕ್ಟೇಶನ್)

$$E(X)=\frac{N+1}{2} \quad \text{ಮತ್ತು } X\text{ನ ವಿಚಲನೆ} \quad V(X)=\frac{N^2-1}{12}$$

ಇರುವುದು. ಚರ ಅವಿಚ್ಛಿನ್ನವಾದಾಗ (ಕಂಟಿನ್ಯೂಯಸ್) ವಿತರಣೆ ಅವಿಚ್ಛಿನ್ನ ಆಯಾಕಾರ ವಿತರಣೆ (ಕಂಟಿನ್ಯೂಯಸ್ ರೆಕ್ಟಾಂಗ್ಯುಲರ್ ಡಿಸ್ಟ್ರಿಬ್ಯೂಷನ್) ಆಗುವುದು. ಆಗ ವಿತರಣೆಯನ್ನು ಹೀಗೆ ನಿರೂಪಿಸಬಹುದು.

$$f(x)=\frac{1}{2a}, \quad -a < x < a$$

$$f(x)=0, \quad x < -a \text{ ಅಥವಾ } x > a$$

ಅಂದರೆ $x$ನ ಬೆಲೆ ಉಭಯ ದಿಕ್ಕಿನಲ್ಲೂ ಸೀಮಿತವಾಗಿರುತ್ತದೆ (ಬೌಂಡೆಡ್) ಮತ್ತು ಸಮಾಂಗವಾಗಿರುತ್ತದೆ (ಸಿಮೆಟ್ರಿಕಲ್). ಇದರ ಎಲ್ಲ ಕೋಟಿಯ ಭ್ರಮಣಾಂಕಗಳಿಗೂ (ಮೊಮೆಂಟ್ಸ್ ಆಫ್ ಆಲ್ ಆರ್ಡರ್ಸ್) ಅಸ್ತಿತ್ವವಿದೆ. ಇದರ ಮಧ್ಯಕ (ಮೀನ್) ಸೊನ್ನೆ, ಎರಡನೆಯ ಭ್ರಮಣಾಂಕ $\mu=a^2/12$ ಮತ್ತು ಮಾನಕ ವಿಚಲನ (ಸ್ಟ್ಯಾಂಡರ್ಡ್ ಡೀವಿಯೇಷನ್) $\sigma=0.289a$ (ಸಮೀಪದ ಬೆಲೆ); ಸರಾಸರಿ ವಿಚಲನ$=a/4$ ಮತ್ತು ಮಧ್ಯಮಾಂತರ ಗುಣಕ (ಕೊಯಿಫಿಶೆಂಟ್ ಆಫ್ ಮೀನ್ ಡಿಫರೆನ್ಸ್) $\Delta_1=a/3$. ಇದು ಪಿಯರ್ಸನ್ ರೇಖೆಗಳ ಜಾತಿಗೆ ಸೇರ್ಪಡೆಯಾದುದು. ಹೇಗೆಂದರೆ k–ನಿಕಷ ಸೊನ್ನೆಯಾದಾಗ ಏಕಸಮ ವಿತರಣ ರೇಖೆ ದೊರೆಯುವುದು.

ಆಯಾಕಾರ ವಿತರೇಖೆಯನ್ನು ಬೀಟಾ ವಿತರಣೆಯ ಒಂದು ವಿಶಿಷ್ಟ ರೂಪವನ್ನಾಗಿ ಪರಿಗಣಿಸಲು ಅವಕಾಶವಿದೆ. ಬೀಟಾ ವಿತರಣೆಯ ಸಾಂದ್ರತೆಯನ್ನು

$$f(x)=\frac{1}{B\ (a,b)}\ x^{a-1}\quad(1-x)^{b-1},\qquad (0< x <1).$$

ಎಂದು ನಿರೂಪಿಸಿದಾಗ, $a,b$ ಇದರ ಪ್ರಾಚಲಗಳಾಗುತ್ತವೆ (ಪ್ಯಾರಾಮೀಟರ್ಸ್). ಈಗ $a=1$ ಮತ್ತು $b=1$ ಎಂದು ಆದೇಶಿಸಿದರೆ ಈ ವಿತರಣೆಯ ಸಾಂದ್ರತೆ $f(x)=1$ ಎಂಬ ರೂಪವನ್ನು ತಾಳಿ ಆಯಾಕಾರ ವಿತರಣೆಯಾಗುವುದು. ಮತ್ತು $x$ನ ಬೆಲೆಗಳ ಗಡಿಗಳು (ಬೌಂಡ್ಸ್) 0 ಮತ್ತು 1 ಆಗುವುವು.

ಕೆಲವು ಸಂದರ್ಭಗಳಲ್ಲಿ $x$ನ ಗಡಿಗಳನ್ನು $-a$ ಮತ್ತು $+a$ ಎಂದು ತೆಗೆದುಕೊಳ್ಳುವುದುಂಟು. ಆಗ ಸಾಂದ್ರತೆಯ ಉತ್ಪನ್ನ (ಫಂಕ್ಷನ್) $f(x)=1/2a$ $(-a<x<a)$ ಎಂದಾಗುವುದು. ಭ್ರಮಣಾಂಕಗಳನ್ನು ಗಣನೆ ಮಾಡುವಲ್ಲಿ ಈ ರೂಪ ಬಹಳ ಉಪಯುಕ್ತವಾಗುವುದು. ಇದರ ಭ್ರಮಣಾಂಕಜನಕಉತ್ಪನ್ನ (ಮೊಮೆಂಟ್ ಜನರೇಟಿಂಗ್ ಫಂಕ್ಷನ್)

$$M(h)=\frac{1}{2ah}\int_{-a}^{a} e^{hx}dx=\ \frac{1}{2a}\left(e^{ah}-e^{-ah}\right)$$

$$=1+\frac{a^2h^2}{3!}+\frac{a^4h^4}{5!}+\ldots\ldots\ldots$$

ಈ ಶ್ರೇಣಿಯನ್ನು ಗಮನಿಸಿದರೆ ಏಕಸಮ ವಿತರಣೆಯ ವಿಷಮಭ್ರಮಣಾಂಕಗಳು (ಆಡ್ ಮೊಮೆಂಟ್ಸ್) ಎಲ್ಲವೂ ಸೊನ್ನೆಯಾಗುತ್ತವೆಂಬುದು ಸ್ಪಷ್ಟ ; ಮತ್ತು $h^{2n}/(2n)!$ ಪದದ ಗುಣಕಗಳು ಸಮ ಭ್ರಮಣಾಂಕಗಳಾಗುವುವು (ಈವನ್ ಮೊಮೆಂಟ್ಸ್). ವಿತರಣೆಯ ಮಧ್ಯಕ 0 ಆದ್ದರಿಂದ$\mu_r=\mu'_r$. ಆದಕಾರಣ $\mu_{2n}=a^{2n}/(2n+1)$. ಇದರಲ್ಲಿ $n$ಗೆ 1, 2, ... ಎಂಬ ಬೆಲೆಗಳನ್ನು ಆದೇಶಿಸಿ $\mu_2=a^2/3$, $\mu_4=a^4/5$, ... ಎಂಬ ಬೆಲೆಗಳನ್ನು ಪಡೆಯಬಹುದು. ಲಕ್ಷಣ ಉತ್ಪನ್ನಗಳನ್ನು (ಕ್ಯಾರೆಕ್ಟೆರಿಸ್ಟಿಕ್ ಫಂಕ್ಷನ್ಸ್) ಬಳಸಿ ಇದೇ ಫಲಗಳನ್ನು ಪಡೆಯಬಹುದು.

ನಿದರ್ಶನ ಮಧ್ಯಕ (ಸ್ಯಾಂಪಲ್ ಮೀನ್) : ಏಕಸಮ ವಿತರಣೆಯ ಸಮಷ್ಟಿಯಿಂದ $n$–ಗಾತ್ರದ ಯಾದೃಚ್ಛಿಕ ನಿದರ್ಶನವನ್ನು (ರ್‍ಯಾಂಡಂ ಸ್ಯಾಂಪಲ್) ತೆಗೆದುಕೊಂಡರೆ ಅದರ ಮಧ್ಯಕದ ವಿತರಣೆ ಆಶ್ಚರ್ಯಕರವಾಗಿ ವರ್ತಿಸುವುದು. ನಿದರ್ಶನ ಮಧ್ಯಕ $m$ ಆದರೆ ಇದರ ಸಾಂದ್ರತಾ ಉತ್ಪನ್ನ ತಾಳುವ ರೂಪ ಹೀಗಿರುವುದು.

$$f(m)=\ \frac{n^n}{(n-1)!}\ \sum_{r=0}^{k}(-1)^r\binom{n}{r}\left(m-\frac{r}{n}\right)^{n-1},$$

$$\frac{k}{n}\leqslant m\leqslant\frac{k+1}{n}\qquad\ldots(1)$$

ಸೋಜಿಗವೆಂದರೆ ಈ ಉತ್ಪನ್ನ $(n-1)$ ಘಾತಪ್ರಮಾಣದ ಬೇರೆ ಬೇರೆಯಾದ $n$ ಚಾಪಗಳಿಂದಾಗಿ ಸಂಗಮಸ್ಥಾನಗಳಲ್ಲಿ ಅಂದರೆ $k/n$ $(k=1,\ 2,\ldots\ldots,\ n)$ ಬಿಂದುಗಳಲ್ಲಿ $(n-1)$ ಬಿಂದುಸ್ಪರ್ಶ ($n-1$ ಪಾಯಿಂಟ್ ಕಾಂಟ್ಯಾಕ್ಟ್) ಉಳ್ಳವಾಗಿರುತ್ತವೆ, $n=2,3,4$ ಈ ಬೆಲೆಗಳಿಗೆ ಆವರ್ತಸಂಖ್ಯಾಉತ್ಪನ್ನ (ಫ್ರೀಕ್ವೆನ್ಸಿ ಫಂಕ್ಷನ್) ಈ ರೂಪಗಳನ್ನು ತಾಳುತ್ತದೆ.

$$n=2\begin{cases}4m & 0\leqslant m\leqslant\frac{1}{2}\\ 4(1-m) & \frac{1}{2}\leqslant m\leqslant 1\end{cases}$$

$$n=3\begin{cases}\dfrac{27m^2}{2} & 0\leqslant m\leqslant\frac{1}{3}\\ \dfrac{27}{2}\left\{m^2-3\left(m-\frac{1}{3}\right)^2\right\} & \frac{1}{3}\leqslant m\leqslant\frac{2}{3}\\ \dfrac{27}{2}\ (1-m)^2 & \frac{2}{3}\leqslant m\leqslant 1\end{cases}$$

$$n=4\begin{cases}\dfrac{128m^3}{3} & \\ \dfrac{128}{3}\left\{m^3-4\,(m-\frac{1}{4})^3\right\} & \frac{1}{4}\leqslant m\leqslant\frac{1}{2}\\ \dfrac{128}{3}\left\{(1-m)^3-4\ \ (\frac{3}{4}-m)^2\right\} & \frac{1}{2}\leqslant m\leqslant\frac{3}{4}\\ \dfrac{128}{3}(1-m)^3 & \frac{3}{4}\leqslant m\leqslant 1\end{cases}$$




ನಕ್ಷೆ 1

ಮೇಲೆ ಕೊಟ್ಟಿರುವ ಆವರ್ತಸಂಖ್ಯೆ ನೋಡುವುದಕ್ಕೆ ಪ್ರಸಾಮಾನ್ಯ (ನಾರ್ಮಲ್) ರೇಖೆಯಂತೆ ಕಾಣುತ್ತದೆ. ವಾಸ್ತವವಾಗಿ ಪರಿಶೀಲಿಸಿದರೆ ಕೇಂದ್ರಾಭಿಮಿತಿ ಪ್ರಮೇಯದ (ಸೆಂಟ್ರಲ್ ಲಿಮಿಟ್ ಥಿಯೊರಂ) ಸಲುವಾಗಿ ಈ ವಿತರಣೆ $n$ ಹೆಚ್ಚಿದಾಗ ಪ್ರಸಾಮಾನ್ಯ ವಿತರಣೆಗೆ ಉಪಗಮಿಸುವುದು.

ಮುಖ್ಯ ಗುಣಧರ್ಮಗಳು : ಯಾವುದಾದರೂ ಅವಿಚ್ಛಿನ್ನ ಚರ $x$ನ ಸಂಭವ ಸಾಂದ್ರತಾ ಉತ್ಪನ್ನ (ಸ. ಸಾ. ಉ, ಪ್ರಾಬೆಬಿಲಿಟಿ ಡೆನ್ಸಿಟಿ ಫಂಕ್ಷನ್, ಪಿ ಡಿ ಎಫ್) $f(x)$ ಇದ್ದರೆ ಆದರ ವಿತರಣ ಉತ್ಪನ್ನ (ಡಿಸ್ಟ್ರಿಬ್ಯೂಷನ್ ಫಂಕ್ಷನ್)

$F(x)=\int_{-\infty}^{x} f(x)dx$ ಇರುವುದು. ಈಗ $y=F(x)$ ಎಂಬ ರೂಪಾಂತರ (ಟ್ರಾನ್ಸ್‌ಫಾರ್ಮೇಶನ್) ಮಾಡಿದರೆ $y$ ಏಕಸಮ ವಿತರಣೆಗೆ ಒಳಗಾಗುತ್ತದೆ, ಮತ್ತು $f(y)=1$ ಇರುವುದು, $0\leqslant y\leqslant 1$. ಈ ರೂಪಾಂತರಕ್ಕೆ ಸಂಭಾವ್ಯತೆಯ ರೂಪಾಂತರ (ಪ್ರಾಬೆಬಿಲಿಟಿ ಟ್ರಾನ್ಸ್‌ಫಾರ್ಮೇಶನ್) ಎಂದು ಹೆಸರು. ಇದು ಬಹಳ ಮುಖ್ಯವಾದ ಮತ್ತು ಹೆಚ್ಚು ಪ್ರಯೋಜನಕರವಾದ ರೂಪಾಂತರವಾಗುವುದು.

ಏಕಸಮ ವಿತರಣೆಯನ್ನು ಅನುಸರಿಸುವ $x$ ಚರವನ್ನು ಪರಿಶೀಲಿಸಿ.

$y=-2\log_e x$ ಇದ್ದರೆ $dy=2dx/x$ ಅಥವಾ $dx=-\frac{1}{2}e^{-y/2}.dy$

ಆದ್ದರಿಂದ $y$ ಚರ 2 ಸ್ವತಂತ್ರಾಂಕದೊಂದಿಗೆ (ಡಿಗ್ರೀಸ್ ಆಫ್ ಫ್ರೀಡಂ) $\chi^2$ ವಿತರಣೆಯನ್ನು ಅನುಸರಿಸುತ್ತವೆ. $k$ ವಿವಿಧ ಸಮಷ್ಟಿಗಳಿಂದ (ಪಾಪ್ಯುಲೇಷನ್ಸ್) ಕ್ರಮವಾಗಿ $u_1,\ u_2,\ldots,\ u_k$ ಎಂಬ ವೀಕ್ಷಣೆಗಳ ಸಂಭಾವ್ಯತೆಗಳು ಕ್ರಮವಾಗಿ $x_1,\ x_2,\ldots,\ x_k$ ಇದ್ದರೆ ಆಗ $^P\lambda=-2\ \log_e x_1\ -2\ \log_e x_2-\ldots-$ $2\ \log_e x_k$ ಎಂಬ ಸ್ಟ್ಯಾಟಿಸ್ಟಿಕ್ $k$ ಸ್ವತಂತ್ರ $\chi^2$ ಚರಗಳ ಮೊತ್ತವಾಗಿರುವುದರಿಂದ ಯೋಗಫಲ $\chi^2$ ವಿತರಣೆಯನ್ನು ಅನುಸರಿಸುವುದು. ಇಲ್ಲಿನ ಪ್ರತಿ $\chi^2$ ಸ್ವತಂತ್ರಾಂಕ 2 ಇರುವುದರಿಂದ $^P\lambda$ವಿನ ಸ್ವತಂತ್ರಾಂಕ $2k$ ಇರುವುದು. ಸಾಂಖ್ಯಿಕೀಯ ಆಧಾರಕಲ್ಪನೆಗಳ ಸಾರ್ಥಕತಾ ಪರೀಕ್ಷಣ ಅಥವಾ ಅಂತರಾರ್ಥ ಪರೀಕ್ಷೆಗಳನ್ನು (ಸಿಗ್ನಿಫಿಕೆನ್ಸ್ ಟೆಸ್ಟ್ಸ್) ಸಮ್ಮಿಳಿತ ಮಾಡಲು ಈ ವಿತರಣೆ ಬಹಳ ಉಪಯೋಗಕ್ಕೆ ಬರುವುದು.

ನಿದರ್ಶದಿಂದ ಪ್ರಾಚಲದ ಅಂದಾಜು : ಅವಿಚ್ಛಿನ್ನ ಏಕಸಮ ವಿತರಣೆಗೆ ಒಂದು ಪ್ರಾಚಲವಿದೆ. ಅದನ್ನು $\theta$ ಎಂದು ಸೂಚಿಸಿದರೆ ಚರದ ಸಾಂದ್ರತಾ ಉತ್ಪನ್ನವನ್ನು ಹೀಗೆ ನಿರೂಪಿಸಬಹುದು.

$$f(x) \begin{cases} \frac{1}{\theta}, & 0 < x < \theta \\ 0 & \text{ಅನ್ಯಥಾ} \end{cases}$$

ಇದರ ನಕ್ಷೆಯನ್ನು 2(4)ನೆಯ ಚಿತ್ರದಲ್ಲಿ ತೋರಿಸಿದೆ. ಇದರ ವಿತರಣ ಉತ್ಪನ್ನವನ್ನು ಹೀಗೆ ನಿರೂಪಿಸಬಹುದು.




ನಕ್ಷೆ 2

$$F(x) = \begin{cases} 0 & x \leqslant 0 \\ \frac{x}{\theta} & 0 < x \leqslant \theta \\ 1 & 0 < x \end{cases}$$

ಇದರ ನಕ್ಷೆಯನ್ನು 2(5)ನೆಯ ಚಿತ್ರದಲ್ಲಿ ತೋರಿಸಿದೆ.

ಈ ಸಮಷ್ಟಿಯಿಂದ $n$-ಗಾತ್ರದ ನಿದರ್ಶನವನ್ನು ಆಯ್ದುಕೊಂಡು ಅದರ ಸಹಾಯದಿಂದ $\theta$ವನ್ನು ಅಂದಾಜು ಮಾಡುವುದು ರೂಢಿ. $n$ ಸ್ವತಂತ್ರ ವೀಕ್ಷಣೆಗಳಲ್ಲಿ ಎಲ್ಲಕ್ಕಿಂತ ದೊಡ್ಡದನ್ನು $x_{max}$ ಎಂದು ಸೂಚಿಸಿದರೆ ಇದು $\theta$ದ ಮಹತ್ತಮ ಪ್ರಾಯಿಕತಾ ಅಂದಾಜು (ಮ್ಯಾಕ್ಸಿಮಂ ಲೈಕ್‌ಲೀಹುಡ್ ಎಸ್ಟಿಮೇಟ್) ಆಗುವುದು. ಇದು ಅಭಿನತ (ಬಯಸ್ಡ್) ಅಂದಾಜು ಆದರೆ ಸುಸಂಗತ (ಕನ್ಸಿಸ್ಟೆಂಟ್). ಹಾಗೂ ಅಂದಾಜನ್ನು $[(n+1)/n]\ x_{max}$ಎಂದು ತೆಗೆದುಕೊಂಡರೆ ಲಘುತಮ ವಿಚಲನ ಅಭಿನತ (ಮಿನಿಮಂ ವೇರಿಯನ್ಸ್ ಅನಬಯಸ್ಡ್) ಅಂದಾಜಾಗಿರುವುದು. ಕನಿಷ್ಠ ವೀಕ್ಷಣೆ $x_{min}$ ಇದ್ದರೆ $(x_{min}+x_{max})/2$ ಅಂದರೆ $x_{min}$ ಮತ್ತು $x_{max}$ ಇವುಗಳ ಸರಾಸರಿಗೆ, ನಡುವ್ಯಾಪ್ತಿ (ಮಿಡ್‌ರೇಂಜ್) ಎಂದು ಹೆಸರು. ಉಪರೋಕ್ತ ಏಕಸಮ ಸಮಷ್ಟಿಯ ಮಧ್ಯಮ $\theta/2$ ಅಜ್ಞಾತವಾದಾಗ ನಿದರ್ಶನದಿಂದ ಇದನ್ನು ಅಂದಾಜು ಮಾಡಬಹುದು. ನಿದರ್ಶನದ ಮಧ್ಯಕಕ್ಕಿಂತ ನಿದರ್ಶನದ ನಡುವ್ಯಾಪ್ತಿ ಹೆಚ್ಚು ದಕ್ಷವಾದ ಅಂದಾಜು ಎಂಬುದು ಗಮನಾರ್ಹವಾದುದು.

(ಎಂ.ಐ.ಜಿ.)

**ಏಕಸ್ವ :** ಒಂದು ಉತ್ಪನ್ನವನ್ನೋ ಪದಾರ್ಥವನ್ನೋ ಮಾರಾಟಮಾಡಲು ಸರ್ಕಾರ ನೀಡಿದ ವಿಶಿಷ್ಟ ಹಕ್ಕು. ಸಮಸ್ತರ ಅವಗಾಹನೆಗೆ ಅವಕಾಶವಿರುವಂತೆ ತೆರೆದಿಟ್ಟ ಅಥವಾ ಬಹಿರಂಗ ಪತ್ರ ಎಂದು ಹೇಳಬಹುದಾದ ಲೆಟರ್ಸ್ ಪೇಟೆಂಟ್ ಎಂಬುದರಿಂದ ಸ್ಥೂಲವಾಗಿ ಈ ಅರ್ಥದಲ್ಲಿ ಬಳಕೆಗೆ ಬಂದ ಪೇಟೆಂಟ್ ಶಬ್ದಕ್ಕೆ ಕನ್ನಡದಲ್ಲಿ ಬಳಸಲಾಗಿರುವ ಸಮಾನಾರ್ಥಕ ಶಬ್ದ. ಪ್ರಶಸ್ತಿ ಪ್ರದಾನ, ಅಧಿಕಾರಿಗಳ ನೇಮಕ, ಸಂಘಸ್ಥಾಪನೆಯ ಸನ್ನದಿನ ನೀಡಿಕೆ, ಹೊಸ ಆವಿಷ್ಕಾರಗಳ ತಯಾರಿಕೆ ಬಳಕೆ ಅನುಭವ ಮಾರಾಟಗಳ ಹಕ್ಕಿನ ಕೊಡುಗೆ—ಇವೆಲ್ಲವೂ ಲೆಟರ್ಸ್ ಪೇಟೆಂಟ್ ಎಂಬ ಬಹಿರಂಗ ಪತ್ರಗಳ ಮುಖೇಣವೇ ಆಗುತ್ತಿದ್ದುವಾದರೂ ಇಂಗ್ಲಿಷಿನ ಪೇಟೆಂಟ್ ಎಂಬ ಶಬ್ದ ಇವುಗಳ ಪೈಕಿ ಕೊನೆಯದಕ್ಕೆ ಮಾತ್ರ ಸಾಮಾನ್ಯವಾಗಿ ಅನ್ವಯವಾಗುತ್ತದೆ. ವಾಣಿಜ್ಯಕ್ಷೇತ್ರದಲ್ಲಿ ಯಾರಿಗೇ ಆಗಲಿ ಏಕಸ್ವಾಮ್ಯದ ಸಂಪೂರ್ಣ ಹಾಗೂ ನಿರವಧಿ ಹಕ್ಕುಗಳನ್ನು ನೀಡುವುದು ಈಚೆಗೆ ಸರ್ಕಾರಗಳ ನೀತಿಯಾಗಿರುವುದಿಲ್ಲವಾದ್ದರಿಂದ ಈ ಬಗೆಯ ಪ್ರದಾನ ಈಗ ಸಾಮಾನ್ಯವಾಗಿ ಯಾವುದಾದರೊಂದು ಆವಿಷ್ಕಾರದ (ಇನ್‌ವೆನ್‌ಷನ್) ಅಥವಾ ಪರಿಶೋಧನೆಯ (ಡಿಸ್ಕವರಿ) ಫಲವಾದ ಉತ್ಪನ್ನಗಳಿಗೆ ಮಾತ್ರ ಸೀಮಿತವಾಗಿರುತ್ತದೆ; ಒಂದು ಕ್ಲುಪ್ತವಾದ ಅವಧಿಗೆ ಮಾತ್ರ ಇದನ್ನು ಕೊಡಮಾಡಲಾಗುತ್ತದೆ. ವಿಜ್ಞಾನ ಮತ್ತು ಉಪಯುಕ್ತ ಕಲೆಗಳಲ್ಲಿ ಹೊಸ ಹೊಸ ಸಂಶೋಧನೆ ಪ್ರಯೋಗಗಳು ನಡೆಯುವಂತೆ ಉತ್ತೇಜನ ನೀಡುವ ಉದ್ದೇಶದಿಂದ ಈ ಬಗೆಯ ಮಿತವ್ಯಾಪ್ತಿಯ ಹಾಗೂ ಮಿತ ಅವಧಿಯ ಏಕಸ್ವ ಹಕ್ಕುಗಳನ್ನು ಕೊಡಲಾಗುತ್ತಿದೆ.

**ಬ್ರಿಟನಿನಲ್ಲಿ :** ಹೊಸ ಉಪಯುಕ್ತ ಆವಿಷ್ಕಾರಗಳ ತಯಾರಿಕೆ ಬಳಕೆ ಮತ್ತು ಮಾರಾಟಗಳ ಬಗ್ಗೆ ಆವಿಷ್ಕರ್ತರಿಗೆ (ಇನ್ವೆಂಟರ್ಸ್) ಒಂದು ಕ್ಲುಪ್ತ ಅವಧಿಗೆ ಸಂಪೂರ್ಣ ಹಕ್ಕು ನೀಡುವ ಅಧಿಕಾರ ಇಂಗ್ಲೆಂಡಿನ ದೊರೆಗೆ ಬಲು ಹಿಂದಿನಿಂದಲೂ ಇತ್ತು. ಆದರೆ ಸಂಪ್ರದಾಯನ್ಯಾಯ ಇದಕ್ಕೆ ಖಚಿತವೂ ಸ್ಪಷ್ಟವೂ ಆದ ಕೆಲವು ಇತಿಮಿತಿಗಳನ್ನು ವಿಧಿಸಿತ್ತು. ಸಾಮಾನ್ಯ ಬಳಕೆಯ ವಸ್ತುಗಳ ಮಾರಾಟದ ಸಂಪೂರ್ಣ ಹಕ್ಕು ನೀಡುವ ಅಧಿಕಾರ ದೊರೆಗೆ ಇರಲಿಲ್ಲ. ಸರ್ವಮಾನ್ಯವಾದ ಕಸಬೊಂದರ ಬಗ್ಗೆ ಯಾರೊಬ್ಬರಿಗೂ ಸಂಪೂರ್ಣ ಹಕ್ಕು ನೀಡುವಂತಿರಲಿಲ್ಲ. ಹಕ್ಕು ಪಡೆದಾತನೇ ಆವಿಷ್ಕರ್ತನಾಗಿಲ್ಲದಿದ್ದರೂ ಆ ಆವಿಷ್ಕಾರವನ್ನು ದೇಶದಲ್ಲಿ ಅವನೇ ಚಾಲ್ತಿಗೆ ತಂದವನಾದರೂ ಆಗಿರಬೇಕು. ಇತರರಿಗೆ ಅದು ವೇದ್ಯವಾಗುವುದಕ್ಕೆ ಅಗತ್ಯವಾಗುವಷ್ಟು ಅವಧಿಗೆ ಮಾತ್ರ ಈ ಹಕ್ಕು ನೀಡತಕ್ಕದ್ದು. ಈ ಏಕಸ್ವದ ಕೊಡುಗೆಗೆ ಕಾರಣವಾದ ವಸ್ತುವಿನಿಂದ ಹೊಸ ವ್ಯಾಪಾರ ಅಥವಾ ತಯಾರಿಕೆಯಾಗುವಂತಿರಬೇಕು. ಏಕಸ್ವ ನೀಡಲಾದ ಆವಿಷ್ಕಾರದಲ್ಲಿ ಉಪಯುಕ್ತತೆ ಮತ್ತು ಹೊಸತನಗಳಿರಬೇಕು. ಇದರಿಂದ ವ್ಯಾಪಾರಕ್ಕೆ ಅನನುಕೂಲವಾಗಲಿ ಧಕ್ಕೆಯಾಗಲಿ ಒದಗಬಾರದು. ಇವು ಸಂಪ್ರದಾಯನ್ಯಾಯದ ಪ್ರಕಾರ ವಿಧಿಸಲಾಗುತ್ತಿದ್ದ ಕೆಲವು ಷರತ್ತುಗಳು.

ಒಂದನೆಯ ಎಲಿಜಬೆತ್ ಮತ್ತು ಒಂದನೆಯ ಜೇಮ್ಸ್‌ರ ಕಾಲದಲ್ಲಿ ಏಕಸ್ವವನ್ನು ಕುರಿತ ಸಂಪ್ರದಾಯನ್ಯಾಯವನ್ನು ಮೂಲೆಗೊತ್ತಲಾಯಿತು. ದೇಶಹಿತಾರ್ಥವಾಗಿ ಹಾಗೂ ವ್ಯಾಪಾರಾಭಿವೃದ್ಧಿಗಾಗಿ ಏಕಸ್ವಗಳನ್ನು ನೀಡಬಹುದೆಂಬ ನಿಯಮವನ್ನು ಮುಂದಿಟ್ಟು ಅನೇಕ ಅವಶ್ಯ ವಸ್ತುಗಳ ವ್ಯಾಪಾರದಲ್ಲಿ ಏಕಸ್ವ ನೀಡಲಾಯಿತು. ಇದನ್ನು ವಿರೋಧಿಸಿ ತೀವ್ರ ಚಳವಳಿ ಹೂಡಿದ ಮೇಲೆ ಕೊನೆಗೂ ಈ ಬಗೆಯ ನ್ಯಾಯಬಾಹಿರ ಏಕಸ್ವಾಮ್ಯ ತೆರವಾಯಿತು. ಇದಕ್ಕಾಗಿ 1624ರಲ್ಲಿ ಜಾರಿಗೆ ಬಂದ ಕಾಯಿದೆ ಬಲು ಮುಖ್ಯವಾದ್ದು. ಒಂದು ಹೊಸ ತಯಾರಿಕೆಗೆ ಸಂಬಂಧಿಸಿದಂತೆ ಅದರ ಪ್ರಥಮ ಆವಿಷ್ಕರ್ತನಿಗೆ (ಅಥವಾ ಆವಿಷ್ಕರ್ತರಿಗೆ) 14 ವರ್ಷಗಳಿಗೆ ಮೀರದಂತೆ ಸಂಪೂರ್ಣ ಹಕ್ಕು ನೀಡಬಹುದೆಂದೂ ಆದರೆ ಬೆಲೆ ಏರಿಸುವ, ವ್ಯಾಪಾರ ಕುಂಠಿಸುವ ಅಥವಾ ದುಷ್ಪರಿಣಾಮವಾಗುವ ಯಾವ ಬಗೆಯ ಹಕ್ಕುಗಳನ್ನೂ ನೀಡಬಾರದೆಂದೂ ವಿಧಿಸಲಾಯಿತು. ಇಂಗ್ಲಿಷ್ ಏಕಸ್ವ ಪದ್ಧತಿಗೆ ಇದೇ ಮೂಲಾಧಾರ. ಮುಂದೆ ಈ ಅವಧಿಯನ್ನು 14 ರಿಂದ 16 ವರ್ಷಗಳಿಗೆ ಏರಿಸಲಾಯಿತು (1919).

**ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ :** ಅಮೆರಿಕ ಸಂಯುಕ್ತಸಂಸ್ಥಾನದಲ್ಲಿ ಪ್ರಥಮ ಏಕಸ್ವ ಕಾಯಿದೆ ಜಾರಿಗೆ ಬಂದದ್ದು 1790ರಲ್ಲಿ. ಇದರ ಪ್ರಕಾರ ಅಮೆರಿಕ ಸಂಯುಕ್ತಸಂಸ್ಥಾನದಲ್ಲಿ ಅದುವರೆಗೂ ಗೊತ್ತಿಲ್ಲದ ಅಥವಾ ಬಳಸಲಾಗಿಲ್ಲದ ಯಾವುದೇ ಆವಿಷ್ಕಾರದ ನಿಜವಾದ ಕರ್ತನಿಗೆ 14 ವರ್ಷಗಳ ಅವಧಿಯ ಏಕಸ್ವ ಕೊಡಬಹುದಾಗಿತ್ತು. 1793ರಲ್ಲಿ ಇನ್ನೊಂದು ಕಾಯಿದೆ ಜಾರಿಗೆ ಬಂತು. ಇಂದು ಜಾರಿಯಲ್ಲಿರುವ ಏಕಸ್ವ ನ್ಯಾಯಕ್ಕೆ 1836ರ ಕಾಯಿದೆಯೇ ಆಧಾರ. ಇದು 1870ರ ಕಾಯಿದೆಯಿಂದ ವಿಸ್ತೃತಗೊಂಡಿತು. ಅಲ್ಲಿಂದೀಚೆಗೆ ಇದಕ್ಕೆ ಪದೇ ಪದೇ ತಿದ್ದುಪಡಿಗಳಾಗಿವೆ. ಏಕಸ್ವಗಳಿಗೂ ಕೈಗಾರಿಕೆಗೂ ಇರುವ ಸಂಬಂಧವನ್ನೂ ಕೈಗಾರಿಕೆಯ ಹಿತದೃಷ್ಟಿಯಿಂದ ಎಷ್ಟರಮಟ್ಟಿಗೆ ಇವು ಸೂಕ್ತವೆಂಬುದನ್ನೂ ಪರಿಶೀಲಿಸಲಾಗುತ್ತಿದೆ. ಪರಿಷ್ಕರ್ತನಿಗೆ ನೀಡಲಾಗುವ ಏಕಸ್ವದ ಅವಧಿ 17 ವರ್ಷ. ಸಸ್ಯಗಳ ಹೊಸ ತಳಿಗಳ ಪರಿಶೋಧನೆ ಮತ್ತು ಆವರ್ತನೆಗಳಿಗೆ ಏಕಸ್ವ ಪಡೆಯಲು 1930ರಲ್ಲಿ ಅವಕಾಶ ನೀಡಲಾಯಿತು. *

**ಭಾರತದಲ್ಲಿ :** ಭಾರತ ಸರ್ಕಾರ 1911ರಲ್ಲಿ ಏಕಸ್ವಗಳ ಮತ್ತು ನಕ್ಷೆಗಳ ಕಾಯಿದೆಯನ್ನು (ದಿ ಪೇಟೆಂಟ್ಸ್ ಅಂಡ್ ಡಿಸೈನ್ಸ್ ಆಕ್ಟ್) ಜಾರಿಗೆ ತಂದಿತು. ಏಕಸ್ವಕ್ಕೆ ಸಂಬಂಧಪಟ್ಟ ವಿಚಾರಗಳನ್ನು ವ್ಯವಸ್ಥೆಯಿಂದ ನಡೆಸಲು ಏಕಸ್ವ ಕಚೇರಿಯನ್ನು ನಿರ್ಮಿಸಿದೆ. ಇದಕ್ಕೆ ಒಬ್ಬ ಮುಖ್ಯಾಧಿಕಾರಿ—ನಿಯಂತ್ರಕ (ಕಂಟ್ರೋಲರ್)—ಇರುತ್ತಾನೆ.

ಏಕಸ್ವ ಪಡೆಯುವ ಕ್ರಮ : ಏಕಸ್ವವನ್ನು ಪಡೆಯಲು ಇಚ್ಛಿಸುವಾತ (ಅಥವಾ ಇಂಥ ಹಲವರು) ಏಕಸ್ವ ಕಚೇರಿಗೆ ನಿರ್ದಿಷ್ಟ ನಮೂನೆಯಲ್ಲಿ (ಫಾರ್ಮ್) ಅರ್ಜಿ ಬರೆದುಕೊಳ್ಳಬೇಕು. ಅರ್ಜಿದಾರ ಭಾರತೀಯ ಪ್ರಜೆಯೇ ಆಗಬೇಕೆಂದಿಲ್ಲ. ನವೀನ ಆವಿಷ್ಕಾರದ (ಶೋಧನೆಯ) ಸ್ವಾಧೀನ ಪಡೆದಿರುವುದಾಗಿ ಅಭ್ಯರ್ಥಿ ತನ್ನ ಅರ್ಜಿಯಲ್ಲಿ ನಿರೂಪಿಸಬೇಕು. ಅಭ್ಯರ್ಥಿ—ಅಥವಾ ಅಭ್ಯರ್ಥಿಗಳಲ್ಲಿ ಒಬ್ಬ—ಪರಿಷ್ಕರ್ತನಾಗಿರಬೇಕು ; ಅಥವಾ ಪರಿಷ್ಕಾರದ ಒಡೆಯನೋ ಅದನ್ನು ಬೇರೆಯವರಿಂದ ಪಡೆದವನೋ ಆಗಿರಬೇಕು. ಅರ್ಜಿಯೊಂದಿಗೆ ಶೋಧನೆಯ ರೂಪುರೇಷೆಗಳನ್ನು ಒಳಗೊಂಡ ತಾತ್ಕಾಲಿಕ ಅಥವಾ ಪರಿಪೂರ್ಣ ವಿವರಣೆ ಕೊಡಬೇಕು. ಅಭ್ಯರ್ಥಿಗಳಲ್ಲಿ ಯಾರೂ ಆವಿಷ್ಕರ್ತರಾಗಿರದಿದ್ದರೆ ಆವಿಷ್ಕರ್ತನ ವಿವರಗಳನ್ನು ಕೊಟ್ಟು ಆ ಹಕ್ಕು ತಮಗೆ ಯಾವ ರೀತಿ ಬಂತೆಂದು ನಿರೂಪಿಸಬೇಕು. ವಿವರಣೆ ಪತ್ರ ಅತಿ ಮುಖ್ಯ ದಾಖಲೆ. ಆವಿಷ್ಕಾರ ಯಾವ ರೀತಿಯದು ಎಂಬುದು ಸುಸ್ಪಷ್ಟವಾಗಿ ಅದರಿಂದ ತಿಳಿಯುವಂತಿರಬೇಕು. ಅದನ್ನು ಅಲ್ಲಿ ಹೆಸರಿಸಬೇಕು. ಆವಿಷ್ಕಾರ ಯಾವ ಬಗೆಯದು, ಅದನ್ನು ಕಾರ್ಯಗತಗೊಳಿಸುವ ಕ್ರಮ ಯಾವುದು—ಮುಂತಾದ

ಅಂಶಗಳು ಪರಿಪೂರ್ಣ ವಿವರಣಪತ್ರದಲ್ಲಿ ಇರುವುದು ಅವಶ್ಯ. ಆವಿಷ್ಕಾರವನ್ನು ಕುರಿತ ಹೆಚ್ಚಿನ ವಿವರ ಅವಶ್ಯವೆಂದು ನಿಯಂತ್ರಕನಿಗೆ ಎನಿಸಿದರೆ ಆತ ಆ ಬಗ್ಗೆ ಆದೇಶ ನೀಡಬಹುದು. ತಾತ್ಕಾಲಿಕ ವಿವರಣ ಪತ್ರ ಸಲ್ಲಿಸಿದ್ದ ಪಕ್ಷದಲ್ಲಿ ಮುಂದಿನ ಒಂಬತ್ತು ತಿಂಗಳೊಳಗೆ ಪರಿಪೂರ್ಣಪತ್ರ ಸಲ್ಲಿಸತಕ್ಕದ್ದು. ಈ ಅವಧಿಯನ್ನು ಮತ್ತೆ ಹತ್ತು ತಿಂಗಳಿಗೆ ವಿಸ್ತರಿಸಬಹುದು. ಇಷ್ಟರೊಳಗೂ ಸಂಪೂರ್ಣ ವಿವರಣ ಪತ್ರ ಬಾರದಿದ್ದಲ್ಲಿ ಅಭ್ಯರ್ಥಿಗಳು ಅದನ್ನು ಬಿಟ್ಟಂತೆ ಲೆಕ್ಕ.

ನಿಯಮಿತ ಕಾಲದೊಳಗೆ ಪರಿಪೂರ್ಣ ವಿವರಣ ಪತ್ರವೇ ಮುಂತಾದವು ಬಂದಲ್ಲಿ ಅರ್ಜಿ ಕಾನೂನುಬದ್ಧವಾಗಿದೆಯೆ ಎಂಬ ಎಲ್ಲ ವಿಚಾರಗಳನ್ನು ವಿಮರ್ಶಿಸಲು ನಿಯಂತ್ರಕ ಈ ಪತ್ರಗಳನ್ನು ಪರೀಕ್ಷಕನಿಗೆ (ಎಗ್ಸಾಮಿನರ್) ಕಳುಹಿಸುತ್ತಾನೆ. ಈ ವಿಚಾರದಲ್ಲಿ ಆತನಿಂದ ಬಂದ ವರದಿಯ ಆಧಾರದ ಮೇಲೆ ನಿಯಂತ್ರಕ ತೀರ್ಮಾನ ಕೈಕೊಳ್ಳುತ್ತಾನೆ. ಆತ ಅರ್ಜಿಯನ್ನು ಸ್ವೀಕರಿಸಲು ನಿರಾಕರಿಸಬಹುದು ; ಅಥವಾ ನಕ್ಷೆಯ ವಿವರಣೆಗಳಲ್ಲಿ ತಿದ್ದುಪಡಿ ಮಾಡುವಂತೆ ಆದೇಶಿಸಬಹುದು. ಅರ್ಜಿಯಲ್ಲಿ ಒಂದು ಶೋಧನೆಗಿಂತ ಹೆಚ್ಚಿನ ಶೋಧನೆಗಳು ಅಡಕವಾಗಿದ್ದಲ್ಲಿ ಇವಕ್ಕೆ ಪ್ರತ್ಯೇಕವಾಗಿ ಅರ್ಜಿ ಸಲ್ಲಿಸಬೇಕೆಂದು ನಿರ್ದೇಶಿಸಬಹುದು.

ಹದಿನೆಂಟು ತಿಂಗಳ ಒಳಗೆ ಅರ್ಜಿಯ ಸ್ವೀಕಾರ ಪ್ರಕಟವಾಗಬೇಕು. ಇಲ್ಲದಿದ್ದಲ್ಲಿ ಅದು ಅಸ್ವೀಕೃತವಾಯಿತೆಂದು ಅರ್ಥ. ಇದರ ಬಗ್ಗೆ ಆಕ್ಷೇಪಣೆಯೇನಾದರೂ ಇದ್ದರೆ ಅದನ್ನು ಅರ್ಜಿ ಸ್ವೀಕೃತವಾಯಿತೆಂದು ಪ್ರಕಟವಾದ ನಾಲ್ಕು ತಿಂಗಳ ಒಳಗೆ ಕಚೇರಿಗೆ ತಿಳಿಸಬೇಕು. ಅರ್ಜಿದಾರ ತನ್ನಿಂದಲೋ ತಾನು ಯಾರ ಪ್ರತಿನಿಧಿಯೋ ಅವನಿಂದಲೋ ಅಥವಾ ತನಗೆ ಆ ಹಕ್ಕನ್ನು ವರ್ಗಾಯಿಸಿದವರಿಂದಲೋ ಇದನ್ನು ಪಡೆದಿದ್ದಾನೆಂದು ಕಕ್ಷಿಯ ಆಕ್ಷೇಪವಿರಬಹುದು. ಇದಕ್ಕೆ ಮುಂಚೆಯೆ ಹಾಕಿದ ಅರ್ಜಿಯಲ್ಲಿ ನಮೂದಿಸಿರುವ ವಿವರಗಳನ್ನೆ ಇದೂ ಒಳಗೊಂಡಿದೆಯೆಂದೂ ಅದ್ದರಿಂದ ಇದಕ್ಕೆ ಏಕಸ್ವ ಕೊಡಲಾಗದೆಂದೂ ತಕರಾರು ಹೂಡಬಹುದು ; ಅಥವಾ ಈ ಅರ್ಜಿಯಲ್ಲಿ ಕಾಣಿಸಿರುವ ಆವಿಷ್ಕಾರ ಭಾರತದಲ್ಲಿ ಆಗಲೇ ಬಳಕೆಯಲ್ಲಿತ್ತೆಂದೂ ಇದರ ಉಪಯೋಗ ಮೊದಲೇ ತಿಳಿದಿತ್ತೆಂದೂ ವಾದಿಸಬಹುದು. ಇಂಥ ಆಕ್ಷೇಪಣೆಯನ್ನು ವಿಚಾರಿಸಿ ಸೂಕ್ತ ತೀರ್ಪು ನೀಡುವುದು ನಿಯಂತ್ರಕನ ಕರ್ತವ್ಯ.

ಯಾರ ಆಕ್ಷೇಪಣೆಯೂ ಇರದಿದ್ದರೆ ಅಥವಾ ಆಕ್ಷೇಪಣೆಯನ್ನು ತಳ್ಳಿಹಾಕಿದರೆ ಸರ್ಕಾರ ಸೂಚಿಸಿದ ಸೂಕ್ತ ಷರತ್ತುಗಳಿಗೆ ಒಳಪಡಿಸಿ ಏಕಸ್ವ ಕಚೇರಿ ತನ್ನ ಮೊಹರುನಿಶಿ ಅರ್ಜಿದಾರನಿಗೆ ಅಥವಾ ಅರ್ಜಿದಾರರಿಗೆ ಏಕಸ್ವ ನೀಡುತ್ತದೆ. ಈ ಏಕಸ್ವವನ್ನು ಪಡೆದವರಿಗೆ ಇದರಲ್ಲಿ ನಮೂದಿಸಿದ ಹೊಸ ಆವಿಷ್ಕಾರದ ಪ್ರಕಾರ ವಸ್ತುವನ್ನು ಭಾರತದಲ್ಲಿ ತಯಾರಿಸಲು, ಅದನ್ನು ಉಪಯೋಗಿಸಲು ಮತ್ತು ಅದನ್ನು ಮಾರಲು ಮಾತ್ರವಲ್ಲದೆ ಈ ಅಧಿಕಾರವನ್ನು ಇನ್ನೊಬ್ಬರಿಗೆ ವರ್ಗಾಯಿಸಲೂ ಹಕ್ಕು ಬರುತ್ತದೆ. ಸಾಮಾನ್ಯವಾಗಿ ಏಕಸ್ವವನ್ನು ಅರ್ಜಿಯ ತಾರೀಕಿನಿಂದ ಇಪ್ಪತ್ನಾಲ್ಕು ತಿಂಗಳುಗಳ ಒಳಗೆ ಕೊಡಬೇಕು. ನಿಯಂತ್ರಕ ಕೊಟ್ಟ ತೀರ್ಪಿನಿಂದಲೋ ತಕರಾರು ಅರ್ಜಿಯನ್ನು ತಳ್ಳಿ ಹಾಕಿದ್ದೇ ಮುಂತಾದ್ದರಿಂದಲೋ ತೊಂದರೆಗೆ ಒಳಗಾದವನು ಕೇಂದ್ರ ಸರ್ಕಾರಕ್ಕೆ ಅಪೀಲು ಮಾಡಲು ಶಾಸನದಲ್ಲಿ ಅವಕಾಶವುಂಟು.

ರಕ್ಷಣೆ : ಏಕಸ್ವ ನೀಡುವ ವಿಚಾರದ ತೀರ್ಮಾನಕ್ಕೆ ಯಾವ ಬಾಧಕವೂ ಬಾರದ ರೀತಿಯಲ್ಲಿ ಅರ್ಜಿಯ ತಾರೀಖಿನಿಂದ ಏಕಸ್ವ ನೀಡುವ ತಾರೀಖಿನ ವರೆಗೆ ಸಂಬಂಧಪಟ್ಟ ವಸ್ತುವನ್ನು ಉಪಯೋಗಿಸಲೂ ಅದರ ಬಗ್ಗೆ ಪ್ರಚಾರ ಮಾಡಲೂ ಅರ್ಜಿದಾರರಿಗೆ ಹಕ್ಕುಂಟು. ಇದನ್ನು ತಾತ್ಕಾಲಿಕ ರಕ್ಷಣೆಯೆಂದು ಕರೆಯಲಾಗುತ್ತದೆ

ಏಕಸ್ವದ ಅವಧಿ ಅದರಲ್ಲಿ ಹಾಕಿದ ತಾರೀಖಿನಿಂದ ಹದಿನಾರು ವರ್ಷ. ಅವಧಿ ಮುಗಿಯುವುದಕ್ಕೆ ಆರು ತಿಂಗಳ ಮುನ್ನ ಈ ಅವಧಿಯನ್ನು ಮುಂದುವರಿಸಲು ಕೇಂದ್ರ ಸರ್ಕಾರಕ್ಕೆ ಅರ್ಜಿ ಸಲ್ಲಿಸಬಹುದು. ಆ ವಿಚಾರದಲ್ಲಿ ಬಹಿರಂಗವಾದ ಪ್ರಕಟನೆಯನ್ನು ನಿರ್ದಿಷ್ಟ ಕ್ರಮದಲ್ಲಿ ಕೊಡಬೇಕು. ಅದಕ್ಕೆ ಯಾರಾದರೂ ಆಕ್ಷೇಪಣೆ ಸಲ್ಲಿಸುವುದಿದ್ದರೆ ನಿರ್ದಿಷ್ಟ ಸಮಯದ ಒಳಗೆ ಅದನ್ನು ಸಲ್ಲಿಸಬಹುದು. ಅವಧಿ ಮುಂದುವರಿಸಲು ಮಾಡಿದ ಅರ್ಜಿಯನ್ನು ಕೇಂದ್ರ ಸರ್ಕಾರ ತಾನೇ ಪರಾಮರ್ಶೆ ಮಾಡಿ ನಿರ್ಧರಿಸಬಹುದು. ಅಗತ್ಯ ಕಂಡಲ್ಲಿ ಉಚ್ಚನ್ಯಾಯಾಲಯಕ್ಕೆ ತೀರ್ಮಾನಕ್ಕೆ ಕಳುಹಿಸಬಹುದು. ನಿಯಂತ್ರಕನೂ ಆಕ್ಷೇಪಣೆ ಕೊಟ್ಟವನೂ ಈ ವ್ಯಾಜ್ಯದ ಪಕ್ಷಗಳೆಂದು (ಪಾರ್ಟಿ) ಉಚ್ಚನ್ಯಾಯಾಲಯದಲ್ಲಿ ತಿಳಿಯಲಾಗುತ್ತದೆ. ಕೊಟ್ಟ ಏಕಸ್ವದಿಂದ ಸರಿಯಾದ ಉತ್ಪತ್ತಿ ದೊರಕಿಲ್ಲವಾದರೆ ಕೇಂದ್ರ ಸರ್ಕಾರ ಅಥವಾ ಉಚ್ಚ ನ್ಯಾಯಾಲಯ ಏಕಸ್ವವನ್ನು ಐದು ವರ್ಷ (ವಿಶೇಷ ಸಂದರ್ಭದಲ್ಲಿ ಹತ್ತು ವರ್ಷಗಳ ಕಾಲ) ಮುಂದುವರಿಸಬಹುದು.

ಏಕಸ್ವಕ್ಕೆ ಮೋಸದ ಅರ್ಜಿ : ಯಾರಾದರೂ ಸುಳ್ಳು ಅರ್ಜಿ ನೀಡಿ ಏಕಸ್ವ ಪಡೆದಿದ್ದರೆ ಅದರಿಂದ ಮೊತ್ತ ಮೊದಲಿನ ಆವಿಷ್ಕರ್ತನಿಗೆ ಅಥವಾ ಆವನ ವಾರಸುದಾರ ಅಥವಾ ಅವನಿಂದ ಆವಿಷ್ಕಾರವನ್ನು ಪಡೆದವನಿಗೆ ಯಾವ ಬಗೆಯ ಧಕ್ಕೆಯೂ ಒದಗದೆಂದು ಕಾಯಿದೆ ಸ್ಪಷ್ಟಪಡಿಸುತ್ತದೆ. ಮೋಸದ ಅರ್ಜಿಯಿಂದ ಪಡೆದ ರಕ್ಷಣೆಯಿಂದ ಮೊತ್ತ ಮೊದಲಿನ ಆವಿಷ್ಕರ್ತನ ಹಕ್ಕಿಗೆ ಯಾವ ಕುಂದೂ ಉಂಟಾಗುವುದಿಲ್ಲ.

ಅರ್ಜಿದಾರರು ಪ್ರಥಮ ಆವಿಷ್ಕರ್ತರಲ್ಲವೆಂಬ ಕಾರಣದಿಂದ ಏಕಸ್ವವನ್ನು ಉಚ್ಚ ನ್ಯಾಯಾಲಯ ರದ್ದು ಮಾಡಿದರೆ ಅಥವಾ ಅದೇ ಕಾರಣಕ್ಕಾಗಿ ಆಕ್ಷೇಪಣೆ ಅರ್ಜಿಯನ್ನು ನಿಯಂತ್ರಕ ಎತ್ತಿ ಹಿಡಿದಲ್ಲಿ ಕಾಯಿದೆಯ ಪ್ರಕಾರ ಮೊದಲಿನ ಆವಿಷ್ಕರ್ತ ಅರ್ಜಿ ಬರೆದುಕೊಂಡರೆ ಆತನಿಗೆ ಏಕಸ್ವ ನೀಡಬಹುದು.

ಏಕಸ್ವ ಪಡೆದವರ ಹೆಸರು, ಏಕಸ್ವದ ವಿವರ, ಅದರ ವರ್ಗಾವಣೆ, ಏಕಸ್ವದ ಉಪಯೋಗಕ್ಕೆ ಕೊಟ್ಟ ಪರವಾನೆ (ಲೈಸೆನ್ಸ್), ಏಕಸ್ವದ ಸನ್ನದಿಗೆ ಮಾಡಿದ ತಿದ್ದುಪಡಿ ಮುಂತಾದವುಗಳನ್ನು ತೋರಿಸುವ ರಿಜಿಸ್ಟರನ್ನು ಏಕಸ್ವದ ಕಚೇರಿಯಲ್ಲಿ ಇಟ್ಟಿರಬೇಕು. ಇದರಲ್ಲಿ ಬರೆಯಬೇಕೆಂದು ವಿಧಿಸಲಾಗಿರುವ ಎಲ್ಲಾ ವಿಚಾರಗಳಲ್ಲೂ ಇದು ಆಪಾತತಃ (ಪ್ರೈಮ ಫೇಷಿಯೀ) ದಾಖಲೆ.

ಕಾಯಿದೆಯ ಪ್ರಕಾರ ಕೊಟ್ಟ ಹಕ್ಕುಗಳ ಹೊರತು ಸರ್ಕಾರಕ್ಕೆ ಏಕಸ್ವ ಹಕ್ಕಿಗೆ ಚ್ಯುತಿ ತರುವ ಕೆಲಸಗಳನ್ನು ಮಾಡಲು ಸಾಧ್ಯವಿಲ್ಲ. ಅರ್ಜಿದಾರನಿಗೆ ಅಥವಾ ಏಕಸ್ವದಾರನಿಗೆ ಜಾಹೀರು ಮಾಡಿ ಸರ್ಕಾರದ ಕೆಲಸಕ್ಕಾಗಿ ಏಕಸ್ವದ ಆವಿಷ್ಕಾರವನ್ನು ಉಪಯೋಗಿಸುವ ಹಕ್ಕು ಸರ್ಕಾರದ ಯಾವುದೇ ಇಲಾಖೆಯ ಅಧಿಕಾರಿಗೆ ಇದೆ. ಯುದ್ಧಕ್ಕೆ ಸಂಬಂಧಪಟ್ಟ ಆವಿಷ್ಕಾರಗಳನ್ನು ಆವಿಷ್ಕರ್ತ ಸರ್ಕಾರಕ್ಕೆ ಬಿಟ್ಟು ಕೊಡಬಹುದು.

ಭಾರತದ ರಕ್ಷಣೆ ಮತ್ತು ಆಹಾರ ಔಷಧಿಗಳ ಉತ್ಪಾದನೆ—ವಿತರಣೆಗಳಿಗೆ ಸರ್ಕಾರ ತೀವ್ರ ಗಮನ ಕೊಡಬೇಕಾದ್ದರಿಂದ ಅವಕ್ಕೆ ಸಂಬಂಧಿಸಿದ ಏಕಸ್ವವನ್ನು ಕೊಡುವ ವಿಚಾರದಲ್ಲಿ ಅಗತ್ಯ ಕ್ರಮಗಳನ್ನು ಕೈಗೊಳ್ಳಲು ಸಾಧ್ಯವಾಗುವಂತೆ 1968 ರಲ್ಲಿ ಏಕಸ್ವ ಕಾಯಿದೆಯಲ್ಲಿ ಭಾರತ ಸರ್ಕಾರ ಸೂಕ್ತ ತಿದ್ದುಪಡಿ ಮಾಡಿತು.

**ಪರವಾನೆ :** ಏಕಸ್ವಸನ್ನದನ್ನು ಮೊಹರುಮಾಡಿದ ಮೂರು ವರ್ಷಗಳ ಬಳಿಕ ಕಾಯಿದೆಯಲ್ಲಿ ನಮೂದಿಸಿರುವ ಕಾರಣಗಳಿಗಾಗಿ ಬೇರೆ ಯಾರಾದರೂ ಅದರ ಉಪಯೋಗವೇ ಮುಂತಾದವುಗಳ ಬಗ್ಗೆ ಪರವಾನೆ ಬಯಸಿ ಕೇಳಬಹುದು. ಇದು ಸಾರ್ವಜನಿಕರ ಹಿತದೃಷ್ಟಿಯಿಂದ ಮಾಡಿದ ಏರ್ಪಾಡು. ಕೇಂದ್ರ ಸರ್ಕಾರವಾಗಲಿ ರಾಜ್ಯ ಸರ್ಕಾರವಾಗಲಿ ಹಕ್ಕಿನ ಪರವಾನೆಯನ್ನು ಭಾರತದ ವಾಣಿಜ್ಯ ಬೆಳವಣಿಗೆಯ ದೃಷ್ಟಿಯಿಂದ ಕೇಳಬಹುದು. ಇಂಥ ಅರ್ಜಿಗಳಿಗೆ ಇರಬೇಕಾದ ಕಾರಣಗಳು, ಅರ್ಜಿಗಳನ್ನು ತೀರ್ಮಾನ ಮಾಡುವ ವಿಧಾನ, ಇದಕ್ಕಾಗಿ ಕೊಡತಕ್ಕ ಪರಿಹಾರ, ಅಪೀಲು ಇತ್ಯಾದಿಗಳ ಬಗ್ಗೆ ಕಾಯಿದೆಯಲ್ಲಿ ಸೂಕ್ತ ವಿಧಿಗಳನ್ನು ನಿರ್ಮಿಸಲಾಗಿದೆ.

ಏಕಸ್ವವನ್ನು ಬಿಟ್ಟುಕೊಡುವುದಾಗಿ ಅದರ ಹಕ್ಕುದಾರ ಇಚ್ಛಿಸಿದ ಪಕ್ಷದಲ್ಲಿ ನಿಯಂತ್ರಕ ಸೂಕ್ತವಾದ ಜಾಹೀರು ನೀಡಿ ಯುಕ್ತ ವಿಚಾರಣೆ ನಡೆಸಿ ಅನಂತರ ಅದನ್ನು ರದ್ದುಪಡಿಸಬಹುದು. ಯಾವುದೇ ಏಕಸ್ವದಿಂದ ದೇಶಕ್ಕೆ ಅಥವಾ ಸಾರ್ವಜನಿಕರಿಗೆ ಅಪಚಾರವಾಗಿದೆಯೆಂದು ಪ್ರಕಟಿಸಿ ಸರ್ಕಾರ ಆ ಏಕಸ್ವವನ್ನು ರದ್ದುಪಡಿಸಬಹುದು.

ಯಾರಿಂದಲಾದರೂ ಏಕಸ್ವಕ್ಕೆ ಚ್ಯುತಿ ಬಂದಾಗ ಆ ಬಗ್ಗೆ ಜಿಲ್ಲಾ ನ್ಯಾಯಾಲಯದ ಮುಂದೆ ವ್ಯವಹಾರ ಮಾಡಬಹುದು. ಏಕಸ್ವವನ್ನು ರದ್ದು ಮಾಡಬೇಕೆಂದು ಪ್ರತಿಅಭ್ಯರ್ಥನೆಇದ್ದಲ್ಲಿ ವ್ಯವಹಾರದ ತೀರ್ಮಾನಕ್ಕೆ ಉಚ್ಚನ್ಯಾಯಾಲಯಕ್ಕೆ ಕಳುಹಿಸಬೇಕು. ಆದರೆ ಏಕಸ್ವದ ತಿಳಿವಳಿಕೆ ಇಲ್ಲದೆ ಅಥವಾ ತಿಳಿಯಲು ಆಸ್ಪದವಿಲ್ಲದೆ ಒಬ್ಬ ಏಕಸ್ವಕ್ಕೆ ಚ್ಯುತಿ ತಂದಿದ್ದರೆ ಅವನ ಮೇಲೆ ನಷ್ಟಕ್ಕೆ ದಾವೆ ನಿಲ್ಲಲಾರದು. ಆದರೂ ನ್ಯಾಯಾಲಯದಲ್ಲಿ ತಡೆಯಾಜ್ಞೆಯ (ಇಂಜೆಕ್ಷನ್) ವ್ಯವಹಾರ ಮಾಡಲು ಯಾವ ಅಡ್ಡಿಯೂ ಇಲ್ಲ. ಈ ವ್ಯಾಜ್ಯದ ಅರ್ಜಿ ಸೂಕ್ತವೆನಿಸಿದಲ್ಲಿ ಕೋರ್ಟು ಈ ಬಗ್ಗೆ ಆದೇಶ ನೀಡುವುದಲ್ಲದೆ ಲೆಕ್ಕಪತ್ರಗಳ ಪರಿಶೀಲನೆಯೇ ಮೊದಲಾದ ನಿವೃತ್ತಿಗಳನ್ನೂ ಕೊಡಬಹುದು. ಉಚ್ಚನ್ಯಾಯಾಲಯದಲ್ಲಿ ನಡೆದ ಮೊಕದ್ದಮೆಯ ತೀರ್ಪನ್ನೂ ಅದು ನಿಯಂತ್ರಕನಿಗೆ ಕಳುಹಿಸಬೇಕು. ನಿಯಂತ್ರಕ ಈ ತೀರ್ಮಾನದ ವಿವರಗಳನ್ನು ಏಕಸ್ವ ರಿಜಿಸ್ಟರಿನಲ್ಲಿ ದಾಖಲು ಮಾಡಿಕೊಳ್ಳುತ್ತಾನೆ.

ತಾನೇ ಏಕಸ್ವ ಹಕ್ಕುದಾರನೆಂದು ಹೇಳುತ್ತಾ ಬೇರೊಬ್ಬ ಅದಕ್ಕೆ ಚ್ಯುತಿ ತಂದನೆಂದು ಆರೋಪಿಸಿ ನಷ್ಟಕ್ಕೆ ಅಥವಾ ಇತ್ಯಾದಿಗಳಿಗೆ ವ್ಯಾಜ್ಯ ಮಾಡುವುದಾಗಿ ಹೆದರಿಸಿ ಬಹಿರಂಗ ಪತ್ರ, ಜಾಹೀರಾತು ಇತ್ಯಾದಿಗಳನ್ನು ಮಾಡಿದರೆ ಅವನ ಮೇಲೆ ತೊಂದರೆಗೆ ಈಡಾದವ ಜಿಲ್ಲಾ ನ್ಯಾಯಾಲಯದಲ್ಲಿ ಸೂಕ್ತ ನಿರ್ದೇಶನಕ್ಕೂ ನಷ್ಟಕ್ಕೂ ವ್ಯಾಜ್ಯ ಹೂಡಬಹುದು.

ಏಕಸ್ವಕ್ಕೆ ಸಂಬಂಧಿಸಿದಂತೆ ನ್ಯಾಯಾಲಯಗಳು ನೀಡಿರುವ ತೀರ್ಪುಗಳಿಂದ ಕೆಲವು ವಿಚಾರಗಳು ಸಿದ್ಧಪಡುತ್ತವೆ. ಹೊಸ ಆವಿಷ್ಕಾರವೆಂದರೇನು ಎಂಬುದು ಒಂದು ಮುಖ್ಯ ವಿಚಾರ. ಇನ್ನೊಬ್ಬರು ಆ ಸಮಯದ ತನಕ ಕಂಡು ಹಿಡಿಯದ ಯಾವುದನ್ನಾದರೂ ಅನೇಕ ವಿಧಾನಗಳಿಂದ ಒಬ್ಬ ಕಂಡುಹಿಡಿಯಬಹುದು. ಇದರಿಂದಾಗಿ ಇವನ ಹಿಂದಿನವ ಅರ್ಜಿ ಹಾಕಿ ಏಕಸ್ವ ಪಡೆಯಲು ತೊಂದರೆಯೇನೂ ಬರುವುದಿಲ್ಲ. ಒಂದು ಆವಿಷ್ಕಾರದ ಏಕಸ್ವವನ್ನು ಅದು ಹೊಸತಲ್ಲವೆಂಬ ಕಾರಣದಿಂದ ನಿರಾಕರಿಸು

ವಾಗ ಆ ಆವಿಷ್ಕಾರ ಉಪಯೋಗದಲ್ಲಿ ಇತ್ತು, ಅದು ತಿಳಿದೂ ಇತ್ತು ಎಂದು ತೋರಿಸಿಕೊಡಬೇಕಾದುದಿಲ್ಲ. ಅದರ ವರ್ಣನೆ ಒಂದು ಪುಸ್ತಕದಲ್ಲಿ ವಿವರಿಸಲಾಗಿದ್ದು ಸಾರ್ವಜನಿಕರ ಅವಗಾಹನೆಗೆ ಬಂದಿದ್ದರೆ ಆ ಆವಿಷ್ಕಾರ ತಿಳಿದಿತ್ತು ಎಂಬುದಾಗಿ ತೀರ್ಮಾನಿಸಬಹುದು. ಒಂದು ಆವಿಷ್ಕಾರದಿಂದ ಹಿಂದೆ ಗೊತ್ತಿದ್ದ ಆವಿಷ್ಕಾರದ ಸುಧಾರಣೆಯಾಗಿದ್ದರೆ ಅದು ನವೀನ ಆವಿಷ್ಕಾರ ಎನಿಸಿಕೊಳ್ಳುತ್ತದೆ. ಆವಿಷ್ಕಾರ ಮಾಡುವ ಸಲುವಾಗಿ ಒಬ್ಬ ಹಣ ಒದಗಿಸಿದ ಮಾತ್ರಕ್ಕೆ ಆತನೇ ಆವಿಷ್ಕರ್ತನಾಗಲಾರ. ಒಂದು ಸಂಸ್ಥೆ ಏಕಸ್ವ ಪಡೆಯಬಹುದಾದರೂ ಅದೇ ಆವಿಷ್ಕರ್ತವೆಂದೆನಿಸಿಕೊಳ್ಳಬೇಕಾದುದಿಲ್ಲ. ಏಕಸ್ವ ಪಡೆದವನೆಂದರೆ ಅದನ್ನು ಇತರರಿಂದ ಪಡೆದವನೂ ಸೇರುತ್ತಾನೆ.

ಹೊಸ ಆವಿಷ್ಕಾರದ ಗಂಧಗಾಳಿಯೂ ಇಲ್ಲದೆ ಎರಡು ಅಥವಾ ಹೆಚ್ಚು ವಸ್ತುಗಳನ್ನು ಜೋಡಿಸಿದ ಮಾತ್ರಕ್ಕೆ ನವೀನ ಆವಿಷ್ಕಾರವಾಗಲಾರದು. ಏಕಸ್ವದ ಚ್ಯುತಿಯ ವ್ಯಾಜ್ಯ ಬಂದಾಗ ಆ ಆವಿಷ್ಕಾರ ಉಪಯುಕ್ತವೇ ಅಲ್ಲವೇ ಎಂಬುದನ್ನು ನೋಡಬೇಕು. ಏಕಸ್ವದ ಸಿಂಧುತ್ವಕ್ಕೆ ಪ್ರಧಾನವಾದ ಅಂಶವೆಂದರೆ ಅದರ ನಾವೀನ್ಯ.

ಏಕಸ್ವ ಇರುವಾಗ ಮಾತ್ರ ವ್ಯಾಜ್ಯ. ಏಕಸ್ವ ಇರುವ ತನಕ ಮಾತ್ರ ಅದು ಸಿಂಧುವಾಗಿರುತ್ತದೆ. ಏಕಸ್ವದ ಚ್ಯುತಿಗೆ ವ್ಯಾಜ್ಯವಾದಾಗ ಏಕಸ್ವದ ಸಿಂಧುತ್ವವನ್ನು ಪ್ರಶ್ನಿಸಬಹುದು. ನಷ್ಟಕ್ಕೆ ಮಾಡಿದ ದಾವೆಯಲ್ಲಿ ಏಕಸ್ವದ ತಿಳಿವಳಿಕೆಯಿರಲಿಲ್ಲ, ಅದನ್ನು ತಿಳಿದುಕೊಳ್ಳಲು ಆಸ್ಪದವಿರಲಿಲ್ಲ—ಎಂದು ಪ್ರತಿವಾದಿ ವಾದಿಸಬಹುದು. ಪ್ರತಿವಾದಿಯ ಮೇಲೆ ತಡೆಯಾಜ್ಞೆಯ ವ್ಯವಹಾರ ಕೈಗೊಂಡಾಗ ತಾತ್ಕಾಲಿಕ (ವಾಜ್ಯ ಮುಗಿಯುವ ತನಕ) ತಡೆಯಾಜ್ಞೆ ಕೇಳಬಹುದು. ಸೂಕ್ತವೆನಿಸಿದಾಗ ನ್ಯಾಯಾಲಯ ತಡೆಯಾಜ್ಞೆ ನೀಡಬಹುದು. (ಕೆ.ಜಿ.ಬಿ.)

**ಅಂತರರಾಷ್ಟ್ರೀಯ ಏಕಸ್ವ ಹಕ್ಕುಗಳು :** ಒಂದು ಏಕಸ್ವದ ಹಕ್ಕುಗಳ ವ್ಯಾಪ್ತಿಯಿರುವುದು ಅದನ್ನು ನೀಡುವ ದೇಶದ ಗಡಿಯೊಳಗೆ ಮಾತ್ರ. ನಾನಾ ದೇಶಗಳಲ್ಲಿ ಏಕಸ್ವ ಹಕ್ಕು ಹೊಂದಬೇಕೆಂದು ಬಯಸುವವರು ಈ ದೇಶಗಳಲ್ಲಿ ಒಂದೊಂದರಲ್ಲೂ ಪ್ರತ್ಯೇಕವಾಗಿ ಇದನ್ನು ಪಡೆಯುವುದವಶ್ಯ. ವಿಶ್ವವ್ಯಾಪಕವಾದ ಏಕಸ್ವ ವ್ಯವಸ್ಥೆ ಯಾವುದೂ ಇದುವರೆಗೆ ಇಲ್ಲ. ಇನ್ನೊಂದು ದೇಶದಲ್ಲಿ ನೀಡಲಾದ ಏಕಸ್ವವನ್ನು ತಮ್ಮ ದೇಶಗಳಲ್ಲೂ ನೋಂದಣಿಮಾಡಿಸಬಹುದೆಂದೂ ಅವು ಊರ್ಜಿತವೆಂದೂ ಕೆಲವು ದೇಶಗಳ ಕಾಯಿದೆಗಳಲ್ಲಿ ನಮೂದಿಸಲಾಗಿದೆ.

ಸಾಮಾನ್ಯವಾಗಿ ಎಲ್ಲ ದೇಶಗಳಲ್ಲೂ ಏಕಸ್ವ ಕಾಯಿದೆಗಳಿವೆ. ಇವುಗಳು ಸ್ಥೂಲವಾಗಿ ಒಂದೇ ಬಗೆಯವು. ಏಕಸ್ವದ ವಸ್ತುವಿನ ವ್ಯಾಖ್ಯೆ. ಆವಿಷ್ಕಾರದ ಹೊಸತನ ಕಳೆದು ಹೋಗುವ ಸಂದರ್ಭ, ಏಕಸ್ವದ ಅವಧಿ. ಏಕಸ್ವ ಪಡೆಯುವ ವಿಧಾನ—ಮುಂತಾದ ವಿಚಾರಗಳಲ್ಲಿ ಮಾತ್ರ ವ್ಯತ್ಯಾಸಗಳಿವೆ. ಸೋವಿಯತ್ ಒಕ್ಕೂಟದಲ್ಲೂ ಏಕಸ್ವ ಪಡೆಯಲು ಅವಕಾಶವುಂಟು. ಆದರೆ ಇದು ವಿರಳ. ಅಲ್ಲಿ ಲೇಖಕನ ಮತ್ತು ಆವಿಷ್ಕರ್ತನ ಹಕ್ಕುಪತ್ರಗಳನ್ನು ಕೊಡುವುದುಂಟು. ಈ ಸಂದರ್ಭಗಳಲ್ಲಿ ಆವಿಷ್ಕರ್ತನಿಗೆ ಪರಿಹಾರಧನ ನೀಡಲಾಗುವುದೇ ವಿನಾ ಆತನಿಗೆ ಸಂಪೂರ್ಣ ಹಕ್ಕು ದೊರಕುವುದಿಲ್ಲ.

ವಿಶ್ವದ ಏಕಸ್ವ ಕಾಯಿದೆಗಳ ಸಾರಾಂಶಗಳನ್ನು ಸಂಗ್ರಹಿಸಿ ಪ್ರಕಟಿಸಬೇಕೆಂಬುದು ನಾನಾ ದೇಶಗಳ ಆವಿಷ್ಕರ್ತರ ಹಾಗೂ ಶಾಸಕರ ದೀರ್ಘಕಾಲದ ಬಯಕೆಯಾಗಿತ್ತು. 1851ರಷ್ಟು ಹಿಂದೆಯೇ ಏಕಸ್ವಧಾರಿಗಳ (ಪೆಟೇಂಟೀಸ್) ಸಂಘವೊಂದು ಈ ಬಗ್ಗೆ ಸಲಹೆ ಮಾಡಿತ್ತು. ಆವಿಷ್ಕರ್ತರ ಪರಸ್ಪರ ಹಕ್ಕುಗಳ ಪುರಸ್ಕಾರಕ್ಕಾಗಿ ಅಂತರರಾಷ್ಟ್ರೀಯ ಒಡಂಬಡಿಕೆಯಾಗಬೇಕೆಂಬುದೂ ಅದರ ಇಚ್ಛೆಯಾಗಿತ್ತು. 1873ರಲ್ಲಿ ವಿಯೆನ್ನದಲ್ಲೂ 1878ರಲ್ಲಿ ಪ್ಯಾರಿಸಿನಲ್ಲೂ ಸೇರಿದ್ದ ಅಂತರರಾಷ್ಟ್ರೀಯ ಸಮ್ಮೇಳನಗಳಲ್ಲಿ ಈ ಅಭಿಪ್ರಾಯಕ್ಕೆ ಪುಷ್ಟಿ ದೊರಕಿತು. ಕೈಗಾರಿಕಾ ಸ್ವಾಮ್ಯದ ರಕ್ಷಣೆಗಾಗಿ ಅಂತರರಾಷ್ಟ್ರೀಯ ಒಡಂಬಡಿಕೆಯೊಂದಕ್ಕೆ ಸಹಿಯಾದ್ದು 1883ರ ಮಾರ್ಚ್ 20ರಂದು, ಪ್ಯಾರಿಸಿನಲ್ಲಿ. ಈ ಒಡಂಬಡಿಕೆಯಿಂದ ಒಂದು ದೇಶದಲ್ಲಿ ಏಕಸ್ವ ಪಡೆದವನು ಇನ್ನೊಂದು ದೇಶದಲ್ಲೂ ಪಡೆಯಲು ಕೆಲವು ಅನುಕೂಲಗಳು ಲಭಿಸಿದುವು. *

**ಏಕಸ್ವಾಮ್ಯ :** ಗೊತ್ತಾದ ಮಾರುಕಟ್ಟೆಯಲ್ಲಿ ಒಂದು ಸರಕು ಅಥವಾ ಸೇವೆಯ ಸರಬರಾಯಿಯ ವಿಶಿಷ್ಟ ಹತೋಟಿ, ಅಥವಾ ಒಂದು ಮಾರುಕಟ್ಟೆಯಲ್ಲಿ ಅದನ್ನು ಮಾರುವ ಅಥವಾ ಕೊಳ್ಳುವ ಬಗ್ಗೆ ಪಡೆದಿರುವ ವಿಶಿಷ್ಟ ಹಕ್ಕು (ಮೊನಾಪೊಲಿ). ವ್ಯಾಪಾರದಲ್ಲಿ ಸಹಜವಾಗಿ ಕಂಡುಬರುವ ಸ್ಪರ್ಧೆಯ ಪರಿಣಾಮವಾಗಿ ಏಕಸ್ವಾಮ್ಯ ಪರಿಸ್ಥಿತಿ ಉದ್ಭವಿಸಬಹುದು; ಅಥವಾ ಸರ್ಕಾರವೇ ಕೆಲವು ಉದ್ದೇಶಗಳಿಗಾಗಿ ಈ ವಿಶಿಷ್ಟ ಹಕ್ಕು ನೀಡಬಹುದು. ಮೊನಾಪೊಲಿ ಎಂಬ ಶಬ್ದದ ವ್ಯುತ್ಪತ್ತಿಯ ದೃಷ್ಟಿಯಿಂದ ವಿಚಾರ ಮಾಡಿದ್ದಾದರೆ, ಒಬ್ಬ ಮಾರಾಟಗಾರನೇ ಒಂದು ಸರಕಿನ ಸರಬರಾಯಿದಾರನಾಗಿದ್ದು, ಈ ಸರಕಿಗೆ ಪ್ರತಿಯಾಗಿ ಬೇರಾವ ಸರಕನ್ನೂ ಸಾಮಾನ್ಯವಾಗಿ ಬಳಸುವುದು ಸಾಧ್ಯವಿಲ್ಲದಂಥ ಸ್ಥಿತಿಯೇ ಏಕಸ್ವಾಮ್ಯ. ಆದರೆ ವಿಕ್ರಯದಾರರ ನಡುವೆ ಪರಿಪೂರ್ಣ ಸ್ಪರ್ಧೆಯಿಲ್ಲದಂಥ ಪೇಟೆಯ ಪರಿಸ್ಥಿತಿಯನ್ನೂ ಏಕಸ್ವಾಮ್ಯವೆಂದೇ ಪರಿಗಣಿಸುವುದು ರೂಢಿಯಲ್ಲಿ ಬಂದಿದೆ. ಪದಾರ್ಥಗಳ ಉತ್ಪಾದನೆ, ಸರಬರಾಯಿ ಮತ್ತು ಬೆಲೆಯ ನಿರ್ಣಯ ಒಬ್ಬನ ಅಥವಾ ಕೆಲವು ಉದ್ಯಮಿಗಳ ಇಲ್ಲವೇ ಒಂದು ಅಥವಾ ಕೆಲವು ಉದ್ಯಮ ಸಂಸ್ಥೆಗಳ ಹತೋಟಿಯಲ್ಲಿರುವುದೇ ಏಕಸ್ವಾಮ್ಯವೆನ್ನಬಹುದು. ಪರಿಪೂರ್ಣ ಸ್ಪರ್ಧೆಯ ಪರಿಸ್ಥಿತಿಯಲ್ಲಿ ಬೆಲೆಯ ನಿಷ್ಕರ್ಷೆಯಾಗುವುದು ಇಡೀ ಮಾರುಕಟ್ಟೆಯಲ್ಲಿನ ಪದಾರ್ಥದ ಬೇಡಿಕೆ ಮತ್ತು ಸರಬರಾಯಿಗಳಿಂದ. ಆದರೆ ಏಕಸ್ವಾಮ್ಯದಲ್ಲಿ ಒಟ್ಟು ಸರಬರಾಯಿಯನ್ನು ಹೆಚ್ಚು ಕಡಿಮೆ ಮಾಡಿ ಆ ಮೂಲಕ ವಸ್ತುಗಳ ಬೆಲೆಯನ್ನು ಬದಲಾಯಿಸುವುದು ಸಾಧ್ಯ. ಏಕಸ್ವಾಮ್ಯ ಹೊಂದಿದವನಿಗೆ ಪ್ರತಿಸ್ಪರ್ಧಿಗಳ ಭಯವಿರುವುದಿಲ್ಲ. ಪೂರೈಕೆಯ ಮೇಲೆ ಸಂಪೂರ್ಣ ಹತೋಟಿಯಿರುವುದರಿಂದ, ಉತ್ಪಾದನೆಯ ವೆಚ್ಚಕ್ಕಿಂತ ಶಕ್ಯವಿರುವಷ್ಟು ಹೆಚ್ಚಿನ ಬೆಲೆಗೆ ವಸ್ತುಗಳನ್ನು ಮಾರಬಹುದು. ಆದ್ದರಿಂದ, ಬಹು ಸಾಮಾನ್ಯವಾಗಿ, ಏಕಸ್ವಾಮ್ಯದ ಬೆಲೆ ಸ್ಪರ್ಧೆಯ ಬೆಲೆಗಿಂತ ಹೆಚ್ಚಾಗಿರುತ್ತದೆ. ಉತ್ಪಾದನೆ ಸರಬರಾಯಿಗಳ ಮೇಲೆ ಹತೋಟಿಯಿರುವುದರಿಂದ ವಿಶೇಷ ಲಾಭ ಗಳಿಸಬಹುದು.

ಉದ್ಯಮಿಗಳು ತಮ್ಮ ಪ್ರತಿಸ್ಪರ್ಧಿಗಳನ್ನು ವ್ಯವಹಾರದಿಂದ ಹೊರದೂಡಿ ಏಕಸ್ವಾಮ್ಯ ಹೊಂದಲು ಪ್ರಯತ್ನಿಸುವರು. ಏಕಸ್ವಾಮ್ಯಪರಿಸ್ಥಿತಿಯಲ್ಲೂ ಕೆಲವು ಉದ್ಯಮಿಗಳಲ್ಲಿ ಸ್ಪರ್ಧೆ ಇರಬಹುದು. ಅನೇಕ ಬಾರಿ ಅವರು ತಮ್ಮ ತಮ್ಮೊಳಗೆ ಸ್ಪರ್ಧೆ ನಿಲ್ಲಿಸಿ, ಸರಸ್ಪರ ಒಪ್ಪಂದದ ಮೇಲೆ ವಿಸ್ತೃತ ಏಕಸ್ವಾಮ್ಯ ನಿರ್ಮಿಸುತ್ತಾರೆ. ವ್ಯಾಪಾರ ಸಂಸ್ಥೆಗಳೂ ಇಂಥ ಕಾರ್ಯ ಕೈಗೊಳ್ಳಬಹುದು.

ಏಕಸ್ವಾಮ್ಯವನ್ನು (1) ಸ್ವಾಭಾವಿಕ, (2) ಸಾಮಾಜಿಕ, (3) ನ್ಯಾಯಬದ್ಧ ಮತ್ತು (4) ಐಚ್ಛಿಕ ಎಂದು ನಾಲ್ಕು ರೀತಿಯಾಗಿ ವಿಂಗಡಿಸಬಹುದು. ಸ್ವಾಭಾವಿಕ ಕಾರಣಗಳ ಫಲವಾಗಿ ಕೆಲವು ಪದಾರ್ಥಗಳನ್ನು ಒಂದು ದೇಶದಲ್ಲಿ ಮಾತ್ರ ಉತ್ಪಾದಿಸುವುದು ಸಾಧ್ಯ. (ಉದಾ : ಆಫ್ರಿಕದಲ್ಲಿ ವಜ್ರಗಳ ಉತ್ಪಾದನೆ) ಇಲ್ಲಿ ಸ್ವಾಭಾವಿಕವಾಗಿಯೆ ಏಕಸ್ವಾಮ್ಯಕ್ಕೆ ಆಸ್ಪದವುಂಟು. ಸರ್ವಜನೋಪಯೋಗಿ ಉದ್ಯಮ ಕ್ಷೇತ್ರಗಳಾಗಿ ರೈಲ್ವೆಗಳು, ಪರಮಾಣುಶಕ್ತಿ ಉತ್ಪಾದನೆ ಮುಂತಾದವುಗಳಲ್ಲಿ ಸ್ಪರ್ಧೆ ನಡೆಯುವುದು ಸಮಾಜ ಹಿತಸಾಧನೆಯ ದೃಷ್ಟಿಯಿಂದ ಒಳ್ಳೆಯದಲ್ಲ. ಆದ್ದರಿಂದ, ಇಂಥವುಗಳಿಗೆ ನೀಡಿದ ಏಕಸ್ವಾಮ್ಯ ಸಾರ್ವಜನಿಕ ಏಕಸ್ವಾಮ್ಯವೆನಿಸಿಕೊಳ್ಳುತ್ತದೆ. ಒಂದು ಗ್ರಂಥದ ಹಕ್ಕು, ವ್ಯಾಪಾರಚಿಹ್ನೆ ಮುಂತಾದವುಗಳ ಬಗ್ಗೆ ಕಾನೂನಿನ ಸಂರಕ್ಷಣೆ ಇರುತ್ತದೆ. ಇದು ನ್ಯಾಯಬದ್ಧ ಏಕಸ್ವಾಮ್ಯ. ಕೆಲವು ಉದ್ಯಮಗಳಲ್ಲಿ ಸ್ಪರ್ಧೆಯ ಪರಿಸ್ಥಿತಿಯಿಂದ ಏಕಸ್ವಾಮ್ಯ ಸ್ಥಿತಿಗೆ ಕಾಲಾನುಕ್ರಮದಲ್ಲಿ ಪರಿವರ್ತನೆಯಾಗಬಹುದು. ಪ್ರಾರಂಭದಲ್ಲಿ ಪರಸ್ಪರ ಸ್ಪರ್ಧಿಗಳಾಗಿದ್ದ ಉದ್ಯಮಿಗಳು ಸ್ಪರ್ಧೆಯಿಂದ ಹಾನಿಯಾಗುವುದನ್ನು ಮನಗಂಡು ತಮ್ಮತಮ್ಮಲ್ಲೇ ಒಂದು ರೀತಿಯ ಒಪ್ಪಂದಕ್ಕೆ ಬರಬಹುದು. ಶಕ್ತವಾದ ಸಂಸ್ಥೆ ಇತರ ಸಂಸ್ಥೆಗಳನ್ನು ವಿಲೀನಗೊಳಿಸಿಕೊಳ್ಳಬಹುದು. ಎರಡು ಅಥವಾ ಹೆಚ್ಚು ಸಂಸ್ಥೆಗಳು ಸಂಯೋಗಹೊಂದಬಹುದು. ಹೀಗೆ ಸಂಭವಿಸಿದ್ದೇ ಐಚ್ಛಿಕ ಏಕಸ್ವಾಮ್ಯ.

**ಏಕಸ್ವಾಮ್ಯದಲ್ಲಿ ಬೆಲೆಯ ನಿರ್ಣಯ :** ಜನಹಿತ ದೃಷ್ಟಿಯಿಂದ ಸ್ಥಾಪಿತವಾದ ಏಕಸ್ವಾಮ್ಯಗಳಲ್ಲಿ ಲಾಭಕ್ಕಿಂತ ಸೇವೆಯೇ ಮುಖ್ಯೋದ್ದೇಶ. ಇತರ ಏಕಸ್ವಾಮ್ಯಗಳಲ್ಲಿ ಪರಿಸ್ಥಿತಿಯ ಉಪಯೋಗ ಪಡೆದು ಪರಮಾವಧಿ ಲಾಭ ಗಳಿಸಬೇಕೆಂಬುದೇ ಉದ್ಯಮಿಗಳ ಉದ್ದೇಶವಾಗಿರುತ್ತದೆ. ಇಂಥ ಪರಿಸ್ಥಿತಿಯಲ್ಲೂ ಏಕಸ್ವಾಮ್ಯ ಸಂಸ್ಥೆ ಅಥವಾ ವ್ಯಕ್ತಿಗೆ ಸಂಪೂರ್ಣ ಅಧಿಕಾರ ಯಾವಾಗಲೂ ಇರುವುದಿಲ್ಲ. ಇಷ್ಟಪ್ಪಾದರೂ ಸ್ಪರ್ಧೆ ಇದ್ದಿರಬಹುದು. ಸ್ಪರ್ಧೆ ಇರಲಿ ಇಲ್ಲದಿರಲಿ, ಏಕಸ್ವಾಮ್ಯದ ಪದಾರ್ಥಕ್ಕೆ ಪ್ರತಿಯಾಗಿ ಬಳಸಬಹುದಾದ ಸರಕುಗಳು ಇರಲಿ, ಇಲ್ಲದಿರಲಿ ಎಲ್ಲ ಏಕಸ್ವಾಮ್ಯಗಳೂ ಸಂಪೂರ್ಣ ಸರ್ವಾಧಿಕಾರಿ ಮನೋಭಾವದಿಂದ ವರ್ತಿಸುವುದು ಸರ್ವಥಾ ಸಾಧ್ಯವಿಲ್ಲ. ಸಾರ್ವಜನಿಕ ಅಸಮಾಧಾನ, ಬಹಿಷ್ಕಾರ, ಸರ್ಕಾರದ ನಿಯಂತ್ರಣ—ಮುಂತಾದವು ಏಕಸ್ವಾಮ್ಯದ ಕೈ ತಡೆಯುವ ಕೆಲವು ಅಂಶಗಳು. ಆದರೂ ಏಕಸ್ವಾಮಿ ಪರಮಾವಧಿ ಲಾಭದ ಮೇಲೆ ಸಾಮಾನ್ಯವಾಗಿ ಕಣ್ಣಿಟ್ಟೇ ಇರುತ್ತಾನೆ. ಈ ಉದ್ದೇಶಸಾಧನೆಗಾಗಿ ಆತ ತನ್ನಿಚ್ಛೆಯಂತೆ ಪದಾರ್ಥದ ಬೆಲೆ ನಿಷ್ಕರ್ಷೆ ಮಾಡಬಹುದು ಅಥವಾ ತನಗೆ ಸರಿ ತೋರಿದಷ್ಟು ಪರಿಮಾಣದಲ್ಲಿ ಸರಕನ್ನು ಮಾರಾಟಕ್ಕೆ ಬಿಡುಗಡೆ ಮಾಡಬಹುದು. ಗರಿಷ್ಠ ಧನಲಾಭದ ಬಿಂದುವಿನ ವರೆಗೆ ಆತ ಉತ್ಪಾದನೆ ಮಾಡುತ್ತಾನೆ; ಬೆಲೆ ಏರಿಸುತ್ತಾನೆ. ಯಾವ ಮಟ್ಟದಲ್ಲಿ ಆತನ ಲಾಭದ ಮೊತ್ತ ಅತ್ಯಂತ ಹೆಚ್ಚಾಗಿರುತ್ತದೋ ಅದು ಆತನ ಸಮತೋಲ ಸ್ಥಿತಿ. ಅಧಿಕಾಧಿಕವಾಗಿ ಉತ್ಪಾದಿಸಿದಷ್ಟೂ, ಆ ಉತ್ಪಾದನೆಯ ಒಂದೊಂದು ಅಂಚಿನ ಘಟಕದ ವೆಚ್ಚಕ್ಕಿಂತ ಹುಟ್ಟುವಳಿ ಹೆಚ್ಚಾಗಿರುವ ವರೆಗೂ, ಆತ ಉತ್ಪಾದನೆ ಹೆಚ್ಚಿಸುತ್ತ ಹೋಗುತ್ತಾನೆ. ಅಂಚಿನ ವೆಚ್ಚವೂ ಅಂಚಿನ ಹುಟ್ಟುವಳಿಯೂ ಸಮನಾಗಿರುವಲ್ಲೇ ಸಮತೋಲ. ಅಲ್ಲಿಂದಾಚೆಗೆ ಉತ್ಪಾದನೆ ಲಾಭದಾಯಕವಲ್ಲ; ಅಂಚಿನ ಉತ್ಪತ್ತಿಯ ಹುಟ್ಟುವಳಿಗಿಂತ ಅಂಚಿನ ವೆಚ್ಚವೇ ಹೆಚ್ಚಾಗುವುದರಿಂದ ಅಲ್ಲಿ ನಿಲ್ಲುವುದು ವಿವೇಕ.

ಏಕಸ್ವಾಮ್ಯ ಸಂಸ್ಥೆಯ ಬೆಲೆ-ವೆಚ್ಚ ಸಮತೋಲವನ್ನು ನಕ್ಷೆ 1ರಲ್ಲಿ ವಿವರಿಸಿದೆ. ಈ ನಕ್ಷೆಯಲ್ಲಿ AR ಎಂಬುದು ಪದಾರ್ಥದ ಬೇಡಿಕೆ ರೇಖೆ ಅಥವಾ ಸರಾಸರಿ ಹುಟ್ಟುವಳಿ ರೇಖೆ. ಪದಾರ್ಥದ ಬೆಲೆ ಏರಿದಷ್ಟೂ ಅದಕ್ಕೆ ಬೇಡಿಕೆ ಕಡಿಮೆಯಾಗುವುದರಿಂದ ಇದು ಬಲಗಡೆಗೆ ಬಾಗಿದೆ; ಪದಾರ್ಥದ ತಯಾರಿಕೆಯ ಸರಾಸರಿ ವೆಚ್ಚ (AC) ಇಳಿಮೊಗನಾಗಿದೆಯೆಂದು ಇಲ್ಲಿ ಭಾವಿಸಿಕೊಳ್ಳಲಾಗಿದೆ. ಅಂಚಿನ ಹುಟ್ಟುವಳಿ ಅಥವಾ ಅಂಚಿನ ಬೇಡಿಕೆಯೂ (MR) ಸರಾಸರಿ ಬೇಡಿಕೆ ಅಥವಾ ಸರಾಸರಿ ಹುಟ್ಟುವಳಿಯಂತೆಯೇ ಬಲಕ್ಕೆ ಬಾಗಿದೆ. ಆದರೆ ಸರಾಸರಿ ಬೇಡಿಕೆ ಅಥವಾ ಸರಾಸರಿ ಹುಟ್ಟುವಳಿ (AR) ಇದರ (MR) ಪರಿಣಾಮವಾದ್ದರಿಂದ ಇದು (MR) AR ಗಿಂತ ಹೆಚ್ಚು ಕಡಿದು. ಸರಾಸರಿ ವೆಚ್ಚದ ರೇಖೆಯೂ (AC) ಅಂಚಿನ ವೆಚ್ಚದ ರೇಖೆಯೂ (MC) ಇಳಿಮುಖ ಪ್ರವೃತ್ತಿ ತೋರಿಸುತ್ತಿವೆ. ಅಂಚಿನ ಘಟಕದ ಉತ್ಪಾದನೆಯ ವೆಚ್ಚವೂ (MC) ಅಂಚಿನ ಘಟಕದ ಮಾರಾಟದಿಂದ ಲಭಿಸುವ ಹಣದ ಹುಟ್ಟುವಳಿಯೂ (MR) ಎಲ್ಲಿ ಸಮನಾಗಿರುತ್ತವೋ (ಸಂಧಿಸುತ್ತವೋ) ಅಲ್ಲಿ ಏಕಸ್ವಾಮ್ಯ ಸಂಸ್ಥೆ ಉತ್ಪಾದನೆಯನ್ನು ನಿಲ್ಲಿಸಬೇಕು. ಈ ಘಟ್ಟದಲ್ಲಿ ಅದರ ಉತ್ಪತ್ತಿ OM; ಬೆಲೆ OP. ಸರಾಸರಿ ವೆಚ್ಚ OW ; ಏಕಸ್ವಾಮ್ಯದ ಲಾಭ PRLW. ಇದು ಆ ಸಂಸ್ಥೆಯ ಸಮತೋಲ ಸ್ಥಿತಿ. ಏಕಸ್ವಾಮ್ಯ ಉತ್ಪಾದಕನ ಸಮತೋಲ ಸ್ಥಿತಿಯಲ್ಲಿ ಆತನ ಪದಾರ್ಥದ ಬೇಡಿಕೆಯ ಪುಟಿತ ಒಂದಕ್ಕಿಂತ ಹೆಚ್ಚಾಗಿಯೇ ಇರುತ್ತದೆಯೆಂಬುದನ್ನು ಗಮನಿಸಬೇಕು. ಅದು ಒಂದಕ್ಕಿಂತ ಕಡಿಮೆಯಾಗಿದ್ದಾಗ ಉತ್ಪಾದನೆಯನ್ನು ಹೆಚ್ಚು ಉತ್ಪಾದಿಸಿದಷ್ಟೂ ಒಟ್ಟು ಹುಟ್ಟುವಳಿ ಇಳಿಯುತ್ತದೆ; ಉತ್ಪಾದನೆಯಲ್ಲಿ ಕಡಿತ ಮಾಡಿದಷ್ಟೂ ಒಟ್ಟು ಹುಟ್ಟುವಳಿ ಹೆಚ್ಚುತ್ತದೆ. ಎಂದರೆ ಬೇಡಿಕೆಯ ಪುಟಿತ ಒಂದಕ್ಕಿಂತ ಕಡಿಮೆಯಿದ್ದಾಗ ಅಂಚಿನ ಹುಟ್ಟುವಳಿ ಋಣಾತ್ಮಕವಾಗಿರುತ್ತದೆ (ನೆಗೆಟಿವ್). ಆದ್ದರಿಂದ ಇಂಥ ಪರಿಸ್ಥಿತಿಯಲ್ಲಿ ಏಕಸ್ವಾಮ್ಯದ ಸಮತೋಲ ಸಾಧ್ಯವಿರುವುದಿಲ್ಲ.




ನಕ್ಷೆ 1.

ಅಂಚಿನ ವೆಚ್ಚ ಇಳಿಮುಖವಾಗಿರುವುದೆಂದು ಊಹಿಸಿಕೊಂಡು ನಕ್ಷೆ 1ರಲ್ಲಿ ಏಕಸ್ವಾಮಿಯ ಸಮತೋಲ ಸ್ಥಿತಿಯನ್ನು ನಿಷ್ಕರ್ಷಿಸಿದ್ದಾಯಿತು. ಅಂಚಿನ ವೆಚ್ಚ ಏರುಮುಖವಾಗಿದ್ದಾಗಲೂ ಅದು ಒಂದೇ ಸಮನಾಗಿರುವಾಗಲೂ ಆತನ ಉತ್ಪಾದನೆ ಮತ್ತು ಬೆಲೆಗಳ ಸಮತೋಲವನ್ನು ಕ್ರಮವಾಗಿ ನಕ್ಷೆ 2 ಮತ್ತು 3ರಲ್ಲಿ ತೋರಿಸಿದೆ. ಅಂಚಿನ ವೆಚ್ಚ (MC) ಇಳಿಮುಖವಾಗಿರುವಾಗ (ನಕ್ಷೆ 1) MC ರೇಖೆ ಸರಾಸರಿ ವೆಚ್ಚರೇಖೆಯ (AC) ಕೆಳಗಡೆಯಿರುತ್ತದೆಂಬುದನ್ನೂ ಅಂಚಿನ ವೆಚ್ಚ ಏರುಮುಖವಾಗಿರುವಾಗ ಅದು AC ರೇಖೆಯ ಮೇಲುಗಡೆಯಿರುತ್ತದೆಂಬುದನ್ನೂ ಅಂಚಿನ ವೆಚ್ಚ ಒಂದೇ ಸಮನಾಗಿರುವಾಗ AC, MC ಗಳೆರಡೂ ಒಂದೇ ಆಗಿರುವುದೆಂಬುದನ್ನೂ ಗಮನಿಸಬೇಕು. ಈ ಪರಿಸ್ಥಿತಿಗಳಲ್ಲೂ MR ಮತ್ತು MC ಸಂಧಿಸುವ ಎಡೆಯಲ್ಲೇ ಸಮತೋಲ. OW ವೆಚ್ಚದಲ್ಲಿ OM ಉತ್ಪತ್ತಿ ಮಾಡಿ OP ಬೆಲೆಗೆ ಮಾರಿದಾಗ ಗರಿಷ್ಠ ಲಾಭ (PRLW).




ನಕ್ಷೆ 2.

ಮೇಲಣ ಮೂರೂ ಪರಿಸ್ಥಿತಿಗಳಲ್ಲಿ ಏಕಸ್ವಾಮಿಗೆ ಉತ್ಪಾದನೆಯ ವೆಚ್ಚ ಇದೆಯೆಂದು ಊಹಿಸಿಕೊಳ್ಳಲಾಗಿದೆ. ಆದರೆ ಉತ್ಪಾದನೆಯ ವೆಚ್ಚವೇ ಇಲ್ಲದ ಏಕಸ್ವಾಮ್ಯವೂ ಇರುವುದು ಸಾಧ್ಯ. (ಉದಾಹರಣೆ : ಔಷಧದ ಗುಣವುಳ್ಳ ನೀರಿನ ಊಟೆ). ನಕ್ಷೆ 4ರಲ್ಲಿ ಈ ಪರಿಸ್ಥಿತಿಯಲ್ಲಿ ಉತ್ಪಾದಕನ ಬೆಲೆ-ಉತ್ಪನ್ನಗಳ ಸಮತೋಲ ಎಲ್ಲಿ ಸಂಭವಿಸುವುವೆಂಬ ಪ್ರಶ್ನೆ ಉದ್ಭವಿಸುತ್ತದೆ. ಅಂಚಿನ ಹುಟ್ಟುವಳಿ ರೇಖೆ (MR) OX ಅಕ್ಷವನ್ನು (ಉತ್ಪತ್ತಿಯದು) ಸಂಧಿಸುವ ಎಡೆಯಲ್ಲಿ (M) ಸಮತೋಲ ಏರ್ಪಡುತ್ತದೆ. ಆತ OM ಉತ್ಪಾದಿಸಿ OP ಬೆಲೆಯಲ್ಲಿ ಮಾರುವುದರಿಂದ ಗರಿಷ್ಠ ಲಾಭ (PRMO) ದೊರಕುತ್ತದೆ.




ನಕ್ಷೆ 3.

ಏಕಸ್ವಾಮ್ಯದಲ್ಲೇ ಆಗಲಿ, ಸಂಪೂರ್ಣ ಸ್ಪರ್ಧೆಯಲ್ಲೇ ಆಗಲಿ, ಉತ್ಪಾದಕರು ಅಂಚಿನ ವೆಚ್ಚವನ್ನೂ ಅಂಚಿನ ಹುಟ್ಟುವಳಿಯನ್ನೂ ಸಮತೂಗಿಸಲು ಪ್ರಯತ್ನಿಸುತ್ತಾರೆ. ಆದರೆ ಸಂಪೂರ್ಣ ಸ್ಪರ್ಧೆಯ ಪೇಟೆಗಳಲ್ಲಿ ಯಾವ ಒಬ್ಬ ಉತ್ಪಾದಕನೂ ವೈಯಕ್ತಿಕವಾಗಿ ಬೆಲೆಯ ಮೇಲೆ ಪರಿಣಾಮವನ್ನುಂಟುಮಾಡಲು ಸಾಧ್ಯವಾಗದ್ದರಿಂದ ಆತ ಪೇಟೆಯ ಧಾರಣೆಯನ್ನು ಒಪ್ಪಿಕೊಂಡು ಆ ಧಾರಣೆಯಲ್ಲಿ ಸಾಧ್ಯವಾದಷ್ಟು ಸರಕುಗಳನ್ನು ಮಾರುತ್ತಾನೆ. ಅವನಿಗೆ ಆ ಬೆಲೆಯೇ ಅಂಚಿನ ಹುಟ್ಟುವಳಿ. ಆದರೆ ಏಕಸ್ವಾಮಿಗೆ ಅಂಚಿನ ಹುಟ್ಟುವಳಿ ಸರಕಿನ ಬೆಲೆಗಿಂತ ಕಡಿಮೆ ಇರುತ್ತದೆ. ಆತ ಸರಬರಾಯಿಯನ್ನು ಸಂಪೂರ್ಣ ಹತೋಟಿಯಲ್ಲಿಟ್ಟು ಆ ಮೂಲಕ ಬೆಲೆಯ ಮೇಲೆ ಪರಿಣಾಮವನ್ನುಂಟುಮಾಡುತ್ತಾನೆ.




ನಕ್ಷೆ 4.

ಏಕಸ್ವಾಮಿ ತನ್ನ ಉತ್ಪಾದನೆಯನ್ನೆಲ್ಲ ಗ್ರಾಹಕರಿಗೆ ಒಂದೇ ಬೆಲೆಗೆ ಮಾರಬೇಕಾಗಿಲ್ಲ. ತನ್ನ ವಸ್ತುಗಳಿಗಿರುವ ಪೇಟೆಯನ್ನು ವಿವಿಧ ರೀತಿಯಲ್ಲಿ ವಿಂಗಡಿಸಿ, ಪ್ರತಿಯೊಂದು ಪೇಟೆಯಲ್ಲೂ ಅಥವಾ ಪೇಟೆಯ ಬೇರೆ ಬೇರೆ ವಲಯಗಳಲ್ಲೂ ಬೇರೆ ಬೇರೆ ಬೆಲೆಗಳಿಗೆ ಮಾರುವುದು ಸಾಧ್ಯವಾಗುತ್ತದೆ. ಈ ರೀತಿ ಮಾರುವ ಬೆಲೆಯಲ್ಲಿ ಪಕ್ಷಪಾತ ಕಂಡುಬರುತ್ತದೆ.

**ಏಕಸ್ವಾಮ್ಯದ ಪ್ರತಿಕೂಲಗಳು :** ಖಾಸಗಿ ಏಕಸ್ವಾಮ್ಯ ಪರಿಸ್ಥಿತಿಯಿಂದ ಅನೇಕ ಪ್ರತಿಕೂಲಗಳುಂಟು. ಸರಕುಗಳ ಬೆಲೆ ಪೈಪೋಟಿಯ ಬೆಲೆಗಿಂತ ಹೆಚ್ಚಾಗಿರುತ್ತದೆ. ಸರಬರಾಯಿಗೆ ಕೃತಕ ಅಡ್ಡಿ ತಂದೊಡ್ಡಿ ವಿಶೇಷ ಲಾಭ ಬರುವಂತೆ ಆತ ಬೆಲೆ ಹೆಚ್ಚಿಸುತ್ತಾನೆ. ಇದಕ್ಕಾಗಿ ಉತ್ಪಾದನೆಯ ಪ್ರಮಾಣವನ್ನು ಕಡಿಮೆ ಮಾಡಲೂ ಆತ ಅಂಜುವುದಿಲ್ಲ. ಬಾಹ್ಯ ಮತ್ತು ಆಂತರಿಕ ಮಿತವ್ಯಯಗಳಿಂದಾಗಬಹುದಾದ ಉಳಿತಾಯಕ್ಕೆ ಆಸ್ಪದ ಕಡಿಮೆಯಾಗುತ್ತದೆ. ಹೊಸ ಉದ್ಯಮಗಳಿಗೆ ಬಂಡವಾಳ ಹಾಕಲು ಅವಕಾಶ ದೊರೆಯುವುದಿಲ್ಲ. ಹೊಸ ಸಂಸ್ಥೆಗಳು ಪ್ರವೇಶಿಸಿ ಸ್ಪರ್ಧಿಸುವುದೂ ಸಾಧ್ಯವಾಗುವುದಿಲ್ಲ. ಉತ್ಪಾದನೆಯ ವಿಷಯದಲ್ಲಿ ತಾಂತ್ರಿಕ ಪ್ರಗತಿಗೆ ಯಾವ ಜರೂರೂ ಇರುವುದಿಲ್ಲ. ಆರ್ಥಿಕ ವಿಷಮತೆ ಹೆಚ್ಚುತ್ತದೆ. ಏಕಸ್ವಾಮಿಗಳ ಮತ್ತು ಅವರ ಸಂಬಂಧಿಗಳ ಹಿತಾಸಕ್ತಿಗಳ ಬೆಳೆವಣಿಗೆಯಾಗಿ ಸಮಾಜಹಿತಕ್ಕೆ ಧಕ್ಕೆಯುಂಟಾಗುತ್ತದೆ.

**ಏಕಸ್ವಾಮ್ಯದ ಅನುಕೂಲಗಳು :** ಏಕಸ್ವಾಮ್ಯದಲ್ಲಿ ಕೆಲವು ಅನುಕೂಲಗಳೂ ಉಂಟು. ಸ್ಪರ್ಧೆಯ ಪರಿಸ್ಥಿತಿಯಲ್ಲಿ ಪ್ರತಿಯೊಂದು ಸಂಸ್ಥೆಯೂ ತನ್ನ ಸರಕಿನ ಜಾಹೀರಾತಿಗಾಗಿ ಅಗಾಧ ಹಣ ಖರ್ಚು ಮಾಡುತ್ತದೆ. ಆದರೆ ಏಕಸ್ವಾಮ್ಯದಲ್ಲಿ ಇದರ ಆವಶ್ಯಕತೆ ಬೀಳದಿರುವುದರಿಂದ ಅದರ ಮಾರಾಟದ ಖರ್ಚಿನಲ್ಲಿ ಮಿತವ್ಯಯ

ವಾಗುತ್ತದೆ. ಅಧಿಕ ಬಂಡವಾಳದ ಬೆಂಬಲವಿರುವುದರಿಂದ ದೊಡ್ಡ ಪ್ರಮಾಣದ ಉತ್ಪಾದನೆಗೆ ಬೇಕಾದ ಸುಧಾರಿಸಿದ ಯಂತ್ರೋಪಕರಣಗಳನ್ನೂ ಸರಕು ಸಾಮಾನುಗಳನ್ನೂ ಕೊಳ್ಳುವುದು ಸಾಧ್ಯ. ಇದರಿಂದ ಉತ್ಪಾದನೆಯ ಖರ್ಚು ಕಡಿಮೆಯಾಗಬಹುದು. ಬೃಹದ್‌ಗಾತ್ರದ ಉತ್ಪಾದನೆಯ ಸೌಲಭ್ಯಗಳೆಲ್ಲ ಇದಕ್ಕೆ ಲಭಿಸುತ್ತವೆ. ಅಧಿಕ ಪ್ರಮಾಣದ ಉತ್ಪಾದನೆಯಿಂದ ವಸ್ತುಗಳನ್ನು ಶಕ್ಯವಾದಷ್ಟು ಕಡಿಮೆ ಬೆಲೆಗೆ ಮಾರಲು ಅವಕಾಶವಾಗುತ್ತದೆ.

**ಏಕಸ್ವಾಮ್ಯದ ನಿಯಂತ್ರಣ :** ಏಕಸ್ವಾಮ್ಯ ಪರಿಸ್ಥಿತಿಯಲ್ಲಿ ಕೆಲವು ನಿರ್ಬಂಧಗಳು ತಾವಾಗಿಯೇ ಕಾಣಿಸಿಕೊಳ್ಳುವುವು. ಏಕಸ್ವಾಮ್ಯದ ಬೆಲೆಯನ್ನು ಅತಿಯಾಗಿ ಹೆಚ್ಚಿಸಿದರೆ, ಅವನ ಸರಕುಗಳಿಗೆ ಸಾರ್ವತ್ರಿಕ ಬಹಿಷ್ಕಾರ ಉದ್ಭವಿಸುವ ಭಯವಿದೆ. ಇಲ್ಲವೇ, ಆ ಪದಾರ್ಥಗಳಿಗೆ ಬದಲಾಗಿ ಬೇರೆ ಪದಾರ್ಥಗಳನ್ನು ಕೊಳ್ಳುವ ಮನೋವೃತ್ತಿ ಜನಗಳಲ್ಲಿ ಬೆಳೆಯಬಹುದು.

ಸರ್ಕಾರಗಳೂ ಸಾರ್ವಜನಿಕ ಹಿತರಕ್ಷಣೆಯ ದೃಷ್ಟಿಯಿಂದ ಏಕಸ್ವಾಮ್ಯದ ವ್ಯವಹಾರಗಳನ್ನು ನಿಯಂತ್ರಿಸಬೇಕಾಗುತ್ತದೆ. ಈ ಕಾರ್ಯನಿರ್ವಹಣೆಗೆ, ಬೆಲೆಯ ನಿಯಂತ್ರಣಗಳನ್ನೂ ಏಕಾಧಿಕಾರದ ಸಂಸ್ಥೆಗಳು ಸ್ಥಾಪಿತವಾಗದಂತೆ ಸೂಕ್ತವಾದ ಕಾಯಿದೆಗಳನ್ನೂ ಜಾರಿಗೆ ತರಬಹುದು. ಏಕಸ್ವಾಮ್ಯಗಳ ಸಮಾಜವಿರೋಧಿ ಪ್ರವೃತ್ತಿಗಳನ್ನು ಪ್ರತಿಭಟಿಸಲು ಬಳಕೆದಾರರ ಸಂಘಗಳಿಗೆ ಉತ್ತೇಜನ ಕೊಡಬಹುದು. ಸ್ಪರ್ಧಿಗಳ ನಡುವೆ ಜೀವನ್ಮರಣ ಹೋರಾಟ ಹೆಚ್ಚಿ, ಶಕ್ತ ಸಂಸ್ಥೆ ಉಳಿದುಕೊಂಡು ಉಳಿದವನ್ನೆಲ್ಲ ನಿರ್ಮೂಲಗೊಳಿಸುವುದು ಸಾಧ್ಯವಾಗುವಂಥ ಪ್ರವೃತ್ತಿಗಳನ್ನೂ ಪರಿಸ್ಥಿತಿಗಳನ್ನೂ ತಡೆಗಟ್ಟಬಹುದು. ಇದಲ್ಲದೆ, ಏಕಸ್ವಾಮ್ಯದ ವ್ಯವಹಾರಗಳನ್ನು ಸರ್ಕಾರದ ಮೇಲ್ವಿಚಾರಣೆಗೊಳಪಡಿಸಿ, ಅವರ ಕೃತ್ರಿಮ ರೀತಿನೀತಿಗಳನ್ನು ಸಾರ್ವಜನಿಕರಿಗೆ ತಿಳಿಯುವಂತೆ ಪ್ರಕಟಿಸುವುದೂ ಒಂದು ಮಾರ್ಗ.

( ಡಿ.ಎಂ.ಎನ್. )

**ಏಕಾಂಕ ನಾಟಕ :** ಒಂದೇ ಅಂಕವನ್ನುಳ್ಳ ಒಂದು ಬಗೆಯ ನಾಟಕ. ಮೊದಮೊದಲಿಗೆ ಹಗುರ ನಾಟಕವಾಗಿ (ವಾದವಿಲ್) ಕಾಣಿಸಿಕೊಂಡು ಅನಂತರ ಕಿರುನಾಟಕವಾಗಿ (ದಿ ಕರ್ಟನ್ ರೈಸರ್ಸ್) ವಿಕಾಸಹೊಂದಿ ಈ ನಾಟಕಪ್ರಕಾರ ತನ್ನದೇ ಆದ ಒಂದು ವಿಶಿಷ್ಟರೂಪವನ್ನು ಪಡೆದು ಇಂಗ್ಲಿಷ್ ಮತ್ತು ಯೂರೋಪಿಯನ್ ಭಾಷೆಗಳಲ್ಲಿ ಗಣ್ಯಸ್ಥಾನ ಗಳಿಸಿತು.

ಇಂಗ್ಲೆಂಡಿನ ನಾಟಕಮಂದಿರಗಳಲ್ಲಿ ಮುಖ್ಯನಾಟಕ ಪ್ರಾರಂಭವಾಗುವುದಕ್ಕೆ ಅರ್ಧ ಅಥವಾ ಮುಕ್ಕಾಲು ಗಂಟೆ ಮುಂಚೆ ಪ್ರಾಸ್ತಾವಿಕವಾಗಿ ಯಾವುದಾದರೊಂದು ಪುಟ್ಟ ನಾಟಕವನ್ನೊ ಕೆಲವು ಪುಟ್ಟ ದೃಶ್ಯಾವಳಿಗಳನ್ನೊ ಅಭಿನಯಿಸುತ್ತಿದ್ದರು. ಇವನ್ನು ಕಿರುನಾಟಕಗಳೆಂದು ಕರೆದರು. ಪ್ರೇಕ್ಷಕರ ಗಮನವೆಲ್ಲವೂ ಮುಖ್ಯನಾಟಕದ ಕಡೆ ಕೇಂದ್ರೀಕೃತವಾಗುತ್ತಿದ್ದುದರಿಂದ ಪ್ರಾಸ್ತಾವಿಕವಾದ ಈ ಪುಟ್ಟ ದೃಶ್ಯಗಳು ಅಥವಾ ಕಿರುನಾಟಕಗಳು ತಮ್ಮದೇ ಆದ ವಿಶಿಷ್ಟಸ್ಥಾನವನ್ನು ಪಡೆಯಲು ಹಲವು ಕಾಲ ಹಿಡಿಯಿತು. ಇಂಗ್ಲೆಂಡ್ ಮತ್ತು ಐರ್ಲೆಂಡ್‌ಗಳಲ್ಲಿ ಪ್ರಾರಂಭವಾದ ಸಣ್ಣ ನಾಟಕಮಂದಿರದ ಚಳವಳಿಯಿಂದ ಏಕಾಂಕ ನಾಟಕಗಳು ಬಹು ಬೇಗ ಜನಪ್ರಿಯವಾಗಿ ದೊಡ್ಡ ನಾಟಕಗಳ ಬೆಳೆವಣಿಗೆಗೆ ಸಹಾಯಕವಾದುವು.

ಏಕಾಂಕ ನಾಟಕವೆಂದರೆ ಕೇವಲ ಸಣ್ಣ ನಾಟಕವೆಂದಲ್ಲ. ಏಕತೆಯಲ್ಲಿ (ನೋಡಿ : ಏಕತೆಗಳು),ಸಂಕ್ಷಿಪ್ತತೆಯಲ್ಲಿ, ಅದು ದೊಡ್ಡ ನಾಟಕಕ್ಕಿಂತ ಬೇರೆಯಾದುದು. ತೀವ್ರಗತಿಯ ನಿರೂಪಣೆ, ಸಂಕ್ಷಿಪ್ತತೆ, ಸಮತೂಕವಾದ ಪರಿಣಾಮ ಇವು ಏಕಾಂಕ ನಾಟಕದ ಮುಖ್ಯ ಗುಣಗಳು. 3–4 ಗಂಟೆಗಳಲ್ಲಿ ನಡೆಯುವ ದೊಡ್ಡ ನಾಟಕದಲ್ಲೂ ಇವು ಬೇಕು. ಆದರೆ ಏಕಾಂಕ ನಾಟಕದಲ್ಲಿ ಇವುಗಳ ಆವಶ್ಯಕತೆ ಹೆಚ್ಚು. ಏಕಾಂಕ ನಾಟಕದಲ್ಲಿನ ಪ್ರತಿಯೊಂದು ಸನ್ನಿವೇಶ, ಪಾತ್ರಗಳ ಅಭಿನಯ ಮತ್ತು ಮಾತುಗಳು ಶಕ್ತಿಯುತವಾಗಿರಬೇಕು ; ನವಿರಾಗಿರಬೇಕು ; ಗಂಭೀರವಾಗಿ ಅಥವಾ ಲಕ್ಷಣವಾಗಿ ಅಥವಾ ಕಾವ್ಯಮಯವಾಗಿ ಬೇಕಾದ ಪರಿಣಾಮಕ್ಕನುಸಾರವಾಗಿ ಅವು ಅಭಿವ್ಯಕ್ತಗೊಳ್ಳಬೇಕು. ಪ್ರೇಕ್ಷಕರ ಚಿತ್ತವನ್ನು ಅದು ಮೊದಲ ದೃಶ್ಯದಿಂದ ಕೊನೆಯವರೆಗೂ ಆವರಿಸಿಕೊಳ್ಳಬೇಕು. ಇದೇ ಉತ್ತಮ ನಾಟಕದ ಗುರಿ ಮತ್ತು ನೀತಿ. ಇಂಥ ಏಕತೆಯನ್ನು ಸಾಧಿಸಬೇಕಾದರೆ ನಾಟಕದ ಭಾವದಲ್ಲಿ ವಸ್ತುವಿನಲ್ಲಿ ಏಕತೆಯಿರಬೇಕು. ಹಲವಾರು ಘಟನೆಗಳು ಏಕಗತಿಯಲ್ಲಿ ಮುಂದುವರಿದು ಪರಿಣಾಮಕಾರಿಯಾದ ಒಂದು ಘಟ್ಟದಲ್ಲಿ ಪರ್ಯವಸಾನ ಹೊಂದಬೇಕು.

ಏಕಾಂಕ ನಾಟಕದಲ್ಲಿ ಸಾಮಾನ್ಯವಾಗಿ ಬರುವ ಪಾತ್ರಗಳ ಸಂಖ್ಯೆ ಅತಿ ಕಡಿಮೆ. ನಾಟಕದ ಕಥೆ ಒಂದೆರಡು ಪಾತ್ರಗಳ ಸುತ್ತಲೂ ತಿರುಗುತ್ತದೆ. ಆದರೆ ಪಾತ್ರಗಳ ಸಂಖ್ಯೆ ಮುಖ್ಯವಲ್ಲ. ಅವು ಒಂದಕ್ಕೊಂದು ಹೊಂದಿಕೊಂಡು ಭಾವೈಕ್ಯವನ್ನು ಸಾಧಿಸಬೇಕು, ಅಂತಿಮ ಪರಿಣಾಮಕ್ಕೆ ಪುಷ್ಟಿ ಕೊಡಬೇಕು. ಉದಾಹರಣೆಗೆ ದಿ ಲಿಟಲ್ ಸ್ಟೋನ್ ಹೌಸ್ ಎಂಬ ತನ್ನ ಏಕಾಂಕ ನಾಟಕದಲ್ಲಿ ಜಾರ್ಜ್ ಕಾಲ್ಡೆರಾನ್ ಹಲವಾರು ಪುಟ್ಟ ಪುಟ್ಟ ಪಾತ್ರಗಳನ್ನು ಸುಂದರವಾಗಿ ಸೃಷ್ಟಿಸಿ ಅವುಗಳ ಮೂಲಕ ರಸಪುಷ್ಟಿಯನ್ನುಂಟುಮಾಡುತ್ತಾನೆ. ಒಟ್ಟಿನಲ್ಲಿ ಹೇಳುವುದಾದರೆ ದೊಡ್ಡ ನಾಟಕ ವಿಸ್ತಾರವಾಗಿ ಸಾಧಿಸುವ ರಸಪುಷ್ಟಿಯನ್ನು ಏಕಾಂಕ ನಾಟಕ ಸೂಚ್ಯವಾಗಿ, ಸೂಕ್ಷ್ಮವಾಗಿ ಸಾಧಿಸುತ್ತದೆ. ಇಂಥ ಸೂಕ್ಷ್ಮವಾದ ಕಾವ್ಯಕುಶಲತೆ ಹಾಗೂ ರಸಸಿದ್ಧಿಯನ್ನು ನಾವು ಉತ್ತಮ ಏಕಾಂಕ ನಾಟಕಗಳಾದ ದಿ ರೈಡರ್ಸ್ ಟು ದಿ ಸೀ, ಎ ನೈಟ್ ಎಟ್ ಎನ್ ಇನ್ ಮುಂತಾದ ಕಲಾ ಕೃತಿಗಳಲ್ಲಿ ಕಾಣಬಹುದು.

ಏಕಾಂಕ ನಾಟಕಗಳನ್ನು ರಚಿಸಿದವರಲ್ಲಿ ಸಿಂಜ್, ಲೇಡಿ ಗ್ರೆಗರಿ, ಲಾರ್ಡ್ ಡನ್‌ಸನಿ, ಸ್ಲೇಡನ್ ಸ್ಮಿಥ್, ನೋಯಲ್ ಕವರ್ಡ್ ಮುಂತಾದವರು ಮುಖ್ಯರು.

ಏಕಾಂಕ ನಾಟಕಗಳನ್ನು ರೇಡಿಯೊ ಮತ್ತು ಟೆಲಿವಿಷನ್‌ಗಳಿಗೆ ಅಳವಡಿಸಿ ಉತ್ತಮ ಪ್ರಯೋಗಗಳನ್ನು ನಡೆಸುತ್ತಿದ್ದಾರೆ. ಚಿರಪರಿಚಿತವಾದ ಉತ್ತಮ ನಾಟಕವೊಂದರ ಸೂಚ್ಯ ಸನ್ನಿವೇಶವೊಂದನ್ನು ಆರಿಸಿಕೊಂಡು ಅದಕ್ಕೆ ತಮ್ಮದೇ ಆದ ಕಾಲ್ಪನಿಕ ಪಾತ್ರ ಮತ್ತು ಘಟನೆಗಳನ್ನು ಸೇರಿಸಿ ಉತ್ಕೃಷ್ಟವಾದ ಏಕಾಂಕ ನಾಟಕಗಳನ್ನು ರಚಿಸಿದ್ದಾರೆ. ಹೀಗೆ ತನ್ನದೇ ಆದ ವಿಶಿಷ್ಟ ಜಾಡನ್ನು ಹಿಡಿದು ಏಕಾಂಕ ನಾಟಕ ಸಾಗುತ್ತಿದೆ.

ಕನ್ನಡದಲ್ಲಿ ಕೈಲಾಸಂ, ಕುವೆಂಪು, ಬೇಂದ್ರೆ, ಕೈವಾರ ರಾಜಾರಾವ್, ಶ್ರೀರಂಗ, ಪರ್ವತವಾಣಿ, ಕ್ಷೀರಸಾಗರ ಮುಂತಾದವರು ಸೊಗಸಾದ ಏಕಾಂಕ ನಾಟಕಗಳನ್ನು ರಚಿಸಿದ್ದಾರೆ. ಅವುಗಳಲ್ಲಿ ಅನೇಕ ಕೃತಿಗಳು ರಂಗಮಂದಿರಗಳಲ್ಲಿ ಅಭಿನಯಿಸಲ್ಪಟ್ಟು ಬಹು ಜನಪ್ರಿಯವಾಗಿವೆ.

ನೋಡಿ—ಉಪನಾಟಕಗಳು. (ಎಚ್.ಕೆ.ಆರ್.)

**ಏಕಾಂತದ ರಾಮಯ್ಯ :** ಕನ್ನಡ ನಾಡಿನಲ್ಲಿ ಶೈವನಿಷ್ಠೆಯ ಮೇಲ್ಮೆಯನ್ನು ಪ್ರಸ್ಥಾಪಿಸಿದ ವೀರ ಶಿವಭಕ್ತರಲ್ಲಿ ಗಣ್ಯ. ಕಾಲ ಹನ್ನೆರಡನೆಯ ಶತಮಾನದ ಉತ್ತರಾರ್ಧ. ಸೋಮನಾಥನ ಗಣಸಹಸ್ರನಾಮಾವಳಿಯಲ್ಲಿ ಇವನ ಹೆಸರಿದೆ. ಈತ ತನ್ನ ಪವಾಡಗಳನ್ನು ಮೆರೆದ ಸ್ಥಳವಾದ ಅಬ್ಬಲೂರಿನ ಶಿಲಾಶಾಸನವೊಂದರಲ್ಲಿ ಇವನ ಬಗ್ಗೆ ಉಲ್ಲೇಖವಿದೆ, ಹರಿಹರ ಇವನನ್ನು ಕುರಿತು ಒಂದು ರಗಳೆಯನ್ನು ಬರೆದಿದ್ದಾನೆ.

ಈತನ ಊರು ಅಲಂದೆನಗರ ಅಂದರೆ ಗುಲ್ಬರ್ಗ ಜಿಲ್ಲೆಯಲ್ಲಿ ಆಳಂದ ಎಂಬ ಗ್ರಾಮ. ಶ್ರೀವತ್ಸಗೋತ್ರದ ಪುರುಷೋತ್ತಮ, ಪದ್ಮಾಂಬಿಕೆ ಎಂಬ ಬ್ರಾಹ್ಮಣ ದಂಪತಿಗಳಲ್ಲಿ ವೀರಭದ್ರನ ವರಪ್ರಸಾದದಿಂದ ಜನಿಸಿದ. ಹೆಸರು ರಾಮ. ಅಲಂದೆಯ ಸೋಮನಾಥ ಶಿವನನ್ನು ಏಕಾಂತದಲ್ಲಿ ಏಕಾಗ್ರ ಭಕ್ತಿಯಿಂದ ಆರಾಧಿಸಿ, ಮೆಚ್ಚಿಸಿದುದರಿಂದಾಗಿ ಈತನಿಗೆ ಏಕಾಂತದ ರಾಮಯ್ಯ ಎಂಬ ಅರ್ಥಪೂರ್ಣ ಹೆಸರು ಬಂತು. ರಾಮಯ್ಯ ಶೈವ ತೀರ್ಥಕ್ಷೇತ್ರಗಳನ್ನು ಸಂದರ್ಶಿಸುತ್ತ ಹುಲಿಗೆರೆಗೆ (ಇಂದಿನ ಲಕ್ಷ್ಮೇಶ್ವರ) ಬಂದು, ಅಲ್ಲಿಯ ದಕ್ಷಿಣಸೋಮನಾಥನನ್ನು ಪೂಜಿಸಿದ. ಈ ದೇವನ ಆದೇಶದಂತೆ ಜೈನಕೇಂದ್ರವಾಗಿದ್ದ ಅಬ್ಬಲೂರಿಗೆ ಆಗಮಿಸಿದ.

ರಾಮಯ್ಯ ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದಲ್ಲಿ ನಿರ್ಭಯವೃತ್ತಿಯಿಂದ ವಾಸವಾಗಿರಲು, ಆ ಪುರದ ಪ್ರಮುಖ ಗಾವುಂಡನೇ ಮೊದಲಾದ ಜೈನಮತೀಯರು ಅಲ್ಲಿಗೆ ಬಂದು ಜಿನನೇ ಶ್ರೇಷ್ಠನೆಂದು ವಾದಹೂಡಿ ಆತಂಕ ಮಾಡಿದರು. ಶಿವನೇ ಶ್ರೇಷ್ಠನೆಂದು ಪ್ರತಿಪಾದಿಸಿದ ರಾಮಯ್ಯನನ್ನು ಪ್ರತಿಭಟಿಸಿದರು. ಶಿವನೇ ಶ್ರೇಷ್ಠನೆಂದು ಪ್ರಸ್ಥಾಪಿಸಲು ತನ್ನ ಶಿರವನ್ನು ಕೊಯ್ದು ಅದನ್ನು ಪುನಃ ಪಡೆಯುವಂತೆ ಆತನಿಗೆ ಆಹ್ವಾನವಿತ್ತರು.

ಈ ಆಹ್ವಾನವನ್ನು ಅಂಗೀಕರಿಸಿ ತನ್ನ ಶಿರವನ್ನು ಕೊಯ್ದು ರಾಮಯ್ಯ ಶಿವಪಾದದಲ್ಲಿ ಅರ್ಪಿಸಿದ. ಅದು ಏಳು ದಿನ ಅಲ್ಲಿ ಉಳಿದುಕೊಂಡು, ಬಳಿಕ ತನ್ನ ಸ್ಥಳಕ್ಕೆ ಸೇರಿಕೊಂಡಿತು. ಈ ಅದ್ಭುತವನ್ನು ಕಂಡ ಜೈನರು ದಿಗ್‌ಭ್ರಾಂತರಾದರು. ರಾಮಯ್ಯ ತನ್ನ ಪ್ರತಿಜ್ಞೆಯಂತೆ ಜಿನನನ್ನು ಧ್ವಂಸಮಾಡಲು ಮುಂದುವರಿದ. ಆತನನ್ನು ವಿರೋಧಿಸಿದ ಜೈನರೆಲ್ಲರೂ ಸೋತು ಶರಣಾಗತರಾಗಿ ರಾಮಯ್ಯನಿಗೆ ಜಯಪತ್ರವನ್ನು ಬರೆದುಕೊಟ್ಟು ಶೈವಮತಾವಲಂಬಿಗಳಾದರು.

ಅನಂತರ ಜೈನರು ರಾಮಯ್ಯನ ವಿರುದ್ಧವಾಗಿ ಬಿಜ್ಜಳನಲ್ಲಿ ದೂರು ಸಲ್ಲಿಸಿದರು. ಬಿಜ್ಜಳ ರಾಮಯ್ಯನ ಪ್ರಭಾವವನ್ನು ಅರಿತವನಾಗಿ ಜೈನರ ದೂರನ್ನು ತಿರಸ್ಕರಿಸಿದ. ರಾಮಯ್ಯನನ್ನು ಸತ್ಕರಿಸಿದ್ದಲ್ಲದೆ ಅಬ್ಬಲೂರಿನ ವೀರ ಸೋಮನಾಥದೇವನಿಗೆ ಭೂದಾನ ಮಾಡಿದ. ರಾಮಯ್ಯನ ಕೀರ್ತಿಯನ್ನು ಕೇಳಿ ಬೇರೆ ರಾಜರು ಪ್ರಭಾವಿತರಾದರು. ಚಾಲುಕ್ಯ ನಾಲ್ಕನೆಯ ಸೋಮೇಶ್ವರ, ಕದಂಬ ಕಾಮದೇವರಿಂದ ಈತ ಸನ್ಮಾನಿತನಾದ. ಇದು ಶಾಸನದಲ್ಲಿರುವ ಸಂಗತಿ. ಈ ಶಾಸನ ವೃತ್ತಾಂತದ ಕೆಲವು ವಿವರಗಳು ಹರಿಹರನ ರಗಳೆಯಲ್ಲಿ ಸಿಕ್ಕುವುದಿಲ್ಲ. ಶಾಸನಗಳಲ್ಲಿರದ ಒಂದೆರಡು ಹೆಚ್ಚಿನ ಅಂಶಗಳು ಹೀಗಿವೆ :

ಹುಲಿಗೆರೆಯ ಅಗ್ಗಣಿಯ ಹೊನ್ನಿತಂದೆಯೆಂಬ ಶಿವಭಕ್ತ ಜೈನಪರಾಜಯ ಕಾರ್ಯದಲ್ಲಿ ರಾಮಯ್ಯನಿಗೆ ಸಹಾಯಕನಾದ. ರಾಮಯ್ಯನ ರುಂಡವನ್ನು ಪುಲಿಗೆರೆ, ಅಣ್ಣಿಗೆರೆ, ಕೆಂಬಾವಿ, ಕಪ್ಪಡಿಸಂಗಮ, ನಾಗನಾಥ, ಸೊನ್ನಲಿಗೆ, ಹಂಪೆ ಮೊದಲಾದ ಶೈವಕ್ಷೇತ್ರಗಳಲ್ಲಿ ಏಳು ದಿನಗಳವರೆಗೆ ಮೆರೆಯಿಸಿದ.

ರಾಮಯ್ಯನ ಕಥೆ ತೆಲುಗು ಬಸವಪುರಾಣ, ಕನ್ನಡ ಬಸವಪುರಾಣ, ಮೊದಲಾದ ಈಚೆಯ ವೀರಶೈವ ಪುರಾಣಕಾವ್ಯಗಳಲ್ಲಿ ಪವಾಡಗಳಿಂದ ಕೂಡಿ ರಂಜಕವಾಗಿ ನಿರೂಪಿತವಾಗಿದೆ.

ರಾಮಯ್ಯ ಪ್ರತಿಷ್ಠೆಮಾಡಿದ ವೀರಸೋಮೇಶ್ವರ ದೇವಾಲಯ ಈಗಲೂ ಅಬ್ಬಲೂರಲ್ಲಿದೆ. ಈ ದೇವಾಲಯದ ಭಿತ್ತಿಗಳ ಮೇಲೆ ರಾಮಯ್ಯನ ಜಿನವಿಜಯದ ಸನ್ನಿವೇಶಗಳನ್ನು ಜೊತೆಯ ವಿವರಣೆಗಳೊಂದಿಗೆ ಚಿತ್ತಾಕರ್ಷಕವಾಗಿ ಕೆತ್ತಲಾಗಿದೆ. ಭೂಗತವಾಗಿದ್ದ ನೂರಾರು ಚಿಕ್ಕ ಶಿವಲಿಂಗಗಳು ಕೆಲವರ್ಷಗಳ ಹಿಂದೆ ಈ ಊರಲ್ಲಿ ದೊರೆತಿವೆ. ದೇವಾಲಯದಲ್ಲಿ ಸೋಮೇಶ್ವರ ಲಿಂಗವಲ್ಲದೆ ರಾಮಯ್ಯ, ಅಗ್ಗಣಿಯ ಹೊನ್ನಯ್ಯರ ಸ್ಮಾರಕಗಳಾದ ಎರಡು ಬೃಹದ್ ಲಿಂಗಗಳಿವೆ. (ಪಿ.ಬಿ.ಡಿ.; ಬಿ.ಎಸ್.)

**ಏಕಾಣುಜೀವಿಕ, ಸೊಂಕಿನ ರೋಗಗಳು :** ಒಂದು ಜೀವಿಯಿಂದ ಇನ್ನೊಂದು ಜೀವಿಗೆ ಅಂಟಿ ಹರಡುವ ರೋಗಗಳೇ ಸೊಂಕಿನ ರೋಗಗಳು (ಇನ್‌ಫೆಕ್ಷಿಯಸ್ ಡಿಸೀಸಸ್). ಇನ್ನೂ ನಿಖರವಾಗಿ ಹೀಗೆ ಹೇಳಬಹುದು—ಆತಿಥೇಯ ಜೀವಿಯನ್ನು (ಹೋಸ್ಟ್) ಆಕ್ರಮಿಸಿ ಅದರ ಊತಕಗಳನ್ನು ಪ್ರವೇಶಿಸಿ ಅಲ್ಲಿ ವಿಪರೀತವಾಗಿ ವೃದ್ಧಿಗೊಳ್ಳುವ ಸೂಕ್ಷ್ಮಜೀವಿಗಳಿಂದ ಜನಿಸುವ ಮತ್ತು ಆತಿಥೇಯ ಜೀವಿಯ ಪ್ರಭೇದದ ಅಥವಾ ಬೇರೆ ಪ್ರಭೇದದ ಜೀವಿಗಳಿಗೆ ಹರಡಬಲ್ಲ ರೋಗಗಳು. ಆತಿಥೇಯ ಜೀವಿ ಮನುಷ್ಯ, ಪ್ರಾಣಿ, ಸಸ್ಯ, ಕೀಟ ಅಥವಾ ಬೇರೆ ಒಂದು ಸೂಕ್ಷ್ಮಜೀವಿಯೇ ಆಗಬಹುದು. ಉದಾಹರಣೆಗೆ ಏಕಾಣುಜೀವಿಗಳಲ್ಲೇ (ಬ್ಯಾಕ್ಟೀರಿಯಾ) ರೋಗಗಳನ್ನು ಉಂಟುಮಾಡಬಲ್ಲ ವೈರಸ್ ಮುಂತಾದ ಸೂಕ್ಷ್ಮ ಜೀವಿಗಳಿವೆ. ಇವುಗಳ ಹೆಸರು ಏಕಾಣುಜೀವಿಹರಗಳು (ಬ್ಯಾಕೀರಿಯೋಫೇಜಸ್). ಮುಖ್ಯ ವಿಷಯವಿಷ್ಟೆ—ಸೂಕ್ಷ್ಮಜೀವಿ ಊತಕದಲ್ಲಿ ನೆಲೆಸಬೇಕು, ವೃದ್ಧಿಗೊಳ್ಳಬೇಕು ಮತ್ತು ಊತಕವನ್ನು ಘಾಸಿಗೊಳಿಸಬೇಕು. ಈ ಕೊನೆಯ ಅಂಶ ನೆರವೇರದಿದ್ದರೆ ಅಂಥ ಸೂಕ್ಷ್ಮಜೀವಿಗಳು ರೋಗವನ್ನು ಉಂಟು ಮಾಡುವುದಿಲ್ಲ—ಅವು ಆತಿಥೇಯ ಜೀವಿಯನ್ನು ಅವಲಂಬಿಸಿರುವ ಪರಪಿಂಡಿ ಜೀವಿಗಳಷ್ಟೇ (ನೋಡಿ–ಪರಪಿಂಡಿಶಾಸ್ತ್ರ).

ಸೊಂಕು ರೋಗದ ಹುಟ್ಟು : ಜೀವಿವಿಕಾಸದಲ್ಲಿ ಸೊಂಕು ಹೇಗೆ ಎಲ್ಲಿ ಹುಟ್ಟಿತೆಂದು ಇನ್ನೂ ಖಚಿತವಾಗಿ ತಿಳಿದಿಲ್ಲ. ಮೊಟ್ಟಮೊದಲಲ್ಲಿ ಜೀವವಿಲ್ಲದ ವಸ್ತುಗಳನ್ನು ಆಹಾರವಾಗಿ ಬಳಸಿ ಉಳಕಲಜೀವಿಸಸಿಗಳಾಗಿ (ಸ್ಯಾಪ್ರೊಫೈಟ್ಸ್) ಏಕಾಣುಜೀವಿಗಳು ವಿಕಾಸಗೊಂಡವು ಎನ್ನಬಹುದು. ಮಣ್ಣಲ್ಲೂ ಕೊಳೆಯುತ್ತಿರುವ ಸೊಪ್ಪುಸದೆಗಳಲ್ಲೂ ಬಿದ್ದಿದ್ದ ಇವುಗಳಲ್ಲಿ ಕೆಲವು ಪ್ರಾಣಿಗಳ ಗಾಯಗಳ ಮೂಲಕ ಆಗಾಗ್ಗೆ ಒಳಹೊಕ್ಕಿರಬೇಕು. ಆದರೆ ಆತಿಥೇಯದ ರಸಗಳ ಹೆಚ್ಚಿನ ಬಲದಿಂದಲೋ ಅವುಗಳಿಂದ ಸಾಕಷ್ಟು ಪೋಷಣೆ ದಕ್ಕದೆಯೋ ಇವುಗಳಲ್ಲಿ ಬಹುಪಾಲು ಸತ್ತರೂ ಕೆಲವಾದರೂ ಜಗ್ಗದೆ ನೆಲೆಯೂರಿರಬೇಕು. ಆಗಿನ ಹೊಸ ಪರಿಸರ ಸಂದರ್ಭಗಳಿಗೆ ತಕ್ಕಂತೆ ಹೊಂದಿಕೊಂಡಂಥ ಏಕಾಣುಜೀವಿಗಳು ಮಾತ್ರ ಉಳಿದಿರಬೇಕು. ಈ ಪ್ರಯತ್ನದಲ್ಲಿ ರೋಗಾಣುಗಳು ಹೊರಬಿಟ್ಟ ವಿಷ ಆತಿಥೇಯ ಜೀವಿಯನ್ನು ಬಲಿ ತೆಗೆದುಕೊಂಡಿರಲೂಬಹುದು. ಇಂಥ ಪರಿಸ್ಥಿತಿಯಿಂದ ರೋಗಾಣುಗಳಿಗೂ ಕೇಡು ತಪ್ಪಿದ್ದಲ್ಲ. ಆಗ ಬೇರೊಂದು ಪ್ರಾಣಿಯಲ್ಲಿ ಅವು ಸೇರಿಕೊಂಡು ಹೊಸ ನೆಲೆಯಲ್ಲಿ ಮತ್ತೆ ಪರಪಿಂಡಿಯಾಗಿ ಬಾಳಬೇಕಾಗುತ್ತದೆ. ವಿಕಾಸದಲ್ಲಿ ಇಂಥ ಸರಣಿಗಳು ಲೆಕ್ಕವಿಲ್ಲದಷ್ಟು ನಡೆದುಹೋಗಿವೆ. ಪರಿಸರಕ್ಕೆ ಹೊಂದಿಕೊಂಡ ರೋಗಾಣುಗಳು ಬದಲಾದುವು, ಉಳಿದುಕೊಂಡವು. ಹೊಂದಲಾಗದವು ನಿರ್ನಾಮವಾಗಿ ಹೋದುವು.

ಪ್ರಪಂಚದಲ್ಲಿರುವ ರೋಗಾಣುಗಳಿಗೆ ಲೆಕ್ಕವೇ ಇಲ್ಲ. ಒಂದೊಂದು ಬಗೆಯದು ಗೊತ್ತಾದ ಒಂದೊಂದು ರೋಗ ಹುಟ್ಟಿಸಬಹುದು. ಆದರೆ ರೋಗಾಣುಗಳ ದಾಳಿಯನ್ನು ಎದುರಿಸುವುದರಲ್ಲಿ ಮೈ ಎದುರಿಸುವ ಬಗೆಗಳು ಮಾತ್ರ ಕೆಲವೇ ಆಗಿರುವುದರಿಂದ ಬಹುಪಾಲು ರೋಗಗಳನ್ನು ಖಚಿತವಾಗಿ ಗುರುತಿಸಬೇಕಾದರೆ ಪ್ರಯೋಗಾಲಯದ ಪರೀಕ್ಷೆಗಳಾಗಬೇಕು. ಇದರಿಂದಲೇ ಈಗ ಬೇರೆ ಬೇರೆ ಎಂದು ಗುರುತಿಸಿರುವ ಎಷ್ಟೊ ರೋಗಗಳು ಮೊದಲು ಹಾಗೆ ತಿಳಿದಿರಲಿಲ್ಲ. ಉರಿಶೀತ (ಇನ್‌ಫ್ಲೂಯೆಂಜ಼) ಹಿಂದೆ ಬೇರೆ ಕಾಯಿಲೆಗಳ ಲೆಕ್ಕಕ್ಕೆ ಸೇರುತ್ತಿತ್ತು. ಕುಷ್ಠರೋಗಕ್ಕೂ ಬಿಳಿಯ ತೊನ್ನಿಗೂ ಚರ್ಮದ ಇನ್ನೂ ಹಲವಾರು ಬೇರೂರಿದ ರೋಗಗಳಿಗೂ ವ್ಯತ್ಯಾಸಗಳನ್ನೇ ಹಿಂದಿನ ಕಾಲದಲ್ಲಿ ಕಾಣದೆ ಎಲ್ಲವನ್ನೂ ಕುಷ್ಠ ಎನ್ನುತ್ತಿದ್ದರು. ಹಾಗೇ ವಿಪರೀತ ವಾಂತಿ, ಭೇದಿ ಆಯಿತೆಂದರೆ ಸಾಕು, ಕಾಲರ ಎನ್ನುವ ಕಾಲ ಈಗಲೂ ಇದೆ. ಹಿಂದೆ ಮಹಾಮಾರಿ ಎಂದು ಹೆಸರಾಗಿದ್ದ ಪ್ಲೇಗಿನಲ್ಲಿ ಇನ್ನೂ ಬೇರೆ ರೋಗಗಳೂ ಸೇರಿಕೊಳ್ಳುತ್ತಿದ್ದುವು. ಪುರಾತನ ರೋಗಗಳಾದ ಸಿಡುಬೂ ಪುಪ್ಪುಸದ್ದಲ್ಲದ ಕ್ಷಯವೂ ಈಜಿಪ್ಟಿನ ಮಮ್ಮಿಗಳಲ್ಲೂ ಇದ್ದುದರ ಗುರುತುಗಳು ಕಂಡುಬಂದಿವೆ. ಗ್ರೀಕರ, ಅದಕ್ಕೂ ಹಿಂದಿನ ನಾಗರಿಕ ಸಮಾಜಗಳಲ್ಲಿ ಗಂಟಲಮಾರಿ (ಡಿಫ್ತೀರಿಯ), ಪುಪ್ಪುಸುರಿತ (ನ್ಯುಮೋನಿಯ), ಕಾಲರ ರೋಗಗಳಿದ್ದ ಕುರುಹುಗಳು ದೊರೆತಿವೆ.

**ಚರಿತ್ರೆ :** ಸೊಂಕಿನ ರೋಗಗಳ ಗುಣ, ಕಾರಣಗಳ ವಿಷಯದಲ್ಲಿ ಪೂರ್ವ ಕಾಲದಿಂದಲೂ ಬಲು ವಿಚಿತ್ರ ನಂಬಿಕೆಗಳಿದ್ದುವು. ಅವು ಯಾವುದೋ ಕಾಣದ ಶಕ್ತಿಯ ಕಾಟವೆಂದೇ ಜನ ನಂಬಿದ್ದರು. ಆಮೇಲಿನ ಶೋಧಕರಿಗೆ ನಿಜಸಂಗತಿ ಕಂಡುಕೊಳ್ಳುವುದರಲ್ಲಿ ಇವು ಯಾವುವೂ ನೆರವಾಗಲೇ ಇಲ್ಲ. ಆದರೆ ಉಪದಂಶದ (ಸಿಫಿಲಿಸ್) ವಿಷಯವಾಗಿ ಫ್ರಾಕಸ್ಟೋರಿಯಸನಂಥವರು ಹೇಳಿದ್ದು ನಿಜವಿಚಾರಕ್ಕೆ ಹತ್ತಿರ ಬಂದಿದ್ದರೂ ಆಗ ಅದನ್ನು ಖಚಿತಪಡಿಸುವ ಪರಿಕರ, ಮುಟ್ಟುಗಳೂ ವಿಧಾನಗಳೂ ಇಲ್ಲದ್ದರಿಂದ ದೃಢಗೊಳಿಸಲಾಗಲಿಲ್ಲ. 17ನೆಯ ಶತಮಾನದಲ್ಲಿ ಆಂತೊನಿ ವಾನ್ ಲೀವನ್‌ಹಾಕ್ ಸೂಕ್ಷ್ಮದರ್ಶಕವನ್ನು ತಯಾರಿಸುವತನಕ ಒಂಟಿ ಊತಕದ ಜೀವಿಗಳನ್ನು ಯಾರಿಗೂ ನೋಡುವುದು ಸಾಧ್ಯವಾಗಿರಲಿಲ್ಲ. ಅಷ್ಟಾದರೂ ಬೇಕಾದ ಇತರ ವಿಧಾನಗಳು ಆಗಿನ್ನೂ ಗೊತ್ತಿರದಿದ್ದುದರಿಂದ ರೋಗಕಾರಣಗಳನ್ನು ಕಂಡುಹಿಡಿಯುವುದರಲ್ಲಿ ಯಾವ ಮುನ್ನಡೆಯೂ ಆಗಲಿಲ್ಲ.

ಸೂಕ್ಷ್ಮಜೀವಿಶಾಸ್ತ್ರ (ಮೈಕ್ರೊಬಯಾಲಜಿ) ನಿಜವಾಗಿ ಹುಟ್ಟಿದ್ದು ಲೂಯಿ ಪ್ಯಾಶ್ಚರನಿಂದ (ನೋಡಿ—ಪ್ಯಾಶ್ಚರ್, ಲೂಯಿ). ಕೆಲವು ಜೈವಿಕ ಸಂಯುಕ್ತಗಳು ಒಡೆವುದಕ್ಕೂ ಸೂಕ್ಷ್ಮದರ್ಶಕದಲ್ಲಿ ಮಾತ್ರ ಕಾಣಬರುವ, ಬದುಕಿರುವ ಜೀವಾಣುಗಳು ಇರುವುದಕ್ಕೂ ನಿಕಟಸಂಬಂಧ ಇರುವುದನ್ನು ಈತ ಚುರುಕಾಗಿ ಗುರುತಿಸಿದ. ಒಂದೊಂದು ಜೀವಾಣುವಿನಿಂದಲೂ ಬೇರೆ ಬೇರೆ ತೆರನಾಗಿ ಹುದುಗೇಳುವುದನ್ನೂ (ಫರ್ಮೆಂಟೇಷನ್) ಕಂಡುಕೊಂಡ. ಇನ್ನೂ ಹೆಚ್ಚಿನದಾಗಿ ಜೀವಿಗಳು ಇದ್ದಕ್ಕಿದ್ದ ಹಾಗೆ ಹುಟ್ಟಿಕೊಳ್ಳುತ್ತವೆಂಬ ಅಂದಿನ ನಂಬಿಕೆಯನ್ನೂ ಎದುರಿಸಿ, ಚಾಲೂಕಿನ ಪ್ರಯೋಗ ಸಾಲುಗಳಿಂದ, ಮೊದಲೇ ಇರುವ ಜೀವಾಣುಗಳೇ ವೃದ್ಧಿಗೊಂಡು ಅದೇ ತೆರನ ಜೀವಾಣುಗಳು ಹುಟ್ಟಿಕೊಳ್ಳುತ್ತವೆಂದೂ ಅನುಮಾನವಿಲ್ಲದಂತೆ ತೋರಿಸಿಕೊಟ್ಟ. ಪರಿಸರ, ಸ್ಥಿತಿಗಳು ಅನುಕೂಲವಾಗಿದ್ದರೆ, ಜೀವಾಣುಗಳ ತಳಿ ಸಾಲುಗಳನ್ನೇ ದ್ರವಮಾಧ್ಯಮಗಳಲ್ಲಿ (ಮೀಡಿಯ) ಬೆಳೆಸಬಹುದೆಂದೂ ಅವುಗಳಲ್ಲಿರುವ ಜೀವಿಗಳನ್ನೆಲ್ಲ ಕುದಿಸಿ ಕೊಂದುಬಿಟ್ಟಮೇಲೆ ಬದುಕಿರುವ ಜೀವಿಗಳು ಒಳಹೋಗದಂತೆ ಎಚ್ಚರದಿಂದಿದ್ದರೆ ಯಾವ ಜೀವಿಯೂ ಬೆಳೆಯಲಾರದೆಂದೂ ಕೆಲವು ಹೊಸ ಜೀವಿಗಳನ್ನು ಒಳಬಿಟ್ಟರೆ ಅದರ ಗೊತ್ತಾದ ತೆರನ ಹುದುಗೇಳುವುದನ್ನೂ ಅನುಮಾನವಿಲ್ಲದಂತೆ ತೋರಿಸಿದ. ಇನ್ನಿತರ ಚಟುವಟಿಕೆಗಳಿಂದ ರೋಗಕಾರಣಗಳನ್ನು ಹುಡುಕಲು ತೊಡಗಿ ಕೊನೆಗೆ ಅನೇಕ ರೋಗಗಳಲ್ಲಿ ಊತಕಗಳಲ್ಲಿ ಗೊತ್ತಾದ ಸೂಕ್ಷ್ಮಜೀವಿಗಳು ಬೆಳೆಯುತ್ತಿರುವುದನ್ನು ರುಜುವಾತುಪಡಿಸಿ ಅಂದಿನ ವೈದ್ಯಕುಲದ ಮೂಢನಂಬಿಕೆ ಎದುರು ಹೋರಾಡಿ, ರೋಗಗಳು ಹರಡುವ ಇಡೀ ಕಲ್ಪನೆಯಲ್ಲಿಯೇ ಕ್ರಾಂತಿ ಎಬ್ಬಿಸಿದ.

ಬೇರೆ ಬೇರೆ ಸೂಕ್ಷ್ಮ ಜೀವಾಣುಗಳ ಅಚ್ಚ ತಳಿಗಳನ್ನು ಬೆಳೆಸುವ ತಾಂತ್ರಿಕ ವಿಧಾನಗಳನ್ನು ಜರ್ಮನಿಯ ಏಕಾಣುಜೀವಿಶಾಸ್ತ್ರಜ್ಞ ರಾಬರ್ಟ್ ಕಾಕ್ (ನೋಡಿ—ಕಾಕ್, ರಾಬರ್ಟ್) ಜಾರಿಗೆ ತಂದು ಕ್ಷಯ, ಕಾಲರ ರೋಗಗಳ ಕಾರಣಗಳಾದ ಜೀವಾಣುಗಳನ್ನು ವಿವರಿಸಿ ತೋರಿಸಿದ. ಪ್ಯಾಶ್ಚರ್, ಕಾಕ್ ಇವರೊಡನೆ ಅಭ್ಯಸಿಸಿದವರೇ ರೋಗಗಳಿಗೆ ಕಾರಣಗಳಾದ ಕಾರಕಗಳನ್ನು ಕಂಡುಹಿಡಿದರು. ಗಾಯಗಳಲ್ಲಿ ನಂಜಾಗುವುದನ್ನು ತಪ್ಪಿಸಲು, ಗ್ಲಾಸ್ಗೋದಲ್ಲಿದ್ದ ಜೋಸೆಫ್ ಲಿಸ್ಟರ್, ಪ್ಯಾಶ್ಚರನ ತತ್ತ್ವಗಳನ್ನು ಅನುಸರಿಸಿದ್ದರಿಂದ ಶಸ್ತ್ರವೈದ್ಯ ಚೆನ್ನಾಗಿ ಕೈಗೂಡಿದ್ದು ಇಡೀ ಶಸ್ತ್ರವೈದ್ಯದಲ್ಲೇ ಒಂದು ಹೊಸ ಯುಗ ಕಾಲಿಟ್ಟಿತು. ನೆಲ ಫಲವತ್ತಾಗಿರಬೇಕಾದರೆ, ಕೇವಲ ಸೂಕ್ಷ್ಮ ಜೀವಿಗಳ ಚಟುವಟಿಕೆಯಿಂದಲೇ ಎನ್ನುವುದು ಬೇಸಾಯದ ಶೋಧನೆಗಳಿಂದ ತೋರಿಬಂದಿತು. ಪ್ರಾಣಿಗಳ, ಗಿಡಮರಗಳ ಪ್ರಪಂಚಗಳಲ್ಲಿ ಸೊಂಕಿನ ರೋಗಗಳು ಗೊತ್ತಾದ ಸೂಕ್ಷ್ಮಜೀವಿಗಳಿಂದಲೇ ಏಳುವುದು ಖಚಿತವಾಯಿತು. ರೋಗನಿದಾನ (ಡಯಗ್ನೋಸಿಸ್), ಚಿಕಿತ್ಸೆಗಳ ವಿಧಾನಗಳು ಪ್ಯಾಶ್ಚರನ ಮೂಲ ಶೋಧನೆಗಳ ಪರಿಣಾಮ ಎನ್ನುವುದರಲ್ಲಿ ಅನುಮಾನವೇ ಇಲ್ಲ.

**ಕಾರಣಗಳು :** ಒಂದು ರೋಗ ಬರಿಸುವುದರಲ್ಲಿ ಒಂದು ಸೂಕ್ಷ್ಮಜೀವಿಯ ಗೊತ್ತಾದ ಪಾತ್ರವನ್ನು ಕಂಡುಕೊಳ್ಳುವುದರಲ್ಲಿ ಕಾಕ್‌ನ ಮೂರು ಮುಖ್ಯ ಮೂಲ ಸೂತ್ರಗಳು ಇಂದಿಗೂ ಹೆಸರಾಗಿವೆ—1 ಒಂದು ರೋಗ ಅನುಭವಿಸುವ ಒಬ್ಬೊಬ್ಬರಲ್ಲೂ ರೋಗಕಾರಕ ಜೀವಾಣುಗಳು ಇದ್ದೇ ತೀರಬೇಕು. ಯಾವ ಅಂಗದಲ್ಲಿ ಯಾವ ತೆರನ ರೋಗ ಹೇಗೆ ಕಾಣಿಸಿಕೊಂಡಿದೆ ಎನ್ನುವುದಕ್ಕೆ ತಕ್ಕಂತೆ ರೋಗಾಣುಗಳನ್ನು ಅರಸಬೇಕು. 2 ರೋಗ ಹತ್ತಿರುವ ಊತಕಗಳಿಂದ ರೋಗಾಣುಗಳನ್ನು ಬೇರ್ಪಡಿಸಿ ಹಲವಾರು ತಲೆಮಾರಿನ ಅಚ್ಚ ತಳಿಗಳನ್ನು ಎಬ್ಬಿಸಿ ಬೆಳೆಸುವಂತಿರಬೇಕು. 3 ಅಚ್ಚ ತಳಿಯ ರೋಗಾಣುಗಳನ್ನು ಆ ರೋಗಕ್ಕೀಡಾಗುವ ಪ್ರಾಣಿಗೆ ಹತ್ತಿಸಿದರೆ

ಆ ರೋಗ ಅದರಲ್ಲಿ ತಲೆದೋರಬೇಕು; ಆ ರೋಗದ ಪ್ರಾಣಿಯ ಊತಕಗಳಿಂದ ಅದೇ ರೋಗಾಣುಗಳನ್ನು ಹೊರತೆಗೆವಂತಿರಬೇಕು. ಬಹುಪಾಲು ಏಕಾಣುಜೀವಿಕ ರೋಗಗಳಲ್ಲಿ ಈ ಮೂಲಸೂತ್ರಗಳು ಚೆನ್ನಾಗಿ ಹೊಂದಿಕೊಳ್ಳುತ್ತವೆ. ಆದರೆ, ಕುಷ್ಠರೋಗದಲ್ಲಿ 2, 3ನೆಯವನ್ನು ಈಗಲೀಗ ಬಲು ಕಷ್ಟದಿಂದ ಮಾತ್ರ ತೋರ ಬಹುದು. ಕುಷ್ಠ ರೋಗಿಗಳು ಎಲ್ಲರಲ್ಲೂ ಇದರ ರೋಗಾಣುಗಳು ಇದ್ದೇ ಇರುವುದರಿಂದ, ಮೂಲಸೂತ್ರ ರೀತಿಯಲ್ಲಿ ಅನುಮಾನವೇ ಇಲ್ಲ.

ಕೆಲವೇಳೆ (ರಿಕೆಟ್ಸನ ವಿಷಕಣಗಳ ಸೊಂಕುಗಳ ತೆರನವಲ್ಲಿ ಇದ್ದಹಾಗೆ) ರೋಗಾಣುಗಳನ್ನು ಪ್ರಯೋಗಾಲಯದ ಜೀವವಿಲ್ಲದ ಮಾಧ್ಯಮಗಳಲ್ಲಿ ಬೆಳೆಸುವುದು ಆಗಲಿಲ್ಲ. ಅಲ್ಲಿ ಈ ಮೂಲಸೂತ್ರಗಳೆಲ್ಲ ನಡೆಯದ್ದರಿಂದ, 2ನೆಯ ಮೂಲಸೂತ್ರ ದಲ್ಲಿ ಪ್ರಾಣಿಯ ಬದಲಾಗಿ ರೋಗಾಣುಗಳನ್ನು ಬೆಳೆಸಲು ಊತಕಗಳ ತಳಿವರಸೆ ಯನ್ನೂ (ಕಲ್ಚರ್) ಕೋಳಿಮರಿ ಪಿಂಡವನ್ನೂ ಬಳಸಬೇಕಾಯಿತು. ಸೂಕ್ಷ್ಮ ದರ್ಶಕದಲ್ಲೂ ಕಾಣದಿದ್ದು ಜೀವವಿರದ ವಸ್ತುಗಳಿಂದ ಬೇರೆಯಾಗಿ ಗುರುತಿಸಲಾಗದ ಸಣ್ಣ ವಿಷಕಣಗಳ ವಿಚಾರದಲ್ಲಿ ಮೊದಲನೆಯ ಮೂಲಸೂತ್ರವನ್ನು ಕೂಡ ತೋರುವುದು ಬಲುಕಷ್ಟ. ಇದಕ್ಕೆ ಚೆನ್ನಾದ ಉಪಾಯಗಳಾಗಿ, ಬಗೆಬಗೆಯ ಮಟ್ಟದ ಸೋಸಿಕಗಳಿಂದಲೂ ವಿಪರೀತ ವೇಗದಿಂದ ಸುತ್ತುವ ಅಪಕೇಂದ್ರಣ ಯಂತ್ರದಿಂದ (ಸೆಂಟ್ರಿಫ್ಯೂಜ್) ವಿಷಕಣಗಳ ಗಾತ್ರವೂ ಕೊಂಚಮಟ್ಟಿಗೆ ಆಕಾರವೂ ಗೊತ್ತಾಗುತ್ತವೆ. ಅಲ್ಲದೆ ಎಲೆಕ್ಟ್ರಾನ್ ಸೂಕ್ಷ್ಮದರ್ಶಕದ ನೆರವೂ ಅಪಾರ. ಕಾಕ್‌ನ ಕಾಲದಿಂದೀಚೆಗೆ ರೋಗಕಾರಣಗಳಾದ ಜೀವಾಣುಗಳನ್ನು ಖಚಿತಪಡಿಸಲು ಹೊಸ ವಿಧಾನಗಳು ಬಂದಿವೆ. ರೋಗ ಹತ್ತಿದ ಮೇಲೆ ರಕ್ತದ ಹರಿವಿನಲ್ಲಿ ಪ್ರತಿ ರಕ್ಷಣೆಕೊಡುವ (ಇಮ್ಯುನೈಸಿಂಗ್) ವಸ್ತುಗಳು ಹುಟ್ಟಿ, ಅನುಮಾನವಿರುವ ರೋಗಾಣು ಅಂಟಣಿಸುವ (ಅಗ್ಲೂಟಿನೇಟಿಂಗ್) ಇಲ್ಲವೇ ಲಯಿಸುವ ಅದರ ಸೊಂಕು ಬಲ ಇಲ್ಲವೇ ವಿಷವನ್ನು ತಟಸ್ಥಗೊಳಿಸುವ (ನ್ಯೂಟ್ರಲೈಸಿಂಗ್) ಗುಣಗಳನ್ನು ತೋರುವುದರಿಂದ ರೋಗವನ್ನು ಕಂಡುಕೊಳ್ಳಬಹುದು.

ರೋಗಕಾರಕಗಳು : ಸಾಮಾನ್ಯವಾಗಿ, ಈ ಸೂಕ್ಷ್ಮಜೀವಿಗಳಲ್ಲಿ ಹಲವಾರು ಬಗೆಗಳಿರುವುವು. ಏಕಾಣುಜೀವಿಗಳಿಂದ ಏಳುವ ರೋಗಗಳಲ್ಲಿ ಮುಖ್ಯವಾದವನ್ನು ಲೇಖನದ ಕೊನೆಯಲ್ಲಿರುವ ವಿವರಪಟ್ಟಿಯಲ್ಲಿ ಕೊಟ್ಟಿದೆ. ರೋಗಕಾರಕ ಏಕಾಣು ಜೀವಿಗಳ ಸೊಂಕು ಅಂಟಿಸುವ ಮೈ ಒಳನುಗ್ಗುವ ಬಲಗಳು ಒಂದೊಂದರದೂ ಒಂದೊಂದು ತೆರ. ಇವುಗಳಲ್ಲಿ ಬಹುಪಾಲು ಮೈಯೊಳಗೇ ವೃದ್ಧಿಗೊಂಡು ಒಳ ಜೀವಿವಿಷಗಳನ್ನು (ಎಂಡೊಟಾಕ್ಸಿನ್ಸ್) ಹೊರಬಿಡುವುವು. ಗಂಟಲಮಾರಿ, ಸೆಟೆಬೇನೆ ತೆರನ ಕೆಲವು ಮಾತ್ರ ಗಂಟಲಲ್ಲೋ ಗಾಯದಲ್ಲೋ ಒಂದೆಡೆಯಲ್ಲಿ ಹೊರಗೇ ಇದ್ದು ಸುರಿಸಿದ ಬಲು ಬಲವಾದ ಹೊರಜೀವಿವಿಷಗಳು (ಎಕ್ಸೊಟಾಕ್ಸಿನ್ಸ್) ರಕ್ತದ ಹರಿವಿನಲ್ಲಿ ಬೇರೆ ಭಾಗಗಳಿಗೆ ಸಾಗುತ್ತವೆ. ಊರುಬಾಡುಬೇನೆಯ ಕದಿರುಜೀವಿ (ಕ್ಲಾಸ್ಟ್ರಿಡಿಯಂ ಬಾಟುಲೈನಂ) ಪರಪಿಂಡಿ ಅಲ್ಲವೇ ಅಲ್ಲ. ಸರಿಯಾದ ಆವರಣದಲ್ಲಿ ರುವ ಆಹಾರದೊಳಗೆ ಇದು ಸೇರಿಬಿಟ್ಟರೆ ವೃದ್ಧಿಗೊಳ್ಳುತ್ತ ಹೊರಜೀವಿವಿಷವನ್ನು ಸುರಿಸುವುದರಿಂದ, ಇದರಿಂದೇಳುವ ರೋಗ ವಿಷವೇರಿಕೆಯೇ ಹೊರತು ಸೊಂಕು ಎನ್ನಿಸಿಕೊಳ್ಳದು.

ಸಾಮಾನ್ಯವಾಗಿ ಆರ್ತ್ರೋಪಾಡುಗಳ ಕರುಳಲ್ಲಿರುವ ಪುಟ್ಟ ಜೀವಾಣುಗಳಾದ ರಿಕೆಟ್ಸನ ರೋಗಾಣುಗಳಲ್ಲಿ ಕೆಲವು ಮಾನವನಿಗೂ ಒಗ್ಗಿಕೊಂಡು, ಸೊಕ್ಕಿನ (ಟೈಫಸ್) ಜ್ವರ, ರಾಕಿ ಪರ್ವತದ ಚುಕ್ಕೆ ಜ್ವರ, ಸುಟ್ಸುಗಮೂಷಿ (ಪೊದೆ ಸೊಕ್ಕೆ ಜ್ವರ), ಕ್ಯುಜ್ವರ, ಅಗಳಿನ (ಟ್ರೆಂಚ್) ಜ್ವರಗಳನ್ನು ಬರಿಸಬಲ್ಲವು. ಹೇನು ಕೂರೆಗಳು, ಚಿಗಟಗಳು, ಉಣ್ಣೆಗಳು, ನುಸಿಗಳಿಂದ ಮಾನವನಿಗೆ ಈ ಸೊಂಕುಗಳು ಸಾಗಿ ಬರುತ್ತವೆ.

ವಿಷಕಣಗಳು ರಿಕೆಟ್ಸನ ರೋಗಾಣುಗಳಿಗಿಂತಲೂ ಸಣ್ಣವು. ಸಾಧಾರಣ ಸೂಕ್ಷ್ಮ ದರ್ಶಕದಲ್ಲಿ ಇವು ಕಾಣಿಸವು. ಏಕಾಣುಜೀವಿಗಳ ಶೋಧಕಗಳ (ಫಿಲ್ಟರ್ಸ್) ಮೂಲಕ ತೂರುತ್ತವೆ. ಬದುಕಿರುವ ಊತಕಗಳಿಲ್ಲದಿದ್ದರೆ ಬೆಳೆಯವು. ಕೆಲವಂತೂ ಮಾನವನಲ್ಲಿ ಮಾತ್ರ ಪರಪಿಂಡಿಗಳಾಗಿ ಗೊತ್ತಾದ ರೋಗಗಳನ್ನು ಬರಿಸುತ್ತವೆ. ಇನ್ನು ಹಲವು ಪ್ರಾಣಿಗಳನ್ನು ಹತ್ತಿಕೊಂಡರೆ, ಮತ್ತೆ ಬೇರೆಯವು ಪ್ರಾಣಿ, ಮಾನವ ಇಬ್ಬರನ್ನೂ ಕಾಡುತ್ತವೆ. ಎಷ್ಟೋ ವೇಳೆ ಗಾಳಿಯ ಮೂಲಕ ತೇಲಿ ಬಂದರೂ ಕೀಟಗಳ ಕಡಿತದಿಂದಲೂ ಕೆಲವೇಳೆ ಉಣಿಸಲ್ಲೂ ಒಳಸೇರಿ ಹಲ ಬಗೆಗಳ ರೋಗ ವೇಳಿಸುವುವು.

ಹುಗುಳು (ತ್ರಷ್) ರೋಗದ ಬಿಳಿಯ ಕಾಯಿಕ (ಕ್ಯಾಂಡಿಡ ಆಲ್ಬಿಕಾನ್ಸ್), ಇನ್ನೂ ಹಲವಾರು ಪುಪ್ಪುಸ ರೋಗಗಳಿಗೂ ಕಾರಣವಾಗುವಂಥ ಮುದುಗು ಜೀವಿಗಳೂ (ಯೀಸ್ಟ್ಸ್) ಅದೇ ತೆರನ ಅಣಬೆಗಳೂ (ಫಂಗಸ್) ಮಾನವನಿಗೆ ರೋಗಕಾರಕಗಳು. ಹಲವಾರು ಅಣಬೆಗಳಲ್ಲಿ ತೀರ ಸಾಮಾನ್ಯವಾದ ಹುಳುಕಡ್ಡಿ (ಗಜಕಡ್ಡಿ) ತೆರನ ಎಷ್ಟೋ ಅಣಬೆಗಳೂ ರೋಗಕಾರಕಗಳು.

ಒಂಟಿ ಊತಕ ಜೀವಿಗಳಾದ ಪ್ರೋಟೊಜೋವಾಗಳಿಂದ ಬರುವ ರೋಗಗಳಲ್ಲಿ ಮಲೇರಿಯ, ಬೈರೊಡಲಿಬೇನೆ (ಟ್ರಿಪನೊಸೋಮಿಯಾಸಿಸ್), ಲೀಷ್ಮನ್‌ಬೇನೆ (ಲಿಷ್ಮಾನಿಯಾಸಿಸ್), ಅಮೀಬಸಂಬಂಧಿ ಆಮಶಂಕೆಗಳಿವೆ. ಆಮಶಂಕೆ ಸೊಂಕು ಬಾಯ ಮೂಲಕ ಹರಡುವುದಾದರೂ ಉಳಿದವುಗಳ ಸೊಂಕು ಮಾನವನನ್ನು ಕಡಿದು ರಕ್ತಹೀರುವ ಕೀಟಗಳಿಂದ ಆಗುತ್ತದೆ.

**ಹರಡಿಕೆ :** ಸಾಂಕ್ರಾಮಿಕತೆ : ಜನರಲ್ಲಿ ಒಂದು ರೋಗ ಹರಡಿರುವುದಕ್ಕೆ, ರೋಗ ಹರಡುವ ರೀತಿ, ಸೊಂಕು ಅಂಟಿಸುವ ರೋಗಾಣುವಿನ ತೀವ್ರತೆ, ಸೊಂಕಿ ಗೊಡ್ಡಿರುವ ಜನರ ವಯಸ್ಸು, ಲಿಂಗ, ಕಸಬು, ಪುಷ್ಟಿ, ರೋಗನಿರೋಧಕ ಬಲ, ಹವಾಮಾನ ಮುಂತಾದವು ಕಾರಣವಾಗುವುವು. ಇವುಗಳಲ್ಲಿ ಒಂದೊಂದೂ ಏರುಪೇರಾಗಿರಬಹುದು; ಆದ್ದರಿಂದಲೇ, ಜನರಲ್ಲಿ ಒಂದು ಸೊಂಕು ಕಾಲಿಟ್ಟಿತೆಂದರೆ, ಇನ್ನಷ್ಟು ವಿವರಗಳು ದೊರೆವತನಕ ಏನಾಗಬಹುದೆಂದು ಖಚಿತವಾಗಿ ಹೇಳಲಾಗು ವುದಿಲ್ಲ. ಒಟ್ಟಿನಲ್ಲಿ ಏಕಾಣುಜೀವಿಗಳು ಮೈ ಒಳಹೋಗಲು ಉಸಿರಾಟ ಮಂಡಲ, ಬಾಯಿ, ಮೈಮೇಲಿನ ಗಾಯಗಳು, ನೇರವಾಗಿ ಕೀಟಗಳ ಕಡಿತದ ತೆರನ ಚುಚ್ಚಿಕೆಗಳ ಮಾದರಿಯ ಹಲವಾರು ದಾರಿಗಳಿವೆ.

ಉಸಿರಾಟ ಮಂಡಲದ ಮೂಲಕ : ಮೂಗು, ಬಾಯಿ, ಗಂಟಲು ಗಂಟಲ್ಕುಳಿಗಳ (ಫ್ಯಾರಿಂಕ್ಸ್) ಲೋಳೆಪೊರೆಗಳ ಮೂಲಕ ಎಷ್ಟೊ ರೋಗಕಾರಕ ಏಕಾಣುಜೀವಿಗಳು ಒಳನುಗ್ಗಿ ರೋಗ ಬರಿಸುತ್ತವೆ. ಗಂಟಲಮಾರಿ ದಂಡಾಣುಜೀವಿ (ಬೆಸಿಲಸ್), ಕೆಂಜ್ವರ (ಸ್ಕಾರ್ಲೆಟ್ ಫೀವರ್), ಮೆಂಡಿಕೆಯುರಿತಗಳಿಗೆ (ಟಾನ್ಸಿಲೈಟಿಸ್) ಕಾರಣ ವಾದ ಸರಕಾಯಿಜೀವಿ (ಸ್ಟ್ರೆಪ್ಟೊಕಾಕಸ್), ನಾಯಿಕೆಮ್ಮಿನ ದಂಡಾಣುಜೀವಿ ಅಂಥವಲ್ಲಿ ಮುಖ್ಯವಾದವು. ಉಗುಳು, ಕೆಮ್ಮು, ಸೀನುಗಳಿಂದ ರೋಗಾಣುಗಳು ಸುತ್ತಲೂ ಚೆಲ್ಲಿ ಹರಡುತ್ತಿರುವುದರಿಂದ ಈ ಬೇನೆಗಳಿಂದ ನರಳುತ್ತಿರುವವರು ಬೇರೆಯವರಿಗೆ ಸೊಂಕು ಅಂಟಿಸುವಂತಿರುವರು. ಪುಪ್ಪುಸಗಳ ಒಳಗೂ ಸೊಂಕು ಹತ್ತಿಸುವ ಕ್ಷಯ ದಂಡಾಣುಜೀವಿ, ಗಾಳಿಕಾಯಿಜೀವಿಗಳಿಂದಾದ (ನ್ಯೂಮೊಕಾಕೈ) ಸೊಂಕುಗಳಲ್ಲೂ ಅಷ್ಟೆ. ಕೆಮ್ಮಿದಾಗ ಉಗುಳು, ಎಂಜಲು, ತೆಮಡೆ, ಲೋಳೆಗೂಡಿದ ಬೇರೆಬೇರೆ ಗಾತ್ರಗಳ ಸಣ್ಣ ತುಂತುರುಗಳ ದೂಳುವೋಡವೇ ರಭಸದಿಂದ ಹೊರಬೀಳುವುದು. ಇದರಲ್ಲಿ ಬಲುಮಟ್ಟಿಗೆ ರೋಗಾಣುಗಳೂ ಇರುವುದರಿಂದ ಇದು ಇತರರ ಉಸಿರಲ್ಲಿ ಸೇರಿದರೆ ಸೊಂಕು ಅಂಟುತ್ತದೆ. ಕ್ಷಯರೋಗ ಹರಡುವುದರಲ್ಲಿ ಈ ವಿಧಾನದ ಪಾತ್ರವನ್ನು ಮೊದಲು ತೋರಿದವನು ಫ್ಲುಗ್ಗೆ (19ನೆಯ ಶತಮಾನದ ಕೊನೆ).

ಕೆಮ್ಮು, ಉಗುಳುಗಳಲ್ಲಿನ ತುಂತುರುಗಳ ಮುಂದಿನ ಗತಿ ಏನಾಗುವುದೆಂಬುದು ಮುಖ್ಯವಾಗಿ ಅವುಗಳ ಗಾತ್ರಕ್ಕೆ ತಕ್ಕ ಹಾಗಿರುತ್ತದೆ. ಅವುಗಳ ಅಡ್ಡಗಲದ ವರ್ಗೀ ಕರಣಕ್ಕೆ ತಕ್ಕಂತೆ ಅವು ಕೆಳಗೆ ಬೀಳುವ ವೇಗ ಇರುವುದು. ದೊಡ್ಡ ದೊಡ್ಡ ಕಣಗಳು ತುಸು ದೂರ ಹಾರಿ ಬಿದ್ದು ಒಣಗಿ ದೂಳಾಗುತ್ತವೆ. ಮಿಲಿಮೀಟರಿಗೂ ಕಿರಿಯವು ಮಾತ್ರ ಬಲು ಬೇಗನೆ ಆರಿಹೋಗಿ ನೆಲಕ್ಕೆ ಬೀಳದೆ ಗಾಳಿಯಲ್ಲಿ ತೇಲುಕಣ ಗಳಾಗಿ ಬಿಡುತ್ತವೆ. ಸಾಮಾನ್ಯ ಅನಿಲಗಳಂತೆ ಇವು ವರ್ತಿಸಿ ಗಾಳಿ ಬೀಸಿದಾಗ ಬಲುದೂರ ಸಾಗಬಲ್ಲವು. ಆದ್ದರಿಂದ ತುಂತುರುಗಳಲ್ಲಿ ಸೇರಿದ ಸೊಂಕು ಹರಡುವ ಕಣಗಳು ಕೆಮ್ಮು, ಸೀನುಗಳಲ್ಲಿ ನಿಂತವನ ಸುತ್ತ ಐದಾರು ಅಡಿಗಳ ದೂರದಲ್ಲಿ ನೆಲದ ಮೇಲೆ ಬೀಳುವುದರಿಂದ, ಕೇವಲ ಅಕ್ಕಪಕ್ಕಗಳಲ್ಲಿ ಇರುವವರಿಗೆ ಮಾತ್ರ ಹರಡಿ ಕೊಳ್ಳುತ್ತವೆ. ಅದೂ ಅಲ್ಲದೆ, ಈ ಕಣಗಳ ತುಂಬ ಏಕಾಣುಜೀವಿಗಳು ತುಂಬಿದ್ದು, ಅವು ಪರಿಸರದ ಹಾನಿಗಳಿಗೆ ಸಿಕ್ಕಿಬೀಳದೆಯೇ ಇನ್ನೊಬ್ಬರಲ್ಲಿ ಬೇಗನೆ ಸೇರಿಕೊಳ್ಳ ಬಹುದು. ಸೊಂಕು ಹರಡಲು ದೂಳು ಬಲ ಸಹಾಯಕಾರಿ.

ಬಾಯ ಮೂಲಕ : ಬಾಯಲ್ಲಿ ಹೊಕ್ಕ ರೋಗಾಣುಗಳು ಜಠರ, ಕರುಳುಗಳಲ್ಲಿ ಏನಾದರೂ ಒಂದು ಬಗೆಯ ಉರಿತವೇಳಿಸುವುವು. ಇದರಿಂದ ಮಲ ಸಾಮಾನ್ಯವಾಗಿ ಸೊಂಕುಕಾರಕ ವಸ್ತುವಾಗುತ್ತದೆ. ಇದಕ್ಕೆ ಕೆಲವು ವಿನಾಯಿತಿಗಳಿವೆ. ಗಂಟಲಿಗೂ ಉಸಿರ್ನಾಳಕ್ಕೂ ಸಂಬಂಧವಿರುವುದರಿಂದ ಉಸಿರಾಟ ಮಂಡಲದ ಸೊಂಕಿನಿಂದ ಬರುವ ಕೆಂಜ್ವರ, ಗಂಟಲಮಾರಿ ತೆರನ ರೋಗಗಳು ರೋಗಿಯ ಎಂಜಲು, ಉಗುಳು ತಾಕಿರುವ ಆಹಾರವನ್ನು ತಿನ್ನುವುದರಿಂದಲೂ ಈ ರೋಗಾಣುಗಳ ಸೊಂಕು ಹತ್ತಿರುವ ಕೆಚ್ಚಲು ಇರುವ ಹಸುಗಳ ಹಾಲನ್ನು ಕಾಯಿಸದೆ ಕುಡಿಸುವುದರಿಂದಲೂ ಬರಬಹುದು. ಇನ್ನೊಂದು ವಿನಾಯಿತಿ ದನದ ಕ್ಷಯ ರೋಗಾಣು. ಹಾಲಿನಲ್ಲಿ ಇದನ್ನು ಸೇವಿಸಿದರೆ, ಗಂಟಲು ಇಲ್ಲವೇ ಕರುಳಿನ ಹಾಲುರಸದ (ಲಿಂಫ್ಯಾಟಿಕ್) ಊತಕದ ಮೂಲಕ ತೂರಿ ಕರುಳಿಗಿಂತಲೂ ಹೆಚ್ಚಾಗಿ, ದೂರದ ಮೂಳೆಗಳು, ಕೀಲುಗಳು, ಗ್ರಂಥಿಗಳು, ಮಿದುಳು ಪೊರೆಗಳು (ಮೆನಿಂಜೀಸ್) ಮತ್ತಿತರ ಅಂಗ ಗಳಲ್ಲಿ ರೋಗವಾಗಿ ಕಾಣಿಸಿಕೊಳ್ಳುತ್ತದೆ.

ಇವಿಷ್ಟು ಮತ್ತು ಬ್ರೂಸೆಲ್ಲೋಸಿಸ್‌ನಂಥ ಹಾಲಿನ ಮೂಲಕ ಪಸರಿಸುವ ಕಾಯಿಲೆಗಳನ್ನು ಬಿಟ್ಟು ಮಲಜನ್ಯವಾದ ಸೊಂಕು ಬಾಯ ಮೂಲಕ ಹರಡಲು

ಮುಖ್ಯ ಕಾರಣಗಳು ಮೂರು—ಆಹಾರ, ನೊಣಗಳು ಮತ್ತು ಕೊಳಕು ಬೆರಳುಗಳು. ಕರುಳಿನಲ್ಲಿ ಸೋಂಕು ಹೊತ್ತಿರುವವರೂ ರೋಗಿಗಳೂ ಕಕ್ಕಸಿಗೆ ಹೋಗಿ ಬಂದ ಮೇಲೆ ಕೂಡಲೇ ಕೈಯನ್ನು ಚೆನ್ನಾಗಿ ತೊಳೆದುಕೊಳ್ಳದಿದ್ದರೆ ಅವರ ಬೆರಳುಗಳಲ್ಲಿ, ಉಗುರು ಸಂದುಗಳಲ್ಲಿ ಸೋಂಕು ಅಂಟಿರುವುದರಿಂದ ಅವರು ಮುಟ್ಟಿದಲ್ಲೆಲ್ಲ ರೋಗದ ಸೋಂಕು ಹತ್ತಿಕೊಳ್ಳುವುದು. ಇದನ್ನು ತಾಕಿಸಿಕೊಂಡವರಿಗೂ ಅವರವರ ಬೆರಳುಗಳ ಮೂಲಕ ಬಾಯಿ, ಮೂಗುಗಳಿಗೆ ಸೇರಿ ಅಲ್ಲಿಂದ ಕರುಳುಗಳನ್ನು ಹೊಗುವುದು. ಅಡುಗೆ ಮಾಡುವವರಲ್ಲೂ ಬಡಿಸುವವರಲ್ಲೂ ಸೋಂಕುಗಳು ಹೀಗೆ ಹತ್ತಿದ್ದರಂತೂ ಬಲು ಅಪಾಯಕರ. ಏಕೆಂದರೆ, ಕರುಳಲ್ಲಿ ಸೇರುವ ಏಕಾಣುಜೀವಿಗಳು ಬಹುಪಾಲು ಆಹಾರ ಪದಾರ್ಥಗಳಲ್ಲಿ ಹುಲುಸಾಗಿ ಬೆಳೆಯುತ್ತವೆ. ಆಹಾರವನ್ನು ಸರಿಯಾದ ಕಾವಿನಲ್ಲಿ ಇರಿಸಿದ್ದರೆ, ಏಕಾಣುಜೀವಿಗಳು ವಿಪುಲವಾಗಿ ಬೆಳೆವುದರಿಂದ, ಅಂಥವನ್ನು ಸೇವಿಸಿದಲ್ಲಿ ರೋಗ ಹತ್ತುವುದು ಏನೂ ಹೆಚ್ಚಲ್ಲ. ಏಕಾಣುಜೀವಿಗಳು ದಂಡಿಯಾಗಿ ಬೆಳೆವ ಆಹಾರಗಳು ಹಾಲು, ಗಂಜಿ, ಸಾರು, ಮಾಂಸದ ತಿಂಡಿಗಳು ಮುಂತಾದವು. ಬೆರಳುಗಳಿಂದಲೇ ಅಲ್ಲದೆ, ದೂಳು, ನೊಣಗಳಿಂದ ಕೂಡ ಸೋಂಕು ಅಂಟಬಹುದು. ಒಳಚರಂಡಿ ಸಾಗಣೆ ಏರ್ಪಾಡಿಲ್ಲದ ಊರುಗಳಲ್ಲಿ, ಎಲ್ಲೆಂದರಲ್ಲಿ ಮಲ ಹಾಕುವುದರಿಂದ ನೆಲದ ಮೇಲೆ ಬಿದ್ದ ಮಲ ಒಣಗಿ ದೂಳಾಗಿ ಗಾಳಿಯಲ್ಲಿ ಸೇರುವುದರಿಂದಲೂ ನೊಣಗಳಿಂದಲೂ ಆಹಾರ ಕೊಳಕಾಗಬಹುದು. ಒಳಚರಂಡಿ ನೀರು ಬಂದು ಸೇರುವ ಖಾರಿಗಳಲ್ಲಿರುವ ಚಿಪ್ಪುಮೀನುಗಳಲ್ಲಿ ಮಾನವನ ಕರುಳಿನಲ್ಲಿರುವ ಏಕಾಣುಜೀವಿಗಳು ಇರುವುದು ಕಂಡುಬಂದಿದೆ. ಆದ್ದರಿಂದ ಈ ಚಿಪ್ಪುಮೀನುಗಳಲ್ಲಿ ವಿಷಮಜ್ವರದ (ಟೈಫಾಯ್ಡ್) ತೆರನ ರೋಗಾಣುಗಳಿದ್ದಲ್ಲಿ ತಿನ್ನುವವರಿಗೂ ಸೋಂಕು ಹತ್ತಬಹುದು.

ಗಾಯಗಳು, ಚರ್ಮ ತರಚಿಕೆಗಳ ಮೂಲಕ : ಹೊರಗಿನ ಯಾವ ರೋಗಾಣುವೂ ಮೈಯ ಒಳಹೋಗದಂತೆ ದೇಹವನ್ನು ರಕ್ಷಿಸುವ ದೊಡ್ಡ ಸಾಧನವೇ ಚರ್ಮ. ಒಡೆಯದ, ಬಿರಿಯದ ಚರ್ಮವನ್ನು ಯಾವ ರೋಗಕಾರಕ ಜೀವಾಣುಗಳೂ ತೂರಿ ಒಳಹೋಗುವಂತಿಲ್ಲ. ಆದರೆ ಕೊಂಚ ತರಚಿಕೊಂಡರೂ ಇನ್ನೂ ಹೆಚ್ಚಾಗಿ ಗಾಯವಾಗಿದ್ದರೂ ಸೋಂಕಿನ ಜೀವಾಣುಗಳು ಚರ್ಮದೊಳನುಗ್ಗಿ ಚರ್ಮದಡಿಯ ಊತಕ, ಸ್ನಾಯುಗಳಲ್ಲಿ ನೆಲೆಸಬಹುದು ; ಒಂದೆಡೆ ರೋಗವೆಬ್ಬಿಸಬಹುದು ; ಹಾಲುರಸ, ರಕ್ತಗಳಲ್ಲಿ ಹರಿಸಾಗಿ ದೂರದ ಅಂಗಗಳಲ್ಲಿ ವೃದ್ಧಿಗೊಳ್ಳಬಹುದು. ಚರ್ಮ ಇಲ್ಲವೇ ಲೋಳೆಪೊರೆ ಸೋಂಕು ಇರುವವರಿಗೆ ತಾಕಿದರೆ ಮೇಹರೋಗ ನೇರವಾಗಿ ಹತ್ತಿಕೊಳ್ಳಬಹುದು. ಚರ್ಮದ ಮೇಲೆ ಯಾವಾಗಲೂ ಇರುವ ಗುತ್ತಿಕಾಯ್ಜೀವಿಗಳು ಕೆರೆದ, ಗೀಚಿದ, ತರಚಿಕೊಂಡ ಇಲ್ಲವೇ ಬಲವಾಗಿ ಒತ್ತಿದ ಕಡೆ ಒಳನುಗ್ಗಿ ಕೀವುಗೂಡಿಸಿ ಕುರುಗಳೇಳಿಸಬಹುದು.

ಕೀಟಗಳಿಂದ : ಕೆಲವು ರೋಗಗಳ ಹರಡಿಕೆಗೆ ರಕ್ತಹೀರುವ ಕೀಟಗಳು ಕಾರಣ. ಉದಾಹರಣೆಗೆ, ಮಲೇರಿಯ. ಈ ಕಾಯಿಲೆಯಲ್ಲಿ ರೋಗಿಯ ಚರ್ಮದಲ್ಲಿನ ಲೋಮನಾಳಗಳ ರಕ್ತದಲ್ಲಿನ ರೋಗಾಣುಗಳನ್ನು ಸೊಳ್ಳೆ ಕಚ್ಚಿ ಕುಡಿಯುತ್ತದೆ. ಕೀಟದಲ್ಲಿ ಇವು ವೃದ್ಧಿಗೊಂಡು ಕೆಲವು ದಿನಗಳಲ್ಲಿ ಜೊಲ್ಲು ಗ್ರಂಥಿಗಳಲ್ಲಿ ಸೇರಿಕೊಳ್ಳುತ್ತವೆ. ಸೊಳ್ಳೆ ಇನ್ನೊಬ್ಬರನ್ನು ಕಡಿದಾಗ ಮಲೇರಿಯ ರೋಗಾಣುಗಳು ಅವರಿಗೆ ಸಾಗುತ್ತವೆ. ಸೋಕ್ಕಿನ ಜ್ವರದಲ್ಲಿ ಸೋಂಕುಸಾಗಣೆ ಕೂರೆಗಳಿಂದಾಗುವುದು. ಕೂರೆಯ ಕರುಳಿನ ಗೋಡೆಯಲ್ಲಿ ಈ ಜ್ವರದ ರೋಗಾಣುಗಳೂ ಬೆಳೆದು ಅದರ ಮಲದಲ್ಲಿ ಹೊರಬೀಳುತ್ತವೆ. ಕೂರೆ ಕಡಿದೆಡೆ ಕೆರೆದುಕೊಂಡರೆ ಚರ್ಮದ ಗಾಯವಾಗಿ ಈ ಮಲದಲ್ಲಿನ ರೋಗಾಣುಗಳು ಒಳನುಗ್ಗುತ್ತವೆ. ಕೀಟಗಳು ಸಾಗಿಸುವ ಸೋಂಕು ಬಹುಮಟ್ಟಿಗೆ ಪ್ರಾಣಿಗಳಲ್ಲೇ ಹೆಚ್ಚು ; ಆಗಾಗ್ಗೆ ಮಾನವನಿಗೂ ಹರಡಿಕೊಳ್ಳುವುದು. ಆದರೆ ಮಲೇರಿಯದ ತೆರನ ಕೆಲವು ರೋಗಗಳು ಮಾನವನಿಗೇ ಮೀಸಲು.

ರೋಗದ ಉಗ್ರತೆ, ಪ್ರತಿರಕ್ಷಣೆ : ಆತಿಥೇಯದ ಮೈಒಳಹೊಕ್ಕು, ಊತಕಗಳಲ್ಲಿ ವೃದ್ಧಿಗೊಂಡು ರೋಗ ಬರಿಸುವ, ಜೀವಾಣುವಿನ ಕಸುವೇ ಉಗ್ರತೆ. ಹೀಗಾಗುವುದು ಮೈಯಲ್ಲಿನ ರೋಗ ತಡೆವ ಬಲವಾದ ಪ್ರತಿರಕ್ಷಣೆಯ (ಇಮ್ಯೂನಿಟಿ) ಮಟ್ಟಕ್ಕೆ ತಕ್ಕಂತಿರುವುದು. ಪ್ರತಿರಕ್ಷಣೆ ಕಡಿಮೆ ಇದ್ದವನಿಗೆ ಒಂದು ಉಗ್ರ ರೋಗಾಣು ತಗುಲಿದರೆ ರೋಗ ಹತ್ತುತ್ತದೆ. ಪ್ರತಿರಕ್ಷಣೆ ಬಲವಾಗಿದ್ದವನಲ್ಲಿ ರೋಗಾಣುವಿನ ಆಟ ಏನೂ ನಡೆಯದಿರಬಹುದು. ರೋಗಾಣುವಿನ ಉಗ್ರತೆ, ಆತಿಥೇಯದ ಪ್ರತಿರಕ್ಷಣೆ ಎಂಬೀ ಪದಗಳು ಸಾಪೇಕ್ಷಕವೆಂದು ತಿಳಿಯಬೇಕು. ಒಂದು ಜೀವಾಣು ಏನೇನೂ ಉಗ್ರವಾಗಿಲ್ಲವೆಂದೋ ಒಬ್ಬ ಆತಿಥೇಯ ಯಾವ ರೋಗಾಣುವಿಗೂ ಜಗ್ಗುವುದಿಲ್ಲವೆಂದೋ ಹೇಳುವುದು ರೋಗಕಾರಕವಲ್ಲದ ಜೀವಾಣುಗಳಿಗೆ ಮಾತ್ರ. ಯಾವಾಗಲೂ ಜೀವಾಣುಗಳಲ್ಲಿ ಒಂದು ತಳಿಯದು ಇನ್ನೊಂದರವಕ್ಕಿಂತ ಉಗ್ರವಾಗಿರಬಹುದು, ಇಲ್ಲವೇ ಒಬ್ಬ ಆತಿಥೇಯ ಇನ್ನೊಬ್ಬನಿಗಿಂತ ಚೆನ್ನಾಗಿ ರೋಗವನ್ನು ತಡೆದುಕೊಳ್ಳಬಹುದು. ಆದ್ದರಿಂದ ಆತಿಥೇಯನ ರೋಗನಿರೋಧಕ ಬಲವನ್ನು ಗಮನಿಸದೆ ಒಂದು ರೋಗಾಣು ಉಗ್ರವಾದದ್ದು ಎನ್ನುವಂತಿಲ್ಲ.

ಜೀವಾಣುಗಳ ಬೇರೆ ಬೇರೆ ಜಾತಿಗಳ ಉಗ್ರತೆಯೂ ಬೇರೆ ಬೇರೆ. ಅಲ್ಲದೇ ಒಂದೇ ಜೀವಾಣುವಿನ ಉಗ್ರತೆ ಬೇರೆ ಬೇರೆ ಕಾಲಗಳಲ್ಲಿ ಬದಲಾಯಿಸಬಹುದು. ಕಾಲು, ಬಾಯಿ ರೋಗದ ವಿಷಕಣದ ತೆರನ ಜೀವಾಣು ಮಾನವನಿಗೆ ರೋಗ ಹತ್ತಿಸುವುದೇ ಇಲ್ಲ. ಅದೇ ಮಾನವನ ಕ್ಷಯರೋಗಾಣು ಮಾನವನಿಗೆ ಸುಲಭವಾಗಿ ಅಂಟಿಕೊಳ್ಳುವುದು. ದಡಾರದ ವಿಷಕಣ ಮಾತ್ರ, ಪ್ರತಿರಕ್ಷಣೆಯಿಲ್ಲದೆ ಯಾರಿಗೆ ತಗುಲಿದರೂ ಉಗ್ರವಾದ ರೋಗವನ್ನೇ ಎಬ್ಬಿಸುತ್ತದೆ.

ಆದ್ದರಿಂದ ಸೋಂಕು ಅಂಟಿದ್ದರ ಪರಿಣಾಮ, ರೋಗಾಣುವಿನ ಉಗ್ರತೆ, ಆತಿಥೇಯದ ಪ್ರತಿರಕ್ಷಣೆ ಸಮತೋಲಕ್ಕೆ ತಕ್ಕ ಹಾಗಿರುವುದು. ರೋಗ ತಡೆವ ಬಲ ಜೋರಾಗಿದ್ದವ ಸೋಂಕಿಗೆ ಇನಿತೂ ಜಗ್ಗದೆ, ನೆಲೆಯೂರಿ ಹಾನಿಗೊಳಿಸುವ ಮುಂಚೆಯೇ ರೋಗಾಣುಗಳನ್ನು ಹಾಳುಗೆಡವಬಹುದು. ಅಷ್ಟೊಂದು ಪ್ರತಿರಕ್ಷಣೆ ಇಲ್ಲದವನಲ್ಲಿ ರೋಗಾಣು ಊತಕಗಳಲ್ಲಿ ನೆಲೆಯೂರಬಹುದಾದರೂ ರೋಗ ಎಬ್ಬಿಸದಂತಾಗಬಹುದು. ಇಂಥವನು ಆರೋಗ್ಯವಾಹಕ (ಹೆಲ್ತ್ ಕ್ಯಾರಿಯರ್) ಎಂದೆನ್ನಿಸುವನು. ಪ್ರತಿರಕ್ಷಣೆ ಇನ್ನಷ್ಟು ಕಡಿಮೆ ಇದ್ದು ಕೊಂಚ ಜಗ್ಗುವಂತಿರುವವರಲ್ಲಿ ರೋಗಾಣು ಮೈ ಒಳಹೊಕ್ಕು ಒಂದಿಷ್ಟು ಚಟುವಟಿಕೆ ತೋರಿ ಕೊಂಚ ರೋಗದ ಲಕ್ಷಣಗಳು ತೋರುವಂತೆ ಮಾಡಿದರೂ ಕೊನೆಗೆ ಮೈಯೇ ಗೆಲ್ಲುತ್ತದೆ. ಸಹಜವಾಗಿ ಈಡಾಗುವವರಲ್ಲಿ ಊತಕದಲ್ಲಿ ರೋಗಾಣು ನೆಲೆಸಿ ವಿಪರೀತ ವೃದ್ಧಿಗೊಂಡು ವಿಷವನ್ನು ಹೊರಬಿಡುತ್ತ ಪೂರ್ತಿ ರೋಗವನ್ನು ಬರಿಸುತ್ತದೆ. ಸಹಜವಾಗಿ ರೋಗವನ್ನು ತಡೆವ ಬಲ ಏನೇನೂ ಇಲ್ಲದೆ ರೋಗಕ್ಕೆ ಬಲು ಈಡಾಗುವವರಲ್ಲಂತೂ ರೋಗಾಣುಗಳು ಬೇಗನೆ ವೃದ್ಧಿಗೊಂಡು ರೋಗ ಇದ್ದಕ್ಕಿದ್ದಂತೆ ತಲೆದೋರುವುದು. ರೋಗಾಣುವಿನ ಸೋಂಕು ಹರಡುವ ತೀವ್ರತೆ ಆತಿಥೇಯದ ಪ್ರತಿರಕ್ಷಣೆಯ ಮಟ್ಟಕ್ಕೆ ತಕ್ಕಂತೆ ರೋಗಿಗೆ ಮಾರಕವಾಗುವುದು. ಕೆಲವು ರೋಗಗಳಂತೂ ಹೆಚ್ಚು ಬಲಿ ತೆಗೆದುಕೊಳ್ಳುತ್ತವೆ.

ರೋಗಾಣುಗಳ ತೀವ್ರತೆ ಕೂಡ ಆಗಾಗ್ಗೆ ಹೆಚ್ಚು ಕಡಿಮೆ ಆದಂತೆ ತೋರುವುದು. ಒಂದು ರೋಗ ಸಾಂಕ್ರಾಮಿಕ ಆದುದಕ್ಕೆ ಅದರ ರೋಗಾಣುವಿನ ಸೋಂಕು ಅಂಟಿಸುವ ತೀವ್ರತೆ ಹೆಚ್ಚಿದ್ದೇ ಕಾರಣವೆಂದು ಹೇಳಿಬಿಡಬಹುವಾದರೂ ಎಂದಿನಂತೆ ಹೀಗಾಗುವುದನ್ನು ಅನುಮಾನ ಇಲ್ಲದಂತೆ ರುಜುವಾತಿಸುವುದು ಕಷ್ಟವೇ. ಸಾಮಾನ್ಯವಾಗಿ ಒಂದು ಜನಾಂತರ (ಎಂಡೆಮಿಕ್) ರೋಗ ಸಾಂಕ್ರಾಮಿಕ ಆಗುವುದಕ್ಕೆ ಮುಖ್ಯ ಕಾರಣ ಜನರ ತಂಡದ ಪ್ರತಿರಕ್ಷಣೆಯ ಕುಗ್ಗೇ ಆಗಿದೆ. ಬಹುಪಾಲು ನಾಗರಿಕ ನಾಡುಗಳಲ್ಲಿ ದಡಾರ ಎಳೆಯ ಮಕ್ಕಳಿಗೇ ತಾಕುತ್ತದೆ. ಇದರ ರೋಗಾಣು ಬಲು ಉಗ್ರವಾದದ್ದರಿಂದ, ಇದಕ್ಕೊಡ್ಡಿದ ಎಲ್ಲ ಮಕ್ಕಳಿಗೂ ಅಂಟುತ್ತದೆ. ತೇರ್ಗಡೆಯಾದ ಮಕ್ಕಳು ಶಾಶ್ವತವಾಗಿ ಪ್ರತಿರಕ್ಷಣೆ ಪಡೆದಿರುವರು. ಆಗ ರೋಗ ಇಳಿದು ಹೋದರೆ, ಅದರ ರೋಗಾಣುವಿನ ಉಗ್ರತೆ ಕುಂದಿತೆಂದಲ್ಲ, ಈಡಾಗುವವರು ಇಲ್ಲದ್ದೇ ಕಾರಣ. ಮತ್ತೆ ಈ ರೋಗಕ್ಕೀಡಾಗುವವರು ವಯಸ್ಸಿಗೆ ಬರುವ ತನಕ, ಮುಂದಿನ ಸುಮಾರು ವರ್ಷವೆಲ್ಲ ರೋಗ ಅಣಗಿಯೇ ಇರುತ್ತದೆ. ಆದರೆ ಎಲ್ಲ ಸಾಂಕ್ರಾಮಿಕಗಳಿಗೂ ಇದೇ ಕಾರಣ ಹೇಳುವಂತಿಲ್ಲ. ಕೆಲವು ವರ್ಷಗಳಿಗೊಂದು ಬಾರಿ ನಾಡಿನ ಜನರಿಗೆ ಉರಿಶೀತ (ಇನ್‌ಫ್ಲೂಯೆಂಜ಼) ತಾಕಿ ಎಷ್ಟೋ ಮಂದಿ ಬೇನೆ ಬಿದ್ದರೂ ಸಾವು ಕಡಿಮೆ. ಆದರೆ ಆಗಾಗ್ಗೆ, ಇದ್ದಕ್ಕಿದ್ದ ಹಾಗೆ ಪಿಡುಗು ಜೋರಾಗಿ ಬಹಳ ಮಂದಿಯನ್ನು ಬಲಿತೆಗೆದುಕೊಳ್ಳುವುದು. ಹೀಗೆ ಬಲು ಜೋರಾದ ಸಾಂಕ್ರಾಮಿಕ ಆಗುವುದರ 20 ವರ್ಷಗಳ ಹಿಂದೂ ಮುಂದೂ ಇದ್ದುದಕ್ಕಿಂತಲೂ ಉರಿಶೀತವನ್ನು ತಡೆವ ಬಲ ಇದ್ದಕ್ಕಿದ್ದಂತೆ 1918–19ರ ಸಾಂಕ್ರಾಮಿಕವಾದಾಗ ಇಳಿದುಹೋಗಿತ್ತೆಂದು ಊಹಿಸಲು ಕಾರಣಗಳೇ ಇಲ್ಲ. ಆದ್ದರಿಂದ ಆ ವಿಷಕಣದ ಬಲು ವಿಷಕರವಾದ ತಳಿ ಬೆಳೆದು ಹರಡಿರಬೇಕು. (ನೋಡಿ—ಉರಿಶೀತ)

ರೋಗ ತಲೆದೋರಲು ಇನ್ನಷ್ಟು ಕಾರಣಗಳು : ಜನರ ವಯಸ್ಸು, ಲಿಂಗ, ಕಸಬುಗಳಿಗೂ ಸೋಂಕುಕಾರಕ ರೋಗಗಳಿಗೂ ಸಂಬಂಧವಿದೆ. ಎಷ್ಟೋ ರೋಗಗಳು ಚಿಕ್ಕಂದಿನಲ್ಲೆ ಅಂಟುತ್ತವೆ. ಆಮೇಲೆ ದೊಡ್ಡವರಾದಾಗ ಮತ್ತೆ ಅದೇ ರೋಗಗಳು ಅಂಟದ ಹಾಗೆ ತಡೆವಂತೆ ಪ್ರತಿರಕ್ಷಣೆ ಆಗಿರುತ್ತದೆ. ಅಂತೂ ಎಳೆತನದಲ್ಲಿ ಮಕ್ಕಳು ಬಹುಮಟ್ಟಿಗೆ ಅನೇಕ ರೋಗಗಳಿಗೆ ಈಡಾಗುವಂತಿರುವುವು. ಆದರೆ ಬೆಳೆದವರಲ್ಲೂ ವಿಷಮಜ್ವರದ ತೆರನ ಕೆಲವು ರೋಗಗಳು ಸಾಮಾನ್ಯ. ಮತ್ತೆ ಮುದಿತನದಲ್ಲಿ ಮೈಯಲ್ಲಿ ರೋಗ ತಡೆವ ಬಲ ಕುಂದಿರುವುದು. ಹರೆಯದಲ್ಲಿ ಏನೂ ಕೆಡಕುಮಾಡದ ಸಣ್ಣ ಬೇನೆಗಳೇ ಆಗ ಅವರಿಗೆ ಮಾರಕವಾಗುತ್ತವೆ.

ರೋಗಕ್ಕೆ ಈಡಾಗುವುದರಲ್ಲಿ ಹೆಣ್ಣು ಗಂಡುಗಳ ವ್ಯತ್ಯಾಸ ಅಷ್ಟಾಗಿಲ್ಲವಾದರೂ ಪುಪ್ಪುಸದ ಕ್ಷಯ ಹುಡುಗರಿಗಿಂತ ಹುಡುಗಿಯರಲ್ಲೇ ಹೆಚ್ಚು. ಕೆಲವು ರೋಗಗಳು ಆಯಾ ಕಸಬುಗಳ ಕೆಲಸಗಾರರಿಗೆ ಅಂಟುತ್ತವೆ. ಪ್ರಾಣಿ ಚರ್ಮಗಳನ್ನು ಸಾಗಿಸುವ ಕೂಲಿಗಾರರಲ್ಲಿ ನೆರಡಿ (ಆಂತ್ರಾಕ್ಸ್) ರೋಗ ಸಾಮಾನ್ಯ. ಕೋಲಾರದ ಚಿನ್ನದ ಗಣಿ

ಗಳ ಆಳದಲ್ಲಿ 15–20 ವರ್ಷಗಳಷ್ಟು ಹೆಚ್ಚುಕಾಲ ಕೆಲಸ ಮಾಡುವವರಲ್ಲಿ ಮೊದಲು ಸಿಲಿಕಬೇನೆ (ಸಿಲಿಕೋಸಿಸ್) ತಲೆದೋರಿ ಅನಂತರ ಸುಲಭವಾಗಿ ಕ್ಷಯ ಹತ್ತುವಂತೆ ಕೆಲವೇಳೆ ಕಸಬಿನಿಂದ ರೋಗಕ್ಕೀಡಾಗುವುದು ಕಂಡುಬರುತ್ತದೆ.

ಪುಷ್ಟಿಯಾದ ಆಹಾರ ಇಲ್ಲವಾದರೆ ಸೋಂಕುಗಳಿಗೆ ಈಡಾಗುವುದು ಹೆಚ್ಚುವುದೆಂದು ಜನರಲ್ಲಿ ನಂಬಿಕೆ ಇರುವುದಾದರೂ ಕೂರಾದ (ಅಕ್ಯೂಟ್) ಸೋಂಕುಕಾರಕ ರೋಗಗಳಲ್ಲಂತೂ ಪೌಷ್ಟಿಕ ಆಹಾರ ಅಷ್ಟೇನೂ ಪರಿಣಾಮಕಾರಿಯಲ್ಲ. ಪುಷ್ಟಿಗೊಂಡ ಮಕ್ಕಳಲ್ಲೂ ಬಡಕಲ ಮಗುವಿನಲ್ಲೂ ದಡಾರ ಸೋಂಕು ಹತ್ತುವುದರಲ್ಲಿ ಏನೇನೂ ವ್ಯತ್ಯಾಸವಿಲ್ಲದ್ದು ಒಂದು ಉದಾಹರಣೆ. ಇತರ ಸೋಂಕುರೋಗಗಳಿಗೂ ಇದನ್ನೇ ಹೇಳಬಹುದು. ಆದರೆ, ಆಹಾರದಲ್ಲಿ ಎ ಜೀವಾತಿನ ತೆರನ ಕೆಲವು ಅಂಶಗಳ ವಿಪರೀತ ಕೊರೆಗಳಿದ್ದರೆ ಮಾತ್ರ ರೋಗ ತಡೆವ ಬಲ ಇಳಿದು ಹೋಗುವುದು. ಅಲ್ಲದೆ ಯೂರೋಪಿನ ಹರೆಯುದವರಲ್ಲಿ ಒಳಗೆ ಹುದುಗಿರುವ ಕ್ಷಯರೋಗ ಪುಷ್ಟಿಗೆಟ್ಟವರಲ್ಲಿ ಹೊರದೋರುವುದು. ಆದ್ದರಿಂದ ಪುಷ್ಟಿಗೊಂಡಿದ್ದವರು ಯಾವ ಸೋಂಕುರೋಗಗಳಿಗೂ ಈಡಾಗರೆನ್ನುವುದು ಸರಿಯಲ್ಲ.

ಸೋಂಕುರೋಗ ಹರಡುವುದಕ್ಕೂ ಹವಾಗುಣಕ್ಕೂ ಇರುವ ಸಂಬಂಧವನ್ನು ಬಿಡಿಯಾಗಿ ಕಾಣುವಂತಿಲ್ಲ. ಉಷ್ಣ ದೇಶಗಳಲ್ಲಿ ವಿಷಮಜ್ವರ, ಆಮಶಂಕೆಗಳೂ ಚಳಿ ದೇಶಗಳಲ್ಲಿ ಉಸಿರಾಟ ಮಂಡಲದ ರೋಗಗಳೂ ಹೆಚ್ಚು ಸಾಮಾನ್ಯ. ಆದರೆ ಉಷ್ಣ ದೇಶಗಳಲ್ಲಿ ಮಲ, ಕೊಚ್ಚೆಗಳ ಸಾಗಣೆ ಸರಿಯಾಗಿರದೆ ಸೋಂಕು ಅಂಟುವ ಅವಕಾಶಗಳೂ ಆಹಾರ ತಯಾರಿಸುವವರ ಕೊಳಕುತನವೂ ಚಳಿದೇಶದಲ್ಲಿ ಬೆಚ್ಚಗೆ ಬಹಳ ಮಂದಿ ತಂಡಗಳಲ್ಲಿ ಒಂದೆಡೆ ಸೇರುವುದೂ ಉಸಿರಾಟ ಮಂಡಲದ ಸೋಂಕುರೋಗಗಳು ಸುಲಭವಾಗಿ ಹರಡುವುದೂ ಕಾರಣಗಳು ಎನ್ನಬಹುದು. ಮಳೆ ಬಿದ್ದರೆ ದೂಳು ಅಡಗುವುದರಿಂದ ದೂಳಿಂದ ಹರಡುವ ಸೋಂಕುರೋಗಗಳು ಮಳೆಗಾಲದಲ್ಲಿ ತಗ್ಗುತ್ತವೆ.

ಜನಾಂತರ ಸಾಂಕ್ರಾಮಿಕ ರೋಗಗಳು : ಎಷ್ಟೋ ಶತಮಾನಗಳಿಂದಲೂ ಒಂದು ರೋಗಾಣು ಒಂದು ನಾಡಿನಲ್ಲಿದ್ದು ನಾಗರಿಕರಿಗೆ ಎಲ್ಲೆಲ್ಲೂ ತಾಕುತ್ತಲೇ ಇದ್ದರೆ, ಕೊನೆಗೆ ಅದು ಬಹಳ ಮಂದಿಯನ್ನು ಸಾಯಿಸದೆ ಉಳಿವ ಸಮತೋಲಕ್ಕೆ ಬಂದಿರುತ್ತದೆ. ಮೊದಮೊದಲ ತಲೆಮಾರುಗಳಲ್ಲಿರುವ ಈ ರೋಗಕ್ಕೆ ಈಡಾಗುವವರೆಲ್ಲ ಇದಕ್ಕೆ ಬಲಿಯಾಗಿ ಆಮೇಲೆ ಇದಕ್ಕೆ ಜಗ್ಗದ ವಂಶದವರೇ ಉಳಿದು ರೋಗ ಜನಾಂತರವಾಗಿರುವುದು. ಇಂಗ್ಲೆಂಡಿನಲ್ಲಿ ಕ್ಷಯ, ಉಪದಂಶಗಳು (ಸಿಫಿಲಿಸ್) ಇದರ ಉದಾಹರಣೆಗಳು.

ಜನಾಂತರವಾಗಿರುವ ರೋಗವೇ ಸಾಂಕ್ರಾಮಿಕವಾಗುವ ಕಾರಣಗಳೆಲ್ಲ ಇನ್ನೂ ಚೆನ್ನಾಗಿ ತಿಳಿದಿಲ್ಲ. ಹಾಗಾಗಬೇಕಾದರೆ ಜನರಲ್ಲಿ ಈ ರೋಗಕ್ಕೆ ಈಡಾಗುವವರು ಸಾಕಷ್ಟು ಮಂದಿ ಇರಬೇಕು, ಸೋಂಕುಕಾರಕ ಜೀವಾಣು ಬಲು ಬೇಗನೆ ಎಲ್ಲರಲ್ಲೂ ಹಬ್ಬಿಕೊಳ್ಳಲು ಅನುಕೂಲವಿರಬೇಕು. ಉರಿಶೀತದ ತೆರನ ರೋಗದಲ್ಲಿ ಸಾಂಕ್ರಾಮಿಕ ಜೀವಾಣು ಬಲು ಮುಂಚೆ ಅಲ್ಲಲ್ಲಿ ಚೆಲ್ಲಿದಂತೆಲ್ಲ (ಸ್ಪೊರ್ಯಾಡಿಕ್) ಹೆಚ್ಚುಹೆಚ್ಚು ಮಂದಿಗಳಲ್ಲಿ ರೋಗ ತಲೆದೋರುವುದು. ಬಲು ಬೇಗನೆ ಕಾಯಿಲೆಗಳು ಕೊನೆಯ ಮಿತಿಗೇರಿ ಆಮೇಲೆ ನಿಧಾನವಾಗಿ ಮೊದಲಿನ ಇರವಿಗೆ ಇಳಿವುದು. ಈ ಏರಿಳಿತಗಳು ಒಂದೇ ವೇಗದಲ್ಲಿ ಇರುವುದರಿಂದ, ರೋಗಿಗಳ ಅಂಕಿಗಳನ್ನು ಒಂದು ಗ್ರಾಫಿನಲ್ಲಿ ಬಿಡಿಸಿದರೆ ಗಂಟೆಯ ಆಕಾರ ತೋರುವುದು. ಸೋಂಕು ಅಂಟಿರುವ ನೀರು, ಹಾಲು, ಐಸ್‌ಕ್ರೀಮ್ ಆಹಾರಗಳನ್ನು ಸೇವಿಸಿ ರೋಗಕ್ಕೆ ಅವಕಾಶ ಕೊಡುವ ಒಂದು ಭಾಗದ ಜನರಲ್ಲಿ ಮಾತ್ರ ತಲೆ ಹಾಕುವ ಸಾಂಕ್ರಾಮಿಕ ಎಂದರೆ ವಿಷಮಜ್ವರ. ಹೀಗೆ ಏಳುವ ಸಾಂಕ್ರಾಮಿಕಗಳು ಸಿಡಿದೆದ್ದಂತೆ ತಲೆದೋರುತ್ತವೆ. ಗ್ರಾಫಿನಲ್ಲಿ ಇದರ ರೋಗಿಗಳ ಅಂಕಿಗಳನ್ನು ಹಾಕಿದಾಗ, ವಕ್ರರೇಖೆಯ ತುದಿ ಚೂಪಾಗಿದ್ದು, ಏರುವ ಕಾಲು ಕಡಿದಾಗೂ ಮರುಚಲದ (ಸೆಕೆಂಡರಿ) ಸೋಂಕುಗಳೇಳುವುದರಿಂದ, ಇಳಿವ ಕಾಲು ಕೊಂಚ ಚಪ್ಪಟೆಯಾಗೂ ಇರುವುವು. ಸಾಂಕ್ರಾಮಿಕಗಳಾಗುವ ಕಾರಣಗಳು ಇನ್ನುಳಿದ ಎಷ್ಟೋ ರೋಗಗಳಲ್ಲಿ ಬೇರೆ ಬೇರೆ ಆಗಿವೆ.

ಸೋಂಕುಕಾರಕ ರೋಗಗಳ ಲಕ್ಷಣಗಳು : ಸೋಂಕುಕಾರಕ ಜೀವಾಣು ಮೈ ಒಳಹೊಕ್ಕಮೇಲೆ ರೋಗದ ಲಕ್ಷಣಗಳು ಕಾಣಿಸಿಕೊಳ್ಳಲು ಹಿಡಿವ ಉದ್ಭವನ (ಇಂಕ್ಯುಬೇಷನ್) ಕಾಲ ಒಂದೊಂದರಲ್ಲಿ ಒಂದೊಂದು ಬಗೆ. ಹೆಣವನ್ನು ಕೊಯ್ದು ಪರೀಕ್ಷಿಸುವಾಗ ಗಾಯವಾದರೆ ಸರಕಾಯ್ಜೀವಿಯ ನಂಜುರಕ್ತವಾಗಿ (ಸೆಪ್ಟಿಸೀಮಿಯ) 24 ತಾಸುಗಳಲ್ಲೇ ಸಾಯುವುದು ಇದ್ದಕ್ಕಿದ್ದ ಹಾಗೆ ಆಗುವುದರ ಉದಾಹರಣೆ. ಇನ್ನೊಂದು ಕೊನೆಯಲ್ಲಿರುವ ಕುಷ್ಠರೋಗದಲ್ಲಿ ಸೋಂಕು ಹತ್ತಿದ ಮೇಲೆ ರೋಗಲಕ್ಷಣಗಳು ಕಾಣಿಸಿಕೊಳ್ಳಲು ಹಲವಾರು ವರ್ಷಗಳೇ ಹಿಡಿಯಬಹುದು. ದಡಾರದ ತೆರನ ದದ್ದುಗಳೇಳುವ ಮಕ್ಕಳ ಜ್ವರಗಳ ಉದ್ಭವನ ಕಾಲ 2-3 ದಿವಸಗಳಿಂದ 2-3 ವಾರಗಳವರೆಗೇ ಇರಬಹುದು. ನಾಯಿಹುಚ್ಚು, ಬ್ರುಸೆಲ್ಲಬೇನೆಗಳಲ್ಲಿ ಇದು 6 ವಾರಗಳಿಗೂ ಮೀರಿರುವುದು. ಕೆಲವೇಳೆ ಸೋಂಕು ಹತ್ತಿದಮೇಲೆ ಕ್ಷಯರೋಗ ಹೊರದೋರಲು ಒಂದೆರಡು ವರ್ಷಗಳೇ ಬೇಕು.

ದದ್ದುಗಳೇಳುವ ಜ್ವರಗಳಲ್ಲಿ, ಆತಿಥೇಯದಲ್ಲಿ ಸಾಕಷ್ಟು ಹಾನಿಗೊಳಿಸುವಂತೆ ವೃದ್ಧಿಗೊಳ್ಳುವ ರೋಗಾಣುವಿಗೆ ಹಿಡಿವ ವೇಳೆಯನ್ನು ಉದ್ಭವನ ಕಾಲ ಸೂಚಿಸಬಹುದು. ಸೋಂಕು ಹತ್ತಿದ ಕೆಲವೇ ವಾರಗಳಲ್ಲಿ ಕ್ಷಯರೋಗ ತಲೆದೋರಬಹುದಾದರೂ ಇದರಿಂದ ಹೆಚ್ಚಿನ ಪರೀಕ್ಷೆಗಳಿಂದ ಮಾತ್ರ ಪತ್ತೆಮಾಡಬಹುದಾದ, ಅವಿತ ಸೋಂಕೆದ್ದು, ಒಂದಷ್ಟು ಕಾಲ ಕಳೆದಮೇಲೆ ರೋಗ ಹೊರಗಾಣಬಹುದು, ಇಲ್ಲವೇ ಬರುಬರುತ್ತ ಅಣಗಿ ವಾಸಿಯಾಗಬಹುದು. ಪರಪಿಂಡಿಗೂ ಆತಿಥೇಯಕ್ಕೂ ನಡುವೆ ನಾಜೂಕಿನ ಸಮತೋಲ ಏರ್ಪಟ್ಟು ಸಹಜವಾಗಿರುವ ಮೈಯ ರೋಗ ತಡೆವ ಬಲದಲ್ಲಿ ಕೊಂಚ ಕಾಲ ಇಳುಗಡೆಯಾದರೂ ಏರುಪೇರಾಗುತ್ತದೆ.

ಯಾವ ಕೀಟದಿಂದಲೇ ಸೋಂಕು ಹತ್ತಿದರೂ ಮೈಯಲ್ಲಿನ ಊತಕಗಳಲ್ಲಿ ಪ್ರತಿಕ್ರಿಯೆಗಳ ಸಾಲುಗಳೇ ಏಳುತ್ತವೆ. ಉರಿತ (ನೋಡಿ) ಇಂಥ ಒಂದು ಪ್ರತಿಕ್ರಿಯೆ. ಉರಿತದಲ್ಲಿ ಸೋಂಕನ್ನು ಒಂದೆಡೆಗೆ ಮಿತಿಗೊಳಿಸಿ ಒಳನುಗ್ಗಿರುವ ರೋಗಾಣುವನ್ನು ಹಾಳುಗೆಡಿಸುವಂತೆ ರಕ್ತನಾಳಗಳ, ರಕ್ತಕಣಗಳ ಬದಲಾವಣೆಗಳಾಗುತ್ತವೆ. ಬಹುಮಟ್ಟಿಗೆ ಎಲ್ಲ ಜೀವಿಗಳಲ್ಲೂ ಒಂದಲ್ಲ ಒಂದು ರೀತಿಯಲ್ಲಿ ಕಾಣಬರುವ ಸಾಮಾನ್ಯ ಪ್ರತಿಕ್ರಿಯೆ ಉರಿತ. ಜೀವಾಣುಗಳು ಒಳಹೊಗುವುದರಿಂದಲೇ ಅಲ್ಲದೆ ಊತಕಗಳೊಳಕ್ಕೆ ಹೊರಗಿಂದ ಯಾವ ಕೆರಳಿಸುವ ವಸ್ತು ಸೇರಿದರೂ ಉರಿತವಾಗುತ್ತದೆ. ಆದರೆ ಜೀವಾಣುಗಳಿಂದೇಳುವ ಪ್ರತಿಕ್ರಿಯೆಗಳು ಮಾತ್ರ ಆಯಾ ಮಾದರಿಯ ಜೀವಾಣುವಿಗೆ ವಿಶಿಷ್ಟ. ಒಟ್ಟಾಗಿ ನವಿರುಜಾಲದ ಒಳಪೊರೆಯ ಮಂಡಲ (ರೆಟಿಕ್ಯುಲೋ–ಎಂಡೋತೀಲಿಯಲ್ ಸಿಸ್ಟಂ) ಎನಿಸಿಕೊಂಡ, ಮೈಯಲ್ಲಿರುವ ಕೆಲವು ಗೊತ್ತಾದ ಜೀವಕಣಗಳಲ್ಲಿ, ಸೋಂಕಿಗೆ ಕಾರಣವಾದ ಆಯಾ ಮಾದರಿಯ ರೋಗಾಣುವಿನ ಮೇಲೆ ವರ್ತಿಸುವ, ನಿರೋಧಕಗಳೆಂಬ (ಆಂಟಿಬಾಡೀಸ್) ಕೆಲವು ವಿಶೇಷ ಪದಾರ್ಥಗಳು ತಯಾರಾಗುತ್ತವೆ. ನಿರೋಧಕಕ್ಕೂ ಅದರ ಎದುರು ಸಮನಾಗಿ ರೋಗಾಣುವಿನಲ್ಲಿರುವ ನಿರೋಧಜನಕ (ಆಂಟಿಜನ್) ಎಂದಿರುವುದಕ್ಕೂ ಕೂಡಿಕೆ ತೀರ ವಿಶಿಷ್ಟ ; ಅಂದರೆ ಇದು ಬೀಗ, ಕೀಲಿಯಂತಿರುವುದು. ರಕ್ತದಲ್ಲಿ ನಿರೋಧಕಗಳು ಸಾಕಷ್ಟಿದ್ದಲ್ಲಿ, ಹಲವಾರು ಬಗೆಗಳಲ್ಲಿ ರೋಗಾಣುಗಳ ಮೇಲೆ ವರ್ತಿಸಿ, ರಕ್ತ, ಊತಕಗಳಲ್ಲಿ ಯಾವಾಗಲೂ ಇರುವ ತಿನಿಕಣಗಳಿಗೆ (ಫ್ಯಾಗೊಸೈಟ್ಸ್) ಬಲಿಯಾಗುವ ಹಾಗೆ ಅವನ್ನು ಬದಲಿಸುತ್ತವೆ. ಹೀಗೆ ಗಳಿಸಿದ ವಿಶಿಷ್ಟ ಪ್ರತಿರಕ್ಷಣೆ ಬಾಳಿನುದ್ದಕ್ಕೋ ಕೆಲವೇ ಕಾಲವೋ ಉಳಿಯಬಹುದು. ಬಾಳಿನುದ್ದಕ್ಕೂ ಇದ್ದರೆ, ಅದೇ ರೋಗ ಮತ್ತೆ ಅಂಟುವಂತಿಲ್ಲ. ಕೊಂಚ ಕಾಲವಿದ್ದರೆ 2, 3, 4 ಬಾರಿಯಾದರೂ ಮೇಲಿಂದಮೇಲೆ ಸೋಂಕಿಗೆ ಈಡಾಗಬಹುದು.

ಬೇರೆ ಬೇರೆ ರೋಗಗಳಲ್ಲಿ ಗಳಿಸಿದ ಪ್ರತಿರಕ್ಷಣೆಯ ಮಟ್ಟ ಇರುವ ಕಾಲಗಳನ್ನು ನಿರ್ಧರಿಸುವ ಅಂಶಗಳ ವಿಚಾರದ ತಿಳಿವು ಏನೇನೂ ಸಾಲದು. ಸಾಮಾನ್ಯವಾಗಿ ಮೈಯೆಲ್ಲ ಹರಡಿಕೊಳ್ಳುವ ವಿಷಕಣಗಳ ಸೋಂಕಿನಿಂದ ಬಲವಾದ ಶಾಶ್ವತ ಪ್ರತಿರಕ್ಷಣೆ ಲಭಿಸುತ್ತದೆ. ಆದರೆ, ಏಕಾಣುಜೀವಿಗಳಿಂದೇಳುವ ಉಸಿರಾಟದ ಸೋಂಕಿನಿಂದ ಬಲವಿಲ್ಲದ ಪ್ರತಿರಕ್ಷಣೆ ಕೊಂಚ ಕಾಲ ಇದ್ದು ಹೋಗುವುದು.

### ಹತೋಟಿ

ನಿರೋಧ : ಸೋಂಕಿನ ವಸ್ತುವಿನ ಪ್ರಮಾಣದ ಇಳುಗಡೆ, ಸೋಂಕು ಸಾಗಣೆಯ ಸಾಧನಗಳ ಹತೋಟಿ, ಆತಿಥೇಯದ ರೋಗ ತಡೆವ ಬಲದ ಹೆಚ್ಚಳಿಕೆ ಇವುಗಳಿಂದ ಸೋಂಕುಕಾರಕ ರೋಗಗಳು ಬಾರದಂತೆ ತಡೆಯಬಹುದು.

ರೋಗ ಅಂಟಿಸುವ ವಸ್ತುವಿನ ಪ್ರಮಾಣವನ್ನು ಇಳಿಸುವ ಉಪಾಯಗಳು, ಸೋಂಕಿನ ವಸ್ತುವಿನ ಗುಣ, ಮೂಲಗಳಿಗೆ ತಕ್ಕಹಾಗೆ ಹಲತೆರನಾಗಿರುವುವು. ಕೈವಸ್ತ್ರ, ಕೆಲವೆಡೆ ಇಟ್ಟಿರುವ ಉಗುಳುದಾನಿಗಳ ಹೊರತಾಗಿ ಎಲ್ಲೆಂದರಲ್ಲಿ ಉಗುಳು, ಸೀನು, ಎಂಜಲು ತೆಮಡೆಗಳನ್ನು ಎಸೆಯಲೇಬಾರದು. ಸೋಂಕುರೋಗಿಗಳನ್ನು, ಬೇರೆಯಾಗಿ ಇರಿಸಬೇಕು. ವಾಹಕಿಗಳ ಕಸಬುಗಳಲ್ಲಿ ಯಾವ ಅಡ್ಡಿಯನ್ನೂ ಹಾಕಬೇಕಿಲ್ಲ. ಅವರನ್ನು ಕೆಲಸದಿಂದ ತೆಗೆದುಹಾಕಿ ಬೇರೆ ಇರಿಸಬೇಕಿಲ್ಲ. ಸಿಡುಬು, ಕಾಲರ ರೋಗಿಗಳನ್ನು ಬೇರೆ ಇರಿಸಿದರೆ, ಯಾರೂ ಅಡ್ಡಿಪಡಿಸರು. ಆದರೆ ಅದೇ ಕ್ಷಯರೋಗಿಗಳನ್ನು ಬೇರೆ ಇರಿಸುವುದಿರಲಿ, ಒಂದೆಡೆ ಕೂಡಿ ಹಾಕುವುದಕ್ಕೂ, ಯಾರಾದರೂ ಸರಿಯೇ, ಒಪ್ಪುವುದು ಇನ್ನೂ ಕಷ್ಟ. ಪ್ಲೇಗು, ಕಾಲರ, ಸಿಡುಬು, ಹಳದಿಜ್ವರದ ರೋಗಿಗಳಿರುವ ಹಡಗುಗಳಿಗೆ ಬಲವಂತವಾಗಿ ಕ್ವಾರಂಟೀನ್ (ನಲವತ್ತು ದಿನಗಳ ತಡೆ) ಹಾಕಿರಿಸಬಹುದು. ಇಲ್ಲೂ ಅಷ್ಟೇ, ಸಾಮಾಜಿಕ, ಹಣಕಾಸಿನ ಕಷ್ಟಗಳಿಂದ ಒಂದು ಮಿತಿಗೊಂಡ ರೂಪದ ಹೊರತಾಗಿ, ಈ ವಿಧಾನ ಜಾರಿಗೆ ತರುವುದು ಕಷ್ಟ. ಕಟ್ಟುನಿಟ್ಟಾಗಿ ಪಾಲಿಸುವುದಂತೂ ಆಗೇ ಆಗದು. ಮುಖ್ಯರಾದ ಕೆಲವರ ತುರ್ತಿನ ಕೆಲಸಗಳಿಗಾಗಿ ಆರೋಗ್ಯಪಾಲನೆಯ ನಿಯಮ

ಗಳನ್ನು ಸಡಿಲಿಸಬೇಕಾಗುವುದು. ಕೊಂಚವಾದರೂ ಸಡಿಲಿಸಿ, ರೋಗಲಕ್ಷಣಗಳು ಹೊರಗೆ ತೋರದವರನ್ನು ಮುಂದೆ ಸಾಗಲು ಬಿಡಬಹುದು. ಅವರು ಹೋಗುವ ಸ್ಥಳದ ಆರೋಗ್ಯಾಧಿಕಾರಿಗೆ ಸುದ್ದಿ ಕೊಟ್ಟು, ಬೇನೆ ಬಿದ್ದರೆ ಕೂಡಲೇ ವೈದ್ಯರನ್ನು ಕಾಣುವಂತೆ ಪಯಣಿಗರಿಗೆ ತಿಳಿವಳಿಕೆ ಕೊಡಬೇಕು. ಹೀಗೆ ಮಾಡುವುದರಿಂದ ಯಾರಲ್ಲಾದರೂ ರೋಗ ಕಾಣಿಸಿಕೊಂಡರೆ ಕೂಡಲೇ ರೋಗವನ್ನು ಗುರುತಿಸಿ ತಕ್ಕ ನಿರೋಧ ಕ್ರಮಗಳನ್ನು ಕೈಗೊಳ್ಳಬಹುದು.

ಕಾವಿನಿಂದಲೊ ರಾಸಾಯನಿಕ ಸೋಂಕುನಾಶಕಗಳಿಂದಲೊ ಸೋಂಕಿನ ಕಾರಕಗಳನ್ನು ಕೆಲವು ಸಮಯಗಳಲ್ಲಿ ಮಾತ್ರ ಹಾಳುಮಾಡಬಹುದೇ ಹೊರತು, ಎಲ್ಲೆಲ್ಲೂ ಇದನ್ನು ಪಾಲಿಸುವಂತಿಲ್ಲ. ಗಾಳಿಯಲ್ಲಿ ಸಾಗಿಬರುವ ಸೋಂಕನ್ನು ತಡೆಯಲು ಕಟ್ಟಡಗಳಲ್ಲಿ ಗಾಳಿಯಾಟ (ವೆಂಟಿಲೇಷನ್) ಬಲು ಮುಖ್ಯ ವಿಧಾನ. ಇದರಿಂದ ಗಾಳಿಯಲ್ಲಿರುವ ರೋಗಾಣುಗಳೂ ಕಡಿಮೆಯಾಗಿ, ಒಳಗೆ ವಾಸಿಸುವವನಿಗೆ ಒಂದೇ ಬಾರಿಗೆ ಅವನ ಊತಕಗಳು ತಡೆದುಕೊಳ್ಳುವಷ್ಟಕ್ಕಿಂತ ಹೆಚ್ಚಾಗಿರವು. ಚೊಕ್ಕತೆಯಿಂದ ದೂಳಿಲ್ಲದಂತೆ ನೋಡಿಕೊಂಡರೆ ಬಲು ಅನುಕೂಲ. ಏಕಾಣುಜೀವಿಗಳನ್ನು ಬಿಸಿಲು ಹಾನಿಗೊಳಿಸುವುದರಿಂದ, ಮನೆಯೊಳಕ್ಕೆ ಸಾಕಷ್ಟು ಬಿಸಿಲೂ ಬೆಳಕೂ ಬೀಳುವಂತೆ ಕಿಟಕಿ, ಬಾಗಿಲುಗಳ ಪರದೆಗಳನ್ನು ಕಳಚಿಟ್ಟು ಮಾಮೂಲಿನಂತೆ ನೀರು, ಸಾಬೂನುಗಳನ್ನು ಬಳಸಬಹುದು. ಬಿಸಿಲು ಇಲ್ಲವಾದಾಗ ಅತಿನೇರಿಳೆ ಬೆಳಕಿನ ವಿಕಿರಣತೆಯಿಂದಲೂ ಸೋಂಕು ಕಳೆವ ತುಂಪುರಿಗಳನ್ನು (ಸ್ಪ್ರೇಸ್) ಆಗಾಗ್ಗೆ ಚಿಮುಕಿಸುವುದರಿಂದಲೂ ಕೋಣೆಯ ರೋಗಾಣುಗಳನ್ನು ಸಾಯಿಸಲು ಯತ್ನಿಸಬಹುದು. ಆದರೆ, ಇವು ಬಿಸಿಲು, ಹೊಸ ಗಾಳಿಗಳ ಸಮಕ್ಕೆ ಬಾರವು.

ಸೋಂಕುಕಾರಕಗಳ ಸಾಗಣೆಯ ಸಾಧನಗಳ ಹತೋಟಿಯನ್ನು ಕರುಳಿನ ರೋಗಗಳಲ್ಲಿ ಬಲು ಚೆನ್ನಾಗಿ ಜಾರಿಗೆ ತರಬಹುದು. ಮುಂದುವರಿದ ಹಲವು ನಾಡುಗಳಲ್ಲಿ ಒಳ್ಳೆಯ ನೀರಿನ ಪೂರೈಕೆಯಿಂದ ಕಾಲರ ರೋಗದ ಹೆಸರಿಲ್ಲವಾಗಿದೆ. ವಿಷಮಜ್ವರದ ಹಾವಳಿಯೂ ತಗ್ಗಿದೆ. ಹಾಗೇ ಪಾಶ್ಚುರೀಕರಣದಿಂದಾಗಿ, ಹಾಲಿನಿಂದ ಸಾಗಿಬರುವ ರೋಗಗಳೂ ಇಲ್ಲವಾಗಿವೆ.

ಆಹಾರದ ಶುಚಿತ್ವವನ್ನು ಕುರಿತು ಬಲು ಎಚ್ಚರವಿರಬೇಕು. ಮಾಂಸಕ್ಕಾಗಿ ಕೊಲ್ಲುವ ಮೊದಲೇ ಕಡ್ಡಾಯವಾಗಿ ಪ್ರಾಣಿಗಳ ಪರೀಕ್ಷೆ ಆಗಬೇಕು. ಕಟುಕಶಾಲೆಗಳಲ್ಲಿ ಚೊಕ್ಕತೆ, ಕಚರಸಾಗಣೆ ಚೆನ್ನಾಗಿರಬೇಕು. ಕೊಂದಮೇಲೆ ಮಾಂಸದ ಪರೀಕ್ಷೆ ಪರಿಣತರಿಂದ ಆಗಬೇಕು. ಊಟ ತಿಂಡಿಗಳ ಮಂದಿರಗಳು, ವಿದ್ಯಾರ್ಥಿನಿಲಯ, ವಸತಿಗೃಹಗಳು ಮತ್ತು ಮನೆಗಳಲ್ಲಿ ಆಹಾರವನ್ನು ಮುಟ್ಟಿ ಅಡುಗೆ ಮಾಡುವವರು ಬಡಿಸುವವರು ಆರೋಗ್ಯನಿಯಮಗಳಂತೆ ತುಂಬ ಚೊಕ್ಕತೆ ಪಾಲಿಸಬೇಕು. ಆಹಾರದಿಂದ ರೋಗಗಳು ಬರದಿರಬೇಕಾದರೆ ಆಹಾರವನ್ನು ತಯಾರಿಸುವ ಕೊಡಿಡುವ ಪಾತ್ರೆಪಡಿಗಗಳು ಚೊಕ್ಕವಾಗಿರಬೇಕು. ಅವು ಎಂದಿಗೂ ಇಲಿ ಹೆಗ್ಗಣಗಳಿಗಾಗಲಿ, ನೊಣ, ಕೀಟಕಗಳಿಗಾಗಲಿ ಸಿಗುವಂತಿರಬಾರದು.

ನಾಯಿಗಳಿಂದ ನಾಯಿಹುಚ್ಚು ಬರುವುದನ್ನು ಪೂರ್ತಿ ತಪ್ಪಿಸಬೇಕಾದರೆ ಬೀದಿ ನಾಯಿಗಳೇ ಇಲ್ಲದಂತೆ ನೋಡಿಕೊಂಡು, ಹೊರನಾಡುಗಳಿಂದ ಬರುವವುಗಳ ಮೇಲೆ ಉಸ್ತುವಾರಿ ಇಡಬೇಕು. ಮೊಟ್ಟೆಯಿಟ್ಟು ಮರಿ ಮಾಡುವ ಜಾಗಗಳನ್ನು ಹಾಳು ಮಾಡುವುದರಿಂದಲೂ ಮರಿಕೀಟಗಳನ್ನು ರಾಸಾಯನಿಕಗಳಿಂದ ಸಾಯಿಸುವುದರಿಂದಲೂ ಕಚ್ಚಿ ರಕ್ತಹೀರುವ ಕೀಟಗಳಿಂದೇಳುವ ರೋಗಗಳು ಬಲು ಮಟ್ಟಿಗೆ ಅಣಗಿವೆ.

ಒಳ್ಳೆಯ ಆಹಾರ, ಹೊತ್ತೊತ್ತಿನ ಊಟ, ಮೈ ಚೊಕ್ಕತೆ, ಹೊಸಗಾಳಿ, ಸಾಕಷ್ಟು ಕೈಕಾಲಾಡಿಕೆ, ಬೇಕಿರುವಷ್ಟು ನಿದ್ರೆ ಇವಾವುದರಲ್ಲೂ ಮಿತಿಗೆಡದಿರುವುದೇ ಮುಂತಾದ ಎಂದಿನ ಆರೋಗ್ಯ ಸೂತ್ರಗಳನ್ನು ಪಾಲಿಸಿದರೆ ರೋಗಕ್ಕೆ ಒಡ್ಡಿರುವ ಜನರ ರೋಗ ತಡೆವ ಬಲವನ್ನು ಕೊಂಚಮಟ್ಟಿಗೆ ಹೆಚ್ಚಿಸಬಹುದು. ಆದರೆ ಇವನ್ನು ಮಾತ್ರ ಪಾಲಿಸಿಬಿಟ್ಟರೆ ಸೋಂಕಂಟಿಸುವ ರೋಗಗಳಿಂದ ತಪ್ಪಿಸಿಕೊಂಡ ಹಾಗಲ್ಲ. ಚಿಕ್ಕಂದಿನಲ್ಲಿ ಬಗೆಬಗೆಯ ಸೋಂಕುಗಳಿಗೊಡ್ಡಿ ಅವುಗಳೆದುರು ಒಂದಿಷ್ಟಾದರೂ ಪ್ರತಿರಕ್ಷಣೆ ಗಳಿಸಿಕೊಂಡಿರುವ ಪಟ್ಟಣಗಳಲ್ಲಿನ ಸಣಕಲರಿಗಿಂತಲೂ ಹಳ್ಳಿಗಾಡಿಂದ ಬಂದ, ಬಲು ಕಟ್ಟುಮಸ್ತಾಗಿ ಬೆಳೆದವರೇ ಸೋಂಕುರೋಗಗಳಿಗೆ ಸುಲಭವಾಗಿ ಈಡಾಗುವರು.

ಸೋಂಕು ರೋಗ ಹತ್ತಿ ಒಂದಷ್ಟು ಮಂದಿ ಸತ್ತು, ಉಳಿದವರಲ್ಲಿ ರೋಗ ತಡೆವ ಬಲ ಹೆಚ್ಚುವಂತೆ ಲಸಿಕೆಗಳನ್ನು ಹಾಕುವುದರಿಂದಲೂ ರೋಗಕ್ಕೆ ಒಡ್ಡಿರುವ ಜನರ ರೋಗ ತಡೆವ ಬಲವನ್ನು ಹೆಚ್ಚಿಸಬಹುದು. ರೋಗ ಬಾರದಂತೆ ತಡೆಯಲು ಇದರಂಥ ಉಪಾಯ ತಾತ್ತ್ವಿಕವಾಗಿ ಇನ್ನಿಲ್ಲ ಎನಿಸಿದರೂ ಇದನ್ನು ಮಾಡಿನೋಡುವಾಗ ಹಲವಾರು ತೊಡಕುಗಳೂ ಮಿತಿಗಳೂ ಎದುರಾಗುತ್ತವೆ. ಬಹುಮಟ್ಟಿಗೆ ರೋಗಗಳು ಬಾರದಂತೆ ತಡೆವ ಲಸಿಕೆಗಳು ಎಲ್ಲೊ ಕೆಲವು ರೋಗಗಳೆದುರು ಮಾತ್ರ ಇವೆ. ಉಳಿದವಕ್ಕಿಲ್ಲ; ಇದ್ದರೂ ಸಾಕಷ್ಟು ಬಲವಾಗಿಲ್ಲ. ಅದೂ ಅಲ್ಲದೆ, ಸೋಂಕು ರೋಗಗಳೆ ಬಾರದಂತೆ ತಡೆಗಟ್ಟಬೇಕಾದರೆ ಸೋಂಕಿಗೆ ಈಡಾಗುವಂತೆ ಇರುವವರೆಲ್ಲರಿಗೂ ಒಂದೊಂದು ರೋಗದ ಎದುರೂ ಲಸಿಕೆ ಹಾಕುವುದಲ್ಲದೆ, ಮತ್ತೆ ಮತ್ತೆ ಹಾಕುತ್ತಲೂ ಇರಬೇಕಾಗುತ್ತದೆ. ಸೇನೆಯಲ್ಲಂತೂ ಇದು ಸರಾಗವಾಗಿ ಕೈಗೂಡಬಹುದು. ಜನಸಾಮಾನ್ಯರಲ್ಲಿ ಆಗದು. ನಿಜವಾದ ರೋಗದಿಂದ ಬಂದುದಕ್ಕೆ ತಕ್ಕಂತೆ ಆದರ ಲಸಿಕೆಯಿಂದೇಳುವ ಪ್ರತಿರಕ್ಷಣೆಯ ಮಟ್ಟವೂ ಇರುವುದು. ಅಂದರೆ ಬಾಳಿನುದ್ದಕ್ಕೂ ಶಾಶ್ವತ ಪ್ರತಿರಕ್ಷಣೆ ಕೊಡುವ ಮತ್ತೆ ಮರುಕಳಿಸಿದ ರೋಗಗಳಲ್ಲಿ ಮಾತ್ರ ಲಸಿಕೆ ಹಾಕುವಿಕೆಯಿಂದ ಅನುಕೂಲವಿದೆ. ಸಿಡುಬು ಇದರ ಒಳ್ಳೆಯ ಉದಾಹರಣೆ.

ಹೊರಜೀವಿವಿಷವನ್ನು ಸುರಿಬಿಡುವ ಸೆಟೆಬೇನೆ, ಗಂಟಲಮಾರಿ ತೆರನ ಏಕಾಣುಜೀವಿಗಳಿಂದ ಏಳುವ ಹಲವು ರೋಗಗಳ ಎದುರೂ ಬಲವಾದ ಲಸಿಕೆಗಳಿವೆ. ಗಂಟಲಮಾರಿಯದಂತೂ ಚೆನ್ನಾಗಿ ಎದ್ದುಕಾಣುವಂಥದು. ಕೇವಲ ಮಗುವನ್ನು ಈ ರೋಗದಿಂದ ಕಾಪಿಡುವುದಲ್ಲದೆ, ಇಡೀ ನಾಡಿನಿಂದಲೇ ರೋಗವನ್ನು ಹೋಗಲಾಡಿಸಬಹುದು. ಈ ರೋಗಕ್ಕೀಡಾಗುವ ವಯಸ್ಸಿನವರನ್ನೂ ಸೇರಿಸಿಕೊಂಡು ಜನರಲ್ಲಿ ಸಾಕಷ್ಟು ಮಂದಿಗೆ ನಾಲ್ವರಲ್ಲಿ ಮೂವರಿಗಾದರೂ ಪ್ರತಿರಕ್ಷಣೆ ಪಡೆಯಲು ಲಸಿಕೆ ಹಾಕಬೇಕು. ಶಾಲಾ ಮಕ್ಕಳಿಗೆ ಸುಮಾರು 5 ವರ್ಷಗಳಿಗೊಮ್ಮೆಯಾದರೂ ಹಾಕದಿದ್ದಲ್ಲಿ ರೋಗ ಹರಡುತ್ತಲೇ ಇರುವುದು. ಇತರ ಏಕಾಣುಜೀವಿಗಳಿಂದ ಬರುವ ರೋಗಗಳ ಎದುರು ಲಸಿಕೆಗಳು ಅಷ್ಟು ಪರಿಣಾಮಕಾರಿಗಳಲ್ಲ. ವಿಷಮಜ್ವರ, ನಾಯಿಕೆಮ್ಮು, ಸೊಕ್ಕಿನಜ್ವರ, ಪ್ಲೇಗು, ಕಾಲರಗಳೆದುರು ಲಸಿಕೆಗಳಿದ್ದರೂ ಅವುಗಳಿಂದ ಲಭಿಸುವ ಪ್ರತಿರಕ್ಷಣೆ ಎಷ್ಟೇ ಬೇಕೆನಿಸಿದರೂ ಬಲವಾದುವಲ್ಲ. ಉಸಿರಾಟ ಮಂಡಲದ ರೋಗಗಳೆದುರು ಲಸಿಕೆಗಳಿಲ್ಲ (**ನೋಡಿ—ಲಸಿಕೆಹಾಕುವಿಕೆ ; ಲಸಿಕೆ ರೋಗಚಿಕಿತ್ಸೆ**). ತತ್ಕಾಲಕ್ಕೆ ರೋಗವನ್ನು ತಡೆವ ಬಲ ಕೊಡಲು ನಿರೋಧರಸಿಕೆಗಳನ್ನು (ಆಂಟಿಸೀರ) ಕೆಲವೇಳೆ ಕೊಡಬಹುದು. ಗಂಟಲಮಾರಿ, ಸೆಟೆಬೇನೆ, ಅನಿಲದ ಅಳಿಕೊಳಪುಗಳಲ್ಲಿ (ಗ್ಯಾಸ್ ಗ್ಯಾಂಗ್ರೀನ್) ಮಾತ್ರ ಹೀಗೆ ಮಾಡಬಹುದು. ಇನ್ನಾವ ವಿಧಾನಗಳಿಂದಲೂ ಆಗದಿದ್ದರೆ, ಕೆಲವು ವೇಳೆ ದಿನವೂ ಮದ್ದುಗಳನ್ನು ಕೊಡುವುದರಿಂದ ಸಾಧಿಸಬಹುದು. ಕಳೆದ ಮಹಾಯುದ್ಧ ಕಾಲದಲ್ಲಿ ಮೆಪಕ್ರೀನ್ (ಅಟೆಬ್ರೀನ್) ಕೊಡುತ್ತಿದ್ದುದರಿಂದ ಮಲೇರಿಯ ಬರದಂತೆ ತಡೆಯಲು ಸಾಧ್ಯವಾಯಿತು. ಹಾಗೇ ಕೆಲವೆಡೆ ಸಲ್ಫೋನೇಮೈಡುಗಳನ್ನು ಕೊಡುತ್ತಿದ್ದುದರಿಂದ ಉಸಿರಾಟ ಮಂಡಲದ ಬೇನೆಗಳನ್ನು ತಡೆವುದಾಯಿತು. ಆದರೆ, ಮುಂದೆ ಸಲ್ಫೋನೇಮೈಡುಗಳಿಗೆ ಜಗ್ಗದ ರೋಗಾಣುಗಳ ತಳಿಗಳು ಬೆಳೆಯಬಹುದಾದ್ದರಿಂದ, ಈ ಮದ್ದುಗಳನ್ನು ಸುಮ್ಮನೆ ಯಾವಾಗಲೂ ಕೊಡುವುದು ಒಳ್ಳೆಯದಲ್ಲ.

**ಚಿಕಿತ್ಸೆ :** ಮೈ ಒಳ ಹೊಕ್ಕಿರುವ ಏಕಾಣುಜೀವಿಗಳ ನಾಶದೊಂದಿಗೆ, ರೋಗಿಯ ರೋಗಲಕ್ಷಣಗಳ ಶಮನ ಮಾಡುವುದೇ ಸೋಂಕುಕಾರಕ ರೋಗಗಳ ಚಿಕಿತ್ಸೆ. ಕುರುವಿನಲ್ಲಿದ್ದ ಹಾಗೆ ಎಲ್ಲಾದರೂ ಕೀವು ಸೇರಿದ್ದರೆ ಇಲ್ಲವೇ ರೋಗ ಒಂದೆಡೆ ನೆಲೆಸಿದ್ದರೆ ಅದನ್ನು ಹೋಗಲಾಡಿಸಲು ಶಸ್ತ್ರಕ್ರಿಯೆ ಮಾಡಬೇಕಾಗುತ್ತದೆ. ಆದರೆ ರೋಗ ಮೈಯಲ್ಲೆಲ್ಲ ಹರಡಿದ್ದಲ್ಲಿ ಬೇರೆ ವಿಧಾನಗಳಾಗಬೇಕು. ಗಂಟಲಮಾರಿ, ಸೆಟೆಬೇನೆಗಳ ತೆರನ ರೋಗಗಳಲ್ಲಿ ರೋಗಾಣುಗಳು ಸುರಿಬಿಡುವ ಜೀವಿವಿಷವನ್ನು ಸಾಕಷ್ಟು ಪ್ರಮಾಣಗಳಲ್ಲಿ ಜೀವಿವಿಷರೋಧಕಗಳಿಂದ (ಆಂಟಿಟಾಕ್ಸಿನ್ಸ್) ಸಯ್ಗೊಳಿಸಬಹುದು. ಬಲವಾದ ಹೊರ ಜೀವಿವಿಷವನ್ನು ಸುರಿಬಿಡದ ಜೀವಾಣುಗಳಿಂದೇಳುವ ರೋಗಗಳ ಚಿಕಿತ್ಸೆಯಲ್ಲಿ ರಸಿಕೆಗಳಿಂದ ಅನುಕೂಲವಿಲ್ಲ. 1939ರಿಂದೀಚೆಗೆ ಸಲ್ಫೋನೇಮೈಡುಗಳೂ ಜೀವಿರೋಧಕಗಳೂ (ಆಂಟಿಬಯೋಟಿಕ್ಸ್) ಜಾರಿಗೆ ಬಂದಾಗಿನಿಂದ ಸೋಂಕುಕಾರಕ ರೋಗಗಳ ಚಿಕಿತ್ಸೆಯಲ್ಲಿ ಕ್ರಾಂತಿಯೇ ಆಗಿದೆ (**ನೋಡಿ—ಸಲ್ಫೋನೇಮೈಡುಗಳು ; ಜೀವಿರೋಧಕಗಳು**). ಗಾಳಿಕಾಯ್ಜೀವಿಯ, ಸರಕಾಯ್ಜೀವಿಯ, ಮಿದುಳು ಪೊರೆಕಾಯ್ಜೀವಿಯ (ಮೆನಿಂಗೊಕಾಕಲ್), ರೇತುಕಾಯ್ಜೀವಿಯ (ಗಾನೊಕಾಕಲ್) ಸೋಂಕುಗಳ ಚಿಕಿತ್ಸೆಗೆ ಸಲ್ಫೋನೇಮೈಡುಗಳು ಪರಿಣಾಮಕಾರಿಗಳು.

ಸಲ್ಫೋನೇಮೈಡುಗಳು ಏಕಾಣುಜೀವಿಗಳ ಜೀವವಸ್ತುಕರಣದಲ್ಲಿ ಅಡ್ಡಿಯಾಗಿ ಅವು ಬೆಳೆಯಲು ಬೇಕೇ ಬೇಕಿರುವ ಕೆಲವು ಪದಾರ್ಥಗಳನ್ನೂ ಬಳಸದಂತೆ ಮಾಡುತ್ತವೆ. ಏಕಾಣುಜೀವಿಗಳ ರೋಗಗಳ ಚಿಕಿತ್ಸೆಯಲ್ಲಿ ಬಲು ಮುಖ್ಯವಾದ ಜೀವಿರೋಧಕಗಳು ಪೆನಿಸಿಲಿನ್, ಸ್ಟ್ರೆಪ್ಟೊಮೈಸಿನ್, ಕ್ಲೋರಾಂಫೆನಿಕಾಲ್, ಕ್ಲೋರ್‌ಟೆಟ್ರಸೈಕ್ಲೀನ್ (ಆರಿಯೊಮೈಸಿನ್), ಆಕ್ಸಿಟೆಟ್ರಸೈಕ್ಲೀನ್ (ಟೆರ್ರಮೈಸಿನ್). ಎಲ್ಲ ಏಕಾಣುಜೀವಿಗಳೂ ಈ ಮದ್ದುಗಳಿಗೆ ಮಣಿಯವು. ಒಂದೆರಡು ದೊಡ್ಡವನ್ನು ಬಿಟ್ಟರೆ ಯಾವ ವಿಷಕಣಗಳ ಸೋಂಕಿನೆದುರೂ ಸರಿಯಾದ ಮದ್ದೇ ಇಲ್ಲ. ಹೊಸ ಹೊಸ ಮದ್ದುಗಳಂತೂ ತಯಾರಾಗುತ್ತಲೇ ಇವೆ. ಬಹಳ ದಿನಗಳೂ ತಿಂಗಳುಗಳೂ ಕೊಡುತ್ತಲೇ ಇದ್ದರೆ, ಕೆಲವು ಏಕಾಣುಜೀವಿಗಳು ಸಲ್ಫೋನೇಮೈಡುಗಳಿಗೂ ಜೀವರೋಧಕಗಳಿಗೂ ಜಗ್ಗದಂತಾಗುವುವು. ಇಷ್ಟೇ ಅಲ್ಲದೆ, ಹೀಗೆ ಜಗ್ಗದ ರೋಗಾಣುಗಳ ತಳಿಗಳೇ ಬೆಳೆದು ಎಲ್ಲೆಲ್ಲೂ ಹಬ್ಬಿಕೊಂಡು ಹೊಸ ಮದ್ದುಗಳಿಗೂ ಮಣಿಯದಂತಾಗುತ್ತವೆ. (**ನೋಡಿ—ಉರಿತ; ಏಕಾಣುಜೀವಿಶಾಸ್ತ್ರ; ಪೀನಿಕಣತೆ; ಪರಬಿಂಡಿಶಾಸ್ತ್ರ; ಪ್ರತಿರಕ್ಷಣಶಾಸ್ತ್ರ; ಪ್ರತಿರಕ್ಷಣೆ; ಸಾಂಕ್ರಾಮಿಕಶಾಸ್ತ್ರ.**)

## ಮಾನವನಲ್ಲಿ ರೋಗಕಾರಕ ಏಕಾಣುಜೀವಿಗಳ ಕೆಲವು ಮುಖ್ಯ ಗುಂಪುಗಳು

| ಏಕಾಣುಜೀವಿ | ರೋಗ | ಮದ್ದು ಚಿಕಿತ್ಸೆ | ಷರಾ |
|---|---|---|---|
| ಉರಿಶೀತದ ರಕ್ತಾನುರಾಗಿ | ಉರಿಶೀತ, ಮಿದುಳು ಪೊರೆಯುರಿತ | ಮಿದುಳು ಪೊರೆಯುರಿತಕ್ಕೆ ರೋಧರಸಿಕೆ ಸ್ಟ್ರೆಪ್ಟೊಮೈಸಿನ್ | ಉರಿಶೀತಕ್ಕೆ ಮದ್ದಿಲ್ಲ |
| ಊರುಬಾಡುಬೇನೆ ಕದಿರುಜೀವಿ | ಊರುಬಾಡುಬೇನೆ | ಜೀವಿವಿಷರೋಧಕ | ಆಹಾರ ವಿಷವೇರಿಕೆ, ಸೊಂಕಲ್ಲ |
| ಎಸ್ಕರೀಷನ ಹೆಗ್ಗರುಳಜೀವಿ | ಎಳೆಗೂಸುಗಳ ಉಚ್ಚಾಟ | ಸಲ್ಫಡಯುಜೀನ್, ಕ್ಲೋರಾಂ ಫೆನಿಕಾಲ್ | .... |
| ಕಾಮಾಲೆ ರಕ್ತಸುರಿತದ ತೆಳುಸುರುಳಿ | ವೀಲನ ರೋಗ | ಪೆನಿಸಿಲಿನ್? | ಇಲಿಕಡಿತದ ರೋಗ |
| ಕಾಲರದ ಬಳುಕಜೀವಿ | ಕಾಲರ | ಸಲ್ಫೊನೇಮೈಡುಗಳು, ಜೀವಿರೋಧಕಗಳು | ರೋಗಲಕ್ಷಣ ಚಿಕಿತ್ಸೆ ಬೇಕು |
| ಕಿರಣಣಬೆ ವರ್ಗ | ಕಿರಣಣಬೇನೆ ಗಲ್ಲಕಟ್ಟು<br>ಹುತ್ತಗಾಲು<br>ಇಲಿಕಡಿತದ ಜ್ವರ | ಪೆನಿಸಿಲಿನ್, ಟೆರ್ರಮೈಸಿನ್, ಆರಿಯೊಮೈಸಿನ್<br>...<br>... | ಉಗ್ರವಲ್ಲ<br>...<br>ಇಲಿಯ ಮೂಗಿನ ಪರಪಿಂಡಿ |
| ಕುಷ್ಠದ ಅಣಬೆಯ ಏಕಾಣುಜೀವಿ | ಕುಷ್ಠರೋಗ | ಡ್ಯಾಪ್ಸೋನ್ | .... |
| ಕ್ಷಯದ ಅಣಬೆಯ ಏಕಾಣುಜೀವಿಗಳು | ಕ್ಷಯ | ಸ್ಟ್ರೆಪ್ಟೊಮೈಸಿನ್, ಐಸೊನಿಯಾಜೈಡ್, ಪಾಸ್ | .... |
| ಗಂಟಲಮಾರಿ ದಂಡೇಕಾಣುಜೀವಿ | ಗಂಟಲಮಾರಿ | ನಿರೋಧಕ್ಕಾಗಿ ಜೀವಿವಿಷದಿಂದ,ಜೀವಿವಿಷರೋಧಕ | .... |
| ತಿರುದಾರಕ ಜಾತಿ | ಉಪದಂಶ, ಯಾಸ್ | ಸೋಮಲ, ಪೆನಿಸಿಲಿನ್ | ಮೇಹರೋಗ ಉಪದಂಶ |
| ನಾಯಿಕೆಮ್ಮು ರಕ್ತಾನುರಾಗಿ | ನಾಯಿಕೆಮ್ಮು | ನಿರೋಧಕ್ಕೆ ಲಸಿಕೆಗಳು | .... |
| ನೆರಡಿ ದಂಡಾಣುಜೀವಿ | ವಿಷಮ ಬೊಕ್ಕೆ, ಉಣ್ಣೆಕಾರರ ರೋಗ | ಆರಿಯೊಮೈಸಿನ್, ಪೆನಿಸಿಲಿನ್, ರೋಧರಸಿಕೆ | ಪ್ರಾಣಿಗಳಲ್ಲಿ ಮಾತ್ರ ನೆರಡಿ |
| ಪರಮಾ ನೀಸರ್‌ಜೀವಿ | ಪರಮಾ ಮೇಹರೋಗ | ಸಲ್ಫೋನೇಮೈಡುಗಳು, ಪೆನಿಸಿಲಿನ್ | ... |
| ಪ್ಲೇಗು ದಂಡಾಣುಜೀವಿ | ಪ್ಲೇಗು | ಸಲ್ಫಡಯುಜೀನ್, ಸ್ಟ್ರೆಪ್ಟೊಮೈಸಿನ್, ಕ್ಲೋರಾಂಫೆನಿಕಾಲ್ | ಚಿಗಟಗಳಿಂದ ಸೋಂಕು |
| ಬಾರ್ಟೊನೆಲ್ಲ ದಂಡಾಣುಜೀವಿ | ಒರೋಯ ಜ್ವರ | ಕ್ಲೋರಾಂಫೆನಿಕಾಲ್? | ಉಸುಬಿನ ನೊಣದ ಸೋಂಕು |
| ಬ್ರೂಸೆಲ್ಲ ಜಾತಿ | ಬ್ರೂಸೆಲ್ಲ ಬೇನೆ | ಟೆರ್ರಮೈಸಿನ್, ಆರಿಯೊಮೈಸಿನ್ | ದನಗಳಲ್ಲಿ ಕಂದುಹಾಕುವಿಕೆ |
| ಮಿದುಳು ಪೊರೆಯುರಿತದ ನೀಸರ್‌ಜೀವಿ | ಮಿದುಳು ಬೆನ್ನುಹುರಿಯ ಜ್ವರ | ಪೆನಿಸಿಲಿನ್, ಸಲ್ಫೋನೇಮೈಡುಗಳು | ... |
| ವಿಸರ್ಪಿ ರೋಗಾಣು | ವಿಸರ್ಪಿ | ರೋಧರಸಿಕೆ | ... |
| ವೆಲ್ಚನ ಕದಿರುಜೀವಿ | ಅನಿಲ ಅಳಿಗೊಳಪು, ಕೆಲವೇಳೆ ಆಹಾರ ವಿಷವೇರಿಕೆ | ಜೀವಿವಿಷರೋಧಕ | ಗಾಯದ ಸೋಂಕು |
| ಸರಕಾಯ್ಜೀವಿಗಳು | ಕೆಂಜ್ವರ, ವಿಸರ್ಪಿ, ಮೆಂಡಿಕೆಯುರಿತ, ಬಾಣಂತಿ ಜ್ವರ, ಕೀಲುವಾತದ ಜ್ವರ, ಪುಪ್ಪುಸ ಉರಿತ | ಸಲ್ಫೋನೇಮೈಡುಗಳು, ಪೆನಿಸಿಲಿನ್ | ... |
| ಸುರುಳಿಕ ಜೀವಿ | ಇಲಿಕಡಿತದ ಒಂದು ಜ್ವರ | ಸೋಮಲ, ಪೆನಿಸಿಲಿನ್ | .... |
| ಸೆಟೆಬೇನೆ ಕದಿರುಜೀವಿ | ಸೆಟೆಬೇನೆ | ಜೀವಿವಿಷರೋಧಕ | ಗಾಯದ ಸೋಂಕು |
| ಷೀಗಜೀವಿ ವರ್ಗ | ಏಕಾಣುಜೀವಿಗಳಿಂದಾದ ಆಮಶಂಕೆ | ಸಲ್ಫೋನೇಮೈಡುಗಳು | ... |
| ಹೊಂಬಣ್ಣ ಗುತ್ತಿಕಾಯ್ಜೀವಿಗಳು | ಕುರುಗಳು, ಗಾಯ ಕೀವು, ಆಹಾರ ವಿಷವೇರಿಕೆ | ಸಲ್ಫೋನೇಮೈಡುಗಳು ಪೆನಿಸಿಲಿನ್. ಟೆರ್ರಮೈಸಿನ್ ಆರಿಯೊಮೈಸಿನ್ | ... |

(ವಿ.ಎಸ್.ಎಸ್.)













1 ಕೀವಿಂದ ತೆಗೆದು ಬಣ್ಣಹಾಕಿದ ಗುತ್ತಿಕಾಯ್ಜೀವಿಗಳೊಂದಿಗೆ ಬಿಳಿ ರಕ್ತಕಣಗಳಿವೆ.

2 ಕೀವಿಂದ ತೆಗೆದು ಬಣ್ಣಹಾಕಿದ ಸರಕಾಯ್ಜೀವಿಗಳೊಂದಿಗೆ ಬಿಳಿ ರಕ್ತಕಣಗಳಿವೆ.

3 ಪುಪ್ಪುಸುರಿತ ರೋಗಿ ಕಫದಲ್ಲಿ ಗಾಳಿಕಾಯ್ಜೀವಿಗಳು ಊದಾ ಬಣ್ಣದಲ್ಲೂ ಶೀತದ ಮಣಿಕಾಯ್ಜೀವಿಗಳು ಕೆಂಪಗೂ ರಕ್ತಕಣಗಳೊಂದಿಗಿವೆ.

4 ಮಿದುಳುಪೊರೆಯುರಿತ ರೋಗಿಯ ಮಿದುಳು ಬೆನ್ನುಹುರಿಯ ದ್ರವದಲ್ಲಿ ಮಿದುಳುಪೊರೆಕಾಯ್ಜೀವಿಗಳು ಬಿಳಿ ರಕ್ತಕಣಗಳಲ್ಲಿ ಜೋಡಿ ಕಾಳುಗಳಂತಿವೆ. ಎರಡು ಬಗೆಯ ಬಣ್ಣವೇರಿಕೆ.

5 ಪರಮಾ ಮೇಹರೋಗದಲ್ಲಿ ಸುರಿವ ಕೀವಿನಲ್ಲಿ ಬಣ್ಣಹಾಕಿದ ರೇತುಕಾಯ್ಜೀವಿಗಳು. ಎರಡು ಬಗೆಯ ಬಣ್ಣವೇರಿಕೆ.

6 ಬಣ್ಣ ಹಾಕಿದ ಗಂಟಲಮಾರಿ ದಂಡಾಣುಜೀವಿಗಳು. ಎಡಗಡೆಯದು ಗಂಟಲಮಾರಿ ರೋಗಿಯ ಗಂಟಲಿಂದ ತೆಗೆದುದು. ಬಲಕ್ಕಿರುವುದು ಪ್ರಯೋಗಾಲಯದ ತಳಿರ್ವಸೆಯದು.

7 ಕ್ಷಯರೋಗಿಯ ಕಫಕ್ಕೆ ಬಣ್ಣಹಾಕಿದಾಗ, ಮೋಟುಕಡ್ಡಿಗಳಂತೆ ಕ್ಷಯ ದಂಡಾಣುಜೀವಿಗಳು ಕೆಂಪಗೆ ಕಾಣುತ್ತವೆ.

8 ಕುಷ್ಠ ಹತ್ತಿದ ಚರ್ಮದಿಂದ ತೆಗೆದು ಬಣ್ಣ ಹಾಕಿದಾಗ ಕೆಂಪಗೆ ಮೋಟುಕಡ್ಡಿಗಳಂತೆ ಕುಷ್ಠ ದಂಡಾಣುಜೀವಿಗಳು ಕಾಣುತ್ತವೆ.

9 ನೆರಡಿ ರೋಗ ಹತ್ತಿಸಿದ ಗಿನಿಯಲೆಯ ಈಲಿಯಿಂದ ತೆಗೆದು ಬಣ್ಣ ಹಾಕಿದ್ದು. ಕೋಲುಗಳಂತಿರುವವು ನೆರಡಿ ದಂಡಾಣುಜೀವಿಗಳು. ಇವಕ್ಕೆ ಕವಚಗಳಿವೆ. ಕೆಳಗಿನವು ತಳಿರ್ವಸೆಯಲ್ಲಿ ಬೆಳಸಿ ಬೇರೆ ಬಣ್ಣಹಾಕಿದ ಬೀಜಕಣಗಳು.

10 ಕಂಕೋಶಉರಿತ ರೋಗಿಯ ಮೂತ್ರದಿಂದ ತೆಗೆದು ಬಣ್ಣಹಾಕಿದ ಹೆಗ್ಗರುಳ ದಂಡಾಣುಜೀವಿಗಳು ಕೆಂಪಗಿವೆ. ಬಲಕ್ಕೆ ಮೇಲೇರುವವು ಎಳೆಯ ಅಗಾರ್ ತಳಿರ್ವಸೆಯಲ್ಲಿ ಬೆಳೆದವು. ಬಲಕ್ಕೆ ಕೆಳಗಿರುವವು ತಳಿರ್ವಸೆಯಲ್ಲಿ ಬೆಳೆದವು.

11 ಅಗಾರ್ ತಳಿರ್ವಸೆಯಲ್ಲಿ ಬೆಳೆಸಿದ ಸೊಕ್ಕಿನ ಜ್ವರದ ಎಳೆಯ ದಂಡಾಣುಜೀವಿಗಳು ಎಡಗಡೆ ಇವೆ. ಬಲಗಡೆ ಇರುವವು ಬೆಳೆದಿವೆ.

12 ತಳಿರ್ವಸೆಯಲ್ಲಿ ಬೆಳೆಸಿ ಬಣ್ಣಹಾಕಿದ ಹೀಗ ಅಮಶಂಕೆಯ ಎಳೆಯ ದಂಡಾಣುಜೀವಿಗಳು.













**ಮಾನವನಲ್ಲಿ ರೋಗಕಾರಕ ಏಕಾಣುಜೀವಿಗಳ ಕೆಲವು ಮುಖ್ಯ ಗುಂಪುಗಳು**

| ಏಕಾಣುಜೀವಿ | ರೋಗ | ಮದ್ದು ಚಿಕಿತ್ಸೆ | ಷರಾ |
|---|---|---|---|
| ಉರಿಶೀತದ ರಕ್ತಾನುರಾಗಿ | ಉರಿಶೀತ, ಮಿದುಳು ಪೊರೆಯುರಿತ | ಮಿದುಳು ಪೊರೆಯುರಿತಕ್ಕೆ ರೋಧರಸಿಕೆ ಸ್ಟ್ರೆಪ್ಟೊಮೈಸಿನ್ | ಉರಿಶೀತಕ್ಕೆ ಮದ್ದಿಲ್ಲ |
| ಊರುಬಾಡುಬೇನೆ ಕದಿರುಜೀವಿ | ಊರುಬಾಡುಬೇನೆ | ಜೀವವಿಷರೋಧಕ | ಆಹಾರ ವಿಷವೇರಿಕೆ, ಸೋಂಕಲ್ಲ |
| ಎಸ್ಕರೀಷನ ಹೆಗ್ಗರುಳಜೀವಿ | ಎಳೆಗೂಸುಗಳ ಉಚ್ಚಾಟ | ಸಲ್ಫಡಯಜೀನ್, ಕ್ಲೋರಾಂ ಫೆನಿಕಾಲ್ | .... |
| ಕಾಮಾಲೆ ರಕ್ತಸುರಿತದ ತೆಳುಸುರುಳಿ | ವೀಲನ ರೋಗ | ಪೆನಿಸಿಲಿನ್? | ಇಲಿಕಡಿತದ ರೋಗ |
| ಕಾಲರದ ಬಳುಕಜೀವಿ | ಕಾಲರ | ಸಲ್ಫೋನೇಮೈಡುಗಳು, ಜೀವಿರೋಧಕಗಳು | ರೋಗಲಕ್ಷಣ ಚಿಕಿತ್ಸೆ ಬೇಕು |
| ಕಿರಣಣಬೆ ವರ್ಗ | ಕಿರಣಣಬೇನೆ ಗಲ್ಲಕಟ್ಟು<br>ಹುತ್ತಗಾಲು<br>ಇಲಿಕಡಿತದ ಜ್ವರ | ಪೆನಿಸಿಲಿನ್, ಟೆರ್ರಮೈಸಿನ್, ಆರಿಯೊಮೈಸಿನ್<br>...<br>... | ಉಗ್ರವಲ್ಲ<br>...<br>ಇಲಿಯ ಮೂಗಿನ ಪರಪಿಂಡಿ |
| ಕುಷ್ಠದ ಅಣಬೆಯ ಏಕಾಣುಜೀವಿ | ಕುಷ್ಠರೋಗ | ಡ್ಯಾಪ್ಸೋನ್ | |
| ಸರಕಾಯ್ಜೀವಿಗಳು | ಕೆಂಜ್ವರ, ವಿಸರ್ಪ, ಮೆಂಡಿಕೆಯುರಿತ, ಬಾಣಂತಿ ಜ್ವರ, ಕೀಲುವಾತದ ಜ್ವರ, ಪುಪ್ಪುಸ ಉರಿತ | ಸಲ್ಫೋನೇಮೈಡುಗಳು, ಪೆನಿಸಿಲಿನ್ | ... |
| ಸುರುಳಿಕ ಜೀವಿ | ಇಲಿಕಡಿತದ ಒಂದು ಜ್ವರ | ಸೋಮಲ, ಪೆನಿಸಿಲಿನ್ | .... |
| ಸೆಟೆಬೇನೆ ಕದಿರುಜೀವಿ | ಸೆಟೆಬೇನೆ | ಜೀವವಿಷರೋಧಕ | ಗಾಯದ ಸೋಂಕು |
| ಷೀಗಜೀವಿ ವರ್ಗ | ಏಕಾಣುಜೀವಿಗಳಿಂದಾದ ಆಮಶಂಕೆ | ಸಲ್ಫೋನೇಮೈಡುಗಳು | ... |
| ಹೊಂಬಣ್ಣ ಗುತ್ತಿಕಾಯ್ಜೀವಿಗಳು | ಕುರುಗಳು, ಗಾಯ ಕೀವು, ಆಹಾರ ವಿಷವೇರಿಕೆ | ಸಲ್ಫೋನೇಮೈಡುಗಳು ಪೆನಿಸಿಲಿನ್. ಟೆರ್ರಮೈಸಿನ್ ಆರಿಯೊಮೈಸಿನ್ | ... |

(ಡಿ.ಎಸ್.ಎಸ್.)

**ಏಕಾಣುಜೀವಿಶಾಸ್ತ್ರ :** ಅತ್ಯಂತ ಕೆಳದರ್ಜೆಯ ಮತ್ತು ಒಂದೇ ಕೋಶವಿರುವ ಜೀವಿಗಳಾದ ಏಕಾಣುಜೀವಿಗಳ (ಬ್ಯಾಕ್ಟೀರಿಯಾ) ಶಾಸ್ತ್ರೀಯ ಅಭ್ಯಾಸ (ಬ್ಯಾಕ್ಟೀರಿಯಾಲಜಿ). ಈ ಶಾಸ್ತ್ರದ ಶಾಖೆಗಳು ಅನೇಕ ವಿಜ್ಞಾನ ಕ್ಷೇತ್ರಗಳಲ್ಲಿ ವ್ಯಾಪಿಸಿವೆ. ಉದಾಹರಣೆಗೆ ವೈದ್ಯವಿಜ್ಞಾನದ ಸೂಕ್ಷ್ಮಜೀವಿಶಾಸ್ತ್ರ (ಮೈಕ್ರೊಬಯಾಲಜಿ), ಕೃಷಿ ವಿಜ್ಞಾನದ ಭೂ ಏಕಾಣುಜೀವಿಶಾಸ್ತ್ರ (ಸಾಯಿಲ್ ಬ್ಯಾಕ್ಟೀರಿಯಾಲಜಿ), ಕೈಗಾರಿಕಾ ಕ್ಷೇತ್ರದ ಏಕಾಣುಜೀವಿಶಾಸ್ತ್ರ (ಇಂಡಸ್ಟ್ರಿಯಲ್ ಬ್ಯಾಕ್ಟೀರಿಯಾಲಜಿ)—ಇತ್ಯಾದಿ.

ಒಂದೇ ಕೋಶವುಳ್ಳ ಈ ಜೀವಿಗಳು ಅತಿಸೂಕ್ಷ್ಮ. ಇವು ಕಣ್ಣುಗಳಿಗೆ ಅಗೋಚರ. ಸೂಕ್ಷ್ಮದರ್ಶಕಗಳ ಮೂಲಕ ಮಾತ್ರ ಇವನ್ನು ನೋಡಬಹುದು. ಇವುಗಳಲ್ಲಿ ಅನೇಕ ವಿಧಗಳಿವೆ. ಕೆಲವು ಮಾನವವರ್ಗಕ್ಕೆ ಉಪಕಾರಿಗಳು ಮತ್ತೆ ಕೆಲವು ಅಪಕಾರಿಗಳು.

ಏಕಾಣುಜೀವಿಗಳು ಪ್ರಾಣಿವರ್ಗಕ್ಕೆ ಸೇರಿದವುಗಳೇ ಅಥವಾ ಸಸ್ಯವರ್ಗಕ್ಕೆ ಸೇರಿದವೇ ? ಸಸ್ಯವರ್ಗಕ್ಕೆ ಸೇರಿದ ಶೈವಲ ಮತ್ತು ಶಿಲೀಂಧ್ರಗಳಿಗಿಂತಲೂ ಪ್ರಾಣಿವರ್ಗಕ್ಕೆ ಸೇರಿದ ಮೂಲಜೀವಿಗಳಿಗಿಂತಲೂ (ಪ್ರೋಟೊಜೋವಾ) ಇವು ಮೂಲಜೀವಿಗಳೆಂದು ಪರಿಗಣಿಸಲಾಗಿದೆ. ಹೋಲಿಕೆಯಲ್ಲಿ ಶೈವಲ ಶಿಲೀಂಧ್ರಗಳಿಗೇ ಸಮೀಪ ಸಂಬಂಧ. ಆದ್ದರಿಂದ ಏಕಾಣುಜೀವಿಗಳನ್ನು ಸ್ಕೀಜೋಮೈಸೀಟ ಎಂಬ ದಂಡಾಣುಜೀವಿಗಳ ಗುಂಪಿನಲ್ಲಿ ಶೈವಲ ಶಿಲೀಂಧ್ರಗಳ ನಡುವೆ ತೋರಿಸಲಾಗಿದೆ.

ಪೂರ್ವೇತಿಹಾಸ : ಈ ಶಾಸ್ತ್ರ ಇತ್ತೀಚಿನದೆಂದೇ ಹೇಳಬಹುದು. ಸೂಕ್ಷ್ಮದರ್ಶಕವನ್ನು ಕಂಡುಹಿಡಿದ ಅನಂತರವೇ ಏಕಾಣುಜೀವಿಗಳ ಅರಿವು ನಮಗೆ ಉಂಟಾದುದು. 1592ರಲ್ಲಿ ಎಚ್. ಜಾನ್‌ಸನ್ ಸಂಯುಕ್ತ ಸೂಕ್ಷ್ಮದರ್ಶಕವನ್ನು (ಕಾಂಪೌಂಡ್ ಮೈಕ್ರೊಸ್ಕೋಪ್) ಕಂಡುಹಿಡಿದನಾದರೂ ಅದರಲ್ಲಿ ಏಕಾಣುಜೀವಿಗಳಷ್ಟು ಸೂಕ್ಷ್ಮಜೀವಿಗಳನ್ನು ಕಾಣಲು ಸಾಧ್ಯವಾಗಲಿಲ್ಲ. 1659ರಲ್ಲಿ ಎ. ಕರ್ಶರ್ ಎಂಬ ವಿಜ್ಞಾನಿ ಹುಳಿಯಾದ ಹಾಲಿನಲ್ಲಿ ಹಾಗೂ ಕೊಳೆಯುತ್ತಿರುವ ಮಾಂಸದಲ್ಲಿ ಅತಿಪುಟ್ಟ ಸೂಕ್ಷ್ಮಜೀವಿಗಳನ್ನು ಕಂಡುದಾಗಿ ತಿಳಿಸಿದ. ಆದರೆ ಇವು ಏಕಾಣುಜೀವಿಗಳೆಂದು ಹೇಳಲು ಸಾಕಷ್ಟು ಆಧಾರವಿರಲಿಲ್ಲ. ಇವನ್ನು ಮೊಟ್ಟಮೊದಲು ನೋಡಿದವ ಪ್ರಾಯಶಃ ಎ. ಫಾನ್ ಲ್ಯೂವೆನ್‌ಹಾಕ್ (ಡಚ್) ಎಂದು ಊಹಿಸಬಹುದು. ಈತ ನೀರು ಜೊಲ್ಲು ಇತ್ಯಾದಿಯಲ್ಲಿ ತಾನು ಕಂಡ ಕೆಲವು ಸಜೀವ ಸೂಕ್ಷ್ಮಪ್ರಾಣಿಗಳ ವರ್ಣನೆಯನ್ನು ಮಾಡಿ ಇದನ್ನು ಒಳಗೊಂಡ ಲೇಖನವನ್ನು ಲಂಡನ್ನಿನ ರಾಯಲ್ ಸೊಸೈಟಿಯ ಅವಗಾಹನೆಗೆ ಒಪ್ಪಿಸಿದ. ಏಕಾಣುಜೀವಿಗಳಲ್ಲಿ ಕೆಲವು ದೊಡ್ಡವು ಕೆಲವು ಚಿಕ್ಕವು. ಲ್ಯೂವೆನ್‌ಹಾಕ್ ಕಂಡ ಜೀವಿಗಳು ದೊಡ್ಡವಿರಬೇಕು.

ಪ್ರತಿಯೊಂದು ರೋಗಕ್ಕೂ ಕಾರಣವಾದ ಒಂದು ನಿರ್ದಿಷ್ಟ ಸೂಕ್ಷ್ಮಜೀವಿ ಇದ್ದೇ ಇರುತ್ತದೆಂಬ ಸಿದ್ಧಾಂತವನ್ನು 1762ರಲ್ಲಿ ಎಂ.ಎ.ಪ್ಲೆನ್‌ಸಿಜ್ ಪ್ರತಿಪಾದಿಸಿದ. ಅಷ್ಟೆ ಅಲ್ಲದೆ ಈ ಜೀವಿಗಳು ದೇಹದಿಂದ ಹೊರಗಡೆಯೂ ಬದುಕಿ ಬೆಳೆಯಬಲ್ಲವು ಹಾಗೂ ಇವು ಗಾಳಿಯಲ್ಲಿ ಒಂದು ಕಡೆಯಿಂದ ಮತ್ತೊಂದೆಡೆಗೆ ಹಾಯುವುವು ಎಂದೂ ಹೇಳಿದ. ಆದರೆ ಏಕಾಣುಜೀವಿಗಳ ವಿಚಾರದಲ್ಲಿ ಈ ಸಮಯದಲ್ಲಿ ನಮ್ಮ ಜ್ಞಾನ ಅಷ್ಟು ಮುಂದುವರಿದಿರಲಿಲ್ಲ. ಆದ್ದರಿಂದ ಈ ಸಿದ್ಧಾಂತ ವಿಜ್ಞಾನಿಯ ದೂರದರ್ಶಿತ್ವವನ್ನು ಎತ್ತಿಹಿಡಿಯುತ್ತದೆಂದು ಹೇಳಬಹುದು. ಮೊಟ್ಟಮೊದಲು ಸಂಯುಕ್ತ ಸೂಕ್ಷ್ಮದರ್ಶಕದಲ್ಲಿ ವಸ್ತುವನ್ನು 1000ದಷ್ಟು ದೊಡ್ಡದನ್ನಾಗಿ ಕಾಣುವಂತೆ ಅಳವಡಿಸಿದ ಖ್ಯಾತಿ ಜಿ. ಡೋಲೆಂಡ್ ಎಂಬುವನಿಗೆ ಸಲ್ಲತಕ್ಕದ್ದು (1844). ದೊಡ್ಡದೇನೋ ಆಯಿತು ಆದರೆ ವಿವರ ಸ್ಫುಟವಾಗಲಿಲ್ಲ. 1870ರಲ್ಲಿ ಜಿ. ಎಬ್ಬೆ ಎಂಬ ವಿಜ್ಞಾನಿ ಸಂಯುಕ್ತ ಸೂಕ್ಷ್ಮದರ್ಶಕವನ್ನು ಎಲ್ಲ ವಿಧಗಳಿಂದಲೂ ಸಮರ್ಪಕವಾಗಿರುವಂತೆಯೂ ವಸ್ತುಗಳು ಸ್ಫುಟವಾಗುವಂತೆಯೂ ಅನೇಕ ಮಾರ್ಪಾಡುಗಳನ್ನು ಮಾಡಿ ಪರಿಷ್ಕರಿಸಿದ. ಈ ಹೇಳಿಗೆ ತಕ್ಕ ಮಟ್ಟಿಗೆ ಏಕಾಣುಜೀವಿಗಳ ಪರಿಚಯವಾಗಿತ್ತೆಂದು ಹೇಳಬಹುದು. ಜೀವರಾಶಿಯಲ್ಲಿ ಇವುಗಳ ಸ್ಥಾನ ನಿಷ್ಕರ್ಷೆಯಾಗಿತ್ತು. ಹಾಗೂ ಏಕಾಣುಜೀವಿಗಳಲ್ಲೇ ವಿವಿಧ ಜಾತಿಯ ವಿಂಗಡಣೆಗೂ ಗಮನ ಕೊಡಲಾಗಿತ್ತು. ಪ್ರತಿಜಾತಿಯ ಏಕಾಣುಜೀವಿಗಳಲ್ಲಿಯೂ ಆಯಾ ಜಾತಿಯ ಪೂರ್ಣಲಕ್ಷಣಗಳು ಇದ್ದುದು ವಿಂಗಡಣೆಗೆ ಸಹಾಯವಾಯಿತು. ಅವುಗಳ ಲಕ್ಷಣಗಳಲ್ಲೇ ವೈವಿಧ್ಯ ಕಂಡು ಬಂದಿದ್ದರೆ ಈ ವಿಂಗಡಣೆ ಕಷ್ಟಸಾಧ್ಯವಾಗುತ್ತಿತ್ತು. ಕೆಲವು ಏಕಾಣುಜೀವಿಗಳ ಸಂತಾನೋತ್ಪತ್ತಿ ಬೀಜಕೋಶಗಳಿಂದ (ಸ್ಪೋರ್ ಫಾರ್ಮೇಶನ್) ಎಂಬುದನ್ನು 1857ರಲ್ಲಿ ಕಾನ್ ಕಂಡುಹಿಡಿದ. ಅದೇ ವರ್ಷದಲ್ಲಿ ಏಕಾಣುಜೀವಿಗಳ ಅಧ್ಯಯನ, ಸಂಶೋಧನೆಗಳಿಗೆ ಹೆಸರಾಂತ ಲೂಯಿ ಪಾಶ್ಚರ್ ಹಾಲು ಹುಳಿಯಾಗುವುದು ಒಂದು ವಿಧದ ಏಕಾಣುಜೀವಿಗಳಿಂದ ಎಂದು ಆಧಾರಗಳ ಸಮೇತ ಮಂಡಿಸಿದ. ಯೂರಿಯ ಲವಣ ಹುದುಗಿನಿಂದ ಅಮೋನಿಯ ಉತ್ಪಾದನೆಯಾಗುವುದೂ ಒಂದು ರೀತಿಯ ಏಕಾಣುಜೀವಿಗಳ ಚಟುವಟಿಕೆಯಿಂದಾಗಿ ಎಂದು ಸ್ಪುತಪಡಿಸಿದ (1862). ವಸ್ತುಗಳು ಕೊಳೆತು ನಾರುವುದೂ ಏಕಾಣುಜೀವಿಗಳ ಕ್ರಿಯೆಯಿಂದಲೇ ಎಂಬುದೂ ತಿಳಿಯಿತು.

ಏಕಾಣುಜೀವಿಗಳ ವಿಚಾರದಲ್ಲಿ ನಮ್ಮ ಜ್ಞಾನ ಬೆಳೆಯುವ ಮುನ್ನ ಎರಡು ವಿಚಾರಗಳನ್ನು ಪ್ರತಿಪಾದಿಸಲಾಗಿತ್ತಾದರೂ ಅವು ಸಂಶೋಧನೆಗಳ ಆಧಾರವಿಲ್ಲದೆ ಸಪುಸ್ಯೆಗಳಾಗಿಯೇ ಉಳಿದಿದ್ದುವು. ಇದ್ದಕ್ಕಿದ್ದಂತೆ ಪುನರ್ಜನ್ಮ ತಾಳುವ ಸಿದ್ಧಾಂತ (ಥಿಯೊರಿ ಆಫ್ ಸ್ಪಾಂಟೇನಿಯಸ್ ರೀಜನರೇಶನ್) ಒಂದು ; ಹುದುಗುವಿಕೆಗೂ ಮಾನವನ ಕೆಲವು ರೋಗಗಳಿಗೂ ಇರುವ ಸಂಬಂಧ ಎರಡು. ಪುನರ್ಜನ್ಮದ ಸಿದ್ಧಾಂತಕ್ಕೆ ಬುಡವಿಲ್ಲವೆಂಬುದರ ಅರಿವಾಯಿತು. ಹುದುಗುವಿಕೆ ಏಕಾಣುಜೀವಿಗಳಿಲ್ಲದೆ ಸಾಧ್ಯವಿಲ್ಲವೆಂಬುದೂ ಪಾಶ್ಚರ್ ನಡೆಸಿದ ಸಂಶೋಧನೆ ಪ್ರಯೋಗಗಳಿಂದ ತಿಳಿದುಬಂತು.

ಏಕಾಣುಜೀವಿಗಳಿಗೆ ಕೆಲವು ವರ್ಣದ್ರವ್ಯಗಳೊಂದಿಗೆ ಸಂಪರ್ಕ ಕಲ್ಪಿಸಿ ಕೆಲವು ವಿಶಿಷ್ಟ ರೀತಿಯ ಕ್ರಮಗಳನ್ನನುಸರಿಸಿ ಅವು ಬಣ್ಣ ಹೀರುವಂತೆ ಮಾಡಿ ಬಣ್ಣ ಕಟ್ಟುವ ಮರ್ಮವನ್ನು ವೈಗರ್ಟ್ ಎಂಬಾತ ಕಂಡುಹಿಡಿದ. ವಿವಿಧ ವರ್ಣದ್ರವ್ಯಗಳನ್ನು ಹೀರುವ ಲಕ್ಷಣಗಳಿಂದ ಆಯಾ ಏಕಾಣುಜೀವಿಗಳನ್ನು ಸುಲಭವಾಗಿ ಗೊತ್ತುಹಚ್ಚುವುದಕ್ಕೆ ಸಾಧ್ಯವಾಯಿತೊಂದೇ ಅಲ್ಲದೆ ವಿವಿಧ ಏಕಾಣುಜೀವಿಗಳ ವಿಂಗಡಣೆಗೂ ಸಹಾಯವಾಯಿತು.

ಪ್ರಖ್ಯಾತ ವಿಜ್ಞಾನಿ ರಾಬರ್ಟ್ ಕಾಕ್, ವಿವಿಧ ಏಕಾಣುಜೀವಿಗಳನ್ನು ಸಂಶೋಧನಾಲಯದಲ್ಲಿ ಬೆಳೆಸಿ, ಬೇಕಾದವನ್ನು ಪ್ರತ್ಯೇಕವಾಗಿ ವಿಂಗಡಿಸಿ ಬೆರಕೆಯಿಲ್ಲದ ಒಂದೇ ವಿಧದ ಏಕಾಣುಜೀವಿಗಳನ್ನು ಪಡೆಯುವ ವಿಧಾನ ಕಂಡುಹಿಡಿದ. ಅಗಾರ್ ಅಗಾರ್ ಎಂಬ ಹುಲ್ಲನ್ನು ಉಪಯೋಗಿಸಿಕೊಂಡು ಅದಕ್ಕೆ ಏಕಾಣುಜೀವಿ ಬೆಳೆಯಲು ಹಿತಕರವಾದ ಆಹಾರ ಸತ್ತ್ವಗಳನ್ನು ಸೇರಿಸಿ ಅವು ಬೆಳೆಯುವಂತೆ ಅಳವಡಿಸಿಕೊಂಡ.

ಇದೇ ಸಮಯದಲ್ಲಿ ಪಾಶ್ಚರ್ ತನ್ನ ಸಂಶೋಧನೆಗಳಿಂದ ಕೋಳಿಗಳ ಕಾಲರಾ ರೋಗ ಹಾಗೂ ಪ್ರಾಣಿಗಳ ಆಸ್‌ಥ್ರಾಕ್ಸ್ ರೋಗಗಳಿಂದ ಪ್ರತಿಬಂಧಕ ಚುಚ್ಚುಮದ್ದುಗಳನ್ನು ಕಂಡುಹಿಡಿಯುವುದರಲ್ಲಿ ಯಶಸ್ವಿಯಾದ. ರೋಗಗಳನ್ನು ಉಂಟುಮಾಡುವ ಏಕಾಣುಜೀವಿಗಳನ್ನು ಸಂಶೋಧನಾಲಯದಲ್ಲಿ ಬೆಳೆಸಿ ಮೊದಲ ಪೀಳಿಗೆಯ ಜೀವಿಗಳಿಂದ ಎರಡನೆಯದು, ಎರಡನೆಯ ಪೀಳಿಗೆಯಿಂದ ಮೂರನೆಯದು ಹೀಗೆ ಕ್ರಮವಾಗಿ ಪೀಳಿಗೆಯಿಂದ ಪೀಳಿಗೆಯನ್ನು ಬೆಳೆಸುತ್ತ ಬಂದಾಗ ಕಡೆಕಡೆಯ ಪೀಳಿಗೆಯ ಏಕಾಣುಜೀವಿಗಳಿಂದ ಆಯಾ ಪ್ರಾಣಿಗಳ ದೇಹಕ್ಕೆ ಸೋಂಕು ಅಂಟಿಸಿದಾಗ ಅವು ರೋಗಪ್ರಚೋದಕ ಶಕ್ತಿಯನ್ನು ಕಳೆದುಕೊಂಡದ್ದು ಕಂಡುಬಂತು. ಅಷ್ಟೇ ಅಲ್ಲದೆ ಇನ್ನೂ ಮಹತ್ತರವಾದ ಪ್ರಭಾವ ಬೀರುವ ಪರಿಣಾಮವೆಂದರೆ ಈ ನಿಶ್ಚೇತನ ಏಕಾಣುಜೀವಿಗಳನ್ನು ದೇಹಕ್ಕೆ ಅಂಟಿಸಿದ ಕೆಲವು ದಿವಸಗಳ ತರುವಾಯ ರೋಗ ಪ್ರಚೋದಕ ಏಕಾಣುಜೀವಿಗಳಿಂದ ಸೋಂಕು ಅಂಟಿಸಿದಾಗ ಪ್ರಾಣಿಗಳಿಗೆ ರೋಗ ತಗುಲಲಿಲ್ಲ. ಅವು ಆಗ ರೋಗನಿರೋಧಕ ಶಕ್ತಿಯನ್ನು ಪಡೆದಿದ್ದವು. ಇದರಿಂದ ಮುಂದೆ ಮಾನವ ಕುಲವನ್ನೇ ಪೀಡಿಸುತ್ತಿದ್ದ ಅನೇಕ ಭೀಕರ ಸೋಂಕು ಜಾಡ್ಯಗಳಿಗೆ ನಿರೋಧಶಕ್ತಿಯನ್ನು ಪ್ರಚೋದಿಸುವ ನಿರೋಧಕಗಳನ್ನು ಕಂಡುಹಿಡಿಯಲು ಮಾರ್ಗವಾಯಿತೆಂದು ಹೇಳಬಹುದು.

ಇಲ್ಲಿಂದ ಮುಂದೆ ಏಕಾಣುಜೀವಿಗಳ ವಿಚಾರವಾಗಿ ನಮ್ಮ ಜ್ಞಾನ ಅದ್ಭುತವಾಗಿ ಬೆಳೆಯುತ್ತ ಬಂದಿದೆ. ಮಾನವಕುಲದಲ್ಲಿ, ಪ್ರಾಣಿಗಳಲ್ಲಿ ಹಾಗೂ ಸಸ್ಯಗಳಲ್ಲಿ ಕಂಡುಬರುವ ಅನೇಕ ರೋಗಗಳಿಗೆ ವಿವಿಧ ರೀತಿಯ ಏಕಾಣುಜೀವಿಗಳೇ ಕಾರಣವೆಂಬುದೂ ತಿಳಿಯಿತು. ಅನೇಕ ಮೂಢನಂಬಿಕೆಗಳೂ ಮಾಯವಾದವು. ಉದಾಹರಣೆಗೆ ಏಕಾಣುಜೀವಿಗಳೆಲ್ಲ ಒಂದಲ್ಲ ಒಂದು ರೋಗಕ್ಕೆ ಕಾರಣವೆಂಬ ನಂಬಿಕೆಗೆ ಬುಡವಿಲ್ಲವೆಂಬುದು ತಿಳಿದುಬಂತು. ಮಾನವಕೋಟಿಗೆ ಮಹತ್ತರವಾದ ಉಪಕಾರ ಮಾಡುವ ಹಾಗೂ ಕೃಷಿಕೈಗಾರಿಕೆ ಮತ್ತಿತರ ಕ್ಷೇತ್ರಗಳಲ್ಲಿಯೂ ಉಪಯೋಗಕರವಾದ ಏಕಾಣುಜೀವಿಗಳು ಹೇರಳವಾಗಿವೆ ಎಂಬುದೂ ಅರಿವಾಯಿತು.

ಇಪ್ಪತ್ತನೆಯ ಶತಮಾನದಲ್ಲಿ ಇಂದಿನವರೆಗೆ ಅನೇಕ ಹೊಸ ವಿಷಯಗಳು ಸಂಶೋಧನಾಲಯಗಳಲ್ಲಿನ ಪ್ರಯೋಗಗಳಿಂದ ಹೊರಬಿದ್ದಿವೆ ಮತ್ತು ಹೊರಬೀಳುತ್ತಲೂ ಇವೆ. ಏಕಾಣುಜೀವಿಗಳ ವಿಚಾರದಲ್ಲಿ ನಮ್ಮ ಜ್ಞಾನ ಅತ್ಯಂತ ಉನ್ನತಮಟ್ಟದಲ್ಲಿದೆ ಎಂದು ಹೇಳಬಹುದಾದರೂ ಇನ್ನೂ ಹೆಚ್ಚು ವಿಷಯಗಳನ್ನು ತಿಳಿಯುವ ದಾಹವಿದ್ದೇ ಇರುವುದರಿಂದ ಸತತವಾಗಿ ಪ್ರಯೋಗ ಮತ್ತು ಸಂಶೋಧನೆಗಳು ನಡೆಯುತ್ತಲೇ ಇವೆ.

ಏಕಾಣುಜೀವಿಗಳ ಇತಿಹಾಸದ ಹಿನ್ನೆಲೆಯಲ್ಲಿ ಅವುಗಳ ರೂಪ, ರಚನೆ, ಶೋಷಕ್ರಿಯೆ ಇತ್ಯಾದಿಗಳನ್ನು ತಿಳಿಯೋಣ. ಸಜೀವ ವಸ್ತುಗಳಲ್ಲಿ ಏಕಾಣುಜೀವಿಗಳೇ ಅತ್ಯಂತ ಪುಟ್ಟವು. ಇದರಿಂದ, ಏಕಾಣುಜೀವಿಗಳನ್ನು ಅಣುಜೀವಿಗಳು,

ಜೀವಾಣುಗಳು ಎಂಬ ಇತರ ಹೆಸರುಗಳಿಂದಲೂ ಕರೆಯುವುದುಂಟು. ಇವುಗಳಲ್ಲಿ ಕೆಲವು ದುಂಡಾಗಿರುತ್ತವೆ (ಕಾಕೈ), ಕೆಲವು ಉದ್ದುದ್ದ (ಬ್ಯಾಸಿಲೈ), ಮತ್ತೆ ಕೆಲವು ಸುರುಳಿಗಳು (ಸ್ಪೈರಿಲಂ) ಇನ್ನು ಕೆಲವು ತಿರುಪುಗಳು (Spirochaetes). ಇವನ್ನು ಕೇವಲ ಬರಿಗಣ್ಣಿನಿಂದಾಗಲೀ ಅಥವಾ ಸಾಧಾರಣವಾದ ಸೂಕ್ಷ್ಮದರ್ಶಕದಲ್ಲಾಗಲೀ ಕಾಣಲು ಸಾಧ್ಯವಿಲ್ಲ. ಉದ್ದದಲ್ಲಿ 0.001 ಮಿ.ಮೀ. (=1 ಮೈಕ್ರಾನ್, ಸಂಕೇತ $\mu$). ಅಥವಾ $1\mu$ ನಿಂದ $2$–$5\mu$ ಗಳಷ್ಟು ಗಾತ್ರದಲ್ಲಿ $0.5\mu$ ನಷ್ಟು ಇರುವುದು ಸಾಮಾನ್ಯ. 2,50,000 ಜೀವಿಗಳು ಒಂದು ಸೂಜಿಯ ತುದಿಯಲ್ಲಿರಬಹುದು. ಸೂಕ್ಷ್ಮದರ್ಶಕ ಕಡೇಪಕ್ಷ ಇವನ್ನು 1000ದಷ್ಟು ದೊಡ್ಡದಾಗಿ ಕಾಣುವಂತೆ ಮಾಡಿದರೆ ಮಾತ್ರ ಇವನ್ನು ನೋಡಬಹುದು.

ಏಕಾಣುಜೀವಿ ಜೀವದ್ರವ್ಯ ತುಂಬಿದ ಒಂದು ಕೋಶ. ಕೋಶಕ್ಕೆ ಹೊರ ಆವರಣ ಇದೆ. ಅದರ ಒಳಸುತ್ತ ಒಂದು ಪೊರೆ. ಹೊರಗಡೆ ಸುತ್ತಲೂ ಲೋಳೆವಸ್ತು ಆವರಿಸಿಕೊಂಡಿದೆ. ಇದು ಪಾಲಿಸ್ಯಾಕ್ಕರೈಡ್ ಎಂಬ ರಾಸಾಯನಿಕದ ಗುಂಪಿಗೆ ಸೇರಿದ್ದು. ಕೆಲವು ಏಕಾಣುಜೀವಿಗಳಿಗೆ ಸುತ್ತಲೂ ಲೋಳೆವಸ್ತು ಇರುವುದಿಲ್ಲ, ಆದರೆ ಅನೇಕ ಏಕಾಣುಜೀವಿಗಳ ಒಂದು ಗುಂಪಿಗೆ ಲೋಳೆವಸ್ತು ಆವರಿಸಿಕೊಂಡಿರಬಹುದು (ಜೂಗ್ಲಿಯಾ). ಕೆಲವಕ್ಕೆ ಚಾವಟಿಯನ್ನು ಹೋಲುವ ಕಶಾಂಗ (ಫ್ಲಾಗೆಲಂ) ಇರುತ್ತದೆ. ಇದರ ಸಹಾಯದಿಂದ ಅವು ಚಲಿಸಲು ಸಾಧ್ಯ. ಈ ಕಶಾಂಗ ಒಂದೇ ಇರಬಹುದು ಅಥವಾ ಬಹುಸಂಖ್ಯೆಯಲ್ಲಿರಬಹುದು. ಕೆಲವಕ್ಕೆ ಕುಚ್ಚಿದ್ದಂತೆ ಇರುತ್ತವೆ. ಕಶಾಂಗಗಳು ವಿವಿಧ ರೀತಿಯಲ್ಲಿ ಕಾಣಿಸಿಕೊಳ್ಳುತ್ತವೆ.

ಪ್ರತಿ ಏಕಾಣುಜೀವಿಯ ಕೋಶದ್ರವ್ಯದೊಳಗೆ ಕೇಂದ್ರ (ನ್ಯೂಕ್ಲಿಯಸ್) ಉಂಟು. ಕೇಂದ್ರದಲ್ಲೂ ಇತರ ಜೀವಿಗಳ ಕೇಂದ್ರದಲ್ಲಿರುವ ಡೆಸಾಕ್ಸಿರಿಯಿಬೋ ನ್ಯೂಕ್ಲಿಯಿಕ್ ಆಮ್ಲ ಇರುತ್ತದೆ. ಜೀವಕಣಗಳ ವಿಭಜನೆಯ ಸಮಯದಲ್ಲಿ ಕಾಣುವ ಸೂಕ್ಷ್ಮ ತಂತುಗಳನ್ನು (ಮಿಟೋಟಿಕ್ ಫಿಗರ್ಸ್) ಇದರಲ್ಲೂ ಗಮನಿಸಲಾಗಿದೆ. ಕೋಶದ್ರವ್ಯದಲ್ಲಿ ಮರಳಿನಂತಿರುವ ಸೂಕ್ಷ್ಮ ಬಿಂದುಗಳನ್ನು ಕಾಣಬಹುದು. ಈ ಸೇರ್ಪಡೆಗಳಲ್ಲಿ (ಇನ್‌ಕ್ಲೂಶನ್ಸ್) ಮೇದಸ್ಸು ಇದೆ, ಕೋಶದಲ್ಲಿ ದುಂಡಗೆ ಅಥವಾ ಅಂಡಾಕಾರದಲ್ಲಿ ಪಾರದರ್ಶಕ ಜಾಗಗಳನ್ನು ನೋಡಬಹುದು. ಇವು ಸೂಕ್ಷ್ಮ ಕುಹರಗಳು (ವ್ಯಾಕ್ಯೂಲ್ಸ್). ಏಕಾಣುಜೀವಿಗಳ ಮತ್ತೊಂದು ವೈಶಿಷ್ಟ್ಯವೆಂದರೆ ಇವುಗಳ ಕೋಶದಲ್ಲಿ ಸಸ್ಯಗಳಲ್ಲಿರುವ ಪತ್ರಹರಿತ್ತು ಇರುವುದಿಲ್ಲ. ಆದ್ದರಿಂದ ಈ ವರ್ಗದ ಏಕಾಣು ಜೀವಿಗಳಲ್ಲಿ ದ್ಯುತಿಸಂಶ್ಲೇಷಣ ಕ್ರಿಯೆಗೆ ಅವಕಾಶವಿಲ್ಲ.

ಇತರ ಮೂಲ ಜೀವಿಗಳೊಂದಿಗೆ ಏಕಾಣುಜೀವಿಗಳ ಸ್ಥಾನ: ಏಕಾಣುಜೀವಿಗಳು ಮೂಲಸಸ್ಯಗಳನ್ನು ಹೋಲುತ್ತವೆ. ಉದಾಹರಣೆಗೆ ನೀಲಪಚ್ಚೆ ಪಾಚಿ ಮತ್ತು ಶಿಲೀಂಧ್ರಗಳಿಗೂ ಇವಕ್ಕೂ ಅನೇಕ ಹೋಲಿಕೆಗಳಿವೆ. ಆದ್ದರಿಂದಲೇ ಏಕಾಣು ಜೀವಿಗಳನ್ನು ಸಸ್ಯವರ್ಗದಲ್ಲಿ ಸೇರಿಸಲಾಗಿದೆ. ಮೂಲ ಪ್ರಾಣಿವರ್ಗದಲ್ಲಿ ಸೇರಿರುವ ಒಂದೇ ಜೀವಕೋಶವುಳ್ಳ ಅಮೀಬ, ಪ್ಯಾರಾಮೀಶಿಯಂ, ಪ್ಲಾಸ್ಮೋಡಿಯಂಗಳು (ಮಲೇರಿಯಾಕಾರಕ) ಈ ಏಕಾಣುಜೀವಿಗಳನ್ನು ಹೋಲುವುದಿಲ್ಲ.

ಏಕಾಣುಜೀವಿಗಳ ವರ್ಗೀಕರಣ ಅಷ್ಟು ಸುಲಭವಲ್ಲ. ಆದರೂ ಕೆಲವು ವಿಶಿಷ್ಟ ಲಕ್ಷಣಗಳನ್ನು ಉಪಯೋಗಿಸಿಕೊಂಡು ಇದನ್ನು ಮಾಡಲಾಗಿದೆ. ಅವು ಹೀಗಿವೆ: 1 ಆಕೃತಿ ರಚನೆ (ಮಾರ್ಫಾಲಜಿ), 2 ಜೀವವಸ್ತುಕರಣ (ಮೆಟಬಾಲಿಸಂ), 3 ಹುದುಗು ಮತ್ತು ಅದರ ಅಂತಿಮ ಉತ್ಪನ್ನ, 4 ಸಸಾರಜನಕ ಪರಿವರ್ತನೆ, 5 ಸಂತಾನವೃದ್ಧಿಗೆ ಆವಶ್ಯಕವಾಗಿ ಒದಗಿಸಬೇಕಾದ ಕೃತಕ ಆಹಾರಸತ್ತ್ವಾಂಶಗಳು, 6 ಸೋಂಕು ಪ್ರಾಣಿಗಳಿಗೆ ಅಂಟಿಸಿದಲ್ಲಿ ಅವುಗಳ ಮೇಲಾಗುವ ಪರಿಣಾಮ ಮತ್ತು ನಿರೋಧಶಕ್ತಿ.

ಏಕಾಣುಜೀವಿಗಳ ಗುಂಪಿಗೆ ಸೇರದ ಇನ್ನೂ ಕೆಲವು ಸೂಕ್ಷ್ಮ ಜೀವಿಗಳೂ ಇವೆ. ಇವು ರಿಕೆಟ್ಸಿಯೆ ಮತ್ತು ವೈರಸ್. ಇವು ಗಾತ್ರದಲ್ಲಿ ಏಕಾಣುಜೀವಿಗಳಿಗಿಂತ ಸಣ್ಣವೂ ಸೂಕ್ಷ್ಮವೂ ಆಗಿವೆ. ಅತಿ ಸೂಕ್ಷ್ಮಶೋಧಕಗಳಮೂಲಕವೂ ವೈರಸುಗಳು ಹಾಯಬಲ್ಲವು. ಎಚ್.ಟಿ. ರಿಕೆಟ್ಸ್ ಎಂಬ ವಿಜ್ಞಾನಿಯ ಯಶಸ್ವಿ ಸಂಶೋಧನೆಯಿಂದ ಪತ್ತೆಯಾದ ಸೂಕ್ಷ್ಮ ಜೀವಿಗಳಿಗೆ ರಿಕೆಟ್ಸಿಯೆ ಎಂಬ ಹೆಸರನ್ನೇ ಆತನ ಸ್ಮಾರಕವಾಗಿ ಇಡಲಾಯಿತು. ಇವು ಜೀವಂತ ಊತಕಗಳಲ್ಲಿ (ಟಿಶ್ಯೂಸ್) ಮಾತ್ರ ಬೆಳೆಯಬಲ್ಲವು. ಏಕಾಣುಜೀವಿಗಳಂತೆ ಕೃತಕ ಆಹಾರಸತ್ತ್ವಗಳನ್ನು ಒದಗಿಸಿದರೆ ಬೆಳೆಯಲಾರವು. ರಿಕೆಟ್ಸಿಯೆಗಳನ್ನು ಪುಟ್ಟ ಏಕಾಣುಜೀವಿಗಳೆನ್ನಬಹುದು ($0.3\mu$–$0.4\mu$). ರಿಕೆಟ್ಸಿಯೆ ಮತ್ತು ವೈರಸುಗಳು ಪೂರ್ಣ ಪರಾವಲಂಬಿಗಳು. ಇವುಗಳಲ್ಲಿ ಕೆಲವು ಮಾನವನಿಗೆ ರೋಗಕಾರಕಗಳೂ ಹೌದು. ಉದಾಹರಣೆಗೆ ಕಲ್ಡಡಾರ (ಟೈಫಸ್) ರಿಕೆಟ್ಸಿಯೆ ಸೂಕ್ಷ್ಮಾಣುಗಳಿಂದುಂಟಾಗುವ ರೋಗ. ನೆಗಡಿ, ಇನ್‌ಫ್ಲೂಯೆಂಜ, ಕಾಮಾಲೆ ಇವು ಒಂದೊಂದು ವಿಧದ ವೈರಸುಗಳ ಸೋಂಕಿನಿಂದ ಬರುವ ರೋಗಗಳು. ಇವನ್ನು ಎಲೆಕ್ಟ್ರಾನ್ ಸೂಕ್ಷ್ಮದರ್ಶಕದಲ್ಲಿ ಮಾತ್ರ ನೋಡಲು ಸಾಧ್ಯ.

ತಮ್ಮ ತಮ್ಮ ನಿತ್ಯಕರ್ಮಗಳನ್ನೆಸಗಲು ಜೀವಿಗಳಿಗೆ ಶಕ್ತಿ ಆವಶ್ಯಕ. ಏಕಾಣು ಜೀವಿಗಳು ಈ ಶಕ್ತಿಯನ್ನು ಅನೇಕ ವಿಧಗಳಲ್ಲಿ ಒದಗಿಸಿಕೊಳ್ಳುತ್ತವೆ. ಇವುಗಳಿಗೂ ಕೆಲವು ಕಿಣ್ವಗಳಿಗೂ (ಎಂಜೈಮುಗಳು) ನಿಕಟ ಸಂಬಂಧವಿರುವುದು ತಿಳಿದಿದೆ. ಇವನ್ನು ಉಪಯೋಗಿಸಿಕೊಂಡು ಬೇಕಾದ ಸಸಾರಜನಕ, ಪಿಷ್ಟ ಮತ್ತಿತರ ಜೈವಿಕ ವಸ್ತುಗಳ (ಆರ್ಗ್ಯಾನಿಕ್ ಮ್ಯಾಟರ್) ವಿಭಜನೆಯಿಂದ ಅವುಗಳನ್ನು ಮೂಲ ಅಂಶಗಳಿಗೆ ಪರಿವರ್ತಿಸಿಕೊಂಡು ತಮ್ಮ ಶಕ್ತಿ ಸಂಪಾದನೆ ಮಾಡಿಕೊಳ್ಳುತ್ತವೆ. ಕೆಲವು ಏಕಾಣುಜೀವಿಗಳಿಗೆ ಈ ರೀತಿ ಶಕ್ತಿಯನ್ನು ಪಡೆಯುವುದು ಅಸಾಧ್ಯ. ಅಂಥವು ಸರಳವಾದ ಆಹಾರವಸ್ತುಗಳು ಎಂದರೆ ಸಕ್ಕರೆ, ಜೈವಿಕಾಮ್ಲ (ಆರ್ಗ್ಯಾನಿಕ್ ಆಸಿಡ್), ಅಮೈನೋ ಆಮ್ಲ ಮತ್ತು ಆಲ್ಕೊಹಾಲ್ ಇತ್ಯಾದಿ ಅಂಶಗಳು ತಮ್ಮ ಕೋಶಪೊರೆಯನ್ನು ಒಳಹೊಕ್ಕು ಬಂದಾಗ ಅವನ್ನು ಪರಿವರ್ತಿಸಿಕೊಂಡು ಆವಶ್ಯಕವಾದ ಆಹಾರಾಂಶಗಳಿಂದ ಶಕ್ತಿಯನ್ನು ಪಡೆಯುತ್ತವೆ. ಮತ್ತೆ ಕೆಲವು ಏಕಾಣುಜೀವಿಗಳು ಕೇವಲ ಅಜೈವಿಕ (ಇನಾರ್ಗ್ಯಾನಿಕ್) ವಸ್ತುಗಳಿಂದ ಶಕ್ತಿ ಪಡೆಯುತ್ತವೆ. ಅಮೋನಿಯ, ಗಂಧಕ, ಹೈಡ್ರೊಜನ್ ಸಲ್ಫೈಡ್ ಇತ್ಯಾದಿ ಲವಣಗಳನ್ನು ಉತ್ಕರ್ಷಣ ಕ್ರಿಯೆಯಿಂದಲೂ ತಮ್ಮ ಸಂತಾನೋತ್ಪತ್ತಿಗೆ ಬೇಕಾಗುವ (ಹೊಸ ಕೋಶವನ್ನು ರೂಪಿಸಿಕೊಳ್ಳಲು) ಸಸಾರಜನಕ ಅಂಶಗಳನ್ನು ಅಮೋನಿಯ ಮತ್ತು ಇಂಗಾಲಾಮ್ಲಗಳಿಂದಲೂ ಪಡೆಯುತ್ತವೆ. ಅಂದರೆ ಕೆಲವು ಏಕಾಣುಜೀವಿಗಳು ಜೈವಿಕ ವಸ್ತುಗಳ ಪರಿವರ್ತನೆಯಿಂದ ಮತ್ತೆ ಕೆಲವು ಅಜೈವಿಕ ವಸ್ತುಗಳ ಪರಿವರ್ತನೆಯಿಂದ ತಮ್ಮ ಜೀವಪೋಷಣೆಗೆ ಅತ್ಯಾವಶ್ಯಕವಾದ ಆಹಾರ ಶಕ್ತಿಯನ್ನು ಒದಗಿಸಿಕೊಳ್ಳುತ್ತವೆ. ಜೈವಿಕ ವಸ್ತುಗಳ ಉಪಯೋಗದಿಂದಲೇ ಜೀವಿಸುವ ಏಕಾಣುಜೀವಿಗಳಿಗೆ ಸ್ವಪೋಷಿತಗಳೆಂದೂ (ಆಟೊಟ್ರಾಫಿಕ್) ಅಜೈವಿಕ ವಸ್ತುಗಳ ಪರಿವರ್ತನೆಯಿಂದ ಜೀವಿಸುವ ಏಕಾಣುಜೀವಿಗಳಿಗೆ ಅನ್ಯಪೋಷಿತಗಳೆಂದೂ (ಹೆಟೆರೊಟ್ರಾಫಿಕ್) ಹೆಸರು. ಆದರೆ ಈ ವಿಂಗಡಣೆ ಅಷ್ಟು ಕಟ್ಟುನಿಟ್ಟಲ್ಲ. ಸ್ವಪೋಷಿತ ಜೀವಿಗಳು ಕೆಲವು ಸಂದರ್ಭಗಳಲ್ಲಿ ಅನ್ಯಪೋಷಿತಗಳಾಗಿಯೂ ಅನ್ಯಪೋಷಿತಗಳು ಸ್ವಪೋಷಿತಗಳಾಗಿಯೂ ಮಾರ್ಪಾಡಾಗಬಹುದು.

ಆವಶ್ಯಕ ಶಕ್ತಿ ಪಡೆಯಲು ಮೇಲೆ ಹೇಳಿದ ಎರಡು ರೀತಿಯಲ್ಲಿ ಅಲ್ಲದೇ ಕೆಲವು ಏಕಾಣುಜೀವಿಗಳು ಮತ್ತೊಂದು ವಿಧದಲ್ಲೂ ಆಹಾರಾಂಶಗಳನ್ನು ಪಡೆದು ಶಕ್ತಿ ಉತ್ಪಾದನೆ ಮಾಡಿಕೊಳ್ಳುತ್ತವೆ. ಸಸ್ಯಗಳು ತಮ್ಮ ಕೋಶಗಳಲ್ಲಿರುವ ಪತ್ರಹರಿತ್ತುವಿನಿಂದ ಸೂರ್ಯರಶ್ಮಿಯನ್ನು ಉಪಯೋಗಿಸಿಕೊಂಡು ದ್ಯುತಿಸಂಶ್ಲೇಷಣ (ಫೋಟೋಸಿಂಥೆಸಿಸ್) ಕ್ರಿಯೆಯಿಂದ ಆಹಾರಾಂಶ ಪಡೆಯುವಂತೆ ಕೆಲವು ಏಕಾಣುಜೀವಿಗಳು ತಮ್ಮ ಕೋಶದಲ್ಲಿರುವ ಪತ್ರಹರಿತ್ತುವಿನಿಂದ ಆಹಾರ ಶಕ್ತಿ ರೂಪಿಸಿಕೊಳ್ಳುತ್ತವೆ.

ಏಕಾಣುಜೀವಿಗಳ ಸಂತಾನವೃದ್ಧಿ: ಸಂತಾನವೃದ್ಧಿ ಸಾಮಾನ್ಯವಾಗಿ ವಿಭಜನೆಯಿಂದ ಇಲ್ಲದಿದ್ದರೆ ಮೊಗ್ಗೊಡೆತ (ಕಾನಿಡಿಯ ಫಾರ್ಮೇಶನ್) ಮತ್ತು ಬೀಜಕೋಶಗಳ ಉತ್ಪತ್ತಿಯಿಂದ. ಇತ್ತೀಚೆಗೆ ಕೆಲವು ಜೀನುಗಳ ಅಧ್ಯಯನ ಸಮಯದಲ್ಲಿ ನಡೆಸಿದ ಸಂಶೋಧನೆಗಳಿಂದ ಏಕಾಣುಜೀವಿಗಳೂ ಲೈಂಗಿಕ ಪ್ರವೃತ್ತಿಯಿಂದ ತಮ್ಮ ಸಂತಾನವನ್ನು ಬೆಳೆಸುತ್ತವೆಂಬುದಕ್ಕೆ ಆಧಾರಗಳು ದೊರಕಿವೆ.

ವಿಭಜನೆ: ತಾಯಿಕೋಶ ವಿಭಜನೆಯಾಗುವ ಮುನ್ನ, ಕೋಶದ್ರವ್ಯ ವಿಸ್ತರಿಸಿ ಗಾತ್ರ ದೊಡ್ಡದಾಗುತ್ತದೆ. ಮೊದಲಿನ ಗಾತ್ರಕ್ಕಿಂತ ಸುಮಾರು ಎರಡರಷ್ಟಾದಾಗ ಕೋಶದ ನಡುಮಧ್ಯದಲ್ಲಿ ಸಂಕುಚಿತವಾಗಿ ಎರಡು ಭಾಗವಾಗಲು ಪ್ರಾರಂಭಿಸಿ ಬರುಬರುತ್ತ ಮಧ್ಯೆ ಗೋಡೆ ಅಡ್ಡಲಾಗಿ ಹಾಯ್ದು ಬಂದು ಇಬ್ಭಾಗವಾಗಿ ಒಂದಿದ್ದದ್ದು ಎರಡಾಗುತ್ತದೆ.

ಇವುಗಳಿಗೆ ತಕ್ಕ ವಾತಾವರಣವಿದ್ದಲ್ಲಿ ಸಂತಾನವೃದ್ಧಿ ಅತ್ಯಂತ ಭರದಿಂದ ಸಾಗುತ್ತದೆ. ಒಂದು ಎರಡಾಗಲು ಕೇವಲ 20–30 ಮಿನಿಟುಗಳು ಸಾಕು. ಇದು ಎಷ್ಟು ದೊಡ್ಡ ಪ್ರಮಾಣದ್ದೆಂದು ಊಹಿಸುವುದೂ ಕಷ್ಟ. ಬೆಳೆಯುವ ದರವನ್ನು ಕೆಳಗೆ ತೋರಿಸಿದೆ: 1 ಏಕಾಣುಜೀವಿ 2 ಗಂಟೆಗಳ ಕೊನೆಯಲ್ಲಿ $1\times2^2=4$ ಏಕಾಣುಜೀವಿಗಳಾಗಿ ವೃದ್ಧಿಗೊಂಡಿರುತ್ತದೆ; ಮುಂದಿನ 2 ಗಂಟೆಗಳ ಕೊನೆಯಲ್ಲಿ ಈ 4 ಜೀವಿಗಳು $4\times2^2=16$ ಜೀವಿಗಳಾಗಿರುತ್ತವೆ; ಹೀಗೆಯೇ ಮುಂದುವರಿಸಿದರೆ ಪ್ರಾರಂಭದಲ್ಲಿದ್ದ 1 ಏಕಾಣುಜೀವಿ 64 ಗಂಟೆಗಳ ಕೊನೆಯಲ್ಲಿ $4^{32}$ ಏಕಾಣುಜೀವಿಗಳಾಗಿ ವೃದ್ಧಿಗೊಂಡಿರುತ್ತದೆ. ($4^{32}=18,500,000,000,000,000,000$ ಸುಮಾರಾಗಿ). ಇವು 18,500,000,000 ಘನ ಮಿಲಿಮೀಟರ್ ಸ್ಥಳವನ್ನು ತುಂಬಲು ಸಾಕು; ಈ ಸಮೂಹವನ್ನು ಬರಿಗಣ್ಣಿಂದ ನೋಡಬಹುದು. ಕಣ್ಣಿಗೆ ಗೋಚರವಾಗುವಷ್ಟು ದೊಡ್ಡ ಸಮೂಹಕ್ಕೆ ಏಕಾಣುಜೀವಿಗಳ ವಸಾಹತು ಎಂದು ಹೆಸರು. ಬೆಳೆಸಿದರೆ ಒಂದೇ ರಾತ್ರಿಯಲ್ಲಿ ಈ ಭಯಂಕರ ಉತ್ಪಾದನೆ ಕಾಣುವುದೇನೂ ಅತಿಶಯವಲ್ಲ. ಆದರೆ ಅದೃಷ್ಟವಶಾತ್ ಪ್ರಕೃತಿಯಲ್ಲಿ ಈ ರೀತಿಯ ಅನಿಯಮಿತ ಉತ್ಪತ್ತಿಗೆ ಅನೇಕ ಅಡಚಣೆಗಳುಂಟು. ಸಂಶೋಧನಾಲಯಗಳಲ್ಲಿ ಅವುಗಳ ಬೆಳೆವಣಿಗೆಗೆ ತಕ್ಕ ವಾತಾವರಣವನ್ನು ಕಲ್ಪಿಸಿ ಬೇಕಾದ ಆಹಾರಸತ್ತ್ವಗಳನ್ನು ಸಾಕಷ್ಟು ಪ್ರಮಾಣದಲ್ಲಿ ಒದಗಿಸಿದರೆ ಮಾತ್ರ ಈ ರೀತಿ ಭಾರಿ ಪ್ರಮಾಣದ

ಉತ್ಪಾದನೆ ಸಾಧ್ಯ. ಉತ್ಪಾದನೆಯ ಸಮಯದಲ್ಲಿ ಉದ್ಭವಿಸುವ ಅನೇಕ ಸ್ಥಿತಿಗತಿಗಳು ಮತ್ತು ಆಮ್ಲಗಳು ಉತ್ಪತ್ತಿನಿರೋಧಕಗಳಾಗಿ ಪರಿಣಮಿಸಿ ಜೀವಿಗಳ ಬೆಳವಣಿಗೆಯನ್ನು ಕುಂಠಿತಗೊಳಿಸುತ್ತವೆ.

ಮೊಗ್ಗೊಡೆದು ಸಂತಾನೋತ್ಪತ್ತಿ (ಫಾರ್ಮೇಶನ್ ಆಫ್ ಕಾನಿಡಿಯ): ಏಕಾಣುಜೀವಿ ಇದ್ದಕ್ಕಿದ್ದಂತೆ ಒಂದು ಕಡೆಯಲ್ಲಿ ಒಂದು ಮೊಗ್ಗನ್ನು ಸೃಷ್ಟಿಸುತ್ತದೆ. ಇದರಿಂದ ಒಂದಾದಮೇಲೊಂದು ಬಂದು, ಒಂದೊಂದಾಗಿ ಕಾಯಿಯಿಂದ ಬೇರೆಯಾಗಿ ತಾನೇ ಸ್ವತಂತ್ರ ಜೀವಿಯಾಗುತ್ತದೆ.

ಬೀಜಕೋಶ ಉತ್ಪತ್ತಿ (ಸ್ಪೋರ್ ಫಾರ್ಮೇಶನ್): ಕೆಲವು ದಂಡಾಣುಜೀವಿಗಳು (ಬ್ಯಾಸಿಲೈ) ಬೀಜಕೋಶ ಅಥವಾ ಬೀಜಕಣಗಳನ್ನು ಉತ್ಪತ್ತಿಮಾಡಿ ವೃದ್ಧಿಗೊಳ್ಳುತ್ತವೆ. ಬೀಜಕಣ ತಾಯಿಕೋಶದಲ್ಲೇ ರೂಪಗೊಳ್ಳುತ್ತದೆ. ಆದ್ದರಿಂದ ಇದನ್ನು ಅಂತರ್ಬೀಜಕಣ (ಎಂಡೊಸ್ಪೋರ್) ಎಂದು ಕರೆಯುವುದು ವಾಡಿಕೆ. ಎಂದಿನಂತೆ ವಿಭಜನೆಯಾಗಿ ವೃದ್ಧಿಹೊಂದಲು ಅಡಚಣೆಗಳಿದ್ದರೆ ಆ ಸಂದರ್ಭಗಳಲ್ಲಿ ಮಾತ್ರ ತಾಯಿ ಏಕಾಣುಜೀವಿ ಬೀಜಕಣವಾಗಿ ಮಾರ್ಪಾಡಾಗಿ ಪುನಃ ಸ್ಥಿತಿಗತಿಗಳು ಉತ್ತಮಗೊಂಡಾಗ ಬೀಜಕಣ ಏಕಾಣುಜೀವಿಯಾಗಿ ರೂಪಗೊಳ್ಳುತ್ತದೆ. ಅಂದರೆ ಕಷ್ಟಪರಿಸ್ಥಿತಿಯನ್ನು ಎದುರಿಸಬೇಕಾದಾಗಲೆಲ್ಲ ಏಕಾಣುಜೀವಿ ಬೀಜಕಣವಾಗುತ್ತದೆ.

ಬೀಜಕಣ ರೂಪಗೊಳ್ಳುವುದನ್ನು ಸೂಕ್ಷ್ಮದರ್ಶಕದಲ್ಲಿ ಗಮನಿಸಬಹುದು. ಮೊಟ್ಟಮೊದಲು ಕೋಶದ್ರವ್ಯದಲ್ಲಿ ಒಂದು ಬೆಳಕಿನ ಬಿಂದು ಕಾಣಿಸಿಕೊಳ್ಳುತ್ತದೆ. ಇದು ಬರಬರುತ್ತ ದೊಡ್ಡದಾಗಿ ದುಂಡಗೆ ಅಥವಾ ಅಂಡಾಕಾರವಾಗಿ ಕಾಣಿಸಿ ದಪ್ಪ ಆವರಣವನ್ನು ಕಲ್ಪಿಸಿಕೊಳ್ಳುತ್ತದೆ. ಇದೇ ಬೀಜಕಣ. ಈ ಬದಲಾವಣೆಗೆ ಅನೇಕ ಗಂಟೆಗಳು ಹಿಡಿಯಬಹುದು. ಒಂದು ಏಕಾಣುಜೀವಿಯಿಂದ ಒಂದೇ ಬೀಜಕಣವಾಗಬಲ್ಲುದು. ಪುನಃ ಬೀಜಕಣ ಮೊಳಕೆಯಾದಾಗ ಅದರಿಂದ ಒಂದೇ ಏಕಾಣುಜೀವಿಯಾಗಲು ಮಾತ್ರ ಸಾಧ್ಯ. ಆಗಲೇ ಹೇಳಿದಂತೆ ಬೀಜಕಣವಾಗಿ ಪರಿವರ್ತನೆ ಹೊಂದುವುದು ಏಕಾಣುಜೀವಿಗಳ ಸಹಜ ವರ್ತನೆಯಲ್ಲ.

ಉಷ್ಣತೆ ಅಧಿಕವಾದರೆ, ನೀರು ಹಿಂಗಿದರೆ, ಸೂರ್ಯನ ಬೆಳಕು ತೀವ್ರವಾದರೆ ಅಥವಾ ಸಾಧಾರಣ ಕ್ರಿಮಿನಾಶಕಗಳನ್ನು ಬಳಸಿದರೆ ಬೀಜಕಣಗಳು ನಾಶವಾಗುವುದಿಲ್ಲ. ಹದಗೆಟ್ಟ ಪರಿಸ್ಥಿತಿಗಳಲ್ಲಿ ಕೆಲವು ವೇಳೆ ಬೀಜಕಣ ಹತ್ತು ವರ್ಷಗಳವರೆಗೆ ಜೀವಂತವಾಗಿದ್ದು ಅನಂತರ ಮೊಳಕೆಯಾಗಿ ಮೊದಲಿನಂತೆ ಏಕಾಣುಜೀವಿಯಾಗಬಲ್ಲುದು ಹಾಗೂ ಅಲ್ಲಿಂದಾಚೆಗೆ ಎಂದಿನಂತೆ ವಿಭಜನೆಯಿಂದಲೇ ಸಂತಾನವೃದ್ಧಿಮಾಡಿಕೊಳ್ಳಬಲ್ಲುದು. ರೋಗಕಾರಕ ಏಕಾಣುಜೀವಿಗಳಲ್ಲಿ ಕೆಲವೇ ಬೀಜಕಣವಾಗಬಲ್ಲವು. ಇದು ನಮ್ಮ ಅದೃಷ್ಟ. ಏಕೆಂದರೆ ಬೀಜಕಣವಾಗಿ ಪರಿವರ್ತನೆ ಹೊಂದಬಲ್ಲ ಏಕಾಣುಜೀವಿಗಳು ಕಷ್ಟಪರಿಸ್ಥಿತಿಗಳನ್ನೆದುರಿಸಿ ಅನೇಕ ಕಾಲ ಜೀವದಿಂದುಳಿದು ರೋಗ ತರಬಲ್ಲವು. ಅವನ್ನು ನಾಶಪಡಿಸುವುದೂ ಸುಲಭವಲ್ಲ. ಏಕಾಣುಜೀವಿಗಳಿರುವ ಪರಿಸರ ಬದಲಾಗದೆ ಒಂದೇ ಸಮಸ್ಥಿತಿಯಲ್ಲಿದ್ದರೆ ಅವುಗಳ ಲಕ್ಷಣ ರೂಪ ರಚನೆಗಳೂ ಬದಲಾಗುವುದಿಲ್ಲ. ಈ ಸ್ಥಿರತೆ ಜೀನುಗಳಲ್ಲಿದ್ದು ತಾಯಿಕೋಶದ ವಿಭಜನೆಯ ಸಮಯದಲ್ಲಿ ಎರಡಾಗಿ ಮಕ್ಕಳಲ್ಲಿ ಪುನರಾವರ್ತನೆಯಾಗುತ್ತದೆ. ಅಂದರೆ ತದ್ವತ್ ಜೀನುಗಳೇ ಪೀಳಿಗೆಯಿಂದ ಪೀಳಿಗೆಗೆ ಹಾಯುತ್ತವೆ. ಏಕಾಣುಜೀವಿಗಳಿರುವ ಪರಿಸರ ಬದಲಾದಲ್ಲಿ ಈ ಬದಲಾದ ಪರಿಸರಕ್ಕೆ ಹೊಂದಿಕೊಳ್ಳಲು ಅವುಗಳಿಗೆ ತಮ್ಮ ರೂಪ, ರಚನೆ ಹಾಗೂ ಲಕ್ಷಣಗಳನ್ನು ಮಾರ್ಪಾಡು ಮಾಡಿಕೊಳ್ಳುವ ಸಾಮರ್ಥ್ಯವಿದೆ. ಬದಲಾವಣೆ ಹೊಂದಬಲ್ಲ ಶಕ್ತಿಗೆ ಪರಿವರ್ತನೆ (ವೇರಿಯೇಷನ್) ಎಂದು ಹೆಸರು. ಹೀಗೆ ಹೊಸ ವಂಶವೇ ಉತ್ಪನ್ನವಾಗುವ ಪರಿಣಾಮವುಳ್ಳ ಈ ವ್ಯತ್ಯಯ (ಮ್ಯುಟೇಶನ್) ಏಕಾಣುಜೀವಿಗಳ ಒಂದು ಮುಖ್ಯ ಲಕ್ಷಣ.

**ಅಳಿವು-ಉಳಿವು**: ಆಹಾರ, ಉಷ್ಣತೆ, ತೇವ, ಬೆಳಕು, ಆಮ್ಲಜನಕ, ಕ್ರಿಮಿನಾಶಕ ಮತ್ತು ನಂಜುರೋಧಕಗಳು (ಆಂಟಿಸೆಪ್ಟಿಕ್) ಏಕಾಣುಜೀವಿಗಳ ಮೇಲೆ ಪ್ರಭಾವ ಬೀರುವ ಕೆಲವು ಮುಖ್ಯ ಅಂಶಗಳು.

**ಆಹಾರ**: ಸೂಕ್ತವಾದ ಆಹಾರ ದೊರಕದಿದ್ದಲ್ಲಿ ಯಾವ ಜೀವಿಯೂ ಬದುಕದು, ಬೆಳೆಯದು. ಹಾಲು ಮಕ್ಕಳಿಗೆಷ್ಟು ಉತ್ತಮ ಮತ್ತು ಪೂರ್ಣ ಆಹಾರವೋ ಏಕಾಣುಜೀವಿಗಳಿಗೂ ಅಷ್ಟೆ. ಹಾಲಿನಲ್ಲಿ ಇವು ಸಹ ಚೆನ್ನಾಗಿ ಬದುಕಿ ವೃದ್ಧಿಯಾಗಬಲ್ಲವು. ಅಗತ್ಯವಾದ ಸಸಾರಜನಕ, ಸಕ್ಕರೆ, ಪಿಷ್ಟಗಳು, ಮೇದಸ್ಸು, ಜೀವಾತುಗಳು, ಲವಣಗಳು ಮತ್ತು ನೀರು ಹಾಲಿನಲ್ಲಿ ಸಾಕಷ್ಟು ಇವೆ. ಏಕಾಣುಜೀವಿಗಳ ಕೋಶದಲ್ಲಿ ಪತ್ರಹರಿತ್ತು ಇಲ್ಲದಿರುವುದರಿಂದ ಇವು (ಸಸ್ಯಗಳಂತೆ) ಗಾಳಿಯಲ್ಲಿರುವ ಇಂಗಾಲಾಮ್ಲ ಮತ್ತು ಸೂರ್ಯನ ಬೆಳಕನ್ನು ಉಪಯೋಗಿಸಿಕೊಂಡು ಆಹಾರವನ್ನು ತಯಾರಿಸಿಕೊಳ್ಳಲಾರವು. ಬದಲು, ಇವು ಇತರ ಮೂಲ ವಸ್ತುಗಳಿಂದ ತಮಗೆ ಬೇಕಾದ ಆಹಾರವನ್ನು ತಯಾರಿಸಿಕೊಳ್ಳುತ್ತವೆ.

ಕೆಲವು ಏಕಾಣುಜೀವಿಗಳು ತಮಗೆ ಬೇಕಾದ ಆಹಾರಸತ್ತ್ವಗಳನ್ನು ತಾವೇ ಸಿದ್ಧಪಡಿಸಿಕೊಳ್ಳಬಲ್ಲವು. ಇನ್ನು ಕೆಲವಕ್ಕೆ ಇದು ಸಾಧ್ಯವಿಲ್ಲ. ಆಹಾರ ಅತ್ಯಗತ್ಯವಾದುದರಿಂದ ಇವು ಸುತ್ತಮುತ್ತಲಿರುವ ಆಹಾರಾಂಶಗಳನ್ನೇ ಅಳವಡಿಸಿಕೊಂಡು ತಮಗೆ ಸೂಕ್ತವಾದ ಆಹಾರವನ್ನು ಪಡೆಯುತ್ತವೆ. ಕೆಲವು ಸಸಾರಜನಕೋತ್ಪಾದಕ (ನೈಟ್ರಿಫೈಯಿಂಗ್) ಮತ್ತು ಗಂಧಕೋತ್ಪಾದಕ ಏಕಾಣುಜೀವಿಗಳು ತಮ್ಮ ಸ್ವಂತ ಶಕ್ತಿಯಿಂದ ಉತ್ಪಾದನೆಮಾಡಿಕೊಂಡ ಅಮೋನಿಯ ಮತ್ತು ಗಂಧಕದ ಆಕ್ಸೈಡುಗಳ ಉಪಯೋಗದಿಂದ ಬೇಕಾದ ಇಂಗಾಲವನ್ನು ಇತರ ಮೂಲವಸ್ತುಗಳಿಂದ ಪಡೆಯುತ್ತವೆ.

ಅನೇಕ ಏಕಾಣುಜೀವಿಗಳಿಗೆ ಜೈವಿಕ ವಸ್ತುಗಳಲ್ಲಿ ಅಡಕವಾಗಿರುವ ಸಸಾರಜನಕವೇ ಆವಶ್ಯಕ. ಹಾಲು, ದನದ ಮಾಂಸದ ಬಟ್ಟಿಗಳಲ್ಲಿ ಇದು ದೊರಕುತ್ತದೆ. ಸಂಶೋಧನಾಲಯಗಳಲ್ಲಿ ಕೃತಕವಾಗಿ ಇವನ್ನು ಬೆಳೆಸುವಾಗ ಅವುಗಳಿಗೆ ಈ ಆಹಾರಾಂಶಗಳೊಂದಿಗೆ ಸುಲಭವಾಗಿ ಉಪಯೋಗಮಾಡಲು ಸಾಧ್ಯವಾಗುವಂಥ ಇತರ ವಸ್ತುಗಳನ್ನೂ ಸತ್ತ್ವಗಳನ್ನೂ ಸೇರಿಸುತ್ತಾರೆ. ಉದಾಹರಣೆಗೆ ಪೆಪ್ಟೋನ್ ಎಂಬ ಸಸಾರಜನಕಾಂಶ ಜೀವಾತುಗಳನ್ನೂ ಸೂಕ್ತಪ್ರಮಾಣಗಳಲ್ಲಿ ಲವಣ ಇತ್ಯಾದಿಗಳನ್ನೂ ಬೆರೆಸುವುದು ವಾಡಿಕೆ. ಜೀವಾತುಗಳಲ್ಲಿ ಮುಖ್ಯವಾದುವುಗಳೆಂದರೆ ಥೈಯಮಿನ್ (ಜೀವಾತು $B_1$), ರಿಬೋಫ್ಲೇವಿನ್ (ಜೀವಾತು $B_2$), ನಯಸಿನ್, ಬಯೋಟಿನ್, ಪ್ಯಾಂಟೋಥೆನಿಕ್ ಆಮ್ಲ, $B_6$, ಫೋಲಿಕ್ ಆಮ್ಲ ಮತ್ತು $B_{12}$.

**ಉಷ್ಣತೆ**: ಸಾಮಾನ್ಯವಾಗಿ ಹೇಳುವುದಾದರೆ ಏಕಾಣುಜೀವಿಗಳ ಉಳಿವಿಗೆ ಸೂಕ್ತವಾದ ಉಷ್ಣತೆ ಸುಮಾರು 25°–30° ಸೆಂ. ಮನುಷ್ಯ ಮತ್ತು ಪ್ರಾಣಿಗಳಲ್ಲಿ ವೃದ್ಧಿಗೊಳ್ಳುವ ಏಕಾಣುಜೀವಿಗಳಿಗೆ 37° ಸೆಂ. ಉಷ್ಣತೆ ಅತ್ಯಂತ ಹಿತಕರ. ಇವು ನಾಶವಾಗದೆ ತಡೆಯಬಲ್ಲ ಅತಿ ಶೀತಲಾವಸ್ಥೆ ಎಂದರೆ 5°–6° ಸೆಂ. ಹಾಗೂ ಅತ್ಯಂತ ಅಧಿಕ ಉಷ್ಣತೆ ಸುಮಾರು 38°—48° ಸೆಂ. ಎಂದು ಹೇಳಬಹುದು. ಅಧಿಕ ಉಷ್ಣತೆಗಿಂತ ಶೀತಲಾವಸ್ಥೆಯನ್ನು ಅವು ಹೆಚ್ಚು ಕಾಲ ಎದುರಿಸಿ ಜೀವಂತವಾಗಿರಬಲ್ಲವು. ಒಂದು ತೊಟ್ಟಿಯಲ್ಲಿರುವ ಎಲ್ಲ ಏಕಾಣುಜೀವಿಗಳನ್ನು ಹತ್ತು ಮಿನಿಟುಗಳಲ್ಲಿ ನಾಶಮಾಡಬಲ್ಲ ಕನಿಷ್ಠ ಉಷ್ಣತೆಯನ್ನು ತಜ್ಞರು ನಿಗದಿಮಾಡಿದ್ದಾರೆ. ಸ್ವಲ್ಪ ಹೆಚ್ಚಿನ ಉಷ್ಣತೆಯಿದ್ದಲ್ಲಿ ಏಕಾಣುಜೀವಿಗಳು ಸ್ಥಗಿತಗೊಳ್ಳುತ್ತವೆ. ಇವು ನಾಶಹೊಂದುವ ಅತ್ಯಂತ ಅಧಿಕ ಉಷ್ಣತೆ ಇಷ್ಟೇ ಎಂದು ನಿಗದಿಮಾಡಲು ಸಾಧ್ಯವಿಲ್ಲ. ಅನೇಕ ರೋಗಕಾರಕ ಏಕಾಣುಜೀವಿಗಳು—ಉದಾಹರಣೆಗೆ ವಿಷಮಶೀತಜ್ವರ, ಆಮಶಂಕೆ, ಭೇದಿ ಇತ್ಯಾದಿ ಏಕಾಣುಜೀವಿಗಳು ಮಂಜುಗಡ್ಡೆಗಳಲ್ಲಿ ಅಥವಾ ಐಸ್‌ಕ್ರೀಂನಲ್ಲಿ ಬದುಕಿದ್ದು ಅನಂತರ ಚೇತನಗೊಳ್ಳುತ್ತವೆ. – 252° ಸೆಂ. ಉಷ್ಣತೆಯ ದ್ರವಗಾಳಿ ಅಥವಾ ದ್ರವಜಲಜನಕಗಳಲ್ಲಿ ಘನೀಭವಿಸಿದ ಏಕಾಣುಜೀವಿಗಳಲ್ಲಿ ಕೆಲವು, ಉಷ್ಣತೆ ಹಿತಕರವಾದಾಗ ಪುನಶ್ಚೇತನಗೊಂಡಿರುವ ನಿದರ್ಶನಗಳಿವೆ. ಏಕಾಣುಜೀವಿಗಳಲ್ಲೇ ಕೆಲವು ಉಷ್ಣಪ್ರೇಮಿಗಳು (ಥರ್ಮೋಫಿಲಿಕ್) ಇವೆ. ಇವು 50°–60° ಸೆಂ. ಉಷ್ಣತೆಗಳಲ್ಲೂ ಬದುಕಿರಬಲ್ಲವು ಮತ್ತು ಎಂದಿನಂತೆ ತಮ್ಮ ಜೀವನವ್ಯಾಪಾರಗಳನ್ನು ನಡೆಸಬಲ್ಲವು. ಆದರೆ ಈ ಶಕ್ತಿ ಇವುಗಳಿಗೆ ಹೇಗೆ ಪ್ರಾಪ್ತವಾಗಿದೆ ಎಂಬ ಸಮಸ್ಯೆ ಇನ್ನೂ ಬಗೆಹರಿದಿಲ್ಲ.

**ಜೀವಾಣುನಾಶನ (ಸ್ಟರಿಲೈಸೇಷನ್)**: ಆಗಲೇ ತಿಳಿಸಿದಂತೆ ಸಾಮಾನ್ಯವಾಗಿ ಈ ಜೀವಿಗಳು ಅಧಿಕ ಉಷ್ಣತೆಯಲ್ಲಿ ಜೀವಿಸಿರಲಾರವು. 50°–60° ಸೆಂ. ಉಷ್ಣತೆಯ ಪ್ರಭಾವದಿಂದ ಇವನ್ನು ನಾಶಪಡಿಸಬಹುದು. ಕುದಿಯುವ ನೀರು, ಆವಿ ಅಥವಾ ಪಾಶ್ಚುರೀಕರಣಗಳ ಪ್ರಭಾವದಿಂದಲೂ ಈ ಜೀವಿಗಳು ನಿರ್ನಾಮವಾಗುತ್ತವೆ. ಆದರೆ ಬೀಜಕಣಗಳು ಈ ಮಟ್ಟದ ಉಷ್ಣತೆಯಲ್ಲಿ ಸುಲಭವಾಗಿ ನಾಶವಾಗವು; ಅಗಲು ಬಹಳ ಕಾಲ ಬೇಕು. 120° ಸೆಂ. ಉಷ್ಣತೆಯ ಆವಿಯನ್ನು ಹೆಚ್ಚು ಒತ್ತಡಕ್ಕೆ ಒಳಪಡಿಸಿದಲ್ಲಿ ಬೀಜಕಣಗಳು ಅಲ್ಪಕಾಲಾವಧಿಯಲ್ಲೇ ನಾಶಗೊಳ್ಳುತ್ತವೆ. ಒಣಬೀಜಕಣಗಳನ್ನು (ಡ್ರೈ ಸ್ಪೋರ್ಸ್) ಇನ್ನೂ ಹೆಚ್ಚು ಒತ್ತಡ ಮತ್ತು ಅಧಿಕ ಉಷ್ಣತೆಗಳಿಂದ ನಾಶಪಡಿಸಬಹುದು. 170° ಸೆಂ. ಉಷ್ಣತೆಯಲ್ಲಿ ಒಂದು ಗಂಟೆ ಕಾಲವಿಟ್ಟರೆ ಅವು ನಾಶವಾಗುತ್ತವೆ.

**ತೇವ**: ಭೂಮಿಯಲ್ಲಿ 2%–3%ರಷ್ಟಾದರೂ ತೇವವಿಲ್ಲದಿದ್ದಲ್ಲಿ ಏಕಾಣುಜೀವಿ ಉತ್ಪತ್ತಿಯಾಗದೆಂಬುದು ಸಂಶೋಧನೆಯಿಂದ ತಿಳಿದ ವಿಷಯ. 5%–10% ತೇವವಿದ್ದರೆ ಇವು ಚೇತನಗೊಳ್ಳುತ್ತವೆ ಹಾಗೂ 25%–40%ರಷ್ಟು ತೇವವಿದ್ದಲ್ಲಿ ಇವುಗಳ ಬೆಳವಣಿಗೆಗೆ ಸಮರ್ಪಕವಾದ ಸ್ಥಿತಿಯಿದೆಯೆಂದು ಹೇಳಬಹುದು. ಏಕಾಣುಜೀವಿಗಳಿಗೆ ಆಹಾರ ಸೇವಿಸಲು ಬಾಯಿ ಇಲ್ಲ. ಯಾವ ಆಹಾರವಾದರೂ ದ್ರವರೂಪದಲ್ಲೇ ಕೋಶಾವರಣದ ಮೂಲಕ ಸೋಸಿ ಹೋಗಬೇಕು. ಆದ್ದರಿಂದ ತೇವದ ಪ್ರಾಮುಖ್ಯ ಎಷ್ಟೆಂದು ತಿಳಿಯುತ್ತದೆ. ತೇವವಿಲ್ಲದ ಸ್ಥಿತಿಯನ್ನು ವಿರೋಧಿಸುವುದರಲ್ಲಿ ಈ ಜೀವಿಗಳಲ್ಲಿ ವೈವಿಧ್ಯವನ್ನು ಕಾಣಬಹುದು. ತೇವವಿಲ್ಲದ ಪರಿಸ್ಥಿತಿಗಳಲ್ಲಿ ಸುಲಭವಾಗಿ ನಾಶಗೊಳ್ಳುವ ಕೆಲವು ಏಕಾಣುಜೀವಿಗಳಿವೆ. ಈ ಲಕ್ಷಣವನ್ನು ಆಹಾರಸಾಮಗ್ರಿಗಳ ರಕ್ಷಣೆಗೆ ಬಳಸಿಕೊಳ್ಳಲಾಗುತ್ತದೆ. ಆಹಾರಗಳಿಂದ ತೇವವನ್ನು ಸಂಪೂರ್ಣ ತೆಗೆದಲ್ಲಿ ಏಕಾಣುಜೀವಿ ಚಟುವಟಿಕೆ ಸ್ಥಗಿತಗೊಂಡು ಆಹಾರ ಬಹಳ ದಿನ

ಗಳು ಕೆಡದೆ ಉತ್ತಮ ಸ್ಥಿತಿಯಲ್ಲಿರುತ್ತದೆ. ತೇವರಹಿತ ಸ್ಥಿತಿಯಲ್ಲಿ ಎಲ್ಲ ಏಕಾಣು ಜೀವಿಗಳು ಸಾಯದಿರಬಹುದು ಹಾಗೂ ತಕ್ಕಷ್ಟು ತೇವ ಒದಗಿದಲ್ಲಿ ಅವು ಪುನಃ ಚೇತನಗೊಂಡು ಆಹಾರವನ್ನು ಕೆಡಿಸಲೂ ಬಹುದು. ಶಿಲೀಂಧ್ರಗಳು ಕಡಿಮೆ ತೇವವಿದ್ದಾಗ್ಯೂ ಬೆಳೆಯಬಲ್ಲವು.

**ಆಕ್ಸಿಜನ್ :** ಏಕಾಣುಜೀವಿಗಳು ಗಾಳಿಯಲ್ಲಿರುವ ಆಕ್ಸಿಜನ್ನಿನ ಬಳಕೆಯಲ್ಲಿ ವಿಧ ವಿಧವಾಗಿ ನಡೆದುಕೊಳ್ಳುತ್ತವೆ. ಕೆಲವಕ್ಕೆ ಉಸಿರಾಡಲು ಆಕ್ಸಿಜನ್ನಿನ ಆವಶ್ಯಕತೆಯಿರುವುದರಿಂದ ಅದಿಲ್ಲದಿದ್ದರೆ ಬೆಳೆಯಲಾರವು—ಇಂಥವು ವಾಯುಜೀವಿಗಳು (ಏರೋಬ್ಸ್). ಮತ್ತೆ ಕೆಲವು ಆಕ್ಸಿಜನ್ ಇಲ್ಲದೆಯೂ ಬೆಳೆಯುತ್ತವೆ. ಇದ್ದರೂ ಅದನ್ನವು ಉಪಯೋಗಿಸಿಕೊಳ್ಳಲಾರದವಾಗಿವೆ. ಇಂಥವು ಅವಾಯುಜೀವಿಗಳು (ಅನಿರೋಬ್ಸ್). ಮತ್ತೆ ಕೆಲವು ಎರಡು ಸ್ಥಿತಿಗಳಲ್ಲೂ ಊರ್ಜಿತವಾಗಬಲ್ಲವು. ಇವನ್ನು ಐಚ್ಛಿಕ (ಫ್ಯಾಕಲ್‍ಟೆಟಿವ್) ಜೀವಿಗಳೆನ್ನಬಹುದು. ಅವಾಯುಜೀವಿಗಳನ್ನು ಕೊಳೆಯುವ ಮತ್ತು ಕೊಳೆಯುತ್ತಿರುವ ವಸ್ತುಗಳಲ್ಲಿ, ಭೂಮಿ ಹಾಗೂ ಕೊಳ ಕೆರೆಗಳ ತಳದಲ್ಲಿರುವ ಮಣ್ಣಿನಲ್ಲಿ ಕಾಣಬಹುದು. ಅಪಕರ್ಷಣಕಾರಿಗಳು (ರೆಡ್ಯೂಸಿಂಗ್ ಏಜೆಂಟ್ಸ್) ಸಾಕಷ್ಟಿದ್ದರೆ (C ಜೀವಾತು, ಸಿಸ್ಟೈನ್ ಇತ್ಯಾದಿ) ಅವಾಯುಜೀವಿಗಳನ್ನು ಸಹ ಗಾಳಿಯಲ್ಲಿ ಬೆಳೆಸಬಹುದು. ಆಹಾರವಸ್ತುಗಳನ್ನು ಡಬ್ಬಗಳಲ್ಲಿ ಹಾಕಿ ರಕ್ಷಿಸುವ (ಟಿನ್ನಿಂಗ್) ಉದ್ಯಮದಲ್ಲಿ ಬೀಜಕೋಶ ಉತ್ಪತ್ತಿಯಾಗುವ ಏಕಾಣುಜೀವಿಗಳನ್ನು ಹೊರಗಿಡುವುದು ಪ್ರಯಾಸವೇ ಸರಿ. ಕಾರ್ಯಗತಿಯ ಭರದಲ್ಲಿ ಸಾಕಷ್ಟು ಉಷ್ಣತೆಗೆ ಒಳಪಡಿಸಿ ಬೀಜಕೋಶಗಳನ್ನು ನಾಶಪಡಿಸದಿದ್ದಲ್ಲಿ ಅವನ್ನು ಡಬ್ಬದಲ್ಲಿಟ್ಟು ಮುಚ್ಚಿದ ಅನಂತರ ಈ ಆಕ್ಸಿಜನ್‍ರಹಿತ ಮುಚ್ಚಿದ ಡಬ್ಬಗಳಲ್ಲಿ ಬೀಜಕೋಶಗಳು ಮೊಳಕೆಯಾಗಿ ವೃದ್ಧಿಗೊಳ್ಳುತ್ತವೆ. ಒಂದು ವೇಳೆ ಈ ಜೀವಿಗಳು ವಿಷವನ್ನು (ಟಾಕ್ಸಿನ್) ತಯಾರಿಸುವವೂ ಆಗಿದ್ದಲ್ಲಿ (ಕ್ಲಾಸ್ಟ್ರಿಡಿಯಂ ಬಾಟ್ಯುಲೈನಂ ಏಕಾಣು ಜೀವಿ) ಈ ವಿಷವುಳ್ಳ ಆಹಾರವನ್ನು ಸೇವಿಸಿದವರು ಕೂಡಲೆ ವಿಷದ ಪರಿಣಾಮಕ್ಕೊಳಗಾಗಿ ನರಳುವುದುಂಟು. ಅತಿ ಅಲ್ಪ ಪರಿಮಾಣದಲ್ಲೂ ಈ ವಿಷ ಅಪಾಯಕಾರಿ.

ಬೆಳಕು : ಕತ್ತಲಿದ್ದಲ್ಲಿ ಏಕಾಣುಜೀವಿಯ ವೃದ್ಧಿ ಭರದಿಂದ ಆಗುತ್ತದೆ. ಬೆಳಕಿಗೆ ಬಂದರೆ ಇವುಗಳ ಚಲನವಲನ ಸ್ಥಗಿತಗೊಳ್ಳುತ್ತದೆ. ಸೂರ್ಯನ ಬೆಳಕಿನಲ್ಲಿ ಅವು ಹೆಚ್ಚೆಂದರೆ 10–15 ಮಿನಿಟುಗಳ ಕಾಲ ಉಳಿಯಬಹುದು ; ಮತ್ತೆ ನಾಶವಾಗಿ ಹೋಗುತ್ತವೆ. ಆ ಬೆಳಕಿನಲ್ಲಿರುವ ಅತಿನೇರಿಳೆ ಕಿರಣಗಳು ಇವುಗಳಿಗೆ ಅಪಾಯಕಾರಿ. ಬೀಜಕೋಶರಹಿತ ಏಕಾಣುಜೀವಿಗಳಿಗೆ 1′–2′ ದೂರದಿಂದ ಈ ಕಿರಣಗಳನ್ನು ಹಾಯಿಸಿದಲ್ಲಿ ಅವು ಕೆಲವೇ ಮಿನಿಟುಗಳಲ್ಲಿ ನಾಶಹೊಂದುತ್ತವೆ. ಪೂರ್ಣ ಉಪಯೋಗ ಪಡೆಯಲು ಈ ಕಿರಣಗಳನ್ನು ಸೂಕ್ತರೀತಿಯಲ್ಲಿ ಅಳವಡಿಸಿಕೊಳ್ಳುವುದು ಆವಶ್ಯಕ.

ಬೆಳೆಸಲು ಉಪಯೋಗಿಸುವ ಕೃತಕ ಮಾಧ್ಯಮ (ಮೀಡಿಯಂ): ಮಾಧ್ಯಮದ ಆಮ್ಲತೆ ಅಥವಾ ಕ್ಷಾರಸ್ವಭಾವ ಏಕಾಣುಜೀವಿಗಳ ಬೆಳವಣಿಗೆಯ ದೃಷ್ಟಿಯಿಂದ ಅತಿ ಮುಖ್ಯ. ಆಮ್ಲೀಯವೂ ಅಲ್ಲದ ಕ್ಷಾರೀಯವೂ ಅಲ್ಲದ ಮಾಧ್ಯಮ ಬಲುಮಟ್ಟಿಗೆ ಎಲ್ಲ ಏಕಾಣುಜೀವಿಗಳ ಬೆಳವಣಿಗೆಗೂ ಹಿತಕರವೆನ್ನಬಹುದು. ಆದರೆ ಸ್ವಲ್ಪ ಮಟ್ಟಿಗೆ ಆಮ್ಲೀಯತೆ ಅಥವಾ ಕ್ಷಾರೀಯತೆಯನ್ನು ಬಯಸುವ ಅನೇಕ ಏಕಾಣು ಜೀವಿಗಳೂ ಇವೆ.

ನಂಜುರೋಧಕ ಹಾಗೂ ಕ್ರಿಮಿನಾಶಕಗಳ ಪರಿಣಾಮ : ಇದನ್ನು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಕೆಲವು ನಾಶಕಗಳು ಏಕಾಣುಜೀವಿಗಳನ್ನು ನಾಶಪಡಿಸುತ್ತವೆ. ಮತ್ತೆ ಕೆಲವು ಅವುಗಳ ಚಟುವಟಿಕೆಯನ್ನು ಸ್ಥಗಿತಗೊಳಿಸುತ್ತವೆ. ಅಧಿಕ ಸಾರದ ನಾಶಕಗಳನ್ನು ಉಪಯೋಗಿಸಿದಾಗ ನಾಶವಾಗುವ ಜೀವಿಗಳು ಸಾರಗುಂದಿಸಿದ ಅವೇ ನಾಶಕಗಳನ್ನು ಉಪಯೋಗಿಸಿದಾಗ ನಿಶ್ಚೇತನ ಮಾತ್ರ ಆಗುತ್ತವೆ. ಆದರೆ ಈ ನಾಶಕಗಳಿಂದ ಸಾಮಾನ್ಯವಾಗಿ ಎಲ್ಲ ಏಕಾಣುಜೀವಿಗಳ ಜೀವಕ್ರಿಯೆಗಳೂ ಕುಂದುವುದೊಂದೇ ಅಲ್ಲದೆ ಸಂತಾನವೃದ್ಧಿಗೂ ಪೂರ್ಣವಿರಾಮವಾಗುತ್ತದೆ. ಕಾರ್ಬಾಲಿಕ್ ಆಮ್ಲ, ಆಲ್ಕೊಹಾಲ್ ಇತ್ಯಾದಿ ನಾಶಕಗಳು, ಗಂಧಕೀಯಗಳು, ಪ್ರತಿಜೀವಕಗಳು (ಅಂಟಿಬಯೊಟಿಕ್ಸ್) ಜೀವಕ್ರಿಯೆಗಳನ್ನು ಕುಂದಿಸಿ ಸಂತಾನೋತ್ಪತ್ತಿಯನ್ನು ನಿಲ್ಲಿಸುವ ಔಷಧಗಳು. ಏಕಾಣುಜೀವಿಗಳ ಸೋಂಕಿನಿಂದ ಆಹಾರಗಳನ್ನು ಸುರಕ್ಷಿತವಾಗಿಡಲು ನಂಜುರೋಧಕಗಳನ್ನು ಮುಖ್ಯವಾಗಿ ಉಪಯೋಗಮಾಡಲಾಗುತ್ತಿದೆ. ಕ್ರಿಮಿನಾಶಕಗಳನ್ನು ಗಾಯಗಳ ಶುದ್ಧೀಕರಣ, ನೀರಿನಲ್ಲಿರುವ ರೋಗಕಾರಕ ಏಕಾಣುಜೀವಿಗಳ ನಾಶ ಮುಂತಾದುವುಗಳಲ್ಲಿ ಉಪಯೋಗಮಾಡಲಾಗುತ್ತಿದೆ. ಕ್ರಿಮಿನಾಶಕಗಳ ಶಕ್ತಿಯನ್ನು ಅನೇಕ ವಿದ್ಯಮಾನಗಳು ಕುಂದಿಸುತ್ತವೆ. ಇವುಗಳಲ್ಲಿ ಮುಖ್ಯವಾದವು- -1 ದ್ರವವೃದ್ಧಿ (ಡೈಲ್ಯೂಷನ್). 2 ಏಕಾಣುಜೀವಿಗಳೊಂದಿಗೆ ಹೊಂದಿರುವ ಸಂಪರ್ಕಸಮಯ, 3 ಏಕಾಣುಜೀವಿಗಳ ಸಂಖ್ಯೆ ಮತ್ತು ಅವುಗಳ ಗುಂಪು, 4 ಉಷ್ಣತೆ, 5 ಮೇಲ್ಮೈ ಎಳೆತ (ಸರ್ಫೇಸ್ ಟೆನ್‍ಷನ್), 6 ಪರಿಸರದ ಸ್ಥಿತಿಗತಿಗಳು.

ಬೀಜಕಣಗಳು ಪ್ರತಿಕೂಲ ಸ್ಥಿತಿಗಳನ್ನು ಏಕಾಣುಜೀವಿಗಳಿಗಿಂತ ಹೆಚ್ಚು ಕಾಲ ನಿರೋಧಿಸಿ ಜೀವಂತವಾಗಿರಬಲ್ಲವು. ಒಂದು ಕ್ರಿಮಿನಾಶಕದ ಪರಿಣಾಮ ಎಲ್ಲ ಏಕಾಣುಜೀವಿಗಳ ಮೇಲೂ ಒಂದೇ ರೀತಿ ಎಂದು ಹೇಳಲಾಗುವುದಿಲ್ಲ. ಕೀವಿನಲ್ಲಿರುವ ಸ್ಟೆಫೈಲೊಕಾಕೈ ಏಕಾಣುಜೀವಿಗಳು ಸ್ವಲ್ಪಮಟ್ಟಿಗೆ ಕ್ರಿಮಿನಾಶಕಗಳ ಪ್ರಭಾವವನ್ನೆದುರಿಸಬಲ್ಲವು. ವಿಷಮಶೀತಜ್ವರ ತರುವ ಏಕಾಣುಜೀವಿಗಳು ಸೂಕ್ಷ್ಮ ಕ್ರಿಮಿನಾಶಕಗಳಿಂದ ಸುಲಭವಾಗಿ ನಾಶಹೊಂದುತ್ತವೆ. ಕ್ರಿಮಿನಾಶಕಗಳ ಶಕ್ತಿಯನ್ನು ನಿರ್ಧರಿಸುವಾಗ ಏಕಾಣುಜೀವಿಗಳನ್ನು ನಾಶಮಾಡುವ ಶಕ್ತಿಯೊಂದೇ ಮುಖ್ಯವೆಂದು ಹೇಳಲಾಗುವುದಿಲ್ಲ. ಇವು ಊತಕಗಳ ಮೇಲೆ ಇತರ ಕೆಟ್ಟ ಪರಿಣಾಮಗಳನ್ನು ಮಾಡಕೂಡದು.

ಗಾಳಿಯ ಮತ್ತು ನೀರಿನ ಏಕಾಣುಜೀವಿಗಳು : ಏಕಾಣುಜೀವಿಗಳಿಲ್ಲದ ಜಾಗಗಳು ಇಲ್ಲವೇ ಇಲ್ಲವೆಂದು ಹೇಳಬಹುದು. ಕೆರೆ, ಕುಂಟೆ, ಚರಂಡಿ, ಗೊಬ್ಬರದ ಗುಂಡಿ, ನದಿ, ನೆಲ ಇತ್ಯಾದಿ ಎಲ್ಲ ಕಡೆಗಳಲ್ಲೂ ಇವು ಇದ್ದೇ ಇವೆ. ಇವುಗಳ ಆಹಾರ ಜೈವಿಕವಸ್ತುಗಳು. ಆದ್ದರಿಂದ ಜೈವಿಕವಸ್ತುಗಳಿರುವಲ್ಲೆಲ್ಲ ಈ ಜೀವಿಗಳು ಹೇರಳವಾಗಿರುತ್ತವೆ. ದ್ರವಗಳಲ್ಲಿ ಅಂದರೆ ಹಾಲು, ಹೆಂಡ, ರಕ್ತ, ಮೂತ್ರ ಇತ್ಯಾದಿಗಳಲ್ಲಿಯೂ ಘನಸ್ಥಿತಿಯ ಆಹಾರಗಳಲ್ಲಿ ಅಂದರೆ ತರಕಾರಿ, ಹಣ್ಣು, ಧಾನ್ಯ, ಮಾಂಸ ಇತ್ಯಾದಿ ಪದಾರ್ಥಗಳಲ್ಲಿಯೂ ಇವುಗಳಿವೆ. ತೇವ, ಉಷ್ಣತೆ ಹಿತಕರವಾಗಿದ್ದಲ್ಲೆಲ್ಲ ಬೆಳೆದು ವೃದ್ಧಿಯಾಗುತ್ತವೆ. ಇಂಥ ಬೆಳವಣಿಗೆಗೆ ಮಿತಿ ಎಂಬುದೇ ಇಲ್ಲ. ಆದರೆ ಇಂಥ ವೃದ್ಧಿಯ ಜೊತೆಯಲ್ಲೇ ನಾಶವಾಗಲು ಬೇಕಾದ ಸ್ಥಿತಿಗಳೂ ಅಲ್ಲಿ ಹುಟ್ಟಿಕೊಳ್ಳುತ್ತವೆ. ತೇವವಿಲ್ಲದ ಸ್ಥಿತಿ, ಅಧಿಕ ಆಮ್ಲತೆ, ಸೂರ್ಯಕಿರಣಗಳು ಮುಂತಾದವುಗಳ ಪರಿಣಾಮದಿಂದ ಇವುಗಳ ಈ ವೃದ್ಧಿಗೆ ತಡೆಯುಂಟಾಗುವುದು.

ನಾವು ಕೆಮ್ಮುವಾಗ, ಸೀನುವಾಗ ಹಾಗೂ ಮಾತನಾಡುವಾಗ ನಮ್ಮ ಬಾಯಿ, ಗಂಟಲುಗಳಲ್ಲಿರುವ ಏಕಾಣುಜೀವಿಗಳು ಹೊರಬಿದ್ದು ಗಾಳಿಯಲ್ಲಿ ಸೇರುತ್ತವೆ. ಈ ಗಾಳಿಯನ್ನು ಮತ್ತೊಬ್ಬ ಉಸಿರಾಡುವಾಗ ತೆಗೆದುಕೊಂಡಲ್ಲಿ ಅವನ ಗಂಟಲು ಶ್ವಾಸಕೋಶಗಳಿಗೆ ಇವು ಹಾಯ್ದು ನೆಲೆಸಿ ವೃದ್ಧಿಯಾಗಿ ಸೋಂಕನ್ನುಂಟುಮಾಡುತ್ತವೆ. ಈ ರೀತಿ ಅನೇಕ ರೋಗಗಳ ಸೋಂಕು ಒಬ್ಬರಿಂದ ಮತ್ತೊಬ್ಬರಿಗೆ ಹರಡುತ್ತದೆ. ಉದಾಹರಣೆಗೆ, ಎಲ್ಲ ಶ್ವಾಸಕೋಶದ ರೋಗಗಳು—ಕ್ಷಯ, ಇನ್‍ಫ್ಲೂಯೆಂಜ಼, ನ್ಯೂಮೋನಿಯಾ, ಗಂಟಲುಮಾರಿ, ನಾಯಿಕೆಮ್ಮು ಇತ್ಯಾದಿ.

ಹರಿಯುವ ನೀರಿಗೆ ಅಸಂಖ್ಯಾತ ಏಕಾಣುಜೀವಿಗಳು ಬಂದು ಸೇರಿಕೊಳುತ್ತವೆ. ಭೂಮಿಯ ಮೇಲ್ಪದರಗಳಲ್ಲಿರುವ ಏಕಾಣುಜೀವಿಗಳೂ ಇದರಲ್ಲಿ ಸೇರುತ್ತವೆ. ಈ ರೀತಿ ಸೇರಿದವು ನೀರಿನಲ್ಲಿ ಬಹಳ ಕಾಲ ಜೀವಿಸಿರಲಾರವು. ಅವು ಕ್ರಮೇಣ ನಾಶವಾಗುತ್ತವೆ. ಕೆಲವು ವೇಳೆ ನೀರು ಬಹಳ ಕಲ್ಮಷಯುಕ್ತವಾಗಿದ್ದು ಅದರಲ್ಲಿ ಜೈವಿಕ ವಸ್ತುಗಳು ಸಾಕಷ್ಟು ಇದ್ದರೆ ಏಕಾಣುಜೀವಿಗಳ ವೃದ್ಧಿಗೆ ಧಾರಾಳ ಅವಕಾಶ ಒದಗುತ್ತದೆ.

ಏಕಾಣುಜೀವಿಗಳೆಲ್ಲವೂ ವ್ಯಾಧಿಕಾರಕಗಳೆಂದೇನೂ ತಿಳಿಯಬೇಕಾಗಿಲ್ಲ. ಹಲವಾರು ಜೀವಿಗಳು ಮಾನವಕುಲಕ್ಕೆ ಉಪಕಾರಿಗಳು. ಹಾಲು ಮತ್ತು ಅದಕ್ಕೆ ಸಂಬಂಧಪಟ್ಟ ಪದಾರ್ಥಗಳ ತಯಾರಿಕೆಯಲ್ಲಿ ಸಹಾಯಮಾಡುವ ಮತ್ತು ಹೊಲಸು ತುಂಬಿದ ಭೂಮಿಯನ್ನು ಫಲವತ್ತಾಗಿ ಮಾಡುವ ಹಾಗೂ ಗ್ರಾಮಸಾರವನ್ನು ಶುಚಿಮಾಡುವ ಏಕಾಣುಜೀವಿಗಳು ಇವುಗಳಲ್ಲಿ ಅತಿಮುಖ್ಯವಾದವು.

ಹಸುವಿನ ಕೆಚ್ಚಲಿನಿಂದ ಬರುವ ಹಾಲಲ್ಲೇ ಕೆಲವು ವಿಧದ ಏಕಾಣುಜೀವಿಗಳಿರುತ್ತವೆ. ಆದರೆ ಇವು ಕೆಡಕುಂಟುಮಾಡುವವಲ್ಲ. ಹಾಲಿನಲ್ಲಿ ಏಕಾಣುಜೀವಿಗಳು ವೃದ್ಧಿಯಾಗಲು ಬೇಕಾದ ಸೌಲಭ್ಯಗಳೆಲ್ಲ ಇವೆ. ಇವುಗಳಲ್ಲಿ ಕೆಲವು ಮುಖ್ಯವಾಗಿ ಸಸಾರಜನಕಾಂಶವನ್ನು ಆಕ್ರಮಣಮಾಡಿ ಅದನ್ನು ಒಡೆಯುತ್ತವೆ. ಆ ಸಂದರ್ಭದಲ್ಲಿ ಹಾಲಿಗೆ ಕೆಟ್ಟ ವಾಸನೆ ಬರುತ್ತದೆ. ಮತ್ತೆ ಕೆಲವು ಹಾಲಿನಲ್ಲಿರುವ ಶರ್ಕರಪಿಷ್ಟ ಅಂಶಗಳನ್ನು ಆಕ್ರಮಿಸಿ ಹಾಲನ್ನು ಹೆಪ್ಪುಗಟ್ಟಿಸುತ್ತವೆ. ಬಿಸಿಮಾಡದ ಹಾಲಿನಲ್ಲಿ ಲ್ಯಾಕ್ಟೋಬ್ಯಾಸಿಲ್ಲೆ ಎಂಬ ಏಕಾಣುಜೀವಿ ವೃದ್ಧಿಹೊಂದಿ ಹಾಲನ್ನು ಕೆಡಿಸದೆ ಹುಳಿ ಮಾಡಬಹುದು. ಹುಳಿ ಮಾಡುವ ಏಕಾಣುಜೀವಿಗಳನ್ನು ನೇರವಾಗಿ ಹಾಲಿಗೆ ಬೆರೆಸಿ ಕೃತಕವಾಗಿ ಹುಳಿ ತರಿಸಲೂಬಹುದು. ಹಾಲಿನಲ್ಲಿ ರೋಗಕಾರಕ ಏಕಾಣುಜೀವಿಗಳೂ ಸೇರಬಹುದು. ಇವು ಮುಖ್ಯವಾಗಿ ಕಲಬೆರಕೆ ಮಾಡುವ ನೀರಿನಿಂದ, ಹಾಲು ಕರೆಯುವವನಿಂದ, ಪಾತ್ರೆಯಿಂದ ಅಥವಾ ಹಾಲನ್ನು ಉಪಯೋಗಿಸುವಾಗ ಸೇರುತ್ತವೆ. ಹಾಲಿನಲ್ಲಿ ಈ ರೋಗಕಾರಕಗಳು ಸೇರಿ ವೃದ್ಧಿಯಾಗದಂತೆ ಅದನ್ನು ಅತಿ ಶೀತಲಾವಸ್ಥೆಯಲ್ಲಿ ರಕ್ಷಿಸಬಹುದು. ರೋಗಕಾರಕಗಳನ್ನು ನಾಶಪಡಿಸಲು ಪಾಶ್ಚುರೀಕರಣ ಮಾಡಬಹುದು (ನೋಡಿ—ಪಾಶ್ಚುರೀಕರಣ). ಹಾಲಿನಿಂದ ಉತ್ಪಾದಿಸುವ ಬೆಣ್ಣೆ, ಗಿಣ್ಣು, ಮೊಸರು ಇತ್ಯಾದಿಗಳಲ್ಲಿ ಏಕಾಣುಜೀವಿಗಳು ಬಹಳ ಪ್ರಮುಖಪಾತ್ರ ವಹಿಸುತ್ತವೆ. ಇವುಗಳಿಲ್ಲದೆ ಬೆಣ್ಣೆ, ಗಿಣ್ಣು, ಮೊಸರು ಮಾಡಲಾಗುವುದಿಲ್ಲ.

ಭೂಮಿಯ ಮೇಲ್ಪದರಗಳಲ್ಲಿ ಕೋಟ್ಯನುಕೋಟಿ ಏಕಾಣುಜೀವಿಗಳಿವೆ. ಇವುಗಳ ಸಂಖ್ಯೆ ಭೂಸಾರ ಹಾಗೂ ಆಳಗಳನ್ನು ಅವಲಂಬಿಸಿದೆ. ಸಾಗುವಳಿ ಮಾಡದ
















13 ತಳಿಯೆಬ್ಬಿಸಿ ಬಣ್ಣ ಹಾಕಿದ ಕಾಲರ ಬಳುಕುಜೀವಿ. ಬಲಗಡೆಯುದರಲ್ಲಿ ಅವುಗಳ ಕೊರಡಂಗಗಳೂ ಕಾಣುತ್ತಿವೆ.

14 ಪ್ಲೇಗು ಗೆಡ್ಡೆಯಿಂದ ತೆಗೆದು ಬಣ್ಣಹಾಕಿದ ಪ್ಲೇಗು ದಂಡಾಣುಜೀವಿಗಳು ರಕ್ತಕಣಗಳ ನಡುವೆ ಇವೆ.

15 3 ದಿನಗಳು ತಳಿಯೆಬ್ಬಿಸಿ ಬಣ್ಣಹಾಕಿದ ಸೆಟಬೇನೆ ಬೀಜಕಣಗಳು ಎಡಕ್ಕಿವೆ. ಬಲಕ್ಕಿರುವವು 12 ತಾಸು ತಳಿಯೆಬ್ಬಿಸಿ ಬಣ್ಣ ಹಾಕಿದಾಗ ಕೊರಡಂಗಗಳನ್ನು ತೋರುತ್ತಿವೆ.

16 ಅನಿಲದ ಅಳಿಕೊಳಪಿನ ಗಾಯದಿಂದ ತೆಗೆದು ಬಣ್ಣಹಾಕಿದ ವೆಲ್ಚನ ದಂಡಾಣುಜೀವಿಗಳು. ಕೆಳಗಿರುವವಲ್ಲಿ, ಅವುಗಳ ಕವಚಗಳು ಚೆನ್ನಾಗಿ ತೋರುತ್ತಿವೆ.

17 ಕಿರಣಣಬೆಬೇನೆಯ ಕೀವುಕುರು ಎದ್ದಿರುವ ಈಲಿಯ ಅಡ್ಡಕೊಯ್ತ. ಮೇಲಿನ ಭಾಗ ಕೀವು, ಕೆಳಗಿನ ಭಾಗ ಕಿರಣಣಬೆ ಜೀವಿಗಳದು.

18 ದನದ ಅರಟನಾಲಗೆಯಲ್ಲಿ ಕಂಡುಬರುವ ಹುಣ್ಣು. ಸರಗೂದಲಿ ಕಿರಣಣಬೆಜೀವಿ ನಡುವೆ ಇದೆ.

19 ಉಪದಂಶ ಮೇಹರೋಗದ ಹುಣ್ಣಿಂದ ತೆಗೆದು ಕತ್ತಲ ಹಿನ್ನೆಲೆ ಬೆಳಗಿಸಿದಾಗ ಕಾಣುವ ನೋಟ ಮೇಲಿನದು. ಅದಕ್ಕೆ ಬಣ್ಣ ಹಾಕಿದ್ದು ಕೆಳಗಿನದು.

20 ಹುಳುಕಡ್ಡಿ ಹತ್ತಿದ ತಲೆಯ ಕೂದಲಿಗೆ ಬಣ್ಣ ಹಾಕಿದಾಗ ಒಳಗೆ ಕಾಣುವ ಮಿಣಿಬೀಜಕಣಜೀವಿಗಳು ಎಡಪಕ್ಕದಲ್ಲಿವೆ. ಬಲಪಕ್ಕದಲ್ಲಿರುವವು ಅದರ ಇನ್ನೊಂದು ಬಗೆ.

21 ಕೂಸಿನಲ್ಲೇಳುವ ಹುಗುಳಿನ ಹುಣ್ಣಿಂದ ತೆಗೆದು ತಳಿಯೆಬ್ಬಿಸಿ ಬಣ್ಣಹಾಕಿದ ಬಿಳಿಚಿಕ ಅಂಡಣಬೆ ಜೀವಾಣುಗಳು.

22 ಮಲದಿಂದ ತೆಗೆದು ಬಣ್ಣಹಾಕಿದ ಕರುಳುಚಲಕಣಗಳು. ಎಡಗಡೆಯಲ್ಲಿ ಹೆಗ್ಗುರುಳಿನವೂ ಬಲಗಡೆಯಲ್ಲಿ ಊತಕಲಯಕದವೂ ಇವೆ.

23 ಕಾಳಜ್ವರದ ರೋಗಿಯ ತೊರಳೆಯಿಂದ ರಕ್ತ ತೆಗೆದು ಬಣ್ಣಹಾಕಿದ ಲೀಷ್ಮನ್ ಕಾಯುಗಳು ರಕ್ತಕಣಗಳಲ್ಲೂ ಹೊರಗೂ ಕಾಣುತ್ತಿವೆ.

24 ಸತ್ತ ಹುಚ್ಚುನಾಯಿಯ ಮಿದುಳಿನ ನೀಲಿಯ ನರಕಣಗಳಲ್ಲಿ ನೆಗ್ರಿಕಾಯುಗಳು ದಪ್ಪ ಕೆಂಪು ಬಟ್ಟುಗಳಂತೆ ಇವೆ.


















ಗಳು ಕೆಡದೆ ಉತ್ತಮ ಸ್ಥಿತಿಯಲ್ಲಿರುತ್ತದೆ. ತೇವರಹಿತ ಸ್ಥಿತಿಯಲ್ಲಿ ಎಲ್ಲ ಏಕಾಣುಜೀವಿಗಳು ಸಾಯದಿರಬಹುದು ಹಾಗೂ ತಕ್ಕಷ್ಟು ತೇವ ಒದಗಿದಲ್ಲಿ ಅವು ಪುನಃ ಚೇತನಗೊಂಡು ಆಹಾರವನ್ನು ಕೆಡಿಸಲೂ ಬಹುದು. ಶಿಲೀಂಧ್ರಗಳು ಕಡಿಮೆ ತೇವವಿದ್ದಾಗ್ಯೂ ಬೆಳೆಯಬಲ್ಲವು.

**ಆಕ್ಸಿಜನ್ :** ಏಕಾಣುಜೀವಿಗಳು ಗಾಳಿಯಲ್ಲಿರುವ ಆಕ್ಸಿಜನ್ನಿನ ಬಳಕೆಯಲ್ಲಿ ವಿಧ ವಿಧವಾಗಿ ನಡೆದುಕೊಳ್ಳುತ್ತವೆ. ಕೆಲವಕ್ಕೆ ಉಸಿರಾಡಲು ಆಕ್ಸಿಜನ್ನಿನ ಅವಶ್ಯಕತೆಯಿರುವುದರಿಂದ ಅದಿಲ್ಲದಿದ್ದರೆ ಬೆಳೆಯಲಾರವು—ಇಂಥವು ವಾಯುಜೀವಿಗಳು (ಏರೋಬ್ಸ್). ಮತ್ತೆ ಕೆಲವು ಆಕ್ಸಿಜನ್ ಇಲ್ಲದೆಯೂ ಬೆಳೆಯುತ್ತವೆ. ಇದ್ದರೂ ಅದನ್ನವು ಉಪಯೋಗಿಸಿಕೊಳ್ಳಲಾರದವಾಗಿವೆ. ಇಂಥವು ಅವಾಯುಜೀವಿಗಳು (ಅನಿರೋಬ್ಸ್). ಮತ್ತೆ ಕೆಲವು ಎರಡು ಸ್ಥಿತಿಗಳಲ್ಲೂ ಊರ್ಜಿತವಾಗಬಲ್ಲವು. ಇವನ್ನು ಐಚ್ಛಿಕ (ಫ್ಯಾಕಲ್‌ಟೆಟಿವ್) ಜೀವಿಗಳೆನ್ನಬಹುದು. ಅವಾಯುಜೀವಿಗಳನ್ನು ಕೊಳೆಯುವ ಮತ್ತು ಕೊಳೆಯುತ್ತಿರುವ ವಸ್ತುಗಳಲ್ಲಿ, ಭೂಮಿ ಹಾಗೂ ಕೊಳ ಕೆರೆಗಳ ತಳದಲ್ಲಿರುವ ಮಣ್ಣಿನಲ್ಲಿ ಕಾಣಬಹುದು. ಅಪಕರ್ಷಣಕಾರಿಗಳು (ರೆಡ್ಯೂಸಿಂಗ್ ಏಜೆಂಟ್ಸ್) ಸಾಕಷ್ಟಿದ್ದರೆ (C ಜೀವಾತು, ಸಿಸ್ಟೈನ್ ಇತ್ಯಾದಿ) ಅವಾಯುಜೀವಿಗಳನ್ನು ಸಹ ಗಾಳಿಯಲ್ಲಿ ಬೆಳೆಸಬಹುದು. ಆಹಾರವಸ್ತುಗಳನ್ನು ಡಬ್ಬಗಳಲ್ಲಿ ಹಾಕಿ ರಕ್ಷಿಸುವ (ಟಿನ್ನಿಂಗ್) ಉದ್ಯಮದಲ್ಲಿ ಬೀಜಕೋಶ ಉತ್ಪತ್ತಿಯಾಗುವ ಏಕಾಣುಜೀವಿಗಳನ್ನು ಹೊರಗಿಡುವುದು ಪ್ರಯಾಸವೇ ಸರಿ. ಕಾರ್ಯಗತಿಯ ಭರದಲ್ಲಿ ಸಾಕಷ್ಟು ಉಷ್ಣತೆಗೆ ಒಳಪಡಿಸಿ ಬೀಜಕೋಶಗಳನ್ನು ನಾಶಪಡಿಸದಿದ್ದಲ್ಲಿ ಅವನ್ನು ಡಬ್ಬದಲ್ಲಿಟ್ಟು ಮುಚ್ಚಿದ ಅನಂತರ ಈ ಆಕ್ಸಿಜನ್‌ರಹಿತ ಮುಚ್ಚಿದ ಡಬ್ಬಗಳಲ್ಲಿ ಬೀಜಕೋಶಗಳು ಮೊಳಕೆಯಾಗಿ

ನಾಶಕಗಳಿಂದ ಸಾಮಾನ್ಯವಾಗಿ ಎಲ್ಲ ಏಕಾಣುಜೀವಿಗಳ ಜೀವಕ್ರಿಯೆಗಳೂ ಕುಂದುವುದೊಂದೇ ಅಲ್ಲದೆ ಸಂತಾನವೃದ್ಧಿಗೂ ಪೂರ್ಣವಿರಾಮವಾಗುತ್ತದೆ. ಕಾರ್ಬಾಲಿಕ್ ಆಮ್ಲ, ಆಲ್ಕೊಹಾಲ್ ಇತ್ಯಾದಿ ನಾಶಕಗಳು, ಗಂಧಕೀಯಗಳು, ಪ್ರತಿಜೀವಕಗಳು (ಆಂಟಿಬಯೊಟಿಕ್ಸ್) ಜೀವಕ್ರಿಯೆಗಳನ್ನು ಕುಂದಿಸಿ ಸಂತಾನೋತ್ಪತ್ತಿಯನ್ನು ನಿಲ್ಲಿಸುವ ಔಷಧಗಳು. ಏಕಾಣುಜೀವಿಗಳ ಸೋಂಕಿನಿಂದ ಆಹಾರಗಳನ್ನು ಸುರಕ್ಷಿತವಾಗಿಡಲು ನಂಜುರೋಧಕಗಳನ್ನು ಮುಖ್ಯವಾಗಿ ಉಪಯೋಗಮಾಡಲಾಗುತ್ತಿದೆ. ಕ್ರಿಮಿನಾಶಕಗಳನ್ನು ಗಾಯಗಳ ಶುದ್ಧೀಕರಣ, ನೀರಿನಲ್ಲಿರುವ ರೋಗಕಾರಕ ಏಕಾಣುಜೀವಿಗಳ ನಾಶ ಮುಂತಾದುವುಗಳಲ್ಲಿ ಉಪಯೋಗಮಾಡಲಾಗುತ್ತಿದೆ. ಕ್ರಿಮಿನಾಶಕಗಳ ಶಕ್ತಿಯನ್ನು ಅನೇಕ ವಿದ್ಯಮಾನಗಳು ಕುಂದಿಸುತ್ತವೆ. ಇವುಗಳಲ್ಲಿ ಮುಖ್ಯವಾದವು—1 ದ್ರವವೃದ್ಧಿ (ಡೈಲ್ಯೂಷನ್), 2 ಏಕಾಣುಜೀವಿಗಳೊಂದಿಗೆ ಹೊಂದಿರುವ ಸಂಪರ್ಕಸಮಯ, 3 ಏಕಾಣುಜೀವಿಗಳ ಸಂಖ್ಯೆ ಮತ್ತು ಅವುಗಳ ಗುಂಪು, 4 ಉಷ್ಣತೆ, 5 ಮೇಲ್ಮೈ ಎಳೆತ (ಸರ್ಫೇಸ್ ಟೆನ್ಷನ್), 6 ಪರಿಸರದ ಸ್ಥಿತಿಗತಿಗಳು.

ಬೀಜಕಣಗಳು ಪ್ರತಿಕೂಲ ಸ್ಥಿತಿಗಳನ್ನು ಏಕಾಣುಜೀವಿಗಳಿಗಿಂತ ಹೆಚ್ಚು ಕಾಲ ನಿರೋಧಿಸಿ ಜೀವಂತವಾಗಿರಬಲ್ಲವು. ಒಂದು ಕ್ರಿಮಿನಾಶಕದ ಪರಿಣಾಮ ಎಲ್ಲ ಏಕಾಣುಜೀವಿಗಳ ಮೇಲೂ ಒಂದೇ ರೀತಿ ಎಂದು ಹೇಳಲಾಗುವುದಿಲ್ಲ. ಕೀವಿನಲ್ಲಿರುವ ಸ್ಟೆಫೈಲೊಕಾಕೈ ಏಕಾಣುಜೀವಿಗಳು ಸ್ವಲ್ಪಮಟ್ಟಿಗೆ ಕ್ರಿಮಿನಾಶಕಗಳ ಪ್ರಭಾವವನ್ನೆದುರಿಸಬಲ್ಲವು. ವಿಷಮಶೀತಜ್ವರ ತರುವ ಏಕಾಣುಜೀವಿಗಳು ಸೂಕ್ಷ್ಮ ಕ್ರಿಮಿನಾಶಕಗಳಿಂದ ಸುಲಭವಾಗಿ ನಾಶಹೊಂದುತ್ತವೆ. ಕ್ರಿಮಿನಾಶಕಗಳ ಶಕ್ತಿಯನ್ನು ನಿರ್ಧರಿಸುವಾಗ ಏಕಾಣುಜೀವಿಗಳನ್ನು ನಾಶಮಾಡುವ ಶಕ್ತಿಯೊಂದೇ ಮುಖ್ಯವೆಂದು ಹೇಳಲಾಗುವುದಿಲ್ಲ. ಇವು ಊತಕಗಳ ಮೇಲೆ ಇತರ ಕೆಟ್ಟ ಪರಿಣಾಮಗಳನ್ನು ಮಾಡಕೂಡದು.

**ಗಾಳಿಯ ಮತ್ತು ನೀರಿನ ಏಕಾಣುಜೀವಿಗಳು :** ಏಕಾಣುಜೀವಿಗಳಿಲ್ಲದ ಜಾಗಗಳು ಇಲ್ಲವೇ ಇಲ್ಲವೆಂದು ಹೇಳಬಹುದು. ಕೆರೆ, ಕುಂಟೆ, ಚರಂಡಿ, ಗೊಬ್ಬರದ ಗುಂಡಿ, ನದಿ, ನೆಲ ಇತ್ಯಾದಿ ಎಲ್ಲ ಕಡೆಗಳಲ್ಲೂ ಇವು ಇದ್ದೇ ಇವೆ. ಇವುಗಳ ಆಹಾರ ಜೈವಿಕವಸ್ತುಗಳು. ಆದ್ದರಿಂದ ಜೈವಿಕವಸ್ತುಗಳಿರುವಲ್ಲೆಲ್ಲ ಈ ಜೀವಿಗಳು ಹೇರಳವಾಗಿರುತ್ತವೆ. ದ್ರವಗಳಲ್ಲಿ ಅಂದರೆ ಹಾಲು, ಹೆಂಡ, ರಕ್ತ, ಮೂತ್ರ ಇತ್ಯಾದಿಗಳಲ್ಲಿಯೂ ಘನಸ್ಥಿತಿಯ ಆಹಾರಗಳಲ್ಲಿ ಅಂದರೆ ತರಕಾರಿ, ಹಣ್ಣು, ಧಾನ್ಯ, ಮಾಂಸ ಇತ್ಯಾದಿ ಪದಾರ್ಥಗಳಲ್ಲಿಯೂ ಇವುಗಳಿವೆ. ತೇವ, ಉಷ್ಣತೆ ಹಿತಕರವಾಗಿದ್ದಲ್ಲೆಲ್ಲ ಬೆಳೆದು ವೃದ್ಧಿಯಾಗುತ್ತವೆ. ಇಂಥ ಬೆಳೆವಣಿಗೆಗೆ ಮಿತಿ ಎಂಬುದೇ ಇಲ್ಲ. ಆದರೆ ಇಂಥ ವೃದ್ಧಿಯ ಜೊತೆಯಲ್ಲೇ ನಾಶವಾಗಲು ಬೇಕಾದ ಸ್ಥಿತಿಗಳೂ ಅಲ್ಲಿ ಹುಟ್ಟಿಕೊಳ್ಳುತ್ತವೆ. ತೇವವಿಲ್ಲದ ಸ್ಥಿತಿ, ಅಧಿಕ ಆಮ್ಲತೆ, ಸೂರ್ಯಕಿರಣಗಳು ಮುಂತಾದವುಗಳ ಪರಿಣಾಮದಿಂದ ಇವುಗಳ ಈ ವೃದ್ಧಿಗೆ ತಡೆಯುಂಟಾಗುವುದು.

ನಾವು ಕೆಮ್ಮುವಾಗ, ಸೀನುವಾಗ ಹಾಗೂ ಮಾತನಾಡುವಾಗ

ಮತ್ತೆ ಕೆಲವು ಹಾಲಿನಲ್ಲಿರುವ ಶರ್ಕರಪಿಷ್ಟ ಅಂಶಗಳನ್ನು ಆಕ್ರಮಿಸಿ ಹಾಲನ್ನು ಹೆಪ್ಪುಗಟ್ಟಿಸುತ್ತವೆ. ಬಿಸಿಮಾಡದ ಹಾಲಿನಲ್ಲಿ ಲ್ಯಾಕ್ಟೋಬ್ಯಾಸಿಲೈ ಎಂಬ ಏಕಾಣುಜೀವಿ ವೃದ್ಧಿಹೊಂದಿ ಹಾಲನ್ನು ಕೆಡಿಸದೆ ಹುಳಿ ಮಾಡಬಹುದು. ಹುಳಿ ಮಾಡುವ ಏಕಾಣುಜೀವಿಗಳನ್ನು ನೇರವಾಗಿ ಹಾಲಿಗೆ ಬೆರೆಸಿ ಕೃತಕವಾಗಿ ಹುಳಿ ತರಿಸಲೂಬಹುದು. ಹಾಲಿನಲ್ಲಿ ರೋಗಕಾರಕ ಏಕಾಣುಜೀವಿಗಳೂ ಸೇರಬಹುದು. ಇವು ಮುಖ್ಯವಾಗಿ ಕಲಬೆರಕೆ ಮಾಡುವ ನೀರಿನಿಂದ, ಹಾಲು ಕರೆಯುವವನಿಂದ, ಪಾತ್ರೆಯಿಂದ ಅಥವಾ ಹಾಲನ್ನು ಉಪಯೋಗಿಸುವಾಗ ಸೇರುತ್ತವೆ. ಹಾಲಿನಲ್ಲಿ ಈ ರೋಗಕಾರಕಗಳು ಸೇರಿ ವೃದ್ಧಿಯಾಗದಂತೆ ಅದನ್ನು ಅತಿ ಶೀತಲಾವಸ್ಥೆಯಲ್ಲಿ ರಕ್ಷಿಸಬಹುದು. ರೋಗಕಾರಕಗಳನ್ನು ನಾಶಪಡಿಸಲು ಪಾಶ್ಚುರೀಕರಣ ಮಾಡಬಹುದು (ನೋಡಿ—ಪಾಶ್ಚುರೀಕರಣ). ಹಾಲಿನಿಂದ ಉತ್ಪಾದಿಸುವ ಬೆಣ್ಣೆ, ಗಿಣ್ಣು, ಮೊಸರು ಇತ್ಯಾದಿಗಳಲ್ಲಿ ಏಕಾಣುಜೀವಿಗಳು ಬಹಳ ಪ್ರಮುಖಪಾತ್ರ ವಹಿಸುತ್ತವೆ. ಇವುಗಳಿಲ್ಲದೆ ಬೆಣ್ಣೆ, ಗಿಣ್ಣು, ಮೊಸರು ಮಾಡಲಾಗುವುದಿಲ್ಲ.

ಭೂಮಿಯ ಮೇಲ್ಪದರಗಳಲ್ಲಿ ಕೋಟ್ಯನುಕೋಟಿ ಏಕಾಣುಜೀವಿಗಳಿವೆ. ಇವುಗಳ ಸಂಖ್ಯೆ ಭೂಸಾರ ಹಾಗೂ ಆಳಗಳನ್ನು ಅವಲಂಬಿಸಿದೆ. ಸಾಗುವಳಿ ಮಾಡದ

ಭೂಮಿಯಲ್ಲಿ ಒಂದು ಗ್ರಾಂ ಮಣ್ಣಿನಲ್ಲಿ 100,000 ಏಕಾಣುಜೀವಿಗಳಿವೆ. ತೋಟ ಮಾಡುವ ಭೂಮಿಯಲ್ಲಿ 1,500,000 ಹಾಗೂ ಹೊಲಸು ನೀರಿನಿಂದ ಕಲುಷಿತವಾದ ಭೂಮಿಯಲ್ಲಿ 115,000,000 ಏಕಾಣುಜೀವಿಗಳಿವೆ ಎಂದು ಅಂದಾಜುಮಾಡಲಾಗಿದೆ. ಇವು ಸಂಶೋಧನಾಲಯಗಳಲ್ಲಿ ಬೆಳೆಯಬಹುದಾದವು ಮಾತ್ರ. ಏಕಾಣುಜೀವಿಗಳ ಸಂಖ್ಯೆ ಭೂಮಿಯ ಮೇಲ್ಪದರದಿಂದ ಆಳ ಹೋದಷ್ಟೂ ಕಡಿಮೆಯಾಗುತ್ತದೆ. ಸುಮಾರು 4′–6′ ಕೆಳಗೆ ಇವು ಬಹು ಕಡಿಮೆ ; ಇಲ್ಲವೆಂದೇ ಹೇಳಬಹುದು. 10′–12′ ಆಳದಲ್ಲಿ ಇವುಗಳ ಸುಳಿವೇ ಇಲ್ಲ. ಭೂಮಿಯಲ್ಲಿರುವ ಏಕಾಣುಜೀವಿಗಳು ವಿಧವಿಧವಾದವು. ಅವುಗಳ ಕಾರ್ಯಾಚರಣೆಗಳಲ್ಲೂ ಬಹುಮಟ್ಟಿಗೆ ವೈವಿಧ್ಯಗಳಿವೆ. ಒಂದು ವಿಧದ ಏಕಾಣುಜೀವಿ ಮತ್ತೊಂದು ವಿಧದ ಏಕಾಣುಜೀವಿಯ ಮೇಲೆ ಪ್ರಭಾವ ಬೀರುತ್ತದೆ. ಕೆಲವು ಮತ್ತೆ ಕೆಲವಕ್ಕೆ ಉತ್ತೇಜಕಾರಕ, ಇನ್ನೂ ಕೆಲವು ಇತರ ಏಕಾಣುಜೀವಿಗಳು ವೃದ್ಧಿಯಾಗಲು ಅಡ್ಡಿ ತಂದೊಡ್ಡುತ್ತವೆ. ಇವುಗಳ ವೃದ್ಧಿ ಹಿತಕರವಾದ ಉಷ್ಣತೆ, ತೇವ ಇತ್ಯಾದಿಯನ್ನವಲಂಬಿಸಿದೆ. ಪ್ರಾಣಿಗಳು, ಸಸ್ಯಗಳು ಹಾಗೂ ಮನುಷ್ಯ ಭೂಮಿಯ ಮೇಲೆ ಜೀವಿಸಲು ಸಾಧ್ಯವಾಗಿರುವುದು ಈ ಏಕಾಣುಜೀವಿಗಳ ಚಟುವಟಿಕೆಗಳಿಂದಲೇ ಎಂದು ಹೇಳಿದರೆ ಉತ್ಪ್ರೇಕ್ಷೆಯೇನಲ್ಲ.

ಜೀವರಾಶಿಯ ಉಳಿವಿಗೆ ಏಕಾಣುಜೀವಿಗಳ ಚಟುವಟಿಕೆಯಿಂದಾಗುವ ಸಸಾರಜನಕ ಸ್ಥಿರೀಕರಣ (ನೈಟ್ರೊಜನ್ ಫಿಕ್ಸೇಶನ್) ಮೂಲಾಧಾರ. ವಾಯುಮಂಡಲದಲ್ಲಿ 80% ಸಾರಜನಕವಿದೆ. ಈ ಅಂಶ ಗಾಳಿಯಿಂದ ಇತರ ವಸ್ತುಗಳೊಡನೆ ಬೆರೆತು ಪ್ರೊಟೀನಾಗಿ ಪರಿವರ್ತನಗೊಂಡು, ಜೀವರಾಶಿಗೇ ಅತ್ಯಾವಶ್ಯಕ ಆಹಾರವಾಗುತ್ತದೆ. ಸಾರಜನಕ ಪ್ರತಿಕ್ರಿಯೆ ಇಲ್ಲದ ಒಂದು ಜಡಾನಿಲವಾದ್ದರಿಂದ ಜೀವಕೋಶಗಳಿಂದ ಈ ಪರಿವರ್ತನೆ ಸಾಧ್ಯವಾಗದು. ಇಲ್ಲಿ ಏಕಾಣುಜೀವಿಗಳ ಪಾತ್ರ ಬಲು ಮಹತ್ತ್ವದ್ದು. ಈ ರೀತಿಯಲ್ಲಿ ಸಾರಜನಕ ಸ್ಥಿರೀಕರಣ ಮಾಡುವ ಏಕಾಣುಜೀವಿಗಳು ರೈಜ಼ೋಬಿಯಂ, ಕ್ಲಾಸ್‌ಟ್ರಿಡಿಯಂ, ಎಜ಼ೋಟೊಬ್ಯಾಕ್ಟರ್ ಎಂಬ ಮೂರು ಗುಂಪಿಗೆ ಸೇರಿದವು. ಭೂಮಿಯಲ್ಲಿ ಸ್ಥಿರೀಕರಣದ ಅದ್ಭುತ ಒಂದು ಕಡೆಯಾದರೆ ಮತ್ತೊಂದು ಕಡೆ ನಿರ್ಜೀವಿ ಜೈವಿಕ ವಸ್ತುಗಳು ಕೊಳೆತು ಅದರಿಂದ ಯಾವ ರೀತಿಯ ಬಾಧಕ ಹಾಗೂ ಅಸಹ್ಯವಾಗಲೀ ಇಲ್ಲದ ರಾಸಾಯನಿಕ ಲವಣಗಳ ಪರಿವರ್ತನೆ ಮತ್ತೊಂದು ಅದ್ಭುತ. ಸಸ್ಯ ಮತ್ತು ಪ್ರಾಣಿಗಳ ಸಾವಿನಿಂದ ಸಸಾರಜನಕ ಮತ್ತು ಇಂಗಾಲಾಣುಗಳು ಭೂಮಿಯನ್ನು ಸೇರುತ್ತವೆ. ಭೂಮಿಯಲ್ಲಿರುವ ಅಸಂಖ್ಯಾತ ಏಕಾಣುಜೀವಿಗಳು ಈ ಅಣುಗಳನ್ನು ಕಿಣ್ವಗಳ ಪ್ರತಿಕ್ರಿಯೆಯಿಂದ ಸರಳ ವಸ್ತುಗಳಿಗೆ ವಿಭಜಿಸುತ್ತವೆ. ಸಸಾರಜನಕ ವಿಭಜನೆಯಿಂದ ಉತ್ಪತ್ತಿಯಾಗುವ ರಾಸಾಯನಿಕಗಳಲ್ಲಿ ಅಮೋನಿಯ ($NH_3$) ಒಂದು. ಇದು ಉತ್ಪತ್ತಿಯಾಗುವ ರೀತಿಗೆ ಅಮೋನಿಫಿಕೇಶನ್ ಎಂದು ಹೆಸರು. ಅಮೋನಿಯ ಸರಳ ರೀತಿಯ ರಾಸಾಯನಿಕ ಮತ್ತು ಅದು ಸುಲಭವಾಗಿ ಪರಿವರ್ತನೆಹೊಂದಿ ನೈಟ್ರೇಟ್ ಆಗಬಲ್ಲುದು. ಅಂದರೆ ಅಮೋನಿಯ ಆಮ್ಲಜನಕದೊಂದಿಗೆ ಸಂಯೋಜಿಸಿ ನೈಟ್ರೈಟ್ ಆಗಿ ಅನಂತರ ನೈಟ್ರೇಟ್ ಲವಣವಾಗುತ್ತದೆ. ಈ ರೀತಿಯ ಪರಿವರ್ತನೆಗೆ ನೈಟ್ರಿಫಿಕೇಶನ್ ಎಂದು ಹೆಸರು. ಕೇವಲ ಕೆಲವೇ ಏಕಾಣುಜೀವಿಗಳು ಈ ಕಷ್ಟಸಾಧ್ಯವಾದ ಪರಿವರ್ತನೆ ಮಾಡಬಲ್ಲವು. ನೈಟ್ರೋಸೋಮೋನಾಸ್, ನೈಟ್ರೋಸೋಕಾಕಸ್—ಇವೆರಡೂ ಅಮೋನಿಯವನ್ನು ನೈಟ್ರೈಟ್ ಆಗಿ ಪರಿವರ್ತಿಸುವುವು. ನೈಟ್ರೋಬ್ಯಾಕ್ಟರ್ ಏಕಾಣುಜೀವಿಗಳು ನೈಟ್ರೈಟನ್ನು ನೈಟ್ರೇಟ್ ಆಗಿ ಪರಿವರ್ತಿಸುತ್ತವೆ. ಈ ನೈಟ್ರೇಟ್ ಲವಣಗಳು ಸಸ್ಯಗಳ ಪ್ರಮುಖ ಆಹಾರ.

ಸಾರಜನಕವಿಲ್ಲದ ರಾಸಾಯನಿಕಗಳನ್ನೂ ಇದೇ ರೀತಿ ಭೂಮಿಯ ಏಕಾಣುಜೀವಿಗಳು ಪರಿವರ್ತನೆ ಮಾಡಬಲ್ಲವು. ಇಂಗಾಲ, ಜಲಜನಕ, ಆಮ್ಲಜನಕಗಳನ್ನೊಳಗೊಂಡ ದೊಡ್ಡ ದೊಡ್ಡ ಅಣುಗಳನ್ನು ವಿಭಜಿಸಿ ಸರಳ ರೀತಿಯ ಸೆಲ್ಯುಲೋಸ್ ಮತ್ತು ಪಿಷ್ಟ ಪರಿವರ್ತನೆ ಏಕಾಣುಜೀವಿಗಳಿಂದಲೇ ನಡೆಯುತ್ತದೆ. ಸೆಲ್ಯುಲೋಸ್, ಪಿಷ್ಟಗಳು ಸಹ ಇನ್ನೂ ಸರಳ ರೀತಿಯ ರಾಸಾಯನಿಕಗಳಾಗಿ ಪಚನ ಹೊಂದಿ ಆವಶ್ಯಕ ಶಕ್ತಿಯನ್ನು ಒದಗಿಸುತ್ತವೆ.

ಗಂಧಕ, ರಂಜಕ, ಕಬ್ಬಿಣ ಮತ್ತಿತರ ಅಜೈವಿಕ ವಸ್ತುಗಳ ಪರಿವರ್ತನೆಯೂ ಭೂಮಿಯಲ್ಲಿರುವ ಏಕಾಣುಜೀವಿಗಳಿಂದಾಗುತ್ತದೆ. ಜೀವವಿಲ್ಲದ ಪ್ರಾಣಿಗಳು, ಸಸ್ಯ ಹಾಗೂ ಕೆಲವು ಸೂಕ್ಷ್ಮಜೀವಿಗಳ ಕೋಶಗಳ ಸಸಾರಜನಕಾಂಶಗಳಲ್ಲಿ ಗಂಧಕಾಂಶವಿರುತ್ತದೆ. ಪ್ರಕೃತಿಯಲ್ಲೂ ಗಂಧಕ, ಸಲ್ಫೇಟ್ ಉಪ್ಪು ಹಾಗೂ ಹೈಡ್ರೊಜನ್ ಸಲ್ಫೈಡುಗಳಲ್ಲೂ ಗಂಧಕವಿದೆ. ಇವುಗಳ ಪರಿವರ್ತನೆಯಲ್ಲಿ ಅನೇಕ ಏಕಾಣುಜೀವಿಗಳು ಭಾಗವಹಿಸುತ್ತವೆ.

ಗ್ರಾಮಸಾರದ ಶುದ್ಧೀಕರಣ : ದೊಡ್ಡ ದೊಡ್ಡ ಪಟ್ಟಣಗಳಲ್ಲಿ ಊರುಗಳಲ್ಲಿ ಗ್ರಾಮಸಾರ ಮತ್ತು ಅದನ್ನು ಕೊಂಡೊಯ್ಯುವ ನೀರಿನ ಶುದ್ಧೀಕರಣ ಮುಖ್ಯವಾಗಿ ಏಕಾಣುಜೀವಿಗಳಿಂದ ಆಗುತ್ತದೆ. ಈ ನೀರಿನಲ್ಲಿ ಅಸಂಖ್ಯಾತ ಏಕಾಣುಜೀವಿಗಳಿರುತ್ತವೆ. ಇವುಗಳಲ್ಲಿ ಕೆಲವು ಮನುಷ್ಯನ ಕರುಳಿನಿಂದ ಮಲದೊಂದಿಗೆ ಹೊರಹಾಯ್ದುವು, ಕೆಲವು ಗಾಳಿಯ ಏಕಾಣುಜೀವಿಗಳು, ಕೆಲವು ಭೂಮಿಯ ಏಕಾಣುಜೀವಿಗಳು. ಇವುಗಳಲ್ಲನೇಕವು ಜೈವಿಕ ವಸ್ತುಗಳನ್ನು ಪರಿವರ್ತಿಸಿ ಅವುಗಳಿಂದ ಯಾವ ಕೆಡಕೂ ಉಂಟಾಗದಂತೆ ಜಡಸ್ಥಿತಿಗೆ ಇಳಿಸುತ್ತವೆ. ರೋಗಕಾರಕ ಏಕಾಣುಜೀವಿಗಳಿಗೂ ಈ ಪರಿವರ್ತನೆಗಳಿಂದ ಉಳಿಗಾಲವಿಲ್ಲ. ಮುಖ್ಯ ಪರಿವರ್ತನೆಯೆಂದರೆ ಜೈವಿಕವಸ್ತುಗಳ ಕೊಳೆತದ ಫಲವಾಗಿ ಮೀಥೇನ್, ಇಂಗಾಲಾಮ್ಲ, ಸಾರಜನಕ ಮತ್ತು ಅಮೋನಿಯ–ಇವು ಉತ್ಪತ್ತಿಯಾಗುತ್ತವೆ. ಮೊದಲೇ ತಿಳಿಸಿದಂತೆ ಅಮೋನಿಯ ಆಮ್ಲಜನಕ ಸಂಯೋಗದಿಂದ ನೈಟ್ರೈಟ್ ಆಗಿ ಅನಂತರ ನೈಟ್ರೇಟ್ ಆಗುತ್ತದೆ. ಅಂದರೆ ಮೊದಲು ಕೊಳೆತು ನಾರುತ್ತಿದ್ದ ಮಲ ಈ ಏಕಾಣುಜೀವಿಗಳ ಸತತ ಕ್ರಿಯೆಯಿಂದ ವಾಸನೆಯಿಲ್ಲದ, ಯಾರಿಗೂ ಅಪಾಯವಿಲ್ಲದ ಲವಣವಾಗಿ ಪರಿವರ್ತನೆ ಹೊಂದುತ್ತದೆ. ಈ ಕ್ರಿಯೆಗಳು ಅತ್ಯಲ್ಪಕಾಲದಲ್ಲಿ ಹೆಚ್ಚಿಗೆ ವಿನಿಯೋಗವಾಗದಂತೆ ಕೃತಕವಾಗಿ ವ್ಯವಸ್ಥೆ ಮಾಡಲು ಅನೇಕ ಸಾಧನಸಲಕರಣೆಗಳನ್ನು ಅಳವಡಿಸಲಾಗಿದೆ.

ಕೈಗಾರಿಕೋದ್ಯಮಗಳಲ್ಲಿ ಏಕಾಣುಜೀವಿಗಳ ಪಾತ್ರ : ಇವುಗಳಲ್ಲಿ ಮುಖ್ಯವಾಗಿ ಪರಿಶೀಲಿಸಬೇಕಾದವು 1 ಬ್ರೆಡ್ ಮಾಡಲು ಉಪಯೋಗಿಸುವ ಯೀಸ್ಟ್ : 2 ನಾರಿನ ಉತ್ಪಾದನೆ; 3 ಸಕ್ಕರೆ, ಪಿಷ್ಟಗಳನ್ನು ಉಪಯೋಗಿಸಿ ಬೀರ್ ದ್ರಾಕ್ಷಾರಸಗಳ ತಯಾರಿಕೆ; 4 ಕಿಣ್ವಗಳ ತಯಾರಿಕೆ; 5 ಜೀವಾತುಗಳ ಉತ್ಪಾದನೆ, 6 ಪ್ರತಿಜೀವಕಗಳು.

1 ಬ್ರೆಡ್ ಉಬ್ಬಿಕೊಂಡು ಮೆತ್ತಗೂ ರುಚಿಯಾಗಿಯೂ ಇರುವಂತೆ ಮಾಡಲು ಸೂಕ್ತರೀತಿಯ ಯೀಸ್ಟನ್ನು (ಹುದುಗು) ಉಪಯೋಗಿಸುತ್ತಾರೆ. ಇದರಿಂದ ಬ್ರೆಡ್ ಬೇಗ ತಯಾರಾಗುವುದಲ್ಲದೆ ಬೇರೆ ಯಾವ ರೀತಿಯ ಏಕಾಣುಜೀವಿಗಳೂ ಅದರಲ್ಲಿ ಸೇರಲು ಅವಕಾಶವಿಲ್ಲದಂತಾಗುತ್ತದೆ.

2 ಕೆಲವು ವಿಶಿಷ್ಟ ಸಸ್ಯಗಳಿಂದ ನಾರು ತಯಾರುಮಾಡುತ್ತಾರೆ. ಅಂಥ ಸಸ್ಯದಲ್ಲಿ ಪೆಕ್ಟಿನ್ ಲವಣ ಇರುವ ಅಂಗಾಂಶವನ್ನು ಕೊಳೆಸಿ ನಾರುಮಾಡುತ್ತಾರೆ. ಈ ಅಂಗಾಂಶ ಮೆತುವಾಗುವಂತೆ ಮಾಡುವ ಕಿಣ್ವಗಳಿರುವ ಏಕಾಣುಜೀವಿಗಳು ಕೆಲವು ಮಾತ್ರ. ಇವುಗಳಲ್ಲಿ ಮುಖ್ಯವಾದವು ಕ್ಲಾಸ್ಟ್ರಿಡಿಯಂ ಫೆಲ್ಸಿನಿಯಂ ಮತ್ತು ಕ್ಲಾಸ್ಟ್ರಿಡಿಯಂ ಬ್ಯೂಟೈರಿಕಂ. ಇವುಗಳ ಕ್ರಿಯೆಗೆ ಒಳಪಡಿಸದೆ ಕೃತಕವಾಗಿ ಪೆಕ್ಟಿನ್ ಮೆತುಮಾಡಲು ಪ್ರಯತ್ನಗಳು ನಡೆದಿವೆಯಾದರೂ ಅವು ಇದುವರೆಗೂ ಸಫಲವಾಗಿಲ್ಲ.

3 ಪ್ರಾಚೀನ ಕಾಲದಿಂದಲೂ ಮಾದಕಗಳು ಎಂದರೆ ಸುರೆ, ಸೋಮ, ದ್ರಾಕ್ಷಾರಸಗಳನ್ನು ಈ ಏಕಾಣುಜೀವಿಗಳ ಬಳಕೆಯಿಂದ ಉತ್ಪಾದನೆ ಮಾಡಲಾಗುತ್ತದೆ. ಇಷ್ಟೇ ಅಲ್ಲದೆ ಎಥೆನಾಲ್ ಅಥವಾ ಈಥೈಲ್ ಆಲ್ಕೊಹಾಲ್, ಗ್ಲಿಸರಾಲ್, ಬ್ಯೂಟೆನಾಲ್, ಅಸಿಟೋನ್, ಅಸಿಟಿಕ್ ಆಮ್ಲ, ಸಿಟ್ರಿಕ್ ಆಮ್ಲ ಮುಂತಾದವುಗಳ ತಯಾರಿಕೆಯೂ ವಿಧವಿಧವಾದ ಏಕಾಣುಜೀವಿಗಳಿಂದಲೇ ನಡೆಯುತ್ತದೆ.

4 ಸಸಾರಜನಕ ಮತ್ತು ಪಿಷ್ಟಗಳನ್ನು ವಿಭಜಿಸಲು ಬೇಕಾದ ಕಿಣ್ವಗಳನ್ನು ಕೆಲವು ಶಿಲೀಂಧ್ರಗಳನ್ನು ಉಪಯೋಗಿಸಿ ಅಥವಾ ಏಕಾಣುಜೀವಿಗಳ ಕ್ರಿಯೆಗಳಿಂದ ಉತ್ಪಾದನೆ ಮಾಡಲಾಗುತ್ತಿದೆ.

5 ಏಕಾಣುಜೀವಿಗಳಲ್ಲಿ ಅನೇಕವು ಮನುಷ್ಯವರ್ಗಕ್ಕೂ ಪ್ರಾಣಿವರ್ಗಕ್ಕೂ ಆವಶ್ಯಕವಾದ ಬಿ ಜೀವಾತುಗಳನ್ನು ತಾವೇ ತಯಾರಿಸಬಲ್ಲವು. ಏಕಾಣುಜೀವಿಗಳೇ ಕೆಲವು ಜೀವಾತುಗಳ ಮೂಲವೆಂದು ಹೇಳಬಹುದು. ಅನೇಕ ರೀತಿಯ ಯೀಸ್ಟುಗಳಲ್ಲಿ ಬಿ ಅಥವಾ ಥಯಮಿನ್ ಜೀವಾತು ತುಂಬಿದೆ. ಬಿ ಅಥವಾ ರಿಬೊಫ್ಲೇವಿನ್ ಸಹ ಯೀಸ್ಟ್ ಬಳಸಿ ಉತ್ಪಾದಿಸಲಾಗುತ್ತಿದೆ. ಸ್ಟ್ರೆಪ್ಟೋಮೈಸಿನ್ ಎಂಬ ಪ್ರತಿಜೀವಿಯನ್ನು ತಯಾರಿಸುವಾಗ ಉಪಯೋಗಿಸುವ ಸ್ಟ್ರೆಪ್ಟೋಮೈಸಿನ್ ಗ್ರೈಸಿಯೂಸ್ ಸಾಕಷ್ಟು ಬಿ ಜೀವಾತನ್ನು ಸಹ ಕೊಡುತ್ತದೆ. ಎರ್ಗೊಸ್ಟಿರಾಲ್ (ಅಂದರೆ ಡಿ ಜೀವಾತು ಕೊಡುವ) ಯೀಸ್ಟಿನಲ್ಲಿದೆ. ಇವೇ ಅಲ್ಲದೇ ಇನ್ನೂ ಅನೇಕ ಏಕಾಣುಜೀವಿಗಳ ಉಪಯೋಗದಿಂದ ಜೀವಾತುಗಳನ್ನು ತಯಾರಿಸಬಹುದು.

6 ಸೂಕ್ಷ್ಮಜೀವಿಗಳು ಉತ್ಪತ್ತಿಮಾಡುವ ರಾಸಾಯನಿಕ ವಸ್ತುವೇ ಪ್ರತಿಜೀವಕಗಳು. ಇವನ್ನು ದ್ರವೀಕರಿಸಿ ಏಕಾಣುಜೀವಿಗಳೊಂದಿಗೆ ಸಂಪರ್ಕ ಕಲ್ಪಿಸಿದರೆ ಅವುಗಳ ಸಂತಾನೋತ್ಪತ್ತಿ ಮತ್ತು ಚಟುವಟಿಕೆಗಳು ನಿಲ್ಲುತ್ತವೆ ಅಥವಾ ಅವನ್ನು ನಾಶಮಾಡಲೂಬಹುದು. ಈ ರೀತಿಯ ಒಂದು ಶಕ್ತಿ ಕೆಲವು ತಂತುಶಿಲೀಂಧ್ರಗಳ (ಫಿಲಮೆಂಟಸ್ ಫಂಗಸ್) ಗುಂಪಿಗೆ ಸೇರಿದ ಜೀವಿಗಳಿಗಿವೆ ಎಂಬುದು ಬಹಳ ಹಿಂದಿನಿಂದಲೂ ನಮಗೆ ತಿಳಿದಿತ್ತು. ನಮಗೆ ತಿಳಿದಿದ್ದರೂ ಈ ಶಕ್ತಿಯನ್ನು ಮಾನವನಲ್ಲಿ ರೋಗಕಾರಕ ಏಕಾಣುಜೀವಿಗಳ ಮೇಲೆ ಪ್ರಯೋಗಿಸಿ ಅಪರಿಮಿತ ಫಲ ಪಡೆದಿರಲಿಲ್ಲ. ಉದಾಹರಣೆಗೆ, ಪೆನಿಸಿಲಿಯ ಮತ್ತು ಆಸ್ಪರ್‌ಗಿಲ್ಲಿ ಶಿಲೀಂಧ್ರಗಳಿಗೆ ಈ ಶಕ್ತಿ ಇದೆ.

ಅಲೆಕ್ಸಾಂಡರ್ ಫ್ಲೆಮಿಂಗ್ ಪೆನಿಸಿಲಿಯಂನಿಂದ ಉತ್ಪತ್ತಿಯಾದ ಪೆನಿಸಿಲಿನ್ ಕಡೆ ಗಮನ ಸೆಳೆದು (1929) ಇಡೀ ಮಾನವಕೋಟಿಗೇ ಮಹತ್ತ್ವದ ಸೇವೆ ಸಲ್ಲಿಸಿದನೆಂದು ಹೇಳಬಹುದು. ಸಾವಿರಾರು ಪ್ರತಿಜೀವಕಗಳ ಪ್ರಭಾವವನ್ನು ರೋಗಕಾರಕ ಏಕಾಣುಜೀವಿಗಳ ಮೇಲೆ ಪ್ರಯೋಗಿಸಿ ಪರಿಶೀಲಿಸಲಾಯಿತು. ಇವುಗಳಲ್ಲಿ ಕೆಲವು ಅತ್ಯಂತ ಯಶಸ್ವಿಯಾದವು. ಅನೇಕ ರೋಗಗಳಿಗೆ ರಾಮಬಾಣದಂತೆ ಪರಿಣಾಮಕಾರಿಗಳಾಗಿದ್ದುದು ಕಂಡುಬಂತು. ಈ ರೀತಿ ಸಂಶೋಧನ ನಡೆಸಿ ಜಯಗಳಿಸಿದ ಪ್ರಖ್ಯಾತ ವಿಜ್ಞಾನಿ ಅಮೆರಿಕ ಸಂಯುಕ್ತಸಂಸ್ಥಾನಗಳ ಸೆಲ್‌ಮನ್ ಎ. ವಾಕ್ಸ್‌ಮನ್. ಈ ಪ್ರತಿಜೀವಕಗಳನ್ನು ಈಗ ಭಾರಿ ಪ್ರಮಾಣದಲ್ಲಿ ಉತ್ಪಾದನೆ ಮಾಡಲಾಗುತ್ತಿದೆ. ಅನೇಕ ಪ್ರತಿಜೀವಕಗಳ ರಾಸಾಯನಿಕ ಅಂಶಗಳನ್ನು ಕಂಡುಹಿಡಿದು ಕೃತಕವಾಗಿ ಪ್ರತಿಜೀವಕಗಳನ್ನು ತಯಾರುಮಾಡಲು ಸಾಧ್ಯವಾಗಿದೆ. ಎಲ್ಲವನ್ನೂ ಕೃತಕವಾಗಿ ತಯಾರಿಸಲು ಸಾಧ್ಯವಾಗಿಲ್ಲ.

ಏಕಾಣುಜೀವಿಗಳಿಂದ ಉಪಯೋಗವೇನೋ ಇದೆ. ಆದರೆ ಅವುಗಳ ಅನಿಯಂತ್ರಿತ ವೃದ್ಧಿ ಮತ್ತು ಚಟುವಟಿಕೆಯಿಂದಾಗಿ ಅನೇಕ ಕಷ್ಟನಷ್ಟಗಳೂ ಸಂಭವಿಸುತ್ತವೆ. ಈ ವೃದ್ಧಿಗೆ ಮಟ್ಟಹಾಕಿ ಅವುಗಳ ಮೇಲೆ ಹತೋಟಿ ಇಟ್ಟುಕೊಳ್ಳಬೇಕಾದ ಸಂದರ್ಭಗಳೂ ಅನೇಕವಿವೆ. ಉದಾಹರಣೆಗೆ, ಹತ್ತಿಬಟ್ಟೆ ಉದ್ಯಮದಲ್ಲಿ ನೂಲು ಮತ್ತು ನೆಯ್ದ ವಸ್ತುಗಳಿಗೆ ಇವು ಬಹಳ ನಷ್ಟಮಾಡುತ್ತವೆ. ಮಾಂಸಾಹಾರ ತಯಾರಾಗುವ ಕಡೆಯೂ ಇವುಗಳ ಸೋಂಕಿನಿಂದ ಬಹಳ ನಷ್ಟವುಂಟಾಗುತ್ತದೆ.

ಏಕಾಣುಜೀವಿಗಳಲ್ಲಿ ಕೆಲವು ರೋಗಕಾರಕಗಳು, ಇವುಗಳಲ್ಲಿ ಮುಖ್ಯವಾದವು ಸ್ಟ್ರೆಪ್ಟೋಕಾಕಸ್, ಸ್ಟೆಫೈಲೋಕಾಕಸ್, ನ್ಯೂಮೋಕಾಕಸ್, ನೈಸೀರಿಯ, ಕೋರಿನಿಬ್ಯಾಕ್ಟೀರಿಯಂ, ಸಾಲ್ಮನೆಲ್ಲ, ಶಿಗೆಲ್ಲ, ವಿಬ್ರಿಯೋ, ಪ್ಯಾಸ್ಚುರೆಲ್ಲ, ಬ್ರೂಸೆಲ್ಲ, ಮೈಕೋಬ್ಯಾಕ್ಟೀರಿಯಂ ಮತ್ತು ಸ್ಪೈರೋಕೀಟ ಇತ್ಯಾದಿ. ಇವುಗಳ ಸೋಂಕಿನಿಂದ ಮನುಷ್ಯರು ಅನುಭವಿಸಬೇಕಾದ ರೋಗಗಳೆಂದರೆ ಸಂಧಿವಾತ, ಹೃದಯದ ಒಳಪೊರೆಯ ಉರಿಯೂತ, ಕೀವು ಹುಣ್ಣುಗಳು, ಶ್ವಾಸಕೋಶಗಳ ಉರಿಯೂತ, ಮೇಹ, ಗಂಟಲುಮಾರಿ, ಶೀತಜ್ವರ, ಪ್ಲೇಗು, ಕಾಲರಾ ಇತ್ಯಾದಿ. ಮಾನವಕೋಟಿಗೇ ಇವು ಶತ್ರುಗಳು. ಭಯಂಕರ ಅಂಟುಜಾಡ್ಯಗಳನ್ನು ಸೋಂಕಿನ ಮೂಲಕ ಒಬ್ಬರಿಂದ ಮತ್ತೊಬ್ಬರಿಗೆ ಹರಡುವ ಈ ಗುಂಪುಗಳ ಏಕಾಣುಜೀವಿಗಳಲ್ಲಿ ಅನೇಕವನ್ನು ನಾವು ಜಯಿಸಿದ್ದೇವೆ. ಅವುಗಳಿಂದ ಉಂಟಾಗುವ ರೋಗಗಳಿಗೆ ಪ್ರತಿಬಂಧಕಗಳನ್ನಾಗಲೀ ಅಥವಾ ಬಂದ ಅನಂತರ ಅವುಗಳನ್ನು ಹತೋಟಿಗೆ ತರಲು ದಿವ್ಯ ಔಷಧಗಳನ್ನಾಗಲೀ ಆಗಲೇ ಕಂಡುಹಿಡಿದಿದ್ದೇವೆ. ಆದರೂ ಅವುಗಳಿಂದ ಕಾಟ ತಪ್ಪಿಲ್ಲ. ಇವನ್ನು ಜಯಿಸಲು ನಿರಂತರ ಹೋರಾಟ ನಡೆದಿದೆ. (ಆರ್.ಎಸ್.ವಿ.)

**ಏಕಾದಶಿ:** ದಶಮಿಯ ಮಾರನೆಯ ತಿಥಿ. ಹರಿವಾಸರ, ಹರಿದಿನ ಎಂದೂ ಹೇಳುವುದುಂಟು. ಏಕಾದಶೀವ್ರತ ಮಾಹಾತ್ಮ್ಯ ಪ್ರಾಯಃ ಎಲ್ಲ ಪುರಾಣಗಳಲ್ಲೂ ಪ್ರತಿಪಾದಿತವಾಗಿದೆ. ಅಮಾವಾಸ್ಯೆ ಅಥವಾ ಪೂರ್ಣಿಮೆಯ ದಿನದಿಂದ ಹನ್ನೊಂದನೆಯ ದಿನ ಏಕಾದಶಿಯಾಗುತ್ತದೆ. ಆ ದಿನ ಸಂಪೂರ್ಣವಾಗಿ ಆಹಾರವನ್ನು ಬಿಟ್ಟು ಬ್ರಹ್ಮಚರ್ಯಾದಿ ನಿಯಮಗಳಿಂದ ಇದ್ದು ಭಗವಂತನ ಧ್ಯಾನ, ಅರ್ಚನೆ ಮುಂತಾದ ಸತ್ಕರ್ಮಗಳಿಂದ ದಿನವೆಲ್ಲ ಕಳೆದು, ರಾತ್ರಿಯಲ್ಲಿ ಜಾಗರಣವಿದ್ದು ಮರುದಿನ ಬೆಳಗ್ಗೆ ಪಾರಣೆ ಮಾಡಬೇಕು. ಇದು ಈ ವ್ರತದ ಸಂಕ್ಷಿಪ್ತ ಪರಿಚಯ. ಸಂಪೂರ್ಣವಾಗಿ ಆಹಾರವನ್ನು ಬಿಡಲು ಶಕ್ತಿಯಿಲ್ಲದವರು ಫಲಾಹಾರದಲ್ಲಿದ್ದು ಇದನ್ನು ಆಚರಿಸಬಹುದು. ಧರ್ಮ, ಅರ್ಥ, ಕಾಮ, ಮೋಕ್ಷವೆಂಬ ಸಕಲ ವಿಧ ಫಲಗಳನ್ನೂ ಈ ವ್ರತ ಕೊಡಬಲ್ಲದ್ದೆಂದು ಹೇಳಲಾಗಿದೆ. ಲೌಕಿಕವಾದ ಯಾವ ಫಲವನ್ನೂ ಅಪೇಕ್ಷಿಸದೆ ಕೇವಲ ಕರ್ತವ್ಯದೃಷ್ಟಿಯಿಂದ ಇದನ್ನು ಆಚರಿಸಿದರೆ ಮೋಕ್ಷ ಪ್ರಾಪ್ತಿಯಾಗುತ್ತದೆ. ಆಗ ಇದನ್ನು ನಿತ್ಯವ್ರತ ಎಂದು ಕರೆಯುತ್ತಾರೆ. ಅವರವರಿಗೆ ಬೇಕಾದ ಫಲಗಳಿಗೋಸ್ಕರವೂ ಸಕಲ ವಿಧ ಪಾಪಗಳ ಪ್ರಾಯಶ್ಚಿತ್ತರೂಪದಲ್ಲೂ ಇದನ್ನು ಕಾಮ್ಯವ್ರತವಾಗಿಯೂ ಆಚರಿಸಬಹುದು. ಏಕಾದಶೀವ್ರತಾಚರಣೆಯಲ್ಲಿ ಪ್ರಸಿದ್ಧನಾದವನೆಂದರೆ ರುಕ್ಮಾಂಗದ. ಇವನ ಚರಿತ್ರೆಯನ್ನು ನಾರದೀಯ ಪುರಾಣದಲ್ಲಿ ವಿಸ್ತಾರವಾಗಿ ಹೇಳಲಾಗಿದೆ. ಇವನಲ್ಲದೆ ಮುಖ್ಯವಾಗಿ—ಶ್ರೀರಾಮ, ನಾರದ, ಅಂಬರೀಷ, ಮಾಂಧಾತ, ಮುಚುಕುಂದ, ಹರಿಶ್ಚಂದ್ರ, ಪಂಚಪಾಂಡವರು—ಮುಂತಾದ ಅನೇಕರು ತಮ್ಮ ತಮ್ಮ ಅಭೀಷ್ಟವನ್ನೂ ಮೋಕ್ಷವನ್ನೂ ಪಡೆದರೆಂದು ಆಯಾ ಪುರಾಣಗಳಿಂದ ತಿಳಿಯಬಹುದು. ಏಕಾದಶಿಯಂದು ಪಾಲಿಸಬೇಕಾದ ಉಪವಾಸ, ಜಾಗರಣೆ ಮುಂತಾದವು ಎಷ್ಟು ಮುಖ್ಯವೋ ಅಷ್ಟೇ ದ್ವಾದಶಿಯಂದು ಪಾಲಿಸಬೇಕಾದ ಪಾರಣೆ ಮೊದಲಾದವೂ ಮುಖ್ಯ. ಆ ವಿವರಗಳಿಗೆ ನೋಡಿ--ದ್ವಾದಶಿ. (ಕೆ.ಎಸ್.ವಿ.)

**ಏಕಾಭಿಮುಖ ವಿಕಾಸವಾದ:** ಜೀವಿಗಳ ವಿಕಾಸಗತಿಯಲ್ಲಿ ಆಗುವ ಬೆಳೆವಣಿಗೆಗಳು ಹಂತಹಂತವಾಗಿ, ಯಾವಾಗಲೂ ಮುಮ್ಮೊಗನಾಗಿ ಖಚಿತಮಾರ್ಗದಲ್ಲೇ ಸಾಗುತ್ತವೆ ಎಂಬ ವಾದ (ಆರ್ಥೋಜೆನೆಸಿಸ್). ಇದನ್ನು ನಿರ್ಧಾರಿತ ವಿಕಾಸವೆಂದೂ ಹೇಳಲಾಗಿದೆ. ಏಕಮುಖವಿಕಾಸವಾದದ ಮೂಲ ಪ್ರವರ್ತಕರಲ್ಲೊಬ್ಬನಾದ ಥಿಯೋಡರ್ ಐಮರ್ ಚಿಟ್ಟೆಗಳ ರೆಕ್ಕೆಯಲ್ಲಿನ ದಿಂಡು ಮತ್ತು ನರರಚನೆಗಳ ವಿಕಾಸವನ್ನು ತನ್ನ ವಾದಕ್ಕೆ ಆಧಾರವಾಗಿ ಒದಗಿಸಿದ. ಅನೇಕ ಅಕಶೇರುಕ ಪಳೆಯುಳಿಕೆಗಳು ಈ ವಾದಕ್ಕೆ ಪುಷ್ಟಿ ನೀಡಿವೆ. ಎಚ್. ಎಫ್. ಆಸ್‌ಬಾರ್ನ್, ಡಬ್ಲ್ಯು. ಕೆ. ಗ್ರಿಗೋರಿ ಮುಂತಾದ ಪ್ರಾಚೀನ ಜೀವಶಾಸ್ತ್ರಜ್ಞರೂ ತಾವು ಅಭ್ಯಾಸ ಮಾಡಿದ ಕಶೇರುಕ ಜೀವಾವಶೇಷ ವಿಜ್ಞಾನದಿಂದ ಇದೇ ವಾದವನ್ನು ಎತ್ತಿ ಹಿಡಿದರು. ಈ ವಾದಕ್ಕೆ ಮತ್ತೊಂದು ಪ್ರಬಲ ಉದಾಹರಣೆಯೆಂದರೆ ಅಶ್ವ ಕುಟುಂಬದ ವಿಕಾಸ. ಹೈರಕೋಥೀರಿಯಂ ಜೀವಿಯಿಂದ ನೇರವಾಗಿ ಇಂದಿನ ಅಶ್ವಕುಟುಂಬ ಹುಟ್ಟಿದೆಯೆಂದು ಅಂದಿನಿಂದ ಇಂದಿನ ವರೆಗೆ ಸಿಕ್ಕಿರುವ ಪಳೆಯುಳಿಕೆಗಳನ್ನು ಸಾಲಾಗಿ ಜೋಡಿಸಿ ಸಮರ್ಥಿಸುವುದುಂಟು. ಏಕಮುಖ ವಿಕಾಸಕ್ಕೆ ಮತಸಂಬಂಧವಾದ ನಿಗೂಢ ಕಾರಣಗಳನ್ನು ಕೊಟ್ಟವರೂ ಇದ್ದಾರೆ. ಮೊದಲೇ ನಿರ್ಧರವಾದ ವಿಕಾಸದ ದಾರಿಯಲ್ಲೇ ನಡೆಯುವಂತೆ ಜೀವಿಯನ್ನು ಯಾವುದೋ ಒಂದು ಅಂತಃಶಕ್ತಿ ಪ್ರೇರಿಸುತ್ತದೆನ್ನುವವರೂ ಇದ್ದಾರೆ. ವೈಜ್ಞಾನಿಕವಾಗಿ ಸಮಂಜಸವಾದ ಉತ್ತರಗಳನ್ನು ಹೇಳುವ ಪ್ರಯತ್ನವೂ ನಡೆದಿದೆ. ಜೀವಿಯ ಜೀವದ್ರವ್ಯದಲ್ಲಿನ ನಿಜಮೌಲ್ಯಗಳು ಅದರ ವಿಕಾಸದ ಹಾದಿಯನ್ನು ರೂಪಿಸುತ್ತವೆ ಎಂಬ ಮಾತಂತೂ ನಿಜ. ವಿಕಾಸದ ಒಂದು ಭಾಗವಾದ ಆನುವಂಶಿಕ ಸರಣಿಯನ್ನು ಪ್ರತ್ಯೇಕಿಸಿ ನೋಡಿದಾಗ ಅದು ಏಕಾಭಿಮುಖವಾಗಿ ತೋರುವುದು ಸಹಜ. ಸಹಜವಷ್ಟೇ ಅಲ್ಲ, ಆನುವಂಶಿಕ ಸರಣಿ ತೋರುವ ವಿಕಾಸ ಮಾರ್ಗ ಮುಖ್ಯವಾದುದೂ ಹೌದು. ಈ ದೃಷ್ಟಿಯಿಂದ ಏಕಾಭಿಮುಖ ವಿಕಾಸವಾದವನ್ನು ವಿಕಾಸವಾದದ ತಳಹದಿ ಎಂದು ಒಪ್ಪಬಹುದೇ ಹೊರತು ಅದನ್ನೇ ವಿಕಾಸವಾದದ ಏಕೈಕಮಾರ್ಗ ಎನ್ನಲಾಗುವುದಿಲ್ಲ. ವಿಕಾಸ ನೇರವಾಗಿ ಅಥವಾ ಏಕಾಭಿಮುಖವಾಗಿ ನಡೆಯುವ ಕ್ರಿಯೆಯಲ್ಲ. ವಾಸ್ತವವಾಗಿ ಅದು ಬಹುಮುಖವಾದ್ದು. ಈ ರೀತಿಯ ಸಿದ್ಧಾಂತಕ್ಕೆ ತಳಿವಿಜ್ಞಾನದ ಕೊಡುಗೆ ಅಪಾರ. ಯಾವುದೇ ಜೀವಿಯಲ್ಲಿ ನಡೆಯುವ ಜೀನುವಿಕೃತಿಗಳು ಆ ಜೀವಿಯ ಉನ್ನತಿಗಾಗಿಯೇ ಅಥವಾ ವಿಕಾಸಕ್ಕಾಗಿಯೇ ನಡೆಯುತ್ತವೆ ಎಂಬ ಮಾತೂ ಸರಿಯಾಗಲಾರದು. ವಿಕೃತಿಗಳಿಂದಾಗಿ ಜೀವಿಗಳಲ್ಲಿ ವೈವಿಧ್ಯ ತಲೆದೋರುತ್ತದೆ. ಯಾವ ವಿಕೃತಿ ಪ್ರಕೃತಿಯ ಆಯ್ಕೆಯನ್ನು ಯಶಸ್ವಿಯಾಗಿ ಎದುರಿಸಿ ಬದುಕುತ್ತದೆಯೊ ಅದು ಉಳಿಯುತ್ತದೆ, ಮಿಕ್ಕವು ನಾಶಹೊಂದುತ್ತವೆ. ಜೀವಿಗೆ ಅನುಕೂಲವಲ್ಲದ, ಆತಂಕ ತರಬಲ್ಲ ರೂಪಭೇದಗಳು ಕೆಲವು ಸಾರಿ ಕಾಣಿಸಿಕೊಂಡು ತಲತಲಾಂತರವಾಗಿ ಬೆಳೆದು ಬರುವುದೂ ಉಂಟು. ಐರ್ಲೆಂಡಿನ ಎಲ್ಕ್ ಸಾರಂಗದ ಶೃಂಗಗಳು ಅಡ್ಡಾದಿಡ್ಡಿಯಾಗಿ ಬೆಳೆದು ಹೊರಲಾರದಷ್ಟು ಭಾರವಾಗಿವೆ. ಹೀಗಾಗಲು ಕಾರಣವನ್ನು ಹುಡುಕುವುದು ಸ್ವಲ್ಪ ಕಷ್ಟದ ಕೆಲಸವಾಗಬಹುದು. ಮೂಲದ್ರವ್ಯದ ವಿಕೃತಿ ಒಂದಕ್ಕಿಂತ ಹೆಚ್ಚಿನ ಮಾರ್ಪಾಟುಗಳಿಗೆ ಕಾರಣವಾದಾಗ ಆ ಮಾರ್ಪಾಟುಗಳಲ್ಲಿ ಕೆಲವು ಅತ್ಯಗತ್ಯವಾಗಿದ್ದು ಕೆಲವು ಅನಗತ್ಯವಾಗಿದ್ದರೂ ಅಗತ್ಯವಾದವುಗಳೊಡನೆ ಅನಗತ್ಯವಾದವನ್ನೂ ಜೀವಿ ಉಳಿಸಿಕೊಳ್ಳಬೇಕಾಗುತ್ತದೆ. ಹೈರಕೋಥೀರಿಯಂ ನೇರವಾಗಿ ಅಶ್ವಕುಟುಂಬವನ್ನು ಕೊಡಲಿಲ್ಲ. ಇದು ವಿಕಾಸಹೊಂದಿದ ಹಾದಿಯಲ್ಲಿ ನಾನಾ ಕವಲುಗಳಿವೆ. ಆದರೆ ಆ ಕವಲುಹಾದಿಗಳಲ್ಲಿ ವಿಕಾಸಗೊಂಡ ಜೀವಿಗಳು ಇಂದಿಲ್ಲ, ಅಷ್ಟೆ. ಗಿಡ ಬೆಳೆಯುವಾಗ ನಾನಾ ರೀತಿಯ ಕವಲು ಕೊಂಬೆಗಳು ಹುಟ್ಟಿದುವು. ಆದರೆ ಅವೆಲ್ಲ ಪರಿಸರವನ್ನೆದುರಿಸಲಾರದೆ ಹುಟ್ಟಿದಷ್ಟೇ ಬೇಗ ನಾಶಹೊಂದಿದುವು. ಆದ್ದರಿಂದ ಬೆಳೆದ ಗಿಡ ನೇರವಾಗಿ ಕಂಡಿತು. ಏಕಮುಖ ವಿಕಾಸ ವಾದಿಗಳು ಅಂಥ ಗಿಡವನ್ನೋ ಅಥವಾ ಅಂಥದೊಂದು ರೆಂಬೆಯನ್ನೋ ತಮ್ಮ ವಾದಸಮರ್ಥನೆಗೆ ನಿದರ್ಶನವಾಗಿ ತೋರುತ್ತಾರೆ.

ವಿಕಾಸ ಯಾವಾಗಲೂ ಮುಮ್ಮೊಗನಾದುದು ಎಂಬ ವಾದವೂ ಸರಿಯಲ್ಲ. ಅದು ಹಿಮ್ಮೊಗನಾಗಿರುವುದನ್ನು ಪರಿಶೋಧನೆಗಳಿಂದ ಸಮರ್ಥಿಸಲಾಗಿದೆ.

ನೋಡಿ—ವಿಕಾಸವಾದ. (ಜಿ.ಎಚ್.; ಎಲ್.ಎಸ್.ಜಿ.)

ಸಂಸ್ಕೃತಿಯ ವಿಕಾಸವನ್ನು ಕುರಿತ ವಿವೇಚನೆಯಲ್ಲೂ ಏಕಾಭಿಮುಖ ವಿಕಾಸವಾದದ ಪ್ರಭಾವ ಬಿದ್ದಿದೆಯೆಂಬುದು ಗಮನಾರ್ಹ. ಸಂಸ್ಕೃತಿಯ ಬೆಳವಣಿಗೆಯಲ್ಲಿ ಮನಸ್ಸಿನ ಪಾತ್ರ ಪ್ರಧಾನವೆಂಬುದು ಹದಿನೆಂಟನೆಯ ಶತಮಾನದ ಭಾವನೆಯಾಗಿತ್ತು. ಹತ್ತೊಂಬತ್ತನೆಯ ಶತಮಾನದ ವೈಜ್ಞಾನಿಕ ಭಾವನೆಗಳ ಪ್ರಸಾರದೊಂದಿಗೆ ಸಂಸ್ಕೃತಿ ವಿಕಾಸದ ಕಾರ್ಯ-ಕಾರಣ ಸಂಬಂಧವನ್ನು ಕುರಿತ ವಿಚಾರಣೆಯೂ ಆರಂಭವಾಯಿತು. ಜೀವವಿಕಾಸದಲ್ಲಿ ಒಂದು ಕ್ರಮವಿರುವ ಹಾಗೆ ಸಂಸ್ಕೃತಿ ವಿಕಾಸದಲ್ಲೂ ಒಂದು ಕ್ರಮವನ್ನು ಕಾಣಬಹುದೆ—ಎಂಬ ಪ್ರಶ್ನೆಗೆ ಉತ್ತರದ ಅನ್ವೇಷಣೆಯಲ್ಲಿ ತೊಡಗಿದ್ದವರಿಗೆ ಏಕಾಭಿಮುಖ ವಿಕಾಸವಾದ ಅನುವಾಗಿ ಒದಗಿಬಂತೆನ್ನಬಹುದು. ಸಮಾಜವಿಕಾಸ ಪ್ರಜ್ಞಾಪೂರ್ವಕವಾದದ್ದಲ್ಲವಾದರೂ ಅದು ಅನಿವಾರ್ಯವೆಂಬುದಂತೂ ನಿಜ. ಈ ಸಂತತ ನವೀಕರಣ ಕ್ರಿಯೆಯ ವಿಧಾನವನ್ನರಿಯುವುದು

ಅಶಕ್ಯ. ಇದರಲ್ಲಿ ಒಂದು ಕ್ರಮವಿಲ್ಲವಾದರೂ ಈ ವಿಕಾಸ ಏಕಾಭಿಮುಖ. ಇದು ಸದಾ ಮುಮ್ಮೊಗನಾದದ್ದು—ಎಂಬುದು ಆಗಿನ ಮಾನವಕುಲಶಾಸ್ತ್ರಜ್ಞರನೇಕರ ಮತವಾಗಿತ್ತು.

ಸಾಮೂಹಿಕ ಸಮಾಜವಾದದ ಪ್ರತಿಪಾದಕರಾದ ಮಾರ್ಕ್ಸ್–ಎಂಗೆಲ್ಸರು ಈ ವಾದದ ಪ್ರತಿಪಾದನೆಯಲ್ಲಿ ಮಾನವಕುಲಶಾಸ್ತ್ರಜ್ಞರಿಗಿಂತಲೂ ಮುಂದೆ ಹೋದರು. ಇವರು ಕಂಡ ಸಾಮಾಜಿಕ ಪ್ರಗತಿಯ ದರ್ಶನ ಇನ್ನೂ ನಿಚ್ಚಳವಾದ್ದು, ಖಚಿತವಾದ್ದು. ಇಡೀ ಸಮಾಜವೇ ಸಾಮೂಹಿಕ ಸಾಮ್ಯವಾದದ ಗುರಿಯತ್ತ ಅನಿವಾರ್ಯವಾಗಿ ಮುಂದುವರಿಯುತ್ತದೆ ; ಸಮಾಜದ ಆಂತರಿಕ ಪ್ರವೃತ್ತಿಗಳು ಈ ಬದಲಾವಣೆಗೆ ಪ್ರೇರಕವಾಗಿರುತ್ತವೆ—ಎಂದು ಇವರು ತರ್ಕಿಸಿದರು.

ಮುಂದೆ ಜೀವವಿಕಾಸ ಕ್ಷೇತ್ರದಲ್ಲಿ ಏಕಾಭಿಮುಖವಿಕಾಸವಾದದ ಬಗ್ಗೆ ಅನೇಕ ಪ್ರಶ್ನೆಗಳೂ ಸಂಶಯಗಳೂ ಉದ್ಭವಿಸಿದಾಗ ಸಂಸ್ಕೃತಿವಿಕಾಸಕ್ಕೆ ಸಂಬಂಧಿಸಿದಂತೆಯೂ ಈ ವಾದದಲ್ಲಿ ಅನೇಕ ತೊಡಕುಗಳು ಹುಟ್ಟಿಕೊಂಡುವು. ಸಮಾಜಶಾಸ್ತ್ರಜ್ಞರು ಸಮಾಜವಿಕಾಸಕ್ಕಿಂತ ಹೆಚ್ಚಾಗಿ ಅದರ ಸಂಘಟನೆಯ ಬಗ್ಗೆ ಹೆಚ್ಚು ವಿಚಾರ ಹರಿಸಲಾರಂಭಿಸಿದರು. *

**ಏಕೀಕರಣ :** ಅಪೂರ್ಣವಾದ್ದಕ್ಕೆ ಇತರ ಭಾಗಗಳನ್ನು ಸೇರಿಸಿಯೋ ಬೇರೆ ಬೇರೆ ಭಾಗಗಳನ್ನು ಸಂಯೋಜಿಸಿಯೋ ಸಾಧಿಸುವ ಸಮಗ್ರೀಕರಣ, ಪೂರ್ಣಕರಣ ; ಅನುಬಂಧ ; ಅನುಕಲನ (ಇಂಟಿಗ್ರೇಷನ್). ಈ ಪ್ರಕ್ರಿಯೆಯ ಫಲವಾಗಿ ಪ್ರತಿ ಬಿಡಿಭಾಗವೂ ಪೂರ್ಣತೆಯ ಅಥವಾ ಸಮಗ್ರತೆಯ ಅಂಗವಾಗಿ ಮಾರ್ಪಡುತ್ತದೆ. ಆ ಭಾಗಗಳು ಪರಸ್ಪರವಾಗಿಯಲ್ಲದೆ ಪೂರ್ಣತೆಯ ಜೊತೆಗೆ ಸಂಬಂಧ ತಳೆಯುತ್ತವೆ ; ತಮ್ಮ ಪ್ರತ್ಯೇಕತೆಯನ್ನು ಕರಗಿಸಿಕೊಳ್ಳುತ್ತವೆ. ಐಕ್ಯ ಸ್ಥಾಪಿಸುವ ಎಲ್ಲ ಕ್ರಿಯೆಯೂ ಏಕೀಕರಣವೇ. ಸಮಾಜ, ಸಂಸ್ಕೃತಿ, ರಾಜಕೀಯ, ಆಡಳಿತ, ಕೈಗಾರಿಕೆ ಮುಂತಾದ ಎಲ್ಲ ಕ್ಷೇತ್ರಗಳಲ್ಲೂ ಏಕೀಕರಣ ಸಾಧ್ಯ. ಈ ನಾನಾ ಬಗೆಯ ಏಕೀಕರಣಗಳನ್ನು ಕುರಿತ ಲೇಖನಗಳನ್ನು ಮುಂದೆ ಕೊಡಲಾಗಿದೆ. *

**ಏಕೀಕರಣ, ಆಡಳಿತ ಮತ್ತು ರಾಜಕೀಯ : ಆಡಳಿತ :** ಆಡಳಿತ ವೈಯಕ್ತಿಕವಾಗಿರಬಹುದು ಅಥವಾ ಸಾರ್ವಜನಿಕವಾಗಿರಬಹುದು. ಸರ್ಕಾರ ನಿಶ್ಚಿತ ಗುರಿ ತಲಪಲು ಕೈಕೊಳ್ಳುವ ಚಟುವಟಿಕೆ ಅಥವಾ ಕಾರ್ಯವಿಧಾನವೇ ಸಾರ್ವಜನಿಕ ಆಡಳಿತ. ಸರ್ಕಾರ ಆಡಳಿತ ಶಾಖೆಗಳಿಂದ ಕೂಡಿದ ವ್ಯವಸ್ಥೆ. ಸಾರ್ವಜನಿಕ ಆಡಳಿತ ಸುಲಭವಾದ ಕಾರ್ಯವಲ್ಲ. ಅದು ಅನೇಕ ಗುರಿಗಳನ್ನು ಏಕಕಾಲಕ್ಕೆ ಸಾಧಿಸಬೇಕಾಗುತ್ತದೆ. ಆದ್ದರಿಂದ ಅದು ಅನೇಕ ಆಡಳಿತ ಇಲಾಖೆಗಳನ್ನು ಹೊಂದಿರಬೇಕಾದ್ದು ಅನಿವಾರ್ಯ. ಆಧುನಿಕ ಸರ್ಕಾರಗಳ ಕಾರ್ಯವ್ಯಾಪ್ತಿ ವಿಸ್ತಾರಗೊಂಡಿದ್ದು ಅದು ಸಂರಕ್ಷಣೆ, ವಿದೇಶ ವ್ಯವಹಾರ, ಸಾರಿಗೆ ಸಂಪರ್ಕ, ಗೃಹ, ಹಣಕಾಸು, ವಾಣಿಜ್ಯ, ಕೈಗಾರಿಕೆ, ಶಿಕ್ಷಣ, ಆರೋಗ್ಯ, ಕಾಯಿದೆ ಮುಂತಾದ ಅನೇಕ ಇಲಾಖೆಗಳನ್ನು ಹೊಂದಿರುತ್ತದೆ. ಈ ವಿವಿಧ ಇಲಾಖೆಗಳು ಏಕಕಾಲಕ್ಕೆ ಪ್ರತ್ಯೇಕವಾಗಿಯೂ ಆಡಳಿತಯಂತ್ರದ ಅಂಗಗಳಾಗಿಯೂ ಕಾರ್ಯ ನಿರ್ವಹಿಸಬೇಕಾಗುತ್ತದೆ. ಈ ವಿವಿಧ ಇಲಾಖೆಗಳನ್ನು ಏಕೀಕರಿಸಿ ಒಂದು ಆಡಳಿತ ಯಂತ್ರವನ್ನು ಸಂಘಟಿಸುವ ಕಾರ್ಯವಿಧಾನವೇ ಆಡಳಿತ ಏಕೀಕರಣ. ಇಂಥ ಏಕೀಕೃತ ಆಡಳಿತಯಂತ್ರದಲ್ಲಿ ನಾನಾ ಇಲಾಖೆಗಳು ಅದರ ಅಂಗಗಳಾಗಿ ಚಟುವಟಿಕೆ ನಡೆಸಿ ಅದಕ್ಕೆ ಪೂರ್ಣತೆ ನೀಡುತ್ತವೆ. ಹೀಗೆ ಏಕೀಕರಿಸಲಾದ ಆಡಳಿತ ವ್ಯವಸ್ಥೆಯಲ್ಲಿ ಪ್ರತಿ ಕಾರ್ಯಸಂಸ್ಥೆಯೂ ನೇರವಾಗಿಯಾಗಲಿ ಇಲಾಖೆಗಳ ಮೂಲಕವಾಗಿಯಾಗಲಿ ಮುಖ್ಯ ಕಾರ್ಯದರ್ಶಿಯ ಅಥವಾ ಶಾಸನಾಂಗದ ನೇರ ನಿಯಂತ್ರಣಕ್ಕೆ ಒಳಪಟ್ಟಿರುತ್ತದೆ. ಇದರಿಂದ ಯಾವುದೇ ನಿರ್ಣಯವನ್ನು ಕೈಗೊಳ್ಳಲು ಅಥವಾ ಯೋಜನೆಯನ್ನು ಸಿದ್ಧಪಡಿಸಲು ಅನುಕೂಲವಾಗುತ್ತದೆ. ಇಂಥ ಆಡಳಿತ ವ್ಯವಸ್ಥೆಯಲ್ಲಿ ಅಧಿಕಾರ ಮುಖ್ಯ ಕಾರ್ಯದರ್ಶಿಯಿಂದ ವಿವಿಧ ಇಲಾಖೆಗಳ ಮೂಲಕ ತಳದ ಕೊನೆಯವರೆಗೆ ಪಸರಿಸುತ್ತದೆ.

ಇಂದು ಸಾಮಾನ್ಯವಾಗಿ ಎಲ್ಲ ಸರ್ಕಾರಗಳೂ ಈ ವ್ಯವಸ್ಥೆ ಅನುಸರಿಸುತ್ತಿವೆ. ಭಾರತದಲ್ಲಿ ಕೂಡ ಏಕೀಕೃತ ಆಡಳಿತ ವ್ಯವಸ್ಥೆಯಿದೆ. ಕೇಂದ್ರ ಸರ್ಕಾರದ ವಿವಿಧ ಇಲಾಖೆಗಳು ರಾಷ್ಟ್ರಪತಿಯ ಹೆಸರಿನಲ್ಲಿ ಮತ್ತು ಪ್ರಧಾನ ಮಂತ್ರಿಯ ನೇತೃತ್ವದಲ್ಲಿ ಮುಖ್ಯ ಕಾರ್ಯದರ್ಶಿಯ ಅಧೀನಕ್ಕೊಳಪಟ್ಟಿರುತ್ತವೆ. ಈ ಪದ್ಧತಿ ಅನೇಕ ರೀತಿಯಿಂದ ಪ್ರಯೋಜನಕಾರಿಯಾದದ್ದು. ಇದರಿಂದಾಗಿ ಸರ್ಕಾರದ ವಿವಿಧ ಸೇವಾಸಂಸ್ಥೆಗಳನ್ನು ಒಗ್ಗೂಡಿಸಲು ಅನುಕೂಲವಾಗುತ್ತದೆ ; ಅಧಿಕಾರವ್ಯಾಪ್ತಿ ಸರಾಗವಾಗಿ ಹೊಣೆಗಾರಿಕೆ ನಿಶ್ಚಿತವಾಗುತ್ತದೆ. ಅಲ್ಲದೆ ವಿವಿಧ ಇಲಾಖೆಗಳು ಒಂದೆಡೆ ಬರುವುದರಿಂದ ತಾಂತ್ರಿಕ ಆವಶ್ಯಕತೆಗಳನ್ನು ಸುಲಭವಾಗಿ ಪೂರೈಸಿಕೊಳ್ಳಬಹುದು. ಕಾರ್ಯದ ಪುನರಾವರ್ತನೆ ಅಥವಾ ಘರ್ಷಣೆಯಾಗದಂತೆ ನೋಡಿಕೊಳ್ಳುವುದು ಸಾಧ್ಯ. ಇಲಾಖೆ–ಇಲಾಖೆಗಳ ನಡುವೆ ಸಹಕಾರ ಹೆಚ್ಚಿ ಆಡಳಿತ ಮಟ್ಟವನ್ನು ಸುಧಾರಿಸಲು ಅನುವಾಗುತ್ತದೆ. ಇದಲ್ಲದೆ ಆಯವ್ಯಯಗಳ ಅಂದಾಜನ್ನು ಯೋಗ್ಯರೀತಿಯಲ್ಲಿ ರಚಿಸಿ ಯೋಜನೆಗಳನ್ನು ಯಶಸ್ವಿಯಾಗಿಸಲೂ ಸಹಕಾರಿಯಾಗುತ್ತದೆ. ಆದ್ದರಿಂದ ಏಕೀಕೃತ ಆಡಳಿತ ವ್ಯವಸ್ಥೆಯಲ್ಲಿ ಸಮತೋಲ ಸಾಧ್ಯ.

ಈ ಬಗೆಯ ವ್ಯವಸ್ಥೆಯನ್ನು ಜಾರಿಗೆ ತರಬೇಕಾದರೆ ಆಡಳಿತ ಸಂಸ್ಥೆಗಳ ಪುನರ್ವಿಂಗಡಣೆಯಾಗುವುದು ಅವಶ್ಯ. ಭಾರತ ಸ್ವಾತಂತ್ರ್ಯ ಪಡೆದ ಅನಂತರ ಈ ಪ್ರಕಾರದ ಆಡಳಿತ ವ್ಯವಸ್ಥೆ ರಚಿತವಾಗಿದ್ದು, ಆ ಕಾರ್ಯ ಮುಂದುವರಿಯುತ್ತಿದೆ. ಈ ರೀತಿ ಏಕೀಕೃತವಾದ ಆಡಳಿತ ವ್ಯವಸ್ಥೆಗೂ ಕೇಂದ್ರೀಕೃತ ಆಡಳಿತ ವ್ಯವಸ್ಥೆಗೂ ಬಹಳ ವ್ಯತ್ಯಾಸವುಂಟು. ಕೇಂದ್ರೀಕೃತ ಆಡಳಿತ ವ್ಯವಸ್ಥೆ ವಸ್ತುತಃ ಏಕೀಕೃತ ಆಡಳಿತ ವ್ಯವಸ್ಥೆಗೆ ವಿರುದ್ಧವಾದದ್ದು. ಕೇಂದ್ರೀಕೃತ ಆಡಳಿತ ವ್ಯವಸ್ಥೆಯಲ್ಲಿ, ಮೇಲಿನಿಂದ ಕೆಳಗಿನ ವರೆಗೆ ಅಧಿಕಾರ ಹಂತಹಂತವಾಗಿ ಹರಿದುಬರುತ್ತದೆ. ಇಂಥ ವ್ಯವಸ್ಥೆಯಲ್ಲಿ ಆಡಳಿತಯಂತ್ರ ನಿಧಾನವಾಗಿ ಚಲಿಸುವುದರಿಂದ ಆಡಳಿತ ಕಾರ್ಯಗಳಲ್ಲಿ ವಿಳಂಬವಾಗುವುದು ಸಹಜ. ಈ ದೋಷವನ್ನು ನಿವಾರಿಸಲೆಂದೇ ಆಡಳಿತದ ವಿಕೇಂದ್ರೀಕರಣವನ್ನು ಅನುಮೋದಿಸಲಾಗಿದೆ. ಆದರೆ ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಯಲ್ಲೂ ಅನೇಕ ನ್ಯೂನತೆಗಳಿರುವುದು ಕಂಡುಬಂದಿದೆ. ಹೀಗೆ ಕೇಂದ್ರೀಕೃತ ಮತ್ತು ವಿಕೇಂದ್ರೀಕೃತ ಆಡಳಿತ ವ್ಯವಸ್ಥೆಗಳಿಗಿಂತ ಏಕೀಕೃತ ಆಡಳಿತ ವ್ಯವಸ್ಥೆಯೇ ಹೆಚ್ಚು ಉಪಯುಕ್ತವಾದ್ದೆನ್ನಬಹುದು. ಈ ಕಾರಣದಿಂದ ಇಂದು ಅನೇಕ ರಾಷ್ಟ್ರಗಳು ತಮ್ಮ ಆಡಳಿತ ಯಂತ್ರರಚನೆಯಲ್ಲಿ ಕೇಂದ್ರೀಕರಣ ಮತ್ತು ವಿಕೇಂದ್ರೀಕರಣಗಳಿಗಿಂತ ಏಕೀಕೃತ ಆಡಳಿತ ವ್ಯವಸ್ಥೆಯನ್ನು ಹೆಚ್ಚುಹೆಚ್ಚಾಗಿ ಅಳವಡಿಸಿಕೊಳ್ಳುತ್ತಲಿವೆ. ಅಮೆರಿಕ ಸಂಯುಕ್ತಸಂಸ್ಥಾನದಲ್ಲೂ ಏಕೀಕೃತ ಆಡಳಿತ ವ್ಯವಸ್ಥೆಯನ್ನು ಕಾಣಬಹುದು.

**ರಾಜಕೀಯ :** ಒಂದು ಭೌಗೋಲಿಕ ಪ್ರದೇಶದಲ್ಲಿರುವ ಜನರನ್ನೆಲ್ಲ ಒಂದು ಸರ್ಕಾರ ಅಥವಾ ಆಡಳಿತವ್ಯವಸ್ಥೆಗೆ ಒಳಪಡಿಸಿ, ಅವರಲ್ಲಿ ತಾವೆಲ್ಲ ಒಂದೆಂಬ ಭಾವನೆ ಮೂಡುವಂತೆ ಕ್ರಮಕೈಕೊಳ್ಳುವುದೇ ರಾಜಕೀಯ ಏಕೀಕರಣ. ಒಂದು ಆಡಳಿತವ್ಯವಸ್ಥೆಗೆ ಒಳಪಟ್ಟವರು ಒಂದು ರಾಷ್ಟ್ರದವರೆಂಬ ಕಲ್ಪನೆ ಹೊಂದಿ ಏಕೀಭವಿಸುವುದು ಸಹಜವೂ ಅನಿವಾರ್ಯವೂ ಆಗಿ ಪರಿಣಮಿಸಬಹುದು.

ಸಾಮಾನ್ಯವಾಗಿ ಒಂದು ರಾಷ್ಟ್ರದಲ್ಲಿ ಅನೇಕ ಬುಡಕಟ್ಟುಗಳೂ ಜನಾಂಗಗಳೂ ಧರ್ಮಗಳೂ ಹಿತಾಸಕ್ತಿಗಳೂ ರಾಜಕೀಯ ಪಕ್ಷಗಳೂ ಗುಂಪುಗಳೂ ಪ್ರದೇಶಗಳೂ ಇರುತ್ತವೆ. ಇವನ್ನೆಲ್ಲ ಒಂದುಗೂಡಿಸಿ ಇವೆಲ್ಲ ಯಾವುದಾದರೊಂದು ಸಾಮಾನ್ಯ ಸೂತ್ರಕ್ಕೆ ಬದ್ಧವಾಗುವ ಹಾಗೆ ಮಾಡುವುದು ರಾಜಕೀಯ ಏಕೀಕರಣದ ಗುರಿ. ರಾಜಕೀಯ ವ್ಯಕ್ತಿಗಳ, ಘಟಕಗಳ, ಗುಂಪುಗಳ, ಸ್ಥಳೀಯ ಸಂಸ್ಥೆಗಳ, ಪ್ರದೇಶಗಳ ಅಥವಾ ದೇಶಗಳ ನಡುವೆ ಏಕತೆ ಸಾಧಿಸಿ ಅವುಗಳ ಪರಸ್ಪರ ರಾಜಕೀಯ ಚಟುವಟಿಕೆಗಳಿಗೆ ಒಂದು ನಿರ್ದಿಷ್ಟ ರೂಪು ಕೊಡುವುದೇ ರಾಜಕೀಯ ಏಕೀಕರಣ ಅಥವಾ ಅನುಕಲನ.

ರಾಜಕೀಯ ಏಕೀಕರಣದ ಬಗ್ಗೆ ಏಕ್ ಕೆಲವು ಮುಖ್ಯ ಅಂಶಗಳನ್ನು ಸೂಚಿಸಿದ್ದಾನೆ :

1 ರಾಜ್ಯದ ಆಡಳಿತದ ಬಗ್ಗೆ ಪ್ರಜೆಗಳಿಗೆ ದೃಢವಾದ ಭಕ್ತಿಯಿರಬೇಕು. ರಾಜ್ಯ ತಮಗಿಂತಲೂ ಮಹತ್ತರವಾದ್ದು ಎಂಬ ನಂಬುಗೆ ಅವರಿಗೆ ಇರಬೇಕು.

2 ರಾಜಕೀಯ ಪಕ್ಷಗಳು ಒಂದಾಗಿ ಸಹಕರಿಸುವ ಅವಕಾಶವಿರಬೇಕು.

3 ಪೈಪೋಟಿಗಿಳಿದಿರುವ ಹಿರಿಯ ರಾಜಕೀಯ ಪಕ್ಷಗಳ ಗಮನವನ್ನು ಬೇರೆ ಕಡೆ ತಿರುಗಿಸಬೇಕು.

4 ರಾಜಕೀಯ ಪಕ್ಷಗಳ ಸದಸ್ಯರು ರಾಜಕೀಯ ಹುದ್ದೆಯ ಬಗ್ಗೆ ಗೌರವದಿಂದ ನಡೆದುಕೊಳ್ಳಬೇಕಲ್ಲದೆ, ಆ ಹುದ್ದೆಯನ್ನು ಅಲಂಕರಿಸುವ ವ್ಯಕ್ತಿಯನ್ನಲ್ಲ.

5 ರಾಜ್ಯಗಳು ಎಲ್ಲ ಸಂದರ್ಭದಲ್ಲೂ ಒಕ್ಕೂಟಕ್ಕೆ ವಿಧೇಯವಾಗಿರಬೇಕು.

6 ಬಹುಕಾಲದಿಂದ ಸ್ಥಿರವಾಗಿರುವ ಗುಂಪಿನಲ್ಲಿ ಏಕೀಕರಣವಾಗಬೇಕು.

7 ರಾಜಕೀಯ ವ್ಯವಸ್ಥೆ ಮೇಲಿಂದ ಮೇಲೆ ಮಾರ್ಪಡಿಸಲು ಬಾರದಂತಿರಬೇಕು.

ರಾಜಕೀಯ ಏಕೀಕರಣದಲ್ಲಿ ಮುಖ್ಯವಾಗಿ ಭೌಗೋಲಿಕ ಪ್ರದೇಶಗಳನ್ನು ಮತ್ತು ಅದರ ಜನತೆಯನ್ನು ಒಂದು ರಾಜಕೀಯ ವ್ಯವಸ್ಥೆಯ ಕಕ್ಷೆಯಲ್ಲಿ ತರುವ ಪ್ರಯತ್ನವನ್ನು ಕಾಣಬಹುದು. ಭಿನ್ನ ರೀತಿಯ ಜನರನ್ನು, ಭಿನ್ನ ರೀತಿಯ ಪ್ರದೇಶಗಳನ್ನು ಒಂದುಗೂಡಿಸುವಾಗ ಅವುಗಳಲ್ಲಿ ಒಂದೇ ವಿಧದ ವರ್ತನೆಯನ್ನುಂಟುಮಾಡುವ ಕೆಲವು ಅಂಶಗಳು ಇರುವುದು ವಿಹಿತ. ಉದಾಹರಣೆಗಾಗಿ, ಸ್ವತಂತ್ರವಾಗಿದ್ದ ದೇಶಗಳು ತಮ್ಮ ಆರ್ಥಿಕ ಅಭಿವೃದ್ಧಿಯ ದೃಷ್ಟಿಯಿಂದಾಗಲಿ ಇತರ ಪ್ರಬಲ ರಾಷ್ಟ್ರಗಳಿಂದ ಒದಗಬಹುದಾದ ಗಂಡಾಂತರ ಮತ್ತು ಆಕ್ರಮಣವನ್ನು ಎದುರಿಸುವುದಕ್ಕಾಗಲಿ ತಮ್ಮಲ್ಲೇ ಒಂದು ಕೂಟ ರಚಿಸಿಕೊಂಡು ಸಂಯುಕ್ತ ರಾಜ್ಯವಾಗಿ ಪರಿವರ್ತಿತವಾಗಬಹುದು. ಈ ಬಗೆಯ ಒಕ್ಕೂಟದಲ್ಲಿ ಸೇರುವಂಥ ಜನರು ಒಂದೇ

ಬಗೆಯ ಧರ್ಮ ಸಂಸ್ಕೃತಿಗಳಿಗೆ ಒಳಪಟ್ಟವರೂ ಒಂದೇ ಭಾಷೆ ಆಡುವವರೂ ಆಗಿದ್ದರೆ ಅದು ಹೆಚ್ಚು ಭದ್ರವಾಗಿರುತ್ತದೆ. ಇಂಗ್ಲೆಂಡ್ ಮತ್ತು ವೇಲ್ಸ್ ದೇಶಗಳು ಒಂದುಗೂಡಿದಾಗ ಇದು ಕೇವಲ ರಾಜಕೀಯ ಒಂದುಗೂಡಿಕೆ ಮಾತ್ರವಾಗಿರದೆ ಇಂಗ್ಲೆಂಡಿನ ಚರ್ಚಿನ ಮುಖಾಂತರ ಧಾರ್ಮಿಕ ಒಂದುಗೂಡುವಿಕೆಯೂ ಆಗಿತ್ತು. ಆದರೆ ಅಮೆರಿಕ ಸಂಯುಕ್ತಸಂಸ್ಥಾನ ಒಂದುಗೂಡಿದಾಗ ಅದಕ್ಕೆ ಇಂಥ ಧಾರ್ಮಿಕ ತಳಹದಿ ಇರಲಿಲ್ಲ. ಅಂದು ವಸಾಹತುಗಳಾಗಿದ್ದ ಅನೇಕ ಪ್ರದೇಶಗಳು ತಮ್ಮವೇ ಆದ ಪರಂಪರೆಗಳನ್ನು ಹೊಂದಿದ್ದ ಭಾಗಗಳಾಗಿದ್ದರೂ ಅವು ಅಂದಿನ ಪರಿಸ್ಥಿತಿಯಲ್ಲಿ ಅನಿವಾರ್ಯ ಕಾರಣಗಳಿಂದಾಗಿ ಒಂದಾಗಬೇಕಾಯಿತು. ಭಾರತ ಬ್ರಿಟಿಷರ ಆಡಳಿತದಲ್ಲಿದ್ದಾಗ ಒಂದು ರೀತಿಯ ರಾಜಕೀಯ ಏಕೀಕರಣ ಹಾಗೂ ಆಡಳಿತ ಏಕತೆ ಉಂಟಾಗಿತ್ತು. ಆದರೆ ಅದು ಸಂಪೂರ್ಣ ಐಕ್ಯವಾಗಿರಲಿಲ್ಲ. ರಾಜಕೀಯವಾಗಿ ಇಲ್ಲಿ ಹಲವಾರು ಪ್ರಾಂತ್ಯಗಳೂ ದೇಶೀಯ ಸಂಸ್ಥಾನಗಳೂ ಇದ್ದುವು. ಸ್ವಾತಂತ್ರ್ಯಾನಂತರ ಸಂವಿಧಾನದಲ್ಲಿ ಭಾರತ ಒಕ್ಕೂಟವನ್ನು ಸ್ಥಾಪಿಸಲಾಯಿತು. ರಾಜ್ಯಗಳನ್ನೂ ಕೇಂದ್ರ ಶಾಸಿತ ಪ್ರದೇಶಗಳನ್ನೂ ಒಳಗೊಂಡ ಭಾರತ ಒಕ್ಕೂಟ ಈಗ ಅಸ್ತಿತ್ವದಲ್ಲಿದೆ. ಭಾರತದಲ್ಲಿ ಭಿನ್ನ ಪ್ರದೇಶಗಳೂ ಭಿನ್ನ ಭಾಷೆಗಳೂ ಭಿನ್ನ ಮತಗಳೂ ಭಿನ್ನ ಸಂಸ್ಕೃತಿಗಳೂ ಇದ್ದರೂ ರಾಜಕೀಯ ಏಕೀಕರಣವನ್ನು ಕಾಣಬಹುದು. ಆದರೆ ಇಂಥ ಸಂದರ್ಭದಲ್ಲಿ ಒಂದು ವಿಶಿಷ್ಟ ಸಮಸ್ಯೆ ಉದ್ಭವಿಸುತ್ತದೆ. ಎಂದರೆ ವಿಭಿನ್ನ ರೀತಿಯ ಜನ ಹಾಗು ಪ್ರದೇಶಗಳು ಯಾವುದೇ ಸಂದರ್ಭದಲ್ಲಿ ಅನಿವಾರ್ಯವಾಗಿ ರಾಜಕೀಯ ಒಗ್ಗಟ್ಟನ್ನು ಸ್ಥಾಪಿಸಿದರೂ ಇಂಥ ಏಕೀಕರಣ ಸುಮಧುರ ಮತ್ತು ಶಾಶ್ವತ ಆಗಬೇಕಾದರೆ ಕೇವಲ ಬಾಹ್ಯ ಒಂದುಗೂಡುವಿಕೆ ಇದ್ದರೆ ಸಾಲದು. ಅದರೊಡನೆ ಆಂತರಿಕ ಒಂದುಗೂಡುವಿಕೆ ಅಥವಾ ಭಾವೈಕ್ಯ ಅತ್ಯವಶ್ಯ. ಹಾಗಿಲ್ಲದ ಪಕ್ಷದಲ್ಲಿ ಅಂಥ ರಾಜಕೀಯ ಒಂದುಗೂಡುವಿಕೆ ಅಪಾಯಕಾರಿಯಾಗುವುದರಲ್ಲಿ ಸಂದೇಹವಿಲ್ಲ. ಆದ್ದರಿಂದಲೇ ಭಾರತದ ಪ್ರಧಾನ ಮಂತ್ರಿಯಾಗಿದ್ದ ಜವಾಹರಲಾಲ್ ನೆಹರೂರವರು ಭಾರತೀಯರಲ್ಲಿ ಆತ್ಮೀಯತೆ ಬೆಳೆದು ಭಾವೈಕ್ಯ ಉಂಟಾಗಬೇಕೆಂದು ಪದೇ ಪದೇ ಹೇಳುತ್ತಿದ್ದರು. ಇಲ್ಲದಿದ್ದರೆ ಅಂತಃಕಲಹಗಳು ಹೆಚ್ಚಾಗಿ ಒಕ್ಕೂಟದ ರಾಜ್ಯಗಳ ನಡುವೆ ಗಡಿಸಂಬಂಧವಾಗಿಯಾಗಲಿ ನದೀ ನೀರಿನ ವಿತರಣೆಗಾಗಲಿ ಕಲಹಗಳು ಉಂಟಾಗಿ ಏಕತೆಗೆ ಧಕ್ಕೆ ತಗಲಬಹುದು. ಸಾಂಸ್ಕೃತಿಕವಾಗಿಯೂ ಧಾರ್ಮಿಕವಾಗಿಯೂ ಭದ್ರವಾದ ಏಕತೆ ಸ್ಥಾಪಿಸಿರುವೆವೆಂದು ಕೊಂಡಿರುವ ದೇಶಗಳಲ್ಲೂ ಪದೇ ಪದೇ ಪ್ರಾದೇಶಿಕ ಸಾಂಸ್ಕೃತಿಕ ಅಥವಾ ಆರ್ಥಿಕ ಹಿತಾಸಕ್ತಿ ಭಿನ್ನತೆಗಳು ಬೃಹದಾಕಾರ ತಾಳಿ ರಾಜಕೀಯ ಏಕತೆಯನ್ನೊಡೆಯುವಂಥ ಅಪಾಯದ ಹಂತ ಮುಟ್ಟುವುದುಂಟು. ಬ್ರಿಟಿಷ್ ಸಂಯುಕ್ತ ರಾಜ್ಯದಲ್ಲಿ ವೆಲ್ಸ್ ಹಾಗೂ ಸ್ಕಾಟ್ ಜನರ ಆತ್ಮಪ್ರತ್ಯಯ ಬೆಳೆಯುತ್ತಿರುವುದಾದರೂ ಅದು ಏಕತೆಯ ಕಟ್ಟನ್ನೊಡೆಯುವ ಹಂತಕ್ಕೆ ಬಂದಿಲ್ಲ. ಆದರೆ ಭಾರತದಲ್ಲಿ ಹಲವು ಶತಮಾನಗಳ ಕಾಲ ಒಟ್ಟಿಗಿದ್ದವರೇ ಭಾರತ–ಪಾಕಿಸ್ತಾನಗಳ ಅಡಿಯಲ್ಲಿ ರಾಜ್ಯವನ್ನು ಹಂಚಿಕೊಂಡದ್ದು ಧಾರ್ಮಿಕ ಹಾಗೂ ಸಾಂಸ್ಕೃತಿಕ ಭಿನ್ನತೆಗಳ ವೈಪರೀತ್ಯದ ಪರಿಣಾಮ. ನಾನಾ ಸಂಸ್ಕೃತಿಯುಕ್ತವಾದ ಮತ್ತು ಹಲವಾರು ರಾಷ್ಟ್ರೀಯ ಮನೋಧರ್ಮಗಳಿರುವ ರಾಜ್ಯಗಳು ಸೋವಿಯತ್ ಒಕ್ಕೂಟದಡಿಯಲ್ಲಿ ಸಾಧಿಸಿರುವ ಏಕತೆಯನ್ನು ಭಿನ್ನತೆಗಳ ನಡುವಣ ಏಕತೆಯೆನ್ನಬಹುದು. ಸಮಾನ ಗುರಿಯೇ ಈ ಭಿನ್ನ ಸಂಸ್ಕೃತಿಗಳ ಏಕತೆಯ ಸೂತ್ರ.

ಇದೂ ಅಲ್ಲದೆ ಇಂದು ಜಾಗತಿಕ ಸರ್ಕಾರ ಸ್ಥಾಪನೆಯ ದಿಶೆಯಲ್ಲಿ ಹಲವರು ವಿಚಾರ ಮಾಡುತ್ತಿದ್ದಾರೆ. ಕೇವಲ ರಾಷ್ಟ್ರಗಳ ಒಕ್ಕೂಟವಲ್ಲದೆ ಅಂತರರಾಷ್ಟ್ರೀಯ ಒಕ್ಕೂಟ ಸಾಧಿಸುವುದರ ಮೂಲಕ ಜಾಗತಿಕ ಸರ್ಕಾರ ಸ್ಥಾಪಿಸುವ ಕನಸು ಕಾಣುವವರಿದ್ದಾರೆ. ಈ ಒಕ್ಕೂಟದ ಮೂಲಕ ವಿಶ್ವಶಾಂತಿ ಸ್ಥಾಪನೆಯಾಗಬೇಕೆಂಬ ಆಕಾಂಕ್ಷೆಯಿಂದ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಿಂದ ಇಂದಿನ ವರೆಗೆ ಅನೇಕ ಪ್ರಯತ್ನಗಳು ನಡೆದಿವೆ. ಅಂತರರಾಷ್ಟ್ರೀಯ ಅಂಚೆ ಸಂಸ್ಥೆ, ಅಂತರರಾಷ್ಟ್ರೀಯ ಕಾರ್ಮಿಕ ಸಂಸ್ಥೆ, ಅಂತರರಾಷ್ಟ್ರೀಯ ರೆಡ್‌ಕ್ರಾಸ್, ಅಂತರರಾಷ್ಟ್ರೀಯ ಸಂಪರ್ಕಸಾಧನ ಸಂಸ್ಥೆ ಮುಂತಾದವುಗಳಲ್ಲದೆ ರಾಷ್ಟ್ರಕೂಟ. ವಿಶ್ವಸಂಸ್ಥೆ ಇವು ಈ ಬಗೆಯ ವಿಶ್ವ ಏಕೀಕರಣ ಪ್ರಯತ್ನದ ನಿದರ್ಶನಗಳು.

(ಎ.ಎಂ.ಆರ್.)

**ಏಕೀಕರಣ, ಕೈಗಾರಿಕೆಯಲ್ಲಿ :** ಆಧುನಿಕ ಕೈಗಾರಿಕೆಯ ಒಂದು ಮುಖ್ಯ ಲಕ್ಷಣವೆಂದರೆ ಕಾರ್ಖಾನೆಗಳ ಗಾತ್ರದಲ್ಲಿ ಕಂಡುಬರುವ ಅತಿ ಬೆಳೆವಣಿಗೆಯ ಪ್ರವೃತ್ತಿ. ಕಾರ್ಖಾನೆಗಳ ಗಾತ್ರ ಎರಡು ವಿಧಗಳಲ್ಲಿ ಬೆಳೆಯುತ್ತದೆ. ಕಾರ್ಖಾನೆಗಳು ಸ್ವಾಭಾವಿಕವಾಗಿಯೇ ಬೆಳೆದು ದೊಡ್ಡ ಉದ್ಯಮಗಳಾಗಿ ಪರಿಣಮಿಸಬಹುದು. ಉದಾಹರಣೆಗೆ 1,000 ಘಟಕಗಳನ್ನು ಉತ್ಪಾದಿಸುತ್ತಿರುವ ಒಂದು ಕಾರ್ಖಾನೆ ಕೆಲವು ವರ್ಷಗಳ ಅನಂತರ 10,000 ಘಟಕಗಳನ್ನು ತಯಾರಿಸುವ ದೊಡ್ಡ ಉದ್ಯಮವಾಗಿ ಬೆಳೆಯಬಹುದು. ಸ್ವಾಭಾವಿಕ ಬೆಳೆವಣಿಗೆಯಿಂದ ಕಾರ್ಖಾನೆಗಳು ಬೃಹದ್‌ಗಾತ್ರ ಪಡೆಯಬೇಕಾದರೆ ಸಾಕಷ್ಟು ಕಾಲಾವಕಾಶ ಬೇಕಾಗುತ್ತದೆ. ಸಣ್ಣ ಉದ್ಯಮ ಸಂಸ್ಥೆಗಳು ಅತ್ಯಲ್ಪಕಾಲದಲ್ಲಿ ಬೃಹತ್ ಉದ್ಯಮಗಳಾಗಿ ಬೆಳೆಯುವ ಮತ್ತೊಂದು ಮಾರ್ಗವೆಂದರೆ ಏಕೀಕರಣ.

ಸ್ಪರ್ಧೆಯ ಅನಿಷ್ಟಗಳನ್ನು ನಿವಾರಿಸಿಕೊಳ್ಳಲೋ ಬೃಹದ್‌ಗಾತ್ರದ ಅನುಕೂಲಗಳನ್ನು ಪಡೆಯಲೋ ಹಲವು ಉದ್ಯಮಗಳು ಒಂದಾಗುವ ಎಲ್ಲ ಕ್ರಮಗಳೂ ಸ್ಥೂಲವಾಗಿ ಏಕೀಕರಣವೇ. ಇವನ್ನು ಉದ್ಯಮಕೂಟ (ನೋಡಿ) ಎಂಬ ಲೇಖನದಲ್ಲಿ ವಿವರಿಸಲಾಗಿದೆ. ಏಕೀಕರಣದ ಫಲವಾಗಿ ಒಂದು ಕೈಗಾರಿಕಾ ಸಂಸ್ಥೆಯ ಬೆಳೆವಣಿಗೆಯಾಗುವುದಕ್ಕೂ ಉದ್ಯಮಗಳ ಸಂಘಟನೆಯಿಂದ ಆಗುವ ಬೆಳೆವಣಿಗೆಗೂ ಬಹಳ ವ್ಯತ್ಯಾಸವುಂಟು. ಕಚ್ಚಾಸಾಮಗ್ರಿಯನ್ನು ಪಡೆಯುವುದರಿಂದ ಹಿಡಿದು ಪದಾರ್ಥಗಳು ಅನುಭೋಗಿಯ ಕೈಸೇರುವ ವರೆಗೆ ತಯಾರಿಕೆ ಹಂಚಿಕೆಗಳ ಎಲ್ಲ ಘಟ್ಟಗಳ ಮೇಲೂ ಹತೋಟಿ ಹೊಂದುವುದೇ ಕೈಗಾರಿಕೆಯ ಏಕೀಕರಣ. ತಯಾರಿಕೆಯ ಒಂದು ಕಾರ್ಯಗತಿಯಿಂದ ಇನ್ನೊಂದು ಕಾರ್ಯಗತಿಗೆ ಸುಲಲಿತವಾಗಿ ಮುಂದುವರಿಯುವಂಥ ಸುವ್ಯವಸ್ಥೆಯೇ ಕೈಗಾರಿಕೆಯ ನಿಜವಾದ ಏಕೀಕರಣವೆನ್ನಬಹುದು; ಸಂಘಟಿತ ಉದ್ಯಮಗುಂಪುಗಳದು ಇನ್ನೊಂದು ಬಗೆಯ ಏಕೀಕರಣ. ಇಲ್ಲಿ ಈ ಉದ್ಯಮಗಳು ಸಂಘಟಿತವಾಗದಿದ್ದರೆ ಮಾರುಕಟ್ಟೆಯಲ್ಲಿ ಇವುಗಳ ನಡುವೆ ಸ್ಪರ್ಧೆ ಇರುತ್ತದೆ. ಕೈಗಾರಿಕೆಯ ನಾನಾ ಕಾರ್ಯಗತಿಗಳ ಸಂಯೋಜನೆಯಿಂದ ಸಂಭವಿಸುವ ಏಕೀಕರಣದ ವಿವಿಧ ಘಟಕಗಳ ನಡುವೆ ವಾಸ್ತವವಾಗಿ ಪರಸ್ಪರ ಸ್ಪರ್ಧೆಯ ಪ್ರಶ್ನೆಯೇ ಇದ್ದಿರುವುದಿಲ್ಲ. ಕಚ್ಚಾಸಾಮಗ್ರಿಯ ಸರಬರಾಜು ಮತ್ತು ಮಾರುಕಟ್ಟೆಗಳ ಹತೋಟಿ ಹೊಂದಬಯಸುವ ತಯಾರಿಕೆದಾರನ ವತಿಯಿಂದಲೋ ತಾನು ಮಾರಾಟಮಾಡುವ ಸರಕುಗಳ ಮೇಲೆ ಸಮರ್ಪಕ ನಿಯಂತ್ರಣ ಹೊಂದಲಿಚ್ಛಿಸುವ ವ್ಯಾಪಾರಿಯ ಪ್ರಯತ್ನದಿಂದಲೋ ತನ್ನ ಉತ್ಪಾದನೆಗೆ ಗ್ರಾಹಕರ ಭರವಸೆ ಪಡೆಯಬಯಸುವ ಕಚ್ಚಾಸಾಮಗ್ರಿತಯಾರಕನಿಂದಲೋ ಅಥವಾ ಇವರೆಲ್ಲರ ಪರಸ್ಪರಾವಲಂಬನದ ಅರಿವಿನ ಫಲವಾಗಿಯೋ ಈ ಬಗೆಯ ಏಕೀಕರಣ ಸಾಧ್ಯವಾಗಬಹುದು. ಆದ್ದರಿಂದ ಒಂದು ದೃಷ್ಟಿಯಿಂದ ಉದ್ಯಮಕೂಟಗಳು ಏಕೀಕರಣ ಪ್ರಯತ್ನಗಳೇ ಆದರೂ ಸ್ಪರ್ಧೆಯ ನಿವಾರಣೆಗಿಂತ ಹೆಚ್ಚಾಗಿ ಕೈಗಾರಿಕೆಯ ಬೆಳೆವಣಿಗೆಯ ದೃಷ್ಟಿಯಿಂದ ಏಕೀಕರಣವನ್ನು ಇಲ್ಲಿ ಪರಿಶೀಲಿಸಲಾಗಿದೆ.

**ಉದಗ್ರ ಏಕೀಕರಣ :** ಸ್ಥೂಲವಾಗಿ ಹೇಳುವುದಾದರೆ ಎಲ್ಲ ಉದ್ಯಮಗಳಲ್ಲೂ ಇಷ್ಟಷ್ಟು ಏಕೀಕರಣ ಇದ್ದೇ ಇರುವುದುಂಟು. ಇದು ಸಾಪೇಕ್ಷವಾದ್ದು. ಬಲು ಸಣ್ಣ ಪದಾರ್ಥವಾದ ಗುಂಡುಸೂಜಿಯ ತಯಾರಿಕೆಯಿಂದ ಹಿಡಿದು, ಅತಿ ದೊಡ್ಡ ಯಂತ್ರಸ್ಥಾವರದ ನಿರ್ಮಾಣದ ವರೆಗೆ ಪ್ರತಿಯೊಂದು ಉದ್ಯಮವೂ ನಾನಾ ಕಾರ್ಯಗತಿಗಳ ಸಮ್ಮಿಲನದ ಫಲ. ಒಂದು ಕಾರ್ಯಗತಿಯ ಪೂರೈಕೆಯಲ್ಲೆ ಇನ್ನೊಂದು ಕಾರ್ಯಗತಿಯ ಆರಂಭ. ಅದು ಮತ್ತೊಂದಕ್ಕೆ ಪೂರಕ. ಉತ್ಪಾದನೆಯ ಗಾತ್ರ ಹೆಚ್ಚಿದಂತೆಲ್ಲ ಇಡೀ ಉತ್ಪಾದನೆಯನ್ನೇ ಅಧಿಕಾಧಿಕ ಕಾರ್ಯಗತಿಗಳಾಗಿ ವಿಂಗಡಿಸಿ ಅವಕ್ಕೆ ವಿಶಿಷ್ಟವಾದ ಯಂತ್ರೋಪಕರಣಗಳನ್ನು ಅಳವಡಿಸುವ ಪ್ರಯತ್ನ ನಡೆಯುವಂತೆ, ಈ ಇಡೀ ಕೈಗಾರಿಕೆಯೇ ಒಂದು ಕಾರ್ಯಗತಿಯಾಗಿ ಪರಿಣಮಿಸಿ ಇದಕ್ಕೆ ಹಿಂದಣ ಮುಂದಣ ಕೊಂಡಿಗಳನ್ನೆಲ್ಲ ಕೂಡಿಸುವ ಪ್ರಯತ್ನವೂ ಸಾಗಬಹುದು. ಅಚ್ಚುಕೂಟದಲ್ಲಿ ಅಕ್ಷರಸಂಯೋಜನೆ, ಪಡಿಯಚ್ಚು ತಯಾರಿಕೆ, ಮುದ್ರಣ, ಮಡಿಸುವಿಕೆ, ಅಂಚು ಕತ್ತರಿ, ಹೊಲಿಗೆ, ಕಟ್ಟು ಮುಂತಾದ ನಾನಾ ಕಾರ್ಯಗತಿಗಳಿರಬಹುದು. ಆದರೆ ಇಡೀ ಅಚ್ಚುಕೂಟದ ಉದ್ಯಮವೇ ಒಂದು ಕಾರ್ಯಗತಿಯೆಂದು ಪರಿಗಣಿಸಿ ಇದಕ್ಕೆ ಹಿಂದಿನ ಕಾಗದತಯಾರಿಕೆ, ಇದಕ್ಕೆ ಬೇಕಾದ ಮರದ ತಿರುಳಿನ ಉತ್ಪಾದನೆ ಮುಂತಾದ ನಾನಾ ಕಾರ್ಯಗತಿಗಳೂ ಇದಕ್ಕೆ ಹೊಂದಿಕೊಳ್ಳಬಹುದು. ಹೀಗೆ ತುದಿಯಿಂದ ಕೆಳಮೊಗನಾಗಿಯೋ ಬುಡದಿಂದ ಮೇಲುಮೊಗನಾಗಿಯೋ ನಡುವಿನಿಂದ ಊರ್ಧ್ವ ಮತ್ತು ಅಧೋಮುಖಗಳಲ್ಲೂ ಇದು ಬೆಳೆಯಬಹುದು. ಈ ನಾನಾ ಉದ್ಯಮಗಳನ್ನೆಲ್ಲ ಕೂಡಿಸಿ ಒಂದೇ ಆಡಳಿತದೊಳಗೆ ಬರುವಂತೆ ವ್ಯವಸ್ಥೆಯಾಗಬಹುದು. ವಾಸ್ತವವಾಗಿ ಇದು ಉದಗ್ರ ಏಕೀಕರಣ ಅಥವಾ ಕೂಟವೇ ಎನ್ನಬಹುದು.

ಇಲ್ಲಿ ಒಂದು ಉದ್ಯಮದ ಪದಾರ್ಥವೇ ಇನ್ನೊಂದರ ಕಚ್ಚಾಸಾಮಗ್ರಿ. ನಾನಾ ಉದ್ಯಮಗಳ ಏಕೀಕರಣದಿಂದ ಇಡೀ ಉತ್ಪಾದನಸರಣಿಯೇ ಬಹುತೇಕ ಸ್ವಯಂಪೂರ್ಣವಾಗಿ ಪರಿಣಮಿಸುವುದಲ್ಲದೆ ನಾನಾ ಬಿಡಿ ಕೈಗಾರಿಕೆಗಳ ಉಪೋತ್ಪನ್ನಗಳ ಸದುಪಯೋಗವಾಗುತ್ತದೆ. ಈ ಉದಗ್ರ ಏಕೀಕರಣದಿಂದ ಲಭಿಸುವ ಅನುಕೂಲಗಳಿವು : ಒಂದನೆಯದಾಗಿ, ಕಚ್ಚಾಪದಾರ್ಥಗಳಿಗಾಗಿ ಇತರ ಉದ್ಯಮ ಸಂಸ್ಥೆಗಳ ಮೇಲೆ ಅವಲಂಬಿಸುವ ಆಗತ್ಯವಿರುವುದಿಲ್ಲ. ಉತ್ಪಾದಿಸಿದ ಪದಾರ್ಥದ ಉತ್ಕೃಷ್ಟತೆ ಏಕರೀತಿಯಾಗಿರುವುದು ಸಾಧ್ಯ. ಕಚ್ಚಾಪದಾರ್ಥದ ವ್ಯವಸ್ಥಿತ ಸರಬರಾಜಿನ ಫಲವಾಗಿ ಉತ್ಪಾದನೆ ಕ್ರಮಬದ್ಧವಾಗಿರುತ್ತದೆ. ಎರಡನೆಯದಾಗಿ, ಒಂದೇ ವಸ್ತುವನ್ನು ಬೇರೆ ಬೇರೆ ಉದ್ಯಮ ಸಂಸ್ಥೆಗಳು ಉತ್ಪಾದಿಸುವಾಗ ಪ್ರತಿಯೊಂದು ಸಂಸ್ಥೆಯೂ ತನ್ನ

ಪದಾರ್ಥದ ಮಾರಾಟಕ್ಕಾಗಿ ಮತ್ತೊಂದನ್ನವಲಂಬಿಸಬೇಕಾಗುತ್ತದೆ. ತಮ್ಮ ಪೂರೈಸಿದ ವಸ್ತುಗಳ ಕ್ರಮಬದ್ಧ ಮಾರಾಟ ಸೌಕರ್ಯ ಪಡೆಯುವ ದೃಷ್ಟಿಯಿಂದ ಇಂಥ ಸಂಸ್ಥೆಗಳು ತಮ್ಮ ಪದಾರ್ಥಗಳನ್ನು ಕೊಳ್ಳುವ ಸಂಸ್ಥೆಗಳೊಡನೆ ಏಕೀಕರಣ ಹೊಂದಬಹುದು. ಬೃಹದ್‌ಗಾತ್ರ ಉತ್ಪಾದನೆಯ ಫಲವಾಗಿ ಇದಕ್ಕೆ ಅಗತ್ಯವಾದ ಕಚ್ಚಾ ಸಾಮಗ್ರಿಯ ಪರಿಮಾಣವೂ ಮಾರಾಟಕ್ಕಾಗಿ ಉತ್ಪಾದಿಸುವ ಸರಕುಗಳ ಮೊತ್ತವೂ ಅಧಿಕವಾಗಿರುವುದರಿಂದ ಈ ಬಗೆಯ ಉದಗ್ರ ಏಕೀಕರಣದಿಂದ ಹೆಚ್ಚು ಸೌಕರ್ಯವೂ ಉಳಿತಾಯವೂ ಸಂಭವಿಸುತ್ತವೆ.

**ಸಮತಲ ಏಕೀಕರಣ :** ಒಂದೇ ಬಗೆಯ ಪದಾರ್ಥಗಳನ್ನು ಉತ್ಪಾದಿಸಿ ಮಾರಾಟಮಾಡುವ ಸಂಸ್ಥೆಗಳ ಏಕೀಕರಣವೂ ದಕ್ಷತೆಯಲ್ಲೂ ಮಿತವ್ಯಯದಲ್ಲೂ ಪರಿಣಮಿಸುತ್ತದೆ. ಒಂದೇ ಪದಾರ್ಥವನ್ನು ಅಥವಾ ಸಾಮ್ಯವಿರುವ ಅನೇಕ ಪದಾರ್ಥಗಳನ್ನು ಉತ್ಪಾದಿಸುವ ಬೇರೆ ಬೇರೆ ವ್ಯವಸ್ಥಾಪಕರ ಹತೋಟಿಯಲ್ಲಿರುವ ಅನೇಕ ಉದ್ಯಮಸಂಸ್ಥೆಗಳನ್ನು ಸಂಯೋಜಿಸಿದರೆ ಸಂಭವಿಸುವ ಸಮತಲ ಏಕೀಕರಣದಿಂದ ಈ ಪದಾರ್ಥಗಳ ಉತ್ಪಾದನೆಯ ಗಾತ್ರ ದೊಡ್ಡದಾಗಿ, ಬೃಹದ್‌ಗಾತ್ರದ ಉತ್ಪಾದನೆಯ ಎಲ್ಲ ಅನುಕೂಲಗಳೂ ದೊರಕುತ್ತವೆ.

**ಪಾರ್ಶ್ವಸ್ಥ ಏಕೀಕರಣ :** ವಿವಿಧವಾದರೂ ಸಂಬಂಧಿವಸ್ತುಗಳನ್ನು ಉತ್ಪಾದಿಸುವ ಸಂಸ್ಥೆಗಳು ಸಂಯೋಜಿಸಿದರೆ ಅದು ಪಾರ್ಶ್ವಸ್ಥ ಏಕೀಕರಣವೆನಿಸುತ್ತದೆ. ಚಕ್ಕಳದಿಂದ ಜೀನು, ಎಕ್ಕಡ, ಕೈಚೀಲ ಮುಂತಾದವನ್ನು ಉತ್ಪಾದಿಸಬಹುದು. ಈ ಪದಾರ್ಥಗಳ ಉತ್ಪಾದನೆಯನ್ನು ಪ್ರತ್ಯೇಕವಾಗಿ ಬೇರೆ ಬೇರೆ ಉದ್ಯಮ ಸಂಸ್ಥೆಗಳು ಕೈಗೊಳ್ಳುವುದಕ್ಕೆ ಬದಲಾಗಿ ಒಂದೇ ಉದ್ಯಮ ಸಂಸ್ಥೆ ಇವೆಲ್ಲವನ್ನೂ ಉತ್ಪಾದಿಸಿದರೆ ಹಲವು ಸೌಕರ್ಯಗಳನ್ನು ಪಡೆಯಬಹುದು. ಹೀಗಾಗಿ, ಚಕ್ಕಳವನ್ನು ಕಚ್ಚಾಸಾಮಗ್ರಿಯಾಗಿ ಉಪಯೋಗಿಸುವ ಅನೇಕ ಸಂಸ್ಥೆಗಳು ಪಾರ್ಶ್ವಸ್ಥ ಏಕೀಕರಣ ಹೊಂದಬಹುದು.

ಪಾರ್ಶ್ವಸ್ಥ ಏಕೀಕರಣ ಎರಡು ಬಗೆಯದಾಗಿರಬಹುದು. ಮೇಲಿನ ಉದಾಹರಣೆಯಲ್ಲಿ ತೋರಿಸಿರುವಂತೆ ಒಂದೇ ಕಚ್ಚಾಪದಾರ್ಥದಿಂದ ಉತ್ಪಾದಿಸಲಾಗುವ ಅನೇಕ ಪೂರೈಸಿದ ವಸ್ತುಗಳನ್ನು ತಯಾರುಮಾಡುವ ಉದ್ಯಮಗಳು ಏಕೀಕರಣ ಹೊಂದಿದರೆ ಅದು ವಿಭಿನ್ನ ಪಾರ್ಶ್ವಸ್ಥ ಏಕೀಕರಣ. ಏಕೆಂದರೆ ಇಲ್ಲಿ ಒಂದೇ ಕಚ್ಚಾವಸ್ತುವಾದ ಚಕ್ಕಳ ವಿಭಿನ್ನ ಪದಾರ್ಥಗಳಿಗೆ ಕಚ್ಚಾಸಾಮಗ್ರಿಯಾಗಿ ಪರಿಣಮಿಸುತ್ತದೆ. ಈ ಉದ್ಯಮಗಳನ್ನು ಸಂಯೋಜಿಸಿದರೆ ಕಚ್ಚಾಸಾಮಗ್ರಿಯಾದ ಚಕ್ಕಳವನ್ನು ಅಧಿಕ ಪ್ರಮಾಣದಲ್ಲಿ ಕೊಳ್ಳುವ ಕಾರಣ ಬೃಹದ್‌ಗಾತ್ರದ ಕೊಳ್ಳುವಿಕೆಯ ಸೌಕರ್ಯಗಳನ್ನು ಪಡೆಯಲು ಸಾಧ್ಯ. ಇದಕ್ಕೆ ವಿರುದ್ಧವಾಗಿ ಒಂದೇ ಸಿದ್ಧ ವಸ್ತುವನ್ನು ಉತ್ಪಾದಿಸುವ ಸಂಸ್ಥೆಗಳಿಗೆ ಬೇಕಾಗುವ ಬೇರೆ ಬೇರೆ ಕಚ್ಚಾಸಾಮಗ್ರಿಗಳನ್ನು ಪ್ರತ್ಯೇಕವಾಗಿ ಸರಬರಾಜು ಮಾಡುವ ಅನೇಕ ಉದ್ಯಮಗಳು ಏಕೀಕರಣ ಹೊಂದಬಹುದು. ಉದಾಹರಣೆಗೆ, ಉಕ್ಕು ತಯಾರಿಸುವ ಸಂಸ್ಥೆಗೆ ಕಬ್ಬಿಣದ ಅದುರು, ಕಲ್ಲಿದ್ದಲು, ಕಲ್ಲಿದ್ದಲಿನ ಕಿಟ್ಟ ಮೊದಲಾದವು ಆವಶ್ಯಕ. ಇವನ್ನು ತಯಾರಿಸುವ ಉದ್ಯಮಗಳೆಲ್ಲ ಒಂದಾದರೆ ಅದರಿಂದ ಮಾರುಕಟ್ಟೆಯ ವೆಚ್ಚಗಳೆಷ್ಟೋ ಕಡಿಮೆಯಾಗುವುದಲ್ಲದೆ ಸಿದ್ಧಗೊಂಡ ಪದಾರ್ಥದ ಗುಣಮಟ್ಟ ಏಕರೀತಿಯಾಗಿರುತ್ತದೆ.

**ಬಹುಭುಜ ಏಕೀಕರಣ :** ಯಾವುದೇ ಉದ್ಯಮಸಂಸ್ಥೆ ತನ್ನ ಉತ್ಪಾದನ ಪರಂಪರೆಗೆ ಬೇಕಾಗುವ ಸಹಾಯಕ ವಸ್ತುಗಳನ್ನಾಗಲಿ ಸೇವೆಗಳನ್ನಾಗಲಿ ತನ್ನಲ್ಲಿಯೆ, ಆಂತರಿಕವಾಗಿ, ಒದಗಿಸುವ ವ್ಯವಸ್ಥೆ ಮಾಡಿಕೊಂಡ ಪಕ್ಷದಲ್ಲಿ ಅದು ಬಹುಭುಜ ಏಕೀಕರಣ. ಉದಾಹರಣೆಗೆ, ಪಾದರಕ್ಷೆ ತಯಾರಕ ತನಗೆ ಬೇಕಾಗುವ ದಾರ, ಮೊಳೆ, ರಟ್ಟುಪೆಟ್ಟಿಗೆ, ಡಬ್ಬಗಳು ಮೊದಲಾದವುಗಳನ್ನು ತನ್ನಲ್ಲಿಯೇ ತಯಾರಿಸಬಹುದು. ಹಾಗೆಯೇ ತನ್ನವೇ ಉಪಕರಣಗಳಿಂದ ತನ್ನ ಕಾರ್ಮಿಕರ ಸೇವೆಗಳನ್ನು ಉಪಯೋಗಿಸಿ ದುರಸ್ತು ಕಾರ್ಯವನ್ನೂ ಕೈಗೊಳ್ಳಬಹುದು. ಇದು ಬಹುಭುಜ ಏಕೀಕರಣ. ವೆಚ್ಚವನ್ನು ಕಡಿಮೆಗೊಳಿಸುವುದೇ ಇದಕ್ಕೆ ಮೂಲ ಪ್ರೇರಣೆ.

ಯಾವುದೇ ಬಗೆಯ ಏಕೀಕರಣವಾಗಲಿ, ಉದ್ಯಮಸಂಸ್ಥೆಯ ಗಾತ್ರವನ್ನು ಅಧಿಕಗೊಳಿಸಿ ಅಧಿಕ ಉತ್ಪಾದನೆಯ ಅನುಕೂಲವನ್ನೊದಗಿಸುತ್ತದೆ. ಈ ವ್ಯವಸ್ಥೆಯಿಂದ ಉದ್ಯಮಸಂಸ್ಥೆಗಳು ತಮಗೆ ಬೇಕಾದ ಕಚ್ಚಾಸಾಮಗ್ರಿಗಳ ಮೇಲೆ ಹತೋಟಿ ಸ್ಥಾಪಿಸಿಕೊಳ್ಳುವುವು. ತಮ್ಮ ಪದಾರ್ಥಗಳ ಮಾರಾಟವನ್ನು ನಿಶ್ಚಿತಗೊಳಿಸುವುವು. ಅಲ್ಲದೆ ಮಾರುಕಟ್ಟೆ ವೆಚ್ಚ ಮೊದಲಾದವುಗಳನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸುವ ಅನುಕೂಲಗಳೂ ಇವಕ್ಕೆ ಲಭಿಸುತ್ತವೆ.

ಆದರೆ ಈ ಪ್ರವೃತ್ತಿ ಮಿತಿಮೀರಿ ಬೆಳೆದರೆ ಕೈಗಾರಿಕೆಯ ಏಕಸ್ವಾಮ್ಯ ಬೆಳೆದು ಸಮಾಜಕ್ಕೆ ಅಪಾಯಕಾರಿಯಾಗಿಯೂ ಪರಿಣಮಿಸಬಹುದು. ಇಂಥ ಸಂಭವವನ್ನು ನಿವಾರಿಸಲು ಎಲ್ಲ ಮುಂದುವರಿದ ದೇಶಗಳಲ್ಲೂ ಸೂಕ್ತ ಕಾನೂನುಗಳು ಜಾರಿಯಲ್ಲಿವೆ.

(ಎಬಿ.ಎ.)

**ಏಕೀಕರಣ, ರಾಷ್ಟ್ರೀಯ :** ಒಂದೇ ಪ್ರಭುತ್ವದ ಅಡಿಯಲ್ಲಿ, ಸಾರ್ವಜನಿಕವಾದ ಒಂದೇ ಸೀಮೆಯಲ್ಲಿ ವಾಸಿಸುತ್ತಿರುವ, ಎಂದರೆ ಸಮಾನ ಆಡಳಿತ ಮತ್ತು ಸಾಂಸ್ಕೃತಿಕ ಲಕ್ಷಣಗಳನ್ನು ಪಡೆದಿರುವ ಜನಸಮುದಾಯವೇ ರಾಷ್ಟ್ರ, ಎಂಬ ವ್ಯಾಖ್ಯೆಯಲ್ಲಿಯೇ ಏಕೀಕರಣದ ತತ್ತ್ವ ಅಡಗಿದೆ. ಆದರೆ ಈ ವ್ಯಾಖ್ಯೆಯನ್ನು ಕಟ್ಟುನಿಟ್ಟಾಗಿ ಅನ್ವಯಿಸುವುದಾದರೆ ವಿಶ್ವದ ಅನೇಕ ದೇಶಗಳು ರಾಷ್ಟ್ರಗಳೆನಿಸಿಕೊಳ್ಳಲಾರವು. ಈ ವ್ಯಾಖ್ಯೆ ಒಂದು ಆದರ್ಶವಷ್ಟೆ. ಸಂಪೂರ್ಣ ಏಕತಾಭಾವ ಇಂಥ ಸಂದರ್ಭದಲ್ಲಿ ಮಾತ್ರ ಸಾಧ್ಯ. ಆಗಲೂ ಜೀವನ ವಿಧಾನಗಳಲ್ಲಿನ ಭಿನ್ನತೆ, ವರಮಾನ ಸಂಪತ್ತುಗಳ ತರ-ತಮ, ಸಂಪರ್ಕಸಾಧನಗಳ ಅಸಮರ್ಪಕತೆ ಮುಂತಾದ ನಾನಾ ಕಾರಣಗಳಿಂದ ಈ ಏಕತೆಗೆ ಭಂಗ ಬರಬಹುದು. ಆದರೆ ನಿಸ್ತೇಜವೂ ವರ್ಣರಹಿತವೂ ಆದ ಸಮಾನತೆಯೇ ಏಕತೆಯಲ್ಲ. ಭಿನ್ನ ಭಾಷೆ ಧರ್ಮ ಸಂಸ್ಕೃತಿಗಳ ಜನ ಒಂದಾಗಿ ಬಾಳುವುದು ಸಾಧ್ಯ. ಎಲ್ಲ ರೀತಿಯಲ್ಲೂ ಅಖಂಡವೆನಿಸಿದ ರಾಷ್ಟ್ರ ಗತಕಾಲದ ಮೃತಕಲ್ಪನೆ. ಇಂಥ ಕಲ್ಪನೆಯ ಫಲವಾಗಿ ಅನೇಕ ರಾಷ್ಟ್ರಗಳಲ್ಲಿ ಇಡೀ ಜನಾಂಗಗಳೇ ಕಷ್ಟಕ್ಕೆ ಒಳಗಾಗಿ ಆ ರಾಷ್ಟ್ರಗಳ ಹಿತಕ್ಕೆ ಧಕ್ಕೆ ಒದಗಿರುವುದು ಇತಿಹಾಸದ ಸಂಗತಿ. ಜನಾಂಗ ಪರಿವರ್ತನೆ ಮತ್ತು ಬಹಿಷ್ಕಾರಗಳ ಮೂಲಕ ರಾಷ್ಟ್ರೀಯ ಭಾವೈಕ್ಯ ಸ್ಥಾಪಿಸುವ ಯತ್ನಗಳೆಲ್ಲ ಸಾಮಾನ್ಯವಾಗಿ ವಿಫಲಗೊಂಡಿವೆ. ಬ್ರಿಟನ್, ಫ್ರಾನ್ಸ್, ಸ್ಪೇನ್‌ಗಳು ಯೂರೋಪಿನ ಅತ್ಯಂತ ಪ್ರಾಚೀನ ರಾಷ್ಟ್ರಗಳು. ಆದರೆ ಅವು ಕೂಡ ಸಂಪೂರ್ಣ ಭಾವೈಕ್ಯ ಪಡೆದ ರಾಷ್ಟ್ರಗಳೆನ್ನಲಾಗುವುದಿಲ್ಲ. ಅಲ್ಲಿನ ಜನ ಉಜ್ಜ್ವಲ ರಾಷ್ಟ್ರಪ್ರೇಮಿಗಳು. ಆದರೆ ಅಲ್ಲೂ ಪ್ರಾದೇಶಿಕ ವೈವಿಧ್ಯಗಳುಂಟು. ಬ್ರಿಟನಿನ ಸ್ಕಾಟ್, ಇಂಗ್ಲಿಷ್ ಮತ್ತು ವೆಲ್ಷ್ ಜನರ ತಮ್ಮತನ ಗಮನಾರ್ಹವಾದ್ದು. ಕೆನಡದಲ್ಲಿ ಕ್ವಿಬೆಕ್ ಪ್ರಾಂತ್ಯದ ಜನ ಹೂಡಿರುವ ಪ್ರತ್ಯೇಕತಾ ಚಳವಳಿಯನ್ನೂ ಉದಾಹರಿಸಬಹುದು. ಫ್ರಾನ್ಸಿನಲ್ಲೂ ಪ್ರಾಂತೀಯ ಭಿನ್ನತೆಗಳುಂಟೇ ಉಂಟು. ಸ್ಪೇನಿನ ಕ್ಯಾಟಲೋನಿಯ ಪ್ರಾಂತ್ಯದ ಸ್ವಾಯತ್ತೆಯ ಚಳವಳಿಯ ಹಿಂದೆ ಪ್ರತ್ಯೇಕತಾಭಾವವನ್ನು ಕಾಣಬಹುದು. ಆದರೂ ಈ ದೇಶಗಳ ಏಕತೆಗೆ ಧಕ್ಕೆ ಬಂದಿದೆಯೆಂದು ಭಾವಿಸಲಾಗದು. ಇಪ್ಪತ್ತನೆಯ ಶತಮಾನದ ಕಲ್ಪನೆಯೇ ಬೇರೆ ತೆರ. ಸರ್ವಜನಹಿತ ಸಾಧಿಸುವ ಉದ್ದೇಶ ಹೊಂದಿರುವ ರಾಜಕೀಯ ವ್ಯವಸ್ಥೆಯ ಅಡಿಯಲ್ಲಿ ಭಿನ್ನಭಾಷೆ ಮತ ಸಂಸ್ಕೃತಿಗಳ ಜನಾಂಗಗಳು ಸಹಜೀವನ ನಡೆಸುವಂತಾಗಬೇಕೆಂಬುದೇ ಇಪ್ಪತ್ತನೆಯ ಶತಮಾನದ ಆದರ್ಶ. ಸೋವಿಯತ್ ದೇಶ ಅನೇಕ ಜನಾಂಗಗಳ ಒಕ್ಕೂಟ. ಅಲ್ಲೂ ಆಯಾ ಪ್ರಾದೇಶಿಕ ವೈಶಿಷ್ಟ್ಯಗಳಿಲ್ಲದೆ ಇಲ್ಲ. ಜಾರ್ಜಿಯ, ಉಕ್ರೇನ್ ಮುಂತಾದವು ರಾಜಕೀಯವಾಗಿಯೂ ಸಾಂಸ್ಕೃತಿಕವಾಗಿಯೂ ಸಾಹಿತ್ಯಿಕವಾಗಿಯೂ ತಮ್ಮ ವೈಶಿಷ್ಟ್ಯಗಳನ್ನು ಬೆಳೆಸಿಕೊಳ್ಳುತ್ತಿವೆ. ಪಶ್ಚಿಮ ಯೂರೋಪಿನ ಸಂಘಟನೆಯ ಪ್ರಯತ್ನ ನಡೆಯುತ್ತಿರುವಾಗಲೇ ಅಲ್ಲಿನ ರಾಷ್ಟ್ರಗಳ ವಿಭಿನ್ನ ಧರ್ಮ ಸಂಸ್ಕೃತಿಗಳ ರಕ್ಷಣೆಗೂ ಮಹತ್ತ್ವಕೊಡಲಾಗಿದೆ. ಭಿನ್ನತೆಗಳೇನೇ ಇರಲಿ, ಸರ್ವರಿಗೂ ಸಮಾನವಾದ ವಿಶಾಲ ತತ್ತ್ವಗಳ ತಳಹದಿಯ ಮೇಲೆ ಏಕೀಕರಣ ಸಾಧಿಸುವುದೇ ಇಂದಿನ ಆದರ್ಶ.

**ಭಾರತದ ಭಾವೈಕ್ಯ :** ರಾಜಕೀಯವಾಗಿಯೂ ಭೌಗೋಳಿಕವಾಗಿಯೂ ಒಂದಾಗಿರುವ ಸ್ವತಂತ್ರ ಭಾರತದ ಅಖಂಡತೆಯ ಕಲ್ಪನೆ ಬಲು ಪುರಾತನವಾದ್ದು ; ಆಡಳಿತ ದೃಷ್ಟಿಯಿಂದ ಇಡೀ ದೇಶ ಒಂದಾಗದಿದ್ದಾಗಲೂ ಇದು ಇದ್ದದ್ದು. ರಾಷ್ಟ್ರದ ಅಖಂಡತೆಯ ದೃಷ್ಟಿ ಬ್ರಿಟಿಷರ ಕೊಡುಗೆಯೆಂದೂ ಭಾರತದಲ್ಲಿ ಇದು ಅತ್ಯಂತ ಈಚೆಗೆ ಬಂದ ಭಾವನೆಯೆಂದೂ ಪರಿಗಣಿಸುವುದು ತಪ್ಪು. ಬ್ರಿಟಿಷರ ಆಡಳಿತದ ಕಾಲದಲ್ಲಿ ಇಡೀ ದೇಶ ಒಂದೇ ಆಡಳಿತಕ್ಕೆ ಒಳಪಟ್ಟಿತ್ತಾದರೂ ಇದಕ್ಕೂ ಹಿಂದೆ ಈ ಬಗೆಯ ಸಾಧನೆ ಆಗಿಲ್ಲದಿರಲಿಲ್ಲ. ಅಶೋಕನ ಸಾಮ್ರಾಜ್ಯ ಆಫ್ಘಾನಿಸ್ತಾನದಿಂದ ಕರ್ನಾಟಕದ ವರೆಗೆ ಹಬ್ಬಿತ್ತು. ಗುಪ್ತರೂ ಚೋಳರೂ ಮೊಘಲರೂ ಭಾರತದ ಬಹುಭಾಗದ ಮೇಲೆ ತಮ್ಮ ಸಾಮ್ರಾಜ್ಯ ವಿಸ್ತರಿಸಿದ್ದರು. ಬ್ರಿಟಿಷರ ಕಾಲದಲ್ಲಿ ಕಾಶ್ಮೀರದಿಂದ ಕನ್ಯಾಕುಮಾರಿಯ ವರೆಗಿನ ಅಖಂಡ ಪ್ರದೇಶ ಅವರ ಆಡಳಿತಕ್ಕೆ ಬಂತು. ಎಲ್ಲರಿಗೂ ಸಮಾನವಾಗಿದ್ದ ದಾಸ್ಯವೂ ಕ್ಲೈಬ್ಯವೂ ಭಾರತೀಯರ ಮನಸ್ಸಿನಲ್ಲಿ ಸ್ವಾತಂತ್ರ್ಯದ ಹಂಬಲವನ್ನೂ ಏಕತೆಯ ಕಲ್ಪನೆಯನ್ನೂ ಭದ್ರಗೊಳಿಸಿದುವೆಂಬುದು ನಿಸ್ಸಂಶಯ.

ಆದರೆ ಪ್ರಾಂತ್ಯ, ಜಾತಿ, ಮತ, ಭಾಷೆಗಳನ್ನೂ ಮೀರಿದ ಭಾರತೀಯತ್ವ ಬಲು ಹಳೆಯದು. ನಾನಾ ಧರ್ಮಗಳನ್ನು ಅನುಸರಿಸುವ, ಅನೇಕ ಭಾಷೆಗಳನ್ನಾಡುವ ಜನರಿರುವ ದೇಶವೆಂದು ಇದನ್ನು ಹೊಗಳಿರುವ ಮಾತು ಅಥರ್ವವೇದದಲ್ಲಿದೆ. ವಿಷ್ಣುಪುರಾಣ, ಮಹಾಭಾರತ, ಕಾಳಿದಾಸನ ರಘುವಂಶ ಮುಂತಾದ ಅಸಂಖ್ಯಾತ ಕೃತಿಗಳಲ್ಲಿ ಭಾರತದ ಭೌಗೋಳಿಕ ಏಕತೆಯ ಚಿತ್ರ ನಿಚ್ಚಳವಾಗಿ ಮೂಡಿಬಂದಿದೆ. ಸಮಾನ ಸುಖ, ಸಮಾನ ದುಃಖ ಮತ್ತು ಸಮಾನ ಆಕಾಂಕ್ಷೆಗಳ ದೃಷ್ಟಿಯಿಂದ ಭಾರತದ ಜನವೆಲ್ಲ ಒಂದು.

ಭಾರತದಲ್ಲಿ ಹಿಂದಿನಿಂದಲೂ ಅನೇಕ ಧರ್ಮಗಳ ಜನ ಒಂದಾಗಿ ಬಾಳಿದ್ದಾರೆ. ಪಾಶ್ಚಾತ್ಯ ದೇಶಗಳಲ್ಲಿ ನಡೆದಂಥ ಧರ್ಮಮೂಲ ಯುದ್ಧಗಳು ಭಾರತದಲ್ಲಿ ಎಂದೂ

ನಡೆದಿಲ್ಲ. ಪರ್ಷಿಯನರು, ಗ್ರೀಕರು, ಶಕರು, ಹೂಣರು ಮುಂತಾದ ಅನೇಕ ಜನ ಭಾರತದ ಮೇಲೆ ಆಕ್ರಮಣ ನಡೆಸಿದ್ದುಂಟು. ಇವರಲ್ಲನೇಕರು ಕೊಳ್ಳೆಯೊಂದಿಗೆ ಹಿಂದಿರುಗಿದರು. ಇಲ್ಲೇ ಉಳಿದವರು ಭಾರತೀಯರೇ ಆದರು. ಅವರಿಂದ ಭಾರತೀಯ ಸಂಸ್ಕೃತಿ ಹೆಚ್ಚು ವಿಶಾಲವಾಯಿತು. ಭಾರತದಲ್ಲಿ ದೇವರುಗಳು ಕೂಡ ಕಾಲದಿಂದ ಕಾಲಕ್ಕೆ ಬದಲಾಗಿರುವುದನ್ನು ಕಾಣಬಹುದು. ಇದಕ್ಕೆ ಏಕೀಕರಣದ ಪ್ರಭಾವವೂ ಒಂದು ಮುಖ್ಯಕಾರಣ. ಏಕತೆಯಲ್ಲಿ ಅನೇಕತೆಯ ತತ್ತ್ವವೇ ಭಾರತದ ಧರ್ಮ ಸಂಸ್ಕೃತಿ ಭಾಷೆ ಸಾಹಿತ್ಯಗಳ ತಳಹದಿ.

ಮುಸ್ಲಿಮರು ಭಾರತವನ್ನು ಗೆದ್ದಾಗ ಭಾವೈಕ್ಯಕ್ಕೆ ಇನ್ನೊಂದು ಮುಖ ಬಂತು. ಹಿಂದಿನ ಆಕ್ರಮಣಕಾರರಂತೆ ಇವರು ಭಾರತದ ಅದುವರೆಗಿನ ಸಂಸ್ಕೃತಿಯಲ್ಲಿ ಒಂದಾಗಲಿಲ್ಲ. ಇವರು ದೇಶ ಗೆದ್ದದ್ದೇ ಅಲ್ಲದೆ ತಮ್ಮ ಧರ್ಮದ ಪ್ರಸಾರವನ್ನೂ ಮಾಡಿದರು. ಭಾರತದಲ್ಲಿ ಇವರ ವೈಶಿಷ್ಟ್ಯ ಉಳಿದುಕೊಂಡು ಬಂತು ; ಭಾರತೀಯರನೇಕರು ಮುಸ್ಲಿಮರಾಗಿ ಮತಾಂತರ ಹೊಂದಿದರು. ಹೊರಗಿಂದ ಬಂದು ಇಲ್ಲೇ ಉಳಿದುಕೊಂಡವರೂ ಭಾರತೀಯರೇ ಆದರು. ಇವರ ಧರ್ಮವೂ ಭಾರತೀಯವೇ ಆಯಿತು. ಹಿಂದೂ–ಮುಸ್ಲಿಂ ಸಾಮರಸ್ಯಪ್ರಯತ್ನ ಸಂತತವಾಗಿ ಸಾಗಿತು ; ಬಹಳಮಟ್ಟಿಗೆ ಸಿದ್ಧಿಸಿತು.

ಅನಂತರ ಮೊಘಲ್ ಸಾಮ್ರಾಜ್ಯ ಮುರಿದು ಬಿತ್ತು. ಬ್ರಿಟಿಷರು ಭಾರತಕ್ಕೆ ಬಂದಾಗ ಸಾಮರಸ್ಯ ಪ್ರಯತ್ನ ಸ್ಥಗಿತವಾಯಿತು. ಸಾಮ್ರಾಜ್ಯವನ್ನು ಕಳೆದುಕೊಂಡ ನೋವು ಅನೇಕ ಮುಸ್ಲಿಮರ ಮನಸ್ಸಿನಲ್ಲಿದ್ದುದರಿಂದ ಅವರು ಪ್ರತ್ಯೇಕವಾಗುಳಿದರು. ಬ್ರಿಟಿಷರೂ ಈ ಪ್ರತ್ಯೇಕತೆಯನ್ನು ಪೋಷಿಸಿ ಭಾರತೀಯರ ಭಾವೈಕ್ಯಕ್ಕೆ ಭಂಗ ತಂದರು.

ಸ್ವತಂತ್ರ ಭಾರತ, ರಾಜ್ಯಗಳ ಒಕ್ಕೂಟ ಮಾತ್ರವಲ್ಲ, ಸಂಸ್ಕೃತಿಗಳ ಕೂಟ. ಇಡೀ ಭಾರತಕ್ಕೆ ಏಕತೆಯನ್ನೂ, ಮಹತ್ತ್ವವನ್ನೂ ನೀಡಿರುವ ಹಿಂದೂ ಸಂಸ್ಕೃತಿಯೊಂದಿಗೆ ಮುಸ್ಲಿಂ ಸಂಸ್ಕೃತಿಯ ವೈಶಿಷ್ಟ್ಯವೂ ಸಹಬಾಳ್ವೆ ನಡೆಸುತ್ತಿದೆ. ಜೊತೆಗೆ ಪಾರ್ಸಿ, ಆಂಗ್ಲೋ–ಇಂಡಿಯನ್ ಮುಂತಾದ ಅಲ್ಪಸಂಖ್ಯಾತ ಸಂಸ್ಕೃತಿ ಸಮೂಹವೂ ಭಾರತದಲ್ಲಿ ಬೆರೆತುಕೊಂಡಿದೆ. ಇವುಗಳ ಜೊತೆಗೆ ಪ್ರಾದೇಶಿಕ ವೈಶಿಷ್ಟ್ಯಗಳೂ ಉಂಟು. ' ಏಕದಲ್ಲಿ ಅನೇಕ ' ಎಂಬುದು ಇಲ್ಲಿನ ಹಳೆಯ ಸೂತ್ರ. ರಾಷ್ಟ್ರದ ಕಲ್ಪನೆ ಎಲ್ಲರಿಗೂ ಸಮಾನವಾದ್ದು. ಇತ್ತೀಚಿನ ಇತಿಹಾಸ, ಭೌಗೋಳಿಕ ಪರಿಸ್ಥಿತಿ, ಆರ್ಥಿಕ ಕ್ಷೇತ್ರದ ಸಮಾನ ಹಿತ, ಸಾರ್ವತ್ರಿಕ ಆಕಾಂಕ್ಷೆ–ಇವು ಭಾರತದ ಭಾವೈಕ್ಯವನ್ನು ಸ್ಥಿರಗೊಳಿಸುತ್ತಿರುವ ಪ್ರಧಾನ ಅಂಶಗಳು. (ಎಂ.ಆರ್.)

**ಏಕೀಕರಣ, ಸಾಂಸ್ಕೃತಿಕ :** ಸಂಕೇತಗಳು ಸಂಸ್ಕೃತಿಯ ಲಕ್ಷಣಗಳು. ಈ ಲಕ್ಷಣಗಳ ಪರಸ್ಪರ ಸಂಬಂಧವೇ ಸಾಂಸ್ಕೃತಿಕ ಏಕೀಕರಣ. ಸಂಸ್ಕೃತಿಯ ಹುರುಳಿನ ಅರಿವು, ಸಾಂಸ್ಕೃತಿಕ ಏಕೀಕರಣದ ವರ್ಗೀಕರಣ ಮತ್ತು ಸಂಕೇತಗಳ ನಡುವಣ ಸಂಬಂಧ ಅಥವಾ ಸಾಂಸ್ಕೃತಿಕ ಏಕೀಕರಣದ ರೂಪ—ಈ ಪ್ರಶ್ನೆಗಳು ವಿದ್ವಾಂಸರನ್ನು ಕಾಡುತ್ತಿರುವ ಮುಖ್ಯ ಸಮಸ್ಯೆಗಳು.

ಸಂಸ್ಕೃತಿಯ ವಿವಿಧ ಅಂಗಗಳು ಪರಸ್ಪರ ಸಮ್ಮಿಲನಗೊಳ್ಳಬಲ್ಲುವು ಎಂಬ ಭಾವನೆ ಹಲವಾರು ಸಂದರ್ಭಗಳಲ್ಲಿ ಪ್ರಯೋಜನಕಾರಿಯಾಗಿದೆ. ವಿವಿಧ ಸಂಸ್ಕೃತಿಗಳ ಸಾಮ್ಯತೆಗಳನ್ನು ಆದರ್ಶಭಾವನಾಪ್ರಧಾನವಾಗಿ ವರ್ಣಿಸುವಾಗ, ಒಂದು ಸಂಸ್ಕೃತಿಯ ವಿಶಿಷ್ಟಗುಣಗಳನ್ನು ಬೇರೆ ಸಂಸ್ಕೃತಿಯ ಜನ ಸ್ವೀಕರಿಸುವಾಗ, ಅಧಿಕಾರವರ್ಗದವರು ವಿವಿಧ ಸಂಸ್ಕೃತಿಗಳಿಗೆ ಸೇರಿದ ಜನರಿಂದ ಸ್ವೀಕೃತವಾಗಬಹುದಾದ ಸುಧಾರಣೆಗಳನ್ನು ಆಚರಣೆಗೆ ತರುವಾಗ, ಹಲವಾರು ಸಾಮಾಜಿಕ ನ್ಯೂನತೆಗಳನ್ನು ತಡೆಹಿಡಿಯಬೇಕಾದಾಗ ಅಥವಾ ವಿವಿಧ ಸಂಸ್ಕೃತಿಗಳ ತುಲನಾತ್ಮಕ ವಿಮರ್ಶೆಮಾಡುವಾಗ ಈ ರೀತಿಯ ಸಾಂಸ್ಕೃತಿಕ ಸಮ್ಮಿಲನ ಸಾಧ್ಯವೆಂಬ ನಂಬಿಕೆ ಉಪಯೋಗಕ್ಕೆ ಬರುತ್ತದೆ. ಆಧುನಿಕ ಸಮಾಜದಲ್ಲಿನ ಆಗುಹೋಗುಗಳು ಈ ಭಾವನೆಯ ಉಪಯುಕ್ತತೆಯನ್ನು ಎತ್ತಿ ತೋರಿಸಿವೆ. ಪ್ರೌಢಶಿಕ್ಷಣ, ರೇಡಿಯೋ, ಟೆಲಿವಿಷನ್, ಚಲನಚಿತ್ರ ಮುಂತಾದ ಬಹುಮುಖ ಸಂಪರ್ಕಮಾಧ್ಯಮ, ವಿರೋಧಾತ್ಮಕ ಸಂಸ್ಕೃತಿಗಳಲ್ಲಿ ಏರ್ಪಡುವ ಸಂಪರ್ಕ ಇವೇ ಮುಂತಾದ ಕಾರಣಗಳಿಂದ ಸಾಂಸ್ಕೃತಿಕ ಏಕೀಕರಣಭಾವನೆಗೆ ಹೆಚ್ಚು ಪ್ರಾಶಸ್ತ್ಯ ದೊರಕುತ್ತಿದೆ. ವಿಶ್ವದಾದ್ಯಂತ ನಡೆಯುತ್ತಿರುವ ಸಾಂಪ್ರದಾಯಿಕ ಮತ್ತು ಆಧುನಿಕ ಸಮಾಜಗಳ ಏಕೀಕರಣಕ್ಕೆ ತಳಹದಿಯಾಗಬೇಕೆಂಬ ಆಶಯಕ್ಕೆ ಇದು ಪೂರಕವಾಗಬೇಕಾಗಿದೆ.

ಸಾಂಸ್ಕೃತಿಕ ವಿಧಾನಗಳ ಸಮೂಹದಲ್ಲಿರಬೇಕಾದ ಆಂತರಿಕ ಹೊಂದಾಣಿಕೆಯೆ ಸಂಸ್ಕೃತಿಶಾಸ್ತ್ರಜ್ಞರ ಮುಖ್ಯ ಸಮಸ್ಯೆಯೆಂದು ಹಲವು ವಿದ್ವಾಂಸರು ವಾದಿಸಿದ್ದಾರೆ. ವಿವಿಧ ಸಂಸ್ಕೃತಿ ಸಮಾಜಗಳ ವಿಭಿನ್ನ ಲಕ್ಷಣಗಳ ವಿಶದೀಕರಣ ಮತ್ತು ಅವುಗಳ ಸಮನ್ವಯಕ್ಕೆ ಆಧುನಿಕ ವಿದ್ವಾಂಸರು ಮಾಡುತ್ತಿರುವ ಪ್ರಯತ್ನಗಳಿಗೆ ಈ ಸಮಸ್ಯೆ ಸಂಬಂಧಿಸಿದೆ. ಕೆಲವು ಹಳೆಯ ವಿದ್ವಾಂಸರು ಏಕೀಕರಣವೆಂಬ ಪದವನ್ನು ಶಿಥಿಲ ಮತ್ತು ಹೆಚ್ಚು ವಿಸ್ತರಿಸಿದ ಅರ್ಥದಲ್ಲಿ ಉಪಯೋಗಿಸಿದ್ದಾರೆ. ವೃತ್ತಿಸಂಬಂಧ ಮತ್ತು ತಾರ್ಕಿಕ ಅಥವಾ ಅರ್ಥವತ್ತಾದ ಏಕೀಕರಣವೆಂಬ ಎರಡು ವಿಧವಾದ ಏಕೀಕರಣವನ್ನು ಸೊರೊಕಿನ್ ವಿವೇಚಿಸಿದ್ದಾನೆ. ಈ ರೀತಿಯಲ್ಲಿ ನಿಖರವಾದ ಅರ್ಥವ್ಯಾಪ್ತಿಯನ್ನು ಕೊಡುವಾಗ ಸಾಂಸ್ಕೃತಿಕ ಏಕೀಕರಣದ ಆಧಾರ, ರೂಪ, ವ್ಯಾಪ್ತಿ ಮತ್ತು ಫಲಿತಾಂಶಗಳ ವಿಷಯವಾಗಿ ಸಾಕಷ್ಟು ಚರ್ಚೆ ನಡೆದಿದ್ದು, ಇದು ಏಕೀಕರಣದ ಭಾವನೆಗೆ ಭದ್ರವಾದ ಬುನಾದಿಯನ್ನೊದಗಿಸಿರುವುದಲ್ಲದೆ, ಅದಕ್ಕೊಂದು ನಿರ್ದಿಷ್ಟರೂಪವನ್ನೂ ಕೊಟ್ಟಿದೆ. ಈ ಪ್ರಯತ್ನಗಳ ಫಲವಾಗಿ ಸಾಮಾಜಿಕ ಸಾಂಸ್ಕೃತಿಕ ಪದ್ಧತಿಗಳಲ್ಲಿ ಆಂತರಿಕ ಸಮನ್ವಯ ಮತ್ತು ಐಕ್ಯಗಳನ್ನು ಕಾಣಬಹುದೆಂದು ವಿದ್ವಾಂಸರು ಒಪ್ಪಿಕೊಳ್ಳುವಂತಾಯಿತು.

ಸಂಸ್ಕೃತಿಗಳು ಪೂರ್ಣ ಸಮ್ಮಿಲನಗೊಂಡ ಸಂಸ್ಥೆಗಳೆಂಬ ವಾದವನ್ನು ಇತ್ತೀಚೆಗೆ ನಡೆದ ಮಾನವಿಕವಿಜ್ಞಾನದ ಶೋಧನೆಗಳು ಒಪ್ಪುವುದಿಲ್ಲ. ಸಾಂಸ್ಕೃತಿಕ ಏಕೀಕರಣ ಕೇವಲ ಪ್ರಗತಿಯ ಲಕ್ಷಣ ; ಸಹಜವಾದ ಉಪಾಧಿಯಲ್ಲ; ಬಲುಮಟ್ಟಿಗೆ ಆಂತರಿಕವಾಗಿ ಹೊಂದಾಣಿಕೆಯಿರುವ ಪ್ರಗತಿಪರವಾದ ನಡೆಯ ಪ್ರಕ್ರಿಯೆ ಎಂದು ಪರಿಗಣಿಸಲಾಗಿದೆ. ಈ ವಾದದ ಆಧಾರದ ಮೇಲೆ ವಿವಿಧ ಸಂಸ್ಕೃತಿಗಳು ಎಷ್ಟರ ಮಟ್ಟಿಗೆ ಸಮ್ಮಿಲನ ಹೊಂದಿವೆಯೆಂಬ ಅಂಶವನ್ನು ವಿದ್ವಾಂಸರು ವಿವೇಚಿಸಲಾರಂಭಿಸಿದ್ದಾರೆ. ಕೆಲವು ಸಂಸ್ಕೃತಿಗಳು ಪೂರ್ಣ ಸಮ್ಮಿಲನ ಹೊಂದಿವೆಯೆಂದು ಈಚಿನ ವರೆಗೂ ರೂಢಿಯಲ್ಲಿದ್ದ ವಾದವನ್ನು ಪ್ರಶ್ನಿಸಲಾರಂಭಿಸಿದ್ದಾರೆ. ಕಾರಣಾಂತರಗಳಿಂದ ಪ್ರತಿಯೊಂದು ಸಮಾಜದಲ್ಲೂ ಬದಲಾವಣೆಗಳುಂಟಾಗುತ್ತಿರುವುದರಿಂದ ಅಂಥ ಸಂಸ್ಕೃತಿಗಳು ಪೂರ್ಣವಾಗಿ ಸಮ್ಮಿಲನ ಹೊಂದಿರಲು ಸಾಧ್ಯವಿಲ್ಲ. ಒಂದು ಸಂಸ್ಕೃತಿಯ ವಿವಿಧ ಆಚಾರ ಪದ್ಧತಿಗಳನ್ನು ಒಟ್ಟುಗೂಡಿಸಿದ ಮಾತ್ರಕ್ಕೆ ಆ ಸಂಸ್ಕೃತಿಯ ಪೂರ್ಣರೂಪವಾಗುವುದಿಲ್ಲ. ಯಾವುದೇ ಒಂದು ಅಂಶವನ್ನು ಇತರ ಅಂಶಗಳಿಂದ ಪೂರ್ಣವಾಗಿ ಬೇರ್ಪಡಿಸಲೂ ಸಾಧ್ಯವಿಲ್ಲ. ಈ ಮೇಲಿನ ವಾದದಿಂದ ಸಾಂಸ್ಕೃತಿಕ ಏಕೀಕರಣ ಪೂರ್ಣವಲ್ಲವೆಂಬ ಮತ್ತು ಎಲ್ಲ ಹಂತಗಳಲ್ಲೂ ನಡೆಯುತ್ತಿರುವ ಒಂದು ಗುಣವೆಂಬ ಅಂಶ ವ್ಯಕ್ತವಾಗುತ್ತದೆ. ಇತ್ತೀಚೆಗೆ ಈ ಏಕೀಕರಣ ಸಮಸ್ಯೆಯನ್ನು ಆದರ್ಶದ ಮಟ್ಟಕ್ಕೆತ್ತಲಾಗಿದೆ. ಹಿಂದಿನ ಸಮಾಜಗಳಲ್ಲಿ ನೆಲಸಿದ್ದ ಪೂರ್ಣ ಸಮನ್ವಯವೇ ಆ ಸಂಸ್ಕೃತಿಗಳ ಮುಖ್ಯ ಲಕ್ಷಣವೆಂದು ಮತ್ತು ಆಧುನಿಕ ಸಮಾಜದ ಕುಂದು ಕೊರತೆಗಳಿಗೆ ಆ ಸಮಾಜದಲ್ಲಿ ಕಂಡುಬರುವ ವಿಚ್ಛಿದ್ರಕಾರಕ ಶಕ್ತಿಗಳೇ ಕಾರಣವೆಂದು ವಾದಿಸಲಾಗಿದೆ. ಇತ್ತೀಚೆಗೆ ಸಮಾಜಶಾಸ್ತ್ರರಂಗದಲ್ಲಿ ನಡೆದಿರುವ ಪ್ರಗತಿಪರಶೋಧನೆಗಳು ಸಾಂಸ್ಕೃತಿಕ ಏಕೀಕರಣ ಸ್ವಾಭಾವಿಕವೇ ಅಲ್ಲವೇ ಎಂಬಂಶವನ್ನು ಕಡೆಗಣಿಸಿ ಯಾವ ರೀತಿಯ ಪ್ರಯೋಜನಗಳುಂಟಾಗುತ್ತವೆಂಬಂಶಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಡುತ್ತಿವೆ.

ಸಾಂಸ್ಕೃತಿಕ ಏಕೀಕರಣ ಮಾನಸಿಕ ಭಾವನೆ ಅಥವಾ ಸಾಮಾಜಿಕ ವರ್ಗಗಳ ಹಿತಾಸಕ್ತಿಗಳನ್ನು ತರ್ಕಸಮ್ಮತವಾಗಿ ಕೈಗೂಡಿಸುವ ಒಂದು ಸಾಧನವೆಂಬ ಹಳೆಯ ವಾದಗಳು ತಿರಸ್ಕೃತವಾಗಿ ಪ್ರಗತಿಪರ ಸಂಸ್ಕೃತಿಗಳ ಮುಖ್ಯ ಲಕ್ಷಣಗಳೇ ಏಕೀಕರಣದ ಬುನಾದಿಯೆಂಬ ಭಾವನೆಗೆ ಆಧುನಿಕ ವಿದ್ವಾಂಸರಲ್ಲಿ ಪ್ರಾಶಸ್ತ್ಯ ದೊರಕುತ್ತಿದೆ. (ಬಿ.ಕೆ.ಜಿ.)

**ಏಕೀಕರಣ, ಸಾಮಾಜಿಕ :** ವಿವಿಧ ಸಾಮಾಜಿಕ ಪದ್ಧತಿಗಳ ಅಥವಾ ವಿಭಿನ್ನ ಸಾಮಾಜಿಕ ಅಂಗಗಳ ಏಕೀಕರಣದ ಪ್ರಶ್ನೆ ದೀರ್ಘಕಾಲದಿಂದ ಬೌದ್ಧಿಕ ಮತ್ತು ವೈಜ್ಞಾನಿಕ ಆಸಕ್ತಿ ಕೆರಳಿಸಿದೆ. ಕೈಗಾರಿಕಾ ಕ್ರಾಂತಿಯ ಫಲವಾಗಿ ಸಾಮಾಜಿಕ ಸಂಬಂಧಗಳಲ್ಲಿ ಸಂಭವಿಸಿರುವ ಏರುಪೇರುಗಳಿಂದ ಸಮಾಜದ ಪುನರೇಕೀಕರಣ ಸಾಧಿಸುವ ಆವಶ್ಯಕತೆ ತೀವ್ರವೂ ಜರೂರೂ ಆಗಿ ಪರಿಣಮಿಸಿದೆ. ಸಣ್ಣ ಗುಂಪುಗಳಿಂದ ಆರಂಭಿಸಿ ವಿಶಾಲ ಸಮಾಜದಂಥ ವಿವಿಧ ಹಂತಗಳಲ್ಲಿ ಈ ಏಕೀಕರಣ ನಡೆಯಬೇಕಾಗಿರುವುದರಿಂದ ಹಲವಾರು ಸಮಸ್ಯೆಗಳು ಉದ್ಭವಿಸುವುದು ಸಹಜವೇ. ಆಯಾ ಹಂತಗಳಿಗೆ ಅನುಸಾರವಾಗಿ ಏಕೀಕರಣ ನಡೆಯಬೇಕು. ವಿವಿಧ ಪಂಗಡಗಳ ಏಕೀಕರಣದಲ್ಲಿ ಉದ್ಭವಿಸುವ ಸಮಸ್ಯೆಗಳಿಗಿಂತ ಅಂಥ ಪಂಗಡಗಳನ್ನೊಳಗೊಂಡ ವಿಶಾಲಜನಾಂಗಗಳ ಏಕೀಕರಣದ ಸಮಸ್ಯೆಗಳು ಕ್ಲಿಷ್ಟತರ. ಮೊದಲಿಗೆ ವಿದ್ವಾಂಸರು ಸಾಂಸ್ಕೃತಿಕ ಸಾಮಾಜಿಕ ಏಕೀಕರಣಗಳ ನಡುವೆ ಇರುವ ವ್ಯತ್ಯಾಸವನ್ನು ಗುರುತಿಸಿದ್ದರೂ ಕಳೆದ ಎರಡು ದಶಕಗಳಿಂದೀಚೆಗೆ ಪ್ರತ್ಯೇಕತೆ ಬೆಳೆದುಬಂದಿದೆ. ಸಾಮಾಜಿಕ ಮೌಲ್ಯ ಮತ್ತು ನಂಬಿಕೆಗಳು ಭಿನ್ನಸಮಾಜಗಳಲ್ಲಿ ಸಮಾನವಾಗಿದ್ದು, ಈ ಜನ ಫಲಪ್ರದವಾಗಿ ಸಹಕರಿಸುವುದು ಯಾಂತ್ರಿಕ ಒಗ್ಗಟ್ಟಿಂದೂ ಏಕತೆ ಮತ್ತು ಪರಸ್ಪರ ಅವಲಂಬನೆಯಿಂದ ಸಂಭವಿಸುವುದು ಆಂಗಿಕ ಒಗ್ಗಟ್ಟಿಂದೂ ಕೆಲವು ವಿದ್ವಾಂಸರು ವಾದಿಸಿದರು.

ಯಾಂತ್ರಿಕ ಒಗ್ಗಟ್ಟಿನಲ್ಲಿ ಸಮಾಜ ವಿಧಿಸಿದ ನಿಯಮಗಳಿಗನುಸಾರವಾಗಿ ಎಲ್ಲರೂ ನಡೆಯಬೇಕಾದರೆ, ಆಂಗಿಕ ಒಗ್ಗಟ್ಟಿನಲ್ಲಿ ಪರಸ್ಪರ ವೈವಿಧ್ಯ ಭಿನ್ನತೆಗಳನ್ನು ಸಮತೋಲ ಮಾಡಿಕೊಳ್ಳುವುದು ಮುಖ್ಯಲಕ್ಷಣ. ಸುಪ್ರಸಿದ್ಧ ಸಮಾಜಶಾಸ್ತ್ರಜ್ಞ ಸೊರೊಕಿನ್ ಈ ವಾದವನ್ನು ಒಪ್ಪುವುದಿಲ್ಲ. ಆತನ ಅಭಿಪ್ರಾಯದಂತೆ ಚಲನಾತ್ಮಕ

ಸಮಾಜದಲ್ಲಿ ಸಾಂಸ್ಕೃತಿಕ ಅಂಶಗಳು ಪರಸ್ಪರಾವಲಂಬಿಗಳಾಗಿರುತ್ತವೆಯಾದ್ದರಿಂದ ಸಾಂಸ್ಕೃತಿಕ ಮತ್ತು ವೃತ್ತಿಸಹಜ ಏಕೀಕರಣ ವಿಧಾನಗಳೆರಡೂ ಒಂದೇ ಆಗಿರುತ್ತವೆ. ತಾರ್ಕಿಕ ಅರ್ಥಪೂರ್ಣ ಏಕೀಕರಣ ಉತ್ತಮದರ್ಜೆಯದಾಗಿದ್ದು ಮೊದಲನೆಯ ರೀತಿಯ ಏಕೀಕರಣ ಕೀಳ್ತರದ್ದೆಂದು ತಿರಸ್ಕೃತ. ಆದರೆ ತಾರ್ಕಿಕ–ಅರ್ಥಪೂರ್ಣ ಏಕೀಕರಣ ಸಾಂಸ್ಕೃತಿಕವಾದ್ದರಿಂದ ಅದು ಇಲ್ಲಿ ಅಪ್ರಕೃತ. ಅನಂತರ ಕಾಲದ ಸಮಾಜಶಾಸ್ತ್ರಜ್ಞರು ಪ್ರಮಾಣಸಂಬಂಧ ಮತ್ತು ವೃತ್ತಿಸಂಬಂಧವೆಂಬ ಎರಡು ರೀತಿಯ ಏಕೀಕರಣಗಳನ್ನು ಸಾಂಸ್ಕೃತಿಕ ಏಕೀಕರಣದಿಂದ ಬೇರ್ಪಡಿಸಿದರು. ಇತ್ತೀಚೆಗೆ ಸಂಪರ್ಕಮೂಲ ಏಕೀಕರಣವೆಂಬ ಹೊಸ ವಿಧಾನವೊಂದು ಮಾನ್ಯವಾಗುತ್ತಿದೆ.

ಸಮಾಜದ ಸಾಮಾನ್ಯ ಮೌಲ್ಯಗಳು ಒಟ್ಟುಗೂಡಿ ಸಂಸ್ಥೀಕರಿಸಲ್ಪಟ್ಟು ಸಮಾಜ ವ್ಯವಸ್ಥೆ ಏರ್ಪಡುವುದಕ್ಕೆ ಪ್ರಮಾಣಸಂಬಂಧ ಏಕೀಕರಣವೆಂದು ಹೇಳಲಾಗಿದೆ. ವ್ಯಕ್ತಿಗಳ ನಡುವೆ, ಸಂಸ್ಥೆಗಳ ನಡುವೆ ಅಥವಾ ಸಂಸ್ಥಾಂತರ್ಗತ ಪ್ರತ್ಯೇಕ ಅಂಗಗಳ ನಡುವೆ ಈ ರೀತಿಯ ಏಕೀಕರಣ ಸಾಧ್ಯ. ಅನೇಕ ಸಂದರ್ಭಗಳಲ್ಲಿ ಈ ಬಗೆಯ ಏಕೀಕರಣ ಸಾಮಾಜಿಕ ಸಂಬದ್ಧತೆಯನ್ನು ಅವಲಂಬಿಸಿರುತ್ತದೆ. ಬಾಹ್ಯಾತಂಕಗಳು ಹೆಚ್ಚಾದಾಗ ಸಮಾಜದಲ್ಲಿ ಆಂತರಿಕ ಸಂಬದ್ಧತೆಯೇರ್ಪಡುತ್ತದೆಂದು ಜನಸಾಮಾನ್ಯರ ನಂಬಿಕೆ. ಆದರೆ ಈ ಏಕತೆಯ ಅಡಿಪಾಯವಾಗಿ ಕೆಲವು ಮೂಲಭೂತ ಸಾಮ್ಯಗಳಿದ್ದರೆ ಮಾತ್ರ ಇಂಥ ಐಕ್ಯ ಸಾಧ್ಯ. ಪ್ರಮಾಣ ಸಂಬಂಧ ಏಕೀಕರಣದ ವಿವಿಧ ಮಟ್ಟಗಳ ಪ್ರಭಾವ ಇತರ ಸಾಮಾಜಿಕ ಘಟನೆಗಳ ಮೇಲೆ ಯಾವ ರೀತಿಯದೆಂಬುದು ಮುಖ್ಯವಾದ ಅಂಶ. ಅದರ ಪ್ರಭಾವದಿಂದ ಸಾಮಾಜಿಕ ವ್ಯವಸ್ಥೆ ಸ್ಥಿರಗೊಳ್ಳುವುದೆಂದು ಕೆಲವರ ನಂಬಿಕೆ. ಮತ್ತೆ ಕೆಲವರು ಹಲವಾರು ಸಂದರ್ಭಗಳಲ್ಲಿ ನಿಯಮಿತ ವೃತ್ತಿಮಾರ್ಗ ಬಿಡುವುದರಿಂದಲೇ ಪ್ರಗತಿ ಸಾಧ್ಯವೆಂದು ವಾದಿಸುತ್ತಾರೆ.

ವೃತ್ತಿಸಂಬಂಧ ಏಕೀಕರಣವಾದದ ಪ್ರಕಾರ ವೃತ್ತಿಪ್ರಾವೀಣ್ಯವೇ ಸಮಾಜದ ಪ್ರಗತಿಗೆ ಸಾಧನ. ವಿವಿಧ ಅಂಗಗಳು ಒಂದೇ ಸಮಾಜದ ಪ್ರಗತಿಗಾಗಿ ಶ್ರಮಿಸುವುದರಿಂದ ಪರಸ್ಪರ ಪೂರಕಗಳಾಗುತ್ತವೆ. ಕೆಲವು ಬಾರಿ ವಿವಿಧ ಅಂಗಗಳಲ್ಲಿ ಪೂರ್ಣ ಸಮನ್ವಯ ಇಲ್ಲದಿರುವುದರಿಂದ ಏಕೀಕರಣ ಅಪೂರ್ಣವಾಗಿರಲು ಸಾಧ್ಯ.

ಚಲನಾತ್ಮಕ ಸಮತೋಲವೇ ಸಾಮಾಜಿಕ ಏಕೀಕರಣದ ಮುಖ್ಯಲಕ್ಷಣವೆಂದು ಕೆಲವರ ವಾದ. ಆದರೆ ಸಮಾಜದ ಭಿನ್ನ ಅಂಗಗಳಲ್ಲಿ ಸಾಕಷ್ಟು ಸಂಬದ್ಧತೆಯಿಲ್ಲವಾದಾಗ ಏಕೀಕರಣದ ಬದಲು ಸಮಾಜದಲ್ಲಿ ಅಸಮತೆ ಹೆಚ್ಚಾಗಿ ವಿಚ್ಛಿದ್ರಗೊಳ್ಳಬಹುದೆಂದು ಮತ್ತೆ ಕೆಲವರು ಅಭಿಪ್ರಾಯಪಡುತ್ತಾರೆ.

ಸಂಪರ್ಕಮೂಲ ಏಕೀಕರಣವಾದದ ಪ್ರಕಾರ ಆಧುನಿಕ ಸಮಾಜಗಳಲ್ಲಿ ರೇಡಿಯೋ, ಟೆಲಿವಿಷನ್, ಚಲನಚಿತ್ರ ಮುಂತಾದ ಸಂಪರ್ಕಮಾಧ್ಯಮಗಳ ಮೂಲಕ ಸಮಾಜದ ಏಕೀಕರಣದ ಸಾಧನೆಯಾಗುತ್ತದೆ. ಈ ಮಾಧ್ಯಮಗಳ ಮೂಲಕ ಸಮಾಜದ ಕೇಂದ್ರಸ್ಥ ಮತ್ತು ಎಲ್ಲೆಗಳಲ್ಲಿರುವ ಅಂಶಗಳಲ್ಲಿ ಪರಿಣಾಮಕಾರಿ ಸಂಪರ್ಕ ಏರ್ಪಟ್ಟು ಒಂದುಗೂಡಲು ಸಾಧ್ಯವಾಗುತ್ತದೆ.

ಸಾಮಾಜಿಕ ಏಕೀಕರಣ ಅನೇಕರ ಮಹದಾಶಯವಾಗಿದೆ. ಆದರೆ ಈ ಬಗ್ಗೆ ಸಾಕಷ್ಟು ಸಂಶೋಧನೆ ನಡೆಯದಿರುವುದರಿಂದಲೂ ಸಂಶೋಧಕರು ತಮ್ಮ ಮೂಲ ತತ್ತ್ವಗಳನ್ನು ಶ್ರುತಪಡಿಸದಿರುವುದರಿಂದಲೂ ಇದು ಇನ್ನೂ ಸಂಪೂರ್ಣ ಫಲಕಾರಿಯಾಗಿಲ್ಲ. (ಬಿ.ಕೆ.ಜಿ.)

**ಏಕೆನ್, ಕಾನ್‌ರ್ಯಾಡ್ ಪಾಟರ್:** 1889 – ಅಮೆರಿಕದ ಕವಿ, ಕಾದಂಬರಿಕಾರ. ಜಾರ್ಜಿಯ ಪ್ರಾಂತ್ಯದ ಸವಾನದಲ್ಲಿ ವೈದ್ಯನೊಬ್ಬನ ಮಗ. ಇವನಿಗೆ ಹನ್ನೊಂದು ವರ್ಷ ವಯಸ್ಸಾಗಿದ್ದಾಗ ತಂದೆ ತಾಯಿಯನ್ನು ಕೊಂದು ಆತ್ಮಹತ್ಯೆ ಮಾಡಿಕೊಂಡ. ಏಕೆನ್ ಹಾರ್ವರ್ಡಿನಲ್ಲಿ ವ್ಯಾಸಂಗ ಮುಂದುವರಿಸಿದ. ಅಲ್ಲಿ ಇವನೂ ಟಿ. ಎಸ್. ಎಲಿಯಟನೂ ಸಮಕಾಲೀನ ವಿದ್ಯಾರ್ಥಿಗಳಾಗಿದ್ದರು (1911). ಏಕೆನ್ 1912ರಲ್ಲಿ ಮೊದಲ ಮದುವೆಯಾಗಿ ಮಸಾಚೂಸೆಟ್ಸ್‌ನಲ್ಲಿ ನೆಲೆಸಿ ತನ್ನ ವೇಳೆಯನ್ನೆಲ್ಲ ಸಾಹಿತ್ಯಕ್ಕಾಗಿ ಮೀಸಲಾಗಿರಿಸಿದ. ಕಾವ್ಯರಚನೆಯೂ ಒಂದು ಅವಶ್ಯ ಕೈಗಾರಿಕೆಯಾದ್ದರಿಂದ ನಾನು ಯುದ್ಧ ಮಾಡಲೊಲ್ಲೆ—ಎಂದು ವಾದಿಸಿ ಈತ ಒಂದನೆಯ ಮಹಾಯುದ್ಧದಲ್ಲಿ ಕಡ್ಡಾಯ ಸೈನಿಕ ಸೇವೆಯಿಂದ ವಿನಾಯಿತಿ ಪಡೆದ. 1914ರಲ್ಲಿ ಈತನ ಮೊದಲನೆಯ ಕೃತಿ ಅರ್ತ್ ಟ್ರೈಯಂಫಂಟ್ ಪ್ರಕಟವಾಯಿತು. 1915ರಿಂದ ಮುಂದಿನ ಐದು ವರ್ಷಗಳ ಅವಧಿಯಲ್ಲಿ ಈತ ಸಫಲವಾಗಿ ಕಾವ್ಯ ರಚಿಸಿದ್ದಾನೆನ್ನಬಹುದು. ಸಂಗೀತ ಪ್ರಧಾನವಾದ ಶುದ್ಧ ಕಾವ್ಯ ರಚನೆಯೇ ಆಗ ಈತನ ಉದ್ದೇಶವಾಗಿತ್ತು. ಮುಂದೆ ಕಥನಕವನಗಳನ್ನೂ ಭಾವಗೀತೆಗಳನ್ನೂ ಚಿಂತನಪರಕಾವ್ಯವನ್ನೂ ಸೃಷ್ಟಿಸಿದ. 1929ರಲ್ಲಿ ಪ್ರಕಟಿತವಾದ ಸೆಲೆಕ್ಟೆಡ್ ಪೋಯೆಮ್ಸ್ ಎಂಬ ಕೃತಿ ಪುಲಿಟ್ಜರ್ ಪಾರಿತೋಷಕವನ್ನೂ ಶೆಲ್ಲಿ ಸ್ಮಾರಕ ಬಹುಮಾನವನ್ನೂ ಪಡೆಯಿತು. ಮಹಾಯುದ್ಧಾನಂತರ ಕಾಲದಲ್ಲಿ ಈತ ಮತ್ತೆ ಸಂಗೀತಪ್ರಧಾನ ಕಾವ್ಯರಚನೆಯಲ್ಲಿ ತೊಡಗಿದ. ಅವುಗಳಲ್ಲಿ ಮನೋವೈಜ್ಞಾನಿಕ ಲಕ್ಷಣಗಳು ಹೆಚ್ಚಾಗಿವೆ. ಈ ಕಾಲದ ಇಂಥ ಕೃತಿಗಳಲ್ಲಿ ದಿ ಸೋಲ್ಜರ್ (1944), ದಿ ಕಿಡ್ (1947), ಸ್ಕೈಲೈಟ್ ಒನ್ (1949) ಮುಖ್ಯವಾದವು. ಈತನ ಕಲೆಕ್ಟೆಡ್ ಪೋಯೆಮ್ಸ್ 1953ರಲ್ಲಿ ಹೊರಬಂತು. *

ಏಕೆನನ ಪ್ರತಿಭೆ ಕಾವ್ಯಸೃಷ್ಟಿಯಷ್ಟಕ್ಕೇ ಸೀಮಿತವಾದದ್ದಲ್ಲ. ಈತ ಐದು ಕಾದಂಬರಿಗಳನ್ನೂ ಬರೆದ. ಇವುಗಳ ಪೈಕಿ ಬ್ಲೂ ವಾಯೇಜ್ (1927) ಮೊದಲನೆಯದು. ನಾಲ್ಕು ಕಥಾಸಂಕಲನಗಳೂ ಇವನಿಂದ ಪ್ರಕಟವಾಗಿವೆ. (1950ರಲ್ಲಿ ಪ್ರಕಟವಾದ ಸಂಕಲನ ಪ್ರಾತಿನಿಧಿಕವಾದದ್ದು.) ಈ ಕಥೆಗಳು ಮುಖ್ಯವಾಗಿ ಮನೋವಿಶ್ಲೇಷಣಾತ್ಮಕವಾದುವು. ಈತ ಅನೇಕ ವಿಮರ್ಶಾತ್ಮಕ (ಉದಾ : ಮಿ. ಆರ್ಕ್ಯಾಲಂಸ್, 1949) ಆತ್ಮಕಥಾತ್ಮಕ (ಉಷಾಂತ್, 1952) ಪ್ರಬಂಧಗಳನ್ನೂ ಬರೆದಿದ್ದಾನೆ. 1953ರಲ್ಲಿ ಏಕೆನನ 900 ಪುಟಗಳ ಕವನ ಸಂಕಲನ ಪ್ರಕಟವಾದಾಗಲೇ ಈತನ ಕೃತಿಯ ಮಹತ್ತೂ ಬೃಹತ್ತೂ ಮೊಟ್ಟಮೊದಲ ಬಾರಿಗೆ ಹಲವರ ಗಮನ ಸೆಳೆಯಿತೆನ್ನಬಹುದು. ಬಹು ದೀರ್ಘಕಾಲ ಈತ ಅಜ್ಞಾತ ಲೇಖಕನಾಗಿಯೇ ಸಾಹಿತ್ಯ ಸೃಷ್ಟಿಯಲ್ಲಿ ತೊಡಗಿದ್ದ.

ಟಿ. ಎಸ್. ಎಲಿಯಟನ ದಿ ವೇಸ್ಟ್ ಲ್ಯಾಂಡ್ ಕವನ ಈತನ ದಿ ಹೌಸ್ ಆಫ್ ಡಸ್ಟ್ (1920) ನಿಂದ ಪ್ರಭಾವಿತವಾಗಿದೆಯೆಂದು ಕೆಲವರ ಅಭಿಪ್ರಾಯ. ಸಂಗೀತ ತಂತ್ರ, ಪ್ರತಿಮಾವಿಧಾನ—ಇವು ಈತನ ಕಾವ್ಯದ ವೈಶಿಷ್ಟ್ಯಗಳೆಂದು ವಿಮರ್ಶಕರ ಮತ. (ಎಂ.ಕೆ.ಎಸ್.)

**ಏಕೆರ್ನಾರ್:** ನೋಡಿ — ಎರಿಡೆನಸ್

**ಏಕೇಶವಾದ:** ದೇವತ್ರಯೈಕತ್ವವಾದದ ವಿರುದ್ಧವಾಗಿ ದೇವರ ಏಕ ವ್ಯಕ್ತಿತ್ವವನ್ನು ಎತ್ತಿ ಹಿಡಿಯುವ ವಾದ (ಯುನಿಟೇರಿಯನಿಸಂ). ದೇವತ್ರಯೈಕತ್ವವಾದ ದೇವರನ್ನು ಪಿತ, ಸುತ ಮತ್ತು ದೇವಾತ್ಮ ಎಂಬ ಮೂರು ರೂಪಗಳಲ್ಲಿ ಗ್ರಹಿಸುತ್ತದೆ. ಏಕೇಶವಾದ ದೇವರನ್ನು ಪಿತನೆಂಬ ಒಂದೇ ರೂಪದಲ್ಲಿ ಗ್ರಹಿಸುತ್ತದೆ. ಆದಿಕ್ರೈಸ್ತಸಭೆಯಲ್ಲಿ ಏರಿಯನ್‌ಪಂಥ, ಮಾನಾರ್ಕಿಯನಿಸಮುಗಳೇ ಮೊದಲಾದ ರೂಪದಲ್ಲಿ ಈ ಬೋಧನೆ ಪ್ರಚಾರದಲ್ಲಿತ್ತು. ನೈಸಿಯ (ಕ್ರಿ.ಶ. 326) ಮತ್ತು ಕಾನ್‌ಸ್ಟ್ಯಾಂಟಿನೋಪಲ್‌ಗಳಲ್ಲಿ (ಕ್ರಿ.ಶ. 381) ಜರುಗಿದ ಧಾರ್ಮಿಕ ಮಹಾಸಭೆಗಳಲ್ಲಿ ಇದನ್ನು ಖಂಡಿಸಿ ದೇವತ್ರಯೈಕತ್ವವನ್ನು ಕ್ರೈಸ್ತ ಅಧಿಕೃತ ಧರ್ಮ ಸಿದ್ಧಾಂತವಾಗಿ ಸಾರಿದರು.

ವಿದ್ಯೆಯ ಪುನರುಜ್ಜೀವನದ (ರಿನೆಸಾನ್ಸ್) ಕಾಲದಲ್ಲಿ ಜನ ಧಾರ್ಮಿಕ ವಿಷಯಗಳನ್ನು ಕುರಿತು ನಿರ್ಭಯವಾಗಿ ಹಾಗೂ ಸ್ವತಂತ್ರವಾಗಿ ಆಲೋಚನೆ ಮಾಡ ತೊಡಗಿದಾಗ ಆಧುನಿಕ ಏಕೇಶವಾದ ಮತ್ತೆ ತಲೆದೋರಿತು. ಮಾರ್ಟಿನ್ ಸೆಲ್ಲೇರಿಯಸ್ (1499–1564) ಎಂಬಾತ ಈ ಬೋಧನೆಯ ಪ್ರಥಮ ಪ್ರತಿಪಾದಕ. 16–17ನೆಯ ಶತಮಾನದಲ್ಲಿ ಇದು ಒಂದು ಸಂಘವಾಗಿ ಪೋಲೆಂಡ್, ಹಂಗೆರಿ ಮತ್ತು ಇಂಗ್ಲೆಂಡುಗಳಲ್ಲಿ ಸ್ಥಾಪಿತವಾಯಿತು. 1803ರಲ್ಲಿ ವಿಲಿಯಂ ಇಲ್ಲಿರಿ ಚಾರ್ಲ್ಸ್‌ಸ್ಟನ್ ಎಂಬಾತ ಈ ಬೋಧನೆಯನ್ನು ಅಮೆರಿಕದಲ್ಲಿ ಪ್ರಚಾರ ಮಾಡಿದ. ಅಲ್ಲಿಯ ಕಾಂಗ್ರಿಗೇಷನಲ್ ಸಭೆಗಳಲ್ಲಿ ಅದು ವಿಶೇಷ ಪ್ರಸಿದ್ಧಿ ಪಡೆಯಿತು. ಇಂದಿಗೂ ಇಂಗ್ಲೆಂಡ್ ಮತ್ತು ಅಮೆರಿಕಗಳ ಏಕೇಶವಾದ ಒಂದು ಪ್ರಮುಖ ಧಾರ್ಮಿಕ ಶಕ್ತಿಯಾಗಿದೆ. (ಎಂ.ಪಿ.ಎಸ್.)

**ಏಕೋತ್ತರ ಶತಸ್ಥಲಗಳು:** ಲಿಂಗಸ್ಥಲ ಮತ್ತು ಅಂಗಸ್ಥಲಗಳು ಸೂಕ್ಷ್ಮಪ್ರಭೇದಗಳಿಂದ ನೂರೊಂದು ಸ್ಥಲಗಳಾಗಿ ಪರಿಣಮಿಸುವುದನ್ನೇ ರೇಣುಕ ಮೊದಲಾದ ಆಚಾರ್ಯರು ಮತ್ತು ಶಿವಶರಣರು ಏಕೋತ್ತರ ಶತಸ್ಥಲ ಎಂದು ವಿವರಿಸಿರುತ್ತಾರೆ. ಭಗವತ್ಪಾದ ಶ್ರೀ ರೇಣುಕಾಚಾರ್ಯರು ಅಗಸ್ತ್ಯ ಮಹರ್ಷಿಗಳಿಗೆ ಬೋಧಿಸಿದ ಏಕೋತ್ತರ ಶತಸ್ಥಲಗಳು ಸಿದ್ಧಾಂತ ಶಿಖಾಮಣಿಯಲ್ಲಿ (ಶಿವಯೋಗಿ ಶಿವಾಚಾರ್ಯಕೃತ ಸು. 1000) ನಿರೂಪಿತವಾಗಿವೆ. ಈ ವಿಷಯದಲ್ಲಿ ಮಹಾಲಿಂಗದೇವನ (1425) ಏಕೋತ್ತರ ಶತಸ್ಥಲ, ಜಕ್ಕಣಾರ್ಯನ (1430) ನೂರೊಂದು ಸ್ಥಲಗಳು, ಗಿರೀಂದ್ರನ (ಸು. 1430) ಏಕೋತ್ತರ ಶತಸ್ಥಲ ಟೀಕೆ, ಮೊಗ್ಗೆ ಮಾಯಿದೇವನ (ಸು. 1430) ಏಕೋತ್ತರ ಶತಸ್ಥಲ (ಷಟ್ಪದಿ) ಇವು ಮುಖ್ಯ ಗ್ರಂಥಗಳು. 4 ಮತ್ತು 5ನೆಯ ಗ್ರಂಥಗಳು ಉಪಲಬ್ಧವಿಲ್ಲ. ಗುಬ್ಬಿ ಮಲ್ಲಣಾರ್ಯರ (1475) ಗಣಭಾಷಿತರತ್ನ ಮಾಲೆಗಳಲ್ಲಿ ಉಕ್ತವಾಗಿರುವ ಏಕೋತ್ತರ ಶತಸ್ಥಲಗಳಲ್ಲಿ ತೋರುವ ಅಂತರವಿಷಯವನ್ನು ಅನುಭವಕ್ಕೆ ತಂದುಕೊಂಡ ಅನುಭಾವಿಗಳಲ್ಲಿ ಕಾಲಕಾಲಕ್ಕೆ ಆಗಿರುವ ಅನುಭಾವವಿಕಾಸದ ಕುರುಹಾಗಿದೆ. ಈ ದೃಷ್ಟಿಯಿಂದ ಏಕೋತ್ತರ ಶತಸ್ಥಲಗಳಲ್ಲಿ ಭಕ್ತ ಮೊದಲಾದ ಆರು ಸ್ಥಲಗಳಲ್ಲಿ ಜೀವಪಿಂಡ, ಪಿಂಡಜ್ಞಾನಿ ಮುಂತಾದ ಅವಾಂತರ ಪ್ರಭೇದಗಳು ಕಂಡುಬರುತ್ತವೆ.

ಅಂಗಸ್ಥಲದಲ್ಲಿ ಉಕ್ತವಾದ 44 ಪ್ರಭೇದಗಳ ಅನುಷ್ಠಾನದಿಂದ ಸಾಧಕ ಜೀವನ್ಮುಕ್ತಸ್ಥಿತಿಯನ್ನು ಪಡೆಯುತ್ತಾನೆ. ಆಗ ಅವನಿಗೆ ಶಿವಯೋಗಿ ಎಂಬ ಉಪಾಧಿ ಲಭಿಸುತ್ತದೆ. ಗುರು–ಜಂಗಮ ಪದವಿಯ ಅಧಿಕಾರಿಗಳ ಆಚಾರವಿಚಾರ




ಗಳು ಜೀವನ್ಮುಕ್ತಾತ್ಮನ ಬಗೆಯನ್ನೇ ಬಣ್ಣಿಸುತ್ತವೆ. ಇಲ್ಲಿ 44 ಪ್ರಭೇದಗಳ ಸಂಗ್ರಹವಿವರಣೆ ಇದೆ. ಬೀಜವೃಕ್ಷನ್ಯಾಯಸ್ಥಲವೆಂದು ಪ್ರಸಿದ್ಧವಿರುವ ಭಕ್ತಸ್ಥಲದಲ್ಲಿ ಪಿಂಡ, ಪಿಂಡಜ್ಞಾನ, ಸಂಸಾರಹೇಯ, ಗುರುಕಾರುಣ್ಯ, ಲಿಂಗಧಾರಣ. ಭಸ್ಮಧಾರಣ, ರುದ್ರಾಕ್ಷಧಾರಣ, ಪಂಚಾಕ್ಷರ ಜಪ, ಭಕ್ತಮಾರ್ಗ ಕ್ರಿಯಾ, ಉಭಯ, ತ್ರಿವಿಧಸಂಪತ್ತಿ, ಪ್ರಸಾದ ಸ್ವೀಕಾರ, ಸೋಪಾಧಿದಾನ, ನಿರುಪಾಧಿದಾನ, ಸಹಜದಾನ—ಎಂಬ ಹದಿನೈದು ಸ್ಥಲಗಳಿವೆ. ಇವು ಭಕ್ತನ ಆಚಾರವಿಚಾರಗಳನ್ನು ಸೂಚಿಸುತ್ತವೆ. ಇಲ್ಲಿ ಭಕ್ತನಲ್ಲಿ ಬೀಜರೂಪದಿಂದ ಪ್ರವೇಶಿಸಿದ ಭಕ್ತಿಯೇ ಬೆಳೆದು ತರುವಾಗಿ ಮುಕ್ತಿಫಲ ನೀಡುತ್ತದೆ.

ಸಲಿಲಮುಕ್ತನ್ಯಾಯಸ್ಥಲವೆಂದು ಪ್ರಸಿದ್ಧವಿರುವ ಮಾಹೇಶಸ್ಥಲದಲ್ಲಿ ಮಾಹೇಶ್ವರಪ್ರಶಂಸಾ, ಲಿಂಗನಿಷ್ಠಾ, ಪೂರ್ವಾಶ್ರಯ ನಿರಸನ, ಸರ್ವಾದ್ವೈತ ನಿರಸನ, ಆಹ್ವಾನ ನಿರಸನ, ಅಷ್ಟಮೂರ್ತಿ ನಿರಸನ, ಸರ್ವಗತತ್ತ್ವ ನಿರಸನ, ಶಿವಜಗನ್ಮಯತ್ವ, ಭಕ್ತದೇಹಿಕ ಲಿಂಗ ಎಂಬ ಒಂಬತ್ತು ಸ್ಥಲಗಳು ಉಕ್ತವಾಗಿವೆ. ಇವುಗಳ ಅನುಷ್ಠಾನದಿಂದ ಭಕ್ತನಲ್ಲಿ ಶ್ರದ್ಧೆ ಘನೀಭೂತವಾಗಿ ನಿಷ್ಠೆಯೆನಿಸುವುದು. ಅನಲಕಾಷ್ಠನ್ಯಾಯಸ್ಥಲವೆನಿಸಿದ ಪ್ರಸಾದಿಸ್ಥಲದಲ್ಲಿ ಅವಧಾನ (ಏಕಾಗ್ರತೆ) ಭಕ್ತಿವಿಶಿಷ್ಟನಾದ ಮಾಹೇಶನೇ ಪ್ರಸನ್ನ ಮನಃಪರಿಪಾಕವನ್ನು ಪಡೆದು ಪ್ರಸಾದಿಯೆನಿಸುತ್ತಾನೆ. ಇಲ್ಲಿಯ ಏಳು ಪ್ರಭೇದಗಳು ಸಾಧಕನ ಮನಃಪ್ರಸನ್ನತೆಯ ಕುರುಹುಗಳು, ಅವು ಕ್ರಮವಾಗಿ ಪ್ರಸಾದಿ, ಗುರುಮಾಹಾತ್ಮ್ಯ, ಲಿಂಗಮಾಹಾತ್ಮ್ಯ, ಜಂಗಮಮಾಹಾತ್ಮ್ಯ, ಭಕ್ತಮಾಹಾತ್ಮ್ಯ, ಶರಣಮಾಹಾತ್ಮ್ಯ, ಪ್ರಸಾದಮಾಹಾತ್ಮ್ಯ ಎಂದು ಏಳು ಹಂತಗಳಲ್ಲಿವೆ. ಭ್ರಮರಕೀಟನ್ಯಾಯಸ್ಥಲವೆನಿಸಿದ ಪ್ರಾಣಲಿಂಗಿಸ್ಥಲದಲ್ಲಿ ಸಾಧಕನಿಗೆ ಲಿಂಗವೇ ಪ್ರಾಣ, ಪ್ರಾಣವೇ ಲಿಂಗ ಎಂಬ ಅನುಭವವಾಗುತ್ತದೆ. ಇದನ್ನು ಇಲ್ಲಿನ ಪ್ರಭೇದಗಳಲ್ಲಿ ಗುರುತಿಸಬಹುದು. ಪ್ರಾಣಲಿಂಗಿ, ಪ್ರಾಣಲಿಂಗಾರ್ಚನ, ಶಿವಯೋಗ ಸಮಾಧಿ, ಲಿಂಗನಿಜ, ಅಂಗಲಿಂಗ—ಎಂದು ಇಲ್ಲಿ ಐದು ವಿಭಾಗಗಳಿವೆ. ಸತೀಪತಿನ್ಯಾಯಸ್ಥಲವೆಂದು ಹೆಸರಾದ ಶರಣಸ್ಥಲದಲ್ಲಿ ಶರಣ ಸತಿ ಲಿಂಗ ಪತಿ ಎಂಬ ಅನುಭವ ಸಾಧಕನಿಗೆ ಉಂಟಾಗಿ ಆತ ಆನಂದ ಭಕ್ತಿಮಗ್ನನಾಗುವ ಕುರುಹುಗಳು ಕಂಡು ಬರುತ್ತವೆ. ಶರಣ, ತಾಮಸನಿರಸನ, ನಿರ್ದೇಶ, ಶೀಲಸಂಪಾದನ ಎಂಬ ನಾಲ್ಕು ಹಂತಗಳು ಇಲ್ಲಿವೆ. ಶಿಖೀಕರ್ಪೂರನ್ಯಾಯಸ್ಥಲವೆಂದು ಪ್ರಸಿದ್ಧವಿರುವ ಐಕ್ಯಸ್ಥಲದಲ್ಲಿ ಆನಂದಪರವಶನಾದ ಜೀವ ಸಮರಸಭಕ್ತಿಯ ಪ್ರಭಾವದಿಂದ ಶಿವನಲ್ಲಿ ಬೆರೆದು ಬೇರಿಲ್ಲದ ಸ್ಥಿತಿಯನ್ನೈದುವನು. ಐಕ್ಯ, ಆಚಾರಸಂಪತ್ತಿ, ಏಕಭಾಜನ, ಸಹಭಾಜನವೆಂಬ ಇಲ್ಲಿನ ನಾಲ್ಕು ಹಂತಗಳಲ್ಲಿ ಸಮರತೆಯ ಸೂಕ್ಷ್ಮವಿಕಾಸವನ್ನು ಕಾಣಬಹುದು.

ದೀಕ್ಷಾಗುರುಸ್ಥಲ ಮೊದಲಾಗಿ ಜ್ಞಾನಶೂನ್ಯಸ್ಥಲದವರೆಗಿರುವ 57 ಲಿಂಗಸ್ಥಲಗಳು ಕೂಡ ಭಕ್ತಾದಿ ಆರು ಸ್ಥಲಗಳನ್ನೇ ಆಶ್ರಯಿಸಿವೆ. ಎಂದರೆ ಜೀವನ್ಮುಕ್ತನೂ ಸಹ ತನ್ನ ನಿತ್ಯಾಚರಣೆಯಲ್ಲಿ ಭಕ್ತಾದಿ ಷಟ್‌ಸ್ಥಲಗಳನ್ನು ಅನುಷ್ಠಾನದಲ್ಲಿಟ್ಟುಕೊಂಡಿರಬೇಕು. ಏಕೆಂದರೆ ಇದರಿಂದ ಆತ ಗಳಿಸಿರುವ ಜೀವನ್ಮುಕ್ತಸ್ಥಿತಿ ದೇಹಾವಸಾನದವರೆಗೆ ದೃಢವಾಗಿರುವುದಲ್ಲದೆ ಇದರಿಂದ ಉಳಿದ ಸಾಧಕರಿಗೆ ಮಾರ್ಗದರ್ಶನವೂ ಆಗುತ್ತದೆ. ದೀಕ್ಷಾಗುರು, ಶಿಕ್ಷಾಗುರು, ಜ್ಞಾನಗುರು, ಕ್ರಿಯಾಗುರು, ಭಾವಲಿಂಗ, ಜ್ಞಾನಲಿಂಗ, ಸ್ವಸ್ಥಲ, ಚರಸ್ಥಲ, ಪರಸ್ಥಲವೆಂಬ ಒಂಬತ್ತು ಪ್ರಭೇದಗಳನ್ನೊಳಗೊಂಡ ಆಚಾರಲಿಂಗ ಸ್ಥಲದಲ್ಲಿ ಜೀವನ್ಮುಕ್ತನಾದ ಶಿವಯೋಗಿ ದೇಹಾಭಿಮಾನವನ್ನು ತೊರೆದು ತನ್ನ ದರ್ಶನಾದಿಗಳಿಂದ ಲೋಕವನ್ನು ಪಾವನವನ್ನಾಗಿ ಮಾಡುತ್ತಾನೆ. ಇದು ಭಕ್ತಸ್ಥಲಕ್ಕೆ ಸಂವಾದಿಯಾಗಿದೆ. ಕ್ರಿಯಾಗಮ, ಭಾವಾಗಮ, ಜ್ಞಾನಾಗಮ, ಸಕಾಯ, ಅಕಾಯ, ಪರಕಾಯ, ಧರ್ಮಾಚಾರ, ಭಾವಾಚಾರ ಮತ್ತು ಜ್ಞಾನಾಚಾರಗಳೆಂಬ ಹತ್ತು ಭಾಗಗಳನ್ನುಳ್ಳ ಗುರುಲಿಂಗಸ್ಥಲ ಮಾಹೇಶಸ್ಥಲಕ್ಕೆ ಸಂವಾದಿಯಾಗಿದೆ. ಇದರಲ್ಲಿ ಜೀವನ್ಮುಕ್ತ ಸುಜ್ಞಾನದಿಂದ ಪ್ರಾಕೃತಾತ್ಮ ಪ್ರಪಂಚ ಅಳಿದಿರಲು ದಿವ್ಯಯೋಗಿಯೆನಿಸಿರುತ್ತಾನೆ. ಕಾಯಾನುಗ್ರಹ, ಇಂದ್ರಿಯಾನುಗ್ರಹ, ಪ್ರಾಣಾನುಗ್ರಹ. ಕಾಯಾರ್ಪಣ, ಕರಣಾರ್ಪಣ, ಭಾವಾರ್ಪಣ, ಶಿಷ್ಯ, ಶುಶ್ರೂಷೆ, ಸೇವ್ಯ ಎಂಬ ಒಂಬತ್ತು ಬಗೆಗಳನ್ನುಳ್ಳ ಶಿವಲಿಂಗಸ್ಥಲ ಪ್ರಸಾದಿಸ್ಥಲಕ್ಕೆ ಸಂವಾದಿಯಾಗಿದ್ದು ಇಲ್ಲಿ ಸಾಧಕ ಉಂಡೂ ಉಪವಾಸಿ, ಬಳಸಿಯೂ ಬ್ರಹ್ಮಚಾರಿ ಎಂಬಂತೆ ವಿಷಯಸಂಗರಹಿತನಾಗಿ ಅನಾಸಕ್ತಸ್ಥಿತಿಯನ್ನೈದುತ್ತಾನೆ. ಆತ್ಮ, ಅಂತರಾತ್ಮ, ಪರಮಾತ್ಮ, ನಿರ್ದೇಹಾಗಮ, ನಿರ್ಭಾವಾಗಮ, ನಷ್ಟಾಗಮ, ಆದಿಪ್ರಸಾದಿ, ಅಂತ್ಯಪ್ರಸಾದಿ, ಸೇವ್ಯಪ್ರಸಾದಿ ಎಂಬ ವಿವಿಧ ಪ್ರಭೇದಗಳನ್ನುಳ್ಳ ಜಂಗಮ ಲಿಂಗಸ್ಥಲ ಪ್ರಾಣಲಿಂಗಸ್ಥಲಕ್ಕೆ ಸಂವಾದಿಯಾಗಿದೆ. ಇಲ್ಲಿ ಶಿವಯೋಗಿ ದೇಹಭ್ರಾಂತಿಯಳಿದು ಶಿವೈಕ್ಯಜ್ಞಾನಾರೂಢನಾಗುತ್ತಾನೆ. ದೀಕ್ಷಾಪಾದೋದಕ, ಶಿಕ್ಷಾಪಾದೋದಕ, ಜ್ಞಾನಪಾದೋದಕ, ಕ್ರಿಯಾನಿಷ್ಪತ್ತಿ, ಭಾವನಿಷ್ಪತ್ತಿ, ಜ್ಞಾನನಿಷ್ಪತ್ತಿ, ಪಿಂಡಾಕಾಶ, ಬಿಂದ್ವಾಕಾಶ, ಮಹಾಕಾಶ, ಕ್ರಿಯಾಪ್ರಕಾಶ, ಭಾವಪ್ರಕಾಶ, ಜ್ಞಾನಪ್ರಕಾಶ ಎಂಬ ವಿವಿಧ ಸ್ತರಗಳನ್ನುಳ್ಳ ಪ್ರಸಾದಲಿಂಗ ಸ್ಥಲ ಶರಣಸ್ಥಲಕ್ಕೆ ಸಂವಾದಿಯಾಗಿದೆ. ಇಲ್ಲಿ ಶಿವಾದ್ವೈತಜ್ಞಾನದಲ್ಲಿದ್ದು ಭಕ್ತ ಸಂಸಾರದಿಂದ ವಿಮುಕ್ತನಾಗುತ್ತಾನೆ. ಸ್ವೀಕೃತ ಪ್ರಸಾದ, ಶಿಷ್ಟೋದನ, ಚರಾಚರಲಯ, ಭಾಂಡ, ಭಾಜನ, ಅಂಗಾಲೇಪನ, ಸ್ವಪರಾಜ್ಞ, ಭಾವಾಭಾವಲಯ, ಜ್ಞಾನಶೂನ್ಯ ಎಂಬ ಒಂಬತ್ತು ಪ್ರಭೇದಗಳ ಮಹಾಲಿಂಗಸ್ಥಲ ಐಕ್ಯಸ್ಥಲಕ್ಕೆ ಸಂವಾದಿಯಾಗಿದೆ. ಈ ಸ್ಥಲಗಳ ಅಂತಿಮ ಫಲವೇ ಸಾಮರಸ್ಯಮುಕ್ತಿ.

ಸ್ಥಲ ಶಬ್ದದ ವ್ಯಾಖ್ಯಾನಕ್ಕೂ ಏಕೋತ್ತರಶತಸ್ಥಲಗಳ ಮೂಲಾಧಾರಗಳಾದ ಷಟ್‌ಸ್ಥಲಗಳ ವಿವರಗಳಿಗೂ ನೋಡಿ—**ಷಟ್‌ಸ್ಥಲಸಿದ್ಧಾಂತ** (ಎಂ.ಜಿ.ಎಚ್.; ಬಿ.ಎಸ್.)

**ಏಕೋರಾಮ :** (1150) ವೀರಶೈವ ಆಚಾರ್ಯರಲ್ಲಿ ಒಬ್ಬ. ಬಸವಣ್ಣನವರ ಸಮಕಾಲೀನ. ಜನ್ಮಸ್ಥಳ ಕಲ್ಬುರ್ಗಿ ಜಿಲ್ಲೆಯ ಮುದೇನೂರು ಅಥವಾ ಮುದ್ರಾಪುರ. ತಂದೆ ರಾಮರುದ್ರ, ಹೆಂಡತಿ ಕಾಮಿಕಾದೇವಿ. ರಾಮನಾಥ ಈತನ ಕುಲದೈವ. ರಾಮನಾಥಾಚಾರ್ಯರಿಂದ ಶಿವದೀಕ್ಷೆಯನ್ನು ಪಡೆದು ಶಿವಪಾರಮ್ಯವನ್ನು ನೆಲೆಗೊಳಿಸಿ ವೀರಶೈವರ ಪಂಚಪೀಠಗಳಲ್ಲಿ ಒಂದಾದ ಹಿಮಾಲಯದ ಕೇದಾರ ಪೀಠದ ಅಧ್ಯಕ್ಷನಾಗಿ ಆಚಾರ್ಯನೆನಿಸಿಕೊಂಡ. ಮೊದಲು ಶೈವನಾಗಿದ್ದು ಶಿವದೀಕ್ಷೆಯನ್ನು

ಪಡೆದಮೇಲೆ ವೀರಶೈವವನ್ನು ಆಚರಿಸುತ್ತ ಮುದ್ರಾಪುರದ ರಾಜ ಭಾಸ್ಕರನ ಆಸ್ಥಾನ ದಲ್ಲಿ ಅಯೋಧ್ಯೆಯ ವ್ಯಾಸದೀಕ್ಷಿತನನ್ನು ವಾದದಲ್ಲಿ ಸೋಲಿಸಿ ಅವನಿಗೆ ಶಿವದೀಕ್ಷೆ ಯನ್ನು ಕೊಟ್ಟ. ಜೈನರಿಗೆ ಮತ್ತು ಬ್ರಾಹ್ಮಣರಿಗೆ ಲಿಂಗದೀಕ್ಷೆಯನ್ನು ಕೊಟ್ಟು ಅನೇಕ ಮಹಿಮೆಗಳನ್ನು ಮೆರೆದ. ದೇವರ ದಾಸಿಮಯ್ಯನಾದಮೇಲೆ ಅದೇ ಪ್ರಾಂತ್ಯದಲ್ಲಿ ಹುಟ್ಟಿ ಆತನ ಕಾರ್ಯವನ್ನು ಯಶಸ್ವಿಯಾಗಿ ಮುಂದುವರಿಸಿ ಆ ಧರ್ಮದಲ್ಲಿ ಉನ್ನತ ಸ್ಥಾನವನ್ನು ಗಳಿಸಿದ ಮಹಂತನೀತ. ಹರದನಹಳ್ಳಿಯ ನಂಜಣಾಚಾರ್ಯ ಬರೆದಿರುವ ಏಕೋರಾಮಾರಾಧ್ಯಪುರಾಣದಲ್ಲಿ ಇವನ ಕಥೆ ವರ್ಣಿತವಾಗಿದೆ. ಅದರ ಪ್ರಕಾರ ಇವನ ವಂಶಾವಳಿ ಈ ರೀತಿ ಇದೆ: ದೂರ್ವಾಸ ದೇವನ ಮಗ ಶಿವಾನಂದ, ಅವನ ಮಗ ಶ್ರೀಕಂಠ, ಅವನ ಮಗ ರಾಮರುದ್ರ. ಈ ರಾಮರುದ್ರನ ಮಗನೇ ಏಕೋರಾಮ. ಕೊನೆಯಲ್ಲಿ ಏಕೋರಾಮ ಶಂಕು ಕರ್ಣನಿಗೆ ದೀಕ್ಷೆ ಕೊಟ್ಟು ಗುರುಪಟ್ಟವನ್ನು ಕಟ್ಟಿ ರಾಮನಾಥಲಿಂಗದಲ್ಲಿಯೇ ಐಕ್ಯವಾದ. (ಬಿ.ಎನ್.ಸಿ.)

**ಏಕೋರಾಮ ಸಿದ್ಧ :** (1120). ಪೂರ್ವೋತ್ತರ ಮೀಮಾಂಸೆ, ತರ್ಕ, ವ್ಯಾಕರಣಶಾಸ್ತ್ರಗಳಲ್ಲಿ ನಿಪುಣನಾದ ಶಿವಾಚಾರ್ಯ. ಏಕೋರಾಮಸಿದ್ಧ ಭಗವತ್ಪಾದ ತನ್ನ ಗುರುವೆಂದು ಶ್ರೀಪತಿ ಪಂಡಿತ (1120) ತನ್ನ ಶ್ರೀಕರಭಾಷ್ಯದ ಪ್ರಾರಂಭದಲ್ಲಿ ಹೊಗಳಿದ್ದಾನೆ. ಈ ಗುರು ಶಿಷ್ಯ ಸಂಬಂಧ ನಿಜವಿರಬೇಕು. ಮೇಲಾಗಿ ಶ್ರೀಪತಿ ಪಂಡಿತ ಶ್ರೀಶೈಲ ಪೀಠಾಧಿಪತಿಗಳಾಗಿದ್ದ ವಿರೂಪಾಕ್ಷದೇಶಿಕೇಂದ್ರರಿಂದ ಲಿಂಗ ದೀಕ್ಷೆಯನ್ನು ಕಾಶಿಯಲ್ಲಿ ಪಡೆದ ಆರಾಧ್ಯಬ್ರಾಹ್ಮಣನೆಂದು ಪುಲ್ಲಕವಿಕೃತ ಶ್ರೀಶೈಲ ಪಂಡಿತಾರಾಧ್ಯಚರಿತ್ರದಲ್ಲಿ ಹೇಳಿದೆ. ಈ ವಿರೂಪಾಕ್ಷದೇಶಿಕ ದೇವರದಾಸಿಮಯ್ಯ ನಿಗೆ (1100) ಶಿವದೀಕ್ಷೆ ನೀಡಿದ ಚಂದ್ರಗುಂಡದೇಶಿಕೇಂದ್ರರ ಗುರು. ಈ ಕಾರಣ ಗಳಿಂದ ಶ್ರೀಪತಿಪಂಡಿತನ ಶ್ರೀಕರಭಾಷೋಕ್ತ ಏಕೋರಾಮಸಿದ್ಧ ಮತ್ತು ಶ್ರೀಶೈಲದ ವಿರೂಪಾಕ್ಷ ದೇಶಿಕೇಂದ್ರ–ಇವರು ಒಬ್ಬನೇ ಆಗಿದ್ದ ಪಕ್ಷದಲ್ಲಿ ಈ ಏಕೋರಾಮ ಆದಯ್ಯನ ವಚನಗಳಲ್ಲಿ ಹೇಳಿರುವ ರೇವಣಸಿದ್ಧನ ಶಿಷ್ಯನಾದ ಮರುಳಸಿದ್ಧನ ಶಿಷ್ಯ ಏಕೋರಾಮನಿರಬಹುದು. ಶ್ರೀಕರಭಾಷ್ಯದಲ್ಲಿ ಈತನನ್ನು ದೇಶಿಕೇಂದ್ರ ಎಂದು ಹೇಳಿರುವುದು ಇದಕ್ಕೆ ಪೋಷಕ. ಆಗ ಏಕೋರಾಮ ಎಂಬ ಹೆಸರು ಶ್ರೀಕರಭಾಷ್ಯದ ಉಲ್ಲೇಖದಂತೆ ವಿರೂಪಾಕ್ಷದೇಶಿಕರ ಅನ್ವರ್ಥಕನಾಮವಿರಬೇಕೆನಿಸುತ್ತದೆ. ಅಂತೂ ಈತ ಕೇದಾರ ಪೀಠಾಚಾರ್ಯ ಏಕೋರಾಮನಿಗಿಂತ ಭಿನ್ನ. (ಎಂ.ಜಿ.ಎನ್.)

**ಏಕ್ವಿಲ :** ಖಗೋಳದ 88 ನಕ್ಷತ್ರ ಪುಂಜಗಳಲ್ಲಿ ಒಂದು ; ಉತ್ತರಾರ್ಧ ಗೋಳದಲ್ಲಿ ಆಕಾಶಗಂಗೆಯಲ್ಲಿ ಇದೆ. ಇದರ ವ್ಯಾಪ್ತಿಯ ವಿವರ : ವಿಷುವದಂಶ (ರೈಟ್ ಅಸೆನ್ಷನ್) 18 ಗಂ. 40 ಮಿ.—20 ಗಂ. 35 ಮಿ. ; ಘಂಟಾವೃತ್ತಾಂಶ (ಡೆಕ್ಲಿನೇಷನ್) 18° ಉ—12° ದ. ಏಕ್ವಿಲ ಪುಂಜದ ಪ್ರಧಾನ ನಕ್ಷತ್ರ ಶ್ರವಣ (ಆಲ್ಟೇರ್). ಇದು ಬರಿಗಣ್ಣಿಗೆ ಸುಲಭವಾಗಿ ಕಾಣುತ್ತದೆ. ಇದರ ಒತ್ತೊತ್ತಿಗೆ ಎರಡು ಬದಿಗಳಲ್ಲಿ ಒಂದೊಂದು ಕ್ಷೀಣ ನಕ್ಷತ್ರ ಇದೆ. ಇವು ಮೂರೂ ಸರಿಸುಮಾರಾಗಿ ಉತ್ತರ–ದಕ್ಷಿಣಕ್ಕೆ ಚಾಚಿರುವ ಕಿರಿ ಸರಳರೇಖೆ ರಚಿಸುತ್ತವೆ. ನಡುವಿನ ಪ್ರಕಾಶ ಮಾನ ನಕ್ಷತ್ರವೇ ಶ್ರವಣ. ಏಕ್ವಿಲ ಪುಂಜದಲ್ಲಿ ಹಲವಾರು ನೋವಾ ನಕ್ಷತ್ರಗಳು ಕಾಣಿಸಿಕೊಂಡಿವೆ. ಇವುಗಳ ಪೈಕಿ ಸುಪ್ರಸಿದ್ಧವಾದದ್ದು ಏಕ್ವಿಲೇ III (1918). *

**ಏಗ್ನಾತ :** ಮೀನಿನಂಥ ಪ್ರಥಮ ಕಶೇರುಕಗಳ ಗುಂಪು. ಇವಕ್ಕೆ ದವಡೆ ಗಳಿಲ್ಲ. ಈ ಮುಖ್ಯ ಲಕ್ಷಣದಿಂದ ಇವನ್ನು ಮೀನು ಮತ್ತು ಭೂಚರ ಕಶೇರುಕ ಗಳಿಂದ ಪ್ರತ್ಯೇಕಿಸಬಹುದು. ದವಡೆಗಳಿಲ್ಲದಿರುವುದರಿಂದ ಇವನ್ನು ಸಾಮಾನ್ಯ ವಾಗಿ ದವಡೆರಹಿತ ಕಶೇರುಕಗಳು ಅಥವಾ ದವಡೆರಹಿತ ಮೀನುಗಳು ಎಂದು ಕರೆಯುತ್ತಾರೆ. ಇವು ಜಲವಾಸಿಗಳು. ಯಾವ ಗುಂಪಿನ ಪ್ರಾಣಿಗಳಿಂದ ವಿಕಸಿಸಿವೆ ಎಂಬುದು ತಿಳಿದಿಲ್ಲ. ಆರ್ಡೋವಿಸಿಯನ್ ಕಾಲದಲ್ಲಿ ಕೆಲವೇ ಸಂಖ್ಯೆಯಲ್ಲಿದ್ದು ವೆಂಬುದು ಖಚಿತವೆಂದು ವಿಜ್ಞಾನಿಗಳು ಹೇಳುತ್ತಾರೆ. ಈ ಪ್ರಾಣಿಗಳಿಗೆ ಶಿರದ ತಳಭಾಗದಲ್ಲಿ ಚಕ್ರಾಕಾರದ ಹೀರುವ ಬಾಯಿ, ಕಿವಿರುಗಳು ಮತ್ತು ಕಿವಿರುರಂಧ್ರ ಗಳು, ತಲೆಯ ಮೇಲಿರುವ ಒಂದೇ ಒಂದು ಮಧ್ಯದ ಮೂಗುಹೊಳ್ಳೆ, ಅದರ ಹಿಂದಿರುವ ಪೈನಿಯಲ್ ಕಣ್ಣು, ಮಿದುಳುಕೋಶ, ದೇಹಕ್ಕೆ ಆಧಾರವಾಗಿರುವ ಆದ್ಯಮೃದ್ವಸ್ಥಿಪಟ್ಟಿ (ನಾಟೊಕಾರ್ಡ್), ಒಳ ಕಿವಿಯಲ್ಲಿ ಒಂದು ಅಥವಾ ಎರಡು ಅರ್ಧಚಂದ್ರಾಕಾರದ ನಾಳಗಳು ಇವೆ. ಈಜುರೆಕ್ಕೆಗಳ ಜೊತೆ ಇಲ್ಲ.

ಈ ಗುಂಪಿನ ಪ್ರಥಮ ಹಾಗೂ ಸಾಮಾನ್ಯ ಪ್ರತಿನಿಧಿಗಳು ಸೈಲೂರಿಯನ್ ಕಾಲದಲ್ಲಿ, ಸಿಹಿನೀರಿನ ತಳಭಾಗದಲ್ಲಿ ಜೀವಿಸುತ್ತಿದ್ದುವು. ಡಿವೋನಿಯನ್ ಕಾಲದಲ್ಲಿ ಬಹಳ ಅಭಿವೃದ್ಧಿಯಾಗಿ ಅನೇಕ ಗುಂಪುಗಳಾಗಿ ಬೆಳೆದುವು. ಆದರೆ ಡಿವೋನಿಯನ್ ಕಾಲದ ಅಂತ್ಯದಲ್ಲಿ ಈ ಗುಂಪಿನ ಎಲ್ಲ ಮೀನುಗಳೂ ಅಳಿದುಹೋಗಿ ಒಂದು ವರ್ಗದವು ಮಾತ್ರ ಉಳಿದು ಬಂದುವು. ಇವೇ ಈಗಿನ ನವೀನ ಮೀನಿನಂಥ ದುಂಡು ಬಾಯಿ ಮೀನುಗಳು (ಸೈಕ್ಲೊಸ್ಟೋಮ್ ಮೀನುಗಳು).

ದವಡೆರಹಿತ ಮೀನುಗಳನ್ನು ಎರಡು ವರ್ಗಗಳನ್ನಾಗಿ ವಿಂಗಡಿಸಿದೆ : 1 ಆಸ್ಟ್ರಕೊಡರ್ಮಿ, 2 ಸೈಕ್ಲೊಸ್ಟೊಮೇಟ.

ಆಸ್ಟ್ರಕೊಡರ್ಮ್ ಮೀನುಗಳು ಈಗ ಜೀವಿಸಿರುವ ದುಂಡುಬಾಯಿ ಮೀನುಗಳನ್ನು ಕೆಲವು ಮುಖ್ಯಲಕ್ಷಣಗಳಲ್ಲಿ ಹೋಲಿದರೂ ಕೆಲವು ಲಕ್ಷಣಗಳಲ್ಲಿ ಅವಕ್ಕಿಂತ ಬೇರೆ ಯಾಗಿವೆ. ಆಸ್ಟ್ರಕೊಡರ್ಮಿಗಳಿಗೆ ಮೂಳೆಯ ರಕ್ಷಾಕವಚವಿತ್ತು. ಕೆಲವುಗಳಲ್ಲಿ ಹೊರಗೂ ಒಳಗೂ ಮೂಳೆ ದೇಹಕ್ಕೆ ಆಧಾರವಾಗಿತ್ತೆಂದು ಪಳೆಯುಳಿಕೆಗಳಿಂದ ಗೊತ್ತಾಗಿದೆ. ಆದ್ದರಿಂದ ಇವನ್ನು ಅಸ್ಥಿಕವಚದ ಮೀನುಗಳೆನ್ನಲಾಗಿದೆ. ಈಗ ಈ ಮೀನುಗಳ ಪ್ರತಿನಿಧಿಗಳಾವುವೂ ಇಲ್ಲ. (ನೋಡಿ—ಅಸ್ಥಿಕವಚದ ಮೀನುಗಳು)

ಸೈಕ್ಲೊಸ್ಟೋಮುಗಳ ದೇಹ ಸಂಪೂರ್ಣವಾಗಿ ಮೃದ್ವಸ್ಥಿಯಿಂದ ಆಧಾರಿತವಾಗಿ ಹಾವಿನಂತೆ ನೀಳವಾಗಿದೆ. ಹೀರುವ ಬಾಯಿ ದುಂಡನಾಗಿ ಮುಳ್ಳುಗಳಿಂದ ಕೂಡಿದೆ. ಅರದಂಥ ನಾಲಗೆ ಇದೆ. ಕಿವಿರುಗಳು ಸಣ್ಣ ಚೀಲದಂತಿವೆ. ನಾಸಿಕದ್ವಾರ ನೆತ್ತಿಯ ಮೇಲಿದೆ. ಒಳಕಿವಿಯಲ್ಲಿ ಎರಡು ಅರ್ಧಚಂದ್ರಾಕಾರದ ನಾಳಗಳಿವೆ. ಇವು ಪರತಂತ್ರ ಜೀವನವನ್ನು ನಡೆಸುತ್ತವೆ. ಹೀರುವ ಬಾಯಿಗಳಿರುವುದರಿಂದ ಬೇರೆ ಮೀನುಗಳಿಗೆ ಅಂಟಿಕೊಂಡು ಒಂದು ಸ್ಥಳದಿಂದ ಮತ್ತೊಂದು ಸ್ಥಳಕ್ಕೆ ಪ್ರಯಾಣ ಬೆಳೆಸುತ್ತವೆ. ಈ ದುಂಡುಬಾಯಿ ಮೀನುಗಳು ಎರಡು ವಿಧ : 1 ಲ್ಯಾಂಪ್ರೆ ಮೀನು, 2 ಮಿಕ್ಸಿನ್ ಮೀನು. ಲ್ಯಾಂಪ್ರೆ ಮೀನುಗಳ ಚರ್ಮ ನುಣುಪು. ಏಳು ಜೊತೆ ಕಿವಿರುಗಳಿವೆ. ಪರಾವಲಂಬಿಗಳಾದರೂ ಬೇರೆ ಮೀನುಗಳಿಗೆ ಅಷ್ಟು ಅಪಾಯಕಾರಿ ಗಳಲ್ಲ. ಮಿಕ್ಸಿನ್ ಮೀನುಗಳ ಚರ್ಮ ಸುಕ್ಕುಸುಕ್ಕಾಗಿರುವುದರಿಂದ ಅವುಗಳಿಗೆ ಸುಕ್ಕು ಮೀನುಗಳು ಎಂದೂ ಹೆಚ್ಚಾಗಿ ಒಂದು ತರಹ ಲೋಳೆಯನ್ನು ವಿಸರ್ಜಿಸು ವುದರಿಂದ ಲೋಳೆ ಮೀನುಗಳು ಎಂದೂ ಹೆಸರಿದೆ. ಇವುಗಳಲ್ಲಿ ಕಿವಿರುಗಳು 6 ರಿಂದ 14 ಜೊತೆ. ಬೇರೆ ಮೀನಿಗೆ ಅಂಟಿಕೊಳ್ಳುವುದೊಂದೇ ಅಲ್ಲದೆ ಅದರ ಚರ್ಮವನ್ನು ಗಾಯಪಡಿಸಿ ಕ್ರಮೇಣ ಅದರ ದೇಹದೊಳಕ್ಕೆ ಪ್ರವೇಶಿಸಿ ಒಳಗಿನ ಅಂಗಾಂಗಗಳನ್ನು ತಿಂದು ಆತಿಥೇಯ ಪ್ರಾಣಿಯನ್ನು ಪೂರ್ಣ ನಾಶಗೊಳಿಸುತ್ತವೆ. (ಎನ್.ವಿ.ಎ.)

**ಏಚಲದೇವಿ :** ಕನ್ನಡನಾಡಿನ ಇತಿಹಾಸದಲ್ಲಿ ಈ ಹೆಸರಿನ ಮೂವರು ಕಾಣಸಿಗುತ್ತಾರೆ. ಹೊಯ್ಸಳ ಇಮ್ಮಡಿ ವಿನಯಾದಿತ್ಯನ ಮಗನಾದ ಎರೆಯಂಗನ (ನೋಡಿ) ಮೊದಲನೆಯ ಹೆಂಡತಿ ಏಚಲದೇವಿ ಈ ಮೂವರ ಪೈಕಿ ಒಬ್ಬಳು. ಈಕೆ ಎಡತೊರೆಮಂಡಲದಲ್ಲಿ (ಈಗಿನ ಹೆರಗೆ ಗ್ರಾಮದ ಸುತ್ತಲಿನ ಪ್ರದೇಶ) ಆಳು ತ್ತಿದ್ದ ಸಾಮಂತ ಪ್ರಭು ಗಂಗ ಮನೆತನದ ಹೆಮ್ಮಾಡಿದೇವನ ಮಗಳು. ಈಕೆಯ ಗಂಡ, ಯುವರಾಜ ಎರೆಯಂಗ 1067 ರಿಂದ 1100ರ ವರೆಗೆ ತಂದೆಗೆ ಸಹಾಯಕನಾಗಿ ರಾಜ್ಯಭಾರದಲ್ಲಿ ಪಾತ್ರ ವಹಿಸುತ್ತಿದ್ದನೆಂದೂ ಬಹುಶಃ ತಂದೆಗಿಂತ ಮೊದಲೇ ತೀರಿ ಕೊಂಡನೆಂದೂ ಒಂದು ಅಭಿಪ್ರಾಯವಿದೆ. ಈತನ ತಂದೆ 1067ರಲ್ಲೋ ಅದರ ಮರುವರ್ಷವೋ ಕಾಲವಾದನೆಂದೂ ಆಮೇಲೆ ಎರೆಯಂಗ ಸ್ವಲ್ಪ ಕಾಲ ರಾಜ್ಯವಾಳಿದ ನೆಂದೂ ಇನ್ನೊಂದು ಮತ. ಎರೆಯಂಗ ಮತ್ತು ಏಚಲದೇವಿಯರ ಗಂಡು ಮಕ್ಕಳು ಮೂವರು : ಒಂದನೆಯ ಬಲ್ಲಾಳ, ವಿಷ್ಣುವರ್ಧನ ಮತ್ತು ಉದಯಾದಿತ್ಯ. ಕೊನೆ ಯವನಾದ ಉದಯಾದಿತ್ಯನಿಗೆ ಏಚಲದೇವಿ ಎಂಬ ಹೆಸರಿನ ಮಗಳೊಬ್ಬಳಿದ್ದಳು. ಈಕೆ ಈ ಹೆಸರಿನ ಎರಡನೆಯವಳು.

ವಿಷ್ಣುವರ್ಧನನ ಮಗನಾದ ಒಂದನೆಯ ನರಸಿಂಹನ (1143–1173) ರಾಣಿಯ ಹೆಸರೂ ಏಚಲದೇವಿಯೇ. ಇವಳಿಗೆ ಮಹಾದೇವಿ ಎಂಬುದು ರೂಢನಾಮ. ಈಕೆ ಯನ್ನು ರೂಪಗುಣಸಂಪನ್ನೆಯೆಂದು ಹಲವು ಶಾಸನಗಳಲ್ಲಿ ವರ್ಣಿಸಲಾಗಿದೆ. ಗಂಡ ನೊಡನೆ ಈಕೆಯೂ ರಾಜ್ಯಭಾರ ಮಾಡುತ್ತಿದ್ದಳು (1168–69). ಹೊಯ್ಸಳ ರಾಜರಲ್ಲಿ ಅತ್ಯಂತ ಪ್ರಸಿದ್ಧನಾದ ಇಮ್ಮಡಿ ವೀರಬಲ್ಲಾಳ ಈಕೆಯ ಮಗ. (ಜಿ.ಆರ್.ಆರ್.)

**ಏಡನ್ :** ಅರೇಬಿಯದ ದಕ್ಷಿಣ ತುದಿಯಲ್ಲಿರುವ ರೇವುಪಟ್ಟಣ ಹಾಗೂ ಇದರ ಸುತ್ತಣ ಪ್ರದೇಶ. 26ನೆಯ ನವೆಂಬರ್ 1967ರಿಂದ ಇದು ದಕ್ಷಿಣ ಯೆಮೆನ್ ಜನತಾ ಗಣರಾಜ್ಯದ ಒಂದು ಭಾಗ. ಬಾಬ್ ಎಲ್ ಮಾಂಡೆಬ್ ಜಲಸಂಧಿಯಿಂದ ಪೂರ್ವಕ್ಕೆ 100 ಮೈಲಿ ದೂರಕ್ಕೆ 1776 ಅಡಿ ಎತ್ತರದ ಬಂಡೆಗಾಡಿನ ಏಡನ್ ಪರ್ಯಾಯದ್ವೀಪದ ಪೂರ್ವಭಾಗದಲ್ಲಿ ಮೃತ ಅಗ್ನಿಪರ್ವತವೊಂದರ ಕುಸಿದ ಬಾಯಿಯ ಮೇಲೆ ಏಡನ್ ಹಳೆಯ ನಗರ ಪವಡಿಸಿದೆ. ಇದರ ಪಶ್ಚಿಮದಲ್ಲಿ ಏಡನ್ ಕೊಲ್ಲಿಯ ಮೇಲೆ ಹೊಸ ಬಂದರನ್ನೂ ಲಿಟ್ಲ್ ಏಡನ್ ಎಂಬ ಬಡಾವಣೆಯನ್ನೂ ಕಾಣಬಹುದು. ಇಲ್ಲೊಂದು ತೈಲಶೋಧನಾಗಾರವೂ ಇದೆ. ವಾಣಿಜ್ಯ ಮಾತ್ರ ವಲ್ಲದೆ ಆಯಕಟ್ಟಿನ ಪ್ರಾಮುಖ್ಯವೂ ಏಡನಿನ ಬೆಳವಣಿಗೆಗೆ ಕಾರಣ. 1853ರಿಂದಲೂ ಸ್ವತಂತ್ರ ಬಂದರೆನಿಸಿಕೊಂಡಿದ್ದು ಕೇಬಲ್ ಮತ್ತು ರೇಡಿಯೊ ಕೇಂದ್ರವಾಗಿರುವ ಏಡನ್ ಸುತ್ತಣ ದೇಶಗಳ ಸರಕು ಸಂಗ್ರಹಿಸಿ ಮತ್ತೆ ರವಾನೆ ಮಾಡುವ ಕೇಂದ್ರ ವಾಗಿದೆ. ಹತ್ತಿ ಜವಳಿ, ಉಪ್ಪು, ಕಾಫಿ, ಚರ್ಮ, ಚಕ್ಕಳ, ಧಾನ್ಯ, ಗೋಂದು, ಹೊಗೆಸೊಪ್ಪು, ಸಕ್ಕರೆ—ಇವು ಈ ರೇವಿನ ಮೂಲಕ ಸಾಗುವ ಮುಖ್ಯ ವಸ್ತುಗಳು. ಹತ್ತು ಮೈಲಿ ದೂರದಲ್ಲಿ ಕಂಡುಹಿಡಿಯಲಾದ ನೆಲದಡಿಯ ಜಲವಸತಿಯಿಂದ ಈಗ

ನಗರಕ್ಕೆ ಧಾರಾಳವಾಗಿ ಕುಡಿಯುವ ನೀರು ಒದಗುತ್ತಿದೆ. ಮಳೆಯ ವಾರ್ಷಿಕ ಸರಾಸರಿ 8''. ಅನೇಕ ವರ್ಷಗಳ ಕಾಲ ಇಲ್ಲಿ ಮಳೆಯೇ ಆಗದಿರುವುದೂ ಉಂಟು.

ಸೂಯೆಜ್ ಕಾಲುವೆ ತೆರೆದಿರುವಾಗ ಪರ್ಷಿಯನ್ ಖಾರಿಗೂ ಭಾರತವೇ ಮುಂತಾದ ಪೂರ್ವದೇಶಗಳಿಗೂ ಯೂರೋಪಿಗೂ ನಡುವೆ ಏಡನ್ ಮುಖ್ಯ ಹಡಗುತಾಣ. ಇಲ್ಲೊಂದು ತೈಲಶೋಧನಾಗಾರವೂ ಇದೆ. ಜನಸಂಖ್ಯೆ 1,00,000. ಸೇಕಡಾ 90 ಭಾಗ ಮುಸ್ಲಿಮರು. ಭಾರತೀಯರೂ ಸೋಮಾಲಿಗಳೂ ಐರೋಪ್ಯರೂ ಯೆಹೂದ್ಯರೂ ಇದ್ದಾರೆ.

ಏಡನ್ ನಗರವನ್ನೊಳಗೊಂಡ ಇಡೀ ಏಡನ್ ಪರ್ಯಾಯದ್ವೀಪ ಏಡನ್ ಖಾರಿಯ ಅಂಚಿನಲ್ಲಿ 750 ಮೈಲಿ ಉದ್ದವಿದ್ದು 100 ಮೈಲಿ ಪರಮಾವಧಿ ಅಗಲ ಹೊಂದಿದೆ. ಇದನ್ನು ಪೂರ್ವ-ಪಶ್ಚಿಮ ಏಡನ್‌ಗಳೆಂದು ಎರಡು ಭಾಗಮಾಡ ಬಹುದು. ಪಶ್ಚಿಮ ಏಡನ್ ಚಿಕ್ಕದು. ಒಟ್ಟು ಜನಸಂಖ್ಯೆಯಲ್ಲಿ ಅರ್ಧಕ್ಕಿಂತಲೂ ಹೆಚ್ಚು ಮಂದಿ ಇಲ್ಲಿ ವಾಸಿಸುತ್ತಾರೆ. ಹಳ್ಳತಿಟ್ಟುಗಳಿಂದ ಕೂಡಿದ ಈ ನಾಡು ಯೆಮೆನ್ ಗಡಿಯ ವರೆಗೆ ಏರುತ್ತ ಹಬ್ಬಿದೆ. ಪೂರ್ವ ಏಡನ್ ಹಳ್ಳತಿಟ್ಟುಗಳಿಂದ ಕೂಡಿದ್ದರೂ ಒಟ್ಟಿನಲ್ಲಿ ಇದು ಪಶ್ಚಿಮ ಪ್ರದೇಶಕ್ಕಿಂತ ತಗ್ಗು. ಅಲ್ ಮುಕಲ್ಲಾ ಈ ಭಾಗದ ಮುಖ್ಯ ಬಂದರು. (ಪಿ.ಎಚ್.)

**ಇತಿಹಾಸ :** ಕ್ರಿಸ್ತಶಕೆಗೂ ಹಿಂದಿನ ಕಾಲದಲ್ಲೂ ಏಡನ್ ಯೂರೋಪ್ ಮತ್ತು ಪೂರ್ವದೇಶಗಳ ಪ್ರಮುಖ ವಾಣಿಜ್ಯ ಕೇಂದ್ರವಾಗಿತ್ತು. ಭಾರತ, ಚೀನ, ಇಂಡೊನೇಷ್ಯ ಮತ್ತು ಆಫ್ರಿಕಗಳಿಂದ ಪದಾರ್ಥಗಳನ್ನು ಏಡನಿನ ಮೂಲಕ ಸಾಗಿಸಲಾಗುತ್ತಿತ್ತೆಂದು ತಿಳಿದು ಬರುತ್ತದೆ. ಕ್ರಿಸ್ತಶಕೆಯ ಆರಂಭದ ಶತಮಾನಗಳಲ್ಲಿ ಭಾರತಕ್ಕೂ ಕೆಂಪುಸಮುದ್ರಕ್ಕೂ ನೇರವಾದ ವ್ಯಾಪಾರ ಬೆಳೆದು ಏಡನಿನ ಪ್ರಾಮುಖ್ಯ ಬಹಳ ಕಡಿಮೆಯಾಗಿತ್ತು. ಆದರೆ ಮಧ್ಯಯುಗದಲ್ಲಿ ಇದು ಮತ್ತೆ ಕುದುರಿಕೊಂಡು ತನ್ನ ಹಿಂದಿನ ಸ್ಥಿತಿಗಿಂತಲೂ ಹೆಚ್ಚು ಅಭಿವೃದ್ಧಿ ಹೊಂದಿತು. ಪೂರ್ವರಾಷ್ಟ್ರಗಳ ಬಟ್ಟೆ, ಮೆಣಸು ಮುಂತಾದ ಪದಾರ್ಥಗಳಿಗೆ ಏಡನ್ ಪ್ರಮುಖ ವ್ಯಾಪಾರಕೇಂದ್ರವಾಗಿತ್ತು. ಮಾರ್ಕೊಪೋಲೊ ತನ್ನ ಪೂರ್ವದೇಶ ಯಾತ್ರೆ ಮುಗಿಸಿ ಹಿಂದಿರುಗುತ್ತಿದ್ದಾಗ ಹಾದಿಯಲ್ಲಿ ಏಡನನ್ನು ಸಂದರ್ಶಿಸಿದ್ದ. ಆಗ ಇದು ವಾಣಿಜ್ಯ ಚಟುವಟಿಕೆಯ ಕೇಂದ್ರವಾಗಿತ್ತು. 1513ರಲ್ಲಿ ಪೋರ್ಚುಗೀಸರು ಇದನ್ನು ಆಕ್ರಮಿಸಿಕೊಳ್ಳಲು ಯತ್ನಿಸಿ ವಿಫಲರಾದರು. 1538ರಲ್ಲಿ ಇದು ತುರ್ಕಿಗಳ ವಶ ವಾಯಿತು. ಒಂದು ಶತಮಾನದ ಅನಂತರ ಯೆಮೆನಿ ಅರಬ್ಬಗಳು ಉತ್ತರದಿಂದ ಇದನ್ನಾಕ್ರಮಿಸಿದರು. 1728ರಲ್ಲಿ ಲಹೇಜ್‌ನ ಸುಲ್ತಾನ ಯೆಮೆನಿನ ಇಮಾಮರ ವಿರುದ್ಧ ದಂಗೆ ಎದ್ದು ಏಡನನ್ನು ವಶಪಡಿಸಿಕೊಂಡದ್ದಲ್ಲದೆ ಅದನ್ನು ಸಂಪೂರ್ಣವಾಗಿ ಲೂಟಿಮಾಡಿದ. ಯೂರೋಪಿನಿಂದ ಭಾರತಕ್ಕೆ ಸಮುದ್ರಮಾರ್ಗವನ್ನು ಕಂಡು ಹಿಡಿದಾಗ ಸ್ವಲ್ಪ ಕಾಲ ಇದರ ಪ್ರಾಮುಖ್ಯ ತಗ್ಗಿತ್ತಾದರೂ ಫ್ರೆಂಚರು ಈಜಿಪ್ಟನ್ನು ಆಕ್ರಮಿಸಿಕೊಂಡಾಗ (1798) ಬ್ರಿಟಿಷ್ ಸೇನೆಯೊಂದು ಇದನ್ನು ವಶಪಡಿಸಿ ಕೊಂಡಿತ್ತು. ಕೆಂಪುಸಮುದ್ರದಲ್ಲಿ ಬ್ರಿಟಿಷರು ಪ್ರಬಲರಾದಾಗ ಏಡನಿನ ಮೇಲೆ ಅವರ ಕಣ್ಣು ಬಿತ್ತು. ಲಹೇಜಿನ ಸುಲ್ತಾನನೊಂದಿಗೆ ಇದಕ್ಕಾಗಿ ಸಂಧಾನ ನಡಸು ತ್ತಿದ್ದಾಗ ಅಷ್ಟರಲ್ಲೇ ಆತ ಭಾರತದ ಹಡಗೊಂದನ್ನು ಕೊಳ್ಳೆಹೊಡೆದನೆಂಬ ಕಾರಣ ದಿಂದ ಈಸ್ಟ್ ಇಂಡಿಯ ಕಂಪನಿ ಈ ಪ್ರದೇಶವನ್ನು 1839ರಲ್ಲಿ ವಶಪಡಿಸಿಕೊಂಡು ಭಾರತದ ಆಡಳಿತಕ್ಕೆ ಸೇರಿಸಿಕೊಂಡಿತು. ಆ ಸುಲ್ತಾನ ಬ್ರಿಟಿಷರೊಂದಿಗೆ ಸ್ನೇಹದ ಒಪ್ಪಂದ ಮಾಡಿಕೊಂಡ. ಆಮೇಲೆ ಸುತ್ತಮುತ್ತಣ ಪ್ರದೇಶಗಳು ಒಂದೊಂದಾಗಿ ಬ್ರಿಟಿಷರ ಅಧೀನಕ್ಕೆ ಬಂದುವು. ಒಳನಾಡಿನ ಜನ ಆಗಿಂದಾಗ್ಗೆ ದಂಗೆಯೇಳುತ್ತಿದ್ದರು. ಇವರ ಮೇಲೆ ಸುಲ್ತಾನನ ಹತೋಟಿಯಿರಲಿಲ್ಲ. 1888ರ ವೇಳೆಗೆ ಇವರೆಲ್ಲ ತಣ್ಣಗಾದರು. ಒಂದನೆಯ ಮಹಾಯುದ್ಧದ ಕಾಲದಲ್ಲಿ ತುರ್ಕಿಯ ಸೇನೆ ಸುಲ್ತಾನನ ಪ್ರದೇಶವನ್ನಾಕ್ರಮಿಸಿಕೊಂಡಿತ್ತು. ಯುದ್ಧ ಅಂತ್ಯವಾದಾಗ ಲಹೇಜ್ ಸುಲ್ತಾನ ಮತ್ತೆ ಬಂದು ಕೂತ.

ಕೆಲಕಾಲದ ವರೆಗೆ ಏಡನ್ ಅಂದಿನ ಬೊಂಬಾಯಿ ಸರ್ಕಾರದ ಅಧೀನದಲ್ಲಿದ್ದು 1932 ರಿಂದ 1937ರ ವರೆಗೆ ಅಂದಿನ ಭಾರತ (ಬ್ರಿಟಿಷ್) ಸರ್ಕಾರದ ವಶಕ್ಕೆ ಬಂತು. 1937ರಲ್ಲಿ ಇದು ಬ್ರಿಟಿಷರ ನೇರವಾದ ವಸಾಹತಾಯಿತು. ವಿಧಾನಪರಿಷತ್ತು ಸ್ಥಾಪಿತವಾದ್ದು 1947ರಲ್ಲಿ. ಇದಕ್ಕೆ ಚುನಾವಣೆಯ ವ್ಯವಸ್ಥೆ ಜಾರಿಗೆ ಬಂದದ್ದು 1955ರಲ್ಲಿ. 1959ರಲ್ಲಿ ಜಾರಿಗೆ ಬಂದ ಸಂವಿಧಾನದ ಪ್ರಕಾರ ಬಹುಮತಾಧಿಕಾರದ ತತ್ತ್ವದ ಮೇಲೆ 1961ರಲ್ಲಿ ಮಂತ್ರಿವ್ಯವಸ್ಥೆ ಜಾರಿಗೆ ಬಂತು.

1963ರಲ್ಲಿ ಇದು ದಕ್ಷಿಣ ಅರೇಬಿಯ ಸಂಯುಕ್ತ ರಾಷ್ಟ್ರದ ಸದಸ್ಯರಾಜ್ಯವಾಯಿ ತಾದರೂ ಇದರ ಮೇಲೆ ಬ್ರಿಟಿಷ್ ಅಧಿಕಾರ ಹೋಗಲಿಲ್ಲ.

ಈ ಪ್ರದೇಶದ ಜನ ಸಂಪೂರ್ಣ ಸ್ವಾತಂತ್ರ್ಯಕ್ಕೆ ಹಾತೊರೆಯುತ್ತಿದ್ದದ್ದರಿಂದ 1964ರ ಒಪ್ಪಂದವೊಂದರ ಪ್ರಕಾರ ದಕ್ಷಿಣ ಅರೇಬಿಯ ಸಂಯುಕ್ತ ರಾಷ್ಟ್ರಕ್ಕೆ 1968ರೊಳಗೆ ಸ್ವಾತಂತ್ರ್ಯ ನೀಡುವುದಾಗಿಯೂ ಬ್ರಿಟಿಷ್ ಪಡೆಗಳನ್ನು ಹಿಂತೆಗೆದು ಕೊಳ್ಳಲಾಗುವುದೆಂದೂ ಬ್ರಿಟಿಷರು ಸಾರಿದರು. ಆದರೆ ಆ ಕಾಲದಲ್ಲಿ ಬಂಡಾಯಗಾರ ಚಳವಳಿ ನಿಲ್ಲಲಿಲ್ಲ. ಇವರಿಗೆ ಅರಬರ ಪ್ರೋತ್ಸಾಹವೂ ಇತ್ತು. 1965ರಲ್ಲಿ ಏಡನ್ ರಾಜ್ಯದ ಸಂವಿಧಾನವನ್ನು ರದ್ದುಮಾಡಿ ಅದರ ಮೇಲೆ ಹೈಕಮಿಷನರನಿಗೆ ಸಂಪೂರ್ಣ ಅಧಿಕಾರ ನೀಡಲಾಯಿತು.

1967ರ ಹೊತ್ತಿಗೆ ಪರಿಸ್ಥಿತಿ ವಿಷಮಿಸಿ ಬ್ರಿಟಿಷ್ ಸೇನೆಯ ವಿರುದ್ಧ ಅನೇಕ ಹಿಂಸಾತ್ಮಕ ಪ್ರದರ್ಶಗಳು ನಡೆದುವು. ರಾಷ್ಟ್ರೀಯ ವಿಮೋಚನಾರಂಗ ಹಾಗೂ ದಕ್ಷಿಣ ಯೆಮೆನ್ ವಿಮೋಚನಾರಂಗ (ಫ್ಲಾಸಿ)—ಈ ಎರಡು ಪಕ್ಷಗಳು ಪ್ರಬಲ ವಾಗಿ ಅಧಿಕಾರಕ್ಕಾಗಿ ಸ್ಪರ್ಧಿಸತೊಡಗಿದುವು. ಪರಿಸ್ಥಿತಿ ಮತ್ತಷ್ಟು ಉಲ್ಬಣ ಗೊಂಡಿತೆನ್ನಬಹುದು. 1967ರಲ್ಲಿ ಇಲ್ಲಿನ ಪರಿಸ್ಥಿತಿಯನ್ನು ವೀಕ್ಷಿಸುವ ಸಲುವಾಗಿ ವಿಶ್ವಸಂಸ್ಥೆಯ ನಿಯೋಗವೊಂದು ಇಲ್ಲಿಗೆ ಬಂದಾಗ ನಡೆದ ಸಾಮೂಹಿಕ ಚಳವಳಿಗಳೂ ಹಿಂಸಾತ್ಮಕ ಗಲಭೆಗಳೂ ಹಿಂದೆಂದೂ ನಡೆಯದಷ್ಟು ಭೀಕರವಾಗಿದ್ದುವು. ಕೊನೆಗೂ 1967ರ ನವೆಂಬರಿನಲ್ಲಿ ಬ್ರಿಟಿಷ್ ಸೇನೆ ಇಲ್ಲಿಂದ ಕಾಲ್ತೆಗೆಯಿತು. ಏಡನ್ ಒಳಗೊಂಡ ದಕ್ಷಿಣ ಯೆಮೆನ್ ಸ್ವತಂತ್ರ ರಾಷ್ಟ್ರವ ಉದಯವಾದ್ದು ಆ ತಿಂಗಳ 26ರಂದು. (ಸಿ.ಪಿ.)

**ಏಡಿ :** ಜಲವಾಸಿಯಾದ ಈ ಪ್ರಾಣಿ ಅಕಶೇರುಕಗಳ ಗುಂಪಿನ ಆರ್ಥ್ರೊಪೊಡ ವಂಶಕ್ಕೆ ಸೇರಿದೆ. ವರ್ಗ ಕ್ರಸ್ಟೇಸಿಯ. ಗಣ ಡೆಕೊಪೊಡ. ಉಪಗಣ ಬ್ರಾಕಿಯುರ.



ಗಂಡು ಏಡಿಯ ಬೆನ್ನುಭಾಗ. ಉದರ ಭಾಗವನ್ನು ಕೆಳಗಡೆ ಪ್ರತ್ಯೇಕವಾಗಿ ತೋರಿಸಿದೆ

ನಳ್ಳಿ ಪರ್ಯಾಯ ಪದ. ಇಂಗ್ಲಿಷ್ ಹೆಸರು ಕ್ರ್ಯಾಬ್. ಏಡಿಗಳು ಕಠಿಣ ಚರ್ಮಿ ಗಳು, ತುಂಡು ಬಾಲದವು, ಸಾಧಾರಣವಾಗಿ ಜಲವಾಸಿಗಳು. ಹಲವು ಜಾತಿಯ ಏಡಿಗಳು ಕಡಲಿನಲ್ಲಿ ವಾಸಿಸುತ್ತವೆ. ಕೆಲವು ಉಷ್ಣ ಮತ್ತು ಸಮಶೀತೋಷ್ಣವಲಯ ಗಳ ಹೊಳೆ, ತೊರೆ, ನಾಲೆ, ಝರಿ, ಕಾಲುವೆ ಮತ್ತು ನೀರು ತುಂಬಿದ ಗದ್ದೆಗಳಲ್ಲೂ ವಾಸಿಸುತ್ತವೆ. ಸಾಮಾನ್ಯವಾಗಿ ಬಂಡೆಗಳಿಂದ ಕೂಡಿದ ತೀರ ಮತ್ತು ತಳಪ್ರದೇಶ ಗಳೇ ಇವುಗಳ ನೆಲೆ. ಬಂಡೆಗಳ ಬಿರುಕು ಮತ್ತು ಬಿಲಗಳೇ ಇವುಗಳ ಬೀಡು. ಇದಲ್ಲದೆ ಕಡಲತೀರದ ಜೌಗುಪ್ರದೇಶ ಮತ್ತು ತೇವಮಯವಾದ ಗದ್ದೆಗಳಲ್ಲೂ ಬಿಲ ತೋಡಿ ವಾಸಿಸುವ ಏಡಿಗಳಿವೆ. ಇವು ಸಂಜೆ ಮತ್ತು ರಾತ್ರಿಯ ವೇಳೆ ತಮ್ಮ ಆಹಾರವನ್ನು ಹುಡುಕಲು ಹೊರಗೆ ಬರುತ್ತವೆ. ಭೂಮಿಯ ಬಿಲಗಳಲ್ಲಿ ವಾಸಿಸುವ ಏಡಿಗಳೆಲ್ಲವೂ ಜಲಚರ ಏಡಿಗಳಂತೆಯೇ ತಮ್ಮ ಪ್ರಾರಂಭಿಕ ಜೀವನವನ್ನು ನೀರಿನ ಆಸರೆಯಲ್ಲಿಯೇ ಕಳೆಯುತ್ತವೆ.

ದೇಹ: ಅಡ್ಡವಾದ ಅಂಡಾಕಾರ ಅಥವಾ ಸರಿಸುಮಾರು ಚೌಕ ಅಥವಾ ತ್ರಿಕೋನಾಕಾರ ; ಸ್ವಲ್ಪಮಟ್ಟಿಗೆ ಚಪ್ಪಟೆ. ತಲೆ ಮತ್ತು ಎದೆಭಾಗಗಳು ಒಂದು ಗೂಡಿ ಶಿರೋವಕ್ಷವಾಗಿ ಮಾರ್ಪಟ್ಟಿದೆ. ಇಡೀ ದೇಹವನ್ನು ಕ್ಯಾರಪೇಸ್ ಎಂಬ ಒಂದು ಗಡುಸಾದ ಚಿಪ್ಪು ಆವರಿಸಿದೆ. ಎದೆಯ ಭಾಗದಲ್ಲಿ ಐದು ಜೊತೆ ಕಾಲು ಗಳಿವೆ. ಅವುಗಳ ಪೈಕಿ ಮೊಟ್ಟಮೊದಲಿನ ಜೊತೆಕಾಲುಗಳು ವಿಶೇಷ ದಪ್ಪವಾಗಿವೆ. ತುದಿಭಾಗಗಳು ಚಿಮುಟದಂತೆ ಮಾರ್ಪಟ್ಟಿವೆ. ಇವುಗಳಿಂದ ಆಹಾರ ಅಥವಾ ಇತರ ವಸ್ತುಗಳನ್ನು ಹಿಡಿಯುವುದು ಸಾಧ್ಯವಾಗುವುದು. ಆತ್ಮರಕ್ಷಣಾಸಾಧನಗಳಾ ಗಿಯೂ ಇವುಗಳ ಉಪಯೋಗವಿದೆ. ಏಡಿಗಳ ಓಟದ ದಾರಿಯನ್ನು ಅಡ್ಡ ಗಟ್ಟಿದರೆ ಅಥವಾ ಒಂದು ಮೂಲೆಗೆ ಅಟ್ಟಿ ನಿಲ್ಲಿಸಿದರೆ ಅವು ತಮ್ಮ ಇಕ್ಕುಳದಂಥ ಪಾದಗಳನ್ನು ಮೇಲೆತ್ತಿ ಭೀತಿಯುಂಟುಮಾಡಲು ಯತ್ನಿಸುತ್ತವೆ. ಒಂದು ವಸ್ತು ವನ್ನು ಏಡಿ ಹಿಡಿದುಕೊಂಡಿತೆಂದರೆ ಅದನ್ನು ಸುಲಭಕ್ಕೇನೂ ಬಿಡುವುದಿಲ್ಲ. ಆಳದ

ನಾಲ್ಕು ಜೊತೆ ಪಾದಗಳ ರಚನೆ ಸರಳ. ಅವು ಚಲನೆಯಲ್ಲಿ ನೆರವಾಗುತ್ತವೆ. ಏಡಿಯ ನಡಿಗೆ ಬಲು ವಿಶಿಷ್ಟವಾದದ್ದು. ಇದು ಭೂಮಿಯ ಮೇಲಾಗಲೀ ನೀರಿನ



ಗಂಡು ಏಡಿಯ ಉದರ ಭಾಗ

ತಳದಲ್ಲಾಗಲೀ ನಡೆಯುವಾಗ ಈ ಚಲನಪಾದಗಳ ತುದಿಯ ಮೇಲೆ ಭಾರ ಹಾಕಿ ಪಕ್ಕಪಕ್ಕದ ದಿಕ್ಕಿನಲ್ಲಿ ನಡೆಯುತ್ತದೆ. ಕೆಲವು ಜಾತಿಯ ಸಮುದ್ರದ ಏಡಿಗಳ ಕೊನೆಯ ಜೊತೆಕಾಲುಗಳ ತುದಿಭಾಗಗಳು ಅಗಲವಾಗಿ ಹುಟ್ಟಿನಂತೆ ಮಾರ್ಪಟ್ಟು ಈಜುವುದಕ್ಕೆ ನೆರವಾಗುತ್ತವೆ. ಶತ್ರುವಿನೊಡನೆ ಹೋರಾಡುವಾಗ ಏಡಿ ಅದರ ಕಾಲುಗಳನ್ನು ಕಳೆದುಕೊಳ್ಳಬಹುದು. ಆದರೆ ಹೀಗೆ ನಷ್ಟವಾದ ಕಾಲು ಅಥವಾ ಅಂಗ ಪುನಃ ಚಿಗುರುತ್ತದೆ. ಎರಡು ಸಂಯುಕ್ತ ಕಣ್ಣುಗಳು ಚಲನಶೀಲವೃಂತದ ತುದಿಯಲ್ಲಿವೆ. ಮೇಲ್ಚಿಪ್ಪಿನ (ಕ್ಯಾರಪೇಸ್) ಮುಂಭಾಗದ ಗುಳಿಗಳಲ್ಲಿ ಒಳಕ್ಕೆ ಎಳೆದುಕೊಳ್ಳುವಂತೆ ಇವುಗಳ ರಚನೆ. ಏಡಿಗೆ ಆರು ಜೊತೆ ಜಂಭಿಕಪಾದಗಳಿವೆ. ಇವೆಲ್ಲವೂ ಬಾಯಿ ಅಂಗುಳದಲ್ಲಿ ಅಳವಡಿಸಿದ್ದು ಅಗಲ ಹಾಗೂ ಚಪ್ಪಟೆಯಾದ ಮೂರನೆಯ ಜಂಭಿಕಪಾದಗಳಿಂದ ಮುಚ್ಚಲ್ಪಟ್ಟಿವೆ.



ಹೆಣ್ಣು ಏಡಿಯ ಉದರ ಭಾಗ

ಉದರ ಭಾಗ ಕ್ಷೀಣಗೊಂಡು ಶಿರೋವಕ್ಷಕ್ಕಿಂತಲೂ ಚಿಕ್ಕದಾಗಿರುವುದಲ್ಲದೆ ಎದೆಯ ಭಾಗದ ತಳದಲ್ಲಿ ಮಡಿಚಿಕೊಂಡಿದೆ. ಉದರ ಮತ್ತು ಕೀಲೇಟ್ ಪಾದಗಳ ಸಹಾಯದಿಂದ ಗಂಡು ಹೆಣ್ಣುಗಳನ್ನು ಸುಲಭವಾಗಿ ಗುರುತಿಸಬಹುದು. ಉದರ ಭಾಗ ಗಂಡಿನಲ್ಲಿ ಹೆಚ್ಚು ಕಿರಿದು ಮತ್ತು ತ್ರಿಕೋನಾಕೃತಿಯದು. ಅದು ಹೆಣ್ಣಿನಲ್ಲಿ ಅಗಲ ಮತ್ತು ದುಂಡಗಿದೆ. ಗಂಡಿನ ಕೀಲೇಟ್ ಪಾದಗಳು ಹೆಣ್ಣಿನದಕ್ಕಿಂತ ಹೆಚ್ಚು ದೊಡ್ಡವೂ ಮತ್ತು ಬಲಯುತವೂ ಆಗಿವೆ. ಫಿಡ್ಲರ್ ಏಡಿಗಳಲ್ಲಿ ಗಂಡಿನ ಒಂದು ಕೀಲೇಟ್ ಪಾದ ಮತ್ತೊಂದಕ್ಕಿಂತ ನಾಲ್ಕು ಅಥವಾ ಐದು ಪಟ್ಟು ದಪ್ಪನಾಗಿದೆ. ಅಲ್ಲದೆ ಉದರದ ತಳಭಾಗದಲ್ಲಿ ಪ್ಲವಪಾದಗಳು ಗಂಡಿನಲ್ಲಿ ಎರಡು ಜೊತೆಯಿದ್ದರೆ ಹೆಣ್ಣಿನಲ್ಲಿ ನಾಲ್ಕು ಜೋಡಿಗಳಿವೆ. ಹೆಣ್ಣಿನ ಪ್ಲವಪಾದಗಳು ಗಂಡಿನದಕ್ಕಿಂತ ಪುಷ್ಟವಾಗಿ ಬೆಳೆದಿರುತ್ತವೆ. ಸಂತಾನೋತ್ಪತ್ತಿಕಾಲದಲ್ಲಿ ಹೆಣ್ಣು ಏಡಿ ತಾನಿಟ್ಟ ಮೊಟ್ಟೆಗಳೆಲ್ಲವನ್ನು ಒಂದು ಮುದ್ದೆಮಾಡಿ ತನ್ನ ಉದರದ ಪ್ಲವಪಾದಗಳಿಗೆ ಅಂಟಿಸಿಕೊಳ್ಳುತ್ತದೆ. ಮೊಟ್ಟೆಯ ಗೊಂಚಲು ದಪ್ಪನಾಗಿರುವುದರಿಂದ ಅದು ದೇಹದಿಂದ ಹೊರ ಚಾಚಿ ಬರುತ್ತದೆ. ಮೇಲೆ ಹೇಳಿದ ಜಂಭಿಕಪಾದ ಚಲನಪಾದ ಪ್ಲವಪಾದಗಳೆಲ್ಲವೂ ಸಂಧಿತಪಾದಗಳು.

ಏಡಿಗಳು ಸಾಮಾನ್ಯವಾಗಿ ಸರ್ವಭಕ್ಷಕ ಪ್ರಾಣಿಗಳು. ಮಾಂಸಾಹಾರಿ ಮತ್ತು ಸಸ್ಯಾಹಾರಿಗಳೆಂಬ ಎರಡು ಬಗೆಯ ಏಡಿಗಳು ಇವೆ. ಒಮ್ಮೊಮ್ಮೆ ಕೆಲವು ಬಗೆಯ ಏಡಿಗಳು ತಮಗಿಂತಲೂ ಸಣ್ಣದಾದ ಏಡಿಗಳನ್ನು ಹಿಡಿದು ತಿನ್ನುವುದೂ ಉಂಟು. ಅಂತೂ ಅನೇಕ ಏಡಿಗಳು ಕೊಳೆಯುತ್ತಿರುವ ಮಾಂಸವನ್ನು ತಿಂದು ಪರಿಸರವನ್ನು ಸ್ವಚ್ಛಗೊಳಿಸುತ್ತವೆ.

ಏಡಿ ಪರತಂತ್ರಜೀವಿಗಳಲ್ಲ. ಆದರೆ ಆತ್ಮರಕ್ಷಣೆಗಾಗಿ ಹಲವು ಬಗೆಯ ಉಪಾಯಗಳನ್ನು ಅವು ಕೈಗೊಂಡಿರುತ್ತವೆ. ಕೆಲವು ಬಗೆಯ ಏಡಿಗಳಿಗೆ ಪರಿಸರದಲ್ಲಿರುವ ಸಣ್ಣಸಣ್ಣ ಕಲ್ಲುಗಳ ಆಕಾರ, ಗಾತ್ರ ಮತ್ತು ವರ್ಣವಿನ್ಯಾಸಗಳೇ ಇವೆ. ಈ ಕಾರಣದಿಂದ ಅವು ಶತ್ರುವಿನ ಕಣ್ಣಿಗೆ ಸುಲಭವಾಗಿ ಬೀಳುವುದಿಲ್ಲ. ಕೆಲವು ಏಡಿಗಳು ತಮ್ಮ ಪರಿಸರದಲ್ಲಿ ಬೆಳೆಯುವ ಜೊಂಡು ಮತ್ತು ಸ್ಪಂಜು ಪ್ರಾಣಿಗಳನ್ನು ಬೆನ್ನಿನ ಮೇಲೆ ಬೆಳೆಸಿಕೊಂಡು ಪರಿಸರದೊಂದಿಗೆ ಐಕ್ಯವಾಗುತ್ತವೆ. ಮತ್ತೆ ಕೆಲವು ಏಡಿಗಳು ತಮ್ಮ ಬೆನ್ನಿನ ಮೇಲೆ ಸಮುದ್ರದ ಅನಿಮೋನನ್ನು ಕೂರಿಸಿಕೊಂಡು ಸಹಜೀವನ ನಡೆಸುವುವು. ಇಂಥ ಸಹಜೀವನದಿಂದ ಏಡಿಗಳಿಗೆ ಸುಲಭವಾಗಿ ಆತ್ಮರಕ್ಷಣೆ ಒದಗುತ್ತದೆ. ಇದರೊಂದಿಗೆ, ಚಲನಸಾಮರ್ಥ್ಯವಿಲ್ಲದ ಅನಿಮೋನಿಗೆ ಒಂದೆಡೆಯಿಂದ ಮತ್ತೊಂದೆಡೆಗೆ ಸವಾರಿ ಹೋಗುವ ಅವಕಾಶ ಸಿಗುತ್ತದೆ.



ಹಿಟೀಲು ಏಡಿ

ಸಂತಾನೋತ್ಪತ್ತಿ : ಇದನ್ನು ವಿವರಿಸಲು ಕಾರ್ಸಿನಸ್ ಜಾತಿಯ ಏಡಿಯನ್ನು ಆರಿಸಿಕೊಳ್ಳಬಹುದು. ಮೊಟ್ಟೆಯಿಟ್ಟ ಎರಡು ವಾರಗಳಾದಮೇಲೆ ಮೊಟ್ಟೆಯಿಂದ ಮರಿ ಅಥವಾ ಲಾರ್ವಗಳು ಹೊರಬರುತ್ತವೆ. ಇವು ಹೆತ್ತವರನ್ನು ಹೋಲುವುದಿಲ್ಲ. ಬೆಳೆದಂತೆ ತಮ್ಮ ಹೊರಕವಚವನ್ನು ಹಲವಾರು ಬಾರಿ ವಿಸರ್ಜಿಸಿಕೊಂಡು ಕೊನೆಗೆ ಮರಿ ಏಡಿಗಳಾಗುತ್ತವೆ ; ಮತ್ತು ಹೆತ್ತವರ ರೂಪರಚನೆಯನ್ನು ಪಡೆಯುತ್ತವೆ. ಈ ತೆರನ ಬೆಳವಣಿಗೆಯ ಹೆಸರು ಕಾಯಪರಿವರ್ತನೆ. ಇದರಲ್ಲಿ ಎರಡು ಪ್ರಮುಖ ಲಾರ್ವಘಟ್ಟಗಳನ್ನು ಕಾಣಬಹುದು. ಮೊಟ್ಟೆಯಿಂದ ಹೊರಬರುವ ಲಾರ್ವದ ಘಟ್ಟಕ್ಕೆ ಜ಼ೋಯೆಯ ಎಂದು ಹೆಸರು. ಇದರ ದೇಹದ ಉದ್ದ ಒಂದು ಮಿಲಿಮೀಟರ್. ಇದು ಪಾರದರ್ಶಕ. ಇಂಥವು ಸಾಗರದ ಮೇಲಾಯದಲ್ಲಿ ಈಜುತ್ತ ತಮ್ಮ ಪರಿಸರದ ಸೂಕ್ಷ್ಮಜೀವಿಗಳನ್ನು ತಿಂದು ದೊಡ್ಡದಾಗುತ್ತವೆ. ದೇಹ ಈಗ ದುಂಡಗೆ ; ಒಂದು ಜೊತೆ ಸಂಯುಕ್ತ ಕಣ್ಣುಗಳು, ರೋಸ್ಟ್ರಮ್ ಮತ್ತು ಕ್ಯಾರ



ಏಡಿಲಾರ್ವದ ಎರಡು ಘಟ್ಟಗಳು
ಎಡಗಡೆಯದು ಜ಼ೋಯೆಯ, ಬಲಗಡೆಯದು ಮೆಗಲೋಪ

ಪೇಸುಗಳಿವೆ. 4–5 ಖಂಡಗಳಿಂದ ಕೂಡಿದ ಉದರ ಭಾಗ ಅದರ ಬಾಲದಂತಿದೆ. ಎದೆಯ ಭಾಗದಲ್ಲಿ ಮೊದಲ ಎರಡು ಜೊತೆಪಾದಗಳು ಮಾತ್ರ ಇವೆ. ಇದರ ಕವಚ ಒಂದೆರಡು ಬಾರಿ ವಿಸರ್ಜನೆಯಾದಮೇಲೆ ಬೆನ್ನಿನ ಮೇಲೆ ಒಂದು ನೀಳವಾದ ಮುಳ್ಳು ರೂಪುಗೊಳ್ಳುತ್ತದೆ. ಜ಼ೋಯೆಯ ಲಾರ್ವ ಕಾಯಪರಿವರ್ತನೆಗೊಂಡು ಮೆಗಲೋಪ ಲಾರ್ವವಾಗಿ ಮಾರ್ಪಡುತ್ತದೆ. ಇದರ ದೇಹ ಮತ್ತು ಕಾಲುಗಳು ಪ್ರೌಢ ಜೀವಿಯಂತಿದ್ದರೂ ಇದರ ಉದರ ಭಾಗ ಶಿರೋವಕ್ಷದ ತಳಭಾಗದಲ್ಲಿ ಮಡಿಚಿ

ಕೊಂಡಿರದೆ ಹಿಂದಕ್ಕೆ ಚಾಚಿಕೊಂಡಿದೆ. ಇದಕ್ಕೆ ಈಜಲು ನೆರವಾಗುವ ಉಪಾಂಗಗಳಿವೆ. ಇದು ಕೊನೆಗೆ ನೀರಿನ ತಳಭಾಗಕ್ಕಿಳಿದು ಕವಚವನ್ನು ವಿಸರ್ಜಿಸಿ ಮರಿ ಏಡಿಯಾಗುತ್ತದೆ. ಇದರ ಗಾತ್ರ ಮೂರು ಮಿಲಿಮೀಟರಿನಷ್ಟು. ಇದು ಬೆಳೆದಂತೆಲ್ಲ ಕಾಲಕಾಲಕ್ಕೆ ತನ್ನ ಗಡುಸಾದ ಹೊರಕವಚವನ್ನು ವಿಸರ್ಜಿಸಿ ಹೊಸದನ್ನು ಪುನಃಪುನಃ ರೂಪಿಸಿಕೊಂಡು ದೊಡ್ಡದಾಗುತ್ತದೆ. ಈ ಪರ್ವಕಾಲದಲ್ಲಿ ಅದರ ಹೊರಕವಚ ಮೃದುವಾಗಿರುತ್ತದೆ; ಅದಕ್ಕೆ ಸ್ಥಿತಿಸ್ಥಾಪಕಶಕ್ತಿ ಇರುತ್ತದೆ. ಇದು ಕ್ರಮೇಣ ಗಟ್ಟಿಯೂ ಗಡಸೂ ಆಗುವುದು.



ಎಡಗಡೆಯದು : ಶಂಖದೊಡನಿರುವ ಸಂನ್ಯಾಸಿ ಏಡಿ
ಬಲಗಡೆಯದು : ಶಂಖದಿಂದ ಹೊರಬಂದಿರುವ ಸಂನ್ಯಾಸಿ ಏಡಿ

ಏಡಿಯ ಮಾಂಸ ಬಲು ರುಚಿಕರ. ಹೀಗಾಗಿ ಏಡಿಯ ಪ್ರಭೇದಗಳನ್ನು ಜನ ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಇದರ ಮಾಂಸ ಮೀನಿನ ಮಾಂಸದಷ್ಟು ಪುಷ್ಟಿದಾಯಕವಲ್ಲ. ಆದರೆ ಇದರಲ್ಲಿ ಔಷಧದ ಮೌಲ್ಯಗಳಿವೆಯೆಂದು ಪರಿಗಣಿಸಲಾಗಿದೆ. ಭಾರತದ ಹಲವು ಕಡೆ ಏಡಿಮಾಂಸದ ಸಾಂಬಾರು ಗೂರಲು ಕೆಮ್ಮು ಮತ್ತು ಬಹುಕಾಲದ ಜ್ವರಗಳಿಂದ ನರಳುವವರಿಗೆ ಉಪಶಮನಕಾರಿಯೆಂದು ಜನ ನಂಬುತ್ತಾರೆ. ಕೆಲವು ಏಡಿಗಳ ಮಾಂಸದ ಸಾರು ಶಕ್ತಿವರ್ಧಕ. ಏಡಿಯ ಸುಲಿದ ಕವಚವನ್ನು ಪುಡಿಮಾಡಿ ಹಂದಿ ಮತ್ತು ಕೋಳಿಗಳ ತಿನಿಸಿನಲ್ಲಿ ಬೆರೆಸುವುದೂ ಉಂಟು. ಅದನ್ನು ಗೊಬ್ಬರಕ್ಕಾಗಿ ಉಪಯೋಗಿಸುವುದೂ ಉಂಟು.

ಭಾರತದಲ್ಲಿ ಆಹಾರಕ್ಕಾಗಿ ಬಳಸುವ ಏಡಿಗಳು. 1 ಪಿಲ್ಲ ಸೆರ್ರಾಟ: ಇದು ಸಮುದ್ರದ ಕೊಲ್ಲಿ, ಖಾರಿ, ನದೀಮುಖಜದ ಜೌಗುಪ್ರದೇಶಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತದೆ. ಇದರ ಕೊನೆಯ ಜೊತೆಕಾಲುಗಳ ತುದಿಭಾಗ ಅಗಲವಾಗಿ ಹುಟ್ಟಿನಂತೆ ಮಾರ್ಪಟ್ಟಿರುವುದರಿಂದ ಇದು ನೀರಿನಲ್ಲಿ ಸುಲಭವಾಗಿ ಈಜಬಲ್ಲುದು. ಬಿಲಗಳಲ್ಲಿ ಇದರ ವಾಸ. ಭಾರತದಲ್ಲಿ ಕಂಡುಬರುವ ಏಡಿಗಳಲ್ಲೆಲ್ಲ ಇದು ಬಲು ದೊಡ್ಡದು. ಚಿಕ್ಕ ಸರೋವರದಲ್ಲಿ ಬೆಳೆಯುವ ಪಿಲ್ಲಜಾತಿಯ ಏಡಿಗಳ ಕ್ಯಾರಪೇಸಿನ ಅಡ್ಡ ಅಳತೆ 40 ಸೆಂ.ಮೀ. ಗಳಷ್ಟಿರುತ್ತದೆ. ಬೇಸಗೆಯಲ್ಲಿ ಇವು ಯಥೇಚ್ಛವಾಗಿ ದೊರಕುವುವು. ಆಗ ಇವನ್ನು ದೋಣಿಗಟ್ಟಲೆ ಹಿಡಿಯುತ್ತಾರೆ.

2 ನೆಪ್ಚೂನಸ್ ಜಾತಿಯ ಏಡಿಗಳು: ಇಲ್ಲಿ ಎರಡು ಜೀವಪ್ರಭೇದಗಳು ಪ್ರಮುಖವಾದುವು; ನೆ.ಪೆಲಾಜಿಕಸ್ ಮತ್ತು ನೆ.ಸ್ಯಾಂಗ್ವಿನೋಲೆಂಟಸ್. ಇವು ಪಿಲ್ಲಿಜಾತಿಯ ಏಡಿಗಳಲ್ಲಿ ಈಜು ಜೀವನ ಸಾಗಿಸತಕ್ಕವು. ಬಂಗಾಳ, ಒರಿಸ್ಸ, ದಕ್ಷಿಣ ಭಾರತದ ತೀರ ಪ್ರದೇಶಗಳಲ್ಲಿ ವಾಸಿಸುತ್ತವೆ. ಇವುಗಳ ಕ್ಯಾರಪೇಸ್ ಅಗಲ ಸುಮಾರು 12–14 ಸೆಂ.ಮಿ. ನಷ್ಟು.

3 ಚೌರಿಬ್ಡಿಸ್ ಕ್ರ್ಯೂಸಿಫೆರ್: ದಕ್ಷಿಣಭಾರತದ ತೀರಪ್ರದೇಶದಲ್ಲಿ ಇದರ ವಾಸ. ಈಜುವ ಸಾಮರ್ಥ್ಯ ಇದೆ. ಕ್ಯಾರಪೇಸಿನ ಮೇಲೆ ವರ್ಣವಿನ್ಯಾಸವಿದೆ.

4 ವರುಣ ಲಿಟ್ಟರಾಟ: ಗಂಗಾನದಿ ಮುಖಜ ಭೂಪ್ರದೇಶಗಳಲ್ಲಿ ಅಸಂಖ್ಯಾತವಾಗಿ ದೊರೆಯುತ್ತದೆ. ಅಲ್ಲದೆ ಕೆರೆ ಕೊಳಗಳ ದಂಡೆಗಳಲ್ಲಿ ಬಿಲ ತೋಡಿಯೂ ವಾಸಿಸುವುದು. ಕೆರೆಯ ನೀರು ಬತ್ತಿಹೋಗುವ ಸಂದರ್ಭಗಳಲ್ಲಿ ತೇಪವಿರುವ ಕೆರೆಯಂಗಳದಲ್ಲಿ ಈ ಏಡಿಗಳು ಗುಂಪುಗೂಡುತ್ತವೆ. ಅಲ್ಲಿಯ ಜನರು ಈ ಸಮಯವನ್ನೇ ಕಾದಿದ್ದು ಆಯಾಸವಿಲ್ಲದೆ ಸುಲಭವಾಗಿ ಹೆಚ್ಚಿನ ಸಂಖ್ಯೆಯಲ್ಲಿ ಇವನ್ನು ಹಿಡಿಯುತ್ತಾರೆ.

5 ಪಾರಟೆಲ್ಫೂಸ ಸ್ಪೈನಿಜೆರ: ಕೆರೆ, ತೊರೆ, ಕಾಲುವೆಗಳ ದಂಡೆಗಳಲ್ಲಿ ಬಿಲಗಳಲ್ಲಿ ವಾಸ. ನೀರಿನಲ್ಲಿ ಹರಿಯುವುದಲ್ಲದೇ ಬೇಗ ಈಜಲಾರದು. ಇದರ ಕ್ಯಾರಪೇಸಿನ ಅಡ್ಡಳತೆ 8 ಸೆಂ.ಮಿ. ನಷ್ಟಿದೆ.

ಬಿಲಗಳಲ್ಲಿ ಮತ್ತು ಕಲ್ಲಿನ ಪೊಟರೆಗಳಲ್ಲಿ ವಾಸಿಸುವ ಏಡಿಗಳನ್ನು ಮತ್ತು ನೀರಿನಲ್ಲಿ ಈಜುವ ಮತ್ತು ಹರಿದಾಡುವ ಏಡಿಗಳನ್ನು ಹಿಡಿಯುವ ರೀತಿಗಳು ಬೇರೆ ಬೇರೆ. ಒಂದು ಬಿದಿರಿನ ಗಳುವನ್ನು ಬಿಲಗಳಲ್ಲಿಯೋ ಅಥವಾ ಬಿರುಕು ಅಥವಾ ಪೊಟರೆಗಳಲ್ಲಿಯೋ ತುರುಕಿದಾಗ ಭಯಗೊಂಡು ಏಡಿ ತನ್ನ ಹಿಡಿಗಾಲುಗಳಿಂದ ಅದನ್ನು ಬಲವಾಗಿ ಹಿಡಿದುಕೊಳ್ಳುತ್ತದೆ. ಹಾಗೆ ಹಿಡಿದುಕೊಂಡ ಏಡಿಯನ್ನು ಹಾಗೆಯೇ ಹೊರಕ್ಕೆಳೆದು ಹಿಡಿಯುವುದು ಒಂದು ವಿಧಾನ. ಕೆಲವು ಸಂದರ್ಭಗಳಲ್ಲಿ ಗಳು ಅಥವಾ ಕೋಲಿನ ತುದಿಗೆ ಸತ್ತ ಮೀನು ಅಥವಾ ಇತರ ಸಣ್ಣ ಪ್ರಾಣಿಯನ್ನು ಕಟ್ಟುವುದೂ ಉಂಟು. ಖಾರಿ, ಕೊಲ್ಲಿಗಳಲ್ಲಿ ಈಜಾಡುವ ಏಡಿಗಳನ್ನು ಹಿಡಿಯುವ ವಿಧಿವಿಧಾನಗಳೇ ಬೇರೆ. ಉತ್ತಳ ನೀರಿನಲ್ಲಿರುವ ಏಡಿಗಳನ್ನು ವೃತ್ತಾಕಾರದ ಬಲೆಗಳನ್ನು ಬೀಸಿ ಹಿಡಿಯುವುದುಂಟು. ಖಾರಿ ಅಥವಾ ಕೊಲ್ಲಿಯ ದಂಡೆಯಲ್ಲಿ ಒಂದು ಕಂಬವನ್ನು ನೆಟ್ಟು ಮತ್ತು ಅದಕ್ಕೆ ಒಂದು ಹಗ್ಗದ ಕೊನೆಯನ್ನು ಬಿಗಿದು ಮತ್ತೊಂದು ಕೊನೆಯನ್ನು ತಮ್ಮ ದೋಣಿಗೆ ಕಟ್ಟುತ್ತಾರೆ. ಸತ್ತ ಮೀನುಗಳನ್ನು ನೇತಾಡುವ ಹಗ್ಗಗಳನ್ನು ಈ ಹಗ್ಗದಿಂದ ಇಳಿಬಿಡುತ್ತಾರೆ. ಇವು ನೀರಿನಲ್ಲಿ ಮುಳುಗಲು ಸಣ್ಣಸಣ್ಣ ಕಲ್ಲುಗಳನ್ನು ಮೀನಿನೊಂದಿಗೆ ಬಿಗಿಯುತ್ತಾರೆ. ಏಡಿಗಳು ಮೀನುಗಳನ್ನು ತಮ್ಮ ಹಿಡಿಗಾಲುಗಳಿಂದ ಬಲವಾಗಿ ಹಿಡಿದು ಕೆಳಕ್ಕೆ ಜಗ್ಗುತ್ತವೆ. ಹಗ್ಗ ಭಾರವಾಗಿರುವುದನ್ನು ಕಂಡು, ಅದನ್ನು ಮೇಲಕ್ಕೆ ಎತ್ತಿ ಏಡಿಗಳನ್ನು ಸಂಗ್ರಹಿಸುತ್ತಾರೆ.

ಜಪಾನ್ ಮತ್ತು ಅಮೆರಿಕ ದೇಶಗಳಲ್ಲಿ ಏಡಿಯ ಮಾಂಸವನ್ನು ಹದಗೊಳಿಸಿ ಡಬ್ಬಗಳಲ್ಲಿ ತುಂಬುವ ಉದ್ಯಮಗಳು ಬೆಳೆದಿವೆ. ಅಲ್ಲಿ ಮೊದಲು ಏಡಿಗಳನ್ನು 15–20 ಮಿನಿಟುಗಳ ಕಾಲ ಕುದಿಯುವ ನೀರಿನಲ್ಲಿ ಅದ್ದಿ ಅನಂತರ ಅವುಗಳ ಹೊರಕವಚ ಮತ್ತು ಇತರ ಮೃದುವಾದ ಪಚನಾಂಗ, ಶ್ವಾಸಾಂಗ, ಸಂತಾನೋತ್ಪತ್ತಿ ಅಂಗಗಳನ್ನು ಹೊರತೆಗೆದು ಶುದ್ಧವಾದ ನೀರಿನಿಂದ ಚೆನ್ನಾಗಿ ತೊಳೆಯುತ್ತಾರೆ. ಅನಂತರ ಅವನ್ನು 1% ಭಾಗದ ಉಪ್ಪುನೀರಿನಲ್ಲಿ ತೊಳೆದು ಜಜ್ಜಿ ಶುದ್ಧಗೊಳಿಸಿ ಡಬ್ಬಗಳಲ್ಲಿ ತುಂಬಿ ರಕ್ಷಿಸುತ್ತಾರೆ. ಹೀಗೆ ಸಿದ್ಧಗೊಳಿಸಿದ ಕೈಸೊನೆಕ್ಸ್ ಫೆಲಾಂಜಿಯಂ ಎಂಬ ಏಡಿಯ ಮಾಂಸ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಹೆಸರಾಗಿದೆ.

ಏಡಿಗಳ ಗಾತ್ರ ಸಾಮಾನ್ಯವಾಗಿ ಚಿಕ್ಕದು. ಕೆಲವು ಮಾತ್ರ ದೊಡ್ಡದಾಗಿರುವುದುಂಟು. ಒಂದೆರಡು ಜಾತಿಯ ಏಡಿಗಳು ರಾಕ್ಷಸಾಕಾರದಷ್ಟು ಬೆಳೆದಿರುತ್ತವೆ. ಉದಾಹರಣೆಗೆ ಜಪಾನಿನ ರಾಕ್ಷಸ ಏಡಿಯ ಕ್ಯಾರಪೇಸು (ದೇಹ) ಒಂದು ಅಡಿಗಿಂತಲೂ ಹೆಚ್ಚಿನ ವ್ಯಾಸವುಳ್ಳದ್ದು. ಅದರ ಕಾಲುಗಳ ಉದ್ದ ಹತ್ತು ಅಡಿಗಳಷ್ಟಿದೆ.

ಬ್ರಾಕಿಯೂರದ ಸೋದರ ಉಪಗಣವಾದ ಅನೊಮುರದಲ್ಲಿ ಕೆಲವು ಕಠಿಣ ಚರ್ಮಿಗಳನ್ನು ಏಡಿಗಳೆಂದು ಕೆಲವು ಸನ್ನಿವೇಶಗಳಲ್ಲಿ ಕರೆಯುವುದುಂಟು. ಈ ಗುಂಪಿನ ದಶಪಾದಿಗಳಿಗೂ ಉದರ ಮೋಟಕು. ಅದು ಶಿರೋವಕ್ಷಕ್ಕಿಂತಲೂ ಚಿಕ್ಕದು; ಮತ್ತು ಶಿರೋವಕ್ಷದ ತಳಭಾಗದಲ್ಲಿ ಅದು ಶಾಶ್ವತವಾಗಿ ಮಡಿಚಿಕೊಂಡಿರುತ್ತದೆ. ಈ ಗುಂಪಿನಲ್ಲಿ ಏಡಿಗಳೆಂದು ಕರೆಸಿಕೊಳ್ಳುವ ಪ್ರಾಣಿಗಳನ್ನು ಸಂನ್ಯಾಸಿ ಏಡಿಗಳೆಂದು ಕರೆಯುವುದುಂಟು. ಇವು ಸಾಮಾನ್ಯವಾಗಿ ಬಸವನಹುಳುವರ್ಗದ ಜಠರಪಾದಿಗಳ (ಗ್ಯಾಸ್ಟ್ರಪೊಡ) ಬರಿದಾದ ಶಂಖಗಳಲ್ಲಿ ವಾಸಿಸುತ್ತವೆ. ಇವುಗಳ ಉದರಭಾಗ ಮೃದುವಾಗಿರುವುದಲ್ಲದೆ ಶಂಖಗಳ ಆಕಾರದಂತೆ ಸುರುಳಿ ಸುತ್ತಿಕೊಂಡಿರುತ್ತವೆ. ಇವುಗಳ ಎಡಭಾಗದ ಉದರದ ಉಪಾಂಗಗಳು ಕ್ಷೀಣಗೊಂಡಿವೆ ಮತ್ತು ಬಲಭಾಗ ನಶಿಸಿಹೋಗಿವೆ. ಶಂಖದ ಒಳತುದಿ ಭಾಗವನ್ನು ಹಿಡಿದುಕೊಳ್ಳಲು ಸಹಾಯಕವಾಗಲು ಅದರ ಕೊನೆಯ ಉದರದ ಉಪಾಂಗಗಳು ಮತ್ತು ಪಶ್ಚಾಂತಪಾದಗಳು (ಉರಪೊಡ) ಕೊಕ್ಕೆಯಂತೆ ಮಾರ್ಪಾಟಾಗಿವೆ. ಇದರ ಆಂಟೆನ್ನಗಳು ಉದ್ದವಾಗಿವೆ. ಮೊದಲ ಕೀಲೇಟುಪಾದಗಳಲ್ಲಿ ಅಸಮನಾಗಿ ಬೆಳೆದಿರುವ ಕೀಲೇಟುಗಳಿವೆ. ಕೊನೆಯ ಎರಡು ಜೊತೆ ವಕ್ಷದ ಕಾಲುಗಳು ಕ್ಷೀಣಗೊಂಡಿವೆ. ಸಂನ್ಯಾಸಿ ಏಡಿಗಳು ದೊಡ್ಡವಾದಂತೆಲ್ಲ ಹಳೆಯ ಶಂಖವನ್ನು ತ್ಯಜಿಸಿ ಹೊಸ ದೊಡ್ಡ ಶಂಖದಲ್ಲಿ ಮನೆ ಮಾಡಿಕೊಳ್ಳುತ್ತವೆ. ಇವು ಸಾಮಾನ್ಯವಾಗಿ ಸಮುದ್ರ ತೀರದ ಖಾರಿಗಳಲ್ಲಿ ಕಂಡುಬರುತ್ತವೆ. ಈ ಗುಂಪಿನಲ್ಲಿ ಬಿರ್ಗಸ್ ಲ್ಯಾಟ್ರೊ ಎಂಬ ತೆಂಗಿನಕಾಯಿ ಏಡಿ ಅಥವಾ ದರೋಡೆಕಾರ ಏಡಿಯನ್ನು ಅದು ದೊರಕುವ ಸ್ಥಳದಲ್ಲಿ ವಾಸಿಸುವ ಜನರು ಆಹಾರಕ್ಕಾಗಿ ಉಪಯೋಗಿಸುತ್ತಾರೆ. ಇದೂ ಕೂಡ ಸಂನ್ಯಾಸಿ ಏಡಿಯೇ. ಮೃದ್ವಂಗಿಗಳ ಕವಚ ಅಥವಾ ಶಂಖಗಳಲ್ಲಿ ಮನೆಮಾಡಿಕೊಂಡು ಜೀವಿಸುತ್ತದೆ. ಹಿಂದೂಸಾಗರದ ಸೆಂಟ್ ನೆಲ್ ದ್ವೀಪ ಮತ್ತು ಬಂಗಾಳಕೊಲ್ಲಿಯ ನಿಕೋಬಾರ್ ದ್ವೀಪಗಳಿಗೆ ಇದು ಸೀಮಿತಗೊಂಡಿದೆ. ಇದರ ಕ್ಲೋಮಗಳು (ಬ್ರಾಂಕಿಯೇ) ಅಥವಾ ಕಿವಿರುಗಳು ಕ್ಷೀಣಗೊಂಡಿರುವುದರಿಂದ ಗಾಳಿಯನ್ನು ಉಸಿರಾಡಲು ಕಿವಿರು ಅಂಗುಳದಲ್ಲಿ ರಕ್ತನಾಳ

ಗಳಿಂದ ತುಂಬಿದ ಗೋಡೆಗಳಿವೆ. ಭೂಪ್ರದೇಶದಲ್ಲಿ ಹೆಚ್ಚು ಕಾಲ ವಾಸಿಸಲು ಇದು ಹೊಂದಿಕೊಂಡಿದ್ದರೂ ಆಗಾಗ್ಗೆ ಸಮುದ್ರಕ್ಕೆ ಭೇಟಿಕೊಟ್ಟು ತನ್ನ ಕಿವಿರುಗಳನ್ನು ಒದ್ದೆ ಮಾಡಿಕೊಳ್ಳುತ್ತದೆ. ಅಲ್ಲದೆ ಸಂತಾನೋತ್ಪತ್ತಿಯೂ ಕೂಡ ಸಮುದ್ರ ದಲ್ಲಿಯೆ ನಡೆಯಬೇಕು. ಏಕೆಂದರೆ ಜ಼ೋಯೆಯ ಲಾರ್ವಗಳು ಸಮುದ್ರವಾಸಿಗಳು. ಅವು ಮರದಿಂದ ಬಿದ್ದ ತೆಂಗಿನಕಾಯಿಗಳ ಸಿಪ್ಪೆಯನ್ನು ಬಿಚ್ಚಿ ಅದರಲ್ಲಿರುವ ಕರಟ



ಬಿರ್‍ಗಸ್ ಲಾತ್ರೊ (ತೆಂಗಿನಕಾಯಿ ಏಡಿ)

ವನ್ನು ಒಡೆದು ತೆಂಗಿನಕಾಯಿಯನ್ನು ತಿನ್ನಬಲ್ಲವು. ಹಲವು ಸಂದರ್ಭಗಳಲ್ಲಿ ತೆಂಗಿನಗಿಡ ಗಳನ್ನೂ ಹತ್ತಬಲ್ಲವು. ತಮ್ಮ ರಕ್ಷಣೆಗಾಗಿ ಒಡೆದ ಕರಟಗಳಲ್ಲಿ ಮನೆಮಾಡಿ ಕೊಂಡಿರುವುದು ಇವುಗಳ ಹುಟ್ಟುಗುಣ. ಈ ಕಾರಣಗಳಿಂದಲೇ ಇವಕ್ಕೆ ತೆಂಗಿನ ಏಡಿಗಳೆಂದು ಕರೆಯುವುದೂ ಉಂಟು. (ಬಿ.ಎಸ್.ಬಿ.)

**ಏಡಿಗಂತಿ :** ದೇಹದ ಯಾವುದೇ ಭಾಗ ಅಥವಾ ಅಂಗದಲ್ಲಿ ಸ್ವತಂತ್ರವಾಗಿ ಬೆಳೆಯುವ ಊತಕ ; ಇದರಿಂದ ದೇಹಕ್ಕೆ ಯಾವ ಉಪಯೋಗವೂ ಇಲ್ಲ ; ಅಡೆತಡೆ ಯಿಲ್ಲದೆ ವರ್ಧಿಸಬಲ್ಲುದು ; ಪ್ರಾಥಮಿಕ ಬೆಳೆವಣಿಗೆಯ (ಪ್ರೈಮರಿ ಗ್ರೋತ್) ಸ್ಥಳದಿಂದ ದೂರವಾಗಿ ದೇಹದ ಬೇರೆ ಬೇರೆ ಭಾಗಗಳಲ್ಲಿ ತದ್ರೂಪದ ದ್ವಿತೀಯಕ ಬೆಳವಣಿಗೆಗಳನ್ನು ಉಂಟು ಮಾಡಬಲ್ಲುದು (ಕ್ಯಾನ್ಸರ್). ಅರ್ಬುದ, ನಳ್ಳಿ, ಜಾಡ್ಯ ಪರ್ಯಾಯ ಪದಗಳು. ಏಡಿಯ ಕಾಲುಗಳಂತೆ ಎಲ್ಲ ದಿಕ್ಕುಗಳಲ್ಲೂ ಹರಡುವುದರಿಂದ ಏಡಿಗಂತಿ ಎಂದು ಹೆಸರಾಗಿದೆ. ಈ ರೋಗಕ್ಕೆ ಬಲಿಯಾದ ವ್ಯಕ್ತಿ ಅತಿ ಶೀಘ್ರವಾಗಿಯೂ ತೀವ್ರವಾಗಿಯೂ ಕ್ಷೀಣಿಸಿ ಕೊನೆಯಲ್ಲಿ ಸಾವಿಗೇ ಒಳಗಾಗುವುದರಿಂದ ಇದನ್ನು ವಿಷಮಗಂತಿ, ವಿಷಮಜಾಡ್ಯ ಎಂದೂ ಕರೆಯುವು ದುಂಟು.

ಏಡಿಗಂತಿಯ ವಿಷಮತೆಯ ಮಟ್ಟ ಒಂದೊಂದು ಬಗೆಯದರಲ್ಲೂ ಒಂದೊಂದು ವಿಧ. ಇದನ್ನು ಕೆಳಗಿನ ಅಂಶಗಳನ್ನು ಆಧರಿಸಿ ನಿರ್ಧರಿಸಲಾಗುತ್ತದೆ.

1 ಏಡಿಯ ಮೈಯಿಂದ ಸುತ್ತಲೂ ಚಾಚಿ ಹರಡುವ ಕೈಕಾಲುಗಳಂತೆ ಅಕ್ಕಪಕ್ಕದ ಊತಕಗಳ ಬಹುಬಗೆಯ ಆಕ್ರಮಣ.

2 ಏಡಿಗಂತಿಯನ್ನು ಶಸ್ತ್ರಕ್ರಿಯೆಯಿಂದ ಪೂರ್ಣವಾಗಿ ಕತ್ತರಿಸಿ ತೆಗೆದು ಹಾಕಿದೆ ವೆಂದು ಭಾವಿಸುತ್ತಿರುವಾಗಲೇ ಅಲ್ಲಿ ಉಳಿದಿರಬಹುದಾದ ಕೆಲವೇ ಏಡಿಗಂತಿಕೋಶ ಗಳ ಪರಿಣಾಮವಾಗಿ ಅದೇ ಜಾಗದಲ್ಲಿ ವ್ಯಾಧಿ ಪುನಃ ತಲೆದೋರುತ್ತದೆ ; ಮತ್ತು ಈ ಕೋಶಗಳು ಯಥಾಪ್ರಕಾರ ವೃದ್ಧಿಗೊಳ್ಳುತ್ತವೆ.

3 ದೇಹದ ಸಹಜ ಊತಕಗಳ ಬೆಳೆವಣಿಗೆಗೆ ಇರುವ ಯಾವ ನಿಯಮ ನಿರ್ಬಂಧ ಗಳಿಗೂ ಏಡಿಗಂತಿಯ ಕೋಶಗಳು ಬದ್ಧವಾಗಿಲ್ಲ. ವಿಭಜನೆಗೊಂಡು ಇವು ಸ್ವ ಸಾಮರ್ಥ್ಯದಿಂದ ಸ್ವೇಚ್ಛೆಯಾಗಿ ಬೇಗ ಬೇಗ ವಿಪರೀತವಾಗಿ ವೃದ್ಧಿಯಾಗಬಲ್ಲುವು.

4 ವ್ಯಾಧಿಯ ವಿಷಮತೆ ತೀವ್ರಗೊಂಡಂತೆ ಏಡಿಗಂತಿಯ ಕೋಶಗಳಿಗೂ ಅದು ಹುಟ್ಟಿದ ಊತಕದ ಕೋಶಗಳಿಗೂ ಇರುವ ಹೋಲಿಕೆ ಕಡಿಮೆ ಆಗುತ್ತದೆ. ಇಷ್ಟು ಮಾತ್ರವಲ್ಲ. ಏಡಿಗಂತಿಯ ಕೋಶಗಳು ಊತಕದ ರಚನೆಯನ್ನಾಗಲೀ ಊತಕ ದಲ್ಲಿನ ಕೋಶದ ನಮೂನೆಯನ್ನಾಗಲೀ ಪಾಲಿಸುವುದಿಲ್ಲ. ಅವು ಗೋಜುಗೋಜ ಲಾಗಿ ಬೆಳೆದುಕೊಂಡು ಹೋಗುತ್ತವೆ.

ನ ಬಹುಪಾಲು ಏಡಿಗಂತಿಗಳಿಗೆ ಒಂದೇ ದೇಹದಲ್ಲಿ ಮೂಲಸ್ಥಾನದಿಂದ ಬಲು ದೂರದಲ್ಲಿ ದ್ವಿತೀಯ ಗಂತಿಗಳನ್ನು (ಎಂದರೆ ಪ್ರಾಥಮಿಕ ಗಂತಿಗೂ ದ್ವಿತೀಯಕ ಬೆಳೆವಣಿಗೆಗೂ ಯಾವ ಸಂಬಂಧವೂ ಇಲ್ಲದಂತೆ) ಪ್ರಚೋದಿಸುವ ಶಕ್ತಿಯಿದೆ. ಈ ಶಕ್ತಿಯ ಹೆಸರು ಸ್ಥಾನಾಂತರಿಕೆ (ಮೆಟಾಸ್ಟ್ಯಾಸಿಸ್). ಹಾಲುರಸ ನಾಳಗಳು (ಲಿಂಫ್ಯಾಟಿಕ್ಸ್) ರಕ್ತನಾಳಗಳು ಮುಂತಾದ ದೇಹದ ಸಹಜ ಸಾಗುದಾರಿಗಳಲ್ಲೋ ಪೊಳ್ಳು ಗಳ ಮೂಲಕವೋ ಏಡಿಗಂತಿಯ ಕೋಶಗಳು ಸಾಗಿ ಹೋಗುವುದರಿಂದ ಇದು ಸಂಭವಿಸುತ್ತದೆ. ಇಂಥ ಕೋಶಗಳು ದೇಹದ ದೂರದೂರದ ಭಾಗಗಳಲ್ಲಿ ನೆಲೆ ಗೊಂಡು ಅಲ್ಲಿ ಏಡಿಗಂತಿಯ ತದ್ರೂಪಗಳಾಗಿ ಬೆಳೆಯುತ್ತವೆ. ಈ ಸ್ಥಾನಾಂತರಿಕೆ ಗಳ ವಿತರಣೆಯನ್ನು—ಎಂದರೆ ದ್ವಿತೀಯಕ ಬೆಳೆವಣಿಗೆಗಳು ಕಾಣಿಸಿಕೊಳ್ಳುವ ಸ್ಥಾನಗಳನ್ನು—ದೇಹದಲ್ಲಿ ಪ್ರಾಥಮಿಕ ಬೆಳೆವಣಿಗೆಯ ಸ್ಥಾನ, ವ್ಯಾಧಿಗ್ರಸ್ಥ ಅಂಗ ಮತ್ತು ಅದಕ್ಕೂ ಹಾಲುರಸ ನಾಳಗಳು, ರಕ್ತ ನಾಳಗಳು, ಸಹಜಸಾಗುದಾರಿಗಳು ಮತ್ತು ದೇಹದ ಪೊಳ್ಳುಗಳು ಇವಕ್ಕೂ ಇರುವ ಸಂಬಂಧದಿಂದ ನಿರ್ಧರಿಸಬಹುದು.

ಸ್ಥಾನಾಂತರಿಕೆಗಳು ಉಂಟಾಗುವ ಕಾಲ ಸಹ ಬದಲಾಗುತ್ತದೆ. ಕೆಲವು ವಿಧದ ಏಡಿಗಂತಿಗಳಲ್ಲಿ ಪ್ರಾಥಮಿಕ ಬೆಳೆವಣಿಗೆ ಚಿಕ್ಕದು ಮತ್ತು ಗಮನಾರ್ಹವಲ್ಲದುದಾ ಗಿದ್ದು ಯಾವ ಚಿಹ್ನೆಗಳನ್ನಾಗಲೀ ಲಕ್ಷಣಗಳನ್ನಾಗಲೀ ಪ್ರಕಟಪಡಿಸದಿರುವಾಗಲೂ ಸ್ಥಾನಾಂತರಿಕೆಗಳು ಉಂಟಾಗಬಹುದು. ಬೇರೆ ವಿಧದವುಗಳಲ್ಲಿ, ಪ್ರಾಥಮಿಕ ಗಂತಿಯನ್ನು ಶಸ್ತ್ರಚಿಕಿತ್ಸೆಯಿಂದ ನಿರ್ಮೂಲಗೊಳಿಸಿದ ದೀರ್ಘ ಕಾಲಾನಂತರವೂ ಸ್ಥಾನಾಂತರಿಕೆಗಳು ತಲೆದೋರಬಹುದು. ಸ್ಥಾನಾಂತರಿಕೆಗಳು ಒಂದು ಸಲ ತಲೆದೋರಿದ ತರುವಾಯ ಪ್ರಾಥಮಿಕ ಗಂತಿಯನ್ನು ಶಸ್ತ್ರಕ್ರಿಯೆಯಿಂದ ನಿರ್ಮೂಲ ಗೊಳಿಸಿದರೂ ಪ್ರಯೋಜನ ಏನೂ ಆಗದು. ಏಡಿಗಂತಿ ಕಾಯಿಲೆಯ ಅನಿವಾರ್ಯ ಅಂತಿಮ ಘಟ್ಟವನ್ನು ನಿರ್ಧರಿಸಲು ದ್ವಿತೀಯಕ ಬೆಳೆವಣಿಗೆಗಳು ಬಲು ಸಹಾಯ ಕಾರಿ ಅಂಶಗಳು.

ವಿಧಗಳು : ಎರಡು ಪ್ರಧಾನ ವಿಧದ ಏಡಿಗಂತಿಗಳಿವೆ—ಕಾರ್ಸಿನೋಮ ಮತ್ತು ಸಾರ್ಕೋಮ.

ಕಾರ್ಸಿನೋಮ : ಇದು ಚರ್ಮ, ಲೋಳೆಪರೆಗಳು, ನರಗಳು, ಮಿದುಳು, ಗ್ರಂಥಿಗಳ ತೆರನ ಮೇಲ್ಪರೆಯಿಂದ ಏಳುತ್ತದೆ. ಆದ್ದರಿಂದ ಚರ್ಮ, ಬಾಯಿ, ಒಸಡು, ಉಸಿರ್ನಾಳ, ಪುಪ್ಪುಸಗಳು, ಅನ್ನನಾಳ, ಜಠರ, ಕರುಳುಗಳು, ನೆಟ್ಟ ಗರುಳು (ರೆಕ್ಟಂ), ಅಂತಃಸ್ರಾವೀಗ್ರಂಥಿಗಳು, ಮೂತ್ರಪಿಂಡ, ಈಲಿ, ಮಾಂಸಲಿ, ಪಿತ್ತಕೋಶ, ಮೂತ್ರಕೋಶ, ಮೊಲೆ, ಜನನಾಂಗಗಳು, ಮಿದುಳು, ನರಗಳು, ಇವಲ್ಲೆಲ್ಲ ಏಳುವ ಏಡಿಗಂತಿಗಳು ಕಾರ್ಸಿನೋಮ.

ಸಾರ್ಕೋಮ : ಜೋಡಿಸುವ ಊತಕಗಳು–ಎಂದರೆ ತಂತುಕ (ಫೈಬ್ರಸ್), ಕೊಬ್ಬಿನ, ಸ್ನಾಯುವಿನ, ಮೆಲ್ಲೆಲುಬಿನ (ಕಾರ್ಟಿಲೇಜಿನಸ್), ಎಲುಬಿನ, ಹಾಲು ರಸದ ,ರಕ್ತವನ್ನು ತಯಾರಿಸುವ ಊತಕಗಳು—ಇವೇ ಮುಂತಾದುವುಗಳಿಗೆ ಬರುವ ವ್ಯಾಧಿ. ಆದ್ದರಿಂದ ಲೋಳೆ ಪರೆಗಳ, ಚರ್ಮದ ಅಡಿಯ ಅಂಗಗಳಲ್ಲಿ ಇರುವ ತಂತುಕ ಅಲ್ಲದೆ ಕೊಬ್ಬಿನ ಊತಕಗಳು, ಸ್ನಾಯುಗಳು, ಮೆಲ್ಲೆಲುಬುಗಳು, ಮೂಳೆಗಳು, ಹಾಲುರಸ ಗ್ರಂಥಿಗಳು, ತೊರಳೆ (ಸ್ಪ್ಲೀನ್), ಎಲುಬಿನ ಮಜ್ಜೆ (ಬೋನ್ ಮ್ಯಾರ್ರೋ), ರಕ್ತದಲ್ಲಿರುವ ಬಿಳಿಯ ಅಲ್ಲದೆ ಕೆಂಪು ರಕ್ತಗೋಳಕಗಳೇ ಮುಂತಾದುವಲ್ಲಿ ಏಳುವ ಏಡಿಗಂತಿಗಳು ಸಾರ್ಕೋಮ.

ಲಿಂಗ, ವಯಸ್ಸು : ಏಡಿಗಂತಿ ಏಳುವುದಕ್ಕೆ ಲಿಂಗ, ವಯಸ್ಸುಗಳ ತಾರತಮ್ಯ ವೇನೂ ಇರುವ ಹಾಗೆ ತೋರುವುದಿಲ್ಲ. ಆದರೆ ಜಠರ, ಗಂಟಲು ಮತ್ತು ಪುಪ್ಪುಸ ಗಳ ಏಡಿಗಂತಿ ಗಂಡಸರಲ್ಲಿ ಅಧಿಕ ; ಮೊಲೆ ಮತ್ತು ಗರ್ಭಕೋಶಗಳ ಏಡಿಗಂತಿ ಹೆಂಗಸರಲ್ಲಿ ಅಧಿಕ. ಪ್ರಾಯದ ರೀತ್ಯಾ ಪರಿಶೀಲಿಸಿದಲ್ಲಿ ಸಾರ್ಕೋಮ ಕಡಿಮೆ ವಯಸ್ಸಿನಲ್ಲೂ ಕಾರ್ಸಿನೋಮ ಹೆಚ್ಚು ವಯಸ್ಸಿನಲ್ಲೂ ತಲೆದೋರುವುದು ಕಂಡು ಬಂದಿದೆ.

ಕಾರಣ : ಕೋಶದ ಬೆಳೆವಣಿಗೆಯಲ್ಲಿ ತಲೆದೋರುವ ಅಕ್ರಮವೇ ಏಡಿಗಂತಿ. ದೇಹದಲ್ಲಿನ ಕೋಶಗಳ ಸಹಜ ಬೆಳೆವಣಿಗೆಯ ಮತ್ತು ವೃದ್ಧಿಯ ನಿಯಮ ಗಳಿಂದ ಏಡಿಗಂತಿ ಕೋಶಗಳು ಅತೀತವಾಗಿವೆ. ಇವುಗಳ ಬೆಳೆವಣಿಗೆ ಹಾಗೂ ವೃದ್ಧಿ ಸ್ವತಂತ್ರ ಮತ್ತು ಶಾಶ್ವತ. ಇತರ ಕೋಶಗಳ ಜೀವವಸ್ತುಕರಣದ ನಿಯಮಕ್ಕಿಂತ ಇವುಗಳ ನಿಯಮ ಭಿನ್ನವಾಗಿದೆ. ಹೀಗಾಗಿ ಇವು ಅಪರಿಮಿತವಾಗಿ ವೃದ್ಧಿಸಬಲ್ಲುವು. ಇನ್ನು ಗಾತ್ರ, ಆಕಾರ ಹಾಗೂ ಇತರ ಲಕ್ಷಣಗಳಲ್ಲಾದರೋ ಈ ಕೋಶಗಳಲ್ಲಿ ಗಮನಾರ್ಹ ವ್ಯತ್ಯಾಸಗಳಿವೆ. ಅವು ಉತ್ಪನ್ನವಾಗುವ ಮೂಲ ಊತಕಗಳ ಕೋಶಗಳಿಗೂ ಏಡಿಗಂತಿ ಕೋಶಗಳಿಗೂ ಯಾವುದೇ ವಿಧದ ಹೋಲಿ ಕೆಯೂ ಇಲ್ಲದಿರುವುದಿದೆ. ಕೋಶಗಳಲ್ಲಿ ಏಡಿಗಂತಿಯಿಂದ ಉಂಟಾಗುವ ಈ ಮೂಲ ಭೂತ ವ್ಯತ್ಯಾಸದ ಕಾರಣವೇನೆಂಬುದು ಗಹನ ಅನ್ವೇಷಣೆ ಮತ್ತು ಸಂಶೋಧನೆಗಳ ವಸ್ತು. ಏಡಿಗಂತಿಗೆ ಇಂಥದೇ ಒಂದು ಕಾರಣ ಎಂದು ಹೇಳುವಂತಿಲ್ಲ ; ಇದರ

ಬದಲು ಹಲವಾರು ಕಾರಣಗಳ ಪ್ರಭಾವದಿಂದ ಕೋಶಗಳಲ್ಲಿ ಏಡಿಗಂತಿ ತಲೆದೋರುವುದೆಂದು ತಿಳಿದಿದೆ. ಕೋಶದಲ್ಲಿ ನಡೆಯುವ ಜೀವಕ್ರಿಯೆಗಳಲ್ಲಿ ಒಂದು ಮೂಲಭೂತ ವ್ಯತ್ಯಾಸವನ್ನು ಯಾವುದೋ ಒಂದು ಆರಂಭಿಕಕಾರಕ (ಇನಿಶಿಯೇಟಿಂಗ್ ಏಜೆಂಟ್) ತೊಡಗಿಸಬಹುದು. ಮುಂದೆ ಪ್ರೇರಕಕಾರಕ (ಪ್ರಮೋಟಿಂಗ್ ಏಜೆಂಟ್) ಎಂಬ ಇನ್ನೊಂದು ಕಾರಕ ದೀರ್ಘಕಾಲ ಈ ಕೋಶದ ಮೇಲೆ ಕ್ರಿಯೆಎಸಗುವುದು. ಇದರ ಪರಿಣಾಮವಾಗಿ ಮೂಲಭೂತ ವ್ಯತ್ಯಾಸ ಅವಿಪರ್ಯಯವಾಗುತ್ತದೆ (ಇರ್ರಿವರ್ಸಿಬಲ್). ಇಂಥ ಅಂಶಗಳನ್ನು ಅಥವಾ ಕಾರಕಗಳನ್ನು ಏಡಿಗಂತಿಜನಕಗಳೆಂದು (ಕಾರ್ಸಿನೋಜೆನ್ಸ್) ಕರೆಯುವುದುಂಟು. ಇವು ಭೌತ, ರಾಸಾಯನಿಕ, ಜೈವಿಕ (ವೈರಸ್ ಮಾದರಿಯ ಅತಿಸೂಕ್ಷ್ಮ ಜೀವಿಗಳಂಥವು) ಆಗಿರಬಹುದು.

ಭೌತ ಮತ್ತು ರಾಸಾಯನಿಕ ಏಡಿಗಂತಿಜನಕಗಳು : ಕ್ರಿಯಾಶೀಲ ಬೆಳಕು (ಆಕ್ಟಿನಿಕ್ ಲೈಟ್), ಎಕ್ಸ್‌ಕಿರಣಗಳು, ರೇಡಿಯಂ (ಸಂಕ್ಷೇಪವಾಗಿ, ಅಯಾನೀಕರಿಸುವ ವಿಸರಣೆಯ ವಿವಿಧ ರೂಪಗಳು) ಭೌತ ಏಡಿಗಂತಿಜನಕಗಳು. ಮಾನವ ಕುಲವು ಪರಮಾಣುಯುಗದ ಹೊಸ್ತಿಲನ್ನು ದಾಟುತ್ತಿರುವುದರಿಂದ ಈ ಬಗೆಯ ವಿಸರಣೆಯಿಂದ ಆಗುವ ಅಪಾಯಗಳು ಹೆಚ್ಚುಹೆಚ್ಚಾಗುತ್ತಿವೆ. (ನೋಡಿ—ಏಡಿಗಂತಿ ಜನಕ ರಾಸಾಯನಿಕಗಳು.)

ಜೈವಿಕ ಏಡಿಗಂತಿಜನಕಗಳು : ಸಾಮಾನ್ಯವಾಗಿ ಪ್ರಾಣಿಗಳಲ್ಲೂ ಸಸ್ಯಗಳಲ್ಲೂ ಏಡಿಗಂತಿಯನ್ನು ಉಂಟುಮಾಡುವ ವೈರಸುಗಳಿಗೆ ಸಾಕಷ್ಟು ನಿದರ್ಶನಗಳಿವೆ. ಈ ಅತಿ ಸೂಕ್ಷ್ಮಜೀವಿಗಳು ಬಲು ಸುಲಭವಾಗಿ ಕೋಶಗಳನ್ನು ಪ್ರವೇಶಿಸಿ ಅಲ್ಲಿ ಉಪಸ್ಥಿತವಾಗುವುವು ; ತರುವಾಯ ಆ ಕೋಶಗಳ ಜೀವನವ್ಯಾಪಾರಗಳಲ್ಲಿ ತಲೆಹಾಕಿ ಅವನ್ನು ಮಾರ್ಪಡಿಸಿ ವಿಷಮ ವ್ಯತ್ಯಾಸಗಳನ್ನು ಉಂಟುಮಾಡುತ್ತವೆ ; ಇವೇ ಮುಂದೆ ವಿಷಮಗಂತಿಗಳಾಗಿ ಏಡಿಗಂತಿಜನಕಗಳಾಗುತ್ತವೆ. (ಸಿ.ಡಿ.)

**ಏಡಿಗಂತಿಜನಕ ರಾಸಾಯನಿಕಗಳು :** ಜೀವಿಯ ದೇಹದಲ್ಲಿ ಏಡಿಗಂತಿಯನ್ನು (ಕ್ಯಾನ್ಸರ್) ಉಂಟುಮಾಡಬಲ್ಲ ರಾಸಾಯನಿಕಗಳು (ಕಾರ್ಸಿನೊಜೆನಿಕ್ ಕೆಮಿಕಲ್ಸ್). ದೇಹದ ಸಹಜ ಕೋಶಗಳಲ್ಲಿ ವಿವಿಧ ಬಗೆಯ ರಾಸಾಯನಿಕಗಳು ವಿಷಮ ಬದಲಾವಣೆಗಳನ್ನು ಉಂಟುಮಾಡಬಲ್ಲವು. ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಈ ಬಗೆಯ ಏಡಿಗಂತಿಯ ಮಾರ್ಪಾಡುಗಳನ್ನು ಉಂಟುಮಾಡಬಲ್ಲ ರಾಸಾಯನಿಕಗಳೇ ಏಡಿಗಂತಿಜನಕ ರಾಸಾಯನಿಕಗಳು. ಏಡಿಗಂತಿ ಬಹುಕೋಶ ಜೀವಿಗಳಿಗೆ (ಮಲ್ಟಿಸೆಲ್ಲುಲರ್ ಆರ್ಗ್ಯಾನಿಸಮ್ಸ್) ಬರುವ ಒಂದು ಕಾಯಿಲೆ. ಜೀವಿಯ ಸಹಜ ಕೋಶಗಳೇ ಅವಾಸ್ತವಿಕರೂಪ ತಳೆದು ಅನಿಯಂತ್ರಿತ ವೃದ್ಧಿಹೊಂದುವಿಕೆ ಮತ್ತು ಜೀವಿಯಲ್ಲಿ ಹರಡುವಿಕೆ—ಇವು ಈ ಕಾಯಿಲೆಯ ಲಕ್ಷಣ. ಏಡಿಗಂತಿ ಒಂದು ಕಾಯಿಲೆ ಅಲ್ಲ; ಹಲವಾರು ಕಾರ್ಯಕಾರಣ ಸಂಬಂಧಗಳ (ಏಟಿಯಾಲಜಿ) ಪರಿಣಾಮವಾಗಿ ಉಂಟಾಗುವ ಹಲವಾರು ಕಾಯಿಲೆಗಳ ಒಂದು ಗುಂಪೇ ಆಗಿದೆ. ಆದ್ದರಿಂದ ಏಡಿಗಂತಿಯ ಬೆಳೆವಣಿಗೆಗೆ ಯಾವುದೇ ಒಂದು ವಿಶಿಷ್ಟ ಕಾರ್ಯಕಾರಣ ಸಂಬಂಧವನ್ನು ಇನ್ನೂ ಕಂಡುಹಿಡಿಯಲಾಗಿಲ್ಲ. ಇದುವರೆಗಿನ ಅನುಭವದ ಪ್ರಕಾರ ಏಡಿಗಂತಿಯ ಹಲವಾರು ನಮೂನೆಗಳಲ್ಲಿ ಬಹುಸಂಖ್ಯೆಯ ಕಾರ್ಯಕಾರಣ ಸಂಬಂಧಗಳು ಅಡಕವಾಗಿವೆಯೆಂದೂ ಇವುಗಳಲ್ಲಿ ಕೆಲವು ಇತರವುಗಳಿಗಿಂತ ಪ್ರಧಾನವಾಗಿವೆಯೆಂದೂ ತಿಳಿದಿವೆ. ಇಂಥವುಗಳಲ್ಲಿ ರಾಸಾಯನಿಕಗಳಿಂದ ಉತ್ಪನ್ನವಾಗುವ ಏಡಿಗಂತಿಗಳಿಗೆ (ಕಾರ್ಸಿನೋಜೆನಿಸಿಸ್) ಗಮನಾರ್ಹ ಸ್ಥಾನವಿದೆ.

ರಾಸಾಯನಿಕಜನ್ಯ ಏಡಿಗಂತಿಯನ್ನು ಮೊದಲು ಸೂಚಿಸಿದಾತ ಪರ್ಸಿವಾಲ್ ಪಾಟ್ (1775). ಹೊಗೆಕೊಳವೆಗಳಲ್ಲಿ ಕಟ್ಟಿಕೊಂಡಿದ್ದ ಕಿಟ್ಟ ತೆಗೆದು ಚೊಕ್ಕ ಪಡಿಸುತ್ತಿದ್ದ ಹುಡುಗರಲ್ಲಿ ತರಡಿನ ಏಡಿಗಂತಿ ಸಾಮಾನ್ಯವಾಗಿ ಏಳಲು ಹೊಗೆಕರಿ ಕಾರಣವಿರುವುದೆಂದು ಈತ ಬಗೆದ. ಕಾರ್ಖಾನೆಗಳ ಕೆಲಸಗಾರರಲ್ಲಿ ಕಂಡುಬರುವ ಚರ್ಮದ ಏಡಿಗಂತಿಯ (ಇಂಡಸ್ಟ್ರಿಯಲ್ ಸ್ಕಿನ್ ಕ್ಯಾನ್ಸರ್) ಕಾರಣ ಅಲ್ಲಿ ಚರ್ಮಕ್ಕೆ ತಾರೆಣ್ಣೆಯೊಡನೆ ಒದಗುವ ಸಂಪರ್ಕ ಎಂದು ಒಂದು ಶತಮಾನದ ತರುವಾಯ ವಾನ್ ವಾಲ್ಕ್ ಮ್ಯಾನ್ ಸೂಚಿಸಿದ (1875). ಶೇಲ್ ಎಣ್ಣೆಯ ಪರಿಣಾಮವಾಗಿ ಉಂಟಾಗುವ ಪ್ಯಾರಾಫಿನ್ ಏಡಿಗಂತಿಯನ್ನು (ಒಂದು ವರ್ಷದ ಅನಂತರ) ಶೋಧಿಸಿದಾತ ಬೆಲ್. ಕೈಗಾರಿಕೆಗಳು ಸರ್ವವ್ಯಾಪಿಯಾಗಿ ಬೆಳೆದಂತೆ ಖನಿಜದ ಎಣ್ಣೆ, ತಾರೆಣ್ಣೆ, ಹೊಗೆಕರಿ ಇವನ್ನೆಲ್ಲ ತಾಗಿಸಿಕೊಳ್ಳುವ ಕೆಲಸಗಾರರಲ್ಲಿ ಆ ಪರಿಣಾಮವಾಗಿ ಎದ್ದ ಗಂತಿಗಳು ಗಮನಕ್ಕೆ ಬಂದುವು.

ರಾಸಾಯನಿಕಗಳು ಏಡಿಗಂತಿಜನಕಗಳಾಗಬಹುದೆಂಬುದನ್ನು ಈ ಅನುಭವಗಳು ಸೂಚಿಸಿದುವು. ಆದರೆ ಈ ಭಾವನೆ ಖಚಿತವಾದದ್ದು ಯೋಮಗಾವ ಮತ್ತು ಇಚಿಕಾವ ಎಂಬ ವಿಜ್ಞಾನಿಗಳು 1915ರಲ್ಲಿ ಮಾಡಿದ ಸುಪ್ರಸಿದ್ಧ ಪರಿಶೋಧನೆಯಿಂದ–ಅವರು ಮೊಲಗಳ ಕಿವಿಗಳಿಗೆ ತಾರೆಣ್ಣೆ ಲೇಪಿಸಿ ಅಲ್ಲಿ ವಿಷಮಗಂತಿಗಳು (ಮ್ಯಾಲಿಗ್ನೆಂಟ್ ಟ್ಯೂಮರ್ಸ್) ಏಳುವುದನ್ನು ಗಮನಿಸಿದರು. ಮುಂದೆ 1918ರಲ್ಲಿ ಇದೇ ತೆರನ ಪ್ರಯೋಗದಿಂದ ಚಿಟ್ಟಿಲಿಗಳ (ಮೈಸ್) ಚರ್ಮದ ಮೇಲೆ ಗಂತಿಗಳನ್ನು ಉಂಟುಮಾಡುವುದು ಸುಟ್ಸೂಯಿಗೆ ಸಾಧ್ಯವಾಯಿತು. ಇಂಥ ಪ್ರಯೋಗಗಳ ಪರಿಣಾಮವಾಗಿ ತಾರೆಣ್ಣೆ, ಖನಿಜದ ಎಣ್ಣೆ ಮುಂತಾದುವುಗಳಲ್ಲಿ ಇರುವ ಏಡಿಗಂತಿಜನಕ ರಾಸಾಯನಿಕಗಳನ್ನು ಬೇರ್ಪಡಿಸಿ ಅಭ್ಯಸಿಸಲು ಹೊಸ ಹುರುಪು ಬಂತು.

1933ರಲ್ಲಿ ಕುಕ್, ಕೆನ್ನವೇ ಮತ್ತು ಹೀಜರ್ ಎಂಬುವರು ತಾರೆಣ್ಣೆಯಲ್ಲಿರುವ ಏಡಿಗಂತಿಜನಕ ಹೈಡ್ರೊಕಾರ್ಬನ್ನನ್ನು ಪ್ರತ್ಯೇಕಿಸಿ ಅದು 3–4 ಬೆಂಜ಼ೊಪೈರೀನ್ ಎಂದು ತೋರಿಸಿಕೊಟ್ಟರು. ಪಾಲಿಸೈಕ್ಲಿಕ್ ಆರೋಮ್ಯಾಟಿಕ್ ಹೈಡ್ರೊಕಾರ್ಬನ್ನುಗಳ ಗುಂಪಿಗೆ ಬೆಂಜ಼ೊಪೈರೀನ್ ಸೇರಿರುವುದರಿಂದ ಇಡೀ ಗುಂಪಿನ ವಿವಿಧ ಹೈಡ್ರೊಕಾರ್ಬನ್ನುಗಳ ಸಂಶ್ಲೇಷಣೆ ಹಾಗೂ ಪರೀಕ್ಷೆಗಳನ್ನು ನಡೆಸಲಾಯಿತು.

ಮಾನವನಿಗೆ ಆತನ ವೃತ್ತಿಗಳ ಕಾರಣವಾಗಿ ಉಂಟಾಗುವ ಅಪಾಯಗಳನ್ನು ರಾಸಾಯನಿಕ ಏಡಿಗಂತಿಜನಕಗಳ ಪರಿಶೀಲನೆಯಿಂದ ಗುರುತಿಸಲು ಸಾಧ್ಯವಾಗಿದೆ. ಮಾನವನ ಪರಿಸರದಲ್ಲಿ ಏಡಿಗಂತಿಜನಕಗಳಾಗಿ ರಾಸಾಯನಿಕಗಳು ವ್ಯಾಪಿಸಿರಬಹುದಾದುದರ ಪ್ರಾಮುಖ್ಯ ಈಗ ಮನದಟ್ಟಾಗಿದೆ. ಬಾಹ್ಯ ಪರಿಸರದಲ್ಲಿ ಮಾತ್ರವಲ್ಲ, ಆಹಾರಪದಾರ್ಥಗಳಲ್ಲಿ ಮತ್ತು ಅವುಗಳೊಡನೆ ಬೆರೆಯುವ ಇತರ ಪದಾರ್ಥಗಳಲ್ಲಿ ಸಹ ಏಡಿಗಂತಿಯ ಜನಿಸುವಿಕೆಯಲ್ಲಿ ಮುಖ್ಯಪಾತ್ರವಹಿಸಬಹುದಾದ ತೀಕ್ಷ್ಣಸಂಯುಕ್ತಗಳು ಇರುತ್ತವೆ. ಈ ಸಂಗತಿ ಈಚೀಚೆಗೆ ಹೆಚ್ಚುಹೆಚ್ಚಾಗಿ ಖಚಿತವಾಗುತ್ತಿದೆ.

ರಾಸಾಯನಿಕ ಏಡಿಗಂತಿಜನಕಗಳನ್ನು ಪರಿಶೋಧಿಸಿದ್ದು ಮತ್ತು ಪರಿಶೋಧಿಸುತ್ತಿರುವುದು ಹೇಗೆ ಎಂಬುದನ್ನು ತಿಳಿಯುವುದು ಕುತೂಹಲಪ್ರದವಾಗಿದೆ. ಪರ್ಸಿವಾಲ್ ಪಾಟನ ಕಾಲದಲ್ಲಿ ಇದ್ದಹಾಗೆಯೇ ಇಂದು ಸಹ ಪರಿಸರದ ಪ್ರಭಾವದಿಂದ ಉಂಟಾಗುವ ಏಡಿಗಂತಿಗಳ ಮೇಲಿನ ಸಂಶೋಧನೆಗಳೇ ಗಮನ ಸೆಳೆಯುತ್ತಿವೆ. ವೃತ್ತಿಜನ್ಯ ಏಡಿಗಂತಿಯ ಅಭ್ಯಾಸದಿಂದ ಪಾಲಿಸೈಕ್ಲಿಕ್ ಹೈಡ್ರೊಕಾರ್ಬನ್ನುಗಳ ಏಡಿಗಂತಿಜನಕಗುಣಗಳು ತಿಳಿದುವು. ಇದರ ಪ್ರಕಾರ ಆರೋಮ್ಯಾಟಿಕ್ ಅಮೈನುಗಳು ಮೂತ್ರಕೋಶದ ಏಡಿಗಂತಿಜನಕಗಳು; ನಿಕ್ಕಲ್ ಲೋಹ ಮೂಗಿನ ಏಡಿಗಂತಿಜನಕವಾದರೆ ಲೋಹಗಳು ಸಾಮಾನ್ಯವಾಗಿ ಪುಪ್ಪುಸದ ಏಡಿಗಂತಿಜನಕಗಳು; ಟ್ಯಾನಿಕ್ ಆಮ್ಲ, ಆಲ್ಕಲಾಯ್ಡುಗಳು, ಕ್ಲೋರೋಕಾರ್ಬನುಗಳು, ಡೈ ಆಲ್ಕೈಲ್ ನೈಟ್ರೋಸಮೀನುಗಳು ಈಲಿಯ ವಿವಿಧ ಏಡಿಗಂತಿಜನಕಗಳು–ಮಾತ್ರವಲ್ಲ ಈಲಿಯ ಅರಿಶಿನಾರಿಗೆಯನ್ನೂ (ಲಿವರ್ ಸಿರೋಸಿಸ್) ಉಂಟುಮಾಡುವುವು; ರೇಡಿಯೊ ರಾಸಾಯನಿಕಗಳು ಮೂಳೆಯ ಲ್ಯುಕೇಮಿಯಾ ಮತ್ತು ಮೂಳೆಯ ಏಡಿಗಂತಿಜನಕಗಳು.

ದೇಹದಲ್ಲಿ ಸಾಮಾನ್ಯವಾಗಿ ಇರುವ ಸಂಯುಕ್ತಗಳ ಅಭ್ಯಾಸದ ಪರಿಣಾಮವಾಗಿ ದೇಹದ ಒಳಗೆ ಉತ್ಪನ್ನವಾಗುವ (ಅಂತರ್ಜಾತ—ಎಂಡೋಜಿನಸ್) ರಾಸಾಯನಿಕ ಏಡಿಗಂತಿಜನಕಗಳನ್ನು ಕುರಿತು ಒಳನೋಟ ಲಭಿಸಿದೆ. ಅಂತಃಸ್ರವೀಗ್ರಂಥಿಗಳ (ಎಂಡೊಕ್ರೈನ್ ಗ್ಲ್ಯಾಂಡ್ಸ್) ಬೆಳೆವಣಿಗೆ ಹಾಗೂ ವಿಶಿಷ್ಟ ರಚನೆಯಲ್ಲಿ ಪೋಷಕವಾಗಿರುವ ಮತ್ತು ಮೊಲೆ ಹಾಗೂ ಗರ್ಭಕೋಶದ ಮೇಲೆ ಪ್ರಭಾವಬೀರುವ ಚೋದನಿಕಗಳು (ಹಾರ್ಮೋನ್ಸ್) ಇವುಗಳಲ್ಲಿ ಪ್ರಧಾನವಾದವು. ದೇಹದಲ್ಲಿ ಇರುವ ಸಮಸ್ಥಿತಿಯನ್ನು (ಹೋಮಿಯೊಸ್ಟ್ಯಾಟಿಕ್ ಬ್ಯಾಲೆನ್ಸ್) ಅಧಿಕ ಚೋದನಿಕಗಳು ವ್ಯತ್ಯಾಸಗೊಳಿಸಿದರೆ ಚೋದನಿಕಗಳಿಗೆ ಪ್ರತಿಕ್ರಿಯೆ ತೋರಿಸುವ ಅಂಗಗಳಲ್ಲಿ (ರೆಸ್ಪಾನ್‌ಸಿವ್ ಆರ್ಗನ್ಸ್) ಏಡಿಗಂತಿ ಉಂಟಾಗುವುದು.

ರೋಗ ಚಿಕಿತ್ಸೆಗಾಗಿ ಬಳಸುವ ಮದ್ದುಗಳ ಪರಿಣಾಮಗಳ ಅಭ್ಯಾಸದಿಂದ ರಾಸಾಯನಿಕಗಳ ಏಡಿಗಂತಿಜನಕ ಗುಣಗಳನ್ನು ತಿಳಿಯಲಾಗಿದೆ. ಗಾಯಗಳಿಗೆ ಲೇಪಿಸುವ ಸ್ಕಾರ್ಲೆಟ್ ರೆಡ್ ಎಂಬ ರಾಸಾಯನಿಕದ ಪರಿಣಾಮಗಳ ಪರಿಶೀಲನೆಯಿಂದ ಏಡಿಗಂತಿಜನಕ ಆಜ಼ೋ ಡೈ, ಆರ್ಥೋ ಅಮೈನೋ, ಆಜ಼ೋ ಟಾಲೀನ್ ಇವುಗಳ ಶೋಧನೆ ಆಯಿತು. ಏಡಿಗಂತಿ ರೋಗ ಚಿಕಿತ್ಸೆಯಿಂದ ನೈಟ್ರೊಜನ್ ಮಸ್ಟರ್ಡುಗಳ ಏಡಿಗಂತಿಜನಕ ಗುಣ ಗೊತ್ತಾಯಿತು.

ಬ್ರಿಟನ್ ಮತ್ತು ಅಮೆರಿಕಗಳಲ್ಲಿ ಪುಪ್ಪುಸದ ಏಡಿಗಂತಿಯ ವ್ಯಾಪ್ತಿಯ ಆಧಿಕ್ಯವನ್ನು ಏಡಿಗಂತಿಯ ಸಾಂಕ್ರಾಮಿಕ ಶಾಸ್ತ್ರ (ಎಪಿಡೆಮಿಯಾಲಜಿ) ವಿಶದೀಕರಿಸಿತು. ಇದರ ಒಂದು ಕಾರ್ಯಕಾರಣ ಸಂಬಂಧ ಸಿಗರೇಟ್ ಸೇವನೆಯಿರಬಹುದೇ ಎಂಬ ಶೋಧನೆಗೆ ಇದು ಎಡೆಮಾಡಿಕೊಟ್ಟಿತು. ಸಿಗರೇಟ್ ಹೊಗೆಯನ್ನು ವಿಶ್ಲೇಷಿಸಿ ತಂಬಾಕಿನ ಕೆಲವು ಏಡಿಗಂತಿಜನಕ ರಾಸಾಯನಿಕಗಳನ್ನು ಪ್ರತ್ಯೇಕಿಸಲಾಗಿದೆ. ಇಂಥ ಕೆಲಸದಲ್ಲಿ ಇರುವ ಆಸಕ್ತಿ ಎರಡು ಬಗೆಯದು. ರಾಸಾಯನಿಕ ಏಡಿಗಂತಿಜನಕಗಳ ಶೋಧನೆ ಹಾಗೂ ಸಮರ್ಪಕ ರಕ್ಷಣೆಯ ಏರ್ಪಾಡು, ಒಂದು. ಏಡಿಗಂತಿಯ ಅಭಿವೃದ್ಧಿ ಬೇರೆ ಬೇರೆ ರಾಸಾಯನಿಕಗಳ ಕಾರಣವಾಗಿ ಹೇಗೆ ಆಗುತ್ತದೆ ಎಂದು ತಿಳಿಯುವುದು, ಇನ್ನೊಂದು.

ಕೆಲವು ಏಡಿಗಂತಿಜನಕ ವಸ್ತುಗಳು, ರಾಸಾಯನಿಕಗಳು ಮತ್ತು ಗಂತಿಯ ಬೆಳೆವಣಿಗೆಯ ಸ್ವರೂಪವನ್ನು ಮುಂದೆ ಪಟ್ಟಿಮಾಡಿದೆ.

1 ಕಲ್ನಾರು : ಪುಪ್ಪುಸದ ಏಡಿಗಂತಿಗೆ ಸಂಬಂಧಿಸಿದೆ. ಕಲ್ನಾರಿನಲ್ಲಿರುವ ಸಿಲಿಕ ಕಾರಣವಾಗಿರಬಹುದೆಂದು ಶಂಕೆ; ಇದನ್ನು ಪ್ರಾಯೋಗಿಕವಾಗಿ ಖಚಿತ ಪಡಿಸಿಲ್ಲ.

2 ಕ್ರೋಮಿಯಂ : ಬಣ್ಣದ ವಸ್ತುಗಳ ತಯಾರಿಕೆಯಲ್ಲೂ ಸತು ಮತ್ತು ಸೀಸದ ಕ್ರೋಮೇಟುಗಳ ತಯಾರಿಕೆಯಲ್ಲೂ ಕೆಲಸ ಮಾಡುವವರಿಗೆ ಪುಪ್ಪುಸದ ಏಡಿಗಂತಿ ಬರಬಹುದು.

3 ನಿಕ್ಕಲ್ : ಉಸಿರಾಟದ ಸಾಗುನಾಳದ ಏಡಿಗಂತಿ ತಲೆದೋರಬಹುದು.

4 ಕಪ್ಪು ರಾಳ (ಪಿಚ್), ತಾರೆಣ್ಣೆ, ಹೊಗೆಕರಿ (ಸೂಟ್) ಮತ್ತು ಖನಿಜದ ಎಣ್ಣೆ : ಇವು ಕಾರ್ಖಾನೆಗಳಲ್ಲಿ, ಕೈಗಾರಿಕೆಗಳಲ್ಲಿ ಚರ್ಮದ ಏಡಿಗಂತಿಜನಕಗಳಾಗಿವೆ. ಪಾಲಿಸೈಕ್ಲಿಕ್ ಆರೋಮ್ಯಾಟಿಕ್ ಹೈಡ್ರೊಕಾರ್ಬನ್ನುಗಳು ಕಪ್ಪುರಾಳ, ತಾರೆಣ್ಣೆ ಮತ್ತು ಹೊಗೆಕರಿಯಲ್ಲಿರುವ ಏಡಿಗಂತಿಜನಕಗಳು. ಖನಿಜದ ಎಣ್ಣೆಯಲ್ಲಿರುವ ರಾಸಾಯನಿಕ ಯಾವುದೆಂದು ಇನ್ನೂ ತಿಳಿದಿಲ್ಲ.

5 ಆರೋಮ್ಯಾಟಿಕ್ ಅಮೈನುಗಳು : ಇವನ್ನು ಸಂಶ್ಲೇಷಿತ ವರ್ಣದ್ರವ್ಯಗಳ ತಯಾರಿಕೆಯಲ್ಲೂ ರಬ್ಬರ್ ಉದ್ಯಮದಲ್ಲೂ ಉಪಯೋಗಿಸುತ್ತಾರೆ; ಇವು ಮೂತ್ರ ಕೋಶದ ಏಡಿಗಂತಿಜನಕಗಳು (ಬೆಂಜಿಡೀನ್, ನ್ಯಾಫ್ತಿಲಮೈನ್).

6 ತಂಬಾಕು : ತಂಬಾಕು ಸೇವನೆಯಿಂದ ಪುಪ್ಪುಸದ್ದೇ ಅಲ್ಲದೆ ಬಾಯಿ, ಧ್ವನಿ ನಾಳ, ಅನ್ನನಾಳ, ಮೂತ್ರಕೋಶಗಳಲ್ಲೂ ಏಡಿಗಂತಿಗಳಾಗಿವೆ. ಪಾಲಿಸೈಕ್ಲಿಕ್ ಆರೋಮ್ಯಾಟಿಕ್ ಹೈಡ್ರೊಕಾರ್ಬನ್ನುಗಳು ಮತ್ತು ನ್ಯಾಫ್ತಿಲಮೈನುಗಳಂಥ ಏಡಿಗಂತಿಜನಕ ರಾಸಾಯನಿಕಗಳನ್ನು ತಂಬಾಕುವಿನಿಂದ ಪ್ರತ್ಯೇಕಿಸಲಾಗಿದೆ.

7 ಬಹ್ವಂಗಗಳು (ಪಾಲಿಮರ್ಸ್) ಮತ್ತು ಪ್ಲಾಸ್ಟಿಕ್ಕುಗಳು : ಇಲಿಗಳಲ್ಲಿ ಬೇಕಲೈಟಿನ ಬಿಲ್ಲೆಗಳಿಂದ ತಂತುಸ್ನಾಯುಗಂತಿಯೂ (ಫೈಬ್ರೊ ಸಾರ್ಕೋಮಾ) ಸೆಲ್ಲೋಫೇನಿನ ಬಿಲ್ಲೆಯಿಂದ ಮೂತ್ರಪಿಂಡದ ಸುತ್ತಲಿನ ಸ್ನಾಯುಗಂತಿಯೂ ಎದ್ದಿವೆ. ಈ ಬೃಹದಣುಕಾರಕಗಳಿಂದ (ಮ್ಯಾಕ್ರೋಮೊಲೆಕ್ಯುಲರ್ ಏಜೆಂಟ್ಸ್) ಉಂಟಾಗುವ ಏಡಿಗಂತಿಯ ಕಾರಣವಿನ್ನೂ ತಿಳಿದಿಲ್ಲ.

8 ಆರ್ಸೆನಿಕ್ : ಕುರಿಗುಣಿಮದ್ದು (ಷೀಪ್ ಡಿಪ್), ವರ್ಣದ್ರವ್ಯಗಳು ಇವುಗಳ ತಯಾರಿಕೆಯಲ್ಲಿ ವಿಪುಲವಾಗಿ ಬಳಸುವ ಆರ್ಸೆನಿಕ್ ಈ ಖನಿಜದ ಗಣಿ ಕೆಲಸಗಾರರಲ್ಲಿ ಪುಪ್ಪುಸದ ಏಡಿಗಂತಿಯನ್ನು ಉಂಟುಮಾಡುವುದೆಂದು ಗೊತ್ತಾಗಿದೆ. ಕೀಟನಾಶಕ ಆರ್ಸೆನಿಕ್ ತಯಾರಿಕರಿಗೆ ಚರ್ಮದ ಏಡಿಗಂತಿ ಆಗುವುದೂ ತಿಳಿದಿದೆ.

9 ಬೂಷ್ಟಿನ ಜೀವವಿಷಗಳು (ಫಂಗಲ್ ಟಾಕ್ಸಿನ್ಸ್) : ಆಹಾರಧಾನ್ಯಗಳು ಮತ್ತು ಇತರ ಆಹಾರ ಪದಾರ್ಥಗಳ ಮೇಲೆ ಬೆಳೆಯುವ ಬೂಷ್ಟುಗಳು ಬಿಡುವ ಜೀವವಿಷಪದಾರ್ಥಗಳನ್ನು ತಿನ್ನುವುದರಿಂದ ಏಡಿಗಂತಿ ಬರುವುದೆಂದು ಗೊತ್ತಾಗಿದೆ. ಈ ಶೋಧನೆ ರಾಸಾಯನಿಕ ಏಡಿಗಂತಿಜನಕಗಳ ಪ್ರಪಂಚದಲ್ಲಿ ಒಂದು ಹೊಸ ವಲಯವನ್ನೇ ಅನಾವರಣ ಮಾಡಿದೆ. ಅಸ್ಪರ್ಗಿಲ್ಲಸ್ ಫ್ಲೇವಸ್ ಎಂಬ ಹೆಸರಿನ ಬೂಷ್ಟು ಬೆರೆತಿದ್ದ ಕಡಲೆಕಾಯಿ ಹಿಂಡಿ ಆಹಾರ ಸೇವಿಸಿದ ಕೋಳಿಗಳಲ್ಲಿ ಒಂದು ವಿಚಿತ್ರ ವ್ಯಾಧಿ ತಲೆದೋರಿತು. ಇದರ ಶೋಧನೆಯ ಪರಿಣಾಮವಾಗಿ ಅಫ್ಲಟಾಕ್ಸಿನ್ ಎಂಬ ಹೊಸತೊಂದು ಏಡಿಗಂತಿಜನಕ ರಾಸಾಯನಿಕವನ್ನು ಪ್ರತ್ಯೇಕಿಸುವುದು ಸಾಧ್ಯವಾಯಿತು. ಹಳದಿ ಬಣ್ಣಕ್ಕೆ ತಿರುಗಿದಂಥ ಅಕ್ಕಿ ಮತ್ತು ಇಂಥ ಇತರ ಆಹಾರ ಪದಾರ್ಥಗಳ ಸೇವನೆಯಿಂದ ಈಲಿಯಲ್ಲಿ ಗಂತಿಗಳು ಏಳಬಹುದು.

ರಾಸಾಯನಿಕ ಏಡಿಗಂತಿಜನಕಗಳು ಮತ್ತು ಅವುಗಳ ವರ್ತನೆಯ ವಿಧಾನ : ರಾಸಾಯನಿಕ ಏಡಿಗಂತಿಜನಕಗಳು ಏಡಿಗಂತಿಯನ್ನು ಪ್ರಚೋದಿಸುವ ಜೀವ ರಾಸಾಯನಿಕ ಕ್ರಿಯಾತಂತ್ರವೇನೆಂದು ಇನ್ನೂ ತಿಳಿದಿಲ್ಲ. ಗಂತಿಗಳನ್ನು ಉಂಟು ಮಾಡುವ ರಾಸಾಯನಿಕ ಕಾರಕಗಳು ಬಲು ವಿಧದವು. ಈ ವೈವಿಧ್ಯದ ಪರಿಣಾಮವಾಗಿ ಎಲ್ಲ ರಾಸಾಯನಿಕಗಳಿಗೂ ಅನ್ವಯಿಸುವಂತೆ ಅವುಗಳ ಏಡಿಗಂತಿಜನಕ ಕ್ರಿಯೆಯನ್ನು ನಿಖರವಾಗಿ ಸೂಚಿಸಬಲ್ಲ ಪರಮಾಣುಸೂತ್ರಗಳನ್ನು ವ್ಯಾಖ್ಯಿಸುವುದು ಸಾಧ್ಯವಾಗುವುದಿಲ್ಲ.

ಇಂದಿನ ಆಧಾರಭಾವನೆಯನ್ನು ಎರಡು ಪಂಗಡಗಳಾಗಿ ವಿಂಗಡಿಸಬಹುದು : 1 ಕೋಶದ ಮೇಲ್ಮೈ ಮೇಲೆ ರಾಸಾಯನಿಕ ವರ್ತಿಸುತ್ತದೆ, ಮತ್ತು 2 ವಂಶವಾಹಿಯಾಗಿ (ಜೆನೆಟಿಕಲಿ) ಬಲು ಮುಖ್ಯವಾಗಿರುವ ನ್ಯೂಕ್ಲೆಯಿಕ್ ಆಮ್ಲಗಳೊಡನೆ ಈ ರಾಸಾಯನಿಕಗಳು ನೇರವಾಗಿ ಅಂತರಕ್ರಿಯೆ ಎಸಗುತ್ತವೆ. ಏಡಿಗಂತಿಜನಕಗಳ ಕ್ರಿಯೆಯ ಹಿನ್ನೆಲೆಯಲ್ಲಿರುವ ನಿಖರವಾದ ರಾಸಾಯನಿಕ ಕ್ರಿಯಾತಂತ್ರ ಏನೇ ಇರಲಿ, ಅವು ವಂಶವಾಹೀ ವಸ್ತುವಿನೊಡನೆ ಅಥವಾ ಅದರ ಮುನ್ಸೂಚಕಗಳೊಡನೆ (ಪ್ರೀಕರ್ಸರ್ಸ್) ಸಂಯೋಜಿಸುವುದರ ಪ್ರಾಮುಖ್ಯವನ್ನು ಕುರಿತು ಎಳ್ಳಷ್ಟೂ ಸಂಶಯವಿಲ್ಲ. ಈ ಸಂಯೋಜನೆ ಪ್ರತ್ಯಕ್ಷವಾಗಿ ಅಥವಾ ಪರೋಕ್ಷವಾಗಿ ಸಹಜ ಬೆಳೆವಣಿಗೆಯನ್ನು ನಿಯಂತ್ರಿಸಲು ಅತ್ಯಾವಶ್ಯಕಗಳಾದ ಕೆಲವು ಮುಖ್ಯ ಪ್ರೋಟೀನುಗಳನ್ನು ನಿರ್ಮೂಲಗೊಳಿಸಬಹುದು.

ಇಂಥ ಸಂಯೋಜನೆಯಿಂದ ಹಲವು ಮೂಲ ಸಂಶ್ಲೇಷಣ ಕ್ರಿಯೆಗಳು ನಡೆದ ತರುವಾಯ, ಈ ಕ್ರಿಯೆಗಳನ್ನು ಆಧರಿಸಿರುವ ಜೀವಕೋಶ ವಿಭಜನೆ ಯಾವ ಹತೋಟಿಯೂ ಇಲ್ಲದೆ ನಡೆಯುತ್ತದೆ.

ಪ್ರಯೋಗಲಭ್ಯ ಪುರಾವೆಗಳಿಂದಲೂ ಗಂತಿಯನ್ನು ಉಂಟುಮಾಡುವ ಹಾಗೂ ಬೆಳೆಸುವ ಕ್ರಿಯೆಯ ಅಭ್ಯಾಸದಿಂದಲೂ ಏಡಿಗಂತಿಜನಕಗಳನ್ನು ಕುರಿತು ಎರಡು ಹಂತಗಳ ಕ್ರಿಯಾತಂತ್ರವನ್ನು ನಿರೂಪಿಸಬಹುದು—ಆರಂಭಿಕ, ಪ್ರೇರಕ. ಸಹಜ ಜೀವಕೋಶಗಳನ್ನು ಏಡಿಗಂತಿಕೋಶಗಳಾಗಿ ಪರಿವರ್ತಿಸುವ ಗುಣ ಕೆಲವು ರಾಸಾಯನಿಕಗಳಿಗೆ ಇದೆ. ಇವು ಆರಂಭಿಕಗಳು (ಇನಿಷಿಯೇಟರ್ಸ್). ಪಾಲಿಸೈಕ್ಲಿಕ್ ಹೈಡ್ರೊಕಾರ್ಬನ್ನುಗಳು, ಆಜೋ ಏಡಿಗಂತಿಜನಕಗಳು ಮತ್ತು ಆರೋಮ್ಯಾಟಿಕ್ ಅಮೈನುಗಳು ಈ ಗುಂಪಿನ ವಿಶಿಷ್ಟ ಉದಾಹರಣೆಗಳು. ಎರಡನೆಯ ಗುಂಪಿನ ರಾಸಾಯನಿಕಗಳಿಗೆ ಏಡಿಗಂತಿಯ ಬದಲಾವಣೆಯನ್ನು ಆರಂಭಿಸಲು ಆಗುವುದಿಲ್ಲ; ಬದಲು, ಆಗಲೇ ಬದಲಾಗಿರುವ ಜೀವಕೋಶದ ಹೆಚ್ಚಳಿಕೆಕ್ಕೆ ಒತ್ತಾಸೆಯನ್ನೋ ಶಕ್ತಿಯನ್ನೋ ನೀಡಿ ಅದನ್ನು ಗಂತಿಯಾಗಿ ಮಾರ್ಪಡಿಸುತ್ತವೆ. ಇವುಗಳಿಗೆ ಪ್ರೇರಕಗಳೆಂದು (ಪ್ರಮೋಟರ್ಸ್) ಹೆಸರು. ಈ ಗುಂಪಿನಲ್ಲಿ ಜಾಪಾಳದ ಎಣ್ಣೆ, ಫಿನಾಲುಗಳು, ನಾನಯಾನಿಕ್ ಶುದ್ಧಿಕಾರಕಗಳು (ನಾನಯಾನಿಕ್ ಡಿಟರ್ಜೆಂಟ್ಸ್), ಈಳಿಯ (ಸಿಟ್ರಸ್) ಎಣ್ಣೆಗಳು, ಯುಫೋರ್ಬಿಯ ಲ್ಯಾಟೀಸುಗಳು ಸೇರಿವೆ. ಆರಂಭಿಕಗಳೇ ಪ್ರೇರಕಗಳಾಗಬಹುದು; ಆದರೆ ಇದರ ವಿಲೋಮ ಅಸಾಧ್ಯ.

ಒಂದೇ ಏಡಿಗಂತಿಜನಕಕ್ಕೆ ಒಡ್ಡಿದ ಎಲ್ಲ ಜನರಲ್ಲೂ ಏಡಿಗಂತಿ ಏಕೆ ಏಳುವುದಿಲ್ಲ ಎನ್ನುವ ಸಮಸ್ಯೆಗೆ ಆರಂಭಿಕ, ಪ್ರೇರಕ ಎಂಬ ಈ ಪರಿಕಲ್ಪನೆ ಒಂದು ಪರಿಹಾರ ನೀಡಬಹುದು. ಏಡಿಗಂತಿ ಎದ್ದು ಕಾಣಿಸಿಕೊಳ್ಳುವಂತೆ ಮಾಡುವುದರಲ್ಲಿ ನಮ್ಮ ಪರಿಸರದಲ್ಲಿರುವ ಪ್ರೇರಕ ಕಾರಕಗಳು ಎಷ್ಟು ಮುಖ್ಯ ಎಂಬುದು ಇದರಿಂದ ಖಚಿತವಾಗುತ್ತದೆ. ಆದ್ದರಿಂದ ಏಡಿಗಂತಿ ಬರದಂತೆ ಕಾಪಾಡಿಕೊಳ್ಳಬೇಕಾದರೆ ರಾಸಾಯನಿಕ ಏಡಿಗಂತಿಜನಕಗಳೊಂದಿಗೆ (ಆರಂಭಿಕಗಳು) ಮಾತ್ರವಲ್ಲ ಪ್ರೇರಕಕಾರಕಗಳೊಡನೆ ಸಹ ಸಂಪರ್ಕ ಒದಗದಂತೆ ಎಚ್ಚರ ವಹಿಸಬೇಕು.

ಸಂಶೋಧನೆಯಿಂದ ಪ್ರಾಣಿಗಳಿಗೆ ಏಡಿಗಂತಿಜನಕಗಳಾದ ವಸ್ತುಗಳ ಪರಂಪರೆಯೇ ಬೆಳೆಯುತ್ತಿದೆ; ಇವು ಪ್ರಾಯಶಃ ಮನುಷ್ಯನಿಗೂ ಅಪಾಯಕಾರಿ. ಇವು ಸರ್ವವ್ಯಾಪಿಯಾಗಿರುವಂತೆ ಭಾಸವಾಗುತ್ತದೆ. ನಾವು ಸೇವಿಸುವ ಗಾಳಿಯಲ್ಲಿ, ಕುಡಿಯುವ ನೀರಿನಲ್ಲಿ, ತಿನ್ನುವ ಆಹಾರದಲ್ಲಿ, ಸೇವಿಸುವ ಹಲವಾರು ಔಷಧಿಗಳಲ್ಲಿ ಅಂಗರಾಗದ್ರವ್ಯಗಳಲ್ಲಿ ಕಾರ್ಖಾನೆಗಳಲ್ಲಿ ವಿಪುಲವಾಗಿ ಬಳಸುವ ರಾಸಾಯನಿಕಗಳಲ್ಲಿ ಅವು ಇವೆ. (ಎಂ.ಎಸ್.ಐ.)

**ಏಡಿಗಂತಿ ಸಂಶೋಧನೆ:** ಏಡಿಗಂತಿಗಳು ಮೈಯಲ್ಲಿ ಏಳುತ್ತಿರುವ ಬಗ್ಗೆ ಅಂಕಿ ಅಂಶ, ಹರಡುವ ರೀತಿ, ರೋಗಚಿಕಿತ್ಸೆಯ ಅನುಭವ, ಪ್ರಾಣಿಗಳ ಮೇಲಿನ ಪ್ರಯೋಗ ಇವೆಲ್ಲ ಏಡಿಗಂತಿಯ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತಿವೆ. ಪ್ರಯೋಗಾಲಯಗಳಲ್ಲಿ ಪ್ರಾಣಿಗಳ ಮೇಲೆ ಮೂಲ ಸಂಶೋಧನೆ ನಡೆಸಿ ಅದರಲ್ಲಿ ಅನುಕೂಲವಾಗಿ ಕಂಡುದನ್ನು ರೋಗಿಗೆ ಕೊಟ್ಟು ಪರಿಶೀಲಿಸುತ್ತಾರೆ. ಅಂತಿಮಗುರಿ ಏಡಿಗಂತಿ ರೋಗಿಯೇ. ಆಸ್ಪತ್ರೆಗಳ ಒಳ–ಹೊರ ರೋಗಿಗಳ ಚಿಕಿತ್ಸಾಲಯದಲ್ಲೂ ತಜ್ಞರ ಸಲಹೆಯ ಕೋಣೆಗಳಲ್ಲೂ ನಡೆವ ನಿತ್ಯದ ರೋಗಿ ಪರೀಕ್ಷೆ, ಚಿಕಿತ್ಸೆಗಳಿಂದ ಇದು ಕೈಗೂಡುತ್ತದೆ.

**ಮೂಲಗುಣ:** ಸಾಮಾನ್ಯವಾದವಕ್ಕಿಂತ ಏಡಿಗಂತಿಯ ಜೀವಕಣಗಳಲ್ಲಿ ಜೀವವಸ್ತುಕರಣ (ಮೆಟಬಾಲಿಸಂ) ಬಲು ಹೆಚ್ಚು. ಇದನ್ನೂ ಪುನರುತ್ಪತ್ತಿಯನ್ನೂ (ರಿಪ್ರೊಡಕ್ಷನ್) ಹತೋಟಿಯಲ್ಲಿಡುವ ಕ್ರೋಮೋಸೋಮಲ್ ಜೀನುಗಳ ಮತ್ತು ಕಿಣ್ವಗಳ ಬಲು ಗಹನವಾದ ನಾಜೂಕಿನ ಹೊಂದಾಣಿಕೆಯ ಹತೋಟಿ ವ್ಯವಸ್ಥೆಗೆ ಏಡಿಗಂತಿಯಿಂದ ಎಷ್ಟೋ ಬಗೆಗಳ ಧಕ್ಕೆ ಬರಬಹುದು. ಇದರಿಂದ ಸ್ಥಿರವಾದ ಮಾರ್ಪಾಡೋ ಜೀನುಗಳಲ್ಲಿ ವ್ಯತ್ಯಯವೋ (ಮ್ಯುಟೇಷನ್) ಆಗಬಹುದು. ಈ ವ್ಯತ್ಯಯ ಸಾಕಷ್ಟಿದ್ದರೆ ಜೀವಕಣ ಸಾಯುತ್ತದೆ. ಧಕ್ಕೆ ಜೀವಾಣು ಸ್ಥಿರವಾಗಿ ಜೀವಾಣು ಭಾಜ್ಯತೆಯನ್ನು (ಮೈಟೋಟಿಕ್ ರೇಟ್) ವೇಗಗೊಳಿಸಿದರೆ ಏಳುವುದೇ ಏಡಿಗಂತಿ.

ಸಹಜವಾದ ಎಂದಿನ ಹತೋಟಿ ವ್ಯವಸ್ಥೆಗೆ ಧಕ್ಕೆ ತರುವ ತಿಳಿವಳಿಕೆಯು ಏಡಿಗಂತಿಜನನ(ಕಾರ್ಸಿನೋಜನಿಸಿಸ್)ಮತ್ತು ಹತೋಟಿಗಳ ಬಗ್ಗೆ ಸಂಶೋಧಿಸಲು ಮಹಾ ಅಸ್ತ್ರ. ಗಡಿಯಾರದ ವೇಗವನ್ನು ಹೆಚ್ಚು ಕಡಿಮೆ ಮಾಡುವಂತೆಯೇ ಜೀವಾಣು ಭಾಜ್ಯತೆಯ ವೇಗವನ್ನೂ ಏಡಿಗಂತಿಜನಕಗಳಿಂದ (ಕಾರ್ಸಿನೋಜನ್ಸ್) ಏರಿಸಬಹುದು ; ವಿಕಿರಣತೆ (ರೇಡಿಯೇಷನ್), ಕಾಲ್ಚಿಸಿನುಗಳಿಂದ ನಿಧಾನಗೊಳಿಸಬಹುದು. ಒಂದೊಂದು ಜೀವಾಣುವೂ 16 ಬಾರಿ ಗುಣಿತವಾದಾಗ 60,000 ಮರಿ ಜೀವಕಣಗಳು ಹುಟ್ಟುವುದರಿಂದ, ಜೀವಾಣು ಭಾಜ್ಯತೆಯ ವೇಗ ತಾಳಗತಿಗಳು ಸ್ವಲ್ಪ ಹೆಚ್ಚಿದರೂ ಬಲುಬೇಗನೆ ಏಡಿಗಂತಿ ಏಳುವುದು ಸುಸ್ಪಷ್ಟ.

ಏಡಿಗಂತಿ ಹುಟ್ಟು : ಏಡೆಬಿಡದೆ ಉರಿಯುತ್ತಿರುವ ಬೆಂಕಿ ಏಡಿಗಂತಿ. ಕಿಚ್ಚೆಬ್ಬಿಸುವ ವಿಧಾನಗಳು ವಿಷ್ಟೋ ಇವೆ. ಅಂತೆಯೇ ಏಡಿಗಂತಿಜನಕಗಳಲ್ಲಿ ಕೆಲವು ಭೌತಿಕವಾದರೆ, ಕೆಲವು ರಾಸಾಯನಿಕವಾಗಿವೆ ; ಮತ್ತೆ ಕೆಲವು ಮೈ ಒಳಗಿನವು ಇಲ್ಲವೇ ಹೊರಗಿನವು. ಅಂಗಾಂಗಗಳಲ್ಲಿ ಬಗೆಬಗೆಯ ಏಡಿಗಂತಿಗಳಾಗುವುದಕ್ಕೆ ಹಲವು ವಿಧಾನಗಳಿವೆ : 1 ಜನಕಾಂಶಗಳು (ಜನೆಟಿಕ್ ಫ್ಯಾಕ್ಟರ್ಸ್), 2 ರಾಸಾಯನಿಕಕಾರಕಗಳು (ಏಜೆಂಟ್ಸ್), 3 ಭೌತಿಕಕಾರಕಗಳು, 4 ವೈರಸುಗಳು, 5 ಚೋದನಿಕಗಳು (ಹಾರ್ಮೋನ್ಸ್), ಸಂಪ್ರದಾಯ, ರೂಢಿ, ಪದ್ಧತಿಗಳು, ಚಟಗಳು. 7 ಭೂಗುಣ, ಹವಗಳು, 8 ಉಳಿದ ಕಾರಣಗಳು.

1 ಜನಕಾಂಶಗಳು : ಏಡಿಗಂತಿ ಆಗುವುದನ್ನೂ ಆಗದ್ದನ್ನೂ ಪ್ರಯೋಗ ಪ್ರಾಣಿಗಳ ತಳಿ ಎಬ್ಬಿಸುವುದರಲ್ಲಿ ತೋರಿಸುವುದು ಸುಲಭ. ಕೆಲವು ವಂಶಗಳ ಜನರಲ್ಲೂ ಕಣ್ಜಾಲನನೆಗಂತಿ (ರೆಟೀನೊಬ್ಲಾಸ್ಟೋಮ) ಬಹುನರತಂತುಗಳು (ಮಲ್ಟಿಪ್ಲ್ ನ್ಯೂರೋಬ್ಲಾಸ್ಟೋಸಿಸ್) ಇತ್ಯಾದಿ ಏಡಿಗಂತಿಗಳು ನಾಲ್ಕು ತಲೆಮಾರುಗಳ ತನಕವೂ ಮರುಕಳಿಸಿರುವುದು ರುಜುವಾತಾಗಿದೆ. ಮಿಗಿಲಾಗಿ ಬೇರೂರಿದ ಬಿಳಿಕಣರಕ್ತದಲ್ಲಿ (ಕ್ರಾನಿಕ್ ಲುಕೇಮಿಯ) ದೊರೆತಿರುವ ಫಿಲಡೆಲ್ಫಿಯ ಕ್ರೋಮೋಸೋಮ್ ಏಡಿಗಂತಿ ಕೆಲವು ವಂಶಗಳಲ್ಲಿ ಬರುವುದನ್ನು ತೋರಿಸುತ್ತದೆ.

2 ರಾಸಾಯನಿಕಗಳು : **ನೋಡಿ—ಏಡಿಗಂತಿಜನಕ ರಾಸಾಯನಿಕಗಳು.**

3 ಭೌತಿಕ ಕಾರಕಗಳು : ವಿಕಿರಣಶಕ್ತಿ (ರೇಡಿಯೋಆಕ್ಟಿವ್) ಕೋಬಾಲ್ಟ್ ಆರ್ಸಿನೈಡ್ ಅದುರನ್ನು ತೆಗೆವ ಜರ್ಮನಿಯ ಗಣಿ ಕೆಲಸಗಾರರಲ್ಲಿ ಪುಪ್ಪುಸದ ಗಂತಿಗಳಾದುದು 1926ರಲ್ಲಿ ಖಚಿತವಾಯಿತು. ಅಮೆರಿಕದ ಗಡಿಯಾರದ ಕಾರ್ಖಾನೆಗಳಲ್ಲಿ, ಕತ್ತಲಲ್ಲಿ ಮಿನುಗುವ ರೇಡಿಯಂ ಬಣ್ಣ ಹಚ್ಚುವ ಕುಂಚಗಳನ್ನು ಬಾಯಿಯಿಂದ ಒದ್ದೆಮಾಡುತ್ತಿದ್ದ ಹೆಣ್ಣಾಳುಗಳ ರಕ್ತಜನಕ ಮೂಳೆಗಳಲ್ಲಿ ಗಂತಿ ಬೆಳೆದು ಮಾರಕ ರಕ್ತಕೊರೆಗೆ ಈಡಾದರು. ಈ ಬಗ್ಗೆ ಮುನ್ನೆಚ್ಚರಿಕೆ ಪಡೆದ ಯೂರೋಪಿನ ಕೆಲಸಗಾರರು ಇದೇ ಕಂಟಕದಿಂದ ಪಾರಾದರು. ಮೊದಮೊದಲಿಗೆ ಎಕ್ಸ್‌ಕಿರಣಗಳೊಂದಿಗೆ ಕೆಲಸಮಾಡುತ್ತಿದ್ದವರಿಗೆ ಕೈಚರ್ಮದ ಗಂತಿ ಏಳುತ್ತಿತ್ತು. ಹಿರೋಷಿಮಾ ನಾಗಸಾಕಿಗಳಲ್ಲಿ ಪರಮಾಣು ಬಾಂಬ್ ಸಿಡಿದಮೇಲೆ ಅಳಿದುಳಿದವರಲ್ಲಿ ಬಿಳಿಕಣರಕ್ತತೆಯೂ ವಿಕಿರಣಚೋದಿತ ಗಂತಿಗಳೂ ಸಾಮಾನ್ಯರಿಗಿಂತ ಹತ್ತರಷ್ಟು ಹೆಚ್ಚಾಗಿತ್ತು. ಬಿಸಿಲಿಗೆ ವಿಪರೀತ ಮೈಯೊಡ್ಡುವುದು ಚರ್ಮಗಂತಿಗೆ ಕಾರಣವಾಗಬಹುದು. ಕಡಿಮೆ ತರಂಗಮಾನದ ಅತಿನೇರಳೆ ಕಿರಣಗಳು ಮೀತಿಮೀರಿದರೆ ಚರ್ಮಕ್ಕೆ ಹಾನಿಕರ.

4 ವೈರಸುಗಳು : ಎಲೆಕ್ಟ್ರಾನ್ ಸೂಕ್ಷ್ಮದರ್ಶಕಕ್ಕೆ ಮಾತ್ರ ನಿಲುಕುವ ವೈರಸುಗಳು ಜೀವಕಣದಲ್ಲಿ ಹೆಗ್ಗುಣಿತವಾಗಿ ಮರಿ ಜೀವಕಣಗಳ ಒಳಹೊಗಬಲ್ಲುವು. ಕೋಳಿ, ಕಪ್ಪೆ, ಮೊಲ ಮುಂತಾದ ಪ್ರಯೋಗದ ಪ್ರಾಣಿಗಳಲ್ಲಿ ಇವುಗಳಿಂದ ಏಡಿಗಂತಿ ಏಳುವುದು ಖಚಿತವಾಗಿದೆ. ಮಾನವರಲ್ಲೂ ವೈರಸುಗಳಿಂದ ನರೋಲಿ (ವಾರ್ಟ್) ಆಗುವುದು ನಿಶ್ಚಿತ.

5 ಚೋದನಿಕಗಳು : ಬಗೆಬಗೆಯ ಅದರಲ್ಲೂ, ಲೈಂಗಿಕ, ಚೋದನಿಕಗಳು ಪ್ರಾಣಿಗಳಲ್ಲಿ ಗಂತಿಯನ್ನು ಚೋದಿಸಬಲ್ಲವು. ಪಿಟುಟರಿ ಗ್ರಂಥಿಯ ಚೋದನಿಕಗಳು ಬೆಳವಣಿಗೆಯನ್ನೂ ಅಂಗಕೆಲಸಗಳನ್ನೂ ನಿಯಂತ್ರಿಸುವ, ನಾಲ್ಕು ಅಂಗಗಳಲ್ಲೇ (ಮೊಲೆ, ಗರ್ಭಕೋಶ, ಅಂಡಾಶಯ, ಪ್ರೋಸ್ಟೇಟ್) ದೇಹದ ಒಟ್ಟು ಏಡಿಗಂತಿಗಳಲ್ಲಿ 25% ರಷ್ಟು ತೋರುತ್ತವೆ. ಮೊಲೆಯ, ಪ್ರೋಸ್ಟೇಟಿನ ಗಂತಿಗಳು ಅಂಡಾಶಯವನ್ನೋ ಅಥವಾ ತರಡನ್ನೋ ತೆಗೆದರೆ ಕಂಡಹಾಗೇ ತಗ್ಗುತ್ತವೆ.

6 ಸಂಪ್ರದಾಯ, ರೂಢಿ, ಪದ್ಧತಿಗಳು, ಚಟಗಳು : ಎಳೆಗೂಸಾಗಿರುವಾಗಲೇ ಶಿಶ್ನದ ಮುಂದೊಗಲನ್ನು ಕತ್ತರಿಸುವ ಮುಸ್ಲಿಮರು ಯೆಹೂದಿಯರಲ್ಲಿ ಶಿಶ್ನದ ಏಡಿಗಂತಿ ಅತಿವಿರಳ. ಹಾಗೆ ಕತ್ತರಿಸದಿರುವ ಹಿಂದೂಗಳಲ್ಲಿ ಹೆಚ್ಚು. ಇದರೊಂದಿಗೇ ಗರ್ಭಗೊರಳಿನ (ಸರ್ವಿಕ್) ಏಡಿಗಂತಿ ಯೆಹೂದಿ, ಮುಸ್ಲಿಂ ಹೆಂಗಸರಲ್ಲಿ ಅತಿ ವಿರಳ. ಹಿಂದೂ ಹೆಂಗಸರಲ್ಲಿ ಹೆಚ್ಚು. ಶಿಶ್ನದ ಮುಂದೊಗಲಡಿಯಲ್ಲಿ ಸೇರುವ ಕೊಳಕು, ಶಿಶ್ನದ ಹಾಗೂ ಗರ್ಭಗೊರಳಿನ ಏಡಿಗಂತಿಗಳಿಗೆ ಕಾರಣವೆಂಬ ಬಲವಾದ ಶಂಕೆಯಿದೆ. ಬಾಲ್ಯ ಮದುವೆಯಾಗಿ ಹೆರಿಗೆಗಳು ಹೆಚ್ಚಾದಷ್ಟೂ ಮುಂದೊಗಲಲ್ಲಿ ಕೊಳೆ ಸೇರಿದಷ್ಟೂ ಇವು ಆಗುವ ಸಂಭವ ಹೆಚ್ಚು.

ಕಾಶ್ಮೀರಿಗಳು ಕಲ್ಲಿದ್ದಲಿನ ಉರಿಕೆಂಡಗಳಿರುವ ಬಿಸಿಬುಟ್ಟಿಯನ್ನು (ಕಾಂಗ್ರಿ) ಹೊಟ್ಟೆ ತೊಡೆಗಳ ಮೇಲೆ ಧರಿಸುವುದರಿಂದ ಅಲ್ಲಲ್ಲ ಚರ್ಮ ಬೆಂದು ಏಡಿಗಂತಿಯಾಗುವುದು ಸಾಮಾನ್ಯ. ಪ್ರಪಂಚದಲ್ಲಿ ಬೇರೆ ಯಾರೂ ಈ ಪದ್ಧತಿಯನ್ನು ಅನುಸರಿಸುವುದಿಲ್ಲ. ಆದ್ದರಿಂದ ಬೇರೆಲ್ಲೂ ಈ ಕಾಂಗ್ರಿ ಏಡಿಗಂತಿ ಕಾಣದು.

ಹೊಗೆಸೇದಿಕೆ : ದಿನವೂ ಬಹಳವಾಗಿ ಸೇದುವ ಸಿಗರೇಟುಗಳ ಸಂಖ್ಯೆ, ಸೇದುವ ಅವಧಿಗಳಿಗೆ ತಕ್ಕಂತೆ ಪುಪ್ಪುಸ ಗಂತಿಯ ಕಂಟಕ ಹೆಚ್ಚುತ್ತದೆ. ಸೇದದವರಿಗಿಂತ ಮಿತಿಮೀರಿ ಸೇದುವವರಲ್ಲಿ 20%–30% ರಷ್ಟು ಹೆಚ್ಚು. ಇಷ್ಟಲ್ಲದೆ ಧೂಮಪಾನಿಗಳಲ್ಲಿ ದನಿನಾಳ, ಬಾಯಿ, ಅನ್ನನಾಳ, ಮೂತ್ರಕೋಶದ ಗಂತಿಗಳಾಗುವ ಗಂಡಾಂತರ ಹೆಚ್ಚು. ದಶಲಕ್ಷ ಜನರಲ್ಲಿ ಅಮೆರಿಕದ ಗಂತಿಸಂಸ್ಥೆ ನಡೆಸಿದ ಶೋಧನೆಯಿಂದ ಈ ನಿಜಾಂಶಗಳು ತಿಳಿದು ಬಂದಿವೆ. ಬೀಡಿ ಸೇದುವ. ತಂಬಾಕು ಮೆಲ್ಲುವ ಗುಜರಾತಿಗಳಲ್ಲಿ ನಾಲಗೆಬುಡ, ಮೆಂಡಿಕೆಗಳ (ಟಾನ್ಸಿಲ್) ಏಡಿಗಂತಿ ಸಾಮಾನ್ಯ.

ಉರಿವ ತುದಿಯನ್ನು ಬಾಯೊಳಗಿಟ್ಟುಕೊಂಡು ಚುಟ್ಟ ಸೇದುವ ರೂಢಿ ಆಂಧ್ರ ಪ್ರದೇಶದಲ್ಲಿದೆ. ಬಿಸಿ ಹೊಗೆ ಬಡಿಯುವ ಬಾಯಿಯ ಗಡುಸು ಅಂಗುಳದಲ್ಲಿ (ಹಾರ್ಡ್ ಪ್ಯಾಲೆಟ್) ಏಡಿಗಂತಿ ಹೆಚ್ಚು. ಒಂದೇ ಸಮನೆ ತಾಕುವ ಕಾವೂ ತಂಬಾಕಿನ ಹೊಗೆಯೂ ಈ ಆಂಧ್ರ ಏಡಿಗಂತಿಗೆ ಮುಖ್ಯ ಕಾರಣಗಳು.

ತಾಂಬೂಲ : ಭಾರತದಲ್ಲಿ ಎಲ್ಲೆಲ್ಲೂ ತಾಂಬೂಲ ಮೆಲ್ಲುವುದು ಸಾಮಾನ್ಯ ಪದ್ಧತಿ. ಅಡಕೆಯಲ್ಲಿ ಒಗರು ಕೊಡುವ ಟ್ಯಾನಿನ್ ಅಲ್ಲದೆ, ಕನಿಷ್ಠ ಪಕ್ಷ ಆರು ಆಲ್ಕಲಾಯ್ಡುಗಳಿವೆ. ತಾಂಬೂಲದಲ್ಲಿ ವೀಳೆಯದೆಲೆ, ಅಡಕೆ, ಸುಣ್ಣ, ಶುಂಠಿ, ತಂಬಾಕು, ಮೆಣಸು ಮತ್ತಿತರ ಪದಾರ್ಥಗಳನ್ನು ಸೇರಿಸುವುದುಂಟು. ಮದ್ರಾಸಿನ ಒಟ್ಟು ಏಡಿಗಂತಿಗಳಲ್ಲಿ 34% ಪಾಲು ಬಾಯಿಗಂತಿಗೆ ಬಹು ಹೆಚ್ಚಾಗಿ ವೀಳ್ಯ, ಅಡಕೆಗಳೊಂದಿಗೆ ತಂಬಾಕು ಅಗಿಯುತ್ತ ಬಾಯಲ್ಲಿ ಒಂದೆಡೆಗೆ ಒತ್ತಲಿಸುವುದು ಕಾರಣ ಎಂದು ನುರಿತವರ ಅಭಿಮತ. ಖೈನಿ ಎಂಬ ತಂಬಾಕು ಸುಣ್ಣಗಳನ್ನು ತಾಂಬೂಲದಲ್ಲಿ ಗಂಟೆಗಟ್ಟಲೆ ದವಡೆಯಲ್ಲಿಟ್ಟುಕೊಂಡು ಮೆಲ್ಲುವ ಬಿಹಾರ, ಉತ್ತರ ಪ್ರದೇಶದ ಜನರಲ್ಲಿ ಬಾಯಿ, ಅನ್ನನಾಳಗಳ ಏಡಿಗಂತಿ. ತಾಂಬೂಲ ಹಾಕದವರಿಗಿಂತ ಎಂಟರಷ್ಟು ಹೆಚ್ಚು. ಬಾಯಿಯ ದುರ್ಗಂಧ, ಹಲ್ಲುಗಳ ರೋಗ, ಅನ್ನಾಂಗಗಳ ಕೊರೆ ಸಹಾಯಕ ಕಾರಣಗಳಿರಬಹುದು.

ಧೋತಿ ಗಂತಿ : ಧೋತಿ ಅಥವಾ ಪಂಚೆಯನ್ನು ಸೊಂಟದ ಸುತ್ತ ಬಿಗಿಯಾಗಿ ಕಟ್ಟಿ ಇನ್ನೊಂದು ತುದಿಯನ್ನು ತೊಡೆ ಸಂದಿನಲ್ಲಿ ತೂರಿಸಿ ಸೊಂಟದ ಹಿಂಭಾಗದಲ್ಲಿ ಬಿಗಿಸುತ್ತಾರೆ. ಸೊಂಟ ಮೂಳೆ ಮೇಲೂ ತೊಡೆಸಂದುಗಳಲ್ಲೂ ಚರ್ಮದ ಒತ್ತುಹುಣ್ಣಾಗಿ (ಪ್ರೆಷರ್ ಸೋರ್) ಏಡಿಗಂತಿಯಾಗುವುದು ಹೆಚ್ಚು. ಬಡವರಲ್ಲಿ ಇದು ಸಾಮಾನ್ಯ. ಕೊಳಕುತನವೇ ಈ ಗಂತಿಗೆ ಕಾರಣವಿರಬಹುದು.

7 ಭೂಗುಣ-ಹವಗಳು : ಮೊಲೆಗಂತಿ ಭಾರತ ಜಪಾನುಗಳಲ್ಲಿ ವಿರಳ ; ಯೂರೋಪ್. ಉತ್ತರ ಅಮೆರಿಕಗಳಲ್ಲಿ ಹೆಚ್ಚು. ಜಪಾನಿನಲ್ಲಿ ಜಠರದ ಏಡಿಗಂತಿ ಬಹಳ ಹೆಚ್ಚು ; ಉತ್ತರ ಯೂರೋಪ್, ಅಮೆರಿಕಗಳಲ್ಲಿ ಅಧಿಕ, ಭಾರತದಲ್ಲಿ ವಿರಳ. ಚೀನೀಯರಲ್ಲಿ ಮೂಗುಗಂಟಲ್ಕುಳಿಯ (ನೇಸೊಫ್ಯಾರಿಂಕ್ಸ್) ಗಂತಿ ಬಲು ಹೆಚ್ಚು. ಉಷ್ಣವಲಯದ ಬಿಳಿಜನರಲ್ಲಿ ಬಿಸಿಲಿನಿಂದ ಚರ್ಮದ ಏಡಿಗಂತಿ ಆಗುವುದು ಹೆಚ್ಚು. ಚರ್ಮದಲ್ಲಿ ಕರ್ವಣ್ಣ (ಮೆಲನಿನ್) ಹೆಚ್ಚಿದ್ದು ಇದನ್ನು ತಡೆಗಟ್ಟುವ ನೀಗ್ರೋಚರ್ಮಗಳಲ್ಲಿ ಇದು ಅರಿದು.

8 ಉಳಿದ ಕಾರಣಗಳು : ಮದ್ಯಪಾನ ಮಾಡುವವರಲ್ಲಿ ದನಿನಾಳ, ಅನ್ನನಾಳಗಳ ಏಡಿಗಂತಿ ಹೆಚ್ಚು. ಆಫ್ರಿಕದ ಬಂಟುಜನಾಂಗದಲ್ಲಿ ಆಹಾರದ ನ್ಯೂನತೆ, ಅಥವಾ ಆಹಾರಾಂಶದಲ್ಲಿ ವಿ ಷ ವ ಸ್ತು (ಉದಾ : ಅಫ್ಲೊಟಾಕ್ಸಿನ್) ಈಲಿಯ ಏಡಿಗಂತಿಗೆ ಕಾರಣ. ಏಡಿಗಂತಿ ರೋಗಿಗಳಲ್ಲಿ ಬೇರೆ ಬಗೆಯ ಗಂತಿ ಏಳುವುದೂ 2–6ರಷ್ಟು ಹೆಚ್ಚು. ಮೊಲೆಗಂತಿ ಮದುವೆ ಆಗದವರಿಗಿಂತ ಆದವರಲ್ಲಿ ಕಡಿಮೆ. ಮಕ್ಕಳಿಗೆ ಎದೆಹಾಲು ಕೊಡುವ ತಾಯಂದಿರಲ್ಲಿ ಇನ್ನೂ ಕಡಿಮೆ.

ಏಡಿಗಂತಿಯ ಹೆಗ್ಗುಣಗಳು : ಹತೋಟಿಗೆಟ್ಟಿರುವುದೂ ಜೀವಕಣಗಳ ಹುಟ್ಟುಮರಳಿಕೆಯೂ (ಅನಾಪ್ಲೇಸಿಯ) ಏಡಿಗಂತಿಯ ಮುಖ್ಯ ಗುಣಗಳು. ಸುತ್ತಣ ಅಂಗಾಂಶಗಳು ಒಳನುಗ್ಗುವುದು, ಮರುಕಳಿಕೆ, ಬೇರೆ ಅಂಗಾಂಗಗಳಿಗೆ ಗುಳೆಯ (ಮೆಟಸ್ಟೇಸಿಸ್) ಹೋಗುವುದು, ಜೀವಾಣುವಿನ (ನ್ಯೂಕ್ಲಿಯಸ್) ಮಾರ್ಪಾಟುಗಳು, ಧ್ರುವೀಕರಣದ (ಪೊಲಾರಿಟಿ) ನಾಶ, ಮಾರಕ ಪರಿಣಾಮ, ಈ ಮುಖ್ಯ ಗುಣಗಳಲ್ಲಿ ಬಗೆಬಗೆಯ ಏಡಿಗಂತಿಗಳೂ ತರಾವರಿಯಾಗಿರುತ್ತವೆ.

ಏಡಿಗಂತಿ ಹರಡುವ ವಿಧಾನಗಳಿವು : ಒಳಪಸರಿಕೆ (ಇನ್‌ಫಿಲ್ಟ್ರೇಷನ್) ಹಾಲುರಸನಾಳಗಳು (ಲಿಂಫ್ಯಾಟಿಕ್ಸ್), ರಕ್ತನಾಳಗಳ ಮೂಲಕ ಅನ್ನನಾಳ, ಕರುಳು, ಮೂತ್ರನಾಳ ಇತ್ಯಾದಿ ಸಹಜ ಅಂಗ ಹೊರದಾರಿಗಳಿಂದ ; ಗುಂಡಿಗೆ, ಪುಪ್ಪುಸ, ಪಚನಾಂಗಗಳ ಸುತ್ತಪೊರೆಗಳ ಪೊಳ್ಳುಗಳ ಮೂಲಕ ; ಚುಚ್ಚಿಳಿತ (ಇನಾಕ್ಯುಲೇಷನ್).

ಮುನ್ನೇಡಿಗಂತಿ (ಪ್ರಿಕ್ಯಾನ್ಸರಸ್ ಲೀಷನ್) : ಬಾಯಿಯ, ಹೆಣ್ಣಿನ ಜನನಾಂಗದ ಬಿಳಿಮಚ್ಚನೆ (ಲ್ಯೂಕೊಪ್ಲೇಕಿಯ), ಮುಪ್ಪಿನ ಕೊಂಪೊರೆತನ (ಕೆರೆಟೋಸಿಸ್) ಮತ್ತಿತರ ಬೇನೆಗಳಲ್ಲಿ ಗಂತಿಯಾಗುವ ಸಂಭವ ಬಹು ಹೆಚ್ಚು.

ಮೈಯಲ್ಲಿ ಪರಿಣಾಮಗಳು : ತೂಕವಿಳಿದು ನಮೆದು ಜಡತೆಯನ್ನಪ್ಪುವುದು ಹೆಚ್ಚಾಗಿ ಹರಡಿಕೊಂಡ ಏಡಿಗಂತಿಯಲ್ಲಿ ಹೆಚ್ಚು. ಹೀಗಾಗಲು, ಗಂತಿಯ ನಿರ್ದಿಷ್ಟ ಸ್ವಭಾವಕ್ಕಿಂತ—ಹಸಿವಿಲ್ಲದಿರುವಿಕೆ, ರಕ್ತನಷ್ಟ, ಭೇದಿ, [illegible]

ಇತ್ಯಾದಿಗಳೇ ಕಾರಣ. ಜೀವವಸ್ತುಕರಣದಲ್ಲಿ ಮೈಕಡಿತ, ರಕ್ತಸಕ್ಕರೆ ತಗ್ಗುವುದು, ಕ್ಯಾಲ್ಸಿಯಂ ಹೆಚ್ಚಳ ಮತ್ತಿತರ ಗೊತ್ತಾದ ಬದಲಾವಣೆಗಳಾಗಬಹುದು.

ರೋಗಿ ಬೇರಾವ ರೋಗಕ್ಕೂ ಏಡಿಗಂತಿಯಷ್ಟು ಅಂಜುವುದಿಲ್ಲ. ಏಡಿಗಂತಿ ಚಿಕಿತ್ಸೆ ಚೆನ್ನಾದಷ್ಟೂ ಈ ರೀತಿ ಅಂಜಿಕೆ ಇಳಿಯಬಹುದು. ಏಡಿಗಂತಿಯನ್ನು ಎಳೆಯದರಲ್ಲೇ ಕಂಡುಹಿಡಿವುದೂ ನಿರೋಧಕ ಕ್ರಮಗಳೂ ತಕ್ಕ ಚಿಕಿತ್ಸೆಯೂ ಮುಖ್ಯ.

ಏಡಿಗಂತಿ ಸಂಶೋಧನೆಯ ಅಂತಿಮ ಗುರಿಗಳಿವು: 1 ಸುಧಾರಿತ ಪರೀಕ್ಷಾ ವಿಧಾನಗಳಿಂದ ಗಂತಿಯನ್ನು ಎಳೆತನದಲ್ಲೇ ಪತ್ತೆ ಹಚ್ಚಿ, ಗೊತ್ತಿರುವ ಚಿಕಿತ್ಸಾ ವಿಧಾನಗಳಿಂದ ಹೆಚ್ಚಿನ ಗುಣ ಪಡೆಯುವುದು. 2 ಸುಧಾರಿತ ಚಿಕಿತ್ಸೆಗಳಿಂದ ವಿಳಂಬಿತ ಹಾಗೂ ದುರ್ಲಕ್ಷಿತ ರೋಗಿಗಳು ಸಫಲಗುಣ ಪಡೆಯುವುದು. 3 ಸಫಲ ನಿರೋಧಕ ಕ್ರಮಗಳಿಂದ ರೋಗಪರೀಕ್ಷೆ ಹಾಗೂ ಚಿಕಿತ್ಸೆಯನ್ನು ಅನಗತ್ಯಗೊಳಿಸುವುದು.

ಎಳೆಯದರ ಶೋಧನೆ: ಇದನ್ನು ಸಾಧಿಸಲು ಅವಶ್ಯಕ್ರಮಗಳು—ಪ್ರಸ್ತುತ ಪರೀಕ್ಷಾಸಾಧನಗಳನ್ನು ಸದುಪಯೋಗಿಸುವುದು ಹಾಗೂ ಪರಿಪೂರ್ಣಗೊಳಿಸುವುದು; ರೋಗಲಕ್ಷಣ ಚಿಹ್ನೆಗಳು ತಲೆದೋರುವ ಮುನ್ನವೇ ತಾಂತ್ರಿಕ ನವ ಸಾಧನಗಳಿಂದ ಏಡಿಗಂತಿಯನ್ನು ಗೊತ್ತುಹಚ್ಚುವುದು.

ಏಡಿಗಂತಿಯ ಎಚ್ಚರಿಕೆಯ ಸಂಕೇತಗಳು; ಬಗೆಬಗೆಗಳ ಏಡಿಗಂತಿಗಳ ರೋಗ ಚಿಹ್ನೆ ಲಕ್ಷಣಗಳು ತರಾವರಿಯಾಗಿದ್ದರೂ ಕೆಲವು ಸೂಚನೆಗಳನ್ನು ಜನಸಾಮಾನ್ಯರೂ ಗುರುತಿಸಬಹುದು. ಈ ಸಂಕೇತಗಳಿಂದ ಏಡಿಗಂತಿ ರುಜುವಾತಾಗುವುದಿಲ್ಲ; ಆದರೆ ಇವು ರೋಗಿಯನ್ನು ವೈದ್ಯರ ಪರೀಕ್ಷೆ ಸಲಹೆಗಳಿಗೆ ಕರೆತರಬಲ್ಲವು. ಇವು ಸುಳ್ಳೆಂದು ನಿರ್ಧಾರವಾದಾಗ ವ್ಯಕ್ತಿ ನಿಶ್ಚಿಂತನಾಗಬಹುದು. ಸಕಾಲದಲ್ಲಿ ಏಡಿಗಂತಿ ಗೊತ್ತಾದರೆ ತಕ್ಕ ಚಿಕಿತ್ಸೆಯಿಂದ ಪೂರಾ ಗುಣಪಡಿಸಬಹುದು. ಏಡಿಗಂತಿಗಿಂತಲೂ ಅದನ್ನು ಕುರಿತ ಅಂಜಿಕೆ ಹೆಚ್ಚು ಹಾನಿಕರ. ಈ ದಿಗಿಲಿನಿಂದ ವೈದ್ಯಪಟುವಿನ ಸಲಹೆ ಪಡೆಯುವುದು ತಡವಾಗುತ್ತದೆ; ತಡವಾದರೆ ಪೂರ್ತಿ ಗುಣ ಕೈಗೂಡದು. ಎಚ್ಚರಿಕೆಯ ಸಂಕೇತಗಳಿವು: 1 ಗಡ್ಡೆ ಅಥವಾ ಊದು ಕಾಣಿಸಿಕೊಂಡು ಬೆಳೆಯುತ್ತಲೇ ಇರುವುದು. 2 ದೇಹದ ಸಹಜ ಮಾರ್ಗಗಳಿಂದ ಆಮು, ಕಫ, ಮಲ, ಮೂತ್ರ ಇತ್ಯಾದಿಗಳ ಮಿತಿಗೆಟ್ಟ ವಿಸರ್ಜನೆ ಅಥವಾ ರಕ್ತಸ್ರಾವ. 3 ಕಾರಣವಿಲ್ಲದೆ ಒಂದೆಡೆ ಕಾಣಿಸಿಕೊಳ್ಳುವ ಚಿಹ್ನೆ ರೋಗಗಳು (i) ಒಡೆದ ದನಿ, (ii) ಎಡೆಬಿಡದ ಕೆಮ್ಮು, (iii) ಕಷ್ಟನುಂಗಣೆ, (iv) ಎಡೆಬಿಡದ ಅಜೀರ್ಣ, (v) ಗೊತ್ತುಗೆಟ್ಟ ಭೇದಿ ಇಲ್ಲವೇ ಮಲಗಟ್ಟು, (vi) ಬಾಯಿ, ಚರ್ಮಗಳಲ್ಲಿ ವಾಸಿಯಾಗದ ಹುಣ್ಣು, (vii) ಮೊಲೆಯಲ್ಲಿ ನೋವಿಲ್ಲದ ಗಡ್ಡೆ, (viii) ಕ್ರಮ ತಪ್ಪಿ ಆಗುವ ಮುಟ್ಟು, ಅನಿರೀಕ್ಷಿತ ರಕ್ತಸ್ರಾವ.

ಎಚ್ಚರಿಕೆ ಸಂಕೇತಗಳ ನಕಾರ (ನೆಗೆಟಿವ್): ರೋಗಲಕ್ಷಣಗಳು ಹೆಚ್ಚಿರುವುದಕ್ಕಿಂತ ಇವು ತೋರುವುದು ಹೆಚ್ಚು ಹಾನಿಕರ. ಇದು ನೋವಿನ ಬಗ್ಗೆಯಂತೂ ಅಕ್ಷರಶಃ ನಿಜ. ರೋಗಿಗೆ ಇದು ದೈವಪ್ರಸಾದ ಎನಿಸಬಹುದು: ಆದರೆ ಬರ ಬರುತ್ತ ದುರಂತ ತಪ್ಪುವುದಿಲ್ಲ. ಏಡಿಗಂತಿಯ ಪ್ರಾರಂಭಲಕ್ಷಣ ನೋವೇ ಆಗಿದ್ದರೆ, ಎಳೆಯದರಲ್ಲೇ ಅದನ್ನು ಸುಲಭವಾಗಿ ಗುರುತಿಸಿ ಅಷ್ಟೇ ಸರಾಗವಾಗಿ ಗುಣಪಡಿಸಬಹುದಿತ್ತು.

ಜನರಲ್ಲಿ ತಿಳಿವಳಿಕೆ: ಇಂದಿನ ಪರೀಕ್ಷಾವಿಧಾನಗಳ ಸದುಪಯೋಗಕ್ಕೆ ಮೊಟ್ಟ ಮೊದಲಾಗಿ ಜನರಲ್ಲಿ ಏಡಿಗಂತಿ ವಿಚಾರವಾಗಿ ತಿಳಿವು ಹೆಚ್ಚಿಸಬೇಕು. ಯಾವ ಚಿಕಿತ್ಸೆಗೂ ಜಗ್ಗದ ಸ್ಥಿತಿಯಲ್ಲಿ ಕೈಮೀರಿದಮೇಲೆ ರೋಗಿ ವೈದ್ಯಸಲಹೆಗೆ ಬಂದರೆ ಯಾವ ಮಹಾ ವಿಧಾನಗಳೂ ಹಿಡಿಯವು. 35 ವಯಸ್ಸು ದಾಟಿದ ಆರೋಗ್ಯವಂತರು ಒಂದೆರಡು ಬಾರಿಯಾದರೂ ಏಡಿಗಂತಿ ಶೋಧನಾ ಶಿಬಿರಗಳಿಗೆ ಬರಬೇಕು. ಈ ಕೆಲಸ ಸೇವೆಗಳು ಸಾಮಾನ್ಯ ವೈದ್ಯ ಸಂಸ್ಥೆಗಳನ್ನವಲಂಬಿಸದೆ ಶೀಘ್ರಶೋಧನೆ, ಅದರಿಂದಾಗುವ ಸಫಲ ಚಿಕಿತ್ಸೆ ನಡೆಸುವ ರಾಷ್ಟ್ರೀಯ ಏಡಿಗಂತಿ ಸ್ವಯಂಸೇವಾ ಸಂಸ್ಥೆಗಳ ಆಶ್ರಯದಲ್ಲಿ ನಡೆಯಬೇಕು.

ಸುಧಾರಿತ ಪರೀಕ್ಷಾ ವಿಧಾನಗಳು: ಏಡಿಗಂತಿಶೋಧನೆ ಕಷ್ಟವಾದಾಗ ಈ ವಿಧಾನಗಳು ಗುಣಕಾರಕ ವೇಗವನ್ನು ಗಮನೀಯವಾಗಿ ಹೆಚ್ಚಿಸಬಲ್ಲವು.

ಸರಳ ಪರೀಕ್ಷೆ. ಗಂತಿ ಬರಿಗಣ್ಣಿನಿಂದ ನೋಡುವಂತಿರುವಾಗ ಅಥವಾ ಮುಟ್ಟಿದರೆ ಗೋಚರವಾಗುವಾಗ ಇದನ್ನು ಮಾಡಬೇಕು.

ರೋಗಿ ಹೇಳಿಕೆಯನ್ನು ಮನವರಿಕೆ ಮಾಡಿಕೊಳ್ಳುವುದು.

ಎಕ್ಸ್‌ಕಿರಣ ಪರೀಕ್ಷೆ: ಜನರು ಮುಂದೆ ಬಂದು ಎಕ್ಸ್‌ಕಿರಣ ಪರೀಕ್ಷೆಗೆ ಈಡಾಗದಿದ್ದಲ್ಲಿ ಏಡಿಗಂತಿಗಳನ್ನು ಗುರುತಿಸಲು ಸದಾ ಸಾಧ್ಯವಿಲ್ಲ. ಅನೇಕ ಬಾರಿ ಗಂತಿ ಎಕ್ಸ್‌ಕಿರಣ ಫಲಕದ ಮೇಲೆ ಎದ್ದು ತೋರಬಹುದು, ನೆರಳು ಬೀಳಿಸಬಹುದು. ಇದನ್ನು ಸರಿಯಾಗಿ ಅರ್ಥಮಾಡಿಕೊಂಡು ಬಳಸಿದರೆ ಚೆನ್ನಾದ ಸಾಧನ.

ವಿಕಿರಣ ಅಪಾರದರ್ಶಕ ರಾಸಾಯನಿಕಗಳು: ಇವನ್ನು ರೋಗಿಗೆ ನುಂಗಿಸಿದರೆ, ಕೆಲವು ಗಂತಿಗಳಿಗೆ ಅಂಟಿಕೊಂಡು ಎಕ್ಸ್‌ಕಿರಣ ಚಿತ್ರದಲ್ಲಿ ನೆರಳಾಗಿ ತೋರಬಹುದು. ಇವನ್ನು ಅಂಟಿಸಿಕೊಳ್ಳದ ಗಂತಿಗಳು ಅಪಾರದರ್ಶಕ ಹಿನ್ನೆಲೆಯಲ್ಲಿ ಚೆನ್ನಾಗಿ ಗೋಚರಿಸಬಹುದು.

ಕೆಲವು ವಿಶೇಷ ಎಂಡೊಸ್ಕೋಪುಗಳ ನೆರವಿನಿಂದ ಉಸಿರ್ನಾಳ, ಜಠರ, ಮೂತ್ರಕೋಶ, ಹೆಗ್ಗರುಳು ಮುಂತಾದ ಒಳಾಂಗಗಳಲ್ಲಿನ ಗಂತಿಗಳನ್ನು ಬರಿಗಣ್ಣಿನಿಂದ ನೋಡಬಹುದು. ಜೀವುಂಡಿ (ಬಯಾಪ್ಸಿ) ತೆಗೆದುಕೊಳ್ಳುವುದು, ಶಸ್ತ್ರಕ್ರಿಯೆ ನಡೆಯುತ್ತಿದ್ದಂತೆಯೇ ಅನುಮಾನಿತ ಗಡ್ಡೆಯಿಂದ ಕೊಯ್ತೆಗೆದ ಚೂರನ್ನು (ಜೀವುಂಡಿಗೆ) ಕೂಡಲೆ ನೀರ್ಗಲ್ಲಾಗಿಸಿ ಗಡಸುಗಟ್ಟಿಸಿ, ನೀರ್ಗಲ್ಲಾಗಿಸುವ ಚಿಕ್ಕ ಕತ್ತರಿಯಿಂದ ಕತ್ತರಿಸಿ, ಸೂಕ್ಷ್ಮದರ್ಶಕದಡಿಯಲ್ಲಿ ಪರೀಕ್ಷಿಸಬೇಕು. ಈ ವಿಧಾನದಿಂದ ಗಂತಿಯ ಇರವು, ರೋಗದ ಬಗೆ—ಇವನ್ನು ಕೆಲಕ್ಷಣಗಳಲ್ಲೇ ತಿಳಿದು ಮುಂದಿನ ತಕ್ಕ ಚಿಕಿತ್ಸೆಯನ್ನು ಖಚಿತವಾಗಿ ನಿರ್ಧರಿಸಬಹುದು. ಇದರಿಂದ ಮತ್ತೊಂದು ಬಾರಿ ಶಸ್ತ್ರಕ್ರಿಯೆಗೊಳಗಾಗುವ ತೊಂದರೆ ತಪ್ಪುತ್ತದೆ. ಬಹುಬೇಗ ಮಾಡುವ ಈ ಏರ್ಪಾಡಿನಿಂದ ಜೀವುಂಡಿಗೆಯ ಊರಿಗೆ (ಫಿಕ್ಸೇಷನ್) ಬಣ್ಣವೇರಿಸಿಕೆ (ಸ್ಟೇಯ್ನಿಂಗ್) ಇನ್ನೂ ಚೆನ್ನಾಗಬೇಕು.

ಪದರ ಜೀವಾಣುಶಾಸ್ತ್ರ (ಎಕ್ಸ್‌ಫೋಲಿಯೇಟಿವ್ ಸೈಟಾಲಜಿ): ಸಾಮಾನ್ಯವಾಗಿ ಏಡಿಗಂತಿಯ ಜೀವಕಣಗಳು ಒಂದಕ್ಕೊಂದು ಅಂಟಿಕೊಳ್ಳುವ ಬಲ ಕಡಿಮೆ. ಬೆಳೆತದ ಮೇಲ್ಮೈ ತೊಳೆತದ ದ್ರವ್ಯದಲ್ಲಿ ಅಥವಾ ಅಂಗದ ರಸದಲ್ಲಿ ಪೊರೆಪೊರೆಯಾಗಿ ಎದ್ದುಬರುವ ಗಂತಿಕಣಗಳನ್ನು ಗುರುತಿಸುವ ವಿಧಾನವೇ ಪದರ ಜೀವಾಣುಶಾಸ್ತ್ರ.

ಎಳ್ಳಷ್ಟೂ ರೋಗಲಕ್ಷಣಗಳಿರದ ಹೆಂಗಸರ ಯೋನಿಸುರಿತದಲ್ಲಿ ಕಂಡುಬರುವ ಗಂತಿಜೀವಕಣಗಳನ್ನು ಪೆಪ್ ಲೇಪ ಶೋಧನೆ (ಪೆಪ್ ಸ್ಮಿಯರ್ ಟೆಸ್ಟ್) ಎಂದು ಜನಪ್ರಿಯವಾಗಿ ಹೆಸರಾದ ಪೆಪನಿಕೋಲನ ವಿಧಾನದಿಂದ ಸೂಕ್ಷ್ಮದರ್ಶಕದಡಿಯಲ್ಲಿ ಪರೀಕ್ಷಿಸಿ ಎಳೆಯದರಲ್ಲೇ ಗೊರಳಿನ ಏಡಿಗಂತಿಯನ್ನು ಗೊತ್ತುಹಚ್ಚಬಹುದು. ಈ ವಿಧಾನ ಜನತಂಡದ ಪರೀಕ್ಷೆಗೆ ಬಳಸುವಷ್ಟು ಸರಳವೂ ಚುರುಕಾದುದೂ ಆಗಿದೆ.

ಗಂತಿಕಣಗಳ ಪರೀಕ್ಷೆಯಿಂದ ಅನೇಕ ಅಂಗಗಳ ಏಡಿಗಂತಿಗಳನ್ನು ಗೊತ್ತುಹಚ್ಚಬಹುದು — ದನಿನಾಳ (ಕಫ), ಪುಪ್ಪುಸ (ಉಗುಳು, ಉಸಿರ್ನಾಳದ ತೊಳೆತಗಳು), ಮೂತ್ರಪಿಂಡ, ಮೂತ್ರಕೋಶ (ಮೂತ್ರ), ಜಠರ ಕರಳು (ಉಪ್ಪುನೀರಿನ ತೊಳೆತಗಳು), ಪಿತ್ತನಾಳ (ದುರಾರ್ಗರುಳಿನ ತೊಳೆಗಳು) ಮತ್ತು ಮೊಲೆಯಿಂದ ಬರುವ ಸುರಿಕೆ. ಇಷ್ಟಲ್ಲದೆ ಮಿದುಳು, ಬೆನ್ನುಹುರಿಯ ದ್ರವ (ಸೆರಿಬ್ರೊಸ್ಪೈನಲ್ ಫ್ಲೂಯಿಡ್), ಸುತ್ತಂಚಿನ (ಪೆರಿಫೆರಲ್) ರಕ್ತದಲ್ಲಿ ಪೊರೆಯ ಚೀಲ, ಪೊಳ್ಳುಗಳಲ್ಲಿನ (ಪುಪ್ಪುಸ, ಗುಂಡಿಗೆ ಪಂಚನಾಂಗಗಳ ಸುತ್ತ ಪೊರೆ, ಕೀಲುಗಳ) ಕವಚ ದ್ರವ್ಯಗಳಲ್ಲಿ ಹಲವಾರು ಸಲ ಗಂತಿಕಣಗಳನ್ನು ಗುರುತಿಸಬಹುದು. ಎಷ್ಟಾದರೂ ಇದಕ್ಕೆಲ್ಲ ರೋಗಿಯನ್ನು ವಿವಿಧ ಗಂತಿಗಳಿಗೆ ಸಿದ್ಧಗೊಳಿಸುವುದು, ಗಂತಿಕಣಗಳು ಕೆಡುವ ಮುನ್ನವೇ ಪರೀಕ್ಷಕ ಪದಾರ್ಥಗಳನ್ನು ಸೇರಿಸಿ ಅಣಿಗೊಳಿಸುವುದು, ಅತಿ ಜಾಗೃತ ಕೌಶಲದಿಂದ ಅನೇಕ ಲೇಪಗಳನ್ನು ಮೊಟಕಾದ ಪರೀಕ್ಷೆ, ಗಂಟೆಗಟ್ಟಲೆ ತಜ್ಞರ ಕಾಲಾವಧಿ ಹಾಗೂ ಪರಿಶ್ರಮ ಬೇಕೇಬೇಕು. ಖಚಿತತೆಯನ್ನು ಬಲಿಗೊಡದೆ ಈ ತ್ರಾಸಕರ ಕ್ರಿಯಾವಿಧಾನವನ್ನು ಸರಳಗೊಳಿಸಬೇಕಾಗಿದೆ.

ಜೀವವಿದ್ಯುನ್ಮಾಪಕ (ಬಯೋ ಎಲೆಕ್ಟ್ರೊಮೀಟರ್): ಏಡಿಗಂತಿ ಮತ್ತಿತರ ರೋಗಗಳನ್ನು ಗುರುತಿಸುವ ಈ ಮಾಪಕಕ್ಕೆ ದೇಹದ ಜೀವವಿದ್ಯುತ್ತೇ ಆಧಾರ. ಈ ಉಪಕರಣದಿಂದ ಎಡಬಲದ ವಿದ್ಯುತ್ ವಿಭವ ವ್ಯತ್ಯಾಸಗಳನ್ನು (ಪೊಟೆನ್‌ಷಿಯಲ್ ಡಿಫರೆನ್ಸ್) ಅಳೆಯಬಹುದು. ಬೆರಳಿಗೆ ತಾಕಿರುವ ವೋಲ್ಟ್‌ಮಾಪಿಯು ವಿದ್ಯುನ್ಮಂಡಲಕ್ಕೆ ಹೊಂದಿಕೊಂಡಿರುತ್ತದೆ.

ಚರ್ಮದ ವಿದ್ಯುದ್ವಾಹಕತೆ (ಕಂಡಕ್ಟಿವಿಟಿ) ಮತ್ತು ಏರುಸಿರಾಟಕ್ಕೆ (ಹೈಪರ್ ವೆಂಟಿಲೇಷನ್) ಈ ಮಾಪಕದ ಅಳತೆಗಳು, ಏಡಿಗಂತಿ ಮತ್ತಿತರ ವ್ಯಾಧಿಗಳನ್ನಷ್ಟೇ ಅಲ್ಲದೆ, ಎಲ್ಲಕ್ಕಿಂತ ಹೆಚ್ಚು ರೋಗಲಕ್ಷಣಗಳ ಸುಳಿವಿಲ್ಲದಿದ್ದರೂ ಏಡಿಗಂತಿಗಾಗುವ ಸಂಭವವನ್ನು ಗೊತ್ತುಹಚ್ಚುತ್ತವೆ.

192 ಏಡಿಗಂತಿ ರೋಗಿಗಳಲ್ಲಿ 40%ಕ್ಕೆ ಮಾತ್ರ ವೆಚ್ಚದ ಪೆಪ್ ಲೇಪ ಶೋಧನೆ ಅಗತ್ಯ. ಮಿಕ್ಕ 60%ಕ್ಕೆ ಬೇಕಿಲ್ಲವೆಂದು ಈ ಮಾಪಕದಿಂದ ಮಾರ್ಟನ್ ವಿಟ್‌ಬಿ ಸಾಧಿಸಿದ್ದಾನೆ. ಅಂದರೆ ಇದು ಸರ್ಕಾರಕ್ಕೆ ಪ್ರತಿ ಲಕ್ಷ ಜನರ ಪರೀಕ್ಷೆಗೆ 20 ಲಕ್ಷ ರೂಪಾಯಿಗಳಷ್ಟು ಉಳಿಸುತ್ತದೆ.

ನಿರೋಧಕ ಕ್ರಮಗಳು: ಏಡಿಗಂತಿಯ ಭೌಗೋಳಿಕತೆ, ಹವ, ಅಪಾಯಕರ ಕಸುಬುಗಳ ಸ್ಥಿತಿಗತಿಗಳು, ರೂಢಿ ಸಂಪ್ರದಾಯಗಳು, ಚಟಗಳು, ಹರವು ಇತ್ಯಾದಿಗಳ

ಅಂಕಿಅಂಶಗಳ ಶೋಧನೆ ಏಡಿಗಂತಿ ನಿವಾರಣೆಗೆ ಮಹಾಕೊಡುಗೆಗಳು. ಪರಿಸರ ಹಾಗೂ ಮೈಯಲ್ಲಿನ ಗಂತಿಕಾರಕಗಳನ್ನು ಹೆಚ್ಚುಹೆಚ್ಚಾಗಿ ಗುರುತಿಸಿ ಮುಕ್ಕಾಲು ಭಾಗದಷ್ಟು ಗಂತಿಗಳನ್ನು ತಡೆಗಟ್ಟಲು ಸಾಧ್ಯವಾಗಿದೆ.

ಕೈಗಾರಿಕೆಯಲ್ಲಿನ ವಿವಿಧ ಹಂತಗಳಲ್ಲಿ ಅನೇಕ ವಸ್ತುಗಳಿಂದ ಗಂತಿ ಹೇಳಬಹುದು—ವಿಕಿರಣಶಕ್ತಿ ಅದುರಿನಲ್ಲಿ, ಬಣ್ಣವಸ್ತುಗಳ ತಯಾರಿಕೆಯಲ್ಲಿ, ಕ್ರೋಮಿಯಂ ತಯಾರಿಕೆಯ ಉತ್ಪನ್ನಗಳಲ್ಲಿ, ಎಕ್ಸ್ ಕಿರಣ ಕೊಳವೆಗಳಿಂದ, ಹರಿದಳ, ಕಲ್ನಾರುಗಳಲ್ಲಿ ಅದುರಿನಿಂದ ಬಳಕೆಯ ರೂಪದ ತನಕ—ಇತ್ಯಾದಿ ಸರಿಯಾದ ನಿವಾರಣೋಪಾಯಗಳು ಏಡಿಗಂತಿಯಾಗುವುದನ್ನು ತಪ್ಪಿಸುತ್ತವೆ. ಈ ಕ್ರಮಗಳಿಂದ ವಸ್ತುಗಳ ಬಣ್ಣ ಕಾರ್ಖಾನೆಗಳಲ್ಲಿ ಮೂತ್ರಕೋಶದ ಗಂತಿ ವಿರಳವಾಗಿದೆ. ವಿಕಿರಣದ ಎದುರು ಎಲ್ಲರೂ ರಕ್ಷಿತರಾಗಬೇಕೆಂದು ಕಾನೂನುಗಳಿವೆ. ವಿವಿಧ ವಿಕಿರಣಮಾಪಕಗಳು ಬಳಕೆಯಲ್ಲಿವೆ—ಗೀಗರ್ ಮುಲ್ಲರ್ ಗುಣಕ (ಕೌಂಟರ್), ಕೊಡುಗೆಮಾಪಕ (ಡೋಸಿಮೀಟರ್), ಪಟಲ ಪದಕ (ಫಿಲ್ಮ್ ಬ್ಯಾಡ್ಜ್) ಇತ್ಯಾದಿ, ಬಾಳಿನುದ್ದಕ್ಕೂ ಮಾನಿತ ವಿಕಿರಣತೆಯ ಪ್ರಮಾಣದ ಘಟ್ಟವೂ ನಿಶ್ಚಿತವಾಗಿದೆ. ಸೀಸದ ಮುಂಕವಚ (ಏಪ್ರನ್) ಕೈಗವುಸುಗಳೂ ಈ ಕೆಲಸಗಾರರನ್ನು ಕಾಪಿಡುತ್ತವೆ.

ಎಳೆಯವರಲ್ಲಿ ಏಡಿಗಂತಿ ಚಿಕಿತ್ಸೆ : ಏಡಿಗಂತಿ ಕೊಲ್ಲುವಷ್ಟೇ ಜನರನ್ನು ವಿಳಂಬವೂ ಕೊಲ್ಲುತ್ತದೆ. ಯಾವ ರೋಗವನ್ನೇ ಆಗಲಿ ತಡಮಾಡದೆ ಬೇಗನೆ ಚಿಕಿತ್ಸೆ ಕೈಗೊಳ್ಳುವುದು ಬಲು ಒಳ್ಳೆಯದು. ಮರವಾಗಿ ಬೆಳೆಯ ಬಿಡುವುದಕ್ಕಿಂತ ಏಡಿಗಂತಿಯನ್ನು ಚಿಗುರಿನಲ್ಲಿ ಚಿವುಟುವುದು ಸುಲಭ. ಜನರು ವಿಳಂಬಮಾಡುವ ಕಾರಣಗಳು ಅಂಜಿಕೆ 75%, ಅಜ್ಞಾನ 20%, ಇತರ ಕಾರಣಗಳು 5%.

ಏಡಿಗಂತಿಯ ಗುಣಕಾರಕ ವೇಗಗಳು

| ಅಂಗ | ಶೀಘ್ರ ಚಿಕಿತ್ಸೆ (%) | ವಿಳಂಬಿತ ಚಿಕಿತ್ಸೆ (%) |
|---|---|---|
| ದನಿನಾಳ | 75 | 5 |
| ತುಟಿ | 85 | 15 |
| ಬಾಯಿ | 60 | 5 |
| ಚರ್ಮ | 90 | 30 |
| ತರಡು (ಬೀಜ) | 75 | 15 |
| ಗರ್ಭಕಂಠ | 70 | 10 |
| ಮೂತ್ರಕೋಶ | 50 | 15 |
| ಸ್ತನ | 70/75 | 10 |

ಏಡಿಗಂತಿ ಚಿಕಿತ್ಸೆ : ಏಡಿಗಂತಿ ನಿರ್ಮೂಲಕ್ಕೆ ಶಸ್ತ್ರವೈದ್ಯ ಹಾಗೂ ವಿಕಿರಣ ರೋಗ ಚಿಕಿತ್ಸೆ (ರೇಡಿಯೊತೆರಪಿ) ನೆರವಾಗುತ್ತವೆ. ಇವೆರಡನ್ನೂ ಬೇರೆ ಬೇರೆಯಾಗೋ ಒಟ್ಟಾಗೋ ಬಳಸಬಹುದು. ಗುಣವಾದ ಗಂತಿಯ ಶಮನ ಇವೆರಡರಿಂದಲೂ ರಾಸಾಯನಿಕ ರೋಗ ಚಿಕಿತ್ಸೆಯಿಂದಲೂ (ಕೀಮೋತೆರಪಿ), ಸಾಧ್ಯ.

ಶಸ್ತ್ರವೈದ್ಯ : ತಾಂತ್ರಿಕತೆಯ ಮುನ್ನಡೆ, ಏಡಿಗಂತಿ ಬೆಳೆತದ ಹೆಚ್ಚಿನ ತಿಳಿವಳಿಕೆ ಅರಿವಳಿಕೆ—ಇವು ಶಸ್ತ್ರವೈದ್ಯದ ಉಪಯುಕ್ತತೆಯನ್ನು ಮೈಯಲ್ಲಿ ಏಳುವ ಎಲ್ಲ ತೆರನ ಗಂತಿಗಳಿಗೂ ಪಸರಿಸಿವೆ. ಶಸ್ತ್ರವೈದ್ಯದ ಸೂತ್ರಗಳಿವು—ಗಂತಿಯ ಬುಡಮುಟ್ಟ ಕೊಯ್ಯಿಗೆತ, ಮೊದಲು ರೋಗಹತ್ತಿದ ನೇರಹರಡಿಕೆ ಪಾಲ್ಗೊಳ್ಳುವ ಪಕ್ಕಪಕ್ಕದ ಹಾಗೂ ಹಾಲುರಸ ಬಸಿವ ಊತಕಗಳನ್ನೆಲ್ಲ ಒಟ್ಟಿಗೆ ತೆಗೆಯುವುದು. ಈ ನಿರ್ಮೂಲನ ಶಸ್ತ್ರಕ್ರಿಯೆಯ ಮೊದಲ ಉತ್ಸಾಹಕ್ಕೆ ಬದುಕುಳಿವವರ ಅಂಕಿಯ ಎದ್ದುಕಾಣುವ ಹೆಚ್ಚಳದ ಆಧಾರ ಇನ್ನೂ ದೊರೆತಿಲ್ಲ.

ವಿಕಿರಣ ಚಿಕಿತ್ಸೆ : ಕೆಲವು ಗಂತಿಗಳಿಗೆ ಇದು ಗುಣಪ್ರದ. ಏಳೆಯ ಮೇಲ್ಮೇಲಿರುವ ಸುಲಭಸಾಧ್ಯಗಳಲ್ಲಿ ಬಹುಫಲಕಾರಿ. ಹರಡಿರುವ ಗಂತಿಗಳ ನಿರ್ವಹಣೆಗೆ (ಉದಾ : ಮೊಲೆಯಿಂದ ಮೂಳೆಗೆ ಹರಡಿಹೋದ) ಹಲವೇಳೆ ಫಲಯುಕ್ತ. ಶಸ್ತ್ರಕ್ರಿಯೆ ಆದಮೇಲೆ ಶಲ್ಯಕ್ಕೆ (ಸ್ಕಾಲ್ಪೆಲ್) ಸಿಗದಿರುವ ಏಡಿಗಂತಿ ಕಣಗಳ ನಾಶಕ್ಕೆ ಫಲಪ್ರದ, ವಿಕಿರಣ ಚಿಕಿತ್ಸೆಯನ್ನು ಶಸ್ತ್ರಕ್ರಿಯೆ ಅಥವಾ ರಸಾಯನರೋಗ ಚಿಕಿತ್ಸೆಯೊಡನೆ ಸೇರಿಸಿದರೆ ಹಲವಾರು ಸಲ ಒಂದೇ ವಿಧಕ್ಕಿಂತ ಹೆಚ್ಚು ಫಲಕಾರಿ.

ಎಕ್ಸ್‌ಕಿರಣಗಳು, ವಿಕಿರಣ ಕಿರಣಗಳು, ವಿಕಿರಣಶೀಲ ಐಸೊಟೋಪುಗಳು [ಗುರಾಣಿಕ (ಥೈರಾಯ್ಡ್) ಗ್ರಂಥಿಯ ಗಂತಿಗೆ ವಿಕಿರಣಶೀಲ ಅಯೊಡಿನ್], ಕೋಬಾಲ್ಟ್-60 ಬಳಕೆಯಲ್ಲಿವೆ. ಅತ್ಯಧಿಕ ವೋಲ್ಟ್ ಹರಿವಿನ ಕಿರಣಾವಳಿಗಳಿಂದ ಆಳದಲ್ಲಿರುವ ಗಂತಿಗಳ (ಪುಪ್ಪುಸ, ಅನ್ನನಾಳ) ಚಿಕಿತ್ಸಾಫಲದ ನಿರ್ಣಯವಿನ್ನೂ ಆಗುವುದರಲ್ಲಿದೆ. ಇವನ್ನು ಸರಿಯಾಗಿ ಬಳಸಿದರೆ, ರೋಗಿ ತಿಂಗಳು ಅಥವಾ ವರ್ಷಗಟ್ಟಲೆ ಚೈತನ್ಯಕರ, ನೋವಿಲ್ಲದ ಉಪಯುಕ್ತವಾದ ಜೀವನವನ್ನು ಸಾಗಿಸಬಹುದು.

ರಸಾಯನ ರೋಗಚಿಕಿತ್ಸೆ : ಗಂತಿಕಣಗಳ ಮೇಲೆ ಫಲಕಾರಿಯಾಗುವ ಮದ್ದು ಕಂಡುಹಿಡಿವ ಯತ್ನ ಇನ್ನೂ ಕೈಗೂಡಿಲ್ಲ. ಮುಖ್ಯವಾಗಿ ಹರಡಿದ ಗಂತಿಗಳಲ್ಲಿ ಬಿಳಿಕಣರಕ್ತತೆ ಹಾಗೂ ವಿಕಿರಣತೆ ಮತ್ತು ಶಸ್ತ್ರಕ್ರಿಯೆಗಳಿಗೆ ಸಹಾಯಕವಾಗಿ ರಸಾಯನರೋಗ ಚಿಕಿತ್ಸೆಯನ್ನು ಬಳಸುತ್ತಾರೆ.

ಏಡಿಗಂತಿ ಮೇಲೆ ಪ್ರಭಾವತೋರುವ ಎಷ್ಟೊ ಮದ್ದುಗಳನ್ನು ನೋಡಿದ್ದಾಗಿದೆ. ಈಗ ಬಳಕೆಯಲ್ಲಿರುವುವು: 1 ವಿಕಿರಣ ಅಣಕಗಳು (ರೇಡಿಯೋಮಿಮೆಟಿಕ್ಸ್), 2 ಜೀವವಸ್ತು ರೋಧಕಗಳು (ಆಂಟಿಮೆಟಬೊಲೈಟ್ಸ್), 3 ಜೀವಿವಿರೋಧಕಗಳು (ಆಂಟಿಬಯೋಟಿಕ್ಸ್), 4 ಚೋದನಿಕಗಳು, 5 ಅಲ್ಕಲಾಯಿಡ್ಸ್.

ಭವಿಷ್ಯಸೂಚಿ : ಅನುದಿನ ಸತತ ಸುಧಾರಣೆಯಾಗುತ್ತಿರುವ ಚಿಕಿತ್ಸಾವಿಧಾನಗಳು, ಬಹುಕಾಲ ಕವಿದಿದ್ದ ಕಾರ್ಗತ್ತಲಿನ ಮೇಲೆ ಬೆಳಕು ಹರಿಸಿ ಆಶಾದಾಯಕ ಗಂತಿಚಿಕಿತ್ಸೆಗೆ ಭರವಸೆಯನ್ನೀಯುತ್ತಿವೆ. (ಜಿ.ಟಿ.ಪಿ.)

**ಏಡಿ ನೆಬ್ಯುಲ :** ವೃಷಭರಾಶಿಯ ಹಿನ್ನೆಲೆಯಲ್ಲಿ ದೂರದರ್ಶಕದ ಸಹಾಯದಿಂದ ಕಾಣಸಿಗುವ ಒಂದು ಅನಿಯತ (ಇರ್‍ರೆಗ್ಯುಲರ್) ನೆಬ್ಯುಲ



(ಕ್ರ್ಯಾಬ್ ನೆಬ್ಯುಲ). ಮೊದಲಿಗೆ ಐರ್ಲೆಂಡಿನ ಲಾರ್ಡ್ ರಾಸ್ (1800–1867) ಎಂಬ ಖಗೋಳಶಾಸ್ತ್ರಜ್ಞ ಇದನ್ನು ಪರಿಶೀಲಿಸಿ (1848) ಇದು ವೃತ್ತಾಕಾರದಲ್ಲಿ ಆವರ್ತಿಸುತ್ತಿದೆ, ಇದರ ಮೇಲ್ಮೈಯಿಂದ ಹೊರಹೊಮ್ಮುವ ಅನಿಲಗಳು ಏಡಿಯ ಕಾಲುಗಳಂತಿವೆ, ಇದು ದಿನೇ ದಿನೇ ಹಿಗ್ಗುತ್ತಿದೆ ಎಂದು ತಿಳಿಸಿದ. ಇದಕ್ಕೆ ಕ್ರ್ಯಾಬ್ (ಎಂದರೆ ಏಡಿ) ನೆಬ್ಯುಲ ಎಂದು ಹೆಸರಿತ್ತವನು ಇವನೇ. ಹಳೆಯ ಚೀನೀ ವರದಿಗಳ ಪ್ರಕಾರ 1054ರ ಜುಲೈ 4ರಂದು ಹಲವಾರು ಅಂಗುಲಗಳಷ್ಟು ಗಾತ್ರದ ಒಂದು ಅಪೂರ್ವ ನಕ್ಷತ್ರ ವೃಷಭರಾಶಿಯಲ್ಲಿ ಕಾಣಿಸಿಕೊಂಡು, ಸುಮಾರು ಒಂದು ವರ್ಷದ ಅನಂತರ ಕ್ರಮೇಣ ಕಾಣದಾಯಿತು. ಚೀನೀ ವಿದ್ವಾಂಸರು ಸೂಚಿಸಿದ ಈ ಸ್ಥಳದಲ್ಲಿ ಏಡಿ ನೆಬ್ಯುಲ ಇರುವುದು ಸ್ಥಿರಪಟ್ಟಿದೆ. ಈ ನಕ್ಷತ್ರ ನೋವ ಅಥವಾ ಮಹಾನೋವ ಆಗಿ ಆಸ್ಫೋಟಿಸಿರಬೇಕು, ಆಗಿನ ಇದರ ಕಾಂತಿವರ್ಗ–16 ಇದ್ದಿರಬೇಕೆಂದು ಊಹಿಸಲಾಯಿತು. ಇದರ ಅವಶೇಷವೇ ಈ ಏಡಿನೆಬ್ಯುಲ ಎಂದು ತೀರ್ಮಾನಿಸಿದ್ದಾರೆ. ಕೆಂಬ್ರಿಜ್ ವಿಶ್ವವಿದ್ಯಾನಿಲಯದ ವಿಜ್ಞಾನಿ ಫ್ರೆಡ್ ಹಾಯ್ಲನ ಗಣನೆಯಂತೆ ಇದು 1045ರಲ್ಲಿ ಸ್ಫೋಟಗೊಂಡು ಮಹಾನೋವ ಆಗಿರಬಹುದು. ಇದರ ಛಾಯಾಚಿತ್ರಗಳ ಅಧ್ಯಯನ ಮತ್ತು ಧ್ರುವೀಕರಣ ಅಳತೆಗಳಿಂದಾಗಿ ಈ ನೆಬ್ಯುಲದ ಒಳ ಭಾಗದಲ್ಲಿ ಕಾಂತಕ್ಷೇತ್ರವಿದೆ ಎಂಬುದು ತಿಳಿದುಬಂದಿದೆ. ಏಡಿನೆಬ್ಯುಲ ಒಂದು ಎಕ್ಸ್ ಕಿರಣಾಕರವೂ ಹೌದು (ನೋಡಿ—ಎಕ್ಸ್‌ಕಿರಣ ಖಗೋಳಶಾಸ್ತ್ರ).

ಸೂರ್ಯನಿಂದ ಏಡಿನೆಬ್ಯುಲದ ದೂರ ಸುಮಾರು 6,000 ಜ್ಯೋತಿರ್ವರ್ಷಗಳೆಂದು ಅಂದಾಜುಮಾಡಲಾಗಿದೆ. ನೆಬ್ಯುಲದ ವ್ಯಾಸ ಸುಮಾರು 3 ಜ್ಯೋತಿರ್ವರ್ಷಗಳು. ನೋಡುವ ದಿಕ್ಕಿನ ನೇರಕ್ಕೆ ಲಂಬವಾಗಿ ಸೆಕೆಂಡಿಗೆ ಸುಮಾರು 1,300 ಕಿಲೋಮೀಟರುಗಳ ದರದಲ್ಲಿ ಇದು ಹಿಗ್ಗುತ್ತಿದೆ. ಏಡಿನೆಬ್ಯುಲದ ದ್ರವ್ಯರಾಶಿ

ಸೂರ್ಯನ ದ್ರವ್ಯರಾಶಿಯ 10%ರಷ್ಟು ಇದೆ. ಭೂಮಿಯ ಮೇಲೆ ಕಾಣಬರುವ ವಿಶ್ವ ಕಿರಣಗಳ ಆಕರ—ಈ ಏಡಿ ನೆಬ್ಯುಲ ಎಂಬುದು ಕೆಲವು ವಿಜ್ಞಾನಿಗಳ ಮತ. *

**ಏಡ್ರಿಯಾಟಿಕ್ ಕಡಲು :** ಮೆಡಿಟರೇನಿಯನ್ ಸಮುದ್ರದ ಒಂದು ಕವಲು. ಇಟಲಿ, ಬಾಲ್ಕನ್ ಪರ್ಯಾಯದ್ವೀಪ—ಇವುಗಳ ನಡುವೆ ಇದೆ. ಉತ್ತರ ಅಕ್ಷಾಂಶ 40° ಯಿಂದ 45° 41′ ವರೆಗೆ—500 ಮೈಲಿ ಉದ್ದಕ್ಕೆ—ಹಬ್ಬಿದೆ. ಇದರ ಅಗಲ 45 ರಿಂದ 140 ಮೈಲಿ. (ಸರಾಸರಿ 110 ಮೈ.) ವಿಸ್ತೀರ್ಣ ಸುಮಾರು 60,000 ಚ.ಮೈ. ಇಡೀ ಮೆಡಿಟರೇನಿಯನಿನಲ್ಲಿ ಇದು ಅತ್ಯಂತ ಕಿರಿ ಆಳದ ಜಲ ಪ್ರದೇಶ. ಉತ್ತರಾರ್ಧದಲ್ಲಿ ಇದರ ಆಳ ಇನ್ನೂ ಕಡಿಮೆಯಾಗುತ್ತ ಹೋಗುತ್ತದೆ. ಈ ಕಡಲಿನ ಅತಿ ಹೆಚ್ಚಿನ ಆಳವೆಂದರೆ 4,035 ಅಡಿ. ಇದರ ನೀರಿನ ಲವಣತ್ವ ಪ್ರತಿ ಸಾವಿರಕ್ಕೆ 18 ರಿಂದ 35ರ ವರೆಗೆ ವ್ಯತ್ಯಾಸವಾಗುತ್ತದೆ.

ರೋಮನರ ಕಾಲದಲ್ಲಿ ಈ ಕಡಲ ದಂಡೆಯ ಏಡ್ರಿಯ ಎಂಬ ಬಂದರು ಬಲು ಪ್ರಸಿದ್ಧವಾಗಿತ್ತು. ಅದರಿಂದಲೇ ಈ ಕಡಲಿಗೆ ಏಡ್ರಿಯಾಟಿಕ್ ಎಂಬ ಹೆಸರು ಬಂದಿದೆ. ಈ ಬಂದರು ಕಡಲಂಚಿನಿಂದ ಒಳನಾಡಿನಲ್ಲಿ 14 ಮೈ. ದೂರದಲ್ಲಿದೆ. ಆಲ್ಪ್ಸ್ ಮತ್ತು ಅಪೆನೈನ್ ಪರ್ವತಗಳಿಂದ ಹರಿದು ಬಂದು ಈ ಕಡಲನ್ನು ಸೇರುವ ನದಿಗಳು ಸಂತತವಾಗಿ ಮಣ್ಣನ್ನು ತಂದು ಇದರಲ್ಲಿ ತುಂಬುತ್ತಲೇ ಇರುವುದರಿಂದ ಈ ನದಿಗಳ ಮುಖಜಭೂಮಿ ಸಮುದ್ರದ ಕಡೆಗೆ ಇಂದಿಗೂ ಬೆಳೆಯುತ್ತಲೇ ಇದೆ. ಕೆಲವು ಕಡೆಗಳಲ್ಲಿ ವರ್ಷಕ್ಕೆ 30 ಅಡಿಗಳಂತೆ ಸಮುದ್ರ ಹಿಂದೆ ಸರಿಯುತ್ತಿದೆ.

ಏಡ್ರಿಯಾಟಿಕಿನಲ್ಲಿ ಸ್ಥೂಲವಾಗಿ ಮೆಡಿಟರೇನಿಯನ್ ವಾಯುಗುಣವಿದೆಯೆನ್ನಬಹುದಾದರೂ ಇದರ ಉತ್ತರದ ಕಡೆಯಲ್ಲಿ ಖಂಡಾಂತರ ವಾಯುಗುಣದ ಲಕ್ಷಣಗಳೂ ಉಂಟು. ಈ ಕಡಲಿನ ಇಟಲಿಯ ಕಡೆಯ ದಂಡೆಗೂ ಬಾಲ್ಕನ್ ದಂಡೆಗೂ ನಡುವೆ ಹಲವು ವ್ಯತ್ಯಾಸಗಳನ್ನು ಕಾಣಬಹುದು. ಇಟಾಲಿಯನ್ ಕರಾವಳಿ ಹೆಚ್ಚು ನೇರ ; ಇಲ್ಲಿ ಜೌಗು ಸಾಮಾನ್ಯ. ಬಾಲ್ಕನ್ ತೀರ ಅಂಕುಡೊಂಕು ; ಕಡಿದು, ಬಂಡೆಮಯ. ಇಟಲಿಯ ಕಡೆಯಲ್ಲಿ ನೈಸರ್ಗಿಕ ಬಂದರು ಇಲ್ಲವೇ ಇಲ್ಲವೆನ್ನಬಹುದು. ಇಟಲಿಯ ತೀರದ ನಡುಗಡ್ಡೆಯಲ್ಲಿ, ಸುಣ್ಣಕಲ್ಲಿನ ಬಂಡೆಯ ಭೂಶಿರದ ರಕ್ಷೆಯಲ್ಲಿರುವ ಆಂಕೋನ ಬಂದರಿನಿಂದಾಚೆಗೆ ಮತ್ತೆ ಈ ಬಗೆಯ ಬಂಡೆಗಲ್ಲಿನ ತೀರ ಸಿಕ್ಕುವುದು ಟ್ರಿಯೆಸ್ಟೆ ಬಂದರಿನ ಬಳಿಯಲ್ಲೆ.

ಈ ಕಡಲಿನ ಇಟಾಲಿಯನ್ ತೀರದಲ್ಲಿ ಒಳ್ಳೆಯ ಬಂದರುಗಳೂ ಇದರ ಶಿರಪ್ರದೇಶದಿಂದ ಒಳನಾಡಿಗೆ ನೈಸರ್ಗಿಕ ಭೂಮಾರ್ಗಗಳೂ ಇಲ್ಲವಾದರೂ ಈ ಕಡಲು ಮಧ್ಯ ಯುರೋಪಿನ ವಕ್ಷಸ್ಥಲದ ವರೆಗೂ ಚಾಚಿ ನಿಂತಿರುವುದರಿಂದ ಇದರ ಪ್ರಾಮುಖ್ಯ ಬಹಳ ಹೆಚ್ಚು. ಇದು ಐರೋಪ್ಯ ವ್ಯಾಪಾರದ ರಾಜಮಾರ್ಗ. ರೋಮನರ ಕಾಲದಿಂದಲೂ ಇಲ್ಲಿನ ಹಲವು ಬಂದರುಗಳು ವ್ಯಾಪಾರ ಕೇಂದ್ರಗಳಾಗಿವೆ. ವೆನಿಸಿನ ಬೆಳೆವಣಿಗೆಯಾದಾಗ ಏಡ್ರಿಯಾಟಿಕ್ ಮಾರ್ಗಗಳಿಗೆ ಹೆಚ್ಚಿನ ಪ್ರಾಶಸ್ತ್ಯ ಬಂತು. ಸೂಯೆಜ್ ಕಾಲುವೆಯ ನಿರ್ಮಾಣದಿಂದ ವೆನಿಸ್ ಟ್ರಿಯೆಸ್ಟೆಗಳ ವ್ಯಾಪಾರ ಹೆಚ್ಚಿತು. ಇಂದು ಇವೆರಡು ಬಂದರುಗಳ ಪೈಕಿ ಟ್ರಿಯೆಸ್ಟೆಯದು ಸಿಂಹಪಾಲು. ಲಂಬರ್ಡಿ ಮೈದಾನದ ಆಯಾತ–ನಿರ್ಯಾತಗಳಿಗೆ ವೆನಿಸ್ ಇಂದಿಗೂ ಹೆಬ್ಬಾಗಿಲು. ಈ ಎರಡರ ಜೊತೆಗೆ ಆಂಕೋನ, ಬ್ರಿಂಡಿಸಿ, ರಿಯೆಕ ಮತ್ತು ಡೂಬ್ರೊವ್‌ನಿಕ್ ಬಂದರುಗಳೂ ಈ ಕಡಲ ಮಾರ್ಗದ ವ್ಯಾಪಾರದಲ್ಲಿ ಪಾಲ್ಗೊಂಡಿವೆ. ಏಡ್ರಿಯಾಟಿಕಿನ ಪೂರ್ವ ಪಶ್ಚಿಮ ದಂಡೆಗಳ ಜನರಿಗೆ ಮೀನುಗಾರಿಕೆ ಒಂದು ಮುಖ್ಯ ಕಸಬು. (ಎಂಎಎಚ್)

**ಏಣುಗಳು :** ಪಕ್ಷೀಕೃತ ಪರ್ವತಗಳಲ್ಲಿನ ನೆರಿಗೆಗಳಲ್ಲಿರುವ ಗಟ್ಟಿಯಾದ ಶಿಲೆಗಳ ಮೇಲಿನ ಮೃದು ಶಿಲೆಗಳು ಹರಿಯುವ ನೀರಿನಿಂದ ಸವೆದು ನಶಿಸಿ ಹೋಗಲಾಗಿ ಉಳಿದು ತೋರುವ ಚೂಪಾದ ಶಿಖರವುಳ್ಳ ಬೆಟ್ಟದ ಬೆನ್ನೇರುಗಳು (ಹಾಗ್‌ಬ್ಯಾಕ್ಸ್). ಅವುಗಳ ಒಂದು ಬದಿಯಲ್ಲಿ ವಾಲಿದ ಮುಖವೂ ಇನ್ನೊಂದು ಬದಿಯಲ್ಲಿ ಗಟ್ಟಿಯಾದ ಶಿಲೆಗಳಿಂದ ಭದ್ರವಾಗಿರಿಸಲ್ಪಟ್ಟ ಇಳಿಜಾರು ಭಾಗವೂ ಗೋಚರಿಸುತ್ತವೆ. ವಾಲಿಕೊಂಡ ಜಲಶಿಲೆಗಳಿಂದ ರಚಿತವಾದ ಎಲ್ಲ ಪಕ್ಷೀಕೃತ ಪರ್ವತಗಳ ಪಾರ್ಶ್ವಗಳಲ್ಲೂ ಏಣುಗಳನ್ನು ಕಾಣಬಹುದು. ಅಪಲೇಷಿಯನ್ ಮತ್ತು ರಾಕಿ ಪರ್ವತಗಳ ಅನೇಕ ಬೆಟ್ಟದ ಸಾಲುಗಳು ಏಣುಗಳಿಂದೊಡಗೂಡಿವೆ. ಪಶ್ಚಿಮ ಕೊಲರ್‍ಯಾಡೊ ಮೇಲಿರುವಂತೆ ಏಣುಗಳೇ ಬೇರೆಯಾಗಿ ಕಾಣುವ ದೃಶ್ಯಗಳು ಮಾತ್ರ ತೀರ ವಿರಳ. ಶುಷ್ಕ ಹವಾಮಾನದ ಪ್ರದೇಶದಲ್ಲಿ ಸವೆತದ ಮೂಲಕ ಶಿಥಿಲಗೊಳ್ಳುವ ಕಾರ್ಯ ನಿಧಾನವಾದುದರಿಂದಲೂ ಕಾಡುಗಳ ಅಭಾವದಿಂದಲೂ ಏಣುಗಳು ಅತ್ಯಂತ ಸ್ಫುಟವಾಗಿ ತೋರಿಬರುತ್ತವೆ.

ಭಾರತದಲ್ಲಿ ಸಿವಾಲಿಕ್ ಗುಡ್ಡಗಳ ಮುಂದುಗಡೆಯ ಶ್ರೇಣಿಯೂ ಅದಕ್ಕೂ ಹೆಚ್ಚಾಗಿ ಕಿರಿ ಹಿಮಾಲಯದ (ಹಿಮಾಚಲ) ಗುಡ್ಡಗಳೂ ಪೂರ್ವದ ಬರೈಲ್ ಗುಡ್ಡಗಳೂ ಕಾಶ್ಮೀರದ ಪೀರ್ ಪಂಜಲ್ ಶ್ರೇಣಿಯೂ ಏಣುಗಳ ದೃಶ್ಯಗಳಿಂದ ಕೂಡಿವೆ. (ಎಂ. ಐ.)



ಉತ್ತರ ಅಮೆರಿಕದ ಐರನ್ ಪರ್ವತಗಳಲ್ಲಿನ ಏಣುಗಳು

**ಏತ :** ನೀರಿನ ಮಟ್ಟ ನೆಲಮಟ್ಟಕ್ಕೆ ಆದಷ್ಟು ಸಮೀಪವಿರುವ ಬಾವಿ ಹೊಳೆ ಮುಂತಾದ ಜಲಾಶಯಗಳಿಂದ ನೀರನ್ನು ಮೇಲೆತ್ತಿ ಪಕ್ಕದ ಹೊಲಗಳಿಗೆ ಮೊಗೆಯುವ ಒಂದು ಸಾಧನ. ಎತ್ತಬೇಕಾದ ಎತ್ತರ 30 ಮೀಟರುಗಳಿಗಿಂತ ಕಡಿಮೆಯಿದ್ದರೆ ಮಾತ್ರ ಏತ ಅನುಕೂಲವೆನಿಸುವುದು. ಏತಗಳಲ್ಲಿ ಎರಡು ವಿಧ–ಮನುಷ್ಯಚಾಲಿತ ಮತ್ತು ಪಶುಚಾಲಿತ. ಮೊದಲಿನದರಲ್ಲಿ ಬಾನೆಯನ್ನು (ನೀರನ್ನು ತುಂಬುವ ಸಾಧನ) ಕೆಳಗಿಳಿಸುವ ಮತ್ತು ಮೇಲೆತ್ತುವ ಕೆಲಸಗಳನ್ನು ಮನುಷ್ಯನೇ ಮಾಡುತ್ತಾನೆ. ಎರಡನೆಯದರಲ್ಲಿ ಪಶುಗಳಿಂದ ಈ ಕೆಲಸಗಳನ್ನು ಮಾಡಿಸುತ್ತಾರೆ. ಪಶುಗಳ ಚಲನೆಯನ್ನು ನಿಯಂತ್ರಿಸುವುದು ಮಾತ್ರ ಇಲ್ಲಿ ಮನುಷ್ಯನ ಕೆಲಸ.

**ಮನುಷ್ಯಚಾಲಿತ ಏತ :** ಇದಕ್ಕೆ ಕೆಲವೆಡೆ ಡೆಂಕ್ಲಿ ಎಂದು ಹೆಸರಿದೆ. ಸಾಮಾನ್ಯವಾಗಿ ನೀರಿನ ಮಟ್ಟ ನೆಲಮಟ್ಟದಿಂದ 15 ಮೀಟರುಗಳಿಗಿಂತ ಹೆಚ್ಚು



ಮನುಷ್ಯಚಾಲಿತ ಏತ

ಆಳದಲ್ಲಿಲ್ಲದ ಬಾವಿ ಅಥವಾ ಕೆರೆಗಳಿಂದ ನೀರನ್ನು ಮೇಲೆತ್ತಿ ಸಣ್ಣಪ್ರಟ್ಟ ಹೊಲಗಳಿಗೆ ಪೂರೈಕೆಮಾಡಲು ಇದರ ಉಪಯೋಗವಿದೆ. ಈ ರೀತಿಯ ಒಂದು ಏತದ ಚಿತ್ರ ಇಲ್ಲಿ ಕೊಟ್ಟಿದೆ. ಬಾವಿಯ ಪಕ್ಕದಲ್ಲಿ ನೇರವಾದ ಒಂದು ಕಂಬವನ್ನು ನೆಟ್ಟು, ಅದರ ತುದಿಯಲ್ಲಿ ಮೇಲೆ ಕೆಳಗೆ ಓಲಾಡುವಂಥ ಒಂದು ಬಲವಾದ ಸನ್ನೆಕೋಲನ್ನು ಇರಿಸಲಾಗುವುದು. ಇದರ ಅರ್ಧಭಾಗ ಬಾವಿಯ ಒಳಭಾಗಕ್ಕೂ ಇನ್ನರ್ಧಭಾಗ ಬಾವಿಯಿಂದ ಹೊರಗೂ ಚಾಚಿರುತ್ತದೆ. ಬಾವಿಯ ಒಳಭಾಗಕ್ಕೆ ಚಾಚಿರುವ ಅರ್ಧಭಾಗದ ತುದಿಗೆ ಒಂದು ಹಗ್ಗವನ್ನು ಕಟ್ಟಿ ಬಾನೆಯನ್ನು ಇದರ ತುದಿಗೆ ಕಟ್ಟಲಾಗುವುದು. ಸನ್ನೆಕೋಲಿನ ಇನ್ನೊಂದು ತುದಿಯಲ್ಲಿ ಸಮಭಾರವನ್ನುಂಟು

ಮಾಡುವ ಒಂದು ಭಾರವಾದ ಕಲ್ಲನ್ನು ಪ್ರತಿಭಾರವಾಗಿ (ಕೌಂಟರ್‌ವೆಯಿಟ್) ಕಟ್ಟಿರುತ್ತಾರೆ. ಬಾನೆಯನ್ನು ನೀರಿನಲ್ಲಿ ಮುಳುಗಿಸಲು ಅದನ್ನು ಆಧರಿಸಿದ ಹಗ್ಗವನ್ನು ಕೆಲಸಗಾರ ಕೆಳಗಿಳಿಸುತ್ತಾನೆ. ಅದರಲ್ಲಿ ನೀರು ಪೂರ್ತಿಯಾಗಿ ತುಂಬಿದ ಬಳಿಕ ಬಾನೆ ನೇರವಾಗಿ ಮೇಲೆ ಹೋಗುವಂತೆ ಅವನು ನಿಯಂತ್ರಿಸುತ್ತಾನೆ. ಸನ್ನೆ ಕೋಲಿನ ಇನ್ನೊಂದು ತುದಿಯಲ್ಲಿ ಪ್ರತಿಭಾರವಿರುವುದರಿಂದ ಬಾನೆ ಮನುಷ್ಯ ಶಕ್ತಿಯ ಸಹಾಯವಿಲ್ಲದೆ ಮೇಲೇರುವುದು. ಹೀಗಾಗಿ ಖಾಲಿ ಬಾನೆಯನ್ನು ಕೆಳಗಿಳಿಸಲು ಮಾತ್ರ ಆತ ಅಲ್ಪಶಕ್ತಿಯನ್ನು ಉಪಯೋಗಿಸಿದರೆ ಸಾಕು. ಬಾನೆಯಲ್ಲಿ ನೀರು ತುಂಬಿದಾಗ ಅದನ್ನು ಮೇಲೆತ್ತಲು ಅವನು ಶಕ್ತಿಯನ್ನು ಉಪಯೋಗಿಸಿ ಪ್ರಯಾಸಪಡಬೇಕಾದ ಅಗತ್ಯವಿಲ್ಲ. ಮೇಲೇರುತ್ತಿರುವ ಬಾನೆ ಬಾವಿಯ ಅಂಚಿಗೆ ತಗುಲಿ ನೀರು ಚೆಲ್ಲದಂತೆ ಎಚ್ಚರವಹಿಸಿದರೆ ಸಾಕು.

**ಪಶುಚಾಲಿತ ಏತ :** ಇದರ ಬಳಕೆಯಿಂದ ಸುಮಾರು 30 ಮೀಟರಿನಷ್ಟು ಆಳದಲ್ಲಿರುವ ನೀರಿನ ಮಟ್ಟದಿಂದ ನೀರನ್ನು ಮೇಲೆತ್ತಿ ಪೂರೈಕೆಮಾಡಲು ಸಾಧ್ಯ.



ಪಶುಚಾಲಿತ ಏತ

ಇಲ್ಲಿ ಆವಶ್ಯಕ ಬಲವನ್ನು ಪಶುಗಳು ಪೂರೈಸುತ್ತವೆ. ಇಂಥ ಬಾವಿಗಳಿಗೆ ಕಪಿಲೆ ಬಾವಿಗಳೆಂದು ಹೆಸರು. ಚಿತ್ರದಲ್ಲಿ ಒಂದು ಪಶುಚಾಲಿತ ಏತವನ್ನು ತೋರಿಸಿದೆ. ಇದರಲ್ಲಿ ನೀರನ್ನು ತುಂಬಿ ಮೇಲೆತ್ತಲು ಒಂದು ದೊಡ್ಡ ಚರ್ಮದ ಚೀಲ ಅಗತ್ಯ. ಚೀಲದ ಒಂದು ತುದಿಯಲ್ಲಿ ದೊಡ್ಡದಾದ ಒಂದು ತೂತೂ ಇನ್ನೊಂದು ತುದಿಯಲ್ಲಿ ಒಂದು ಸಣ್ಣ ತೂತೂ ಇವೆ. ಉದ್ದವಾದ ಹಗ್ಗದ ಒಂದು ತುದಿಯನ್ನು ದೊಡ್ಡ ತೂತಿನ ಬಳಿ ಚೀಲಕ್ಕೆ ಕಟ್ಟಿ, ಈ ಹಗ್ಗವನ್ನು ಬಾವಿಯ ಮೇಲ್ಭಾಗದಲ್ಲಿರುವ ರಾಟೆಯ ಮೂಲಕ ಕೊಂಡೊಯ್ದು ನೀರನ್ನು ಎಳೆಯುವ ಎತ್ತುಗಳ ನೊಗಕ್ಕೆ ಕಟ್ಟಬೇಕು. ಇನ್ನೊಂದು ಹಗ್ಗವನ್ನು ತೆಗೆದುಕೊಂಡು ಅದರ ಒಂದು ತುದಿಯನ್ನು ಚರ್ಮದ ಚೀಲದ ಚಿಕ್ಕ ತೂತಿನ ಬಳಿ ಕಟ್ಟಿ ಅದನ್ನು ಬಾವಿಯ ಮೇಲ್ಭಾಗದಲ್ಲಿರುವ ಎರಡನೆಯ ರಾಟೆಯ ಮೂಲಕ ಕೊಂಡೊಯ್ದು ಎತ್ತುಗಳ ನೊಗಕ್ಕೆ ಕಟ್ಟಬೇಕು. ಬಾವಿಯಿಂದ ಸ್ವಲ್ಪ ದೂರದ ವರೆಗೆ ಎತ್ತುಗಳ ಚಲನೆಗಾಗಿ ಒಂದು ಇಳಿಜಾರಾದ ದಾರಿಯನ್ನು ಮಾಡಲಾಗುವುದು: ನೀರನ್ನೆಳೆಯುವ ಎತ್ತುಗಳು ಇಳಿಜಾರು ದಾರಿಯಲ್ಲಿ ಮುಂದೆ ಮತ್ತು ಹಿಂದೆ ಚಲಿಸುತ್ತವೆ. ಎತ್ತುಗಳು ಬಾವಿಯ ಬಳಿಯಿದ್ದಾಗ ಚರ್ಮದ ಚೀಲ ಪೂರ್ತಿಯಾಗಿ ನೀರಿನಲ್ಲಿ ಮುಳುಗುವಂತೆ ಮಾಡುವಷ್ಟು ಚೀಲಕ್ಕೆ ಕಟ್ಟಿದ ಹಗ್ಗಗಳು ಉದ್ದವಾಗಿರಬೇಕು. ಚೀಲದೊಳಗೆ ನೀರು ಪೂರ್ತಿಯಾಗಿ ತುಂಬಿದೊಡನೆ ಎತ್ತುಗಳು ಇಳಿಜಾರು ದಾರಿಯಲ್ಲಿ ಕೆಳಗೆ (ಬಾವಿಯಿಂದ ದೂರಕ್ಕೆ) ಚಲಿಸಲಾರಂಭಿಸುತ್ತವೆ. ಅವು ಮುಂದೆ ಚಲಿಸಿದಂತೆ ನೀರಿನಿಂದ ತುಂಬಿದ ಚೀಲ ಮೇಲೇರತೊಡಗುವುದು. ಆಗ ಅದರ ಎರಡೂ ತೂತುಗಳು ಚಿತ್ರದಲ್ಲಿ ತೋರಿಸಿದಂತೆ ಮೇಲ್ಭಾಗಕ್ಕೆ ಬರುವುದರಿಂದ ನೀರು ಚೀಲದಿಂದ ಸುರಿಯುವುದಿಲ್ಲ. ಎತ್ತುಗಳು ಇಳಿಜಾರುದಾರಿಯ ಕೊನೆಯನ್ನು ತಲುಪಿದಾಗ ಚೀಲ ಸಂಪೂರ್ಣವಾಗಿ ಬಾವಿಯಿಂದ ಮೇಲೆ ಬಂದಿರುತ್ತದೆ. ಈಗ ಚೀಲದ ಸಣ್ಣ ತೂತಿನ ಮೂಲಕ ನೀರು ಬಾವಿಯ ಅಂಚಿನ ಮೇಲೆ ಇಟ್ಟಿರುವ ತೊಟ್ಟಿ ಅಥವಾ ಮರಿಗೆಗೆ ಸುರಿಯುವುದು. ಮರಿಗೆಯಿಂದ ನೀರನ್ನು ಹೊಲಗಳಿಗೆ ಹರಿಯಬಿಡಲಾಗುವುದು. (ಕೆ.ಸಿ.ಜಿ.)

**ಏನ್ಸ್‌ವರ್ತ್, ವಿಲಿಯಂ ಹ್ಯಾರಿಸನ್ :** 1805–82. ಇಂಗ್ಲಿಷ್ ಕಾದಂಬರಿಕಾರ. ಮ್ಯಾಂಚೆಸ್ಟರಿನ ವಕೀಲನೊಬ್ಬನ ಮಗ. ಗ್ರ್ಯಾಮರ್ ಶಾಲೆಯಲ್ಲಿ ಓದಿದ. ವಕೀಲಿಯಲ್ಲಿ ಆಸಕ್ತಿ ಇಲ್ಲದೆ ಸಾಹಿತ್ಯರಂಗಕ್ಕಿಳಿದ. ಪ್ರಕಾಶಕನೊಬ್ಬನ ಮಗಳನ್ನು ಮದುವೆಯಾಗಿ ತಾನೂ ಪ್ರಕಾಶಕನಾಗಿ 11 ತಿಂಗಳು ಕೆಲಸಮಾಡಿದ. 1834ರಲ್ಲಿ ಇವನ ಪ್ರಥಮ ಕಾದಂಬರಿ ರೂಕ್‌ವುಡ್ ಬೆಳಕಿಗೆ ಬಂತು. ಇದರಲ್ಲಿನ ಒಬ್ಬ ವ್ಯಕ್ತಿ ಡಿಕ್ ಟರ್ಪಿನ್ ಎಂಬಾತ ಯಾರ್ಕಿಗೆ ಬರುವ ದೃಶ್ಯ ಕಣ್ಣಿಗೆ ಕಟ್ಟುವಂತಿದೆ. 1881ರ ಸುಮಾರಿಗೆ ಈತನ 39 ಕೃತಿಗಳು ಪ್ರಕಾಶನಗೊಂಡಿದ್ದುವು. ಇವುಗಳಲ್ಲಿ ಅನೇಕ ಪುಸ್ತಕಗಳು ಬೆಂಟ್ಲೀಸ್ ಮಿಸಲೆನಿ, ಏನ್ಸ್‌ವರ್ತ್ ಮ್ಯಾಗಜೀನ್ ಮತ್ತು ನ್ಯೂಮಂತ್ಲಿ ಎಂಬ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದುವು. ಇವುಗಳಲ್ಲಿ ಸಾಹಿತ್ಯ ದೃಷ್ಟಿಯಿಂದ ಪ್ರಸಿದ್ಧವಾದುವೆಂದರೆ ದಿ ಟವರ್ ಆಫ್ ಲಂಡನ್ (1840), ಗೈ ಫಾಕ್ಸ್ (1841), ಮೈಸರ್ಸ್ ಡಾಟರ್ (1842), ವಿಂಡ್ಸರ್ ಕ್ಯಾಸಲ್ (1843), ಸೇಂಟ್ ಜೇಮ್ಸ್ (1844). ಇವುಗಳೊಂದಿಗೆ ಕಿಚ್‌ಟನ್ (1837), ಓಲ್ಡ್ ಸೇಂಟ್ ಪಾಲ್ಸ್ (1841) ಮತ್ತು ಲ್ಯಾಂಕಷೈರ್ ವಿಚಸ್ (1848) ಗಳನ್ನೂ ಸೇರಿಸಬಹುದು.

(ಎಚ್.ಎ.ಎಸ್.)

**ಏಪಸ್ :** ಖಗೋಳದ ದಕ್ಷಿಣಾರ್ಧದಲ್ಲಿರುವ ಒಂದು ನಕ್ಷತ್ರ ಪುಂಜ. ವಿಷುವದಂಶ 13 ಗಂ. 45 ಮಿ.–18 ಗಂ. 10 ಮಿ. ಘಂಟಾವೃತ್ತಾಂಶ 68°ದ. – 82° ದ. ಇದೊಂದು ಕೇವಲ ಸಾಮಾನ್ಯ ಪುಂಜ. *

**ಏಪ್ರಿಲ್ :** ಕ್ರಿಸ್ತವರ್ಷದ ನಾಲ್ಕನೆಯ ತಿಂಗಳು. ಈ ತಿಂಗಳಲ್ಲಿ 30 ದಿವಸಗಳಿವೆ. ರೋಮ್ ಪಟ್ಟಣದ ಸ್ಥಾಪಕ ರೋಮ್ಯುಲಸ್ ಎಂಬುವನಿಂದ ಈ ಸಂಖ್ಯೆ ವಿಧಿತವಾಯಿತೆಂದು ರೋಮನ್ ಐತಿಹ್ಯದಿಂದ ತಿಳಿದುಬರುತ್ತದೆ. ನ್ಯೂಮ ಪಾಂಪಿಲಿಯಸ್ ಎಂಬಾತ ಈ ತಿಂಗಳಿಗೆ 29 ದಿವಸಗಳನ್ನು ನಿಗದಿಪಡಿಸಿದ. ಆದರೆ ಜೂಲಿಯಸ್ ಸೀಸರ್ 30 ದಿವಸಗಳೆಂಬುದನ್ನೇ ಸ್ಥಿರೀಕರಿಸಿದ. ಇಂದಿಗೂ ಇದೇ ಸಂಖ್ಯೆ ಉಳಿದಿದೆ. ಮೂಲ ಆಲ್ಬೇನಿಯನ್ ಅಥವಾ ಲ್ಯಾಟಿನ್ ತಾರೀಖು ಪಟ್ಟಿಗಳಲ್ಲಿ ಏಪ್ರಿಲಿಗೆ 36 ದಿವಸಗಳನ್ನು ಕಾಣಿಸಿದ್ದು, ಇದನ್ನೇ ಮೊದಲನೆಯ ತಿಂಗಳೆಂದು ಗಣಿಸಲಾಗಿತ್ತು. ರೋಮನರು ಈ ತಿಂಗಳನ್ನು ಶುಕ್ರನಿಗೆ ಪವಿತ್ರವಾದ ತಿಂಗಳೆಂದು ಪರಿಗಣಿಸಿದ್ದರು. ಗ್ರೀಕ್ ಭಾಷೆಯಲ್ಲಿ ಶುಕ್ರನಿಗಿರುವ ಆಫ್ರೋಡೈಟ್ ಎಂಬ ಪದದಿಂದ ಏಪ್ರಿಲ್ ಪದ ನಿಷ್ಪನ್ನವಾಗಿದೆಯೆಂದು ತಿಳಿಯಲಾಗಿತ್ತು. ರೋಮನಿನ ಏಪ್ರಿಲಿಸ್ ಎಂಬ ಪದದಿಂದ ಏಪ್ರಿಲ್ ಆವಿರ್ಭವಿಸಿದ್ದು ತೆಗೆ, ಪ್ರಾರಂಭಿಸು ಎಂಬ ಅರ್ಥ ನೀಡುತ್ತದೆ. ಹೂ, ಗಿಡ–ಮರಗಳು ಚಿಗುರುವ ಕಾಲದ ಸೂಚಕವಾಗಿ ಈ ಹೆಸರನ್ನು ಇಟ್ಟುಕೊಂಡಿದ್ದಿರಬಹುದು. ವಸಂತಕಾಲದ ಪ್ರಾರಂಭವನ್ನು ಏಪ್ರಿಲ್ ಸೂಚಿಸುವುದು. ಇಂದಿಗೂ ಏಪ್ರಿಲ್ 21ರಂದು ರೋಮ್‌ನಗರದ ಹುಟ್ಟುಹಬ್ಬ ರೋಮಿನಲ್ಲಿ ಅತಿ ವಿಜೃಂಭಣೆಯಿಂದ ನಡೆಯುತ್ತದೆ.

ಭಾರತೀಯ ಪಂಚಾಂಗದ ಫಾಲ್ಗುಣ–ಚೈತ್ರಮಾಸಗಳು ಸಾಮಾನ್ಯವಾಗಿ ಈ ತಿಂಗಳಲ್ಲಿ ಸೇರಿಕೊಂಡಿರುತ್ತವೆ. ಸೌರಮಾನ ಯುಗಾದಿ ಸಾಮಾನ್ಯವಾಗಿ ಏಪ್ರಿಲ್ 13, 14 ರಂದೇ ಬರುತ್ತದೆ. ಅಧಿಕಮಾಸ ಬಂದ ವರ್ಷದ ಮೂರನೆಯ ವರ್ಷದಲ್ಲಿ ಚಾಂದ್ರಮಾನ ಯುಗಾದಿ, ಶ್ರೀರಾಮನವಮಿ ಮುಂತಾದ ಹಬ್ಬಗಳು ಈ ತಿಂಗಳಲ್ಲೇ ಬರುತ್ತವೆ. *

**ಏಬ್ರಹಾಂ :** ಯೆಹೂದಿ ನಂಬಿಕೆಯ ಪ್ರಕಾರ ಪ್ರಾಚೀನ ಹೀಬ್ರೂ ರಾಷ್ಟ್ರದ ಸ್ಥಾಪಕ. ಏಬ್ರಹಾಂ ಎಂದರೆ ಹಲವರ ತಂದೆ ಎಂದು ಬೈಬಲಿನ ಅರ್ಥ. ಈತನನ್ನು ಏಬ್ರಾಂ ಎಂದೂ ಕರೆಯಲಾಗಿದೆ. ಈ ತಂದೆ ಮಹೋನ್ನತ—ಎಂಬುದು ಏಬ್ರಾಂ ಪದವನ್ನು ಕುರಿತ ವ್ಯಾಖ್ಯಾನ. ಐಸಾಕ್ ಇವನ ಸಂತಾನ. ಆದ್ದರಿಂದ ಈತ ಯೆಹೂದ್ಯರ ಆದ್ಯಪುರುಷ. ಇಸ್ಮಾಯೀಲ್ (ಇಷ್ಮೇಅಲ್) ಈತನ ಮಗನೇ ಆದ್ದರಿಂದ ಈತ ಅರಬರಿಗೂ ಹಿರಿಯ.

ದಕ್ಷಿಣ ಬ್ಯಾಬಿಲೋನಿಯದ ಕಾಲ್ಡೀಸಿನ ಅರ್‌ನಲ್ಲಿ ಏಬ್ರಹಾಂ ಜನಿಸಿದ. ಇವನ ತಂದೆ ಟೆರಾ ; ಒಬ್ಬ ವಿಗ್ರಹಾರಾಧಕ. ಇವನ ಹೆಂಡತಿಯ ಹೆಸರು ಸಾರಾ. ಅನೇಕ ಕಡೆಗಳಲ್ಲಿ ಸಂಚರಿಸಿ ಹಾರಾನ್‌ನಲ್ಲಿ ನೆಲೆಸಿದ್ದಾಗ ದೇವರು ಇವನಿಗೆ ಪ್ರತ್ಯಕ್ಷನಾದ. ಆತನ ಆಜ್ಞೆಯಂತೆ ಕ್ಯಾನಾನಿಗೆ ಹೋಗಿ ಅಲ್ಲಿ ಹೊಸ ರಾಷ್ಟ್ರ ಸ್ಥಾಪಿಸುವ ಉದ್ದೇಶದಿಂದ ತನ್ನ ಮಗ ಐಸಾಕನನ್ನೇ ಬಲಿಕೊಡಲು ಉದ್ಯುಕ್ತನಾಗಿದ್ದಾಗ ದೇವರು ಪ್ರತ್ಯಕ್ಷನಾಗಿ ಈ ಬಲಿಯನ್ನು ತಡೆದನಲ್ಲದೆ ಈತನ ದೃಢಭಕ್ತಿಗೆ ಮೆಚ್ಚಿ ಅನುಗ್ರಹಿಸಿದ. ನಿನ್ನ ವಂಶಜರಿಂದ ಎಲ್ಲ ರಾಷ್ಟ್ರಗಳೂ ಪುನೀತವಾಗಲಿ ಎಂಬುದು ದೇವರು ಈತನಿಗೆ ಕೊಟ್ಟ ವರ.

ಇಸ್ಲಾಂ ನಂಬಿಕೆಯ ಪ್ರಕಾರ ನೂಹ್ ಪ್ರವಾದಿಗಳಿಗೆ ಹಾಂ, ಸಾಂ ಮತ್ತು ಯಾಫುಸ್ ಎಂಬ ಮೂವರು ಮಕ್ಕಳಿದ್ದರು. ಏಬ್ರಹಾಂದು ಸಾಂ ವಂಶ. ಈತನ ಅಡ್ಡ ಹೆಸರು ದೇವರ ಮಿತ್ರ. ತಂದೆ ಆಜರ್, ರಾಜನಾದ ನಮ್ರೂದನ ನೌಕರ.

ಜೊತೆಗೆ ವಿಗ್ರಹ ತಯಾರಕ. ತನ್ನ ಕಾಲದಲ್ಲಿ ಒಬ್ಬ ಮಹಾ ವ್ಯಕ್ತಿಯ ಜನ್ಮವಾಗುವುದೆಂದೂ ಅವನಿಂದ ಅವನೂ ಅವನ ರಾಜ್ಯವೂ ನಾಶವಾಗುವುದಾಗಿಯೂ ನುಡಿದ ಭವಿಷ್ಯವಾಣಿಯಿಂದ ಕಿಡಿಯಾದ ನಮ್ರೂದ್ ದೊರೆ ಎಲ್ಲ ಎಳೆ ಮಕ್ಕಳನ್ನೂ ಕೊಲ್ಲಬೇಕೆಂದು ಆಜ್ಞಾಪಿಸಿದ. ಆದ್ದರಿಂದ ಏಬ್ರಹಾಂ ಹುಟ್ಟಿದ್ದು ಊರ ಹೊರಗಿನ ಒಂದು ಗುಹೆಯಲ್ಲಿ. ತಾಯಿ ತನ್ನ ಮಗುವನ್ನು ಅಲ್ಲೇ ಗುಟ್ಟಾಗಿ ಇಟ್ಟು ಎದೆ ಹಾಲು ಕೊಟ್ಟು ಬೆಳೆಸಿದಳು. ಏಬ್ರಹಾಂ ದೊಡ್ಡವನಾದ ಮೇಲೆ ದೊರೆಯ ಕೋಪಕ್ಕೆ ಪಾತ್ರನಾಗಿ ಅವನಿಂದ ತಪ್ಪಿಸಿಕೊಂಡು ಸಿರಿಯಕ್ಕೆ ಹೋಗಿ ಅಲ್ಲಿ ಸಾರಾಳನ್ನು ಮದುವೆಯಾಗಿ ಈಜಿಪ್ಟಿಗೆ ಹೋದ. ಸುಂದರಿ ಪತ್ನಿಯ ದೆಸೆಯಿಂದ ಬಲು ಕಷ್ಟಪಟ್ಟು ಅಲ್ಲಿಂದಲೂ ತಪ್ಪಿಸಿಕೊಂಡ. ಅಲ್ಲಿ ಈತನಿಗೆ ದಾಸಿಯಾಗಿ ದೊರಕಿದ ಹಾಜರಾಳಲ್ಲಿ ಹುಟ್ಟಿದ ಮಗುವಿನ ಹೆಸರು ಇಸ್ಮಾಯಿಲ್. ಸವತಿ ಸಾರಾಳ ಮತ್ಸರಕ್ಕೆ ತುತ್ತಾದ ದಾಸಿಯೂ ಆಕೆಯ ಪುತ್ರನೂ ದೇಶಭ್ರಷ್ಟರಾಗಿ ಮೆಕ್ಕಕ್ಕೆ ಬಂದರು. ಅಲ್ಲಿ ಇವರು ಬಾಯಾರಿದಾಗ ಇಸ್ಮಾಯಿಲನ ಕಾಲ ಬಳಿಯಲ್ಲೇ ನೀರಿನ ಚಿಲುಮೆ ಸಿಕ್ಕಿತೆಂದೂ ಮುಂದೆ ಏಬ್ರಹಾಮನೂ ಇಲ್ಲಿಗೆ ಬಂದು ಮಗನನ್ನು ಕೂಡಿಕೊಂಡು ಇಲ್ಲಿ ಕಾಬಾ ಕಟ್ಟಡ ಕಟ್ಟಿದನೆಂದೂ ನಂಬಿಕೆಯಿದೆ. ಮುಸ್ಲಿಮರು ಪ್ರಾರ್ಥನೆ ಮಾಡುವಾಗ ಕಾಬಾದ ಕಡೆ ಮುಖ ತಿರುಗಿಸಿಕೊಳ್ಳುತ್ತಾರೆ. ಏಬ್ರಹಾಂ ಯೆಹೂದ್ಯರ ತಂದೆಯೆಂದು ಇವರೂ ನಂಬುತ್ತಾರೆ. (ಎಸ್.ಎ.ಟಿ.ಕೆ.)

**ಏಬ್ರಹಾಂ, ಅ ಸಾಂಟಕ್ಲಾರ:** 1644–1709. ಜರ್ಮನಿಯ ಧರ್ಮಬೋಧಕ, ವಿಡಂಬನಕಾರ. ಸಾಂಟಕ್ಲಾರ ಎಂಬುದು ಕೆಥೊಲಿಕ್ ಪಂಥದ ಸಂನ್ಯಾಸಿಯಾಗಿ ಆತ ತೆಗೆದುಕೊಂಡ ಹೆಸರು. ಉಲ್ರಿಚ್ ಮೆಗೆರ್ಲೆ ಎಂಬುದು ಅವನ ಮೊದಲಿನ ಹೆಸರು. ದಕ್ಷಿಣ ಬೇಡೆನ್ ಪ್ರಾಂತ್ಯದ ಮೆಸ್‌ಕರ್ಚ್ ಎಂಬೆಡೆ ಹುಟ್ಟಿದ ಆತ ಕಾಲಕ್ರಮೇಣ ವಿಯನ್ನ ನಗರದಲ್ಲಿ ರಾಜಾಸ್ಥಾನದ ಬೋಧಕನಾದ (1677). ಆದರೆ ಇತರ ಬೋಧಕರಂತೆ ಆತ ಶ್ರೀಮದ್ಗಾಂಭೀರ್ಯದ ಮುಸುಕನ್ನು ಹೊದೆದವನಲ್ಲ. ಹಾಸ್ಯ ಮತ್ತು ವಿಡಂಬನೆಗಳು ಅವನಿಗೆ ಹುಟ್ಟುಗುಣಗಳಾಗಿ ಬಂದಿದ್ದುವು. 1679ರಲ್ಲಿ ವಿಯನ್ನದಲ್ಲಿ ಪ್ಲೇಗ್ ವ್ಯಾಧಿ ಹರಡಿತು. ಆಗ ಆತ ಧರ್ಮಬೋಧನೆಯನ್ನು ಸ್ವಲ್ಪಕಾಲ ನಿಲ್ಲಿಸಬೇಕಾಯಿತು. ಹೀಗೆ ದೊರೆತ ವಿರಾಮವನ್ನು ಲೇಖನಕಾರ್ಯದಲ್ಲಿ ಕಳೆದ. ವಾಚಕರ ಆಲಸ್ಯವನ್ನು ಹೋಗಲಾಡಿಸುವ ಸಾಮರ್ಥ್ಯ ಆತನ ಬರೆಹಗಳ ಮುಖ್ಯ ಗುಣ. 1683ರಲ್ಲಿ ವಿಯನ್ನ ತುರ್ಕಿಯ ಸೇನೆಗಳ ಮುತ್ತಿಗೆಗೆ ಗುರಿಯಾದಾಗ ಅವುಫ್, ಅವುಫ್, ಇಹ್ರ್ ಕ್ರಿಶ್ಚಿಯನ್ (ಏಳಿ, ಏಳಿ, ಕ್ರೈಸ್ತಯೋಧರೆ,) ಎಂಬ ಸ್ಫೂರ್ತಿದಾಯಕವಾದ ಲೇಖನವೊಂದನ್ನು ಬರೆದ. ಆತನ ಕೃತಿಗಳಲ್ಲಿ ಅತ್ಯಂತ ಪ್ರಸಿದ್ಧವಾದುದು ಜೂಡಾಸ್ ಡೆರ್ ಎಟ್ಸ್‌ಷೆಲ್ಮ್ (1686–95). ಕಥಾನಿರೂಪಣೆ ಮತ್ತು ಬೋಧನಾತ್ಮಕ ಪ್ರವಚನಗಳು ಜೊತೆ ಜೊತೆಗೆ ಬರುವ ಈ ಗ್ರಂಥ ಏಸುಕ್ರಿಸ್ತನನ್ನು ರೋಮನ್ ಅಧಿಕಾರಿಗಳಿಗೆ ತೋರಿಸಿಕೊಟ್ಟು ಅವನ ಸಾವಿಗೆ ಕಾರಣನಾದ ಗುರುದ್ರೋಹಿ ಜೂಡಾಸನನ್ನು ಕುರಿತದ್ದು. ವಿನೋದ, ವ್ಯಂಗ್ಯೋಕ್ತಿ, ವಿಡಂಬನೆ, ನೀತಿಬೋಧನೆ ಮತ್ತು ಸತ್ತ್ವಯುತವಾದ ಭಾಷಾ ಪ್ರಯೋಗ—ಇವುಗಳ ಮಿಶ್ರಣ ಸಾಂಟಕ್ಲಾರನ ಶೈಲಿಯ ವೈಶಿಷ್ಟ್ಯ. ಈ ತೆರದ ಬರೆಹದ ಮೂಲಕ ಜನರ ರೀತಿನೀತಿಗಳನ್ನು ಉತ್ತಮಪಡಿಸುವುದೇ ಆತನ ಉದ್ದೇಶವಾಗಿತ್ತು. (ಎಂ.ಆರ್.; ಜಿ.ವಿ.ಎಸ್.)

**ಏರಣ್:** ಮಧ್ಯಪ್ರದೇಶದ ಸಾಗರ ಜಿಲ್ಲೆಯಲ್ಲಿ ಬಿನಾ ನದಿಯ ದಡದಲ್ಲಿರುವ ಒಂದು ಸಣ್ಣ ಗ್ರಾಮ. ಕ್ರಿ.ಪೂ. 2000ದಿಂದ 700 ವರ್ಷಗಳ ವರೆಗೂ ಇಲ್ಲಿ ತಾಮ್ರಶಿಲಾಯುಗದ ಸಂಸ್ಕೃತಿ ನೆಲೆಸಿದ್ದು, ಸೂಕ್ಷ್ಮಶಿಲಾಯುಧಗಳೂ ಕೆಂಪು ಹಿನ್ನೆಲೆಯ ಮೇಲೆ ಕಪ್ಪುಬಣ್ಣದಿಂದ ಚಿತ್ರಿತವಾದ ಮಡಕೆಗಳೂ ಉಪಯೋಗದಲ್ಲಿದ್ದುದಾಗಿ ಇಲ್ಲಿ ನಡೆದ ಭೂ ಶೋಧನೆಗಳಿಂದ ತಿಳಿದುಬಂದಿದೆ. ವ್ಯವಸಾಯ ಪ್ರಧಾನವಾದ ಈ ಸಂಸ್ಕೃತಿ ಕ್ರಿ.ಪೂ. ಸುಮಾರು 700ರ ವೇಳೆಗೆ ಕೊನೆಗೊಂಡು ಕಬ್ಬಿಣಯುಗದ ಮತ್ತು ಪ್ರಾಚೀನ ಐತಿಹಾಸಿಕ ಸಂಸ್ಕೃತಿಗಳ ಲಕ್ಷಣಗಳನ್ನೊಳಗೊಂಡ ಸಂಸ್ಕೃತಿಯೊಂದು ಪ್ರಾರಂಭವಾಯಿತು. ಅನಂತರ ಇಲ್ಲಿ ಸುವ್ಯವಸ್ಥಿತ ರಾಜ್ಯಪದ್ಧತಿ ಬಳಕೆಗೆ ಬಂದಂತೆ ಕಾಣುತ್ತದೆ. ಭಾರತದಲ್ಲೇ ಅತ್ಯಂತ ಪ್ರಾಚೀನ ಲಿಪಿಯುಕ್ತ ನಾಣ್ಯಗಳು ಇಲ್ಲಿ ದೊರೆತಿವೆ. ಅಶೋಕನ ಕಾಲದ್ದಕ್ಕಿಂತ ಹಳೆಯ ಬ್ರಾಹ್ಮೀಲಿಪಿಯಲ್ಲಿ ಧರ್ಮಪಾಲಸ ಮತ್ತು ಏರಾಕನ್ಯ ಎಂಬ ಬರೆಹಗಳನ್ನು ಉಳ್ಳ ತಾಮ್ರದ ಅಥವಾ ಕಂಚಿನ ನಾಣ್ಯಗಳು ಇಲ್ಲಿ ದೊರಕಿವೆ. ಕೆಲವು ನಾಣ್ಯಗಳ ಮೇಲೆ ನದಿಯ ಚಿಹ್ನೆ ಕಂಡುಬರುತ್ತದೆ. ಈ ನಾಣ್ಯಗಳು ವಿದೇಶೀ ನಾಣ್ಯಪದ್ಧತಿಯಿಂದ ಪ್ರಭಾವಿತವಾಗಿರುವುವೆಂದು ನಿಸ್ಸಂದೇಹವಾಗಿ ಹೇಳಬಹುದು. ಸಮುದ್ರಗುಪ್ತನ ಒಂದು ಶಾಸನವೂ ಕ್ರಿ.ಶ. 5ನೆಯದರಿಂದ 11ನೆಯ ಶತಮಾನದ ವರೆಗಿನ ಕಟ್ಟಡಗಳೂ ಇಲ್ಲಿ ದೊರೆಕಿವೆ. ಇಲ್ಲಿನ ಒಂದೇ ಕಲ್ಲಿನ ಸ್ತಂಭ, ವಿಷ್ಣು, ವರಾಹ ಮತ್ತು ನರಸಿಂಹ ದೇವಾಲಯಗಳು ಉತ್ತರಕಾಲೀನ ಗುಪ್ತರ ಕಾಲಕ್ಕೆ ಸೇರಿದವು. ಏರಣ್‌ವರೆಗೂ ದಾಳಿಮಾಡಿದ ಹೂಣರನ್ನು ಭಾನುಗುಪ್ತ ಸೋಲಿಸಿ ಓಡಿಸಿದ. (ಬಿ.ಕೆ.ಜಿ.)

**ಏರನ್:** ಬೈಬಲಿನಂತೆ ಯಹೂದ್ಯ ಯಾಜಕ ಸಂಘದ ಮೊದಲ ಯಜಮಾನ ಅಥವಾ ಅಧ್ಯಕ್ಷ. ಮೋಸೆಸನ ಸಹೋದರ. ಮೋಸೆಸನೊಡನೆ ಇಸ್ರೇಲಿಗಳನ್ನು ಈಜಿಪ್ಟಿಗೆ ಕರೆದೊಯ್ದುದಲ್ಲದೆ ಅವನೊಡನೆ ರೆಫಿಡಿಮ್ ಯುದ್ಧದಲ್ಲಿ ಭಾಗವಹಿಸಿದ. ಅವನ ಪರವಾಗಿ ಈಜಿಪ್ಟಿನಲ್ಲಿ ಧರ್ಮಪ್ರಚಾರ ಮಾಡಿದ. ಸುವರ್ಣ ಕರುವನ್ನು ರಚಿಸಿ ಅದರ ಆರಾಧನೆಯನ್ನು ಪ್ರಾರಂಭಿಸಿದ. ಪರದೇಶದವಳೊಬ್ಬಳನ್ನು ಮೋಸೆಸ್ ಮದುವೆಯಾದಾಗ ಏರನ್ ಮತ್ತು ಅವನ ಸೋದರಿ ಮಿರಿಯಮ್ ಇಬ್ಬರೂ ಅದನ್ನು ತೀವ್ರವಾಗಿ ವಿರೋಧಿಸಿದರು. (ಜಿ.ಎಚ್.)

**ಏರಿ:** ಸುತ್ತಲಿನ ನೆಲದ ಮಟ್ಟಕ್ಕಿಂತ ಎತ್ತರವಾಗಿ ಮಣ್ಣು ಇಲ್ಲವೆ ಕಲ್ಲಿನಿಂದ ಕಟ್ಟಿರುವ ರಚನೆ (ಡೈಕ್). ಇದು ತ್ರಾಪಿಜ್ಯದ ಆಕಾರದಲ್ಲಿದೆ; ಎಂದರೆ ಬುಡ ಅಗಲ, ಮೇಲೆ ಕಿರಿದು. ಏರಿಯನ್ನು ಕಟ್ಟುವುದರಲ್ಲಿನ ಉದ್ದೇಶಗಳು ಹಲವಾರು. ಪ್ರಾಚೀನ ಈಜಿಪ್ಟಿನಲ್ಲಿ ಕ್ರಿ.ಪೂ.4,000ದ ಸುಮಾರಿನಲ್ಲಿ ನೈಲ್ ನದಿಯ ದಡಗಳ ಮೇಲೆ ಸಮಾಂತರವಾಗಿ ನೂರಾರು ಮೈಲಿಗಳ ಏರಿಗಳನ್ನೂ ಅವುಗಳಿಗೆ ಸಮಕೋನವಾಗಿ ಸಣ್ಣ ಏರಿಗಳನ್ನೂ ಕಟ್ಟಿ ತೋಟ್ಟಿಗಳಲ್ಲಿ ಹೇಗೋ ಹಾಗೆ ಏರಿಗಳ ಮಧ್ಯೆ ಪ್ರವಾಹದ ನೀರನ್ನು ನಿಲ್ಲಿಸುವ ಏರ್ಪಾಡು ಇತ್ತು. ದೊಡ್ಡ ಏರಿಗಳಲ್ಲಿ ಬಾಗಿಲುಗಳಿಂದ ಮುಚ್ಚಬಹುದಾದ ತೂಬುಗಳನ್ನಿಟ್ಟು ಅವುಗಳಿಂದ ಬೇಕಾದ ತೊಟ್ಟಿಗಳೊಳಕ್ಕೆ ನೀರನ್ನು ಬಿಡಬಹುದಿತ್ತು. ಈ ನೀರಿನಲ್ಲಿದ್ದ ಫಲವತ್ತಾದ ಗೋಡು ಮಣ್ಣು ಆಹಾರ ಧಾನ್ಯಗಳನ್ನು ವಿಶೇಷವಾಗಿ ಬೆಳೆಸಲು ಉಪಯೋಗಕಾರಿ. ಇದರಿಂದಾಗಿ ಕ್ರಿ.ಪೂ. ಒಂದನೆಯ ಶತಮಾನದಲ್ಲಿ ಈಜಿಪ್ಟ್ ದೇಶ ರೋಮನ್ ಚಕ್ರಾಧಿಪತ್ಯದ ಉಗ್ರಾಣವೆನಿಸಿಕೊಂಡಿತ್ತು.

ಸಮುದ್ರ, ಹೊಳೆ ಇಲ್ಲವೆ ಪ್ರವಾಹದ ನೀರು ಊರಿನೊಳಕ್ಕೆ ನುಗ್ಗದ ಹಾಗೆ ಏರಿ ತಡೆಯುತ್ತದೆ. ಹಾಲೆಂಡ್, ಇಂಗ್ಲೆಂಡಿನ ಫೆನ್ ಪ್ರಾಂತ್ಯ, ಅಮೆರಿಕದಲ್ಲಿ ಮಿಸಿಸಿಪಿ ನದಿಯ ಕೆಳಕಣಿವೆ ಮತ್ತು ಚೀನದ ತಗ್ಗಾದ ಪ್ರದೇಶ—ಇಲ್ಲೆಲ್ಲ ಪ್ರವಾಹದ ನೀರನ್ನು ಹೊರಕ್ಕೆ ಸಾಗಿಸಲು ಏರಿಗಳನ್ನು ಎರಡು ದಡಗಳಲ್ಲಿಯೂ ಕಟ್ಟುತ್ತಾರೆ. ಹಾಲೆಂಡಿನ ಆರ್ಥಿಕ ಜೀವನ ನಿಂತಿರುವುದೇ ಈ ಏರಿಗಳಿಂದ—ಸಮುದ್ರದ ತೀರದಲ್ಲಿ ದೊಡ್ಡ ಏರಿಗಳನ್ನೂ ಕಟ್ಟೆಗಳನ್ನೂ ಒಳನಾಡಿನಲ್ಲಿ ನೂರಾರು ಮೈಲಿಗಳ ಏರಿಗಳನ್ನೂ ಅಪಾರವಾದ ವೆಚ್ಚದಿಂದ ಕಟ್ಟಿ ಅವನ್ನೇ ಜಾಗರೂಕತೆಯಿಂದ ರಕ್ಷಿಸುವುದರ ಮೂಲಕ. ಇವುಗಳಲ್ಲಿ ಒಂದು ಏರಿಯ ಉದ್ದ 3,660 ಮೀ. ಎತ್ತರ. 7ಮೀ. ಚಪ್ಪಟೆಯಾದ ಇಳಿಕಲಿನ ಉದ್ದ 90 ಮೀ. ಇದನ್ನು ಕಾಂಕ್ರೀಟಿನ ದಿಮ್ಮಿಗಳಿಂದ ಭದ್ರಪಡಿಸಿದ್ದಾರೆ. ಈ ಏರಿಯ ಮೇಲೆ ಒಂದು ರಸ್ತೆ ಮತ್ತು ಒಂದು ರೈಲು ಮಾರ್ಗ ಸಹ ಇವೆ.

ಯೂರೋಪಿನಲ್ಲಿ ಹಿಂದಿನ ಕಾಲದಲ್ಲಿ ಸಣ್ಣ ರಾಷ್ಟ್ರಗಳ ಗಡಿಗಳನ್ನು ಗುರುತು ಮಾಡುವುದಕ್ಕಾಗಿ ಒಂದೆರಡು ಮೈಲಿಗಳಿಂದ ನೂರಾರು ಮೈಲಿಗಳ ವರೆಗೂ ಏರಿಗಳನ್ನು ಹಾಕುತ್ತಿದ್ದರು. ಗಡಿಯ ಅಂಚಿನಲ್ಲಿ ಮಣ್ಣನ್ನು ತೋಡಿ ಅದನ್ನೇ ತಮ್ಮ ರಾಷ್ಟ್ರದ ಕಡೆಗೆ ಏರಿಯ ಹಾಗೆ ತುಂಬುತ್ತಿದ್ದರು. ಹೀಗೆ ಉಂಟಾದ ಕಂದಕಗಳಲ್ಲಿ ಕ್ರಮೇಣ ಮಳೆಯ ನೀರು ನಿಂತು ಅವು ಶತ್ರುಗಳಿಗೆ ದುರ್ಗಮ ಪ್ರದೇಶಗಳಾಗುತ್ತಿದ್ದುವು. ಇಂಥ ಏರಿಗಳು ಹಳ್ಳಗಳ ಮೇಲೂ ಗುಡ್ಡಗಳ ಮೇಲೂ ಬಳಸಿಕೊಂಡು ಹೋಗಿ ದೇಶಕ್ಕೆ ಸುಲಭರಕ್ಷಣೆ ಒದಗಿಸುತ್ತಿದ್ದುವು. ತಮ್ಮ ಆಡಳಿತದಲ್ಲಿ ಇದ್ದಾಗ ರೋಮನರು ಬ್ರಿಟನ್ನಿನಲ್ಲಿ ಇಂಥ ಹಲವಾರು ಏರಿಗಳನ್ನು ಕಟ್ಟಿದ್ದರು. ಇದೇ ಮಾದರಿಯಲ್ಲಿ ಮುಂದಿನ ಶತಮಾನಗಳಲ್ಲಿಯೂ ಏರಿಗಳು ನಿರ್ಮಾಣವಾದುವು.

ಕೆಲವು ದೇಶಗಳಲ್ಲಿ ಶತ್ರುಗಳ ದೆಸೆಯಿಂದ ರಾಜ್ಯವನ್ನು ರಕ್ಷಿಸಿಕೊಳ್ಳಲು ಏರಿಗಳನ್ನು ಕಟ್ಟುತ್ತಾರೆ. ಯೂರೋಪಿನಲ್ಲಿ ಒಂದು ಯುದ್ಧದಲ್ಲಿ ಉದ್ದೇಶಪೂರ್ವಕವಾಗಿ ಏರಿಯನ್ನು ಒಡೆದು ಕೂಡಿಟ್ಟ ನೀರನ್ನು ಒತ್ತಿಬರುತ್ತಿದ್ದ ಶತ್ರುಗಳ ಮೇಲೆ ನುಗ್ಗಿಸಿ ಅವರನ್ನು ಕೊಂದು ದೇಶರಕ್ಷಣೆ ಮಾಡಿಕೊಂಡರು. ಎರಡನೆಯ ಮಹಾಯುದ್ಧದಲ್ಲಿ ಎಷ್ಟೋ ಸಾರಿ ಶತ್ರುಗಳು ಒಡೆದಿದ್ದ ಏರಿಗಳನ್ನು ಮತ್ತೆ ಪ್ರವಾಹ ಬರುವುದಕ್ಕೆ ಮುಂಚೆ ಆತುರವಾಗಿ ಪುನರ್ನಿರ್ಮಾಣ ಮಾಡಿ ನೀರನ್ನು ತುಂಬಿಸಬೇಕಾಯಿತು.

ಹರಿಯುವ ನೀರಿನ ಪ್ರವಾಹವನ್ನು ತಡೆಯುವುದಕ್ಕಾಗಿಯೂ ಏರಿಗಳನ್ನು ಕಟ್ಟಬೇಕಾಗುತ್ತದೆ. ಹೊಳೆಯನ್ನೋ ನಾಲೆಯನ್ನೋ ಒಂದು ಗಡಿಯ ಆಚೆಗೆ ಹೋಗದಂತೆ ಏರಿಗಳು ತಡೆಯುತ್ತವೆ. ಪ್ರವಾಹದಲ್ಲಿ ಮುಳುಗಿ ಹೋಗುವ ಭೂಮಿಯಲ್ಲಿ ನೆಲದ ಮಟ್ಟದ ಮೇಲೆ ಏರಿಗಳನ್ನು ಕಟ್ಟಿ ನೀರನ್ನು ನಾಲೆಗಳ ಮೂಲಕ ಹರಿಸುತ್ತಾರೆ. ಸಮುದ್ರತೀರದಲ್ಲಿಯೂ ಅಳಿವೆಗಳ ಬಾಯಲ್ಲಿಯೂ ಇರುವ ಏರಿಗಳು ಕರಾವಳಿ ಕೊರೆದುಹೋಗದಂತೆ ಕಾಪಾಡುತ್ತವೆ. ಭೂಮಿಯನ್ನು ಮರುಪಡೆವ ಯೋಜನೆಗಳಲ್ಲಿ ಏರಿಗಳ ಜೊತೆಗೆ ಕಲ್ಲಿನ ಗೋಡೆಗಳೂ ಬೇಕಾಗಬಹುದು. ಹಳ್ಳಗಳಿಗೆ ಅಡ್ಡಲಾಗಿ ಮಣ್ಣಿನ ಏರಿಗಳನ್ನು ಕಟ್ಟಿ ಕೆರೆಗಳನ್ನು ನಿರ್ಮಿಸಿ ಕೂಡಿಟ್ಟ ನೀರನ್ನು ನೀರಾವರಿಗಾಗಿ ಬಳಸಿಕೊಳ್ಳುತ್ತಾರೆ. ಮಣ್ಣಿನ ಏರಿಗಳಲ್ಲಿ ನೀರು ಕೊಂಚವೂ ಸೋರದ ಹಾಗೆ ಮಾಡುವುದು ಕಷ್ಟ. ಜೇಡಿಮಣ್ಣು, ಕಾಂಕ್ರೀಟಿನ ತಡಿಕೆ ಗೋಡೆ

ಗಳು ಇಲ್ಲವೆ ಉಕ್ಕಿನ ತಗಡಿನ ದಸಿಗಳನ್ನು ಅವಶ್ಯವಾದ ಕಡೆ ಉಪಯೋಗಿಸಿ ನೀರು ಸೋರದಂತೆ ತಡೆಯಬೇಕಾಗುತ್ತದೆ. ಪ್ರವಾಹದಿಂದ ಅಥವಾ ಅಲೆಗಳಿಂದ ನೀರಿನ ಕಡೆಯ ಇಳಿಕಲು ಕೊರೆಯದ ಹಾಗೆ ಕಲ್ಲು ಇಲ್ಲವೆ ಕಾಂಕ್ರೀಟಿನಿಂದ ಕಟ್ಟಣೆಯನ್ನು ಕಟ್ಟಬೇಕು.

ನದಿಗಳು ನಗರಗಳ ಮಧ್ಯದಲ್ಲಿ ಹರಿಯುವಾಗ ದಡಗಳ ಮೇಲೆ ಕಲ್ಲಿನ ಅಥವಾ ಕಾಂಕ್ರೀಟಿನ ಆಧಾರವನ್ನು ಕೊಟ್ಟು ಹಿಂದುಗಡೆ ಉದ್ದವಾದ ಮಣ್ಣಿನ ಏರಿಗಳಿಂದ ಪ್ರವಾಹಗಳ ಹಾವಳಿಯನ್ನು ತಪ್ಪಿಸುತ್ತಾರೆ. ಲಂಡನ್ ನಗರದಲ್ಲಿ ಥೇಮ್ಸ್ ನದಿಯ ಏರಿಯ ಮೇಲೆ ಅಗಲವಾದ ರಸ್ತೆಯನ್ನು ಮಾಡಿದ್ದಾರೆ. ಸಾಮಾನ್ಯವಾಗಿ ನದಿ ನಗರದ ಮಧ್ಯದಲ್ಲಿ ಹರಿದುಹೋದರೆ ಪ್ರವಾಹದ ಹಾವಳಿಯನ್ನು ಒಂದಲ್ಲ ಒಂದು ಸಾರಿ ಎದುರಿಸಲೇ ಬೇಕಾಗುತ್ತದೆ. 1923ನೆಯ ಇಸವಿಯಲ್ಲಿ ಬಂದ ತುಂಗಾನದಿಯ ಮಹಾ ಪ್ರವಾಹದಲ್ಲಿ ಶಿವಮೊಗ್ಗ ಪಟ್ಟಣ ವಿಶೇಷ ನಷ್ಟವನ್ನನುಭವಿಸಿತು. ಹೀಗೆ ಹೈದರಾಬಾದ್ ಮತ್ತು ಪೂನ ನಗರಗಳಲ್ಲಿ ನದಿಗಳು ವಿಶೇಷ ಅನಾಹುತವನ್ನುಂಟು ಮಾಡಿವೆ. ಇಂಥ ಸಂದರ್ಭಗಳಲ್ಲಿ ಎರಡು ದಡಗಳಲ್ಲಿಯೂ ಭದ್ರವಾದ ಏರಿಗಳನ್ನು ಕಟ್ಟಬೇಕಾಗುತ್ತದೆ.

ಹಾಲೆಂಡ್ ತಗ್ಗಾದ ಭೂಪ್ರದೇಶ. ಆದ್ದರಿಂದ ನೆಲಕ್ಕೆ ನೀರು ನುಗ್ಗದಂತೆ ಏರಿಗಳು ಇಲ್ಲಿ ಅತ್ಯವಶ್ಯ. ಇಂಥ ಏರಿಗಳಿಗೆ ಡೈಕುಗಳೆನ್ನುತ್ತಾರೆ. ರೇವುಪಟ್ಟಣಗಳಲ್ಲಿ ಹಡಗಿನ ಭರ್ತಿ ಕಟ್ಟೆಯೂ (ಕ್ವೇ) ಒಂದು ಏರಿ. ಹೀಗೆ ಏರಿಯ ಉಪಯೋಗ ಸಾರ್ವತ್ರಿಕವಾಗಿದೆ.

ಏರಿಗಳು ಇತರ ಶಿಲ್ಪದ ಕಟ್ಟಡಗಳ ಭಾಗಗಳಾಗಿಯೂ ಇರಬಹುದು. ರೈಲ್ವೆಗಳು, ರಸ್ತೆಗಳು ಮತ್ತು ನಾಲೆಗಳು ತಗ್ಗಾದ ಭೂಮಿಯನ್ನು ದಾಟಿ ಒಂದೇ ಮಟ್ಟದಲ್ಲಿ ಹೋದಾಗ ಏರಿಗಳು ಅವಶ್ಯವಾಗುತ್ತವೆ. ಇಂಥ ಏರಿಗಳನ್ನು ಮಣ್ಣಿನಿಂದ ಕಟ್ಟಿ ಇಳಿಕಲಿನಲ್ಲಿ ಕಲ್ಲುಕಟ್ಟಣೆಯನ್ನು ಕಟ್ಟಬಹುದು. ಜೌಗು ನೆಲದ ಮೇಲೂ ಸರೋವರಗಳ ತಳದಲ್ಲಿಯೂ ನದಿಗಳ ಪ್ರವಾಹಗಳ ಬಯಲುಗಳಲ್ಲಿಯೂ ರೈಲ್ವೆಗಳನ್ನೂ ರಸ್ತೆಗಳನ್ನೂ ಸಾಗಿಸಬೇಕಾದಾಗ ಏರಿಗಳು ಕುಸಿದು ಮಟ್ಟ ತಗ್ಗದಂತಿರಬೇಕು. ಆಗ ಏರಿಯ ಖರ್ಚು ಹೆಚ್ಚೋ ಸೇತುವೆಯ ಖರ್ಚು ಹೆಚ್ಚೋ ಎಂದು ನೋಡಬೇಕಾಗುತ್ತದೆ.

ಭಾರತದಲ್ಲಿ ಏರಿಯ ಉಪಯೋಗ ವಿಶೇಷವಾಗಿರುವುದು ನೀರಾವರಿಯ ಕೆರೆಗಳ ನಿರ್ಮಾಣದಲ್ಲಿ. ಹಳ್ಳಗಳಿಗೆ ಅಡ್ಡಲಾಗಿ ಮಣ್ಣಿನ ಏರಿಗಳನ್ನು ಕಟ್ಟಿ ನಿರ್ಮಿಸಿದ ಸಣ್ಣ ಜಲಾಶಯಗಳಿಗೆ ಕೆರೆಗಳು ಎನ್ನುತ್ತಾರೆ. ಏರಿ ಕೆರೆಯ ಒಂದು ಅಂಗ. ಮೊದಲಿಗೆ ಕೆರೆ ಎಂದರೆ ಏರಿ ಎಂದೇ ಅರ್ಥವಿತ್ತೆಂದು ತಿಳಿದು ಬಂದಿದೆ. ಕೆರೆ ತುಂಬಿದ ಮೇಲೆ ಹೆಚ್ಚಾಗಿ ಬಂದ ನೀರನ್ನು ಏರಿಗೆ ಅಪಾಯವಾಗದ ಹಾಗೆ ಹೊರಕ್ಕೆ ಸಾಗಿಸುವ ಕೋಡಿ ಮತ್ತು ಶೇಖರವಾದ ನೀರನ್ನು ಕೆರೆಯಿಂದ ಏರಿಯ ಮೂಲಕ ಹಿಂದುಗಡೆಗೆ ಸಾಗಿಸಲು ತೂಬು—ಇವು ಉಳಿದ ಅಂಗಗಳು. ತೂಬಿನಿಂದ ಹರಿಯುವ ನೀರನ್ನು ಸಾಗುವಳಿಯಾಗುವ ಜಮೀನುಗಳಿಗೆ ನಾಲೆ ಸಾಗಿಸುತ್ತದೆ.

ಮಣ್ಣಿನ ಏರಿಯ ನಮೂನೆಗಳು : ಏರಿಯ ಪಾರ್ಶ್ವಗಳಲ್ಲಿ ಮಣ್ಣನ್ನು ಮೂರು ವಿಧವಾಗಿ ತುಂಬಬಹುದು : 1 ಎಲ್ಲ ಕಡೆಯಲ್ಲಿಯೂ ಒಂದೇ ವಿಧವಾದ ಮಣ್ಣನ್ನು ತುಂಬುವುದು; 2 ಮಧ್ಯದಲ್ಲಿ ಜಿಗುಟಾದ ಮಣ್ಣನ್ನು ತುಂಬಿ ಹೊರಗಡೆ ಎರಡು ಪಕ್ಕಗಳಲ್ಲಿಯೂ ನೀರು ಜಿನುಗಬಹುದಾದ ಹರಳುಮಣ್ಣನ್ನು ತುಂಬುವುದು ; 3 ಒಳಗಡೆ ನೀರು ಜಿನುಗಲಾರದ ಜೇಡಿಮಣ್ಣು ಇಲ್ಲವೆ ಕಲ್ಲುಗಾರೆಯ ಗೋಡೆಯನ್ನು ಮಧ್ಯದಲ್ಲಿ ಕಟ್ಟಿ, ಸುತ್ತಲೂ ಒಂದೇ ವಿಧವಾದ ಮಣ್ಣನ್ನು ತುಂಬುವುದು. ಇವುಗಳ ವಿವರಗಳನ್ನು ಮುಂದೆ ಹೇಳಿದೆ.

1 ದಕ್ಷಿಣ ಭಾರತದಲ್ಲಿ ಉತ್ತರ ಕರ್ಣಾಟಕದ ಕೆಲವು ಭಾಗಗಳನ್ನೂ ಬೊಂಬಾಯಿಯ ಕೆಲವು ಭಾಗಗಳನ್ನೂ ಬಿಟ್ಟು ಉಳಿದ ಕಡೆಗಳಲ್ಲಿ ಒಂದೇ ರೀತಿಯ ಮಣ್ಣನ್ನು ಉಪಯೋಗಿಸುವುದು ರೂಢಿ. ಕೆರೆಯ ಅಂಗಳದಲ್ಲಿ ಏರಿಯಿಂದ 15 ಮೀ. ದೂರದಲ್ಲಿ 45–90 ಸೆಂ.ಮೀ ಆಳ, 1.8 ಮೀ. ಅಗಲ, 4.6–9.2 ಮೀ. ಉದ್ದವಾದ ಗುಂಡಿಗಳನ್ನು ತೆಗೆದು ಮಣ್ಣನ್ನು ತಲೆಹೊರೆಯ ಮೇಲೆ ಏರಿಗೆ ಸಾಗಿಸಿ ಸಣ್ಣ ಕೆರೆಗಳನ್ನು ಕಟ್ಟುತ್ತಾರೆ. ಹೀಗೆ ಬೇರೆ ಬೇರೆಯ ಪ್ರದೇಶಗಳಲ್ಲಿ ಉಪಯೋಗಿಸುವ ಮಣ್ಣುಗಳಲ್ಲಿ ಬಹಳ ವ್ಯತ್ಯಾಸಗಳಿವೆ.

2 ಮೇಲಿನ ಮಣ್ಣು 90 – 180 ಸೆಂ.ಮೀ. ವರೆಗೂ ಕರಿ ಹತ್ತಿಯ ಮಣ್ಣಾಗಿದ್ದು ಅದರ ಕೆಳಗೆ ಶಿಥಿಲವಾದ ಹಿಟ್ಟು ಬಂಡೆಯಿದ್ದರೆ ಈ ನಮೂನೆಯನ್ನು ಉಪಯೋಗಿಸಬೇಕು. ಬರಿಯ ಕಪ್ಪುಮಣ್ಣಿನಿಂದಲೇ ಕಟ್ಟಿದ ಏರಿ ಬಿಸಿಲಿನಲ್ಲಿ ಕಾದಾಗ ಬಿರುಕುಬಿಡುತ್ತದೆ. ಕೆರೆಯಲ್ಲಿ ನೀರು ಕೆಳಕ್ಕೆ ಇಳಿದಾಗ ಈ ಬಿರುಕುಗಳು ಏರಿಯ ಹೊಟ್ಟೆಯವರೆಗೂ ಹೋಗುತ್ತವೆ. ಆಮೇಲೆ ಮಳೆ ಬಂದು ಕೆರೆ ಏಕಾಏಕಿ ತುಂಬಿದರೆ ಬಿರುಕುಗಳ ಮೂಲಕ ಒಳಕ್ಕೆ ನುಗ್ಗುವ ನೀರಿನಿಂದ ಕೆರೆಗೆ ವಿಪತ್ತು ಸಂಭವಿಸಬಹುದು. ಏರಿಯ ಮುಂಭಾಗ ನೆನೆದಾಗ ಜಾರುವ ಸಂಭವವೂ ಉಂಟು. ಕರಳು ಮಣ್ಣಿನಿಂದಲೇ ಏರಿಯನ್ನು ಕಟ್ಟಿದರೆ ನೀರು ಧಾರಾಳವಾಗಿ ಸೋರಿ ಹೋಗುತ್ತದೆ. ಜಿನುಗುವ ನೀರಿನ ವೇಗವೂ ಮಿತಿಮೀರಿ ಏರಿಗೆ ತೊಂದರೆಯಾಗಬಹುದು. ಆದರೆ ಏರಿಯ ಮಧ್ಯದಲ್ಲಿ ಜಿಗಟು ಮಣ್ಣನ್ನೂ ಪಕ್ಕಗಳಲ್ಲಿ ಕರಳು ಮಣ್ಣನ್ನೂ ಉಪಯೋಗಿಸಿದರೆ ಜಿಗಟು ಮಣ್ಣು ನೀರು ಜಿನುಗುವುದನ್ನು ತಪ್ಪಿಸುತ್ತದೆ. ಜಿಗಟು ಮಣ್ಣು ಒಣಗಿ ಬಿರುಕು ಬಿಡುವುದನ್ನು ಹೊರಗಡೆ ಇರುವ ಕರಳುಮಣ್ಣು ತಪ್ಪಿಸುತ್ತದೆ. ಹೀಗೆ ಒಂದೊಂದು ಮಣ್ಣು ಅದರದರ ಗುಣಕ್ಕೆ ಸರಿಯಾಗಿ ಉಪಯೋಗವಾಗುತ್ತದೆ. ಮುಂಭಾಗದ ಕರಳುಮಣ್ಣಿನಲ್ಲಿ ನೀರು ನುಗ್ಗುವುದೇನೋ ಒಂದು ದೋಷ. ಇದ್ದಷ್ಟರಲ್ಲಿ ಜಿಗಟಾದ ಮಣ್ಣನ್ನೇ ಮುಂಭಾಗದಲ್ಲಿ ಸೇರಿಸಬೇಕು.

3 ಈ ನಮೂನೆಗೂ 2ನೆಯ ನಮೂನೆಗೂ ಹೆಚ್ಚಿನ ವ್ಯತ್ಯಾಸವಿಲ್ಲ. ಮಧ್ಯದಲ್ಲಿ ಜಿಗಟುಮಣ್ಣಿಗೆ ಬದಲಾಗಿ ಜೇಡಿಮಣ್ಣಿನ ಇಲ್ಲವೆ ಕಲ್ಲುಗಾರೆಯ ಕಿರಿದಾದ ಗೋಡೆಯಿರುತ್ತದೆ. ಇದರ ಮುಂಭಾಗದಲ್ಲಿ ಸಾಧ್ಯವಾದಷ್ಟು ನೀರು ಜಿನುಗದಂಥ ಮಣ್ಣನ್ನು ಹಾಕಬೇಕು. ಸಾಕಾದಷ್ಟು ಒಳ್ಳೆಯ ಮಣ್ಣು ಸಿಕ್ಕದೆ ಇರುವ ಕಡೆಗಳಲ್ಲಿ 2ನೆಯ ನಮೂನೆಯ ಜಿಗಟುಮಣ್ಣಿನ ನಡುವಿನ ಏರಿಯ ಜೊತೆಗೆ ನೀರು ತಳಪಾಯದಲ್ಲಿ ಜಿನುಗದ ಹಾಗೆ ಜೇಡಿಮಣ್ಣಿನಿಂದ ತುಂಬಿದ ಕಂದಕವನ್ನಾದರೂ ಇಡಬಹುದು. ಮಣ್ಣಿನ ಏರಿಯ ಸಂವಿಧಾನವನ್ನು ಕಲ್ಲುಗಾರೆಯ ಕಟ್ಟೆಯ ಹಾಗೆ ಲೆಕ್ಕಾಚಾರದಿಂದ ಗೊತ್ತುಮಾಡುವುದು ಸಾಧ್ಯವಿಲ್ಲ. ಅನುಭವದಿಂದಲೂ ಒಂದೊಂದು ಕಡೆಯೂ ದೊರೆಯುವ ಮಣ್ಣಿನ ಲಕ್ಷಣಗಳಿಂದಲೂ ಹೊಸ ಕೆರೆಯ ಏರಿಯ ಅಡ್ಡಕೊಯ್ತವನ್ನು ನಿರ್ಣಯಿಸಬೇಕು.

ಮಣ್ಣಿನ ಏರಿಗಳು ನಾಲ್ಕು ವಿಧಗಳಲ್ಲಿ ಉರುಳಬಹುದು : 1 ಒಳಕ್ಕೆ ನೀರು ಜಿನುಗುವುದರಿಂದ ; 2 ಏರಿಯ ಮಣ್ಣು ಜಾರುವುದರಿಂದ ; 3 ನೀರಿನ ಅಲೆಗಳ ಕೊರೆತದಿಂದ ; 4 ಏರಿಯ ಮೇಲೆ ನೀರು ಉರುಳುವುದರಿಂದ. ಇವುಗಳ ವಿವರ ಹೀಗಿದೆ:

1 ಕೆರೆಯ ನೀರು ಏರಿಯ ತಳಪಾಯದ ಕೆಳಗಿನಿಂದಲೂ ಏರಿಯ ಮಣ್ಣಿನಿಂದಲೂ ಜಿನುಗುವಾಗ ಜೊತೆಯಲ್ಲಿ ಮಣ್ಣಿನ ಕಣಗಳನ್ನು ಒಯ್ಯುತ್ತದೆ. ಆಗ ಡೊಗರುಗಳು ಪ್ರಾರಂಭವಾಗಿ ಹರಡಿ ಏರಿ ಕುಸಿಯುತ್ತದೆ. ಕೊನೆಯಲ್ಲಿ ನೀರು ಏರಿಯ ಮೇಲೆ ಹರಿದು ಮಣ್ಣನ್ನು ಕೊರೆದು ಏರಿಯನ್ನು ಉರುಳಿಸುತ್ತದೆ. ಜಿನುಗುವ ನೀರಿನ ದಾರಿ ಚಿಕ್ಕದಾಗಿದ್ದು, ನೀರಿನ ವೇಗ ಮಣ್ಣು ತಡೆಯಲಾರದ ಮಟ್ಟಕ್ಕೆ ಏರಬಹುದು. ಆಗ ಕೊಳವಿಯಲ್ಲಿ ನೀರು ಏರಿದ ಹಾಗೆ ಏರಿ ಉರುಳಬಹುದು.

2 ಮಣ್ಣು ನಿಲ್ಲಬಹುದಾದ ಇಳಿಜಾರಿಗಿಂತ ಕಡಿದಾಗಿ ನಿಂತಾಗ ಏರಿ ಜಾರುತ್ತದೆ. ಜಿಗಟುಮಣ್ಣಿನಲ್ಲಿ ಘರ್ಷಣಶಕ್ತಿ ಮತ್ತು ಅಂಟಿಕೊಳ್ಳುವ ಶಕ್ತಿ ಅದರಲ್ಲಿನ ತೇವಕ್ಕೆ ತಕ್ಕಂತೆ ವ್ಯತ್ಯಾಸವಾಗುತ್ತವೆ. ಒಣಗಿರುವ ಜಿಗಟುಮಣ್ಣಿನಲ್ಲಿ ಎರಡು ಶಕ್ತಿಗಳೂ ಹೆಚ್ಚಾಗಿಯೇ ಇರುವುವು. ಸ್ವಲ್ಪವೇ ನೀರು ಬೆರೆತಾಗ ಅಂಟಿಕೊಳ್ಳುವ ಶಕ್ತಿ ಇನ್ನೂ ಹೆಚ್ಚಾಗುತ್ತದೆ. ಆದರೆ ಮತ್ತಷ್ಟು ನೀರು ಸೇರಿದರೆ ಎರಡು ಶಕ್ತಿಗಳೂ ಕಡಿಮೆಯಾಗುತ್ತವೆ. ನೆನೆದಾಗ ಜಿಗಟುಮಣ್ಣು ಕೆಸರಾಗುತ್ತದೆ. ನೀರೇ ಇಲ್ಲದೆ ಒಣಗಿದಾಗ ಬಿರಿಯುತ್ತದೆ. ಏರಿ ಜಾರದ ಹಾಗೆ ಇರಬೇಕಾದರೆ ಅದರ ಮಣ್ಣು ಯಾವ ಇಳಿಜಾರಿನಲ್ಲಿ ನಿಲ್ಲಬಹುದೋ ಅದನ್ನು ಪರೀಕ್ಷೆ ಮಾಡಿ ಏರಿಯ ಎರಡು ಮುಖಗಳನ್ನೂ ಅದಕ್ಕಿಂತ ಹೆಚ್ಚು ಚಪ್ಪಟೆಯಾಗಿ ಇಡಬೇಕು. ಹಿಂಭಾಗ ನೀರಿನಲ್ಲಿ ನೆನೆಯುವ ಹಾಗಿರಬಾರದು. ಹುಡಿಮಣ್ಣು ನಿಲ್ಲುವ ಇಳಿಜಾರಿಗಿಂತ ಈ ಮುಖ ಹೆಚ್ಚು ಚಪ್ಪಟೆಯಾಗಿರಬೇಕು.

3 ಮುಂಭಾಗದಲ್ಲಿ ನೀರಿನ ಅಲೆಗಳು ಕೊರೆದಾಗ ಮಣ್ಣು ನೀರಿನಲ್ಲಿ ಕೊರೆದು ಹೋಗಿ ಮೇಲಿನ ಭಾಗ ಜಾರುತ್ತದೆ. ಹೀಗೆಯೇ ಆಗಿ ಏರಿಯ ಅಗಲವೇ ಕಿರಿದಾಗಿ ಕ್ರಮೇಣ ನೀರು ಏರಿಯ ಮೇಲೆ ಹರಿಯುತ್ತದೆ. ಮುಂಭಾಗದಲ್ಲಿ ಕಲ್ಲಿನ ಕಟ್ಟಡವನ್ನು ಕಟ್ಟುವುದರಿಂದ ಇದನ್ನು ತಡೆಯಬಹುದು.

4 ಕೆರೆಯಲ್ಲಿ ನೀರಿನ ಮಟ್ಟ ಏರಿಯ ತಲೆಯ ಮಟ್ಟಕ್ಕಿಂತಲೂ ಮೇಲಕ್ಕೆ ಏರಿದಾಗ ಏರಿ ಕೊರೆದುಹೋಗಿ ಉರುಳುತ್ತದೆ. ಇದನ್ನು ತಪ್ಪಿಸಲು ನೀರು ಪರಮಾವಧಿಯ ಮಟ್ಟಕ್ಕಿಂತ ಮೇಲೆ ಕೆರೆಯಲ್ಲಿ ಏರದ ಹಾಗೆ ಕೋಡಿಯನ್ನು ದೊಡ್ಡದು ಮಾಡಬೇಕು. ಏರಿಯಮೇಲೆ ದನಕರುಗಳು ಓಡಾಡಿ ಮಳೆಯಲ್ಲಿ ನೆನೆದು ಏರಿ ಕುಗ್ಗದ ಹಾಗೆ ಆಗಾಗ ಭರ್ತಿ ಮಾಡುತ್ತಿರಬೇಕು.

ಚರಂಡಿಗಳು : ಕೆರೆಯ ನೀರು ಜಿನುಗಿದ್ದರಿಂದಾಗಲೀ ಮಳೆಯ ನೀರು ಏರಿಯ ಹಿಂಭಾಗದ ಮೇಲೆ ಬಿದ್ದು ಒದ್ದೆಯಾದ್ದರಿಂದಾಗಲೀ ಏರಿಯ ಒಳಗಡೆ ಸೇರಿಕೊಂಡ ನೀರನ್ನು ದಪ್ಪಕಲ್ಲಿನಿಂದ ತುಂಬಿದ ಚರಂಡಿಗಳ ಮೂಲಕ ಹೊರಕ್ಕೆ ಸಾಗಿಸಬೇಕು.

ಏರಿಗಳ ಕಟ್ಟುವ : ಏರಿಯನ್ನು ಕಟ್ಟಬೇಕಾದ ಸ್ಥಳವೂ ಅದರ ಅಳತೆಗಳೂ ನಿಶ್ಚಯವಾದ ಮೇಲೆ ಏರಿಯ ತಳಪಾಯವನ್ನು 90–120 ಸೆಂ.ಮೀ. ಆಳವಾಗಿ ತೆಗೆದು ತಳವನ್ನು ಒರಟಾಗಿರುವ ಹಾಗೆ ಮಾಡಿ ನೀರನ್ನು ಚಿಮುಕಿಸಿ ಹೊಸ ಮಣ್ಣನ್ನು ಹಾಕಿ ಕೆಲಸವನ್ನು ಪ್ರಾರಂಭಿಸಬಹುದು. ಕಟ್ಟೆಗೆ ಹಾಕುವ ಮಣ್ಣನ್ನು ಪರೀಕ್ಷೆ ಮಾಡಬೇಕು. ಇದ್ದುದರಲ್ಲಿ ಜಿಗಟಾದ ಮಣ್ಣನ್ನು ಏರಿಯ ಮಧ್ಯದಲ್ಲಿ ಹಾಕಬೇಕು. ಮೊದಲು ದೂರದ ಗುಂಡಿಗಳಿಂದ ಮಣ್ಣನ್ನು ಉಪಯೋಗಿಸಬೇಕು. ಏರಿಯ ಅಗಲದಲ್ಲಿ ಈ ಕೊನೆಯವರೆಗೂ ನಡುವಿನ ಕಡೆ ಕೊಂಚ ಇಳಿಜಾರಾಗಿ ಮಣ್ಣನ್ನು 15–25 ಸೆಂ.ಮೀ. ವರಸೆಗಳಲ್ಲಿ ಹಾಕಬೇಕು. ಈ ಮಣ್ಣನ್ನು ಸಣ್ಣ ಏರಿಗಳಲ್ಲಿ ಎಮ್ಮೆಗಳನ್ನೋ ದನಗಳನ್ನೋ ಓಡಿಸಿಯೂ ದೊಡ್ಡ ಏರಿಗಳಲ್ಲಿ ಆವಿಯ ರೋಲರುಗಳಿಂದಲೂ ಗಟ್ಟಿಮಾಡಬೇಕು. ಏರಿ ಪೂರೈಸಿದ ಮೇಲೆ ಕೊಂಚ ತಗ್ಗುತ್ತದೆ. ಅದಕ್ಕಾಗಿ ಗಟ್ಟಿಯಾದ ಮಣ್ಣಿನಲ್ಲಿ 12 ಸೆಂ.ಮೀ. ಗೆ 1 ಸೆಂ.ಮೀ. ನಂತೆಯೂ ಸಾಧಾರಣ ಮಣ್ಣಿನಲ್ಲಿ 1.5 ಸೆಂ.ಮೀ. ನಂತೆಯೂ ಕರೀಮಣ್ಣಿನಲ್ಲಿ 2 ಸೆಂ.ಮೀ. ನಂತೆಯೂ ಹೆಚ್ಚು ಎತ್ತರವಾಗಿ ಏರಿಯನ್ನು ಕಟ್ಟಬೇಕು. ತಗ್ಗಿದ ಮೇಲೆ ಅದು ಸರಿಯಾದ ಎತ್ತರಕ್ಕೆ ಬರುತ್ತದೆ. ಒಂದು ವರ್ಷ ಮಾಡಿದ ಮಣ್ಣು ಕೆಲಸದ ಮೇಲೆ ಮಾರನೆಯ ವರ್ಷ ಕೆಲಸವನ್ನು ಪ್ರಾರಂಭಿಸುವಾಗ ಅಡ್ಡಕೊಯ್ತದಲ್ಲಿ ಮೆಟ್ಟಲಾಗಿಯೂ ಮಟ್ಟದಲ್ಲಿ ಹಲ್ಲು ಹಲ್ಲಾಗಿಯೂ ಹಳೆಯ ಮಣ್ಣು ಕೆಲಸವನ್ನು ಕತ್ತರಿಸಿ ಅದರೊಂದಿಗೆ ಬೆರೆಯುವಂತೆ ಹೊಸ ಮಣ್ಣನ್ನು ಹಾಕಬೇಕು. ಏರಿಯ ಮುಂಭಾಗ ನೀರಿನ ಅಲೆಗಳ ಹೊಡೆತದಿಂದ ಕೊರೆಯದ ಹಾಗೆ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೆ ಕಲ್ಲುಕಟ್ಟಡವನ್ನು ಕಟ್ಟಬೇಕು.

(ಎಚ್.ಸಿ.ಕೆ.)

**ಏರಿಯನ್ ತತ್ತ್ವ :** ಕ್ರಿಸ್ತ ದೈವಾಂಶ ಸಂಭೂತನೇ ಹೊರತು ದೇವರೇ ಅಲ್ಲ ಎಂದು ಹೇಳುವ ಒಂದು ಪಂಥದ ತತ್ತ್ವಸರಣಿ. ಇದನ್ನು ಪ್ರತಿಪಾದಿಸಿದವ ಅಲೆಕ್ಸಾಂಡ್ರಿಯದಲ್ಲಿ ಕ್ರಿ. ಶ ನಾಲ್ಕನೆಯ ಶತಮಾನದಲ್ಲಿದ್ದ ಏರಿಯಸ್ ಎಂಬ ಕ್ರೈಸ್ತತಾತ್ತ್ವಿಕ. ಏರಿಯಸ್‌ಗಿಂತ ಮುಂಚೆ ಲೂಷಿಯನ್ನನ ಬರೆವಣಿಗೆಗಳಲ್ಲಿ ಬೀಜರೂಪವಾಗಿ ಈ ಭಾವನೆ ವ್ಯಕ್ತವಾಗಿದೆಯಾದರೂ ಅದನ್ನು ಸ್ಪಷ್ಟವಾಗಿ ಯಾರೂ ಘೋಷಿಸಿರಲಿಲ್ಲ. ಏರಿಯಸ್ ಅದನ್ನು ಘಂಟಾಘೋಷವಾಗಿ ಸಾರಿದ್ದರಿಂದ ಆ ತತ್ತ್ವ ಅವನದೇ ಎಂಬ ನಂಬಿಕೆಗೆ ಅವಕಾಶವಾಯಿತು.

ಕ್ರಿಸ್ತ ದೇವರೆಂದೇ ನಂಬಿದ್ದ ಜನ ಏರಿಯಸ್‌ಗೆ ಬಹಿಷ್ಕಾರ ಹಾಕಿದರು (319). ಹಾಗೆಯೆ ಅನೇಕ ಬಿಷಪರು ಏರಿಯಸ್‌ನ ಪಕ್ಷವನ್ನು ಸಮರ್ಥಿಸಿ ವಿವಾದ ಹೂಡಿದರು. ಈ ವಿಚಾರವಾಗಿ ತೀರ್ಮಾನ ಕೊಡಲು ಕಾನ್‌ಸ್ಟ್ಯಾಂಟೈನ್ ಒಂದು ಸಮಿತಿಯನ್ನು ಏರ್ಪಡಿಸಿದ. ಈ ಸಮಿತಿಯವರು ಪವಿತ್ರಾತ್ಮನ ಸತ್ತ್ವವೂ ಕ್ರೈಸ್ತನ ಸತ್ತ್ವವೂ ಒಂದೇ ಆದುದರಿಂದ ಕ್ರಿಸ್ತ ದೇವರೇ ಹೊರತು ಮಾನವನಲ್ಲವೆಂದು ತೀರ್ಪುಕೊಟ್ಟರು.

ಆದರೂ ಏರಿಯಸ್‌ನ ವಾದ ಅಡಗಲಿಲ್ಲ. ಅದು ಪುನಃ ಜನಮೆಚ್ಚಿನ ಭಾವನೆಯಾಯಿತು. ಕ್ರಿ.ಶ. 381ರಲ್ಲಿ ಅದನ್ನು ವಿಮರ್ಶಿಸಲು ಕಾನ್‌ಸ್ಟ್ಯಾಂಟಿನೋಪಲ್‌ನಲ್ಲಿ ಇನ್ನೊಂದು ಸಮಿತಿಯನ್ನು ರಚಿಸಲಾಯಿತು. ಅದೂ ಏರಿಯನ್ ತತ್ತ್ವಕ್ಕೆ ವಿರುದ್ಧವಾಗಿಯೇ ತೀರ್ಪುಕೊಟ್ಟಿತು. ಈ ವಾದ ಅಲ್ಲಿಗೇ ಮುಕ್ತಾಯವಾಯಿತೆಂದು ಹೇಳಲಾಗುವುದಿಲ್ಲ. ಇದರ ಅನುಯಾಯಿಗಳು ಈಗಲೂ ಇದ್ದಾರೆ.

(ಜಿ.ಎಚ್.)

**ಏರುಮುಖ ಪ್ರತಿಫಲ ಸೂತ್ರ :** ಉತ್ಪಾದನೆಯಲ್ಲಿ ತೊಡಗಿಸಲಾಗುವ ಅಂಗಗಳ ಪೈಕಿ ಒಂದನ್ನೋ ಹಲವನ್ನೋ ಸ್ಥಿರವಾಗಿರಿಸಿ ಉಳಿದ ಅಂಗವನ್ನು ಅಥವಾ ಅಂಗಗಳನ್ನು ಸ್ಥಿರವಾದ ಅಂಗಗಳೊಂದಿಗೆ ಹೆಚ್ಚುಹೆಚ್ಚಾಗಿ ಸಂಯೋಜಿಸಿದಾಗ, ಹೀಗೆ ಅಧಿಕವಾಗಿ ತೊಡಗಿಸಿದ ಅಂಗ ಅಥವಾ ಅಂಗಗಳಿಂದ ದೊರಕುವ ಪ್ರತಿಫಲ ಅಥವಾ ಉತ್ಪತ್ತಿ ಒಂದು ಘಟ್ಟದ ವರೆಗೂ ಏರುಗತಿಯಲ್ಲಿ ಹೆಚ್ಚುತ್ತಿರುತ್ತದೆ. ಉತ್ಪಾದನೆಯ ಎಲ್ಲ ಅಂಗಗಳನ್ನೂ ಹೆಚ್ಚಿಸಿದಾಗಲೂ—ಎಂದರೆ ಈ ಉತ್ಪಾದನಾಂಗಗಳ ನಡುವಣ ಪ್ರಮಾಣಗಳನ್ನು ಹೆಚ್ಚುಕಡಿಮೆ ಮಾಡದೆ ಎಲ್ಲವನ್ನೂ ಒಟ್ಟಿಗೆ ಹೆಚ್ಚಿಸಿದಾಗಲೂ (ಉದಾಹರಣೆಗೆ, ಅವನ್ನು ಇಮ್ಮಡಿಸಿದಾಗ, ಮುಮ್ಮಡಿಸಿದಾಗ)—ಅವುಗಳ ಇಡೀ ಗಾತ್ರವನ್ನೇ ವಿಸ್ತರಿಸಿದಾಗಲೂ—ಪ್ರತಿಫಲ ಹೆಚ್ಚಬಹುದು. ಈ ಎರಡೂ ಸಂದರ್ಭಗಳಲ್ಲಿ ಸಂಭವಿಸುವ ಏರುಮುಖ ಪ್ರತಿಫಲ ಪ್ರವೃತ್ತಿಯ ವಿವೇಚನೆಯೇ ಏರುಮುಖ ಪ್ರತಿಫಲಸೂತ್ರ (ಲಾ ಆಫ್ ಇನ್‌ಕ್ರೀಸಿಂಗ್ ರಿಟರ್ನ್ಸ್).

ಉತ್ಪಾದನಾಂಗಗಳ ಪರಸ್ಪರ ಪ್ರಮಾಣಗಳನ್ನು ವ್ಯತ್ಯಾಸ ಮಾಡಿದಾಗ ಅವುಗಳಿಂದ ಪ್ರತಿಫಲದ ಮೇಲಾಗುವ ಪರಿಣಾಮಗಳನ್ನು ಪ್ರತಿಫಲ ಸೂತ್ರಗಳೆಂದು ಪರಿಗಣಿಸುವುದು ವಾಡಿಕೆಯಾಗಿ ಬಂದಿದೆ. ಎಲ್ಲಿಯವರೆಗೆ ಈ ಉತ್ಪಾದನಾಂಗಗಳ ಪರಸ್ಪರ ಸಂಯೋಜನೆ ಪರಮಾವಧಿ ಮುಟ್ಟಿರುವುದಿಲ್ಲವೋ ಅಲ್ಲಿಯವರೆಗೆ ಅವುಗಳ ಪ್ರಮಾಣಗಳ ವ್ಯತ್ಯಾಸದಿಂದ ಪ್ರತಿಫಲವೂ ಏರುಗತಿಯಲ್ಲೇ ಏರುತ್ತಿರುತ್ತದೆ. ಅಲ್ಲಿಂದಾಚೆಗೆ ಉತ್ಪಾದನಾಂಗಗಳಲ್ಲಿ ಯಾವುದೊಂದನ್ನು ಹೆಚ್ಚಿಸಿದರೂ ಈ ಹೆಚ್ಚಿನ ಘಟಕದಿಂದಾಗಿ ದೊರಕುವ ಪ್ರತಿಫಲ ಹಿಂದಿನ ಘಟಕದ ಪ್ರತಿಫಲಕ್ಕಿಂತ ಹೆಚ್ಚಾಗಿರುವುದು ಸಾಧ್ಯವಿಲ್ಲ. ಇದು ಸ್ಥಿರವಾಗಿಯೇ ಮುಂದುವರಿಯಬಹುದು; ಅಥವಾ ಇಳಿಮುಖವಾಗಬಹುದು. ಆದ್ದರಿಂದ ವಿವೇಕಿಯಾದ ಉತ್ಪಾದಕ ಈ ಘಟ್ಟದಲ್ಲಿ ನಾನಾ ಉತ್ಪಾದನಾಂಗಗಳ ಪರಸ್ಪರ ಪ್ರಮಾಣಗಳನ್ನು ವ್ಯತ್ಯಾಸಗೊಳಿಸುವ ಪ್ರಯತ್ನವನ್ನು ಸ್ಥಗಿತಗೊಳಿಸುತ್ತಾನೆ. ಉತ್ಪಾದನೆಯ ಈ ಗಾತ್ರಕ್ಕೆ ಇದೇ ಪರಮಾವಧಿಯ ಸ್ಥಿತಿ.

ಒಂದು ಉದ್ಯಮದ ಉತ್ಪಾದನೆಯ ಏರುಮುಖ, ಇಳಿಮುಖ ಮತ್ತು ಸ್ಥಿರ ಪ್ರವೃತ್ತಿಗೆ ಸಂಬಂಧಿಸಿದಂತೆ ಕ್ರಮವಾಗಿ ಏರುಮುಖ, ಇಳಿಮುಖ ಮತ್ತು ಸ್ಥಿರ ಪ್ರತಿಫಲ ಸೂತ್ರಗಳೆಂಬ ಮೂರು ಸೂತ್ರಗಳನ್ನು ಪ್ರತಿಪಾದಿಸುವುದು ಅರ್ಥಶಾಸ್ತ್ರಜ್ಞರಲ್ಲಿ ರೂಢಿಯಾಗಿ ಬಂದಿದೆ. ಆದರೆ ಉತ್ಪಾದನಾಂಗಗಳ ವ್ಯತ್ಯಾಸದಿಂದ ಪ್ರತಿಫಲಿಸುವ ಈ ಮೂರೂ ಪ್ರವೃತ್ತಿಗಳನ್ನೂ ಚರ ಅನುಪಾತ ಸೂತ್ರವೆಂಬ (ಲಾ ಆಫ್ ವೇರಿಯಬಲ್ ಪ್ರಪೋರ್ಷನ್ಸ್) ಒಂದೇ ಸೂತ್ರದ ಮೂರು ಮುಖಗಳೆಂದು ಪರಿಗಣಿಸುವುದು ಹೆಚ್ಚು ಸಮಂಜಸವೆಂಬುದಾಗಿ ವಾದಿಸಲಾಗಿದೆ. ಉತ್ಪಾದನ ಕಾರ್ಯದಲ್ಲಿ ಪ್ರಕೃತಿಯ ಕೈವಾಡ ಎಲ್ಲಿ ಅಧಿಕವಾಗಿದೆಯೋ ಅಲ್ಲಿ ಇಳಿಮುಖ ಪ್ರತಿಫಲ ಪ್ರವೃತ್ತಿ ಪ್ರಬಲವಾಗಬಹುದೆಂದೂ (ಉದಾಹರಣೆ : ಕೃಷಿ) ಮಾನವನ ಕೈ ಎಲ್ಲಿ ಮೇಲೋ ಅಲ್ಲಿ ಏರುಮುಖ ಪ್ರತಿಫಲ ಪ್ರವೃತ್ತಿ ಹೆಚ್ಚು ಪ್ರಬಲವೆಂದೂ (ಉದಾಹರಣೆ : ಕೈಗಾರಿಕೆ) ಮಾರ್ಷಲ್ ಹೇಳಿದ್ದಾನೆ. ಒಟ್ಟಿನಲ್ಲಿ ಉತ್ಪಾದನಾಂಗಗಳ ಅಧಿಕ ನಿಯೋಜನೆಯಿಂದ ಅದರ ಅನುಪಾತಕ್ಕಿಂತ ಅಧಿಕ ಪ್ರತಿಫಲ ದೊರಕಿದಾಗ ಏರುಮುಖ ಪ್ರತಿಫಲ ಸೂತ್ರದ ಪ್ರಭಾವವಿದೆಯೆಂದು ಹೇಳಬಹುದು. ವೆಚ್ಚದ ದೃಷ್ಟಿಯಿಂದ ಹೇಳುವುದಾದರೆ, ಏರುಮುಖ ಪ್ರತಿಫಲ ಪ್ರವೃತ್ತಿಯಿದ್ದಾಗ ಅಂಚಿನ ಘಟಕದ ವೆಚ್ಚ ಕಡಿಮೆಯಾಗುವ ಪ್ರವೃತ್ತಿಯಿರುತ್ತದೆ. ಉತ್ಪಾದನೆ ಹೆಚ್ಚಿದಂತೆಲ್ಲ ಉತ್ಪನ್ನದ ಬೆಲೆ ಇಳಿಯುತ್ತಿದ್ದ ಪಕ್ಷದಲ್ಲಿ ಏರುಮುಖ ಪ್ರತಿಫಲ ಸೂತ್ರವಿದೆಯೆಂದು ತಿಳಿಯತಕ್ಕದ್ದು.

ಏರುಮುಖ ಪ್ರತಿಫಲ ಅಥವಾ ಇಳಿಮುಖ ವೆಚ್ಚಕ್ಕೆ ಅನೇಕ ಕಾರಣಗಳುಂಟು. ಉತ್ಪಾದನೆಯ ಗಾತ್ರ ವಿಸ್ತರಿಸಿದಂತೆ ವಿಶೇಷಜ್ಞತೆ ಅಥವಾ ಶ್ರಮ ವಿಭಜನೆಯನ್ನನುಸರಿಸಲು ಅವಕಾಶ ಕಲ್ಪಿತವಾಗುವುದು. ಕಾರ್ಮಿಕರನ್ನು ಅಧಿಕ ಸಂಖ್ಯೆಯಲ್ಲಿ ನಿಯಮಿಸಿದಂತೆಲ್ಲ ಕಾರ್ಯಭಾರವನ್ನು ವಿಭಜಿಸಿ ಪ್ರತಿ ಕಾರ್ಯವನ್ನೂ ವಿಶೇಷಜ್ಞನಾದ ಕಾರ್ಮಿಕನಿಗೆ ವಹಿಸಿಕೊಡಲು ಅನುಕೂಲವಾಗುತ್ತದೆ. ಇದರಿಂದ ಕಾರ್ಯದಕ್ಷತೆ ಅಧಿಕಗೊಂಡು ಉತ್ಪನ್ನ ಅಧಿಕ ಪ್ರಮಾಣದಲ್ಲಿ ವೃದ್ಧಿಗೊಳ್ಳಲು ಸಾಧ್ಯವಾಗುವುದು. ಎರಡನೆಯದಾಗಿ, ಉತ್ಪಾದನೆಯ ಗಾತ್ರ ಕೆಳಮಟ್ಟದ್ದಾಗಿದ್ದಾಗ ಕಾರ್ಖಾನೆಯಲ್ಲಿ ತಯಾರಾಗುವಂಥ ಹಲವು ರೀತಿಯ ಸಾಮಗ್ರಿಗಳು ಸಾಧನಗಳ ಅಭಾವದ ಕಾರಣದಿಂದ ವ್ಯರ್ಥವಾಗುವ ಸಂಭವವಿರುತ್ತದೆ. ಆದರೆ ಉತ್ಪಾದನ ಶ್ರೇಣಿ ವಿಸ್ತಾರಗೊಂಡಂತೆ ಅಂಥ ಸಾಮಗ್ರಿಗಳು ವ್ಯರ್ಥವಾಗದಂತೆ ಅವುಗಳಿಂದ ಉಪವಸ್ತುಗಳನ್ನು ನಿರ್ಮಿಸಿ ಉತ್ಪತ್ತಿಯ ಸರಾಸರಿ ವೆಚ್ಚವನ್ನು ಕಡಿಮೆಮಾಡುವ ಸಾಧ್ಯತೆಯಿರುತ್ತದೆ. ಅಲ್ಲದೆ ಪ್ರತಿಫಲವನ್ನು ಅಧಿಕಗೊಳಿಸುವ ಕಾರಣಗಳು ಸಾಮಾನ್ಯವಾಗಿ ಆಯಾಮಿಕ (ಡೈಮೆನ್ಷನಲ್) ಸಂಬಂಧವುಳ್ಳವು. ಉದಾಹರಣೆಗೆ, ತಲಾ 1 ಅಡಿ ಬದಿ ಇರುವ ಪೆಟ್ಟಿಗೆಯಲ್ಲಿ ಹಿಡಿಸುವುದರ 27ರಷ್ಟು ವಸ್ತುಗಳು ತಲಾ 3 ಅಡಿ ಬದಿ ಇರುವ ಪೆಟ್ಟಿಗೆಯಲ್ಲಿ ಹಿಡಿಸುತ್ತವೆ. ಆದರೆ ದೊಡ್ಡ ಪೆಟ್ಟಿಗೆಯನ್ನು ತಯಾರುಮಾಡಲು ಚಿಕ್ಕದಕ್ಕೆ ಬೇಕಾಗುವ ಒಂಬತ್ತರಷ್ಟು ಹಲಗೆ ಆದರೆ ಸಾಕು. ಹಾಗೆಯೆ 200 ಟನ್ನಿನ ಧಾರಣಶಕ್ತಿಯಿರುವ ಐದು ಕುಲುಮೆಗಳನ್ನು ಕಟ್ಟಲು 1,000 ಟನ್ನಿನ ಧಾರಣಶಕ್ತಿಯಿರುವ ಒಂದೇ ಕುಲುಮೆ ಕಟ್ಟುವುದಕ್ಕಿಂತ ಸರಾಸರಿಯಲ್ಲಿ ಅಧಿಕ ವೆಚ್ಚ ಬೀಳುತ್ತದೆ. ಉತ್ಪಾದನೆಯು ಕೆಳಶ್ರೇಣಿಯಿಂದ ಉನ್ನತ ಶ್ರೇಣಿಗಳಿಗೆ ಹೋದಂತೆಲ್ಲ ಉದ್ಯಮಿಗೆ ಮೇಲೆ ಹೇಳಿದ ಕೆಲವು ಅನುಕೂಲಗಳು ಲಭಿಸುತ್ತವೆ. ಇವು ಆಂತರಿಕ ಅನುಕೂಲಗಳು ಅಥವಾ ಮಿತವ್ಯಯಗಳು. ಇವುಗಳ ಜೊತೆಗೆ ಕೆಲವು ಬಾಹ್ಯ ಅನುಕೂಲಗಳೂ ಲಭಿಸುವುದುಂಟು (ಉದಾಹರಣೆ : ಸಾಗಣೆ ವೆಚ್ಚ, ವಿದ್ಯುಚ್ಛಕ್ತಿ, ಸಾಮಗ್ರಿಯ ಸಂಗ್ರಹಣ ಮತ್ತು ಮಾರುಕಟ್ಟೆಯ ವೆಚ್ಚಗಳಲ್ಲಿ ರಿಯಾಯಿತಿ). ಕೈಗಾರಿಕೆ ವಿಸ್ತಾರಗೊಂಡಂತೆ ಹಲವು ಪೂರಕ ಕಾರ್ಖಾನೆಗಳು ಬೆಳೆದು ಸಲಕರಣೆ, ಕಚ್ಚಾಸಾಮಗ್ರಿ ಮೊದಲಾದವು ಈ ಕೈಗಾರಿಕೆಗಳಿಗೆ ಕಡಿಮೆ ದರಗಳಲ್ಲಿ ಒದಗಬಹುದು. ಈ ಎಲ್ಲ ವೆಚ್ಚಗಳ ಇಳಿತದಿಂದಾಗಿ ಉತ್ಪನ್ನದ ಆಂಶಿಕ ವೆಚ್ಚವೂ ಇಳಿಯುವುದು ಸಹಜ.

ನೋಡಿ—ಬೃಹದ್ಗಾತ್ರ ಉತ್ಪಾದನೆ ; ಗಾತ್ರಾನುಗುಣ ಪ್ರತಿಫಲ ; ಮಿತವ್ಯಯಗಳು—ಆಂತರಿಕ, ಬಾಹ್ಯ.

(ಎಬಿ.ಎ.)

**ಏರೈಡೆಸ್ :** ಆರ್ಕಿಡೇಸಿ ಸಸ್ಯ ಕುಟುಂಬದಲ್ಲಿ (ಫ್ಯಾಮಿಲಿ) ಅತಿ ಮುಖ್ಯವಾದ ಜಾತಿ. ಇದರಲ್ಲಿ ಅರುವತ್ತಕ್ಕೂ ಹೆಚ್ಚು ಪ್ರಭೇದಗಳು (ಸ್ಪೀಶೀಸ್) ಇವೆ. ಇವು ಆರ್ಕಿಡ್ ಸಸ್ಯಗಳು ; ಬಲು ಸರಳ ಮತ್ತು ಸುಂದರವಾಗಿರುವುದರಿಂದ ಜನಪ್ರಿಯವಾಗಿವೆ. ಫ್ಲೋರಾಕೊಚಿನ್ ಚೈನಾನ್ಸಿಸ್ ಎಂಬ ಗ್ರಂಥದಲ್ಲಿ (1790) ಏರೈಡೆಸ್ ಓಡರೇಟಂ ಎಂಬ ಜಾತಿಯ ಆರ್ಕಿಡ್ಡಿನ ಉಲ್ಲೇಖವಿದೆ. ಏರೈಡೆಸ್ ಆರ್ಕಿಡ್ಡುಗಳು ಏಷ್ಯಖಂಡದ ಮೂಲವಾಸಿಗಳು.



ಏರೈಡೆಸ್ ಓಡರೇಟಂ

ಏರೈಡೆಸ್ ಜಾತಿಯವು ಸಾಮಾನ್ಯವಾಗಿ ಅಪ್ಪು ಸಸ್ಯಗಳಾಗಿಯೂ ಶಿಲಾಸಸ್ಯಗಳಾಗಿಯೂ ಬೆಳೆಯುತ್ತವೆ. ಇವು ವಾಂಡಾ ಜಾತಿಯ ಆರ್ಕಿಡ್ಡುಗಳನ್ನು ಅನೇಕ ವಿವರಗಳಲ್ಲಿ ಹೋಲುತ್ತವೆ. ಇವುಗಳಲ್ಲಿ ಹಳೆಯ ಎಲೆಗಳ ಸ್ವಲ್ಪಭಾಗ ಉಳಿದಿರುವುದು ಗಮನಾರ್ಹ ವ್ಯತ್ಯಾಸ. ಈ ಜಾತಿಯ ಸಸ್ಯಗಳ ಹೂಗೊಂಚಲುಗಳು ನರಿಯ ಬಾಲದಂತಿರುವುದರಿಂದ ನರಿಬಾಲದ ಆರ್ಕಿಡ್ಡುಗಳೆಂದು ಇವುಗಳಿಗೆ ಹೆಸರು. ಹೂಗೊಂಚಲು ಅಂತ್ಯಾರಂಬಿ (ರೇಸಿಮೋಸ್) ; ಕೊಳವೆಯಾಕಾರ. ಪರಿಮಳವನ್ನು ಬೀರುವ ಆರ್ಕಿಡ್ಡುಗಳಲ್ಲಿ ಇವು ಅಗ್ರಸ್ಥಾನ ಪಡೆದಿವೆ. ಹೂಗಳ ಬಣ್ಣ ವಿವಿಧ, ಪುಷ್ಪಪತ್ರ ಮತ್ತು ದಳ ಅಗಲ. ಪಕ್ಕದ ಹೂವಿನ ಪುಷ್ಪಪತ್ರಗಳು ಮೇಲಿನ ಹೂವಿನ ಪುಷ್ಪಪತ್ರಗಳಿಗಿಂತ ಅಗಲವಾಗಿರುತ್ತವೆ. ಪುಷ್ಪಮಂಜರಿಯ ಕಂಬದ ಬುಡದ ಭಾಗ ದಪ್ಪವಾಗಿ ಹಕ್ಕಿ ತಲೆಯ ಆಕಾರವನ್ನು ಹೋಲುತ್ತವೆ. ಹೂವಿನ ಭಾಗಗಳು ವಿವಿಧ ಬಣ್ಣಗಳಲ್ಲಿರುವುದರಿಂದ ಬಹಳ ಸುಂದರವಾಗಿ ಕಾಣುತ್ತವೆ.

ಏರೈಡೆಸ್ ಕ್ರಾಸಿಫೋಲಿಯಂ : ಇವು ಸಮೃದ್ಧಿ ಮತ್ತು ಗಟ್ಟಿಮುಟ್ಟಾಗಿ ಬೆಳೆಯುತ್ತವೆ. ಎಲೆಗಳು ಕಾಂಡದ ಮೇಲೆ ಒತ್ತಾಗಿದ್ದು ಚರ್ಮದಂತೆ ಒರಟಾಗಿವೆ ; ಇವು ಎರಡು ಹಂತಗಳಲ್ಲಿದ್ದು ಎರಡು ಅಂಗುಲ ಅಗಲವಾಗಿವೆ. ತುದಿಯ ಎಲೆಯ ಎರಡು ಭಾಗಗಳು ಸಮವಾಗಿರುವುದಿಲ್ಲ. ಹೂಗೊಂಚಲು ಸಡಿಲವಾಗಿದ್ದು ಎರಡು ಅಂಗುಲ ಉದ್ದವಾಗಿದೆ. ಗೊಂಚಲಲ್ಲಿ ಅಧಿಕ ಸಂಖ್ಯೆಯಲ್ಲಿ ಹೂಗಳಿರುವುವು. ಪ್ರತಿ ಹೂವಿನ ಅಗಲ 1¼″, ಬಣ್ಣ ಗುಲಾಬಿ ಕೆಂಪು ಅಥವಾ ಕಂದು.

ಏರೈಡೆಸ್ ಕ್ರಿಸ್ಪಂ : ಇದು ಹೆಚ್ಚು ಎತ್ತರವಾಗಿ ಬೆಳೆಯುವ ಆರ್ಕಿಡ್ ಎಂದು ಹೆಸರಾಗಿದೆ. ದಕ್ಷಿಣ ಭಾರತದ ಮೂಲನಿವಾಸಿ. ಎಲೆಗಳು 5″–8″ ಉದ್ದ ಮತ್ತು 2″ ಅಗಲವಾಗಿವೆ. ಹೂಗೊಂಚಲು ಹೆಚ್ಚಿನ ಸಂಖ್ಯೆ ಹೂಗಳಿಂದ ಸಡಿಲವಾಗಿ ಜೋಡಿಸಿರುತ್ತದೆ. ಇದರ ಉದ್ದ ಸುಮಾರು 3″ ; ನೆಲಕ್ಕೆ ಸಮಾಂತರ ಅಥವಾ ಕಮಾನಿನಂತೆ ಬಾಗಿರುತ್ತದೆ. ಪುಷ್ಪಪತ್ರ ದಳಗಳು ಬಿಳಿಯ ಬಣ್ಣದವು ; ತುದಿಗಳು ಗುಲಾಬಿ ಕಂದುಬಣ್ಣ. ಹೂಗಳು ಸುವಾಸನಾಯುಕ್ತವಾಗಿವೆ.

ಏರೈಡೆಸ್ ಫೀಲ್ಡಿಂಜಿಯೈ : ಇದು ಏರೈಡೆಸ್ ಜಾತಿಯ ಪ್ರಖ್ಯಾತಿಯಾದ ಆರ್ಕಿಡ್. ಇದನ್ನು ಹುಕ್ಕರ್ ಎಂಬ ಸಸ್ಯಶಾಸ್ತ್ರಜ್ಞ ಈಶಾನ್ಯ ಭಾರತದಲ್ಲಿ ಗುರುತಿಸಿ ವಿವರಿಸಿದ್ದಾನೆ (1850). ಇದರಲ್ಲಿ ಎಲೆ ಅಗಲ ; ಹೂಗೊಂಚಲು 2′ ಉದ್ದ, ಅಂತ್ಯಾರಂಬಿ. ಗೊಂಚಲಲ್ಲಿ ಹೂಗಳು ನಿಬಿಡವಾಗಿವೆ. ಹೂ 1¼″ ಉದ್ದ ; ಸುವಾಸನಾಯುಕ್ತವಾಗಿದೆ. ಬಣ್ಣ ಕಂದು ; ಮೇಲುಭಾಗದಲ್ಲಿ ಬಿಳಿಯ ಚುಕ್ಕೆಗಳು ಇವೆ. ಹೂವಿನ ಪಾರ್ಶ್ವ ಪುಷ್ಪಪತ್ರಗಳು (ಲ್ಯಾಟರಲ್ ಸೆಪಲ್ಸ್) ಬಿಳುಪು ; ಹೂತುಟಿ ಕಂದು ಅಥವಾ ಬಿಳುಪು; ಹೂತುಟಿಯ ಎರಡು ಭಾಗಗಳು ಹಿಂದಕ್ಕೆ ಬಾಗಿರುವುದರಿಂದ ಆಲಿಕೆಯ ಆಕಾರವಾಗಿ ಕಾಣುತ್ತವೆ.

ಏರೈಡೆಸ್ ಓಡರೇಟಂ : ಇದು ಭಾರತದೇಶದ ಮೂಲವಾಸಿ. 5′ ಎತ್ತರದಷ್ಟು ಬೆಳೆಯುತ್ತದೆ; ಬೆಳೆದು ಧಾರಾಳವಾಗಿ ಕವಲೊಡೆದಿರುತ್ತದೆ. ಕಾಂಡ ಒಂದೇ. ಇದರ ಮೇಲೆ 10″ ಉದ್ದದ ಮತ್ತು 2″ ಅಗಲದ ಎಲೆಗಳು ಪರ್ಯಾಯವಾಗಿ ಜೋಡಿಸಿರುತ್ತವೆ. ಎಲೆಗಳು ಚರ್ಮದಂತೆ ಒರಟು ; ಬಣ್ಣ ಹಳದಿ ಮಿಶ್ರಿತ ಹಸಿರು. ಹೂಗೊಂಚಲು ಒಂದೇ ಸಸ್ಯದಲ್ಲಿ ಹಲವು ಇವೆ. ಇವು ಹೆಚ್ಚಿನ ಸಂಖ್ಯೆಯ ಒತ್ತಾಗಿರುವ ಹೂಗಳಿಂದ ಕೂಡಿದ್ದು ಜೋಲಾಡುತ್ತಿರುತ್ತವೆ; ಅಥವಾ ಕಮಾನಿನಂತೆ ಬಾಗಿರುತ್ತವೆ. ಪ್ರತಿ ಹೂವಿನ ಅಗಲ ಸುಮಾರು 2″ ; ಇದು ಸುವಾಸನಾಯುಕ್ತವಾಗಿದೆ. ಪುಷ್ಪಪತ್ರ ಮತ್ತು ಹೂದಳಗಳ ಬಣ್ಣ ಬಿಳುಪು ; ತುದಿಯಲ್ಲಿ ಕಂದುಬಣ್ಣದ ಮಚ್ಚೆಗಳಿವೆ. ಹೂತುಟಿ (ಲಿಪ್) ಆಲಿಕೆಯ ಆಕಾರ. (ಡಿ.ಎಂ.)

**ಏರ್ಲಂಗ :** ಈಗ ಇಂಡೊನೇಷ್ಯದ ಭಾಗವಾಗಿರುವ ಜಾವಾ ರಾಜ್ಯದ ದೊರೆಗಳಲ್ಲೊಬ್ಬ. ಪೂರ್ವ ಜಾವಾ ರಾಜನಾಗಿದ್ದ ಧರ್ಮವಂಶನ ಅಳಿಯ. ಧರ್ಮವಂಶನ ಆಳ್ವಿಕೆಯ ಕಾಲದಲ್ಲಿ ಆ ರಾಜ್ಯ ತಕ್ಕಮಟ್ಟಿನ ಪ್ರಗತಿ ಹೊಂದಿತ್ತು. ಮಲಕ್ಕಾ ಸುಮಾತ್ರಗಳೊಂದಿಗೆ ವ್ಯಾಪಾರ ಬೆಳೆಸಿತ್ತು. ಆದರೆ ಕೆಲವು ಜಲಸಂಧಿಗಳ ಹತೋಟಿ ಯಾರದಾಗಿರಬೇಕೆಂಬ ಪ್ರಶ್ನೆಯ ಬಗ್ಗೆ ಸುಮಾತ್ರದ ಶ್ರೀವಿಜಯ ಸಾಮ್ರಾಜ್ಯಕ್ಕೂ ಧರ್ಮವಂಶನಿಗೂ ವ್ಯಾಜ್ಯ ಹುಟ್ಟಿದ ಫಲವಾಗಿ ಸುಮಾತ್ರನರು ಜಾವಾ ದ್ವೀಪವನ್ನು ಆಕ್ರಮಿಸಿ ರಾಜಮನೆತನದವರನ್ನು ಕೊಂದು ರಾಜಧಾನಿಯನ್ನು ಧ್ವಂಸಮಾಡಿದರು (1006). ಧರ್ಮವಂಶನ ರಾಜ್ಯ ಚುಕ್ಕುಚೂರಾಯಿತು. ಆದರೆ ಏರ್ಲಂಗ ಶತ್ರುಗಳ ಕೈಗೆ ಸಿಕ್ಕದೆ ತಲೆತಪ್ಪಿಸಿಕೊಂಡು ಅಲೆದಾಡಿ, ಶಕ್ತಿವರ್ಧಿಸಿಕೊಂಡು, ಬೆಂಬಲಿಗರ ನೆರವಿನಿಂದ ರಾಜ್ಯವನ್ನು ಗೆದ್ದ (1010). 1019ರಲ್ಲಿ ಪಟ್ಟಾಭಿಷಿಕ್ತನಾಗಿ ಹಲು ಶ್ರೀಧರ್ಮವಂಶ ಏರ್ಲಂಗ ಅನಂತ ವಿಕ್ರಮೋತ್ತುಂಗ ದೇವ ಎಂಬ ಹೆಸರಿನಿಂದ ಮಹಾರಾಜನಾದ. ಈತನ ಆಳ್ವಿಕೆಯ ಕಾಲದಲ್ಲಿ ರಾಜ್ಯ ಮತ್ತೆ ಒಂದಾಗಿ ಪ್ರಬಲವಾಯಿತು. ಏರ್ಲಂಗ ರಾಜನಾದ ಕೂಡಲೇ ಭೀಷ್ಮ ಪ್ರಭಾವ, ಅಥಮಾಪನು ಮುಂತಾದ ಸಣ್ಣ ರಾಜರುಗಳನ್ನು ಗೆದ್ದ. ದಕ್ಷಿಣ ಜಾವಾದಲ್ಲಿ ಆಳುತ್ತಿದ್ದ ರಾಣಿಯೊಬ್ಬಳ ಮೇಲೆ 1032ರಲ್ಲಿ ಯುದ್ಧಮಾಡಿ ಅವಳನ್ನು ಸೋಲಿಸಿದ. ಏರ್ಲಂಗನ ಸ್ಥಾನ ಭದ್ರವಾಯಿತು. ಕ್ರಿ. ಶ. 1035ರಲ್ಲಿ ವೆಂಗ್‌ಕರ್ ರಾಜ್ಯದ ವಿಜಯನ ಮೇಲೆ ದಂಡೆತ್ತಿಹೋಗಿ ಅವನನ್ನೂ ಸೋಲಿಸಿದ. ತನ್ನ ಶಕ್ತಿ ಪ್ರತಿಷ್ಠೆಗಳಿಗೆ ತಕ್ಕಂತೆ ಕಹುರಿಪನ್ ಎಂಬಲ್ಲಿ ಹೊಸ ರಾಜಧಾನಿ ಸ್ಥಾಪಿಸಿದ. ರಾಜ್ಯದಲ್ಲಿ ಸುಭಿಕ್ಷೆ ಹೆಚ್ಚಿತು. ಕಳಿಂಗ, ಕರ್ಣಾಟಕ ಮುಂತಾದ ದೂರದೇಶಗಳಿಂದ ವ್ಯಾಪಾರಗಾರರು ಇಲ್ಲಿಗೆ ಬರುತ್ತಿದ್ದರು. ಏರ್ಲಂಗನೂ ಈತನ ಮಾವನಂತೆ ಅನೇಕ ಹಿಂದೂ ದೇವಸ್ಥಾನಗಳನ್ನೂ ಬೌದ್ಧ ಆಶ್ರಮಗಳನ್ನೂ ಸ್ಥಾಪಿಸಿದ. ಸಾಹಿತ್ಯ ಕಲೆಗಳಿಗೆ ಆಶ್ರಯ ನೀಡಿದ. ಕಣ್ವ ಕವಿಯ ಅರ್ಜುನವಿವಾಹ ಎಂಬ ಗ್ರಂಥ ಈತನ ಪ್ರೋತ್ಸಾಹದಿಂದ ರಚಿತವಾಯಿತೆಂದು ಹೇಳಲಾಗಿದೆ. ನ್ಯಾಯಸಂಹಿತೆಯೂ ಹಿಂದೂ ಕಾವ್ಯಗಳೂ ಸಂಸ್ಕೃತದಿಂದ ಜಾವಾನೀಸ್ ಭಾಷೆಗೆ ಅನುವಾದವಾದುವು. ಭಾರತೀಯ ಜ್ಞಾನಭಂಡಾರದ ಬಾಗಿಲನ್ನು ಜಾವಾದ ಸಾಮಾನ್ಯ ಜನಕ್ಕೂ ತೆರೆಯಲು ಸಾಧ್ಯವಾದದ್ದು ಆಗ.

ಏರ್ಲಂಗ ತನ್ನ ರಾಜ್ಯವನ್ನು ಇಬ್ಬರು ಮಕ್ಕಳಲ್ಲಿ ಹಂಚಿದ. ಈತ ಸತ್ತದ್ದು 1049ರಲ್ಲಿ. ಬೆಲ್‌ಹನ್‌ನಲ್ಲಿ ಇವನ ಕಳೇಬರಕ್ಕೆ ಸಮಾಧಿ ಮಾಡಲಾಯಿತು. ಆ ಸ್ಥಳದಲ್ಲಿ ಸ್ಥಾಪಿಸಲಾದ ವಿಷ್ಣುವಿಗ್ರಹ ಏರ್ಲಂಗನ ಕಾಲದ ಶಿಲ್ಪಕಲೆಯ ಪ್ರತೀಕವಾಗಿದೆ. (ಎ.ಎ.ಎಸ್.)

**ಏರ್ಲಿಕ್, ಪಾಲ್ :** 1854–1915. ಜರ್ಮನಿಯ ಪ್ರಸಿದ್ಧ ವೈದ್ಯ. ಅಣುಜೀವಿಶಾಸ್ತ್ರಜ್ಞ ಮತ್ತು ರಸಾಯನಶಾಸ್ತ್ರಜ್ಞ. 1908ರಲ್ಲಿ ಈತನಿಗೆ ವೈದ್ಯಶಾಸ್ತ್ರದಲ್ಲಿ ನೊಬೆಲ್ ಪಾರಿತೋಷಕ ದೊರೆಯಿತು. ರಸಾಯನಶಾಸ್ತ್ರಜ್ಞಾನವನ್ನು ವೈದ್ಯಶಾಸ್ತ್ರ, ಜೀವವಿಜ್ಞಾನಗಳಿಗೆ ಹೊಂದಿಸಿದ್ದು ಈತನ ಬಲು ಮುಖ್ಯಕಾರ್ಯ. ಮೊದಲು ಈತ ವೈದ್ಯಶಾಸ್ತ್ರವನ್ನು ಅಭ್ಯಸಿಸಿದ. ಬಳಿಕ ರಸಾಯನಶಾಸ್ತ್ರ ಈತನನ್ನು ಆಕರ್ಷಿಸಿತು. ಜೀವಕೋಶದ ವಿವಿಧ ಭಾಗಗಳನ್ನು ನಿರ್ದಿಷ್ಟ ವರ್ಣದ್ರವ್ಯಗಳಿಂದ ಬಣ್ಣಗಟ್ಟುವುದನ್ನು (ಸ್ಟೇನಿಂಗ್) ಕಂಡುಹಿಡಿದು ರಕ್ತಪರೀಕ್ಷಾಶಾಸ್ತ್ರಕ್ಕೆ ತಳಹದಿ ಹಾಕಿದ. ಜೀವಂತ ಪ್ರಾಣಿಗೆ ತೊಂದರೆಯಾಗದಂತೆ ಅದರ ನಿರ್ದಿಷ್ಟ ಅಂಗಗಳಿಗೆ ಬಣ್ಣಗಟ್ಟುವುದನ್ನು ಕಂಡುಹಿಡಿದ. ಕ್ಷಯರೋಗದ ಅಣುಜೀವಿಯನ್ನು ಸೂಕ್ಷ್ಮದರ್ಶಕದಲ್ಲಿ ನೋಡಲು ಒಂದು ವಿಧಾನವನ್ನು ಆವಿಷ್ಕರಿಸಿದ್ದೂ ಈತನೇ. ಇಮ್ಯೂನಾಲಜಿ ಕ್ಷೇತ್ರದಲ್ಲಿ ಈತ ಬಹಳ ಉಪಯುಕ್ತಕಾರ್ಯಗಳನ್ನು ನಡೆಸಿದ. ಇದೆಲ್ಲಕ್ಕಿಂತ ಮುಖ್ಯವೆಂದರೆ ಆಧುನಿಕ ರಾಸಾಯನಿಕ ಚಿಕಿತ್ಸಾಕ್ರಮ ಈತನಿಂದಲೇ ಮೊದಲಾದದ್ದು. ಸಿಫಿಲಿಸ್ ರೋಗದ ಔಷಧಿಯಾದ ಸಾಲ್ವರ್ಸಾನ್–606ನ್ನು ಕಂಡು ಹಿಡಿದುದು ಈತನ ಗಮನಾರ್ಹ ಸಾಧನೆ. ತರ್ಕಬದ್ಧವಾಗಿ ಯೋಚಿಸಿ ಒಂದು ಹೊಸ ರಾಸಾಯನಿಕ ಸಂಯುಕ್ತವನ್ನು ಯಾವುದೇ ಒಂದು ರೋಗಕ್ಕೆ ಹೇಳಿ ಮಾಡಿಸಿದಂತೆ ಔಷಧವಾಗಿ ತಯಾರಿಸುವುದು ಅಂದಿನಿಂದ ಮೊದಲಾಯಿತು. ಈಗ ಇಂಥ ಔಷಧಗಳ ತಯಾರಿಕೆ ಒಂದು ಬೃಹತ್ ಕೈಗಾರಿಕೆಯಾಗಿದೆ. (ಎಂ.ಆರ್.ಆರ್.)

**ಏರ್ಲಿಕ್, ಯುಜೀನ್ :** 1862–1918. ಶುದ್ಧ ಸಮಾಜಶಾಸ್ತ್ರಕ್ಕೂ ನ್ಯಾಯಶಾಸ್ತ್ರಕ್ಕೂ ಮಧ್ಯವರ್ತಿಯೆನ್ನಬಹುದಾದ ನೈಯಾಯ ಸಮಾಜಶಾಸ್ತ್ರದ (ಸೋಷಿಯಾಲೊಜಿ ಆಫ್ ಲಾ) ಜನಕ. ನ್ಯಾಯಶಾಸ್ತ್ರವನ್ನು ಸಮಾಜಶಾಸ್ತ್ರದ ಹಿನ್ನೆಲೆಯಲ್ಲಿಟ್ಟು ಅಧ್ಯಯನ ಮಾಡುವುದರಿಂದ ಅದರ ನೈಜ ಸ್ವರೂಪ ಅರ್ಥವಾಗು

ತ್ರದೆಂಬ ವಾದದ ಪ್ರತಿಪಾದಕ. ಆಗ ಆಸ್ಟ್ರಿಯನ್ ಚಕ್ರಾಧಿಪತ್ಯದ ಭಾಗವಾಗಿದ್ದು ಈಗ ರಷ್ಯದಲ್ಲಿರುವ ಬುಕೋವಿನ ಪ್ರಾಂತ್ಯದ ಮುಖ್ಯ ಪಟ್ಟಣವಾದ ಚೆರ್ನಾವಿಟ್ಸ್‌ನಲ್ಲಿ ಏರ್ಲಿಕ್ ಜನಿಸಿದ. ವಿಯೆನ್ನ ವಿಶ್ವವಿದ್ಯಾಲಯದಲ್ಲಿ ನ್ಯಾಯಶಾಸ್ತ್ರದ ಪದವಿ ಪಡೆದ ಮೇಲೆ ತನ್ನ ಹುಟ್ಟೂರಿನ ವಿಶ್ವವಿದ್ಯಾಲಯದಲ್ಲಿ ಈತನಿಗೆ 1897ರಲ್ಲಿ ರೋಮನ್ ನ್ಯಾಯದ ಖಾಸಗಿ ಅಧ್ಯಾಪಕ ಹುದ್ದೆ (ಪ್ರೈವಾಟ್ ಡೋಟ್ಸೆಂಟ್) ದೊರಕಿತು. ಕೊನೆಗಾಲದ ವರೆಗೂ ಈತ ಅಲ್ಲೇ ಉಳಿದ. ಈತ 1918 ಅಥವಾ 1919ರಲ್ಲಿ ಅಸುನೀಗಿರಬೇಕೆಂದು ಹೇಳಲಾಗಿದೆ. ಬುಕೋವಿನ ಪ್ರಾಂತ್ಯವನ್ನು ರೂಮೇನಿಯಕ್ಕೆ ವರ್ಗಾಯಿಸಿದ್ದರಿಂದ ಆ ಸಮಯದಲ್ಲಿ ಅಲ್ಲಿ ಬಹಳ ಗಲಭೆ ಏರ್ಪಟ್ಟಿದ್ದ ಪರಿಣಾಮವಾಗಿ ಆತ ಸತ್ತ ದಿನ ಯಾವುದೆಂಬುದು ತಿಳಿಯಲಿಲ್ಲ.

ತನ್ನ ಜೀವಿತದ ಮುಖ್ಯ ಕಾಲದಲ್ಲಿ ಏರ್ಲಿಕ್ ರೂಢಿಸಿಕೊಂಡ ಅಭಿಪ್ರಾಯಗಳ ಕ್ರೋಡೀಕೃತ ರೂಪವೇ ಈತನ ಫಂಡಮೆಂಟಲ್ ಪ್ರಿನ್ಸಿಪಲ್ಸ್ ಆಫ್ ದಿ ಸೋಷಿಯಾಲೊಜಿ ಆಫ್ ಲಾ (1913) ಎಂಬ ಗ್ರಂಥ. ಆಗ ಅಮೆರಿಕ ಸಂಯುಕ್ತ ಸಂಸ್ಥಾನ ಮತ್ತು ಇಂಗ್ಲೆಂಡ್ ವಿನಾ ಉಳಿದ ದೇಶಗಳಲ್ಲಿನ ನ್ಯಾಯಪದ್ಧತಿಯೆಲ್ಲ ಆ ಕಾಲದಲ್ಲಿ ಪ್ರಚಲಿತವಿದ್ದ ಕಲ್ಪನೆಯ ತಳಹದಿಯ ಮೇಲೆ ಕಟ್ಟಿದ್ದಾಗಿತ್ತು. ವ್ಯವಹಾರ ಯಾವುದೇ ಇರಲಿ, ಪ್ರಚಲಿತವಿರುವ ಕಾಯಿದೆಗಳ ಹಾಗೂ ಅಧಿಕೃತ ನ್ಯಾಯಾಲಯಗಳ ತೀರ್ಪುಗಳ ವ್ಯವಸ್ಥೆಯ ಆಧಾರದಮೇಲೆ ಅದನ್ನು ಇತ್ಯರ್ಥ ಮಾಡುವುದು ಸಾಧ್ಯವೆಂಬುದು ಸ್ಥೂಲವಾಗಿ ಈ ಮತ. ಈ ಸಿದ್ಧಾಂತವನ್ನು ಪ್ರಧಾನವಾಗಿ ವಿರೋಧಿಸಿದವನೆಂದರೆ ಜರ್ಮನಿಯ ಹರ್ಮನ್ ಕಾಂಟರೋವಿಚ್. ಆತನದು ಸ್ವತಂತ್ರ ನ್ಯಾಯದ ಸಿದ್ಧಾಂತ. ಏರ್ಲಿಕ್ ಇದನ್ನು ಸಮರ್ಥಿಸಿದನಾದರೂ ಇದನ್ನೇ ಸಂಪೂರ್ಣವಾಗಿ ಅನುಸರಿಸಲಿಲ್ಲ; ಇದರಿಂದಲೂ ಮುಂದೆ ಹೋದ. ನ್ಯಾಯ ತೀರ್ಪುಗಳಲ್ಲಿ ವ್ಯಕ್ತವಾದ ನ್ಯಾಯಕ್ಕೂ ಸಾಮಾಜಿಕ ಕಟ್ಟಳೆಗಳಲ್ಲಿ ಪ್ರಕಟವಾಗಿರುವ ನ್ಯಾಯಕ್ಕೂ ಇರುವ ವ್ಯತ್ಯಾಸವನ್ನು ಗಮನಿಸಬೇಕೆಂಬುದು ಏರ್ಲಿಕನ ವಾದ. ಸಮಾಜದಲ್ಲಿ ಇಡೀ ನ್ಯಾಯವ್ಯವಸ್ಥೆಯನ್ನರಿಯಲು ಕಾಯಿದೆಗಳ ನ್ಯಾಯವಷ್ಟೇ ಸಾಲದು ಎಂಬ ವಾದವನ್ನು ಮಂಡಿಸಿದವರಲ್ಲಿ ಏರ್ಲಿಕನೇ ಮೊದಲಿಗನಲ್ಲ. ರಷ್ಯೊ–ಪೋಲಿಷ್ ನ್ಯಾಯಶಾಸ್ತ್ರಜ್ಞ ಲೆಯೊ ಪೆಟ್ರಜಿಟ್ಸ್ಕಿ ಈ ಬಗ್ಗೆ ಚರ್ಚಿಸಿದ್ದಾನೆ (1905–07). ನ್ಯಾಯಕ್ಕೆ ಮನಶ್ಶಾಸ್ತ್ರವೇ ತಳಹದಿಯೆಂದೂ ವ್ಯಕ್ತಿಯ ಮನಸ್ಸಿನ ವರ್ತನೆಯೇ ಇದರ ಬಗ್ಗೆ ನಿರ್ಣಾಯಕವೆಂದೂ ಆತನ ವಾದ. ಪಿಟಿರಿಮ್ ಎ. ಸರೋಕಿನ್ ಮತ್ತು ನಿಕೊಲಾಸ್ ಟಿಮಷೆಫ್ ಆತನ ಪಂಥದವರು. ಆದರೆ ವ್ಯಕ್ತಿಗತ ಮನಶ್ಶಾಸ್ತ್ರಕ್ಕೆ ಆತ ನೀಡಿದ ಮಹತ್ತ್ವ ತಪ್ಪೆಂದು ಇವರ ಮತ. ಸಾಮೂಹಿಕ ಮನಶ್ಶಾಸ್ತ್ರದ ಪ್ರಾಮುಖ್ಯವನ್ನು ಇವರು ಒತ್ತಿ ಹೇಳಿದರಲ್ಲದೆ ಕೊನೆಗೆ ನ್ಯಾಯವನ್ನು ಸಮಾಜಶಾಸ್ತ್ರದ ಸೀಮೆಯೊಳಕ್ಕೇ ತಂದರೆನ್ನಬಹುದು.

ಏರ್ಲಿಕನ ಕಾಲದಲ್ಲೇ ಬದುಕಿದ್ದ ರಾಸ್ಕೊ ಪೌಂಡನೂ ಸಮಾಜಶಾಸ್ತ್ರೀಣ ನ್ಯಾಯಶಾಸ್ತ್ರದ ಬಗ್ಗೆ ಲೇಖನಗಳನ್ನು ಬರೆದ. ಪುಸ್ತಕ ನ್ಯಾಯಕ್ಕೂ ಜೀವನ ನ್ಯಾಯಕ್ಕೂ ಇರುವ ವ್ಯತ್ಯಾಸವನ್ನು ತೋರಿಸಲು ಈತ ಯತ್ನಿಸಿದ್ದಾನೆ.

ಏರ್ಲಿಕನ ಹಾದಿಯಲ್ಲೇ ವಿಚಾರ ಮಾಡಿದ ಇತರರೆಂದರೆ ಸ್ವೀಡನಿನ ಅಪ್ಸಾಲ ಪಂಥದವರು. ನ್ಯಾಯದ ಮೂಲ ಕಲ್ಪನೆಗಳೇ ತಪ್ಪೆಂಬುದು ಇವರ ಮತ. ಹಕ್ಕುಗಳು ಬಾಧ್ಯತೆಗಳು ಎಂಬವೇ ಇಲ್ಲ; ಈ ಬಗ್ಗೆ ಮಾನವನ ಭಾವನೆಗಳಿವೆ ಅಷ್ಟೆ, ಎಂದು ಇವರು ವಾದಿಸಿದ್ದಾರೆ.

ಪುಸ್ತಕದ ಬದನೆಕಾಯಷ್ಟೆ ನ್ಯಾಯವಲ್ಲ; ಇದು ಸಮಾಜದ ಒಂದು ವಾಸ್ತವ ಸಂಗತಿ ಎಂಬ ಬಗ್ಗೆ ವಿಚಾರ ಹರಿಸಿದವೆಂಬ ದೃಷ್ಟಿಯಲ್ಲಿ ಈ ಅಧ್ಯಯನಗಳೆಲ್ಲ ಉಪಯುಕ್ತವಾಗಿವೆ. ಮಾನವ ಯಾವ ರೀತಿ ವರ್ತಿಸುತ್ತಾನೆ ಎಂಬುದರ ಮೇಲಿಂದ ಇದನ್ನರಿಯಬಹುದು. ಸಂಘಟಿತ ಸಮಾಜದಲ್ಲೆಲ್ಲ ಇದನ್ನು ಕಾಣಬಹುದು ಎಂದು ಈತ ವಾದಿಸಿದ. ಆದ್ದರಿಂದ ನ್ಯಾಯದ ಇರುವಿಕೆ, ವ್ಯಾಪ್ತಿ, ಅದರ ಕಟ್ಟಾಜ್ಞೆ—ಇವು ಪೂರ್ವ ನಿಯಮಿತ ಕಲ್ಪನೆಗಳಿಂದ ಉಂಟಾಗುವುದಿಲ್ಲ; ಸಮಾಜದ ಸತ್ಯಗಳನ್ನೂ ಇದು ಪ್ರತಿಬಿಂಬಿಸಬೇಕಾಗುತ್ತದೆ. ಆದ್ದರಿಂದ ನ್ಯಾಯಾಲಯ ಇರುವ ನ್ಯಾಯವನ್ನೆ ಎತ್ತಿ ಹಿಡಿಯುತ್ತದೆಯೆಂದು ಹೇಳುವುದಾದರೆ ಅದು ತಪ್ಪಾಗುತ್ತದೆ. ಸಾಮಾಜಿಕ ಸತ್ಯಗಳನ್ನು ಒಳಗೊಂಡ ನ್ಯಾಯವನ್ನು ನ್ಯಾಯಾಲಯ ನಿರ್ಮಾಣ ಮಾಡಬೇಕಾಗುತ್ತದೆ. ಏಕೆಂದರೆ, ಸಮಾಜದಲ್ಲಿ ಕೇವಲ ಅಧಿಕಾರ ರೂಢ ನ್ಯಾಯವಲ್ಲದೆ, ಅನಧಿಕಾರ ರೂಢ ಕಟ್ಟಳೆಗಳು ಅನೇಕವಿರುತ್ತವೆ ಮತ್ತು ವ್ಯಕ್ತಿಗಳು ಈ ಅನಧಿಕಾರ ರೂಢ ನ್ಯಾಯವನ್ನೂ ಪರಿಪಾಲಿಸುತ್ತಿರುತ್ತಾರೆ. ಹಾಗೆ ವ್ಯಕ್ತಿಗಳು ನ್ಯಾಯವನ್ನು ಪರಿಪಾಲಿಸಲಿಕ್ಕೂ, ಪರಿಪಾಲನೆ ಮಾಡದಿರುವುದಕ್ಕೂ ಅವರ ಮನೋಭೀಷ್ಟ ಸನ್ನಿವೇಶಗಳು ಮೂಲಕಾರಣ. ನೈಜವಾದ ನ್ಯಾಯ ದೊರಕಬೇಕಾದರೆ ಈ ಸಾಮಾಜಿಕ ಸನ್ನಿವೇಶಗಳು ಮತ್ತು ವ್ಯಕ್ತಿಗಳ ಮನೋಭೀಷ್ಟಗಳನ್ನು ನೆನಪಿನಲ್ಲಿಟ್ಟು ನ್ಯಾಯ ಮಾಡಬೇಕು ಮತ್ತು ದೊರಕಿಸಿಕೊಡಬೇಕು ಎಂಬುದು ಏರ್ಲಿಕನ ತರ್ಕದ ತಿರುಳು.

ನಿರೀಕ್ಷಣ, ಸಾಧಾರಣೀಕರಣ, ಅವಲೋಕಿತಾಂಶಗಳ ಜೋಡಣೆ, ನಿರ್ದಿಷ್ಟ ಸಂದರ್ಭಗಳಲ್ಲಿ ಈ ಫಲಿತಾಂಶಗಳ ಅನ್ವಯ ಈ ವಿಧಾನದಿಂದ ಸಮಾಜದ ಕಟ್ಟಳೆಗಳನ್ನರಿಯಬಹುದೆಂದು ಏರ್ಲಿಕ್ ಸೂಚಿಸಿದ್ದಾನೆ. ಇದು ಆಗಿನ ಸಮಾಜಶಾಸ್ತ್ರಜ್ಞರು ಅನುಸರಿಸುತ್ತಿದ್ದ ವಿಧಾನವೇ ಆಗಿದೆ.

ಸಾಮಾಜಿಕ ನ್ಯಾಯಶಾಸ್ತ್ರದ ಜೊತೆಗೆ ಈ ಪುಸ್ತಕದಲ್ಲಿ ಏರ್ಲಿಕ್ ನಾನಾದೇಶಗಳ ನ್ಯಾಯ ಬೆಳೆವಣಿಗೆಯನ್ನು ಕುರಿತು ವಿವೇಚಿಸಿದ್ದಾನೆ. ನೈಯಾಯ ಸಮಾಜಶಾಸ್ತ್ರಕ್ಕಾಗಿ ಮೀಸಲಾದ ಅಧ್ಯಾಯಗಳು ಕೊನೆಯ ಎರಡು ಮಾತ್ರ. ಆದರೆ ಇದು ಒಂದು ಸಮರ್ಪಕ ಶಾಸ್ತ್ರವಾಗಿ ಬೆಳೆಯುವುದಕ್ಕೆ ಅವಶ್ಯವಾದಷ್ಟು ನೇರ್ಪಾಗಿ ಇಲ್ಲಿ ಈ ಬಗ್ಗೆ ವಿವೇಚನೆ ನಡೆದಿಲ್ಲ. ಯಾವ ನಿಟ್ಟಿನಲ್ಲಿ ಇದು ಬೆಳೆಯಬಲ್ಲದೆಂಬ ನಿರ್ದಿಷ್ಟ ಕಲ್ಪನೆಯೂ ಇಲ್ಲ.

ನ್ಯಾಯದ ಬೆಳೆವಣಿಗೆ, ಅದರ ವಿನ್ಯಾಸ—ಇವುಗಳ ಬಗ್ಗೆ ಈ ತೆರನಾದ ಅಧ್ಯಯನ ಆವಶ್ಯಕವಾದರೂ ಯಾವುದು ನ್ಯಾಯ ಎಂಬುದನ್ನು ಯಾವ ಮಾಪನಕ್ರಮದಿಂದ ಕಂಡುಹಿಡಿಯಬೇಕೆನ್ನುವುದರ ಬಗ್ಗೆ ಸಾಕಷ್ಟು ಮಾರ್ಗದರ್ಶನವನ್ನು ಈ ಸಾಮಾಜಿಕ ಅಧ್ಯಯನ ಕ್ರಮ ನೀಡಲಿಲ್ಲ. ನ್ಯಾಯಕ್ಕೆ ಉಗಮಸ್ಥಾನವಾದ ಸಮಾಜ ವ್ಯವಸ್ಥೆಯನ್ನೂ ಅದು ಎಡೆಕೊಡುವ ಹಿತಾಸಕ್ತಿಗಳನ್ನೂ ಗಮನಕ್ಕೆ ತಂದುಕೊಂಡಿಲ್ಲವಾದ ಕಾರಣ ಈ ತೆರನಾದ ಅಧ್ಯಯನ ಅಪ್ರಬುದ್ಧ ಶಾಸ್ತ್ರವಾಗಿಯೇ ಉಳಿದಿದೆ.

(ಎಲ್.ಎಸ್.)

**ಏಹಾರ್ಡ್, ಲುಡ್‌ವಿಗ್ :** (1897– ). ಜರ್ಮನಿಯ ಫೆಡರಲ್ ಗಣರಾಜ್ಯದ ಅಧ್ಯಕ್ಷ (ಛಾನ್ಸೆಲರ್) (1963–1966) ಆಗಿದ್ದವ. ಬವೇರಿಯದಲ್ಲಿದ್ದ ಜವಳಿ ವ್ಯಾಪಾರಿಯೊಬ್ಬನ ಮಗ. ಒಂದನೆಯ ಮಹಾಯುದ್ಧದಲ್ಲಿ ಭಾಗವಹಿಸಿ ಗಾಯಗೊಂಡುದರ ಫಲವಾಗಿ ಕಸಬಿನ ಅರ್ಥಶಾಸ್ತ್ರಜ್ಞನಾದ. ಅಂದು ಪ್ರಬಲವಾಗಿದ್ದ ನಾಜ಼ಿ ಪಕ್ಷವನ್ನು ಸೇರಲು ಇಷ್ಟಪಡದ ಕಾರಣ ಇವನನ್ನು 1942ರಲ್ಲಿ ನಾಜ಼ಿಗಳು ತಮ್ಮ ಪಕ್ಷದಿಂದ ತೆಗೆದುಹಾಕಿದರು. ಅನಂತರ ಈತ ಔದ್ಯೋಗಿಕ ಸಂಶೋಧನಸಂಸ್ಥೆಯೊಂದನ್ನು ಸ್ಥಾಪಿಸಿದ. ದೊಡ್ಡ ರಾಜಕಾರಣಿಯಾದದ್ದರಿಂದ ಈತನನ್ನು ಬವೇರಿಯದ ಅರ್ಥಸಚಿವನನ್ನಾಗಿ ನೇಮಿಸಲಾಯಿತು (1945). ರಾಜ್ಯದ ರಾಜಕೀಯದಿಂದ 1947ರಲ್ಲಿ ಹೊರಬಂದು ಕ್ರಿಶ್ಚಿಯನ್ ಡೆಮೋಕ್ರೆಟಿಕ್ ಯೂನಿಯನನ್ನು ಸೇರಿ ಯಶಸ್ವೀ ಹಣಕಾಸಿನ ಸುಧಾರಣೆಗಳನ್ನು ಯೋಜಿಸಿದ (1948). ಇದಾದ ಒಂದು ವರ್ಷದಲ್ಲೆ ಆಗಿನ ಜರ್ಮನಿಯ ಅಧ್ಯಕ್ಷನಾಗಿದ್ದ ಕೊನ್ರಾಡ್ ಅಡೆನೋವರನ ಸಚಿವಸಂಪುಟವನ್ನು ಸೇರಿದ. 1957ರ ಚುನಾವಣೆಯಲ್ಲಿ ಪಶ್ಚಿಮ ಜರ್ಮನಿಯ ಅರ್ಥಸಚಿವನಾಗಿ ಆಯ್ಕೆಯಾದನಲ್ಲದೆ ಅನಂತರ ಪಶ್ಚಿಮ ಜರ್ಮನಿಯ ಉಪಾಧ್ಯಕ್ಷನಾಗಿಯೂ (ವೈಸ್‌ಛಾನ್ಸೆಲರ್) ನೇಮಕಹೊಂದಿದ. ಅಡೆನೋವರ್ ರಾಜೀನಾಮೆಯನ್ನಿತ್ತಮೇಲೆ ಕ್ರಿಶ್ಚಿಯನ್ ಡೆಮೋಕ್ರ್ಯಾಟ್ ಆಗಿದ್ದ ಈತ ಅಧ್ಯಕ್ಷನಾದ (1963). ಈತನ ಅಧಿಕಾರಾವಧಿಯಲ್ಲಿ ಅನೇಕ ಸಾಮಾಜಿಕ ಸುಧಾರಣೆಗಳಾದುವು. ಹೊರನಾಡುಗಳಲ್ಲಿ ಅನಿರ್ಬಂಧಿತ ವ್ಯಾಪಾರ ತಾತ್ತ್ವಿಕವಾಗಿಯಾದರೂ ಮಿತಿಯಲ್ಲಿರಬೇಕೆಂಬುದು ಈತನ ಮತ. ಪಶ್ಚಿಮ ಜರ್ಮನಿಯ ಬೃಹದ್ ಆರ್ಥಿಕ ಪುನಶ್ಚೇತನಕ್ಕೆ ಈತನ ನಿರ್ದೇಶನ ಮತ್ತು ಸಹಾಯವೇ ಮುಖ್ಯಕಾರಣ. ಆದರೆ ಒಳಾಡಳಿತದಲ್ಲಿ ಶಕ್ತಿಕೇಂದ್ರೀಕರಣದ ಬಗ್ಗೆ ಇದ್ದ ತೀವ್ರಾಸಕ್ತಿ ಮತ್ತು ರಾಜಕೀಯ ಪುಢಾರಿತನಗಳಿಂದಾಗಿ ಈತ ಅನೇಕ ಆಕ್ಷೇಪಣೆಗಳಿಗೆ ಒಳಗಾದ. ಅಡೆನೋವರ್ 1966ರ ಮಾರ್ಚಿವರೆಗೂ ಪಕ್ಷದ ಅಧ್ಯಕ್ಷನಾಗಿದ್ದ. ಅಡೆನೋವರನ ಅನಂತರ ಈತನೇ ಪಕ್ಷದ ಅಧ್ಯಕ್ಷನೂ ಆದ.

*

**ಏಲಂ :** ನೈರುತ್ಯ ಏಷ್ಯಯಲ್ಲಿದ್ದ ಒಂದು ಪ್ರಾಚೀನ ದೇಶ. ಸ್ಥೂಲವಾಗಿ ಈಗಿನ ಖೂಜ಼ಿಸ್ತಾನ್ ಪ್ರಾಂತ್ಯದಲ್ಲಿತ್ತೆನ್ನಬಹುದು. ಭೌಗೋಲಿಕವಾಗಿಯೂ ಸಾಂಸ್ಕೃತಿಕವಾಗಿಯೂ ಬ್ಯಾಬಿಲೋನಿಯದ ಪೂರ್ವಕ್ಕೆ ಯೂಫ್ರೇಟೀಸ್ ಮತ್ತು ಟೈಗ್ರಿಸ್ ನದಿಗಳ ದಕ್ಷಿಣ ಪ್ರದೇಶವೇ ಏಲಮಿನ ಮುಖ್ಯ ಭಾಗ. ಆಗಿಂದಾಗ್ಗೆ ಇಲ್ಲಿನ ಜನ ನೆರೆಹೊರೆಯ ಪ್ರದೇಶಗಳ ಜನರೊಂದಿಗೆ ಹೋರಾಡುತ್ತಿದ್ದುದರಿಂದ ಈಶಾನ್ಯ ಆಗ್ನೇಯಗಳ ಬೆಟ್ಟಗಾಡುಗಳೂ ಈ ದೇಶದ ಎಲ್ಲೆಯೊಳಕ್ಕೆ ಸೇರಿದ್ದುದುಂಟು. ಇದರ ಎಲ್ಲೆಯನ್ನು ಖಚಿತವಾಗಿ ಹೇಳುವುದು ಅಸಾಧ್ಯ. ಯೂಫ್ರೇಟೀಸ್ ಟೈಗ್ರಿಸ್ ನದಿಗಳ ಮುಖದ ಜೌಗುಪ್ರದೇಶವನ್ನು ಬೈಬಲಿನಲ್ಲಿ ಏಲಂ ಎಂದು, ಕರೆಯಲಾಗಿದೆ.

ಮೊದಲಿಗೆ ಇಲ್ಲಿ ಅನೇಕ ಬುಡಕಟ್ಟುಗಳ ಜನ ವಾಸಿಸುತ್ತಿದ್ದರು. ಇವರ ಪೈಕಿ ಸೀಮೈಟ್‌ಗಳೂ ಕ್ಯಾಸೈಟ್‌ಗಳೂ ಮುಖ್ಯರಾದವರು. ಕ್ಯಾಸೈಟ್‌ಗಳಿಂದಾಗಿ ಈ ಪ್ರದೇಶಕ್ಕೆ ಸಿಸ್ಸೈ ಅಥವಾ ಸಿಸ್ಸಿಯ ಎಂದು ಹೆಸರಾಗಿ ಏಲಮಿನ ಮುಖ್ಯಪಟ್ಟಣಕ್ಕೆ ಸೂಸಿಯಾನೆ ಅಥವಾ ಸೂಸ ಎಂದು ಹೆಸರಾಯಿತೆಂದು ಒಂದು ವಾದವಿದೆ. ಸುಮೇರಿಯನ್ ಗ್ರಂಥಗಳಲ್ಲಿ ಈ ಪ್ರದೇಶಕ್ಕೆ ನಮ್ಮ (ಎತ್ತರದ ಪ್ರದೇಶ) ಎಂಬ ಹೆಸರಿದ್ದು ಸಿಮೆಟಿಕ್ ಭಾಷಾಂತರದಲ್ಲಿ ಅದು ಏಲಮ್ಟು ಅಥವಾ ಏಲಂ

ಎಂದಾಯಿತು. ಏಲಂನಲ್ಲಿ ಆವಾನ್, ಆನಾಸ್, ಸಿಮಾಷ್ ಮತ್ತು ಸೂಸ ಎಂಬ ನಾಲ್ಕು ಪ್ರದೇಶಗಳಿದ್ದುವೆಂದು ಪುರಾತನ ಆಕರಗಳಿಂದ ತಿಳಿದು ಬರುತ್ತದೆ.

ಪೂರ್ವಶಿಲಾಯುಗದ ಅವಶೇಷಗಳು ಇಲ್ಲಿ ದೊರಕಿಲ್ಲ. ಮಧ್ಯ ಶಿಲಾಯುಗದ ಮಾಹಿತಿಗಳು ಸ್ಪಷ್ಟವಾಗಿಲ್ಲ. ನವಶಿಲಾಯುಗ ಕಾಲದ ಅನೇಕ ಅವಶೇಷಗಳು ದೊರಕಿವೆ. ಇಲ್ಲಿನ ಜನಕ್ಕೆ ವ್ಯವಸಾಯವೂ ಪಶುಪೋಷಣೆಯೂ ಗೊತ್ತಿದ್ದುವೆಂದೂ ಇವರು ಗ್ರಾಮವಾಸಿಗಳೆಂದೂ ಹೇಳಬಹುದು. ನೆಲ ಉತ್ತು, ಬಿತ್ತಿ, ಕಲ್ಲಿನ ಹಲ್ಲುಗಳಿದ್ದ ಮೂಳೆಯ ಕುಡುಗೋಲುಗಳಿಂದ ಫಸಲು ಕೊಯ್ಯುತ್ತಿದ್ದದ್ದುಂಟು. ಸ್ವಲ್ಪಮಟ್ಟಿಗೆ ಲೋಹದ ಬಳಕೆಯೂ ಇವರಿಗೆ ಗೊತ್ತಿತ್ತು. ಬೇಟೆಗಾರಿಕೆ ಇವರ ಮುಖ್ಯ ಕಸಬುಗಳಲ್ಲೊಂದು. ಶವಗಳನ್ನು ಮನೆಗಳಲ್ಲೂ, ಹೊರಗೂ ಹೂಳುತ್ತಿದ್ದರು. ಬುಟ್ಟಿಗಳ ನೇಯ್ಗೆ ಮತ್ತು ಲಿನನ್‌ಬಟ್ಟೆ ತಯಾರಿಕೆ ಗೊತ್ತಿತ್ತು. ಕ್ರಿ.ಪೂ. 3800ರಲ್ಲಿ ಇಲ್ಲಿ ಕೋಟೆಯಿಂದ ರಕ್ಷಿತವಾದ ನಾಗರಿಕತೆ ಪ್ರಾರಂಭವಾಗಿತ್ತು. ಆ ಕಾಲದ ಮಡಕ್ಕು ಮತ್ತು ಬೈಡಾಲು ಎಂಬಲ್ಲಿಯೂ ಕೋಟೆಗಳಿದ್ದುವು. ಕ್ರಿ.ಪೂ. 28ನೆಯ ಶತಮಾನದಲ್ಲಿ (?) ಮೆಸೊಪೊಟೇಮಿಯದ ದೊರೆ ಸಾರ್ಗಾನ್ ಏಲಮನ್ನು ಗೆದ್ದ. ಆ ವೇಳೆಗೆ ಸುಮೇರಿಯನ್ ಸಂಸ್ಕೃತಿ ಹರಡಿತ್ತು. ಅಲ್ಲಿ ನಗರ ರಾಜ್ಯಗಳು ಇದ್ದುದಲ್ಲದೆ ಸುಮೇರಿಯನ್ ದೇವತೆಗಳ ಆರಾಧನೆಯೂ ನಡೆದಿತ್ತು. ಅರ್ ಬಳಿಯಲ್ಲಿ, ಯೂಫ್ರೇಟಿಸ್ ನದಿಯ ದಡದಲ್ಲಿದ್ದ ಎರೆಕ್ ರಾಜ್ಯದ ದೊರೆ ಏಲಮನ್ನೂ ಗೆದ್ದುದಾಗಿ ಹೇಳಲಾಗಿದೆ. ಸಾರ್ಗಾನನ ಮೊಮ್ಮಗ ನರಮ್‌ಸಿನನಿಂದ ಇದರ ಆಡಳಿತಕ್ಕೆ ನೇಮಿತವಾಗಿದ್ದ ಪ್ರಾಂತ್ಯಾಧಿಕಾರಿ ಸ್ವತಂತ್ರನಾಗಿ ಆಳಿದನೆಂದೂ ತಿಳಿದುಬಂದಿದೆ. ಕ್ರಿ. ಪೂ. 3ನೆಯ ಸಹಸ್ರಮಾನದಲ್ಲಿ ಇಲ್ಲಿನ ಗುಟಿ ಜನ ಮೆಸೊಪೊಟೇಮಿಯವನ್ನು ಗೆದ್ದರು. ಮುಂದೆಯೂ ಇಲ್ಲಿ ಅನೇಕ ಸ್ವತಂತ್ರ ನಗರ ರಾಜ್ಯಗಳಿದ್ದರೂ ಇವುಗಳಲ್ಲಿ ಕೆಲವು ಸುಮೇರಿಯನ್ನರ ವಶವಾಗಿದ್ದುವು. ಸುಮೇರಿಯದ ಅರ್ ರಾಜ್ಯವನ್ನು ಇವರು ಒಮ್ಮೆ ಗೆದ್ದುಕೊಂಡಿದ್ದರು. ಏಲಂ ಕ್ರಿ. ಪೂ. 17ನೆಯ ಶತಮಾನದಲ್ಲಿ ಬ್ಯಾಬಿಲಾನಿನ ಹ್ಯಾಮುರಾಬಿಯ ವಶವಾಯಿತು. ಆಗ ಅನೇಕ ಸಾಂಸ್ಕೃತಿಕ ಅಂಶಗಳು ಮರೆಯಾದರೂ ಬರೆವಣಿಗೆ ಮುಂದುವರಿಯಿತು. ಕ್ರಿ. ಪೂ. 8ನೆಯ ಶತಮಾನದಲ್ಲಿ ಅಸ್ಸಿರಿಯನ್ನರೊಡನೆ ಯುದ್ಧಮಾಡಿ ಬ್ಯಾಬಿಲಾನನ್ನು ಉಳಿಸಿಕೊಂಡ ಈ ಜನ ಅವರಿಂದ ಮುಂದೆ ಹಲವು ಸಲ ಸೋತರೂ ನೆರೆಹೊರೆಯ ದೊರೆಗಳ ಸಹಾಯದಿಂದ ಕ್ರಿ. ಪೂ. 612ರಲ್ಲಿ ಆ ಚಕ್ರಾಧಿಪತ್ಯದ ನಾಶಕ್ಕೆ ಕಾರಣರಾದರು ; ಅನಂತರ ಪರ್ಷಿಯದ ಅಕೆಮಿನಿಡ್ ಚಕ್ರಾಧಿಪತ್ಯದಲ್ಲಿ ಲೀನವಾಗಿ ಏಲಂ ತನ್ನ ವ್ಯಕ್ತಿತ್ವವನ್ನು ಕಳೆದುಕೊಂಡಿತು. (ಬಿ.ಕೆ.ಜಿ.)

ಏಲಮಿನ ಸಾಂಸ್ಕೃತಿಕ ಧಾರ್ಮಿಕ ವಿಚಾರಗಳ ಬಗ್ಗೆ ವಿವರಗಳೇನೂ ತಿಳಿದುಬಂದಿಲ್ಲ. ಆಗಿನ ಕಾಲದ ಬರೆವಣಿಗೆಗಳೆಲ್ಲ ಬಹುತೇಕ ಯುದ್ಧಗಳಲ್ಲಿ ಪಡೆದ ವಿಜಯವನ್ನು ಕುರಿತಂಥವು. ಇಷಿಷಿನಾಕ್, ಹುಬನ್, ಕಿರಿರಿಷ, ನಹುಂಟೆ ಮತ್ತು ಷಿಮುಟ್ ಇವು ಆ ಕಾಲದ ಕೆಲವು ಮುಖ್ಯ ದೇವತೆಗಳು. ಆದರೆ ಇವುಗಳ ಗುಣಧರ್ಮ, ಶಕ್ತಿ ಪ್ರಭಾವಗಳೇನು ಎಂಬುದು ತಿಳಿದುಬಂದಿಲ್ಲ.

ಏಲಂ ಭಾಷೆ ಸುಲಭಗ್ರಾಹ್ಯವಲ್ಲ. ಅದು ಒಂದು ಸಂಶ್ಲೇಷ ಭಾಷೆ. ಆದರೆ ಇದರ ಆ ಕಾಲದ ಸಂಬಂಧಿಗಳಾಗಲಿ, ಈ ವಂಶಕ್ಕೆ ಸೇರಿದ ಆಧುನಿಕ ಭಾಷೆಗಳಾಗಲಿ ಯಾವುವೂ ಇಲ್ಲ. ಏಲಂ ಪರ್ಷಿಯದ ಅಧೀನರಾಜ್ಯವಾದಾಗ ಬರೆಯಲಾದ ಅನೇಕ ದಸ್ತಾವೇಜುಗಳು ದೊರತಿವೆ. ಆದರೆ ಆ ವೇಳೆಗಾಗಲೇ ಮೂಲ ಭಾಷೆಯ ರಚನೆಯಲ್ಲಿ ಬಹಳಮಟ್ಟಿನ ಬದಲಾವಣೆಗಳಾಗಿದ್ದುವು.

ಏಲಮಿನ ಕಲೆ ವಾಸ್ತುಶಿಲ್ಪಗಳು ಬ್ಯಾಬಿಲೋನಿಯದವುಗಳ ಮಾದರಿಯವು.*

**ಏಲಕ್ಕಿ :** ಸೈಟಾಮಿನೆ ಉಪವರ್ಗದ ಜಿಂಜಿಬರೇಸಿ ಕುಟುಂಬಕ್ಕೆ ಸೇರಿದ ಏಕದಳ ಪಂಗಡದ ಬಹುವಾರ್ಷಿಕ ಸಸ್ಯಗಳಲ್ಲೊಂದು ; ಎಲೆಟೇರಿಯ ಕಾರ್ಡಮೋಮಮ್ ಎಂಬುದು ಇದರ ವೈಜ್ಞಾನಿಕ ಹೆಸರು. ಸಂಸ್ಕೃತದಲ್ಲಿ ಉಪಕುಂಚಿಕ ಎನ್ನುತ್ತಾರೆ. ಇದರಲ್ಲಿ ಒಂದೇ ಪ್ರಭೇದವಿದ್ದು ಇದು ಮುಖ್ಯವಾಗಿ ಭಾರತ ಮತ್ತು ಮಲಯ ಪರ್ಯಾಯದ್ವೀಪಗಳ ಸಸ್ಯವಾಗಿದೆ. ಜಗತ್ತಿನಲ್ಲೇ ಅತಿ ಪ್ರಮುಖವಾದ ಹಾಗೂ ಬೆಲೆ ಬಾಳುವ ಸಾಂಬಾರ ಪದಾರ್ಥವೆನಿಸಿದೆ. ಇದು ಪ್ರಪಂಚದ ಕೆಲವೇ ಭಾಗಗಳಲ್ಲಿ ಮಾತ್ರ ಬೆಳೆದರೂ ಬಹಳ ಹಿಂದಿನ ಕಾಲದಿಂದಲೂ ಅನೇಕ ದೇಶಗಳಲ್ಲಿ ಪ್ರಾಮುಖ್ಯ ಪಡೆದಿದೆ.

ಅಲ್ಲಲ್ಲಿ ಕಾಡಿನಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತಿದ್ದ ಈ ಗಿಡವನ್ನು ಈಚೆಗೆ ವಾಣಿಜ್ಯ ಬೆಳೆಯನ್ನಾಗಿ ದೊಡ್ಡ ತೋಟಗಳಲ್ಲಿ ಬೆಳೆಸುತ್ತಿದ್ದಾರೆ. ಕಾಯಿಯ ಗಾತ್ರದ ಮೇಲೆ ಏಲಕ್ಕಿಯನ್ನು ಮೂರು ವಿಧವಾಗಿ ವಿಂಗಡಿಸಲಾಗಿದೆ. ಸಿಲೋನ್ ಏಲಕ್ಕಿ ತೀರ ಉದ್ದವಾಗಿದೆ. ಮೈಸೂರು ಏಲಕ್ಕಿ ಅಷ್ಟು ಉದ್ದವಿಲ್ಲ. ಮಲಬಾರ್ ಏಲಕ್ಕಿ ಇನ್ನೂ ಗಿಡ . ಏಲಕ್ಕಿ ದಕ್ಷಿಣ ಭಾರತದಲ್ಲಿ ಅಧಿಕವಾಗಿಯೂ ಸಿಲೋನ್, ಜಾವಗಳಲ್ಲಿ ಸ್ವಲ್ಪಮಟ್ಟಿಗೂ ಬೆಳೆಯುತ್ತದೆ. ನಿಜವಾದ ಏಲಕ್ಕಿಗೆ ಸಂಬಂಧಿಸಿದ [illegible] (… ರ್ಡಮಸ್) ಎಂಬುದು ಇಂಡೋಚೀನ, ಪೂರ್ವ ಹಾಗೂ ಪಶ್ಚಿಮ ಆಫ್ರಿಕ, ಥೈಲ್ಯಾಂಡ್, ವಿಯಟ್ನಾಂ ಮತ್ತು ಲಾವೋಸ್‌ಗಳಲ್ಲಿ ಬೆಳೆಯುತ್ತದೆ.



ಏಲಕ್ಕಿ ಗಿಡದ ಎಲೆ, ಪ್ರಕಂದ ಮತ್ತು ಹೂಗೊಂಚಲು

ಭಾರತದಲ್ಲಿ ಏಲಕ್ಕಿಯ ಉತ್ಪನ್ನ ಮತ್ತು ರಫ್ತು ಹೀಗಿದೆ : 1966ರ ಸೆಪ್ಟೆಂಬರ್‌ನಿಂದ 1967ರ ಆಗಸ್ಟ್ ಅವಧಿಯಲ್ಲಿ ಏಲಕ್ಕಿಯ ಉತ್ಪನ್ನ 2,300 ಮೆಟ್ರಿಕ್ ಟನ್ನುಗಳೆಂದು ಮೂಲ ಅಂದಾಜಾಗಿತ್ತು. ತಾತ್ಕಾಲಿಕ ಅಂಕಿಅಂಶಗಳ ಪ್ರಕಾರ 1967ರ ಆಗಸ್ಟಿನಲ್ಲಿ 10.41 ಲಕ್ಷ ರೂ. ವಿದೇಶಿವಿನಿಮಯ ಬೆಲೆಯ 24.2 ಮೆಟ್ರಿಕ್ ಟನ್ನುಗಳಷ್ಟು ಏಲಕ್ಕಿಯನ್ನು ರಫ್ತು ಮಾಡಲಾಯಿತು. ಹಿಂದಿನವರ್ಷ ಅಂದರೆ 1966ರ ಆಗಸ್ಟಿನಲ್ಲಿ 31.67 ಲಕ್ಷ ರೂ. ಬೆಲೆಯ 71.68 ಮೆಟ್ರಿಕ್ ಟನ್ನುಗಳಷ್ಟು ಏಲಕ್ಕಿಯನು ರಫ್ತು ಮಾಡಲಾಗಿತ್ತು.

ಏಲಕ್ಕಿ ಗಿಡ 6′–12′ ವರೆಗೆ ಬೆಳೆಯುತ್ತದೆಯಲ್ಲದೆ ಬಹಳ ವರ್ಷ ಫಲ ಕೊಡುತ್ತದೆ. ಕಾಂಡ ಭೂಗತ, ಹೊರಗೆ ಕಾಣದು. ಎಲೆಗಳು ಹಸಿರು; ಕಿರಿದಾಗಿ ಉದ್ದವಾಗಿರುತ್ತವೆ. ಕಾಯಿ ಬೇರಿನಲ್ಲಿ ಗೊಂಚಲು ಗೊಂಚಲಾಗಿ ಬಿಡುತ್ತದೆ. ಪ್ರತಿ ಕಾಯಲ್ಲೂ ಮೂರು ಭಾಗಗಳಿದ್ದು ಒಟ್ಟು ಮೂವತ್ತು ಬೀಜಗಳಿರುತ್ತವೆ.

ಸರಾಸರಿ 60″ ರಿಂದ 250″ ಮಳೆಬೀಳುವ ಪ್ರದೇಶಗಳಲ್ಲಿ ಏಲಕ್ಕಿ ಚೆನ್ನಾಗಿ ಬೆಳೆಯುತ್ತದೆ: ಸಮುದ್ರಮಟ್ಟಕ್ಕೆ 2,500′ಯಿಂದ 3,000′ ಎತ್ತರವಿದ್ದು ಉಷ್ಣತೆ 15°–35° ಸೇ.ನ ವರೆಗೆ ಇರುವ ಬೆಟ್ಟಗುಡ್ಡ ಹಾಗೂ ಕಾಡು ಪ್ರದೇಶಗಳಲ್ಲಿ ಇದರ ಸಾಗುವಳಿ ಸುಲಭ. ಮುಖ್ಯವಾಗಿ ಬಿದ್ದ ನೀರು ಸರಾಗವಾಗಿ ಜಾರಿ ಹರಿದು ಹೋಗುವಂತಿರಬೇಕು. ಕಾಫಿಯಂತೆ ಏಲಕ್ಕಿಗೂ ನೆರಳು ಅಗತ್ಯ. ಮೈಸೂರು ರಾಜ್ಯದ ಪಶ್ಚಿಮ ತೀರದ ಘಟ್ಟಗಳು, ಉತ್ತರ ಕನ್ನಡ ಜಿಲ್ಲೆ, ಶಿವಮೊಗ್ಗ, ಚಿಕ್ಕಮಗಳೂರು, ಕೊಡಗು ಹಾಗೂ ಹಾಸನ ಜಿಲ್ಲೆಗಳಲ್ಲೂ ಕೇರಳದ ವೈನಾಡು, ಮಲಬಾರ್, ಅಣ್ಣಾಮಲೈ ಪ್ರದೇಶಗಳಲ್ಲೂ ಮದ್ರಾಸ್ ಪ್ರಾಂತ್ಯದ ಕೊಡೈಕೆನಾಲಿನಲ್ಲೂ ದೊಡ್ಡ ಏಲಕ್ಕಿ ತೋಟಗಳಿವೆ.

ಬೆಟ್ಟದ ಇಳಿಜಾರಿನ ಕಾಡು ಪ್ರದೇಶದ ಫಲವತ್ತಾಗಿರುವ ಗೋಡುಭೂಮಿ ಏಲಕ್ಕಿ ಬೆಳೆಗೆ ಹೇಳಿ ಮಾಡಿಸಿದ್ದು. ಸಸ್ಯ ಕೊಳೆತು ಫಲವತ್ತಾದ ಭೂಮಿಯಿದ್ದರಂತೂ ಇನ್ನೂ ಮೇಲು. ವರ್ಷಪೂರ್ತಿ ಮಳೆ ಬೀಳುವ ಪ್ರದೇಶ ಹೊಂದುತ್ತದೆ. ನವೆಂಬರ್ ಮತ್ತು ಡಿಸೆಂಬರ್ ತಿಂಗಳಲ್ಲಿ ಮಳೆ ಬೀಳುವುದು ಬಹು ಮುಖ್ಯ. ಈ ತಿಂಗಳುಗಳಲ್ಲಿ ಬೀಳುವ ಮಳೆ ಏಪ್ರಿಲ್-ಮೇ ತಿಂಗಳಲ್ಲಿ ಸಮೃದ್ಧಿಯಾಗಿ ಹೂವು ಬಿಡುವುದಕ್ಕೆ ಸಹಕಾರಿಯಾಗುತ್ತದೆ. ಏಲಕ್ಕಿ ಗಿಡದ ಬೇರು ಮೇಲುಭಾಗದ ಮಣ್ಣಿನಲ್ಲಿ ಇರುವುದರಿಂದ ಭೂಮಿಯ ಮೇಲುಮೈ ಒಣಗಬಾರದು. ಇಂಗು ಕಾಲುವೆಗಳು ಇಲ್ಲದೆ ಇದ್ದು ಜೌಗು ಹಿಡಿಯುವ ಭೂಮಿ ಇದನ್ನು ಬೆಳೆಯಲು ಯೋಗ್ಯವಲ್ಲ. ನೀರನ್ನು ಹಾಯಿಸೋಗಲು

ಬಿಡದಿರುವ ಜಿಗಟಾದ ಗೋಡುಮಣ್ಣು ಸರಿಯಾಗಿ ಬೇರು ಬಿಡುವುದಕ್ಕೆ ಅಡಚಣೆ ಯನ್ನುಂಟುಮಾಡಿ ಜೌಗೂ ಹಿಡಿಸುತ್ತದಾದ್ದರಿಂದ ಅದೂ ಉತ್ತಮವಲ್ಲ.

1965–66 ಮತ್ತು 66–67ರ ಹಣಕಾಸು ವರ್ಷದ ಅವಧಿಗಳಲ್ಲಿ ಭಾರತದಿಂದ ರಫ್ತಾದ ಏಲಕ್ಕಿಯ ದೇಶವಾರು (ವಲಯವಾರು) ವಿವರಗಳು.

| ವಲಯ | ಪರಿಮಾಣ ಮೆಟ್ರಿಕ್ ಟನ್ನುಗಳಲ್ಲಿ | | ಬೆಲೆ '000ರೂ. ಗಳಲ್ಲಿ | |
|---|---|---|---|---|
| | 1965–66 | 66–67 | 65–66 | 66–67 |
| ಐರೋಪ್ಯವಲಯ | | | | |
| 1 ಗ್ರೇಟ್ ಬ್ರಿಟನ್ | 25.6 | 35.3 | 733.0 | 1,413.2 |
| 2 ಐರೋಪ್ಯ ಸಾಮಾನ್ಯ ಮಾರುಕಟ್ಟೆಯ ರಾಷ್ಟ್ರಗಳು | 56.4 | 97.7 | 1,785.0 | 4235.9 |
| 3 ಪೂರ್ವಯೂರೋಪ್ | 50.8 | 147.7 | 1,907.3 | 6,648.9 |
| 4 ಇತರ ಐರೋಪ್ಯ ರಾಷ್ಟ್ರಗಳು | 123.2 | 231.9 | 4,409.6 | 11,958.0 |
| ಮಧ್ಯಪ್ರಾಚ್ಯವಲಯ | 746.3 | 970.9 | 30,015.1 | 49,523.0 |
| ಪೂರ್ವ ಏಷ್ಯವಲಯ | 363.8 | 196.1 | 4,558.5 | 5,403.5 |
| ಆಫ್ರಿಕನ್ ವಲಯ | 18.5 | 13.9 | 368.5 | 525.8 |
| ಆಸ್ಟ್ರೇಲಿಯ ಮತ್ತು ಪೆಸಿಫಿಕ್ ಸಾಗರ ವಲಯ | 1.4 | 1.9 | 34.3 | 79.0 |
| ಅಮೆರಿಕನ್ ವಲಯ | 5.6 | 27.3 | 123.0 | 1,493.2 |
| ಒಟ್ಟು ರಫ್ತು | 1.391.6 | 1.722.7 | 43,934.3 | 81,280.5 |

ಸಾಮಾನ್ಯವಾಗಿ ಏಲಕ್ಕಿಯನ್ನು ಬೀಜಗಳಿಂದ ವೃದ್ಧಿಮಾಡುತ್ತಾರೆ. ಗುಪ್ತಕಾಂಡ ಗಳಿಂದಲೂ ಬೆಳೆಸಬಹುದು. ಆದರೆ ಅದು ಅಷ್ಟಾಗಿ ಅಭ್ಯಾಸದಲ್ಲಿಲ್ಲ. ಇದರ ಕೃಷಿ ಕಾಫಿಯಂತೆಯೇ. ಒಟ್ಲು ಪಾತಿ ಮಾಡುವ ಜಮೀನನ್ನು ಬಹಳ ನಯವಾಗಿ ತಯಾರು ಮಾಡಬೇಕು. ಮೇಲುಮಣ್ಣನ್ನು ಸುಟ್ಟು, ಬೀಳುವ ಬೂದಿಯನ್ನು ತೆಗೆದು ಹೊರಗೆ ಹಾಕಬೇಕು. ಫಲವತ್ತಾದ ಕಾಡುಮಣ್ಣನ್ನು ಅಷ್ಟೇ ಗೊಬ್ಬರದೊಂದಿಗೆ ಮಿಶ್ರಮಾಡಿ ಒಂದು ಪದರ ಹಾಕಿ ಮಟ್ಟಸಮಾಡಬೇಕು. 4′ ಅಗಲ 9″ ಎತ್ತರ ಮತ್ತು ಅನುಕೂಲಕ್ಕೆ ತಕ್ಕಹಾಗೆ ಉದ್ದವಿರುವ ಏರು ಮಡಿಗಳನ್ನೇ ಮಾಡುವುದು ಸಾಮಾನ್ಯ. ಸಾಲುಗಳಲ್ಲಿ ಬೀಜವನ್ನು ಬಿತ್ತಬೇಕು. ನಯವಾದ ಮಣ್ಣಿನಿಂದ ತೆಳುವಾಗಿ ಮುಚ್ಚಬೇಕು. ಪ್ರತಿನಿತ್ಯ ನೀರು ಹಾಕಬೇಕು. ಒಟ್ಲು ಪಾತಿಗೆ ನೆರಳು ಬಹು ಮುಖ್ಯ. ಬೀಜ ಬಿತ್ತಿದ ಒಂದು ತಿಂಗಳ ಅನಂತರ ಮೊಳಕೆ ಬರಲು ಪ್ರಾರಂಭಿಸಿ ಸುಮಾರು ಎಂಟು ತಿಂಗಳಲ್ಲಿ ಸಸಿ ದೊಡ್ಡದಾಗುತ್ತದೆ. ರೋಗಗಳಿಂದ ಮೊಳಕೆಗಳನ್ನು ದೂರ ವಿಡಲು ಸೇಕಡ ಒಂದರ ಬೋರ್ಡೋ ದ್ರಾವಣವನ್ನು ಆಗಾಗ್ಗೆ ಸಿಂಪಡಿಸಬೇಕು. ಎಂಟು ತಿಂಗಳ ಸಸಿಗಳನ್ನು ಎರಡನೆಯ ಒಟ್ಲು ಪಾತಿಯಲ್ಲಿ ನೆಡುವುದರಿಂದ ಅವು ಬೇಗನೆ ಬೆಳೆದು ತೋಟದಲ್ಲಿ ನೆಡುವುದಕ್ಕೆ ಸಿದ್ಧವಾಗುತ್ತವೆ. ಸಸಿಗಳನ್ನು ನೆಡುವ ಮೊದಲು ಸಣ್ಣದಾಗಿರುವ ಗುಣಿಗಳನ್ನು ಮಾಡಿ ಉತ್ತಮವಾದ ಗೊಬ್ಬರವನ್ನು ಹಾಕಬೇಕು. ಸಸಿಗಳನ್ನು ತೀಕ್ಷ್ಣವಾದ ಬಿಸಿಲಿನಿಂದ ಕಾಪಾಡಲು ಎರಡನೆಯ ಒಟ್ಲು ಪಾತಿಗಳಿಗೆ ಕೂಡ ಚಪ್ಪರ ಹಾಕಬೇಕು. ಸಸಿಗಳನ್ನು ನೆಟ್ಟ ಒಂದು ವರ್ಷದ ಅನಂತರ ಅವು ತೋಟದಲ್ಲಿ ನೆಡಲು ಸಿದ್ಧವಾಗುತ್ತವೆ.



ಮಂಜರಾಬಾದ್ ಏಲಕ್ಕಿ—ಹೂಗೊಂಚಲುಗಳು ನೆಲದ ಮೇಲೆ ಹರಡಿಕೊಂಡಿವೆ. ಎಲೆಗಳ ಕೆಳಭಾಗ ನಯವಾಗಿದೆ.



ನರ್ಸರಿಯಲ್ಲಿ ಬೆಳೆಯುತ್ತಿರುವ ಏಲಕ್ಕಿ ಸಸ್ಯಗಳು

ತೋಟದಲ್ಲಿನ ಕಳೆಗಳನ್ನು ಕಾಲಕಾಲಕ್ಕೆ ತೆಗೆಯಬೇಕು. ತೀಕ್ಷ್ಣವಾದ ಸೂರ್ಯನ ಕಿರಣಗಳು ಬೀಳದ ಹಾಗೆ ನೆರಳು ಕೊಡಬೇಕು. ಒಣಗಿದ ಹಳೆಯ ಎಲೆಗಳನ್ನು ತೆಗೆದು ಸ್ವಚ್ಛಮಾಡಬೇಕು. ಸಸಿ ಕಾರಣಾಂತರದಿಂದ ಸತ್ತುಹೋದರೆ ಬದಲಿ ಸಸಿಗಳನ್ನು ನೆಟ್ಟು ತೋಟವನ್ನು ಸರಿಮಾಡಬೇಕು. ಕಂಬಳಿ ಹುಳುವನ್ನು ತಡೆಗಟ್ಟಲು ಸೇಕಡ 0·25ರ ಬಿ.ಎಚ್.ಸಿ. ಪುಡಿಯನ್ನು ಎರಚಬೇಕು. ಕಟ್ಟೆರೋಗ ಕಂಡ ತತ್‌ಕ್ಷಣ ಗಿಡವನ್ನೇ ಕಿತ್ತು ಸುಡಬೇಕು.



ಸಿಲೋನ್ ಏಲಕ್ಕಿ—ಹೂಗೊಂಚಲುಗಳು ನೇರವಾಗಿವೆ, ಕಾಂಡ ಕೊಂಚ ಕೆಂಪಾಗಿದೆ

ದೀರ್ಘಕಾಲದ ಬೆಳೆಯಾದ್ದರಿಂದ ಸರಿಯಾದ ಗೊಬ್ಬರ ಕೊಟ್ಟಲ್ಲಿ ಏಲಕ್ಕಿಯ ಕೃಷಿ ಲಾಭದಾಯಕವಾಗುತ್ತದೆ. ಮುಂಗಾರು ಮಳೆಯ ಪ್ರಾರಂಭದಲ್ಲೆ ಗೊಬ್ಬರ ಕೊಡುವುದು ವಾಡಿಕೆ. ಹರಳು ಹಿಂಡಿಯನ್ನು ಕೊಡುವುದು ಕೆಲವು ಕಡೆ ಬಳಕೆಯಲ್ಲಿದೆ. ಕೃತಕ ಗೊಬ್ಬರ ಹೆಚ್ಚಿನ ಉಪಯೋಗದಲ್ಲಿಲ್ಲ. ಸೀಮೆ ಗೊಬ್ಬರವನ್ನು ಉಪಯೋಗಿಸುವುದರಿಂದ ಬೆಳೆ ಹಸನಾಗುತ್ತದೆ. ಎಕರೆಗೆ 30 ಪೌಂಡು ಸಾರಜನಕ, 30 ಪೌಂಡು ರಂಜಕ ಮತ್ತು 40 ಪೌಂಡು ಬೂದಿಯನ್ನು ಕೊಡಲು ಏಲಕ್ಕಿ ಅಭಿವೃದ್ಧಿ ಮಂಡಲಿ ಸಲಹೆ ಮಾಡಿದೆ.



ಏಲಕ್ಕಿಯನ್ನು ಸಂಸ್ಕರಣಕ್ಕೆ ಸಿದ್ಧಪಡಿಸಿರುವುದು

ಸಸಿಗಳನ್ನು ನೆಟ್ಟ ಮೂರು ವರ್ಷಗಳಾಗುವಾಗ ಫಲ ದೊರೆಯುತ್ತದೆ. ಐದು ವರ್ಷಾನಂತರ ಲಾಭದಾಯಕ ಫಲ ಸಿಕ್ಕುತ್ತದೆ. ಒಂದು ಗಿಡ ಸರಾಸರಿ 15 ವರ್ಷಗಳ ತನಕ ಹೇರಳವಾಗಿ ಫಸಲನ್ನು ಕೊಡುತ್ತದೆ. ಏಲಕ್ಕಿ ಗಿಡ ಏಪ್ರಿಲ್-ಮೇ ತಿಂಗಳಿನಿಂದ ಹೂ ಬಿಡಲು ಪ್ರಾರಂಭಿಸುತ್ತದೆ. ಹೂ ಬಿಟ್ಟ ಸುಮಾರು ನಾಲ್ಕು ತಿಂಗಳ ಅನಂತರ ಕಾಯಿ ಬಲಿಯುತ್ತದೆ. ಸೆಪ್ಟೆಂಬರ್ ತಿಂಗಳಿನಿಂದ ಡಿಸೆಂಬರ್ ತಿಂಗಳ ವರೆಗೆ ಕುಯಿಲು ನಡೆಯುತ್ತದೆ. ಕಾಯಿಗಳು ಒಂದೇ ಸಾರಿ ಕುಯ್ಲಿಗೆ ಬರುವುದಿಲ್ಲವಾದ್ದರಿಂದ ಐದು ಆರು ಬಾರಿ ಕುಯ್ಲು ಮಾಡಬೇಕಾಗುತ್ತದೆ. ಕುಯ್ಲು ಸುಮಾರು 40 ದಿವಸಗಳು ಸಾಗುತ್ತದೆ. ಐದು ವರ್ಷಗಳ ಅನಂತರ ಎಕರೆಗೆ ಸುಮಾರು 40ರಿಂದ 60 ಪೌಂಡು ಕಾಯಿ ದೊರೆಯುತ್ತದೆ. ಸರಾಸರಿ ಇಳುವರಿ ವರ್ಷಕ್ಕೆ ಎಕರೆ ಒಂದಕ್ಕೆ 60 ಪೌಂಡು.



ತೊಟ್ಟು ತೆಗೆದ ಮತ್ತು ಸಂಸ್ಕರಿಸಿದ ಏಲಕ್ಕಿಯ ರಾಶಿ

ಬಲಿತ ಕಾಯಿಗಳನ್ನು 4—5 ದಿವಸ ಬಿಸಿಲಿನಲ್ಲಿ ಹರಡಿ ಒಣಗಿಸುತ್ತಾರೆ. ಅಂಥವನ್ನು ಬಿಸಿಲುಕಾಯಿಗಳೆನ್ನುತ್ತಾರೆ. ಕೃತಕ ರೀತಿಯಿಂದ ಒಣಗಿಸಿದವನ್ನು ಹಸಿರುಕಾಯಿಗಳೆನ್ನುತ್ತಾರೆ. ಒಣಗಿದ ಏಲಕ್ಕಿಯನ್ನು ತೊಟ್ಟು ಹೋಗುವಂತೆ ಉಜ್ಜಿ, ಕಜ್ಜಿ ಇರುವ ಕಾಯಿ, ಬಡಕಲು ಹಾಗೂ ಕಪ್ಪುಕಾಯಿಗಳನ್ನು ಹೆರಕಿ ಉಳಿದ ಒಳ್ಳೆಯ ಕಾಯಿಗಳನ್ನು ಮಾರಿದರೆ ಮಾರುಕಟ್ಟೆಯಲ್ಲಿ ಒಳ್ಳೆಯ ಬೆಲೆ ಸಿಗುತ್ತದೆ. ಒಂದು ಎಕರೆಯಲ್ಲಿ ಚೆನ್ನಾಗಿ ಬೆಳೆದ ಗಿಡಗಳಿದ್ದರೆ 250 ಪೌಂಡುಗಳ ವರೆಗೂ ಫಸಲನ್ನು ಪಡೆಯಬಹುದು.

ಏಲಕ್ಕಿಗೂ ಕೀಟಾದಿ ಪಿಡುಗುಗಳುಂಟು. ಹಸಿರು ಹುಳುವೊಂದು ಹತ್ತಿ ಕಾಂಡ ಮತ್ತು ಎಲೆಗಳನ್ನು ಕೊರೆದು ತಿನ್ನುತ್ತದೆ. ಇದನ್ನು ನಿವಾರಿಸಲು ಸೇಕಡ 0·3 ಡಿ.ಡಿ.ಟಿ.ಯನ್ನು ಸಿಂಪಡಿಸಬೇಕು. ಥ್ರಿಪ್ಸ್ ಎಂಬ ಕ್ರಿಮಿಗಳು ಎಲೆ, ಹೂ ಮುಂತಾದವುಗಳನ್ನು ತುಂಡರಿಸಿ ರಸವನ್ನು ಹೀರುತ್ತವೆ. ಕ್ರಿಮಿ ಹತ್ತಿದ ಭಾಗಗಳು

ಒಣಗಿ ದದ್ದುಗಳಂತೆ ಕಾಣುತ್ತವೆ. ಇದರಿಂದ ಕಾಯಿ ಬಿಡುವುದು ಕಡಿಮೆಯಾಗುತ್ತದೆ. ಕೆಲವು ಸಾರಿ ಪುಷ್ಪಮಂಜರಿ ಬಿದ್ದುಹೋಗುತ್ತದೆ. ಸೇಕಡ 0.3 ಡಿ.ಡಿ.ಟಿ.ಯನ್ನು ಸಿಂಪಡಿಸುವುದರಿಂದ ಅಥವಾ ಸೇಕಡ 5 ಬಿ.ಎಚ್.ಸಿ.ಯನ್ನೋ ಸೇಕಡ 0.03 ಫಾಲಿಡಾಲ್ ಪುಡಿಯನ್ನೊ ಎರಚುವುದರಿಂದ ಈ ಪಿಡುಗನ್ನು ನಿವಾರಿಸಬಹುದು. ಮೊದಲು ನೆರಳುಮರಗಳ ಮೇಲೆ ಕಾಣಿಸಿಕೊಂಡು ಅನಂತರ ಏಲಕ್ಕಿ ಗಿಡಕ್ಕೆ ಹರಡಿಕೊಂಡು ಎಲೆಗಳನ್ನು ತಿಂದು ನಾಶಮಾಡುವ ಕೀಟವೆಂದರೆ ಕಂಬಳಿಹುಳು. ಸೇಕಡ 0.25ರ ಬಿ.ಎಚ್.ಸಿ. ಮಿಶ್ರಣವನ್ನೋ ಸೇಕಡ 0.05 ಫಾಲಿಡಾಲನ್ನೋ ಸಿಂಪಡಿಸಿ ಈ ಬಾಧೆಯನ್ನು ಹೋಗಲಾಡಿಸಬಹುದು. ಮೈಮೇಲೆ ಸಣ್ಣಗೀರನ್ನುಳ್ಳ ಕಂದುಬಣ್ಣದ ಹುಳುವೊಂದು ಕಾಯನ್ನು ಕೊರೆದು ಹಾಳುಮಾಡುತ್ತದೆ. ಸೇಕಡ 0.25 ಬಿ.ಎಚ್.ಸಿ. ಅಥವಾ ಸೇಕಡ 0.5ರ ಫಾಲಿಡಾಲನ್ನು ಸಿಂಪಡಿಸಿ ಈ ಬಾಧೆಯನ್ನು ಹೋಗಲಾಡಿಸಬಹುದು. ಮತ್ತೊಂದು ಹುಳು ಒಳಕಾಂಡದಲ್ಲಿ ಸುರಂಗಗಳನ್ನುಕೊರೆದು ಗಿಡವನ್ನು ಒಣಗಿಸುತ್ತದೆ. ಸೇಕಡ 2ರ ಆಲ್‌ಡ್ರಿನ್ ಪುಡಿಯನ್ನು ಎರಚಿ ಈ ಹುಳುವನ್ನು ನಾಶಮಾಡಬಹುದು. ಗಿಡದ ಬುಡಗಳನ್ನು ಸೇಕಡ 75 ಕ್ಲೋರೇಡಿನ್ ಮಿಶ್ರಣದಿಂದ ನೆನೆಸುವುದು ಉತ್ತಮ.

ಬಾಳೆಯಲ್ಲಿರುವ ಹೇನು (ಪೆಂಟಾಲೋನಿಯ ನೈಗ್ರೊನರ್ವೋಸ) ಏಲಕ್ಕಿಯಲ್ಲಿ ಕಟ್ಟೆರೋಗವನ್ನು ಹರಡುತ್ತದೆ. ಇದರಿಂದ ಎಲೆಗಳು ಹಳದಿಬಣ್ಣಕ್ಕೆ ತಿರುಗಿ ನಡುನಡುವೆ ಬಿಳಿಗೆರೆಗಳು ಕಾಣಿಸಿಕೊಳ್ಳುತ್ತವೆ. ಎಲೆಗಳ ಗಾತ್ರ ಚಿಕ್ಕದಾಗುತ್ತದೆ. ರೋಗ ಕಂಡ ತತ್‌ಕ್ಷಣ ಗಿಡವನ್ನು ಕಿತ್ತು ಸುಡಬೇಕು. ರೋಗಸಾಂಕ್ರಾಮಿಕವಾದ್ದರಿಂದ ಹೇನುಗಳನ್ನು ಹತೋಟಿಮಾಡುವುದರಿಂದ ಈ ರೋಗವನ್ನು ಬಲುಮಟ್ಟಿಗೆ ತಡೆಯಬಹುದು. ಕೊಳೆರೋಗ ಹತ್ತಿದಾಗ ಮೊದಲು ಎಲೆಗಳು ಬಾಡಿ ಹಳದಿಬಣ್ಣಕ್ಕೆ ತಿರುಗುತ್ತವೆ. ಅನಂತರ ಕಾಂಡ ಕೊಳೆಯುತ್ತದೆ. ರೋಗಕ್ಕೆ ಈಡಾದ ಗಿಡವನ್ನು ತೆಗೆಯಬೇಕು ;


ಒಣಗಿಸಿದ ಏಲಕ್ಕಿ ಕಾಯಿಗಳ ತೊಟ್ಟನ್ನು ತೆಗೆಯುವುದು


ಒಣಗಿಸುವ ಕೋಣೆ : ಏಲಕ್ಕಿ ಕಾಯಿಗಳನ್ನು ತಟ್ಟೆಗಳಲ್ಲಿ ಹರಡಲಾಗಿದೆ

ಮತ್ತು ಎರಡು ಔನ್ಸಿನಷ್ಟು ಅಮೋನಿಯಂ ಸಲ್ಫೇಟ್ ಮತ್ತು ಸೂಪರ್ ಫಾಸ್‌ಫೇಟನ್ನು ಪ್ರತಿ ಗಿಡದ ಬುಡಕ್ಕೆ ಹಾಕುವುದರಿಂದ ಈ ರೋಗವನ್ನು ತಡೆಯಬಹುದು. ಒಮ್ಮೊಮ್ಮೆ ಏಲಕ್ಕಿಯ ಮೊಳಕೆ ಒಣಗಿಹೋಗುವುದುಂಟು. ಸೇಕಡ 1ರ ಬೋರ್ಡೊ ದ್ರಾವಣದಿಂದ ಒಟ್ಲುಪಾತಿಯನ್ನು ನೆನೆಸುವುದರಿಂದ ಈ ರೋಗವನ್ನು ನಿವಾರಿಸಬಹುದು.

ಏಲಕ್ಕಿಯ ಉಪಯೋಗಗಳು : ಏಲಕ್ಕಿ ಮುಖ್ಯ ಸಾಂಬಾರ್ ಪದಾರ್ಥಗಳಲ್ಲೊಂದು. ಅದನ್ನು ಸಿಹಿ ತಿಂಡಿಗಳಿಗೆ ಅದರಲ್ಲೂ ಹೆಚ್ಚಾಗಿ ಪಾಯಸಕ್ಕೆ ಬಳಸುತ್ತಾರೆ. ಅಲ್ಲದೆ ಕಾರದ ಪದಾರ್ಥಗಳನ್ನು ಮಾಡುವಾಗಲೂ ಗರಂ ಮಸಾಲೆಯೊಡನೆ ಸೇರಿಸುತ್ತಾರೆ. ಈಚೆಗೆ ಚಾಕೊಲೇಟುಗಳಿಗೂ ವಾಸನೆಕಟ್ಟಲು ಇದನ್ನು ಬಳಸುತ್ತಿದ್ದಾರೆ. ಕೆಲವೆಡೆ ಮಾದಕ ಪಾನೀಯಗಳಿಗೆ ಇದರ ವಾಸನೆ ಕಟ್ಟಿರುವುದುಂಟು. ಮಧ್ಯಪ್ರಾಚ್ಯ ನಾಡುಗಳಲ್ಲಿ ಕಾಫಿಗೆ ಏಲಕ್ಕಿ ಹಾಕುವ ಅಭ್ಯಾಸವಿದೆ. ಔಷಧವಾಗಿ ಏಲಕ್ಕಿ ಜೀರ್ಣಕಾರಿ ಎನ್ನಿಸಿದೆ. ಪ್ರಾಚ್ಯದೇಶಗಳಲ್ಲಿ ತಾಂಬೂಲದೊಂದಿಗೆ ಇದನ್ನು ಸೇವಿಸುತ್ತಾರೆ. ಏಲಕ್ಕಿಯ ಸುವಾಸನೆಗೂ ಔಷಧಗುಣಕ್ಕೂ ಕಾರಣವಾಗಿರುವುದು ಅದರಲ್ಲಿರುವ ತೈಲಾಂಶ. ಸಿಲೋನ್ ಜಾತಿಗಿಂತ ಭಾರತದ ಜಾತಿಯಲ್ಲಿ ತೈಲಾಂಶ ಹೆಚ್ಚಿನ ಪರಿಮಾಣದಲ್ಲಿದೆ. ಇಡೀ ಕಾಯನ್ನು ಭಟ್ಟಿ ಇಳಿಸಿ ಎಣ್ಣೆ ತೆಗೆಯುತ್ತಾರೆ. ಎಣ್ಣೆಗೆ ಬಣ್ಣವಿಲ್ಲ. ಕೆಲವು ಬಾರಿ ತೆಳು ಹಳದಿಬಣ್ಣ ಇರುವುದೂ ಉಂಟು. (ಡಿ.ಎಂ.; ಬಿ.ಪಿ.)

**ಏಲಕ್ಕಿ ಬೆಟ್ಟ :** ನೀಲಗಿರಿ ಬೆಟ್ಟಗಳ ದಕ್ಷಿಣಕ್ಕೆ, ಪಾಲ್ಘಾಟ್ ಕಣಿವೆಯಿಂದಾಚೆಗಿರುವ ಬೆಟ್ಟಗಳಲ್ಲೊಂದು. (ಕಾರ್ಡಮಂ ಹಿಲ್ಸ್). ಅಣ್ಣಾಮಲೈ ಮತ್ತು ಪಾಲಂ ಈ ಗುಂಪಿನ ಇನ್ನೆರಡು ಬೆಟ್ಟಗಳು. ಈ ಬೆಟ್ಟಗಳ ಪೈಕಿ ಇದೇ ಅತ್ಯಂತ ದಕ್ಷಿಣಕ್ಕಿದೆ. ಏಲಕ್ಕಿ ಬೆಟ್ಟದ ಮೈಯೂ ವೈಗೈ ನದಿಯ ದಕ್ಷಿಣಕ್ಕಿರುವ ಈ ಬೆಟ್ಟದ ಚಾಚುಭಾಗವೂ ಬಲು ಕಡಿದು. ಆದರೆ ಇದರ ವಾಯುವ್ಯಭಾಗ ಆಗ್ನೇಯಾಭಿಮುಖವಾಗಿ ಹಬ್ಬಿ ಎತ್ತರದ ಕಣಿವೆಗಳನ್ನೊಳಗೊಂಡಿದೆ. ಇಲ್ಲಿಯ ನದಿಗಳ (ಉದಾ : ಪೆರಿಯಾರ್) ಹರಿವು ನೇರ; ಉತ್ತರದಿಂದ ದಕ್ಷಿಣಾಭಿಮುಖ. ನದಿಗಳ ಅಡ್ಡಕ್ಕೆ ಹಬ್ಬಿರುವ

[illegible] ಇವು [illegible] ಹೊಂದಿಯಲ್ಲಿವೆ. ಈ ಬೆಟ್ಟದ ಪೂರ್ವ ಪಶ್ಚಿಮ ಬದಿಗಳ ಇಳಿಜಾರುಗಳಲ್ಲಿ ಪ್ಲಾಂಟೇಷನ್‌ಗಳುಂಟು. ಆದರೆ ಇವು ಪಶ್ಚಿಮದ ಬದಿಯಲ್ಲಿ ಹೆಚ್ಚು. ಇಲ್ಲಿನ ಕಣಿವೆಗಳು ಬೇಸಾಯಕ್ಕೆ ಮೀಸಲು. ಇಳಿಜಾರಿನ ಕೆಳಭಾಗಗಳಲ್ಲಿ 80″–120″ ಮಳೆ ಬೀಳುವಲ್ಲೆಲ್ಲ, 1,300 ಮೀಟರ್ ಎತ್ತರದವರೆಗೆ ರಬ್ಬರ್ ಬೆಳೆಸುತ್ತಾರೆ. ಅಲ್ಲಿಂದ ಮೇಲುಗಡೆಗೆ–2,000 ಮೀಟರ್ ಎತ್ತರದವರೆಗೆ 100″–150″ ಮಳೆಯಾಗುವಲ್ಲೆಲ್ಲ ಚಹ ಮುಖ್ಯ ಬೆಳೆ. (ಎನ್.ಎ.)



ಏಲಕ್ಕಿ ಕಾಯಿಗಳು

**ಏಷ್ಯ :** ಪ್ರಪಂಚದ ಅತ್ಯಂತ ದೊಡ್ಡ ಖಂಡ. ವಿಸ್ತೀರ್ಣ 1,71,39,445 ಚ.ಮೈ. ಇದು ಭೂಪ್ರದೇಶದ ಮೂರನೆಯ ಒಂದು ಭಾಗವನ್ನಾವರಿಸಿದೆ.

ಯೂರಲ್ ಪರ್ವತ, ಯೂರಲ್ ನದಿ, ಕ್ಯಾಸ್ಪಿಯನ್ ಸಮುದ್ರ, ಕಾಕಸಸ್ ಪರ್ವತ, ಕಪ್ಪು ಸಮುದ್ರ ಮತ್ತು ಮೆಡಿಟರೇನಿಯನ್ ಸಮುದ್ರ—ಇವು ಈ ಖಂಡದ ಪಶ್ಚಿಮ ಮೇರೆ. ಪೂರ್ವದಲ್ಲಿ ಪೆಸಿಫಿಕ್ ಸಾಗರ, ದಕ್ಷಿಣದಲ್ಲಿ ಹಿಂದೂಸಾಗರ ಮತ್ತು ಉತ್ತರದಲ್ಲಿ ಆರ್ಕ್‌ಟಿಕ್ ಸಾಗರಗಳು ಎಲ್ಲೆಗಳಾಗಿವೆಯೆನ್ನಬಹುದು. ಆದರೆ ಇಂಡೊನೇಷ್ಯನ್ ದ್ವೀಪಸ್ತೋಮ, ದಕ್ಷಿಣೋತ್ತರವಾಗಿ ಪೆಸಿಫಿಕ್‌ನಲ್ಲಿ ಹಬ್ಬಿರುವ ದ್ವೀಪಗಳ ಸಾಲು—ಇವೆಲ್ಲ ಏಷ್ಯಕ್ಕೆ ಸೇರಿದ ಪ್ರದೇಶಗಳೇ. ಇಡೀ ಭೂಮಿಯ ಮೇಲೆ ಇದೊಂದು ಬೃಹತ್ ಸಮದ್ವಿಭುಜ ತ್ರಿಭುಜದಂತೆ ಕಾಣುತ್ತದೆ.

ಇದರ ಬೃಹತ್ ಸಮಭುಜಗಳ ಪೈಕಿ ಒಂದು ಏಡನಿನಿಂದ ಬೇರಿಂಗ್ ಜಲಸಂಧಿಯ ವರೆಗೂ ಇನ್ನೊಂದು ಸಿಂಗಪುರದಿಂದ ಬೇರಿಂಗಿನ ವರೆಗೂ ಇವೆ. ಇವುಗಳಲ್ಲಿ ಒಂದೊಂದರ ಉದ್ದವೂ 6,500 ಮೈ. ಏಡನಿನಿಂದ ಸಿಂಗಪುರದ ವರೆಗೆ ಸಾಗಿರುವ ಮೂರನೆಯ ಭುಜದ ಉದ್ದ 4,500 ಮೈ.

ಈ ವಿಶಾಲವಾದ ಭೂಖಂಡದ ಒಂದು ವೈಶಿಷ್ಟ್ಯವೆಂದರೆ ಇದು ಇತರ ಖಂಡಗಳೊಂದಿಗೆ ಹೊಂದಿರುವ ಸಂಪರ್ಕ. ಯೂರೋಪ್ ವಾಸ್ತವವಾಗಿ ಇದರ ಪಶ್ಚಿಮಭಾಗ. ಏಷ್ಯವೂ ಆಫ್ರಿಕವೂ ಸೂಯೆಜ಼ಿನ ಬಳಿ ಸೇರುತ್ತವೆ. ಉತ್ತರ ಅಮೆರಿಕಕ್ಕೂ ಏಷ್ಯಕ್ಕೂ ನಡುವೆ ಬೇರಿಂಗ್ ಜಲಸಂಧಿಯಿದೆ. ಇಂಡೊನೇಷ್ಯನ್ ದ್ವೀಪಸ್ತೋಮಗಳಾಚೆಯೇ ಆಸ್ಟ್ರೇಲಿಯ. ಹೀಗೆ ಇದರ ಸನ್ನಿವೇಶ ಪ್ರಾಮುಖ್ಯ ಹೆಚ್ಚಿನದು. ಏಷ್ಯದ ಇತಿಹಾಸವೇ ಮುಂತಾದ ನಾನಾ ಅಂಶಗಳ ಮೇಲೆ ಈ ಸನ್ನಿವೇಶವೂ ಸಾಕಷ್ಟು ಪ್ರಭಾವ ಬೀರಿದೆಯೆನ್ನಬಹುದು.

ಸಾಗರಗಳೊಂದಿಗೂ ಏಷ್ಯದ್ದು ಇದೇ ರೀತಿಯ ಸಂಬಂಧ. ಈ ಖಂಡದ ಒಂದು ಭಾಗವಾದ ಏಷ್ಯಮೈನರ್ ಮೆಡಿಟರೇನಿಯನ್ ಸಮುದ್ರದಲ್ಲಿ ಚಾಚಿದೆ. ಇದರ ಮೂಲಕ ಈ ಖಂಡಕ್ಕೆ ಅಟ್ಲಾಂಟಿಕ್ ಸಾಗರದ ಸಂಪರ್ಕವುಂಟು. ಏಷ್ಯದ ಉತ್ತರದಲ್ಲಿರುವುದು ಆರ್ಕ್‌ಟಿಕ್ ಸಾಗರ. ಏಷ್ಯದ ಭಾಗಗಳಾದ ಕಾಮ್‌ಚಾಟ್ಕ, ಸಾಖಲೀನ್, ಜಪಾನ್ ಮತ್ತು ಫಿಲಿಪೀನ್ಸ್ ಪೆಸಿಫಿಕ್ ಸಾಗರದಲ್ಲಿ ಇವೆ. ಅರೇಬಿಯ, ದಕ್ಷಿಣ ಭಾರತ ಮತ್ತು ಮಲಯ ಈ ಮೂರು ಪರ್ಯಾಯದ್ವೀಪಗಳು ಹಿಂದೂಸಾಗರದ ಜಲದಲ್ಲಿ ಮೈ ತೊಳೆಯುತ್ತವೆ.

26° ಪೂ. ರೇಖಾಂಶದಿಂದ 170 ಪ. ರೇಖಾಂಶದ ವರೆಗೂ 82 ಉ. ಅಕ್ಷಾಂಶದಿಂದ 10° ದ. ಅಕ್ಷಾಂಶದ ವರೆಗೂ ಈ ಖಂಡ ಹರಡಿದೆ. ದಕ್ಷಿಣದಲ್ಲಿ ಈಸ್ಟ್ ಇಂಡೀಸ್ ಮುಖಾಂತರ ಸಮಭಾಜಕವೃತ್ತ ಹಾದು ಹೋಗುತ್ತದೆ. ಅರೇಬಿಯ, ಭಾರತ ಮತ್ತು ಬರ್ಮಗಳ ಮಧ್ಯಭಾಗದಲ್ಲೂ ದಕ್ಷಿಣ ಚೀನದ ಮುಖಾಂತರವೂ ಹಾದು ಹೋಗುವ ರೇಖೆ ಕರ್ಕಾಟಕ ಸಂಕ್ರಾಂತಿವೃತ್ತ. ಸೈಬೀರಿಯದ ಉತ್ತರದ ಅಂಚಿನಲ್ಲಿ ಉತ್ತರ ಮೇರುವೃತ್ತವಿದೆ. ಉತ್ತರಾರ್ಧಗೋಳದಲ್ಲಿನ ಸುಮಾರು ಅರ್ಧ ಪ್ರದೇಶ ಏಷ್ಯದಲ್ಲಿದೆ.

ಈ ಖಂಡದ ಸಮುದ್ರತೀರ ಅಸ್ತವ್ಯಸ್ತವಾಗಿದೆ. ಇದರ ಮೂರು ಕಡೆಗಳಲ್ಲಿ ಸಮುದ್ರವಿದ್ದರೂ ಇದರ ವಿಸ್ತಾರದ ದೃಷ್ಟಿಯಿಂದ ಸಮುದ್ರತೀರ ಬಹಳ ಕಡಿಮೆ (33,000 ಮೈ.). ಅಲ್ಲದೆ ಇದು ಹೆಚ್ಚು ಡೊಂಕಾಗಿಯೂ ಇಲ್ಲ.

ಹಲವು ವಿಚಾರಗಳಲ್ಲಿ ಈ ಖಂಡ ವೈಶಿಷ್ಟ್ಯಪೂರ್ಣ. ಇಲ್ಲಿರುವ ಮೃತ ಸರೋವರ ಪ್ರಪಂಚದ ಅತ್ಯಂತ ತಗ್ಗಿನ ಪ್ರದೇಶದಲ್ಲಿದೆ (ಸಮುದ್ರ ಮಟ್ಟಕ್ಕಿಂತ 1,286′ ಕೆಳಗೆ). ವಿಶ್ವದ ಅತ್ಯಂತ ಎತ್ತರದ ಪರ್ವತ ಶಿಖರವೂ ಇಲ್ಲುಂಟು (ಎವರೆಸ್ಟ್). ಅತ್ಯಂತ ಕಡಿಮೆ ಹಾಗೂ ಅತ್ಯಂತ ಹೆಚ್ಚಿನ ಉಷ್ಣತೆಗಳನ್ನೂ ಇಲ್ಲಿ ಕಾಣಬಹುದು. ಜಗತ್ತಿನ ಪ್ರಮುಖ ನಾಗರಿಕತೆಗಳೆಲ್ಲ ಹುಟ್ಟಿದ್ದು ಇಲ್ಲೇ. ಎಲ್ಲ ರೀತಿಯ ಜನರೂ ಇಲ್ಲಿ ವಾಸಿಸುತ್ತಾರೆ. ಅಲೆಮಾರಿ ಜನಾಂಗದವರೂ ಅತ್ಯಂತ ಮುಂದುವರಿದ ಜನಾಂಗದವರೂ ಇಲ್ಲಿ ಇದ್ದಾರೆ. ಜಗತ್ತಿನ ಮುಖ್ಯ ಧರ್ಮಗಳಿಗೆಲ್ಲ ಏಷ್ಯವೇ ಉಗಮಸ್ಥಾನ. ಜುಡಾಯಿಸಂ ಜೆರುಸಲೆಂನಲ್ಲಿ ಜನಿಸಿತು. ಕ್ರೈಸ್ತ ಧರ್ಮ ಪ್ಯಾಲೆಸ್ಟೈನಿನಲ್ಲಿ ಜನಿಸಿ ಜಗತ್ತಿನಾದ್ಯಂತ ಹರಡಿತು. ಅರೇಬಿಯದಲ್ಲಿ ಜನಿಸಿದ ಇಸ್ಲಾಂ ಧರ್ಮ ಪೂರ್ವಾರ್ಧಗೋಳದಲ್ಲೆಲ್ಲ ಹರಡಿದೆ. ಬೌದ್ಧ ಹಾಗೂ ಹಿಂದೂಧರ್ಮಗಳು ಭಾರತದಲ್ಲಿ ಜನ್ಮ ತಳೆದವು. ಇರಾನಿನ ಪಾರ್ಸೀಧರ್ಮ, ಜಪಾನಿನಲ್ಲಿನ ಷಿಂಟೊ, ಚೀನದ ಕನ್‌ಫ್ಯೂಷಿಯನಿಸಂ ಮತ್ತು ಟಾವೋಇಸಂ—ಇವು ಪ್ರಪಂಚದ ಇತರ ಧರ್ಮಗಳು—ಇವೂ ಏಷ್ಯದಲ್ಲಿ ಜನಿಸಿದುವು. ಪ್ರಪಂಚಕ್ಕೆ ಬೇಕಾದ ಸಂಬಾರಪದಾರ್ಥ, ರೇಷ್ಮೆ, ಪೆಟ್ರೋಲಿಯಂ, ಮ್ಯಾಂಗನೀಸ್, ಅಭ್ರಕಗಳನ್ನು ಒದಗಿಸುವುದೂ ಈ ಖಂಡವೇ. ಜಗತ್ತಿನಲ್ಲಿರುವ ಎಲ್ಲ ರೀತಿಯ ಸಸ್ಯವರ್ಗಗಳೂ ಖನಿಜಗಳೂ ಇಲ್ಲಿ ದೊರೆಯುತ್ತವೆ. ಅತ್ಯಂತ ಕಡಿಮೆ ಹಾಗೂ ಅತ್ಯಂತ ಹೆಚ್ಚಿನ ಜನಸಾಂದ್ರತೆಯ ಪ್ರದೇಶಗಳು ಇಲ್ಲುಂಟು. ವಿಸ್ತಾರದಲ್ಲಿ ವಿಶ್ವದ $\frac{1}{3}$ ಭಾಗ ಹೊಂದಿರುವ ಈ ಖಂಡದಲ್ಲಿ ಅದರ $\frac{3}{5}$ರಷ್ಟು ಜನ ವಾಸಿಸುತ್ತಾರೆ.

ಮೇಲ್ಮೈಲಕ್ಷಣ : ಏಷ್ಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು: 1 ಉತ್ತರದ ತಗ್ಗು ಪ್ರದೇಶ. ಆರ್ಕ್‌ಟಿಕ್ ಸಾಗರದಿಂದ ನೈಋತ್ಯಾಭಿಮುಖವಾಗಿ ಮಹಾತ್ರಿಭುಜದಂತೆ ಹಬ್ಬಿರುವ ಈ ಭಾಗ ಸೈಬೀರಿಯದ ಬಹು ಭಾಗವನ್ನೊಳಗೊಂಡಿದೆ. ಯೂರೋಪಿನ ಮಹಾಮೈದಾನಕ್ಕೂ ಇದಕ್ಕೂ ನಡುವೆ ಯೂರಲ್ ಪರ್ವತಗಳು ಗಡಿರೇಖೆ. ಇಲ್ಲಿ ಹರಿಯುವ ಆಬ್, ಯೆನಿಸೇ ಮತ್ತು ಲೀನ ನದಿಗಳು ಬಹು ಉದ್ದ. ನಿಧಾನ. ಆರ್ಕ್‌ಟಿಕ್ ಸಾಗರದ ಕಡೆಗೆ ನೆಲದ ಇಳಿಜಾರು ಬಲು ಕಮ್ಮಿ. ಇವುಗಳ ಮುಖಭಾಗದಲ್ಲಿ ನೀರು ವರ್ಷದಲ್ಲಿ ಕೆಲಕಾಲ ಹೆಪ್ಪುಗಟ್ಟುತ್ತದೆ.

ಆಗ ಮೇಲ್ಗಡೆಯಿಂದ ಹರಿದು ಬಂದ ನೀರು ಮುಂದಾರಿಗಾಣದೆ ನೆಲದ ಮೇಲೆ ಹರಡುವುದು ಅನಿವಾರ್ಯ. ತತ್ಫಲವಾಗಿ ಆ ಭೂಮಿಯೆಲ್ಲ ಜೌಗಾಗಿ ಪರಿಣಮಿಸುತ್ತದೆ. ನೈರುತ್ಯದಲ್ಲಿ ಆರಲ್ ಸರೋವರದ ಪ್ರದೇಶ ಒಂದು ಬೋಗುಣಿಯಂತಿದ್ದು ಇದರೊಳಕ್ಕೆ ಕೆಲವು ನದಿಗಳು ಹರಿಯುತ್ತವೆ.




ಏಷ್ಯದ ಮೇಲ್ಮೈಲಕ್ಷಣ

1 ಉತ್ತರದ ತಗ್ಗು ಪ್ರದೇಶ 2 ಪ್ರಸ್ಥಭೂಮಿ ಪ್ರದೇಶ 3 ಪರ್ವತ ಮತ್ತು ಪ್ರಸ್ಥಭೂಮಿ ಪ್ರದೇಶ 4 ನದೀಕಣಿವೆ ಪ್ರದೇಶ

2 ಉತ್ತರದ ತಗ್ಗುನೆಲಕ್ಕೆ ದಕ್ಷಿಣದಲ್ಲಿರುವ ಕೇಂದ್ರೀಯ ತ್ರಿಭುಜವೇ ಏಷ್ಯದ ಎರಡನೆಯ ಭಾಗ. ಏಷ್ಯದ ಮಹಾ ಪರ್ವತಶ್ರೇಣಿಗಳನ್ನೂ ಅವುಗಳ ಹೆಗಲ ಮೇಲೆ ಕುಳಿತ ಪ್ರಸ್ಥಭೂಮಿಗಳನ್ನೂ ಒಳಗೊಂಡಿರುವುದು ಈ ಪ್ರದೇಶವೇ. ಈ ತ್ರಿಭುಜದ ಪಶ್ಚಿಮಕ್ಕೆ ಏಷ್ಯ ಮೈನರ್ ವರೆಗೂ ಆಗ್ನೇಯದಲ್ಲಿ ಇಂಡೋ–ಚೀನ ಮತ್ತು ಈಸ್ಟ್ ಇಂಡೀಸ್‌ಗಳ ಉದ್ದಕ್ಕೂ ಪರ್ವತಗಳು ಕವಲೊಡೆದಿವೆ.

ಹೀಗೆ ಕೆಂಪು ಸಮುದ್ರದಿಂದ ಬೇರಿಂಗ್ ಜಲಸಂಧಿಯ ವರೆಗೂ ಹಬ್ಬಿರುವ ಪರ್ವತಾವಳಿಗಳು ಅತ್ಯಂತ ಆಕರ್ಷಣೀಯ. ಇವು ಪ್ರಪಂಚದ ಮಧ್ಯಂತರ ಪರ್ವತಾವಳಿಯ ಒಂದು ಭಾಗ. ಆಗ್ನೇಯ ಹಾಗೂ ವಾಯವ್ಯ ಏಷ್ಯಗಳ ಮಧ್ಯೆ ವಾಯುಗುಣದ ಪ್ರಭಾವ ಹಾಗೂ ಸಂಚಾರ ಮಾರ್ಗಗಳಿಗೆ ಇವು ದೊಡ್ಡ ಅಡ್ಡಿ. ಆರ್ಮೀನಿಯನ್ ಮತ್ತು ಪಾಮಿರ್ ಪರ್ವತಗ್ರಂಥಿಗಳಲ್ಲಿ ಇವುಗಳ ಉಗಮ. ಇವು ಒಳನಾಡಿನ ಜಲಾನಯನ ಪ್ರದೇಶಗಳು.

ಆರ್ಮೀನಿಯನ್ ಗ್ರಂಥಿಯಿಂದ ಪೂರ್ವದ ಕಡೆಗೆ ಇರಾನ್ ಪ್ರಸ್ಥಭೂಮಿಯ ಉತ್ತರಕ್ಕೆ ಇರುವ ಪರ್ವತಗಳು ಎಲ್‌ಬರ್ಜ್ ಮತ್ತು ಕೊಪೆಟ್‌ದಾಗ್. ಡಮಾವಂಡ್ (18,580′) ಅತ್ಯುನ್ನತ ಶಿಖರ. ಈ ಪರ್ವತಗಳು ಹಿಂದೂಕುಷ್ ಪರ್ವತಗಳ ಮುಖಾಂತರ ಪಾಮಿರ್ ಗ್ರಂಥಿ ತಲಪುತ್ತವೆ. ಇದರ ಇನ್ನೊಂದು ಕವಲೇ ಸುಲೇಮಾನ್ ಪರ್ವತವಾಗಿ ಪಾಮಿರ್ ಗ್ರಂಥಿಯನ್ನು ತಲಪುತ್ತದೆ. ಇಲ್ಲಿ ಭೂಕಂಪಗಳು ಹೆಚ್ಚು. ಈ ಭೂಭಾಗ ಇನ್ನೂ ಅಸ್ಥಿರ ಎಂಬುದು ಸ್ಪಷ್ಟ.

ಇಲ್ಲಿನ ಅನೇಕ ಪರ್ವತಾವಳಿಗಳು ಚೆಲ್ಲಾಪಿಲ್ಲಿಯಾಗಿ ಅವ್ಯವಸ್ಥಿತವಾಗಿ ಹರಡಿವೆಯಾದರೂ ಮುಖ್ಯವಾದ ಪರ್ವತಸಾಲುಗಳು ಇರಾನಿನಿಂದ ಪೆಸಿಫಿಕ್ ಸಾಗರದ ವರೆಗೆ ಕ್ರಮಬದ್ಧವಾದ ರೀತಿಯಲ್ಲಿ ಹರಡಿವೆ.

ಇವುಗಳ ಪೈಕಿ ಅತ್ಯಂತ ಉತ್ತರದಲ್ಲಿ ಆಗ್ನೇಯಾಭಿಮುಖವಾಗಿ ಸಾಗುವುದೇ ಟಿಯೆನ್ ಷಾನ್ ಶ್ರೇಣಿ. ಚೀನದವರು ಇದನ್ನು ಸ್ವರ್ಗಪರ್ವತವೆಂದು ಕರೆಯುತ್ತಾರೆ. ಇದರಿಂದ ಭಿನ್ನವಾಗಿರುವುದು ಆಲ್ಟೈ ಪರ್ವತ. ಟಿಯೆನ್ ಷಾನ್ [illegible] [illegible] ಈ ಪರ್ವತದ ವಿಸ್ತಾರ 700 ಮೈಲಿ. ಒಂದು ದೃಷ್ಟಿಯಲ್ಲಿ ಆಸ್ಟಿನ್ ಟಾ ಇದರ ಭಾಗ. ಇದು ಪುರಾತನ, ನಗ್ನೀಕೃತ. ಪಿಷಿಹ್‌ಷಾನ್ ಇನ್ನೊಂದು ಕವಲು. ಇದರ ಎತ್ತರ ಇನ್ನೂ ಪತ್ತೆಯಾಗಿಲ್ಲ.

ಇವೆಲ್ಲಕ್ಕಿಂತ ಭವ್ಯವಾಗಿರುವ ಶ್ರೇಣಿಗಳೆಂದರೆ ಹಿಮಾಲಯ. ಹಿಮಾಲಯದಲ್ಲಿ ಐದು ಸಮಾನಾಂತರ ಉಪಶ್ರೇಣಿ ವಿಭಾಗಗಳಿವೆ. ಬೃಹತ್ ಹಿಮಾಲಯದಲ್ಲಿ 24,000′ ಗಿಂತಲೂ ಎತ್ತರವಾಗಿರುವ 60ಕ್ಕಿಂತಲೂ ಹೆಚ್ಚು ಶಿಖರಗಳುಂಟು. ಕಿರಿ ಹಿಮಾಲಯದಲ್ಲಿರುವ ಪರ್ವತಸಾಲುಗಳು ಅನೇಕ. 29,028′ ಎತ್ತರವಾಗಿರುವ ಎವರೆಸ್ಟ್ ವಿಶ್ವದ ಮಹೋನ್ನತ ಶಿಖರ. ಇದು ಜಗತ್ತಿನ ಮಾತೃದೇವತೆ (ಜೋಮೊಉಂಗ್ಮ). ಕಾಂಚನಗಂಗಾ (ಕಂಚೆನ್‌ಜಂಗಾ–28,146′), ಮಕಲು (27,790′), ಧವಳಗಿರಿ (26,826′), ನಂಗಾಪರ್ಬತ್ (26,660′), ಅನ್ನಪೂರ್ಣ (26,503′) ಗೋಸೈನ್‌ಟಾನ್ (26,291′)—ಇವು ಇತರ ಕೆಲವು ಮುಖ್ಯ ಶಿಖರಗಳು.

ಬರ್ಮದಲ್ಲಿ ಈ ಪರ್ವತಗಳು ದಕ್ಷಿಣಾಭಿಮುಖವಾಗಿ ಮುಂದುವರಿಯುತ್ತವೆ. ಅಲ್ಲಿ ಇವುಗಳ ಹೆಸರು ಅರಕಾನ್ ಹಾಗೂ ಪೆಗು ಯೋಮ. ಅಂಡಮಾನ್, ನಿಕೋಬಾರ್ ಮತ್ತು ಇಂಡೋನೇಷ್ಯಗಳ ಮುಖಾಂತರ ಸಾಗುವ ಈ ಪರ್ವತ ಶ್ರೇಣಿಗಳು ಮಲಯ ಮತ್ತು ಅನ್ನಾಂ ಪರ್ವತಗಳಾಗಿ ಒಡೆದು ಮುಂದುವರಿದು ಕಣ್ಮರೆಯಾಗುತ್ತವೆ.

ಹಿಮಾಲಯಕ್ಕಿಂತ ಕಡಿಮೆ ಎತ್ತರ ಉಳ್ಳದ್ದೆಂದರೆ ಕಾರಕೋರಂ. ಇದು ವಾಯವ್ಯದ ಕಡೆ ತುರ್ಕಿಸ್ತಾನದ ಕಡೆಗೆ ಮುಂದುವರಿಯುತ್ತದೆ. ಇಲ್ಲಿ ಗಾಡ್ವಿನ್ ಆಸ್ಟಿನ್ ಎಂಬ ಶಿಖರವಿದೆ. ಇದು ಜಗತ್ತಿನ ಎರಡನೆಯ ಉನ್ನತ ಶಿಖರ (28,250′). ಇದರೊಂದಿಗೆ ಗಷೆರ್ ಬ್ರುಮ್ (26,470′) ಮತ್ತು ರಕಪೂಷಿ (25,560′) ಶಿಖರಗಳೂ ಇಲ್ಲಿವೆ.

ಪರ್ವತಗಳ ಮಧ್ಯದಲ್ಲಿರುವ ಟಿಬೆಟ್ ಒಂದು ಬೃಹತ್ ಪ್ರಸ್ಥಭೂಮಿ : ಪ್ರಪಂಚದ ಮೇಲ್ಛಾವಣಿ. ಇದು 16,000′–18,000′ ಎತ್ತರ, 1,500 ಮೈಲಿ ಉದ್ದ, 800 ಮೈಲಿ ಅಗಲ ಇದೆ.

ಪಾಮಿರ್ ಗ್ರಂಥಿ ಇನ್ನೂ ಎತ್ತರ (20,000′). ಈ ಗ್ರಂಥಿಯಲ್ಲಿ ಒಂದರೊಳಗೊಂದು ಸೇರಿರುವ ಕಡಿದು ಬಂಡೆಗಳೂ ಶಿಲಾಪ್ರಪಾತಗಳೂ ಇವೆ.

ಏಷ್ಯದ ಪೂರ್ವದ ಅಂಚಿನ ಉದ್ದಕ್ಕೂ ಮಾಲೆಯಾಕಾರದಲ್ಲಿ ಹಬ್ಬಿರುವ ದ್ವೀಪಗಳ ಮೇಲೆ ಪರ್ವತಗಳ ಹಲವು ಸರಪಣಿಗಳಿವೆ. ಈ ದ್ವೀಪಗಳು ಅಗ್ನಿಪರ್ವತಗಳಿಂದಾದವು.

ಏಷ್ಯದ ಮಡಿಕೆ ಪರ್ವತಶ್ರೇಣಿಗಳ ನಡುವಣ ಪ್ರದೇಶಗಳು ಪ್ರಸ್ಥಭೂಮಿಗಳು. ಇವುಗಳಲ್ಲಿ ಹಲವು ಚಪ್ಪಟೆಯಾಗಿವೆ. ಹಿಮಾಲಯ ಕೂನ್‌ಲೂನ್ ಪರ್ವತಗಳ ನಡುವೆ ಇರುವುದು ಟಿಬೆಟ್ ಪ್ರಸ್ಥಭೂಮಿ. ಕೂನ್‌ಲೂನಿಗೂ



ಅಸ್ಸಾಮಿ ಉಡುಗೆ ತೊಡುಗೆ

ಆಸ್ಟಿನ್ ಟಾ ಪರ್ವತಗಳಿಗೂ ನಡುವೆ ಇರುವ ಸಣ್ಣ ಬೋಗುಣಿ ಟಿಬೆಟ್ ಪ್ರಸ್ಥಭೂಮಿಗಿಂತ ಸ್ವಲ್ಪ ತಗ್ಗು; ಜೌಗು. ಆಸ್ಟಿನ್ ಟಾ ಟಿಯೆನ್ ಷಾನ್‌ಗಳ ನಡುವೆ

ಇರುವ ಡಾರಿಂಮ್ ಜೋಂಗಾರಿ ಶುಷ್ಕ. ನಡುವೆ ಒಂದು ಸಣ್ಣ ಸರೋವರವಿದೆ. ಆಲ್ಟೈಗೆ ದಕ್ಷಿಣದಲ್ಲಿ ಆಸ್ಟಿನ್ ಟಾ ಪರ್ವತಗಳ ಈಶಾನ್ಯಕ್ಕೆ ಇರುವ ಪ್ರದೇಶವೇ



ರಾಜಸ್ಥಾನದ ಸುಂದರಿ

ಗೋಬಿ ಮರುಭೂಮಿ. ಪಾಮಿರ್ ಗ್ರಂಥಿಯ ಪಶ್ಚಿಮದ ಉತ್ತರ ದಕ್ಷಿಣ ಪರ್ವತ ಕವಲುಗಳ ನಡುವೆ, ಪರ್ಷಿಯದ ಬಹುಭಾಗವನ್ನಾವರಿಸಿರುವುದು ಇರಾನ್ ಪ್ರಸ್ಥಭೂಮಿ. ಕಪ್ಪುಸಮುದ್ರಕ್ಕೂ ಮೆಡಿಟರೇನಿಯನ್ ಸಮುದ್ರಕ್ಕೂ ನಡುವೆ, ಆರ್ಮೀನಿಯನ್ ಗ್ರಂಥಿಗೆ ಪಶ್ಚಿಮದಲ್ಲಿ, ಏಷ್ಯ ಮೈನರ್ ಪ್ರಸ್ಥಭೂಮಿ ಇದೆ.

3 ದಕ್ಷಿಣದ ಪುರಾತನ ಪ್ರಸ್ಥಭೂಮಿಗಳು ಏಷ್ಯದ ಇನ್ನೊಂದು ಭೌಗೋಲಿಕ ವಿಭಾಗ. ಅರೇಬಿಯ ಪ್ರಸ್ಥಭೂಮಿ ಹಳೆಯ ಗಟ್ಟಿ ಬಂಡೆಗಳಿಂದ ಕೂಡಿದ್ದು. ಪಶ್ಚಿಮದ ಕೆಂಪು ಸಮುದ್ರದ ಅಂಚು ಕಡಿದು, ಎತ್ತರ. ಪೂರ್ವಾಭಿಮುಖವಾಗಿ ಇಳಿಜಾರು. ಟೈಗ್ರಿಸ್ ಕಣಿವೆಯಲ್ಲಿ ಇದು ಅಂತ್ಯವಾಗುತ್ತದೆ. ಈ ಪ್ರದೇಶ ಬಲು ಶುಷ್ಕ. ಇಲ್ಲಿ ನದಿಗಳಿಲ್ಲ. ಆದ್ದರಿಂದ ಬಹುತೇಕ ಅಖಂಡ.

ಭಾರತ ಪರ್ಯಾಯದ್ವೀಪದ ದಕ್ಷಿಣದ ಪ್ರಸ್ಥಭೂಮಿಯೂ ಪಶ್ಚಿಮದಿಂದ ಪೂರ್ವಕ್ಕೆ ಇಳುಕಲಾಗಿದೆ. ಇದರ ಪಶ್ಚಿಮದ ಸೆರಗೇ ಪಶ್ಚಿಮ ಘಟ್ಟ. ಪೂರ್ವದಲ್ಲಿ ತಗ್ಗಾದ ಪೂರ್ವಘಟ್ಟ. ಮಹಾನದಿ, ಗೋದಾವರಿ ಮುಂತಾದ ನದಿಗಳು ಅಲ್ಲಲ್ಲಿ ಈ ಪ್ರಸ್ಥಭೂಮಿಯನ್ನು ಭೇದಿಸಿವೆ.

ಬರ್ಮದಿಂದ ಪೂರ್ವಕ್ಕಿರುವುದು ಇನ್ನೊಂದು ಪ್ರಸ್ಥಭೂಮಿ. ಪುರಾತನ ಶಿಲಾ ಶಾಖೆಯೊಂದು ಮಲಯ ಪರ್ಯಾಯದ್ವೀಪದ ವರೆಗೂ ಹಬ್ಬಿದೆ. ಈ ಪ್ರಸ್ಥಭೂಮಿಗೆ ಅಡ್ಡಲಾಗಿಯೂ ಹಲವು ನದಿಗಳಿವೆ. (ಉದಾ: ಸಾಲ್ವೀನ್, ಮೇಕಾಂಗ್, ಯಾಂಗ್ಸಿ).

4 ಏಷ್ಯದ ನಾಲ್ಕನೆಯ ಮುಖ್ಯ ಭೌಗೋಲಿಕ ವಿಭಾಗವೇ ಮಹಾನದಿಗಳ ಮೈದಾನಗಳು. ಇವು ಫಲವತ್ತಾದ ತಗ್ಗುನೆಲಗಳು. ಯುಫ್ರೇಟೀಸ್ ಮತ್ತು ಟೈಗ್ರಿಸ್ ಮೈದಾನ, ಸಿಂಧೂನದೀ ಬಯಲು, ಗಂಗಾ–ಬ್ರಹ್ಮಪುತ್ರಾ ಮೈದಾನ, ಇರವಾಡಿ ಬಯಲು, ಮೇನಾಮ್ ಮೇಕಾಂಗ್ ನದೀ ಕಣಿವೆಗಳು, ಯಾಂಗ್ಸಿ ಕಣಿವೆ, ಹ್ವಾಂಗ್ ಹೋ ನದೀ ಪ್ರದೇಶ—ಇವು ಈ ವಿಭಾಗಕ್ಕೆ ಸೇರಿದವು.

ಏಷ್ಯದಲ್ಲಿ ಎತ್ತರವಾಗಿರುವ ಪ್ರದೇಶಗಳಿರುವಂತೆ ಅತ್ಯಂತ ಆಳವಾದ ತಗ್ಗು ಪ್ರದೇಶಗಳೂ ಜೌಗುಪ್ರದೇಶಗಳೂ ಇವೆ. ಪ್ರಪಂಚದಲ್ಲಿ ಎಲ್ಲಕ್ಕಿಂತ ಆಳವಾದ ತಗ್ಗುಪ್ರದೇಶವೆಂದರೆ ಜಾರ್ಡನ್‌ನಲ್ಲಿರುವ ಮೃತಸರೋವರ ಪ್ರದೇಶ. ಇದು ಮೆಡಿಟರೇನಿಯನ್ ಸಮುದ್ರ ಮಟ್ಟಕ್ಕಿಂತ 1,286′ ತಗ್ಗಿನಲ್ಲಿದೆ. ಮಂಗೋಲಿಯದಲ್ಲಿನ ಅನೇಕ ಪ್ರದೇಶಗಳೂ ಕ್ಯಾಸ್ಪಿಯನ್ ಸಮುದ್ರದ ಉತ್ತರ ಹಾಗೂ ಪೂರ್ವ ತೀರಗಳೂ ಇಂಥ ಇನ್ನೆರಡು ಪ್ರದೇಶಗಳು. ಚೀನದ ಚೆಂಘೈಯಲ್ಲಿನ ಟ್ಸೈಡಾಂ ಜೌಗುಪ್ರದೇಶ 900′ ತಗ್ಗಿನಲ್ಲೂ ಟರ್ಫಾನ್ ಓಯಸಿಸ್ 900′ ಕೆಳಗೂ ಇವೆ.

**ನದಿಗಳು:** ಖಂಡದ ಹೆಚ್ಚುಭಾಗ ಸಾಮಾನ್ಯ ರೀತಿಯ ನದಿ ಹಂಚಿಕೆ ವ್ಯವಸ್ಥೆಯನ್ನು ಹೊಂದಿದ್ದರೂ ಮಧ್ಯದ ಒಳಪ್ರದೇಶ ನದಿಗಳ ಮುಖಾಂತರ ಸಾಗರದೊಂದಿಗೆ ಸಂಬಂಧ ಹೊಂದಿಲ್ಲ. ಇದು ಖಂಡದ ಹೃದಯಭಾಗ. ಇದನ್ನು ಪರ್ವತಶ್ರೇಣಿಗಳು ಸುತ್ತುವರಿದಿವೆ. ಅನೇಕ ಖಂಡಾಂತರ ಜಲಾನಯನ ಪ್ರದೇಶಗಳು ಇಲ್ಲಿವೆ. 50 ಲಕ್ಷ ಚ.ಮೈ. ವಿಸ್ತಾರವಾಗಿರುವ ಈ ಪ್ರದೇಶದಲ್ಲಿ ಮಳೆ ವಿರಳ. ನೀರು ಅತಿಯಾಗಿ ಆವಿಯಾಗುತ್ತದೆ. ಆದ್ದರಿಂದ ಸಾಗರಗಳನ್ನು ತಲಪುವ ಮಟ್ಟಿಗೂ ನೀರು ಒದಗಿಸಲು ನದಿಗಳಿಗೆ ಸಾಧ್ಯವಾಗಿಲ್ಲ. ಇಲ್ಲಿನ ಒಂದು ತೊಟ್ಟು ಮಳೆ ನೀರೂ ಸಾಗರ ಸೇರುವುದಿಲ್ಲ.

ಆಫ್ಘಾನಿಸ್ತಾನದ ಪರ್ವತಗಳಿಂದ ಹರಿದು ಬರುವ, ಕರಗಿದ ಹಿಮಜಲದಿಂದ ಕೂಡಿರುವ, ಹೆಲ್‌ಮಂಡ್ ನದಿ ಇರಾನಿನ ಸೈಸ್ತಾನಿನ ಉಪ್ಪುನೀರಿನ ಸರೋವರಗಳಿಂದ ಕೂಡಿದ ಜೌಗುಪ್ರದೇಶದಲ್ಲಿ ಕಣ್ಮರೆಯಾಗುತ್ತದೆ. ಹಿಂದೂಕುಷ್ ಪರ್ವತಗಳಿಂದ ಉತ್ತರದ ಕಡೆ ಹರಿಯುವ ಅಮೂ ದಾರ್ಯಾ (1,400 ಮೈ.) ಮತ್ತು ಸಿರ್ ದಾರ್ಯಾ (1,500 ಮೈ.)ಗಳಿಗೆ ಅರಲ್ ಸಮುದ್ರವೇ ಗುರಿ. ಪೂರ್ವದ ಕಡೆ ಒಂದು ಸಾವಿರ ಮೈಲಿಗಿಂತಲೂ ಹೆಚ್ಚು ದೂರ ಹರಿಯುವ ಟಾರಿಮ್ ನದಿ ಲೋಬ್‌ನೋರ್ ಎಂಬ ಶುಷ್ಕ ಶೂನ್ಯ ಪ್ರದೇಶದಲ್ಲಿ ಕಣ್ಮರೆಯಾಗುತ್ತದೆ. ಇಲ್ಲಿ ನದಿಯ ಲೀನ ಬಾಲ್ಕಷ್ ಸರೋವರದಲ್ಲಿ.

ಆದರೆ ಏಷ್ಯದ ಮಧ್ಯದಲ್ಲಿ ಹುಟ್ಟುವ ಅನೇಕ ಬೃಹತ್ ನದಿಗಳು ಸಾಗರಗಳನ್ನು ತಲಪುತ್ತವೆ. ಈಗಿನ ಸಿಂಧು, ಗಂಗಾ, ಬ್ರಹ್ಮಪುತ್ರಾ ಮೂಲನದಿಗಳನ್ನೂ ಅವುಗಳ ಉಪನದಿಗಳನ್ನೂ ಒಳಗೊಂಡಂತೆ ಇಂಡೋ–ಬ್ರಹ್ಮ ನದಿ ಸುಮಾರು ಎರಡು ಕೋಟಿ ವರ್ಷಗಳ ಹಿಂದೆ ಹಿಮಾಲಯ ಪ್ರದೇಶಗಳಲ್ಲಿ ಹುಟ್ಟಿ 2,500 ಮೈಲಿ ಉದ್ದದ ಕಣಿವೆಯೊಂದರಲ್ಲಿ ಬೃಹದ್ ಪ್ರಮಾಣದಲ್ಲಿ ಪ್ರವಹಿಸಿ ಅರಬ್ಬೀ ಸಮುದ್ರವನ್ನು ಸೇರುತ್ತಿತ್ತೆಂದು ಅಭಿಪ್ರಾಯ ಪಡಲಾಗಿದೆ (ನೋಡಿ—ಇಂಡೋ–ಬ್ರಹ್ಮ ನದಿ). ಜಗತ್ತಿನ 12 ದೊಡ್ಡ ನದಿಗಳಲ್ಲಿ ಏಳು ಇಲ್ಲಿಯೇ ಇವೆ. ಇವುಗಳಲ್ಲಿ ಮೂರು ನದಿಗಳು (ಆಬ್, ಎನಿಸೇ, ಲೀನಾ) ಉತ್ತರದ ಕಡೆ ಹರಿದು ಆರ್ಕ್‌ಟಿಕ್ ಸಾಗರ ಸೇರುತ್ತವೆ. ಬೇಸಗೆಯಲ್ಲಿ ಆಬ್ ನದಿ ಇರ್‌ಟಿಷ್‌ನೊಂದಿಗೆ ಕೂಡಿ ಪಾತ್ರವನ್ನು ಮೀರಿ ದಡಗಳಲ್ಲಿ ಹರಿದು 1,00,000 ಚ.ಮೈ. ಅಭೇದ್ಯ ಜೌಗುಪ್ರದೇಶ ನಿರ್ಮಿಸುತ್ತದೆ. ಎನಿಸೇ (2,800 ಮೈ.) ಮತ್ತು ಲೀನಾ (3,000 ಮೈ.) ಕೆಲವು ಕಡೆ ಇಪ್ಪತ್ತು ಮೈಲಿಗಳಷ್ಟು ಅಗಲವಾಗಿವೆ. ಯಾನ, ಇಂಡಿಗರ್ಕಾ ಮತ್ತು ಕೊಲಿಮಗಳು–ಇಲ್ಲಿನ ಚಿಕ್ಕ ನದಿಗಳು. ಇವೆಲ್ಲವೂ ಚಳಿಗಾಲದಲ್ಲಿ (ಹೆಚ್ಚಾಗಿ ಉತ್ತರಾರ್ಧ ಭಾಗಗಳು) ಹೆಪ್ಪುಗಟ್ಟುತ್ತವೆ. ಪೆಸಿಫಿಕ್ ಸಾಗರವನ್ನು ಸೇರುವ ಹಾಗೂ ಪೂರ್ವದ ಕಡೆ ಹರಿಯುವ ನದಿಗಳಲ್ಲಿ ಆಮೂರ್ (1,780 ಮೈ. ಉದ್ದ) ಹ್ವಾಂಗ್‌ಹೋ (2,700 ಮೈ. ಉದ್ದ), ಯಾಂಗ್ಸೀ (3,100 ಮೈ. ಉದ್ದ) ಮತ್ತು ಮೇಕಾಂಗ್ (2,600 ಮೈ. ಉದ್ದ) ಮುಖ್ಯವಾದವು. ಆಮೂರ್ ನದಿ ಮಂಚೂರಿಯದ ಉತ್ತರದ ಅಂಚಿನಲ್ಲಿ ಹರಿದು, ಉತ್ತರದ ಕಡೆ ತಿರುಗಿ ಓಕಾಟ್ಸ್ಕ ಸಮುದ್ರ ಸೇರುತ್ತದೆ. ಹ್ವಾಂಗ್ ಹೋ ಅತ್ಯಂತ ನಿರ್ದಯಿ ನದಿ. ಚೀನದ ಕಣ್ಣೀರು ಎಂದು ಇದರ ನಾಮಧೇಯ. ಯಾಂಗ್ಸೀ ಕಿಯಾಂಗ್ ಕಡಿದಾದ ಬೆಟ್ಟಗಳಿಂದ ಹರಿದು ಬಂದು ಚೀನವನ್ನು ಉತ್ತರ–ದಕ್ಷಿಣಾರ್ಧಗಳನ್ನಾಗಿ ಮಾಡಿ, ಪೆಸಿಫಿಕ್ ಸಾಗರ ಸೇರುತ್ತದೆ. ಯುವಾನ್, ಮಿನಾಂ, ಸಿಯಾಂಗ್, ಮಿನ್, ಹ್ವಾಯಿ, ಹಾಯಿ, ಲಿಆವೊ–ಇಲ್ಲಿನ ಚಿಕ್ಕ ನದಿಗಳು.

ಆಗ್ನೇಯ ಏಷ್ಯದಲ್ಲಿನ ಮೇಕಾಂಗ್, ಇರವಾಡಿ, ಸಾಲ್ವೀನ್ (1,750 ಮೈ.) ನದಿಗಳು ಒಂದಕ್ಕೊಂದು ಸಮಾನಾಂತರವಾಗಿ, ಉತ್ತರ-ದಕ್ಷಿಣವಾಗಿ ಹರಿಯುತ್ತವೆ.

ಹಿಂದೂ ಸಾಗರವನ್ನು ಸೇರುವ ನದಿಗಳಲ್ಲಿ ಸಿಂಧೂ (1,700 ಮೈ.) ಗಂಗಾ (1,550 ಮೈ.) ಮುಖ್ಯ. ಟಿಬೆಟ್ಟಿನಲ್ಲಿ ಅರ್ಧಕ್ಕಿಂತ ಹೆಚ್ಚು ಭಾಗ ಹರಿಯುವ ಬ್ರಹ್ಮಪುತ್ರಾ ನದಿ ಬಂಗಾಳ ಕೊಲ್ಲಿ ಸೇರುವುದಕ್ಕೆ ಮುಂಚೆ ಹಿಮಾಲಯಗಳಿಂದ ಹರಿದು ಬರುವ ಗಂಗಾ ನದಿಯನ್ನು ಕೂಡಿ, ಪ್ರಪಂಚದಲ್ಲಿ ಅತ್ಯಂತ ವಿಶಾಲ ಮುಖಜಭೂಮಿಯನ್ನು ನಿರ್ಮಾಣಮಾಡಿದೆ. ಸಿಂಧೂನದಿ ಹಿಮಾಲಯ ಪರ್ವತಗಳಲ್ಲಿ ಜನಿಸಿ, ಉಪ-ನದಿಗಳೊಂದಿಗೆ ಕೂಡಿ ಅರಬ್ಬೀ ಸಮುದ್ರ ಸೇರುತ್ತದೆ. ಸಾಲ್ವೀನ್, ಸಿಟ್ಟಾಂಗ್, ಇರವಾಡಿ, ಮಹಾನದಿ, ಗೋದಾವರಿ, ಕೃಷ್ಣಾ, ಕಾವೇರಿ, ನರ್ಮದಾ, ತಪತಿ—ಇಲ್ಲಿನ ಇತರ ನದಿಗಳು. ಅತ್ಯಂತ ಪಶ್ಚಿಮದಲ್ಲಿರುವ ಯುಫ್ರೇಟೀಸಿನ ಉದ್ದ 1,700 ಮೈ. ಇದು ಟೈಗ್ರಿಸಿನೊಂದಿಗೆ (1,100 ಮೈ.) ಕೂಡಿ ಪರ್ಷಿಯ ಕೊಲ್ಲಿ ಸೇರುತ್ತದೆ.

ಸರೋವರಗಳು : ಅತಿಯಾದ ತೇವದಿಂದ ಕೂಡಿದ್ದ ಪ್ರಾರಂಭಿಕ ಯುಗದಲ್ಲಿ ಅರಲ್ ಸಮುದ್ರ ವಿಸ್ತಾರವಾಗಿ, ವಿಶಾಲವಾದ ಕ್ಯಾಸ್ಪಿಯನ್ ಸಮುದ್ರದ ವರೆಗೂ ಹರಡಿದ್ದು ಅಲ್ಲಿಂದ ಮುಂದೆ ಕಪ್ಪು ಸಮುದ್ರದ ವರೆಗೂ ತನ್ನ ಕೈಚಾಚಿತ್ತು. ಕಪ್ಪು ಸಮುದ್ರವೇ ಪ್ರಪಂಚದ ಅತ್ಯಂತ ದೊಡ್ಡ ನಡುಗಡಲು (1,68,500 ಚ. ಮೈ.) ಅರಲ್ ಸಮುದ್ರದ ವಿಸ್ತೀರ್ಣ 26,000 ಚ. ಮೈ. ಬಾಲ್ಕಾಷ್ (6,700 ಚ. ಮೈ.) ಮತ್ತು ಇಸ್ಸಿಕ್ ಕಲ್ (2,200 ಚ. ಮೈ.)—ಇವೂ ಪ್ರಪಂಚದ ಪ್ರಮುಖ ಸರೋವರಗಳಲ್ಲಿ ಸೇರಿವೆ. ದಕ್ಷಿಣ ಸೈಬೀರಿಯದಲ್ಲಿರುವ ಬೇಕಲ್ ಸರೋವರ (12,160 ಚ. ಮೈ.) ಪ್ರಪಂಚದ ಅತಿ ವಿಶಾಲವಾದ ಸಿಹಿನೀರಿನ ಸರೋವರ. ಸರಾಸರಿ 6,360′ (ಒಂದು ಮೈಲಿ) ಆಳವಾಗಿರುವುದರಿಂದ

ಬೃಹತ್ ಪ್ರಮಾಣದ ನೀರು ಇದರಲ್ಲಿದ್ದು ಇತರ ವಿಶಾಲ ಸರೋವರಗಳಿಗಿಂತಲೂ ಇದು ಹೆಚ್ಚು ನೀರನ್ನು ಹೊಂದಿದೆ. ಟಿಬೆಟ್ ಮತ್ತು ತುರ್ಕಿಗಳಲ್ಲಿ ಅನೇಕ ಉಪ್ಪು



ರಾಜಸ್ಥಾನಿಗಳು

ನೀರಿನ ಸರೋವರಗಳಿವೆ. ತುರ್ಕಿಯಲ್ಲಿನ ವಾನ್ ಮತ್ತು ಇರಾನಿನಲ್ಲಿನ ಉರ್ಮಿಯಾ ಸರೋವರಗಳು ಖನಿಜ ಭರಿತ ಜಲದಿಂದ ಕೂಡಿವೆ. ಚೀನದಲ್ಲಿ ಟುಂಗ್ ಟಿಂಗ್ ಎಂಬುದು ಒಂದು ಮುಖ್ಯ ಸರೋವರ. ಇದರ ವಿಸ್ತಾರ ಯಾಂಗ್ಟ್ಸಿನದಿಯ ನೀರಿನ ಪ್ರಮಾಣಕ್ಕೆ ತಕ್ಕಂತೆ ಬದಲಾವಣೆಯಾಗುತ್ತ ಹೋಗುತ್ತದೆ. ಉತ್ತರ ಚೀನದಲ್ಲಿ ಕೊಕೊ–ನೋರ್ (2,300 ಚ. ಮೈ.) ಉಪ್ಪು ನೀರಿನ ಸರೋವರ.

**ವಾಯುಗುಣ :** ಖಂಡದ ಅಸಾಧ್ಯ ವಿಸ್ತಾರ, ನಿಬಿಡತೆ, ಅಕ್ಷಾಂಶಗಳ ವ್ಯತ್ಯಾಸ, ಭೂಮಿಯ ಮೇಲ್ಮೈ ಇವು ಅನೇಕ ವಾಯುಗುಣವೈಲಕ್ಷಣ್ಯಗಳನ್ನು ನಿರ್ಮಿಸಿವೆ. ಖಂಡದ ಹೆಚ್ಚು ಭಾಗ ಸಮುದ್ರಕ್ಕೆ ಬಲು ದೂರದಲ್ಲಿರುವುದರಿಂದ ಸೆಕೆ ಮತ್ತು ಚಳಿಗಳ ಅತಿರೇಕಗಳನ್ನೊಳಗೊಂಡ ಖಂಡಾಂತರ ವಾಯುಗುಣವನ್ನು ಕಾಣಬಹುದು. ಅಲ್ಲದೆ ಬೇರೆ ಯಾವ ಖಂಡದಲ್ಲೂ ಪರ್ವತಶ್ರೇಣಿಗಳು ವಾಯುಗುಣದ ಮೇಲೆ ಇಲ್ಲಿಯಷ್ಟು ಪ್ರಭಾವ ಬೀರುವುದಿಲ್ಲ. ಉತ್ತರದಿಂದ ಬರುವ ಶೀತಪ್ರಭಾವಗಳನ್ನು ಮತ್ತು ದಕ್ಷಿಣದಿಂದ ಬರುವ ಉಷ್ಣತೆಯ ಪ್ರಭಾವ ಹಾಗೂ ಜಲಮಾರುತಗಳನ್ನು ಇವು ತಡೆಗಟ್ಟುತ್ತವೆ.

ಜನವರಿಯ ಉಷ್ಣತೆ ದಕ್ಷಿಣದಿಂದ ಉತ್ತರದ ಕಡೆಗೆ ಹೋದಂತೆ ಕಡಿಮೆಯಾಗುತ್ತದೆ. ಸಮತಾಪರೇಖೆಗಳು ಸಾಮಾನ್ಯವಾಗಿ ಪೂರ್ವ ಪಶ್ಚಿಮವಾಗಿವೆ. ಮಧ್ಯ ಮತ್ತು ಉತ್ತರ ಏಷ್ಯಗಳಲ್ಲಿನ ಉಷ್ಣತೆ 0° ಫ್ಯಾ.ಗಿಂತಲೂ ಕಡಿಮೆ. ಸೈಬೀರಿಯದಲ್ಲಿ ಚಳಿ ವಿಪರೀತ. ಲೀನಾ ನದೀ ತೀರದಲ್ಲಿನ ಸರಾಸರಿ ಉಷ್ಣತೆ ವರ್ಷಪೂರ್ತಿ ಸೊನ್ನೆಗಿಂತ 1° ಫ್ಯಾ. ಮೇಲಿರುತ್ತದೆ. ಹಿಮ ಹೂಳುಗಳ ನಾನಾ ಪದರಗಳಿಂದ ನಿರ್ಮಾಣವಾಗಿರುವ ದೊಡ್ಡ ದ್ವೀಪಗಳು ಬೆಚ್ಚನೆಯ ಹವೆಯಲ್ಲಿ ಕರಗಿ ಹೋಗುತ್ತವೆ. ಲೀನಾ ನದಿ ವರ್ಷದಲ್ಲಿ ಎರಡು ತಿಂಗಳು ಮಾತ್ರ ಹಿಮದ ಕಾಟದಿಂದ ದೂರವಿದ್ದರೂ ಇದಕ್ಕೆ ಹೊಂದಿಕೊಂಡಿರುವ ಉಪನದಿಗಳೂ ಮತ್ತಿತರ ಜಲವಿಭಾಗಗಳೂ ವರ್ಷಾಂತರಗಳಿಂದ ಹೆಪ್ಪುಗಟ್ಟಿವೆ. ಇಷ್ಟಾದರೂ ಅತ್ಯಂತ ಚಳಿಪ್ರದೇಶ ಮೇರುವಿನ ಬಳಿ ಇಲ್ಲ. ಯಾನಾ ನದಿಯ ಕಂದರದಲ್ಲಿರುವ ವರ್ಕೊಯಾನ್ಸ್ಕ ಅತ್ಯಂತ ಚಳಿಪ್ರದೇಶವಾಗಿದೆ.

ಬೇಕಲ್ ಸರೋವರದ ಬಳಿ 30.5" ಒತ್ತಡ ನಿರ್ಮಾಣವಾಗಿ ಏಕಪ್ರಕಾರವಾಗಿ ಮುಂದುವರಿದು ಉತ್ತರದ ಬೆಟ್ಟಗಳ ವರೆಗೂ ಹರಡುತ್ತದೆ. ಇದನ್ನು ಆರ್ಕ್‌ಟಿಕ್‌ನ ಕಡಲ್ಗಾಳಿಗಳು ಹಿಂದಕ್ಕೆ ತಳ್ಳುತ್ತವೆ. ಬ್ಯೂರಾನ್ (ಪುರ್ಗಾ) ಅಥವಾ ಬ್ಯೂರ್ ಫಾಸ್ ಚಂಡಮಾರುತ ಅತ್ಯಂತ ಭಯಾನಕ.

ವರ್ಕೊಯಾನ್ಸ್ಕನಲ್ಲಿನ ಜುಲೈ ಉಷ್ಣತೆ ಸ್ಯಾನ್ ಫ್ರಾನ್ಸಿಸ್ಕೊವಿನದಕ್ಕಿಂತಲೂ ಹೆಚ್ಚು.

ಹೀಗಾಗಿ ಖಂಡದ ಹೆಚ್ಚುಭಾಗ ಜನವರಿಯಲ್ಲಿ ಹೆಚ್ಚು ಒತ್ತಡದ ಪ್ರದೇಶವಾಗಿರುತ್ತದೆ.

ಇದಕ್ಕೆ ಪ್ರತಿಯಾಗಿ ನೈಋತ್ಯ ಏಷ್ಯ ಅತ್ಯುಷ್ಣಪ್ರದೇಶ. ಅರೇಬಿಯದ ಒಳಭಾಗದಲ್ಲಿ ವಾರ್ಷಿಕ ಆವಿಯಾಗುವಿಕೆ ಸುಮಾರು 160". ಇದರ ಪರಿಣಾಮವಾಗಿ ನೆಲ ಸೋಕುವುದಕ್ಕೆ ಮೊದಲೇ ಮಳೆ ಹಾಗೆಯೇ ಆವಿಯಾಗುವುದೂ ಉಂಟು. ಬಿಸಿಲಿಗೆ ನೇರವಾಗಿರುವ ಶಿಲೆಗಳು ಒಡೆದು ಸಿಡಿಯುತ್ತವೆ. ಮರಳು ನೀರಿನ ಕುದಿಯುವ ಉಷ್ಣತೆ ಪಡೆಯುವುದರಿಂದ ಇಲ್ಲಿ ಸಾಮಾನ್ಯವಾಗಿ ದಿನದಲ್ಲಿ ಪ್ರಯಾಣಮಾಡುವುದನ್ನು ತಪ್ಪಿಸಿ, ರಾತ್ರಿಯ ಹೊತ್ತು ಒಂಟೆಗಳ ಮೇಲೆ ನಕ್ಷತ್ರ ಮಾರ್ಗದರ್ಶನದಲ್ಲಿ ಪ್ರಯಾಣ ಮಾಡುವುದು ರೂಢಿ. ಪರ್ಷಿಯನ್ ಕೊಲ್ಲಿಯಲ್ಲಿನ ನೀರು ಅತ್ಯುಷ್ಣ. ಇಲ್ಲಿನ ಉಷ್ಣತೆ 96°ಫ್ಯಾ. ತೀರಗಳಲ್ಲಿ ಕೆಲವು ಸಲ 120°ಫ್ಯಾ. ಇರುತ್ತದೆ. ಭಾರತದ ಥಾರ್ ಮರುಭೂಮಿಯ ಪ್ರದೇಶಗಳಲ್ಲಿ ಹೊಪ್ಪಳೆಗಳೇಳುವ ಉಷ್ಣತೆಯಿಂದ ಚಂಗೇಸ್‌ಖಾನನ ಬಲಿಷ್ಠ ಸೈನ್ಯವೇ ಹೆದರಿತೆಂದು ಹೇಳಲಾಗಿದೆ. ಜುಲೈ ತಿಂಗಳಲ್ಲಿ ಮರುಭೂಮಿ ಪ್ರದೇಶಗಳೆಲ್ಲ ಅತ್ಯಂತ ಕಡಿಮೆ ಒತ್ತಡ ಪ್ರದೇಶಗಳಾಗುತ್ತವೆ.

ಅರಬ್ಬೀ ಸಮುದ್ರ ಮತ್ತು ಬಂಗಾಳ ಕೊಲ್ಲಿಗಳು ಮಾನ್ಸೂನ್ ಮಾರುತಗಳ ಕೇಂದ್ರಗಳು. ಪೂರ್ವಚೀನ ಸಮುದ್ರದಲ್ಲೂ ಇದೇ ರೀತಿಯ ಮಾನ್ಸೂನ್ ಮಾರುತಗಳ ಕೇಂದ್ರವಿದೆ.

ಅನೇಕ ಪ್ರದೇಶಗಳು ಮಾರುತಗಳ ಶಾಪಕ್ಕೆ ಬಲಿಯಾಗಿವೆಯೆನ್ನಬಹುದು. ವಿಶಾಲ ಪ್ರದೇಶವಾದ ಗೋಬಿ ಮರುಭೂಮಿಯಲ್ಲಿನ ಕರಬುರಾನ್ ಮಾರುತಗಳು ತುರ್ಕಿಯ ಮರುಭೂಮಿ ಹಾಗೂ ಸ್ಟೆಪ್‌ಗಳ ಮೂಲಕ ಹಾದು, ಅಲ್ಲಲ್ಲಿರುವ ಸರೋವರಗಳ ಮತ್ತು ನದಿಗಳ ನೀರಿನ ತೇವ ಪಡೆದು ಕ್ಯಾಸ್ಪಿಯನ್ ಸಮುದ್ರದ ಮುಖಾಂತರ ಹಾದುಹೋಗುತ್ತವೆ. ಇವು ವಿಶಾಲವಾದ ಮಳೆ ನೆರಳಿನ ಮರುಭೂಮಿಯಿಂದ ಬರುತ್ತವೆ.



ನಾಗಾ ಜಾನಪದ ನೃತ್ಯ

ಇರಾನಿನ ಕೆಲವು ಪ್ರದೇಶಗಳಲ್ಲಿ ಸೈಸ್ಟಾನ್ ಎಂಬ 120 ದಿನಗಳ ಮಾರುತಗಳು ಗಂಟೆಗೆ 70 ಮೈಲಿ ವೇಗದಲ್ಲಿ ಬೀಸುತ್ತವೆ. ಕೆಲವು ಸಮಯದಲ್ಲಿ ಬಿರುಗಾಳಿ ಇನ್ನೂ ಪ್ರಕೋಪ ಹೊಂದಿ ಗಂಟೆಗೆ 120 ಮೈಲಿಗಿಂತಲೂ ಹೆಚ್ಚು ವೇಗವಾಗಿ

ಬೀಸುವುದುಂಟು. ತುರ್ಕಿಯ ಕಡೆಯಿಂದ ಪರ್ಷಿಯನ್ ಕೊಲ್ಲಿಯ ಕಡೆ ಇದೇ ರೀತಿ ಬೀಸುವುದು ಶಾಮಲ್ ಮಾರುತ.



ಲಡಾಖಿ ಸ್ತ್ರೀಪುರುಷರು

ಟಿಬೆಟ್ ಇತ್ಯಾದಿ ಎತ್ತರದ ಪ್ರದೇಶಗಳು ಅತ್ಯುಷ್ಣತೆಯ ಕಾಟವನ್ನೇನೊ ತಪ್ಪಿಸಿ ಕೊಳ್ಳುತ್ತವೆ. ಆದರೆ ಶುಷ್ಕ ಮಾರುತಗಳು ಉತ್ತರದ ಕಡೆಯಿಂದ ಬೀಸುವುದರಿಂದ ಪರಿಸ್ಥಿತಿ ಅಸಹನೀಯ.

ಭಯಾನಕ ಹೊಯ್ಗಾಳಿಗಳು ಅರೇಬಿಯ ಮರುಭೂಮಿಯಿಂದ ಬೀಸಿ ದೂರದಲ್ಲಿ ಸಮುದ್ರದಲ್ಲಿರುವ ಹಡಗುಗಳನ್ನು ಮರಳಿನಿಂದ ಬಡಿಯುವುದುಂಟು. ಉತ್ತರ ಚೀನದಲ್ಲಿ ಇಂಥ ಮಾರುತಗಳ ಪ್ರಭಾವ ಅಧಿಕ. ಅಲ್ಲಿನ ದೂಳು ಮಧ್ಯ ಏಷ್ಯದಲ್ಲಿ ವಿಸ್ತರಿಸಿ ನೂರಾರು ಮೈಲಿ ಅಗಲ, ಸಾವಿರಾರು ಅಡಿಗಳ ಆಳ ಸಂಚಿತವಾಗಿರುತ್ತದೆ.

ಹಿಂದೂ ಸಾಗರದಲ್ಲಿನ ಮಾನ್ಸೂನ್ ಮಾರುತಗಳ ಪ್ರಭಾವವನ್ನು ದಕ್ಷಿಣ ಏಷ್ಯದಲ್ಲೆಲ್ಲ ಕಾಣಬಹುದು. ಇವು ಈಶಾನ್ಯದಿಂದ ಆರು ತಿಂಗಳ ಕಾಲ ಬೀಸಿ, ಆಮೇಲೆ ನೈಋತ್ಯದಿಂದ ಬೀಸುತ್ತವೆ. ಪೂರ್ವಕ್ಕೆ ಹೋದಂತೆ ಅವುಗಳ ಪಥವೂ ಕಾಲಾವಧಿಯೂ ವ್ಯತ್ಯಾಸಗೊಳ್ಳುವುವು. ಜೂನಿನಿಂದ ಸೆಪ್ಟೆಂಬರ್ ವರೆಗೆ ಬೀಸುವ ಈ ಮಾರುತಗಳು ಮಳೆಯನ್ನು ತರದಿದ್ದರೆ ಕೋಟ್ಯಂತರ ಜನ ಕ್ಷಾಮಕ್ಕೆ ಬಲಿಯಾಗುತ್ತಾರೆ. ದಕ್ಷಿಣ ಚೀನ ಮತ್ತು ಜಪಾನ್ ತೀರದಲ್ಲಿ ಬೀಸುವ ಕಡಲ್ಗಾಳಿಗಳು ಅಪಾಯಕಾರಿ.

ಏಷ್ಯದಲ್ಲಿ ಮಳೆ ಹಂಚಿಕೆ ಬಲು ಅಸಮವಾದದ್ದು. ಸೈಬೀರಿಯದಲ್ಲಿ ವಾರ್ಷಿಕ ಮಳೆ 20″ ಗಳಿಗಿಂತಲೂ ಕಡಿಮೆ. ಆದರೆ ಜಗತ್ತಿನಲ್ಲೆ ಅತ್ಯಂತ ಹೆಚ್ಚಿನ ಮಳೆ ಬೀಳುವ ಪ್ರದೇಶ ಅಸ್ಸಾಮಿನಲ್ಲಿದೆ. ಚಿರಪೂಂಜಿಯಲ್ಲಿ ವಾರ್ಷಿಕ ಸರಾಸರಿ ಮಳೆ 424″. 24 ಗಂಟೆಗಳಲ್ಲಿ 36″ಕ್ಕೂ ಹೆಚ್ಚು ಮಳೆ ಬೀಳುವುದುಂಟು. ಆದರೆ ಮಳೆ ಹಂಚಿಕೆ ವರ್ಷಪೂರ್ತಿ ಅಸಮರ್ಪಕ. ಇಲ್ಲಿನ ಒಟ್ಟು ಮಳೆ ಐದು ತಿಂಗಳಲ್ಲಿ ಮಾತ್ರ ಬೀಳುತ್ತದೆ ; ವರ್ಷದ ಉಳಿದ ತಿಂಗಳುಗಳಲ್ಲಿ ಸಾಮಾನ್ಯವಾಗಿ ಮಳೆ ಇಲ್ಲ.

ದಕ್ಷಿಣ ಚೀನ, ಬರ್ಮ, ಇಂಡೋ-ಚೀನ, ಸಿಂಹಳ–ಮಲಯ, ಇವು ಅಧಿಕ ಮಳೆಯ ಪ್ರದೇಶಗಳು. ಫಾರ್ಮೋಸದ ಕೆಲವು ಕಡೆಗಳಲ್ಲಿ 300″ ಗಳಷ್ಟು ಮಳೆಯಾಗುವುದುಂಟು. ಉಜಾನ್‌ನಲ್ಲಿ ಇದು ಇನ್ನೂ ಹೆಚ್ಚು. ಮಲಯದಲ್ಲಿ ಒಂದು ಗಂಟೆಯಲ್ಲಿ ಧಾರಾಕಾರ ಮಳೆ ; ಮರುಗಳಿಗೆಯಲ್ಲೆ ಅಸಾಧ್ಯ ಒಣಹವೆ. ವೆರ್ಖೋಯಾನ್ಸ್ಕ್‌ನಲ್ಲಿ ವಾರ್ಷಿಕ ಉಷ್ಣತೆಯ ವ್ಯತ್ಯಾಸ ತೀವ್ರ; ಮಲಯದಲ್ಲಿ 10°.

ಏಷ್ಯದ ಮುಖ್ಯ ವಾಯುಗುಣಗಳಿವು : 1 ಉಷ್ಣವಲಯದ ಮಾನ್ಸೂನ್ ವಾಯುಗುಣ ಭಾರತ, ಪಾಕಿಸ್ತಾನ, ಇಂಡೋ-ಚೀನ, ದಕ್ಷಿಣ ಚೀನಗಳಲ್ಲಿ.

2 ಭೂಮಧ್ಯರೇಖೆಯ ವಾಯುಗುಣ : ಮಲಯ, ಇಂಡೊನೇಷ್ಯಗಳಲ್ಲಿ, ಇದು ಅಕ್ಷಾಂಶ ಹಾಗೂ ಸಾಗರಿಕ ಪ್ರಭಾವಗಳಿಗೆ ತಕ್ಕಂತೆ ಬದಲಾಗುವುದುಂಟು. ಉಷ್ಣತೆ ಸಾಮಾನ್ಯವಾಗಿ ಹೆಚ್ಚು. ವರ್ಷಪೂರ್ತಿ ಮಳೆ. ಆದರೆ ಮೇ–ಅಕ್ಟೋಬರ್ ಅವಧಿಯಲ್ಲಿ ಅತ್ಯಂತ ಹೆಚ್ಚು ಮಳೆ. ಡಿಸೆಂಬರ್–ಜನವರಿಗಳು ಸಾಮಾನ್ಯವಾಗಿ ಶುಷ್ಕ.

3 ಸಮಶೀತೋಷ್ಣ ಮಾನ್ಸೂನ್ ವಾಯುಗುಣ : ಮಧ್ಯ ಮತ್ತು ಉತ್ತರ ಚೀನ. ಮಂಚೂರಿಯ, ಮಧ್ಯ ಮತ್ತು ದಕ್ಷಿಣ ಜಪಾನ್‌ಗಳನ್ನೊಳಗೊಂಡ ಈಶಾನ್ಯ ಏಷ್ಯ.

4 ಮರುಭೂಮಿ ಮತ್ತು ಶುಷ್ಕ ಮರುಭೂಮಿ ವಾಯುಗುಣ : ಮಾನ್ಸೂನ್ ಪ್ರದೇಶದ ವಾಯುವ್ಯಕ್ಕೆ ಅರೇಬಿಯದಿಂದ ಇರಾನ್ ತುರ್ಕಿಸ್ತಾನಗಳ ಮುಖಾಂತರ ಗೋಬಿ ಮರುಭೂಮಿಯ ಅಂಚಿನ ವರೆಗೆ. ಇಲ್ಲಿ ಮಳೆ ಇಲ್ಲ. ಬೆಳೆಯೂ ಇಲ್ಲ. ಇರಾನ್ ವರೆಗಿನ ಪ್ರದೇಶದಲ್ಲಿ ಉಷ್ಣವಲಯ ವಾಯುಗುಣ, ಉಳಿದ ಕಡೆಗಳಲ್ಲಿ ಸಮಶೀತೋಷ್ಣ ವಲಯ ವಾಯುಗುಣ.

5 ಮೆಡಿಟರೇನಿಯನ್ ಸಮುದ್ರ ವಾಯುಗುಣ : ಮರುಭೂಮಿ ವಾಯುಗುಣ ಪ್ರದೇಶದ ವಾಯುವ್ಯಕ್ಕೆ, ಮೆಡಿಟರೇನಿಯನ್ ಸಮುದ್ರದ ಅಂಚಿನಲ್ಲಿ, ಮತ್ತು ತುರ್ಕಿ, ಸಿರಿಯ, ಇಸ್ರೇಲ್, ಜಾರ್ಡನ್‌ಗಳಲ್ಲಿದೆ. ಉಷ್ಣತೆಯ ಒಣ ಬೇಸಗೆಗಳೂ ಮಳೆಯಿಂದ ಕೂಡಿದ ಚಳಿಗಾಲಗಳೂ ಈ ವಾಯುಗುಣದ ವೈಶಿಷ್ಟ್ಯ. ಇದರ ಪ್ರಭಾವವನ್ನು ಇರಾನ್ ಪ್ರಸ್ಥಭೂಮಿಯ ವರೆಗೂ ಕಾಣಬಹುದು.

6 ತಂಡ್ರ ವಾಯುಗುಣ : ಇದು ಉತ್ತರದ ಅಂಚಿನಲ್ಲಿದೆ.

7 ಶೀತ ಹಿತೋಷ್ಣ (ಕೋಲ್ಡ್ ಟೆಂಪರೇಟ್) ವಾಯುಗುಣ: ಸೈಬೀರಿಯದ ಹೆಚ್ಚು ಪ್ರದೇಶಗಳಲ್ಲಿ.

**ಸ್ವಾಭಾವಿಕ ಸಸ್ಯವರ್ಗ :** ಏಷ್ಯದ ಸಸ್ಯವರ್ಗ ಅಲ್ಲಿನ ವಾಯುಗುಣ ಭೂಗುಣಗಳಿಗೆ ಅನುಸಾರವಾದದ್ದು. ಉಷ್ಣತೆಯೂ ತೇವವೂ ಇದನ್ನು ತೀರ್ಮಾನಿಸುತ್ತವೆ. ಉತ್ತರದಲ್ಲಿ ಚಟುವಟಿಕೆಯ ಸಸ್ಯ ಬೆಳೆವಣಿಗೆ ವರ್ಷದಲ್ಲಿ ಕೇವಲ ಮೂರು ತಿಂಗಳು ಮಾತ್ರ; ಆಗ್ನೇಯದಲ್ಲಿ ವರ್ಷಪೂರ್ತಿ ಸಸ್ಯ ಬೆಳೆವಣಿಗೆಯಾಗುತ್ತದೆ.

ಖಂಡದ ಉತ್ತರದ ಅಂಚಿನಲ್ಲಿ ಆರ್ಕ್‌ಟಿಕ್ ತೀರದುದ್ದಕ್ಕೂ ತಂಡ್ರ ಸಸ್ಯವರ್ಗ. ಸಾವಿರಾರು ಮೈಲಿಗಳ ವಿಸ್ತಾರದ ಒಳಮಣ್ಣು ಶಾಶ್ವತವಾಗಿ ನೂರಾರು ಅಡಿಗಳ ವರೆಗೆ ಹೆಪ್ಪುಗಟ್ಟಿರುತ್ತದೆ. ಬೇಸಗೆ ಬಲು ಕಡಿಮೆಯಾದ್ದರಿಂದ ಶಾಶ್ವತ ಸಸ್ಯವರ್ಗವಿಲ್ಲ. ಹಾವಸೆಗಳು ಜೌಗು ಪ್ರದೇಶಗಳಿಗೆ ಕಚ್ಚಿಕೊಂಡಿರುತ್ತವೆ. ನೀರು ಹಬ್ಬೆಗಿಡಗಳು ಬಿಳಲುಗಳಂತೆ ಅಲ್ಲಲ್ಲಿ ಇಳಿ ಬಿದ್ದಿರುವುದುಂಟು. ಆಸ್ಪ್ ಮತ್ತು ಭೂರ್ಜ ಸಸಿಗಳು ನೆಲದ ಮೇಲೆ ಕೆಲವು ಅಂಗುಲಗಳ ವರೆಗೆ ಕಾಣಿಸಿಕೊಳ್ಳುತ್ತವೆ. ತಗ್ಗು ಪ್ರದೇಶಗಳಲ್ಲಿ ತಂಡ್ರ ಸಸ್ಯವರ್ಗದೊಂದಿಗೆ ಚಿಕ್ಕ ಮರಗಳೂ ಬೆರೆತಿರುವುದುಂಟು.




ಏಷ್ಯದ ಸ್ವಾಭಾವಿಕ ಸಸ್ಯವರ್ಗ

1 ತಂಡ್ರ 2 ಪೂರ್ವ ತೀರದ ಕಾಡು 3 ಉಷ್ಣವಲಯದ ಮಾನ್ಸೂನ್ ಸಸ್ಯ 4 ಮರುಭೂಮಿ 5 ಹುಲ್ಲುಗಾವಲು 6 ಶಂಕುಧಾರಿ ಮರಗಳ ಕಾಡು 7 ಮೆಡಿಟರೇನಿಯನ್ ಸಸ್ಯ 8 ಸಮಭಾಜಕವೃತ್ತ ಪ್ರದೇಶದ ಕಾಡುಗಳು

ತಂಡ್ರದ ದಕ್ಷಿಣದಲ್ಲಿ ಖಂಡದ ಅಗಲಕ್ಕೂ ಪ್ರಪಂಚದಲ್ಲೆಲ್ಲ ಅತ್ಯಂತ ವಿಶಾಲವಾದ ಕಾಡುಗಳು ಕಂಡು ಬರುತ್ತವೆ. ಇವನ್ನು ಸೈಬೀರಿಯನ್ ಟೈಗ ಎಂದು ಕರೆಯುತ್ತಾರೆ. ಉತ್ತರ ಯೂರೋಪಿನಿಂದ ಉತ್ತರ ಏಷ್ಯದ ಮುಖಾಂತರ ಪೆಸಿಫಿಕ್‌ವರೆಗೆ ಇವು

ಹರಡಿವೆ. ಪೈನ್, ಲಾರ್ಚ್, ಸ್ಪ್ರೂಸ್, ಫರ್ ಇತ್ಯಾದಿ ಮರಗಳೊಂದಿಗೆ ಭೂರ್ಜ ಹಾಗೂ ಆಸ್ಪ್ ಮರಗಳೂ ಮಿಶ್ರವಾಗಿವೆ. ಅಲ್ಲಲ್ಲಿ ಜೌಗುಪ್ರದೇಶಗಳೂ ಉಂಟು.

ಇವುಗಳ ದಕ್ಷಿಣಕ್ಕೆ ಹಾಗೂ ಆಗ್ನೇಯದಲ್ಲಿ ಚಳಿಗಾಲದಲ್ಲಿ ಎಲೆಗಳುದುರುವ, ಅಗಲವಾದ ಎಲೆಗಳುಳ್ಳ ಮರಗಳ ಕಾಡುಗಳು ಕಂಡುಬರುತ್ತವೆ. ಈಶಾನ್ಯ ಏಷ್ಯದಲ್ಲಿರುವವು ತಣ್ಣಗಿನ ಸಮಶೀತೋಷ್ಣವಲಯ ಕಾಡುಗಳು. ಎತ್ತರದ ಪ್ರದೇಶಗಳಲ್ಲಿ ಮೊನಚಾದ ಎಲೆಗಳ ಮರಗಳುಂಟು. ಓಕ್, ಬೀಚ್ ಮತ್ತು ಕರ್ಪೂರ ಮರಗಳು ಇಲ್ಲಿ ಮುಖ್ಯ. ಉತ್ತರದಲ್ಲಿರುವವು ಕೊಡೆ ರೀತಿಯ ಮರಗಳು.

ಪೂರ್ವ ಏಷ್ಯದ ಉತ್ತರ ಭಾಗದಲ್ಲಿ ಓಕ್, ಎಲ್ಮ್ ಇತ್ಯಾದಿ ಮರಗಳ ಕಾಡುಗಳಿವೆ. ಕೊರಿಯದಲ್ಲಿ ಗಟ್ಟಿಮುಟ್ಟಾದ ಬಿದಿರು ದೊರೆಯುತ್ತದೆ. ಮಧ್ಯ ಚೀನ ಮತ್ತು ಜಪಾನ್‌ಗಳಲ್ಲಿ ಬೆಚ್ಚಗಿರುವ ಸಮಶೀತೋಷ್ಣವಲಯ ಕಾಡುಗಳುಂಟು. ಭೂತಾಕಾರದ ರೆಡ್‌ವುಡ್ ಮರಗಳು ಇಲ್ಲಿವೆ. ಚೀನದಲ್ಲೂ ಕಾಡುಗಳನ್ನು ಕಾಣಬಹುದು. ದಕ್ಷಿಣ ಚೀನದಲ್ಲಿ ಸವನ್ನವುಂಟು. ಆಗ್ನೇಯ ಮತ್ತು ದಕ್ಷಿಣ ಏಷ್ಯದಲ್ಲಿ ಉಷ್ಣವಲಯ ಕಾಡುಗಳು ಇವೆ.

ಸದಾ ಹಸಿರಾಗಿರುವ ಕಾಡುಗಳಲ್ಲಿ ತೇಗ ಹೇರಳ. ಹಡಗು ನಿರ್ಮಾಣದಲ್ಲಿ ತೇಗ ಅಸಮಾನವಾದುದು. ಮಹಾಗನಿಯ ಅನೇಕ ವಿಧಗಳು ಇಂಡೋನೇಷ್ಯ ಫಿಲಿಪೀನ್ಸ್‌ನಲ್ಲಿ ಕಂಡುಬರುತ್ತವೆ.

ಮಧ್ಯದ ಪರ್ವತಗಳಲ್ಲಿರುವ ಪರ್ವತಸಸ್ಯಗಳು ನೆಲದ ಎತ್ತರಕ್ಕೆ ತಕ್ಕಂತೆ ಬದಲಾಗುತ್ತವೆ. ಸಾಮಾನ್ಯ ಎತ್ತರ ಪ್ರದೇಶಗಳಲ್ಲಿ ಓಕ್, ಮೇಪಲ್ ಇತ್ಯಾದಿ ಗಟ್ಟಿ ಮರಗಳು ಬೆಳೆಯುತ್ತವೆ. ಹಿಮಾಲಯಗಳ ದಕ್ಷಿಣದಲ್ಲಿ 17,000′ ವರೆಗೆ ಇರುವವು ಎಲೆ ಮೊನೆಚಾದ ಕಾಡುಗಳು. ಹಿಮರೇಖೆಯ ವರೆಗೆ ಇರುವುದು ಆಲ್ಪೈನ್ ಸಸ್ಯವರ್ಗ.

ಮರುಭೂಮಿ ಪ್ರದೇಶದ ಅಂಚುಗಳಲ್ಲಿ, ಅರೇಬಿಯದಿಂದ ಭಾರತದ ವರೆಗೆ ಜಾಲಿಯ ಮರಗಳು ಮುಳ್ಳಿನ ಪೊದೆಗಳೊಂದಿಗೆ ಬೆಳೆಯುತ್ತವೆ. ಇದರಿಂದ ನರುಗಂಪುಳ್ಳ ಅಂಟುಗಳು, ರಾಳ ಮತ್ತು ವೈದ್ಯಕ್ಕೆ ಬೇಕಾಗುವ ಔಷಧಗಳನ್ನು ತಯಾರಿಸುತ್ತಾರೆ. ಓಯಸಿಸ್‌ಗಳಿರುವ ಕಡೆ ಖರ್ಜೂರದ ಮರಗಳಿವೆ.

ಏಷ್ಯ ಮೈನರಿನಲ್ಲಿ ಆಲಿವ್, ಓಕ್ ಮರಗಳಿರುವ ಮೆಡಿಟರೇನಿಯನ್ ಸಸ್ಯವರ್ಗವನ್ನು ಕಾಣಬಹುದು.

ಅರೇಬಿಯದಲ್ಲಿನ ಕೆಲವೇ ಸಸ್ಯಗಳು ಬೂದುಬಣ್ಣ ಇಲ್ಲವೆ ಬೆಳ್ಳಗಿರುತ್ತವೆ.

ದಕ್ಷಿಣ ರಷ್ಯದಿಂದ ಮಂಚೂರಿಯದ ವರೆಗೆ ಹಬ್ಬಿರುವುದು ಸ್ಟೆಪ್—ಹುಲ್ಲುಗಾವಲು. ಮಧ್ಯೆ ಮಧ್ಯೆ ಇರುವ ಪರ್ವತಾವಳಿಗಳು ಮತ್ತು ಮರುಭೂಮಿಗಳಿಂದ ಸ್ಟೆಪ್ ಅಷ್ಟು ಪ್ರಭಾವಿತವಾಗಿಲ್ಲ. ತುರ್ಕಿಸ್ತಾನ್ ಮತ್ತು ಮಧ್ಯ ಏಷ್ಯದ ಹುಲ್ಲುಗಾವಲುಗಳು ಅನಾದಿಕಾಲದಿಂದಲೂ ದನಕರುಗಳ ಸಾಕಣೆಕೆಗೆ ಅನುಕೂಲ ಮಾಡಿಕೊಟ್ಟಿವೆ.



ನರಿಯ ಗಾತ್ರದ ನಾಯಿಜಾತಿಯ ಪ್ರಾಣಿ

**ಪ್ರಾಣಿವರ್ಗ :** ಏಷ್ಯದ ವೈಶಾಲ್ಯಕ್ಕೆ ತಕ್ಕಂತೆ ವೈವಿಧ್ಯಪೂರ್ಣ ಪ್ರಾಣಿವರ್ಗವಿದೆ. ಕುದುರೆ ಇಲ್ಲಿನ ಅಲೆಮಾರಿ ಜನಾಂಗಕ್ಕೆ ಸುಮಾರು 5,000 ವರ್ಷಗಳಿಂದಲೂ



ಕಂಬಳಿ ಹುಳು

ಸೇವೆ ಸಲ್ಲಿಸುತ್ತ ಬಂದಿದೆ. ಈ ಖಂಡ ಶೀಘ್ರಗಾಮಿ ಹೇಸರಗತ್ತೆಗಳ ಮೂಲಸ್ಥಾನ. ಪ್ರಾಚೀನತಮ ಮೇಕೆಗಳಿರುವುದು ತುರ್ಕಿಯಲ್ಲಿ. ಒಂಟೆ ಮರುಭೂಮಿಯ ಅತ್ಯಮೂಲ್ಯ ಪ್ರಾಣಿ. ಟಿಬೆಟಿನಲ್ಲಿ ಯಾಕ್ ಭಾರ ಹೊರುವುದಲ್ಲದೆ ಬೆಣ್ಣೆ, ಚರ್ಮ ಮತ್ತು ಮಾಂಸಗಳನ್ನು ಒದಗಿಸುತ್ತದೆ.

ಕಾಡುವೃಷಭಗಳು ಭಾರತ ಮಲಯಗಳಲ್ಲಿ ಕಂಡುಬರುತ್ತವೆ. ಭಾರತದಿಂದ ಇಂಡೋನೇಷ್ಯದ ವರೆಗೆ ಎಮ್ಮೆಗಳನ್ನು ಕಾಣಬಹುದು.

ಸೈಬೀರಿಯದ ವಿಶಾಲ ಪ್ರದೇಶಗಳಲ್ಲಿ ಹಿಮಸಾರಗಗಳು ಗುಂಪು ಗುಂಪಾಗಿ ಓಡಾಡುತ್ತವೆ. ಹಿಮನೆಲದ ಮೇಲೆ ಚಕ್ರಗಳಿಲ್ಲದ ವಾಹನಗಳನ್ನೆಳೆಯಲು ಇವು ಸಹಾಯಕ. ಚರ್ಮ ಮತ್ತು ಮಾಂಸಗಳನ್ನೂ ಇವು ಒದಗಿಸುತ್ತವೆ.

ನೇಪಾಳ, ಸಿಕ್ಕಿಂ, ಕಾಶ್ಮೀರ ಇತ್ಯಾದಿ ಪರ್ವತ ಪ್ರದೇಶಗಳಲ್ಲಿ ಕಸ್ತೂರಿ ಮೃಗಗಳು ಧಾರಾಳ. ಪಾಮಿರಿನಲ್ಲಿಯ ಓವಿಸ್ ಪೋಲಿ ಎನ್ನುವ ಹಿಮ ಕುರಿಗಳ ಕೋಡುಗಳು ಅತ್ಯಂತ ಉಪಯುಕ್ತ. ಏಷ್ಯದಲ್ಲಿ ಅನೇಕ ರೀತಿಯ ಚಿಗರಿಗಳುಂಟು. ಬೊಗಳುವ ಜಿಂಕೆಗಳು ಚೀನದಲ್ಲಿವೆ.

ಸಿಂಹಳ, ಸುಮಾತ್ರ, ಭಾರತ, ಬರ್ಮ, ಮಲಯಗಳಲ್ಲಿ ಇಂದಿಗೂ ಆನೆಗಳ ಹಿಂಡುಗಳಿವೆ. ಇವುಗಳನ್ನು ಪಳಗಿಸಿ, ಅನೇಕ ರೀತಿಯ ಕಾರ್ಯಗಳನ್ನು ಇವುಗಳಿಂದ ಮಾಡಿಸಿಕೊಳ್ಳುತ್ತಾರೆ. ಈ ಖಂಡದಲ್ಲಿ ಮೂರು ರೀತಿಯ ನೀರಾನೆಗಳಿವೆ—ಒಂದು ಕೊಂಬಿನವು ನೇಪಾಳ, ಅಸ್ಸಾಂಗಳಲ್ಲಿವೆ; ಎರಡು ಕೊಂಬಿನವು ಜಾವ, ಸುಮಾತ್ರ, ಮಲಯ, ಬರ್ಮ, ಬೋರ್ನಿಯೊಗಳಲ್ಲಿವೆ. ಮಲಯ, ಸುಮಾತ್ರಗಳಲ್ಲಿ ಘೇಂಡಾಮೃಗಗಳಿವೆ. ಭಾರತದಲ್ಲಿ ಕಿರುಬಗಳೂ ಹಿಮಾಲಯ, ಕುನ್‌ಲೂನ್‌ಗಳಲ್ಲಿ ಚಿರತೆಗಳೂ ಉಂಟು. ಪ್ರಪಂಚದಲ್ಲೆ ವಿರಳವಾಗುತ್ತಿರುವ ಸಿಂಹಗಳು ಗುಜರಾತಿನ ಗಿರ್ ಕಾಡುಗಳಲ್ಲಿವೆ. ಸೈಬೀರಿಯ ಹಾಗೂ ಭಾರತದ ಕಾಡುಗಳಲ್ಲಿ ತೋಳಗಳೂ ಉಂಟು.

ಏಷ್ಯದಲ್ಲಿ ಅನೇಕ ವಿಧವಾದ ಕರಡಿಗಳಿವೆ. ಇವುಗಳಲ್ಲಿ ಅತ್ಯಂತ ದೊಡ್ಡದಾದ ಬಿಳಿ ಕರಡಿಗಳು ಆಗಾಗ ಆರ್ಕ್‌ಟಿಕ್ ತೀರಗಳಲ್ಲಿ ಕಂಡುಬರುತ್ತವೆ.

ಮಾಂಸಾಹಾರಿಗಳಲ್ಲಿ ಅತ್ಯಂತ ಭಯಾನಕ ಪ್ರಾಣಿ ಎಂದರೆ ಹುಲಿ. ಏಷ್ಯದಲ್ಲಿ ವಿನಾ ಮತ್ತೆಲ್ಲೂ ಇವು ದೊರೆಯುವುದಿಲ್ಲ. ಸಾಮಾನ್ಯವಾಗಿ ಭಾರತ, ಬೋರ್ನಿಯೊ, ಸಿಂಹಳ, ಮಲಯ, ಸುಮಾತ್ರ, ಜಾವಾ ಮತ್ತು ಬಾಲಿಗಳಲ್ಲಿನ ಕಾಡುಗಳಲ್ಲಿ ಇವೆ. ಸೈಬೀರಿಯದ ಹುಲಿಗೆ ಒತ್ತಾದ ಕೂದಲು ಒಂದು ವಿಶೇಷ.

ಚೀನದಲ್ಲಿ ಕಂಡುಬರುವ ಪಾಂಡ ಎನ್ನುವ ಮಾಂಸಾಹಾರಿ ಬಹಳ ವಿಚಿತ್ರ ಪ್ರಾಣಿ. ಕರಡಿಯಂತೆ ಕಾಣುವ ಈ ಪ್ರಾಣಿಗೆ ಬಿದಿರಿನ ಮೊಳಕೆಯೇ ಆಹಾರ. ಇದರ ತೂಕ 350 ಪೌಂಡು ಗಳಿಗಿಂತಲೂ ಹೆಚ್ಚು.

ದಕ್ಷಿಣ ಏಷ್ಯದಲ್ಲಿ ಅನೇಕ ರೀತಿಯ ಮಂಗಗಳನ್ನೂ ಕಾಣಬಹುದು. ಮಲಯದಲ್ಲಿರುವ ಗಿಬನ್ ಎನ್ನುವ ನಿಡುದೋಳಿನ ವಾನರ ಮನುಷ್ಯನಂತೆ ಎರಡು ಕಾಲ ಮೇಲೆ ಚಲಿಸುತ್ತದೆ. ಮರದಲ್ಲಿ ವಾಸಿಸುವ ಉದ್ದತೋಳಿನ ಒರ್ರ್ಯಾಂಗೂಟ್ಯಾನ್ ಎನ್ನುವ ಉದ್ದ ತೋಳಿನ ನರವಾನರ ಬೋರ್ನಿಯೊ, ಸುಮಾತ್ರ ಗಳಲ್ಲಿ ವಾಸಮಾಡುತ್ತದೆ.

ಏಷ್ಯದಲ್ಲಿ ಅನೇಕ ರೀತಿಯ ಪಕ್ಷಿಗಳಿವೆ. ಬರ್ಮ, ಥೈಲೆಂಡ್, ಇಂಡೋ–ಚೀನ, ಮಲೆಯ, ಸುಮಾತ್ರ, ಬೋರ್ನಿಯೊ ಕಾಡುಗಳಲ್ಲಿ ಜೀವಂಜೀವ, ಕೊಕ್ಕರೆ, ಮತ್ತು ಬೆಳ್ಳಕ್ಕಿಗಳು ಉಂಟು. ಲ್ಯಾಮ್ಮರ್ ಜೀಯಿರ್ ಎಂಬ ಬೃಹತ್ ಪಕ್ಷಿಯ ರೆಕ್ಕೆಯ ಹರಡು $10\frac{1}{2}'$. ನವಿಲುಗಳೂ ಡೇಗೆಗಳೂ ಬೇಕಾದಷ್ಟು ಕಂಡುಬರುತ್ತವೆ. ಪಾರಿವಾಳ, ಕೆಂಪುಂಗುರದ ಉದ್ದ ತೋಕೆಯ ಸಣ್ಣಗಿಳಿ, ಕೊಂಬುಕೊಕ್ಕಿನ ಹಕ್ಕಿ, ಕೋಗಿಲೆ, ಹದ್ದು, ಗಿಡುಗ. ಮರಕುಟುಕ, ಕಾಗೆ, ಮೈನ––ಇತ್ಯಾದಿ ಪಕ್ಷಿಗಳು ದಕ್ಷಿಣ ಮತ್ತು ಆಗ್ನೇಯ ಏಷ್ಯಗಳಲ್ಲಿ ಧಾರಾಳ.



ಮರಳುಗಾಡಿನ ಒಂದು ಹಲ್ಲಿ

**ಭಾ**ರತದಲ್ಲಿರುವ ವಿಷಸರ್ಪಗಳು ಅಸಂಖ್ಯಾತ. ನಾಗರಹಾವು ಪ್ರತಿವರ್ಷ ಸಾವಿರಾರು ಜನರನ್ನು ಆಹುತಿ ತೆಗೆದುಕೊಳ್ಳುತ್ತದೆ. ಹೆಬ್ಬಾವುಗಳೂ ಹೇರಳ. ಆಮೆಗಳೂ ಹೆಚ್ಚು.



ಏಷ್ಯನ್ ಮರಳುಗಾಡಿನ ಒಂದು ವಿಷಸರ್ಪ

ಭಾರತದ ನದಿಗಳಲ್ಲೂ ಮಲಯದ ಬಳಿಯ ಸಮುದ್ರ ತೀರಗಳಲ್ಲೂ ಮೊಸಳೆಗಳುಂಟು. ಡೂಗಾಂಗ್ ಎನ್ನುವ ಸಸ್ಯಾಹಾರಿ ಸಸ್ತನಿ ಪ್ರಾಣಿ ಹಿಂದೂ ಸಾಗರದಲ್ಲಿ ಕಾಣುತ್ತದೆ. ಆದರೆ ಕಡಲ ಹಂದಿಗಳು ಗಂಗಾನದಿಯಲ್ಲಿ ಮಾತ್ರ ಉಂಟು. ಬೇಕಲ್ ಸರೋವರದಲ್ಲಿ ಸಿಹಿನೀರಿನ ತಿಮಿಂಗಿಲಗಳನ್ನು ಕಾಣಬಹುದು. ಅಸಂಖ್ಯಾತ ಉರಗಗಳಿದ್ದರೂ ಊಸರವಳ್ಳಿ, ಹೆಂಟೆಗೊದ್ದಗಳು ಭಾರತ ಮತ್ತು ಸಿಂಹಳಗಳಲ್ಲಿ ಮಾತ್ರ ಕಂಡುಬರುತ್ತವೆ.

**ವ್ಯವಸಾಯ ಮತ್ತು ಪಶುಪಾಲನೆ :** ಈ ಶತಮಾನದ ಆದಿಯಲ್ಲಿ ಪ್ರಾರಂಭವಾದ ವ್ಯವಸಾಯಕ್ರಾಂತಿಯಿಂದ ಸೋವಿಯತ್ ಏಷ್ಯದ ಸ್ವರೂಪವೇ ಬದಲಾಯಿತೆನ್ನಬಹುದು. ಕಪ್ಪುಮಣ್ಣಿನಿಂದ ಕೂಡಿರುವ ಸ್ಟೆಪ್ ಸೋವಿಯತ್ ಒಕ್ಕೂಟದ ಹೆಚ್ಚುವರಿ ಧಾನ್ಯ ಬೆಳೆಯುವ ಪ್ರದೇಶ. ಗೋದಿ, ರೈ ಮತ್ತು ಬಾರ್ಲಿ ಮುಖ್ಯ ಬೆಳೆ. ಸೋವಿಯತ್ ಮಧ್ಯ ಏಷ್ಯ ಮತ್ತು ಟ್ರಾನ್ಸ್ ಕಕೇಷಿಯಗಳಲ್ಲಿ ಹತ್ತಿ ಪ್ರಮುಖ ಬೆಳೆ. ಸೂರ್ಯಕಾಂತಿ ಮತ್ತು ಅಗಸೆಗಳನ್ನು ಎಣ್ಣೆಗಾಗಿ ಬೆಳೆಯುತ್ತಾರೆ.

ಶುಷ್ಕ ಸ್ಟೆಪ್‌ಗಳಲ್ಲಿ ಕುರಿ ಮತ್ತು ಮೇಕೆಗಳನ್ನೂ ವ್ಯವಸಾಯ ಪ್ರದೇಶಗಳಲ್ಲಿ ದನಕರುಗಳನ್ನೂ ತಂಡ್ರ ಟೈಗಗಳಲ್ಲಿ ಹಿಮಸಾರಗಗಳನ್ನೂ ಸಾಕುತ್ತಾರೆ.

ನೈಋತ್ಯ ಏಷ್ಯದಲ್ಲಿ (ಮಧ್ಯ ಪ್ರಾಚ್ಯ) ಭೂಮಧ್ಯ ಸಮುದ್ರದ ಕಡೆಯಿಂದ ಪೂರ್ವದ ಕಡೆಗೆ ವ್ಯವಸಾಯ ಪ್ರದೇಶ ಕಡಿಮೆಯಾಗುತ್ತ ಹೋಗಿ, ಸೌದಿ ಅರೇಬಿಯದಲ್ಲಿ ಇಲ್ಲದಂತಾಗಿದೆ. ಜೋಳ ಬತ್ತಗಳನ್ನು (ನೀರಾವರಿ ಬೆಳೆ) ಇರಾಕ್ ತುರ್ಕಿ; ಕ್ಯಾಸ್ಪಿಯನ್ ತೀರಗಳಲ್ಲೂ ಬೀಟ್‌ರೂಟ್ ಹತ್ತಿಗಳನ್ನು ತುರ್ಕಿ, ಇರಾನ್, ಇಸ್ರೇಲ್‌ಗಳಲ್ಲೂ ಬೆಳೆಯುತ್ತಾರೆ. ಇಸ್ರೇಲ್, ಲೆಬನನ್, ಸಿರಿಯಗಳಲ್ಲಿ ಈಳೆಜಾತಿಯ ಹಣ್ಣುಗಳನ್ನು ಬೆಳೆಯುತ್ತಾರಲ್ಲದೆ. ಅವನ್ನು ರಫ್ತು ಕೂಡ ಮಾಡುತ್ತಾರೆ. ಪ್ರಪಂಚದ 415 ಪಾಲು ಖರ್ಜೂರ ಇರಾನಿನಿಂದ ಬರುತ್ತದೆ. ಅರೇಬಿಯದಲ್ಲೂ ಇದನ್ನು ಬೆಳೆಯುತ್ತಾರೆ. ತುರ್ಕಿ, ಇರಾನ್‌ಗಳಲ್ಲಿ ದ್ರಾಕ್ಷಿಯನ್ನು ಬೆಳೆಸಿ ಒಣಗಿಸುತ್ತಾರೆ.

ಮರುಭೂಮಿ ಮತ್ತು ಅರೆ ಮರುಭೂಮಿಗಳಲ್ಲಿ ಕುರಿ ಮತ್ತು ಮೇಕೆಗಳನ್ನು ಸಾಕುವುದುಂಟು. ಅರೇಬಿಯದ ಠಾಕಣಗಳು ಬಲು ಪ್ರಸಿದ್ಧ.

ಭಾರತ, ಪಾಕಿಸ್ತಾನ. ಸಿಂಹಳಗಳಲ್ಲಿ ಸೇಕಡಾ 60 ಭಾಗದ ಭೂಮಿ ವ್ಯವಸಾಯಕ್ಕೆ ಒಳಪಟ್ಟಿದೆ. ಬತ್ತ, ಗೋದಿ, ಮಿಲೆಟ್, ಜೋಳ—ಇಲ್ಲಿನ ಮುಖ್ಯ ಆಹಾರ ಬೆಳೆಗಳು. ಬಂಗಾಳ, ಅಸ್ಸಾಂ, ಒರಿಸ್ಸ, ದಖಿನ್ ಪ್ರಸ್ಥಭೂಮಿಯ ತೀರ ಮತ್ತು ಸಿಂಹಳಗಳಲ್ಲಿ ಬತ್ತದ ಸಾಂದ್ರಬೇಸಾಯವಾಗುತ್ತಿದೆ. ಪಂಜಾಬ್ (ಭಾರತ ಮತ್ತು ಪಾಕೀಸ್ತಾನ್) ಮತ್ತು ಉತ್ತರ ಪ್ರದೇಶಗಳಲ್ಲಿ ಗೋದಿ ಮುಖ್ಯ ಬೆಳೆ. ಗಂಗಾನದಿಯ ಮುಖಜಭೂಮಿಯಲ್ಲಿ (ಭಾರತ ಮತ್ತು ಪಾಕಿಸ್ತಾನ್) ಉತ್ತಮ ಮಟ್ಟದ ಸಣಬನ್ನು ಬೆಳೆಯಲಾಗುತ್ತದೆ. ಪಶ್ಚಿಮ ಪಾಕಿಸ್ತಾನ ಮತ್ತು ದಖಿನ್ ಪ್ರಸ್ಥಭೂಮಿಯ ವಾಯುವ್ಯ ಭಾಗಗಳಲ್ಲಿ ಹತ್ತಿಯನ್ನು ಹೇರಳವಾಗಿ ಬೆಳೆಯುತ್ತಾರೆ. ಅಸ್ಸಾಂ, ಪಶ್ಚಿಮ ಬಂಗಾಳ, ಸಿಲ್ಹೆಟ್, ನೀಲಗಿರಿ ಬೆಟ್ಟಗಳು, ಸಿಂಹಳಗಳಲ್ಲಿ ವಿಶಾಲ ಚಹ ತೋಟಗಳಿವೆ. ಕೇರಳ ಸಿಂಹಳಗಳಲ್ಲಿ ರಬ್ಬರ್ ಮತ್ತು ಮೈಸೂರಿನಲ್ಲಿ ಕಾಫಿ ತೋಟಗಳಿವೆ.



ಅರಬ್ಬಿ ಜಿಂಕೆ

ಆಗ್ನೇಯ ಏಷ್ಯದ ಫಲವತ್ತಾದ ಪ್ರದೇಶಗಳಲ್ಲಿ ಬತ್ತವನ್ನು ಬೆಳೆಯಲಾಗುತ್ತದೆ. ಇರವಾಡಿ, ಮೇನಾಂ, ಮೇಕಾಂಗ್ ನದಿಗಳ ಮುಖಜಭೂಮಿ ಪ್ರದೇಶಗಳಲ್ಲಿ ಅನೇಕ ಶತಮಾನಗಳಿಂದ ಬತ್ತ ಬೆಳೆಯುತ್ತಿದ್ದಾರೆ. ಇಲ್ಲಿಂದ ಬೇರೆ ಕಡೆಗೆ ಇದರ ಹೆಚ್ಚುವರಿ ರಫ್ತಾಗುತ್ತದೆ. ಉತ್ತರ ವಿಯೆಟ್ನಾಂ ಹಾಗೂ ಜಾವಾದಲ್ಲಿ ಬೆಳೆಯುವ ಬತ್ತ ಸ್ಥಳೀಯ ಅವಶ್ಯಕತೆಗಳನ್ನು ಪೂರೈಸಲು ಸಾಕು. ಜಾವಾ, ಫಿಲಿಪೀನ್‌ಗಳಲ್ಲಿ ಬೆಟ್ಟಗಳನ್ನು ಮೆಟ್ಟಿಲುಮೆಟ್ಟಿಲಾಗಿ ಕಡಿದು, ಬತ್ತದ ಗದ್ದೆಗಳನ್ನು ಮಾಡಲಾಗಿದೆ. ಮಧ್ಯ ಬರ್ಮ, ಥೈಲೆಂಡ್, ಕೋರಟ್ ಪ್ರಸ್ಥಭೂಮಿಗಳಲ್ಲಿ ನೀರಾವರಿ ಅನುಕೂಲದಿಂದ ಬತ್ತ ಬೆಳೆಯಲಾಗುತ್ತದೆ. ತಂಬಾಕು, ಕಬ್ಬು, ಸೋಯಾಬೀನುಗಳನ್ನು ಇಲ್ಲೆಲ್ಲ ಬೆಳೆಯುತ್ತಾರೆ. ಇಲ್ಲಿನ ಬೆಳೆಗಳಲ್ಲಿ ತೋಟದವು ಬಲು ಮುಖ್ಯ. ಮಲೆಯ ಮತ್ತು ಇಂಡೊನೇಷ್ಯಗಳು ಪ್ರಪಂಚದ ಹೆಚ್ಚು ಪಾಲು ಸ್ವಾಭಾವಿಕ ರಬ್ಬರನ್ನು ಒದಗಿಸುತ್ತವೆ. ದಕ್ಷಿಣ ವಿಯೆಟ್ನಾಂ ಮತ್ತು ಥೈಲೆಂಡ್‌ಗಳಲ್ಲೂ ಇದನ್ನು ಬೆಳೆಯುತ್ತಾರೆ. ಇಂಡೊನೇಷ್ಯ, ಮಲೆಯಗಳು ಕೊಬ್ಬರಿ ತಯಾರಿಕೆಯಲ್ಲಿ ಪ್ರಮುಖವಾದವು. ಮಲೆಯ, ಸುಮಾತ್ರಗಳಲ್ಲಿ ತಾಳೆಮರ ಹೆಚ್ಚು ಜನಪ್ರಿಯ. ಜಾವಾದಲ್ಲಿ ಚಹ ಬೆಳೆಯುತ್ತಾರೆ.

ಚೀನದ ಉತ್ತರದಲ್ಲಿ ಗೋದಿ, ಬಾರ್ಲಿ, ಸೋಯಾಬೀನ್ಸ್ ಬೆಳೆಯುತ್ತಾರೆ. ದಕ್ಷಿಣ ಚೀನ ಮತ್ತು ಫಾರ್ಮೋಸಗಳಲ್ಲಿ ಬತ್ತ ಪ್ರಮುಖ ಬೆಳೆ. ಮಂಚೂರಿಯದಲ್ಲಿ ಸೋಯಾಬೀನ್ಸನ್ನೂ ಚೀನದ ಉತ್ತರಾರ್ಧದಲ್ಲಿ ಜೋಳವನ್ನೂ ಬೆಳೆಯಲಾಗುವುದು. ಉತ್ತರ ಚೀನ ಮಧ್ಯ ಯಾಂಗ್‌ಟ್ಸಿಗಳಲ್ಲಿ ಹತ್ತಿಯೂ ದಕ್ಷಿಣ ಚೀನ ಬೆಟ್ಟಗಳ ಮತ್ತು ಫಾರ್ಮೋಸ ಪ್ರದೇಶಗಳಲ್ಲಿ ಚಹವೂ ಮುಖ್ಯ ವಾಣಿಜ್ಯ ಬೆಳೆಗಳು. ಎಳ್ಳು, ರೇಪ್ ಮತ್ತು ಸೋಯಾಬೀನ್ಸ್ ಬೆಳೆಯಲ್ಲಿ ಚೀನದ್ದು ಮೊದಲನೆಯ ಸ್ಥಾನ. ದಕ್ಷಿಣ ಚೀನ ಮತ್ತು ಫಾರ್ಮೋಸಗಳಲ್ಲಿ ಕಬ್ಬು, ತಂಬಾಕು ಮತ್ತು ಈಳೆಜಾತಿಯ ಹಣ್ಣುಗಳನ್ನು ಬೆಳೆಯಲಾಗುತ್ತದೆ.

ಜಪಾನ್ ಕೊರಿಯಗಳಲ್ಲಿ ವ್ಯವಸಾಯಕ್ಕೆ ತಂದಿರುವ ಪ್ರದೇಶಗಳು ಬಲು ಕಡಿಮೆ. ಆದರೂ ಉತ್ತಮ ವ್ಯವಸಾಯ ವಿಧಾನಗಳನ್ನು ಅನುಸರಿಸಿ, ಹೆಚ್ಚಿನ ಬೆಳೆ ತೆಗೆಯುತ್ತಾರೆ. ಜಪಾನಿನಲ್ಲಿ ಬತ್ತದ ಸಾಗುವಳಿಯಾಗುವುದು ನೀರಾವರಿಯಿಂದ. ಉತ್ತರ ಕೊರಿಯದಲ್ಲಿ ಮಿಲೆಟ್ಸ್ ಮತ್ತು ಗೋದಿಯೂ ದಕ್ಷಿಣ ಕೊರಿಯದಲ್ಲಿ ಬಾರ್ಲಿಯೂ ಮುಖ್ಯ ಆಹಾರ ಬೆಳೆಗಳು. ಜಪಾನಿನಲ್ಲಿ ಗೋದಿ, ಬಾರ್ಲಿ, ಓಟ್ಸ್—ಇವು ಬತ್ತದ ಅನಂತರದ ಮುಖ್ಯ ಬೆಳೆಗಳು. ಕೊರಿಯದಲ್ಲಿ ಹತ್ತಿಯೂ ದಕ್ಷಿಣ ಜಪಾನಿನಲ್ಲಿ ಹಿಪ್ಪುನೇರಳೆ ಮತ್ತು ಚಹವೂ ವಾಣಿಜ್ಯ ಬೆಳೆಗಳು.

**ಖನಿಜಗಳು ಮತ್ತು ಕೈಗಾರಿಕೆಗಳು :** ಏಷ್ಯದಲ್ಲಿ ಹೇರಳವಾದ ಖನಿಜ ಸಂಪತ್ತಿದೆ. ಮುಖ್ಯವಾದ ವಲಯಗಳಿವು.

(ಎ) ಸೋವಿಯತ್ ಏಷ್ಯ : ಕ್ಯಾಸ್ಪಿಯನ್ ಸುತ್ತಮುತ್ತ ಎಣ್ಣೆಬಾವಿಗಳಿವೆ. ಮಧ್ಯ ಏಷ್ಯದ ಫರ್ಗನಾ, ಲೀನಾ ಬಯಲುಗಳಲ್ಲೂ ಸ್ಯಾಕಲೀನ್ ಬಯಲುಗಳಲ್ಲೂ ಎಣ್ಣೆ ಸಾಮಾನ್ಯ ಪ್ರಮಾಣದಲ್ಲಿ ದೊರೆಯುತ್ತದೆ.

ಪಶ್ಚಿಮ ಸೈಬೀರಿಯದ ಕುಜ್ನೆಟ್‌ಸ್ಕ್ ಬಯಲು ಸೋವಿಯತ್ ಒಕ್ಕೂಟದ ಎರಡನೆಯ ದೊಡ್ಡ ಕಲ್ಲಿದ್ದಲುಗಣಿ ಪ್ರದೇಶ. ಕಾಜ಼ಾಕ್‌ಸ್ತಾನದಲ್ಲಿನ ಕಾರಾಗಾಂಡಾ ಕಲ್ಲಿದ್ದಲು ಗಣಿಗಳು ಯೂರಲ್ ಪರ್ವತಗಳಲ್ಲಿರುವ ಲೋಹ ಕೈಗಾರಿಕೆಗಳಿಗೆ ಕಲ್ಲಿದ್ದಲನ್ನು ಒದಗಿಸುತ್ತವೆ. ಪೂರ್ವ ಸೈಬೀರಿಯದಲ್ಲಿನ ಇರ್ಕಟ್‌ಸ್ಕ್ ಮತ್ತು ವ್ಲಾಡಿವೋಸ್ಟಾಕ್ ಬಯಲುಗಳಲ್ಲಿನ ಕಲ್ಲಿದ್ದಲು ಸ್ಥಳೀಯ ಕೈಗಾರಿಕೆಗಳಿಗೆ ಸಹಾಯಕವಾಗಿರುವುದಲ್ಲದೆ, ಟ್ರಾನ್ಸ್–ಸೈಬೀರಿಯನ್ ರೈಲ್ವೆಗೆ ಅನುಕೂಲಕರ. ಟುಂಗುಸ್ಕ ಮತ್ತು ಲೀನಾ ಬಯಲುಗಳಲ್ಲಿ ಕಲ್ಲಿದ್ದಲು ನಿಕ್ಷೇಪಗಳು ಹೇರಳವಾಗಿವೆಯೆಂದು ನಂಬಲಾಗಿದೆ.

ಮಧ್ಯ ಏಷ್ಯದ ಟುಯ–ಮುಯುನ್‌ನಲ್ಲಿ ಯುರೇನಿಯಂ ದೊರೆಯುತ್ತದೆ. ಕುಜ್ನೆಟ್‌ಸ್ಕ್, ಖಬರೋವ್‌ಸ್ಕ್, ಕಾಜ಼ಾಕ್‌ಸ್ತಾನಗಳಲ್ಲಿ ಕಬ್ಬಿಣದ ಅದುರು, ಮ್ಯಾಂಗನೀಸ್, ಕ್ರೋಂ, ಕೋಬಾಲ್ಟ್ ಇವೆ. ಬಾಲ್ಕ್ಯಾಷ್ ಸರೋವರದ ಪೂರ್ವದಲ್ಲಿ ತಾಮ್ರವುಂಟು. ಕಾಜ಼ಾಕ್‌ಸ್ತಾನ್, ಮಧ್ಯ ಏಷ್ಯ, ಪಶ್ಚಿಮ ಸೈಬೀರಿಯಗಳಲ್ಲಿ ಅನೇಕ ತಾಮ್ರದ ಗಣಿಗಳಿವೆ. ಪೂರ್ವ ಸೈಬೀರಿಯದಲ್ಲಿ ತವರವಿದೆ. ಕುಜ್ನೆಟ್‌ಸ್ಕ್ ಸತುವಿಗೂ ನೋರಿಲಿಸ್ಕ್ ನಿಕಲಿಗೂ ಕಾಜ಼ಾಕ್‌ಸ್ತಾನ್ ಮತ್ತು ಕುಜ್ನೆಟ್‌ಸ್ಕ್ ಅಲ್ಯೂಮಿನಿಯಂಗೂ ಪ್ರಸಿದ್ಧ. ಇವಲ್ಲದೆ ಸೈಬೀರಿಯದಲ್ಲಿ ನಿಕಲ್, ಬಾಕ್ಸೈಟ್ ಮತ್ತು ಅಲ್ಯೂಮಿನಿಯಂ, ಯೂರಲ್ ಪರ್ವತಗಳಲ್ಲಿ ತಾಮ್ರ, ಕ್ರೋಮಿಯಂ, ಚಿನ್ನ ಮತ್ತು ಪಚ್ಚೆಗಳ ಹೇರಳ ನಿಕ್ಷೇಪಗಳಿವೆಯೆಂದು ಊಹಿಸಲಾಗಿದೆ.

ಖನಿಜಗಳು ಸಿಗುವ ಪ್ರದೇಶಗಳಲ್ಲಿ ಕೈಗಾರಿಕೆಗಳು ಬೆಳೆದಿರುವುದು ಆಶ್ಚರ್ಯವಲ್ಲ. ಆದರೂ ಸೋವಿಯತ್ ಒಕ್ಕೂಟದ ಐರೋಪ್ಯ ಪ್ರದೇಶದಷ್ಟು ಮಟ್ಟಿಗೆ ಏಷ್ಯನ್ ಪ್ರದೇಶದ ಅಭಿವೃದ್ಧಿಯಾಗಿಲ್ಲ. ಕುಜ್ನೆಟ್‌ಸ್ಕ್‌ನಲ್ಲಿ ಅನೇಕ ಭಾರಿ ಕೈಗಾರಿಕೆಗಳು ಸ್ಥಾಪನೆಯಾಗಿವೆ. ಟ್ರಾನ್ಸ್–ಸೈಬೀರಿಯನ್ ರೈಲ್ವೆಯೂ ಮಧ್ಯ ಏಷ್ಯದಲ್ಲಿ ಎಂಜಿನಿಯರಿಂಗ್ ಮತ್ತಿತರ ಕೈಗಾರಿಕೆಗಳೂ ಸ್ಥಾಪನೆಯಾಗಿವೆ. ಸೋವಿಯತ್ ಮಧ್ಯ ಏಷ್ಯದಲ್ಲಿ ಬಟ್ಟೆಗಿರಣಿಗಳೂ ವ್ಲಾಡಿವೋಸ್ಟಾಕ್ ಸುತ್ತಮುತ್ತ ಮರ ಕೊಯ್ಯುವ ಕೈಗಾರಿಕೆಗಳೂ ಹರಡಿವೆ.

(ಬಿ) ಪಶ್ಚಿಮ ಏಷ್ಯ : ಅಮೂಲ್ಯವಾದ ಪೆಟ್ರೋಲಿಯಂ ಮತ್ತು ಕಲ್ಲಿದ್ದಲು ಗಣಿಗಳು ಇಲ್ಲಿರುವುದು ಈ ಪ್ರದೇಶದ ಅದೃಷ್ಟವೆಂದೇ ಹೇಳಬೇಕು. ತುರ್ಕಿಯಲ್ಲಿರುವ ಅಮೂಲ್ಯ ಕಲ್ಲಿದ್ದಲು ಗಣಿಗಳು ಕೈಗಾರಿಕೆಗಳಿಗೆ ಸಹಾಯಕ. ಯುಫ್ರೇಟೀಸ್–ಟೈಗ್ರಿಸ್ ಮತ್ತು ಪರ್ಷಿಯನ್ ಕೊಲ್ಲಿಯ ಸುತ್ತಮುತ್ತಲ ಮರುಭೂಮಿ ಪ್ರದೇಶಗಳಲ್ಲಿ ಅಪಾರವಾದ ಪೆಟ್ರೋಲಿಯಂ ನಿಕ್ಷೇಪಗಳಿದ್ದು, ಅನೇಕ ಎಣ್ಣೆಬಾವಿಗಳಿವೆ. ಜಾಗ್ರಾಸ್ ಪರ್ವತಗಳ ಪಾದಗಳ ಬಳಿಯಲ್ಲಿ ಇರಾನ್ ಇರಾಕ್‌ಗಳಲ್ಲಿ ವಿಶಾಲ ಎಣ್ಣೆಬಾವಿಗಳುಂಟು. ಆದರೆ ಇತ್ತೀಚೆಗೆ ಪರ್ಷಿಯನ್ ಖಾರಿಯ ಕುವೈತ್, ಬಹ್ರೈನ್, ಕಾಟಾರ್ ಇತ್ಯಾದಿ ದೇಶಗಳು ಪೆಟ್ರೋಲಿಯಂ ತಯಾರಿಕೆಗೆ ಹೆಸರಾಗಿವೆ.

ತುರ್ಕಿಯಲ್ಲಿ ದೊರಕುವ ಖನಿಜಗಳು ಅನೇಕ. ಭೂಮಧ್ಯಸಮುದ್ರ ತೀರಗಳಲ್ಲಿ ಮ್ಯಾಂಗನೀಸ್ ದೊರೆಯುತ್ತದೆ. ಈ ದೇಶ ಕ್ರೋಂ ತಯಾರಿಕೆಯಲ್ಲಿ ಪ್ರಪಂಚದಲ್ಲಿ ಮೊದಲನೆಯ ಸ್ಥಾನ ಪಡೆದಿದೆ. ತಾಮ್ರ ಇನ್ನೊಂದು ಮುಖ್ಯ ಲೋಹ. ಸೌದಿ ಅರೇಬಿಯದಲ್ಲಿ ಚಿನ್ನವೂ ಉಂಟು. ಮೃತ ಸರೋವರದ ಬಳಿ ಪೊಟ್ಯಾಷ್, ತುರ್ಕಿಯಲ್ಲಿ ಗಂಧಕ, ಜಾರ್ಡನ್‌ನಲ್ಲಿ ರಂಜಕ ಶಿಲೆ ಹೆಸರಿಸುವಂಥ ಖನಿಜಗಳು.

ಯುಫ್ರೇಟೀಸ್–ಟೈಗ್ರಿಸ್ ಕಣಿವೆ ಹೇರಳವಾದ ತಾಮ್ರ, ಕಬ್ಬಿಣ ಮತ್ತು ಗಂಧಕ ನಿಕ್ಷೇಪಗಳನ್ನು ಹೊಂದಿದೆ. ಇಲ್ಲಿಯ ಸೀಸದ ಗಣಿಗಳು ಅನೇಕ ಶತಮಾನಗಳಿಂದ ನಡೆದುಕೊಂಡು ಬರುತ್ತಿವೆ.

ಈ ಪ್ರದೇಶದಲ್ಲಿ ಪೆಟ್ರೋಲಿಯಂ ಶೋಧನೆ ಮುಖ್ಯ ಕೈಗಾರಿಕೆ. ತುರ್ಕಿ, ಸಿರಿಯ, ಲೆಬನನ್, ಇಸ್ರೇಲ್ ಮತ್ತು ಇರಾನಿನ ಅನೇಕ ನಗರಗಳಲ್ಲೂ ಇರಾಕ್, ಆಫ್‌ಘಾನಿಸ್ತಾನಗಳ ರಾಜಧಾನಿಗಳಲ್ಲೂ ಹತ್ತಿ ಗಿರಣಿ ಕೈಗಾರಿಕೆಗಳುಂಟು.

(ಸಿ) ದಕ್ಷಿಣ ಏಷ್ಯ : ಭಾರತದಲ್ಲಿ ಹೇರಳವಾದ ಕಲ್ಲಿದ್ದಲು ನಿಕ್ಷೇಪಗಳಿವೆ. ದಖನ್ ಪ್ರಸ್ಥಭೂಮಿಯ ಈಶಾನ್ಯದಲ್ಲಿ ಇದು ಕೇಂದ್ರೀಕೃತ. ಅಸ್ಸಾಮಿನ ದಿಗ್ಬಾಯ್ ಮತ್ತು ಪಶ್ಚಿಮ ಪಾಕಿಸ್ತಾನದ ಅಟಕ್‌ನಲ್ಲಿ ಪೆಟ್ರೋಲಿಯಂ ಎಣ್ಣೆಬಾವಿಗಳುಂಟು. ಪ್ರಪಂಚದಲ್ಲೇ ಶ್ರೇಷ್ಠವಾದ ಕಬ್ಬಿಣದ ಅದುರು ಮತ್ತು ಮ್ಯಾಂಗನೀಸ್‌ದೊರಕುವುದು ಭಾರತದ ದಖನ್ ಪ್ರಸ್ಥಭೂಮಿಯ ಈಶಾನ್ಯದಲ್ಲಿ. ಇಲ್ಲಿ ತಾಮ್ರ, ತವರ, ಕ್ರೋಮೈಟ್,

ಚಿನ್ನ, ಬಾಕ್ಸೈಟುಗಳೂ ಉಂಟು. ರಾಜಾಸ್ಥಾನದ ಗಣಿಗಳಿಂದ ತೆಗೆಯುವ ಲವಣದ ಜೊತೆಗೆ ಮಹಾರಾಷ್ಟ್ರ, ಗುಜರಾತ್, ತಮಿಳುನಾಡುಗಳಲ್ಲಿ ಸಮುದ್ರದಿಂದ ಉಪ್ಪನ್ನು ತಯಾರಿಸಲಾಗುತ್ತಿದೆ. ಪ್ರಪಂಚದ ಕಾಗೆಬಂಗಾರದ ಉತ್ಪತ್ತಿಯಲ್ಲಿ ಸೇಕಡಾ 80 ದೊರಕುವುದು ಛೋಟಾನಾಗಪುರದಲ್ಲಿ (ಭಾರತ). ಮೊನಾಜೈಟ್ ನಿಕ್ಷೇಪಗಳಿರುವುದು ಕೇರಳದಲ್ಲಿ. ಪಾಕಿಸ್ತಾನದಲ್ಲಿ ಕ್ರೋಮೈಟ್, ಲವಣಶಿಲೆ ಇತ್ಯಾದಿಗಳು ಕಡಿಮೆ ಪ್ರಮಾಣದಲ್ಲಿ ದೊರೆಯುತ್ತವೆ.

ಭಾರತದಲ್ಲಿ ಎರಡು ಪ್ರಮುಖ ಕೈಗಾರಿಕಾ ವಲಯಗಳಿವೆ : 1 ಜೆಮ್‍ಷೆಡ್‍ಪುರದಿಂದ ಕಲ್ಕತ್ತದ ವರೆಗಿನ ಪ್ರದೇಶ, 2 ಬೊಂಬಾಯಿಂದ ಅಹಮದಾಬಾದ್ ವರೆಗಿನ ಪ್ರದೇಶ. ಇತರ ಕಡೆಗಳಲ್ಲೂ ಕೈಗಾರಿಕೆಗಳುಂಟು.

(ಡಿ) ಆಗ್ನೇಯ ಏಷ್ಯ : ಆಗ್ನೇಯ ಏಷ್ಯದಲ್ಲಿನ ಖನಿಜ ಸಂಪತ್ತು ಗಮನಾರ್ಹವಾದದ್ದು. ಪ್ರಪಂಚದ ತವರದ ಉತ್ಪತ್ತಿಯಲ್ಲಿ ⅓ ಭಾಗ ಬರುವುದು ಮಲೆಯದಿಂದ. ಮಲೆಯ ಮತ್ತು ಇಂಡೋನೇಷ್ಯಗಳು ತವರ ತಯಾರಿಕೆಯಲ್ಲಿ ಪ್ರಪಂಚದಲ್ಲಿ ಮೊದಲನೆಯ ಮತ್ತು ಮೂರನೆಯ ಸ್ಥಾನಗಳನ್ನೂ ಥೈಲೆಂಡ್ ಮತ್ತು ಬರ್ಮಗಳು ಐದನೆಯ ಮತ್ತು ಎಂಟನೆಯ ಸ್ಥಾನಗಳನ್ನೂ ಪಡೆದಿವೆ. ಉತ್ತರ ವಿಯಟ್ನಾಮಿನಲ್ಲಿ ಕಲ್ಲಿದ್ದಲು ಗಣಿಗಳಿವೆ. ಮಲೆಯ, ಬೋರ್ನಿಯೊ, ಸುಮಾತ್ರಗಳಲ್ಲಿ ಈ ನಿಕ್ಷೇಪಗಳುಂಟು. ಪ್ರಪಂಚದ ದೃಷ್ಟಿಯಿಂದ ಮುಖ್ಯವಾದ ಎಣ್ಣೆಬಾವಿಗಳು ಮಧ್ಯ ಬರ್ಮ, ಜಾವಾ, ಸುಮಾತ್ರ, ಬೋರ್ನಿಯಗಳಲ್ಲಿವೆ. ಮಲೆಯ, ಫಿಲಿಪೀನ್‍ಗಳಲ್ಲಿ ದೊರೆಯುವ ಕಬ್ಬಿಣದ ಅದುರನ್ನು ಜಪಾನಿಗೆ ರಫ್ತುಮಾಡಲಾಗುತ್ತದೆ. ಉತ್ತರ ವಿಯಟ್ನಾಂ, ಮಲೆಯ, ಜಾವಾ, ಫಿಲಿಪೀನ್‍ಗಳಲ್ಲಿ ಕಡಿಮೆ ಪ್ರಮಾಣದಲ್ಲಿ ಮ್ಯಾಂಗನೀಸ್ ದೊರೆಯುತ್ತದೆ. ಮಧ್ಯ ಬರ್ಮದಲ್ಲಿ ಸೀಸ, ಸತು ಮತ್ತು ನಿಕ್ಕಲ್ ದೊರೆಯುತ್ತವೆ. ಪ್ರಪಂಚದ ಕ್ರೋಮಿಯಂ ತಯಾರಿಕೆಯಲ್ಲಿ ಫಿಲಿಪೀನ್ಸಿನದು ನಾಲ್ಕನೆಯ ಸ್ಥಾನ. ಫಿಲಿಪೀನ್ಸ್, ಥೈಲೆಂಡ್, ಮಲೆಯ, ಸುಮಾತ್ರ, ದಕ್ಷಿಣ ವಿಯಟ್ನಾಂಗಳಲ್ಲಿ ಚಿನ್ನ ದೊರೆತರೂ ಅಷ್ಟೇನೂ ಮುಖ್ಯವಲ್ಲ.

ಈ ಪ್ರದೇಶಗಳಲ್ಲಿ ಕೈಗಾರಿಕೆಗಳ ಅಭಿವೃದ್ಧಿಯಾಗಿಲ್ಲ. ಶಕ್ತಿಸಾಧನಗಳಿಲ್ಲದ್ದೇ ಕಾರಣ. ಸಿದ್ಧವಸ್ತು ತಯಾರಿಕೆಯ ಕೈಗಾರಿಕೆಗಳು ಇಲ್ಲಿಲ್ಲ. ಸಿಂಗಪುರದಲ್ಲಿ ತವರ ಕರಗಿಸುವ ಕೈಗಾರಿಕೆಯುಂಟು. ಜಾವಾದಲ್ಲಿ ಅನೇಕ ಸಕ್ಕರೆ ಕಾರ್ಖಾನೆಗಳೂ ಬರ್ಮ, ಥೈಲೆಂಡ್, ಇಂಡೊನೇಷ್ಯ, ಫಿಲಿಪೀನ್ಸ್ ಮತ್ತು ಉತ್ತರ ವಿಯಟ್ನಾಂಗಳಲ್ಲಿ ಹತ್ತಿ ಗಿರಣಿ ಕೈಗಾರಿಕೆಗಳೂ ಇವೆ.

(ಇ) ಪೂರ್ವ ಏಷ್ಯ : ಕಲ್ಲಿದ್ದಲು, ಮ್ಯಾಂಗನೀಸ್, ಕಬ್ಬಿಣ, ಬಾಕ್ಸೈಟ್, ತವರ, ಆಂಟಿಮೊನಿ, ಬಿಸ್ಮತ್, ಗ್ರಾಫೈಟ್ ಮತ್ತು ಮ್ಯಾಗ್ನಸೈಟ್‍ಗಳು ಮುಖ್ಯ ಖನಿಜಗಳು. ಚೀನದ ಪ್ರಸ್ಥಭೂಮಿಯಲ್ಲಿ ಪೆಟ್ರೋಲಿಯಂ, ಉಪ್ಪು ದೊರೆಯುತ್ತವೆ. ಜಪಾನಿನಲ್ಲಿ ಖನಿಜಗಳು ಸಾಕಷ್ಟಿಲ್ಲವಾದರೂ ಇದು ಕೈಗಾರಿಕೆಯಲ್ಲಿ ಅಭಿವೃದ್ಧಿ ಹೊಂದಿದ ದೇಶ.

ಮಂಚೂರಿಯ ಕೊರಿಯಗಳಲ್ಲಿ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಯೂ ಚೀನದಲ್ಲಿ ಕಬ್ಬಿಣ ಮತ್ತು ಉಕ್ಕು, ನೂಲು, ಯಂತ್ರೋಪಕರಣ, ವಾಹನ ಮತ್ತು ರಾಸಾಯನಿಕ ವಸ್ತುಗಳ ಭಾರಿ ಪ್ರಮಾಣದ ಕೈಗಾರಿಕೆಗಳೂ ಬೆಳೆದಿವೆ.

**ಜನಸಂಖ್ಯೆ :** ಏಷ್ಯ ಖಂಡದಲ್ಲಿ ಜನಸಂಖ್ಯೆಯದು ಒಂದು ಸಮಸ್ಯೆ. ಪ್ರಪಂಚದ ಜನಸಂಖ್ಯೆಯಲ್ಲಿ ಸೇಕಡಾ 55 (ಸೋವಿಯತ್ ವಿಭಾಗವನ್ನು ಬಿಟ್ಟು) ಈ ಖಂಡದಲ್ಲಿದೆ. ಏಷ್ಯದ ಜನಸಂಖ್ಯೆ 164,05,39,000. ಜನಸಾಂದ್ರತೆ ಚ.ಮೈ.ಗೆ 217. ಕ್ರಿ.ಶ. 2000ದಷ್ಟು ಹೊತ್ತಿಗೆ ಏಷ್ಯದ ಜನಸಂಖ್ಯೆ 316,70,88,000 ಮತ್ತು ಜನಸಾಂದ್ರತೆ 421 ಆಗುವುದೆಂದು ನಿರೀಕ್ಷಿಸಲಾಗಿದೆ. ಹೆಚ್ಚು ಜನ ಗ್ರಾಮವಾಸಿಗಳು. ಜಪಾನ್ ವಿನಾ ಉಳಿದಕಡೆಗಳಲ್ಲಿ ಕೈಗಾರಿಕಾನಗರಗಳ ಜನಸಂಖ್ಯೆಯ ಪ್ರಮಾಣ ಕಡಿಮೆ.

ಪಶ್ಚಿಮ ಪಾಕಿಸ್ತಾನದಿಂದ ಹಿಡಿದು ಉತ್ತರ ಚೀನ ಮತ್ತು ಜಪಾನ್ ವರೆಗಿನ ಪ್ರದೇಶದಲ್ಲಿ ಜನನಿವಾಸಕ್ಕೆ ಅನುಕೂಲಕರ ವಾಯುಗುಣ, ಫಲವತ್ತಾದ ಭೂಮಿ, ವ್ಯವಸಾಯ ಮತ್ತು ಕಸಬು ಇವೆ. ಇಲ್ಲಿನ ಜನಸಾಂದ್ರತೆ ಚ.ಮೈ.ಗೆ 400. ಪೂರ್ವ ಚೀನದಲ್ಲಿ ಇದು 900ಕ್ಕಿಂತ ಹೆಚ್ಚಾದರೂ, ಕೆಲವು ವ್ಯವಸಾಯ ಪ್ರದೇಶಗಳಲ್ಲಿ ಚ.ಮೈ.ಗೆ 2000ದಿಂದ 3000ದ ವರೆಗೂ ಇದೆ. ಜಗತ್ತಿನ ಮೂರು ಅತ್ಯಂತ ಜನಸಮ್ಮರ್ದ ಪ್ರದೇಶಗಳಲ್ಲಿ ಎರಡು ಏಷ್ಯದಲ್ಲೇ ಇವೆ. ಇವುಗಳಲ್ಲಿ ಪೂರ್ವ ಚೀನವೇ ಕೇಂದ್ರವಾಗಿರುವ ಪೂರ್ವ ಏಷ್ಯ ಅತ್ಯಂತ ದೊಡ್ಡ ಪ್ರದೇಶ. ಎರಡನೆಯ ಜನಸಾಂದ್ರ ಪ್ರದೇಶವೆಂದರೆ ಆಫ್‍ಘಾನಿಸ್ತಾನ್, ಪಾಕಿಸ್ತಾನ್, ಭಾರತ, ಸಿಲೋನ್‍ಗಳನ್ನೊಳಗೊಂಡ ದಕ್ಷಿಣ ಏಷ್ಯ. ಇಡೀ ಖಂಡದ ವಿಸ್ತೀರ್ಣದಲ್ಲಿ ಅರ್ಧಕ್ಕಿಂತ ಕಡಿಮೆ ಇರುವ ದಕ್ಷಿಣ ಹಾಗೂ ಆಗ್ನೇಯ ಏಷ್ಯದಲ್ಲಿ ಏಷ್ಯದ ಸೇಕಡಾ 90ರಷ್ಟು ಜನ ವಾಸಿಸುತ್ತಾರೆ. (ಕೆ.ಆರ್.ಆರ್.)

**ಏಷ್ಯದ ಅಭಿವೃದ್ಧಿ ಬ್ಯಾಂಕು :** ಏಷ್ಯ ಮತ್ತು ದೂರ ಪ್ರಾಚ್ಯ ಪ್ರದೇಶದ ಆರ್ಥಿಕ ಬೆಳವಣಿಗೆ ಮತ್ತು ಸಹಕಾರಗಳಿಗೆ ಪ್ರೋತ್ಸಾಹ ನೀಡುವುದಕ್ಕಾಗಿಯೂ ಅಭಿವೃದ್ಧಿ ಹೊಂದುತ್ತಿರುವ ದೇಶಗಳು ಬಿಡಿಯಾಗಿಯೋ ಇಡಿಯಾಗಿಯೋ ಅಂತೂ ಶೀಘ್ರವಾಗಿ ಆರ್ಥಿಕ ಪ್ರಗತಿ ಹೊಂದುವಂತೆ ಕ್ರಮಕೈಗೊಳ್ಳುವುದಕ್ಕಾಗಿಯೂ ವಿಶ್ವಸಂಸ್ಥೆಯ ಏಷ್ಯ ಮತ್ತು ದೂರಪ್ರಾಚ್ಯಗಳ ಆರ್ಥಿಕ ಆಯೋಗದಿಂದ ಸ್ಥಾಪಿತವಾದ ಸಂಸ್ಥೆ (ಏಷ್ಯನ್ ಡೆವೆಲಪ್‍ಮೆಂಟ್ ಬ್ಯಾಂಕ್). 1966ರ ಡಿಸೆಂಬರಿನಲ್ಲಿ ಇದು ಕಾರ್ಯಾರಂಭ ಮಾಡಿತು. ಈ ಪ್ರದೇಶಕ್ಕೆ ಸೇರಿದ 19 ಮತ್ತು ಇದರ ಹೊರಗಿನ 13 ದೇಶಗಳು ಏಷ್ಯದ ಅಭಿವೃದ್ಧಿ ಬ್ಯಾಂಕಿನ ಸದಸ್ಯತ್ವ ಪಡೆದಿವೆ. ಬ್ಯಾಂಕಿನ ಪ್ರಧಾನ ಕಚೇರಿ ಇರುವುದು ಫಿಲಿಪೀನ್ಸ್ ದೇಶದ ಮನಿಲ ನಗರದಲ್ಲಿ.

ಬ್ಯಾಂಕು ತನ್ನ ಉದ್ದೇಶ ಸಾಧನೆಗಾಗಿ ಅನುಸರಿಸುವ ಕ್ರಮಗಳು ಇವು : 1 ಅಭಿವೃದ್ಧಿಗಾಗಿ ಸರ್ಕಾರಿ ಮತ್ತು ಖಾಸಗಿ ಬಂಡವಾಳ ನಿಯೋಜನೆಯ ಪ್ರವರ್ತನೆ ; 2 ಇಡೀ ಪ್ರದೇಶದ ಸಮಾನ ಆರ್ಥಿಕಾಭಿವೃದ್ಧಿಗೆ ಅತ್ಯಂತ ಪರಿಣಾಮಕಾರಿಯಾಗಿ ನೆರವಾಗುವಂತೆ, ಕಿರಿಯ ಮತ್ತು ಕಡಿಮೆ ಅಭಿವೃದ್ಧಿ ಹೊಂದಿದ ಸದಸ್ಯರಾಷ್ಟ್ರಗಳ ಅಗತ್ಯಗಳಿಗೆ ವಿಶೇಷ ಗಮನ ದೊರಕುವಂತೆ, ಪ್ರಾದೇಶಿಕ, ಉಪಪ್ರಾದೇಶಿಕ ಮತ್ತು ರಾಷ್ಟ್ರೀಯ ಯೋಜನೆಗಳಿಗೂ ಕಾರ್ಯಕ್ರಮಗಳಿಗೂ ಆದ್ಯಗಮನವಿರುವಂಥ ಅಭಿವೃದ್ಧಿ ಪ್ರಯತ್ನಗಳಿಗೆ ಹಣ ಒದಗಿಸುವ ಸಲುವಾಗಿ ಲಭ್ಯವಿರುವ ಸಾಧನ ಸಂಪತ್ತಿನ ಬಳಕೆ ; 3 ಈ ಪ್ರದೇಶದ ಸದಸ್ಯರಾಷ್ಟ್ರಗಳ ಸಾಧನಸಂಪತ್ತು ಉತ್ತಮವಾಗಿ ಬಳಕೆಯಾಗುವಂತೆಯೂ ಅರ್ಥವ್ಯವಸ್ಥೆಗಳು ಪರಸ್ಪರ ಪೂರಕವಾಗುವಂತೆಯೂ ವಿದೇಶೀವ್ಯಾಪಾರ–ಅದರಲ್ಲೂ ಅಂತರ್‍ಪ್ರದೇಶ ವ್ಯಾಪಾರ–ಸುವ್ಯವಸ್ಥಿತವಾಗಿ ಬೆಳೆಯುವಂತೆಯೂ ಮಾಡುವ ಉದ್ದೇಶದಿಂದ ಇವುಗಳ ಅಭಿವೃದ್ಧಿನೀತಿಗಳನ್ನೂ ಯೋಜನೆಗಳನ್ನೂ ಸುಸಂಘಟಿಸುವ ಕಾರ್ಯದಲ್ಲಿ ರಾಷ್ಟ್ರಗಳಿಂದ ಬರುವ ಬೇಡಿಕೆಗಳ ಈಡೇರಿಕೆ ; 4 ನಿಶ್ಚಿತ ಕಾರ್ಯಸೂಚಿಗಳನ್ನು ರೂಪಿಸುವುದೂ ಸೇರಿದಂತೆ ಅಭಿವೃದ್ಧಿಕಾರ್ಯಕ್ರಮಗಳ ತಯಾರಿಕೆ, ಹಣನಿರ್ವಹಣೆ, ಕಾರ್ಯಾನ್ವಯಗಳೇ ಮುಂತಾದ ಎಲ್ಲ ವಿಚಾರಗಳಲ್ಲೂ ಸೂಕ್ತ ತಾಂತ್ರಿಕ ನೆರವಿನ ನೀಡಿಕೆ ; ಅಲ್ಲದೆ ಕೃಷಿ, ಕೈಗಾರಿಕೆ, ಸಾರ್ವಜನಿಕ ಆಡಳಿತ ಮುಂತಾದ ಕ್ಷೇತ್ರಗಳಲ್ಲಿ ರಾಷ್ಟ್ರೀಯ ಅಥವಾ ಪ್ರಾದೇಶಿಕ ಮಟ್ಟದಲ್ಲಿ ಈಗಾಗಲೇ ಕೆಲಸ ಮಾಡುತ್ತಿರುವ ಸಂಸ್ಥೆಗಳಿಗೆ ತಾಂತ್ರಿಕ ನೆರವು ನೀಡಿಕೆ ಮತ್ತು ಹೊಸ ಸಂಸ್ಥೆಗಳ ರಚನೆ ; 5 ಈ ಪ್ರದೇಶದಲ್ಲಿ ಅಭಿವೃದ್ಧಿಗಾಗಿ ಹಣ ನಿಯೋಜಿಸಬಹುದಾದ ವಿಶ್ವಸಂಸ್ಥೆ ಮತ್ತು ಅದರ ಉಪಾಂಗಗಳೊಂದಿಗೂ (ಸಬ್ಸಿಡಿಯರಿ) ಕಾರ್ಯಕರ್ತೃಗಳೊಂದಿಗೂ (ಏಜೆನ್ಸೀಸ್) ಇತರ ಅಂತರರಾಷ್ಟ್ರೀಯ ಸಂಸ್ಥೆಗಳೊಂದಿಗೂ ಸಹಕಾರ ಕಲ್ಪನೆ.

**ರಚನೆ :** ಬ್ಯಾಂಕಿನ ಅಧಿಕಾರವೆಲ್ಲ ನಿಹಿತವಾಗಿರುವುದು (ವೆಸ್ಟೆಡ್) ಶಾಸಕ ಮಂಡಲಿಯಲ್ಲಿ (ಬೋರ್ಡ್ ಆಫ್ ಗವರ್ನರ್ಸ್). ಹೊಸ ಸದಸ್ಯರ ಪ್ರವೇಶ, ಬ್ಯಾಂಕಿನ ಅಧಿಕೃತ ಬಂಡವಾಳದಲ್ಲಿ ಬದಲಾವಣೆ, ನಿರ್ದೇಶಕರ (ಡೈರೆಕ್ಟರ್ಸ್) ಮತ್ತು ಅಧ್ಯಕ್ಷರ ಚುನಾವಣೆ, ಪ್ರಣಾಳಿಕೆಯ ತಿದ್ದುಪಡಿ ಮುಂತಾದ ವಿಷಯಗಳನ್ನು ಬಿಟ್ಟು ಉಳಿದ ಅಧಿಕಾರಗಳನ್ನು ಇದು ನಿರ್ದೇಶಕ ಮಂಡಲಿಗೆ ವಹಿಸಿಕೊಡಬಹುದು. ಪ್ರತಿಯೊಂದು ಸದಸ್ಯ ರಾಷ್ಟ್ರವೂ ಒಬ್ಬ ಶಾಸಕನನ್ನೂ ಒಬ್ಬ ಪರ್ಯಾಯ (ಆಲ್ಟರ್ನೇಟ್) ಶಾಸಕನನ್ನೂ ನೇಮಿಸುತ್ತದೆ. ಶಾಸಕ ಮಂಡಲಿ ಕನಿಷ್ಠ ಪಕ್ಷ ವರ್ಷಕ್ಕೊಮ್ಮೆಯಾದರೂ ಸೇರಬೇಕು.

ಬ್ಯಾಂಕಿನ ಕಲಾಪಗಳ ಸಾಮಾನ್ಯ ನಿರ್ದೇಶನವೇ ನಿರ್ದೇಶಕ ಮಂಡಲಿಯ ಹೊಣೆ. ಶಾಸಕ ಮಂಡಲಿ ವಹಿಸಿಕೊಡುವ ಅಧಿಕಾರಗಳನ್ನು ಇದು ಚಲಾಯಿಸುತ್ತದೆ. ನಿರ್ದೇಶಕ ಮಂಡಲಿಯ ಸದಸ್ಯರ ಸಂಖ್ಯೆ ಹತ್ತು. ಇವರನ್ನು ಶಾಸನ ಮಂಡಲಿ ಚುನಾಯಿಸುತ್ತದೆ. ಇವರ ಪೈಕಿ ಏಳ್ವರು ಪ್ರಾದೇಶಿಕ ಸದಸ್ಯರಾಷ್ಟ್ರಗಳ ಪ್ರತಿನಿಧಿಗಳು ; ಮೂವರು ಪ್ರದೇಶಾತೀತ ಸದಸ್ಯರಾಷ್ಟ್ರಗಳ ಪ್ರತಿನಿಧಿಗಳು. ಪ್ರತಿ ನಿರ್ದೇಶಕನ ಅಧಿಕಾರಾವಧಿ ಎರಡು ವರ್ಷ; ಅವಧಿ ಪೂರೈಸಿದ ಮೇಲೆ ಈತ ಮತ್ತೆ ಚುನಾವಣೆಯಾಗಬಹುದು. ಬ್ಯಾಂಕಿನ ಅಧ್ಯಕ್ಷನೇ ಈ ಮಂಡಲಿಯ ಪೀಠಾಧಿಪತಿ (ಚೇರ್‍ಮನ್). ಇವನು ನಿರ್ದೇಶಕನೇ ಆಗಿರಬೇಕಾದುದಿಲ್ಲ. ಸದಸ್ಯರಾಷ್ಟ್ರಗಳ ಚುನಾವಣೆ ಹಕ್ಕಿಗೆ ಅವುಗಳ ಬಂಡವಾಳವೇ ಆಧಾರ. ಒಟ್ಟು ಮತಚಲಾವಣೆ ಹಕ್ಕಿನ ಸೇಕಡಾ 20ರಷ್ಟನ್ನು ಎಲ್ಲ ಸದಸ್ಯರಾಷ್ಟ್ರಗಳಲ್ಲೂ ಸಮನಾಗಿಯೂ ಉಳಿದದ್ದನ್ನು ಆಯಾ ರಾಷ್ಟ್ರಗಳ ಬಂಡವಾಳಗಳಿಗೆ ಅನುಗುಣವಾಗಿಯೂ ಹಂಚಲಾಗಿದೆ.

**ಹಣಕಾಸಿನ ರಚನೆ :** ಬ್ಯಾಂಕಿನ ಅಧಿಕೃತ ಬಂಡವಾಳ 110 ಕೋಟಿ ಅಮೆರಿಕನ್ ಡಾಲರು. ಚಂದಾ ಎತ್ತಿದ ಬಂಡವಾಳ 97 ಕೋಟಿ ಡಾಲರು. ಪ್ರತಿ ಸದಸ್ಯರಾಷ್ಟ್ರವೂ ತನ್ನ ಅಪೇಕ್ಷಿತ (ಸಬ್‍ಸ್ಕ್ರೈಬ್ಡ್) ಬಂಡವಾಳದಲ್ಲಿ ಅರ್ಧಭಾಗವನ್ನೂ ಐದು ಸಮಾನ ವಾರ್ಷಿಕ ಕಂತುಗಳಲ್ಲಿ ಸಲ್ಲಿಸಬೇಕು. ಪ್ರತಿ ಕಂತಿನ ಅರ್ಧ ಭಾಗವನ್ನು ಚಿನ್ನದಲ್ಲಾಗಲಿ ಪರಿವರ್ತನೀಯ (ಕನ್‍ವರ್ಟಿಬಲ್) ನಾಣ್ಯದಲ್ಲಾಗಲಿ ಕೊಡತಕ್ಕದ್ದು. ಉಳಿದರ್ಧವನ್ನು ಸ್ಥಳೀಯ ನಾಣ್ಯದಲ್ಲಿ ಪಾವತಿ ಮಾಡಬಹುದು. ಅಪೇಕ್ಷಿತ ಬಂಡವಾಳದ ಉಳಿದರ್ಧಭಾಗ ಆಹ್ವಾನಿತ ಷೇರುಗಳಾಗಿ. ಬ್ಯಾಂಕಿನ ಹೊಣೆಗಳಿಗೆ ಭದ್ರತೆಯು

ಬೆಂಬಲವಾಗಿ ಇರುತ್ತದೆ. ಅಪೇಕ್ಷಿತ ಬಂಡವಾಳವಾದ 97 ಕೋಟಿ ಡಾಲರುಗಳಲ್ಲಿ ಪ್ರಾದೇಶಿಕ ಮತ್ತು ಪ್ರದೇಶಾತೀತ ಸದಸ್ಯರಾಷ್ಟ್ರಗಳ ಪಾಲು ಅನುಕ್ರಮವಾಗಿ 61.5 ಕೋಟಿ ಮತ್ತು 35.5 ಕೋಟಿ. ವಿವರಗಳು ಈ ರೀತಿ ಇವೆ :

| ದೇಶ | | ಚಂದಾ ಕೋಟಿ ಡಾಲರುಗಳಲ್ಲಿ | |
|---|---|---|---|
| ಪ್ರಾದೇಶಿಕ ಸದಸ್ಯರಾಷ್ಟ್ರಗಳು : | | | |
| ಅಫ್ಘನಿಸ್ತಾನ | ... | 0.478 | |
| ಆಸ್ಟ್ರೇಲಿಯ | ... | 8.500 | |
| ಇಂಡೋನೇಷ್ಯ | ... | 2.500 | |
| ಕಾಂಬೋಡಿಯ | ... | 0.350 | |
| ಕೊರಿಯ ಗಣರಾಜ್ಯ | ... | 3.000 | |
| ಜಪಾನ್ | ... | 20.000 | |
| ಟೈವಾನ್ | ... | 1.600 | |
| ಥೈಲೆಂಡ್ | ... | 2.000 | |
| ನ್ಯೂಜಿಲೆಂಡ್ | ... | 2.256 | |
| ನೇಪಾಳ | ... | 0.216 | |
| ಪಶ್ಚಿಮ ಸಮೋವ | ... | 0.006 | |
| ಪಾಕಿಸ್ತಾನ | ... | 3.200 | |
| ಫಿಲಿಪೀನ್ಸ್ | ... | 3.500 | |
| ಭಾರತ | ... | 9.300 | |
| ಮಲೇಷ್ಯ | ... | 2.000 | |
| ಲಾವೋಸ್ | ... | 0.042 | |
| ವಿಯೆಟ್ನಾಂ ಗಣರಾಜ್ಯ | ... | 1.200 | |
| ಸಿಂಗಪುರ | ... | 0.500 | |
| ಸಿಂಹಳ | ... | 0.852 | |
| | | | 61.500 |
| ಪ್ರದೇಶಾತೀತ ಸದಸ್ಯರಾಷ್ಟ್ರಗಳು : | | | |
| ಅಮೆರಿಕ ಸಂಯುಕ್ತಸಂಸ್ಥಾನ | ... | 20.000 | |
| ಆಸ್ಟ್ರಿಯ | ... | 0.500 | |
| ಇಟಲಿ | ... | 2.000 | |
| ಕೆನಡ | ... | 2.500 | |
| ಜರ್ಮನ್ ಒಕ್ಕೂಟ ಗಣರಾಜ್ಯ | ... | 3.400 | |
| ಡೆನ್ಮಾರ್ಕ್ | ... | 0.500 | |
| ನಾರ್ವೇ | ... | 0.500 | |
| ನೆದರ್ಲೆಂಡ್ಸ್ | ... | 1.100 | |
| ಬೆಲ್ಜಿಯಂ | ... | 0.500 | |
| ಫಿನ್ಲೆಂಡ್ | ... | 0.500 | |
| ಸಂಯುಕ್ತ ರಾಜ್ಯ (ಬ್ರಿಟನ್) | ... | 3.000 | |
| ಸ್ವಿಟ್ಜರ್ಲೆಂಡ್ | ... | 0.500 | |
| ಸ್ವೀಡನ್ | ... | 0.500 | |
| | | | 35.500 |
| | | ಒಟ್ಟು | 97.000 |

ಬ್ಯಾಂಕಿನ ಕಲಾಪಗಳಿಗೆ ಅಗತ್ಯವಾದ ಹಣ ಒದಗಿರುವುದು ಮುಖ್ಯವಾಗಿ ಬಂಡವಾಳ ಮತ್ತು ಸಾಲಗಳಿಂದ. ಸರ್ಕಾರಗಳಿಗೂ ರಾಷ್ಟ್ರೀಯ ಅಭಿವೃದ್ಧಿಕಾರ್ಯಗಳಿಗೂ ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಿಗೂ ಅಂತರರಾಷ್ಟ್ರೀಯ ಕಾರ್ಯಕರ್ತೃಗಳಿಗೂ ಕೈಗಾರಿಕೆ, ಕೃಷಿ, ವಿದ್ಯುತ್ತು, ಸಾರಿಗೆ ಮತ್ತು ಸಂಪರ್ಕ ಮುಂತಾದ ಕ್ಷೇತ್ರಗಳಲ್ಲಿ ನಿರ್ದಿಷ್ಟ ಅಭಿವೃದ್ಧಿ ಕಾರ್ಯಕ್ರಮಗಳಿಗೂ ನೇರವಾಗಿ ಈ ಹಣದಿಂದ ಸಾಲ ನೀಡಲಾಗುತ್ತದೆ. ಬ್ಯಾಂಕಿನ ಉದ್ದೇಶಗಳಿಗೆ ಭಂಗ ಬಾರದಂಥ ಯಾವುದೇ ಕಾರ್ಯಕ್ಕಾದರೂ ವಿಶೇಷ ನಿಧಿಗಳಿಗಾಗಿ ಬ್ಯಾಂಕು ಪ್ರದಾತೃಗಳಿಂದ ಹಣದ ಕೊಡುಗೆ ಸ್ವೀಕರಿಸಬಹುದು. ಸಾಮಾನ್ಯ ನಿಧಿಯ ವ್ಯವಹಾರಗಳದಕ್ಕಿಂತ ಹೆಚ್ಚು ಧಾರಾಳವಾದ ಷರತ್ತುಗಳ ಮೇಲೆ ಸಾಲ ನೀಡಲು ವಿಶೇಷ ನಿಧಿಗಳಿಗಾಗಿ ಬ್ಯಾಂಕು ತನಗೆ ಪಾವತಿಯಾದ ಬಂಡವಾಳದಲ್ಲಿ ಸೇಕಡಾ 10ರಷ್ಟನ್ನು ಎತ್ತಿಡಬಹುದು. ವಿಶೇಷ ಕೃಷಿನಿಧಿ ಈಗಾಗಲೇ ನಿರ್ಮಿತವಾಗಿದೆ.

ಈ ಪ್ರದೇಶದ ಕೃಷಿ ಕ್ಷೇತ್ರದಲ್ಲಿ ಕಾರ್ಯಾಚರಣೆ ಸಾಧ್ಯವಾಗುವಂತೆ ಬ್ಯಾಂಕು ಈ ಕ್ಷೇತ್ರದ ಸರ್ವೆ ನಡೆಸಿದೆ. ಸಾರಿಗೆ ಕ್ಷೇತ್ರದಲ್ಲಿ ಉಪ-ಪ್ರಾದೇಶಿಕ ಸರ್ವೆಯನ್ನೂ ಮಾಡಲಾಗುತ್ತಿದೆ.

ನಾನಾ ವಿಧವಾಗಿ ರೂಢಿಸಿಕೊಂಡ ಬಂಡವಾಳವನ್ನು ಈ ಪ್ರದೇಶದ ಸದಸ್ಯ ರಾಷ್ಟ್ರಗಳು ಕೈಕೊಳ್ಳುವ ನಿರ್ದಿಷ್ಟ ಯೋಜನೆಗಳಲ್ಲಿ ವಿನಿಯೋಗಿಸಲಾಗುವುದು. ಏಷ್ಯದ ಬಹುತೇಕ ರಾಷ್ಟ್ರಗಳಲ್ಲಿ ವ್ಯವಸಾಯ ಪ್ರಧಾನ ಕಸಬಾಗಿರುವುದರಿಂದ, ವ್ಯವಸಾಯ ಮತ್ತು ಇತರ ಮೂಲಭೂತ ಆವಶ್ಯಕತೆಗಳಿಗೆ ಆದ್ಯತೆ ನೀಡಲಾಗುವುದು. ನಿರ್ದಿಷ್ಟ ಯೋಜನೆಗಳಿಗೆ ಸಾಲ ನೀಡುವಾಗ ಬ್ಯಾಂಕು ಕೆಲವು ಸ್ಪಷ್ಟನೀತಿಗಳನ್ನು ಗಮನದಲ್ಲಿಟ್ಟುಕೊಳ್ಳುವುದು ಆವಶ್ಯಕವೆನಿಸುವುದು. ಮೊದಲನೆಯದಾಗಿ, ಸಾಲ ನೀಡಿಕೆಗೆ ಯೋಜನೆಗಳನ್ನು ಆಯ್ಕೆ ಮಾಡುವಾಗ ಪ್ರದೇಶದ ಸಾಮರಸ್ಯ ಅಭಿವೃದ್ಧಿಯನ್ನು ಮತ್ತು ತೀರಾ ಹಿಂದುಳಿದ ಸಣ್ಣ ರಾಷ್ಟ್ರಗಳ ಆವಶ್ಯಕತೆಗಳನ್ನು ಬ್ಯಾಂಕು ಗಮನದಲ್ಲಿಡುವುದು. ಎರಡನೆಯದಾಗಿ, ಸಾಲ ನೀಡಿಕೆಯ ಸಂದರ್ಭದಲ್ಲಿ ಆಯಾ ರಾಷ್ಟ್ರಗಳು ಹೊಂದಿರುವ ಇತರ ಸಾಲ ಸೌಲಭ್ಯಗಳನ್ನೂ ಗಣನೆಗೆ ತೆಗೆದುಕೊಳ್ಳಲಾಗುವುದು. ಇದರ ಪರಿಣಾಮವಾಗಿ, ಅಸಹಾಯಕ ರಾಷ್ಟ್ರಗಳಿಗೆ ಹೆಚ್ಚಿನ ಸಾಲ ಸೌಲಭ್ಯಗಳು ದೊರಕುವಂತಾಗುವುದು. ಮೂರನೆಯದಾಗಿ, ಸಾಲ ನೀಡಿಕೆ ಆಯಾ ಯೋಜನೆಗಳ ಸಾಮರ್ಥ್ಯವನ್ನು ಸಹ ಅವಲಂಬಿಸಿರುತ್ತದೆ. ಒಟ್ಟಿನಲ್ಲಿ ಇದು ಸಾಲ ನೀಡುವಾಗ ಬ್ಯಾಂಕ್ ಉದ್ಯಮದ ಎಲ್ಲ ಸುಸ್ಥ ತತ್ತ್ವಗಳನ್ನೂ ಅನುಸರಿಸುತ್ತದೆ.

ಇವಲ್ಲದೆ, ಹಿಂದುಳಿದ ರಾಷ್ಟ್ರಗಳ ಶಾಸಕರು ಸೂಚಿಸಿರತಕ್ಕ ಮತ್ತೊಂದು ನಿಯಮವೂ ಗಮನಾರ್ಹ. ಇದರ ಪ್ರಕಾರ ಬ್ಯಾಂಕುಸಾಲಗಳು ಯಾವುದೇ ರಾಷ್ಟ್ರದಲ್ಲೂ ಕೇಂದ್ರೀಕೃತವಾಗದಂತೆ ಬ್ಯಾಂಕು ತನ್ನ ಕಾರ್ಯವನ್ನು ನಿರ್ವಹಿಸಬೇಕಾಗುವುದು. ಅಂದರೆ, ಬ್ಯಾಂಕಿನ ಸಾಲಗಳು ಪ್ರದೇಶದ ಎಲ್ಲ ರಾಷ್ಟ್ರಗಳಲ್ಲಿ ಆದಷ್ಟು ಸೂಕ್ತ ಪ್ರಮಾಣದಲ್ಲಿ ವಿನಿಯೋಗವಾಗಬೇಕೆಂಬುದು ಇದರ ಹಿಂದಿನ ಉದ್ದೇಶ.

ಆರ್ಥಿಕಾಭಿವೃದ್ಧಿ ಬಂಡವಾಳದಿಂದಲೇ ಸಾಧ್ಯವಿಲ್ಲವೆಂಬುದು ಸ್ಪಷ್ಟವಾಗಿದೆ. ಆದ್ದರಿಂದ, ಅಭಿವೃದ್ಧಿಹೊಂದಿದ ರಾಷ್ಟ್ರಗಳ ಇತರ ಆವಶ್ಯಕತೆಗಳನ್ನು ಪೂರೈಸುವುದಕ್ಕಾಗಿಯೂ ಬ್ಯಾಂಕು ಶ್ರಮಿಸುತ್ತದೆ. ತತ್ಪರಿಣಾಮವಾಗಿ, ಸದಸ್ಯರಾಷ್ಟ್ರಗಳಿಗೆ ತಾಂತ್ರಿಕ ಸಹಾಯ ನೀಡಲು ಬ್ಯಾಂಕಿನ 21ನೆಯ ವಿಧಿ ತಿಳಿಸುತ್ತದೆ. ಏಷ್ಯದ ರಾಷ್ಟ್ರಗಳಲ್ಲಿ ಅನುಕೂಲಕರವಾದ ಸಾಮಾಜಿಕ ಮತ್ತು ಆರ್ಥಿಕ ವಾತಾವರಣವನ್ನು ಸೃಷ್ಟಿಸುವುದರಲ್ಲೂ ಸದಸ್ಯರಾಷ್ಟ್ರಗಳ ಅಭಿವೃದ್ಧಿ ಯೋಜನೆಗಳು ಹೊಂದಿಕೊಂಡು ಹೋಗಲೂ ಏಷ್ಯದ ಅಂತರಪ್ರಾಂತೀಯ ವ್ಯಾಪಾರ ಅಭಿವೃದ್ಧಿಗೊಳ್ಳಲೂ ಬ್ಯಾಂಕು ಸಹಾಯ ಮಾಡುತ್ತದೆ. ಇದಕ್ಕೆ ಪೋಷಕವಾಗಿ ಎಂಬಂತೆ ಬ್ಯಾಂಕು ಏಷ್ಯದ ವ್ಯವಸಾಯ ಸಮೀಕ್ಷೆ, ಪ್ರಾದೇಶಿಕ ಸಾರಿಗೆ ವ್ಯವಸ್ಥೆ ಸಮೀಕ್ಷೆ ಮತ್ತು ಇತರ ಸಮೀಕ್ಷೆಗಳನ್ನು ಕೈಗೊಳ್ಳುತ್ತದೆ.

**ಬ್ಯಾಂಕಿನ ಪ್ರಗತಿ :** ಕೆಲವು ರಾಷ್ಟ್ರಗಳಿಗೆ ನಿರ್ದಿಷ್ಟ ಕ್ಷೇತ್ರಗಳಲ್ಲಿ ಬ್ಯಾಂಕು ನೆರವು ನೀಡುತ್ತಿದೆ. ಈ ವರೆಗೆ ನೆರವು ಪಡೆದಿರುವ ದೇಶಗಳೆಂದರೆ ಇಂಡೊನೇಷ್ಯ (ಆಹಾರ ಉತ್ಪಾದನೆ ಮತ್ತು ಸರಬರಾಯಿ), ಕೊರಿಯ ಗಣರಾಜ್ಯ (ಕೃಷಿ ಮತ್ತು ಮೀನುಗಾರಿಕೆ ಅಭಿವೃದ್ಧಿ ಕಾರ್ಪೊರೇಷನ್), ಫಿಲಿಪೀನ್ಸ್ (ನೀರಾವರಿ ಮತ್ತು ಜಲ ನಿರ್ವಹಣೆ ಅಭಿವೃದ್ಧಿ ; ಮನಿಲದಲ್ಲಿ ಮೀನುಗಾರಿಕೆ ಅಭಿವೃದ್ಧಿಗಾಗಿ ಆಧುನಿಕ ರೇವು ನಿರ್ಮಾಣ), ವಿಯಟ್ನಾಂ ಗಣರಾಜ್ಯ (ಕೈಗಾರಿಕಾಭಿವೃದ್ಧಿ ಹಣಕಾಸು ಸಂಸ್ಥೆಗಳು), ನೇಪಾಳ (ಕೃಷಿ ಅಭಿವೃದ್ಧಿ ಬ್ಯಾಂಕು). ಬ್ಯಾಂಕು ತನ್ನ ಸಾಲ ನೀಡಿಕೆಯಲ್ಲಿ ನೀರಾವರಿ ಹಾಗೂ ಜಲನಿಯಂತ್ರಣ ಕಾರ್ಯಕ್ರಮಗಳಿಗೂ ಸಾರಿಗೆ ವ್ಯವಸ್ಥೆ ಮತ್ತು ಮೂಲ ಕೈಗಾರಿಕೆಗಳಿಗೂ ಆದ್ಯತೆ ಕೊಡುತ್ತಿದೆ.

ಏಷ್ಯದ ಅಭಿವೃದ್ಧಿ ಬ್ಯಾಂಕು ತನ್ನ ಪ್ರಾರಂಭದ ಅತ್ಯಲ್ಪ ಕಾಲದಲ್ಲಿಯೇ ಸಾಧಿಸಿರುವ ಪ್ರಗತಿ ಆಶಾಭಾವನೆಯನ್ನು ಉಂಟುಮಾಡಿದೆ. ಹೆಚ್ಚುಹೆಚ್ಚಾಗಿ ಸ್ಥಳೀಯ ಬಂಡವಾಳದ ಉಪಯೋಗ, ಅಂತರ್‌ಪ್ರಾದೇಶಿಕ ವ್ಯಾಪಾರದ ಪ್ರೋತ್ಸಾಹ, ಆವಶ್ಯಕ ತಾಂತ್ರಿಕ ಜ್ಞಾನ ಒದಗಿಸುವಿಕೆ ಮುಂತಾದ ಉದ್ದೇಶಗಳನ್ನು ಸಾಧಿಸುವ ಕೆಲಸದಲ್ಲಿ ಏಷ್ಯದ ಬ್ಯಾಂಕು ಮುನ್ನಡೆದಿದೆ. ವಿದೇಶೀ ಹಣದ ಮೇಲೆ ರಾಷ್ಟ್ರದ ಅವಲಂಬನೆಯನ್ನು ಕಡಿಮೆ ಮಾಡುವುದರ ಮೂಲಕ ಆರ್ಥಿಕಾಭಿವೃದ್ಧಿಯನ್ನು ಸಾಧಿಸುವ ಉದ್ದೇಶವನ್ನು ಹಲವು ದೇಶಗಳು ಸ್ವಾಗತಿಸಿವೆ. ಈ ದಿಸೆಯಲ್ಲಿ ಬ್ಯಾಂಕಿನ ಅತಿ ಮುಖ್ಯವಾದ ಸಮಸ್ಯೆ ಅದರ ಬಂಡವಾಳದ ಗಾತ್ರ. ಏಕೆಂದರೆ, ಬ್ಯಾಂಕು ಕೈಕೊಳ್ಳಬೇಕಾದ ಕಾರ್ಯಗಳ ಮತ್ತು ಅದರ ಬಂಡವಾಳದ ಗಾತ್ರದ ನಡುವಿನ ಅಂತರ ಬಹಳವಿದೆ. ಪ್ರಪಂಚ ಬ್ಯಾಂಕಿನ ಮತ್ತು ಇತರ ಅಂತರರಾಷ್ಟ್ರೀಯ ಅಭಿವೃದ್ಧಿ ಸಂಸ್ಥೆಗಳ ಸಹಕಾರ ದೊರಕುತ್ತಿದೆ. ( ಜಿ.ಬಿ.ಎಚ್.; ಸಿ.ಸಿ.ಪಿ )

**ಏಷ್ಯದ ಅರ್ಥವ್ಯವಸ್ಥೆ :** ಪ್ರಪಂಚದ ಶೇಕಡಾ 55ರಷ್ಟು ಜನ ಏಷ್ಯದಲ್ಲಿದ್ದಾರೆ. ಆದರೆ ಇವರು ಪ್ರಪಂಚದ ಒಟ್ಟು ಸಂಪತ್ತು ಮತ್ತು ಉತ್ಪನ್ನದ ಕೇವಲ 1/10 ಅಂಶವನ್ನು ಮಾತ್ರ ಅನುಭೋಗಿಸುತ್ತಿದ್ದಾರೆ. ಇದು ಈ ಖಂಡದ

ಆರ್ಥಿಕ ಸ್ಥಿತಿಯ ಸ್ಥೂಲ ಚಿತ್ರ. ಈ ಖಂಡವೆಂದೊಡನೆ ಆರ್ಥಿಕ ಬೆಳೆವಣಿಗೆಯ ಸಿದ್ಧಾಂತಗಳಿಗೆ ತೊಡಕಾಗಿ, ವಿವಿಧ ಹಾಗೂ ಜಟಿಲ ಆರ್ಥಿಕ ಪ್ರಯೋಗದಲ್ಲಿ ತೊಡಗಿರುವ ರಾಷ್ಟ್ರಗಳ ಚಿತ್ರ ಮೂಡುತ್ತದೆ. ಆರ್ಥಿಕ ಪ್ರಗತಿಗೆ ಇರುವ ಸಮಸ್ಯೆಗಳು ಅನೇಕ ಹಾಗೂ ಜಟಿಲ. ಕೃಷಿಯೇ ಪ್ರಧಾನವಾದ ಈ ಖಂಡದಲ್ಲಿ ಸೇಕಡಾ 70–80 ರಷ್ಟು ಜನ ಪ್ರಾಚೀನ ನಂಬಿಕೆಗಳಿಗೆ ಅಂಟಿಕೊಂಡಿರುವಂಥವರು.

ಎರಡನೆಯ ಮಹಾಯುದ್ಧದ ಅನಂತರದಲ್ಲಿ ಮಾತ್ರ ಇಲ್ಲಿನ ಅನೇಕ ರಾಷ್ಟ್ರಗಳು ಪ್ರಗತಿಯ ಪ್ರಯತ್ನದಲ್ಲಿ ತೊಡಗಿವೆ.

ಏಷ್ಯದ ಅರ್ಥವ್ಯವಸ್ಥೆಯಲ್ಲಿ ಒಂದು ರಾಷ್ಟ್ರ ಪ್ರತ್ಯೇಕವಾಗಿ ಎದ್ದು ನಿಲ್ಲುತ್ತದೆ. ಅದು ಜಪಾನ್. ಅದೊಂದು ಪೌರಸ್ತ್ಯ ಪವಾಡ. ಏಷ್ಯದ ಪ್ರಗತಿ ಪಥದಲ್ಲಿ ಅದು ಉಳಿದ ರಾಷ್ಟ್ರಗಳಿಗಿಂತ ಬಲು ಮುಂದಿದೆ. ವಿಶ್ವದಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನ ದೃಷ್ಟಿಯಿಂದ ಅದಕ್ಕೆ ಹಿರಿಯ ಸ್ಥಾನ. ಏಷ್ಯನ್ ರಾಷ್ಟ್ರಗಳು ಜಪಾನಿನಂತೆಯೇ ಮುಂದುವರಿಯುವ ಆರ್ಥಿಕ ಪ್ರಯತ್ನದಲ್ಲಿ ತೊಡಗಿವೆ. ಆದುದರಿಂದ ಏಷ್ಯದ ಅರ್ಥವ್ಯವಸ್ಥೆಯನ್ನು ಒಟ್ಟಾಗಿ ವಿವೇಚಿಸುವಾಗ, ಪಾಶ್ಚಾತ್ಯ ರಾಷ್ಟ್ರಗಳ ಹೆಗಲಿಗೆ ಸಮನಾಗಿ ನಿಂತಿರುವ ಜಪಾನು ಮಾತ್ರ ಅನೇಕ ವಿಚಾರಗಳಲ್ಲಿ ಅಪವಾದ.

**ಕೃಷಿ :** ಕೃಷಿಯೇ ಏಷ್ಯದ ಅರ್ಥವ್ಯವಸ್ಥೆಯ ಬೆನ್ನೆಲುಬು. ಇದು ಇಲ್ಲಿನ ಹೆಚ್ಚು ಜನರಿಗೆ ಜೀವನಾಧಾರ ಮತ್ತು ಸಂಪನ್ಮೂಲ. ಆದರೆ ಇಂದೂ ಇಲ್ಲಿನ ಕೃಷಿ ವಿಧಾನ ತೀರ ಹಳೆಯ ರೀತಿಯದು. ಆಧುನಿಕ ಬೇಸಾಯದ ಕ್ರಮಗಳಾದ ಜಲಾಶಯದ ಉಪಯೋಗ, ರಾಸಾಯನಿಕ ಗೊಬ್ಬರಗಳ ಪ್ರಯೋಗ, ಬೇಸಾಯದಲ್ಲಿ ಯಾಂತ್ರೀಕರಣ—ಇವು ಏಷ್ಯದ ರಾಷ್ಟ್ರಗಳಲ್ಲಿ ಈಚೆಗೆ ಪ್ರಾರಂಭವಾಗಿ ಇನ್ನೂ ಶೈಶವಾವಸ್ಥೆಯಲ್ಲೇ ಇವೆ.

20ನೆಯ ಶತಮಾನದ ಪ್ರಥಮಾರ್ಧದಲ್ಲಿ ಭಾರತದ ಆಹಾರಧಾನ್ಯ ಉತ್ಪನ್ನ ಸರಾಸರಿ ಸೇಕಡಾ 0.5ರಷ್ಟು ಹೆಚ್ಚಿತು. ಏಷ್ಯದ ಉಳಿದ ರಾಷ್ಟ್ರಗಳಲ್ಲೂ ಹೆಚ್ಚು ಕಡಿಮೆ ಇದೇ ಪ್ರಮಾಣದ ಬೆಳೆವಣಿಗೆಯನ್ನು ಕಾಣಬಹುದು. 1950ರಿಂದೀಚೆಗೆ ಕೃಷಿರಂಗದಲ್ಲಿ ವೇಗವಾದ ಸುಧಾರಣೆಗಳು ಪ್ರಾರಂಭವಾಗಿವೆ. ಏಷ್ಯದ ರಾಷ್ಟ್ರಗಳ ಸರ್ಕಾರಗಳು ಕೃಷಿರಂಗದಲ್ಲಿ ಪ್ರಗತಿ ಸಾಧಿಸಲು ಮನಃಪೂರ್ವಕವಾಗಿ ಪ್ರಯತ್ನ ನಡೆಸುತ್ತಿವೆ. 1960ನೆಯ ದಶಕದ ಪ್ರಥಮ ಆರು ವರ್ಷಗಳಲ್ಲಿ ಏಷ್ಯದ ರಾಷ್ಟ್ರಗಳ ಆಹಾರ ಧಾನ್ಯಗಳ ಉತ್ಪನ್ನ ಸರಾಸರಿ ಸೇ. 1ರಷ್ಟು ವೃದ್ಧಿಯಾಗಿದೆ ಎಂದು ಆಹಾರ ಮತ್ತು ಕೃಷಿ ಸಂಸ್ಥೆ ಅಂದಾಜು ಮಾಡಿದೆ.

ಏಷ್ಯನ್ ರಾಷ್ಟ್ರಗಳು ಎದುರಿಸುತ್ತಿರುವ ಕೃಷಿ ಸಮಸ್ಯೆಗಳು ಅಪಾರ. ಕೃಷಿ ಇಲ್ಲಿ ವರುಣನ ಕೃಪೆ. ಒಂದೇ ರಾಷ್ಟ್ರದಲ್ಲಿ ಕೆಟ್ಟ ಹವಾಮಾನ ಪರಿಸ್ಥಿತಿಗಳಿಂದ ಕೋಟಿ ಕೋಟಿ ಟನ್ ಆಹಾರ ಬೆಳೆ ನಷ್ಟವಾಗುತ್ತಿರುವ ಉದಾಹರಣೆಗಳುಂಟು. ನಿರೀಕ್ಷಿತ ಸಮಯಕ್ಕಿಂತ ಮುಂಚೆಯೋ ಸ್ವಲ್ಪ ತಡೆದೋ ಮಳೆ ಬಂದರೆ ಬೆಳೆಯಲ್ಲಿ ಅಪಾರವಾದ ನಷ್ಟ ಸಂಭವಿಸುತ್ತದೆ. ಕ್ಷಾಮ ಮತ್ತು ನೆರೆ ಏಷ್ಯನ್ ರೈತರ ಎರಡು ಶತ್ರುಗಳು. ಇವುಗಳಿಂದ ಆತನನ್ನು ರಕ್ಷಿಸಲು ಜಲಾಶಯ ನಿರ್ಮಾಣ, ಅಣೆಕಟ್ಟು, ಭೂಸಾರ ರಕ್ಷಣೆ ಮುಂತಾದವು ಈ ರಾಷ್ಟ್ರಗಳಲ್ಲಿ ಇನ್ನೂ ಬಹಳ ಬಾಲ್ಯಾವಸ್ಥೆಯಲ್ಲಿವೆ. ಹಿಂದುಳಿದ ಕೃಷಿ ವ್ಯವಸ್ಥೆಯಿಂದಾಗಿ ಅನೇಕ ರಾಷ್ಟ್ರಗಳು ಆಹಾರ ಸಮಸ್ಯೆಯನ್ನೆದುರಿಸುತ್ತಿವೆ.

ಏಷ್ಯದ ಎಲ್ಲ ರಾಷ್ಟ್ರಗಳೂ ಭೂಸುಧಾರಣಾಕ್ರಮಕ್ಕೆ ಪಣ ತೊಟ್ಟಿವೆ. ಜಪಾನಿನ ಯುದ್ಧೋತ್ತರ ಪವಾಡದ ಹಿನ್ನೆಲೆಯೆಂದರೆ ಅಲ್ಲಿ ನಡೆದ ಭೂಸುಧಾರಣೆ. ಟೈವಾನ್‌ನಲ್ಲಿ ಉಳುವವನಿಗೇ ಭೂಮಿ ಯೋಜನೆ ಫಲಗೊಂಡು ಮುಕ್ಕಾಲು ಘಟ್ಟಕ್ಕೆ ಬಂದಿದೆ. ಭಾರತದಲ್ಲಿ ಹಂತಹಂತವಾಗಿ ಭೂಸುಧಾರಣೆ ಪ್ರಗತಿ ಹೊಂದುತ್ತಿದೆ. ಫಿಲಿಪೀನ್ಸ್ ಮತ್ತು ಇತರ ಕಡೆ ಇದು ಇನ್ನೂ ಬಹಳ ಹಿಂದುಳಿದಿದೆ. ಚೀನ, ಸೋವಿಯತ್ ಏಷ್ಯ, ಉತ್ತರ ವಿಯಟ್ನಾಂ, ಉತ್ತರ ಕೊರಿಯ ಮತ್ತು ಮಂಗೋಲಿಯಗಳಲ್ಲಿ ಭೂಸುಧಾರಣೆಯನ್ನು ಸಹಕಾರ ಮತ್ತು ಸಾಮೂಹಿಕ ಬೇಸಾಯದ ಮೂಲಕ ಪ್ರಯತ್ನಿಸಲಾಗಿದೆ. ಏಷ್ಯದ ಕಮ್ಯೂನಿಸ್ಟೇತರ ರಾಷ್ಟ್ರಗಳಲ್ಲಿ ಭೂಸುಧಾರಣೆ ಅನೇಕ ಆರ್ಥಿಕ ಹಾಗೂ ಸಾಮಾಜಿಕ ಅಡೆತಡೆಗಳನ್ನು ದಾಟಬೇಕಾಗಿದೆ.

ಭೂಸುಧಾರಣೆಯ ಜೊತೆಗೆ ಯಾಂತ್ರಿಕ ಸುಧಾರಣೆಗಳನ್ನು ಸಾಧಿಸುವುದು ಈ ರಾಷ್ಟ್ರಗಳ ಧ್ಯೇಯ. ಏಷ್ಯದ ಕೇವಲ $\frac{1}{3}$ ಭಾಗ ಮಾತ್ರ ವ್ಯವಸಾಯ ಯೋಗ್ಯವಾಗಿದ್ದು, ಅನೇಕ ರಾಷ್ಟ್ರಗಳು ವ್ಯವಸಾಯದ ಭೂಮಿಯನ್ನು ವಿಸ್ತರಿಸುವ ಕಾರ್ಯಕ್ರಮವನ್ನು ಕೈಗೊಂಡಿವೆ. ಈ ಎಲ್ಲ ರಾಷ್ಟ್ರಗಳಲ್ಲೂ ಭೂಮಿಯ ಇಳುವರಿಯನ್ನು ವೃದ್ಧಿಸಲು ಕೈಗೊಂಡಿರುವ ಮುಖ್ಯ ಕ್ರಮಗಳೆಂದರೆ, ಉತ್ತಮ ರೀತಿಯ ಬೀಜದ ಉಪಯೋಗ, ರಾಸಾಯನಿಕ ಗೊಬ್ಬರಗಳ ಪ್ರಯೋಗ ಮತ್ತು ವ್ಯವಸಾಯಕ್ಕೆ ವಿದ್ಯುಚ್ಛಕ್ತಿ ಮತ್ತು ಯಂತ್ರಸಾಧನೆಗಳ ಅಳವಡಿಕೆ. ಆದರೆ ಈ ಕ್ರಮಗಳನ್ನು ಸತತವಾಗಿ ನಡೆಸಿಕೊಂಡು ಹೋಗಲು ಸಹ ಈ ರಾಷ್ಟ್ರಗಳು ತೊಂದರೆಯನ್ನೆದುರಿಸಬೇಕಾಗಿದೆ. ಮುಖ್ಯವಾದ ಸಮಸ್ಯೆಯೆಂದರೆ ಈ ಕ್ರಮಗಳು ದುಬಾರಿ. 1960ರ ಮಧ್ಯಭಾಗದಿಂದ ಮಾತ್ರ ಭಾರತದಲ್ಲಿ ಮತ್ತು ಚೀನದಲ್ಲಿ ರಾಸಾಯನಿಕ ಗೊಬ್ಬರದ ಬಳಕೆಯ ಪ್ರಾಮುಖ್ಯವನ್ನು ಕಾಣಬಹುದು. ಆದರೂ ಈ ಎರಡು ರಾಷ್ಟ್ರಗಳು ಒಂದು ಎಕರೆಗೆ ಬಳಸುತ್ತಿರುವ ರಾಸಾಯನಿಕ ಗೊಬ್ಬರ ಜಪಾನ್ ಎಕರೆಯೊಂದಕ್ಕೆ ಬಳಸುವುದರ ಕೇವಲ $\frac{1}{18}$ರಷ್ಟು. ನೀರಾವರಿಯನ್ನೊದಗಿಸುವುದೂ ಸಮಸ್ಯೆಯೇ ಆಗಿದೆ. ಏಷ್ಯದ ವ್ಯವಸಾಯ ಜಮೀನಿನಲ್ಲಿ $\frac{1}{3}$ ಭಾಗಕ್ಕಿಂತಲೂ ಕಡಿಮೆ ಪ್ರದೇಶಕ್ಕೆ ನೀರಾವರಿ ಸೌಕರ್ಯ ಸೀಮಿತವಾಗಿದೆ. ಏಷ್ಯದ ಎಲ್ಲ ರಾಷ್ಟ್ರಗಳಿಗೂ ಇರುವ ಸಂಪತ್ತೆಂದರೆ ಶ್ರಮ. ಬಂಡವಾಳ ಕೊರತೆಯಿದ್ದು, ಯಾಂತ್ರಿಕ ಬೇಸಾಯ ದುಬಾರಿಯಾಗಿರುವುದರಿಂದ ಬೇಸಾಯ ಅವಲಂಬಿಸಿರುವುದು ಶ್ರಮಸಂಪತ್ತನ್ನೇ. ಅಧಿಕ ಇಳುವರಿ ನೀಡುವ ಉತ್ತಮ ಬೀಜಗಳ ಬಿತ್ತನೆಗೆ ಅತ್ಯಂತ ಹೆಚ್ಚಿನ ಗಮನ ಕೊಡಲಾಗುತ್ತಿದೆ.

ಇಷ್ಟಾಗಿಯೂ ಏಷ್ಯ ತನಗೆ ಅಗತ್ಯವಾದಷ್ಟು ಆಹಾರ ಸಾಮಗ್ರಿಗಳನ್ನು ಉತ್ಪಾದಿಸಿಕೊಳ್ಳುತ್ತಿಲ್ಲ. ಪ್ರತಿವರ್ಷ ಭಾರತ ಸುಮಾರು 0.9 ಕೋಟಿ ಟನ್ ಆಹಾರ ವಸ್ತುಗಳನ್ನೂ ಚೀನ ಸುಮಾರು 0.5 ಕೋಟಿ ಟನ್ನನ್ನೂ ಹೊರಗಿನಿಂದ ಆಮದು ಮಾಡಿಕೊಳ್ಳುತ್ತಿವೆ. ಏಷ್ಯ ವರ್ಷಕ್ಕೆ 1.5 ಕೋಟಿ ಟನ್ ಗೋದಿಯನ್ನು ಆಮದು ಮಾಡಿಕೊಳ್ಳುತ್ತಿದೆ. ಪ್ರಪಂಚದ ಒಟ್ಟು ಉತ್ಪಾದನೆಯ ಸೇಕಡಾ 70ರಷ್ಟು ಅಕ್ಕಿ ಉತ್ಪಾದಿಸುವ ಈ ಖಂಡ 1964 ರಿಂದೀಚೆಗೆ ಅದನ್ನೂ ಆಮದು ಮಾಡಿಕೊಳ್ಳುತ್ತಿದೆ. ಗೋದಿ ಮತ್ತು ಅಕ್ಕಿ ಆಮದಿನ ಹೆಚ್ಚಿನ ಅಂಶ ಬರುವುದು ಉತ್ತರ ಅಮೆರಿಕದಿಂದ. ಕೃಷಿಯಲ್ಲಿನ ಪ್ರಗತಿ ವೇಗವಾಗಿ ನಡೆಯುತ್ತಿಲ್ಲದಿರುವುದೇ ಇದರ ಕಾರಣಗಳಲ್ಲೊಂದು. ತಲಾ ಆದಾಯ ಹೆಚ್ಚಿದಂತೆ ಜನಸಂಖ್ಯೆ ಹೆಚ್ಚಿ ಆಹಾರದ ಬೇಡಿಕೆಯೂ ಹೆಚ್ಚುತ್ತಿರುವುದು ಈ ರಾಷ್ಟ್ರಗಳ ಸಾಮಾನ್ಯ ಅನುಭವ. ಉದಾಹರಣೆಗೆ, ಅಭಿವೃದ್ಧಿ ಹೊಂದುತ್ತಿರುವ ಏಷ್ಯನ್ ರಾಷ್ಟ್ರಗಳಾದ ಸಿಂಹಳ, ಚೀನ (ಟೈವಾನ್), ಭಾರತ, ಇಂಡೊನೇಷ್ಯ, ಪಾಕಿಸ್ತಾನ, ಫಿಲಿಪೀನ್ಸ್ ಮತ್ತು ಥೈಲೆಂಡ್ ಇವೆಲ್ಲ ರಾಷ್ಟ್ರಗಳನ್ನೂ ಒಟ್ಟಾಗಿಸಿ, ಲೆಕ್ಕ ಹಾಕಿದಾಗ, ಇಲ್ಲಿ ತಲಾ ಆದಾಯ ಸೇಕಡಾ 1ರಷ್ಟು ವೃದ್ಧಿಯಾದಾಗ ಆಹಾರ ಉತ್ಪನ್ನದ ಬೇಡಿಕೆಯ ಹೆಚ್ಚಳ 0.89 ರಷ್ಟಾಗುತ್ತದೆ. ಅಮೆರಿಕ ಮತ್ತು ಆಸ್ಟ್ರೇಲಿಯಗಳಲ್ಲಿ ಈ ಬೇಡಿಕೆಯ ಹೆಚ್ಚಳ ಕೇವಲ 0.15 ಮತ್ತು 0.11. ಏಷ್ಯದ ಪ್ರತಿ ವ್ಯಕ್ತಿಯ ಸರಾಸರಿ ಅನುಭೋಗ ದಿನಕ್ಕೆ 2,050 ಕೆಲೊರಿ. ಇದು ಅಗತ್ಯಕ್ಕಿಂತ ಬಹಳ ಕಡಿಮೆ.

ವಾಣಿಜ್ಯ ಬೆಳೆಗಳಾದ ಚಹ, ಕಬ್ಬು, ರಬ್ಬರ್ ಮತ್ತು ತೈಲೋತ್ಪಾದಕ ಸಸ್ಯಗಳೂ ಏಷ್ಯದ ಅರ್ಥವ್ಯವಸ್ಥೆಯಲ್ಲಿ ಪ್ರಮುಖ ಸ್ಥಾನ ಪಡೆದಿವೆ. ಏಷ್ಯನ್ ರಾಷ್ಟ್ರಗಳ ನಿರ್ಯಾತ ಅವಲಂಬಿಸಿರುವುದು ಈ ಮೂಲವಸ್ತುಗಳನ್ನೇ.

ಆದರೆ ಈ ವಸ್ತುಗಳ ಬೆಲೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ಯಾವಾಗಲೂ ಕುಸಿಯುತ್ತಿದ್ದು, ಯಾಂತ್ರಿಕ ವಸ್ತುಗಳ ಬೆಲೆ ಏರುತ್ತಿದ್ದು, ಏಷ್ಯನ್ ರಾಷ್ಟ್ರಗಳ ಅಂತರರಾಷ್ಟ್ರೀಯ ವ್ಯಾಪಾರವನ್ನು ಕುಂಠಿತಗೊಳಿಸುತ್ತಿವೆ. ಈ ರಾಷ್ಟ್ರಗಳು ತಮ್ಮ ಪ್ರಗತಿಗೆ ಬೇಕಾದ ಯಂತ್ರಸಾಮಗ್ರಿಗಳನ್ನು ಅನಿವಾರ್ಯವಾಗಿ ಕೊಳ್ಳಬೇಕಾಗಿರುವುದರಿಂದ ಈ ಸಮಸ್ಯೆ ಇನ್ನೂ ಜಟಿಲ. ಇಷ್ಟೇ ಅಲ್ಲದೆ ಅತ್ಯಂತ ಹಳೆಯ ಕಾಲದ ಬೇಸಾಯಕ್ಕೇ ಅತುಕೊಂಡಿರುವ ಈ ರಾಷ್ಟ್ರಗಳು ಕೃಷಿರಂಗದಲ್ಲಿ ಸಹ ಪಾಶ್ಚಾತ್ಯ ರಾಷ್ಟ್ರಗಳ ಪೈಪೋಟಿಯನ್ನೆದುರಿಸುತ್ತಿವೆ. ಏಷ್ಯದ ಕೆಲವು ರಾಷ್ಟ್ರಗಳ ಕೃಷಿ ಉತ್ಪನ್ನವನ್ನೂ ಅದರ ಸರಾಸರಿ ಹೆಚ್ಚಳವನ್ನೂ ಕೆಳಗಿನ ಯಾದಿಯಲ್ಲಿ ಕೊಡಲಾಗಿದೆ.

ವಿದೇಶೀ ವ್ಯಾಪಾರಕ್ಕೆ ಕೃಷಿಯ ಮೇಲೆ ಮುಖ್ಯವಾಗಿ ಅವಲಂಬಿತವಾಗಿರುವ ಏಷ್ಯನ್ ರಾಷ್ಟ್ರಗಳು ಆಂತರಿಕವಾಗಿ ಕೃಷಿ ವಸ್ತುಗಳ ಉತ್ಪನ್ನದ ಡೋಲಾಯಮಾನ ಸ್ಥಿತಿಗೂ ಬಾಹ್ಯವಾಗಿ ಅವುಗಳ ಬೆಲೆಯ ಕುಸಿತದ ಸಮಸ್ಯೆಗೂ ಹೊಂದಿಕೊಳ್ಳಬೇಕಾಗಿದ್ದು, ವಿದೇಶೀ ವ್ಯಾಪಾರದಿಂದ ಪಡೆಯುವ ಲಾಭ ಯಾವಾಗಲೂ ವ್ಯತ್ಯಾಸ ಹೊಂದುವ ಪರಿಸ್ಥಿತಿಯನ್ನೆದುರಿಸಬೇಕಾಗಿದೆ.

**ಕೈಗಾರಿಕೆ :** ಇದೂ ಏಷ್ಯದ ರಾಷ್ಟ್ರಗಳ ಒಂದು ಪ್ರಮುಖ ಸಮಸ್ಯೆ. ದೊಡ್ಡ ಉತ್ಪಾದನೋದ್ಯಮಗಳ ಜೊತೆಗೆ ಈ ರಾಷ್ಟ್ರಗಳು ಸಾರಿಗೆ, ಬ್ಯಾಂಕಿಂಗ್, ಸಂಪರ್ಕ, ವಿದ್ಯುತ್, ಜಲಾಶಯ—ಇವೆಲ್ಲವನ್ನೂ ವ್ಯವಸ್ಥಿತವಾಗಿ ನಿರ್ಮಾಣ ಮಾಡಿಕೊಳ್ಳಬೇಕಾಗಿದೆ. ತಮ್ಮ ರಾಷ್ಟ್ರಗಳಲ್ಲಿನ ವರಮಾನ ಹೆಚ್ಚಬೇಕಾದರೆ ತಾವೂ ಕೈಗಾರಿಕೆ ಬೆಳೆಸಬೇಕು ಎಂಬುದನ್ನು ಈ ರಾಷ್ಟ್ರಗಳು ಈಗ ಮನಗಂಡಿವೆ. ಅಷ್ಟೇ ಅಲ್ಲ, ಪಾಶ್ಚಾತ್ಯಾವಲಂಬನದಿಂದ ವಿಮೋಚನೆ ಹೊಂದಲೂ ಇದೇ ಮಾರ್ಗ.

ಏಷ್ಯದ ಹೆಚ್ಚಿನ ರಾಷ್ಟ್ರಗಳು ಕೈಗಾರಿಕಾ ರಂಗದಲ್ಲಿ ಹೆಚ್ಚು ಮುನ್ನಡೆಯುವುದಕ್ಕೆ ಸಾಧ್ಯವಾಗಿಲ್ಲ. ಅವಕ್ಕೆ ಈ ರಂಗದಲ್ಲಿನ ಸಮಸ್ಯೆಗಳು ಅಪಾರ. ಆದರೂ ಈ ರಾಷ್ಟ್ರಗಳು ಇಪ್ಪತ್ತನೆಯ ಶತಮಾನದ ಐದು–ಆರನೆಯ ದಶಕಗಳಲ್ಲಿ ಪ್ರಗತಿಯ ಬಗ್ಗೆ ಹೆಚ್ಚು ಆಸಕ್ತಿ ವಹಿಸಿವೆ. ವಿಶ್ವಸಂಸ್ಥೆಯ ಅಂಕಿ–ಅಂಶಗಳ ಪ್ರಕಾರ ಕಳೆದ ಐದು ವರ್ಷಗಳಲ್ಲಿ ಏಷ್ಯದ ಕೈಗಾರಿಕಾ ಉತ್ಪನ್ನ ಶತಕ್ಕೆ [illegible] ಹೆಚ್ಚಿದೆ. ಬೃಹತ್

1952-54 ರಿಂದ 1961-63ರ ವರೆಗೆ
ಕೃಷಿ ಉತ್ಪನ್ನದ ಸರಾಸರಿ ವಾರ್ಷಿಕ ಬೆಳೆವಣಿಗೆ

| ದೇಶ | ಉತ್ಪನ್ನ ಸೂಚ್ಯಂಕಗಳು | | | ಜನಸಂಖ್ಯೆಯ ಬೆಳೆವಣಿಗೆಯ ವೇಗ | ತಲಾ ಉತ್ಪನ್ನ | | |
|---|---|---|---|---|---|---|---|
| | ಕೃಷಿ | ಆಹಾರ | ದ್ವಿದಳ ಧಾನ್ಯಗಳು | | ಕೃಷಿ | ಆಹಾರ | ದ್ವಿದಳ ಧಾನ್ಯಗಳು |
| ಜಪಾನ್ | 3.3 | 3.6 | 2.4 | 1.0 | 2.4 | 2.5 | 1.5 |
| ಥೈಲೆಂಡ್ | 5.2 | 4.8 | 4.1 | 3.0 | 2.1 | 1.8 | 1.0 |
| ಇರಾನ್ | 3.8 | 3.6 | 3.1 | 2.3 | 1.6 | 1.2 | 0.7 |
| ಕೊರಿಯ ರಿಪಬ್ಲಿಕ್ | 3.5 | 3.8 | 3.1 | 2.3 | 1.3 | 1.3 | 0.7 |
| ಮಲೇಷಿಯ–ಮಲೆಯ | 4.0 | 6.0 | 3.1 | 3.3 | 0.9 | 2.8 | 0.0 |
| ಚೀನ (ಟೈವಾನ್) | 4.1 | 4.0 | 2.9 | 3.5 | 0.5 | 0.4 | 0.6 |
| ಭಾರತ | 2.5 | 2.4 | 2.9 | 2.1 | 0·5 | 0.4 | 0.8 |
| ಸಿಂಹಳ | 3.0 | 3.2 | 5.9 | 2.6 | 0.4 | 0.6 | 3.3 |
| ಫಿಲಿಪೀನ್ಸ್ | 3.4 | 3.1 | 3.1 | 3.3 | 0.4 | 0.0 | 0.0 |
| ಬರ್ಮ | 2.1 | 2.5 | 2.5 | 2.2 | 0.0 | 0.2 | 0 4 |
| ಪಾಕಿಸ್ತಾನ | 1.6 | 1.5 | 2.5 | 2.1 | 0.4 | 0.7 | 0.4 |
| ಇಂಡೊನೇಷ್ಯ | 1.2 | 1.5 | 2.2 | 2.2 | 1.0 | 0.4 | 0.0 |

ಕೈಗಾರಿಕೆಗಳನ್ನೂ ಸೇರಿಸಿದರೆ ಈ ಸಂಖ್ಯೆ ಇನ್ನೂ ಹೆಚ್ಚು. ಏಷ್ಯದ ಪ್ರಗತಿ ಹೊಂದುತ್ತಿರುವ ರಾಷ್ಟ್ರಗಳ ಕೈಗಾರಿಕಾ ಉತ್ಪನ್ನ 1960ರ ದಶಕದಲ್ಲಿ ವರ್ಷಕ್ಕೆ ಸರಾಸರಿ ಸೇಕಡಾ 8ರಂತೆ ಏರಿತು. ಅಂದರೆ, ಈ ರಂಗದ ಉತ್ಪನ್ನದ ಬೆಳೆವಣಿಗೆ ಉಳಿದ ರಂಗಗಳದಕ್ಕಿಂತ ಎರಡರಷ್ಟು ಹೆಚ್ಚು. ಯಾಂತ್ರಿಕ ಸಾಧನಗಳ ತಯಾರಿಕೆಯಲ್ಲಿ ನಿರ್ಯಾತ ಮಾಡುವಷ್ಟರಮಟ್ಟಿಗಿನ ಸಿದ್ಧಿಯನ್ನು ಭಾರತ, ಚೀನ ಸಾಧಿಸಿವೆ. ಇವೆರಡೂ ಸಾಕಷ್ಟು ಪ್ರಗತಿ ಹೊಂದಿದ ಅಣುಶಕ್ತಿ ಕೇಂದ್ರಗಳನ್ನು ಸಹ ಹೊಂದಿವೆ.

ಏಷ್ಯದ ಕೈಗಾರಿಕಾ ರಂಗ ಎದುರಿಸುತ್ತಿರುವ ಸಮಸ್ಯೆಗಳಲ್ಲಿ ಬಂಡವಾಳದ, ತಜ್ಞರ, ಉದ್ಯಮಿಗಳ ಮತ್ತು ವ್ಯವಸ್ಥಾಪಕರ ಕೊರತೆ ಬಹಳ ಮುಖ್ಯ. ಜಪಾನನ್ನುಳಿದು ಇತರ ಎಲ್ಲ ರಾಷ್ಟ್ರಗಳೂ ತಮ್ಮ ಕೈಗಾರಿಕಾ ಪ್ರಗತಿಗೆ ಒಂದಲ್ಲ ಒಂದು ದೃಷ್ಟಿಯಿಂದ ಪಾಶ್ಚಾತ್ಯ ದೇಶಗಳನ್ನು ಅವಲಂಬಿಸಬೇಕಾಗಿದೆ.

ಸತತವಾಗಿ ಬಂಡವಾಳಕ್ಕಾಗಿ ಪರಾವಲಂಬಿಗಳಾಗಿರುವುದು ಆರ್ಥಿಕ ಪ್ರಗತಿಯ ದೃಷ್ಟಿಯಿಂದ ಬಹಳ ಅಪಾಯಕಾರಿ ಎಂಬುದನ್ನು ಏಷ್ಯನ್ ರಾಷ್ಟ್ರಗಳು ಮನಗಂಡಿವೆ. ಹೀಗಾಗಿ ತಮ್ಮಲ್ಲಿಯೇ ಸಾಧ್ಯವಾದಷ್ಟು ಬಂಡವಾಳವನ್ನು ಒದಗಿಸಿಕೊಳ್ಳುವ ಪ್ರಯತ್ನ ನಡೆದಿದೆ. 1960ರಲ್ಲಿ ಅಸ್ತಿತ್ವಕ್ಕೆ ಬಂದ ಏಷ್ಯದ ಅಭಿವೃದ್ಧಿ ಬ್ಯಾಂಕು (ನೋಡಿ) ಈ ದಿಶೆಯಲ್ಲೊಂದು ಮೈಲಿಕಲ್ಲು. ಆದರೂ ಸದ್ಯದಲ್ಲಿ ಈ ರಾಷ್ಟ್ರಗಳು ಬಂಡವಾಳದ ದೃಷ್ಟಿಯಿಂದ ಸ್ವಾವಲಂಬಿಗಳಾಗುವುದು ಕಠಿಣ.

ಏಷ್ಯದ ರಾಷ್ಟ್ರಗಳು ಕೈಗಾರಿಕಾಭಿವೃದ್ಧಿಗೆ ಸತತವಾಗಿ ಪ್ರಯತ್ನ ಪಡುತ್ತಿವೆ. ಅನೇಕ ರಾಷ್ಟ್ರಗಳು ಪ್ರಗತಿ ಸಾಧಿಸಿವೆ. ಇದಕ್ಕೆ ಒಂದು ನಿದರ್ಶನವೆಂದರೆ, ಅನೇಕ ಏಷ್ಯನ್ ರಾಷ್ಟ್ರಗಳಲ್ಲಿ ಕೈಗಾರಿಕೆ ಹಾಗೂ ಯಂತ್ರಗಳ ಉತ್ಪನ್ನದ ಬೆಳೆವಣಿಗೆಯ ವೇಗ, ಮುಖ್ಯವಾದ ಕೃಷಿರಂಗದ ಉತ್ಪನ್ನದ ವೇಗಕ್ಕಿಂತ ಹೆಚ್ಚಾಗಿದೆ. ಕೆಲವು ರಾಷ್ಟ್ರಗಳ ಕೈಗಾರಿಕೆ ಮತ್ತು ಯಂತ್ರೋತ್ಪಾದನೆಯ ಬೆಳೆವಣಿಗೆಯನ್ನು ಮುಂದಿನ ಯಾದಿಯಲ್ಲಿ ಕೊಟ್ಟಿದೆ.

1952–54 ರಿಂದ 1961–63ರ
ಕೈಗಾರಿಕಾ ಹಾಗೂ ಯಂತ್ರೋತ್ಪಾದನೆಯ ಬೆಳೆವಣಿಗೆ

| ದೇಶ | | ಕೈಗಾರಿಕೆ (ಸೇಕಡಾ) | | ಯಂತ್ರ (ಸೇಕಡಾ) |
|---|---|---|---|---|
| ಭಾರತ | ... | 7.4 | ... | 7.0 |
| ಚೀನ | ... | 11.0 | ... | 11.5 |
| ಪಾಕಿಸ್ತಾನ | ... | 12.7 | ... | 12·9 |
| ಜಪಾನ್ | ... | 14.1 | ... | 15.0 |
| ಫಿಲಿಪೀನ್ಸ್ | ... | — | ... | 8.9 |
| ದಕ್ಷಿಣ ಕೊರಿಯ | ... | 14.0 | ... | 12.6 |
| ಸಿಂಹಳ | ... | 5.2 | ... | 5.0 |

ಯುದ್ಧಾನಂತರದಲ್ಲಿ ಕೈಗಾರಿಕೆಗೆ ತೀವ್ರವಾಗಿ ಗಮನ ಕೊಟ್ಟ ಏಷ್ಯನ್ ರಾಷ್ಟ್ರಗಳು ಪ್ರಾರಂಭಕ್ಕೆ ಬೃಹದ್‍ಕೈಗಾರಿಕೆಗಳ ನಿರ್ಮಾಣದ ಆಶೆಯನ್ನಿರಿಸಿಕೊಂಡಿದ್ದುವು. ಭಾರತ ಮತ್ತು ಚೀನಗಳು ರಷ್ಯವನ್ನು ಆದರ್ಶವಾಗಿಟ್ಟುಕೊಂಡು ಮುಂದು

ವರಿದುವು. ಅವು ಉಕ್ಕು ಕಾರ್ಖಾನೆ, ವಿದ್ಯುತ್ ಆಗಾರ, ಎಂಜಿನಿಯರಿಂಗ್ ಕೈಗಾರಿಕೆ, ರಾಸಾಯನಿಕ ಕಾರ್ಖಾನೆ ಇವಕ್ಕೆ ಹೆಚ್ಚು ಹಣ ಹೂಡಿದವು. ಬೇಸಾಯವಿಲ್ಲದೆ ಬದುಕಿಲ್ಲ ಎಂಬುದನ್ನು ಅರಿತು, ಆಹಾರದಲ್ಲಿ ಸ್ವಾವಲಂಬನೆ ಸಾಧಿಸುವ ದೃಷ್ಟಿಯಿಂದ ಈ ರಂಗದಲ್ಲಿ ಈಚೆಗೆ ಹೆಚ್ಚಿನ ನಿಯೋಜನೆ ಪ್ರಾರಂಭವಾಗಿದೆ. ಸಣ್ಣ ಕೈಗಾರಿಕೆ ಹಾಗೂ ಕೃಷಿವಸ್ತುಗಳ ನಿರ್ಯಾತದಲ್ಲಿ ಸಹ ಪ್ರಮುಖ ಪಾತ್ರ ವಹಿಸುತ್ತಿರುವುದರಿಂದ ಇದಕ್ಕೆ ಭದ್ರವಾದ ತಳಹದಿ ಹಾಕುವ ಯತ್ನ ಏಷ್ಯನ್ ರಾಷ್ಟ್ರಗಳಲ್ಲಿ ಇಂದು ನಡೆಯುತ್ತಿದೆ.

ಕಮ್ಯೂನಿಸ್ಟ್ ರಾಷ್ಟ್ರಗಳನ್ನು ಬಿಟ್ಟರೆ ಏಷ್ಯದಲ್ಲಿ ಉಳಿದೆಲ್ಲೆಡೆ ಕೈಗಾರಿಕಾ ರಂಗದ ಮಾಲೀಕತ್ವ ಸರ್ಕಾರ ಹಾಗೂ ಖಾಸಗಿಯವರಲ್ಲಿ ನೆಲೆಸಿದೆ. ಇದು ಬಂಡವಾಳ ನಿಯೋಜನೆಯ ದೃಷ್ಟಿಯಿಂದ ವಿಹಿತವೆಂದು ಈ ರಾಷ್ಟ್ರಗಳ ನಂಬಿಕೆ; ಕೈಗಾರಿಕೆಯ ಪ್ರಗತಿಯಿಲ್ಲದೆ ತಾವು ಪಾಶ್ಚಾತ್ಯ ರಾಷ್ಟ್ರಗಳಿಗೆ ಭುಜಕೊಟ್ಟು ನಿಲ್ಲುವುದು ಸಾಧ್ಯವಿಲ್ಲವೆಂದು ಅರಿತಿರುವ ಏಷ್ಯನ್ ರಾಷ್ಟ್ರಗಳು ಈ ಹಾದಿಯಲ್ಲಿ ಪ್ರಗತಿ ಸಾಧಿಸಲು ಮನಃಪೂರ್ವಕವಾಗಿ ಶ್ರಮಿಸುತ್ತಿವೆ.

**ಹಣಕಾಸು :** ಏಷ್ಯನ್ ರಾಷ್ಟ್ರಗಳ ಕೃಷಿರಂಗದ ಪ್ರಗತಿಯಾಗಲಿ, ಕೈಗಾರಿಕಾ ರಂಗದ ಪ್ರಗತಿಯಾಗಲಿ, ಹಣಕಾಸು ಎಷ್ಟು ದೊರೆಯುತ್ತದೆ ಎಂಬುದರ ಮೇಲೆ ಅವಲಂಬಿತವಾಗಿವೆ. ತಮ್ಮ ಬಡತನದಿಂದಾಗಿ ಕಡಿಮೆ ಆದಾಯ, ಕಡಿಮೆ ಜೀವನಮಟ್ಟ, ಕಡಿಮೆ ಉಳಿತಾಯ ಮತ್ತು ಕಡಿಮೆ ಬಂಡವಾಳ ಶೇಖರಣೆ—ಇವುಗಳ ವಿಷವೃತ್ತದಲ್ಲಿ ಸಿಕ್ಕಿರುವ ಏಷ್ಯನ್ ರಾಷ್ಟ್ರಗಳು ಹಣಕಾಸಿನ ಕ್ಷೇತ್ರದಲ್ಲಿ ಎದುರಿಸಬೇಕಾದ ಸಮಸ್ಯೆಗಳು ಅಪಾರ. ಈ ರಾಷ್ಟ್ರಗಳ ಉಳಿತಾಯ, ಬಂಡವಾಳ ಶೇಖರಣೆ ತೀರ ಅಲ್ಪ.

ಏಷ್ಯದ ಹೆಚ್ಚಿನ ರಾಷ್ಟ್ರಗಳು ತಮ್ಮ ಆದಾಯಕ್ಕೆ ನೇರವಾಗಿ ವರಮಾನ ತೆರಿಗೆಯನ್ನೇ ಅವಲಂಬಿಸಿವೆ. ಈ ರಾಷ್ಟ್ರಗಳು ತಮ್ಮ ಆದಾಯದ 1/5 ಭಾಗವನ್ನು ವರಮಾನ ತೆರಿಗೆಗಳ ಮೂಲದಿಂದ ಪಡೆದುಕೊಳ್ಳುತ್ತವೆ. ಆಯಾತ ಕರ ಮತ್ತು ಇತರ ಪರೋಕ್ಷ ತೆರಿಗೆಗಳೂ ಮುಖ್ಯವೇ. ಈ ರಾಷ್ಟ್ರಗಳಿಗೆ ಪಾಶ್ಚಾತ್ಯ ರಾಷ್ಟ್ರಗಳಂತೆ ಕಡ್ಡಾಯ ಉಳಿತಾಯವನ್ನು ಪ್ರೇರೇಪಿಸುವ ತೆರಿಗೆಗಳನ್ನು ವಿಧಿಸುವುದು ಕಠಿಣವಾದ ವಿಷಯ. ಇವು ಸತತವಾಗಿ ಎದುರಿಸುತ್ತಿರುವ ಸಮಸ್ಯೆಯೆಂದರೆ ಹಣದ ಉಬ್ಬರ; ಇದರಿಂದ ಜೀವನಮಟ್ಟ ಕಡಿಮೆಯಾಗುವುದು ಅನಿವಾರ್ಯ. ಉದಾಹರಣೆಗೆ, 1961–66ರಲ್ಲಿ ಇಂಡೊನೇಷ್ಯದಲ್ಲಿ ಅನುಭೋಗ ವಸ್ತುಗಳ ಬೆಲೆ ಸೇ. 600 ರಷ್ಟು ಹೆಚ್ಚಿತು. ಹಣಕಾಸಿನ ಸ್ಥಿತಿ ತೀರ ಅಸಮರ್ಪಕವಾಗಿರುವುದರಿಂದ ಈ ರಾಷ್ಟ್ರಗಳು ವಿದೇಶೀ ಬಂಡವಾಳದ ಕಡೆ ನೋಡುವುದು ಸಹಜ. 1965ರಲ್ಲಿ ಪಾಶ್ಚಾತ್ಯ ರಾಷ್ಟ್ರಗಳಿಂದ ಪೂರ್ವ ಮತ್ತು ದಕ್ಷಿಣ ಏಷ್ಯಕ್ಕೆ ಹರಿದು ಬಂದ ಬಂಡವಾಳ 280 ಕೋಟಿ ಡಾಲರ್ (ವಿಶ್ವಬ್ಯಾಂಕ್ ಮತ್ತು ಇತರ ಹಣಕಾಸು ಸಂಸ್ಥೆಗಳ ಮೂಲದಿಂದ). ಇದು ಅಲ್ಲಿಂದೀಚೆಗೆ ಪ್ರತಿ ವರ್ಷ ಅದೇ ಪ್ರಮಾಣದಲ್ಲಿ ಮುಂದುವರಿದಿದೆ. ಸೋವಿಯತ್ ವಲಯದಿಂದ ಬಂದ ಸಹಾಯಧನ 1965ರ ವರೆಗೆ ತಲಾ 300 ಕೋಟಿ ಡಾಲರ್. ಬಂಡವಾಳಕ್ಕಾಗಿ ಈ ರೀತಿಯ ಪರಾವಲಂಬನೆ ಏಷ್ಯದ ರಾಷ್ಟ್ರಗಳಿಗೆ ಪ್ರಗತಿಯ ದೃಷ್ಟಿಯಿಂದ ಅನಿವಾರ್ಯ.

**ಜನಸಂಖ್ಯೆ :** ಏಷ್ಯದ ಪ್ರಗತಿಯನ್ನೆಲ್ಲ ಕಬಳಿಸುತ್ತಿರುವುದು ಇಲ್ಲಿನ ಜನಸಂಖ್ಯೆಯ ಬೆಳವಣಿಗೆ. ಅನೇಕ ಏಷ್ಯನ್ ರಾಷ್ಟ್ರಗಳಲ್ಲಿ 1960–61ರಲ್ಲಿ ನಡೆದ ಜನಗಣತಿಯಂತೆ ಇಲ್ಲಿ ಜನಸಂಖ್ಯೆ ವರ್ಷಕ್ಕೆ ಸೇ. 2.5ರಂತೆ ಬೆಳೆಯುತ್ತಿದೆ. ಈ ರೀತಿಯ ಜನಸಂಖ್ಯಾ ಸ್ಫೋಟ ಏಷ್ಯವನ್ನು ಭವಿಷ್ಯದಲ್ಲಿ ದೊಡ್ಡ ವಿಪತ್ತಿಗೆ ಈಡು ಮಾಡುತ್ತದೆಂಬುದು ತಜ್ಞರ ಅಭಿಮತ. ಏಷ್ಯದ ಕೆಲವು ಮುಖ್ಯ ರಾಷ್ಟ್ರಗಳ ಜನಸಂಖ್ಯೆಯ ಬೆಳವಣಿಗೆಯ ಗತಿಯನ್ನು ಮುಂದೆ ಕೊಟ್ಟಿದೆ :

1953–60ರ ನಡುವೆ ಜನಸಂಖ್ಯೆಯ ಸರಾಸರಿ ಬೆಳವಣಿಗೆ

| ಜನಸಂಖ್ಯೆ ಬೆಳವಣಿಗೆಯ ವೇಗ (ಸೇಕಡಾ) | ದೇಶ | ಜನಸಂಖ್ಯೆ (1960ರಲ್ಲಿ) (ಕೋಟಿಯಲ್ಲಿ) |
|---|---|---|
| 1.9 ಕ್ಕಿಂತ ಕಡಿಮೆ | ಜಪಾನ್ | 9.3 |
| | ಆಫ್ಘಾನಿಸ್ತಾನ್ | 1.4 |
| | ಬರ್ಮಾ | 2.1 |
| | ನೇಪಾಳ | 0.9 |
| 2.0 ರಿಂದ 2.9 | ಭಾರತ | 43.2 |
| | ಕಾಂಬೋಡಿಯ | 0.5 |
| | ಇರಾನ್ | 2.0 |
| | ಪಾಕಿಸ್ತಾನ | 9.3 |
| | ಸಿಂಹಳ | 1.0 |
| | ಚೀನ | 64.7 (1957ರ ಡಿಸೆಂಬರಿನಲ್ಲಿ) |
| | ದಕ್ಷಿಣ ಕೊರಿಯ | 2.5 |
| | ಮಂಗೋಲಿಯ | 0.1 |
| | ಹಾಂಗ್‌ಕಾಂಗ್ | 0.3 |
| 3.0 ಮತ್ತು ಅದಕ್ಕೆ ಮೇಲ್ಪಟ್ಟು | ಉತ್ತರ ಬೋರ್ನಿಯೋ | 0.05 |
| | ಫಿಲಿಪೀನ್ಸ್ | 2.6 |
| | ಸರಾವಾಕ್ | 0.08 |
| | ಥೈಲೆಂಡ್ | 2.6 |
| | ದಕ್ಷಿಣ ವಿಯೆಟ್ನಾಂ | 1.4 |
| | ಬ್ರೂನೈ | 0.01 |
| | ಚೀನ (ಟೈವಾನ್) | 1.1 |
| | ಮಲೆಯ | 0.7 |
| | ಸಿಂಗಪುರ | 0.2 |

ಹೀಗೆ ಅತ್ಯಧಿಕ ವೇಗದಲ್ಲಿ ಬೆಳೆಯುತ್ತಿರುವ ಜನಸಂಖ್ಯೆಗೆ ಕಾರಣಗಳು ಹಲವಾರು. 1950ರಿಂದ ಏಷ್ಯದ ಅನೇಕ ರಾಷ್ಟ್ರಗಳಲ್ಲಿ ಮರಣಸಂಖ್ಯೆ ಬಹಳ ಮಟ್ಟಿಗೆ ಕಡಿಮೆಯಾಗಿದೆ. ವೈದ್ಯಕೀಯ ಸೌಲಭ್ಯ ಮತ್ತು ಆರೋಗ್ಯ ಮುನ್ನಡೆ ಇವೇ ಅದಕ್ಕೆ ಕಾರಣ. ಆದರೆ ಜನಸಂಖ್ಯೆಯ ಏರುಗತಿಯನ್ನು ಕಡಿಮೆ ಮಾಡುವುದಕ್ಕೆ ಹೆಚ್ಚು ಪ್ರಾಧಾನ್ಯ ದೊರೆಯಲಿಲ್ಲ. ದೊಡ್ಡ ಕುಟುಂಬವೇ ಭಾಗ್ಯ ಮತ್ತು ಭದ್ರತೆ ಎಂದು ನಂಬಿರುವ ಹೆಚ್ಚಿನ ಜನಕ್ಕೆ ಅದರ ಆರ್ಥಿಕ ತೊಂದರೆಗಳನ್ನು ಮುಂಗಾಣುವ ವಿದ್ಯಾಭ್ಯಾಸವಾಗಲಿ, ದೂರದೃಷ್ಟಿಯಾಗಲಿ ಇಲ್ಲ. ಕುಟುಂಬ ಯೋಜನೆಗೆ ಇರುವ ಸಾಮಾಜಿಕ ಹಾಗೂ ಆರ್ಥಿಕ ಅಡೆತಡೆಗಳು ಹಲವು. ಅನೇಕ ದೇಶಗಳ ಜನ ಇಂದು ಸಹ ವಿಸ್ತಾರ ಕುಟುಂಬಗಳ ಕಡೆಗೇ ತಮ್ಮ ಒಲವನ್ನು ತೋರಿಸುತ್ತಿದ್ದಾರೆ. ಆದರೆ ಜಪಾನ್ ಮಾತ್ರ ಕಾಯಿದೆ ತಂದು ತನ್ನ ಜನಸಂಖ್ಯೆ ಬೆಳವಣಿಗೆಯ ವೇಗವನ್ನು ಸೇ. 2.0 ರಿಂದ ಸೇ. 1.0ಕ್ಕೆ ಕಳೆದ ಎರಡು ಶತಕಗಳಲ್ಲಿ ಇಳಿಸಿಕೊಂಡಿದೆ. ಭಾರತದ ಯೋಜನೆಗಳಲ್ಲಿ ಕುಟುಂಬಯೋಜನೆಗೆ ಹೆಚ್ಚಿನ ಮಹತ್ತ್ವ ನೀಡಲಾಗಿದ್ದರೂ ಪ್ರಗತಿ ಗಮನಾರ್ಹವಾಗಿ ಆಗಿಲ್ಲ. ಈ ರಾಷ್ಟ್ರಗಳಲ್ಲಿ ಸಾಮಾಜಿಕ ಬದಲಾವಣೆಯಾದ ಹೊರತು ಈ ದಿಕ್ಕಿನಲ್ಲಿ ಯಾವ ಪ್ರಗತಿಯನ್ನೂ ಆಶಿಸುವಂತಿಲ್ಲ. ವಿದ್ಯಾಭ್ಯಾಸ ಮುನ್ನಡೆದಂತೆ ಕುಟುಂಬಯೋಜನೆ ಸಿದ್ಧಿಸುವ ಆಶೆ ಈ ರಾಷ್ಟ್ರಗಳಿಗಿದೆ. ಆದರೆ ಅಲ್ಲಿಯ ವರೆಗೆ ಜನಸಂಖ್ಯೆಯಲ್ಲಾಗುವ ಬೆಳವಣಿಗೆಯಿಂದ ಈ ರಾಷ್ಟ್ರಗಳ ಪ್ರಗತಿಯ ಮೇಲೆ ಆಗುವ ಪರಿಣಾಮ ತೀವ್ರ.

ಜನಸಂಖ್ಯೆಯ ಏರಿಕೆ ಇದೇ ಗತಿಯಲ್ಲಿ ನಡೆದರೆ 1999ರ ವೇಳೆಗೆ ಅದು ಈಗಿನ 180 ಕೋಟಿಯಿಂದ 310 ಕೋಟಿಯಾಗಬಹುದೆಂದು ನಿರೀಕ್ಷಿಸಲಾಗಿದೆ.

ಇದನ್ನು ಹೇಗೆ ತಡೆಗಟ್ಟಬಹುದು ಎನ್ನುವುದೇ ಬೃಹದ್ ಸಮಸ್ಯೆ. ಈ ರಾಷ್ಟ್ರಗಳ ಸರ್ಕಾರಗಳು ಇದರ ಪರಿಣಾಮವನ್ನು ಮನಗಂಡು ಅನೇಕ ರೀತಿಯ ಯೋಜನೆಗಳನ್ನು ಕೈಗೊಂಡಿವೆ. ಏಷ್ಯನ್ ರಾಷ್ಟ್ರಗಳು ಶಕ್ತಿಮೀರಿ ದುಡಿದರೆ ಆರ್ಥಿಕ ಪ್ರಗತಿ ವರ್ಷಕ್ಕೆ ಸೇ. 5ರಂತೆ ಮುಂದುವರಿಯುತ್ತದೆ. ಆದರೆ ಜನಸಂಖ್ಯೆ ಸೇ. 2.5ರಂತೆ ಹೆಚ್ಚಿದರೆ ಜೀವನಮಟ್ಟದ ಮೇಲೆ ಆರ್ಥಿಕ ಪ್ರಗತಿಯಿಂದ ಯಾವ ಪರಿಣಾಮವೂ ಆಗದು. ಕಮ್ಯೂನಿಸ್ಟ್ ರಾಷ್ಟ್ರವಾದ ಚೀನ ಸಹ ಜನಸಂಖ್ಯೆಯ ಈ ಮಟ್ಟದ ಬೆಳವಣಿಗೆಯಿಂದ ಆರ್ಥಿಕ ಪ್ರಗತಿ ಕುಂಠಿತವಾಗುವುದೆಂಬುದನ್ನು ಮನಗಂಡಿದೆ.

ಬರುವ ದಶಕಗಳಲ್ಲಿ ಜನಸಂಖ್ಯಾ ಸಮಸ್ಯೆಯನ್ನೆದುರಿಸುವುದೇ ಏಷ್ಯನ್ ರಾಷ್ಟ್ರಗಳ ಪ್ರಮುಖ ಆರ್ಥಿಕ ಸಮಸ್ಯೆಯಾಗಬಹುದು.

**ಆರ್ಥಿಕ ಯೋಜನೆಗಳು :** ಏಷ್ಯದ ರಾಷ್ಟ್ರಗಳೆಲ್ಲವೂ ತಮ್ಮ ಆರ್ಥಿಕ ಅಭಿವೃದ್ಧಿಗಾಗಿ ಯೋಜನೆಗಳನ್ನು ರೂಪಿಸಿಕೊಂಡಿವೆ. ಏಷ್ಯದಲ್ಲಿ ಹಾಂಗ್‌ಕಾಂಗ್ ಮಾತ್ರ ಇದಕ್ಕೆ ಅಪವಾದ. ಅದು ತಾಟಸ್ಥ್ಯ ನೀತಿಗೆ (ಲೇಸೇ ಫೇರ್) ಗಟ್ಟಿಯಾಗಿ ಅಂಟಿಕೊಂಡಿದೆ. ಆ ಮಾರ್ಗದಿಂದಲೇ ಪ್ರಗತಿ ಸಾಧಿಸುವ ಹಂಬಲ ಆ ದೇಶದ್ದು. ಭಾರತ, ಚೀನ ಮತ್ತು ಪಾಕಿಸ್ತಾನ ಕ್ರಮವಾಗಿ 1951, 1953 ಮತ್ತು 1955ರಲ್ಲಿ ತಮ್ಮ ಪ್ರಥಮ ಪಂಚವಾರ್ಷಿಕ ಯೋಜನೆಗಳನ್ನು ಆರಂಭಿಸಿದುವು.

ಏಷ್ಯದಲ್ಲಿ ಯೋಜನೆಗಳ ಹಾದಿ ಬಲು ಕಠಿಣ. ಚೀನ ತನ್ನ ಎರಡನೆ ಯೋಜನೆ ಪ್ರಾರಂಭವಾಗುವುದಕ್ಕೆ ಮುಂಚೆಯೇ ಮುನ್ನೆಗೆತ ಕಾರ್ಯಕ್ರಮವನ್ನು ಅರಿಸಿ

ಕೊಂಡು ಎರಡನೆಯ ಯೋಜನೆಯನ್ನು ಹಿಂತಳ್ಳಿತು. ಆರ್ಥಿಕ ಹೊಡೆತಗಳಿಂದಾಗಿ ಮೂರನೆಯ ಯೋಜನೆಯನ್ನು ಸಹ 3 ವರ್ಷ ಕಾಲ ಮುಂದಕ್ಕೆ ಹಾಕಬೇಕಾಯಿತು. ಭಾರತ ಮೂರು ಯೋಜನೆಗಳನ್ನು ಕ್ರಮವಾಗಿ ಮುಗಿಸಿದರೂ ನಾಲ್ಕನೆಯ ಯೋಜನೆಯನ್ನು ಮೂರು ವರ್ಷ ಕಾಲ ಮುಂದಕ್ಕೆ ಹಾಕಬೇಕಾಯಿತು. ಆರ್ಥಿಕ ಅಡಚಣೆ, ಪಾಕಿಸ್ತಾನದೊಡನೆ ಯುದ್ಧ, ಅನಾವೃಷ್ಟಿಯ ಫಲವಾಗಿ ಬೆಳೆಯಲ್ಲಿನ ನಷ್ಟ–ಇವು ನಾಲ್ಕನೆಯ ಯೋಜನೆಗೆ ಒದಗಿದ ವಿಘ್ನಗಳು. ಆದರೂ ಭಾರತದ ಯೋಜನೆ ಇಡೀ ಏಷ್ಯಕ್ಕೆ ಆದರ್ಶಪ್ರಾಯವಾಗಿದೆ. ವ್ಯವಸ್ಥಿತ ನಿರೂಪಣೆ, ಯೋಜನಾ ಆಯೋಗ, ಸರ್ಕಾರಿ ಹಾಗೂ ಖಾಸಗಿ ವಲಯಗಳ ಕಾರ್ಯಕ್ಷೇತ್ರ ನಿಷ್ಕರ್ಷೆ—ಇವು ಅದರ ವೈಶಿಷ್ಟ್ಯಗಳು. ಇಂಡೊನೇಷ್ಯ, ಚೀನ (ಟೈವಾನ್), ಬರ್ಮ, ಆಫ್ಘಾನಿಸ್ತಾನ, ನೇಪಾಳ, ದಕ್ಷಿಣ ವಿಯಟ್ನಾಂ, ಲಾವೋಸ್, ಕಾಂಬೋಡಿಯ, ದಕ್ಷಿಣ ಕೊರಿಯ, ಮಂಗೋಲಿಯ, ಫಿಲಿಪೀನ್ಸ್, ಸಿಂಹಳ, ಮಲಯ ಈ ರಾಷ್ಟ್ರಗಳು ಯೋಜನೆಗಳನ್ನು ರೂಪಿಸಿಕೊಂಡು ಶ್ರದ್ಧಾಪೂರ್ವಕವಾಗಿ ಆರ್ಥಿಕ ಪ್ರಗತಿಗಾಗಿ ಶ್ರಮಿಸುತ್ತಿವೆ. ಜಪಾನ್ 1961–71ರಷ್ಟು ದೀರ್ಘಾವಧಿಯ ಯೋಜನೆಯನ್ನು ರೂಪಿಸಿಕೊಂಡಿದೆ. ಜಪಾನಿನ ಯೋಜನೆಯಲ್ಲಿ ಸರ್ಕಾರಿ ರಂಗಕ್ಕೆ ಕಡಿಮೆ ಪ್ರಾಧಾನ್ಯ. ಖಾಸಗಿ ವಲಯದ ಮೇಲೆ ಕಡಿಮೆ ಹಿಡಿತವಿರುವ ಯೋಜನೆ ಇದರದು.

ತಮ್ಮ ಯೋಜನೆಗಳಲ್ಲಿ ರೂಪಿಸಿಕೊಂಡಿರುವ ಪ್ರಮಾಣದ ಆರ್ಥಿಕ ಬೆಳೆವಣಿಗೆಯನ್ನು ಮುಟ್ಟುವುದು ಈ ರಾಷ್ಟ್ರಗಳಿಗೆ ಕಠಿಣವಾಗಿದ್ದರೂ ಇವು ಯೋಜನೆಯಿಂದ ತಕ್ಕಮಟ್ಟಿನ ಬೆಳೆವಣಿಗೆ ಸಾಧಿಸಿವೆ. 1950ರ ದಶಕ ಹಾಗೂ 60ರ ಪ್ರಾರಂಭದಲ್ಲಿ ಏಷ್ಯನ್ ರಾಷ್ಟ್ರಗಳಲ್ಲಿ (ಜಪಾನನ್ನು ಬಿಟ್ಟು) ವರ್ಷಕ್ಕೆ ಸೇ. 4ರಂತೆ ಆರ್ಥಿಕ ಬೆಳೆವಣಿಗೆಯಾಗಿದೆ. ಮತ್ತೊಂದು ಕುತೂಹಲಕರವಾದ ಅಂಶವೆಂದರೆ, ಭಾರತ ಚೀನಗಳಿಗಿಂತ ತಡವಾಗಿ ಯೋಜನೆಯನ್ನು ಪ್ರಾರಂಭಿಸಿದ ಕೆಲವು ಸಣ್ಣ ರಾಷ್ಟ್ರಗಳು ಹೆಚ್ಚಿನ ಆರ್ಥಿಕ ಬೆಳೆವಣಿಗೆಯನ್ನು ತಮ್ಮ ಯೋಜನೆಗಳ ಮೂಲಕ ಸಾಧಿಸಿವೆ. 1960ರ ದಶಕದಲ್ಲಿ ವರ್ಷಕ್ಕೆ ಸೇ. 5ಕ್ಕಿಂತಲೂ ಹೆಚ್ಚಾಗಿ ಬೆಳೆವಣಿಗೆಯನ್ನು ಸಾಧಿಸಿರುವ ಏಷ್ಯನ್ ರಾಷ್ಟ್ರಗಳುಂಟು. ಕೆಲವು ರಾಷ್ಟ್ರಗಳ ಬೆಳೆವಣಿಗೆಯ ವೇಗವನ್ನು ಮುಂದೆ ಕೊಟ್ಟಿದೆ :

1960–66, 1966, 1967ರಲ್ಲಿ ಒಟ್ಟು ರಾಷ್ಟ್ರೀಯ ಉತ್ಪನ್ನದ ವಾರ್ಷಿಕ ಬೆಳೆವಣಿಗೆಯ ಗತಿ

| ಒಟ್ಟು ರಾಷ್ಟ್ರೀಯ ಆದಾಯದ ವಾರ್ಷಿಕ ಬೆಳೆವಣಿಗೆಯ ಗತಿ | 1960–66 | 1966 | 1967 |
|---|---|---|---|
| 1 ಸೇ. 8ಕ್ಕಿಂತಲೂ ಹೆಚ್ಚು | ಚೀನ (ಟೈವಾನ್) | ಇರಾನ್ ಕೊರಿಯ ಗಣರಾಜ್ಯ | ಚೀನ (ಟೈವಾನ್) ಭಾರತ ಇರಾನ್ ಕೊರಿಯ ಗಣರಾಜ್ಯ |
| 2 ಸೇ. 5 ರಿಂದ ಸೇ. 8 | ಇರಾನ್ ಕೊರಿಯ ಗಣರಾಜ್ಯ ಮಲೇಷಿಯ ಪಾಕಿಸ್ತಾನ ಫಿಲಿಪೀನ್ಸ್ (1962–66) ಥೈಲೆಂಡ್ | ಚೀನ (ಟೈವಾನ್) ಮಲೇಷಿಯ ಥೈಲೆಂಡ್ | ಮಲೇಷಿಯ ಪಾಕಿಸ್ತಾನ ಫಿಲಿಪೀನ್ಸ್ ಥೈಲೆಂಡ್ |
| 3 ಸೇ. 3 ರಿಂದ ಸೇ. 5 | ಸಿಂಹಳ ಭಾರತ | ಭಾರತ ಪಾಕಿಸ್ತಾನ ಫಿಲಿಪೀನ್ಸ್ | ಸಿಂಹಳ |
| 4 ಸೇ. 3ಕ್ಕಿಂತಲೂ ಕಡಿಮೆ | ಬರ್ಮ ಇಂಡೊನೇಷ್ಯ | ಬರ್ಮ ಸಿಂಹಳ ಇಂಡೊನೇಷ್ಯ | ಬರ್ಮ ಇಂಡೊನೇಷ್ಯ |

ಏಷ್ಯದ ಆರ್ಥಿಕ ವ್ಯವಸ್ಥೆಯನ್ನು ಒಟ್ಟಾಗಿ ವಿವೇಚಿಸಿದಾಗ ಕಂಡುಬರುವ ಅಂಶವೆಂದರೆ, ಈ ರಾಷ್ಟ್ರಗಳು ತಮ್ಮ ಆರ್ಥಿಕ ಪ್ರಗತಿಗಾಗಿ ಬಡತನವನ್ನು ನೀಗಿಸಿಕೊಳ್ಳುವುದಕ್ಕಾಗಿ ಅಪಾರ ಶ್ರದ್ಧೆ ಮತ್ತು ಶ್ರಮ ವಹಿಸುತ್ತಿವೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕೈಗಾರಿಕಾ ಕ್ರಾಂತಿ ನಡೆದಾಗ ಅವರಿಗಿದ್ದ ಸಾಮಾಜಿಕ, ರಾಜಕೀಯ ಸಮಸ್ಯೆಗಳು ಕಡಿಮೆ. ಏಷ್ಯದ ರಾಷ್ಟ್ರಗಳು ತಮ್ಮ ಸಾಮಾಜಿಕ ಸಮಸ್ಯೆಗಳನ್ನು ಗೆದ್ದು ಅನಂತರ ಆರ್ಥಿಕ ಸಮಸ್ಯೆಗಳನ್ನು ಪರಿಹರಿಸಿಕೊಳ್ಳಬೇಕಾದ ಸಂದಿಗ್ಧ ಸಮಯ ಒದಗಿದೆ. ಅವುಗಳ ಆರ್ಥಿಕ ಮುನ್ನಡೆಯ ಪ್ರಯೋಗಗಳು ಸಿದ್ಧಿಯ ಹಂತದಲ್ಲಿವೆ. (ಸಿ.ಕೆ.ಆರ್.)

**ಏಷ್ಯದ ಇತಿಹಾಸ :** ಏಷ್ಯದ ಇತಿಹಾಸ ಐದಾರು ಸಾವಿರ ವರ್ಷಗಳಷ್ಟು ದೀರ್ಘವಾದದ್ದು. ಸಂಕುಚಿತಾರ್ಥದಲ್ಲಿ ಏಷ್ಯವೆಂದರೆ ಏಜಿಯನ್‌ಗೆ ಪೂರ್ವಕ್ಕಿದ್ದ ರೋಮನರ ಪ್ರಾಂತ್ಯ ; ಆಗ ಇದರಲ್ಲಿ ಮಿಸಿಯ, ಲಿಡಿಯ, ಕೇರಿಯ ಮತ್ತು ಫ್ರಿಜಿಯಗಳು ಅಡಕವಾಗಿದ್ದುವು. ಕಾಲಕ್ರಮೇಣ ಏಷ್ಯ ಪ್ರಾಂತ್ಯದಲ್ಲಿ ರೋಮನರು ಅನೇಕ ಬದಲಾವಣೆಗಳನ್ನು ಮಾಡಿದರು. ಈಗ ಇಡೀ ಖಂಡಕ್ಕೇ ಏಷ್ಯ ಎಂಬ ಹೆಸರಿದೆ.

ಏಷ್ಯದ ಜನಾಂಗಗಳಲ್ಲಿ ಏಕರೂಪತೆ ಇಲ್ಲ. ಉದಾಹರಣೆಗೆ ತುರ್ಕಿಯವರು, ಭಾರತೀಯರು, ಚೀನಿಯರು ಮತ್ತು ಜಪಾನೀಯರ ನಡುವೆ ಅನೇಕ ವ್ಯತ್ಯಾಸಗಳಿವೆ. ಏಷ್ಯದಲ್ಲಿನ ಸಂಸ್ಕೃತಿಗಳ ಹಿನ್ನೆಲೆಯನ್ನು ಅಭ್ಯಾಸ ಮಾಡಿದಾಗ ವ್ಯಕ್ತಿಗಳು ಪ್ರಧಾನವಲ್ಲ. ಸಮಾಜದಲ್ಲಿನ ಕುಟುಂಬಜೀವನವೂ ರಾಜಕೀಯ ಜೀವನವೂ ವಿಶಿಷ್ಟವಾಗಿ ಎದ್ದು ಕಾಣುತ್ತವೆ. ಆದ್ದರಿಂದ ಏಷ್ಯದ ಇತಿಹಾಸವೂ ಸರಳವಾದ ಹಾಗೂ ವಿಶಾಲವಾದ ರೂಪರೇಷೆಗಳನ್ನು ಪಡೆದಿದೆ. ಯೂರೋಪಿನ ಇತಿಹಾಸಕ್ಕಿಂತಲೂ ಏಷ್ಯದ ಇತಿಹಾಸ ಬಹಳ ದೊಡ್ಡದು. ಆದರೆ ಏಷ್ಯದ ಇತಿಹಾಸವನ್ನು ಸಮಗ್ರವಾಗಿ ನೋಡಿದಾಗ ಯೂರೋಪಿಯನ್ನರ ಇತಿಹಾಸದಲ್ಲಿ ಕಂಡುಬರುವಂಥ ಕುತೂಹಲಪೂರ್ಣ, ವಿಶಿಷ್ಟ ಘಟನಾವಳಿಗಳೂ ವ್ಯಕ್ತಿಗಳೂ ಕಂಡುಬರುವುದಿಲ್ಲವೆನ್ನಬಹುದು. ಆದರೂ ಏಷ್ಯದ ಇತಿಹಾಸದಲ್ಲಿ ಬರುವ ಚೆಂಗೇಸ್‌ಖಾನ್ ಮತ್ತು ತೈಮೂರರು ನೆಪೋಲಿಯನ್ ಮತ್ತು ಹಿಟ್ಲರರನ್ನೂ ಮೀರಿಸಿದವರೆನ್ನಬಹುದು. ಅಷ್ಟೇ ಅಲ್ಲ, ವಿಶ್ವದ ಇತಿಹಾಸದ ಮೇಲೆ ಪ್ರಭಾವ ಬೀರಿದ ಯೇಸು, ಬುದ್ಧ ಮಹಮ್ಮದರಂಥವರು ಹುಟ್ಟಿ ಬಾಳಿದ್ದು ಏಷ್ಯದಲ್ಲಿ. ಹಿಂದೂ, ಬೌದ್ಧ, ಕ್ರಿಸ್ತ, ಇಸ್ಲಾಂ, ಜುಡಾಯಿಸಮ್, ಪಾರ್ಸಿ, ಟಾವೊ ಮುಂತಾದ ಧರ್ಮಗಳು ಹುಟ್ಟಿದ್ದೂ ಏಷ್ಯದಲ್ಲೇ.

ಬ್ಯಾಬಿಲೋನಿಯ ನಾಗರಿಕತೆಯನ್ನು ಬಿಟ್ಟರೆ, ಕ್ರಿ.ಪೂ. 1500ಕ್ಕಿಂತ ಹಿಂದಿನ ಏಷ್ಯನ್ ಇತಿಹಾಸವನ್ನು ಸಮಗ್ರವಾಗಿ ಅಭ್ಯಾಸ ಮಾಡುವುದು ಕಷ್ಟ. ಏಕೆಂದರೆ ಆ ಕಾಲಕ್ಕೆ ಸಂಬಂಧಿಸಿದಂತೆ ದೊರೆತಿರುವ ಆಧಾರಗಳು ಸ್ವಲ್ಪ. ಹೆಚ್ಚಾಗಿ ಊಹೆಯಿಂದಲೇ ಮುಂಚಿನ ಇತಿಹಾಸವನ್ನು ಚಿತ್ರಿಸಿಕೊಳ್ಳಬೇಕಾಗಿದೆ. ಭಾರತದಲ್ಲಿ ಕ್ರಿ.ಪೂ. 5000 ವರ್ಷಗಳಷ್ಟು ಹಿಂದೆ ಇದ್ದ ಹರಪ್ಪ–ಮೊಹೆಂಜೋದಾರೊ ನಾಗರಿಕತೆ ಬೆಳಕಿಗೆ ಬಂದಿದೆ. ಸುಮಾರು ಕ್ರಿ.ಪೂ. 1500ರ ವೇಳೆಗೆ ಚೀನೀಯರು ಹ್ವಾಂಗ್ ಹೊ ನದಿಯ ತೀರದಲ್ಲಿ ಬಂದು ನೆಲೆಸುತ್ತಿದ್ದರು ; ಆರ್ಯರು ಭಾರತವನ್ನು ಪ್ರವೇಶಿಸುತ್ತಿದ್ದರು ; ಬ್ಯಾಬಿಲೋನಿಯದ ಕೀರ್ತಿ ಮತ್ತು ಪ್ರಭಾವ ಅತಿ ಹೆಚ್ಚಿನದಾಗಿತ್ತು.

ಏಷ್ಯದ ರಾಷ್ಟ್ರಗಳು ಪಾಶ್ಚಾತ್ಯರ ಹತೋಟಿಗೆ ಬಂದ ವಿಷಯವನ್ನು ಬಿಟ್ಟು, ಸುಮಾರು 2000 ವರ್ಷಗಳ ಏಷ್ಯದ ಇತಿಹಾಸದಲ್ಲಿ ಪ್ರಮುಖವಾಗಿ ಚೀನೀ, ಭಾರತೀಯ, ಮುಸ್ಲಿಂ ಮತ್ತು ಮಧ್ಯ ಏಷ್ಯ—ಹೀಗೆ ನಾಲ್ಕು ಪ್ರಭಾವಗಳನ್ನು ಕಾಣಬಹುದು. ಇವುಗಳಲ್ಲಿ ಮೊದಲ ಮೂರು ಪ್ರಭಾವಗಳು ಭಿನ್ನ ಸಂಸ್ಕೃತಿಗಳ ಪ್ರತೀಕಗಳಾಗಿವೆ. ನಾಲ್ಕನೆಯದು ನವೀನವಲ್ಲದಿದ್ದರೂ ವಿವಿಧ ಜನಾಂಗಗಳನ್ನು ಒಂದು ಕಡೆಯಿಂದ ಮತ್ತೊಂದೆಡೆಗೆ ಕೊಂಡೊಯ್ಯುವುದರಲ್ಲೂ ರಾಜಕೀಯ ಬಲವನ್ನು ಹಂಚುವುದರಲ್ಲೂ ಹೆಚ್ಚಿನ ಪಾತ್ರ ವಹಿಸಿದೆ.

ಪೂರ್ವ ಏಷ್ಯದ ನಾಗರಿಕತೆಗಳ ಮೇಲೆ ಚೀನ ತನ್ನದೇ ಆದ ಮುದ್ರೆಯನ್ನೊತ್ತಿದೆ. ಕೊರಿಯ, ಜಪಾನ್ ಮತ್ತು ವಿಯೆಟ್ನಾಂಗಳು ಚೀನದ ನೇರ ಪ್ರಭಾವಕ್ಕೆ ಒಳಗಾದ ಪ್ರದೇಶಗಳು. ಹೊರವಲಯದಲ್ಲಿ ಮಂಗೋಲಿಯ, ಟಿಬೆಟ್, ಸಯಾಂ, ಕಾಂಬೋಡಿಯ ಮತ್ತು ಬರ್ಮಗಳಿವೆ. ಈ ಪ್ರದೇಶಗಳಲ್ಲಿ ಭಾರತೀಯ ಹಾಗೂ ಚೀನೀ ನಾಗರಿಕತೆಗಳ ಪ್ರಭಾವಗಳು ಸಮ್ಮಿಶ್ರಗೊಂಡಿವೆ. ಭಾರತೀಯರ ಪ್ರಭಾವ ಸ್ವಲ್ಪ ಹೆಚ್ಚಿನದು ಎಂದೇ ಹೇಳಬಹುದು. ಚೀನೀಯರ ಪ್ರಭಾವ ಹೆಚ್ಚಾಗಿದ್ದ ಪ್ರದೇಶಗಳಲ್ಲಿ ಕನ್‌ಫ್ಯೂಷಿಯನ್ ಮತ ಪ್ರಮುಖವಾಯಿತು. ಇದರ ಜೊತೆಗೆ ವಿಶಿಷ್ಟ ಚೀನೀ ಕಲೆಯೂ ಬರೆವಣಿಗೆಯ ಕ್ರಮವೂ ಹಬ್ಬಿದುವು.

ಭಾರತೀಯ ಪ್ರಭಾವ ಮುಖ್ಯವಾಗಿ ಬೌದ್ಧಮತದ ಪ್ರಸಾರದಿಂದ ಬಂದದ್ದು ಎನ್ನಬಹುದು. ಇಂಡೋ–ಚೀನ, ಮಲಯ ಪರ್ಯಾಯದ್ವೀಪ, ಟಿಬೆಟ್ ಮತ್ತು ಮಂಗೋಲಿಯಗಳು ಭಾರತೀಯ ಸಂಸ್ಕೃತಿಯ ಪ್ರಭಾವಕ್ಕೆ ಒಳಪಟ್ಟ ಪ್ರದೇಶಗಳು.

ಚೀನ ಮತ್ತು ಜಪಾನ್ ದೇಶಗಳು ಹೆಚ್ಚಾಗಿ ಬೌದ್ಧಮತವನ್ನು ಅವಲಂಬಿಸಿದ್ದರಿಂದ, ಆ ದೇಶಗಳೂ ಭಾರತದ ಸಂಸ್ಕೃತಿಯ ಪ್ರಭಾವ ವಲಯಕ್ಕೊಳಗಾದ ಪ್ರದೇಶಗಳೆಂದು ಹೇಳಬಹುದು. ಆದರೆ ಈ ಪ್ರಭಾವ ಪರಸ್ಪರವಲ್ಲ. ಏಕೆಂದರೆ, ಚೀನೀಯರ ಕಲೆ, ಸಾಹಿತ್ಯ ಅಥವಾ ಧರ್ಮನೀತಿ ಯಾವುದೂ ಭಾರತದ ಸಂಸ್ಕೃತಿಯ ಮೇಲೆ ಪ್ರಭಾವ ಬೀರಿಲ್ಲ. ಆದರೆ ಬೌದ್ಧಮತದ ಪ್ರಭಾವ ಮತಕ್ಕೆ ಮಾತ್ರವೇ ಸೀಮಿತಗೊಳ್ಳದೆ, ಅದರ ಜೊತೆಗೆ ಭಾರತೀಯ ಕಲೆ ಮತ್ತು ಸಾಹಿತ್ಯವೂ ಜಾವಾ ಕಾಂಬೋಡಿಯಗಳಲ್ಲಿ ಅವರ ವರ್ಣಮಾಲೆಯೂ ಪ್ರಭಾವ ಬೀರಿದುವು.

ಇಸ್ಲಾಂ ಧರ್ಮ ಪಶ್ಚಿಮ ಏಷ್ಯದಲ್ಲಿ ಹೆಚ್ಚು ಪ್ರಭಾವಯುತವಾಯಿತು. ಇಂದಿಗೂ ಅದು ಆ ಪ್ರದೇಶದಲ್ಲಿ ವಾಸಮಾಡುತ್ತಿರುವ ಜನಾಂಗದ ಮುಖ್ಯ ಧರ್ಮ. ಉತ್ತರ ಮತ್ತು ಮಧ್ಯ ಭಾರತದಲ್ಲಿ ಇಸ್ಲಾಂ ಪ್ರಬಲಗೊಂಡಿತು. ಇಂದಿಗೆ ಒಟ್ಟು ಜನಸಂಖ್ಯೆಯ 1/5ರಷ್ಟು ಜನ ಆ ಮತದ ಅನುಯಾಯಿಗಳಾಗಿದ್ದಾರೆ. ಭಾರತದಿಂದ ಪೂರ್ವಕ್ಕೆ ಮಲೆಯ ಮತ್ತು ಇಂಡೋನೇಷ್ಯಗಳಿಗೆ ಈ ಮತ ಹಬ್ಬಿ ಅಲ್ಲಿದ್ದ ಹಿಂದೂ ಮತದ ಪ್ರಭಾವವನ್ನು ಮೀರಿ ತನ್ನ ಪ್ರಾಬಲ್ಯ ಸ್ಥಾಪಿಸಿತು. ಇಂಡೋ-ಚೀನದಲ್ಲಾಗಲಿ, ಜಪಾನಿನಲ್ಲಾಗಲಿ, ಇಸ್ಲಾಂ ಹೆಚ್ಚಿನ ಪ್ರಗತಿ ಸಾಧಿಸಲಿಲ್ಲ. ಚೀನದ ಸಿಂಕಿಯಾಂಗ್ ಪ್ರಾಂತ್ಯದಲ್ಲಿ ಮುಸ್ಲಿಮರಿದ್ದಾರೆ. ಇಸ್ಲಾಂ ತನ್ನದೇ ಆದ ಕಲೆ ಮತ್ತು ನಾಗರಿಕತೆಗಳನ್ನು ಈ ಪ್ರದೇಶಗಳಿಗೆ ಕೊಂಡೊಯ್ದಿದೆ. ಅರಬ್ಬೀ ಅಕ್ಷರಮಾಲೆ ಮತ್ತು ಅರಬ್ಬೀ ಭಾಷೆ, ಪದಸಂಪತ್ತು ಎಲ್ಲವೂ ಇಸ್ಲಾಂ ಧರ್ಮದೊಡನೆ ಈ ಪ್ರದೇಶಕ್ಕೆ ಬಂದುವು.

ಮಧ್ಯ ಏಷ್ಯದ ಅನೇಕ ಜನಾಂಗಗಳು ಏಷ್ಯದ ಇತಿಹಾಸದಲ್ಲಿ ಹೆಚ್ಚಿನ ಪಾತ್ರ ವಹಿಸಿದ್ದರೂ ಅವಕ್ಕೆ ಸಾಮಾನ್ಯವಾದ ಒಂದೇ ಹೆಸರಿಲ್ಲದೆ ಇರುವುದರಿಂದ ಅವುಗಳ ಪಾತ್ರವನ್ನು ಇತಿಹಾಸದಲ್ಲಿ ಗುರುತಿಸುವುದು ಕಷ್ಟದ ಕೆಲಸ. ತುರ್ಕಿಯವರು, ಮಂಗೋಲರು ಮತ್ತು ಹೂಣರು ಎಂದು ಈ ಜನಾಂಗಗಳನ್ನು ಗುರುತಿಸಬಹುದು. ಕ್ರಿಸ್ತಶಕದ ಆರಂಭದಲ್ಲಿ ಮಧ್ಯ ಏಷ್ಯ ಕುದಿದೆದ್ದು, ಇಲ್ಲಿನ ಜನ ಹಲವಾರು ದಾಳಿಗಳಿಗೆ ಕಾರಣರಾದರು ; ಆವಾರ್‌ಗಳೂ (ಕ್ರಿ.ಶ. ಸು. 600–900) ಹೂಣರೂ (ಕ್ರಿ.ಶ. ಸು. 400–500) ಬಲ್ಗೇರಿಯನರೂ (ಕ್ರಿ.ಶ. ಸು. 7ನೆಯ ಶತಮಾನ) ಯೂರೋಪಿನ ಮೇಲೆ ಮಾಡಿದ ಆರಂಭದ ದಾಳಿಗಳೂ ಮಂಗೋಲರು ರಷ್ಯದ ಮೇಲೆ ನಡೆಸಿದ ದಾಳಿಯೂ ತೈಮೂರನ ದಂಡಯಾತ್ರೆಯೂ ತುರ್ಕರ ಪಶ್ಚಿಮ ಏಷ್ಯನ್ ಮತ್ತು ಪೂರ್ವ ಯೂರೋಪಿಯನ್ ಆಕ್ರಮಣವೂ ಮೊಘಲರ ಭಾರತದ ಆಕ್ರಮಣವೂ ಕೂಬ್ಲಖಾನನ ನೇತೃತ್ವದಲ್ಲಿ ಮಂಗೋಲರು ಚೀನದ ಮೇಲೆ ನಡೆಸಿದ ಆಕ್ರಮಣವೂ ಅನಂತರ ಮಂಚುಗಳ ಚೀನಾದೇಶದ ಆಕ್ರಮಣವೂ ಉದಾಹರಣೆಗಳು. ಇವುಗಳ ಜೊತೆಗೆ ಭಾರತ, ಚೀನ ಮತ್ತು ಪರ್ಷಿಯಗಳ ಮೇಲೆ ಮಧ್ಯ ಏಷ್ಯದ ಬುಡಕಟ್ಟಿನವರು ನಡೆಸಿದ ಸಣ್ಣಪುಟ್ಟ ದಂಡಯಾತ್ರೆಗಳನ್ನೂ ಸೇರಿಸಬಹುದು.

ಆಡಳಿತಕ್ಕಿಂತ ಹೆಚ್ಚಾಗಿ ಯುದ್ಧಪ್ರೇಮಿಗಳಾಗಿದ್ದ ಈ ಜನ ಒಂದು ಕಡೆಯಿಂದ ಮತ್ತೊಂದು ಕಡೆಗೆ ಸತತವಾಗಿ ಹೋಗುತ್ತಿದ್ದುದರಿಂದ ಇವರು ಮತೀಯ ಹಾಗೂ ಸಾಂಸ್ಕೃತಿಕ ಭಾವನೆಗಳನ್ನು ಒಂದು ಪ್ರದೇಶದಿಂದ ಮತ್ತೊಂದು ಪ್ರದೇಶಕ್ಕೆ ಕೊಂಡೊಯ್ಯುವ ಮಧ್ಯವರ್ತಿಗಳಾದರು. ಭಾರತದಲ್ಲಿ ಇಸ್ಲಾಂ ಧರ್ಮವೂ ಯೂರೋಪಿನಲ್ಲಿ ಗ್ರೀಕ್–ಬ್ಯಾಕ್ಟ್ರಿಯನ್ ನಾಗರಿಕತೆಯೂ ಹಬ್ಬಲು ಇವರೇ ಕಾರಣರೆನ್ನಬಹುದು.

ಮಧ್ಯ ಏಷ್ಯದಲ್ಲಿ ಚೀನ, ಭಾರತ, ಇರಾನ್ ಮತ್ತು ಗ್ರೀಕ್ ಸಂಸ್ಕೃತಿಗಳ ಮಿಶ್ರಣದಿಂದುಂಟಾದ ಒಂದು ಸಂಸ್ಕೃತಿ ಇದ್ದ ವಿಷಯ ಈಚಿನ ಸಂಶೋಧನೆಗಳಿಂದ ಬೆಳಕಿಗೆ ಬಂದಿದೆ; ಬೌದ್ಧ, ಕ್ರೈಸ್ತ ಮತ್ತು ವ್ಯಾನಿಕೆಯ ಶಾಸನಗಳೂ ಹಲವಾರು ಕಡೆ ವಿವಿಧ ಭಾಷೆಗಳ ಗ್ರಂಥಭಂಡಾರಗಳೂ ದೊರೆತಿವೆ.

ಇವೆಲ್ಲ ಹೆಚ್ಚಾಗಿ ಏಷ್ಯದ ಈಚಿನ ಇತಿಹಾಸಕ್ಕೆ ಸಂಬಂಧಪಟ್ಟವು. ಆದರೆ ಅತ್ಯಂತ ಪೂರ್ವಕಾಲದಲ್ಲಿ ಬ್ಯಾಬಿಲೋನಿಯ ಮತ್ತು ಅಸ್ಸಿರಿಯಗಳು ಸಂಸ್ಕೃತಿಯ ಕೇಂದ್ರಗಳಾಗಿದ್ದುವು. ಕ್ರಿ.ಪೂ. 7ನೆಯ ಶತಮಾನದ ವೇಳೆಗೆ ಈ ರಾಜ್ಯಗಳು ಕ್ಷೀಣಸ್ಥಿತಿಗೆ ಬಂದುವು. ಅವುಗಳ ಸ್ಥಾನವನ್ನು ಪರ್ಷಿಯನ್ ಸಾಮ್ರಾಜ್ಯ ಆಕ್ರಮಿಸಿಕೊಂಡಿತು. ಸುಮೇರಿಯನ್ ನಾಗರಿಕತೆಯೂ ವೈಶಿಷ್ಟ್ಯಪೂರ್ಣವಾದದ್ದು. ಕ್ರಿ.ಪೂ. 4000 ದಷ್ಟು ಹಿಂದಿನ ಬರೆವಣಿಗೆಗಳನ್ನು ಸುಮೇರಿಯನರು ನಮಗೆ ಬಿಟ್ಟುಹೋಗಿದ್ದಾರೆ. ಯೂಫ್ರೆಟೀಸ್ ಮತ್ತು ಟೈಗ್ರಿಸ್ ನದಿಗಳ ನಡುವಣ ಫಲವತ್ತಾದ ಪ್ರದೇಶ (ಮೆಸೊಪೊಟೇಮಿಯ) ಅನೇಕ ನಾಗರಿಕತೆಗಳ ತೊಟ್ಟಿಲಾಗಿತ್ತು. ಬ್ಯಾಬಿಲೋನಿನ ಹಮ್ಮುರಾಬಿ (ಕ್ರಿ.ಪೂ. 2123–2081) ನ್ಯಾಯವಾದಿ ಎಂದು ಹೆಸರಾಗಿದ್ದಾನೆ. ಕ್ರಿ.ಪೂ. 1950ರ ವೇಳೆಗೆ ಹಿಟ್ಟೈಟರು ಸಿರಿಯ, ಪಶ್ಚಿಮ ಏಷ್ಯಗಳನ್ನೊಳಗೊಂಡ ಒಂದು ಸಾಮ್ರಾಜ್ಯವನ್ನೇ ಕಟ್ಟಿದ್ದರು. ಅವರ ಬರೆವಣಿಗೆಯನ್ನು ಸಂಪೂರ್ಣವಾಗಿ ಇನ್ನೂ ಓದಲು ಸಾಧ್ಯವಾಗಿಲ್ಲ. ಕ್ರಿ.ಪೂ. 9 ಮತ್ತು 10ನೆಯ ಶತಮಾನಗಳ ವೇಳೆಗೆ ಅಸ್ಸಿರಿಯನರು ಪ್ರಬಲರಾದರು. ಇವರು ಬ್ಯಾಬಿಲೋನಿಯನರ ಬುಡಕಟ್ಟಿಗೆ ಸೇರಿದವರಾಗಿದ್ದರೂ ವಿಶಿಷ್ಟವಾದ ಕಲೆ ಮತ್ತು ಧರ್ಮ ಹೊಂದಿದ್ದರು. ಪರ್ಷಿಯನರು ಅಸ್ಸಿರಿಯನರನ್ನು ಕ್ರಿ.ಪೂ. 606ರಲ್ಲಿ ಸೋಲಿಸಿದರು. ಪರ್ಷಿಯನ್ ಚಕ್ರವರ್ತಿ ಸೈರಸ್ ಕ್ರಿ.ಪೂ. 555ರಲ್ಲಿ ಬ್ಯಾಬಿಲಾನ್ ಪಟ್ಟಣವನ್ನು ತನ್ನ ಕೈವಶಮಾಡಿಕೊಂಡ. ಅಸ್ಸಿರಿಯ ಪ್ರಮುಖವಾಗಿ ಬಲದ ಮೇಲೆ ನಿಂತಿದ್ದರಿಂದ, ಪರ್ಷಿಯನರ ದಾಳಿಗೆ ತುತ್ತಾದಾಗ ಅದು ಸಂಪೂರ್ಣ ನಾಶವಾಯಿತು.

**ಚೀನ :** ಏಷ್ಯದಲ್ಲಿ ಚೀನ ಅತ್ಯಂತ ಪ್ರಾಚೀನ ದೇಶ. ಚೀನದ ಇತಿಹಾಸ ಕ್ರಿ.ಪೂ. 12ನೆಯ ಶತಮಾನಕ್ಕೂ ಹಿಂದೆ ಹೋಗುತ್ತದೆ. ಚೀನೀಯರ ಉಗಮದ ಬಗ್ಗೆ ಹೆಚ್ಚಿಗೆ ತಿಳಿದಿಲ್ಲ. ಆದರೆ ಅವರು ಪಶ್ಚಿಮದಿಂದ ಬಂದರೆಂದು, ಹ್ವಾಂಗ್ ಹೋ ನದಿಯ ತೀರದಲ್ಲಿ ಸುಮಾರು ಕ್ರಿ.ಪೂ. 3000ದಲ್ಲಿ ಬಂದು ನೆಲೆಸಿದರೆಂದು ಖಚಿತವಾಗಿ ಹೇಳಬಹುದು. ಇತಿಹಾಸದ ಪ್ರಾರಂಭದಲ್ಲಿ ಚೀನದಲ್ಲಿ ಚಿಕ್ಕಪುಟ್ಟ ಪಾಳೆಯಪಟ್ಟುಗಳಿದ್ದುವು. ಕ್ರಿ.ಪೂ. ಸುಮಾರು 220ರಲ್ಲಿ ಟ್ಸಿನ್ ಅಥವಾ ಚಿನ್ (ಚೀನ ಎಂಬ ಹೆಸರು ಬಂದದ್ದು ಇದರಿಂದ) ಎಂಬ ರಾಜ್ಯ ಉದಯವಾಗಿ ಸಣ್ಣಪುಟ್ಟ ಪಾಳೆಯಪಟ್ಟುಗಳನ್ನು ಅದು ತನ್ನ ಹತೋಟಿಯಲ್ಲಿಟ್ಟುಕೊಂಡಿತು. ಹ್ಯಾನ್ ಸಾಮ್ರಾಜ್ಯ (ಕ್ರಿ.ಪೂ. 206ರಿಂದ ಕ್ರಿ.ಶ. 220) ಉದಯವಾಗುವ ವರೆಗೂ ಚೀನದಲ್ಲಿ ಆಂತರಿಕ ಕಲಹ ಸಾಮಾನ್ಯವಾಗಿತ್ತು. ಹ್ಯಾನ್ ಮತ್ತು ಟಾಂಗ್ (ಕ್ರಿ.ಶ. 618–907) ರಾಜರುಗಳ ಕಾಲದಲ್ಲಿ ಚೀನದ ಸ್ಥಿತಿ ಉತ್ತಮಗೊಂಡಿದ್ದಲ್ಲದೆ ಇದು ಏಷ್ಯದಲ್ಲೆ ಒಂದು ಪ್ರಬಲ ದೇಶವಾಯಿತು. 13ನೆಯ ಶತಮಾನದಲ್ಲಿ ಕೂಬ್ಲಖಾನನ ಸಾಮ್ರಾಜ್ಯ ಒಂದು ಶತಮಾನದಷ್ಟು ಕಾಲ ಬಾಳಿತು. ಚೀನೀ ಮಿಂಗ್ ವಂಶೀಯರು ಅನಂತರ 300 ವರ್ಷ ಆಳಿದರು. 1644ರಲ್ಲಿ ಉತ್ತರದ ಜನಾಂಗದವರಾದ ಮಂಚುಗಳು ರಾಜಧಾನಿ ಪೀಕಿಂಗನ್ನು ಆಕ್ರಮಿಸಿ, 1912ರ ವರೆಗೆ ಚೀನವನ್ನಾಳಿದರು. ಆ ವರ್ಷ ಕ್ರಾಂತಿಯ ಪರಿಣಾಮವಾಗಿ ರಾಜಾಧಿಕಾರ ಕೊನೆಗೊಂಡು ಗಣರಾಜ್ಯ ಸ್ಥಾಪಿತವಾಯಿತು. ದೇಶವನ್ನು ಆಳುವ ಹಕ್ಕು ಒಂದೇ ರಾಜವಂಶಕ್ಕೆ ಸೀಮಿತವಾಗಿರಲಿಲ್ಲ. ಕ್ರಿ.ಶ.ದ ಆದಿಯಿಂದ ಚೀನವನ್ನಾಳಿದ ರಾಜವಂಶಗಳ ಸಂಖ್ಯೆ ಸುಮಾರು 20. ಇವು ಅನೇಕ ವೇಳೆ ಸುತ್ತಮುತ್ತಲಿನ ಪ್ರದೇಶಗಳನ್ನು ತಮ್ಮ ರಾಜಕೀಯ ಹತೋಟಿಗೆ ಒಳಪಡಿಸಿಕೊಂಡಿದ್ದುವು. ಚೀನೀ ತತ್ತ್ವಜ್ಞರಲ್ಲಿ ಕನ್‌ಫ್ಯೂಷಿಯಸ್ (ಕ್ರಿ.ಪೂ. 551–478) ಬಹಳ ಪ್ರಖ್ಯಾತ. ಚೀನೀಯರ ಕುಟುಂಬಜೀವನ, ರಾಜಕೀಯ ಹಾಗೂ ಸಾಮಾಜಿಕ ಪದ್ಧತಿಗಳ ಮೇಲೆ ಆತನ ಪ್ರಭಾವ ಬಹಳ ಹೆಚ್ಚಿನದು. ಮಾನವಾನುಕಂಪಿ, ಶಾಂತಿದೂತ ಎಂದು ಕನ್‌ಫ್ಯೂಷಿಯಸ್ ಹೆಸರಾಗಿದ್ದಾನೆ.

ಮುಖ್ಯವಾಗಿ ಭಾರತದಿಂದ ಸಂಸ್ಕೃತಿಯನ್ನು ಪಡೆದ ಟಿಬೆಟ್ 8ನೆಯ ಶತಮಾನದಲ್ಲಿ ಮಧ್ಯ ಏಷ್ಯದ ಸಾಮ್ರಾಜ್ಯವೆಂದು ಹೆಸರು ಗಳಿಸಿ, ಅನಂತರ ಚೀನದ ರಾಜಕೀಯದ ಪ್ರಭಾವಕ್ಕೆ ಒಳಪಟ್ಟು ತನ್ನ ಸ್ವಾತಂತ್ರ್ಯ ಕಳೆದುಕೊಂಡಿತು. ಭಾರತದಿಂದ ಬೌದ್ಧಮತ ಟಿಬೆಟಿಗೆ ಹೋಯಿತು. ಪೋಪನಂತೆ ಮಠಾಧಿಪತಿಗಳಾದ ಲಾಮಾಗಳು ಲೌಕಿಕ ಪ್ರಪಂಚದಲ್ಲೂ ಮುಖ್ಯರಾಗಿ ಅಧಿಕಾರ ನಡೆಸಿದರು.

ಮಂಗೋಲರು ಚೀನವನ್ನು ಮತ್ತು ಯೂರೋಪಿನ ಅನೇಕ ಭಾಗಗಳನ್ನು ಆಕ್ರಮಣ ಮಾಡಿದರು. ಅನೇಕ ಮಂಗೋಲರು ರಷ್ಯದಲ್ಲಿ ವಾಸಿಸುತ್ತಿದ್ದಾರೆ. ಅವರ ಮೂಲ ಸಂಸ್ಕೃತಿ ಭಾರತೀಯ ಮತ್ತು ಚೀನೀ ಸಂಸ್ಕೃತಿಗಳ ಸಂಮಿಶ್ರಣವಾಗಿತ್ತು. ಅವರು ಉಪಯೋಗಿಸುತ್ತಿದ್ದ ಅಕ್ಷರಮಾಲೆ ಸಿರಿಯ ಅಕ್ಷರಮಾಲೆಯಿಂದ ಬಂದದ್ದು. ಇದನ್ನು ನೆಸ್ಟೋರಿಯನ್ ಪಾದ್ರಿಗಳು ಮಂಗೋಲಿಯಕ್ಕೆ ತಂದಿದ್ದರು.

**ಜಪಾನ್ :** ಜಪಾನ್ ಏಷ್ಯದ ಒಂದು ಮುಖ್ಯ ದೇಶ. ಐನಸ್ ಜನಾಂಗದವರು ಜಪಾನಿನ ಮೂಲನಿವಾಸಿಗಳು. ಕಾಲಕ್ರಮೇಣ ಈ ಜನಾಂಗದವರನ್ನು ಉತ್ತರದ ದ್ವೀಪಗಳಿಗೆ ಒತ್ತರಿಸಲಾಯಿತು. ಅವರು ಜಪಾನೀಯರೊಡನೆ ನಡೆಸಿದ ಯುದ್ಧಗಳು ಐತಿಹಾಸಿಕವಾದರೂ ನಮಗೆ ಅವುಗಳ ಬಗ್ಗೆ ಸಾಕಷ್ಟು ಆಧಾರಗಳು ದೊರೆತಿಲ್ಲ. ಜಪಾನೀಯರು ಎಲ್ಲಿಂದ ಬಂದರೆಂದು, ಯಾವಾಗ ಬಂದರೆಂದು ಹೇಳುವುದು ಕಷ್ಟ. ಜಪಾನೀಯರದು ಒಂದು ಮಿಶ್ರ ಜನಾಂಗ. ಮಧ್ಯ ಏಷ್ಯ ಮತ್ತು ಮಲಯ ಅಥವಾ ಪಾಲಿನೇಷಿಯದ ಜನಾಂಗದವರ ಸಂಮಿಶ್ರಣದಿಂದ ಜಪಾನೀಯರು ಬಂದಿರಬಹುದು. 6ನೆಯ ಶತಮಾನದಲ್ಲಿ ಚೀನೀ ನಾಗರಿಕತೆ ಮತ್ತು ಬೌದ್ಧಮತ ಜಪಾನಿಗೆ ಬಂದ ಕಾಲದಿಂದ ಜಪಾನೀಯರ ಇತಿಹಾಸ ನಿರ್ದಿಷ್ಟವಾಗಿ ಪ್ರಾರಂಭವಾಗುತ್ತದೆ. ಕೊರಿಯದ ಮೂಲಕ ಚೀನೀ ನಾಗರಿಕತೆ ಜಪಾನಿಗೆ ಹಬ್ಬಿತು. ಕೆಲವೇ ಪಾಳೆಯಗಾರರ ಮನೆತನದವರು ಚಕ್ರವರ್ತಿಯನ್ನು ಬದಿಗೊತ್ತಿ, ಕ್ರಿ.ಶ. 645ರಲ್ಲಿ ಚೀನೀ ಸರ್ಕಾರಕ್ಕೆ ಅನುವರ್ತಿಯಾದ ರಾಜ್ಯವೊಂದನ್ನು ಕಟ್ಟಿದರು. ಫೂಜಿವಾರ ಮನೆತನದವರು ಮೊದಲಿಗೆ ಅಧಿಕಾರಕ್ಕೆ ಬಂದರು. ಅನಂತರ ತೈರಾ ಮತ್ತು ಮಿನಮೋಟೊ ಮನೆ

ತನಗಳ ನಡುವೆ ಪೈಪೋಟಿ ನಡೆಯಿತು. 1192ರಲ್ಲಿ ಮಿನಮೋಟೊ ಮನೆತನದವರು ಗೆದ್ದು ಒಂದು ದ್ವಂದ್ವ ಆಡಳಿತ ಸ್ಥಾಪನೆ ಮಾಡಿದರು. ಈ ಸರ್ಕಾರದ ರಚನೆಯಲ್ಲಿ ಹೆಸರಿಗೆ ಚಕ್ರವರ್ತಿ ಸಾರ್ವಭೌಮನಾದರೂ ನಿಜವಾದ ಅಧಿಕಾರ ಈ ಪಾಳೆಯಗಾರರ ಮನೆತನದವರ ಕೈಯಲ್ಲಿತ್ತು. ಈ ರೀತಿಯಲ್ಲಿ ಕಾಮಾಕುರಾ ನಗರದ ಹೋಜೋ ಉತ್ತರಾಧಿಕಾರಿಗಳು 1205 ರಿಂದ 1333ರ ವರೆಗೆ ಆಡಳಿತ ನಡೆಸಿದರು. ಕೂಬ್ಲಖಾನ್ ದಂಡೆತ್ತಿ ಬಂದಾಗ ಅವನನ್ನು ತಡೆಗಟ್ಟಿ ಓಡಿಸಿದರು. ಅನಂತರ ಅಧಿಕಾರ ಆಷಿಕಾಗಾ ಮನೆತನಕ್ಕೆ ಹೋಯಿತು. 1338 ರಿಂದ 1565ರ ವರೆಗೆ ಆಳಿದ ಆಷಿಕಾಗಾ ಮನೆತನದವರು ಕಲೆ, ಸಂಸ್ಕೃತಿಗಳಿಗೆ ಬಹಳ ಪ್ರೋತ್ಸಾಹ ಕೊಟ್ಟು ಪ್ರಖ್ಯಾತರಾದರು. 16ನೆಯ ಶತಮಾನದ ಮಧ್ಯಭಾಗದಲ್ಲಿ ಪೋರ್ಚುಗೀಸರು ಜಪಾನಿಗೆ ಬಂದಾಗ ಅಲ್ಲಿ ಅನಾಯಕತ್ವ ತಲೆದೋರಿತ್ತು. ಪೋರ್ಚುಗೀಸರು ಜಪಾನಿನಲ್ಲಿ ಕ್ರೈಸ್ತಮತ ಹರಡಲು ಯತ್ನಿಸಿದರು. ವೀರ ಹಿದೆಯೊಷಿ ಈ ಕಾಲದಲ್ಲಿ ಕೊರಿಯ ದೇಶದ ಮೇಲೆ ದಂಡಯಾತ್ರೆ ಕೈಗೊಂಡ. ಆದರೆ ಅಕಾಲಮರಣದಿಂದಾಗಿ ಅವನ ಯೋಜನೆ ಪೂರ್ಣವಾಗಲಿಲ್ಲ. ಉತ್ತರಾಧಿಕಾರಿಯಾದ ಇಯೆಯಾಸು ಹೊರದೇಶಗಳ ಸಂಪರ್ಕವನ್ನು ಪೂರ್ತ ಕಡಿದುಹಾಕಿದ. ಪರದೇಶಗಳನ್ನು ಗೆಲ್ಲುವ ಯೋಜನೆಯನ್ನು ತಳ್ಳಿಹಾಕಿ, ಕ್ರೈಸ್ತಮತಕ್ಕೆ ಬಹಿಷ್ಕಾರ ಹಾಕಿ, ಪರಕೀಯರು ಜಪಾನಿಗೆ ಬರದಂತೆ ಮಾಡಿದ. ಮುಂದೆ ಸುಮಾರು 216 ವರ್ಷಗಳ ಕಾಲ ಕೆಲವು ಡಚ್ಚರ ಮತ್ತು ಚೀನೀಯರ ವಿನಾ ಎಲ್ಲ ವಿದೇಶೀಯರಿಗೂ ಜಪಾನ್ ತನ್ನ ದ್ವಾರವನ್ನು ವ್ಯಾಪಾರಕ್ಕೆ ಮುಚ್ಚಿತ್ತು. 1854ರಲ್ಲಿ ಅಮೆರಿಕ ಜಪಾನನ್ನು ಬಗ್ಗಿಸಿತು. ಪರದೇಶೀಯರ ಆಗಮನಕ್ಕೆ ಎಡೆಕೊಡುವುದೇ ಮುಂತಾದ ವ್ಯಾಪಕ ಒಪ್ಪಂದಕ್ಕೆ ಒಡಂಬಡಿಸಿತು. ಐರೋಪ್ಯರೊಡನೆ ಹೋರಾಡಬೇಕಾದರೆ ಅವರಂತೆ ಆಧುನಿಕ ಶಸ್ತ್ರಾಸ್ತ್ರಗಳನ್ನು ಪಡೆಯಬೇಕೆಂಬ ವಿಚಾರ ಜಪಾನಿಗೆ ಬಂದದ್ದು ಆಗ. ಐರೋಪ್ಯರ ಅನುಭವದಿಂದ ಅದು ಪಾಠ ಕಲಿತು, 1868ರಲ್ಲಿ ಏಷ್ಯದ ಇತಿಹಾಸದಲ್ಲಿ ಒಂದು ಹೊಸ ಯುಗವನ್ನೆ ಪ್ರಾರಂಭಮಾಡಿತು. 1867ರಲ್ಲಿ ಮೇಜಿ ದೊರೆಯ ವಂಶದ ಆಗಮನದಿಂದ ಪ್ರಾರಂಭವಾದ ಕ್ರಾಂತಿ ಜಪಾನನ್ನು ಒಂದು ಬಲಯುತ ಆಧುನಿಕ ರಾಷ್ಟ್ರವನ್ನಾಗಿ ಮಾಡಿತು. ಅಲ್ಲಿಂದ 1945ರ ವರೆಗೆ ಜಪಾನ್ ಏಷ್ಯದಲ್ಲಿ ತನ್ನದೇ ಆದ ಸಾಮ್ರಾಜ್ಯವನ್ನು ಕಟ್ಟಲು ಹವಣಿಸಿ, ಅದರಲ್ಲಿ ಜಯ ಗಳಿಸಿ, ಎರಡನೆಯ ಮಹಾಯುದ್ಧದಲ್ಲಿ ಸಂಪೂರ್ಣ ಸೋತು ಅನಂತರ ಹೊಸ ಹಾದಿ ಹಿಡಿಯಿತು.

**ಕೊರಿಯ :** ವರ್ಣ ಮತ್ತು ಭಾಷೆಗಳಲ್ಲಿ ಕೊರಿಯ ಉಳಿದ ರಾಷ್ಟ್ರಗಳಿಂದ ಭಿನ್ನವಾದ ರಾಷ್ಟ್ರವಾದರೂ ನಾಗರಿಕತೆಯ ಅಂಶಗಳನ್ನು ಚೀನದಿಂದ ಪಡೆಯಿತು. ಇತಿಹಾಸದ ಅನೇಕ ಘಟ್ಟಗಳಲ್ಲಿ ಅದು ಚೀನೀ ಸಾರ್ವಭೌಮತ್ವವನ್ನು ಒಪ್ಪಿಕೊಂಡಿತ್ತು. ಚೀನದ ಚಕ್ರವರ್ತಿಗಳಿಗೆ ಕಪ್ಪಕಾಣಿಕೆಗಳನ್ನು ಸಹ ಕೊಡುತ್ತಿತ್ತು. 16ನೆಯ ಶತಮಾನದಲ್ಲಿ ಸ್ವಲ್ಪ ಕಾಲದ ವರೆಗೆ ಜಪಾನೀಯರು ಕೊರಿಯವನ್ನು ಆಕ್ರಮಿಸಿಕೊಂಡಿದ್ದರು. 1894ರಲ್ಲಿ ಅದು ಸಂಪೂರ್ಣ ಸ್ವಾತಂತ್ರ್ಯ ಪಡೆಯಿತು. ಆದರೆ ಆ ಸ್ವಾತಂತ್ರ್ಯ ಬಹು ಕಾಲ ಉಳಿಯಲಿಲ್ಲ. 1904–05ರಲ್ಲಿ ನಡೆದ ರಷ್ಯ-ಜಪಾನ್ ಯುದ್ಧದ ತರುವಾಯ ಜಪಾನೀಯರು 1910ರಲ್ಲಿ ಕೊರಿಯವನ್ನು ತಮ್ಮ ಸಂಪೂರ್ಣ ಹತೋಟಿಗೆ ತಂದುಕೊಂಡು, ಆ ದೇಶವನ್ನು ಒಂದು ವಸಾಹತಿನಂತೆ ಆಳಿದರು.

**ಭಾರತ :** ಏಷ್ಯದ ಮುಖ್ಯ ದೇಶಗಳಲ್ಲಿ ಒಂದಾದ ಭಾರತಕ್ಕೆ ಸುಮಾರು 5,000 ವರ್ಷಗಳಿಗಿಂತ ಮಿಗಿಲಾದ ಭವ್ಯ ಇತಿಹಾಸವಿದೆ. ಭಾರತದ ಇತಿಹಾಸ ಸುಮಾರು ಕ್ರಿ.ಪೂ. 5000ಕ್ಕೂ ಹಿಂದೆ ಇದ್ದ ಸಿಂಧೂ ಕೊಳ್ಳದ ನಾಗರಿಕತೆಯಿಂದ ಪ್ರಾರಂಭವಾಗುತ್ತದೆ. ಕ್ರಿ.ಪೂ. ಸುಮಾರು 1500ರಲ್ಲಿ ಆರ್ಯರು ಭಾರತಕ್ಕೆ ವಲಸೆ ಬಂದು, ಗಂಗಾ ಬ್ರಹ್ಮಪುತ್ರಾ ನದಿಗಳ ತೀರಗಳಲ್ಲಿ ನೆಲಸಿ ಭವ್ಯ ವೈದಿಕ ಸಂಸ್ಕೃತಿಯನ್ನು ಸೃಷ್ಟಿಸಿ ಬೆಳೆಸಿದರು. ಹಿಂದೆ ಇದ್ದ ಸಿಂಧೂ ಕೊಳ್ಳದ ನಾಗರಿಕತೆಯನ್ನೂ ದ್ರಾವಿಡ ಸಂಸ್ಕೃತಿಯ ಕೆಲವು ಅಂಶಗಳನ್ನೂ ಆರ್ಯರು ತಮ್ಮ ಸಂಸ್ಕೃತಿಯಲ್ಲೂ ಅಳವಡಿಸಿಕೊಂಡು ಸಮಗ್ರ ಹಿಂದೂ ಸಂಸ್ಕೃತಿಗೆ ಬುನಾದಿ ಹಾಕಿದರು. ಮುಂದೆ 2,000 ವರ್ಷಗಳ ಕಾಲ ಭಾರತಕ್ಕೆ ಅನೇಕ ಜನಾಂಗಗಳವರು ವಲಸೆ ಬಂದರು. ಇದರಿಂದಾಗಿ ಬೇರೆ ಬೇರೆ ಸಂಸ್ಕೃತಿಗಳ ಕ್ರಿಯೆ ಪ್ರತಿಕ್ರಿಯೆ ನಡೆದು ಒಂದು ವಿಶಿಷ್ಟವಾದ ಸಂಸ್ಕೃತಿ ಬೆಳೆಯಲು ಅವಕಾಶವಾಯಿತು. ವೇದಗಳ ಕಾಲದಲ್ಲಿ ಜಾತಿಪದ್ಧತಿ, ಗ್ರಾಮಜೀವನ ವ್ಯವಸ್ಥೆ ಮತ್ತು ರಾಜಕೀಯ ಪದ್ಧತಿಗಳು ರೂಪುಗೊಂಡವು. ಪ್ರಖ್ಯಾತವಾದ, ವಿಪುಲವಾದ ದಾರ್ಶನಿಕ ಸಾಹಿತ್ಯ ನಿರ್ಮಾಣವಾಯಿತು. ಉಪನಿಷತ್ತುಗಳು, ವೇದ ವೇದಾಂಗಗಳು ಮತ್ತು ಪುರಾಣಗಳು ರಚಿತವಾದುವು. ಕ್ರಿ.ಪೂ. 542–490ರಲ್ಲಿ ಮಗಧದಲ್ಲಿ ಆಳುತ್ತಿದ್ದ ಬಿಂದುಸಾರನದೇ ಮೊದಲನೆಯ ಮುಖ್ಯ ರಾಜ್ಯ.

ಅಲೆಕ್ಸಾಂಡರ್ ಭಾರತದ ಮೇಲೆ ದಂಡಯಾತ್ರೆ ನಡೆಸಿದ್ದು ಕ್ರಿ.ಪೂ. 327ರಲ್ಲಿ. ಆದರೆ ಅದರಿಂದ ಹೆಚ್ಚಿನ ಪರಿಣಾಮವೇನೂ ಆಗಲಿಲ್ಲ. ಚಂದ್ರಗುಪ್ತ ಮೌರ್ಯ ಸಾಮ್ರಾಜ್ಯವನ್ನು ಸ್ಥಾಪಿಸಿ ಭಾರತದ ಇತಿಹಾಸದಲ್ಲಿ ಮೊದಲನೆಯ ಚಕ್ರವರ್ತಿ ಎಂಬ ಕೀರ್ತಿ ಪಡೆದ. ಈ ವಂಶದವನಾದ ಅಶೋಕ (ಕ್ರಿ.ಪೂ. 273–232) ಪ್ರಾಚೀನ ಭಾರತದ ಇತಿಹಾಸದಲ್ಲಿ ಶ್ರೇಷ್ಠ ರಾಜನೆಂದು ಗೌರವ ಗಳಿಸಿ, ಬೌದ್ಧಧರ್ಮ ದೇಶ ವಿದೇಶಗಳಲ್ಲಿ ಹರಡಲು ಪ್ರೋತ್ಸಾಹಿಸಿದ. ಅವನ ಕಾಲಾನಂತರ ಚಿಕ್ಕಪುಟ್ಟ ರಾಜ್ಯಗಳು ತಲೆ ಎತ್ತಿದುವು. ಕ್ರಿ.ಶ. 4 ಮತ್ತು 5ನೆಯ ಶತಮಾನಗಳಲ್ಲಿ ಉತ್ತರಭಾಗದಲ್ಲಿ ಗುಪ್ತ ಸಾಮ್ರಾಜ್ಯ ಪ್ರಸಿದ್ಧಿಗೆ ಬಂತು. ಈ ಕಾಲವನ್ನು ಭಾರತದ ಇತಿಹಾಸದಲ್ಲಿ ಸುವರ್ಣ ಯುಗವೆಂದು ಕರೆಯುತ್ತಾರೆ. ಈ ಯುಗದಲ್ಲಿ ಸಾಹಿತ್ಯ, ಕಲೆ, ವಿಜ್ಞಾನಗಳು ಹೆಚ್ಚಿನ ಪ್ರಗತಿ ಸಾಧಿಸಿದುವಲ್ಲದೆ, ಭಾರತೀಯ ಸಂಸ್ಕೃತಿ ಆಗ್ನೇಯ ಏಷ್ಯದ ರಾಷ್ಟ್ರಗಳಲ್ಲಿ ಹರಡಿತು. 7ನೆಯ ಶತಮಾನದಲ್ಲಿ ಹರ್ಷ ಚಕ್ರವರ್ತಿ ಸ್ವಲ್ಪ ಕಾಲ ಐಕ್ಯ ಸಾಧಿಸಿದ ತರುವಾಯ ಮತ್ತೆ ದೇಶದಲ್ಲೆಲ್ಲ ಚಿಕ್ಕಪುಟ್ಟ ರಾಜ್ಯಗಳು ತಲೆ ಎತ್ತಿಕೊಂಡುವು. ದಕ್ಷಿಣದಲ್ಲಿ ಚೋಳ, ಪಲ್ಲವ, ಚಾಲುಕ್ಯ, ಕದಂಬ, ಹೊಯ್ಸಳ, ರಾಷ್ಟ್ರಕೂಟ ಮೊದಲಾದ ಸಾಮ್ರಾಜ್ಯಗಳು ಹೊಮ್ಮಿ ಭಾರತೀಯ ಸಂಸ್ಕೃತಿಯ ಪರಂಪರೆಯನ್ನು ಕಾಪಾಡಿಕೊಂಡು ಬಂದುವಲ್ಲದೆ, ಅದಕ್ಕೆ ವಿಶಿಷ್ಟ ರೀತಿಯ ಕಾಣಿಕೆಗಳನ್ನು ಸಲ್ಲಿಸಿದುವು.

ಉತ್ತರದಲ್ಲಿ ರಜಪೂತರು 700 ರಿಂದ 1000ದ ವರೆಗೆ ಪ್ರಬಲರಾಗಿದ್ದರು. ಅವರ ತರುವಾಯ ಮುಸ್ಲಿಮರು ಭಾರತಕ್ಕೆ ದಂಡೆತ್ತಿ ಬಂದು 12ನೆಯ ಶತಮಾನದಲ್ಲಿ ದೆಹಲಿಯಲ್ಲಿ ಸಾಮ್ರಾಜ್ಯ ಸ್ಥಾಪಿಸಿದರು. 1526ರಲ್ಲಿ ಮೊಘಲ್ ಸಾಮ್ರಾಜ್ಯ ಬಾಬರನ ನೇತೃತ್ವದಲ್ಲಿ ಸ್ಥಾಪಿತವಾಯಿತು. ಈ ಕಾಲದಲ್ಲಿ ಹೊಸ ಹೊಸ ವಿಷಯಗಳು ಭಾರತಕ್ಕೆ ಬಂದುವು. ಕಲೆ, ಸಾಹಿತ್ಯ, ಸಾಮಾಜಿಕ ಜೀವನ, ರಾಜಕೀಯ ಜೀವನ, ಮತೀಯ ಜೀವನ—ಈ ಎಲ್ಲ ಕ್ಷೇತ್ರಗಳಲ್ಲೂ ಹಿಂದೂ ಮುಸ್ಲಿಂ ನಾಗರಿಕತೆಗಳ ಪರಸ್ಪರ ಮಿಲನದಿಂದ ಒಂದು ನವೀನ ನಾಗರಿಕತೆಯ ಪರಂಪರೆ ಹುಟ್ಟಿಕೊಂಡಿತು. ಸಮಗ್ರ ಭಾರತೀಯ ಸಂಸ್ಕೃತಿ ಮತ್ತಷ್ಟು ಶ್ರೀಮಂತವಾಯಿತು. ಮೊಘಲರ ಸಾಮ್ರಾಜ್ಯ ಔರಂಗಜ಼ೇಬನ ಕಾಲಕ್ಕೆ ಉನ್ನತಮಟ್ಟಕ್ಕೇರಿ ಅನಂತರ ಅವನತಿಯ ಹಾದಿ ಹಿಡಿಯಿತು. ತಾಜ್‌ಮಹಲಿನಂಥ ವಿಶ್ವವಿಖ್ಯಾತ ಶಿಲ್ಪಕಲಾಕೌಶಲಗಳು ಭಾರತದಲ್ಲಿ ನಿರ್ಮಿತವಾದದ್ದು ಮೊಘಲರ ಕಾಲದಲ್ಲಿ. 18ನೆಯ ಶತಮಾನದಲ್ಲಿ ಭಾರತದಲ್ಲಿ ದೇಶೀಯ ಗುಂಪುಗಳಾದ ಮರಾಠಿ, ರಜಪೂತ, ಸಿಖ್ ಮತ್ತು ಆಫ್ಘನರಿಗೂ ವಿದೇಶೀ ಗುಂಪುಗಳಾದ ಬ್ರಿಟಿಷ್ ಮತ್ತು ಫ್ರೆಂಚರಿಗೂ ನಡುವೆ ಅಧಿಕಾರಕ್ಕಾಗಿ ಹೋರಾಟಗಳಾಗಿ ಕಡೆಗೆ ಫ್ರೆಂಚರನ್ನು ಓಡಿಸಿದ ಬ್ರಿಟಿಷರು 19ನೆಯ ಶತಮಾನದ ವೇಳೆಗೆ ಇಡೀ ಭಾರತದಲ್ಲೇ ಪ್ರಬಲರಾದರು. 19ನೆಯ ಶತಮಾನದಲ್ಲಿ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕದಿಂದ ಜಾಗೃತಿಯುಂಟಾಗಿ, 20ನೆಯ ಶತಮಾನದಲ್ಲಿ ಬ್ರಿಟಿಷರ ವಿರುದ್ಧ ಹೋರಾಟ ನಡೆಸಿದ ಭಾರತೀಯರು 1947ರಲ್ಲಿ ಮಹಾತ್ಮಾ ಗಾಂಧಿಯ ನೇತೃತ್ವದಲ್ಲಿ ಸ್ವಾತಂತ್ರ್ಯ ಪಡೆದರು.

**ಸಿಂಹಳ :** ಕ್ರಿ. ಪೂ. 6ನೆಯ ಶತಮಾನದಲ್ಲಿ ಆರ್ಯರು ಸಿಂಹಳದ ಮೇಲೆ ಆಕ್ರಮಣ ನಡೆಸಿದರೆಂಬುದು ಐತಿಹ್ಯ. ಅಶೋಕನ ಕಾಲದಲ್ಲಿ ಸಿಂಹಳ ಬೌದ್ಧಮತದ ಕೇಂದ್ರವಾಗಿ ಬರ್ಮ ಮತ್ತು ಥೈಲೆಂಡ್‌ಗಳಲ್ಲಿ ಪ್ರಭಾವ ಬೀರಿತು. ತಮಿಳರಿಗೂ ಸಿಂಹಳೀಯರಿಗೂ ನಡೆದ ಹೋರಾಟದ ಕಥೆಯೇ ಸಿಂಹಳದ ಮಧ್ಯ ಯುಗದ ಚರಿತ್ರೆ. 12ನೆಯ ಶತಮಾನದಲ್ಲಿ ಸಿಂಹಳೀ ರಾಜಮನೆತನವೊಂದು ಪ್ರಬಲವಾಗಿ ಆಡಳಿತ ನಡೆಸಿದ ಮೇಲೆ ಪೋರ್ಚುಗೀಸರು ಮತ್ತು ಅನಂತರ ಡಚ್ಚರು ಸಿಂಹಳದ ಮೇಲೆ ತಮ್ಮ ಹತೋಟಿ ಸ್ಥಾಪಿಸಿದರು. 1796ರಲ್ಲಿ ಬ್ರಿಟಿಷರು ಡಚ್ಚರನ್ನು ಓಡಿಸಿದರು. ಸ್ವಾತಂತ್ರ್ಯ ಗಳಿಸುವ ವರೆಗೂ (1948) ಸಿಂಹಳ ಬ್ರಿಟಿಷರ ಅಧೀನದಲ್ಲಿತ್ತು.

**ಪರ್ಷಿಯ :** ಪರ್ಷಿಯ ಅಥವಾ ಆಧುನಿಕ ಇರಾನ್ ಏಷ್ಯದ ಇತಿಹಾಸದಲ್ಲಿ ಮಹತ್ತ್ವದ ಪಾತ್ರವಹಿಸಿದೆ. ಮೂಲತಃ ಆರ್ಯರಾಗಿದ್ದ ಪರ್ಷಿಯನರು (ಹಿಂದೂಗಳಂತೆ) ಮಧ್ಯ ಏಷ್ಯದಿಂದ ಬಂದಿರಬಹುದು. ಪರ್ಷಿಯನರ ಮತಕ್ಕೂ ಪ್ರಾಚೀನ ಭಾರತೀಯ ವೈದಿಕ ಮತಕ್ಕೂ ಅನೇಕ ಸಾಮ್ಯಗಳಿವೆ. ಕ್ರಿ.ಪೂ. 7ನೆಯ ಶತಮಾನದಲ್ಲಿದ್ದ ಜಾರತೂಷ್ಟ್ರ ಪರ್ಷಿಯನರ ಮತವನ್ನು ಕ್ರೋಡೀಕರಿಸಿದ. ಸೈರಸ್, ಡೇರಿಯಸ್, ಸರ್‌ಕ್ಸಿಸ್ ಮೊದಲಾದ ಪರ್ಷಿಯನ್ ಚಕ್ರವರ್ತಿಗಳ ಕೈಕೆಳಗೆ ಪರ್ಷಿಯನ್ ಸಾಮ್ರಾಜ್ಯ ಏಷ್ಯ ಮೈನರಿನಿಂದ ಭಾರತದ ಗಡಿಯ ವರೆಗೆ ಹಬ್ಬಿತ್ತು. ಗ್ರೀಕರಿಂದ ಪರಾಜಿತರಾದ ಮೇಲೆ ಅವರ ಪ್ರಭಾವ ಕಡಿಮೆಯಾಯಿತು. 7ನೆಯ ಶತಮಾನದಲ್ಲಿ ಪರ್ಷಿಯ ಮುಸ್ಲಿಮರ ಆಕ್ರಮಣಕ್ಕೆ ತುತ್ತಾಗಿ ಇಸ್ಲಾಂ ಧರ್ಮವನ್ನು ಪ್ರಧಾನ ಧರ್ಮವಾಗಿ ಅಂಗೀಕರಿಸಿತು. ಮುಸ್ಲಿಮರ ಕಾಲದಲ್ಲಿ ಸಣ್ಣಪುಟ್ಟ ರಾಜವಂಶಗಳು ಉಳಿದುವು. ಹೆಚ್ಚಾಗಿ ಅರಾಜಕತೆ ನೆಲೆಸಿತ್ತು. 1585 ರಿಂದ 1628ರ ವರೆಗೆ ಆಳಿದ ಅಬ್ಬಾಸ್ ಷಾ ಚಕ್ರವರ್ತಿಯ ನೇತೃತ್ವದಲ್ಲಿ ಪರ್ಷಿಯ ಹೆಚ್ಚಿನ ಕೀರ್ತಿ ಮತ್ತು ವೈಭವ ಗಳಿಸಿತು. ಅನಂತರದ ಕಾಲದಲ್ಲಿ ಅಫ್ಘನರ ಆಕ್ರಮಣದಿಂದಾಗಿ ಅನಾಯಕತ್ವ ಉಂಟಾಯಿತು. 1907ರ ಆಂಗ್ಲೊ-ರಷ್ಯನ್ ಒಪ್ಪಂದದ ಪ್ರಕಾರ ಪರ್ಷಿಯ ಸ್ವತಂತ್ರವಾಗಿರಬೇಕೆಂದು ತೀರ್ಮಾನಿಸಲಾಯಿತು. 1941ರಲ್ಲಿ ರಷ್ಯ-ಬ್ರಿಟಿಷ್ ಒಪ್ಪಂದ ಕೊನೆಗೊಂಡಿತು. ಅದರೊಡನೆ ಪರ್ಷಿಯದ ಮೇಲಿದ್ದ ದ್ವಂದ್ವ ರೀತಿಯ ನಿಯಂತ್ರಣವೂ ಕೊನೆಗೊಂಡಿತು.

**ತುರ್ಕಿ :** ಕ್ರಿ.ಶ. 545ರಲ್ಲಿ ಮೊಟ್ಟಮೊದಲ ಬಾರಿಗೆ ಚೀನದ ಗಡಿಪ್ರದೇಶಗಳಲ್ಲಿ ಕಾಣಿಸಿಕೊಂಡ ತುರ್ಕಿ ಜನಾಂಗದವರು ಅನಂತರ ಏಷ್ಯ ಯೂರೋಪ್ ಖಂಡಗಳಲ್ಲಿ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದರು. ವೀಗುರ್ ಜನರೂ ಸೆಲ್ಜೂಕರೂ ಉಸ್ಮಾನ್‌ಲಿಗಳೂ ತುರ್ಕಿ ಜನಾಂಗದ ಮುಖ್ಯ ಆಕ್ರಮಣಕಾರಿ ಮತ್ತು ಯುದ್ಧ ಪ್ರೇಮಿ ಗುಂಪುಗಳು. 1453ರಲ್ಲಿ ಉಸ್ಮಾನ್‌ಲಿಗಳು ಕಾನ್‌ಸ್ಟ್ಯಾಂಟಿನೋಪಲ್ ನಗರವನ್ನು ಹಿಡಿದು, ಆಟೋಮನ್ ಸಾಮ್ರಾಜ್ಯ ಸ್ಥಾಪಿಸಿದರು. 1922ರಲ್ಲಿ ಇದು ಗಣರಾಜ್ಯವಾಗಿ ಪರಿವರ್ತನೆಗೊಂಡು ಅಂಕಾರವನ್ನು ರಾಜಧಾನಿಯಾಗಿ ಮಾಡಿಕೊಂಡು, ಐರೋಪ್ಯ ಸಂಸ್ಕೃತಿಯ ಆಚಾರ ವ್ಯವಹಾರಗಳನ್ನು ಸಂಪೂರ್ಣವಾಗಿ ಅಳವಡಿಸಿಕೊಂಡಿತು. ಎರಡನೆಯ ಮಹಾಯುದ್ಧದಲ್ಲಿ ಫೆಬ್ರುವರಿ 1945ರ ವರೆಗೆ ತಟಸ್ಥವಾಗಿದ್ದು ಅನಂತರ ಜರ್ಮನಿ ಮತ್ತು ಜಪಾನ್‌ಗಳ ಮೇಲೆ ಯುದ್ಧ ಘೋಷಿಸಿತು.

**ಇಸ್ರೇಲ್ :** ಯಹೂದಿಗಳ ಮೂಲಸ್ಥಾನವಾದ ಇಸ್ರೇಲ್ ಅಥವಾ ಪ್ಯಾಲೆಸ್ಟೈನ್ ಏಷ್ಯದಲ್ಲಿದ್ದರೂ ಇತಿಹಾಸದ ಉದ್ದಕ್ಕೂ ಈ ಜನ ಬೇರೆ ದೇಶಗಳಲ್ಲಿ ಹಂಚಿಹೋಗಿದ್ದು, ವ್ಯಾಪಾರ ವಾಣಿಜ್ಯಗಳಲ್ಲಿ ಪ್ರಮುಖರಾಗಿದ್ದು, 1948ರಿಂದೀಚೆಗೆ ತಮ್ಮದೇ ಆದ ದೇಶ ರಚಿಸಿಕೊಂಡಿದ್ದಾರೆ. (ನೋಡಿ—ಇಸ್ರೇಲ್)

**ಅರಬರು :** ಕ್ರಿ.ಪೂ. 9ನೆಯ ಶತಮಾನದ ತರುವಾಯದ ಕಾಲದಲ್ಲಿ ಅರಬ್ಬರ ಹೆಸರು ಅಕ್ಕಪಕ್ಕದ ರಾಷ್ಟ್ರಗಳಲ್ಲಿ ಕೇಳಿಬಂದಿತು. ಇಸ್ಲಾಂ ಧರ್ಮದ ಸ್ಥಾಪಕನಾದ ಮಹಮದನಿಗಿಂತ ಮುಂಚೆ ಅರಬರಿಗೆ ತಮ್ಮದೇ ಆದಂಥ ಇತಿಹಾಸವಿದ್ದಿರಲಿಲ್ಲ. ಇಸ್ಲಾಂ ಪ್ರಬಲವಾದ ತರುವಾಯ ಅರಬರು ಆ ಮತವನ್ನು ಆಗಿನ ಪ್ರಪಂಚದಲ್ಲೆಲ್ಲ ಹರಡುವ ಪ್ರಯತ್ನ ನಡೆಸಿದರು. ಪೂರ್ವದಲ್ಲಿ ಭಾರತ, ಪರ್ಷಿಯ ಮತ್ತು ಮಧ್ಯ ಏಷ್ಯಗಳನ್ನೂ ಪಶ್ಚಿಮದಲ್ಲಿ ಸ್ಪೇನ್ ಮತ್ತು ಮೊರಾಕೊಗಳನ್ನೂ ಆಕ್ರಮಿಸಿದರು. ಡಮಾಸ್ಕಸಿನ - ಓಮಯಾದ್ ಖಲೀಫರು ಮತ್ತು ಬಾಗ್ದಾದಿನ ಅಬ್ಬಾಸಿದ್ ಖಲೀಫರು ಪಶ್ಚಿಮ ಏಷ್ಯದಲ್ಲಿ ರಾಜಕೀಯ ಪ್ರಭಾವವನ್ನು ವಿಸ್ತರಿಸಿ ಪ್ರಖ್ಯಾತರಾದರು. ಐಕಮತ್ಯದ ಕೊರತೆಯಿಂದಾಗಿ ಚಕ್ರಾಧಿಪತ್ಯದ ಅನೇಕ ಭಾಗಗಳು ಸ್ವಾತಂತ್ರ್ಯ ಘೋಷಿಸಿದವು. ಉಳಿದಷ್ಟು ಭಾಗಗಳನ್ನು ತುರ್ಕಿಯವರು ವಶಪಡಿಸಿಕೊಂಡರು. ಅರಬರು ಸ್ಪೇನಿನಲ್ಲೂ ಸ್ವಲ್ಪ ಕಾಲ ಆಳಿದರಲ್ಲದೆ ಯೂರೋಪನ್ನು ಸಂಪೂರ್ಣವಾಗಿ ತಮ್ಮ ಹತೋಟಿಗೆ ತಂದುಕೊಳ್ಳುವ ಯತ್ನ ನಡೆಸಿದರು. 15ನೆಯ ಶತಮಾನದ ವರೆಗೆ ಈ ಪ್ರಯತ್ನಗಳು ನಡೆದುವು. ಅನಂತರ ಅರಬರ ರಾಜಕೀಯ ಪ್ರಾಬಲ್ಯ ಕುಸಿಯಿತು. ಆದಾಗ್ಯೂ ಅರಬರ ಮತೀಯ ಭಾವನೆಗಳು ಮತ್ತು ಸಾಹಿತ್ಯ ಪಶ್ಚಿಮ ಏಷ್ಯ ಮತ್ತು ಉತ್ತರ ಆಫ್ರಿಕಗಳಲ್ಲಿ ಪ್ರಬಲವಾದ ಮತ್ತು ಪ್ರಭಾವಯುತವಾದ ಶಕ್ತಿಗಳಾಗಿವೆ.

ಒಂದನೆಯ ಮಹಾಯುದ್ಧದ ತರುವಾಯ ಸವೂದಿ ಅರೇಬಿಯ ಪ್ರಾಮುಖ್ಯ ಗಳಿಸಿತು. ಅರಬರಲ್ಲಿ ರಾಷ್ಟ್ರೀಯತೆಯ ಮನೋಭಾವ ಬೆಳೆಯಿತು. 1945ರಲ್ಲಿ ನಡೆದ ಯಾಲ್ಟ ಸಮ್ಮೇಳನದಲ್ಲಿ ಐರೋಪ್ಯ ಹಾಗೂ ಅಮೆರಿಕನ್ ನಾಯಕರು ಅರಬರ ರಾಷ್ಟ್ರೀಯತೆಯ ಮನೋಭಾವಗಳನ್ನು ಗುರುತಿಸಿ ಸೂಕ್ತರೀತಿಯಲ್ಲಿ ನಡೆದುಕೊಳ್ಳುವ ಭರವಸೆ ಇತ್ತರು.

**ಆಗ್ನೇಯ ಏಷ್ಯ :** ಏಷ್ಯದ ಮತ್ತೊಂದು ಬುಡಕಟ್ಟಿನವರಾದ ಮಲೆಯರು ಮಲೆಯ ಪರ್ಯಾಯದ್ವೀಪ, ಜಾವ, ಸುಮಾತ್ರ ಮತ್ತು ಫಿಲಿಪೀನ್ಸ್‌ನಲ್ಲೂ ಅನೇಕ ಚಿಕ್ಕಪುಟ್ಟ ದ್ವೀಪಗಳಲ್ಲೂ ಫಾರ್ಮೋಸ ಮತ್ತು ಮಡಗಾಸ್ಕರ್‌ಗಳಲ್ಲೂ ಹರಡಿ ಹೋಗಿದ್ದಾರೆ. ಇಷ್ಟು ವಿಶಾಲವಾಗಿ ಹರಡಿರುವ ಈ ಜನರಿಗೆ ತಮ್ಮದೇ ಆದ ಏಕರೀತಿಯ ರಾಜ್ಯಾಂಗವಿಲ್ಲ. ಏಷ್ಯದ ಮಲೆಯರು ಸಮುದ್ರಯಾನ ಮಾಡುವುದರಲ್ಲಿ ಗಟ್ಟಿಗರು. ಈ ಜನಾಂಗದ ಇತಿಹಾಸದಲ್ಲಿ ಮುಖ್ಯವಾಗಿ ಮೂರು ಘಟ್ಟಗಳನ್ನು ಗುರುತಿಸಬಹುದು. ಮೊದಲನೆಯದು ಹಿಂದುಳಿದ ಸಂಸ್ಕೃತಿಯ ಪರಿಸ್ಥಿತಿ. ಈಗಿನ ಬೋರ್ನಿಯೊ ದ್ವೀಪಗಳಲ್ಲಿ ವಾಸಿಸುವ ದೇಶೀಯರಂತೆ ಇದ್ದದ್ದು. ಎರಡನೆಯ ಘಟ್ಟದಲ್ಲಿ ಈ ಜನಾಂಗದವರು ಜಾವಾ, ಸುಮಾತ್ರ ಮತ್ತು ಮಲೆಯಗಳಲ್ಲಿ ಹಿಂದೂ ಸಂಸ್ಕೃತಿಯಿಂದ ಪ್ರಭಾವಿತರಾದರು. ಸುಮಾತ್ರದಲ್ಲಿ ಉದಯವಾದ ಶ್ರೀ ವಿಜಯ ಸಾಮ್ರಾಜ್ಯ 7ನೆಯದರಿಂದ 14ನೆಯ ಶತಮಾನದ ವರೆಗೆ ಬಹಳ ಪ್ರಸಿದ್ಧವಾಗಿತ್ತು. ಮೂರನೆಯ ಘಟ್ಟದಲ್ಲಿ, ಬಲಿದ್ವೀಪವನ್ನು ಬಿಟ್ಟು ಉಳಿದ ಎಲ್ಲ ಪ್ರದೇಶಗಳಲ್ಲೂ ಹಿಂದೂ ಧರ್ಮವನ್ನು ಹಿಂದಕ್ಕೆ ತಳ್ಳಿ ಇಸ್ಲಾಂ ಪ್ರಬಲಗೊಂಡಿತು. ಒಟ್ಟಿನಲ್ಲಿ ಮಲೆಯ ಜನಾಂಗದವರು ಆಗ್ನೇಯ ಏಷ್ಯದ ಆಧುನಿಕ ಇತಿಹಾಸದಲ್ಲಿ ಅಂಥ ಹೆಚ್ಚಿನ ಪಾತ್ರ ವಹಿಸಲಿಲ್ಲವೆನ್ನಬಹುದು.

ಆಗ್ನೇಯ ಏಷ್ಯದ ಉಳಿದ ಭಾಗಗಳಾದ ಬರ್ಮ, ಥೈಲೆಂಡ್ (ಸಯಾಂ), ಕಾಂಬೋಡಿಯ, ಉತ್ತರ ಮತ್ತು ದಕ್ಷಿಣ ವಿಯೆಟ್ನಾಂ ಮತ್ತು ಲಾವೋಸ್‌ಗಳು ಹಿಂದಿನಿಂದಲೂ ಭಾರತೀಯ ಮತ್ತು ಚೀನೀ ಸಂಸ್ಕೃತಿಗಳಿಂದ ಪ್ರಭಾವಿತವಾಗಿವೆ. ಈ ಪ್ರದೇಶಗಳಲ್ಲಿ ವಾಸಿಸುತ್ತಿರುವ ಜನಾಂಗದವರು ಹತ್ತಾರು ಗುಂಪುಗಳಿಗೆ ಸೇರಿದವರಾಗಿದ್ದಾರೆ. ಇತಿಹಾಸದಲ್ಲಿ ಮೊದಲು ಪ್ರಾಮುಖ್ಯ ಗಳಿಸಿದವರೆಂದರೆ ಖ್ಮೆರ್ ಜನಾಂಗದವರು. ಕ್ರಿ.ಶ. 800–1200ರಲ್ಲಿ ಖ್ಮೆರ್ ಸಾಮ್ರಾಜ್ಯ ಉನ್ನತ ಸ್ಥಿತಿಯಲ್ಲಿತ್ತೆನ್ನಬಹುದು. ಕ್ರಿ.ಶ. ಎರಡನೆಯ ಶತಮಾನದಲ್ಲಿ ಸ್ಥಾಪಿತವಾದ, ಈಗಿನ ವಿಯಟ್ನಾಂ ಪ್ರದೇಶದಲ್ಲಿದ್ದ ಚಂಪ ಸಾಮ್ರಾಜ್ಯ ಇಂಡೋಚೀನದಲ್ಲೆಲ್ಲ ಪ್ರಸಿದ್ಧವಾಗಿ ಹಿಂದೂ ಸಂಸ್ಕೃತಿಯಿಂದ ಪ್ರಭಾವಿತವಾಗಿ ಅನೇಕ ಕಲಾಕೌಶಲಗಳನ್ನು ರಚಿಸಲು ಪ್ರೋತ್ಸಾಹಿಸಿತು. ಜಾವಾದ ಮುಖಾಂತರ ಹಿಂದೂ ಸಂಸ್ಕೃತಿ ಚಂಪಕ್ಕೆ ಹೋಗಿರಬಹುದು. ವಿಯಟ್ನಾಮಿನಲ್ಲಿ ವಾಸಿಸುವ ಅನ್ನಾಮೀಯರು ಚಂಪ ರಾಜ್ಯವನ್ನು ನಾಶಗೊಳಿಸಿ ವಿಯಟ್ನಾಮಿನ ಮೇಲೆ ತಮ್ಮ ಪ್ರಭಾವ ಬೀರಿದರು. ಇವರು ಚೀನೀ ಸಂಸ್ಕೃತಿಯಿಂದ ಪ್ರಭಾವಿತರಾದರು. ಬರ್ಮೀಯರು ಟಿಬೆಟಿನ ಜನಾಂಗದ ಗುಂಪಿಗೆ ಸೇರಿದವರಾಗಿದ್ದು ಈಗಿನ ಬರ್ಮದಲ್ಲಿ 12, 16 ಮತ್ತು 18ನೆಯ ಶತಮಾನಗಳಲ್ಲಿ ಪ್ರಸಿದ್ಧ ಸಾಮ್ರಾಜ್ಯ ಕಟ್ಟಿ, 19ನೆಯ ಶತಮಾನದ ವೇಳೆಗೆ ಬ್ರಿಟಿಷರಿಗೆ ಶರಣಾಗತರಾದರು. ಬರ್ಮೀಯರು ಬಹುತೇಕ ಬೌದ್ಧಮತೀಯರಾದರೂ ಹಿಂದೂ ಸಂಸ್ಕೃತಿಯ ಹಲವಾರು ಅಂಶಗಳನ್ನು ಪಡೆದಿದ್ದಾರೆ. ಚೀನೀ ಜನಾಂಗಕ್ಕೆ ಹತ್ತಿರದವರಾದ ಸಯಾಮಿಗಳು 13ನೆಯ ಶತಮಾನದಲ್ಲಿ ಈಗಿನ ಥೈಲೆಂಡ್ ಪ್ರದೇಶದಲ್ಲಿ ರಾಜ್ಯ ಕಟ್ಟಿ, ಬೌದ್ಧಮತಾವಲಂಬಿಗಳಾಗಿ, ಭಾರತದಿಂದ ಅಕ್ಷರಮಾಲೆಯನ್ನೂ ಭಾರತೀಯ ಸಂಸ್ಕೃತಿಯ ಇನ್ನೂ ಅನೇಕ ಅಂಶಗಳನ್ನೂ ಪಡೆದುಕೊಂಡರು. ಆಧುನಿಕ ಕಾಲದಲ್ಲಿ ಆಗ್ನೇಯ ಏಷ್ಯದಲ್ಲಿ ಥೈಲೆಂಡ್ ಮಾತ್ರ ಪಾಶ್ಚಾತ್ಯರ ನೇರ ವಸಾಹತು ಆಡಳಿತದಿಂದ ತಪ್ಪಿಸಿಕೊಂಡು ತನ್ನ ಸ್ವಾತಂತ್ರ್ಯವನ್ನು ಕಾಪಾಡಿಕೊಂಡಿತು.

**ಪಾಶ್ಚಾತ್ಯ ಸಾಮ್ರಾಜ್ಯ :** ಹದಿನೈದನೆಯ ಶತಮಾನದ ಕೊನೆಗೆ ವಾಸ್ಕೋ ಡ ಗಾಮನ ನೇತೃತ್ವದಲ್ಲಿ ಪೋರ್ಚುಗೀಸ್ ನೌಕೆ ಗುಡ್‌ಹೋಪ್ ಭೂಶಿರದ ಮಾರ್ಗವಾಗಿ ಹಿಂದೂ ಮಹಾಸಾಗರವನ್ನು ಪ್ರವೇಶಿಸಿತು. ಏಷ್ಯದ ಆಧುನಿಕ ಇತಿಹಾಸದಲ್ಲಿ ಇದೊಂದು ಮುಖ್ಯ ಘಟನೆ. ಏಕೆಂದರೆ ಇಲ್ಲಿಂದಾಚೆಗೆ ಐರೋಪ್ಯರು ಏಷ್ಯವನ್ನು ತಮ್ಮ ಅಧೀನದಲ್ಲಿಟ್ಟುಕೊಳ್ಳುವ ಪ್ರಯತ್ನ ನಡೆಸಿದರು. ಈ ಘಟನೆ ಭಾರತದಲ್ಲಿ ಮೊಘಲ್ ಸಾಮಾಜ್ಯ ಆರಂಭವಾಗುವುದಕ್ಕೆ ಸುಮಾರು 25 ವರ್ಷಗಳ ಹಿಂದೆ ನಡೆಯಿತು. ಚೀನದ ಕೊನೆಯ ಅರಸರಾದ ಮಂಚುಗಳು ಪ್ರಾಬಲ್ಯಕ್ಕೆ ಬರಲು ಇನ್ನೂ ಸುಮಾರು ಅರ್ಧ ಶತಮಾನವಿತ್ತು. ಪೋರ್ಚುಗೀಸರು ಹಿಂದೂ ಮಹಾಸಾಗರದಲ್ಲಿ ತಮ್ಮ ಪ್ರಾಬಲ್ಯವನ್ನು ಸ್ಥಾಪಿಸಿದ್ದಲ್ಲದೆ ಪೂರ್ವಕ್ಕಿರುವ ಎಲ್ಲ ಸಮುದ್ರಗಳ ಮೇಲೂ ತಮ್ಮ ಹತೋಟಿಯನ್ನಿಟ್ಟುಕೊಂಡರು. ಪೋರ್ಚುಗೀಸರು ಹೋದಲ್ಲಿ ಅವರನ್ನು ಹಿಂಬಾಲಿಸಿ ಸ್ಪಾನಿಷರು, ಡಚ್ಚರು, ಫ್ರೆಂಚರು ಮತ್ತು ಇಂಗ್ಲಿಷರು ನಡೆದರು. ಎಲ್ಲಕ್ಕಿಂತ ಮಿಗಿಲಾಗಿ ಇವರೆಲ್ಲ ವ್ಯಾಪಾರವನ್ನೇ ಮುಖ್ಯ ಉದ್ದೇಶವನ್ನಾಗಿಟ್ಟುಕೊಂಡಿದ್ದರು. ಏಷ್ಯದ ರೇಷ್ಮೆ ಮತ್ತು ಸಂಭಾರ ಪದಾರ್ಥಗಳು ಪಾಶ್ಚಾತ್ಯರನ್ನು ಆಕರ್ಷಿಸಿದುವು. ವ್ಯಾಪಾರವನ್ನು ಹಿಂಬಾಲಿಸಿ ಪಾಶ್ಚಾತ್ಯರ ಮತ ಬಂತು. ಕ್ರೈಸ್ತ ಮತವನ್ನು ಹರಡಲು ಅನೇಕ ಪ್ರಯತ್ನಗಳು ನಡೆದುವು. ಪೋರ್ಚುಗೀಸರು ಈ ದಿಸೆಯಲ್ಲಿ ಎಲ್ಲರಿಗಿಂತ ಮಿಗಿಲಾಗಿ ಹೆಣಗಾಡಿದರು.

ಪೋರ್ಚುಗೀಸರು ಗೋವ ಮತ್ತು ಮೆಕಾವ್‌ಗಳಲ್ಲೂ ಸ್ಪಾನಿಷರು ಫಿಲಿಪೀನ್ಸ್‌ನಲ್ಲೂ (1565) ತಮ್ಮ ಕೋಠಿಗಳನ್ನು ಕಟ್ಟಿದರು. ಐರೋಪ್ಯ ರಾಷ್ಟ್ರಗಳ ಮಧ್ಯೆ ಇದ್ದ ಪೈಪೋಟಿ ಏಷ್ಯಕ್ಕೂ ಹಬ್ಬಿತು. ಡಚ್ಚರು ಪೋರ್ಚುಗೀಸರನ್ನು ಓಡಿಸಿ ಜಾವಾ ದ್ವೀಪದಲ್ಲಿ ತಮ್ಮ ಸಂಭಾರ ಪದಾರ್ಥಗಳ ಒಂದು ಸಾಮ್ರಾಜ್ಯವನ್ನೇ ಕಟ್ಟಿದರು. ಕ್ರಮೇಣ ಸುಮಾತ್ರ ದ್ವೀಪವೂ ಅವರ ವಶವಾಗಿ, ಜಾವಾದ ಬಟೇವಿಯ ಡಚ್ಚರ ವಸಾಹತುಗಳ ಕೇಂದ್ರವಾಯಿತು. 1749 ಮತ್ತು 1805ರ ನಡುವಣ ಕಾಲದಲ್ಲಿ ಫ್ರೆಂಚರಿಗೂ ಬ್ರಿಟಿಷರಿಗೂ ಭಾರತದಲ್ಲಿ ಪ್ರಭಾವ ಗಳಿಸುವ ಸಲುವಾಗಿ ಯುದ್ಧಗಳು ನಡೆದುವು. ಆ ವೇಳೆಗೆ ಮೊಘಲ್ ಸಾಮ್ರಾಜ್ಯ ನಶಿಸಿಹೋಗಿ, ಒಂದು ಕೇಂದ್ರಾಡಳಿತವಿಲ್ಲದಂಥ ಪರಿಸ್ಥಿತಿ ಒದಗಿತ್ತು. ಇದರ ಜೊತೆಗೆ ಭಾರತೀಯರಲ್ಲೇ ಇದ್ದ ಪರಸ್ಪರ ಕಲಹಗಳು ಬ್ರಿಟಿಷರಿಗೆ ತಮ್ಮ ಸಾಮ್ರಾಜ್ಯವನ್ನು ಕಟ್ಟಲು ಒಳ್ಳೆಯ ಅವಕಾಶವನ್ನು ಕಲ್ಪಿಸಿಕೊಟ್ಟಿತು. ಹತ್ತೊಂಬತ್ತನೆಯ ಶತಮಾನದಲ್ಲಿ ಬ್ರಿಟಿಷರು ಬಹು ಸುಲಭವಾಗಿ ಭಾರತವನ್ನೆಲ್ಲ ಜಯಿಸಿದರು. ಭಾರತದಲ್ಲಿ ಕಟ್ಟಿದ ಈ ಸಾಮ್ರಾಜ್ಯವನ್ನು ಕಾಪಾಡಲು, ಏಡನ್, ಪರ್ಷಿಯ, ಅರೇಬಿಯ, ಬರ್ಮ ಮತ್ತು ಸಿಂಗಪುರಗಳಲ್ಲಿ ಕೋಟೆಕೊತ್ತಲಗಳನ್ನು ಕಟ್ಟಿದರು.

ಪರಾಜಿತರಾದ ಫ್ರೆಂಚರು ಭಾರತದಿಂದ ಪೂರ್ವಕ್ಕೆ ಹೋಗಿ ಆಗ್ನೇಯ ಏಷ್ಯದ ಭಾಗಗಳಲ್ಲಿ ತಮ್ಮ ಪ್ರಭಾವ ಬೀರತೊಡಗಿದರು. ಬರ್ಮದಲ್ಲೂ ಸ್ವಲ್ಪ ಕಾಲ ತಮ್ಮ ಪ್ರಭಾವ ಸ್ಥಾಪಿಸಲು ಪ್ರಯತ್ನ ನಡೆಸಿದರು. ಬರ್ಮವನ್ನು ತಮ್ಮ ನೆಲೆಯನ್ನಾಗಿ ಮಾಡಿಕೊಂಡು ಭಾರತದಲ್ಲಿದ್ದ ಬ್ರಿಟಿಷರೊಡನೆ ಹೋರಾಟ ನಡೆಸುವುದೇ ಇವರ ಉದ್ದೇಶವಾಗಿತ್ತು. ಆದರೆ ಫ್ರೆಂಚರ ಈ ಉದ್ದೇಶ ಪೂರ್ಣವಾಗಲಿಲ್ಲ. ಕೊನೆಗೆ ಫ್ರೆಂಚರು ಕೊಚಿನ್, ಚೀನ, ಅನ್ನಾಂ, ಟಾಂಕಿನ್, ಲಾವೋಸ್ ಮತ್ತು

ಕಾಂಬೋಡಿಯಗಳಲ್ಲಿ ತಮ್ಮ ವಸಾಹತುಗಳನ್ನು ಸ್ಥಾಪಿಸಿದರು. ಆ ಪ್ರದೇಶದಲ್ಲಿ ಆಳುತ್ತಿದ್ದ ರಾಜರು ಫ್ರೆಂಚರ ಅಧೀನರಾಗಿ ಅವರ ಪೋಷಣೆಗೆ ಒಳಪಟ್ಟರು. ಆಗ್ನೇಯ ಏಷ್ಯದಲ್ಲಿ ಥೈಲೆಂಡ್ ಅಥವಾ ಸಯಾಂ ಮಾತ್ರ ಪಾಶ್ಚಾತ್ಯರ ವಸಾಹತು ನೀತಿಗೆ ತುತ್ತಾಗದೆ ತನ್ನ ಸ್ವಾತಂತ್ರ್ಯ ಕಾಪಾಡಿಕೊಂಡಿತು. ಥೈಲೆಂಡಿನ ಅಕ್ಕಪಕ್ಕಗಳಲ್ಲಿದ್ದ ಫ್ರೆಂಚರೂ ಬ್ರಿಟಿಷರೂ ಆ ದೇಶ ತಮ್ಮಿಬ್ಬರ ಪ್ರಭಾವ ವಲಯಗಳ ನಡುವಿನ ಪ್ರದೇಶವಾಗಿ ಸ್ವತಂತ್ರವಾಗಿ ಇರಬೇಕೆಂದು ಒಪ್ಪಂದ ಮಾಡಿಕೊಂಡಿದ್ದೇ ಇದಕ್ಕೆ ಕಾರಣ.

ಪಶ್ಚಿಮ ಏಷ್ಯದಲ್ಲಿ ಆಟೋಮನರ ಸಾಮ್ರಾಜ್ಯ ಪ್ರಭಾವಶಾಲಿಯಾಗಿತ್ತು. ಆದರೆ 16ನೆಯ ಶತಮಾನದಿಂದೀಚೆಗೆ ಆ ಸಾಮ್ರಾಜ್ಯ ಅವನತಿಯ ಹಾದಿ ಹಿಡಿದಿತ್ತು. 1882ರಲ್ಲಿ ಬ್ರಿಟಿಷರು ಆ ಸಾಮ್ರಾಜ್ಯದ ಅಧೀನದಲ್ಲಿದ್ದ ಈಜಿಪ್ಟನ್ನು ತಮ್ಮ ಹತೋಟಿಗೆ ತಂದುಕೊಂಡರು. ಈಜಿಪ್ಟ್ ಬ್ರಿಟನಿನ ವ್ಯಾಪಾರ ಮಾರ್ಗಕ್ಕೆ ಅತ್ಯಂತ ಆವಶ್ಯಕವಾಗಿತ್ತು. ಸೂಯೆಜ಼್ ಕಾಲುವೆ ರಚಿಸಿದ ಅನಂತರ ಈಜಿಪ್ಟಿನ ಉಪಯೋಗ ಹೆಚ್ಚಿತು. ಆಮೇಲೆ ಬ್ರಿಟಿಷರು ತಮ್ಮ ಹತೋಟಿಯನ್ನು ಇಟ್ಟುಕೊಳ್ಳುವ ಸಲುವಾಗಿ ಈಜಿಪ್ಟನ್ನು ತಮ್ಮ ಪ್ರಭಾವ ವಲಯದೊಳಕ್ಕೆ ತಂದುಕೊಂಡರು. ಫ್ರೆಂಚರು ಸಿರಿಯದಲ್ಲಿ ತಮ್ಮ ಪ್ರಭಾವವನ್ನು ಸ್ಥಾಪಿಸಿದರು. ದೂರ ಪ್ರಾಚ್ಯ ದೂರವಿದ್ದುದರಿಂದಲೊ ಏನೊ, ಸ್ವಲ್ಪ ಕಾಲ ಪಾಶ್ಚಾತ್ಯರ ವಸಾಹತು ನೀತಿಗೆ ತುತ್ತಾಗದೆ ಉಳಿದಿತ್ತು. ಆದರೆ 1842ರಿಂದಾಚೆಗೆ ಚೀನ ದೇಶ ಪಾಶ್ಚಾತ್ಯರಿಗೆ ವ್ಯಾಪಾರಕ್ಕಾಗಿ ತನ್ನ ಬಾಗಿಲು ತೆರೆಯಬೇಕಾಯಿತು. ಚೀನೀಯರ ಸ್ವಾತಂತ್ರ್ಯವನ್ನು ಮೊಟಕುಗೊಳಿಸುವ ಹೆಚ್ಚಿನ ರಿಯಾಯಿತಿಗಳು 1930ರ ದಶಕದ ವರೆಗೆ ನಡೆದುಕೊಂಡು ಬಂದುವು. ಇವಕ್ಕೆಲ್ಲ ಚೀನ ದೇಶವನ್ನು 1911ರ ವರೆಗೆ ಆಳಿದ ಮಂಚೂಗಳೇ ಕಾರಣವೆನ್ನಬಹುದು. ಅನಂತರ ಸ್ಥಾನಮಾನಗಳಿಗಾಗಿ ನಡೆದ ಆಂತರಿಕ ಕಲಹಗಳಿಂದ ಚೀನ ತನ್ನ ಸಂಪೂರ್ಣ ಸ್ವಾತಂತ್ರ್ಯವನ್ನು ಪಡೆದುಕೊಳ್ಳಲು ಸಾಧ್ಯವಾಗಲಿಲ್ಲ.

ಈ ಕಾಲದಲ್ಲೇ ರಷ್ಯ ಉತ್ತರ ಮತ್ತು ಮಧ್ಯ ಏಷ್ಯಗಳಲ್ಲಿ ತನ್ನ ಪ್ರಭಾವವನ್ನು ಸ್ಥಾಪಿಸುವ ಪ್ರಯತ್ನ ನಡೆಸಿತು. ಸೈನ್ಯಬಲ, ರಾಜಕೀಯ ಕುಟಿಲನೀತಿ ಮತ್ತು ವಸಾಹತುಗಳ ಸ್ಥಾಪನೆ—ಇವೇ ರಷ್ಯನರ ಅಸ್ತ್ರಗಳಾಗಿದ್ದುವು. 1900ರ ವೇಳೆಗೆ ರಷ್ಯ ಪೆಸಿಫಿಕ್ ಮಹಾಸಾಗರದ ತೀರದ ವರೆಗೆ ತನ್ನ ಹತೋಟಿ ಹಬ್ಬಿಸಿತ್ತು. ಚೀನ ಮತ್ತು ಕೊರಿಯಗಳು ರಷ್ಯನರ ಈ ಮುನ್ನುಗ್ಗುವಿಕೆಯಿಂದ ತತ್ತರಿಸಿದುವು.

**ಏಷ್ಯದ ಜಾಗೃತಿ :** ಹತ್ತೊಂಬತ್ತನೆಯ ಶತಮಾನದ ಇತಿಹಾಸ ಮುಖ್ಯವಾಗಿ ಪಾಶ್ಚಾತ್ಯರು ಏಷ್ಯದಲ್ಲಿ ವಿವಿಧ ರೀತಿನೀತಿಗಳಿಂದ, ಕುಟಿಲೋಪಾಯಗಳಿಂದ ಹೇಗೆ ತಮ್ಮ ಪ್ರಭಾವ (ರಾಜಕೀಯ, ಸಾಮಾಜಿಕ, ಹಾಗೂ ಮತೀಯ) ಸ್ಥಾಪಿಸಿದರು ಎಂಬುದನ್ನು ತೋರಿಸಿದರೆ, ಇಪ್ಪತ್ತನೆಯ ಶತಮಾನದ ಏಷ್ಯದ ಇತಿಹಾಸ, ಏಷ್ಯ ಹೇಗೆ ಇಂಥ ಬಂಧನದಿಂದ ಮುಕ್ತವಾಗಿ ತನ್ನದೇ ಆದ ಆದರ್ಶಗಳನ್ನು ರೂಪಿಸಿಕೊಳ್ಳತೊಡಗಿತು ಎಂಬುದನ್ನು ತೋರಿಸುತ್ತದೆ. ಇಪ್ಪತ್ತನೆಯ ಶತಮಾನದ ಹೊತ್ತಿಗೆ ಏಷ್ಯದ ವಿವಿಧ ಜನಾಂಗದವರು ಯೂರೋಪಿನ ವಿರುದ್ಧ ಎಚ್ಚೆತ್ತು ತಮ್ಮ ಸ್ವಾತಂತ್ರ್ಯಕ್ಕಾಗಿ ಹೋರಾಡಲು ಸಿದ್ಧರಾದರು. ಏಷ್ಯದಲ್ಲಿ ಮೊತ್ತಮೊದಲ ಬಾರಿಗೆ ಜಪಾನ್ ಯೂರೋಪಿನಿಂದಲೇ ಪಾಠ ಕಲಿತು, ಅದರ ಅಸ್ತ್ರಗಳಿಂದಲೇ ಎದುರಿಸುವ ಸಿದ್ಧತೆ ನಡೆಸಿತು. 1868ರಿಂದೀಚೆಗೆ ಅನೇಕ ಸುಧಾರಣೆಗಳನ್ನು ಮಾಡಿ ಜಪಾನ್ ಆಧುನಿಕ ರಾಷ್ಟ್ರವಾಯಿತು. ಹೊಸದಾಗಿ ಸೃಷ್ಟಿಸಿದ ಈ ಬಲವನ್ನು 1894–95ರಲ್ಲಿ ಚೀನದ ವಿರುದ್ಧವಾಗಿಯೂ 1904–05ರಲ್ಲಿ ರಷ್ಯದ ವಿರುದ್ಧವಾಗಿಯೂ ಪ್ರಯೋಗಿಸಿ, ಆ ದೇಶಗಳನ್ನು ಸೋಲಿಸಿದ್ದು ಒಂದು ಮಹಾಸಾಧನೆ. ಪಾಶ್ಚಾತ್ಯರಂತೆ ಜಪಾನ್ ಸಹ ಏಷ್ಯದಲ್ಲಿ ವಸಾಹತುಗಳನ್ನು ಸ್ಥಾಪಿಸುವ ಪ್ರಯತ್ನ ನಡೆಸಿತು. ಮೇಲೆ ತಿಳಿಸಿದ ಎರಡು ಯುದ್ಧಗಳ ಪರಿಣಾಮವಾಗಿ ಫಾರ್ಮೋಸ, ಕೊರಿಯ ಮತ್ತು ಮಂಚೂರಿಯಗಳಲ್ಲಿ ಜಪಾನ್ ತನ್ನ ಪ್ರಭಾವ ಸ್ಥಾಪಿಸಿತು. 1945ರಲ್ಲಿ ಎರಡನೆಯ ಮಹಾಯುದ್ಧದಲ್ಲಿ ಸಂಪೂರ್ಣ ಸೋಲನ್ನು ಅನುಭವಿಸುವ ವರೆಗೂ ಜಪಾನಿನ ಈ ಕನಸಿಗೆ ತಡೆಯೇ ಇರಲಿಲ್ಲ.

ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕದಿಂದ ಏಷ್ಯನ್ ರಾಷ್ಟ್ರಗಳಲ್ಲಿ ಒಂದು ಜಾಗೃತಿಯುಂಟಾಯಿತು. ಜಪಾನ್ ರಷ್ಯದ ಮೇಲೆ ಗಳಿಸಿದ ವಿಜಯವೂ (1905) ಚೀನ ದೇಶದ ಕ್ರಾಂತಿಯೂ ಸುಧಾರಣಾ ಚಳವಳಿಯೂ (1911) ಪ್ರಪಂಚದ ಇತಿಹಾಸದಲ್ಲೇ ಮೊಟ್ಟಮೊದಲ ಬಾರಿಗೆ ಭಾರತದಲ್ಲಿ ನಡೆದ ಅಹಿಂಸಾತ್ಮಕ ಚಳವಳಿಯೂ ಏಷ್ಯದ ಇತರ ರಾಷ್ಟ್ರಗಳ ನಾಯಕರನ್ನು ಹುರಿದುಂಬಿಸಿದುವು. ರಷ್ಯದಲ್ಲಿ ಸಂಭವಿಸಿದ ಕ್ರಾಂತಿಯಿಂದ ಏಷ್ಯದ ರಾಷ್ಟ್ರಗಳ ಮೇಲೂ ಪರಿಣಾಮವಾಗದಿರಲಿಲ್ಲ.

ಎರಡನೆಯ ಮಹಾಯುದ್ಧದ ಪರಿಣಾಮವೂ ಅಲ್ಪವೇನಲ್ಲ. ಇದರಿಂದ ಪಾಶ್ಚಾತ್ಯ ಸಾಮ್ರಾಜ್ಯಶಾಹಿಗೆ ಬಲವಾದ ಪೆಟ್ಟು ಬಿತ್ತು. ಭಾರತದ ವಿಭಜನೆ ಮತ್ತು ಸ್ವಾತಂತ್ರ್ಯ ಸಂಪಾದನೆ, ಬರ್ಮ, ಮಲೆಯ, ಇಂಡೊನೇಷ್ಯ ಮುಂತಾದ ರಾಷ್ಟ್ರಗಳ ವಿಮೋಚನೆ, ಇಂಡೋ–ಚೀನ ಪ್ರದೇಶದ ರಾಜ್ಯಗಳಿಗೆ ಸ್ವಾತಂತ್ರ್ಯದಾನ, ಫಿಲಿಪೀನ್ಸಿನ ಬಿಡುಗಡೆ, ಚೀನದಲ್ಲಿ ಕಮ್ಯೂನಿಸ್ಟ್ ಪ್ರಭುತ್ವ ಸ್ಥಾಪನೆ, ವಿಯೆಟ್ನಾಂ ಕಲಹ, ಪಶ್ಚಿಮ ಏಷ್ಯದ ಅಸ್ಥಿರ ರಾಜಕೀಯ—ಇವು ಕೆಲವು ಮುಖ್ಯ ಘಟನೆಗಳು.

ಪಾಶ್ಚಾತ್ಯ ರಾಷ್ಟ್ರಗಳ ದಾಸ್ಯದಿಂದ ಬಿಡುಗಡೆಯಾದ ಮೇಲೆ ಏಷ್ಯದ ರಾಷ್ಟ್ರಗಳು ಆಧುನಿಕ ರೀತಿಯಲ್ಲಿ ಆರ್ಥಿಕ ಪ್ರಗತಿಯನ್ನು ಸಾಧಿಸಲು ಪ್ರಯತ್ನ ನಡೆಸಿದುವು. ಹಳೆಯ ಸಂಸ್ಕೃತಿಯನ್ನು ಸಂಪೂರ್ಣವಾಗಿ ಕೈಬಿಡದೆ, ಪಾಶ್ಚಾತ್ಯರಿಂದ ಕಲಿಯಬಹುದಾದ ಆಧುನಿಕ ಭಾವನೆಗಳನ್ನು ಕಲಿತು ಮುಂದುವರಿಯಲು ಏಷ್ಯ ಯತ್ನಿಸಿತು. ಆಧುನಿಕ ಏಷ್ಯದಲ್ಲಿ ಪೂರ್ವ–ಪಶ್ಚಿಮಗಳ ಸಂಗಮವನ್ನು ನೋಡಬಹುದಾಗಿದೆ. ಅಷ್ಟಾದರೂ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿಗಳು ರಾಜಕೀಯ ಬದಲಾವಣೆಯಷ್ಟೇ ವೇಗದಿಂದ ನಡೆಯುತ್ತಿಲ್ಲ. ಇದೊಂದು ಸಮಸ್ಯೆ. ಪಾಶ್ಚಾತ್ಯ ಪ್ರಜಾಪ್ರಭುತ್ವ, ಕಮ್ಯೂನಿಸ್ಟ್ ವ್ಯವಸ್ಥೆ ಇವುಗಳ ನಡುವೆ ಏಷ್ಯದ ರಾಷ್ಟ್ರಗಳು ಉಯ್ಯಾಲೆಯಾಡುತ್ತಿವೆ. ಸಾಮಾಜಿಕ ಆರ್ಥಿಕ ಕ್ಷೇತ್ರಗಳಲ್ಲಿ ಶೀಘ್ರವಾಗಿ ಮುಂದುವರಿಯಲಾಗದ ದೇಶಗಳು ಸರ್ವಾಧಿಕಾರಕ್ಕೂ ಎಡೆಗೊಡುತ್ತಿವೆ.

(ಎಸ್. ಕೆ. ಎಚ್.)

**ಏಷ್ಯದ ಪ್ರಾಗಿತಿಹಾಸ :** ವಿಶ್ವದಲ್ಲೇ ಬಲುದೊಡ್ಡದಾದ ಏಷ್ಯ ಖಂಡ ಆದಿಕಾಲದಿಂದಲೂ ವೈವಿಧ್ಯಗಳ ಆಗರವೆನಿಸಿದೆ. ಈ ವೈವಿಧ್ಯಗಳನ್ನು ಮಾನವನ ಉಗಮಕಾಲದಿಂದಲೇ ನೋಡಬಹುದು. ಪೂರ್ವಶಿಲಾಯುಗದ ಆರಂಭ ಕಾಲದಲ್ಲಿ ಮಾನವ ಆಫ್ರಿಕ ಪ್ರದೇಶಗಳಲ್ಲಿ ಉಗಮ ಹೊಂದಿ ತನ್ನ ಸಂಸ್ಕೃತಿ ಕಾರ್ಯವನ್ನು ಪ್ರಾರಂಭಿಸಿ ಕ್ರಮೇಣ ವಿಶ್ವದ ಇತರ ಭಾಗಗಳಿಗೆ ಪ್ರಸರಿಸಿದನೆಂಬುದು ಕೆಲವು ವಿದ್ವಾಂಸರ ನಂಬಿಕೆ. ಈ ವಿಷಯದಲ್ಲಿ ಖಚಿತವಾದ ಸಾಕ್ಷ್ಯಾಧಾರಗಳು ಇನ್ನೂ ದೊರಕಿಲ್ಲ. ಮಧ್ಯ ಪ್ಲಿಸ್ಟೊಸೀನ್ ಯುಗದ ವೇಳೆಗಾಗಲೇ ಏಷ್ಯದ ಹಲವು ಭಾಗಗಳಲ್ಲಿ ಮಾನವನಿದ್ದ ಬಗ್ಗೆ ಆಧಾರಗಳು ಸಿಕ್ಕಿವೆ. ಇಂಡೊನೇಷ್ಯದ ಜಾವಾದ್ವೀಪ ಮತ್ತು ಚೀನದ ರಾಜಧಾನಿ ಪೀಕಿಂಗ್ ಬಳಿಯ ಚೌಕಾಟಿಯನ್ ಗುಹೆಗಳಲ್ಲಿ ಪೂರ್ವಶಿಲಾಯುಗದ ಆದಿಕಾಲಕ್ಕೆ ಸೇರಿದ ಮಾನವನ ಜೀವಾವಶೇಷಗಳು (ಫಾಸಿಲ್ಸ್) ದೊರಕಿದ್ದು ಆತ ಏಷ್ಯದ ಕಪಿಮಾನವ (ಪಿಥೆಕಾಂಥ್ರೋಪಸ್ ಏಷ್ಯಾಟಿಕಸ್)



ಚೌಕಾಟಿಯೆನ್ ಗುಹೆಗಳ ವಾಸಿ—ಕಪಿಮಾನವ

ಸಂತತಿಗೆ ಸೇರಿದವನೆಂದು ತಿಳಿದುಬಂದಿದೆ. ಇಂಡೊನೇಷ್ಯದ ಪಜ್ಜಿಟೇನಿಯನ್, ಚೀನದ ಚೌಕಾಟಿಯನ್, ಮಲೆಯದ ತಂಪಾನಿಯನ್, ಬರ್ಮದ ಅನ್ಯಾಥಿಯನ್ ಮತ್ತು ವಾಯವ್ಯ ಭಾರತದ ಸೋಹನ್ ಸಂಸ್ಕೃತಿಗಳು ಉಂಡೆಕಲ್ಲಿನಿಂದ ಮಾಡಿದ ತುಂಡುಕೊಡಲಿ, ಒರೆಯುವ ಕತ್ತಿ ಮತ್ತು ಚಕ್ಕೆಕಲ್ಲಿನಾಯುಧಗಳಿಂದ ಕೂಡಿ ಒಂದೇ ರೀತಿಯವಾಗಿರುವುದರಿಂದ ಈ ಕಪಿಮಾನವನೇ ಈ ಸಂಸ್ಕೃತಿಗಳ ಕರ್ತೃವೆಂದು ಅಭಿಪ್ರಾಯ ಪಡಲಾಗಿದೆ. ಇದೇ ಕಾಲದಲ್ಲಿ ಭಾರತದ ಇತರ ಭಾಗಗಳಲ್ಲಿ (ಮುಖ್ಯವಾಗಿ ಮಧ್ಯ ಮತ್ತು ದಕ್ಷಿಣಭಾರತ) ಮತ್ತು ಪಶ್ಚಿಮ ಏಷ್ಯದ ಅನೇಕ ಭಾಗಗಳಲ್ಲಿ ಇದಕ್ಕಿಂತಲೂ ಮುಂದುವರಿದ ಕೈಗೊಡಲಿ ಸಂಸ್ಕೃತಿ ಹರಡಿತ್ತು. ಭಾರತ ಪರ್ಯಾಯದ್ವೀಪದ ನರ್ಮದ, ಗೋದಾವರಿ, ಕೃಷ್ಣ ಮತ್ತು ಪಾಲಾರ್ ನದೀ

ಕಣಿವೆಗಳಲ್ಲಿ ಅಬೆವಿಲಿಯನ್ ಮತ್ತು ಅಷುಲಿಯನ್ ಹಂತಗಳಿಗೆ ಸೇರಿದ ಕೈಗೊಡಲಿ ಸಂಸ್ಕೃತಿ ಬಹಳ ಪ್ರಬಲವಾಗಿತ್ತು. ಪಶ್ಚಿಮ ಏಷ್ಯದಲ್ಲಿ ಇತ್ತೀಚಿನ ಸಂಶೋಧನೆಗಳಿಂದ ಈ ಸಂಸ್ಕೃತಿಯ ವಿಷಯ ಸ್ವಲ್ಪಮಟ್ಟಿಗೆ ಬೆಳಕಿಗೆ ಬಂದಿದೆ. ಇರಾನಿನ



ಕೈಗೊಡಲಿಗಳು, ಭಾರತ

ಅನೇಕ ಪರ್ವತಗುಹೆ ಮತ್ತು ಮೈದಾನ ಪ್ರದೇಶಗಳಲ್ಲೂ ಮಧ್ಯ ಅರೇಬಿಯದ ಅಡ್‍ದಾವಾದಿಮಿ, ಇರಾಕಿನ ಬಾರ್ಡಾ ಬಲ್ಕಾ, ಜಾರ್ಡನಿನ ಬಯಿರ್‌ವೆಲ್ಸ್ ಬಳಿಯಲ್ಲೂ ವಿವಿಧ ಹಂತಗಳಿಗೆ ಸೇರಿದ ಕೈಗೊಡಲಿ ಮತ್ತು ಇತರ ಆಯುಧಗಳು ದೊರಕಿ, ಪೂರ್ವಶಿಲಾಯುಗದ ಮಾನವನ ಬಗೆಗೆ ಮಾಹಿತಿಗಳನ್ನು ಒದಗಿಸಿವೆ. ಪೂರ್ವ ಏಷ್ಯ ಪ್ರದೇಶಗಳಲ್ಲಿ ಮೇಲೆ ಹೇಳಿದ ಉಂಡೆಕಲ್ಲಿನಾಯುಧಗಳ ಸಂಸ್ಕೃತಿಗಳು ಪ್ಲಿಸ್ಟೊಸೀನ್ ಯುಗದ ಬಹುಭಾಗದ ವರೆಗೂ ಮುಂದುವರಿಯುತ್ತಿದ್ದು ಅಂತ್ಯಭಾಗದಲ್ಲಿ ಸ್ವಲ್ಪ ಮಟ್ಟಿಗೆ ಬದಲಾವಣೆ ಹೊಂದಿದಂತೆ ಕಾಣುತ್ತದೆ. ವಾಯವ್ಯ ಭಾರತದ ಸುಧಾರಿತ ಸೋಹನ್ ಸಂಸ್ಕೃತಿ ಮತ್ತು ಚೌಕಾಟಿಯನ್ ಮೇಲ್ಗುಹೆಯಲ್ಲಿನ ಅವಶೇಷಗಳು ಈ ಹಂತಕ್ಕೆ ಸೇರಿದವು. ಮೊದಲ ಕಾಲದ ತುಂಡು ಕೊಡಲಿ ಮತ್ತು ಒರೆಯುವ ಕತ್ತಿಗಳ ಬಳಕೆ ಅಲ್ಪಸ್ವಲ್ಪ ಮುಂದುವರಿದರೂ ಈ ಹಂತದಲ್ಲಿ ಚಕ್ಕೆಕಲ್ಲುಗಳಿಂದ ಮಾಡಿದ ಒರೆಯುವ ಆಯುಧ ಮತ್ತು ಮೊನೆಗಳೇ ಪ್ರಧಾನವಾಗಿದ್ದುವು. ಚೀನದ ಷಾನ್ಸಿ ಪ್ರಾಂತ್ಯದ ಟಿಂಗ್‍ತ್ಸುನ್ ನೆಲೆಯಲ್ಲೂ ಈ ರೀತಿಯ ಅವಶೇಷಗಳು ದೊರಕಿವೆ.



ಚೀನದ ನವಶಿಲಾಯುಗದ ಆಯುಧಗಳು

ಕೈಗೊಡಲಿ ಸಂಸ್ಕೃತಿಗಳು ಬಳಕೆಯಲ್ಲಿದ್ದ ದಕ್ಷಿಣ ಮತ್ತು ಪಶ್ಚಿಮ ಏಷ್ಯದ ಅನೇಕ ಪ್ರದೇಶಗಳಲ್ಲಿ ಆಯುಧ ತಯಾರಿಕೆ ವಿಧಾನಗಳಲ್ಲಿ ಪ್ರಗತಿ ಕಂಡುಬಂದದ್ದಲ್ಲದೆ ಕ್ರಮೇಣ ಕೈಗೊಡಲಿ ಸಂಸ್ಕೃತಿ ಮರೆಯಾಗಿ ಚಕ್ಕೆಕಲ್ಲಿನಾಯುಧಗಳು ಹೆಚ್ಚು ಬಳಕೆಗೆ ಬಂದುವು. ಭಾರತದ ಬಹುಭಾಗಗಳಲ್ಲಿ ಮಧ್ಯಶಿಲಾಯುಗ ಸಂಸ್ಕೃತಿಯೆಂದು ಹೆಸರಾಗಿರುವ ಈ ಸಂಸ್ಕೃತಿಯಲ್ಲಿ ಅಯ್ದು ಕಲ್ಲುಗಳಿಂದ ಮಾಡಿದ ಸಣ್ಣ ಗಾತ್ರದ ವಿವಿಧ ರೀತಿಯ ಒರೆಯುವ, ಕೊರೆಯುವ ಆಯುಧಗಳೂ ಮೊನೆಗಳೂ ಪ್ರಧಾನವಾಗಿವೆ. ಪಶ್ಚಿಮ ಏಷ್ಯ ಪೂರ್ವಶಿಲಾಯುಗ ಸಂಸ್ಕೃತಿಗೆ ಕೇಂದ್ರವಾದ ಯೂರೋಪಿನ ನೆರೆಯಲ್ಲಿದ್ದದ್ದರಿಂದ ಅಲ್ಲಿನ ಪ್ರಭಾವ ಹೆಚ್ಚಾಗಿದ್ದು ಅಲ್ಲಿನ ಮಧ್ಯಶಿಲಾಯುಗೀನ ಮೌಸ್ಟೀರಿಯನ್ ಮತ್ತು ಲೆವಾಲ್ವಾಸಿಯನ್ ಸಂಸ್ಕೃತಿಯ ರೀತಿಯ ಅವಶೇಷಗಳು ಉತ್ತರ ಅಫ್ಘಾನಿಸ್ತಾನದ ಬ್ಯಾಕ್ಟ್ರಿಯ ಪ್ರದೇಶದ ಬಾಲ್ಕ್ ಮತ್ತು ಹೈಬಕ್ ಪಟ್ಟಣಗಳ ಪರಿಸರದಲ್ಲೂ ಇರಾನಿನ ಕರ್ಮನ್ ಷಾ ಮತ್ತು ಇರಾಕಿನ ಕುರ್ಡಿಸ್ತಾನದಲ್ಲಿ ಹಲವೆಡೆಗಳಲ್ಲೂ ಸಿರಿಯ ಮತ್ತು ಪ್ಯಾಲೆಸ್ಟೈನಿನ ಹಲವಾರು ಪ್ರದೇಶಗಳಲ್ಲೂ ದೊರಕಿವೆ.



ಕಲ್ಲಿನ ಆಯುಧಗಳು, ಮೌಂಟ್ ಕಾರ್ಮೆಲ್

ಪಶ್ಚಿಮ ಏಷ್ಯ ಪೂರ್ವಶಿಲಾಯುಗದ ಅಂತ್ಯಭಾಗದಲ್ಲಿ ಮಾನವನ ಕಾರ್ಯರಂಗದ ಕೇಂದ್ರವಾಗಿತ್ತು. ಆಧುನಿಕ ಮಾನವ (ಹೋಮೋ ಸೇಪಿಯನ್) ಈ ಪ್ರದೇಶದಲ್ಲಿ ಉಗಮಿಸಿ ಕ್ರಮೇಣ ಯೂರೋಪಿಗೆ ಕೂರಲಗು ಆಯುಧಗಳ ಸಂಸ್ಕೃತಿಗಳೊಂದಿಗೆ ಪ್ರವೇಶಿಸಿ, ಅಲ್ಲಿನ ಪೂರ್ವಶಿಲಾಯುಗದ ಅಂತ್ಯಕಾಲೀನ ಸಂಸ್ಕೃತಿಗೂ ಅಭೂತಪೂರ್ವ ಕಲೆಗಳಿಗೂ ಕಾರಣಕರ್ತನಾದನೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆತ ಯೂರೋಪಿನಲ್ಲಿ ಸಾಧಿಸಿದಷ್ಟು ಪ್ರಗತಿಯನ್ನು ತನ್ನ ಉಗಮಸ್ಥಾನವಾದ ಪ್ಯಾಲೆಸ್ಟೈನಿನಲ್ಲಿ ಸಾಧಿಸದಿದ್ದರೂ ಪಶ್ಚಿಮ ಏಷ್ಯದ ಅನೇಕ ಪ್ರದೇಶಗಳಲ್ಲಿ ಇಂಥ ಸಂಸ್ಕೃತಿಗಳ ಅವಶೇಷಗಳನ್ನು ಉಳಿಸಿದ್ದಾನೆ. ಇರಾಕ್, ಪ್ಯಾಲೆಸ್ಟೈನ್, ಸಿರಿಯ ಮತ್ತು ಜಾರ್ಡನ್‍ಗಳಲ್ಲಿ ಈ ಅವಶೇಷಗಳು ದೊರಕಿವೆ.



ಚೌಕಾಟಿಯನ್ ಮೇಲ್ಗುಹೆಯಲ್ಲಿನ ಕಲ್ಲಿನಾಯುಧಗಳು

**ಮಧ್ಯಶಿಲಾಯುಗ :** ಮಧ್ಯಶಿಲಾಯುಗಕ್ಕೆ ಸೇರಿದ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳು ಸಹ ಪಶ್ಚಿಮ ಏಷ್ಯದಲ್ಲಿ ವಿಶೇಷವಾಗಿ ನೆಲಸಿದ್ದುವು. ಜಾರ್ಡನಿನ ಆಗ್ನೇಯ ಭಾಗಗಳಲ್ಲಿ ಅಂತ್ಯಪೂರ್ವಶಿಲಾಯುಗದಿಂದ ಕ್ರಮೇಣ ಬದಲಾಗುತ್ತ ಮಧ್ಯಶಿಲಾಯುಗೀನ ಸಂಸ್ಕೃತಿರೂಪಕ್ಕೆ ಪರಿವರ್ತನೆಗೊಳ್ಳುತ್ತಿರುವ ಹಂತದ ಅವಶೇಷಗಳು ಕಂಡುಬಂದಿವೆ. ಪ್ಯಾಲೆಸ್ಟೈನಿನ ಮೌಂಟ್ ಕಾರ್ಮೆಲಿನ ವಾಡಿ–ಎಲ್–ನಟೂಫ್ ಗುಹೆಗಳಲ್ಲಿನ ಸೂಕ್ಷ್ಮಶಿಲಾಯುಧದ ನಟೂಫಿಯನ್ ಸಂಸ್ಕೃತಿ ಬಹಳ ಪ್ರಸಿದ್ಧವಾದದ್ದು. ಇದು ಯೂರೋಪಿನ ಸಮಕಾಲೀನ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳನ್ನು ಹೋಲುತ್ತಿದ್ದರೂ ಕ್ರಮೇಣ ಮಾನವನ ಸಂಸ್ಕೃತಿಯ ಪ್ರಗತಿಯಲ್ಲಿ ಪ್ರಧಾನ ಹಂತವಾದ ಆಹಾರೋತ್ಪಾದನೆಗೆ ಕಾರಣವಾದ ನವಶಿಲಾಯುಗ ಕ್ರಾಂತಿಗೆ ಈ ನಟೂಫಿಯನ್ ಸಂಸ್ಕೃತಿಯೇ ಮೂಲಾಧಾರವೆಂದು

ಪ್ರಾಕ್ತನಶಾಸ್ತ್ರಜ್ಞರು ಸಾಧಿಸಿದ್ದಾರೆ. ಈ ಜನ ಮೊದಲ ಹಂತದ ವ್ಯವಸಾಯೋದ್ಯಮ ಮತ್ತು ಪಶುಪಾಲನೆಯನ್ನು ರೂಢಿಗೆ ತಂದವರೆಂಬುದನ್ನು ಇವರು ಉಪಯೋಗಿಸುತ್ತಿದ್ದ ಅಲಂಕೃತ ಕುಡುಗೋಲು ಮತ್ತು ಅರೆಯುವ ಕಲ್ಲುಗಳು ವ್ಯಕ್ತಪಡಿಸುತ್ತವೆ. ಇವರು ಪರ್ವತಗುಹೆಗಳಿಂದ ಕ್ರಮೇಣ ಮೈದಾನ ಪ್ರದೇಶಗಳಿಗೆ ವಲಸೆ ಬರುತ್ತಿದ್ದರೆಂಬುದು ಸ್ವಲ್ಪ ಅನಂತರದ ಕಾಲದ ಜರ್ ಮಲ್ಲಹಾ ನೆಲೆಯಿಂದ ಸಿದ್ಧಪಡುತ್ತದೆ. ಮುಂದಿನ ಹಂತವನ್ನು ರೂಪಿಸುವ ಜೆರಿಕೋ ನೆಲೆಯ ಕೆಳಗಿನ ಪದರಗಳ ಸಂಸ್ಕೃತಿಯೊಂದಿಗೆ ಸಂಪರ್ಕವಿತ್ತೆಂಬುದನ್ನೂ ಇದು ಸೂಚಿಸುತ್ತದೆ. ಸಿರಿಯ, ಇರಾಕಿನ ಹಜರ್‌ಮದ್ ಮತ್ತು ಷನಿದಾರ್ ಗುಹೆಗಳು, ಜರ್ಜಿ ಮತ್ತು ಪಲೇಗಾವ್ರಾ ನೆಲೆಗಳು, ಇರಾನಿನ ಕರ್ಮನ್‌ಕ್ಷಾ ಬಳಿಯ ಟಿಪೆ ಅಸಿಯಾಬ್, ಆಫ್ಘಾನಿಸ್ತಾನದ ಕಾರಾ ಕಾಮರ್ ಮುಂತಾದೆಡೆಗಳಲ್ಲೂ ಸಮಕಾಲೀನ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳ ಅವಶೇಷಗಳು ದೊರಕಿವೆ.


ಜಾವದ ಕಲ್ಲಿನ ಆಯುಧಗಳು

ಭಾರತದಲ್ಲಿ ಮಧ್ಯಶಿಲಾಯುಗಕ್ಕೆ ಸೇರುವ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳ ಅವಶೇಷಗಳು ಹಲವಾರೆಡೆಗಳಲ್ಲಿ ಸಿಕ್ಕಿವೆ. ದಕ್ಷಿಣದಲ್ಲಿ ತಿರುನೆಲ್ವೇಲಿ ಜಿಲ್ಲೆಯಲ್ಲಿರುವ ಸಾಯರ್‌ಪುರಂ ಮುಂತಾದ ತೇರಿನೆಲೆಗಳಲ್ಲೂ ದಾಮೋದರ್ ನದೀಕಣಿವೆಯಲ್ಲಿರುವ ಬೀರ್‌ಭಾನ್ಪುರದ ಬಳಿಯೂ ಸಿಂಗ್ರೌಲಿ ನದೀಕಣಿವೆಯಲ್ಲಿ ವಿಂಧ್ಯ ಪರ್ವತದ ಪಚ್‌ಮಾರಿ ಮುಂತಾದ ಪ್ರದೇಶದಲ್ಲೂ ಬೊಂಬಾಯಿ ಬಳಿಯ ಖಾಂಡಿವ್ಲಿ ಮತ್ತು ಬೋರಿವ್ಲಿ ಬಳಿಯೂ ದೊರಕಿರುವ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳ ಅವಶೇಷಗಳು ಕ್ರಿ.ಪೂ. 4–5ನೆಯ ಸಹಸ್ರಮಾನಗಳಿಗೋ ಇನ್ನೂ ಮೊದಲ ಕಾಲಕ್ಕೋ ನಿರ್ದೇಶಿತವಾದರೆ ಇತರೆಡೆಗಳಲ್ಲಿನ ಆ ಸಂಸ್ಕೃತಿಯ ಮಾಹಿತಿಗಳು ಅನಂತರದ ಕಾಲಕ್ಕೆ ಸೇರುತ್ತವೆ. ಗುಜರಾತಿನ ಲಂಘನಾಜ್, ಹೀರ್‌ಪುರ, ಪಾಕಿಸ್ತಾನದ ಸುಕ್ಕೂರ್ ಮತ್ತು ರೋಹ್ರಿಗಳಲ್ಲಿ ಈ ಹಂತದಿಂದ ಕ್ರಮೇಣ ಆಹಾರೋತ್ಪಾದನೆಯ ಹಂತವನ್ನು ತಲಪುತ್ತಿರುವ ಮಾಹಿತಿಗಳೂ ಕಂಡುಬಂದಿವೆ.


ಚೀನದ ಕಲ್ಲಿನ ಆಯುಧಗಳು, ಅಂತ್ಯಪೂರ್ವಶಿಲಾಯುಗ

ಸಮಕಾಲೀನ ಚೀನದಲ್ಲಿ ಮಧ್ಯಶಿಲಾಯುಗ ಸಂಸ್ಕೃತಿಗಳ ರೂಪ ಬೇರೆಯಾಗಿಯೇ ಕಂಡುಬಂದಿದೆ. ಪ್ಲಿಸ್ಟೊಸೀನ್ ಯುಗದ ಅಂತ್ಯಭಾಗದಲ್ಲಿ ಬಳಕೆಗೆ ಬಂದ ಆರ್ಡಾಸ್ ಸಂಸ್ಕೃತಿ ಹಳದಿ ನದಿಯ ತಿರುವಿನಲ್ಲಿರುವ ಆರ್ಡಾಸ್ ಹುಲ್ಲುಗಾವಲು ಪ್ರದೇಶದ ದಕ್ಷಿಣದಂಚಿನಲ್ಲಿ ಕಂಡುಬಂದಿದೆ. ಸಮಕಾಲೀನ ಮಾನವ ಅವಶೇಷಗಳು ಈವರೆಗೂ ದೊರಕಿಲ್ಲ. ಷು ಇ ಟುಂಗ್ ಕಾ ಎಂಬ ನೆಲೆಯಲ್ಲಿ ಬೂದಿಯೊಡಗೂಡಿದ ಬಿದು ಒಲೆಗಳೂ ಹೇರಳವಾಗಿ ಕಲ್ಲಿನಾಯುಧಗಳೂ ದೊರಕಿವೆ. ಒರೆಯುವ, ಕೊರೆಯುವ ಆಯುಧಗಳೂ ಮೊನೆಗಳೂ ವಿಶೇಷವಾಗಿರುವ ಈ ಸಂಸ್ಕೃತಿಯನ್ನು ಪ್ಲಿಸ್ಟೊಸೀನ್ ಯುಗದ ಅಂತ್ಯಭಾಗಕ್ಕೆ ನಿರ್ದೇಶಿಸಲಾಗಿದ್ದರೂ ಮಧ್ಯಶಿಲಾಯುಗ ಸಂಸ್ಕೃತಿಗಳ ಹಲವಂಶಗಳು ಇಲ್ಲಿ ಕಂಡುಬಂದು ಇವು ಮುಂದಿನ ಹಂತವನ್ನು ಸೂಚಿಸುವುವೆಂದು ಹೇಳಬಹುದಾಗಿದೆ. ಅನಂತರದ ಕಾಲದಲ್ಲಿ ಯೂರೋಪಿನ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳಿಗೆ ಹೋಲಿಸಬಹುದಾದ ಸಂಸ್ಕೃತಿಗಳ ಅವಶೇಷಗಳು ವಿಶೇಷವಾಗಿಲ್ಲದಿದ್ದರೂ ದಕ್ಷಿಣದ ಕ್ವಾಂಗ್ಸಿ ಪ್ರದೇಶದ ಗುಹೆಯಲ್ಲಿನ ಅವಶೇಷಗಳು ವಿಯೆಟ್ನಾಮಿನ ಬ್ಯಾಕ್ಸನ್ ಸಂಸ್ಕೃತಿಯನ್ನು ಹೋಲುತ್ತವೆ. ಉತ್ತರದಲ್ಲಿ ಮಂಗೋಲಿಯ, ಮಂಚೂರಿಯ ಪ್ರದೇಶಗಳಲ್ಲಿ ಹವಾಗುಣದ ಬದಲಾವಣೆಯಿಂದ ಆಹಾರ ಸಂಗ್ರಹಣೆ ಮತ್ತು ಬೇಟೆಯ ಮೇಲೆ ಆಧಾರಿತವಾಗಿದ್ದ ಸಂಸ್ಕೃತಿಗಳು ಕ್ರಮೇಣ ಪರಿವರ್ತನೆಗೊಂಡು ಜನ್ಮತಳೆದ ಪ್ರಾರಂಭದೆಶೆಯ ವ್ಯವಸಾಯ ಸಂಸ್ಕೃತಿಗಳ ಅವಶೇಷಗಳು ಅನೇಕ ನೆಲೆಗಳಲ್ಲಿ ಕಂಡುಬರುತ್ತವೆ. ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳನ್ನು ಹೋಲುವ ಈ ಅವಶೇಷಗಳು ಗೋಬಿ ಮರುಭೂಮಿ, ಮಂಚೂರಿಯ ಮತ್ತು ಆರ್ಡಾಸ್ ಪ್ರಾಂತ್ಯಗಳಲ್ಲಿ ವಿಶೇಷ; ಈ ಸಂಸ್ಕೃತಿಯ ಮುಖ್ಯ ನೆಲೆ ಷಬರಕ್-ಉಸು. ಪೂರ್ವ ಷೆನ್ಸಿ ಪ್ರಾಂತ್ಯದಲ್ಲಿ ಮಧ್ಯಶಿಲಾಯುಗದ ಅಂತ್ಯ–ನವಶಿಲಾಯುಗ ಪ್ರಾರಂಭಕಾಲಗಳಿಗೆ ಸೇರುವ ಸಂಸ್ಕೃತಿಯ ಅವಶೇಷಗಳು 15 ಮರಳು ದಿಬ್ಬಗಳ ಮೇಲೆ ಕಂಡುಬಂದಿದೆ. ಷ–ಯುವಾನ್ ಸಂಸ್ಕೃತಿಯೆಂದು ಇದರ ಹೆಸರು. ಇದು ಗೋಬಿ ಸಂಸ್ಕೃತಿಯ ದಕ್ಷಿಣದ ಎಲ್ಲೆಯನ್ನು ಸೂಚಿಸುತ್ತದೆಂದು ಹೇಳಬಹುದು.


ಉಂಡೆಕಲ್ಲಿನಾಯುಧಗಳು

ದಕ್ಷಿಣ ಚೀನ, ಇಂಡೋ–ಚೀನ ಮತ್ತು ಇಂಡೊನೇಷ್ಯ ಪ್ರದೇಶಗಳಲ್ಲಿ ಈ ಕಾಲದ ಸಂಸ್ಕೃತಿಗಳ ರೂಪರೇಷೆಗಳು ಸಾಕಷ್ಟು ವಿಶದವಾಗಿಲ್ಲ. ಈ ಪ್ರದೇಶಗಳ ಪ್ರಮುಖ ಕಾಣಿಕೆಯೆಂದರೆ ಆಗ್ನೇಯ ಏಷ್ಯ ಮತ್ತು ಶಾಂತಿಸಾಗರದ ದ್ವೀಪಸ್ತೋಮಗಳಲ್ಲಿ ತಮ್ಮ ಸಂಸ್ಕೃತಿಯ ಪ್ರಸಾರ. ಬಹುಶಃ ಏಷ್ಯದಲ್ಲಿ ಬತ್ತದ ವ್ಯವಸಾಯ ಕಲೆಯನ್ನು ಹರಡಿದುದಕ್ಕೆ ಇವೇ ಕಾರಣ. ಇದು ಚೀನದ ಲುಂಗ್‌ಷಾನ್ ಸಂಸ್ಕೃತಿಯ ಕೊಡುಗೆಯಾಗಿರಬಹುದು. ಈ ಪ್ರದೇಶಗಳಲ್ಲಿ ಆಗ ಹರಡಿದ್ದ ಬ್ಯಾಕ್ಸನ್ ಅಥವಾ ಹೋಬಿನ್ಹಿಯನ್ ಸಂಸ್ಕೃತಿಯಲ್ಲಿ ಮುಖ್ಯ ಆಯುಧ ಪೂರ್ವಶಿಲಾಯುಗ ಕಾಲದಿಂದಲೂ ಬಳಕೆಯಲ್ಲಿದ್ದ ತುಂಡು ಕೊಡಲಿ. ಇದಲ್ಲದೆ ಅನೇಕ ಚಕ್ಕೆಕಲ್ಲಿನಾಯುಧಗಳೂ ಬಳಕೆಯಲ್ಲಿದ್ದುವು. ಷೆಜ್ವಾನ್, ಕ್ವಾಂಗ್ಸಿ, ವಿಯೆಟ್‌ನಾಮ್, ಥೈಲೆಂಡ್, ಮಲೆಯ ಮತ್ತು ಇಂಡೊನೇಷ್ಯಗಳಲ್ಲಿ ಹಬ್ಬಿದ್ದ ಈ ಸಂಸ್ಕೃತಿಯ ಜನ ಗುಹೆಗಳಲ್ಲಿ ವಾಸಿಸುತ್ತಿದ್ದು ಕಾಡುಹಂದಿ, ಜಿಂಕೆ, ಪಶುಗಳು, ಆಮೆ ಮುಂತಾದ ಪ್ರಾಣಿಗಳನ್ನು ತಿನ್ನುತ್ತಿದ್ದರು. ವಿವಿಧ ರೀತಿಯ ಜಲಚರಗಳೂ ಇವರ ಆಹಾರ. ಅರೆಯುವ ಕಲ್ಲುಗಳು ದೊರಕಿರುವುದರಿಂದ ಸಸ್ಯಾಹಾರಿಗಳೂ ಆಗಿದ್ದರೆಂದು ಹೇಳಬಹುದು. ಕ್ರಮೇಣ ಈ ಜನ ನವಶಿಲಾಯುಗ ಸಂಸ್ಕೃತಿಗಳನ್ನಳವಡಿಸಿಕೊಂಡು, ನಯಮಾಡಿದ ಕಲ್ಲಿನಾಯುಧ ಮತ್ತು ಮಡಕೆಗಳನ್ನುಪಯೋಗಿಸುತ್ತಿದ್ದುದಲ್ಲದೆ ವ್ಯವಸಾಯೋಪಜೀವಿಗಳೂ ಆದರೆಂಬುದಕ್ಕೆ ಮಾಹಿತಿಗಳು ಕೆಲವಾರು ನೆಲೆಗಳಲ್ಲಿ ದೊರಕಿವೆ. ಆಗ್ನೇಯ ಏಷ್ಯದ ದ್ವೀಪಗಳಲ್ಲಿ ಸೂಕ್ಷ್ಮಶಿಲಾಯುಧಗಳು ಪ್ರಮುಖವಾಗಿರುವ ಹಲವಾರು ನೆಲೆಗಳು ಬೆಳಕಿಗೆ ಬಂದಿವೆ. ಬೇಟೆಯನ್ನು ಮುಖ್ಯ ಕಸುಬಾಗಿ ಹೊಂದಿದ್ದು ಗುಹೆಗಳಲ್ಲಿ ವಾಸಿಸುತ್ತಿದ್ದ ಈ ಜನ ಏಷ್ಯದ ಮುಖ್ಯ ಭೂಭಾಗದ ಸಂಸ್ಕೃತಿಗಳೊಂದಿಗೆ ಯಾವ ರೀತಿಯ ಸಂಪರ್ಕ ಹೊಂದಿದ್ದರೆಂಬುದನ್ನು ನಿರ್ಧಾರವಾಗಿ ಹೇಳಲಾಗಿಲ್ಲ. ಸುಮಾತ್ರದ ಜಾಂಬಿ ಜಿಲ್ಲೆಯ ಗುಹೆಗಳಲ್ಲೂ ಜಾವದ ಬ್ಯಾಂಡಿಯೊಂಗ್ ಬಳಿಯ ಸರೋವರ ತೀರದಲ್ಲೂ ಫಿಲಿಪೀನ್ಸ್ ಲುಜ಼ೋನ್ ಜಿಲ್ಲೆಯಲ್ಲೂ

ಅಬ್ಸಿಡಿಯನಿನಿಂದ ಮಾಡಿದ ಸೂಕ್ಷ್ಮವಾದ ಆಯುಧಗಳು ದೊರಕಿವೆ. ಸಿಲೆಬಸ್ ದ್ವೀಪದ ನೈಋತ್ಯಭಾಗದಲ್ಲಿನ ಗುಹೆಗಳಲ್ಲಿ ಈ ಗುಂಪಿಗೆ ಸೇರಿದ ಅವಶೇಷಗಳು ಪ್ರಾಣಿಗಳ ಅವಶೇಷಗಳೊಂದಿಗೆ ಸಿಕ್ಕಿವೆ. ನಾಯಿಯನ್ನುಳಿದು ಇಲ್ಲಿ ದೊರಕಿದ ಇತರ ಪ್ರಾಣಿಗಳ ಅವಶೇಷಗಳು ಸಾಕುಪ್ರಾಣಿಗಳ ವರ್ಗಕ್ಕೆ ಸೇರದಿರುವುದರಿಂದ ಬೇಟೆ ಈ ಜನರ ಮುಖ್ಯ ಕಸುಬಾಗಿದ್ದಿತೆಂದು ತಿಳಿದುಬರುತ್ತದೆ. ಈ ಸಂಸ್ಕೃತಿಗಳು ಇಂಡೋನೇಷ್ಯ ಸಂಸ್ಕೃತಿಗಳಿಂದ ಹುಟ್ಟಿದವೋ ಅಥವಾ ಉತ್ತರ ಚೀನ ಪ್ರಾಂತ್ಯದಿಂದ ಹುಟ್ಟಿದವೋ ಎಂಬುದು ಸಮಸ್ಯೆಯಾಗೇ ಉಳಿದಿದೆ.

**ನವಶಿಲಾಯುಗ :** ನವಶಿಲಾಯುಗ ಕಾಲದಲ್ಲಿ ಪಶ್ಚಿಮ ಏಷ್ಯ ಬಹಳ ಪ್ರಧಾನಪಾತ್ರ ವಹಿಸಿತ್ತು. ಈ ಮೊದಲೇ ತಿಳಿಸಿರುವಂತೆ ಪ್ಯಾಲೆಸ್ಟೈನ್ ಮತ್ತು ಸಿರಿಯದ ಕೆಲಭಾಗಗಳಲ್ಲಿ ಮಧ್ಯಶಿಲಾಯುಗದ ನಟೂಫಿಯನ್ನರು ಬೆಟ್ಟಗುಡ್ಡ ಪ್ರದೇಶಗಳಿಂದ ಮೈದಾನ ಪ್ರದೇಶಗಳಿಗೆ ಇಳಿದುಬಂದು ಕ್ರಮೇಣ ಆಹಾರೋತ್ಪಾದನೆಯ ಚಟುವಟಿಕೆಗಳಲ್ಲಿ ತೊಡಗಲಾರಂಭಿಸಿದ್ದರು. ಪ್ಯಾಲೆಸ್ಟೈನಿನ ಮೌಂಟ್ ಕಾರ್ಮೆಲ್ ಗುಹೆಗಳು, ಐನ್ ಮಲ್ಲಹಾ, ಜೆರಿಕೊ, ಜಾರ್ಡನಿನ ಸೆಯ್ಲ್–ಅಕ್ಲಟ್, ಇರಾಕಿನ ಜಾ ವಿ ಷೆಮಿ, ಷನಿದಾರ್, ಕರೀಮ್ ಷಾಹಿರ್, ಮ್ಲಾಫಾತ್ ಮುಂತಾದ ನೆಲೆಗಳು ನವಶಿಲಾಯುಗದ ಕ್ರಾಂತಿಯ ವಿವಿಧ ಹಂತಗಳನ್ನು ಕ್ರಮಾಗತವಾಗಿ ನಿರೂಪಿಸುತ್ತವೆ. ಕ್ರಿ.ಪೂ. 9ನೆಯ ಸಹಸ್ರಮಾನಕ್ಕೆ ನಿರ್ದೇಶಿತವಾಗುವ ಈ ನೆಲೆಗಳ ಮೊದಲ ಹಂತದಲ್ಲಿ ನಯಮಾಡಿದ ಕಲ್ಲಿನ ಕೊಡಲಿಗಳೂ ಅಗೆಯುವ ಕೋಲಿನ ಭಾರದ ಗುಂಡುಗಳೂ ಅರೆಯುವ ಕಲ್ಲುಗಳೂ ಒರಟಾಗಿ ಕಟ್ಟಿದ ಗುಡಿಸಲ ಅವಶೇಷಗಳೂ ಸಾಕುಪ್ರಾಣಿಗಳಾದ ಆಡು, ಕುರಿ ಮತ್ತು ದನಗಳ ಅವಶೇಷಗಳೂ ದೊರಕಿ, ವ್ಯವಸಾಯ, ಮಾನವನ ಸ್ಥಿರವಸತಿ ಮತ್ತು ಪಶುಸಂಗೋಪನೆಗಳು ಜನರ ಮುಖ್ಯ ಚಟುವಟಿಕೆಗಳಾಗಿದ್ದುವೆಂಬುದನ್ನು ತಿಳಿಸುತ್ತವೆ. ಈ ಜನ 200ಕ್ಕೂ ಮಿಗಿಲಾದ ಮನೆಗಳಿದ್ದ ತಮ್ಮ ಗ್ರಾಮವನ್ನು ರಕ್ಷಿಸಲು ಕೋಟೆ ಕಂದಕಗಳನ್ನು ನಿರ್ಮಿಸಿಕೊಂಡಿದ್ದರೆಂಬುದು ಜೆರಿಕೋ ನೆಲೆಯಲ್ಲಿ ದೊರಕಿದ ಮಾಹಿತಿಗಳಿಂದ ತಿಳಿದುಬರುತ್ತದೆ. ಇವರು ಕೆಲಕಾಲದಲ್ಲೆ ಮಡಕೆ ಕುಡಿಕೆಗಳನ್ನು ಉಪಯೋಗಿಸಲಾರಂಭಿಸಿದರು. ಸಮಕಾಲೀನ ಸಂಸ್ಕೃತಿಗಳು ಇರಾಕೀ ಕುರ್ಡಿಸ್ತಾನದ ಜಾರ್ಮೋ ನೆಲೆಯಲ್ಲೂ ಕಂಡುಬಂದಿವೆ. ಮೊದಲಿಗೆ ಮಣ್ಣಿನ ಪಾತ್ರೆಗಳು ಬಳಕೆಯಲ್ಲಿರಲಿಲ್ಲ. ಇವರ ಆಯುಧೋಪಕರಣಗಳು ಕಲಾಕುಶಲತೆಯಿಂದ ಕೂಡಿದ್ದುವು. ಇವರ ಮತೀಯ ಮತ್ತು ಸಾಮಾಜಿಕ ಪ್ರಗತಿಯ ಬಗೆಗೂ ಆಧಾರಗಳು ದೊರಕಿವೆ. ಜೆರಿಕೋ ಸಂಸ್ಕೃತಿಗಿಂತಲೂ ಸ್ವಲ್ಪ ಈಚಿನದಾದ ಈ ಸಂಸ್ಕೃತಿಯ ಕಾಲ ಕ್ರಿ.ಪೂ. 6750. ಇದರ ಮುಂದಿನ ಹಂತವಾದ ಸುಧಾರಿತ ನವಶಿಲಾಯುಧ ಸಂಸ್ಕೃತಿಯ ಚಿಹ್ನೆಗಳು ಇರಾಕಿನ ಹಸುನಾ, ಮಟಾರ್ರಾ, ನಿನಿವ್ಹೆ ಮುಂತಾದ ನೆಲೆಗಳಲ್ಲೂ ಪ್ಯಾಲೆಸ್ಟೈನ್, ಸಿರಿಯ, ಜಾರ್ಡನ್ ಪ್ರದೇಶಗಳ ಹಲವಾರು ನೆಲೆಗಳಲ್ಲೂ ಇರಾನಿನ ಟಿಪೆಸರಬ್‌ನಲ್ಲೂ ಅದರ ಮುಂದಿನ ಹಂತ ಸಿಯಾಲ್ಕ್, ಚಷ್ಮಾಆಲಿ, ಅನೌ ಮುಂತಾದ ನೆಲೆಗಳಲ್ಲೂ ಆಫ್ಘಾನಿಸ್ತಾನದ ಮುಂಡೀಗಕ್ ನೆಲೆಯಲ್ಲೂ ಕಂಡುಬಂದಿವೆ. ಪಶ್ಚಿಮ ಏಷ್ಯದಲ್ಲಿ ಮಾನವನ ಸಂಸ್ಕೃತಿಯ ಪ್ರಗತಿಯ ಚಿತ್ರ ಪಡೆಯಲು ಇವೆಲ್ಲ ಸಹಾಯಕ.





ಉಂಡೆಕಲ್ಲಿನಾಯುಧಗಳ ಮತ್ತೊಂದು ಜೋಡಿ

ಮುಂದಿನ ಹಂತವಾದ ಇರಾಕಿನ ಹಲಾಫ್ ಸಂಸ್ಕೃತಿಯ ಕಾಲದಲ್ಲಿ ನವಶಿಲಾಯುಗದ ಸಂಸ್ಕೃತಿಯೇ ಪ್ರಮುಖವಾಗಿದ್ದರೂ ಮೊತ್ತ ಮೊದಲಿಗೆ ತಾಮ್ರದ ಪರಿಚಯವಾದದ್ದು ಆಗಲೇ. ಆ ವರೆಗೂ ಸಂಸ್ಕೃತಿಯ ಪ್ರಗತಿ ಸಾಧನೆಯಲ್ಲಿ ಅಗ್ರಗಣ್ಯವಾಗಿದ್ದ ಈ ಪ್ರದೇಶಕ್ಕೆ ಹೊರಗಿನ ಪ್ರದೇಶಗಳಿಂದ ಮೊತ್ತಮೊದಲಿಗೆ ಮಾರ್ಗದರ್ಶನ (ಕೆಲವಿಷಯಗಳಲ್ಲಿ ಮಾತ್ರ) ದೊರಕಿತೆಂದು ಹೇಳಬಹುದು. ತಾಮ್ರದ ಉಪಯೋಗ ಮತ್ತು ತಯಾರಿಕೆಯ ವಿಧಾನಗಳು ಮೊದಲಿಗೆ ಉತ್ತರ ಇರಾನಿನಲ್ಲಿ ಕಂಡುಹಿಡಿಯಲಾಗಿದ್ದು ಕ್ರಮೇಣ ಇವನ್ನು ಇರಾಕಿಗೆ ತರಲಾಯಿತೆಂದು ತಿಳಿದುಬರುತ್ತದೆ. ಆ ವರೆವಿಗೂ ಉತ್ತರ ಇರಾಕಿನಲ್ಲಿ ಮಾತ್ರ ಜನವಸತಿಯಿತ್ತು. ದಕ್ಷಿಣಭಾಗವಾಗ ಜೌಗುಪ್ರದೇಶ. ಆದರೆ ಆ ಕಾಲದಲ್ಲಿ ಪ್ರಾರಂಭವಾದ ಉಬೇದ್ ಸಂಸ್ಕೃತಿ ದಕ್ಷಿಣಭಾಗಕ್ಕೂ ಮೊದಲ ಬಾರಿಗೆ ಪ್ರಸರಿಸಿ ಅಲ್ಲಿನ ಫಲವತ್ತಾದ ಮೆಕ್ಕಲು ಮಣ್ಣಿನ ಪ್ರದೇಶಗಳಲ್ಲಿ ಸಂಪದ್ಯುಕ್ತ ವ್ಯವಸಾಯ ಪದ್ಧತಿಯನ್ನು ಸ್ಥಾಪಿಸಿದ್ದಲ್ಲದೆ ನಾಗರಿಕಜೀವನದ ಬುನಾದಿ ಹಾಕಿತು. ಈ ತಾಮ್ರಶಿಲಾಯುಗೀನ ಸಂಸ್ಕೃತಿಗಳು ಇರಾಕಿನಲ್ಲಿ ಪ್ರಾರಂಭವಾಗಿ ಕಾಲಕ್ರಮೇಣ ನೆರೆಹೊರೆಯ ಪ್ರದೇಶಗಳಾದ ಸಿರಿಯ, ಪ್ಯಾಲೆಸ್ಟೈನ್, ಜಾರ್ಡನ್ ಪ್ರದೇಶಗಳಿಗೂ ಹರಡಿತು. ಇರಾನಿನ ಉತ್ತರ ಭಾಗದಲ್ಲಿ ಸೂಸ ಮುಂತಾದ ನೆಲೆಗಳಲ್ಲಿ ಪ್ರಗತಿದಾಯಕ ಸಂಸ್ಕೃತಿಗಳು ನೆಲೆಗೊಂಡುವು. ಸುಮಾರು ಇದೇ ಸಮಯದಲ್ಲಿ ಇರಾಕ್ ಮತ್ತು ಇರಾನ್‌ಗಳಲ್ಲಿ ಚಿತ್ರಲಿಪಿ ಬಳಕೆಗೆ ಬಂತು. ನೆರೆಯ ಪ್ರದೇಶಗಳೊಡನೆ ವಾಣಿಜ್ಯವೂ ಬೆಳೆದು, ಸಂಪದ್ಯುಕ್ತ ನಾಗರಿಕ ಜೀವನ ತ್ವರಿತಗತಿಯಲ್ಲಿ ಬೆಳೆಯಿತು. ಮುಂದಿನ ಹಂತಗಳಾದ ಉರೂಕ್ ಮತ್ತು ಜೆಂಡೆಟ್‌ನಾಸರ್ ಸಂಸ್ಕೃತಿಗಳ ಕಾಲದಲ್ಲಿ ಹೆಚ್ಚು ಪ್ರಗತಿ ಆಯಿತು. ನೀರಾವರಿ ವ್ಯವಸಾಯ, ಬರೆವಣಿಗೆಯ ಉಪಯೋಗ ಮತ್ತು ಇಟ್ಟಿಗೆಯ ಕಟ್ಟಡ—ಇವು ಹೆಚ್ಚಾಗಿ ಬಳಕೆಗೆ ಬಂದು ಕೊನೆಗೆ ಸುವ್ಯವಸ್ಥಿತ ರಾಜ್ಯಪದ್ಧತಿಗಳು ಸ್ಥಾಪಿತವಾದುವು. ಐತಿಹಾಸಿಕ ಯುಗದ ಸುಮೇರಿಯನ್ ಸಂಸ್ಕೃತಿ ಪ್ರಾರಂಭವಾದದ್ದು ಆಗಲೇ. ಸಿರಿಯ, ಪ್ಯಾಲೆಸ್ಟೈನ್ ಮತ್ತು ಇರಾನ್‌ಗಳಲ್ಲಿ ಇಷ್ಟು ಬೇಗ ಐತಿಹಾಸಿಕ ಯುಗ ಪ್ರಾರಂಭವಾಗಿದ್ದರೂ ಕ್ರಮೇಣ ಇರಾಕಿನ ಸುಮೇರಿಯನ್ ನಾಗರಿಕತೆಯ ಪ್ರಭಾವದಿಂದ ನಾಗರಿಕತೆ ಹರಡಿತು. ಭಾರತದಲ್ಲಿ ನವಶಿಲಾಯುಗ ಸಂಸ್ಕೃತಿ ಪ್ರಾದೇಶಿಕ ವೈವಿಧ್ಯಗಳಿಂದ ಕೂಡಿದೆ. ಇರಾನಿನ ಸಮಕಾಲೀನ ಸಂಸ್ಕೃತಿಗಳ ಪ್ರಭಾವ ಕಂಡುಬರುವ ನವಶಿಲಾಯುಗ ಸಂಸ್ಕೃತಿ ದಖನ್ ಪ್ರದೇಶದಲ್ಲೂ ಪೂರ್ವತೀರದಲ್ಲೂ ಕ್ರಿ.ಪೂ. 2300ರ ಸುಮಾರಿನಲ್ಲಿ ತಲೆದೋರಿ, ಬಳ್ಳಾರಿ ರಾಯಚೂರು ಪ್ರದೇಶಗಳಲ್ಲಿ ಕೇಂದ್ರೀಕೃತವಾಗಿತ್ತು. ಇದು ಕ್ರಮೇಣ ಕರ್ಣಾಟಕದ ಇತರ ಪ್ರದೇಶಗಳಿಗೂ ಆಂಧ್ರದ ಪಶ್ಚಿಮ ಮತ್ತು ಉತ್ತರ ಭಾಗಗಳಿಗೂ ತಮಿಳುನಾಡಿನ ಉತ್ತರಭಾಗಗಳಿಗೂ ಹಬ್ಬಿತು. ನಯ ಮಾಡಿದ ಕಲ್ಲಿನಾಯುಧಗಳು ಕೈಯಲ್ಲಿ ರೂಪಿಸಿದ ಮಣ್ಣಿನ ಪಾತ್ರೆಗಳ ಮತ್ತು ಪಶುಪಾಲನೆಯ ಉಪಯೋಗ ತಿಳಿದಿದ್ದ ಈ ಜನ ಕ್ರಮೇಣ ವ್ಯವಸಾಯವನ್ನು ಆರಂಭಿಸಿ ಬೆಟ್ಟದ ತಪ್ಪಲುಗಳಿಂದ ಮೈದಾನ ಪ್ರದೇಶಗಳಿಗೆ ಬಂದು ನೆಲೆಸಿದರು. ರಾಯಚೂರು ಜಿಲ್ಲೆಯ ಪಿಕ್ಲಿಹಾಲ್, ಮಸ್ಕಿ, ಬಳ್ಳಾರಿ ಜಿಲ್ಲೆಯ ಸಂಗಕಲ್ಲು, ತೆಕ್ಕಲಕೋಟೆ, ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಆಂಧ್ರಪ್ರದೇಶದ ನಾಗಾರ್ಜುನಕೊಂಡ, ಯಲ್ಲೇಶ್ವರಂ ಮುಂತಾದವು ಇವರ ಮುಖ್ಯ ನೆಲೆಗಳಲ್ಲಿ ಕೆಲವು. ಇದೇ ಸುಮಾರಿನಲ್ಲಿ ಕಾಶ್ಮೀರದಲ್ಲಿ ಚೀನದ ಪ್ರಭಾವವಿದ್ದ ನವಶಿಲಾಯುಗ ಸಂಸ್ಕೃತಿ ಬಳಕೆಯಲ್ಲಿತ್ತು. ಈ ಜನ ಮೇಲೆ ಹೇಳಿದ ಸಂಸ್ಕೃತಿ ಲಕ್ಷಣಗಳನ್ನು ಹೊಂದಿದ್ದುದಲ್ಲದೆ ನೆಲದಲ್ಲಿ ಹಳ್ಳಗಳನ್ನಗೆದು ಅವುಗಳ ಮೇಲೆ ಹುಲ್ಲುಚಾವಣಿಗಳನ್ನು ಹೊದಿಸಿ ರಚಿಸಿದ ಗುಡಿಸಲುಗಳಲ್ಲಿ ವಾಸಿಸುತ್ತಿದ್ದರು. ಮೊದಲು ಪಶುಪಾಲನೆ, ಬೇಟೆ ಇವರ ಮುಖ್ಯ ಕಸಬುಗಳಾಗಿದ್ದರೂ ಕ್ರಮೇಣ ವ್ಯವಸಾಯವನ್ನು ಪ್ರಾರಂಭಿಸಿದುದಾಗಿ ತಿಳಿದುಬರುತ್ತದೆ. ಪೂರ್ವಭಾಗದಲ್ಲಿ ಅಸ್ಸಾಂ, ಬಂಗಾಳ, ಬಿಹಾರ್ ಮತ್ತು ಒರಿಸ್ಸ ಪ್ರಾಂತ್ಯಗಳಲ್ಲಿ ಆಗ್ನೇಯ ಏಷ್ಯ ಮತ್ತು ದಕ್ಷಿಣ ಚೀನಗಳ ಪ್ರಭಾವವಿದ್ದ ನವಶಿಲಾಯುಗಕ್ಕೆ ನಿರ್ದೇಶಿತವಾಗುವ ಅವಶೇಷಗಳು ದೊರಕಿದ್ದರೂ ಕ್ರಿ.ಪೂ. ಒಂದನೆಯ ಸಹಸ್ರಮಾನಕ್ಕೆ ಸೇರಬಹುದಾದ ಈ ಹಿಂದುಳಿದ ಸಂಸ್ಕೃತಿಯ ವಿಷಯವಾಗಿ ಹೆಚ್ಚಿನ ಮಾಹಿತಿಗಳು ಗೊತ್ತಾಗಿಲ್ಲ. ಮಧ್ಯ ಮತ್ತು ಪಶ್ಚಿಮ ಭಾರತಗಳಲ್ಲಿ ಭೌಗೋಳಿಕ ಕಾರಣಗಳಿಂದ ಈ ನವಶಿಲಾಯುಗ ಸಂಸ್ಕೃತಿ ಹರಡಲು ಸಾಧ್ಯವಾಗದೆ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳ ಅನಂತರ ತಾಮ್ರಶಿಲಾಯುಗದ ಸಂಸ್ಕೃತಿಗಳು ಬಳಕೆಗೆ ಬಂದುವು. ನಾಗರಿಕತೆಯ ಉನ್ನತ ಮಟ್ಟ ತಲಪಿದ್ದ ಹರಪ್ಪ ನಾಗರಿಕತೆ ವಾಯುವ್ಯದಲ್ಲಿ ಸಿಂಧೂನದೀತೀರದಲ್ಲಿ ಮೊದಲಿಗೆ ಪ್ರಾರಂಭವಾಗಿ ಕ್ರಮೇಣ ಪೂರ್ವ ಮತ್ತು ದಕ್ಷಿಣ ಭಾಗಗಳಲ್ಲಿ ಹರಡಿತು. ಆಫ್ಘಾನಿಸ್ತಾನ ಮತ್ತು ಬಲೂಚಿಸ್ತಾನಗಳ ಪರ್ವತ ಪ್ರದೇಶಗಳಲ್ಲಿ ನೆಲೆಸಿದ್ದ, ಆಹಾರೋತ್ಪಾದನೆಯ ಹಂತದ ಪಂಗಡಗಳಿಂದ ಕ್ರಮೇಣ ಬೆಳೆದು ಬಂದ, ಮತ್ತು ಸುಮೇರಿಯನ್ ನಾಗರಿಕತೆಯೊಡನೆ ಸಂಪರ್ಕ ಪಡೆದಿದ್ದ ಈ ಸಂಸ್ಕೃತಿ ವ್ಯವಸಾಯ ಮತ್ತು ಕೈಗಾರಿಕೆಗಳ ಮೇಲೆ ಆಧಾರಿತವಾಗಿದ್ದು, ಭಾರತದ ಇತರ ಕೆಲವು ಪ್ರದೇಶಗಳೊಂದಿಗೂ ಹೊರದೇಶಗಳೊಂದಿಗೂ ವ್ಯಾಪಾರ ಸಾಂಸ್ಕೃತಿಕ ಸಂಪರ್ಕಗಳನ್ನು ಬೆಳೆಸಿಕೊಂಡಿತ್ತು. ಈ ಸಂಸ್ಕೃತಿಯ ಮುಖ್ಯ ನೆಲೆಗಳಾಗಿದ್ದ ರಾಬಿ ನದಿ ದಂಡೆಯ ಹರಪ್ಪ ಮತ್ತು ಸಿಂಧೂ ನದಿ ದಂಡೆಯ ಮೊಹೆಂಜೊದಾರೊಗಳಲ್ಲಿನ ಉತ್ಖನನಗಳಿಂದ ಈ ಅಂಶ





ವ್ಯಕ್ತಪಡುತ್ತದೆ. ಈ ಅಕ್ಷರಸ್ಥ ನಾಗರಿಕತೆ ಬಹು ಶೀಘ್ರವಾಗಿ ಉನ್ನತ ಮಟ್ಟ ತಲಪಿ ತನ್ನ ಪ್ರಭಾವವನ್ನು ನೆರೆಯ ಗಂಗಾ-ಯಮುನಾ ಬಯಲಿಗೂ ಸೌರಾಷ್ಟ್ರ ಪ್ರದೇಶಕ್ಕೂ ಬಲೂಚಿಸ್ತಾನ ಮತ್ತು ಸಿಂಧ್ ಪ್ರಾಂತ್ಯಗಳಿಗೂ ವಿಸ್ತರಿಸಿತ್ತು. ಆದರೆ ಕ್ರಮೇಣ ಆಂತರಿಕ ಕಾರಣಗಳ ಒತ್ತಡಗಳಿಗೊಳಗಾಗಿ ಕ್ಷೀಣಗೊಂಡಿತು. ಈ ನಾಗರಿಕತೆಯ ಜೀವಿತ ಕಾಲವನ್ನು ಕ್ರಿ.ಪೂ. 2300–1700 ಎಂದು ನಿರ್ದೇಶಿಸಲಾಗಿದೆ. ಇದರ ಅವನತಿಯ ಅನಂತರ ಗಂಗಾನದಿ ಬಯಲಿನಲ್ಲೂ ಮಧ್ಯ ಮತ್ತು ಪಶ್ಚಿಮ ಭಾರತ ಪ್ರದೇಶಗಳಲ್ಲೂ ಇದರ ಮತ್ತು ಮೊದಲಿನ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳಿಂದ ಉದಿಸಿದ ತಾಮ್ರಶಿಲಾಯುಗೀನ ಸಂಸ್ಕೃತಿಗಳು ರೂಢಿಗೆ ಬಂದುವು. ಹರಪ್ಪ ನಾಗರಿಕತೆಯಲ್ಲಿ ರೂಢಿಯಲ್ಲಿದ್ದ ಅಕ್ಷರತೆ ಮತ್ತು ನಗರ ಜೀವನ ಕಣ್ಮರೆಯಾದರೂ ಮುಂದುವರಿದ ವ್ಯವಸಾಯ ಪದ್ಧತಿಯೂ ಗ್ರಾಮೀಣ ಜೀವನವೂ ಇದಕ್ಕೆ ಸಂಬಂಧಿಸಿದ ಕೈಗಾರಿಕೆಗಳೂ ಪ್ರಧಾನವಾಗಿದ್ದ ಈ ಪ್ರಾಗೈತಿಹಾಸಿಕ ಸಂಸ್ಕೃತಿಯ ಕಾಲದಲ್ಲಿ ಫಲವತ್ತಾದ ಗಂಗಾ ಯಮುನಾ ನದೀಬಯಲಿನಲ್ಲಿ ಹೆಚ್ಚು ಪ್ರಗತಿಯಾಯಿತು. ಕಬ್ಬಿಣ ಬಳಕೆಗೆ ಬಂದದ್ದು ಕ್ರಿ.ಪೂ. 2ನೆಯ ಸಹಸ್ರಮಾನದ ಕೊನೆಯಲ್ಲಿ. ಕ್ರಮೇಣ ಮಧ್ಯ ಮತ್ತು ದಕ್ಷಿಣ ಭಾರತಗಳಿಗೂ ಕಬ್ಬಿಣಯುಗದ ಸಂಸ್ಕೃತಿ ಹರಡಿತು. ಈ ವೇಳೆಗಾಗಲೇ ಉತ್ತರ ಭಾರತದಲ್ಲಿ ಮೊದಲ ಐತಿಹಾಸಿಕ ರಾಜ್ಯಗಳು ಸ್ಥಾಪಿತವಾಗಿ



ಮೊಹೆಂಜೊದಾರೊ ಸಂಸ್ಕೃತಿಯ ಮುದ್ರೆಗಳು



ಯಾಂಗ್-ಶಾವೋ ಸಂಸ್ಕೃತಿಯ ವರ್ಣ-ಚಿತ್ರಿತ ಮಡಕೆಗಳು

ಚಾರಿತ್ರಿಕಯುಗದ ಪ್ರಾರಂಭವಾಗಿತ್ತು. ದಕ್ಷಿಣ ಭಾರತದಲ್ಲಿ ಕಬ್ಬಿಣಯುಗವನ್ನು ಪ್ರಾಗಿತಿಹಾಸ ಕಾಲವೆಂದು ಪರಿಗಣಿಸಲಾಗಿದೆ. ಆ ಸಮಯದಲ್ಲಿ ಪ್ರಭಾವಶಾಲಿಯಾಗಿದ್ದ ಬೃಹತ್‌ಶಿಲಾಸಮಾಧಿ ಸಂಸ್ಕೃತಿಯ ಜನ ಸುಧಾರಿತ ನೀರಾವರಿ ವ್ಯವಸಾಯ, ಕುಂಬಾರ ಚಕ್ರದಿಂದ ತಯಾರಾದ ಮಣ್ಣಿನ ಪಾತ್ರೆ, ಕಬ್ಬಿಣದಿಂದ ಮಾಡಿದ ಆಯುಧೋಪಕರಣ—ಇವನ್ನು ಬಳಕೆಗೆ ತಂದು ಗ್ರಾಮೀಣ ಜೀವನ ಪದ್ಧತಿ ಸ್ಥಾಪಿಸಿದರು. ಕ್ರಿ.ಪೂ. 5–4ನೆಯ ಶತಮಾನಗಳ ವೇಳೆಗೆ ಇಲ್ಲಿ ಬರವಣಿಗೆ, ರಾಜ್ಯಭಾರ ಪದ್ಧತಿ ಮತ್ತು ನಗರಜೀವನ ಕ್ರಮಗಳು ರೂಢಿಗೆ ಬಂದು ಇತಿಹಾಸ ಯುಗ ಪ್ರಾರಂಭವಾಯಿತು.

ಪೂರ್ವ ಏಷ್ಯ ಮತ್ತು ಚೀನ ಪ್ರದೇಶಗಳಲ್ಲಿ ಕ್ರಿ.ಪೂ. 3000ದ ಸುಮಾರಿಗೆ ಸೈಬೀರಿಯ, ಮಂಚೂರಿಯ ಮತ್ತು ಮಂಗೋಲಿಯ ಪ್ರದೇಶಗಳಲ್ಲಿ ನೆಲೆಸಿದ್ದ ಸೂಕ್ಷ್ಮಶಿಲಾಯುಧ ಸಂಸ್ಕೃತಿಗಳ ಜನ ನಯಗೊಳಿಸಿದ ಕಲ್ಲಿನಾಯುಧ ಮತ್ತು ಮಣ್ಣಿನ ಪಾತ್ರೆಗಳ ಉಪಯೋಗವನ್ನು ಪಶ್ಚಿಮದಿಂದ ಕಲಿತುಕೊಂಡರು. ವ್ಯವಸಾಯ ಮತ್ತು ಪಶುಪಾಲನೆಗಳ ಪರಿಚಯವಿಲ್ಲದಿದ್ದರೂ ಈ ಸಂಸ್ಕೃತಿಗಳನ್ನು ನವಶಿಲಾಯುಗ ಸಂಸ್ಕೃತಿಗಳೆಂದು ಹೆಸರಿಸಲಾಗಿದೆ. ಬೇಟೆ ಮುಖ್ಯ ಕಸಬಾಗಿದ್ದು ಈ ಜನ ಇದಕ್ಕಾಗಿ ಸಾಕಿದ ನಾಯಿಗಳನ್ನುಪಯೋಗಿಸುತ್ತಿದ್ದರು. ಮಡಕೆಗಳನ್ನು ಹಗ್ಗದ ಗುರುತುಗಳಿಂದ ಅಲಂಕರಿಸುತ್ತಿದ್ದರು. ಚೀನದ ಹ್ವಾಂಗ್ ಹೋ ಕಣಿವೆಯಲ್ಲಿ ನೆಲೆಸಿದ್ದ ನವಶಿಲಾಯುಗ ಸಂಸ್ಕೃತಿ ಹೆಚ್ಚು ಪ್ರಗತಿಪರವಾಗಿತ್ತು. ವ್ಯವಸಾಯ ಬಳಕೆಯಲ್ಲಿತ್ತು. ಅನಂತರ ದಕ್ಷಿಣ ಚೀನ, ಇಂಡೋಚೀನ ಪ್ರದೇಶಗಳಲ್ಲಿ ಹರಡಿದ ಈ ಸಂಸ್ಕೃತಿ ಕ್ರಮೇಣ ಪ್ರಬಲಗೊಂಡಿತು. ಇಂಡೋ-ಚೀನದ ಟಾಂಕಿಂಗ್ ಪ್ರದೇಶದ ಹೋಬಿನ್ಹ್ ಎಂಬಲ್ಲಿ ಸಣ್ಣ ಗಾತ್ರದ ಕಲ್ಲಿನಾಯುಧಗಳು ಬಳಕೆಯಲ್ಲಿದ್ದರೆ, ಬ್ಯಾಕ್ಸನಿನಲ್ಲಿ ಅಂಚುಗಳನ್ನು ನಯಗೊಳಿಸಿದ ಕಲ್ಲಿನ ಕೊಡಲಿ ಮತ್ತು ಒರಟಾದ ಮಡಕೆಗಳು ಬಳಕೆಯಲ್ಲಿದ್ದುವು. ಈ ಪ್ರದೇಶದಲ್ಲೆಲ್ಲ ಕ್ರಮೇಣ ಪೂರ್ಣವಾಗಿ ನಯಗೊಳಿಸಿದ ಚೌಕಾಕಾರದ ಕೊಡಲಿ ಪ್ರಧಾನ ಆಯುಧವಾಯಿತು. ಹಿಡಿಯಲ್ಲಿ ಸೇರಿಸಲು ಅನುಕೂಲವಾಗುವಂಥ ಭುಜಗಳುಳ್ಳ ಕೊಡಲಿಗಳೂ ಸ್ವಲ್ಪಕಾಲಾನಂತರ ಬಳಕೆಗೆ ಬಂದುವು. ಈ ವೇಳೆಗೆ ಚೀನದ ದಕ್ಷಿಣ ಭಾಗಗಳಲ್ಲಿ ಕಂಚಿನ ಬಳಕೆ ರೂಢಿಗೆ ಬಂದು ಕ್ರಮೇಣ ಈ ಪ್ರದೇಶಗಳಿಗೂ ಹಬ್ಬಿತು. ಕಲ್ಲಿನಾಯುಧಗಳನ್ನು ಸಹ ಕಂಚಿನ ಆಯುಧಗಳ ಮಾದರಿಯಲ್ಲಿ ಅದೇ ತಯಾರಿಕಾ ವಿಧಾನಗಳಿಂದ ಮಾಡುತ್ತಿದ್ದಿರಬಹುದೆಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಆಗ್ನೇಯ ಏಷ್ಯದಾದ್ಯಂತ ಪ್ರಬಲವಾಗಿದ್ದ ಈ ಸಂಸ್ಕೃತಿಯ ಪ್ರಭಾವ ಪೂರ್ವಭಾರತದ ಅಸ್ಸಾಂ ಬಂಗಾಲ ಪ್ರದೇಶಗಳ ಮೇಲೆ ಆದದ್ದು ಬಹುಶಃ ಈ ಹಂತದಲ್ಲೆ.

ವ್ಯವಸಾಯಾಧಾರಿತ ಪಂಗಡಗಳು ಮಧ್ಯ ಚೀನದ ಹೋನಾನ್ ಪ್ರಾಂತ್ಯದ ಹ್ವಾಂಗ್ ಹೋ ಮತ್ತು ವೆನ್ನಿಗಳಲ್ಲಿ ಹಳದಿ ಮೆಕ್ಕಲುಮಣ್ಣಿನ ಮೈದಾನಗಳಲ್ಲಿ ತಲೆದೋರಿತು. ಬಹುಶಃ ಮಧ್ಯ ಮತ್ತು ಪಶ್ಚಿಮ ಏಷ್ಯದಿಂದ ಬಂದ ಈ ವ್ಯವಸಾಯ ಮತ್ತು ಪಶುಸಂಗೋಪನೋದ್ಯಮಗಳು ಕ್ರಮೇಣ ಹೋ ನಾನ್ ಪ್ರಾಂತ್ಯದ ಇತರ ಭಾಗಗಳಲ್ಲೂ ಕಾನ್ಸು ಪ್ರಾಂತ್ಯದಲ್ಲೂ ಹರಡಿ ಜನಜೀವನ ರೀತಿಯನ್ನು ಸುಧಾರಿತಗೊಳಿಸಿತು. ಈ ಪ್ರಭಾವಗಳೊಡನೆ ಮಡಕೆಗಳನ್ನು ಬಣ್ಣಗಳಿಂದ ಅಲಂಕರಿಸುವ



ಮೊಹೆಂಜೊದಾರೊ ಕೋಟೆಕೊತ್ತಲಗಳು

ಶಾಸನಗಳದು ಚೀನೀ ಭಾಷೆ. ಇತಿಹಾಸಯುಗಕ್ಕೆ ಸೇರಿದ ಚೌ ವಂಶ ಅಧಿಕಾರಕ್ಕೆ ಬಂದದ್ದು ಅನಂತರ (ಕ್ರಿ. ಪೂ. 1027–222).

ಇಂಡೋ-ಚೀನದಲ್ಲಿ ಹೋ ಬಿನ್ಹಿಯನ್ ಬ್ಯಾಕ್ಸೋನಿಯನ್ ಸಂಸ್ಕೃತಿಗಳು ಬಹಳಕಾಲ ಬಳಕೆಯಲ್ಲಿದ್ದು ಕ್ರಿ.ಪೂ. ಮೊದಲನೆಯ ಸಹಸ್ರಮಾನದ ಮಧ್ಯಕಾಲದಲ್ಲಿ ಕ್ರಮೇಣ ಕಂಚು ಮತ್ತು ಕಬ್ಬಿಣಗಳ ಉಪಯೋಗ ಗೊತ್ತಿದ್ದ ಡಾಂಗ್ಸನ್ ಸಾಮ್ರಾಂಗ್‌ಸೆನ್ ಸಂಸ್ಕೃತಿಗಳು ರೂಢಿಗೆ ಬಂದುದಲ್ಲದೆ ವ್ಯವಸಾಯ ಪಶುಪಾಲನೆಗಳು ಹರಡಿದುವು. ಕೆಲವು ಪ್ರದೇಶಗಳಲ್ಲಿ ಇತ್ತೀಚಿನ ವರೆಗೂ ಬಳಕೆಯಲ್ಲಿದ್ದ ಚಾಕು, ರಂಧ್ರವಿರುವ ಕೊಡಲಿ, ಭರ್ಜಿಯ ಮೊನೆ ಮತ್ತು ತಾಮ್ರದ ಬುರುಡುಮದ್ದಲೆಗಳು ಬಳಕೆಗೆ ಬಂದದ್ದೂ ಈ ಕಾಲದಲ್ಲೆ. ಕ್ರಮೇಣ ಚೀನ ಮತ್ತು ಭಾರತಗಳ ಸಂಸ್ಕೃತಿಗಳು ಕ್ರಿ.ಶ. ಮೊದಲನೆಯ ಸಹಸ್ರಮಾನದ ದೀರ್ಘಕಾಲದಲ್ಲಿ ಈ ಪ್ರದೇಶಗಳಿಗೆ ಹರಡುವ ವರೆಗೂ ಇವು ಪ್ರಾಗಿತಿಹಾಸ ಮಟ್ಟದಲ್ಲೆ ಇದ್ದು ಮಧ್ಯಯುಗೀನ ಇತಿಹಾಸಕಾಲದಲ್ಲಿ ಚಾರಿತ್ರಿಕ ಯುಗವನ್ನು ಪ್ರವೇಶಿಸಿದುವು.

ಕಲೆಯೂ ಬಂದಂತೆ ಕಾಣುತ್ತದೆ. ಯಾಂಗ್–ಷಾವೊ ಸಂಸ್ಕೃತಿಯೆಂದು ಹೆಸರಾದ ಈ ಸಂಸ್ಕೃತಿಯ ಜನಕ್ಕೆ ಮೊದಲಿನಿಂದಲೂ ಧಾನ್ಯಗಳನ್ನು ಬೆಳೆಯುವ ವಿಧಾನ ಗೊತ್ತಿತ್ತು. ಇವರು ಬತ್ತದ ಬೇಸಾಯವನ್ನು ದಕ್ಷಿಣ ಪ್ರದೇಶಗಳಿಂದ ಕಲಿತುಕೊಂಡರು. ವಿಶಾಲವಾದ ಗ್ರಾಮುಗಳಲ್ಲಿ ಚಚ್ಚೌಕದ ಮನೆಗಳಲ್ಲಿ ವಾಸಿಸುತ್ತಿದ್ದ ಈ ಜನ ಧಾನ್ಯಗಳನ್ನು ನೆಲದೊಳಗಿನ ಹಳ್ಳಗಳಲ್ಲಿ ಶೇಖರಿಸುತ್ತಿದ್ದರು. ಗ್ರಾಮದ ಹೊರಭಾಗಗಳಲ್ಲಿ ಶವಗಳನ್ನು ಹೂಳುತ್ತಿದ್ದರು. ಮಣ್ಣಿನ ಪಾತ್ರೆಗಳನ್ನು ಕೈಯಿಂದ ತಯಾರಿಸುತ್ತಿದ್ದರು. ಅವುಗಳನ್ನು ಬಣ್ಣಗಳಿಂದ ಅಲಂಕರಿಸುತ್ತಿದ್ದರು.

ಅನಂತರದ ಮುಂದುವರಿದ ಸಂಸ್ಕೃತಿಯ ಮಾಹಿತಿಗಳೂ ಹ್ವಾಂಗ್ ಹೊ ಕಣಿವೆಯ ಪೂರ್ವಭಾಗಗಳಲ್ಲಿ ದೊರಕಿವೆ. ಇದು ಲುಂಗ್–ಷಾನ್ ಸಂಸ್ಕೃತಿಯೆಂದು ಹೆಸರಾಗಿದೆ. ಯಾಂಗ್–ಷಾವೊ ಸಂಸ್ಕೃತಿಯೊಂದಿಗೆ ಅನೇಕ ಹೋಲಿಕೆಗಳಿರುವ ಲುಂಗ್–ಷಾನ್ ಸಂಸ್ಕೃತಿಯ ಮಡಕೆಗಳು ಹೆಚ್ಚು ನಯ, ಕುಂಬಾರ ಚಕ್ರದ ಮೇಲೇ ಮಾಡಲ್ಪಟ್ಟದ್ದು. ಇವುಗಳ ಬಣ್ಣ ಕಪ್ಪು. ಹೊಸ ಹೊಸ ಆಕಾರದ ಮಡಕೆಗಳೂ ಬಳಕೆಗೆ ಬಂದುವು. ಈ ಹಂತದಲ್ಲಿ ಜನಜೀವನ ರೀತಿ ಸುಧಾರಿತವಾಯಿತು. ದನಕುರಿಗಳನ್ನೂ ಕೆಲವು ಸಲ ಕುದುರೆಗಳನ್ನೂ ಸಾಕುವುದು ರೂಢಿಗೆ ಬಂತು. ಮುಂದುವರಿದ ವ್ಯವಸಾಯವಿಧಾನಗಳಿಂದ ಐಶ್ವರ್ಯ ಅಭಿವೃದ್ಧಿ ಹೊಂದಿ ನಾಗರಿಕತೆ ಬೆಳೆಯಲಾರಂಭಿಸಿತು. ಮತೀಯ, ಸಾಮಾಜಿಕ ಆಚಾರಪದ್ಧತಿಗಳು ಬೆಳೆದುವು. ಲುಂಗ್–ಷಾನ್ ಕೊನೆಯ ಹಂತದ ಪ್ಸಿಯಾವೊ–ತ್ಸುನ್ ಸಂಸ್ಕೃತಿ ಕಾಲಕ್ರಮದಲ್ಲಿ ಯಾಂಗ್‌ಟ್ಸೆ ಬಯಲು, ಷೆಜ್‌ವಾನ್, ದಕ್ಷಿಣ ಸಮುದ್ರತೀರ ಮತ್ತು ಆಗ್ನೇಯ ಏಷ್ಯಗಳಿಗೆ ಹರಡಿ ಬಲು ಪ್ರಭಾವಶಾಲಿಯಾಯಿತೆನ್ನಬಹುದು. ಬತ್ತದ ಬೇಸಾಯ ಪದ್ಧತಿ ಪೂರ್ವ ಏಷ್ಯದಲ್ಲೆಲ್ಲ ಹರಡಿದ್ದೂ ಅಕ್ಕಿ ಈ ಪ್ರದೇಶದ ಮುಖ್ಯ ಆಹಾರವಾದದ್ದೂ ಆಗಲೆ. ಕ್ರಿ.ಪೂ. 2ನೆಯ ಸಹಸ್ರಮಾನದ ಅಂತ್ಯಕಾಲದ ವೇಳೆಗೆ ನಗರಸ್ಥ ಜೀವನ ನೆಲೆಯಾಗಿ ನಿಂತು ಐತಿಹಾಸಿಕ ಚೀನೀ ಸಂಸ್ಕೃತಿಯ ಅಸ್ತಿಭಾರವೇರ್ಪಟ್ಟಿತ್ತೆಂಬುದು ಷಾಂಗ್ ವಂಶದ ಸ್ಥಾಪನೆಯಿಂದಲೂ ಪ್ಸಿಯಾವೊ–ತ್ಸುನ್ ನಗರದ ಸಂಪದ್ಭರಿತ ಸ್ಥಿತಿಗಳಿಂದಲೂ ತಿಳಿದುಬರುತ್ತದೆ. ವಿಶಾಲ ಸುವ್ಯವಸ್ಥಿತ ನಗರದಲ್ಲಿ ಅರಮನೆ, ಕುಶಲಕರ್ಮಿಗಳ ವಸತಿಗಳು, ಆಯಾಕಾರದ ಮರದ ಕಟ್ಟಡಗಳು, ಕಲ್ಲಿನ ಅಥವಾ ಕಂಚಿನ ಪೀಠಗಳ ಮೇಲೆ ನಿಲ್ಲಿಸಿದ ಕಂಬಗಳ ಸಾಲುಗಳಿಂದ ಕೂಡಿದ ವಿಶಾಲ ಭವನಗಳು—ಇವೆಲ್ಲ ಈ ನಾಗರಿಕತೆಯ ಮಟ್ಟವನ್ನು ಸೂಚಿಸುತ್ತವೆ. ಪುರಾತನ ವಿಶ್ವದ ನಾಗರಿಕತೆಗಳ ಕುರುಹುಗಳಲ್ಲಿ ಷಾಂಗ್ ಸಂಸ್ಕೃತಿಕಾಲದ ಕಂಚಿನ ವಸ್ತುಗಳದು ವಿಶಿಷ್ಟ ಸ್ಥಾನ. ಈ ಕಾಲದ ಸಮಾಧಿಗಳಲ್ಲಿರುವ ಐಶ್ವರ್ಯ ಈ ಜನರ ಪ್ರಗತಿಯನ್ನು ಸೂಚಿಸುತ್ತದೆಂದು ಹೇಳಬಹುದು. ಈ ಜನಕ್ಕೆ ಬರೆವಣಿಗೆ ಗೊತ್ತಿತ್ತೆಂಬುದು ಕಂಚಿನ ಪಾತ್ರೆಗಳ ಮೇಲಿನ ಕೆಲವು ಶಾಸನಗಳಿಂದ ತಿಳಿದುಬರುತ್ತದೆ. ಈ



[illegible]

ಕ್ರಿ.ಶ. 16–17ನೆಯ ಶತಮಾನಗಳಲ್ಲಿ ಮಲನೇಷ್ಯದ ದ್ವೀಪಗಳನ್ನು ಐರೋಪ್ಯರು ಪ್ರವೇಶಿಸುವ ವರೆಗೂ ಇಲ್ಲಿ ಅನಾಗರಿಕ ಶಿಲಾಯುಗ ಹಂತದ ಪಂಗಡಗಳಿದ್ದುವು. ಈ ಜನಕ್ಕೆ ಅಕ್ಕಿಯ ಉಪಯೋಗ ಗೊತ್ತಿರಲಿಲ್ಲ. ಬಾಳೆ, ಹಲಸು, ತೆಂಗು ಮುಂತಾದ ಬೆಳೆಗಳನ್ನಿವರು ಬೆಳೆಯುತ್ತಿದ್ದರು. ಹಂದಿ, ನಾಯಿ, ಕೋಳಿ ಮತ್ತು ಜಲಚರಗಳೂ ಇವರ ಆಹಾರ ಪೂರೈಕೆಯ ಸಾಧನಗಳಾಗಿದ್ದುವು, ನಯಗೊಳಿಸಿದ ಕಲ್ಲಿನಾಯುಧಗಳನ್ನು ಉಪಯೋಗಿಸುತ್ತಿದ್ದರು. ಕೈಯಿಂದ ಮಾಡಿದ ಮಡಕೆಗಳು ಬಳಕೆಯಲ್ಲಿದ್ದುವು.

ಕೊರಿಯದಲ್ಲಿ ಕ್ರಿ.ಪೂ. 3ನೆಯ ಸಹಸ್ರಮಾನದಲ್ಲಿ ಉತ್ತರ ಏಷ್ಯದ ಪ್ರಭಾವ ಬೀರುವ ನವಶಿಲಾಯುಗ ಸಂಸ್ಕೃತಿಗಳು ತಲೆದೋರಿದುವು. ಮೊದಮೊದಲು ಬೇಟೆ ಮತ್ತು ಮೀನುಗಾರಿಕೆ ಇಲ್ಲಿಯ ಜನರ ಮುಖ್ಯ ಕಸಬು. ಕ್ರಮೇಣ ಮಣ್ಣಿನ ಪಾತ್ರೆಗಳ ಉಪಯೋಗವನ್ನೂ ಕಲ್ಲಿನ ಕಟ್ಟಡಕಲೆಯನ್ನೂ ಇವರು ಅರಿತರು. ಕ್ರಿ.ಪೂ. 4ನೆಯ ಶತಮಾನದಲ್ಲಿ ಕಂಚು ಮತ್ತು ಕಬ್ಬಿಣಗಳ ಬಳಕೆಯೂ ಅನಂತರ ವ್ಯವಸಾಯವೂ ರೂಢಿಗೆ ಬಂದುವು. ಕ್ರಿ.ಶ. ದ ಆರಂಭಕಾಲದಲ್ಲಿ ಜಪಾನ್ ಚೀನಗಳ ಪ್ರಭಾವ ಹೆಚ್ಚಿದಾಗ ಇಲ್ಲಿ ಐತಿಹಾಸಿಕ ಯುಗದ ಆರಂಭವಾಯಿತು.

ಜಪಾನಿನ ಅತ್ಯಂತ ಪುರಾತನ ಅವಶೇಷಗಳು ಕ್ರಿ.ಪೂ. 3–2ನೆಯ ಸಹಸ್ರಮಾನಗಳ ನವಶಿಲಾಯುಗ ಸಂಸ್ಕೃತಿಗಳಿಗೆ ಸೇರಿದವು. ಈ ಸಂಸ್ಕೃತಿಗಳಲ್ಲಿ ಎರಡು ಹಂತಗಳುಂಟು. ಮೊದಲನೆಯದಾದ ಜಮೋನ್ ಸಂಸ್ಕೃತಿಯಲ್ಲಿ (ಕ್ರಿ.ಪೂ. 2500–250) ಹಗ್ಗದ ಗುರುತಿರುವ ಮಡಕೆಗಳ ಉಪಯೋಗ ಗೊತ್ತಿದ್ದು ಇದು ಪೂರ್ವ ಸೈಬೀರಿಯದ ಸಂಸ್ಕೃತಿಗಳನ್ನು ಹೋಲುತ್ತದೆ. ಈ ಸಂಸ್ಕೃತಿಯ ಜನಕ್ಕೆ ವ್ಯವಸಾಯ ಗೊತ್ತಿರಲಿಲ್ಲ. ನಯಗೊಳಿಸಿದ ಕಲ್ಲಿನಾಯುಧಗಳು ಆಗ ಬಳಕೆಯಲ್ಲಿದ್ದುವು. ಬೇಟೆ ಮತ್ತು ಮೀನುಗಾರಿಕೆ ಮುಖ್ಯ ಕಸಬು. ನೆಲದಲ್ಲಿ ತೋಡಿದ ಹಳ್ಳಗಳ ಮೇಲೆ ಭೂಮಿಯಲ್ಲಿ ನೆಟ್ಟ ಕಂಬದ ಸಹಾಯದಿಂದ ನಿಲ್ಲಿಸಿದ್ದ ಚಾವಣಿಗಳಿದ್ದ ಗುಡಿಸಲುಗಳಲ್ಲಿ ಇವರ ವಾಸ. ಎರಡನೆಯ ಯ ಯೋ ಇ ಸಂಸ್ಕೃತಿ ಕಾಲದಲ್ಲಿ (ಕ್ರಿ.ಪೂ. 250–ಕ್ರಿ. ಶ. 250) ಇವರಿಗೆ ವ್ಯವಸಾಯದ ಪರಿಚಯವಾಯಿತು. ಬತ್ತದ ಬೇಸಾಯ ರೂಢಿಗೆ ಬಂದದ್ದು ಆಗ. ಸ್ವಲ್ಪ ಕಾಲಾನಂತರ ಕಂಚಿನ ಉಪಯೋಗ ತಿಳಿದುಬಂದು, ಪ್ರಗತಿಯ ವೇಗ ಹೆಚ್ಚಿತು. ಕುಂಬಾರಚಕ್ರದಿಂದ ತಯಾರಿಸಿದ ಮಡಕೆಗಳೂ ಬತ್ತದ ನೀರಾವರಿ ಬೇಸಾಯವೂ ಈ ಸಂಸ್ಕೃತಿಯ ಮುಖ್ಯಲಕ್ಷಣಗಳು. ಅನಂತರ ಈ ಪ್ರದೇಶ ಚೀನದ ದಾಳಿಗಳಿಗೆ ತುತ್ತಾಯಿತು. ಆಗ ಚರಿತ್ರಯುಗ ಪ್ರಾರಂಭವಾಯಿತೆನ್ನಬಹುದು. (ಬಿ.ಕೆ.ಜಿ.)

**ಏಷ್ಯದ ಭೂ ಇತಿಹಾಸ :** ಏಷ್ಯಖಂಡದ ಬೆಳೆವಣಿಗೆಯಲ್ಲಿ ಪರ್ವತಜನ್ಯ ಶಕ್ತಿಗಳು ಪ್ರಮುಖಪಾತ್ರ ವಹಿಸಿವೆ ಎಂದು ಭಾವಿಸಲಾಗಿದೆ. ಮೊದಲಿಗೆ ಅಲ್ಲಲ್ಲೇ ಶಾಶ್ವತಭೂಖಂಡಗಳು (ಷೀಲ್ಡ್)ಇದ್ದವು. ಭೂಇತಿಹಾಸದ ನಾನಾ ಯುಗಗಳಲ್ಲಿ ತಲೆದೋರಿದ ಪರ್ವತಜನ್ಯ ಶಕ್ತಿಗಳ ಪ್ರಭಾವದಿಂದ ವಿಸ್ತೀರ್ಣ ಅಭಿನತಿಗಳಲ್ಲಿ (ಜಿಯೊಸಿಂಕ್ಲೈನ್ಸ್) ಸಂಗ್ರಹವಾಗಿದ್ದ ನಿಕ್ಷೇಪಗಳು ಮೇಲಕ್ಕೆ ಎತ್ತಲ್ಪಟ್ಟು ವಿವಿಧ ತೆರನಾಗಿ ಮಡಿಕೆ ಬಿದ್ದು ಹೊಸ ಭೂಭಾಗಗಳಾಗಿ ಮಾರ್ಪಟ್ಟುವು. ಅಲ್ಲದೆ ಕ್ರಮೇಣ ಈ ಹೊಸ ಭೂಭಾಗಗಳು ಶಾಶ್ವತ ಭೂಖಂಡ ಕೇಂದ್ರಗಳೊಡನೆ ಮಿಲನಗೊಂಡು ಭೂಖಂಡದ ವಿಸ್ತೀರ್ಣ ಬೆಳೆಯುತ್ತ ಈಗಿನ ಖಂಡಭಾಗ ರೂಪುಗೊಂಡಿತೆಂದು ಊಹಿಸಲಾಗಿದೆ.

ಈ ಬೃಹತ್ ಖಂಡದ ಭೂ ಇತಿಹಾಸವನ್ನು ತಿಳಿಯಲು ಅದನ್ನು ಎಂಟು ಭಾಗಗಳಾಗಿ ವಿಭಜಿಸಲಾಗಿದೆ :–1 ಅರೇಬಿಯ ಪರ್ಯಾಯದ್ವೀಪ ಮತ್ತು ಇರಾಕ್ ಬಯಲು, 2 ಭಾರತ ಪರ್ಯಾಯದ್ವೀಪ ಮತ್ತು ಸಿಂಧೂ–ಗಂಗಾ ಬಯಲು, 3 ತುರ್ಕಿ ಕಕೇಸಿಯ, ಇರಾನ್ ಮತ್ತು ಆಫ್ಘಾನಿಸ್ತಾನ್ ಪರ್ವತಶ್ರೇಣಿ, 4 ಬಲೂಚಿಸ್ತಾನದಿಂದ ಬರ್ಮದ ವರೆಗೆ ಹಬ್ಬಿರುವ ಹಿಮಾಲಯ ಪರ್ವತಶ್ರೇಣಿ, 5 ಮಧ್ಯ ಏಷ್ಯ, 6 ಏಷ್ಯಾಟಿಕ್ ರಷ್ಯದ ತಗ್ಗುಪ್ರದೇಶಗಳು, 7 ಪೆಸಿಫಿಕ್ ತೀರಪ್ರದೇಶಗಳು, 8 ದ್ವೀಪಸ್ತೋಮಗಳು.

1 ಅರೇಬಿಯ ಪರ್ಯಾಯದ್ವೀಪ ಮತ್ತು ಇರಾಕ್ ಬಯಲು ಪ್ರದೇಶ : ಪೂರ್ವ ಕೇಂಬ್ರಿಯನ್ ಶಿಲೆಗಳು ಕೆಂಪು ಸಮುದ್ರದ ತೀರದುದ್ದಕ್ಕೂ ಕೇಂದ್ರ ಅರೇಬಿಯದಲ್ಲೂ ವಿಸ್ತಾರವಾಗಿ ಹರಡಿವೆ. ಅಲ್ಲದೆ ಕೇಂಬ್ರಿಯನ್ ಕಾಲದಿಂದೀಚಿನ ಇತರ ಭೂಯುಗಗಳ ಜಲಜಶಿಲೆಗಳೂ ನಿಕ್ಷೇಪಗೊಂಡಿವೆ. ಇವುಗಳಲ್ಲಿ ಮಿಸೊಜೋಯಿಕ್ ಮತ್ತು ಟರ್ಷಿಯರಿ ಯುಗದ ನಿಕ್ಷೇಪಗಳು ಅತ್ಯಂತ ಉತ್ತಮರೀತಿಯಲ್ಲಿ ಕಂಡುಬರುತ್ತವೆ. ಇವು ಜಾರ್ಡನ್, ತುರ್ಕಿ ಮತ್ತು ಇರಾನುಗಳಲ್ಲಿ ಕಮಾನಿನಂತೆ ಮೇಲಕ್ಕೆ ಎತ್ತಲ್ಪಟ್ಟಿವೆ. ಶಿಲಾಪ್ರಸ್ತರಗಳು ತಮ್ಮ ಜಾಡಿನಲ್ಲಿ ಹಲವೆಡೆ ಭಂಗಗೊಂಡಿರುವುದೂ ಉಂಟು. ಮಧ್ಯ ಏಷ್ಯದ ಪ್ರಸಿದ್ಧ ತೈಲಪ್ರದೇಶಗಳು ಹರಡಿರುವುದು ಈ ಭಾಗದಲ್ಲೇ. ಈ ಪ್ರದೇಶದ ಬಹುಮುಖ್ಯ ರಚನಾ ವೈವಿಧ್ಯವೆಂದರೆ ಟರ್ಷಿಯರಿ ಯುಗದ ಕಮರಿಗಳ ಶ್ರೇಣಿ. ಕೆಂಪು ಸಮುದ್ರ, ಮೃತ್ಯುಸಮುದ್ರ ಮತ್ತು ಜಾರ್ಡನ್ ಕಣಿವೆಗಳು ಈ ಶ್ರೇಣಿಯವು. ಇವುಗಳಿಗೆ ಸಂಬಂಧಿಸಿದಂತೆ ತೀವ್ರ ರೀತಿಯಲ್ಲಿ ಜ್ವಾಲಾಮುಖಿಗಳ ಕಾರ್ಯಾಚರಣೆಯೂ ಉಂಟಾಯಿತು. ಹೀಗಾಗಿ ಯೆಮೆನ್‌ನಲ್ಲಿ 12,336 ಅಡಿ, ಉತ್ತರ ಹೆಜಾಸಿನಲ್ಲಿ 9,400 ಅಡಿ ಮತ್ತು ದಕ್ಷಿಣ ಸಿರಿಯದಲ್ಲಿ 5,938 ಅಡಿ ಮಂದದ ಲಾವಾಪ್ರಸ್ತರಗಳ ಶ್ರೇಣಿಗಳಿವೆ. ಅನೇಕ ಕಡೆ ಈ ಶ್ರೇಣಿಗಳು ಸ್ತರಭಂಗಗಳಿಗೆ ಒಳಗಾಗಿವೆ.

2 ಭಾರತ ಪರ್ಯಾಯದ್ವೀಪ ಮತ್ತು ಸಿಂಧೂ–ಗಂಗಾ ಬಯಲು : ಪೂರ್ವ ಕೇಂಬ್ರಿಯನ್ ಕಾಲದಿಂದಲೂ ಪರ್ಯಾಯದ್ವೀಪಭಾಗ ಭೂಖಂಡವೆನಿಸಿದೆ. ಮುಂದೆ ತೀವ್ರಸ್ತರಭಂಗ ಮತ್ತು ಭೂಹೊರಚಿಪ್ಪಿನ ರಚನೆಯಲ್ಲಾದ ಬದಲಾವಣೆಗಳು ಈ ಭೂಭಾಗದ ಶಿಲಾವಿನ್ಯಾಸವನ್ನು ಸಾಕಷ್ಟು ಕ್ಲಿಷ್ಟಗೊಳಿಸಿವೆ. ಪರ್ಯಾಯದ್ವೀಪದ ಬಹುಭಾಗ ಗೀರುಶಿಲೆ (ನೈಸ್) ಮತ್ತು ಕಣಶಿಲೆ (ಗ್ರ್ಯಾನೈಟ್)ಗಳಿಂದ ಆವೃತವಾಗಿದೆ.

ಮಧ್ಯ ಭಾರತದ ಹಲವಾರು ಕಡೆ ಕಾರ್ಬೊನಿಫೆರಸ್ ಯುಗದ ಅಂತ್ಯದಿಂದ ಹಿಡಿದು ಕ್ರಿಟೇಷಿಯಸ್ ಯುಗದ ಮೊದಲ ಹಂತದ ವರೆಗಿನ ಗೊಂಡ್ವಾನ ಕಾಲದಲ್ಲಿ ಉಂಟಾದ ಭೂಚಟುವಟಿಕೆಗಳ ನಿಮಿತ್ತ ಶಿಲಾಪ್ರಸ್ತರಗಳು ಅಲ್ಲಲ್ಲೇ ಕುಸಿದು ಬೃಹದಾಕಾರದ ಇಳುಕಲುಗಳುಂಟಾದವು. ನದಿಗಳು ಕೊಚ್ಚಿ ತಂದ ಮರಳು, ಮಣ್ಣು ಮತ್ತು ಮೆಕ್ಕಲಿನೊಡನೆ ಸಸ್ಯವರ್ಗಗಳ ಭಾಗಗಳೂ ಈ ಭೂತೊಟ್ಟಿಗಳಲ್ಲಿ ನಿಕ್ಷೇಪಹೊಂದಿ ಕಾಲಕ್ರಮೇಣ ಕಲ್ಲಿದ್ದಲಿನ ನಿಕ್ಷೇಪಗಳಾಗಿ ರೂಪಾಂತರಗೊಂಡುವು. ಇವುಗಳಲ್ಲಿ ಬಹು ಪ್ರಸಿದ್ಧವಾದುದು ದಾಮೋದರ್ ಕಣಿವೆಯ ಪ್ರದೇಶ. ಇದೇ ಕಾಲದಲ್ಲಿ ಪೂರ್ವ ಮತ್ತು ಪಶ್ಚಿಮ ತೀರಪ್ರದೇಶಗಳನ್ನು ಸಮುದ್ರ ಪದೇ ಪದೇ ಆವರಿಸಿಕೊಂಡಿತ್ತು. ಮುಂದೆ ಈಗಿನ ಪುಣೆ–ಬೊಂಬಾಯಿ ಪ್ರದೇಶದಲ್ಲಿ ಅಸಂಖ್ಯಾತ ಬಿರುಕುಗಳ ಮೂಲಕ ಬೆಸಾಲ್ಟ್ ಲಾವಾಪ್ರವಾಹಗಳು ಹೊರಹೊಮ್ಮಿ ಸುಮಾರು 2,00,000 ಚದರ ಮೈಲಿ ವಿಸ್ತಾರವಾದ ಪ್ರದೇಶವನ್ನು ಆವರಿಸಿದುವು. ಇಂದಿಗೂ ಈ ಪ್ರಾಂತ್ಯದಲ್ಲಿ ಕರಿಯ ಕಲ್ಲಿನ, ಮೆಟ್ಟಲುಮೆಟ್ಟಲಾಗಿರುವ, ಬೆಟ್ಟಸಾಲುಗಳನ್ನು ನೋಡಬಹುದು.

ಪರ್ಯಾಯದ್ವೀಪದ ಪಶ್ಚಿಮ ಮತ್ತು ಪೂರ್ವತೀರಗಳುದ್ದಕ್ಕೂ ಬೆಟ್ಟಸಾಲುಗಳಿವೆ. ಇವೇ ಪಶ್ಚಿಮಘಟ್ಟಗಳು ಮತ್ತು ಪೂರ್ವಘಟ್ಟಗಳು. ಇವು ಕಬ್ಬಿಣ, ಬೆಣಚು, ಪ್ರಸ್ತರೀಶಿಲೆ, ಗ್ರ್ಯಾನೈಟ್, ಚಾರ್ನಕೈಟ್ ಇತ್ಯಾದಿ ಶಿಲೆಗಳನ್ನು ಹೊಂದಿವೆ. ಸಾಮಾನ್ಯವಾಗಿ ಸಮುದ್ರಮಟ್ಟದಿಂದ 3,000–5,000 ಅಡಿ ಎತ್ತರ ಮುಟ್ಟಿವೆ. ಇವಲ್ಲದೆ ಛೋಟಾನಾಗಪುರ ಮತ್ತು ಷಿಲ್ಲಾಂಗ್ ಪ್ರಸ್ಥಭೂಮಿಗಳನ್ನೂ ಹೆಸರಿಸಬೇಕು. ಇವು ಸುಮಾರು 2,000–3,000 ಅಡಿ ಎತ್ತರವಿವೆ.

ಆರಾವಳಿ ಮತ್ತು ವಿಂಧ್ಯಪರ್ವತಗಳಿರುವುದೂ ಈ ಭಾಗದಲ್ಲೆ. ಇವುಗಳ ಉತ್ತರಕ್ಕೆ ಬಹು ವಿಸ್ತಾರವಾದ ಸಿಂಧೂ–ಗಂಗಾ ಬಯಲು ಪ್ರದೇಶವಿದೆ. ಇದು ಉತ್ತಮ ಬಗೆಯ ನದೀ ಮೆಕ್ಕಲಿನಿಂದ ಕೂಡಿದೆ.

3 ತುರ್ಕಿ, ಇರಾನ್ ಮತ್ತು ಆಫ್ಘಾನಿಸ್ತಾನ್ : ಈ ಭೂಭಾಗ ಮಡಿಕೆಬಿದ್ದು ಅಸ್ತವ್ಯಸ್ತವಾಗಿರುವ ಅಸಂಖ್ಯಾತ ಶಿಲಾಶ್ರೇಣಿಗಳಿಂದ ಕೂಡಿದೆ. ಅಲ್ಲಲ್ಲೆ ಸ್ತರಭಂಗಗಳಿಂದುಂಟಾದ ಚಚ್ಚೌಕಾಕೃತಿಯ ಪರ್ವತಗಳನ್ನೂ (ಬ್ಲಾಕ್ ಮೌಂಟನ್ಸ್) ವಿಶಾಲವಾದ ಇಳುಕಲುಗಳನ್ನೂ ನೋಡಬಹುದು, ಉತ್ತರ ಇರಾನಿನ ಎಲ್‌ಬುರ್ಸ್ ಮತ್ತು ಕೋಪೆಡಾಗ್ ಪರ್ವತಶ್ರೇಣಿಗಳು ಪೂರ್ವದಿಕ್ಕಿನತ್ತ ಆಫ್ಘಾನಿಸ್ತಾನದ ಹಿಂದೂಕುಷ್ ಪರ್ವತದ ಕಡೆಗೆ ತಮ್ಮ ಜಾಡನ್ನು ಹರಿಸಿವೆ. ದಕ್ಷಿಣದಲ್ಲಿ ಬಹು ವಿಶಾಲವಾದ ಜಾಗ್ರೋಸ್ ಶ್ರೇಣಿ ಇದೆ. ಇದರಲ್ಲಿ 14,000 ಅಡಿಗಳಿಗೂ ಮೀರಿದ ಎತ್ತರದ ಹಲವಾರು ಶಿಖರಗಳಿವೆ. ಇದರ ಜಾಡು ವಾಯುವ್ಯ–ಆಗ್ನೇಯವಾಗಿದ್ದು ಇರಾನ್, ಬರ್ಮ ಮತ್ತು ಬಲೂಚಿಸ್ತಾನಗಳಲ್ಲೆಲ್ಲ ಪ್ರಸರಿಸಿದೆ. ಮಧ್ಯ ಏಷ್ಯದ ಪ್ರಮುಖ ತೈಲಕ್ಷೇತ್ರಗಳಿಗೂ ಜಾಗ್ರೋಸ್ ಶ್ರೇಣಿಗೂ ನಿಕಟಸಂಬಂಧ. ಅದರಲ್ಲೂ ಅರೇಬಿಯನ್ ಪ್ರಸ್ಥಭೂಮಿಗೆ ಒತ್ತಿನಿಂತಿರುವ ಈ ಶ್ರೇಣಿಯ ಅಲೆಯಾಕೃತಿಯ ಮಡಿಕೆಗಳು ಈ ದೃಷ್ಟಿಯಲ್ಲಿ ಬಹು ಪ್ರಮುಖಸ್ಥಾನವನ್ನಾಕ್ರಮಿಸಿವೆ. ಅಲ್ಲದೆ ಈ ಶ್ರೇಣಿಗಳಲ್ಲಿ ಹಲವಾರು ಲವಣ ಇಳುಕಲುಗಳೂ ಜ್ವಾಲಾಮುಖಿಗಳೂ ಇವೆ.

ತುರ್ಕಿಯ ಭೂವಿನ್ಯಾಸ ಕ್ಲಿಷ್ಟವಾದುದು. ಇದರಲ್ಲಿ ಪ್ಲಿಯೊಸೀನ್ ಕಾಲದ 16,945 ಅಡಿ ಎತ್ತರದ ಮೌಂಟ್ ಅರಾರಟ್ ಜ್ವಾಲಾಮುಖಿ ಶಿಖರವೇ ಸರಳವಾದ ರಚನೆಯುಳ್ಳದ್ದೆಂದು ಭೂವಿಜ್ಞಾನಿಗಳ ಅಭಿಪ್ರಾಯ. ಈ ಕೇಂದ್ರದಿಂದ ಉಗಮವಾಗುವ ಆಂಟಿ–ಟಾರಸ್ ಮತ್ತು ಟಾರಸ್ ಪರ್ವತಗಳು ಮೆಡಿಟರೇನಿಯನ್ ತೀರದುದ್ದಕ್ಕೂ ಪಾಂಟಿಕ್ ಪರ್ವತ ಕಪ್ಪು ಸಮುದ್ರದುದ್ದಕ್ಕೂ ಹಬ್ಬಿವೆ. ಈ ಶ್ರೇಣಿಯ ಅನಟೋಲಿಯನ್ ಪ್ರಸ್ಥಭೂಮಿಯಲ್ಲಿ ಅಸಂಖ್ಯಾತ ತಗ್ಗುಗಳಿವೆ. ಇವುಗಳಲ್ಲಿ ಟುಜ್ ಮತ್ತು ವಾನ್ ಎಂಬ ಕ್ಷಾರಸರೋವರಗಳನ್ನು [illegible]. ಕಪ್ಪು ಸಮುದ್ರದ ಜೋಂಗುಲ್ ಡಾಕ್ ಎಂಬಲ್ಲಿ ಬಹುಪ್ರಸಿದ್ಧವಾದ ಕಾರ್ಬೊನಿ

ಫೆರಸ್ ಯುಗದ ಕಲ್ಲಿದ್ದಲ ನಿಕ್ಷೇಪಗಳಿವೆ. ಇತರೆಡೆಗಳಲ್ಲಿ ಕ್ರೋಮ್ ಮತ್ತು ಮ್ಯಾಂಗನೀಸ್ ಅದುರುಗಳ ವಿಶಾಲ ನಿಕ್ಷೇಪಗಳಿವೆ. ಈ ಭೂಭಾಗದಲ್ಲಿ ಆಗಾಗ್ಗೆ ಆಗುತ್ತಿದ್ದ ಭೂಕಂಪಗಳು ಪ್ರದೇಶದ ಅಸ್ಥಿರತೆಯನ್ನು ಸೂಚಿಸುತ್ತವೆ.

4 ಹಿಮಾಲಯ ಶ್ರೇಣಿ : ಪೂರ್ವ–ಪಶ್ಚಿಮದುದ್ದಕ್ಕೂ ಹಿಮಾಲಯ ಸುಮಾರು 1,500 ಮೈಲಿ ಹಬ್ಬಿದೆ. ಈ ಜಾಡಿನುದ್ದಕ್ಕೂ ಇದನ್ನು ಐದು ವಿಭಾಗಗಳಾಗಿ ವಿಂಗಡಿಸಿದ್ದಾರೆ. ಉತ್ತರದಲ್ಲಿನ ಟಿಬೆಟ್ ಪ್ರಸ್ಥಭೂಮಿಗೂ ಈ ಶ್ರೇಣಿಗೂ ನಡುವೆ ಮೇಲಿನ ಸಿಂಧೂ ಮತ್ತು ಬ್ರಹ್ಮಪುತ್ರ ಕಣಿವೆಗಳಿವೆ. ಇದರ ದಕ್ಷಿಣಕ್ಕೆ ಬೃಹದ್ ಹಿಮಾಲಯ ಶ್ರೇಣಿ ಪ್ರಾರಂಭವಾಗುತ್ತದೆ. ಶ್ರೇಣಿಯಲ್ಲಿ 24,000 ಅಡಿಗಳಿಗೂ ಮೀರಿದ ಎತ್ತರದ 60 ಶಿಖರಗಳಿವೆ. ಇವುಗಳಲ್ಲಿ ಬಹುಮುಖ್ಯವಾದವು : ಎವರೆಸ್ಟ್ ಅಥವಾ ಗೌರೀಶಂಕರ (29,028 ಅಡಿ), ನಂಗಾಪರ್ವತ (26,660 ಅಡಿ) ಮತ್ತು ನಾಮ್ ಚಿಬರ್ವ (25,446 ಅಡಿ). ಇವುಗಳ ದಕ್ಷಿಣದತ್ತ ಹಲವಾರು ಮೊನಚಾದ ಬೆಟ್ಟದ ಚಾಚುಗಳೂ ಆಳವಾದ ಕಣಿವೆಗಳೂ ಇವೆ. ಇಲ್ಲಿನ ಮುಖ್ಯ ಶಿಖರಗಳ ಎತ್ತರ 15,000 ಅಡಿ. ಮತ್ತೂ ದಕ್ಷಿಣಕ್ಕೆ ಕೆಳ ಹಿಮಾಲಯ ಶ್ರೇಣಿ ಇದೆ. ಇಲ್ಲಿ ಕೆಲವು ಶಿಖರಗಳು 12,000 ಅಡಿ ಎತ್ತರವನ್ನು ಮುಟ್ಟಿವೆ. ಹಲವಾರು ತಗ್ಗು ಪ್ರದೇಶಗಳೂ ಇವೆ. ಇವುಗಳಲ್ಲಿ ಮುಖ್ಯವಾದುದು ಕಾಶ್ಮೀರ್ ಕಣಿವೆ. ಇದರ ದಕ್ಷಿಣದ ಪರ್ವತಶ್ರೇಣಿಯ ಎತ್ತರ ಬಹುಮಟ್ಟಿಗೆ ಕುಗ್ಗಿ ಕೇವಲ 6,345 ಅಡಿ ಎತ್ತರದ ಸಿವಾಲಿಕ್ ಬೆಟ್ಟಗಳ ಸಾಲಾಗಿದೆ. ಇದು ಬಹುತೇಕ ಮಧ್ಯ ಪ್ಲಿಸ್ಟೊಸೀನ್ ಯುಗದಲ್ಲಿ ಮೇಲುಮೇಲಕ್ಕೆ ಏರುತ್ತಿದ್ದ ಹಿಮಾಲಯ ಪರ್ವತಶ್ರೇಣಿಗಳ ಸವೆತದಿಂದ ದೊರೆತ ಶಿಲಾಚೂರುಗಳಿಂದ ಕೂಡಿದೆ.

5 ಮಧ್ಯ ಏಷ್ಯ : ಇದರಲ್ಲಿ ಮುಖ್ಯವಾದ ಟಿಬೆಟ್ ಪ್ರಸ್ಥಭೂಮಿ 16,000 ಅಡಿ ಎತ್ತರವನ್ನು ಮುಟ್ಟಿದೆ. ಇಲ್ಲಿಯ ಕಾರಕೋರಂ ಪರ್ವತಶ್ರೇಣಿಯ ಗಾಡ್ವಿನ್–ಆಸ್ಟಿನ್ (K-2) ಶಿಖರ 28,250 ಅಡಿ ಎತ್ತರವಿದೆ. ಪಾಮಿರ್ ಮತ್ತು ಟಿಯೆನ್–ಷಾನ್ ಶ್ರೇಣಿಗಳಲ್ಲಿ 20,000 ಅಡಿಗಳಿಗೂ ಮೀರಿದ ಶಿಖರಗಳುಂಟು. ಅಲ್ಲದೆ 9,000 ಅಡಿ ಆಳದ ತಗ್ಗುಪ್ರದೇಶಗಳೂ ಇವೆ. ಇದಕ್ಕೆ ಉತ್ತಮ ಉದಾಹರಣೆ ಚೀನದ ಸಿಂಕಾಯ್ ಪ್ರಾಂತ್ಯದ ಸೈಡಂ ತಗ್ಗು. ಪ್ರಸಿದ್ಧವಾದ ಟುರ್‌ಫಾನ್ ಓಯಸಿಸ್ ಸಮುದ್ರಮಟ್ಟಕ್ಕೆ 980 ಅಡಿ ತಗ್ಗಿನಲ್ಲಿದೆ. ವಾಯವ್ಯದ ಭಾಗದಲ್ಲಿ ಗೋಬಿ ಮರುಭೂಮಿ ಇದೆ.

6 ಏಷ್ಯಾಟಿಕ್ ರಷ್ಯದ ತಗ್ಗು ಪ್ರದೇಶಗಳು : ಈ ವಿಭಾಗದ ಕೇಂದ್ರ ಸೈಬೀರಿಯನ್ ಪ್ರಸ್ಥಭೂಮಿ ಲೇನಾ ಮತ್ತು ಏನಿಸೈ ಕಣಿವೆಗಳ ಮಧ್ಯೆ 3,000 ಅಡಿಗಳಿಗೂ ಕಡಿಮೆ ಎತ್ತರವಾಗಿದೆ. ಏನಿಸೈನ ಪಶ್ಚಿಮಕ್ಕಿರುವ ಪಶ್ಚಿಮ ಸೈಬೀರಿಯನ್ ಬಯಲಿನಲ್ಲಿ ಮಡಿಕೆ ಬೀಳದೆ ಮೀಸೊಜ಼ೋಯಿಕ್ ಮತ್ತು ಟರ್ಷಿಯರಿ ನಿಕ್ಷೇಪಗಳಿವೆ. ಇವು ಯೂರಲ್ ಶ್ರೇಣಿಯ ತನಕ ಹಬ್ಬಿವೆ. ಈ ಭೂಭಾಗ ಸಾಮಾನ್ಯವಾಗಿ ಜೌಗು ಪ್ರದೇಶ. ಇದರಲ್ಲಿ ಬಹು ಪ್ರಸಿದ್ಧವಾದುದು ವಾಸ್ಯು ಜೇನ್ ಜೌಗುಪ್ರದೇಶ. ಆಗ್ನೇಯ ಭಾಗದ ಕುಸ್ನೆಸ್ಕ್ ಮತ್ತು ಮಿನುಸಿನ್‌ಸ್ಕ್ ತಗ್ಗುಗಳಲ್ಲಿ ಪೇಲಿಯೊಜ಼ೋಯಿಕ್ ಯುಗದ ಕಲ್ಲಿದ್ದಲ ನಿಕ್ಷೇಪಗಳಿವೆ. ಇವು ಆಲ್ಟಾಯ್ ಮತ್ತು ಸಾಯನ್ ಪರ್ವತಶ್ರೇಣಿಗಳ ತಪ್ಪಲು. ದಕ್ಷಿಣದಲ್ಲಿ ಕಜ಼ಾಕ್ ದಿಬ್ಬ ಪ್ರದೇಶವಿದೆ. ಇದರ ಸಾಮಾನ್ಯ ಎತ್ತರ 1,000 ಅಡಿ. ಕ್ಯಾಸ್ಪಿಯನ್ ಸಮುದ್ರದ ಉತ್ತರ ತೀರ ಪ್ರದೇಶದಲ್ಲಿ ತೈಲಕೇಂದ್ರಗಳಿವೆ.

7 ಪೆಸಿಫಿಕ್ ತೀರಪ್ರದೇಶಗಳು : ಪೂರ್ವ ಸೈಬೀರಿಯದಿಂದ ಪ್ರಾರಂಭವಾಗಿ ಚೀನದ ಮೂಲಕ ಹಾದು ಮಲೇಷಿಯವನ್ನು ಮುಟ್ಟುವ ಈ ಭೂಭಾಗದಲ್ಲಿ ವಿವಿಧ ವಿನ್ಯಾಸದ ಪ್ರದೇಶಗಳಿವೆ. ಲೇನಾದ ಪೂರ್ವಕ್ಕಿರುವ ವೆರ್ಖೋಯಾನ್‌ಸ್ಕ್ ಮತ್ತು ಚೆರ್‌ಸ್ಕಿ ಶ್ರೇಣಿಗಳು 8,200 ಅಡಿಗಳಿಗೂ ಮೀರಿ ಎತ್ತರವಾಗಿವೆ. ಕಾಮ್‌ಚಾಟ್ಕ ಪ್ರದೇಶದ 15,000 ಅಡಿ ಎತ್ತರದಲ್ಲಿ ಜ್ವಾಲಾಮುಖಿಗಳಿವೆ.

ಚೀನದಲ್ಲಿ ಯೆನ್-ಷಾನಿಯನ್ ಪರ್ವತಜನ್ಯ ಯುಗಕ್ಕೆ ಒಳಗಾಗಿ ಭೂಭಾಗ ಪುನರುಜ್ಜೀವನಗೊಂಡು ಸ್ತರಭಂಗಗಳ ಪ್ರಭಾವದಿಂದ ಚಚ್ಚೌಕಾಕೃತಿಯ ಬೆಟ್ಟಗಳೂ ಇತ್ತೀಚೆಗೆ ತಲೆದೋರಿದ ಮೆಕ್ಕಲು ಪ್ರದೇಶಗಳೂ ಅಕ್ಕಪಕ್ಕದಲ್ಲಿವೆ. ಮಂಚೂರಿಯ ಬಯಲಿನ ಇಕ್ಕೆಲಗಳಲ್ಲಿ ಖಿಂಗನ್, ಜೆಹೋಲ್, ಲಿಯೊಟುಂಗ್ ಮೊದಲಾದ ತಲೆಕೆಳಗಾದ ವಿನ್ಯಾಸವುಳ್ಳ ಚಚ್ಚೌಕಾಕೃತಿಯ ಭೂಭಾಗಗಳನ್ನು ಗುರುತಿಸಬಹುದು.

ಕೊರಿಯದಲ್ಲಿ ಭೂಚಟುವಟಿಕೆಗಳಿಂದ ಛೇದಿತವಾದ ಪ್ರಸ್ಥಭೂಮಿಗಳೂ ಮೀಸೊಜ಼ೋಯಿಕ್ ಮಡಿಕೆಗಳೂ ಇವೆ. ಆಗ್ನೇಯ ಚೀನ ಸಹ ಹೆಚ್ಚಿನ ರೀತಿಯ ಸ್ತರಭಂಗಗಳಿಗೆ ಒಳಗಾಗಿದೆ. ಇಲ್ಲಿನ ಪೋ'ಯಾಂಗ್, ಟುಂಗ್ ಟಿಂ'ಗ್ ಸರೋವರಗಳು ಮತ್ತು ಸಿಕಿಯಾಂಗ್ ಕಣಿವೆ ಜೇಡು ಮತ್ತು ಕಡಪಶಿಲಾಪ್ರಸ್ತರಗಳಿಂದ (ಸ್ಲೇಟ್) ಆವೃತವಾದ ತಗ್ಗುಪ್ರದೇಶಗಳಲ್ಲಿವೆ. ಪಶ್ಚಿಮದತ್ತ ಸರಿದರೆ ಬಹು ಆಳವಾಗಿ ಛೇದಿತವಾದ ಕಣಿವೆಗಳನ್ನು ಹಾದುಹೋಗಬೇಕು. ಅನಂತರ 6,000 ಅಡಿ ಎತ್ತರದ ಪಶ್ಚಿಮ ಯುನಾನ್ ಪ್ರಸ್ಥಭೂಮಿ ಸಿಗುತ್ತದೆ. ಇದಕ್ಕೆ ಉತ್ತರದಲ್ಲಿ ಕಡಿದಾದ ಸಿನ್‌ಲಿಂಗ್ ಷಾನ್ ಪರ್ವತಶ್ರೇಣಿ ಇದೆ.

ಪರ್ಮಿಯನ್ ಯುಗದಿಂದೀಚೆಗೆ ಶಾಶ್ವತ ಭೂಖಂಡವೆನಿಸಿದ ಓರ್ ಡೋಸ್ ಪ್ರಸ್ಥಭೂಮಿ. ವಾಯವ್ಯ ಚೀನದ ಕೇಂದ್ರ ಭಾಗವೇ ಇಲ್ಲಿ ಪುರಾತನ ನೆಲ ಭಾಗದ ನಿಕ್ಷೇಪಗಳನ್ನೂ ಎತ್ತರವಾಗಿರುವ ಮತ್ತು ಯಾವ ತೆರನಾದ ಭೂ ಚಟುವಟಿಕೆಗಳಿಗೂ ಒಳಗಾಗಿ ಅಸ್ತವ್ಯಸ್ತಗೊಂಡಿರದ ಲೋಯೆಸ್ ಎಂಬ ಒಂದು ಬಗೆಯ ಹಳದಿ ದೂಳು ಮಣ್ಣಿನ ನಿಕ್ಷೇಪಗಳಿವೆ. ಲೋಯೆಸ್ ಭಾಗದಲ್ಲಿ ಪ್ರಸಿದ್ಧವಾದ ಹಳದಿ ನದಿ, ಯಾಂಗ್‌ಟ್ಸಿ ಬಯಲು, ಸರೋವರಗಳು ಮತ್ತು ನೈಸರ್ಗಿಕ ಕಾಲುವೆಗಳೂ ಇವೆ.

ದಕ್ಷಿಣಭಾಗದ ಯುನಾನ್ ಪ್ರಸ್ಥಭೂಮಿ ಬರ್ಮ ಮತ್ತು ಇಂಡೋ–ಚೀನಗಳಿಗೂ ವ್ಯಾಪಿಸಿದೆ. ಬರ್ಮದಲ್ಲಿ ಇದನ್ನು ಷಾನ್ ಪ್ರಸ್ಥಭೂಮಿ ಎನ್ನುತ್ತಾರೆ. ಇದರ ಅನೇಕ ಕಡೆ ಸಲ್‌ವೀನ್ ಮತ್ತು ಮೆಕಾಂಗ್ ನದಿಗಳಿಂದಾದ ಆಳವಾದ ಕಣಿವೆಗಳಿವೆ.

8 ದ್ವೀಪಸ್ತೋಮಗಳು : ಇಂಡೊನೇಷ್ಯದಿಂದ ಜಪಾನ್ ತನಕ ಹಬ್ಬಿರುವ ಈ ಭೂಭಾಗ ಬಹು ಅಸ್ಥಿರವಾದುದು. ಈ ಪ್ರದೇಶದಲ್ಲಿ ಅಸಂಖ್ಯಾತ ಜ್ವಾಲಾಮುಖಿಗಳೂ ಅವುಗಳಿಗೆ ಸಂಬಂಧಿಸಿದ ದ್ವೀಪಗಳೂ ಇವೆ. ಪರ್ವತಜನ್ಯ ಶಕ್ತಿಗಳ ಚಟುವಟಿಕೆಯೂ ಬಹು ತೀವ್ರ. ಮಲೇಷಿಯ ಮತ್ತು ಬೋರ್ನಿಯೊಗಳಲ್ಲಿ ಮೀಸೊಜ಼ೋಯಿಕ್ ಶಿಲೆಗಳೂ ಉಳಿದೆಡೆ ಟರ್ಷಿಯರಿ ನಿಕ್ಷೇಪಗಳೂ ಮಡಿಕೆಗಳೂ ಕಂಡುಬಂದಿವೆ. ಇವುಗಳಲ್ಲಿ ತೈಲಪ್ರದೇಶಗಳೂ ಇವೆ. ಇಂಡೊನೇಷ್ಯದಲ್ಲಿ ಹಲವು ಜ್ವಾಲಾಮುಖಿಗಳ ಶಿಖರಗಳು 10,000 ಅಡಿಗಳ ಎತ್ತರವನ್ನೂ ಮೀರಿವೆ. ಅಗ್ನಿಪರ್ವತಗಳ ತೀವ್ರಗತಿಯ ಕಾರ್ಯಾಚರಣೆ ಇದ್ದೂ ಭೂಭಾಗ ಮಡಿಕೆ ಬೀಳದೆ ಅಲ್ಲಿನ ಶಿಲಾಪ್ರಸ್ತರಗಳ ಜಾಡಿನಲ್ಲಿ ಭಂಗವಾಗದಿರುವುದು ಜಪಾನಿನ ಭೂವಿನ್ಯಾಸದ ವೈಶಿಷ್ಟ್ಯ. ಇಲ್ಲಿಯ ಅತ್ಯಂತ ದೊಡ್ಡ ಭೂ ಇಳುಕಲಿನಲ್ಲಿ 12,388 ಅಡಿ ಎತ್ತರದ ಫ್ಯೂಜಿಯಾಮ ಅಗ್ನಿಪರ್ವತವಿದೆ. ಪೂರ್ವಭಾಗದಲ್ಲಿ ಮಡಿಕೆ ಬಿದ್ದಿರುವ ಮತ್ತು ಸ್ತರಭಂಗಗಳಿಂದ ಛೇದಿತವಾದ ಪ್ರಾಚೀನ ಶಿಲಾಪ್ರಸ್ತರಗಳ ಮೇಲೆ ಕಡಿದಾದ ಪರ್ವತಶ್ರೇಣಿ ಇದೆ. ಪಶ್ಚಿಮದತ್ತ ಸ್ತರಭಂಗಗಳಿಗೊಳಗಾಗದ ಕಿರಿಯ ನಿಕ್ಷೇಪಗಳೂ ಅಸಂಖ್ಯಾತ ಅಗ್ನಿಪರ್ವತಗಳೂ ಇವೆ. (ಬಿ.ಎ.ಜಿ.)

**ಏಷ್ಯದ ಮಾನವ ಬುಡಕಟ್ಟುಗಳು :** ಏಷ್ಯದಲ್ಲಿ ಮುಖ್ಯವಾಗಿ ಕಾಕೇಶಿಯನ್, ಮಂಗೋಲ್ ಮತ್ತು ನೀಗ್ರೊ ಎಂಬ ಮೂರು ಬುಡಕಟ್ಟುಗಳಿವೆ. ಪ್ರತಿಯೊಂದು ಬುಡಕಟ್ಟಿನಲ್ಲೂ ಬೇರೆ ಬೇರೆ ವಿಭಾಗಗಳೂ ಉಪ-ವಿಭಾಗಗಳೂ ಇವೆ. ಕಾಕೇಶಿಯನ್ ಬುಡಕಟ್ಟಿನಲ್ಲಿ ನಾರ್ಡಿಕ್, ಆಲ್ಪೈನ್ ಮತ್ತು ಮೆಡಿಟರೇನಿಯನ್ ; ಮಂಗೋಲಿಯನ್ ಬುಡಕಟ್ಟಿನಲ್ಲಿ ಮಂಗೋಲಿಯನ್, ಮಲೆಯೇಸಿಯನ್ ಮತ್ತು ಅಮೆರಿಕನ್ ಇಂಡಿಯನ್ ; ನೀಗ್ರೊ ಬುಡಕಟ್ಟಿನಲ್ಲಿ ಆಫ್ರಿಕದ ನೀಗ್ರೊ, ಮಲನೇಸಿಯ ಕಾಂಗೋದ ಪಿಗ್ಮಿ, ಏಷ್ಯದ ಪಿಗ್ಮಿ ಮತ್ತು ಹೋಟೆಂಟಾಟ್—ಇವು ವಿಭಾಗಗಳು. ಜನರ ಬಾಹ್ಯ ಲಕ್ಷಣಗಳೂ ಸಂಸ್ಕೃತಿಯೂ ಒಂದೊಂದರಲ್ಲಿಯೂ ಬೇರೆಬೇರೆಯಾಗಿವೆ.



ರಾಜಸ್ಥಾನಿ ರೈತ

ಮೇಲ್ಕಂಡ ಎಲ್ಲ ಬುಡಕಟ್ಟುಗಳ ವಿಭಾಗಗಳೂ ಏಷ್ಯದಲ್ಲಿ ಕಂಡುಬರುತ್ತಿಲ್ಲ ಎಂದು ತಜ್ಞರು ವಾದಿಸುತ್ತಾರೆ. ಮೆಡಿಟರೇನಿಯನ್, ಮಂಗೋಲಿಯನ್ ಮತ್ತು ನೀಗ್ರೊಗಳ ಕೆಲವು ವಿಭಾಗಗಳವರು ಏಷ್ಯದಲ್ಲಿ ಆತಿಯಾಗಿ ನೆಲೆಸಿದ್ದಾರೆಂದು

ಭಾವನೆಯಿದೆ. ಕಪಾಲ ಸೂಚ್ಯಂಕ, ಕಣ್ಣುಗಳ ಲಕ್ಷಣಗಳು, ಮೂಗಿನ ಸೂಚಿ, ದವಡೆ ಮುಂದಕ್ಕೆ ಚಾಚಿಕೊಂಡಿರುವ ಚಿಹ್ನೆ, ಕೂದಲಿನ ಲಕ್ಷಣ, ಚರ್ಮದ ಬಣ್ಣ, ಎತ್ತರ ಇವೇ ಮೊದಲಾದ ಆಧಾರಗಳನ್ನು ಇಟ್ಟುಕೊಂಡು, ಈ ಬುಡಕಟ್ಟುಗಳ ಹಲವು ವಿಭಾಗಗಳ ಜನ ಏಷ್ಯದಲ್ಲಿ ನೆಲೆಸಿದ್ದಾರೆಂದು ನಿರ್ಧರಿಸಲಾಗಿದೆ.



ಟಿಬೆಟ್ ಶ್ರೀಮಂತ

ಏಷ್ಯದಲ್ಲಿನ ಮಾನವ ಬುಡಕಟ್ಟುಗಳನ್ನು ಪೂರ್ವ ಏಷ್ಯದ ಬುಡಕಟ್ಟುಗಳು, ಪಶ್ಚಿಮ ಏಷ್ಯದ ಬುಡಕಟ್ಟುಗಳು, ಏಷ್ಯದ ಆಗ್ನೇಯ ಭಾಗದ ಬುಡಕಟ್ಟುಗಳು ಮತ್ತು ಭಾರತದ ಬುಡಕಟ್ಟುಗಳು ಎಂದು ವಿಭಾಗಿಸಿದ್ದಾರೆ. ಪೂರ್ವ ಏಷ್ಯದ ಉಪವಿಭಾಗಗಳಲ್ಲಿ ಚೀನೀಯರೂ ಜಪಾನೀಯರೂ ಬಹುಮುಖ್ಯವಾದವರು. ಚೀನೀಯರು ಮಂಗೋಲಿಯನ್ ಬುಡಕಟ್ಟಿಗೆ ಸೇರಿದವರು. ಹಾಗೆಯೇ ಜಪಾನಿನವರೂ ಮಂಗೋಲಿಯನರ ಬುಡಕಟ್ಟಿಗೆ ಸೇರಿದವರೆಂದು ಖಚಿತಪಟ್ಟಿದೆ. ಆದ್ದರಿಂದ ಈ ಎರಡು ಉಪವಿಭಾಗಗಳ ಜನರ ಬಾಹ್ಯ ರಚನೆಗಳಲ್ಲಿ ಅಷ್ಟೊಂದು ವ್ಯತ್ಯಾಸ ಕಂಡುಬರುವುದಿಲ್ಲ. ಇವೆರಡು ಉಪವಿಭಾಗಗಳ ಒಳಪಂಗಡಗಳಾದ ಉತ್ತರ ಚೀನೀಯರೂ ದಕ್ಷಿಣ ಚೀನೀಯರೂ ಟಿಬೆಟಿನವರೂ ದಕ್ಷಿಣ ಚೀನದ ಆದಿವಾಸಿಗಳೂ ಮಂಗೋಲರೂ ತುರ್ಕಿಯವರ ಕೆಲವು ಗುಂಪುಗಳವರೂ ತುಂಗುಸರೂ ಕೊರಿಯನರೂ ಏಷ್ಯದ ಆದಿವಾಸಿಗಳೂ ಮಂಗೋಲಿಯನ್ ಬುಡಕಟ್ಟಿಗೆ ಸೇರಿದವರೆಂದು ಹೇಳಬಹುದು. ಇವರ ಬಾಹ್ಯ ರೂಪಗಳಲ್ಲಿ ಒಬ್ಬರಿಗೊಬ್ಬರಿಗೆ ಹೆಚ್ಚಿನ ತಾರತಮ್ಯಗಳೇನೂ ಕಾಣಬರುವುದಿಲ್ಲವೆಂಬ ಒಂದು ವಾದವೂ ಇದೆ.



ನೇಪಾಳಿ ಬ್ರಾಹ್ಮಣ

ಒಟ್ಟಿನಲ್ಲಿ ಪೂರ್ವ ಏಷ್ಯದ ಜನ ಎತ್ತರದಲ್ಲಿ 5'2" ದಿಂದ 5'6". ಅವರ ಮುಂಡ ಉದ್ದ. ಭುಜಗಳು ಚಾಚಿಕೊಂಡಂತೆ ಇವೆ. ಮೊಣಕೈಗಳು ತೋಳುಗಳಿಗಿಂತ ಚಿಕ್ಕವು. ಕೈಗಳೂ ಪಾದಗಳೂ ಚಿಕ್ಕವೇ. ಉಗುರುಗಳು ಬುಷ್ ಜನರ ಉಗುರುಗಳಂತಿವೆ. ಬೆನ್ನು ನೇರ, ಎದೆ ಅಗಲ. ತೊಡೆಯ ಹಿಂದಿನ ಮೇಲ್ಭಾಗ ಚಿಕ್ಕದು. ಚರ್ಮ ನುಣುಪು, ಕೇಶರಹಿತ. ತಲೆಯ ಮೇಲೆ ಮಾತ್ರ ಬಹಳ ಉದ್ದನೆಯ ಕೂದಲುಂಟು. ಕೂದಲು ಉದುರಿ ಬೋಳು ತಲೆಯಾಗುವವರೇ ವಿರಳ. ಬಹಳ ವಯಸ್ಸಾದ ಮೇಲೆ ಮಾತ್ರವೇ ತಲೆ ನರೆಯುತ್ತದೆ.

ತಲೆಯ ಆಕಾರದಲ್ಲಿ ಒಂದೊಂದು ಒಳಪಂಗಡಕ್ಕೂ ವ್ಯತ್ಯಾಸಗಳು ಕಂಡುಬರುತ್ತವೆ. ಉತ್ತರ ಚೀನೀಯರ ತಲೆಯ ಆಕಾರ ಮಧ್ಯಮವರ್ಗದ್ದು, ದಕ್ಷಿಣ ಚೀನೀಯರದು ಮೋಟು ತಲೆ. ಕೊರಿಯನ್ ಮತ್ತು ಜಪಾನೀಯರದು ಚಾಚಿಕೊಂಡಂತಿರುವ ಮೋಟು ತಲೆ. ಮಂಗೋಲಿಯನರದು ಉದ್ದ ತಲೆ. ಸಾಮಾನ್ಯವಾಗಿ ಈ ಎಲ್ಲ ಒಳಗುಂಪಿನವರ ಕಣ್ಣುಗಳು ಬೇರೆ ಬುಡಕಟ್ಟುಗಳ ಜನರ ಕಣ್ಣುಗಳಿಗಿಂತ ಸಣ್ಣವಾಗಿರುತ್ತವೆ.

ಪಶ್ಚಿಮ ಏಷ್ಯದ ಜನರಲ್ಲಿ ಮಂಗೋಲಿಯನ್ ಬುಡಕಟ್ಟಿನ ಲಕ್ಷಣಗಳನ್ನು ಕಾಣಬಹುದು. ಇವರ ಜೊತೆಗೆ ಫ್ರೆಂಚರು ಮತ್ತು ಗ್ರೀಕರಿಗೆ ಹೋಲುವಂಥವರ ಪಂಗಡಗಳೂ ಸೇರಿಕೊಂಡಿವೆ. ಇರಾನ್ ದೇಶದ ವಾಯುವ್ಯ ಪ್ರದೇಶವಲ್ಲೂ ಆಫ್ಘಾನಿಸ್ತಾನದ ಪಶ್ಚಿಮ ಪ್ರದೇಶದಲ್ಲೂ ಮಂಗೋಲಿಯನ್ ಸಂಬಂಧ ಯಥೇಚ್ಛ. ಅರೇಬಿಯದ ಸುತ್ತಮುತ್ತ ಮೆಡಿಟರೇನಿಯನರ ಗುಂಪಿಗೆ ಸೇರಿದ ಜನ ಇದ್ದಾರೆ. ದಕ್ಷಿಣ ಅರೇಬಿಯದಲ್ಲಿ ಇವರ ಜೊತೆಗೆ ನೀಗ್ರೊ ಬುಡಕಟ್ಟಿನ ಜನಗಳನ್ನೂ ಕಾಣಬಹುದು.



ಪಠಾಣ

ಮೇಲ್ಕಂಡ ಬುಡಕಟ್ಟಿನ ಜನಗಳಲ್ಲಿ ನೀಗ್ರೊಗಳನ್ನು ಬಿಟ್ಟರೆ ಉಳಿದವರ ಬಾಹ್ಯ ಲಕ್ಷಣಗಳು ಸಾಮಾನ್ಯವಾಗಿ ಒಂದೇ. ಇವರಲ್ಲಿ ಬಹು ಮಂದಿಯನ್ನು ಏಷ್ಯದ ಎತ್ತರ ಪ್ರದೇಶವಾಸಿಗಳೆಂದು(ಹೈಲ್ಯಾಂಡರ್ಸ್) ಕರೆಯುವ ವಾಡಿಕೆ ಇದೆ. ಇವರ ಮೈಬಣ್ಣ ಸ್ವಲ್ಪ ಹಳದಿ. ಕೂದಲು ಕಪ್ಪು. ಮೈ ಮತ್ತು ಹುಬ್ಬುಗಳ ಮೇಲೆ ದಟ್ಟ; ತಲೆಯ ಮೇಲಿನ ಕೂದಲು ನೇರ. ಗಡ್ಡದ ಮೇಲಿನ ಕೂದಲು ಕೆಲವು ಸಾರಿ ಗುಂಗುರು.

ಇವರ ದೇಹ ಗುಂಡಗಿರುತ್ತದೆ. ಎತ್ತರ 5'5"—5'7". ಹಣೆ ಮುಂದಕ್ಕೆ ಚಾಚಿಕೊಂಡಂತಿರುತ್ತದೆ. ಹಣೆಗೆ ತಕ್ಕಂತೆ ದವಡೆಗಳು; ಮೂಗು ಬುಡದಲ್ಲಿ ಎತ್ತರ, ಆಮೇಲೆ ಉದ್ದ. ತುರ್ಕಿ, ಸಿರಿಯ, ಲೆಬನನ್. ಕುರ್ದಿಸ್ತಾನಗಳಲ್ಲಿನ ಜನರಲ್ಲಿ ಈ ಲಕ್ಷಣಗಳನ್ನು ಕಾಣಬಹುದು. ಮರಳುಗಾಡಿನಲ್ಲಿ ಮತ್ತು ಗುಡ್ಡಗಾಡಿನಲ್ಲಿ ವಾಸವಾಗಿರುವ ಅರಬರಲ್ಲಿ ಈ ಲಕ್ಷಣಗಳು ಮಾರ್ಪಾಟುಗೊಂಡಿರುತ್ತವೆ.

ಅರಬರಲ್ಲಿ ಅವರು ವಾಸವಾಗಿರುವ ಸನ್ನಿವೇಶಕ್ಕನುಗುಣವಾಗಿ ಸಮಾಜ ಧೋರಣೆಗಳು ಕಂಡುಬರುತ್ತವೆ. ರವಲ ಮತ್ತು ಷಮ್ಮಾರರು ಒಂಟೆಗಳನ್ನು ಸಾಕಿಕೊಂಡು ತಾವು ಸಮಾಜ ಧುರೀಣರು ಎಂದು ಮೇಲ್ಮಟ್ಟದ ಜೀವನ ನಡೆಸಿಕೊಂಡು ಸಮಾಜದಲ್ಲಿ ಅಗ್ರಸ್ಥಾನ ಹೊಂದಿರುತ್ತಾರೆ. ಇವರಿಗಿಂತ ಕಡಿಮೆ ದರ್ಜೆಯವರು ಎಂದರೆ ಓಯಸಿಸುಗಳ ಹತ್ತಿರ ಇರುವ ಹಳ್ಳಿಗಾಡಿನವರು. ಇವರು ಆಡಂಬರವಿಲ್ಲದ ಜೀವನವನ್ನು ನಡೆಯಿಸಿಕೊಂಡು ತಮ್ಮ ತಮ್ಮ ಕಾರ್ಯಗಳಲ್ಲಿ ನಿರತರಾಗಿರುತ್ತಾರೆ. ಇವರು ಮಧ್ಯಮವರ್ಗಕ್ಕೆ ಸೇರಿದವರು. ಗುಲಾಮರೆನಿಸಿಕೊಂಡು ಸತತವೂ ಇತರರಿಗಾಗಿ ದುಡಿಯುತ್ತಿರುವವರು ಕೊನೆಯ ದರ್ಜೆಗೆ ಸೇರಿದವರು.

ಸಮಾಜದಲ್ಲಿ ಅಗ್ರಸ್ಥಾನವನ್ನು ಪಡೆದ ಮೊದಲನೆಯ ದರ್ಜೆಯವರು ದಾಯಾದಿಗಳಲ್ಲೇ ಮದುವೆಯ ಸಂಬಂಧ ಬೆಳೆಸುತ್ತಾರೆ. ತಮ್ಮ ಚಿಕ್ಕಪ್ಪನ ಮಕ್ಕಳನ್ನೇ ಅವರು ಮದುವೆಯಾಗುವುದರಿಂದ ಬಾಹ್ಯರೂಪಗಳಲ್ಲಿ ಹೆಚ್ಚು ವ್ಯತ್ಯಾಸಗಳಿಲ್ಲ. ಬೆಡವಿನ್ ಎಂಬ ಈ ಗುಂಪಿನಲ್ಲಿ ಅನೇಕ ಜನ ಒಂದೇ ರೀತಿಯಲ್ಲಿ ಕಾಣುತ್ತಾರೆ. ಇವರಿಗೂ ಎತ್ತರ ಪ್ರದೇಶವಾಸಿಗಳಿಗೂ ಅಲ್ಪಸ್ವಲ್ಪ ವ್ಯತ್ಯಾಸಗಳು ಮಾತ್ರ ಉಂಟು.

ಬೆಡವಿನರ ಮೈ ಸ್ವಲ್ಪ ಸಣ್ಣ. ಕಾಲುಗಳು ಉದ್ದ. ಅವರ ಎದೆ ಸಣ್ಣ, ತಲೆ ಉದ್ದ. ಉಳಿದೆಲ್ಲ ಬಾಹ್ಯಲಕ್ಷಣಗಳಲ್ಲಿ ಬೆಡವಿನರಿಗೂ ಎತ್ತರ ನೆಲವಾಸಿಗಳಿಗೂ ಅಷ್ಟು ಹೆಚ್ಚಾದ ವ್ಯತ್ಯಾಸಗಳು ಕಂಡುಬರುವುದಿಲ್ಲ.

ಸಲುಬ್ಬರು ಬೆಡವಿನರ ಹತ್ತಿರ ಕೂಲಿ ಕೆಲಸ ಮಾಡಿಕೊಂಡಿರುತ್ತಾರೆ. ಇವರ ಮೈ ನುಣುಪು, ದವಡೆಗಳು ಸಣ್ಣ, ಕೋಲುಮುಖ. ಹೆಚ್ಚು ಕೂದಲಿಲ್ಲ. ಇವರು ಇಲ್ಲಿಯ ಆದಿವಾಸಿಗಳ ಗುಂಪಿಗೆ ಸೇರಿದವರು. ಈ ಭಾಗದಲ್ಲಿರುವ ಜಿಪ್ಸಿಗಳು ಕೂಲಿ ಕೆಲಸವನ್ನೂ ಸಣ್ಣಪುಟ್ಟ ವ್ಯಾಪಾರಗಳನ್ನೂ ಮಾಡಿಕೊಂಡಿರುತ್ತಾರೆ. ಆದರೆ ಇವರ ಸಂಖ್ಯೆ ಅತಿ ಕಡಿಮೆ.



ಷಾನ್ ಮಹಿಳೆ (ಉತ್ತರ ಬರ್ಮ)

ಅರೇಬಿಯದ ದಕ್ಷಿಣದ ಕಡೆಗೆ ಬೇಸಗೆಯಲ್ಲಿ ಮಳೆ ಬೀಳುವುದರಿಂದ ವ್ಯವಸಾಯದ ಕೆಲಸವನ್ನು ಮಾಡಲು ಅಲ್ಲಿನ ಜನಾಂಗಕ್ಕೆ ಬಹಳ ಅನುಕೂಲವಾಗಿದೆ. ಇಲ್ಲಿ ವಾಸವಾಗಿರುವ ಜನಾಂಗ ಬೆಡವಿನರಿಗಿಂತ ಕುಳ್ಳು, ಹೆಚ್ಚು ಹಳದಿ. ಈ ಭಾಗದಲ್ಲಿರುವ ತಿಹಮ ಎಂಬ ಸ್ಥಳದಲ್ಲಿ ಅವರು ನೀಗ್ರೊಗಳನ್ನು ದುಡಿಸಿಕೊಂಡು ಜೀವನ ಮಾಡುತ್ತಾರೆ. ಇಲ್ಲಿನ ಸುತ್ತಮುತ್ತಲಿನ ರೇವುಪಟ್ಟಣಗಳಲ್ಲಿ ಇತರರೂ ಉಂಟು. ಇವರು ಅಲ್ಲಿನ ಆದಿವಾಸಿಗಳೊಂದಿಗೆ ಹೊಂದಿಕೊಂಡು ಕೂಲಿ ಕೆಲಸ ಮಾಡಿ ಜೀವನ ನಡೆಸುತ್ತಾರೆ.

ಏಷ್ಯದ ಆಗ್ನೇಯ ಭಾಗದ ಬುಡಕಟ್ಟಿನ ಜನ ಟಿಬೆಟಿನ ಮತ್ತು ಚೀನದ ದಕ್ಷಿಣಕ್ಕೂ ಹೆಚ್ಚಾಗಿ ವಾಸವಾಗಿದ್ದಾರೆ. ಇವರಲ್ಲಿ ಬರ್ಮೀಯರು, ಮಿಯಾವೊ, ಯಾವೊ, ಲ್ಯಾವೋಟ್ ಮತ್ತು ಮೊಂಟಗ್ನಾರ್ಡರು ಸೇರಿದ್ದಾರೆ. ಥಿಯಾಸರೂ ಲ್ಯಾವೋಟರೂ ವಿಯೆಟ್‌ನಾಮರೂ ಕಾಂಬೋಡಿಯದ ಖ್ಮೇರರೂ ಬರ್ಮದ ಮಾನ್ಸರೂ ಮಲಯದವರೂ ಇಂಡೊನೇಷ್ಯದವರೂ ಈ ಗುಂಪಿಗೆ ಸೇರಿದವರು. ಯುಂಬ್ರಿ, ಶಕೈ, ಪುನನ್ಯ, ಕುಬು ಮತ್ತು ಲುಬು ಪಾಮ್‌ಪೆನ್ ಜನರೂ ಇವರ ಲಕ್ಷಣಗಳನ್ನೇ ಹೊಂದಿದ್ದಾರೆ. ಲುಜನ್, ಮಿಂಡನ್‌ಪೊ ಮತ್ತು ಪಲವನ್ ಪ್ರದೇಶಗಳಲ್ಲಿ ವಾಸಿಸುತ್ತಾರೆ. ಕಾಡುಜನರಂತೆಯೇ ಇದ್ದಾರೆ. ನೀರಿನ ಹಳ್ಳಗಳನ್ನು ತೋಡುವುದರಲ್ಲೂ ತರಕಾರಿ ಸಂಗ್ರಹಿಸಿ ಮಾರುವುದರಲ್ಲೂ ಸಣ್ಣಪುಟ್ಟ ಮೃಗಗಳನ್ನು ಬೇಟೆಯಾಡುವವರಲ್ಲೂ ಅವರು ನಿಪುಣರು. ಮೈಬಣ್ಣ ಹಳದಿ ಮಿಶ್ರಿತ ಕಂದು. ಕೆಲವರ



ಭೂತಾನದ ಸಂನ್ಯಾಸಿನಿ

ಮೈಬಣ್ಣ ಕಪ್ಪು. ತಲೆಕೂದಲು ಗುಂಗುರು. ಮುಖ ಆಸ್ಟ್ರೇಲಿಯದ ಆದಿವಾಸಿಗಳದಿದ್ದಂತೆ. ಮಲೆಯದ ಮಾಂಗರು ಇವರಿಗಿಂತ ಎತ್ತರ. ಅವರ ಮೈಬಣ್ಣ ಕಪ್ಪು.



ಛೋಟಾನಾಗಪುರದ ಮುಂಡ ಹೆಂಗಸು

ಅವರ ಹೆಂಗಸರ ಮುಖ ಮಕ್ಕಳ ಮುಖದಂತೆ ಕಾಣಿಸುತ್ತದೆ. ಅಂಡಮಾನದ ಬುಡಕಟ್ಟಿನವರಲ್ಲಿ ಜರವರೂ ಬಂಗೆ ಎಂಬ ಪಂಗಡಗಳೂ ಮುಖ್ಯ. ಇವರಲ್ಲಿ ಜರವರು ಜಗಳಗಂಟಿಗಳು, ಶುದ್ಧ ಒರಟರು. ಇವರು ಸಾಮಾನ್ಯವಾಗಿ 4′ $10\frac{3}{4}$″ ಎತ್ತರ. ಇವರ ಮೈ ಕಪ್ಪು. ಕೂದಲು ಗುಂಗುರು. ಇಲ್ಲಿರುವ ಯುಂಬ್ರಿ ಎಂಬ ಬೇಟೆಯಾಡುವ ಜನರ ಸಂಖ್ಯೆ ಕಡಿಮೆಯಾಗಿದೆ. ಉಳಿದಿರುವ ಅಲ್ಪಸ್ವಲ್ಪ ಜನಸಂಖ್ಯೆಯೂ ರೋಗಕ್ಕೆ ಬಲಿಯಾಗುತ್ತಿದೆ. ಬೋರ್ನಿಯೊದ ಪುನನರು ಯುಂಬ್ರಿಯರಿಗಿಂತ ಹೆಚ್ಚು ಆರೋಗ್ಯವಂತರು. ಬೇಟೆಯೂ ವ್ಯವಸಾಯವೂ ಶಕೈಯರ ಕಸಬು. ಕುಬು ಮತ್ತು ಬುಲು ಜನ ಕಾಡಿನಲ್ಲಿ ಸಿಕ್ಕುವ ಗೋಂದು, ಮೇಣ ಮುಂತಾದವನ್ನು ಮಾರಿ ಬಟ್ಟೆ, ಚಾಕು ಮುಂತಾದವನ್ನು ಕೊಂಡು ಜೀವನ ಸಾಗಿಸುತ್ತಾರೆ. ಷಾಂಪೆನರು ನಿಕೋಬಾರ್ ದ್ವೀಪವಾಸಿಗಳು. ಕಾಡು ಜನರಂತೆಯೇ ಇವರ ವರ್ತನೆ.



ನಿಕೋಬಾರ್ ದ್ವೀಪದ ಒಬ್ಬ ಬಾಲಕಿ



ತಾಯಿ-ಮಗು (ಅಂಡಮಾನ್)

ಕಾಂಬೋಡಿಯನರು, ಥೈಗಳು, ಬರ್ಮಾದ ಮಾನ್ಯರು ಮತ್ತು ಇಂಡೊನೇಷ್ಯನರು ಸಾಮಾನ್ಯವಾಗಿ ಕುಳ್ಳರು. 5′2″–5′3″ ಎತ್ತರ. ಇವರು ಅಷ್ಟೇನೂ ಸ್ಥೂಲಕಾಯರಲ್ಲ. ಮೈ ಹಳದಿ ಅಥವಾ ಕಂದು ಬಣ್ಣ. ಕೂದಲು ನೇರ. ಇವರ ಮುಖ ಮಂಗೋಲಿಯನರ ಮುಖದಂತೆ ಅಗಲವಾಗಿರುವುದಿಲ್ಲ. ಕಾಂಬೋಡಿಯನರ ಮೈಬಣ್ಣ ಬಹಳ ಕಂದು. ಮೂಗು ಅಗಲ. ಅವರದು ಗುಂಗುರು ಕೂದಲು. ಬರ್ಮೀಯರು ಮಂಗೋಲಿಯನರ ಬಾಹ್ಯಲಕ್ಷಣಗಳನ್ನು ಹೊಂದಿದ್ದಾರೆ. ಇಂಡೊನೇಷ್ಯನರು ಮಂಗೋಲ್ ಮತ್ತು ಆಸ್ಟ್ರಲಾಯ್ಡರ ಬೆರಕೆಯ ಗುಣ ಹೊಂದಿದ್ದಾರೆ. ಇವರ ಜೊತೆಗೆ ಇಂಡೊನೇಷ್ಯದಲ್ಲಿ ನೀಗ್ರೊ ಬುಡಕಟ್ಟಿಗೆ ಸೇರಿದವರೂ ಉಂಟು.

ಕಾಕಸಾಯಿಡ್, ಆಸ್ಟ್ರಲಾಯಿಡ್ ಮತ್ತು ಮಂಗೋಲಾಯಿಡ್ ಈ ಮೂರು ಗುಂಪುಗಳೂ ಅವುಗಳ ಉಪಪಂಗಡಗಳೂ ನಾನಾ ರೀತಿಯ ವ್ಯವಸ್ಥಿತ ಗುಂಪುಗಳನ್ನೊಳಗೊಂಡ ಮತಗಳೂ ಭಾಷೆಗಳೂ ಸಾಮಾಜಿಕ ಗುಂಪುಗಳೂ ಭಾರತದಲ್ಲಿರಲು ಅಲ್ಲಿನ ಅನುಕೂಲಕರ ವಾಯುಗುಣವೂ ಮೇಲ್ಮೈಲಕ್ಷಣಗಳೂ ಕಾರಣ. ದ್ರಾವಿಡ ಭಾಷೆಗಳನ್ನಾಡುವ ಜನರಲ್ಲಿ ಹೆಚ್ಚು ಮಂದಿ ಆಗ್ನೇಯ ಏಷ್ಯದ ಜನರನ್ನು ಹೋಲುತ್ತಾರೆ.



ಉತ್ತರ ಬೋರ್ನಿಯೊ ನಿವಾಸಿ



ಛೋಟಾನಾಗಪುರದ ಆ[illegible]ರರು

ಟಿಬೆಟಿಗೆ ಸೇರಿದ ಮಂಗೋಲಾಯಿಡ್ ಜನ ಬಹು ಹಿಂದಿನ ಕಾಲದಿಂದ ಹಿಮಾಲಯ ಪರ್ವತದ ಸುತ್ತಮುತ್ತಲೂ ವಾಸವಾಗಿದ್ದಾರೆ. ಅವರು ಭಾರತದಲ್ಲಿ ನೆಲೆಸಿದ್ದು ಯಾವಾಗ ಎಂಬುದನ್ನು ಖಚಿತಪಡಿಸುವುದು ಕಷ್ಟವಾಗಿದೆ. ಹರಪ್ಪ ಸಂಸ್ಕೃತಿಯ ಕಾಲದಿಂದಲೂ ಅವರು ಇಲ್ಲಿ ನೆಲೆಸಿದ್ದಾರೆಂದು ಹೇಳಿದರೆ ತಪ್ಪಾಗಲಾರದು.

ಮುಂಡ ಮಾತನಾಡುವವರು ಛೋಟಾನಾಗಪುರದ ಬೆಟ್ಟಗಳಲ್ಲಿಯೂ ಇತರ ಗುಡ್ಡಗಾಡುಗಳಲ್ಲಿಯೂ ವಾಸವಾಗಿದ್ದಾರೆ. ಇವರು ಆಗ್ನೇಯ ಏಷ್ಯದ ಬುಡಕಟ್ಟಿಗೆ ಸೇರಿದವರಾಗಿ, ಆರ್ಯರು ಭಾರತಕ್ಕೆ ಬರುವುದಕ್ಕೆ ಮೊದಲೇ ಬಂದು

ನೆಲೆಸಿದ್ದರೆಂದು ಹೇಳಲಾಗಿದೆ. ಅಸ್ಸಾಮಿನ ಖಾಸಿ ಜನರೂ ಈ ಗುಂಪಿಗೆ ಸೇರಿದವರು. ಈ ಗುಂಪುಗಳಲ್ಲದೆ ನಿಜವಾದ ಆದಿವಾಸಿಗಳೆಂದು ಪರಿಗಣಿಸಲಾಗಿರುವ ಬೇಟೆಗಾರರು ಮತ್ತು ಕಾಡುಜನರ ಗುಂಪುಗಳು ಇಲ್ಲಿ ವಾಸವಾಗಿವೆ. ಇವರ ಮೇಲೆ ದಂಡೆತ್ತಿಬಂದ ಹಲವಾರು ಗುಂಪುಗಳು ಇವರನ್ನು ಗುಡ್ಡಗಾಡುಗಳಿಗೂ ಅರಣ್ಯಗಳಿಗೂ ಓಡಿಸಿದುವು. ಇವರ ಬಾಹ್ಯರೂಪಗಳನ್ನು ನೋಡಿದರೆ ಇವರು ಬೇರೆ ಬುಡಕಟ್ಟಿನ ಜನಗಳೊಂದಿಗೆ ಅತಿಯಾಗಿ ಮಿಶ್ರವಾಗಿಲ್ಲವೆಂದು ತಿಳಿದುಬರುತ್ತದೆ.



ಅಸ್ಸಾಮಿನ ಖಾಸಿ ಬೆಟ್ಟಗಳ ಹೆಂಗಸು

ಗುಡ್ಡಗಾಡಿನ ಮತ್ತು ಕಾಡುಗಳ ಜನರಾದ ಒಡ್ಡರು (ವೆಡ್ಡರು) ಈಗಲೂ ಸಿಂಹಳ ದ್ವೀಪದಲ್ಲಿದ್ದಾರೆ. ಇವರು ಹೆಚ್ಚಾಗಿ ಇತರ ಗುಂಪುಗಳೊಂದಿಗೆ ಸಮ್ಮಿಳನವಾಗಿಲ್ಲ. ಸುಮಾರು 400 ವರ್ಷಗಳ ಹಿಂದೆ ಒಡ್ಡರು ಸಿಂಹಳದ ಬಹುಭಾಗದ ಕಾಡುಗಳಲ್ಲಿ ವಾಸವಾಗಿದ್ದರು. ಇವರೇ ಸಿಂಹಳದ ಆದಿವಾಸಿಗಳೆಂದು ಖಚಿತಪಟ್ಟಿದೆ. ಇವರು ಕುಳ್ಳರು; ಸುಮಾರು 5′ 1⅛″ ಎತ್ತರ. ಕಾಡಿನಲ್ಲಿ ಸಂಚರಿಸುವುದೆಂದರೆ ಇವರಿಗೆ ಹೆಚ್ಚು ಪ್ರೀತಿ. ಇವರು ಬಹುಕಾಲದ ಹಿಂದೆ, ಕಾಕಸಾಯಿಡರ ಮತ್ತು ಆಸ್ಟ್ರಲಾಯಿಡರ ಮಿಶ್ರತೆಯಿಂದ ಉದ್ಭವಿಸಿದ್ದಾರೆಂದು ತಜ್ಞರು ವಾದಿಸುತ್ತಾರೆ. ಕೇರಳದ ಉರುಲಿಸರು ಆಸ್ಟ್ರಲಾಯಿಡರ ಗುಂಪಿಗೂ ಛೋಟಾನಾಗಪುರದ ಬಿರ್‌ಹೋರರು ಕಾಕಸಾಯಿಡರ ಗುಂಪಿಗೂ ಸೇರಿದವರು. ಕೇರಳದ ಅಣ್ಣಾಮಲೆಯಲ್ಲಿರುವ ಕಾಡರರು ಕೆಲವು ಮಿಶ್ರಿತ ಬುಡಕಟ್ಟುಗಳಿಗೆ ಸೇರಿದವರು. 1941ರಲ್ಲಿ ಇವರ ಸಂಖ್ಯೆ 566. ಇವರು ಗೆಡ್ಡೆಗೆಣಸುಗಳನ್ನು ತಿಂದು, ಜೇನುತುಪ್ಪವನ್ನು ಮಾರಿ ಜೀವನ ನಡೆಸುತ್ತಾರೆ. ಇವರಲ್ಲಿ ತಮ್ಮ ಚಿಕ್ಕಪ್ಪನ ಮಗಳನ್ನು ಮದುವೆಯಾಗುವುದು ರೂಢಿ. ಬಹುಪತೀತ್ವ ಇವರಲ್ಲಿರುವ ಪದ್ಧತಿ. ಇವರು ಕುಳ್ಳರು; ಚಾಕಲೇಟ್ ಬಣ್ಣದವರು. ಇವರದು ಉಂಗುರ ಕೂದಲು. ಇವರನ್ನು ಆಸ್ಟ್ರಲಾಯಿಡ್ ಗುಂಪಿಗೆ ಸೇರಿದವರೆಂದು ಹೇಳಬಹುದು.

ಬಿಹಾರದ ದಕ್ಷಿಣ ಭಾಗದ ಛೋಟಾನಾಗಪುರದ ಬೆಟ್ಟಗಳಲ್ಲೂ ಈ ಬೆಟ್ಟಗಳ ಸುತ್ತಮುತ್ತಲಿನ ಹಳ್ಳಿಗಳಲ್ಲೂ ವಾಸವಾಗಿರುವ ಜನ ಮುಂಡ, ಸಂತಾಲ ಮುಂತಾದ ಭಾಷೆಗಳನ್ನಾಡುತ್ತಾರೆ. ಅವರು ಭೂವ್ಯವಸಾಯದಲ್ಲಿ ತೊಡಗಿದ್ದಾರೆ. ಎತ್ತರ ಸರಾಸರಿ 5′ 2⅛″. ಸಣ್ಣ ಮತ್ತು ಉದ್ದ ತಲೆ. ಕಂದುಬಣ್ಣದ ಮೈ. ಮೂಗಿನ ಬುಡ ಅಗಲ. ಮೈಮೇಲೆ ಹೆಚ್ಚು ಕೂದಲಿಲ್ಲ. ಅನೇಕರಿಗೆ ತುಟಿಗಳು ದಪ್ಪವಾಗಿವೆ. ಇವರು ಮಲೇನೇಸಿಯನರಂತೆ ಬಾಹ್ಯರೂಪರೇಖೆ ಪಡೆದಿದ್ದಾರೆ. ಇವರೂ ಮಂಗೋಲಾಯಿಡರ ಮತ್ತು ಆಸ್ಟ್ರಲಾಯಿಡರ ಸಮ್ಮಿಶ್ರವಿರಬೇಕೆಂದು ಸುಲಭವಾಗಿ ಹೇಳಬಹುದು.

ಖಾಸಿಬೆಟ್ಟಗಳಲ್ಲಿ ವಾಸವಾಗಿರುವವರು ಹೆಚ್ಚುಕಡಿಮೆ ಸಂತಾಲರ ಗುಂಪಿಗೆ ಸೇರಿದವರು. ಇವರು ಯಾವುದೋ ಒಂದು ಗೊತ್ತಿಲ್ಲದ ಕಾಲದಲ್ಲಿ ಆಗ್ನೇಯ ಏಷ್ಯದಿಂದ ಭಾರತಕ್ಕೆ ವಲಸೆ ಬಂದು ವ್ಯವಸಾಯ ಉದ್ಯಮಗಳಲ್ಲಿ ನಿರತರಾಗಿದ್ದಾರೆ. ಇವರು ಸುಮಾರು 5,000′ ಎತ್ತರದಲ್ಲಿರುವ ಬೆಟ್ಟಗಳಲ್ಲಿ ಚಳಿ, ಮಳೆ ಮತ್ತು ಮೋಡಗಳನ್ನೊಳಗೊಂಡ ಸನ್ನಿವೇಶದಲ್ಲಿ ತಮ್ಮ ದಿನಚರಿಯ ಕೆಲಸಗಳನ್ನು ಸಾಗಿಸಿಕೊಂಡು ಹೋಗುತ್ತಿದ್ದಾರೆ. ಇವರ ಮುಂಡ ಉದ್ದ, ಕಾಲುಗಳು ಮೋಟು, ಮುಖ ಮತ್ತು ಮೂಗು ದೊಡ್ಡವು. ಇವರದು ಹಳದಿ ಅಥವಾ ಕೆಂಪು ಮಿಶ್ರಿತ ಕಂದು ಬಣ್ಣದ ಮೈ. ಕೂದಲು ನೇರ. ಸುಮಾರು ಸೇಕಡಾ 60ರಷ್ಟು ಜನರ ಕಣ್ಣುರೆಪ್ಪೆಗಳು ಮುಚ್ಚಿಕೊಂಡಂತೆ ಇರುತ್ತವೆ. ಒಟ್ಟಿನಲ್ಲಿ ಮಂಗೋಲಾಯಿಡರ ಬಾಹ್ಯ ಲಕ್ಷಣಗಳು ಅವರಲ್ಲಿ ಅತಿಯಾಗಿಯೂ, ಆಸ್ಟ್ರಲಾಯಿಡರ ಲಕ್ಷಣ ಸ್ವಲ್ಪ ಕಡಿಮೆಯಾಗಿಯೂ ಇರುವುವೆಂದು ಹೇಳಬಹುದು. ಗೇರೋ ಬೆಟ್ಟಗಳಲ್ಲಿ ವಾಸಿಸುವ ಗೇರೋ ಜನರೂ ಮಂಗೋಲಾಯಿಡರ ಮತ್ತು ಆಸ್ಟ್ರಲಾಯಿಡರ ಮಿಶ್ರವೆಂದು ಖಚಿತವಾಗಿ ಹೇಳಬಹುದು. ಇವರಿಬ್ಬರಿಗೂ ಹೆಚ್ಚು ವ್ಯತ್ಯಾಸಗಳು ಕಂಡುಬಂದಿಲ್ಲ. ಇರುವ ಅಲ್ಪಸ್ವಲ್ಪ ವ್ಯತ್ಯಾಸಗಳು ಇವರು ವಾಸವಾಗಿರುವ ಸನ್ನಿವೇಶಗಳಿಗೆ ಮಾತ್ರ ಅನ್ವಯಿಸಿವೆ.

ದಕ್ಷಿಣ ಭಾರತದಲ್ಲಿ ದ್ರಾವಿಡಭಾಷೆಗಳಾದ ತಮಿಳು, ತೆಲುಗು, ಕನ್ನಡ, ಮಲೆಯಾಳಂ ಮತ್ತು ತುಳು ಬಳಕೆಯಲ್ಲಿವೆ. ದ್ರಾವಿಡರು 5′ 4″ – 5′ 5″ ಬೆಳೆಯುತ್ತಾರೆಂದೂ ಕಪ್ಪು ಮೈಬಣ್ಣದಿಂದ ಮೊದಲ್ಗೊಂಡು ಕಪ್ಪು ಮಿಶ್ರಿತ ಕಂದು ಬಣ್ಣದವರಾಗಿ ಇರುತ್ತಾರೆಂದೂ ಹೇಳಲಾಗಿದೆ. ಇವರ ಕಣ್ಣುಗಳು ಸಾಮಾನ್ಯವಾಗಿ ಕಪ್ಪುಗುಡ್ಡೆಗಳುಳ್ಳವವಾಗಿ ಚರ್ಮದ ಬಣ್ಣಕ್ಕೆ ಹೋಲಿಕೆಯಾಗುತ್ತವೆ. ತಲೆಕೂದಲು ಕಪ್ಪಾಗಿಯೂ ಅಂದವಾಗಿಯೂ ಹೆಚ್ಚಾಗಿಯೂ ಇರುತ್ತದೆ. ಒಟ್ಟಿನಲ್ಲಿ ದ್ರಾವಿಡ ಪಂಗಡದವರು ಕಾಕಸಾಯಿಡರ ಬಾಹ್ಯಗುಣಗಳುಳ್ಳವರಾಗಿದ್ದಾರೆಂದೂ ಅವರ ಬುಡಕಟ್ಟಿಗೆ ಸೇರಿದ್ದಾರೆಂದೂ ಹೇಳಬಹುದು.

ಹಿಮಾಲಯದ ತಪ್ಪಲಲ್ಲಿ ವಾಸವಾಗಿರುವ ಮಂಗೋಲಾಯಿಡರ ವಿಭಾಗಕ್ಕೆ ಸೇರಿದವರು ಆರ್ಯರಿಗಿಂತ ಹಿಂದೆಯೇ ಪಾಕಿಸ್ತಾನ, ನೇಪಾಳ, ಸಿಕ್ಕಿಂ, ಭೂತಾನಗಳಲ್ಲಿ ನೆಲೆಸಿದ್ದರು. ಇವರೆಲ್ಲರನ್ನೂ ಭೂಟಿಯರು ಮತ್ತು ಬೆಟ್ಟದಲ್ಲಿ ವಾಸವಾಗಿರುವ ಜನರೆಂದು ವಿಭಾಗಿಸಬಹುದು. ಭೂಟಿಯರನ್ನು ಷೆರ್ಪಾಸರೆಂದೂ ಭೂತಾನಿಗಳೆಂದೂ ಕರೆಯುವುದು ವಾಡಿಕೆ. ಮಂಗೋಲಾಯಿಡ್ ವಿಭಾಗಕ್ಕೆ ಸೇರಿದ ಇವರು ಅತಿ ಎತ್ತರವಾದ ಸ್ಥಳದಲ್ಲಿ, ಅಂದರೆ ಸುಮಾರು 9,000 ಅಡಿಗಳ ಮೇಲೆ, ವಾಸವಾಗಿದ್ದಾರೆ. ಉದ್ದ ಮುಂಡ, ಉದ್ದ ಮತ್ತು ಅಗಲ ತಲೆ, ಮಂಗೋಲಾಯಿಡರ ಕಣ್ಣುಗಳಂತೆ ಕಣ್ಣು, ಅಗಲ ಮುಖ—ಇವು ಇವರ ಬಾಹ್ಯಲಕ್ಷಣಗಳು. ಇವರಲ್ಲಿ ಕೆಲವರ ಕೈಗಳು ಮತ್ತು ಕಾಲುಗಳು ಉದ್ದವಾಗಿ ಇರುವುದೂ ಉಂಟು. ಕಾಫಿರ್, ಲಹುಲಿ, ಮಂಚಾಟಿಸ್, ಕನವಾರ್, ದತ್ತಿಯಲ್, ಮಾಗ, ಗುರುಂಗ, ತಮಂಗ, ತರುವ, ರಿಯಾಸ, ಲುಂಬುಸ ಮತ್ತು ಲೆಪ್ಚಸರು ಹಿಮಾಲಯದ ಗುಡ್ಡಗಾಡುಗಳಲ್ಲಿ ವಾಸಿಸುತ್ತಾರೆ. ಇವರೂ ಮಂಗೋಲಾಯಿಡ್ ಮತ್ತು ಕಾಕಸಾಯಿಡ್ ಮಿಶ್ರಿತರು. ನ್ಯೂಯರು ಖಟ್ಮಂಡುವಿನ ಕಣಿವೆಯ ಹಲವು ಭಾಗಗಳಲ್ಲಿ ವಾಸವಾಗಿದ್ದಾರೆ. ಅವರ ಮೈಬಣ್ಣ ಸುಮಾರು ಹಳದಿ; ಚೀನೀಯರಂತೆ ಕಾಣಿಸುತ್ತಾರೆ. ಅವರ ಸಮೀಪದಲ್ಲೇ ವಾಸವಾಗಿರುವ ಖಾಸರ ಭಾಷೆ ನೇಪಾಳಿ. ಮೊಗಲರ ಕಾಲದಲ್ಲಿ ಕೆಲವು ರಜಪೂತರು ಉತ್ತರ ದಿಕ್ಕಿಗೆ ಹೋಗಿ ಅಲ್ಲಿ ನೆಲೆಸಿ ರಾಜ್ಯ ಕಟ್ಟಿ ಆಮೇಲೆ ಅಲ್ಲಿನ ಜನಗಳಲ್ಲಿ ಮಿಶ್ರಿತರಾಗಿ ಹೋದರು. ಅವರು ಈಗಿನ ಖಾಸರು. ಬರ್ಮದ ಉತ್ತರ ಭಾಗದ ಪರ್ವತ ಶ್ರೇಣಿಯ ತಪ್ಪಲಲ್ಲಿ ವಾಸವಾಗಿರುವ ನಾಗರು ಕೆಂಪು ಮಿಶ್ರಿತ ಕಂದುಬಣ್ಣದವರು. ಅವರು ಏಷ್ಯದ ಮಂಗೊಲಾಯಿಡ್ ಗುಂಪಿಗೆ ಸೇರಿದವರು; ಅಮೆರಿಕದ ರೆಡ್ ಇಂಡಿಯನರಂತೆ ಕಾಣಿಸುತ್ತಾರೆ.



ಸಿಂಹಳದ ವೆಡ್ಡ

ಈ ಪಂಗಡಗಳನ್ನು ಬಿಟ್ಟರೆ ಉಳಿದೆಲ್ಲ ಜನರೂ ಅಖಂಡ ಭಾರತದಲ್ಲಿ

ಕಾಕಸಾಯಿಡರ ಗುಂಪಿಗೆ ಸೇರಿದವರು. ಇವರೆಲ್ಲರೂ ಪಶ್ಚಿಮ ಏಷ್ಯದಿಂದ ವಲಸೆ ಬಂದವರ ೧ [ ವಂಶಕ್ಕೆ ಸೇರಿದವರು. ಅವರು ಇಲ್ಲಿನ ಮೂಲವಾಸಿಗಳೊಂದಿಗೆ ಮಿಶ್ರಗೊಂಡು, ಭಾರತದ ವಾಯುಗುಣ ಭೂಲಕ್ಷಣಗಳಿಗೆ ತಕ್ಕಂತೆ ಪರಿವರ್ತನೆ ಗೊಂಡರು. (ಕೆ.ಎಚ್.ಐ.)

**ಏಷ್ಯದ ವಾಸ್ತುಶಿಲ್ಪ, ಕಲೆ :** ಕಲೆ ಮತ್ತು ವಾಸ್ತುಶಿಲ್ಪಗಳ ಅಧ್ಯಯನ ದೃಷ್ಟಿಯಿಂದ ಏಷ್ಯವನ್ನು ಪಶ್ಚಿಮ, ಪೂರ್ವ, ದಕ್ಷಿಣ, ಉತ್ತರ, ಆಗ್ನೇಯ, ಮಧ್ಯ ಎಂದು ವಿಭಾಗಿಸಬಹುದು. ಕ್ರಿ.ಪೂ. ಐದನೆಯ ಸಹಸ್ರಮಾನದಿಂದ ಪ್ರಾರಂಭವಾಗಿ ಇಂದಿನ ವರೆಗೂ ಏಷ್ಯದಲ್ಲಿ ಕಲೆಗಳು ಉಜ್ವಲವಾಗಿ ಬೆಳೆದುಬಂದಿವೆ. ವಿಶ್ವದ ಪ್ರಮುಖ ಸಂಸ್ಕೃತಿಗಳು ಇಲ್ಲಿಯೇ ಜನ್ಮ ತಳೆದು ವಾಸ್ತುಶಿಲ್ಪ ಮತ್ತು ಇತರ ಕಲೆಗಳಿಗೆ ಸುಭದ್ರ ಬುನಾದಿ ಹಾಕಿದುವು. ಈ ದೃಷ್ಟಿಯಿಂದ ಮೆಸೊಪೊಟೇಮಿಯ, ಸಿಂಧೂ ಕೊಳ್ಳ ಮುಂತಾದವು ಗಮನಾರ್ಹವಾದವು.



ಮೈತ್ರೇಯ ಬುದ್ಧನ ಕಂಚಿನ ಪ್ರತಿಮೆ (ಚೀನ)

**ಪಶ್ಚಿಮ ಏಷ್ಯ :** ಅನೇಕ ಪ್ರಾಚೀನ ನಾಗರಿಕತೆಗಳಿಗೆ ಜನ್ಮವಿತ್ತ ಪಶ್ಚಿಮ ಏಷ್ಯ ಕಲೆಯ ದೃಷ್ಟಿಯಿಂದಲೂ ಪ್ರಮುಖಸ್ಥಾನ ಪಡೆದಿದೆ. ಇದರಲ್ಲಿ ಮೆಸೊಪೊಟೇಮಿಯ, ಅನಟೋಲಿಯ ಮತ್ತು ಸಿರಿಯ ಮುಖ್ಯ. ಕ್ರಿ.ಪೂ. ನಾಲ್ಕನೆಯ ಸಹಸ್ರಮಾನದಿಂದ ಪ್ರಾರಂಭವಾದ ಕಲಾಪರಂಪರೆ ಪಶ್ಚಿಮ ಏಷ್ಯದಲ್ಲಿ ಈಗ ಅನೇಕ ರೂಪಾಂತರ ಹೊಂದಿ ಮುಂದುವರಿದಿದೆ. ಮೆಸೊಪೊಟೇಮಿಯದ ಉರೂಕ್ ಸಂಸ್ಕೃತಿಯ ಕಾಲದಲ್ಲಿ ವಾಸ್ತುಕಲೆ ಚೆನ್ನಾಗಿ ಅಭಿವೃದ್ಧಿ ಹೊಂದಿತ್ತು. ಈರೆಕ್‍ನಲ್ಲಿ ದೊರಕಿರುವ ಅರಮನೆಯೂ ದೇವಾಲಯಗಳೂ ಮನೆಗಳೂ ಉರೂಕ್ ಸಂಸ್ಕೃತಿಯ ಪ್ರತಿನಿಧಿಗಳಾಗಿದ್ದು ಅವುಗಳ ಬೃಹತ್ಪ್ರಮಾಣ ಮತ್ತು ಆಂತರಿಕ ಅಲಂಕಾರಗಳಿಂದ ಮೆಚ್ಚುಗೆಗೆ ಅರ್ಹವಾಗಿವೆ. ಜಂಡಟ್‍ನಾಸ್ರ್‍ನಲ್ಲಿ ಈ ಸಂಸ್ಕೃತಿಯೂ ಕಲೆಗಳೂ ಮುಂದುವರಿದುವು. ವರ್ಣಚಿತ್ರಗಳು ವಿಶೇಷವಾಗಿ ಬಳಕೆಗೆ ಬಂದುವು. ಶಿಲ್ಪ ಕಲೆಯಲ್ಲೂ ಗಮನಾರ್ಹ ಬೆಳವಣಿಗೆಗಳಾದುವು. ಈ ಕಾಲದ ಶಿಲ್ಪವೆಲ್ಲವೂ ಧಾರ್ಮಿಕ ಮತ್ತು ಮತೀಯ ಉದ್ದೇಶಗಳಿಗೇ ಮೀಸಲಾಗಿದ್ದುದರಿಂದ, ರಾಜರೂ ಪುರೋಹಿತರೂ ನಿರ್ದೇಶಿಸಿದಂತೆ ಶಿಲ್ಪಗಳನ್ನು ತಯಾರಿಸಬೇಕಾಗಿತ್ತು. ಶಿಲ್ಪಿಗೆ ತನ್ನ ಕಲ್ಪನೆಗೆ ತಕ್ಕಂತೆ ಶಿಲ್ಪಗಳನ್ನು ತಯಾರಿಸುವ ಅವಕಾಶವಿಲ್ಲದಿದ್ದರೂ ಆ ಕಾಲದ ಶಿಲ್ಪಗಳು ಬಹು ಮನೋಹರವಾಗಿವೆ. ಕಲ್ಲಿನ ಶಿಲ್ಪಗಳ ಜೊತೆಗೆ ಜೇಡಿಮಣ್ಣಿನ ವಿಗ್ರಹ ತಯಾರಿಸುವ ಕಲೆಯೂ ಬೆಳೆದು ಬಂತು. ಮುದ್ರೆಗಳ ತಯಾರಿಕೆಯಲ್ಲಿ ಈ ಕಾಲದ ಕಲಾಕಾರನಿಗೆ ಹೆಚ್ಚಿನ ಪರಿಶ್ರಮವಿತ್ತು.

ಸಾರ್ಗನಾಯಿಡ್ ಕಾಲದಲ್ಲಿ ಆಕಾಡ್ ನಗರ ಚೆನ್ನಾಗಿ ಅಭಿವೃದ್ಧಿಯಾಯಿತು. (ನೋಡಿ—ಅಕ್ಕಾಡ್) ಬ್ಯಾಬಿಲೋನಿಯನ್ ಸಂಸ್ಕೃತಿಯ ಕಾಲದಲ್ಲಿ ಬೃಹತ್ಪ್ರಮಾಣದಲ್ಲಿ ಜಿಗುರೇಟ್ ದೇವಾಲಯಗಳ ನಿರ್ಮಾಣ ಪ್ರಾರಂಭವಾಯಿತು. ಅರ್‍ನಲ್ಲಿ ನಿರ್ಮಿಸಿದ ದೇವಾಲಯ ಆ ಕಾಲದ ವಾಸ್ತುಕಲೆಗೆ ಉತ್ತಮ ನಿದರ್ಶನ. ಕ್ರಿ.ಪೂ. ಎರಡನೆಯ ಸಹಸ್ರಮಾನದ ಕೊನೆಯಲ್ಲಿ ಅಸ್ಸೀರಿಯನ್ ಸಂಸ್ಕೃತಿ ಅಭಿವೃದ್ಧಿ ಹೊಂದಿತು. ಈ ಕಾಲದ ಕಟ್ಟಡಗಳಿಗಿಂತ ಶಿಲ್ಪ ಹೆಚ್ಚು ಕಾಣಸಿಗುತ್ತವೆ. ಮೆಸೊಪೊಟೇಮಿಯದ ಕಲಾಸಂಪ್ರದಾಯಗಳಿಂದ ಪ್ರಭಾವಿತಗೊಂಡು ಅಭಿವೃದ್ಧಿಹೊಂದಿದ ಕಲೆಗಳಲ್ಲಿ ಅನಟೋಲಿಯ ಮತ್ತು ಆರ್ಮೀನಿಯದ ಕಲೆಗಳು ಮುಖ್ಯ. ಕ್ರಿ.ಪೂ. ಎರಡನೆಯ ಸಹಸ್ರಮಾನದಿಂದ ಹಿಟ್ಟೈಟ್ ಸಂಸ್ಕೃತಿಯ ಆಶ್ರಯದಲ್ಲಿ ಅನಟೋಲಿಯದಲ್ಲಿ ವಾಸ್ತುಶಿಲ್ಪ ಕಲೆ ಉಚ್ಛ್ರಾಯ ಸ್ಥಿತಿ ಮುಟ್ಟಿತು. ಹಿಟ್ಟೈಟ್ ಸಂಸ್ಕೃತಿಯ ಪತನಾನಂತರ ಆರ್ಮೀನಿಯದಲ್ಲಿ ಕಲೆ ಅಭಿವೃದ್ಧಿಹೊಂದಿತು. ಹಿಟ್ಟೈಟ್ ಕಾಲದ ಕಟ್ಟಡಗಳು ವಿಶೇಷವಾಗಿ ಕಲ್ಲಿನಿಂದ ನಿರ್ಮಾಣವಾದವು. ಹಿಟ್ಟೈಟ್ ರಾಜ ಹತ್‍ಹುಯುಕ್ ಕ್ರಿ.ಪೂ. ಹದಿನಾಲ್ಕನೆಯ ಶತಮಾನದಲ್ಲಿ ಉತ್ತರ ಸಿರಿಯದ ಭಾಗಗಳನ್ನು ತನ್ನ ವಶಮಾಡಿಕೊಂಡು ಹತ್ತುಶಾಶ್ ಎಂಬ ರಾಜಧಾನಿಯನ್ನು ಸ್ಥಾಪಿಸಿದ. ಈತ ಇಲ್ಲಿ ಎತ್ತರವಾದ ತೋರಣಗಳನ್ನೂ ಸಿಂಹದ ಶಿಲ್ಪಗಳನ್ನೂ ನಿರ್ಮಿಸಿ ವಿಶಾಲವಾದ ಕಟ್ಟಡಗಳನ್ನು ಕಟ್ಟಿಸಿದ. ವಾಸ್ತುಶಿಲ್ಪದೃಷ್ಟಿಯಿಂದ ಇದೊಂದು ಪರ್ವಕಾಲ. ಈ ರಾಜ್ಯದ ಪತನವಾದ ಅನಂತರ ಉರರ್ತು ಎಂಬ ರಾಜ್ಯ ಕ್ರಿ.ಪೂ. ಏಳನೆಯ ಶತಮಾನದಲ್ಲಿ ತಲೆಯೆತ್ತಿತ್ತು. ಈ ಕಾಲದಲ್ಲಿ ಲೋಹಶಿಲ್ಪಕಲೆ ಉಚ್ಛ್ರಾಯ ಸ್ಥಿತಿ ಮುಟ್ಟಿತು. ಕಂಚು, ತಾಮ್ರ ಮೊದಲಾದ ಲೋಹಗಳಲ್ಲಿ ಮಾಡಿದ ಬೃಹತ್ ಪ್ರಮಾಣದ ಸಿಂಹದ ಮುಖಗಳೂ ಪಾತ್ರೆಗಳೂ ಕಲಾತ್ಮಕವಾಗಿವೆ. ಈ ಪಾತ್ರೆಗಳ ಮೇಲೆ ರೇಖಾಚಿತ್ರಗಳೂ ತಗ್ಗುಮಾದರಿಯ ಶಿಲ್ಪಗಳೂ ವಿಶೇಷವಾಗಿವೆ. ಇದರಲ್ಲಿ ಅಸ್ಸೀರಿಯನ್ ಸಂಸ್ಕೃತಿಯ ಪ್ರಭಾವಗಳನ್ನು ಗುರುತಿಸಬಹುದು.

ಸಿರಿಯದಲ್ಲಿ ಕ್ರಿ.ಪೂ. ಎರಡನೆಯ ಸಹಸ್ರಮಾನದಿಂದಲೇ ಅರಮನೆ ಮತ್ತು ದೇವಾಲಯಗಳ ನಿರ್ಮಾಣ ಕಲೆ ಪ್ರಾರಂಭವಾಯಿತು. ಸಿರಿಯನ್ ಕಲೆಯಲ್ಲಿ ವಿಶೇಷವಾಗಿ ಅನಟೋಲಿಯ ಮತ್ತು ಹಿಟ್ಟೈಟ್ ಕಲಾಪ್ರಭಾವಗಳನ್ನೇ ಕಾಣಬಹುದು. ಆದ್ದರಿಂದ ಪ್ರಾಚೀನ ಸಿರಿಯನ್ ಕಲೆ ಮಿಶ್ರಜಾತಿಯದು. ಅಲಲಖ್ ಮತ್ತು ಉಗರಿಟ ಪ್ರದೇಶಗಳಲ್ಲಿ ಪ್ರಾಚೀನತಮ ಕಟ್ಟಡಗಳ ಅವಶೇಷಗಳು ದೊರಕಿವೆ. ಆದರೆ ಈ ಕಾಲದಲ್ಲಿ ಶಿಲ್ಪ ಇನ್ನೂ ಚೆನ್ನಾಗಿ ಅಭಿವೃದ್ಧಿಯಾಗಿರಲಿಲ್ಲ. ಇದು ವಿಕಾಸ ಹೊಂದಿದ್ದು ಕ್ರಿ.ಪೂ. ಹದಿನೈದನೆಯ ಶತಮಾನದ ಹೊತ್ತಿಗೆ. ಇದನ್ನು ಸಿರೋ-ಫಿನೀಷಿಯನ್ ಕಲಾಶೈಲಿಯೆನ್ನಬಹುದು. ಇದ್ರಿಮಿ ರಾಜನ ಶಿಲ್ಪವಾಗಲಿ ಅದರ ಸಮೀಪದಲ್ಲಿ ದೊರಕಿರುವ ಸಿಂಹಗಳ ಶಿಲ್ಪಗಳೇ ಆಗಲಿ ಪ್ರಬುದ್ಧಶೈಲಿಗೆ ಸೇರಿದವುಗಳಲ್ಲವೆನ್ನುವುದು ಸುಲಭವಾಗಿ ಗೊತ್ತಾಗುತ್ತದೆ. ಮೆದುಕಲ್ಲಿನಲ್ಲಿ ಮಾಡಲಾದ ಈ ಶಿಲ್ಪಗಳಲ್ಲಿ ಮೆರಗು ಕೊಟ್ಟು ಮಾಡಿರುವ ಕಣ್ಣುಗಳು ಗಮನಾರ್ಹ. ಈ ಕಾಲದ ಕಂಚಿನ ವಿಗ್ರಹಗಳೂ ಪಾತ್ರೆಗಳೂ ಆಗಿನ ಶಿಲ್ಪಶೈಲಿಯನ್ನೇ ಅನುಸರಿಸಿವೆ. ಆದರೆ ಚಿನ್ನದ ಪಾತ್ರೆಗಳು ಬಹಳ ನಾಜೂಕಾಗಿ ತಯಾರಿಸಿದವು. ಇವುಗಳ ಮೇಲೆ ಕೆತ್ತಲಾದ ರೇಖಾಚಿತ್ರಗಳು ಬಹು ರಮ್ಯ. ದಂತದಲ್ಲಿ ತಯಾರಿಸಲಾದ ಸಣ್ಣ ಸಣ್ಣ ಶಿಲ್ಪಗಳು ಚಿನ್ನದ ಕೆಲಸದಂತೆಯೇ ಉತ್ತಮ ಮಟ್ಟದಲ್ಲಿವೆ.

ಕ್ರಿ.ಪೂ. ಸಾವಿರದ ಇನ್ನೂರರ ಸಮಯಕ್ಕೆ ಉಂಟಾದ ರಾಜಕೀಯ ಬದಲಾವಣೆಗಳಿಂದ ಮತ್ತೊಂದು ಶೈಲಿಯ ಕಲೆ ಸಿರಿಯದಲ್ಲಿ ಪ್ರಾರಂಭವಾಯಿತು. ಇದು ಸಿರೋ-ಹಿಟ್ಟೈಟ್ ಶೈಲಿ. ಇದು ಸಿರೋ-ಫಿನೀಷಿಯನ್ ಶೈಲಿಗಿಂತ ಹೆಚ್ಚು ವಿಕಾಸ ಹೊಂದಿದ್ದು. ಇದರಲ್ಲಿ ಉತ್ತಮ ಶಿಲ್ಪಗಳಿವೆ.

ಪಶ್ಚಿಮ ಏಷ್ಯದಲ್ಲಿ ಪ್ರಾಚೀನ ಸಂಸ್ಕೃತಿಗಳು ಪತನವಾದ ಅನಂತರ ಈ ಪ್ರದೇಶದ ಬಹು ಭಾಗಗಳನ್ನು ಅರಬರು ಆಕ್ರಮಿಸಿಕೊಂಡರು. ಈ ಆಕ್ರಮಣದೊಂದಿಗೆ ಕಲೆಯಲ್ಲಿಯೂ ಬದಲಾವಣೆಗಳುಂಟಾದವು (ನೋಡಿ—ಇಸ್ಲಾಮೀ ವಾಸ್ತುಶಿಲ್ಪ, ಕಲೆ).

**ಪೂರ್ವ ಏಷ್ಯ :** ಪೂರ್ವ ಏಷ್ಯದಲ್ಲಿ ಕಲೆಯ ದೃಷ್ಟಿಯಿಂದ ಮುಖ್ಯವಾದ ರಾಜ್ಯಗಳೆಂದರೆ ಚೀನ, ಜಪಾನ್ ಮತ್ತು ಕೊರಿಯ. ಈ ಮೂರು ದೇಶಗಳ ವಾಸ್ತುಶಿಲ್ಪ ಮತ್ತು ಕಲೆಗಳಲ್ಲಿ ಪರಸ್ಪರ ಸಂಬಂಧಗಳೂ ಪ್ರಭಾವಗಳೂ ಕಾಣಬರುತ್ತವೆ. ಚೀನೀಯರು ಕ್ರಿ.ಪೂ. ಹನ್ನೆರಡನೆಯ ಶತಮಾನದಿಂದಲೇ ಕಟ್ಟಡಗಳ

ನಿರ್ಮಾಣದಲ್ಲಿ ಪರಿಣತರಾಗಿದ್ದರು. ಕ್ರಿ.ಪೂ. 214ರಲ್ಲಿ ಪ್ರಾರಂಭಿಸಲಾದ ಬೃಹತ್ ಗೋಡೆ (1,500 ಮೈ. ಉದ್ದ) ಅಲ್ಲಿನ ಪ್ರಾಚೀನ ಅವಶೇಷಗಳಲ್ಲಿ ಮುಖ್ಯವಾದದ್ದು. ಮಿಂಗ್ ರಾಜವಂಶಕ್ಕೆ ಪೂರ್ವದ ಕಟ್ಟಡಗಳು ಅಷ್ಟಾಗಿ ಉಳಿದಿಲ್ಲ. ಮಿಂಗ್ ರಾಜರ ಅರಮನೆಗಳು ಚೌಕವಾದ ಮತ್ತು ವೃತ್ತಾಕಾರದ ವಿವಿಧ ಭಾಗಗಳನ್ನೊಳಗೊಂಡು ಬಹಳ ರಮಣೀಯವಾದುವೆಂದು ಹೆಸರು ಪಡೆದಿವೆ. ಈ ಅರಮನೆಗಳು ಬಣ್ಣ ಬಣ್ಣದ ಹೆಂಚುಗಳಿಂದಲೂ ಅಮೃತಶಿಲೆಯ ಆಲಂಕಾರಿಕ ಬಳ್ಳಿಗಳಿಂದಲೂ ಚಿನ್ನದ ತಗಡುಗಳಿಂದಲೂ ಕೂಡಿವೆ. ಕಿರಿದೂ ಎತ್ತರವೂ ಆದ ಮತ್ತು ಅಂತಸ್ತುಗಳುಳ್ಳ ಗೋಪುರಗಳ ನಿರ್ಮಾಣ ಚೀನೀ ವಾಸ್ತುಕಲೆಯ ಒಂದು ವೈಶಿಷ್ಟ್ಯ. ಬೌದ್ಧ ದೇವಾಲಯಗಳನ್ನು ಮೊದಮೊದಲು ಈ ರೀತಿಯಲ್ಲೇ ಕಟ್ಟಲಾಗುತ್ತಿದ್ದು, ಕಾಲ ಕ್ರಮದಲ್ಲಿ ಅರಮನೆಯ ಗೋಪುರಗಳೂ ಈ ರೀತಿಯಲ್ಲೇ ನಿರ್ಮಾಣವಾಗ ತೊಡಗಿದುವು. 17ನೆಯ ಶತಮಾನದಲ್ಲಿ ಪೀಕಿಂಗಿನಲ್ಲಿ ನಿರ್ಮಿಸಲಾದ ಸಿಂಹಾಸನ ಭವನ, ಚಿಯನ್‌ಮೆನನ ಹೆಬ್ಬಾಗಿಲು ಮುಂತಾದವು ಈ ರೀತಿಯ ವಾಸ್ತುಕಲೆಗೆ ಉತ್ತಮ ಉದಾಹರಣೆಗಳು. ಇದು ಚೀನೀಯರ ರಾಷ್ಟ್ರೀಯ ವಾಸ್ತುಕಲೆಯಾಗಿ ಮುಂದುವರಿಯುತ್ತಿದೆ.

ಚೀನದಲ್ಲಿ ಬೌದ್ಧಮತದ ಪ್ರಭಾವ ಬೆಳೆದ ಮೇಲೆ ಭಾರತೀಯ ಮತ್ತು ಚೀನೀ ಸಂಪ್ರದಾಯಗಳೆರಡೂ ಬೆರೆತುವು. ಆಗ ನಿರ್ಮಿತವಾದ ಬುದ್ಧವಿಗ್ರಹಗಳೂ ಗುಹಾಲಯಗಳೂ ಈ ಮಿಶ್ರಶೈಲಿಯಲ್ಲಿ ಅಭಿವ್ಯಕ್ತವಾಗಿವೆ. ಇದನ್ನು ಚೀನೀ–ಭಾರತೀಯ ಶೈಲಿ ಎಂದು ಕರೆಯಬಹುದು. ಮರ, ಕಂಚು ಮತ್ತು ಇತರ ಲೋಹಗಳಲ್ಲಿ ವಿಗ್ರಹಗಳನ್ನು ಮಾಡುವುದರಲ್ಲಿ ಚೀನೀಯರು ಪರಿಶ್ರಮ ಹೊಂದಿದ್ದರೂ ಕಲ್ಲಿನಿಂದ ವಿಗ್ರಹಗಳನ್ನು ಮಾಡುವುದು ಅಷ್ಟಾಗಿ ಜನಾನುರಾಗಿಯಾಗಿರಲಿಲ್ಲ. ಚೀನೀ ಯಾತ್ರಿಕರು ಭಾರತದಿಂದ ಹಿಂದಿರುಗುವಾಗ ಬುದ್ಧನ ಪ್ರತಿಮೆಗಳನ್ನು ತಮ್ಮೊಡನೆ ತೆಗೆದುಕೊಂಡು ಹೋಗಿದ್ದರು. ಇವುಗಳ ಆಧಾರದ ಮೇಲೆ ಚೀನದಲ್ಲಿ ಶಿಲ್ಪಗಳು ತಯಾರಾದುವು. ಯುನ್‌ಕಾಂಗ್ ಮತ್ತು ಲಾಂಗ್‌ಮನ್ ಪ್ರದೇಶಗಳಲ್ಲಿ ಬೌದ್ಧ ಕಲೆಯನ್ನು ವಿಶೇಷವಾಗಿ ಕಾಣುತ್ತೇವೆ. ಕ್ರಿ.ಶ. 414ರಲ್ಲಿ ತಾನ್‌ಯಾವೊ ಎಂಬ ಬೌದ್ಧ ಭಿಕ್ಷುವಿನ ನೇತೃತ್ವದಲ್ಲಿ ತೈ–ತ್ಸಾಂಗ್ ದೊರೆಯ ಕಾಲದಲ್ಲಿ ಇವು ನಿರ್ಮಾಣವಾದುವು. ಭಾರತದ ಬುದ್ಧಗಯಾ ದೇವಾಲಯದ ಮಾದರಿಯಲ್ಲಿ ಕಿನ್ಗೈಸ್ಸೆಯಲ್ಲಿ ಕ್ರಿ.ಶ. 665ರಲ್ಲಿ ಒಂದು ದೇವಾಲಯದ ನಿರ್ಮಾಣವಾಯಿತು. ವರ್ಣಚಿತ್ರ ಕಲೆಯಲ್ಲೂ ಭಾರತೀಯ ಪ್ರಭಾವಗಳನ್ನು ಸುಲಭವಾಗಿ ಗುರುತಿಸಬಹುದು. ಭಾರತೀಯ ಚಿತ್ರಕಾರರಾದ ಶಾಕ್ಯಬುದ್ಧ, ಬುದ್ಧಕೀರ್ತಿ, ಕುಮಾರಬೋಧಿ ಮುಂತಾದವರು ಅನೇಕ ಬೌದ್ಧ ಚಿತ್ರಗಳನ್ನು ಬರೆದರು. ಜೇಡಿಮಣ್ಣಿನ ಪಾತ್ರೆಗಳನ್ನು ತಯಾರಿಸುವುದರಲ್ಲಿ ಚೀನೀಯರು ಅದ್ಭುತ ಪ್ರಗತಿ ಸಾಧಿಸಿದ್ದಾರೆ. ನೂರಾರು ವರ್ಷಗಳಿಂದ ಚೀನೀಯರು ಇವುಗಳನ್ನು ಪ್ರಪಂಚದ ಎಲ್ಲ ಕಡೆಗಳಿಗೂ ರಫ್ತು ಮಾಡುತ್ತಿದ್ದಾರೆ. ಉತ್ತಮ ರೇಷ್ಮೆ ಬಟ್ಟೆಗಳ ತಯಾರಿಕೆಗೂ ಚೀನೀಯರು ಪ್ರಾಚೀನ ಕಾಲದಿಂದಲೂ ಪ್ರಸಿದ್ಧರಾಗಿದ್ದಾರೆ.

ಜಪಾನಿನ ವಾಸ್ತುಶಿಲ್ಪ ವಿಶೇಷವಾಗಿ ಚೀನೀ ವಾಸ್ತುಶಿಲ್ಪವನ್ನೇ ಅನುಸರಿಸಿದೆ. ಅಲ್ಲಿ ರಾಷ್ಟ್ರೀಯ ಭಾವನೆ ಜಾಗೃತವಾದಾಗ, ಜಪಾನೀಯರೂ ಚೀನೀ ಸಂಪ್ರದಾಯಕ್ಕೆ ಭಿನ್ನವಾದ ಪರಂಪರೆಯನ್ನು ರೂಢಿಸಿಕೊಂಡರು. ಜಪಾನಿನಲ್ಲಿ ಒಳ್ಳೆಯ ಮರಗಳ ಕಾಡುಗಳಿವೆ. ಭೂಕಂಪಗಳ ಹೆದರಿಕೆಯಿಂದ ಅಲ್ಲಿನ ಜನ ಮರಗಳನ್ನು ವಿಶೇಷವಾಗಿ ಬೆಳೆಸುತ್ತಾರೆ. ಕಟ್ಟಡಗಳ ನಿರ್ಮಾಣದಲ್ಲಿ ಬೊಂಬುಗಳ ಬಳಕೆ ಹೆಚ್ಚು. ಷಿಂಟೋ ಧರ್ಮಕ್ಕೆ ಸಂಬಂಧಪಟ್ಟ ದೇವಾಲಯಗಳೆಲ್ಲವೂ ಸಾಮಾನ್ಯವಾಗಿ ಬೊಂಬುಗಳಿಂದ ಕಟ್ಟಲಾದ ಮತ್ತು ತಡಿಕೆಯಿಂದ ಮುಚ್ಚಿದ ಒಂದಂತಸ್ತಿನ ಸರಳ ಕಟ್ಟಡಗಳು. ಬೌದ್ಧ ಧರ್ಮ ಚೀನದಿಂದ ಜಪಾನಿಗೆ ಬಂದ ಮೇಲೆ ಇಲ್ಲಿ ಚೀನೀ ಪ್ರಭಾವ ಹೆಚ್ಚಿತು. ಆಗ ಬೌದ್ಧ ದೇವಾಲಯಗಳು ಚೀನೀ ವಾಸ್ತುಶೈಲಿಯಲ್ಲೂ ಷಿಂಟೋ ದೇವಾಲಯಗಳು ಹಳೆಯ ಜಪಾನ್ ಶೈಲಿಯಲ್ಲೂ ನಿರ್ಮಾಣವಾಗುತ್ತಿದ್ದುವು. ಕಾಲಕ್ರಮೇಣ ಈ ಎರಡು ಶೈಲಿಗಳೂ ಪರಸ್ಪರ ಬೆರೆತುವು. ತಾಂತ್ರಿಕ ಬೌದ್ಧಧರ್ಮ ಜಪಾನಿನಲ್ಲಿ ತಲೆಯೆತ್ತಿದ ಅನಂತರ ಕಟ್ಟಡ ನಿರ್ಮಾಣದಲ್ಲೂ ಬದಲಾವಣೆಗಳಾದುವು. ಬೆಟ್ಟಗಳ ಮೇಲೆ ದೇವಾಲಯ ಕಟ್ಟುವ ಪದ್ಧತಿ ಪ್ರಾರಂಭವಾಯಿತು. ಕ್ರಿ.ಶ. ಒಂಬತ್ತನೆಯ ಶತಮಾನದಿಂದ ಹನ್ನೆರಡನೆಯ ಶತಮಾನದ ವರೆಗೆ ಜಪಾನಿನ ವಿಶಿಷ್ಟ ಶೈಲಿಯೊಂದು ಬೆಳೆಯಿತೆನ್ನಬಹುದು. ಇದನ್ನು ಷಿಂಡೆನ್‌ಜುಕಾರಿ ಶೈಲಿ ಎಂದು ಕರೆಯುತ್ತಾರೆ. ಅಕ್ಕಪಕ್ಕದಲ್ಲಿ ಕಟ್ಟಲಾದ ಅನೇಕ ಕಟ್ಟಡಗಳಿಗೆ ಸೇರಿಕೊಂಡಂತೆ ಅಂಗಳಗಳನ್ನೂ ಮಧ್ಯದಲ್ಲಿ ಒಂದು ಸರೋವರವನ್ನೂ ನಿರ್ಮಿಸುವುದು ಈ ಶೈಲಿಯ ಮುಖ್ಯ ಲಕ್ಷಣ. ಇದು ಮೂರು–ನಾಲ್ಕು ಶತಮಾನಗಳ ವರೆಗೆ ಜಪಾನಿನ ವಾಸ್ತುಕಲೆಯ ವೈಶಿಷ್ಟ್ಯವಾಗಿತ್ತು. ಹನ್ನೆರಡನೆಯದರಿಂದ ಹದಿನಾರನೆಯ ಶತಮಾನದ ವರೆಗೆ ಮತ್ತೆ ವಿಶೇಷವಾದ ಚೀನೀ ಪ್ರಭಾವಕ್ಕೆ ಇದು ಒಳಗಾಯಿತು. ಹದಿನಾರನೆಯ ಶತಮಾನದ ಕೊನೆಯ ಭಾಗದಲ್ಲಿ ಮೊಮೊಯಾಮ ಎಂಬ ರಾಷ್ಟ್ರೀಯ ಶೈಲಿ ವಿಕಾಸ ಹೊಂದಿತು. ಇದು ಜಪಾನಿನ ವಾಸ್ತುಕಲೆಯಲ್ಲಿ ವೈಭವದ ಕಾಲ. ಮೂರು ಶತಮಾನಗಳ ಕಾಲ ಉಚ್ಛ್ರಾಯ ಸ್ಥಿತಿಯಲ್ಲಿದ್ದ ಈ ಶೈಲಿ ಹತ್ತೊಂಬತ್ತನೆಯ ಶತಮಾನದಿಂದ ಪಾಶ್ಚಾತ್ಯ ಪ್ರಭಾವಕ್ಕೊಳಗಾಯಿತು.



ಅಂಗ್ಕೋರ್‌ವಾಟಿನ ಒಂದು ಶಿಲ್ಪ

ಕಲ್ಲಿಗಿಂತ ಮರವನ್ನೇ ವಿಶೇಷವಾಗಿ ಶಿಲ್ಪಕ್ಕೂ ಬಳಸುವುದು ಜಪಾನಿನ ವೈಶಿಷ್ಟ್ಯ. ಕ್ರಿ.ಶ. ಎಂಟನೆಯ ಶತಮಾನ ಶಿಲ್ಪಕಲೆಯ ದೃಷ್ಟಿಯಿಂದ ಮಹತ್ವದ ಕಾಲ.

ಕಂಚು, ಮರ, ದಂತಗಳಿಂದ ಮಾಡಲಾದ ಬುದ್ಧನ ವಿಗ್ರಹಗಳು ವಿಶೇಷವಾಗಿ ದೊರಕಿವೆ. ತೋಡೈಜಿ ದೇವಾಲಯಗಳಲ್ಲಿರುವ 53 ಅಡಿಗಳ ಕಂಚಿನ ವಿರೋಚನ ಬುದ್ಧನ ವಿಗ್ರಹ ಜಪಾನಿನ ಶಿಲ್ಪಕಲೆಯ ಔನ್ನತ್ಯಕ್ಕೆ ಉತ್ತಮ ಉದಾಹರಣೆ. ಕ್ರಿ.ಶ. ನಲ್ಕನೆಯ ಶತಮಾನದಲ್ಲಿ ಇಳಿಮುಖವಾದ ಈ ಕಲೆ ಮತ್ತೆ ಹದಿಮೂರನೆಯ ಶತಮಾನದಲ್ಲಿ ಅಭಿವೃದ್ಧಿ ಹೊಂದಿತು.



ಹರಿಹರ, ನಾಮ್ ದ (ಜಾವ)

ಜಪಾನೀಯರು ಶಿಲ್ಪಕಲೆಗಿಂತ ಹೆಚ್ಚಾಗಿ ವರ್ಣಚಿತ್ರಕಲೆಯಲ್ಲಿ ಪರಿಶ್ರಮ ಪಡೆದರು. ಬೌದ್ಧಧರ್ಮದ ಬೆಳೆವಣಿಗೆಯೊಂದಿಗೆ ವರ್ಣಚಿತ್ರಕಲೆಯೂ ಜಪಾನಿನಲ್ಲಿ ಅಭಿವೃದ್ಧಿಯಾಯಿತು. ಜಪಾನಿನ ವರ್ಣಚಿತ್ರಗಳು ವಿಶೇಷವಾಗಿ ರೇಷ್ಮೆ ಬಟ್ಟೆಗಳ ಮೇಲೆ ಮಾಡಿದವು. ಇವುಗಳನ್ನು ಬೌದ್ಧ ದೇವಾಲಯಗಳಲ್ಲಿ ಪೂಜೆಗಾಗಿ ತೂಗು ಹಾಕುವ ಪದ್ಧತಿ ಬೆಳೆಯಿತು. ವರ್ಣಚಿತ್ರಕಲೆಯಲ್ಲೂ ಚೀನೀ ಪ್ರಭಾವಗಳ ಮತ್ತು ರಾಷ್ಟ್ರೀಯ ಶೈಲಿಯ ಲಕ್ಷಣಗಳ ಮಿಶ್ರಣವನ್ನು ಕಾಣಬಹುದು.

ಕೊರಿಯದ ವಾಸ್ತುಶಿಲ್ಪ ಮತ್ತು ಇತರ ಕಲೆಗಳಲ್ಲಿ ಚೀನೀ ಸಂಪ್ರದಾಯಗಳೇ ವಿಶೇಷ. ಒಂದು ದೃಷ್ಟಿಯಲ್ಲಿ ಅದು ಚೀನೀ ಶೈಲಿಯ ಒಂದು ಸ್ಥಳೀಯ ವೈವಿಧ್ಯ ಮಷ್ಟೆ. ಕೊರಿಯದಲ್ಲಿ ಬೌದ್ಧ ಧರ್ಮದೊಂದಿಗೆ ಬೌದ್ಧ ಕಲೆಯೂ ಬೆಳೆಯಿತು.

**ದಕ್ಷಿಣ ಏಷ್ಯ :** ದಕ್ಷಿಣ ಏಷ್ಯದಲ್ಲಿ ಭಾರತವೇ ಅತಿ ಮುಖ್ಯ ರಾಷ್ಟ್ರ. ವಾಸ್ತುಶಿಲ್ಪ ಮತ್ತು ಕಲೆಗಳ ದೃಷ್ಟಿಯಿಂದಲೂ ಭಾರತ ಪ್ರಾಮುಖ್ಯ ಗಳಿಸಿದೆ. ಕ್ರಿ.ಪೂ. ಮೂರನೆಯ ಸಹಸ್ರಮಾನದ ಸಿಂಧೂ ನಾಗರಿಕತೆಯಿಂದ ಭಾರತೀಯ ವಾಸ್ತುಶಿಲ್ಪ ಮತ್ತು ಇತರ ಕಲೆಗಳ ಚರಿತ್ರೆ ಪ್ರಾರಂಭವಾಗುತ್ತದೆ. ಬೃಹದಾಕಾರದ ಕೋಟೆಗಳು, ಮನೆಗಳು, ಸ್ನಾನಗೃಹ, ಕಂಚಿನ ವಿಗ್ರಹ, ಇತರ ಶಿಲ್ಪಗಳು, ಶಾಸನವುಳ್ಳ ಮುದ್ರೆಗಳು, ವಿವಿಧ ವರ್ಣಗಳ ಮಡಕೆಗಳು ಮುಂತಾದವು ಭಾರತೀಯ ಕಲಾಕೃತಿಯ ಸಂಪ್ರದಾಯಕ್ಕೆ ಭದ್ರ ಬುನಾದಿ ಹಾಕಿವೆ. ಮೌರ್ಯರ ಕಾಲದಲ್ಲಿ ಕಲ್ಲಿನಿಂದ ವಾಸ್ತುಶಿಲ್ಪ ಕೃತಿಗಳನ್ನು ನಿರ್ಮಿಸುವ ಕಲೆ ಅಭಿವೃದ್ಧಿ ಹೊಂದಿತು. ಅಶೋಕ ನಿರ್ಮಿಸಿದ ಕಲ್ಲುಕಂಬಗಳು ಪರ್ಷಿಯನ್ ಪ್ರಭಾವವನ್ನು ವ್ಯಕ್ತಪಡಿಸಿದರೂ ಉತ್ತಮ ಕೃತಿಗಳಾಗಿವೆ. ಗುಪ್ತರ ಕಾಲದಲ್ಲಿ ವಾಸ್ತುಶಿಲ್ಪ ಮತ್ತು ಚಿತ್ರಕಲೆಗಳು ಉಚ್ಛ್ರಾಯಸ್ಥಿತಿ ಮುಟ್ಟಿದುವು. ದಕ್ಷಿಣದಲ್ಲಿ ಗುಹಾದೇವಾಲಯಗಳ ಪರಂಪರೆ ಪ್ರಾರಂಭವಾಗಿ ಕಾರ್ಲ, ಭೇಡ್ಸ ಮುಂತಾದಲ್ಲಿ ಗುಹೆಗಳು ನಿರ್ಮಾಣವಾಗಿ, ಅಜಂತ, ಎಲ್ಲೋರದಂಥ ವಿಶ್ವವಿಖ್ಯಾತ ಕೃತಿಗಳ ನಿರ್ಮಾಣಕ್ಕೆ ದಾರಿ ಮಾಡಿಕೊಟ್ಟುವು. ನಾಗರ, ದ್ರಾವಿಡ ಮತ್ತು ವೇಸರ ಎಂಬ ಮೂರು ಪ್ರಕಾರದ ದೇವಾಲಯಗಳ ನಿರ್ಮಾಣ ಪ್ರಾರಂಭವಾಗಿ ದೇಗುಲನಿರ್ಮಾಣಕಲೆ ಅಭಿವೃದ್ಧಿ ಹೊಂದಿತು. ಬಾದಾಮಿ, ಪಟ್ಟದಕಲ್, ಐಹೊಳೆ, ಕಂಚಿ, ತಂಜಾವೂರು. ಭುವನೇಶ್ವರ ಮೊದಲಾದ ಕಡೆಗಳಲ್ಲಿ ವಿವಿಧ ಶೈಲಿಗಳ ದೇಗುಲಗಳು ತಲೆ ಎತ್ತಿದುವು. ಕರ್ಣಾಟಕದಲ್ಲಿ ಚಾಳುಕ್ಯ, ಹೊಯ್ಸಳ ಮತ್ತು ವಿಜಯನಗರ ರಾಜ್ಯಗಳ ಕಾಲದಲ್ಲಿ ಕಟ್ಟಲಾದ ದೇವಾಲಯಗಳು ಪ್ರಸಿದ್ಧವಾಗಿವೆ. ವಿಜಯನಗರ ಸಾಮ್ರಾಜ್ಯದ ಅನಂತರ ದಕ್ಷಿಣ ಭಾರತದ ನಾಯಕರು ದೇವಾಲಯ ನಿರ್ಮಾಣಕಾರ್ಯಕ್ಕೆ ವಿಶೇಷ ಪ್ರೋತ್ಸಾಹ ಕೊಟ್ಟರು. ಗುಜರಾತಿನಲ್ಲಿನ ಜೈನ ದೇವಾಲಯಗಳು ನಿರ್ಮಾಣವಾದುವು.

ಭಾರತದಲ್ಲಿ ಮಹಮ್ಮದೀಯರ ರಾಜ್ಯ ಸ್ಥಾಪನೆಯಾದ ಮೇಲೆ ಇಂಡೋ–ಸಾರ್ಸೆನಿಕ್ ಶೈಲಿಯ ಕಟ್ಟಡಗಳು ನಿರ್ಮಾಣವಾಗಲು ಪ್ರಾರಂಭವಾದುವು. ಮೊಗಲ್ ರಾಜರು ಕಟ್ಟಡನಿರ್ಮಾಣಕಾರ್ಯಗಳಲ್ಲಿ ವಿಶೇಷ ಆಸಕ್ತಿ ವಹಿಸಿದರು. ದೆಹಲಿ, ಆಗ್ರ, ಲಖ್ನೌ, ಫತೇಪುರ್–ಸಿಕ್ರಿ ಮುಂತಾದ ಕಡೆಗಳಲ್ಲಿ ಉತ್ತಮ ವಾಸ್ತುಕೃತಿಗಳು ನಿರ್ಮಾಣವಾದುವು. ಡಚ್, ಪೋರ್ಚುಗೀಸ್ ಮತ್ತು ಬ್ರಿಟಿಷರ ಆಗಮನದಿಂದ ಆಯಾ ಶೈಲಿಗಳ ಚರ್ಚುಗಳು ಮತ್ತು ಇತರ ಕಟ್ಟಡಗಳು ನಿರ್ಮಾಣವಾದುವು.



ಜೇಡಿಮಣ್ಣಿನಿಂದ ಮಾಡಿದ ಬೋಧಿಸತ್ವನ ವರ್ಣಚಿತ್ರಿತ ವಿಗ್ರಹ (ಜಪಾನ್)

ದಕ್ಷಿಣ ಭಾರತದಲ್ಲೂ ಉತ್ತರ ಪ್ರದೇಶ, ಮಧ್ಯ ಪ್ರದೇಶ, ಆಂಧ್ರ ಮುಂತಾದ ಕಡೆಗಳಲ್ಲೂ ಆದಿಮ ಜನ ವಾಸಿಸುತ್ತಿದ್ದಾರೆ. ಇವರ ಕುಶಲಕಲೆಗಳಾದ ವರ್ಣ ಚಿತ್ರ, ಚಾಪೆ ಹೆಣೆಯುವುದು, ಬುಟ್ಟಿ ಹೆಣೆಯುವುದು, ಕಂಚಿನ ಪ್ರತಿಮೆಗಳ ನಿರ್ಮಾಣ ಮುಂತಾದವು ಪ್ರಚಲಿತವಾಗಿದ್ದು ಉನ್ನತ ಮಟ್ಟದಲ್ಲಿವೆ. ಪ್ರಾಚೀನ ಕಾಲದಿಂದಲೂ ಭಾರತೀಯರು ಸಂಗೀತದಲ್ಲಿ ವಿಶೇಷ ಆಸಕ್ತಿ ಹೊಂದಿದ್ದು, ಒಂದು ವಿಶಿಷ್ಟ ಸಂಗೀತ ಪರಂಪರೆಯನ್ನು ಬೆಳೆಸಿಕೊಂಡಿದ್ದಾರೆ. ವೇದಕಾಲದಿಂದ ಹಿಡಿದು ಇಂದಿನ ವರೆಗೆ ಸಂಗೀತ ಕಲೆ ಅವಿಚ್ಛಿನ್ನವಾಗಿ ಬೆಳೆದುಬಂದಿದೆ. ಅನೇಕ ಪ್ರಾಚೀನ

ಕಲೆಗಳು ತಮ್ಮ ಉಚ್ಛ್ರಾಯಸ್ಥಿತಿಯನ್ನು ಕಳೆದುಕೊಂಡು ಗ್ರಾಮಗಳಲ್ಲಿ ಕುಶಲ ಕಲೆಗಳಾಗಿ ಮುಂದುವರಿಯುತ್ತಿವೆ.

ಪ್ರಾಚೀನ ಭಾರತ ತನ್ನ ಕಲೆಯನ್ನು ತಾನು ರೂಪಿಸಿಕೊಂಡಿದ್ದುದೇ ಅಲ್ಲದೆ, ಅಕ್ಕಪಕ್ಕದ ರಾಜ್ಯಗಳಾದ ಸಿಂಹಳ, ಆಫ್ಘಾನಿಸ್ತಾನ ಮತ್ತು ಆಗ್ನೇಯ ಏಷ್ಯನ್ ರಾಜ್ಯಗಳ ಕಲಾಪರಂಪರೆಯನ್ನು ರೂಢಿಸಿಕೊಳ್ಳಲು ಸಹಾಯಮಾಡಿತು. ಈ ದೃಷ್ಟಿಯಿಂದ ಈ ರಾಜ್ಯಗಳೆಲ್ಲವೂ ಸಾಂಸ್ಕೃತಿಕ ಭಾರತದ ಅವಿಭಾಜ್ಯ ಅಂಗಗಳಾಗಿದ್ದುವೆಂದು ಖಚಿತವಾಗಿ ಹೇಳಬಹುದು. ಆದರಿಂದಲೇ ಈ ರಾಜ್ಯಗಳನ್ನು ಬೃಹದ್ಭಾರತ ಎಂದು ಕರೆಯುತ್ತಾರೆ.

ಭಾರತಕ್ಕೆ ಬಹು ಸಮೀಪವಾಗಿರುವ ಸಿಂಹಳದ್ವೀಪ ದಕ್ಷಿಣ ಭಾರತದ ಪಲ್ಲವರು ಮತ್ತು ಚೋಳರೊಂದಿಗೆ ರಾಜಕೀಯ ಸಂಪರ್ಕ ಹೊಂದಿತ್ತು. ಕ್ರಿಸ್ತಶಕದ ಆರಂಭದ ಸಮಯಕ್ಕೆ ಇಲ್ಲಿ ಅನೇಕ ವಿಹಾರಗಳೂ ಚೈತ್ಯಗಳೂ ನಿರ್ಮಾಣವಾದುವು. ಮೊದಲನೆಯ ಕಾಶ್ಯಪರಾಜನಿಂದ ನಿರ್ಮಿತವಾದ ಸೀಗಿರಿಯ ಗುಹಾದೇವಾಲಯಗಳಲ್ಲಿ ವರ್ಣಚಿತ್ರಗಳಿವೆ. ಇವು ಅಜಂತ ಶೈಲಿಗೆ ಸೇರಿದವು. ಕುಂಚದ ಅತಿಸೂಕ್ಷ್ಮ ಕೆಲಸವನ್ನು ಇಲ್ಲಿ ಕಾಣಬಹುದು. ಪೊಲನ್ನಾರುವದಲ್ಲಿರುವ ಕಟ್ಟಡಗಳು ದ್ರಾವಿಡ ಸಂಪ್ರದಾಯಕ್ಕೆ ಸೇರಿದವು. ಚೋಳರು ಇಲ್ಲಿ ಅನೇಕ ದೇವಾಲಯಗಳನ್ನು ನಿರ್ಮಿಸಿದರು. ಇಲ್ಲಿರುವ ಶಿವದೇವಾಲಯದಲ್ಲಿ ಗರ್ಭಗೃಹ, ಅಂತರಾಳ, ಅರ್ಧ ಮಂಡಪ, ಮಂಡಪ ಮುಂತಾದ ಭಾಗಗಳಿವೆ. ಸಿಂಹಳದ ಮೂರ್ತಿಶಿಲ್ಪಗಳಲ್ಲಿ ಅಮರಾವತಿ ಮತ್ತು ನಾಗಾರ್ಜುನಕೊಂಡದ ಶಿಲ್ಪಪ್ರಭಾವಗಳನ್ನು ಸುಲಭವಾಗಿ



ಬೋಧಿಸತ್ವ ಅವಲೋಕಿತೇಶ್ವರನ ಮರದ ವಿಗ್ರಹ (ಚೀನ)

ಗುರುತಿಸಬಹುದು. ಕಂಚು ಮತ್ತು ತಾಮ್ರದಿಂದ ವಿಗ್ರಹಗಳನ್ನು ಮಾಡುವ ಕಲೆ ಕ್ರಿ.ಶ. ಐದನೆಯ ಶತಮಾನದಿಂದ ಪ್ರಾರಂಭವಾಗಿ ಹನ್ನೆರಡನೆಯ ಶತಮಾನದ ವರೆಗೆ ಉಚ್ಛ್ರಾಯಸ್ಥಿತಿಯಲ್ಲಿತ್ತು. ಶಿವ, ನಟರಾಜ, ಗಣೇಶ, ಪಾರ್ವತಿ, ವಿಷ್ಣು, ಲಕ್ಷ್ಮಿ ಮುಂತಾದ ದೇವತೆಗಳ ವಿಗ್ರಹಗಳು ದಕ್ಷಿಣ ಭಾರತದ ಶೈಲಿಯಲ್ಲಿವೆ.



ಬಾಂಟೀಯ್ ಸ್ರೈನಲ್ಲಿನ ಅಪ್ಸರಿ

ಚೀನೀ ಯಾತ್ರಿಕರಾದ ಫಾಹಿಯಾನ್ ಮತ್ತು ಹ್ಯುಯೆನ್‌ತ್ಸಾಂಗರ ಬರೆವಣಿಗೆಯ ಪ್ರಕಾರ ಆಫ್ಘಾನಿಸ್ತಾನದ ಹೆಚ್ಚು ಭಾಗ ಪ್ರಾಚೀನ ಭಾರತಕ್ಕೆ ಸೇರಿತ್ತು. ಆದ್ದರಿಂದ ಇಲ್ಲೂ ಭಾರತೀಯ ಪ್ರಭಾವಿತ ವಾಸ್ತುಶಿಲ್ಪಗಳನ್ನು ಕಾಣಬಹುದು. ಬಮಿಯಾನ್, ಕಪಿಶಾ, ಬೆಗ್ರಾಮ್‌ಗಳು ಇಲ್ಲಿನ ಮುಖ್ಯ ಕಲಾಕೇಂದ್ರಗಳು. 4-5ನೆಯ ಶತಮಾನಗಳಿಗೆ ಸೇರಿದ 175′ ಮತ್ತು 120′ಗಳ ಎರಡು ಕಲ್ಲಿನ ಬುದ್ಧವಿಗ್ರಹಗಳು ಬಮಿಯಾನ್‌ನಲ್ಲಿ ದೊರಕಿವೆ. ಇವುಗಳಲ್ಲಿ ಭಾರತೀಯ, ಇರಾನೀ ಮತ್ತು ಗಾಂಧಾರ ಪ್ರಭಾವಗಳು ಮಿಳಿತವಾಗಿವೆ. ಕಪಿಶಾದಲ್ಲಿ ಅನೇಕ ವಿಹಾರಗಳೂ ವೈದಿಕ ದೇವಾಲಯಗಳೂ ಇದ್ದುವು. ಹಡ್ಡದಲ್ಲಿ 531 ಸ್ತೂಪಗಳ ಅವಶೇಷಗಳೂ 500ಕ್ಕೂ ಹೆಚ್ಚು ಬೌದ್ಧಶಿಲ್ಪಗಳೂ ದೊರಕಿವೆ. ಬಮಿಯಾನಿನಲ್ಲಿ ಬುದ್ಧನ ವಿಗ್ರಹಗಳು ಮಾತ್ರವಲ್ಲದೆ, ಅನೇಕ ಭಿತ್ತಿ ಚಿತ್ರಗಳು ದೊರಕಿವೆ. ಗುಪ್ತಶೈಲಿಯ ಅನೇಕ ದೇವಾಲಯಗಳನ್ನು ಇಲ್ಲಿ ಪತ್ತೆ ಹಚ್ಚಲಾಗಿದೆ. ಬೆಗ್ರಾಮಿನಲ್ಲಿ ದೊರಕಿರುವ ದಂತದ ವಿಗ್ರಹಗಳು ಭಾರತದ ಮಥುರಾ ಶಿಲ್ಪ ಶೈಲಿಗಳಿಗೆ ಸೇರಿದವೆಂದು ಸುಲಭವಾಗಿ ಗುರುತಿಸಬಹುದು. ಜೇಡಿಮಣ್ಣಿನ ವಿಗ್ರಹಗಳು ಇಲ್ಲಿ ವಿಶೇಷವಾಗಿ ದೊರಕಿವೆ. ಇವು ಗುಪ್ತಸಂಪ್ರದಾಯಕ್ಕೆ ಸೇರಿದವು. ಬೆಗ್ರಾಮ್‌ನಲ್ಲಿ ದೊರಕಿರುವ ವರ್ಣಚಿತ್ರಗಳಲ್ಲಿ ಗುಪ್ತ ಮತ್ತು ಪಾಲರ ಕಾಲದ ಪ್ರಭಾವಗಳನ್ನು ವಿಶೇಷವಾಗಿ ಕಾಣಬಹುದು. ಇಸ್ಲಾಮೀ ಕಲಾಸಂಪ್ರದಾಯಕ್ಕೆ ಸೇರಿದ ಕಟ್ಟಡಗಳನ್ನು ಹೆರಾತ್, ಕಾಂದಹಾರ್, ಘಜ್ನಿ ಮುಂತಾದಲ್ಲಿ ಕಾಣಬಹುದು. (ನೋಡಿ—ಆಫ್ಘಾನಿಸ್ತಾನ.)

**ಆಗ್ನೇಯ ಏಷ್ಯ :** ಆಗ್ನೇಯ ಏಷ್ಯದ ವಿವಿಧ ರಾಜ್ಯಗಳಲ್ಲಿ ಕ್ರಿಸ್ತಶಕದ ಆರಂಭದಿಂದ ಹಿಂದೂ ರಾಜ್ಯಗಳು ಸ್ಥಾಪನೆಯಾದುವು. ಇವುಗಳ ಆಶ್ರಯದಲ್ಲಿ

ಭಾರತೀಯ ಸಂಸ್ಕೃತಿ ಈ ರಾಜ್ಯಗಳಲ್ಲಿ ಅಭಿವೃದ್ಧಿ ಹೊಂದಿತು. ಪ್ರಾಚೀನ ಸಂಸ್ಕೃತಿಯ ದೃಷ್ಟಿಯಿಂದ ಆಗ್ನೇಯ ಏಷ್ಯವನ್ನು ಬೃಹದ್‌ಭಾರತ ಎಂದು ಕರೆಯಬಹುದು. ಸಾಮಾಜಿಕ, ಮತೀಯ ಮತ್ತು ಧಾರ್ಮಿಕ ಸ್ಥಿತಿಗಳಲ್ಲಿ ಭಾರತೀಯ ಪ್ರಭಾವ ಆಗ್ನೇಯ ಏಷ್ಯದ ರಾಜ್ಯಗಳಲ್ಲಿ ಯಾವ ರೀತಿ ಬೆಳೆಯಿತೋ ಅದಕ್ಕೂ ವಿಶೇಷವಾಗಿ



ಕಂಚಿನ ಬುದ್ಧವಿಗ್ರಹಗಳು (ಜಪಾನ್)

ಭಾರತೀಯ ವಾಸ್ತುಶಿಲ್ಪ ಮತ್ತು ಕಲೆಗಳು ಅಲ್ಲಿ ವಿಕಾಸಹೊಂದಿದುವು. ಆದ್ದರಿಂದ ಆಗ್ನೇಯ ಏಷ್ಯದ ಪ್ರಾಚೀನ ವಾಸ್ತುಶಿಲ್ಪಕಲೆ ಭಾರತೀಯ ವಾಸ್ತುಶಿಲ್ಪ ಪಂಥಕ್ಕೇ ಸೇರಿದ್ದುವು. ದೇವಾಲಯಗಳ ನಿರ್ಮಾಣದಲ್ಲಂತೂ ಚಾಳುಕ್ಯ, ಪಲ್ಲವ ಮುಂತಾದ ಶೈಲಿಗಳನ್ನು ಅನುಸರಿಸಲಾಯಿತು. ಮೊದಮೊದಲು ಭಾರತೀಯ ಶೈಲಿಯ ಪೂರ್ಣಪ್ರಭಾವಗಳನ್ನು ಕಾಣಬಹುದಾದರೂ ಕಾಲಕ್ರಮದಲ್ಲಿ ಸ್ಥಳೀಯ ಲಕ್ಷಣಗಳು ತಲೆದೋರಿದುವು. ಕಾಂಬೋಡಿಯದಲ್ಲಿ ಭಾರತೀಯ ಶೈಲಿ, ಇಂಡೋ–ಖ್ಮೆರ್ ಶೈಲಿ ಮತ್ತು ಖ್ಮೆರ್ ಶೈಲಿ ಎಂದು ಮೂರು ಶೈಲಿಗಳನ್ನು ಸುಲಭವಾಗಿ ಗುರುತಿಸಬಹುದು. ಇದೇ ರೀತಿಯ ಶೈಲಿಗಳು ಜಾವಾದಲ್ಲೂ ಇವೆ. ಈ ವಾಸ್ತುಶಿಲ್ಪ ಕೃತಿಗಳೆಲ್ಲವೂ ಹಿಂದೂ ಧಾರ್ಮಿಕ ಭಾವನೆಗಳ ಮೇಲೆ ಆಧಾರಿತವಾಗಿದ್ದುದರಿಂದ ಇವು ಆಂತರಿಕವಾಗಿ ಒಂದೂ ಶೈಲಿಗೆ ಸಂಬಂಧಿಸಿದರೂ ಬಾಹ್ಯರೂಪದಲ್ಲಿ ಸ್ಥಳೀಯ ಲಕ್ಷಣಗಳನ್ನೇ ಹೊಂದಿದ್ದುವು. ಮುಖದಲ್ಲಿ ಈ ಲಕ್ಷಣಗಳು ಎದ್ದುಕಾಣುತ್ತವೆ. ಪೂರ್ಣ ಭಾರತೀಯ ಶೈಲಿಯ ಕಾಂಬೋಡಿಯದ ಶಿಲ್ಪದಲ್ಲಿಯೂ ದೇವತೆಗಳ ಮುಖಲಕ್ಷಣಗಳು ಭಾರತೀಯವಾಗಿರದೆ, ಖ್ಮೆರ್ ಲಕ್ಷಣಗಳನ್ನೇ ಹೊಂದಿ ನಮ್ಮ ಗಮನ ಸೆಳೆಯುತ್ತವೆ. ಆಗ್ನೇಯ ಏಷ್ಯದಲ್ಲಿ ನಿರ್ಮಾಣವಾದ ವಾಸ್ತುಶಿಲ್ಪ ಕಲಾಕೃತಿಗಳಲ್ಲಿ ಆಂಗ್ಕೋರ್‌ವಾಟ್, ಬೊರಬೊದೂರ್, ಆನಂದ ದೇವಾಲಯ, ಬೆಲ್‌ಹನನ ವಿಷ್ಣು ಮುಂತಾದವು ಗಮನಾರ್ಹ. (ನೋಡಿ—ಆಗ್ನೇಯ ಏಷ್ಯ.)

**ಮಧ್ಯ ಏಷ್ಯ :** ಪ್ರಾಚೀನ ಪ್ರಪಂಚದಲ್ಲಿ ಮಧ್ಯ ಏಷ್ಯ ಅನೇಕ ಸಂಸ್ಕೃತಿಗಳ ಸಂಗಮಸ್ಥಾನವಾಗಿತ್ತು. ಸೋವಿಯತ್ ಪುರಾತತ್ತ್ವಜ್ಞರು ಮಧ್ಯ ಏಷ್ಯದ ಅನೇಕ ಸ್ಥಳಗಳಲ್ಲಿ ನಡೆಸಿರುವ ಉತ್ಖನನಗಳಿಂದ, ಈ ಪ್ರದೇಶದಲ್ಲಿ ನೂತನ ಶಿಲಾಯುಗದ ಕಾಲದಲ್ಲಿಯೇ ಮಡಕೆಗಳ ಮೇಲೆ ವಿವಿಧ ರೀತಿಯ ವರ್ಣಚಿತ್ರಗಳನ್ನು ಬರೆಯುವ ಪರಂಪರೆ ಪ್ರಾರಂಭವಾಯಿತೆಂದು ಗೊತ್ತಾಗುತ್ತದೆ. ಕ್ರಿ.ಪೂ. ಒಂದನೆಯ ಸಹಸ್ರಮಾನದ ಕರಸುಕ್ ಸಂಸ್ಕೃತಿಯ ಕಂಚಿನ ವಿಗ್ರಹಗಳು ಒಳ್ಳೆಯ ಕಲಾತ್ಮಕ ವಸ್ತುಗಳು. ಕ್ರಿಸ್ತಶಕದ ಆರಂಭದ ಹೊತ್ತಿಗೆ ಬೌದ್ಧಧರ್ಮ ಈ ಪ್ರದೇಶಗಳಲ್ಲೆಲ್ಲ ಹರಡಿ, ಕುಶಾನರ ಆಸಕ್ತಿಯಿಂದ ಗಾಂಧಾರ ಶೈಲಿ ಪ್ರಾರಂಭವಾಯಿತು. ಇದು ಭಾರತೀಯ ಶೈಲಿಯಿಂದ ಪ್ರಭಾವಿತಗೊಂಡ ಒಂದು ನೂತನ ಶೈಲಿ. ಸೊಗ್ಡಿಯಾನದಲ್ಲಿ ಈ ಪಂಥಕ್ಕೆ ಸೇರಿದ ಅನೇಕ ಪ್ರಾಚೀನ ನೆಲೆಗಳನ್ನು ಶಹರಿಸ್ತಾನ್, ವರಖ್ಷ ಮುಂತಾದ ಕಡೆಗಳಲ್ಲಿ ಗುರುತಿಸಲಾಗಿದೆ. ಎತ್ತರವಾದ ಮತ್ತು ವಿಶಾಲವಾದ ಕೋಟೆಗಳೂ ಅರಮನೆಗಳೂ ದೇವಾಲಯಗಳೂ ಅವುಗಳಲ್ಲಿನ ಭಿತ್ತಿಚಿತ್ರಗಳೂ ಇವುಗಳಲ್ಲಿ ಮುಖ್ಯವಾದವು. ಕ್ರಿ.ಶ. ಐದನೆಯ ಶತಮಾನದ ಸಮಯದಲ್ಲಿ ಕುಶಾನರ ಪ್ರಭಾವ ಕಡಿಮೆಯಾದಾಗ ಹೊರಗಡೆಯಿಂದ ಇಲ್ಲಿಗೆ ಬಂದ ಎಫ್ತಲೈಟ್ ಜನರು ಬೌದ್ಧಧರ್ಮವನ್ನೂ ಅದರಿಂದ ಪ್ರಭಾವಿತಗೊಂಡಿದ್ದ ಕಲೆಯನ್ನೂ ನಾಶಮಾಡಿದರು, ದೇವಾಲಯಗಳನ್ನು ಕೆಡವಿಸಿದರು. ಹೀಗಾಗಿ ಈ ಪ್ರದೇಶದಲ್ಲಿ ಬೌದ್ಧ ವಾಸ್ತುಶಿಲ್ಪ ಅಥವಾ ವರ್ಣಚಿತ್ರಕಲೆ ಮತ್ತೆ ಅಭಿವೃದ್ಧಿಯಾಗಲಿಲ್ಲ. ಅರಬರು ಈ ದೇಶದಲ್ಲಿ ತಮ್ಮ ಆಧಿಪತ್ಯವನ್ನು ಸ್ಥಾಪಿಸಿದ ಮೇಲೆ ಇಸ್ಲಾಮಿ ಕಲೆ ಇಲ್ಲಿ ಅಭಿವೃದ್ಧಿಯಾಯಿತು.



ಚೈಯಾದ ಅವಲೋಕಿತೇಶ್ವರ (ಸಯಾಂ)

ಸರಿಂಡಿಯ ಎಂದು ಪ್ರಸಿದ್ಧವಾಗಿರುವ ಚೀನೀ ಮತ್ತು ಸೋವಿಯತ್ ತುರ್ಕಿಸ್ತಾನಗಳಲ್ಲಿ ವಿಶ್ವವಿಖ್ಯಾತವಾದ ಬೌದ್ಧಕಲಾಪರಂಪರೆ ಅಭಿವೃದ್ಧಿಹೊಂದಿತು. ಕ್ರಿ.ಶ. ಒಂದನೆಯ ಶತಮಾನದಿಂದ ಮಹಮ್ಮದೀಯರ ದಾಳಿಗಳ ವರೆಗೆ ಇಲ್ಲಿ ನಿರ್ಮಿತವಾದ ಕಲೆ ಮತ್ತು ವಾಸ್ತುಶಿಲ್ಪಗಳಲ್ಲಿ ಗಾಂಧಾರ ಮತ್ತು ಪಶ್ಚಿಮ ಏಷ್ಯದ ಪ್ರಭಾವಗಳನ್ನೂ ಅನಂತರ ಬಂದ ಚೀನೀ ಪ್ರಭಾವಗಳನ್ನೂ ಕಾಣಬಹುದು. ಭಾರತೀಯ ಪ್ರಭಾವ

ಇಲ್ಲಿ ನಿಂತು ಹೋದ ಮೇಲೆ ಚೀನೀ ಸಂಪ್ರದಾಯಗಳು ವಿಶೇಷವಾದುವು. ಕೊನೆಗೆ ಮಹಮ್ಮದೀಯರ ದಾಳಿಗಳ ಅನಂತರ ಇಸ್ಲಾಮೀ ಕಲಾಪ್ರಭಾವ ಬೆಳೆಯಿತು. ಸರ್ ಆರಲ್ ಸ್ಟೈನ್ ಎಂಬ ವಿಖ್ಯಾತ ಪುರಾತತ್ತ್ವಜ್ಞ ಇಲ್ಲಿ ನಡೆಸಿದ ಸಂಶೋಧನೆಗಳಿಂದಾಗಿ ಈ ಪ್ರದೇಶದಲ್ಲಿದ್ದ ವಾಸ್ತುಶಿಲ್ಪಕೃತಿಗಳು ಬೆಳಕಿಗೆ ಬಂದಿವೆ. ಮಿರನ್ ಎಂಬಲ್ಲಿ ಒಂದು ದೊಡ್ಡ ಸ್ತೂಪ ದೊರಕಿದ್ದು, ಅದರ ಸುತ್ತಲೂ ಇರುವ ಕಟ್ಟಡಗಳಲ್ಲಿ ವರ್ಣಚಿತ್ರಗಳಿವೆ. ತುರ್ಕಿಸ್ತಾನದಲ್ಲೆ ಅತ್ಯಂತ ಪ್ರಾಚೀನವಾದ ವರ್ಣಚಿತ್ರವಿದು. ಇದರ ಕಾಲ ಕ್ರಿ.ಶ. ಮೂರನೆಯ ಶತಮಾನ. ಇದರಲ್ಲಿ ಕಾಣಬರುವ ವಿಶ್ವಂತರ ಜಾತಕದ ವರ್ಣಚಿತ್ರದಲ್ಲಿ ಗಾಂಧಾರಶೈಲಿಯ ಪ್ರಭಾವವನ್ನು ಕಾಣಬಹುದು. ಟಟ ಎಂಬ ಕಲಾಕಾರ ಈ ಚಿತ್ರಗಳನ್ನು ಬರೆದವನೆಂದು ಗೊತ್ತಾಗುತ್ತದೆ. ಈತ ಏಷ್ಯದಲ್ಲಿ ನೆಲೆಸಿದ ರೋಮನ್ ಪ್ರಜೆಯಿರಬೇಕು. ಈ ವರ್ಣಚಿತ್ರಗಳಲ್ಲಿ ರೋಮನ್ ಮತ್ತು ಗ್ರೀಕ್ ಪ್ರಭಾವಗಳನ್ನು ಕಾಣಬಹುದು. ಈ ಪ್ರಭಾವಗಳು ಇಲ್ಲಿಗೆ ಹೇಗೆ ಬಂದುವು ಎಂಬ ವಿಚಾರದಲ್ಲಿ ಖಚಿತವಾದ ಮಾಹಿತಿ ದೊರಕಿಲ್ಲ.

ಕ್ರಿ.ಶ. ಐದನೆಯದರಿಂದ ಎಂಟನೆಯ ಶತಮಾನಗಳ ವರೆಗೆ ಬೌದ್ಧಧರ್ಮದಿಂದ ಪ್ರಭಾವಗೊಂಡ ಕಲೆ ಖೊಟಾನ್ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಅಭಿವೃದ್ಧಿ ಹೊಂದಿತು. ಸ್ತೂಪಗಳು, ವಿಹಾರಗಳು ಮತ್ತು ವರ್ಣಚಿತ್ರಗಳು ಭಾರತೀಯ ಕಲಾ ಸಂಪ್ರದಾಯಕ್ಕೆ ಸೇರಿದವು. ಕಾಶ್ಮೀರದ ಮೂಲಕ ಈ ಪ್ರಭಾವಗಳು ಖೋಟಾನಿಗೆ ಬಂದುವು. ಗುಪ್ತರ ಕಾಲದ ಕಲಾಶೈಲಿಗೆ ಸೇರಿದ ಅನೇಕ ಪ್ರಭಾವಗಳನ್ನು ಇಲ್ಲಿ ಸುಲಭವಾಗಿ ಗುರುತಿಸಬಹುದು.

ಯೋತ್ಕಾನ್ ಪ್ರದೇಶದಲ್ಲಿ ದಂದನ್ ಉಯಿಲಿಕ್ ಎಂಬಲ್ಲಿ ಅನೇಕ ವಿಹಾರಗಳು ಕಾಣಬಂದಿವೆ. ಈ ವಿಹಾರಗಳಲ್ಲಿನ ವರ್ಣಚಿತ್ರಗಳು ಮುಖ್ಯವಾದುವು. ಇಲ್ಲಿ ಬೋಧಿಸತ್ವ, ಗಂಧರ್ವ, ಯಕ್ಷ, ಧರ್ಮಚಕ್ರ, ಅಷ್ಟದಳಪದ್ಮ, ನಾಗ, ನರ್ತನ ಮಾಡುತ್ತಿರುವ ಸ್ತ್ರೀಯರು ಮುಂತಾದ ವರ್ಣಚಿತ್ರಗಳುಂಟು. ರವಾಕ್‌ನಲ್ಲಿರುವ ಮಹಾವಿಹಾರದ ಅವಶೇಷಗಳು ವಾಸ್ತುಕಲೆಗೆ ಪ್ರಸಿದ್ಧವಾಗಿವೆ. ಕ್ರಿ.ಶ. ಮೂರನೆಯ ಶತಮಾನದಲ್ಲಿ ನಿರ್ಮಿತವಾದ ಈ ವಿಹಾರದಲ್ಲಿ ಮೂರು ಅಂತಸ್ತಿನ ಸ್ತೂಪವೂ ಅದರ ಸುತ್ತಲೂ ಇರುವ ಗೋಡೆಗಳಲ್ಲಿ ಎತ್ತರದ ಬುದ್ಧನ ವಿಗ್ರಹಗಳೂ ಇವೆ. ಈ ವಿಗ್ರಹಗಳಿಗೆ ಆ ಕಾಲದಲ್ಲಿ ವಿವಿಧ ವರ್ಣಗಳನ್ನು ಹಚ್ಚಲಾಗಿತ್ತು. ಈ ವರ್ಣಗಳು ಈಗ ಬಹಳಮಟ್ಟಿಗೆ ಮಾಸಿವೆ.

ನಿಯ ಎಂಬಲ್ಲಿ ವಿಹಾರಗಳೂ ಸ್ತೂಪಗಳೂ ಕಂಡುಬಂದಿವೆ. ಇವು ಮೇಲೆ ಹೇಳಿದ ವಿಹಾರಗಳಿಗಿಂತ ಬೃಹತ್ ಪ್ರಮಾಣದವು. ಇಲ್ಲಿ ಭಾರತೀಯ, ಗಾಂಧಾರ ಮತ್ತು ಚೀನೀ ಪ್ರಭಾವಗಳನ್ನು ಗುರುತಿಸಬಹುದು. ಖರೋಷ್ಠೀ ಮತ್ತು ಚೀನೀ ಲಿಪಿಗಳ ಶಾಸನಗಳು ಇಲ್ಲಿ ದೊರಕಿರುವುದು ಇದನ್ನು ಸಮರ್ಥಿಸುತ್ತದೆ. ತುಮ್‌ಷುಕ್ ಎಂಬಲ್ಲಿಯೂ ಇದೇ ರೀತಿಯ ವಾಸ್ತುಶಿಲ್ಪಕೃತಿಗಳು ದೊರಕಿವೆ.

ಮಧ್ಯ ಏಷ್ಯದಲ್ಲಿನ ಕುಚಿದ್ವೀಪ ವಾಸ್ತುಶಿಲ್ಪ ಮತ್ತು ವರ್ಣಚಿತ್ರ ಕಲೆಗೆ ಹೆಸರಾದದ್ದು. ಕಿಜಿಲ್ ಮತ್ತು ಕುಂತುರು ಎಂಬಲ್ಲಿ ಪತ್ತೆಹಚ್ಚಲಾಗಿರುವ ಗುಹಾದೇಗುಲಗಳು ಭಾರತೀಯ ಗುಹಾದೇವಾಲಯಗಳನ್ನು ಹೋಲುತ್ತವೆ. ಕ್ರಿ.ಶ. ನಾಲ್ಕನೆಯ ಶತಮಾನದಿಂದ ಎಂಟನೆಯ ಶತಮಾನದ ವರೆಗೆ ಬಳಕೆಯಲ್ಲಿದ್ದ ಈ ಗುಹೆಗಳು ವರ್ಣಚಿತ್ರಕ್ಕೆ ಪ್ರಸಿದ್ಧವಾದವು. ವರ್ಣಚಿತ್ರದಲ್ಲಿ ಗುಪ್ತರ ಶೈಲಿಯ ಪ್ರಭಾವಗಳನ್ನು ವಿಶೇಷವಾಗಿ ಕಾಣಬಹುದು. ಬುದ್ಧನ ಜೀವನಕ್ಕೆ ಸಂಬಂಧಿಸಿದ ಕಥೆಗಳನ್ನು ಚಿತ್ರಿಸಿರುವ ಭಿತ್ತಿಚಿತ್ರಗಳು ಬಹು ಗಮನಾರ್ಹ. ಕುಂತುರುದಲ್ಲಿರುವ ಗುಹಾಲಯಗಳ ಭಿತ್ತಿಚಿತ್ರಗಳು ಕಿಜಿಲ್ ಚಿತ್ರಶೈಲಿಗೇ ಸೇರಿದವು. ಆದರೆ ಇಲ್ಲಿನ ವರ್ಣಚಿತ್ರಗಳು ಹೆಚ್ಚು ಶ್ರೀಮಂತವಾಗಿವೆ. ನಾಗರಾಜಗುಹೆ ಮತ್ತು ನಿರ್ವಾಣಗುಹೆಗಳಲ್ಲಿರುವ ಅಪ್ಸರೆಯರು, ನವಿಲುಗಳು ಮತ್ತು ಇತರ ಪ್ರಾಣಿಗಳು ಬಹಳ ಉತ್ತಮವಾಗಿವೆ. ಕ್ರಿ.ಶ. ಆರನೆಯ ಶತಮಾನದ ಅನಂತರದ ಇಲ್ಲಿನ ಗುಹೆಗಳಲ್ಲಿನ ವರ್ಣಚಿತ್ರಗಳಲ್ಲಿ ಚೀನೀ ಪ್ರಭಾವಗಳನ್ನು ಕಾಣಬಹುದು. ದುಲ್ದುರ್, ಅಖುರ್, ಸುಬಾಷಿ ಮತ್ತು ಹಿಸಾರ್‌ಗಳಲ್ಲಿ ದೊರಕಿರುವ ವಿಹಾರಗಳೂ ವರ್ಣಚಿತ್ರಗಳೂ ಕಿಜಿಲ್ ಶೈಲಿಗೇ ಸೇರಿದವು.

ಕರಶಹರ್ ಮತ್ತೊಂದು ಮುಖ್ಯ ಕಲಾಕೇಂದ್ರ. ಇಲ್ಲಿಯೂ ಅನೇಕ ದೇವಾಲಯಗಳೂ ಬುದ್ಧನ ಶಿಲ್ಪಗಳಿರುವ ಗುಹೆಗಳೂ ದೊರಕಿವೆ. ಈ ಶಿಲ್ಪಗಳಲ್ಲಿ ಬುದ್ಧನ ಪರಿನಿರ್ವಾಣ ಮುಖ್ಯವಾದದ್ದು. ಇಲ್ಲಿನ ವರ್ಣಚಿತ್ರಗಳು ಉತ್ತಮವಾಗಿವೆ. ಇವು ಕಿಜಿಲ್ ಶೈಲಿಗಿಂತ ಭಿನ್ನ. ಚಿತ್ರಗಳಲ್ಲಿ ರೂಪಿತವಾಗಿರುವ ಮನುಷ್ಯರ ಭಾವಭಂಗಿಗಳೂ ಮುದ್ರೆಗಳೂ ಗಮನಾರ್ಹ. ಮಣ್ಣುಗಾರೆಯಿಂದ ವಿಗ್ರಹಗಳನ್ನು ತಯಾರು ಮಾಡಲು ಉಪಯೋಗಿಸುತ್ತಿದ್ದ ಜೇಡಿಮಣ್ಣಿನ ಸುಟ್ಟ ಅಚ್ಚುಗಳು ಇಲ್ಲಿ ದೊರಕಿವೆ. ಈ ವಿಗ್ರಹಗಳಲ್ಲೂ ಗುಪ್ತಶೈಲಿಯ ಪ್ರಭಾವವೇ ಹೆಚ್ಚು.

ತುರ್ಫಾನ್ ಪಕ್ಕದ ಇತರ ರಾಜ್ಯಗಳಿಗಿಂತ ಹೆಚ್ಚು ಕಾಲ ಬೌದ್ಧಧರ್ಮದ ಪ್ರಭಾವಕ್ಕೆ ಒಳಗಾಗಿತ್ತು. ಇಲ್ಲಿ ಕ್ರಿ.ಶ. ಹದಿನೈದನೆಯ ಶತಮಾನದಲ್ಲೂ ಬೌದ್ಧಧರ್ಮ ಪ್ರಚಲಿತವಿತ್ತೆಂದು ತಿಳಿದುಬರುತ್ತದೆ. ತುರ್ಫಾನಿನಲ್ಲಿ ದೇವಾಲಯಗಳು ಮಾತ್ರವಲ್ಲದೆ ಕೋಟೆಗಳು, ಅರಮನೆಗಳು, ಮನೆಗಳು, ಬುರುಜುಗಳು ಮುಂತಾದವೂ ಬೆಳಕಿಗೆ



ನೇಪಾಳದ ಒಂದು ದೇಗುಲ

ಬಂದಿವೆ. ತುರ್ಫಾನಿನ ಈ ಅವಶೇಷಗಳನ್ನು ಮುಖ್ಯವಾಗಿ ಇದಿಕುತ್‌ಶಹರಿ, ಖೊಜೊ, ಮುರ್ತುಕ್, ಬೆಜೆಕ್ಲಿಕ್ ಮುಂತಾದ ಕಡೆಗಳಲ್ಲಿ ನೋಡಬಹುದು. ವಾಸ್ತುಕಲೆಯ ದೃಷ್ಟಿಯಿಂದ ಖೊಜೊ ಮತ್ತು ಇದಿಕುತ್‌ಶಹರಿ ಮುಖ್ಯ. ಕೋಶ್ ಗುಂಬಜ್ ವೃತ್ತಾಕಾರದ ತಲವಿನ್ಯಾಸ ಮತ್ತು ಗುಮ್ಮಟವನ್ನುಳ್ಳ ಒಂದು ಕಟ್ಟಡ. ಇದರೊಳಗಿನ ಗೋಡೆಯ ಚಿತ್ರಗಳು ಬಹಳಮಟ್ಟಿಗೆ ನಾಶವಾಗಿವೆ. ಈ ಚಿತ್ರಗಳಲ್ಲಿ ಚೀನೀ ಪ್ರಭಾವವೇ ವಿಶೇಷ.

ಮಧ್ಯ ಏಷ್ಯದ ಭಾಗಗಳೇ ಆದರೂ ಇನ್ನೂ ಪೂರ್ವಕ್ಕಿರುವ ತೌ–ಲಾನ್, ತಾನ್–ಹುವಾಂಗ್ ಮತ್ತು ಕರಖೋಟೊಗಳಲ್ಲಿ ಉಪಲಬ್ಧವಾಗಿರುವ ಅವಶೇಷಗಳಲ್ಲಿ ಚೀನೀ ಪ್ರಭಾವಗಳೇ ವಿಶೇಷವಾಗಿ ಕಾಣಬರುತ್ತವೆ. ತೌ–ಲಾನಿನಲ್ಲಿ ದೊರಕಿರುವ ಕಂಚಿನ, ಚಿನ್ನದ ಮತ್ತು ಇತರ ಲೋಹಗಳ ಪಾತ್ರೆಗಳು ಕಲಾತ್ಮಕವಾದವು. ತಾನ್–ಹುವಾಂಗ್ ಗುಹೆಗಳಲ್ಲಿನ ವರ್ಣಚಿತ್ರಗಳು ಬುದ್ಧನ ಜೀವನಕ್ಕೆ ಸಂಬಂಧಿಸಿದವುಗಳಾದರೂ ಅವುಗಳಲ್ಲಿ ಕಾಣಬರುವ ಮುಖಲಕ್ಷಣ, ಆಲಂಕಾರಿಕ ನಮೂನೆಗಳು, ಪ್ರಾಣಿಗಳು ಮತ್ತು ವರ್ಣಸಂಯೋಜನೆ—ಇವೆಲ್ಲವೂ ಚೀನೀ ವರ್ಣಚಿತ್ರ ಶೈಲಿಗೆ ಸೇರಿದವು ; ಇವು ಕ್ರಿ.ಶ. ಐದರಿಂದ ಎಂಟನೆಯ ಶತಮಾನಗಳ ಅವಧಿಯಲ್ಲಿ ನಿರ್ಮಿತವಾದವು. ಒಟ್ಟಿನಲ್ಲಿ ಮಧ್ಯ ಏಷ್ಯದಲ್ಲಿ ಇಸ್ಲಾಮೀ ಕಲೆ ಪ್ರಾರಂಭವಾಗುವ ವರೆಗೂ ವಿಶೇಷವಾಗಿ ಭಾರತೀಯ ಶಿಲ್ಪಶೈಲಿಯಿಂದ ಪ್ರಭಾವಿತವಾದ ಕಲೆಯೇ ಪ್ರಚಲಿತವಾಗಿತ್ತೆಂದು ಗೊತ್ತಾಗುತ್ತದೆ.

**ಉತ್ತರ ಏಷ್ಯ :** ಉತ್ತರ ಏಷ್ಯದಲ್ಲಿ ಸೈಬೀರಿಯ ಅತಿ ಮುಖ್ಯ ದೇಶ. ಇದು ಹದಿನೇಳನೆಯ ಶತಮಾನದ ವರೆಗೆ ಪ್ರಾಗೈತಿಹಾಸಿಕ ಸಂಸ್ಕೃತಿಯ ನೆಲೆಯಾಗಿತ್ತು. ರಷ್ಯನ್ ವಸಾಹತುಗಳು ಇಲ್ಲಿ ಸ್ಥಾಪನೆಯಾಗುವ ವರೆಗೆ ಇಲ್ಲಿ ಯಾವ ಗಮನಾರ್ಹವಾದ ವಾಸ್ತುಶಿಲ್ಪಗಳೂ ನಿರ್ಮಿತವಾಗಲಿಲ್ಲ. ಸೈಬೀರಿಯದ ಪ್ರಾಗೈತಿಹಾಸಿಕ ಕಲೆಯ ವಿಚಾರವಾಗಿಯೂ ವಿಶೇಷವಾದ ಮಾಹಿತಿಗಳು ದೊರಕಿಲ್ಲ.(ಎ.ಎ.ಎಸ್.)

**ಏಷ್ಯದ ಶಾಸನಗಳು, ನಾಣ್ಯಗಳು :** ಏಷ್ಯದ ಶಾಸನಗಳನ್ನು, ಅವುಗಳನ್ನು ಬರೆಯಲು ಬಳಸಲಾಗಿರುವ ಲಿಪಿಗಳ ದೃಷ್ಟಿಯಿಂದ, ಭಾವಲಿಪಿಗಳ (ಈಡಿಯೊಗ್ರಾಫ್) ಮತ್ತು ಧ್ವನಿನಿರೂಪಕ (ಫೊನೆಟಿಕ್) ವರ್ಣಲಿಪಿಗಳ (ಆಲ್ಫಬೆಟ್) ಶಾಸನಗಳೆಂದು ಸಾಮಾನ್ಯವಾಗಿ ವಿಂಗಡಿಸಬಹುದಾಗಿದೆ.

ಭಾವಲಿಪಿ ಶಾಸನಗಳ ಪೈಕಿ ಕ್ರಿ.ಪೂ. ಸುಮಾರು 20ನೆಯ ಶತಮಾನದಲ್ಲಿ ಹುಟ್ಟಿರಬಹುದಾದ (ಇಂದಿನ ಇರಾಕ್ ದೇಶದ) ಸುಮೇರಿಯನ್ ಜನಾಂಗದವರ ನೂರಾರು ಶಿಲಾ ಮತ್ತು ಜೇಡಿಮಣ್ಣಿನ ಫಲಕ ಶಾಸನಗಳೇ ಪ್ರಾಚೀನತಮವಾದವು. ಇವುಗಳನ್ನು ಬರೆಯುವಲ್ಲಿ ಬೆಣೆಯಾಕಾರದ (ಕ್ಯೂನಿಫಾರಂ) ಭಾವಲಿಪಿಗಳನ್ನು ಬಳಸಲಾಗಿದೆ. ಇಂಥ ಲಿಪಿಗಳನ್ನು ತಮ್ಮ ಶಾಸನಗಳಿಗಾಗಿ ಬಳಸಿಕೊಂಡವರಲ್ಲಿ ಬ್ಯಾಬಿಲೋನಿಯನ್, ಅಸ್ಸಿರಿಯನ್ ಮತ್ತು ಪರ್ಷಿಯನ್ ಜನಾಂಗದವರು ಸೇರಿದ್ದಾರೆ. ವಿಶ್ವ ಇತಿಹಾಸದಲ್ಲಿ ಪ್ರಮುಖ ಸ್ಥಾನ ಪಡೆದಿರುವ ಹಮ್ಮುರಾಬಿಯ ಧರ್ಮಸೂತ್ರಗಳ ಶಿಲಾಸ್ತಂಭ ಶಾಸನ ಇದೇ ಲಿಪಿಯಲ್ಲಿದೆ. ಅಲ್ಲದೆ ಏಷ್ಯ ಮೈನರಿನ ಎಲಾಮೈಟ್, ಕಸ್ಸೈಟ್, ಹಿಟ್ಟೈಟ್, ಮಿಟನ್ನಿ, ಹುರ್ರಿಯನ್, ಉರರ್ತು, ಕ್ಯಾಪ್ಪಡೋಸಿಯನ್, ಕೇನನೈಟ್ ಇತ್ಯಾದಿ ಜನಾಂಗಗಳವರೂ ಪ್ರಾಚೀನ ಕಾಲದಲ್ಲಿ ಸುಮೇರಿಯನ್ನರ ಈ ಬೆಣೆಯಾಕಾರದ ಭಾವಲಿಪಿಗಳನ್ನು ಬಳಸಿ ತಮ್ಮ ಶಾಸನಗಳನ್ನು ಬರೆಯುತ್ತಿದ್ದರೆನ್ನುವುದಕ್ಕೆ ಆಧಾರಗಳಿವೆ. ಈ ಲಿಪಿಯ ಇತ್ತೀಚಿಗಿನ ಶಾಸನ ಕ್ರಿ.ಪೂ. 6ನೆಯ ವರ್ಷದ್ದಾಗಿದ್ದು, ಕ್ರಿ.ಶ.ದ ಪ್ರಾರಂಭದ ವೇಳೆಗೆ ಈ ಲಿಪಿಯ ಬಳಕೆ ತಪ್ಪಿಹೋಯಿತೆಂದು ಊಹಿಸಲಾಗಿದೆ.

ಪಶ್ಚಿಮ ಪಾಕಿಸ್ತಾನ ಹಾಗೂ ವಾಯುವ್ಯ ಮತ್ತು ಪಶ್ಚಿಮ ಭಾರತದಲ್ಲಿ ಕ್ರಿ.ಪೂ. ಸುಮಾರು 2400ರಿಂದ 1700ರ ವರೆಗೆ ಪ್ರಚಲಿತವಾಗಿದ್ದ ಸಿಂಧೂ ಕಣಿವೆಯ (ಅಥವಾ ಹರಪ್ಪ) ಸಂಸ್ಕೃತಿಗೆ ಸಂಬಂಧಿಸಿದ ನೂರಾರು ಸಾಬೂನುಗಲ್ಲಿನ ಮುದ್ರೆಗಳು ದೊರೆತಿವೆ. ಅವುಗಳ ಮೇಲಿನ ಬರೆಹಗಳಿಗೆ ಆ ಕಾಲದ ಭಾರತೀಯರು 200ಕ್ಕೂ ಹೆಚ್ಚಿನ ಸಾಂಕೇತಿಕಾಕ್ಷರಗಳನ್ನು ಬಳಸಿರುವರು. ಈ ಚಿತ್ರಲಿಪಿಯನ್ನು ಅರ್ಥೈಸಲು ಇಲ್ಲಿಯ ವರೆಗೆ ಅನೇಕ ಪ್ರಯತ್ನಗಳು ನಡೆದಿದ್ದರೂ ಸರ್ವಸಮ್ಮತವಾದ ಪರಿಹಾರ ದೊರೆಯದಾಗಿದೆ.

ಏಷ್ಯ ಮೈನರ್ ಮತ್ತು ಉತ್ತರ ಸಿರಿಯದ ನಿವಾಸಿಗಳಾಗಿದ್ದ ಹಿಟ್ಟೈಟ್ ಜನಾಂಗದವರ ಚಿತ್ರಲಿಪಿ ಶಾಸನಗಳು ಕ್ರಿ.ಪೂ. 1500 ರಿಂದ 600ರ ವರೆಗಿನವು. ಈ ಶಾಸನಗಳ ಸಾಂಕೇತಿಕ ಚಿತ್ರಗಳನ್ನು ಅರ್ಥೈಸುವಲ್ಲಿಯೂ ವಿದ್ವಾಂಸರ ನಡುವೆ ಸಾಕಷ್ಟು ಭಿನ್ನಾಭಿಪ್ರಾಯಗಳಿವೆ. ಕಾಲಕ್ರಮೇಣ ಈ ಜನಾಂಗದವರು ಬ್ಯಾಬಿಲೋನಿಯನ್ನರ ಭಾವಲಿಪಿಗಳನ್ನು ಬಳಸಿ ತಮ್ಮದೇ ಆದ ಬೆಣೆಯಾಕಾರದ ಲಿಪಿಮಾಲೆಯನ್ನು ಸೃಷ್ಟಿಸಿಕೊಂಡರೆನ್ನುವುದಕ್ಕೆ ಶಾಸನಗಳ ಆಧಾರವಿದೆ.

ಕ್ರಿ.ಪೂ. 8ನೆಯ ಶತಮಾನದ ವೇಳೆಗೆ ಏಷ್ಯ ಮೈನರಿನಲ್ಲಿ ಅತಿ ಪ್ರಬಲರಾಗಿದ್ದ ಫ್ರಿಜಿಯನ್ ಜನಾಂಗದವರ ಕೆಲವು ಶಾಸನಗಳು ಕ್ರಿ.ಪೂ. 8–7ನೆಯ ಶತಮಾನಗಳಷ್ಟು ಹಳೆಯವು. ಇವರ ಶಾಸನಗಳಲ್ಲಿಯ ಲಿಪಿಗೆ ಗ್ರೀಕ್ ಲಿಪಿಯೇ ಮೂಲ. ಇವರ ರೋಮನ್ ಯುಗದ ಶಾಸನಗಳಂತೂ ಗ್ರೀಕ್ ಲಿಪಿಯಲ್ಲೇ ಇವೆ. ಏಷ್ಯ ಮೈನರಿನ ಪ್ಯಾಂಫಿಲಿಯದವರ ಪ್ರಾಚೀನ ಶಾಸನಗಳ ಲಿಪಿಯೂ ಗ್ರೀಕ್ ಲಿಪಿಯಿಂದಲೇ ಹುಟ್ಟಿದ್ದಾಗಿದೆ. ಅನಂತರ ಕಾಲದ ಗ್ರೀಕ್–ಅರಮೈಯಿಕ್ ಮಿಶ್ರಿತ ಲಿಪಿಯ ಶಾಸನಗಳೂ ದೊರೆತಿವೆ.

ಫ್ರಿಜಿಯನ್ ರಾಷ್ಟ್ರದ ಪತನದ ಅನಂತರ ಏಷ್ಯ ಮೈನರಿನ ಪ್ರಭಾವಶಾಲಿ ರಾಷ್ಟ್ರವಾಗಿ ಬೆಳಗಿದ ಲಿಡಿಯದ ಶಾಸನಗಳು ಹಲವು ಕ್ರಿ.ಪೂ. 5–4ನೆಯ ಶತಮಾನಗಳಷ್ಟು ಪುರಾತನವಾದವು. ಲಿಡಿಯನ್ ಲಿಪಿಗೂ ಗ್ರೀಕ್ ಲಿಪಿಯೇ ಮೂಲ. ಲಿಡಿಯನ್ ಮತ್ತು ಗ್ರೀಕ್ ದ್ವಿಭಾಷಾಶಾಸನಗಳೂ ಎರಡು ದೊರೆತಿವೆ. ಲಿಡಿಯನ್ ಲಿಪಿಯನ್ನು ಸಾಮಾನ್ಯವಾಗಿ ಬಲದಿಂದ ಎಡಕ್ಕೆ ಬರೆಯಲಾಗುತ್ತಿತ್ತು.

ಲಿಡಿಯಕ್ಕೆ ದಕ್ಷಿಣದಲ್ಲಿದ್ದ ಕೇರಿಯನ್ ರಾಷ್ಟ್ರದ ಶಾಸನಗಳ ಪೈಕಿ ಪ್ರಾಚೀನತಮವಾದ್ದು ಕ್ರಿ.ಪೂ. 7ನೆಯ ಶತಮಾನದಷ್ಟು ಹಳೆಯದು. ಕೇರಿಯನ್ ಲಿಪಿಯೂ ಗ್ರೀಕ್ ಲಿಪಿಯಿಂದಲೇ ಹುಟ್ಟಿದ್ದಾದರೂ ಸ್ವಲ್ಪ ಮಟ್ಟಿಗೆ ಅದು ಕ್ರೀಟ್ ಮತ್ತು ಸೈಪ್ರಸ್‌ಗಳ ಪ್ರಾಚೀನ ಲಿಪಿಗಳಿಂದಲೂ ಪ್ರಭಾವಿತವಾಗಿತ್ತು.

ಚೀನದ ಪ್ರಾಚೀನ ಮತ್ತು ಆಧುನಿಕ ಸ್ವದೇಶೀ ಲಿಪಿಗಳು ಭಾವಲಿಪಿಗಳೇ ಆಗಿವೆ. ಆ ನಾಡಿನಲ್ಲಿ ದೊರೆತಿರುವ ಅನೇಕ ಕಂಚು ಕಂಚಿನ ಪ್ರತಿಮೆಗಳ ಮೇಲಿನ ಶಾಸನಗಳ ಮೇಲಿನ ಪೈಕಿ ಕ್ರಿ.ಪೂ. 12–11ನೆಯ ಶತಮಾನದಷ್ಟು ಹಳೆಯವು ಕೇವಲ ಕೆಲವೇ ಭಾವಲಿಪಿಗಳಿಂದ ಕೂಡಿರುತ್ತವೆ. ಆ ಕಾಲದಿಂದೀಚೆಗಿನ ಕಂಚು ಕಂಚಿನ ಪ್ರತಿಮಾಶಾಸನಗಳ ಪಾಠಗಳು ಸಾಕಷ್ಟು ದೀರ್ಘವಾಗಿದ್ದು ಅವುಗಳಲ್ಲಿ ಹೆಚ್ಚಿನವು ತೇದಿಯ ವಿವರಗಳನ್ನೂ ಒಳಗೊಂಡಿರುತ್ತವೆ. ಚೀನದ ಉತ್ತರ ಹೋನಾನ್ ಪ್ರಾಂತ್ಯದ ಷಿಯಾವೊ-ತುನ್ ಗ್ರಾಮದಲ್ಲಿ ಉತ್ಖನನ ಸಮಯದಲ್ಲಿ ದೊರೆತ ನೂರಾರು ಎಲುಬುಗಳ ಹಾಗೂ ಆಮೆಚಿಪ್ಪುಗಳ ಚೂರುಗಳ ಮೇಲಿನ ಪ್ರಾಚೀನ ಭಾವಲಿಪಿಗಳ ಪೈಕಿ ಕೆಲವಾದರೂ ಕ್ರಿ.ಪೂ. 11ನೆಯ ಶತಮಾನದಷ್ಟು ಹಳೆಯವೆಂಬುದು ಕೆಲವು ಸಂಶೋಧಕರ ಅಭಿಪ್ರಾಯ. ತಮ್ಮ ತಮ್ಮ ಭವಿಷ್ಯಗಳ ಬಗೆಗೆ ಜನ ಕೇಳಿದ ಪ್ರಶ್ನೆಗಳಿಗೆ ಕಾಲಜ್ಞಾನಿಗಳು ನೀಡಿದ ಉತ್ತರಗಳನ್ನೇ ಈ ಚೂರುಗಳ ಮೇಲೆ ಬರೆಯಲಾಗಿದೆ ಎಂದು ನಂಬಲಾಗಿದೆ. ಚೀನದ ರಾಜಧಾನಿ ಪೀಕಿಂಗಿನ ಕನ್‌ಫ್ಯೂಷಿಯನ್ ದೇವಾಲಯದ ಮಹಾದ್ವಾರದಲ್ಲಿ ಇಡಲಾಗಿರುವ ನಗಾರಿರೂಪದ ಕಲ್ಲುಗಳ ಮೇಲೆ ಕೊರೆಯಲಾಗಿರುವ ಭಾವಲಿಪಿ ಶಾಸನಗಳು ಕ್ರಿ.ಪೂ. 9ನೆಯ ಶತಮಾನಕ್ಕಿಂತಲೂ ಪೂರ್ವಕಾಲದವು. ಚೀನದಲ್ಲಿ ಕೇವಲ ಕೆಲವೇ ಶಿಲಾಶಾಸನಗಳು ದೊರೆತಿರುವುದು ಅಚ್ಚರಿಯ ಸಂಗತಿ. ಪ್ರಾಚೀನ ಚೀನೀಯರು ಮರದ ಹಲಗೆ, ಬಿದಿರು, ರೇಷ್ಮೆ ಮುಂತಾದ ನಶ್ವರವಸ್ತುಗಳ ಮೇಲೆ ಬರೆಯುತ್ತಿದ್ದುದೇ ಇದಕ್ಕೆ ಕಾರಣವೆಂದು ಊಹಿಸಲಾಗಿದೆ. ಚೀನದ ನೇರ ಪ್ರಭಾವಕ್ಕೊಳಗಾದ ಜಪಾನ್, ಕೊರಿಯ, ಉತ್ತರ ವಿಯಟ್ನಾಂ, ಮಂಗೋಲಿಯ ಮುಂತಾದ ಕೆಲವು ರಾಷ್ಟ್ರಗಳದ್ದೂ ಇದೇ ಪರಿಸ್ಥಿತಿ. ಚೀನೀ ತುರ್ಕಿಸ್ತಾನದ ಮರುಭೂಮಿಯಲ್ಲಿ ನಡೆಸಲಾದ ಅಗೆತಗಳಲ್ಲಿ ಮರದ ಹಲಗೆ, ಚರ್ಮ, ಭೂರ್ಜಪತ್ರ ಇತ್ಯಾದಿಗಳ ಮೇಲೆ ಬರೆಯಲಾದ ಪ್ರಾಚೀನ ದಾಖಲೆಗಳು ದೊರೆತಿರುವುದು ಈ ಊಹೆಗೆ ಪೋಷಕವಾಗಿದೆ. ಟಿಬೆಟ್ಟಿನ ಉತ್ತರಕ್ಕೆ ಚೀನದಲ್ಲಿ ಕ್ರಿ.ಶ. 10–13ನೆಯ ಶತಮಾನಗಳಲ್ಲಿ ಅಸ್ತಿತ್ವದಲ್ಲಿದ್ದ ತಂಗುತ್ ಅಥವಾ ಪಶ್ಚಿಮ ಹಿಯ ರಾಷ್ಟ್ರದ ಅರಸರ ಕೆಲವು ಭಾವಲಿಪಿಶಾಸನಗಳು ಕ್ರಿ.ಶ. 11–13ನೆಯ ಶತಮಾನಗಳವಾಗಿವೆ.

ಚೀನದಲ್ಲಿ ಪ್ರಾಚೀನ ಶಾಸನಗಳ ಅಧ್ಯಯನ ಹಿಂದಿನಿಂದಲೂ ನಡೆದುಬಂದಿದೆ. ಕ್ರಿ.ಶ. 11ನೆಯ ಶತಮಾನದಲ್ಲಿ ಪ್ರಕಟವಾದ ಗ್ರಂಥವೊಂದರಲ್ಲಿ ಚೀನದ 400 ಪ್ರಾಚೀನ ಶಾಸನಗಳನ್ನು ಕುರಿತ ಸಂಶೋಧನಾತ್ಮಕ ವಿವರಣೆಗಳಿವೆ.

ಪ್ರಾಚೀನ ಸಿರಿಯದ ಬಿಬ್ಲೋಸ್ ಜನಾಂಗಕ್ಕೆ ಸೇರಿದ ಶಾಸನಗಳದು ಕ್ರಿ.ಪೂ. ಸುಮಾರು 1500–1300ರ ಒಂದು ರೀತಿಯ ಚಿತ್ರಲಿಪಿಯಾಗಿದೆ. ಈ ಶಾಸನಗಳ ಭಾಷೆ ಫಿನಿಷಿಯನ್ ಎಂದೂ ಬಳಸಲಾಗಿರುವ ಸಾಂಕೇತಿಕ ಚಿತ್ರಗಳಿಗೂ ಅವುಗಳ ಧ್ವನಿರೂಪಕ ಮೌಲ್ಯಗಳಿಗೂ ಸಂಬಂಧವಿಲ್ಲವೆಂದೂ ಆದಕಾರಣ ಈ ಲಿಪಿಯನ್ನು ಉಚ್ಚಾರಾಂಶದ (ಸಿಲ್ಯಾಬಿಕ್) ಲಿಪಿಯೆನ್ನಬೇಕೆಂದೂ ವಿದ್ವಾಂಸರ ಅಭಿಪ್ರಾಯ. ಈ ಶಾಸನಗಳಲ್ಲಿ ಉಪಯೋಗಿಸಲಾಗಿರುವ ಸಾಂಕೇತಿಕಾಕ್ಷರಗಳಿಗೂ ಈಜಿಪ್ಟ್, ಕ್ರೀಟ್, ಸೈಪ್ರಸ್, ಕೇನನ್, ಸಿಂಧೂ ಕಣಿವೆ ಮುಂತಾದ ಪ್ರಾಂತ್ಯಗಳ ಸಾಂಕೇತಿಕಾಕ್ಷರಗಳಿಗೂ ಗಮನಾರ್ಹ ಪ್ರಮಾಣದ ಹೋಲಿಕೆಗಳಿರುವುದು ಕುತೂಹಲಕಾರಿಯಾದ ವಿಷಯ.

ಸೈಪ್ರಸಿನಲ್ಲಿ ಇಲ್ಲಿಯ ವರೆಗೆ ಸುಮಾರು 200 ಪ್ರಾಚೀನ ಶಾಸನಗಳು ದೊರೆತಿದ್ದು, ಅವುಗಳಲ್ಲಿ ಹೆಚ್ಚಿನವು ಗ್ರೀಕ್ ಭಾಷೆಯಿಂದ ಪ್ರಭಾವಿತವಾಗಿವೆ. ಈ ದ್ವೀಪದಲ್ಲಿ ಕ್ರಿ.ಪೂ. 6–2ನೆಯ ಶತಮಾನಗಳಲ್ಲಿ ಉಚ್ಚಾರಾಂಶದ ಲಿಪಿಗಳನ್ನು ಬಳಸಿ ಶಾಸನಗಳನ್ನು ಬರೆಯಲಾಗುತ್ತಿತ್ತು. ಅದರ ಮೊದಲಿನ ಭಾವಲಿಪಿ ಶಾಸನಗಳು ಕ್ರಿ.ಪೂ. ಸುಮಾರು 2100 ರಿಂದ 1200ರ ವರೆಗಿನವಾಗಿದೆ.

ಪ್ರಾಚೀನ ಪರ್ಷಿಯದ ಕ್ರಿ.ಪೂ. 6–3ನೆಯ ಶತಮಾನಗಳಿಗೆ ಸೇರಿದ ಶಾಸನಗಳ ಬೆಣೆಯಾಕಾರದ ಲಿಪಿ ಉಚ್ಚಾರಾಂಶದ ಲಿಪಿಯೂ ಹೌದು ; ಧ್ವನಿನಿರೂಪಕ ವರ್ಣಮಾಲೆಯೂ ಹೌದು. ಈ ಲಿಪಿಯ ಉತ್ಪತ್ತಿಗೆ ಅರಮೇಯಿಕ್ ಲಿಪಿ ಮೂಲವೆಂದು ಪರಿಗಣಿಸಲಾಗಿದೆ. ಈ ಲಿಪಿಯ ಶಾಸನಗಳಲ್ಲಿ ಹಲವು ಪರ್ಷಿಯದ ಪರ್ಸೆಪೊಲಿಸ್ ನಗರದ ಅದ್ಭುತ ಐತಿಹಾಸಿಕ ಕಟ್ಟಡಗಳಲ್ಲಿ ಕಾಣಸಿಗುತ್ತವೆ. ಈ ಲಿಪಿಯ ಬಂಗಾರದ, ಬೆಳ್ಳಿಯ ಹಾಗೂ ಜೇಡಿಮಣ್ಣಿನ ಫಲಕಶಾಸನಗಳೂ ದೊರೆತಿವೆ. ಕಾಲಕ್ರಮದಲ್ಲಿ ಜಂಬು ಕಾಗದದ ಬಳಕೆ ಹೆಚ್ಚಿದಂತೆ ಈ ಲಿಪಿಯ ಶಾಸನಗಳ ಸಂಖ್ಯೆ ಕಡಿಮೆ ಆಗುತ್ತ ಬಂತು.

ಧ್ವನಿನಿರೂಪಕ ವರ್ಣಮಾಲೆಗಳನ್ನು ಬಳಸಿ ಬರೆದ ಶಾಸನಗಳ ಪೈಕಿ ದಕ್ಷಿಣ ಅರೇಬಿಯದಲ್ಲಿ ದೊರೆತಿರುವ, ಕ್ರಿ.ಪೂ. 8ನೆಯ ಶತಮಾನದ ದಕ್ಷಿಣ ಸಿಮಿಟಿಕ್ ಶಾಸನಗಳೇ ಪ್ರಾಚೀನತಮವಾದವು. ದಕ್ಷಿಣ ಅರೇಬಿಯದ ಪ್ರಾಚೀನ ಇತಿಹಾಸ, ಭಾಷೆ, ಲಿಪಿ—ಇವುಗಳನ್ನು ಕುರಿತ ನಮ್ಮ ತಿಳಿವಳಿಕೆ ಪೂರ್ತಿ ಈ ಶಾಸನಗಳ ಮೇಲೆ ಆಧಾರಿತವಾಗಿದೆ. ಈ ಪ್ರಾಂತ್ಯದಲ್ಲಿ ಇಲ್ಲಿಯ ವರೆಗೆ ನೂರಾರು ಶಾಸನಗಳು ದೊರೆತಿದ್ದು, ಅವುಗಳ ಸುಂದರ ಲಿಪಿಯನ್ನು ಸಬೀಯನ್ ಎಂದೂ ಕರೆಯುವುದು ವಾಡಿಕೆಯಲ್ಲಿದೆ. ಅವುಗಳಲ್ಲಿ ಹೆಚ್ಚಿನವನ್ನು ಬಲದಿಂದ ಎಡಕ್ಕೆ ಬರೆಯಲಾಗಿದೆ. ಮತ್ತು ಆ ಶಾಸನಗಳು ಪ್ರಾಚೀನತಮ ಅರಾಬಿಕ್ ಭಾಷೆಯ ಮೇಲೆ ಬೆಳಕು ಚೆಲ್ಲುವಂಥವಾಗಿವೆ. ಉತ್ತರ ಅರೇಬಿಯದ ವಾಯುವ್ಯ ಸಿರಿಯ ಮತ್ತು ಟ್ರಾನ್ಸ್‌ಜಾರ್ಡನ್ ಪ್ರಾಂತ್ಯಗಳಲ್ಲೂ ಸುಮಾರು 1,800 ದಕ್ಷಿಣ ಸಿಮಿಟಿಕ್ ಶಾಸನಗಳು ದೊರೆತಿದ್ದು, ಅವು ಕ್ರಿ.ಪೂ. ಸುಮಾರು 500 ರಿಂದ ಕ್ರಿ.ಶ. ಸುಮಾರು 400ರ ವರೆಗಿನವಾಗಿವೆ.

ಸರಿಸುಮಾರಾಗಿ ಈಗ ಪ್ಯಾಲೆಸ್ಟೈನ್ ಇರುವ ಭಾಗಕ್ಕೆ ಸಂಬಂಧಿಸಿದ ಕೇನನೈಟ್ ಶಾಖೆಯ ಭಾಷೆಗಳೂ ಅರಮೇಯಿಕ್ ಶಾಖೆಯ ಭಾಷೆಗಳೂ ವಾಯುವ್ಯ ಸಿಮಿಟಿಕ್ ಕುಟುಂಬಕ್ಕೆ ಸೇರಿದವು. ಇವುಗಳ ಪೈಕಿ ಕೇನನೈಟ್ ಶಾಖೆಯ ಹೀಬ್ರುವಿನಲ್ಲಿರುವ ಶಾಸನಗಳು ಕೆಲವು ಮಾತ್ರ ಇಸ್ರೇಲಿನಲ್ಲಿ ದೊರೆಯುತ್ತವೆ. ಪ್ಯಾಲೆಸ್ಟೈನಿನಲ್ಲಿ

ಮೇಲಿಂದ ಮೇಲೆ ನಡೆದುಹೋದ ಯುದ್ಧಗಳ ಪರಿಣಾಮವಾಗಿ ಅಲ್ಲಿಯ ಅನೇಕ ಶಾಸನಗಳು ನಾಶಗೊಂಡಿರಬಹುದೆಂದು ಊಹಿಸಲಾಗಿದೆ. ಆದರೂ, ದೊರೆತಿರುವ ಶಾಸನಗಳು ರಾಷ್ಟ್ರದ ಪ್ರಾಚೀನ ಇತಿಹಾಸ, ಭಾಷೆ, ಮತ್ತು ಲಿಪಿಗಳ ಅಧ್ಯಯನಕ್ಕೆ ಸಾಕಷ್ಟು ಸಹಕಾರಿಯಾಗಿವೆ. ಹೀಬ್ರೂ ಶಾಸನಗಳ ಪೈಕಿ ಪ್ರಾಚೀನತಮವಾದದ್ದೆಂದರೆ ಕ್ರಿ.ಪೂ. 11ನೆಯ ಶತಮಾನದ ಗೆಜ಼ೆರ್ ಪಂಚಾಂಗ. ಇದರ ಅಕ್ಷರಗಳಲ್ಲಿ ಹಲವು ಉತ್ತರ ಸಿಮಿಟಿಕ್ ಶಾಸನಗಳ ಅಕ್ಷರಗಳಿಗೆ ಸರಿಹೊಂದುತ್ತವೆ. ಜೂಡಿಯ ಅಥವಾ ದಕ್ಷಿಣ ಪ್ಯಾಲೆಸ್ಟೈನಿನ ಶಾಸನಗಳಲ್ಲಿ ಕ್ರಿ.ಪೂ. ಸುಮಾರು 700ರ ಸಿಲೋಂ ಶಾಸನ ಪ್ರಾಚೀನತಮವಾದದ್ದು. ಪ್ಯಾಲೆಸ್ಟೈನಿನ ಬರೆಹಗಳಿಂದ ಕೂಡಿದ ಹಲವು ತೂಕದ ಬಟ್ಟುಗಳೂ ಅಳತೆಗಳೂ ದೊರೆತಿವೆ. ಅಲ್ಲದೆ, ಕೇನನೈಟ್ ಶಾಖೆಯ ಇತರ ಭಾಷೆಗಳಾದ ಮೋಬೈಟ್, ಅಮ್ಮೋನೈಟ್ ಮತ್ತು ಎಡೋಮೈಟ್ ಭಾಷೆ ಲಿಪಿಗಳ ಶಾಸನಗಳೂ ದೊರೆತಿದ್ದು, ಅವು ಕ್ರಿ.ಪೂ. 9–7ನೆಯ ಶತಮಾನದವಾಗಿವೆ.

ಬಿಬ್ಲೋಸ್ ಜನಾಂಗದವರ ಫಿನಿಷಿಯಿನ್ ಭಾಷೆಯ ಪ್ರಾಚೀನತಮ ಶಾಸನಗಳ ಪ್ರಸ್ತಾಪ ಮೇಲೆ ಬಂದಿದೆ. ಅನಂತರಕಾಲದ ಫಿನಿಷಿಯದ ಶಾಸನಗಳು ಆ ಪ್ರಾಂತ್ಯದಲ್ಲಷ್ಟೇ ಅಲ್ಲದೆ ಸೈಪ್ರಸ್, ಗ್ರೀಸ್, ಉತ್ತರ ಆಫ್ರಿಕ, ಮಾಲ್ಟ, ಸಿಸಿಲಿ, ಸಾರ್ಡೀನಿಯ, ಫ್ರಾನ್ಸ್, ಸ್ಪೇನ್ ಮುಂತಾದ ರಾಷ್ಟ್ರಗಳಲ್ಲೂ ದೊರೆತಿವೆ. ಲಿಪಿಶಾಸ್ತ್ರದೃಷ್ಟಿಯಿಂದ ಫಿನಿಷಿಯನ್ ಶಾಸನಗಳಿಗಿರುವ ಸ್ಥಾನ ಮಹತ್ತ್ವದ್ದು.

ಕ್ರಿ.ಪೂ. 11–10ನೆಯ ಶತಮಾನಗಳಿಂದ ಮೆಸೊಪೊಟೇಮಿಯ ಮತ್ತು ಪಶ್ಚಿಮ ಸಿರಿಯಗಳಲ್ಲಿ ಪ್ರಬಲರಾಗಿ ಬೆಳಗಿದ ಆರಮೇಯನ್ ಜನಾಂಗದವರ ಪ್ರಾಚೀನತಮ ಆರಮೇಯಿಕ್ ಶಾಸನ ಕ್ರಿ.ಪೂ. 9ನೆಯ ಶತಮಾನದಷ್ಟು ಹಳೆಯದು. ಆ ವೇಳೆಗೆ ಆರಮೇಯಿಕ್ ಲಿಪಿ ಪರ್ಷಿಯನ್ ಸಾಮ್ರಾಜ್ಯದ ಪಶ್ಚಿಮ ಪ್ರಾಂತ್ಯಗಳಲ್ಲಿ ಅಧಿಕೃತವಾಗಿ ಬಳಕೆಗೆ ಬಂದಿತ್ತು. ಅಚ್ಚರಿಯ ಸಂಗತಿಯೆಂದರೆ, ಹೆಚ್ಚಿನ ಮಹತ್ತ್ವದ ಆರಮೇಯಿಕ್ ಶಾಸನಗಳು ದೊರೆತಿರುವುದು ಆರಮೇಯನರ ಆಳ್ವಿಕೆಗೆ ಹೊರಗಿದ್ದ ಅಸ್ಸಿರಿಯ, ಪರ್ಷಿಯ, ಕ್ಯಾಪ್ಪಡೋಸಿಯ, ಲಿಸಿಯ, ಲಿಡಿಯ, ಸಿಲಿಸಿಯ, ಉತ್ತರ ಅರೇಬಿಯ, ಗ್ರೀಸ್, ಆಫ್‌ಘಾನಿಸ್ತಾನ, ಭಾರತ, ಪಾಕಿಸ್ತಾನ ಇತ್ಯಾದಿ ದೂರದೇಶಗಳಲ್ಲಿ ಮತ್ತು ಆರಮೇಯನರ ಪ್ರಭಾವ ಸಾಕಷ್ಟು ಇಳಿಮುಖವಾದ ಅನಂತರ. ಈ ಸಂದರ್ಭದಲ್ಲಿ ಪಾಕಿಸ್ತಾನದಲ್ಲಿ ದೊರೆತಿರುವ ಅಶೋಕನ ಆರಮೇಯಿಕ್ ಶಾಸನವನ್ನೂ ಆಫ್‌ಘಾನಿಸ್ತಾನದಲ್ಲಿ ದೊರೆತಿರುವ ಅದೇ ಚಕ್ರವರ್ತಿಯ ಕ್ರಿ.ಪೂ. ಗ್ರೀಕ್–ಆರಮೇಯಿಕ್ ದ್ವಿಭಾಷಾಶಾಸನವನ್ನೂ ಪ್ರಸ್ತಾಪಿಸಬಹುದಾಗಿದೆ.

ಆರಮೇಯಿಕ್ ಲಿಪಿಯಿಂದ ಹುಟ್ಟಿದ ಹೀಬ್ರೂ ಲಿಪಿಯಲ್ಲಿ ಬರೆದ ರೋಮ್ ಮತ್ತು ವೆನೋಸಗಳಲ್ಲಿಯ ಸಮಾಧಿಗುಹೆಗಳ ಮೇಲಿನ ಯೆಹೂದ್ಯ ಶಾಸನಗಳು 6ನೆಯ ಶತಮಾನದಿಂದ ಕಾಣಿಸಿಕೊಳ್ಳುತ್ತವೆ.

ಉತ್ತರ ಅರೇಬಿಯ, ಟ್ರಾನ್ಸ್‌ಜಾರ್ಡನ್ ಮತ್ತು ಸಿನಾಯ್‌ಗಳ ಮಧ್ಯಭಾಗದ ನಿವಾಸಿಗಳಾಗಿದ್ದ ನಬತೇಯನ್ ಜನಾಂಗದವರದು ಅರಾಬಿಕ್ ಸಂಸ್ಕೃತಿಯೇ ಆಗಿದ್ದರೂ ಅವರ ಕ್ರಿ.ಪೂ. 2—ಕ್ರಿ.ಶ. 2ನೆಯ ಶತಮಾನಗಳ ಶಾಸನಗಳು ಆರಮೇಯಿಕ್ ಭಾಷೆಯಲ್ಲಿವೆ. ಈಜಿಪ್ಟ್ ಮತ್ತು ಇಟಲಿಯಲ್ಲೂ ಈಜಿಯನ್ ದ್ವೀಪವಾದ ಕೋಸ್‌ನಲ್ಲೂ ಕೆಲವು ನಬತೇಯನ್ ಶಾಸನಗಳು ದೊರೆತಿವೆ.

ಇಂದಿನ ಮಾನವ ಸಮಾಜದಲ್ಲಿ ರೋಮನ್ ಲಿಪಿಯನ್ನು ಬಿಟ್ಟರೆ ಹೆಚ್ಚಾಗಿ ಬಳಕೆಯಲ್ಲಿರುವುದು ಅರಾಬಿಕ್ ಲಿಪಿ. ಕ್ರಿ.ಶ. 7–8ನೆಯ ಶತಮಾನಗಳಲ್ಲಿ, ಇಸ್ಲಾಂ ಧರ್ಮ ಹುಟ್ಟಿದ ಅನಂತರ, ಅರಬರು ಕೈಗೊಂಡ ವಿಜಯ ಪ್ರಯಾಣಗಳ ಪರಿಣಾಮವಾಗಿ ಇಂದು ಭಾರತದಿಂದ ಅಟ್ಲಾಂಟಿಕ್ ಸಾಗರದ ವರೆಗಿನ ಪ್ರದೇಶಗಳಲ್ಲಿ ಅರಾಬಿಕ್ ಭಾಷೆ ಒಂದಲ್ಲ ಒಂದು ರೂಪದಲ್ಲಿ ಪ್ರಚಲಿತವಾಗಿದೆ. ಭಾಷೆಗಿಂತಲೂ ಹೆಚ್ಚಾಗಿ ಹರಡಿದ ಅರಾಬಿಕ್ ಲಿಪಿ ಇಂದು ಪರ್ಷಿಯ, ಬಾಲ್ಕನ್ ದ್ವೀಪಕಲ್ಪ, ಆಗ್ನೇಯ ರಷ್ಯ, ಪಶ್ಚಿಮ, ಮಧ್ಯ ಹಾಗೂ ಆಗ್ನೇಯ ಏಷ್ಯ ಮತ್ತು ಆಫ್ರಿಕದ ಬಹುಭಾಗಗಳಲ್ಲಿ ಬಳಕೆಯಲ್ಲಿದೆ. ಈ ಲಿಪಿಯ ಪ್ರಾಚೀನತಮ ಸುಳುಹುಗಳು ಕಾಣಸಿಗುವುದು ಸಿರಿಯದ ನಬತೇಯನರ ಕ್ರಿ.ಶ. 324ರ ಒಂದು ಶಾಸನದಲ್ಲಿ. ಅರಾಬಿಕ್ ಲಿಪಿಯ ಪೂರ್ಣ ಬೆಳವಣಿಗೆಯನ್ನು ತೋರಿಸಿಕೊಡುವ ಪ್ರಾಚೀನತಮ ಶಾಸನ ಕ್ರಿ.ಶ. 512 ರದಾಗಿದ್ದು, ಅದು ಗ್ರೀಕ್–ಸಿರಿಯಾಕ್–ಅರಾಬಿಕ್ ಭಾಷೆಗಳಲ್ಲಿದೆ. ಆರಮೇಯಿಕ್‌ನಂತೆಯೇ ಅರಾಬಿಕ್ ಲಿಪಿಯೂ ಬಲದಿಂದ ಎಡಕ್ಕೆ ಬರೆಯುವಂಥದು. ಕ್ರಿ.ಶ. 7ನೆಯ ಶತಮಾನದಿಂದ ಶಾಸನಗಳಲ್ಲಿ ಕಾಣಿಸಿಕೊಳ್ಳುವ ಕೂಫಿಕ್ ಹಾಗೂ ನಸ್‌ಖಿ ಲಿಪಿಗಳು ಅರಾಬಿಕ್‌ನ ಎರಡು ಮಾದರಿಗಳೇ ಆಗಿದ್ದು, ಕಾಲಕ್ರಮೇಣ ಹುಟ್ಟಿದ ಇತರ ಅನೇಕ ಲಿಪಿಗಳ ಮೂಲಲಿಪಿಗಳಾಗಿವೆ.

ಸಿರಿಯದ ಮರುಭೂಮಿಯಲ್ಲಿ ನೆಲೆಸಿದ ಪಾಲ್ಮೈರದ ಅರಬರ ಕ್ರಿ.ಪೂ. 1–ಕ್ರಿ.ಶ. 3ನೆಯ ಶತಮಾನಗಳ ಶಾಸನಗಳು ಆರಮೇಯಿಕ್‌ನಿಂದ ಹುಟ್ಟಿದ ಪಾಲ್ಮೈರೀನ್ ಲಿಪಿಯಲ್ಲಿವೆ. ಇಂಥ ಶಾಸನಗಳು ಪ್ಯಾಲೆಸ್ಟೈನ್, ಉತ್ತರ ಆಫ್ರಿಕ, ಹಂಗರಿ, ಇಟಲಿ, ಇಂಗ್ಲೆಂಡ್ ಮುಂತಾದ ದೂರದೇಶಗಳಲ್ಲೂ ದೊರೆತಿವೆ.

ಆರಮೇಯಿಕ್ ಲಿಪಿಯಿಂದಲೇ ಹುಟ್ಟಿದ ಸಿರಿಯಾಕ್ ಲಿಪಿಯನ್ನು ಬಳಸಿ ಬರೆಯಲಾಗಿರುವ ಕ್ರೈಸ್ತಧರ್ಮದವರ ಸಮಾಧಿಗಳ ಮೇಲಿನ ಶಾಸನಗಳು ಕ್ರಿ.ಶ. 1ನೆಯ ಶತಮಾನದಿಂದ ಕಾಣಿಸಿಕೊಳ್ಳುತ್ತವೆ. ಕ್ರೈಸ್ತಧರ್ಮವನ್ನು ಹರಡಿಸುವ ಸಲುವಾಗಿ ಕ್ರಿ.ಶ. 7ನೆಯ ಶತಮಾನದಲ್ಲಿ ಮಧ್ಯ ಏಷ್ಯ ಹಾಗೂ ಚೀನಕ್ಕೆ ಬಂದ ನೆಸ್ಟೋರಿಯನ್ ಚರ್ಚಿನ ಧರ್ಮಪ್ರಚಾರಕರು ಸಿರಿಯಾಕ್ ಲಿಪಿಯದೇ ಒಂದು ಮಾದರಿಯಾದ ನೆಸ್ಟೋರಿಯನ್ ಲಿಪಿಯ ಶಾಸನಗಳನ್ನು ಆ ಪ್ರದೇಶಗಳಲ್ಲಿ ಕೆತ್ತಿಸಿದ್ದಾರೆ. ಇವುಗಳಲ್ಲಿ ಕ್ರಿ.ಶ. 781ರ ನೆಸ್ಟೋರಿಯನ್–ಚೀನೀ ದ್ವಿಭಾಷಾ ಶಾಸನವೊಂದೂ ಸೇರಿದೆ. ಕ್ರಿ.ಶ. 13–14ನೆಯ ಶತಮಾನಗಳ ಅನೇಕ ನೆಸ್ಟೋರಿಯನ್ ಶ್ಮಶಾನಗಳನ್ನು ರಷ್ಯದ ದಕ್ಷಿಣ ಸೈಬೀರಿಯದಲ್ಲಿ ಪತ್ತೆ ಹಚ್ಚಲಾಗಿದೆ. ಅವುಗಳಲ್ಲಿ ಹಲವು ನೆಸ್ಟೋರಿಯನ್ ಶಾಸನಗಳು ದೊರೆತಿವೆ. ಕ್ರೈಸ್ತಧರ್ಮದವರೂ ಬ್ಯಾಬಿಲೋನಿಯದ ನಿವಾಸಿಗಳೂ ಆಗಿದ್ದ ಮ್ಯಾಂಡೇಯನ್ ಜನಾಂಗದವರ ಕ್ರಿ.ಶ. 7–8ನೆಯ ಶತಮಾನಗಳ ಕೆಲವು ಶಾಸನಗಳು ದೊರೆತಿವೆ. ಅವನ್ನು ಸೀಸದ ಮೇಲೆ ಹಾಗೂ ಮಣ್ಣು ಬೋಗುಣಿಗಳ ಒಳಭಾಗದಲ್ಲಿ ಬರೆದಿದೆ. ಭಾಷೆ ಆರಮೇಯಿಕ್, ಪರ್ಷಿಯನ್ ಹಾಗೂ ಅರಾಬಿಕ್‌ಗಳಿಂದ ಪ್ರಭಾವಿತವಾಗಿದೆ.

ಜರತುಷ್ಟ್ರ, ಯೆಹೂದ್ಯ, ಕ್ರೈಸ್ತ, ಬೌದ್ಧ ಮತ್ತು ಇಸ್ಲಾಂ ಧರ್ಮಗಳ ಮುನ್ನಡೆಯೊಂದಿಗೆ ಏಷ್ಯದಲ್ಲಿ ಆರಮೇಯಿಕ್ ಲಿಪಿಯ ವಿಕಾಸವೂ ನಡೆದುಬಂದಿತ್ತು. ಅಶೋಕನ ಕೆಲವು ಶಾಸನಗಳ ಖರೋಷ್ಠಿ ಲಿಪಿ ಆರಮೇಯಿಕ್‌ನಿಂದಲೇ ಹುಟ್ಟಿದ್ದು. ಕ್ರಿ.ಶ. 4–5ನೆಯ ಶತಮಾನಗಳ ಅನಂತರ ಬಳಕೆ ತಪ್ಪಿಹೋದ ಖರೋಷ್ಠಿ ಲಿಪಿಯ ಶಾಸನಗಳು ಮತ್ತು ದಾಖಲೆಗಳು ಪೂರ್ವ ಆಫ್‌ಘಾನಿಸ್ತಾನದ ಗಾಂಧಾರಪ್ರಾಂತ್ಯ, ಉತ್ತರ ಪಂಜಾಬ್ ಹಾಗೂ ಪೂರ್ವ ತುರ್ಕಿಸ್ತಾನಗಳಲ್ಲಿ ದೊರೆತಿವೆ. ಆರಮೇಯಿಕ್‌ನಿಂದ ಪರ್ಷಿಯನರು ರೂಪಿಸಿಕೊಂಡ ಪಹ್ಲವಿ ಲಿಪಿಯ, ಪಹ್ಲವಿ ಭಾಷೆಯ ಶಾಸನಗಳು ಕ್ರಿ.ಪೂ. 3–ಕ್ರಿ.ಶ. 3ನೆಯ ಶತಮಾನಗಳವು. ಈ ಶಾಸನಗಳಲ್ಲಿ ಆರಮೇಯಿಕ್ ಭಾಷೆಯ ಕೆಲವು ಶಬ್ದಗಳನ್ನು ಭಾವಲಿಪಿಯಲ್ಲಿ ಬರೆಯಲಾಗಿರುವುದು ಕುತೂಹಲಕಾರಿಯಾದ ಸಂಗತಿ.

ರಷ್ಯದ ಇಂದಿನ ಉಜ಼್ಬೆಕಿಸ್ತಾನದಲ್ಲಿ ವಾಸಿಸುತ್ತಿದ್ದ ಸೋಗ್ಡಿಯನ್ ಜನಾಂಗದವರ ಸೋಗ್ಡಿಯನ್ ಲಿಪಿಯೂ ಆರಮೇಯಿಕ್ ಲಿಪಿ ಮತ್ತು ಭಾಷೆಗಳೂ ಮಧ್ಯ ಏಷ್ಯದಲ್ಲಿ ಪ್ರಚಾರದಲ್ಲಿದ್ದುವು. ಕ್ರಿ.ಶ. 9ನೆಯ ಶತಮಾನದ ಮಧ್ಯ ಏಷ್ಯದ ತ್ರಿಭಾಷಾ ಶಾಸನವೊಂದು ತುರ್ಕಿ–ಸೋಗ್ಡಿಯನ್–ಚೀನೀ ಭಾಷೆಗಳಲ್ಲಿದೆ. ಸೋಗ್ಡಿಯನ್ ಶಾಸನವೊಂದು ಭಾರತದ ಲದಾಖಿನಲ್ಲೂ ದೊರೆತಿದೆ. ಪೂರ್ವ ತುರ್ಕಿಸ್ತಾನದಲ್ಲೂ ವಾಯುವ್ಯ ಚೀನದಲ್ಲೂ ಕ್ರಿ.ಶ. 2–9ನೆಯ ಶತಮಾನಗಳ ಸೋಗ್ಡಿಯನ್ ಹಸ್ತಪ್ರತಿಗಳಿದ್ದುವು. ಕ್ರಿ.ಶ. 7–8ನೆಯ ಶತಮಾನಗಳ ಹಲವು ಶಾಸನಗಳು ಮಧ್ಯ ಸೈಬೀರಿಯ, ವಾಯುವ್ಯ ಮಂಗೋಲಿಯ ಮತ್ತು ಈಶಾನ್ಯ ತುರ್ಕಿಸ್ತಾನದಲ್ಲಿ ದೊರೆತಿದ್ದು, ಅವುಗಳ ಲಿಪಿ ಸೈಬೀರಿಯನ್ ಅಥವಾ ಕೊಕ್ ತುರ್ಕಿ ಆಗಿದೆ. ಈ ಲಿಪಿ ಸೋಗ್ಡಿಯನ್ ಲಿಪಿಯಿಂದ ಹುಟ್ಟಿರಬಹುದು. ಈ ಶಾಸನಗಳ ಭಾಷೆ ಪ್ರಾಚೀನ ತುರ್ಕಿ.

ಕ್ರಿ.ಪೂ. 3ನೆಯ ಶತಮಾನದಿಂದೀಚೆಗೆ, ಎಂದರೆ ಭಾರತದ ಇತಿಹಾಸ ಕಾಲ ಆರಂಭವಾದಾಗಿನಿಂದ, ದೇಶದ ಮೂಲೆಮೂಲೆಗಳಲ್ಲೂ ಸಹಸ್ರಾರು ಸಂಖ್ಯೆಯಲ್ಲಿ ದೊರೆಯುವ ಶಾಸನಗಳೇ ಅದರ ಚರಿತ್ರೆಗೆ ಆಧಾರ. ಈ ಶಾಸನಗಳ ಪೈಕಿ ಹೆಚ್ಚಿನವು ಬಿಡಿ ಅಥವಾ ಬಂಡೆಕಲ್ಲುಗಳ ಮತ್ತು ತಾಮ್ರದ ತಗಡುಗಳ ಮೇಲೆ ಕೊರೆಯಲ್ಪಟ್ಟವು. ಬಂಗಾರ, ಬೆಳ್ಳಿ, ಕಬ್ಬಿಣ, ಕಂದು ಕಂಚು, ಮರ, ಭೂರ್ಜಪತ್ರ, ಸಾಚಿಪತ್ರ, ಬಟ್ಟೆ, ಚರ್ಮ, ಇಟ್ಟಿಗೆ ಇತ್ಯಾದಿಗಳ ಮೇಲೂ ಶಾಸನಗಳನ್ನು ಬರೆಯಲಾಗುತ್ತಿತ್ತೆನ್ನುವುದಕ್ಕೆ ನಿದರ್ಶನಗಳು ಇಲ್ಲವೇ ಸೂಚನೆಗಳು ದೊರೆತಿವೆ.

ಅಶೋಕನ ಶಾಸನಗಳನ್ನು ಬರೆಯುವಲ್ಲಿ ಬ್ರಾಹ್ಮೀ, ಖರೋಷ್ಠಿ, ಗ್ರೀಕ್ ಮತ್ತು ಆರಮೇಯಿಕ್ ಲಿಪಿಗಳನ್ನು ಬಳಸಲಾಗಿದೆ. ಇಂದಿನ ಭಾರತದ ಎಲ್ಲ ಹಿಂದೂ ಲಿಪಿಗಳು ಹಾಗೂ ನೇಪಾಳ, ಟಿಬೆಟ್, ಪೂರ್ವ ತುರ್ಕಿಸ್ತಾನ, ಬರ್ಮ, ಥೈಲೆಂಡ್, ಮಲೇಷಿಯ, ಇಂಡೊನೇಷ್ಯ, ಕಾಂಬೋಡಿಯ, ದಕ್ಷಿಣ ವಿಯೆಟ್ನಾಂ, ಸಿಂಹಳ ಮುಂತಾದ ರಾಷ್ಟ್ರಗಳಲ್ಲಿ ಇಂದಿಗೂ ಬಳಕೆಯಲ್ಲಿರುವ ಅಥವಾ ಇಸ್ಲಾಮಿನ ಪ್ರಭಾವ ಹೆಚ್ಚಾಗುವ ತನಕ ಬಳಕೆಯಲ್ಲಿದ್ದ, ಲಿಪಿಗಳು ಅಶೋಕನ ಕಾಲದ ಬ್ರಾಹ್ಮೀ ಲಿಪಿಯಿಂದಲೇ ಹುಟ್ಟಿದವು.

ಅಶೋಕನ ಶಾಸನಗಳು ಪ್ರಾಕೃತ, ಗ್ರೀಕ್ ಮತ್ತು ಆರಮೇಯಿಕ್ ಭಾಷೆಗಳಲ್ಲಿವೆ. 3–4ನೆಯ ಶತಮಾನದ ವೇಳೆಗೆ ಉತ್ತರ ಭಾರತದಲ್ಲೂ 4ನೆಯ ಶತಮಾನದ ಉತ್ತರಾರ್ಧದ ವೇಳೆಗೆ ದಕ್ಷಿಣ ಭಾರತದಲ್ಲೂ ಅಲ್ಲಿಯ ತನಕ ಪ್ರಧಾನ ಶಾಸನಭಾಷೆಯಾಗಿ ಮೆರೆದ ಪ್ರಾಕೃತವನ್ನು ಸಂಸ್ಕೃತ ಆಕ್ರಮಿಸಿಕೊಂಡಿತು. ಕಾಲಕ್ರಮೇಣ ಭಾರತದ ಮತ್ತು ಭಾರತದಿಂದ ಪ್ರಭಾವಿತವಾದ ಮಧ್ಯ ಮತ್ತು ಆಗ್ನೇಯ ಏಷ್ಯದ ರಾಷ್ಟ್ರಗಳ ಶಾಸನಗಳನ್ನು ಪ್ರಾಂತೀಯ ಭಾಷೆಗಳಲ್ಲೂ ಬರೆಯುವ ರೂಢಿ ಬಂತು.

ಉತ್ತರ ಭಾರತದ ಪ್ರಾಂತೀಯ ಭಾಷೆಗಳು ಬಳಕೆಗೆ ಬಂದದ್ದು ಅನಂತರ. ಉತ್ತರ ಭಾರತದಿಂದ ಪ್ರಭಾವಿತವಾದ ಮಧ್ಯ ಮತ್ತು ಆಗ್ನೇಯ ಏಷ್ಯದ ರಾಷ್ಟ್ರಗಳ ಶಾಸನಗಳನ್ನು ಬರೆಯುವಲ್ಲಿ ಪ್ರಾಂತೀಯ ಭಾಷೆಗಳು ಬಳಕೆಗೆ ಬಂದುವು. ಉತ್ತರ ಭಾರತದ ಪ್ರಾಂತೀಯ ಭಾಷೆಗಳ ಪೈಕಿ ಕ್ರಿ.ಶ. 10ನೆಯ ಶತಮಾನದಿಂದ ಮರಾಠಿ, 11ನೆಯ ಶತಮಾನದಿಂದ ಹಿಂದಿ ಮತ್ತದರ ಉಪಭಾಷೆಗಳು, 13ನೆಯ ಶತಮಾನದಿಂದ ಒರಿಯ, 13–14ನೆಯ ಶತಮಾನದಿಂದ ಕಾಶ್ಮೀರಿ ಮತ್ತದರ ಉಪಭಾಷೆಗಳು, 16ನೆಯ ಶತಮಾನದಿಂದ ಅಸ್ಸಾಮಿನ ಅಹೋಂ, 17ನೆಯ ಶತಮಾನದಿಂದ ಮೈಥಿಲೀ ಶಾಸನಭಾಷೆಗಳಾಗಿ ಕಾಣಿಸಿಕೊಳ್ಳುತ್ತವೆ. ದಕ್ಷಿಣ ಭಾರತದಲ್ಲಿ ತಮಿಳು ನಾಡಿನ ಕೆಲವು ಗುಹೆಗಳಲ್ಲಿ ಕೊರೆಯಲಾಗಿರುವ ಶಾಸನಗಳು ತಮಿಳು ಭಾಷೆಯಲ್ಲಿದ್ದು ಅವು ಕ್ರಿ.ಶ. 3ನೆಯ ಶತಮಾನದಷ್ಟಾದರೂ ಹಳೆಯವೆಂದು ಲಿಪಿಶಾಸ್ತ್ರದೃಷ್ಟಿಯಿಂದ ಹೇಳಬಹುದಾಗಿದೆ. ಕನ್ನಡಶಾಸನಗಳ ಮಟ್ಟಿಗೆ ಕ್ರಿ.ಶ. 5ನೆಯ ಶತಮಾನದ ಮಧ್ಯಭಾಗದಲ್ಲಿ ಹುಟ್ಟಿದ ಹಲ್ಮಿಡಿ ಶಾಸನವೇ ಇದುವರೆಗೆ ತಿಳಿದಿರುವಂತೆ ಪ್ರಾಚೀನತಮವಾದದ್ದು. ತೆಲುಗುಭಾಷೆಯ ಪ್ರಾಚೀನತಮ ಶಾಸನ ಕ್ರಿ.ಶ. 6ನೆಯ ಶತಮಾನದ ಉತ್ತರಾರ್ಧಕ್ಕೆ ಸೇರಿದ್ದು. ಕ್ರಿ.ಶ. 13–14ನೆಯ ಶತಮಾನದಿಂದ ಮಲಯಾಳಂ ಮತ್ತು ತುಳು ಶಾಸನಗಳು (ಐದಾರು) ಕಾಣಿಸಿಕೊಳ್ಳುತ್ತವೆ.

ಭಾರತದ ನೇರ ಪ್ರಭಾವಕ್ಕೊಳಗಾಗಿದ್ದ ರಾಷ್ಟ್ರಗಳ ಪೈಕಿ ಪಾಕಿಸ್ತಾನದಲ್ಲಿ ಅಶೋಕನ ಆರಮೇಯಿಕ್ ಮತ್ತು ಪ್ರಾಕೃತ ಶಾಸನಗಳೂ ಆಫ್‌ಘಾನಿಸ್ತಾನದಲ್ಲಿ ಅವನ ಗ್ರೀಕ್ ಮತ್ತು ಆರಮೇಯಿಕ್ ಶಾಸನಗಳೂ ನೇಪಾಳದಲ್ಲಿ ಅದೇ ಅರಸನ ಪ್ರಾಕೃತ ಶಾಸನಗಳೂ ದೊರೆತಿವೆ. ನೇಪಾಳದಲ್ಲಿ ಕ್ರಿ.ಶ. 5ನೆಯ ಶತಮಾನದಿಂದ ಸಂಸ್ಕೃತ ಶಾಸನಗಳೂ 14–15ನೆಯ ಶತಮಾನದಿಂದ ನೀವಾರೀ ಶಾಸನಗಳೂ ಕಾಣಿಸಿಕೊಳ್ಳುತ್ತವೆ. ಬರ್ಮದಲ್ಲಿ ಸಂಸ್ಕೃತ, ಮೋನ್ ಮತ್ತು ಪ್ಯೂ ಭಾಷೆಗಳ ಶಾಸನಗಳು ಕ್ರಿ.ಶ. 6ನೆಯ ಶತಮಾನದಿಂದಲೂ ಥೈಲೆಂಡಿನ ಸಂಸ್ಕೃತ ಮತ್ತು ಸಯಾಮೀ ಶಾಸನಗಳು ಕ್ರಿ.ಶ. 5–6ನೆಯ ಶತಮಾನದಿಂದಲೂ ಇಂಡೊನೇಷ್ಯದ ಸಂಸ್ಕೃತ ಮತ್ತು ಕವಿ ಶಾಸನಗಳು ಅನುಕ್ರಮವಾಗಿ ಕ್ರಿ.ಶ. 5, 8ನೆಯ ಶತಮಾನಗಳಿಂದಲೂ ಕಾಂಬೋಡಿಯದ ಸಂಸ್ಕೃತ ಮತ್ತು ಖ್ಮೆರ್ ಶಾಸನಗಳು ಅನುಕ್ರಮವಾಗಿ ಕ್ರಿ.ಶ. 5, 7ನೆಯ ಶತಮಾನಗಳಿಂದಲೂ ದಕ್ಷಿಣ ವಿಯೆಟ್ನಾಮಿನ (ಪ್ರಾಚೀನ ಚಂಪ) ಸಂಸ್ಕೃತ ಶಾಸನಗಳು ಕ್ರಿ.ಶ. 4–5ನೆಯ ಶತಮಾನಗಳಿಂದಲೂ ಕಾಣಿಸಿಕೊಳ್ಳುತ್ತವೆ. ಸಿಂಹಳದಲ್ಲಿ ಪ್ರಾಕೃತ ಹಾಗೂ ಪಾಲಿಭಾಷೆಗಳೇ ಪ್ರಧಾನ ಶಾಸನ ಭಾಷೆಗಳಾಗಿದ್ದುವಾಗಿದ್ದರಿಂದ ಅಲ್ಲಿ ದೊರೆತಿರುವ ಸಂಸ್ಕೃತ ಶಾಸನಗಳು ಕೆಲವು ಮಾತ್ರ. ಆ ದ್ವೀಪದ ಪ್ರಾಕೃತ, ಪಾಲಿ ಶಾಸನಗಳ ಪೈಕಿ ಪ್ರಾಚೀನತಮವಾದವು ಕ್ರಿ.ಪೂ. 2ನೆಯ ಶತಮಾನದವು. ಪ್ರಾಚೀನತಮ ಸಂಸ್ಕೃತ, ಸಿಂಹಳ ಶಾಸನಗಳು ಅನುಕ್ರಮವಾಗಿ ಕ್ರಿ.ಶ. 5, 8ನೆಯ ಶತಮಾನಗಳವು. ಕ್ರಿ.ಶ. 11ನೆಯ ಶತಮಾನದ ಚೋಳರ ಹಲವು ಶಾಸನಗಳೂ ಸೇರಿದಂತೆ ಅನೇಕ ತಮಿಳು ಶಾಸನಗಳು ಸಿಂಹಳದಲ್ಲಿ ದೊರೆತಿವೆ.

ಭಾರತದಲ್ಲಿ ಅರಬ್ಬೀ ಮತ್ತು ಪರ್ಷಿಯನ್ ಶಾಸನಗಳು ಕ್ರಿ.ಶ. 12ನೆಯ ಶತಮಾನದ ಕೊನೆಯ ದಶಕದಿಂದ ದೊರೆಯುತ್ತವೆ. ಈ ಶಾಸನಗಳಲ್ಲಿ ಹೆಚ್ಚಿನವು ಮಸೀದಿಗಳಲ್ಲೂ ಸಮಾಧಿಗಳ ಮೇಲೂ ಬರೆಯಲಾದವು. ಅರಬ್ಬೀ–ಪರ್ಷಿಯನ್ ಶಾಸನಗಳ ಪೈಕಿ ಹೆಚ್ಚಿನವಲ್ಲಿ ಪರ್ಷಿಯನ್ ಭಾಷೆಯನ್ನು ಬಳಸಲಾಗಿದೆ. ಭಾರತಕ್ಕೆ ಬಂದು ನೆಲೆಸಿದಾಗಿನಿಂದಲೂ ಮುಸ್ಲಿಂ ಇತಿಹಾಸಕಾರರು ನಾಡಿನ ಬೇರೆ ಬೇರೆ ಮಹಮ್ಮದೀಯ ಅರಸುಮನೆತನಗಳ ಚರಿತ್ರೆಯನ್ನು ಬರೆದಿಟ್ಟಿರುವರಾದ ಕಾರಣ, ಇತಿಹಾಸ ದೃಷ್ಟಿಯಿಂದ ಭಾರತದ ಅರಬ್ಬೀ–ಪರ್ಷಿಯನ್ ಶಾಸನಗಳಿಗೆ ಹೆಚ್ಚಿನ ಮಹತ್ತ್ವವಿಲ್ಲ.

ನಾಣ್ಯಗಳು : ನಿರ್ದಿಷ್ಟ ತೂಕದ ನಾಣ್ಯಗಳನ್ನು ಮಾನವ ಮಾಡತೊಡಗಿದ್ದು ಕ್ರಿ.ಪೂ. 7ನೆಯ ಶತಮಾನದಲ್ಲಿ ಮಾತ್ರ. ಅದರ ಮೊದಲು ಜಗತ್ತಿನ ಎಲ್ಲೆಡೆಗಳಲ್ಲೂ ವಸ್ತುಗಳ ಅದಲುಬದಲಿಯಿಂದಲೇ ವ್ಯಾಪಾರ ಸಾಗುತ್ತಿತ್ತು. ನಾಣ್ಯಗಳು ಹುಟ್ಟುವ ಮೊದಲು ಚಿನ್ನದ ಉಂಗುರಗಳೂ ಓಲೆಗಳೂ ಆಭರಣಗಳಾಗಿರುವುದರ ಜೊತೆಗೆ ಹಣದ ಕೆಲಸವನ್ನೂ ಪೂರೈಸುತ್ತಿದ್ದವು.

ಕ್ರಿ.ಪೂ. 7ನೆಯ ಶತಮಾನದಲ್ಲಿ ಏಷ್ಯ ಮೈನರಿನ ಲಿಡಿಯದ ಖಾಸಗಿ ವ್ಯಾಪಾರಿಯೊಬ್ಬ (ಚಿನ್ನ ಮತ್ತು ಬೆಳ್ಳಿಗಳಿಂದಾದ) ಇಲೆಕ್ಟ್ರಂ ಎಂಬ ಮಿಶ್ರಲೋಹದಿಂದ ಅವರೆಯ ರೂಪದ ತುಂಡುಗಳನ್ನು ಮಾಡಿ ಅವುಗಳ ಮೇಲೆ ತನ್ನದೇ ಆದ ಒಂದು ಗುರುತನ್ನು ಮುದ್ರಿಸಿದಾಗ ಜಗತ್ತಿನ ಪ್ರಾಚೀನತಮ ನಾಣ್ಯಗಳು ಹೊರಬಿದ್ದುವು. ಅಂದಿನಿಂದ ಜಗತ್ತಿನ ಬೇರೆ ಬೇರೆ ಪ್ರಾಂತ್ಯಗಳಲ್ಲಿ, ಕಾಲಗಳಲ್ಲಿ ಬೇರೆ ಬೇರೆ ಅರಸುಮನೆತನಗಳಿಂದ, ನಗರಗಳಿಂದ, ಸಂಘಸಂಸ್ಥೆಗಳಿಂದ, ವ್ಯಕ್ತಿಗಳಿಂದ ಹೊರಡಿಸಲಾಗಿರುವ ನಾಣ್ಯಗಳಿಗೆ ಲೆಕ್ಕವಿಲ್ಲ. ಮಾನವನ ಗತಕಾಲದ ಇತಿಹಾಸವನ್ನು ಪುನರ್ರಚಿಸುವಲ್ಲಿ ಶಾಸನಾದಿ ದಾಖಲೆಗಳು ಮುಖ್ಯ ಮೂಲ ಸಾಮಗ್ರಿಗಳಾದರೆ, ನಾಣ್ಯಗಳು ಪೋಷಕ ಆಧಾರವಸ್ತುಗಳಾಗಿವೆ ; ಅವು ಇತರ ಐತಿಹಾಸಿಕ ಆಧಾರಗಳ ಅಧ್ಯಯನದಿಂದ ಉಂಟಾಗಬಹುದಾದ ತಪ್ಪು ತಿಳಿವಳಿಕೆಗಳನ್ನು ತಿದ್ದುವಂಥವೂ ಹೌದು. ಅಲ್ಲದೆ, ಪ್ರಾಚೀನಕಾಲದಿಂದಲೂ ಜಗತ್ತಿನ ಬೇರೆ ಬೇರೆ ಪ್ರಾಂತ್ಯಗಳಲ್ಲಿ ವಾಸಿಸುತ್ತಿದ್ದ ವಿವಿಧ ಜನಾಂಗಗಳು ಯುದ್ಧ, ವ್ಯಾಪಾರ, ಧರ್ಮಪ್ರಚಾರ ಇತ್ಯಾದಿಗಳ ಮೂಲಕ ದೂರದೂರದ ರಾಷ್ಟ್ರಗಳ ಮೇಲೆ ಉಂಟುಮಾಡಿರಬಹುದಾದ ಪ್ರಭಾವವನ್ನು ತಿಳಿದುಕೊಳ್ಳುವಲ್ಲಿ ನಾಣ್ಯಗಳ ಪಾತ್ರ ಅತಿಮುಖ್ಯವಾದದ್ದು.

ಏಷ್ಯ ಮೈನರಿನ ಲಿಡಿಯ ಅಯೋನಿಯ ದ್ವೀಪಗಳು, ತ್ರೋಏಸ್, ಈಲಿಸ್, ಲೆಸ್ಬೋಸ್, ಮೈಸಿಯ, ಬಿಥಿನಿಯ ರಾಷ್ಟ್ರಗಳು ಕ್ರಿ.ಪೂ. 7–5ನೆಯ ಶತಮಾನಗಳ ಅವಧಿಯಲ್ಲಿ ಹೊರಡಿಸಿದ ಇಲೆಕ್ಟ್ರಂ ನಾಣ್ಯಗಳು ದೊರೆತಿವೆ. ಅವುಗಳ ಮೇಲ್ಭಾಗದಲ್ಲಿ ಸಿಂಹದ ಮುಖಮುದ್ರೆಯೂ ಹಿಂಭಾಗದಲ್ಲಿ ಎರಡು ಮೂರು ಮುದ್ರೆಗಳೂ ಕಂಡುಬರುತ್ತವೆ. ಏಷ್ಯ ಮೈನರಿನ ಅನೇಕ ರಾಷ್ಟ್ರಗಳು ಹಾಗೂ ಸ್ವತಂತ್ರ ನಗರಗಳು ಹೊರಡಿಸಿದ ಬಂಗಾರದ ಮತ್ತು ಬೆಳ್ಳಿಯ ನಾಣ್ಯಗಳು ಕ್ರಿ.ಪೂ. 6ನೆಯ ಶತಮಾನದಿಂದಲೂ ಕಂದು ಕಂಚಿನ ನಾಣ್ಯಗಳು ಕ್ರಿ.ಪೂ. 5ನೆಯ ಶತಮಾನದಿಂದಲೂ ಕಂಡುಬಂದಿವೆ. ಆ ಪ್ರದೇಶದಲ್ಲಿ ಗ್ರೀಕರ, ರೋಮನರ, ಈಜಿಪ್ಟಿನ ಟಾಲೆಮಿ ವಂಶದವರ ನಾಣ್ಯಗಳೂ ದೊರೆತಿವೆ.

ಭಾರತದಲ್ಲಿ ಬಳಕೆಯಲ್ಲಿದ್ದ ನಾಣ್ಯಗಳ ಪೈಕಿ ಪ್ರಾಚೀನತಮವಾದವು ಪುರಾಣಗಳು. ಪ್ರಾಚೀನ ಸಾಹಿತ್ಯದಲ್ಲಿ ಬಂಗಾರ, ಬೆಳ್ಳಿ ಮತ್ತು ತಾಮ್ರದ ಪುರಾಣಗಳ ಪ್ರಸ್ತಾಪವಿದ್ದರೂ ಬಂಗಾರದ ಪುರಾಣಗಳು ಇಲ್ಲಿಯ ವರೆಗೆ ದೊರೆತಿಲ್ಲ. ಈ ನಾಣ್ಯಗಳ ಮೇಲೆ ಸಾಂಕೇತಿಕ ಮುದ್ರೆಗಳು ಕಂಡುಬರುವ ಕಾರಣ ಇವನ್ನು ಮುದ್ರೆಯೊತ್ತಿನ ನಾಣ್ಯಗಳೆಂದು ಕರೆಯುವುದು ವಾಡಿಕೆ. ಸೂರ್ಯ, ಆನೆ, ಹಸು, ರಥ, ಕುದುರೆ, ವೃಷಭ, ಮರ, ಹುಲಿ, ಸಿಂಹ ಇತ್ಯಾದಿಗಳು ಈ ಮುದ್ರೆಗಳು. ಪರದೇಶಗಳ ಸತ್ತೇರ್, ಡೇರಿಕ್, ದೀನಾರ ಮುಂತಾದ ನಾಣ್ಯಗಳೂ ಭಾರತದಲ್ಲಿ ದೊರೆತಿವೆ. ಕ್ರಿ.ಪೂ. 2–1ನೆಯ ಶತಮಾನಗಳ ಅವಧಿಯಲ್ಲಿ ವಾಯುವ್ಯ ಭಾರತದ ಕೆಲವು ಪ್ರಾಂತ್ಯಗಳ ದೊರೆಗಳಾಗಿ ಮೆರೆದ ಇಂಡೋ–ಗ್ರೀಕ್ ಅರಸುಗಳ ಗ್ರೀಕ್ ಮತ್ತು ಖರೋಷ್ಠೀ ಆಲೇಖ್ಯಗಳಿಂದ ಕೂಡಿದ ನಾಣ್ಯಗಳೂ ಕ್ರಿ.ಪೂ. 3ನೆಯ ಶತಮಾನದಿಂದ ಕ್ರಿ.ಶ. 3ನೆಯ ಶತಮಾನದ ವರೆಗಿನ ಅವಧಿಯಲ್ಲಿ ಮಧ್ಯಭಾರತ, ಕರ್ಣಾಟಕ, ಆಂಧ್ರ ಪ್ರದೇಶಗಳ ಅರಸುಗಳಾಗಿದ್ದ ಶಾತವಾಹನರ (ಬೆಳ್ಳಿ–ತಾಮ್ರಗಳ) ಮಿಶ್ರಲೋಹದ ಹಾಗೂ ಸೀಸದ ನಾಣ್ಯಗಳೂ ಶಾತವಾಹನರ ಅಧೀನರಾಗಿ ಬನವಾಸಿ, ಚಂದ್ರವಳ್ಳಿ ಇತ್ಯಾದಿ ಪ್ರಾಂತ್ಯಗಳನ್ನು ಆಳುತ್ತಿದ್ದ ಚುಟು ಮತ್ತು ಮಹಾರಠಿಗಳ ನಾಣ್ಯಗಳೂ ಉಂಟು. ಕ್ರಿಸ್ತಶಕದ ಪ್ರಾರಂಭದಿಂದೀಚೆಗಿನ ಭಾರತದಲ್ಲಿ ರಾಜ್ಯವಾಳಿದ ಕುಷಾನರ, ಗುಪ್ತರ, ಶಕಜನಾಂಗದ, ಪಶ್ಚಿಮ ಕ್ಷತ್ರಪರ, ವರ್ಧಮಾನವಂಶದವರ ರಜಪೂತ ಅರಸುಮನೆತನಗಳ, ಕಲ್ಯಾಣದ ಪಶ್ಚಿಮ ಚಾಳುಕ್ಯರ, ವೇಂಗಿಯ ಪೂರ್ವ ಚಾಲುಕ್ಯರ, ಕರ್ಣಾಟಕದ ಕಲಚುರಿಗಳ, ತಮಿಳುನಾಡಿನ ಚೋಳರ, ಪಾಂಡ್ಯರ, ಕೇರಳದ ಚೇರರ, ತಳಕಾಡಿನ ಗಂಗರ, ವಿಜಯನಗರ ಸಮ್ರಾಟರ ನಾಣ್ಯಗಳು ಬೇಕಷ್ಟು ದೊರೆತಿವೆ. ದೆಹಲಿಯ ಸುಲ್ತಾನರು ಮತ್ತು ಮೈಸೂರಿನ ಸುಲ್ತಾನರೂ ಸೇರಿದಂತೆ ಭಾರತದ ಬೇರೆ ಬೇರೆ ಪ್ರಾಂತ್ಯಗಳಲ್ಲಿ ರಾಜ್ಯಗಳನ್ನು ಕಟ್ಟಿ ಆಳಿದ ಮಹಮ್ಮದೀಯ ಅರಸುಮನೆತನಗಳ ನಾಣ್ಯಗಳಂತೂ ಹೇರಳ. ಕ್ರಿ.ಶ. 1661ರಿಂದ ಮದ್ರಾಸಿನ ಟಂಕಶಾಲೆಯಿಂದ ಈಸ್ಟ್ ಇಂಡಿಯ ಕಂಪನಿಯವರ ಪಗೋಡ ನಾಣ್ಯಗಳು ಕಣ್ಮರೆಯಾಗಿ ರೂಪಾಯಿ ನಾಣ್ಯಗಳ ಇತಿಹಾಸ ಪ್ರಾರಂಭವಾಯಿತು. ಭಾರತದ ಕೆಲವು ಭಾಗಗಳಲ್ಲಿ ಕೆಲವು ಶತಮಾನಗಳ ಹಿಂದೆ ಇಂಡೋ–ಪೋರ್ಚುಗೀಸ್, ಇಂಡೋ–ಡೇನಿಷ್, ಇಂಡೋ–ಫ್ರೆಂಚ್ ಇಂಡೋ–ಡಚ್ ನಾಣ್ಯಗಳೂ ಚಲಾವಣೆಯಲ್ಲಿದ್ದುವು.

ಪ್ರಾಚೀನ ಚೀನದಲ್ಲಿ ಬೇಸಾಯದ ಉಪಕರಣಗಳನ್ನೇ ವ್ಯಾಪಾರ ಕ್ಷೇತ್ರದಲ್ಲಿ ಉಪಯೋಗಿಸುತ್ತಿದ್ದರಾಗಿ ಆ ದೇಶದ ಕ್ರಿ.ಪೂ. 8ನೆಯ ಶತಮಾನದ ಪ್ರಾಚೀನತಮ ನಾಣ್ಯಗಳು ಅಂಥ ಉಪಕರಣಗಳ ರೂಪದಲ್ಲೇ ಇದ್ದುವು. ಅನಂತರ ಕಾಲದ ಚೀನದ ಬಂಗಾರ, ಬೆಳ್ಳಿ ಮತ್ತು ಕಂದು ಕಂಚಿನ ಪ್ರಾಚೀನ ನಾಣ್ಯಗಳು ದೊರೆತಿವೆ. ಕ್ರಿ.ಶ. 622ರಲ್ಲಿ ತಂಗ್ ವಂಶದವರು ಹೊರಡಿಸಿದ ನಾಣ್ಯಗಳು ಅವುಗಳಿಂದೀಚೆಗಿನ ಚೀನೀ ನಾಣ್ಯಗಳಿಗೆ ಮಾದರಿಗಳಾದುವು. ಕೊರಿಯ, ವಿಯೆಟ್ನಾಂ ಹಾಗೂ ಇಂಡೊನೇಷ್ಯ ರಾಷ್ಟ್ರಗಳ ಗತಕಾಲದ ನಾಣ್ಯಗಳು ಚೀನೀ ನಾಣ್ಯಗಳಿಂದ ಪ್ರಭಾವಿತವಾಗಿದ್ದುವು. ಹಾಗೆಯೇ ಜಪಾನಿನ ನಾಣ್ಯಗಳೂ ಸ್ವಲ್ಪ ಮಟ್ಟಿಗೆ ಚೀನೀ ಪ್ರಭಾವವನ್ನು ಪ್ರದರ್ಶಿಸುವಂಥವಾಗಿದ್ದುವು. ಜಪಾನಿನಲ್ಲಿ ಕ್ರಿ.ಶ. 5ನೆಯ ಶತಮಾನದಿಂದ ಲೋಹನಾಣ್ಯಗಳ ಚಲಾವಣೆ ಪ್ರಾರಂಭವಾಯಿತೆನ್ನಬಹುದಾಗಿದೆ. ಆ ರಾಷ್ಟ್ರದಲ್ಲಿ ಕ್ರಿ.ಶ. 1870ರಲ್ಲಿ ಯೂರೋಪಿನ ಮಾದರಿಯ ನಾಣ್ಯಪದ್ಧತಿಯನ್ನು ಜಾರಿಗೆ ತರಲಾಯಿತು.

ಪ್ರಾಚೀನ ಬರ್ಮಾದಲ್ಲಿ ಬಸವನ ಹುಳುವಿನ ಚಿಪ್ಪಿನ ಆಕಾರದ ಬೆಳ್ಳಿ ನಾಣ್ಯಗಳೂ ಪ್ರಾಚೀನ ಥೈಲೆಂಡಿನಲ್ಲಿ ವಲಯಾಕಾರದ ಬೆಳ್ಳಿ ನಾಣ್ಯಗಳೂ ಚಲಾವಣೆಯಲ್ಲಿದ್ದುವು.

ಕ್ರಿ.ಶ. 12ನೆಯ ಶತಮಾನದ ಸಿಂಹಳ ಅರಸುಗಳ ನಾಣ್ಯಗಳು ತಮಿಳುನಾಡಿನ ಚೋಳರ ನಾಣ್ಯಗಳಿಂದ ಪ್ರಭಾವಿತವಾಗಿದ್ದುವು. ಕ್ರಿ.ಶ. 16–17ನೆಯ ಶತಮಾನಗಳಲ್ಲಿ ಹಿಂದೂ ಮಹಾಸಾಗರ ಹಾಗೂ ಪರ್ಷಿಯನ್ ಖಾರಿಯ ಪ್ರದೇಶಗಳಲ್ಲಿ ಲಾರಿನ್ ಎಂಬ ಬೆಳ್ಳಿ ಸರಿಗೆಯ ತುಂಡುಗಳು ನಾಣ್ಯಗಳಾಗಿದ್ದು, ಅವು ಸಿಂಹಳದಲ್ಲಿ ಗಾಳದ ಕೊಕ್ಕೆಯ ರೂಪದಲ್ಲಿ ವ್ಯವಹಾರದಲ್ಲಿದ್ದುವು. ಕಾಗದದ ಹಣ ಚೀನದಲ್ಲಿ ಕ್ರಿ.ಶ. 9ನೆಯ ಶತಮಾನದಷ್ಟು ಹಿಂದೆಯೇ ಚಲಾವಣೆಗೆ ಬಂದಿತ್ತು. (ಕೆ.ವಿ.ಆರ್.)

**ಏಷ್ಯನ್ ಕ್ರೀಡೆಗಳು :** ವಿಶ್ವವಿಖ್ಯಾತ ಒಲಿಂಪಿಕ್ ಕ್ರೀಡೆಗಳ ಮಾದರಿಯಲ್ಲಿ ಏಷ್ಯದಲ್ಲಿ ನಾಲ್ಕು ವರ್ಷಗಳಿಗೊಮ್ಮೆ ನಡೆಯುವ ಕ್ರೀಡೆಗಳು. ಕ್ರೀಡಾ ಜಗತ್ತಿನಲ್ಲಿ ಪಾಶ್ಚಾತ್ಯ ರಾಷ್ಟ್ರಗಳದೇ ಮೇಲುಗೈಯಾಗಿದ್ದು, ಏಷ್ಯದ ರಾಷ್ಟ್ರಗಳು ಹಿಂದುಳಿಯಬೇಕಾದ ಕಾಲವೂ ಒಂದಿತ್ತು. ಕ್ರಮೇಣ ಏಷ್ಯದ ವಿವಿಧ ರಾಷ್ಟ್ರಗಳ ಕ್ರೀಡಾಪಟುಗಳ ಸತತ ಪ್ರಯತ್ನ ಮತ್ತು ಶ್ರಮಗಳ ಫಲವಾಗಿ ಏಷ್ಯನ್ ರಾಷ್ಟ್ರಗಳೂ ಪಾಶ್ಚಾತ್ಯ ರಾಷ್ಟ್ರಗಳಿಗೆ ಸಾಟಿಯಾಗಿ ನಿಂತು, ಅನೇಕ ವೇಳೆ ಅವುಗಳಿಗೂ ಮಿಗಿಲೆನಿಸಿಕೊಂಡಿದ್ದು ಏಷ್ಯನ್ ರಾಷ್ಟ್ರಗಳಿಗೆಂದೇ ಪ್ರತ್ಯೇಕವಾದ ಒಂದು ಕ್ರೀಡಾಕೂಟವನ್ನು ನಡೆಸಬೇಕೆಂಬ ತೀರ್ಮಾನಕ್ಕೆ ಎಡೆಮಾಡಿಕೊಟ್ಟಿತ್ತು. ರಾಜಕೀಯ ಮತ್ತು ಇತರ ಕ್ಷೇತ್ರಗಳಲ್ಲಿ ಮುಂದಿದ್ದ ಭಾರತದ ಮೇಲೆ ಈ ಕ್ರೀಡೆಗಳ ಸಂಘಟನೆ ಮತ್ತು ಸಂಯೋಜನೆಗಳ ಹೊಣೆ ಬಿತ್ತು. ದಿವಂಗತ ಜಿ. ಡಿ. ಸೊಂಧಿಯ ಅವಿರತ ಪ್ರಯತ್ನದ ಫಲವಾಗಿ ಏಷ್ಯನ್ ಗೇಮ್ಸ್ ಫೆಡರೇಷನಿನ ಉದಯವಾಯಿತು. ಈ ಫೆಡರೇಷನಿನ ಆಶ್ರಯದಲ್ಲಿ ಮೊಟ್ಟ ಮೊದಲ ಏಷ್ಯನ್ ಕ್ರೀಡೆಗಳು ನವದೆಹಲಿಯಲ್ಲಿ ಜರುಗಿದುವು (1951). ಈ ಕೂಟದಲ್ಲಿ 11 ಏಷ್ಯನ್ ರಾಷ್ಟ್ರಗಳು ಭಾಗವಹಿಸಿದ್ದುವು. ಫಿಲಿಪೀನ್ಸಿನ ರಾಜಧಾನಿ ಮನಿಲದಲ್ಲಿ ನಡೆದ ಎರಡನೆಯ ಏಷ್ಯನ್ ಕ್ರೀಡೆಗಳಲ್ಲಿ (1954) ಭಾಗವಹಿಸಿದ ಏಷ್ಯನ್ ರಾಷ್ಟ್ರಗಳ ಸಂಖ್ಯೆ 18. ಟೋಕಿಯೋದಲ್ಲಿ ನಡೆದ (1958) ಮೂರನೆಯ ಏಷ್ಯನ್ ಕ್ರೀಡೆಗಳಲ್ಲಿ ಜಪಾನು ಭಾಗವಹಿಸಿ, ಜಗತ್ತೇ ವಿಸ್ಮಯಪಡುವ ರೀತಿಯಲ್ಲಿ ತನ್ನ ಕ್ರೀಡಾಕೌಶಲವನ್ನು ಪ್ರದರ್ಶಿಸಿತು. 20 ಏಷ್ಯನ್ ರಾಷ್ಟ್ರಗಳು ಈ ಕೂಟದಲ್ಲಿ ಭಾಗವಹಿಸಿದ್ದುವು. ಇಂಡೋನೇಷ್ಯದ ರಾಜಧಾನಿ ಜಕಾರ್ತದಲ್ಲಿ ನಡೆದ (1962) ನಾಲ್ಕನೆಯ ಏಷ್ಯನ್ ಕ್ರೀಡಾಕೂಟದಲ್ಲಿ ಭಾರತ ತನ್ನ ವಿಶೇಷ ಸಾಧನೆಯ ಫಲವಾದ ಕ್ರೀಡಾಕೌಶಲ ಪ್ರದರ್ಶನಮಾಡಿ ಜಗತ್ತಿನ ಪ್ರಶಂಸೆಗೆ ಪಾತ್ರವಾಯಿತು. ಅಥ್ಲೆಟಿಕ್ ಸ್ಪರ್ಧೆಗಳಲ್ಲೂ ಫುಟ್‌ಬಾಲ್ ಪಂದ್ಯದಲ್ಲೂ ಪ್ರಶಸ್ತಿ ಗಳಿಸಿತು. ಈ ಕೂಟದಲ್ಲಿ ಭಾಗವಹಿಸಿದ ಏಷ್ಯನ್ ರಾಷ್ಟ್ರಗಳ ಸಂಖ್ಯೆ 17. ಐದನೆಯ ಏಷ್ಯನ್ ಕ್ರೀಡಾಕೂಟ ನಡೆದದ್ದು ಥೈಲೆಂಡಿನ ರಾಜಧಾನಿ ಬ್ಯಾಂಗ್‌ಕಾಕಿನಲ್ಲಿ (1966). ಭಾಗವಹಿಸಿದ ಏಷ್ಯನ್ ರಾಷ್ಟ್ರಗಳ ಸಂಖ್ಯೆ 18. ಈ ಕ್ರೀಡಾಕೂಟದಲ್ಲಿ ಜಪಾನ್ ಮಹತ್ತ್ವದ ಪಾತ್ರವಹಿಸಿತು. ಅರ್ಧಕ್ಕಿಂತಲೂ ಹೆಚ್ಚಿನ ಕ್ರೀಡೆಗಳಲ್ಲಿ ಅದು ಜಯಗಳಿಸಿ, ಇತರ ರಾಷ್ಟ್ರಗಳಿಗಿಂತಲೂ ಹೆಚ್ಚಿನ ಸ್ವರ್ಣಪದಕಗಳನ್ನು (78) ಗಳಿಸಿಕೊಂಡಿತು. ಈ ಕೂಟದಲ್ಲಿ ಭಾರತ ಗಳಿಸಿದ ಸ್ವರ್ಣಪದಕಗಳ ಸಂಖ್ಯೆ 7.

ಆರನೆಯ ಏಷ್ಯನ್ ಕ್ರೀಡೆಗಳು 1970ರ ಡಿಸೆಂಬರ್ 9ರಿಂದ ಬ್ಯಾಂಗ್‌ಕಾಕಿನಲ್ಲಿ ಆರಂಭವಾದುವು. ಭಾಗವಹಿಸಿದ ರಾಷ್ಟ್ರಗಳ ಸಂಖ್ಯೆ 18, ಸ್ಪರ್ಧಿಗಳು 2,000ಕ್ಕೂ ಹೆಚ್ಚು ಮಂದಿ. 12 ದಿನಗಳ ಕಾಲ ನಡೆದ ಈ ಕೂಟದ ಕ್ರೀಡಾಜ್ಯೋತಿಯನ್ನು ಥೈಲೆಂಡಿನ ದೊರೆ ಬೆಳಗಿಸಿ ವಿಧ್ಯುಕ್ತವಾಗಿ ಕ್ರೀಡೆಗಳನ್ನು ತೊಡಗಿಸಿದರು. ಈ ಕ್ರೀಡೆಗಳಲ್ಲಿ ಅತ್ಯಧಿಕ ಪದಕಗಳನ್ನು ಗಳಿಸಿದ ರಾಷ್ಟ್ರ ಜಪಾನ್ (74 ಚಿನ್ನದ ಪದಕಗಳು, 47 ಬೆಳ್ಳಿಯ ಪದಕಗಳು ಮತ್ತು 23 ಕಂಚಿನ ಪದಕಗಳು). ಭಾರತ 6 ಚಿನ್ನದ ಪದಕಗಳನ್ನೂ 9 ಬೆಳ್ಳಿಯ ಪದಕಗಳನ್ನೂ 19 ಕಂಚಿನ ಪದಕಗಳನ್ನೂ ಗಳಿಸಿತು. (ಎ.ಆರ್.ಸಿ.ಬಿ.)

**ಏಷ್ಯ ಮತ್ತು ದೂರ ಪ್ರಾಚ್ಯಗಳ ಆರ್ಥಿಕ ಆಯೋಗ :** ವಿಶ್ವಸಂಸ್ಥೆಯ ಆರ್ಥಿಕ ಮತ್ತು ಸಾಮಾಜಿಕ ಸಮಿತಿ ಏರ್ಪಡಿಸಿರುವ ನಾಲ್ಕು ಪ್ರಾದೇಶಿಕ ಸಂಸ್ಥೆಗಳಲ್ಲಿ ಒಂದು. ಇದರ ಎಕೊನಾಮಿಕ್ ಕಮಿಷನ್ ಫಾರ್ ಏಷ್ಯ ಅಂಡ್ ದಿ ಫಾರ್ ಈಸ್ಟ್ ಎಂಬ ಇಂಗ್ಲಿಷ್ ಹೆಸರಿನ ಮುಖ್ಯ ಶಬ್ದಗಳ ಮೊದಲಕ್ಷರಗಳಾದ ಇ, ಸಿ, ಎ, ಎಫ್, ಇ ಎಂಬ ಅಕ್ಷರಗಳನ್ನು ಸೇರಿಸಿ ಇಕಾಫೆ ಎಂದು ಕರೆಯುವುದು ರೂಢಿಯಾಗಿದೆ. ವಿಶ್ವಸಂಸ್ಥೆಯ ಆರ್ಥಿಕ ಮತ್ತು ಸಾಮಾಜಿಕ ಸಮಿತಿಯ ಒಂದು ನಿರ್ಣಯಾಡ ಮೇರೆಗೆ ಇದು 1947ರ ಮಾರ್ಚಿ 28ರಂದು ಅಸ್ತಿತ್ವಕ್ಕೆ ಬಂತು. ಇದರ ಪ್ರಥಮ ಸಭೆ ಅದೇ ವರ್ಷದ ಜೂನಿನಲ್ಲಿ ನಡೆಯಿತು. ಈ ಆಯೋಗದ ಮೂಲಕ ಏಷ್ಯ ಮತ್ತು ದೂರಪ್ರಾಚ್ಯ ಪ್ರದೇಶಗಳ ಶೀಘ್ರಪ್ರಗತಿ ಸಾಧಿಸುವುದೇ ಇದನ್ನು ಸ್ಥಾಪಿಸಿದ್ದರ ಉದ್ದೇಶ.

ಇಕಾಫೆ ಮಂಡಳಿಯ ಕಾರ್ಯಚಟುವಟಿಕೆಗಳ ಭೌಗೋಳಿಕ ವ್ಯಾಪ್ತಿಗೆ ಒಳಪಟ್ಟಿರುವ ಆಫ್ಘಾನಿಸ್ತಾನ, ಬ್ರೂನೈ, ಬರ್ಮ, ಕ್ಯಾಂಬೋಡಿಯ, ಸಿಂಹಳ, ಚೀನ, ಮಲಯ, ಹಾಂಗ್‌ಕಾಂಗ್, ಭಾರತ, ಇಂಡೊನೇಷ್ಯ, ಇರಾನ್, ಜಪಾನ್, ಕೊರಿಯ, ಲಾವೋಸ್, ಮಂಗೋಲಿಯ, ನೇಪಾಳ, ಉತ್ತರ ಬೋರ್ನಿಯೊ, ಪಾಕಿಸ್ತಾನ, ಫಿಲಿಪೀನ್ಸ್, ಸಾರವಾಕ್, ಸಿಂಗಪುರ, ಥೈಲೆಂಡ್ ಮತ್ತು ವಿಯಟ್ನಾಂ.

ಇಕಾಫೆ ಮಂಡಳಿಯಲ್ಲಿ 27 ಸದಸ್ಯರಾಷ್ಟ್ರಗಳೂ ಎರಡು ಸಹಸದಸ್ಯರಾಷ್ಟ್ರಗಳೂ ಇವೆ (1969). ಆಫ್ಘಾನಿಸ್ತಾನ, ಆಸ್ಟ್ರೇಲಿಯ, ಬರ್ಮ, ಕ್ಯಾಂಬೋಡಿಯ, ಸಿಂಹಳ, ಚೀನ, ಫ್ರಾನ್ಸ್, ಭಾರತ, ಇಂಡೊನೇಷ್ಯ, ಇರಾನ್, ಜಪಾನ್, ಕೊರಿಯ ಗಣರಾಜ್ಯ, ಲಾವೋಸ್, ಮಲೇಷಿಯ, ಮಂಗೋಲಿಯ, ನೇಪಾಳ, ನೆದರ್ಲೆಂಡ್ಸ್, ನ್ಯೂ ಜೀಲೆಂಡ್, ಪಾಕಿಸ್ತಾನ, ಫಿಲಿಪೀನ್ಸ್, ಸಿಂಗಪುರ ಥೈಲೆಂಡ್, ಸೋವಿಯತ್ ಒಕ್ಕೂಟ, ಬ್ರಿಟನ್, ಅಮೆರಿಕ ಸಂಯುಕ್ತಸಂಸ್ಥಾನ, ವಿಯಟ್ನಾಂ ಗಣರಾಜ್ಯ, ಪಶ್ಚಿಮ ಸಮೋವ—ಇವು ಸದಸ್ಯರಾಷ್ಟ್ರಗಳು. ಬ್ರೂನೈ ಮತ್ತು ಹಾಂಗ್‌ಕಾಂಗ್ ಸಹಸದಸ್ಯತ್ವ ಪಡೆದಿವೆ. ಬ್ರಿಟನ್, ಅಮೆರಿಕ ಸಂಯುಕ್ತಸಂಸ್ಥಾನ, ಫ್ರಾನ್ಸ್, ಸೋವಿಯತ್ ಒಕ್ಕೂಟ, ನೆದರ್ಲೆಂಡ್ಸ್, ಆಸ್ಟ್ರೇಲಿಯ, ನ್ಯೂ ಜೀಲೆಂಡ್ ಇವು ಏಷ್ಯ ಮತ್ತು ದೂರ ಪ್ರಾಚ್ಯ ಪ್ರದೇಶದ ಹೊರಗಿರುವ ಸದಸ್ಯರಾಷ್ಟ್ರಗಳು. ಈ ರಾಷ್ಟ್ರಗಳಿಂದ ಆರ್ಥಿಕ ಸಹಾಯ ಪಡೆದುಕೊಳ್ಳುವುದು ಆಯೋಗದ ಉದ್ದೇಶ. ಆಯೋಗದ ಸಭೆಗೆ ಈ ಸದಸ್ಯರನ್ನಲ್ಲದೆ ವಿವಿಧ ದೇಶಗಳಿಂದ ಸಮಾಲೋಚಕ ಸದಸ್ಯರನ್ನೂ ಆಹ್ವಾನಿಸುವುದುಂಟು.

ಆಯೋಗದ ಮುಖ್ಯ ಉದ್ದೇಶಗಳಿವು : 1 ಇಕಾಫೆ ಪ್ರದೇಶದಲ್ಲಿರುವ ರಾಷ್ಟ್ರಗಳ ಆರ್ಥಿಕ ಗತಿಯನ್ನು ವೇಗಗೊಳಿಸುವುದು. ಆ ರಾಷ್ಟ್ರಗಳಲ್ಲಿ ಎಲ್ಲ ರಂಗಗಳಲ್ಲೂ ಪರಸ್ಪರ ಸಂಪರ್ಕವನ್ನು ವೃದ್ಧಿಗೊಳಿಸುವುದು. ಆ ರಾಷ್ಟ್ರಗಳು ವಿಶ್ವದ ಎಲ್ಲ ರಾಷ್ಟ್ರಗಳೊಡನೆ ಸಹಕಾರ ಬೆಳೆಸುವಂತೆ ನೋಡಿಕೊಳ್ಳುವುದು. ಆ ರಾಷ್ಟ್ರಗಳ ಆರ್ಥಿಕ ಅಭಿವೃದ್ಧಿಯನ್ನು ಶೀಘ್ರಗೊಳಿಸುವುದು. 2 ಆರ್ಥಿಕ ಹಾಗೂ ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟಂತೆ ಸಂಶೋಧನೆಗಳನ್ನು ನಡೆಸುವುದು ಮತ್ತು ನಿಯೋಜಿಸುವುದು. 3 ಆರ್ಥಿಕ, ತಾಂತ್ರಿಕ ವಿಷಯಗಳಿಗೆ ಸಂಬಂಧಪಟ್ಟ ಅಂಕಿ ಅಂಶಗಳನ್ನು ಸಂಗ್ರಹಿಸುವುದು ಮತ್ತು ಅವುಗಳನ್ನು ಪ್ರಕಟಿಸುವುದು. 4 ವಿಶ್ವಸಂಸ್ಥೆಯ ತಾಂತ್ರಿಕ ನೆರವಿನ ಯೋಜನೆಯಲ್ಲಿ ಸೇರಿರದ ವಿಷಯಗಳ ಬಗ್ಗೆ ಸದಸ್ಯರಾಷ್ಟ್ರಗಳಿಗೆ ಸಲಹೆ ನೀಡುವುದು. 5 ಆರ್ಥಿಕ ಹಾಗೂ ಸಾಮಾಜಿಕ ಸಮಿತಿಯ ಕಾರ್ಯಗಳು ಸಫಲವಾಗುವಂತೆ, ಆರ್ಥಿಕ ಹಾಗೂ ತಾಂತ್ರಿಕ ಕ್ಷೇತ್ರದಲ್ಲಿ ಅದಕ್ಕೆ ಸಹಾಯ ಮಾಡುವುದು. 6 ಆರ್ಥಿಕ ಅಭಿವೃದ್ಧಿಯ ಸಾಮಾಜಿಕ ವಿಷಯಗಳಲ್ಲಿ ಸಹಾಯ ಮಾಡುವುದು.

ಒಟ್ಟಿನಲ್ಲಿ ತನ್ನ ಸದಸ್ಯರಾಷ್ಟ್ರಗಳಲ್ಲಿ ಆರ್ಥಿಕ ಅಭಿವೃದ್ಧಿಯನ್ನು ತೀವ್ರಗೊಳಿಸುವುದು ಇಕಾಫೆಯ ಗುರಿ. ಈ ಆಯೋಗ ಇಕಾಫೆ ಕ್ಷೇತ್ರಕ್ಕೆ ಸಂಬಂಧಿಸಿದ್ದಾದರೂ ಇದು ಒಟ್ಟಿನಲ್ಲಿ ಅಂತರರಾಷ್ಟ್ರೀಯ ಸಹಕಾರವೃದ್ಧಿಗಾಗಿ ಏರ್ಪಟ್ಟಿರುವ ಒಂದು ಸಂಸ್ಥೆ.

ಇದು ಮಾತೃಸಂಸ್ಥೆಯಾದ ಆರ್ಥಿಕ ಮತ್ತು ಸಾಮಾಜಿಕ ಸಮಿತಿಯ (ಎಕನಾಮಿಕ್ ಅಂಡ್ ಸೋಷಿಯಲ್ ಕೌನ್ಸಿಲ್) ಮತ್ತು ವಿಶ್ವಸಂಸ್ಥೆಯ ಮಹಾಸಭೆಯ ನಿರ್ದೇಶಕ್ಕನುಗುಣವಾಗಿ ಕಾರ್ಯ ನಡೆಸುತ್ತದೆ. ಇದರ ಕಾರ್ಯಕ್ರಮ ರೂಪಿತವಾಗುವುದು ವಾರ್ಷಿಕ ಸಭೆಗಳಲ್ಲಿ. ಆಯೋಗದ ಮುಖ್ಯ ಕಛೇರಿ ಬ್ಯಾಂಗ್‌ಕಾಕಿನಲ್ಲಿದೆ.

ಪ್ರಾರಂಭದ ವರ್ಷಗಳಲ್ಲಿ ವರ್ಷಕ್ಕೆ ಒಂದಕ್ಕಿಂತ ಹೆಚ್ಚು ಬಾರಿ ಇದರ ಅಧಿವೇಶನಗಳು ನಡೆಯುತ್ತಿದ್ದುವು. ಆದರೆ 1949ರಿಂದೀಚೆಗೆ ಇದು ವರ್ಷಕ್ಕೊಮ್ಮೆ ಮಾತ್ರ ನಡೆಯುತ್ತದೆ. ಸಭೆ ಸದಸ್ಯರಾಷ್ಟ್ರಗಳಲ್ಲಿ ಎಲ್ಲಾದರೂ ನಡೆಯಬಹುದು. ಈ ಅಧಿವೇಶನಗಳನ್ನು ಏಷ್ಯದ ಆರ್ಥಿಕ ಪಾರ್ಲಿಮೆಂಟ್ ಎಂಬುದಾಗಿ ಹೇಳಲಾಗಿದೆ. ಸದಸ್ಯರಾಷ್ಟ್ರಗಳಿಗೆ ಸಂಬಂಧಪಟ್ಟ ಎಲ್ಲ ಆರ್ಥಿಕ ಸಮಸ್ಯೆಗಳನ್ನೂ ಕೂಲಂಕಷವಾಗಿ ಚರ್ಚಿಸುವುದಲ್ಲದೆ ಇವನ್ನು ಯಾವ ರೀತಿಯಲ್ಲಿ ಎದುರಿಸಬೇಕು ಎಂಬುದನ್ನೂ ನಿರ್ಧರಿಸಲಾಗುತ್ತದೆ.

ಇಕಾಫೆ ಆಯೋಗದಲ್ಲಿ ಮೂರು ಖಾಯಂ ಸಮಿತಿಗಳಿವೆ : ಔದ್ಯೋಗಿಕ ಹಾಗೂ ಪ್ರಾಕೃತಿಕ ಸಂಪನ್ಮೂಲಗಳ ಸಮಿತಿ, ವ್ಯಾಪಾರ ಸಮಿತಿ ಹಾಗೂ ಅಂತರ್ವ್ಯಾಪಾರ ಮತ್ತು ಸಂಪರ್ಕ ಸಮಿತಿ. ಈ ಸಮಿತಿಗಳು ವರ್ಷಕ್ಕೊಮ್ಮೆ ಕೂಡುತ್ತವೆ. ಅದರಲ್ಲಿ ಮಂಡಳಿಯ ಎಲ್ಲ ಸದಸ್ಯರಾಷ್ಟ್ರಗಳೂ ಸಹಸದಸ್ಯರಾಷ್ಟ್ರಗಳೂ ಭಾಗವಹಿಸುತ್ತವೆ. ನಿರ್ದಿಷ್ಟ ಸಮಸ್ಯೆಗಳನ್ನು ಪರಿಶೀಲಿಸುವುದಕ್ಕೋಸ್ಕರ ರಚಿತವಾಗಿರುವ ಅನೇಕ ಉಪಸಂಸ್ಥೆಗಳುಂಟು.

ಕ್ರಿಯಾತಂಡಗಳೂ ಚರ್ಚಾಗೋಷ್ಠಿಗಳೂ ಸಮಾಲೋಚಕ ತಂಡಗಳೂ ಅಧ್ಯಯನ ತಂಡಗಳೂ ಆಯೋಗದ ಕಾರ್ಯಗಳ ವಿವಿಧ ಸಮಸ್ಯೆಗಳನ್ನು ಪರಿಶೀಲಿಸುತ್ತವೆ. ವಿಶ್ವಸಂಸ್ಥೆಯ ಅಂಗಸಂಸ್ಥೆಯಾದ ತಾಂತ್ರಿಕ ಸಹಾಯ ಕಾರ್ಯಮಂಡಳಿಯೊಂದಿಗೆ

# ಏಷ್ಯನ್ ಕ್ರೀಡೆಗಳು













1 ಕ್ರೀಡಾಜ್ಯೋತಿಯ ಆಗಮನ
2 ಭಾರತೀಯ ತಂಡ
3 ಓಟನಿರತ ಮಹಿಳಾ ಸ್ಪರ್ಧಿಗಳು
4 ಜ್ಯೋತಿ ಬೆಳಗಿಸುವ ದೃಶ್ಯ
5 ಸಾಮೂಹಿಕ ಕವಾಯತು
6 ಭಾರತ ಪಾಕಿಸ್ತಾನ್ ಹಾಕಿ ಪಂದ್ಯ

(ಬ್ಯೂರೊ ಆಫ್ ಟೆಕ್ನಿಕಲ್ ಅಸಿಸ್ಟೆನ್ಸ್ ಆಪರೇಷನ್ಸ್) ವಿಚಾರ ವಿನಿಮಯ ನಡೆಸುತ್ತದೆ. ಅನೇಕ ರಾಷ್ಟ್ರಗಳ ಸರಕಾರೇತರ ಸಂಸ್ಥೆಗಳಿಂದಲೂ ಆಯೋಗಕ್ಕೆ ದೊರಕುತ್ತಿರುವ ಸಹಾಯ ಅಪಾರ.

ಆಯೋಗದ ಕಾರ್ಯಕ್ರಮ ಮುಖ್ಯವಾಗಿ ಮೂರು ಮುಖ : 1 ಮಾಹಿತಿಯ ಸಂಗ್ರಹಣೆ, ವಿಶ್ಲೇಷಣೆ. 2 ರಾಷ್ಟ್ರಗಳಿಗೆ ಸಂಬಂಧಿಸಿದ ಆರ್ಥಿಕ ಕಾರ್ಯಕ್ರಮಗಳ ಬಗ್ಗೆ ಕಾರ್ಯಾಚರಣೆಯ ನಿರ್ದೇಶನ, 3 ತಾಂತ್ರಿಕ ಮತ್ತು ವಿಶೇಷ ಆರ್ಥಿಕ ನಿಧಿಯ ಯೋಜನೆಯ ಬಗ್ಗೆ ಸಲಹೆ ಸೇವೆಗಳ ನೀಡಿಕೆ. ಅಧ್ಯಯನ ಮತ್ತು ಸಂಶೋಧನೆಗಳಿಂದ ನಿರ್ದಿಷ್ಟ ಕಾರ್ಯಾಚರಣೆಗಳ ಬಗ್ಗೆ ಮಂಡಳಿಯ ಗಮನ ಈಚೆಗೆ ಹರಿದಿದೆ. ಆರ್ಥಿಕ ಅಭಿವೃದ್ಧಿಗಾಗಿ ಯೋಜನೆಗಳು, ಸಂಶೋಧನೆ ಮತ್ತು ಅಂಕಿ–ಅಂಶಗಳು, ವಿದೇಶೀ ವ್ಯಾಪಾರ, ಕೈಗಾರಿಕಾಕ್ಷೇತ್ರ ಮತ್ತು ಪ್ರಾಕೃತಿಕ ಸಂಪನ್ಮೂಲಗಳು, ಸಾರಿಗೆ ಮತ್ತು ಸಂಪರ್ಕ, ಪ್ರವಾಹ ಹತೋಟಿ ಮತ್ತು ಜಲಸಂಪದಭಿವೃದ್ಧಿ, ಕೃಷಿ, ಸಮಾಜ ಕಲ್ಯಾಣ—ಇವು ಆಯೋಗದ ಗಮನ ಸೆಳೆದಿರುವ ಕೆಲವು ಮುಖ್ಯ ಕ್ಷೇತ್ರಗಳು.

ಆರ್ಥಿಕ ಅಭಿವೃದ್ಧಿಗಾಗಿ ಯೋಜನೆಗಳು : 1959ರ ವರೆಗೆ ಆಯೋಗ ತನ್ನ ರಾಷ್ಟ್ರಗಳಿಗೆ ಯೋಜನೆಗಳನ್ನು ರೂಪಿಸಲು ಅನೇಕ ಬಗೆಯಲ್ಲಿ ಸಹಾಯ ಮಾಡಿತು. ಯೋಜನೆಗಳನ್ನು ಹೆಚ್ಚು ದೃಢವೂ ಪರಿಣಾಮಕಾರಿಯೂ ಆಗುವಂತೆ ಮಾಡಲು 1959 ರಿಂದ ಹೊಸ ಬಗೆಯ ಯತ್ನ ನಡೆದಿದೆ. ಅಭಿವೃದ್ಧಿಯೋಜನೆಗಳ ಸಿದ್ಧಾಂತ ಮತ್ತು ಅನುಷ್ಠಾನಗಳ ಬಗ್ಗೆ ಚರ್ಚೆ ನಡೆಸಲು ಪ್ರತಿವರ್ಷವೂ ತಜ್ಞರು ಸಭೆ ಸೇರುತ್ತಾರೆ. ಮೊದಲನೆಯ ಸಭೆಯ ವರದಿ 1960ರಲ್ಲಿ ಪ್ರಕಟವಾಯಿತು. ಇಂಥ ಉಪಯುಕ್ತ ವರದಿಗಳು ಅನಂತರ ಸಹ ಪ್ರಕಟವಾಗುತ್ತ ಬಂದಿವೆ. ಏಷ್ಯದ ಆರ್ಥಿಕ ಯೋಜಕರ ಪ್ರಥಮ ಸಮ್ಮೇಳನ ನಡೆದದ್ದು 1961ರಲ್ಲಿ. 1964ರ ಜನವರಿಯಲ್ಲಿ ಏಷ್ಯನ್ ಆರ್ಥಿಕಾಭಿವೃದ್ಧಿ ಸಂಸ್ಥೆ (ಏಷ್ಯನ್ ಇನ್ಸ್‌ಟಿಟ್ಯೂಟ್ ಫಾರ್ ಎಕನಾಮಿಕ್ ಡೆವೆಲಪ್‌ಮೆಂಟ್) ಅಸ್ತಿತ್ವಕ್ಕೆ ಬಂತು. ಪರಿಣತ ಯೋಜನಾ ಸಿಬ್ಬಂದಿಯನ್ನು ತಯಾರಿಸುವುದು ಈ ಸಂಸ್ಥೆಯ ಗುರಿ. ಈವರೆಗೆ ಸುಮಾರು 500 ಅಧಿಕಾರಿಗಳಿಗೆ ಇಲ್ಲಿ ತರಬೇತಿ ಕೊಡಲಾಗಿದೆ.

ಸಂಶೋಧನೆ ಮತ್ತು ಅಂಕಿ–ಅಂಶ : ಏಷ್ಯ ಮತ್ತು ದೂರಪ್ರಾಚ್ಯಗಳ ಆರ್ಥಿಕ ಆಯೋಗ ತನ್ನ ಆರಂಭದ ದಿನಗಳಿಂದಲೂ ಸದಸ್ಯರಾಷ್ಟ್ರಗಳಿಗೆ ಸಂಬಂಧಿಸಿದಂತೆ ಉಪಯುಕ್ತ ಅಂಕಿ–ಅಂಶಗಳನ್ನು ಸಂಗ್ರಹಿಸಿ ಪ್ರಕಟಿಸುವ ಕಾರ್ಯದಲ್ಲಿ ತೊಡಗಿದೆ. 1957ರಿಂದ ಏಷ್ಯನ್ ಅಂಕಿ–ಅಂಶ ತಜ್ಞರ ಸಮ್ಮೇಳನಗಳು ಆಗಿಂದಾಗ್ಗೆ ನಡೆಯುತ್ತಿವೆ. ಸದಸ್ಯರಾಷ್ಟ್ರಗಳಲ್ಲಿ ಅಂಕಿ–ಅಂಶ ವಿಧಾನಗಳನ್ನು ಹೆಚ್ಚು ವೈಜ್ಞಾನಿಕವನ್ನಾಗಿ ಮಾಡುವುದು, ಅವುಗಳನ್ನು ಯೋಜನೆಗಳಿಗೆ ಪೂರಕವನ್ನಾಗಿ ಮಾಡುವುದು—ಇವು ಈ ಸಮ್ಮೇಳನಗಳ ಗುರಿ. ಜನಸಂಖ್ಯೆ, ಗೃಹವಸತಿ ಮತ್ತು ಕೃಷಿಯ ಬಗ್ಗೆ ಅನೇಕ ಉಪಯುಕ್ತ ಅಂಕಿ-ಅಂಶಗಳನ್ನು ಸಂಗ್ರಹಿಸಲಾಗಿದೆ.

ವಿದೇಶೀ ವ್ಯಾಪಾರ : ವ್ಯಾಪಾರ ಸಮಿತಿ ಈ ಆಯೋಗದ ಒಂದು ಪ್ರಮುಖ ಅಂಗ. ಸದಸ್ಯರಾಷ್ಟ್ರಗಳ ನಡುವಿನ ವ್ಯಾಪಾರ, ಅದರ ಪ್ರಗತಿ, ಹೊರ ಪ್ರದೇಶದ ವ್ಯಾಪಾರದಿಂದ ಮಂಡಳಿಯ ಮೇಲೆ ಆಗುತ್ತಿರುವ, ಆಗಬಹುದಾದ ಪರಿಣಾಮ—ಇವುಗಳನ್ನು ಕುರಿತು ವಿವೇಚನೆ ನಡೆಸುವುದು ಇದರ ಉದ್ದೇಶ.

ಪ್ರಾದೇಶಿಕ ವ್ಯಾಪಾರ ಒಪ್ಪಂದಗಳಿಂದ (ಉದಾ : ಐರೋಪ್ಯ ಸಾಮಾನ್ಯ ಮಾರುಕಟ್ಟೆ) ಆಯೋಗದ ಸದಸ್ಯರಾಷ್ಟ್ರಗಳ ವ್ಯಾಪಾರದ ಮೇಲಿನ ಪರಿಣಾಮಗಳು, ಆಯಾತ–ನಿರ್ಯಾತ ನಿಯಮಗಳ ಬದಲಾವಣೆಯ ಕಾಯಿದೆಗಳು, ಅಂತರರಾಷ್ಟ್ರ ವ್ಯಾಪಾರ ಪ್ರದರ್ಶನಗಳ ಸಾಧ್ಯತೆಗಳು, ಜಹಜು ಮತ್ತು ಸಮುದ್ರ ಸಾಗಾಣಿಕೆಯ ಮೇಲೆ ನಿರ್ಧರಿಸಬಹುದಾದ ದರಗಳು, ಸುಂಕನಿರ್ವಹಣೆ, ಪ್ರಾದೇಶಿಕ ವ್ಯಾಪಾರ ಸಹಕಾರ ಸಾಧ್ಯತೆ ಮುಂತಾದವು ವ್ಯಾಪಾರ ಸಮಿತಿಯ ವಾರ್ಷಿಕ ಸಮ್ಮೇಳನಗಳ ಮುಂದೆ ಚರ್ಚೆಗೆ ಬರುವ ವಿಚಾರಗಳು.

ಅಂತರರಾಷ್ಟ್ರೀಯ ವ್ಯಾಪಾರ ವರ್ಧನ ಸಮ್ಮೇಳನ ಪ್ರತಿವರ್ಷವೂ ನಡೆಯುವುದುಂಟು. ಸುಂಕನಿಯಮಗಳನ್ನು ಪರಸ್ಪರ ರಾಷ್ಟ್ರಗಳು ಸಡಿಲಗೊಳಿಸಬಹುದಾದ ಸಾಧ್ಯತೆಯ ಬಗ್ಗೆ ಸುಂಕನಿರ್ವಹಣೆಯ ಕ್ರಿಯಾಮಂಡಲಿ ಅನೇಕ ಶಿಫಾರ್ಸುಗಳನ್ನು ಮಾಡಿದೆ. ಇವಲ್ಲದೆ ವಾಣಿಜ್ಯಕ ಪಂಚಾಯತಿ ಪದ್ಧತಿಯ ಪ್ರೋತ್ಸಾಹಕ್ಕಾಗಿ ಒಂದು ಕೇಂದ್ರವನ್ನು ತೆರೆಯಲಾಗಿದೆ. ಅದು ಏಷ್ಯನ್ ರಾಷ್ಟ್ರಗಳ ವ್ಯಾಪಾರದ ಬಗ್ಗೆ ಒಂದು ಒಪ್ಪಂದಕ್ಕೆ ಬರುವುದಕ್ಕೆ ಸಹಾಯ ಮಾಡುತ್ತಿದೆ. 1966ರ ಡಿಸೆಂಬರಿನಲ್ಲಿ ಪ್ರಪ್ರಥಮವಾಗಿ ಥೈಲೆಂಡಿನಲ್ಲಿ ಏಷ್ಯನ್ ಅಂತರರಾಷ್ಟ್ರೀಯ ವ್ಯಾಪಾರಮೇಳವನ್ನು ನಡೆಸಲಾಯಿತು. ಏಷ್ಯ ಹಾಗೂ ಏಷ್ಯೇತರ ರಾಷ್ಟ್ರಗಳಿಂದ ಸುಮಾರು 3,000 ರಾಷ್ಟ್ರಗಳು ಈ ಮೇಳದಲ್ಲಿ ಭಾಗವಹಿಸಿದ್ದುವು.

ಕೈಗಾರಿಕೆಯ ಮತ್ತು ಪ್ರಾಕೃತಿಕ ಸಂಪನ್ಮೂಲಗಳು : ಕೈಗಾರಿಕಾ ಕ್ಷೇತ್ರದಲ್ಲಿ ಆಯೋಗದ ಕೆಲಸ ಮುಖ್ಯವಾಗಿ ವಿದ್ಯುಚ್ಛಕ್ತಿ, ಖನಿಜ ಅಭಿವೃದ್ಧಿ, ಎಂಜಿನಿಯರಿಂಗ್, ಸಣ್ಣಪ್ರಮಾಣದ ಕೈಗಾರಿಕೆ, ವಸತಿನಿರ್ಮಾಣ ಇವುಗಳಿಗೆ ಸಂಬಂಧಿಸಿದೆ.

ಏಷ್ಯ ಮತ್ತು ದೂರಪ್ರಾಚ್ಯ ರಾಷ್ಟ್ರಗಳಲ್ಲಿನ ಒಂದು ಪ್ರಮುಖ ಕೊರತೆಯೆಂದರೆ, ವ್ಯವಸ್ಥಿತವಾಗಿ ತಯಾರಾದ ಕೈಗಾರಿಕಾ ಯೋಜನಾರಾಹಿತ್ಯ ಮತ್ತು ಯಾವ ಯಾವ ಕೈಗಾರಿಕೆಗಳಲ್ಲಿ ಹಣ ನಿವೇಶಿಸಬಹುದು ಮುಂತಾದ ವಿಷಯಗಳ ಬಗ್ಗೆ ಸರಿಯಾದ ಮಾಹಿತಿಯ ಅಭಾವ. ಆದ್ದರಿಂದ ಆಯೋಗ ಪ್ರಾದೇಶಿಕ ಕೈಗಾರಿಕಾ ಸಮಸ್ಯೆಗಳ ಪರಿಶೀಲನೆ ನಡೆಸುತ್ತಿದೆ. ಬರ್ಮ ಮತ್ತು ಸಿಂಗಪುರಗಳಲ್ಲಿ ಕೈಗಾರಿಕಾ ಸಾಧ್ಯತೆ ಸಮೀಕ್ಷೆ ನಡೆಸಲಾಗಿದೆ. ಕೈಗಾರಿಕಾ ಹಾಗೂ ಪ್ರಕೃತಿ ಸಂಪತ್ತಿನ ಸಮಿತಿಯ ಕೈಕೆಳಗೆ ವಿದ್ಯುಚ್ಛಕ್ತಿ, ಖನಿಜಸಂಪತ್ತು, ಕಬ್ಬಿಣ ಮತ್ತು ಉಕ್ಕು ಇವುಗಳಿಗೆ ಸಂಬಂಧಪಟ್ಟ ಸಮಿತಿಗಳು ಕೆಲಸ ಮಾಡುತ್ತಿವೆ.

ವಿದ್ಯುಚ್ಛಕ್ತಿ : ಏಷ್ಯ ಮತ್ತು ದೂರಪ್ರಾಚ್ಯ ಪ್ರದೇಶಗಳ ಪ್ರಗತಿಗೆ ಅತ್ಯಂತ ಮುಖ್ಯವಾದದ್ದು ವಿದ್ಯುಚ್ಛಕ್ತಿ. ಆದ್ದರಿಂದ ಆಯೋಗ ವಿದ್ಯುಚ್ಛಕ್ತಿ ಉತ್ಪನ್ನಕ್ಕೆ ಮೂಲ ಸಂಪತ್ತಾದ ಜಲ, ಕಲ್ಲಿದ್ದಲು ಮತ್ತು ಪರಮಾಣುಶಕ್ತಿ ಸಾಧನಗಳ ಬಗ್ಗೆ ವಿವರವಾದ ಮಾಹಿತಿಯನ್ನು ಸಂಪಾದಿಸಿ ಪ್ರಕಟಿಸುತ್ತಿದೆ. ವಿದ್ಯುಚ್ಛಕ್ತಿ ಬುಲೆಟಿನ್ ಎಂಬ ವಾರ್ಷಿಕ ಪತ್ರಿಕೆಯಲ್ಲಿ ಈ ವಿಷಯಗಳನ್ನು ಪ್ರಕಟಿಸಲಾಗುತ್ತಿದೆ. ವಿದ್ಯುಚ್ಛಕ್ತಿಯ ಸಮಿತಿ ಆಗಿಂದಾಗ್ಗೆ ಸಭೆ ಸೇರಿ ವಿದ್ಯುಚ್ಛಕ್ತಿಗೆ ಸಂಬಂಧಿಸಿದ ವಿಷಯಗಳನ್ನೆಲ್ಲ ಪರಿಶೀಲಿಸುತ್ತದೆ.

ಏಷ್ಯನ್ ರಾಷ್ಟ್ರಗಳಲ್ಲಿ ಕೈಗಾರಿಕೆ ಅಭಿವೃದ್ಧಿಯನ್ನು ತೀವ್ರಗೊಳಿಸುವ ಉದ್ದೇಶದಿಂದ 1966ರ ಮಾರ್ಚಿಯಲ್ಲಿ ಸ್ಥಾಪಿತವಾದ ಏಷ್ಯನ್ ಕೈಗಾರಿಕಾಭಿವೃದ್ಧಿ ಸಮಿತಿ ಮತ್ತು ಕೈಗಾರಿಕಾಕರಣ ಸಮ್ಮೇಳನ ಖಾಯಂ ವಿಭಾಗಗಳು.

ಪ್ರಾದೇಶಿಕ ಕೈಗಾರಿಕಾಭಿವೃದ್ಧಿ ಮತ್ತು ಯೋಜನಾ ಕೇಂದ್ರ ಸ್ಥಾಪಿತವಾದದ್ದು 1965ರ ಜನವರಿಯಲ್ಲಿ. ಸದಸ್ಯರಾಷ್ಟ್ರಗಳಲ್ಲಿ ರಾಷ್ಟ್ರೀಯ ಕೈಗಾರಿಕಾ ಅಭಿವೃದ್ಧಿ ಯೋಜನೆಗೆ ಸಂಬಂಧಿಸಿದ ವಿಷಯಗಳನ್ನು ಸಂಗ್ರಹಿಸುವುದು ಮತ್ತು ಮಾಹಿತಿಯನ್ನು ಪ್ರಕಟಿಸುವುದು, ಸಹಕಾರ ಸಾಧ್ಯವಿರುವ ಕೈಗಾರಿಕಾ ಕ್ಷೇತ್ರಗಳನ್ನು ಗುರುತಿಸುವುದು—ಮುಂತಾದ ನಾನಾ ವಿಚಾರಗಳಲ್ಲಿ ಇದರ ಪರಿಣತರು ಸೇವೆ ಸಲ್ಲಿಸುತ್ತಿದ್ದಾರೆ.

ಗ್ರಾಮಾಂತರ ಪ್ರದೇಶಗಳ ವಿದ್ಯುಚ್ಛಕ್ತಿ ಆವಶ್ಯಕತೆಗಳನ್ನು ಆಯೋಗ ಮನಗಂಡಿದೆ. ಈ ಬಗ್ಗೆ ಅದು ವಿವರವಾದ ಅಧ್ಯಯನ ನಡೆಸಿ ಮಾಹಿತಿಯನ್ನು ಪ್ರಕಟಿಸಿದೆ. ಗ್ರಾಮಾಂತರ ವಿದ್ಯುಚ್ಛಕ್ತಿ ಸರಬರಾಯಿಯ ವಿಷಯದಲ್ಲಿ ಪರಿಣತರ ತಂಡವೊಂದು ರಚಿತವಾಗಿದೆ. ಸದಸ್ಯರಾಷ್ಟ್ರಗಳ ಕೋರಿಕೆಯ ಮೇರೆಗೆ ಅವುಗಳಿಗೆ ಭೇಟಿ ನೀಡಿ ಸಲಹೆ ನೀಡುವುದು ಈ ತಂಡದವರ ಕಾರ್ಯಭಾರ.

ಖನಿಜ ಸಂಪತ್ತಿನ ಅಭಿವೃದ್ಧಿ : ಆಯೋಗದ ಭೂವಿಜ್ಞಾನ ಕಾರ್ಯತಂಡ 1954ರಲ್ಲಿ ತನ್ನ ಕೆಲಸ ಪ್ರಾರಂಭಿಸಿ, ಈ ಪ್ರದೇಶದ ಭೂವೈಜ್ಞಾನಿಕ ಪಟಗಳ ಕೆಲಸ ಮುಗಿಸಿದೆ. ಈ ಕ್ಷೇತ್ರದ ಪ್ರತಿಯೊಂದು ರಾಷ್ಟ್ರಕ್ಕೂ ಭೂವೈಜ್ಞಾನಿಕ ಹಾಗೂ ಖನಿಜ ಸಾಧನಗಳ ಪಟಗಳನ್ನು ತಯಾರಿಸಲಾಗಿದೆ. ಭಾರತದ ಭೂವೈಜ್ಞಾನಿಕ ಸರ್ವೆಯ ನಿರ್ದೇಶಕರು ಪ್ರಾದೇಶಿಕ ಭೂವೈಜ್ಞಾನಿಕ ಪಟಗಳ ಸಮನ್ವಯಾಧಿಕಾರಿಯಾಗಿದ್ದರು. ಪೆಟ್ರೋಲಿಯಂ ಕ್ಷೇತ್ರದಲ್ಲಿ ಸಮಾವೇಶ ನಡೆಸಲು ಆಸಕ್ತಿವಹಿಸಿದ ಪ್ರಥಮ ವಿಶ್ವಸಂಸ್ಥೀಯ ಅಂಗವೆಂದರೆ ಇದೇ. 1958ರ ಡಿಸೆಂಬರಿನಲ್ಲಿ, ಏಷ್ಯ ಹಾಗೂ ದೂರಪ್ರಾಚ್ಯದ ಪೆಟ್ರೋಲಿಯಂ ಸಂಪತ್ತಿನ ಅಭಿವೃದ್ಧಿಯನ್ನು ಕುರಿತ ಸಮಾವೇಶವನ್ನು ನವದೆಹಲಿಯಲ್ಲಿ ನಡೆಸಲಾಯಿತು. ಎರಡನೆಯ ಸಮಾವೇಶ ಸೇರಿದ್ದು 1962ರ ಸೆಪ್ಟೆಂಬರಿನಲ್ಲಿ—ಟೆಹರಾನಿನಲ್ಲಿ.

ಎಂಜಿನಿಯರಿಂಗ್ : ಲೋಹ ಮತ್ತು ಎಂಜಿನಿಯರಿಂಗ್ ಉಪಸಮಿತಿಯ ಮೂಲಕ ಏಷ್ಯ ಹಾಗೂ ಏಷ್ಯೇತರ ತಜ್ಞರನ್ನು ವಿಚಾರ ವಿನಿಮಯಕ್ಕಾಗಿ ಒಂದುಗೂಡಿಸಲಾಗುತ್ತಿದೆ. ಈ ಉಪಸಮಿತಿ ಕಬ್ಬಿಣ ಮತ್ತು ಉಕ್ಕಿನ ಉತ್ಪಾದನೆಗಳ ಬಗ್ಗೆ ಹೊಸ ವಿಧಾನವನ್ನು ಸೂಚಿಸಿದೆ. ಈ ಪ್ರದೇಶದ ದೇಶಗಳಲ್ಲಿ ಸಿಗುವ ನಾನ್ ಕೋಕಿಂಗ್ ಕಲ್ಲಿದ್ದಲನ್ನು ಹೇಗೆ ಉಪಯೋಗಿಸಿಕೊಳ್ಳಬಹುದೆಂಬುದರ ಬಗ್ಗೆ ಸಲಹೆಗಳನ್ನು ಕೊಟ್ಟಿದೆ. ಆಗಿಂದಾಗ್ಗೆ ಪ್ರಕಟವಾಗುವ 'ಕಬ್ಬಿಣ ಮತ್ತು ಉಕ್ಕು ಪತ್ರಿಕೆಯ ಮೂಲಕ ಈ ಬಗ್ಗೆ ಉಪಯುಕ್ತ ಮಾಹಿತಿಗಳು ಪ್ರಕಟವಾಗುತ್ತಿವೆ.

ಹಡಗು ಮತ್ತು ದೋಣಿ ನಿರ್ಮಾಣ, ಯಂತ್ರ ಕೈಗಾರಿಕೆ ಮುಂತಾದವಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಆಯೋಗ ಪರಿಶೀಲಿಸುತ್ತದೆ. ಇವುಗಳ ಅಭಿವೃದ್ಧಿಯ ಬಗ್ಗೆ ಇದು ಸದಸ್ಯರಾಷ್ಟ್ರಗಳಿಗೆ ನೀಡುತ್ತಿರುವ ಸಲಹೆ ಸಹಾಯ ಅಪಾರ.

ವಸತಿನಿರ್ಮಾಣ : ಕಡಿಮೆ ವರಮಾನದ ಜನಗಳ ವಸತಿಸಮಸ್ಯೆಗಳನ್ನು ಬಗೆಹರಿಸಲು ಪ್ರತ್ಯೇಕವಾದ ಕಾರ್ಯತಂಡವೊಂದುಂಟು. ವಸತಿ ನಿರ್ಮಾಣ ಸಮಸ್ಯೆಗಳನ್ನು ಸತತವಾಗಿ ಅಭ್ಯಸಿಸಲು ವಿಶ್ವರಾಷ್ಟ್ರಸಂಸ್ಥೆ ಮತ್ತಿತರ ರಾಷ್ಟ್ರಗಳ ಸಹಕಾರದೊಂದಿಗೆ ನವದೆಹಲಿ ಮತ್ತು ಬಾಂಡುಂಗ್‌ಗಳಲ್ಲಿ ಪ್ರಾದೇಶಿಕ ಗೃಹನಿರ್ಮಾಣ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.

ಸಾರಿಗೆ ಮತ್ತು ಸಂಪರ್ಕ : ಇದಕ್ಕೆ ಸಂಬಂಧಪಟ್ಟ ಸಮಸ್ಯೆಗಳ ಪರಿಹಾರಕ್ಕಾಗಿ ಒಳನಾಡಿನ ಸಾರಿಗೆ ಮತ್ತು ಸಂಪರ್ಕ ಸಮಿತಿ ವಿವಿಧ ಸಾರಿಗೆ ವ್ಯವಸ್ಥೆಗಳ ಸಮನ್ವಯ

ಸಾಧ್ಯತೆ, ಸಾರಿಗೆ ಅಭಿವೃದ್ಧಿ ಮತ್ತು ಯೋಜನೆ ಮುಂತಾದ ವಿಷಯಗಳಲ್ಲಿ ಅಧ್ಯಯನ ನಡೆಸಿದೆ. ರೈಲ್ವೆ ಮತ್ತು ರಸ್ತೆ ಸಾರಿಗೆ ಸಂಪರ್ಕ ಮುಂತಾದವುಗಳ ಅಭಿವೃದ್ಧಿಗಾಗಿ ಅನೇಕ ಅಧ್ಯಯನತಂಡಗಳೂ ಸಮೀಕ್ಷೆಗಳೂ ನಡೆದಿವೆ. ಆಯೋಗದ ಗಮನ ಸೆಳೆದಿರುವ ಇನ್ನೊಂದು ಮುಖ್ಯ ವಿಚಾರವೆಂದರೆ ಪ್ರವಾಸೋದ್ಯಮ.

ಪ್ರವಾಹ ಹತೋಟಿ, ಜಲಸಂಪತ್ತು ಮತ್ತು ಕೃಷಿ ಅಭಿವೃದ್ಧಿ : ಪ್ರವಾಹ ಹತೋಟಿ ಮತ್ತು ಜಲಸಂಪದಭಿವೃದ್ಧಿ ಬ್ಯೂರೋವನ್ನು 1949ರಲ್ಲಿ ಸ್ಥಾಪಿಸಲಾಯಿತು. ಈ ಬ್ಯೂರೋ ಸದಸ್ಯರಾಷ್ಟ್ರಗಳಲ್ಲಿನ ಜಲಸಂಪದಭಿವೃದ್ಧಿಯನ್ನು ಕುರಿತ ವಿಷಯಗಳ ಅಧ್ಯಯನ, ಪ್ರಕಟನೆ, ಸೂಕ್ತನೆರವು ನೀಡುತ್ತಿರುವುದಲ್ಲದೆ ಕೃಷಿ ಅಭಿವೃದ್ಧಿಗಾಗಿ ಈ ಆಯೋಗ ಆಹಾರ ಮತ್ತು ಕೃಷಿ ಸಂಸ್ಥೆಯೊಂದಿಗೆ ಸಹವರ್ತಿಸುತ್ತಿದೆ. (ಸಿ.ಕೆ.ಆರ್.)

**ಏಷ್ಯ ಮೈನರ್ :** ಏಷ್ಯದ ಪಶ್ಚಿಮದ ತುದಿಯಲ್ಲಿ, ಆಧುನಿಕ ತುರ್ಕಿಯ ಏಷ್ಯನ್ ಭಾಗವನ್ನೊಳಗೊಂಡ ಪರ್ಯಾಯದ್ವೀಪ. ವಿಸ್ತೀರ್ಣ 2,87,000 ಚ. ಮೈ. ಆಂಟಿ–ಟಾರಸ್ ಪರ್ವತಶ್ರೇಣಿಯೇ ಇದರ ಪೂರ್ವದ ಗಡಿ. ಪಶ್ಚಿಮ ಉತ್ತರ ದಕ್ಷಿಣಗಳಲ್ಲಿ ಕ್ರಮವಾಗಿ ಏಜಿಯನ್, ಕಪ್ಪು ಮತ್ತು ಮೆಡಿಟರೇನಿಯನ್ ಸಮುದ್ರಗಳಿವೆ. ಏಜಿಯನ್ ಸಮುದ್ರಕ್ಕೂ ಕಪ್ಪು ಸಮುದ್ರಕ್ಕೂ ನಡುವೆ ಕೊಂಡಿಯಂತಿರುವ ಮಾರ್ಮರ ಸಮುದ್ರದಿಂದ ಐರೋಪ್ಯ ತುರ್ಕಿಯೂ ಏಷ್ಯನ್ ತುರ್ಕಿಯೂ ಪ್ರತ್ಯೇಕಗೊಂಡಿವೆ.

ಏಷ್ಯ ಮೈನರ್ ಎಂಬ ಹೆಸರನ್ನು ಈಗಿನ ಅರ್ಥದಲ್ಲಿ ಮೊಟ್ಟಮೊದಲಿಗೆ ಬಳಸಲಾದದ್ದು 5ನೆಯ ಶತಮಾನದಲ್ಲಿ—ಒರೋಸ್ಸಿಯಸ್ ಬರೆದ ಹಿಸ್ಟೋರಿಯ ಅಡ್ವರ್ಸಸ್ ಪೆಗಾನೋಸ್ ಕೃತಿಯಲ್ಲಿ. ರೋಮಿನ ಏಷ್ಯನ್ ಪ್ರಾಂತ್ಯವನ್ನು ಸೂಚಿಸಲಿಕ್ಕಾಗಿ ಅನಟೋಲಿಯ ಅಥವಾ ಲೆವಾಂಟ್ ಎಂಬುದಕ್ಕೆ ಏಷ್ಯ ಮೈನರ್ ಪರ್ಯಾಯಶಬ್ದವಾಗಿತ್ತು. ಅನಂತರ ಬೈಜಾಂಟೈನರಿಂದ ತುರ್ಕರು ಗೆದ್ದುಕೊಂಡ ಪ್ರದೇಶಕ್ಕೆ ಈ ಹೆಸರು ಬಂದದ್ದು 10ನೆಯ ಶತಮಾನದಲ್ಲಿ.

**ಭೂರಚನೆ, ಮೇಲ್ಮೈಲಕ್ಷಣ:** ಪೋರ್ಚುಗಲಿನಿಂದ ಮಲಯ ದ್ವೀಪಸ್ತೋಮದ ವರೆಗೆ ಅಕ್ಷಾಂಶರೇಖೆಗಳಂತೆ ಹಬ್ಬಿರುವ ಮಡಿಕೆ ಪರ್ವತಗಳ ಪಟ್ಟಿಯಲ್ಲಿ ಏಷ್ಯ ಮೈನರ್ ಪ್ರದೇಶವೂ ಒಂದು ಭಾಗ. ಪರ್ವತರಚನೆಯ ಕಾರ್ಯ ಇಲ್ಲಿ ಇತ್ತೀಚೆಗೆ ತಾನೇ ಮುಗಿದಿದೆ. ಆದರೆ ಟ್ರೋಆಡ್‌ನಲ್ಲಿ ಪದೇ ಪದೇ ಸಂಭವಿಸುವ ಭೂಕಂಪಗಳೂ ಕೇರಿಯದ ಕೆಲವು ಭಾಗಗಳಲ್ಲಿ ಹೊಮ್ಮುವ ಬಿಸಿ ಬುಗ್ಗೆಗಳೂ ವಿಷಾನಿಲಗಳೂ ಯಾನಾರ್ ಟಾಸಿನ ಸತತಜ್ವಾಲೆಯೂ ಇದಕ್ಕೆ ಸಾಕ್ಷಿ. ಏಷ್ಯ ಮೈನರಿನಲ್ಲಿ ಜೀವಂತ ಅಗ್ನಿಪರ್ವತಗಳು ಯಾವುವೂ ಈಗ ಇಲ್ಲ.

ಏಷ್ಯ ಮೈನರಿನ ನಡುವಣ ಪ್ರಸ್ಥಭೂಮಿ ಪಶ್ಚಿಮದಲ್ಲಿ ಸಮುದ್ರಮಟ್ಟದಿಂದ 2,500 ಅಡಿ ಎತ್ತರವಾಗಿದ್ದು ಪೂರ್ವದ ತುದಿಯಲ್ಲಿ 4,500 ಅಡಿಗಳಿಗೆ ಏರುತ್ತದೆ. ಇದಕ್ಕೆ ಆಗ್ನೇಯದಲ್ಲೂ ದಕ್ಷಿಣದಲ್ಲೂ ಟಾರಸ್ ಪರ್ವತಶ್ರೇಣಿಗಳು ಹಬ್ಬಿವೆ. ಇವು ಈಶಾನ್ಯಾಭಿಮುಖವಾಗಿ ಹಬ್ಬಿ ಅಮಾನಸ್ ಶ್ರೇಣಿಗಳೊಂದಿಗೆ ಕೂಡಿಕೊಂಡು ಮುಂದುವರಿದು ಆಂಟಿ–ಟಾರಸ್ ಎನಿಸಿಕೊಳ್ಳುತ್ತವೆ. ಸಿಲಿಸಿಯ ಕರಾವಳಿ ಪ್ರದೇಶವಿರುವುದು ಟಾರಸ್ ಮತ್ತು ಅಮಾನಸ್ ಮಡಿಕೆಗಳಿಂದ ಸಂಭವಿಸಿರುವ ಕೋನ ಪ್ರದೇಶದಲ್ಲಿ.

ಏಷ್ಯ ಮೈನರಿನ ಉತ್ತರದಲ್ಲಿರುವವು ಪಾಂಟಿಕ್ ಪರ್ವತಶ್ರೇಣಿಗಳು. ಇವು ದಕ್ಷಿಣ ಮತ್ತು ಪೂರ್ವದ ಶ್ರೇಣಿಗಳಿಗಿಂತ ತಗ್ಗು. ಇವನ್ನು ಅನೇಕ ನದಿಗಳು ವಿಭಾಗಿಸುತ್ತವೆ.

ಪರ್ಯಾಯದ್ವೀಪದ ಪಶ್ಚಿಮ ಪರ್ವತಗಳು ಪೂರ್ವ-ಪಶ್ಚಿಮವಾಗಿ ಹಬ್ಬಿರುವ ಮಡಿಕೆ ಶ್ರೇಣಿಗಳು. ಕರಾವಳಿಯಿಂದ ಪ್ರಸ್ಥಭೂಮಿ ಪ್ರದೇಶಕ್ಕೆ ಹಾದುಹೋಗಲು ಅನುಕೂಲವಾದ ವಿಶಾಲ ಕಣಿವೆಗಳು ಇಲ್ಲಿ ಅನೇಕ ಉಂಟು. ಇಲ್ಲಿನ ಪರ್ವತ ಶ್ರೇಣಿಗಳು ಪಶ್ಚಿಮದ ಸಮುದ್ರದೊಳಕ್ಕೆ ಇಳಿದಿರುವುದರಿಂದ ಸಮುದ್ರತೀರ ಅಂಕುಡೊಂಕು. ತೀರದ ದ್ವೀಪಗಳಿಗೂ ಕರಾವಳಿಗೂ ನಡುವಣ ಸಮುದ್ರದ ಆಳ ಹೆಚ್ಚು. ಈ ಕಾರಣಗಳಿಂದಾಗಿ ಇಲ್ಲಿ ನೈಸರ್ಗಿಕ ಬಂದರುಗಳು ಅನೇಕ. ಮಾರ್ಮರ ಸಮುದ್ರದೊಳಕ್ಕೂ ಲಂಬಕೋನೀಯವಾಗಿ ಪರ್ವತಶ್ರೇಣಿಗಳು ಇಳಿದಿವೆ.

ಏಷ್ಯ ಮೈನರಿನ ನದಿಗಳು ವರ್ಷವೆಲ್ಲ ತುಂಬಿ ಹರಿಯುವುದಿಲ್ಲ. ಇವುಗಳ ಕೆಳಭಾಗದಲ್ಲಿ ಮರಳು ಹೆಚ್ಚು. ಇವುಗಳಿಂದಾಗಿ ಈ ಪ್ರದೇಶದ ಕರಾವಳಿಯ ರೇಖೆಯೇ ಹಿಂದಿನ ಕಾಲಕ್ಕೂ ಈಗ್ಗೂ ಬಹಳ ವ್ಯತ್ಯಾಸಗೊಂಡಿದೆ. ಏಷ್ಯ ಮೈನರಿನ ಮುಖ್ಯ ನದಿಗಳಿವು : ಪಶ್ಚಿಮದಲ್ಲಿ ಗೆಡಿಜ್, ಬುಯುಕ್ ಮೆಂಡೆರಿಸ್ ಮತ್ತು ಕೋಕ; ಉತ್ತರದಲ್ಲಿ ಸಕರ್ಯ, ಕಿಜಿಲ್ ಇರ್ಮಕ್ ಮತ್ತು ಯೆಸಿಲ್ ಇರ್ಮಕ್; ದಕ್ಷಿಣದಲ್ಲಿ ಸೇಹಾನ್ ಮತ್ತು ಕೇಹಾನ್. ಪ್ರಸ್ಥಭೂಮಿಯ ನಟ್ಟನಡುವೆ ಇರುವ ಟಜ಼್ ಗೋಲು ಅದರ ಹೆಸರೇ ಸೂಚಿಸುವಂತೆ ಲವಣಸರೋವರ.

**ವಾಯುಗುಣ :** ಪರ್ಯಾಯ ದ್ವೀಪವನ್ನು ಸುತ್ತುವರಿದ ಪರ್ವತಶ್ರೇಣಿಗಳಿಂದಾಗಿ ನಡುವಣ ಪ್ರಸ್ಥಭೂಮಿಯಲ್ಲಿನ ವಾಯುಗುಣ ವೈಪರೀತ್ಯಗಳಿಂದ ಕೂಡಿದ್ದಾಗಿದೆ. ಅಲ್ಲಿ ವರ್ಷಕ್ಕೆ ಮೂರು ನಾಲ್ಕು ತಿಂಗಳು ಹಿಮದ ಹೊದಿಕೆ; ನಡುಬೇಸಗೆಯಲ್ಲಿ ಬಿಸಿಲು ಧಗೆ ಅಸಾಧ್ಯ. ಎಲ್ಲ ಋತುಗಳಲ್ಲೂ ಗಾಳಿ ಮೊರೆಯುತ್ತ



ನವಶಿಲಾಯುಗದ ಆಯುಧಗಳು (ಮೆರ್ಸಿನ್)

ಬೀಸುತ್ತದೆ. ಮಳೆಯಾಗುವುದು ವಸಂತ ಋತುವಿನಲ್ಲಿ ಮತ್ತು ಬೇಸಗೆಯ ಆದಿಯಲ್ಲಿ. ಚಳಿಗಾಲದಲ್ಲಿ ಪ್ರಸ್ಥಭೂಮಿಯ ನಡುಭಾಗದಿಂದ ದಕ್ಷಿಣಕ್ಕೆ ಬೀಸುವ ಗಾಳಿ ಸಮುದ್ರತೀರಕ್ಕೆ ಇಳಿಯುವಾಗ ತನ್ನ ಶೈತ್ಯವನ್ನು ತ್ಯಜಿಸುತ್ತದೆ. ಅದರೂ ಒಮ್ಮೊಮ್ಮೆ ಥಂಡಿ ಅಧಿಕವಾಗಿ ಅಲ್ಲಿನ ಕಿತ್ತಳೆ ಫಸಲೆಲ್ಲ ನಾಶವಾಗುವುದುಂಟು.

ಚಳಿಗಾಲದಲ್ಲಿ ಪೂರ್ವಾಭಿಮುಖವಾಗಿ ಬೀಸುವ ಚಕ್ರಮಾರುತಗಳಿಂದ ತೀರಪ್ರದೇಶಗಳಲ್ಲಿ ಮಳೆಯಾಗುತ್ತದೆ.

**ಸಸ್ಯಪ್ರಾಣಿವರ್ಗ :** ಏಷ್ಯ ಮೈನರಿನ ಸಸ್ಯ ವೈವಿಧ್ಯಮಯ. ಆದರೆ ಮಧ್ಯ ಮತ್ತು ಪೂರ್ವ ಪ್ರದೇಶಗಳಲ್ಲಿರುವುದೆಷ್ಟೋ ಇನ್ನೂ ತಿಳಿದು ಬಂದಿಲ್ಲ. ಪೂರ್ವದಿಂದ ಪಶ್ಚಿಮಕ್ಕೂ ಪಶ್ಚಿಮದಿಂದ ಪೂರ್ವಕ್ಕೂ—ಏಷ್ಯ ಯೂರೋಪುಗಳ ನಡುವೆ—ಸಸ್ಯಗಳು ವಲಸೆ ಹೋಗುವ ಮುಖ್ಯ ಮಾರ್ಗ ಏಷ್ಯ ಮೈನರ್. ನಿತ್ಯಹಸುರಿನ ಸಸ್ಯಗಳಿಂದ ಮರುಭೂಮಿಯ ಕುರುಚಲ ವರೆಗೆ ನಾನಾ ಬಗೆಯ ಸಸ್ಯಗಳನ್ನು ಇಲ್ಲಿ ಕ್ರಮವಾಗಿ ಗುರುತಿಸಬಹುದು. ಪ್ರಾಣಿಗಳಲ್ಲೂ ಇದೇ ಬಗೆಯ ವೈವಿಧ್ಯವುಂಟು. *

**ಪ್ರಾಗಿತಿಹಾಸ :** ಏಷ್ಯ ಮೈನರಿನ ಪ್ರಾಗಿತಿಹಾಸವನ್ನು ಆಗಿನ ಕಾಲದ ನಾನಾ ಅವಶೇಷಗಳು, ಬಂಡೆಗೆತ್ತನೆಗಳು ಮುಂತಾದ ಮಾಹಿತಿಗಳಿಂದ ರಚಿಸಿಕೊಳ್ಳಬೇಕಾಗಿದೆ. ಪೂರ್ವಶಿಲಾಯುಗದ ಅಬ್ಬೆವಿಲ್ಲಿಯನ್ ಹಂತಕ್ಕೆ ಸೇರುವ ಕೈಗೊಡಲಿಗಳು ಅಂಕಾರ, ಇಸ್ತಾನ್‌ಬುಲ್ ಪ್ರದೇಶಗಳಲ್ಲಿ ದೊರಕಿದ್ದರೂ ಅವುಗಳ ಕಾಲ ನಿರ್ಣಯಿಸಲು ಅವಶ್ಯವಾದ ಮಾಹಿತಿಗಳು ದೊರಕಿಲ್ಲ. ಅನಂತರದ ಅಷ್ಯೂಲಿಯನ್ ಹಂತದ ಕೈಗೊಡಲಿಗಳು ಸಮ್‌ಸುನ್ ಬಳಿಯ ತೆಕ್ಕೆಕೋಯ್ ಬಳಿ ದೊರಕಿವೆ. 1937ರಲ್ಲಿ ನಡೆದ ಉತ್ಖನನಗಳಲ್ಲಿ ಅಷ್ಯೂಲಿಯನ್ ಹಂತದ ಅಂತ್ಯಕಾಲಕ್ಕೆ ಸೇರುವ ಮಿಕಾಕ್ವಿಯನ್ ರೀತಿಯ ಕೈಗೊಡಲಿಗಳು ಅಂಕಾರ ಬಳಿ ಎಟಿಯೋ ಕುಸು ಎಂಬಲ್ಲಿನ ನದೀ ಮಟ್ಟಗಳಿಂದ ದೊರಕಿವೆ. ಇವು ಮಧ್ಯ ಪ್ಲಿಸ್ಟೋಸೀನ್ ಯುಗದ ಕೊನೆಗಾಲಕ್ಕೆ ಸೇರಿದವು. ಸಮಕಾಲೀನ ಚಕ್ಕೆ ಕಲ್ಲಿನಾಯುಧಗಳು ಮೌಸ್ಟೀರಿಯನ್ ಮತ್ತು ಲೆವಾಲ್ವಾಸಿಯನ್ ಸಂಸ್ಕೃತಿಗಳಿಗೆ ಸೇರಿದವು. ಇವು ಆ ಸುತ್ತಿನ ಇತರ ನದೀಮಟ್ಟಗಳಿಂದ ದೊರಕಿವೆ. ಇಂಥ ಆಯುಧಗಳು ಏಷ್ಯ ಮೈನರಿನ ಮೈದಾನ

ಪ್ರದೇಶದ ದಕ್ಷಿಣ ಭಾಗದ ಅನೇಕ ನೆಲೆಗಳಲ್ಲೂ ಸಿಕ್ಕಿವೆಯಾದ್ದರಿಂದ ಈ ಸಂಸ್ಕೃತಿ ಅಲ್ಲೆಲ್ಲ ವಿಸ್ತಾರವಾಗಿ ಹರಡಿತೆನ್ನಬಹುದು. ಮೌಸ್ಟೀರಿಯನ್ ರೀತಿಯ ಆಯುಧಗಳು ಮಲಾಟ್ಯದ ಬಳಿಯ ಅಡಿಯಮನ್, ಸಮ್‌ಸುನ್ ಬಳಿಯ ತೆಕ್ಕೆಕೋಯ್ ಮತ್ತು ಅಂಟಾಲ್ಯದ ಬಳಿಯ ಯಾಗ್ಯಕೋಯದ ನೆರೆಯಲ್ಲಿರುವ ಕರಾಯಿನ್ ಗುಹೆ—ಇಲ್ಲೆಲ್ಲ ಕಂಡುಬಂದಿವೆ. ಪೂರ್ವಶಿಲಾಯುಗದ ಅಂತ್ಯಕಾಲದ ಅರಿಗ್ನೇಸಿಯನ್ ಸಂಸ್ಕೃತಿಯ ಅವಶೇಷಗಳು ಇಸ್ಪಾರ್ಟ ಪ್ರಾಂತ್ಯದ ಬೊಜನೊನು ಗುಹೆಯಲ್ಲೂ ಅಡಿಯಮನ ಬಳಿಯೂ ದೊರಕಿವೆ. ಅಡಿಯಮನ್ ಬಳಿಯ ಕಲ್ಲುಬಂಡೆಗಳ ಮೇಲೆ ಸಮಕಾಲೀನವಾದ ಕಾಡುಮೇಕೆಗಳ ರೇಖಾಚಿತ್ರಗಳ ಕೆತ್ತನೆ ಕಂಡುಬಂದಿದೆ. ಆ ಕಾಲದ ಇತರ ಸಂಸ್ಕೃತಿಗಳ ಅವಶೇಷಗಳು ಈ ಪ್ರದೇಶದಲ್ಲಿ ಇನ್ನೂ ಕಂಡುಬಂದಿಲ್ಲ.

ಮಧ್ಯಶಿಲಾಯುಗಕ್ಕೆ ಸೇರುವ ಸೂಕ್ಷ್ಮ ಶಿಲಾಯುಧ ಸಂಸ್ಕೃತಿಯ ಅವಶೇಷಗಳು ಸಿವಾಸ್ ಬಳಿ ಹಫೀಕ್ ಸರೋವರದ ತೀರದಲ್ಲೂ ಇಸ್ಪಾರ್ಟ ಬಳಿಯ ಬಲಾಡಿಜ್‌ನಲ್ಲೂ ಸಮ್‌ಸುನ್ ಬಳಿಯಿರುವ ಹಲವಾರು ಗುಹೆಗಳು ಮತ್ತಿತರ ನೆಲೆಗಳಲ್ಲೂ ದೊರಕಿವೆ. ಮೊದಲು ಹೇಳಿದ ನೆಲೆಯಲ್ಲಿ ಮರದ ಉಪಕರಣಗಳನ್ನೂ ಬಳಸುತ್ತಿದ್ದುದಾಗಿ ತಿಳಿದುಬಂದಿದೆ. ಈ ಸಂಸ್ಕೃತಿಕಾಲದ ಅಂತ್ಯಭಾಗಕ್ಕೆ ನಿರ್ದೇಶಿಸಬಹುದಾದ ಅಂಟಾಲ್ಯ ಬಳಿಯ ಬೆಲ್‌ಡಿಬಿ ಗುಹಾಮುಖ ನೆಲೆಯಲ್ಲಿ ಕ್ರಮೇಣ ನವಶಿಲಾಯುಗ ಸಂಸ್ಕೃತಿಯತ್ತ ಆಗುತ್ತಿದ್ದ ಪರಿವರ್ತನೆಯ ಸೂಚನೆಗಳು ಕಂಡುಬರುತ್ತವೆ. ಅಲ್ಲಿನ ಶಿಲೆಗಳ ಮೇಲೆ ಕಂಡುಬರುವ ವರ್ಣಚಿತ್ರಗಳು ಗಮನಾರ್ಹ.

ನವಶಿಲಾಯುಗ ಸಂಸ್ಕೃತಿ ಏಷ್ಯ ಮೈನರಿನಲ್ಲಿ ವಿಶೇಷವಾಗಿ ಹಬ್ಬಿದಂತೆ ಕಂಡುಬರುವುದಿಲ್ಲ. ಮೈದಾನ ಪ್ರದೇಶದಲ್ಲಿ ಲವಣ ಸರೋವರದ ಸುತ್ತಮುತ್ತ ಕೆಲವು ನವಶಿಲಾಯುಗ ಸಂಸ್ಕೃತಿ ರೀತಿಯ ಕಲ್ಲಿನಾಯುಧಗಳು ದೊರಕಿದ್ದರೂ ಅಂಥ ಅವಶೇಷಗಳು ದಕ್ಷಿಣಕ್ಕೆ 300 ಮೈಲಿ ದೂರದ ಮೆರ್ಸಿನ್ ಮತ್ತು ಸಕ್‌ಜಗೋಜು ನೆಲೆಗಳ ವರೆಗೂ ಕಂಡುಬಂದಿಲ್ಲ. ಆದ್ದರಿಂದ ಮೈದಾನ ಪ್ರದೇಶದ ಈ ಅವಶೇಷಗಳು ಲವಣಶೋಧನೆಗಾಗಿ ಅಲೆಯುತ್ತಿದ್ದ ಜನರು ತಂದವುಗಳಾಗಿರಬೇಕೆಂದೂ ಆ ಪ್ರದೇಶದಲ್ಲಿ ನವಶಿಲಾಯುಗೀಣ ಜನವಸತಿಯಿರಲಿಲ್ಲವೆಂದೂ ಅಭಿಪ್ರಾಯಪಡಲಾಗಿದೆ. ಈ ಸಂಸ್ಕೃತಿ ಬಹುಶಃ ದಕ್ಷಿಣದ ಪ್ರಭಾವದಿಂದ ಇಲ್ಲಿ ಪ್ರವೇಶಿಸಿ, ಕೆಲವಾರು ಶತಮಾನಗಳ ಕಾಲ ರೂಢಿಯಲ್ಲಿದ್ದು ಕ್ರಮೇಣ ತಾಮ್ರ-ಶಿಲಾಯುಗೀಣ ಸಂಸ್ಕೃತಿಗೆ ದಾರಿಮಾಡಿಕೊಟ್ಟಿತೆಂಬುದು ಮೆರ್ಸಿನ್ ಮತ್ತು ಸಕ್‌ಜಗೋಜು ನೆಲೆಗಳಿಂದ ದೊರೆತ ಮಾಹಿತಿಗಳಿಂದ ವ್ಯಕ್ತವಾಗುತ್ತದೆ.

ಕ್ರಿ.ಪೂ. 3500ಕ್ಕೂ ಮೊದಲ ಕಾಲಕ್ಕೆ ಸೇರುವ ತಾಮ್ರಶಿಲಾಯುಗೀಣ ಸಂಸ್ಕೃತಿಯ ಅವಶೇಷಗಳು ಮೈದಾನ ಪ್ರದೇಶದ ಹಲವಾರು ನೆಲೆಗಳಲ್ಲಿ ದೊರಕಿವೆ. ಆ ಕಾಲದ ಸಂಸ್ಕೃತಿಗಳು ಇಲ್ಲಿ ಕೇಂದ್ರೀಕೃತವಾಗಿದ್ದುವೆನ್ನಬಹುದು. ಮೆರ್ಸಿನ್ ನೆಲೆಯಲ್ಲಿ ಸಿಕ್ಕಿರುವ ಅವಶೇಷಗಳು ಕ್ರಿ.ಪೂ. 4000ಕ್ಕೂ ಹಿಂದಿನವು. ಕ್ರಮೇಣ ಅಲಿಷಾರ್-ಹುಯುಕ್, ಹಿಸಾರ್ಲಿಕ್, ಥೆರ್ಮಿ, ಯೊರ್ಟಾನ್ ಮುಂತಾದ ನೆಲೆಗಳಲ್ಲೂ ಇವು ಕಂಡುಬರುತ್ತವೆ. ಸಾಧಾರಣವಾಗಿ ಅಲಂಕಾರರಹಿತವಾದ ಕಪ್ಪುಬಣ್ಣದ ಮಡಕೆಗಳು



ಯಾಂಗ್ ಷಾವೊ ಸಂಸ್ಕೃತಿಯ ಮಾನವಾಕೃತಿಯ ಮಡಕೆಮುಚ್ಚಳಗಳು

ಉಪಯೋಗಿಸಲ್ಪಡುತ್ತಿದ್ದರೂ ಕೆಲವೇಳೆ ಮಡಕೆಗಳ ಮೇಲೆ ಹಲರೀತಿಯ ವಿನ್ಯಾಸಗಳನ್ನು ಕೊರೆದು ಆ ಗೆರೆಗಳಲ್ಲಿ ಬಿಳಿಯ ಸುಣ್ಣವನ್ನು ತುಂಬಿ, ವಿನ್ಯಾಸಗಳು ಕಾಣುವಂತೆ ಮಾಡಲಾಗುತ್ತಿತ್ತು; ಅಥವಾ ಬಿಳಿಯ ಬಣ್ಣದಿಂದ ವಿನ್ಯಾಸಗಳನ್ನು ಬಿಡಿಸಲಾಗುತ್ತಿತ್ತು. ಅಕ್ಕಪಕ್ಕದ ಸೈಲೀಷಿಯ, ಸಿರಿಯ, ಇರಾಕ್, ಇರಾನ್ ಮುಂತಾದ ಪ್ರದೇಶಗಳಲ್ಲಿ ವಿವಿಧ ರೀತಿಯ ವರ್ಣರಂಜಿತ ಮಡಕೆಗಳನ್ನು ಉಪಯೋಗಿಸುತ್ತಿದ್ದ ಸಂಸ್ಕೃತಿಗಳು ನೆಲೆಸಿದ್ದರೂ ಏಷ್ಯ ಮೈನರ್ ತನ್ನ ಪ್ರತ್ಯೇಕತೆಯನ್ನುಳಿಸಿಕೊಂಡಿತ್ತು. ಬಹುಶಃ ಈ ಸಂಸ್ಕೃತಿ ಉತ್ತರ ಇರಾಕ್ ಮತ್ತು ಸಿರಿಯಗಳ ನವಶಿಲಾಯುಗ ಸಂಸ್ಕೃತಿಗಳಿಂದ ಹುಟ್ಟಿರಬಹುದು. ದಕ್ಷಿಣದಂಚಿನ ಕೆಲನೆಲೆಗಳಲ್ಲಿ ಉತ್ತರ ಇರಾಕ್ ಸಿರಿಯ ಪ್ರದೇಶಗಳ ಸಂಸ್ಕೃತಿಗಳಿಗೆ ಸೇರಿದ ವರ್ಣಚಿತ್ರಿತ ಮಡಕೆಗಳು ಉಪಯೋಗದಲ್ಲಿದ್ದರೂ ಅವು ಆ ಸಂಸ್ಕೃತಿಯ ಮುಖ್ಯ ಲಕ್ಷಣವಾಗಿರಲಿಲ್ಲ.

ಅನಂತರದ ತಾಮ್ರಯುಗೀನ ಸಂಸ್ಕೃತಿ ಮೈದಾನದಲ್ಲೆಲ್ಲ ಪ್ರಬಲವಾಯಿತು. ಕ್ರಿ.ಪೂ. 2ನೆಯ ಸಹಸ್ರಮಾನದ ಅಂತ್ಯದ ವರೆಗೂ ಬಳಕೆಯಲ್ಲಿದ್ದ ಈ ಸಂಸ್ಕೃತಿಯ ಕಾಲದಲ್ಲಿ ಮೊತ್ತಮೊದಲಿಗೆ ಏಷ್ಯ ಮೈನರ್ ಸಾಂಸ್ಕೃತಿಕವಾಗಿ ನೆರೆಯ ಪ್ರಾಂತ್ಯಗಳ ಮೇಲೆ ಪ್ರಭಾವ ಬೀರಲಾರಂಭಿಸಿತು. ಮೊದಲ ತಾಮ್ರಶಿಲಾಯುಗೀಣ ಸಂಸ್ಕೃತಿಗಳಲ್ಲಿದ್ದ ರೀತಿಯ ಮಡಕೆಗಳ ಉಪಯೋಗ ಮುಂದುವರಿದರೂ ಅವುಗಳ ಆಕಾರ ಮತ್ತು ಗಾತ್ರಗಳಲ್ಲಿ ವೈವಿಧ್ಯ ಕಂಡುಬರುತ್ತದೆ. ಅಲಂಕಾರಿಕ ಹಿಡಿಗಳು ಮತ್ತು ನೀಳ ಹಿಡಿಗಳು ಇರುವ ತಟ್ಟೆಗಳು, ಎರಡು ಹಿಡಿಗಳ ಬಟ್ಟಲುಗಳು ಮೊದಲಾದವನ್ನು ಲೋಹದ ಪಾತ್ರೆಗಳ ಮಾದರಿಯಲ್ಲಿ ತಯಾರಿಸಿದಂತೆ ತೋರುತ್ತದೆ. ಈ ಸುಮಾರಿನಲ್ಲಿ ಖಿರ್ಬೆಟ್ ಕೆರಾಕ್ ಮೃಣ್ಪಾತ್ರೆಗಳೆಂದು ಹೆಸರಾಗಿರುವ ಹೊಸ ರೀತಿಯ ಮಡಕೆಗಳು ಬಳಕೆಗೆ ಬಂದುವು. ಕ್ರಿ. ಪೂ. 2600ರ ಸುಮಾರಿನಿಂದ ಪ್ಯಾಲೆಸ್ಟೈನಿನಲ್ಲಿ ಈ ಪಾತ್ರೆಗಳನ್ನು ಬಳಸಲಾಗುತ್ತಿತ್ತು. ಏಷ್ಯ ಮೈನರ್ ಪ್ರದೇಶ ಹೊರಗಿನವರ ದಾಳಿಗೆ ಗುರಿಯಾಯಿತೆಂಬುದನ್ನು ಇದು ಸೂಚಿಸುತ್ತದೆ. ದಕ್ಷಿಣ ರಷ್ಯದ ಕಾಕಸಸ್ ಪರ್ವತಪ್ರಾಂತ್ಯದಿಂದ ಹೊರಟು ದಾಳಿ ನಡೆಸಿದ ಹಿಟ್ಟೈಟ್ ಜನರೇ ಇದಕ್ಕೆ ಕಾರಣರೆಂದು ಲಿಯೋನಾರ್ಡ್ ವುಲ್ಲಿ ಅಭಿಪ್ರಾಯಪಟ್ಟಿದ್ದಾನೆ. ಇದೇ ಸುಮಾರಿನಲ್ಲಿ ಏಷ್ಯ ಮೈನರಿನ ತಾಮ್ರಯುಗದ ಕಪ್ಪುಬಣ್ಣದ ಮಡಕೆಗಳು ಗ್ರೀಸ್, ಸೈಲೀಷಿಯ, ಸಿರಿಯ ಮುಂತಾದ ಪ್ರದೇಶಗಳಲ್ಲಿ ಕಂಡುಬರುತ್ತವೆ. ತಾಮ್ರಯುಗದ ಸಂಸ್ಕೃತಿಯ ಉಳಿಕೆಗಳಲ್ಲಿ ಮುಖ್ಯವಾದವೆಂದರೆ ಅಲಾಕ ಹುಯುಕ್ ಬಳಿ ಕಂಡುಬಂದಿರುವ ರಾಜಮನೆತನದವರ ಅಥವಾ ಶ್ರೀಮಂತರ 13 ಸಮಾಧಿಗಳು. ಇವುಗಳನ್ನು ಕ್ರಿ.ಪೂ. 2500ರಿಂದ 2300ರ ಕಾಲಕ್ಕೆ ನಿರ್ದೇಶಿಸಲಾಗಿದೆ.

ಅನಂತರ ಕ್ರಿ.ಪೂ. 2100ರ ಸುಮಾರಿಗೆ ಕಂಚಿನ ಯುಗ ಪ್ರಾರಂಭವಾಯಿತು. ಸುಮಾರು ಎರಡೂವರೆ ಶತಮಾನಗಳ ಅವಧಿ ಕಂಚಿನ ಯುಗದ ಸಂಸ್ಕೃತಿಯ ಆದಿಭಾಗ. ಈ ಕಾಲದಲ್ಲಿ ಬರೆವಣಿಗೆ ಬಳಕೆಗೆ ಬಂತು. ಬರೆವಣಿಗೆಗಳುಳ್ಳ ಮಣ್ಣಿನ ಫಲಕಗಳು ಉತ್ಖನನಗಳಲ್ಲಿ ದೊರಕಿವೆ. ಏಷ್ಯ ಮೈನರಿನೊಡನೆ ವ್ಯಾಪಾರ ಸಂಬಂಧ ಸ್ಥಾಪಿಸಿದ ಅಸ್ಸಿರಿಯದ ವರ್ತಕರು ತಮ್ಮ ಲೆಕ್ಕಪತ್ರಗಳನ್ನು ಬರೆದಿಟ್ಟುಕೊಳ್ಳಲು ಉಪಯೋಗಿಸಿದ ಫಲಕಗಳೇ ಹೆಚ್ಚು ಸಂಖ್ಯೆಯಲ್ಲಿದ್ದರೂ, ಕೆಲ ಫಲಕಗಳು ನ್ಯಾಯಸಂಬಂಧವಾದ ವಿವರಣೆಗಳನ್ನೀಯುತ್ತವೆ. ಬರೆವಣಿಗೆಯ ಸಂಪ್ರದಾಯ ಅಸ್ಸಿರಿಯನರ ಕೊಡುಗೆ. ಇದು ಸಮಕಾಲೀನ ಮೆಸೊಪೊಟೇಮಿಯದ ಪ್ರಭಾವಕ್ಕೊಳಗಾಗಿತ್ತು. ಈ ಕಾಲದಲ್ಲಿ ವರ್ಣಚಿತ್ರಿತವಾದ ಹೊಸ ರೀತಿಯ ಮಡಕೆಗಳ ಸಂಸ್ಕೃತಿ ತಲೆದೋರಿತು. ಇದು ಕಪ್ಪಡೋಸಿಯನ್ ವರ್ಣಚಿತ್ರಿತ ಮಡಕೆಗಳ ಸಂಸ್ಕೃತಿಯೆಂದು ಹೆಸರಾಗಿದೆ. ಈ ಸಂಸ್ಕೃತಿಯ ಜನ ಪೂರ್ವ ದಿಕ್ಕಿನಿಂದ ಬಂದಂತೆ ಕಾಣುತ್ತದೆ. ಇದೇ ಸುಮಾರಿಗೆ ಹಿಟ್ಟೈಟ್ ಜನ ಹೆಚ್ಚು ಸಂಖ್ಯೆಯಲ್ಲಿ ಮೈದಾನ ಪ್ರದೇಶದಲ್ಲಿ ನೆಲೆಸಲಾರಂಭಿಸಿದುದರಿಂದ ಅವರೇ ಕಪ್ಪಡೋಸಿಯನ್ ಸಂಸ್ಕೃತಿಯನ್ನು ಏಷ್ಯ ಮೈನರಿಗೆ ತಂದಿರಬೇಕೆಂದು ಭಾವಿಸಲಾಗಿದೆ. ಆದರೆ ಕ್ರಿ.ಪೂ. 1850 ರಿಂದ—ಹಿಟ್ಟೈಟ್ ರಾಜ್ಯ ಸ್ಥಾಪನೆಯಾದ ಮೇಲೆ—ಕಪ್ಪಡೋಸಿಯನ್ ಮಡಕೆಗಳು ಕಣ್ಮರೆಯಾದುವು. ಆ ವೇಳೆಗೆ ಹಿಟ್ಟೈಟರು ಸ್ಥಳೀಯ ಸಂಸ್ಕೃತಿಯನ್ನು ಅಳವಡಿಸಿಕೊಂಡದ್ದೇ ಇದಕ್ಕೆ ಕಾರಣವಾಗಿರಬಹುದು.

ಹಿಟ್ಟೈಟ್ ರಾಜ್ಯಸ್ಥಾಪನೆಯೊಂದಿಗೆ ಚಾರಿತ್ರಿಕಯುಗ ಪ್ರಾರಂಭವಾಯಿತು. ಅಲ್ಲಿಂದ ಮುಂದಿನ ಕಾಲಕ್ಕೆ ಸಂಬಂಧಿಸಿದಂತೆ ದೊರಕಿರುವ ಅನೇಕ ಲಿಖಿತ ಆಧಾರಗಳಿಂದ ಏಷ್ಯ ಮೈನರಿನ ಮುಂದಿನ ಇತಿಹಾಸ ಸ್ಪಷ್ಟವಾಗುತ್ತದೆ. (ಬಿ.ಕೆ.ಜಿ.)

**ಇತಿಹಾಸ:** ಪ್ರಾಕ್ತನವಸ್ತುಸಂಶೋಧನೆಯಿಂದ ದೊರೆತಿರುವ ಮುದ್ರೆಗಳು, ಶಾಸನಗಳು, ಸ್ಮಾರಕಗಳು ಮತ್ತು ಮಣ್ಣಿನ ಮಡಕೆ ಕುಡಿಕೆಗಳು ಏಷ್ಯ ಮೈನರಿನ ಪ್ರಾಚೀನ ಇತಿಹಾಸವನ್ನು ನಿರೂಪಿಸುವ ವಸ್ತುಗಳಾಗಿವೆ. ಬಹಳ ಹಿಂದೆ, ಅಂದರೆ ಕ್ರಿ.ಪೂ. 3000 ದಿಂದ 1000 ವರ್ಷಗಳ ವರೆಗೆ, ಸೆಮೈಟರು, ಲಿಡಿಯನರು ಕೇರಿಯನರು, ಲಿಸಿಯನರು, ಗ್ರೀಕರು, ರೋಮನರು ಮತ್ತು ಫಿನಿಷಿಯನರು ತಮ್ಮ ಒಡೆತನವನ್ನಿಲ್ಲಿ ಸ್ಥಾಪಿಸಿದ್ದರು. ಪೂರ್ವಕ್ಕೂ ಪಶ್ಚಿಮಕ್ಕೂ ಮಧ್ಯೆ ಇರುವ ಸಮರ ಕ್ಷೇತ್ರವೆಂದೇ ಮೊದಲಿಂದಲೂ ಏಷ್ಯ ಮೈನರಿನ ಖ್ಯಾತಿ.

ಕ್ರಿ.ಪೂ. ಸುಮಾರು 1950ರಲ್ಲಿ ಏಷ್ಯ ಮೈನರಿನ ಪಶ್ಚಿಮಭಾಗ ಹಿಟ್ಟೈಟ್ ರಾಜರ ಸ್ವಾಧೀನದಲ್ಲಿತ್ತು. ಕ್ರಿ.ಪೂ. 1500ರ ವೇಳೆಗೆ ಇವರು ಹೇಟಿ ಅಥವಾ ಈಗಿನ ಬಾಘೋಸ್ ಕೀಯಲ್ಲಿ ಪ್ರಬಲ ಸಾಮ್ರಾಜ್ಯ ಸ್ಥಾಪಿಸಿ ಏಷ್ಯ ಮೈನರನ್ನು ಆಳಿದರಲ್ಲದೆ



ಅಲಾಕದ ಭೂಸಮಾಧಿಗಳಲ್ಲಿದ್ದ ಚಿನ್ನ, ಬೆಳ್ಳಿ ಮತ್ತು ತಾಮ್ರದ ವಸ್ತುಗಳು

ಸಿರಿಯ ಮತ್ತು ಮಿಟ್ಟಾನಿಗಳ ಮೇಲೆ ಪ್ರಭುತ್ವಕ್ಕಾಗಿ ಕ್ರಮವಾಗಿ ಈಜಿಪ್ಟಿನ ಅರಸರೊಡನೆಯೂ ಅಸ್ಸಿರಿಯನರೊಡನೆಯೂ ಕಾದಾಡಿದರು.

ಇಂಡೋ–ಯುರೋಪಿಯನ್ ಬುಡಕಟ್ಟಿಗೆ ಸೇರಿದ ಗ್ರೀಕರು ಹಿಟ್ಟೈಟ್ ಸಾಮ್ರಾಜ್ಯವನ್ನು ನಾಶಮಾಡಿ ಏಜಿಯನ್ ಸಮುದ್ರತೀರದ ಸುತ್ತ ಅನೇಕ ವಸಾಹತುಗಳನ್ನು ಸ್ಥಾಪಿಸಿದರು. ಕ್ರಮೇಣ ಫ್ರಿಜಿಯನ್ ರಾಜ್ಯದ ಉದಯವಾಯಿತು. ಇದರ ಕುರುಹುಗಳು ಶಿಲಾಸ್ಮಾರಕಗಳಲ್ಲೂ ಶಿಲಾಸಮಾಧಿಗಳಲ್ಲೂ ಕೋಟೆಗಳಲ್ಲೂ ನಗರಗಳಲ್ಲೂ ಗ್ರೀಕರ ದಂತಕಥೆಗಳಲ್ಲೂ ಉಳಿದಿವೆ. ಕ್ರಿ.ಪೂ. 8ನೆಯ ಶತಮಾನದಲ್ಲಿ ಆರ್ಮೀನಿಯದಿಂದ ಬಂದ ಸಿಮ್ಮರಿಯನರು ಫ್ರಿಜಿಯನ್ ರಾಜ್ಯವನ್ನಾಕ್ರಮಿಸಿದರು. ಅದರ ನಾಶವಾದ ಬಳಿಕ ಸಾರ್ಡಿಸ್ ಕೇಂದ್ರವಾಗುಳ್ಳ ಲಿಡಿಯ ರಾಜ್ಯ ಮೂಡಿತು. ಕೊನೆಯ ದೊರೆಯಾದ ಕ್ರೋಸಸ್ ಹೆಲಿಸ್ ವರೆಗೂ ರಾಜ್ಯ ವಿಸ್ತರಿಸಿದನಲ್ಲದೆ ತೀರಪ್ರದೇಶದಲ್ಲಿ ಅಭಿವೃದ್ಧಿ ಸ್ಥಿತಿಯಲ್ಲಿದ್ದ ಗ್ರೀಕರ ವಸಾಹತುಗಳನ್ನು ವಶಪಡಿಸಿಕೊಂಡ. ಕ್ರಿ.ಪೂ. 546ರಲ್ಲಿ ಪರ್ಷಿಯದ ದೊರೆ ಸೈರಸ್ ಲಿಡಿಯದ ಮೇಲೆ ದಂಡೆತ್ತಿಹೋಗಿ ಸಾರ್ಡಿಸನ್ನು ವಶಪಡಿಸಿಕೊಂಡ ಮೇಲೆ ಗ್ರೀಕರ ವಸಾಹತುಗಳು ಯಾವ ಪ್ರತಿರೋಧ ಶಕ್ತಿಯಿಲ್ಲದೆ ಸುಲಭವಾಗಿ ಪರ್ಷಿಯಕ್ಕೆ ಸೇರಿಹೋದುವು. ಪರ್ಷಿಯನರ ಆಳ್ವಿಕೆಯಲ್ಲಿ ಏಷ್ಯ ಮೈನರ್ ನಾಲ್ಕು ಸಂಸ್ಥಾನಗಳಾಗಿ ವಿಭಾಗವಾಯಿತಾದರೂ ಗ್ರೀಕರ ನಗರ ರಾಜ್ಯಗಳನ್ನಾಳುತ್ತಿದ್ದವರು ಗ್ರೀಕರೇ. 'ಸಾಮ್ರಾಜ್ಯ ಸ್ಥಾಪನೆಗಾಗಿ ಇತಿಹಾಸದಲ್ಲಿ ಗ್ರೀಕರಿಗೂ ಪರ್ಷಿಯನರಿಗೂ ನಡುವೆ ದೀರ್ಘ ಕಾಲದ ಹೋರಾಟ ನಡೆದು ಕೊನೆಗೆ ಗ್ರೀಕರ ಅಲೆಕ್ಸಾಂಡರ್ ಕ್ರಿ.ಪೂ. 334ರಲ್ಲಿ ಏಷ್ಯ ಮೈನರನ್ನು ಮುತ್ತಿ ಪರ್ಷಿಯನರನ್ನು ಸಂಪೂರ್ಣ ಸೋಲಿಸಿದ.

ಅಲೆಕ್ಸಾಂಡರನ ಮರಣಾನಂತರ ಇತರ ಅನೇಕ ರಾಜರು ಏಷ್ಯ ಮೈನರಿನ ವಿವಿಧ ಭಾಗಗಳಲ್ಲಿ ತಮ್ಮ ಪ್ರಭುತ್ವ ಸ್ಥಾಪಿಸಿದರು.

ಕ್ರಿ.ಪೂ. 190ರಲ್ಲಿ ಏಷ್ಯ ಮೈನರ್ ರೋಮನರ ಕೈಸೇರಿ ಪ್ರಭಾವಶಾಲಿಗಳಾದ ಅವರ ಆಳ್ವಿಕೆಯಲ್ಲಿ ಹೆಚ್ಚು ಅಭಿವೃದ್ಧಿಹೊಂದಿತು. ಕ್ರಿ.ಶ. 3ನೆಯ ಶತಮಾನದ ಕೊನೆಯಲ್ಲಿ ಆಳಿದ ರೋಮನ್ ಚಕ್ರವರ್ತಿ ಡಯೋಕ್ಲಿಷಿಯನ್ ಕಾಲದಲ್ಲಿ ಕ್ರೈಸ್ತ ಮತದ ಪ್ರಚಾರ ಬಿರುಸಾಗಿ ನಡೆದು ಅನೇಕ ಕ್ರೈಸ್ತ ಮಠಗಳು ಅಲ್ಲಲ್ಲಿ ಕಾಣಿಸಿಕೊಂಡುವು.

ಕ್ರಿ.ಶ. 395ರಲ್ಲಿ ರೋಮನ್ ಚಕ್ರಾಧಿಪತ್ಯ ಇಬ್ಭಾಗವಾದಾಗ ಏಷ್ಯ ಮೈನರ್ ಕಾನ್‌ಸ್ಟಾಂಟಿನೋಪಲ್ ರಾಜಧಾನಿಯಾಗುಳ್ಳ ಬೈಜಾಂಟೈನ್ ಚಕ್ರಾಧಿಪತ್ಯದಲ್ಲಿ ವಿಲೀನವಾಯಿತು. ಪ್ರಾಂತೀಯ ಭಾಷೆಗಳೂ ಹಳೆಯ ಮತಧರ್ಮಗಳೂ ಕ್ರಮೇಣ ಅದೃಶ್ಯವಾಗಿ ದೇಶವೆಲ್ಲ ಗ್ರೀಕ್ ಸಂಸ್ಕೃತಿಯ ಪೂರ್ಣ ಪ್ರಭಾವಕ್ಕೊಳಗಾಯಿತು. ಕ್ರಿ.ಶ. 6ನೆಯ ಶತಮಾನದ ಕೊನೆಯಲ್ಲಿ ಏಷ್ಯ ಮೈನರ್ ಸಂಪದ್ಭರಿತ ಪ್ರದೇಶವಾಗಿ ಅನೇಕ ಶತಮಾನಗಳ ಕಾಲ ಶಾಂತಿಯ ನೆಲೆವೀಡಾಗಿತ್ತು. ಕ್ರಿ. ಶ. 668ರಲ್ಲಿ ಅರಬರು ಏಷ್ಯ ಮೈನರನ್ನು ಪ್ರವೇಶಿಸಿ ಕಾನ್‌ಸ್ಟಾಂಟಿನೋಪಲನ್ನು ಮುತ್ತಿದರು. ಇಲ್ಲಿಂದ ಮೂರು ಶತಮಾನಗಳ ಪರ್ಯಂತರ ಯುಫ್ರೇಟೀಸ್ ಮತ್ತು ಸೈಲೀಷಿಯನ್ ದ್ವಾರಗಳಲ್ಲಿನ ಸೇತುವೆಗಳ ಒಡೆತನಕ್ಕಾಗಿ ಬಿಜಾಂಟಿನರಿಗೂ ಬಾಗ್ದಾದಿನ ಕಲೀಫರಿಗೂ ಪದೇ ಪದೇ ಯುದ್ಧಗಳು ಸಂಭವಿಸಿದುವು.

ಕ್ರಿ.ಶ. 11ನೆಯ ಶತಮಾನದಲ್ಲಿ ಸೆಲ್ಜುಕ್ ತುರ್ಕರು ಏಷ್ಯ ಮೈನರನ್ನು ನಾಶಗೊಳಿಸಿದ ಮೇಲೆ ಅನೇಕ ಅನಾಗರಿಕ ತುರ್ಕರ ಪಂಗಡಗಳು ಹುಟ್ಟಿಕೊಂಡುವು. ಹಾಗೆ ಹುಟ್ಟಿಕೊಂಡ ಪಂಗಡಗಳಲ್ಲಿ ಮಂಗೋಲ್ ಪಂಗಡವೂ ಒಂದು. ಮಂಗೋಲರ ರೀತಿ ವರ್ತನೆಗಳು ಇತಿಹಾಸದಲ್ಲೇ ಭಯಾನಕವಾದವು. ಇವರಲ್ಲಿ ಕುಂಟ ತೈಮೂರ್ ಒಬ್ಬ. ಮಂಗೋಲರ ದಾಳಿಯಿಂದ ಜನನಿಬಿಡ ಪ್ರದೇಶಗಳು ನಿರ್ಜನ ಪ್ರದೇಶಗಳಾದುವು. ಭೂಮಿ ಬಂಜರಾಯಿತು. ನಗರಗಳ ಲೂಟಿಯಾಯಿತು. ಐತಿಹಾಸಿಕ ಸ್ಮಾರಕಗಳ ಧ್ವಂಸವಾಯಿತು. ಸಮಸ್ತ ಕ್ರೈಸ್ತ ಪಂಗಡಗಳ ಸಂಹಾರವಾಯಿತು. ಈ ಮಹಾ ವಿಪತ್ಪರಂಪರೆಗಳಿಂದ ಏಷ್ಯ ಮೈನರ್ ಮತ್ತೆ ಚೇತರಿಸಿಕೊಳ್ಳಲಾಗಲಿಲ್ಲ.

ತೈಮೂರನ ಮರಣಾನಂತರ ಆಟೋಮನರು ಪ್ರಬಲರಾಗಿ ಏಷ್ಯ ಮೈನರಿನ ಮೇಲೆ ದೀರ್ಘಕಾಲ ತಮ್ಮ ಒಡೆತನ ಸ್ಥಾಪಿಸಿದರು. ಆದರೆ ಮೊದಲನೆಯ ಮಹಾಯುದ್ಧ ಮುಗಿದ ಬಳಿಕ ಅವರ ಆಳ್ವಿಕೆ ಕೊನೆಗಂಡಿತು. ಬ್ರಿಟಿಷ್ ಪಡೆಗಳು ಏಷ್ಯ ಮೈನರಿನ ಅರಬ್ಬೀ ಭಾಷೆಯನ್ನಾಡುವ ಜನರಿರುವ ಪ್ರದೇಶಗಳನ್ನೆಲ್ಲ ಸ್ವಾಧೀನಪಡಿಸಿಕೊಂಡುವು. 1919ರಲ್ಲಿ ಗ್ರೀಕ್ ಪಡೆ ಸ್ಮರ್ನವನ್ನು ಆಕ್ರಮಿಸಿತು.

ಕ್ರಿ.ಶ. 1920ರ ಆಗಸ್ಟ್ ತಿಂಗಳಲ್ಲಿ ತುರ್ಕರು ಸಹಿ ಮಾಡಿದ ಸೆವ್‌ರ್ ಒಪ್ಪಂದದ ಪ್ರಕಾರ ಏಷ್ಯ ಮೈನರ್ ಭೌಗೋಳಿಕವಾಗಿ ಕ್ಷಯಿಸತೊಡಗಿತು. ರಾಷ್ಟ್ರ ಸಂಘದ ಆಜ್ಞಾನುಸಾರ ಗ್ರೇಟ್ ಬ್ರಿಟನ್, ಪ್ಯಾಲೆಸ್ಟೈನ್ ಮತ್ತು ಇರಾಕುಗಳ ಮೇಲೂ ಫ್ರಾನ್ಸ್ ಸಿರಿಯಗಳ ಮೇಲೂ ಪ್ರಭಾವ ಸ್ಥಾಪಿಸಿತು. ಇದೇ ಸಂದರ್ಭದಲ್ಲಿ ಗ್ರೇಟ್ ಬ್ರಿಟನ್, ಫ್ರಾನ್ಸ್ ಮತ್ತು ಇಟಲಿ ರಾಷ್ಟ್ರಗಳು ಒಂದು ಕರಾರಿಗೆ ಸಹಿ ಹಾಕಿದವು. ಈ ಮೂರು ರಾಷ್ಟ್ರಗಳು ಏಷ್ಯ ಮೈನರಿನ ದಕ್ಷಿಣ ಮತ್ತು ಆಗ್ನೇಯ ಭಾಗಗಳನ್ನು ತಮ್ಮಲ್ಲೇ ಹಂಚಿಕೊಂಡುವು.

ಮುಸ್ತಾಫ ಕೆಮಲ್ ಪಾಷನ ಶ್ರೇಷ್ಠ ನಾಯಕತ್ವದಲ್ಲಿ ನಡೆದ ತುರ್ಕಿ ರಾಷ್ಟ್ರೀಯ ಚಳವಳಿ ಚರಿತ್ರಾರ್ಹವಾದದ್ದು. ತುರ್ಕರು ಬೇಗ ಸೈಲೇಷಿಯದಿಂದ ಫ್ರೆಂಚರನ್ನೂ ಸ್ಮರ್ನದಿಂದ ಗ್ರೀಕರನ್ನೂ ಹೊಡೆದೋಡಿಸಿದರು. 1923ರ ಜುಲೈ ತಿಂಗಳಲ್ಲಿ ಅಂಗೀಕೃತವಾದ ಲೋಸನ್ ಕೌಲಿನ ಪ್ರಕಾರ ತುರ್ಕಿ ಸ್ವತಂತ್ರ ರಾಷ್ಟ್ರವಾಯಿತು. ಕ್ರಮೇಣ ಅಲ್ಲಿನ ಸುಲ್ತಾನರ ಆಳ್ವಿಕೆ ಕೊನೆಗೊಂಡಿತು. ತುರ್ಕಿ ಗಣರಾಜ್ಯವಾಯಿತು. ಲೋಸನ್ ಕೌಲಿನ ಜೊತೆಯಲ್ಲೆ ಗ್ರೀಕರಿಗೂ ತುರ್ಕರಿಗೂ ಒಪ್ಪಂದ ನಡೆದು ಪಶ್ಚಿಮ ಏಷ್ಯ ಮೈನರಿನಲ್ಲಿ ವಾಸಿಸುತ್ತಿದ್ದ ಸುಮಾರು ಹತ್ತು ಲಕ್ಷ ಗ್ರೀಕರು ಸ್ವಸ್ಥಳಗಳಾದ ಗ್ರೀಸ್, ಮತ್ತು ಮ್ಯಾಸಿಡೋನಿಯ ದೇಶಗಳಿಗೆ ಸ್ಥಳಾಂತರಗೊಂಡರು. (ಸಿ.ಕೆ.ವೈ.ಡಿ.)

**ಏಷ್ಯಾಟಿಕ್ ಸೊಸೈಟಿ ಆಫ್ ಬಾಂಬೆ:** ಪಶ್ಚಿಮ ಭಾರತದಲ್ಲಿ ಪ್ರಾಚ್ಯಶಾಸ್ತ್ರ, ಭಾಷಾವಿಜ್ಞಾನ, ಭೂಗೋಳ, ಇತಿಹಾಸ ಹಾಗೂ ಭಾರತೀಯ ಸಾಹಿತ್ಯ ಸಂಶೋಧನೆಗಾಗಿ ರೂಪುಗೊಂಡಿರುವ ಸಂಸ್ಥೆ. ಬೊಂಬಾಯಿಯ ರಿಕಾರ್ಡರ್ ಹುದ್ದೆಯಲ್ಲಿದ್ದ ಸರ್ ಜೇಮ್ಸ್ ಮ್ಯಾಕಿಂಟಾಷನಿಂದ 1804ರ ನವೆಂಬರ್ 26ರಂದು ಲಿಟರರಿ ಸೊಸೈಟಿ ಆಫ್ ಬಾಂಬೆ ಎಂಬ ಹೆಸರಿನಿಂದ ಪ್ರಾರಂಭವಾಗಿ, 1829ರಲ್ಲಿ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಆಫ್ ಗ್ರೇಟ್ ಬ್ರಿಟನ್ ಅಂಡ್ ಐರ್ಲೆಂಡಿನ ಅಂಗಸಂಸ್ಥೆಯಾದ ಮೇಲೆ ಈ ಹೆಸರು ಪಡೆಯಿತು. ಲಿಟರರಿ ಸೊಸೈಟಿ ಎಂಬ ಹೆಸರು ತಳೆದಿದ್ದಾಗ ಸರ್ ಮ್ಯಾಕಿಂಟಾಷ್ ಈ ಸಂಸ್ಥೆಯ ಪ್ರಥಮ ಅಧ್ಯಕ್ಷನಾಗಿ ಆಯ್ಕೆಯಾದ. ಅಧ್ಯಕ್ಷ, ಕಾರ್ಯದರ್ಶಿ, ಕೋಶಾಧಿಕಾರಿ ಇವರುಗಳಿದ್ದ ಇದರ ಕಾರ್ಯಕಾರಿ ಸಮಿತಿ ಕ್ರಮೇಣ ಬೆಳೆದು, ನಾಲ್ಕು ಜನ ಉಪಾಧ್ಯಕ್ಷರನ್ನೂ ಒಬ್ಬ ಸಹಕಾರ್ಯದರ್ಶಿಯನ್ನೂ ಪಡೆಯಿತು. ಬೊಂಬಾಯಿ ಪ್ರಾಂತ್ಯದ ಗವರ್ನರನ್ನು ಇದರ ಪೋಷಕರ ಸ್ಥಾನಕ್ಕೆ ನಿವೇದಿಸಲಾಯಿತು.

ಸ್ಥಾಪನೆಯಾದ ಕೆಲವೇ ವರ್ಷಗಳಲ್ಲಿ ಇದು ಗಮನಾರ್ಹ ಪ್ರಗತಿ ಸಾಧಿಸಿತು. ಕ್ರಿ.ಶ. 1819ರಲ್ಲಿ ಇದರ ಟ್ರಾನ್ಸ್ಯಾಕ್ಷನ್ಸ್ ಆಫ್ ದಿ ಲಿಟರರಿ ಸೊಸೈಟಿ ಎಂಬ ಪತ್ರಿಕೆಯ ಮೂರು ಸಂಪುಟಗಳು ಪ್ರಕಟವಾದುವು. ಏಷ್ಯಾಟಿಕ್ ಸೊಸೈಟಿ ಆಫ್ ಗ್ರೇಟ್ ಬ್ರಿಟನ್ ಅಂಡ್ ಐರ್ಲೆಂಡ್ ಸಂಸ್ಥೆಯ ಸೂಚನೆಯ ಪ್ರಕಾರ ಅದರ ಅಂಗಸಂಸ್ಥೆಯಾದ ಮೇಲೆ ಈ ಎರಡು ಸಂಸ್ಥೆಗಳಲ್ಲಿ ಯಾವುದೇ ಒಂದರ ಸದಸ್ಯ

ರಾಗಿದ್ದವರಿಗೆ ಇನ್ನೊಂದರ ಸದಸ್ಯತ್ವವೂ ಲಭಿಸುವಂತಾಯಿತು. 1955ರಿಂದೀಚೆಗೆ ಈ ಸಂಸ್ಥೆ ಏಷ್ಯಾಟಿಕ್ ಸೊಸೈಟಿ ಆಫ್ ಬಾಂಬೆ ಎಂದು ವಿದಿತವಾಗಿದೆ.

1829ರಿಂದ 1841ರ ವರೆಗೆ ಈ ಸಂಸ್ಥೆಯ ಕಾರ್ಯಕಲಾಪಗಳು ಹಾಗೂ ಸಂಶೋಧನ ಪ್ರಬಂಧಗಳು ದಿ ರಾಯಲ್ ಏಷ್ಯಾಟಿಕ್ ಸೊಸೈಟಿಯ ಪತ್ರಿಕೆಯಲ್ಲಿ ಪ್ರಕಟವಾಗುತ್ತಿದ್ದು, 1841ರಲ್ಲಿ ಈ ಸಂಸ್ಥೆ ತನ್ನದೇ ಆದ ಜರ್ನಲ್ ಆಫ್ ದಿ ಬಾಂಬೆ ಬ್ರಾಂಚ್ ಆಫ್ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಎಂಬ ನಿಯತಕಾಲಿಕವನ್ನು ಪ್ರಕಟಿಸಲು ಆರಂಭಿಸಿತು. 1925ರ ವರೆಗೆ ಇದರ ಗೌರವ ಕಾರ್ಯದರ್ಶಿಯೇ ಸಂಪಾದಕನ ಕಾರ್ಯ ನಿರ್ವಹಿಸುತ್ತಿದ್ದ. ಈ ಪತ್ರಿಕೆಯ ಪ್ರಥಮ ಸಂಪಾದಕ ಓರ್ಲಿಬರ್ 1842ರಲ್ಲಿ ನಿವೃತ್ತನಾದ ಮೇಲೆ ಅವನ ಸ್ಥಾನಕ್ಕೆ ಬಂದ ಜಾನ್ ಗ್ರ್ಯಾಂಟ್ ಮಾಲ್‌ಕಮ್‌ಸನನ ನೇತೃತ್ವದಲ್ಲಿ ಈ ಸಂಸ್ಥೆ ಅನೇಕ ರೀತಿಗಳಲ್ಲಿ ಪ್ರಗತಿ ಸಾಧಿಸಿತು. ಈತನ ಕಾಲದಲ್ಲಿ ಸ್ಥಾಪಿತವಾದ ವಸ್ತುಸಂಗ್ರಹಾಲಯ ಕ್ರಮೇಣ ಬೆಳೆದು ಇಂದು ಪ್ರಿನ್ಸ್ ಆಫ್ ವೇಲ್ಸ್ ಮ್ಯೂಸಿಯಂ ಎಂಬ ಹೆಸರಿನಿಂದ ವಿಖ್ಯಾತವಾಗಿದೆ. 1925ರಿಂದ ಈ ಸಂಸ್ಥೆಯ ನಿಯತಕಾಲಿಕದ ಎರಡನೆಯ ಶ್ರೇಣಿ ಪ್ರಾರಂಭವಾಗಿದ್ದು ಆ ವರ್ಷದಿಂದ ಪತ್ರಿಕೆಯ ಸಂಪಾದಕತ್ವ ಗೌರವ ಕಾರ್ಯದರ್ಶಿಯಿಂದ ಬೇರೆಯಾಗಿ ಆ ಕೆಲಸಕ್ಕೆ ಗಣ್ಯ ವಿದ್ವಾಂಸರನ್ನು ನಿಯಮಿಸಲಾಗುತ್ತಿದೆ. ಇವರಲ್ಲಿ 1925ರಿಂದ 1942ರ ವರೆಗೆ (ಸಂಪುಟ 1–28) ಸಂಪಾದಕತ್ವ ವಹಿಸಿದ್ದ ವಿ. ಎಸ್. ಸುಕ್ಥಂಕರ್ ಮತ್ತು 1942ರಿಂದ ಈ ಕಾರ್ಯ ನಿರ್ವಹಿಸುತ್ತಿರುವ ಪಿ. ವಿ. ಕಾಣೆ ಈ ಪತ್ರಿಕೆಯ ಏಳಿಗೆಗೆ ಅವಿರತ ಶ್ರಮಿಸಿದ್ದಾರೆ. ಈ ಪತ್ರಿಕೆಯ 68ಕ್ಕೂ ಅಧಿಕ ಸಂಪುಟಗಳು ಬೆಳಕಿಗೆ ಬಂದಿವೆ.

ಕಳೆದ ಸುಮಾರು 166 ವರ್ಷಗಳಲ್ಲಿ ಈ ಸಂಸ್ಥೆ ವಿವಿಧ ರೀತಿಗಳಲ್ಲಿ ಸೇವೆ ಸಲ್ಲಿಸಿ ಭಾರತೀಯ ಸಂಶೋಧನ ಕ್ಷೇತ್ರದಲ್ಲಿ ತನ್ನದೇ ಆದ ಒಂದು ಸ್ಥಾನ ಗಳಿಸಿದೆ. 1831ರಲ್ಲಿ ಸ್ಥಾಪಿತವಾದ ಬಾಂಬೆ ಜಿಯೋಗ್ರಾಫಿಕ್ ಸೊಸೈಟಿ ಈ ಸಂಸ್ಥೆಯೊಂದಿಗೆ 1873ರಲ್ಲಿ ವಿಲೀನವಾಯಿತು. 1831ರಲ್ಲಿ ಆ ಸಂಸ್ಥೆಯ ಇಂಗ್ಲೆಂಡಿನ ಓರಿಯಂಟಲ್ ಟ್ರಾನ್ಸ್ಯಾಕ್ಷನ್ ಕಮಿಟಿಯವರಿಗೆ ಭಾರತೀಯ ಗ್ರಂಥಗಳ ಇಂಗ್ಲಿಷ್, ಫ್ರೆಂಚ್ ಹಾಗೂ ಲ್ಯಾಟಿನ್ ಭಾಷಾಂತರ ಒದಗಿಸುವುದರಲ್ಲಿ, 1837ರಲ್ಲಿ ಬ್ರಿಟನಿನ ರಾಯಲ್ ಏಷ್ಯಾಟಿಕ್ ಸೊಸೈಟಿಗೆ ಭಾರತದ ಭೂ ಉತ್ಪಾದನ ಶಕ್ತಿಯ ಬಗ್ಗೆ ಮಾಹಿತಿ ಕೊಡುವುದರಲ್ಲಿ, 1846ರಲ್ಲಿ ಬೊಂಬಾಯಿ ಸರ್ಕಾರಕ್ಕಾಗಿ ಅಂಕಿ–ಅಂಶ ಸಂಗ್ರಹಿಸುವುದರಲ್ಲಿ, 1847ರಲ್ಲಿ ಭಾರತ ಸರ್ಕಾರದ ಸೂಚನೆಯ ಮೇರೆಗೆ ಭಾರತದ ಮಧ್ಯ ಏಷ್ಯ ವಿಜ್ಞಾನ ಸಂಶೋಧನ ಸಮಿತಿಗೂ 1848ರಲ್ಲಿ ಭಾರತದ ಗುಹಾದೇವಾಲಯಗಳ ಸಂಬಂಧ ನಿಯಮಿತವಾದ ಸಮಿತಿಗೂ ದೇವಾಲಯ ಚಿತ್ರೀಕರಣ ಹಾಗೂ ಶಾಸನಸಂಗ್ರಹಣಗಳಲ್ಲಿ ಮಹತ್ತ್ವದ ಸಹಕಾರವನ್ನಿತ್ತಿತ್ತಲ್ಲದೆ, 1865ರಲ್ಲಿ ಡಾ. ಲಿವಿಂಗ್‌ಸ್ಟನನಿಗೆ ಆಫ್ರಿಕದ ಅನ್ವೇಷಣೆಗಾಗಿ ಹಣ ಸಂಗ್ರಹಿಸಿಕೊಟ್ಟಿತು. ಬೊಂಬಾಯಿಯ ಖಗೋಳವೀಕ್ಷಣಾಲಯ ಈ ಸಂಸ್ಥೆಯ ಸಹಾಯದಿಂದಲೇ ಸ್ಥಾಪಿತವಾಯಿತು.

ಈ ಸಂಸ್ಥೆಗೆ ಅನೇಕ ಮಹನೀಯರು ಸೇವೆ ಸಲ್ಲಿಸಿದ್ದಾರೆ. ಅವರಲ್ಲಿ ಸರ್ ಜೇಮ್ಸ್ ಮ್ಯಾಕಿಂಟಾಷ್, ಜೆ. ಕ್ಯಾಂಬೆಲ್, ಎಂ.ಎಸ್. ಎಲ್ಫಿನ್‌ಸ್ಟನ್, ಜಾನ್ ವಿಲ್ಸನ್, ಮಾಲ್‌ಕಮ್‌ಸನ್, ವ್ಯಾನ್ಸ್ ಕೆನಡಿ, ಎ. ಎ. ಮ್ಯಾಕ್‌ಡನೆಲ್, ಜಾರ್ಜ್ ಗ್ರಿಯರ್‌ಸನ್, ಆರ್. ಜಿ. ಭಂಡಾರ್‌ಕರ್, ಕೆ. ಟಿ. ತೆಲಂಗ್, ಭಾವು ದಾಜಿ, ವಿ. ಎಸ್. ಸುಕ್ಥಂಕರ್ ಹಾಗೂ ಪಿ. ವಿ. ಕಾಣೆ ಇವರು ಮುಖ್ಯರಾದ ಕೆಲವರು. (ಎಂ.ಎನ್‌.ಕೆ.)

**ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್:** ಏಷ್ಯದ ಇತಿಹಾಸ, ಪ್ರಾಚೀನ ಸಂಪ್ರದಾಯ, ಕಲೆ, ಶಾಸ್ತ್ರ, ಸಾಹಿತ್ಯಗಳೇ ಮುಂತಾದವುಗಳ ಕ್ರಮಬದ್ಧ ಅಧ್ಯಯನದಲ್ಲಿ ಆಸಕ್ತರಾದ ವಿದ್ವಾಂಸರನ್ನುಳ್ಳ ಸಭೆ. 1784ರ ಜನವರಿ 15ರಂದು, ಆಗ ಭಾರತದ ಗವರ್ನರ್–ಜನರಲ್ ಆಗಿದ್ದ ವಾರನ್ ಹೇಸ್ಟಿಂಗ್ಸನ ಬೆಂಬಲದಿಂದ, ಕಲ್ಕತ್ತೆಯ ವರಿಷ್ಠ ನ್ಯಾಯಾಧೀಶ ಸರ್ ವಿಲಿಯಂ ಜೋನ್ಸ್‌ನಿಂದ ಸ್ಥಾಪಿತವಾಯಿತು. ಆಗ ಇದರ ಹೆಸರು ಏಷ್ಯಾಟಿಕ್ ಸೊಸೈಟಿ ಎಂದು ಮಾತ್ರ ಇತ್ತು.

ಈ ಸಂಸ್ಥೆಯನ್ನು ಸ್ಥಾಪಿಸುವ ಉದ್ದೇಶದಿಂದ ಸರ್ ರಾಬರ್ಟ್ ಚೇಂಬರ್ಸನ ಅಧ್ಯಕ್ಷತೆಯಲ್ಲಿ ಕಲ್ಕತ್ತೆಯಲ್ಲಿ ಅಂದು ಸೇರಿದ್ದ ಸಭೆಯಲ್ಲಿ ಸರ್ ವಿಲಿಯಂ ಜೋನ್ಸ್ ಭಾಷಣ ಮಾಡುತ್ತ, ಪ್ರಕೃತಿಯ ಅಗಾಧ ಚೌಕಟ್ಟಿನಲ್ಲಿ ಏನೇನು ವಿರಳವಾಗಿದೆಯೋ ಅದನ್ನೆಲ್ಲ ಕುರಿತು ನೀವು ಅನ್ವೇಷಣೆ ನಡಸಬೇಕು. ಹೊಸ ಹೊಸ ಅವಲೋಕನ ಮತ್ತು ಪರಿಶೋಧನೆಗಳಿಂದ ಏಷ್ಯದ ಭೂವಿವರಣೆಯನ್ನು ತಿದ್ದಬೇಕು. ಒಮ್ಮೆ ಜನವಸತಿಯಿದ್ದು ಆಮೇಲೆ ಪರಿತ್ಯಕ್ತವಾದ ರಾಷ್ಟ್ರಗಳ ಇತಿಹಾಸವನ್ನೂ ಸಂಪ್ರದಾಯಗಳನ್ನೂ ಅನ್ವೇಷಿಸಬೇಕು. ಏಷ್ಯದ ಜನರ ನಾನಾ ಸರ್ಕಾರಪ್ರಕಾರಗಳನ್ನೂ ಸಾಮಾಜಿಕ ಧಾರ್ಮಿಕ ಸಂಸ್ಥೆಗಳನ್ನೂ ಬೆಳಕಿಗೆ ತರಬೇಕು. ಅಂಕಗಣಿತ, ಜ್ಯಾಮಿತಿ, ತ್ರಿಕೋಣಮಿತಿ, ಅಂಕಣಮಾನ, ಬಲವಿಜ್ಞಾನ, ದೃಗ್ವಿಜ್ಞಾನ, ಖಗೋಳಶಾಸ್ತ್ರ ಮತ್ತು ಸಾಮಾನ್ಯ ಭೌತಶಾಸ್ತ್ರಗಳ ಕ್ಷೇತ್ರಗಳಲ್ಲಿ ಅವರು ಮಾಡಿದ ಸುಧಾರಣೆಗಳನ್ನೂ ಅನುಸರಿಸಿದ ವಿಧಾನಗಳನ್ನೂ ಪರೀಕ್ಷಿಸಬೇಕು. ಅವರ ನೀತಿವ್ಯವಸ್ಥೆ, ವ್ಯಾಕರಣ, ಅಲಂಕಾರಶಾಸ್ತ್ರ ಮತ್ತು ಮೀಮಾಂಸಶಾಸ್ತ್ರಗಳನ್ನೂ ಶಸ್ತ್ರಚಿಕಿತ್ಸೆ ಮತ್ತು ವೈದ್ಯಗಳಲ್ಲಿ ಅವರ ಕೌಶಲವನ್ನೂ ಅಂಗರಚನಾಶಾಸ್ತ್ರದಲ್ಲೂ ರಸಾಯನಶಾಸ್ತ್ರದಲ್ಲೂ ಅವರು ಪಡೆದಿರಬಹುದಾದ ಪ್ರಗತಿಯನ್ನೂ ಪರೀಕ್ಷಿಸಬೇಕು. ಅವರ ವ್ಯವಸಾಯ, ಉತ್ಪಾದನೆ, ವ್ಯಾಪಾರಗಳನ್ನು ಕುರಿತು ಸಂಶೋಧನೆ ನಡೆಸಬೇಕಲ್ಲದೆ ಅವರ ಸಂಗೀತ, ಶಿಲ್ಪ, ಚಿತ್ರಕಲೆ, ಕಾವ್ಯಗಳನ್ನೂ ಅಧ್ಯಯನ ಮಾಡಬೇಕು. ಸಮಾಜಜೀವನದ ಸುಖಸಾಧನೆಗಳನ್ನೂ ನಯನಾಭೋಕಗಳನ್ನೂ ಸ್ವಲ್ಪವಾದರೂ ಒದಗಿಸುವ ಅಥವಾ ಅಧಿಕಗೊಳಿಸುವ ಸಣ್ಣಪುಟ್ಟ ಕಲೆಗಳನ್ನೂ ನೀವು ಕಡೆಗಣಿಸಬಾರದು' ಎಂದು ಹೇಳಿದರು. ಒಟ್ಟಿನಲ್ಲಿ ಏಷ್ಯದ ಲೌಕಿಕ ಪ್ರಾಕೃತಿಕ ಇತಿಹಾಸ, ಪ್ರಾಚೀನತೆ, ಕಲೆ, ವಿಜ್ಞಾನ ಮತ್ತು ಸಾಹಿತ್ಯಗಳನ್ನು ಕುರಿತ ಸಂಶೋಧನೆಯೂ ಜ್ಞಾನಪ್ರಸಾರವೂ ಏಷ್ಯಾಟಿಕ್ ಸೊಸೈಟಿಯ ಉದ್ದೇಶ.

ಕಳೆದ ಸುಮಾರು 187 ವರ್ಷಗಳಲ್ಲಿ ಈ ಸಂಸ್ಥೆ ತನ್ನ ಕಾರ್ಯನಿರ್ವಹಣೆಯಲ್ಲಿ ಬಹಳವಾಗಿ ಸಫಲವಾಗಿದೆ. ಇಂಥ ಸಂಸ್ಥೆಗಳಲ್ಲಿಯೇ ಪ್ರಪ್ರಥಮವಾದ ಈ ಸಂಸ್ಥೆ ಏಷ್ಯದಲ್ಲಿ, ಅದರಲ್ಲೂ ಭಾರತದಲ್ಲಿ, ಸಾಹಿತ್ಯ, ವಿಜ್ಞಾನ ಮತ್ತು ಪ್ರಾಚ್ಯಸಂಶೋಧನೆಗಳ ಕ್ಷೇತ್ರಗಳಲ್ಲಿ ಇಂದು ಕಂಡುಬಂದಿರುವ ಪ್ರಗತಿಗೆ ಒಂದಿಲ್ಲೊಂದು ರೀತಿಯಲ್ಲಿ ಕಾರಣವಾಗಿದೆ. ಪ್ರಾರಂಭದಲ್ಲಿ ಇದರ ಕಾರ್ಯಕಾರಿಸಮಿತಿ ಒಬ್ಬ ಅಧ್ಯಕ್ಷ, ನಾಲ್ಕು ಜನ (ತರುವಾಯ ಮೂರು ಜನ) ಉಪಾಧ್ಯಕ್ಷರು, ಒಬ್ಬ ಕಾರ್ಯದರ್ಶಿ ಹಾಗೂ ಒಬ್ಬ ಕೋಶಾಧಿಕಾರಿ—ಇವರನ್ನೊಳಗೊಂದಿದ್ದು, ಭಾರತದ ಗವರ್ನರ್–ಜನರಲ್ ಹಾಗೂ ಅವರ ಕಾರ್ಯಕಾರಿ ಮಂಡಲಿಯವರನ್ನು (ಲಾರ್ಡ್ ವಿಲಿಯಂ ಬೆಂಟಿಂಕನ ತರುವಾಯ ಗವರ್ನರ್–ಜನರಲನ್ನು ಮಾತ್ರ) ಪೋಷಕರನ್ನಾಗಿ ನಿವೇದಿಸುತ್ತ ಬಂದಿದ್ದು, ಇಂದು ಬಂಗಾಲದ ರಾಜ್ಯಪಾಲರು ಈ ಸ್ಥಾನವನ್ನಲಂಕರಿಸುತ್ತಾರೆ. ಇದರ ಸದಸ್ಯತ್ವದಲ್ಲಿ ಪ್ರಾರಂಭದಲ್ಲಿ ಸಾಮಾನ್ಯ ಸದಸ್ಯ, ಸಹಸದಸ್ಯ, ಪತ್ರಕರ್ತಸದಸ್ಯ ಮೊದಲಾದ ವರ್ಗಗಳಿದ್ದುವು. 1869ರ ಅನಂತರ ಪತ್ರಕರ್ತಸದಸ್ಯರನ್ನು ನಿಯಮಿಸುವ ರೂಢಿ ಮುಂದುವರಿಯಲಿಲ್ಲ. 1829ರ ವರೆಗೆ ಆಂಗ್ಲರಿಗೆ ಮಾತ್ರ ಸದಸ್ಯತ್ವಕ್ಕೆ ಪ್ರವೇಶವಿದ್ದು ಆ ವರ್ಷದಿಂದ ಭಾರತೀಯ ಹಾಗೂ ಉಳಿದ ದೇಶಗಳ ಜನರಿಗೂ ಸದಸ್ಯತ್ವ ಲಭ್ಯವಾಯಿತು. 1851ರಲ್ಲಿ ಗೌರವ ಸದಸ್ಯರನ್ನಾರಿಸುವ ಕ್ರಮವನ್ನು ಜಾರಿಗೆ ತರಲಾಯಿತು. 1796ರಿಂದ ಸದಸ್ಯರಿಗೆ ಚಂದಾಹಣ ವಿಧಿಸಲಾಯಿತು. ಇತ್ತೀಚಿನ ಕೆಲವರ್ಷಗಳಿಂದ ಈ ಸಂಸ್ಥೆ ತನ್ನ ಫೆಲೊಷಿಪ್ಪನ್ನು ಗಣ್ಯ ವಿದ್ವಾಂಸರಿಗೆ ನೀಡುತ್ತಿದೆ. ಇದು 1784ರಿಂದ 1832ರ ವರೆಗೆ ಏಷ್ಯಾಟಿಕ್ ಸೊಸೈಟಿ ಎಂದೂ 1832ರಿಂದ 1935ರ ವರೆಗೆ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್ ಎಂದೂ 1935ರಿಂದ 1951ರ ವರೆಗೆ ರಾಯಲ್ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್ ಎಂದೂ ತರುವಾಯ ಪುನಃ ಏಷ್ಯಾಟಿಕ್ ಸೊಸೈಟಿ ಎಂದೂ ಪ್ರಸಿದ್ಧವಾಗಿದೆ. ಲಂಡನಿನಲ್ಲಿ ಪ್ರಾರಂಭವಾದ ದಿ ರಾಯಲ್ ಏಷ್ಯಾಟಿಕ್ ಸೊಸೈಟಿ ಆಫ್ ಗ್ರೇಟ್ ಬ್ರಿಟನ್ ಮತ್ತು ಐರ್ಲೆಂಡ್ ಸಂಸ್ಥೆ 1829ರಲ್ಲಿ ಬಂಗಾಲದ ಏಷ್ಯಾಟಿಕ್ ಸೊಸೈಟಿ ತನ್ನೊಡನೆ ವಿಲೀನವಾಗಲು ಬಯಸಿದ್ದರೂ ಇದು ಆ ಕೋರಿಕೆಗೆ ಒಡಂಬಡಲಿಲ್ಲ.

1788ರಲ್ಲಿ ಈ ಸಂಸ್ಥೆಯ ಏಷ್ಯಾಟಿಕ್ ರಿಸರ್ಚಸ್ ಎಂಬ ಪತ್ರಿಕೆಯ ಪ್ರಥಮ ಸಂಪುಟ ಹೊರಬಂತು. 1839ರ ವರೆಗೆ ಇದರ 20 ಸಂಪುಟಗಳು ಪ್ರಕಟವಾದ ಅನಂತರ ಈ ಪತ್ರಿಕೆಯ ಪ್ರಕಟನೆ ಮುಂದುವರಿಯಲಿಲ್ಲ. 1821ರಲ್ಲಿ ವಿಲ್‌ಸನರಿಂದ ಕ್ವಾರ್ಟರ್ಲಿ ಓರಿಯಂಟಲ್ ಜರ್ನಲ್ ಎಂಬ ಪತ್ರಿಕೆಯ ಪ್ರಕಟನೆ ಪ್ರಾರಂಭವಾಯಿತು. ಈ ಸಂಸ್ಥೆ ಟ್ರಾನ್‌ಸಾಕ್‌ಷನ್ಸ್ ಆಫ್ ದಿ ಮೆಡಿಕಲ್ ಅಂಡ್ ಫಿಸಿಕಲ್ ಸೊಸೈಟಿ ಎಂಬ ಪತ್ರಿಕೆ ಪ್ರಾರಂಭಿಸಿತು. 1827ರ ತರುವಾಯ ಇವು ಹೊರಬರಲಿಲ್ಲ. 1829ರಲ್ಲಿ ಕ್ಯಾಪ್ಟನ್ ಹರ್ಬರ್ಟ್ ಗ್ಲೀನಿಂಗ್ಸ್ ಇನ್ ಸೈನ್ಸ್ ಎಂಬ ಮಾಸಪತ್ರಿಕೆ ಪ್ರಾರಂಭಿಸಿದ. ಅವನ ತರುವಾಯ ಅದರ ಸಂಪಾದಕನಾದ ಜೇಮ್ಸ್ ಪ್ರಿನ್ಸೆಪ್ ಈ ಪತ್ರಿಕೆಯ ಹೆಸರನ್ನು ಜರ್ನಲ್ ಆಫ್ ದಿ ಏಷ್ಯಾಟಿಕ್ ಸೊಸೈಟಿ ಎಂದು ಬದಲಿಸಿದ. 1832ರಲ್ಲಿ ಈ ಪತ್ರಿಕೆಯ ಮೊದಲನೆಯ ಸಂಪುಟ ಜರ್ನಲ್ ಆಫ್ ದಿ ಏಷ್ಯಾಟಿಕ್ ಸೊಸೈಟಿ ಆಫ್ ಬೆಂಗಾಲ್ ಎಂಬ ಹೆಸರಿನಿಂದ ಹೊರಬಂತು. ಅಂದಿನಿಂದ ಇಂದಿನ ವರೆಗೆ ಇದು ನಾಲ್ಕು ಶ್ರೇಣಿಗಳಲ್ಲಿ ಪ್ರಕಟವಾಗಿದ್ದು ಇಲ್ಲಿಯ ವರೆಗೆ ಇದರ 136ಕ್ಕೂ ಹೆಚ್ಚು ಸಂಪುಟಗಳು ಬೆಳಕು ಕಂಡಿವೆ. ಈ ಪತ್ರಿಕೆಯಲ್ಲದೆ, ಈ ಸಂಸ್ಥೆಯ ಇತರ ಪ್ರಕಟನೆಗಳ ಪೈಕಿ ಇಯರ್ ಬುಕ್ ಆಫ್ ದಿ ಏಷ್ಯಾಟಿಕ್ ಸೊಸೈಟಿ; ಬಿಬ್ಲಿಯೊಥಿಕ ಏಷ್ಯಾಟಿಕ, ಬಿಬ್ಲಿಯೊಥಿಕ ಇಂಡಿಕ, ರಾಮಾಯಣ, ಋಗ್ವೇದ (ಮಾಕ್ಸ್‌ಮುಲರನಿಂದ ಸಂಪಾದಿತವಾದ್ದು) —ಇವು ಮುಖ್ಯವಾಗಿವೆ.

ಬಹುಕಾಲದ ವರೆಗೆ ಈ ಸಂಸ್ಥೆಯ ಅಧೀನದಲ್ಲಿದ್ದ ಪ್ರಾಚ್ಯಸಂಶೋಧನೆ, ಭೂಗರ್ಭಶಾಸ್ತ್ರ, ಪ್ರಾಣಿಶಾಸ್ತ್ರ, ಸಸ್ಯಶಾಸ್ತ್ರ ಮೊದಲಾದವುಗಳಿಗೆ ಸಂಬಂಧಪಟ್ಟ ವಸ್ತು ಸಂಗ್ರಹಾಲಯಗಳನ್ನು 1866ರಲ್ಲಿ ಒಂದು ನ್ಯಾಸ ಮಂಡಲಿಗೆ (ಬೋರ್ಡ್ ಆಫ್

ಟ್ರಸ್ಟೀಸ್) ವರ್ಗಾಯಿಸಲಾಯಿತು. ಭಾರತದ ಬೃಹದ್‌ವಸ್ತುಸಂಗ್ರಹಾಲಯಗಳಲ್ಲಿ ಒಂದಾದ ಇಂಡಿಯನ್ ಮ್ಯೂಸಿಯಂ ಉಗಮವಾದದ್ದೂ ಇವುಗಳಿಂದ.

ಈ ಸಂಸ್ಥೆ ಈ ರೀತಿ ಮಹತ್ತರವಾದ ಸೇವೆ ಸಲ್ಲಿಸಲು ಅನೇಕ ಪಾಶ್ಚಾತ್ಯ ಹಾಗೂ ಭಾರತೀಯ ಸಂಶೋಧಕರೂ ಉನ್ನತಾಧಿಕಾರಿಗಳೂ ವಿದ್ವಾಂಸರೂ ಕಾರಣ. ಅವರಲ್ಲಿ ಈ ಸಂಸ್ಥೆಯ ಸಂಸ್ಥಾಪಕರೂ ಪ್ರಥಮ ಅಧ್ಯಕ್ಷರೂ ಆದ ಸರ್ ವಿಲಿಯಂ ಜೋನ್ಸ್, ಸರ್ ಜಾನ್ ಶೋರ್, ಸರ್ ಚಾರ್ಲ್ಸ್ ವಿಲ್ಕಿನ್ಸ್, ಹೆನ್ರಿ ಥಾಮಸ್ ಕೋಲ್‌ಬ್ರೂಕ್, ಎಚ್. ಎಚ್. ವಿಲ್‌ಸನ್, ಜೇಮ್ಸ್ ಪ್ರಿನ್ಸೆಪ್, ಈಶ್ವರಚಂದ್ರ ವಿದ್ಯಾಸಾಗರ, ಸುನೀತಿಕುಮಾರ ಚಟರ್ಜಿ ಹಾಗೂ ಆರ್. ಸಿ. ಮಜುಮ್‌ದಾರ್ ಇವರು ಉಲ್ಲೇಖಾರ್ಹರು.

**ನೋಡಿ—ಏಷ್ಯಾಟಿಕ್ ಸೊಸೈಟಿ ಆಫ್ ಬಾಂಬೆ; ರಾಯಲ್ ಏಷ್ಯಾಟಿಕ್ ಸೊಸೈಟಿ ಆಫ್ ಗ್ರೇಟ್ ಬ್ರಿಟನ್ ಅಂಡ್ ಐರ್ಲೆಂಡ್.** (ಎಂ.ಎಸ್.ಕೆ. ; ಬಿ.ಕೆ.ಸಿ.)

**ಏಳು ವರ್ಷಗಳ ಯುದ್ಧ :** 1756-1763. ಫ್ರಾನ್ಸ್, ಆಸ್ಟ್ರಿಯ, ರಷ್ಯ, ಸ್ಯಾಕ್ಸನಿ, ಸ್ವೀಡನ್ ಮತ್ತು (1762ರಿಂದ) ಸ್ಪೇನ್ ಇವುಗಳಿಗೂ ಪ್ರಷ್ಯ, ಇಂಗ್ಲೆಂಡ್ ಮತ್ತು ಹ್ಯಾನೊವರ್‌ಗಳಿಗೂ ನಡುವೆ, ಯೂರೋಪ್, ಉತ್ತರ ಅಮೆರಿಕ ಮತ್ತು ಭಾರತ ಕ್ಷೇತ್ರಗಳಲ್ಲಿ ನಡೆದ ಜಾಗತಿಕ ಯುದ್ಧ (ಸೆವೆನ್ ಇಯರ್ಸ್ ವಾರ್). ಇದಕ್ಕೆ ಕಾರಣಗಳು ಸ್ಥೂಲವಾಗಿ ಎರಡು. ಉತ್ತರ ಅಮೆರಿಕದಲ್ಲೂ ಭಾರತದಲ್ಲೂ ವಸಾಹತಿಗಾಗಿ ಫ್ರೆಂಚರಿಗೂ ಇಂಗ್ಲಿಷರಿಗೂ ನಡುವೆ ನಡೆದಿದ್ದ ಸ್ಪರ್ಧೆ ಒಂದು ಮುಖ್ಯಕಾರಣ. ಅಮೆರಿಕದಲ್ಲಿ ಇಂಗ್ಲಿಷರು ಅಲಿಘನಿ ಪರ್ವತಗಳನ್ನು ದಾಟಿ ಪಶ್ಚಿಮಾಭಿಮುಖವಾಗಿ ಪದಾಕ್ರಮಣ ಮಾಡುತ್ತಿದ್ದಾಗ ಫ್ರೆಂಚರು ಕೆನಡದಿಂದ ನೈಋತ್ಯಾಭಿಮುಖವಾಗಿ ನಡೆಯುತ್ತ ಇಂಗ್ಲಿಷರ ಹಾದಿಯಲ್ಲಿ ಅಡ್ಡಹಾಯ್ದುದ್ದರಿಂದ ವಿರಸಕ್ಕೆ ಆಸ್ಪದವುಂಟಾಯಿತು. ಜರ್ಮನಿಯ ಅಧಿನಾಯಕತ್ವಕ್ಕಾಗಿ ಆಸ್ಟ್ರಿಯದ ಮೇರಿಯಾ ಥೆರೀಸಗೂ ಪ್ರಷ್ಯದ ಎರಡನೆಯ ಫ್ರೆಡರಿಕನಿಗೂ ನಡುವೆ ವಿರಸವೇರ್ಪಟ್ಟದ್ದೂ ಯುದ್ಧಕ್ಕೆ ಕಾರಣವಾಯಿತು. ಆಸ್ಟ್ರಿಯದ ಉತ್ತರಾಧಿಕಾರದ ಬಗ್ಗೆ ನಡೆದ ಯುದ್ಧ 1748ರಲ್ಲಿ ಕೊನೆಗೊಂಡಿತ್ತಾದರೂ ಅನಂತರದ ವರ್ಷಗಳಲ್ಲೂ ದ್ವೇಷದ ಹೊಗೆ ಯಾಡುತ್ತಲೇ ಇತ್ತು. ಯೂರೋಪಿನಲ್ಲಿ ಯಾರು ಹೆಚ್ಚು ಬಲಿಷ್ಠರು ಎಂಬ ಬಗ್ಗೆ ಮತ್ತೊಮ್ಮೆ ಪರೀಕ್ಷೆ ನಡೆಸಬೇಕೆಂಬ ಚಪಲ ಬೆಳೆಯುತ್ತಿತ್ತು. ತಾನು ಹಿಂದಿನ ಯುದ್ಧದಲ್ಲಿ ಕಳೆದುಕೊಂಡಿದ್ದ ಸೈಲೀಷಿಯ ಪ್ರಾಂತ್ಯವನ್ನು ಮರಳಿ ಪಡೆಯಬೇಕೆಂಬುದು ಆಸ್ಟ್ರಿಯದ ಹಂಬಲವಾದರೆ ಅದನ್ನು ತಾನೇ ಉಳಿಸಿಕೊಂಡು ಆಸ್ಟ್ರಿಯವೇ ಮುಂತಾದ ನೆರೆರಾಷ್ಟ್ರಗಳ ಹಮ್ಮನ್ನು ಮುರಿಯಬೇಕೆಂಬುದು ಪ್ರಷ್ಯದ ಆಕಾಂಕ್ಷೆ. ರಾಜಕಾರ್ಯ, ಯುದ್ಧವಿದ್ಯೆ ಎರಡರಲ್ಲೂ ಅಸಾಧಾರಣ ಪ್ರತಿಭೆ ಹೊಂದಿದ್ದ ಫ್ರೆಡರಿಕ್ ಆಗ ಪ್ರಷ್ಯದ ದೊರೆಯಾಗಿದ್ದ. ಪೂರ್ವದಲ್ಲಿ, ಹದಿನೆಂಟನೆಯ ಶತಮಾನದ ವರೆಗೂ, ತೀರ ಹಿಂದುಳಿದಿದ್ದ ರಷ್ಯ ಈಗ ಗಣನೀಯ ಪ್ರಗತಿ ಹೊಂದಿ ಇತರ ರಾಷ್ಟ್ರಗಳ ಮೇಲೆ ತನ್ನ ಪ್ರಭಾವ ಬೀರಲು ಪ್ರಾರಂಭಿಸಿತ್ತು. ಹೀಗಾಗಿ ಒಂದು ಕಡೆ ಇಂಗ್ಲೆಂಡ್ ಮತ್ತು ಪ್ರಷ್ಯ ಇವೂ ಇನ್ನೊಂದು ಕಡೆ ಆಸ್ಟ್ರಿಯ, ಫ್ರಾನ್ಸ್ ಮತ್ತು ರಷ್ಯ ಇವೂ ಇದ್ದ ಎರಡು ಬಣಗಳೇರ್ಪಟ್ಟಿದ್ದುವು.

ಸೈಲೀಷಿಯವನ್ನು ಪುನಃ ಪಡೆಯಬೇಕೆಂಬ ನಿರ್ಧಾರದಿಂದ ಆಸ್ಟ್ರಿಯದ ರಾಣಿ ಮೇರಿಯಾಥೆರೀಸ ತನ್ನ ದೇಶದ ಉತ್ತರ ಗಡಿಯಲ್ಲಿ ಸೈನ್ಯಸಂಗ್ರಹ ಮಾಡುತ್ತಿದ್ದಾಳೆಂಬ ನೆಪ ಹೂಡಿ, ಫ್ರೆಡರಿಕ್ 1756ರಲ್ಲಿ ಸ್ಯಾಕ್ಸನಿಯನ್ನಾಕ್ರಮಿಸಿದ. ಫ್ರಾನ್ಸಿನಿಂದೊದಗಬಹುದಾದ ಅಪಾಯವನ್ನು ತಪ್ಪಿಸಿಕೊಳ್ಳುವ ಸಲುವಾಗಿ ಆತ ಇಂಗ್ಲೆಂಡಿನ ಒಪ್ಪಿಗೆಯೊಡನೆ ಹ್ಯಾನೊವರನ್ನು ಆಕ್ರಮಿಸಿಕೊಂಡ. ಇದರಿಂದ ಫ್ರಾನ್ಸಿನ ಸೈನ್ಯಗಳು ಪ್ರಷ್ಯದೊಳಗೆ ನುಗ್ಗಲು ಅಡಚಣೆಯಾಯಿತು. ಆದರೆ ದಕ್ಷಿಣದಲ್ಲಿ ಆಸ್ಟ್ರಿಯದ ಪಡೆ ಸಜ್ಜಾಗಿ ಕದನಕ್ಕೆ ನಿಂತಿತ್ತು, ಪೂರ್ವದಿಂದ ರಷ್ಯನ್ ಸೈನ್ಯ ತನ್ನ ದೇಶದೊಳಕ್ಕೆ ನುಗ್ಗುವ ಭಯವೂ ಇತ್ತು. ಇವೆರಡು ಕಡೆಯಲ್ಲೂ ಶತ್ರುಗಳನ್ನು ಪ್ರಷ್ಯ ಎದುರಿಸಬೇಕಾಗಿತ್ತು. ಫ್ರಾನ್ಸಿನ ಸೈನ್ಯವನ್ನೆದುರಿಸಲು ಇಂಗ್ಲೆಂಡಿನಿಂದ ಸೈನ್ಯ ಸಹಾಯ ಬಂದಿತ್ತು.

ಯುದ್ಧದ ಮೊದಲ ಐದು ವರ್ಷ ಇಂಗ್ಲೆಂಡಿಗೂ ಪ್ರಷ್ಯಕ್ಕೂ ಅನುಕೂಲಕರವಾಗಿರಲಿಲ್ಲ. ಫ್ರೆಡರಿಕನ ಸಹಾಯಕ್ಕೆ ಕೊಂಚ ಸೈನ್ಯವನ್ನೂ ಅಪಾರ ಹಣವನ್ನೂ ಕಳುಹಿಸಿ, ಯೂರೋಪಿನಲ್ಲಿ ಯುದ್ಧ ಮುಂದುವರಿಯುವಂತೆ ಮಾಡಿದರೆ ಫ್ರಾನ್ಸ್ ತನ್ನ ಸೈನ್ಯದ ಬಹುಭಾಗವನ್ನು ಯೂರೋಪಿನಲ್ಲೇ ಇಟ್ಟುಕೊಳ್ಳಬೇಕಾಗುತ್ತದೆ. ಅದರ ವಸಾಹತುಗಳಿಗೆ ಸೈನ್ಯ ಕಳಿಸುವ ಸ್ಥಿತಿಯಲ್ಲಿರುವುದಿಲ್ಲ. ಇದರಿಂದ ಆ ಪ್ರದೇಶಗಳಲ್ಲಿ ಬ್ರಿಟಿಷರು ಫಾನ್ಸಿನ ಪ್ರಾಬಲ್ಯ ಮುರಿಯಬಹುದು—ಎಂಬುದು ಇಂಗ್ಲೆಂಡಿನ ಯುದ್ಧಮಂತ್ರಿ ಲಾರ್ಡ್ ಚಾಥಮನ ಹಂಚಿಕೆ. ಆದರೂ ಮೊದಲು ಶತ್ರುಗಳ ಕೈ ಮೇಲಾಗಿ ಇಂಗ್ಲೆಂಡ್ ಪ್ರಷ್ಯಗಳಿಗೆ ಗಂಭೀರ ಪರಿಸ್ಥಿತಿಯುಂಟಾಯಿತು. ಫ್ರೆಡರಿಕ್ ಕೊಲ್ಲಿನಿನಲ್ಲಿ ಸೋತು ಬೊಹಿಮಿಯವನ್ನು ಶತ್ರುಗಳಿಗೆ ಬಿಟ್ಟುಕೊಡಬೇಕಾಯಿತು. 1758-1759ರಲ್ಲಂತೂ ಪ್ರಷ್ಯದ ಸ್ಥಿತಿ ತೀರ ಹದಗೆಟ್ಟಿತು. ಜ಼ಾರೆನ್‌ಡಾರ್ಫ್ ಕದನದಲ್ಲಿ ಪ್ರಷ್ಯ ಗೆದ್ದಿತಾದರೂ ಅದಕ್ಕೆ ಸಂಭವಿಸಿದ ನಷ್ಟ ಅಪಾರ. ಮರುವರ್ಷ ಕ್ಯೂನೆರ್ಸ್‌ಡಾರ್ಫಿನಲ್ಲಿ ಸೋಲೇ ಕಾದಿತ್ತು. ಭಾರತದಲ್ಲಿ ಫೋರ್ಟ್ ಸೇಂಟ್ ಡೇವಿಡ್ ಫ್ರೆಂಚರ ವಶವಾದ್ದರಿಂದ ಮದರಾಸು ಇಂಗ್ಲಿಷರ ಕೈಬಿಟ್ಟುಹೋಗುವ ಸ್ಥಿತಿ ಬಂದಿತ್ತು. ಉತ್ತರ ಅಮೆರಿಕದಲ್ಲೂ ಬ್ರಿಟಿಷರ ಪರಿಸ್ಥಿತಿ ಆಶಾದಾಯಕವಾಗಿರಲಿಲ್ಲ.

ಆದರೆ ಕೊನೆಯ ಮೂರು ವರ್ಷಗಳಲ್ಲಿ ಶತ್ರುಗಳ ಬಲ ಕುಂದುತ್ತ ಬಂತು. ಪ್ಲಾಸಿ ಕದನದಲ್ಲಿ ಬ್ರಿಟಿಷರು ಬಂಗಾಳ ಗೆದ್ದುಕೊಂಡರಲ್ಲದೆ 1760ರಲ್ಲಿ ನಡೆದ ವಾಂಡಿವಾಷ್ ಕದನದಿಂದ ದಕ್ಷಿಣ ಭಾರತದಲ್ಲೂ ಫ್ರೆಂಚರ ಪ್ರಾಬಲ್ಯ ಮುರಿದುಬಿತ್ತು. ಉತ್ತರ ಅಮೆರಿಕದಲ್ಲಿ ಕರ್ನಲ್ ವುಲ್ಫ್ ಕ್ವಿಬೆಕ್ ಕೋಟೆಯನ್ನು ಹಿಡಿದ. ಯೂರೋಪಿನಲ್ಲಿ ಲೀಗ್‌ನಿಟ್ಸ್ ಮತ್ತು ಟೋರ್ಗಾನ್ ಕದನಗಳಲ್ಲಿ ಆಸ್ಟ್ರಿಯದ ಸೈನ್ಯವನ್ನು ಫ್ರೆಡರಿಕ್ ಸೋಲಿಸಿ ಹಿಮ್ಮೆಟ್ಟಿಸಿದ. ಇದೇ ಸಮಯಕ್ಕೆ ಸರಿಯಾಗಿ ರಷ್ಯದ ರಾಣಿ ಒಂದನೆಯ ಎಲಿಜ಼ಬೆತಳ ಮರಣ ಸಂಭವಿಸಿತು. ಅವಳ ಅನಂತರ ಸಿಂಹಾಸನವೇರಿದ ಪೀಟರ್ ದೊರೆ ಫ್ರೆಡರಿಕನ ಅಭಿಮಾನಿ. ಇದರಿಂದ ರಷ್ಯದಿಂದಲೂ ಫ್ರೆಡರಿಕನಿಗೆ ವಿರೋಧ ಅಡಗಿಹೋಯಿತು.

1763ರಲ್ಲಿ ಹ್ಯೂಬರ್ಟ್ಸ್‌ಬರ್ಗಿನಲ್ಲಿ ಪ್ರಷ್ಯಕ್ಕೂ ಆಸ್ಟ್ರಿಯಕ್ಕೂ ಒಪ್ಪಂದವಾಗಿ ಯುದ್ಧ ನಿಂತಿತು. ಸೈಲೀಷಿಯ ಪ್ರಷ್ಯಕ್ಕೆ ಸೇರಿಹೋಯಿತು. ಅದೇ ವರ್ಷ ನಡೆದ ಪ್ಯಾರಿಸ್ ಒಪ್ಪಂದದಲ್ಲಿ ಕೆನಡ ಬ್ರಿಟಿಷರದಾಯಿತು. ಭಾರತದಲ್ಲೂ ಫ್ರೆಂಚರ ಪ್ರಾಬಲ್ಯ ಕೊನೆಗೊಂಡಿತು. ಈ ಎಲ್ಲ ಪರಾಭವಗಳಿಂದ ಫ್ರಾನ್ಸಿನ ಕೀರ್ತಿಗೆ ತಟ್ಟಿದ ಕಳಂಕ ಅಷ್ಟಿಷ್ಟಲ್ಲ. ಮುಂದೆ ಜರುಗಿದ ಮಹಾಕ್ರಾಂತಿಗೆ ಈ ಅವಮಾನವೂ ಒಂದು ಪ್ರಬಲ ಕಾರಣ. ಬ್ರಿಟಿಷರಿಗಂತೂ ಆಗ ಯಾವ ಅಡಚಣೆಯೂ ಇರಲಿಲ್ಲ. ಮುಂದಿನ ವರ್ಷಗಳಲ್ಲಿ ಅದು ಮಹಾಚಕ್ರಾಧಿಪತ್ಯವೊಂದನ್ನು ಕಟ್ಟಲು ಅನುಕೂಲಕರವಾದ ವಾತಾವರಣ ಏರ್ಪಟ್ಟಂತಾಯಿತು. (ಎ.ಎಂ.)

**ಏಳು ವಾರಗಳ ಯುದ್ಧ :** ಆಸ್ಟ್ರಿಯ, ಸ್ಯಾಕ್ಸನಿ, ಹ್ಯಾನೊವರ್, ಬವೇರಿಯ, ವರ್ಟೆಂಬರ್ಗ್, ಬಾಡೆನ್,ಹೆಸ್-ಕ್ಯಾಸಲ್, ಹೆಸ್-ಡಾರ್ಮ್‌ಸ್ಟಾಟ್‌ಮತ್ತು ನಾಸೊಗಳಿಗೂ ಪ್ರಷ್ಯ ಮತ್ತು ಇಟಲಿಗಳಿಗೂ ನಡುವೆ 1866ರಲ್ಲಿ ನಡೆದ ಯುದ್ಧ (ಸೆವೆನ್ ವೀಕ್ಸ್ ವಾರ್). ಮುಖ್ಯವಾಗಿ ಆಸ್ಟ್ರಿಯ–ಪ್ರಷ್ಯಗಳ ದೀರ್ಘ ವಿರಸದ ಫಲವಾಗಿದ್ದು, ಅಂತ್ಯದಲ್ಲಿ ಇದು ಪರಿಹಾರವಾದ್ದರಿಂದ ಇದು ಆಸ್ಟ್ರೊ-ಪ್ರಷ್ಯನ್ ಯುದ್ಧವೆಂದೂ ಹೆಸರಾಗಿದೆ.

1815ರಲ್ಲಿ ಸ್ಥಾಪಿತವಾಗಿದ್ದ ಜರ್ಮನ್ ಸಂಧಿಕೂಟದಲ್ಲಿ ಪ್ರಾಬಲ್ಯ ಗಳಿಸಲು ಆಸ್ಟ್ರಿಯಕ್ಕೂ ಪ್ರಷ್ಯಕ್ಕೂ ನಡುವೆ ತೀವ್ರ ಸ್ಪರ್ಧೆ ನಡೆದಿತ್ತು. ಪ್ರಷ್ಯ ಆಗ ರಾಷ್ಟ್ರೀಯತ್ವಪ್ರತಿಪಾದಕ ರಾಷ್ಟ್ರ. ಆಸ್ಟ್ರಿಯ ಇದಕ್ಕೆ ವಿರುದ್ಧ. ಆಸ್ಟ್ರಿಯವನ್ನುಳಿದು ಎಲ್ಲ ಜರ್ಮನ್ ರಾಜ್ಯಗಳನ್ನೂ ಒಗ್ಗೂಡಿಸುವುದು ಪ್ರಷ್ಯದ ಬಯಕೆ. ಆದರೆ ಆಸ್ಟ್ರಿಯದ ವಿರೋಧದಿಂದ ಇದು ಸಾಧ್ಯವಾಗಿರಲಿಲ್ಲ. ಆಸ್ಟ್ರಿಯನ್ ಸಾಮ್ರಾಜ್ಯವನ್ನು ಜರ್ಮನ್ ಸಂಧಿಕೂಟದೊಂದಿಗೆ ಸೇರಿಸಬೇಕೆಂಬ ಆಸ್ಟ್ರಿಯನ್ ಹಂಬಲವನ್ನು ಡ್ರೆಸ್ಡೆನ್ ಸಮ್ಮೇಳನ ತಿರಸ್ಕರಿಸಿತ್ತು. 1862ರಲ್ಲಿ ಪ್ರಷ್ಯದ ಪ್ರಧಾನಿಯಾಗಿದ್ದ ಬಿಸ್ಮಾರ್ಕ್ ಜರ್ಮನಿಯನ್ನು ಒಗ್ಗೂಡಿಸುವ ಕಾರ್ಯದಲ್ಲಿ ಉದ್ಯುಕ್ತನಾಗಿದ್ದ. ಇದು ಆಸ್ಟ್ರಿಯಕ್ಕೆ ಸಹ್ಯವಾಗಿರಲಿಲ್ಲ.

ಭೌಗೋಳಿಕ ಕಾರಣಗಳಿಗಾಗಿ ಸ್ಯಾಕ್ಸನಿ ಆಸ್ಟ್ರಿಯದ ಕಡೆ ಸೇರಿಕೊಂಡಾಗ ಪ್ರಷ್ಯ ಸೈನ್ಯಗಳನ್ನು ಜಮಾಯಿಸಿಕೊಂಡು ಸ್ಯಾಕ್ಸನಿ ಮತ್ತು ಬೊಹಿಮಿಯಗಳ ಆಕ್ರಮಣ ನಡೆಸಿತು. ಅನಂತರ ಸ್ಯಾಡೋವಾದಲ್ಲಿ ಆಸ್ಟ್ರಿಯ ಸೈನ್ಯಕ್ಕೂ ಪರಾಭವವುಂಟಾಯಿತು. ಆಸ್ಟ್ರಿಯದ ಕಡೆ ಒಲಿದಿದ್ದ ಕೆಲವು ಜರ್ಮನ್ ರಾಜ್ಯಗಳು ಪ್ರಷ್ಯದ ಅಧಿನಾಯಕತ್ವವನ್ನು ಒಪ್ಪಿಕೊಳ್ಳಬೇಕಾಯಿತು. ಏಳು ವಾರಗಳಲ್ಲಿ ಮುಗಿದ ಈ ಯುದ್ಧವೇ ಜರ್ಮನಿಯ ಏಕೀಕರಣಕ್ಕೆ ನಾಂದಿಯಾಯಿತೆನ್ನಬಹುದು. ಪ್ರಷ್ಯದೊಡನೆ ಸೇರಿದ್ದಕ್ಕಾಗಿ ವಿನೀಷಿಯ ಸಿಕ್ಕಿದ್ದೇ ಇಟಲಿಗೆ ಆದ ಲಾಭ. (ಎ.ಎಂ.)

**ಏಳೆ :** ಅಚ್ಚಕನ್ನಡ ಛಂದಸ್ಸಿನ ಒಂದು ಪದ್ಯಜಾತಿ. ಇದರ ಲಕ್ಷಣವನ್ನು ಮೊದಲು ನಾಗವರ್ಮನ (ಸು. 990) ಛಂದೋಂಬುಧಿಯಲ್ಲೂ ಅನಂತರ ಜಯಕೀರ್ತಿಯ (ಸು. 1050) ಛಂದೋನುಶಾಸನ ಎಂಬ ಸಂಸ್ಕೃತ ಛಂದೋಗ್ರಂಥ ಮತ್ತು ಶಾರ್ಙ್ಗದೇವನ (ಸು. 1250) ಸಂಗೀತರತ್ನಾಕರ ಎಂಬ ಸಂಗೀತಶಾಸ್ತ್ರ ಗ್ರಂಥಗಳಲ್ಲಿಯೂ ನಿರೂಪಿಸಲಾಗಿದೆ.

ಛಂದೋಂಬುಧಿಯಲ್ಲಿ ಹೀಗೆ ಹೇಳಿದೆ: ಭುಜಪಕ್ಷಪುರಗಣ ವ್ರಜದೊಳಾಏಳೆಯೊಳಕ್ಕು। ಮಜಗಣಮೇಳೆಗಿಭಗತೀ ॥ ಕ್ರಮವಾಗಿ 2, 2 ಮತ್ತು 3 ಗಣಗಳ ಗುಂಪಿನಲ್ಲಿ 6ನೆಯದು ಬ್ರಹ್ಮಗಣವಾಗಿರುವುದು ಏಳೆಯ ಲಕ್ಷಣ—ಎಂಬುದು ಪದ್ಯದ ಆಶಯ. ಈ ಲಕ್ಷಣಪದ್ಯ ಅದರ ಲಕ್ಷ್ಯವೂ ಆಗಿದೆ. ಆದ್ದರಿಂದ ಉಳಿದ ಗಣಗಳು ವಿಷ್ಣುಗಣಗಳಾಗಿರುತ್ತವೆಯೆಂದೂ ಎರಡು ಪಾದಗಳಿರುವ ಈ ಮಟ್ಟಿನ ಮೊದಲನೆಯ ಪಾದದಲ್ಲಿ 2 ಗಣಗಳಾದ ಮೇಲೆ ಪ್ರಾಯಃ ಯತಿ ಬಂದು 3ನೆಯ ಗಣದಲ್ಲಿ ಒಳಪ್ರಾಸ ಪಾಲಿತವಾಗುತ್ತದೆಯೆಂದೂ ತಿಳಿಯಲವಕಾಶವಿದೆ.

ಛಂದೋನುಶಾಸನದಲ್ಲಿ ಹೀಗೆ ಹೇಳಿದೆ : ತ್ರಿಪದೀ ತೃತೀಯಾಂ ಹಾ । ವಪಮುಂಚ್ಯ ತ್ಯೈಲೇತಿ॥ ಸುಪಠಿತಾ ಗೇಯವಿದಜನೈಃ॥ 3ನೆಯ ಪಾದವನ್ನು ಬಿಟ್ಟರೆ ತ್ರಿಪದಿಯೇ ಏಳೆಯಾಗುತ್ತದೆಯೆಂಬುದಾಗಿ ಗೇಯವಿದರಾದ ಜನರಿಂದ ಹೇಳಲ್ಪಟ್ಟಿದೆ—ಎಂಬುದು ಪದ್ಯದ ಆಶಯ. ಜಯಕೀರ್ತಿ ತ್ರಿಪದಿಯ ಮೊದಲ ಪಾದವನ್ನು 2-2 ಗಣಗಳಿಗೆ ಒಂದೊಂದು ಪಾದವಾಗಿ ಗಣಿಸಿರುವುದರಿಂದ ನಾವು 2ನೆಯ ಪಾದವೆಂದು ತಿಳಿಯುವುದು ಆತನ ಅಭಿಪ್ರಾಯದಂತೆ 3ನೆಯದಾಗಿದೆ. ಆ ಕಾರಣ ಆತನ ಮತದಂತೆ ತ್ರಿಪದಿಯಲ್ಲಿ 2ನೆಯ ಪಾದವನ್ನು ಬಿಟ್ಟರೆ ಉಳಿಯುವ 1–3ನೆಯ ಪಾದಗಳ ಲಕ್ಷಣವೇ ಏಳೆಯ ಲಕ್ಷಣ. ಇದು ನಾಗವರ್ಮ ಹೇಳಿರುವ ಲಕ್ಷಣಕ್ಕೆ ಸಮಾನವಾದುದೇ ಆಗಿದೆ.

ಸಂಗೀತರತ್ನಾಕರದಲ್ಲಿ ಕನ್ನಡ ಏಳೆಯನ್ನು ಕುರಿತಾಗ, ಪಂಚಕಾಮಾ ರತಿಶ್ಚೈವ ಕಾಮೋಽಂತೇ ಚರಣತ್ರಯೇ–ಎಂದು ಹೇಳಿದೆ. 5 ಮದನ (=ವಿಷ್ಣು) ಗಣಗಳು, 1 ರತಿ (=ಬಹ್ಮ) ಗಣ. ಕೊನೆಗೊಂದು ಮದನ (=ವಿಷ್ಣು )ಗಣ—ಹೀಗೆ ಬರುವ 3 ಪಾದಗಳನ್ನು (ಎಂದರೆ ನಮ್ಮ ಗಣನೆಯಂತೆ 2 ಪಾದಗಳನ್ನು) ಉಳ್ಳದ್ದು ಏಳೆ—ಎಂದು ಇಲ್ಲೂ ಹೇಳಿರುವುದು ಕಾಣುತ್ತದೆ.

ಕನ್ನಡ, ಸಂಸ್ಕೃತ ಲಾಕ್ಷಣಿಕರು ಏಳೆಗೆ ಹೇಳಿರುವ ಮೇಲಿನ ಲಕ್ಷಣ ನಿರ್ವಚನವನ್ನು ಸಾಹಿತ್ಯದಲ್ಲಿ ದೊರೆಯುವ ಅದರ ನಿದರ್ಶನಗಳಿಗೆ ಅನ್ವಯಿಸಿನೋಡಿ, ಅದರ ಸಾಮಾನ್ಯ ಲಕ್ಷಣವನ್ನೂ ಅಪವಾದಗಳನ್ನೂ ಹೀಗೆ ಹೇಳಬಹುದು: ಎರಡು ಪಾದಗಳು; ಮೊದಲ ಪಾದದಲ್ಲಿ 4 ವಿಷ್ಣುಗಣಗಳು (2 ಗಣಗಳ ಬಳಿಕ ಯತಿ ಮತ್ತು 3ನೆಯ ಗಣದಲ್ಲಿ ಒಳಪ್ರಾಸ ಎಂದರೆ ದ್ವಿತೀಯಾಕ್ಷರ ಪ್ರಾಸದ ಆವೃತ್ತಿ); ಎರಡನೆಯ ಪಾದದಲ್ಲಿ, ಒಟ್ಟು ಪದ್ಯದ 5ನೆಯ ಗಣ ವಿಷ್ಣು, 6ನೆಯದು ಬ್ರಹ್ಮ, 7ನೆಯದು ವಿಷ್ಣು. ಇದನ್ನು ಹೀಗೆ ತೋರಿಸಬಹುದು.

*
ವಿ+ವಿ+ವಿ+ವಿ ।
ವಿ+ಬ್ರ+ವಿ ॥

ಇದು ಸಾಮಾನ್ಯ ಲಕ್ಷಣ. ಏಳೆಯ ಎಲ್ಲ ನಿದರ್ಶನಗಳೂ ಈ ಸಾಮಾನ್ಯ ಲಕ್ಷಣಕ್ಕೆ ಹೊಂದಿಕೊಂಡಿರುತ್ತವೆಯೆಂದು ಹೇಳುವಂತಿಲ್ಲ. ಇತರ ಅಂಶವೃತ್ತಗಳಿಗೆ ಸಹಜವಾಗಿರುವ ಅಪವಾದಗಳು ಇಲ್ಲೂ ಉಂಟು. ಆದಿಪ್ರಾಸ ಅಥವಾ ಒಳಪ್ರಾಸ ಅಥವಾ ಈ ಎರಡು ಬಗೆಯ ಪ್ರಾಸಗಳೂ ಇಲ್ಲದೆ ಹೋಗಬಹುದು. ವಿಷ್ಣುಗಣಗಳಿಗೆ ಪರ್ಯಾಯವಾಗಿ ಯಾವುದೇ ಗಣಸ್ಥಾನದಲ್ಲಿ ರುದ್ರವೋ ಬ್ರಹ್ಮವೋ ಬರಬಹುದು. ಹಾಗೂ 6ನೆಯ ಬ್ರಹ್ಮಗಣ ಸ್ಥಾನದಲ್ಲಿಯೇ ವಿರಳವಾಗಿ ವಿಷ್ಣುವೋ ರುದ್ರವೋ ಬರಬಹುದು.

ಇಲ್ಲಿ ಗಮನಿಸತಕ್ಕ ಒಂದು ಸಂಗತಿಯಿದೆ. 3ನೆಯ ಸೋಮೇಶ್ವರನ ಮಾನಸೋಲ್ಲಾಸದಲ್ಲೂ (1129) ಶಾರ್ಙ್ಗದೇವನ ಸಂಗೀತರತ್ನಾಕರದಲ್ಲೂ ಇತರ ಕೆಲವು ಶಾಸ್ತ್ರಗ್ರಂಥಗಳಲ್ಲೂ ಸಂಸ್ಕೃತ ಛಂದಸ್ಸಿನ ವಿಷಯಗಳನ್ನು ವಿವರಿಸುವಾಗ ಏಲಾ ಎಂಬೊಂದು ಸಂಸ್ಕೃತ ಪದ್ಯಜಾತಿಯ ಮತ್ತು ಅದರ ಪ್ರಭೇದಗಳ ಲಕ್ಷಣಗಳನ್ನು ಲಕ್ಷ್ಯಸಹಿತವಾಗಿ ನಿರೂಪಿಸಿರುವುದು ಕಂಡುಬರುತ್ತದೆ. ಗಣೈಲಾ ಮಾತ್ರೈಲಾ ವರ್ಣೈಲಾ ಎಂಬುದಾಗಿಯೂ ಕರ್ಣಾಟೀ ಏಲಾ, ಲಾಟೀ ಏಲಾ ಎಂದು ಮುಂತಾಗಿಯೂ ಪ್ರಕಾರಗಳನ್ನು ಮಾಡಿಕೊಂಡು ಒಂದೊಂದಕ್ಕೂ ಹಲವು ಪ್ರಭೇದಗಳನ್ನು ಕಲ್ಪಿಸಿ ಆ ಗ್ರಂಥಗಳಲ್ಲಿ ವಿವರಿಸಿದೆ. ಇವುಗಳಿಗೂ ಅಂಶ ಗಣಾತ್ಮಕವಾಗಿ ನಿರೂಪಿಸಿರುವ ನಾಗವರ್ಮ ಜಯಕೀರ್ತಿಗಳ ಕನ್ನಡ ಏಳೆಗೂ ಯಾವ ಸಂಬಂಧವೂ ಇಲ್ಲವೆಂದು ಹೇಳಬಹುದು. ಸಂಸ್ಕೃತದ ಗೀತನಾಮುವಾದ ಏಲಾ ಎಂಬುದರ ತದ್ಭವವಾಗಿ ಏಳೆ ಎಂಬುದು ಬಂದಿರಬಹುದೆಂದು ಮಾತ್ರ ತೋರುತ್ತದೆ.

ಈವರೆಗೆ ತಿಳಿದಿರುವಂತೆ, ಕನ್ನಡದ ಯಾವ ಶಾಸನದಲ್ಲಿಯೇ ಆಗಲಿ ಕಾವ್ಯದಲ್ಲಿಯೇ ಆಗಲಿ ಏಳೆಯ ಛಂದಸ್ಸಿನಲ್ಲಿರುವ ಪದ್ಯ ದೊರೆತಿಲ್ಲ. ಜಾನಪದ ಸಾಹಿತ್ಯದಲ್ಲಿ ಮಾತ್ರ ಅಂಥ ಪದ್ಯಗಳು ತಕ್ಕಮಟ್ಟಿಗೆ ದೊರೆಯುತ್ತವೆ. ಪ್ರಯೋಗಶೀಲ ಕವಿಗಳ ಪ್ರಯತ್ನದಿಂದ ಹೊಸಗನ್ನಡ ಕಾಲದಲ್ಲೂ ಈ ಹಳೆಯ ಛಂದಸ್ಸು ಪುನರುಜ್ಜೀವನಗೊಂಡಿರುವುದು ಕಾಣುತ್ತದೆ. ಎಸ್.ವಿ. ಪರಮೇಶ್ವರಭಟ್ಟರ ತುಂಬೆ ಹೂವು (1968) ಎಂಬುದು 700 ಏಳೆಗಳ ಸ್ವತಂತ್ರ ಕೃತಿ. ಏಳೆ ಅಚ್ಚಕನ್ನಡ ಛಂದಸ್ಸಿನಲ್ಲಿ ತುಂಬ ಹಳೆಯ ಪದ್ಯಜಾತಿಯಾಗಿರುವುದು ಸಾಧ್ಯ. ಏಳೆಯೇ ತ್ರಿಪದಿಯಾಗಿ ರೂಪಗೊಂಡಂತೆ ತೋರುವುದರಿಂದ ತ್ರಿಪದಿ ವ್ಯಾಪಕವೂ ಪ್ರಿಯವೂ ಆಗಿ ಬೆಳೆಯತೊಡಗಿದಂತೆ ಏಳೆ ರಚನೆಯಲ್ಲಿ ಹಿಂದೆ ಬಿದ್ದಿರಬೇಕೆಂದು ತೋರುತ್ತದೆ. (ಪ್ರಾಯಃ ಹಾಡಿಕೆಯಲ್ಲಿ ಅದರ 2ನೆಯ ಪಾದದ ಪುನರಾವರ್ತನೆ ಕಾರಣವಾಗಿ, ಒಂದು ಗಣ ಕೂಡಿ, ಇಡಿಯ ಏಳೆಯೇ ಮತ್ತೆ ಮಗುಚಿ ಬಂದಂತಾಗಿ ತ್ರಿಪದಿ ಕಾಣಿಸಿಕೊಂಡಿರುವುದು ಶಕ್ಯ. ಹಾಡಿನಲ್ಲಿ ತ್ರಿಪದಿಯ 2ನೆಯ ಪಾದದ 3 ಗಣಗಳ ಪುನರಾವೃತ್ತಿಯನ್ನು ಬಿಟ್ಟರೆ ಅದರ 3 ಪಾದಗಳ ಸಾಹಿತ್ಯ ಉಳಿಯುತ್ತದೆ. ಅಥವಾ, ಹಾಡಿನಲ್ಲಿ ಏಳೆಯ 2ನೆಯ ಪಾದದ 3 ಗಣಗಳನ್ನೂ ಹೇಳಿ ಮುಗಿಯುತ್ತಿದ್ದಂತೆ, ಮೀಟಿಗೆ ಇನ್ನೊಂದು ಗಣ ಕೂಡಿ, ಅದೇ ಪಾದದ ಮೊದಲ ಮೂರು ಗಣಗಳು ಇನ್ನೊಮ್ಮೆ ಆವೃತ್ತಿಗೊಂಡು ಕೂಡ ತ್ರಿಪದಿಯಾಗಿರುವುದು ಸಾಧ್ಯ.)

ಅಚ್ಚಕನ್ನಡ ಛಂದಸ್ಸಿನ ಮಟ್ಟುಗಳಲ್ಲಿ ಏಳೆಯೇ ಅತಿ ಚಿಕ್ಕದು. ಅದರಲ್ಲಿ ವಿವರವಾದ ಭಾವವನ್ನಾಗಲಿ ಸಂಗತಿಯನ್ನಾಗಲಿ ತರುವುದು ಸಾಧ್ಯವಿಲ್ಲ. ಆದಕಾರಣ ಚುರುಕಿನ ನಡೆಯ ಕೋಲಾಟ, ಪ್ರಶ್ನೋತ್ತರ ಮೊದಲಾದವುಗಳಲ್ಲಿ ಇದು ಹೆಚ್ಚಾಗಿ ಬಳಕೆಗೆ ಬಂದಿರಬಹುದು ಎಂದು, ನಿದರ್ಶನಗಳನ್ನು ಗಮನಿಸಿ, ಊಹಿಸಬಹುದಾಗಿದೆ. ಏಳೆಯೇ ಗೀತಿಕೆ, ಸಾಂಗತ್ಯ ಮೊದಲಾದ ಇತರ ಕೆಲವು ಅಂಶವೃತ್ತಗಳಿಗೆ ಮೂಲವೆಂದು ಕೆಲವರು ಭಾವಿಸುತ್ತಾರೆ. ಆದರೆ ಇದನ್ನು ಖಚಿತವಾಗಿ ಸಾಧಿಸುವುದಕ್ಕೆ ಆಯಾ ಮಟ್ಟಿನ ಸಾಮಾನ್ಯ ಲಕ್ಷಣದ ಗಣರಚನೆ ಎಡೆಗೊಡುವುದಿಲ್ಲ. ತಮಿಳಿನ ಪ್ರಾಚೀನ ಕುಱಳ್‌ವೆಣ್ಬಾ ವೃತ್ತವನ್ನು ಏಳೆ ಹೋಲುತ್ತದೆ. ತಮಿಳು ಮತ್ತು ಕನ್ನಡಗಳ ಅಂಶಗಣರಚನೆ ವಿಶಿಷ್ಟವಾದುದೆಂಬುದನ್ನು ನೆನೆದರೆ ಆ ಎರಡು ಪದ್ಯಜಾತಿಗಳ ಪ್ರತ್ಯೇಕತೆ ಮನವರಿಕೆಯಾಗುತ್ತದೆ.

ಈಗ ಏಳೆಯ ಲಕ್ಷಣ ಹೇಗೆ ಕೆಲವು ನಿದರ್ಶನಗಳಲ್ಲಿ ಗೋಚರವಾಗುತ್ತದೆ ಎಂಬುದನ್ನು ನೋಡಬಹುದು :

1 ಸಾಮಾನ್ಯ ಲಕ್ಷಣಕ್ಕೆ ಹೊಂದುವ ಲಕ್ಷ್ಯ :

ವಿ ವಿ * ವಿ ವಿ
ಹಡೆದ ತಾ।ಯಿಗೆ ಬನ್ನಿ । ಹಡೆದ ತಂ।ದೆಗೆ ಬನ್ನಿ ।
ವಿ ಬ್ರ ವಿ
ಪಡೆದ ಗಂ।ಡನಿಗೆ। ನಮ ಬನ್ನಿ ॥

2 ಅಪವಾದ ರೀತಿಯ ರಚನೆಗೆ ಲಕ್ಷ್ಯ :

ರು
i ಚಿನ್ನದ । ಕೈಗಡಗ । ಚೆನ್ನೇರು । ಇಟಗೊಂಡು ।
ಚಿನ್ನದಾ।ಭರಣ । ನಡಬಾಗಿ ॥

ರು
ii ಹಂದರದ । ಜನ ಕೇಳಿ । ಬಂಧು ಬ।ಳಗ ಕೇಳಿ ।
ರು
ಒಪ್ಪಿ ಮಗ । ಳೆನಗ।ಕೊಡಬೇಕ ॥

iii ಅರಿಯ । ಹೆಡೆಯಾಗಿ । ಬಾರಿಯ । ಗಣೆಯಾಗಿ ॥
ವಿ
ಮುತ್ತಿನ । ಪಗ್ಗಕ । ಕಡೆಗೋಲ ॥

iv ಮೂಡಣ । ದಿಕ್ಕಿನ । ಕತ್ತಲ । ಹರಿದ್ಹೋಗಿ।
ದಾಳಿಂಬ । ಕದವು । ಡಣಲಂದು ॥

(ಟಿ.ವಿ.ವಿ.)



ಕನ್ನಡ ವರ್ಣಮಾಲೆಯ ಹನ್ನೊಂದನೆಯ ಅಕ್ಷರ. ದೀರ್ಘ ಸ್ವರ. ಸಾಮಾನ್ಯವಾಗಿ ಸ್ವತಂತ್ರವಾಗಿ ದೊರಕುವುದು ಕಷ್ಟ. ವ್ಯಂಜನಗಳ ಜೊತೆಯಲ್ಲಿ ದೊರೆಯುತ್ತದೆ. ಅಶೋಕನ ಕಾಲದ ಬ್ರಾಹ್ಮೀ ಲಿಪಿಯಲ್ಲಿ ವ್ಯಂಜನದ ಬಲಗಡೆ ಎರಡು ಸಣ್ಣ ಗೆರೆಗಳನ್ನು ಬರೆಯುತ್ತಿದ್ದುದು ಕಾಣಬರುತ್ತದೆ. ಕಾಲಕ್ರಮದಲ್ಲಿ ಈ ಎರಡು ರೇಖೆಗಳು ಕೊಂಡಿಯ ರೂಪವನ್ನು ತಾಳಿ, ಅಕ್ಷರದ ಕೆಳಭಾಗದಲ್ಲಿ ಬರೆಯುವ ಕ್ರಮ ರೂಢಿಗೆ ಬಂತು. ಶಾಸನಗಳಲ್ಲಿ ಐದು ಎಂಬುದನ್ನು ಅಯಿದು ಎಂದೂ ಐವತ್ತು ಎಂಬುದನ್ನು ಆಯವತ್ತು ಎಂದೂ ಬರೆದಿರುವುದನ್ನು ಗಮನಿಸಿದಲ್ಲಿ ಈ ಅಕ್ಷರದ ಉಚ್ಚಾರಣಾವೈವಿಧ್ಯ ಗೊತ್ತಾಗುತ್ತದೆ. ಇದು ಸಂಯುಕ್ತ ಸ್ವರ. (ಎ.ವಿ.ಎನ್.)

| ಥೈ | ಕೈ | |
|---|---|---|
| [illegible] | – | ಅಶೋಕ. ಕ್ರಿ.ಪೂ. ೩ನೆಯ ಶತಮಾನ |
| – | [illegible] | ಕದಂಬ. ಕ್ರಿ.ಶ. ೬ನೆಯ ಶತಮಾನ |
| – | [illegible] | ಗಂಗ. ಕ್ರಿ. ಶ. ೭ ನೆಯ ಶತಮಾನ |
| – | – | ರಾಷ್ಟ್ರಕೂಟ. ಕ್ರಿ.ಶ. ೯ನೆಯ ಶತಮಾನ |
| – | – | ಕಲ್ಯಾಣಿ ಚಾಳುಕ್ಯ. ಕ್ರಿ.ಶ ೧೧ನೆಯ ಶತಮಾನ |
| – | [illegible] | ಹೊಯ್ಸಳ. ಕ್ರಿ.ಶ. ೧೩ನೆಯ ಶತಮಾನ |
| – | [illegible] | ವಿಜಯನಗರ. ಕ್ರಿ.ಶ. ೧೫ನೆಯ ಶತಮಾನ |
| – | [illegible] | ಮುದಕೆರಿನಾಯಕ. ಕ್ರಿ.ಶ ೧೮ನೆಯ ಶತಮಾನ |

**ಐಂಥೊವೆನ್, ವಿಲೆಂ:** 1860–1927. ಲೀಡನ್ ವಿಶ್ವವಿದ್ಯಾನಿಲಯದಲ್ಲಿ ಅಂಗರಚನಾಶಾಸ್ತ್ರದ ಪ್ರಾಧ್ಯಾಪಕ. ಆಸಕ್ತಿ ಭೌತಶಾಸ್ತ್ರದಲ್ಲೂ ಇತ್ತು. ಗುಂಡಿಗೆಯ ವಿದ್ಯುದ್ವಿಭವಗಳಲ್ಲಿ ಉಂಟಾಗುವ ಸೂಕ್ಷ್ಮತಮ ವ್ಯತ್ಯಾಸಗಳನ್ನು ಗುರುತಿಸುವ ಎಲೆಕ್ಟ್ರೊಕಾರ್ಡಿಯೋಗ್ರಾಫ್ ಸಾಧನವನ್ನು ಕಂಡುಹಿಡಿದ. ಇದಕ್ಕಾಗಿ ಈತನಿಗೆ 1924ರಲ್ಲಿ ನೊಬೆಲ್ ಪಾರಿತೋಷಕ ದೊರೆಯಿತು. ಗುಂಡಿಗೆಯಲ್ಲೇಳುವ ವಿದ್ಯುತ್ತಿನ ವಿಚಾರದಲ್ಲಿ ಮೊದಲಿನಿಂದಲೂ ಬಲು ಆಸಕ್ತನಾಗಿದ್ದು ಗುಂಡಿಗೆ ಬಡಿದುಕೊಳ್ಳುವಾಗ ಏಳುವ ವಿದ್ಯುತ್ತಿನ ಸೂಕ್ಷ್ಮತಮ ವಿದ್ಯುದ್ವಿಭವ ವ್ಯತ್ಯಾಸಗಳನ್ನು ತೋರುವ ದಾರದ ಗ್ಯಾಲ್ವನೊಮೀಟರನ್ನು ಕಂಡುಹಿಡಿದ. ಅದು ಸೂಚಿಸುವ ವ್ಯತ್ಯಾಸಗಳನ್ನು ಗುರುತಿಸುವ ಯಂತ್ರಸಾಧನವಾಗಿ ಎಲೆಕ್ಟ್ರೊಕಾರ್ಡಿಯೊಗ್ರಾಫ್ ಸುಮಾರು 20 ವರ್ಷಗಳ ಕಾಲ ಬಳಕೆಯಲ್ಲಿತ್ತು. ಹೀಗೆ ಗುರುತಿಸಿದ ಚಿತ್ರವನ್ನು ಗುಂಡಿಗೆಯ ತಂತಿ ಸುದ್ದಿ ಎಂದು ಅವನು ಕರೆಯುತ್ತಿದ್ದ. ಇದೇ ಅಲ್ಲದೆ ಇದನ್ನು ಚಿತ್ರಿಸಲು ಮೈಯಲ್ಲಿ ತಂತಿಗಳನ್ನು ಎಲ್ಲೆಲ್ಲಿ ತಗುಲಿಸಬೇಕೆಂದೂ ಇವನು ನಿರ್ಧರಿಸಿದ್ದು ಈಗಲೂ ಜಾರಿಯಲ್ಲಿದೆ. ಇಂದು ಬಳಕೆಯಲ್ಲಿರುವ ಸುಧಾರಿತ ಎಲೆಕ್ಟ್ರೊಕಾರ್ಡಿಯೋಗ್ರಾಫ್ ಕೂಡ ಇದೇ ಮಾದರಿಯದು. (ಡಿ.ಎಸ್.ಎಸ್.)

**ಐಕ್‍ಮನ್, ಕ್ರಿಶ್ಚಿಯನ್:** 1858-1930. ಆಹಾರ ಪುಷ್ಟಿಯನ್ನು ಕುರಿತ ಸಂಶೋಧನೆಗಳಿಗೆ ಹೆಸರಾದ ಡಚ್ ರೋಗಶಾಸ್ತ್ರಜ್ಞ. ಬೆರಿಬೆರಿ ರೋಗವನ್ನು ನಿವಾರಿಸುವ ಜೀವಾತುವಾದ ಅನ್ಯೂರಿನನ್ನು ಕಂಡುಹಿಡಿದು ನೊಬೆಲ್ ಬಹುಮಾನ ಪಡೆದ (1929). ಆಂಸ್ಟರ್ಡಾಂ ವಿಶ್ವವಿದ್ಯಾನಿಲಯದಲ್ಲಿ ವೈದ್ಯ ಪದವೀಧರನಾದ. ಬರ್ಲಿನ್ನಲ್ಲಿದ್ದ ಪ್ರಪಂಚಕ್ಕೆ ಹೆಸರಾಗಿದ್ದ ರಾಬರ್ಟ್ ಕಾಕ್ ಕೈಕೆಳಗೆ ಏಕಾಣುಜೀವಿಶಾಸ್ತ್ರ ಕಲಿತ. ಅಲ್ಲಿಂದ ಡಚ್ಚರ ವಸಾಹತಾಗಿದ್ದ ಬಟೇವಿಯಕ್ಕೆ (ಇಂದಿನ ಇಂಡೊನೇಷ್ಯ) ಹೋಗಿ ಅಲ್ಲಿ ರೋಗಶಾಸ್ತ್ರ ಸಂಶೋಧನಸಂಸ್ಥೆಗೆ ನಿರ್ದೇಶಕನಾದ. ಆ ದೇಶದಲ್ಲಿ ಬಹುವಾಗಿ ಹರಡಿ ಕಾರಣವೇ ಗೊತ್ತಿಲ್ಲದೆ ಜನರು ಬಲಿಯಾಗುತ್ತಿದ್ದ ಬೆರಿಬೆರಿ ರೋಗದ ಸಂಶೋಧನೆಯನ್ನು 1890ರಿಂದ ಸುಮಾರು ಏಳು ವರ್ಷಗಳ ಕಾಲ ನಡೆಸಿದ. ಹೊಳಪಿಟ್ಟ ಬಿಳಿಯ ಅಕ್ಕಿ ಹಾಕಿ ಪಾರಿವಾಳಗಳನ್ನು ಸಾಕಿ ಬೆರಿಬೆರಿ ರೋಗ ಬರುವುದನ್ನು ಮೊದಲು ತೋರಿಸಿಕೊಟ್ಟ. ಇನ್ನೊಬ್ಬ ಡಚ್ ವೈದ್ಯ ಗ್ರಿನ್ಸ್‌ನೊಂದಿಗೆ ಸೇರಿ ಬೆರಿಬೆರಿ ರೋಗಕ್ಕೆ ಅಕ್ಕಿತವುಡೇ ಮದ್ದು ಎನ್ನುವುದನ್ನು ತೋರಿಸಿದಾಗ ಇಡೀ ಜೀವಾತುಗಳ ಶೋಧನೆಯ ನಾಂದಿ ಆಯಿತು. ಮತ್ತೆ ಹಾಲೆಂಡಿಗೆ ಮರಳಿ ಆರೋಗ್ಯಶಾಸ್ತ್ರ ಪ್ರಾಧ್ಯಾಪಕನಾಗಿದ್ದ. ಸಾಯುವ 2 ವರ್ಷ ಮುಂಚೆ ನಿವೃತ್ತನಾದ. (ಡಿ.ಎಸ್.ಎಸ್.)

**ಐಕ್ಹಾರ್ನಿಯ:** ನೀರಿನಲ್ಲಿ ಅಥವಾ ಹೆಚ್ಚಿನ ತೇವದಲ್ಲಿ ಬೆಳೆಯುವ, ಮೂಲಿಕೆಯಂಥ ಒಂದು ಏಕದಳ ಸಸ್ಯಜಾತಿ. ಪಾಂಟಿಡೇರಿಯೇಸಿ ಕುಟುಂಬಕ್ಕೆ ಸೇರಿದೆ. ಈ ಜಾತಿಯಲ್ಲಿ 5 ಪ್ರಭೇದಗಳಿವೆ. ಅವುಗಳಲ್ಲಿ ಐ. ಕ್ರ್ಯಾಸಿಪೆಸ್ ಎಂಬುದು ಮುಖ್ಯವಾದದ್ದು.

ಐಕ್ಹಾರ್ನಿಯ ಸಸ್ಯದ ಕಾಂಡ ಸಂಯುಕ್ತ ರೀತಿಯದು. ಪಕ್ಕದ ಕಾಂಡ ಮುಖ್ಯ ಕಾಂಡಕ್ಕೆ ಅಂಟಿಕೊಂಡಿರುತ್ತದೆ. ಗಿಣ್ಣಿನ ಬಳಿ ಬೇರು. ಎಲೆಗಳು ಚಕ್ರ ಅಥವಾ ಹೃದಯದ ಆಕಾರವಾಗಿರುತ್ತವೆ. ಐ. ಕ್ರ್ಯಾಸಿಪೆಸಿನಲ್ಲಿ ಎಲೆಯ ತೊಟ್ಟು ಚೀಲದಂತೆ



ಐಕ್ಹಾರ್ನಿಯ ಕ್ರ್ಯಾಸಿಪೆಸ್

ಊದಿಕೊಂಡಿರುತ್ತದೆ. ಹೂಗೊಂಚಲು ತೆನೆಯಾಗಿದ್ದು ಉಪಪತ್ರ ಅಥವಾ ಯುಗದಿಂದ ಆವೃತವಾಗಿರುತ್ತದೆ. ಹೂಗಳು ದ್ವಿಲಿಂಗಿಗಳಾಗಿಯೂ ಪಾರ್ಶ್ವಸೌಷ್ಠವವುಳ್ಳವಾಗಿಯೂ ಇವೆ. ಪುಷ್ಪಾಂಗ ಸಂಖ್ಯೆ ಮೂರರ ಅಪವರ್ತ್ಯದಲ್ಲಿದೆ. ಆಲಿಕೆಯಾಕಾರದಲ್ಲಿರುವ ಪುಷ್ಪಾವರಣ ನೀಲನೇರಳೆ ಅಥವಾ ಬಿಳಿ ಬಣ್ಣದ್ದು. ಅದರಲ್ಲಿ 6 ಪುಷ್ಪಪತ್ರಗಳಿರುತ್ತವೆ. ಕೇಸರಗಳು 6. ಕೇಸರದಂಡಗಳಲ್ಲಿ 3 ಉದ್ದವಾಗಿಯೂ 3 ಚಿಕ್ಕವಾಗಿಯೂ ಇವೆ. ಅಂಡಕೋಶದಲ್ಲಿ 3 ಭಾಗಗಳಿವೆ. ಅಂಡಾಶಯ ಉಚ್ಚಸ್ಥಿತಿಯಲ್ಲಿದೆ. ಅಂಡಕಗಳು ಪ್ರತಿಕುಹರದಲ್ಲೂ ಅಧಿಕ ಸಂಖ್ಯೆಯಲ್ಲಿವೆ.

ಐ. ಕ್ರ್ಯಾಸಿಪೆಸ್ ಎಂಬ ಪ್ರಭೇದ ಅಮೆರಿಕ, ಆಸ್ಟ್ರೇಲಿಯ, ಜಾವ, ಭಾರತ, ಪಾಕಿಸ್ತಾನ್ ಮುಂತಾದ ದೇಶಗಳಲ್ಲಿ ಹೆಚ್ಚಾಗಿದ್ದು ನೀರಿನಲ್ಲಿ ಬೃಹತ್ ಕಳೆಯಾಗಿ ವ್ಯಾಪಿಸಿ ತೊಂದರೆಯನ್ನುಂಟುಮಾಡುತ್ತಿದೆ. ಕೆಲವು ಕಡೆಗಳಲ್ಲಿ ಹಡಗಿನ ಸಂಚಾರಕ್ಕೂ ಅಡ್ಡಿಯನ್ನುಂಟುಮಾಡಿದೆ. ಕೆರೆ, ಕಾಲುವೆ, ಕುಂಟೆಗಳಲ್ಲಿ ಒತ್ತಾಗಿ ಬೆಳೆದು ಸೊಳ್ಳೆಗಳ ಉದ್ಭವಸ್ಥಾನವಾಗಿದೆ. ಈ ಸಸ್ಯವನ್ನು ನಿರ್ಮೂಲ ಮಾಡುವುದು ಒಳ್ಳೆಯದಾದರೂ ಈ ಜಾತಿಯ ಕೆಲವು ಪ್ರಭೇದಗಳನ್ನಾದರೂ ಅವುಗಳ ಚೆಲುವಾದ ಹೂಗಳಿಗಾಗಿ ಉಳಿಸಿಕೊಳ್ಳಬೇಕಾಗುತ್ತದೆ. (ಬಿ.ಎನ್.ಎನ್.ಆರ್.)

**ಐಚ್ಛಿಕ ವಿಷಯಗಳು:** ವಿದ್ಯಾರ್ಥಿ ತನ್ನ ಇಚ್ಛೆಗೆ ಅನುಸಾರವಾಗಿ ಆರಿಸಿಕೊಳ್ಳುವ ಅಧ್ಯಯನ ವಿಷಯಗಳು (ಆಪ್ಷನಲ್ ಸಬ್ಜೆಕ್ಟ್ಸ್). ಭಾರತದಲ್ಲಿ ಸಾಮಾನ್ಯವಾಗಿ ಪ್ರೌಢಶಾಲೆ ಮತ್ತು ಕಾಲೇಜುಗಳಲ್ಲಿ ಹೀಗೆ ಆರಿಸಿಕೊಳ್ಳುವ ಅವಕಾಶವಿರುತ್ತದೆ. ಕೆಲವು ಕಡೆಗಳಲ್ಲಿ ಪ್ರಾಥಮಿಕ ಶಾಲೆಯ ಮೇಲ್ತರಗತಿಗಳಲ್ಲೂ ಇಂಥ ಅವಕಾಶ ಉಂಟು. ವಿಷಯದ ಆಯ್ಕೆಗೆ ವಿದ್ಯಾರ್ಥಿಯ ಆಸಕ್ತಿ ಅಭಿರುಚಿಗಳೇ ನಿರ್ಣಾಯಕ ಕಾರಣಗಳು. ಜೊತೆಗೆ ತಾನು ಕೈಗೊಳ್ಳಬೇಕೆಂದಿರುವ ಕಸಬಿಗೆ ಅನುಕೂಲವಾಗುವಂಥ ವಿಷಯಗಳನ್ನು ಆಯ್ದುಕೊಂಡು ಅವುಗಳಲ್ಲಿ ಪರಿಣತಿಯನ್ನು ಸಾಧಿಸಿದರೆ ಇನ್ನೂ ಉತ್ತಮ.

ಪ್ರೌಢಶಾಲೆಗಳಲ್ಲಿ ಹುಡುಗರ ಆಸಕ್ತಿಗಳಿಗೆ ಅನುಗುಣವಾಗಿ ಅವರವರ ಯೋಗ್ಯತೆಗೆ ತಕ್ಕಂತೆ ಅನೇಕ ಐಚ್ಛಿಕ ವಿಷಯಗಳಿವೆ. ಇವನ್ನು ಎರಡು ಮತ್ತು ಮೂರನೆಯ ವರ್ಷಗಳಲ್ಲಿ ವ್ಯಾಸಂಗ ಮಾಡಬೇಕು. ಇತ್ತೀಚಿನವರೆಗೂ ಮೈಸೂರು ರಾಜ್ಯದಲ್ಲಿ ಮೂರು ವಿಷಯಗಳನ್ನು ಒಳಗೊಂಡ ಒಂದು ಅಧ್ಯಯನ ಸಮೂಹವನ್ನು ಆರಿಸಿಕೊಳ್ಳಲು ಅವಕಾಶವಿತ್ತು. ಅಂಥ ಎಂಟು ಅಧ್ಯಯನ ವಿಷಯ ಸಮೂಹಗಳನ್ನೂ ಒಂದೊಂದು ವಿಷಯದಲ್ಲೂ ಆಯಬಹುದಾದ ವಿಷಯಗಳನ್ನೂ ಕೆಳಗೆ ಸೂಚಿಸಿದೆ : 1 ಮಾನವಿಕ ಗುಂಪಿನ ವಿಷಯಗಳು : i ಆಧುನಿಕ ಭಾಷೆ

(ಕನ್ನಡ, ತೆಲುಗು, ಹಿಂದಿ, ಮರಾಠಿ, ಉರ್ದು, ಇಂಗ್ಲಿಷ್, ಫ್ರೆಂಚ್ ಮತ್ತು ಜರ್ಮನ್) ii ಪ್ರಾಚೀನ ಭಾಷೆ (ಸಂಸ್ಕೃತ, ಪಾಳಿ, ಪ್ರಾಕೃತ, ಪರ್ಷಿಯನ್ ಅಥವಾ ಅರಬ್ಬೀ ಭಾಷೆ) iii ಗಣಿತ iv ಚರಿತ್ರೆ v ಭೂಗೋಳಶಾಸ್ತ್ರ vi ಅರ್ಥಶಾಸ್ತ್ರ vii ರಾಜನೀತಿಶಾಸ್ತ್ರ viii ಪೌರನೀತಿ ix ಸಮಾಜಶಾಸ್ತ್ರ. 2 ವಿಜ್ಞಾನಶಾಸ್ತ್ರದ ಗುಂಪಿನ ವಿಷಯಗಳು : ಇವುಗಳಲ್ಲಿ ಯಾವುದಾದರೂ ಒಂದು ಗುಂಪನ್ನು ಆರಿಸಬಹುದು. i ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಗಣಿತಶಾಸ್ತ್ರ ii ಭೌತಶಾಸ್ತ್ರ, ರಸಾಯನಶಾಸ್ತ್ರ ಮತ್ತು ಜೀವಶಾಸ್ತ್ರ. 3 ತಾಂತ್ರಿಕ ಗುಂಪಿನ ವಿಷಯಗಳು : i ಗಣಿತಶಾಸ್ತ್ರ ii ಭೌತಶಾಸ್ತ್ರ iii ರಸಾಯನಶಾಸ್ತ್ರ iv ಎಂಜಿನಿಯರಿಂಗ್, ಡ್ರಾಯಿಂಗ್. 4 ವ್ಯವಸಾಯಶಾಸ್ತ್ರ: i ರಸಾಯನಶಾಸ್ತ್ರ ii ಜೀವಶಾಸ್ತ್ರ iii ಪಶುಸಂಗೋಪನ iv ತೋಟಗಾರಿಕೆ ಮತ್ತು ವ್ಯವಸಾಯಶಾಸ್ತ್ರ. 5 ವಾಣಿಜ್ಯದ ಗುಂಪಿನ ವಿಷಯಗಳು : ಇವುಗಳಲ್ಲಿ ಯಾವುದಾದರೂ ಮೂರು ವಿಷಯಗಳು : i ವಾಣಿಜ್ಯಶಾಸ್ತ್ರ ii ಜಮಾಖರ್ಚು ಅಥವಾ ಬುಕ್ ಕೀಪಿಂಗ್ iii ಟೈಪ್‌ರೈಟಿಂಗ್ iv ಅರ್ಥಶಾಸ್ತ್ರ v ಸಹಕಾರಶಾಸ್ತ್ರ vi ಶೀಘ್ರಲಿಪಿ ಅಥವಾ ಷಾರ್ಟ್‌ಹ್ಯಾಂಡ್ vii ವಾಣಿಜ್ಯ ಭೂಗೋಳ. 6 ಗೃಹವಿಜ್ಞಾನ : i ಅ. ಗೃಹಕಾರ್ಯ ನಿರ್ವಹಣೆ ಆ. ನೆಯ್ಗೆ, ಬಟ್ಟೆಗಳು. ii ಆಹಾರ, ದೇಹಪೋಷಣೆ ಮತ್ತು ಅಡಿಗೆ iii ಶಿಶುಸಂರಕ್ಷಣೆ ಮತ್ತು ಮಕ್ಕಳ ಬೆಳೆವಣಿಗೆ ಮತ್ತು ತಾಯ್ತನದ ಕಲೆ. 7 ಲಲಿತಕಲೆಗಳು : i ಚಿತ್ರಕಲೆ ಮತ್ತು ವರ್ಣಕಲೆ ii ಸಂಗೀತ—ಕರ್ಣಾಟಕ ಸಂಗೀತ, ಹಿಂದೂಸ್ತಾನಿ ಸಂಗೀತ, ಪಾಶ್ಚಾತ್ಯ ಸಂಗೀತ iii ನೃತ್ಯ–ಭರತನಾಟ್ಯ; ಕಥಕ್ಕಳಿ: iv ಶಿಲ್ಪಶಾಸ್ತ್ರ. 8 ಮತ್ಸ್ಯೋದ್ಯಮಶಾಸ್ತ್ರದ ಗುಂಪಿನ ವಿಷಯಗಳು : i ರಸಾಯನಶಾಸ್ತ್ರ ii ಜೀವಶಾಸ್ತ್ರ iii ಮತ್ಸ್ಯೋದ್ಯಮ ತಂತ್ರ.

ಮಾಧ್ಯಮಿಕ ಶಾಲಾ ಘಟ್ಟದಲ್ಲೂ ಐಚ್ಛಿಕ ವಿಷಯಗಳನ್ನು ಇಟ್ಟಿದ್ದಾರೆ. ಅವುಗಳಲ್ಲಿ ಬಡಗಿ ಕೆಲಸ, ವ್ಯವಸಾಯ, ದರ್ಜಿ ಕೆಲಸ, ಕಮ್ಮಾರನ ಕೆಲಸ ಇತ್ಯಾದಿಗಳು ಮುಖ್ಯವಾದುವು. ಈ ಐಚ್ಛಿಕ ವಿಷಯಗಳ ಉದ್ದೇಶ ಬಾಲಕರು ಮಾಧ್ಯಮಿಕ ಶಾಲೆಯ ವಿದ್ಯಾಭ್ಯಾಸದ ಅನಂತರ ಸೂಕ್ತ ಉದ್ಯೋಗಗಳನ್ನು ಕೈಗೊಳ್ಳಲು ಅನುವು ಮಾಡುವುದೇ ಆಗಿದೆ.

ಐಚ್ಛಿಕ ವಿಷಯಗಳ ಬಗ್ಗೆ ಹೊಸ ಪ್ರಯೋಗಗಳು : 1956ರಲ್ಲಿ ಪ್ರಕಟವಾದ ಕೊಠಾರಿ ಶಿಕ್ಷಣ ಆಯೋಗದ ಸಲಹೆಯಂತೆ ಪ್ರೌಢಶಾಲೆಯ ಹಂತದಲ್ಲಿ ಐಚ್ಛಿಕ ವಿಷಯಗಳನ್ನು ಆರಂಭಿಸುವುದನ್ನು ಮುಂದೆ ಹಾಕುವ ಯತ್ನ ನಡೆಯುತ್ತಿದೆ. ಆಧುನಿಕ ಸಮಾಜಜೀವನ ಹೆಚ್ಚು ಹೆಚ್ಚು ಸಂಕೀರ್ಣವಾದಂತೆ ಹೆಚ್ಚಿನ ಸಾಮಾನ್ಯ ಶಿಕ್ಷಣ ಅಗತ್ಯವೆಂದೂ ವಿಶಿಷ್ಟ ಅಧ್ಯಯನಕ್ಷೇತ್ರಕ್ಕೆ ಕಾಲಿಡಲು ಅದು ತೀರ ಎಳೆಯ ವಯಸ್ಸೆಂದೂ ಈ ಸಲಹೆಯನ್ನು ಮಾಡಲಾಗಿದೆ. ಕೆಲವು ರಾಜ್ಯಗಳಲ್ಲಿ ಈ ಸಲಹೆಯನ್ನನುಸರಿಸಿ ಪ್ರೌಢಶಾಲೆಗಳಲ್ಲಿ ಐಚ್ಛಿಕ ವಿಷಯಗಳನ್ನೇ ತೆಗೆದುಹಾಕಿ ಜೂನಿಯರ್ ಕಾಲೇಜಿನಲ್ಲಿ ಅವಕ್ಕೆ ಅವಕಾಶ ಕಲ್ಪಿಸಲಾಗುತ್ತಿದೆ. ಈ ಹೊಸ ಪ್ರಯೋಗದ ಬಗ್ಗೆ ಶಿಕ್ಷಣವೇತ್ತರಲ್ಲಿ ಒಮ್ಮತ ಅಭಿಪ್ರಾಯವಿಲ್ಲ. ಸದ್ಯದ ಪ್ರಯೋಗದ ಫಲಾಫಲಗಳನ್ನು ನೋಡಿಕೊಂಡು ಮುಂದೆ ಆ ಬಗ್ಗೆ ಸಾರ್ವತ್ರಿಕವೂ ಸಾಧುವೂ ಆದ ತೀರ್ಮಾನಗಳನ್ನು ಕೈಕೊಳ್ಳಬೇಕಾಗುತ್ತದೆ. (ಕೆ.ಆರ್.ವಿ.)

**ಐಡರ್ ಬಾತು :** ಸೊಮಟೇರಿಯ ಜಾತಿಗೆ ಸೇರಿದ ಕಡಲಬಾತು. ಇವುಗಳಲ್ಲಿ ಹಲವು ಬಗೆಯ ಪ್ರಭೇದಗಳಿದ್ದರೂ ಅಮೆರಿಕದ ಐಡರ್ (ಸೊ. ಡ್ರೆಸ್ಸೇರಿ) ಮತ್ತು ಯೂರೋಪಿನ ಐಡರ್ (ಸೊ. ಮೊಲ್ಲಿಸ್ಸಿಮ) ಎಂಬುವು ಪ್ರಸಿದ್ಧವಾದುವು. ಇವು ಲ್ಯಾಬ್ರಡಾರ್, ನ್ಯೂಫೌಂಡ್‌ಲೆಂಡ್, ಗ್ರೀನ್‌ಲೆಂಡ್, ಐಸ್ಲೆಂಡ್ ಮತ್ತು ನಾರ್ವೆಗಳ ಕಡಲ ತೀರ ಪ್ರದೇಶಗಳಲ್ಲಿ ವಾಸಿಸುತ್ತವೆ. ಇವುಗಳ ತಲೆ ವಿಚಿತ್ರ ಹಾಗೂ ವೈಶಿಷ್ಟ್ಯಪೂರ್ಣವಾದದ್ದು. ತಲೆ ದಪ್ಪ; ಕೊಕ್ಕು ಮೂರು ಅಂಗುಲಗಳಷ್ಟು ಉದ್ದವಿದ್ದು ಮುಂದಲೆಯಿಂದ ಹೊರಟ ಪುಕ್ಕ ಮೂಗಿನ ಹೊಳ್ಳೆಯ ವರೆಗೂ ಚಾಚಿರುವುದರಿಂದ ಹಳದಿ ಬಣ್ಣದ ಕೊಕ್ಕು ಪುಕ್ಕಮಯವಾಗಿರುವಂತೆ ಕಾಣುತ್ತದೆ. ಗಂಡು ಬಾತಿನ ತಳಭಾಗದಲ್ಲಿ ಕಪ್ಪು ಪುಕ್ಕಗಳಿವೆ. ತಲೆ ಮತ್ತು ಬೆನ್ನಿನ ಭಾಗ ಪೆಲ್ಲ ಬಿಳುಪು ಪುಕ್ಕಗಳಿಂದ ಆವೃತವಾಗಿದೆ. ಹೆಣ್ಣಿನ ರೆಕ್ಕೆಯನ್ನು ಅಗಲಿಸಿದರೆ ಕೆಂಪು ಚುಕ್ಕೆಗಳಿಂದ ಕೂಡಿದ ಎರಡು ಕಪ್ಪು ಪಟ್ಟೆಗಳನ್ನು ಕಾಣಬಹುದು. ಈ ಹಕ್ಕಿಗಳು ಏಡಿ, ಕಡಲ ಡುಬ್ಬಿ ಮತ್ತು ಕಪ್ಪೆಚಿಪ್ಪು ಹುಳುಗಳನ್ನು ನುಂಗಿ ಜೀರ್ಣಿಸಿಕೊಳ್ಳುತ್ತವೆ. ಚೆನ್ನಾಗಿ ಈಜುತ್ತವೆ. 20–30 ಅಡಿಗಳ ಆಳದ ವರೆಗೂ ನೀರಿನಲ್ಲಿ ಮುಳುಗಬಲ್ಲುವು. ಸಂತಾನೋತ್ಪತ್ತಿ ಕಾಲದಲ್ಲಿ ಹೆಣ್ಣುಬಾತು ಸಮುದ್ರದ ದಡದ ಮೇಲೆ ಬೆಳೆದಿರುವ ಜೊಂಡುಹುಲ್ಲಿನ ಸಹಾಯದಿಂದ ಗೂಡನ್ನು ಮಾಡಿಕೊಂಡು ಅದರಲ್ಲಿ ತನ್ನ ಎದೆಯ ಪುಕ್ಕವನ್ನು ಚೆಲ್ಲಿ ಮೃದುವಾದ ಹಾಸಿಗೆಯನ್ನು ಮಾಡಿಕೊಂಡು ಮೊಟ್ಟೆಗಳನ್ನಿಡುತ್ತದೆ. ಒಂದೊಂದು ಗೂಡಿನಲ್ಲಿ ಸರಾಸರಿ ಐದು ಮೊಟ್ಟೆಗಳಿರುತ್ತವೆ. ಗೂಡು ಬಿಟ್ಟು ಹೊರಗೆ ಬರುವಾಗಲೆಲ್ಲ ಹೆಣ್ಣುಬಾತು ತನ್ನ ಎದೆಯ ಭಾಗದ ಪುಕ್ಕವನ್ನು ಮೊಟ್ಟೆಗಳ ಮೇಲೆ ಉದುರಿಸಿ ಹೊದಿಕೆ ಮಾಡುತ್ತದೆ. ಅಲ್ಲಿನ ನಿವಾಸಿಗಳು ತಮ್ಮ ಆಹಾರಕ್ಕಾಗಿ ಮೊಟ್ಟೆಗಳನ್ನೂ ಹಾಸಿಗೆ ಮತ್ತು ಹೊದಿಕೆಗಳ ತಯಾರಿಕೆಗೆ ಪುಕ್ಕಗಳನ್ನೂ ಸಂಗ್ರಹಿಸುತ್ತಾರೆ. ಗೂಡು ಖಾಲಿಯಾದಂತೆಲ್ಲ ಹೆಣ್ಣುಬಾತು ಮತ್ತೆ ಪುಕ್ಕಗಳನ್ನು ಬಿಚ್ಚಿ ಹಾಸಿಗೆ ಮಾಡಿಕೊಂಡು ಮೊಟ್ಟೆಗಳನ್ನು



ಇಡುತ್ತದೆ. ಹೆಣ್ಣು ಐಡರ್ ಬಾತಿನ ಪುಕ್ಕ ಗಂಡಿನದಕ್ಕಿಂತ ಮೃದು, ಹಗುರ ಮತ್ತು ಸ್ಥಿತಿಸ್ಥಾಪಕ ಶಕ್ತಿಯುಳ್ಳದ್ದು. ಹೆಚ್ಚು ಶಾಖ ಕೊಡುವ ಈ ಪುಕ್ಕಗಳಿಂದ ಬೆಲೆಬಾಳುವ ಹಾಸಿಗೆ ಮತ್ತು ಹೊದಿಕೆಗಳು ತಯಾರಾಗುತ್ತವೆ. ಗಂಡಿನ ಪುಕ್ಕಗಳಿಂದ ಮಾಡಿದ ಹಾಸಿಗೆಗಳಿಗೆ ಬೆಲೆ ಕಡಿಮೆ. ಹೆಚ್ಚು ಮೊಟ್ಟೆಗಳನಿಡುತ್ತದಾದರೂ ಜನಶೋಷಣೆಯಿಂದಾಗಿ ಈ ಜಾತಿಯ ಸಂತಾನ ಕ್ರಮೇಣ ಕ್ಷೀಣಿಸುತ್ತಿದೆ. ಈಚೆಗೆ ಕಾನೂನಿನ ರಕ್ಷಣೆ ನೀಡಿ ಈ ಜಾತಿಯನ್ನು ಸಂರಕ್ಷಿಸುವ ಏರ್ಪಾಟು ಮಾಡಿದ್ದಾರೆ. (ಬಿ.ಎನ್.ಬಿ.)

**ಐಡಿಯಲಿಸಂ :** ಪಾಶ್ಚಾತ್ಯ ದರ್ಶನ ಪದ್ಧತಿಯಲ್ಲಿ ಪ್ರಸಿದ್ಧವಾದ ಒಂದು ಪಂಥ. ಇದನ್ನು ಧ್ಯೇಯವಾದ ಅಥವಾ ಚಿದೇಕಸತ್ಯತಾವಾದ ಎಂದು ಭಾಷಾಂತರಿಸಬಹುದು. ಮೊದಲ ಅರ್ಥದಲ್ಲಿ ಪ್ಲೇಟೋವಿನ ಸಿದ್ಧಾಂತವನ್ನು ಐಡಿಯಲಿಸಂ ಎಂದು ವ್ಯವಹರಿಸುವುದುಂಟು. ಐಡಿಯಲ್ ಎಂದರೆ ಧ್ಯೇಯ, ಆದರ್ಶ, ಗುರಿ ಎಂದು ಅರ್ಥ. ಪ್ಲೇಟೊ ಪ್ರತ್ಯಕ್ಷ ಸಿದ್ಧವಾದ ಪ್ರಪಂಚಕ್ಕಿಂತ ಸತ್ಯ, ಸೌಂದರ್ಯ ಮತ್ತು ಧಾರ್ಮಿಕ ಪುರುಷಾರ್ಥಗಳು ಹೆಚ್ಚು ಮೂಲಭೂತವಾದ ತತ್ತ್ವಗಳೆಂದೂ ಅವೇ ವಿಶ್ವದ ತಳಹದಿಯಾಗಿರುವುವಲ್ಲದೆ ಅಂತಿಮ ಪ್ರಯೋಜನಗಳಾಗಿಯೂ ಇವೆಯೆಂದು ಸಾಧಿಸಿದ್ದರಿಂದ ಅವನ ಸಂಪ್ರದಾಯಕ್ಕೆ ಐಡಿಯಲಿಸಂ ಎಂದು ಪ್ರಸಿದ್ಧಿ ಬಂತು. ಆಧುನಿಕ ಐರೋಪ್ಯ ದರ್ಶನದಲ್ಲಿ ಬಾರ್ಕ್ಲೆ ಎಂಬವನ ವಾದಕ್ಕೆ ಐಡಿಯಲಿಸಂ ಎಂದು ಹೆಸರು ಬಂದಿತು. ಇವನ ಪ್ರಕಾರ ಬಾಹ್ಯಪ್ರಪಂಚ, ಭೌತಿಕ ವಸ್ತು ಎಂಬುವುದು ಇಲ್ಲವೇ ಇಲ್ಲ. ಕೇವಲ ಚಿತ್ ಅಥವಾ ಜ್ಞಾನ ಮಾತ್ರ ಸತ್ಯ. ಬಾಹ್ಯಪ್ರಪಂಚ ಕೇವಲ ಚಿತ್ಕಲ್ಪಿತ. ಇವನ ನಿಲುವು ಪ್ರತ್ಯೇಕಪ್ರತ್ಯೇಕವಾದ ಜೀವಚೈತನ್ಯವನ್ನು ಅವಲಂಬಿಸಿರುವುದರಿಂದ, ಈ ಪಕ್ಷಕ್ಕೆ ವ್ಯಕ್ತಿನಿಷ್ಠ ಚಿದೇಕಸತ್ಯವಾದ ಎಂದು ಹೆಸರಾಯಿತು. ಇದು ಭಾರತೀಯ ದರ್ಶನದ ಯೋಗಾಚಾರಕ್ಕೆ ಹೋಲುತ್ತದೆ. ಮುಂದೆ ಬಂದ ಫಿಷ್ಟೆ, ಷಿಲಿಂಗ್, ಹೆಗೆಲ್ ಇವರು ಮೂಲಭೂತವಾದ ಅನಂತಚೈತನ್ಯ ಒಂದೇ ಸತ್ಯವೆಂದು ವಾದಿಸಿದರು. ಇವರ ಮತ ಅದ್ವೈತವೇದಾಂತವನ್ನು ಹೋಲುತ್ತದೆ. ವಿಶ್ವಚೈತನ್ಯವನ್ನು ಏಕಮಾತ್ರ ಪರಮಾರ್ಥವೆಂದು ಎತ್ತಿಹಿಡಿದದ್ದರಿಂದ ಈ ಪಂಥಕ್ಕೆ ವಿಶ್ವಚೈತನ್ಯ ಸತ್ಯತಾವಾದ (ಆಬ್ಜೆಕ್ಟಿವ್, ಸ್ಪೆಕ್ಯುಲೆಟಿವ್, ಆಬ್ಸಲೂಟ್ ಐಡಿಯಲಿಸಂ) ಎಂದು ಖ್ಯಾತಿ ಬಂದಿತು. ಐಡಿಯಲಿಸಂ ಬಹಳ ಮೇಧಾವಿ ತಾತ್ತ್ವಿಕರಿಂದ ಪೋಷಿತವಾಗಿದ್ದು ಇಡೀ ದರ್ಶನಪ್ರಪಂಚದಲ್ಲೇ ಒಂದು ಪ್ರಧಾನ ಮಾರ್ಗವಾಗಿದೆ. ಇತ್ತೀಚಿನ ದರ್ಶನವಿಮರ್ಶೆಯಲ್ಲಿ ಇದರ ಪ್ರಾಬಲ್ಯ ಸ್ವಲ್ಪ ಕಡಿಮೆಯಾಗಿದೆ. ಸ್ಥಿತಿ ಹೀಗೆಯೇ ಮುಂದೆಯೂ ಇರುವುದೆಂದು ಹೇಳಬರದು. (ಎಸ್.ಎಸ್.ಆರ್.)

**ಐತರೇಯ :** 'ಇತರಾ'ದಿಂದ ಬಂದಿದೆ. ಇತರಾ ಎಂಬುವಳ ಪುತ್ರನಿರಬಹುದು. ಐತರೇಯ ಬ್ರಾಹ್ಮಣ, ಐತರೇಯ ಆರಣ್ಯಕ, ಐತರೇಯ ಉಪನಿಷತ್ತು

ಎಂಬ ಗ್ರಂಥಗಳು ಈ ಹೆಸರಿನಲ್ಲಿ ಉಪಲಬ್ಧವಾಗಿವೆ. ಸಾಯಣಾಚಾರ್ಯರ ಪ್ರಕಾರ ಇತರಾ ಎಂಬವಳು ಬಹು ಪ್ರಾಚೀನನಾದ ಒಬ್ಬ ಋಷಿಯ ಪತ್ನಿ. ಅವಳಲ್ಲಿ ಜನಿಸಿದ ಪುತ್ರ ಮಹಿದಾಸ ಐತರೇಯ. ಈ ವಿಚಾರವಾಗಿ ಐತರೇಯ ಆರಣ್ಯಕದಲ್ಲಿ ಉಲ್ಲೇಖವಿದೆ. (ಬಿ.ಕೆ.ಎಸ್.)

**ಐತರೇಯ ಆರಣ್ಯಕ :** ಋಗ್ವೇದಕ್ಕೆ ಸೇರಿದ ಐತರೇಯ ಬ್ರಾಹ್ಮಣದ ಕಡೆಯ ಅಧ್ಯಾಯಗಳು. ಇದರಲ್ಲಿ ಆರಣ್ಯಕಗಳೆಂಬ ಐದು ಭಾಗಗಳಿವೆ. ಮಹಿದಾಸ ಐತರೇಯ ಇವರ ಋಷಿ. ಬ್ರಹ್ಮ, ಆತ್ಮ, ಜನ್ಮಾಂತರ ಮತ್ತು ಸೃಷ್ಟಿಕ್ರಮದ ತತ್ತ್ವಗಳನ್ನು ಇದು ಚರ್ಚಿಸುತ್ತದೆ. ಈ ಭಾವನೆಗಳೇ ಐತರೇಯ ಉಪನಿಷತ್ತಿನಲ್ಲಿ ಬೃಂಹಿತವಾಗಿ ಗಹನವೂ ಮಹತ್ತರವೂ ಆದ ದರ್ಶನಗಳಾಗಿವೆ. (ಸಿ.ಜಿ.ಪಿ.)

**ಐತರೇಯ ಉಪನಿಷತ್ತು :** ಇದು ಋಗ್ವೇದಶಾಖೆಗೆ ಸೇರಿದ ಇದೇ ಹೆಸರಿನ ಆರಣ್ಯಕದ ಕೆಲವು ಅಧ್ಯಾಯಗಳನ್ನು ಒಳಗೊಂಡಿದೆ. ಬಹ್ವೃಚೋಪನಿಷತ್ತೆಂತಲೂ ಮಹಾ ಐತರೇಯ ಉಪನಿಷತ್ತೆಂತಲೂ ಇದಕ್ಕೆ ಹೆಸರುಗಳಿವೆ. ಆರಣ್ಯಕ ಮತ್ತು ಉಪನಿಷತ್ತುಗಳನ್ನು ವಿಂಗಡಿಸಿ ಇದಿಷ್ಟು ಆರಣ್ಯಕ, ಇದು ಉಪನಿಷತ್ತು ಎಂದು ಪರಿಗಣಿಸುವುದರಲ್ಲಿ ಅಭಿಪ್ರಾಯಭೇದವಿದೆ.

ಮಹಿದಾಸ ಐತರೇಯ ಇದರ ಋಷಿ (ಮಂತ್ರದ್ರಷ್ಟೃ). ಆದರಿಂದ ಇದಕ್ಕೆ ಈ ಹೆಸರು. ಈತ ವಿಶಾಲಾ ಎಂಬಾಕೆಯ ಪುತ್ರನೆಂದೂ ಶ್ರೀಮನ್ನಾರಾಯಣನ ಅವತಾರವೆಂದೂ ಮಧ್ವಾಚಾರ್ಯರ ಭಾವನೆ. ಇತರಾ ಎಂಬುವಳ ಮಗ ಮಹಿದಾಸ. ಯಜ್ಞಸಭೆಗಳಲ್ಲಿ ತಂದೆ ತನ್ನ ಇತರ ಪತ್ನಿಯರ ಮಕ್ಕಳೊಡನೆ ಈತನನ್ನು ತೊಡೆಯ ಮೇಲೆ ಕೂರಿಸಿಕೊಳ್ಳದೆ ತಾತ್ಸಾರ ತೋರಿಸಲು, ಕರುಳು ನೊಂದ ತಾಯಿ ತನ್ನ ಕುಲದೈವ ಮಹೀ(ಭೂಮಿ)ದೇವಿಯನ್ನು ಪ್ರಾರ್ಥಿಸಲು ಆಕೆಯ ವರಪ್ರಸಾದದಿಂದ ಈತನಿಗೆ ಅಸಮಾನವಾದ ದಿವ್ಯಜ್ಞಾನ ಸಿದ್ಧಿಸಿತು—ಎನ್ನುವ ಈ ಐತಿಹ್ಯವೊಂದನ್ನು ಸಾಯಣರು ಉಲ್ಲೇಖಿಸುತ್ತಾರೆ.

ಇದು ಅತಿ ಪುರಾತನವಾದ ಗದ್ಯರೂಪದಲ್ಲಿದೆ. ಪುರಾತನವಾದ ಉಪನಿಷತ್ತುಗಳಲ್ಲಿ ಇದೂ ಒಂದು. ಇರುವುದು ಚಿಕ್ಕ ಚಿಕ್ಕ ಮೂರೇ ಅಧ್ಯಾಯಗಳು. ಒಟ್ಟು ಐದು ಖಂಡಗಳೆಂಬ ಉಪವಿಭಾಗಗಳು. ಹತ್ತು ಪಾಯಿಂಟ್ ಅಚ್ಚುಮೊಳೆಗಳಲ್ಲಿ ಮುದ್ರಿಸಿದರೆ ಸುಮಾರು ಎರಡು ಕಲಮುಗಳಾಗುವಷ್ಟು ಇದರ ಗಾತ್ರ. ಅತಿ ಚಿಕ್ಕ ಉಪನಿಷತ್ತುಗಳಲ್ಲಿ ಪ್ರಾಯಶಃ ಇದಕ್ಕೆ ಮೂರನೆಯ ಸ್ಥಾನ. ವಾಙ್ಮೇ ಮನಸಿ ಪ್ರತಿಷ್ಠಿತಾ ಎಂಬುದು ಇದರ ಶಾಂತಿಮಂತ್ರ. ಕೊನೆಯಲ್ಲಿ ಪ್ರಜ್ಞಾನಂ ಬ್ರಹ್ಮ ಎಂಬ ಉಪದೇಶವಿದೆ.

1 ಈ ಇದೆಲ್ಲವೂ ಮೊಟ್ಟಮೊದಲು ಆತ್ಮವೊಂದೇ ಆಗಿತ್ತು ; ಮತ್ತೇನೂ ಇರಲಿಲ್ಲ ಎಂದು ಪ್ರಾರಂಭವಾಗಿ ಆತ್ಮ ಲೋಕಸೃಷ್ಟಿ ಮಾಡಲು ಇಚ್ಛಿಸಿ ಅಂಭೋಲೋಕ, ಮರೀಚಿಲೋಕ, ಮರ(ಮರ್ತ್ಯ)ಲೋಕ ಮತ್ತು ಆಪೋಲೋಕಗಳನ್ನೂ ಲೋಕಪಾಲಕರನ್ನೂ ಸೃಷ್ಟಿಸುತ್ತಾನೆ.

2 ಈ ರೀತಿ ಸೃಷ್ಟರಾದ ಲೋಕಪಾಲಕರು ಅಸ್ತಿತ್ವದ ಮಹಾರ್ಣವಕ್ಕೆ ಬಿದ್ದು ಅಶನ ಮತ್ತು ಪಿಪಾಸೆಗಳಿಗೆ ಸಿಲುಕಿದರು ; ಅವರಿಗೊಂದು ಭೌತಿಕ ನೆಲೆ ಬೇಕಾಯಿತು ; ಇತರ ಯಾವ ಪ್ರಾಣಿಗಳ ಶರೀರವೂ ಒಗ್ಗದೆ ಮಾನವ ಶರೀರ ಮೆಚ್ಚುಗೆಯಾಯಿತು ; ಪಂಚೇಂದ್ರಿಯತತ್ತ್ವಗಳೂ ಪಾಂಚಭೌತಿಕತತ್ತ್ವಗಳೂ ಮೃತ್ಯು, ಅಪಾನವಾಯು, ರೇತಸ್ಸು ಮುಂತಾದ ಲೋಕಪಾಲರೂ ಅದರಲ್ಲಿ ಮನೆ ಮಾಡಿಕೊಂಡರು. ಹಸಿವು ತೃಷೆಗಳಿಗೂ ಅಲ್ಲಿ ಸ್ಥಾನ ಸಿಕ್ಕಿತು.

3 ಲೋಕಗಳಿಗಾಗಿ, ಲೋಕಪಾಲಕರಿಗಾಗಿ ಅನ್ನ ಸೃಷ್ಟಿಯಾಯಿತು ; ಆ ಅನ್ನವನ್ನು ಇತರ ಲೋಕಪಾಲಕರು ಗ್ರಹಿಸಲಾಗಲಿಲ್ಲ ; ಅಪಾನವಾಯು ಮಾತ್ರ ಗ್ರಹಿಸಿತು ; ಆದ್ದರಿಂದ ಅದಕ್ಕೆ ಅನ್ನಾಯುವೆಂದು ಮತ್ತೊಂದು ಹೆಸರು ; ಕಡೆಯಲ್ಲಿ ಆತ್ಮ ಶಿರಃಕಪಾಲವನ್ನು ಭೇದಿಸಿಕೊಂಡು ಪ್ರವೇಶಿಸಿದ. ಇದೇ ಆತನ ನಾಂದನವೆಂಬ ಸ್ಥಾನ.

ಅಲ್ಲಿ ಜೀವಾತ್ಮನಾದ ಅವನಿಗೆ ಮೂರು ಅವಸ್ಥೆ(ಸ್ವಪ್ನ)ಗಳಿಗೆ ಉಚಿತವಾದ ಮೂರು ಆವಾಸಸ್ಥಾನ(ಆವಸಥ)ಗಳು ; ಅಲ್ಲಿ ಅವನು ತನ್ನ ಸುತ್ತೆಲ್ಲ ಇದ್ದ ನಾಮರೂಪಾತ್ಮಕವಾದ ಚರಾಚರ ಜಗತ್ತನ್ನು ನೋಡಿದ. ಆದರೆ ಅದೊಂದು ಅದ್ಭುತ–ಅದೆಲ್ಲವೂ ತಾನೇ–ಬ್ರಹ್ಮನೇ–ಆಗಿತ್ತು.

4 ಎರಡನೆಯ ಅಧ್ಯಾಯ ಜನ್ಮಾಂತರಕ್ಕೊಳಗಾದ ಆತ್ಮ ಮಾನವ ಶರೀರದಲ್ಲಿ ಹುಟ್ಟಿ ಆತ್ಮಸಾಕ್ಷಾತ್ಕಾರ ಮಾಡಿಕೊಂಡು ಅಮೃತಾತ್ಮವಾಗುವುದೆಂಬ ಸಂದೇಶವನ್ನು ಕೊಡುತ್ತದೆ.

5 ನಾವು ಆತ್ಮವೆಂದು ಉಪಾಸಿಸುವ ಇವನು ಯಾರು ? ಪರಬ್ರಹ್ಮ ಮತ್ತು ಅಪರಬ್ರಹ್ಮರಿಬ್ಬರಲ್ಲಿ ಇವನು ಯಾರು ? ಎಂದು ಪ್ರಶ್ನಿಸಿಕೊಂಡು ಪಂಚೇಂದ್ರಿಯ ತತ್ತ್ವಗಳು, ಪಾಂಚಭೌತಿಕ ತತ್ತ್ವಗಳು, ಹೃದಯ, ಮನಸ್ಸು, ಸಂಜ್ಞಾನ, ವಿಜ್ಞಾನ, ಪ್ರಜ್ಞಾನಾದಿಗಳು, ಇಂದ್ರ, ಪ್ರಜಾಪತಿ ಮುಂತಾದ ದೈವೀತತ್ತ್ವಗಳು ಸಕಲ ಚರಾಚರ ಜಗತ್ತು—ಇವೆಲ್ಲ ಪ್ರಜ್ಞಾಪ್ರತಿಷ್ಠಿತವಾದ ಬ್ರಹ್ಮವೆಂದು ಮೂರನೆಯ ಅಧ್ಯಾಯ ಹೇಳಿ ಸೃಷ್ಟಿ ಬ್ರಹ್ಮನಿಂದ—ಆತ್ಮನಿಂದ—ವಿಕಾಸಗೊಂಡು, ಅಂತ್ಯದಲ್ಲಿ (?) ಅಲ್ಲಿಯೇ ಪ್ರತಿಷ್ಠಿತವಾಗುತ್ತದೆಂದು ಸಾರುತ್ತದೆ. (ಸಿ.ಜಿ.ಪಿ.)

**ಐತರೇಯ ಬ್ರಾಹ್ಮಣ :** ಶ್ರುತಿ ಎಂದು ಪ್ರಸಿದ್ಧವಾಗಿರುವ ವೇದದ ಬ್ರಾಹ್ಮಣಭಾಗದಲ್ಲಿ ಋಗ್ವೇದಕ್ಕೆ ಸಂಬಂಧಪಟ್ಟಂತೆ ಉಪಲಬ್ಧವಾಗಿರುವ ಎರಡು ಬ್ರಾಹ್ಮಣಗ್ರಂಥಗಳಲ್ಲಿ ಒಂದು ; ಮತ್ತೊಂದು ಕೌಷೀತಕಿ ಬ್ರಾಹ್ಮಣ. ಐತರೇಯ ಎಂಬುದು ಇತರಾ ಎಂಬ ಪದದಿಂದ ಬಂದಿದೆ ; ಇತರಾ ಎಂಬ ಋಷಿಪತ್ನಿಯಲ್ಲಿ ಜನಿಸಿದ ಮಹಿದಾಸ ಐತರೇಯನ ಕರ್ತೃತ್ವಕ್ಕೆ ಸೇರಿಸಲ್ಪಟ್ಟಿದೆ. ಇದರ ನಲವತ್ತು ಅಧ್ಯಾಯಗಳು ಐದೈದು ಅಧ್ಯಾಯಗಳ ಎಂಟು ಪಂಚಿಕಗಳಾಗಿ ವಿಭಾಗಗೊಂಡಿವೆ ; ಈ ಎಂಟನ್ನು ಅಷ್ಟಕಗಳೆಂದು ಕರೆದಿದ್ದಾರೆ. ಈ ಗ್ರಂಥವು ಯಜ್ಞಯಾಗಗಳನ್ನು ಕುರಿತ ವಿಚಾರಗಳನ್ನೊಳಗೊಂಡಿದೆ. ಇದರಲ್ಲಿ ಸೋಮಯಾಗದ ವಿವರಣೆ ಪ್ರಮುಖವಾಗಿರುವುದಲ್ಲದೆ, ಯಾಗಾದಿಗಳ ಮಹತ್ತ್ವದ ನಿರೂಪಣೆಯೂ ಗಮನಾರ್ಹವಾಗಿದೆ.

ಮೊದಲ ಹದಿಮೂರು ಅಧ್ಯಾಯಗಳಲ್ಲಿ ಐದು ದಿನ ನಡೆಯಬೇಕಾದ ಅಗ್ನಿಷ್ಟೋಮದ ದೀಕ್ಷೆ, ಪ್ರವರ್ಗ್ಯ, ಉಪಸದ್, ಅಗ್ನಿಪ್ರಣಯನ, ಸೋಮಪಾನ ಮುಂತಾದ ವಿಹಿತಕರ್ಮಗಳೂ ಇವಕ್ಕನ್ವಯಿಸುವಂತೆ ಹೋತೃ ಎಂಬ ಋತ್ವಿಕ್ಕಿನ ಕರ್ತವ್ಯಗಳೂ ಪ್ರತಿಪಾದಿತವಾಗಿವೆ. ಅಲ್ಲದೆ ಪ್ರಾತಃಕಾಲ ಮಧ್ಯಾಹ್ನ ಸಾಯಂಕಾಲಗಳ ಸೋಮಸವನಗಳಲ್ಲಿ ಹೋತೃ ಪಠಿಸಬೇಕಾದ ಪ್ರಶಂಸಾತ್ಮಕ ಮಂತ್ರಗಳಾದ ಶಸ್ತ್ರಗಳ ವಿವರಣೆಯೂ ಇದೆ. ಬಳಿಕ ನಾಲ್ಕು ಅಧ್ಯಾಯಗಳಲ್ಲಿ ಎಲ್ಲ ಸೋಮಯಾಗಗಳಿಗೂ ಮಾದರಿಯಾಗಿ ಅವುಗಳ ಪ್ರಕೃತಿ ಎನಿಸಿಕೊಂಡಿರುವ ಅಗ್ನಿಷ್ಟೋಮದ ವೈಶಿಷ್ಟ್ಯವಿಚಾರವೂ ಅದರ ಮುಖ್ಯವಿಧಗಳಾದ ಉಕ್ಥ್ಯ, ಷೋಡಶೀ, ಅತಿರಾತ್ರ–ಇವುಗಳ ವಿವರಣೆಯೂ ಕಂಡುಬರುತ್ತದೆ. ಅತಿರಾತ್ರಕ್ಕನ್ವಯಿಸುವಂತೆ ಶಸ್ತ್ರಗಳೂ ಹೋತೃವಿನ ಕರ್ತವ್ಯಗಳೂ ಮುಂದಿನ ಒಂದು ಅಧ್ಯಾಯದ ವಿಷಯ. ಅನಂತರ ಆರು ಅಧ್ಯಾಯಗಳು ದ್ವಾದಶಾಹ ಎಂಬ ಯಾಗದ ಹತ್ತು ದಿನಗಳಲ್ಲಿ ಹೋತೃ ಮಾಡಬೇಕಾದ ಕೆಲಸಗಳನ್ನು ತಿಳಿಸುತ್ತವೆ. ಮುಂದಿನ ಒಂದು ಅಧ್ಯಾಯ ಅಗ್ನಿಹೋತ್ರಿ ಆಚರಿಸಬೇಕಾದ ಕೆಲವು ವ್ರತಗಳನ್ನೂ ಬ್ರಹ್ಮನೆಂಬ ಋತ್ವಿಕ್ಕಿನ ಕರ್ತವ್ಯಗಳನ್ನೂ ಕುರಿತಿದೆ. ಅಲ್ಲಿಂದ ಮುಂದೆ ಐದು ಅಧ್ಯಾಯಗಳಲ್ಲಿ, ಪ್ರಧಾನರಲ್ಲದ ಆರು ಜನ ಹೋತೃಗಳಿಗೆ ಸಂಬಂಧಪಟ್ಟ ಕರ್ತವ್ಯಗಳ ಮತ್ತು ಅವರು ಕೌಶಲದಿಂದ ಪಠಿಸಬೇಕಾದ ಶಿಲ್ಪಶಸ್ತ್ರಗಳ ವಿಚಾರವಿದೆ. ಈ ಐದು ಅಧ್ಯಾಯಗಳು ಅವುಗಳ ಹಿಂದಿನ ಹತ್ತಕ್ಕೆ ಪೂರಕಗಳಂತಿವೆ.

ಕಡೆಯ ಹತ್ತು ಅಧ್ಯಾಯಗಳು ಪ್ರಧಾನವಾಗಿ ಕ್ಷತ್ರಿಯರಿಂದ ಆಚರಿಸಲ್ಪಡಬೇಕಾಗಿರುವ ಯಜ್ಞಯಾಗಗಳಿಗೆ ಸಂಬಂಧಪಟ್ಟಿವೆ. ಇವು ಚಾರಿತ್ರಿಕ ದೃಷ್ಟಿಯಿಂದಲೂ ಮುಖ್ಯವಾದ ಅಧ್ಯಾಯಗಳಾಗಿವೆ. ರಾಜರುಗಳು ಮಾಡುವ ಯಾಗಾದಿಗಳ ಪ್ರಾರಂಭಕರ್ಮಗಳು ಕೆಳಕಂಡ ಪ್ರಸಿದ್ಧವಾದ ಶುನಃಶೇಫಾಖ್ಯಾನದ ಮೂಲಕ ಈ ಭಾಗದಲ್ಲಿ ಪ್ರತಿಪಾದಿತವಾಗಿವೆ.

ಇಕ್ಷ್ವಾಕುವಂಶದ ರಾಜನಾದ ಹರಿಶ್ಚಂದ್ರನಿಗೆ ಪುತ್ರಸಂತಾನವಿರಲಿಲ್ಲವಾಗಿ ಅಸ್ವಾನದಲ್ಲಿದ್ದ ನಾರದನೆಂಬ ಋಷಿಯ ಉಪದೇಶದ ಪ್ರಕಾರ ವರುಣದೇವತೆಯನ್ನು ಪ್ರಾರ್ಥಿಸಿ, ಪುತ್ರನೊಬ್ಬನನ್ನು ಅನುಗ್ರಹಿಸುವುದಾದರೆ ಅವನನ್ನು ಆ ದೇವತೆಗೇ ಅರ್ಪಿಸುವುದಾಗಿ ವಾಗ್ದಾನ ಮಾಡುತ್ತಾನೆ. ಅನಂತರ ರೋಹಿತನೆಂಬ ಒಬ್ಬ ಪುತ್ರನನ್ನು ಪಡೆಯುತ್ತಾನೆ. ಶಿಶು ಹುಟ್ಟಿದಂದಿನಿಂದ ಶಸ್ತ್ರೋಪೇತನಾಗುವವರೆಗಿನ ಬೆಳೆವಣಿಗೆಯ ಹಲವಾರು ಸ್ಥಿತಿಗಳಲ್ಲಿ ವರುಣ ಕೇಳಿದಾಗಲೆಲ್ಲ ಮುಂದುಮುಂದಿನ ಸ್ಥಿತಿ ಬರಲೆಂದು ನೆಪ ಹೇಳುತ್ತ ಹರಿಶ್ಚಂದ್ರ ಕಾಲ ತಳ್ಳುತ್ತಾನೆ. ಪುತ್ರ ಶಸ್ತ್ರೋಪೇತನಾಗಿದ್ದ ಸ್ಥಿತಿಯಲ್ಲಿ ಯಥಾಪ್ರಕಾರ ವರುಣನಿಂದ ತಗಾದೆ ಬರುತ್ತದೆ. ಆಗ ರಾಜ ತಾನು ವರುಣನಿಗೆ ಕೊಟ್ಟ ವಾಗ್ದಾನದ ವಿಚಾರವನ್ನು ಮಗನಿಗೆ ತಿಳಿಸಿ, ಅದರ ಈಡೇರಿಕೆಗೆ ಅವನ ಒಪ್ಪಿಗೆಯನ್ನು ಕೇಳುತ್ತಾನೆ. ಆದರೆ ಅವನು ಅದನ್ನು ಒಪ್ಪದೆ ಧನುಸ್ಸನ್ನು ಹಿಡಿದು ಕಾಡಿಗೆ ಹೋಗಿ ತಪ್ಪಿಸಿಕೊಳ್ಳುತ್ತಾನೆ.

ಈ ಮಧ್ಯೆ ವರುಣನ ಆಗ್ರಹದಿಂದ ಹರಿಶ್ಚಂದ್ರ ರೋಗಗ್ರಸ್ತನಾಗುತ್ತಾನೆ. ರೋಹಿತನಿಗೆ ಈ ವಿಚಾರ ತಿಳಿದು ಗ್ರಾಮವೊಂದಕ್ಕೆ ಬರುತ್ತಾನೆ. ಅಲ್ಲಿ ಇಂದ್ರ ಅವನಿಗೆ ಕಾಣಿಸಿಕೊಂಡು ಸಂಚಾರ ಬಹು ಸ್ವಾರಸ್ಯಕರವೆಂದು ತಿಳಿಸುವುದಲ್ಲದೆ ಮತ್ತೆ ಸಂಚಾರದಲ್ಲಿ ತೊಡಗಬೇಕೆಂದು ಅವನನ್ನು ಪ್ರೇರೇಪಿಸುತ್ತಾನೆ. ಅನಂತರ ರೋಹಿತ ಪುನಃ ಕೆಲವು ವರ್ಷಗಳ ಪರ್ಯಂತ ಸಂಚಾರ ಮಾಡುತ್ತಾನೆ. ಆರು ವರ್ಷಗಳ ಸಂಚಾರದ ಕಡೆಯಲ್ಲಿ ಉಪವಾಸದಿಂದ ತೊಳಲುತ್ತಿದ್ದ ಅಜೀಗರ್ತನೆಂಬ ಮುನಿಯನ್ನು ಸಂಧಿಸುತ್ತಾನೆ. ಆ ಮುನಿಗೆ ಶುನಃಪುಚ್ಛ, ಶುನಃಶೇಫ, ಶುನೋಲಾಂಗೂಲ ಎಂಬ ಮೂವರು ಪುತ್ರರು. ನೂರು ಹಸುಗಳನ್ನು ಕೊಟ್ಟು ರೋಹಿತ ಅಜೀಗರ್ತನಿಂದ ಅವನ ಮಧ್ಯಮ ಮಗನಾದ ಶುನಃಶೇಫನನ್ನು

ಪಡಿಸಿಕೊಂಡು ತಂದೆಯಾದ ಹರಿಶ್ಚಂದ್ರರಾಜನ ಬಳಿಗೆ ಕರೆತರುತ್ತಾನೆ. ರಾಜ ತನ್ನ ಮಗನ ಪರವಾಗಿ ಶುನಃಶೇಫನನ್ನೇ ಅರ್ಪಿಸುವುದಾಗಿ ವರುಣನಲ್ಲಿ ಬಿನ್ನವಿಸಿ ಕೊಳ್ಳುತ್ತಾನೆ. ಇದಕ್ಕೆ ವರುಣನ ಒಪ್ಪಿಗೆಯೂ ದೊರಕುತ್ತದೆ. ಆ ಸಂದರ್ಭ ದಲ್ಲಿ ರಾಜನಿಗೆ ರಾಜಸೂಯಯಾಗದ ಕರ್ಮಾದಿಗಳನ್ನು ವರುಣ ವಿವರಿಸುತ್ತಾನೆ. ಯಾಗದ ಪ್ರಾರಂಭದಲ್ಲಿ ನಡೆಯುವ ಅಭಿಷೇಚನೀಯದಲ್ಲಿ ಶುನಃಶೇಫನೇ ಯಜ್ಞ ಪಶುವಾಗಿ ಬಂಧಿಸಲ್ಪಡುತ್ತಾನೆ.

ತನ್ನ ನಿಸ್ಸಹಾಯಕತೆಯನ್ನು ಮನಗಂಡ ಶುನಃಶೇಫ ಹಲವಾರು ದೇವತೆಗಳ ಶರಣುಹೋಗಿ, ಕಡೆಯಲ್ಲಿ ಉಷಸ್ಸಿನ ಪ್ರಾರ್ಥನೆ ಮಾಡುತ್ತಿರುವಾಗ ಅವನ ಬಂಧನ ನಿವಾರಣೆಯಾಗುವುದಲ್ಲದೆ ಹರಿಶ್ಚಂದ್ರನ ರೋಗವೂ ಪರಿಹಾರವಾಗುತ್ತದೆ.

ಮೇಲ್ಕಂಡ ಆಖ್ಯಾನ ಈ ಗ್ರಂಥದಲ್ಲಿ ರಾಜಸೂಯಯಾಗದ ಪೀಠಿಕೆಯನ್ನು ಒದಗಿಸಿಕೊಟ್ಟಿದೆ. ಶುನಃಶೇಫ ಯಜ್ಞಪಶುವಾಗಿರುವ ಅಲ್ಲಿನ ಪ್ರಸಂಗ ಕೇವಲ ಸಾಂಕೇತಿಕವೆಂದು ಚರಿತ್ರಕಾರರು ಅಭಿಪ್ರಾಯಪಟ್ಟಿದ್ದಾರೆ. ಈ ಗ್ರಂಥದ ಕಡೆಯ ಅಧ್ಯಾಯ ರಾಜ ತನ್ನ ಮನೆಯಲ್ಲಿ ಕರ್ಮಾದಿಗಳ ಮೇಲ್ವಿಚಾರಣೆಗೆ ಪುರೋಹಿತ ನನ್ನು ನೇಮಿಸಿಕೊಳ್ಳುವ ವಿಚಾರಕ್ಕೆ ಸಂಬಂಧಪಟ್ಟಿದೆ.

ಗ್ರಂಥದಲ್ಲಿ ಕಂಡುಬರುವ ಪುನರುಕ್ತಿ, ಪ್ರಕ್ಷಿಪ್ತ ಮುಂತಾದವುಗಳ ದೃಷ್ಟಿಯಿಂದ ಅದು ಏಕಕರ್ತೃಕವೆಂಬ ವಿಚಾರದಲ್ಲಿ ಸಂಶಯವಿದೆ. ಶೈಲಿಯೇನೊ ಉದ್ದಕ್ಕೂ ಬಹುಮಟ್ಟಿಗೆ ಒಂದೇ ತರಹದ್ದಾಗಿದೆ. ಭಾಷೆ ಋಗ್ವೇದಾದಿ ಸಂಹಿತೆಗಳದ್ದಕ್ಕಿಂತ ಈಚಿನದು. ಆದರೆ ಅದು ಸಂಸ್ಕೃತಕಾವ್ಯಭಾಷೆಯಂತಿಲ್ಲ. ಅದರಲ್ಲಿ ವೈದಿಕ ಭಾಷೆಯ ಅನೇಕ ರೂಪಗಳು ಕಂಡುಬರುತ್ತವೆ. ಒಟ್ಟಿನಲ್ಲಿ ಗ್ರಂಥದ ಬಹುಭಾಗ ಒಬ್ಬನೇ ಕರ್ತೃವಿನಿಂದ ರಚಿತವಾಗಿದ್ದಿರಬೇಕು.

ಈ ಗ್ರಂಥದಲ್ಲಿ ಅಲ್ಲಲ್ಲೇ ಕಂಡುಬರುವ 'ದೇವಾ ವೈ ಯಜ್ಞೇನ ಶ್ರಮೇಣ ತಪಸಾಹುತಿಭಿಃ ಸ್ವರ್ಗಂ ಲೋಕಮಾಯನ್', 'ಸಖಾ ಹ ಜಾಯಾ', 'ಶ್ರದ್ಧಾ ಪತ್ನೀ, ಸತ್ಯ ಯಜಮಾನಃ, ಶ್ರದ್ಧಾ-ಸತ್ಯ' ಮುಂತಾದ ಆದರ್ಶವಾಕ್ಯಗಳು ಗಮನಾರ್ಹವಾಗಿವೆ.

ಹೀಗೆ ಮಂತ್ರಗಳು, ಗಾಥ, ಇತಿಹಾಸ, ಹೋತೃವಿನ ಕರ್ತವ್ಯಕ್ಕೆ ಸಂಬಂಧಪಟ್ಟ ವಿಧಿಗಳು, ವಿಹಿತಕರ್ಮಾದಿಗಳ ವಿವರಣೆಗಳು—ಇವೇ ಮುಂತಾದ ವಿಷಯಗಳ ಪ್ರತಿಪಾದನೆಯಿಂದ ಕೂಡಿರುವ ಈ ಗ್ರಂಥ ಅದರ ಶಾಖಾನುಯಾಯಿಗಳಿಗೆ ವಿಹಿತ ಕರ್ಮಗಳ ಒಂದು ಕೋಶದಂತಿದೆ. (ಬಿ.ಕೆ.ಎಸ್.)

**ಐತಿಹಾಸಿಕ ಕಾದಂಬರಿ :** ಇತಿಹಾಸದ (ಚರಿತ್ರೆ) ವಸ್ತುವನ್ನಾರಿಸಿಕೊಂಡು ರಚಿಸಿದ ಕಾದಂಬರಿ (ಹಿಸ್ಟಾರಿಕಲ್ ನಾವೆಲ್). ಹಿಂದೆ ಆಗಿಹೋದ ಸಂಗತಿ ಗಳನ್ನು ಹೆಚ್ಚಿಸದೆ ಕುಗ್ಗಿಸದೆ ಯಥಾವತ್ತಾಗಿ ನಿರೂಪಿಸುವ ಲೇಖನವೇ ಇತಿಹಾಸ. ಮುಖ್ಯವಾಗಿ ಅದು ನಡೆದ ನಿಜಾಂಶದ ಪ್ರಾಮಾಣಿಕ ವರದಿ. ಅದರಲ್ಲಿ ಇತಿಹಾಸ ಕಾರನ ವೈಯಕ್ತಿಕ ಅಭಿಮತಕ್ಕಾಗಲಿ ಸ್ವಂತ ಕಲ್ಪನೆಗಾಗಲಿ ಆಸ್ಪದ ದೊರಕದು. ಕಾದಂಬರಿಯಾದರೋ ಸಾಹಿತಿ ತಾನೇ ನಿರ್ಮಾಣಗೈಯುವ ಕಥನಸಾಹಿತ್ಯ. ಮನುಷ್ಯರನ್ನೂ ಅವರ ಹಿನ್ನೆಲೆಯನ್ನೂ ತಸ್ವೀರು ತೆಗೆಯುವಂತೆ ಪ್ರತಿಚಿತ್ರಿಸುವ ಹೆಬ್ಬಯಕೆಯ ದೃಢನಿಷ್ಠರ ವಾಸ್ತವಿಕ ಕಾದಂಬರಿಯಲ್ಲೂ ಅಂಶಗಳ ಆಯ್ಕೆ, ಬದಲಾವಣೆ, ಅಷ್ಟಿಷ್ಟು ಜರುಗುವುದರಿಂದ ಕೃತಿಕಾರನ ಕೈವಾಡ ಕಂಡೇ ಕಾಣುತ್ತದೆ. ಹಾಗಾದರೆ ಇತಿಹಾಸದ ಹೊಣೆಗಾರಿಕೆಯನ್ನೂ ಕಾದಂಬರಿಯ ಹೊಣೆಗಾರಿಕೆಯನ್ನೂ ಒಂದೇ ಕೃತಿಯಲ್ಲಿ ನೆರವೇರಿಸಿ ಗೆಲ್ಲುವುದೆಂತು ? ಬಂಧನ, ಸ್ವಾತಂತ್ರ್ಯ ಎರಡನ್ನೂ ಒಟ್ಟಿಗೇ ಸಾಧಿಸಿ ನಿಲ್ಲುವುದೆಂತು? ಅದೇ ಐತಿಹಾಸಿಕ ಕಾದಂಬರಿಯ ಪ್ರಧಾನ ಸಮಸ್ಯೆ, ಅಚ್ಚರಿ, ಸೊಬಗು, ಆನಂದ.

ಬಿಡಿಸುವುದಕ್ಕೆ ಕಷ್ಟಕರವಾದರೂ ಬಿಡಿಸಲೇ ಆಗದ ಪ್ರಶ್ನೆಯಲ್ಲ, ಈ ಯಥಾರ್ಥತೆ ಕಲ್ಪನೆಗಳ ಸಮರಸ ಮಿಳಿತ. ಅತ್ಯುತ್ತಮ ಐತಿಹಾಸಿಕ ಕಾದಂಬರಿಗಳು ಕೆಲವಾದರೂ ಹುಟ್ಟಿಬಂದಿವೆ. ಮೊದಲನೆಯದಾಗಿ, ಸಾಹಿತಿಯ ವಿಭಾವನಾಶಕ್ತಿ (ಇಮ್ಯಾಜಿನೇ ಷನ್) ಸ್ಮೃತಿಶಕ್ತಿಯಾಗಿಯೂ (ಮೆಮೊರಿ) ಸೃಷ್ಟಿಶಕ್ತಿಯಾಗಿಯೂ (ಕ್ರಿಯೇಷನ್) ಅವಿರೋಧ ಹೊಂದಾಣಿಕೆಯಿಂದ ಕೆಲಸಮಾಡಬಲ್ಲುದು. ಟಾಲ್‌ಸ್ಟಾಯ್ ಮಹಾ ಶಯನ ವಾರ್ ಅಂಡ್ ಪೀಸ್ ಎಂಬ ಮೇರುಕಾದಂಬರಿಯಲ್ಲಿ ರಷ್ಯದ ಮೇಲೆ ನೆಪೋಲಿಯನ್ ಹೂಡಿದ ದಂಡಯಾತ್ರೆಯ ನೂರಾರು ವಿವರಗಳೂ ಆ ಕಾಲದಲ್ಲಿದ್ದು ಬದುಕು ಸಾಗಿಸಿದವೆನ್ನಲಾದ ಕೆಲವು ಕುಟುಂಬಗಳ ಕಾಲ್ಪನಿಕ ವ್ಯಕ್ತಿಚಿತ್ರಣವೂ ಅಚ್ಚುಕಟ್ಟಾಗಿ ಸುರಮ್ಯವಾಗಿ ಕೂಡಿಕೊಂಡಿವೆ. ಹೆನ್ರಿ ಎಸ್ಮಂಡ್ ಕಾದಂಬರಿಯಲ್ಲಿ ಥ್ಯಾಕರೆ ತನ್ನ ಹಿಂದಣ ಶತಮಾನದ ರಾಜಕೀಯ ಆಗುಹೋಗನ್ನು ಹಿನ್ನೆಲೆಯಾ ಗಿಟ್ಟುಕೊಂಡು ಒಂದು ಶ್ರೀಮಂತ ಸಂಸಾರದ ಸುಖದುಃಖಕ್ಕೆ ಜೀವಂತ ಕಳೆಕೊಟ್ಟಿ ದ್ದಾನೆ. ಎರಡನೆಯದಾಗಿ, ಚರಿತ್ರೆಯ ಹಲವು ಘಟನಾವಳಿಗಳಿಗೆ ಸಮಂಜಸ ಪ್ರಾರಂಭ, ಮಧ್ಯ, ಮುಕ್ತಾಯಗಳಿದ್ದು ಮಾರ್ಪಾಟು ಕೇಳದೆ ಸಾಹಿತ್ಯ, ಕಥೆ ಗಳಾಗುವ ಗುಣವುಂಟು. ಹೀಗಾಯ್ತು ಎಂಬುದು ಚರಿತ್ರೆಯ ಗುರಿ ; ಹೀಗಾಗ ಬಹುದು ಎಂಬುದು ಸಾಹಿತ್ಯದ ಗುರಿ. ಎರಡೂ ವಿಭಿನ್ನವಾದರೂ ಕೆಲವೊಮ್ಮೆ ಹಾಗಾಗಬಹುದು ಎಂಬಂತೆಯೇ ಹಾಗಾದದ್ದು ಮನಸ್ಪೂರ್ಶಿರುತ್ತದೆ. ಚರಿತ್ರೆಯ ಯಥಾರ್ಥ ಸತ್ಯವೇ ಸಾಹಿತ್ಯದ ವಿಭಾವನಾ ಸತ್ಯದ ರೂಪವನ್ನು ತಳೆಯುತ್ತದೆ.

ಭೂತಕಾಲದ ಯಾವುದೇ ಶತಮಾನವಾಗಲಿ ಅದನ್ನು ಐತಿಹಾಸಿಕ ಕಾದಂಬರಿಕಾರ ತನ್ನ ಕಥೆಗೆ ಅಳವಡಿಸಿಕೊಳ್ಳಬಹುದು ; ಎಂದರೆ ಅದರಲ್ಲೇ ತಾನು ಜೀವಿಸುತ್ತಿರುವೆ ನೆಂಬ ಭಾವನೆಯೂ ಆ ಸಮಯದ ಸಮಾಜವೇ ತನ್ನದು, ಆ ಜನರೇ ತನ್ನ ನೆರೆ ಹೊರೆ, ಗುರುತುಪರಿಚಯ ಎಂಬ ತನ್ಮಯತೆಯೂ ಅವನಿಗೆ ಅತ್ಯಾವಶ್ಯಕ. ಅಳಿದುಹೋಗಿರುವ ಸ್ಥಿತಿಗತಿ, ವ್ಯವಹಾರ, ವಾತಾವರಣಗಳಿಗೆ ಅವನು ಒಂದು ವಿಧದ ಪರಕಾಯಪ್ರವೇಶ ನಡೆಸಬೇಕು. ಬೆನ್ನಿಗಂಟಿದ ಭೂತದಂತಿರುವ ಸಮ ಕಾಲೀನತೆಯನ್ನು ಪೂರ್ತಿಯಾಗಿ ಉಚ್ಚಾಟನೆ ಮಾಡಬೇಕು. ಇಲ್ಲದಿದ್ದರೆ ಸತ್ಯಕ್ಕೆ ಫಾಸಿ ಬರಬಹುದು. ನಂಬಿಕೆ, ನಡೆವಳಿಕೆ, ಸಂಕಲ್ಪ, ಸಾಧನೆಗಳಲ್ಲಿ ದೇಶದೇಶಕ್ಕೆ ವ್ಯತ್ಯಾಸ ; ಅವಧಿ ಅವಧಿಗೆ ವ್ಯತ್ಯಾಸ. ಕಲಬೆರಕೆ ಮಾಡಿ ಕೆಡಿಸಿದ್ದಾನೆಂಬ ಆಪಾದನೆ ತಟ್ಟದಂತೆ ಬಲು ಎಚ್ಚರದಿಂದ ಇರಬೇಕಾಗುತ್ತದೆ, ಐತಿಹಾಸಿಕ ಕಾದಂಬರಿಕಾರ. ಬಿಲ್ಲುಬಾಣ ಕತ್ತಿ ಭರ್ಜಿಗಳೇ ಆಯುಧವಾಗಿದ್ದ ಘಟ್ಟವನ್ನು ಚಿತ್ರಿಸುತ್ತ ಬಂದೂಕು ಬಾಂಬುಗಳ ಮಾತನ್ನು ಎತ್ತದೇ ಸಾಗುವುದು ಸುಲಭ. ಸ್ತ್ರೀಸ್ವಾತಂತ್ರ್ಯ, ದಣಿಯೂ ಮನುಷ್ಯ ಜೀತದಾಳೂ ಮನುಷ್ಯ ಎಂಬ ಬುದ್ಧಿ, ದೇಶಭಕ್ತಿ ಬೇರೆ ರಾಜ ಭಕ್ತಿ ಬೇರೆ ಎಂಬ ತತ್ತ್ವ—ಮೊದಲಾದ ಆಧುನಿಕ ಧೋರಣೆಗಳನ್ನು ಮಧ್ಯಯುಗಕ್ಕೊ ಪ್ರಾಚೀನಕಾಲಕ್ಕೊ ಕಿಂಚಿತ್ತೂ ಅನ್ವಯಿಸದೆ ಇರುವುದು ಅಷ್ಟೊಂದು ಸುಲಭವಲ್ಲ. ಅಲ್ಲೊಂದು ಇಲ್ಲೊಂದು ಪ್ರಾಸಂಗಿಕ ವಾಕ್ಯ, ಅದೊಂದು ಇದೊಂದು ಸಣ್ಣಪುಟ್ಟ ಕಾರ್ಯ–ಇಂಥ ಅಮುಖ್ಯ ವಿಚಾರದಲ್ಲಿ ಮಿಶ್ರಣವಾದರೆ ಅದೇನೂ ದೊಡ್ಡ ದೋಷ ವಲ್ಲ ; ಕಾದಂಬರಿಯ ಹರವು ವಿಶಾಲ. ಕಂಬಳಿಯಲ್ಲಿ ಬೆರತಿರುವ ಪಕರಿ ನೂಲಿನ ಎಳೆಗಳನ್ನು ಎಣಿಸುವವರಾರು? ಅಂಥ ಎಷ್ಟು ಹಿಂದಿನದನ್ನು ಎಟುಕಿಸಿಕೊಳ್ಳ ಬಹುದೋ ಅಷ್ಟೇ ಹಿಂದಕ್ಕೆ ಕಾದಂಬರಿಕಾರ ಕೈ ನೀಡಿದರೆ ಲೇಸು. ಗೌತಮ ಬುದ್ಧನ ವಿಷಯವಾಗಿ ಕಾದಂಬರಿ ಬರೆಯಲು ಯಾವ ಸಾಹಿತಿಗೆ ತಾನೇ ಅಭಿಲಾಷೆ ಯಿಲ್ಲ ? ಆದರೆ ಬರೆಯಬಲ್ಲ ಸಮರ್ಥರು ಎಷ್ಟು ಮಂದಿ ?

ಸಮಯ, ಸನ್ನಿವೇಶದ ವರ್ಣನೆಗೆ ಹೆಚ್ಚು ಜಾಗವನ್ನಿತ್ತು ಪಾತ್ರವರ್ಗದ ಕೆತ್ತನೆಗೆ ಕಡಿಮೆ ಲಕ್ಷ್ಯ ನೀಡಿದರೆ ಚರಿತ್ರೆಗೇನೂ ಊನವಿಲ್ಲ ; ಆದರೆ ಕಾದಂಬರಿ ಹಾಗೆ ಮಾಡಿದರೆ ಅದು ಚರಿತ್ರೆಯ ನಕಲಾಗುತ್ತದೆಯೇ ವಿನಾ ಸಾಹಿತ್ಯವಾಗಿ ಪರಿ ಗಣಿತವಾಗಲಾರದು. ಕಾರ್ಲೈಲನ ಅಭಿಪ್ರಾಯದಂತೆ ಚರಿತ್ರೆಯೂ ಪ್ರಬಲ ವ್ಯಕ್ತಿಗಳ ಆಳ್ವನದ ನಿರೂಪಣೆ. ಎಂದಮೇಲೆ ಅಪ್ಪಟ ಗದ್ಯಸಾಹಿತ್ಯವಾದ ಕಾದಂಬರಿಯಲ್ಲಿ ಪಾತ್ರಗಳಿಗೇ ಪ್ರಾಧಾನ್ಯವಲ್ಲವೇ? ಐತಿಹಾಸಿಕ ಕಾದಂಬರಿಯ ಜನಕನೆಂಬ ಹೆಸರನ್ನು ಪಡೆದ ಸರ್ ವಾಲ್ಟರ್ ಸ್ಕಾಟ್ ಪಾತ್ರವರ್ಗದ ವಿಷಯದಲ್ಲಿ ಒಂದು ನಿಯಮವನ್ನು ತನ್ನ ಅನುಷ್ಠಾನಕ್ಕೆ ವಿಧಿಸಿಕೊಂಡಂತೆ ಕಾಣುತ್ತದೆ. ನಾಯಕಸ್ಥಾನವನ್ನು ದೊರೆ, ದಂಡಾಧೀಶ ಇತ್ಯಾದಿ ಪ್ರಖ್ಯಾತರಿಗೆ ಕೊಡಕೂಡದು ; ಸಾಹಸಿಗಳಾದರೂ ಸಾಮಾಜಿಕ ಹಂತಗಳಲ್ಲಿ ಕೊಂಚ ಕೆಳಗಿನವರಿಗೆ ಕೊಡತಕ್ಕದ್ದು. ಇದೇ ಆ ಸೂತ್ರ. ಐತಿಹಾಸಿಕ ಕಾದಂಬರಿಕಾರರೆಲ್ಲರೂ ಸರಿಸುಮಾರಾಗಿ ಸ್ಕಾಟನ ಪದ್ಧತಿಯನ್ನೇ ಹಿಂಬಾಲಿಸಿದ್ದಾರೆ. ಹಾಗೆ ನಿಯಂತ್ರಿಸುವುದರಿಂದ ಕೃತಿಕಾರನಿಗೆ ಯಥೋಚಿತವಾಗಿ ಕಲ್ಪನೆಮಾಡುವ ಧಾರಾಳ ಲಭಿಸುತ್ತದೆ. ಸ್ಕಾಟನ ಕ್ವೆಂಟಿನ್ ಡರ್ವರ್ಡ್ ಕಥೆ ಯಲ್ಲಿನ ಕಥಾನಾಯಕ ಒಬ್ಬ ಆಗಂತುಕ ತರುಣ ಯೋಧ. ಅರಸ ಲೂಯಿ ಮತ್ತು ಪ್ರಾಂತಾಧೀಶ ಬರ್ಗಂಡಿ—ಇವರ ಹೋರಾಟ ಹಿನ್ನೆಲೆಯ ಕಥಾವಸ್ತು. ಹಾಗೆಯೇ ಅಲೆಕ್ಸಾಂಡರ್ ಡ್ಯೂಮಾನ ದಿ ತ್ರಿ ಮಸ್ಕೆಟಿಯರ್ಸ್ ಎಂಬ ಕಥೆಯಲ್ಲಿ ಆಥೊ, ಪೋರ್ತೊ ಮೊದಲಾದ ನಾಲ್ವರು ಅಸದೃಶ ವೀರಭಟರೇ ಕಥಾನಾಯಕರು. ರಾಜ ರಾಣಿ, ಪ್ರಧಾನಿಗಳ ಸೆಣಸಾಟ ಹಿನ್ನೆಲೆಯ ಕಥಾವಸ್ತು.

ಸ್ಕಾಟ್ ಮತ್ತು ಡ್ಯೂಮಾರ ರಚನೆಗಳು ದಿಟವಾಗಿ ಐತಿಹಾಸಿಕ ಕಾದಂಬರಿಗಳಲ್ಲ. ಇತಿಹಾಸದ ಛಾಯೆಯನ್ನು ಹೊತ್ತ ಸಾಹಸಕಥೆಗಳು, ಅಚ್ಚರಿ ಕಥೆಗಳು (ರೊಮಾ ನ್ಸಸ್)—ಎಂಬ ಆಕ್ಷೇಪಣೆಯಿದೆ. ಅದು ಸ್ವಲ್ಪಮಟ್ಟಿಗೆ ಸರಿ. ಐತಿಹಾಸಿಕತೆ ಡ್ಯೂಮಾಗಿಂತ ಸ್ಕಾಟನಲ್ಲಿ ಅಧಿಕ. ಆದರೂ ಇಬ್ಬರೂ ರೊಮ್ಯಾಂಟಿಕ್ ಯುಗದ ಸಾಹಿತಿಗಳು. ರೋಮಾಂಚಗೊಳಿಸುವ ಧೀರ ಕೃತ್ಯಗಳ ಕಡೆಗೇ ಅವರ ಒಲವು. ಹದಿನೆಂಟನೆಯ ಶತಮಾನದ ಕೊನೆ ಭಾಗದಲ್ಲಿ ಅಮಾನುಷ ವಿದ್ಯಮಾನಗಳೂ ಇತರ ವೈಪರೀತ್ಯಗಳೂ ನಿಬಿಡವಾದ ಕಟ್ಟುಕಥೆಗಳನ್ನು ಚಾರಿತ್ರಿಕವೆಂದು ಪ್ರಕಟಿಸುವ ವ್ಯಾಪಾರವಿತ್ತು. ಅಂಥ ವಿಕೃತಿಗಳ ವಿಕಾರವನ್ನು ತೊಡೆದುಹಾಕಿ ನಿಜವಾಗಿ ಚಾರಿತ್ರಿಕವೆನಿಸಿಕೊಳ್ಳಬಲ್ಲ ಕಾದಂಬರಿಯನ್ನು ಹೊರತಂದ ಕೀರ್ತಿ ಸ್ಕಾಟನದು. ಯೂರೋಪಿನ ಮಧ್ಯಯುಗದ ಬಾಹ್ಯಲಕ್ಷಣಗಳನ್ನು ಬಣ್ಣಿಸುವಾಗ ಆತ ಏನೇ ತಪ್ಪು ಮಾಡಿದರೂ ಅದರ ಅಂತರ್ಯವನ್ನು ಚೆನ್ನಾಗಿ ಪ್ರತಿಬಿಂಬಿಸಿದ.

ಅವನ ವಿಧಾನದ ಕಾದಂಬರಿಯನ್ನು ಐತಿಹಾಸಿಕ ಸಾಹಸದ ಕಥೆ, ಅಚ್ಚರಿ ಕಥೆಯೆಂದು (ಹಿಸ್ಟಾರಿಕಲ್ ರೊಮಾನ್ಸ್) ಕರೆದಿದ್ದಾರೆ. ಹಾಗೆ ಕರೆದರೆ ಅನ್ಯಾಯವಲ್ಲ.

ಐತಿಹಾಸಿಕ ಕಾದಂಬರಿಯ ವಿಮರ್ಶೆಯಲ್ಲಿ ಅದರಲ್ಲಿರುವ ನಿರ್ದುಷ್ಟ ಚಾರಿತ್ರಿಕಾಂಶ ಎಷ್ಟು, ಉಚಿತ ಕವಿಕಲ್ಪನಾಂಶ ಎಷ್ಟು ಎಂಬ ತಾರತಮ್ಯ ವೀಕ್ಷಣೆ ಅತ್ಯಂತ ಮುಖ್ಯ. ಕನ್ನಡದಲ್ಲಿ ಬಂದಿರುವ ರಾಜಪುತ್ರರನ್ನು ಕುರಿತ ಕಥೆಗಳನ್ನೂ ಶಿವಾಜಿ, ಶಾಂತಲ, ಟಿಪ್ಪೂಸುಲ್ತಾನ್, ಚನ್ನಬಸವನಾಯಕ ಮುಂತಾದವರ ಕಥೆಗಳನ್ನೂ ಈ ದೃಷ್ಟಿಯಿಂದ ನಿಷ್ಪಕ್ಷಪಾತವಾಗಿ ಪರಿಶೀಲಿಸಬೇಕು.

ಐತಿಹಾಸಿಕ ಕಾದಂಬರಿಕಾರ ಸುತ್ತುನೋಟ ನೋಡುತ್ತ ಹಿಂದಣ ಕೆಲವು ತಲೆಮಾರುಗಳ ದೃಶ್ಯಪರಂಪರೆಯನ್ನು ಓದುಗರ ಮುಂದೆ ಇಡಬಹುದು. ಅಂಥ ವಿರಚನೆಗೆ ಕಾಲದ ಒಂದು ಅವಧಿಯ ಕಾದಂಬರಿಯೆಂದು ಹೆಸರು. ಅಥವಾ ಒಬ್ಬ ವ್ಯಕ್ತಿಯನ್ನು ಕೇಂದ್ರದಲ್ಲಿಟ್ಟು ಅವನಿಗೆ ಸಂಬಂಧಿಸಿದ ಘಟನಾವಳಿಗಳನ್ನು ಮಾತ್ರ ನಾಟಕೀಯವಾಗಿ ವಿವರಿಸುತ್ತ ಕಥೆ ಹೇಳಬಹುದು. ಇಂಥ ಕೃತಿ ಉತ್ಪ್ರೇಕ್ಷೆಯನ್ನು ಒಳಗೊಂಡು ಅಚ್ಚರಿ ಕಥೆಯಾಗಿ ಬಿಡುವ ಸಂಭವವುಂಟು. ಅಥವಾ ಅವಧಿಯೂ ವ್ಯಕ್ತಿಗಳೂ ಸಮಪ್ರಮಾಣದಲ್ಲಿ ಯುಕ್ತರೀತಿಯಿಂದ ಸೇರಿಕೊಂಡು ಅದು ಹೆಚ್ಚೊ ಇವರು ಹೆಚ್ಚೊ ಎಂಬ ಸಂದೇಹ ಏಳದಂತೆ ಸುಂದರ ಸಾಹಿತ್ಯಮಾರ್ಗವನ್ನು ಕೃತಿಕಾರ ತುಳಿಯಬಹುದು. ಇದೇ ಐತಿಹಾಸಿಕ ಕಾದಂಬರಿಯ ನೈಜ ಪ್ರಕಾರವೆಂದು ತಜ್ಞರ ಮತ.

ಚರಿತ್ರೆಯಿಂದ ನಮಗೆ ಗತಕಾಲದ ಕೇವಲ ಹೊರಮೈನ ವಿಶದ ಪರಿಚಯವಾಗುತ್ತದೆ— ಎಂಬ ದೂರು ಉಂಟು. ಇದು ಅತಿಯಾದ ಅಭಿಮಾನದಿಂದ ಹೇಳುವ ಮಾತು. ಉತ್ತಮ ಚರಿತ್ರಕಾರನಿಗೆ ಒಳಗಣ್ಣು ಇದ್ದೇ ಇರುತ್ತದೆ. ಆಗುಹೋಗುಗಳ ಆಂತರ್ಯವನ್ನು ಭೇದಿಸಿ ಅಲ್ಲಿ ಹುದುಗಿರುವ ಒಲವು ನಿಲವು ಉದ್ದೇಶ ಮುಂತಾದ ಮೂಲಾಂಶಗಳನ್ನು ಆತ ಹೊರಕ್ಕೆಳೆಯಬಲ್ಲ. ಆದರೆ ಹಾಗೆ ಮಾಡುವಾಗ ಅವನು ಕೋಚುಪಾಚನ್ನು ತಿದ್ದಲಾಶಿಸುವುದಿಲ್ಲ. ನಿಜತ್ವವೇ ಅವನ ಏಕೈಕ ಗುರಿ. ಐತಿಹಾಸಿಕ ಕಾದಂಬರಿಕಾರ ಓರೆಕೋರೆಗಳು ಬಾಧಿಸದ ಸಂಗತಿಗಳನ್ನು ಆಯ್ದುಕೊಂಡು, ಸ್ವಲ್ಪ ಸೇರಿಸಿ, ಎಲ್ಲವನ್ನೂ ಸರಿಯಾಗಿ ಜೋಡಿಸಿ, ಒಟ್ಟಿನ ಕಥೆ ಸ್ವಾರಸ್ಯಪೂರ್ಣವೂ ಆಹ್ಲಾದಕರವೂ ಆಗುವಂತೆ ಮಾಡುತ್ತಾನೆ. ಮೇಲಾಗಿ ಜೀವಂತ ಪಾತ್ರಗಳ ರಸಭರಿತ ನಾಟಕವನ್ನು ಆಡಿಸುತ್ತಾನೆ, ನಮ್ಮ ಮುಂದೆ.

(ಎಸ್.ವಿ.ಆರ್.)

**ಐತಿಹಾಸಿಕ ಕಾವ್ಯ:** ಐತಿಹಾಸಿಕ ಕಾವ್ಯವೆಂಬುದು ಕಥನಕಾವ್ಯದ (ನ್ಯಾರೆಟಿವ್ ಪೊಯಟ್ರಿ) ಒಂದು ಪ್ರಭೇದ (ಹಿಸ್ಟಾರಿಕಲ್ ಪೊಯಟ್ರಿ). ವಿವರದಲ್ಲೊ ಪರಿಣಾಮದಲ್ಲೊ ದಿಟವಾಗಿ ಚಾರಿತ್ರಿಕವೆಂದು ಶ್ಲಾಘಿಸಬಲ್ಲ ಹಲವು ಘಟನಾವಳಿಗಳ ಪ್ರಕರಣವನ್ನು ಅದು ಪದ್ಯರೂಪದಲ್ಲಿ ಕಥೆಯಾಗಿ ಹೇಳುತ್ತದೆ. ಕಾರ್ಯ ಮತ್ತು ಕಾರ್ಯಾವಳಿಯ ಕಡೆಗೇ ಕವಿಯ ಮುಖ್ಯ ಗಮನ, ಹೆಚ್ಚು ಆಸಕ್ತಿ. ದೇಶ ಕಾಲ ಪರಿಸ್ಥಿತಿಯ ವರ್ಣನೆ ಅಲ್ಲಲ್ಲಿ ಎಷ್ಟು ಬೇಕೊ ಅಷ್ಟು ಸಂಕ್ಷಿಪ್ತವಾಗಿ ಬರುತ್ತದೆ. ಕ್ರಿಯಾಶೀಲ ವ್ಯಕ್ತಿಗಳೇ ನಾಯಕ ಪ್ರತಿನಾಯಕಾದಿ ಪಾತ್ರಗಳು. ಅವರ ಸ್ವಭಾವ ಚಿತ್ರಣವೂ ಸಂಕಲ್ಪನಿರೂಪಣೆಯೂ ಅವರ ಕೆಲವೇ ಮಾತುಗಳಿಂದಲೂ ನಾನಾ ಓಡಾಟ ಮಾಡಾಟದಿಂದಲೂ ಆಗಬೇಕು, ಆಗುತ್ತದೆ. ದೀರ್ಘ ಭಾಷಣಕ್ಕಾಗಲಿ, ಅಪ್ರಾಸಂಗಿಕ ಭಾವನಾಪುಂಜಕ್ಕಾಗಲಿ ಅದರಲ್ಲಿ ಆಸ್ಪದವಿಲ್ಲ. ಈ ಬಗೆಯ ಕೃತಿಗಳಲ್ಲಿ ಯಾವ ಬಗೆಯ ವಿಳಂಬವೂ ಕ್ಲುಪ್ತ ಮಿತಿಯನ್ನು ಮೀರಿದ ವೈಶಾಲ್ಯವೂ ಕೂಡದು.

ಪುರಾತನ ಕಾಲದಲ್ಲಿ ಮೊದಲು ಮೊದಲು ಹುಟ್ಟಿಬಂದ ಕಾವ್ಯಜಾತಿ ಎಪಿಕ್ ಎಂಬ ಅಂಕಿತದ ಭವ್ಯಕಾವ್ಯ. ಅದರಲ್ಲಿ ಅನೇಕ ಕಥನಾವಳಿಯ ಕಥನವಿದ್ದರೂ ಅದು ಕಥನಕಾವ್ಯಕ್ಕಿಂತ ಬಹಳ ಮಿಗಿಲಾದದ್ದು. ಜನಾಂಗದ ಹೋರಾಟ, ಬೆಳೆವಣಿಗೆ, ಭಾವ, ಭಾವನಾಸಮೂಹ, ಸಂಸ್ಕೃತಿ–ಎಲ್ಲವೂ ಅದರಲ್ಲಿ ಪ್ರತಿಬಿಂಬಿತವಾಗಿರುತ್ತದೆ. ಹಿಂದಣವರಿಗೆ ಭವ್ಯಕಾವ್ಯವೇ ಚರಿತ್ರೆಯಾಗಿತ್ತು. ಭಾರತೀಯ ಸಾಹಿತ್ಯದಲ್ಲಿ ಮಹಾಭಾರತಕ್ಕೆ ಇತಿಹಾಸವೆಂಬ ನಾಮಧೇಯವಿಲ್ಲವೇ ? ಪುರಾಣ ಕಥಾವಳಿಯ ಅಕಿಲೀಸನಿಗೂ ಚಾರಿತ್ರಿಕ ಅಲೆಕ್ಸಾಂಡರನಿಗೂ ಭೇದ ಕಾಣಿಸಲಿಲ್ಲ, ಅವರಿಗೆ. ಜೂಲಿಯಸ್ ಸೀಸರನಂತೆ ಇನಿಯಾಸನೂ ಅವರ ದೃಷ್ಟಿಗೆ ವಾಸ್ತವಿಕ ಮಹಾಪುರುಷ. ಅಂಥ ಅಭಿಪ್ರಾಯಕ್ಕೆ ಈಗ ಮನ್ನಣೆಯಿಲ್ಲ.

ಹೊಸ ಹುಟ್ಟಿನ ಅವಧಿಯಲ್ಲಿ ಸ್ವಂತ ನಾಡು ಮತ್ತು ನುಡಿಯ ಪ್ರೇಮ ವೆಗ್ಗಳವಾಯ್ತು. ಗತಕಾಲದ ರಾಜರು ಮತ್ತು ಇತರ ಶೂರರ ವಿಚಾರವಾಗಿ ಕುತೂಹಲ ಕೆರಳಿತು. ಕೆಲವು ಲೇಖಕರು ಹಳೆಯ ದಾಖಲೆ, ಅವಶೇಷ, ದಂತಕಥೆ ಮುಂತಾದ ಆಧಾರವನ್ನು ಬಳಸಿಕೊಂಡು ಐತಿಹಾಸಿಕ ವೃತ್ತಾಂತವೆಂಬ (ಉದಂತ; ಕ್ರಾನಿಕಲ್) ಪ್ರಬಂಧಗಳನ್ನು ಗದ್ಯದಲ್ಲಿ ಬರೆದರು. ಅವುಗಳಿಂದ ದೊರೆತ ಕಥಾ ಸಾಮಗ್ರಿ ನಾಟಕಕಾರರಿಗೂ ಕವಿಗಳಿಗೂ ತುಂಬ ಉಪಯುಕ್ತವಾಯ್ತು. ಹಲವು ಪದ್ಯವೃತ್ತಾಂತಗಳೂ ಹೊರಬಂದುವು. ಕ್ರಮೇಣ ಅದೊಂದು ಕಾವ್ಯಪ್ರಕಾರವೇ ಆಯ್ತು. ಬರುಬರುತ್ತ ಅದರ ಪ್ರಶಸ್ತಿ ಕುಂದಿಹೋದರೂ ಅದು ಪೂರ್ತ ಕಣ್ಮರೆಯಾಗಿಲ್ಲ. ಈ ಶತಮಾನದ ಆರಂಭದಲ್ಲಿ ಸರ್ ಫ್ರಾನ್ಸಿಸ್ ಡ್ರೇಕನ ಸಾಹಸಗಳನ್ನು ಹೊಗಳುವ ಒಂದು ಸುದೀರ್ಘ ಪದ್ಯಕಾವ್ಯ ಪ್ರಕಟವಾಯ್ತು. ಅದೊ ಇದೊ ಚಾರಿತ್ರಿಕ ಘಟನೆಯನ್ನೊ ಘಟನಾವಳಿಯನ್ನೊ ನಿರೂಪಿಸುವ ಕಿರುಕಾವ್ಯ, ನೀಳ ಕಾವ್ಯ ರಚಿತವಾಗುತ್ತಲೇ ಬಂದಿವೆ. ಅವುಗಳಲ್ಲಿ ಚಾರಿತ್ರಿಕ ಸತ್ತ್ವವೂ ವಿಭಾವನಾ ಸತ್ಯವೂ ಅಚ್ಚುಕಟ್ಟಾಗಿ ಕೂಡಿಕೊಂಡಿದ್ದರೆ ಅವನ್ನು ನಾವು ಮೆಚ್ಚಲೇಬೇಕು. ಆದರೆ ಅನೇಕ ಪದ್ಯವೃತ್ತಾಂತಗಳು ಬೇಸರ ತರುವಷ್ಟು ನೀರಸ, ಸಪ್ಪೆ ಗದ್ಯಕ್ಕೆ ಛಂದೋಬದ್ಧ ಶೈಲಿಯ ಕವುದಿಯನ್ನು ಹೊದಿಸಿದಂತೆ!

ಹೊಸ ಹುಟ್ಟಿನ ಕಾಲದಲ್ಲೇ ಇನ್ನೊಂದು ಬಗೆಯ ಅರ್ಧ ಚಾರಿತ್ರಿಕ ಮಹಾಕಾವ್ಯವೂ ಎದ್ದುಬಂತು. ವೀರಕಾವ್ಯ (ಹೀರೋಯಿಕ್ ಪೊಯಮ್) ಎಂದು ಅದರ ನಾಮಧೇಯ. ಸುಮ್ಮನೆ ರೊಮಾನ್ಸ್ ಎಂದು ಅದನ್ನು ಕರೆಯುವ ವಾಡಿಕೆಯೂ ಇತ್ತು. ಸ್ಪೆನ್ಸರ್, ಆರಿಯೋಸ್ಟೊ ಮೊದಲಾದ ಶ್ರೇಷ್ಠ ಕವಿಗಳಿಂದ ಆ ಕಾವ್ಯ ಪ್ರಕಾರಕ್ಕೆ ಮನ್ನಣೆಯೂ ಯಶಸ್ಸೂ ಯಥೇಷ್ಟವಾಗಿ ದಕ್ಕಿತು. ಅವರ ಉದ್ದೇಶ ಬೆರಗಾಗಿಸುವ ಮಹೋದ್ದೇಶ. ಆದಿಕವಿಯೆಂದು ಪ್ರಶಂಸೆಗೊಂಡ ಪ್ರಾಚೀನ ಗ್ರೀಸಿನ ಹೋಮರ್, ಅವನನ್ನು ಅನುಸರಿಸಿ, ಅವನಂತೆಯೇ ಹೆಸರಾಂತ ಪ್ರಾಚೀನ ರೋಮಿನ ವರ್ಜಿಲ್–ಇವರು ಇಡೀ ಪಾಶ್ಚಾತ್ಯ ಲೋಕಕ್ಕೆ ಕವಿಕುಲಗುರುದ್ವಯರು. ಹೊಸ ಹುಟ್ಟಿನ ಅತ್ಯುತ್ಸಾಹದಲ್ಲಿ, ಪ್ರಾಚೀನರೊಡನೆ ಸ್ಪರ್ಧೆ ನಿಂತು ಅರ್ವಾಚೀನರೂ ಮಹೋನ್ನತ ಕಾವ್ಯಗಳನ್ನು ಕಟ್ಟಲಾರರೆ ಎಂಬ ಭಾವನೆ ಹುಟ್ಟಿ ಬೆಳೆದು ವೀರಕಾವ್ಯ ವಿರಚನೆಗೆ ಪ್ರೇರಣೆಯಾಯ್ತು. ಹಿಂದಣವರ ಭವ್ಯಕಾವ್ಯಕ್ಕೂ ಈಚಿನವರ ವೀರ ಕಾವ್ಯಕ್ಕೂ ದೊಡ್ಡ ವ್ಯತ್ಯಾಸವೊಂದಿದೆ. ಎರಡರಲ್ಲೂ ಅಸಾಧಾರಣ ವ್ಯವಹಾರಗಳೂ ಅತಿಮಾನುಷ ವ್ಯಕ್ತಿಗಳೂ ಉಂಟು. ಆದರೆ ಭವ್ಯಕಾವ್ಯದುದ್ದಕ್ಕೂ ಸ್ಫುಟ ಮಾನವೀಯತೆಯ ಪ್ರಕಾಶ ತಾನೇ ತಾನು; ವೀರಕಾವ್ಯದಲ್ಲಾದರೊ ಅಮಾನುಷತ್ವದ ಕೆಂಬೆಳಕು ಹೆಚ್ಚು. ಅದರಲ್ಲಿ ಬರುವವರು ಬಲು ಎತ್ತರದ ಆದರ್ಶ ಮಾನವರಾದರೂ ನಮ್ಮ ಪ್ರಪಂಚಕ್ಕೆ ಸೇರಿದವರೆ; ಇದರಲ್ಲಿ ಬರುವವರು ಯಾವುದೋ ವಿಚಿತ್ರ ಕಲ್ಪನಾಲೋಕಕ್ಕೆ ಸೇರಿದವರು. ಅದರಲ್ಲಿ ನೇರ ಕಥನಕ್ಕೂ ನಿಲ್ಲದ ಹಾಗೂ ತ್ವರೆಗೊಳ್ಳದ ಮಧ್ಯಮ ಗತಿಯ ನಡಿಗೆಗೂ ಪುರಸ್ಕಾರ; ಇದರಲ್ಲಿ ವಿಳಂಬಕ್ಕೂ ವರ್ಣನಾಚಾಪಲ್ಯಕ್ಕೂ ಮರ್ಯಾದೆ.

ಕನ್ನಡದ ಚಂಪೂ ಕವಿಗಳು ಅನುಸರಿಸುತ್ತಿದ್ದ ಒಂದು ಕ್ರಮವನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ತಮ್ಮ ಮತ್ತು ತಮ್ಮ ಆಶ್ರಯದಾತರ ವಂಶಾವಳಿಯನ್ನು ಘೋಷಿಸಿ ಪ್ರಶಂಸಾಪದ್ಯಗಳನ್ನು ಪೀಠಿಕೆಯಲ್ಲೂ ಕೆಲವೊಮ್ಮೆ ಸಮಾಪ್ತಿಯಲ್ಲೂ ಅವರು ಇಡುತ್ತಿದ್ದರು. ಕಾವ್ಯದ ನಾಯಕನಿಗೂ ತಮ್ಮ ರಾಜನಿಗೂ ಹೋಲಿಕೆ ಕಾಣುತ್ತಿದ್ದರು. ಚಾರಿತ್ರಿಕವಾದರೂ ಅವು ಕಾವ್ಯದ ವಿಷಯದಿಂದ ತೀರ ಪ್ರತ್ಯೇಕ. ಕೆಲವು ಕವಿಗಳು ಅರಸರ ಇತಿಹಾಸಭಾಗಗಳನ್ನು ಕಥನಗೈದರು. ಕೆಳದಿನೃಪವಿಜಯ, ಚಿಕದೇವರಾಜವಿಜಯ ಮುಂತಾದವು ಒಂದು ಬಗೆಯ ಐತಿಹಾಸಿಕ ಕಾವ್ಯ. ಅವುಗಳಲ್ಲಿ ಹಲಕೆಲವು ನಡೆದ ಸಂಗತಿಗಳ ಉಲ್ಲೇಖವಿದ್ದರೂ ವಿವರದಲ್ಲೂ ಪಾತ್ರಚಿತ್ರಣದಲ್ಲೂ ಉದ್ದೇಶದಲ್ಲೂ ರೀತಿಯಲ್ಲೂ ಆದರ್ಶತೆ, ಉತ್ಪ್ರೇಕ್ಷೆ, ಸಾಂಪ್ರದಾಯಿಕತೆಗಳ ನರ್ತನವೇ ಹೆಚ್ಚು. ಅಲಂಕಾರಶಾಸ್ತ್ರವನ್ನು ಬರೆಯುತ್ತ ಉದಾಹರಣೆಯೆಲ್ಲಕ್ಕೂ ರಾಜನ ಗುಣಶೀಲ, ಸಾಹಸಕಾರ್ಯವನ್ನೇ ವಸ್ತುವನ್ನಾಗಿಸಿಕೊಳ್ಳುವ ಚಮತ್ಕಾರವನ್ನೂ ಮೆರೆದ ಕವಿಗಳುಂಟು.

ಐತಿಹಾಸಿಕ ಘಟನಾವಳಿ ಸೂಕ್ತವಾಗಿ ಕಾವ್ಯಕ್ಕೆ ಹೊಂದಿಕೊಳ್ಳುವುದು ದಿಟವಾಗಿ ಅಪರೂಪ. ಆದ್ದರಿಂದಲೇ ಐತಿಹಾಸಿಕ ಕಾವ್ಯವೆಂಬುದೂ ವಿರಳ. (ಎಸ್.ವಿ.ಆರ್.)

**ಐತಿಹಾಸಿಕ ನಾಟಕ:** ಇತಿಹಾಸದ ವಸ್ತುವನ್ನೇ ಬಳಸಿಕೊಂಡು ಕಟ್ಟಿದ ನಾಟಕ. ಚರಿತ್ರೆಯಲ್ಲಿ ಆಗಿಹೋದ ಗತಕಾಲದ ವ್ಯಕ್ತಿಗಳು ಇತಿಹಾಸಕಾರನ, ಜೀವನಚರಿತ್ರೆ ಬರೆಯುವವನ, ಕಲ್ಪನೆಯನ್ನು ಹೇಗೆ ಕೆರಳಿಸಿದವೋ ಹಾಗೆ ಗ್ರೀಕರ ಕಾಲದಿಂದಲೂ ನಾಟಕಕಾರನ ಪ್ರತಿಭೆಯನ್ನೂ ಸೆಳೆದಿವೆ. ಪ್ರಾಚೀನ ಗ್ರೀಕ್ ನಾಟಕಕಾರರಲ್ಲಿ ಪ್ರಸಿದ್ಧರಾದ ಈಸ್ಕಿಲಸ್, ಯೂರಿಪಿಡೀಸ್ ಮತ್ತು ಸೊಫಕ್ಲೀಸರು ಗ್ರೀಸಿನ ಇತಿಹಾಸ ಮತ್ತು ಐತಿಹ್ಯಗಳಿಂದ ವಸ್ತುವನ್ನಾಯ್ದುಕೊಂಡು ಅದ್ಭುತವಾದ ನಾಟಕಗಳನ್ನು ರಚಿಸಿದ್ದಾರೆ. ಇತಿಹಾಸವೆಂದರೆ ಈಗಿನ ಅರ್ಥದಂತೆ ಚರಿತ್ರೆಯೇ ಎಂಬ ಭಾವನೆ ಪ್ರಬಲವಾದಂತೆಲ್ಲ ಚಾರಿತ್ರಿಕ ಅಥವಾ ಐತಿಹಾಸಿಕ ನಾಟಕದ ಕಲ್ಪನೆ ಖಚಿತವಾಗತೊಡಗಿತು. ನಾಟಕಕಾರನಿಗಿಂತ ಕಾದಂಬರಿಕಾರನಿಗೆ ಹೆಚ್ಚು ಸ್ವಾತಂತ್ರ್ಯವಿದೆಯೆಂದು ಗಾಲ್ಸ್‌ವರ್ದಿ ಹೇಳಿದ ಮಾತು ಐತಿಹಾಸಿಕ ನಾಟಕ ಬರೆಯುವವನಿಗೆ ಅಷ್ಟಾಗಿ ಅನ್ವಯಿಸುವುದಿಲ್ಲ. ಐತಿಹಾಸಿಕ ನಾಟಕದಲ್ಲಿ ಬರುವ ವಾಸ್ತವಿಕ ಜೀವನದ ವ್ಯಕ್ತಿಗಳು ಪ್ರಧಾನ ಪಾತ್ರವಹಿಸಿ ನಾಟಕಕ್ಕೆ ಆವಶ್ಯಕವಾದ ರೂಪವನ್ನು ನೀಡುತ್ತಾರೆ. ಅನೇಕ ಐತಿಹಾಸಿಕ ನಾಟಕಗಳನ್ನು ನಾಟಕೀಯ ಜೀವನಚರಿತ್ರೆ ಅಥವಾ ಚರಿತ್ರೆಯ ತುಣುಕುಗಳೆಂದು ಕರೆಯಬಹುದು. ಉದಾಹರಣೆಗೆ, ಮಾರ್ಲೋ

ಬರೆದ ಟ್ಯಾಂಬರ್‌ಲೇನ್, ಷೇಕ್ಸ್‌ಪಿಯರನ ಐತಿಹಾಸಿಕ ನಾಟಕಗಳು, ಬರ್ನಾರ್ಡ್ ಷಾನ ಸೇಂಟ್ ಜೋನ್, ಡೊನಾಲ್ಡ್ ಕಾರ್ಸ್‌ವೆಲ್‌ನ ಚಿಕ್ಕದಾದರೂ ಗಮನಾರ್ಹ ಕೃತಿ ಕೌಂಟ್ ಆಲ್‌ಬೆನಿ. ಐತಿಹಾಸಿಕ ನಾಟಕದ ತಂತ್ರ ಕಾದಂಬರಿಕಾರನ ತಂತ್ರದಿಂದ ಬೇರೆಯಾದದ್ದು. ಗತಕಾಲದ ಘಟನೆಗಳಲ್ಲಿ ಸುಲಭವಾಗಿ ಎದ್ದು ತೋರುವ ನಾಟಕೀಯ ಅಂಶವನ್ನು ನಾಟಕಕಾರ ನೇರವಾಗಿ ತನ್ನ ಉದ್ದೇಶಕ್ಕಾಗಿ ಬಳಸಿಕೊಳ್ಳುತ್ತಾನೆ. ಚರಿತ್ರೆಯಲ್ಲಿ ಬಾಳಿಬದುಕಿದ ಮಾನವ ವ್ಯಕ್ತಿಗಳ ಸ್ವಭಾವ, ಕ್ರಿಯೆಗಳು ಯಾವ ವಾಸ್ತವಿಕ ಘಟನೆಗಳನ್ನು ಸೃಷ್ಟಿಸಿದವೆನ್ನುವುದನ್ನು ಗುರುತಿಸುವುದು ನಾಟಕಕಾರನ ಉದ್ದೇಶ. ಮಧ್ಯಯುಗದ ಉಜ್ಜ್ವಲ ಪ್ರದರ್ಶನಗಳಿಂದ (ಪೇಜೆಂಟ್ರಿ) ವಿಕಾಸವಾದ ನಾಟಕ ಮಾನವಸಹಜ ಭಾವೋದ್ರೇಕವನ್ನೂ ಮೈಗೂಡಿಸಿಕೊಂಡಂತೆ, ಇತಿಹಾಸಕಾರನ 'ಕ್ರಾನಿಕಲ್' ನಿರೂಪಣೆಯಲ್ಲಿನ ರಾಗವೈವಿಧ್ಯ, ಉಜ್ಜ್ವಲ ಚಿತ್ರಣದೊಂದಿಗೆ ಬೆರೆತಾಗ, ಈ ವರ್ಣರಂಜಿತ ಐತಿಹಾಸಿಕ ವ್ಯಕ್ತಿಗಳು ನಾಟಕಕಾರನ ವಿಭಾವನೆಯನ್ನು ಪ್ರಬಲವಾಗಿ ಸೆಳೆದುವು. ಈ ವೇಳೆಗೆ ನಿಚ್ಚಳವಾದ ರೂಪ ಪಡೆದಿದ್ದ ನಾಟಕಪ್ರಕಾರ ಚರಿತ್ರೆಯ ಈ ಎಲ್ಲ ನಾಟಕೀಯ ಅಂಶಗಳನ್ನೂ ಅಳವಡಿಸಿಕೊಂಡಿತು. ಮಿಂಚಿನಂತೆ ಸುಳಿಯುವ ದೃಶ್ಯಾವಳಿಗಳ ಮೂಲಕ ಕಥೆಯನ್ನು ನಿರೂಪಿಸುವ ಹಿತಮಿತವಾದ ತಂತ್ರ ಕಥನಕ್ಕೊಂದು ಸಾಂಗತ್ಯವನ್ನು ತಂದುಕೊಟ್ಟಿತು. ಹೀಗೆ ವಿಕಾಸವಾದ, ಮಧ್ಯಯುಗದ 'ಕ್ರಾನಿಕಲ್' ನಾಟಕಗಳಿಂದ ಹೀರಿಕೊಂಡ ಅಂಶಗಳನ್ನು ಷೇಕ್ಸ್‌ಪಿಯರ್ ತನ್ನ ಕಲ್ಪನೆ ಹಾಗೂ ಸಮಾಜಪ್ರಜ್ಞೆಯ ಮೂಸೆಯಲ್ಲಿಟ್ಟು ಕರಗಿಸಿ ರಮ್ಯ ಐತಿಹಾಸಿಕ ನಾಟಕಗಳನ್ನು ರಚಿಸಿದ. ಮೂಲದ 'ಕ್ರಾನಿಕಲ್' ನಾಟಕಗಳಲ್ಲಿಲ್ಲದ ರಚನಾಕೌಶಲ, ಪಾತ್ರವಿನ್ಯಾಸ, ಇತಿಹಾಸಪ್ರಜ್ಞೆ ಇವನ್ನು ಷೇಕ್ಸ್‌ಪಿಯರ್ ಸಾಧಿಸಿದ. ಐತಿಹಾಸಿಕ ನಾಟಕ ಬರೆಯುವವರಿಗೆ ಅವನು ಒಳ್ಳೆಯ ಮಾರ್ಗದರ್ಶಕನಾಗಿದ್ದಾನೆ.

ಇತಿಹಾಸದ ವಾಸ್ತವಾಂಶಗಳು ನಾಟಕಕಲೆಯ ಕಲ್ಪನೆಯೊಡನೆ ಯಾವ ಪ್ರಮಾಣದಲ್ಲಿ ಬೆರೆಯಬೇಕೆನ್ನುವುದು ನಾಟಕಕಾರನ ಪ್ರತಿಭೆಯನ್ನೇ ಅನುಸರಿಸುತ್ತದೆ. ಇತಿಹಾಸದ ವ್ಯಕ್ತಿಗಳನ್ನು ಸನ್ನಿವೇಶ ಘಟನೆಗಳನ್ನು ಸಮಕಾಲೀನಪ್ರಜ್ಞೆಯ ಮೂಲಕ ವೀಕ್ಷಿಸಿ, ಭೂತ-ವರ್ತಮಾನ ಕಾಲಗಳಿಗೆ ಸೇತುವೆಯಾಗಿ ನಿರ್ಮಿಸುವ ಕಾರ್ಯವನ್ನು ಈಚಿನ ಹಲವು ಪ್ರತಿಭಾವಂತ ನಾಟಕಕಾರರು ಸೊಗಸಾಗಿ ನೆರವೇರಿಸಿದ್ದಾರೆ. ಆಸ್‌ಬಾರ್ನ್ ಬರೆದ ಮಾರ್ಟಿನ್ ಲೂಥರ್, ಬ್ರೆಕ್ಟ್‌ನ ಗೆಲಿಲಿಯೊ, ಬಹಳ ಹಿಂದೆಯೇ ಆಧುನಿಕ ಕಾವ್ಯನಾಟಕಕ್ಕೊಂದು (ಪೊಯೆಟಿಕ್ ಡ್ರಾಮ) ರೂಪವಿತ್ತ ಟಿ. ಎಸ್. ಎಲಿಯಟ್‌ನ ಮರ್ಡರ್ ಇನ್ ದಿ ಕೆಥೆಡ್ರಲ್—ಇವುಗಳಲ್ಲಿ ಆಧುನಿಕ ಐತಿಹಾಸಿಕ ನಾಟಕದ ರೂಪರೇಷೆಗಳನ್ನು ಕಾಣಬಹುದು.

ಗತಕಾಲದ ಒಂದು ಸನ್ನಿವೇಶವನ್ನೊ ಘಟನೆಯನ್ನೊ ಒಬ್ಬನ ಜೀವನದ ಪ್ರಮುಖ ಸಂಗತಿಯನ್ನೊ ತದ್ವತ್ತಾಗಿ ಚಿತ್ರಿಸುವುದು ಐತಿಹಾಸಿಕ ನಾಟಕಗಳ ಮುಖ್ಯ ಉದ್ದೇಶ. ಹಾಗೆ ಮಾಡುವಲ್ಲಿ ಪ್ರಧಾನ ವ್ಯಕ್ತಿಗಳು ಬದಲಾಗದೆ ಹಾಗೆಯೇ ಬಂದರೂ ಪೋಷಕವಾಗಿ ಬರುವ ಅನೇಕ ವಿಷಯಗಳು ಮತ್ತು ಪಾತ್ರಗಳು ಕಾಲ್ಪನಿಕವಾಗಿರಬಹುದು. ಅಲ್ಲದೆ ನಾಟಕಕಾರ ತನ್ನ ಯಾವುದೋ ಒಂದು ಉದ್ದೇಶ ಸಾಧನೆಗಾಗಿ ಐತಿಹಾಸಿಕ ಘಟನೆಯೊಂದನ್ನು ಎತ್ತಿಕೊಂಡಾಗ ಸ್ಥೂಲವಾಗಿ ನಾಟಕ ಇತಿಹಾಸಕ್ಕೆ ಅವಿರುದ್ಧವಾಗಿ ಕಂಡರೂ ಸಂಭಾಷಣೆ, ಸನ್ನಿವೇಶ, ಪಾತ್ರಪೋಷಣೆಗಳೆಲ್ಲ ಕಾಲ್ಪನಿಕವಾಗಿಬಿಡಬಹುದು. ಈ ಎಲ್ಲಕ್ಕೂ ಪ್ರಸಿದ್ಧ ನಾಟಕಗಳಲ್ಲಿ ಉದಾಹರಣೆಗಳು ದೊರೆಯುತ್ತವೆ.
(ಎಚ್.ಕೆ.ಆರ್.)

**ಸಂಸ್ಕೃತದಲ್ಲಿ ಐತಿಹಾಸಿಕ ನಾಟಕಗಳು:** ಹಿಂದಿನ ಭಾರತೀಯರಿಗೆ ಐತಿಹಾಸಿಕ ಬುದ್ಧಿಯೇ ಇಲ್ಲವೆಂದು ಆಧುನಿಕ ಇತಿಹಾಸಕಾರರ ಆಕ್ಷೇಪಣೆ. ಭಾರತದಲ್ಲಿ ಪ್ರಾಚೀನ ಇತಿಹಾಸದ ಮುಖ್ಯ ಘಟನೆಗಳನ್ನು ಕಾಲನಿರ್ದೇಶ ಸಮೇತವಾಗಿ ಸ್ವೀಕಾರಾರ್ಹವೆನಿಸುವಂತೆ ರಚಿಸಿದ ಬರೆಹಗಳ ಅಭಾವವೇ ಇದಕ್ಕೆ ಮುಖ್ಯ ಆಧಾರ. ಮೊದಲು ಮೊದಲು, ಜನಪ್ರಿಯವೂ ರೋಚಕವೂ ಆದ ರೀತಿಯಲ್ಲಿ ರಾಜರ ಚರಿತ್ರೆಗಳನ್ನು ಕಥಾಕಲ್ಪನೆಗಳೊಂದಿಗೆ ಕೂಡಿಸಿಯೆ ಕಾವ್ಯರಚನೆ ಮಾಡುತ್ತಿದ್ದರು. ಈ ದೃಷ್ಟಿಯಿಂದ ರಾಮಾಯಣ, ಮಹಾಭಾರತ, ಪುರಾಣದಲ್ಲಿ ಬರುವ ರಾಜಚರಿತ್ರೆಗಳು –ಎಲ್ಲವೂ ಇತಿಹಾಸವೆನಿಸುತ್ತಿತ್ತು. ಆದರೆ ಇವುಗಳಲ್ಲಿ ಎಲ್ಲೂ ಕಾಲಗಣನೆಯ ನಿರ್ದೇಶವೇ ಇಲ್ಲ. ಕೇವಲ ಕಲ್ಪಿತಾಂಶಗಳಿಂದಲೇ ನೇಯ್ದ ಅದ್ಭುತರಮ್ಯ ಚರಿತ್ರೆ ಕಥೆಯೆನಿಸುತ್ತಿತ್ತು, ಅಷ್ಟೆ.

ಸಂಸ್ಕೃತದ ನಾಟಕಗಳೆಲ್ಲ ಪ್ರಾಯಿಕವಾಗಿ ಈ ಮೂರು ಬಗೆಯ (ಇತಿಹಾಸ, ಪುರಾಣ ಮತ್ತು ಕಥೆ) ಮೂಲವಸ್ತುವನ್ನೇ ಅವಲಂಬಿಸಿರುತ್ತಿದ್ದುವು. ರಾಜ ಸಚಿವಾದಿಗಳ ವೀರ ಇಲ್ಲವೆ ಶೃಂಗಾರಕಾರ್ಯಗಳಿಗೆ ನಾಟಕಗಳಲ್ಲಿ ಪರಮಪ್ರಾಶಸ್ತ್ಯವಿದ್ದರೂ ನಾಟಕಕಾರ ಸಮಕಾಲೀನರನ್ನು ನಾಯಕರನ್ನಾಗಿ ತರುವ ಪರಿಪಾಠ ಹೆಚ್ಚಾಗಿರಲಿಲ್ಲ. ಆದರೂ ಈಗ ಉಪಲಬ್ಧವಾಗಿರುವ ಕೆಲವೊಂದು ನಾಟಕಗಳ ಸಮಕಾಲೀನ ರಾಜವೃತ್ತಾಂತವನ್ನೇ ಒಳಗೊಳ್ಳುವುದರಿಂದ ಭಾರತೀಯರಿಗೆ ಕ್ವಚಿತ್ತಾದರೂ ಐತಿಹಾಸಿಕ ಬುದ್ಧಿಯಿತ್ತೆಂದು ಸಾಧಿಸುವಂತಾಗಿದೆ.

ಐತಿಹಾಸಿಕ ನಾಟಕಗಳ ನೂತನ ಪರಂಪರೆಗೆ ಕಾಳಿದಾಸನೇ ಪ್ರವರ್ತಕನೆಂದರೂ ಸಲ್ಲುತ್ತದೆ. ಏಕೆಂದರೆ ಪ್ರಾಚೀನ ಪುರಾಣೇತಿಹಾಸಗಳಲ್ಲಿ ಪ್ರಸಿದ್ಧನಲ್ಲದ ಅಗ್ನಿಮಿತ್ರ ರಾಜನನ್ನು ನಾಯಕನನ್ನಾಗಿ ಮಾಡಿ ಅವನು ಮಾಳವಿಕಾಗ್ನಿಮಿತ್ರವನ್ನು ಬರೆದಿದ್ದಾನೆ. ಕೆಲವು ವಿದ್ವಾಂಸರು ಕಾಳಿದಾಸ ಅಗ್ನಿಮಿತ್ರ ರಾಜನ ಸಮಕಾಲೀನನೆಂಬ ವಾದವನ್ನು ಕೂಡ ಪುರಸ್ಕರಿಸುತ್ತಾರೆ (ಡಾ. ಕುನ್ಹನ್ ರಾಜಾ ಮತ್ತು ಡಾ. ವಿ. ರಾಘವನ್ ಮೊದಲಾದವರು). ಈ ರಾಜನ ಶೃಂಗಾರವಿಲಾಸವನ್ನೇ ಸ್ವಾರಸ್ಯಕೇಂದ್ರವೆಂದರೂ ಇದರ ಹಿನ್ನೆಲೆಯಲ್ಲಿ ಸತ್ಯವಾದ ಚಾರಿತ್ರಾಂಶಗಳನ್ನೊಳಗೊಳ್ಳುವ ರಾಜಕೀಯ ಪರಿಸ್ಥಿತಿ ವರ್ಣಿತವಾಗಿದೆ. ಪಾಟಲಿಪುತ್ರದಲ್ಲಿ ರಾಜನಾಗಿರುವ ವೃದ್ಧ ಪುಷ್ಯಮಿತ್ರ; ಅವನ ಪ್ರತಿನಿಧಿಯಾಗಿ ವಿದಿಶಾಪಟ್ಟಣವನ್ನಾಳುತ್ತಿರುವ ಮಗ ಅಗ್ನಿಮಿತ್ರ ; ಕೆಳಗೆ ವಿದರ್ಭದಲ್ಲಿ ರಾಜ್ಯಕ್ಕಾಗಿ ಇಬ್ಬರ ಕಲಹ. ಪಾಟಲಿಪುತ್ರದ ಪೂರ್ವ ರಾಜರಾದ ಮೌರ್ಯರ ಸಚಿವನ ಸಹಾಯ ಒಬ್ಬನಿಗೆ ; ಅಗ್ನಿಮಿತ್ರನ ಸಹಾಯ ಇನ್ನೊಬ್ಬನಿಗೆ. ಅಗ್ನಿಮಿತ್ರನ ರಾಜ್ಯತಂತ್ರದ ವಿಜಯ. ವಿದರ್ಭರಾಜಪುತ್ರಿಯ ಪಾಣಿಗ್ರಹಣ. ಅತ್ತ ಯವನರಿಂದ ಪುಷ್ಯಮಿತ್ರನ ಯಜ್ಞಾಶ್ವಬಂಧನ. ಅಗ್ನಿಮಿತ್ರನ ಮಗನಾದ ವಸುಮಿತ್ರನಿಗೂ ಯವನರಿಗೂ ಕಾಳಗ. ಯುದ್ಧದಲ್ಲಿ ವಸುಮಿತ್ರನ ವಿಜಯ. ನಮಗೆ ಉಪಲಬ್ಧವಿರುವ ಇತರ ಐತಿಹಾಸಿಕ ಘಟನೆಗಳೊಂದಿಗೆ ಈ ನಾಟಕದಲ್ಲಿ ಪ್ರಥಮತಃ ಉಲ್ಲಿಖಿತವಾಗಿರುವ ಈ ಘಟನೆಗಳು ಕೂಡ ಅವಿರುದ್ಧವಿದ್ದು ಪೂರಕವೆನಿಸುವಂತಾಗಿವೆ.

ಇದೇ ರೀತಿ, ವಿಶಾಖದತ್ತನ (ಸು. 600) ಮುದ್ರಾರಾಕ್ಷಸ ನಾಟಕದ ಮೂಲ ಅಚ್ಚು ಕಥಾಸಾಹಿತ್ಯದಿಂದ ಬಂದುದಾದರೂ ಅಲ್ಲಿ ಜೀವಂತವಾಗಿ ಕಣ್ಣುಮುಂದೆ ಸುಳಿಯುವ ಪರ್ವತರಾಜ, ಅಮಾತ್ಯರಾಕ್ಷಸ, ಮಲಯಕೇತು ಮುಂತಾದ ಪಾತ್ರಗಳು ನಾಟಕಕಾರನ ಐತಿಹಾಸಿಕ ಪ್ರಜ್ಞೆಗೆ ಮಾನದಂಡಗಳಂತಿವೆ.

ಇದೇ ಕವಿಯ ದೇವೀಚಂದ್ರಗುಪ್ತವೆಂಬ ನಾಟಕದ ತುಣುಕುಗಳು ಭೋಜನ ಶೃಂಗಾರಪ್ರಕಾಶ ಮುಂತಾದ ಲಕ್ಷಣಗ್ರಂಥಗಳಲ್ಲಿ ಉದಾಹೃತವಾಗಿವೆ. ಗುಪ್ತ ಸಮ್ರಾಟ್ ಎರಡನೆಯ ಚಂದ್ರಗುಪ್ತನ ಹಿರಿಯಣ್ಣ ರಾಮಗುಪ್ತ, ಅವನ ರಾಣಿ ಧ್ರುವದೇವಿ. ಶಕರೊಡನೆ ಯುದ್ಧದಲ್ಲಿ ಸೋತ ರಾಮಗುಪ್ತ ವಿಷಮಘಳಿಗೆಯಲ್ಲಿ ತನ್ನ ರಾಣಿಯನ್ನೇ ಶಕರಾಜನಿಗೆ ಒಪ್ಪಿಸುವ ಅವಮಾನಕರ ಒಪ್ಪಂದ ಮಾಡಿಕೊಳ್ಳುತ್ತಾನೆ. ಇದನ್ನು ಸಹಿಸಲಾರದ ಚಂದ್ರಗುಪ್ತ ರಾಣಿಯ ವೇಷದಲ್ಲಿ ಶಕರಾಜನ ಅಂತಃಪುರಕ್ಕೆ ಸೇರಿ ಅವನನ್ನು ಕೊಂದು ಹಿಂದಿರುಗಿ ಅಣ್ಣ ಸತ್ತಮೇಲೆ ತಾನೇ ಧ್ರುವದೇವಿಯನ್ನು ಮದುವೆಯಾಗುತ್ತಾನೆ. ಆಕೆಯೇ ಕುಮಾರಗುಪ್ತನ ತಾಯಾಗುತ್ತಾಳೆ. ಇಷ್ಟೆಲ್ಲ ಐತಿಹಾಸಿಕ ಸಂಗತಿಗಳನ್ನು ಈ ನಾಟಕದ ತುಣುಕುಗಳು ಮೊತ್ತ ಮೊದಲಿಗೆ ನಮ್ಮ ಗಮನಕ್ಕೆ ತರುತ್ತವೆ.

ಹೀಗೆಯೇ ಇತಿಹಾಸಕಾರನ ಗಮನವನ್ನು ಸೆಳೆವ ಮತ್ತೊಂದು ನಾಟಕ ಈ ಶತಮಾನದಲ್ಲಿಯೇ ಮೊದಲು ಅಚ್ಚಾಯಿತು : ಕೌಮುದೀಮಹೋತ್ಸವವೆಂದು ಅದರ ಹೆಸರನ್ನು ಊಹಿಸಲಾಗಿದೆ. ಬರೆದಾಕೆ ವಿಜ್ಜಿಕಾ ಎಂದಿರಬಹುದೆನ್ನುತ್ತಾರೆ. ಅದರಲ್ಲಿ ರಾಜ್ಯಭ್ರಷ್ಟನಾದ ಕಲ್ಯಾಣವರ್ಮನೆಂಬಾತ ಹೇಗೆ ಪೂರ್ವಮಂತ್ರಿಯಾದ ಮಂತ್ರಗುಪ್ತನ ಹಂಚಿಕೆಗಳಿಂದ ಮರಳಿ ತನ್ನ ರಾಜ್ಯವನ್ನು ಪಡೆದನೆಂಬ ಕಥೆ ಬರುತ್ತದೆ. ಮಗಧರಾಜನ ಸೇನಾಧಿಪತಿಯಾಗಿದ್ದ ಚಂಡಸೇನ ಮ್ಲೇಚ್ಛರಾದ ಲಿಚ್ಛವಿಗಳೊಡನೆ ಕೂಡಿಕೊಂಡು ಪಾಟಲಿಪುತ್ರವನ್ನು ಮುತ್ತಿ, ತನ್ನ ಪ್ರಭು ಸುಂದರವರ್ಮನನ್ನು ಕೊಂದು, ಮಗ ಕಲ್ಯಾಣವರ್ಮನನ್ನು ಓಡಿಸಿ, ತಾನೇ ರಾಜನಾದುದನ್ನು ಈ ನಾಟಕ ತಿಳಿಸುತ್ತದೆ. ಇತರ ಶೃಂಗಾರ ನಾಟಕಗಳಂತೆ ನಾಯಕ ಕಲ್ಯಾಣವರ್ಮನಿಗೆ ಶೂರಸೇನರಾಜನ ಮಗಳಾದ ಕೀರ್ತಿಸೇನೆಯೆಂಬ ಕನ್ಯಾರತ್ನ ಪ್ರಾಪ್ತಿಯನ್ನು ವರ್ಣಿಸುತ್ತದೆ. ಈ ಮಗಧರಾಜ್ಯ ಚರಿತ್ರೆ ನಮಗೆ ಅನ್ಯತ್ರ ಉಪಲಬ್ಧವಿಲ್ಲ.

ಮಾಳವಿಕಾಗ್ನಿಮಿತ್ರ ಮತ್ತು ರತ್ನಾವಳೀ ನಾಟಕಗಳ ಮಾದರಿಯಲ್ಲಿ ಬರೆಯಲಾಗಿರುವ ಬಿಲ್ಹಣಕವಿಯ (11ನೆಯ ಶತಮಾನ) ಕರ್ಣಸುಂದರೀ ಎಂಬ ನಾಟಕ ಸಮಕಾಲೀನನಾದ ಅಣಹಿಲವಾಡದ ಕರ್ಣದೇವನೃಪನನ್ನು ಕುರಿತಿದ್ದರೂ ಅದರಲ್ಲಿ ಶೃಂಗಾರವಸ್ತು ಹೆಚ್ಚು ; ಐತಿಹಾಸಿಕ ವಸ್ತು ಕಡಿಮೆ. ಹೀಗೆಯೇ ಮೃಚ್ಛಕಟಿಕ ಮುಂತಾದ ಪ್ರಕರಣಗಳಲ್ಲಿ ಆರ್ಯಕ ಪಾಲಕರ ಘರ್ಷಣೆಯೇ ಮುಂತಾದ ರಾಜಕೀಯ ವೃತ್ತಾಂತಗಳು ಬರುವುದುಂಟು. ಸಂಸ್ಕೃತದಲ್ಲಿ ಐತಿಹಾಸಿಕ ನಾಟಕಗಳ ಪರಂಪರೆ ಒಂದುಂಟೆಂದು ಹೇಳಲು ಮೇಲಿನ ಈ ಕೆಲವು ನಿದರ್ಶನಗಳು ಸಾಕು.
(ಕೆ.ಕೆ.)

**ಕನ್ನಡದಲ್ಲಿ ಐತಿಹಾಸಿಕ ನಾಟಕಗಳು :** ಕನ್ನಡ ಸಾಹಿತ್ಯದಲ್ಲಿ ಐತಿಹಾಸಿಕ ನಾಟಕಗಳು ಹೇಳಿಕೊಳ್ಳುವಷ್ಟಿಲ್ಲವಾದರೂ ಈ ಪ್ರಕಾರ ಕನ್ನಡಕ್ಕೆ ಹೊಸದೇನೂ

ಅಲ್ಲ. ರಾಮಾಯಣ ಮಹಾಭಾರತಗಳನ್ನು ಅವಲಂಬಿಸಿದ ಸಂಸ್ಕೃತ ನಾಟಕಗಳು ಕನ್ನಡಕ್ಕೆ ಬಂದಾಗಲೇ ಕನ್ನಡದಲ್ಲಿ ಐತಿಹಾಸಿಕ ನಾಟಕಗಳ ಜನನವೂ ಆಯಿತೆನ್ನಬಹುದು. ಸಾಮಾನ್ಯವಾಗಿ ಈ ನಾಟಕಗಳೆಲ್ಲ ರೂಪಾಂತರಗಳು ಇಲ್ಲವೇ ಭಾಷಾಂತರಗಳು. ಹೀಗೆ ಉಪಲಬ್ಧವಾದ ಮೊದಲ ಕನ್ನಡ ನಾಟಕ ಮಿತ್ರವಿಂದಾ ಗೋವಿಂದ ; ಸಂಸ್ಕೃತ ರತ್ನಾವಳಿಯ ಭಾಷಾಂತರ. ಇದರ ಕರ್ತೃ ಮೈಸೂರರಸ ಚಿಕದೇವರಾಜ ಒಡೆಯರ ಆಸ್ಥಾನಕವಿ ಸಿಂಗರಾರ್ಯ. ಈ ನಾಟಕದಲ್ಲಿ ಇತಿಹಾಸದ ಅಂಶಕ್ಕಿಂತ ಕಲ್ಪನಾಂಶವೇ ಹೆಚ್ಚು.

ಅನಂತರ ನಮ್ಮ ದೃಷ್ಟಿಗೆ ಬರುವವರು ಬಸವಪ್ಪಶಾಸ್ತ್ರಿಗಳು. ಶಾಕುಂತಲ, ವಿಕ್ರಮೋರ್ವಶೀಯ, ರತ್ನಾವಳಿ, ಉತ್ತರರಾಮಚರಿತ್ರೆ ಮಾಲತೀಮಾಧವ, ಚಂಡಕೌಶಿಕ ನಾಟಕಗಳ ಭಾಷಾಂತರಗಳನ್ನೂ ಷೇಕ್ಸ್‌ಪಿಯರನ ಒಥೆಲೋವನ್ನು ಅನುಸರಿಸಿ ಶೂರಸೇನ ಚರಿತ್ರೆಯನ್ನೂ ಇವರು ರಚಿಸಿದ್ದಾರೆ. ಭಾಷಾಂತರ ಕಲೆಯನ್ನು ರಮ್ಯವಾಗಿ ಕರಗತಮಾಡಿಕೊಂಡವರಲ್ಲಿ ಶ್ರೇಷ್ಠರಿವರು. ಇವರ ಹಿಂದೆಯೇ ಬೆಳ್ಳಾವೆ ನರಹರಿಶಾಸ್ತ್ರಿ, ಚುರಮುರಿ ಶೇಷಗಿರಿರಾವ್ ಮತ್ತು ಬಿ. ಕೃಷ್ಣಪ್ಪ—ಇವರು ಬೆಳಕಿಗೆ ಬಂದರು.

ಚಂಡಕೌಶಿಕ ನಾಟಕದ ನಾಲ್ಕು ಅಂಕಗಳು ಮಾತ್ರ ಭಾಷಾಂತರವಾಗಿದ್ದಾಗ ಅವರೊಡನೆ ಆ ಕಾರ್ಯದಲ್ಲಿ ಸರಿತೂಗಿ ಉಳಿದ ಭಾಗವನ್ನು ಮುಗಿಸಿದವರು ಅಳಸಿಂಗರಾಚಾರ್ಯರು. ಭಾಸನ ಸ್ವಪ್ನವಾಸದತ್ತ ಮತ್ತು ಪಂಚರಾತ್ರಗಳನ್ನು ಇವರು ಕನ್ನಡಿಸಿದರು. ಪಂಚರಾತ್ರವನ್ನು ಇವರಲ್ಲದೆ ಕೆ. ಆರ್. ರಾಮಸ್ವಾಮಿ, ಪಾನ್ಯಂ ಸುಂದರಶಾಸ್ತ್ರಿ ಮತ್ತು ಎನ್. ಎಸ್. ನಾರಾಯಣಶಾಸ್ತ್ರಿಗಳೂ ಅನುವಾದಿಸಿದ್ದಾರೆ.

ಪ್ರತಿಮಾ ನಾಟಕ ಮೈಸೂರು ಸೀತಾರಾಮಶಾಸ್ತ್ರಿಗಳಿಂದ, ಉಳಿದ ಭಾಸನಾಟಕಗಳು ಎಲ್. ಗುಂಡಪ್ಪನವರಿಂದ ಭಾಷಾಂತರವಾಗಿವೆ. ಶ್ರೀಹರ್ಷನ ನಾಗಾನಂದವನ್ನು ಮೈಸೂರಿನ ಅನಂತನಾರಾಯಣ ಶಾಸ್ತ್ರಿಗಳೂ ಶೂದ್ರಕನ ಮೃಚ್ಛಕಟಿಕವನ್ನು ಗರಣಿ ವೈ. ಕೃಷ್ಣಾಚಾರ್ಯರೂ ಧೋಂಡೋ ನರಸಿಂಹ ಮುಳಬಾಗಿಲ ಅವರೂ ನಂಜನಗೂಡು ಸುಬ್ಬಾಶಾಸ್ತ್ರಿಗಳೂ ಭಟ್ಟನಾರಾಯಣನ ವೇಣೀಸಂಹಾರವನ್ನು ಜಯರಾಮಾಚಾರ್ಯರೂ ಕಾಳಿದಾಸನ ಮಾಲವಿಕಾಗ್ನಿಮಿತ್ರವನ್ನು ಶ್ರೀಕಂಠಶಾಸ್ತ್ರಿಗಳೂ ಧಾರವಾಡದ ನಾ. ಗು. ಕರಗುದರಿ ಅವರೂ ವಿಶಾಖದತ್ತನ ಮುದ್ರಾರಾಕ್ಷಸವನ್ನು ಎಂ. ರಾಮಶೇಷಶಾಸ್ತ್ರಿಗಳೂ ರಾಕ್ಷಸನ ಮುದ್ರಿಕೆ ಎಂಬ ಹೆಸರಿನಿಂದ ತೀ. ನಂ. ಶ್ರೀಕಂಠಯ್ಯ ಅವರೂ ಅನುವಾದಿಸಿದ್ದಾರೆ.

ಷೇಕ್ಸ್‌ಪಿಯರನ ಮ್ಯಾಕ್‌ಬೆತ್ ಅನ್ನು ಎಂ. ಎಲ್. ಶ್ರೀಕಂಠೇಶಗೌಡ ಮತ್ತು ಡಿ. ವಿ. ಗುಂಡಪ್ಪ—ಇವರು ಭಾಷಾಂತರಿಸಿದ್ದಾರೆ. ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ಅನ್ನು ಶ್ರೀಕಂಠೇಶಗೌಡರು ಪ್ರಮಿಳಾರ್ಜುನೀಯವೆಂದೂ ಕೆರೂರು ವಾಸುದೇವಾಚಾರ್ಯರು ಪಾತ್ರಗಳ ಹೆಸರು ಹೊರತು ಉಳಿದುದನ್ನು ಸಂಪೂರ್ಣವಾಗಿಯೂ ಪರಿವರ್ತಿಸಿದ್ದಾರೆ. ಕೆರೂರರ ಭಾಷಾಂತರವನ್ನು ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲೇ ಬಂದ ಶ್ರೇಷ್ಠನಾಟಕಗಳಲ್ಲೊಂದೆಂದು ಪರಿಗಣಿಸಲಾಯಿತು. ಇದೇ ಸಾಲಿನಲ್ಲಿ ಕುವೆಂಪು ಅವರ ಬಿರುಗಾಳಿ (ಟೆಂಪೆಸ್ಟ್) ಬಿ. ಎಂ. ಶ್ರೀ. ಅವರ ಪಾರಸೀಕರು ಬರುತ್ತವೆ.

ಸೋಸಲೆ ಗರಳಪುರಿ ಶಾಸ್ತ್ರಿಗಳು ಲಾರೆನ್ಸ್ ಹೌಸ್‌ಮನನ ಸಾಕ್ರಟೀಸನ ಕೊನೆಯ ದಿನಗಳು, ಇಬ್ಸೆನನ ಆರ್ಯಕ ಮತ್ತು ಸೂತ್ರದ ಬೊಂಬೆಗಳನ್ನು ತಂದಿತ್ತರು. ಸಿ. ಅನಂದರಾಯರು ರಾಮವರ್ಮ–ಲೀಲಾವತಿ (ರೋಮಿಯೊ ಅಂಡ್ ಜೂಲಿಯೆಟ್) ಮತ್ತು ಹ್ಯಾಮ್‌ಲೆಟ್ ಅನುವಾದಿಸಿದರು. ಜಾನ್ ಮೇಸ್‌ಫೀಲ್ಡನ ಟ್ರಯಲ್ ಆಫ್ ಜೀಸಸ್ ಅನ್ನು ದೇವುಡು ನರಸಿಂಹಶಾಸ್ತ್ರಿಗಳು ವಿಚಾರಣೆ ಎಂಬ ಹೆಸರಿನಲ್ಲಿ ತಂದರು. ಮಧುಸೂದನದತ್ತರ ಬಂಗಾಳಿ ನಾಟಕ ಕೃಷ್ಣಾಕುಮಾರಿಯನ್ನು ಬೆನಗಲ್ ರಾಮರಾಯರು ಪರಿವರ್ತಿಸಿದರು ; ದ್ವಿಜೇಂದ್ರಲಾಲ್ ರಾಯ್‌ರ ಪುನರ್ಜನ್ಮ, ಮೇವಾಡಪತನ, ಷಹಜಹಾನ್ ನಾಟಕಗಳೂ ಕನ್ನಡಕ್ಕೆ ಬಂದಿವೆ. ಪೌರಾಣಿಕ–ಐತಿಹಾಸಿಕಗಳನ್ನೂ ಐತಿಹಾಸಿಕಗಳೆಂದುಕೊಂಡು ನಾಟಕ ರಚಿಸಿದವರಲ್ಲಿ ಅಗ್ರಗಣ್ಯರಾದವರು ಮೂವರು—ಉತ್ತರ ಕರ್ನಾಟಕದ ಬಾಳಾಚಾರ್ಯ ಸಕ್ಕರಿ (ಶಾಂತಕವಿ), ಮೈಸೂರಿನ ಬೆಳ್ಳಾವೆ ನರಹರಿಶಾಸ್ತ್ರಿ ಮತ್ತು ನಂಜನಗೂಡು ಶ್ರೀಕಂಠಶಾಸ್ತ್ರಿ. ಜಿ. ಪಿ. ರಾಜರತ್ನಂ ರಚಿಸಿರುವ ಗಂಡುಗೊಡಲಿ ಪೌರಾಣಿಕ–ಐತಿಹಾಸಿಕ ನಾಟಕಗಳಲ್ಲಿ ಉನ್ನತಮಟ್ಟದ್ದು.

ಸದಾಶಿವರಾವ್ ಗರೂಡರು ಎಚ್ಚಮನಾಯಕವನ್ನೂ ಕೆರೂರು ವಾಸುದೇವಾಚಾರ್ಯರು ನಲ–ದಮಯಂತಿಯನ್ನೂ ಬರೆದಿದ್ದಾರೆ. ಪುರಂದರದಾಸ, ಮೀರಾಬಾಯಿ, ಭದ್ರಾಚಲ ರಾಮದಾಸ್ ಇತ್ಯಾದಿ ಭಗವದ್ಭಕ್ತರನ್ನು ಕುರಿತ ನಾಟಕಗಳೂ ವಿಪುಲವಾಗಿ ಬಂದಿವೆ. ಬಿ. ಪುಟ್ಟಸ್ವಾಮಯ್ಯನವರು ಗೌತಮಬುದ್ಧ, ಷಹಜಹಾನ್ ಮುಂತಾದುವನ್ನು ಹೃದಯಂಗಮವಾಗಿ ಬರೆದಿದ್ದಾರೆ.

ಬಿ. ಎಂ. ಶ್ರೀ. ಅವರ ಜಾಡಿನಲ್ಲೇ ನಡೆದ ಕೆ. ವಿ. ರಾಘವಾಚಾರ್ಯರು ಗ್ರೀಕ್ ಮೂಲದಿಂದಲೇ ಅಂತಿಗೊನೆಯನ್ನು ಭಾಷಾಂತರಿಸಿ ನಾಟಕರತ್ನವೊಂದನ್ನು ಇತ್ತಿದ್ದಾರೆ. ಕುವೆಂಪು ಅವರು ಮಹಾರಾತ್ರಿಯಲ್ಲಿ ಸಿದ್ಧಾರ್ಥನ ರಾಜ್ಯತ್ಯಾಗವನ್ನು ಬಣ್ಣಿಸಿದ್ದಾರೆ. ಸಣ್ಣ ಕಥೆಯ ಶ್ರೀನಿವಾಸರು ಒಂಬತ್ತು ನಾಟಕಗಳನ್ನು ರಚಿಸಿದ್ದಾರೆ. ತಿರುಪಾಣಿ, ಯಶೋಧರಾಗಳು ಚಾರಿತ್ರಿಕ ವಸ್ತುಗಳನ್ನು ಒಳಗೊಂಡಿದ್ದರೂ ಚಿರಕಾವ್ಯಗಳ ಗುಂಪಿಗೆ ಸೇರುತ್ತವೆ. ಶಾಂತಾ, ಸಾವಿತ್ರಿ, ಉಷಾ ಇವು ಪೌರಾಣಿಕ–ಐತಿಹಾಸಿಕಗಳೆಂದರೆ ಸಲ್ಲುತ್ತದೆ. ಅಚ್ಚ ಐತಿಹಾಸಿಕಗಳೆಂದು ಕಾಕನಕೋಟೆ, ತಾಳೀಕೋಟೆ, ಶಿವಛತ್ರಪತಿ ನಾಟಕಗಳನ್ನು ಹೆಸರಿಸಬಹುದು. ಕಾಕನಕೋಟೆ ಶುದ್ಧ ಚಾರಿತ್ರಿಕರೂಪಕವಾಗಿದ್ದು, ಗದ್ಯ ಮತ್ತು ಪದ್ಯದಿಂದ ಕೂಡಿ ಮನೋಜ್ಞವಾಗಿದೆ. ಉಳಿದೆರಡು ಸಂಪೂರ್ಣವಾಗಿ ಗದ್ಯನಾಟಕಗಳು. ವಸ್ತುವಿನಲ್ಲಿ, ಶೈಲಿಯಲ್ಲಿ ವೈವಿಧ್ಯವಿದ್ದು, ವಾಚಕರ ಮತ್ತು ಪ್ರೇಕ್ಷಕರ ಮನವನ್ನು ಇವು ಹಿಡಿದು ನಿಲ್ಲಿಸುತ್ತವೆ. ಪೌರಾಣಿಕವೆನಿಸಿಕೊಳ್ಳುವಷ್ಟು ಪ್ರಾಚೀನವಲ್ಲದ್ದೂ ಆಧುನಿಕ-ಐತಿಹಾಸಿಕವೆನ್ನುವಷ್ಟು ಈಚಿನದೂ ಅಲ್ಲದ್ದು ಶ್ರೀನಿವಾಸರ ಯಶೋಧರಾ. ಸಿದ್ಧಾರ್ಥ ಬುದ್ಧನಾದ ಮೇಲೆ ಮೊಟ್ಟಮೊದಲಿಗೆ ಕಪಿಲವಸ್ತುವಿನಲ್ಲಿ ತನ್ನ ಪೂರ್ವಾಶ್ರಮದ ಹೆಂಡತಿಯಾದ ಯಶೋಧರೆಯನ್ನು ಹೇಗೆ ಕಂಡುಕೊಂಡನೆಂಬ ವಿಷಯವೇ ಇದರ ವಸ್ತು. ಯಶೋಧರೆಯ ಪಾತ್ರ ಇಲ್ಲಿ ವಿನೂತನವಾಗಿ ಚಿತ್ರಿತವಾಗಿದೆ.

ಮೈಸೂರಿನ ಪ್ರಾಚೀನ ಚರಿತ್ರೆಯನ್ನೇ ವಸ್ತುವನ್ನಾಗಿ ಆರಿಸಿಕೊಂಡು ಹಲವಾರು ನಾಟಕರಚನೆ ಮಾಡಿದವರಲ್ಲಿ ಮೊದಲಿಗರೆಂದರೆ—ಸಂಸ ಎಂಬ ಕಾವ್ಯನಾಮದ ಎ. ಎನ್. ಸಾಮಿ ವೆಂಕಟಾದ್ರಿ (1898–1939). ಇವರು ಇಪ್ಪತ್ತಮೂರು ನಾಟಕಗಳನ್ನು ಬರೆದಿದ್ದಾರಾದರೂ ಎಲ್ಲವೂ ಉಪಲಬ್ಧವಿಲ್ಲ. ಬಿರುದೆಂತೆಂಬರ ಗಂಡ, ಸುಗುಣಗಂಭೀರ, ವಿಗಡವಿಕ್ರಮರಾಯ—ಇವು ಮೊದಲು ಬೆಳಕು ಕಂಡ ಮೂರು ನಾಟಕಗಳು. ಅನಂತರ ಬೆಟ್ಟದ ಅರಸು, ವಿಜಯನಾರಸಿಂಹ, ಮಂತ್ರಶಕ್ತಿ—ಇವು ದೊರಕಿದುವು. ಇವು ಆರೂ ಅನರ್ಘ್ಯ ರತ್ನಗಳು.

ರಾಜ ಒಡೆಯರ ಅಣ್ಣ ಬೆಟ್ಟದ ಚಾಮರಾಜರ ಬಂಗಾರದವಳ ಮಗ ಬೆಟ್ಟದ ಅರಸು ರಾಜ ಒಡೆಯರ ಮರಣಕ್ಕೆ ಮುಂಚೆ ದಳವಾಯಿಯಾಗಿ ನೇಮಕವಾದವನು. ಅನಂತರ ಪಟ್ಟಕ್ಕೆ ಬಂದ ಚಾಮರಾಜ ಒಡೆಯರ ಕಾಲದಲ್ಲೂ ದಳವಾಯಿಯಾಗಿದ್ದು, ನಿಷ್ಠೆಯಿಂದ ಸೇವೆ ಸಲ್ಲಿಸಿದ. ಅದಕ್ಕೆ ಅವನಿಗಾದ ಪ್ರತಿಫಲ ಸೆರೆಯವಾಸ, ಕಣ್ಣುಗಳಿಗೆ ಭಾಂಡಕರ್ಪೂರದ ಕಟ್ಟು ; ನಿಸ್ಸೀಮ ರಾಜಭಕ್ತ ರಾಜದ್ರೋಹಿಯೆನಿಸಿ ತಾನೆಸಗದಿದ್ದ ದ್ರೋಹ ಕಪಟಗಳಿಗೆ ಬಲಿಯಾದ. ಇವನಾದ ಮೇಲೆ ಮೂರನೆಯ ದಳವಾಯಿಯಾಗಿ ವಿಗಡವಿಕ್ರಮರಾಯ ಬಂದ. ತನ್ನ ಕುಟಿಲ ಕ್ರೂರತನದಿಂದ ಎಲ್ಲರನ್ನೂ ಬದಿಗೊತ್ತಿ ರಾಜ್ಯಾಡಳಿತವನ್ನು ತಾನೇ ವಹಿಸಿಕೊಂಡ. ಈ ಬೆಟ್ಟದ ಅರಸು ನಾಟಕ ನಾಯಕ ಬಿದ್ದುದನ್ನೂ ವಿಕ್ರಮನ ಅಭ್ಯುದಯವನ್ನೂ ಚಿತ್ರಿಸುತ್ತದೆ. ಉಳಿದ ಐದು ನಾಟಕಗಳಂತೆ ಹಲವಾರು ಪಾರಿಭಾಷಿಕ ಪದಪ್ರಯೋಗದಿಂದ ಹಳೆಯ ಕಾಲದ ಅರಸೊತ್ತಿಗೆಯ ಆವರಣವನ್ನು ಕಲ್ಪಿಸಿ ಓದುಗರನ್ನು ಆ ಕಾಲಕ್ಕೆ ಕರೆದೊಯ್ಯುವ ಕೆಲಸವನ್ನು ನಾಟಕಕಾರ ಸಮರ್ಥವಾಗಿ ನಿರ್ವಹಿಸಿದ್ದಾನೆ. ವಿಜಯನಾರಸಿಂಹ ನಾಟಕದ ನಾಯಕ ರಣಧೀರ ಕಂಠೀರವ ನರಸರಾಜ. ರಾಜ್ಯದೊಳಗೂ ಹೊರಗೂ ತನ್ನ ಶಕ್ತಿ ಧೋರಣೆಗಳಿಗೆ ಹೆದರಿದ್ದ ವಿರೋಧಶಕ್ತಿಗಳನ್ನು ತನ್ನ ಆಪ್ತ ಆಯುಧವಾದ ವಿಜಯನಾರಸಿಂಹ ಖಡ್ಗದ ಸಹಾಯದಿಂದ, ಅಸಮಸಾಹಸದಿಂದ ಅಡಗಿಸಿ, ವಿಜಯಿಯಾಗಿ ಮೈಸೂರಿನ ಮಲ್ಲರ ಕೀರ್ತಿ ಮೆರೆಸುತ್ತಾನೆ. ಬೆಟ್ಟದ ಅರಸು ನಾಟಕದಲ್ಲಿ ರಾಜ್ಯದ ಕಾರುಬಾರು ವಹಿಸಿಕೊಂಡು ದರ್ಪದಿಂದ ಕ್ರೌರ್ಯದಿಂದ ರಾಜ್ಯಾಡಳಿತ ನಡೆಸುತ್ತಿದ್ದ ದಳವಾಯಿ ವಿಕ್ರಮರಾಯ, ತನ್ನಿಷ್ಟದಂತೆ ನಡೆಯಲೊಪ್ಪದಿದ್ದ ಮಹಾರಾಜ ಇಮ್ಮಡಿ ರಾಜ ಒಡೆಯರಿಗೇ ವಿಷವೂಡಿಸಿ, ಕೊಲ್ಲಿಸಿ, ಕಂಠೀರವ ನರಸರಾಜನನ್ನು ಕರೆಸಿ ಸಿಂಹಾಸನದ ಮೇಲೆ ಕೂಡಿಸಿ ಅವನನ್ನು ತನ್ನ ಕೈಗೊಂಬೆಯಾಗಿ ಮಾಡಿಕೊಳ್ಳುವ ಉದ್ದೇಶಪಟ್ಟು ತನ್ನ ವಿಗಡತನದ ವಿಜೃಂಭಣೆಗೆ ತೊಡಗುತ್ತಾನೆ. ಅಷ್ಟರಲ್ಲೇ ಗೂಢಚಾರರಿಂದ ತನ್ನ ಬಗ್ಗೆ ರಣಧೀರನ ಮನೋಗತವೇಂತೆಂಬುವನ್ನು ಹಠಾತ್ತನೆ ಕಂಡುಕೊಂಡ ವಿಕ್ರಮರಾಯ ತಾನಾಗಿ ಬಹುಮರ್ಯಾದೆಯಿಂದ ರಣಧೀರನನ್ನು ಕರೆಸಿ ಅರಮನೆಯಲ್ಲಿ ಬಂದಿಯಾಗಿರಿಸುತ್ತಾನೆ. ರಣಧೀರನ ಗೆಳೆಯರು ನಿರೀಶನ ನಾಯಕತ್ವದಲ್ಲಿ ರಣಧೀರನನ್ನು ಸೆರೆಯಿಂದ ಬಿಡಿಸಬೇಕೆನ್ನುವಷ್ಟರಲ್ಲಿ ಅರಮನೆಯ ಸೇವಕರಾದ ಚೆನ್ನ ಮತ್ತು ರಂಗರು ರಾಜಮನೆತನದ ಮೇಲಿನ ಭಕ್ತಿಯಿಂದ ಪ್ರಭಾವಿತರಾಗಿ ವಿಕ್ರಮನ ವಿಗಡತನಕ್ಕೆ ರೋಸಿ ಅವನೊಬ್ಬನೇ ಸಿಕ್ಕಿದಾಗ ಅವನ ರುಂಡ ಹಾರಿಸುತ್ತಾರೆ. ಕಂಠೀರವನಿಗೆ ಪಟ್ಟಾಭಿಷೇಕವಾಗುತ್ತದೆ. ಸರ್ವಾಧಿಕಾರದ ಸವಿಗಂಡು ನರರಾಕ್ಷಸನಾದ ವಿಕ್ರಮನ ದ್ರೋಹದ ದುಷ್ಟಶಕ್ತಿಯನ್ನು ಪತ್ತಿಕ್ಕಲು ರಣಧೀರನ ರಾಜಭಕ್ತಿ, ನಿರೀಶನ ಸ್ನೇಹಶಕ್ತಿ, ರಾಜಮಾತೆಯ ಮತ್ತು ಪೌರರ ಪ್ರತೀಕಾರಶಕ್ತಿ—ಇವಿಷ್ಟೂ ಒಗ್ಗೂಡಬೇಕಾಗುತ್ತದೆ. ವಿಕ್ರಮನ ವಿಗಡತನ ಇಲ್ಲಿ

ಪ್ರಮುಖವಾಗಿದ್ದು ಸುತ್ತಬರುವ ಪಾತ್ರಗಳೆಲ್ಲ ಜೀವಕಳೆಯಿಂದ ತುಂಬಿ ಒಬ್ಬೊಬ್ಬರ ಒಂದೊಂದು ಮಾತು, ಚಲನೆ, ಕೊನೆಗೆ ಮಾತಿನ ನಡುವೆ ಅನಿವಾರ್ಯವಾಗಿ ಬರುವ ಮೌನ ಕೂಡ ನಾಟಕವನ್ನು ಜೀವಂತವಾಗಿಸಿವೆ. ಸಂಸರ ಶೈಲಿ ಗಂಡುಶೈಲಿ. ಚಾರಿತ್ರಿಕ ಕಾಲಕ್ಕೆ ತಕ್ಕ ಗದ್ಯಬಂಧವನ್ನು ರೂಪಿಸಬಲ್ಲದ್ದು. ಬೆಟ್ಟದ ಅರಸು ನಾಟಕದಿಂದ ಆರಂಭವಾದ ಮೂರು ನಾಟಕಗಳ ಚಕ್ರ ವಿಜಯನಾರಸಿಂಹವನ್ನು ದಾಟಿ ವಿಗಡವಿಕ್ರಮರಾಯದಲ್ಲಿ ಕೊನೆಯಾಗುತ್ತದೆ. ಮಂತ್ರಶಕ್ತಿ ಎಂಬ ನಾಟಕ ಕಂಠೀರವ ನರಸರಾಜರ ಶಕ್ತಿತ್ರಯದಲ್ಲಿ ಒಂದಾದ ಮಂತ್ರಶಕ್ತಿಯನ್ನು ವಿಜೃಂಭಿಸುತ್ತದೆ. 'ಬಿರುದೆಂತೆಂಬರ ಗಂಡ' ಮೈಸೂರಿನ ರಾಜಮನೆತನಕ್ಕೆ ಸೇರಿದ ಇಮ್ಮಡಿ ತಿಮ್ಮರಾಜ ಒಡೆಯರನ್ನು ಕುರಿತ ಏಕಾಂಕ ನಾಟಕ. 'ಸುಗುಣಗಂಭೀರ' ಬೋಳಚಾಮರಾಜರ ಕಾಲದಲ್ಲಿ ನಡೆದ ಘಟನೆಯನ್ನು ವಸ್ತುವಾಗಿ ಉಳ್ಳದ್ದು. ಕಳಕಳಿಸುವ ಪಾತ್ರಗಳಿಂದ ತುಂಬಿ, ವೀರರಸಪ್ರಧಾನವಾದ ಈ ನಾಟಕ ಕರುಣೆಯ ಝರಿಯನ್ನು ಹರಿಸುತ್ತ ಮನೋಜ್ಞವಾಗಿದೆ. ಐತಿಹಾಸಿಕ ವಸ್ತುಗಳನ್ನು ಆಧರಿಸಿ ನಾಟಕ ರಚಿಸಿದ ಸಂಸರ ಹೆಸರನ್ನು ಸುವರ್ಣಾಕ್ಷರಗಳಲ್ಲಿ ಬರೆದಿಡಬೇಕು. ಅವರು ವಸ್ತುವನ್ನು ಬಳಸಿರುವ ರೀತಿ, ಭಾಷೆಯ ಶೈಲಿ, ರಚನಾತಂತ್ರ ಅದ್ಭುತ.

ಎಂ. ಆರ್. ಶ್ರೀನಿವಾಸಮೂರ್ತಿ ಅವರ ಕಂಠೀರವ ವಿಜಯ ಎಂಬ ನಾಟಕ ಜಗಜಟ್ಟಿ ನರಸರಾಜ ಒಡೆಯರು ತಿರುಚಿನಾಪಳ್ಳಿಯ ಜಟ್ಟಿಯನ್ನು ಮಲ್ಲಗಾಳಗದಲ್ಲಿ ಗೆದ್ದು ಮೈಸೂರಿನ ಹಿರಿಮೆಯನ್ನು ಸ್ಥಾಪಿಸಿದ ಕಥೆ. ಅಭಿನಯಯೋಗ್ಯವಾಗಿ ಸರಳವಾಗಿದೆ. ಎಂ. ಆರ್. ಶ್ರೀ. ಅವರ ಎರಡನೆಯ ಐತಿಹಾಸಿಕ ನಾಟಕ ಧರ್ಮದುರಂತ ನಾಲ್ಕನೆಯ ಮೈಸೂರು ಯುದ್ಧದ ಟಿಪ್ಪುವಿನ ಕಾಲದ ಕಥೆ. ರಾಮರಾಯ ಮಹಮದೀಯನಾದದ್ದು, ಅವನ ಹೆಂಡತಿ ಲಲಿತೆ ಮತ್ತು ಆಯಷೆಯರು ಅವನ ಮೇಲಿನ ನಿರ್ವ್ಯಾಜಪ್ರೇಮದಿಂದಲೇ ಪ್ರಾಣತ್ಯಾಗಮಾಡಿದ್ದು—ಈ ವಸ್ತುವನ್ನು ಒಳಗೊಂಡ ಈ ನಾಟಕ ಚೇತೋಹಾರಿಯಾಗಿದೆ.

ಶ್ರೀನಿವಾಸರ ತಾಳೀಕೋಟೆ ಎಂಬ ರೂಪಕ ವಿಜಯನಗರದ ರಾಮರಾಯ, ಆಯಷೆ, ರುಸ್ತುಂ, ತಿರುಮಲಾಂಬ—ಮುಂತಾದ ಚಾರಿತ್ರಿಕ ವ್ಯಕ್ತಿಗಳನ್ನೊಳಗೊಂಡಿದೆ. ಪಾತ್ರಗಳ ಸ್ವಭಾವನಿರೂಪಣೆ, ಗುಪ್ತಪ್ರೇಮದ ಫಲವಾಗಿ ರಾಮರಾಯ ತನ್ನ ಮಗನಾದ ರುಸ್ತುಮನಿಂದಲೇ ಅಪರಿಹಾರ್ಯವಾಗಿ ಕೊಲೆಯಾದುದು ಮುಂತಾದ ಸನ್ನಿವೇಶಗಳ ಸಮರ್ಥ ಚಿತ್ರಣದಿಂದ ನಾಟಕ ಅಗ್ರಸ್ಥಾನ ಪಡೆದಿದೆ. ಇಲ್ಲಿ ವಿಧಿ ತನ್ನ ಆಟ ಹೂಡಿ ಘಟನೆಗಳನ್ನು ನಡೆಸುವುದರಿಂದ ಕೊಲೆಗಡುಕ ರುಸ್ತುಮನಲ್ಲೂ ಅನುಕಂಪ ಹುಟ್ಟುವುದು ಅನಿವಾರ್ಯ. ಜೊತೆಗೆ ಮತಸಂಬಂಧವಾದ ಯುದ್ಧ ಒದಗಿತೆಂದರೆ ವಿಜಯನಗರದಂಥ ಮಹಾಸಾಮ್ರಾಜ್ಯವನ್ನೂ ಮುಳುಗಿಸುವಷ್ಟು ಭೀಕರವಾಗಿ ಪರಿಣಮಿಸುತ್ತದೆನ್ನುವುದೂ ಇಲ್ಲಿ ಚಿತ್ರಿತವಾಗಿದೆ. ಭರತಖಂಡ ಅನ್ಯಮತೀಯರ ಪದಾಘಾತಕ್ಕೆ ಸಿಕ್ಕಿ ಶತಚೂರ್ಣವಾಗುವುದರಲ್ಲಿದ್ದಾಗ ಭಾರತದಲ್ಲಿ ಹಿಂದೂಧರ್ಮವನ್ನು ಉದ್ಧಾರಮಾಡಲೆಂದು ಕಾರಣ ಪುರುಷನಂತೆ ಜನಿಸಿದವ ಶಿವಾಜಿ. ಈ ಮಹಾಪುರುಷ, ನಾಡನ್ನೂ ಧರ್ಮವನ್ನೂ ಉದ್ಧರಿಸಿದ. ಈ ಗಹನವಸ್ತುವನ್ನು ಆಧಾರವಾಗಿ ಉಳ್ಳದ್ದು ಶ್ರೀನಿವಾಸರ ಶಿವಛತ್ರಪತಿ. ಚರಿತ್ರೆಯಲ್ಲಿ ವೀರರಸವೇ ಮೂರ್ತಿವೆತ್ತಂತಿರುವ ಶಿವಾಜಿ ಇಲ್ಲಿ ವೇದಾಂತಿಯೂ ಆಗಿದ್ದಾನೆ.

ಕಂಠೀರವ ನರಸರಾಜರ ಆಳ್ವಿಕೆಯಲ್ಲಿ ಕಾಡುಕುರುಬರ ದೊರೆಗೆ ಸಂದಾಯ ಮಾಡಬೇಕಾಗಿದ್ದ ಕಪ್ಪಕಾಣಿಕೆಗಳ ವಿಷಯದಲ್ಲಿ ಅವರಿಗೂ ಹೆಗ್ಗಡದೇವನಕೋಟೆಯ ಹೆಗ್ಗಡೆಗೂ ವಿವಾದ ಉಂಟಾಗಿ, ಕುರುಬರ ಮುಖಂಡ ಕಾಚ ಮಹಾರಾಜರನ್ನೇ ಕಂಡು ಅವರ ಮನ ಒಲಿಸಿಕೊಂಡು ತನ್ನ ಜನಾಂಗಕ್ಕೆ ಒದಗಿದ್ದ ಕಷ್ಟ ನಿವಾರಿಸಿಕೊಂಡ ವಸ್ತುವನ್ನು ಆಧರಿಸಿ ಬರೆದ ನಾಟಕ ಕಾಕನಕೋಟೆ. ಕಾಡುಜನರ ನಿಜ ಜೀವನ, ಊರ ಜನರ ನಿಜಜೀವನ, ಇವೆರಡನ್ನೂ ಇಲ್ಲಿ ಹದವಾಗಿ ಜೋಡಿಸಿ ಚಿತ್ರಿಸುವ ಸಾಧನವಾಗಿದ್ದಾನೆ, ಕಾಚ.

ಐತಿಹಾಸಿಕ ನಾಟಕ ರಚನೆಯಲ್ಲಿ ಹಿರಿಯ ಸ್ಥಾನ ಕುವೆಂಪು ಅವರ ರಕ್ತಾಕ್ಷಿಗೆ ಸಲ್ಲುತ್ತದೆ. ಬಿದನೂರು ನಾಯಕನ ಮರಣ, ಆತನ ರಾಣಿಯ ದುರ್ನಡತೆ, ಪರಿಣಾಮವಾಗಿ ಆ ರಾಜ್ಯ ಹೈದರಾಲಿಯ ಪಾಲು ಆದದ್ದು—ಈ ಚಾರಿತ್ರಿಕ ವಸ್ತುವನ್ನು ಆಧರಿಸಿ ರಚಿತವಾದುದೀ ನಾಟಕ. ಷೇಕ್ಸ್‌ಪಿಯರ್ ನಾಟಕಗಳಿಂದ ಪ್ರಭಾವಿತರಾದ ಕುವೆಂಪು ಅವರು ಈ ನಾಟಕದಲ್ಲಿ ತಮ್ಮದೇ ಆದ ವೈಶಿಷ್ಟ್ಯವನ್ನು ಆರ್ಜಿಸಿದ್ದಾರೆ. ಇಲ್ಲಿನ ಸಂವಿಧಾನಕೌಶಲ, ಪಾತ್ರಸೃಷ್ಟಿಗಳು ಅನ್ಯಾದೃಶ. ಇದೊಂದು ಶ್ಲಾಘ್ಯವಾದ ಸ್ವತಂತ್ರ ಐತಿಹಾಸಿಕ ನಾಟಕ, ಕನ್ನಡ ನಾಟಕಲೋಕಕ್ಕೊಂದು ಕಲಶ.

ವಿಜಯನಗರದ ಇತಿಹಾಸವನ್ನೇ ಕಥಾವಸ್ತುವನ್ನಾಗಿ ಉಪಯೋಗಿಸಿಕೊಂಡು, ರಂ. ಶ್ರೀ. ಮುಗಳಿಯವರು ವಿಜಯಸಾಮ್ರಾಜ್ಯ, ಸೇವಾಪ್ರದೀಪಗಳನ್ನು ರಚಿಸಿದ್ದಾರೆ. ವಿಜಯನಗರದ ಸಾಮ್ರಾಜ್ಯ 1336 ರಿಂದ 1346ರ ವರೆಗೆ ಹತ್ತು ವರ್ಷ ತಳವೂರಿದ ಕ್ರಮವನ್ನು ವಿಜಯನಗರ ಸಾಮ್ರಾಜ್ಯದಲ್ಲೂ ವಿಜಯನಗರದ ಮೊದಲ ದೇವರಾಯ ಅರಸು ಮುದಗಲ್ಲಿನ ಪರ್ತಳ ಎಂಬ ಒಕ್ಕಲುಮಗಳನ್ನು ಮೋಹಿಸಿ ಮದುವೆಯಾಗಲು ಮಾಡಿದ ಪ್ರಯತ್ನವನ್ನು ಸೇವಾಪ್ರದೀಪದಲ್ಲೂ ವಸ್ತುವಾಗಿ ಬಳಸಿದೆ. ಮುಗಳಿಯವರು ಸೂಕ್ಷ್ಮವಿಮರ್ಶಾತ್ಮಕ ದೃಷ್ಟಿಯಿಂದ ತಮಗೆ ಕಂಡ ಸತ್ಯವನ್ನು ಈ ನಾಟಕಗಳಲ್ಲಿ ಪ್ರತಿಪಾದಿಸಿದ್ದಾರೆ. ಹಿಂದೂ ಮಹಮ್ಮದೀಯರ ಸಂಬಂಧ ಪ್ರಯೋಜನಕಾರಿಯಾಗಿ ಪರಿಣಮಿಸಬೇಕೇ ಹೊರತು ಜನಜೀವನಕ್ಕೆ ಕಂಟಕವಾಗಬಾರದೆಂಬ ಸೂಚನೆ ವಿಜಯಸಾಮ್ರಾಜ್ಯದಲ್ಲಿದೆ.

ರತ್ನಸಿಂಹಾಸನ ಎಂ. ನರಸಿಂಹಮೂರ್ತಿಯವರ ಐತಿಹಾಸಿಕ ನಾಟಕ. ಭಾಷಾಭಿಮಾನ, ದೇಶಾಭಿಮಾನಗಳಿಗೆ ಬೆಲೆ ಕೊಟ್ಟು ಒಂದು ಜನಾಂಗವನ್ನೇ ಎಚ್ಚರಿಸಿ ಕಾರ್ಯೋನ್ಮುಖರಾಗುವಂತೆ ಮಾಡಬೇಕೆನ್ನುವ ಪ್ರಯತ್ನವನ್ನೂ ಇಲ್ಲಿ ಕಾಣುತ್ತೇವೆ. ರಾಜ ಒಡೆಯರ ರಾಜ್ಯಸ್ಥಾಪನೆ ಇಲ್ಲಿನ ನಾಟಕದ ವಸ್ತು. ರಾಜ ಒಡೆಯರು ಪಟ್ಟಕ್ಕೆ ಬಂದುದು ಬೆಟ್ಟದ ಚಾಮರಾಜರಿಗೆ ಅಸಮಾಧಾನಕರವಾಗಿದ್ದರೂ ಕಾರುಗಹಳ್ಳಿ ಪಾಳೆಯಗಾರನ ಮುತ್ತಿಗೆಯಿಂದಾಗಿ ಅಣ್ಣತಮ್ಮ ಇಬ್ಬರೂ ಒಟ್ಟುಗೂಡಿ ಮೈಸೂರು ರಾಜ್ಯವನ್ನು ಭದ್ರಪಡಿಸಿ ವಿಸ್ತರಿಸಿದರು. ಈ ವಸ್ತು ಒಳ್ಳೆಯ ಐತಿಹಾಸಿಕ ನಾಟಕವೊಂದರ ರಚನೆಗೆ ಕಾರಣವಾಗಿರುವುದರಿಂದ ಗಮನಾರ್ಹವಾಗಿದೆ.

ವೀರರಸ ಪ್ರಧಾನವಾಗಿದ್ದು ದೇಶಭಕ್ತಿ, ನಾಡಭಕ್ತಿಗಳನ್ನು ದೇದೀಪ್ಯಮಾನವಾಗಿಸುವ ನಾಟಕಗಳೆಂದರೆ—ಎಚ್ಚಮನಾಯಕ, ವೀರರಾಣಿ ಕಿತ್ತೂರು ರುದ್ರಮ್ಮ, ಇವೆರಡೂ ಉತ್ತರ ಕರ್ನಾಟಕದಲ್ಲಿ ಮನೆಮಾತಾಗಿವೆ. ಇವುಗಳ ಕರ್ತೃ ಅಭಿನಯದಲ್ಲಿ ಎತ್ತಿದಕೈ ಎನಿಸಿದ ಸದಾಶಿವರಾವ್ ಗರೂಡ್.

ವಿಶಾಖದತ್ತನ ಮುದ್ರಾರಾಕ್ಷಸದ ಮೂರು ಅನುವಾದಗಳು ಕನ್ನಡಕ್ಕೆ ಬಂದಿವೆ. ಗಂಡು ಹೆಣ್ಣಿನ ಪ್ರೇಮ ದ್ವೇಷಮಾತ್ಸರ್ಯಗಳ ಮಹಾಭೆಂಕಿಯನ್ನು ಹೊತ್ತಿಸಿ ಇಡೀ ಭರತಖಂಡವನ್ನೇ ಹೇಗೆ ಪರಕೀಯರ ದಾಳಿಗೆ ಪದೇ ಪದೇ ಒಡ್ಡಿತು ಎಂಬ ದುರಂತವಸ್ತುವುಳ್ಳದ್ದು ಪೃಥ್ವೀರಾಜ–ಸಂಯುಕ್ತೆಯರ ಪ್ರಣಯ ಕಥೆ. ಎಂ. ಗೋವಿಂದರೆಡ್ಡಿಯವರು ಈ ವಸ್ತುವನ್ನು ಆಧರಿಸಿ ಪೃಥ್ವೀಸಂಯುಕ್ತೆ ಎಂಬ ನಾಟಕ ರಚಿಸಿದ್ದಾರೆ. ಪ್ರತಾಪಗಡ ಜೋಧಪುರಗಳ ನಡುವೆ ನಡೆದ ವ್ಯವಹಾರವೊಂದು ಕಥಾವಸ್ತುವಾಗುಳ್ಳ ಐದುಅಂಕಗಳ ನಾಟಕ ಬೆಳ್ಳಿಭುಜಂಗರಾಯರ ಉದ್ಧಾರ. ತೆಲುಗಿನಿಂದ ಕನ್ನಡಕ್ಕೆ ಬಂದಿರುವ ವಿ. ಬ. ಈಶ್ವರರಾಯರ ತಿಷ್ಯರಕ್ಷಿತೆ ಎಂಬುದು ಅಶೋಕನ ಮೂರನೆಯ ಪತ್ನಿ ಮಗ ಕುನಾಲನೊಡನೆ ನಡೆಸಿದ ಪ್ರೇಮ ವ್ಯವಹಾರ ಕುರಿತಾದದ್ದು.

ಡಿ. ವಿ. ಜಿ. ರಚಿಸಿರುವ ವಿದ್ಯಾರಣ್ಯವಿಜಯ ಉತ್ತಮ ಕಥಾವಸ್ತು ಮತ್ತು ಉತ್ತಮ ಶೈಲಿಗಳಿಂದಾಗಿ ಕನ್ನಡದ ಶ್ರೇಷ್ಠ ನಾಟಕಗಳಲ್ಲೊಂದೆನಿಸಿದೆ. ಈಚೆಗೆ ಸಮೇತನಹಳ್ಳಿ ರಾಮರಾಯರು ತಲಕಾಡುಗೊಂಡ ಎಂಬ ಐತಿಹಾಸಿಕ ನಾಟಕವನ್ನು ಇತ್ತಿದ್ದಾರೆ. ಹೊಸ ದೃಷ್ಟಿ, ಹೊಸ ತಂತ್ರ, ಹೊಸ ಶೈಲಿಗಳಿಗಾಗಿ ಶ್ರೀರಂಗರ ಪುಲಿಕೇಶಿ ಎಂಬ ನಾಟಕವನ್ನೂ ಗಿರೀಶ ಕಾರ್ನಾಡರ ತುಘಲಕ್ ನಾಟಕವನ್ನೂ ಹೆಸರಿಸಬಹುದು.

(ಬಿ.ಎಸ್.ಆರ್.ಆರ್.)

**ಐತಿಹಾಸಿಕ ಪಂಥ :** ಅಭಿಜಾತ ಅರ್ಥಶಾಸ್ತ್ರಜ್ಞರ ಅಮೂರ್ತ ಹಾಗೂ ನಿಗಮನ ಸಿದ್ಧಾಂತಗಳಿಗೆ ಪ್ರತಿಕ್ರಿಯೆಯಾಗಿ ಪ್ರಥಮತಃ ಜರ್ಮನಿಯಲ್ಲೂ ಅನಂತರ ಇತರ ದೇಶಗಳಲ್ಲೂ ಉದ್ಭವಿಸಿದ ಪಂಥ (ಹಿಸ್ಟಾರಿಕಲ್ ಸ್ಕೂಲ್). ಆರ್ಥಿಕ ಜೀವನದ ವಸ್ತುಸ್ಥಿತಿಗತಿಗಳನ್ನು ಅರಿಯಬೇಕಾದರೆ ಅರ್ಥಶಾಸ್ತ್ರಜ್ಞರು ಇತಿಹಾಸವನ್ನು ವೀಕ್ಷಿಸಬೇಕೆಂಬುದು ಈ ಪಂಥದ ಲೇಖಕರ ಮುಖ್ಯ ವಾದ. ಆರ್ಥಿಕ ಸೂತ್ರಗಳ ವಿಕಸನಶೀಲತೆಯನ್ನು ವಿಶೇಷವಾಗಿ ಒತ್ತಿ ಹೇಳಿದ್ದು ಈ ಪಂಥದವರ ಮುಖ್ಯ ಸಾಧನೆ.

ವಾಸ್ತವವಾಗಿ ನೋಡುವುದಾದರೆ ಇದು ಒಂದು ಪಂಥವಲ್ಲ ; ಹಲವು ಪಂಥಗಳ ಒಂದು ಗುಂಪು. ಒಂದು ರಾಷ್ಟ್ರದ ಆರ್ಥಿಕ ಜೀವನದ ಸ್ವರೂಪ ಆ ದೇಶದ ಇತಿಹಾಸದ ಒಂದು ಮುಖ. ಅದು ಆ ದೇಶಕ್ಕೆ ಆ ಕಾಲಕ್ಕೆ ವಿಶಿಷ್ಟವಾದ್ದು. ಅದು ಗತಕಾಲದ ಸಂತಾನವಾದ್ದರಿಂದ ಇತಿಹಾಸದ ಅಭ್ಯಾಸದಿಂದ ಮಾತ್ರವೇ ಸುಸ್ಪಷ್ಟವಾಗತಕ್ಕದ್ದು. ಇದು ಈ ಪಂಥದವರ ವಾದಮೂಲ. ಅಭಿಜಾತ ಪಂಥದವರ ದೃಷ್ಟಿ ಕಾಲದೇಶಾತೀತ. ಇಡಿಯಾಗಿ ನೋಡುವ ಬದಲು ಬಿಡಿಯಾಗಿ ನೋಡುವುದೇ ಅವರ ಪದ್ಧತಿಯಾಗಿತ್ತು. ಆದರೆ ಮಾನವ ಸಾಮಾಜಿಕವಾಗಿ ಪಾತ್ರವಹಿಸುವ ಎಲ್ಲ ಕ್ಷೇತ್ರಗಳ ಕುಂದಣದಲ್ಲಿ ಅರ್ಥಶಾಸ್ತ್ರವನ್ನೂ ಇಟ್ಟು ನೋಡುವ ಪರಿಪಾಟಿಯನ್ನು ಬೆಳೆಸಿದವರು ಐತಿಹಾಸಿಕ ಪಂಥದವರು. ಅರ್ಥಶಾಸ್ತ್ರಕ್ಕೆ ಸಾಮಾಜಿಕ ಸಿದ್ಧಾಂತದ ತಳಹದಿ ಹಾಕಿದವರು ಇವರೇ ಎನ್ನಬಹುದು.

ಆದ್ಯಪ್ರವರ್ತಕರು : ಜರ್ಮನ್ ಭಾಷೆಯಾಡುವ ದೇಶಗಳಲ್ಲಿ 1843ರಿಂದ ಸುಮಾರು ನಲವತ್ತು ವರ್ಷಗಳ ಕಾಲ ಅತ್ಯಂತ ಪ್ರಭಾವಶಾಲಿಯಾಗಿದ್ದ ಐತಿಹಾಸಿಕ ಪಂಥವನ್ನು ಆಡಂ ಮುಲ್ಲರನ (1779–1829) ಕಾಲದಿಂದಲೂ ಅರಸಬಹುದಾಗಿದೆ. ಮುಲ್ಲರನ ದೃಷ್ಟಿಯಲ್ಲಿ ಅರ್ಥವ್ಯವಸ್ಥೆಯೆಂಬುದು ಲಾಭಕ್ಕಾಗಿ ಶ್ರಮಿಸುವವರ

ಒಂದು ಪ್ರತ್ಯೇಕ ವಿಭಾಗವಲ್ಲ. ಇದು ಆರ್ಷೇಯ ಕಾಲದಿಂದಲೂ ಬೆಳೆದು ಬಂದಿರುವ ಸಾಮಾಜಿಕ ವ್ಯವಸ್ಥೆಯ ಒಂದು ಅಂಗ. ಕಟ್ಟು, ಕಟ್ಟಳೆ, ಶಿಕ್ಷಣ, ರಾಜಕೀಯ, ಮತ ಇವುಗಳಿಗೂ ಅರ್ಥವ್ಯವಸ್ಥೆಗೂ ಅವಿನಾ ಸಂಬಂಧ. ಇತಿಹಾಸದೊಂದಿಗೆ ಇವು ಬದಲಾದಂತೆಲ್ಲ ಅರ್ಥವ್ಯವಸ್ಥೆಯೂ ವ್ಯತ್ಯಾಸವಾಗುವುದು ಅನಿವಾರ್ಯ. ಹಣವೆಂಬುದು ಕೂಡ ಆಂತರಿಕ ಸಹಕಾರ ಮನೋಭಾವದ ಒಂದು ಮೂರ್ತರೂಪ. ಅನೇಕ ಅಭಿಜಾತ ಅರ್ಥಶಾಸ್ತ್ರಜ್ಞರು ಭಾವಿಸಿದ್ದಂತೆ ಇವನ ದೃಷ್ಟಿಯಲ್ಲಿ ಸರ್ಕಾರ ಅನಿಷ್ಟವೂ ಅನಿವಾರ್ಯವೂ ಆದ, ಹದ್ದುಬಸ್ತಿನಲ್ಲಿಡಬೇಕಾದ ಒಂದು ವ್ಯವಸ್ಥೆಯಲ್ಲ. ಸರ್ಕಾರೀ ಅರ್ಥನೀತಿ ಈತನ ದೃಷ್ಟಿಯಲ್ಲಿ ಒಂದು ಉತ್ಪಾದೀ ಬಲ.

ಆಡಂ ಮುಲ್ಲರನಿಗೂ ಆತನ ಜಾಡಿನಲ್ಲಿ ನಡೆದ ಇತರ ಅರ್ಥಶಾಸ್ತ್ರಜ್ಞರಿಗೂ ಸ್ಥೂಲವಾಗಿ ಜೆ. ಜಿ. ಫಿಕ್ಟೆ ಮತ್ತು ಜಾರ್ಜ್ ವಿಲ್ಹೆಲ್ಮ್ ಫ್ರೆಡ್ರಿಕ್ ಹೆಗೆಲ್ ಈ ದಾರ್ಶನಿಕರ ಭಾವನೆಗಳು ಆಧಾರ. ಉದಾರ ಅಭಿಜಾತ ಪಂಥೀಯರಂತೆ ಫಿಕ್ಟೆಯೂ ವ್ಯಕ್ತಿಸ್ವಾತಂತ್ರ್ಯದ ಪ್ರಬೋಧಕ ಆದರ್ಶವನ್ನೆ ಎತ್ತಿಹಿಡಿದನಾದರೂ ಸರ್ಕಾರಕ್ಕೊಂದು ಸಾಮಾಜಿಕ ಗುರಿಯಿರಬೇಕೆಂದೂ ಸರ್ಕಾರದ ಅಧಿಕಾರದ ವಿಸ್ತರಣೆಯಾಗಬೇಕೆಂದೂ ಆತ ವಾದಿಸಿದ. ಹೆಗೆಲನಂತೂ ಸರ್ಕಾರದ ಸ್ವತಂತ್ರ ಸರ್ವವ್ಯಾಪಕತ್ವದ ಪ್ರತಿಪಾದಕ. ಅವನ ದೃಷ್ಟಿಯಲ್ಲಿ ವ್ಯಕ್ತಿಗಳು ಇದರ ಸಾಧನಗಳು ಮಾತ್ರ; ಸರ್ಕಾರವೆಂಬ ಶರೀರದಲ್ಲಿ ವ್ಯಕ್ತಿಗಳಿಗೆ ಅಂಗಗಳ ಸ್ಥಾನ. ಆದರೆ ಬ್ರಿಟಿಷ್ ಮತ್ತು ಫ್ರೆಂಚ್ ಅಭಿಜಾತ ಅರ್ಥಶಾಸ್ತ್ರಜ್ಞರ ಅಭಿಪ್ರಾಯ ಇದಕ್ಕೆ ವ್ಯತಿರಿಕ್ತವಾಗಿತ್ತು. ವಿವಿಧ ವ್ಯಕ್ತಿಗಳ ಹಿತಾಸಕ್ತಿಗಳ ಮತ್ತು ವಿವೇಚನಾಯುತ ಕಾರ್ಯಾಚರಣೆಗಳ ಅನ್ಯೋನ್ಯ ಕ್ರಿಯೆಗಳ ಪರಿಣಾಮವಾಗಿ ಆರ್ಥಿಕ ಜೀವನ ರೂಪುಗೊಳ್ಳುವುದೆಂಬುದು ಅವರ ಭಾವನೆಯಾಗಿತ್ತು. ಒಬ್ಬೊಬ್ಬನೂ ತನ್ನತನ್ನ ಹಿತ ಸಾಧಿಸಿಕೊಂಡರೆ ಸಮಷ್ಟಿಯ ಹಿತವೂ ಸಾಧಿಸಿದಂತೆ—ಎಂಬುದು ಅವರ ನಂಬಿಕೆ.

ಐತಿಹಾಸಿಕ ಪಂಥದ ಮೇಲೆ ಮೊಟ್ಟಮೊದಲು ಹೆಚ್ಚಿನ ಪ್ರಭಾವ ಬೀರಿದವನೆಂದರೆ ಫ್ರೆಡರಿಕ್ ಲಿಸ್ಟ್. 1841ರಲ್ಲಿ ಪ್ರಕಟವಾದ ಆತನ ಅಭಿಪ್ರಾಯಗಳಿಗೆ ಜರ್ಮನ್ ರಾಷ್ಟ್ರೀಯತ್ವದ ಭಾವನೆಯೇ ಮೂಲ. ನೆಪೋಲಿಯನನ ವಿರುದ್ಧವಾಗಿ ಪ್ರಬಲ ಜರ್ಮನ್ ರಾಷ್ಟ್ರ ನಿರ್ಮಾಣ ಮಾಡಬೇಕೆಂಬ ಹಂಬಲಕ್ಕೆ ಬೆಂಬಲವಾಗಿ ಲಿಸ್ಟನ ಆರ್ಥಿಕ ಭಾವನೆಗಳು ರೂಪುಗೊಂಡುವು. ಪ್ರಪಂಚದ ನಾನಾ ರಾಷ್ಟ್ರಗಳು ಸಮಾನವಾದ ಶಕ್ತಿ ಗಳಿಸದಿರುವುದಕ್ಕೆ ಆಯಾ ರಾಷ್ಟ್ರಗಳ ಇತಿಹಾಸ ಸಂಗತಿಗಳೇ ಕಾರಣ. ಅಭಿವೃದ್ಧಿ ಹೊಂದದ ರಾಷ್ಟ್ರಗಳ ಬೆಳೆವಣಿಗೆಗಾಗಿ ಶೈಶವ ಕೈಗಾರಿಕೆಗಳಿಗೆ ರಕ್ಷಣೆ ನೀಡಬೇಕೆಂಬುದು ಅವನ ಸಿದ್ಧಾಂತ. ಆಡಂ ಸ್ಮಿತ್ತನ ದೃಷ್ಟಿಯಲ್ಲಿ ಪದಾರ್ಥೋತ್ಪಾದನೆ ಮಾತ್ರವೇ ಉತ್ಪಾದೀಶ್ರಮ; ಉಳಿದದ್ದೆಲ್ಲ ವ್ಯರ್ಥ. ಆದರೆ ಲಿಸ್ಟ್ ಹೀಗೆ ಭಾವಿಸಿರಲಿಲ್ಲ. ಆತನ ದೃಷ್ಟಿಯಲ್ಲಿ ಒಂದು ದೇಶದ ನಿಜವಾದ ಸಂಪತ್ತು ಅದರ ಸರಕುದಾಸ್ತಾನುಗಳಲ್ಲ; ಅಲ್ಲಿಯ ಜನರ ಬುದ್ಧಿಶಕ್ತಿ, ಕ್ರಿಯಾಸಾಮರ್ಥ್ಯ ಇವೇ ನಿಜವಾದ ಸಂಪತ್ತು.

**ಹಳೆಯ ಪಂಥ :** ಮುಲ್ಲರ್, ಲಿಸ್ಟ್ ಮುಂತಾದವರ ಮೂಲಭಾವನೆಗಳ ತಳಹದಿಯ ಮೇಲೆ ಜರ್ಮನಿಯ ಹಳೆಯ ಇತಿಹಾಸ ಪಂಥ ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ನಿಚ್ಚಳವಾಗಿ ಮೂಡಿ ಬಂತು. ಇದರ ಅಧ್ವರ್ಯುಗಳು ಮೂರು ಜನ : ಡಬ್ಲ್ಯು. ರಾಷೆರ್ (1817–1894), ಬ್ರೂನೊ ಹಿಲ್ಡೆಬ್ರಾಂಟ್ (1812-1878) ಮತ್ತು ಕೆ. ಕ್ನೀಸ್ (1821–1898). ಇವರು ಮೂವರೂ ಮಾರ್ಕ್ಸನ ಸಮಕಾಲೀನರು. ಇತಿಹಾಸ, ರಾಜ್ಯಶಾಸ್ತ್ರಗಳೆರಡನ್ನೂ ಅಭ್ಯಾಸ ಮಾಡಿದ್ದ ರಾಷೆರ್ ವಿವೇಕಯುತ ರಾಜಕಾರಣಕ್ಕೆ ಇತಿಹಾಸದ ಅನುಭವವೇ ಆಧಾರವಾಗಬೇಕೆಂದು ಪ್ರತಿಪಾದಿಸಿದ. ಆರ್ಥಿಕ ವಿವೇಚನೆಯ ಹಿಂದೆ ಇತಿಹಾಸ ಪ್ರಜ್ಞೆ ಇರಬೇಕೆಂಬುದು ಅವನ ವಾದ. ರಿಕಾರ್ಡೊವಿನ ನಿಗಮನ ಸಿದ್ಧಾಂತಗಳನ್ನು ಈತ ತಳ್ಳಿಹಾಕಲಿಲ್ಲವಾದರೂ ಅನುಭವಕ್ಕೆ ಇವನು ಕೊಟ್ಟ ಬೆಲೆ ಅಧಿಕ. ಅರ್ಥಶಾಸ್ತ್ರಕ್ಕೆ ಇತಿಹಾಸ ಪೋಷಕವಾಗಬೇಕು; ಆರ್ಥಿಕ ವ್ಯವಸ್ಥೆಗಳ ಮತ್ತು ಸ್ಥಿತಿಗತಿಗಳ ವರ್ಣನೆಯೇ ಅರ್ಥಶಾಸ್ತ್ರದ ಆದಿ ಮತ್ತು ಅಂತ್ಯ ಎಂಬುದು ಈತನ ವಾದ ಸಾರವೆನ್ನಬಹುದು.

ಅಭಿಜಾತ ಮಾರ್ಗವನ್ನು ಇನ್ನೂ ತರ್ಕಬದ್ಧವಾಗಿ ಟೀಕಿಸಿದವನೆಂದರೆ ಬ್ರೂನೊ ಹಿಲ್ಡ್‌ಬ್ರಾಂಟ್. ಎಲ್ಲ ಕಾಲದೇಶಗಳಿಗೂ ಅನ್ವಯವಾಗುವ ಸಹಜ ಆರ್ಥಿಕ ಸೂತ್ರಗಳನ್ನು ಅನ್ವೇಷಿಸುವುದಾಗಿಯೂ ಕಂಡುಹಿಡಿದಿರುವುದಾಗಿಯೂ ಹೇಳಿಕೊಳ್ಳುತ್ತಿದ್ದ ಅಭಿಜಾತ ಪಂಥದ ವಾದವನ್ನು ಈತ ತಳ್ಳಿಹಾಕಿದ. ವಿಭಿನ್ನ ರಾಷ್ಟ್ರಗಳ ಮತ್ತು ಇಡೀ ಮಾನವತೆಯ ಬೆಳೆವಣಿಗೆಯನ್ನು ಎಚ್ಚರಿಕೆಯಿಂದ ಅಧ್ಯಯನ ಮಾಡುವುದು ಅರ್ಥಶಾಸ್ತ್ರದ ಉದ್ದೇಶ ಎಂದು ಈತ ಬರೆದಿದ್ದಾನೆ.

ಹಳೆಯ ಐತಿಹಾಸಿಕ ಪಂಥದ ಸ್ಥಾಪಕತ್ರಿಮೂರ್ತಿಗಳಲ್ಲಿ ಮೂರನೆಯವನಾದ ಕೆ. ಕ್ನೀಸನದು ಇತರರಿಗಿಂತ ಹೆಚ್ಚು ಖಚಿತವಾದ ವಿಚಾರಧಾರೆಯೆನ್ನಬಹುದು. ಇತಿಹಾಸದ ಅಧ್ಯಯನವೇ ಅರ್ಥಶಾಸ್ತ್ರದ ನ್ಯಾಯವಾದ ಮಾರ್ಗವೆಂಬುದು ಇವನ ವಾದ. ಭೌತವಿಜ್ಞಾನಗಳಲ್ಲಿರುವಂಥ ಸೂತ್ರಗಳನ್ನು ಅಳವಡಿಸುವುದು ಸಾಧ್ಯವಿಲ್ಲ. ಸಾಮಾಜಿಕ ಬೆಳೆವಣಿಗೆಯ ಕ್ರಮದಲ್ಲಿ ಆವರ್ತಿಸುವ ಕೆಲವು ಪ್ರವೃತ್ತಿಗಳನ್ನು ಗಮನಿಸಿ ಅವುಗಳ ಸಾದೃಶ್ಯಗಳನ್ನು ಸೂಚಿಸಬಹುದಷ್ಟೆ. ಇದು ಇವನ ಅಭಿಪ್ರಾಯ.

ಸಾಮ್ಯವಾದದ ಪ್ರತಿಪಾದಕನಾದ ಕಾರ್ಲ್ ಮಾರ್ಕ್ಸನ ಮಾರ್ಗವೂ ಹಳೆಯ ಐತಿಹಾಸಿಕ ಪಂಥವೂ ಮೂಲತಃ ಒಂದೇ ಎಂದು ತೋರುವುವಾದರೂ ಇವೆರಡೂ ವಿಭಿನ್ನವಾದವು. ಇತಿಹಾಸ ದೃಷ್ಟಿಯೇನೋ ಎರಡಕ್ಕೂ ಸಾಮಾನ್ಯ. ಉತ್ಪಾದನ ಬಲಗಳಿಗೆ ಅನುಗುಣವಾದ ಮಾನವರ ಪ್ರತಿಕ್ರಿಯೆಯನ್ನು ಕುರಿತು ಇಬ್ಬರೂ ವಿವೇಚನೆ ನಡೆಸಿದರು. ಆದರೆ ನಾನಾ ಅರ್ಥವ್ಯವಸ್ಥೆಗಳು ಬದಲಾಗಿ ಅಂತಿಮವಾಗಿ ಸಾಮ್ಯವಾದದ ಸ್ಥಾಪನೆಯಾಗುವುದೆಂದು ಮಾರ್ಕ್ಸ್ ನಂಬಿದ್ದ. ಐತಿಹಾಸಿಕ ಪಂಥದವರು ಈ ದೃಷ್ಟಿಯನ್ನೊಪ್ಪಲು ಸಿದ್ಧರಿರಲಿಲ್ಲ. ಇತಿಹಾಸದ ಗತಿಯನ್ನಷ್ಟೆ ಅವರು ಒತ್ತಿ ಹೇಳಿದರು. ನಾನಾ ಸಮಾಜ ವ್ಯವಸ್ಥೆಗಳು ಇರುವುದು ಸಾಧ್ಯವೆಂದು ಅವರ ನಂಬಿಕೆ. ಅರ್ಥವ್ಯವಸ್ಥೆಯ ಅಡಿಪಾಯದ ಮೇಲೆ ಸಾಮಾಜಿಕ ವ್ಯವಸ್ಥೆಗಳ ರಚನೆಯಾಗುವುದೆಂದು ಮಾರ್ಕ್ಸ್ ನಂಬಿದ್ದರೆ, ಇದಕ್ಕೆ ವಿರುದ್ಧವಾದ ಕಲ್ಪನೆ ಐತಿಹಾಸಿಕ ಪಂಥೀಯರದು.

**ಆಧುನಿಕ ಪಂಥ :** ಆಧುನಿಕ ಐತಿಹಾಸಿಕ ಪಂಥದ ಅರ್ಥಶಾಸ್ತ್ರಜ್ಞರು ಹಳೆಯ ಪಂಥದವರು ಬಿಟ್ಟಲ್ಲಿಂದ ಮುನ್ನಡೆದರು. ವಿಶ್ವದ ಐತಿಹಾಸಿಕ ಆರ್ಥಿಕ ಅಭಿವೃದ್ಧಿಯತ್ತ ಹಳೆಯ ಪಂಥದವರು ದೃಷ್ಟಿ ಹಾಯಿಸಿದರೆ ಹೊಸ ಪಂಥದವರು ವಿಶಿಷ್ಟ ಕ್ಷೇತ್ರಗಳ ಅಭ್ಯಾಸಕ್ಕೆ ಈ ದೃಷ್ಟಿಯನ್ನು ಅನ್ವಯಿಸಲು ಯತ್ನಿಸಿದರು. ಗಸ್ಟಾಫ್ ಷ್ಮಾಲರ್ (1838–1917) ಹೊಸ ಪಂಥದ ಸ್ಥಾಪಕ. ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಅಮೆರಿಕ ಸಂಯುಕ್ತಸಂಸ್ಥಾನಗಳಲ್ಲೂ ಇದು ಪ್ರಚಾರವಾಯಿತು. ಐತಿಹಾಸಿಕ ಅನುಗಮನ–ನಿಗಮನ, ವಿಶಿಷ್ಟದೃಷ್ಟಿ–ಸಾಧಾರಣೀಕರಣ, ವಿವರಣೆ-ಸೂತ್ರಕಲ್ಪನೆ ಮುಂತಾದ ಪರ–ವಿರೋಧ ವಾದಗಳ ನಡುವೆ ಘರ್ಷಣೆ ಜರುಗಿತು. ಸಮಾಜನೀತಿ, ಕಾರ್ಮಿಕ ಸಮಸ್ಯೆ ಮುಂತಾದ ವಿಚಾರಗಳಲ್ಲಿ ಇತಿಹಾಸ ಪಂಥದವರು ಹೆಚ್ಚು ಆಸಕ್ತಿ ವಹಿಸಿದರು. ಹತ್ತೊಂಬತ್ತನೆಯ ಶತಮಾನ ಮುಕ್ತಾಯವಾಗುವ ವೇಳೆಗೆ ಜರ್ಮನಿಯ ಸಾಂಬಾರ್ಟ್, ಮ್ಯಾಕ್ಸ್ ವೆಬರ್ ಮುಂತಾದವರು ಈ ನಿಟ್ಟಿನಲ್ಲಿ ಹೆಚ್ಚಿನ ವಿಚಾರ ಹರಿಸಿದರು.

ಐತಿಹಾಸಿಕ ಪಂಥದಿಂದ ಪ್ರಭಾವಿತರಾದ ಅಮೆರಿಕನ್ ಅರ್ಥಶಾಸ್ತ್ರಜ್ಞರು ಅನೇಕ ಮಂದಿ. 1920ರ ದಶಕದಲ್ಲಿ ಜೆ. ಆರ್. ಕಾಮನ್ಸ್, ಆರ್. ಜಿ. ಟಗ್ವೆಲ್, ಎ. ಬಿ. ವುಲ್ಫ್, ಸಿ. ಇ. ಏರ್ಸ್, ಡಬ್ಲ್ಯು. ಎಚ್. ಹ್ಯಾಮಿಲ್ಟನ್, ಎ. ಎಂ. ಕೋಪ್‌ಲ್ಯಾಂಡ್, ಡಬ್ಲ್ಯು. ಇ. ಆಟ್ಕಿನ್ಸ್ ಮುಂತಾದವರು ಅಮೆರಿಕನ್ ಬೋಧನ ಸಂಶೋಧನ ವಿಧಾನವೊಂದರ ಪ್ರತಿಪಾದಕರು. ಬ್ರಿಟಿಷ್ ನವ ಅಭಿಜಾತ ಪಂಥದ ಅಮೂರ್ತ ಸಿದ್ಧಾಂತ ದೃಷ್ಟಿಯನ್ನೆ ಬಿಟ್ಟುಕೊಡಲು ಹವಣಿಸಿದವರು ಇವರು. ಸಾಮಾಜಿಕ–ಮಾನಸಿಕ ಮತ್ತು ಸಾಮಾಜಿಕ–ನೈತಿಕ ದೃಷ್ಟಿಯಲ್ಲಿ ಆರ್ಥಿಕ ವರ್ತನೆಯ ನಿರೀಕ್ಷಣೆಗೆ ಇವರು ನೀಡಿದ ಪ್ರಾಶಸ್ತ್ಯ ಹೆಚ್ಚಿನದು. ಆರ್ಥಿಕ ಮಾನವನೆಂಬ ಮಿಥ್ಯೆಯ ಗುಳ್ಳೆಯನ್ನು ಇವರು ಒಡೆಯಲೆತ್ನಿಸಿದರು. ಮಾನವನ ಚರ್ಯೆಯ ಹಿಂದೆ ಸುಖದೃಷ್ಟಿಯೇ ಪ್ರಧಾನವೆಂಬ ವಾದವೂ ಇವರಿಂದ ಗೇಲಿಗೆ ಒಳಗಾಯಿತು. ಮಾನವನ ವರ್ತನೆ, ಅವನ ಅಗತ್ಯಗಳು, ಬಯಕೆಗಳು, ಆತನ ಸಾಧನೋಪಾಯಗಳು—ಇವೆಲ್ಲ ಅತ್ಯಂತ ಜಟಿಲವೂ ಸರ್ವದಾ ಪರಿವರ್ತನಶೀಲವೂ ಆದ ವಿಕಾಸದ ಪರಿಣಾಮಗಳು. ವಿಶಿಷ್ಟ ಸಾಮಾಜಿಕ ಸಂಸ್ಥೆ ಸಂಪ್ರದಾಯಗಳಿಂದ ಈ ವಿಕಾಸ ರೂಪುಗೊಳ್ಳುತ್ತದೆಯಾದ್ದರಿಂದ ಇದು ಒಂದು ದೃಷ್ಟಿಯಲ್ಲಿ ಸಾಂಸ್ಥಿಕವಾದ್ದು (ಇನ್ಸ್‌ಟಿಟ್ಯೂಷನಲ್). ಆರ್ಥಿಕ ಸಂಸ್ಥೆಗಳ ವಿಕಾಸ ಮಾರ್ಗದಲ್ಲಿ ಅವು ಅನುಭವಿಸುವ ಪರಿವರ್ತನೆಗಳ, ಮಾನವರ ಆರ್ಥಿಕ ವರ್ತನೆಯ ಹಿಂದಿನ ಮನೋವೈಚಿತ್ರ್ಯಗಳ ಆಮೂಲಾಗ್ರ ಅಭ್ಯಾಸದಿಂದ ಮಾತ್ರವೇ ಆರ್ಥಿಕ ಸಂಬಂಧಗಳ ನಿಜಸ್ವರೂಪವನ್ನರ್ಥಮಾಡಿಕೊಳ್ಳುವುದು ಸಾಧ್ಯ. ಅರ್ಥವ್ಯವಸ್ಥೆಯ ಚಲನಾತ್ಮಕ ಸ್ವಭಾವದ ಅವಲೋಕನವೇ ಸಂಸ್ಥಾವಾದಿಗಳ (ಇನ್ಸ್‌ಟಿಟ್ಯೂಷನಲಿಸ್ಟ್ಸ್) ದೃಷ್ಟಿಯಲ್ಲಿ ಪ್ರಧಾನ. ಜರ್ಮನ್ ಐತಿಹಾಸಿಕ ಪಂಥದ ಮೂಲ ಭಾವನೆಗಳನ್ನೆ ಅಮೆರಿಕನ್ ಸಂಸ್ಥಾವಾದವೂ ಹೋಲುವುದೆಂಬುದು ಗಮನಿಸಬೇಕಾದ ಅಂಶ. ಜರ್ಮನ್ ಇತಿಹಾಸ ಪಂಥದವರಂತೆ ಸಂಸ್ಥಾವಾದಿಗಳು ಕೂಡ ಅರ್ಥನೀತಿಯ ಗುರಿಗಳನ್ನು ನಿರ್ದೇಶಿಸುವಾಗ ಈ ಗುರಿಗಳಿಂದ ಜನತೆಯ ಮೇಲಾಗುವ ಮಾನಸಿಕ ಪರಿಣಾಮಗಳನ್ನೂ ಸಾಮಾಜಿಕ–ನೈತಿಕ ಪ್ರಭಾವಗಳನ್ನೂ ಗಮನಿಸಬೇಕೆಂದು ಹೇಳಿದರು. ಸಂಸ್ಥಾವಾದಿಗಳ ಈ ಮೌಲ್ಯನಿರೀಕ್ಷಣವಾದವನ್ನು ಹ್ಯಾಡ್ಲೆ, ಸೆಲಿಗ್ಮನ್, ಮೇಯೊ–ಸ್ಮಿತ್ ಮುಂತಾದ ಅನೇಕರು ಒಪ್ಪಲಿಲ್ಲ.

ಈ ಎಲ್ಲ ವಾದ–ಪ್ರತಿವಾದಗಳಿಂದ ಅರ್ಥನೀತಿಯ ಮೇಲೆ ಪರಿಣಾಮಗಳಾದುವು. ನಿರಪೇಕ್ಷ ಆರ್ಥಿಕ ಸ್ವಾತಂತ್ರ್ಯದ ಅಮೂರ್ತ ಸಿದ್ಧಾಂತಗಳನ್ನು

ಬದಿಗೊತ್ತಿ, ಆರ್ಥಿಕ ಸಂಸ್ಥೆಗಳ ವಾಸ್ತವಿಕ ಬೆಳವಣಿಗೆಗಳಿಗೂ ವ್ಯಕ್ತಿಗಳ ಮತ್ತು ಸಾಮಾಜಿಕ–ಆರ್ಥಿಕ ಗುಂಪುಗಳ ವರ್ತನೆಗೂ ಹೆಚ್ಚಿನ ಪ್ರಾಧಾನ್ಯ ನೀಡಬೇಕೆಂಬುದು ಸಂಸ್ಥಾವಾದಿಗಳ ತರ್ಕಸಾರ. ಅಗತ್ಯವೆಂದು ಕಂಡುಬಂದರೆ ಸರ್ಕಾರಿ ಆರ್ಥಿಕ ಯೋಜನೆ, ನಿಯಂತ್ರಣ ಇವನ್ನು ಸ್ವಾಗತಿಸಬೇಕೆಂದೂ ಇವರು ವಾದಿಸಿದರು. ಸಾಮಾಜಿಕ—ನೈತಿಕ ಕಲ್ಯಾಣ ಸಾಧಿಸುವುದು ಮುಖ್ಯವೆಂಬುದು ಇವರ ಮತವಾಗಿತ್ತು.

ಅಮೂರ್ತ ಸಿದ್ಧಾಂತ, ಅನುಭವವೇದ್ಯ ವಿಚಾರ, ಅಂಕಿ–ಅಂಶಗಳ ಅಧ್ಯಯನ, ಗಣಿತಶಾಸ್ತ್ರ–ಇತಿಹಾಸ ದೃಷ್ಟಿಗಳ ಅನ್ವಯ—ಇವೆಲ್ಲವನ್ನೂ ಒಳಗೊಂಡ ಸಮಗ್ರ ಅರ್ಥಶಾಸ್ತ್ರ ಈಗತಾನೇ ಮೈತಳೆಯುತ್ತಿದೆಯೆನ್ನಬಹುದು. ಸಮಾಜ ಜೀವನದ ಸಮಗ್ರದೃಷ್ಟಿಯನ್ನು ಪ್ರತಿಪಾದಿಸಿ, ನಾನಾ ಸಾಮಾಜಿಕ ವರ್ತನೆಗಳು ಪರಸ್ಪರ ಪೂರಕವೆಂಬ ವಿಚಾರಕ್ಕೆ ಪ್ರಚೋದನೆ ನೀಡಿದ್ದೇ ಐತಿಹಾಸಿಕ ಪಂಥದ ನಿಜವಾದ ಸಾಧನೆ. (ಕೆ.ಡಿ.)

**ಐತಿಹ್ಯ :** ಚಾರಿತ್ರಿಕವೆಂದು ಜನ ಸಾಮಾನ್ಯವಾಗಿ ಅಂಗೀಕರಿಸಿದ್ದು ಪರಂಪರಾಗತವಾದ ವಿಶೇಷ ಘಟನೆ (ಲೆಜೆಂಡ್). ಇಲ್ಲಿನ ಸಂಗತಿಗಳನ್ನು ಇತಿಹಾಸದ ಸಂಗತಿಗಳಂತೆ ತಾಳೆ ನೋಡಲು ಆಗುವುದಿಲ್ಲವಾದರೂ ವಸ್ತು ಸಾಕಷ್ಟು ಪ್ರಾಚೀನ ಮೂಲದ್ದಾಗಿರುತ್ತದೆ. ಪ್ರಾಚೀನ ಕಾಲದ ಚಾರಿತ್ರಿಕ ಸಂಗತಿಯೊಂದು ಕ್ರಮೇಣ ಅಪೂರ್ವವೂ ಅದ್ಭುತವೂ ಆದ ಸನ್ನಿವೇಶಗಳನ್ನು ಒಳಗೊಳ್ಳುತ್ತ ತಲೆಮಾರುಗಳ ಮೂಲಕ ಹರಿದು ಬರುವಾಗ ಐತಿಹ್ಯ ಬಹುಶಃ ರೂಪುಗೊಂಡಿರಬೇಕೆಂದು ತೋರುತ್ತದೆ. ಐತಿಹ್ಯದಲ್ಲಿ ಚಾರಿತ್ರಿಕ ಅಂಶ ಎಷ್ಟು, ಕಾಲ್ಪನಿಕ ಅಂಶ ಎಷ್ಟು ಎಂದು ಗೆರೆಯೆಳೆದು ತೋರಿಸಲು ಬಾರದು. ಐತಿಹ್ಯಗಳು ವ್ಯಕ್ತಿಗಳ ಸ್ಥಳಗಳ ಅಥವಾ ಘಟನೆಗಳ ವಾಸ್ತವ ಅಥವಾ ತೋರ್ಕೆಯ ನಂಬಿಕೆಗಳನ್ನೊಳಗೊಂಡ ಕಥನಗಳು. ಇವು ನಡೆದ ಘಟನೆಗಳ ಪಳೆಯುಳಿಕೆಗಳೆನ್ನಬಹುದು. ಹೇಳುವವರ ನಂಬಿಕೆಯಂತೆ ಉಳಿದುಬಂದವು. ಪ್ರಥಮತಃ ಗೊತ್ತಾದ ಸ್ಥಳಗಳಿಗೆ ಸಂಬಂಧಿಸಿದವು. ಆದರೆ ಬೇರೆ ಬೇರೆ ಸ್ಥಳಗಳಲ್ಲಿ ಇಂಥದೇ ರೀತಿಯ ಕಥನನಂಬಿಕೆ ಕಂಡುಬಂದಲ್ಲಿ ಆಶ್ಚರ್ಯ ಪಡಬೇಕಾದುದಿಲ್ಲ.

ಮೂಲತಃ ಲೆಜೆಂಡ್ ಪದ ಧಾರ್ಮಿಕ ರೀತಿಯ ಕಥನವೊಂದಕ್ಕೆ ಅನ್ವಯಿಸುತ್ತಿದ್ದು ಆಮೇಲೆ ಚಾರಿತ್ರಿಕ ಆಧಾರವಿರದಿದ್ದರೂ ಜನಾದರಣೀಯ ಸತ್ಯವಾಗಿ ತಲೆಮಾರಿನಿಂದ ತಲೆಮಾರಿಗೆ ಬಂದಿರುವ ಕಥೆಗೂ ಬಳಕೆಯಾಯಿತು. ಪ್ರಥಮ ಹಂತದಲ್ಲಿ ಈ ಪದ ಸಾಧುಜೀವನಕ್ಕೆ ಸಂಬಂಧಿಸಿದ ಕಥೆಗಳನ್ನು ಸೂಚಿಸುತ್ತಿದ್ದಂತೆ ತೋರುತ್ತದೆ. ಉದಾಹರಣೆಗೆ, ಜಾಕಬ್ಸ್ ಡೇ ವರಾಗಿನೆ ಅವರ ಗೋಲ್ಡನ್ ಲೆಜೆಂಡ್ ಎಂಬ ಸಾಧುಕಥೆಗಳ ಸಂಗ್ರಹ (ಇಂಗ್ಲಿಷ್ ಭಾಷಾಂತರ ಕ್ರಿ.ಶ. 1483ರಲ್ಲಿ ಪ್ರಕಟವಾಯಿತು). ಲೆಜೆಂಡ್ ಎಂಬ ಪದ ಮಧ್ಯಕಾಲೀನ ಲ್ಯಾಟಿನ್ನಿನ ಲೆಜೆಂಡಾ ಎಂಬುದರಿಂದ ನಿಷ್ಪನ್ನವಾದುದು. ಇದರ ಅರ್ಥ ಪಠಿಸಬಹುದಾದದ್ದು – ಎಂದು.ಆದ್ದರಿಂದ ಆರಾಧನಾ ಮಂದಿರಗಳಲ್ಲಿ ಪಠನೆಗಳಿಗಾಗಿ ಉಪಯೋಗಿಸುತ್ತಿದ್ದ, ಬೈಬಲ್ಲಿನಿಂದ ಮತ್ತು ಸಾಧುಜೀವನದಿಂದ ತೆಗೆದ ಭಾಗಗಳಿಗೆ ಈ ಪದವನ್ನು ಬಳಸಲಾಯಿತು. ಪಾಶ್ಚಾತ್ಯ ಸಂಸ್ಕೃತಿಯಲ್ಲಿನ ಕ್ರೈಸ್ತ ಸಾಧುಗಳನ್ನು ಕುರಿತ ಐತಿಹ್ಯಗಳನ್ನು ನೋಡಿಯೇ ಯೂರೋಪಿನ ಕೆಲವು ಲೇಖಕರು ಲೆಜೆಂಡ್ ಪದವನ್ನು ಸಾಧು ಐತಿಹ್ಯಕ್ಕೆ ನಿಶ್ಚಿತಗೊಳಿಸಿದ ಹಾಗೆ ಕಾಣುತ್ತದೆ.

ಇತರ ಮಧ್ಯಯುಗದ ಐತಿಹ್ಯಗಳಲ್ಲಿ ಇತಿಹಾಸ ಮತ್ತು ನೀತಿಕಥೆಗಳು ಬಿಡಿಸಲಾಗದ ರೀತಿಯಲ್ಲಿ ಸೇರಿಕೊಂಡಿರುವುದನ್ನು ಕಾಣಬಹುದು. ಇತಿಹಾಸದ ಬರೆವಣಿಗೆ ಹೆಚ್ಚು ವ್ಯವಸ್ಥಿತವಾಗಿ ಬಂದು, ತನ್ನ ವಸ್ತುವಿನ ನಿಜತ್ವವನ್ನು ದೃಢಪಡಿಸಿಕೊಂಡ ಮೇಲೆ, ಉಳಿದ ನೀತಿಕಥೆಗಳು ಮತ್ತು ನಂಬಲಾಗದ ಕಥೆಗಳು ಐತಿಹ್ಯದ ಕ್ಷೇತ್ರಕ್ಕೆ ಬಂದುವೆಂದು ಕೆಲವರ ಅಭಿಪ್ರಾಯ.

ಆಧುನಿಕ ಬಳಕೆಯಲ್ಲಿ ಈ ಪದಕ್ಕೆ ಪ್ರಧಾನವಾಗಿ ಎರಡು ಅರ್ಥವಿದೆ : ಒಂದು—ನಾಣ್ಯ, ಸ್ಮಾರಕಪದಕ ಇತ್ಯಾದಿಗಳ ಮೇಲಿನ ಶಾಸನ ; ಮತ್ತೊಂದು—ಇತಿಹಾಸದ ಹಾಗೆ ತಾಳೆನೋಡಲಾಗದ ಮತ್ತು ಪುರಾತನ ಮೂಲವುಳ್ಳದ್ದೆಂದು ಗ್ರಹಿಕೆಯಾಗಿರುವ ಬರೆವಣಿಗೆಯ ಕಥನ. ಕೆಲವು ಆಧುನಿಕ ಲೇಖಕರು ಆರ್ಷೇಯ ಶೈಲಿಯಲ್ಲಿ ಶುದ್ಧ ಕಲ್ಪನಾತ್ಮಕ ಕಥೆಗಳನ್ನು ಬರೆದು, ಅವನ್ನು ಲೆಜೆಂಡ್‌ಗಳೆಂದು ಕರೆದಿರುವುದೂ ಉಂಟು. ಇದರಿಂದಾಗಿ, ಅಕ್ಷರಸ್ಥರ ನಡುವೆ, ಈ ಪದ, ಜಾನಪದಕ್ಕಿಂತ ಭಿನ್ನವಾದ ಪುರಾತನ ಗ್ರಂಥವೊಂದರಿಂದ ಬಂದ ಕಥೆಯೊಂದಕ್ಕೆ ಅನ್ವಯಿಸುತ್ತಿದ್ದಂತೆ ತಿಳಿಯುತ್ತದೆ. ಆದರೆ ಇತ್ತೀಚೆಗೆ ಜಾನಪದ ವಿದ್ವಾಂಸರು ಇದನ್ನು ಕಂಠಸ್ಥವಾಗಿ ವಹನಗೊಂಡ ಕಥೆಗಳಿಗೆ ಅನ್ವಯಿಸಿ, ಇದರ ಅರ್ಥವನ್ನು ನಿಗದಿಪಡಿಸಿದ್ದಾರೆ. ಈ ದೃಷ್ಟಿಯಲ್ಲಿ ಐತಿಹ್ಯವೆಂದರೆ, ವ್ಯಕ್ತಿ, ಸ್ಥಳ ಅಥವಾ ಘಟನೆಯೊಂದನ್ನು ಕುರಿತಂತೆ ಸಾಂಪ್ರದಾಯಿಕ ಮೂಲವಸ್ತುಗಳೊಡನೆ ನಿಜಾಂಶವೊಂದರ ಮೇಲೆ ಆಧರಿತವಾಗಿದೆಯೆಂದು ಭಾವಿಸುವ ಕಥನವೇ ಆಗಿದೆ.

ಐತಿಹ್ಯಗಳು ಮೊದಮೊದಲು ಸಂಕ್ಷಿಪ್ತವೂ ಸರಳವೂ ಆಗಿದ್ದು, ಕ್ರಮೇಣ ಉತ್ಪ್ರೇಕ್ಷಿತ ವಿವರಣೆಗಳ ದೀರ್ಘ ಹಾಗೂ ಕಲ್ಪನಾತ್ಮಕ ಕಥೆಗಳಾಗಿ ಬೆಳವಣಿಗೆ ಹೊಂದಿದುವು. ಮೂಲದಲ್ಲಿ ಇವು ಚಾರಿತ್ರಿಕವೆನಿಸಿದರೂ ಅನಂತರದಲ್ಲಿ ಸಾಂಪ್ರದಾಯಿಕವೆನಿಸಿದುವು. ಕೆಲವರು ಐತಿಹ್ಯ ಮತ್ತು ಸಂಪ್ರದಾಯಗಳನ್ನು ಜೊತೆಜೊತೆಯಲ್ಲಿ ನೋಡಿರಲು ಈ ದೃಷ್ಟಿಯೇ ಕಾರಣವಾಗಿರಬೇಕು. ಸಾಮಾನ್ಯವಾಗಿ ಐತಿಹ್ಯದಲ್ಲಿ ಏಕಮಾತ್ರ ಕಥನಾಶಯ ಕಂಡುಬರುತ್ತದೆ.

ವಸ್ತುವಿನ ದೃಷ್ಟಿಯಿಂದ ಐತಿಹ್ಯಗಳನ್ನು ಮೂರು ಪ್ರಧಾನ ಗುಂಪುಗಳಾಗಿ ವಿಂಗಡಿಸಬಹುದು : 1 ಸೃಷ್ಟಿ ಅಥವಾ ಜಗತ್ತಿನ ಮೂಲವನ್ನು ಕುರಿತಾದ ವಿವರಣಾತ್ಮಕ ಐತಿಹ್ಯಗಳು ; 2 ಅತಿಮಾನುಷ ವ್ಯಕ್ತಿಗಳನ್ನು ಕುರಿತ ಐತಿಹ್ಯಗಳು ; 3 ಐತಿಹಾಸಿಕ ಅಥವಾ ಮಿಥ್ಯೈತಿಹಾಸಿಕ ಐತಿಹ್ಯಗಳು. ಸೃಷ್ಟಿಕಾರ್ಯದ ಉಗಮ, ಭೂಮಿ ರೂಪಿತವಾದ ಬಗೆ ಮೊದಲಾದ ವಿಷಯಗಳನ್ನೊಳಗೊಂಡ ಐತಿಹ್ಯಗಳು ಬಹುಮಟ್ಟಿಗೆ ಪುರಾಣದ ಸಂಪರ್ಕವನ್ನು ಪಡೆದಿರುತ್ತವೆ. ಈ ಬಗೆಗಿನ ಕಥೆಗಳು ಜಗತ್ತಿನ ಎಲ್ಲ ಕಡೆಯಲ್ಲೂ ಸಾಕಷ್ಟು ಸಂಖ್ಯೆಯಲ್ಲಿ ದೊರಕುತ್ತವೆ. ಇವುಗಳ ಮೇಲೆ ಆಯಾ ದೇಶದ ಪವಿತ್ರ ಧಾರ್ಮಿಕ ಗ್ರಂಥಗಳು ಪ್ರಭಾವ ಬೀರಿರುವುದನು ಕಾಣಬಹುದು. ಜನಪದ ಇನ್ನೂ ನಂಬಿಕೊಂಡಿರುವ ಕಿನ್ನರ, ದೆವ್ವ, ಪಿಶಾಚಿ, ರಾಕ್ಷಸ ಮೊದಲಾದ ಅದ್ಭುತಗಳನ್ನು ಒಳಗೊಂಡಿರುವ ಕಥೆಗಳೇ ಎರಡನೆಯ ವಿಭಾಗದ ಐತಿಹ್ಯಗಳು. ಇದರಲ್ಲಿ ಕಿನ್ನರಕಥೆಗಳಿಗೂ ಐತಿಹ್ಯಗಳಿಗೂ ಇರುವ ಸಂಬಂಧವನ್ನು ಅವುಗಳಲ್ಲಿರುವ ಸಮಾನಾಂಶವಾದ ಅದ್ಭುತಗಳಿಂದ ಗುರುತಿಸಬಹುದು. ಇನ್ನು ಮೂರನೆಯ ವಿಭಾಗದ ಐತಿಹ್ಯಗಳು ಚಾರಿತ್ರಿಕ ಲಕ್ಷಣಗಳನ್ನು ಆಶ್ರಯಿಸಿರುವ ರಚನೆಗಳನ್ನು ತಿಳಿಸುತ್ತವೆ. ಐತಿಹ್ಯದ ವಸ್ತು ಸಮಗ್ರವಾಗಿ ಕಲ್ಪನಾತ್ಮಕವೆಂದು ಕರೆಯಬೇಕಾಗಿಲ್ಲ, ಕಲ್ಪನೆಗೆ ಆಧಾರ ಕೊಡುವ ಸತ್ಯಾಂಶಗಳೂ ಅಲ್ಲಿರುತ್ತವೆ. ಐತಿಹ್ಯಗಳು ಐತಿಹಾಸಿಕ ಗಣ್ಯವ್ಯಕ್ತಿಗಳ ಸುತ್ತ ಗುಂಪುಗೂಡಿ ಬೆಳೆದಿರುವ ಹಾಗೆ ಕಾಣುತ್ತದೆ. ಪುರಾತನ ಐತಿಹಾಸಿಕ ವ್ಯಕ್ತಿ ಕ್ರಮೇಣ ಐತಿಹ್ಯದ ವಸ್ತುವಾಗಿ, ಅವನ ಗುಣಗೌರವ ವೈಶಿಷ್ಟ್ಯಗಳ ಮೇಲೆ ಐತಿಹ್ಯದ ಕಥೆಗಳು ರೂಪುಗೊಂಡಿರಬೇಕು. ಜನ ಸಾಮಾನ್ಯರಲ್ಲಿ ಐತಿಹ್ಯವನ್ನು ಇತಿಹಾಸದ ಜೊತೆಗೆ ತಪ್ಪು ಕಲ್ಪಿಸಿಕೊಳ್ಳುವುದೂ ಒಂದು ಸಾಮಾನ್ಯ ಪ್ರವೃತ್ತಿ. ಅಂತು, ಕಾಲದಿಂದ ಕಾಲಕ್ಕೆ ನೆನಪಾಗಿ ಉಳಿದುಕೊಂಡಿರುವ ಕೆಲವು ಐತಿಹಾಸಿಕ ಲಕ್ಷಣಗಳನ್ನು ಐತಿಹ್ಯಗಳು ವ್ಯಕ್ತಪಡಿಸುತ್ತವೆ. ಆದರೆ ಕೆಲವುಸಾರಿ ಇವು ಭ್ರಾಂತಿಮೂಲವೂ ಅಸಂಬದ್ಧವೂ ಆಗಿರುವುದುಂಟು. ಉದಾಹರಣೆ–ಪೈಡ್ ಪೈಪರ್ ಆಫ್ ಹ್ಯಾಮಲಿನ್—ಎಂಬ ಕಿನ್ನರಿ ಜೋಗಿಯ ಕಥೆ.

ವಿತರಣೆಯ ದೃಷ್ಟಿಯಿಂದ ಐತಿಹ್ಯಗಳನ್ನು ಸ್ಥಳೀಯ ಐತಿಹ್ಯ ಮತ್ತು ವಲಸೆಯ ಐತಿಹ್ಯಗಳೆಂದು ಎರಡು ದೊಡ್ಡ ಗುಂಪುಗಳಾಗಿ ವಿಂಗಡಿಸಬಹುದು. ಸ್ಥಳೀಯ ಐತಿಹ್ಯಗಳು ಗೊತ್ತಾದ ಸ್ಥಳವೊಂದಕ್ಕೆ ಸಂಬಂಧಿಸಿದವು. ಭೂವಲಯದ ಅಥವಾ ಹೆಸರಿನ ಕೆಲವು ಸ್ಥಳೀಯ ವೈಲಕ್ಷಣ್ಯಗಳನು ವಿವರಿಸುವುದಕ್ಕಾಗಿಯೊ ಸ್ಥಳೀಯ ಸಂಪ್ರದಾಯದ ಕಥೆಯೊಂದನ್ನು ಹೇಳುವುದಕ್ಕಾಗಿಯೊ ಅವು ಸೃಷ್ಟಿಯಾಗಿರುತ್ತವೆ. ಸಂಗ್ರಹವಾಗಿ ಹೇಳುವುದಾದರೆ, ಸ್ಥಳೀಯ ಐತಿಹ್ಯ ಚಿಕ್ಕದಾದುದು, ಘಟನಾತ್ಮಕವಾದುದು, ವಿವರಣಾತ್ಮಕವಾದದು. ಇದರ ರಚನೆ ಸರಳ, ತಂತ್ರದಲ್ಲಿ ಕಿನ್ನರಕಥೆಯನ್ನು ಇದು ಹೋಲುತ್ತದೆ. ಇದರ ಕ್ಷೇತ್ರ ತುಂಬ ಪರಿಮಿತ. ಬಹು ಹಿಂದಿನ ಸಂಪ್ರದಾಯಗಳನ್ನೂ ನೀತಿಪದ್ಧತಿಗಳನ್ನೂ ಹೊಂದಿ ಪುರಾತನತ್ವದ ಸೂಚಿಯಾಗಿರುತ್ತದೆ. ಸಾಮಾನ್ಯವಾಗಿ ಹರ್ಷಾಂತವಾದರೂ ದುಃಖಾಂತವಾಗಿಯೂ ಕೊನೆಗೊಳ್ಳುವ ಐತಿಹ್ಯಗಳು ಹಲವಾರಿವೆ. ಇವುಗಳ ಇನ್ನೊಂದು ಗುಣ ಬೋಧಪರತೆ ಮತ್ತು ನೀತಿಪರತೆ. ಭೂತ, ಪ್ರೇತ ಮೊದಲಾದವುಗಳಲ್ಲಿನ ನಂಬಿಕೆ ಇವುಗಳ ಮತ್ತೊಂದು ಲಕ್ಷಣ. ಸ್ಥಳೀಯ ಐತಿಹ್ಯಗಳು ವಲಸೆ ಹೋಗುವುದಿಲ್ಲ. ಅವು ಸಂಕ್ಷಿಪ್ತವಾಗಿದ್ದು ಕೆಲವು ಆಶಯಗಳನ್ನು ಒಳಗೊಂಡಿರುತ್ತವೆ. ಈ ಪರಿಮಿತ ಆಶಯಗಳೇ ಯಾವಾಗಲೂ ಆವರ್ತನಗೊಳ್ಳುತ್ತಿರುತ್ತವೆ.

ಸ್ಥಳೀಯ ಐತಿಹ್ಯಗಳಲ್ಲಿ ಹಲವಾರು ಪ್ರಕಾರಗಳಾಗಿವೆ. ಮುಖ್ಯವಾದವನ್ನು ಮಾತ್ರ ಇಲ್ಲಿ ಹೆಸರಿಸಲಾಗಿದೆ. ಜಗತ್ತಿನಾದ್ಯಂತ ಕಂಡುಬರುವ ಇಂಥದೊಂದು ಪ್ರಕಾರವೆಂದರೆ, ಪ್ರವಾಹ ಐತಿಹ್ಯ. ಕೆರೆ, ಕೊಳ, ಸರೋವರಗಳು ಇರುವಲ್ಲೆಲ್ಲ ಈ ರೀತಿಯ ಐತಿಹ್ಯಗಳು ಪ್ರಚಲಿತವಾಗಿವೆ. ಇವುಗಳಿಗೆ ಆಳವನ್ನು ಕಂಡರಿಯೆವೆಂದೂ ಕಂಡುಹಿಡಿಯಲು ಹೊರಟರೆ ವಿಪತ್ತು ತಪ್ಪಿದ್ದಿಲ್ಲವೆಂದೂ ನಂಬಿಕೆ ಇದೆ. ಕೆರೆ ಅಥವಾ ಸರೋವರದ ಮಧ್ಯಭಾಗದಲ್ಲಿ ಭೂಭಾಗವೊಂದು ಇದ್ದು, ಅಲ್ಲಿಯ ನಿವಾಸಿಗಳ ನಾಸ್ತಿಕತೆಯಿಂದಾಗಿ ಪ್ರವಾಹ ಬಂದು ಮುಳುಗಿ ಹೋಯಿತೆಂದು ಕಥೆಯುಂಟು. ಈ ಬಗೆಯ ಐತಿಹ್ಯಗಳಲ್ಲಿ ಪ್ರಮುಖವಾದುದು ನೋಹ ಮತ್ತು ಅವನ ದೋಣಿಯ ಕಥೆ. ಇದಲ್ಲದೆ ಆಲ್ಬನ್ ಲೇಕ್ ಐತಿಹ್ಯವನ್ನೆ ತೆಗೆದುಕೊಳ್ಳಬಹುದು. ಆಲ್ಬಲಾಂಗಾ ಎಂಬುವನೊಬ್ಬ ಮಾನವ ರೂಪದಲ್ಲಿ ದೇವತೆಯನ್ನು ನಿರ್ಮಿಸಿ, ಜುಪಿಟರ್ ದೇವತೆಯ ಗುಡುಗು ಮಿಂಚುಗಳನ್ನು

ಅಣಕಿಸಿದನಂತೆ. ಈ ಅನೀತಿವರ್ತನೆಗಾಗಿ ಈತನ ಮತ್ತು ಈತನ ಅರಮನೆ ಬರಸಿಡಿಲಿಗೆ ತುತ್ತಾದುದಲ್ಲದೆ, ಅಲ್ಬನ್ ಸರೋವರ ಉಕ್ಕಿಬಂದು ಅರಮನೆಯನ್ನು ಮುಳುಗಿಸಿದಂತೆ ಕಥೆ ಇದೆ. ನಾಶಹೊಂದಿದ ಅರಮನೆಯನ್ನು ಆ ಸರೋವರದ ತಳಭಾಗದಲ್ಲಿ ಇವತ್ತಿಗೂ ನೋಡಬಹುದೆಂದು ಪ್ರಾಚೀನ ಉದಂತಕಾರನೊಬ್ಬ ಹೇಳಿದ್ದಾನೆ. ಪ್ರಳಯದ ಈ ಪ್ರಧಾನಾಶ್ರಯ ಮತ್ತು ನಿವಾಸಿಗಳ ನಿರೀಶ್ವರ ವಾದ ಮಧ್ಯಯುಗದ ಮಾದರಿಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಅಂಥ ಅನೇಕ ಐತಿಹ್ಯಗಳು ಸ್ವತಂತ್ರ ಬೆಳವಣಿಗೆಗಳಾಗಿರುವುದಲ್ಲದೆ, ಕೆಲವು ವೇಳೆ ನಿಜವಾದ ಸ್ಥಳಗಳು ದುರಂತಗಳ ಜ್ಞಾಪಕಗಳಾಗಿಯೂ ಉಳಿದಿವೆ. ಈ ಚಾರಿತ್ರಿಕ ಜ್ಞಾಪಕಾಂಶಗಳ ಜೊತೆಗೆ ಭೂಗರ್ಭಶಾಸ್ತ್ರಜ್ಞನ ಊಹೆಗಳು, ಆಶಯಗಳು, ವಲಸೆ ಹೋಗುವಿಕೆ–ಈ ಎರಡು ವಿಷಯಗಳನ್ನು ಗಮನಿಸಬೇಕಾಗುತ್ತದೆ.

ಐತಿಹ್ಯದ ಮತ್ತೊಂದು ಜನಪ್ರಿಯಪ್ರಕಾರ ಬಲಿಕೊಡುವ ವಿಷಯವನ್ನು ಕುರಿತದ್ದು. ಕಟ್ಟಡ, ಕೋಟೆ, ಆರಾಧನಮಂದಿರ, ಸೇತುವೆ ಹಾಗೂ ಕೆರೆಗಳ ಏರಿಗಳು ಶಾಶ್ವತವಾಗಿ ನಿಲ್ಲಲು ಕೊಡುತ್ತಿದ್ದ ಅಸ್ತಿಭಾರ-ಬಲಿಗಳನ್ನು ಇವು ತಿಳಿಸುತ್ತವೆ. ಕೆರೆಯ ಏರಿ ನಿಲ್ಲಲು ಬಲಿ ಅರ್ಪಿಸಿದ ಕಥೆಯೊಂದು ನಾಗಮಂಗಲದ ಸಮೀಪದ ಸೂಳೆಕೆರೆಯ ಬಗ್ಗೆ ಪ್ರಚಲಿತವಾಗಿದೆ. ರಾಜನ ಸೂಳೆಯೊಬ್ಬಳು ರಾಜ ಕಟ್ಟಿಸುತ್ತಿದ್ದ ಕೆರೆಯ ಏರಿ ನಿಲ್ಲದಿದ್ದಾಗ ಅದಕ್ಕೆ ತಾನೇ ಬಲಿಯಾದ ಪ್ರಸಂಗ ಇಲ್ಲಿದೆ. ಕೆರೆ ತೋಡಿ ನೀರು ಬರದಿದ್ದಾಗಲೂ ಬಲಿಕೊಟ್ಟ ಪ್ರಸಂಗಗಳನ್ನು ಹೇಳುವ ಹಲವಾರು ಐತಿಹ್ಯಗಳು ಪ್ರಚುರವಾಗಿವೆ. ಸಾಮಾನ್ಯವಾಗಿ ಇಲ್ಲಿ ಬಲಿಯಾಗುವವಳು ಕಿರಿಯ ಸೊಸೆ. ಕೆರೆಗೆ ಹಾರ ಎಂಬ ಕಥೆಯನ್ನೇ ಇಲ್ಲಿ ಉದಾಹರಿಸಬಹುದು. ಇದನ್ನ ಬಹುಮಟ್ಟಿಗೆ ಹೋಲುವಂಥ ಐತಿಹ್ಯವೊಂದು ಕೊಡಗು ಜಿಲ್ಲೆಯ ಸೋಮವಾರಪೇಟೆ ತಾಲ್ಲೂಕಿನ ಮಳ್ತೆಗ್ರಾಮದ ಹೊನ್ನಮ್ಮನ ಕೆರೆಯ ಬಗ್ಗೆ ಇರುವುದನ್ನು ಶ್ರೀ ಪಿ. ಕೆ. ರಾಜಶೇಖರ ಅವರು ಸಂಗ್ರಹಿಸಿದ್ದಾರೆ. ಹೊನ್ನಮ್ಮನ ಬಗೆಗಿನ ಇಂಥ ಐತಿಹ್ಯಗಳು ಹಲವು ಕಡೆ ಹರಡಿಕೊಂಡಿವೆ. ಈ ರೀತಿಯ ಕಥೆಯೊಂದು ಮಂಡ್ಯಜಿಲ್ಲೆಯ ಮದ್ದೂರು ಕೆರೆಯ ಬಗ್ಗೆಯೂ ಇದೆ. ಇವುಗಳಲ್ಲಿ ಕಾಣಬರುವ ಮತ್ತೊಂದು ಆಶಯವೆಂದರೆ, ಬಲಿಯಾದವರು ದೇವತೆಗಳಾಗಿ ಬಡಬಗ್ಗರಿಗೆ ವಿಶೇಷ ಸಂದರ್ಭಗಳಲ್ಲಿ ಒಡವೆ ಕೊಡುತ್ತಿದ್ದುದು, ಮಾತನಾಡುತ್ತಿದ್ದುದು, ಆಮೇಲೆ ಒಮ್ಮೆ ಹೊಲೆಯನೊಬ್ಬ ನಿನ್ನ ಸೊಲ್ಲು ಬೆಲ್ಲವಾಗಲಿಲ್ಲವೆ—ಎಂದಮೇಲೆ ಅದು ನಿಂತು ಹೋದದ್ದು.

ಬಲಿ ಐತಿಹ್ಯಗಳ ಐತಿಹಾಸಿಕತೆಯ ಬಗ್ಗೆ ಒಂದು ಮಾತು. ಹಲವಾರು ಕಟ್ಟಡಗಳನ್ನು ಕೆಡವಿ ಶೋಧಿಸಿ ತೆಗೆದಾಗ ಅನೇಕ ಅಸ್ತಿಭಾರದಲ್ಲಿ ಅಸ್ಥಿಪಂಜರಗಳು ದೊರೆತಿವೆ. 19ನೆಯ ಶತಮಾನದಲ್ಲಿ ಉತ್ತರ ಜರ್ಮನಿಯಲ್ಲಿ ಇಂಥದೊಂದು ಸಂಶೋಧನೆ ನಡೆದು ಅಸ್ತಿಭಾರ–ಬಲಿಯ ಉಳಿಕೆಯೊಂದು ಪತ್ತೆಯಾಗಿರುವುದನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದು. ಇವನ್ನು ಗಮನಿಸಿದರೆ ಬಲಿ ಕಥೆಗಳ ಪ್ರಾಚುರ್ಯಕ್ಕೆ ಜನಪ್ರಿಯತೆಗೆ ಬೆಂಬಲ ಸಿಕ್ಕಂತಾಗುತ್ತದೆ. ಕಟ್ಟಡದ ಬಲಿಗೆ ಸಂಬಂಧಿಸಿದ ಮತ್ತೊಂದು ಪ್ರಕಾರವೆಂದರೆ, ವೀರನೊಬ್ಬ ಸತ್ತ ಅನಂತರ ಅವನನ್ನು ನಗರದ ಹೆಬ್ಬಾಗಿಲು ಅಥವಾ ದೇಶದ ಗಡಿಗಳಲ್ಲಿ ಹೂಳುವುದರಿಂದ ಆಕ್ರಮಣವನ್ನು ತಪ್ಪಿಸಬಹುದು—ಎಂಬುದು.

ಪರ್ವತ ಕಂದರಗಳಲ್ಲಿ ಶತ್ರುಗಳು ಬೆನ್ನಟ್ಟಿಬಂದಾಗ ವೀರನೊಬ್ಬ ಅಥವಾ ಸೆರೆಯಿಂದ ಬಿಡಿಸಿಕೊಂಡು ಬಂದ ಕನ್ನೆಯೊಬ್ಬಳು ಹಾರಿ ಬಿದ್ದು ಪಾರಾದ ಬಗ್ಗೆ ಸತ್ತ ಬಗ್ಗೆ ಅನೇಕ ಬಗೆಯ ಐತಿಹ್ಯಗಳು ಬೆಳೆದಿವೆ. ಈ ತೆರದ ಐತಿಹ್ಯದ ಜನನಕ್ಕೆ ಸಮಾನ ಸಂಪ್ರದಾಯವೊಂದು ಕಾರಣವಾಗಿರಬೇಕೆನಿಸುತ್ತದೆ.

ಐತಿಹ್ಯದ ಮತ್ತೊಂದು ಪ್ರಕಾರ ಕೌಟುಂಬಿಕ ಐತಿಹ್ಯ. ಕೆಲವು ಕುಟುಂಬಗಳಲ್ಲಿ ಸಾವು ಸೂಚಿಸಿ ಅಳುವ ದೆವ್ವಗಳು ಆಗಾಗ್ಗೆ ಕಾಣಿಸಿಕೊಳ್ಳುತ್ತವಂತೆ. ಈ ದೆವ್ವ ನಿರಾಕರಿಸಿದ ಪತ್ನಿಯಾಗಿದ್ದು, ತನ್ನ ಪ್ರೀತಿಯ ಮೊದಲ ವಸ್ತುವಾಗಿದ್ದವರ ಮೇಲೆ ಸೇಡು ತೀರಿಸಿಕೊಳ್ಳುವುದೇ ಆಗಿದೆ. ಕ್ರಾಪ್ಪೆಯವರ ಅಭಿಪ್ರಾಯದಂತೆ ದೆವ್ವದ ಅಸ್ತಿತ್ವ ಹಾಗೂ ಅದು ನಿಯತಕಾಲಿಕವಾಗಿ ಕಾಣಿಸಿಕೊಳ್ಳುವಿಕೆ ಐತಿಹ್ಯದ ಜನಪ್ರಿಯ ಭಾಗವಾಗಿದೆ.

ವ್ಯಾಪಕವಾಗಿ ಹರಡಿಕೊಂಡಿರುವ ಮತ್ತೊಂದು ಐತಿಹ್ಯದ ಪ್ರಕಾರವೆಂದರೆ, ಇತಿಹಾಸದ ಘಟನೆಯಂತೆ ತೋರುವ ಐತಿಹ್ಯಗಳು. ಇವು ನಿಜವಾಗಿ ಹೆಸರಾಂತಿದ್ದರೂ ಇವನ್ನು ಕುರಿತ ಸ್ಪಷ್ಟವಾದ ಇತಿಹಾಸವಾವುದೂ ಸಿಕ್ಕದು. ಉದಾಹರಣೆಗೆ, ಅಲೆಗ್ಸಾಂಡರ್-ಬಗೆಗಿನ ಕಥೆಗಳು. ಐತಿಹಾಸಿಕ ಐತಿಹ್ಯಗಳಲ್ಲಿರುವ ಅರ್ಧ ಸಾಹಿತ್ಯಿಕ ಲಕ್ಷಣಕ್ಕೆ ಪ್ರಖ್ಯಾತ ರಾಜರ ಹೆಸರಿನ ಜೊತೆಗೆ ಸೇರಿಕೊಂಡಿರುವ ಐತಿಹ್ಯಗಳು ನಿದರ್ಶನವಾಗುತ್ತವೆ. ಸೈನ್ಯ, ವೀರರು, ಮನೆತನದ ಬಿರುದುಗಳು, ಲಾಂಛನಗಳು, ಧ್ವಜಗಳು ಮೊದಲಾದ ಯುದ್ಧವಿಷಯಿಕ ಕಥೆಗಳೂ ಕೆಲಮಟ್ಟಿಗೆ ಐತಿಹಾಸಿಕ ಐತಿಹ್ಯಗಳಿಗೆ ಸಂಬಂಧಪಟ್ಟಿವೆ. ಇವುಗಳ ಹಿಂದಿನ ಸತ್ಯಾಂಶಗಳನ್ನು ತಿಳಿಯಬಯಸುವ ಸಂಶೋಧಕರಿಗೆ ಸ್ವಲ್ಪವಾದರೂ ಇವುಗಳಿಂದ ವಿವರಣೆ ದೊರೆಯಬಹುದು, ಅಷ್ಟೆ ವಿನಾ ಇವೆಲ್ಲ ಪೂರ್ಣ ನಡೆದ ಘಟನೆಗಳಲ್ಲ. ಸಾರ್ವತ್ರಿಕ ಆಧಾರದ ಮೇಲೆ ನಿಂತಿರುವ ಐತಿಹ್ಯಗಳಲ್ಲಿ ನಿಕ್ಷೇಪದ ಕಥೆಗಳು ಮತ್ತು ಗಡೀಪಾರಿಗೆ ಸಂಬಂಧಿಸಿದ ಕಥೆಗಳು ಮುಖ್ಯವೆನಿಸಿವೆ. ಪ್ರತಿಮೆಯ ಐತಿಹ್ಯಗಳನ್ನೂ ಇಲ್ಲೇ ಹೇಳಬೇಕು.

ಸ್ಥಳೀಯ ಐತಿಹ್ಯಗಳಲ್ಲಿ ಅತ್ಯಂತ ದೊಡ್ಡ ಗುಂಪೆಂದರೆ ಜನಪದ ನಿರುಕ್ತಿಗೆ ಸಂಬಂಧಿಸಿದವು. ಸ್ಥಳದ ಹೆಸರೊಂದಕ್ಕೆ ನಿಜವಾದ ನಿಷ್ಪತ್ತಿ ತಿಳಿಯದಿದ್ದಾಗ, ತಪ್ಪು ವ್ಯಾಖ್ಯಾನ ಮಾಡುವುದೇ ಇದು. ಈ ತಪ್ಪು ನಿಷ್ಪತ್ತಿ ಅಪರಿಚಿತ ಹೆಸರಿಗೆ ವಿವರಣೆ ಕೊಡಲು ಕಾರ್ಯಕಾರಣ ಕಥೆಯೊಂದನ್ನು ಸೃಜಿಸುತ್ತದೆ. ಉದಾಹರಣೆಗೆ, ಬೆಂದಕಾಳೂರು ಎಂಬುದರಿಂದಲೇ ಬೆಂಗಳೂರು ಎಂಬ ಹೆಸರು ಬಂತೆಂದು ಹೇಳುವ, ಕೆಂಪೇಗೌಡನಿಗೆ ಸಂಬಂಧಿಸಿದ ಐತಿಹ್ಯಗಳು.

ಸ್ಥಳೀಯ ಐತಿಹ್ಯಕ್ಕೆ ತುಂಬ ಸಂಬಂಧವಿರುವ ಮತ್ತೊಂದು ಭಾಗ ವಿವರಣಾತ್ಮಕ ಐತಿಹ್ಯ. ಒಂದಲ್ಲ ಒಂದು ರೀತಿಯಲ್ಲಿ ಎಲ್ಲ ಸ್ಥಳೀಯ ಐತಿಹ್ಯಗಳಲ್ಲಿಯೂ ಈ ಕಾರ್ಯಕಾರಣ ಅಂಶ ಇರುವುದಾದರೂ ಇದರಲ್ಲಿ ಅದೇ ಪ್ರಧಾನ. ಪ್ರಾಣಿಗಳ, ಸಸ್ಯಗಳ, ನಕ್ಷತ್ರಗಳ ಮಾನವಕುಲದ ಮೂಲ ಮತ್ತು ವೈಲಕ್ಷಣ್ಯಗಳನ್ನು ವಿವರಿಸುವುದಕ್ಕಾಗಿ ಹುಟ್ಟಿಕೊಂಡವು ಇವು. ಕ್ರಮೇಣ ಈ ವಿವರಣೆಗಳೇ ಕಥೆಗಳ ರೂಪವನ್ನು ತಾಳಿರಬಹುದು. ಅಥವಾ ಕಥೆಯೊಂದಕ್ಕೆ ಸೇರಿಕೊಂಡಿರಲೂಬಹುದು. ಅಂತೂ ಯಾವುದಾದರೂ ವಿಶೇಷ ಲಕ್ಷಣಕ್ಕೆ ವಿವರಣೆ ನೀಡುವುದು ಇವುಗಳ ಕೆಲಸ.

ಎಲ್ಲೆಲ್ಲಿ ಒಂಟಿಯಾದ ಬಂಡೆಗಳು ಬಿದ್ದಿರುತ್ತವೆಯೋ ಅಲ್ಲೆಲ್ಲ ಅವನ್ನು ಬೃಹದ್ದೇಹಿಯೊಬ್ಬನು ಯಾವುದಾದರೂ ಉದ್ದೇಶಕ್ಕೆ ತೆಗೆದುಕೊಂಡು ಹೋಗುತ್ತಿದ್ದಾಗ ಬಿದ್ದವೆಂದು ಹೇಳುತ್ತಾರೆ. ಸಾಲಿಗ್ರಾಮದ ಸಮೀಪದಲ್ಲಿ ಒಂದು ಬಂಡೆಯಿದೆ. ಇದು ಹಿಂದೆ ರಾಮಚಂದ್ರ ಸಮುದ್ರಕ್ಕೆ ಸೇತುವೆ ಕಟ್ಟಿದ ಸಂದರ್ಭದಲ್ಲಿ, ಆಂಜನೇಯನ ಕೈಯಿಂದ ಜಾರಿ ಬಿದ್ದಿತೆಂದೂ ಇವತ್ತಿಗೂ ಜನ ನಂಬಿಕೊಂಡಿದ್ದಾರೆ. ಆ ಕಲ್ಲು ಭೂಮಿಯ ಮೇಲೆ ಕುಳಿತಿಲ್ಲವೆಂದೂ ಮಧ್ಯೆ ತೆಳುವಾದ ಬಟ್ಟೆಯೊಂದನ್ನು ತೂರಿಸಬಹುದೆಂದೂ ಹೇಳುತ್ತಾರೆ. ಇದಕ್ಕೆ ಆಂಜನೇಯ ಕಲ್ಲು ಎಂದೇ ಹೆಸರಿದೆ. ಇದಲ್ಲದೆ ಸೀತೆ ಸ್ನಾನ ಮಾಡಿದಳೆಂದು ಹೇಳುವ, ಶ್ರೀರಾಮನ ಹೆಜ್ಜೆ ಗುರುತುಗಳೆಂದು ತೋರಿಸುವ ಜಾಗಗಳು ನಾಡಿನ ಬೇರೆ ಬೇರೆ ಕಡೆಗಳಲ್ಲಿ ಹರಡಿಕೊಂಡಿವೆ. ಇವುಗಳಲ್ಲದೆ ಸ್ಮಾರಕ ಐತಿಹ್ಯಗಳು, ಮತಾನುಚರಣೆಯ ಐತಿಹ್ಯಗಳು, ಮೂಢಾಚರಣೆಯ ಐತಿಹ್ಯಗಳು, ಸ್ವಪ್ನಾನುಭವದ ಐತಿಹ್ಯಗಳು—ಇತ್ಯಾದಿಯಾಗಿ ಇನ್ನೂ ಹಲವಾರು ಪ್ರಕಾರಗಳು ಸ್ಥಳೀಯ ಐತಿಹ್ಯಗಳಲ್ಲಿ ಕಾಣಿಸಿಕೊಳ್ಳುತ್ತವೆ.

ಸ್ಥಳೀಯ ಐತಿಹ್ಯಗಳಲ್ಲಿನ ಕೆಲವು ವರ್ಗಗಳಿಗೆ ಖಂಡಿತವಾಗಿಯೂ ಮೂಲವನ್ನು ಹೇಳಲು ಸಾಧ್ಯವಿದೆ. ಯಾವುದೇ ಐತಿಹ್ಯ—ಅದು ಏನೇ ಆಗಿರಲಿ—ಮೂಲತಃ ಅದು ಚಾರಿತ್ರಿಕವಾದುದೆಂಬುದನ್ನು ಮರೆಯುವಂತಿಲ್ಲ. ಆದರೆ ಜನತೆಯ ಮೇಲಿನ ಧಾರ್ಮಿಕ ಗ್ರಂಥಗಳ ಪ್ರಭಾವದಿಂದಾಗಿ, ಅಲ್ಲಿನ ಎಷ್ಟೋ ಕಥೆಗಳು ಐತಿಹ್ಯಗಳಾಗಿ ಚಾಲ್ತಿಯಲ್ಲಿರುವುದನ್ನೂ ದೂರೀಕರಿಸುವ ಹಾಗಿಲ್ಲ. ಯೂರೋಪಿನ ಎಷ್ಟೋ ಐತಿಹ್ಯ ಕಥೆಗಳು ಬೈಬಲಿನ ಯಥಾವತ್ತಾದ ಪ್ರತಿಗಳಾಗಿವೆ. ಅಂಥ ಜನಪ್ರಿಯ ಕಥನಗಳ ಎಲ್ಲ ವರ್ಗಗಳಿಗಿಂತಲೂ ಸ್ಥಳೀಯ ಐತಿಹ್ಯ ತನ್ನ ವಿಶೇಷ ಅವಶೇಷಗಳಿಂದಾಗಿ ಮಾನವಶಾಸ್ತ್ರೀಯ ಪಂಥದ ವಾದಗಳನ್ನು ಸಮರ್ಥಿಸುತ್ತದೆ ಎಂಬುದನ್ನು ಒಪ್ಪಬಹುದು.

ಪ್ರಸಾರದ ದೃಷ್ಟಿಯಿಂದ ಅತ್ಯಂತ ಮಹತ್ತ್ವದ್ದೆಂದರೆ ಎರಡನೆಯ ವರ್ಗದ ವಲಸೆಯ ಐತಿಹ್ಯ. ಯಾವುದೋ ಒಂದು ಸ್ಥಳದಲ್ಲಿ ಹುಟ್ಟಿ ಅನಂತರ ವಿಶ್ವವ್ಯಾಪಕತೆಯನ್ನು ಪಡೆದುಕೊಂಡದ್ದು ಇದು. ವಲಸೆಯ ಐತಿಹ್ಯ ಕೆಲಮಟ್ಟಿಗೆ ದೀರ್ಘವಿರುವ ಆದರೆ ಕಿನ್ನರಕಥೆಗಿಂತ ಚಿಕ್ಕದಾದ ಗದ್ಯಕಥನ. ಪಾಠಾಂತರಗಳು ಪರಿಮಿತ ಸಂಖ್ಯೆಯವು, ಆಶಯಗಳು ಬಹಳ ಸಂಖ್ಯೆಯಲ್ಲಿದ್ದರೂ ಸ್ಥಿರವಾದವು, ಮತ್ತು ವಲಸೆಯಿಂದ ಅವು ವ್ಯತ್ಯಾಸವಾಗವು. ಆದ್ದರಿಂದ ಬಹುಮೂಲ ಸಿದ್ಧಾಂತ ಇಲ್ಲಿ ಅನ್ವಯವಾಗುವುದಿಲ್ಲ. ಈ ಐತಿಹ್ಯ ಮೂಲತಃ ಸ್ಥಳೀಕೃತ ಕಥೆಯಾದುದಾದರೂ ವಿಸ್ತಾರವಾಗಿ ಹರಡಿಕೊಂಡಿರುವುದರಿಂದ ಕೆಲವು ಸಮಯದಲ್ಲಿ ಮೂಲವನ್ನು ಪತ್ತೆಹಚ್ಚಲು ಕಷ್ಟವಾಗಬಹುದು. ಆದರೆ ಉಳಿದವುಗಳಿಗಿಂತ ಇಲ್ಲಿ ಅನ್ವೇಷಣೆ ಸುಲಭ. ಇದರ ಹರಡುವಿಕೆ ದುರ್ಗಾಭಾಗವತರು ಹೇಳುವಂತೆ ಸ್ಥಳೀಯ ಐತಿಹ್ಯಕ್ಕಿಂತ ವಿಸ್ತಾರವಾದುದು, ಕಿನ್ನರಕಥೆಗಿಂತ ಪರಿಮಿತವಾದುದು. ಇದರ ಕ್ಷಿಪ್ರಗತಿಯ ಪ್ರಸಾರಕ್ಕೆ ಎಲ್ಲ ಕಡೆಯೂ ಕಾಣಬರುವ ಮೂಲಭೂತ ಭಾವನೆ ಕಾರಣವೆನ್ನಬಹುದು. ವಲಸೆಯ ಐತಿಹ್ಯಕ್ಕೆ ಅತ್ಯುತ್ತಮ ಉದಾಹರಣೆ ವಿಕ್ಟಿಮ್ಸ್ ಲಾಸ್ಟ್ ವರ್ಡ್ಸ್ ಎಂಬ ಕಥೆ. ಬೌದ್ಧ ಧರ್ಮದ ಮೂಲಭೂತ ತತ್ತ್ವವನ್ನು ಆಧರಿಸಿರುವ ಇದು ಭಾರತದಲ್ಲಿ ಹುಟ್ಟಿ ಅನಂತರ ಇತರ ಕಡೆಗೆ ಹರಡಿರಬೇಕೆಂದು ವಿದ್ವಾಂಸರ ಅಭಿಪ್ರಾಯ. ಚಂದ್ರಹಾಸನ ಕಥೆ ಮತ್ತೊಂದು ನಿದರ್ಶನ.

ವಲಸೆಯ ಐತಿಹ್ಯ ದೇಶ, ಮತಗಳ ತಾರತಮ್ಯವಿಲ್ಲದ ವಿಸ್ತೃತ ಆಧಾರದ, ಸಾಮಾನ್ಯ ಮಾನವಮೂಲವಸ್ತುವನ್ನು ಒಳಗೊಂಡಿರುವುದಿಲ್ಲ. ಅವು ಒಂದು ಕಡೆ ಹುಟ್ಟುತ್ತಲೇ ಅಲ್ಲಿನ ಸ್ಥಿತಿ ಅನುಷ್ಠಾನ ನಂಬಿಕೆ ಹಾಗೂ ಸಾಂಪ್ರ

ದಾಯಿಕ ಪದ್ಧತಿಗಳನ್ನು ಮೈಗೂಡಿಸಿಕೊಳ್ಳುತ್ತವೆ. ಬೇರೆ ಕಡೆಗೆ ವಲಸೆ ಹೋದಾಗ ಅಲ್ಲಿನ ಪರಿಸ್ಥಿತಿಗೆ ಅನಾಮತ್ತಾಗಿ ಒಪ್ಪಿಗೆಯಾಗಬಹುದು. ಅಥವಾ ಅಲ್ಲಿನ ಧಾರ್ಮಿಕ ಪದ್ಧತಿಗಳಲ್ಲಿ ವಿಲೀನವಾಗಬಹುದು. ಕೆಲವು ವೇಳೆ ಹೆಸರಿನ ಆಕಸ್ಮಿಕ ಉಲ್ಲೇಖ ತನ್ನ ಎಲ್ಲ ಪರ್ಯಾಯಗಳ ಮೂಲಕ ಪಟ್ಟು ಹಿಡಿದು ಅಂಟಿಕೊಂಡಿದ್ದು ಬೆಲೆಯುಳ್ಳ ಸೂಚನೆಯನ್ನು ಒದಗಿಸುತ್ತದೆ. ಕಥೆಗಳನ್ನು ಮತ್ತೆ ಮತ್ತೆ ಹೇಳುವಾಗ ಕಥಾವಕ್ತೃಗಳ ಔದಾಸೀನ್ಯದಿಂದಾಗಿ ಕಥೆಗಳು ಆಗಾಗ್ಗೆ ಬದಲಾಗುವುದುಂಟು.

ಇಲ್ಲಿನ ಪ್ರಮುಖ ಸಮಸ್ಯೆಯೊಂದೆಂದರೆ, ಈ ಕಥೆಗಳು ಕೆಲವು ದೇಶಗಳಿಂದ ಮತ್ತೆ ಕೆಲವಕ್ಕೆ ಏಕೆ ವಲಸೆ ಹೋಗುತ್ತವೆ ಎಂಬುದು. ಇದಕ್ಕೆ ಬೆನ್ಫೆ ಭಾರತೀಯ–ಮೂಲವಾದದ ಮೂಲಕ ಕೆಲಮಟ್ಟಿಗೆ ಉತ್ತರ ಕೊಟ್ಟಿದ್ದಾನೆ. ಅವನ ಅಭಿಪ್ರಾಯದಲ್ಲಿ ಭಾರತೀಯ ಕಥೆಗಳು ಇತರ ಕಡೆಗೆ ಹರಡಿಕೊಳ್ಳುವುದಕ್ಕೆ ಬೌದ್ಧಧರ್ಮ ಪ್ರಚಾರಕರು ಕಾರಣವಾಗಿರಬೇಕೆಂಬುದು. ಆದರೆ ಈತ ಆಧರಿಸಿದುದು ಬರವಣಿಗೆಯ ರೂಪದ ಕಥೆಗಳನ್ನು—ಎಂಬುದನ್ನು ಮರೆಯಬಾರದು. ಆದ್ದರಿಂದ ವಾಕ್ ಸಂಪ್ರದಾಯದ ಕಥೆಗಳಿಗೆಲ್ಲ ಪ್ರಚಾರವೇ ಕಾರಣವಾಯಿತೆಂದು ಹೇಳಲಾಗುವುದಿಲ್ಲ. ಕಥೆಗಳ ಪ್ರಸಾರಕ್ಕೆ ಧಾರ್ಮಿಕ ಚಳವಳಿ ಒಂದು ಕಾರಣವಾಗಿರುವಂತೆ, ಇದಕ್ಕಿಂತಲೂ ಆಳವಾದ ಮತ್ತೊಂದು ಕಾರಣ ಇರಬೇಕು. ಅಂತು ಸಾಕಷ್ಟು ಸಂಖ್ಯೆಯ ಐತಿಹ್ಯಗಳ ಪ್ರಸಾರಕ್ಕೆ ಪ್ರತ್ಯೇಕ ಜನವರ್ಗವೊಂದು ಕಾರಣವಾಗಿದ್ದು ಇವರು ಧರ್ಮ ಪ್ರಚಾರಕರೇ ಆಗಿರಬೇಕೆಂದು ತೋರುತ್ತದೆ.

ಹೀಗೆ ಐತಿಹ್ಯಗಳನ್ನು ಸ್ಥಳೀಯ ಮತ್ತು ವಲಸೆಯ ಐತಿಹ್ಯಗಳೆಂದು ಎರಡು ವಿಧವಾಗಿ ವಿವೇಚಿಸಬಹುದು. ಇವುಗಳಿಗೆ ಪರಸ್ಪರ ವ್ಯತ್ಯಾಸವಿರುವಂತೆ ಇವುಗಳಲ್ಲಿ ಆಂತರಿಕ ಸಂಬಂಧವೂ ಇದೆ. ಸ್ಥಳೀಯ ಐತಿಹ್ಯ, ತಾನು ಸಂಯೋಜಿಸಿರುವ ಆಶಯಗಳಲ್ಲಿ ಪರಿಮಿತಿ ಪ್ರದೇಶದಲ್ಲಿ ವಲಸೆಬಂದಂತೆ ಕಾಣಬಂದರೂ ಒಂದು ಕಡೆ ನೆಲೆಯಾಗಿ ನಿಂತುಕೊಂಡದ್ದು, ವಲಸೆಯ ಐತಿಹ್ಯ ವಿಸ್ತಾರವಾದ ಭೂಪ್ರದೇಶದಲ್ಲಿ ಸರ್ವ ಕಡೆಗೂ ವಲಸೆ ಹೋದದ್ದೇ ಆಗಿದೆ. ಒಂದು ಬಹುಮೂಲಕ್ಕೆ ಸಂಬಂಧಿಸಿದುದು, ಇನ್ನೊಂದರಲ್ಲಿ ಅದನ್ನು ಹೇಳಲಾಗುವುದಿಲ್ಲ. ಹೀಗೆ ಇವೆರಡಕ್ಕೂ ಇರುವ ವ್ಯತ್ಯಾಸವನ್ನು ತೋರಿಸುವುದಾದರೂ ವಲಸೆಯ ಐತಿಹ್ಯ ಸ್ಥಳೀಕೃತವಾಗಿರುವುದಿಲ್ಲವೆಂದಾಗಲಿ, ವ್ಯಕ್ತಿಗಳಿಗೆ ಸಂಬಂಧಿಸಿರುವುದಿಲ್ಲವೆಂದಾಗಲಿ ಹೇಳಲಾಗದು. ಅಂತು ಇವುಗಳ ನಡುವಣ ಗಡಿರೇಖೆಯನ್ನು ನಿರ್ಮಿಸುವುದು ಕಷ್ಟಸಾಧ್ಯವಾದ ಕೆಲಸ.

ಐತಿಹ್ಯಕ್ಕೆ ಸಂಬಂಧಿಸಿದ ಇನ್ನೆರಡು ವಿಷಯಗಳನ್ನು ಇಲ್ಲಿ ಪ್ರಸ್ತಾಪಿಸಬೇಕು. ಮೊದಲನೆಯದಾಗಿ ಐತಿಹ್ಯಕ್ಕೂ ಸಾಹಿತ್ಯಕ್ಕೂ ಇರುವ ಸಂಬಂಧ. ಸಾಹಿತ್ಯದಲ್ಲಿ ಐತಿಹ್ಯದ ಪಾತ್ರ ಮಹತ್ತ್ವಪೂರ್ಣವಾದುದು. ಚಾರಿತ್ರಿಕ ಆಭಾಸದ ಸಾಹಿತ್ಯ ವಿಶೇಷವಾಗಿ ಐತಿಹ್ಯದ ಮೂಲವಸ್ತುವನ್ನು ಅವಲಂಬಿಸಿರುತ್ತದೆ. ಇತಿಹಾಸ ದಾಖಲೆಗಳಿಗಿಂತ ಸಂಪ್ರದಾಯದ ಮೇಲೆ ಅವಲಂಬಿತವಾದಾಗ ಚರಿತ್ರೆಗೂ ಐತಿಹ್ಯಕ್ಕೂ ಇರುವ ವ್ಯತ್ಯಾಸ ಅಸ್ಪಷ್ಟವಾಗಿದೆ. ಕುಮಾರರಾಮನ ಬಗೆಗಿನ ಕಥೆಗಳನ್ನೇ ಇಲ್ಲಿ ಉಲ್ಲೇಖಿಸಬಹುದು. ಇವನ ವೀರ್ಯವತ್ತಾದ ಜೀವನವನ್ನೂ ಪರನಾರೀಸೋದರತ್ವವನ್ನೂ ಪ್ರಕಾಶಗೊಳಿಸಲು ಇಂಥ ಕಥೆಗಳು ಆಮೇಲೆ ಹುಟ್ಟಿಕೊಂಡಿರಬೇಕೆಂದು ತೋರುತ್ತದೆ. ಆದರೆ ಬಹಳ ವರ್ಷಗಳ ತರುವಾಯ ಬಂದ ನಂಜುಂಡ ಕವಿಗೆ ಚಾರಿತ್ರಿಕ ಹಾಗೂ ಚಾರಿತ್ರಿಕ ಆಭಾಸದ ಸಂಗತಿಗಳೆಲ್ಲ ಕಾವ್ಯಕ್ಕೆ ವಸ್ತುವಾದುವು; ಮಾತ್ರವಲ್ಲ, ಐತಿಹ್ಯವೆನಿಸಿರುವ ಕಥೆಗಳೇ ಕಾವ್ಯದಲ್ಲಿ ಮನಸೆಳೆಯುವ ಪ್ರಸಂಗಗಳಾಗಿವೆ. ಅಲ್ಲದೆ, ಇಡೀ ರಾಮಾಯಣ ಭಾರತಗಳೇ ಒಂದು ಕಾಲಕ್ಕೆ ಚಾರಿತ್ರಿಕವಾಗಿದ್ದು, ಕ್ರಮೇಣ ಐತಿಹ್ಯದ ಹಲವು ಕಥೆಗಳಿಂದ ಮುಂದೆ ಬೆಳವಣಿಗೆಯಾಗಿರಬೇಕೆಂದು ತೋರುತ್ತದೆ. ಸಾಹಿತ್ಯಕ್ಕೆ ಐತಿಹ್ಯ ಹೇಗೆ ಮಹತ್ತ್ವದ ವಸ್ತುವಾಗುತ್ತದೆ ಎಂಬುದನ್ನಿಲ್ಲಿ ಕಾಣಬಹುದು.

ಪರಿಶೀಲಿಸಬೇಕಾದ ಎರಡನೆಯ ವಿಚಾರವೆಂದರೆ, ಐತಿಹ್ಯಕ್ಕೂ ಪುರಾಣಕ್ಕೂ ಇರುವ ವ್ಯತ್ಯಾಸ ಹಾಗೂ ಸಂಬಂಧಗಳು. ಐತಿಹ್ಯದ ಮೂಲ ಸಂಪ್ರದಾಯದ ಸಂಬಂಧವನ್ನು ಹೊಂದಿದುದಾದರೂ ಅಲ್ಲಿಯ ವೀರನ ದೊಡ್ಡತನವನ್ನು ಮತ್ತಷ್ಟು ಅತಿಶಯಗೊಳಿಸುವ ಸಲುವಾಗಿ ಪೌರಾಣಿಕ ಲಕ್ಷಣಗಳನ್ನು ಆರೋಪಿಸುವುದು ಸಾಮಾನ್ಯ. ಈ ರೀತಿಯಾಗಿಯೇ ರಾಮ, ಕೃಷ್ಣ ಮೊದಲಾದವರು ಪುರಾಣ ಕಥೆಗಳ ವೀರರಾಗಿ ಮಾರ್ಪಾಡಾಗಿರುವುದು. ಇದೇ ಪ್ರವೃತ್ತಿಯನ್ನು ಜನಪದ ಐತಿಹ್ಯಗಳಲ್ಲಿಯೂ ಕಾಣುತ್ತೇವೆ. ಬಹುತೇಕ ಸಾಂಸ್ಕೃತಿಕ ವೀರರು ಪೌರಾಣಿಕವೀರರಾದುದು ಕೂಡ ಇದೇ ರೀತಿಯಲ್ಲಿ. ಆದ್ದರಿಂದಲೇ ಐತಿಹ್ಯಕ್ಕೂ ಪುರಾಣಕ್ಕೂ ಇರುವ ಗಡಿರೇಖೆಯನ್ನು ಗುರುತಿಸುವುದು ಸುಲಭವಲ್ಲ.

ಅಂತು ಐತಿಹ್ಯ ಮತ್ತು ಪುರಾಣಗಳಿಗಿರುವ ಸಂಬಂಧ ತುಂಬ ಸಮಸ್ಯಾತ್ಮಕವಾದುದು. ಪುರಾಣಕಥೆಯ ಪ್ರಧಾನ ಪಾತ್ರಗಳು ದೇವತೆಗಳು ಮತ್ತು ಪ್ರಕೃತಿ ಶಕ್ತಿಗಳು. ಉದ್ದೇಶವಿವರಣೆ ಐತಿಹ್ಯಗಳು ಪ್ರಾಚೀನ ವೀರರನ್ನು ಕುರಿತವು. ಈ ವೀರರ ಕಥೆಗಳು ಆಗಾಗ್ಗೆ ಪೌರಾಣಿಕ ಹಾಗೂ ಭ್ರಾಮಕ ಅಂಶಗಳನ್ನು ಒಳಗೊಂಡಿರುತ್ತವೆ ; ಸತ್ಯಾಂಶವೆಲ್ಲಿ ಕೊನೆಗೊಳ್ಳುತ್ತದೆ ಮತ್ತು ಕಲ್ಪನೆ ಎಲ್ಲಿ ಪ್ರಾರಂಭವಾಗುತ್ತದೆ ಎಂಬುದನ್ನು ತೀರ್ಮಾನಿಸಲು ಕೆಲವು ಸಾರಿ ಅಸಾಧ್ಯವಾಗಬಹುದು. ಆದರೆ ಐತಿಹ್ಯಗಳು ಸಾಕಷ್ಟು ಪ್ರಮಾಣದ ವಾಸ್ತವಿಕ ಅಥವಾ ಚಾರಿತ್ರಿಕ ಸತ್ಯದ ಆಧಾರಗಳ ಮೇಲೆ ರೂಪಿತವಾಗಿರುತ್ತವೆ ಎಂಬುದನ್ನು ಮರೆಯಬಾರದು. (ಆರ್.ಜಿ.)

**ಐನಾರ್ಸನ್, ಇಂಡ್ರಿಡಿ :** 1851–1939. ಐಸ್ಲೆಂಡಿನ ಸಂಸತ್ ಸದಸ್ಯ, ಬ್ಯಾಂಕೊಂದರ ಹಾಗೂ ಹಣಕಾಸು ಇಲಾಖೆಯ ನಿರ್ದೇಶಕ, ಅಲ್ಲದೆ ನಾಟಕಕಾರ, ಭಾಷಾಂತರಕಾರ. ಹೀಗೆ ಶೋಭಿಸಿದ ಈತನದು ಬಹುಮುಖ ಪ್ರತಿಭೆ. ಐಸ್ಲೆಂಡಿನ ರಾಷ್ಟ್ರೀಯ ರಂಗಭೂಮಿಯನ್ನು ಸ್ಥಾಪಿಸಿ, ನಡೆಸಿದ ಕೀರ್ತಿಯೂ ಈತನದೇ. ಷೇಕ್ಸ್‌ಪಿಯರ್, ಇಬ್ಸೆನ್, ಜಾರ್ನ್‌ಸನ್ ಇವರ ನಾಟಕಗಳನ್ನು ಈತ ಭಾಷಾಂತರಿಸಿದ್ದಾನೆ.

1872ರಲ್ಲಿ ನೀಯಾರ್‌ಸ್ನಾಟನ್ (ಹೊಸ ವರ್ಷದ ಹೊಸ್ತಿಲಲ್ಲಿ) ಎಂಬ ಮೊದಲ ಪ್ರೇಮನಾಟಕವನ್ನು ಬರೆದು ಖ್ಯಾತಿ ಗಳಿಸಿದ. ಬ್ರಾಂಡಿಸ್, ಇಬ್ಸೆನ್, ಜಾರ್ನ್‌ಸನ್ ಈತನ ಮೇಲೆ ಪ್ರಭಾವ ಬೀರಿದರು. ಸಾಮಾಜಿಕ ನಾಟಕ ಸ್ಕೈಪಿಡ್ ಸೆಕ್ಯೂರ್‌ನಲ್ಲಿ (1902) ನೈಜಚಿತ್ರಣವನ್ನು ತರಲು ಯತ್ನಿಸಿದ. ಆದರೂ ಸಾಹಸಪೂರ್ಣ ಪ್ರವೃತ್ತಿಯ ಕಡೆಗೆ ತನಗಿರುವ ಒಲವನ್ನು ಬಿಡಲಾಗದೆ ಚಾರಿತ್ರಿಕ ನಾಟಕಗಳ ವಸ್ತುವಿಗಾಗಿ ಜಾನಪದ ಕಥೆಗಳು, ವಂಶಚರಿತ್ರೆಗಳನ್ನು ಶೋಧಿಸಿದ. ಡ್ಯಾನ್ಸಿನ್ ಇ ಹ್ರುನಿ (ಹ್ರುನಿ ಎಂಬಲ್ಲಿ ನೃತ್ಯ) ಎಂಬ ಇವನ ಸರಳರಗಳೆಯ ನಾಟಕ ತುಂಬ ಯಶಸ್ವಿಯಾಯಿತು. (ಟಿ.ವಿ.ಎಸ್.)

**ಐನೂ :** ಜಪಾನಿನ ಒಂದು ಹಳೆಯ ಜನಾಂಗ. ಬಹುಶಃ ಹಿಂದೆ ಜಪಾನಿನ ಅನೇಕ ದ್ವೀಪಗಳಲ್ಲಿ ಹರಡಿದ್ದಿರಬಹುದಾದರೂ ಈಗ ಇವರು ಹಾಕ್ಕೈಡೋ, ಸ್ಯಾಕಲೀನ್, ಕೂರಿಲ್ ದ್ವೀಪಗಳಿಗೆ ಮಾತ್ರ ಸೀಮಿತರಾಗಿದ್ದಾರೆ. ಈಗ ಇವರ ಸಂಖ್ಯೆ ದಿನೇ ದಿನೇ ಕಡಿಮೆಯಾಗುತ್ತಿದೆ. ನೆರೆಹೊರೆಯವರೊಂದಿಗೆ ವಿವಾಹಸಂಬಂಧ ಬೆಳೆಸದಿದ್ದರೆ ಇವರ ವಂಶವೇ ನಶಿಸಿ ಹೋಗಬಹುದು. ಇವರು ಒಂದಾನೊಂದು ಕಾಲದಲ್ಲಿ ಉತ್ತರ ಏಷ್ಯವನ್ನೆಲ್ಲ ಆವರಿಸಿಕೊಂಡಿದ್ದ ಕಾಕಸಾಯ್ಡರ ವಂಶಜರಿರಬಹುದು. ಆಸ್ಟ್ರೇಲಿಯ–ನ್ಯೂಜಿಲೆಂಡುಗಳ ಆಸ್ಟ್ರಲಾಯ್ಡರಿಗೂ ಇವರಿಗೂ ಸಾಮ್ಯವುಂಟೆಂದು ಕೆಲವು ವಿದ್ವಾಂಸರ ಮತ. ಐನೂಗಳು ಕುಳ್ಳರು. ಇವರ ಮೈಮೇಲೆ ದಟ್ಟ ಕೂದಲು. ಇದುವರೆಗೆ ತಿಳಿದಿರುವ ಮಟ್ಟಿಗೆ ಬೇರೆ ಯಾವ ಮಾನವಗುಂಪಿಗೂ ಇಷ್ಟೊಂದು ದಟ್ಟ ಕೂದಲಿಲ್ಲ. ಇವರ ಅಕ್ಕಪಕ್ಕಗಳಲ್ಲಿರುವ ಮಂಗೋಲಾಯ್ಡರಿಗೆ ಮೈಮೇಲೆ ಕೂದಲು ಬಲು ಕಡಿಮೆ. ಐನೂಗಳ ಭಾಷೆಗೂ ಇತರ ಭಾಷೆಗಳಿಗೂ ಯಾವ ಹೋಲಿಕೆಯೂ ಕಾಣಿಸುವುದಿಲ್ಲ. ಇವರ ಧರ್ಮ ಯೂರೋಪ್ ಉತ್ತರ ಏಷ್ಯಗಳ ಪ್ರಾಚೀನ ಧರ್ಮಗಳೊಂದಿಗೆ ಹೋಲುವುದೆಂದು ಹೇಳಲಾಗಿದೆ. ಅನ್ನಾಮಿನ ಖಾ ಜನರ ರಕ್ತಗುಂಪು ಇವರದು. ಕಡಲು ಬಳಿಯ ಪುಟ್ಟ ಹಳ್ಳಿಗಳಲ್ಲಿ ವಾಸಿಸುವ ಈ ಜನರ ಕಸಬು ಬೇಟೆ, ಮೀನುಗಾರಿಕೆ ಮುಂತಾದವು. ಈಚೆಗೆ ತೋಟಗಾರಿಕೆಯಲ್ಲೂ ಇವರು ನಿರತರಾಗಿದ್ದಾರೆ. ಗಂಡಸರು ಗಡ್ಡಧಾರಿಗಳು. ಹೆಂಗಸರು ಬಾಯ ಸುತ್ತ ಮೀಸೆಯೋಪಾದಿಯಲ್ಲಿ ಹಚ್ಚೆ ಹೊಯ್ಯಿಸಿಕೊಳ್ಳುತ್ತಾರೆ. ಮರದ ತೊಗಟೆ ಅಥವಾ ಪ್ರಾಣಿಯ ತೊಗಲು ಇವರ ಬಟ್ಟೆ. ಇದರ ಮೇಲೆ ಜ್ಯಾಮಿತಿಯ ಚಿತ್ತಾರ. ಪ್ರಕೃತಿಯ ಆರಾಧನೆ, ಪಿತೃಪೂಜೆ, ಕರಡಿಯ ಬಲಿ—ಇವು ಇವರ ಕೆಲವು ಆಚಾರಗಳು. ಜಪಾನಿನ ಹೊಸ ಶಿಲಾಯುಗ ಸಂಸ್ಕೃತಿಯ ಜನರಿವರೆಂದು ಹೇಳಲು ಕೆಲವು ಆಧಾರಗಳಿವೆ. ಯುವ ಐನೂಗಳು ಜಪಾನೀ ಆಚಾರವಿಚಾರಗಳನ್ನು ತಮ್ಮ ಬಾಳಿನಲ್ಲಿ ಅಳವಡಿಸಿಕೊಳ್ಳುತ್ತಿದ್ದಾರೆ. (ಎಸ್.ಎಸ್.)

**ಐನೆ ಅಕ್ಬರಿ :** ಅಕ್ಬರನ ಆಸ್ಥಾನದಲ್ಲಿದ್ದ ಅಬುಲ್ ಫಜಲ್ (ನೋಡಿ) ಪರ್ಷಿಯನ್ ಭಾಷೆಯಲ್ಲಿ ಬರೆದ ಅಕ್ಬರ್‌ನಾಮಾ ಎಂಬ ಬೃಹದ್‌ಗ್ರಂಥದ ಐದು ಭಾಗಗಳಲ್ಲಿ ಮೂರನೆಯದು—ಅತ್ಯಂತ ಪ್ರಸಿದ್ಧವಾದದ್ದು. ಸ್ವತಂತ್ರ ಕೃತಿ ಎಂದೂ ಹೇಳಬಹುದು. ಅಕ್ಬರನ ಪ್ರೇರಣೆ, ಪ್ರೋತ್ಸಾಹ ಮತ್ತು ಆಜ್ಞೆಗನುಗುಣವಾಗಿ ಐದು ಬಾರಿ ಪರಿಷ್ಕಾರಗೊಂಡು ಈ ಕೃತಿ ಹೊರಬಂತು. ಅಬುಲ್ ಫಜಲ್ ಇತರ ಗ್ರಂಥಗಳನ್ನು ಬರೆದಿರುವನಾದರೂ ಆತನ ಹೆಸರನ್ನು ಚಿರಸ್ಥಾಯಿಯಾಗಿ ಮಾಡಿದ್ದು ಈ ಗ್ರಂಥವೇ. ಅಬುಲ್ ಫಜಲನೇ ಉಲ್ಲೇಖಿಸಿರುವಂತೆ ಆತ ಪುಸ್ತಕ ಬರೆಯಲು ಕಾರಣವೆಂದರೆ ಮಹಾನ್ ಸಮ್ರಾಟನೊಬ್ಬನ ಸ್ಮೃತಿಯನ್ನು ರಕ್ಷಿಸಿಡುವುದು ಮತ್ತು ಜಿಜ್ಞಾಸುಗಳಿಗೆ ಒಳ್ಳೆಯ ಮಾರ್ಗದರ್ಶನ ನೀಡುವುದು. ಮೊಗಲರ ಕಾಲದ ಇಸ್ಲಾಮೀ ಪ್ರಪಂಚದಲ್ಲಿ ಇದಕ್ಕೆ ಸಾಕಷ್ಟು ಮರ್ಯಾದೆ ದೊರಕಿತ್ತು. ಆದರೆ ವಾರೆನ್ ಹೇಸ್ಟಿಂಗ್ಸನ ಕಾಲದಲ್ಲಿ ಗ್ಲ್ಯಾಡ್‌ವಿನ್ ಇದರ ಭಾಗವೊಂದನ್ನು ಇಂಗ್ಲಿಷಿಗೆ ಅನುವಾದಿಸುವ ವರೆಗೆ ಐರೋಪ್ಯ ವಿದ್ವಾಂಸರ ಹಾಗೂ ಭಾರತೀಯರ

ಗಮನಿಸ ಇದರತ್ತ ಹರಿದಿರಲೇ ಇಲ್ಲ. ಅನಂತರ ಬ್ಲ್ಯಾಕ್‌ಮನ್ (1873) ಮತ್ತು ಜ್ಯಾರಟ್ (1891; 1894) ಇದನ್ನು ಸಂಪೂರ್ಣವಾಗಿ ಭಾಷಾಂತರಿಸಿದರು.

(ಎಸ್.ಎಂ.ಎಚ್.)

ಇದನ್ನು ಮುಗಿಸಲು ಅಬುಲ್ ಫಜ಼ಲನಿಗೆ ಏಳು ವರ್ಷಗಳು ಬೇಕಾದುವು. ಕೃತಿ ಸಂಪೂರ್ಣಗೊಂಡಿದ್ದು 1598ರಲ್ಲಿ. ಮೊದಲನೆಯ ಭಾಗದಲ್ಲಿ ಸಮ್ರಾಟನ ಪ್ರಶಸ್ತಿ, ಅರಮನೆಗಳು ಮತ್ತು ದರಬಾರುಗಳ ವಿವರಣೆ ಇದೆ. ಎರಡನೆಯ ಭಾಗದಲ್ಲಿ ರಾಜ್ಯ ನೌಕರರು ಮತ್ತು ಸೈನಿಕರೇ ಅಲ್ಲದೆ ವಿವಾಹ ಮತ್ತು ಶೈಕ್ಷಣಿಕ ನಿಯಮಗಳು, ವಿವಿಧ ಮನೋರಂಜನೆಯ ಸಾಧನಗಳು ಮತ್ತು ರಾಜದರ್ಬಾರಿನ ಪ್ರಮುಖ ಆಶ್ರಿತರಾದ ಸಾಹಿತ್ಯಕಾರರು, ಸಂಗೀತಜ್ಞರುಗಳು ಮುಂತಾದ ವಿವರಣೆ ಇದೆ. ಮೂರನೆಯ ಭಾಗದಲ್ಲಿ ನ್ಯಾಯ ಮತ್ತು ನಿರ್ವಾಹಕ ವಿಭಾಗಗಳ ಕಾನೂನುಗಳು, ಕೃಷಿಶಾಸನದ ವಿವರಗಳು ಮತ್ತು ಹನ್ನೆರಡು ಸುಬಾಗಳ ವಿವರಗಳುಂಟು. ಹಿಂದೂಗಳ ಸಾಮಾಜಿಕ ಸ್ಥಿತಿಯ ಮತ್ತು ಅವರ ಧರ್ಮ ದರ್ಶನ ಸಂಸ್ಕೃತಿಗಳ, ವಿದೇಶೀ ಆಕ್ರಮಣಕಾರರ, ಪ್ರಮುಖ ವಿದೇಶೀ ಯಾತ್ರಿಕರ ಮತ್ತು ಮುಸಲ್ಮಾನ್ ಸಂತರ ವರ್ಣನೆಗಳನ್ನು ನಾಲ್ಕನೆಯ ಭಾಗ ಒಳಗೊಂಡಿದೆ. ಅಕ್ಬರನ ಸುಭಾಷಿತಗಳಿಗೆ ಐದನೆಯ ಭಾಗ ಮೀಸಲು. ಈ ರೀತಿಯಾಗಿ ಸಮ್ರಾಟ, ಸಾಮ್ರಾಜ್ಯ ಮತ್ತು ಪ್ರಜೆಗಳ ಬಗ್ಗೆ ಅನೇಕ ವಿವರಗಳನ್ನು ಒಳಗೊಂಡಿರುವ ಈ ಗ್ರಂಥದಲ್ಲಿ ಯುದ್ಧ, ರಾಜಕೀಯ ಮುಂತಾದವು ತುಂಬಿದ್ದರೂ ಪ್ರಜೆಗಳಿಗೂ ಸಾಕಷ್ಟು ಪ್ರಾಧಾನ್ಯವುಂಟು. ಹೀಗಾಗಿ ಇದನ್ನು ಆಧುನಿಕ ಭಾರತದ ಮೊದಲನೆಯ ಗಜ಼ೆಟಿಯರ್ ಎಂದು ಹೇಳಬಹುದು. ಅಂದಿನ ಧಾರ್ಮಿಕ ಒತ್ತಡ ಮತ್ತು ಮತಾಂಧತೆಗಳನ್ನು ಮೀರಿ ನಿಂತು, ಹಿಂದೂ ಸಮಾಜ, ಧರ್ಮ ಮತ್ತು ದರ್ಶನಗಳನ್ನು ಪ್ರಗತಿಶೀಲವೂ ಉದಾರವೂ ಆದ ದೃಷ್ಟಿಯಲ್ಲಿ ವಿವರಿಸಿರುವುದರಿಂದ ಪುಸ್ತಕದ ಮೌಲ್ಯ ಹೆಚ್ಚಿದೆ.

ಗ್ರಂಥದಲ್ಲಿ ಬರುವ ಸಮ್ರಾಟನ ಪ್ರಶಸ್ತಿಗಳಲ್ಲಿ ಅತಿಶಯೋಕ್ತಿ ಇದೆಯೆಂದು ಕೆಲವು ವಿದ್ವಾಂಸರ ಅಭಿಪ್ರಾಯ. ಈ ಗ್ರಂಥವನ್ನು ಅಕ್ಬರನ ಕಾಲದ ರಾಜಕೀಯ ಆರ್ಥಿಕ ಹಾಗೂ ಸಾಮಾಜಿಕ ಜೀವನಗಳ ಕೋಶವೆನ್ನಬಹುದು. ಇತಿಹಾಸದಲ್ಲಿ ಅಕ್ಬರನ ಸ್ಥಾನವನ್ನು ನಿರ್ದೇಶಿಸುವಲ್ಲಿ ಇದರ ಪಾತ್ರ ಬಲು ಮುಖ್ಯ. *

**ಐನ್‌ಸ್ಟೈನ್, ಆಲ್ಬರ್ಟ್:** 1879–1955. ಸೈದ್ಧಾಂತಿಕ ಭೌತಶಾಸ್ತ್ರಜ್ಞ; ಭೌತಶಾಸ್ತ್ರದ ಮೂಲಭಾವನೆ ಮತ್ತು ತತ್ತ್ವಗಳನ್ನು ಅನೇಕ ರೀತಿಯಲ್ಲಿ ಮಾರ್ಪಡಿಸಿ ವಿಜ್ಞಾನಿಗಳ ವೈಚಾರಿಕ ಮನೋದೃಷ್ಟಿಯನ್ನೇ ಬದಲಾಯಿಸಿದ ಯುಗಪುರುಷ; ಸಾಪೇಕ್ಷ ಸಿದ್ಧಾಂತದ (ಥಿಯೊರಿ ಆಫ್ ರಿಲೆಟಿವಿಟಿ) ಮಂಡನಕಾರ; ಪರಮಾಣುಶಕ್ತಿಯ ರಹಸ್ಯವನ್ನು ಶ್ರುತಪಡಿಸಿದಾತ ; ಮಾನವಕಲ್ಯಾಣದಲ್ಲಿಯೂ ವಿಶ್ವಶಾಂತಿಯಲ್ಲಿಯೂ ಅಪಾರ ಆಸಕ್ತಿ ತಳೆದಿದ್ದ ಶಾಂತಿದೂತ. ಬುದ್ಧಿಶಕ್ತಿ, ಬಹುಮುಖ ಸಂಶೋಧನ ಸಾಮರ್ಥ್ಯ, ಮೂಲಭೂತ ಪ್ರಶ್ನೆಗಳ ಬಗ್ಗೆ ಆಸಕ್ತಿ ಹಾಗೂ ಚಿಂತನ ಶಕ್ತಿ—ಇವನ್ನೆಲ್ಲ ಗಮನಿಸಿದರೆ ಈತನನ್ನು 20ನೆಯ ಶತಮಾನದ ನ್ಯೂಟನ್ ಎನ್ನಬಹುದು.

ಬಾಲ್ಯ : 1879ನೆಯ ಮಾರ್ಚ್ 14 ರಂದು ಜರ್ಮನಿಯ ಸ್ವೆಬಿಯಾ ಪ್ರಾಂತ್ಯದ ಉಲ್ಮ್ ಎಂಬ ಊರಿನಲ್ಲಿ ಐನ್‌ಸ್ಟೈನ್ ಹುಟ್ಟಿದ. ಮರುವರ್ಷವೇ ಆತನ ತಂದೆ ಜೀವನೋಪಾಯಕ್ಕಾಗಿ ಈ ಊರನ್ನು ಬಿಟ್ಟು ಮ್ಯೂನಿಚ್ ನಗರ ಸೇರಬೇಕಾಯಿತು. ಅಲ್ಲಿ ತನ್ನ ತಮ್ಮನ ಸಹಾಯದಿಂದ ಒಂದು ವಿದ್ಯುದ್ರಾಸಾಯನಿಕ ಕಾರ್ಖಾನೆಯನ್ನು ಸ್ಥಾಪಿಸಿ ಅದರ ಉತ್ಪನ್ನಗಳ ಮಾರಾಟದಿಂದ ಜೀವನಕ್ಕೆ ಬೇಕಾದ ಹಣವನ್ನು ಸಂಪಾದಿಸತೊಡಗಿದ. ಹಿರಿಯ ಐನ್‌ಸ್ಟೈನ್ ಜನ್ಮತಃ ಯೆಹೂದಿ ; ಮತಸಂಪ್ರದಾಯಗಳ ವಿಷಯದಲ್ಲಿ ಈತನದು ವಿಶಾಲ ಮನೋಭಾವ. ಹೀಗಾಗಿ ಮಗನನ್ನು ಮ್ಯೂನಿಚಿನ ಕೆಥೊಲಿಕ್ ಕ್ರೈಸ್ತ ಶಾಲೆಗೆ ಸೇರಿಸುವುದರಲ್ಲಿ ಆತನಿಗೆ ಏನೂ ಅಳುಕು ಇರಲಿಲ್ಲ. ಹತ್ತು ವರ್ಷ ತುಂಬುವ ವೇಳೆಗೆ ಈ ಅಣುಗನ ಪ್ರಾಥಮಿಕ ವಿದ್ಯಾಭ್ಯಾಸ ಮುಗಿಯಿತು. ಮುಂದೆ ಅದೇ ನಗರದ ಜಿಮ್ನಾಸಿಯಂನಲ್ಲಿ (ಅಂದಿನ ವಿವಿಧೋದ್ದೇಶ ಶಾಲೆಗಳ ಹೆಸರು) ತನ್ನ ವ್ಯಾಸಂಗವನ್ನು ಮುಂದುವರಿಸಿದ. ಈ ಶಾಲೆಗಳಲ್ಲಿ ಅನುಸರಿಸುತ್ತಿದ್ದ ಪಠ್ಯಕ್ರಮ, ಬೋಧನವಿಷಯ ಐನ್‌ಸ್ಟೈನನಿಗೆ ಅಷ್ಟಾಗಿ ರುಚಿಸಲಿಲ್ಲ. ಕೆಲವು ವೇಳೆ ಬೇಸರವೇ ಆಗುತ್ತಿತ್ತು. ಆದ್ದರಿಂದ ಶಾಲೆಯಲ್ಲಿ ಇತರರಂತೆಯೇ ಅವನು ಸಾಧಾರಣ ವಿದ್ಯಾರ್ಥಿಯಾಗಿಯೇ ಉಳಿದ. ಆದರೆ ಸ್ವಭಾವತಃ ಈತ ಬಲು ಕುತೂಹಲಿ. ಸ್ವತಃ ಅನೇಕ ವಿಷಯಗಳನ್ನು ಅರಿಯಲು ಪ್ರಯತ್ನಪಟ್ಟ. ಇಲ್ಲಿ ಅವನಿಗೆ ವಿಶೇಷ ಸಹಕಾರ ದೊರೆತದ್ದು ಅವನ ಚಿಕ್ಕಪ್ಪನಿಂದ. ಗಣಿತಶಾಸ್ತ್ರದ ವಿಭಾಗಗಳಾದ ಬೀಜರೇಖಾಗಣಿತ ಹಾಗೂ ಅವಕಲನಶಾಸ್ತ್ರಗಳನ್ನು ಈತನಿಂದ ಕಲಿತದ್ದು ಮಾತ್ರವಲ್ಲ, ಅವುಗಳಲ್ಲಿ ಸಾಕಷ್ಟು ಪ್ರೌಢಿಮೆಯನ್ನು ಸಹ ಐನ್‌ಸ್ಟೈನ್ ಗಳಿಸಿಕೊಂಡ. ವಿಜ್ಞಾನದ ವಿವಿಧ ವಿಭಾಗಗಳು, ಹಳೆಯ ಮತಗ್ರಂಥಗಳು, ಸಾಹಿತ್ಯ, ವಯೊಲಿನ್ ಇಲ್ಲೆಲ್ಲ ಈತನ ಬಲು ಚುರುಕಾದ ಮನಸ್ಸು ವ್ಯಾಪಕವಾಗಿ ಹರಿಯಿತು. ಮನಸ್ಸು ವ್ಯಾಕುಲಗೊಂಡಾಗ ಅವನ್ನು ಮರೆಯಲು ವಯೊಲಿನ್ ವಾದನದಲ್ಲಿ ತಲ್ಲೀನತೆ ಪಡೆಯುತ್ತಿದ್ದ.

ವಿದ್ಯೆ : 1894ರಲ್ಲಿ ಐನ್‌ಸ್ಟೈನನ ತಂದೆತಾಯಿಯರು ಮ್ಯೂನಿಚ್ ನಗರವನ್ನು ತೊರೆದು ಇಟಲಿ ದೇಶದ ಮಿಲಾನ್ ನಗರವನ್ನು ಸೇರಿದರು. ಕಿರಿಯ ಐನ್‌ಸ್ಟೈನ್ ವಿದ್ಯಾಭ್ಯಾಸದ ಪ್ರಯುಕ್ತ ಮ್ಯೂನಿಚಿನಲ್ಲಿಯೇ ಉಳಿಯಬೇಕಾಯಿತು. ಆದರೆ ಈ ಏರ್ಪಾಡು ಬಲುಕಾಲ ಸುಗಮವಾಗಿ ಸಾಗಲಿಲ್ಲ. ಉಳಿದಿದ್ದ ಮಾರ್ಗ ಒಂದೇ—ಜ಼ೂರಿಕ್ ನಗರದ ಸ್ವಿಸ್ ಪಾಲಿಟೆಕ್ನಿಕನ್ನು ಸೇರುವುದು. ಇವನಿಗಾಗ 15 ವರ್ಷ ಪ್ರಾಯ. ಈತ ಗಣಿತಶಾಸ್ತ್ರದಲ್ಲಿ ಮಾತ್ರ ಅಸಾಮಾನ್ಯ ವಿದ್ವತ್ತು ಗಳಿಸಿದ್ದ, ನಿಜ;



ಆದರೆ ಇತರ ವಿಷಯಗಳಲ್ಲಿ ಸಾಕಷ್ಟು ಪರಿಣತನಾಗಿರದಿದ್ದುದರಿಂದ ಸ್ವಿಸ್ ಪಾಲಿಟೆಕ್ನಿಕನ್ನು ಸೇರಲು ಮಾಡಿದ ಪ್ರಥಮ ಪ್ರಯತ್ನ ಸಫಲವಾಗಲಿಲ್ಲ. ಮುಂದಿನ ವರ್ಷ (1896) ಇಲ್ಲಿ ಜಯ ಸಿದ್ಧಿಸಿತು. ಪಾಲಿಟೆಕ್ನಿಕಿನಲ್ಲಿ ಗಣಿತ ಹಾಗೂ ಭೌತಶಾಸ್ತ್ರಗಳನ್ನು ಐಚ್ಛಿಕ ವಿಷಯಗಳಾಗಿ ಆರಿಸಿಕೊಂಡ.

ವಿದ್ಯಾಸಂಸ್ಥೆಯೇನೋ ಬದಲಾಯಿತು ; ಆದರೆ ಹಾಡು ಹಿಂದಿನದೇ—ಬೋಧನ ವಿಷಯಗಳಲ್ಲಿ ಹಿರಿಮೆ ಇರಲಿಲ್ಲ, ಬೋಧನವಿಧಾನದಲ್ಲಿ ರಸವಿರಲಿಲ್ಲ. ಸಾಕಷ್ಟು ವಿರಾಮ ಲಭಿಸುತ್ತಿದ್ದುದೊಂದು ಅನುಕೂಲ. ಇದರಿಂದ ಸ್ವತಂತ್ರ ವ್ಯಾಸಂಗ ಮತ್ತು ಚಿಂತನೆಗಳಿಗೆ ಧಾರಾಳವಾದ ಅವಕಾಶ ದೊರೆಯಿತು. ಬೋಲ್ಟ್ಸ್‌ಮನ್, ಮ್ಯಾಕ್ಸ್‌ವೆಲ್, ಹೆಲ್ಮ್‌ಹೋಲ್ಟ್ಸ್, ಹರ್ಟ್ಸ್ ಮುಂತಾದ ಉದ್ದಾಮ ವಿಜ್ಞಾನಿಗಳ ಗ್ರಂಥಗಳನ್ನೂ ಸಂಶೋಧನ ಲೇಖನಗಳನ್ನೂ ವಿದ್ಯಾರ್ಥಿ ಐನ್‌ಸ್ಟೈನ್ ಸ್ವತಂತ್ರವಾಗಿ ಅಭ್ಯಸಿಸಿ ಗಹನಪಾಂಡಿತ್ಯ ಸಂಪಾದಿಸಿದ. ಮ್ಯಾಕ್ಸ್‌ವೆಲ್ಲನ ಕ್ಷೇತ್ರ ಸಿದ್ಧಾಂತ ಇವನ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದ್ದು ಮಾತ್ರವಲ್ಲ ಭೌತಶಾಸ್ತ್ರದ ಸಿದ್ಧಾಂತಗಳ ಬಗ್ಗೆ ಈತನ ದೃಷ್ಟಿಕೋನವನ್ನೇ ಬದಲಾಯಿಸಿತು. ಮ್ಯಾಕ್ಸ್‌ವೆಲ್ ತನ್ನ ಸಿದ್ಧಾಂತದಲ್ಲಿ ಕ್ಷೇತ್ರದ ಭಾವನೆಗೆ ಆದ್ಯತೆ ನೀಡಿದ್ದನಲ್ಲದೆ ಅದರ ಆಧಾರದ ಮೇಲೆ

ಎಲ್ಲ ಕ್ರಿಯೆಗಳನ್ನೂ ವಿವರಿಸುವ ಪ್ರಯತ್ನ ಮಾಡಿದ್ದ. ಆ ದಿವಸಗಳಲ್ಲಿ ಐನ್‌ಸ್ಟೈನನಿಗೆ ವಿಖ್ಯಾತ ಗಣಿತವಿಜ್ಞಾನಿ ಮಿಂಕೊವಿಸ್ಕಿಯ ಪರಿಚಯಲಾಭವಾಯಿತು. ಈತ ಮುಂದೆ ವಿಶಿಷ್ಟ ಸಾಪೇಕ್ಷ ಸಿದ್ಧಾಂತಕ್ಕೆ (ಸ್ಪೆಷಲ್ ಥಿಯೊರಿ ಆಫ್ ರಿಲೆಟಿವಿಟಿ) ಒಂದು ಪರ್ಯಾಯ ವ್ಯಾಖ್ಯೆಯನ್ನೇ ನೀಡಿದ ಮಹಾಮೇಧಾವಿ.

ಉದ್ಯೋಗ : ಪಾಲಿಟೆಕ್ನಿಕ್ ವ್ಯಾಸಂಗ ಮುಗಿಯುವಾಗ ಐನ್‌ಸ್ಟೈನನ ಪ್ರಾಯ ಇಪ್ಪತ್ತು ವರ್ಷ. ಮುಂದೆ ಜೀವನನಿರ್ವಹಣೆ ನಡೆಯಲು ಸಂಪಾದನೆ ಅಗತ್ಯವಾಗಿತ್ತು. ಸ್ವಲ್ಪ ಕಾಲ ಉಪಾಧ್ಯಾಯವೃತ್ತಿಯನ್ನು ಹಿಡಿದ. 1902ರಲ್ಲಿ ಬರ್ನ್ ಪಟ್ಟಣದ ಏಕಸ್ವ ಕಚೇರಿಯಲ್ಲಿ (ಪೇಟೆಂಟ್ ಆಫೀಸ್) ಏಕಸ್ವ ಪರೀಕ್ಷಕನಾಗಿ ನೇಮಕಗೊಂಡ. ಅಲ್ಲಿ ವಿಶೇಷ ಕೆಲಸವಿಲ್ಲದಿದ್ದುದರಿಂದ ಐನ್‌ಸ್ಟೈನನಿಗೆ ತನ್ನ ವ್ಯಾಸಂಗವನ್ನು ಯಾವ ಅಡಚಣೆಯೂ ಇಲ್ಲದೆ ಮುಂದುವರಿಸಲು ಅನುಕೂಲವಾಯಿತು.

ಇದೇ ವೇಳೆಗೆ ಆ ಮೊದಲು ಜ಼ೂರಿಕ್ ಪಾಲಿಟೆಕ್ನಿಕಿನಲ್ಲಿ ತನ್ನ ಸಹಪಾಠಿಯಾಗಿದ್ದ ಮಿಲೇವಮ್ಯೂರಿಷ್ ಎಂಬಾಕೆಯನ್ನು ಮದುವೆಯಾದ. ಆಕೆಯೂ ಭೌತಶಾಸ್ತ್ರದಲ್ಲಿ ಆಸಕ್ತಳಾಗಿದ್ದುದೇ ಮದುವೆಗೆ ಮುಖ್ಯ ಕಾರಣ. ಈ ದಂಪತಿಗಳಿಗೆ ಇಬ್ಬರು ಗಂಡು ಮಕ್ಕಳು ಹುಟ್ಟಿದರು. ಆದರೆ ದಾಂಪತ್ಯಜೀವನ ಮೊದಲು ನಿರೀಕ್ಷಿಸಿದಷ್ಟು ತೃಪ್ತಿಕರವಾಗಿ ಸಾಗಲಿಲ್ಲ. ಗಂಡಹೆಂಡಿರ ಮನೋದೃಷ್ಟಿ ಅನೇಕ ರೀತಿಯಲ್ಲಿ ಸರಿಹೊಂದದೆ ಕಾಲಕ್ರಮೇಣ ಸಂಸಾರದಲ್ಲಿ ಅಹಿತವಾತಾವರಣವೇರ್ಪಟ್ಟಿತು. ಆದರೆ ಐನ್‌ಸ್ಟೈನ್ ತನ್ನ ಸಂಶೋಧನ ಕಾರ್ಯಗಳಲ್ಲಿಯೇ ನಿರತನಾಗಿ ಇದನ್ನು ಮರೆಯುತ್ತಿದ್ದ.

ಸಾಪೇಕ್ಷವಾದ : ದಿನಗಳು ಕಳೆದಂತೆ ಐನ್‌ಸ್ಟೈನನ ಸಂಶೋಧನೆ ಮತ್ತು ಚಿಂತನೆ ಹೆಚ್ಚು ಹೆಚ್ಚು ಭರದಿಂದ ಮುಂದುವರಿದುವು. 1905ರಲ್ಲಿ ಮಹತ್ತ್ವಪೂರಿತವಾದ ನಾಲ್ಕು ಸಂಶೋಧನ ಲೇಖನಗಳನ್ನು ಪ್ರಕಟಿಸಿದ. ಇವುಗಳಲ್ಲಿ ಎರಡು ವಿಶಿಷ್ಟ ಸಾಪೇಕ್ಷಸಿದ್ಧಾಂತಕ್ಕೆ ಸಂಬಂಧಿಸಿದವು ; ಉಳಿದೆರಡು ಕ್ರಮವಾಗಿ ಬ್ರೌನಿಯನ್ ಚಲನೆ ಮತ್ತು ದ್ಯುತಿ ವಿದ್ಯುತ್ಕ್ರಿಯೆಗಳಿಗೆ ಸಂಬಂಧಿಸಿದವು. ಈ ಲೇಖನಗಳಿಂದ ಐನ್‌ಸ್ಟೈನ್ ಜಗದ್ವಿಖ್ಯಾತನಾದ. ಇವುಗಳಿಂದ ಅವನಿಗೆ ಲಭಿಸಿದ ಗೌರವ ಪರಂಪರೆಗಳಲ್ಲಿ ಹೆಸರಾಂತವು—ಜ಼ೂರಿಕ್ ವಿಶ್ವವಿದ್ಯಾನಿಲಯ ನೀಡಿದ ಡಾಕ್ಟರೇಟ್ ಪದವಿ ಮತ್ತು 1910–11ರಲ್ಲಿ ಅದೇ ವಿಶ್ವವಿದ್ಯಾನಿಲಯ ನೀಡಿದ ಭೌತಶಾಸ್ತ್ರ ಪ್ರಾಧ್ಯಾಪಕತ್ವದ ಆಹ್ವಾನ. ಐನ್‌ಸ್ಟೈನ್ ಇವನ್ನು ಸ್ವೀಕರಿಸಿದ. 1911ರಲ್ಲಿ ವಿಸ್ತೃತ ಸಾಪೇಕ್ಷ ಸಿದ್ಧಾಂತದ (ಜನರಲ್ ರಿಲೆಟಿವಿಟಿ) ಮೊದಲ ಹಂತವೆಂದು ಪರಿಗಣಿಸಬಹುದಾದ ಗುರುತ್ವತೂಕ, ಮತ್ತು ಜಡತ್ವತೂಕಗಳ ಸಾಮ್ಯಕ್ಕೆ ಸಂಬಂಧಿಸಿದಂತೆ ಒಂದು ಮುಖ್ಯ ಲೇಖನವನ್ನು ಪ್ರಕಟಿಸಿದ.

1914ರಲ್ಲಿ ಅಂದರೆ ಮೊದಲ ಮಹಾಯುದ್ಧ ಪ್ರಾರಂಭಕ್ಕೆ ಸ್ವಲ್ಪ ಮುಂಚೆ ಬರ್ಲಿನ್ನಿನ ಪ್ರಷ್ಯನ್ ವಿಜ್ಞಾನ ಅಕೆಡಮಿ ಐನ್‌ಸ್ಟೈನನನ್ನು ಅದರ ಭೌತಶಾಸ್ತ್ರ ಸಂಸ್ಥೆಯ ನಿರ್ದೇಶಕನನ್ನಾಗಿ ನೇಮಿಸಿ ಅವನಿಗೆ ಆಹ್ವಾನವನ್ನು ಕಳುಹಿಸಿತು. ಅದನ್ನು ಸ್ವೀಕರಿಸಿದ ಅವನು ಬರ್ಲಿನ್ ನಗರವನ್ನು ಸೇರಿದ. ಇಲ್ಲಿ ಅವನ ಸಂಶೋಧನೆಗಳು ಮುಂದುವರಿದುವು. ವಿಸ್ತೃತ ಸಾಪೇಕ್ಷಸಿದ್ಧಾಂತಕ್ಕೆ ಸಂಬಂಧಿಸಿದ ಲೇಖನಗಳನ್ನು 1915–16 ರಲ್ಲಿಯೂ ವ್ಯಾಪಕವಾದ ಈ ಸಿದ್ಧಾಂತದಿಂದ ವಿಶ್ವ ರಚನೆ ಮತ್ತು ಸ್ವರೂಪಕ್ಕೆ ಸಂಬಂಧಪಟ್ಟಂತೆ ಲಭಿಸುವ ತೀರ್ಮಾನಗಳನ್ನು 1917 ರಲ್ಲಿಯೂ ಪ್ರಕಟಿಸಿದ.



ಓಪೆನ್‌ಹೀಮರನೊಡನೆ ಐನ್‌ಸ್ಟೈನ್

ಬರ್ಲಿನ್ ನಗರಕ್ಕೆ ಬಂದು ನೆಲೆಸಿದ ತರುವಾಯವೂ ಐನ್‌ಸ್ಟೈನನ ದಾಂಪತ್ಯ ಜೀವನ ಸುಖಮಯವಾಗಿರಲಿಲ್ಲ. ಮನೆಯ ವಾತಾವರಣ ಇನ್ನಷ್ಟು ಕಹಿಯಾಯಿತು. ಬೇರೆ ಮಾರ್ಗವಿಲ್ಲದೆ 1919ರಲ್ಲಿ ಮೊದಲ ವಿವಾಹವನ್ನು ವಿಚ್ಛೇದಿಸಿ ಅದೇ ವರ್ಷ ತನ್ನ ಸೋದರಮಾವನ ಮಗಳಾದ ಎಲ್ಸಾಳನ್ನು ಮದುವೆಯಾದ.

ಮೊದಲನೆಯ ಮಹಾಯುದ್ಧ ಮುಗಿಯಿತು. ಸಾರಿಗೆ ಸಂಪರ್ಕ ಸುಗಮವಾದದ್ದರಿಂದ ಐನ್‌ಸ್ಟೈನ್ ಬ್ರಿಟನ್ ಮತ್ತು ಅಮೆರಿಕ ದೇಶಗಳಿಗೆ ಭೇಟಿಯಿತ್ತು ಬರ್ಲಿನಿಗೆ ಮರಳಿದ. ಈ ವೇಳೆಗಾಗಲೇ ಆತನ ಕೀರ್ತಿ ಎಲ್ಲೆಲ್ಲಿಯೂ ಹರಡಿ ಅವನಿಗೆ ಅನೇಕ ರೀತಿಯ ಅಧಿಕ ಗೌರವ ಮನ್ನಣೆಗಳು ದೊರೆತವು. ದ್ಯುತಿ ವಿದ್ಯುತ್ಕ್ರಿಯೆ ಮತ್ತು ತಾತ್ತ್ವಿಕ ಭೌತಶಾಸ್ತ್ರಗಳಿಗೆ ಸಂಬಂಧಿಸಿದ ಆತನ ಸಂಶೋಧನೆಗಳನ್ನು ಗಮನಿಸಿದ ಸ್ವೀಡಿಷ್ ರಾಯಲ್ ವಿಜ್ಞಾನ ಸಂಸ್ಥೆ 1921ರಲ್ಲಿ, ವಿಜ್ಞಾನಪ್ರಪಂಚದಲ್ಲಿ ಅತ್ಯಂತ ಗೌರವಪೂರ್ವಕವಾದ ನೊಬೆಲ್ ಪಾರಿತೋಷಕವನ್ನು ನೀಡಿತು. ಮರುವರ್ಷ ಲೀಗ್ ಆಫ್ ನೇಷನ್ಸ್ ಸಂಸ್ಥೆಯ ಬೌದ್ಧಿಕ ಸಹಕಾರ ಸಂಘದ ಸದಸ್ಯನಾಗಿ ಚುನಾವಣೆಗೊಂಡ.

ಯೆಹೂದಿಗಳಿಗೆ ಪವಿತ್ರವಾದ ಪ್ಯಾಲೆಸ್ಟೈನ್ ದೇಶವನ್ನು ಐನ್‌ಸ್ಟೈನ್ ಸಂದರ್ಶಿಸಿದ್ದು 1922ರಲ್ಲಿ. ಅಲ್ಲಿನ ಪರಿಸ್ಥಿತಿಗಳ ಪರಿಶೀಲನೆಯಿಂದ ಅಲ್ಲೊಂದು ಯೆಹೂದಿ ರಾಷ್ಟ್ರವನ್ನು ಸ್ಥಾಪಿಸುವುದೇ ವಿಶ್ವ ಯೆಹೂದಿ ಪ್ರಶ್ನೆಗೆ ಸರಿಯಾದ ಪರಿಹಾರವೆಂಬ ತೀರ್ಮಾನಕ್ಕೆ ಬಂದ. ಸಹಜವಾಗಿಯೇ ಈ ಗುರಿಯನ್ನು ಸಾಧಿಸಲು ಹೋರಾಡುತ್ತಿದ್ದ ಸಯೋನಿಸ್ಟ್ ಚಳವಳಿಗೆ ತನ್ನ ಬೆಂಬಲ ನೀಡಿದ. ಆದರೆ ಈ ಯೆಹೂದಿ ರಾಷ್ಟ್ರ ಯಾವ ರೀತಿಯ ಸಂಕುಚಿತ ಭಾವನೆಯನ್ನೂ ಹೊಂದಿರಬಾರದು, ಪ್ಯಾಲಿಸ್ಟೈನ್ ಅರಬ್ಬರಿಗೂ ಈ ರಾಷ್ಟ್ರಗಳಲ್ಲಿ ಸಮಾನಸ್ಥಾನವಿರಬೇಕು, ಯೆಹೂದಿಗಳು ಮತ್ತು ಅರಬ್ಬರು ಸೌಹಾರ್ದದಿಂದ ಒಟ್ಟಿಗೆ ಬಾಳಬೇಕು—ಎಂಬ ತನ್ನ ಖಚಿತ ಅಭಿಪ್ರಾಯಗಳನ್ನು ಚಳವಳಿಯ ಮುಖಂಡನಾದ ವೀಸ್‌ಮನನಿಗೆ ಸ್ಪಷ್ಟವಾಗಿ ತಿಳಿಸಿದ. ಇದೇ ಅಭಿಪ್ರಾಯಗಳನ್ನು ಅನೇಕ ಸಾರ್ವಜನಿಕ ಸಭೆಗಳಲ್ಲೂ ವ್ಯಕ್ತಪಡಿಸಿದ.

ವಿಸ್ತೃತ ಸಾಪೇಕ್ಷಸಿದ್ಧಾಂತ ಅಸ್ತಿತ್ವಕ್ಕೆ ಬಂದು ಅನೇಕ ರೀತಿಯಲ್ಲಿ ಸಮರ್ಥಿತವಾದ ಮೇಲೆ ಐನ್‌ಸ್ಟೈನ್ ತನ್ನ ಸಂಶೋಧನೆಗಳನ್ನು ಮುಂದುವರಿಸಿ ಸಮಗ್ರ ಅಥವಾ ಏಕೀಕೃತ ಕ್ಷೇತ್ರಸಿದ್ಧಾಂತವನ್ನು ನಿರ್ಮಿಸುವ ಪ್ರಯತ್ನಗಳನ್ನು ಕೈಗೊಂಡ. ಈ ದಿಕ್ಕಿನಲ್ಲಿ ಸಂಶೋಧನೆಗಳೇನೊ ಮುಂದುವರಿಯುತ್ತಿದ್ದುವು. ಆದರೆ ದೇಶದಲ್ಲಿ ನಾಜ಼ಿಗಳ ದೌರ್ಜನ್ಯ ಮತ್ತು ಹಿಂಸಾಕೃತ್ಯಗಳು ವಿರೋಧಿಗಳ ಬಗ್ಗೆ ಅವರ ಅಪಪ್ರಚಾರ, ಯೆಹೂದಿಗಳ ಬಗ್ಗೆ ದ್ವೇಷ ಇವೆಲ್ಲ ದಿನೇ ದಿನೇ ಹೆಚ್ಚುತ್ತ ಬಂದು ರಾಜಕೀಯ ವಾತಾವರಣ ಬಲುಮಟ್ಟಿಗೆ ಹದಗೆಟ್ಟಿತು. ವಿಶ್ವವಿದ್ಯಾನಿಲಯಗಳಲ್ಲಿ ಕೂಡ ಬೌದ್ಧಿಕ ವಾತಾವರಣ ಬಲುಮಟ್ಟಿಗೆ ಕಲುಷಿತವಾಯಿತು. 1930–32ರಲ್ಲಿ ಅಮೆರಿಕಕ್ಕೆ ಎರಡು ಸಲ ಭೇಟಿಕೊಟ್ಟು ಹಿಂತಿರುಗಿದ ಅನಂತರ ಇನ್ನು ಹೆಚ್ಚುಕಾಲ ಜರ್ಮನಿಯಲ್ಲಿ ತಾನಿರುವುದು ಸಾಧ್ಯವಿಲ್ಲ, ಹಾಗೆ ಇರುವುದು ಕ್ಷೇಮಕರವೂ ಅಲ್ಲ ಎಂಬುದು ಸ್ಪಷ್ಟವಾಯಿತು. ಭಾರವಾದ ಹೃದಯದಿಂದ ಜರ್ಮನಿ ದೇಶವನ್ನು ತೊರೆಯಬೇಕಾಯಿತು. ಆಗ ಐನ್‌ಸ್ಟೈನನನ್ನು ಪ್ರೀತಿವಿಶ್ವಾಸಗಳಿಂದ ಸ್ವಾಗತಿಸಿದ್ದು (1935) ಅಮೆರಿಕ ದೇಶ. ಅಲ್ಲಿನ ವಿಜ್ಞಾನಿಗಳು ಮತ್ತು ಸರ್ಕಾರ ಈತನನ್ನು ಬಲು ಗೌರವದಿಂದ ಬರಮಾಡಿಕೊಂಡರು. ಪ್ರಿನ್ಸ್‌ಟನ್ನಿನಲ್ಲಿರುವ ಪ್ರೌಢವ್ಯಾಸಂಗ ಸಂಸ್ಥೆಯ ಆಜೀವಾಂತ ಸದಸ್ಯನಾಗಿ ಈತನನ್ನು ನೇಮಿಸಿದ್ದು ಮಾತ್ರವಲ್ಲ, ಸಂಶೋಧನೆಯನ್ನು ಮುಂದುವರಿಸಲು ಬೇಕಾಗುವ ಸಕಲ ಸೌಕರ್ಯಗಳನ್ನೂ ಒದಗಿಸಿ ಕೊಟ್ಟರು. ಪ್ರತಿಭೆಯ ವಿಕಾಸ ನಿರ್ವಿಘ್ನವಾಗಿ ಮುಂದುವರಿಯಲು ಅವಕಾಶ ಒದಗಿತು. ಐನ್‌ಸ್ಟೈನನ ಉಳಿದ ಜೀವನಾವಧಿ ಕಳೆದದ್ದು ಇಲ್ಲಿಯೇ. 1940ರಲ್ಲಿ ಈತನನ್ನು ಅಮೆರಿಕ ದೇಶ ತನ್ನ ಪ್ರಜೆಯಾಗಿ ಸ್ವೀಕರಿಸಿತು.

ಈ ಮಧ್ಯೆ 1939ನೆಯ ಸೆಪ್ಟೆಂಬರಿನಲ್ಲಿ ಎರಡನೆಯ ಮಹಾಯುದ್ಧ ಪ್ರಾರಂಭವಾಯಿತು. ಇಷ್ಟರಲ್ಲೇ ಯೂರೋಪಿನ ಅನೇಕ ಪ್ರಮುಖ ವಿಜ್ಞಾನಿಗಳು ನಾಜ಼ಿ ಮತ್ತು ಫಾಸಿಸ್ಟ್ ದೌರ್ಜನ್ಯಗಳಿಂದ ತಪ್ಪಿಸಿಕೊಂಡು ಅಮೆರಿಕದಲ್ಲಿ ಬಂದು ನೆಲೆಸಿದರು. ಇವರು ಮತ್ತು ಅಮೆರಿಕದ ಕೆಲವು ಪ್ರಮುಖ ವಿಜ್ಞಾನಿಗಳು ಅಂದಿನ ಅಂತರರಾಷ್ಟ್ರೀಯ ಪರಿಸ್ಥಿತಿಯನ್ನು ಗಮನಿಸಿ ಎಲ್ಲ ದೃಷ್ಟಿಯಿಂದಲೂ ಅಮೆರಿಕ ದೇಶ ಪರಮಾಣುಬಾಂಬು ತಯಾರಿಕೆಯ ದಿಕ್ಕಿನಲ್ಲಿ ಪ್ರಯತ್ನವನ್ನು ಪ್ರಾರಂಭಿಸುವುದು ಒಳ್ಳೆಯದೆಂಬ ತೀರ್ಮಾನಕ್ಕೆ ಬಂದರು. ತಮ್ಮ ಸಲಹೆಗಳ ಪರವಾಗಿ ಅಧ್ಯಕ್ಷ ರೂಸ್‌ವೆಲ್ಟರವರಿಗೆ ಐನ್‌ಸ್ಟೈನ್ ಕಾಗದ ಬರೆಯುವಂತಾದರೆ ತಮ್ಮ ಪ್ರಯತ್ನ ಸಫಲವಾಗುವುದೆಂದು ಫರ್ಮಿ, ಸಿಲಾರ್ಡ್, ಟೆಲ್ಲರ್ ಮುಂತಾದ ಅನೇಕ ಪ್ರಮುಖ ವಿಜ್ಞಾನಿಗಳು ಭಾವಿಸಿದರು. ತಮ್ಮ ಸಲಹೆಗಳನ್ನು ಐನ್‌ಸ್ಟೈನನಿಗೆ ವಿವರಿಸಿ ಈ ಬಗ್ಗೆ ಅಧ್ಯಕ್ಷರಿಗೆ ತಮ್ಮೆಲ್ಲರ ಪರವಾಗಿ ಕಾಗದವೊಂದನ್ನು ಬರೆಯಬೇಕೆಂದು

ಮನವಿ ಮಾಡಿಕೊಂಡಾಗ ಸ್ವಭಾವತಃ ಶಾಂತಿಪ್ರಿಯ ಹಾಗೂ ಶಾಂತಿವಾದಿಯಾದ ಈತ ಒಂದು ಧರ್ಮಸಂಕಟದ ಪರಿಸ್ಥಿತಿಯನ್ನು ಎದುರಿಸಬೇಕಾಯಿತು. ಆದರೆ ಅಂದಿನ ಸಮಯ ಸಂದರ್ಭಗಳನ್ನೆಲ್ಲ ಕೂಲಂಕಷವಾಗಿ ಪರ್ಯಾಲೋಚಿಸಿ ಪರಮಾಣು ಬಾಂಬು ತಯಾರಿಕೆ ಪ್ರಯತ್ನವನ್ನು ಅಮೆರಿಕ ಕೈಗೊಳ್ಳುವುದು ಎಲ್ಲ ಜನರ ಹಿತ ದೃಷ್ಟಿಯಿಂದಲೂ ಸರಿ ಎಂಬ ತೀರ್ಮಾನಕ್ಕೆ ಆತ ಬಂದ. ಇದಲ್ಲದಿದ್ದರೆ ನಾಜ಼ಿ ಜರ್ಮನಿ ಈ ಸಿದ್ಧಿ ಪಡೆಯುವುದು ನಿಶ್ಚಯ, ಇದರಿಂದ ಪ್ರಪಂಚವಿನಾಶ ಕಟ್ಟಿಟ್ಟದ್ದು ಎಂಬುದು ಆತನ ಮನಸ್ಸಿನ ಹಿನ್ನೆಲೆಯಲ್ಲಿದ್ದ ಭಾವ. ವಿಜ್ಞಾನಿಗಳ ಪರವಾಗಿ ಅಧ್ಯಕ್ಷ ರೂಸ್‌ವೆಲ್ಟರಿಗೆ ಕಾಗದ ಬರೆದು ಬಹುಶಃ ಈಗಾಗಲೇ ಜರ್ಮನಿ ಈ ದಿಕ್ಕಿನಲ್ಲಿ ಪ್ರಯತ್ನಗಳನ್ನು ಕೈಗೊಂಡು ಮುಂದುವರಿದಿರಬಹುದೆಂದೂ ಅಮೆರಿಕ ಯೋಗ್ಯ ಪ್ರಯತ್ನಗಳನ್ನು ಕೈಗೊಳ್ಳದಿದ್ದಲ್ಲಿ ಮುಂದೆ ವಿಪರೀತ ಅನಾಹುತಕ್ಕೆ ಎಡೆಯಾಗುವುದೆಂದೂ ಸ್ಪಷ್ಟವಾಗಿ ತಿಳಿಸಿದ.

ಈ ಕಾಗದವನ್ನು ಅಪಾರ್ಥಮಾಡಿಕೊಂಡ ಅನೇಕರು ಐನ್‌ಸ್ಟೈನನನ್ನು ಬಲು ಕಟುವಾಗಿ ಟೀಕಿಸಿ ಪರಮಾಣು ಬಾಂಬಿನ ತಯಾರಿಕೆಯ ನೈತಿಕ ಜವಾಬ್ದಾರಿ ಆತನದೇ ಎಂದು ತೀವ್ರವಾಗಿ ದೂಷಿಸಿದ್ದಾರೆ. ಈ ಟೀಕೆಗಳಿಗೆ ಉತ್ತರವಾಗಿ ಜಪಾನ್ ದೇಶದ ಪತ್ರಿಕಾ ಸಂಪಾದಕರೊಬ್ಬರಿಗೆ ಬರೆದ ಪತ್ರದಲ್ಲಿ ಐನ್‌ಸ್ಟೈನ್ ತನ್ನ ನಿಲುವನ್ನು ಸ್ಪಷ್ಟಪಡಿಸಿದ್ದಾನೆ. ಶಾಂತಿಸ್ಥಾಪನೆ ಮತ್ತು ಶಾಂತಿಪಾಲನೆಯಲ್ಲಿ ತನಗೆ ಅಚಲವಾದ ನಂಬಿಕೆ ಇರುವುದಾದರೂ ಜನಜೀವನವನ್ನೇ ಹಾಳು ಮಾಡುವ ದುರುದ್ದೇಶವುಳ್ಳ ರಾಕ್ಷಸೀಬಲಗಳನ್ನು ಎದುರಿಸುವಾಗ ಎಲ್ಲ ವಿಧವಾದ ಅಸ್ತ್ರಗಳನ್ನೂ ಬಳಸುವುದು ಅನಿವಾರ್ಯವೆಂಬ ಅಂಶ ಆ ಪತ್ರದಲ್ಲಿ ನಿರೂಪಿತವಾಗಿದೆ.

ಪ್ರಿನ್ಸ್‌ಟನ್ನಿನ ಪ್ರಶಾಂತ ಬೌದ್ಧಿಕ ವಾತಾವರಣದಲ್ಲಿ ಐನ್‌ಸ್ಟೈನನ ಸಂಶೋಧನೆ ಮತ್ತು ಚಿಂತನೆಗಳು ಮುಂದುವರಿದುವು. ಏಕೀಕೃತ ಕ್ಷೇತ್ರಸಿದ್ಧಾಂತವೊಂದನ್ನು ನಿರ್ಮಿಸುವ ಆಶಯದಿಂದ 1920ರಲ್ಲೇ ಪ್ರಾರಂಭಿಸಿದ್ದ ಪ್ರಯತ್ನಗಳನ್ನು ಮುಂದುವರಿಸಿ 1949ರಲ್ಲಿ ಹೊಸ ಏಕೀಕೃತ ಕ್ಷೇತ್ರಸಿದ್ಧಾಂತವನ್ನು ಪ್ರಕಟಿಸಿದ. ಈ ಸಿದ್ಧಾಂತವನ್ನು ಪುನಃ ಪರಿಷ್ಕರಿಸಿ ಪರಿಷ್ಕೃತ ಸಿದ್ಧಾಂತವನ್ನು 1952ರಲ್ಲಿ ಪ್ರಕಟಿಸಿದ. ಇದು ಅತಿ ಕ್ಲಿಷ್ಟವಾದ ಸಿದ್ಧಾಂತ. ಇದನ್ನು ಈವರೆಗೂ ಪೂರ್ಣವಾಗಿ ಅರ್ಥ ಮಾಡಿಕೊಳ್ಳಲು ಸಾಧ್ಯವಾಗಿಲ್ಲ. ಎಲ್ಲ ವಿಧವಾದ ಮೂಲ ಘಟನೆಗಳನ್ನೂ ವಿವರಿಸಬಹುದಾದ ಐಕ್ಯೈಕ ಸಮಗ್ರ ಸಿದ್ಧಾಂತವನ್ನು ನಿರ್ಮಿಸುವುದು ಅಗತ್ಯ ಮತ್ತು ಸಾಧ್ಯ ಎಂದು ನಂಬಿದ್ದ ಐನ್‌ಸ್ಟೈನ್ ಕೊನೆಯವರೆಗೂ ತನ್ನ ಪ್ರಯತ್ನವನ್ನು ಮುಂದುವರಿಸಿದ. ಆದರೆ ಇದು ಸಫಲವಾಗುವ ಮುನ್ನವೇ ವಿಧಿವಶನಾದ (1955). ಅಂದು ಅರ್ಧ ಶತಮಾನಕಾಲ ಸತತವಾಗಿ ಸತ್ಯಾನ್ವೇಷಣೆಯಲ್ಲಿ ತೊಡಗಿ ಇತರರಿಗೆ ಮಾರ್ಗದರ್ಶಿಯಾಗಿದ್ದ ಮಹಾಚೇತನವೊಂದು ಕಣ್ಮರೆಯಾಯಿತು.

ಬೌದ್ಧಿಕ ಜೀವನ ಹಾಗೂ ಸಾಧನೆ : ಐನ್‌ಸ್ಟೈನನ ಕ್ಷೇತ್ರ ತಾತ್ತ್ವಿಕ ಭೌತ ಶಾಸ್ತ್ರಕ್ಕೇ ಬಲು ಪಾಲು ಮೀಸಲು. ಆದರೆ ಆತನ ಕುತೂಹಲಕ್ಕೆ ಮೇರೆ ಇರಲಿಲ್ಲ. ವಿಜ್ಞಾನ ಮೀಮಾಂಸೆ, ರಾಜಕೀಯ ಮತ್ತು ಧಾರ್ಮಿಕ ಪ್ರಶ್ನೆಗಳು, ಯೆಹೂದಿ ಪ್ರಶ್ನೆ, ನಿಶ್ಶಸ್ತ್ರೀಕರಣ, ಶಾಂತಿಸ್ಥಾಪನೆ, ವಿಶ್ವಸರ್ಕಾರ, ಜೀವನದರ್ಶನ— ಇವೆಲ್ಲ ವಿಚಾರಗಳಲ್ಲಿಯೂ ಆಳವಾಗಿ ಚಿಂತಿಸಿ ಖಚಿತ ಅಭಿಪ್ರಾಯಗಳನ್ನು ಆತ ತಳೆದಿದ್ದನಲ್ಲದೆ ಯುಕ್ತಕಂಡಲ್ಲಿ ಅವನ್ನು ವ್ಯಕ್ತಪಡಿಸಿಯೂ ಇದ್ದ.

ಐನ್‌ಸ್ಟೈನನ ಮುಖ್ಯ ಕೊಡುಗೆ ಸಾಪೇಕ್ಷಸಿದ್ಧಾಂತ ಮತ್ತು ಅದರ ಬೆಳೆವಣಿಗೆ. ಆದರೆ ಶಕಲಸಿದ್ಧಾಂತದ (ಕ್ವಾಂಟಂ ಥಿಯೊರಿ) ಪ್ರಾರಂಭದ ದೆಸೆಯಲ್ಲಿ ಈತ ಅದರಲ್ಲಿ ಸಾಕಷ್ಟು ಭಾಗವಹಿಸಿದ್ದ. ಹಾಗಿದ್ದರೂ 1925ರ ಅನಂತರ ಹೈಸನ್‌ಬರ್ಗನ ಅನಿಶ್ಚಿತತ್ವ ನಿಯಮದ ಆಧಾರದ ಮೇಲೆ ಬೆಳೆದ ಹೊಸ ಶಕಲ ಸಿದ್ಧಾಂತದ ಬಗ್ಗೆ ಈತನಿಗೆ ಅಷ್ಟಾಗಿ ಸಹಾನುಭೂತಿ ಇರಲಿಲ್ಲ. ಅದರಲ್ಲಿಯೂ ಈ ಸಿದ್ಧಾಂತದ ಸಂಭವನೀಯಾತ್ಮಕ ವಿವರಣೆ ಮತ್ತು ವ್ಯಾಖ್ಯೆಗಳಲ್ಲಿ ಸ್ವಲ್ಪವೂ ನಂಬಿಕೆ ಇರಲಿಲ್ಲ. ಇದೊಂದು ಕೇವಲ ತಾತ್ಕಾಲಿಕ ಪರಿಹಾರ ಎಂದೇ ಈತನ ನಂಬಿಕೆಯಾಗಿತ್ತು. ಈ ಸಿದ್ಧಾಂತ ಮತ್ತು ಇತರ ಮೂಲ ಸಿದ್ಧಾಂತಗಳನ್ನು ಒಳಗೊಂಡ ಒಂದು ಸಮಗ್ರ ಕ್ಷೇತ್ರಸಿದ್ಧಾಂತದ ನಿರ್ಮಾಣ ಅಗತ್ಯ ಮತ್ತು ಸಾಧ್ಯ, ಈ ಸಮಗ್ರ ಸಿದ್ಧಾಂತ ಸಂಭವನೀಯಾತ್ಮಕವಾಗಿರದೆ, ನಿರ್ಣಯಾತ್ಮಕವಾಗಿಯೇ ಇರುತ್ತದೆ ಎಂದು ಐನ್‌ಸ್ಟೈನನ ದೃಢ ನಂಬಿಕೆ.

ವಿಜ್ಞಾನ ಮೀಮಾಂಸೆಯ ಮುಖ್ಯ ಭಾಗಗಳಲ್ಲೊಂದಾದ ವಿಜ್ಞಾನದ ವಿಚಾರ ಮಾರ್ಗದ ಬಗ್ಗೆ ಐನ್‌ಸ್ಟೈನ್ ತನ್ನ ಅಭಿಪ್ರಾಯವನ್ನು ಸ್ಪಷ್ಟವಾಗಿ ತಿಳಿಸಿದ್ದಾನೆ. ವಿಜ್ಞಾನದ ಬೆಳೆವಣಿಗೆ ಮತ್ತು ಸ್ವರೂಪಗಳನ್ನು ಗಮನಿಸಿದರೆ ವೈಜ್ಞಾನಿಕ ಸಿದ್ಧಾಂತಗಳಿಗೆ ಅನುಭವಲಭ್ಯ ವಿಷಯಗಳೇ ಅಲ್ಲದೆ ಕೆಲವು ಮೂಲ ಪರಿಕಲ್ಪನೆ ಮತ್ತು ಮೂಲಭಾವನೆಗಳು ಆಧಾರವಾಗಿರುವುದು ಕಂಡುಬರುತ್ತದೆ. ಐನ್‌ಸ್ಟೈನನ ಪ್ರಕಾರ ಈ ಪರಿಕಲ್ಪನೆ ಮತ್ತು ಭಾವನೆಗಳು ತಾರ್ಕಿಕದೃಷ್ಟಿಯಿಂದ ಅತಿಸರಳವಾಗಿಯೂ ಪರಸ್ಪರ ಸಮಂಜಸವಾಗಿಯೂ ಇರಬೇಕು. ಇವನ್ನು ಯಾವ ರೀತಿಯಿಂದಲೂ ಇಂದ್ರಿಯಗೋಚರ ವಿಷಯಗಳಿಂದ ವ್ಯುತ್ಪತ್ತಿಸುವುದು ಸಾಧ್ಯವಿಲ್ಲ. ವಿಜ್ಞಾನಿ ತನ್ನ ಬುದ್ಧಿ ಮತ್ತು ಪ್ರತಿಭಾಶಕ್ತಿಯಿಂದ ಇವನ್ನು ಅನಿರ್ಬಂಧಿತವಾಗಿ ಸೃಜಿಸುತ್ತಾನೆ; ಆದರೆ ಇವು ತಿರುಳಿಲ್ಲದ ಕಾಲ್ಪನಿಕ ಹಾಗೂ ಅವಾಸ್ತವಿಕ ಭಾವನೆಗಳಾಗದೆ ಅರ್ಥಪೂರ್ಣ ಭಾವನೆಗಳಾಗಿ ಯಥಾರ್ಥ ಜ್ಞಾನವನ್ನು ನೀಡಲು ಸಹಾಯಕಾರಿಯಾಗಬೇಕಾದರೆ ವಾಸ್ತವವಿಷಯಗಳೊಂದಿಗೆ ಸಂಬಂಧ ಪಡೆಯಬೇಕು ; ಈ ಸಂಬಂಧದ ಅರಿವು ನಮ್ಮ ಪ್ರಜ್ಞೆಗೆ ಸ್ವಯಂಗೋಚರವಾಗುತ್ತದೆಯೇ ವಿನಾ ತಾರ್ಕಿಕ ತೀರ್ಮಾನವಾಗಿ ಲಭಿಸುವುದಿಲ್ಲ. ಈ ಭಾವನೆಗಳ ಯಾಥಾರ್ಥ್ಯಕ್ಕೆ ಈ ಸಂಬಂಧವೊಂದೇ ಸಾಲದು ಇವು ಯಾವ ರೀತಿಯಲ್ಲೂ ಅನುಭವಸಿದ್ಧವಾದ ಯಥಾರ್ಥ ವಿಷಯಗಳಿಗೆ ವಿರೋಧವಾಗಿರಬಾರದು ಮತ್ತು ಇವುಗಳಿಂದ ಲಭಿಸುವ ತೀರ್ಮಾನಗಳು ಅನುಭವ ಸಮರ್ಥನೀಯವಾಗಿರಬೇಕು.

ಸಾಮಾನ್ಯವಾಗಿ ಬಹುತೇಕ ವಿಜ್ಞಾನಿಗಳು ರಾಜಕೀಯ ಮತ್ತು ಸಾಮಾಜಿಕ ವ್ಯವಹಾರಗಳಿಂದ ದೂರವಿರುವುದನ್ನು ಕಾಣುತ್ತೇವೆ. ಐನ್‌ಸ್ಟೈನನ ಅಭಿಪ್ರಾಯದಲ್ಲಿ ವಿಜ್ಞಾನಿಗಳು ಮತ್ತು ಇತರ ಬುದ್ಧಿಜೀವಿಗಳು ಈ ವ್ಯವಹಾರಗಳಲ್ಲಿ ನೇರವಾಗಿ ಭಾಗವಹಿಸದಿದ್ದರೂ ಇವುಗಳ ಬಗ್ಗೆ ಆಲೋಚಿಸಿ ನಮ್ಮ ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದು ಅಗತ್ಯ ಎಂದಿತ್ತು. ಲೇಖನ ಮತ್ತು ಸಾರ್ವಜನಿಕ ಭಾಷಣಗಳ ಮೂಲಕ ರಾಜಕೀಯ ಮತ್ತು ಸಾಮಾಜಿಕ ಪ್ರಶ್ನೆಗಳ ಬಗ್ಗೆ ತನ್ನ ಅಭಿಪ್ರಾಯಗಳನ್ನು ಐನ್‌ಸ್ಟೈನ್ ವ್ಯಕ್ತಪಡಿಸುತ್ತಿದ್ದ. ಚಿಕ್ಕಂದಿನಿಂದಲೂ ಸಮಾಜದ ದರಿದ್ರ ಮತ್ತು ಶೋಷಿತ ವರ್ಗಗಳ ಬಗ್ಗೆ ಆತನಿಗೆ ಒಂದು ವಿಧವಾದ ಸಹಜ ಅನುಕಂಪವಿತ್ತು. ಸಮಾಜದಲ್ಲಿ ವರ್ಗವರ್ಗಗಳಿಗಿರುವ ಅಂತರ ಭೇದಭಾವನೆಗಳು, ಆರ್ಥಿಕ ಮತ್ತು ಸಾಮಾಜಿಕ ಶೋಷಣೆ—ಇವನ್ನು ಆತ ಸರ್ವಥಾ ಸಹಿಸುತ್ತಿರಲಿಲ್ಲ. ರಷ್ಯದಲ್ಲಿ ಕಮ್ಯೂನಿಸಂ ತತ್ತ್ವಗಳಿಗನುಸಾರವಾಗಿ ಸ್ಥಾಪಿತವಾದ ಸಮತಾವಾದಿ ಸಮಾಜ ವ್ಯವಸ್ಥೆಯನ್ನು ಆತ ಒಪ್ಪಲಿಲ್ಲ. ಒಂದು ರೀತಿಯ ಪ್ರಜಾಸತ್ತಾತ್ಮಕ ಸಮತಾವಾದದಲ್ಲಿ ಅವನಿಗೆ ನಂಬಿಕೆ ಇತ್ತು ; ನೈತಿಕದೃಷ್ಟಿಯಿಂದ ಈ ವಾದ ಅತಿ ಸಮರ್ಥನೀಯವೆಂದು ಭಾವಿಸಿದ್ದ. ಪ್ರತಿಯೊಬ್ಬನಿಗೂ ಕನಿಷ್ಠ ಜೀವನಸೌಲಭ್ಯಗಳನ್ನು ಒದಗಿಸುವುದು ಸಮಾಜದ ಹೊಣೆ, ಅವನವನ ಶಕ್ತಿಸಾಮರ್ಥ್ಯಾನುಸಾರ ವ್ಯಕ್ತಿತ್ವದ ಬೆಳೆವಣಿಗೆಗೆ ಪ್ರತಿಯೊಬ್ಬನಿಗೂ ಅವಕಾಶವಿರಬೇಕು ; ಅವನ ಮೂಲಹಕ್ಕುಗಳನ್ನು ಯಾವ ವಿಧದಲ್ಲೂ ಕುಂಠಿತಮಾಡದೆ ಅವನ್ನು ಸಂರಕ್ಷಿಸುವುದು ಸಮಾಜ ಮತ್ತು ಸರ್ಕಾರದ ಕರ್ತವ್ಯ ಎಂದು ಅನೇಕ ಸಂದರ್ಭಗಳಲ್ಲಿ ಅವನು ಶ್ರುತಪಡಿಸುವುದಿತ್ತು. ಪ್ರತಿಯೊಬ್ಬ ವ್ಯಕ್ತಿಗೂ ಎಲ್ಲ ವಿಧವಾದ ಸ್ವಾತಂತ್ರ್ಯ, ಅದರಲ್ಲೂ ಅವನಿಗೆ ಇಷ್ಟಬಂದ ಕ್ಷೇತ್ರದಲ್ಲಿ ಅನ್ವೇಷಣೆ ಮಾಡಲು ಮತ್ತು ಅನ್ವೇಷಣೆಯ ತೀರ್ಮಾನಗಳನ್ನು ಅಭಿವ್ಯಕ್ತಪಡಿಸಲು, ಸಂಪೂರ್ಣ ಬೌದ್ಧಿಕ ಸ್ವಾತಂತ್ರ್ಯವಿರಬೇಕೆಂಬುದು ಈತನ ಬಲು ಖಚಿತವಾದ ನಿಲುವು. ಆದ್ದರಿಂದ ವ್ಯಕ್ತಿಸ್ವಾತಂತ್ರ್ಯವಿರೋಧಿಗಳಾದ ಇಟಲಿ ದೇಶದ ಫ್ಯಾಸಿಸ್ಟ್ ಮತ್ತು ಜರ್ಮನಿಯ ನಾಜ಼ಿ ಸರ್ಕಾರಗಳನ್ನು ಈತ ಬಲು ತೀವ್ರವಾಗಿ ಖಂಡಿಸಿದ. ಮಾನವ ಸಹೋದರತ್ವದ ಆದರ್ಶದಲ್ಲಿ ಅವನಿಗೆ ಅಪಾರ ನಂಬಿಕೆ. ಅನೇಕ ಸಂದರ್ಭದಲ್ಲಿ ಅಮೆರಿಕದ ಬಿಳಿಯ ಜನರು ನೀಗ್ರೊಗಳ ಬಗ್ಗೆ ತೋರುತ್ತಿದ್ದ ಅವಹೇಳನ ಮನೋಭಾವವನ್ನು ಸಹಿಸಲಾರದೆ ಖಂಡಿಸುತ್ತಿದ್ದ.

ಸ್ವಭಾವತಃ ಮಾನವ ಹಿತಚಿಂತಕನಾದ ಐನ್‌ಸ್ಟೈನನಿಗೆ ಚಿಕ್ಕಂದಿನಿಂದಲೇ ಮಿಲಿಟರಿ ಶಿಸ್ತು ಎಂದರೆ ಜುಗುಪ್ಸೆ ಮತ್ತು ವಿರೋಧ. ಎರಡು ಮಹಾಯುದ್ಧಗಳಿಂದ ಸಂಭವಿಸಿದ ಅಪಾರ ಕಷ್ಟನಷ್ಟಗಳನ್ನು ಕಣ್ಣಾರೆ ಕಂಡಮೇಲಂತೂ ಈ ಯುದ್ಧ ವಿರೋಧೀಭಾವ ಅತಿಯಾಗಿ ಬಲಗೊಂಡಿತು. ಪ್ರಪಂಚದ ಭವಿಷ್ಯ ಮತ್ತು ಎಲ್ಲ ಜನರ ಹಿತದೃಷ್ಟಿಯಿಂದ ಸಾರ್ವತ್ರಿಕ ನಿಶ್ಶಸ್ತ್ರೀಕರಣ ಅತ್ಯಗತ್ಯ ; ಯುದ್ಧಸಂಭವನೆಯ ಮೂಲ ಕಾರಣಗಳನ್ನೆ ನಿರ್ಮೂಲಗೊಳಿಸಬೇಕು ; ಶಾಂತಿಯನ್ನು ಸ್ಥಾಪಿಸಿ ಅದರ ಪಾಲನೆಗೆ ವಿಶ್ವಸರ್ಕಾರವನ್ನು ಸ್ಥಾಪಿಸಬೇಕು ; ಎಲ್ಲ ರಾಷ್ಟ್ರಗಳೂ ಇದರ ಅಧೀನಕ್ಕೆ ಒಳಪಡಬೇಕು ಎಂದು ಅನೇಕ ಸಲ ಒತ್ತಿ ಒತ್ತಿ ತನ್ನ ಅಭಿಪ್ರಾಯಗಳನ್ನು ತಿಳಿಸಿದ. ರಾಷ್ಟ್ರರಾಷ್ಟ್ರಗಳ ನಡುವೆ ಉದ್ಭವಿಸುವ ಸಮಸ್ಯೆಗಳನ್ನು ವಿಶ್ವಸರ್ಕಾರದ ನೆರವಿನಿಂದ ಶಾಂತಿಯುತವಾಗಿ ಪರಿಹರಿಸಬೇಕು ; ಇಂಥ ಸಂದರ್ಭವಲ್ಲಿ ಮಹಾತ್ಮ ಗಾಂಧಿ ತೋರಿಸಿಕೊಟ್ಟಿರುವ ಶಾಂತಿಮಾರ್ಗವನ್ನು ಅನುಸರಿಸುವುದು ಸೂಕ್ತವೆಂದು ವಾದಿಸಿದ. ಗಾಂಧಿ ಬಗ್ಗೆ ಐನ್‌ಸ್ಟೈನನಿಗೆ ಅಪಾರ ಗೌರವವಿತ್ತು.

ಐನ್‌ಸ್ಟೈನ್ ಜನ್ಮತಃ ಯೆಹೂದಿ. ಆದರೆ ತನ್ನ ಮತ, ಧರ್ಮ ಮತ್ತು ಆಚರಣೆಗಳಿಗೆ ಆತ ಎಂದೂ ಕಟ್ಟು ಬೀಳದೆ ಒಂದು ವಿಧವಾದ ಸ್ವತಂತ್ರ ಮನೋಭಾವವನ್ನೇ ತಳೆದಿದ್ದ. ಸದಾ ಆತ ಒಬ್ಬ ಬುದ್ಧಿಜೀವಿಯಾಗಿಯೇ ಉಳಿದ. ಹೀಗೆಂದಮಾತ್ರಕ್ಕೆ ಅವನು ನಾಸ್ತಿಕನಲ್ಲ. ಅವನಿಗೆ ಎಲ್ಲ ಮತಗಳ ಮೂಲ ಭಾವನೆಗಳ ಬಗ್ಗೆ ಗೌರವವಿತ್ತು. ಮತ, ಧರ್ಮ ಮತ್ತು ದೇವರು ಇವುಗಳ ಬಗ್ಗೆ ಅವನ ಕಲ್ಪನೆಯೇ ಬೇರೆ. ದೇವರು ಎಂದರೆ ಸತ್ಯ ಸೌಂದರ್ಯಗಳ ಮೂರ್ತ

ರೂಪ ಹಾಗೂ ಆಧ್ಯಾತ್ಮಿಕ ಸ್ವರೂಪಿಯಾದ ಶಕ್ತಿ ಎಂಬುದೇ ಅವನ ಕಲ್ಪನೆ. ಈ ಶಕ್ತಿ ಅನುಭವಾತೀತವಲ್ಲ. ವಿಶ್ವ ಹಾಗೂ ನಮ್ಮ ಭಾವನೆಗಳಲ್ಲಿ ನಾವು ಕಾಣುವ ಅದ್ಭುತ ರಚನೆ ಮತ್ತು ಭವ್ಯತೆ ಈ ಆದಿಶಕ್ತಿಯ ಅರಿವನ್ನು ಮೂಡಿಸುತ್ತವೆ. ಇಂಥ ಅರಿವು ನಮ್ಮಲ್ಲಿ ಒಂದು ವಿಧವಾದ ಪೂಜ್ಯ ಅಂದರೆ ಆಸ್ತಿಕ ಮನೋಭಾವವನ್ನು ಉಂಟು ಮಾಡುತ್ತದೆ ಎಂದು ಆತನ ನಂಬಿಕೆ. ಕೇವಲ ಭಯ ಭಾವನೆಯಿಂದಾಗಲಿ ಅಥವಾ ನೀತಿ ಸಂರಕ್ಷಣೆಗಾಗಲೀ ಹುಟ್ಟಿಕೊಂಡ ಮಾತುಗಳು ಅಷ್ಟೇನೂ ಶ್ರೇಷ್ಠ ವಲ್ಲ, ಜೀವನದ ಪರಮಮೌಲ್ಯ ಮತ್ತು ಗುರಿಗಳ ಪ್ರಜ್ಞೆಯನ್ನು ಒದಗಿಸಿ ಅವು ನಮ್ಮ ಅಂತರಾಳದಲ್ಲಿ ರೂಢವಾಗಿ ಆತ್ಮಪರಿಶುದ್ಧತೆಯನ್ನು ಸಾಧಿಸಲು ಸಹಾಯಕ ವಾಗುವ ಮತವೇ ಅತಿ ಶ್ರೇಷ್ಠವೆಂದು ಅವನು ಭಾವಿಸಿದ್ದ. ಸತ್ಯಾನ್ವೇಷಣೆ, ಪರಮ ಮೌಲ್ಯಗಳ ಅರಿವು, ಜೀವನದಲ್ಲಿ ಅವುಗಳ ಸಾಧನೆಗಾಗಿ ಪ್ರಯತ್ನ—ಇದೇ ಧರ್ಮ, ಇದೇ ಆಸ್ತಿಕತೆ ಎಂದು ಅವನ ಭಾವನೆ.

ಇಂದ್ರಿಯಗೋಚರವಾದ ವಿಷಯಗಳನ್ನೆಲ್ಲ ಸುವ್ಯವಸ್ಥಿತವಾಗಿ ಒಟ್ಟುಗೂಡಿಸಿ ಅವನ್ನು ಅರ್ಥಪೂರ್ಣವಾಗಿ ವಿವರಿಸುವುದೇ ವಿಜ್ಞಾನದ ಗುರಿ. ಇದನ್ನು ಸಾಧಿಸಲು ವಿಜ್ಞಾನ ಅನುಸರಿಸುವ ವಿಧಾನ ನಮಗೆ ಜೀವನದ ಪರಮಾಕಾಂಕ್ಷೆಗಳ ಅರಿವನ್ನು ಕೊಡಲು ಅಶಕ್ಯ. ಈ ಅರಿವನ್ನು ಒದಗಿಸುವ ಅನುಭವಮೂಲವೇ ಬೇರೆ ಎಂಬುದು ಐನ್‌ಸ್ಟೈನನ ಅಭಿಪ್ರಾಯ. ಈ ದೃಷ್ಟಿಯಿಂದ ಅವನು ವಿಜ್ಞಾನ ಮತ್ತು ಆಸ್ತಿಕತೆಗಳ ಸಂಬಂಧವನ್ನು ವಿವೇಚಿಸಿ ಅವುಗಳ ನಡುವೆ ಯಾವ ವಿಧವಾದ ತಿಕ್ಕಾಟಕ್ಕೂ ಆಸ್ಪದವಿಲ್ಲ ; ಅವೆರಡೂ ಪರಸ್ಪರ ಪೂರಕ ; ಎರಡನ್ನೂ ಸಂಗತ ಗೊಳಿಸಿ ಸಮಗ್ರಜೀವನ ದರ್ಶನವನ್ನು ರೂಪಿಸುವುದು ಸಾಧ್ಯ ಮತ್ತು ಅತ್ಯಗತ್ಯ ಎಂದು ತನ್ನ ಹಲವಾರು ಲೇಖನಗಳಲ್ಲಿ ಬರೆದಿದ್ದಾನೆ.

ಐನ್‌ಸ್ಟೈನ್ ತನ್ನ ಅನುಭವ, ಚಿಂತನೆ ಮತ್ತು ಅನ್ವೇಷಣೆಗಳ ಬಗ್ಗೆ ಮಾತ ನಾಡುತ್ತ ತನ್ನ ಇಡೀ ಜೀವನಕ್ಕೆ ಸ್ಫೂರ್ತಿಯನ್ನು ಒದಗಿಸಿ ಮಾರ್ಗದರ್ಶನ ನೀಡಿದ ಉದಾತ್ತ ಮೌಲ್ಯಗಳ ಬಗ್ಗೆ ಈ ರೀತಿ ನುಡಿದಿದ್ದಾನೆ: ''ನನ್ನ ಜೀವನದ ಹಾದಿ ಯನ್ನು ಬೆಳಗಿಸಿ ಹಸನ್ಮುಖಿಯಾಗಿ ಮತ್ತೆ ಮತ್ತೆ ಜೀವನವನ್ನು ಎದುರಿಸಲು ಧೈರ್ಯ ತಂದುಕೊಟ್ಟ ಪರಮ ಮೌಲ್ಯಗಳೆಂದರೆ ದಯೆ, ಸೌಂದರ್ಯ ಮತ್ತು ಸತ್ಯ.'' ನೋಡಿ—ಸಾಪೇಕ್ಷಸಿದ್ಧಾಂತ. (ಕೆ.ಎಸ್‌ಆರ್‌ಐ.)

**ಐನ್‌ಸ್ಟೈನಿಯಂ :** ನಿಸರ್ಗದಲ್ಲಿ ಇಲ್ಲದಿರುವ ಆದರೆ ಕೃತಕವಾಗಿ ಸೃಷ್ಟಿ ಮಾಡಲಾಗಿರುವ ಯುರೇನಿಯಂಅತೀತ (ಟ್ರಾನ್ಸ್‌ಯುರೇನಿಯಂ) ಧಾತುಗಳಲ್ಲಿ ಒಂದು. ಪರಮಾಣು ಸಂಖ್ಯೆ 99. ಸಂಕೇತ Es. ಅತಿಸ್ಥಿರ ಸಮಸ್ಥಾನಿಯ ಭಾರ ಸಂಖ್ಯೆ 254. ಎಲೆಕ್ಟ್ರಾನಿಕ್ ವಿನ್ಯಾಸ ಪ್ರಾಯಶಃ

$$1s^22s^22p^63s^23p^63d^{10}4s^24p^64d^{10}4f^{14}5s^25p^65d^{10}5f^{11}6s^26p^67s^2$$

ಜಗದ್ವಿಖ್ಯಾತ ವಿಜ್ಞಾನಿ ಆಲ್ಬರ್ಟ್ ಐನ್‌ಸ್ಟೈನನ ಜ್ಞಾಪಕಾರ್ಥವಾಗಿ ಈ ಧಾತುವಿಗೆ ಈ ಹೆಸರು ಕೊಡಲಾಗಿದೆ.

ಪರಮಾಣು ಸಂಖ್ಯೆ 99 ಮತ್ತು 100 ಇರುವ ಐನ್‌ಸ್ಟೈನಿಯಂ ಮತ್ತು ಫರ್ಮಿಯಂ ಧಾತುಗಳನ್ನು ಕಂಡುಹಿಡಿದ ಪ್ರಸಂಗ ಅನುದ್ದೇಶಿತ ಮತ್ತು ಅನಿರೀಕ್ಷಿತ ಆವಿಷ್ಕಾರಕ್ಕೆ ಒಂದು ಸೊಗಸಾದ ನಿದರ್ಶನ. 1952ರ ನವೆಂಬರಿನಲ್ಲಿ ಪೆಸಿಫಿಕ್ ಸಾಗರದ ಒಂದು ಚಿಕ್ಕ ದ್ವೀಪದ ಮೇಲೆ ನಡೆಸಿದ ಮೊತ್ತಮೊದಲ ಪರೀಕ್ಷಾರ್ಥ ಉಷ್ಣಬೈಜಿಕ (ಥರ್ಮೊನ್ಯೂಕ್ಲಿಯರ್) ಆಸ್ಫೋಟನೆಯ (ಹೈಡ್ರೊಜನ್ ಬಾಂಬ್) ಪರಿಣಾಮವಾಗಿ ಮೇಲೆದ್ದ ಸ್ಫೋಟನ ಮೇಘಗಳ (ಎಕ್ಸ್‌ಪ್ಲೋಷನ್ ಕ್ಲೌಡ್ಸ್) ಮೂಲಕ ಹಾರಾಟ ನಡೆಸಿದ ವಿಮಾನಗಳು ಸೋಸುವ ಕಾಗದದ (ಫಿಲ್ಟರ್ ಪೇಪರ್) ಮೇಲೆ ಸಂಗ್ರಹಿಸಿದ ಅವಶೇಷ ವಸ್ತುವನ್ನು ಪರೀಕ್ಷೆಗಾಗಿ ಅಮೆರಿಕದ ವಿವಿಧ ಸಂಶೋಧನಾಲಯಗಳಿಗೆ ಕಳಿಸಲಾಯಿತು. ಅದರಲ್ಲಿ ಭಾರವಾದ ಕೆಲವು ಹೊಸ ಪ್ಲುಟೋನಿಯಂ ಸಮಸ್ಥಾನಿಗಳು (ಐಸೊಟೋಪ್ಸ್) ಕಂಡುಬಂದುದರಿಂದ ಇನ್ನೂ ಭಾರವಾದ ಧಾತುಗಳು ಸಂಶ್ಲೇಷಿತವಾಗಿರಬಹುದೆಂಬ ಸಂದೇಹ ಉಂಟಾಯಿತು. ಅದನ್ನು ಪರೀಕ್ಷಿಸಿ ನೋಡುವ ಸಲುವಾಗಿ ಸ್ಫೋಟನೆ ನಡೆದ ಸ್ಥಳದ ನೆರೆಹೊರೆಯ ಹವಳದ ದಿಬ್ಬಗಳಿಂದ ನೂರಾರು ಪೌಂಡುಗಳಷ್ಟು ಹವಳವನ್ನು ಸಂಗ್ರಹಿಸಿ ತರಲಾಯಿತು. ಅದರಲ್ಲಿ 99 ಮತ್ತು 100ನೆಯ ಧಾತುಗಳನ್ನು ಘಿಯಾರ್ಸೊ ಮತ್ತು ಸಂಗಡಿಗರು ಖಚಿತವಾಗಿ ಗುರುತಿಸಿದರು.

ಉಷ್ಣಬೈಜಿಕ ಆಸ್ಫೋಟನೆಯ ಸಂದರ್ಭದಲ್ಲಿ ಯುರೇನಿಯಂ–238 ಬೀಜ ಒಂದಾದ ಮೇಲೊಂದರಂತೆ ನ್ಯೂಟ್ರಾನುಗಳನ್ನು ಹೀರಿಕೊಂಡು ಕ್ಷಣಮಾತ್ರದಲ್ಲಿ ಅತ್ಯಂತ ಭಾರವಾದ ಯುರೇನಿಯಂ ಸಮಸ್ಥಾನಿಗಳಾಗಿ ಪರಿವರ್ತನೆಗೊಳ್ಳುತ್ತದೆ. ಭಾರ 255ರ ವರೆಗೂ ಉಳ್ಳ ಈ ಯುರೇನಿಯಂ ಬೀಜಗಳು ಎಲೆಕ್ಟ್ರಾನುಗಳನ್ನು ಹೊರಹಾಕಿ ಪ್ಲುಟೋನಿಯಂ, ಅಮೆರಿಸಿಯಂ, ಕ್ಯೂರಿಯಂ, ಬರ್ಕೇಲಿಯಂ, ಕ್ಯಾಲಿಫೋರ್ನಿಯಂ ಮತ್ತು 99, 100 ಭಾರದ ಐನ್‌ಸ್ಟೈನಿಯಂ, ಫರ್ಮಿಯಂ ಧಾತು ಗಳ ಸಮಸ್ಥಾನಿಗಳಾಗಿ ಮಾರ್ಪಡುತ್ತವೆ.

1954ರ ವರೆಗೆ ಈ ಫಲಿತಾಂಶಗಳನ್ನು ಗೋಪ್ಯವೆಂದು ವರ್ಗೀಕರಿಸಲಾಗಿತ್ತು. 1954ರಲ್ಲಿ ಸಾರ್ವಜನಿಕರ ತಿಳಿವಳಿಕೆಗಾಗಿ ಇವನ್ನು ಪ್ರಕಟಿಸುವ ವೇಳೆಗೆ ಈ ಧಾತು ವನ್ನು ಇನ್ನೂ ಇತರ ವಿಧಾನಗಳಿಂದಲೂ ತಯಾರಿಸಲಾಗಿತ್ತು. ಅವುಗಳಲ್ಲಿ ಮುಖ್ಯ ವಾದುವೆಂದರೆ ಪ್ಲುಟೋನಿಯಂ ಧಾತುವನ್ನು 2—3 ವರ್ಷಗಳ ಕಾಲ ಸತತವಾಗಿ ರಿಯಾಕ್ಟರುಗಳಲ್ಲಿ ಉತ್ಪತ್ತಿಯಾಗುವ ತೀಕ್ಷ್ಣವಾದ ನ್ಯೂಟ್ರಾನ್ ಪ್ರವಾಹಕ್ಕೆ ಗುರಿ ಪಡಿಸುವುದು. ಈ ವಿಧಾನವಲ್ಲದೆ, ಯುರೇನಿಯಂ-238ನ್ನು ನೈಟ್ರೊಜನ್ ಬೀಜ ಗಳಿಂದ ತಾಡಿಸಿಯೂ ಐನ್‌ಸ್ಟೈನಿಯಮನ್ನು ಉತ್ಪತ್ತಿಮಾಡಿದ್ದಾರೆ.

246ರಿಂದ ಪ್ರಾರಂಭವಾಗಿ 256ರವರೆಗಿನ ಒಟ್ಟು ಹನ್ನೊಂದು ಐನ್‌ಸ್ಟೈನಿಯಂ ಸಮಸ್ಥಾನಿಗಳು ಪತ್ತೆಯಾಗಿವೆ. ಇವುಗಳಲ್ಲಿ ಬಹುಪಾಲು ಅಲ್ಪಾಯುಗಳು. ಆದರೆ Es-253 ಮತ್ತು Es-254 ತಕ್ಕಮಟ್ಟಿಗೆ ದೀರ್ಘಾಯುಗಳು. ಮೊದಲನೆಯದರ ಅರ್ಧಾಯು 20 ದಿವಸಗಳು ; ಎರಡನೆಯದರದ್ದು ಸುಮಾರು 300 ದಿವಸಗಳು. ಎರಡೂ ಆಲ್ಫ ವಿಸರ್ಜಕಗಳು (ಆಲ್ಫ ಎಮಿಟರ್ಸ್), ಅಂದರೆ ಆಲ್ಫ ಕಣಗಳನ್ನು ಹೊರಸೂಸಿ ಕ್ಷಯಿಸುತ್ತವೆ. ಮೊತ್ತಮೊದಲ ಬಾರಿ ಐನ್‌ಸ್ಟೈನಿಯಮನ್ನು ಗುರು ತಿಸಿದಾಗ ಉತ್ಪತ್ತಿಯಾಗಿದ್ದುದು ಕೇವಲ ಎಣಿಸಲು ಬರುವಷ್ಟು ಪರಮಾಣುಗಳು. ಅದಕ್ಕಾಗಿ ವಿಶೇಷ ವಿಧಾನಗಳನ್ನು ಬಳಸಲಾಯಿತು. ಆದರೆ ದೀರ್ಘಾಯುವಿನ ಎರಡು ಸಮಸ್ಥಾನಿಗಳು ಈಗ ಪತ್ತೆಯಾಗಿರುವುದರಿಂದ ಐನ್‌ಸ್ಟೈನಿಯಮನ್ನು ಗಣನೀಯ ಪ್ರಮಾಣದಲ್ಲಿ ತಯಾರಿಸುವುದು ಸಾಧ್ಯವಾಗಿದೆ. (ಜಿ.ಆರ್.ಎಲ್.)

**ಐಪೋಮಿಯ :** ಕನ್ವಾಲ್ವುಲೇಸಿ ಕುಟುಂಬಕ್ಕೆ ಸೇರಿದ ಒಂದು ದೊಡ್ಡ ಸಸ್ಯಜಾತಿ. ಬಹುಪಾಲು ಉಷ್ಣ ಮತ್ತು ಸಮಶೀತೋಷ್ಣ ವಲಯಗಳ ಮೂಲ ವಾಸಿಗಳು. ಈ ಜಾತಿಯಲ್ಲಿ ಏಕಋತುವಿನ ಸಸ್ಯಗಳಿಂದ ಹಿಡಿದು ಬಹುವಾರ್ಷಿಕ ಸಸ್ಯಗಳವರೆಗೆ ಮೂಲಿಕೆ, ಬಳ್ಳಿ, ಪೊದೆ ಮತ್ತು ಮರದಂತಿರುವ ಸಸಿಗಳು ಸೇರಿವೆ. ಅವುಗಳಲ್ಲಿ ಸುಂದರವಾಗಿ ಹೂ ಬಿಡುವ ಕೆಲವು ಬಳ್ಳಿಗಳು ತೋಟಗಾರಿಕೆಯಲ್ಲಿ ಪ್ರಾಮುಖ್ಯ ಪಡೆದಿವೆ. ಈ ಬಳ್ಳಿಗಳ ಕಾಂಡದಲ್ಲಿ ಅಂಟಾದ ದ್ರವವಿರುತ್ತದೆ. ಈ ಸಸ್ಯಗಳು ತಮ್ಮ ಕಾಂಡಗಳ ಸಹಾಯದಿಂದ ಹಬ್ಬುತ್ತವೆ. ಎಲೆಗಳಿಗೆ ತೊಟ್ಟುಂಟು. ಜೋಡಣೆ ಪರ್ಯಾಯವಾಗಿ. ಆಕಾರ ಹೃದಯ ಅಥವಾ ಕರನೆಯಂತೆ. ಅಂಚುನಯ ಅಥವಾ ಗರಗಸದಂತೆ ಮುಳ್ಳುಮುಳ್ಳು. ತುದಿ ಸಾಮಾನ್ಯವಾಗಿ ಮೊನಚು ಅಥವಾ ಲಂಬಾಗ್ರ. ಹೂ ಒಂಟಿಯಾಗಿಯೂ ಗೊಂಚಲಾಗಿಯೂ ಇರುತ್ತದೆ. ಆಕಾರ ಅಲಿಕೆ ಯಂತೆ ಅಥವಾ ಗಂಟೆಯಂತೆ. ಪ್ರಭೇದಗಳನ್ನನುಸರಿಸಿ ಹೂವಿನ ಬಣ್ಣ. ಪುಷ್ಪಪತ್ರ ಸಮೂಹ ಆಳವಾಗಿ ಭಾಗವಾಗಿರುತ್ತದೆ. ಕೂಡುಹೂದಳ ಐದು ಭಾಗವಾಗಿದೆ. ಕೇಸರ ಗಳು 5 ; 2 ರಿಂದ 4 ಕೋಶದ ಅಂಡಾಶಯವಿದೆ. ಶಲಾಕಾಗ್ರ ಸ್ಪಷ್ಟಗೊಂಚಲು ಮಾದರಿಯದು. ಪರಾಗಸ್ಪರ್ಶ ಹಕ್ಕಿಗಳಿಂದ ಅಥವಾ ಗಾಳಿಯಿಂದ ಆಗುತ್ತದೆ. ಹಣ್ಣು ಸಂಪುಟ (ಕ್ಯಾಪ್ಸೂಲ್) ಮಾದರಿಯದು.

ಐಪೋಮಿಯ ಜಾತಿಯಲ್ಲಿ ಸುಮಾರು 400 ಪ್ರಭೇದಗಳಿವೆ. ಅವುಗಳಲ್ಲಿ 50 ಪ್ರಭೇದಗಳು ಭಾರತದಲ್ಲಿ ಬೆಳೆಯುತ್ತವೆ. ಕೆಲವು ಪ್ರಭೇದಗಳನ್ನು ಈಚೆಗೆ ಕ್ವಾಮೊಕ್ಲಿಟ್, ಮಿನಾ, ಮೆರಿಮಿಯ ಮುಂತಾದ ಅನ್ಯಜಾತಿಗಳಿಗೆ ಸೇರಿಸಲಾಗಿದೆ. ತೋಟಗಾರಿಕೆಯಲ್ಲಿ ಪ್ರಾಮುಖ್ಯ ಪಡೆದಿರುವ ಹನ್ನೊಂದು ಪ್ರಭೇದಗಳನ್ನು ಇಲ್ಲಿ ಪರಿಶೀಲಿಸಬಹುದು.

1 ಐಪೋಮಿಯ ಟ್ರೈಕಲರ್ : ಈ ಪ್ರಭೇದದ ಹೂ ನಸುಗೆಂಪು, ಕೆಂಪು ಮತ್ತು ನೀಲಿ ಬಣ್ಣಗಳಿಂದ ಕೂಡಿದೆ. ಇದು ಮೆಕ್ಸಿಕೋ ದೇಶದ ಮೂಲವಾಸಿ. ಈಗ ಉಷ್ಣವಲಯದ ಎಲ್ಲ ಭಾಗಗಳಿಗೂ ವ್ಯಾಪಿಸಿದೆ. ಬಹುವಾರ್ಷಿಕವಾದ ಈ ಬಳ್ಳಿ ಅತಿಯಾಗಿ ಬೆಳೆದು ವಿಸ್ತಾರವಾಗಿ ಹಬ್ಬುತ್ತದೆ. ಕೊಳವೆಯಾಕಾರದ ಕಾಂಡದಲ್ಲಿ ಅಲ್ಲಲ್ಲಿ ಕಡುಗೆಂಪು ಬಣ್ಣವಿದೆ. ಎಲೆ ದಟ್ಟ ಹಸಿರು. ಈ ಪ್ರಭೇದದ ಸಸ್ಯಗಳು ಸೆಪ್ಟೆಂಬರ್ ತಿಂಗಳಿನಿಂದ ಡಿಸೆಂಬರ್ ತಿಂಗಳವರೆಗೆ ಹೂ ಬಿಡುತ್ತವೆ. ಹೂಗೊಂಚಲು ತುದಿಯಲ್ಲಿದ್ದು ಪ್ರತಿ ಹೂಗೊಂಚಲಿನಲ್ಲಿ 3 ರಿಂದ 4 ಹೂಗಳಿರುತ್ತವೆ.

ಈ ಸಸ್ಯ ಬಹುವಾರ್ಷಿಕವಾದರೂ ಪ್ರತಿವರ್ಷ ಕಳೆಗುಂದುವುದರಿಂದ, ಇದನ್ನು ವಾರ್ಷಿಕವಾಗಿ ಬೆಳೆಸುವುದು ರೂಢಿಯಲ್ಲಿದೆ. ಇದನ್ನು ಬೀಜಗಳಿಂದ ವೃದ್ಧಿ ಮಾಡಬಹುದು. ಇದರ ಬೇಸಾಯಕ್ಕೆ ಭೂಮಿ ಅಷ್ಟು ಫಲವತ್ತಾಗಿರಬೇಕಾಗಿಲ್ಲ.

2 ಐಪೋಮಿಯ ಕ್ವಾಮೊಕ್ಲಿಟ್ : ಈ ಪ್ರಭೇದಕ್ಕೆ ಸೈಪ್ರೆಸ್ ವೈನ್, ಇಂಡಿಯನ್ ಪಿಂಕ್ ಎಂಬ ಸಾಮಾನ್ಯ ಹೆಸರುಗಳು ಬಳಕೆಯಲ್ಲಿವೆ. ಇದು ಏಕ ಋತುವಿನ ಹಬ್ಬುಬಳ್ಳಿ. ಕಾಂಡ ಸಣ್ಣದಾಗಿ ಸುಮಾರು 20′ ಎತ್ತರ ಹಬ್ಬುತ್ತದೆ. ಎಲೆಗೆ ಚಿಕ್ಕ ತೊಟ್ಟಿರುತ್ತದೆ ಅಥವಾ ತೊಟ್ಟಿಲ್ಲದೆ ಇದ್ದು ಗರಿ ರೂಪದಲ್ಲಿ ಭಾಗಿತ ವಾಗಿರುತ್ತದೆ. ಹೂಗೊಂಚಲಿನಲ್ಲಿ ಹಲವು ಹೂಗಳಿರುತ್ತವೆ. ಗೊಂಚಲ ತೊಟ್ಟು ಹೂವಿನ ತೊಟ್ಟಿಗಿಂತ ಉದ್ದ. ಹೂ 1″ ರಿಂದ 1½″ ಉದ್ದ. ಬಣ್ಣ ಕೇಸರಿ. ಆಕಾರ ತಟ್ಟೆಯಂತೆ. ಈ ಸಸ್ಯ ಮಳೆಗಾಲದಲ್ಲಿ ಹೂ ಬಿಡುತ್ತದೆ. ಡಿಸೆಂಬರ್ ತಿಂಗಳಲ್ಲಿ ಫಲ ಕೊಡುತ್ತದೆ. ಇದು ಅಮೆರಿಕದ ಉಷ್ಣಪ್ರದೇಶದ

ಮೂಲವಾಸಿ. ಈಗ ಇದು ಉಷ್ಣವಲಯದ ಎಲ್ಲ ಭಾಗಗಳಿಗೆ ವ್ಯಾಪಿಸಿದೆ. ಇದನ್ನು ಬೀಜಗಳಿಂದ ವೃದ್ಧಿ ಮಾಡಬಹುದು.

ಆಯುರ್ವೇದೀಯ ಔಷಧವಾಗಿ ಈ ಸಸ್ಯ ಪ್ರಾಮುಖ್ಯ ಪಡೆದಿದೆ.

3 ಐಪೋಮಿಯ ಹಾರ್ಸ್‌ಫಾಲಿಯೆ : ಈ ಸಸ್ಯವನ್ನು ಮೊದಲ ಬಾರಿಗೆ ಬೆಳೆಸಿದ ಶ್ರೀಮತಿ ಚಾರಲ್ಸ್ ಹಾರ್ಸ್‌ಫಾಲಳ ಜ್ಞಾಪಕಾರ್ಥವಾಗಿ ಇದಕ್ಕೆ ಈ ಹೆಸರು ಕೊಡಲಾಗಿದೆ. ಇದು ಎತ್ತರವಾಗಿ ಬೆಳೆಯುವ ಬಹುವಾರ್ಷಿಕ ಬಳ್ಳಿ; ಎಲೆ ಹಸ್ತಾಕಾರ. ಒಂದು ಎಲೆಯಲ್ಲಿ 5 ರಿಂದ 7 ಕಿರು ಎಲೆಗಳು ಇರುತ್ತವೆ; ಕಿರು ಎಲೆ ಭರ್ಜಿಯಾಕಾರ, ಕದಿರಿನಾಕಾರ. ಗಾತ್ರದಲ್ಲಿ ದಪ್ಪ. ಅಂಚು ನಯ. ತುದಿ ಲಂಬಾಗ್ರ. ಹೂಗೊಂಚಲು ಮಧ್ಯಾರಂಭಿ. ಹೂಗೊಂಚಲಿನ ತೊಟ್ಟು ಹೂ ತೊಟ್ಟಿನಷ್ಟೆ ಉದ್ದ ಅಥವಾ ಹೂತೊಟ್ಟಿಗಿಂತ ಸ್ವಲ್ಪ ಉದ್ದ. ಸಮವಾಗಿರುವ 5 ಪುಷ್ಪಪತ್ರಗಳೂ 5 ಕೂಡು ಹೂದಳಗಳೂ ಇವೆ. ಬಣ್ಣ ಗುಲಾಬಿ. ಭಾರತ ದೇಶದಲ್ಲಿ ಈ ಸಸ್ಯ ಚೆನ್ನಾಗಿ ಫಲಕೊಡುತ್ತಿಲ್ಲ. ಈಗ ಉಷ್ಣವಲಯದ ಎಲ್ಲ ಭಾಗ ಗಳಲ್ಲೂ ಇದರ ಬೇಸಾಯವಿದೆ. ಈ ಸಸ್ಯವನ್ನು ಬೇರುತುಂಡುಗಳಿಂದ ವೃದ್ಧಿ ಮಾಡಬಹುದಾದರೂ ಗಿಡ ಬೇಗ ಅಂಟದು.

4 ಐಪೋಮಿಯ ಲಿಯರಿಯೈ : ಸಿಲೋನ್ ದೇಶದಲ್ಲಿ ಸಸ್ಯಗಳನ್ನು ಸಂಗ್ರಹಣೆ ಮಾಡಿದ ಲಿಯರ್ ಮಹಾಶಯನ ಗೌರವಾರ್ಥವಾಗಿ ಈ ಪ್ರಭೇದಕ್ಕೆ ಈ ಹೆಸರು ಬಂದಿದೆ. ಶೀಘ್ರವಾಗಿ ಮತ್ತು ಎತ್ತರವಾಗಿ ಬೆಳೆಯುವ ಈ ಸಸ್ಯದ ಬುಡ ಗಟ್ಟಿ ಯಾಗಿದೆ. ತುದಿ ನವುರಾದ ರೋಮಗಳಿಂದ ಕೂಡಿದೆ. ಉದ್ದವಾದ ತೊಟ್ಟಿರುವ ಎಲೆ ಕರನೆಯಾಕಾರದ್ದು. ಅಂಚು ನಯ, ಕೆಲವು ಸಾರಿ 3 ರಿಂದ 5 ಭಾಗವಾಗಿರು ತ್ತದೆ. ತುದಿ ಮೊನಚು, ಬುಡದಲ್ಲಿನ ನಾಭಿ ಆಳವಾಗಿರುತ್ತದೆ. ಮೇಲು ಮತ್ತು ತಳಭಾಗಗಳಲ್ಲಿ ನಯವಾದ ರೋಮಗಳಿವೆ. ಹೂಗೊಂಚಲಿನಲ್ಲಿ 5 ಅಥವಾ ಅದಕ್ಕಿಂತ ಹೆಚ್ಚು ಹೂಗಳಿವೆ. ಅವುಗಳ ಬಣ್ಣ ಊದಾ ಮತ್ತು ನೀಲಿ ಮಿಶ್ರಣದ್ದು. ಕೂಡು ಹೂದಳದ ಮೇಲೆ 5 ನಸುಗೆಂಪು ಗೆರೆಗಳು ಇರುತ್ತವೆ. ಈ ಸಸ್ಯ ಆಗಸ್ಟ್ ತಿಂಗಳಿಂದ ಡಿಸೆಂಬರ್ ತಿಂಗಳವರೆಗೆ ಹೂ ಬಿಡುತ್ತದೆ. ಇದು ದಕ್ಷಿಣ ಅಮೆರಿಕದ ಮೂಲವಾಸಿ. ಈಗ ಉಷ್ಣ ಮತ್ತು ಸಮಶೀತೋಷ್ಣವಲಯಗಳಲ್ಲಿ ವ್ಯಾಪಿಸಿದೆ. ಈ ಸಸ್ಯವನ್ನು ಬೀಜಗಳಿಂದ ವೃದ್ಧಿ ಮಾಡಬಹುದು. ಮಳೆಗಾಲದ ಪ್ರಾರಂಭ ಬೀಜ ಬಿತ್ತಲು ಯೋಗ್ಯವಾದ ಕಾಲ.

5 ಐಪೋಮಿಯ ಪಾಮೇಟ : ಈ ಸಸ್ಯ ಹಸ್ತಾಕಾರದ ಎಲೆಗಳನ್ನು ಹೊಂದಿರುವುದರಿಂದ ಇದಕ್ಕೆ ಈ ಹೆಸರು. ರೈಲ್ವೆ ಬಳ್ಳಿ ಎಂಬ ಮತ್ತೊಂದು ಹೆಸರೂ ಬಳಕೆಯಲ್ಲಿದೆ. ಇದು ಬಹುವಾರ್ಷಿಕ. ಕಾಂಡದ ಮೇಲುಭಾಗದಲ್ಲಿ ರೋಮಗಳಿವೆ. ಎಲೆ ಹಸ್ತಾಕಾರ. ಒಂದು ಎಲೆಯಲ್ಲಿ 5 ರಿಂದ 7 ಕಿರು ಎಲೆ



ಐಪೋಮಿಯ ಡಿಜಿಟಾಟ

ಗಳು ಇರುತ್ತವೆ. ಕಿರು ಎಲೆಗಳು ಭರ್ಜಿಯಾಕಾರದಲ್ಲಿ ಅಥವಾ ಕದಿರಿನ ಆಕಾರದಲ್ಲಿ ಇವೆ. ಅಂಚು ನಯ. ತುದಿ ಮೊನಚು. ಹೂಗೊಂಚಲು 2 ರಿಂದ 3 ಹೂಗಳಿ ರುವ ಮಧ್ಯಾರಂಭಿ. ಹೂವು ಗಂಟೆಯಾಕಾರವಾಗಿದೆ. ಬಣ್ಣ ನಸುಗೆಂಪು.

ಈ ಪ್ರಭೇದದ ಸಸ್ಯ ವರ್ಷ ಪೂರ್ತಿ ಹೂ ಮತ್ತು ಹಣ್ಣುಗಳನ್ನು ಬಿಡುತ್ತದೆ. ಇದನ್ನು ಬಳ್ಳಿ ತುಂಡುಗಳಿಂದ ಸುಲಭವಾಗಿ ವೃದ್ಧಿಮಾಡಬಹುದು. ಕಾಂಡದ ಮೇಲಿರುವ ಗಂಟುಗಳು ಭೂಮಿಯ ಸಂಪರ್ಕಕ್ಕೆ ಬಂದಾಗ ಸಹಜವಾಗಿ ಬೇರು ಬಿಡುತ್ತವೆ.

6 ಐಪೋಮಿಯ ಕಾರ್ನಿಯ : ಈ ಪ್ರಭೇದದ ಹೂ ಮಾಂಸದ ಬಣ್ಣ ದ್ದಾದುದರಿಂದ ಇದಕ್ಕೆ ಈ ಹೆಸರು. ಕಾಂಡ ದಪ್ಪ ; ಬಹುವಾಗಿ ಕವಲೊಡೆದು ವಿಶಾಲವಾಗಿ ಹರಡಿಕೊಂಡಿರುತ್ತದೆ. ಕಾಂಡದಲ್ಲಿ ಅಂಟಾದ ದ್ರಾವಣವಿದೆ. ಈ ಸಸ್ಯ ಚಳಿಗಾಲವನ್ನು ಬಿಟ್ಟು ಉಳಿದ ಎಲ್ಲ ಕಾಲಗಳಲ್ಲೂ ಹೂ ಬಿಡುತ್ತದೆ. ಇದು ದಕ್ಷಿಣ ಅಮೆರಿಕದ ಮೂಲವಾಸಿ. ಇದನ್ನು ಬಳ್ಳಿ ತುಂಡುಗಳಿಂದ ವೃದ್ಧಿಮಾಡ ಬಹುದು. ಎಲೆಗಳು ಜಾನುವಾರುಗಳಿಗೆ ವಿಷಕರವಾದದ್ದು.

7 ಐಪೋಮಿಯ ವಿಟಿಫೋಲಿಯ : ಇದರ ಎಲೆ ದ್ರಾಕ್ಷಿ ಎಲೆಯಂತೆ ಇರುವುದರಿಂದ ಇದಕ್ಕೆ ಈ ಹೆಸರು. ವಿಶಾಲವಾಗಿ ಬೆಳೆದು ಸದಾ ಹಸಿರಾಗಿರುವ ಬಹುವಾರ್ಷಿಕ ಬಳ್ಳಿಯಿದು. ಈ ಸಸ್ಯ ಅಕ್ಟೋಬರ್ ತಿಂಗಳಿಂದ ಮಾರ್ಚ್ ತಿಂಗಳವರೆಗೆ ಹೂ ಬಿಡುತ್ತದೆ. ಹೂವಿನ ಬಣ್ಣ ಗಂಧಕದ ಹಳದಿ. ಹಣ್ಣು ನಾಲ್ಕು ಬೀಜವಿರುವ ಸಂಪುಟದ ಮಾದರಿಯದು. ಬಳ್ಳಿ ತುಂಡುಗಳಿಂದ ಸುಲಭವಾಗಿ ಈ ಸಸ್ಯವನ್ನು ವೃದ್ಧಿಮಾಡಬಹುದು. ಎಲೆಗಳಿಗೆ ಉತ್ತಮ ಔಷಧಿ ಗುಣಗಳಿವೆ.

8 ಐಪೋಮಿಯ ಕಾಕ್‌ಸಿನಿಯ : ಹೂ ಕಡುಗೆಂಪು ಬಣ್ಣದಿಂದ ಕೂಡಿರುವುದ ರಿಂದ ಈ ಹೆಸರು. ಇದು ದುರ್ಬಲ ಕಾಂಡದ ವಾರ್ಷಿಕ ಬಳ್ಳಿ. ಈ ಸಸ್ಯ ಮಳೆ ಗಾಲದಲ್ಲಿ ಹೂಬಿಟ್ಟು ಅಕ್ಟೋಬರ್, ನವೆಂಬರ್ ತಿಂಗಳುಗಳಲ್ಲಿ ಹಣ್ಣು ಕೊಡು ತ್ತದೆ. ಇದು ಮೆಕ್ಸಿಕೋ ಮತ್ತು ಅರಿಜೋನ ದೇಶಗಳ ಮೂಲವಾಸಿ. ಈಗ ಭಾರತದ ಎಲ್ಲ ಭಾಗಗಳಲ್ಲೂ ಬೇಸಾಯದಲ್ಲಿದೆ. ಇದನ್ನು ಬೀಜಗಳಿಂದ ಸುಲಭವಾಗಿ ವೃದ್ಧಿಮಾಡಬಹುದು. ಈ ಸಸ್ಯ ಔಷಧಿಯ ಪ್ರಾಮುಖ್ಯ ಪಡೆದಿದೆ.

9 ಐಪೋಮಿಯ ಲೊಬೇಟ : ಎಲೆಗಳು ಭಾಗಿತವಾಗಿರುವುದರಿಂದ ಇದಕ್ಕೆ ಈ ಹೆಸರು. ಇದು ಕುಳ್ಳಾಗಿ, ಶೀಘ್ರವಾಗಿ ಬೆಳೆಯುವ ವಾರ್ಷಿಕ ಬಳ್ಳಿ. ಹೂಗಳ ಬಣ್ಣ ಕಡುಗೆಂಪು ಅಥವಾ ಕಿತ್ತಲೆ. ಅರಳಿದ ಅನಂತರ ಇವು ಹಳದಿ ಬಣ್ಣಕ್ಕೆ ತಿರುಗುತ್ತವೆ. ಈ ಸಸ್ಯ ಸೆಪ್ಟೆಂಬರ್ ತಿಂಗಳಿಂದ ಡಿಸೆಂಬರ್ ತಿಂಗಳವರೆಗೆ ಹೂ ಬಿಡುತ್ತದೆ. ಇದು ಮೆಕ್ಸಿಕೋ ದೇಶದ ಮೂಲವಾಸಿ. ಈಗ ಇದರ ಬೇಸಾಯ ಉಷ್ಣವಲಯದ ಎಲ್ಲ ಭಾಗಗಳಲ್ಲೂ ಇದೆ.

10 ಐಪೋಮಿಯ ಪರ್‌ಪ್ಯೂರಿಯ : ಹೂವಿನ ಬಣ್ಣ ಕೆನ್ನೀಲಿಯಾದ್ದರಿಂದ ಸಸ್ಯಕ್ಕೆ ಈ ಹೆಸರು. ಇದು ವಾರ್ಷಿಕ ಸಸ್ಯ. ಬಳ್ಳಿಯ ಮೇಲೆ ನಯವಾದ ರೋಮಗಳಿವೆ. ಹೂವಿನದು ಆಲಿಕೆಯಾಕಾರ. ಬಣ್ಣ ಬಿಳುಪಿನಿಂದ ಕೆನ್ನೀಲಿವರೆಗೆ ; ಮಳೆಗಾಲದಲ್ಲಿ ಹೂ ಬಿಟ್ಟು ಅಕ್ಟೋಬರ್ ನವೆಂಬರ್ ತಿಂಗಳಲ್ಲಿ ಹಣ್ಣು ಕೊಡು ತ್ತದೆ. ಇದು ಅಮೆರಿಕದ ಉಷ್ಣಪ್ರದೇಶಗಳ ಮೂಲವಾಸಿ ; ಭಾರತದಲ್ಲಿ ಅಷ್ಟೇ ಚೆನ್ನಾಗಿ ಬೆಳೆಯುತ್ತದೆ. ಬೀಜಗಳಿಂದ ಸುಲಭವಾಗಿ ವೃದ್ಧಿಮಾಡಬಹುದು. ಆಫ್ರಿಕ ದಲ್ಲಿ ಇದನ್ನು ಔಷಧಿಗಳಿಗಾಗಿ ಉಪಯೋಗಿಸುತ್ತಾರೆ.

11 ಐಪೋಮಿಯ ಸಿನ್ಯಮಯೇಟ : ಈ ಬಳ್ಳಿ ವಿಶಾಲವಾಗಿ ಬೆಳೆಯುತ್ತದೆ. ಮೈಮೇಲೆ ಹಳದಿ ಬಣ್ಣದ ರೋಮಗಳಿವೆ. ಎಲೆ ಹಸ್ತಾಕಾರದ್ದು. ಹೂಗೊಂಚ ಲಿಗೆ ಉದ್ದವಾದ ತೊಟ್ಟು ಇದ್ದು ತುದಿಯಲ್ಲಿ ಎರಡು ಹೂಗಳಿರುತ್ತವೆ. ಹೂವಿನ ಆಕಾರ ಗಂಟೆಯಂತೆ. ಬಣ್ಣ ಬಿಳಿ.

ಆರ್ಥಿಕ ಪ್ರಾಮುಖ್ಯ : ಈ ಜಾತಿಯ ಒಂದು ಪ್ರಭೇದವಾದ ಐಪೋಮಿಯ ಬಟಾಟಸ್ ಎಂಬುದೇ ಗೆಣಸಿನ ಸಸ್ಯ. ಇದು ಮಾನವನ ಆಹಾರವಾಗೂ ತರಕಾರಿಯ ರೂಪದಲ್ಲೂ ಇತರ ವಿಧಗಳಲ್ಲೂ ಬಳಕೆಯಲ್ಲಿದೆ. ಐಪೋಮಿಯ ಪರ್ಗ ಮತ್ತು ಐಪೋಮಿಯ ಟರ್ಪೆಥಂ ಎಂಬ ಪ್ರಭೇದಗಳಿಂದ ಜಲಾಪ ಎಂಬ ಭೇದಿ ಔಷಧಿಯನ್ನು ತಯಾರಿಸುತ್ತಾರೆ. ಹಿಂದೆ ವಿವರಿಸಿರುವ ಹಲವು ಪ್ರಭೇದಗಳನ್ನು ಅವುಗಳ ಅಲಂಕಾರದ ಹೂಗಳಿಗಾಗಿ ಉದ್ಯಾನಗಳಲ್ಲೂ ಮನೆಗಳ ಮುಂದೆಯೂ ಬೆಳೆಸುತ್ತಾರೆ. ಮರಳು ದಿಣ್ಣೆಗಳು ಕುಸಿಯದಂತೆ ತಡೆಯಲು ಐಪೋಮಿಯ ಪ್ರೆಸ್‌ಕ್ಯಾಪ್ರೆ ಎಂಬ ಪ್ರಭೇದವನ್ನು ಬೆಳೆಸುವರು. (ಡಿ.ಎಂ.; ಎಸ್.ಎನ್.ಆರ್.)

**ಐಫಲ್, ಅಲೆಕ್ಸಾಂಡರ್ ಗಸ್ಟಾವ್ :** 1832–1923. ಪ್ಯಾರಿಸ್ ನಗರದಲ್ಲಿರುವ ವಿಶ್ವವಿಖ್ಯಾತ ಐಫಲ್ ಗೋಪುರದ (ನೋಡಿ) ನಿರ್ಮಾತೃ. ಇವನೊಬ್ಬ ಫ್ರೆಂಚ್ ಎಂಜಿನಿಯರ್. 1855ರಲ್ಲಿ ಪ್ಯಾರಿಸಿನಲ್ಲೇ ಪದವೀಧರನಾಗಿ ಬೃಹತ್ ಲೋಹ ರಚನಾಕೃತಿಗಳನ್ನು ರೂಪಿಸುವುದರಲ್ಲಿ ವಿಶೇಷ ಜ್ಞಾನ ಸಂಪಾದಿಸಿ, ಈ ಕ್ಷೇತ್ರದಲ್ಲಿ ಹೆಚ್ಚಿನ ಪ್ರವರ್ಧಮಾನಕ್ಕೆ ಬಂದ. ಅಂತರ್ಜಲ ಅಡಿಪಾಯಗಳಿಗೆ (ನೋಡಿ—ಅಂತರ್ಜಲ ಸಂಪುಟ) ಒತ್ತರಗೊಂಡ ಗಾಳಿಯನ್ನು ಮೊದಲು ಬಳಸಿ

ದವರಲ್ಲಿ ಈತನೂ ಒಬ್ಬ. ಫ್ರಾನ್ಸಿನಲ್ಲಲ್ಲದೆ ಹೊರನಾಡುಗಳಲ್ಲೂ ಮುಖ್ಯ ಸೇತುವೆಗಳನ್ನೂ ಸೇತುವೆಮಾರ್ಗಗಳನ್ನೂ ರೂಪಿಸಿದ ಖ್ಯಾತಿ ಇವನದು. ಹಂಗರಿಯ ರಾಜಧಾನಿ ಬುಡಾಪೆಸ್ಟಿನ ಮುಖ್ಯ ರೈಲುನಿಲ್ದಾಣದಲ್ಲಿ ಒಂದು ಬೃಹದ್ ಮೇಲ್ಛಾವಣಿಯನ್ನು ಈತ ರಚಿಸಿದನಲ್ಲದೆ 1878ರಲ್ಲಿ ಪ್ಯಾರಿಸಿನಲ್ಲಿ ನಡೆದ ಒಂದು ವಸ್ತುಪ್ರದರ್ಶನಕ್ಕೆ ಬೇರೆ ಬೇರೆ ಪ್ರದರ್ಶನ ಮಂಟಪ ನಮೂನೆಗಳನ್ನೂ ರಚಿಸಿಕೊಟ್ಟ. ಎಲ್ಲಕಿಂತಲೂ ಮಿಗಿಲಾದ ಇವನ ದೊಡ್ಡ ಕೆಲಸವೆಂದರೆ ಪ್ಯಾರಿಸಿನ ಚಾಂಪ್ ಡಿ ಮಾರ್ಸ್‌ನಲ್ಲಿರುವ ಐಫಲ್ ಗೋಪುರದ ನಿರ್ಮಾಣ (1889).



ಐಫಲ್ ಗೋಪುರ

ಪನಾಮ ಕಾಲುವೆಯ ನಿರ್ಮಾಣದಲ್ಲಿ ಹಡಗುಕಟ್ಟೆಗಳನ್ನು ರೂಪಿಸುವ ಕೆಲಸಕ್ಕೆ ಐಫಲ್‌ನನ್ನು ಕರೆಯಿಸಿಕೊಳ್ಳಲಾಯಿತು. ಇದನ್ನು ಪೂರ್ಣಗೊಳಿಸಲು ತೀರ ಹೆಚ್ಚು ಕಾಲವನ್ನು ಅಂದರೆ ಮೂವತ್ತು ವರ್ಷಗಳನ್ನು ತೆಗೆದುಕೊಂಡನೆಂಬ ದೂರಿಗೆ ಈತ ಒಳಗಾಗಬೇಕಾಯಿತು. ಅನಂತರ ತನ್ನ ವೇಳೆಯನ್ನು ವಾಯುಗತಿಶಾಸ್ತ್ರದ ಸಂಶೋಧನೆ ಮತ್ತು ಪ್ರಯೋಗಗಳಿಗೆ ಈತ ಮೀಸಲಾಗಿಸಿದ. ಇದರಿಂದಾಗಿ ವಾಯುಗತಿಶಾಸ್ತ್ರದ ಮೊದಲ ಪ್ರಯೋಗಾಲಯವನ್ನು ಓಟಈ (Auteuil) ಎಂಬಲ್ಲಿ 1912ರಲ್ಲಿ ಸ್ಥಾಪಿಸಿದ. 1907–1919ರ ಅವಧಿಯಲ್ಲಿ ಈತ ನಡೆಸಿದ ಅಧ್ಯಯನ ಮತ್ತು ರಚಿಸಿದ ಗ್ರಂಥಗಳಿಂದಾಗಿ ವಿಮಾನ ರಚನೆಯ ಬಗ್ಗೆ ಅನೇಕ ಮೂಲಭೂತ ಅಂಶಗಳು ಬೆಳಕಿಗೆ ಬಂದವು. ಗಾಳಿಗಿಂತ ಹಗುರವಾದ ವಾಯುಯಾನದ ಬಗ್ಗೆ ಈತನದೇ ಒಂದು ವ್ಯಾಪಕ ಸಿದ್ಧಾಂತವಿದೆ. ಯಂತ್ರಶಿಲ್ಪಶಾಸ್ತ್ರದ ಅಗತ್ಯಗಳಿಗೆ ಅನುಗುಣವಾಗಿ ವಿಮಾನಗಳ ರಚನೆಯನ್ನು ಅನುಮಾಡಿಕೊಂಡು, ವಾಯು–ಸುರಂಗ ಮತ್ತು ಗಾಳಿತಡೆಯ ಮೇಲಿನ ಅಂಕಿ-ಅಂಶಗಳ ನಡುವೆ ಒಂದು ಗಮನಾರ್ಹ ಸಂಬಂಧವನ್ನು ಈತ ಸಾಧಿಸಿಕೊಟ್ಟ. ರೆಸಿಸ್ಟೆನ್ಸ್ ಆಫ್ ದಿ ಏರ್ ಅಂಡ್ ಏವಿಯೇಷನ್ ಎಂಬ ಈತನ ಪುಸ್ತಕ 1913ರಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ ನೌಕಾಪಡೆಯ ಕಮಾಂಡರ್ ಜೆರೋಮ್ ಸಿ ಹನ್‌ಸಕರ್ ಎಂಬವನಿಂದ ಇಂಗ್ಲಿಷ್ ಭಾಷೆಗೆ ಅನುವಾದಗೊಂಡಿದೆ. ತಾನು ಸ್ಥಾಪಿಸಿದ ಓಟಈ ಪ್ರಯೋಗಶಾಲೆಯನ್ನು 1920ರಲ್ಲಿ ಫ್ರೆಂಚ್ ಸರ್ಕಾರಕ್ಕೆ ಈತ ವಹಿಸಿಕೊಟ್ಟ. ಈತ ನಿಧನನಾದದ್ದು ಪ್ಯಾರಿಸಿನಲ್ಲೇ. *

**ಐಫಲ್ ಗೋಪುರ :** ಫ್ರಾನ್ಸ್ ದೇಶದ ಪ್ಯಾರಿಸ್ ನಗರದಲ್ಲಿರುವ ಮಹಾನ್ ಗೋಪುರ. ಪ್ಯಾರಿಸಿನ ವಸ್ತುಪ್ರದರ್ಶನಕ್ಕೋಸ್ಕರ ಇದನ್ನು ನಿರ್ಮಿಸಲಾಯಿತು (1889). ಫ್ರಾನ್ಸ್ ದೇಶದ ಪ್ರಸಿದ್ಧ ಶಿಲ್ಪಶಾಸ್ತ್ರಜ್ಞ ಮತ್ತು ಸೇತುವೆ ನಿರ್ಮಾಣಕಾರನಾದ ಅಲೆಕ್ಸಾಂಡರ್ ಗಸ್ಟಾವ್ ಐಫಲ್ ಈ ಪ್ರಖ್ಯಾತ ಗೋಪುರವನ್ನು ರೂಪಿಸಿದ. (ನೋಡಿ–ಐಫಲ್, ಅಲೆಕ್ಸಾಂಡರ್ ಗಸ್ಟಾವ್). ಈತನ ಹೆಸರನ್ನೇ ಗೋಪುರಕ್ಕೆ ಇಡಲಾಗಿದೆ.

ಪ್ಯಾರಿಸಿನ ಚ್ಯಾಂಪ್ ಡಿ ಮಾರ್ಸ್‌ನಲ್ಲಿರುವ ಈ ಬೃಹದ್‌ಗೋಪುರದ ಎತ್ತರ 984′. ಸುಮಾರು 340 ಚ. ಅ. ಜಾಗವನ್ನಿದು ಆಕ್ರಮಿಸಿದೆ. ಬೀಡು ಕಬ್ಬಿಣದಿಂದಾದ ಇದರ ತೂಕ 7,300 ಟನ್ನುಗಳು. ಇದರ ನಿರ್ಮಾಣಕ್ಕೆ ಹತ್ತು ಲಕ್ಷಕ್ಕಿಂತ ಹೆಚ್ಚು ಡಾಲರುಗಳನ್ನು ವ್ಯಯಮಾಡಲಾಗಿದೆ. ಈ ಗೋಪುರದಿಂದಾಗಿ ಪ್ಯಾರಿಸಿನ ಸೌಂದರ್ಯ ಹೆಚ್ಚಿದೆ. 63 ಜನರನ್ನು ಒಟ್ಟಿಗೆ ಒಯ್ಯಬಲ್ಲ ಮೂರು ವಿದ್ಯುಚ್ಚಾಲಿತ ಎತ್ತಿಗೆ ಯಂತ್ರಗಳು ಕುತೂಹಲವುಳ್ಳವರನ್ನು ಗೋಪುರದ ತುದಿ ಗೊಯ್ಯುತ್ತವೆ. ಗೋಪುರದ ನೆತ್ತಿಯಿಂದ ಸುತ್ತಲ 85 ಮೈಲಿಗಳ ದೃಶ್ಯ ಗೋಚರವಾಗುತ್ತದೆ. ಹೀಗಾಗಿ ಪ್ರವಾಸಿಗಳ ಮುಖ್ಯ ಆಕರ್ಷಣೆಗಳಲ್ಲಿ ಇದೂ ಒಂದಾಗಿದೆ. ಇದರಲ್ಲೇ 55′ ಎತ್ತರದ ಪ್ರಸಾರ ಕೇಂದ್ರವನ್ನು ಅಳವಡಿಸಲಾಗಿದೆ. (ಆರ್.ಡಿ.ಆರ್.)

**ಐಬಿಸ್ :** ಕ್ರೌಂಚ (ಹೆರಾನ್) ಮತ್ತು ಕೊಕ್ಕರೆಯ (ಸ್ಟಾರ್ಕ್) ಕುಟುಂಬಕ್ಕೆ ಸೇರಿದ ಒಂದು ನೀರುಹಕ್ಕಿ. ಇದರಲ್ಲಿ ಅನೇಕ ಪ್ರಭೇದಗಳಿವೆ. ಇವು ಪ್ರಪಂಚದ ನಾನಾ ಭಾಗಗಳಲ್ಲಿ ಹರಡಿವೆ. ಭಾರತದ ಹಲವೆಡೆಗಳಲ್ಲಿ ಮೈಸೂರು ದೇಶದ ಅನೇಕ ಭಾಗಗಳಲ್ಲಿ ಬಿಳಿ ಮತ್ತು ಕರಿಯ ಎರಡು ಪ್ರಭೇದಗಳು ಕಾಣಸಿಗುತ್ತವೆ. ಐಬಿಸ್ ಹಕ್ಕಿ ಗಾತ್ರದಲ್ಲಿ ದೊಡ್ಡದು. ಕೊಕ್ಕು ಉದ್ದವಾಗಿ ಪಿಕಾಸಿಯ ಅಲಗಿನಂತೆ ಮುಂದಕ್ಕೆ ಬಾಗಿರುತ್ತದೆ. ಅನೇಕ ಬಗೆಯವಕ್ಕೆ ತಲೆಯ ಮೇಲೆ ಪುಕ್ಕಗುಚ್ಛವಿದೆ. ಬಿಳಿ ಮತ್ತು ಕರಿ ಐಬಿಸುಗಳಿಗೆ ಬಣ್ಣದಲ್ಲಿ ಮಾತ್ರ ವ್ಯತ್ಯಾಸವುಂಟು. ಅಮೆರಿಕದ ಉಷ್ಣವಲಯ ಪ್ರದೇಶಗಳಲ್ಲಿ ಕೆಂಪು ಐಬಿಸ್ ಇದೆ. ಕೆಂಪು ರೆಕ್ಕೆ ಪುಕ್ಕಗಳಿಗಾಗಿ ಈ ಹಕ್ಕಿಯನ್ನು ಎರಡು ಶತಮಾನ ಬೇಟೆಯಾಡಿದರಾಗಿ ಇದರ ವಂಶ ತೀರ ಸಪಿಸಿಹೋಗಿದೆ. ಅಳಿದುಳಿದ ಕೆಲವು ಕುಟುಂಬಗಳನ್ನು ಕಾನೂನಿನ ಬಂಧನ ಹಾಕಿ ಈಗ ಕಾಪಾಡಲಾಗಿದೆ.



ಐಬಿಸ್ ಹಕ್ಕಿಯ ಜೀವನ ಕ್ರಮವೆಲ್ಲ ಕ್ರೌಂಚ, ಬಕಗಳಂತೆಯೆ. ಇದು ಗುಂಪಿನಲ್ಲಿ ವಾಸಿಸುತ್ತದೆ. ಕೆಲವೇಳೆ ಒಂದು ಗುಂಪಿನಲ್ಲಿ ಸಾವಿರ ಹಕ್ಕಿಗಳಿರುವುದೂ ಉಂಟು. ನೀರಿನ ಆಶ್ರಯದಲ್ಲಿದ್ದು ಮೀನು, ಏಡಿ, ಕಪ್ಪೆ ಮೊದಲಾದುವನ್ನು ಇದು ಹಿಡಿದು ತಿನ್ನುತ್ತದೆ. ದೊಡ್ಡ ಮರದ ಕವೆಗೊಂಬಿನಲ್ಲಿ ಕಡ್ಡಿಗಳಿಂದ

ಗೂಡು ಕಟ್ಟಿಕೊಂಡು ಇದು ವಾಸಿಸುತ್ತದೆ. ವಾಡಿಕೆಯಾಗಿ ಒಂದು ಬಾರಿಗೆ ಎರಡರಿಂದ ನಾಲ್ಕು ಮೊಟ್ಟೆ ಇಡುತ್ತದೆ.

ಈ ಹಕ್ಕಿ ಓಸಿರಿಸ್ ದೇವತೆಯ ದೂತನಾಗಿದ್ದುಕೊಂಡು ಮಾನವರು ಮಾಡುವ ತಪ್ಪುಗಳನ್ನೆಲ್ಲ ಎಣಿಕೆಹಾಕಿ ವರದಿ ಒಪ್ಪಿಸುತ್ತದೆಂದು ಈಜಿಪ್ಟಿನವರು ನಂಬಿದ್ದರು. (ಜಿ.ಎಂ.ಬಿ.)

ಕ್ರಿ.ಪೂ. 3ನೆಯ ಶತಮಾನದಲ್ಲಿದ್ದ ಪ್ರಾಚೀನ ಗ್ರೀಕ್ ಕವಿ ಕಲ್ಲಿಮಾಕಸ್ ಮತ್ತು ಆತನ ಸ್ಪರ್ಧಿ ಅಪೊಲೋನಿಯಸ್—ಇವರ ಮಧ್ಯೆ ನಡೆದ ವಿರಸದಲ್ಲಿ ಜನಿಸಿದ ಪದ್ಯವೊಂದಕ್ಕೆ ಐಬಿಸ್ ಎಂಬ ಹೆಸರಿದೆ. ಇದರ ಪ್ರತಿ ಈಗ ಸಿಕ್ಕಿಲ್ಲದಿದ್ದರೂ ಓವಿಡ್ ಮತ್ತು ಸುಯಿದಾಸ್ ಕವಿಗಳು ಇದರ ಬಗ್ಗೆ ಹೇಳಿದ್ದಾರೆ. ಈ ಪದ್ಯದ ವಸ್ತು ಅಪೊಲೋನಿಯಸ್ ಮೇಲಿನ ಟೀಕೆ. ಐಬಿಸ್ ಎಂಬುದು ಈಜಿಪ್ಟಿನ ಹಕ್ಕಿ. ಅದು ನೋಡಲು ಅಂದವಿಲ್ಲ. ಕರ್ಕಶ ಧ್ವನಿಯೇ ಅದರ ಸ್ವರ. ಅದರ ಸ್ವಭಾವಗಳು ಬೇಸರ ತರಿಸುವಂಥವು. ಕಲ್ಲಿಮಾಕಸ್ ಅಪೊಲೋನಿಯಸನನ್ನು ಐಬಿಸ್ ಹಕ್ಕಿಗೆ ಹೋಲಿಸಿದ್ದಾನೆ. ಅಲ್ಲದೆ ಈ ಪದ್ಯಗಳ ಹಲವು ಭಾಗಗಳು ಸಮಸ್ಯಾತ್ಮಕವಾಗಿವೆಯೆಂದು ಹೇಳುತ್ತಾರೆ.

ಈ ವಿವರದಿಂದ ಐಬಿಸ್ ಹಕ್ಕಿಯ ವಿಷಯದಲ್ಲಿ ಈಜಿಪ್ಟಿನವರಿಗಿದ್ದ ಅಭಿಪ್ರಾಯ ಇನ್ನೂ ಸ್ಪಷ್ಟವಾಗುತ್ತದೆ. (ಟಿ.ವಿ.ಎಸ್.)

**ಐಬೀರಿಯನ್ ಪರ್ಯಾಯದ್ವೀಪ :** ಅಟ್ಲಾಂಟಿಕ್ ಮತ್ತು ಮೆಡಿಟರೇನಿಯನ್ ಸಮುದ್ರಗಳ ನಡುವೆ ಇರುವ, ಸ್ಪೇನ್ ಪೋರ್ಚುಗಲುಗಳನ್ನೊಳಗೊಂಡ, ಆಗ್ನೇಯ ಪಿಷ್ಯನ್ ಪರ್ಯಾಯದ್ವೀಪ. ಇದನ್ನು ಯುರೋಪ್ ಖಂಡದ ಉಳಿದ ಭಾಗದಿಂದ ಪಿರೆನೀಸ್ ಪರ್ವತವೂ ಉತ್ತರ ಆಫ್ರಿಕದಿಂದ ಜಿಬ್ರಾಲ್ಟರ್ ಜಲಸಂಧಿಯೂ ಪ್ರತ್ಯೇಕಿಸುತ್ತವೆ. ನವಶಿಲಾಯುಗದಲ್ಲಿ ಆಫ್ರಿಕದಿಂದ ಇಲ್ಲಿಗೆ ವಲಸೆ ಬಂದರೆಂದು ನಂಬಲಾಗಿರುವ ಪುರಾತನ ಐಬೀರಿಯನರಿಂದ ಇದಕ್ಕೆ ಈ ಹೆಸರು ಬಂದಿದೆ. ಇದರ 4/5 ಭಾಗವನ್ನು ಸ್ಪೇನ್ ದೇಶ ಆವರಿಸಿದೆ ; ಇದರ ಹೆಚ್ಚು ಭಾಗ ಪ್ರಸ್ಥಭೂಮಿ. ಸುತ್ತ ಇರುವ ಪರ್ವತಶ್ರೇಣಿಗಳಿಂದ ಹರಿಯುವ ನದಿಗಳ ಪೈಕಿ ಟೇಗಸ್, ಡೋರೂ, ಗ್ವಾಡಲ್‌ಕ್ವಿವರ್ ಮತ್ತು ಏಬ್ರೋ ಮುಖ್ಯ. ಇದರ ವಿಸ್ತೀರ್ಣ 2,24,392 ಚ. ಮೈ. ಕರಾವಳಿಯ ಮೈದಾನ ಕಿರಿದು.

ಈ ಪರ್ಯಾಯದ್ವೀಪದ ಉತ್ತರ ಮತ್ತು ದಕ್ಷಿಣ ಭಾಗಗಳಲ್ಲಿ ಸಾಕಷ್ಟು ಮಳೆಯಾಗುತ್ತದೆ ; ಒಳಭಾಗಗಳಲ್ಲಿ ಕಡಿಮೆ. ಕಣಿವೆಗಳಲ್ಲೂ ಪರ್ವತಗಳ ಮೇಲೂ ಸಾಧಾರಣವಾಗಿ ಕಾಡುಗಳು ಬೆಳೆದಿವೆ. ಬಯಲುಪ್ರದೇಶಗಳಲ್ಲಿ ಗೋದಿ, ಬಾರ್ಲಿ, ಮೆಕ್ಕೆಜೋಳ, ರೈ, ಆಲಿವ್, ಹೊಗೆಸೊಪ್ಪು, ಹಣ್ಣು ಮತ್ತು ಬತ್ತ ಮುಖ್ಯ ಬೆಳೆಗಳು. ದನಕರು ಮತ್ತು ಕುರಿಗಳನ್ನು ಮಾಂಸ, ಚರ್ಮ, ಹಾಲು ಮತ್ತು ಉಣ್ಣೆಗಳಿಗಾಗಿ ಸಾಕುತ್ತಾರೆ. ಮೀನುಗಾರಿಕೆಯೂ ಒಂದು ಮುಖ್ಯ ಕಸಬು. ಈ ಪ್ರದೇಶದಲ್ಲಿ ಪಾದರಸ, ಕಲ್ಲಿದ್ದಲು, ಕಬ್ಬಿಣ, ಸೀಸ, ತವರ, ತಾಮ್ರ, ಸತು, ಪೊಟ್ಯಾಷ್ ಖನಿಜಗಳು ಸಿಕ್ಕುವುವು. ಇವುಗಳಲ್ಲಿ ಹೆಚ್ಚು ಪಾಲು ರಫ್ತಾಗುತ್ತವೆ. ಹತ್ತಿ, ಧಾನ್ಯ, ಸಕ್ಕರೆ, ಕಾಫಿ, ಯಂತ್ರೋಪಕರಣಗಳು, ಬಟ್ಟೆ, ಪೆಟ್ರೋಲಿಯಂ ಮುಂತಾದವು ಆಮದಾಗುತ್ತವೆ. ಕಬ್ಬಿಣ ಮತ್ತು ಉಕ್ಕು, ಬಟ್ಟೆಗಳು, ಸಿಗರೇಟು; ಚರ್ಮದ ಸಾಮಾನುಗಳು, ಮದ್ಯ—ಇವು ಈ ಪ್ರದೇಶದ ಕೆಲವು ಮುಖ್ಯ ಕೈಗಾರಿಕೆಗಳು. ಒಳನಾಡಿನಲ್ಲಿ ಹೆಚ್ಚಿನ ಮಾರ್ಗಾನುಕೂಲಗಳಿಲ್ಲದಿರುವುದಕ್ಕೆ ಪ್ರಾಕೃತಿಕ ಅಡಚಣೆಯೂ ವಿರಳ ಜನಸಂಖ್ಯೆಯೂ ಕಾರಣ. ಆದರೆ ಕರಾವಳಿಯ ಮೈದಾನಗಳಲ್ಲಿ ಮತ್ತು ನದೀ ಕಣಿವೆಗಳಲ್ಲಿ ಸಂಚಾರಸೌಲಭ್ಯಗಳು ಹೆಚ್ಚು ಸಮರ್ಪಕ. ಜನ ಹೆಚ್ಚಾಗಿ ಚಿಕ್ಕ ಪಟ್ಟಣಗಳಲ್ಲಿ ವಾಸಿಸುತ್ತಾರೆ. ಮಡ್ರಿಡ್ ಸ್ಪೇನಿನ ರಾಜಧಾನಿ ಮತ್ತು ಕೈಗಾರಿಕಾ ಕೇಂದ್ರ, ಮಾರ್ಗಸಂಧಿ. ಲಿಸ್ಬನ್ ಪೋರ್ಚುಗಲಿನ ರಾಜಧಾನಿ ಮತ್ತು ಬಂದರು. (ಎ.ಕೆ.)

**ಐಬೀರಿಯನ್ ಸಂಸ್ಕೃತಿ :** ಪ್ರಾಚೀನ ಗ್ರೀಕ್ ಚರಿತ್ರಕಾರರು ವಿಶಾಲವಾದ ಅರ್ಥದಲ್ಲಿ ನೈಋತ್ಯ ಯುರೋಪಿನ ಪ್ರಾಚೀನ ಜನಗಳನ್ನು ಐಬೀರಿಯನರೆಂದು ಕರೆದರು. ಆದರೆ ಸಾಮಾನ್ಯವಾಗಿ ಪೂರ್ವ ಸ್ಪೇನಿನಲ್ಲಿ, ಅದರಲ್ಲೂ ಐಬರಸ್ ನದಿಯ (ಈಗಿನ ಏಬ್ರೋ) ಕೊಳ್ಳದಲ್ಲಿ ವಾಸಿಸುತ್ತಿದ್ದ ಜನಾಂಗದವರನ್ನು ಐಬೀರಿಯನರೆಂದು ಕರೆಯಬಹುದು. ಇವರು ಉತ್ತರ ಆಫ್ರಿಕದಿಂದ ದಕ್ಷಿಣ ಯುರೋಪಿಗೆ ನೂತನಶಿಲಾಯುಗದ ಕಾಲದಲ್ಲಿ ಅಂದರೆ ಸುಮಾರು ಕ್ರಿ.ಪೂ. 3000ದಲ್ಲಿ ಬಂದು ನೆಲೆಸಿದರು. ಇವರು ಹ್ಯಾಮಿಟಿಕ್ ಬುಡಕಟ್ಟಿನವರು. ಒಂದು ಸಿದ್ಧಾಂತದ ಪ್ರಕಾರ ಇತಿಹಾಸಪೂರ್ವಕಾಲದಲ್ಲಿ ಐಬೀರಿಯನರು ಯುರೋಪಿನ ವಿವಿಧ ಭಾಗಗಳನ್ನು ಆಕ್ರಮಿಸಿಕೊಂಡಿದ್ದರೆಂದೂ ಕಾಲಕ್ರಮದಲ್ಲಿ ಅವರ ಬುಡಕಟ್ಟು ನಾಶವಾಯಿತೆಂದೂ ಇಂದಿನ ಬಾಸ್ಕ್ ಬುಡಕಟ್ಟಿನ ಜನ ಐಬೀರಿಯನರಿಂದಲೇ ಹುಟ್ಟಿದವರೆಂದೂ ತಿಳಿದು ಬರುತ್ತದೆ. ಇತಿಹಾಸಪೂರ್ವಕಾಲದ ಫ್ರಾನ್ಸ್, ಗ್ರೇಟ್ ಬ್ರಿಟನ್, ಐರ್‌ಲೆಂಡ್‌ಗಳಲ್ಲಿ ಐಬೀರಿಯನ್ ಸಂಸ್ಕೃತಿಗೆ ಸೇರಿದ ಅವಶೇಷಗಳು ದೊರಕಿವೆ. ರೋಮನ್ ಚರಿತ್ರಕಾರರ ಅಭಿಪ್ರಾಯದಂತೆ ಐಬೀರಿಯನರು ಕುಳ್ಳರು, ಕಪ್ಪು ವರ್ಣದವರು, ಸಣ್ಣ ಮುಖ ಮತ್ತು ದಪ್ಪ ಕೆಳತುಟಿ ಉಳ್ಳವರು. ಐಬೀರಿಯನ್ ಜನಾಂಗದಲ್ಲಿ ಅನೇಕ ಪ್ರಭೇದಗಳಿವೆ. ಆಲ್ಮೇರಿಯದಲ್ಲಿ ವಾಸಿಸುತ್ತಿದ್ದ ಬಸ್ತೆತನಿಗಳೂ ಪಶ್ಚಿಮದಲ್ಲಿದ್ದ ಟರ್ಟೆಸ್ಸಿಯನರೂ ಇವರಲ್ಲಿ ಮುಖ್ಯರಾದವರು.

ಕ್ರಿ.ಪೂ. ಆರು ಮತ್ತು ಏಳನೆಯ ಶತಮಾನಗಳಲ್ಲಿ ಕೆಲ್ಟಿಕ್ ದಂಡಯಾತ್ರೆಗಳಿಗೆ ಐಬೀರಿಯನರು ಒಳಗಾದರು. ಅನಂತರ ಗ್ರೀಕರು ಇವರ ಮೇಲೆ ದಾಳಿ ನಡೆಸಿದರು. ಕ್ರಿ.ಪೂ. ನಾಲ್ಕನೆಯ ಶತಮಾನದ ಹೊತ್ತಿಗೆ ಕಾರ್ಥೇಜಿಯನರ ಪ್ರಭಾವ ಹೆಚ್ಚಾಯಿತು. ಅನಂತರ ರೋಮನ್ ದಾಳಿಗಳಿಗೆ ಒಳಗಾಗಿ ಐಬೀರಿಯನ್ ಸಂಸ್ಕೃತಿ ನಾಶವಾಯಿತು.

ಎತ್ತರವಾದ ಗೋಡೆಗಳಿಂದ ಆವೃತವಾದ ನಗರಗಳಲ್ಲಿ ಐಬೀರಿಯನರ ವಾಸ. ಟ್ಯಾರಗೋನ, ಟಾರ್ಟೀಸಸ್, ಮಸ್ಸಿಯ ಮುಂತಾದ ಕಡೆಗಳಲ್ಲಿ ಕಾಣಬರುವ ಮಹತ್ತರವಾದ ಗೋಡೆಗಳು ಐಬೀರಿಯನರ ರಾಜಕೀಯ ಭದ್ರತೆಯನ್ನೂ ಮಹತ್ತ್ವವನ್ನೂ ಸೂಚಿಸುತ್ತವೆ. ಈ ಕೋಟೆಗಳು ಕಾರ್ಥೇಜಿಯನರಿಂದ ನಾಶವಾದುವು. ವ್ಯವಸಾಯ, ಗಣಿಗಾರಿಕೆ, ಲೋಹವಿದ್ಯೆ ಮುಂತಾದವುಗಳಲ್ಲಿ ಇವರು ನಿಷ್ಣಾತರಾಗಿದ್ದರು. ಐಬೀರಿಯನರ ನಾಣ್ಯಗಳು ವಿಶೇಷವಾಗಿ ದೊರಕಿವೆ. ಕ್ರಿ.ಪೂ. ಐದನೆಯ ಶತಮಾನದ ಗ್ರೀಕ್ ನಾಣ್ಯಗಳ ಪ್ರಭಾವಗಳನ್ನು ಎತ್ತಿತೋರಿಸುವ ಇವರ ನಾಣ್ಯಗಳು ವೈವಿಧ್ಯಮಯ. ರೋಮನರ ದಂಡಯಾತ್ರೆಗಳ ಅನಂತರ ರೋಮನ್ ನಾಣ್ಯಗಳ ಪ್ರಭಾವಗಳು ವಿಶೇಷವಾದುವು. ಈ ನಾಣ್ಯಗಳ ಮುಂಬದಿಯಲ್ಲಿ ಐಬೀರಿಯನರ ಮುಖ್ಯ ನಗರಗಳ ಹೆಸರುಗಳೂ ಅಶ್ವಾರೋಹಿ ಯೋಧನ ಚಿತ್ರವೂ ಹಿಂಬದಿಯಲ್ಲಿ ರಾಜನ ತಲೆಯ ಚಿತ್ರವೂ ಇವೆ. ಇವುಗಳಲ್ಲಿರುವ ಬರೆವಣಿಗೆಯನ್ನು ಇನ್ನೂ ಪೂರ್ಣವಾಗಿ ಓದಲಾಗಿಲ್ಲವೆಂದೇ ಹೇಳಬೇಕು. ಈ ಲಿಪಿ ಪಶ್ಚಿಮ ಗ್ರೀಕ್ ಮತ್ತು ಫ್ಯೂನಿಕ್ ಲಿಪಿಗಳನ್ನು ವಿಶೇಷವಾಗಿ ಹೋಲುತ್ತದೆ. ಇವರ ಪ್ರಾಚೀನ ಗ್ರಂಥಗಳು ನಮಗೆ ಉಪಲಬ್ಧವಾಗಿಲ್ಲದಿದ್ದರೂ ಐಬೀರಿಯನರು ಉತ್ತಮ ಸಾಹಿತ್ಯ ಹೊಂದಿದ್ದರೆಂದು ಹೇಳಲು ಆಧಾರಗಳಿವೆ.

ಇವರ ಕುಂಭನಿರ್ಮಾಣದಲ್ಲಿ ಐಬೀರಿಯನ್ ಕಲೆಯ ಪರಿಪೂರ್ಣತೆಯನ್ನು ಕಾಣಬಹುದು. ಇದು ಕ್ರಿ.ಪೂ. ಮೂರನೆಯ ಶತಮಾನದಲ್ಲಿ ಉಚ್ಛ್ರಾಯ ಸ್ಥಿತಿ ಮುಟ್ಟಿತ್ತು. ಮಡಕೆಗಳ ಮೇಲಿನ ಪ್ರಾಣಿಗಳು, ಗಿಡಮರಗಳು, ಪಕ್ಷಿಗಳು, ಮನುಷ್ಯರು ಮತ್ತು ಜ್ಯಾಮಿತೀಯ ವಿವಿಧ ಚಿಹ್ನೆಗಳ ಕೌಶಲಭರಿತ ವರ್ಣಚಿತ್ರಗಳಿವೆ. ಹೂಜಿಗಳ ಮೇಲಿನ ವರ್ಣಚಿತ್ರಗಳಂತೂ ಉತ್ತಮ ಮಟ್ಟದವು. ಯುದ್ಧ, ನಾಟ್ಯ, ಬೇಟೆ, ಸಂಸಾರ ಮುಂತಾದವುಗಳ ವರ್ಣಚಿತ್ರಗಳನ್ನು ಹೂಜಿಗಳ ಮೇಲೆ ಬಿಡಿಸಲಾಗಿದೆ. ಈ ಹೂಜಿಗಳ ಮೇಲೆ ಐಬೀರಿಯನ್ ಲಿಪಿಯ ಶಾಸನಗಳೂ ಇರುವುದರಿಂದ, ಇವುಗಳ ಪ್ರಾಮುಖ್ಯ ಹೆಚ್ಚು. ಕಂಚಿನ ಯುಗಕ್ಕೆ ಸೇರಿದ ಅನೇಕ ಕಂಚಿನ ಪಾತ್ರೆಗಳು ದೊರಕಿವೆ. ಅವುಗಳಲ್ಲಿ ವೈಶಿಷ್ಟ್ಯವೇನೂ ಕಾಣುವುದಿಲ್ಲ.

ಐಬೀರಿಯನ್ ಶಿಲ್ಪ ಗ್ರೀಕ್ ಶಿಲ್ಪದಿಂದ ಪ್ರಭಾವಿತವಾಗಿತ್ತು. ಮರ್ಸಿಯ, ಅಲ್ಬಸೆಟ್ ಮುಂತಾದ ಕಡೆಗಳಲ್ಲಿ ದೊರಕಿರುವ ಐಬೀರಿಯನರ ಶಿಲ್ಪಗಳು ಮನಮೋಹಕವಾಗಿವೆ. ಕಂಚಿನ ವಿಗ್ರಹಗಳಲ್ಲೂ ಗ್ರೀಕರ ಪ್ರಭಾವ ಎದ್ದು ಕಾಣುತ್ತದೆ. ಸ್ಪೇನಿನಲ್ಲಿ ರೋಮನರು ಪ್ರಮುಖರಾಗುವುದಕ್ಕೆ ಮುಂಚೆ ಐಬೀರಿಯನರು ಇಡೀ ಪ್ರದೇಶವನ್ನು ಆಕ್ರಮಿಸಿಕೊಂಡರು. ಅನಂತರ ಒಂದು ಶತಮಾನಕ್ಕೂ ಹೆಚ್ಚಿನ ಕಾಲ ಐಬೀರಿಯನ್ ಮತ್ತು ರೋಮನ್ ಸಂಸ್ಕೃತಿಗಳು ಒಟ್ಟಿಗೇ ಸಹಬಾಳ್ವೆ ನಡೆಸಿದುವು. ಪುರಾತನ ನೆಲೆಗಳಲ್ಲಿ ನಡೆದ ಅಗೆತಗಳಲ್ಲಿ ರೋಮನ್ ಮತ್ತು ಐಬೀರಿಯನ್ ಶೈಲಿಯ ಮಡಕೆಗಳು, ಶಿಲ್ಪಗಳು ಒಟ್ಟಿಗೆ ದೊರಕಿರುವುದು ಇದನ್ನು ಸಮರ್ಥಿಸುತ್ತದೆ. ಕಾಲಕ್ರಮದಲ್ಲಿ ಕ್ರಿಸ್ತನ ಕಾಲದ ಸುಮಾರಿಗೆ ಐಬೀರಿಯನ್ ಸಂಸ್ಕೃತಿ ನಾಶವಾಗಿ ರೋಮನ್ ಸಂಸ್ಕೃತಿಯೊಡನೆ ಮಿಳಿತವಾಗಿ ಹೋಯಿತು. 3000 ವರ್ಷ ಪ್ರವರ್ಧಮಾನ ಸ್ಥಿತಿಯಲ್ಲಿದ್ದ ಈ ಸಂಸ್ಕೃತಿ ಯುರೋಪಿನಲ್ಲಿ ಒಂದು ಹೊಸ ಸಂಸ್ಕೃತಿಗೆ ಕಾರಣವಾಯಿತು. (ಎ.ವಿ.ಎನ್.)

**ಐಬೆಕ್ಸ್ :** ದಕ್ಷಿಣ ಯುರೋಪು, ಮಧ್ಯ ಏಷ್ಯ, ಏಷ್ಯ ಮೈನರುಗಳಲ್ಲಿ ಕಂಡುಬರುವ, ಸ್ಥೂಲವೂ ದೃಢವೂ ಆದ ಮೈಕಟ್ಟುಳ್ಳ ಕಾಡುಮೇಕೆಗಳ ಪೈಕಿ ಒಂದು. ಕ್ಯಾಪ್ರ ಜಾತಿಗೆ ಸೇರಿದೆ. ಪರ್ವತ ಪ್ರದೇಶಗಳಲ್ಲೇ ಇದರ ವಾಸ ಹೆಚ್ಚು. ಒಂದಾನೊಂದು ಕಾಲದಲ್ಲಿ ಜರ್ಮನಿ ಮತ್ತು ಸ್ವಿಟ್ಜರ್‌ಲೆಂಡ್ ದೇಶಗಳ ಪರ್ವತ ಶ್ರೇಣಿಗಳಲ್ಲಿ ಇದು ಕಾಣಸಿಗುತ್ತಿತ್ತು.

ಐಬೆಕ್ಸ್ ನೋಡುವುದಕ್ಕೆ ಅಂದವಾದ ಪ್ರಾಣಿ. ಹೆಗಲವರೆಗಿನ ಎತ್ತರ 40". ಉದ್ದ ಸುಮಾರು $4\frac{1}{2}'$. ಕೊಂಬು ಬಾಗಿದ್ದು ಉದ್ದಕ್ಕೂ ಗಚ್ಚುಗಚ್ಚಾಗಿ, ಗರಗಸದಂತಿದೆ. ಹೆಣ್ಣುಗಳ ಕೊಂಬು ನೇರ, ಮೋಟು. ಗಂಡುಗಳಿಗೆ ಗಡ್ಡವುಂಟು. ಅವುಗಳ ಮೈತುಂಬ ಒರಟಾದ ಬಿರುಸು ಕೂದಲುಗಳಿವೆ. ಬೇಸಗೆಯಲ್ಲಿ ಕೂದಲು

ಇನ್ನುಗಿದ್ದು ಬೂದುಬಣ್ಣಕ್ಕಿರುತ್ತದೆ. ಶೀತಕಾಲದಲ್ಲಿ ಉದ್ಭವಾದ ಪಳದಿ-ಕೆಂಪು ಬಣ್ಣದ ಕೂದಲು ಈ ಸಣ್ಣ ತೆಳುಕೂದಲನ್ನು ಮುಚ್ಚಿಕೊಳ್ಳುತ್ತದೆ.

ಏಷ್ಯದ ಐಬೆಕ್ಸಿನ ಕೊಂಬುಗಳೂ ಮೈಬಣ್ಣವೂ ಮಿಕ್ಕ ಪ್ರದೇಶಗಳವಕ್ಕಿಂತ ಭಿನ್ನವಾಗಿವೆ. ಬೇಸಗೆಯಲ್ಲಿ ಅವು ಝರಿಗಳ ಕಡಿದಾದ ಇಳಿಜಾರುಗಳಲ್ಲಿ ಮೊಳೆಯುವ ಹುಲ್ಲುಚಿಗುರುಗಳಿಂದ ಆಕರ್ಷಿತವಾಗಿ ಹಿಮಪಂಕ್ತಿಯಿಂದ ಕೆಳಕ್ಕೆ ಇಳಿದುಬರುತ್ತವೆ.



ಗುಂಪಿನಲ್ಲಿ 12ರಿಂದ 40 ಪ್ರಾಣಿಗಳಿರುತ್ತವೆ. ಸಾಮಾನ್ಯವಾಗಿ ಇವು ಮುಂಜಾವಿನಲ್ಲಿ, ಅನಂತರ ಮರಳಿ ಮುಚ್ಚಂಜೆಯಲ್ಲಿ ಮೇಯುತ್ತವೆ. ಅಲ್ಲದೆ ತಮ್ಮ ತಮ್ಮ ಮೇವಿನ ಸ್ಥಳಗಳನ್ನು ಪದೇ ಪದೇ ಬದಲಾಯಿಸುತ್ತಿರುತ್ತವೆ. ಮೇಯುವ ಸ್ಥಳಗಳ ಹಿಂದುಗಡೆಯ ಬೆಟ್ಟದ ಬೆನ್ನೇಣುಗಳೂ ಕಮರಿಗಳೂ ಅವಕ್ಕೆ ಒಳ್ಳೆಯ ಆಶ್ರಯವನ್ನು ಕೊಡುತ್ತವೆ. ಈ ಉನ್ನತ ಪ್ರದೇಶಗಳಿಗೆ ಅವು ವಿಶ್ರಾಂತಿಗಾಗಿಯೋ ಇಲ್ಲ ಭಯದಿಂದ ಪಾರಾಗಲೋ ಹೋಗುತ್ತವೆ. ಈ ಪ್ರದೇಶಗಳು ದುರ್ಗಮವಾಗಿರುವುದರಿಂದಲೂ ಈ ಪ್ರಾಣಿಗಳ ಹೆಣ್ಣುಗಳಿಗೆ ಚುರುಕಾದ ಕಣ್ಣುಗಳೂ ಶತ್ರುಗಳ ವಾಸನೆಯನ್ನು ಕಂಡುಹಿಡಿಯುವ ಸಾಮರ್ಥ್ಯವೂ ಜಾಗರೂಕತೆಯೂ ಇರುವುದರಿಂದಲೂ ಇವು ಆ ಜಾಗಗಳಲ್ಲಿ ನೆಮ್ಮದಿಯಾಗಿರಬಲ್ಲವು.

ಮುಂಬೇಸಗೆಯಲ್ಲಿ ವಯಸ್ಸಾದ ಗಂಡುಗಳು ಹೆಣ್ಣುಗಳ ಮತ್ತು ಮರಿಗಳ ಹತ್ತಿರದಲ್ಲಿದ್ದು ಗುಂಪಿನ ಯೋಗಕ್ಷೇಮ ನೋಡಿಕೊಳ್ಳುತ್ತವೆ. ಅಕ್ಟೋಬರ್ ತಿಂಗಳು ಇವಕ್ಕೆ ಬೆದೆಗಾಲ. ಮೇ ಅಥವಾ ಜೂನ್ ತಿಂಗಳಿನಲ್ಲಿ ಆಹಾರ ಸಮೃದ್ಧಿಯಾಗಿರುವಾಗ ಮರಿಹಾಕುತ್ತವೆ. ಈ ಮರಿಗಳು ಇತರೆಲ್ಲ ಮೇಕೆ ಕುರಿಗಳಂತೆ ಬಲುಬೇಗ ತಮ್ಮ ತಾಯ ಜೊತೆಗೆ ಬೆಟ್ಟದ ಬಿರುಕುಗಳಲ್ಲಿಯೂ ಬಂಡೆಗಳಲ್ಲಿಯೂ ಓಡಿಯಾಡಲು ಪ್ರಾರಂಭಿಸುತ್ತವೆ. ಮೈಕೆಳಭಾಗದಲ್ಲಿ ದಟ್ಟವಾದ ತುಪ್ಪಟವಿರುವುದರಿಂದ ಇವಕ್ಕೆ ಚಳಿ ಸೋಕದು. ಸಮೃದ್ಧವಾಗಿಯೂ ಮೃದುವಾಗಿಯೂ ದಟ್ಟವಾಗಿಯೂ ಇರುವ ಈ ತುಪ್ಪುಳಕ್ಕಾಗಿ ಇವನ್ನು ಜನ ಬೇಟೆಯಾಡುತ್ತಾರೆ.

ಸೈಬೀರಿಯದ ಐಬೆಕ್ಸ್ ಉಳಿದೆಲ್ಲ ಬೆಟ್ಟದ ಆಡುಗಳಿಗಿಂತ ದೊಡ್ಡದು. ಅಂದರೆ ಗಂಡು ಗಾತ್ರದಲ್ಲಿ ಒಂದು ಸಣ್ಣ ಕತ್ತೆಯಷ್ಟಿರುತ್ತದೆ. (ಎ.)

**ಐಯಾಂಬ್ಲಿಕಸ್ :** ಕ್ರಿ.ಶ. 250-330. ಸಿರಿಯ ದೇಶದ ಒಬ್ಬ ತತ್ತ್ವಜ್ಞಾನಿ. ತನ್ನ ಗುರುವಾದ ಪಾರ್ಫಿರಿಯ ಗ್ರಂಥಗಳಿಂದ ಸ್ಫೂರ್ತಿ ಪಡೆದನಾದರೂ ಅವನ ಅಭಿಪ್ರಾಯಗಳನ್ನು ಒಪ್ಪದೆ ಆತನ ಗುರುವಾದ ಪ್ಲೋಟೈನಸಿನಿಂದ ಪ್ರಚುರವಾದ ನಿಯೊ ಪ್ಲೇಟೋನಿಸಂ ಪಂಥದ ರೂಪರೇಷೆಗಳನ್ನು ತಿದ್ದಿ ಆ ಪಂಥದ ಧೀರ ಪ್ರತಿನಿಧಿ ಎಂದು ಹೆಸರು ಗಳಿಸಿದ. ಕ್ರೈಸ್ತಮತದ ವಿರುದ್ಧ ನಿಯೊ ಪ್ಲೇಟೋನಿಸಂ ತತ್ತ್ವವನ್ನು ಸಂಘಟಿಸಿದವರಲ್ಲಿ ಅಗ್ರಗಣ್ಯನೆಂದು ಈತನನ್ನು ಹೊಗಳಲಾಗಿದೆ. ಎರಡು ಶತಮಾನಗಳವರೆಗೆ ನಿಯೊ ಪ್ಲೇಟೋನಿಸಂ ವಿಚಾರದಲ್ಲಿ ಈತನದೇ ಅಧಿಕೃತ ವಾಣಿಯಾಗಿತ್ತೆಂದು ಹೇಳಿದರೆ ಇವನ ಪ್ರಭಾವ ಎಷ್ಟೆಂದು ಊಹಿಸಬಹುದು.

ಪ್ಲೋಟೈನಸನ ಸಿದ್ಧಾಂತಕ್ಕೆ ಪಾರ್ಫಿರಿ ಮಾಡಿದ ಅದ್ವೈತ ಪರವಾದ ವ್ಯಾಖ್ಯಾನವನ್ನು ತಿರಸ್ಕರಿಸಿದ ಐಯಾಂಬ್ಲಿಕಸ್ ತನ್ನದೇ ಆದ ವಿಚಾರಣೆಯನ್ನು ಮಂಡಿಸುತ್ತ ತತ್ತ್ವ ಅನೇಕ ಮುಖವಾದುದು, ಅನೇಕ ರೀತಿಯಲ್ಲಿ ಅಸ್ತಿತ್ವವನ್ನು ಹೊಂದಿರುವಂಥದು, ಆತ್ಮತತ್ತ್ವ ಬುದ್ಧಿತತ್ತ್ವಕ್ಕಿಂತ ಭಿನ್ನ, ಆತ್ಮ ಆತ್ಮಕ್ಕೂ ವ್ಯತ್ಯಾಸವುಂಟು, ಮಾನವನ ಆತ್ಮ ಶುದ್ಧ ಅಥವಾ ಪರಮಾತ್ಮ ತತ್ತ್ವಕ್ಕಿಂತ ಭಿನ್ನ—ಎಂದು ನಿರೂಪಿಸಿದ. ಆಧ್ಯಾತ್ಮಿಕ ಪ್ರಪಂಚದಲ್ಲಿರುವ ಸತ್ಯಸತ್ತ್ವಗಳ ವಿಶ್ಲೇಷಣೆಯನ್ನು ಮಾಡುವುದರ ಮೂಲಕ ಸತ್ಯ ಅಥವಾ ಸತ್ ಎನ್ನುವುದು ಸಂಕೀರ್ಣವಾದುದೆಂದೂ ಹಂತಹಂತಗಳಿಂದ ಕೂಡಿದ ರಚನೆ ಇರುವಂಥದೆಂದೂ ಹೇಳಿದ. ಈ ಹಂತಗಳಲ್ಲಿ ರೂಪ್ರಗೊಂಡ ಅಂಶಗಳು ತಮ್ಮ ತಮ್ಮ ಸ್ಥಾನದಲ್ಲಿದ್ದುಕೊಂಡು ಸತ್‌ತತ್ತ್ವಕ್ಕೆ ಪೋಷಕ ಅಥವಾ ಪೂರಕಗಳಾಗಿ ವರ್ತಿಸುತ್ತವೆ. ಯಾವುದನ್ನೂ ಅಲ್ಲಗಳೆಯಲು ಸಾಧ್ಯವಿಲ್ಲ. ಸಣ್ಣ ದೊಡ್ಡ ಎರಡೂ ಸತ್ಯ, ವ್ಯಷ್ಟಿ ಸಮಷ್ಟಿ ಎರಡೂ ಸತ್ಯ, ಬುದ್ಧಿ ಬುದ್ಧಿಗಮ್ಯ ಎರಡೂ ಸತ್ಯ. ಹೀಗೆ ಸತ್ಯದ ಮಳಿಗೆಯಲ್ಲಿ ಅನೇಕತ್ವಕ್ಕೆ ಸ್ಥಾನವಿದೆ. ಈ ಅನೇಕತ್ವದ ಹಂತವನ್ನು ಅರಿತುಕೊಂಡು ಸಾಧಕ ಮೇಲೇರಬೇಕು. ತನ್ನತನವನ್ನು ತಾನು ಕಂಡುಕೊಳ್ಳಬೇಕು—ಎಂದು ಐಯಾಂಬ್ಲಿಕಸ್ ವಾದಿಸುತ್ತಾನೆ.

ಈತನ ವಿಶ್ಲೇಷಣದ ಆಧಾರದ ಮೇಲೆ ತತ್ತ್ವಶಾಸ್ತ್ರದ ಇತಿಹಾಸದಲ್ಲಿ ತತ್ತ್ವಶಾಸ್ತ್ರಕ್ಕೂ ಮಾನಸಿಕ ಶಾಸ್ತ್ರಕ್ಕೂ ಇರುವ ವ್ಯತ್ಯಾಸವನ್ನು ಕಾಣುವಂತಾಯಿತು ಎಂದು ಹಲವಾರು ಅಭಿಪ್ರಾಯ ಪಡುತ್ತಾರೆ.

ಐಯಾಂಬ್ಲಿಕಸ್ ಅನೇಕ ಗ್ರಂಥಗಳನ್ನು ಬರೆದಿದ್ದರೂ ಹಲವೇ ಮಾತ್ರ ಈಗ ಉಳಿದಿವೆ. ಅವುಗಳಲ್ಲಿ ಮುಖ್ಯವಾದವೆಂದರೆ—ದಿ ಮಿಸ್ಟರೀಸ್; ಲೈಫ್ ಆಫ್ ದಿ ಸೋಫಿಸ್ಟ್, ಫಿಲಾಸಫಿ ಡೆರ್ ಗ್ರೀಷನ್. (ಕೆ.ಬಿ.ಆರ್.)

**ಐರಿಷ್ ರಾಷ್ಟ್ರೀಯ ರಂಗಮಂದಿರ :** ಐರಿಷ್ ಸಾಹಿತ್ಯವನ್ನು ಪುನರುಜ್ಜೀವನಗೊಳಿಸುವಲ್ಲಿ ಪ್ರಧಾನ ಪಾತ್ರವಹಿಸಿದ್ದ ಕವಿ ಡಬ್ಲ್ಯು. ಬಿ. ಯೇಟ್ಸನೇ ಮುಖ್ಯವಾಗಿ ಈ ರಂಗಮಂದಿರದ ಸ್ಥಾಪಕ ಮತ್ತು ಪ್ರಥಮ ಸಂಚಾಲಕ. ಐರಿಷ್ ಸಂಸ್ಕೃತಿಯನ್ನು ಸಹಜವಾಗಿ ಪ್ರತಿಬಿಂಬಿಸುವಂಥ ನಾಟಕಗಳ ಸೃಷ್ಟಿಗೂ ಪ್ರದರ್ಶನಕ್ಕೂ ಅವರದೇ ಆದ ಒಂದು ರಂಗಮಂದಿರದ ಅಗತ್ಯವಿತ್ತು. ಲಂಡನ್ ಮತ್ತು ಡಬ್ಲಿನ್ ನಗರಗಳಲ್ಲಿದ್ದ ಐರಿಷ್ ಸಾಹಿತ್ಯ ಸಂಘಗಳಿತ್ತ ಬೆಂಬಲದಿಂದಲೂ ಎಡ್ವರ್ಡ್ ಮಾರ್ಟಿನ್, ಜಾರ್ಜ್ ಮೂರ್, ಲೇಡಿ ಗ್ರಿಗರಿ ಮುಂತಾದ ಆಪ್ತರ ಸಹಾಯದಿಂದಲೂ ಯೇಟ್ಸ್‌ನ ನೇತೃತ್ವದಲ್ಲಿ ಐರಿಷ್ ಸಾಹಿತ್ಯ ನಾಟ್ಯಸಭಾ ಎಂಬ ಸಂಸ್ಥೆ 1899ರಲ್ಲಿ ಸ್ಥಾಪಿತವಾಯಿತು. ಡಬ್ಲಿನ್ ಅದರ ಕೇಂದ್ರವಾಯಿತು. ಮೊದಮೊದಲು ಪ್ರದರ್ಶಿತವಾದ ಯೇಟ್ಸ್‌ನ ಮತ್ತು ಅವನ ಸಂಗಡಿಗರ ನಾಟಕಗಳಿಗೆ ನಿರೀಕ್ಷಿಸಿದ ಯಶಸ್ಸು ದೊರೆಯಲಿಲ್ಲ. ಆದರೆ ಅನೇಕ ನಾಟಕಕಾರರ ಮತ್ತು ಕಲಾಭಿಮಾನಿಗಳ ಗಮನವನ್ನು ಸೆಳೆಯುವಷ್ಟು ಮಟ್ಟಿಗೆ ಈ ನಾಟ್ಯಮಂಡಲಿ ಬೆಳೆಯಿತು. 1904ರಲ್ಲಿ ಎ.ಇ.ಎಫ್. ಹಾರ್ನಿಮನ್ ಎಂಬ ಐರಿಷ್ ಶ್ರೀಮಂತಳ ಅಭಿಮಾನ ಔದಾರ್ಯಗಳು ನೀಡಿದ ಬಳುವಳಿಯಾಗಿ ಅಬೆ ರಸ್ತೆಯಲ್ಲಿನ ಪುಟ್ಟ ರಂಗಮಂದಿರವೊಂದು ಯೇಟ್ಸನ ನಾಟ್ಯಸಂಸ್ಥೆಗೆ ದೊರೆಯಿತು. ಅಂದಿನಿಂದ ಸಾಹಿತ್ಯ ನಾಟಕ ಮಂಡಳಿಗೆ ಐರಿಷ್ ರಾಷ್ಟ್ರೀಯ ರಂಗಮಂದಿರ ಎಂಬ ಹೊಸ ಹೆಸರಾಯಿತು. ಅಬೆ ರಂಗಮಂದಿರವನ್ನು ಕಾವ್ಯನಾಟಕಗಳ ಪ್ರಯೋಗಕ್ಕೆ ಅಳವಡಿಸಲು ಯೇಟ್ ಬಹುವಾಗಿ ಪ್ರಯತ್ನಿಸಿದ. ಈ ಪ್ರಯತ್ನ ಸಫಲವಾದುದಾಗಲಿ ಕಾವ್ಯನಾಟಕಗಳ ಪ್ರಯೋಗ ಯಶಸ್ವಿಯಾದುದಾಗಲಿ ಸಂದೇಹವೇ. ಆದರೆ ಯೇಟ್ಸ್‌ನ ಅವಿರತ ಪರಿಶ್ರಮದಿಂದ ಈ ರಂಗಮಂದಿರ ಪ್ರಯೋಗಶೀಲತೆಗೆ ಹೆಸರಾಯಿತು. ಪ್ರತಿಭಾಶಾಲಿಗಳಾದ ನಾಟಕಕಾರರಿಗೆ ಸ್ಫೂರ್ತಿಯ ಕೇಂದ್ರವಾಯಿತು. ಜೆ. ಎಂ. ಸಿಂಜ್‌ನಂಥ ಶ್ರೇಷ್ಠ ನಾಟಕಕಾರನ ಪ್ರತಿಭೆಯನ್ನು ಮೊದಲು ಗುರುತಿಸಿ ಸರಿಯಾದ ಮಾರ್ಗದರ್ಶನವಿತ್ತುದೊಂದು ಯೇಟ್ಸ್‌ನ ಅಮೋಘವಾದ ಕಾಣಿಕೆ, ಐರಿಷ್ ರಂಗಭೂಮಿಗೆ. ನಾಗರಿಕತೆಯ ಕುಪ್ರಭಾವದಿಂದ ದೂರವಾಗಿದ್ದ ಪಶ್ಚಿಮ ಐರ್ಲೆಂಡಿನ ಮುಗ್ಧ ಕೃಷಿಕರ ಸರಳಜೀವನವನ್ನು ಕುರಿತು, ಹಳೆಯ ಗೇಲಿಕ್ ಭಾಷೆಯ ಸತ್ತ್ವವನ್ನೂ ಸೊಗಡನ್ನೂ ಒಳಗೊಂಡ ಇಂಗ್ಲಿಷ್ ಆಡುಮಾತಿನಲ್ಲಿ ಸಿಂಜ್ ನಾಟಕಗಳನ್ನು ಬರೆದ. ಹೀಗೆಯೇ 'ಎ.ಇ.', ಲೇಡಿ ಗ್ರಿಗರಿ, ಪಾದ್ರಿಯಕ್ ಕೋಲಮ್ ಅಪೂರ್ವವಾದ ನಾಟಕಗಳನ್ನು ರಚಿಸಿದರು.

ನಾಟಕ ಮತ್ತು ರಂಗಮಂದಿರಗಳ ಬಗ್ಗೆ ಯೇಟ್ಸ್ ಕೆಲವು ನಿಖರವಾದ ಧ್ಯೇಯ, ಶೀಲ, ನಿಷ್ಠೆಗಳನ್ನಿರಿಸಿಕೊಂಡಿದ್ದ. ರಂಗಮಂದಿರ ದೇಗುಲದಂತೆ ಪವಿತ್ರವಾದುದು. ನಾಟಕದ ಉದ್ದೇಶ ಉದಾತ್ತವಾದುದು, ಜನಜಂಗುಳಿಗೆ ಅಗ್ಗದ ಮನರಂಜನೆಯನ್ನೊಗಿಸುವುದಲ್ಲ. ಕವಿಯ ಅನುಭಾವ, ದರ್ಶನ ಪ್ರೇಕ್ಷಕರ ಮನದಲ್ಲಿ ಪಡಿಮೂಡುವಂತಾಗಬೇಕು.

ವಾಸ್ತವತೆಗಿಂತ ದರ್ಶನಧ್ವನಿಯೇ ಪ್ರಧಾನವಾಗಿದ್ದ ಯೇಟ್ಸನ ಕಾವ್ಯನಾಟಕಗಳು ಸ್ವಪ್ನಶೀಲವಾಗಿದ್ದುವು. ಐರಿಷ್ ಪ್ರೇಕ್ಷಕರ ಮನೋಧರ್ಮ ಆದರ್ಶಕ್ಕಿಂತ ವಾಸ್ತವತೆಯ ಕಡೆಯೇ ಒಲಿಯುತ್ತಿರುವುದು ಸ್ಪಷ್ಟವಾದ ಅನಂತರ ಯೇಟ್ಸ್ ಕಾವ್ಯನಾಟಕಗಳನ್ನು ಬಿಟ್ಟು ಗದ್ಯನಾಟಕಗಳ ರಚನೆಗೆ ತೊಡಗಿದ. ತನ್ನ ಧ್ಯೇಯವನ್ನು ಮಾತ್ರ ಜನ ಅಪೇಕ್ಷಿಸುವ ಅಗ್ಗದ ಮನರಂಜನೆಗೆ ಎಂದಿಗೂ ಬಲಿಕೊಡದೆ ನಾಟ್ಯಮಂದಿರದ, ನಾಟಕಸಾಹಿತ್ಯದ ಶ್ರೇಷ್ಠಮಟ್ಟವನ್ನೂ ಶೀಲವನ್ನೂ ಕೊನೆಯವರೆಗೂ ಕಾಯ್ದುಕೊಂಡು ಬಂದ ಶ್ರೇಯಸ್ಸು ಅವನದು. ಇತಿಹಾಸದಲ್ಲಿ ಐರಿಷ್ ರಾಷ್ಟ್ರೀಯ ರಂಗಮಂದಿರ ಚಿರಸ್ಮರಣೀಯವಾಗಿರುವುದೂ ಅದರಿಂದಲೇ. (ಕೆ.ಟಿ.ಪಿ.)

**ಐರಿಸ್ :** ಇರಿಡೇಸಿ ಕುಟುಂಬಕ್ಕೆ ಸೇರಿದ ಒಂದು ಸಸ್ಯಜಾತಿ. ಕಾಮನ ಬಿಲ್ಲಿನಂತೆ ರಂಗುರಂಗಾದ ಹೂಗಳಿವೆಯಾಗಿ ಈ ಹೆಸರು (ಐರಿಸ್—ಕಾಮನಬಿಲ್ಲು). ಇದು ಸುಂದರವಾದ ಹೂ ಬಿಡುವ ಲಶುನ ಸಸ್ಯ. ಆಕರ್ಷಕವಾದ ಈ ಸಸ್ಯ ಆರ್ಕಿಡ್ಡಿನಂತೆ ಕಾಣುತ್ತದೆ. ಇದನ್ನು ಸುಲಭವಾಗಿ ಎಲ್ಲ ಕಡೆಗಳಲ್ಲೂ ಬೆಳೆಸಬಹುದಾದ್ದರಿಂದ ಇದನ್ನು ಬಡವನ ಆರ್ಕಿಡ್ಡು ಎಂದೂ ಕರೆಯುತ್ತಾರೆ. ಇದನ್ನು ಕುಂಡಸಸ್ಯ, ಕಲ್ಲೇರಿ ಸಸ್ಯ ಮತ್ತು ಮನೆ ಅಲಂಕಾರ ಸಸ್ಯಗಳನ್ನಾಗಿ ಬೆಳೆಸುತ್ತಾರೆ. ಹೂಗಳನ್ನು ಬಿಡಿ ಹೂವಾಗಿಯೂ ಕಳಶದ ಅಲಂಕಾರದ ಹೂವಾಗಿಯೂ ಉಪಯೋಗಿಸುತ್ತಾರೆ.

ಐರಿಸ್ ಜಾತಿಯಲ್ಲಿ 200ಕ್ಕೂ ಹೆಚ್ಚು ಪ್ರಭೇದಗಳಿವೆ. ಇವಕ್ಕೆಲ್ಲ ಗುಪ್ತಕಾಂಡಗಳು (ರೈಜ಼ೋಮ್ಸ್) ಇವೆ. ನೇರವಾಗಿ ಸರಳವಾಗಿ ಅಥವಾ ಕವಲೊಡೆದು ಬೆಳೆಯುವ ಈ ಸಸ್ಯಗಳ ತುದಿಯಲ್ಲಿ ಹೂ ಮೊಳೆಯುತ್ತದೆ. ಸಾಮಾನ್ಯವಾಗಿ ಬೇರು ಮೂಲಕವೇ ಎಲೆ. ಕೆಲವು ಎಲೆಗಳು ಮಾತ್ರ ಕಾಂಡದ ಮೇಲಿರುತ್ತವೆ. ಎಲೆಯ ಆಕಾರ ಕತ್ತಿಯಂತೆ ನೀಳ. ಹೂ ಒಂಟಿಯಾಗಿಯೂ ಗೊಂಚಲಾಗಿಯೂ ಇರುವುದುಂಟು. ಗೊಂಚಲು ಅಂತ್ಯಾರಂಬಿ, ಇಲ್ಲವೆ ಮಿಶ್ರಮಾದರಿಯದು. ಒಂದೊಂದು ಪ್ರಭೇದದಲ್ಲೂ ಹೂವಿನ ಬಣ್ಣ ಒಂದೊಂದು ರೀತಿ. ಹೂವನ್ನು ಎರಡು ಉಪದಳಗಳು ಆವರಿಸಿವೆ. ಹೂಗಳು ದ್ವಿಲಿಂಗಿಗಳು. ಹೂ ರಚನೆ ಸಾಮಾನ್ಯರೀತಿಯದು. ಪುಷ್ಪಪತ್ರಗಳಂತೆ ದಳಗಳೂ ಸಂಯೋಗವಾಗಿರುತ್ತವೆ. ಒಂದೇ ಸ್ವರೂಪವನ್ನು (ಪೆರಿಯಾಂತ್) ತಾಳಿವೆ. ಇವು ಆರಾರರ ಎರಡು ವೃತ್ತಗಳಲ್ಲಿವೆ; ಕೇಸರಗಳು 3; ಬಹುಬೀಜಗಳ ಮೂರು ಕೋಶದ ಕೆಳ ಅಂಡಾಶಯವಿದೆ. ಹಣ್ಣು 3 ಅಥವಾ 6 ಮುಖದ ಕ್ಯಾಪ್ಸೂಲ್ ಮಾದರಿಯದು.



ಐರಿಸ್ ಆರ್ಕಿಯಾಯ್ಡ್ಸ್ ಕುಂಡ ಸಸ್ಯ

ಈ ಜಾತಿಯ ಹಲವು ಪ್ರಭೇದಗಳಲ್ಲಿ ಉದ್ಯಾನಗಾರಿಕೆಯ ದೃಷ್ಟಿಯಿಂದ ಐರಿಸ್ ಚೈನೆನ್ಸಿಸ್, ಐರಿಸ್ ಜರ್ಮ್ಯಾನಿಕ, ಐರಿಸ್ ಜಾಪೋನಿಕ, ಐರಿಸ್ ಸೈಬೀರಿಕ, ಐರಿಸ್ ಹಿಸ್ಪ್ಯಾನಿಕ, ಐರಿಸ್ ಫ್ಲೊರೆಂಟೀನ, ಐರಿಸ್ ಸಿಪಿಯೋಡೆಸ್ ಮತ್ತು ಐರಿಸ್ ನೆಪಾಲೆನ್ಸಿಸ್ ಎಂಬುವು ಮುಖ್ಯವಾದವು.

ಐರಿಸ್ ಚೈನೆನ್ಸಿಸ್ ಪ್ರಭೇದ ಸಸ್ಯ ಊದಾ ಮತ್ತು ನೀಲಿಮಿಶ್ರಿತ ಬಣ್ಣದ ಹೂಗಳನ್ನು ಬಿಡುತ್ತದೆ. ಇದು ತಗ್ಗುಪ್ರದೇಶಗಳಲ್ಲಿ ಬೆಳೆಯಲು ಯೋಗ್ಯವಾಗಿದೆ.

ಐರಿಸ್ ಜರ್ಮ್ಯಾನಿಕ ಸಸ್ಯದ ಹೂಗಳು ನೀಲಿ, ನಸುಗೆಂಪು ಅಥವಾ ಬಿಳಿಯ ಬಣ್ಣದವು. ಏಪ್ರಿಲ್–ಮೇ ತಿಂಗಳುಗಳಲ್ಲಿ ಹೂ ಬಿಡುತ್ತದೆ.

ಐರಿಸ್ ಜಾಪೋನಿಕ ಪ್ರಭೇದದ ಸಸ್ಯ ಬಿಳುಪು, ನಸುಗೆಂಪು, ಕೆಂಪು, ನೀಲಿ, ಊದಾ ಮುಂತಾದ ಹಲವು ಬಣ್ಣಗಳಲ್ಲಿ ಹೂ ಬಿಡುತ್ತದೆ. ದೊಡ್ಡ ಗಾತ್ರದ ಹೂಗಳಿಗೆ ಈ ಸಸ್ಯ ಪ್ರಸಿದ್ಧಿಯಾಗಿದೆ. ಸಾಮಾನ್ಯವಾಗಿ ಜೂನ್ ತಿಂಗಳಿಂದ ಸೆಪ್ಟೆಂಬರ್ ತಿಂಗಳವರೆಗೆ ಹೂ ಅರಳುತ್ತದೆ.

ಐರಿಸ್ ಸೈಬೀರಿಕ ಸುಂದರವಾದ ಕಿರಿದಾದ ಎಲೆಗಳ ಮಧ್ಯದಲ್ಲಿ ಹೊಳಪಾದ ನೀಲಿ ಹೂಗಳನ್ನು ಬಿಡುವ ಪ್ರಭೇದ.

ಐರಿಸ್ ಹಿಸ್ಪ್ಯಾನಿಕ ಪ್ರಭೇದ ನೀಲಿ, ಹಳದಿ, ಬಿಳುಪು, ಅತಿ ನಸುಗೆಂಪು ಮುಂತಾದ ಬಣ್ಣಗಳ ಹೂ ಬಿಡುತ್ತದೆ.

ಐರಿಸ್ ಫ್ಲೊರೆಂಟೀನ ಪ್ರಭೇದದ ಸಸ್ಯಗಳು ತಂಪಾದ ಹವಾಗುಣಕ್ಕೆ ಹೊಂದಿಕೊಂಡು ಬೆಳೆಯುವ ಗುಣವುಳ್ಳವು. ಬಿಳುಪು ಬಣ್ಣದ ಹೂಗಳನ್ನು ಬಿಡುತ್ತವೆ.

ಐರಿಸ್ ಸಿಪಿಯೋಡೆಸ್ ಪ್ರಭೇದದ ಸಸ್ಯ ಸುಮಾರು ಎರಡು ಅಡಿ ಎತ್ತರ ಬೆಳೆದು ವಿವಿಧ ಬಣ್ಣದ ಹೂಗಳನ್ನು ಬಿಡುತ್ತದೆ.

ಐರಿಸ್ ನೆಪಾಲೆನ್ಸಿಸ್ ಪ್ರಭೇದ ಹಿಮಾಲಯ ಸರಹದ್ದು ಪ್ರದೇಶಗಳಲ್ಲಿ ಹೆಚ್ಚಿನ ಬೇಸಾಯದಲ್ಲಿದೆ. ಇದು ನಸು–ಊದಾ ಬಣ್ಣದ ಹೂಗಳನ್ನು ಬಿಡುತ್ತದೆ.



ಐರಿಸ್ ಜಾಪೋನಿಕ

ಒಂದೊಂದು ಪ್ರಭೇದಕ್ಕೂ ಬೆಳವಣಿಗೆಯಲ್ಲಿ ವ್ಯತ್ಯಾಸವಿರುವುದರಿಂದ ಇವು ಸಸ್ಯಶಾಸ್ತ್ರದಲ್ಲಿ ಪ್ರಾಮುಖ್ಯ ಪಡೆದಿವೆ. ಇವನ್ನು ಗುಪ್ತಕಾಂಡದಂತೆ ಬೇರು ಬಿಡುವ ಅಥವಾ ಎತ್ತರವಾಗಿ ಬೆಳೆಯುವ ವಿಧ, ಕುಳ್ಳಾಗಿ ಬೆಳೆಯುವ ಅಥವಾ ಜರ್ಮನ್ ವಿಧ. ಲಶುನ ಬೇರು ಬಿಡುವ ಅಥವಾ ಡಚ್, ಸ್ಪ್ಯಾನಿಷ್ ಮತ್ತು ಇಂಗ್ಲಿಷ್ ವಿಧ ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು. ಗುಪ್ತಕಾಂಡದಂತೆ ಬೇರು ಬಿಡುವ ವಿಧಗಳ ಬೇಸಾಯ ಸುಲಭ. ಹೆಚ್ಚು ತೇವಾಂಶವಿರುವ ಒಣ ಹವಾಗುಣದ ಫಲವತ್ತಾದ ಮಣ್ಣಿನಲ್ಲಿ ಇವು ಸಮೃದ್ಧಿಯಾಗಿ ಬೆಳೆಯುತ್ತವೆ. ಇವನ್ನು ಗುಪ್ತಕಾಂಡಗಳಿಂದ ಸುಲಭವಾಗಿ ವೃದ್ಧಿ ಮಾಡಬಹುದು. ಈ ವಿಧದಲ್ಲಿ ಐರಿಸ್ ನೆಪಾಲೆನ್ಸಿಸ್, ಐರಿಸ್ ಕುಮಾವೊನೆನ್ಸಿಸ್ ಮತ್ತು ಐರಿಸ್ ಕಾಶ್ಮೀರಿಯಾನ ಪ್ರಭೇದಗಳು ಸೇರಿವೆ. ಇವುಗಳ ಮುಖ್ಯವಾದ ತಳಿಗಳು ಎಂದರೆ ಬಿಳುಪಾದ ಹೂ ಬಿಡುವ ವೈಟ್ ಸಿಟಿ, ಹಳದಿ ಹೂ ಬಿಡುವ ಸಹರ, ಅತೀ ಹಳದಿ ಹೂ ಬಿಡುವ ಸೆಯಿಂಟ್‌ರೋಲೆಕ್ಸ್, ತಿಳಿ ನೀಲಿ ಬಣ್ಣದ ಹೂ ಬಿಡುವ ಅಲೈನ್, ನೀಲಿ ಬಣ್ಣದ ಹೂ ಬಿಡುವ ಸಿರಿಯಸ್, ಕಪ್ಪು ಅಥವಾ ಕಂದು ಬಣ್ಣದ ಹೂ ಬಿಡುವ ಬ್ಲಾಕ್ ಪ್ಯಾಂತರ್, ಕಡುಗೆಂಪು ಬಣ್ಣದ ಹೂ ಬಿಡುವ ಕೊನಸ್ಟನ್ಸ್ ಮೇಯರ್, ತಾಮ್ರದ ಕೆಂಪು ಬಣ್ಣದ ಹೂ ಬಿಡುವ ಹೆಸ್ಪರ್‌ಪ್ರಿನ್ಸ್, ಚಿನ್ನದ ಕಂದು ಬಣ್ಣದ ಹೂ ಬಿಡುವ ಕಿಂಗ್ ಮೀಡಸ್ ಮುಂತಾದುವುಗಳು ಹೆಚ್ಚಿನ ಬೇಸಾಯದಲ್ಲಿವೆ. ಕುಳ್ಳಾಗಿ ಬೆಳೆಯುವ ಐರಿಸ್ ಸಸ್ಯಗಳಲ್ಲಿ ಮುಖ್ಯವಾದ ಪ್ರಭೇದಗಳೆಂದರೆ ಐರಿಸ್ ಜಾಪೋನಿಕ ಮತ್ತು ಐರಿಸ್ ಸೈಬೀರಿಕ. ಇವುಗಳಲ್ಲಿ ಮುಖ್ಯವಾಗಿ ಬೇಸಾಯದಲ್ಲಿರುವ ತಳಿಗಳನ್ನು ಮುಂದೆ ಕಾಣಿಸಿದೆ. ರಕ್ತಬಣ್ಣದ ಹೂ ಬಿಡುವ ಬರ್ಗಂಡಿ, ಕಪ್ಪುಮಿಶ್ರಿತ ಕಂದುಬಣ್ಣದ ಹೂ ಬಿಡುವ ಮರೊಕಯಿನ್, ಹಳದಿ ಬಣ್ಣದ ಹೂ ಬಿಡುವ ಆರೆಂಜ್ ಕ್ವೀನ್, ನೀಲಿ ಬಣ್ಣದ ಹೂ ಬಿಡುವ ಪ್ರಿನ್ ಲೂಯಿಸ್. ಈ ತಳಿಗಳು ಹೆಚ್ಚು ಸುಣ್ಣದ ಅಂಶವಿರುವ ಮಣ್ಣಿನಲ್ಲಿ ಯಶಸ್ವಿಯಾಗಿ ಬೆಳೆಯುವುದಿಲ್ಲ. ಲಶುನ ಬೇರು ಬಿಡುವ, ಡಚ್, ಸ್ಪ್ಯಾನಿಷ್ ಮತ್ತು ಇಂಗ್ಲಿಷ್ ಸಸ್ಯಗಳು ಅಂಚು ಸಸ್ಯಗಳನ್ನಾಗಿ ಬೆಳೆಸಲು ಯೋಗ್ಯವಾದುವು. ಇವುಗಳ ಬಿಡಿ ಹೂಗಳು ಪ್ರಸಿದ್ಧಿಯಾಗಿವೆ. ಇಂಗ್ಲಿಷ್ ತಳಿಗಳ ಬೇಸಾಯ ಹೆಚ್ಚು ತೇವಾಂಶವಿರುವ ಮತ್ತು ತಂಪಾದ ಹವಾಗುಣದಲ್ಲಿ ಸುಗಮವಾಗುತ್ತದೆ; ಡಚ್ ಮತ್ತು ಸ್ಪ್ಯಾನಿಷ್ ಸಸ್ಯಗಳಿಗೆ ಹೆಚ್ಚಿನ ತೇವಾಂಶ ಅಗತ್ಯವಿಲ್ಲ. ಇವುಗಳ ಮುಖ್ಯ ತಳಿಗಳನ್ನು ಮುಂದೆ ಕಾಣಿಸಿದೆ. ನಸುನೀಲಿ ಬಣ್ಣದ ಹೂ ಬಿಡುವ ಚಾಂಪಿಯನ್; ಕಂಚು ಮಿಶ್ರಿತ ನೀಲಿ ಬಣ್ಣದ ಹೂ ಬಿಡುವ ಬ್ರಾಂಜ಼್ ಬ್ಯೂಟಿ, ನೀಲಿ, ಹಳದಿ ಮತ್ತು ಕಿತ್ತಳೆ ಬಣ್ಣಗಳ ಹೂ ಬಿಡುವ ಹಾರ್ಮೊನಿ, ಅತಿನೀಲಿ ಬಣ್ಣದ ಹೂ ಬಿಡುವ ಇಂಪರೇಟರ್, ಹಾಲಿನ ಬಿಳುಪು ಬಣ್ಣದ ಹೂ ಬಿಡುವ ಜೋನ್ ಆಫ್ ಆರ್ಕ್, ನಸುಹಳದಿ ಬಣ್ಣದ ಹೂ ಬಿಡುವ ಲೆಮನ್ ಕ್ವೀನ್, ನೀಲಿ ಬಣ್ಣದ ಹೂ ಬಿಡುವ ವೆಡ್ಜ್‌ಹುಡ್, ಬಿಳಿ ಹೂ ಬಿಡುವ ಎಕ್ಸ್‌ಲ್ಸಿಯರ್. ಸ್ಪ್ಯಾನಿಷ್ ತಳಿಗಳಲ್ಲಿ ಹೆಚ್ಚಿನ ಬೇಸಾಯದಲ್ಲಿರುವ ತಳಿಗಳು ಎಂದರೆ, ಹಳದಿ ಬಣ್ಣದ ಹೂ ಬಿಡುವ ಜಿಪ್ಸಿ ಗರ್ಲ್, ಅತಿಯಾದ ನೀಲಿಬಣ್ಣದ ಹೂ ಬಿಡುವ ಕಿಂಗ್ ಆಫ್ ದಿ ಬ್ಲೂ, ಕಂಚು ಮಿಶ್ರಿತ ಕಂದುಬಣ್ಣದ ಹೂ ಬಿಡುವ ಲಿ ಮೊಗೊಲ್, ಕೆನೆ ಬಣ್ಣದ

ಹೂ ಬಿಡುವ ಸಲ್ಫರ್ ಬ್ಯೂಟಿ. ಇಂಗ್ಲಿಷ್ ಐರಿಸ್ ತಳಿಗಳಲ್ಲಿ ಹೆಚ್ಚಿನ ಬೇಸಾಯದಲ್ಲಿರುವ ತಳಿಗಳನ್ನು ಮುಂದೆ ಕಾಣಿಸಿದೆ. ಅತಿಯಾದ ಕಂದು ಬಣ್ಣದ ಹೂ ಬಿಡುವ ಮ್ಯಾನ್ಸ್‌ಫೀಲ್ಡ್, ಬಿಳಿ ಹೂ ಬಿಡುವ ಮೌಂಟ್ ಬ್ಲಾಂಕ್, ಅತಿಯಾದ ನೀಲಿ ಬಣ್ಣದ ಹೂ ಬಿಡುವ ಡಲ್‌ಫ್ಸ್‌ಸ್ ಬ್ಲೂ ಮತ್ತು ನೀಲಿ ಬಣ್ಣದ ಹೂ ಬಿಡುವ ಕ್ವೀನ್ ಆಫ್ ದಿ ಬ್ಲೂ.

ಐರಿಸ್ ಸಸ್ಯಗಳನ್ನು ಗುಪ್ತಕಾಂಡದ ತುಂಡು ಮತ್ತು ಲಶುನಗಳಿಂದ ವೃದ್ಧಿ ಮಾಡಬಹುದು. ಬೀಜಗಳಿಂದಲೂ ವೃದ್ಧಿ ಸಾಧ್ಯ.

ಐರಿಸ್ ಸಸ್ಯಗಳು ಸಮುದ್ರಮಟ್ಟಕ್ಕಿಂತ 3,000′ ಎತ್ತರದವರೆಗೆ ಸುಲಭವಾಗಿ ಬೆಳೆಯುತ್ತವೆ. ಫಲವತ್ತಾಗಿರುವ ಮತ್ತು ಜೌಗಿಲ್ಲದ ಮರಳುಗೋಡು ಮಣ್ಣು ಬೇಸಾಯಕ್ಕೆ ಶ್ರೇಷ್ಠವಾದುದು. (ಡಿ.ಎಂ.)

**ಐರಿಸೈನಿ :** ಅಮರಾಂತೇಸಿ ಕುಟುಂಬಕ್ಕೆ ಸೇರಿದ ಸುಮಾರು ಇಪ್ಪತ್ತಕ್ಕೂ ಹೆಚ್ಚು ಪ್ರಭೇದಗಳನ್ನೊಳಗೊಂಡ ಒಂದು ಅಲಂಕಾರದ ಸಸ್ಯಜಾತಿ. ಹೂ ಮತ್ತು ಬೀಜಗಳ ಮೇಲೆ ಮೃದುವಾದ ರೋಮದ ಹೊದಿಕೆಯಿದೆ. ದಳದಂತೆ ಮಾರ್ಪಟ್ಟ ಇದರ ಎಲೆಗಳು (ಪೆಟಲಾಯ್ಡ್) ಆಕರ್ಷಣೀಯ ಬಣ್ಣಗಳ ರಮಣೀಯತೆಯನ್ನು ಪ್ರದರ್ಶಿಸುವುದರಿಂದ ಇವು ಉದ್ಯಾನ ಸಸ್ಯಗಳಾಗಿ ಪ್ರಾಮುಖ್ಯ ಪಡೆದಿವೆ. ಇವನ್ನು ಎಲೆಸಸ್ಯ, ಮಡಿಸಸ್ಯ ಮತ್ತು ಪೊದೆಸಸ್ಯಗಳನ್ನಾಗಿ ಬೆಳೆಸುತ್ತಾರೆ. ಇವುಗಳಲ್ಲಿ ಅನೇಕವು ಅಮೆರಿಕದ ಉಷ್ಣ ಮತ್ತು ಸಮಶೀತೋಷ್ಣವಲಯಗಳ ಮೂಲವಾಸಿಗಳು.

ಐರಿಸೈನಿ ಜಾತಿಯ ಸಸ್ಯಗಳು ನೇರವಾಗಿ ಬೆಳೆಯುವ ದೀರ್ಘಕಾಲದ ಪರ್ಣಸಸಿಗಳು ; ಇವುಗಳಲ್ಲಿ ಕುಳ್ಳಾದ ಪೊದೆಗಳು ; ಇನ್ನು ಕೆಲವು ಹತ್ತುವ ಬಳ್ಳಿಗಳು ; ತೊಟ್ಟಿರುವ ಇದರ ಎಲೆಗಳು ಅಭಿಮುಖಪತ್ರ ಜೋಡಣೆ ಹೊಂದಿವೆ. ಎಲೆಗಳ ಅಂಚು ಗರಗಸದ ಹಲ್ಲಿನಂತಿದೆ ; ತುದಿ ಮೊನಚಾಗಿದೆ. ಕಂಕುಳ ತುದಿಯಲ್ಲಿರುವ ಹೂಗೊಂಚಲು ಚೂಪುತುದಿಯದು(ಸ್ಪೈಕ್ ಮಾದರಿ) ; ಏಕಲಿಂಗ ಮತ್ತು ದ್ವಿಲಿಂಗ ಪುಷ್ಪಗಳೆರಡೂ ಇವೆ. ತೊಟ್ಟಿನ ಮೇಲೆ ಉಪಪುಷ್ಪಪತ್ರಗಳೂ ಪುಷ್ಪಪತ್ರಗಳೂ ಇವೆ ; ಪುಷ್ಪಪತ್ರಗಳು ತಳದಲ್ಲಿ ಕೂಡಿದ್ದು ಐದು ಭಾಗಗಳನ್ನು ಒಳಗೊಂಡಿವೆ. ಕೇಸರಗಳು ತಳದಲ್ಲಿ ಕೂಡಿಕೊಂಡಿದ್ದು ಮೇಲ್ಭಾಗದಲ್ಲಿ ಬಿಡಿಬಿಡಿಯಾಗಿವೆ. ಶಲಾಕಾಗ್ರ ಎರಡು ಮೂರು ಭಾಗಗಳಾಗಿದೆ. ಹಣ್ಣು ಒಡೆಯದ ಮಾದರಿಯದು; ಬೀಜ ಒಂದೇ.

ಕಾಂಡದ ತುಂಡುಗಳಿಂದ ಈ ಸಸ್ಯವನ್ನು ವೃದ್ಧಿಮಾಡಬಹುದು. ಹೇನು ಮತ್ತು ನುಸಿ ಹತ್ತುವುದು ಸಾಮಾನ್ಯವಾದ್ದರಿಂದ ಫಾಲಿಡಾಲ್ ಅಥವಾ ಥೀಮೇಟನ್ನು ಬಳಸಬೇಕಾಗುತ್ತದೆ. ಮತ್ತಾವ ತೀವ್ರರೀತಿಯ ರೋಗಗಳೂ ಇದಕ್ಕೆ ಅಂಟವು.

ಐರಿಸೈನಿ ಹರ್ಬ್‌ಸ್ಟೈ : ಲಂಡನ್ನಿನಲ್ಲಿರುವ ಹೆಸರಾಂತ ಕ್ಯೂ ತೋಟದ ಸಸ್ಯವೃದ್ಧಿಗಾರ ಹರ್ಬ್‌ಸ್ಟ್ ಎಂಬುವನ ಜ್ಞಾಪಕಾರ್ಥವಾಗಿ ಈ ಪ್ರಭೇದಕ್ಕೆ ಈ ಹೆಸರು. ಎಲೆ ಕರನೆಯಾಕಾರದಲ್ಲಿದೆ. ತುದಿ ತಗ್ಗು, ಕೆಂಪುನಾಳಗಳು ಕಮಾನಿನ ಆಕಾರದಲ್ಲಿ ಹರಡಿವೆ. ಹೂ ಹಳದಿ, ತೊಟ್ಟು ಉದ್ದ, ಗಾತ್ರ ಅಲ್ಪ, ಗೊಂಚಲು ಮಿಶ್ರ ಮಾದರಿಯದು.

ಐರಿಸೈನಿ ಲಿಂಡನ್ಯೆ : ಎಕ್ವಡಾರ್ ದೇಶದಲ್ಲಿದ್ದ ಜೆ. ಲಿಂಡನ್ ಎಂಬ ಸಸ್ಯಶಾಸ್ತ್ರಜ್ಞನ ಜ್ಞಾಪಕಾರ್ಥವಾಗಿ ಈ ಪ್ರಭೇದಕ್ಕೆ ಈ ಹೆಸರು. ಈ ಜಾತಿಯ ಕಾಂಡ ಮತ್ತು ಎಲೆ ಗುಲಾಬಿ ಬಣ್ಣವಾಗಿದ್ದು ಎಲೆ ಕರನೆಯಾಕಾರ ಅಥವಾ ಭರ್ಜಿಯಾಕಾರವಾಗಿರುತ್ತದೆ. ಎಲೆಯ ತುದಿ ಮೊನಚು. ನಾಳಗಳು ಪ್ರಮುಖವಾಗಿ ಹರಡಿಕೊಂಡಿದ್ದು ಆಕರ್ಷಣೀಯವಾಗಿ ಕಾಣುತ್ತವೆ. (ಡಿ.ಎಂ.)

**ಐರೆರ್, ಯಾಕಬ್:** 1544 (?)–1605. ಜರ್ಮನಿಯ ನ್ಯೂರೆಂಬರ್ಗ್‌ನಲ್ಲಿ ಹುಟ್ಟಿದ ಈತ ನಾಟಕಕಾರ. 1570ರಲ್ಲಿ ಬ್ಯಾಂಬರ್ಗ್ ಪಟ್ಟಣಕ್ಕೆ ತೆರಳಿ 1593ರಲ್ಲಿ ನ್ಯೂರೆಂಬರ್ಗಿಗೆ ಹಿಂದಿರುಗಿದ. ವೃತ್ತಿಯಲ್ಲಿ ವಕೀಲ. ಪುರಸಭಾ ಸದಸ್ಯ ಹಾಗೂ ಸರ್ಕಾರದ ವಕೀಲನೂ ಆಗಿದ್ದ.

ಸಂಪ್ರದಾಯ ರೀತಿಯಲ್ಲಿ ಬರೆದ ಬ್ಯಾಂಬರ್ಗ್ ಚರಿತ್ರೆ ಮತ್ತು ಚರ್ಚ್ ಪ್ರಾರ್ಥನಾಗೀತೆಗಳನ್ನು ಬಿಟ್ಟರೆ ಈತ ನೂರಕ್ಕೂ ಹೆಚ್ಚು ನಾಟಕಗಳನ್ನು ರಚಿಸಿದ್ದಾನೆ. ಇವುಗಳಲ್ಲಿ 30 ದುಃಖಾಂತ ಹಾಗೂ ಸುಖಾಂತ ನಾಟಕಗಳು, 36 ಪ್ರಹಸನಗಳು, ಮತ್ತಿತರವು ಗೀತನೃತ್ಯಗಳು.

ಪದ್ಯರಚನೆ, ಶೈಲಿಗಳಲ್ಲಿ, ಪಾತ್ರಗಳ ಸರಳ ನಿರೂಪಣೆಯಲ್ಲಿ, ನೀತಿಬೋಧಕ ಪ್ರವೃತ್ತಿಯಲ್ಲಿ, ಸಂಭಾಷಣೆಯ ಅನಾಟಕೀಯತೆಯಲ್ಲಿ, ಕಥೆ ಹೇಳುವ ರೀತಿಯಲ್ಲಿ ನಾಟಕಕಾರ ಹ್ಯಾನ್ಸ್‌ಸ್ಯಾಕ್ಸ್‌ನನ್ನು ಈತ ಹೋಲುತ್ತಾನೆ. ಆದರೆ ಕಥಾನಕಗಳಲ್ಲಿ ಸಣ್ಣಪುಟ್ಟ ವಿವರಗಳು ಹೆಚ್ಚಾಗಿ ಅವು ಸಪ್ಪೆಯಾಗಿವೆ. ಎಲಿಜ಼ಬೆತ್ ಕಾಲದ ನಾಟಕಗಳನ್ನು, ಜರ್ಮನಿಯಲ್ಲಿ 16ನೆಯ ಶತಮಾನದ ಉತ್ತರಾರ್ಧ ಹಾಗೂ 17ನೆಯ ಶತಮಾನದ ಆದಿಯಲ್ಲಿ, ಇಂಗ್ಲಿಷ್ ನಟರು ಪ್ರದರ್ಶಿಸುತ್ತಿದ್ದರು. ಈ ಪ್ರದರ್ಶನಗಳಲ್ಲಿ ನಾಜೂಕಿಲ್ಲದಿದ್ದರೂ ರಂಗದ ಮೇಲೆ ಇವು ಪ್ರಭಾವಯುತವಾಗಿದ್ದುವು. ರಂಗದ ಮೇಲೆ ಹೊರ ಚಲನವಲನಗಳಿಗೆ, ಉದ್ರಿಕ್ತ ಘಟನೆಗಳಿಗೆ, ಪ್ರದರ್ಶನಯುಕ್ತ ಪ್ರಭಾವಗಳಿಗೆ ಹೆಚ್ಚು ಗಮನವೀಯುವುದನ್ನು ಐರೆರ್ ಇಂಗ್ಲಿಷ್ ನಾಟಕಗಳಿಂದ ಕಲಿತ. ಸಾಂಪ್ರದಾಯಿಕವಾಗಿ ದುಃಖಾಂತ ನಾಟಕಗಳಲ್ಲೂ ಕಾಣಿಸಿಕೊಳ್ಳುತ್ತಿದ್ದ ಹಾಸ್ಯನಟ, ಇಂಗ್ಲಿಷ್ ನಾಟಕಗಳಲ್ಲಿರುವಂತೆ ವಿದೂಷಕನಾಗಿ ಮಾರ್ಪಾಡಾದ. ಗ್ರೀಕ್ ನಾಟಕದ ಮೇಳದವರ ಹಾಡಿನ ಲಯದಂತೆ ಸಾಂಪ್ರದಾಯಿಕ ರಾಗಗಳನ್ನೊಳಗೊಂಡ ಗೀತನೃತ್ಯಗಳನ್ನು ಇಂಗ್ಲಿಷ್ ನೃತ್ಯಗಳ ರೀತಿಯಲ್ಲಿ ರಚಿಸಿದ. ಇದಕ್ಕೆ ಇಂಗ್ಲಿಷ್ ನೃತ್ಯಗಳಿಂದ ಸಮೃದ್ಧಿಯಾಗಿ ಕಥಾವಸ್ತು ದೊರೆಯಿತು. ಜರ್ಮನಿಯ ಕಥೆಗಳು, ಲಿಪಿ, ಬೊಕ್ಯಾಚಿಯೊರವರ ಕೃತಿಗಳು, ನಿತ್ಯಜೀವನದ ಹಾಸ್ಯ ಸನ್ನಿವೇಶಗಳೂ ಐರೆರಗೆ ಸ್ಫೂರ್ತಿಯನ್ನಿತ್ತುವು. ಹಲವು ನೂತನ ಲಕ್ಷಣಗಳಿದ್ದರೂ ಈತ ಹಳೆಯ ಸಂಪ್ರದಾಯದ ಕೊನೆಯ ಕವಿಯಾದ.

ಷೇಕ್ಸ್‌ಪಿಯರನ ನಾಟಕಗಳು ಐರೆರ್‌ಗೆ ಸ್ಫೂರ್ತಿಯನ್ನಿತ್ತುವು. ಅವುಗಳಂತೆ ತನ್ನ ನಾಟಕಗಳಲ್ಲೂ ಅನೇಕ ಕಥಾನಕಗಳನ್ನು ಹಾಸುಹೊಕ್ಕಾಗಿ ಬಳಸಿದರೂ ಕೃತಿರಚನೆಯಲ್ಲಿ ಷೇಕ್ಸ್‌ಪಿಯರನ್ನು ಮೀರಿಸಲಾಗಲಿಲ್ಲ.

ಈತನ 69 ನಾಟಕಗಳನ್ನು 1618ರಲ್ಲಿ ಒಟ್ಟಿಗೆ ಪ್ರಕಟಿಸಲಾಯಿತು. ಜರ್ಮನ್ ನಾಟಕದ ಕಥೆ ಹೇಳುವ ಧಾಟಿಯನ್ನು, ಅದರ ದ್ವಿಪದಿಪ್ರಾಸ ರೀತಿಯನ್ನು ಇಂಗ್ಲಿಷ್ ಸುಖಾಂತ ನಾಟಕದ ತಂತ್ರ ಹಾಗೂ ಉದ್ವಿಗ್ನತೆಯನ್ನು ಐರೆರ್ ಬೆರಸಲು ಯತ್ನಿಸಿದ. ಹ್ಯಾನ್ಸ್ ಸ್ಯಾಕ್ಸ್‌ನನ್ನು ಅನುಕರಣ ಮಾಡಲು ಯತ್ನಿಸಿದರೂ ಆತನ ಸ್ವೋಪಜ್ಞತೆ, ಚತುರೋಕ್ತಿ, ಆಲಂಕಾರಿಕ ಶೈಲಿ ಐರೆರ್‌ಗೆ ಲಭಿಸಲಿಲ್ಲ.

ನೋಡಿ—ಸ್ಯಾಕ್ಸ್, ಹ್ಯಾನ್ಸ್. (ಟಿ.ಪಿ.ಎಸ್.)

**ಐರೋಪ್ಯ ಆರ್ಥಿಕ ಸಮುದಾಯ :** ಬೆಲ್ಜಿಯಂ, ಫ್ರಾನ್ಸ್, ಜರ್ಮನ್ ಗಣರಾಜ್ಯ, ಇಟಲಿ, ಲಕ್ಸೆಂಬರ್ಗ್, ನೆದರ್ಲೆಂಡ್ಸ್—ಈ ಆರು ರಾಷ್ಟ್ರಗಳ ನಡುವಣ ಒಪ್ಪಂದಕ್ಕನುಗುಣವಾಗಿ 1958ರ ಜನವರಿ 1ರಂದು ಸ್ಥಾಪಿತವಾದ ಸಂಸ್ಥೆ (ಯೂರೋಪಿಯನ್ ಎಕನಾಮಿಕ್ ಕಮ್ಯೂನಿಟಿ). ಐರೋಪ್ಯ ಸಾಮಾನ್ಯ ಮಾರುಕಟ್ಟೆ (ಕಾಮನ್ ಮಾರ್ಕೆಟ್) ಎಂಬ ಹೆಸರೂ ಇದಕ್ಕುಂಟು. ಸದಸ್ಯ ರಾಷ್ಟ್ರಗಳಿಗೆ ಸಾಮಾನ್ಯವಾದ ಮಾರುಕಟ್ಟೆಯೊಂದನ್ನು ಸ್ಥಾಪಿಸಿ ಅವುಗಳ ಆರ್ಥಿಕ ನೀತಿಗಳಲ್ಲಿ ಸಾಮರೂಪ್ಯವುಂಟಾಗುವಂತೆ ಮಾಡಿ, ತನ್ಮೂಲಕ ಆ ದೇಶಗಳ ಆರ್ಥಿಕ ಚಟುವಟಿಕೆಗಳ ಸಮರಸ ಬೆಳವಣಿಗೆಯನ್ನೂ ಸ್ಥಿರತೆಯನ್ನೂ ಉಂಟುಮಾಡುವುದೂ ಅಲ್ಲಿನ ಪ್ರಜೆಗಳ ಜೀವನಮಟ್ಟ ಹೆಚ್ಚಿಸುವುದೂ ದೇಶಗಳ ನಡುವೆ ನಿಕಟಸಂಬಂಧ ಬೆಳೆಯಿಸುವುದೂ ಸಂಸ್ಥೆಯ ಉದ್ದೇಶ. ಇದರ ಸಾಧನೆಗಾಗಿ ಸಂಸ್ಥೆ ಅನುಸರಿಸುವ ಮುಖ್ಯ ವಿಧಾನಗಳು ಇವು : 1 ಆಮದು-ರಫ್ತು ಸುಂಕಗಳ ಮತ್ತು ನಾನಾ ನಿರ್ಬಂಧಗಳ ರದ್ದು, 2 ಸಮಾನ ಸುಂಕ ವ್ಯವಸ್ಥೆಯ ಮತ್ತು ವಾಣಿಜ್ಯ ನೀತಿಯ ಸ್ಥಾಪನೆ, 3 ಜನ, ಸೇವೆ ಮತ್ತು ಬಂಡವಾಳಗಳು ಸುಸೂತ್ರವಾಗಿ ಸಾಗುವಂತೆ ಏರ್ಪಾಡು, 4 ಕೃಷಿ ಮತ್ತು ಸಾರಿಗೆಗೆ ಸಂಬಂಧಿಸಿದಂತೆ ಏಕರೀತಿಯ ನೀತಿಯ ಪ್ರತಿಷ್ಠಾಪನೆ, 5 ನ್ಯಾಯವಾದ ಸ್ಪರ್ಧೆಯ ವ್ಯವಸ್ಥೆಯ ಕಲ್ಪನೆ, 6 ನಾನಾ ಆರ್ಥಿಕ ನೀತಿಗಳನ್ನು ಸಂಯೋಜನೆಗೆ ಒಳಪಡಿಸಿ ವಿದೇಶೀ ವಿನಿಮಯ ಕ್ಷೇತ್ರದಲ್ಲಿ ಪಾವತಿ ಶಿಲ್ಕುಗಳ (ಬ್ಯಾಲೆನ್ಸಸ್ ಆಫ್ ಪೇಮೆಂಟ್ಸ್) ಸಮತೋಲನ, 7 ಸದಸ್ಯ ರಾಷ್ಟ್ರಗಳ ಪೌರಸಭಾ ಕಾನೂನುಗಳಲ್ಲಿ ಏಕರೂಪತೆಯ ಸಾಧನೆ, 8 ಸಾಮಾಜಿಕ ನಿಧಿಯ ಮತ್ತು ಐರೋಪ್ಯ ನಿಯೋಜನ ಬ್ಯಾಂಕಿನ (ಇನ್‌ವೆಸ್ಟ್‌ಮೆಂಟ್ ಬ್ಯಾಂಕ್) ರಚನೆ ಮತ್ತು 9 ಕೆಲವು ಸದಸ್ಯ ರಾಷ್ಟ್ರಗಳಿಗೆ ಸಂಬಂಧ ಹೊಂದಿರುವ ಸಾಗರಾಂತರ ದೇಶಗಳೂ ಪ್ರದೇಶಗಳೂ ಈ ಸಂಸ್ಥೆಯ ಚಟುವಟಿಕೆಗಳಲ್ಲಿ ಭಾಗವಹಿಸಲು ಅವಕಾಶ ಕಲ್ಪನೆ.

ರಾಷ್ಟ್ರ-ರಾಷ್ಟ್ರಗಳ ಆರ್ಥಿಕ ವ್ಯವಹಾರಗಳಿಗೆ ರಾಜಕೀಯ ಪ್ರತ್ಯೇಕತೆಯಿಂದ ಪ್ರಾಪ್ತವಾಗುವ ಅನೇಕ ಬಗೆಯ ಅಡಚಣೆಗಳನ್ನು ತೊಡೆದು ಹಾಕಿ, ಹಲವಾರು ರಾಷ್ಟ್ರಗಳು ಒಟ್ಟಾಗಿ ಒಂದೇ ರೀತಿಯ ಆರ್ಥಿಕ ನೀತಿಗಳನ್ನು ಅನುಸರಿಸುವುದರ ಮೂಲಕ ಒಂದು ವಿಧದ ಅಂತರರಾಷ್ಟ್ರೀಯ ಆರ್ಥಿಕ ಸಂಘಟನೆಯನ್ನು ಸಾಧಿಸುವ ಪ್ರಯತ್ನಗಳು ಎರಡನೆಯ ಮಹಾಯುದ್ಧದ ಕಾಲದಿಂದೀಚೆಗೆ ಎದ್ದು ಕಾಣುವ ಆರ್ಥಿಕ ಘಟನೆ. ಪಾಶ್ಚಾತ್ಯ ಯೂರೋಪಿನ ರಾಷ್ಟ್ರಗಳು ತಮ್ಮ ಅರ್ಥವ್ಯವಸ್ಥೆಯನ್ನು ಪರಸ್ಪರವಾಗಿ ಸಂಘಟಿತಗೊಳಿಸುವ ಪ್ರಯತ್ನ ಈಚೆಗೆ ಪ್ರಾಮುಖ್ಯ ಗಳಿಸಿದೆ. 17 ಐರೋಪ್ಯ ರಾಷ್ಟ್ರಗಳ ಆರ್ಥಿಕ ಸಹಕಾರ ಸಂಸ್ಥೆ 1948ರ ಏಪ್ರಿಲ್ 16ರಂದು ಸ್ಥಾಪಿತವಾಯಿತು. ಅಂದಿನಿಂದ ಈ ಎಲ್ಲ ರಾಷ್ಟ್ರಗಳ ಪ್ರತಿನಿಧಿಗಳು ಶಾಶ್ವತವಾಗಿ ಪ್ಯಾರಿಸಿನಲ್ಲಿ ಇದ್ದು ಪ್ರತಿದಿನವೂ ಒಟ್ಟಾಗಿ ಅನೇಕ ವಿಷಯಗಳ ಬಗ್ಗೆ ವಿಚಾರ ವಿನಿಮಯ ಮಾಡಿಕೊಳ್ಳುತ್ತ ಬಂದಿದ್ದಾರೆ. ಹೀಗಾಗಿ ಒಂದು ರಾಷ್ಟ್ರ ಯಾವ ಒಂದು ನೀತಿ ಹಾಗೂ ಕ್ರಮವನ್ನು ಆಲೋಚಿಸುವಾಗಲೂ ಇತರ ಸದಸ್ಯ ರಾಷ್ಟ್ರಗಳ ಮೇಲೆ ಆಗಬಹುದಾದ ಪರಿಣಾಮವನ್ನು ಸ್ವಭಾವಿಕವಾಗಿಯೇ ಪರಿಗಣಿಸುವ ರೂಢಿ ಬೆಳೆದು ಬಂದು ಸರ್ವ ಐರೋಪ್ಯವೆಂದು ಹೇಳಬಹುದಾದ ದೃಷ್ಟಿ ಬೇರೂರಿ ಆರ್ಥಿಕ

ಸಂಘಟನೆಗಳಿಗೆ ಮಾರ್ಗ ಮಾಡಿಕೊಟ್ಟಂತಾಗಿದೆ. ಬೆನೆಲಕ್ಸ್ ಒಕ್ಕೂಟ (ನೋಡಿ) ಐರೋಪ್ಯ ಕಲ್ಲಿದ್ದಲು ಮತ್ತು ಉಕ್ಕು ಸಮುದಾಯ (ನೋಡಿ) ಮುಂತಾದ ಸಂಘಟನ ಯೋಜನೆಗಳು ರೂಪುಗೊಂಡುವು. ಐರೋಪ್ಯ ಆರ್ಥಿಕ ಸಮುದಾಯದ ಸ್ಥಾಪನೆ ಇವೆಲ್ಲ ಯೋಜನೆಗಳಿಗಿಂತಲೂ ಮುಖ್ಯವಾದ ಆರ್ಥಿಕ ಸಂಘಟನೆಯ ಹೆಜ್ಜೆ.

ಐರೋಪ್ಯ ಆರ್ಥಿಕ ಸಮುದಾಯ ಒಂದು ರೀತಿಯ ರಾಷ್ಟ್ರಾತೀತ ಸರ್ಕಾರವೇ ಆಗಿದೆಯೆಂದು ಹೇಳಬಹುದು. ಒಟ್ಟುಗೂಡಿರುವ ಆರು ರಾಷ್ಟ್ರಗಳು ಕೆಲವು ಆರ್ಥಿಕ ವಿಷಯಗಳಲ್ಲಿ ವೈಯಕ್ತಿಕ ರಾಷ್ಟ್ರೀಯ ಅಧಿಕಾರವನ್ನು ಸಮುದಾಯಕ್ಕೆ ಬಿಟ್ಟು ಕೊಟ್ಟಿವೆ. ಇದರಿಂದ ಈ ಆರು ರಾಷ್ಟ್ರಗಳ ಆರ್ಥಿಕ ಸಂಘಟನೆ ಸಾಧಿಸಲು ಸಮುದಾಯಕ್ಕೆ ಅವಕಾಶವುಂಟಾಗಿದೆ. ರಾಜಕೀಯವಾಗಿ ಒಂದಾಗದೆ ಸುಭದ್ರವಾದ ಮತ್ತು ಪರಿಪೂರ್ಣವಾದ ಆರ್ಥಿಕ ಸಂಘಟನೆ ಸಾಧ್ಯವಿಲ್ಲವೆಂಬುದು ಪ್ರೊ. ಆರ್ಥರ್ ಲೂಯಿಸ್ ಅಭಿಪ್ರಾಯ. ರಾಜಕೀಯ ಸಂಘಟನೆಯ ಕ್ರಮಗಳನ್ನ ಕೈಕೊಳ್ಳುತ್ತಿರುವುದು ಈಚಿನ ಮಹತ್ತ್ವಪೂರಿತ ಬೆಳೆವಣಿಗೆಗಳಲ್ಲಿ ಒಂದು.

ಐರೋಪ್ಯ ಆರ್ಥಿಕ ಸಮುದಾಯದ ಸ್ಥಾಪನೆಗೆ ರಾಜಕೀಯ, ಧ್ಯೇಯಾತ್ಮಕ ಮತ್ತು ಆರ್ಥಿಕ ಪ್ರೇರಕ ಶಕ್ತಿಗಳಿವೆ. ಯೂರೋಪಿನ ರಾಷ್ಟ್ರಗಳೆಲ್ಲವೂ ಸೇರಿ ಒಕ್ಕೂಟ ಒಂದನ್ನು ಸ್ಥಾಪಿಸುವುದರ ಮೂಲಕ ಹೆಚ್ಚು ವಿಶಾಲವಾದ ರಾಜಕೀಯ ಸಂಸ್ಥಾನವಾಗಬೇಕೆಂಬುದು ಸರ್ ವಿನ್‌ಸ್ಟನ್ ಚರ್ಚಿಲ್ ಬಹಳ ಹಿಂದೆಯೇ ಮಾಡಿದ್ದ ಸೂಚನೆ. ಎರಡನೆಯ ಮಹಾಯುದ್ಧದ ತರುವಾಯ ಯೂರೋಪಿನಲ್ಲಿ ಕಮ್ಯೂನಿಸ್ಟ್ ಮತ್ತು ಕಮ್ಯೂನಿಸ್ಟೇತರವೆಂಬ ಎರಡು ಬಣಗಳು ಒಡೆದು ಮೂಡಿದುವು. ಕಮ್ಯೂನಿಸ್ಟೇತರ ರಾಷ್ಟ್ರಗಳ ಸಂಘಟನೆಯ ಯತ್ನಗಳಲ್ಲಿ ಇದೂ ಒಂದು. ಉತ್ತರ ಅಟ್ಲಾಂಟಿಕ್ ಕೌಲು ಸಂಸ್ಥೆ (ನೋಡಿ) ಪಶ್ಚಿಮ ಯೂರೋಪಿನ ರಾಷ್ಟ್ರಗಳನ್ನೂ ಕೆನಡ ಮತ್ತು ಅಮೆರಿಕ ಸಂಯುಕ್ತಸಂಸ್ಥಾನಗಳನ್ನೂ ರಕ್ಷಣಾದೃಷ್ಟಿಯಿಂದ ಒಂದುಗೂಡಿಸಿದೆ. ಆರ್ಥಿಕ ಕ್ಷೇತ್ರದ ಸಂಘಟನೆಗಾಗಿ ಐರೋಪ್ಯ ಆರ್ಥಿಕ ಸಮುದಾಯದ ಉದಯವಾಯಿತು.

ಆರ್ಥಿಕ ಲಾಭದೃಷ್ಟಿ ಸಮುದಾಯದ ಇನ್ನೊಂದು ಮುಖ್ಯ ಪ್ರೇರಕ ಶಕ್ತಿ. ಆಧುನಿಕ ಆರ್ಥಿಕ ಪದ್ಧತಿಯಲ್ಲಿ ಅನೇಕ ಕೈಗಾರಿಕೆಗಳಲ್ಲಿ ಬೃಹದ್ಗಾತ್ರ ಉತ್ಪಾದನ ವ್ಯವಸ್ಥೆಯಿಂದ ಮಾತ್ರ ಆಂತರಿಕ ಆಡಳಿತ ಹಾಗೂ ಇತರ ಸುವ್ಯವಸ್ಥಾ ಕ್ರಮಗಳನ್ನೂ ಬಾಹ್ಯಪರಿಸ್ಥಿತಿಗಳಿಂದ ಪ್ರಯೋಜನ ಹೆಚ್ಚಿಸಿಕೊಳ್ಳುವ ಕ್ರಮಗಳನ್ನೂ ಅನುಸರಿಸುವುದು ಸಾಧ್ಯ. ಯೂರೋಪಿನ ಸಣ್ಣಪುಟ್ಟ ರಾಷ್ಟ್ರಗಳು ತಮ್ಮ ತಮ್ಮ ದೇಶೀಯ ಉತ್ಪನ್ನ ಸಾಧನೆಗಳಿಗೂ ಆಂತರಿಕ ಮಾರುಕಟ್ಟೆಗಳಿಗೂ ಅನುಸಾರವಾಗಿ ಕೈಗಾರಿಕೆಗಳನ್ನು ಹೂಡುವುದಾದರೆ ಸಾಕಷ್ಟು ಪ್ರಮಾಣದ ವಿಸ್ತರಣೆ ಸಾಧ್ಯವಾಗಲಾರದು ಎಂಬ ಕಾರಣ ಒಕ್ಕೂಟಕ್ಕೆ ಪ್ರೇರಕವಾಯಿತು. ಹೀಗೆ ಮಾಡುವುದರಿಂದ ಅರ್ಥವ್ಯವಸ್ಥೆಯ ಕ್ಷೇತ್ರ ವಿಸ್ತಾರಗೊಂಡು ಶ್ರಮ ವಿಭಜನೆಗೂ ಆಂತರಿಕ ಹಾಗೂ ಬಾಹ್ಯ ಮಿತವ್ಯಯಗಳಿಗೂ ಹೆಚ್ಚು ಅವಕಾಶವಾಗುವುದೆಂಬ ಅರಿವು ಉಂಟಾದದ್ದೇ ಈ ಸಮುದಾಯ ಸ್ಥಾಪನೆಗೆ ಆರ್ಥಿಕ ಕಾರಣ.

ಈ ಪ್ರೇರಕ ಶಕ್ತಿಗಳು ಪ್ರಬಲವಾದುದಕ್ಕೆ ಕಾರಣ ಎರಡನೆಯ ಮಹಾಯುದ್ಧದ ತರುವಾಯ ಪ್ರಾಪ್ತವಾದ ಆರ್ಥಿಕ ದುಃಸ್ಥಿತಿ. ಮುರಿದು ಬಿದ್ದ ಅರ್ಥವ್ಯವಸ್ಥೆಗಳನ್ನು ಪುನರ್ವ್ಯವಸ್ಥೆಗೊಳಿಸುವ ಪ್ರಯತ್ನದಲ್ಲಿ ಐರೋಪ್ಯ ರಾಷ್ಟ್ರಗಳೆಲ್ಲ ಒಂದುಗೂಡಲೇಬೇಕಾದ ಅನಿವಾರ್ಯ ಉದ್ಭವಿಸಿತು.

ಈ ಆರ್ಥಿಕ ಸಮುದಾಯದ ಕೆಲವು ಮುಖ್ಯ ಲಕ್ಷಣಗಳನ್ನು ಸ್ಥೂಲವಾಗಿ ಹೀಗೆ ಹೇಳಬಹುದು : ಪರಸ್ಪರ ಸುಂಕ ಹಾಗೂ ವ್ಯಾಪಾರ ಪ್ರಮಾಣ ನಿರ್ಬಂಧಗಳ ನಿರ್ಮೂಲ, ಏಕರೀತಿಯ ಹೊರ ವ್ಯಾಪಾರ ಸುಂಕ, ನಿರಾತಂಕ ಬಂಡವಾಳ ಚಲನೆ, ವಿನಿಮಯ, ವ್ಯವಸಾಯ, ಯಾನವಾಹನ ಮತ್ತು ಇತರ ಆರ್ಥಿಕ ನೀತಿಗಳ ಬಗ್ಗೆ ಏಕರೀತಿಯ ಅನುಸರಣೆ ಇತ್ಯಾದಿ ಕ್ರಮಗಳ ಮೂಲಕ ಆರು ರಾಷ್ಟ್ರಗಳೂ ಸೇರಿ ಒಂದೇ ಆರ್ಥಿಕ ಕ್ಷೇತ್ರವಾಗುವಂತೆ ಮಾಡುವುದೇ ಸಮುದಾಯದ ಮುಖ್ಯ ಆಶಯ. ಇದೇ ಐರೋಪ್ಯ ಸಾಮಾನ್ಯ ಮಾರುಕಟ್ಟೆಯ ಯೋಜನೆ.

ಐರೋಪ್ಯ ಆರ್ಥಿಕ ಸಮುದಾಯದ ಕಾರ್ಯಸಾಧನೆಗಾಗಿ ಅನೇಕ ಸಮಿತಿಗಳು ಸ್ಥಾಪಿತವಾಗಿವೆ. ಇವುಗಳ ಪೈಕಿ ಆರ್ಥಿಕ ಮತ್ತು ಸಾಮಾಜಿಕ ಸಮಿತಿಯೂ ಒಂದು. ಇದರಲ್ಲಿ ಸಮುದಾಯದ ಆರು ಸದಸ್ಯ ರಾಷ್ಟ್ರಗಳ ನಾನಾ ಸಾಮಾಜಿಕ ಆರ್ಥಿಕ ಕ್ಷೇತ್ರಗಳನ್ನು ಪ್ರತಿನಿಧಿಸುವ 101 ಮಂದಿ ಸದಸ್ಯರಿದ್ದಾರೆ. ಇದೊಂದು ಸಮಾಲೋಚಕ ಸಮಿತಿ. ಹೆಚ್ಚಾಗಿ ಕೃಷಿ ಮತ್ತು ಸಾರಿಗೆಗೆ ಸಂಬಂಧಿಸಿದಂತೆ ಈ ಸಮಿತಿ ಸಲಹೆ ನೀಡುತ್ತದೆ.

ಈ ಸಮುದಾಯದ ಇತರ ಸಮಿತಿಗಳು ಇಂತಿವೆ : 1 ಹಣ ಸಮಿತಿ : ಸದಸ್ಯ ರಾಷ್ಟ್ರಗಳ ಹಣಕಾಸಿನ ಪರಿಸ್ಥಿತಿಯನ್ನು ಪರಿಶೀಲಿಸಿ ಸಲಹೆ ನೀಡುವುದೂ ರಾಷ್ಟ್ರೀಯ ಹಣನೀತಿಗಳನ್ನು ಸಂಯೋಜಿಸುವುದೂ ಇದರ ಗುರಿ. 2 ಶೀಘ್ರಾವಧಿ ಆರ್ಥಿಕ ನೀತಿ ಸಮಿತಿ : ಸದಸ್ಯ ದೇಶಗಳ ದಿನದಿನದ ಆರ್ಥಿಕ ನೀತಿಗಳನ್ನು ಸಂಯೋಜಿಸಿ ಅವುಗಳ ಆರ್ಥಿಕ ವಿಸ್ತರಣೆ ಕ್ರಮಬದ್ಧವಾಗಿ ನಡೆಯುವ ಸಲಹೆ ನೀಡುವುದು ಈ ಸಮಿತಿಯ ಉದ್ದೇಶ. 3 ಮಧ್ಯಾವಧಿ ಆರ್ಥಿಕ ನೀತಿ ಸಮಿತಿ : ಸಮುದಾಯ ರಾಷ್ಟ್ರಗಳ ಅರ್ಥವ್ಯವಸ್ಥೆಯಲ್ಲಿ ತೋರಿಬರುತ್ತಿದ್ದ ನಾನಾ ಪ್ರವೃತ್ತಿಗಳನ್ನು ಗಮನಿಸಿ, ಅವುಗಳ ಅರ್ಥನೀತಿಗಳ ಹೊಂದಾಣಿಕೆಗಾಗಿ ಸೂಕ್ತ ಸಲಹೆ ನೀಡುವ ಉದ್ದೇಶದಿಂದ ಇದು ಸ್ಥಾಪಿತವಾಗಿದೆ. 4 ಆಯ–ವ್ಯಯ ನೀತಿ ಸಮಿತಿ, ಕೇಂದ್ರ ಬ್ಯಾಂಕ್ ಗವರ್ನರುಗಳ ಸಮಿತಿ, ಸಾರಿಗೆ ಸಮಿತಿ ಮತ್ತು ವಲಸೆ ಹೋಗುವ ಕಾರ್ಮಿಕರ ಸಾಮಾಜಿಕ ಭದ್ರತೆಗಾಗಿ ಆಡಳಿತ ಆಯೋಗ—ಇವು ಇತರ ಕೆಲವು ಸಮಿತಿಗಳು.

ಸಾಮಾನ್ಯ ಮಾರುಕಟ್ಟೆಯ ರಾಷ್ಟ್ರಗಳಲ್ಲಿನ ಕಾರ್ಮಿಕರ ಉದ್ಯೋಗಾವಕಾಶಗಳನ್ನು ಉತ್ತಮಪಡಿಸಿ ಜೀವನಮಟ್ಟವನ್ನು ಏರಿಸುವ ಉದ್ದೇಶದಿಂದ 1960ರಲ್ಲಿ ಐರೋಪ್ಯ ಸಾಮಾಜಿಕ ನಿಧಿಯ ಸ್ಥಾಪನೆಯಾಯಿತು. ಸರ್ಕಾರಗಳ, ಕಾರ್ಮಿಕ ಸಂಘಗಳ ಮತ್ತು ನೇಮಕದಾರರ (ಎಂಪ್ಲಾಯರ್ಸ್) ಪ್ರತಿನಿಧಿಗಳು ಈ ನಿಧಿಯ ಆಡಳಿತ ಆಯೋಗದಲ್ಲಿರುತ್ತಾರೆ. ಉದ್ಯೋಗ ಪುನರ್ವ್ಯವಸ್ಥೆ ಪುನರ್‌ತರಬೇತಿಗಳಿಗಾಗಿ ಸದಸ್ಯರಾಷ್ಟ್ರ ಮಾಡುವ ಖರ್ಚಿನಲ್ಲಿ ಅರ್ಧವನ್ನು ಈ ನಿಧಿಯಿಂದ ಒದಗಿಸಲು ಅವಕಾಶವಿದೆ. ಒಂದು ಉತ್ಪಾದನೆಯಿಂದ ಇನ್ನೊಂದು ಉತ್ಪಾದನೆಗಾಗಿ ಉದ್ಯಮವನ್ನು ಪರಿವರ್ತನೆಗೊಳಿಸಿದ್ದರ ಫಲವಾಗಿ ಕಾರ್ಮಿಕರ ಕೂಲಿಯ ನಷ್ಟವನ್ನು ತುಂಬಿಕೊಡಲೂ ಈ ನಿಧಿಯನ್ನು ಬಳಸಬಹುದು. 1960–1968ರ ಅವಧಿಯಲ್ಲಿ ಈ ನಿಧಿಯಿಂದ 8.026 ಕೋಟಿ ಡಾಲರುಗಳನ್ನು 9,59,258 ಕಾರ್ಮಿಕರ ನೆರವಿಗಾಗಿ ನೀಡಲಾಗಿತ್ತು.

ಸಮುದಾಯ ರಾಷ್ಟ್ರಗಳ ಸಾಗರಾಂತರ ಪ್ರದೇಶಗಳ ಸಾಮಾಜಿಕ ಆರ್ಥಿಕ ಅಭಿವೃದ್ಧಿಗಾಗಿ ಒಂದು ಪ್ರತ್ಯೇಕ ನಿಧಿ ಸ್ಥಾಪಿತವಾಗಿದೆ. 1959ರಲ್ಲಿ ಇದನ್ನು ತೊಡಗಿಸಲಾಯಿತು.

ಸಮುದಾಯ ಹಿತ ಸಾಧಿಸಬಲ್ಲ ಸಾಮಾನ್ಯ ಮಾರುಕಟ್ಟೆಯ ಸುಲಲಿತ ಸರ್ವತೋಮುಖ ಬೆಳೆವಣಿಗೆಯಾಗುವಂತೆ ಅಭಿವೃದ್ಧಿ ಕಾರ್ಯಗಳಿಗಾಗಿ ಸಾಲ ಕೊಡುವ ಮತ್ತು ಜಾಮೀನು ನೀಡುವ ಉದ್ದೇಶದಿಂದ ಸ್ಥಾಪಿತವಾಗಿರುವ ಐರೋಪ್ಯ ನಿಯೋಜನಾ ಬ್ಯಾಂಕಿನ ಬಂಡವಾಳ 100 ಕೋಟಿ ಡಾಲರ್. ಇದಕ್ಕೆ ಫ್ರಾನ್ಸ್ ಮತ್ತು ಜರ್ಮನ್ ಗಣರಾಜ್ಯ ತಲಾ 30 ಕೋಟಿ ಡಾಲರುಗಳನ್ನೂ ಇಟಲಿ 24 ಕೋಟಿಯನ್ನೂ ಬೆಲ್ಜಿಯಂ 8.65 ಕೋಟಿಯನ್ನೂ ನೆದರ್‌ಲೆಂಡ್ಸ್ 7.15 ಕೋಟಿಯನ್ನೂ ಲಕ್ಸೆಂಬರ್ಗ್ 20 ಲಕ್ಷವನ್ನೂ ಚಂದಾ ಸಲ್ಲಿಸಿವೆ.

15 ವರ್ಷಗಳೊಳಗೆ ಒಪ್ಪಂದದ ರಾಷ್ಟ್ರಗಳೊಳಗೆ ಆಮದು-ರಫ್ತು ಸುಂಕವಿಲ್ಲದೆ ವ್ಯಾಪಾರ ನಡೆಯುವಂತೆ ಮಾಡುವುದು ಸಮುದಾಯದ ಆಶಯ. ಸಮುದಾಯದ ರಾಷ್ಟ್ರಗಳು ಇತರ ರಾಷ್ಟ್ರಗಳೊಡನೆ ನಡೆಸುವ ವ್ಯಾಪಾರಕ್ಕೆ ಏಕರೀತಿಯ ಆಮದು-ರಫ್ತು ನೀತಿ ಹಾಗೂ ಸುಂಕದರಗಳ ಪಟ್ಟಿ ಅನುಸರಿಸಲಾಗುವುದು. ಆರಂಭದಲ್ಲಿ 1–1–57ರಲ್ಲಿ ಆರು ರಾಷ್ಟ್ರಗಳು ಅನುಸರಿಸುತ್ತಿದ್ದ ದರಗಳ ಸರಾಸರಿಯೇ ಈ ಹೊಸ ಸುಂಕ ದರಗಳು; ಇವು ಮುಂದೆ ಕಾಣಿಸಿರುವ ಮಿತಿಗೆ ಹೆಚ್ಚಾಗದಿರಬೇಕೆಂದು ವಿಧಿಸಲಾಗಿದೆ: 1 ಕಚ್ಚಾ ಸಾಮಗ್ರಿಗಳಿಗೆ 3%, 2 ಅರ್ಧ ತಯಾರಿಸಿದ ಸರಕುಗಳಿಗೆ 10%, 3 ಕೆಲವು ರಾಸಾಯನಿಕ ಸರಕುಗಳಿಗೆ 15%–25%, 4 ನಮೂದಿಸಲಾಗಿರುವ ಕೆಲವು ಸರಕುಗಳಿಗೆ ಪರಸ್ಪರ ಮಾತುಕತೆಗಳ ಮೇಲೆ ನಿರ್ಧಾರವಾಗುವ ದರಗಳು. ಹೀಗೆ ಸುಂಕ ದರಗಳ ಪರಮಾವಧಿ ಮಟ್ಟವನ್ನು ಗೊತ್ತುಮಾಡಿದಂತಾಗಿದೆ. ಈ ಏಕರೂಪದ ಹೊರ ಸುಂಕ ಪದ್ಧತಿ ಮೂರು ಹಂತಗಳಲ್ಲಿ ಜಾರಿಗೆ ಬರತಕ್ಕದ್ದು. ಒಂದು ಸಾರಿ ಸ್ಥಾಪನೆಯಾದ ಸುಂಕದ ಮಟ್ಟ ಬದಲಾವಣೆಯಾಗಬೇಕಾದರೆ ಸಭೆಯಲ್ಲಿ ಸರ್ವಾನುಮತದ ನಿರ್ಣಯ ಆವಶ್ಯಕ. ವ್ಯವಸಾಯ ವಸ್ತುಗಳ ಮೇಲಿನ ಸುಂಕವನ್ನು ಸದಸ್ಯ ರಾಷ್ಟ್ರ ಸಭೆಯ ಅನುಮತಿಯಿಂದ ಕೆಲವು ಕಾಲದ ವರೆಗೆ ವಜಾ ಮಾಡಬಹುದು.

ಆಮದು ಪ್ರಮಾಣ ಮಿತಿಗೊಳಿಸುವ ಪಸುಗೆ (ಕೋಟ) ಪದ್ಧತಿ ರದ್ದಾಗುತ್ತದೆ. ಮೊದಲ ವರ್ಷದಲ್ಲೇ ಉಭಯ ಪಕ್ಷೀಯ ಪಸುಗೆಗಳು ಕ್ಷೇತ್ರೀಯ ಪಸುಗೆಗಳಾಗಿ ಮಾರ್ಪಟ್ಟುವು. ಅಂದರೆ ನಿಗದಿಯಾದ ಆಮದಿನ ಪರಿಮಾಣವನ್ನು ಇನ್ನೊಂದು ರಾಷ್ಟ್ರದಿಂದ ಮಾತ್ರ ಪಡೆಯುವುದಕ್ಕೆ ಬದಲಾಗಿ ಉಳಿದ 5 ರಾಷ್ಟ್ರಗಳಲ್ಲಿ ಯಾವುದರಿಂದ ಬೇಕಾದರೂ ಪಡೆಯಬಹುದು. ಕಾಲಕ್ರಮದಲ್ಲಿ ಪಸುಗೆಯ ಮೂಲಕವಾಗಲಿ ಇತರ ವಿಧದಲ್ಲಾಗಲಿ ಆಮದು ಪ್ರಮಾಣವನ್ನು ನಿರ್ಬಂಧಿಸುವ ಕಟ್ಟುಪಾಡುಗಳನ್ನು ಕ್ಷೇತ್ರದೊಳಗೆ ಪೂರ್ಣವಾಗಿ ರದ್ದುಗೊಳಿಸಿ ವ್ಯಾಪಾರ ಸ್ವಾಭಾವಿಕ ಮಾರ್ಗಗಳಲ್ಲಿ ಬೆಳೆಯುವ ಅವಕಾಶವನ್ನು ಸಮುದಾಯ ಕಲ್ಪಿಸಲಿದೆ.

ವಿದೇಶೀ ವಿನಿಮಯ ಮತ್ತು ವ್ಯಾಪಾರ ನೀತಿಗಳ ಬಗ್ಗೆ ಸಾಮಾನ್ಯ ಮಾರುಕಟ್ಟೆಯ ಆವಶ್ಯಕತೆಗಳಿಗೆ ಅನುಸಾರವಾದ ಕೆಲವು ನಿಯಮಗಳನ್ನು ಒಪ್ಪಂದದಲ್ಲಿ ಸೂಚಿಸಿದೆ. ಸಮುದಾಯದ ಸದಸ್ಯ ರಾಷ್ಟ್ರಗಳೂ ಅಂತರರಾಷ್ಟ್ರೀಯ ಹಣ ನಿಧಿಯ ಸದಸ್ಯತ್ವ ಹೊಂದಿರುವುದರಿಂದ ಅವು ವಿದೇಶೀ ವಿನಿಮಯ ಕ್ಷೇತ್ರದಲ್ಲಿ ಸೂಕ್ತ ಕಟ್ಟುಪಾಡುಗಳಿಗೆ ಒಳಗಾಗಿವೆ. ರಫ್ತು ವ್ಯಾಪಾರಕ್ಕೆ ಸಹಾಯವನ್ನು

(ಎಕ್ಸ್‌ಪೋರ್ಟ್ ಸಬ್ಸಿಡಿ) ನೀಡಿಕೆ, ವ್ಯವಹಾರ ಕೂಟಗಳ (ಕಾರ್ಟೆಲ್ಸ್) ಮೂಲಕ ಬೆಲೆ ನಿಗದಿ ಪದ್ಧತಿ, ಸರ್ಕಾರಿ ವ್ಯಾಪಾರ ಕಾರ್ಪೊರೇಷನ್‌ಗಳ ಮೂಲಕ ಅನುಚಿತ ಸ್ಪರ್ಧೆಯಲ್ಲಿ ನಿರತವಾಗುವುದು—ಇಂಥ ನೀತಿಗಳನ್ನು ತಪ್ಪಿಸಲು ಒಪ್ಪಂದದಲ್ಲಿ ಸೂಚಿತವಾಗಿರುವ ಪ್ರಕಾರ ಅನೇಕ ಕ್ರಮಗಳನ್ನು ಕೈಗೊಳ್ಳಲಾಗಿದೆ.

ಸಾರ್ವತ್ರಿಕ ಮಾರುಕಟ್ಟೆಯ ನಿಯಮಗಳ ಪ್ರಕಾರ ಸದಸ್ಯರಾಷ್ಟ್ರಗಳ ರೈಲು, ರಸ್ತೆ, ಹಡಗು, ವಿಮಾನ ಇತ್ಯಾದಿ ಸಾರಿಗೆ ಪದ್ಧತಿಗಳಲ್ಲಿ ಆದಷ್ಟುಮಟ್ಟಿಗೆ ಏಕರೂಪದ ರೀತಿನೀತಿಗಳನ್ನು ಜಾರಿಗೆ ತರಲಾಗುವುದು. ಬಂಡವಾಳವನ್ನು ಈ ಆರು ರಾಷ್ಟ್ರಗಳೊಳಗೆ ಜನ ಸುಸೂತ್ರವಾಗಿ ಎಲ್ಲಿ ಬೇಕಾದರೂ ನಿಯೋಜಿಸುವ ಅವಕಾಶ ಉಂಟಾಗುವಂತೆ ಕಟ್ಟುಪಾಡುಗಳನ್ನೆಲ್ಲ ಸಂಪೂರ್ಣವಾಗಿ ವಿಸರ್ಜಿಸುವ ಯತ್ನ ನಡೆದಿದೆ.

ಹಿಂದುಳಿದಿರುವ ಸಮುದಾಯ ರಾಷ್ಟ್ರಗಳ ಆರ್ಥಿಕಾಭಿವೃದ್ಧಿ, ಉತ್ಪನ್ನ ವಿಧಾನದ ಆಧುನೀಕರಣ, ಕೈಗಾರಿಕೆಗಳ ವೈಜ್ಞಾನಿಕ ಪರಿಷ್ಕರಣ (ರ್‍ಯಾಷನಲೈಸೇಷನ್) ಇತ್ಯಾದಿ ಕಾರ್ಯಗಳಿಗೆ ಆವಶ್ಯಕವಾದ ಹಣಕಾಸನ್ನು ಐರೋಪ್ಯ ನಿಯೋಜನ ಬ್ಯಾಂಕು ಒದಗಿಸುತ್ತದೆ.

ಸದಸ್ಯರಾಷ್ಟ್ರಗಳ ವ್ಯವಸಾಯ ನೀತಿಗಳ ಸಮನ್ವಯ, ವ್ಯವಸಾಯ ಉತ್ಪನ್ನಗಳ ವಿಚಾರದಲ್ಲೂ ಸಮುದಾಯ ಕ್ಷೇತ್ರಕ್ಕೆಲ್ಲ ಒಂದೇ ಮಾರುಕಟ್ಟೆಯ ನಿರ್ಮಾಣ—ಇವೂ ಸಮುದಾಯದ ಸಹಜವಾದ ಗುರಿಗಳಾಗಿದ್ದಾಗ್ಯೂ ಈ ಭಾಗದಲ್ಲಿ ಕೆಲವು ರಿಯಾಯಿತಿಗಳನ್ನು ತೋರಿಸಲಾಗಿದೆ. ಕೆಲವು ವ್ಯವಸಾಯ ಉತ್ಪನ್ನಗಳ ಮೇಲೆ ಹತೋಟಿ ಸ್ಥಾಪಿಸುವುದಕ್ಕೂ ಅವುಗಳಿಗೆ ರಕ್ಷಣೆ ನೀಡುವುದಕ್ಕೂ ಆಯಾ ರಾಷ್ಟ್ರಗಳ ಸರ್ಕಾರಗಳಿಗೆ ಸ್ವಲ್ಪ ಅವಕಾಶವಿದೆ. ಮಾರಾಟ ಮಂಡಲಿಗಳ ಸ್ಥಾಪನೆ, ಕನಿಷ್ಠ ಬೆಲೆ ನಿಗದಿ, ಕನಿಷ್ಠ ಮಟ್ಟಕ್ಕಿಂತ ಕೆಳಗೆ ಬೆಲೆ ಇಳಿದಾಗ ಆಮದು ನಿಷೇಧ, ವಿಶೇಷ ಧನಸಹಾಯ—ಇವುಗಳ ಮೂಲಕ ಒಂದೊಂದು ರಾಷ್ಟ್ರವೂ ಅದರ ವ್ಯವಸಾಯ ಸ್ಥಿತಿಗತಿಗಳಿಗೆ ತಕ್ಕಂತೆ ಪ್ರತ್ಯೇಕ ನೀತಿಯನ್ನು ತಾತ್ಕಾಲಿಕವಾಗಿ ಅನುಸರಿಸಬಹುದು. ಹೀಗೆ ವ್ಯವಸಾಯದ ವಿಷಯವಾಗಿ ಕಟ್ಟುಪಾಡುಗಳು ಸ್ವಲ್ಪ ಸಡಿಲವಾಗಿವೆ.

ಮಾರುಕಟ್ಟೆಯ ಏಕತೆಯಿಂದ ಸದಸ್ಯರಾಷ್ಟ್ರಗಳ ಕೈಗಾರಿಕಾ ರಚನೆಯಲ್ಲಿ ಆಗುವ ಬದಲಾವಣೆಗಳು, ಕೆಲಸಗಾರರಿಗೆ ಒಂದು ಸದಸ್ಯರಾಷ್ಟ್ರದಿಂದ ಇನ್ನೊಂದು ಸದಸ್ಯ ರಾಷ್ಟ್ರಕ್ಕೆ ಹೋಗಲು ಇರುವ ಸರಳ ಅವಕಾಶ, ಕ್ಷೇತ್ರಾದ್ಯಂತವೂ ಒಂದು ಬಗೆಯ ಕೆಲಸಕ್ಕೆ ಒಂದೇ ದರದ ಕೂಲಿ ನಿಗದಿ—ಇಂಥ ತೀವ್ರ ಬದಲಾವಣೆಗಳು ಅನೇಕ ಸಾಮಾಜಿಕ ಪರಿಣಾಮಗಳನ್ನೂ ಸಮಸ್ಯೆಗಳನ್ನೂ ಉಂಟುಮಾಡುವುದು ಸ್ವಾಭಾವಿಕ. ಇವನ್ನು ಎದುರಿಸಲು ಸಹಾಯ ನೀಡುವ ಸಲುವಾಗಿ ಐರೋಪ್ಯ ಸಾಮಾಜಿಕ ನಿಧಿಯೊಂದನ್ನು ಸ್ಥಾಪಿಸಲಾಗಿದೆ.

ಈ ಎಲ್ಲ ರೀತಿನೀತಿಗಳ ಮೂಲಕ ಆರ್ಥಿಕ ಸಮುದಾಯ ಒಪ್ಪಂದ ಆರು ಪಾಶ್ಚಾತ್ಯ ಐರೋಪ್ಯ ರಾಷ್ಟ್ರಗಳೊಡನೆ ನಿಕಟ ಆರ್ಥಿಕ ಸಂಘಟನೆ ಸಾಧಿಸುತ್ತಿರುವುದು ಮಹತ್ತ್ವದ ಘಟನೆ. ಆರ್ಥಿಕ ಸಂಘಟನೆಯ ಜೊತೆಗೆ ರಾಜಕೀಯ ಸಂಘಟನೆಯನ್ನೂ ಸಾಧಿಸುವ ಯತ್ನಗಳು ನಡೆಯುತ್ತಿವೆ.

ಆರು ರಾಷ್ಟ್ರಗಳು ಮಾತ್ರವೇ ಕೂಡಿಕೊಂಡು ಸಂಘಟನೆ ಬೆಳೆಸಲುದ್ಯಮಿಸಿರುವುದು ಇತರ ಐರೋಪ್ಯ ರಾಷ್ಟ್ರಗಳಿಗೇ ಅಲ್ಲದೆ ಹೊರಗಿನ ರಾಷ್ಟ್ರಗಳಿಗೂ ಅನೇಕ ಸಮಸ್ಯೆಗಳನ್ನು ತಂದೊಡ್ಡಿದೆ. ಅಲ್ಲದೆ ಪ್ರಪಂಚದ ಇತರ ಭಾಗಗಳಲ್ಲೂ ಇಂಥ ಸಾಮಾನ್ಯ ಮಾರುಕಟ್ಟೆಯ ಸ್ಥಾಪನೆಗೆ ಇದರಿಂದ ಪ್ರೇರಣೆಯುಂಟಾಗಿದೆ.

ಸಾಮಾನ್ಯ ಮಾರುಕಟ್ಟೆಯ ವ್ಯವಸ್ಥೆಯಷ್ಟು ನಿಕಟ ಆರ್ಥಿಕ ಸಂಘಟನೆಗೆ ತಯಾರಾಗಿಲ್ಲದ ಇತರ ಪಾಶ್ಚಾತ್ಯ ಐರೋಪ್ಯ ರಾಷ್ಟ್ರಗಳ ಪೈಕಿ 7 ರಾಷ್ಟ್ರಗಳು ಬ್ರಿಟನಿನ ಮುಂದಾಳುತನದಲ್ಲಿ ನವೆಂಬರ್ 1959ರಲ್ಲಿ ಸಹಿ ಆದ ಸ್ಟಾಕ್‌ಹೋಂ ಒಡಂಬಡಿಕೆಯ ಆಧಾರದ ಮೇಲೆ ಐರೋಪ್ಯ ನಿರಾತಂಕ ವ್ಯಾಪಾರ ಸಂಘವೊಂದನ್ನು ಸ್ಥಾಪಿಸಿದುವು. 1961ರಲ್ಲಿ ಬ್ರಿಟನ್ ಐರೋಪ್ಯ ಆರ್ಥಿಕ ಸಮುದಾಯಕ್ಕೆ ಸೇರಲು ಸಂಧಾನಗಳನ್ನು ನಡೆಸಲಾರಂಭಿಸಿತು. ಇದು ಒಂದು ಮುಖ್ಯ ಘಟನೆ.

ಬ್ರಿಟನ್ ಐರೋಪ್ಯ ಸಾಮಾನ್ಯ ಮಾರುಕಟ್ಟೆಗೆ ಸೇರುವ ನಿರ್ಧಾರ ಅನೇಕ ಸಮಸ್ಯೆಗಳನ್ನೆಬ್ಬಿಸಿದೆ. ಮುಖ್ಯವಾಗಿ ಬ್ರಿಟನಿನ ಹೊರ ವ್ಯಾಪಾರದ ಸೇಕಡಾ 50 ರಷ್ಟು ಭಾಗ ಕಾಮನ್‌ವೆಲ್ತ್ ರಾಷ್ಟ್ರಗಳೊಡನೆ ನಡೆಯುತ್ತಿದ್ದು ಇವುಗಳ ವ್ಯಾಪಾರಕ್ಕೆ ವಿಶೇಷ ಸುಂಕ ರಿಯಾಯಿತಿಗಳು ಬಹುಕಾಲದಿಂದಲೂ ಜಾರಿಯಲ್ಲಿವೆ. ಈಗ ಈ ಆರ್ಥಿಕ ಬಾಂಧವ್ಯಗಳನ್ನು ಕಡಿದುಹಾಕುವುದು ಕಷ್ಟಕರ. ಭಾರತ ಮತ್ತು ಇತರ ಕಾಮನ್‌ವೆಲ್ತ್ ರಾಷ್ಟ್ರಗಳು ತಮಗೆ ಸಂಭವಿಸುವ ನಷ್ಟದ ಬಗ್ಗೆ ಬ್ರಿಟನಿಗೆ ಹೇಳಿಕೊಂಡಿವೆ. ಇಂಥ ಪರಿಣಾಮಗಳಾಗದಂತೆ ಸೂಕ್ತ ಕ್ರಮ ಕೈಗೊಳ್ಳುವುದಾಗಿ ಬ್ರಿಟನ್ ಭರವಸೆ ನೀಡಿದೆ. ಬ್ರಿಟನಿನ ದೃಷ್ಟಿಯಿಂದ ಐರೋಪ್ಯ ರಾಷ್ಟ್ರಗಳೊಡನೆ ನಿಕಟ ಸಂಘಟನೆ ಅವಶ್ಯ. ಅಂತೆಯೇ ಕಾಮನ್‌ವೆಲ್ತ್ ರಾಷ್ಟ್ರಗಳ ಸಂಪರ್ಕ ತ್ಯಜಿಸುವುದೂ ಅನುಚಿತ. ಅಂತಿಮವಾಗಿ ಯಾವ ಷರತ್ತುಗಳ ಮೇಲೆ ಬ್ರಿಟನ್ ಸಾಮಾನ್ಯ ಮಾರುಕಟ್ಟೆ ಸೇರುವುದೆಂಬುದನ್ನು ಕಾದು ನೋಡಬೇಕಾಗಿದೆ. ಐರೋಪ್ಯ ಸಾಮಾನ್ಯ ಮಾರುಕಟ್ಟೆಯ ಮಾದರಿಯ ಆರ್ಥಿಕ ಒಕ್ಕೂಟಗಳು ಪ್ರಪಂಚದ ವಿವಿಧ ಭಾಗಗಳಲ್ಲಿ ಸ್ಥಾಪಿತವಾಗುತ್ತಿವೆ. ನಾರ್ಡಿಕ್ ಸಾಮಾನ್ಯ ಮಾರುಕಟ್ಟೆ ಯೋಜನೆ (1959), ಮಧ್ಯ ಅಮೆರಿಕನ್ ನಿರಾತಂಕ ವ್ಯಾಪಾರ ಕ್ಷೇತ್ರ (1958), ಲ್ಯಾಟಿನ್ ಅಮೆರಿಕನ್ ನಿರಾತಂಕ ವ್ಯಾಪಾರ ಕ್ಷೇತ್ರ (1960), ಪಶ್ಚಿಮ ಆಫ್ರಿಕನ್ ಸಂಘದ ಕೇಂದ್ರ (1950), ಆಫ್ರಿಕನ್ ಸಾಮಾನ್ಯ ಮಾರುಕಟ್ಟೆ, ವೆಸ್ಟ್ ಇಂಡೀಸ್ ಫೆಡರೇಷನಿನ ಸುಂಕ ಸಂಘ, ಅರಬ್ ಸಾಮಾನ್ಯ ಮಾರುಕಟ್ಟೆ, ಏಷ್ಯ ಮತ್ತು ದೂರಪ್ರಾಚ್ಯ ಆರ್ಥಿಕ ಸಂಸ್ಥೆ ಇವು ಕೆಲವು ಉದಾಹರಣೆಗಳು. ಇವುಗಳಲ್ಲಿ ಕೆಲವು ಕಾರ್ಯಗತವಾಗಿವೆ; ಉಳಿದವು ರೂಪುಗೊಳ್ಳುತ್ತಿವೆ. ಒಟ್ಟಿನಲ್ಲಿ ಇತ್ತೀಚಿನ ವರ್ಷಗಳಲ್ಲಿ ಹೀಗೆ ಬೆಳೆಯುತ್ತಿರುವ ಪ್ರಾದೇಶಿಕ ಆರ್ಥಿಕ ಕೂಟಗಳು ಅಂತರ ರಾಷ್ಟ್ರೀಯ ಆರ್ಥಿಕ ಸಂಬಂಧಗಳನ್ನು ಬಲುಮಟ್ಟಿಗೆ ಮಾರ್ಪಾಟು ಮಾಡುತ್ತಿರುವುದಂತೂ ನಿಜ. ವಿಶ್ವ ವ್ಯಾಪಾರವನ್ನು ಸ್ವಾಭಾವಿಕ ಮಾರ್ಗಗಳಲ್ಲಿ ವಿಸ್ತರಿಸುವ ಧ್ಯೇಯವುಳ್ಳ, ಸುಂಕಗಳ ಮತ್ತು ವ್ಯಾಪಾರದ ಸಾಮಾನ್ಯ ಒಪ್ಪಂದದಂಥ (ಜನರಲ್ ಅಗ್ರಿಮೆಂಟ್ ಆನ್ ಟಾರಿಫ್ಸ್ ಅಂಡ್ ಟ್ರೇಡ್) ವಿಶಾಲವಾದ ಅಂತರರಾಷ್ಟ್ರೀಯ ವಾಣಿಜ್ಯ ಒಪ್ಪಂದದ ಚೌಕಟ್ಟಿನೊಳಗೇ ಈ ವ್ಯವಸ್ಥೆಗಳೆಲ್ಲ ರಚಿತವಾಗುತ್ತಿರುವುದರಿಂದ ಅಂತರರಾಷ್ಟ್ರೀಯ ಅರ್ಥವ್ಯವಸ್ಥೆ ಸರಿಯಾದ ಪಥದಲ್ಲಿ ನಡೆಯುತ್ತಿದೆಯೆಂದು ಒಟ್ಟಿನಲ್ಲಿ ಹೇಳಬಹುದು. (ಎ.ಪಿ.ಎಸ್.)

**ಐರೋಪ್ಯ ಕಲೆ :** ಯೂರೋಪಿನ ಶಿಲ್ಪ ಮತ್ತು ಚಿತ್ರಕಲೆಗಳ ಸ್ಥೂಲ ರೂಪರೇಷೆಗಳನ್ನು ಗುರುತಿಸುವುದೇ ಈ ಲೇಖನದ ಉದ್ದೇಶ. ಏಷ್ಯ, ಅಮೆರಿಕ, ಆಫ್ರಿಕ ಮತ್ತು ಆಸ್ಟ್ರೇಲಿಯಗಳಲ್ಲಿನಂತೆ ಯೂರೋಪಿನಲ್ಲಿಯೂ ಪ್ರಾಚೀನ ಕಲೆ



ಕೂಬನ್ ಜಿಲ್ಲೆಯಲ್ಲಿ ದೊರೆತ ಒಂದು ಚಿನ್ನದ ಆಭರಣ. ಮಲಗಿರುವ ಜಿಂಕೆಯಂತಿದೆ. ಏಳು ಮತ್ತು ಆರನೆಯ ಶತಮಾನಗಳ ಸಿಥಿಯನ್ ಕಲೆಗೊಂದು ನಿದರ್ಶನ

ಅತಿಪುರಾತನವಾದುದೇ. ಹಿಮಶಿಲಾಯುಗ ಕಳೆದು ನೆಲ ಬಾಳಿಗೆ ಹಸನಾಗುತ್ತಿದ್ದಂತೆ ಉತ್ತರ ಯೂರೋಪಿನಿಂದ ಮಧ್ಯಯೂರೋಪಿಗೂ ಅಲ್ಲಿಂದ ಸುತ್ತಲೂ ಹರಡಿದ ಮಾನವ ಬುಡಕಟ್ಟುಗಳ ದೈನಂದಿನ ಅಗತ್ಯಗಳು, ಆಶೋತ್ತರಗಳು, ಶಕ್ತಿ ಸಾಮರ್ಥ್ಯಗಳು—ಇವುಗಳಿಗೆ ಅನುಸಾರವಾಗಿ ನಾಗರಿಕತೆ, ಸಂಸ್ಕೃತಿ, ಕಲೆ ಮೊದಲಾದವು ಹರಡಿದುವು. ಮೇಲಿಂದ ಮೇಲೆ ಗುಂಪುಗುಂಪುಗಳಲ್ಲಿ ನಡೆದ ಜಗಳ, ಯುದ್ಧ, ದಾಳಿಗಳಿಂದಾಗಿ ಜೀವನ ಅಲ್ಲೋಲಕಲ್ಲೋಲವಾಯಿತು. ಇದ್ದ ನಾಗರಿಕತೆ ಅಳಿದು ಹೊಸ ನಾಗರಿಕತೆ ಬೆಳೆದು ಅಭಿವೃದ್ಧಿಗೊಂಡಿತು. ಇದರ ಅನೇಕ ವಿವರಗಳನ್ನು ಯೂರೋಪಿನ ಪ್ರಾಗಿತಿಹಾಸ ಎಂಬ ಸಚಿತ್ರ ಲೇಖನದಲ್ಲಿ ನೋಡಬಹುದು.

**ಗ್ರೀಕ್ ಶೈಲಿ :** ಯೂರೋಪಿನ ಇಂದಿನ ನಾಗರಿಕತೆ, ಸಂಸ್ಕೃತಿ ಹಾಗೂ ಕಲೆಗಳಿಗೆ ಮೂಲಸ್ಥಾನವಾದ ಗ್ರೀಸ್ ದೇಶದ ಕಲೆ ಎರಡು ಸಾವಿರ ವರ್ಷಗಳಿಗೂ ಹಳೆಯದು. ಕ್ರಿ. ಪೂ. ಸುಮಾರು 1000ದ ಸುಮಾರಿನಲ್ಲಿ ಡೋರಿಯನರು ಗ್ರೀಸನ್ನು ಆಕ್ರಮಿಸಿದರು. ಆಗಿನಿಂದ ಗ್ರೀಕ್ ಶಿಲ್ಪ ಬೆಳೆಯಿತೆನ್ನಬಹುದು. ಅಲ್ಲಿಂದ ಕ್ರಿ.ಪೂ. 10ನೆಯ ಶತಮಾನದಿಂದ ಕ್ರಿ.ಪೂ. 6ನೆಯ ಶತಮಾನದ ವರೆಗೆ ಅದು ಬೆಳೆದು ಬಲಗೊಂಡಿತು. ಒಲಿಂಪಿಯದ ಪ್ರಾಚೀನ ದೇವಾಲಯಗಳಲ್ಲಿ ಡೋರಿಕ್ ಮಾದರಿಗಳನ್ನು ಗುರುತಿಸಬಹುದು. ಗ್ರೀಕ್ ಕಲೆಯ ವೈಭವಾವ

ಶೇಷಗಳನ್ನು ಅಥೆನ್ಸ್ ನಗರದಲ್ಲಿ ಇಂದಿಗೂ ಕಾಣಬಹುದು. ಶಿಲ್ಪ ತಂತ್ರದಲ್ಲಿ ಚಾಚೂ ತಪ್ಪಿಲ್ಲದಂತೆ ಅಷ್ಟೂ ಅಷ್ಟು ಖಚಿತವಾಗಿ ನಿರ್ಮಾಣಗೊಂಡ ಕಟ್ಟಡವೆಂದರೆ 2,000 ವರ್ಷಗಳ ಹಿಂದೆ ನಿರ್ಮಾಣವಾದ ಪಾರ್ಥೆನಾನ್ ದೇವಾಲಯ. ಪ್ರಪಂಚದಲ್ಲಿ ಇಂಥ ಶುದ್ಧ ಶಿಲ್ಪತಂತ್ರದ ಕಟ್ಟಡಗಳು ಬಹಳ ಇಲ್ಲ. ಈಗ ದೇವಾಲಯ ಶಿಥಿಲ ಗೊಂಡಿದೆಯಾದರೂ ಅದರ ವೈಖರಿಯನ್ನು ಇಂದಿಗೂ ಗುರುತಿಸಬಹುದು. ಬುದ್ಧಿ ಕೌಶಲಕ್ಕೆ ಅಧಿದೇವತೆಯೆನಿಸಿದ ಅಥೀನೆ ಪಾರ್ಥೆನೋಸ್ ದೇವತೆಯ ಹೆಸರಿನಲ್ಲಿ ಇದನ್ನು ನಿರ್ಮಿಸಲಾಯಿತು. ಅಥೆನ್ಸಿನ ಅಕ್ರೊಪೊಲಿಸ್ ಬೆಟ್ಟದ ನೆತ್ತಿಯಲ್ಲಿರುವ ಈ ಭವ್ಯ ಕಟ್ಟಡದ ಅವಶೇಷವನ್ನು ವೀಕ್ಷಿಸಲು ಇಂದಿಗೂ ವಿಶ್ವದ ನಾನಾ ಭಾಗ ಗಳಿಂದ ಪ್ರೇಕ್ಷಕರು ಬರುತ್ತಿರುತ್ತಾರೆ. ಈ ದೇವಾಲಯಗಳ ಮುಖ್ಯ ಆಕರ್ಷಣೆ ಎಂದರೆ ಇಲ್ಲಿನ ಕಂಬಸಾಲು. ಇವು ಡೋರಿಕ್ ಮಾದರಿಯ ಗಂಡು ಶೈಲಿಯವಾಗಿವೆ. ಈ ಡೋರಿಕ್ ಶೈಲಿ ಸುಮಾರು ಒಂದೂವರೆ ಸಾವಿರ ವರ್ಷ ಜನಪ್ರಿಯವಾಗಿತ್ತು.



ಅಟಿಕದ ದಕ್ಷಿಣದ ತುದಿಯ ಭೂಶಿರದ ನೆತ್ತಿಯಲ್ಲಿರುವ ಪೊಸೈಡನ್ ದೇವತಾಮಂದಿರ ಪ್ರಾಚೀನ ಗ್ರೀಕ್ ವಾಸ್ತು ಮಾದರಿಯದು.

ಅಲಂಕರಣ ಕಡಿಮೆಯಾದರೂ—ಅದರಿಂದಲೇ ಅಂಥ ಶೈಲಿಯನ್ನು ಗಂಡುಶೈಲಿ ಎಂದುದು—ನೋಟಕ್ಕೆ ಬಲು ಸೊಗಸಾಗಿರುವ ಈ ಕಂಬಗಳನ್ನು ನೆಲದಲ್ಲಿ ನೆಟ್ಟಿಲ್ಲ. ಇವು ಸುಮ್ಮನೆ ಎತ್ತರದ ವೇದಿಕೆಯ ಮೇಲೆ ನಿಂತಿವೆ, ಅಷ್ಟೆ. ಅಲ್ಲದೆ ಇವು ಬುಡದಲ್ಲಿ ದಪ್ಪನಾಗಿದ್ದು ಮೇಲೆ ಹೋಗುತ್ತ ಹೋಗುತ್ತ ತೆಳುವಾಗುತ್ತವೆ. ಒಂದೊಂದು ಕಂಬವನ್ನೂ ಎರಡು ಮೂರು ದಪ್ಪಕಲ್ಲುಗಳಿಂದ ಮಾಡಿದ್ದಾರಾದರೂ ಮಧ್ಯದ ಬೆಸುಗೆ ಎಲ್ಲೂ ಕಾಣದು. ಒಂದೇ ಕಲ್ಲಿನ ಕಂಬದಂತೆ ಕಾಣುತ್ತ ಅವು ಪ್ರೇಕ್ಷಕರನ್ನು ದಂಗುಬಡಿಸುತ್ತವೆ. ಗ್ರೀಕರಿಗೆ ಶಿಲ್ಪದಲ್ಲಿ ಅತಿ ಸುಂದರವಾದುದನ್ನು ಕಲ್ಪಿಸುವ ಕಾಣ್ಕೆ ಸಿದ್ಧಿಸಿತ್ತು. ಆದ್ದರಿಂದಲೇ ಅವರು ಅಂಥ ಅದ್ಭುತ ವಾಸ್ತುಶಿಲ್ಪಗಳನ್ನು ನಿರ್ಮಿಸಿದರು. ಅವರಾದ ಮೇಲೆ ಅನೇಕರು ಡೋರಿಕ್ ಮೂಲ ಮಾದರಿಯನ್ನು ಅಲ್ಪಸ್ವಲ್ಪ ವ್ಯತ್ಯಾಸ ಮಾಡಿ ಹೊಸ ಶೈಲಿಗಳನ್ನು ರೂಪಿಸಲು ಯತ್ನಿಸಿದರಾದರೂ ಯಾರ ಮಾರ್ಪಾಟೂ ಮೂಲ ಶೈಲಿಯಷ್ಟು ಸುಂದರವಾಗಿಲ್ಲ. ಎರಡುಸಾವಿರದ ಮುನ್ನೂರು ವರ್ಷಗಳ ಹಿಂದಿನ ಗ್ರೀಕ್ ದೊರೆ ಪೆರಿಕ್ಲೀಸನ ಕಾಲವನ್ನು ಗ್ರೀಸಿನ ಸ್ವರ್ಣಯುಗವೆನ್ನುತ್ತಾರೆ. ಅಂದಿನ ದೇವಾಲಯಗಳು, ದೇವತಾಮೂರ್ತಿಗಳು, ಇತರ ಬೃಹದ್‌ಭವನಗಳು, ಕೋಟೆಕೊತ್ತಳಗಳು, ರಸ್ತೆಗಳು, ಸೇತುವೆಗಳು, ಗೋಪುರಗಳು—ಇವು ಈಗ ಅಳಿದು ಹೋಗಿದ್ದರೂ ಹಿಂದೆ ಇದ್ದವೆನ್ನಲು ಮಾಹಿತಿಯನ್ನೊದಗಿಸುವಷ್ಟು ಮಟ್ಟಿಗೆ ಉಳಿದು ಬಂದಿವೆ.

ಗ್ರೀಕರು ತಮ್ಮ ವಾಸ್ತುಶಿಲ್ಪದಲ್ಲಿ ಗಾರೆಯನ್ನು ಬಳಸುತ್ತಿರಲಿಲ್ಲ. ಕಲ್ಲುಗಳನ್ನೇ ಅಚ್ಚುಕಟ್ಟಾಗಿ ಕತ್ತರಿಸಿ ಜೋಡಿಸಿ ಕಟ್ಟಡಗಳನ್ನು ಕಟ್ಟುತ್ತಿದ್ದರು. ಚಿತ್ತಾರಗಳಿಗೆ ಹೊಳಪನ್ನು ಕೊಡುತ್ತಿದ್ದರಲ್ಲದೆ ವಿವಿಧ ಬಣ್ಣಗಳನ್ನು ಬಳಸುತ್ತಿದ್ದರು. ಗ್ರೀಕ್ ಸ್ವಾಸ್ಥ್ಯಗಳಲ್ಲಿ ಪ್ರಾರಂಭವಾದ ಅಯೋನಿಕ್ ಶೈಲಿ ಕ್ರಮೇಣ ಕ್ರಿ.ಪೂ. ಸು. 500ರಲ್ಲಿ ಗ್ರೀಸನ್ನು ಪ್ರವೇಶಿಸಿತು. ಇದನ್ನು ಅಥೆನ್ಸಿನ ಎರೆಕ್ತಿಯಂ ದೇವಾಲಯದಲ್ಲಿ ಗುರುತಿಸಬಹುದು. ಗ್ರೀಕ್ ಕಲಾಪರಂಪರೆಯಲ್ಲಿ ಅತಿ ನವೀನವೆನಿಸಿದ ಕಾರಿಂಥಿಯನ್ ಶೈಲಿಯ ಬಳಕೆ ಅಷ್ಟಾಗಿ ಗ್ರೀಸಿನಲ್ಲಿ ಕಂಡುಬರದು. ಅಧಿಕಾರ ಗ್ರೀಸಿನಿಂದ ಪಶ್ಚಿಮ ಪ್ರಾಂತ್ಯ ನಗರಗಳಿಗೆ ವರ್ಗಾವಣೆಯಾದ ಮೇಲೆ (ಕ್ರಿ. ಪೂ. 3ನೆಯ ಶತಮಾನ) ಹೆಲೆನಿಸ್ಟಿಕ್ ವಾಸ್ತುಶಿಲ್ಪಕಲೆ ಮೊದಲಾಯಿತೆನ್ನಬಹುದು. ನಗರರಚನೆಯ ಪ್ರಾಮುಖ್ಯ ಮತ್ತು ಸಂಕೀರ್ಣ ರಚನಾವಿಧಾನಗಳು ಆಗ ಮುಖ್ಯವೆನಿಸಿದುವು.

ಗ್ರೀಕ್ ಶಿಲ್ಪದಲ್ಲಿ ಸಹಜತೆಗೆ ಗಮನಕೊಡಲಾಗಿದೆ. ಅವರು ಕೆತ್ತಿದ ದೇವತಾ ವಿಗ್ರಹಗಳು ಆದರ್ಶ ಸ್ತ್ರೀಪುರುಷರ ದೇಹರಚನೆ, ಸೌಂದರ್ಯಗಳನ್ನುಳ್ಳವಾಗಿವೆ. ಅಪೊಲೊ, ಅಥೀನ, ವೀನಸ್, ಅಲೆಕ್ಸಾಂಡರ್ ಮೊದಲಾದವರ ಮೂರ್ತಿಗಳು ಇದಕ್ಕೆ ಒಳ್ಳೆಯ ಉದಾಹರಣೆ. ಕ್ರಿ. ಪೂ. 500 ರಿಂದ 300ರ ವರೆಗಿನ ಕಾಲದಲ್ಲಿ ಪ್ರಸಿದ್ಧರಾದ ಶಿಲ್ಪಿಗಳೆಂದರೆ ಪ್ರಾಕ್ಸಿಟಿಲಿಸ್, ಲಿಸಿಪಸ್, ಮಿರಾನ್, ಕ್ರಿಸಿಲಾಸ್, ಟಿಮೋತಿಯಸ್, ಬ್ರಯಾಕ್ಸಿಸ್. ವರ್ಣಚಿತ್ರಕಾರರೆಂದರೆ ಅಪೊಲೊಡೋರಸ್, ಜ್ಯೂಕ್ಸಿಸ್, ಪಾರ್ಹಾಸಿಯಸ್. (ವಿವರಗಳಿಗೆ ನೋಡಿ—ಅಥೆನ್ಸ್; ಗ್ರೀಕ್ ಕಲೆ).

**ರೋಮನ್ ಮಾದರಿ:** ಗ್ರೀಕರಂತೆ ರೋಮನರೂ ದೊಡ್ಡ ಸಾಮ್ರಾಜ್ಯ ವನ್ನು ಕಟ್ಟಿ ವೈಭವದಿಂದ ಹಲಶತಮಾನಗಳ ಕಾಲ ಯೂರೋಪಿನ ಬಹು ಭಾಗ ವನ್ನು ಆಳಿದರು. ಅವರ ಶಿಲ್ಪ ಹಾಗೂ ಕಲೆಗೆ ಸ್ಫೂರ್ತಿ ದೊರೆತದ್ದು ನೆರೆ ದೇಶವಾದ ಗ್ರೀಸಿನಿಂದ. ದಕ್ಷಿಣ ಇಟಲಿ ಮತ್ತು ಸಿಸಿಲಿಗಳ ಮಾದರಿಗಳನ್ನು ಅವರು ಅನುಸರಿಸಿದಂತೆ ತೋರುತ್ತದೆ. ಅನಂತರ ನೇರವಾಗಿ ಗ್ರೀಸಿನಿಂದಲೂ ಹೆಲೆನಿಸ್ಟಿಕ್ ಪೂರ್ವರಾಷ್ಟ್ರಗಳಿಂದಲೂ ಅವರು ಅನುಸರಿಸಿದರೆನ್ನಬಹುದು.



ಅಥೆನ್ಸಿನ ಅಕ್ರೊಪೋಲೀಸ್ ಬೆಟ್ಟದ ಮೇಲಿರುವ ಪಾರ್ಥೆನಾನ್ ದೇವಾಲಯ. ಬಹು ಸ್ತಂಭಗಳ ಈ ರಚನೆ ಪ್ರಾಚೀನ ಗ್ರೀಕ್ ಶಿಲ್ಪ ಶೈಲಿಗೆ ಪ್ರಸಿದ್ಧ ನಿದರ್ಶನವಾಗಿದೆ.

ಇಟ್ರುಸ್ಕನರಿಂದ ಕಟ್ಟಡ ವಿನ್ಯಾಸದಲ್ಲಿ ನಿಜವಾದ ಕಮಾನು, ಕಮಾನು ಸರಣಿ ಮತ್ತು ಗುಮ್ಮಟದ ಬಳಕೆಯನ್ನು ಅನುಕರಿಸಲಾಯಿತು. ಕ್ರಿ. ಪೂ. ಸುಮಾರು ಎರಡನೆಯ ಶತಮಾನದ ಹೊತ್ತಿಗಾಗಲೆ ಜಲ್ಲಿಕಲ್ಲಿನ ಗಾರೆ ಬಳಕೆಗೆ ಬಂದದ್ದರಿಂದ ವಾಸ್ತುಶಿಲ್ಪದಲ್ಲಿ ಅಗಾಧ ಬದಲಾವಣೆಗಳಾದುವು. ಕಮಾನಿನ ಬಳಕೆ ಹೆಚ್ಚಿ ಕಂಬ ಸಾಲುಗಳ ಅಲಂಕರಣಕ್ಕೆ ಎಡೆಯಾಯಿತು. ಗೃಹಗಳ ಉದ್ದಗಲಗಳು ಹೆಚ್ಚಿದುವು. ಪ್ರಾಚೀನ ರೋಮನ್ ಶಿಲ್ಪತಂತ್ರಕ್ಕೆ ಈಗಿರುವ ಉದಾಹರಣೆಗಳೆಂದರೆ ಅವರು ರೋಮಿನ ಹೊರವಲಯದಲ್ಲಿ ನಿರ್ಮಿಸಿದ ಕಲ್ಲಿನ ಮೇಲು ಕಾಲುವೆಗಳ ಉಳಿಕೆಗಳು. ಕ್ರಿ.ಪೂ. 100–ಕ್ರಿ.ಶ. 300 ವರೆಗಿನ ಕಾಲವನ್ನು ರೋಮನರ ಉಚ್ಛ್ರಾಯ ಕಾಲವೆನ್ನಬಹುದು. ಹಸಿ ಇಟ್ಟಿಗೆಗಳನ್ನೇ ಕಟ್ಟಡಗಳಿಗೆ ಬಳಸುತ್ತಿದ್ದರಾದರೂ ಗಾರೆಯ ಗೋಡೆಗಳ ಹೊರಮುಖಕ್ಕೆ ಸುಟ್ಟ ಇಟ್ಟಿಗೆಗಳನ್ನು ಬಳಸುವ ವಾಡಿಕೆ ಹೆಚ್ಚಿತು. ಮುಖ್ಯವಾದ ಕಟ್ಟಡಗಳಿಗೆ ಹೊರಮೈ ನಾಜೂಕಿಗಾಗಿ ನಯಗಾರೆಯನ್ನು ಉಜ್ಜುವ ವಾಡಿಕೆ ಹಿಂದಿನಿಂದ ಇದ್ದದ್ದೆ. ಕಮಾನು ಸರಣಿಗಳನ್ನು ವಿಧವಿಧವಾಗಿ ಬಳಸಿಕೊಳ್ಳಲಾಯಿತು. ಟ್ರಾಜನ್ ಮಹಾರಾಜನ ಕಾಲವನ್ನು ರೋಮನ್ ಶಿಲ್ಪದ ಉತ್ಕೃಷ್ಟ ಕಾಲವೆನ್ನಬಹುದು (ಕ್ರಿ.ಶ. 98–117). ಗ್ರೀಕ್ ಮಾದರಿಯ ಕುಸುರಿ ಕೆಲಸವಿಲ್ಲದಿದ್ದರೂ ಎಲ್ಲ ಕಾಲದಲ್ಲೂ ರೋಮನರು ತಮ್ಮ ವಾಸ್ತುಕಲೆಯಲ್ಲಿ ವೈಭವಕ್ಕೂ ಅನುಕೂಲಗಳಿಗೂ ಗಮನವಿತ್ತಿರುವುದನ್ನು ನಾವು ಗುರುತಿಸಬಹುದು. ನಗರ ಮಧ್ಯದಲ್ಲಿನ ಸಾರ್ವಜನಿಕ ಕ್ಷೇತ್ರಗಳಾದ ಚಾವಡಿಗಳನ್ನು ಇನ್ನೂ ಹೆಚ್ಚು ವಿಸ್ತಾರವಾಗಿ, ಹೆಚ್ಚು ಸುಂದರವಾಗಿ ಕಟ್ಟುವ ಕಲೆ ಕ್ರಮೇಣ ಬೆಳೆದು ಬಂತು. ರೋಮನರ ಉತ್ಕೃಷ್ಟ ಕಲಾ ಮಾದರಿಗಳೆಂದರೆ ಅವರು ವಿಶೇಷವಾಗಿ ನಿರ್ಮಿಸಿರುವ ಬಸಿಲಿಕಗಳು, ಸ್ನಾನಗೃಹಗಳು, ಅರ್ಧ

ಚಂದ್ರಾಕಾರದ ಪೀಠಪಂಕ್ತಿಯುಳ್ಳ ನಾಟಕ ಮಂದಿರಗಳು, ವಿಜಯ ಸ್ಮಾರಕಗಳಾದ ಬೃಹದ್‌ಕಮಾನುಗಳು. ನಗರವಾಸಿಗಳಾದ ಶ್ರೀಮಂತರು ಬಿಡುವಿನ ದಿನಗಳನ್ನು ವಿರಾಮವಾಗಿ ಹಳ್ಳಿಗಾಡಿನಲ್ಲಿ ಕಳೆಯಲು ತಮಗಾಗಿ ದೂರದ ಪ್ರದೇಶಗಳಲ್ಲಿ ಕಟ್ಟಿಕೊಂಡ ವಿಹಾರ ಗೃಹಗಳು (ವಿಲ್ಲ) ಅವರ ಸೂಕ್ಷ್ಮ ಸೌಂದರ್ಯಾಭಿರುಚಿಗೂ ಅನುಕೂಲ ದೃಷ್ಟಿಗೂ ಸಾಕ್ಷಿಯಾಗಿವೆ.

ಚಿತ್ರಕಲೆಯಲ್ಲಿ ಮೊದಲ ಹಂತವೆನಿಸಿದ ಇಟ್ರುಸ್ಕನ್ ಶೈಲಿಯಲ್ಲಿ ಪ್ರಾಚೀನ ಗ್ರೀಸಿನ ಅನುಕರಣೆ ಎದ್ದು ಕಾಣುತ್ತದಾದರೂ ಸ್ಥಳೀಯವಾದ ವರ್ಣಾಲಂಕರಣ ಹಾಗೂ ವೈಭವಗಳು ಗಮನಾರ್ಹವಾಗಿವೆ. ಬರಬರುತ್ತ ಕ್ರಿ.ಪೂ. ಸು. 400 ರಿಂದ ಈಚೆಗೆ ಗ್ರೀಕ್ ಶಿಷ್ಟ ಮಾದರಿಯೇ ರೋಮನರ ಆದರ್ಶವಾಗುತ್ತ ಬಂತು. ಕ್ರಿ.ಪೂ. 300 ರಿಂದ 100ರ ವರೆಗೆ ಅವೆರಡರ ಮಿಶ್ರಶೈಲಿಗಳನ್ನೂ ಕಾಣಬಹುದು. ಆಗಸ್ಟನ್ ಕಾಲದಲ್ಲಿ (ಕ್ರಿ.ಪೂ. 30–ಕ್ರಿ.ಶ. 4) ಗ್ರೀಕರ ಆದರ್ಶ ಪಂಥದೊಂದಿಗೆ ರೋಮನರ ಸಹಜತೆಯನ್ನು ಮಿಳಿತ ಮಾಡುವ ಪ್ರಯತ್ನಗಳು ನಡೆದುವು. ಮುಂದಿನ ದಶಕಗಳಲ್ಲಿ ಎದೆಯ ವರೆಗಿನ ಮೂರ್ತಿಚಿತ್ರಣದಲ್ಲಿ ಒಂದೊಂದು ವ್ಯಕ್ತಿಯ ಮನಸ್ಸನ್ನೂ ಮುಖದಲ್ಲಿ ಮೂಡಿಸುವ ಪ್ರಯತ್ನ ನಡೆದಿರುವುದನ್ನು ಗುರುತಿಸಬಹುದು. ಟ್ರಾಜನ್ (ಕ್ರಿ.ಶ. 2ನೆಯ ಶತಮಾನ) ರಾಜನ ಕಾಲದಲ್ಲಿ ಈಜಿಪ್ಟಿನ ಪ್ರಭಾವ ಹೆಚ್ಚಿದಂತೆ ತೋರುತ್ತದೆ. ಇದನ್ನು ರೋಮಿನ ಟ್ರಾಜನ್ ಶ್ರೇಣಿಯಲ್ಲಿ ಗುರುತಿಸಬಹುದು. ಹಾಡ್ರಿಯನ್ (ಕ್ರಿ.ಶ. 3 ನೆಯ ಶತಮಾನ) ರಾಜನ ಕಾಲದಲ್ಲಿ ಪೂರ್ವ ರಾಷ್ಟ್ರಗಳ ಅನುಕರಣೆ ಹೆಚ್ಚಿ ಇದರಿಂದ ಕಲೆಯಲ್ಲಿ ಅಮೂರ್ತತೆ ಬೆಳೆಯಿತೆನ್ನಬಹುದು. ಪಾಂಪೇ ಪ್ರದೇಶದಲ್ಲಿ ಉಳಿದುಬಂದಿರುವ ವರ್ಣಚಿತ್ರಗಳು ರೋಮನ್ ಮಾದರಿಗೆ ಉತ್ತಮ ನಿದರ್ಶನಗಳಾಗಿವೆ. ರೋಮನರು ಮನೆಯ ಹೊರ ಅಂಗಣಕ್ಕಿಂತ ಒಳ ಅಂಗಣಗಳಲ್ಲೇ ತಮ್ಮ ಚಿತ್ರಕಲೆಯನ್ನು ಪ್ರದರ್ಶಿಸಿರುವುದು ಗಮನಾರ್ಹವಾದ ಒಂದು ಅಂಶ. ಚಿತ್ರಕಲೆಯಲ್ಲೂ ಲೋಹಕಲೆ, ಮೃತ್‌ಕಲೆ ಮತ್ತು ಗಾಜುಕಲೆಗಳಲ್ಲೂ ಹೆಚ್ಚಿನ ಅಲಂಕರಣ ಮತ್ತು ತೀಕ್ಷ್ಣ ವರ್ಣಗಳನ್ನು ನಾವು ಕಾಣಬಹುದು. (ನೋಡಿ—ರೋಮನ್ ಕಲೆ).

**ಬಿಜ಼ಾಂಟಿನ್ ಶೈಲಿ :** ರೋಮನರ ಅನಂತರ ಪ್ರಾಬಲ್ಯಕ್ಕೆ ಬಂದದ್ದು ಬಿಜ಼ಾಂಟಿನ್ ಸಾಮ್ರಾಜ್ಯ. ಇದರ ತಿರುಳು ಪ್ರದೇಶಗಳೆಂದರೆ ಏಷ್ಯ ಮೈನರ್ ಮತ್ತು ಬಾಲ್ಕನ್ ಪ್ರಸ್ಥಭೂಮಿಯ ದಕ್ಷಿಣ ಪ್ರದೇಶ. ಸಾವಿರ ವರ್ಷಗಳ ಇದರ ಚರಿತ್ರೆಯಲ್ಲಿ ಅನೇಕ ಏಳುಬೀಳುಗಳನ್ನು ಕಾಣಬಹುದು. ಬಿಜ಼ಾಂಟಿಯಂ (ಕಾನ್‌ಸ್ಟ್ಯಾಂಟಿನೋಪಲ್) ಅನ್ನು ರೋಮನ್ ಚಕ್ರಾಧಿಪತ್ಯದ ರಾಜಧಾನಿಯನ್ನಾಗಿ ಮಾಡಿದ (ಕ್ರಿ.ಶ. 330) ಅನಂತರ ಅಲ್ಲಿ ಬೆಳೆದು ಬಂದ ಶೈಲಿಯನ್ನು ಬಿಜ಼ಾಂಟಿನ್ ಶೈಲಿ ಎನ್ನುತ್ತಾರೆ. ರೋಮನ್ ರೀತಿಯಲ್ಲಿಯೇ ಕಟ್ಟಡಗಳನ್ನೂ ಕಟ್ಟಿ ಅವಕ್ಕೆ



ಹದಿನೈದನೆಯ ಶತಮಾನದ ಕೊನೆಯ ಭಾಗದಲ್ಲಿ ರೊಸ್ಟೊವ್ ಕ್ರೆಮ್ಲಿನಿನಲ್ಲಿ ಕಟ್ಟಲಾದ ದಿ ಅಸಂಷನ್ ಕೆಥೆಡ್ರಲ್. ಬಿಜ಼ಾಂಟಿನ್ ಕಲೆಗೆ ಇನ್ನೊಂದು ಮಾದರಿ.



ಮಾಸ್ಕೋದ ಕೆಂಪು ಚೌಕದಲ್ಲಿರುವ ಸಂತ ಬ್ಯಾಸಿಲನ ಕೆಥೆಡ್ರಲ್. 16ನೆಯ ಶತಮಾನದ ಬಿಜ಼ಾಂಟಿನ್ ಮಾದರಿಯದು.

ಇನ್ನೂ ಹೆಚ್ಚಿನ ಬಣ್ಣಗಳನ್ನೂ ಅಲಂಕರಣಗಳನ್ನೂ ಉಪಯೋಗಿಸಿರುವುದು ಈ ಶೈಲಿಯ ವೈಶಿಷ್ಟ್ಯ. ಈ ಶೈಲಿ ಗ್ರೀಸ್, ಬಾಲ್ಕನ್ ಪ್ರದೇಶಗಳ ಮೂಲಕ ಏಷ್ಯ ಮೈನರನ್ನು ಹೊಕ್ಕು ರಷ್ಯದಲ್ಲಿ ಹರಡಿತು. ಇದರ ಖಚಿತ ಅಭಿವ್ಯಕ್ತಿಯನ್ನು ರಾವೆನ್ನದಲ್ಲಿನ ಸ್ಯಾನ್ವಿಟೇಲನ ಚರ್ಚಿನಲ್ಲೂ ಪ್ರಸಿದ್ಧ ಹಾಜಿಯ ಸೊಫಿಯದಲ್ಲೂ ಕಾಣಬಹುದು. ಅನಂತರ ಈ ಶೈಲಿಯ ಮೇಲೆ ಪೂರ್ವ ರಾಷ್ಟ್ರಗಳ ಪ್ರಭಾವ ಹೆಚ್ಚಿರುವುದನ್ನು ವೆನಿಸಿನ ಸೇಂಟ್ ಮಾರ್ಕನ ಚರ್ಚಿನಲ್ಲಿ ಗುರುತಿಸಬಹುದು. ಬರಬರುತ್ತ ಈ ಶೈಲಿಯಲ್ಲಿನ ಅಲಂಕರಣ ವಿಧಾನಗಳು ಇನ್ನೂ ವಿಸ್ತಾರಗೊಂಡು ಹೆಚ್ಚು ಹೆಚ್ಚು ಸಂಕೀರ್ಣವಾಗತೊಡಗಿದುವು. ಇದಕ್ಕೆ ಉದಾಹರಣೆಯಾಗಿ ಮಾಸ್ಕೊ ಕೆಥೆಡ್ರಲ್ ಅನ್ನು ಹೆಸರಿಸಬಹುದು.

ಈ ಎಲ್ಲ ಗುಣಗಳನ್ನೂ ಬಿಜ಼ಾಂಟಿನ್ ಚಿತ್ರಕಲೆಯಲ್ಲೂ ಕಾಣಬಹುದು. (ನೋಡಿ —ಬಿಜ಼ಾಂಟಿನ್ ಕಲೆ.)

**ಪ್ರಾಚೀನ ಕ್ರೈಸ್ತ ಶೈಲಿ :** ಕ್ರೈಸ್ತಮತ ಹರಡಲು ಪ್ರಾರಂಭವಾದ ಮೊದಲ ದಿನಗಳಲ್ಲಿನ ಶಿಲ್ಪಶೈಲಿಯನ್ನು ಈ ಹೆಸರಿನಿಂದ ಕರೆಯಬಹುದು. ಎಲ್ಲಿಯ ವರೆಗೆ ರೋಮನ್ ಚಕ್ರಾಧಿಪತ್ಯದಲ್ಲಿ ಕ್ರೈಸ್ತಮತಕ್ಕೆ ಬಹಿಷ್ಕಾರವಿತ್ತೋ ಅಲ್ಲಿಯ ವರೆಗೆ ಕ್ರೈಸ್ತರು ತಮ್ಮ ದೇವಾಲಯಗಳನ್ನು ನೆಲಮಾಳಿಗೆಯಲ್ಲಿ ಗುಪ್ತವಾಗಿ ನಿರ್ಮಿಸಿಕೊಳ್ಳುತ್ತಿದ್ದರು (ಕ್ಯಾಟಕೂಂಬ್ಸ್). ಪರಿಸ್ಥಿತಿ ಸುಧಾರಿಸಿ ರೋಮನ್ ದೊರೆ ಕಾನ್‌ಸ್ಟ್ಯಾಂಟೈನನೇ ಕ್ರೈಸ್ತಮತಾವಲಂಬಿಯಾದಾಗ ಬಳಕೆಯಲ್ಲಿದ್ದ ಬ್ಯಾಸಿಲಿಕಗಳನ್ನೇ ತಮ್ಮ ಚರ್ಚುಗಳನ್ನಾಗಿ ಬಳಸಲಾರಂಭಿಸಿದರು. ಇಂಥ ಅನೇಕ ಚರ್ಚುಗಳು ಹೊರನೋಟಕ್ಕೆ ದೊಡ್ಡ ಉಗ್ರಾಣಗಳಂತೆ ಕಾಣುತ್ತಿದ್ದುವಾದರೂ ಒಳಗಿನ ಅಲಂಕರಣಗಳು ದಂಗುಬಡಿಸುವಂತಿದ್ದುವು. ರೋಮಿನ ಹೊರವಲಯದಲ್ಲಿರುವ ಸೇಂಟ್ ಪಾಲನ ಚರ್ಚು ಇಂಥ ಕಟ್ಟಡಗಳಿಗೆ ಒಂದು ಉತ್ತಮ ನಿದರ್ಶನ. ಇದು ನಿರ್ಮಾಣವಾದ್ದು ಕ್ರಿ.ಶ. 380ರಲ್ಲಿ. ಅಲ್ಲಿಂದ ಮುಂದೆ ಸು. 1400 ವರ್ಷಗಳ ಕಾಲ ಜನ ಇಲ್ಲಿ ಪ್ರಾರ್ಥನೆ ನಡೆಸಿದ್ದಾರೆ. 1823ರಲ್ಲಿ ಈ ಕಟ್ಟಡ ಬೆಂಕಿಯಿಂದ ನಾಶವಾಯಿತಾದರೂ ಮತ್ತೆ ಇದನ್ನು ಹಿಂದೆ ಇದ್ದಂತೆಯೇ ಕಟ್ಟಲಾಗಿದ್ದು ಇವತ್ತಿಗೂ ನಾವು ಇದನ್ನು ರೋಮಿನಲ್ಲಿ ನೋಡಬಹುದು.



ಪ್ರಾಚೀನ ಕ್ರೈಸ್ತ ವಾಸ್ತು ಮಾದರಿಯ (ಕ್ರಿ.ಶ. ಆರನೆಯ ಶತಮಾನ) ಒಂದು ಬ್ಯಾಸಿಲಿಕ. ಇಟಲಿಯ ರಾವೆನ್ನದಲ್ಲಿದೆ.

**ಅಂಧಕಾರ ಯುಗದಲ್ಲಿನ ಕ್ರೈಸ್ತಮಠಗಳು :** ತನ್ನ ಕೊನೆಗಾಲದಲ್ಲಿ ರೋಮನ್ ಚಕ್ರಾಧಿಪತ್ಯ ಎರಡಾಗಿ ವಿಭಾಗಗೊಂಡಿತು. ಪೂರ್ವಭಾಗಕ್ಕೆ ಕಾನ್‌ಸ್ಟ್ಯಾಂಟಿನೋಪಲ್ ಮತ್ತು ಪಶ್ಚಿಮ ಭಾಗಕ್ಕೆ ರೋಂ ರಾಜಧಾನಿಗಳಾದುವು. ಅದೇ ಕಾಲದಲ್ಲಿ ಉತ್ತರದಿಂದ ಟ್ಯೂಟನರೆಂಬ ಅನಾಗರಿಕ ಜನರ ದಾಳಿ ಮೊದಲಾಯಿತು. ಅವರು ಫ್ರಾನ್ಸ್, ಇಟಲಿ, ಸ್ಪೇನುಗಳನ್ನು ಆಕ್ರಮಿಸಿ ಕೊನೆಗೊಮ್ಮೆ ರೋಮಿನಲ್ಲಿ ತಮ್ಮ ಝುಂಡ ಊರಿದರು. ಓದುಬರೆಹ ಬಾರದ ಈ ಜನ ಒರಟರೂ ಯುದ್ಧ ಪ್ರಿಯರೂ ಆಗಿದ್ದರು. ಇಂಥವರು ಕ್ರಮೇಣ ಕ್ರೈಸ್ತಮತಾವಲಂಬಿಗಳಾಗಿದ್ದರು. ಇವರ ಆಳ್ವಿಕೆಯ ಕಾಲವನ್ನು ಚರಿತ್ರೆಯಲ್ಲಿ ಅಂಧಕಾರ ಯುಗವೆನ್ನಲಾಗಿದೆ (ಕ್ರಿ.ಶ. 500–ಕ್ರಿ.ಶ. 1000). ಹೀಗೆನ್ನಲು ಅನೇಕ ಕಾರಣಗಳಿವೆ. ಮಧ್ಯಯೂರೋಪಿನಲ್ಲಿ ಸುಸಂಘಟಿತವಾದ ಯಾವ ರಾಜಕೀಯ ವ್ಯವಸ್ಥೆಯೂ ಅಂದು ಇರಲಿಲ್ಲ. ಸ್ಪೇನ್, ಇಟಲಿ, ಫ್ರಾನ್ಸ್ ಇವಾವುವೂ ರಾಷ್ಟ್ರಮಟ್ಟವನ್ನು ಮುಟ್ಟಿರಲಿಲ್ಲ. ಸಣ್ಣಪುಟ್ಟ ಪ್ರಾಂತ್ಯಗಳು ತಮ್ಮತಮ್ಮಲ್ಲೆ ಸದಾ ಹೋರಾಡುತ್ತಿದ್ದುವು. ರೋಮನರ ಭಾಷೆಯಾದ ಲ್ಯಾಟಿನ್ ಮರೆಯಾಗುತ್ತ ಬಂದಿದ್ದು ಅದರಿಂದ ಹುಟ್ಟಿದ್ದ ಅನೇಕ ಉಪಭಾಷೆಗಳು ಬಳಕೆಗೆ ಬರುತ್ತಿದ್ದುವು. ಒಬ್ಬರಾಡಿದ ಭಾಷೆ ಇನ್ನೊಬ್ಬರಿಗೆ ಅರ್ಥವಾಗುವಂತಿರಲಿಲ್ಲ. ಎಲ್ಲ ಮಬ್ಬಾದಂತೆ, ಏನೋ ಕಾವಳ ಕವಿದಂತೆ ಆಗಿತ್ತು. ಇಂಥ ಸಂದಿಗ್ಧ ಸಮಯದಲ್ಲಿ ಟ್ಯೂಟನ್ ದೊರೆಯಾದ ಷಾರ್ಲಮಾನನ ಆಡಳಿತ ತನ್ನದೇ ಆದ ಬೆಳಕಿನಿಂದ ಝಗಝಗಿಸುವ ಅವಧಿಯೆನಿಸಿದೆ. ಆತ ಸ್ವತಃ ಅನಾಗರಿಕ ಮತ್ತು ಅನಕ್ಷರಸ್ಥನಾದರೂ ದೇಶದ ಹಿತಚಿಂತನೆಯ ದೃಷ್ಟಿಯಿಂದ ಅನೇಕ ಉತ್ತಮ ಕೆಲಸಗಳನ್ನು ಮಾಡಿದ. ಜೊತೆಗೆ ಅಂದಿನ ಕ್ರೈಸ್ತ ಪಾದ್ರಿಗಳು ಹಿಂದಿನ ರೋಮನ್ ಭಾಷಾಸಾಹಿತ್ಯಗಳನ್ನು ಉಳಿಸಿಕೊಂಡು ಬಂದರಲ್ಲದೆ ಅನೇಕ ಹೊಸ ಮಠಗಳನ್ನು ಕಟ್ಟಿಸಿದರು. ಶಿಲ್ಪಕಲೆಯ ದೃಷ್ಟಿಯಿಂದ ಇವು ಪ್ರಮುಖವೆನಿಸಿವೆ. ನಿದರ್ಶನಗಳಾಗಿ ವೆಟ್ಟಿಂಗ್‌ಟನ್ನಿನ ಮೇರಿಯ ಸ್ಟೆಲ ಮಠವನ್ನೂ ರೋಮಿನ ಹೊರ ವಲಯದಲ್ಲಿದ್ದ ಸೇಂಟ್ ಪಾಲ್ ಮಠವನ್ನೂ ಹೆಸರಿಸಬಹುದು.

**ರೋಮನೆಸ್ಕ್ ಶೈಲಿ :** ಅಂಧಕಾರ ಯುಗ ಕಳೆದ ಮೇಲಿನ ಮೂರುನೂರು ವರ್ಷಗಳ ಐರೋಪ್ಯ ಶಿಲ್ಪ, ಕಲೆಗಳನ್ನು ರೋಮನೆಸ್ಕ್ ಶೈಲಿಯವೆನ್ನುತ್ತಾರೆ (ಕ್ರಿ.ಶ. 1000–1300). ಒಂದು ಕಾಲದಲ್ಲಿ ರೋಮನ್ ಸಾಮ್ರಾಜ್ಯದ ಭಾಗಗಳಾಗಿದ್ದು ಅನಂತರ ಪ್ರತ್ಯೇಕಾಧಿಕಾರಕ್ಕೊಳಪಟ್ಟ ಇಟಲಿ, ಫ್ರಾನ್ಸ್, ಸ್ಪೇನ್ ಮೊದಲಾದ ಪ್ರಾಂತ್ಯಗಳಲ್ಲಿ ಕಂಡು ಬಂದುದರಿಂದ ಈ ಶಿಲ್ಪಕ್ಕೆ ರೋಮನೆಸ್ಕ್ ಎಂಬ ಹೆಸರು ಬಂತು. ಇವುಗಳಿಗೆಲ್ಲ ಮೂಲ ರೋಮನ್ ಶಿಲ್ಪವಾದರೂ ಈ ಒಂದೊಂದೂ ಪ್ರಾಂತ್ಯ ತನ್ನದೇ ಆದ ರೀತಿಯಲ್ಲಿ ಶಿಲ್ಪ, ಕಲೆಗಳನ್ನು ಬೆಳೆಸಿಕೊಂಡಿರುವುದನ್ನು ನಾವು ನೋಡಬಹುದು. ಇಟಲಿಯ ಪೀಸ ನಗರದ ಓಲು ಗೋಪುರದ ಪಕ್ಕದಲ್ಲಿರುವ ಕೆಥೆಡ್ರಲ್ ರೋಮನೆಸ್ಕ್ ಮಾದರಿಗೆ ಒಳ್ಳೆಯ ನಿದರ್ಶನ. ಅದು ರೋಮನ್ ಶಿಲುಬೆಯಂತಿರದೆ ಲ್ಯಾಟಿನ್ ಶಿಲುಬೆಯ ಆಕಾರದಲ್ಲಿದೆ. ಅಂದರೆ ಅದರ ಒಂದು ದಿಂಡು ಇನ್ನೊಂದಕ್ಕಿಂತ ಉದ್ದವಾಗಿದೆ. ಅಲ್ಲದೆ ಅದರ ಮುಖ ಪೂರ್ವಕ್ಕೆ ತಿರುಗಿದಂತಿದೆ. ಕೆಥೆಡ್ರಲಿನ ಕಂಬಸಾಲುಗಳ ಮೇಲಿನ ಮತ್ತು ಕಿಟಕಿಗಳ



ಫ್ರಾನ್ಸಿನ ಆರ್ಲ್ಸನಲ್ಲಿರುವ ಅರ್ಧವೃತ್ತಾಕಾರದ ರಂಗಮಂದಿರ. ಫ್ಲೇವಿಯನ್ ಮತ್ತು ಆಂಟೊನೈನ್ ಯುಗದ ರೋಮನ್ ಶಿಲ್ಪದ ಮಾದರಿ.



ರೋಮನೆಸ್ಕ್ ವಾಸ್ತುಶಿಲ್ಪದ ಒಂದು ಮಾದರಿ. ಫ್ರಾನ್ಸಿನ ಟೂಲೂಸ್‌ನಲ್ಲಿರುವ ಸೇಂಟ್ ಸರ್ನಿನ್ ಚರ್ಚು. ಹನ್ನೊಂದನೆಯ ಶತಮಾನದ ಕೊನೆಯಲ್ಲಿ ನಿರ್ಮಾಣವಾದುದು.

ಮೇಲಿನ ಗುಂಡು ಕಮಾನುಗಳು ರೋಮನೆಸ್ಕ್ ಮಾದರಿಯ ಮುಖ್ಯ ಗುಣವನ್ನು ತೋರಿಸುತ್ತವೆ. ಕಂಬಸಾಲುಗಳಲ್ಲಿ ನೆಲದ ಮೇಲಿನ ಮೊದಲ ಸಾಲು ಇದ್ದಷ್ಟು ಎತ್ತರವಾಗಿ ಮಹಡಿಯ ಕಂಬ ಸಾಲುಗಳಿಲ್ಲ. ಹಾಗೆಯೆ ಅದರ ಮೇಲಿನ ಸಾಲಿನ



ದಕ್ಷಿಣ ಫ್ರಾನ್ಸಿನ ನೀಮ್ಸ್‌ನಲ್ಲಿನ ಒಂದು ಸೇತುವೆ ; ಆಗಸ್ಟಸ್ ಯುಗದ ರೋಮನ್ ಮಾದರಿಯದು

ಎತ್ತರವೂ ಕಡಿಮೆಯಾಗಿದೆ. ಇಟಲಿಯ ಒಂದೊಂದು ಊರಿನಲ್ಲೂ ಒಂದೊಂದು ವಾಸ್ತುಶಿಲ್ಪಕೃತಿಯನ್ನು ಅದರದರ ವೈಶಿಷ್ಟ್ಯಕ್ಕಾಗಿ ನಾವು ಹೆಸರಿಸಬಹುದು. ಫ್ರಾನ್ಸಿನ ಅಂಗುಲೆಮ್ ಕೆಥೆಡ್ರಲ್ ಇನ್ನೊಂದು ಒಳ್ಳೆಯ ಉದಾಹರಣೆ. ಜರ್ಮನಿಯಲ್ಲೂ ಈ ಶೈಲಿಯ ಭವ್ಯ ಕಟ್ಟಡಗಳನೇಕವಿವೆ. ಇಂಗ್ಲೆಂಡಿನಲ್ಲಿ ನಾರ್ಮನರ ಕಾಲದಲ್ಲಾದ ಕಟ್ಟಡಗಳು ಗುಣರೂಪಗಳ ದೃಷ್ಟಿಯಿಂದ ರೋಮನೆಸ್ಕ್ ಶೈಲಿಯವಾದರೂ ಅವನ್ನು ನಾರ್ಮನ್ ಶೈಲಿಯವೆನ್ನುವುದು ವಾಡಿಕೆ.

**ಮಧ್ಯಯುಗದ ಕೋಟೆ ಕೊತ್ತಳಗಳು :** ಪಾಳೆಯಗಾರಿಕೆ ರೂಢಿಯಲ್ಲಿದ್ದ ಮಧ್ಯಯುಗದಲ್ಲಿ ಯೂರೋಪಿನಲ್ಲೆಲ್ಲ ಕೋಟೆ ಕೊತ್ತಳಗಳು ನಿರ್ಮಾಣಗೊಂಡುವು. ಸಾಮಾನ್ಯವಾಗಿ ಇವು ಬೆಟ್ಟದ ನೆತ್ತಿಯಲ್ಲಿರುತ್ತವೆ. ಶತ್ರುಗಳ ದಾಳಿಯಿಂದ



ಬರ್ಗ್ ಕಾಟ್ಜ್ : ರೈನ್ ನದಿಯ ಮೇಲಿರುವ ಮಧ್ಯಕಾಲೀನ ಕೋಟೆಮನೆ

ಪಾರಾಗದಿರಲು ಶ್ರೀಮಂತಾಧಿಕಾರಿಗಳು ಕಟ್ಟಿಸಿಕೊಂಡ ಈ ಮನೆಗಳ ಸುತ್ತಲೂ ಬಲವಾದ ಕಲ್ಲಿನ ಕೋಟೆಯಿರುತ್ತದೆ. ಕೋಟೆಗೊಂದು ದಿಡ್ಡಿಬಾಗಿಲಿದ್ದು ಅದು ಬಹು ಭದ್ರವಾಗಿರುತ್ತದೆ. ಸುತ್ತಣ ಪ್ರಾಕಾರದ ತಳದಲ್ಲಿ ಒಂದು ಕಂದಕವಿದ್ದು ಶತ್ರು ಲಗ್ಗೆ ಹತ್ತುವಾಗ ಅದನ್ನು ನೀರಿನಿಂದ ತುಂಬಲಾಗುತ್ತದೆ. ಗೋಡೆಯ ಮೇಲಿನ ಬುರುಜುಗಳಿಂದ ಸೈನಿಕರು ಶತ್ರುಗಳ ಮೇಲೆ ಅಸ್ತ್ರಪ್ರಯೋಗಮಾಡುವ ಅನುಕೂಲಗಳಿರುತ್ತವೆ. ಒಂದು ಕೋಟೆಮನೆ ಎಂದರೆ ಒಂದು ಚಿಕ್ಕ ಊರು ಇದ್ದಂತೆಯೆ. ಅದರಲ್ಲಿ ಅನುಕೂಲವಾದ ಅರಮನೆ, ವಿಹಾರಸ್ಥಳಗಳು, ಪೂಜಾ ಗೃಹಗಳು, ಬಂದಿಖಾನೆ, ದಿವಾನಖಾನೆ, ಉಗ್ರಾಣ ಇತ್ಯಾದಿ ಸಕಲವೂ ಇರುತ್ತವೆ. ಇಂಗ್ಲೆಂಡ್, ಫ್ರಾನ್ಸ್, ಇಟಲಿ, ಸ್ಪೇನ್, ಜರ್ಮನಿ, ಆಸ್ಟ್ರಿಯ, ರಷ್ಯ ಮೊದಲಾದ ಕಡೆ ನೀರನ್ನು, ಬೆಟ್ಟವನ್ನು ಆಶ್ರಯಿಸಿ ನಿಂತಿರುವ ಕೋಟೆಮನೆಗಳನ್ನು ಇಂದಿಗೂ ಕಾಣಬಹುದು.

**ಗಾಥಿಕ್ ಶೈಲಿ :** ಮಧ್ಯಯುಗದ ಕೊನೆಯ ಭಾಗದಲ್ಲಿ ಹಾಗೂ ಪುನರುಜ್ಜೀವನ ಅವಧಿಯ ಪ್ರಾರಂಭದಲ್ಲಿ ಕಂಡುಬರುವ ವಿಶಿಷ್ಟ ವಾಸ್ತುಶಿಲ್ಪಶೈಲಿಗೆ ಈ ಹೆಸರಿದೆ. ಕ್ರಿ.ಶ. 12ನೆಯ ಶತಮಾನದಿಂದ ಕ್ರಿ.ಶ. 15ನೆಯ ಶತಮಾನದ ವರೆಗೆ ಯೂರೋಪಿನಲ್ಲೆಲ್ಲ ಇದು ಪ್ರಧಾನ ಶೈಲಿಯಾಗಿದ್ದುದು ಕಂಡುಬರುತ್ತದೆ. ಈ ಶೈಲಿಗೆ ಈ ಹೆಸರು ಬರಲು ಇರುವ ಕಾರಣ ಬಹು ವಿಚಿತ್ರವಾಗಿದೆ. ಜರ್ಮನಿಯ ಗಾಥ್ ಜನ ಪಶ್ಚಿಮಕ್ಕೂ ದಕ್ಷಿಣಕ್ಕೂ ನುಗ್ಗಿ ದಾಳಿ ಮಾಡಿ ರೋಮನ್ ಚಕ್ರಾಧಿಪತ್ಯವನ್ನು ಹಾಳು ಮಾಡಿದರಷ್ಟೆ. ಈ ಜನ ಒರಟರು, ಕ್ರೂರಿಗಳು, ವಿಧ್ವಂಸಕಾರಿ ಮನೋಧರ್ಮ ಉಳ್ಳವರು. ತಾವು ಹೋದ ಕಡೆಯೆಲ್ಲ ಕೊಲೆ ಸುಲಿಗೆಗಳನ್ನು ಮಾಡಿದರಲ್ಲದೆ ಕಣ್ಣಿಗೆ ಕಂಡ ಊರು ಕೇರಿಗಳಿಗೆ ಬೆಂಕಿಯಿಟ್ಟು ಸುಟ್ಟರು. ಗಾಥ್ ಜನರ ಆಳ್ವಿಕೆಯ ಕಾಲದಲ್ಲಿ ಬೆಳೆದು ಬಂದ ವಾಸ್ತುಶಿಲ್ಪಶೈಲಿಯನ್ನು ಆ ಜನರ ಹೆಸರಿಗೇ ಕಟ್ಟಿ ಅದನ್ನು ಗಾಥಿಕ್ ಎಂದು ಕರೆದುದು ಸಹಜವೇ. ಗಾಥಿಕ್ ಶೈಲಿ ನಿಜಕ್ಕೂ ಬಹು ಸುಂದರವಾದ ಶೈಲಿಯಾದರೂ ಅದು ಪ್ರಾಚೀನ ಗ್ರೀಕ್ ಮತ್ತು ರೋಮನ್ ಶೈಲಿಯಷ್ಟು ಸುಸಂಸ್ಕೃತವೆಂದು ಅಂದಿನ ಜನ ತಿಳಿಯಲಿಲ್ಲ. ಅದರ ಬಗ್ಗೆ ಅವರಿಗೆ ಬಹು ತಾತ್ಸಾರವಿತ್ತು. ಒರಟು, ಅಸಂಸ್ಕೃತ, ಅನಾಗರಿಕ ಎಂಬ



ಕೊಲೋನ್ ಕೆಥೆಡ್ರಲಿನ ಒಳಭಾಗದ ಒಂದು ನೋಟ. ಗಾಥಿಕ್ ಶೈಲಿಯ ಭವ್ಯತೆಯನ್ನಿದು ನಿದರ್ಶಿಸುತ್ತದೆ

ಅರ್ಥದಲ್ಲಿ ಗಾಥಿಕ್ ಎಂಬ ಪದವನ್ನಿಲ್ಲಿ ಬಳಸಲಾಗಿದೆ. ಆದರೆ ಗಾಥಿಕ್ ಶೈಲಿ ನಿಜಕ್ಕೂ ವಿಚಿತ್ರವಾಗಿದ್ದು ಬಹು ಸುಂದರವಾಗಿದೆ. ಅಲ್ಲದೆ ಅದನ್ನು ಬಳಕೆಗೆ ತಂದವರು ಗಾಥರಲ್ಲ. ಗಾಥರ ಆಳ್ವಿಕೆಯ ಕಾಲದಲ್ಲಿ ಆಯಾ ಪ್ರಾಂತ್ಯದ ಸ್ಥಳೀಯ ಶಿಲ್ಪಿಗಳು ಸ್ವಸಂತೋಷದಿಂದ, ಧಾರ್ಮಿಕ ತೃಪ್ತಿಗಾಗಿ, ರೋಮನ್ ಮತ್ತು



ಗಾಥಿಕ್ ಮಾದರಿಯ ದೊಡ್ಡ ಕೆಥೆಡ್ರಲ್. ಮಿಲಾನಿನಲ್ಲಿದೆ. ಇದರ ನಿರ್ಮಾಣಕಾರ್ಯ 14ನೆಯ ಶತಮಾನದಲ್ಲೇ ಪ್ರಾರಂಭವಾಯಿತು.

ರೋಮನೆಸ್ಕ್ ಶೈಲಿಗಳನ್ನು ಅನುಕರಿಸಿ, ಆದರೂ ಅದಕ್ಕಿಂತ ಭಿನ್ನವೆನಿಸಿದ ಕೆಲವು ಮಾರ್ಪಾಟುಗಳನ್ನು ಮಾಡಿಕೊಂಡು ನಿರ್ಮಿಸಿದ ವಾಸ್ತುಶಿಲ್ಪಶೈಲಿಯೇ ಗಾಥಿಕ್ ಶೈಲಿ. ಇದರ ಪ್ರಧಾನ ಲಕ್ಷಣಗಳು ಇವು: ಅದುವರೆಗೂ ಅಡ್ಡಗಲಾಗಿ ನೆಲದಲ್ಲಿ ವಿಸ್ತಾರವಾಗಿ ಹರಡಿ ನಿಂತಿರುತ್ತಿದ್ದ ಮನೆಗಳು ನೆಟ್ಟಗೆ ಆಕಾಶದ ಕಡೆಗೆ ಎತ್ತರ ಎತ್ತರವಾಗಿ ಬೆಳೆಯತೊಡಗಿದುವು. ಅಂದರೆ ಹಲವು ಉಪ್ಪರಿಗೆಯ ಮನೆಗಳು ಬಳಕೆಗೆ ಬಂದುವು. ಚಾವಣಿಗಳಿಗೆ ಮರವನ್ನು ಉಪಯೋಗಿಸುವುದನ್ನು ನಿಲ್ಲಿಸಿ ಕಲ್ಲನ್ನೇ ಬಳಸಲು ಪ್ರಾರಂಭಿಸಿದರು. ಕಿಟಕಿ, ಬಾಗಿಲು ಹಾಗೂ ಕಂಬಸಾಲುಗಳ ಮೇಲಿದ್ದ ಕಮಾನುಗಳನ್ನು ಅರ್ಧವೃತ್ತಾಕಾರದಲ್ಲಿ ಮಾಡದೆ ಚೂಪಾಗಿ ನಿರ್ವಹಿಸಲಾಯಿತು. ಇದು ಅಂಥ ಹೊಸ ತಂತ್ರವೇನಲ್ಲ. ಪೂರ್ವರಾಷ್ಟ್ರಗಳಲ್ಲಿ ಚೂಪು ಕಮಾನಿನ ಬಳಕೆ ಬಹಳ ಹಿಂದಿನಿಂದಲೂ ಇತ್ತು. ಧರ್ಮಯುದ್ಧಗಳಿಗಾಗಿ ವಿದೇಶಗಳಿಗೆ ಹೋದ ಯೋಧರು ಅದನ್ನು ಯೂರೋಪಿಗೆ ತಂದರು. ಶಿಲ್ಪ ತಂತ್ರದ ದೃಷ್ಟಿಯಿಂದಲೂ ಗುಂಡು ಕಮಾನಿಗಿಂತ ಚೂಪು ಕಮಾನುಗಳ ನಿರ್ವಹಣೆ ಸುಲಭವೆನ್ನಲಾಗಿದೆ.

ಚೂಪು ಕಮಾನುಗಳು, ಎತ್ತರೆತ್ತರದ ಮಹಡಿಗಳು, ತುದಿಯ ಗೋಪುರಗಳು, ಹೆಚ್ಚಿನ ಚಿತ್ರಕೆಲಸಗಳು, ಬಣ್ಣದ ಗಾಜು—ಇವು ಗಾಥಿಕ್ ಶೈಲಿಯ ಮುಖ್ಯಾಂಶಗಳು. ಫ್ರಾನ್ಸಿನಲ್ಲಿ ಈ ಶೈಲಿಯ ಅನೇಕ ಚರ್ಚುಗಳಿವೆ. ಅವುಗಳಲ್ಲೆಲ್ಲ ಬಹು ಪ್ರಸಿದ್ಧವಾದುದು ಆಮಿಯೆನ್ಸ್ ಕೆಥೆಡ್ರಲ್. ಜೊತೆಗೆ ನೋಟರ್‌ಡೇಮ್, ಸೇಂಟ್ ಚಾಪೆಲ್, ರ್ಹೀಮ್ಸ್‌ಗಳನ್ನು ಹೆಸರಿಸಬಹುದು. ಇಂಗ್ಲೆಂಡಿನಲ್ಲಿ ಗಾಥಿಕ್ ಶೈಲಿಗೆ ಒಳ್ಳೆಯ ಉದಾಹರಣೆಗಳೆಂದರೆ ಸ್ಯಾಲಿಸ್‌ಬರಿ, ಲಿಂಕನ್ ಮತ್ತು ಕ್ಯಾಂಟರ್‌ಬರಿಗಳಲ್ಲಿರುವ ಕೆಥೆಡ್ರಲ್‌ಗಳು. ಸ್ಪೇನಿನ ವಾಸ್ತುಶಿಲ್ಪದಲ್ಲಿ ಅಲಂಕರಣ ಹೆಚ್ಚು ಮತ್ತು ಕಿಟಕಿಗಳು ಬಲು ಚಿಕ್ಕವು. ಜರ್ಮನಿಯ ಕೊಲೋನ್ ಕೆಥೆಡ್ರಲ್, ಬೆಲ್ಜಿಯಮಿನ ಆಂಟ್‌ವರ್ಪ್‌ನಲ್ಲಿರುವ ನಗರ ಸಭಾಭವನ, ಸ್ಪೇನಿನ ಬರ್ಗೋಸ್ ಕೆಥೆಡ್ರಲ್—ಈ ಕೆಲವು ಗಾಥಿಕ್ ಶೈಲಿಯ ಇತರ ಪ್ರಸಿದ್ಧ ನಿದರ್ಶನಗಳು.

**ಮಹಮ್ಮದೀಯ ಶೈಲಿ :** ಇಸ್ಲಾಂ ಧರ್ಮ ಅರೇಬಿಯದಿಂದ ಬಹು ವೇಗವಾಗಿ ಪ್ರಪಂಚದ ಎಲ್ಲೆಡೆಗೂ ಹರಡಿತಷ್ಟೆ. ಅದರೊಂದಿಗೆ ಮುಸ್ಲಿಂ ರಾಷ್ಟ್ರವೂ ವ್ಯಾಪಕವಾಗಿ ಬೆಳೆಯುತ್ತ ಹೋಯಿತು. ಮುಸ್ಲಿಮರು ಮೆಡಿಟರೇನಿಯನ್ ಸಮುದ್ರದ ದಕ್ಷಿಣದಲ್ಲಿ ಈಜಿಪ್ಟ್, ಆಫ್ರಿಕದ ಉತ್ತರ ತೀರಗಳನ್ನು ಆಕ್ರಮಿಸಿ ಕ್ರಮೇಣ ಜಿಬ್ರಾಲ್ಟರ್ ಮುಖಾಂತರ ಸ್ಪೇನನ್ನು ತಲಪಿದರು. ಕಾಲ ಸಂದಂತೆ ಸ್ಪೇನನ್ನೆಲ್ಲ ಆಕ್ರಮಿಸಿ ಫ್ರಾನ್ಸಿನತ್ತ ನಡೆದರು. ಆದರೆ ಫ್ರೆಂಚರು ಟೂರ್ಸ್ ಯುದ್ಧದಲ್ಲಿ ಸೆಣಸಿ ಶತ್ರುಗಳನ್ನು ಓಡಿಸಿಬಿಟ್ಟರು. ಮಹಮ್ಮದೀಯರ ಆಡಳಿತಕ್ಕೆ ಕೆಲಕಾಲ ಒಳಪಟ್ಟಿದ್ದ ಸ್ಪೇನಿನಲ್ಲಿ ಆ ಶೈಲಿಯ ಅನೇಕ ಕಟ್ಟಡಗಳು ನಿರ್ಮಾಣವಾದುವು. ಸ್ಪೇನಿನಲ್ಲಿ ನೆಲೆಸಿದ್ದ ಅರಬ್ಬೀಯರನ್ನು ಮೂರರೆನ್ನುತ್ತಾರೆ. ಇವರ ರಾಜಧಾನಿ ಕಾರ್ಡೋವ. ಮೂರರು ಸ್ಪೇನಿನಲ್ಲಿ ಸುಮಾರು ಎಂಟುನೂರು ವರ್ಷ ಆಡಳಿತ ನಡೆಸಿ ಕ್ರಿಸ್ಟೋಫರ್ ಕೊಲಂಬಸನ ಕಾಲಕ್ಕೆ ಅಲ್ಲಿಂದ ಕಾಲು ತೆಗೆದರು. ಸ್ಪೇನಿನ ಗ್ರನಾಡದಲ್ಲಿದ್ದ ಅರಸುಮನೆತನದವರು ನಿರ್ಮಿಸಿದ ಅಲ್ಹಾಂಬ್ರ ಕೋಟೆ, ಅರಮನೆ ಮಹಮ್ಮದೀಯ ಶೈಲಿಗೊಂದು ಒಳ್ಳೆಯ ಉದಾಹರಣೆ. ಕಾರ್ಡೋವದಲ್ಲಿನ ಮಸೀದಿ, ಸೆವಿಲ್‌ನಲ್ಲಿರುವ ಗಿರಾಲ್ಡ ಗೋಪುರಗಳು ಪ್ರಸಿದ್ಧವಿವೆ.

**ಪುನರುಜ್ಜೀವನ (ರೆನೆಸಾನ್ಸ್) ಕಾಲದ ಶಿಲ್ಪ :** ಮಧ್ಯಯುಗದಿಂದ ಆಧುನಿಕ ಯುಗದ ನಡುವಣ ಅವಧಿಯನ್ನು ಪುನರುಜ್ಜೀವನಕಾಲವೆನ್ನುತ್ತೇವೆ. ಅದು ಸುಮಾರು ಕ್ರಿ.ಶ. 14ರಿಂದ 16ನೆಯ ಶತಮಾನದ ವರೆಗಿನ ಕಾಲವನ್ನು ಸೂಚಿಸುತ್ತದೆ. ಇಟಲಿಯಲ್ಲಿ ಪ್ರಾರಂಭವಾದ ಈ ಹೊಸ ಧೋರಣೆ 15 ಮತ್ತು 16ನೆಯ ಶತಮಾನಗಳಲ್ಲಿ ಪೂರ್ಣವಿಕಾಸಗೊಂಡು ಫ್ರಾನ್ಸ್, ಸ್ಪೇನ್, ಜರ್ಮನಿ, ಇಂಗ್ಲೆಂಡ್ ಮತ್ತು ಇತರ ಐರೋಪ್ಯ ದೇಶಗಳಿಗೆ ಹರಡಿತು. ಇದರಿಂದಾಗಿ ಗಾಥಿಕ್ ಶೈಲಿ ಹಿಂದೆ ಸರಿಯಿತು. ಕಟ್ಟಡದ ಒಟ್ಟು ರಚನೆಗಿಂತ ಅದರ ಮುಖಭಾಗ ಮತ್ತು ಒಳಭಾಗಗಳ ಕುಸುರಿಚಿತ್ರಣಕ್ಕೆ ಪ್ರಾಶಸ್ತ್ಯ ಬಂತು. ಈ ಶೈಲಿಯ ಪ್ರಾರಂಭಿಕ ಕಾಲದ (1420–1500) ಮುಖ್ಯಶಿಲ್ಪಿಗಳೆಂದರೆ ಬ್ರೂನೆಲೆಸ್ಚಿ, ಅಲ್ಬರ್ಟಿ, ಬ್ರಮಾಂಟೆ. ಫ್ಲಾರೆನ್ಸ್ ಮಿಲಾನ್, ವೆನಿಸ್‌ಗಳಲ್ಲಿ ಇವರ ಕೃತಿಗಳನ್ನು ಕಾಣಬಹುದು. ಮಧ್ಯಕಾಲದಲ್ಲಿ



ಪುನರುಜ್ಜೀವನ ಕಾಲದ ಪ್ರಥಮ ಇಟ್ಯಾಲಿಯನ್ ಶಿಲ್ಪಿ ಬ್ರೂನೆಲೆಶ್ಚಿಯ ಕೃತಿ ಸ್ಯಾನ್ ಲೊರೆಂಜೋ ಭವನ, ಫ್ಲಾರೆನ್ಸ್. ಡೊನಟೆಲೊನ ಅಲಂಕರಣವೂ ಸೇರಿದೆ.

(1500–1780) ರೋಮ್ ನಗರದಲ್ಲಿ ಮತ್ತು ಅದರ ಸುತ್ತಮುತ್ತ ಬ್ರಮಾಂಟೆ ಮತ್ತು ಇತರರು ಕೆಲಸ ಮಾಡಿದರು. ಅವರ ಶಿಷ್ಟ ಶೈಲಿಗೆ ಸೇಂಟ್ ಪೀಟರನ ಚರ್ಚ್ ಉತ್ತಮ ನಿದರ್ಶನವಾಗಿದೆ. ಪುನರುಜ್ಜೀವನಕಾಲದ ಕೊನೆಯ ಭಾಗದಲ್ಲಿ (1600–1780) ಬ್ಯಾರೋಕ್ ಮತ್ತು ರೊಕೊಕೊ ಶೈಲಿ ಪ್ರಧಾನವಾಯಿತು.

ಈ ಕಾಲದ ಚಿತ್ರಕಲಾಪ್ರೌಢಿಮೆಗೆ ಇಟಲಿಯ ಫ್ಲಾರೆನ್ಸ್ ಕೇಂದ್ರವೆನಿಸಿತು. ಅಲ್ಲಿನ ಪ್ರಸಿದ್ಧ ಚಿತ್ರಕಾರರಲ್ಲಿ ಜ಼ಾಟ್ಟೊ, ಫ್ರಾ ಆಂಜೆಲಿಕೊ, ಲಿಯೊನಾರ್ಡೊ ಡ ವಿಂಚಿ, ಬಾಟಿಸೆಲಿ, ಮೈಕೆಲೇಂಜಲೊ ಇವರನ್ನು ಹೆಸರಿಸಬಹುದು. ಸಿಯೆನ್ನ, ವೆನಿಸ್, ರೋಮ್ ಮತ್ತು ಇತರ ಇಟಲಿಯ ಪ್ರಮುಖ ಪಟ್ಟಣಗಳಲ್ಲಿ ಕಲಾವಿದರು



ಚೆರಿಹಣ್ಣುಗಳನ್ನು ಹಿಡಿದ ಬಾಲಕಿ; ಪುನರುಜ್ಜೀವನ ಕಾಲದ ಚಿತ್ರಕಲೆಯ ಒಂದು ಮಾದರಿ. ಬಿ. ಲೂನಿಯ ಒಂದು ಕೃತಿ.

ತಮ್ಮವೇ ಆದ ಪ್ರಸ್ಥಾನಗಳನ್ನು ಬಳಕೆಗೆ ತಂದರು. ಇದೇ ಕಾಲದಲ್ಲಿ ಪ್ರಸಿದ್ಧ ಕಲಾವಿದ ರ್‍ಯಾಫೆಲ್ ರೋಮಿನಲ್ಲಿ ತನ್ನ ಕೃತಿರಚನೆಮಾಡಿದ. ಎಂಟನೆಯ ಚಾರಲ್ಸ್ ನೇಪಲ್ಸಿನ ಮೇಲೆ ಮಾಡಿದ ದಾಳಿಯಿಂದಾಗಿ ಪುನರುಜ್ಜೀವನ ಕಾಲದ ಧೋರಣೆಗಳು ಫ್ರಾನ್ಸನ್ನು ಪ್ರವೇಶಿಸಿದುವು. ಇಟಲಿಯ ಕಲಾವಿದರನ್ನು ಒಂದನೆಯ ಫ್ರಾನ್ಸಿಸ್ ಆಹ್ವಾನಿಸಿದ. ಎರಡನೆಯ ಹೆನ್ರಿ ಇಟಲಿಯ ಕ್ಯಾಥರೀನ್ ಡಿ ಮೆಡಿಚಿಯನ್ನು ಮದುವೆಯಾದ ಮೇಲಂತೂ ಇಟಲಿಗೆ ಕೋಡು ಕೊನರಿತು. ಸುಮಾರು 15ನೆಯ ಶತಮಾನದಲ್ಲಿ ಇದರ ಪ್ರಭಾವ ಸ್ಪೇನಿನ ಮೇಲೂ ಆದಂತೆ ಕಾಣುತ್ತದೆ. ಕಲಾದೃಷ್ಟಿಯಿಂದ ನೋಡುವುದಾದರೆ ಪುನರುಜ್ಜೀವನಕಾಲದ ಧೋರಣೆಗಳು ಇಂಗ್ಲೆಂಡ್ ಮತ್ತು ಜರ್ಮನಿಗಳ ಮೇಲೆ ಅಷ್ಟು ಪ್ರಭಾವ ಬೀರದಿರುವ ವಿಷಯ ಗಮನಾರ್ಹವಾದುದು.

**ಬ್ಯಾರೋಕ್ ಶೈಲಿ :** ಇಟಲಿಯಲ್ಲಿ 16ನೆಯ ಶತಮಾನದಿಂದಾಚೆ ಬಳಕೆಗೆ ಬಂದ ಶಿಲ್ಪಶೈಲಿ. ಅಭಿಜಾತಶೈಲಿಗೆ ಪ್ರತಿಯಾಗಿ ಹುಟ್ಟಿದುದು. ಅತ್ಯಾಲಂಕಾರವೇ ಇದರ ದಾರಿ. ಅನಂತರ ಸುಮಾರು ಒಂದೂವರೆ ಶತಮಾನ ಇದು ಇಡೀ ಯುರೋಪಿನಲ್ಲೆಲ್ಲ ಖ್ಯಾತ ಪದ್ಧತಿಯಾಗಿತ್ತು. ಅನಂತರ ಮತ್ತೆ 18ನೆಯ ಶತಮಾನದಲ್ಲಿ ಅಭಿರುಚಿ ಅಭಿಜಾತಪದ್ಧತಿಯ ಕಡೆಗೇ ಹೊರಳಿತು. ರೋಮಿನ ಸೇಂಟ್ ಪೀಟರ್ ಚರ್ಚಿನ ಚೌಕದಲ್ಲಿ ಬರ್ನಿನಿ ಈ ಶೈಲಿಯಲ್ಲಿ ಕೆಲಸ ಮಾಡಿದ್ದಾನೆ. ಈ ಪದ್ಧತಿಯಲ್ಲಿ ಉಳಿದ ಪ್ರಸಿದ್ಧರೆಂದರೆ ಬಾರೊಮಿನಿ, ವಿಗ್ನೋಲ. ಫ್ರಾನ್ಸಿನಲ್ಲಿ ಹದಿನಾಲ್ಕನೆಯ ಲೂಯಿಯ ಆಡಳಿತದಲ್ಲಿ ಈ ಶೈಲಿ ಉಚ್ಛ್ರಾಯ ಸ್ಥಿತಿಗೇರಿತು. ಜರ್ಮನಿ, ಆಸ್ಟ್ರಿಯ, ಸ್ಪೇನುಗಳಲ್ಲಿ ಈ ಶೈಲಿಯ ಅತಿರೇಕಗಳನ್ನು ಕಾಣಬಹುದು.

**ರೊಕೊಕೊ ಶೈಲಿ :** ಬ್ಯಾರೋಕ್ ಶೈಲಿಯಿಂದ ಹೊಮ್ಮಿಬಂದ ಒಂದು ನವುರಾದ ಹೊಸ ಶೈಲಿ. ಫ್ರಾನ್ಸಿನಲ್ಲಿ 15ನೆಯ ಲೂಯಿಯ ಕಾಲದಲ್ಲಿ (18ನೆಯ ಶತಮಾನ) ಬಳಕೆಗೆ ಬಂತು. ಒಳಾಂಗಣಗಳ ಕುಸುರಿ ಚಿತ್ರಣವೇ ಈ ಶೈಲಿಯ ವಿಶಿಷ್ಟ ಗುಣವೆನ್ನಬಹುದು. ಅಲಂಕರಣಕ್ಕಾಗಿ ಕಪ್ಪೆಚಿಪ್ಪು, ಶಂಖ, ಹೂ ಮೊದಲಾದವನ್ನು ಬಳಸಲಾಗಿದೆ. ಈ ಶೈಲಿಯಲ್ಲಿ ಸ್ವಲ್ಪಮಟ್ಟಿಗೆ ಚೀನೀಮಾದರಿಗಳ ಅನುಕರಣೆ ಇದೆ. ರೊಕೊಕೊ ಶೈಲಿಯ ಪ್ರಭಾವ ಜರ್ಮನಿ, ಆಸ್ಟ್ರಿಯ ಮತ್ತು ಇಂಗ್ಲೆಂಡಿನ ಮೇಲೆ ಸಾಕಷ್ಟು ಆಯಿತೆನ್ನಲು ದಾಖಲೆಗಳಿವೆ.

**ಜಾರ್ಜಿಯನ್ ಮತ್ತು ರೀಜೆನ್ಸಿ ಶೈಲಿಗಳು :** ಯುರೋಪಿನ ಪುನರುಜ್ಜೀವನ ಕಾಲದ ಶಿಲ್ಪಶೈಲಿಯನ್ನು ಇಂಗ್ಲೆಂಡಿನಲ್ಲಿ ಈ ಹೆಸರಿನಿಂದ ಕರೆಯಲಾಯಿತು. ರಾಣಿ ಆನಳ ರಾಜ್ಯಭಾರ ಮುಗಿದು ಒಂದನೆಯ ಜಾರ್ಜ್ ಪಟ್ಟಕ್ಕೆ ಬಂದ ಸುಮಾರಿನಲ್ಲಿ (ಕ್ರಿ.ಶ. 1720) ಪ್ರಾರಂಭವಾದ ಈ ಶೈಲಿ ಹತ್ತೊಂಬತ್ತನೆಯ ಶತಮಾನದ ಮೊದಲ ದಶಕ ಮುಗಿಯುವ ವರೆಗೂ ಉಳಿದು ಬಂದಿತೆನ್ನಬಹುದು. ಅನಂತರ ಎಂದರೆ ನಾಲ್ಕನೆಯ ಜಾರ್ಜ್ ಪ್ರಿನ್ಸ್ ರೀಜೆಂಟ್ ಆದ ಸುಮಾರಿನಲ್ಲಿ (ಕ್ರಿ.ಶ. 1811) ಇದು ರೀಜೆನ್ಸಿ ಶೈಲಿಯಲ್ಲಿ ಲೀನವಾಯಿತೆನ್ನಬಹುದು.

ಅದು ಎಲ್ಲ ಕಡೆಯೂ ಕೈಗಾರಿಕೆಗಳು ಬೆಳೆಯುತ್ತಿದ್ದ ಕಾಲ. ಜನರೆಲ್ಲ ಬಹು ಸಂಖ್ಯೆಯಲ್ಲಿ ನಗರಗಳಲ್ಲಿ ಬಂದು ನೆಲೆಸಲು ಪ್ರಾರಂಭಿಸಿದ್ದರು. ರೋಮನರ ಕಾಲಕ್ಕೆ ನಿಂತುಹೋಗಿದ್ದ ನಗರನಿರ್ಮಾಣಕಲೆಗೆ ಈಗ ಮತ್ತೆ ಅವಕಾಶ ದೊರಕಿದಂತಾಯಿತು. ಬಾತ್ ಮತ್ತು ಎಡಿನ್‌ಬರೊ ನಗರಗಳಲ್ಲಿ ಜಾರ್ಜಿಯನ್ ಶೈಲಿಗೆ ಉತ್ತಮ ನಿದರ್ಶನಗಳು ದೊರೆಯುತ್ತವೆ. ಅವೆರಡೂ ಕಡೆ ನಗರರಚನೆಯ ಕೆಲಸ ಮಾಡಿದವ ರಾಬರ್ಟ್ ಆಡಮ್. ಇಲ್ಲಿ ಮನೆಗಳು ಅಂದವಾಗಿ ಅನುಕೂಲವಾಗಿ ಕಟ್ಟಲ್ಪಟ್ಟಿವೆ. ರಸ್ತೆಗಳ ಯೋಜನೆಯೂ ಸಮರ್ಪಕವಾಗಿದೆ. ಮನೆಗಳ ಬಾಹ್ಯಾಲಂಕರಣ ಅಭಿಜಾತಮಾದರಿಯಾಗಿದ್ದು ಬಾಗಿಲು ಕಿಟಕಿಗಳು ಗ್ರೀಕ್ ಮತ್ತು ರೋಮನ್ ಶೈಲಿಗಳಲ್ಲಿವೆ. ಈಗಲೇ ಬಹುಮಾಳಿಗೆಯ ವಾಸಗೃಹಗಳ ಬಳಕೆ ಹೆಚ್ಚಿದ್ದು. ಜಾಗ ಉಳಿಸುವುದು ಒಂದು ಉದ್ದೇಶವಾದರೆ ಅನುಕೂಲ ಎರಡನೆಯದು. ಅಕ್ಕಪಕ್ಕಗಳಲ್ಲಿ ಜಾಗ ಬಿಡದೆ ಸಾಲಾಗಿ ಮನೆಗಳನ್ನು ಕಟ್ಟಿ ಸಾರ್ವಜನಿಕರ ಅನುಕೂಲಕ್ಕಾಗಿ ಅಲ್ಲಲ್ಲಿ ಸಾರ್ವಜನಿಕ ಉದ್ಯಾನಗಳನ್ನು ನಿರ್ಮಿಸಲಾಯಿತು. ದಾರಿ ಪಕ್ಕದ ಸಾಲುಮರಗಳೂ ಹಸಿರು ಮೈದಾನಗಳೂ ಊರಿನ ಸೌಂದರ್ಯವನ್ನು ಹೆಚ್ಚಿಸಿದುವು. ಆಡಮ್ ಸಹೋದರರು ಮಧ್ಯ ಲಂಡನ್ನಿನ ಬಹುಭಾಗದ ವಾಸ್ತುಶಿಲ್ಪಕ್ಕೆ ದಾರಿತೋರಿದರು.

ರೀಜೆನ್ಸಿ ಕಾಲದಲ್ಲಿ ಅಂದರೆ ಹತ್ತೊಂಬತ್ತನೆಯ ಶತಮಾನದ ಪ್ರಾರಂಭದಲ್ಲಿ ಅದುವರೆಗೂ ಶ್ರೀಮಂತರ ಮನೆಗಳಿಗೆ ದೊರೆಯಲಾಗಿದ್ದ ಪ್ರಾಶಸ್ತ್ಯ ಸಾಮಾನ್ಯರ ಮನೆಗಳಿಗೂ ಬಂತು. ಇದರಿಂದಾಗಿ ಬಾತ್, ಬ್ರೈಟನ್ ಮೊದಲಾದ ಅನೇಕ ಸುಂದರ ನಗರಗಳು ನಿರ್ಮಾಣವಾದುವು. ಲಂಡನ್ನಿನಲ್ಲಿ ಶಿಲ್ಪಿ ಜಾನ್ ನ್ಯಾಷ್ ಎಂಬಾತ ರೀಜೆಂಟ್ ಪಾರ್ಕ್ ಮತ್ತು ರೀಜೆಂಟ್ ರಸ್ತೆಗಳಲ್ಲಿ ಅದ್ಭುತವಾದ ಗೃಹಗಳನ್ನು ನಿರ್ಮಿಸಿದ. ಜನ ಈತನ ಕೃತಿಗಳನ್ನು ಅಭಿಜಾತ ಗ್ರೀಕ್ ಕಟ್ಟಡಗಳಂತಿವೆಯೆಂದು ಹೊಗಳಿದರು.

ಅಷ್ಟರಲ್ಲಿ ಕೈಗಾರಿಕಾ ಕ್ರಾಂತಿ ತನ್ನ ಕೈವಾಡವನ್ನು ಪ್ರದರ್ಶಿಸಲಾರಂಭಿಸಿತು. ಕಾರ್ಖಾನೆಗಳ ಸುತ್ತಮುತ್ತ ಕಾರ್ಮಿಕರ ವಸತಿಗಳ ನಿರ್ಮಾಣ ಪ್ರಾರಂಭವಾಯಿತು. ಹಳೆಯ ನಗರ ನಿರ್ಮಾಣಕಾರ್ಯ ಸ್ಥಗಿತಗೊಂಡಿತು. ಇರುವಷ್ಟು ಜಾಗದಲ್ಲೇ ಹೆಚ್ಚು ಹೆಚ್ಚು ಜನರಿಗೆ ವಸತಿಯನ್ನೊದಗಿಸುವುದರ ಕಡೆ ಗಮನ ಹರಿಯಿತು. ಊರುಗಳಲ್ಲಿನ ಜನಸಂಖ್ಯೆ ಇದ್ದಕ್ಕಿದ್ದಂತೆ ಅಪಾರವಾಗಿ ಬೆಳೆಯತೊಡಗಿತು.

**ಹತ್ತೊಂಬತ್ತನೆಯ ಶತಮಾನ :** ಯುರೋಪಿನ ಅದರಲ್ಲೂ ಇಂಗ್ಲೆಂಡಿನ ವಾಸ್ತುಶಿಲ್ಪ ಈ ಶತಮಾನದಲ್ಲಿ ಬಹುಸಂಕೀರ್ಣವಾಯಿತೆನ್ನಬಹುದು. ಒಂದು ಕಡೆ ಅಭಿಜಾತ ಶೈಲಿಗೂ ಮತ್ತೊಂದು ಕಡೆ ಗಾಥಿಕ್ ಶೈಲಿಗೂ ಪೈಪೋಟಿ ನಡೆದುದನ್ನು ಶತಮಾನದ ಉದ್ದಕ್ಕೂ ನಾವು ನೋಡಬಹುದು. ಪಲ್ಲಾಡಿಯನಿಸಂ ಶೈಲಿಯ ಚೇಂಬರ್ಸ್ ಮತ್ತು ಪಾಂಪೇಯಿ ಶೈಲಿಯ ಆಡಮ್—ಈ ಇಬ್ಬರು ಶಿಲ್ಪಿಗಳೂ ಇಟಲಿಯಿಂದ ತಮ್ಮ ಸ್ಫೂರ್ತಿಯನ್ನು ಪಡೆದರು. ರೀಜೆಂಟ್ ಪಾರ್ಕಿನ ಬೃಹದ್ಗೃಹಗಳು, ಹೋವ್, ಬ್ರೈಟನ್, ವೇಮೌತ್, ಚೆಲ್ಟನ್‌ಹ್ಯಾಂ, ಕ್ಲಿಫ್ಟನ್, ಟರ್ನ್‌ಬ್ರಿಡ್ಜ್ ವೆಲ್ಸ್ ಮೊದಲಾದ ಕಡೆಗಳಲ್ಲಿನ ವಿವಿಧ ಕಟ್ಟಡಗಳ ಮೂಲಕ ಖ್ಯಾತಿಪಡೆದ ಜಾನ್ ನ್ಯಾಷನಿಗೆ ಮೇಲ್ಪಂಕ್ತಿಯಾದವರು ಚೇಂಬರ್ಸ್ ಮತ್ತು ಆಡಮ್. ನ್ಯಾಷನ ಶೈಲಿಯಲ್ಲಿ ರೋಮನ್ ಮತ್ತು ಗ್ರೀಕ್ ಶೈಲಿಗಳ ಅನುಕರಣೆಯಿದೆ. ಅಷ್ಟು ಹೊತ್ತಿಗಾಗಲೇ ಗ್ರೀಸ್ ಮತ್ತು ರೋಮಿಗೆ ಭೇಟಿಕೊಟ್ಟು ಬಂದಿದ್ದ ಸ್ಟೂಅರ್ಟ್ ಮತ್ತು ರೆವೆಟ್ಟರ ಅಂಟಿಕ್ವಿಟೀಸ್ ಆಫ್ ಅಥೆನ್ಸ್ ಎಂಬ ಗ್ರಂಥ ಅಚ್ಚಾಗಿತ್ತು (1762). ಅಲ್ಲದೆ ಅಥೆನ್ಸಿನ ಅಪೂರ್ವಕೃತಿಗಳಾದ ಎಲ್ಜಿನ್ ಅಮೃತಶಿಲಾಶಿಲ್ಪಗಳು ಲಂಡನ್ನಿಗೆ ಬಂದಿದ್ದುವು (1801). ಹೀಗಾಗಿ ಗ್ರೀಕ್ ಶೈಲಿಯ ಪುನರುದ್ಧರಣ ಕಾರ್ಯ ಅನೇಕ ವರ್ಷ ಯಶಸ್ವಿಯಾಗಿ ನಡೆಯಿತು. ಡಿ. ಬರ್ಟನ್ನನ ಅಥೀನಿಯಂ ಕ್ಲಬ್ ಕಟ್ಟಡವೂ ಎಚ್. ಡಬ್ಲ್ಯು. ಇನ್‌ವುಡ್ನನ ಸೇಂಟ್ ಪಾಂಕ್ರಾಸ್ ಚರ್ಚು ಇದಕ್ಕೆ ಉತ್ತಮ ಉದಾಹರಣೆಗಳು. ಇದೇ ಮಾದರಿಯ ಗ್ರೀಕ್ ಶೈಲಿಯ

ಪುನರುಜ್ಜೀವನವನ್ನು ಜರ್ಮನಿಯಲ್ಲೂ ಕಾಣಬಹುದು. ಪರ್ಸಿಯರ್ ಮತ್ತು ಫಾಂಟೇನರ ಪ್ರಾಚೀನ ಶಿಲ್ಪಗ್ರಂಥಗಳಿಂದ ಪ್ರಭಾವಿತರಾದ ಫ್ರಾನ್ಸಿನ ಶಿಲ್ಪಿಗಳು ಹೊಸತಾಗಿ ರೂಢಿಸಿದ ಎಂಪೈರ್ ಶೈಲಿ ಈ ಶತಮಾನದ ಮೊದಲ ಮೂವತ್ತು ವರ್ಷಗಳು ಫ್ರಾನ್ಸಿನಲ್ಲಿ ಪ್ರಸಿದ್ಧವಾಗಿತ್ತು. ಕ್ರಮೇಣ ಈ ಪ್ರಭಾವ ಅಂದಿನ ಅಮೆರಿಕಕ್ಕೂ ಹರಡಿದುದು ಗಮನಾರ್ಹವಾದ ವಿಷಯ.

ಅದುವರೆಗೂ ಬಹು ಜನರ ತಾತ್ಸಾರಕ್ಕೆ ಒಳಗಾಗಿದ್ದ ಗಾಥಿಕ್ ಶೈಲಿಗೆ ಇದ್ದಕ್ಕಿದ್ದಂತೆ ಇಂಗ್ಲೆಂಡಿನಲ್ಲಿ ಪ್ರಾಮುಖ್ಯ ಬಂತು. 1818ರಲ್ಲಿ ಇಂಗ್ಲೆಂಡಿನ ಸಂಸತ್ ಸಭೆ ಹೊಸ ಆಂಗ್ಲಿಕನ್ ಚರ್ಚುಗಳ ನಿರ್ಮಾಣಕ್ಕೆಂದು ಒಂದು ದಶಲಕ್ಷ ಪೌಂಡುಗಳನ್ನು ಕೊಟ್ಟಾಗ ಗಾಥಿಕ್ ಶೈಲಿಗೆ ರೆಕ್ಕೆ ಮೂಡಿದಂತಾಯಿತು. ಆಗ ನಿರ್ಮಾಣವಾದ 214 ಚರ್ಚುಗಳಲ್ಲಿ 174 ಈ ಶೈಲಿಯಲ್ಲಿವೆ. ಅವುಗಳಲ್ಲಿ ಬಹು ಪ್ರಸಿದ್ಧವಾದುದೆಂದರೆ ಲಂಡನ್ನಿನಲ್ಲಿರುವ ಸೇಂಟ್ ಲೂಕನ ಚರ್ಚು. ಇಂಥ ಪುನರುಜ್ಜೀವನಕ್ಕೆ ಅಂದಿನ ಇಂಗ್ಲೆಂಡಿನ ಅದ್ಭುತರಮ್ಯ ಸಾಹಿತ್ಯದ ಧೋರಣೆಯೂ ಕಾರಣವಾಯಿತೆನ್ನಬಹುದು. ಗಾಥಿಕ್ ಶೈಲಿಯ ಪ್ರಭಾವ ಇಂಗ್ಲೆಂಡಿನಲ್ಲಿ ಇಡೀ ನೂರು ವರ್ಷ ಇದ್ದಿತೆನ್ನಬಹುದು.

ಇದೇ ಶತಮಾನದ ಸಾರ್ವಜನಿಕ ಭವನಗಳಲ್ಲಿ ಗ್ರೀಕ್, ರೋಮನ್, ಗಾಥಿಕ್ ಮತ್ತು ಎಲಿಜಬೀತನ್ ಶೈಲಿಗಳ ಮಿಶ್ರಣವಿದೆ.

**ಇಪ್ಪತ್ತನೆಯ ಶತಮಾನದ ವಾಸ್ತುಶಿಲ್ಪ :** ಒಂದನೆಯ ಮಹಾಯುದ್ಧಕ್ಕೆ ಮೊದಲು ಬಳಕೆಗೆ ಬಂದ ವಾಸ್ತುಶಿಲ್ಪಶೈಲಿಯನ್ನು ಆಧುನಿಕ ಶೈಲಿ ಎನ್ನಲಾಗಿದೆ. ಆಧುನಿಕ ಎಂಬ ಮಾತು ಪ್ರಾಚೀನ, ಮಧ್ಯಕಾಲೀನ ಎಂಬವುಗಳಂತೆ ಸಾಪೇಕ್ಷವಾದದ್ದು. ಅದು ಶಬ್ದಾರ್ಥವನ್ನು ವಿಶದೀಕರಿಸುವುದಿಲ್ಲ. ಉಪಯುಕ್ತತಾಶೀಲ (ಫಂಕ್ಷನಲ್) ಎಂಬ ಮಾತು ಆಧುನಿಕ ಕಲೆಯನ್ನು ಸರಿಯಾಗಿ ವಿವರಿಸೀತು. ಜನನಿಬಿಡವಾದ ಪಟ್ಟಣಗಳು, ಹೆಚ್ಚಿನ ವಾಹನ ಸಂಚಾರ, ದೊಡ್ಡ ದೊಡ್ಡ ಕಾರ್ಖಾನೆಗಳು, ಕಾರ್ಮಿಕರ ಮತ್ತು ಇತರ ನೌಕರರ ಸಣ್ಣಪುಟ್ಟ ವಸತಿಗೃಹಗಳು, ದೊಡ್ಡ ದೊಡ್ಡ ಕಚೇರಿಗಳು—ಇವೆಲ್ಲವನ್ನೂ ಕೇವಲ ಉಪಯೋಗದ ದೃಷ್ಟಿಯಿಂದ ಅನುಕೂಲವಾದ ರೀತಿಯಲ್ಲಿ ಕಟ್ಟಲು ಹೊಸದೊಂದು ವಿಧಾನವೇ ಬೇಕಾಯಿತು. ಹಿಂದಿನ ಅಲಂಕರಣಶೈಲಿ ನಿರರ್ಥಕವಾಗಿ ತೋರಿತು. ಈ ಶತಮಾನದ ಪ್ರಾರಂಭದಲ್ಲಿ ಪ್ರಖ್ಯಾತ ಕಲಾವಿಮರ್ಶಕನೆನಿಸಿದ ಜಾನ್ ರಸ್ಕಿನ್ನನ ಭಾಷಣಗಳು ಮತ್ತು ಗ್ರಂಥಗಳು ಜನರ ಮನೋಧರ್ಮವನ್ನಾಗಲೆ ಬದಲಿಸಿದ್ದುವು. ಅನಂತರ ಅವನ ಶಿಷ್ಯರಲ್ಲಿ ಒಬ್ಬನಾದ ವಿಲಿಯಂ ಮಾರಿಸ್ ಅಲಂಕರಣಕ್ಕಿಂತ ಮುಖ್ಯವಾದುದು ಉಪಯುಕ್ತತೆ ಎಂಬ ವಾದವನ್ನು ಮುಂದುವರಿಸಿ ಕೆಂಟ್‌ನಲ್ಲಿ ನವೀನ ಕಟ್ಟಡಗಳನ್ನು ರೂಪಿಸಿದ. 1851ರಲ್ಲಿ ಜೋಸೆಫ್ ಪ್ಯಾಕ್ಸ್ಟನ್ ಎಂಬ ಶಿಲ್ಪಿ ಅಂದಿನ ಮಹಾವಸ್ತುಪ್ರದರ್ಶನಕ್ಕಾಗಿ ಹೈಡ್ ಪಾರ್ಕಿನಲ್ಲಿ ನಿರ್ಮಿಸಿದ ಸ್ಫಟಿಕದ ಅರಮನೆಯನ್ನು (ಕ್ರಿಸ್ಟಲ್ ಪ್ಯಾಲೆಸ್) ಕಟ್ಟಲು ಕೇವಲ ಕಬ್ಬಿಣ ಮತ್ತು ಉಕ್ಕಿನ ಕಂಬ ಸಲಾಕೆಗಳನ್ನು ಬಳಸಿದನಷ್ಟೆ; ಅಲ್ಲಿಂದ ಮುಂದೆ ವಾಸ್ತುಶಿಲ್ಪದಲ್ಲಿ ಅವುಗಳ ಬಳಕೆ ಕ್ರಮೇಣ ಹೆಚ್ಚಿತು. ಭದ್ರ ಕಾಂಕ್ರೀಟಿನ ಬಳಕೆ ಬಂದಮೇಲೆ ವಾಸ್ತುಶಿಲ್ಪದ ರೀತಿಯೇ ಬೇರೆ ದಾರಿ ಹಿಡಿಯಿತು. ಫ್ರಾನ್ಸಿನಲ್ಲಿ ಪ್ರಾರಂಭವಾದ ಇದರ ಬಳಕೆ ಕ್ರಮೇಣ ಇಡೀ ಯೂರೋಪನ್ನೇ ಆಕ್ರಮಿಸಿತು.

ಫ್ರಾನ್ಸಿನ ಲೆ ಕಾರ್ಬೂಸರ್, ಪೆರ್ರೆ, ಫಿನ್ಲೆಂಡಿನ ಆಲ್ಟೊ, ಸಾರಿನೆನ್, ಜರ್ಮನಿಯ ಗ್ರೋಪಿಯಸ್, ಮೆಂಡೆಲ್ಸಾನ್, ಹಾಲೆಂಡಿನ ಡುಡಾಕ್, ಬ್ರಿಟನ್ನಿನ ಇ. ಎಂ. ಫ್ರೈ, ಗಿಬರ್ಡ್, ಎಚ್. ಎಂ. ರಾಬರ್ಟ್‌ಸನ್—ಈ ಮೊದಲಾದವರು ಆಧುನಿಕ ಶೈಲಿಯ ಅಂಕುರಾರ್ಪಣ ಮಾಡಿದ ಮುಖ್ಯ ಶಿಲ್ಪಿಗಳೆನ್ನಬಹುದು. ಗ್ರೋಪಿಯಸ್ ಮತ್ತು ಕಾರ್ಬೂಸರರ ಗ್ರಂಥಗಳು ಆಧುನಿಕ ಶೈಲಿಗೆ ವ್ಯಾಖ್ಯಾನ ನೀಡುವುದರ ಮೂಲಕ ಅದಕ್ಕೆ ಜನಪ್ರಿಯತೆಯನ್ನು ಗಳಿಸಿಕೊಟ್ಟಿವೆ.

ಆಧುನಿಕ ಶೈಲಿಯ ಮುಖ್ಯ ಗುಣಲಕ್ಷಣಗಳು ಹೀಗಿವೆ : ನಿರ್ಮಾಣವಾದ ಮನೆ ಉದ್ದೇಶಕ್ಕೆ ಅನುಗುಣವಾಗಿರಬೇಕು. ಭಾರ ಹೊರುವ ಗೋಡೆಗಳಾವುವೂ ಅನಾವಶ್ಯಕ. ಅವುಗಳ ಬದಲು ಭದ್ರ ಕಾಂಕ್ರೀಟಿನ ತೆಳ್ಳನೆಯ ಕಂಬಗಳು, ಅದರದೇ ತೊಲೆಗಳು ಇರಬೇಕು. ಸೂರು ಇಪ್ಪಾರಾಗಿರದೆ ಒಪ್ಪಾರಾಗಿದ್ದು, ಮಟ್ಟಸವಾಗಿರಬೇಕು. ಒಟ್ಟು ಮನೆಗೆ ಭದ್ರ ಕಾಂಕ್ರೀಟಿನ ರಕ್ಷಣೆ ಇರಬೇಕು. ಅಗತ್ಯವಿದ್ದಲ್ಲೆಲ್ಲ ಕ್ಯಾಂಟಿ ಲಿವರುಗಳು ಮತ್ತು ಬಾಲ್ಕನಿಗಳಿದ್ದರೆ ಒಳ್ಳೆಯದು. ಕಿಟಕಿಗಳು ಬಾಗಿಲುಗಳು ಎಷ್ಟು ದೊಡ್ಡವಾಗಿದ್ದರೆ ಅಷ್ಟು ಒಳ್ಳೆಯದು. ಅವುಗಳ ಮೇಲೆ ಯಾವ ಬಗೆಯಾದ ಕಮಾನುಗಳೂ ಬೇಕಿಲ್ಲ. ಅಲಂಕರಣದ ಅಗತ್ಯವೇ ಇಲ್ಲ. ಇಡೀ ಮನೆ ಬೆಂಕಿಯ ಪೊಟ್ಟಣಗಳ ಸಾಲಿನಂತೆ ನೇರವೂ ಸುಲಭವೂ ಆಗಿರಬೇಕು.

ಶಿಷ್ಟ ಅಳತೆಗೆ ತಕ್ಕಂತೆ ಮೊದಲೇ ಸಿದ್ಧವಾದ (ಪ್ರಿಫ್ಯಾಬ್ರಿಕೇಟೆಡ್) ಬಿಡಿ ಭಾಗಗಳನ್ನು ಹೇರಳವಾಗಿ ಬಳಸುವ ವಾಡಿಕೆ ಹೆಚ್ಚಿತು. ಎರಡನೆಯ ಮಹಾಯುದ್ಧವಾದ ಅನಂತರ ವಾಸದ ಮನೆಗಳ ಅಭಾವ ತೋರಿಬಂದಾಗ ಇಂಥ ಹೊಸ ಮಾದರಿಗಳ ಕಡೆ ಶಿಲ್ಪಿಗಳ ಗಮನ ಹೆಚ್ಚಾಗಿ ಹರಿಯಿತು. ಗಂಡ, ಹೆಂಡತಿ ಮತ್ತು ಇಬ್ಬರು ಮಕ್ಕಳಿಗಾಗುವ ಪುಟ್ಟ ಮನೆಯಿಂದ ಹಿಡಿದು ಎಂಟು ಹತ್ತು ಸಾವಿರ ಜನ ಕೆಲಸ ಮಾಡುವ ಗಿರಣಿಯ ವರೆಗಿನ ಎಲ್ಲ ಮನೆಗಳನ್ನು ನವವಿಧಾನದಿಂದ ಕಟ್ಟಲಾಗಿದೆ. ಅಲ್ಲಲ್ಲಿನ ನಿವೇಶನಗಳ ಅನುಕೂಲ, ಅಗತ್ಯ, ಉದ್ದೇಶ, ವಾಯುಗುಣಗಳಿಗೆ ಅನುಸಾರವಾಗಿ ಶಿಲ್ಪವಿಧಾನ ಮಾರ್ಪಡುತ್ತದೆ. ಹಿಂದಿನ ಯಾವ ಅಲಂಕರಣಗಳಿಗೂ ಅವಕಾಶ ಕೊಡದ ನವವಿಧಾನದ ಜೊತೆಗೆ ಹಳೆಯ ಸಂಪ್ರದಾಯಗಳ ಹಿತಮಿತ ಮಿಶ್ರಣದಿಂದ ಹೊಸ ಹೊಸ ಸುಂದರ ವಾಸ್ತು ಶೈಲಿಗಳನ್ನು ರೂಢಿಸಿರುವುದೂ ಉಂಟು. ಓಸಾಕದ ಎಕ್ಸ್‌ಪೊ '70ರ ಶಿಲ್ಪ ತಾಂತ್ರಿಕ ಶಿಲ್ಪವಿಧಾನದಲ್ಲಿ ಹೊಸ ದಾಖಲೆಯನ್ನೇ ಸ್ಥಾಪಿಸಿದೆ. (ನೋಡಿ—ಎಕ್ಸ್‌ಪೊ ಲೇಖನ ಮತ್ತು ಅದಕ್ಕೆ ಸಂಬಂಧಿಸಿದ ವರ್ಣಚಿತ್ರಗಳು). ಪ್ಯಾರಿಸಿನಲ್ಲಿ ಯುನೆಸ್ಕೊ ಕಚೇರಿಗಳಿರುವ ಇಂಗ್ಲಿಷಿನ Y ಅಕ್ಷರದ ಆಕಾರದ ಹೊಸ ಕಟ್ಟಡ, ಒಲಂಪಿಕ್ ಆಟಗಳಿಗಾಗಿ ರೋಮಿನಲ್ಲಿ ಶಿಲ್ಪಿ ನರ್ವಿ 1960ರಲ್ಲಿ ಕಟ್ಟಿದ ಭವನ, ಸ್ಪೇನಿನಲ್ಲಿ ಶಿಲ್ಪಿ ಯುಡಾರ್ಡೊ ಟೊರೋಜ ನಿರ್ಮಿಸಿದ ಕುದುರೆ ಪಂದ್ಯದ ಸ್ಟೇಡಿಯಂ—ಇವು ಇತರ ಕೆಲವು ನಿದರ್ಶನಗಳು. ಈಚೆಗಂತೂ ಸೌಧನಿರ್ಮಾಣಕ್ಕೆ ಗಾಜು ಮತ್ತು ಪ್ಲ್ಯಾಸ್ಟಿಕ್‌ಗಳನ್ನೂ ಬಳಸಲಾಗಿದೆ. ರಸ್ತೆಗಳು. ಉದ್ಯಾನಗಳು. ಸೇತುವೆಗಳು. ವಠಾರಗಳು. ಗಗನಚುಂಬಿ ಸೌಧಗಳು, ಸುರಂಗಗಳು, ನೆಲಮಾಳಿಗೆಗಳು, ಸಿಡಿಲ ಹೊರೆಯನ್ನೂ ಭೂಕಂಪವನ್ನೂ ಎದುರಿಸುವ ಯೋಜನೆಗಳು, ಕಟ್ಟಿದ ಮನೆಯನ್ನು ಒಂದೆಡೆಯಿಂದ ಮತ್ತೊಂದೆಡೆಗೆ ಒಯ್ಯುವ ವ್ಯವಸ್ಥೆಗಳು—ಇಲ್ಲೆಲ್ಲ ಇಪ್ಪತ್ತನೆಯ ಶತ



ಇಪ್ಪತ್ತನೆಯ ಶತಮಾನದ ವಾಸ್ತು, ಶಿಲ್ಪ ವಿಧಾನಕ್ಕೊಂದು ಉಚಿತ ನಿದರ್ಶನ: ಎಗನ್ ಮೊಲರ್–ನೀಸ್ಲೆನ್ ಎಂಬ ಶಿಲ್ಪಿ ಕಿರುದಾರಿಯಂಚಿನ ಆಸನಕ್ಕಾಗಿ ರೂಪಿಸಿದ ಒಂದು ಮಾದರಿ.

ಮಾನದ ತಾಂತ್ರಿಕ ಹಾಗೂ ಕಲಾತ್ಮಕ ಆಧುನಿಕ ವಿಧಾನಗಳನ್ನು ನಾವು ಕಾಣಬಹುದಾಗಿದೆ.

**ಹತ್ತೊಂಬತ್ತನೆಯ ಶತಮಾನದಿಂದೀಚಿನ ಚಿತ್ರಕಲಾ ಸಮೀಕ್ಷೆ :** ಸಮಾಜದಲ್ಲಿ, ಸಾಹಿತ್ಯದಲ್ಲಿ, ವಾಸ್ತುಶಿಲ್ಪದಲ್ಲಿ ಕಾಲಕಾಲಕ್ಕೆ ಆದ ಬದಲಾವಣೆಗಳ



ಮನೆಗಳು : ಘನಾಕೃತಿ ವಿಧಾನ (ಕ್ಯೂಬಿಸಂ) ಬಳಕೆಗೆ ಬಂದ ಮೊದಲ ವರ್ಷಗಳಲ್ಲಿ ಜಾರ್ಜೆಸ್ ಬ್ರಾಕ್ ಎಂಬ ಕಲಾವಿದನಿಂದ ರೂಪಿತವಾದುದು (1908)

ಪ್ರಭಾವ ಚಿತ್ರಕಲೆಯ ಮೇಲೂ ಆಯಿತು. ಫ್ರಾನ್ಸಿನ ಮಹಾಕ್ರಾಂತಿಯ ಕಾಲದ ಒಬ್ಬ ಗಣ್ಯ ಕಲಾಕಾರನೆಂದರೆ ಜ್ಯಾಕ್ವಿಸ್ ಲೂಯಿ ಡೇವಿಡ್. ಈತ ಮೊದಲು ಆಸ್ಥಾನ ಕಲಾವಿದನಾಗಿದ್ದು ಅನಂತರ ಕ್ರಾಂತಿಕಾರರೊಡಗೂಡಿ ಬಂಡಾಯದಲ್ಲಿ ಭಾಗ ವಹಿಸಿದವನು. ಅಭಿಜಾತ ಕಲಾಶೈಲಿಯಲ್ಲಿ ಗ್ರೀಕ್ ಮತ್ತು ರೋಮನ್ ಚರಿತ್ರೆಯ ಅನೇಕ ವರ್ಣಚಿತ್ರಗಳನ್ನು ಈತ ರಚಿಸಿದ್ದಾನೆ. ಈತನ ಕೃತಿಯಾದ ಅಶ್ವಾರೂಢ ನೆಪೋಲಿಯನನ ಚಿತ್ರ ಬಹು ಪ್ರಖ್ಯಾತವಾದುದು. ಡೇವಿಡನ ಶಿಷ್ಯ ಇಂಗ್ರೆಸ್ ಗುರುವಿಗಿಂತ ಒಂದು ಹೆಜ್ಜೆ ಮುಂದೆ ನಡೆದನೆನ್ನಬಹುದು. ಅಭಿಜಾತ ಮಾರ್ಗದ ಕಲಾವಿದರು ಚಿತ್ರದಲ್ಲಿನ ವರ್ಣವಿನ್ಯಾಸಕ್ಕೆ ಅಷ್ಟು ಗಮನವಿತ್ತಿರಲಿಲ್ಲ. ಅವರ ಗಮನವೆಲ್ಲ ಗೆರೆಗಳು ಮತ್ತು ಗಾತ್ರಗಳ ಮೇಲಿತ್ತು. ಆದ್ದರಿಂದ ಅಲ್ಲಿನ ವರ್ಣ ವಿನ್ಯಾಸ ಮಬ್ಬು ಮಬ್ಬಾಗಿ ನಿರ್ಜೀವವಾಗಿತ್ತು. ಇಂಗ್ರೆಸ್ ರೇಖಾಚಿತ್ರವಿನ್ಯಾಸ ದಲ್ಲಿ ಅಸಾಧಾರಣ ನೈಪುಣ್ಯವನ್ನು ತೋರಿಸಿದ್ದಾನೆ. ಡೇವಿಡನ ಮತ್ತೊಬ್ಬ ಶಿಷ್ಯ ಬ್ಯಾರನ್‌ಗ್ರಾಸ್ ನೆಪೋಲಿಯನನ ಸೈನ್ಯದಲ್ಲಿ ಅಧಿಕಾರಿಯಾಗಿದ್ದುಕೊಂಡು ಅಲ್ಲಿನ ಯುದ್ಧ ವಿಷಯಗಳನ್ನು ಚಿತ್ರಿಸಿದ್ದಾನೆ. ಸೈನಿಕರ ಶೌರ್ಯದ ಜೊತೆಗೆ ಅವರ ಅತೀವ ವೇದನೆ, ದುಃಖಗಳನ್ನೂ ಗ್ರಾಸ್ ಹೃದಯ ಕರಗುವಂತೆ ಚಿತ್ರೀಕರಿಸಿದ್ದಾನೆ.

ಅನಂತರ ಡೆಲಕ್ವಾ ಎಂಬ ಫ್ರೆಂಚ್ ಕಲಾವಿದನ ನಾಯಕತ್ವದಲ್ಲಿ ರೊಮ್ಯಾನ್ಟಿಸಿಸ್ಟರ ಹೊಸದೊಂದು ಕಲಾಶೈಲಿ ಆವರಿಸಿತು. ಅಭಿಜಾತ ಶೈಲಿಯನ್ನು ಇವರು ಒಪ್ಪಲಿಲ್ಲ. ಅಲ್ಲದೆ ಅಭಿಜಾತ ವಸ್ತುವನ್ನೂ ಇವರು ಆರಿಸಲಿಲ್ಲ. ತಮ್ಮ ಕಾಲದ ಜನಜೀವನವೇ ಚಿತ್ರದ ವಸ್ತುವಾಗಬೇಕೆಂದು ಇವರು ವಾದಿಸಿದರು. ಅಲ್ಲದೆ ಗೀಟು, ಗೆರೆಗಳಿಗಿಂತ ಬಣ್ಣಕ್ಕೆ ಹೆಚ್ಚಿನ ಪ್ರಾಧಾನ್ಯ ಕೊಡಲಾರಂಭಿಸಿದರು. ಅದರಂತೆ ಡೆಲಕ್ವಾ ತನ್ನ ಚಿತ್ರಗಳಿಗಾಗಿ ಧರ್ಮಯುದ್ಧನಿರತರಾದ ಯೋಧವೀರರು, ಬೈಬಲಿನ ಕಥೆಗಳು, ಆಲ್ಜಿಯರ್ಸಿನ ಜನತೆ, ಗ್ರೀಕರಿಗೂ ತುರ್ಕರಿಗೂ ಅಂದು ನಡೆಯುತ್ತಿದ್ದ ಯುದ್ಧ – ಇಂಥ ವಸ್ತುಗಳನ್ನಾಯ್ದುಕೊಂಡ. ಸಿಂಹದ ಬೇಟೆ ಎಂಬ ಹೆಸರಿನ ಅವನ ಒಂದು ಚಿತ್ರ ಬಹು ಸಹಜವಾಗಿದೆ.



ಮೆರಿಡಿಯನ್ ಎಂಬ ಶೀರ್ಷಿಕೆಯುಳ್ಳ ಒಂದು ವಾಸ್ತುಕೃತಿ. ನಿರ್ಮಾತೃ ಬಾರ್ಬರ ಹೆಪ್‌ವರ್ತ್. ಅಮೂರ್ತ ಕಲಾ ಮಾದರಿಗೊಂದು ನಿದರ್ಶನ



ಪರಿಣಾಮ ವಿಧಾನದ ಅಂಕುರಾರ್ಪಣೆ ಮಾಡಿದ ಕಲಾವಿದ ಮಾನೆಯ ಒಂದು ಕೃತಿ (1863). ಅದರ ಒಂದು ಪಾರ್ಶ್ವವನ್ನು ಮಾತ್ರ ಹಿಗ್ಗಲಿಸಿ ಇಲ್ಲಿ ತೋರಲಾಗಿದೆ.

ಹದಿನೆಂಟನೆಯ ಶತಮಾನದ ಪ್ರಾರಂಭದಲ್ಲಿ ವೆನಿಸಿನಲ್ಲಿ ಟಿಷಿಯನ್, ರೋಮಿನಲ್ಲಿ ಮೈಕೆಲೇಂಜಲೊ, ಸ್ಪೇನಿನಲ್ಲಿ ವೆಲಾಸ್ಕೆ, ಫ್ಲಾಂಡರ್ಸಿನಲ್ಲಿ ರೂಬೆನ್ಸ್, ನೆದರ್ಲೆಂಡ್ಸಿ



ಮಾರಿಸ್ ಡಿ ವ್ಲಾಮಿನ್ಕ್ಸ್‌ನ (1905) ಒಂದು ವರ್ಣಚಿತ್ರ. ಫಾವಿಸಂ ಪಂಥದ ಕಲಾ ವಿಧಾನಕ್ಕೊಂದು ನಿದರ್ಶನ. ಛಾಯೆಯಿಲ್ಲದ ಘನ ನಿರ್ಮಾಣವೂ ಪಡಿಯಚ್ಚಿರದ ರೂಪರಚನೆಯೂ ಈ ಪಂಥದವರ ಚಿತ್ರ ವಿಧಾನ.

ನಲ್ಲಿ ರೆಂಬ್ರಾನ್ಟ್, ಜರ್ಮನಿಯಲ್ಲಿ ಡ್ಯೂರರ್, ಫ್ರಾನ್ಸಿನಲ್ಲಿ ಪೌಸಿನ್—ಇವರು ಪ್ರಸಿದ್ಧರಾದಂತೆ ಇಂಗ್ಲೆಂಡಿನಲ್ಲಿ ವಿಲಿಯಂ ಹೋಗಾರ್ತ್ ತುಂಬ ಖ್ಯಾತನಾದ. ಅನಂತರ ಜೋಷುವ ರೇನಾಲ್ಡ್ಸ್ ಮತ್ತು ಥಾಮಸ್ ಗೇನ್ಸ್‌ಬರೊ ಎಂಬಿಬ್ಬರು ಕಲಾವಿದರು ಮನುಷ್ಯನ ಭಾವಚಿತ್ರಣದಲ್ಲಿ ಅಂದರೆ ತಸ್ವೀರು ಚಿತ್ರಣದಲ್ಲಿ ಹೆಸರು ಗಳಿಸಿದರು. ದಿ ಸ್ಟ್ರಾಬೆರಿ ಗರ್ಲ್, ಮಾಸ್ಟರ್ ಹೇರ್, ದಿ ಏಜ್ ಆಫ್ ಇನ್ನೊಸೆನ್ಸ್—ಇವು ರೇನಾಲ್ಡ್ಸನ ಖ್ಯಾತ ಕೃತಿಗಳು. ಲೇಡಿ ವಾಕಿಂಗ್ ಇನ್ ಸೇಂಟ್ ಜೇಮ್ಸ್ ಪಾರ್ಕ್, ಮಿಸ್ಟೆಸ್ ಸಿಡಾನ್ಸ್, ದಿ ಬ್ಲೂ ಬಾಯ್—ಇವು ಗೇನ್ಸ್‌ಬರೋನ ಕೆಲವು ಖ್ಯಾತ ಚಿತ್ರಗಳು. ಬೆಂಜಮಿನ್ ವೆಸ್ಟ್ ಮತ್ತು ಜಾನ್ ಸಿಂಗಲ್ಟನ್ ಕಾಪ್ಲೆ ಎಂಬಿಬ್ಬರು ಅಮೆರಿಕನರು ವರ್ಣಚಿತ್ರ ವೀಕ್ಷಣಕ್ಕೆಂದು ಯೂರೋಪಿಗೆ ಬಂದವರು ಪ್ರವಾಸಾನಂತರ ಇಂಗ್ಲೆಂಡಿನಲ್ಲಿ ನೆಲೆಸಿ ಅದ್ಭುತ ಚಿತ್ರಗಳನ್ನು ರಚಿಸಿದರು. ಅಮೆರಿಕದಲ್ಲಿ ಸ್ವಾತಂತ್ರ್ಯಯುದ್ಧವಾಗುತ್ತಿದ್ದ ಸಮಯದಲ್ಲಿ ಇಂಗ್ಲಿಷ್ ಕವಿಯೊಬ್ಬ ಚಿತ್ರಗಾರನಾಗಿಯೂ ಪ್ರಸಿದ್ಧಿಗೆ ಬಂದ. ಅವನೇ ವಿಲಿಯಂ ಬ್ಲೇಕ್. ಆತ ಪ್ರಧಾನವಾಗಿ ಕೆತ್ತನೆಯ ಕೆಲಸದಲ್ಲಿ ನಿಪುಣ. ಮರದ ಫಲಕಗಳ ಮೇಲೆ ಚಿತ್ರಗಳನ್ನು ಕೊರೆದು ಅಚ್ಚು ತಯಾರಿಸಿ ಅವರಿಂದ ಮುದ್ರಣ ಮಾಡುವುದು ಅವನ ಹವ್ಯಾಸ. ಅದಕ್ಕಾಗಿ ಆತ ಮೊದಲು ಬಣ್ಣಗಳಿಂದ ತಯಾರಿಸುತ್ತಿದ್ದ ಆಲೇಖ್ಯ ಚಿತ್ರಗಳೂ ಅವನ ಕಲಾವಂತಿಕೆಗೆ ಸಾಕ್ಷಿಗಳಾಗಿವೆ. ಮುಂದೆ ಬಂದ ಜಾನ್ ಕಾನ್‌ಸ್ಟಬಲ್ ಚಿತ್ರಗಳಿಗೆ ನೈಜ ವರ್ಣಗಳನ್ನು ಬಳಸಿ ಅವುಗಳ ಸಹಜತೆಯನ್ನು ಹೆಚ್ಚಿಸಿದನಲ್ಲದೆ ಗುಪ್ಪೆಗುಪ್ಪೆಯಾಗಿ ಬಣ್ಣಗಳನ್ನು ಬಳಸಿ ಚಿತ್ರಗಳ ಕಾಂತಿಯನ್ನೂ ಇಮ್ಮಡಿಸಿದ. ಹಿಂದಿನ ಕಲಾವಿದರೆಲ್ಲ ಗಿಡಮರಗಳಿಗೆ ಕೇವಲ ಕಂದುಬಣ್ಣವನ್ನು ಉಪಯೋಗಿಸುತ್ತಿದ್ದರು. ಕಾನ್‌ಸ್ಟಬಲ್ ಆನರೋ ಹಸಿರು, ಕಪ್ಪು ಬಣ್ಣಗಳ ಛಾಯೆಗಳನ್ನು ಬಳಸಿ ಅವು ಸಹಜವಾಗಿ ತೋರುವಂತೆ ಮಾಡಿದ. ಸೂರ್ಯೋದಯ ಸೂರ್ಯಾಸ್ತಗಳ ಸಮುದ್ರದ ಸೊಬಗು, ಕಾಂತಿ ಮತ್ತು ಗಾಂಭೀರ್ಯಗಳನ್ನು ವರ್ಣಗಳಲ್ಲಿ ಉಜ್ಜ್ವಲವಾಗಿ ಸೆರೆಹಿಡಿದಿರುವ ಕಲಾವಿದನೆಂದರೆ ಜೋಸೆಫ್ ಮಲ್ಲಾರ್ಡ್ ವಿಲಿಯಂ ಟರ್ನರ್. ಪೆಟ್‌ವರ್ತ್ ಹೌಸಿನಿಂದ ಕಾಣುವ ಸರೋವರ ಮತ್ತು ವಿನಿಸಿನ ಗ್ರ್ಯಾಂಡ್ ಕೆನಾಲ್—ಎಂಬೆರಡು ಚಿತ್ರಗಳು ಟರ್ನರನ ಪ್ರಸಿದ್ಧ ಕೃತಿಗಳಾಗಿವೆ.

ಫ್ರಾನ್ಸಿನ ಬಾರ್ಬಿಜಾನ್ ಪಂಥದ ಪ್ರಮುಖ ಶ್ರದ್ಧಾಳುಗಳೆಂದರೆ ಥಿಯೊಡರ್ ರೂಸೊ, ಕೇರೊ, ಮಿಲೆ. ಇವರು ಬಾರ್ಬಿಜಾನ್ ಹಳ್ಳಿಯ ಸುತ್ತಣ ಕಾಡುಗಳ ಸಹಜರಮ್ಯತೆಯನ್ನು ಚಿತ್ರಿಸುವಲ್ಲಿ ಸಹಜತೆಯನ್ನೂ ಪರಿಣಾಮ ವಿಧಾನವನ್ನೂ (ಇಂಪ್ರೆಷನಿಸಂ) ಬಳಸಿ ಮುಖ್ಯರೆನಿಸಿದ್ದಾರೆ.

ಇಲ್ಲಿಂದ ಮುಂದೆ ಆಧುನಿಕ ಕಲೆ ಬಹು ವಿಸ್ತಾರವಾಗಿ, ಬಹು ಸಂಕೀರ್ಣವಾಗಿ ಬೆಳೆದು ಬಂದಿದೆ. ಅದು ಸೃಷ್ಟಿಸಿರುವ ಕೆಲವು ಪ್ರಸ್ಥಾನಗಳ ಮೂಲಕ ಕೇವಲ ಸಂಕ್ಷೇಪವಾಗಿ ಸ್ಥೂಲವಾಗಿ ಅದರ ಚರಿತ್ರೆಯನ್ನು ಇಲ್ಲಿ ಗಮನಿಸಲಾಗಿದೆ.

ಸಾಮಾನ್ಯವಾಗಿ ಚಿತ್ರಕಲೆಯಲ್ಲಿ ಕಣ್ಣಿಗೆ ಕಂಡ ಮೂರ್ತರೂಪಗಳನ್ನು ಹಿಡಿದಿಡುವುದೇ ಮುಖ್ಯವಾದರೂ ಒಂದು ಬಗೆಯ ನವೀನ ಚಿತ್ರಕಲೆ ತದ್ವಿರುದ್ಧವಾದ ದಾರಿಯನ್ನು ಹಿಡಿದಿದೆ. ಅದೇ ಅಮೂರ್ತ ಚಿತ್ರವಿಧಾನ (ಅಬ್‌ಸ್ಟ್ರಾಕ್ಟ್ ಆರ್ಟ್). ಸಾಮಾನ್ಯವಾಗಿ ಸಹಜ ನಿರೂಪಣೆಯದಾದರೂ ಇಲ್ಲಿ ಪದಾರ್ಥಚಿತ್ರಣಕ್ಕಿಂತ ಭಾವಚಿತ್ರಣ ಮುಖ್ಯ. ಫಾವಿಸಂ, ಕ್ಯೂಬಿಸಂ (ಘನಾಕೃತಿ ಕಲಾವಿಧಾನ), ಎಕ್ಸ್‌ಪ್ರೆಷನಿಸಂ (ಅಭಿವ್ಯಕ್ತಿ ಪಂಥ) ಇತ್ಯಾದಿ ವಿಧಾನಗಳ ತಳಹದಿಯಾಗಿ ಅಮೂರ್ತ ಚಿತ್ರವಿಧಾನ ಇದೆ ಎನ್ನಬಹುದು. ಇದರ ಮೊದಲಿಗ ಕಾಂಡಿಸ್ಕಿ (1910). ಈ ವಿಧಾನದಲ್ಲಿ ಗೀರುಗಳು, ಮೇಲುಮೈ, ಆಕೃತಿಗಳು, ವರ್ಣಗಳು ಎಲ್ಲವೂ ಮೂಲವಸ್ತುವಿಗೆ ಏನೂ ಸಂಬಂಧವಿಲ್ಲದಂತೆ ಮೂಡಿಬಂದಿರುತ್ತವೆ. ಜ್ಯಾಕ್‌ಸನ್, ಪೊಲಾಕ್, ಕೂನಿಂಗ್, ಹ್ಯಾನ್ಸ್ ಹಾಫ್‌ಮನ್—ಇವರು ಈ ಪಂಥದ ಪ್ರಮುಖರು. ಅಮೂರ್ತ ಚಿತ್ರವಿಧಾನದ ಒಂದು ಅಂಗ (ಕನ್‌ಸ್ಟ್ರಕ್ಟಿವಿಸಂ) ರಷ್ಯದಲ್ಲಿ ಬೆಳೆದು ಬಂತು. ನಾಮ್‌ಗಾಬೊ,



ಎನ್ರಿಕೊ ಪ್ರ್ಯಾಂಪೋಲಿನಿ ಎಂಬ ಕಲಾವಿದ ಅಭಿನಯಕ್ಕಾಗಿ ಸಿದ್ಧಪಡಿಸಿದ ರಂಗಮಂದಿರದ ಚಿತ್ರವಿದು. ಸ್ವೇಚ್ಛಾ ಸಂಕೇತ ವಿಧಾನವನ್ನು ಬಳಕೆಗೆ ತಂದು, 1914ರ ಮಹಾಯುದ್ಧ ಕಾಲದಲ್ಲಿ ಆ ಪಂಥ ಇಳಿಗತಿಗೆ ಬಂದಾಗಲೂ ಅದನ್ನು ವಿವಿಧ ರೀತಿಯಲ್ಲಿ ಪುನರುಜ್ಜೀವನಗೊಳಿಸಿದವನೀತ.

ಆಂತೊನಿ ಪೆವ್ಸ್ನರ್, ಐ ಲಿಸಿಟ್ಸ್ಕಿ—ಇವರು ಈ ಪಂಥದ ಪ್ರಮುಖರು. ಕ್ಯೂಬಿಸಂ (ಘನಾಕೃತಿ ಕಲಾವಿಧಾನ) ಕೂಡ ಅಮೂರ್ತ ಚಿತ್ರವಿಧಾನದ ಪೂರ್ವ ಭಾಗವೇ ಆಗಿದೆ. ಸಹಜ ಆಕೃತಿಗಳಿಗಿಂತ ಜ್ಯಾಮಿತೀಯ ಆಕೃತಿಗಳಿಗೇ ಇಲ್ಲಿ ಪ್ರಾಮುಖ್ಯ. ಈ ಪಂಥದಲ್ಲಿ ಬಾರ್ಕ್, ಸೀಸಾನ್, ಗ್ರಿಸ್ ಮತ್ತು ಲೇಗರ್ ಪ್ರಮುಖರು.

ಎಲ್ಲ ಹಳೆಯ ವಿಧಾನಗಳನ್ನೂ ಸಂಪ್ರದಾಯಗಳನ್ನೂ ಪ್ರತಿಭಟಿಸಿ ಹೊಸ ಜಾಡನ್ನು ಅರಸಹೊರಟ (1916–21) ಐರೋಪ್ಯ ಕಲಾವಿದರ ನೂತನ ಶೈಲಿಯನ್ನು ದಾದಾಯಿಸಂ ಎನ್ನುತ್ತಾರೆ. ಇದರ ಪ್ರಭಾವದಿಂದಲೇ ಸರ್ರಿಯಲಿಸಂ (ಅತಿವಾಸ್ತವಿಕ ವಿಧಾನ) ಮೊದಲಾದ ವಿಶೇಷ ವಿಧಾನಗಳು ಆವಿರ್ಭವಿಸಿದುವು. ಹಾಲೆಂಡಿನಲ್ಲಿ 1917–28ರ ಸುಮಾರಿನಲ್ಲಿ ಚೌಕಗಳನ್ನು, ಮೂಲವರ್ಣಗಳನ್ನು ಪ್ರಧಾನವಾಗುಳ್ಳ ಡೇ ಸ್ಟಿಲ್ ಎಂಬ ಶೈಲಿ ಬಳಕೆಗೆ ಬಂತು. ವಾನ್ ಡೋಸ್‌ಬರ್ಗ್, ಮಾಂಡ್ರಿಯನ್ ಮೊದಲಾದವರು ಈ ಹೊಸ ಮಾದರಿಯ ಅಧ್ವರ್ಯುಗಳೆಂದು ಹೆಸರಾಗಿದ್ದಾರೆ.

ಯಾವ ಕಲೆಯಲ್ಲಿ ಪ್ರಕೃತಿಗಿಂತ ಕಲೆಗಾರನ ಭಾವೋದ್ವೇಗಗಳಿಗೆ ಹೆಚ್ಚಿನ ಸ್ಥಾನವಿರುತ್ತದೋ ಅಂಥ ಕೃತಿಗಳನ್ನು ಅಭಿವ್ಯಕ್ತಿ ಪಂಥದವೆನ್ನುತ್ತಾರೆ (ಎಕ್ಸ್‌ಪ್ರೆಷನಿಸಂ). ಪರಿಣಾಮವಿಧಾನಾನಂತರದ ಚಿತ್ರಕಲೆ ಈ ವಿಭಾಗಕ್ಕೆ ಸೇರುತ್ತದೆ. ಇದರ ಒಂದು ರೂಪವೇ ಫ್ರಾನ್ಸಿನ ಫಾವಿಸಂ. ಸಾಹಿತ್ಯದಲ್ಲೂ ಅಭಿವ್ಯಕ್ತಿ ಪಂಥದ ಲೇಖಕರಿದ್ದಾರೆ. ಸ್ವೇಚ್ಛಾ ಸಂಕೇತ ವಿಧಾನ (ಫ್ಯೂಚರಿಸಂ) ಇಟಲಿಯಲ್ಲಿ ಮೂಡಿತೆನ್ನಬಹುದು. ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಯಂತ್ರಯುಗದ ಕಾರ್ಯವೈಭವವನ್ನು ಕಲೆಯಲ್ಲಿ ಕೊಂಡಾಡಲು ರೂಪುಗೊಂಡ ಈ ವಿಧಾನವನ್ನು ಪ್ರಾರಂಭಿಸಿದವ ಕವಿ ಮ್ಯಾರಿನೆಟ್ಟಿ.

ಪರಿಣಾಮ ವಿಧಾನವೂ (ಇಂಪ್ರೆಷನಿಸಂ) ಫ್ರಾನ್ಸ್ ದೇಶದ್ದು. ಪ್ರಕೃತಿಯಲ್ಲಿ ನೇರ ಕಣ್ಣಿಗೆ ಕಂಡದ್ದನ್ನು ಕಂಡಂತೆ ಚಿತ್ರಿಸುವುದೇ ಈ ವಿಧಾನದ ಗುರಿ. ಒಂದೇ ಸಮುದ್ರ, ಒಂದೇ ಸೂರ್ಯೋದಯ ದಿನದಿನವೂ ಹೊಸದಾಗಿ ಕಾಣಬಹುದು. ಕಾಣ್ಕೆ ವ್ಯಕ್ತಿ ವ್ಯಕ್ತಿಗೂ ಭಿನ್ನವಾಗಿರಬಹುದು. ಬೇರೆ ಬೇರೆ ಜಾಗದಿಂದ ಅದೇ ವಿಷಯ ಬೇರೆ ಬೇರೆಯಾಗಿ ಭಾಸವಾಗಬಹುದು. ಇದನ್ನು ಹಿಡಿಯುವುದೇ ಪರಿಣಾಮ ವಿಧಾನದ ಉದ್ದೇಶ. ಈ ಪಂಥದವರಲ್ಲಿ ಮಾನೆ, ಸಿಸ್ಲೆ, ಪಿಸ್ಸಾರೋ—ಇವರು ಮುಖ್ಯರು. ಉಳಿದವರೆಂದರೆ ರೆನಾರ್, ಡೆಗಾಸ್.

ಮುಖ್ಯವಾದ ಕೆಲವು ಪಂಥಗಳ ಬಗ್ಗೆ ಒಂದೆರಡು ಮಾತುಗಳನ್ನು ಮಾತ್ರ ಇಲ್ಲಿ ಹೇಳಲಾಗಿದೆ. ವಿವರಗಳಿಗೆ ಆಯಾ ಪಂಥ ಮತ್ತು ಆಯಾ ದೇಶಗಳ ಕಲಾ ವಿಭಾಗಗಳನ್ನು ನೋಡಬಹುದು. (ಬಿ.ಎಸ್.)

**ಐರೋಪ್ಯ ಕಲ್ಲಿದ್ದಲು ಮತ್ತು ಉಕ್ಕು ಸಮುದಾಯ:** ಫ್ರಾನ್ಸ್, ಪಶ್ಚಿಮ ಜರ್ಮನಿ, ಇಟಲಿ, ಬೆಲ್ಜಿಯಂ, ನೆದರ್ಲೆಂಡ್ಸ್ ಮತ್ತು ಲಕ್ಸೆಂಬರ್ಗ್‌ಗಳ ಕಲ್ಲಿದ್ದಲು ಮತ್ತು ಉಕ್ಕಿನ ಮೂಲಸಾಧನಗಳನ್ನು ಒಗ್ಗೂಡಿಸಿಕೊಳ್ಳಲು 1952ರಲ್ಲಿ ಆ ರಾಷ್ಟ್ರಗಳ ಸರ್ಕಾರಗಳಿಂದ ಸ್ಥಾಪಿತವಾದ ಸಂಸ್ಥೆ (ಯೂರೋಪಿಯನ್ ಕೋಲ್ ಅಂಡ್ ಸ್ಟೀಲ್ ಕಮ್ಯೂನಿಟಿ). ಎರಡನೆಯ ಮಹಾಯುದ್ಧವಾದ ಮೇಲೆ ಯೂರೋಪಿನಲ್ಲಿ ಒಂದು ಹೊಸ ವಾತಾವರಣ ಉದ್ಭವಿಸಿತು. ಮಹಾಯುದ್ಧದ ಪರಿಣಾಮದಿಂದ ಅನೇಕ ಐರೋಪ್ಯ ರಾಷ್ಟ್ರಗಳು ತಲ್ಲಣಗೊಂಡುವು. ಆರ್ಥಿಕವಾಗಿ ಅನೇಕ ರಾಷ್ಟ್ರಗಳು ಅಗಾಧ ನಷ್ಟಕ್ಕೆ ಒಳಗಾದುವು. ಇನ್ನು ಮುಂದೆ ಯಾದರೂ ಇಂಥ ಅನಾಹುತವನ್ನು ತಪ್ಪಿಸಬೇಕೆಂದು ಇವು ನಿರ್ಧರಿಸಿ ಇದಕ್ಕಾಗಿ ಒಕ್ಕೂಟಗಳನ್ನೂ ಸಂಘಗಳನ್ನೂ ರಚಿಸಿಕೊಳ್ಳಲಾರಂಭಿಸಿದುವು. ರಾಜಕೀಯವಾಗಿ ಪಶ್ಚಿಮ ಯೂರೋಪಿನ ಕೆಲವು ರಾಷ್ಟ್ರಗಳು ಒಂದಾಗಿ ಒಂದು ಒಕ್ಕೂಟ ರಚಿಸಿಕೊಳ್ಳಬೇಕೆಂಬ ಆಶೆ ವ್ಯಕ್ತವಾಯಿತು. ಆದರೆ ಅನೇಕ ಅಡಚಣೆಗಳ ಪರಿಣಾಮವಾಗಿ ಯೂರೋಪಿನ ರಾಜಕೀಯ ಐಕ್ಯ ಸಾಧಿಸಲಿಲ್ಲ. ಆರ್ಥಿಕ ವಿಷಯಗಳಲ್ಲಾದರೂ ಪರಸ್ಪರ ಸಹಕಾರ ಏರ್ಪಡಿಸಿಕೊಳ್ಳಬೇಕೆಂಬ ಆಶಯದಿಂದ ಪಶ್ಚಿಮ ಯೂರೋಪಿನ ರಾಷ್ಟ್ರಗಳು ವಿವಿಧ ರೀತಿಯ ಆರ್ಥಿಕ ಒಕ್ಕೂಟಗಳನ್ನು ರಚಿಸಿಕೊಂಡುವು. ಅಂಥವುಗಳ ಪೈಕಿ ಯೂರೋಪಿನ ಕಲ್ಲಿದ್ದಲು ಮತ್ತು ಉಕ್ಕಿನ ಸಮುದಾಯ ಒಂದು.

ಅನೇಕ ವರ್ಷಗಳಿಂದಲೂ ಫ್ರಾನ್ಸ್ ಮತ್ತು ಜರ್ಮನಿಗಳು ಉಕ್ಕು ಮತ್ತು ಕಲ್ಲಿದ್ದಲಿನ ಉತ್ಪಾದನೆ ಮತ್ತು ವ್ಯಾಪಾರದ ವಿಷಯದಲ್ಲಿ ಪೈಪೋಟಿ ನಡೆಸುತ್ತಿದ್ದುವು. ಉಕ್ಕು ಮತ್ತು ಕಲ್ಲಿದ್ದಲಿನ ಉತ್ಪಾದನೆಯ ಮೇಲೆ ತಮ್ಮ ಹತೋಟಿ ಹೆಚ್ಚಿಸಿಕೊಳ್ಳಲು ಯತ್ನಿಸಿದಾಗ ಈ ಎರಡು ರಾಷ್ಟ್ರಗಳ ಮಧ್ಯೆ ಕೆಲವು ಬಾರಿ ಘರ್ಷಣೆಗಳು ಉದ್ಭವಿಸಿದ್ದುವು. ಆದ್ದರಿಂದ ಇನ್ನು ಮುಂದೆ ಇಂಥ ಪೈಪೋಟಿಯ ಪರಿಸ್ಥಿತಿ ತಪ್ಪಿಸಿ ಮಧುರ ಬಾಂಧವ್ಯ ಏರ್ಪಡಿಸಲು ಫ್ರಾನ್ಸ್ ಎರಡನೆಯ ಮಹಾಯುದ್ಧವಾದ ಮೇಲೆ ಕಾರ್ಯಕ್ರಮ ಕೈಗೊಂಡಿತು. ಜರ್ಮನಿ ಮತ್ತು ಫ್ರಾನ್ಸ್‌ಗಳ ಮಧ್ಯೆ ಇದ್ದ ದ್ವೇಷವನ್ನು ಕಡಿಮೆ ಮಾಡಿ ಅವೆರಡು ರಾಷ್ಟ್ರಗಳ ಮಧ್ಯೆ ಸಹಕಾರ ಏರ್ಪಡಿಸಿದರೆ ಮಾತ್ರ ಪಶ್ಚಿಮ ಯೂರೋಪಿಯನ್ ರಾಷ್ಟ್ರಗಳ ಸರ್ವತೋಮುಖ ಪ್ರಗತಿ ಸಾಧ್ಯ ವೆಂಬುದನ್ನು ಫ್ರಾನ್ಸಿನ ಪ್ರಮುಖ ಕೈಗಾರಿಕೋದ್ಯಮಿ ಮತ್ತು ಅರ್ಥಶಾಸ್ತ್ರಜ್ಞ ಜೀನ್ ಮಾನೆ ಗ್ರಹಿಸಿದ್ದ. ಜರ್ಮನಿ ಮತ್ತು ಫ್ರಾನ್ಸ್‌ಗಳ ಆರ್ಥಿಕ ತಳಹದಿ ಎನಿಸಿರುವ ಉಕ್ಕು ಮತ್ತು ಕಲ್ಲಿದ್ದಲಿನ ಉತ್ಪಾದನೆ ಮತ್ತು ವಿತರಣೆಯ ವಿಷಯದಲ್ಲಿ ಈ ಎರಡು ರಾಷ್ಟ್ರಗಳ ಮಧ್ಯೆ ಮೊದಲು ಸಹಕಾರ ಏರ್ಪಡಿಸಿದರೆ ಮುಂದೆ ಉಳಿದ ವಿಷಯಗಳಲ್ಲೂ ಈ ಎರಡು ರಾಷ್ಟ್ರಗಳ ಮಧ್ಯೆ ಸಹಕಾರ ತಾನಾಗಿಯೇ ಉದ್ಭವಿಸುತ್ತದೆ ಎಂಬುದು ಇವನ ಅಭಿಪ್ರಾಯ. ತನ್ನ ಅಭಿಪ್ರಾಯವನ್ನು ಕಾರ್ಯಗತಮಾಡಲು ಒಂದು ಯೋಜನೆಯನ್ನು ತಯಾರಿಸಿ ಫ್ರಾನ್ಸಿನ ವಿದೇಶಾಂಗ ಮಂತ್ರಿ ರಾಬರ್ಟ್ ಷೂಮನನ ಮುಂದೆ 1950ರಲ್ಲಿ ಇಟ್ಟರು. ಷೂಮನ್ ಈ ಯೋಜನೆಯನ್ನು ಮೆಚ್ಚಿ ಕಾರ್ಯಗತಗೊಳಿಸಲು ಮನಸ್ಸು ಮಾಡಿದ.

ಕೇವಲ ಜರ್ಮನಿ ಮತ್ತು ಫ್ರಾನ್ಸ್‌ಗಳ ನಡುವೆ ಒಡಂಬಡಿಕೆ ಏರ್ಪಡಿಸಿಕೊಳ್ಳುವುದರ ಬದಲು, ಪಶ್ಚಿಮ ಯೂರೋಪಿನಲ್ಲಿರುವ ಇನ್ನೂ ಕೆಲವು ರಾಷ್ಟ್ರಗಳೊಡನೆಯೂ ಒಡಂಬಡಿಕೆ ಏರ್ಪಡಿಸಿಕೊಳ್ಳುವುದು ಒಳ್ಳೆಯದು ಎಂಬುದನ್ನು ಮನಗಂಡು ಷೂಮನ್ ಇತರ ರಾಷ್ಟ್ರಗಳೊಡನೆ ಮಾತುಕತೆ ಪ್ರಾರಂಭಿಸಿದ. ಅದರ ಪರಿಣಾಮವಾಗಿ ಒಟ್ಟು ಆರು ಪಶ್ಚಿಮ ಐರೋಪ್ಯ ರಾಷ್ಟ್ರಗಳು ಷೂಮನ್ ಸಲಹೆಗಳಿಗೆ ಬೆಂಬಲವಿತ್ತುವು. 1951ರ ಏಪ್ರಿಲ್ ತಿಂಗಳಲ್ಲಿ ಷೂಮನನ ಸಲಹೆಯ ಪ್ರಕಾರ ಐರೋಪ್ಯ ಕಲ್ಲಿದ್ದಲು ಮತ್ತು ಉಕ್ಕು ಸಮುದಾಯ ಸ್ಥಾಪಿಸಲು ಬೆಲ್ಜಿಯಂ, ಪಶ್ಚಿಮ ಜರ್ಮನಿ, ಫ್ರಾನ್ಸ್, ಇಟಲಿ, ಲಕ್ಸೆಂಬರ್ಗ್ ಮತ್ತು ನೆದರ್ಲೆಂಡ್ಸ್ ದೇಶಗಳು ಒಂದು ಒಪ್ಪಂದಕ್ಕೆ ಸಹಿಹಾಕಿದುವು. ಈ ಒಪ್ಪಂದದ ಪ್ರಕಾರ 1952ರ ಜುಲೈಯಲ್ಲಿ ಯೂರೋಪಿನ ಕಲ್ಲಿದ್ದಲು ಮತ್ತು ಉಕ್ಕಿನ ಸಮುದಾಯ ಅಸ್ತಿತ್ವಕ್ಕೆ ಬಂತು. ಮೇಲ್ಕಂಡ ಏರ್ಪಾಡು ರಾಬರ್ಟ್ ಷೂಮನನ ಯತ್ನದ ಫಲವಾಗಿ ಕಾರ್ಯಗತವಾದ್ದರಿಂದ ಇದನ್ನು ಷೂಮನ್ ಯೋಜನೆಯೆಂದು ಕರೆಯಲಾಗಿದೆ.

ಐರೋಪ್ಯ ಕಲ್ಲಿದ್ದಲು ಮತ್ತು ಉಕ್ಕಿನ ಸಮುದಾಯ ಸ್ಥಾಪಿತವಾದ ಮೇಲೆ ಇದಕ್ಕೆ ಸೇರಿದ ದೇಶಗಳಿಗೆಲ್ಲ ಅನ್ವಯಿಸುವಂತೆ ಒಂದು ಸಾಮಾನ್ಯ ಮಾರುಕಟ್ಟೆ ಪದ್ಧತಿಯನ್ನು 1953ರಲ್ಲಿ ಜಾರಿಗೆ ತರಲಾಯಿತು. ಅದರ ಮುಖ್ಯ ಲಕ್ಷಣಗಳು ಹೀಗಿವೆ: 1 ಈ ಮಾರುಕಟ್ಟೆಗೆ ಸೇರಿದ ಆರು ದೇಶಗಳಲ್ಲಿ ಎಲ್ಲಿಯಾದರೂ ಕಲ್ಲಿದ್ದಲು ಮತ್ತು ಉಕ್ಕು ಮಾರಬಹುದು. 2 ಯಾವ ದೇಶವೂ ಮತ್ತೊಂದು ದೇಶದಿಂದ ಬರುವ ಕಲ್ಲಿದ್ದಲು ಮತ್ತು ಉಕ್ಕಿನ ಮೇಲೆ ಆಮದು ಸುಂಕ ವಿಧಿಸುವಂತಿಲ್ಲ. 3 ಅದೇ ರೀತಿ ದೇಶಗಳು ರಫ್ತು ಸುಂಕ ಹಾಕುವಂತಿಲ್ಲ. 4 ತಮ್ಮ ದೇಶಕ್ಕೆ ಆಮದಾಗುವ ಅಥವಾ ತಮ್ಮಿಂದ ರಫ್ತಾಗುವ ಒಟ್ಟು ಉಕ್ಕು ಮತ್ತು ಕಲ್ಲಿದ್ದಲಿನ ಮೇಲೆ ಯಾವ ರೀತಿಯ ಪ್ರತಿಬಂಧಕವನ್ನೂ ವಿಧಿಸುವ ಹಾಗಿಲ್ಲ. 5 ಯಾವ ಪ್ರಮಾಣದಲ್ಲಿ ಬೇಕಾದರೂ ಪ್ರತಿಯೊಂದು ದೇಶವೂ ಉಕ್ಕು ಮತ್ತು ಕಲ್ಲಿದ್ದಲಿನ ಉತ್ಪಾದನೆ ಮತ್ತು ವಿತರಣೆ ಕೈಗೊಳ್ಳಬಹುದು.

ಹೀಗೆ ಸುಮಾರು 17 ಕೋಟಿ ಪ್ರಜಾಸಂಖ್ಯೆ ಇರುವ ಪಶ್ಚಿಮ ಯೂರೋಪಿನ ರಾಷ್ಟ್ರಗಳ ಮಧ್ಯೆ ನಿರ್ಬಂಧರಹಿತ ಮಾರುಕಟ್ಟೆ ಜಾರಿಗೆ ಬಂತು.

ಕಲ್ಲಿದ್ದಲು ಮತ್ತು ಉಕ್ಕು ಸಮುದಾಯದ ಆಡಳಿತವ್ಯವಸ್ಥೆಯನ್ನು ನೋಡಿಕೊಳ್ಳಲು ಒಬ್ಬರು ಅಧ್ಯಕ್ಷರು, ಇಬ್ಬರು ಉಪಾಧ್ಯಕ್ಷರು ಮತ್ತು ಏಳು ಜನ ಸದಸ್ಯರುಗಳುಳ್ಳ ಒಂದು ಉನ್ನತ ಮಂಡಲಿ ಇದೆ. ಈ ಉನ್ನತಮಂಡಲಿ 142 ಪ್ರತಿನಿಧಿಗಳನ್ನುಳ್ಳ ಪ್ರತಿನಿಧಿಸಭೆಯ ಹತೋಟಿಗೆ ಒಳಪಟ್ಟಿರುತ್ತದೆ. ಆರು ದೇಶಗಳ ಪಾರ್ಲಿಮೆಂಟುಗಳು ಒಂದು ನಿರ್ದಿಷ್ಟ ಪ್ರಮಾಣದಲ್ಲಿ ಪ್ರತಿನಿಧಿಗಳನ್ನು ಚುನಾಯಿಸಿ ಪ್ರತಿನಿಧಿಸಭೆಗೆ ಕಳುಹಿಸುತ್ತವೆ. ಮೂರನೆಯ ಎರಡು ಬಹುಮತ ಪಡೆಯುವ ಆಧಾರದ ಮೇಲೆ ಪ್ರತಿನಿಧಿಸಭೆ ಯಾವ ಸಂದರ್ಭದಲ್ಲಿ ಬೇಕಾದರೂ ಉನ್ನತ ಮಂಡಲಿಯ ಸದಸ್ಯರನ್ನು ಅಧಿಕಾರದಿಂದ ಕಿತ್ತೊಗೆಯಬಹುದು. ಇದಲ್ಲದೆ ಪ್ರತಿಯೊಂದು ರಾಷ್ಟ್ರವೂ ತನ್ನ ಒಬ್ಬ ಪ್ರತಿನಿಧಿಯನ್ನು ಸಮಾಲೋಚನಾ ಮಂಡಲಿಗೆ ಕಳುಹಿಸುತ್ತದೆ. ಈ ಮಂಡಲಿ ಪ್ರತಿ ದೇಶದ ಆರ್ಥಿಕ ನೀತಿಗಳ ವಿಷಯದಲ್ಲಿ ಉನ್ನತಮಂಡಲಿ ಯಾವ ರೀತಿ ವರ್ತಿಸಬೇಕು ಎಂಬುದರ ವಿಷಯದಲ್ಲಿ ಸಲಹೆ ನೀಡುತ್ತದೆ.

ಕಲ್ಲಿದ್ದಲು ಮತ್ತು ಉಕ್ಕು ಸಮುದಾಯದ ಆಡಳಿತ ಖರ್ಚಿಗೆ ಹಣ ಒದಗಿಸಲು ಉನ್ನತ ಮಂಡಲಿ ಸಾಮಾನ್ಯ ಮಾರುಕಟ್ಟೆಯ ಪ್ರದೇಶದಲ್ಲಿ ಉತ್ಪಾದನೆಯಾಗುವ ಒಟ್ಟು ಕಲ್ಲಿದ್ದಲು ಮತ್ತು ಉಕ್ಕಿನ ಮೇಲೆ ಒಂದು ತೆರಿಗೆ ವಿಧಿಸುತ್ತದೆ. ಈ ಪ್ರದೇಶದಲ್ಲಿ ಉಕ್ಕು ಮತ್ತು ಕಲ್ಲಿದ್ದಲು ಉತ್ಪಾದನೆಯಲ್ಲಿ ತೊಡಗಿರುವ ಸಂಸ್ಥೆಗಳಿಗೆ ಬಂಡವಾಳ ಒದಗಿಸುವುದರಲ್ಲೂ ಉನ್ನತ ಮಂಡಲಿ ಸಹಾಯ ಮಾಡುತ್ತದೆ. ಆಗಿಂದಾಗ್ಗೆ ಉನ್ನತ ಮಂಡಲಿ ಪ್ರಪಂಚದ ಬೇರೆ ಬೇರೆ ಭಾಗಗಳಲ್ಲಿ ಡಿಬೆಂಚರುಗಳನ್ನು ಮಾರಿ ನಿಧಿ ಕೂಡಿಸುತ್ತದೆ. ಹೀಗೆ ಪಡೆದ ನಿಧಿಯಿಂದ ಕಲ್ಲಿದ್ದಲು ಮತ್ತು ಉಕ್ಕಿನ ಉತ್ಪಾದನೆಯಲ್ಲಿ ತೊಡಗಿರುವ ಸಂಸ್ಥೆಗಳಿಗೆ ಸಾಲ ಒದಗಿಸಿ ಅವುಗಳ ಅಭಿವೃದ್ಧಿ ಕಾರ್ಯಕ್ಕೆ ನೆರವು ನೀಡುತ್ತದೆ.

ಈ ರಾಷ್ಟ್ರಗಳು ಸಾಮಾನ್ಯ ಮಾರುಕಟ್ಟೆಯ ಪ್ರದೇಶದಲ್ಲಿ ಕಲ್ಲಿದ್ದಲು ಮತ್ತು ಉಕ್ಕಿನ ಉತ್ಪಾದನೆ ಮತ್ತು ವಿತರಣೆ ಯಾವ ನಿರ್ಬಂಧವೂ ಇಲ್ಲದೆ ನಡೆದುಕೊಂಡು ಹೋಗುವಂತೆ ಉನ್ನತ ಮಂಡಲಿ ನೋಡಿಕೊಳ್ಳುತ್ತದೆ. ಈ ಕರ್ತವ್ಯನಿರ್ವಹಣೆಯಲ್ಲಿ ಉನ್ನತಮಂಡಲಿ ಯಾವ ರಾಷ್ಟ್ರದ ಸರ್ಕಾರಕ್ಕೂ ಅಧೀನವಾಗಿಲ್ಲ. ಯೂರೋಪಿನ ಕಲ್ಲಿದ್ದಲು ಮತ್ತು ಉಕ್ಕಿನ ಸಮುದಾಯ ಸ್ಥಾಪಿತವಾದಾಗ ರೂಪಿಸಲಾದ ನಿಯಮಗಳ ಪ್ರಕಾರ ತನ್ನ ಕಾರ್ಯವನ್ನು ಉನ್ನತ ಮಂಡಲಿ ನಿರ್ವಹಿಸುತ್ತದೆ.

ಯೂರೋಪಿನ ಕಲ್ಲಿದ್ದಲು ಮತ್ತು ಉಕ್ಕಿನ ಸಮುದಾಯ ಸ್ಥಾಪಿತವಾದ ಮೇಲೆ ಐರೋಪ್ಯ ರಾಷ್ಟ್ರಗಳಲ್ಲಿ ಕಲ್ಲಿದ್ದಲು ಮತ್ತು ಉಕ್ಕಿನ ವ್ಯಾಪಾರ ಹೆಚ್ಚಿದ ಹೊರದೇಶಗಳೊಡನೆಯೂ ನಡೆಯುತ್ತಿದ್ದ ವ್ಯಾಪಾರ ಅಧಿಕಗೆ ...ತು. ಮಾರುಕಟ್ಟೆ ಪ್ರದೇಶದಲ್ಲಿ ಉಕ್ಕಿನ ಮತ್ತು ಕಲ್ಲಿದ್ದಲಿನ ಉತ್... ಬೆಳೆದಿದೆ. ಇದರಿಂದ ಈ ರಾಷ್ಟ್ರಗಳ ಆರ್ಥಿಕ ಅಭಿವೃದ್ಧಿ... ...ಳ್ಳಿಯ ಪರಿಣಾಮವಾಗಿದೆ. ಈ ರಾಷ್ಟ್ರಗಳು ತಮ್ಮಲ್ಲಿರುವ ಸಂಪನ್ಮೂಲಗಳನ್ನು ವಿವಿಧ ಯೋಜನೆಗಳ ಮೂಲಕ ಉಪಯೋಗಿಸಿಕೊಂಡು ಅದ್ಭುತ ಪ್ರಗತಿ ಸಾಧಿಸಲು ಸಹಾಯವಾಯಿತು. ಜೊತೆಗೆ ಉಳಿದ ಆರ್ಥಿಕ ಕ್ಷೇತ್ರಗಳಲ್ಲೂ ಪರಸ್ಪರ ಸಹಕಾರದ ಮೂಲಕ ಪ್ರಗತಿ ಸಾಧಿಸಬೇಕೆಂಬ ಮನೋಭಾವ ಈ ರಾಷ್ಟ್ರಗಳಲ್ಲಿ ಮೂಡಿತು.

ತಮ್ಮ ಗುರಿಯನ್ನು ಮತ್ತಷ್ಟು ಶೀಘ್ರವಾಗಿ ಮುಟ್ಟಲು 1957ರಲ್ಲಿ ರೋಮಿನಲ್ಲಿ ಮತ್ತೊಂದು ಒಪ್ಪಂದಕ್ಕೆ ಆರು ರಾಷ್ಟ್ರಗಳು ಸಹಿ ಹಾಕಿದುವು. ಅದರ ಪ್ರಕಾರ ಐರೋಪ್ಯ ಆರ್ಥಿಕ ಸಮುದಾಯ (ನೋಡಿ) ಸ್ಥಾಪಿತವಾಯಿತು. ಇದೇ ರೀತಿ ಐರೋಪ್ಯ ಪರಮಾಣುಶಕ್ತಿ ಸಮುದಾಯವೂ (ನೋಡಿ) ಆರು ರಾಷ್ಟ್ರಗಳ ಸಹಕಾರದ ಫಲವಾಗಿ ಅಸ್ತಿತ್ವಕ್ಕೆ ಬಂತು.

ಹೀಗೆ ಪಶ್ಚಿಮ ಯೂರೋಪಿನಲ್ಲಿ ಆರ್ಥಿಕ ಸಹಕಾರದ ಮಹತ್ತ್ವವನ್ನು ಅರಿತುಕೊಂಡು ರಾಷ್ಟ್ರಗಳು ಒಗ್ಗಟ್ಟಿನಿಂದ ವರ್ತಿಸುವಂತೆ ಮಾಡಲು ಯೂರೋಪಿನ ಕಲ್ಲಿದ್ದಲು ಮತ್ತು ಉಕ್ಕಿನ ಸಮುದಾಯ ಅಡಿಪಾಯ ಒದಗಿಸಿತೆಂದು ಹೇಳಬಹುದು.

(ಎಂ.ಎಂ.)

**ಐರೋಪ್ಯ ಪರಮಾಣುಶಕ್ತಿ ಸಮುದಾಯ :** ಐರೋಪ್ಯ ಆರ್ಥಿಕ ಸಂಘಟನೆಯ ಉದ್ದೇಶದಿಂದ ಸ್ಥಾಪಿತವಾದ ಸಂಸ್ಥೆಗಳಲ್ಲಿ ಒಂದು. ಎರಡನೆಯ ಮಹಾಯುದ್ಧದ ಅನಂತರದ ಕಾಲದಲ್ಲಿ ಆರ್ಥಿಕ ಸಹಕಾರ ಮತ್ತು ಸಂಘಟನೆಯ ಮೂಲಕ ಉತ್ಪಾದನೆಯನ್ನೂ ಅಂತರರಾಷ್ಟ್ರೀಯ ವ್ಯಾಪಾರವನ್ನೂ ಹೆಚ್ಚಿಸಿ ತನ್ಮೂಲಕ ಜನರ ಜೀವನಮಟ್ಟವನ್ನು ಉತ್ತಮಗೊಳಿಸುವುದು ಸಾಧ್ಯವೆಂಬ ಅಭಿಪ್ರಾಯಕ್ಕೆ ವಿಶೇಷ ಮನ್ನಣೆ ದೊರಕಿತು. ಬೆಲ್ಜಿಯಂ, ನೆದರ್‌ಲೆಂಡ್ಸ್ ಮತ್ತು ಲಕ್ಸೆಂಬರ್ಗ್‌ಗಳು ಸೇರಿ ಸ್ಥಾಪಿಸಿದ ಬೆನೆಲಕ್ಸ್ (1949), ಮತ್ತು ಫ್ರಾನ್ಸ್, ಪಶ್ಚಿಮ ಜರ್ಮನಿ, ಇಟಲಿ, ಬೆಲ್ಜಿಯಂ, ಲಕ್ಸೆಂಬರ್ಗ್ ಮತ್ತು ನೆದರ್‌ಲೆಂಡ್ಸ್ ಕೂಡಿ ರಚಿಸಿದ ಐರೋಪ್ಯ ಕಲ್ಲಿದ್ದಲು ಮತ್ತು ಉಕ್ಕು ಸಮುದಾಯ (1952) ಇವು ಐರೋಪ್ಯ ಆರ್ಥಿಕ ಸಂಘಟನೆಯ ಪ್ರಾರಂಭದ ಯತ್ನಗಳಲ್ಲಿ ಮುಖ್ಯವಾದವು. ಇವುಗಳ ಕಾರ್ಯಚಟುವಟಿಕೆಗಳಿಂದ ಲಭ್ಯವಾದ ಅನುಭವವನ್ನಾಧರಿಸಿ ಉನ್ನತಮಟ್ಟದ ಆರ್ಥಿಕ ಸಂಘಟನೆಗಾಗಿ ಪ್ರಯತ್ನ ಪ್ರಾರಂಭವಾಯಿತು. 1955ರಲ್ಲಿ ಸೇರಿದ್ದ ಆರು ಐರೋಪ್ಯ ರಾಷ್ಟ್ರಗಳ ವಿದೇಶೀ ವ್ಯವಹಾರಗಳ ಮಂತ್ರಿಗಳ ಸಭೆಯಲ್ಲಿ, ಐರೋಪ್ಯ ಆರ್ಥಿಕ ಸಂಘಟನೆಗಾಗಿ ವಿಶೇಷ ಕಾರ್ಯಕ್ರಮಗಳನ್ನು ಕೈಗೊಳ್ಳುವ ಘಟ್ಟವನ್ನು ತಲಪಿರುವುದಾಗಿ ಭಾವಿಸಿ, ಒಂದು ಐರೋಪ್ಯ ಸಾಮಾನ್ಯ ಮಾರುಕಟ್ಟೆಯನ್ನು ಸ್ಥಾಪಿಸುವ ಮತ್ತು ತಾವೆಲ್ಲರೂ ಸೇರಿ ಪರಮಾಣುಶಕ್ತಿಯ ಅಭಿವೃದ್ಧಿಗೆ ಪ್ರಯತ್ನ ಮಾಡುವ ಆಶಯವನ್ನು ವ್ಯಕ್ತಪಡಿಸಲಾಯಿತು. ಈ ಎರಡು ಉದ್ದೇಶಗಳ ಪೈಕಿ ಪರಮಾಣುಶಕ್ತಿ ಅಭಿವೃದ್ಧಿಗೆ ಆರು ರಾಷ್ಟ್ರಗಳೂ ಒಟ್ಟುಗೂಡಿ ಪ್ರಯತ್ನಿಸಬಹುದೆಂಬುದು ಹೆಚ್ಚು ಆಕರ್ಷಕವಾಗಿ ತೋರಿತು. ಆದರೂ ಈ ಎರಡೂ ಉದ್ದೇಶಗಳನ್ನೂ ನೆರವೇರಿಸುವುದಕ್ಕೆ ಒಪ್ಪಂದ ಮಾಡಿಕೊಳ್ಳಬೇಕೆಂದು ಉದ್ದೇಶಿಸಿ, ಈ ಬಗ್ಗೆ ವರದಿಯೊಂದನ್ನು ಸಿದ್ಧಪಡಿಸಲು ಬೆಲ್ಜಿಯಂನ ವಿದೇಶಾಂಗ ವ್ಯವಹಾರಗಳ ಮಂತ್ರಿಯಾಗಿದ್ದ ಪಾಲ್ ಹೆನ್ರಿ ಸ್ಪಾಕ್ ನೇತೃತ್ವದಲ್ಲಿ ತಜ್ಞರ ತಂಡವೊಂದನ್ನು ನೇಮಿಸಲಾಯಿತು. ಈ ತಂಡ ಸಿದ್ಧಪಡಿಸಿದ ವರದಿ ಆರು ಐರೋಪ್ಯ ರಾಷ್ಟ್ರಗಳ ಆರ್ಥಿಕ ಸಂಘಟನೆಯ ಒಪ್ಪಂದಕ್ಕೆ ಆಧಾರವಾಯಿತು. 1957ರ ಮಾರ್ಚ್ 25ರಂದು ರೋಮ್ ನಗರದಲ್ಲಿ ಫ್ರಾನ್ಸ್, ಪಶ್ಚಿಮ ಜರ್ಮನಿ, ಇಟಲಿ, ಬೆಲ್ಜಿಯಂ, ಲಕ್ಸೆಂಬರ್ಗ್ ಮತ್ತು ನೆದರ್‌ಲೆಂಡ್ಸ್ ಇವು ಐರೋಪ್ಯ ಸಾಮಾನ್ಯ ಮಾರುಕಟ್ಟೆಯನ್ನು ಸ್ಥಾಪಿಸುವ ಒಂದು ಒಪ್ಪಂದಕ್ಕೆ ಮತ್ತು ಐರೋಪ್ಯ ಪರಮಾಣುಶಕ್ತಿ ಸಮುದಾಯವನ್ನು ಸ್ಥಾಪಿಸುವ ಮತ್ತೊಂದು ಒಪ್ಪಂದಕ್ಕೆ ಸಹಿ ಹಾಕಿದುವು. 1958ರ ಜನವರಿ ಒಂದರಿಂದ ಈ ಒಪ್ಪಂದಗಳು ಜಾರಿಗೆ ಬಂದುವು.

... ಪ... ...ಯದ ಒಪ್ಪಂದದ ಮೊದಲನೆಯ ವಿಧಿಯಲ್ಲಿ ... ...ು ಪರಮಾಣು ಕೈಗಾರಿಕೆಗಳನ್ನು ಸ್ಥಾಪಿಸುವುದಕ್ಕೆ ಅಗತ್ಯ ...ನ್ನುಂಟುಮಾಡುವುದೇ ಈ ಸಮುದಾಯದ ಮುಖ್ಯ ಗುರಿ. ...ಟ್ಟವನ್ನು ಉತ್ತಮಗೊಳಿಸುವುದು ಈ ಕೈಗಾರಿಕೆಗಳನ್ನು ಅಭಿ...ರ ಅಂತಿಮ ಉದ್ದೇಶ. ಶಾಂತಿಯುತ ಬಳಕೆಗಾಗಿ ಪರಮಾಣು ...ದ್ಧಿಗೆ ಸಂಬಂಧಿಸಿದ ವಿಷಯಗಳು ಮಾತ್ರ ಸಮುದಾಯದ ವ್ಯಾಪ್ತಿಗೆ ... ರಕ್ಷಣಾವ್ಯವಸ್ಥೆಗಾಗಿ ಉಪಯೋಗವಾಗುವ ಪರಮಾಣುಶಕ್ತಿಯ ...ಲ್ಲ ಸದಸ್ಯರಾಷ್ಟ್ರಗಳು ಸ್ವತಂತ್ರವಾಗಿ ನಡೆದುಕೊಳ್ಳಬಹುದು. ಆದರೆ ...ದಾಯದ ನಿಯಂತ್ರಣಕ್ಕೆ ಒಳಪಡುವ ಪರಮಾಣು ವಸ್ತುಗಳನ್ನು ಸದಸ್ಯರಾಷ್ಟ್ರ...ು ರಕ್ಷಣಾವ್ಯವಸ್ಥೆಗೆ ಬಳಸದಂತೆ ಪ್ರತಿಬಂಧಿಸುವ ವ್ಯವಸ್ಥೆ ಮಾಡಲಾಗಿದೆ.

ಸಮುದಾಯದ ಉದ್ದೇಶಗಳ ಸಾಧನೆಗಾಗಿ ಅಷ್ಟಾಂಶಗಳ ಕಾರ್ಯಕ್ರಮವೊಂದನ್ನು ಒಪ್ಪಂದದಲ್ಲಿ ಕೊಡಲಾಗಿದೆ. ಒಪ್ಪಂದದ ಎರಡನೆಯ ವಿಧಿಯಲ್ಲಿ ನಮೂದಿತವಾಗಿರುವ ಅಂಶಗಳು ಈ ರೀತಿ ಇವೆ :

1 ಸಂಶೋಧನೆಯನ್ನು ಅಭಿವೃದ್ಧಿಪಡಿಸಿ ಪರಮಾಣು ಸಂಶೋಧನ ಕೇಂದ್ರದಲ್ಲಿ ಸಂಶೋಧನ ಕಾರ್ಯಗಳನ್ನು ಕೈಗೊಳ್ಳುವುದರ ಜೊತೆಗೆ ಸದಸ್ಯರಾಷ್ಟ್ರಗಳು ಪ್ರತ್ಯೇಕವಾಗಿ ಕೈಗೊಳ್ಳುವ ಸಂಶೋಧನ ಕಾರ್ಯಗಳಿಗೆ ಹಣ ಮತ್ತು ಉಪಕರಣಗಳ ರೂಪದಲ್ಲಿ ನೆರವು ನೀಡುವುದೂ ಮತ್ತು ಸದಸ್ಯರಾಷ್ಟ್ರಗಳಲ್ಲಿ ನಡೆಯುವ ಸಂಶೋಧನೆಯಲ್ಲಿ ಸಂಘಟನೆ ಉಂಟುಮಾಡುವುದು ಸಮುದಾಯದ ಕರ್ತವ್ಯ.

2 ಸಮುದಾಯ ಪರಮಾಣು ಕೇಂದ್ರಗಳಲ್ಲಿ ಕೆಲಸ ಮಾಡುವವರಿಗೆ ಮತ್ತು ನಾಗರಿಕರಿಗೆ ಪರಮಾಣು ವಿಕಿರಣಗಳಿಂದ ಆರೋಗ್ಯ ಕೆಡದಂತೆ ರಕ್ಷಿಸಲು ಕೈಕೊಳ್ಳಬೇಕಾದ ಕ್ರಮಗಳನ್ನು ಸೂಚಿಸಿ ಪ್ರತಿಸದಸ್ಯರಾಷ್ಟ್ರವೂ ಅವುಗಳನ್ನು ಅನುಸರಿಸುವಂತೆ ಮಾಡಬೇಕು.

3 ಸಮುದಾಯದಲ್ಲಿ ಪರಮಾಣುಶಕ್ತಿಯ ಅಭಿವೃದ್ಧಿಗೆ ಅಗತ್ಯವಾದ ಸೌಲಭ್ಯಗಳನ್ನು ಒದಗುವಂತೆ ಖಾಸಗಿ ವಲಯಕ್ಕೆ ಪ್ರೋತ್ಸಾಹ ನೀಡಿ ಈ ಉದ್ದೇಶಕ್ಕಾಗಿ ಹೆಚ್ಚು ಬಂಡವಾಳ ಹೂಡುವಂತೆ ಮಾಡಬೇಕು.

4 ಎಲ್ಲ ಸದಸ್ಯರಾಷ್ಟ್ರಗಳಿಗೂ ಪರಮಾಣು ಇಂಧನ ಯಾವಾಗಲೂ ದೊರಕುವಂತೆ ಏರ್ಪಡಿಸಬೇಕು.

5 ಸೂಕ್ತನಿಯಂತ್ರಣದ ಮೂಲಕ ಪರಮಾಣು ವಸ್ತುಗಳು ಉದ್ದೇಶಿತ ಬಳಕೆಗಲ್ಲದೆ ಬೇರೆ ರೀತಿಯಲ್ಲಿ ಬಳಕೆಯಾಗದಂತೆ ತಡೆಯಬೇಕು.

6 ವಿಶೇಷ ವಿದಳನವಸ್ತುಗಳನ್ನು ಸಮುದಾಯದ ಆಸ್ತಿ ಎಂದು ಪರಿಗಣಿಸಿ, ಇವುಗಳ ಬಳಕೆಯ ವಿಷಯದಲ್ಲಿ ಸಮುದಾಯದ ಆಸ್ತಿಯ ಹಕ್ಕು ಚಲಾಯಿಸಬೇಕು. ಇದರಿಂದ ಪರಮಾಣುವಸ್ತುಗಳ ಬಳಕೆಯ ಮೇಲೆ ಕ್ರಮವಾದ ಹತೋಟಿ ಇಡಲು ಸಾಧ್ಯವಾಗುತ್ತದೆ.

7 ಸಮುದಾಯ ಪರಮಾಣುವಸ್ತುಗಳಿಗೆ ವಿಶಾಲವಾದ ಮಾರುಕಟ್ಟೆ ಒದಗಿಸಬೇಕು ಮತ್ತು ಎಲ್ಲ ಸದಸ್ಯ ರಾಷ್ಟ್ರಗಳೂ ಅತ್ಯುತ್ತಮ ತಾಂತ್ರಿಕ ತಿಳಿವಳಿಕೆ ಪಡೆಯಲು ಅವಕಾಶ ಒದಗಿಸಬೇಕು. ಪರಮಾಣು ವಸ್ತುಗಳಿಗೆ ಮತ್ತು ವಿಶೇಷ ಉಪಕರಣಗಳಿಗೆ ಸಾಮಾನ್ಯ ಮಾರುಕಟ್ಟೆಯನ್ನು ಸ್ಥಾಪಿಸುವುದು, ಪರಮಾಣು ಕೈಗಾರಿಕೆಗಳಲ್ಲಿ ಹೂಡುವ ಬಂಡವಾಳದ ಚಲನೆಗೆ ಅಡ್ಡಿ ಇಲ್ಲದಂತೆ ಮಾಡುವುದು, ತಾಂತ್ರಿಕ ಜ್ಞಾನ ಪಡೆದಿರುವವರು ಉದ್ಯೋಗಕ್ಕಾಗಿ ಸಮುದಾಯದ ಯಾವುದೇ ರಾಷ್ಟ್ರಕ್ಕಾಗಲಿ ನಿರ್ಬಂಧವಿಲ್ಲದೆ ಹೋಗುವುದಕ್ಕೆ ಅವಕಾಶಮಾಡುವುದು ಮುಂತಾದ ಕ್ರಮಗಳ ಮೂಲಕ ಈ ಉದ್ದೇಶಗಳನ್ನು ಸಫಲಗೊಳಿಸಬಹುದು.

8 ಪರಮಾಣುಶಕ್ತಿಯ ಶಾಂತಿಯುತ ಬಳಕೆಯನ್ನು ಹೆಚ್ಚಿಸುವುದಕ್ಕೆ ಸಹಾಯಕವಾಗುವಂತೆ ಇತರ ರಾಷ್ಟ್ರಗಳೊಡನೆ ಮತ್ತು ಅಂತರರಾಷ್ಟ್ರೀಯ ಸಂಸ್ಥೆಗಳೊಡನೆ ಸಮುದಾಯ ಸಂಪರ್ಕ ಹೊಂದಿರಬೇಕು.

ಪರಮಾಣುಶಕ್ತಿ ಸಂಶೋಧನೆಗಾಗಿ ಮತ್ತು ಮಾನವಕಲ್ಯಾಣಕ್ಕೆ ಪರಮಾಣುಶಕ್ತಿಯನ್ನು ಹೆಚ್ಚಾಗಿ ಬಳಕೆಗೆ ತರುವುದಕ್ಕಾಗಿ ಕೈಗೊಳ್ಳುವ ಕಾರ್ಯಗಳಿಗೆ ತಗಲುವ ವೆಚ್ಚ ಅಪಾರವಾದ್ದು. ಅಷ್ಟೇ ಅಲ್ಲದೆ ಈ ಕಾರ್ಯಕ್ರಮಗಳಿಗೆ ಅನೇಕ ತಜ್ಞರ ಸಹಕಾರವೂ ಅಗತ್ಯ. ಇಂಥ ಒಂದು ಕ್ಷೇತ್ರ ಸಾಮೂಹಿಕವಾಗಿ ಸಂಶೋಧನೆ ನಡೆಸುವುದಕ್ಕೆ ಅತ್ಯಂತ ಯೋಗ್ಯವಾದುದಾಗಿದೆ. ಕೆಲವು ರಾಷ್ಟ್ರಗಳು ಒಟ್ಟುಗೂಡಿ ಸಂಶೋಧನ ಕಾರ್ಯಗಳನ್ನು ಕೈಗೊಂಡಾಗ ಅವುಗಳಿಗೆ ತಗಲುವ ವೆಚ್ಚವನ್ನು ನಿರ್ವಹಿಸುವುದು ಸುಲಭವಾಗುತ್ತವೆ ಮತ್ತು ತಾಂತ್ರಿಕ ಜ್ಞಾನವನ್ನು ಪರಸ್ಪರ ವಿನಿಮಯಮಾಡಿಕೊಳ್ಳುವುದರ ಮೂಲಕ ಸಂಶೋಧನೆಯಲ್ಲಿ ಕ್ಷಿಪ್ರ ಪ್ರಗತಿ ಸಾಧಿಸಿ ಮಾನವಕಲ್ಯಾಣವನ್ನು ಹೆಚ್ಚಿಸಲು ಸಾಧ್ಯವಾಗುತ್ತದೆ. ಈ ದೃಷ್ಟಿಯಿಂದ ಐರೋಪ್ಯ ಪರಮಾಣು ಸಮುದಾಯದ ಸ್ಥಾಪನೆಯಾಗಿದೆ.

(ಬಿ.ಎಸ್.ಎಸ್.ಎ.)

**ಐರೋಪ್ಯ ವ್ಯೂಹ:** ಇಂಗ್ಲೆಂಡು ಐರೋಪ್ಯ ರೇವುಪಟ್ಟಣಗಳೊಂದಿಗೆ ವ್ಯಾಪಾರ ನಡಸದಂತೆ ಫ್ರಾನ್ಸಿನ ಒಂದನೆಯ ನೆಪೋಲಿಯನ್ ಚಕ್ರವರ್ತಿ ವ್ಯವಸ್ಥೆಗೊಳಿಸಿದ್ದ ದಿಗ್ಬಂಧನ (ಕಾಂಟಿನೆಂಟಲ್ ಸಿಸ್ಟಮ್). 1793ರ ಯುದ್ಧದ ಆದಿಯಲ್ಲಿ ಫ್ರಾನ್ಸಿನ ಸಾರ್ವಜನಿಕ ಸುರಕ್ಷತಾ ಸಮಿತಿ ಮೊಟ್ಟಮೊದಲಿಗೆ ಇದನ್ನು ಪರಿಶೀಲಿಸಿತ್ತಾದರೂ ಆಗ ಇದನ್ನು ಕಟ್ಟುನಿಟ್ಟಾಗಿ ಜಾರಿಗೆ ತಂದಿರಲಿಲ್ಲ. 1803ರಲ್ಲಿ ಯುದ್ಧ ಮತ್ತೆ ಆರಂಭವಾದಾಗ ಇದನ್ನು ವಿಧಿಸಲಾಯಿತು. 1804ರಲ್ಲಿ ನೆಪೋಲಿಯನ್ ಬ್ರಿಟಿಷ್ ವಸ್ತುಗಳ ಆಮದನ್ನು ನಿಷೇಧಿಸಿದ್ದಲ್ಲದೆ ಬ್ರಿಟಿಷ್ ಹಡಗುಗಳಿಗೆ ಫ್ರೆಂಚ್ ಮತ್ತು ಹ್ಯಾನೋವರ್ ಬಂದರುಗಳನ್ನು ಮುಚ್ಚಿದ. ಇದು ಬರ್ಲಿನಿನಿಂದ ಹೊರಡಿಸಲಾದ ಆಜ್ಞೆ. ಆದರೆ ಇಂಗ್ಲಿಷರು ಬಗ್ಗಲಿಲ್ಲ. ಅವರು ಫ್ರೆಂಚ್ ಬಂದರುಗಳನ್ನೆಲ್ಲ ಬಹಿಷ್ಕರಿಸಿದರು. ಅವುಗಳೊಂದಿಗೆ ವ್ಯಾಪಾರ ನಿಲ್ಲಿಸಿದರು. ಪ್ರತಿಯಾಗಿ ನೆಪೋಲಿಯನ್ ಇನ್ನೊಂದು ಹೆಜ್ಜೆ ಮುಂದೆ ಹೋದ. ಬ್ರಿಟಿಷ್ ದ್ವೀಪಗಳ ಸುತ್ತ ದಿಗ್ಬಂಧನ ವಿಧಿಸಿದ. ಬ್ರಿಟನಿನೊಂದಿಗಾಗಲಿ ಅದರ ಅಧೀನ ಪ್ರದೇಶಗಳೊಂದಿಗಾಗಲಿ ಯಾರೂ ವ್ಯಾಪಾರ ನಡಸದಂತೆ ಆ ಮಾರ್ಗವಾಗಿ ಹೋಗುವ ಹಡಗುಗಳನ್ನೆಲ್ಲ ವಶಪಡಿಸಿಕೊಳ್ಳಲು ಕಟ್ಟಾಜ್ಞೆ ಬಂತು. ಇದು ಮಿಲಾನ್ ಶಾಸನವೆಂದು ಹೆಸರಾಗಿದೆ. ಬ್ರಿಟನಿನ ಹೊಟ್ಟೆ ಬಿಗಿದು, ಉದ್ಯೋಗ ಬಿದ್ದು, ಸಾಮಾಜಿಕ ಅವ್ಯವಸ್ಥೆಯೇರ್ಪಟ್ಟು, ಅದು ಶಾಂತಿಗಾಗಿ ಮಂಡಿಯೂರಿ ಮುಂದೆ ಬರುವುದೆಂಬುದಾಗಿ ನೆಪೋಲಿಯನ್ ಭಾವಿಸಿದ್ದ.

ಈ ಭಾವನೆಗೆ ಅನುವಾಗಿ ನೆಪೋಲಿಯನ್ ಆಗ ಇಡೀ ಯೂರೋಪಿನಲ್ಲೇ ಪ್ರಬಲ ವ್ಯಕ್ತಿಯಾಗಿದ್ದ, ಶಕ್ತಿಯಾಗಿದ್ದ. ಅವನ ಕೀರ್ತಿ ಅತ್ಯಂತ ಉನ್ನತಮಟ್ಟದಲ್ಲಿತ್ತು. ಆಗ ಆತ ಫ್ರಾನ್ಸಿನ ಚಕ್ರವರ್ತಿ ಮಾತ್ರವೇ ಅಲ್ಲ, ಇಟಲಿಯ ರಾಜ. ಸ್ವಿಟ್ಸರ್‌ಲೆಂಡಿನಲ್ಲಿ ಅವನ ಮಾತು ಆಗ ವೇದವಾಕ್ಯ. ಮೂವರು ತಮ್ಮಂದಿರು ಅವನ ಅಧೀನರಾಜರಾಗಿದ್ದರು. ಒಬ್ಬ ಲೂಯಿ ; ಹಾಲೆಂಡಿನ ರಾಜ. ಇನ್ನೊಬ್ಬ ಜೆರೋಮ್ ; ವೆಸ್ಟ್‌ಫೇಲಿಯದ ದೊರೆ. ನೇಪಲ್ಸ್ ದೇಶದ ರಾಜ ಜೋಸೆಫ್ ಮತ್ತೊಬ್ಬ. ಆಸ್ಟ್ರಿಯ ಪ್ರಷ್ಯಗಳು ನೆಪೋಲಿಯನನಿಗೆ ಸೋತು ಶರಣಾಗತವಾಗಿದ್ದುವು. ರಷ್ಯ ಮಿತ್ರರಾಷ್ಟ್ರವಾಗಿ ಪರಿವರ್ತನೆಗೊಂಡಿತ್ತು. ಯೂರೋಪಿನ ಮುಖ್ಯ ರಾಷ್ಟ್ರವಾಗಿದ್ದ ಇಂಗ್ಲೆಂಡ್ ಇಷ್ಟಾದರೂ ಇನ್ನೂ ನೆಪೋಲಿಯನನ ಶತ್ರುವೇ ಆಗಿತ್ತು. ಬ್ರಿಟನ್ ಶರಣಾಗತವಾದರೆ ತನಗೆ ಬೇರೆ ಯಾರೂ ಅಡ್ಡಿಯಿಲ್ಲವೆಂಬುದು ಆಗ ನೆಪೋಲಿಯನ್ ತಳೆದಿದ್ದ ಭಾವನೆ.

ಆದರೆ ನೆಪೋಲಿಯನನ ಬಳಿ ಸುವ್ಯವಸ್ಥಿತ ನೌಕಾಬಲವಿರಲಿಲ್ಲ. ಟ್ರಫಾಲ್‌ಗರ್‌ನಲ್ಲಿ ನಡೆದ ಜಲಯುದ್ಧ ಇದನ್ನು ಸ್ಪಷ್ಟಪಡಿಸಿತ್ತು. ಆದ್ದರಿಂದ ಇಂಗ್ಲೆಂಡ್ ದೇಶವನ್ನು ನೇರವಲ್ಲದ ಮಾರ್ಗದಿಂದ ತನ್ನ ಹತೋಟಿಗೆ ತಂದುಕೊಳ್ಳುವ ಪ್ರಯತ್ನ ನಡೆಸಿದ. ಇಂಗ್ಲೆಂಡಿನ ಶಕ್ತಿಗೆ ಆ ದೇಶ ನಡೆಸುತ್ತಿದ್ದ ವ್ಯಾಪಾರವೇ ಆಧಾರ. ಇಂಗ್ಲೆಂಡಿನ ವಾಣಿಜ್ಯ ಸಂಪರ್ಕವನ್ನು ಕುಂಠಿತಗೊಳಿಸುವುದರಿಂದ ಜಯ ಗಳಿಸಬಹುದೆಂದು ಅವನಿಗೆ ಅನಿಸಿದ್ದು ಸಹಜವೇ. ರಷ್ಯ ಕೂಡ ಟಿಲ್‌ಸಿಟ್ ಶಾಂತಿ ಒಪ್ಪಂದದ ಪ್ರಕಾರ ಇಂಥ ಶಾಸನಗಳ ಜಾರಿಗೆ ತನ್ನ ಅಂಗೀಕಾರ ಮುದ್ರೆ ಒತ್ತಿತ್ತು.

ಆದರೆ ನೆಪೋಲಿಯನನ ಈ ಯೋಜನೆ ಫಲಕಾರಿಯಾಗಲಿಲ್ಲ. ಏಕೆಂದರೆ ಇಂಗ್ಲೆಂಡು ಹೊಂದಿದ್ದ ವಾಣಿಜ್ಯ ಹಡಗುವ್ಯವಸ್ಥೆ ಅಗಾಧ. ಅದೂ ಅಲ್ಲದೆ ವಸಾಹತುಗಳನ್ನು ಹೊಂದಿದ್ದ ದೇಶಗಳು ತಮ್ಮ ವಸಾಹತುಗಳೊಡನೆ ನಡಸುತ್ತಿದ್ದ ಎಲ್ಲ ಆಮದು-ರಫ್ತುಗಳಿಗೂ ಇಂಗ್ಲೆಂಡಿನ ಹಡಗು ವ್ಯವಸ್ಥೆಯನ್ನೇ ಹೆಚ್ಚಾಗಿ ಅವಲಂಬಿಸಬೇಕಾಗಿತ್ತು. ಆದ್ದರಿಂದ ನೆಪೋಲಿಯನನ ದಿಗ್ಬಂಧನದಿಂದಾಗಿ ಐರೋಪ್ಯ ರಾಷ್ಟ್ರಗಳ ವ್ಯಾಪಾರ ಕುಸಿಯುವಂತಾಯಿತು. ಇದರ ಪರಿಣಾಮವಾಗಿ ದಿನಬಳಕೆಯ ಅಗತ್ಯ ವಸ್ತುಗಳ ಬೆಲೆಗಳು ಏರಿದುವು. ಹೆಚ್ಚಿನ ಕಷ್ಟನಷ್ಟ ಆದದ್ದು ಐರೋಪ್ಯರಿಗೇ ಹೊರತು ಬ್ರಿಟಿಷರಿಗಲ್ಲ. ಫ್ರಾನ್ಸಿನ ಮಿತ್ರರಾಷ್ಟ್ರಗಳಿಗೆ ನಿರಾಶೆಯಾಯಿತು. ಅವು ನೆಪೋಲಿಯನನ ಆಡಳಿತವನ್ನು ದ್ವೇಷಿಸತೊಡಗಿದ್ದರಿಂದ ಅವನಿಗಿದ್ದ ಬೆಂಬಲ ಕಡಿಮೆಯಾಯಿತು. ಈ ನಿರ್ಬಂಧಗಳನ್ನು ಕಠಿಣವಾಗಿ ಜಾರಿಗೆ ತರುವ ಭರದಲ್ಲಿ ನೆಪೋಲಿಯನ್ ಅನೇಕ ರಾಷ್ಟ್ರಗಳ ಮೇಲೆ ದಂಡೆತ್ತಿಹೋಗಬೇಕಾಯಿತು. ಇದರಿಂದ ಅವನ ಬಲ ಕುಂದಿತು. ಪೋರ್ಚುಗಲಿನ ಮುತ್ತಿಗೆ, ನೆಪೋಲಿಯನನಿಂದ ಸ್ಪೇನಿನ ಸಿಂಹಾಸನದ ಅಕ್ರಮಣ, ಪೋಪನೊಡನೆ ಅವನ ಜಗಳ, ರಷ್ಯದ ಜಾರ್ ಚಕ್ರವರ್ತಿಯೊಡನೆ ವಿರಸ—ಇವೆಲ್ಲವೂ ಐರೋಪ್ಯವ್ಯೂಹವನ್ನು ಜಾರಿಗೆ ತರಲೇಬೇಕೆಂಬ ಹಠದ ಪರಿಣಾಮಗಳು. ರಷ್ಯದ ಚಕ್ರವರ್ತಿ ಇದನ್ನು ವಿರೋಧಿಸಿದಾಗ, ಆ ದೇಶದ ಮೇಲೆ 1812ರಲ್ಲಿ ನೆಪೋಲಿಯನ್ ದಂಡೆತ್ತಿಹೋದ. ಈ ವಿನಾಶಕಾರಿ ದಂಡಯಾತ್ರೆಯೇ ನೆಪೋಲಿಯನನ ಅವನತಿಗೆ ಅಡಿಗಲ್ಲು ಹಾಕಿತು.

(ಎಸ್.ಕೆ.ಎಸ್.)

**ಐರೋಪ್ಯ ಸಮುದಾಯಗಳು:** ಬೆಲ್ಜಿಯಂ, ಫ್ರಾನ್ಸ್, ಜರ್ಮನ್ ಗಣರಾಜ್ಯ, ಇಟಲಿ, ಲಕ್ಸೆಂಬರ್ಗ್ ಮತ್ತು ನೆದರ್ಲೆಂಡ್ಸ್ ರಾಷ್ಟ್ರಗಳು ಸೇರಿ ರಚಿಸಿಕೊಂಡಿರುವ ಮೂರು ಸಮುದಾಯಗಳು (ಯೂರೋಪಿಯನ್ ಕಮ್ಯೂನಿಟೀಸ್): ಐರೋಪ್ಯ ಆರ್ಥಿಕ ಸಮುದಾಯ, ಐರೋಪ್ಯ ಕಲ್ಲಿದ್ದಲು ಮತ್ತು ಉಕ್ಕು ಸಮುದಾಯ ಮತ್ತು ಐರೋಪ್ಯ ಪರಮಾಣು ಶಕ್ತಿ ಸಮುದಾಯ (ವಿವರಗಳಿಗೆ: ಆಯಾ ಶೀರ್ಷಿಕೆಗಳನ್ನು ನೋಡಿ)

ಈ ಮೂರು ಸಂಸ್ಥೆಗಳೂ ಕಾನೂನಿನ ದೃಷ್ಟಿಯಿಂದ ಪ್ರತ್ಯೇಕವಾದರೂ ಇವಕ್ಕೆಲ್ಲ ಸಮಾನವಾದ ಕೆಲವು ವ್ಯವಸ್ಥೆಗಳಿವೆ. ಐರೋಪ್ಯ ಸಂಸತ್ತು, ನ್ಯಾಯಾಲಯ ಇವು ಎಲ್ಲಕ್ಕೂ ಒಂದೇ. ನ್ಯಾಯಿಕ, ಸಾಂಖ್ಯಿಕ ಮತ್ತು ಸಮಾಚಾರ ಸೇವಾ ವ್ಯವಸ್ಥೆಗಳೂ ಸಮಾನವೇ. ಸಂಬಂಧಿಸಿದ ರಾಷ್ಟ್ರಗಳು 1965ರಲ್ಲಿ ಸಹಿ ಹಾಕಲಾದ ಕೌಲಿಗೆ ಅನುಗುಣವಾಗಿ ಈಗ ಮೂರು ಸಮುದಾಯಗಳಿಗೂ ಒಂದೇ ಮಂತ್ರಿ ಸಮಿತಿಯೂ ಒಂದೇ ಆಯೋಗವೂ ಇವೆ. ಪಶ್ಚಿಮ ಯೂರೋಪಿನ ರಾಷ್ಟ್ರಗಳು ತಮ್ಮ ನಡುವಣ ಗೋಡೆಗಳನ್ನೆಲ್ಲ ಕೆಳತಳ್ಳಿ ಆರ್ಥಿಕವಾಗಿಯೂ ಸಾಮಾಜಿಕವಾಗಿಯೂ ಇವು ಒಂದು ಸಶಕ್ತ ಸಮುದಾಯವಾಗಿ ಬಾಳುವ ಹಾಗೆ ಮಾಡಲು ಇದು ಮೊದಲ ಘಟ್ಟ. ಮೂರು ಐರೋಪ್ಯ ಸಮುದಾಯಗಳಿಗೂ ಸಮಾನವಾದ ಸಂಸ್ಥೆಗಳ ರೂಪುರೇಷೆಗಳನ್ನು ಮುಂದೆ ಕೊಟ್ಟಿದೆ.

ಐರೋಪ್ಯ ಸಂಸತ್ತು : ಮೂರೂ ಸಮುದಾಯಗಳ ನಿರ್ವಹಣಾಂಗಗಳ ಮೇಲೆ ಉಸ್ತುವಾರಿ ಮಾಡುವುದೂ ಸಮುದಾಯಗಳ ವಾರ್ಷಿಕ ಸಾಮಾನ್ಯ ವರದಿಗಳನ್ನೂ ಅವಕ್ಕೆ ಸಂಬಂಧಿಸಿದ ಎಲ್ಲ ವಿಷಯಗಳನ್ನೂ ಕುರಿತು ಚರ್ಚಿಸುವುದೂ ಇದರ ಉದ್ದೇಶ. ಇದಕ್ಕಾಗಿ ಸಂಸತ್ತು ಅನೇಕ ಸ್ಥಾಯೀ ಸಮಿತಿಗಳನ್ನು ರಚಿಸಿದೆ. ಆರು ರಾಷ್ಟ್ರಗಳ ಸಂಸತ್ತುಗಳಿಂದ ಇದಕ್ಕೆ ಸದಸ್ಯರು ನಾಮಕರಣಗೊಳ್ಳುತ್ತಾರೆ.

ನ್ಯಾಯಾಲಯ : ಮೂರು ಸಮುದಾಯಗಳನ್ನು ಸ್ಥಾಪಿಸಿರುವ ಕೌಲುಗಳ ಅನ್ವಯದ ಬಗ್ಗೆ ಕ್ರಮಕೈಕೊಳ್ಳುವುದೂ ರಾಷ್ಟ್ರಗಳ ನಡುವೆ ಉದ್ಭವಿಸಬಹುದಾದ ವ್ಯಾಜ್ಯಗಳ ಬಗ್ಗೆ ತೀರ್ಪು ನೀಡುವುದೂ ಇದರ ಗುರಿ. ನ್ಯಾಯಾಲಯದ ಅಧ್ಯಕ್ಷನನ್ನು ಸದಸ್ಯರಾಷ್ಟ್ರಗಳು ನೇಮಿಸುತ್ತವೆ.

ಮಂತ್ರಿ ಸಮಿತಿ : ಸದಸ್ಯರಾಷ್ಟ್ರಗಳ ಆರ್ಥಿಕನೀತಿಗಳ ಸಂಯೋಜನೆ ಮತ್ತು ಕೌಲುಗಳ ಅನ್ವಯಕ್ಕ ಅಗತ್ಯವಾದ ತೀರ್ಮಾನ ಕೈಗೊಳ್ಳುವುದಕ್ಕಾಗಿ ಇದು ಸ್ಥಾಪಿತವಾಗಿದೆ. ಪ್ರತಿ ರಾಷ್ಟ್ರವೂ ಒಬ್ಬ ಪ್ರತಿನಿಧಿಯನ್ನು ಇದಕ್ಕೆ ನಾಮಕರಣ ಮಾಡುತ್ತದೆ.

ಐರೋಪ್ಯ ಸಮುದಾಯ ಆಯೋಗ : ಇದರ ವ್ಯಾಪ್ತಿ ವಿಶಾಲ. ಕೌಲಿನ ಅನ್ವಯದ ಸ್ಥೂಲ ಪರಿಶೀಲನೆಯೇ ಅಲ್ಲದೆ ವ್ಯತ್ಯಸ್ತ ಹಾಗೂ ವಿಶಿಷ್ಟ ಪರಿಸ್ಥಿತಿಗಳಿಗೆ ಅನುಗುಣವಾಗಿ ಆಗಿಂದಾಗ್ಗೆ ಸದಸ್ಯರಾಷ್ಟ್ರಗಳಿಗೆ ಸಲಹೆ ನೀಡುವುದೂ ಉದ್ದೇಶ. ಇದರ ಸದಸ್ಯರೂ ಕೌಲಿನ ರಾಷ್ಟ್ರಗಳಿಂದಲೇ ನೇಮಕವಾಗುತ್ತಾರೆ. *

**ಐರೋಪ್ಯ ಸಲ್ಲಿಕೆ ಕೂಟ:** ಐರೋಪ್ಯ ರಾಷ್ಟ್ರಗಳ ನಡುವೆ ಪರಸ್ಪರ ಹಣ ವಿನಿಮಯವನ್ನು ಸುಸೂತ್ರಗೊಳಿಸುವ ಉದ್ದೇಶದಿಂದ 1950ರಲ್ಲಿ ಜಾರಿಗೆ ಬಂದ ಸಂಸ್ಥೆ (ಯೂರೋಪಿಯನ್ ಪೇಮೆಂಟ್ಸ್ ಯೂನಿಯನ್). ಎರಡನೆಯ ಮಹಾಯುದ್ಧಾನಂತರದಲ್ಲಿ ಆರ್ಥಿಕ ಪುನರ್ರಚನೆಗಾಗಿ ಸ್ಥಾಪಿತವಾಗಿದ್ದ ಐರೋಪ್ಯ ಆರ್ಥಿಕ ಸಹಕಾರ ಸಂಸ್ಥೆಯ (ಆರ್ಗನೈಸೇಷನ್ ಫಾರ್ ಯೂರೋಪಿಯನ್ ಇಕೊನಾಮಿಕ್ ಕೋ-ಆಪರೇಷನ್) 17 ಪಾಶ್ಚಾತ್ಯ ಐರೋಪ್ಯ ಸದಸ್ಯ ರಾಷ್ಟ್ರಗಳು ಸೇರಿ ಇದನ್ನು ಸ್ಥಾಪಿಸಿಕೊಂಡುವು. ಆಗ ಪರಸ್ಪರವಾಗಿಯೂ ಅಮೆರಿಕ ಸಂಯುಕ್ತ ಸಂಸ್ಥಾನದೊಡನೆಯೂ ಪ್ರಾಪ್ತವಾಗಿದ್ದ ವಿದೇಶೀ ಹಣ ಕೊರತೆ ಐರೋಪ್ಯ ರಾಷ್ಟ್ರಗಳ ಮುಖ್ಯ ಸಮಸ್ಯೆಗಳಲ್ಲಿ ಒಂದಾಗಿತ್ತು. ರಫ್ತು ಮಾಡುವ ಶಕ್ತಿ ಕುಗ್ಗಿ ಆಮದು ಮಾಡಿಕೊಳ್ಳುವ ಆವಶ್ಯಕತೆ ಹೆಚ್ಚಾಗಿದ್ದುದೇ ಈ ವಿಧದ ಸಮಸ್ಯೆಗೆ ಕಾರಣ. ಹದಗೆಟ್ಟ ಅಂದಿನ ಪರಿಸ್ಥಿತಿಯಲ್ಲಿ ಒಂದೊಂದು ರಾಷ್ಟ್ರವೂ ತನ್ನದೇ ಆದ ಅನೇಕ ವಿನಿಮಯ ಹತೋಟಿ ಕ್ರಮಗಳನ್ನು ಅನುಸರಿಸುತ್ತಿತ್ತು. ಇದರಿಂದ ವ್ಯಾಪಾರ ವ್ಯವಹಾರಗಳಿಗೆ ಅಡ್ಡಿಯಾಗಿತ್ತು. ನೆರೆಯ ರಾಷ್ಟ್ರದಿಂದ ಪಡೆಯಬಹುದಾದ ಪದಾರ್ಥವನ್ನು ವಿದೇಶೀ ವಿನಿಮಯ ತೊಂದರೆಗಳಿಂದಾಗಿ ಅಲ್ಲಿಂದ ಪಡೆಯಲಾಗದೆ, ಸಾಲ ಒದಗಿಸಲು ಸಿದ್ಧವಾಗಿದ್ದ ಅಮೆರಿಕ ಸಂಯುಕ್ತ ಸಂಸ್ಥಾನದಿಂದ ಪಡೆಯಬೇಕಾದ ಸಂದರ್ಭಗಳಿದ್ದುವು. ಆರ್ಥಿಕ ಪುನರ್ರಚನೆ ಮತ್ತು ಅಭಿವೃದ್ಧಿ ಕಾರ್ಯದಲ್ಲಿ ತೊಡಗಿದ್ದ ಐರೋಪ್ಯ ರಾಷ್ಟ್ರಗಳು ಇಂಥ ಪರಿಸ್ಥಿತಿಯಲ್ಲಿ ಪರಸ್ಪರ ವಿನಿಮಯ ಸೌಲಭ್ಯಗಳನ್ನು ಏರ್ಪಡಿಸಿಕೊಳ್ಳಬೇಕಾದ ಆವಶ್ಯಕತೆ ಹೆಚ್ಚಾಗಿತ್ತು. ಅಂತೆಯೇ ಐರೋಪ್ಯ ಆರ್ಥಿಕ ಸಹಕಾರ ಸಂಸ್ಥೆಯಿಂದ ಐರೋಪ್ಯ ಸಲ್ಲಿಕೆ ಕೂಟ ಸ್ಥಾಪಿತವಾಯಿತು. ತಾತ್ಕಾಲಿಕ ವ್ಯವಸ್ಥೆಯಾಗಿ ಮೊದಲು ಎರಡು ವರ್ಷಗಳಿಗೆಂದು ರೂಪಿತವಾಗಿದ್ದ ಕೂಟ ತರುವಾಯ ವರ್ಷವರ್ಷವೂ ಹೊಸ ಒಪ್ಪಂದಗಳ ಆಧಾರದ ಮೇಲೆ ಮುಂದುವರಿದು 1958ರ ವರೆಗೆ ನಡೆದು ಬಂತು.

ಈ ಕೂಟದ ಮುಖ್ಯ ಉದ್ದೇಶಗಳು ಮೂರು: 1 ಸದಸ್ಯರಾಷ್ಟ್ರಗಳ ಪರಸ್ಪರ ಲೇವಾದೇವಿ ಲೆಕ್ಕಗಳ ಬಹುಮುಖ ತೀರುವೆ (ಮಲ್ಟಿಲ್ಯಾಟರಲ್ ಕ್ಲಿಯರಿಂಗ್)

ವ್ಯವಸ್ಥೆಯ ಏರ್ಪಾಡು. ಎರಡೆರಡು ರಾಷ್ಟ್ರಗಳು ತಮ್ಮ ಪರಸ್ಪರ ವ್ಯಾಪಾರವನ್ನು ಪ್ರತ್ಯೇಕವಾಗಿಸಬೇಕಾದುದರ ಮತ್ತು ದ್ವಿರಾಷ್ಟ್ರ ಒಪ್ಪಂದಗಳನ್ನು ಏರ್ಪಡಿಸಿಕೊಳ್ಳುವುದರ ಆವಶ್ಯಕತೆಯನ್ನು ಇದು ತಪ್ಪಿಸುತ್ತದೆ. 2 ಸದಸ್ಯರಾಷ್ಟ್ರಗಳ ಲೇಣೆ–ದೇಣೆಯಲ್ಲಿ ಪ್ರಾಪ್ತವಾಗುವ ತಾತ್ಕಾಲಿಕ ಕೊರತೆ ನೀಗಿಸಲು ಸಹಾಯವಾಗುವಂತೆ ಉದ್ದರಿ ಸರಬರಾಯಿ. ಈ ಮೂಲಕ ಪರಸ್ಪರ ವ್ಯಾಪಾರ ಮತ್ತು ಸಲ್ಲಿಕೆ ವ್ಯವಹಾರಗಳಿಗೆ ಅಡ್ಡಿಯಾಗಿರುವ ನಿರ್ಬಂಧಗಳನ್ನು ತೆಗೆಯುವಂತೆ ರಾಷ್ಟ್ರಗಳನ್ನು ಪ್ರೇರೇಪಿಸಬಹುದು. 3 ಸದಸ್ಯ ರಾಷ್ಟ್ರವೊಂದಕ್ಕೆ ತಾತ್ಕಾಲಿಕವಾಗಿ ಸಂಭವಿಸುವ ಸಲ್ಲಿಕೆ ಕೊರತೆ (ಪೇಮೆಂಟ್ಸ್ ಡಿಫಿಸಿಟ್ಸ್) ದೀರ್ಘಕಾಲದ ಸಮಸ್ಯೆಯಾಗದಂತೆ ನೋಡಿಕೊಳ್ಳಲು ರಾಷ್ಟ್ರ ಸೂಕ್ತಕ್ರಮಗಳನ್ನು ಕೈಗೊಳ್ಳುವಂತೆ ಉತ್ತೇಜನ ನೀಡುವುದು ಕೂಟದ ಮೂರನೆಯ ಉದ್ದೇಶ. ಒಟ್ಟಿನಲ್ಲಿ ಐರೋಪ್ಯ ಸಲ್ಲಿಕೆ ಕೂಟ ಸದಸ್ಯರಾಷ್ಟ್ರಗಳ ವಿದೇಶೀ ವಿನಿಮಯ ವ್ಯವಹಾರಗಳು ಸುಸೂತ್ರವಾಗಿ ನಡೆಯುವಂತೆ ಅನುಕೂಲ ಮಾಡುವ ವ್ಯವಸ್ಥೆಯಾಗಿತ್ತು.

ಈ ಕೂಟ ಐರೋಪ್ಯ ಆರ್ಥಿಕ ಸಹಕಾರ ಸಂಸ್ಥೆಯ ಭಾಗವಾಗಿ ಕಾರ್ಯಾಚರಣೆ ನಡೆಯಿಸುತ್ತಿದ್ದುದರಿಂದ ಆ ಸಂಸ್ಥೆಯ ಸಮಿತಿಯ ಅಧಿಕಾರವ್ಯಾಪ್ತಿಗೆ ಇದು ಒಳಪಟ್ಟಿತ್ತು. ಆಡಳಿತ ಸೌಕರ್ಯಕ್ಕಾಗಿ ಸಮಿತಿ ಪ್ರತಿವರ್ಷ ಏಳು ಸದಸ್ಯರನ್ನುಳ್ಳ ಒಂದು ಆಡಳಿತ ಮಂಡಲಿಯನ್ನು ಚುನಾಯಿಸುತ್ತಿತ್ತು. ಕೂಟ ವ್ಯವಸ್ಥೆಯ ಕಾರ್ಯನಿರ್ವಹಣೆ, ಋಣಿ ರಾಷ್ಟ್ರಗಳು ಕೊಡಬೇಕಾದ ಮತ್ತು ಧನಿ ರಾಷ್ಟ್ರಗಳಿಗೆ ನೀಡಬೇಕಾದ ಬಡ್ಡಿದರಗಳ ನಿರ್ಣಯ, ಸದಸ್ಯರಾಷ್ಟ್ರಗಳ ಆರ್ಥಿಕ ಸ್ಥಿತಿಗತಿಗಳ ಅವಲೋಕನ ಇವು ಬೋರ್ಡಿನ ಮುಖ್ಯ ಕರ್ತವ್ಯಗಳು. ಲೇಣೆ–ದೇಣೆ ಕೊರತೆ ಅಥವಾ ಹೆಚ್ಚಳ ಹೊಂದಿರುವ ರಾಷ್ಟ್ರಗಳು ಕೈಗೊಳ್ಳಬೇಕಾದ ನೀತಿಗಳ ಮತ್ತು ಕ್ರಮಗಳ ಬಗ್ಗೆ ಸಲಹೆ ಮಾಡುವ ಅಧಿಕಾರವನ್ನು ಕೂಟ ಪಡೆದಿತ್ತು.

ಐರೋಪ್ಯ ಸಲ್ಲಿಕೆ ಕೂಟದ ವ್ಯವಹಾರಗಳೂ ಲೆಕ್ಕಾಚಾರಗಳೂ 1921ರಲ್ಲಿ ಸ್ಥಾಪನೆಯಾದ ಅಂತರರಾಷ್ಟ್ರೀಯ ತೀರುವೆ ಬ್ಯಾಂಕಿನ ಮೂಲಕ ನಡೆಯುತ್ತಿದ್ದುವು. ಪ್ರತಿ ಸದಸ್ಯ ರಾಷ್ಟ್ರವೂ ಇತರ ಒಂದೊಂದು ಸದಸ್ಯ ರಾಷ್ಟ್ರದ ಲೆಕ್ಕದಲ್ಲಿಯೂ ಇಟ್ಟ ಮೊಬಲಗನ್ನು ತಿಂಗಳಿಗೊಮ್ಮೆ ಬ್ಯಾಂಕಿಗೆ ತಿಳಿಸುವುದು ; ಈ ಲೆಕ್ಕಗಳ ಆಧಾರದ ಮೇಲೆ ಒಂದೊಂದು ಸದಸ್ಯರಾಷ್ಟ್ರದೊಡನೆಯೂ ಹೊಂದಿದ್ದ ಹೆಚ್ಚಳ—ಕೊರತೆ ಸ್ಥಿತಿಯನ್ನು ಬ್ಯಾಂಕು ಲೆಕ್ಕ ಮಾಡಿ, ಇದರ ಆಧಾರದ ಮೇಲೆ ಹೆಚ್ಚಳ ಅಥವಾ ಕೊರತೆಯನ್ನು ಸಂಬಂಧಪಟ್ಟ ಸದಸ್ಯರಾಷ್ಟ್ರ ಬ್ಯಾಂಕಿನೊಡನೆ ಒಂದೇ ವ್ಯವಹಾರದ ಮೂಲಕ ಸರಿತೂಗಿಸುವುದು. ಇದೇ ಸಲ್ಲಿಕೆ ಕೂಟದ ಕಾರ್ಯವಿಧಾನ.

ವಿದೇಶೀ ಸಲ್ಲಿಕೆ ಕೊರತೆ ಹೊಂದಿದ್ದ ಸದಸ್ಯರಾಷ್ಟ್ರಗಳಿಗೆ ಒಂದು ಮಿತಿಯ ವರೆಗೆ ಕೂಟ ಉದ್ದರಿ ನೀಡುತ್ತಿತ್ತು. ಪ್ರತಿಯೊಂದು ಸದಸ್ಯರಾಷ್ಟ್ರವೂ ನಿಗದಿಯಾದ ಪ್ರಮಾಣಕ್ಕೂ ಮೀರಿದ ಕೊರತೆ ಉಂಟಾಗದಂತೆ ಸೂಕ್ತ ಕ್ರಮ ಕೈಕೊಳ್ಳಬೇಕಾಗಿತ್ತು. ಏಕೆಂದರೆ ಕೂಟದ ನಿಯಮಾನುಸಾರ ನಿಗದಿಯಾದ ಒಂದು ಪ್ರಮಾಣಕ್ಕೂ ಮೀರಿದ ಕೊರತೆಯನ್ನು ಚಿನ್ನ ಅಥವಾ ಡಾಲರು ಕೊಟ್ಟು ಸರಿತೂಗಿಸಬೇಕಿತ್ತು. ಇದು ಸಾಮಾನ್ಯವಾಗಿ ಕಷ್ಟವಾಗಿದ್ದುದರಿಂದ ಸದಸ್ಯರಾಷ್ಟ್ರಗಳು ಎಚ್ಚರಿಕೆಯಿಂದ ಕೊರತೆಯ ಪ್ರಮಾಣ ಮಿತಿ ಮೀರದಂತೆ ನೋಡಿಕೊಳ್ಳಲು ಪ್ರಯತ್ನಿಸುತ್ತಿದ್ದುವು. ಕೆಲವು ವಿಶೇಷ ಸಂದರ್ಭಗಳಲ್ಲಿ ಕೂಟ ಹೆಚ್ಚು ಉದ್ದರಿಯ ವ್ಯವಸ್ಥೆ ಮಾಡಿಕೊಟ್ಟಿತು.

ಲೇಣೆ–ದೇಣೆಗಳಲ್ಲಿ ಹೆಚ್ಚಳ ಹೊಂದುವ ಸದಸ್ಯರಾಷ್ಟ್ರಗಳು ಕೂಟದ ಮೇಲೆ ಹೆಚ್ಚು ಹೆಚ್ಚು ಪಾವತಿ ಹಕ್ಕು (ಕ್ಲೇಮ್ಸ್) ಕೂಡಿಸುತ್ತ ಹೋಗದಂತೆಯೂ ಮಿತಿಗಳನ್ನು ವಿಧಿಸಲಾಗಿತ್ತು. ಮಿತಿಮೀರಿದ ಹಕ್ಕುಗಳನ್ನು ಹೊಂದಿದ ರಾಷ್ಟ್ರಗಳೊಡನೆ ಕೂಟ ವಿಶೇಷ ಏರ್ಪಾಡುಗಳನ್ನು ಮಾಡಿಕೊಳ್ಳುತ್ತಿತ್ತು.

ಮುಖ್ಯವಾಗಿ ಕೂಟರಾಷ್ಟ್ರಗಳೊಳಗೆ ಸಂಭವಿಸುತ್ತಿದ್ದ ಲೇಣೆ-ದೇಣೆಗಳ ಅಸಮತೆ ಸರಿಪಡಿಸಲು ಇದು ನೇರ ನೆರವು ನೀಡುತ್ತಿತ್ತು. ಅಲ್ಲದೆ ಕೊರತೆ ಹೊಂದಿದ್ದ ರಾಷ್ಟ್ರಕ್ಕೆ ಇದು ವಿಶೇಷ ಸಲಹೆ ನೀಡುವ ಅಧಿಕಾರ ಪಡೆದಿದ್ದುದರಿಂದ ಆ ರಾಷ್ಟ್ರ ವಿದೇಶೀ ಹಣ ಮತ್ತು ವ್ಯಾಪಾರ ನೀತಿಗಳ ಮೇಲೂ ಪ್ರಭಾವ ಹೊಂದಿತ್ತು. ಕೂಟದ ಆಡಳಿತ ಮಂಡಳಿ ಪ್ರತಿಯೊಂದು ಸದಸ್ಯರಾಷ್ಟ್ರದ ವಿದೇಶೀ ವ್ಯವಹಾರಗಳನ್ನೂ ಅದರ ಸಾಮಾನ್ಯ ಆರ್ಥಿಕ ಪರಿಸ್ಥಿತಿಯನ್ನೂ ಆಗಿಂದಾಗ್ಗೆ ಕೂಲಂಕಷವಾಗಿ ಪರಿಶೀಲಿಸಿ, ಏರುಪೇರುಗಳನ್ನು ಸರಿಪಡಿಸಲು ಸೂಕ್ತಕ್ರಮಗಳನ್ನು ಸೂಚಿಸುತ್ತಿತ್ತು. ಮಿತಿಮೀರಿದ ಕೊರತೆ ಅಥವಾ ಹೆಚ್ಚಳಗಳೇ ಈ ಸಂಸ್ಥೆ ಎದುರಿಸಬೇಕಾಗಿದ್ದ ಮುಖ್ಯ ಸಮಸ್ಯೆಯಾಗಿತ್ತು. ಈ ಸಮಸ್ಯೆಯನ್ನು ನಿವಾರಿಸುವುದರಲ್ಲಿ ಸಂದರ್ಭೋಚಿತ ಕ್ರಮ ಕೈಗೊಂಡು ವಿನಿಮಯದಲ್ಲಿ ರಾಷ್ಟ್ರಗಳಿಗೆ ಹೆಚ್ಚಿನ ಅನುಕೂಲ ಕಲ್ಪಿಸುವುದೇ ಕೂಟದ ಮುಖ್ಯ ಗುರಿಯಾಗಿತ್ತು.

ಕೂಟ ಸ್ಥಾಪನೆಯಾದ ತಿಂಗಳಲ್ಲೇ ಕೊರಿಯದ ಯುದ್ಧ ಸಂಭವಿಸಿದ್ದರಿಂದ ಇದು ಕಷ್ಟಪರಿಸ್ಥಿತಿ ಎದುರಿಸಬೇಕಾಯಿತು. ಕೆಲವು ಸದಸ್ಯರಾಷ್ಟ್ರಗಳ ಅಂತರರಾಷ್ಟ್ರೀಯ ಲೇಣೆ–ದೇಣೆಗಳಲ್ಲಿ ಅಸಾಧಾರಣ ಕೊರತೆ ಪ್ರಾಪ್ತವಾಯಿತು; ಇತರ ಕೆಲವು ರಾಷ್ಟ್ರಗಳ ಲೇಣೆ–ದೇಣೆಗಳಲ್ಲಿ ಮಿತಿಮೀರಿದ ಹೆಚ್ಚಳ ಉಂಟಾಯಿತು. ಈ ಎರಡು ರೀತಿಯ ಸಂದರ್ಭಗಳು ವಿಶೇಷ ಸಮಸ್ಯೆಗಳನ್ನೆ ಸೃಷ್ಟಿಸಿದುವು.

1950–51ರಲ್ಲಿ ಜರ್ಮನಿಯ ವಿದೇಶೀ ಲೇಣೆ–ದೇಣೆಯಲ್ಲಿ ತೀವ್ರ ಪ್ರಮಾಣದ ಕೊರತೆ ಸಂಭವಿಸಿತು. ಕೂಟ ನೆರವಿಗೆ ಬಾರದಿದ್ದಲ್ಲಿ ಜರ್ಮನಿ ಆಮದು ನಿರ್ಬಂಧ ಕ್ರಮ ಇದರಿಂದಾಗಿ ಬಂದು ತತ್ಪರಿಣಾಮವಾಗಿ ನೆದರ್ಲೆಂಡ್ಸ್, ಡೆನ್ಮಾರ್ಕ್ ಮುಂತಾದ ರಾಷ್ಟ್ರಗಳ ಮೇಲೆ ದುಷ್ಪರಿಣಾಮವಾಗುತ್ತಿದ್ದುದೇ ಅಲ್ಲದೆ ಕ್ರಮೇಣ ಐರೋಪ್ಯ ಆರ್ಥಿಕ ವ್ಯವಸ್ಥೆಯ ವ್ಯಾಪಾರ ನಿರ್ಬಂಧ ನಿರ್ಮೂಲ ಕಾರ್ಯಕ್ರಮಗಳೆಲ್ಲವೂ ಮುರಿದು ಬೀಳುವಂತಾಗುತ್ತಿತ್ತು. ಕೂಟ ಜರ್ಮನಿಗೆ ಆ ವರ್ಷ (1950–51) ಒದಗಿಸಿದ ಸುಮಾರು 12 ಕೋಟಿ ಡಾಲರುಗಳ ಉದ್ದರಿಯಿಂದ ಜರ್ಮನಿಯ ಆರ್ಥಿಕ ಪುನರುಜ್ಜೀವನಕ್ಕೆ ಸಹಾಯವಾಯಿತು. ತುರ್ಕಿ, ಗ್ರೀಸ್, ಆಸ್ಟ್ರಿಯ ಮತ್ತು ಐಸ್‌ಲೆಂಡ್‌ಗಳು ಅನುಭವಿಸಿದ ಲೇಣೆ–ದೇಣೆ ಕೊರತೆ ಪರಿಸ್ಥಿತಿ ಎದುರಿಸಲೂ ಐರೋಪ್ಯ ಸಲ್ಲಿಕೆ ಕೂಟ ನೆರವು ನೀಡಿತು.

ಕೂಟ ಸ್ಥಾಪನೆಯಾದ ವರ್ಷ ಬ್ರಿಟನ್, ಫ್ರಾನ್ಸ್, ಪೋರ್ಚುಗಲ್ ಮತ್ತು ಬೆಲ್ಜಿಯಂ ರಾಷ್ಟ್ರಗಳ ಲೇಣೆ-ದೇಣೆಗಳಲ್ಲಿ ಮಿತಿಮೀರಿದ ಹೆಚ್ಚಳಗಳು ಸಂಭವಿಸಿದ್ದಾಗ ವಾಣಿಜ್ಯ ಹಾಗೂ ವಿನಿಮಯ ನಿರ್ಬಂಧಗಳನ್ನು ಸಡಲಿಸಬೇಕೆಂದು ಆ ರಾಷ್ಟ್ರಗಳಿಗೆ ಕೂಟ ಸಲಹೆ ಮಾಡಿತು. ಈ ಸಲಹೆಯ ಪ್ರಕಾರ ಕೈಕೊಂಡ ಕ್ರಮಗಳಿಂದ ಪರಿಸ್ಥಿತಿ ಸುಧಾರಿಸಲು ಅನುಕೂಲವಾಯಿತು.

1954ರಲ್ಲಿ ಕೂಟದ ಒಪ್ಪಂದ ಪುನರ್ ಪರಿಶೀಲನೆಗೆ ಬಂದಾಗ 1950ರಲ್ಲಿ ಸದಸ್ಯ ರಾಷ್ಟ್ರಗಳು ಒಪ್ಪದೆ ಇದ್ದ ಒಂದು ಮುಖ್ಯ ತತ್ತ್ವವನ್ನು ಆಗ ಅಂಗೀಕರಿಸಲಾಯಿತು. ಸದಸ್ಯರಾಷ್ಟ್ರಗಳು ಕೂಟದ ಸಾಲಗಳ ಬಗ್ಗೆ ಸಾಲ ತೀರುವೆ ನಿಧಿಯ ಏರ್ಪಾಡು (ಅಮಾರ್ಟೈಸೇಷನ್) ಕೈಕೊಳ್ಳಬೇಕೆಂಬುದೇ ಈ ಹೊಸ ಕ್ರಮ. ಅಂದಿನಿಂದ 1958ರ ತನಕ ಮಾಡಿದ ಇಂಥ ಸಾಲತೀರುವೆ ನಿಧಿಗಳು ಒಟ್ಟಿನಲ್ಲಿ 112 ಕೋಟಿ ಡಾಲರುಗಳಷ್ಟು ತೀರುವೆಗೆ ಏರ್ಪಾಟು ಮಾಡಿದುವು.

ಒಟ್ಟಿನಲ್ಲಿ 1950–56ರ ಅವಧಿಯಲ್ಲಿ ಸಂಭವಿಸಿದ 3,200 ಕೋಟಿ ಡಾಲರುಗಳಷ್ಟು ಒಟ್ಟು ಹೆಚ್ಚಳ ಮತ್ತು ಕೊರತೆಗಳಲ್ಲಿ ಮುಕ್ಕಾಲು ಭಾಗದಷ್ಟನ್ನು ಪುಸ್ತಕದಲ್ಲೆ ಪರಸ್ಪರ ಜೋಡಣೆಯಿಂದಲೇ ಸರಿತೂಗಿಸಲು ಸಾಧ್ಯವಾಯಿತು ; ಉಳಿದ ಕಾಲು ಭಾಗವನ್ನು ಮಾತ್ರ ಚಿನ್ನ ಮತ್ತು ಡಾಲರುಗಳ ಲೇಣೆ-ದೇಣೆ ಮೂಲಕ ಸರಿತೂಗಿಸಲಾಯಿತು. ಈ ವ್ಯವಹಾರದಲ್ಲಿ ಅಮೆರಿಕದ ಸಹಾಯ ಮೊದಮೊದಲು ಹೆಚ್ಚಾಗಿದ್ದು ಕ್ರಮೇಣ ಕಡಿಮೆಯಾಯಿತು. ಅಂತರ-ಐರೋಪ್ಯ ಲೇವಾದೇವಿಯಲ್ಲಿ ಚಿನ್ನ ಹಾಗೂ ಪರಿವರ್ತನೀಯ ಹಣಗಳ ಹೆಚ್ಚುವರಿಯ ಉಪಯೋಗದಿಂದ ಅಂತರರಾಷ್ಟ್ರೀಯ ವ್ಯಾಪಾರ ಸರ್ವತೋಮುಖವಾಗಿ ಬೆಳೆಯಲು ಮಾರ್ಗ ಏರ್ಪಟ್ಟಿತು. ದ್ವಿಪಕ್ಷೀಯ ವ್ಯಾಪಾರ ಏರ್ಪಾಡುಗಳ ಮೂಲಕ ಕೆಲವು ದುಬಾರಿ ರಫ್ತುದಾರರು ಹಿಂದೆ ಪಡೆಯುತ್ತಿದ್ದ ರಕ್ಷಣೆಯನ್ನು ಒಕ್ಕೂಟದ ಏರ್ಪಾಡುಗಳು ತೆಗೆದುಹಾಕಿದುದರಿಂದ ವ್ಯಾಪಾರಮಾರ್ಗ ಆರ್ಥಿಕ ಬಲಗಳ ನಿರ್ದೇಶನಕ್ಕೆ ಒಳಗಾದಂತಾಯಿತು.

ವ್ಯಾಪಾರ ಪ್ರಮಾಣದ ಬಗ್ಗೆ ಇದ್ದ ಪರತ್ತುಗಳನ್ನು ಸಡಿಲಗೊಳಿಸಿದ್ದರಿಂದ ಅಂತರ ಐರೋಪ್ಯ ವ್ಯಾಪಾರ ನಿರಾತಂಕ ವ್ಯಾಪಾರದತ್ತ ಸಾಗಿತು. ಇವುಗಳಿಂದ ವಿವಿಧ ಐರೋಪ್ಯ ರಾಷ್ಟ್ರಗಳ ಬೆಲೆಮಟ್ಟಗಳಲ್ಲಿ ಹೊಂದಾಣಿಕೆಯುಂಟಾಗುತ್ತ ಬಂತು. ಕೃತಕ ಆರ್ಥಿಕ ಪ್ರತ್ಯೇಕತಾಶಕ್ತಿಗಳು ಮಾಯವಾದುವು. ಈ ಕೂಟದಿಂದ ಐರೋಪ್ಯ ಅರ್ಥವ್ಯವಸ್ಥೆಯಲ್ಲಿ ಸ್ವಾಭಾವಿಕ ಸ್ಪರ್ಧಾ ಪ್ರವೃತ್ತಿಗಳನ್ನು ಪುನಃ ಸ್ಥಾಪಿಸಲು ಸಹಾಯವಾಯಿತೆನ್ನಬಹುದು. (ಎ.ಪಿ.ಎಸ್.)

**ಐರೋಪ್ಯ ಸಾಮಾನ್ಯ ಮಾರುಕಟ್ಟೆ :** ನೋಡಿ—ಐರೋಪ್ಯ ಆರ್ಥಿಕ ಸಮುದಾಯ.

**ಐರೋಪ್ಯ ಸಾಹಿತ್ಯವಿಮರ್ಶೆಯ ರೂಪರೇಷೆಗಳು :** ಸಾಮಾನ್ಯವಾಗಿ ಪ್ರಚಾರವಾಗಿರುವ ಅಭಿಪ್ರಾಯದಂತೆ ಐರೋಪ್ಯ ಸಾಹಿತ್ಯವಿಮರ್ಶೆಯ ಇತಿಹಾಸಕ್ಕೆ ಸ್ಥೂಲವಾಗಿ ಏಳು ಅವಧಿಗಳುಂಟು. ಕ್ರಿಸ್ತಪೂರ್ವ ನಾಲ್ಕನೆಯ ಶತಮಾನದಿಂದ ಒಂದನೆಯ ಶತಮಾನದ ಕಡೆಯ ವರೆಗೆ ಹೆಲೆನಿಕ್ ಮತ್ತು ಹೆಲೆನಿಸ್ಟಿಕ್ ವಿಭಾಗಗಳನ್ನೊಳಗೊಂಡ ಪ್ರಾಚೀನ ಗ್ರೀಕ್ ಅವಧಿ, ಅಲ್ಲಿಂದ ಸುಮಾರು ಕ್ರಿಸ್ತಶಕ ಐನೂರರ ವರೆಗೆ ಪ್ರಾಚೀನ ರೋಮನ್ ಅವಧಿ, 500 ರಿಂದ 1500ರ ವರೆಗೆ ಮಧ್ಯಯುಗ, 1500 ರಿಂದ ಸುಮಾರು 1630ರ ತನಕ ಹೊಸ ಹುಟ್ಟಿನ ಕಾಲ, ಅಲ್ಲಿಂದ ಹೆಚ್ಚು ಕಡಿಮೆ 18ನೆಯ ಶತಮಾನದ ಕೊನೆಯ ವರೆಗೆ ನವಅಭಿಜಾತತೆಯ ಸಮಯ, ಆಮೇಲೆ ಸುಮಾರು ನಲವತ್ತು ಐವತ್ತು ವರ್ಷ ರೊಮ್ಯಾಂಟಿಕತೆಯ ಕಾಲ, ಸುಮಾರು 19ನೆಯ ಶತಮಾನದ ಮಧ್ಯದಿಂದ ಆಧುನಿಕ ಯುಗ—ಹೀಗೆ. ಪ್ರಾಚೀನ ಗ್ರೀಕರನ್ನೂ ರೋಮನರನ್ನೂ ಸಾಹಿತ್ಯಸೃಷ್ಟಿಯಲ್ಲಿ [illegible] ಅಭಿಜಾತ [illegible] ಕಾಲವೆಂದು ಬಗೆಯುವುದು ವಾಡಿಕೆ. ಮಧ್ಯಯುಗದಲ್ಲಿ ಕ್ರೈಸ್ತ ಚರ್ಚಿನ ಪ್ರಭಾವ

ಅತ್ಯಂತವಾಗಿ ಇದ್ದನ್ನದ್ದರಿಂದಲೂ ಲೌಕಿಕ ಸಾಹಿತ್ಯ ಹೆಚ್ಚಾಗಿ ತಲೆಯೆತ್ತದ್ದರಿಂದಲೂ ಮಧ್ಯಯುಗದ ವಿಮರ್ಶೆ ಗಮನಾರ್ಹವಲ್ಲವೆಂದು ಕೆಲವರ ಅಭಿಮತ. ಅದನ್ನು ಒಪ್ಪಲಾಗದು. ನಿಯೊಕ್ಲಾಸಿಕಲ್ ಪದ್ಧತಿಯೆಂಬ ನವ ಅಭಿಜಾತ ಪಂಥದ ಹೊಸ ಹುಟ್ಟು ಎದ್ದು ಬಂದಾಗಲೇ ಪ್ರಾರಂಭವಾಯಿತೆಂದು ಕೆಲವರ ಭಾವನೆ. ಹಾಗೆ ಆಗಿರಬಹುದು. ಆದರೂ ಹೊಸ ಹುಟ್ಟಿನ ಸಾಹಿತ್ಯಕ್ಕೂ ಸಾಹಿತ್ಯವಿಮರ್ಶೆಗೂ ಶಿಷ್ಟತೆಯಿಂದ ವಿಭಿನ್ನವಾದ ಸ್ವಂತ ವರ್ಚಸ್ಸು ತುಂಬಿರುವುದರಿಂದ ಅವನ್ನು ನವ ಅಭಿಜಾತತೆಯಿಂದ ಪ್ರತ್ಯೇಕಿಸಿ ಲಕ್ಷಿಸುವುದೇ ಸಾಧು. ಒಬ್ಬೊಬ್ಬರಿಗೆ ಆಧುನಿಕಯುಗ ಸುಮಾರು 1750ರಂದೇ ಉದಯಗೊಂಡಿತೆಂದು ತೋರಿಬಂದಿದೆ. ಅವರ ಭಾವನೆಗೆ ರೊಮ್ಯಾಂಟಿಕ್ ಸಮಯ ಆಧುನಿಕತೆಯಲ್ಲಿ ಅಂತರ್ಗತ. ಇದನ್ನು ಒಪ್ಪಲಾಗದು. ನವ ಅಭಿಜಾತತೆ 19ನೆಯ ಶತಮಾನದ ಒಂದೆರಡು ದಶಕದಲ್ಲೂ ಹಠ ಹಿಡಿದು ನಿಂತಿದ್ದು ತನ್ನ ಆಡಳಿತ ಬಿಟ್ಟುಕೊಡಲು ಸಮ್ಮತಿಸಲಿಲ್ಲ. ಅದನ್ನು ಪೂರ್ತಿ ಕೆಳಗಿಳಿಸುವುದಕ್ಕೆ ರೊಮ್ಯಾಂಟಿಕತೆಯೊಂದೇ ಸಾಲದಾಯಿತು. ವಾಸ್ತವತೆ ವೈಜ್ಞಾನಿಕತೆ ಎರಡೂ ಬೆಂಬಲ ಕೊಟ್ಟ ಮೇಲೆ ನವ ಅಭಿಜಾತತೆಗೆ ಇಳಿಗಾಲ ಪ್ರಾರಂಭವಾಯಿತು. ಅದೂ ಅಲ್ಲದೆ ರೊಮ್ಯಾಂಟಿಕತೆಗೆ ತನ್ನದೇ ಆದ ವೈಶಿಷ್ಟ್ಯವಿದೆ. ಹಿಂದಿನದನ್ನು ಸಂಪೂರ್ಣವಾಗಿ ಕೈಬಿಟ್ಟಲ್ಲದೆ ಇಂದಿನದು ಬದುಕಲಾರದು ಎಂದು ಆಧುನಿಕತೆ ಸಾರಿದರೆ ಹಿಂದಿನದರ ಸ್ಫೂರ್ತಿಯಿಂದ ಕಸುವುಗೊಂಡು ಇಂದಿನದು ಬೆಳೆಯಬೇಕು ಎಂಬುದು ರೊಮ್ಯಾಂಟಿಕತೆಯ ಧ್ಯೇಯ. ಆದ್ದರಿಂದ ರೊಮ್ಯಾಂಟಿಕ್ ಅವಧಿಯನ್ನು ಆಧುನಿಕತೆಯಲ್ಲಿ ವಿಲೀನಗೊಳಿಸುವುದು ಸರಿಯಲ್ಲ.

ಸಾಹಿತ್ಯವನ್ನು ಕುರಿತ ಸಾಹಿತ್ಯವೇ ವಿಮರ್ಶೆ. ಮೊದಲು ಸಾಹಿತ್ಯ ಅನಂತರ ವಿಮರ್ಶೆ—ಇದು ತರ್ಕಸಮ್ಮತ ಕ್ರಮ. ಪುರಾತನ ಗ್ರೀಕರಲ್ಲಿ ಅದೇ ಕ್ರಮ ಆಗಿ ಬಂದದ್ದರಿಂದ ಅವರು ಕಂಡುಹಿಡಿದ ಕಾವ್ಯತತ್ತ್ವಗಳಿಗೂ ನಿಯಂತ್ರಿಸಿದ ಕಾವ್ಯ ಸೂತ್ರಗಳಿಗೂ ಬಹುಕಾಲ ನಿಲ್ಲುವ ಸತ್ಯತೆಯೂ ಸಾಮರ್ಥ್ಯವೂ ಲಭಿಸಿದುವು. ಕ್ರಿಸ್ತ



ಪ್ಲೇಟೊ

ಪೂರ್ವ ೯ನೆಯ ಶತಮಾನದಿಂದ ಭವ್ಯಕಾವ್ಯಗಳೂ ಪ್ರಗಾಥಗಳೂ ಐದನೆಯ ಶತಮಾನದಲ್ಲಿ ರುದ್ರನಾಟಕ ಹರ್ಷನಾಟಕಗಳೂ ಸಾಕಷ್ಟು ವಿರಚಿತವಾಗಿ ಪ್ರಚಾರಗೊಂಡು ಜನರಿಗೆ ಪರಿಚಯವಾದುವು. ಭವ್ಯಕವಿ ಹೋಮರ್ ಗ್ರೀಕರಿಗೆ ಅಚ್ಚುಮೆಚ್ಚು. ಅವನ ಕಾವ್ಯಗಳ ಮೇಲೆ ಏಳು ಆರನೆಯ ಶತಮಾನಗಳಲ್ಲಿ ಕೆಲವು ಜ್ಞಾನಿಗಳು ಮಾಡಿದ ಟೀಕೆಟಿಪ್ಪಣಿಗಳು ಈಗಲೂ ಉಳಿದಿವೆ. ತತ್ತ್ವವಿಚಾರದಲ್ಲೂ ನೀತಿಬೋಧನೆಯಲ್ಲೂ ಅವರು ಆಡಿದ ಪ್ರಾಸಂಗಿಕ ವಾಕ್ಯಗಳನ್ನು ಸಾಹಿತ್ಯವಿಮರ್ಶೆಯೆಂದು ಪರಿಗಣಿಸಲಾಗದು. ಹಾಗೆಯೇ ವಿಡಂಬನಕಾರನಾದ ವಿನೋದಶೀಲ ಅರಿಸ್ಟೊಫೇನಿಸ್ ತನ್ನ ನಾಟಕದಲ್ಲಿ ಎಸಗಿದ ರುದ್ರನಾಟಕಕಾರರ ತುಲನೆಯನ್ನೂ ಖಚಿತ ವಿಮರ್ಶೆಯೆಂದು ತೆಗೆದುಕೊಳ್ಳುವುದು ಅಸಾಧ್ಯ. ಕಾವ್ಯವಿಮರ್ಶೆ ಅಧಿಕೃತವಾಗಿ ವ್ಯವಸ್ಥಿತವಾಗಿ ಪ್ರಾರಂಭವಾದದ್ದು ನಾಲ್ಕನೆಯ ಶತಮಾನದಲ್ಲಿ, ಮಹಾದಾರ್ಶನಿಕ ಪ್ಲೇಟೊವಿನಿಂದ. ಪ್ಲೇಟೊವನ್ನು ಕಾವ್ಯವಿರೋಧಿ, ಕವಿಗಳ ಶತ್ರು ಎನ್ನುತ್ತಿದ್ದರು. ಅದು ಕೇವಲ ಬಾಹ್ಯನೋಟದ ಪರಿಣಾಮ. ಕವಿತ್ವಕ್ಕೆ ಒಂದು ಬಗೆಯ ದಿವ್ಯಾವೇಶ ಆವಶ್ಯಕವೆಂದು ಅವನಂತೆ ಉತ್ಸಾಹಗೂಡಿ ಸುರಮ್ಯವಾಗಿ ಬಣ್ಣಿಸುವವರು ಅಪರೂಪ. ಕವಿಗಳ ಆ ಸಮ್ಮೋಹನ ಶಕ್ತಿಯೇ ಅವನಲ್ಲಿ ಕೋಪ ಎಬ್ಬಿಸಿತು. ಮಂದಿ ರಾಗಾವೇಶದಿಂದ ಕುಣಿದಾಡುವಂತೆ ಮಾಡಿ ಅವರನ್ನು ದುರ್ಬಲಗೊಳಿಸುತ್ತದೆ, ಕಾವ್ಯ—ಎಂಬುದು ಅವನ ಆಕ್ಷೇಪಣೆ. ಅಲ್ಲದೆ ಆದರ್ಶವಾಗಬೇಕಾದ ಸತ್ಯದ ನಕಲಿನ ನಕಲನ್ನು ಕಾವ್ಯ ತಯಾರಿಸುತ್ತದೆಯಾಗಿ ಅದು ಸತ್ಯದಿಂದ ದೂರ; ದೇವತೆಗಳೂ ವಿಷಯಲಾಂಪಟ್ಯಾದಿ ದೋಷಯುಕ್ತರೆಂದು ಸುಳ್ಳು ಹೇಳಿ ದೈವದೂಷಣೆಯ ಕಡೆಗೆ ಜನರನ್ನು ತಳ್ಳುತ್ತದೆ. ಆದ್ದರಿಂದ ಆದರ್ಶರಾಷ್ಟ್ರದಲ್ಲಿ ಕವಿಗಳಿಗೆ ಜಾಗವಿರಕೂಡದು. ಪ್ರಾಯಶಃ ಕಮ್ಮಾರ, ಕೃಷಿಕ ಮೊದಲಾದವರು ಕವಿವರ್ಗಕ್ಕಿಂತ ಹೆಚ್ಚು ಲೋಕೋಪಕಾರಿಗಳೆಂದು ಪ್ಲೇಟೊವಿನ ನಿರ್ಧಾರ. ಪ್ರಾಚೀನ ಗ್ರೀಕರಿಗೆ ಬಡಗಿ, ವೈದ್ಯ, ಶಿಲ್ಪಿ, ಕವಿ ಎಲ್ಲರೂ ಒಂದೇ ಗುಂಪಿನ ಕೆಲಸಗಾರರು. ಸಮಾಜಸೇವೆ ಎಲ್ಲರಿಗೂ ಗುರಿ.

ಪ್ಲೇಟೊವಿನ ಶಿಷ್ಯರಲ್ಲಿ ಅರಿಸ್ಟಾಟಲ್ ಒಬ್ಬ. ಅವನು ಗುರುವಿನ ಮತವನ್ನು ಖಂಡಿಸಲೋಸ್ಕರವೇ ತನ್ನ ಕಾವ್ಯಕಲೆಯನ್ನು ರೂಪಿಸಲಿಲ್ಲ. ಅವನ ಉದ್ದೇಶಗಳಲ್ಲಿ ಅಂಥ ಪ್ರತಿಭಟನೆ ಒಂದಾಗಿದ್ದರೂ ಇರಬಹುದು. ಅರಿಸ್ಟಾಟಲನ ವಾದಸರಣಿ ಇದು. ಅನುಕರಣೆ ಕಾವ್ಯದ ಕೆಲಸ, ದಿಟ; ಆದರೆ ಅದು ಯಥಾರ್ಥತೆಯನ್ನು ತದ್ವತ್ತಾಗಿ ತಂದಿಡುವುದಿಲ್ಲ; ಒಳಗೆ ಹುದುಗಿರುವ ಆದರ್ಶ ಸತ್ಯವನ್ನು ಪ್ರತಿಬಿಂಬಿಸುತ್ತದೆ. ಕಾವ್ಯ ಇತಿಹಾಸಕ್ಕಿಂತ ಹೆಚ್ಚು ತತ್ತ್ವವತ್ತಾದದ್ದು, ತತ್ತ್ವ ಶಾಸ್ತ್ರಕ್ಕಿಂತ ಹೆಚ್ಚು ರಸವತ್ತಾದದ್ದು. ಜನರೊಳಗೆ ಇದ್ದುಕೊಂಡು ಮಂದ್ಯೆಸಿ ಕಸಿವಿಸಿಗೊಳಿಸುವ ಮರುಕ, ಭೀತಿ ಇತ್ಯಾದಿ ಭಾವಗಳು ಹೊರಬೀಳುವಂತೆ ಮಾಡಿ ಹೃದಯಶುದ್ಧಿಗೂ ಮನಶ್ಶಾಂತಿಗೂ ಕಾವ್ಯ ಸುಲಭೋಪಾಯವಾಗುತ್ತದೆ. ಮೇಲಾಗಿ ಕಾವ್ಯ ತನಗೆ ಸಮಂಜಸವಾದ ಮತ್ತು ತನ್ನಿಂದ ಮಾತ್ರ ಒದಗಬಲ್ಲ ಸಂತಸವನ್ನು ಕೊಡುವುದರಿಂದ ಅದು ಪುರಸ್ಕಾರಾರ್ಹ.

ಭವ್ಯಕಾವ್ಯ, ರುದ್ರನಾಟಕ, ಹರ್ಷನಾಟಕ ಮುಂತಾದ ಪ್ರಭೇದಗಳ ವಿಂಗಡಣೆ, ರುದ್ರನಾಟಕದ ಆರು ಅಂಗಗಳ ವಿವರಣೆ, ಕವಿಗಳ ಸಾಮ್ಯವೈಷಮ್ಯ ನಿರೂಪಣೆ ಇತ್ಯಾದಿ ಹಲವು ಕಾರ್ಯಗಳನ್ನು ಅರಿಸ್ಟಾಟಲ್ ಸಮರ್ಪಕವಾಗಿ ನಡೆಸಿಕೊಟ್ಟ.

ಪ್ರಾಚೀನ ಗ್ರೀಕರಿಗೆ ಕಾವ್ಯಾಲಾಪ ಹವ್ಯಾಸವಾದರೆ ಭಾಷಣವಿದ್ಯೆ ನಿತ್ಯಜೀವನದ ಚರ್ಯೆಯಾಗಿತ್ತು. ಅದಕ್ಕೂ ಒಂದು ಉತ್ತಮ ಕೈಪಿಡಿ ರಚಿತವಾಯಿತು, ಅರಿಸ್ಟಾಟಲನಿಂದ. ಭಾಷಣದ ಜಿಜ್ಞಾಸೆಯ ಮೂಲಕ ಗದ್ಯದ ವಿಚಾರವನ್ನೂ ಆತ ಚೆನ್ನಾಗಿ ಪರಿಶೀಲಿಸಿದ. ಮುಂದೆ ನೂರಾರು ವರ್ಷ ಆ ಪುಸ್ತಕಕ್ಕೆ ಮರ್ಯಾದೆ ದೊರಕಿತೇ ವಿನಾ ಅವನ ಕಾವ್ಯಕಲೆಗಲ್ಲ. ಎಂದರೆ ನಮ್ಮ ದೃಷ್ಟಿಗೆ ಎಷ್ಟೇ ಘನ ವಿಮರ್ಶಕನಾಗಿ ಅರಿಸ್ಟಾಟಲ್ ಕಾಣಬಂದರೂ ಸಾಹಿತ್ಯವಿಮರ್ಶೆಗೆ ಮುಖ್ಯವೃತ್ತಿಯ ಪದವಿಯನ್ನು ಹೊಂದಿಸಿಕೊಡುವುದು ಆಗಲಿಲ್ಲ, ಅವನಿಂದ ಕೂಡ. ವಾಗ್ಮಿತೆಯ ಆಕರ್ಷಣೆಗೆ ಕುಂದು ತಟ್ಟಲಿಲ್ಲ. ಪ್ರಜಾಪ್ರಭುತ್ವ ಕುಸಿದುಬಿದ್ದು ಚಕ್ರಾಧಿಪತ್ಯ ಏರ್ಪಟ್ಟ ಮೇಲೂ ಆ ಕಲೆಗೆ ಪ್ರೋತ್ಸಾಹ ಕಡಿಮೆಯಾಗಲಿಲ್ಲ. ಯುವಕರ ವಿದ್ಯಾಭ್ಯಾಸಕ್ಕೆ ವ್ಯಾಕರಣ ತರ್ಕಗಳೊಂದಿಗೆ ಅದೂ ಒಂದು ಪಠ್ಯವಾಯಿತು.

ಹೆಲನಿಸ್ಟಿಕ್ ಅಥವಾ ಅಲೆಕ್ಸಾಂಡ್ರಿಯನ್ ಅವಧಿಯಲ್ಲಿ ಅನೇಕ ಮಹಾಪಂಡಿತರು ಆಗಿಬಂದರು. ಪ್ಲೋಟಿನಸ್. ಪ್ರೋಕ್ಲಸ್, ಪಾರ್ಫೈರಿ, ಮೆಲೀಗರ್. ಹರ್ಮೊಜೀನಿಸ್, ಡಿಮೆಟ್ರಿಯಸ್ ಮುಂತಾದವರಿಗೆ ವಿಶೇಷ ಸನ್ಮಾನತೆಯಿತ್ತು. ಭಾಷಣವಿದ್ಯೆಯೇ ಅವರ ಪ್ರಧಾನ ಆಸಕ್ತಿಯಾಗಿದ್ದರೂ ಸಾಹಿತ್ಯದ ಗೋಜನ್ನು ಅವರು ಬಿಡಲಾಗಲಿಲ್ಲ. ಅಥವಾ ಬಿಡಲೊಲ್ಲದೆ ಹೋದರು. ಏತಕ್ಕೆಂದರೆ ವಾದಚಾತುರ್ಯ, ಯುಕ್ತ್ಯಾಲಂಕಾರ, ಉಪಕ್ರಮ. ಮುಕ್ತಾಯ ಮುಂತಾದವಕ್ಕೆಲ್ಲ ಸಾಹಿತ್ಯದಿಂದಲೇ ಸೂಕ್ತ ನಿದರ್ಶನ ಬರಬೇಕಲ್ಲವೇ ? ಹೋಮರನನ್ನೂ, ನೂರಾರು ರುದ್ರನಾಟಕಕಾರರನ್ನೂ ಆ ವಿದ್ವಾಂಸರು ಪಠಿಸಿದಂತೆ ಯಾವ ವಿಮರ್ಶಕನೂ ಪಠಿಸಲಾರ. ಹೀಗಾಗಿ ಭಾಷಣವಿದ್ಯೆ ಬರುತ್ತ ಬರುತ್ತ ಸಾಹಿತ್ಯವಿಮರ್ಶೆಯನ್ನು ಹೆಚ್ಚು ಹೆಚ್ಚು ಪ್ರಮಾಣದಲ್ಲಿ ತನ್ನೊಳಕ್ಕೆ ಸೇರಿಸಿಕೊಂಡಿತು. ಸಾವಿರಾರು ನಾಟುನುಡಿಗಳು (ಎಪಿಗ್ರಾಮ್)

ಪ್ರಚುರಗೊಂಡುವು. ಅವುಗಳಲ್ಲಿ ಹಲವು ಅತ್ಯುತ್ತಮ ವಿಮರ್ಶೆಯ ಕಿಂಚಿತ್ ಛಾಯೆಯಿಂದ ಆಹ್ಲಾದಕರವಾಗಿವೆ. ವಾಗ್ಮಿವಿದ್ಯೆಯ ಆವಶ್ಯಕತೆಯೂ ಮಹತ್ತ್ವವೂ ರೋಮನರ ಕಾಲದಲ್ಲಿ ಹೆಚ್ಚಾದುವೇ ಹೊರತು ಕಡಿಮೆಯಾಗಲಿಲ್ಲ.

ರೋಮನರಿಗೆ ಗ್ರೀಕ್ ಭಾಷೆಯನ್ನು ಕಂಡರೆ ಅತೀವ ವ್ಯಾಮೋಹ: ಸುಸಂಸ್ಕೃತ ಪುರುಷರೆಲ್ಲರೂ ಸ್ವಂತ ನುಡಿಯಾದ ಲ್ಯಾಟಿನ್ ಜೊತೆಗೆ ಗ್ರೀಕಿನಲ್ಲೂ ಬಲ್ಲವರಾಗಿದ್ದರು. ಸಿಸಿರೊ ಲ್ಯಾಟಿನ್ ಗದ್ಯದ ಸೀಮಾಪುರುಷರಲ್ಲಿ ಅತಿ ಗಣ್ಯನಾದವ; ಅವನು ಸಮಯ ಸಿಕ್ಕಿದಾಗಲೆಲ್ಲ ಮಾತನಾಡುತ್ತಿದ್ದುದು ಗ್ರೀಕ್. ಕೆಲವು ವಿದ್ವಾಂಸರು ಗ್ರೀಕಿನಲ್ಲೇ ಗ್ರಂಥ ಬರೆದರು. ಪ್ಲೂಟಾರ್ಕನ ಹೆಸರು ಜಗದ್ವಿಖ್ಯಾತವಾದುದು. ಅವನಿಗೆ ಸಾಹಿತ್ಯದ ವಿಚಾರ ಮುಖ್ಯವಾಗಿರಲಿಲ್ಲ. ಡೆಮಾಸ್ತನೀಸ್ ಸಿಸಿರೊಗಳನ್ನು ಹೋಲಿಸಿ ಬರೆದ ಪ್ರಬಂಧದಲ್ಲೂ ಸಾಹಿತ್ಯಸಂಬಂಧಿಯಾದ ವಾಕ್ಯಗಳು ವಿರಳ. ಪ್ರಾಯಶಃ ಅವನಿಗೆ ಗೊತ್ತಿದ್ದ ಲ್ಯಾಟಿನ್ ಬಡಕಲೋ ಏನೊ! ಭಾಷಣವಿದ್ಯೆಯ ಬೋಧಕರಲ್ಲಿ ಒಬ್ಬನಾದ ಲ್ಯೂಸಿಯನ್ ಅರಿಸ್ಟೋಫೆನೀಸನಂತೆ ಅವಹೇಳನಕುಶಲಿ, ನಾವೀನ್ಯದ ವೈರಿ. ಶುದ್ಧಶೈಲಿಯ ಉಪಾಸಕ, ಮಿತತ್ತ್ವದ ಮತ್ತು ಮಧ್ಯಮ ಮಾರ್ಗದ ಪ್ರೇಮಿ. ವಿಮರ್ಶಕನಾಗುವ ವ್ಯಕ್ತಿತ್ವ ಅವನಲ್ಲಿ ಅಂಕುರವಾಗಿದ್ದರೂ ಅದು ಎಲೆಗೂಡಲಿಲ್ಲ, ಹೂಬಿಡಲಿಲ್ಲ.

ಸಾಂಸ್ಕೃತಿಕ ಪರಿಸ್ಥಿತಿ ಹೀಗಿದ್ದರೂ ಕ್ರಿ.ಶ. ಸುಮಾರು 250ರಲ್ಲಿ ಉತ್ಕೃಷ್ಟತೆಯಲ್ಲಿದ್ದ ಒಬ್ಬ ವಿಮರ್ಶಕನನ್ನು ಬಹುವಾಗಿ ಶ್ಲಾಘಿಸಲಾಗಿದೆ. ಅವನ ಹೆಸರು ಲಾಂಜೈನಸ್. ನಡೆದಾಡುವ ಪುಸ್ತಕಭಂಡಾರ, ಸಚೇತನ ವಿಶ್ವಕೋಶ—ಎಂಬ ವರ್ಣನೆ ಅವನದ್ದಾಗಿದ್ದಿತಂತೆ. ಅವನ ಒಂದು ಕಿರು ಹೊತ್ತಿಗೆ ಉಪಲಬ್ಧವಾಗಿದೆ. ಅದಕ್ಕೆ ಅಂಟಿಸಿರುವ ಈಚಿನ ಹೆಸರು ಭವ್ಯತೆಯನ್ನು ಕುರಿತು—ಎಂದು. ಅದು ಅಸಮರ್ಪಕವೆಂದು ಕೆಲವು ನುರಿತ ವಿದ್ವಾಂಸರ ಅಭಿಪ್ರಾಯ. ವಾಗ್ವಿಭವೋನ್ನತಿ—ಎಂಬ ನಾಮಧೇಯ ಉಚಿತವೆಂದು ಅವರ ಹೇಳಿಕೆ. ಗ್ರಂಥದಲ್ಲಿ ಉದ್ವೇಕ್ಮಾ ಸತ್ತ್ವಮಯವಾದ ರಸವದ್ವಾಕ್ಯಗಳು ನರ್ತನಗೈಯುತ್ತವೆ. ಕಾವ್ಯ ಹೇಗೆ ಮಹೋನ್ನತವಾಗಬಲ್ಲುದು ಎಂಬುದನ್ನು ಸೂಕ್ಷ್ಮ ವಿವೇಚನೆಯಿಂದಲೂ ಭಾವಪೂರಿತವಾಗಿಯೂ ಮನವೊಪ್ಪಿಸುವ ಉಜ್ಜ್ವಲ ನುಡಿಯಿಂದಲೂ ಲಾಂಜೈನಸನಂತೆ ವಿವರಿಸಬಲ್ಲ ಜಾಣರು ವಿರಳ. ಕಾವ್ಯ ಶ್ರೇಷ್ಠವೆನಿಸುವುದು ನೀತಿಬೋಧೆಯಿಂದಲ್ಲ, ಓದುಗರಿಗೆ ಪರವಶತೆಯನ್ನುಂಟುಮಾಡುವುದರಿಂದ. ಮಹೋನ್ನತ ಶೈಲಿಗೆ ಉದಾತ್ತ ಭಾವನೆಗಳೂ ಧಾರಾಳ ಮನಸ್ಸೂ ಸೂಕ್ತ ರಾಗಾವೇಶವೂ ಅಲಂಕಾರಪ್ರಾವೀಣ್ಯವೂ ಅಮೋಘವಾಗ್ಜಾಲವೂ ಉತ್ಕೃಷ್ಟ ಸಂಯೋಜನೆಯೂ ಕಾರಣ. ಸರಿಯಾದ ಉದಾಹರಣೆಗಳ ಮೂಲಕ ಹೇಗೆ ಮಹೋನ್ನತಿ ಕುದುರಿದೆ, ಎಲ್ಲಿ ಅದರ ಆಭಾಸ ಉಂಟಾಗಿದೆ ಎಂಬುದನ್ನು ಸ್ಪಷ್ಟಪಡಿಸಿದ್ದಾನೆ. ಯಾವ ಅಂಶವನ್ನೇ ಚರ್ಚಿಸುತ್ತಿರಲಿ ಅವನ ಉಕ್ತಿ ತತ್ಕ್ಷಣ ನಮ್ಮ ಮನಸ್ಸನ್ನು ಒಲಿಸಿಕೊಳ್ಳುತ್ತದೆ. ದೋಷವಿಲ್ಲದಿರುವಿಕೆ ಎಂಬ ವಿಷಯದಲ್ಲಿ ಅವನದೇ ಕೊನೆಯ ಮಾತು ಎನ್ನಬಹುದು. ಸಾಹಿತ್ಯವನ್ನು ಸಾಹಿತ್ಯವಾಗಿಯೇ ವಿಮರ್ಶಿಸಿದವರಲ್ಲಿ ಅವನೇ ಮೊಟ್ಟಮೊದಲಿಗ. ಲಾಂಜೈನಸ್ ಏಕಾಂಗಿ. ಅವನ ಸನಿಯಕ್ಕೆ ಬರಬಲ್ಲವರು ಹಾಗಿರಲಿ, ಅವನ ಪಥದಲ್ಲಿ ಹೆಜ್ಜೆಯಿಡಲು ಬಯಸಿದ ವಿದ್ವಾಂಸನೊಬ್ಬನೂ ಸಾಹಿತ್ಯ ಚರಿತ್ರೆಯಲ್ಲಿ ನಮಗೆ ಕಾಣಸಿಗರು.

ರೋಮನರಿಗೆ ಗ್ರೀಕರಿಂದ ಆದ ಅನುಕೂಲಗಳಲ್ಲಿ ಮುಖ್ಯವಾದದ್ದು ಇದು: ತಮ್ಮ ಮುಂದಿದ್ದ ವಿಶಾಲ ಗ್ರೀಕ್ ಸಾಹಿತ್ಯದೊಡನೆ ತಮ್ಮ ಸಾಹಿತ್ಯವನ್ನು ಹೋಲಿಸಿ, ತೂಕಮಾಡಿ, ಬೆಲೆ ನಿಷ್ಕರ್ಷಿಸಿ, ವಿಮರ್ಶೆಗೆ ತಿರುಳನ್ನೂ ಸ್ವಾರಸ್ಯವನ್ನೂ ಅವರು ತಂದುಕೊಂಡರು. ಆದರೆ ಅವರು ಸ್ವಭಾವತಃ ಕಾರ್ಯಪಟುಗಳು, ಆಲೋಚನಾಪರರಲ್ಲ. ಎರಡನೆಯದಾಗಿ ಲ್ಯಾಟಿನ್ ಸಾಹಿತ್ಯಕ್ಕೆ ಪುಷ್ಟಿ ಕಡಿಮೆಯಾಗಿತ್ತು. ದಣಿಯ ಹಿಂದೆ ಆಳುಗಳು ನಡೆಯುವಂತೆ ವರ್ಜಿಲ್ ಹೋಮರನನ್ನೂ ಸೆನೆಕ ಯೂರಿಪಿಡೀಸನನ್ನೂ ಹೊರೇಸ್ ಅರಿಸ್ಟಾಟಲನ್ನೂ ಭಯಭಕ್ತಿಯಿಂದ ಹಿಂಬಾಲಿಸಿದರು. ಪ್ರತಿಭಾಶಾಲಿಗಳೇ ಹೀಗೆ ಮಾಡಿದ ಮೇಲೆ ಸಾಧಾರಣ ಸಾಹಿತಿಗಳ ಗತಿಯೇನು! ಲುಕ್ರೀಷಿಯಸ್ ಮತ್ತು ಕ್ಯಾಟಲಸ್ ಇಬ್ಬರೇ ಸ್ವಾವಲಂಬಿಗಳಾಗಿ ಸ್ವತಂತ್ರ ಹಾದಿಯಲ್ಲಿ ಮುಂದುವರಿದು ಅಪ್ಪಟ ರೋಮನರಾದರು; ಆದರೆ ಅವರಿಗೆ ಸಂದ ಗೌರವ ಅಷ್ಟೇನೂ ಹೇಳುವಂಥದಲ್ಲ

ಇದರಿಂದ ಏನು ಉಪಯೋಗ, ಎಂಬುದು ರೋಮನರ ಜಾಯಮಾನ. ಭಾಷಣವಿದ್ಯೆ ಅವರಿಗೆ ಬಹುವಾಗಿ ಬೇಕಾಯಿತು. ವಾಗ್ಮಿತೆಯಲ್ಲಿ ಅವರು ಗ್ರೀಕರನ್ನು ಸರಿಗಟ್ಟಬಹುದಾಗಿತ್ತು. ಆದ್ದರಿಂದ ಭಾಷಣವಿದ್ಯೆಯ ಬೋಧಕರೂ ಗ್ರಂಥಕರ್ತರೂ ವ್ಯಾಖ್ಯಾನಕಾರರೂ ಐದನೆಯ ಶತಮಾನದ ಅಂತ್ಯದ ವರೆಗೂ ಉದಿಸಿಬಂದು ನೇರವಾಗಿ ಅಲ್ಲದಿದ್ದರೂ ಸಾಹಿತ್ಯದ ಮಾತುಕತೆಯನ್ನು ಪಾಲಿಸಿಕೊಂಡರು. ಅವರಲ್ಲಿ ಕ್ವಿಂಟಿಲಿಯನ್ ಮುಖ್ಯಸ್ಥ. ಅವನೇನೂ ಪ್ರತಿಭಾವಂತನಲ್ಲ. ಆದರೆ ವಾಗ್ಮಿತೆಯ ಸೂತ್ರಗಳಿಗೆ ಉದಾಹರಣೆಗೋಸ್ಕರ ಅವನು ಸಾಹಿತ್ಯವನ್ನು ಆ ಕಡೆಯಿಂದ ಈ ಕಡೆಯ ವರೆಗೆ ಅಭ್ಯಾಸ ಮಾಡಿದ. ಆಗೊಮ್ಮೆ ಈಗೊಮ್ಮೆ ಅವನ ವದನದಿಂದ ಸಾಹಿತ್ಯವಿಮರ್ಶೆ ಉದುರುತ್ತದೆ—ಅದೂ ಸಾಹಿತ್ಯದ ಮೇಲಣ ಮಮತೆಯಿಂದಲ್ಲ, ವ್ಯಾವಹಾರಿಕ ದಕ್ಷತೆಯ ಸಾಧನೆಗೋಸ್ಕರ. ಸಾಹಿತ್ಯ ಭಾಗಗಳನ್ನು ಉದ್ಧರಿಸದೇ ಬಿಟ್ಟರೆ ಯಾವ ವಕೀಲನಾಗಲಿ ಸೆನೆಟ್ ಸಭಾಸದನಾಗಲಿ ಶೋಭಿಸುವುದಿಲ್ಲವೆಂಬುದು ಅವನ ಭಾವನೆ.

ರೋಮನ್ ಯುಗದಲ್ಲಿ ಅವತರಿಸಿದ ಒಬ್ಬ ಸಾಹಿತಿಗೆ ವಿಮರ್ಶಕನೆಂಬ ಅಪಾರ ಖ್ಯಾತಿ ಒದಗಿಬಂತು. ಕೆಲಕಾಲ ಅವನು ಅರಿಸ್ಟಾಟಲನ್ನು ಹಿಂದೆ ಹಾಕಿದ. ಬಹಳ ಕಾಲ ಅವನೊಡನೆ ಸಹ ಸಿಂಹಾಸನರೂಢನಾಗಿ ವಿಮರ್ಶಾಸಾಮ್ರಾಜ್ಯವನ್ನು ಆಳಿದ. ಅವನೇ ಹೊರೇಸ್. ಹೊರೇಸ್ ನಿಜವಾಗಿ ಕವಿ, ಮೃದು ವಿಡಂಬನಕಾರ,



ಹೊರೇಸ್

ಕುಶಲ ಪತ್ರದ ರೀತಿಯ ಲಲಿತಪ್ರಬಂಧಕಾರ. ಉದ್ದೇಶಪೂರ್ವಕವಾಗಿ ಅವನೆಂದೂ ವಿಮರ್ಶೆ ಬರೆದವನಲ್ಲ. ಆದರೂ ಅವನ ಒಂದು ಪದ್ಯಪ್ರಬಂಧ ಕಾವ್ಯಕಲೆ ಎಂಬ ಹೆಸರನ್ನು ಹೊತ್ತು ವಿಮರ್ಶೆಯ ಪ್ರಸ್ಥಾನ ಗ್ರಂಥವಾಯಿತು. ಅದರಲ್ಲಿ ಗಾಢ ಚಿಂತನೆಯ ಗಂಭೀರತೆಗೂ ಭಾವಾವೇಶದ ಉರವಣೆಗೂ ಆಸ್ಪದವಿಲ್ಲ. ಎಲ್ಲೆಲ್ಲೂ ಸರಳವೂ ಸ್ಪಷ್ಟವೂ ವಿವೇಕಯುಕ್ತವೂ ಒಲಿಸಿಕೊಳ್ಳತಕ್ಕವೂ ಆದ ನಿಯಮಾವಳಿಗಳಿವೆ. ಅವು ಸ್ಥಾನದರ್ಪದಿಂದ ಜರುಗುವ ಆಜ್ಞೆಗಳಲ್ಲ, ಅನುಭವಪೂರ್ಣನಾದ ಹಿರಿಯನ್ನು ಕೊಡುವ ಸವಿ ಹಿತೋಪದೇಶಗಳು. ಹೊರೇಸನದು ಸೂತ್ರೋಚ್ಚಾರ ವಿಮರ್ಶೆಯಾದರೂ (ಪ್ರಿಸ್ಕ್ರಿಪ್ಟಿವ್ ಕ್ರಿಟಿಸಿಸಂ) ಉಚ್ಚರಿಸುವವ ಸುಶಿಕ್ಷಿತ ಸಂಭಾವಿತನಾಗಿ ನಾಗರಿಕ ವಿನಯ ಮರ್ಯಾದೆಯನ್ನು ಸದಾ ಪಾಲಿಸುವವನಾದ್ದರಿಂದ ರಸಾಹ್ಲಾದ ಉಂಟಾಗುತ್ತದೆಯೇ ಹೊರತು ಆಕ್ರೋಶ ಉತ್ಪತ್ತಿಯಾಗುವುದಿಲ್ಲ. ಅವುಗಳ ಸಾರಸರ್ವಸ್ವವನ್ನೂ ಔಚಿತ್ಯವೆಂಬ ಒಂದೇ ಶಬ್ದದಲ್ಲಿ ಅಡಕಮಾಡಬಹುದು. ಕಾವ್ಯಪ್ರಕಾರ ಯಾವುದೆಂಬುದನ್ನು ಮರೆಯದಿರಿ, ನಾಟಕಕ್ಕೆ ಐದಂಕವೇ ಇರತಕ್ಕದ್ದು, ರೌದ್ರಕೃತ್ಯವಾವುದೂ ರಂಗದ ಮೇಲೆ ಜರುಗಕೂಡದು, ಪ್ರಸ್ತಾವಕ್ಕೂ ಪಾತ್ರಕ್ಕೂ

ಅನುಗುಣವಾದ ಮಾತನ್ನೇ ಬಳಸಿ, ಗ್ರೀಕ್ ಗ್ರಂಥಗಳನ್ನು ಹಗಲೂ ಇರುಳೂ ಪಠಿಸಿ—ಇತ್ಯಾದಿ. ಸಾರಸ್ವತ ಸಲಹೆಗಳು ಇಡೀ ಯೂರೋಪಿಗೇ ಪ್ರಿಯವಾದುವು. ಹೊರೇಸನ ಸೂಕ್ತಿಗಳು ನಾಣ್ಣುಡಿಯಂತೆ ಕ್ಷಿಪ್ರಗ್ರಾಹ್ಯವಾದವು, ನಾಟಿ ನಿಲ್ಲಬಲ್ಲಂಥವು, ಅತ್ಯಂತ ತೃಪ್ತಿಕರವಾದವು. ಅವನ ಅಪಾರ ಪ್ರಶಸ್ತಿ ನ್ಯಾಯವಾದದ್ದೇ.

ಮಧ್ಯಯುಗ ಸಾಹಿತ್ಯವಿಮರ್ಶೆಯ ಕಾಲವಲ್ಲ—ಎಂದು ಕೆಲವು ವಿದ್ವಾಂಸರು. ತೀರ್ಪಿತ್ತಿದ್ದಾರೆ, ಅದು ಅಕ್ಷರಶಃ ನಿಜವಲ್ಲ. ಆಗ ವಿದ್ಯಾವಂತ ವರ್ಗ ಒಂದಲ್ಲ ಒಂದು ಬಗೆಯಲ್ಲಿ ಕ್ರೈಸ್ತ ಚರ್ಚಿಗೆ ಸಂಬಂಧಿಸಿದ್ದರಿಂದ ಅವರ ಹಂಗಿನ ವಿಷಯ ದೇವತಾಶಾಸ್ತ್ರವಾಗಿತ್ತು (ಥಿಯಾಲಜಿ). ಕಾವ್ಯನಾಟಕಾದಿ ಬರೆಹವನ್ನು ಕೇವಲ ಭಾಷಾಜ್ಞಾನದ ಉಪಕರಣವನ್ನಾಗಿ ಉಪಯೋಗಿಸಿಕೊಂಡು ಕೈಬಿಡತಕ್ಕದ್ದಲ್ಲದೆ ಅವಕ್ಕೆ ಚಿತ್ತವನ್ನು ಸೂರೆಗೊಡಬಾರದು—ಎಂದು ಅವರ ದೃಢನಿರ್ಧಾರ. ಅವರ ಕಠಿಣದೃಷ್ಟಿಗೆ ಗ್ರೀಕ್ ಲ್ಯಾಟಿನ್ ಸಾಹಿತ್ಯವೆಲ್ಲ ಮ್ಲೇಚ್ಛಸಾಹಿತ್ಯ (ಪೇಗನ್ ಲಿಟರೇಚರ್). ಅದರ ಕಡೆಗೆ ಮನಸ್ಸನ್ನು ತಿರುಗಿಸುವುದು ಪಾಪಕಾರ್ಯ. ನಾಟಕವನ್ನು ನೋಡುವವರಿಗೆ ನರಕ ಕಾದಿದೆ. ರಸವ್ಯಾಸಂಗ ಬೇಕಾದರೆ ಮಹಾ ಸಾಹಿತ್ಯವಾದ ಬೈಬಲ್ ಇಲ್ಲವೆ ? ಎಷ್ಟು ಸಾರಿ ಅದನ್ನು ಓದಿದರೆ ತಾನೆ ತಣಿವುಂಟಾದೀತು !

ಆ ವಿದ್ಯಾವಂತರ ಭಾಷೆ ಸಾಮಾನ್ಯವಾಗಿ ಲ್ಯಾಟಿನ್—ವರ್ಜಿಲ್ ಸಿಸಿರೊ ಹೊರೇಸರ ಗ್ರಾಂಥಿಕ ಲ್ಯಾಟಿನ್. ಕೆಳದರ್ಜೆಯ ಲ್ಯಾಟಿನ್ ಮಿಶ್ರವಾದ ದೇಶಭಾಷೆಗಳೂ ಮಧ್ಯಯುಗದಲ್ಲಿ ಬೆಳೆದುಬಂದುವಲ್ಲದೆ ಅವುಗಳಲ್ಲಿ ನೂರಾರು ಯೋಗ್ಯ ಅದ್ಭುತ ಕಥೆಗಳೂ (ರೊಮಾನ್ಸ್) ಸಾವಿರಾರು ಭಾವಗೀತೆಗಳೂ ಹುಟ್ಟಿ ಬಂದುವು. ಆದರೆ ಅವುಗಳ ಕಡೆಗೆ ಪಂಡಿತರ ಗಮನ ಹರಿಯಲೇ ಇಲ್ಲ. ಅವು ಮಧ್ಯಯುಗದ ಪರಮ ಸಾಹಿತ್ಯ ಎಂಬ ನಿಜಾಂಶ ಯೂರೋಪಿಗೆ ಅರಿವಾದದ್ದು 18ನೆಯ ಶತಮಾನದ ಎರಡನೆಯ ಭಾಗದಲ್ಲಿ. ಚರ್ಚಿನ ಆಶ್ರಯದಲ್ಲೇ ರಹಸ್ಯಗಳು, ಪವಾಡಗಳು, ನೀತಿರೂಪಕಗಳು—ಎಂಬ ಮೂರು ಬಗೆಯ ನಾಟಕಗಳು ಮೂಡಿಬಂದುವು. ಅವುಗಳಲ್ಲಿ ಉಪದೇಶ ಹೆಚ್ಚು, ಕಾವ್ಯಾಂಶ ಕಡಿಮೆ. ಅವಕ್ಕೆ ಟ್ರ್ಯಾಜಡಿ, ಕಾಮೆಡಿ—ಎಂಬ ಅಂಕಿತವನ್ನು ಯಾರೂ ಅಂಟಿಸುತ್ತಿರಲಿಲ್ಲ. ಒಂದು ಬಗೆಯ ದೃಷ್ಟಾಂತ ಕಥೆ ಪ್ರಚಾರಕ್ಕೆ ಬಂತು. ಉನ್ನತ ಸ್ಥಾನ ಸಂಪತ್ತಿನಲ್ಲಿ ಇದ್ದು ಬಲು ಸೊಕ್ಕಿ ಪಾತಕಮಾಡಿ ಕೆಳಗುರುಳಿದವನ ಪ್ರಕರಣವೂ ಅದೃಷ್ಟದೇವಿಯ ಅನಿಮಿತ್ತ ಆಗ್ರಹಕ್ಕೆ ಪಕ್ಕಾಗಿ ನೊಂದವನ ಪ್ರಕರಣವೂ ಆ ಕಥೆಯ ವಿಷಯ. ಅದಕ್ಕೇ ಮಧ್ಯಯುಗದಲ್ಲಿ ಟ್ರ್ಯಾಜಡಿ ಎಂಬ ಹೆಸರು. ಹೀಗೆ ಕೊಂಚಮಟ್ಟಿಗಾದರೂ ಸಾಹಿತ್ಯವಿಮರ್ಶೆ ನಡೆಯುತ್ತಲೇ ಇತ್ತು, ಮಧ್ಯಯುಗದಲ್ಲಿ.

ಅಲ್ಲದೆ ಭಾಷಣವಿದ್ಯೆ ಕಡ್ಡಾಯವಾಗಿ ವಿದ್ಯಾಶಾಲೆಗಳಲ್ಲಿ ಬೋಧನ ಭಾಗವಾಗಿತ್ತು. ಬೀಡ್, ಇಸಿಡೋರ್, ಆಗಸ್ಟಿನ್, ಅಪೊಲೋನಿಯಸ್, ಕ್ಯಾಸಿಯೋಡರಸ್, ಬೋಅರಿಯಸ್ ಮೊದಲಾದವರು ಅದರಲ್ಲಿ ಪರಿಣತರಾಗಿದ್ದರು. ಅವರು ಹೊರೇಸ್, ಕ್ವಿಂಟಿಲಿಯನರನ್ನು ಅನುಸರಿಸಿದರು. ಉದಾಹರಣೆಗಾಗಿ ಕಾವ್ಯಭಾಗಗಳನ್ನು ಉಪಯೋಗಿಸಲೇಬೇಕಾಯಿತು. ತತ್ತ್ವಶಾಸ್ತ್ರದ ಮತ್ತು ದೇವತಾಶಾಸ್ತ್ರದ ತೊತ್ತಿನಂತೆ ಕಾವ್ಯ ಜೀತ ದುಡಿದರೆ ಪರವಾಯಿಲ್ಲ, ಎಂಬುದೇ ಅವರ ಸಮಾಧಾನ.

ಆದರೂ ಕಾವ್ಯವನ್ನು ಕುರಿತು ಮಧ್ಯಯುಗದ ಮುಖಂಡರಿಗೆ ಜುಗುಪ್ಸೆ. ಹಿಂದೆ ಪ್ಲೇಟೊ ನುಡಿದಿದ್ದಂಥ ಆಕ್ಷೇಪವನ್ನೇ ಅವರು ಎತ್ತಿ ಆಡಿದರು. ತಮ್ಮ ದೂರಿಗೆ ವ್ಯಾವಹಾರಿಕ ಕಾರಣ ಮುಂದಿಡುವುದು ಅವರ ನಡೆವಳಿಕೆ. ಎಷ್ಟೇ ಆದರೂ ಕಾವ್ಯ ಸುಳ್ಳಿನ ಕಂತೆ, ಕಟ್ಟುಕಥೆಯ ಬೊಂತೆ; ಅದರಲ್ಲಿ ತುಂಬಿರುವ ಅಶ್ಲೀಲತೆ ದೈವ ದೂಷಣೆಗಳಿಂದ ಕೆಡುಕೇ ವಿನಾ ಒಳ್ಳೆಯದಲ್ಲ; ಅದು ಚಿತ್ತವನ್ನು ಬಡಿದೆಬ್ಬಿಸಿ ಶಾಂತಿ ಭಂಗಕ್ಕೆ ದೂಡುತ್ತದೆ, ಮನುಷ್ಯನನ್ನು. ಮ್ಲೇಚ್ಛ ದೇವತೆಗಳನ್ನು ತರುವುದರಿಂದ ಕ್ರೈಸ್ತಮತಕ್ಕೆ ಅದು ವಿರೋಧಿ. ಕಾವ್ಯದಿಂದ ನಡತೆಯನ್ನು ತಿದ್ದುವುದು ಹೇಗೆ ? ಇಂಥ ಅಭಿಪ್ರಾಯಗಳನ್ನು ಟರ್ಟ್ಯುಲಿಯನ್, ಇಸಿಡೋರ್, ಅಕ್ವಿನಸ್ ಮುಂತಾದವರು ಕಟುವಾಗಿ ಹೇಳಿದರು. ಅವರದೇ ಬಲಿಷ್ಠ ಪಕ್ಷ.

ಇನ್ನೊಂದು ಪಕ್ಷವೂ ಇತ್ತೆಂಬುದನ್ನು ಲಕ್ಷಿಸಬೇಕು. ಕಾವ್ಯವನ್ನು ತೀರ ಕೆಟ್ಟು ದಲ್ಲವೆಂದೂ ಸ್ವೀಕರಣೀಯವೆಂದೂ ಸಮರ್ಥನ ಮಾಡಲೋಸುಗ ಅವರಲ್ಲಿ ಕೆಲವರು ಯತ್ನಿಸಿದರು. ಕಾವ್ಯದಲ್ಲಿ ಮುಖ್ಯವಾದದ್ದು ಅದರ ಅಭಿಧಾರ್ಥವಲ್ಲ, ಅನ್ಯಾರ್ಥ (ಅಲೆಗೊರಿ) ಎಂದು ಅವರ ವಾದ. ಹರ್ಕ್ಯುಲೀಸ್ ಥೀಸಿಯಸ್ ಮುಂತಾದ ವೀರರನ್ನು ಆದಿಕಾಲದ ಜ್ಞಾನಿಗಳಂತೆ ಭಾವಿಸತಕ್ಕದ್ದು. ದುಷ್ಟಾಳಿಗಳನ್ನೂ ಭಾವಾತಿರೇಕವನ್ನೂ ಎದುರಿಸಿ ಬಗ್ಗುಬಡಿಯುವುದೇ ಅವರ ನಿಜ ಸಾಹಸ. ಅವರು ಒಂದು ರೀತಿ ಮ್ಲೇಚ್ಛ ಸಂತರು. ಅನ್ಯಾರ್ಥ ಸಂಕೇತವನ್ನು ಆಮೇಲೆ ಬೈಬಲಿನ ಹಳೆಯ ಒಡಂಬಡಿಕೆಯ ಏಬ್ರಹಾಂ, ಆಡಂ, ಈವ್ ಮತ್ತು ಜೇಕಬರಿಗೂ ಅನ್ವಯಿಸಿದರು. ಆರನೆಯ ಶತಮಾನದ ಫುಲ್‌ಜೆಂಟಿಯುಸನಿಂದ ಹದಿನಾಲ್ಕರ ಪೆಟ್ರಾರ್ಕನ ವರೆಗೂ ಅನ್ಯಾರ್ಥ ಪ್ರತಿಪಾದನೆಯೇ ಸಮರ್ಪಕ ಸಾಹಿತ್ಯವಿಮರ್ಶೆಯೆಂಬ ಅಭಿಪ್ರಾಯ ಬಳಕೆಯಲ್ಲಿತ್ತು. ಕಾವ್ಯಕ್ಕೆ ವ್ಯಕ್ತಾರ್ಥ, ನೀತ್ಯರ್ಥ, ಅನ್ಯಾರ್ಥ—ಈ ಮೂರೂ ಸಲ್ಲುತ್ತವೆಂದು ಬಗೆಯ ಬೇಕು. ಡಾಂಟೆ ನಾಲ್ಕನೆಯದೊಂದನ್ನು ತಂದು ಸೇರಿಸಿದ. ಅದೇ ಗೂಢಾರ್ಥ ಅಥವಾ ಅತೀಂದ್ರಿಯಾರ್ಥ (ಅನಗೋಜಿ). ಅನ್ಯಾರ್ಥವಾದುದರಿಂದ ಕಾವ್ಯಕ್ಕೆ ಒಂದು ಬಗೆಯ ಆಸ್ರಯ ದೊರೆತರೂ ಅದು ಒಂದು ಸ್ವತಂತ್ರವ್ಯಾಪಾರವೆಂಬುದು ಸ್ಥಿರವಾಗಲಿಲ್ಲ. ದೇವತಾಶಾಸ್ತ್ರದ ಲೌಕಿಕರೂಪ ಅದು ಎಂದಾಯಿತು. ಆದರೆ ಪೆಟ್ರಾರ್ಕ್, ಬೊಕ್ಯಾಚ್ಚೊ ಇಬ್ಬರೂ ದೇವತಾಶಾಸ್ತ್ರ ಒಂದು ಬಗೆಯ ಕಾವ್ಯ, ದೇವರ ಕಾವ, ಎಂದು ಯುಕ್ತಿಯುಕ್ತವಾಗಿ ವಾದಿಸಿದರು. ಅವರಿಗೆ ಬೈಬಲ್ ಒಂದು ಕಾವ್ಯವೆಂದು ನಿಶ್ಚಲ ನಂಬಿಕೆ. ಕಾವ್ಯಸಮರ್ಥನೆಯಲ್ಲಿ ಬೊಕ್ಯಾಚ್ಚೊ ಮೊಟ್ಟ ಮೊದಲಣ ಆಧುನಿಕ ಎಂದು ಕೆಲವರು ಹೊಗಳಿದ್ದಾರೆ. ಅವನ ಸಮರ್ಥನೆ ದಿಟವಾಗಿ ಆಧುನಿಕವಲ್ಲ ಮಧ್ಯ ಯುಗದ್ದು.

ದೇಶಕಾಲಗಳ ಸಂಕಲೆಯನ್ನು ಕಿತ್ತೊಗೆದು ವಿಶ್ವವ್ಯಾಪ್ತ ಅಮರ ವ್ಯಕ್ತಿಯಂತೆ ವಿಹರಿಸುವುದು ಪ್ರಚಂಡಪ್ರತಿಭಾವಂತನಿಗೆ ಸಾಧ್ಯ. ಅಂಥ ಮಹಾಮೇಧಾವಿ ಡಾಂಟೆ. ಅವನ ವಿಮರ್ಶೆ ಹೆಚ್ಚಾಗಿ ಭಾಷಾವಿಚಾರಕ್ಕೆ ಸೇರಿದ್ದು. ಪ್ರಾಸಂಗಿಕವಾಗಿ ಕಾವ್ಯದ ವಿಚಾರಕ್ಕೆ. ಇಟಲಿಯ ಪ್ರಾಂತಭಾಷೆಗಳ ಹೋಲಿಕೆ ಅವುಗಳ ಗುಣದೋಷ, ಟಸ್ಕನ್ ಭಾಷೆಯ ಹಿರಿಮೆ, ಮುಂತಾದ ಜಿಜ್ಞಾಸೆಯಲ್ಲಿ ಅವನು ಅತ್ಯುತ್ತಮ ವಿಮರ್ಶಕನ ಲಕ್ಷಣವನ್ನು ಮೆರೆದ. ಹಾಗೂ ಪದಗಳ ಸತ್ತ್ವ ಲಾವಣ್ಯಗಳನ್ನು ಅವನು ವಿಂಗಡಿಸಿ ವರ್ಣಿಸಿರುವ ರೀತಿಯೂ ಅದೇ ಬಗೆಯದೇ. ಅವನ ಹಲವು ಚಿಕ್ಕ ವಾಕ್ಯಗಳೂ ವಿಶೇಷಣಗಳೂ ವಿಮರ್ಶೆಯ ಪರಿಭಾಷೆಯಲ್ಲಿ ಸೇರಿಕೊಂಡಿವೆ. ಕಾವ್ಯದ ವಸ್ತು ಮೂರು : ಯುದ್ಧ, ಪ್ರೇಮ, ಸದ್ಗುಣ ಎಂದು ಅವನ ಅಭಿಮತ. ಶಬ್ದಗಳನ್ನು ಜರಡಿಯಾಡಿದ ಡಾಂಟೆಗೆ ಭಾಷಣವಿದ್ಯೆ ಹೊಲ್ಲ ಎನ್ನಿಸಿತು. ಅವನ ವಿಮರ್ಶೆ ಪ್ರಾಚೀನ ಗ್ರೀಕರ ವಿಮರ್ಶೆಗಿಂತಲೂ ಹೆಚ್ಚು ಉದಾರವಾದದ್ದು ಎಂದಿದ್ದಾರೆ. ಲಾಂಜೈನಸನಂತೆ ಡಾಂಟೆಯೂ ತನ್ನ ಯುಗದಲ್ಲಿ ಒಬ್ಬನೇ ಒಬ್ಬ. ಕಾವ್ಯದ ಬಾಹ್ಯರೂಪ ರಚನಾ ಕಟ್ಟು ಪಾಡು ಯಾವುದೇ ಆಗಿರಲಿ ಅದರ ಆಳದಲ್ಲಿನ ಮೂಲ ಸಂಜ್ಞೆ ಸರಿಸುಮಾರಾಗಿ ಒಂದೇ ಗುರುತಿನದು; ಅದನ್ನು ಕಣ್ಣಿಟ್ಟು ನೋಡಿ ಇತರರ ಅವಗಾಹನೆಗೆ ನಿಸ್ಸಂದಿಗ್ಧವಾಗಿ ತರಬಲ್ಲ ವಿಮರ್ಶಕ ರಸಿಕರು ಬೇಡಿದಾಗಲೆಲ್ಲ ಎದ್ದುಬರುವುದಿಲ್ಲ; ಸೃಷ್ಟಿದೇವಿ ತನ್ನ ಇಚ್ಛೆಯಂತೆ ಡಾಂಟೆಯಂಥ ಕವಿ ವಿಮರ್ಶಕನನ್ನು ಕಳಿಸುತ್ತಾಳೆ ಭೂಮಿಗೆ, ಲೋಕೋದ್ಧಾರಕ್ಕಾಗಿ.

ಹೊಸಹುಟ್ಟು (ನವೋದಯ; ರಿನೆಸಾನ್ಸ್) ಎಂಬುದು ಯೂರೋಪಿನ ಸಾಂಸ್ಕೃತಿಕ ಚರಿತ್ರೆಯಲ್ಲಿ ನಡೆದ ಒಂದು ದೊಡ್ಡ ಕ್ರಾಂತಿ. ಸುಮಾರು 15ನೆಯ ಶತಮಾನದಲ್ಲಿ ಮೊದಲು ಇಟಲಿಯಲ್ಲಿ ಅನಂತರ ಫ್ರಾನ್ಸ್ ಇಂಗ್ಲೆಂಡುಗಳಲ್ಲಿ ಅನಂತರ ಸ್ಪೇನ್, ಜರ್ಮನಿ ಮುಂತಾದ ಇತರ ರಾಷ್ಟ್ರಗಳಲ್ಲಿ ಪ್ರಾರಂಭಗೊಂಡ ನವೋದಯ ಸುಮಾರು 1630ರ ವರೆಗೂ ಪ್ರಭಾವಯುಕ್ತವಾಗಿತ್ತು. ಆ ಯುಗದಲ್ಲಿ ಮನುಷ್ಯಜೀವನದ ಸಕಲ ಶಾಖೆಗಳಲ್ಲೂ ಸ್ಪಷ್ಟ ಬದಲಾವಣೆ ಉಂಟಾಯಿತು. ಇಲ್ಲಿ ನಮಗೆ ಪ್ರಕೃತವಾಗಿರುವುದು ಸಾಹಿತ್ಯವನ್ನೂ ಸಾಹಿತಿಗಳನ್ನೂ ಕುರಿತು ಆಲೋಚನಾಪರರಲ್ಲಿ ಆದ ದೃಷ್ಟಿ ವ್ಯತ್ಯಾಸ. ಅದಕ್ಕೆ ಮುಖ್ಯ ಕಾರಣ ಅಭಿಜಾತ (ಕ್ಲ್ಯಾಸಿಕಲ್) ಸಾಹಿತ್ಯದ ಪುನರ್ಗಳಿಕೆ. ಹಳೆಯ ಗ್ರೀಕ್ ಲ್ಯಾಟಿನ್ ಕವಿಗಳ ಮತ್ತು ದಾರ್ಶನಿಕರ ಗ್ರಂಥಗಳು ಮೂಲರೂಪದಲ್ಲಿ ಪಂಡಿತರಿಗೆ ಲಭ್ಯವಾದಾಗ ಅವರ ಅಚ್ಚರಿಗೂ ಮೆಚ್ಚಿಕೆಗೂ ಎಣೆಯಿರಲಿಲ್ಲ. ಆ ಪೇಗನ್ ಸಾಹಿತ್ಯದಲ್ಲಿ ಮೂಡಿಬಂದಿದ್ದ ಸಹಜವೂ ಶುದ್ಧವೂ ಆಳವೂ ವಿಶಾಲವೂ ಆದ ಮಾನವತೆಯನ್ನು ಪರಿಭಾವಿಸಿ ಅವರಿಗೆ ಒಂದು ಕಡೆ ನಿಬ್ಬೆರಗು, ಇನ್ನೊಂದು ಕಡೆ ಪರಮಾನಂದ, ಮತ್ತೊಂದು ಕಡೆ ಹುರುಪು ಹುಮ್ಮಸ್ಸು, ಮಗುದೊಂದು ಕಡೆ ಮಾನವ ಜೀವನದ ಹಿರಿಮೆಯಲ್ಲಿ ಭರವಸೆ. ಕ್ರಮೇಣ ಅವರಿಗೆ ಮಾನುಷ ದಾರ್ಶನಿಕರು (ಹ್ಯೂಮನಿಸ್ಟ್ಸ್) ಎಂಬ ಹೆಸರು ಬಂತು. ಗ್ರಂಥಗಳ ಸಂಗ್ರಹಣೆ, ಸಂಪಾದನೆ, ವ್ಯಾಖ್ಯಾನ, ಟಿಪ್ಪಣಿ ಇತ್ಯಾದಿ ಕಾರ್ಯಾವಳಿಯಲ್ಲಿ ಲೇಖಕರು ಆಸಕ್ತಿಯಿಂದ ನಿರತರಾದರು. ಅವರಿಗೆ ದೊರೆತ ಪುಸ್ತಕಗಡಣದಲ್ಲಿ ಬಹು ಮುಖ್ಯವಾದವುಗಳಲ್ಲಿ ಅರಿಸ್ಟಾಟಲನ ಕಾವ್ಯಕಲೆ ಅತಿ ಮುಖ್ಯವಾದುದು. ಆ ಕಾವ್ಯದೀಪಿಕೆಯ ಇತಿಹಾಸ ನಿಜವಾಗಿ ರೋಮಾಂಚಕ. ಹಿಂದೆ ಸೂಚಿಸಿರುವಂತೆ ಅರಿಸ್ಟಾಟಲನ ತರುವಾಯ ಅದಕ್ಕೆ ಸಾಕಷ್ಟು ಪ್ರಸಾರ ಸಿಗಲಿಲ್ಲ. ಕ್ರಮೇಣ ವಿದ್ವಜ್ಜನ ಅದನ್ನು ಮರೆತುಬಿಟ್ಟಂತೆ ತೋರುತ್ತದೆ. ಹೆಲನಿಸ್ಟಿಕ್ ಅವಧಿಯಲ್ಲಾಗಲಿ ರೋಮನರ ಯುಗದಲ್ಲಾಗಲಿ ಅದರ ಪ್ರಸ್ತಾಪ ವಿಳ ಲಿಲ್ಲ; ಸಿಸಿರೊ, ಹೊರೇಸ್, ಕ್ವಿಂಟಿಲಿಯನ್ ಯಾರೂ ಅದನ್ನು ಓದಿದ್ದಂತೆ ಕಾಣುವುದಿಲ್ಲ. ಎಂದಮೇಲೆ ಮಧ್ಯಯುಗದ ಮಾತೇಕೆ ! ಹತ್ತನೆಯ ಶತಮಾನದಲ್ಲಿ ಅದರ ಸಿರಿಯಾಕ್ ಭಾಷೆಯ ತರ್ಜುಮೆಯನ್ನು ಅಬುಬಾಸ್ಕರ್ ಅರಬ್ಬೀ ಭಾಷೆಗೆ ಪರಿವರ್ತನೆ ಮಾಡಿದನಂತೆ. ಎರಡು ಶತಮಾನಗಳ ತರುವಾಯ ಅವಿರೋಜಿಜ್ ಕೈಯಿಂದ ಇನ್ನೊಂದು ಸಂಕ್ಷಿಪ್ತ ಪ್ರತಿ ತಯಾರಾಯಿತಂತೆ. ಜರ್ಮನಿಯ ಹರ್ಮ್ಯಾನ್ ಎಂಬಾತ ಹದಿಮೂರನೆಯ ಶತಮಾನದಲ್ಲಿ ಕಾವ್ಯಕಲೆಯ ಲ್ಯಾಟಿನ್ ಭಾಷಾಂತರ ರಚಿಸಿದ. ಮಧ್ಯಯುಗದಲ್ಲಿ ಅದು ಕೆಲಕೆಲವರಿಗೆ ಪರಿಚಿತವಾಗಿದ್ದರೂ ಅದರ ಪ್ರಭಾವ ಏನೇನೂ

ಇರಲಿಲ್ಲ. ಹದಿನಾಲ್ಕನೆಯ ಶತಮಾನದಲ್ಲಿ ಸ್ಪೇನಿನ ಮಾಂಟಿನಸನಿಂದ ಇನ್ನೊಂದು ಭಾಷಾಂತರ ಬಂತು. ಆದರೂ ಪೆಟ್ರಾರ್ಕ್, ಬೊಕ್ಯಾಚ್ಚೊ ಅದರ ಹೆಸರನ್ನೇ ಎತ್ತುವುದಿಲ್ಲ.

ಇಟಲಿಯ ಜಾರ್ಜಿಯೊ ವಲ್ಲ 1498ರಲ್ಲಿ ಲ್ಯಾಟಿನ್ ತರ್ಜುಮೆಯನ್ನು ತಯಾರಿಸಿ, 1508ರಲ್ಲಿ ಗ್ರೀಕ್ ಮೂಲದೊಡನೆ ಅದನ್ನು ಪ್ರಕಟಿಸಿದ. 1536ರಲ್ಲಿ ಅಲೆಗ್ಸಾಂಡ್ರಿಯೊ ಫಾಸ್ಚಿಸಿ ಪರಿಷ್ಕರಿಸಿದ ಲ್ಯಾಟಿನ್ ತರ್ಜುಮೆಯನ್ನು ಗ್ರೀಕ್ ಮೂಲದೊಂದಿಗೆ ಪ್ರಕಟಿಸಿದ. ಅಲ್ಲಿಂದ ಮುಂದೆ ಅರಿಸ್ಟಾಟಲ್ ಸಾಹಿತಿಗಳಿಗೂ ಸಾಹಿತ್ಯ ವಿಮರ್ಶಕರಿಗೂ ಒಂದು ಜ್ಯೋತಿಯಾದ. 1548ರಲ್ಲಿ ರಾಬರ್ಟೆಲ್ಲೊವಿನ ವಿಮರ್ಶಾಪೂರ್ಣ ಪ್ರಕಟನೆ ಹೊರಬಂದ ಮೇಲಂತೂ ಅದರ ಪ್ರಶಸ್ತಿಗೆ ಕಳೆಯೇರಿತು.

ಹೊಸ ಹುಟ್ಟಿನ ಮಾನವನಿಷ್ಠ ಪಂಡಿತರಿಗೆ ಹೊಸ ಹುರುಪು ಹೊಸ ಉತ್ಸಾಹ ಹೊಸ ನೋಟ ಇದ್ದದ್ದು ನಿಜ; ಆದರೆ ಹಳೆಯದೆಲ್ಲವನ್ನೂ ಗುಡಿಸಿ ಬಿಸಾಡಿ ಹೊಸ ದನ್ನು ತಂದಿಡುವ ವಿಪರೀತ ಮತಿ ಅವರನ್ನು ಎಂದಿಗೂ ಪೀಡಿಸಿಲ್ಲ. ಕೆಲವಂಶ ಗಳಲ್ಲಿ ಹೊಸಹುಟ್ಟಿನ ಅವಧಿ ಕಂಡ ಹಾಗೆ ಮಧ್ಯಯುಗದ ಮುಂದುವರಿಕೆ ಎಂದರೂ ತಡೆಯುತ್ತದೆ. ಅದು ಬರಿ ಮುಂದುವರಿಕೆಯಲ್ಲ, ಬೆಳವಣಿಗೆ ಕೂಡಿದ ಮುಂದುವರಿಕೆ. ಭಾಷಣವಿದ್ಯೆಯನ್ನು ತೆಗೆದುಕೊಳ್ಳಿ; ವಿದ್ಯಾರ್ಜನೆಗೆ ಅದರ ವಿಶಿಷ್ಟ ಉಪಯೋಗ ಆವಶ್ಯಕವೆಂದು ಮನಗಂಡು ಅದನ್ನು ಹೊಸಹುಟ್ಟಿನಲ್ಲಿ ಇಟ್ಟುಕೊಳ್ಳಲಾಯಿತು. ಭಾಷಣದ ಅವಸರ ಮರೆಯಾಗಿ ಹೋದದ್ದರಿಂದ ಭಾಷಣವಿದ್ಯೆ ಹೆಚ್ಚುಹೆಚ್ಚಾಗಿ ಲೇಖನಕಲೆಯಾಯಿತು (ಕಾಂಪೋಜಿಷನ್); ಕ್ರಮೇಣ ಅಲಂಕಾರಶಾಸ್ತ್ರವಾಗಿ ಪರಿಣಮಿಸಿತು. 19ನೆಯ ಶತಮಾನದ ಕೊನೆಯ ವರೆಗೂ ಅದು ವಿದ್ಯಾಭ್ಯಾಸಕ್ರಮದ ಒಂದು ಅಂಗವಾಗಿಯೇ ನಡೆದುಬಂತು. ಈ ಶತಮಾನದಲ್ಲೂ ವಿಶಾಲಾರ್ಥವನ್ನು ಅದಕ್ಕೆ ಹೊಂದಿಸಿ ಅದರಿಂದ ಪ್ರಯೋಜನ ಪಡೆಯಬಹುದೆಂದು ಐ. ಎ. ರಿಚರ್ಡ್ಸ್ ಮೊದಲಾದವರ ಮತ. 16, 17ನೆಯ ಶತಮಾನಗಳ ಕವಿಗಳ ಶೈಲಿ ಸಾಮಾನ್ಯವಾಗಿ ಅಲಂಕಾರಮಯವಾಗಿರುವುದಕ್ಕೆ ಅವರಿಗೆ ಅಲಂಕಾರಶಾಸ್ತ್ರದಲ್ಲಿ ಶಿಕ್ಷಣ ಆಗಿದ್ದುದೇ ಕಾರಣ. ಪದ್ಯ ಗದ್ಯ ಎರಡರಲ್ಲೂ ಅಲಂಕಾರವೈಖರಿಗೆ ಎಡೆಯಿತ್ತು.

ಮಾನುಷ್ಯವತ್ಸಲರಾದ ವಿದ್ವಾಂಸರು ಹಲವು ಸಾರಸ್ವತ ಕಾರ್ಯಗಳನ್ನು ತಮ್ಮ ಪಾಲಿಗೆ ಬಂದ ಕರ್ತವ್ಯವೆಂದು ಭಾವಿಸಿ ನಿರಾಲಸ್ಯದಿಂದ ಶ್ರಮಿಸಿ ಅವನ್ನು ನೆರವೇರಿಸಿದರು. ಅವು ಹೀಗಿವೆ: 1 ಮುಖ್ಯವೆನಿಸಿದ ಅಭಿಜಾತ (ಕ್ಲಾಸಿಕಲ್) ಗ್ರಂಥಗಳ ನಿರ್ದುಷ್ಟ ಭಾಷಾಂತರ 2 ಅಭಿಜಾತ ವಿಧಾನದ ದೇಶೀಯ ಕಾವ್ಯರಚನೆ, ಮುಖ್ಯವಾದ ನಾಟಕ ಸಾಹಿತ್ಯದ ರಚನೆ 3 ಸಾಹಿತ್ಯಪ್ರಕಾರಗಳ ವಿಂಗಡನೆ ಮತ್ತು ಅವುಗಳ ಭಿನ್ನಲಕ್ಷಣ ನಿರ್ಣಯ 4 ಹಿಂದಣ ಯುಗಗಳಲ್ಲೂ ತಮ್ಮ ಕಾಲದಲ್ಲೂ ಚರ್ಚೆ ಎಬ್ಬಿಸಿದ ಆಕ್ಷೇಪಣೆಗಳಿಂದ ಸಾಹಿತ್ಯವನ್ನು ರಕ್ಷಿಸಿಕೊಳ್ಳುವುದು ಮತ್ತು ಸಾಹಿತ್ಯ ಸಮರ್ಥನೆ 5 ತಮ್ಮ ಕಾಲದ ಕವಿವರ್ಗ ಮನಬಂದಂತೆ ಯದ್ವಾ ತದ್ವಾ ಕಾವ್ಯ ನಿರ್ಮಾಣ ಮಾಡದಂತೆ ತಡೆಗಟ್ಟುವುದು 6 ಹಲವುಕಾಲ ನಿಲ್ಲತಕ್ಕ ಸಾಹಿತ್ಯ ವಿಮರ್ಶೆಯ ರಚನೆ 7 ಪ್ರಾಚೀನ ಗ್ರೀಕ್ ಲ್ಯಾಟಿನ್ ಸಂಸ್ಕೃತಿ ಸಾಹಿತ್ಯಗಳ ಹಿರಿಮೆ ಉಪಯುಕ್ತತೆಗಳ ಸ್ಥಾಪನೆ.

ಇವುಗಳಲ್ಲಿ ಕೆಲವು ಇಲ್ಲಿ ನಮ್ಮ ಪರಿಶೀಲನೆಗೆ ಬರಬೇಕಾದ್ದಿಲ್ಲ.

ಹೊರೇಸ್ ಜೊತೆಗೆ ಅರಿಸ್ಟಾಟಲ್ ಒದಗಿಬಂದದ್ದರಿಂದ ವಿಮರ್ಶಕರಿಗೆ ಚತುರ್ಭುಜ ವಾಯಿತು. ಆದರೆ ಪ್ಲೇಟೊ ಬಗೆಗೆ ಅವರಿಗೆ ತುಂಬ ಆತಂಕ. ಅವನನ್ನು ಅವರೆಂದಿಗೂ ಕೈಬಿಡಲಾರರು. ಕಾವ್ಯವನ್ನು ಅವನು ಬಹುವಾಗಿ ಹಳಿದು ಕವಿಗಳಿಗೆ ಬಹಿಷ್ಕಾರ ಹಾಕಿದ್ದರ ಕಾರಣಗಳನ್ನು ಕುರಿತು ಅವರು ಆಳವಾಗಿ ವಿವೇಚಿಸಿದರು.

ಕವಿಗಳ ಸಂರಕ್ಷಣೆ ಹೊರೇಸನ ನೇತೃತ್ವದಲ್ಲಿ ಜರುಗಿತು : 1 ಕಾವ್ಯದಿಂದ ಬೋಧನೆಯೂ ರಸಾಹ್ಲಾದವೂ ಒಟ್ಟಿಗೆ ಆಗುತ್ತವೆ. 2 ನಾಗರಿಕತೆಯ ಸ್ಥಾಪನೆಗೂ ಉತ್ಕರ್ಷಕ್ಕೂ ಕಾವ್ಯವೊಂದು ಉತ್ತಮ ಸಾಧನ. ಆದಿಕವಿಗಳು ಮಹಾಜ್ಞಾನಿಗಳೂ ಪ್ರವಾದಿಗಳೂ ಆಗಿದ್ದರು; ಅಲ್ಲದೆ ಕುಶಲಕಲೆಗಳೂ ಯಂತ್ರೋಪಕರಣಗಳೂ ನಿರ್ಮಿತವಾದದ್ದು ಅವರಿಂದಲೇ. ಉದಾಹರಣೆಗಾಗಿ ಆರ್ಫಿಯಸ್ ಮನುಷ್ಯರನ್ನು ದುರ್ಭರ ಹಿಂಸಾಕೃತ್ಯಗಳಿಂದ ಮೇಲಕ್ಕೆತ್ತಿದ. ಆಂಫಿಯನ್ ವಸತಿ ನಿರ್ಮಾಣದ ಜನಕನಾದ. ವಿವಾಹ ಮುಂತಾದ ಒಳ್ಳೆಯ ಕಟ್ಟುಪಾಡನ್ನು ಸಮಾಜ ಸುಭದ್ರತೆಗೆ ಒದಗಿಸಿದವರೂ ಕವಿಗಳೇ. 3 ಕವಿಯ ಪೀಳಿಗೆ ಅತ್ಯಂತ ಪುರಾತನವಾದದ್ದು; ಅವನ ಕೆಲಸವನ್ನು ದೈವಿಕವೆಂದೇ ತಿಳಿಯಬೇಕು. 4 ಜನರ ನಡತೆಯ ಮೇಲೆ ಕಾವ್ಯದ ಪ್ರಭಾವ ಪರಿಣಾಮಕರವೆಂಬ ಬಗೆಗೆ ಹೊಸಹುಟ್ಟಿನ ವಿಮರ್ಶಕರಿಗೆ ಸಂದೇಹವೇ ಇರಲಿಲ್ಲ. ವಿದ್ಯಾಭ್ಯಾಸವೆಂದರೆ ಶೀಲಶಿಕ್ಷಣ. ಅದಕ್ಕೆ ಕಾವ್ಯವನ್ನಲ್ಲದೆ ಮತ್ತಾವುದನ್ನೂ ನೆಮ್ಮದಿಯಿಂದ ಬಳಸಲಾಗುವುದಿಲ್ಲ. 5 ಕಾವ್ಯಕ್ಕೂ ಕವಿಗಳಿಗೂ ವಿಶೇಷ ಮನ್ನಣೆ ಅವಿಚ್ಛಿನ್ನವಾಗಿ ಸಂದು ಬಂದಿದೆ. ಇಟಲಿಯಲ್ಲಿ ಸವೋನರೋಲ ಇಂಗ್ಲೆಂಡಿನಲ್ಲಿ ಗಾಸನ್ ಕವಿಗಳನ್ನು ಬಯ್ದು ಗಜರಿ ಗರ್ಜಿಸಿದರು, ನಿಜ. ಅವರ ತಪ್ಪು ತಿಳುವಳಿಕೆಯನ್ನು ಕಂಡು ಕನಿಕರಿಸತಕ್ಕದ್ದೇ ವಿನಾ ಅವರ ಅಭಿಪ್ರಾಯವನ್ನು ಮನ್ನಿಸತಕ್ಕದ್ದಲ್ಲ.

ಇದೆಲ್ಲ ಹೊರಗಣ ವಿಮರ್ಶೆ. ನಿಜವಾದ ಆಂತರಿಕ ವಿಮರ್ಶೆಗೆ ಅರಿಸ್ಟಾಟಲ್ ಪ್ರಬಲ ಪ್ರೇರಕನಾದ. ಅವನ ವಿವರಣೆಯನ್ನು ಅನುಸರಿಸಿ ಈ ಅಭಿಪ್ರಾಯಗಳು ಹೊರಬಂದುವು. ದೇಶದೇಶದವರಿಂದ ಪುನಃಪುನಃ ಘೋಷಣೆಗೊಂಡುವು: 1 ಪ್ರತ್ಯಕ್ಷ ವಾಸ್ತವ್ಯವನ್ನಲ್ಲ ಕಾವ್ಯ ಪ್ರತಿಬಿಂಬಿಸುವುದು, ಪರೋಕ್ಷವೂ ಅತ್ಯುಚ್ಚವೂ ಆದ ಆದರ್ಶ ವಾಸ್ತವ್ಯವನ್ನು. ಅದರ ಮುಖ್ಯ ವಿಷಯ, ವಿಶ್ವವ್ಯಾಪಿಯೂ ಅಮರವೂ ಆದ ಸತ್ಯ ; ಬಿಡಿ ಸಂಗತಿಗಳಲ್ಲ, ಬಿಡಿ ವ್ಯಕ್ತಿಗಳಲ್ಲ. ಕೇವಲ ಆಗುಹೋಗಿನ ಪ್ರತಿಚಿತ್ರಣವಲ್ಲ ಅದರ ಕೆಲಸ ; ಆಗಬಹುದಾದ್ದು ಆಗಬೇಕಾದ್ದು ಅದರ ಲಕ್ಷ್ಯ. 2 ಆದ್ದರಿಂದ ಕಾವ್ಯರೂಪಕ ಭಾವಗಳನ್ನು ಕೆರಳಿಸುವುದೇನೊ ನಿಜ ; ಆದರೆ ಅದು ಮೊದಲಣ ಹೆಜ್ಜೆ, ಅಷ್ಟೆ. ಎರಡನೆಯ ಹೆಜ್ಜೆ ಭಾವಗಳನ್ನು ಉಪಶಮನಗೈದು ಸಂಯಮದ ಕ್ಲುಪ್ತಮರ್ಯಾದೆಗೆ ಅವನ್ನು ಒಳಗೊಳಿಸುವುದು. ಹೀಗೆ ಚರಿತ್ರೆಗಿಂತ ಕಾವ್ಯ ಹೆಚ್ಚು ಪ್ರಯೋಜನಕರ, ತತ್ತ್ವಶಾಸ್ತ್ರಕ್ಕಿಂತ ಹೆಚ್ಚು ಸಂತೋಷದಾಯಕ.

ಡೇನಿಯೆಲೊ (1536), ಮಿಂಟುರ್ನೊ (1559), ಸ್ಕ್ಯಾಲಿಜೊ, ವರ್ಚಿ, ರಾಬರ್ಟೆಲೊ, ಫ್ರಕಾಸ್ಟರೊ (1555) ಮುಂತಾದವರಿಂದ ಕಾವ್ಯಕಲೆ ಎಂಬ ಹೆಸರಿನ ಪ್ರಬಂಧಗಳು ರಚಿತವಾದುವು. ಅವರಲ್ಲಿ ಕೆಲವರಿಗೆ ಅರಿಸ್ಟಾಟಲ್ ಸರಿಯಾಗಿ ಗ್ರಹಿಕೆಯಾಗಲಿಲ್ಲ. ಫ್ರಕಾಸ್ಟರೊ ಆತನನ್ನು ಹೆಚ್ಚುಕಡಿಮೆ ಸರಿಯಾಗಿ ಅರ್ಥ ಮಾಡಿಕೊಂಡಂತೆ ಭಾಸವಾಗುತ್ತದೆ. ಅಷ್ಟೇ ಅಲ್ಲದೆ ಅರಿಸ್ಟಾಟಲನ ಅನುಕರಣತತ್ತ್ವದ ವಿವರಣೆಗೆ ಪ್ಲೇಟೊವಿನ ಆದರ್ಶ ಸೌಂದರ್ಯತತ್ತ್ವವನ್ನು ಫ್ರಕಾಸ್ಟರೂ ಜೋಡಿಸಿದ. ಹೊಸ ಹುಟ್ಟಿನ ಅವಧಿಯಲ್ಲಿ ಸೌಂದರ್ಯವನ್ನು ಮೂರು ರೀತಿ ಪರಿಗಣಿಸುತ್ತಿದ್ದರು: 1 ವಸ್ತುನಿಷ್ಠ, ಇಂದ್ರಿಯಗೋಚರ; ಬಾಹ್ಯಾಕಾರದಂತೆ ವರ್ತುಲ ಚಚ್ಚೌಕ ಇತ್ಯಾದಿ. 2 ನೈತಿಕಕೋನದಿಂದ; ಸೌಂದರ್ಯವೂ ಸಜ್ಜನಿಕೆಯೂ ಹತ್ತಿರ ಹತ್ತಿರ, ಬಹುತೇಕ ಒಂದೇ. 3 ಕಲಾಮೂಲ ಭಾವನೆಯಂತೆ; ವಸ್ತುವಿವರ ಪರಿಕರ ಎಲ್ಲವೂ ಚೆನ್ನಾಗಿ ಹೊಂದಿಕೊಂಡದ್ದು.

ಕಾವ್ಯಪ್ರಭೇದಗಳು ಮೂರೆಂದು ವಿದ್ವಾಂಸರ ಒಡಂಬಡಿಕೆ: ಗೀತಾತ್ಮಕ, ನಾಟಕೀಯ, ಕಥನರೀತಿಯದು. ಈ ವರ್ಗೀಕರಣ ಗ್ರೀಕರಿಂದ ನಡೆದುಬಂದದ್ದು. ಅದಕ್ಕೆ ಹೆಚ್ಚಿನ ಮಾರ್ಪಾಟು ಸಂದಿಲ್ಲ, ಇಂದಿಗೂ.

ಪ್ಲೇಟೊ ಕವಿಗಳನ್ನು ಹೊರದೂಡಿದ್ದು ಏತಕ್ಕೆ ಎಂಬ ಬಿಡಿ ಪ್ರಶ್ನೆಯೊಂದು ವಿದ್ವಾಂಸರಿಗೆ ತಲೆನೋವು ತರುತ್ತಿತ್ತು. ಟ್ಯಾಸೊ, ಡೇನಿಯೆಲೊ ಮೊದಲಾದವರು ಪ್ಲೇಟೊ ಕುಕವಿಗಳನ್ನು ನಿಂದಿಸಿದ, ಸತ್ಕವಿಗಳನ್ನಲ್ಲ ಎಂಬ ಚತುರೋಕ್ತಿಯಿಂದ ಸಮಾಧಾನ ನೀಡಲು ಬಯಸಿದರು.

ಕಾವ್ಯದ ವಿಚಾರದಲ್ಲಿ ಹೊರೇಸ್ ಅರಿಸ್ಟಾಟಲ್ ಪ್ಲೇಟೊ ಈ ಮೂವರ ಅಭಿಪ್ರಾಯಗಳ ಬೆರಕೆಯಿಂದ ಒಂದು ಮೀಮಾಂಸೆಯನ್ನು ಸಜ್ಜುಗೊಳಿಸುವುದು ಪಂಡಿತರಿಗೆ ಸಾಧ್ಯವಾಯಿತು. ನಾಟಕದ ವಿಚಾರದಲ್ಲಿ ಅರಿಸ್ಟಾಟಲ್ ಹೊರೇಸರ ಜೊತೆಗೆ ಮಧ್ಯಯುಗದಿಂದ ಇಳಿದು ಬಂದಿದ್ದನ್ನು ಹೇಗೊ ಮಿಳಿತಗೊಳಿಸಲೇ ಬೇಕಾಯಿತು. ಮಧ್ಯಯುಗದ ಭಾವನೆಯೇನು? ಅರಿಸ್ಟಾಟಲನ ತರುವಾಯ ಅವನ ವಿದ್ಯಾಪೀಠಕ್ಕೆ ಗುರುವಾದ ಥಿಯೊಫ್ರಾಸ್ಟಸನವೆಂದು ಹೇಳಲಾದ ಕೆಲವು ವಿವರಣೋಕ್ತಿಗಳೇ ಮಧ್ಯಯುಗದ ತತ್ತ್ವ. ಥಿಯೊಫ್ರಾಸ್ಟಸನ ಅಭಿಮತ ಇದು: ನಾಯಕನ ಜೀವನದಲ್ಲಿ ದೊಡ್ಡ ಬದಲಾವಣೆ ಉಂಟಾದರೆ ಅದೇ ಟ್ರ್ಯಾಜಡಿ; ಕಾಮೆಡಿಯ ಕಥಾವಸ್ತು ಖಾಸಗಿ ಮಂದಿಯ ಬಾಳಿಗೆ ಸಂಬಂಧಿಸಿದ್ದು, ಏನೇನೂ ಅಪಾಯ ಕಾಣದ್ದು. ರೋಮನರಲ್ಲೂ ಕಾಮೆಡಿಯ ಕಲ್ಪನೆ ಇದೇ ಆಗಿತ್ತು. ಅದಕ್ಕೆ ವ್ಯಾಖ್ಯೆ ಬರೆಯುತ್ತ ಮಧ್ಯಯುಗದ ವಿದ್ವಾಂಸರು ಸಂತೃಪ್ತರಾದರು. ಟ್ರ್ಯಾಜಡಿಗೂ ಕಾಮೆಡಿಗೂ ವ್ಯತ್ಯಾಸವಿಷ್ಟೆ : 1 ಟ್ರ್ಯಾಜಡಿಯ ಮುಖ್ಯ ಪಾತ್ರಗಳು ಅರಸರು, ಜನನಾಯಕರು ; ಕಾಮೆಡಿಯಲ್ಲಿ ಸಾಮಾನ್ಯ ದರ್ಜೆಯ ಮಂದಿ. 2 ಟ್ರ್ಯಾಜಡಿಯಲ್ಲಿ ಭಾರಿ ಅನಾಹುತಗಳು, ರೌದ್ರಚರ್ಯೆ ; ಕಾಮೆಡಿಯಲ್ಲಿ ಸಾಧಾರಣ ಸಾಂಸಾರಿಕ ಜರುಗಣೆಗಳು. 3 ಸುಖದಿಂದ ಪ್ರಾರಂಭವಾದ ಟ್ರ್ಯಾಜಡಿ ಅಸೌಖ್ಯದಲ್ಲಿ ಕೊನೆಗೊಳ್ಳುತ್ತದೆ ; ಕಾಮೆಡಿಯಲ್ಲಿ ಅದರ ವಿಲೋಮ. 4 ಅದರಲ್ಲಿ ಶಬ್ದಪುಂಜವೂ ಶೈಲಿಯೂ ಘನವಾದವು. ಇದರಲ್ಲಿ ಬಳಕೆಯ ಆಡುಮಾತು, ಸಡಿಲ ಶೈಲಿ. 5 ಐತಿಹಾಸಿಕ ಸಂಗತಿಗಳು ಟ್ರ್ಯಾಜಡಿಗೆ ಯೋಗ್ಯ, ಕಾಮೆಡಿಗೆ ಕವಿ ತನ್ನ ಮನಬಂದಂತೆ ಕಥೆ ಕಲ್ಪಿಸಬಹುದು. 6 ದೇಶಭ್ರಷ್ಟತೆ ರಕ್ತಪಾತ ಟ್ರ್ಯಾಜಡಿಗೆ ಸಲ್ಲುತ್ತವೆ. ಪ್ರೇಮ ಗುಪ್ತಪ್ರಣಯ ಕಾಮೆಡಿಗೆ. ಈ ತೆರನ ಅಭಿಪ್ರಾಯ ಹೊಸಹುಟ್ಟಿನ ಅವಧಿಯಲ್ಲೂ ಅಮೇಲೂ ರೂಢಿಯಲ್ಲಿತ್ತು.

ರೂಪಕ ಮೀಮಾಂಸೆಯಲ್ಲಿ ಅರಿಸ್ಟಾಟಲನ್ನು ಹಿಂಬಾಲಿಸುವುದೇ ವಿದ್ವಾಂಸರ ಆಶಯವಾಗಿತ್ತು. ಸಿನ್ನಿಯೊ, ಮ್ಯಾಗಿ ಮುಂತಾದವರು ಅದರ ಪ್ರತಿಪಾದಕರಾದರು. ಅವರಲ್ಲಿ ಸ್ಕ್ಯಾಲಿಜರ್ ಮುಖ್ಯನಾದವ. ಟ್ರ್ಯಾಜಡಿಯ ವಿವರಣೋಕ್ತಿಯಲ್ಲಿ ಅರಿಸ್ಟಾಟಲನ್ನೇ ಅವನು ಅನುವಾದಿಸಿದ. ಆದರೆ ಅವನ ಮೆಚ್ಚಿಕೆಗೆ ಪಾತ್ರನಾದ ಟ್ರ್ಯಾಜಿಕ್ ಕವಿ ರೋಮನರ ಸೆನೆಕ, ಗ್ರೀಕರ ಸೋಫಕ್ಲೀಸ್

ಅಲ್ಲ. ಆ ಕಾರಣದಿಂದ ಅವನ ಟ್ರ್ಯಾಜಿಕ್ ಘಟನಾಪಟ್ಟಿಯಲ್ಲಿ ಕಗ್ಗೊಲೆ, ಪೂರ್ಣಹತಾಶೆ, ಶಿರಚ್ಛೇದ, ತಂದೆತಾಯಿಯರ ಹತ್ಯೆ. ಅಕ್ರಮ ಕೂಟ, ಬೆಂಕಿಯಿಂದ ಸರ್ವನಾಶ, ಕರಾಳ ಸಂಗ್ರಾಮ, ಕಿರಿಚು, ರುದ್ರರೋದನ, ಸಮಾಧಿಗೀತ—ಮುಂತಾದುವೇ ಹೆಚ್ಚು. ಸ್ಕ್ಯಾಲಿಜರನಿಗಿಂತಲೂ ಅಧಿಕನಾದವ ಕ್ಯಾಸಲ್ ವೆಟ್ರೋ (1570). ಮೂರು ಏಕತೆಗಳು ಎಂಬ ನಿಯಮವನ್ನು ರೂಪಿಸಿ ಸಿದ್ಧಾಂತಕ್ಕೆ ಅದನ್ನು ಅವನೇ ಏರಿಸಿದ. ಅವನ ಅಭಿಮತದಲ್ಲಿ ನಾಟಕಾಲಯದ ನೇಪಥ್ಯ ಕಿರಿದು. ಆದ್ದರಿಂದ ಒಂದೇ ಕಾರ್ಯಾವಳಿ ಒಂದೇ ಸ್ಥಳದಲ್ಲಿ ನಡೆದು ಒಂದೇ ದಿವಸದಲ್ಲಿ ಮುಗಿಯುವುದು ನ್ಯಾಯ. ಅರಿಸ್ಟಾಟಲ್ ಮುಂದಿಟ್ಟ ಭಾವ ವಿರೇಚನೆಯ (ಕೆಥಾರ್ಸಿಸ್) ತತ್ತ್ವವನ್ನು ಕುರಿತೂ ವಿಮರ್ಶಕರು ವಿಪುಲ ಚರ್ಚೆ ನಡೆಸಿದರು.

ಅರಿಸ್ಟಾಟಲನ ಮತದಂತೆ ಭವ್ಯಕಾವ್ಯ (ಎಪಿಕ್) ಟ್ರ್ಯಾಜಡಿಗೆ ಎರಡನೆಯದು. ಈ ಅಭಿಪ್ರಾಯ ಹೊಸಹುಟ್ಟಿನ ಪಂಡಿತರಿಗೆ ರುಚಿಸಲಿಲ್ಲ. ಅರಿಸ್ಟಾಟಲ್ ಹೋಮರ್ ಒಬ್ಬನನ್ನೇ ದೃಷ್ಟಿಯಲ್ಲಿಟ್ಟುಕೊಂಡಿದ್ದ ; ರುದ್ರನಾಟಕಕಾರರು ಹೋಮರನನ್ನು ಮೀರಿಸಿದಂತೆ ಅವನಿಗೆ ತೋಚಿತು. ಹೊಸ ಹುಟ್ಟಿನವರಿಗೆ ವರ್ಜಿಲನ ಪರಿಚಯವೂ ಇದ್ದಿತಾಗಿ ಅವರು ಭವ್ಯಕಾವ್ಯಕ್ಕೆ ಟ್ರ್ಯಾಜಡಿ ಸರಿದೂಗಲಾರದೆಂದು ಬಗೆದರು. ಅದೂ ಅಲ್ಲದೆ ಭವ್ಯಕಾವ್ಯದ ವಿವರಣೆ ಬಹು ಸಂಕ್ಷಿಪ್ತ, ಅರಿಸ್ಟಾಟಲನಲ್ಲಿ. ಹೊಸ ಹುಟ್ಟು ಅದರ ವಿಸ್ತಾರ ನಿರೂಪಣೆಯನ್ನು ಕೈಗೊಳ್ಳಬೇಕಾಯಿತು. 1520ಕ್ಕೆ ಹಿಂದೆಯೇ ಇನಿಯಡ್‌ನ್ನು ಮಾದರಿಯಾಗಿರಿಸಿಕೊಂಡು ವಿಡಾ ಪದ್ಯರೂಪದಲ್ಲಿ ವಿಮರ್ಶೆ ಬರೆದ. ಟ್ರಿಸ್ಸಿನೊ ಅರಿಸ್ಟಾಟಲನ್ನು ಅನುವಾದಮಾಡಿ ಕೊನೆಗೆ ಭವ್ಯ ಕಾವ್ಯಕ್ಕೆ ಯಾವಾಗಲೂ ಬಹಳ ಗೌರವ ಸಿಕ್ಕಿದೆ, ಅದು ಹೆಚ್ಚೊ ಟ್ರ್ಯಾಜಡಿ ಹೆಚ್ಚೊ ಎಂಬುದನ್ನು ಓದುಗರೇ ತೀರ್ಮಾನಿಸಲಿ ಎಂಬ ಟಿಪ್ಪಣಿಯನ್ನು ನುಡಿದ. ಡೇನಿಯೆಲೊ ಹೇಳಿದ ಭವ್ಯಕಾವ್ಯದ ವಿವರಣೋಕ್ತಿಯನ್ನೇ ಅವನು ಸೂಕ್ಷ್ಮವಾಗಿ ಅದಕ್ಕೆ ಅನ್ವಯಿಸಿದ. ಭವ್ಯಕಾವ್ಯಕ್ಕೆ ವೀರಕಾವ್ಯ (ಹಿರಾಯಿಕ್ ಪೊಯಟ್ರಿ) ಎಂಬ ಹೆಚ್ಚು ವೈಶಾಲ್ಯದ ಅಂಕಿತ ರೂಢಿಗೆ ಬಂತು.

ಅದಕ್ಕೆ ಕಾರಣವಿತ್ತು. ಇಟಲಿಯ ಕವಿ ಆರಿಯೋಸ್ಟೊ ಒಂದು ಶ್ರೇಷ್ಠ ಕಥನ ಕಾವ್ಯ ಕಟ್ಟಿ ಲೋಕವನ್ನೇ ಚಕಿತಗೊಳಿಸಿದ. ಹೋಮರ್, ವರ್ಜಿಲ್, ಡಾಂಟೆಗಳ ಭವ್ಯಕಾವ್ಯಕ್ಕೆ ಅದು ಏನೂ ಕಡಿಮೆಯಲ್ಲ ಎಂಬ ಪ್ರಖ್ಯಾತಿ ಆ ಕಾವ್ಯಕ್ಕೆ ಬಂತು. ಅದು ಮಧ್ಯಯುಗದ ಅದ್ಭುತ ಕಥೆಯಂತೆ ಅದ್ಭುತಗಳನ್ನು ಒಳಗೊಂಡಿದ್ದರೂ ಕಾವ್ಯ ಲಕ್ಷಣಗಳಲ್ಲಿ ಅದರಿಂದ ಬೇರೆ. ಆದರೆ ಆರಿಯೋಸ್ಟೊ ಕಾವ್ಯಕ್ಕೂ ರೊಮಾನ್ಸ್ ಎಂದೇ ಹೆಸರಾಯಿತು. ಆಮೇಲೆ ಇಟಲಿಯ ಟ್ಯಾಸೊ, ಇಂಗ್ಲೆಂಡಿನ ಸ್ಪೆನ್ಸರ್ ಇವರು ಬರೆದ ಅದೇ ಮಾದರಿಯ ಕಾವ್ಯಗಳೂ ಹಳೆಯ ಭವ್ಯಕಾವ್ಯದೊಂದಿಗೆ ಸೆಣಸಿದುವು. ಅವನ್ನು ಒಳಕ್ಕೆ ಸೇರಿಸಿಕೊಳ್ಳುವುದಕ್ಕೋಸ್ಕರ ವೀರಕಾವ್ಯ ಮೂರು ನಾಲ್ಕು ಬಗೆ ಎಂದು ಸೂತ್ರಿಸಿದರು. ಆದರೂ ಮಿಂಟೂರ್ನೊ, ಬೆಂಬೊ, ಹಾರ್ವಿ ಮುಂತಾದ ಕೆಲವು ಪ್ರತಿಗಾಮಿಗಳಿಗೆ ರೊಮಾನ್ಸ್ ಕಾವ್ಯಾಭಾಸವೆಂದೇ ತೋರಿಬಂತು.

ಪ್ರಾಚೀನರನ್ನು ಹಿಂಬಾಲಿಸಬೇಕು ಎಂಬ ಧ್ಯೇಯಕ್ಕೆ ಹೊಸಹುಟ್ಟಿನಲ್ಲಿ ಸಾಮಾನ್ಯವಾಗಿ ಮನ್ನಣೆಯಿತ್ತು. ಆದರೂ ಕವಿಗೆ ಸ್ವಾತಂತ್ರ್ಯ ಇಲ್ಲದಿಲ್ಲ. ಮೇಲಾಗಿ ತರ್ಕವಿವೇಚನೆ ಕವಿಗೆ ಅತಿ ಮುಖ್ಯ. ಅದರ ಬೋಧನೆಯಂತೆ ತನ್ನ ಕೆಲಸವನ್ನು ಅವನು ನಡೆಸಿದರೆ ಕ್ಷೇಮ ಎಂಬ ಅಭಿಪ್ರಾಯಕ್ಕೂ ಸಾಕಷ್ಟು ಗೌರವ ವಿತ್ತು.

ಇಟಲಿಯ ಮೇಲ್ಪಂಕ್ತಿಯೇ ಫ್ರಾನ್ಸ್, ಇಂಗ್ಲೆಂಡ್, ಸ್ಪೇನ್ ಇತ್ಯಾದಿ ರಾಷ್ಟ್ರಗಳಲ್ಲಿ ಗಣ್ಯತೆ ಪಡೆಯಿತು. ಡುಬೆಲ್ಲೆ, ರಾನ್ಸಾ, ಸಿಡ್ನಿ, ಜಾನ್ಸನ್, ಎಸ್ಪಿನಾಡೊ, ಸಪಾಟೆ ಮೊದಲಾದವರ ಹೆಸರುಗಳನ್ನು ಇಲ್ಲಿ ಹೇಳಬಹುದು. ಇವರಾರಲ್ಲೂ ನವೀನವಾದದ್ದು ಏನೂ ಇಲ್ಲ. ಕಾವ್ಯಮೀಮಾಂಸೆಗಿಂತ ಕವಿಗಳಿಗೆ ಬುದ್ಧಿವಾದ ಇವರಲ್ಲಿ ಅಧಿಕ. ಆಲೋಚನಾ ಮೌಲ್ಯಕಿಂತ ವ್ಯಾವಹಾರಿಕ ಮೌಲ್ಯಕ್ಕೆ ಹೆಚ್ಚು ಗಮನ.

ಒಟ್ಟಿನಲ್ಲಿ ಹೊಸಹುಟ್ಟಿನ ಸಾಹಿತ್ಯವಿಮರ್ಶೆ ಕವಿಗೆ ಉಚಿತ ಸ್ಥಾನಮಾನ ಲಭಿಸುವುದಕ್ಕೆ ನೆರವಾಯಿತು. ಪ್ಲೇಟೊ ಅರಿಸ್ಟಾಟಲ್ ಹೋರೇಸರ ತತ್ತ್ವಗಳ ಒಂದು ಬಗೆಯ ಸಮನ್ವಯವನ್ನು ರೂಪಿಸಲು ಯತ್ನಿಸಿತು. ಪ್ರಾಚೀನರನ್ನು ಅವರ ಅಂತಃಸತ್ತ್ವಕ್ಕಾಗಿಯೂ ಸಾಹಿತ್ಯ ಪರಂಪರೆಯನ್ನು ಪಾಲಿಸುವುದಕ್ಕಾಗಿಯೂ ಉಳಿಸಿಕೊಳ್ಳಬೇಕು ಎಂಬುದು ಅವರ ಮನೋರಥವಾದರೂ ಸಾಹಿತ್ಯ ಹೊಸ ಪಥ ದಲ್ಲಿ ಸಹಜವಾಗಿಯೂ ಸರಾಗವಾಗಿಯೂ ಸುರಮ್ಯವಾಗಿಯೂ ಚಲಿಸುತ್ತಿರುವುದನ್ನು ಕಾಣುತ್ತ ಅದು ವಿರೋಧ ಸೂಚಿಸಿದರೂ ಅಡ್ಡಗಟ್ಟುವುದಕ್ಕೆ ಹಾತೊರೆಯಲಿಲ್ಲ.

17ನೆಯ ಶತಮಾನದಲ್ಲಿ ವಿಮರ್ಶೆಯ ಆಡಳಿತಸೂತ್ರ ಇಟಲಿಯ ಕೈಯಿಂದ ಫ್ರಾನ್ಸಿಗೆ ವರ್ಗವಾಯಿತು. ಫ್ರೆಂಚ್ ಅಕೆಡಮಿಯ ಸ್ಥಾಪನೆ, ಶ್ರೀಮಂತಿನಿಯರ ಖಾಸಗಿ ಸಾರಸ್ವತ ಗೋಷ್ಠಿಗಳು, 14ನೆಯ ಲೂಯಿಯ ನಿರಂಕುಶಾಧಿಕಾರ—ಮುಂತಾದ ಪ್ರಬಲಶಕ್ತಿಗಳು ಭಾಷೆ, ಸಾಹಿತ್ಯ, ವಿಮರ್ಶೆಗಳೆಲ್ಲವನ್ನೂ ಒಂದು ನಯನಾಜೂಕಿನ ಕಟ್ಟಿನಲ್ಲಿ ಹತೋಟಿಗೈಯುವುದಕ್ಕೆ ಅನುವಾದುವು. ಮೊದಲು ಮಾಲರ್ಬ್, ಆಮೇಲೆ ಬಾಲ್‌ಜ್ಯಾಕ್, ಡೇಕಾರ್ಟ್, ಪ್ಯಾಸ್ಕಲ್, ಆಮೇಲೆ ಡಾಬಿಗ್ನ್ಯಾಕ್, ಬ್ವಾಲೊ, ಲಬ್ರೂಯೇರ್, ಫೆನಿಲನ್ ಮೊದಲಾದ ಉಜ್ವಲ ಮೇಧಾವಿಗಳು ಆ ಜವಾಬ್ದಾರಿಗೆ ಯುಕ್ತ ಕಾರ್ಯಪಾಸಿಗಳಾದರು.

ಹೊಸಹುಟ್ಟಿನ ಕವಿಗಳು ಬಹಳ ಧಾರಾಳವಾಗಿ ಪದಗಳನ್ನೂ ಪದಪುಂಜಗಳನ್ನೂ ವಚನವಿಗ್ರಹಗಳನ್ನೂ ತಂದು ಭಾಷೆಗೆ ಸುರಿಸಿದರು. ಅವನ್ನು ಪರೀಕ್ಷಿಸಿ ವಿಚಿತ್ರ ವಾದವನ್ನು ತೊಡೆದುಹಾಕಿ ನುಡಿಗೆ ಸಕ್ರಮ ಸಾಮಂಜಸ್ಯ ತಾರ್ಕಿಕತೆಯನ್ನು ಉಂಟುಮಾಡುವುದು ಮಾಲರ್ಬನ ಹೊಣೆಯಾಯಿತು. ಚಾಪಿಲೇನ್ ಇಟಲಿ ಸ್ಪೇನುಗಳ ಸಾಹಿತ್ಯವನ್ನು ಓದಿದವ ; ಹಳೆಯ ಫ್ರೆಂಚ್ ಸಾಹಿತ್ಯವನ್ನೂ ಬಲ್ಲವ. ಪ್ರಧಾನಿ ರಿಷಲುವಿನ ಅಪ್ಪಣೆಯನ್ನು ಶಿರಸಾವಹಿಸಿ ಕಾರ್ನೀಲನ ಲುಸಿಡ್ ನಾಟಕದ ಮೇಲೆ ಕತ್ತಿಕಟ್ಟಿದ. ನಾಟಕದಲ್ಲಿ ಹೋರೇಸ್ ಅರಿಸ್ಟಾಟಲರ ನಿಯಮಾವಳಿಗೆ ಲೋಪ ತರಬಾರದು ಎಂಬುದು ಧರ್ಮಶಾಸ್ತ್ರವಾಗುತ್ತ ಹೋಯಿತು. ಸಾಹಿತ್ಯ ಪ್ರಭೇದಗಳನ್ನೂ ಅವುಗಳ ವಿರಚನಾಕ್ರಮವನ್ನೂ ಯಾವುದು ಗುಣ ಯಾವುದು ದೋಷ ಎಂಬುದನ್ನು ಅವರೀರ್ವರು ಆಗಲೇ ಸ್ಪಷ್ಟವಾಗಿ ಹೇಳಿಬಿಟ್ಟಿದ್ದಾರೆ. ಆದ್ದ ರಿಂದ ಅವರನ್ನು ಶ್ರದ್ಧೆಯಿಂದ ಹಿಂಬಾಲಿಸುವುದೇ ಕವಿಗಳಿಗೆ ಇರುವ ಏಕೈಕ ಮಾರ್ಗ. ಇದನ್ನು ವಿಮರ್ಶಕರು ಒತ್ತಿ ಒತ್ತಿ ಸಾರಿದರು. ಹೋರೇಸನಂತೆ ಬ್ವಾಲೊ ಒಂದು ಕಾವ್ಯಕಲೆಯನ್ನು ರಚಿಸಿದ. ಅದು ನವಅಭಿಜಾತತೆಯ ಪ್ರಧಾನ ಗ್ರಂಥವಾಯಿತು. ಅದರ ಸಾರಾಂಶ ಇಷ್ಟು. ಕವಿಗೆ ಪ್ರತಿಭೆ ಆವಶ್ಯಕ, ಅದಕ್ಕಿಂತ ಹೆಚ್ಚಾಗಿ ಸುಬುದ್ಧಿಯೂ ತರ್ಕವಿವೇಚನೆಯೂ ಆವಶ್ಯಕ. ಸುಮ್ಮನೆ ಎತ್ತರಕ್ಕೆ ಹಾರಬಯಸಬಾರದು. ಅತಿ ಸೂಕ್ಷ್ಮ ವಿವರಗಳನ್ನು ಕೊಡಲೂಬಾರದು. ಕೆಳಕ್ಕೆ ಇಳಿಯದಂತೆ ಎಚ್ಚರದಿಂದಿರ ತಕ್ಕದ್ದು. ಸ್ಪಷ್ಟ ಶೈಲಿಗೆ ಸ್ಪಷ್ಟ ಆಲೋಚನೆ ತಾಯಿ. ಔಚಿತ್ಯ ಹೆಗ್ಗುರಿಯಾಗಿರಲಿ ; ವಿನಯ, ಮರ್ಯಾದೆ ಕೈಹಿಡಿದು ನಡೆಸಲಿ. ಹೀಗೆ ಹೋರೇಸ್ ಮತ್ತು ಅರಿಸ್ಟಾಟಲರನ್ನು ತನಗೆ ತೋರಿದಂತೆ ಅರ್ಥಮಾಡಿಕೊಂಡು ಬ್ವಾಲೊ ನಿಯಮಾವಳಿ ಸಿದ್ಧಪಡಿಸಿದ. ರ್‍ಯಾಪಿನ್ ಆ ನಿಯಮಗಳನ್ನು ಅನುಮೋದಿಸಿ ಸಾಹಿತ್ಯ ವಿಚಾರಗಳಿಗೆ ಕೆಲವು ತಲೆಚೀಟಿ ಅಂಟಿಸಿ ನವಶಿಷ್ಟತೆಯ ಪಾಲಕನಾದ. ಲುಬಾಸ್ ಭವ್ಯಕಾವ್ಯದ ವಿಷಯವಾಗಿ ಸೂತ್ರ ಹೇಳಿದ. ವಾಲ್ಟೇರ್ ವಿಮರ್ಶೆಯ ಮೂಲಕವೂ ರೂಪಕ ನಿರ್ಮಾಣದ ಮೂಲಕವೂ ನವಅಭಿಜಾತತೆಯನ್ನು ಎತ್ತಿಹಿಡಿದ.

ಇಂಗ್ಲೆಂಡಿನಲ್ಲಿ ಡ್ರೈಡನ್, ಪೋಪ್, ಜಾನ್ಸನ್ ನವಅಭಿಜಾತತೆಯ ಧೀರರಾ ದರು. ಆದರೆ ಅವರಲ್ಲಿ ಸ್ವಲ್ಪಮಟ್ಟಿನ ಸ್ವಾತಂತ್ರ್ಯ ಕಾಣಬರುತ್ತದೆ. ಕಾರಣ ಇಷ್ಟೆ. ಷೇಕ್ಸ್‌ಪಿಯರ್ ಪ್ರಾಚೀನರ ಸೂತ್ರಗಳಿಗೆ ವಿರುದ್ಧವಾದ ನಾಟಕ ರಚಿಸಿ ಗೆದ್ದನಲ್ಲವೆ ? ವಾಲ್ಟೇರನಿಗೆ ಅವನು ಒಡ್ಡೊಡ್ಡಾಗಿ ಕಂಡುಬಂದರೂ ಇಂಗ್ಲಿಷ್ ವಿಮರ್ಶಕರಿಗೆ ಅವನೊಬ್ಬ ಮಹಾ ನಾಟಕಕಾರ. ಅವನು ಒದಗಿಸುವಷ್ಟು ಭಾವಾರ್ಥವನ್ನೂ ಭಾಷಾಲಾವಣ್ಯವನ್ನೂ ಮತ್ತಾರೂ ಒದಗಿಸಿಲ್ಲ, ಬಹುಶಃ ಒದಗಿಸಲಾರರು. ನಿಯಮಕ್ಕೆ ವಿರುದ್ಧವಾಗಿ ಯಾವ ಕೃತಿಯೂ ಹರ್ಷ ಕೊಡಕೂಡದು. ಎಂಬ ಫ್ರೆಂಚರ ಶಾಸನ ಇಂಗ್ಲಿಷರಿಗೆ ಒಗ್ಗಲಿಲ್ಲ. ಆದ್ದರಿಂದ ಅವರು ಪರಮ ಪ್ರತಿಭೆಯ ಕವಿ ನಿಯಮಗಳನ್ನು ಉಲ್ಲಂಘಿಸಬಹುದು ಎಂದುಬಿಟ್ಟರು. ನವಅಭಿಜಾತತೆಯ ಗೇಣು ಸೂತ್ರಗಳಿಂದ ಆಜಾನುಬಾಹು ಷೇಕ್ಸ್‌ಪಿಯರನ್ನು ಅಳೆಯ ಹೋಗಿ ರೈಮರ್ ಎಂಬಾತ ನಾಚಿಕೆಗೇಡಾದ. ಪ್ರಚಂಡ ಮೇಧಾವಿಯಾದರೂ ನವಶಿಷ್ಟತೆಯಿಂದ ಅರೆಕುರುಡ ನಾದ ವಾಲ್ಟೇರನೂ ಹಾಗೆಯೇ. ಅಂತೂ ಸಾಹಿತ್ಯವಿಮರ್ಶೆ ಸುಮಾರು ನೂರೈವತ್ತು ವರ್ಷ ಮಡುಗಟ್ಟಿ ನಿಶ್ಚಲವಾಗಿ ನಿಂತು ಪಾಚಿಕಟ್ಟಿ ಅಂದಗೆಟ್ಟು ಹೋಯಿತು.

ಕವಿಗೆ ಹೆಚ್ಚು ಸ್ವಾತಂತ್ರ್ಯ ಇರತಕ್ಕದ್ದೆಂದು ವಾದಿಸುವ ಮುನ್ನೋಟದ ಯೋಚನಾವಂತರು 18ನೆಯ ಶತಮಾನದಲ್ಲಿ ಆಗಿಬಂದರು. ಆದರೆ ಅವರಿಗೆ ಅಭಿಜಾತತೆಯ ಶಿಸ್ತನ್ನು ಒಡೆಯುವ ಸಾಮರ್ಥ್ಯವಿರಲಿಲ್ಲ. ಆದರೂ ಒಬ್ಬಿಬ್ಬರು ತಮ್ಮ ಪಾಂಡಿತ್ಯ ಪ್ರತಿಭೆಗಳಿಂದ ವಿಮರ್ಶೆ ನಡೆಸಿ ಬೇಗಬೇಗ ನವಅಭಿಜಾತತೆಯ ಸಂಕೋಲೆ ಕಳಚಿ ಬೀಳುವಂತೆ ಎಸಗುವುದರಲ್ಲಿ ನೆರವಾದರು. ಫ್ರೆಂಚರ ಡಿಡರೊ ಉದ್ದೇಶಪೂರ್ವಕವಾಗಿ ವಿಮರ್ಶಕನಾಗಲಿಲ್ಲ. ವಿಶ್ವಜ್ಞಾನ ವ್ಯಾಸಂಗಿ ಆದದ್ದರಿಂದ ಸಾಹಿತ್ಯವನ್ನು ಕುರಿತು ಅವನು ಸಲಹೆಗಳನ್ನು ಹೇಳಿದ; ಅವುಗಳಲ್ಲಿ ಹಲವು ಅಮೂಲ್ಯ. ಇಂಗ್ಲೆಂಡಿನ ರಿಚರ್ಡ್‌ಸನ್ನನ ಕಾದಂಬರಿಯನ್ನು ಅವನು ಶ್ಲಾಘಿಸಿರು ವುದು ಅವನ ಉದಾರನೋಟದ ಕುರುಹು. ನಾನಾ ಲಲಿತಕಲೆಗಳನ್ನು ಕುರಿತು ಅವನು ಚಿಂತನೆಮಾಡಿ ಒಪ್ಪತಕ್ಕ ತೀರ್ಮಾನಗಳನ್ನು ನುಡಿದ.

ಅವನ ಹಾಗೆಯೇ ವಿಶಾಲದೃಷ್ಟಿಯಿಂದ ಕಲೆ ಸಾಹಿತ್ಯಗಳನ್ನು ವೀಕ್ಷಿಸಿದ ಇನ್ನೊಬ್ಬ ಮಹಾವ್ಯಕ್ತಿ ಜರ್ಮನಿಯ ಲೆಸ್ಸಿಂಗ್. ಅವನು ಬಂದಾಗ ಗಾಟ್‌ಷೆಡ್ ಎಂಬ ಕವಿ ಜರ್ಮನಿಯಲ್ಲಿ ನವಶಿಷ್ಟತೆಯ ಪ್ರಧಾನ ಪುರೋಹಿತನಾಗಿದ್ದ.

ಅವನಿಗೆದುರಾಗಿ ಆಗಲೇ ಸ್ವಿಟ್ಸರ್‌ಲೆಂಡಿನ ಬಾಡ್ಮರ್, ಬ್ರೈಟಿಂಗರ್ ಎಂಬಿಬ್ಬರು ಪಂಡಿತರು ಹೋರಾಟ ನಡೆಸಿದ್ದರು. ಅವರಿಗಿಂತ ಹೆಚ್ಚು ಸಾಹಿತ್ಯಜ್ಞಾನ ಲೆಸ್ಸಿಂಗನಿಗಿತ್ತು. ಪ್ರಾಚೀನರನ್ನೂ ಅರ್ವಾಚೀನರನ್ನೂ ಅವನು ಶ್ರದ್ಧೆಯಿಂದ ಪಠಿಸಿದ್ದ. ತೌಲನಿಕ ವಿಮರ್ಶೆಯಲ್ಲಿ ಅವನು ಎತ್ತಿದ ಕೈ. ಅರಿಸ್ಟಾಟಲನ ಅಭಿಪ್ರಾಯವನ್ನು ನೇರವಾಗಿ ವಿವರಿಸಿದ್ದು ಅವನು ನೆರವೇರಿಸಿದ ದೊಡ್ಡ ಕಾರ್ಯ. ನವಅಭಿಜಾತತೆಯ ಫ್ರೆಂಚರು ಹೇಗೆ ಅರಿಸ್ಟಾಟಲನ್ನು ಅಪಾರ್ಥ ಮಾಡಿಕೊಂಡರೆಂಬುದಕ್ಕೆ ಅವನು ಕನ್ನಡಿ ಹಿಡಿದ. ಅವನ ಒಂದು ಹೇಳಿಕೆ ಸಾಹಿತ್ಯದ ನೈಜ ಸೃಷ್ಟಿಯನ್ನು ತೃಪ್ತಿಕರವಾಗಿ ಬಣ್ಣಿಸುತ್ತದೆ: ಪ್ರತಿಯೊಂದು ಶ್ರೇಷ್ಠ ಕಲಾ ಕೃತಿಗೂ ಅದರದೇ ಆದ ಆಂತರಿಕ ನಿಯಮವಿದೆ. ಇಂಥ ಹೇಳಿಕೆಗಳು ಅವನ ಇಪ್ಪತ್ತು ಸಂಪುಟಗಳಲ್ಲಿ ಹೇರಳವಾಗಿವೆ.

ಹದಿನೆಂಟನೆಯ ಶತಮಾನದ ಕೊನೆಯಲ್ಲಿ ರೊಮ್ಯಾಂಟಿಕ್ ಚಳವಳಿ ಜರ್ಮನಿಯಲ್ಲಿ ಆರಂಭವಾಗಿ ಕ್ರಮೇಣ ಫ್ರಾನ್ಸ್, ಇಂಗ್ಲೆಂಡ್, ಸ್ಪೇನ್, ರಷ್ಯ ಮುಂತಾದ ದೇಶಗಳಿಗೂ ಹರಡಿತು. ಸಾಹಿತ್ಯಕೃತಿಯನ್ನು ವ್ಯಾಖ್ಯಾನಿಸಿ ಬೆಲೆಕಟ್ಟುವ ಕೆಲಸದಲ್ಲಿ ಅದೇ ಸೂಚಿಸುವ ವಿಧಾನವನ್ನು ಅನುಸರಿಸತಕ್ಕದ್ದು. ಹೊರಗಣ ಕಟ್ಟುಕಟ್ಟಳೆಯನ್ನು ಹಿಡಿದುಕೊಂಡರೆ ಅಪಾಯ. ಇದೇ ಅದರ ಮೂಲ ನಂಬಿಕೆಗಳಲ್ಲಿ ಒಂದು. ರೊಮ್ಯಾಂಟಿಕತೆಯ ವಾದಿಗಳಿಗೆ ಷೇಕ್ಸ್‌ಪಿಯರ್ ಅತಿ ನೆಚ್ಚಿನ ಕವಿ. ಫ್ರಾನ್ಸಿನ ವಿಕ್ಟರ್ ಹ್ಯೂಗೋವಿಗೆ ಅವನನ್ನು ಎಷ್ಟು ಹೊಗಳಿದರೂ ತೀರದು. ಫ್ರಾನ್ಸಿನಲ್ಲಿ ಮದಾಂ ಡ ಸ್ಟೀಲ್, ಇಂಗ್ಲೆಂಡಿನಲ್ಲಿ ವರ್ಡ್ಸ್‌ವರ್ತ್, ಕೋಲ್‌ರಿಜರು ರೊಮ್ಯಾಂಟಿಕತೆಯ ಸ್ಥಾಪಕರಾದರು.

ಸಾಹಿತ್ಯವಿಮರ್ಶೆಯಲ್ಲಿ ಕೋಲ್‌ರಿಜನ ಹೆಸರು ಮೇಲ್ಮಟ್ಟದ್ದು. ದೃಢವಾದ ಜ್ಞಾನವೂ ತೀಕ್ಷ್ಣ ರಸಜ್ಞತೆಯೂ ಅವನ ಹಿರಿಯ ಗುಣ. ಜರ್ಮನಿಯ ತತ್ತ್ವಶಾಸ್ತ್ರದ ಗಾಢಾಭಿಪ್ರಾಯಗಳನ್ನು ಸಾಹಿತ್ಯಕ್ಕೆ ಹೊಂದಿಸಿದುದರಲ್ಲಿ ಅವನು ನಿಸ್ಸೀಮ. ಸಾಹಿತ್ಯ ಸೃಷ್ಟಿಸಬಲ್ಲ ವಿಭಾವನೆಯನ್ನು (ಇಮ್ಯಾಜಿನೇಷನ್) ಅವನಂತೆ ಖಚಿತವಾಗಿ ತಿಳಿಯಹೇಳುವವರು ಅಪೂರ್ವ. ಕವಿಯ ಭಾಷೆ ಛಂದಸ್ಸುಗಳ ವಿಚಾರದಲ್ಲೂ ಅವನ ಹೇಳಿಕೆ ಕಟ್ಟಕಡೆಯ ತೀರ್ಮಾನ ಎನಿಸುತ್ತದೆ. ಹ್ಯಾಜ್‌ಲಿಟ್, ಲ್ಯಾಮ್ ಮೊದಲಾದ ಇತರ ಕೆಲವು ಉತ್ತಮ ವಿಮರ್ಶಕರು ಅದೇ ಕಾಲದಲ್ಲಿ ಎದ್ದು ಬಂದರು. ಸಾಹಿತ್ಯಕ್ಕೆ ಮೀಸಲಾದ ಪತ್ರಿಕೆಗಳೂ ಉದಿಸಿ ವಿಮರ್ಶೆ ಒಳ್ಳೆಯ ವ್ಯವಸಾಯವೆಂಬ ಭಾವನೆಯನ್ನು ಮೂಡಿಸಿದುವು.



ಕೋಲ್‌ರಿಜ್

ಹತ್ತೊಂಬತ್ತನೆಯ ಶತಮಾನದ ಎರಡನೆಯ ಭಾಗದಲ್ಲಿ ಸಾಹಿತ್ಯವಿಮರ್ಶೆಗೆ ಬೇರಾವ ಕಾಲದಲ್ಲೂ ಸಿಗದಷ್ಟು ಗೌರವ ದಕ್ಕಿತು. ವಿಮರ್ಶಕ ಸಮಾಜಕ್ಕೂ ಜನಾಂಗಕ್ಕೂ ಅಗತ್ಯವಾದ ಪ್ರತಿನಿಧಿ ಎಂದಾಯಿತು. ಫ್ರಾನ್ಸಿನಲ್ಲಿ ಸೇಂಟ್ ಬವ್, ರಷ್ಯದಲ್ಲಿ ಬೆಲಿನ್‌ಸ್ಕಿ. ಇಟಲಿಯಲ್ಲಿ ಡಸ್ಯಾಂಕ್ಟಿಸ್, ಡೆನ್‌ಮಾರ್ಕಿನಲ್ಲಿ ಬ್ರ್ಯಾಂಡ್ಸ್. ಇಂಗ್ಲೆಂಡಿನಲ್ಲಿ ಆರ್ನಲ್ಡ್. ಸ್ಪೇನಿನಲ್ಲಿ ಇಪೆಲಾಗೊ ಅಂಥ ಗಣ್ಯ ಪುರುಷರೆಂದು ಪ್ರಸಿದ್ಧಿ ಪಡೆದರು. ಜರ್ಮನಿ. ಅಮೆರಿಕ ಸಂಯುಕ್ತಸಂಸ್ಥಾನಗಳಲ್ಲಿ ಮಾತ್ರ ಹೆಸರಾಂತ ವಿಮರ್ಶಕ ಎದ್ದು ಬರಲಿಲ್ಲ.

ಆಗಲೇ ಪುಷ್ಕಳವಾಗಿ ಬೆಳೆದ ಸಾಹಿತ್ಯವಿಮರ್ಶೆ ಇಪ್ಪತ್ತನೆಯ ಶತಮಾನದಲ್ಲಿ ವಿಪರೀತ ಸಮೃದ್ಧಿಹೊಂದಿ ಕಣಜದ ಗೋಡೆಯನ್ನು ಎಂಟು ಕಡೆಗಳಿಂದಲೂ ಚುಚ್ಚಿ ಬಿರಿಸುತ್ತಿದೆ. ಅದರ ಸಮಗ್ರ ಅವಲೋಕನ ಹಾಗಿರಲಿ, ಸಾಕಷ್ಟು ವೀಕ್ಷಣೆಯೂ ಶ್ರಮಸಾಧ್ಯವಾದ ವ್ಯಾಪಾರ. ಕೆಲವು ಪ್ರಧಾನಾಂಶಗಳನ್ನು ಲಕ್ಷ್ಯದಲ್ಲಿ ಇರಿಸಿಕೊಂಡು ವಿವೇಚಿಸುವುದು ಹಿತ. ಆಧುನಿಕತೆಯ ವಿಚಾರ ಸಂಕೀರ್ಣವಾಗಿದ್ದು ಗೋಜು. ತಬ್ಬಿಬ್ಬು ಹಿಡಿಸುವಂಥಾದ್ದು. ಇಡೀ ಪಾಶ್ಚಾತ್ಯ ಪ್ರಪಂಚ ವಿಮರ್ಶೆಯ ಅಗಾಧ ಪ್ರಯೋಗಶಾಲೆಯಾಯಿತು. ಚಾರಿತ್ರಿಕ ದೃಷ್ಟಿ. ವೈಜ್ಞಾನಿಕತೆ, ಮನಶ್ಶಾಸ್ತ್ರ, ವೈಯಕ್ತಿಕತೆ. ಪರಿಣಾಮವಿಧಾನ (ಇಂಪ್ರೆಷನಿಸಂ). ಸಾಂಕೇತಿಕತೆ, ಅತಿವಾಸ್ತವತೆ. ಸಾಪೇಕ್ಷತೆ—ಯಾವುದಿಲ್ಲ ? ಯಾವುದುಂಟು ? ತತ್ಪರಿಣಾಮವಾಗಿ ಬಹುಮಂದಿ ಒಪ್ಪುವ ಸಿದ್ಧಾಂತವಾಗಲಿ, ತರ್ಕಸಮ್ಮತವಾದ ವಿಧಾನವಾಗಲಿ ಇನ್ನೂ ರೂಪಿತವಾಗಿಲ್ಲ. ಸಾಹಿತ್ಯದ ಮತ್ತು ವಿಮರ್ಶೆಯ ನೆಲೆ, ಮೂಲ ಮೌಲ್ಯ ಇತ್ಯಾದಿ ಅಧಿಷ್ಠಾನ ವಿಷಯವೇ ವಾದಗ್ರಸ್ತವಾಗಿಬಿಟ್ಟಿದೆ.

ಕಳೆದ ನೂರ ಮೂವತ್ತು ನೂರ ನಲವತ್ತು ವರ್ಷಗಳ ವಿಮರ್ಶೆಯನ್ನು ಕಲಾ ಮೂಲ ಅಥವಾ ಕೃತಿಸೀಮಿತ (ಈಸ್ಥೆಟಿಕ್), ವೈಜ್ಞಾನಿಕ, ಮಾನವತಾನಿಷ್ಠ (ಹ್ಯೂಮನಿಸ್ಟಿಕ್) ಎಂಬ ಸ್ಥೂಲ ವಿಭಾಗಗಳಾಗಿ ವಿಂಗಡಿಸಿಕೊಂಡು ವಿವೇಚಿಸುವುದು ಒಳ್ಳೆಯದು.

ಕಲಾಮೂಲ ವಿಮರ್ಶೆಗೆ ಮಹಾದಾರ್ಶನಿಕ ಕ್ಯಾಂಟನೇ ಜನಕನೆಂಬ ಹೇಳಿಕೆಯಿದೆ. ಅವನು ತನ್ನ ಕ್ರಿಟಿಕ್ ಆಫ್ ಜಜ್‌ಮೆಂಟ್ ಗ್ರಂಥದಲ್ಲಿ ಘೋಷಿಸಿದ ತತ್ತ್ವಗಳು ಒಂದಲ್ಲ ಒಂದು ರೀತಿಯಲ್ಲಿ ಪ್ರಚೋದಕವಾಗಿದ್ದು ಆ ನಿಟ್ಟಿನಲ್ಲಿ ತುಂಬ ಪ್ರಭಾವ ಬೀರಿದುವು. ಸೃಷ್ಟಿಶಕ್ತಿಯುಳ್ಳ ವಿಭಾವನೆ. ಕಲಾವಿಚಾರದ ಪ್ರತ್ಯೇಕ ಲಕ್ಷಣ, ಉದ್ದೇಶ ತೋರಿಸದ ಉದ್ದೇಶತೆ ಮೊದಲಾದ ಘನಾಭಿಪ್ರಾಯಗಳು ತತ್ತ್ವಜ್ಞರ ವಿವರಣೆಯೊಂದಿಗೆ ವಿಮರ್ಶಕರ ಕೈವಶವಾದುವು. ಕಲಾಮೂಲ ವಿಮರ್ಶೆಯ ವಿಷಯ ಕಲಾಸೃಷ್ಟಿಯ ಕಾರ್ಯ, ಕಲಾಕೃತಿಯ ಗುಣಲಕ್ಷಣ, ವಿಮರ್ಶೆಯ ಕೆಲಸ. ಅದರ ದೃಷ್ಟಿಗೆ ಕಲಾಸ್ವಾದ ವಿಶಿಷ್ಟವಾದೊಂದು ಅನುಭವ. ಅದರಿಂದ ಲಭಿಸುವ ಜ್ಞಾನ ಇತರ ಬಗೆಯ ಜ್ಞಾನದಿಂದ ಬೇರೆ. ವಿಜ್ಞಾನ, ನೀತಿಶಾಸ್ತ್ರಗಳು ತಂದು ಕೊಡುವ ಜ್ಞಾನದಿಂದ ಬೇರೆ. ಆದ್ದರಿಂದ ಕಲಾಕೃತಿಯನ್ನು ವಿಮರ್ಶಿಸುವಾಗ ನೀತಿ, ನಿಯಮಾವಳಿ, ಸನ್ನಿವೇಶ ಮುಂತಾದ ವಿಚಾರವೆಲ್ಲ ಅನ್ಯ; ಅವಾವುವಕ್ಕೂ ಗಮನವೀಯಲಾಗದು. 1790–1820ರ ಅವಧಿಯಲ್ಲಿ ಕ್ಯಾಂಟನನ್ನು ಅನುಸರಿಸಿ ಫಿಷ್ಟೆ, ಷೆಲ್ಲಿಂಗ್, ಸಾಲ್ಗರ್, ಹೆಗಲ್ ಮುಂತಾದವರು ಗ್ರಂಥ ಬರೆದರು, ತತ್ತ್ವಶಾಸ್ತ್ರದ ಮಾರ್ಗದಲ್ಲಿ. ಸ್ಕಿಲ್ಲರ್, ಷೆಗಲ್ ಸಹೋದರರು. ರಿಕ್ಟರ್ ಮೊದಲಾದವರು ಕಾರ್ಯನಿರತ ಕಲೆಗಾರನ ಮಾರ್ಗದಲ್ಲಿ ಗ್ರಂಥ ಬರೆದರು. ಸಾಹಿತ್ಯ ವಿಮರ್ಶಕರೂ ಹಿಂದುಳಿಯಲಿಲ್ಲ. ಕೋಲ್‌ರಿಜನ ಉದ್ಗ್ರಂಥ 1817ರಲ್ಲಿ ಹೊರಬಂತು. ಅನಂತರ ಕಲಾಮೂಲ ವಿಮರ್ಶೆ ಹಲವು ವಿಧಗಳಾಗಿ ಒಡೆಯಿತು. ಫ್ರೆಂಚರೂ ಅವರನ್ನು ಹಿಂಬಾಲಿಸಿ ಇಂಗ್ಲಿಷರೂ ಕಲೆಗಾಗಿ ಕಲೆ (ನೋಡಿ) ಎಂಬ ಪಂಗಡವನ್ನು ಹೊರ ತಂದರು. ತನಗೆ ತೋಚಿದಂತೆ ವಿಮರ್ಶೆ ನಡೆಸಬೇಕೆಂಬುದು ಬಲಿದು ಪರಿಣಾಮ ವಿಧಾನ (ಇಂಪ್ರೆಷನಿಸಂ) ಹುಟ್ಟಿತು. ಕ್ಯಾಂಟನ ಕಲಾಭಿರುಚಿಯ ತೀರ್ಮಾನಗಳಿಗೆ ವ್ಯಕ್ತಿನಿಷ್ಠ ವಿಶ್ವತ್ವವುಂಟು—ಎಂಬ ಹೇಳಿಕೆ ಹಲವರಿಗೆ ಪ್ರಿಯವಾಯಿತು. ಅವರಿಗೆ ಕಲಾಸೌಂದರ್ಯ ವ್ಯಕ್ತಿನಿಷ್ಠ, ವಸ್ತುನಿಷ್ಠವಲ್ಲ; ಉತ್ತಮ ಕಲಾಕೃತಿಗಳೊಂದಿಗೆ ರಸಿಕ ವ್ಯಕ್ತಿ ನಡೆಸುವ ವೈಯಕ್ತಿಕ ಸಾಹಸಗಳೇ ವಿಮರ್ಶೆ. ವಿಮರ್ಶಕ ತನ್ನ ಆತ್ಮೀಯ ಅನುಭವವನ್ನಲ್ಲದೆ ಮತ್ತೇನನ್ನು ವರ್ಣಿಸಿಯಾನು? ಕಲೆಗಾಗಿ ಕಲೆ. ಪರಿಣಾಮವಿಧಾನ ಎರಡೂ ಯಾವ ವಿಮರ್ಶಾ ಸಿದ್ಧಾಂತವನ್ನೂ ಹೊರತರಲಿಲ್ಲ. ಅಷ್ಟೇಕೆ, ಅವು ವಿಮರ್ಶೆಯಲ್ಲಿ ಒಮ್ಮತ ಅಸಾಧ್ಯವೆಂದೇ ಹೇಳಿಬಿಟ್ಟುವು.

ಕೃತಿಸೀಮಿತದಿಂದ ಹುಟ್ಟಿಬಂದ ಇನ್ನೊಂದು ಕಲಾಪದ್ಧತಿ ಸಾಂಕೇತಿಕತೆ. ಅದನ್ನು ಸ್ಥಾಪಿಸಿದಾತ ಫ್ರೆಂಚರ ಸಾಹಿತಿ ಬೋದಿಲೇರ್. ಅವನು ಸ್ವೀಡನ್‌ಬರ್ಗ್ ಎಂಬ ವಿಶಿಷ್ಟ ಲಕ್ಷಣದ ದಾರ್ಶನಿಕನಿಂದ ಸಮರೂಪತೆ ನಿಯಮ ಅಥವಾ ಸಂವಾದಿ

ಸಿದ್ಧಾಂತವನ್ನು (ಥಿಯೊರಿ ಆಫ್ ಕರೆಸ್ಪಾಂಡೆನ್ಸಸ್) ಕಲಿತುಕೊಂಡ. ಫ್ಲಾಬರ್ಟನಿಂದ ಕಲಾವಿರಚನಾ ತಂತ್ರದ ಮುಖ್ಯತೆಯನ್ನು ಅರಿತ. ಮೇಲಾಗಿ ಕೋಲ್‌ರಿಜನ ಮೂಲಕ ಎಡ್ಗರ್ ಅಲನ್ ಪೋಗೆ ಇಳಿದು ಅವನಿಂದ ಬೋದಿಲೇರನ್ನು ಮುಟ್ಟಿದ ಪ್ರಭಾವ ಕ್ಯಾಂಟನದು. ವಿಷಯಾತೀತವೂ ಅನುಭವಜನ್ಯವಲ್ಲದ್ದೂ ಆದ ಗೂಢ ದರ್ಶನವನ್ನೂ ಕಲಾತಂತ್ರದ ಗಟ್ಟಿಯಾಕಾರದ ವಿವರಗಳನ್ನೂ ಅಚ್ಚುಕಟ್ಟಾಗಿ ಹೊಂದಿಸುವ ವಿದ್ಯೆಯಲ್ಲಿ ಬೋದಿಲೇರನಿಗೆ ಪೋನೇ ಗುರು. ಬೋದಿಲೇರನ ಶಿಷ್ಯರಾಗಿ ಬಂದವರು ವರ್ಲೇನ್ ಮತ್ತು ಮಲಾರ್ಮೆ. ಆದರೆ ಸಾಂಕೇತಿಕತೆ ಕೇವಲ ವೈಯಕ್ತಿಕ ವೈಚಿತ್ರ್ಯಕ್ಕೆ ತಿರುಗಿ ಸತ್ತ್ವ ಕಳೆದುಕೊಂಡಿತು. ಯೇಟ್ಸ್, ಪಾಲ್ ವ್ಯಾಲೆರಿ ಮೊದಲಾದ ಕೆಲವೇ ಕೆಲವರು ಅದನ್ನು ಮತ್ತೆ ರೂಢಿಗೆ ತರಲು ಪ್ರಯತ್ನಿಸಿ ಜಯ ಗಳಿಸದೇ ಹೋದರು. ಆದರೂ ಸಾಹಿತ್ಯವಿಮರ್ಶೆಯಲ್ಲಿ ಸಂಕೇತದ ವಿಚಾರ ಸೂಕ್ತ ಸಂದರ್ಭದಲ್ಲಿ ಬಳಕೆಗೆ ಬಂತು.

ಕೃತಿಸೀಮಿತತತ್ತ್ವದ ತತ್ತ್ವಶಾಸ್ತ್ರೀಯ ಮುಖವನ್ನು ಕ್ರೋಚೆ, ಬರ್ಗ್‌ಸನ್ನರಲ್ಲಿ ಕಾಣಬಹುದು. ಅವರಿಗೆ ಹೆಗಲನ ಮೂಲಕ ಕ್ಯಾಂಟನೇ ಮಾರ್ಗದರ್ಶಕ.

20ನೆಯ ಶತಮಾನದ ಎರಡನೆಯ ದಶಕದಲ್ಲಿ ಹೊಸ ವಿಮರ್ಶೆಯೆಂಬ ಡೌಲಿನ ಸಾಹಿತ್ಯವ್ಯಾಸಂಗ ತಲೆಯೆತ್ತಿತ್ತು. ಹಿಂದಿನಿಂದ ಸಾಂಪ್ರದಾಯಿಕವಾಗಿ ಬಂದ ತತ್ತ್ವಗಳು, ಸೂತ್ರಗಳು, ಸನ್ನಿವೇಶ ವಿವರಣೆ, ಕವಿಸ್ವಭಾವದ ವಿಚಾರ —ಇವೇ ಮುಂತಾದ, ಕೃತಿಯಿಂದ ಹೊರಚ್ಚಾದ ಸಮಸ್ತವನ್ನೂ ಬದಿಗೊತ್ತಿ ಕೃತಿಯೊಂದನ್ನೇ ಪರಿಕಿಸಬೇಕು—ಎಂಬುದು ಅದರ ಚಾಲಕಶಕ್ತಿ. ಆದರೆ ಹೊಸ ವಿಮರ್ಶಕರಲ್ಲಿ ಅನೇಕ ವಿಭಿನ್ನ ಗುಂಪುಗಳಾದುವು. ಅವರಿಂದ ಆಗಿರುವ ಒಂದು ಪ್ರಯೋಜನ ಕಲಾಕೃತಿಗೆ ಹೆಚ್ಚುಕಡಿಮೆ ಸಂಪೂರ್ಣವಾಗಿ ಲಕ್ಷ್ಯವೇ ಮೀಸಲಾಗಬೇಕೆಂಬ ಅಭಿಪ್ರಾಯ; ಕಲಾಕೃತಿಗೆ ಆಂಗಿಕ ಹೊಂದಾಣಿಕೆ (ಆರ್ಗ್ಯಾನಿಕ್ ಯೂನಿಟಿ) ಇರಲೇಬೇಕೆಂಬ ತತ್ತ್ವ.

ಇತ್ತೀಚೆಗೆ ಮನಶ್ಶಾಸ್ತ್ರಜ್ಞ ಯೂಂಗನಿಂದ ಪ್ರಚೋದಿತವಾದ ವಿಧಾನವೊಂದು ವಿಮರ್ಶೆಯೊಳಕ್ಕೆ ಕಾಲಿಟ್ಟಿದೆ. ಅವನು ಜಾರಿಗೆ ತಂದ ಭಾವನೆಗಳಲ್ಲಿ ನರರ ಅಂತರಾಳದಲ್ಲಿ ಹುದುಗಿದೆಯೆಂದು ಹೇಳಲಾಗುವ ಸಾಮೂಹಿಕ ಅಪ್ರಜ್ಞೆ (ದಿ ಕಲೆಕ್ಟಿವ್ ಅನ್‌ಕಾಂಷಸ್) ಕಡುಪುಳ್ಳದ್ದು. ಕೆಲವೊಮ್ಮೆ ಅದು ಜಾಗರಿತವಾಗಿ ಭಾವ ಭಾವನೆಗಳ ಆದ್ಯ ಮಾದರಿಯ (ಆರ್ಕಿಟೈಪ್ಸ್) ಅರಿವನ್ನು ಒದಗಿಸುತ್ತದೆ. ಕೆಲವರಿಗೆ ಸೃಷ್ಟಿಗೈಯುವ ರಾಗೋತ್ಸಾಹವನ್ನು ಎಬ್ಬಿಸಿ ಕಲಾನಿರ್ಮಿತಿಗೆ ಕಾರಣವಾಗುತ್ತದೆ. ಈ ಅಭಿಪ್ರಾಯದ ಸುಳಿವು ಕ್ಯಾಂಟನ ವಿಭಾವನಾ ಕಲ್ಪನೆಯಲ್ಲಿ ಗೋಚರಿಸಿದೆಯೆಂದು ಕೆಲವರ ಹೇಳಿಕೆ. ಯೂಂಗನ ನಿರ್ಧಾರದಂತೆ ಆದ್ಯಮಾದರಿಗಳು ಮೂಲ ಐತಿಹ್ಯ (ಲೆಜೆಂಡ್), ಕಥಾವಳಿ (ಮಿತ್ಸ್) ಶಾಶ್ವತ ಸಂಕೇತಗಳು (ಇಂಟರ್ನಲ್ ಸಿಂಬಲ್ಸ್), ದ್ರವ್ಯವರ್ಗಗಳು (ಕೆಟಗೊರೀಸ್) ಇತ್ಯಾದಿ ರೂಪಗಳಲ್ಲಿ ಪ್ರಕಟಿತವಾಗಿ ನುಡಿದ ವಚನಕ್ಕೆ ಅರ್ಥತುಂಬುತ್ತವೆ. ರುದ್ರನಾಟಕ ಭವ್ಯಕಾವ್ಯಪ್ರಭೇದಗಳ ಜಿಜ್ಞಾಸೆಯಲ್ಲೂ ಸಾಂಕೇತಿಕತೆಯ ವ್ಯಾಖ್ಯಾನದಲ್ಲೂ ಆದ್ಯ ಮಾದರಿಗಳ ಪ್ರಸ್ತಾಪ ಬರುತ್ತಿದೆ. 20ನೆಯ ಶತಮಾನಕ್ಕೆ ಮನಶ್ಶಾಸ್ತ್ರದ ಯುಗವೆಂಬ ಹೆಸರು ಯುಕ್ತ.

18ನೆಯ ಶತಮಾನ ಯಂತ್ರೋದ್ಯಮದ ಕಾಲವಾದರೆ 19ನೆಯ ಶತಮಾನ ವಿಜ್ಞಾನ ಯುಗವಾಯಿತು. ನಾನಾ ಪ್ರಬಲ ಸಂಶೋಧಗಳಿಂದ ಮನುಷ್ಯಚಿಂತನೆ ಅಲ್ಲೋಲಕಲ್ಲೋಲಗೊಂಡಿತು. ವಿಜ್ಞಾನಕ್ಕೆ ಒಗ್ಗಿಬಂದ ವಿಧಿಗಳು, ವಿಕಾಸ —ಇವು ಸಮಾಜ ಸಂಸ್ಕೃತಿ ಸಾಹಿತ್ಯಕ್ಕೂ ಯಥೋಚಿತವಾಗಿ ಅನ್ವಯವಾಗಬಹುದೆಂದು ಯೋಚನಾಪರರಿಗೆ ಭಾಸವಾಯಿತು. ಬೆಂತಮ್, ಕಾಂಪ್ಟ್, ಹರ್ಬರ್ಟ್ ಸ್ಪೆನ್ಸರ್ ಮೊದಲಾದವರು ವೈಜ್ಞಾನಿಕವಾಗಿ ಸಮಾಜಶಾಸ್ತ್ರ ರಚಿಸುವುದಕ್ಕೆ ಆಸಕ್ತಿ ವಹಿಸಿದರು. ಕ್ಯಾಂಟನ ತತ್ತ್ವಶಾಸ್ತ್ರ ಬ್ರಿಟನಿನಲ್ಲಿ ಪ್ರಬಲಗೊಳ್ಳುತ್ತಿದ್ದ ಅನುಭವೈಕವಾದಕ್ಕೆ (ನೋಡಿ) ತಡೆಹಾಕಲು ಪ್ರಯತ್ನಿಸಿದರೂ ಆ ವಾದ ಬೆಳೆಯುತ್ತಲೇ ಬಂತು; ವೈಜ್ಞಾನಿಕ ಪ್ರಗತಿಯೂ ಯಂತ್ರೋದ್ಯಮ ಪ್ರಗತಿಯೂ ಪ್ರಯೋಗ ಅನುಭವಗಳಿಗೆ ಪ್ರಶಸ್ತಿ ತಂದುಕೊಟ್ಟುವು.

ವೈಜ್ಞಾನಿಕ ವಿಮರ್ಶಕರೆಲ್ಲರೂ ಒಂದೇ ಪಂಗಡದವರಲ್ಲ. ಸಾಮಾಜಿಕ ವಿಮರ್ಶಕರಿಗೆ ಸಂಸ್ಕೃತಿಮೂಲ ಪ್ರಭಾವಗಳು ಮುಖ್ಯ. ಮತಧರ್ಮ ಅರ್ಥಶಾಸ್ತ್ರ ರಾಜಕೀಯ ತತ್ತ್ವಗಳಂತೆ ಸಾಹಿತ್ಯ ನಿರ್ಮಾಣಗೊಳ್ಳುತ್ತದೆಂದು ಅವರ ನಿಲವು. ಸಾಹಿತ್ಯ ಚರಿತ್ರಕಾರರಿಗೆ ಆಧಾರಗಳೂ ಸಂಪ್ರದಾಯಗಳೂ ಮುಖ್ಯ. ಮನಶ್ಶಾಸ್ತ್ರಪ್ರೇರಿತ ವಿಮರ್ಶಕರು ಸಾಹಿತಿಗಳ ಸ್ವಂತ ಅನುಭವಗಳನ್ನೂ ಆತ್ಮಚರಿತ್ರೆಯನ್ನೂ ಬಹುವಾಗಿ ಗೌರವಿಸುತ್ತಾರೆ. ಜ಼ೋಲ ಮೊದಲಾದ ಕಾದಂಬರಿಕಾರರಿಗೆ ತಮ್ಮ ಕೃತಿಗಳು ವಿಜ್ಞಾನದ ವಿಧಿಗಳಿಗೆ ಅನುರೂಪ ಎಂಬ ಹೆಮ್ಮೆ.

ವೈಜ್ಞಾನಿಕ ವಿಮರ್ಶೆ ಕಲಾಕೃತಿಯಿಂದ ಹೊರಗಣ ಸಂಗತಿಗಳಿಗೆ ಎಡೆಕೊಡುವುದನ್ನು ಧ್ಯೇಯವಾಗಿ ಇಟ್ಟುಕೊಂಡಿರುವುದರಿಂದ ಅದಕ್ಕೂ ಕಲಾಮೂಲ ವಿಮರ್ಶೆಗೂ ಬದ್ಧ ವೈರ. ಎರಡು ಗುಂಪಿಗೂ ವಾದ ವಿವಾದ ರೊಮ್ಯಾಂಟಿಕರಿಂದ ಪ್ರಾರಂಭವಾಗಿ ಇಪ್ಪತ್ತನೆಯ ಶತಮಾನದಲ್ಲೂ ನಡೆದಿದೆ.

ಮೊದಲು ಎದ್ದುಬಂದ ವೈಜ್ಞಾನಿಕ ವಿಮರ್ಶೆ ಸಮಾಜ ಸಂಬಂಧವಾದದ್ದು. ಅನುವಂಶಿಕತೆ, ವಾಯುಗುಣ, ಸಮಾಜ ಪದ್ಧತಿ ಮುಂತಾದವು ಸಾಹಿತ್ಯಸೃಷ್ಟಿಯಾಗುವ ಬಗೆಯನ್ನು ನಿರ್ಣಯಿಸುತ್ತವೆಯೆಂದೇ ಅದರ ನಂಬಿಕೆ.

ಇಂಥ ಅಭಿಪ್ರಾಯದ ಮುನ್ಸೂಚನೆ 18ನೆಯ ಶತಮಾನದಲ್ಲೇ ಹರ್ಡರ್, ಮಾಂಟೆಸ್ಕ್ಯೂ ಮೊದಲಾದವರಿಂದ ಆಗಿಬಂದರೂ ವೈಜ್ಞಾನಿಕತೆ ಅಧಿಕೃತವಾಗಿ ಜನಿಸಿದ್ದು ಮದಾಂ ಡ ಸ್ಟೀಲಳ ಸಾಹಿತ್ಯವೂ ಸಮಾಜ ಸಂಸ್ಥೆಗಳೂ (1800) ಎಂಬ ಪುಸ್ತಕದಿಂದ. ಸ್ಟೆಂಡಲ್, ಸೇಂಟ್ ಬವ್, ರೀನನ್ ಮೊದಲಾದವರಿಂದ ಅದಕ್ಕೆ ಪುಷ್ಟಿ ದೊರೆಯಿತು. ಟೇನ್ ಬರೆದ ಇಂಗ್ಲಿಷ್ ಸಾಹಿತ್ಯ ಚರಿತ್ರೆ (1864) ಆ ವಿಧಾನದ ವಿವರಣೆಯೂ ಉದಾಹರಣೆಯೂ ಆಯಿತು.

ಜರ್ಮನಿ ತನ್ನದೇ ಆದ ವೈಜ್ಞಾನಿಕ ವಿಮರ್ಶೆಯನ್ನು ಹೊರತಂದಿತು. ಗ್ರಿಮ್ ಸೋದರರು, ವರ್ನರ್, ಷೀರರ್ ಮತ್ತು ಇತರ ವೈಯಾಕರಣಿಗಳು ಭಾಷಾಪ್ರಮುಖ ವಿಮರ್ಶೆಯರ್ನನ್ನು ಹುಟ್ಟುಹಾಕಿ ಬೆಳೆಸಿದರು. ಅವರು ಗಳಿಸಿದ ವಿಜಯದಿಂದ ವಿಮರ್ಶೆಯೂ ಒಂದು ವಿಜ್ಞಾನವಾಗಬಹುದೆಂಬ ಆಶೋತ್ತರ ಪಂಡಿತ ವರ್ಗದಲ್ಲಿ ಹರಡಿತು. 1860 ರಿಂದ 1916ರ ವರೆಗಿನ ಐವತ್ತಾರು ಸಂವತ್ಸರಗಳ ಕಾಲದಲ್ಲಿ ಜರ್ಮನ್ ಪಾಂಡಿತ್ಯ ಜಗತ್ಕೀರ್ತಿಯನ್ನು ಸಂಪಾದಿಸಿಕೊಂಡಿತು. ಅದರ ಬಹುಪಾಲು ಭಾಷಾಶಾಸ್ತ್ರಕ್ಕೆ ಸಂಬಂಧಿಸಿದ್ದು. ಬೊ ಅಕ್ ಕೈಫನಾಕ್ ರಚಿಸಿದ ಬೃಹದ್ಗ್ರಂಥಗಳು ಇದಕ್ಕೆ ನಿದರ್ಶನ. ಅದೇ ದಾರಿಯಲ್ಲಿ ಸ್ಕೀಟ್, ಚೇಂಬರ್ಸ್, ಕೋರ್ಟ್‌ಹೋಪ್ ಇತ್ಯಾದಿ ಬ್ರಿಟಿಷ್ ಪಂಡಿತರೂ ನಡೆದರು.

ಡಾರ್ವಿನನ ಪ್ರಭಾವ ಸಾಹಿತ್ಯ ಚರಿತ್ರೆಯ ಮೇಲೂ ಕಾದಂಬರಿಯ ವಿಮರ್ಶೆಯ ಮೇಲೂ ಬಲವಾಗಿ ಬಿತ್ತು. ಸಾಹಿತ್ಯದ ಶಕ್ತಿಗಳು ವಿಕಾಸ ಹೊಂದುತ್ತ ಹೋಗುತ್ತವೆಂದೂ ಉದ್ಘಕೃತಿಗಳು ಆಗಿಬಂದು ಅವಧಿಯ ಘಟ್ಟಗಳನ್ನು ಏರ್ಪಡಿಸುತ್ತವೆಂದೂ ಬ್ರೂನಟೀರ್ ಹೇಳಿದ. ಪ್ಯಾಸ್ಕಲ್, ಚಾಟೊಬ್ರಿಯಾನ್ ಅಂಥ ಕೃತಿಕಾರರು. 1890ರಲ್ಲಿ ಬ್ರೂನಟೀರ್ ಸಾಹಿತ್ಯ ಪ್ರಭೇದಗಳ ವಿಕಾಸ ಎಂಬ ಗ್ರಂಥವನ್ನು ಹೊರತಂದ; 1897ರಲ್ಲಿ ಫ್ರೆಂಚ್ ಸಾಹಿತ್ಯದ ಕೈಪಿಡಿಯನ್ನು ಬರೆದ.

ಜ಼ೋಲ ಮತ್ತು ಇತರರು ಕಾದಂಬರಿಯ ನಿಯಂತ್ರಣವನ್ನು ವೈಜ್ಞಾನಿಕವಾಗಿ ವಿವರಿಸಿದರು. ಕಾದಂಬರಿಯಲ್ಲೂ ನಾಟಕದಲ್ಲೂ ಸ್ವಭಾವತೆಯೆಂಬ ತತ್ತ್ವ ಲೇಖಕರನ್ನು ಆಳತೊಡಗಿತು. ಜೀವನ ಒಂದು ಗೊಂಡಾರಣ್ಯ, ಬದುಕುವುದು ಹೋರಾಟದಲ್ಲಿ ಗೆದ್ದರೇನೆ. ಆದ್ದರಿಂದ ಲೇಖಕ ಇರುವ ಸ್ಥಿತಿಯನ್ನು ಇದ್ದಂತೆ ಪ್ರತಿಚಿತ್ರಿಸತಕ್ಕದ್ದು. ಇದು ಸ್ವಭಾವತೆ ತತ್ತ್ವದ ತಿರುಳು. ಜ಼ೋಲ ತನ್ನ ಕೃತಿಗಳನ್ನು ಪ್ರಾಯೋಗಿಕ ಕಾದಂಬರಿಗಳು ಎಂದು ಹೆಸರಿಟ್ಟು ಕರೆದ (1880).

ವೈಜ್ಞಾನಿಕತೆಯ ಎರಡು ಮುಖ್ಯ ಕವಲುಗಳೆಂದರೆ ಮಾರ್ಕ್ಸ್ ಮತ್ತು ಎಂಗೆಲ್ಸ್, ಫ್ರಾಯ್ಡ್—ಇವರ ತತ್ತ್ವ. ಸಾಹಿತ್ಯಕ್ಕೆ ನಿಜವಾದ ಆಸರೆ ಅದರ ಕಾಲದ ಆರ್ಥಿಕ ವಸ್ತುವ್ಯವಸ್ಥೆ ಎಂಬುದು ಮಾರ್ಕ್ಸ್ ಮತ್ತು ಎಂಗೆಲ್ಸರ ವಾದ. ಕಾವ್ಯ ಭಾಷೆ, ಪಾತ್ರ ಶಿಲ್ಪ ಸಂವಿಧಾನ ಮೊದಲಾದ ವಿಚಾರಗಳನ್ನು ಮನಶ್ಶಾಸ್ತ್ರ ರೀತ್ಯಾ ವಿವರಿಸಿ ಫ್ರಾಯ್ಡ್ ತಾನೇ ಪ್ರಬಂಧ ಬರೆದ. ಹಾಗೆಯೇ ಕವಿಯ ಆತ್ಮಕಥೆ ಸಾಂಕೇತಿಕತೆಗಳ ಮೇಲೂ ಬರೆದ. ಫ್ರಾಯ್ಡನ್ನು ಹಿಂಬಾಲಿಸಿದ ವಿಮರ್ಶೆಗೆ ಕಲಾಕೃತಿಯಲ್ಲಿ ಕಾಣಬಹುದಾದ ಕೃತಿಕಾರನ ಲಕ್ಷಣ ಗಮನೀಯ ಅಂಶ.

ಈ ಶತಮಾನದ ಎರಡನೆಯ ದಶಕದಲ್ಲಿ ಗಣಿತಶಾಸ್ತ್ರಕ್ಕೆ ಅಂಗಿಕವಾಗಿರುವ ಅಂಕಿ ಅಂಶ ನಕ್ಷೆ ಮುಂತಾದ ಕ್ರಮಗಳನ್ನು ಸಾಹಿತ್ಯವಿಮರ್ಶೆಯಲ್ಲಿ ಬಳಸಲಾರಂಭಿಸಿದರು. ನಾಮಪದ ಕ್ರಿಯಾಪದ ಗುಣವಾಚಕಾದಿಗಳು ಕಾವ್ಯದಲ್ಲಿ ಎಷ್ಟೆಷ್ಟು ಬರುತ್ತವೆಂದು ವರ್ನನ್ ಲೀ ಲೆಕ್ಕಮಾಡಿ ಹೇಳಿದ. ಇತರರಿಂದ ವಿಷಯಗಳ ನಕಾಶೆ, ಪದಗಳ ಸಂವಿಧಾನ ಮುಂತಾದವು ಗಣಿತವಾದುವು. ಷೇಕ್ಸ್‌ಪಿಯರನ ಮತ್ತು ಅವನ ಸಮಕಾಲೀನರ ಕೃತಿಗಳಲ್ಲಿ ಬರುವ ಅಭಿಪ್ರಾಯ ಪ್ರತಿಮೆಗಳನ್ನು ಕ್ಯಾರೊಲೀನ್ ಸ್ಪರ್ಜನ್ ನಕ್ಷೆ ಮಾಡಿದಳು. ಷೇಕ್ಸ್‌ಪಿಯರನ್ನು ಓದುವಾಗ ಅಕ್ಷರಣೆಯೂ (ಸ್ಪೆಲ್ಲಿಂಗ್) ವಿರಾಮ ಚಿಹ್ನೆಗಳೂ ಹೇಗೆ ಬೇಕಾಗುತ್ತವೆಂಬುದನ್ನು ಲಾರಾ ರೈಡಿಂಗ್ ಮತ್ತು ರಾಬರ್ಟ್ ಗ್ರೇವ್ಸ್ ತೋರಿಸಿದ್ದಾರೆ.

ಇಂಥ ವ್ಯವಸಾಯವನ್ನು ಹಿಂಬದಿಗೆ ತಳ್ಳಿ ಶಬ್ದಾರ್ಥ ಪ್ರಮುಖ ವಿಮರ್ಶೆ ಎದ್ದು ಬಂತು. ಅದರ ಪ್ರತಿಪಾದಕದಲ್ಲಿ ಐ. ಎ. ರಿಚರ್ಡ್ಸ್ ಗಣ್ಯನಾದವ.

ಮಾನವತಾಮೂಲ ವಿಮರ್ಶೆ ಸುಲಭವಾಗಿ ಹಿಡಿತಕ್ಕೆ ಸಿಕ್ಕುವಂಥದಲ್ಲ. ತಮ್ಮ ಉದ್ದೇಶ ವಿಧಾನಗಳನ್ನು ಆ ಪಂಗಡದ ವಿಮರ್ಶಕರು ಸ್ಪಷ್ಟವಾಗಿ ವಚನಿಸಿಲ್ಲ. ಅವರ ವಂಶ ಹೊಸಹುಟ್ಟಿನ ವರೆಗೂ ಹಿಂದಕ್ಕೆ ಹೋಗುತ್ತದೆ. ಸಂಸ್ಕೃತಿಯ ಧ್ಯೇಯ ಮತ್ತು ನೀತಿಬೋಧೆ ಅದರ ಪ್ರಧಾನ ಲಕ್ಷಣ. 19ನೆಯ ಶತಮಾನದಲ್ಲಿ ಆದ ವಿಜ್ಞಾನ ಪ್ರಸಾರ, ಕಲೆಗಾರ ಪ್ರತ್ಯೇಕಿಸಲ್ಪಟ್ಟಿದ್ದು, ಸಾರ್ವಜನಿಕ ವಿದ್ಯಾಭ್ಯಾಸ, ಸಾಂಪ್ರದಾಯಿಕ ಮೌಲ್ಯಗಳ ಪರಾಭವ, ಹಳೆಯ ಸಂಸ್ಕೃತಿಯ ಕುಸಿತ ಮೊದಲಾದವನ್ನು ಆ ಕಾಲದ ಸಾಹಿತ್ಯ ವಿಮರ್ಶಕರು ಪರಿಶೀಲಿಸಬೇಕಾಯಿತು. ಅವರಲ್ಲಿ

ಕೆಲವರು ಘಂಟಾಘೋಷವಾಗಿ ಬಲಿಷ್ಠ ಕೇಂದ್ರ ಸರ್ಕಾರ, ವ್ಯವಸ್ಥಿತ ಶಿಕ್ಷಣ ಪದ್ಧತಿ ಲಲಿತಕಲೆಗಳಿಗೆ ಸುಭದ್ರಸ್ಥಾನ—ಇವು ಏರ್ಪಡಲೇಬೇಕೆಂದು ಸಾರಿದರು. ಅವರಿಗೆ ಕಲಾಮೂಲ ವಿಮರ್ಶೆ ಹೊಲ್ಲ. ಸಾಹಿತ್ಯದಿಂದ ಶೀಲ ನೆಟ್ಟಗಾಗದಿದ್ದರೆ ಅದು ಸಾಹಿತ್ಯವೇ ಅಲ್ಲ, ಅವರ ನೋಟಕ್ಕೆ. ವೈಜ್ಞಾನಿಕತೆಯೂ ಅವರಿಗೆ ರುಚಿಸುವುದಿಲ್ಲ. ಏತಕ್ಕೆಂದರೆ ಅದು ಮಾನವ ಸ್ವಾತಂತ್ರ್ಯವನ್ನು ಇಲ್ಲವೆನ್ನಿಸುತ್ತದೆ, ನೀತಿ ಧರ್ಮ ಬೇಡ ಎನ್ನುತ್ತದೆ. ಅವರ ಪಾಂಡಿತ್ಯವೆಲ್ಲ ಜೀವವಿಲ್ಲದ ಕ್ಷುಲ್ಲಕ ಸಂಗತಿಗಳ ಮೇಲೆ ಕಟ್ಟಿದುದು. ಅವರಲ್ಲಿ ಅನೇಕರಿಗೆ ಗಯಟೆಯೇ ಮೇಲ್ಪಂಕ್ತಿ. ಏತಕ್ಕೆಂದರೆ ಅವನು ರೊಮ್ಯಾಂಟಿಕತೆಯನ್ನು ಕಾಯಿಲೆಯೆಂದು ಹಳಿದ. ಅಭಿಜಾತ ಸಾಧುವೆಂದು ಹೇಳಿದ. ತೀವ್ರ ರಾಷ್ಟ್ರೀಯತೆಯನ್ನು ಖಂಡಿಸಿ ಜಗತ್ಸಾಹಿತ್ಯವೆಂಬುದನ್ನು ಹೊಗಳಿದ. ಕಲೆಗಾರನಿಂದ ಸಮಾಜದ ನೈತಿಕಾರೋಗ್ಯ ದೃಢವಾಗಿರಬೇಕೆಂಬುದೇ ಅವನ ಸಿದ್ಧಾಂತ. ಆದರೆ ಅವನಲ್ಲಿ ಅನಿಶ್ಚಿತತೆಯೂ ಪೂರ್ವಾಪರ ವಿರೋಧವೂ ಹೇರಳ.

ಇಂಗ್ಲೆಂಡಿನ ಮ್ಯಾಥ್ಯೂ ಆರ್ನಲ್ಡ್ ಮತ್ತು ಫ್ರಾನ್ಸಿನ ಸೇಂತ್ ಬವ್ ಗಯಟೆಯ ಬಗೆಯವರೇ. ಆದರೆ ಅವರ ದೃಷ್ಟಿ ನಿಶ್ಚಂಚಲ, ಅವರ ನುಡಿ ನಿಸ್ಸಂದಿಗ್ಧ. ಚಾರಲ್ಸ್ ಮೌರಾ ಮತ್ತು ಅರ್ವಿಂಗ್ ಬ್ಯಾಬಿಟ್ ಮನುಷ್ಯವಾತ್ಸಲ್ಯದ ವಿಮರ್ಶಕರು. ಕೆಲವೊಮ್ಮೆ ಲೋಕವನ್ನು ತಿದ್ದುವ ಚಟಕ್ಕೆ ಈಡಾಗಿದ್ದಾರೆ, ನಿಜ. ಟಾಲ್‌ಸ್ಟಾಯ್ ಮತ್ತು ನೀಚೆ ಅದೇ ಹವ್ಯಾಸದ ವೈಪರೀತ್ಯ. ತಮ್ಮ ಕಾಲದ ಲಲಿತಕಲೆ ಅವರ ಸೂಕ್ಷ್ಮ ನಾಸಿಕಕ್ಕೆ ನಾತಗೂಡಿದ ಕಸ. ಟಾಲ್‌ಸ್ಟಾಯ್ ಕಲೆಯಲ್ಲಿ ಸರಳತೆ, ದೈವಭಕ್ತಿ, ಪ್ರಾಮಾಣಿಕತೆ ಇರಬೇಕೆಂದು ಹಠ ತೊಟ್ಟ; ಒಂದು ಬಗೆಯ ಸಂತೋಷಾವೇಶ ಸ್ಫುರಿಸದಿದ್ದರೆ ಕಲೆ ಕಲೆಯಲ್ಲ—ಎಂಬುದು ನೀಚೆಯ ಮತ.

ಕಲಾಮೂಲ ವಿಮರ್ಶೆಯೂ ವೈಜ್ಞಾನಿಕ ವಿಮರ್ಶೆಯೂ ಅತಿರೇಕಕ್ಕೆ ಹೋಗುವಂತೆ ತೋರಿದಾಗ ಮಾನವತಾ ವಿಮರ್ಶೆ ಮುಂದೆ ಬಂದು ಹಾಳತವನ್ನೂ ಮಿತಿಯನ್ನೂ ಪೋಷಿಸುತ್ತದೆ. ಅದರ ಸಹಾಯದಿಂದ ಇನ್ನೊಂದು ಒಳ್ಳೆಯದಾಗಿದೆ. ಪರಿಣಾಮವಿಧಾನವೂ ವೈಯಕ್ತಿಕತೆಯೂ ಕಲಾಪ್ರಪಂಚದಲ್ಲಿ ಮಿತಿಯನ್ನು ಮೀರಿ ವರ್ತಿಸುವುದುಂಟು; ಹಾಗೆಯೇ ಸಾಂಪ್ರದಾಯಿಕತೆ ಪಾಂಡಿತ್ಯಗಳಿಗೂ ಅತಿಯ ಕಡೆಗೆ ಸರಿಯುವ ಚಾಪಲ್ಯವುಂಟು. ಮಾನವತಾಮೂಲ ವಿಮರ್ಶೆ ಅವನ್ನೂ ಮಧ್ಯಮಾರ್ಗಕ್ಕೆ ಎಳೆತರುವುದರಲ್ಲಿ ಉಪಯುಕ್ತ. ಜಾಕ್ ಮಾರಿಟೇನ್ ಅಂಥ ಸಮತೋಲ ಕಾರ್ಯದಲ್ಲಿ ಪ್ರವೀಣ.

ಮ್ಯಾರಿಟೇನನ ಹೆಸರನ್ನು ಹೇಳಿದ ಕೂಡಲೆ ಯಾವ ಗುಂಪಿಗೂ ಸೇರದೆ ತಮ್ಮ ಅಗಾಧ ಪ್ರತಿಭೆಯಿಂದ ಸಾಹಿತ್ಯಕ್ಷೇತ್ರದಲ್ಲಿ ಕುತೂಹಲ ಕೆರಳಿಸಿರುವ ಇತರ ಕೆಲವರನ್ನೂ ಒಂದೆರಡು ಪದ್ಧತಿಗಳನ್ನೂ ಹೆಸರಿಸಲೇ ಬೇಕು; ಆಂದ್ರೆ ಬ್ರಿಟನ್, ಜೀನ್‌ಪಾಲ್ ಸಾರ್ಟ್ರ್. ಇವರ ಕಾಣಿಕೆ ಅಮೂಲ್ಯವಾದುದು. ಮೊದಲ ಮಹಾಯುದ್ಧ ಮುಗಿದಮೇಲೆ ಯೂರೋಪಿನಲ್ಲಿ ಕಷ್ಟನಷ್ಟ ಆಶಾನಾಶ ನಿರುತ್ಸಾಹ ದುಗುಡಗಳ ಹೆಚ್ಚಳದಿಂದ ಎಲ್ಲ ಕಡೆಯೂ ನೀರಸ ಬಯಲೇ ಇದ್ದಂತೆ ಕಾಣಬಂದಿತ್ತು. ಕಲೆಗಾರರು ಹಲವು ಪ್ರಯೋಗಗಳ ಮೂಲಕ ಉಲ್ಲಾಸವುಂಟುಮಾಡಲು ಹವಣಿಸಿದರು. ಅತೀವ ವಾಸ್ತವತೆ (ಸರ್ರಿಯಲಿಸಂ) ಅವುಗಳಲ್ಲಿ ಒಂದು. ಅದರ ತಿರುಳು ಇಷ್ಟೆ; ಮಾನವನ ಅಂತಶ್ಚೇತನ ಅಥವಾ ಆತ್ಮಕ್ಕೆ ಸ್ವಯಂ ಚಾಲಕ ಶಕ್ತಿಯಿದೆ; ಬುದ್ಧಿ ಭಾವ ಸಂಕಲ್ಪ ಮೊದಲಾದವುಗಳಿಂದ ಅದಕ್ಕೆ ಅಡ್ಡಿ ಹೂಡದೆ ಅದರಷ್ಟಕ್ಕೆ ಅದನ್ನು ಬಿಟ್ಟರೆ ಅದು ಶುದ್ಧವಾದ ಕಲೆಯನ್ನು ರೂಪಿಸುತ್ತದೆ. ಬುದ್ಧಿ ವಿವೇಚನೆಯ ಅಥವಾ ನೈತಿಕ ಭಾವನೆಯ ಅಧಿಕಾರದಿಂದ ಚೇತನವನ್ನು ವಿಮೋಚಿಸಿದಾಗ ಪ್ರಕೃತಿಸಹಜವಾಗಿ ಅದು ಕೆಲಸಮಾಡುತ್ತದೆ. ನಿರ್ಮಲ ನೈಸರ್ಗಿಕ ಕಲೆಯನ್ನು ಸೃಷ್ಟಿಸುತ್ತದೆ. ಸ್ವಪ್ನದಂಥ ಅದರ ಅನಿಸಿಕೆಗಳೂ ತುಡಿತ ಮಿಡಿತಗಳೂ ನೈಜರೂಪದಲ್ಲಿ ಹೊರಬರುವುದೇ ಅತೀವ ವಾಸ್ತವತೆ. ಈ ವಾದಕ್ಕೆ ಫ್ರಾಯ್ಡನ ತತ್ತ್ವಗಳು ಬಹುಮಟ್ಟಿಗೆ ಪ್ರಚೋದಕವೆಂದು ಬೇರೆ ಹೇಳಬೇಕಾಗಿಲ್ಲ.

ಅಸ್ತಿತ್ವ ತತ್ತ್ವ (ಎಕ್ಸಿಸ್ಟೆಂಷಿಯಲಿಸಂ) 1950ರಿಂದ ನಾನಾ ದೇಶಗಳಿಗೆ ಹರಡಿ ಕಲೆ ಸಾಹಿತ್ಯಗಳ ಮೇಲೆ ಪ್ರಭಾವ ಬೀರಿದೆ. ವಿಮರ್ಶೆಯಲ್ಲಿ ಅದರ ಅಭಿಪ್ರಾಯಗಳನ್ನು ಶಕ್ತಿಯುತವಾಗಿ ಮೂಡಿಸಿದವ ಜೀನ್ ಪಾಲ್ ಸಾರ್ಟ್ರ್. ಮೌಲ್ಯವೆಲ್ಲ ಸಾಪೇಕ್ಷ. ಆದರ್ಶವ್ಯವಸ್ಥೆಯೆಂಬುದಾವುದೂ ಇಲ್ಲವೇ ಇಲ್ಲ. ಆದರೆ ಮನುಷ್ಯ ಕಾರ್ಯ ನಡೆಸಲೇಬೇಕು. ಈ ಪರಸ್ಪರ ವಿರುದ್ಧ ಸಮಸ್ಯೆಯನ್ನು ಜೀವನ ವ್ಯಕ್ತಿಯ ಎದುರು ಒಡ್ಡುತ್ತದೆ. ಅದನ್ನು ಬಿಡಿಸಿ ಬಗೆಹರಿಸುವುದೆಂತು ? ಇದಕ್ಕೆ ಸಾರ್ಟ್ರ್ ಕೊಡುವ ಉತ್ತರ ಇದು. ಸಮಸ್ಯೆ ಒಂದು ವಿಧದಲ್ಲಿ ತನ್ನ ಜಟಿಲತೆಯಿಂದ ನೋವು ತರುವಂಥದು. ಇನ್ನೊಂದು ವಿಧದಲ್ಲಿ ತನ್ನ ವಿರೋಧಾಭಾಸದಿಂದ ನಗು ತರುವಂಥದು. ಆದ್ದರಿಂದ ಬಿಡಿ ವ್ಯಕ್ತಿ ಒಂದು ಪರಿಸ್ಥಿತಿಯ ಹೊಣೆಯನ್ನು ಸ್ವಾತಂತ್ರ್ಯದಿಂದ ಗೆಲುವಾಗಿ ಹೊತ್ತುಕೊಳ್ಳಲಿ. ಆ ಹೊಣೆಗಾಗಿ ಶಕ್ತಿಮೀರಿ ಶ್ರಮಿಸಲಿ. ಹಾಗೆ ಮಾಡಿದರೆ ಸರ್ವಸಿದ್ಧಿಯಾಗಿ ಅವನು ವಿಜಯಿಯಾಗುತ್ತಾನೆ. ಕವಿಗೆ ಬೇರಾವ ಸ್ವಾತಂತ್ರ್ಯ ಬೇಕು ? ಈ ತತ್ತ್ವ ನಾಟಕ, ಕಾದಂಬರಿಗಳ ವಿಮರ್ಶೆಯಲ್ಲಿ ಹಲವು ಉತ್ತಮ ಪರಿಣಾಮಗಳಿಗೆ ಮೂಲವಾಗಿದೆ.

ಬಾಹ್ಯನಿಷ್ಠಾವಾದ (ಫಾರ್ಮಲಿಸಂ) ಎಂಬುದು ಕೆಲಕಾಲ ರಷ್ಯದಲ್ಲಿ ಗಲಭೆ ಮಾಡಿತು. ಅದರ ಧ್ಯೇಯವನ್ನು ವಿವರಿಸಿದ ಲನ್ಸ್‌ನ ಹೇಳಿಕೆಯಂತೆ ಕಲೆ ಜೀವನದಷ್ಟೇ ಮುಖ್ಯ, ಯಥಾರ್ಥ; ಜೀವನದ ಹಾಗೆಯೇ ಕಲೆಗೂ ಗುರಿಯಿಲ್ಲ, ಅರ್ಥವಿಲ್ಲ. ಕಲೆ ಇರುವುದೇಕೆಂದರೆ ಇರದೇ ಅದಕ್ಕೆ ಗತ್ಯಂತರವಿಲ್ಲ. ಆದ್ದರಿಂದ ಕಲೆಯಲ್ಲಿ ನಾವು ಭಾವಿಸಬೇಕಾದದ್ದು ನಿಪುಣತಂತ್ರದಿಂದ ಅದು ಮುಂದಿಡುವ ಬಾಹ್ಯಾಕೃತಿಯನ್ನು, ಸಾಹಿತ್ಯಪ್ರಬಂಧದ ವಿಷಯ ಅದರ ಶೈಲಿಯ ವಿಧಾನ ವಿನ್ಯಾಸವೆಷ್ಟೊ ಅಷ್ಟೆ—ಎಂಬುದು ಮತ್ತೊಂದು ವ್ಯಾಖ್ಯೆ.

ಸಾಹಿತ್ಯ ವಿಮರ್ಶೆಯ ಪ್ರಕಾರಗಳನ್ನು ಕ್ಲ್ಯಾಸಿಕಲ್, ನಿಯೊಕ್ಲ್ಯಾಸಿಕಲ್, ರೊಮ್ಯಾಂಟಿಕ್, ಆಧುನಿಕ ಎಂದು ವಿಭಾಗಿಸಿ ತೃಪ್ತರಾಗುತ್ತಿದ್ದರು, ದಶಕಗಳ ಹಿಂದೆ. ಈಗ ಅದು ಅಪೂರ್ಣ, ಅಸಮರ್ಪಕ—ಎಂದಾಗಿದೆ. ಸಂಪ್ರದಾಯದ ಚಿಂತನೆಯನ್ನು ಬಿಟ್ಟುಕೊಟ್ಟು ವಿಮರ್ಶೆಯ ಕೆಲಸವೇನು ಎಂಬ ವಿಚಾರದಲ್ಲಿ ನಿರತವಾಗಿರುವ ಮತ್ತೊಂದು ಬಗೆಯ ಪಂಗಡಗಳನ್ನು ಕಾಣಬಹುದು. ಕಾವ್ಯಕ್ಕೆ ವ್ಯಾಖ್ಯಾನ ಮಾಡುವುದು, ಕಾವ್ಯದ ಬೆಲೆಕಟ್ಟುವುದು, ಕಾವ್ಯ ಎಬ್ಬಿಸುವ ವಿಮರ್ಶಕನ ಪ್ರತಿಕ್ರಿಯೆಯ ವಿವರಣೆ—ಇವು ಮೂರು ವಿಧದ ವಿಮರ್ಶೆಯನ್ನು ಹೊರತಂದುವು: ವಿಮರ್ಶೆಯಿಂದ ಕವಿಗೆ ಸಹಾಯವಾಗಬೇಕು, ಓದುಗರಿಗೆ ಸಹಾಯವಾಗಬೇಕು, ಸಮಾಜಕ್ಕೆ ಸಹಾಯವಾಗಬೇಕು. ಇವುಗಳಿಂದ ಬೇರೆ ತರಹದ ವಿಮರ್ಶೆ ಉಂಟಾದುವು. ಈ ಪರಿಯ ಅನೇಕ ಅಭಿಪ್ರಾಯಗಳು ಐರೋಪ್ಯ ಸಾಹಿತ್ಯ ವಿಮರ್ಶೆಯನ್ನು ಸಾರವತ್ತಾಗಿಸಿವೆ, ಗೋಜುಗೋಜಾಗಿಸಿವೆ, ಚೈತನ್ಯ ತುಂಬಿ ಬಾಳಿಸುತ್ತಿವೆ.

(ಎಸ್.ವಿ.ಆರ್.)

**ಐರ್ಲೆಂಡ್ :** ಗ್ರೇಟ್ ಬ್ರಿಟನಿಗೆ ಪಶ್ಚಿಮದಲ್ಲಿ, ಉತ್ತರ ಅಕ್ಷಾಂಶ 51° 25′ ನಿಂದ 55° 23′ಗೂ ಪಶ್ಚಿಮ ರೇಖಾಂಶ 5° 25′ ನಿಂದ 10° 30′ ಗೂ ನಡುವೆ ಸೊಟ್ಟಪಟ್ಟ ಹರಳಿನಂತೆ ಹಬ್ಬಿರುವ ದ್ವೀಪ. ಸರಾಸರಿ 110 ಮೈ. ಅಗಲ ಮತ್ತು 220 ಮೈ. ಉದ್ದ ಇರುವ ಇದರ ವಿಸ್ತೀರ್ಣ 31,840 ಚ. ಮೈ. ಉತ್ತರ ಐರ್ಲೆಂಡ್ ಮತ್ತು ಐರಿಷ್ ಗಣರಾಜ್ಯಗಳೆಂದು ಇದರಲ್ಲಿ ಎರಡು ರಾಜಕೀಯ ವಿಭಾಗಗಳಿವೆ. ಆದರೆ ಐರ್ಲೆಂಡಿನ ಅತ್ಯಂತ ಉತ್ತರದ ಬಿಂದು ಡಾನೆಗಾಲ್ ಇರುವುದು ಉತ್ತರ ಐರ್ಲೆಂಡಿನಲ್ಲಲ್ಲ, ಐರಿಷ್ ಗಣರಾಜ್ಯದಲ್ಲಿ. ಇತಿಹಾಸ ಪ್ರಸಿದ್ಧವಾದ ಅಲ್ಸ್ಟರ್ ಪ್ರಾಂತ್ಯದ ಒಂಬತ್ತು ಕೌಂಟಿಗಳಲ್ಲಿ (ವಿಭಾಗ) ಆರು ಉತ್ತರ ಐರ್ಲೆಂಡಿನಲ್ಲಿವೆ. ಆದ್ದರಿಂದ ಉತ್ತರ ಐರ್ಲೆಂಡನ್ನು ಅಲ್ಸ್ಟರ್ ಎಂದೂ ಕರೆಯುವುದುಂಟು. ಇದು ಸಂಯುಕ್ತ ಪ್ರಭುತ್ವದಲ್ಲಿದೆ (ಯುನೈಟೆಡ್ ಕಿಂಗ್ಡಮ್). ಐರಿಷ್ ಗಣರಾಜ್ಯದಲ್ಲಿ 26 ಕೌಂಟಿಗಳಿವೆ. ಇದು ಸ್ವತಂತ್ರ ಸಾರ್ವಭೌಮ ರಾಜ್ಯ. ಹಚ್ಚ ಹಸುರು ಹಬ್ಬಿರುವ ಐರ್ಲೆಂಡನ್ನು ಪಚ್ಚೆಯ ದ್ವೀಪವೆಂದು ಕರೆಯುವುದುಂಟು. ಅಂಧಕಾರಯುಗದಲ್ಲಿ ಇದು ಜ್ಞಾನ ನಿಷ್ಠೆಗಳ ಕೇಂದ್ರವಾಗಿತ್ತಂತೆ. ಆದ್ದರಿಂದ ಇದನ್ನು ಸಂತರ ಮತ್ತು ಜ್ಞಾನಿಗಳ ದ್ವೀಪವೆಂದು ಸಂಬೋಧಿಸುವುದೂ ಉಂಟು.

**ಮೇಲ್ಮೈಲಕ್ಷಣ :** ಬಟ್ಟಲ ತಟ್ಟೆಯಂತೆ ಸುತ್ತಲೂ ಹರಕು ಮುರುಕು ಪರ್ವತಗಳು ; ನಡುವೆ ಸುಣ್ಣಕಲ್ಲಿನ ಬಯಲು. ಇದು ಸ್ಥೂಲವಾಗಿ ಐರ್ಲೆಂಡಿನ ಸ್ವರೂಪ. ಇದರ ಪೂರ್ವತೀರ ಸಾಮಾನ್ಯವಾಗಿ ನೇರ, ಸರಳ. ಆದರೆ ಪಶ್ಚಿಮದ್ದು ಹಾಗಲ್ಲ. ಅದು ಅತ್ಯಂತ ಅಂಕುಡೊಂಕು ; ಹಲವೆಡೆಗಳಲ್ಲಿ ಕೋರೆದಾಡೆಗಳಂತೆ ಸಮುದ್ರದೊಳಕ್ಕೆ ಚಾಚಿರುವ ಕಡಿದಾದ ಬಂಡೆಗಳಿವೆ. ಅಟ್ಲಾಂಟಿಕ್ ಸಾಗರದ ನೆಲಗೊರೆತಕ್ಕೆ ಇವು ಸಾಕ್ಷಿ. ಈ ಕಾರಣದಿಂದಾಗಿ ಈ ತೀರದಲ್ಲಿ ಅನೇಕ ಖಾರಿಗಳೂ ಕೊಲ್ಲಿಗಳೂ ಸಣ್ಣ ದೊಡ್ಡ ದ್ವೀಪಗಳೂ ವಿಸ್ತಾರ ಭೂಪ್ರದೇಶದೊಂದಿಗೆ ಸೂಕ್ಷ್ಮಸಂಬಂಧ ಮಾತ್ರ ಉಳಿಸಿಕೊಂಡಿರುವ ಪರ್ಯಾಯ ದ್ವೀಪಗಳೂ ಅಸಂಖ್ಯಾತವಾಗಿವೆ. ದ್ವೀಪಗಳ ಪೈಕಿ ಅಚಿಲ್ ಮತ್ತು ಆರನ್ ಅತ್ಯಂತ ದೊಡ್ಡವು. ನೈಋತ್ಯದಂಚಿನಲ್ಲಿರುವ ವ್ಯಾಲೆಂಟಿನ ದ್ವೀಪ ಅಟ್ಲಾಂಟಿಕಾಂತರ ಕಡಲತಂತಿಮಾರ್ಗಗಳ ಮುಖ್ಯಕೇಂದ್ರ, ಹವಾವೀಕ್ಷಣಾಲಯ. ಆಳಗಡಲಿನ ಉತ್ತಮ ಬಂದರುಗಳೂ ಇಲ್ಲಿ ಹಲವುಂಟು. ಮಧ್ಯದ ಮೈದಾನದ ಸುಣ್ಣಕಲ್ಲಿನ ಮೆದುನೆಲವನ್ನು ಕೊರೆದು ಒಳಕ್ಕೆ ಚಾಚಿರುವ ಅಟ್ಲಾಂಟಿಕಿನಿಂದಾಗಿರುವ ಮೂರು ದೊಡ್ಡ ಕೊಲ್ಲಿಗಳೆಂದರೆ ಡಾನೆಗಾಲ್, ಸ್ಲೈಗೋ ಮತ್ತು ಗಾಲ್‌ವೇ. ಈ ಕೊಲ್ಲಿಗಳಿಂದ ಸಂಭವಿಸಿರುವ ಮೂರು ಪರ್ಯಾಯದ್ವೀಪಗಳು ಡಾನೆಗಾಲ್, ಕಾನೆಮಾರ ಮತ್ತು ಕೆರಿ. ನಡುಮಾ ಮೈದಾನ ಪೂರ್ವಾಭಿಮುಖವಾಗಿ ಐರಿಷ್ ಸಮುದ್ರದ ವರೆಗೂ ಹಬ್ಬಿದೆ. ಈ ಭಾಗವೇ ಐರ್ಲೆಂಡಿನ ನಗರಭರಿತ ಪ್ರದೇಶ. ಪುರಾತನ ಕಾಲದಿಂದ ಐರ್ಲೆಂಡಿನ ನಾಗರಿಕತೆ ಹಬ್ಬಿದ್ದು ಇಲ್ಲಿ. ಈ ಮೈದಾನ ಒಂದೇ ಸಮನಾಗಿಲ್ಲ. ಸಮುದ್ರ ಮಟ್ಟಕ್ಕಿಂತ ಸರಾಸರಿ 250 ಅಡಿ ಎತ್ತರವಿರುವ ಈ ಪ್ರದೇಶದಲ್ಲಿ

ವಂಕಿಗಳಂತೆ ಸುತ್ತಿರುವ ಹಲವಾರು ಬೆಟ್ಟಗುಡ್ಡಗಳುಂಟು. ಪೂರ್ವ ಬಿಟ್ಟು ಉಳಿದೆಲ್ಲ ಕಡೆಗಳಲ್ಲೂ ಈ ಪ್ರದೇಶದ ಸುತ್ತ ಪರ್ವತಗಳು ಮುರಿದು ಉಳಿದು ಕೊಂಡಿವೆ. ಐರ್ಲೆಂಡಿನ ಪಶ್ಚಿಮವಂಚಿನ ಕೆಮ್ಮರಳು ಬಣ್ಣದ ಬೆಟ್ಟಗಳು ಈ ಭಾಗಕ್ಕೆ ಅಪೂರ್ವವಾದ ಪರ್ವತಶೋಭೆ ತಂದಿವೆ. ಬಾಯಿನ್ ಮತ್ತು ಷ್ಯಾನನ್‌ಗಳು ಮೈದಾನದ ಮುಖ್ಯ ನದಿಗಳು. ಷ್ಯಾನನ್ ನದಿ ಘಟ್ಟವಿಳಿದು ಧುಮ್ಮಿಕ್ಕುವಲ್ಲಿ ವಿದ್ಯುತ್ತನ್ನು ಉತ್ಪಾದಿಸಲಾಗುತ್ತಿದೆ. ಐರ್ಲೆಂಡ್ ಗಣರಾಜ್ಯಕ್ಕೆ ವಿದ್ಯುತ್ತನ್ನೊದಗಿಸುತ್ತಿರುವುದು ಮುಖ್ಯವಾಗಿ ಇಲ್ಲಿಂದ. ಈ ದೃಷ್ಟಿಯಿಂದ ಉತ್ತರ ಭಾಗದಲ್ಲಿ ಅರ್ನ್ ನದಿ ಮುಖ್ಯವಾದ್ದು. ಇದು ಉತ್ತರ ಐರ್ಲೆಂಡಿಗೆ ಹರಿಯುವುದರಿಂದ ಈ ನದಿ ಸಮುದ್ರಕ್ಕೆ ಧುಮ್ಮಿಕ್ಕುವಲ್ಲಿ ವಿದ್ಯುದುತ್ಪಾದನೆ ಮಾಡಬಹುದಾದರೂ ಐರ್ಲೆಂಡಿನ ಎರಡು ರಾಜಕೀಯ ವಿಭಾಗಗಳ ನಡುವಣ ವ್ಯಾಜ್ಯದಿಂದ ಇದು ಸಾಧ್ಯವಾಗಿಲ್ಲ.

**ವಾಯುಗುಣ :** ಐರ್ಲೆಂಡ್ ಉತ್ತರ ಅಟ್ಲಾಂಟಿಕ್ ಚಕ್ರಮಾರುತದ ನೇರ ಪ್ರಭಾವಕ್ಕೆ ಒಳಗಾಗಿರುವುದರಿಂದ ಇಲ್ಲಿನ ಹವಾ ಸಾಮಾನ್ಯವಾಗಿ ಹಿತಕರ; ನೈರುತ್ಯದಲ್ಲಿ ಅತ್ಯಂತ ಸಮಶೀತೋಷ್ಣ (45°ಫ್ಯಾ.–59°ಫ್ಯಾ.). ಕಡಲ ಸನಿಹದಲ್ಲಿರುವ ಎತ್ತರ ಪರ್ವತಗಳ ಬಳಿ ಪರಮಾವಧಿ ಮಳೆಯಾಗುತ್ತದೆ (80″). ಮೈದಾನದಲ್ಲಿ ಸಾಧಾರಣ (30″–40″). ಅಕ್ಟೋಬರಿನಿಂದ ಡಿಸೆಂಬರ್ ವರೆಗೆ ಮಳೆಗಾಲ. ಪೂರ್ವ ತೀರದಲ್ಲಿ ಆಗಸ್ಟಿನಲ್ಲಿ ಪರಮಾವಧಿ ಮಳೆ. ವಸಂತದಲ್ಲಿ ಒಣ ಹವೆ ಇರುವುದರಿಂದ ವ್ಯವಸಾಯಕ್ಕೆ ಅನುಕೂಲವುಂಟು. ಆಕಳುಗಳನ್ನು ಸಾಕಲು ಇಲ್ಲಿನ ವಾಯುಗುಣ ಅತ್ಯಂತ ಪ್ರಶಸ್ತವಾಗಿದೆ.

**ಸ್ವಾಭಾವಿಕ ಸಸ್ಯ, ಪ್ರಾಣಿಗಳು :** ಇತಿಹಾಸಪೂರ್ವಕಾಲದಲ್ಲಿ ಇಲ್ಲಿ ಉತ್ತರ ಪರ್ವತ ವಿನಾ ಉಳಿದೆಲ್ಲ ಪ್ರದೇಶಗಳಲ್ಲೂ ದಟ್ಟ ಕಾಡುಗಳಿದ್ದುವು. ಸುಮಾರು ನಾಲ್ಕುಸಾವಿರ ವರ್ಷಗಳ ಕಾಲದಿಂದಲೂ ಇಲ್ಲಿ ಜನ ದನಕರು ಸಾಕಿಕೊಂಡಿದ್ದಾರೆ. ಆದ್ದರಿಂದ ಕಾಡು ಕಡಿಯುವ ಹವ್ಯಾಸ ಅತಿಯಾಗಿ ಹೆಚ್ಚಿ 17ನೆಯ ಶತಮಾನದ ವೇಳೆಗೆ ಇದು ಸಂಪೂರ್ಣವಾಗಿ ನಿರ್ನಾಮವಾಗುವ ಸ್ಥಿತಿಗೆ ಬಂದಿತ್ತು. ಐರ್ಲೆಂಡಿನ ಸಸ್ಯವೈವಿಧ್ಯ ಗ್ರೇಟ್ ಬ್ರಿಟನಿನದಕ್ಕಿಂತ ಕಡಿಮೆ. ಆದರೆ ಐಬೀರಿಯನ್ ಪರ್ಯಾಯದ್ವೀಪಕ್ಕೂ ಉತ್ತರ ಅಮೆರಿಕಕ್ಕೂ ಈ ಪ್ರದೇಶಕ್ಕೂ ಸಂಬಂಧವಿತ್ತೆಂಬುದನ್ನು ಇಲ್ಲಿನ ಸಸ್ಯಗಳೂ ಪ್ರಾಣಿಗಳೂ ಸೂಚಿಸುತ್ತವೆ.

**ಜನಸಂಖ್ಯೆ :** ಯೂರೋಪಿನ ದೇಶಗಳ ಪೈಕಿ ಐರ್ಲೆಂಡ್ ಒಂದರಲ್ಲೇ 19ನೆಯ ಶತಮಾನದ ಉತ್ತರಾರ್ಧದಲ್ಲಿ ಜನಸಂಖ್ಯೆ ಇಳಿಯಿತೆನ್ನಬಹುದು. ಇದಕ್ಕೆ ಕ್ಷಾಮವೂ ಇಲ್ಲಿಂದ ಜನ ಹೊರಕ್ಕೆ ವಲಸೆಹೋದದ್ದೂ ಕಾರಣ. ಇಪ್ಪತ್ತನೆಯ ಶತಮಾನದಲ್ಲಿ ಜನಸಂಖ್ಯೆ ಹೆಚ್ಚುಕಡಿಮೆ ಸ್ಥಿರವಾಗಿದೆ. ಹಳ್ಳಿಗರ ಸಂಖ್ಯೆಯೇ ಹೆಚ್ಚು. ದಕ್ಷಿಣಕ್ಕಿಂತ ಉತ್ತರದಲ್ಲಿ ಪಟ್ಟಣಿಗರ ಸಂಖ್ಯೆ ಹೆಚ್ಚು.

**ಉತ್ತರ ಐರ್ಲೆಂಡ್ :** ಇದು ಗ್ರೇಟ್ ಬ್ರಿಟನ್ ಮತ್ತು ಉತ್ತರ ಐರ್ಲೆಂಡ್ ಸಂಯುಕ್ತ ಪ್ರಭುತ್ವದ ಒಂದು ರಾಜಕೀಯ ವಿಭಾಗ. ಆಂಟ್ರಿಮ್, ಆರ್ಮಾ, ಡೌನ್, ಫರ್ಮೇನ, ಲಂಡನ್‌ಡೆರಿ ಮತ್ತು ಟೈರೋನ್ ಕೌಂಟಿಗಳ ನ್ನೊಳಗೊಂಡಿದೆ. ಇದನ್ನು ಅಲ್ಸ್ಟರ್ ಎಂದೂ ಕರೆಯುವುದುಂಟು. ಆದರೆ ಪ್ರಾಚೀನ ಅಲ್ಸ್ಟರ್ ಪ್ರಾಂತ್ಯದ ಮೂರು ಕೌಂಟಿಗಳು (ಕ್ಯಾವೆನ್, ಡಾನೆಗಾಲ್ ಮತ್ತು ಮನಗೆನ್) ಐರ್ಲೆಂಡ್ ಗಣರಾಜ್ಯಕ್ಕೆ ಸೇರಿವೆ. ಇದರ ಉತ್ತರಕ್ಕೆ ಅಟ್ಲಾಂಟಿಕ್ ಸಾಗರವೂ ಈಶಾನ್ಯ ಮತ್ತು ದಕ್ಷಿಣಕ್ಕೆ ಉತ್ತರ ಕಡಲ್ಗಾಲುವೆಯೂ ಐರಿಷ್ ಸಮುದ್ರವೂ ದಕ್ಷಿಣ ಪಶ್ಚಿಮಗಳಲ್ಲಿ ಐರ್ಲೆಂಡ್ ಗಣರಾಜ್ಯವೂ ಇವೆ. ಇದರ ವಿಸ್ತೀರ್ಣ 5,462 ಚ. ಮೈ. ಜನಸಂಖ್ಯೆ 14,25,042.




1920 ಮತ್ತು 1922ರಲ್ಲಿ ಜಾರಿಗೆ ಬಂದ ಕಾಯಿದೆಗಳ ಪ್ರಕಾರ ಉತ್ತರ ಐರ್ಲೆಂಡಿಗೆ ಪ್ರತ್ಯೇಕ ಸಂಸತ್ತು ಸ್ಥಾಪಿತವಾಗಿದೆ. ದೇಶದ ವಿಭಜನೆಯ ಫಲವಾಗಿ ಇದು ರಾಜಕೀಯ ಕ್ಷೋಭೆಗೆ ಒಳಗಾಯಿತು. ಆಗಿಂದಾಗ್ಗೆ ಹಿಂಸಾತ್ಮಕ ಚಳವಳಿಗಳು ನಡೆಯುತ್ತಿವೆ. (ಪಿ.ಎಚ್.)

ಉತ್ತರ ಐರ್ಲೆಂಡ್ ಸಂಸತ್ತಿನ ಸಭೆಗಳು ಎರಡು : ಸೆನೇಟ್ ಮತ್ತು ಕಾಮನ್ಸ್ ಸಭೆ. ಸೆನೇಟಿನಲ್ಲಿ 24 ಚುನಾಯಿತ ಮತ್ತು 2 ಅಧಿಕಾರ ಪ್ರಯುಕ್ತ ಸದಸ್ಯರೂ ಕಾಮನ್ಸ್ ಸಭೆಯಲ್ಲಿ 52 ಸದಸ್ಯರೂ ಇದ್ದಾರೆ. ಸೆನೇಟಿನ ಸದಸ್ಯರ ಅಧಿಕಾರಾವಧಿ ನಿಗದಿಗೊಳಿಸಲಾಗಿದೆ. ಇವರು ಕಾಮನ್ಸ್ ಸಭಾಸದಸ್ಯರಿಂದ ಆಯ್ಕೆ ಹೊಂದುತ್ತಾರೆ. ಕಾಮನ್ಸ್ ಸಭೆಯ ಅವಧಿ ಸಾಮಾನ್ಯವಾಗಿ 5 ವರ್ಷ. ರಾಜತ್ವ, ಯುದ್ಧ ಮತ್ತು ಶಾಂತಿವಿಷಯಗಳು, ರಕ್ಷಣಾಪಡೆಗಳು, ಕೌಲುಗಳು, ಬಿರುದುಗಳು, ರಾಷ್ಟ್ರದ್ರೋಹ ಮುಂತಾದವು ಸಂಯುಕ್ತ ಪ್ರಭುತ್ವದ ಸಂಸತ್ತಿಗೆ ಮೀಸಲಾದ ವಿಷಯಗಳು. ಇವನ್ನು ಬಿಟ್ಟು ಉಳಿದೆಲ್ಲ ವಿಚಾರಗಳಲ್ಲೂ ಇಲ್ಲಿನ ಸಂಸತ್ತಿಗೆ ಅಧಿಕಾರವುಂಟು. ರಾಣಿಯ ಪ್ರತಿನಿಧಿಯಾಗಿ ಆಳುವವನು ಗವರ್ನರ್. ಜವಾಬ್ದಾರಿ ತತ್ತ್ವದ ತಳಹದಿಯ ಮೇಲೆ ರಚಿತವಾದ ಮಂತ್ರಿಸಂಪುಟವಿದೆ. (ಎಂ.ಎಚ್.ಆರ್.)

ವ್ಯವಸಾಯ ಇಲ್ಲಿನ ಮುಖ್ಯ ಕಸಬು. ಹಿಡುವಳಿಗಳು ಸಣ್ಣವು. ಬಾರ್ಲಿ. ಓಟ್ಸ್. ಆಲೂಗೆಡ್ಡೆ. ಗೋದಿ. ಟರ್ನಿಪ್—ಇವು ಮುಖ್ಯ ಬೆಳೆಗಳು. ಹಂದಿ. ದನಕರು. ಕುರಿ. ಕೋಳಿ ಮುಖ್ಯ ಸಾಕುಪ್ರಾಣಿಗಳು.

ಉತ್ತರ ಐರ್ಲೆಂಡಿನ ಖನಿಜಗಳು ಅಲ್ಪ. ಜವಳಿ ಮತ್ತು ಎಂಜಿನಿಯರಿಂಗ್ ಕೈಗಾರಿಕೆಗಳು ಮುಖ್ಯ. ಹೊಸ ಕೈಗಾರಿಕೆಗಳ ಸ್ಥಾಪನೆಗೆ ಸರ್ಕಾರ ನೆರವು ನೀಡುತ್ತಿದೆ. ಐರ್ಲೆಂಡಿನ ಆಮದು ವ್ಯಾಪಾರದಲ್ಲಿ ಮುಕ್ಕಾಲು ಭಾಗವೂ ರಫ್ತಿನಲ್ಲಿ ಸೇಕಡಾ 90 ಭಾಗವೂ ಗ್ರೇಟ್ ಬ್ರಿಟನ್ನಿನೊಂದಿಗೆ ನಡೆಯುತ್ತದೆ. ರಾಜಧಾನಿ ಬೆಲ್‌ಫಾಸ್ಟ್. ಇದರ ಜನಸಂಖ್ಯೆ 3,99,270. ಲಂಡನ್‌ಡೆರಿಯ ಜನಸಂಖ್ಯೆ 55,681.

**ಐರ್ಲೆಂಡ್ ಗಣರಾಜ್ಯ :** ಉತ್ತರ ಐರ್ಲೆಂಡಿನ 6 ಕೌಂಟಿಗಳನ್ನು ಬಿಟ್ಟು ಉಳಿದ 26 ಕೌಂಟಿಗಳು ಇದಕ್ಕೆ ಸೇರಿವೆ. 1922ರಿಂದ 1937ರ ವರೆಗೆ ಇದಕ್ಕೆ ಐರಿಷ್ ಸ್ವತಂತ್ರ ರಾಜ್ಯ ಎಂಬ ಹೆಸರಿತ್ತು. 1937ರ ಸಂವಿಧಾನದ ಪ್ರಕಾರ ಇದರ ಹೆಸರು ಐರ್. ದಕ್ಷಿಣ ಐರ್ಲೆಂಡ್ ಎಂದೂ ಇದನ್ನು ಬಳಕೆಮಾತಿನಲ್ಲಿ

ಕರೆಯುವುದುಂಟು. ಆದರೆ ಐರ್ಲೆಂಡಿನ ಅತ್ಯಂತ ಉತ್ತರ ಭಾಗ ಇದಕ್ಕೆ ಸೇರಿದೆ. ಇದಕ್ಕೆ ಉತ್ತರ, ವಾಯುವ್ಯ ಮತ್ತು ಪಶ್ಚಿಮ ದಿಕ್ಕುಗಳಲ್ಲಿ ಅಟ್ಲಾಂಟಿಕ್ ಸಾಗರವೂ ಆಗ್ನೇಯದಲ್ಲಿ ಸೇಂಟ್ ಜಾರ್ಜ್ ಕಡಲ್ಗಾಲುವೆಯೂ ಪೂರ್ವದಲ್ಲಿ ಐರಿಷ್ ಸಮುದ್ರವೂ ಈಶಾನ್ಯದಲ್ಲಿ ಉತ್ತರ ಐರ್ಲೆಂಡೂ ಇವೆ. ಲೆನ್ಸ್ಟರ್, ಮನ್ಸ್ಟರ್



ದನಗಳ ಹರಾಜು

ಕನ್ನಾಟ್ ಮತ್ತು ಅಲ್ಸ್ಟರ್ ಎಂಬ ನಾಲ್ಕು ಪ್ರಾಂತ್ಯಗಳಿಂದ ಕೂಡಿರುವ ಈ ದೇಶದ ವಿಸ್ತೀರ್ಣ 26,000 ಚ.ಮೈ. ಜನಸಂಖ್ಯೆ 28,84,002 (1966).

1918ರ ಡಿಸೆಂಬರಿನಲ್ಲಿ ಚುನಾವಣೆಗೊಂಡು 1919ರಲ್ಲಿ ಸಮಾವೇಶವಾಗಿದ್ದ ಈ ದೇಶದ ಸ್ವಾತಂತ್ರ್ಯವನ್ನು ರಾಷ್ಟ್ರೀಯ ಸಂಸತ್ತು 1919ರ ಜನವರಿಯಲ್ಲಿ ಸಾರಿ ಕೊಂಡಿತಾದರೂ ಬ್ರಿಟಿಷ್ ಕಾಯಿದೆಯ ಪ್ರಕಾರ ಇದು ಸಂಯುಕ್ತ ಪ್ರಭುತ್ವದ ಭಾಗವಾಗಿಯೇ ಮುಂದುವರಿಯಿತು. ಉತ್ತರ ದಕ್ಷಿಣ ಐರ್ಲೆಂಡುಗಳಿಗೆ ಪ್ರತ್ಯೇಕ ಸಂಸತ್ತುಗಳನ್ನು ಸ್ಥಾಪಿಸುವ ಕಾಯಿದೆ ಜಾರಿಗೆ ಬಂದದ್ದು 1920ರಲ್ಲಿ. 1921ರಲ್ಲಿ ಉತ್ತರ ಐರ್ಲೆಂಡಿನ ಸಂಸತ್ತಿನ ಚುನಾವಣೆ ನಡೆಯಿತು. ಐರ್ಲೆಂಡಿನ ಉಳಿದ ಭಾಗದಲ್ಲಿ ಈ ಕಾಯಿದೆ ಜಾರಿಗೆ ಬರಲಿಲ್ಲ. 1921ರ ಡಿಸೆಂಬರ್ 6ರಂದು ಗ್ರೇಟ್ ಬ್ರಿಟನ್ ಐರ್ಲೆಂಡುಗಳ ಪ್ರತಿನಿಧಿಗಳ ನಡುವೆ ಒಡಂಬಡಿಕೆಯಾಗಿ, ಐರ್ಲೆಂಡ್ ಗಣರಾಜ್ಯಕ್ಕೆ ಒಳರಾಜ್ಯದ (ಡೊಮಿನಿಯನ್) ಸ್ಥಾನ ಲಭಿಸಿತು. ಉತ್ತರ ಐರ್ಲೆಂಡಿಗೆ ಇದರಿಂದ ಹೊರಬರುವ ಅವಕಾಶ ಕೊಡಲಾಯಿತು. ಐರಿಷ್ ಸ್ವತಂತ್ರರಾಜ್ಯ ಉದಯವಾದದ್ದು ಹೀಗೆ. ಕ್ರಮೇಣ ಇದು ಸಂಯುಕ್ತ ಪ್ರಭುತ್ವದೊಂದಿಗೆ ಸಂಬಂಧ ಕಡಿದುಕೊಂಡಿತು. ಇದು ಐರಿಷ್ ಗಣರಾಜ್ಯವಾದದ್ದು 1937ರಲ್ಲಿ.

ಐರಿಷ್ ಗಣರಾಜ್ಯದ ಸಂಸತ್ತಿನ ಎರಡು ಸಭೆಗಳಲ್ಲಿ ಒಂದು ಪ್ರತಿನಿಧಿ ಸಭೆ; ಇನ್ನೊಂದು ಸೆನೇಟ್. ಐರಿಷ್ ಇಲ್ಲಿನ ಪ್ರಥಮ ಅಧಿಕೃತ ಭಾಷೆ; ಇಂಗ್ಲಿಷ್ ಎರಡನೆಯದು.

ಕೃಷಿಯೇ ಜನರ ಮುಖ್ಯ ಕಸಬು. ಒಣಹುಲ್ಲು, ಟರ್ನಿಪ್, ಆಲೂಗೆಡ್ಡೆ, ಸಕ್ಕರೆ, ಬೀಟ್, ಬಾರ್ಲಿ, ಓಟ್ಸ್, ಗೋದಿ–ಇವು ಮುಖ್ಯ ಬೆಳೆಗಳು. ಆಕಳು ಕುರಿ ಹಂದಿ ಮುಖ್ಯ ಪ್ರಾಣಿಗಳು. ಮೀನುಗಾರಿಕೆಯೂ ಮುಖ್ಯ ಉದ್ಯೋಗ.

ಇಲ್ಲಿ ಖನಿಜಸಂಪತ್ತು ಅಷ್ಟಿಲ್ಲ. ಜಿಪ್ಸಮ್, ಅಮೃತಶಿಲೆ, ಸ್ಲೇಟ್. ಸುಣ್ಣಕಲ್ಲು, ಕಲ್ಲಿದ್ದಲು, ತಾಮ್ರ, ಕಬ್ಬಿಣ, ಸೀಸ, ಬೆರೈಟೀಸ್ ಸಿಗುತ್ತವೆ. ಆಹಾರ, ಹೊಗೆಸೊಪ್ಪು, ಪಾನೀಯ, ಕಾಗದ, ವಿದ್ಯುದುಪಕರಣ, ಜವಳಿ, ರಸಾಯನ ವಸ್ತು–ಈ ಕೈಗಾರಿಕೆಗಳು ಬೆಳೆಯುತ್ತಿವೆ. ವಿದೇಶೀ ವ್ಯಾಪಾರ ಹೆಚ್ಚಾಗಿ ಗ್ರೇಟ್‌ಬ್ರಿಟನ್, ಕೆನಡ, ಬೆಲ್ಜಿಯಂ ಮತ್ತು ಲಕ್ಸೆಂಬರ್ಗ್‌ಗಳೊಡನೆ ನಡೆಯುತ್ತದೆ. ಡಬ್ಲಿನ್ ರಾಜಧಾನಿ (ಜನಸಂಖ್ಯೆ 5,68,772). ಕಾರ್ಕ್ (1,22,146), ಲಿಮರಿಕ್ (55,912), ವಾಟರ್‌ಫರ್ಡ್ (29,842) ಮತ್ತು ಗಾಲ್‌ವೇ (24,597) ಇತರ ಪಟ್ಟಣಗಳು.

(ಪಿ.ಎಚ್.; ಪಿ.ಎಂ.ಯು.ಎನ್.)

**ಐರ್ಲೆಂಡಿನ ಇತಿಹಾಸ :** ಐರ್ಲೆಂಡಿನ ಅತ್ಯಂತ ಪ್ರಾಚೀನ ಇತಿಹಾಸ ಅವರ ಪುರಾಣಗಳಲ್ಲೂ ದಂತಕತೆಗಳಲ್ಲೂ ಹುದುಗಿಹೋಗಿದೆ. ಕೆಲ್ಟರು ಇಲ್ಲಿಗೆ ಬರುವ ಮೊದಲೇ ಇಲ್ಲಿ ನವಶಿಲಾಯುಗದ ಜನ ಅಧಿಕ ಸಂಖ್ಯೆಯಲ್ಲಿ ಇದ್ದಿರಬೇಕು. ಅನಂತರವೂ ಅವರು ಇಲ್ಲಿ ವಾಸವಾಗಿದ್ದರೆಂಬುದಕ್ಕೆ ಆಧಾರಗಳಿವೆ. ಇತರ ದೇಶಗಳಿಗಿಂತ ಇಲ್ಲಿ ಈ ಎರಡು ಜನಾಂಗಗಳೂ ಹೆಚ್ಚಾಗಿ ಬೆರೆತುವು. ಕ್ರಿ.ಪೂ. 6ನೆಯ ಶತಮಾನದಲ್ಲೂ ಮತ್ತೆ 3ನೆಯ ಶತಮಾನದಲ್ಲೂ ಕೆಲ್ಟರು ಇಲ್ಲಿ ಅಧಿಕ ಸಂಖ್ಯೆಯಲ್ಲಿ ನೆಲಸಿದರು. ಕ್ರಿಸ್ತಶಕೆಯ ಆದಿಯ ವೇಳೆಗೆ ಇವರ ಜೊತೆಗೆ ಪಿಕ್ಟರೂ ಸೇರಿಕೊಂಡಿದ್ದರು. ಬಹುಶಃ ಇವರು ಸ್ಕಾಟ್ಲೆಂಡಿನಿಂದ ಬಂದವರು. ಕ್ರಿ.ಶ. 4–5ನೆಯ ಶತಮಾನಗಳ ಸುಮಾರಿನಲ್ಲಿ ಐರಿಷರು ವೇಲ್ಸಿನಲ್ಲಿ ವಸಾಹತು ನಿರ್ಮಿಸಿದ್ದರು.

ಉತ್ತರದಲ್ಲಿ ಇರ್ ವಂಶದ ದೊರೆಗಳು ರಾಜ್ಯ ಸ್ಥಾಪಿಸಿದಾಗ (ಕ್ರಿ.ಪೂ. 300) ಐರ್ಲೆಂಡಿನ ಇತಿಹಾಸದ ಉದಯವಾಯಿತು. ಟೇರ, ಲೆನ್ಸ್ಟರ್ ಮತ್ತು ಮನ್ಸ್ಟರ್—ಈ ಮೂರು ವಂಶಗಳ ಅರಸರು ಇಡೀ ಐರ್ಲೆಂಡಿನ ನಾನಾ ಭಾಗಗಳನ್ನಾಳುತ್ತಿದ್ದರಲ್ಲದೆ, ಪರಮಾಧಿಕಾರಕ್ಕಾಗಿ ತಮ್ಮತಮ್ಮಲ್ಲೆ ಬಹುಕಾಲ ಕಚ್ಚಾಡಿದರು. 4ನೆಯ ಶತಮಾನದಲ್ಲಿ ಟೇರ ದೊರೆಗಳು ಬಹಳ ಪ್ರವರ್ಧಮಾನಕ್ಕೆ ಬಂದಿದ್ದರು. ಇವರ ಸೇನೆಗಳು ಯುರೋಪ್ ಖಂಡ ಪ್ರದೇಶದ ಮೇಲೆ ಕೂಡ ಏರಿಹೋಗಿದ್ದುವು.

ಐರ್ಲೆಂಡಿಗೆ ಕ್ರೈಸ್ತಮತ ಬಂದ ಸಂದರ್ಭದಲ್ಲಿ ಅಲ್ಲಿದ್ದ ಪ್ರಭುತ್ವಗಳ ಪೈಕಿ ಮುಖ್ಯವಾದವು ನಾಲ್ಕು. ಅವುಗಳ ಒಕ್ಕೂಟಗಳ ಒಡೆಯನೇ ಅಧಿರಾಜ (ಹೈ ಕಿಂಗ್). ಈ ಸ್ಥಾನ ಕೇವಲ ನಾಮಮಾತ್ರ. ಕೆಲವು ಸ್ವತಂತ್ರರಾಜ್ಯಗಳು ಇದನ್ನು ಒಪ್ಪಿರಲಿಲ್ಲ.

ಐರ್ಲೆಂಡಿನ ಪುರಾತನ ಧರ್ಮ ಯಾವುದೆಂಬುದು ಸ್ಪಷ್ಟವಾಗಿಲ್ಲ. ಇಲ್ಲಿನ ಜನ ಆಗ ಅನೇಕ ದೇವರುಗಳನ್ನು ಆರಾಧಿಸುತ್ತಿದ್ದರು. ಪೂಜಾರಿಗಳ ಪ್ರಭಾವ ಹೆಚ್ಚಿನದಾಗಿತ್ತು. ಜನರ ದೃಷ್ಟಿಯಲ್ಲಿ ಅವರು ಪವಾಡ ಪುರುಷರು.

ಸೇಂಟ್ ಪ್ಯಾಟ್ರಿಕ್ ಇಲ್ಲಿಗೆ ಬರುವ ವೇಳೆಗೆ (ಕ್ರಿ.ಶ. 432) ಐರಿಷ್ ಜನ ನಾಗರಿಕತೆಯ ಎತ್ತರದ ಹಂತವನ್ನೇರಿದ್ದರು. ಯೂರೋಪಿನ ಬಹು ಭಾಗ ಕತ್ತಲಲ್ಲಿ ಅಡಗಿದ್ದಾಗ ಈ ಜನ ಉಪಾಧ್ಯಾಯರಿಗೂ ಕವಿಗಳಿಗೂ ಚರಿತ್ರಕಾರರಿಗೂ ಹೆಚ್ಚಿನ ಗೌರವ ಸಲ್ಲಿಸುತ್ತಿದ್ದರು. ಕ್ರಿಸ್ತಶಕೆಗೂ ಹಲವು ಶತಮಾನಗಳ ಹಿಂದೆಯೇ ಅಲ್ಲಿ ಕೇಂದ್ರೀಯ ಸಂಸತ್ತಿತ್ತು. ಇದು ವರ್ಷಕ್ಕೆ ಮೂರು ಸಾರಿ ಸಭೆ ಸೇರುತ್ತಿತ್ತು. ಉಪಾಧ್ಯಾಯರೂ ನ್ಯಾಯಮೂರ್ತಿಗಳೂ ಪುರೋಹಿತರೂ ನಾನಾ ಗುಂಪುಗಳ ನಾಯಕರೂ ಇಲ್ಲಿಗೆ ಬಂದು ಶಾಸನ ಮಾಡುತ್ತಿದ್ದರು; ನ್ಯಾಯ ತೀರ್ಪು ನೀಡುತ್ತಿದ್ದರು. ಅಂದಿನ ನ್ಯಾಯಗಳಿಗೆ ಬ್ರೀಹಾನ್ ನ್ಯಾಯಗಳೆಂದು ಹೆಸರು. ಆಧುನಿಕ ನ್ಯಾಯವಿದ್ಯಾರ್ಥಿಗಳ ಮನ್ನಣೆಗೂ ಇವು ಪಾತ್ರವಾಗಿವೆ.

ಕ್ರಿ.ಶ. 4ನೆಯದರಿಂದ 8ನೆಯ ಶತಮಾನದ ವರೆಗಿನ ಐರಿಷ್ ರಾಜಕೀಯ ಇತಿಹಾಸ ಅವಿರತ ಗುಂಪುಯುದ್ಧಗಳ ಕಂತೆಬೊಂತೆ. ಚರ್ಚು ಅಷ್ಟೇನೂ ಪ್ರಭಾವಶಾಲಿಯಾಗಿರಲಿಲ್ಲ. ಅನೇಕವೇಳೆ ಅದೂ ಈ ಜಗಳದಲ್ಲಿ ಪಕ್ಷವಹಿಸುತ್ತಿತ್ತು.

ನಾರ್ಸ್ ಜನ ಐರ್ಲೆಂಡಿನ ಮೇಲೆ ಆಕ್ರಮಣ ನಡೆಸಿದ್ದು 8ನೆಯ ಶತಮಾನದ ಕೊನೆಯಲ್ಲಿ. ಮೊದಲು ನಾರ್ವೀಜಿಯನರೂ ಅನಂತರ ಡೇನರೂ ಅಲ್ಲಿಗೆ ಬಂದರು. ಇದು ಐರ್ಲೆಂಡಿನ ಮೇಲೆ ಪರೋಕ್ಷವಾಗಿ ಒಳ್ಳೆಯ ಪರಿಣಾಮವನ್ನೇ



ಐರ್ಲೆಂಡಿನ ಒಂದು ವಿದ್ಯುತ್ ಕೇಂದ್ರ

ಉಂಟುಮಾಡಿತೆನ್ನಬಹುದು. ಐರ್ಲೆಂಡಿನ ಜನ ಪರಕೀಯರ ಸೇನೆಗಳಲ್ಲಿ ಯೋಧರಾಗಿ ಯುದ್ಧವಿದ್ಯೆ ಕಲಿತರು. ಯೂರೋಪಿನೊಂದಿಗೆ ಇವರ ಸಂಪರ್ಕ ಬೆಳೆಯಿತು. ವ್ಯಾಪಾರ ಕುದುರಿತು. 10ನೆಯ ಶತಮಾನದಲ್ಲಿ ಬ್ರಿಯಾನ್ ಬೊರೊಯಿಮೆಯ ಪ್ರಬಲನಾದ. ಈ ಐರಿಷ್ ದೊರೆ ಡೇನರನ್ನು ಸಗ್ಗುಬಡಿದು

ಪರಮಾಧಿಕಾರ ಪಡೆದ. 1002ರಿಂದ 12 ವರ್ಷಕಾಲ ನಡೆದ ಈತನ ಆಡಳಿತ ಶ್ರೇಯಃಕಾರಕವಾಗಿತ್ತು. 1014ರಲ್ಲಿ ನಡೆದ ಯುದ್ಧದಲ್ಲಿ ಡೇನರ ರೆಕ್ಕೆ ಮತ್ತೆ ಮುರಿಯಿತು. ಆದರೆ ಕಾಳಗದಲ್ಲಿ ಬ್ರಿಯಾನ್ ಮಡಿದ. ಇದರಿಂದ ಐರ್ಲೆಂಡಿನ ಕೇಂದ್ರಶಕ್ತಿ ಮತ್ತೆ ಉಡುಗಿಹೋಯಿತು. ಮುಂದಿನ ಒಂದು ಶತಮಾನಕಾಲದಲ್ಲಿ ಒಳಜಗಳ ಹೆಚ್ಚಿತು.

ಕ್ರಿ.ಶ. 4ನೆಯದರಿಂದ 12ನೆಯ ಶತಮಾನದ ವರೆಗಿನ ಕಾಲದಲ್ಲಿ ಐರ್ಲೆಂಡು ಸಾಮಾಜಿಕವಾಗಿ ಅಷ್ಟೇನೂ ಮುಂದುವರಿಯಲಿಲ್ಲ. ಊಳಿಗಮಾನ್ಯ ಪದ್ಧತಿ ಬೆಳೆಯಿತಾದರೂ ಹಳೆಯ ಗುಂಪು ಜೀವನವೂ ಬ್ರೀಹಾನ್ ನ್ಯಾಯಪದ್ಧತಿಯೂ ಮುಂದುವರಿದುವು.

ನಾರ್ಮನ್ ದೊರೆ ಎರಡನೆಯ ಹೆನ್ರಿ 1172ರಲ್ಲಿ ಐರ್ಲೆಂಡಿನ ಮೇಲೆ ಪ್ರಭುತ್ವ ಸ್ಥಾಪಿಸಿ ತನ್ನ ರಾಜ್ಯಪಾಲನನ್ನು ಅಲ್ಲಿಗೆ ನೇಮಿಸಿದ. ಒಂದನೆಯ ಹಾಗೂ ಎರಡನೆಯ ಎಡ್ವರ್ಡರ ಕಾಲದಲ್ಲಿ ಇದರ ಮೇಲೆ ಇಂಗ್ಲಿಷರ ಹಿಡಿತ ಹೆಚ್ಚಾಯಿತು. ಐರಿಷರು ಆಂಗ್ಲೋ–ನಾರ್ಮನರೊಂದಿಗೆ ವಿವಾಹಸಂಬಂಧ ಬೆಳೆಸಕೂಡದೆಂದು ಮೂರನೆಯ ಎಡ್ವರ್ಡ್ ದೊರೆಯ ಕಾಲದಲ್ಲಿ ಕಾನೂನೊಂದು ಜಾರಿಗೆ ಬಂತು.

ಐರ್ಲೆಂಡಿನ ಶಾಸನಸಭೆಯನ್ನು ಇಂಗ್ಲಿಷ್ ಆಡಳಿತ ಮಂಡಲಿಯ ಅಧೀನಕ್ಕೆ ಒಳಪಡಿಸುವ ಕಾಯಿದೆಯಾದ್ದು (1494) ಏಳನೆಯ ಹೆನ್ರಿಯ ಕಾಲದಲ್ಲಿ. ಆ ವೇಳೆಗೆ ಅಲ್ಲಿದ್ದ ಆಂಗ್ಲೋ–ನಾರ್ಮನ್ ಸಂಸಾರಗಳು ಸಂಪೂರ್ಣವಾಗಿ ಐರಿಷ್ ಆಗಿ ಪರಿವರ್ತಿತವಾಗಿದ್ದುವು. ಗುಂಪಿನ ಕಟ್ಟಳೆಗಳಿಗೇ ಅವು ಬದ್ಧವಾಗಿದ್ದುವು. ಹೆನ್ರಿ ದೊರೆ ಅಲ್ಲಿನ ಗುಂಪುನಾಯಕರ ಅಧಿಕಾರ ಮುರಿದು ತಾನೇ ಐರ್ಲೆಂಡಿನ ದೊರೆಯೆಂದು ಸಾರಿಕೊಂಡ.



ಬೆಲ್ಫಾಸ್ಟಿನ ಒಂದು ನೂತನ ಗೃಹ

ಮೊದಲನೆಯ ಎಲಿಜಬೆತ್ ಐರ್ಲೆಂಡನ್ನು ಸಂಪೂರ್ಣವಾಗಿ ಅಧೀನಕ್ಕೊಳಪಡಿಸಿಕೊಳ್ಳಬೇಕೆಂದು ಹೊರಗಿದಳು, ಧರ್ಮವಿಧಿ, ಸಾಮಾಜಿಕ ಕಟ್ಟಳೆ, ಭಾಷೆ ಮುಂತಾದ ಎಲ್ಲ ವಿಚಾರಗಳಲ್ಲೂ ಅದು ಇಂಗ್ಲೆಂಡಿನಂತಾಗಬೇಕೆಂಬುದು ಆಕೆಯ ಬಯಕೆ. ಇದನ್ನು ವಿರೋಧಿಸಿದ ಜನ ಶಿಕ್ಷೆಗೆ ಒಳಗಾದರು. ಇಂಗ್ಲೆಂಡಿನ ಉಪಾಯಗಳೆಲ್ಲ ಐರ್ಲೆಂಡನ್ನು ಶಾಶ್ವತ ದಾಸ್ಯಕ್ಕೊಳಪಡಿಸುವ ಹಂಚಿಕೆಗಳೆಂಬ ಅರಿವು ಮೂಡಿದಾಗ ಅಲ್ಲಿನ ಜನ ಒಗ್ಗಟ್ಟಾದರು. ಕೆಥೊಲಿಕ್ ಧರ್ಮಪ್ರೇಮ, ದೇಶಪ್ರೇಮ—ಇವೆರಡೂ ಈ ಒಗ್ಗಟ್ಟಿನ ಅಡಿಗಲ್ಲುಗಳಾದುವು. ಹೀಗಾಗಿ ಎಲಿಜಬೆತ್ ಐರ್ಲೆಂಡಿನ ವಿರೋಧವನ್ನೆ ಕಟ್ಟಿಕೊಂಡಳೆನ್ನಬಹುದು.

ಐರಿಷರು ಪದೇ ಪದೇ ದಂಗೆ ಏಳುತ್ತಿದ್ದರು. ಸ್ಪೇನ್, ಇಟಲಿಗಳು ಇವರಿಗೆ ಸಹಾಯ ನೀಡಿದುವು (1579–83). ಇಂಗ್ಲಿಷರು ದಂಗೆ ಅಡಗಿಸಲು ಅನುಸರಿಸಿದ ವಿಧಾನ ಅತ್ಯಂತ ಕ್ರೌರ್ಯಮಯ. ಐರಿಷರು ಕಾಡುಜನರೆಂಬುದು ಇಂಗ್ಲಿಷರ ನಂಬಿಕೆಯಾಗಿತ್ತು. ಐರಿಷರ ಬಗ್ಗೆ ಅವರು ಯಾವ ಕಾಲದಲ್ಲೂ ಸೌಜನ್ಯದಿಂದ ನಡೆದುಕೊಳ್ಳಲಿಲ್ಲ.

ಇಂಗ್ಲೆಂಡಿನಲ್ಲಿ ಒಂದನೆಯ ಚಾರಲ್ಸ್ ದೊರೆಯ ಮರಣದಂಡನೆಯಿಂದ ಐರ್ಲೆಂಡ್ ಸ್ವತಂತ್ರವಾಗಲು ಮತ್ತೊಂದು ಅವಕಾಶ ಸಿಕ್ಕಿತು. ಆದರೆ ಅನಂತರ ಬಂದ ಕ್ರಾಮ್‌ವೆಲನ ಕಟ್ಟುನಿಟ್ಟಿನ ಆಡಳಿತಕಾಲದಲ್ಲಿ ಐರಿಷರು ಬಲವಾದ ಪೆಟ್ಟಿಗೆ ಈಡಾದರು. ಅಲ್ಲಿನ ಕೆಥೊಲಿಕರು ಅನುಭವಿಸಬೇಕಾಗಿದ್ದ ಕೋಟಲೆ ಅಷ್ಟಿಷ್ಟಲ್ಲ.

1688ರ ಕ್ರಾಂತಿಯ ಪರಿಣಾಮವಾಗಿ ಉತ್ತರ ಐರ್ಲೆಂಡಿನಲ್ಲಿ ಕೆಥೊಲಿಕರಿಗೂ ಪ್ರಾಟೆಸ್ಟಂಟರಿಗೂ ಕಾದಾಟ ಪ್ರಾರಂಭವಾಯಿತು. ಬಹುಕಾಲ ಅಸ್ಥಿರತೆಯಿತ್ತು. ಮತ್ತೆ ಅವರು ಸೋಲನ್ನನುಭವಿಸಿದರು.

ಫ್ರಾನ್ಸಿನ ಮಹಾಕ್ರಾಂತಿಯಿಂದ ಐರ್ಲೆಂಡಿನ ಜನರಲ್ಲಿ ಮತ್ತೆ ಉತ್ಸಾಹ ಮೂಡಿತು. ಸಂಯುಕ್ತ ಐರಿಷ್ ಜನ ಎಂಬ ಸಂಸ್ಥೆ ಸ್ಥಾಪಿತವಾಯಿತು. ಐರ್ಲೆಂಡನ್ನು ಹೇಗಾದರೂ ತನ್ನ ಕೈಯಲ್ಲಿಟ್ಟುಕೊಳ್ಳಲು ಇಂಗ್ಲೆಂಡ್ ಪಟ್ಟ ಸಾಹಸ ಅಷ್ಟಿಷ್ಟಲ್ಲ. ಇಂಗ್ಲೆಂಡಿನ ಪಾರ್ಲಿಮೆಂಟು ಜಾರಿಗೆ ತಂದ ಐಕ್ಯಾಟ ಕಾಯಿದೆಯ ಪ್ರಕಾರ (1800) ಪ್ರಾತಿನಿಧ್ಯ ನಿಗದಿಯಾಯಿತು. ಆದರೆ ಕೆಥೊಲಿಕರಿಗೆ ಅವಕಾಶ ದೊರಕಿದ್ದು 1829ರಲ್ಲಿ ಮಾತ್ರ.

17-18ನೆಯ ಶತಮಾನಗಳಲ್ಲಿ ಐರಿಷ್ ರೈತರ ಮುಖ್ಯ ಆಹಾರ ಆಲೂಗೆಡ್ಡೆಯಾಗಿತ್ತು. 1846ರಲ್ಲಿ ಆಲೂಗೆಡ್ಡೆಯ ಕ್ಷಾಮ ಉಂಟಾದಾಗ ಅನೇಕ ಸಾವಿರ ಐರಿಷ್ ಜನ ಸತ್ತರು. ವಿಶ್ವದ ಧಾನ್ಯ ಮಾರುಕಟ್ಟೆಯಲ್ಲಿ ಅಮೆರಿಕನ್ ಸ್ಪರ್ಧೆ ಆರಂಭವಾದ್ದರಿಂದಲೂ ಇಂಗ್ಲೆಂಡು ಆಗ ನಿರಾತಂಕ ವ್ಯಾಪಾರದಲ್ಲಿ ನಂಬಿಕೆಯಿಟ್ಟಿದ್ದರಿಂದಲೂ ಐರ್ಲೆಂಡಿನ ಧಾನ್ಯಕ್ಕೆ ಸರಿಯಾದ ರಕ್ಷಣೆಯಿಲ್ಲದೆ, ಧಾರಣೆ ಗಿಟ್ಟದೆ, ಅಲ್ಲಿನ ಜನ ನಷ್ಟಕ್ಕೊಳಗಾದರು. ಈ ಕಾಲದಲ್ಲಿ ಅಮೆರಿಕಕ್ಕೆ ವಲಸೆ ಹೋದವರು ಎಷ್ಟೋ ಜನ. ರಾಜಕೀಯ ಆಂದೋಲನವೂ ಬಲವಾಯಿತು. ಐರ್ಲೆಂಡಿನ ಸ್ವಯಂ ಆಡಳಿತಕ್ಕಾಗಿ ಪಾರ್ಲಿಮೆಂಟಿನ ಮುಂದೆ 1886ರಲ್ಲೂ 1893ರಲ್ಲೂ ಬಂದ ಮಸೂದೆಗಳು ಅಂಗೀಕೃತವಾಗಲಿಲ್ಲ. 1914ರಲ್ಲಿ ತಂದ ಮಸೂದೆಗೆ ಒಪ್ಪಿಗೆ ದೊರೆಯಿತಾದರೂ ಆಗ ಒಂದನೆಯ ಮಹಾಯುದ್ಧ ಅಡ್ಡ ಬಂತು.

ಯುದ್ಧಾನಂತರ ಐರ್ಲೆಂಡಿನ ಸ್ವಾತಂತ್ರ್ಯ ಹೋರಾಟ ಪ್ರಬಲವಾಯಿತು. ಶಿನ್ ಫೇನ್ ಪಕ್ಷದ ಗೆರಿಲಾಗಳು ಸರ್ಕಾರಿ ಪಡೆಗಳೊಡನೆ ಕಾದಿದರು. 1921ರಲ್ಲಿ ಅವರೊಂದಿಗೆ ಒಪ್ಪಂದವಾಗಿ, ಉತ್ತರದ ಆರು ಕೌಂಟಿಗಳು ವಿನಾ ಉಳಿದ ಭಾಗಕ್ಕೆ ಸ್ವಾತಂತ್ರ್ಯ ಲಭಿಸಿತು. (ಉತ್ತರ ಐರ್ಲೆಂಡು ಉಳಿದ ಭಾಗದೊಂದಿಗೆ ಸೇರಲಿಲ್ಲ.) ಆಗ ಉದಿಸಿದ ಐರಿಷ್ ಸ್ವತಂತ್ರ ರಾಜ್ಯ ಕ್ರಮೇಣ ಬ್ರಿಟನಿನ ರಾಜಪ್ರಭುತ್ವದ ಸಂಕೇತವನ್ನೂ ಕಡಿದುಕೊಂಡಾಗ (1927) ಅದು ತಳೆದ ಹೆಸರೇ ಐರಿಷ್ ಗಣರಾಜ್ಯ.

(ಪಿ.ಎಂ.ಯು.ಎಸ್.)

**ಐಲಾಂಥಸ್ ಚಿಟ್ಟೆ :** ನಾಕ್ಟ್ಯುಯಿಡೆ ಕುಲಕ್ಕೆ ಸೇರಿದ ಎಲಿಗ್ಮಾ ನಾರ್ಸಿಸಸ್ ಎಂಬ ವೈಜ್ಞಾನಿಕ ಹೆಸರಿನ ಒಂದು ಚಿಟ್ಟೆ. ದೇವಲೋಕದ ಮರ ಎಂಬ ಹೆಸರು ಗಳಿಸಿ ಬಹಳ ಎತ್ತರವಾಗಿ ಬೆಳೆಯುವ ಐಲಾಂಥಸ್ ಎಕ್ಸೆಲ್ಸ ಎಂಬ ಮರದ ಎಲೆಗಳನ್ನು ತಿಂದು ಹಾಳುಮಾಡುವ ಈ ಚಿಟ್ಟೆಗಳನ್ನು ಆ ಮರದ ಹೆಸರಿಂದಲೇ ಕರೆಯಲಾಗಿದೆ. ಆಕಾರದಲ್ಲಿ ಇದು ದೊಡ್ಡದು ; ಬಣ್ಣ ಹಳದಿ ; ರೆಕ್ಕೆಗಳ ಮೇಲೆ ಕಂದು ಅಥವಾ ಕಪ್ಪು ಪಟ್ಟೆಗಳಿವೆ. ಮರಿಗಳು ಉದ್ದವಾಗಿದ್ದು ಅವುಗಳ ಮೈಮೇಲೆ ತೆಳುವಾಗಿ ಕೂದಲು ಆವರಿಸಿರುತ್ತದೆ. ಅಲ್ಲಲ್ಲಿ ಕೆಂಪು ಮತ್ತು ಕಪ್ಪು ಪಟ್ಟೆಗಳಿರುತ್ತವೆ. ಮರಿಯ ತಲೆಯ ಬಣ್ಣ ಹಳದಿ. ಇವು ಕೊಂಬೆಗಳ ಮೇಲೆ, ಮಾಸಲು ಹಳದಿ ಬಣ್ಣದ ತೆಳುದಾರದ ಗೂಡು ಕಟ್ಟಿ ಕೋಶಾವಸ್ಥೆ ಹೊಂದುತ್ತವೆ.

(ಟಿ.ಎಸ್.ಟಿ.)

**ಐವರಿ ಕೋಸ್ಟ್ :** ಆಫ್ರಿಕದ ಪಶ್ಚಿಮ ತೀರದಲ್ಲಿರುವ ಒಂದು ಗಣರಾಜ್ಯ. ಪಶ್ಚಿಮ ರೇಖಾಂಶ 2° 30′ ನಿಂದ 7° 30′ರ ವರೆಗೂ ಉತ್ತರ ಅಕ್ಷಾಂಶ 5° ಯಿಂದ 10° ವರೆಗೂ ಇದು ಹಬ್ಬಿದೆ. ದಕ್ಷಿಣದಲ್ಲಿ ಗಿನಿ ಖಾರಿ, ಪಶ್ಚಿಮದಲ್ಲಿ ಲೈಬೀರಿಯ ಮತ್ತು ಗಿನಿ, ಉತ್ತರದಲ್ಲಿ ಮಾಲಿ ಮತ್ತು ಉತ್ತರ ವೋಲ್ಟ, ಪೂರ್ವದಲ್ಲಿ ಘಾನ—ಇವು ಈ ರಾಜ್ಯವನ್ನು ಸುತ್ತುವರಿದಿವೆ. ರಾಜ್ಯದ ವಿಸ್ತೀರ್ಣ 3,22,500 ಚ.ಕಿಮೀ.

ಮೇಲ್ಮೈಲಕ್ಷಣ : ಐವರಿ ಕೋಸ್ಟಿನ ಹೆಚ್ಚು ಭಾಗ ವಿಶಾಲವಾದ ಪ್ರಸ್ಥಭೂಮಿ. ಕಾಂಗ್ ಟೆರ್ ಪ್ರಸ್ಥಭೂಮಿಯ ಎತ್ತರ 4,757 ಅಡಿ. ಅಲ್ಲಿಂದ ಸಮುದ್ರಾಭಿಮುಖವಾಗಿ ಇಳಿಜಾರಾಗಿರುವ ನೆಲದ ಕೊನೆಯ ನಲವತ್ತು ಮೈಲಿ ಮೈದಾನವೆನ್ನಬಹುದು. ಇಲ್ಲಿ ಹರಿಯುವ ನದಿಗಳು ಅಮುಖ್ಯ: ಕವಾಲಿ, ಸಸಾಂಡ್ರ, ಬಂಡಾಮ ಮತ್ತು ಕೋಮೊ. ಇವು ದೋಣಿಸಂಚಾರಕ್ಕೆ ಯೋಗ್ಯವಾಗಿಲ್ಲ.

ವಾಯುಗುಣ : ಐವರಿ ಕೋಸ್ಟಿನ ವಾಯುಗುಣ ತಾಯಿತ್ಯತ್ಯಗಳಿಂದ ಕೂಡಿದ್ದು. ಉಷ್ಣತೆ 57° ಫ್ಯಾ. (14° ಸೆಂ.) ಯಿಂದ 103° ಫ್ಯಾ. (39° ಸೆಂ.) ವರೆಗೆ ವ್ಯತ್ಯಾಸವಾಗುತ್ತದೆ. ಡಿಸೆಂಬರಿನಿಂದ ಮೇ ವರೆಗೆ ಹೆಚ್ಚು ಮಳೆ (80″–120″). ತೀರಪ್ರದೇಶದಿಂದ ಉತ್ತರಕ್ಕೆ ಸಾಗಿದಂತೆ ಉಷ್ಣವಲಯ ಮರೆಯಾಗಿ ಉಪೋಷ್ಣವಲಯದ ವಾಯುಗುಣ ಕಂಡುಬರುತ್ತದೆ.

ಸಸ್ಯವರ್ಗ ಮತ್ತು ಪ್ರಾಣಿಗಳು : ಐವರಿ ಕೋಸ್ಟಿನ ದಕ್ಷಿಣದ ಭಾಗದಲ್ಲೂ ಕವಾಲಿ ಮತ್ತು ಕೋಮೊ ನದೀ ಕಣಿವೆಗಳಲ್ಲೂ ದಟ್ಟವಾದ ನಿತ್ಯಹಸುರಿನ ಕಾಡುಗಳುಂಟು. ಸ್ವಲ್ಪ ಉತ್ತರದಲ್ಲಿ ಎಲೆ ಉದುರುವ ಕಾಡುಗಳಿವೆ.

ನರಿ, ಕತ್ತೆಕಿರುಬ, ಚಿರತೆ, ಕೋತಿ, ಆನೆ, ನೀರ್ಕುದುರೆ, ಮೊಸಳೆ, ಗೋಸುಂಬೆ, ಹಲ್ಲಿ, ಹಾವು, ಕ್ರಿಮಿಕೀಟ, ಚಿಟ್ಟೆ, ಚೇಳು, ಹಕ್ಕಿಗಳು, ರಣಹದ್ದು, ಕೊಕ್ಕರೆ. ಪಾರಿವಾಳ, ಆಮೆ, ಗಿಣಿ—ಇವು ಇಲ್ಲಿ ಧಾರಾಳ.

ಬೆಳೆ, ಕೈಗಾರಿಕೆ, ವಾಣಿಜ್ಯ : ಐವರಿ ಕೋಸ್ಟಿನ ಸಂಪತ್ತಿಗೆ ಅರಣ್ಯಗಳು ಬಹಳ ಮಟ್ಟಿಗೆ ಕಾರಣ. ದೇಶದ ನಿರ್ಯಾತದಲ್ಲಿ ಹೆಚ್ಚಿನ ಪ್ರಮಾಣ ಅರಣ್ಯವಸ್ತುಗಳು. ಕಾಡು ಕಡಿದು ವ್ಯವಸಾಯಕ್ಕೆ ಬಳಸಲಾಗಿರುವ ನೆಲ ಕಡಿಮೆ. ರಾಷ್ಟ್ರೀಯ ವರಮಾನದ ಅರ್ಧ ಭಾಗ ಬೇಸಾಯದಿಂದ ಬರುತ್ತದೆ. ಕಾಫಿ ಬೆಳೆಯುವ ದೇಶಗಳಲ್ಲಿ ಐವರಿ ಕೋಸ್ಟಿನದು ಮೂರನೆಯ ಸ್ಥಾನ (ಮೊದಲಿನ ಎರಡು ಬ್ರಜ಼ಿಲ್ ಮತ್ತು ಕೊಲಂಬಿಯ). ವಿಶ್ವದ ಒಟ್ಟಿನಲ್ಲಿ ಇದರ ಪಾಲು ಸೇಕಡಾ 6. ಕೋಕೊ ಬೆಳೆಯಲ್ಲಿ ಐವರಿ ಕೋಸ್ಟ್ ನಾಲ್ಕನೆಯದು (ಘಾನ, ನೈಜೀರಿಯ ಮತ್ತು ಬ್ರಜ಼ಿಲ್‌ಗಳು ಮೊದಲ ಮೂರು). ವಿಶ್ವ ಬೆಳೆಯಲ್ಲಿ ಸೇಕಡಾ 9 ರಷ್ಟನ್ನು ಐವರಿ ಕೋಸ್ಟ್ ಉತ್ಪಾದಿಸುತ್ತದೆ. ಐವರಿ ಕೋಸ್ಟಿನ ನಿರ್ಯಾತಗಳಲ್ಲಿ ಅರ್ಧಕ್ಕಿಂತ ಹೆಚ್ಚು ಪಾಲು ಇವುಗಳದು. ಬನಾನ, ತೆಂಗು, ಕೊಬರಿ—ಇವು ರಫ್ತಾಗುತ್ತವೆ.

ಐವರಿ ಕೋಸ್ಟಿನ ಮುಖ್ಯ ಆಹಾರ ಬೆಳೆಗಳು ಗೆಣಸು, ಮುಸುಕಿನ ಜೋಳ, ಬತ್ತ, ಮರಗೆಣಸು, ಕಾಳು, ನೆಲಗಡಲೆ ಇತ್ಯಾದಿ. ಕುರಿ ಮತ್ತು ಆಕಳುಗಳನ್ನು ಉತ್ತರದಲ್ಲಿ ಹೆಚ್ಚಾಗಿ ಸಾಕುತ್ತಾರೆ. ಆದರೂ ಹೊರಗಿನಿಂದ ಮಾಂಸ ಆಮದಾಗುತ್ತದೆ. ಅಬಿಜಾನಿನ ಬಳಿ ಮೀನುಗಾರಿಕೆ ಒಂದು ಮುಖ್ಯ ಕಸಬು.

ಉತ್ತರದಲ್ಲೂ ಪಶ್ಚಿಮದಲ್ಲೂ ವಜ್ರದ ಉತ್ಪಾದನೆಯಾಗುತ್ತದೆ. ಕರಾವಳಿಯ ಗ್ರಾಂಡ್ ಲಾಹೌ ಬಳಿ ಮ್ಯಾಂಗನೀಸ್ ಗಣಿಗಳಿವೆ. ಖಾದ್ಯ ಎಣ್ಣೆ ತಯಾರಿಕೆ, ಆಹಾರ ಪರಿಷ್ಕರಣ, ಮರಕೊಯ್ತ, ಮೋಟಾರು ಭಾಗಗಳ ಜೋಡಣೆ, ಜವಳಿ—ಇವು ಕೆಲವು ಕೈಗಾರಿಕೆಗಳು.

ಐವರಿ ಕೋಸ್ಟಿನಲ್ಲಿ ಕೈಗಾರಿಕೆಗಳು ಹೆಚ್ಚಾಗಿ ಬೆಳೆದಿಲ್ಲ. ವಿದೇಶೀ ಬಂಡವಾಳ ನಿಯೋಜನೆಗೆ ಇಲ್ಲಿನ ಸರ್ಕಾರ ವಿಶೇಷವಾಗಿ ಉತ್ತೇಜನ ನೀಡಿದೆ.

ಐವರಿ ಕೋಸ್ಟಿನ ರಸ್ತೆವ್ಯವಸ್ಥೆ ಪಶ್ಚಿಮ ಆಫ್ರಿಕದಲ್ಲೇ ಅತ್ಯಂತ ಉತ್ಕೃಷ್ಟವಾದ್ದು. ಸುಮಾರು 33,000 ಕಿ.ಮೀ.ಗಳ ಪ್ರಾಥಮಿಕ ಹಾಗೂ ದ್ವಿತೀಯಕ ರಸ್ತೆಗಳಿವೆ. ಐವರಿ ಕೋಸ್ಟಿನಿಂದ ಉತ್ತರ ವೋಲ್ಟಕ್ಕೆ ಮೀಟರ್ ಗೇಜ್ ರೈಲುಮಾರ್ಗವುಂಟು.

ಅಬಿಜಾನ್ ಐವರಿ ಕೋಸ್ಟಿನ ರಾಜಧಾನಿ (ಜನಸಂಖ್ಯೆ 2,60,000). ಇದು ಪಶ್ಚಿಮ ಆಫ್ರಿಕದಲ್ಲೇ ಅತ್ಯುತ್ತಮ ರೇವುಪಟ್ಟಣ. ರೈಲುಮಾರ್ಗದ ಕೊನೆದಾಣ. ವಿಮಾನ ವ್ಯವಸ್ಥೆಯ ಕೇಂದ್ರ. ಬವಾಕೆ, ಬವಾಫ್ಲೆ, ಓಡಿಯೆನೆ, ಸಿಗ್ವೆಲ, ಗಿಗ್ಲೊ, ಗ್ರಾಂಡ್ ಬಸಾರಿ, ಸೆಸಾಂಡ್ರ ಮತ್ತು ಟಾಬೊ ಇತರ ಪಟ್ಟಣಗಳು.

ಐವರಿ ಕೋಸ್ಟಿನ ಅಧಿಕೃತ ಭಾಷೆ ಫ್ರೆಂಚ್. ಅನೇಕ ಸ್ಥಳೀಯ ಭಾಷೆಗಳು ಬಳಕೆಯಲ್ಲಿವೆ. ಸಂಪ್ರದಾಯದ ಆಚರಣೆಗಳಲ್ಲಿ ನಂಬಿಕೆಯಿರುವವರೇ ಹೆಚ್ಚು ಮಂದಿ. ಒಟ್ಟು ಜನಸಂಖ್ಯೆಯ ಸೇಕಡಾ 12ರಷ್ಟು ಮಂದಿ ಕ್ರೈಸ್ತರು—ಮುಖ್ಯವಾಗಿ ರೋಮನ್ ಕೆಥೊಲಿಕರು. ನೂರಕ್ಕೆ 25 ಮಂದಿ ಮುಸ್ಲಿಮರಿದ್ದಾರೆ. (ಪಿ.ಎಚ್.)

**ಇತಿಹಾಸ, ಆಡಳಿತ :** 15ನೆಯ ಶತಮಾನದ ದ್ವಿತೀಯಾರ್ಧದ ವೇಳೆಗೆ ಪೋರ್ಚುಗೀಸರು ಈ ಪ್ರದೇಶವನ್ನು ಪರಿಶೋಧಿಸಿದ ಮೇಲೆ ದಂತ ಮತ್ತು ಗುಲಾಮ ವ್ಯಾಪಾರಕ್ಕಾಗಿ ಪಾಶ್ಚಾತ್ಯರು ಇಲ್ಲಿಗೆ ಬರಲಾರಂಭಿಸಿದರು. 17ನೆಯ ಶತಮಾನದ ಕೊನೆಯ ವೇಳೆಗೆ ಫ್ರೆಂಚರು ಇಲ್ಲಿನ ಪೂರ್ವತೀರಪ್ರದೇಶದ ಅಸ್ಸಿನಿ ಮತ್ತು ಗ್ರಾಂಡ್ ಬಾಸಮ್‌ಗಳಲ್ಲಿ ಖಾಯಂ ವ್ಯಾಪಾರಕೇಂದ್ರಗಳನ್ನು ಸ್ಥಾಪಿಸಿದ್ದರು. ಕೋಟೆ ಕೊತ್ತಳಗಳು ನಿರ್ಮಿತವಾದುವು. ಸುತ್ತಮುತ್ತಣ ಪ್ರದೇಶಗಳು ಕ್ರಮೇಣ ಸ್ಥಳೀಯ ನಾಯಕರ ಕೈಯಿಂದ ಇವರಿಗೆ ವರ್ಗವಾದುವು. 1870ರಲ್ಲಿ ಫ್ರೆಂಚ್-ಜರ್ಮನ್ ಯುದ್ಧದ ಫಲವಾಗಿ ಫ್ರೆಂಚ್ ಸೇನೆ ಇಲ್ಲಿಂದ ಕಾಲ್ತೆಗೆಯಿತು. ಈ ಪ್ರದೇಶದ ರಕ್ಷಣೆಯ ಜವಾಬ್ದಾರಿಯನ್ನು ಫ್ರೆಂಚ್ ವರ್ತಕರೇ ವಹಿಸಿಕೊಂಡರು. ಇವರು ಘಾನದ ಕಡೆಯಿಂದ ಬರುತ್ತಿದ್ದ ಬ್ರಿಟಿಷ್ ಆಕ್ರಮಣವನ್ನು ಯಶಸ್ವಿಯಾಗಿ ತಡೆಗಟ್ಟಿದರು. ಮಾರ್ಸೆಲ್ ಟ್ರೀಕ್-ಲ್ಯಾಪ್ಲೇನ್ ಇವರ ಪೈಕಿ ಒಬ್ಬ. ಈತನೂ ಕ್ಯಾಪ್ಟನ್ ಬಿಂಗರನೂ ಸೇರಿ ಇತರ ಸ್ಥಳೀಯ ನಾಯಕರನ್ನು ಪುಸಲಾಯಿಸಿ, ಅವರ ನೆಲಗಳ ಮೇಲೆ ತಮ್ಮ ರಕ್ಷಣೆಯ ಕೊಡೆ ಹಿಡಿದರು. 1893ರಲ್ಲಿ ಐವರಿ ಕೋಸ್ಟ್ ಒಂದು ಪ್ರತ್ಯೇಕ ಫ್ರೆಂಚ್ ವಸಾಹತಾಗಿ ಸ್ಥಾಪಿತವಾಯಿತು. ಬಿಂಗರ್ ಪ್ರಥಮ ಗವರ್ನರ್.

ಐವರಿ ಕೋಸ್ಟಿನ ಪಶ್ಚಿಮ ಮತ್ತು ಪೂರ್ವ ಗಡಿಗಳ ನಿಷ್ಕರ್ಷೆ ಕಷ್ಟವಾಗಲಿಲ್ಲ. ಬ್ರಿಟನ್ ಲೈಬೀರಿಯಗಳೊಂದಿಗೆ ಈ ಬಗ್ಗೆ ಒಪ್ಪಂದವಾಯಿತು. ಆದರೆ ಉತ್ತರದ ಗಡಿ ಖಚಿತಗೊಂಡದ್ದು 1898ರಲ್ಲಿ. ಫ್ರೆಂಚರ ರಾಜ್ಯಾಕಾಂಕ್ಷೆಯ ಮಗ್ಗುಲ ಮುಳ್ಳಾಗಿದ್ದ ಸುಡಾನಿ[illegible]ಗಾರ ಸ್ಯಾಮೋರಿಯನ್ನು ಫ್ರೆಂಚರು ಹಿಡಿದು [illegible] ಬೊಕ್ಕಿಗೆ ಹಾಕಿದಾಗಲೇ ಇದು ಸಾಧ್ಯವಾಯಿತು.

ಆದರೂ ಫ್ರೆಂಚರು ಇಲ್ಲಿ ತಳವೂರುವ ಮುನ್ನ ಇನ್ನೂ ಅನೇಕ ವಿಘ್ನಗಳನ್ನೆದುರಿಸಬೇಕಾಯಿತು. ಹಳದಿ ಜ್ವರ ಒಂದು ಶತ್ರು. ಸ್ವಾತಂತ್ರ್ಯಪ್ರಿಯರಾದ ಸ್ಥಳೀಯ ಜನರ ಪ್ರತಿಭಟನೆಯ ಅಪಾಯವಂತೂ ಇದ್ದೇ ಇತ್ತು. ಹತ್ತೊಂಬತ್ತನೆಯ ಶತಮಾನ ಉರುಳಿ, ಇಪ್ಪತ್ತನೆಯ ಶತಮಾನದ ಎರಡನೆಯ ದಶಕದ ಅಂತ್ಯ ಸಮೀಪಿಸುವ ವೇಳೆಗೆ ಫ್ರೆಂಚರು ಇಲ್ಲಿ ಭದ್ರವಾಗಿದ್ದರು. ದಕ್ಷಿಣ ತುದಿಯಿಂದ ಉತ್ತರ ವೋಲ್ಟಕ್ಕೆ ಉದ್ದನೆಯ ರೈಲುಮಾರ್ಗವೂ ರಾಜ್ಯದ ನಾನಾ ಕಡೆಗಳನ್ನು ಕೂಡಿಸುವ ಉತ್ತಮ ರಸ್ತೆ ವ್ಯವಸ್ಥೆಯೂ ನಿರ್ಮಿತವಾದುವು. ಅಬಿಜಾನ್ ರಾಜಧಾನಿಯಾಯಿತು. ಅಲ್ಲಿ ಬಂದರು ನಿರ್ಮಾಣವಾದ್ದು 1951ರಲ್ಲಿ.

ಎರಡನೆಯ ಮಹಾಯುದ್ಧ ಬಂತು. 1940ರಿಂದ 1942ರ ವರೆಗೆ ಇದು ಫ್ರಾನ್ಸಿನ ವಿಷಿಯಲ್ಲಿ ಜರ್ಮನರ ಕೈಗೊಂಬೆಯಾಗಿ ರಾಜ್ಯವಾಳುತ್ತಿದ್ದ ಸರ್ಕಾರದ ಅಧೀನದಲ್ಲಿತ್ತು. 1946ರಲ್ಲಿ ಫ್ರೆಂಚಿನ ಒಂದು ಭಾಗವಾಯಿತು. ಆಡಳಿತ ಮತ್ತು ಹಣಕಾಸುಗಳಲ್ಲಿ ಇಷ್ಟಷ್ಟು ಅಧಿಕಾರ ಪ್ರಾಪ್ತವಾಯಿತೇ ವಿನಾ ಇದಕ್ಕೆ ನಿಜವಾದ ಸ್ವಾತಂತ್ರ್ಯ ಲಭಿಸಲಿಲ್ಲ.

1947ರಲ್ಲಿ ಇದರ ಉತ್ತರಭಾಗದ ಜನ ಪ್ರತ್ಯೇಕವಾಗಲು ಬಯಸಿದಾಗ ಫ್ರೆಂಚರು ಅದನ್ನು ಕತ್ತರಿಸಿ ಉತ್ತರ ವೋಲ್ಟವೆಂದು ಹೆಸರಿಸಿದರು. 1958ರ ಡಿಸೆಂಬರ್ 4ರಂದು ಐವರಿ ಕೋಸ್ಟ್ ಸ್ವಯಮಾಡಳಿತವನ್ನೂ 1960ರ ಆಗಸ್ಟ್ 7ರಂದು ಸ್ವಾತಂತ್ರ್ಯವನ್ನೂ ಪಡೆಯಿತು. ಇದಕ್ಕೆಲ್ಲ ಕಾರಣನಾದ ನಾಯಕನೇ ಫೀಲಿಕ್ಸ್ ಹೌಫ್ವೆ-ಬಾಯಿನಿ. ಉತ್ತರ ವೋಲ್ಟ, ನೈಜರ್ ಮತ್ತು ದಹೋಮಿಗಳೊಂದಿಗೆ ಈತ ಮೈತ್ರಿಕೂಟ ಮಾಡಿಕೊಂಡ. ಈ ರಾಜ್ಯಗಳಿಗೆಲ್ಲ ಸಮಾನವಾದ ಸಂವಿಧಾನ, ಸುಂಕವ್ಯವಸ್ಥೆ, ವಿದೇಶ ಮತ್ತು ರಕ್ಷಣಾನೀತಿ ಮತ್ತು ಅಭಿವೃದ್ಧಿ ಕಾರ್ಯಕ್ಕೆ ಎಲ್ಲರಿಗೂ ಒದಗಿಬರುವ ಬಂಡವಾಳ ಇರಬೇಕೆಂಬುದು ಬಾಯಿನಿಯ ಕನಸು. ಇವಕ್ಕೂ ಫ್ರಾನ್ಸಿಗೂ ನಡುವೆ ಸಹಕಾರದ ಕರಾರುಗಳಿಗೆ 1961ರಲ್ಲಿ ಸಹಿ ಹಾಕಲಾಯಿತು. ಮೈತ್ರಿಕೂಟದ ರಾಷ್ಟ್ರಗಳು ಈಗ ಫ್ರೆಂಚ್ ಸಮುದಾಯಕ್ಕೆ ಸೇರಿಲ್ಲ.

1960ರ ಸಂವಿಧಾನದ ಪ್ರಕಾರ ಐವರಿ ಕೋಸ್ಟ್ ಗಣರಾಜ್ಯದ ಅಧ್ಯಕ್ಷನಿಗೆ ವ್ಯಾಪಕ ಅಧಿಕಾರಗಳುಂಟು. ಸಚಿವರುಗಳನ್ನೂ ಪ್ರಮುಖ ಅಧಿಕಾರಿಗಳನ್ನೂ ನೇಮಕ ಮಾಡುವವನೀತನೇ. ರಾಷ್ಟ್ರೀಯ ಸಭೆಯ ಸದಸ್ಯರ ಸಂಖ್ಯೆ 100. ಇವರು ನೇರವಾಗಿ ಚುನಾಯಿತರಾಗುತ್ತಾರೆ. ದೇಶವನ್ನು ಆಡಳಿತ ಸೌಕರ್ಯಕ್ಕಾಗಿ 19 ಜಿಲ್ಲೆಗಳಾಗಿ ವಿಂಗಡಿಸಲಾಗಿದೆ. (ಸಿ.ಬಿ.)

**ಐವಾನ್ :** ರಷ್ಯದ ಇತಿಹಾಸದಲ್ಲಿ ಈ ಹೆಸರಿನವರು ಆರು ಜನ. ಇವರಲ್ಲಿ ಮೂವರು ಮಾಸ್ಕೊ ಮಹಾರಾಜರು, ಇಬ್ಬರು ಜ಼ಾರ್ ದೊರೆಗಳು, ಒಬ್ಬ ರಷ್ಯದ ಚಕ್ರವರ್ತಿ.

**ಐವಾನ್ I :** 1304–1341. ವ್ಲಾದಿಮಿರ್ ಮತ್ತು ಮಾಸ್ಕೊಗಳ ಮಹಾರಾಜ ಡೇನಿಯಲನ ಮಗ; ಪೂರ್ಣ ಹೆಸರು ಐವಾನ್ ಡ್ಯಾನಿಲೊವಿಚ್. 1325ರಲ್ಲಿ ತ್ವೇರಿನ ರಾಜ ದಿಮಿತ್ರಿ ಮಿಕೈಲೊವಿಚನಿಂದ ಅವನ ಸಹೋದರ ಯೂರಿ ಕೊಲೆಯಾದಾಗ ಈತ ಮಾಸ್ಕೊವಿನ ಗದ್ದುಗೆಯೇರಿದ. ದಿಮಿತ್ರಿ ನಡೆಸಿದ ಅಮಾನುಷ ಕೃತ್ಯ ಕಂಡ ಉಜ್ಬೆಕಿನ ಖಾನ ದಿಮಿತ್ರಿಯನ್ನು ಸಂಹರಿಸಿದರೂ ಮಹಾರಾಜನೆನಿಸಿಕೊಳ್ಳಲು ಅಗತ್ಯವಾಗಿದ್ದ ವ್ಲಾದಿಮಿರ್ ರಾಜ್ಯ ಐವಾನನ ಆಡಳಿತಕ್ಕೆ ಬರಲಿಲ್ಲ. ವ್ಲಾದಿಮಿರಿನ ಆಡಳಿತ ನಿರ್ವಹಿಸಲು ಖಾನನಿಂದ ನಿಯಮಿತನಾಗಿದ್ದವನು ದಿಮಿತ್ರಿಯ ಸಹೋದರ ಅಲೆಕ್ಸಾಂಡರ್. ಆದರೆ 1327ರಲ್ಲಿ ತ್ವೇರಿನ ಜನ ದಂಗೆಯೆದ್ದು ಮಂಗೋಲ್ ವರ್ತಕರನ್ನೂ ತ್ವೇರಿನ ಅಧಿಕಾರಿಗಳನ್ನೂ ಕೊಂದಾಗ ಖಾನ್ ಈ ದಂಗೆ ಅಡಗಿಸಲು ಐವಾನನನ್ನು ಸೈನ್ಯಸಮೇತ ಕಳುಹಿಸಿದ. ಐವಾನ್ ಈ ಕಾರ್ಯವನ್ನು ಯಶಸ್ವಿಯಾಗಿ ನಿರ್ವಹಿಸಿ ತ್ವೇರ್ ರಾಜ್ಯವನ್ನು ವಶಪಡಿಸಿಕೊಂಡ. ಇದರಿಂದ ಸಂತೋಷಗೊಂಡ ಖಾನ್ ವ್ಲಾದಿಮಿರ್ ರಾಜ್ಯದ ಅರ್ಧಭಾಗವನ್ನು ಇವನ ಆಳ್ವಿಕೆಗೆ ಒಪ್ಪಿಸಿ ಮಹಾರಾಜನೆಂಬ ಬಿರುದು ನೀಡಿದ.

ದೇಶಭ್ರಷ್ಟನಾದ ಅಲೆಕ್ಸಾಂಡರ್ ಹತ್ತು ವರ್ಷಗಳ ಕಾಲ ಪದೇ ಪದೇ ವ್ಲಾದಿಮಿರ್ ಮೇಲೆ ಬೀಳುತ್ತಿದ್ದ. ಕೊನೆಗೊಮ್ಮೆ ಖಾನ್ ಐವಾನನಿಂದ ಪ್ರೇರಿತನಾಗಿ ಅಲೆಕ್ಸಾಂಡರನನ್ನೂ ಅವನ ಮಗನನ್ನೂ ಗಲ್ಲಿಗೇರಿಸಿದ.

ಇವನ ಕಾಲದಲ್ಲಿ ಮಾಸ್ಕೊ ರಾಜ್ಯದ ಎಲ್ಲೆಗಳು ವಿಸ್ತರಿಸಿದುವು. ಈತ ಭೂಕಂದಾಯವನ್ನು ನಿರ್ದಾಕ್ಷಿಣ್ಯವಾಗಿ ವಸೂಲಿ ಮಾಡಿ ರಾಜ್ಯದ ಬೊಕ್ಕಸವನ್ನು ತುಂಬಿದ. ಅದರಿಂದಾಗಿ ಇವನಿಗೆ ಕಲಿಟ (ಹಣದ ಚೀಲ) ಎಂಬ ಪರ್ಯಾಯನಾಮ ಬಂತು. ರಷ್ಯದಲ್ಲಿ ಶಾಂತಿಸ್ಥಾಪನೆ ಮಾಡಿದವನು ಈತ. ಈತ ಸತ್ತದ್ದು 1341ರಲ್ಲಿ.

**ಐವಾನ್ II :** 1326–1359. ಮಾಸ್ಕೊ ಮಹಾರಾಜ. ಮೊದಲನೆಯ ಐವಾನನ ಮಗ. ಐವಾನ್ ಐವಾನೊವಿಚ್ ಪೂರ್ಣನಾಮ. ತನ್ನ ಸಹೋದರ ಸೆಮಾನನ ಅನಂತರ ಸಿಂಹಾಸನವನ್ನೇರಿದ. ಸುಜ಼್ದಾಲ್ ಜನರ ವಿರೋಧವಿದ್ದರೂ ಖಾನನ ದೃಷ್ಟಿಗೆ ಬಿದ್ದು ಮಹಾರಾಜನೆನಿಸಿದ. ರೈಯೆಜ಼ಾನರು ಪದೇ ಪದೇ

ಮಾಸ್ಕೊವಿನ ಮೇಲೆ ಬೀಳುತ್ತಿದ್ದುದನ್ನು ಕಂಡ ಐವಾನ್ ರೈಯೆಜ಼ಾನರನ್ನು ದ್ವೇಷಿಸುತ್ತಿದ್ದ ಪ್ರೊನ್‌ಸ್ಕ್ ರಾಜನಿಗೆ ನೆರವು ನೀಡಿ ರೈಯೆಜ಼ಾನರನ್ನು ಅಡಗಿಸಿ ಮಾಸ್ಕೊ ಮೇಲೆ ಆಗಬೇಕಿದ್ದ ಯುದ್ಧವನ್ನು ತಪ್ಪಿಸಿದ. ಆದರೆ ಆತನ ಸಲಹೆಗಾರರೆನಿಸಿದ ಬೊಯರ್‌ಗಳು ರಾಜಕೀಯದಲ್ಲಿ ಹೆಚ್ಚಿನ ಪಾತ್ರ ವಹಿಸತೊಡಗಿದರು. ಕೊನೆಗೊಮ್ಮೆ ಐವಾನನ ಖ್ಯಾತ ಸಲಹೆಗಾರ ಆಲೆಸ್ಕಿ ಬೊಯರುಗಳನ್ನು ಕಲೆ ಹಾಕಿ ಐವಾನನ ವಿರುದ್ಧ ಪಿತೂರಿ ನಡೆಸುತ್ತಿದ್ದುದು ತಿಳಿದು ಬಂತು. ಆಲೆಸ್ಕಿ ಕೊಲೆಗೆ ಈಡಾದ. ಇದರಿಂದಾಗಿ ಅನೇಕ ಗಣ್ಯ ಬೊಯರುಗಳು ಮಾಸ್ಕೊವಿನಿಂದ ರೈಯೆಜ಼ಾನಿಗೆ ವಾಪಸಾದರು. ಈತ 1359ರಲ್ಲಿ ನಿಧನನಾದ.

**ಐವಾನ್** III : 1440–1505. ಐವಾನ್ ವ್ಯಾಸಿಲಿಯೆವಿಚ್ ಮಾಸ್ಕೊದ ಪ್ರಸಿದ್ಧ ರಾಜ. ಮಹಾಶಯನೆಂದು ಈತ ಖ್ಯಾತಿ ಗಳಿಸಿದ್ದಾನೆ. ಇವನ ತಂದೆ ಎರಡನೆಯ ವ್ಯಾಸಿಲಿ. ಅವನ ಅನಂತರ ಈತ ಸಿಂಹಾಸನವನ್ನೇರಿದ (1462). ವ್ಯಾಸಿಲಿಯೆವಿಚ್ ಶತ್ರುರಾಜರನ್ನು ಸದೆಬಡಿದು ರಾಜ್ಯದ ಎಲ್ಲೆಯನ್ನು ವಿಸ್ತರಿಸಿದ. ಆವರೆಗೂ ಸ್ವತಂತ್ರ ರಾಜ್ಯವೆನಿಸಿದ್ದ ನೊಫ್‌ಗೊರೊಟನ್ನು 1478ರಲ್ಲಿ ಮುತ್ತಿ ತನ್ನ ಸ್ವಾಧೀನಕ್ಕೆ ತೆಗೆದುಕೊಂಡ. ಟಾಟರರಿಗೆ ಅಧೀನ ರಾಷ್ಟ್ರವಾಗಿ ಸ್ವಾಮಿನಿಷ್ಠೆ ತೋರುತ್ತಿದ್ದ ಮಾಸ್ಕೊ ಈತನ ಸಾಮರ್ಥ್ಯದ ಫಲವಾಗಿ ಸ್ವಾತಂತ್ರ್ಯ ಪಡೆಯುವ ಯೋಗ್ಯತೆ ಸಂಪಾದಿಸಿತು. 1503ರಲ್ಲಿ ಈತ ನಡೆಸಿದ ಶಾಂತಿ ಸಂಧಾನದ ಪರಿಣಾಮವಾಗಿ ಉಥೋನಿಯನರ ಎರಡು ದಂಗೆಗಳು ಅಡಗಿದುವು. ಈತ ತನ್ನ ರಾಜ್ಯಾಡಳಿತವನ್ನು ವೈಟ್ ರಷ್ಯ ಮತ್ತು ಲಿಟಲ್ ರಷ್ಯಕ್ಕೂ ವಿಸ್ತರಿಸಿದ. ಬಿಜ಼ಾನ್‌ಟಿಯಂನ ಕೊನೆಯ ಚಕ್ರವರ್ತಿಯ ಸೋದರಸೊಸೆ ಸೋಫಿಯಳನ್ನು ಮದುವೆಯಾಗಿ ಬಿಜಾನ್‌ಟಿಯಂನ ರಾಜಗಾಂಭೀರ್ಯ ಹಾಗೂ ಶ್ರೀಮಂತಿಕೆಯ ವೈಭವವನ್ನು ರಷ್ಯದಲ್ಲೂ ಮೆರೆದು ಜ಼ಾರ್ ಬಿರುದು ಪಡೆದ. ಕೈಗಾರಿಕೆ ಮತ್ತು ವಿದೇಶ ವ್ಯಾಪಾರಗಳಿಗೆ ಆದ್ಯತೆ ನೀಡಿದ್ದೂ ರಾಜ್ಯದ ನ್ಯಾಯ ವ್ಯವಸ್ಥೆಯಲ್ಲಿನ ದೋಷಗಳನ್ನು ಕ್ರಮಪಡಿಸಿದ್ದೂ ಈತನ ಇತರ ಸಾಧನೆಗಳು. ಸಾಯುವ ಮುನ್ನ ಈತ ಇಡೀ ರಷ್ಯದ ರಾಜ್ಯವನ್ನು ವಿಸ್ತರಿಸಿ ಒಟ್ಟುಗೂಡಿಸಿ ಬಲಪಡಿಸಿದ. *

**ಐವಾನ್** IV : ಭೀಕರ ಐವಾನ್ ಎಂಬ ಕುಖ್ಯಾತಿ ಗಳಿಸಿ, 1547ರಿಂದ 1584ರ ವರೆಗೆ ಆಳಿದ ರಷ್ಯನ್ ಚಕ್ರವರ್ತಿ. ತಂದೆಯ ಮರಣಾನಂತರ ಪಟ್ಟಕ್ಕೆ ಬಂದಾಗ (1533) ಅವನಿಗಿನ್ನೂ ಮೂರು ವರ್ಷ. ಹದಿನಾಲ್ಕು ವಯಸ್ಸಿನವನಾಗಿದ್ದಾಗಲೇ ಅಧಿಕಾರಸೂತ್ರಗಳನ್ನು ತನ್ನ ಕೈಗೆ ತೆಗೆದುಕೊಂಡ. ಮೂರು ವರ್ಷಗಳ ತರುವಾಯ, ತನ್ನ ಅಧಿಕಾರ ಮಾಸ್ಕೊ ಮತ್ತು ಅದರ ಸುತ್ತಮುತ್ತಣ ಪ್ರದೇಶಗಳಿಗೆ ಸೀಮಿತವಾಗಿದ್ದರೂ, ತಾನು ಮಾಸ್ಕೊ ಮತ್ತು ಸಮಗ್ರ ರಷ್ಯದ ಸಮ್ರಾಟನೆಂದು ಘೋಷಿಸಿಕೊಂಡ. ಮುಂದೆ 1560ರ ವರೆಗೆ ಕೆಲವು ಸಮರ್ಥ ಸಲಹೆಗಾರರ ನೆರವಿನಿಂದ ರಾಜ್ಯವಾಳಿದ. ಸಾಮಾನ್ಯ ಜನತೆಯಲ್ಲಿ ಪ್ರೀತಿವಿಶ್ವಾಸಗಳನ್ನಿಟ್ಟು ಶ್ರೀಮಂತರ ದರ್ಪವನ್ನೂ ನಿರಂಕುಶ ಪ್ರವೃತ್ತಿಯನ್ನೂ ಅಡಗಿಸಲೆತ್ನಿಸಿದ. ಸ್ಥಳೀಯ ಪ್ರಜಾಧಿಕಾರ ವ್ಯವಸ್ಥೆಯನ್ನು ರಾಜ್ಯದ ನಾನಾಕಡೆ ಜಾರಿಗೆ ತಂದ. ಸಮಗ್ರ ರಷ್ಯದ ಸಮ್ರಾಟನೆಂದು ತಾನು ಧರಿಸಿದ ಬಿರುದನ್ನು ಸಮರ್ಥಿಸಿಕೊಳ್ಳಲೆಂಬಂತೆ ಪೂರ್ವದ ಕಸಾನ್ ಮತ್ತು ಆಸ್ಟ್ರಕಾನ್ ಪ್ರಾಂತ್ಯಗಳನ್ನು ವಶಪಡಿಸಿಕೊಂಡ. ಸೈಬೀರಿಯದಲ್ಲಿನ ಅನೇಕ ಪ್ರದೇಶಗಳನ್ನು ಸ್ವಾಧೀನಪಡಿಸಿಕೊಳ್ಳಲು ಇವನಿಂದ ನಿಯುಕ್ತನಾಗಿದ್ದವನು ಯರ್ಮಾರ್ಕ್. ಪಶ್ಚಿಮದಲ್ಲಿ ಪೋಲೆಂಡ್ ಮತ್ತು ಸ್ವೀಡನ್‌ಗಳ ಮೇಲೆ ನಡೆಸಿದ ಯುದ್ಧಗಳಲ್ಲಿ ಐವಾನ್ ಪರಾಜಯಹೊಂದಿದ. ಹೀಗೆ ರಷ್ಯದ ರಾಜ್ಯವಿಸ್ತರಣ ಪೂರ್ವದಲ್ಲೇ ಹೊರತು ಪಶ್ಚಿಮಕ್ಕಲ್ಲ ಎಂಬುದು ಖಚಿತವಾಯಿತು. ಇಂಗ್ಲೆಂಡಿನೊಂದಿಗೆ ಈತ ವ್ಯಾಪಾರಸಂಬಂಧವನ್ನಿಟ್ಟುಕೊಂಡಿದ್ದ.

1560ರ ವರೆಗೆ ಇವನ ಆಳ್ವಿಕೆ ಪ್ರಗತಿಮಾರ್ಗದಲ್ಲೇ ಸಾಗಿತು. ಆ ವರ್ಷ ಇವನ ಹೆಂಡತಿ ಕಾಲವಾದಳು. ಇವನೂ ಸ್ವಲ್ಪಕಾಲ ಕಾಯಿಲೆಯಿಂದ ನರಳಿದ. ಸ್ವಭಾವತಃ ಒರಟನೂ ನಿಷ್ಠುರನೂ ಆಗಿದ್ದ ಐವಾನ್ ಕ್ರಮೇಣ ಪ್ರಜಾಪೀಡಕನೂ ಆದ. ಬಲಿಷ್ಠಸಾಮಂತರು ತನಗೆ ವಿರೋಧವಾಗಿ ಒಳಸಂಚು ನಡೆಸುತ್ತಿರುವರೆಂಬ ಕಲ್ಪನೆಯನ್ನು ಬೆಳೆಸಿಕೊಂಡು, ಅವರ ಪ್ರಾಬಲ್ಯ ಮುರಿಯುವುದಕ್ಕೆಂದು ನೇರವಾಗಿ ತನ್ನ ಅಧೀನಕ್ಕೊಳಪಟ್ಟ ಸೈನ್ಯವೊಂದನ್ನು ನಿರ್ಮಿಸಿದ. ಅನೇಕ ಸಾಮಂತರೂ ಶ್ರೀಮಂತರೂ ಮರಣದಂಡನೆಗೊಳಗಾದರು ; ಕೆಲವರನ್ನು ಸೈಬೀರಿಯಕ್ಕೆ ಗಡಿಪಾರು ಮಾಡಲಾಯಿತು. ಪಿತೂರಿ ನಡೆಯುತ್ತಿದೆಯೆಂಬ ಸಂದೇಹದಿಂದ 1580ರಲ್ಲಿ ನೊಫ್‌ಗೊರೊಟ್ ನಗರವನ್ನೇ ಹಾಳುಗೆಡವಿದ. ಅದೇ ವರ್ಷ ಈತನ ಜ್ಯೇಷ್ಠಪುತ್ರನೇ ಮರಣದಂಡನೆಗೆ ಗುರಿಯಾದ. ಒಂದೊಂದು ಸಲ ರೋಷಾವೇಶದಿಂದ ಅಮಾನುಷ ಪ್ರಜಾಪೀಡನೆ ; ಆವೇಶ ಇಳಿದಾಗ, ಅಷ್ಟೇ ಉದ್ವೇಗದ ಪಶ್ಚಾತ್ತಾಪ, ಕೊರಗು, ದೇವರಲ್ಲಿ ಕ್ಷಮಾಯಾಚನೆ—ಇದು ಈತನ ಬಾಳಾಯಿತು. ಆದರೂ ಇವನ ಕಾಲದಲ್ಲಿ ಸಣ್ಣದಾಗಿದ್ದ ಮಾಸ್ಕೊ ರಾಜ್ಯ ವಿಸ್ತರಿಸಿ ರಷ್ಯನ್ ಸಾಮ್ರಾಜ್ಯವಾಯಿತು.

(ಬಿ.ಎಸ್.; ಎ.ಎಂ.)

**ಐವಾನ್** V : 1666–1696. ಐವಾನ್ ಅಲೆಕ್ಸಿವಿಚ್ ರಷ್ಯದ ಜ಼ಾರ್ ದೊರೆ. ಈತ ದೊರೆ ಆಲೆಕ್ಸಿಯ ಮೊದಲ ಹೆಂಡತಿಯ ಕಿರಿಮಗ. ಈತ ನಿರಂತರ ರೋಗಿ. ದೇಹದಾರ್ಢ್ಯವಿಲ್ಲದ ಬುದ್ಧಿಹೀನ ; ರಕ್ತರೋಗಪೀಡಿತ ; ಜೊತೆಗೆ ಇವನಿಗೆ ದೃಷ್ಟಿಮಾಂದ್ಯ ಬೇರೆ. ಈತ ತನ್ನ ಕೊನೆಯ ದಿನಗಳಲ್ಲಿ ಪಾರ್ಶ್ವವಾಯು ಪೀಡಿತನಾಗಿ ನರಳಿದ. ರಾಜ್ಯದ ಯಾವ ಕಾರ್ಯಭಾರದಲ್ಲೂ ಈತ ಭಾಗವಹಿಸಲಿಲ್ಲ. ದುರಾಶಾಪೀಡಿತೆ ಕುಟಿಲೆ ಅಕ್ಕ ಸೋಫಿಯಳ ಕೈಗೊಂಬೆಯಾಗಿಯೇ ಈತ ಆಯುಷ್ಯವನ್ನೆಲ್ಲ ಕಳೆದ.

**ಐವಾನ್** VI : 1740–1764. ರಷ್ಯದ ಚಕ್ರವರ್ತಿ. ಐವಾನ್ ಆಂಟೊನೊವಿಚ್. ತಂದೆ ಬರ್ನ್ಸ್‌ವಿಕ್‌ನ ಆಂಟೊನ್ ಉದ್ರಿಚ್. ರಷ್ಯದ ಚಕ್ರವರ್ತಿನಿ ಅನ್ನಾ ಐವಾನೊನಾ ಈ ಮಗುವನ್ನು ತನ್ನ ಉತ್ತರಾಧಿಕಾರಿಯೆಂದು ಘೋಷಿಸಿದ ಮಾರನೆಯ ದಿನವೇ ಮೃತಳಾದಳು. ಈ ಮಗುವನ್ನು ಚಕ್ರವರ್ತಿಯೆಂದು ಘೋಷಿಸಿ, ಚಕ್ರವರ್ತಿಯ ರೀಜಂಟಾಗಿ ಮೂರು ವಾರಗಳ ಕಾಲ ರಾಜ್ಯಭಾರ ಮಾಡಿದವನು ಕಾರ್‌ಲೆಂಡಿನ ಡ್ಯೂಕ್. ಅನಂತರ ದೇಶದಲ್ಲಿ ಕ್ಷಿಪ್ರಕ್ರಾಂತಿ ನಡೆದು ಜ಼ಾರೆನ್ನಾ ಎಲಿಜ಼ಬೆತಳನ್ನು ಸಿಂಹಾಸನದಲ್ಲಿ ಕೂರಿಸಿ ಐವಾನ್ ಮತ್ತು ಆತನ ಸಂಬಂಧಿಕರನ್ನು ಸೆರೆಯಲ್ಲಿಡಲಾಯಿತು. 20 ವರ್ಷಗಳ ಕಾಲ ಜೈಲಿನಲ್ಲಿ ಯಾರಿಗೂ ತನ್ನ ಗುರುತು ಸಿಗದಂತೆ ಬಾಳಿದ ಐವಾನ್ ಅರೆಹುಚ್ಚನಾದ. ಕೊನೆಗೆ ಐವಾನನನ್ನು ಗುರುತು ಹಚ್ಚಿ ಬಿಡುಗಡೆಗೆ ಪ್ರಯತ್ನ ನಡೆಯುತ್ತಿದ್ದಾಗ ಜೈಲಿನ ಅಧಿಕಾರಿಗಳೇ ಐವಾನನನ್ನು ಕೊಲೆ ಮಾಡಿದರು. *

**ಐವಿ :** ಈ ಹೆಸರಿನ ಅನೇಕ ಜಾತಿಯ ಗಿಡಗಳಿವೆ. ಇವುಗಳಲ್ಲಿ ಮುಖ್ಯವಾದುವು ಎರಡು. ಅವು ಇಂಗ್ಲಿಷ್ ಅಥವಾ ಯೂರೋಪಿಯನ್ ಐವಿ ಮತ್ತು ವಿಷ ಐವಿ.

ಇಂಗ್ಲಿಷ್ ಐವಿ ಎಂಬುದು ಹೆಡೆರ ಹೆಲಿಕ್ಸ್ ಎಂಬ ಶಾಸ್ತ್ರೀಯ ಹೆಸರುಳ್ಳ ಏರಾಲಿಯೇಸಿ ಕುಟುಂಬಕ್ಕೆ ಸೇರಿದ ಬಳ್ಳಿ. ಇದೇ ಹೆಡೆರ ಜಾತಿಗೆ ಸೇರಿದ ಇನ್ನೂ ಹಲವಾರು ಪ್ರಭೇದಗಳೂ ಇವೆ. ಅಲ್ಲದೆ ಹೆಡರ ಹೆಲಿಕ್ಸ್ ಪ್ರಭೇದದಲ್ಲಿಯೇ ಅನೇಕ ವಿಧಗಳೂ ಇವೆ. ಇದು ಸಾಮಾನ್ಯವಾಗಿ ಯೂರೋಪ್, ಉತ್ತರ ಆಫ್ರಿಕ, ರಷ್ಯ, ಜಪಾನ್ ಮತ್ತು ಅಮೆರಿಕಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತದೆ. ಅಲ್ಲದೆ ಇದನ್ನು ತೋಟಗಳಲ್ಲಿ, ಉದ್ಯಾನಗಳಲ್ಲಿ ಅಂದಕ್ಕಾಗಿ ಬೆಳೆಸುತ್ತಾರೆ. ನಮ್ಮ ದೇಶದಲ್ಲಿ ಹಿಮಾಲಯದಲ್ಲಿ ಹಾಗೂ ಅಸ್ಸಾಂಗಳಲ್ಲಿ ಬೆಳೆಯುತ್ತದೆ.

ಸುಂದರವಾದ, ಯಾವಾಗಲೂ ಹಸಿರಾದ ವಿವಿಧ ಆಕಾರಗಳ ಎಲೆಗಳುಳ್ಳ ಬಳ್ಳಿ ಇದು. ಬೇರೆ ಗಿಡಮರಗಳು, ಕಲ್ಲುಬಂಡೆಗಳು, ಗೋಡೆಗಳು ಇತ್ಯಾದಿ ಆಸರೆಗಳನ್ನು ತನ್ನ ಅಡರು ಬೇರುಗಳ ಸಹಾಯದಿಂದ ಹತ್ತಿಕೊಂಡು ಬೆಳೆಯುತ್ತದೆ. ತನ್ನ ಬೆಳೆವಣಿಗೆಯಲ್ಲಿ ಎರಡು ಅವಸ್ಥೆಗಳನ್ನು ತೋರಿಸುತ್ತದೆ. ಬೆಳೆವಣಿಗೆಯ ಪ್ರಥಮ ಹಂತದಲ್ಲಿ ಆಸರೆಯನ್ನು ಹಬ್ಬಿಕೊಂಡು ಮೇಲ್ಮುಖವಾಗಿ ಬೆಳೆಯುತ್ತದೆ. ಆಗ ಬಿಡುವ ಎಲೆಗಳಲ್ಲಿ 3–5 ಪತ್ರಪಾಲಿಗಳು (ಲೋಬ್ಸ್) ಇರುತ್ತವೆ. ಇದೇ ಹಂತದಲ್ಲಿ ವಿಪುಲವಾಗಿ ಅಡರು ಬೇರುಗಳು ಹೊರಟು ಗಿಡ ಆಸರೆಯನ್ನು ಹತ್ತಲು ಸಹಾಯಕವಾಗುತ್ತವೆ. ಬಳ್ಳಿ ಆಶ್ರಯದ ಮೇಲ್ತುದಿಯನ್ನು ತಲಪಿದ ಮೇಲೆ ಬೆಳೆವಣಿಗೆಯ ಎರಡನೆಯ ಅವಸ್ಥೆ ಕಾಣಬರುತ್ತದೆ. ಆಗ ಹೊರಡುವ ಕವಲುಗಳು ನೇರವಾಗಿ ಮೇಲಕ್ಕೆ ಬೆಳೆಯದೆ ಅಡ್ಡವಾಗಿ ಬೆಳೆಯತೊಡಗುತ್ತವೆ. ಎಲೆಗಳು ಕಿರಿದು ; ಪತ್ರಪಾಲಿಗಳಿರುವುದಿಲ್ಲ. ಇದೇ ಅವಸ್ಥೆಯಲ್ಲಿಯೇ ಗಿಡ ಹೂ ಬಿಡಲು ಪ್ರಾರಂಭಿಸುತ್ತದೆ. ಹೂಗಳ ಬಣ್ಣ ಕೊಂಚ ಹಸಿರು. ಅವು ಅಂಬೆಲ್ ರೀತಿಯ ಹೂಗೊಂಚಲುಗಳಲ್ಲಿ ಇರುತ್ತವೆ. ಹಣ್ಣಿನ ಬಣ್ಣ ಕಪ್ಪು, ಹಳದಿ ಅಥವಾ ಕೆಂಪು.

ಐವಿ ಎಂಥ ಭೂಮಿಯಲ್ಲಾದರೂ ಬೆಳೆಯುತ್ತದೆ. ಅಲ್ಲದೆ ಇದಕ್ಕೆ ಬೆಳಕಿನ ಆವಶ್ಯಕತೆ ಹೆಚ್ಚಾಗಿಲ್ಲ. ಇದರ ಸುಂದರವಾದ ಎಲೆಗಳಿಗೋಸ್ಕರ ತೋಟಗಳಲ್ಲಿ, ಉದ್ಯಾನಗಳಲ್ಲಿ ತುಂಡುಗಳ ಮುಖಾಂತರ ಅಥವಾ ಬೀಜಗಳ ಮುಖಾಂತರ ಬೆಳೆಸುತ್ತಾರೆ.

ಒಂದು ಕಾಲದಲ್ಲಿ ಇದರ ಎಲೆ ಮತ್ತು ಕಾಯಿಗಳನ್ನು ಹಲವು ರೋಗಗಳ ನಿವಾರಣೆಗೆ ಬಹಳವಾಗಿ ಬಳಸುತ್ತಿದ್ದರು. ಆದರೆ ಈಚೆಗೆ ಇದರ ಬಳಕೆ ಕಡಿಮೆಯಾಗಿದೆ. ಎಲೆ ಮತ್ತು ಕಾಯಿಗಳು ಉತ್ತೇಜಕ, ಸ್ವೇದಕಾರಿ ಮತ್ತು ವಿರೇಚಕಗಳೆಂದು ಹೇಳುತ್ತಾರೆ. ಎಲೆ, ಬೀಜ ಮತ್ತು ಕಾಯಿಗಳಲ್ಲಿ ಆಲ್ಫ–ಹೆಡರಿನ್ ಎಂಬ ವಿಶೇಷ ವಸ್ತುವಿದೆ. ಇದರ ಸೇವನೆ ದೇಹದ ಮೇಲೆ ತೀವ್ರ ಪರಿಣಾಮಗಳನ್ನು ಉಂಟುಮಾಡುತ್ತದೆ. ಅನ್ನನಾಳವನ್ನು ಉದ್ರೇಕಗೊಳಿಸುವುದಲ್ಲದೆ, ರಕ್ತನಾಳಗಳನ್ನು ಸಂಕುಚಿತಗೊಳಿಸುತ್ತದೆ. ರಕ್ತದ ಒತ್ತಡ ಮತ್ತು ಹೃದಯದ ಬಡಿತದ ಗತಿಯನ್ನು ಕ್ಷೀಣಗೊಳಿಸುವುದರ ಮೂಲಕ ಉಸಿರಾಟಕ್ಕೆ ತೊಂದರೆಯನ್ನು ಉಂಟುಮಾಡಿ ಸಾವನ್ನು ತರಬಲ್ಲುದು. ಅಲ್ಲದೆ ಎಲೆಗಳನ್ನು ತಿಂದರೆ ಚರ್ಮದ ಊತವೂ

ಬರಬಹುದೆನ್ನುತ್ತಾರೆ. ಆದರೂ ಇದರ ಎಲೆಗಳ ಕಷಾಯವನ್ನು ಹೇನುಗಳನ್ನು ನಿವಾರಿಸಲು ಕೂದಲಿಗೆ ಹಚ್ಚುತ್ತಾರೆ. ಕಾಯಿಗಳಿಂದ ತಯಾರಿಸಿದ ಕಷಾಯವನ್ನು ಸಂಧಿವಾತರೋಗದ ನಿವಾರಣೆಯಲ್ಲಿ ಉಪಯೋಗಿಸುತ್ತಾರೆ.

ಇನ್ನೊಂದು ಬಗೆಯ ಐವಿ ಗಿಡವಾದ ವಿಷ ಐವಿಯೆಂಬುದು ಅನಕಾರ್ಡಿಯೇಸಿ ಕುಟುಂಬಕ್ಕೆ ಸೇರಿದ ರ್‍ಹಸ್ ಟಾಕ್ಸಿಕೊಡೆಂಡ್ರಾನ್ ಅಥವಾ ಟಾಕ್ಸಿಕೊಡೆಡ್ರಾನ್ ರಾಡಿಕನ್ಸ್ ಎನ್ನುವ ಪ್ರಭೇದ. ಮೂಲತಃ ಉತ್ತರ ಅಮೆರಿಕದ ನಿವಾಸಿಯಾದ ಇದೂ ಕೂಡ ಇಂಗ್ಲಿಷ್ ಐವಿಯಂತೆ ಬಳ್ಳಿ. ಇದರಲ್ಲಿಯೂ ಹಲವಾರು ಬಗೆಗಳಿದ್ದು ಕೆಲವು ಬಳ್ಳಿಯಂತೆಯೂ ಕೆಲವು ಪೊದೆಯಂತೆಯೂ ಮತ್ತೆ ಕೆಲವು ಸಣ್ಣ ಮರಗಳಾಗಿಯೂ ಬೆಳೆಯುತ್ತವೆ. ಸಾಮಾನ್ಯವಾಗಿ ಬಳ್ಳಿಯಂತೆ ಬೆಳೆಯುವ ಈ ಗಿಡದಲ್ಲಿಯೂ ಅವರು ಬೇರುಗಳಿದ್ದು ಗಿಡ ಆಶ್ರಯವನ್ನು ಹತ್ತಿ ಬೆಳೆಯಲು ಸಹಾಯ ಮಾಡುತ್ತವೆ. ಇದರ ಎಲೆಗಳು ಸಂಯುಕ್ತ ಎಲೆಗಳಾಗಿದ್ದು ಒಂದೊಂದ ರಲ್ಲೂ ಮೂರು ಉಪಪತ್ರಗಳಿರುತ್ತವೆ. ಇದರ ಹೂಗಳೂ ಹಸಿರು. ಕಾಯಿಗಳ ಬಣ್ಣ ಮಾತ್ರ ಬಿಳಿ.

ಇವರ ಎಲ್ಲ ಪ್ರಭೇದಗಳೂ ವಿಷಪೂರಿತ. ಗಿಡವನ್ನಾಗಲಿ, ಎಲೆಗಳನ್ನಾಗಲಿ ಮುಟ್ಟಿದರೆ ತೀವ್ರವಾದ ಚರ್ಮದ ಊತ ಉಂಟಾಗುತ್ತದೆ. ಎಲೆ, ಹೂ, ಹಣ್ಣು, ತೊಗಟೆ ಮತ್ತು ಬೇರುಗಳಲ್ಲಿ ಅಂಟಿನಂಥ ಯೂರೊಷಿಯೊಲ್ ಎಂಬ ದ್ರವವಿರುತ್ತದೆ. ಚರ್ಮದ ಊತಕ್ಕೆ ಇದೇ ಪ್ರಮುಖ ಕಾರಣವೆಂದು ಕಂಡು ಬಂದಿದೆ. ಈ ವಸ್ತು ಬೇಗ ಒಣಗದೆ ಇರುವುದರಿಂದ ಇದರ ಮಾರಕಗುಣ ವರ್ಷಾನುಗಟ್ಟಲೆ ಕಡಿಮೆಯಾಗದಂತೆ ಇರುತ್ತದೆ. ಅಲ್ಲದೆ ಈ ವಸ್ತು ಬಟ್ಟೆ, ಪಾದರಕ್ಷೆ, ಉಪಕರಣಗಳಿಗೆ ಅಂಟಿಕೊಂಡಿದ್ದರೆ, ಅವುಗಳ ಸಂಪರ್ಕಕ್ಕೆ ಬಂದ ಯಾರಲ್ಲಾದರೂ ಚರ್ಮದ ಊತವನ್ನುಂಟುಮಾಡಬಹುದು. (ಕೆ.ಬಿ.ಎಸ್.)

**ಐಶ್ವರ್ಯ:** ಈಶ್ವರಧರ್ಮ. ಪ್ರಭುತ್ವ ಹಾಗೂ ಅತಿಮಾನುಷ ಶಕ್ತಿ ಸಂಪತ್ತುಗಳು. ಅಣಿಮಾ, ಲಘಿಮಾ, ಮಹಿಮಾ, ಪ್ರಾಪ್ತಿ, ಪ್ರಾಕಾಮ್ಯ, ವಶಿತ್ವ, ಈಶಿತ್ವ, ಕಾಮಾವಸಾಯಿತ್ವ ಎಂದು ಎಂಟು ಬಗೆಗಳಿವೆ; ಇವನ್ನು ಅಷ್ಟಸಿದ್ಧಿಗಳೆಂದು ಕರೆದಿದ್ದಾರೆ. ಅಂದರೆ ಅಣುವಿನಷ್ಟು ಸಣ್ಣದಾಗುವ ಶಕ್ತಿಯಿಂದ ಹಿಡಿದು ಇಚ್ಛೆಗಳೇ ಇಲ್ಲದ ಸ್ಥಿತಿಯನ್ನುಂಟುಮಾಡಿಕೊಳ್ಳುವವರೆಗೂ ಬೇಕಾಗಿರುವ ವಿವಿಧ ಶಕ್ತಿಗಳು; ಮಧ್ಯದಲ್ಲಿ ಕ್ರಮವಾಗಿ ಅತಿಲಘುವಾಗುವಿಕೆ, ಪರಿಮಾಣವನ್ನು ಹೆಚ್ಚಿಸಿಕೊಳ್ಳುವಿಕೆ, ಸರ್ವಾಭೀಷ್ಟಗಳ ಈಡೇರಿಕೆ, ಮನಸ್ಸಿನ ಸ್ವಾತಂತ್ರ್ಯ ಎಲ್ಲವನ್ನೂ ತನ್ನ ಇಚ್ಛೆಗೆ ಅಧೀನಪಡಿಸಿಕೊಳ್ಳುವುದು, ಪ್ರಭುತ್ವ—ಇವು ಸೇರಿವೆ. ಅಣಿಮಾದಿ ಶಕ್ತಿಗಳನ್ನು ಕೊಡುವ ಬುದ್ಧಿಧರ್ಮವೆಂದು ಕೆಲವರ ಅಭಿಪ್ರಾಯ.

ನೋಡಿ—ಅಷ್ಟಸಿದ್ಧಿಗಳು

(ಬಿ.ಕೆ.ಎಸ್.)

**ಐಸೆನ್‌ಸ್ಟೀನ್, ಸಿರ್ಗೀ ಮಿಕೈಲೊವಿಚ್:** 1898–1948. ರಷ್ಯದ ಪ್ರಖ್ಯಾತ ಚಲನಚಿತ್ರ ನಿರ್ದೇಶಕ; ಚಲನಚಿತ್ರ ತಂತ್ರನಿಪುಣ. ತಂದೆ ಶ್ರೀಮಂತ; ಹಡಗು ನಿರ್ಮಾಪಕ. ಐಸೆನ್‌ಸ್ಟೀನ್ ಸೇಂಟ್ ಪೀಟರ್ಸ್‌ಬರ್ಗಿನಲ್ಲಿ ಎಂಜಿನಿಯರಿಂಗ್ ಶಿಕ್ಷಣ ಪಡೆಯುತ್ತಿದ್ದಾಗ ತನ್ನ ಸ್ನೇಹಿತರನೇಕರು ಕೆಂಪು ಸೇನೆಗೆ ಸೇರುತ್ತಿದ್ದುದನ್ನು ಕಂಡು ತಾನೂ ಅದಕ್ಕೆ ಸೇರಿ ಕ್ರಾಂತಿಯಲ್ಲಿ ಭಾಗವಹಿಸಿದ. ಕ್ರಾಂತಿ ಮುಗಿದಮೇಲೆ ಈತನ ಒಲವು ನಾಟಕ ಕಲೆಯತ್ತ ಹರಿಯಿತು. ಆಗ (1920) ಈತ ಅದರಲ್ಲಿ ದೃಶ್ಯಚಿತ್ರಕಾರನಾಗಿ ಸೇರಿ ಕೆಲಕಾಲ ಕೆಲಸ ಮಾಡಿದ. ಟ್ರೆಟ್ಯೆಕೋಫ್ ವಿರಚಿತ ಗ್ಯಾಸ್ ಮಾಸ್ಕ್ ನಾಟಕವನ್ನು ರಂಗಭೂಮಿಯ ಮೇಲೆ ತಂದಾಗ ಈತನಿಗೆ ಆ ಕ್ಷೇತ್ರದ ಇತಿಮಿತಿಗಳು ಗೋಚರವಾದುವು.

ಐಸೆನ್‌ಸ್ಟೀನ್ ಚಲನಚಿತ್ರ ಜಗತ್ತನ್ನು ಪ್ರವೇಶಿಸಿ ಸ್ಟ್ರೈಕ್ ಚಿತ್ರ ದಿಗ್ದರ್ಶಿಸಿದ. 1905ರಲ್ಲಿ ನಡೆದ ದಂಗೆಯೊಂದರ ಆಧಾರದ ಮೇಲೆ ರಚಿತವಾದ ಬ್ಯಾಟಲ್‌ಷಿಪ್ ಪೊಟೆಮ್‌ಕಿನ್ ಚಿತ್ರ ಹೊರತಂದಾಗ ಈತನಿಗೆ 26 ವರ್ಷ. ಜೀವನದ ವಾಸ್ತವ ಚಿತ್ರಣವೆಂದು ಇದು ವಿಶ್ವವಿಖ್ಯಾತಿ ಪಡೆಯಿತು. ಅನಂತರ ಬಂದ ಟೆನ್ ಡೇಸ್ ದಟ್ ಷುಕ್ ದಿ ವರ್ಲ್ಡ್ ಮತ್ತು ದಿ ಓಲ್ಡ್ ಅಂಡ್ ದಿ ನ್ಯೂ ಚಿತ್ರಗಳೂ ಅವನ ಗೌರವ ಹೆಚ್ಚಿಸಿದುವು. ಅಮೆರಿಕದ ಪ್ಯಾರಾಮೌಂಟ್ ಸಂಸ್ಥೆಯ ಆಹ್ವಾನದ ಮೇಲೆ ಹಾಲಿವುಡ್ಡಿಗೆ ಬಂದ. ಅಲ್ಲಿ ಈತ ಸೃಷ್ಟಿಸಿದ ಚಿತ್ರಗಳಿಗೆ ಅಮೆರಿಕದಲ್ಲಿ ಮನ್ನಣೆ ದೊರಕಲಿಲ್ಲ. ಮೆಕ್ಸಿಕೋವಿನಲ್ಲಿ 14 ತಿಂಗಳು ಕಳೆದ ಅನಂತರ ಐಸೆನ್‌ಸ್ಟೀನ್ ಸೋವಿಯತ್ ಸರ್ಕಾರದ ಆದೇಶದ ಮೇಲೆ ರಷ್ಯಕ್ಕೆ ವಾಪಸಾದ. ಅಲ್ಲಿ ಇವನು ದಿಗ್ದರ್ಶಿಸಿದ್ದ ಅಲೆಕ್ಸಾಂಡರ್ ನೆವೆಸ್ಕಿ (1938) ಚಿತ್ರಕ್ಕೆ ಲೆನಿನ್ ಪ್ರಶಸ್ತಿ ದೊರಕಿತು. 16ನೆಯ ಶತಮಾನದಲ್ಲಿದ್ದ ರಷ್ಯದ ಚಕ್ರವರ್ತಿಯಾಗಿದ್ದ ನಾಲ್ಕನೆಯ ಜ಼ಾರನ ಜೀವನ ಕಥೆಯೇ ಇವನ ಮುಂದಿನ ಚಿತ್ರವಾದ ಐವಾನ್ ದಿ ಟೆರಿಬಲ್‌ನ ವಸ್ತು. ಮೂರು ಭಾಗಗಳಲ್ಲಿ ಹಬ್ಬಿದ ಈ ಚಿತ್ರ ಸೋವಿಯತ್ ಕಮ್ಯೂನಿಸಂ ತತ್ತ್ವಕ್ಕೆ ವಿರುದ್ಧವಾದ್ದೆಂದು ಅಲ್ಲಿನ ಸರ್ಕಾರ ಇದರ 2ನೆಯ ಭಾಗದ ಮೇಲೆ ಹಾಕಿದ ನಿಷೇಧ 1958ರ ವರೆಗೂ ಮುಂದುವರಿಯಿತು.

ಐಸೆನ್‌ಸ್ಟೀನ್ 1948ರಲ್ಲಿ ಮಾಸ್ಕೋವಿನಲ್ಲಿ ನಿಧನನಾದ.

ಕ್ಲಿಷ್ಟವೂ ಸಂಕೀರ್ಣವೂ ಆದ ಜೀವನ ವ್ಯಾಪಾರಗಳನ್ನು ವಾಸ್ತವತೆಯ ಕಣ್ಣಿಂದ ಕಂಡು ಅವುಗಳನ್ನು ನಿರೂಪಿಸಲು ಪ್ರತಿಮಾ ವಿಧಾನವನ್ನಳವಡಿಸಿದ ಪ್ರಪ್ರಥಮನೆಂದು ಐಸೆನ್‌ಸ್ಟೀನ್ ಖ್ಯಾತನಾಗಿದ್ದಾನೆ. *

**ಐಸಾಕ್ರಟೀಸ್:** ಕ್ರಿ. ಪೂ. 436–338. ಆಟಿಕ ದೇಶದ ವಾಗ್ಮಿ. ಗ್ರೀಸಿನ ಅಧೀನ ನಗರರಾಜ್ಯವೊಂದರ ಪೌರ ತಿಯೊಡೊರಸನ ಮಗ. ಜನನ ಅಥೆನ್ಸ್‌ನಲ್ಲಿ. ಪ್ರಾಡಿಗಸ್, ಸಾಕ್ರಟೀಸರೊಂದಿಗೂ ಅನಂತರ ಥೆಸಲಿಯಲ್ಲಿ ಗೋರ್ಜಿಯಸನೊಂದಿಗೂ ವಿದ್ಯಾಭ್ಯಾಸ ಮಾಡಿದ. ಪೆಲೊಪೊನೀಸಿಯನ್ ಯುದ್ಧದ ಪರಿಣಾಮವಾಗಿ ಬಡತನ ಬಂದಾಗ ನ್ಯಾಯಾಲಯದ ಬಳಿ ಕುಳಿತು ಅರ್ಜಿ ಬರೆದು ಹಣ ಗಳಿಸಿದ. ಕೊನೆಗೆ 393ರಲ್ಲಿ ಭಾಷಣ ವಿದ್ಯೆಯನ್ನು ಕಲಿಯಲು ಶಾಲೆಯೊಂದನ್ನು ತೆರೆದ. ಈತನ ಕ್ರಮ ಅಂದಿನ ಭಾಷಣತಂತ್ರವನ್ನು ಸಾಕಷ್ಟು ತಿದ್ದಿತು. ಸನ್ನಿವೇಶವನ್ನು ಕಲ್ಪಿಸಿಕೊಂಡು ಅದಕ್ಕೆ ಹೊಂದುವಂಥ ಭಾಷಣವನ್ನು ಬರೆಯೋದಬೇಕೆಂದು ಇವನ ಅಭಿಪ್ರಾಯ. ಭಾಷಣದಲ್ಲಿ ವ್ಯಾಕರಣಶುದ್ಧವಾದ ಮತ್ತು ಖಚಿತಾರ್ಥವನ್ನುಳ್ಳ ಪದಗಳನ್ನೇ ಬಳಸಬೇಕು. ಅಲಂಕಾರಗಳು ಇರಬಾರದು. ಅದು ಚರಿತ್ರೆ ಮತ್ತು ತತ್ತ್ವಶಾಸ್ತ್ರದಿಂದ ವಿಪುಲ ಉದಾಹರಣೆಗಳನ್ನೊಳಗೊಂಡಿರಬೇಕು. ಇದೇ ಸರಿಯಾದ ಭಾಷಣ—ಎಂದು ಆತನ ಅಭಿಮತ. ಪೂರ್ಣವಿರಾಮವನ್ನು ಈತ ಯುಕ್ತವಾಗಿ ಬಳಸಿದ. ಸಿಸರೋನ ಮೂಲಕ ಉಳಿದು ಬಂದಿರುವ ಈತನ ಭಾಷಣಗಳು ಇಂದಿಗೂ ಕಲಾಮಯವಾಗಿವೆ. ಇವನದು ಸೋಫಿಸ್ಟ್ ತತ್ತ್ವಕ್ಕೆ ವಿರುದ್ಧವಾದುದು. ಇವನ ಶಾಲೆಯಲ್ಲಿ ಭಾಷಣ ಕಲೆಯೊಂದಿಗೆ ತತ್ತ್ವಶಾಸ್ತ್ರ ಬೋಧನೆಯೂ ನಡೆಯುತ್ತಿತ್ತಲ್ಲದೆ ಸಾಂಪ್ರದಾಯಿಕ ಶಿಸ್ತು ಮತ್ತು ನಡೆವಳಿಕೆಗೆ ಪ್ರಾಧಾನ್ಯವಿತ್ತು. ಈತ ಪ್ಲೇಟೊವನ್ನು ಸಾಮಾನ್ಯವಾಗಿ ಒಪ್ಪಿದ್ದನಾದರೂ ಆತನ ಆಧಾರರಹಿತ ಊಹೆಗಳನ್ನೂ ಭೌತಾತೀತ ನೀತಿತತ್ತ್ವಗಳನ್ನೂ ಖಂಡಿಸುತ್ತಿದ್ದ.

ಇವನ ಕಾಲದಲ್ಲಿ ಗ್ರೀಸಿನ ನಗರರಾಜ್ಯಗಳಲ್ಲಿ ಒಗ್ಗಟ್ಟಿಲ್ಲದೆ ಅಂತಃಕಲಹಗಳಾಗುತ್ತಿದ್ದುವು. ಪರ್ಷಿಯನರು ಗ್ರೀಸಿನ ಮೇಲೆ ದಾಳಿ ನಡೆಸಲಾರಂಭಿಸಿದ್ದರು. ಆಗ ಈತ ಗ್ರೀಸಿನ ಸಂಘಟನೆಗಾಗಿ ಅನೇಕ ಭಾಷಣಗಳನ್ನು ಕೊಟ್ಟ. ಅವು ಉದ್ರೇಕಪೂರ್ಣವಾಗಿದ್ದಂತೆ ವಿದ್ವತ್ಪೂರ್ಣವೂ ಆಗಿದ್ದುವು. ತನ್ನ ವಾಕ್ಚಾತುರ್ಯದಿಂದ ಗ್ರೀಕರನ್ನು ಒಗ್ಗಟ್ಟಾಗಲು ಹೀಗೆ ಈತ ಹುರಿದುಂಬಿಸಿದ. ಪ್ಯಾನೆಗಿರಿಕಸ್ (380) ಎಂಬ ತನ್ನ ಭಾಷಣದಲ್ಲಿ ಪರ್ಷಿಯನರನ್ನು ಎದುರಿಸಲು ಸ್ಪಾರ್ಟ ಮತ್ತು ಅಥೆನ್ಸ್ ಒಟ್ಟುಗೂಡುವ ರಾಷ್ಟ್ರೀಯ ದೃಷ್ಟಿಯನ್ನು ಸೊಗಸಾಗಿ ವರ್ಣಿಸಿದ್ದಾನೆ. ಫಿಲಿಪ್ಪಸ್ ಲೇಖನದಲ್ಲಿ ಪರ್ಷಿಯನರ ವಿರುದ್ಧ ಯುದ್ಧದಲ್ಲಿ ಗ್ರೀಸಿನ ನಾಯಕತ್ವವನ್ನು ವಹಿಸಲು ಮ್ಯಾಸಿಡೋನಿಯದ ದೊರೆಗೆ ಕರೆ ಕೊಟ್ಟಿದ್ದಾನೆ. ಈತನ ಆನ್ ದಿ ಪೀಸ್ (335) ಮತ್ತು ಅರಿಯೊಪಜೆಟಿಕಸ್ ಎಂಬ ಎರಡು ಭಾಷಣಗಳು ಸಾಹಿತ್ಯದೃಷ್ಟಿಯಿಂದ ಅತಿ ಸೊಗಸಾಗಿವೆ. (ಎಸ್.ಕೆ.ಕೆ.)

**ಐಸಿಸ್:** ಈಜಿಪ್ಟ್ ದೇಶದ ಪುರಾಣ ಕಥೆಗಳಲ್ಲಿ ಬರುವ ಪ್ರಸಿದ್ಧ ದೇವತೆ. ಕ್ರಿ.ಪೂ. 1500ರ ಹಿಂದೆಯೇ ಈ ದೇವತೆಯ ಆರಾಧನೆ ರೂಢಿಯಲ್ಲಿತ್ತು.

ಪುರಾಣದ ಪ್ರಕಾರ ಈಕೆ ಗೆಬ್ ಮತ್ತು ನಟ್ ಎನ್ನುವವರ ಮಗಳು. ಈಕೆಗೆ ಒಬ್ಬಳು ಸಹೋದರಿ. ನೆಫ್ತಿಸ್ ಎಂದು ಆಕೆಯ ಹೆಸರು. ಹಾಗೆಯೇ ಒಸೈರಿಸ್ ಮತ್ತು ಸೆತ್ ಎನ್ನುವವರು ಸಹೋದರರು. ತನ್ನ ಸಹೋದರನಾದ ಒಸೈರಿಸ್‌ನನ್ನೇ ಮದುವೆ ಮಾಡಿಕೊಂಡು, ಆತನ ಮೂಲಕ ಹೋರಸ್ ಎನ್ನುವ ಮಗನನ್ನು ಪಡೆದವಳೆಂದು ಕಥೆ. ಅಣ್ಣ ತಮ್ಮಂದಿರ ಜಗಳದಲ್ಲಿ ಸೆತ್ ಎನ್ನುವವ ಐಸಿಸಳ ಗಂಡನಾದ ಒಸೈರಿಸನನ್ನು ಕೊಂದು ಆತನ ದೇಹವನ್ನು ತುಂಡು ತುಂಡು ಮಾಡಿ ಈಜಿಪ್ಟ್ ದೇಶದಾದ್ಯಂತ ಚೆಲ್ಲಿಸಿದನೆಂದು ಕಥೆ. ಐಸಿಸಳು ತನ್ನ ಗಂಡನ ಈ ದಾರುಣ ಅಂತ್ಯದಿಂದ ನೊಂದವಳಾಗಿ ಅವನ ದೇಹದ ಭಾಗಗಳನ್ನು ಹುಡುಕಿ ಅವನ್ನು ಒಟ್ಟಿಗೆ ಕೂಡಿಸಿ ಮಯಣವನ್ನು ಹಚ್ಚಿ ಪ್ರಾಣವನ್ನು ಬರಿಸುತ್ತಾಳೆ. ಇದು ಈಕೆಯ ಶಕ್ತಿಯ ನಿದರ್ಶನ ಎಂದು ಪುರಾಣ ಹೇಳುತ್ತದೆ. ಇದೇ ಸಂದರ್ಭದಲ್ಲೇ ಈಕೆ ತನ್ನ ಮಗನಾದ ಹೋರಸ್‌ನನ್ನು ಹೆತ್ತದ್ದು. ತನ್ನ ಸಹೋದರ ಸೆತ್‌ನ ಭಯದಿಂದಾಗಿ ಈಕೆ ಹೋರಸ್‌ನನ್ನು ನೈಲ್ ನದಿಯ ಅಂಚಿನಲ್ಲಿ ಬೆಳೆದ ಪೊದೆಗಳಲ್ಲೇ ಬಚ್ಚಿಟ್ಟು ಸಾಕುತ್ತಾಳೆ. ಹೋರಸ್ಸನು ದೊಡ್ಡವನಾಗಿ ಬಲಿಷ್ಠನಾದ ಮೇಲೆ ತನ್ನ ತಂದೆಯನ್ನು ಹತ್ಯ ಮಾಡಿದನಲ್ಲದೆ, ತನ್ನ ತಾಯಿಗೆ ಕಿರುಕುಳವನ್ನು ಕೊಟ್ಟ ಸೆತ್‌ನ ಮೇಲೆ ಕಾಳಗ ಮಾಡಿ ಅವನನ್ನು ಸೋಲಿಸಿ ಬಂಧಿಸಿ ತಾಯ ಹತ್ತಿರಕ್ಕೆ ತರುತ್ತಾನೆ. ಆದರೆ ಕರುಣಾಮಯಿಯಾದ ಆಕೆ ಸೆತ್‌ನನ್ನು ಕೊಲ್ಲಬಾರದೆಂದು ಹೇಳುತ್ತಾಳೆ. ಅದರಿಂದ ಕುಪಿತನಾದ ಹೋರಸ್

ತಲೆಗೆ ಬಲವಾದ ಪೆಟ್ಟನ್ನು ಕೊಡುತ್ತಾನೆ. (ಕೆಲವರು ಹೇಳುವಂತೆ ತಲೆಯನ್ನೇ ಕಡಿಯುತ್ತಾನೆ.) ಅವರೆ ಶಾಪಗ್ರಸ್ತನಾಗಿ ತನ್ನ ಕೈಗಳನ್ನು ಕಳೆದುಕೊಳ್ಳುತ್ತಾನೆ. ಐಸಿಸ್ ಕರುಣಾಮಯಿಯೆಂದೂ ಪ್ರೇಮಮಯಿಯೆಂದೂ ಅತೀವ ದೈವಿಕಶಕ್ತಿಯನ್ನು ಪಡೆದಿದ್ದವಳೆಂದೂ ಎಲ್ಲರ ಆರಾಧ್ಯದೇವತೆಯಾಗಿ ಪೂಜೆ ಪಡೆಯುತ್ತಾಳೆ. ಈಜಿಪ್ಟ್ ದೇಶದ ಧಾರ್ಮಿಕ ಇತಿಹಾಸದಲ್ಲಿ ಈಕೆಯ ಹೆಸರು ಬಹು ಪ್ರಮುಖವಾದುದು.

ಈಕೆಯ ಕೀರ್ತಿ ಈಜಿಪ್ಟ್ ದೇಶವನ್ನು ಮೀರಿ ನೆರೆಹೊರೆಯ ದೇಶಗಳಿಗೂ ಹಬ್ಬಿ ಯೂರೋಪನ್ನೆಲ್ಲ ಆವರಿಸಿದಂತೆ ಕಂಡುಬರುತ್ತದೆ. ಕ್ರಿ.ಪೂ. 333ರಲ್ಲಿ ಗ್ರೀಕ್ ದೇಶದ ಪಿರಾಸ್ ಎನ್ನುವಲ್ಲಿ ಈಕೆಗೆ ಒಂದು ದೇವಾಲಯ ನಿರ್ಮಿಸಿದ್ದುಂಟು. ಹಾಗೆಯೇ ಅಥೆನ್ಸ್ ನಗರದಲ್ಲೂ ಈಕೆಗೆ ಸ್ವಾಗತ ಸಿಕ್ಕಿತು. ಪಾಂಪೆಯ ದೊರೆ ಈಕೆಗೆ ಮೀಸಲಾದ ಒಂದು ದೇವಾಲಯ ನಿರ್ಮಿಸಿದನೆಂದು ಗೊತ್ತಾಗುತ್ತದೆ. ಕಾಲಕ್ರಮೇಣ ಈಕೆಯ ಆರಾಧನೆ ಸಿಸಿಲಿ, ಸಾರ್ಡೀನಿಯ, ಮೊರಾಕೊ, ಸ್ಪೇನ್, ಫ್ರಾನ್ಸ್, ಬ್ರಿಟನ್, ಜರ್ಮನಿ, ಡಾನ್ಯೂಬ್ ತೀರದ ದೇಶಗಳು—ಹೀಗೆ ಎಲ್ಲೆಡೆಯಲ್ಲೂ ಹಬ್ಬಿತು. ಈ ವೇಳೆಗೆ ಈ ದೇವತೆ ವಿಶ್ವಮಾತೃ ಎಂದಾಗಿ ಪರಿಗಣಿಸಲ್ಪಟ್ಟು, ಎಲ್ಲರನ್ನೂ ಪವಿತ್ರಗೊಳಿಸುವ, ಎಲ್ಲರಿಗೂ ಅಮೃತತ್ತ್ವವನ್ನು ನೀಡುವ ಮಹಾಮಾತೆಯೆಂದು ಪೂಜೆ ಪಡೆದಿದ್ದಳು.

ಈಜಿಪ್ಟ್ ದೇಶದ ಪುರಾಣಕಥೆಗಳನ್ನು ಬಿಟ್ಟರೆ ಈ ದೇವತೆಯ ಮಹತ್ತ್ವವನ್ನು ತಿಳಿಸುವ ಮೂಲಗಳಲ್ಲಿ ಮುಖ್ಯವಾದುದು ಪ್ಲೂಟಾರ್ಕ್ ಕವಿ ಬರೆದ ಡಿ ಐಸೈಡ್ ಎಟ್ ಓಸಿರೈಡ್ ಎನ್ನುವ ಗ್ರಂಥ. ಐಸಿಸ್ ದೇವತೆಯ ಕಲ್ಪನೆಯ ಆಧಾರದ ಮೇಲೆಯೇ ವರ್ಜಿನ್ ಮೇರಿ ಮತ್ತು ಮಡೋನ ಇವರ ಕಲ್ಪನೆಗಳೂ ಹುಟ್ಟಿರಬಹುದೆಂದು ಅನೇಕರ ಅಭಿಪ್ರಾಯ. (ಕೆ.ಬಿ.ಆರ್)

**ಐಸೆನ್‌ಹೌವರ್, ಡ್ವೈಟ್ ಡೇವಿಡ್ :** 1890–1969. ಅಮೆರಿಕನ್ ಜನರಲ್, ಅಮೆರಿಕ ಸಂಯುಕ್ತಸಂಸ್ಥಾನದ 33ನೆಯ ಅಧ್ಯಕ್ಷ.



ಐಸೆನ್‌ಹೌವರ್

ಐಸೆನ್‌ಹೌವರ್ ಜನ್ಮ ಟೆಕ್ಸಾಸ್ ರಾಜ್ಯದ ಡೆನಿಸನ್‌ನಲ್ಲಿ. ತಂದೆ ಡೇವಿಡ್ ಐಸೆನ್‌ಹೌವರ್. ಡ್ವೈಟ್ ಐಸೆನ್‌ಹೌವರ್ ಎರಡು ವರ್ಷಗಳ ಮಗುವಾಗಿದ್ದಾಗ ಈ ಸಂಸಾರ ಅಬಿಲೀನಿಗೆ ಬಂತು. ಡೇವಿಡ್ ಐಸೆನ್‌ಹೌವರನ ದೊಡ್ಡ ಸಂಸಾರಕ್ಕೆ ಆಗ ಸರ್ವದಾ ಬಡತನ. ಆರು ಮಂದಿ ಗಂಡುಮಕ್ಕಳೂ ತಂದೆಯೊಂದಿಗೆ ದುಡಿಯಬೇಕಾದ ಪರಿಸ್ಥಿತಿಯಿತ್ತು.

ತಂದೆತಾಯಿಯರ ಪ್ರೋತ್ಸಾಹದಿಂದ ಐಸೆನ್‌ಹೌವರ್ ವಿದ್ಯಾಭ್ಯಾಸ ನಡೆಯಿತು. 1915ರಲ್ಲಿ ವೆಸ್ಟ್‌ಪಾಯಿಂಟ್ ಮಿಲಿಟರಿ ಅಕೆಡಮಿಯಲ್ಲಿ ಪದವಿ ಸಂಪಾದಿಸಿ ಯೋಧನಾಗಿ ಜೀವನವನ್ನಾರಂಭಿಸಿದ ಐಸೆನ್‌ಹೌವರ್ ಒಂದನೆಯ ಮಹಾಯುದ್ಧ ಕಾಲದಲ್ಲಿ ಟ್ಯಾಂಕ್ ಯುದ್ಧತಂತ್ರದ ಬೋಧಕನಾಗಿ ಹೆಸರು ಗಳಿಸಿದನಾದರೂ ಯುದ್ಧರಂಗದಲ್ಲಿ ಹೋರಾಡಿದವರ ಸಾಹಸದ ಮುಂದೆ ಐಸೆನ್‌ಹೌವರ್ ಕೀರ್ತಿ ಅಷ್ಟಾಗಿ ಪ್ರಕಾಶಕ್ಕೆ ಬರಲಿಲ್ಲ. ಒಳ್ಳೆಯ ಮೈಕಟ್ಟಿದ್ದ ಐಸೆನ್‌ಹೌವರ್ ಎಲ್ಲ ಆಟಗಳಲ್ಲೂ ನಿಷ್ಣಾತನಾಗಿದ್ದ. ಸೇನೆಯ ಫುಟ್‌ಬಾಲ್ ತಂಡದಲ್ಲಿ ಈತನೂ ಇದ್ದ.

ಎರಡು ಮಹಾಯುದ್ಧಗಳ ನಡುವಣ ಕಾಲದಲ್ಲಿ ಐಸೆನ್‌ಹೌವರ್ ಅಮೆರಿಕನ್ ಮಹಾದಂಡನಾಯಕ ಮೆಕಾರ್ಥರನ ಸಿಬ್ಬಂದಿಯಲ್ಲೊಬ್ಬನಾಗಿದ್ದು ವಾಷಿಂಗ್ಟನ್ ಫಿಲಿಪೀನ್ಸ್‌ಗಳಲ್ಲಿ ದುಡಿದು ತನ್ನ ಮೇಲಧಿಕಾರಿಯ ಗಮನ ಸೆಳೆದನಾದರೂ ಮೂವತ್ತು ವರ್ಷ ಕಾಲವಾದ ಮೇಲೂ ಆತ ಲೆಫ್ಟಿನೆಂಟ್ ಕರ್ನಲ್ ದರ್ಜೆಯಿಂದ ಮೇಲೇರಿರಲಿಲ್ಲ. ಆಗ ಈತನ ವಯಸ್ಸು 50.

1941 ಬಂತು. ಆಗ ಇವನ ಶಕ್ತಿಪ್ರಕಾಶನಕ್ಕೆ ಅವಕಾಶ ದೊರಕಿತು. ಐಸೆನ್‌ಹೌವರ್ ಕರ್ನಲ್ ಆದ. ಅನಂತರ ಬ್ರಿಗೇಡಿಯರ್ ಜನರಲ್ ಪದ್ದವಿಯೂ ಬಂತು. ಪರ್ಲ್ ಹಾರ್ಬರಿನಲ್ಲಿ ಜಪಾನೀಯರು ಅಮೆರಿಕನ್ ಸೇನಾ ನೆಲೆಗಳ ಮೇಲೆ ದಾಳಿ ಮಾಡಿದಾಗ ಅಮೆರಿಕವೂ ಯುದ್ಧದಲ್ಲಿ ಧುಮುಕಿತು. ಐಸೆನ್‌ಹೌವರನ ಯೋಗ್ಯತೆಯನ್ನು ಅಮೆರಿಕನ್ ಸೇನೆಯ ಪ್ರಧಾನ ದಂಡನಾಯಕನಾಗಿದ್ದ ಜಾರ್ಜ್ ಮಾರ್ಷಲ್ ಗುರುತಿಸಿ ಅವನನ್ನು ಮೇಲೆತ್ತಿ ಯೂರೋಪಿನಲ್ಲಿದ್ದ ಅಮೆರಿಕನ್ ಸೇನೆಗಳ ನಾಯಕನಾಗಿ ನೇಮಿಸಿದ. ಮೊದಲು ಐರೋಪ್ಯ ಯುದ್ಧರಂಗಕ್ಕಿಳಿದು ನಾಜ಼ಿಗಳನ್ನು ಸೋಲಿಸಿ ಅನಂತರ ಪೆಸಿಫಿಕ್ ರಂಗದಲ್ಲಿ ಯುದ್ಧ ಜರುಗು ಮಾಡಬೇಕೆಂಬ ಅಂಶವನ್ನು ಐಸೆನ್‌ಹೌವರ್ ಮನಗಂಡಿದ್ದ. ಯೂರೋಪಿನ ಆಕ್ರಮಣಕ್ಕೆ ಹಂಚಿಕೆ ತಯಾರಿಸಿದ್ದ. ಇದರಿಂದ ಐಸೆನ್‌ಹೌವರ್ ಬಗ್ಗೆ ವಿಶ್ವಾಸ ವೃದ್ಧಿಯಾಯಿತು. ಐಸೆನ್‌ಹೌವರನ ಸ್ನೇಹಪರತೆ, ದೃಢಚಿತ್ತ ಇವು ಪ್ರಕಾಶಗೊಂಡದ್ದು ಆಗ. ಯುದ್ಧಮಿತ್ರರ ಐಕಮತ್ಯಕ್ಕಾಗಿ ಐಸೆನ್‌ಹೌವರ್ ದುಡಿದ. ಅಮೆರಿಕನ್ ಮತ್ತು ಬ್ರಿಟಿಷ್ ಸಂಯುಕ್ತ ಸೇನೆಗಳ ಅಧಿಪತಿಯಾಗಿ ಉತ್ತರ ಆಫ್ರಿಕದ ಆಕ್ರಮಣ ಕಾರ್ಯದಲ್ಲಿ ಈತ ತೋರಿದ ಎದೆಗಾರಿಕೆ ಹಾಗೂ ತಂತ್ರನೈಪುಣ್ಯ ಅಸಾಧಾರಣ. ತನ್ನ ಎರಡನೆಯ ಪ್ರಯತ್ನದಲ್ಲಿ ಶತ್ರುಗಳನ್ನು ಹಿಮ್ಮೆಟ್ಟಿಸಿ ಟ್ಯೂನಿಸಿನಿಂದ ಮುಂದುವರಿದು ಆರೇ ವಾರಗಳಲ್ಲಿ ಸಿಸಿಲಿಯನ್ನಾಕ್ರಮಿಸಿದ. ಮಿತ್ರಪಕ್ಷದ ಸೈನ್ಯಗಳ ದಂಡನಾಯಕನಾಗಿ ಒಮ್ಮತದಿಂದ ಚುನಾಯಿತನಾದ. 1944ರಲ್ಲಿ ನಾರ್ಮಂಡಿಯಲ್ಲಿ ಮಿತ್ರಸೈನ್ಯ ಇಳಿಯಿತು. ಜರ್ಮನಿ ಸೋತು ಶರಣಾಗತವಾಗಲು ಈ ಯುದ್ಧತಂತ್ರವೂ ಕಾರಣ.

ಎರಡನೆಯ ಮಹಾಯುದ್ಧ ಮುಗಿದ ಮೇಲೆ, 1948ರಲ್ಲಿ ಈತ ಕೊಲಂಬಿಯ ವಿಶ್ವವಿದ್ಯಾನಿಲಯದ ಅಧ್ಯಕ್ಷನಾದ. ಈತ ಉತ್ತರ ಅಟ್ಲಾಂಟಿಕ್ ಕೌಲು ಸಂಸ್ಥೆಯ ಸಂಯುಕ್ತ ಪಡೆಗಳ ಪರಮೋನ್ನತ ದಂಡನಾಯಕನಾಗಿ ನೇಮಕವಾದದ್ದು 1951ರಲ್ಲಿ. 1952ರಲ್ಲಿ ಅಮೆರಿಕದ ಜನಪ್ರಿಯತೆಯನ್ನು ಗಳಿಸಿ ಅಮೆರಿಕ ಸಂಯುಕ್ತ ಸಂಸ್ಥಾನದ ಅಧ್ಯಕ್ಷತೆಯ ಚುನಾವಣೆಯಲ್ಲಿ ರಿಪಬ್ಲಿಕನ್ ಪಕ್ಷದ ಅಭ್ಯರ್ಥಿಯಾಗಿ ಗೆದ್ದನಲ್ಲದೆ 1956ರಲ್ಲಿ ಮತ್ತೆ ಅಧ್ಯಕ್ಷನಾದ.

ಐಸೆನ್‌ಹೌವರ್ ಯೋಧನಾಗಿದ್ದರೂ ಶಾಂತಿಪ್ರಿಯ ; ಅಧ್ಯಕ್ಷನಾಗಿದ್ದರೂ ರಾಜಕೀಯ ಅವನಿಗೆ ಸೇರುತ್ತಿರಲಿಲ್ಲ. ಅಮೆರಿಕದ ರಾಜಕಾರಣದಲ್ಲಿ ಐಸೆನ್‌ಹೌವರ್ ಮುಂದುವರಿದದ್ದು ವೈಯಕ್ತಿಕ ಪ್ರಭಾವದಿಂದಲೇ. ಕೋಟ್ಯಂತರ ಡಾಲರುಗಳನ್ನು ಯುದ್ಧಕ್ಕಾಗಿ ವೆಚ್ಚಮಾಡುವುದನ್ನು ಆತ ಒಪ್ಪುತ್ತಿರಲಿಲ್ಲ.

ತನ್ನ ಅಧಿಕಾರದ ಕಾಲದಲ್ಲಿ ಮಹತ್ತ್ವದ ಕ್ರಮಗಳನ್ನೇನೂ ಕೈಗೊಳ್ಳಲಿಲ್ಲವೆಂದು ಐಸೆನ್‌ಹೌವರ್ ಬಗ್ಗೆ ಒಂದು ಟೀಕೆಯುಂಟು. ವಿಯೆಟ್ನಾಂ ಯುದ್ಧದ ಉಗಮ ಚಿಹ್ನೆಗಳು ಕಾಣಿಸಿಕೊಂಡದ್ದು ಇವನ ಕಾಲದಲ್ಲಿ. ರಾಷ್ಟ್ರಭದ್ರತೆ, ವಿದ್ಯಾಭಿವೃದ್ಧಿ, ವಸತಿನಿರ್ಮಾಣ, ನಗರ ನೈರ್ಮಲ್ಯ, ಸಾರ್ವಜನಿಕ ಆರೋಗ್ಯ ಮುಂತಾದ ವಿಷಯಗಳಿಗೆ ಹೆಚ್ಚು ಗಮನಕೊಟ್ಟು, ದಕ್ಷಿಣದ ಪ್ರಾಂತ್ಯಗಳಲ್ಲಿ ರೂಢಿಯಲ್ಲಿದ್ದ, ನೀಗ್ರೋಗಳನ್ನು ಬಿಳಿಯರಿಂದ ಪ್ರತ್ಯೇಕಿಸುವ, ವರ್ಣನೀತಿಯನ್ನು ಉಗ್ರವಾಗಿ ಖಂಡಿಸಿದ ; ರಾಷ್ಟ್ರಜೀವನದಲ್ಲಿ ವರ್ಣೀಯರ ಮತ್ತು ಬಿಳಿಯರ ಮೂಲಾಧಾರ ಹಕ್ಕುಗಳು ಒಂದೇ ಎಂದು ಸಾರಿದ. ಶಿಕ್ಷಣ ಸಂಸ್ಥೆಗಳಲ್ಲಿ ಬಿಳಿಯರು ಮತ್ತು ನೀಗ್ರೋಗಳಿಗೆ ಸಮಾನಾವಕಾಶವಿರಬೇಕು ಎಂದು ಆಜ್ಞೆ ಹೊರಡಿಸಿದ : ಇದನ್ನು ವಿರೋಧಿಸಿ

ಗಲಭೆಯೆಬ್ಬಿಸಿದವರನ್ನು ದಂಡಿಸಿದ. 1958ರಲ್ಲಿ ಅಲಾಸ್ಕ ಮತ್ತು ಹವಾಯ್ ಸಂಯುಕ್ತಸಂಸ್ಥಾನಕ್ಕೆ ಸೇರಿದುವು. ಕಮ್ಯೂನಿಸ್ಟ್ ತತ್ತ್ವದ ವ್ಯಾಪ್ತಿಯನ್ನು ತಡೆಗಟ್ಟುವುದು ಈತನ ವಿದೇಶಾಂಗ ನೀತಿಯಾಗಿದ್ದರೂ ಆಗ್ನೇಯ ಏಷ್ಯದ ರಾಜ್ಯಗಳ ಆರ್ಥಿಕಾಭಿವೃದ್ಧಿಗಾಗಿ ಉದಾರವಾಗಿ ಸಾಲ ನೀಡಿದ್ದೂ ಕಮ್ಯೂನಿಸ್ಟ್ ರಾಷ್ಟ್ರಗಳು ಆ ರಾಜ್ಯಗಳ ಸ್ವಾತಂತ್ರ್ಯಕ್ಕೆ ಧಕ್ಕೆ ತರುವ ಪ್ರಯತ್ನ ನಡೆಸಿದರೆ ಸೈನಿಕ ನೆರವು ನೀಡುವುದಾಗಿ ಅವುಗಳಿಗೆ ಭರವಸೆ ನೀಡಿದ್ದೂ ಅಲ್ಲದೆ 1956ರ ಸೂಯೆಜ್ ಕಾಲುವೆ ಬಿಕ್ಕಟ್ಟನ್ನು ಬಗೆಹರಿಸಲೆತ್ನಿಸಿದ್ದೂ ಚಿಯಾಂಗ್–ಕೈ–ಷೇಕನ ಸಹಾಯಕ್ಕೆ ಅಮೆರಿಕ ನುಗ್ಗುವುದೆಂದು ಘೋಷಿಸಿ ಚೀನೀ ದಾಳಿಯನ್ನು ತಪ್ಪಿಸಿದ್ದೂ ಐಸೆನ್‌ಹೌವರ್ ಕೈಕೊಂಡ ಕೆಲವು ಕ್ರಮಗಳು. ಕಮ್ಯೂನಿಸ್ಟ್ ರಾಜ್ಯವಾದ ಹಂಗರಿಯಲ್ಲಿ ಬಂಡಾಯವೆದ್ದದ್ದೂ ಈತನ ಅಧಿಕಾರ ಕಾಲದಲ್ಲೆ. ಮುಂದಿನ ಅಧ್ಯಕ್ಷನಾದ ಕೆನೆಡಿಯ ಕಾಲದಲ್ಲಿ ಸಂಭವಿಸಿದ ಕ್ಯೂಬ ಹಗರಣವೂ ಐಸೆನ್‌ಹೌವರ್ ಅಧಿಕಾರದ ಅವಧಿಯಲ್ಲೇ ಆರಂಭವಾಯಿತು. ಆದರೆ ಸೋವಿಯತ್ ರಷ್ಯದ ಪ್ರಧಾನಿಯಾಗಿದ್ದ ಖ್ರುಶ್ಚಾಫ್ ಬರ್ಲಿನ್ ದಿಗ್ಬಂಧನದ ಬೆದರಿಕೆ ಹಾಕಿದಾಗ ಐಸೆನ್‌ಹೌವರನ ನೇರ ಪ್ರವೇಶದಿಂದ ಅದು ಪರಿಹಾರವಾಯಿತು. ಖ್ರುಶ್ಚಾಫ್ ಅಮೆರಿಕಕ್ಕೆ ಭೇಟಿ ನೀಡಿದ. ಐಸೆನ್‌ಹೌವರನೂ ರಷ್ಯದ ಸಂದರ್ಶನ ಮಾಡಲಿದ್ದು, ಈ ರಾಷ್ಟ್ರನಾಯಕರ ವೈಯಕ್ತಿಕ ಸ್ನೇಹದ ತಳಹದಿಯ ಮೇಲೆ ಅಂತರರಾಷ್ಟ್ರೀಯ ಸೌಹಾರ್ದ ಬೆಳೆಯುವ ಸೂಚನೆಗಳು ಕಂಡು ಬಂದಿದ್ದುವು. ಆದರೆ ಅಷ್ಟರಲ್ಲೆ ಅಮೆರಿಕನ್ ಗೂಢಚರ್ಯೆಯ ವಿಮಾನವೊಂದು ತನ್ನ ಪ್ರದೇಶವನ್ನು ಪ್ರವೇಶಿಸಿತೆಂಬ ಕಾರಣದಿಂದ ಸೋವಿಯತ್ ದೇಶ ಅದನ್ನು ಹೊಡೆದುರುಳಿಸಿತು. ಮತ್ತೆ ವಿರಸ ಮೂಡಿತು. ಐಸೆನ್‌ಹೌವರನ ರಷ್ಯ ಭೇಟಿ ರದ್ದಾಯಿತು.

ಈತ ಅಧ್ಯಕ್ಷನಾಗಿದ್ದಾಗ ದೊಡ್ಡ ಯುದ್ಧವೇನೂ ಆಗಲಿಲ್ಲ. ಆದರೆ ಶಾಂತಿ ಭದ್ರವಾಗುವ ಭರವಸೆಯೂ ದೊರಕಲಿಲ್ಲ. ಐಸೆನ್‌ಹೌವರ್ ಒಳ್ಳೆಯ ಯೋಧನಾದರೂ ಆತನಿಗೆ ಯುದ್ಧ ಬೇಕಿರಲಿಲ್ಲ; ಯುದ್ಧವಾಗಲೇಬಾರದು—ಎಂಬುದು ಅವನ ಆಶಯ. ಯುದ್ಧವೆಂದರೆ ಏನೆಂಬುದು ಅವನಿಗೆ ಚೆನ್ನಾಗಿ ಗೊತ್ತಿತ್ತು.

ನೇರ ನಡೆ, ನೇರ ನುಡಿ, ಸರಳಜೀವನ—ಇವುಗಳಿಂದ ಎಲ್ಲರ ಪ್ರೀತಿ ಗಳಿಸಿದ್ದವನು ಐಸೆನ್‌ಹೌವರ್. ಈತನ ಅಡ್ಡ ಹೆಸರು 'ಐಕ್'.

(ಎಚ್.ಎಸ್.ಕೆ.; ಐ.ಆರ್.; ಐ.ಎನ್.ಎಸ್.ಎಂ.)

**ಐಸೊಎಲೆಕ್ಟ್ರಿಕ್ ಬಿಂದು :** ಅಣುವು ಋಣ ಅಥವಾ ಧನ ಅಯಾನ್ ಆಗದೆ ಝ್ವಿಟ್ಟರ್ ಅಥವಾ ತಟಸ್ಥ ಅಣುವಾಗಿ ಉಳಿಯುವ pH ಮೌಲ್ಯದ ಅಂಕ (ಐಸೊಎಲೆಕ್ಟ್ರಿಕ್ ಪಾಯಿಂಟ್). $NH_2$ ಮತ್ತು COOH ಪುಂಜಗಳೆರಡನ್ನೂ ಉಳ್ಳ ಅಮೈನೋ ಆಮ್ಲಗಳು ಪ್ರೋಟಾನ್ ನೀಡಿಕೆ–ಸ್ವೀಕಾರಗಳಿಂದ ದೊರೆಯುವ ಝ್ವಿಟ್ಟರ್ ಅಯಾನುವಿನ ರೂಪದಲ್ಲಿರುತ್ತವೆ. ಪೂರ್ಣ ಅಣುವನ್ನು ಗಮನಿಸಿದಾಗ ಅದು ಹೆಚ್ಚಿನ ಋಣ ಅಥವಾ ಧನ ವಿದ್ಯುತ್ತನ್ನು ಪಡೆದಿರದೆ ವಿದ್ಯುತ್ತಾಟಸ್ಥ್ಯವನ್ನು (ಎಲೆಕ್ಟ್ರಿಕಲ್ ನ್ಯೂಟ್ರಾಲಿಟಿ) ಪಡೆದಿರುವುದು ಕಂಡುಬರುತ್ತದೆ. ಆದರೆ ಅಮೈನೋ ಆಮ್ಲವನ್ನುಳ್ಳ ದ್ರಾವಣದ pH ಮೌಲ್ಯ ಕಡಿಮೆಯಾದಾಗ ಝ್ವಿಟ್ಟರ್ ಅಯಾನು ಪ್ರೋಟಾನ್ ಸ್ವೀಕಾರ ಮಾಡಿ ಧನ ಅಯಾನ್ ಆಗುತ್ತದೆ; ಮತ್ತು pH ಮೌಲ್ಯ ಹೆಚ್ಚಾದಾಗ ಋಣ ಅಯಾನ್ ಆಗಿ ಪರಿವರ್ತಿತವಾಗುತ್ತದೆ. ಈ ಬಗೆಯ ಋಣ, ಧನ ಮತ್ತು ಝ್ವಿಟ್ಟರ್ ಅಯಾನುಗಳ ಪರಸ್ಪರ ಪರಿವರ್ತನೆ ಮತ್ತು ಸಮತೋಲನಗಳನ್ನು ಮುಂದೆ ತೋರಿಸಿದೆ—



ಪ್ರೋಟೀನುಗಳಲ್ಲಿ ಝ್ವಿಟ್ಟರ್ ಅಯಾನುಗಳಿಗೆ ಬದಲಾಗಿ ತಟಸ್ಥ ಅಣುವಿದ್ದು pH ಮೌಲ್ಯ ವ್ಯತ್ಯಾಸಗೊಂಡಂತೆ ಋಣ, ಧನ ಅಯಾನುಗಳು ಮತ್ತು ತಟಸ್ಥ ಅಣುಗಳ ಪರಿವರ್ತನೆ ನಡೆಯುತ್ತದೆ.

ಪ್ರತಿ ಅಮೈನೋ ಆಮ್ಲ ಅಥವಾ ಪ್ರೋಟೀನು ಪ್ರತ್ಯೇಕ ಐಸೊಎಲೆಕ್ಟ್ರಿಕ್ ಬಿಂದುವನ್ನು ಪಡೆದಿರುವುದು ಅದರ ಮುಖ್ಯ ಗುಣಗಳಲ್ಲೊಂದು. ಪ್ರೋಟೀನುಗಳು ತಮ್ಮ ಐಸೊಎಲೆಕ್ಟ್ರಿಕ್ ಬಿಂದುವಿನಲ್ಲಿ ತಮ್ಮ ವಿದ್ಯುದತಾಟಸ್ಥ್ಯವನ್ನು ಕಳೆದುಕೊಂಡು ಕಲಾಯ್ಡ್ ಬಗೆಯ ನೀರಿನ ದ್ರಾವಣಗಳಿಂದ ಗರಣೆಯಾಗಿ ಹೊರಬೀಳುತ್ತವೆ. ಪ್ರೋಟೀನುಗಳು ಭಿನ್ನ ಐಸೊಎಲೆಕ್ಟ್ರಿಕ್ ಬಿಂದುಗಳನ್ನು ಪಡೆದಿರುವುದರಿಂದಲೇ ವಿದ್ಯುತ್ ಕ್ಷೇತ್ರೀಯ ಚಲನೆಯಿಂದ (ಎಲೆಕ್ಟ್ರೋಫಾರಿಸ್) ಅವನ್ನು ಬೇರ್ಪಡಿಸಲು ಸಾಧ್ಯ.

ಐಸೊಎಲೆಕ್ಟ್ರಿಕ್ ಬಿಂದುಗಳು

| ವಸ್ತು | | ಐಸೊಎಲೆಕ್ಟ್ರಿಕ್ ಬಿಂದು (pH) |
|---|---|---|
| **ಅಮೈನೋ ಆಮ್ಲಗಳು** | | |
| ಅಲನೀನ್ | ... | 6.00 |
| ಆರ್ಗಿನೈನ್ | ... | 10.76 |
| ಆಸ್ಪಾರ್ಟಿಕ್ ಆಮ್ಲ | ... | 2.77 |
| ಸಿಸ್ಟೈನ್ | ... | 5.07 |
| ಸಿಸ್ಟೀನ್ | ... | 4.60 |
| ಗ್ಲೂಟಮಿಕ್ ಆಮ್ಲ | ... | 3.22 |
| ಗ್ಲೈಸೀನ್ | ... | 5.65 |
| ಹಿಸ್ಟಿಡೀನ್ | ... | 7.59 |
| ಹೈಡ್ರಾಕ್ಸಿಪೈರೊಲೀನ್ | ... | 5.83 |
| ಐಸೊಲ್ಯೂಸಿನ್ | ... | 6.02 |
| ಲ್ಯೂಸಿನ್ | ... | 5.98 |
| ಲೈಸಿನ್ | ... | 9.74 |
| ಫೆನಿಲಲನೀನ್ | ... | 5.48 |
| ಪ್ರೊಲಿನ್ | ... | 6.30 |
| ಸೆರೀನ್ | ... | 5.68 |
| ಟ್ರಿಪ್ಟೋಫಾನ್ | ... | 5.89 |
| ಟೈರೊಸಿನ್ | ... | 5.66 |
| ವಾಲಿನ್ | ... | 5.96 |
| **ಡೈಪೆಪ್ಟೈಡುಗಳು** | | |
| ಗ್ಲೈಸಿಲ್‌ಗ್ಲೈಸಿನ್ | ... | 5.50 |
| ಅಲಾನಿಲ್‌ಗ್ಲೈಸಿನ್ | ... | 5.50 |
| ಲ್ಯೂಸಿಲ್‌ಗ್ಲೈಸಿನ್ | ... | 5.70 |
| **ಪ್ರೋಟೀನುಗಳು** | | |
| ಗ್ಲೂಟೆನಿನ್ | ... | 4.50 |
| ಜೆಲಾಟಿನ್ | ... | 4.70 |
| ಮೊಟ್ಟೆಯ ಆಲ್ಬುಮಿನ್ | ... | 4.80 |
| ಸೀರಂ ಆಲ್ಬುಮಿನ್ | ... | 5.40 |
| ಎಡೆಸ್ಟಿನ್ | ... | 5.70 |
| ಆಕ್ಸಿಹೆಮೊಗ್ಲೋಬಿನ್ | ... | 6.80 |
| ಗ್ಲಿಯಾಡಿನ್ | ... | 9.20 |
| ಕ್ಲೂಪೈನ್ | ... | 12.10 |

(ಕೆ.ಟಿ.ಎಸ್.)

**ಐಸೊಜೈಮುಗಳು :** ಒಂದೇ ಬಗೆಯ ಪ್ರಾಣಿಯಲ್ಲಿ ಒಂದೇ ಕಿಣ್ವಕ್ಕೆ ಅನೇಕ ಬಗೆಯ ರಚನೆಗಳಿದ್ದಾಗ ರಚಿತವಾಗುವ ಘಟಕಗಳು. ಪ್ರೋಟೀನುಗಳ ಚತುರ್ಥ ಮಟ್ಟದ ರಚನೆ ಐಸೊಜೈಮುಗಳ ರಚನೆಗೆ ಆಧಾರಭೂತವಾಗಿದೆ. ಇಂಥ ಕಿಣ್ವಗಳ ಬಗ್ಗೆ ತಿಳಿದುಬಂದಿರುವ ಜ್ಞಾನವನ್ನು ಲ್ಯಾಕ್ಟಿಕ್ ಡೀಹೈಡ್ರೋಜಿನೇಸ್ ಕಿಣ್ವದ ಬಗ್ಗೆ ನಡೆಸಿರುವ ಸಂಶೋಧನೆಗಳಿಂದ ಬಲುಮಟ್ಟಿಗೆ ಸಂಗ್ರಹಿಸಲಾಗಿದೆ. ಈ ಕಿಣ್ವ ಕೆಳಗೆ ಕಾಣಿಸಿರುವ ಕ್ರಿಯೆಯನ್ನು ವರ್ಧಿಸುತ್ತದೆ.



ಕೋಳಿಯಲ್ಲಿ ಈ ಕಿಣ್ವ ಮುಖ್ಯವಾಗಿ ಎರಡು ರೂಪದಲ್ಲಿ ದೊರೆಯುತ್ತದೆ. ಒಂದು ಹೃದಯದ ಮಾಂಸಖಂಡಕ್ಕೂ ಇನ್ನೊಂದು ಎದೆಯ ಮಾಂಸಖಂಡಕ್ಕೂ ವಿಶಿಷ್ಟವಾದದ್ದು. ಇವೆರಡು ಬಗೆಯ ಕಿಣ್ವಗಳಿಗೆ ಅಮೈನೋ ಆಮ್ಲಗಳ ರಚನೆಯಲ್ಲಿಯೂ ಭೌತ ಮತ್ತು ಇಮ್ಯೂನೊಲಾಜಿಕಲ್ ಗುಣದಲ್ಲಿಯೂ ವೇಗವರ್ಧಕ ಕ್ರಿಯೆಯಲ್ಲಿಯೂ ವ್ಯತ್ಯಾಸಗಳಿವೆ. ಕೋಳಿ ಮತ್ತು ಇತರ ಪ್ರಾಣಿಗಳಿಂದ ಐದು ಬಗೆಯ ಲ್ಯಾಕ್ಟಿಕ್ ಡೀ ಹೈಡ್ರೋಜಿನೇಸುಗಳನ್ನು (LDH) ಬೇರ್ಪಡಿಸಲಾಗಿದೆ.

ಇವುಗಳಲ್ಲಿ ಮೂರಕ್ಕೆ, ಎದೆಯ ಮಾಂಸಖಂಡ ಕಿಣ್ವಕ್ಕೂ, ಹೃದಯ ಮಾಂಸಖಂಡ ಕಿಣ್ವಕ್ಕೂ ಮಧ್ಯಂತರ ಗುಣಗಳಿವೆ. ಉದಾಹರಣೆಗೆ LDHನ್ನು ವಿದ್ಯುತ್‌ಕ್ಷೇತ್ರೀಯ ಚಲನೆಗೆ (ಎಲೆಕ್ಟ್ರೋಫಾರಿಸಿಸ್) ಗುರಿಪಡಿಸಿದರೆ ಸುಸ್ಪಷ್ಟವಾದ ಒಂದರಿಂದ ಇನ್ನೊಂದು ಸಮಾಂತರವಲ್ಲಿರುವ ಐದು ಪಟ್ಟಿಗಳು (ಬ್ಯಾಂಡ್ಸ್) ಕಂಡುಬರುತ್ತವೆ. ಎದೆಯ ಮಾಂಸಖಂಡದ ಕಿಣ್ವ ಒಂದು ತುದಿಯಲ್ಲಿಯೂ ಹೃದಯ ಮಾಂಸಖಂಡದ ಕಿಣ್ವ ಇನ್ನೊಂದು ತುದಿಯಲ್ಲಿಯೂ ಇರುತ್ತವೆ. ಅಲ್ಲದೆ ಈ ಐದು ಐಸೊಜೈಮುಗಳ ಅಪ್ಯೈನೋ ಆಮ್ಲ ಘಟನೆಯನ್ನು ಪರಿಶೀಲಿಸಿದರೆ ಹೃದಯದ ಕಿಣ್ವದಿಂದ ಹಿಡಿದು ಎದೆಯ ಕಿಣ್ವದವರೆಗೆ ಕ್ರಮಾನುಗತಿಕ ವ್ಯತ್ಯಾಸಗಳು ಕಂಡುಬರುತ್ತವೆ. ಇದೇ ತರಹೆಯ ವ್ಯತ್ಯಾಸಗಳನ್ನು ವೇಗವರ್ಧಕ ಕ್ರಿಯೆ ಮತ್ತು ಇಮ್ಯೂನೊಲಾಜಿಕಲ್ ಗುಣಗಳಲ್ಲಿಯೂ ಕಾಣಬಹುದು.

LDHನ ರಚನೆಯನ್ನು ಪರಿಶೀಲಿಸಿದಾಗ, ಇಂಥ ನಡತೆಗಿರುವ ಆಧಾರವನ್ನು ಕಂಡುಕೊಳ್ಳಬಹುದು. ಕಿಣ್ವವನ್ನು ಮರ್‌ಕ್ಯಾಪ್ಟೋ ಎಥನಾಲ್ ಸೇರಿರುವ ಗ್ವಾನಿಡಿನಿಯಂ ಕ್ಲೋರೈಡ್ ದ್ರಾವಣದಿಂದ ಸಂಸ್ಕರಿಸಿ ನಾಲ್ಕು ಉಪಾಂಗಗಳನ್ನು ಪಡೆಯಬಹುದು. ಇದು ಚತುರಂಶವುಳ್ಳ ಕಿಣ್ವವಾಗಿದ್ದರೆ (ಹೌದೆನ್ನುವುದಕ್ಕೆ ಆಧಾರಗಳಿವೆ) ಇದನ್ನು ಬೇರೆ ಬೇರೆ ಎರಡು ಜೀನಿಗಳಿಂದ ನಿರ್ದೇಶಿತವಾದ ಎರಡು ಬಗೆಯ ಉಪಾಂಗವುಳ್ಳ ಪ್ರೋಟೀನೆಂದು ಭಾವಿಸಿ ಮೇಲೆ ಹೇಳಿದ ವ್ಯತ್ಯಾಸಗಳನ್ನು ಅರ್ಥಮಾಡಿಕೊಳ್ಳಬಹುದು. ಹೃದಯದ ಮಾಂಸಖಂಡದ ಕಿಣ್ವ H ವರ್ಗದ ಮತ್ತು ಎದೆಯ ಮಾಂಸಖಂಡದ ಕಿಣ್ವ M ವರ್ಗದ ಉಪಾಂಗಗಳಿಂದ ರಚಿತವಾಗಿದೆಯೆಂದು ಭಾವಿಸಿದರೆ ರಚನೆಯಲ್ಲಿ ಭಿನ್ನವಾಗಿರುವ ಐದು ಬಗೆಯ LDHಗಳನ್ನು – HHHH, HHHM, HHMM, HMMM, MMMM – ಪಡೆಯಬಹುದು. ಇಂಥ ಘಟನೆಗಳನ್ನು ರೂಪಿಸುವಾಗ ಚತುರಂಶಿಯ (ಟೆಟ್ರಾಮರ್) ಪ್ರತಿಯೊಂದು ಉಪಾಂಗ ಇನ್ನೊಂದಕ್ಕೆ ಎಲ್ಲ ವಿಧದಲ್ಲಿಯೂ ಸಮಾನವೆಂದು ಭಾವಿಸಲಾಗಿದೆ. ಇಲ್ಲದಿದ್ದರೆ HHHM ರಚನೆಯುಳ್ಳ ನಾಲ್ಕು ಬಗೆಯ ಅಣುಗಳನ್ನು ಪಡೆಯಬಹುದು. LDH ಎರಡು ಬಗೆಯ ಉಪಾಂಗಗಳಿಂದ ರಚಿತವಾದ ಕಿಣ್ವವೆಂದು ಭಾವಿಸಿ ಅದರ ಗುಣಗಳಲ್ಲಿ ತೋರಿಬರುವ ಕ್ರಮಾನುಗತಿಕ ವ್ಯತ್ಯಾಸಗಳನ್ನು ಅರ್ಥಮಾಡಿಕೊಳ್ಳಬಹುದು.

ಇತರ ಐಸೊಜೈಮುಗಳ ಗುಣಗಳನ್ನು ಅವುಗಳ ರಚನೆಯ ಆಧಾರದ ಮೇಲೆ ವಿವರಿಸಬಹುದೇ ಎಂಬ ಪ್ರಶ್ನೆಗೆ ಇನ್ನೂ ಉತ್ತರ ದೊರೆತಿಲ್ಲ. ಲ್ಯಾಕ್ಟಿಕ್ ಡೀಹೈಡ್ರೋಜಿನೇಸಿನಂಥ ಕಿಣ್ವಗಳನ್ನು ಸಂಕರಕಿಣ್ವಗಳೆಂದು ಕರೆಯಬಹುದೆಂಬ ಸೂಚನೆಯನ್ನೂ ಮಾಡಲಾಗಿದೆ. (ಎಚ್‌. ಎಸ್‌. ಎಸ್‌.)

**ಐಸೊಟೋನುಗಳು :** ಪರಮಾಣು ನ್ಯೂಕ್ಲಿಯಗಳಲ್ಲಿ ನ್ಯೂಟ್ರಾನುಗಳು ಸಮಾನ ಅಥವಾ ಸ್ಥಿರವಿರುವಂಥ ನ್ಯೂಕ್ಲೈಡುಗಳು. ಉದಾಹರಣೆಗೆ $^{36}_{16}$ ಸಲ್ಫರ್ $\left(^{36}_{16}S\right)$, $^{38}_{18}$ ಆರ್ಗಾನ್ $\left(^{38}_{18}A\right)$, $^{40}_{20}$ ಕ್ಯಾಲ್ಸಿಯಂ $\left(^{40}_{20}Ca\right)$, $^{39}_{19}$ ಪೊಟ್ಯಾಸಿಯಂ $\left(^{39}_{19}K\right)$ ಇವು ಪ್ರತ್ಯೇಕ ಧಾತುಗಳ ಐಸೊಟೋಪುಗಳಿದ್ದರೂ ಇವುಗಳೆಲ್ಲಲ್ಲ 20 ನ್ಯೂಟ್ರಾನುಗಳಿರುತ್ತವೆ. ಐಸೊಟೋಪುಗಳಲ್ಲಿ ಪ್ರೋಟಾನುಗಳ ಸಂಖ್ಯೆ ಸ್ಥಿರವಾಗಿದ್ದರೆ ಐಸೊಟೋನುಗಳಲ್ಲಿ ನ್ಯೂಟ್ರಾನುಗಳ ಸಂಖ್ಯೆ ಸ್ಥಿರವಾಗಿದೆ.

ಇಂಥ ಐಸೊಟೋನುಗಳ ಧಾತುಗಳ ಐಸೊಟೋಪುಗಳ ಸಂಖ್ಯೆ ಹೆಚ್ಚುಮಟ್ಟಿಗೆ ಸಮಾನವಾಗಿದೆ. ಉದಾಹರಣೆಗೆ

$^{36}_{16}S$–ಸಲ್ಫರ್—4 ಐಸೊಟೋಪುಗಳು

$^{40}_{20}Ca$–ಕ್ಯಾಲ್ಸಿಯಂ—5 ಐಸೊಟೋಪುಗಳು

ಇನ್ನೂ ಇವು ಸುಮಾರಾಗಿ ಏಕಪ್ರಕಾರವಾದ ವಿಕಿರಣಗಳನ್ನು ಕಕ್ಕುತ್ತವೆ. ಇಂಥ ವಿಕಿರಣಗಳ ಶಕ್ತಿ ಸುಮಾರು ಒಂದೇ ಇರುತ್ತದೆ. (ಯು. ಎಲ್‌. ಎ.)

**ಐಸೊಟೋಪುಗಳು :** ಒಂದೇ ಪರಮಾಣು ಸಂಖ್ಯೆ ಇರುವ (ಆದ್ದರಿಂದ ಒಂದೇ ಧಾತು ಆಗಿರುವ) ಆದರೆ ದ್ರವ್ಯಮಾನ ಸಂಖ್ಯೆಯಲ್ಲಿ (ಮಾಸ್ ನಂಬರ್) ಭಿನ್ನವಾಗಿರುವ ಎರಡು ಅಥವಾ ಹೆಚ್ಚು ನ್ಯೂಕ್ಲೈಡುಗಳು (ಸಮಸ್ಥಾನಿಗಳು). ಒಂದೇ ಧಾತುವಿನ ವಿವಿಧ ರೂಪಗಳಾದ ಐಸೊಟೋಪುಗಳು ರಾಸಾಯನಿಕವಾಗಿ ಒಂದೇ ಧಾತುವಾದರೂ ಧಾತುವಿನ ಪರಮಾಣುವಿನ ಒಳರಚನೆಯಲ್ಲಿ ವ್ಯತ್ಯಾಸವಿರುವ ಧಾತುರೂಪಗಳಿವು. ಧಾತುಗಳ ಆವರ್ತಕೋಷ್ಟಕದಲ್ಲಿ ಇವು ಒಂದೇ ಸ್ಥಾನವನ್ನು ಪಡೆಯುತ್ತವೆ.

ಪ್ರಪಂಚದ ಸಮಸ್ತ ವಸ್ತುಗಳಲ್ಲೂ ಸುಮಾರು 104 ಪ್ರತ್ಯೇಕ ಧಾತುಗಳ (ಎಂದರೆ ಪ್ರತ್ಯೇಕ ಪರಮಾಣುಗಳು) ಇವೆ ; ಆದರೆ ಇಂಥ ನೈಸರ್ಗಿಕ ಮತ್ತು ಕೃತಕ ಧಾತುಗಳ ಸುಮಾರು 1,300 ಐಸೊಟೋಪುಗಳನ್ನು ಗುರುತಿಸಲಾಗಿದೆ.

ಒಂದೇ ವಾಕ್ಯದಲ್ಲಿ ಹೇಳುವುದಾದರೆ ಪರಮಾಣುವೊಂದು ತನ್ನ ನ್ಯೂಕ್ಲಿಯಸಿನಲ್ಲಿ ಪ್ರೋಟಾನ್ ಮತ್ತು ನ್ಯೂಟ್ರಾನ್ ಕಣಗಳನ್ನು ಒತ್ತಟ್ಟಿಗೆ ದಟ್ಟವಾಗಿ ಕೂಡಿಸಿರುವ ಮತ್ತು ಹೊರಗಡೆ ಎಲೆಕ್ಟ್ರಾನುಗಳೆಂಬ ಅತಿಸೂಕ್ಷ್ಮ ಕಣಗಳನ್ನು ಪಡೆದಿರುವ ವ್ಯವಸ್ಥೆ. ನ್ಯೂಕ್ಲಿಯಸ್ ಸುಮಾರು $10^{-13}$ ಸೆಂ.ಮೀ. ವ್ಯಾಸವುಳ್ಳದಾದರೆ ಕೇಂದ್ರದಿಂದ ಸುಮಾರು $10^{-8}$ ಸೆಂ.ಮೀ. ದೂರದಲ್ಲಿ ಎಲೆಕ್ಟ್ರಾನುಗಳು ಒಂದು ಅಥವಾ ಹೆಚ್ಚು ಕಕ್ಷೆಗಳಲ್ಲಿ ನ್ಯೂಕ್ಲಿಯಸಿನ ಸುತ್ತಲೂ ವೇಗವಾಗಿ ಸುತ್ತುತ್ತಿವೆ. ಎಲೆಕ್ಟ್ರಾನಿನಲ್ಲಿ ಋಣವಿದ್ಯುತ್ $1.6021 \times 10^{-19}$ ಕೂಲಾಂಬಿನಷ್ಟಿದ್ದು ಇದರ ಭಾರ $9.1091 \times 10^{-31}$ ಕಿಲೋಗ್ರಾಂ ಇರುವುದು. ನ್ಯೂಟ್ರಾನಿನಲ್ಲಿ ವಿದ್ಯುದಂಶವಿಲ್ಲ. ಇದರ ಭಾರ $1.6748 \times 10^{-27}$ ಕಿಲೋಗ್ರಾಂ. ಪ್ರೋಟಾನಿನಲ್ಲಿ ಎಲೆಕ್ಟ್ರಾನಿನಲ್ಲಿದ್ದಷ್ಟೇ ವಿದ್ಯುತ್ತು ಇದ್ದು ಇದರ ಭಾರ $1.6725 \times 10^{-27}$ ಕಿಲೋಗ್ರಾಂ. ಪರಮಾಣುವೊಂದರ ಭಾರ ಪ್ರೋಟಾನ್ ನ್ಯೂಟ್ರಾನುಗಳಿಂದ ಏರ್ಪಡುತ್ತದೆ. ಕಾರಣ ಎಲೆಕ್ಟ್ರಾನುಗಳ ತೂಕ ಅತ್ಯಲ್ಪ.

ಒಂದು ಧಾತುವನ್ನು $^{A}_{Z}E$ ಸಂಕೇತದಿಂದ ಬರೆಯುತ್ತೇವೆ. ಇಲ್ಲಿ Z ಇದರಲ್ಲಿನ ಪ್ರೋಟಾನುಗಳ ಸಂಖ್ಯೆ. ಇಷ್ಟೇ ಎಲೆಕ್ಟ್ರಾನುಗಳು ಕೇಂದ್ರೇತರ ಭಾಗದಲ್ಲಿವೆ. ಈ ಸಂಖ್ಯೆಯೇ ಆವರ್ತಕೋಷ್ಟಕದಲ್ಲಿ ಈ ಧಾತುವಿನ ಸ್ಥಾನವನ್ನು ಸೂಚಿಸುತ್ತದೆ. ಇದರ ಹೆಸರು ಧಾತುವಿನ ಪರಮಾಣು ಸಂಖ್ಯೆ. ನ್ಯೂಕ್ಲಿಯಸಿನಲ್ಲಿ N ನ್ಯೂಟ್ರಾನುಗಳಿದ್ದರೆ ಆಗ Z+N ಪರಮಾಣುವಿನ ಭಾರ Aಯನ್ನು ಸೂಚಿಸುತ್ತದೆ. $^{4}_{2}$ಹೀಲಿಯಂ $\left(^{4}_{2}He\right)$ ಎಂಬುದರ ಭಾರ 4, ಸಂಖ್ಯೆ 2, ಪ್ರೋಟಾನುಗಳ ಸಂಖ್ಯೆ 2, ನ್ಯೂಟ್ರಾನುಗಳ ಸಂಖ್ಯೆ 2. $^{238}_{92}$ ಯುರೇನಿಯಮ್ $\left(^{238}_{92}U\right)$ ಎಂಬುದರ ಭಾರ 238 : ಪ್ರೋಟಾನುಗಳ ಸಂಖ್ಯೆ 92, ನ್ಯೂಟ್ರಾನುಗಳ ಸಂಖ್ಯೆ 146.

ಐಸೊಟೋಪುಗಳಿರಬಹುದೆಂಬ ಅನುಮಾನದ ಹಿನ್ನೆಲೆ: ಪ್ರೋಟಾನ್ ಹೈಡ್ರೊಜನ್ನಿನ ನ್ಯೂಕ್ಲಿಯಸ್ ಎಂದ ಬಳಿಕ ನ್ಯೂಟ್ರಾನ್ ಕೂಡ ಭಾರದಲ್ಲಿ ಸುಮಾರು ಪ್ರೋಟಾನಿನಷ್ಟೆ ಇರುವ ಕಾರಣ ಎಲ್ಲ ಧಾತುಗಳ ಪರಮಾಣುಭಾರಗಳೂ ಪೂರ್ಣಾಂಕಗಳೇ ಆಗಬೇಕು ಎಂಬ ಪ್ರೌಟನ ಭಾವನೆ ಕಳೆದ ಶತಮಾನಗಳಲ್ಲಿ ನಡೆಸಿದ ಪರಮಾಣುಭಾರನಿರ್ಣಯದ ಪ್ರಯೋಗಗಳಿಂದ ಸಿದ್ಧವಾಗಲಿಲ್ಲ. ಕ್ಲೋರಿನ್ ಪರಮಾಣುಭಾರ 35.453, ತಾಮ್ರದ ಪರಮಾಣುಭಾರ 63.54, ಸತುವಿನ ಪರಮಾಣು ಭಾರ 65.38. ಇವೇಕೆ ಹೀಗೆ ಭಿನ್ನಾಂಶಗಳನ್ನೊಳಗೊಂಡಿವೆ ಎಂಬುದು ಕುತೂಹಲದಾಯಕ ಪ್ರಶ್ನೆಯಾಗಿತ್ತು.

ಇಷ್ಟರಲ್ಲೇ ಯುರೇನಿಯಮ್, ಆಕ್ಟಿನಿಯಮ್ ಮತ್ತು ಥೋರಿಯಮ್ ಧಾತುಗಳು ನೈಸರ್ಗಿಕವಾಗಿ ವಿಕಿರಣ ಕ್ರಿಯಾಶಕ್ತಿಯನ್ನು (ರೇಡಿಯೋ ಆಕ್ಟಿವಿಟಿ) ಪ್ರದರ್ಶಿಸುತ್ತ ತಮ್ಮ ತಮ್ಮ ಶ್ರೇಣಿಗಳ ಅಂತ್ಯದಲ್ಲಿ ರೇಡಿಯಮ್ G, ಆಕ್ಟಿನಿಯಮ್ D ಮತ್ತು ಥೋರಿಯಮ್ D ಆಗಿ ಪರಿವರ್ತನೆ ಹೊಂದುತ್ತಿರುವುದು ತಿಳಿದು ಬಂದಿತು. ಇವೆಲ್ಲ ಪರಮಾಣು ಸಂಖ್ಯೆ 82 ಉಳ್ಳವು. ಇವನ್ನು ಪರಮಾಣುಸಂಖ್ಯೆ 82 ಇರುವ ಸೀಸದಿಂದ (Pb) ರಾಸಾಯನಿಕವಾಗಿ ಬೇರ್ಪಡಿಸಲಾರೆವು. ಚುಟುಕಿನಲ್ಲಿ ಇವು ಸೀಸದ ರೂಪಗಳೇ. ಇವನ್ನು $^{210}_{82}RaD$ , $^{206}_{82}RaB$, $^{211}_{82}AcB$ , $^{207}_{82}AcD$ , $^{212}_{82}ThB$ ಮತ್ತು $^{208}_{82}ThD$ ಎಂದು ಬರೆದುಕೊಳ್ಳಬಹುದು. ಪ್ರೋಟಾನುಗಳ ಸಂಖ್ಯೆ ನ್ಯೂಕ್ಲಿಯಸಿನಲ್ಲಿ 82 ಮತ್ತು ಕೇಂದ್ರೇತರ ಭಾಗದಲ್ಲಿ 82 ಎಲೆಕ್ಟ್ರಾನುಗಳು ಇವೆಲ್ಲವುಗಳಲ್ಲಿಯೂ ಇವೆ ; ಇವು ಸೀಸದ ಐಸೊಟೋಪುಗಳೇ ಎಂದು ಮೊತ್ತಮೊದಲು ಫ್ರೆಡರಿಕ್ ಸಾಡ್ಡಿ ಪ್ರತಿಪಾದಿಸಿದ. ಇವು ಐಸೊಟೋಪುಗಳೆಂದು ಅವನು ನಾಮಕರಣ ಮಾಡಿದನಲ್ಲದೆ ವಿವಿಧ ಐಸೊಟೋಪುಗಳ ಮಿಶ್ರಣ ವಿದ್ದುದರಿಂದಲೇ ಸಾಮಾನ್ಯ ಸೀಸದ ಪರಮಾಣು ಭಾರ 207.21 ಎಂದೂ ಸಾರಿದ.

ಆದ್ದರಿಂದ Z ಒಂದೇ ಇರುವ ಆದರೆ Nನ ಬೆಲೆ ಹೆಚ್ಚುಕಡಿಮೆಯಾಗುವ ಕಾರಣ ಭಾರ A(=Z+N) ವ್ಯತ್ಯಾಸವಾಗುವ ಧಾತುವಿನ ರೂಪಗಳೇ ಅದರ ಐಸೊಟೋಪುಗಳು. ಕೆಲವೇ ನಿದರ್ಶನಗಳನ್ನು ಪರಿಶೀಲಿಸಬಹುದು.

| ಧಾತು | ಪರಮಾಣು ಸಂಖ್ಯೆ | ಐಸೊಟೋಪುಗಳು |
|---|---|---|
| ಕಬ್ಬಿಣ Fe | 26 | $^{54}_{26}Fe$, $^{56}_{26}Fe$, $^{57}_{26}Fe$, $^{58}_{26}Fe$ |
| ತವರ Sn | 50 | $^{112}_{50}Sn$, $^{114}_{50}Sn$, $^{115}_{50}Sn$, $^{116}_{50}Sn$, $^{117}_{50}Sn$, $^{118}_{50}Sn$, $^{119}_{50}Sn$, $^{120}_{50}Sn$, $^{122}_{50}Sn$, $^{124}_{50}Sn$ |
| ನಿಯಾನ್ Ne | 10 | $^{20}_{10}Ne$, $^{21}_{10}Ne$, $^{22}_{10}Ne$ |

ಐಸೊಟೋಪುಗಳ ಆವಿಷ್ಕಾರ: ಜೆ.ಜೆ. ಥಾಮ್ಸನ್ 1913ರಲ್ಲಿ ನಡೆಸಿದ ಪ್ರಯೋಗವನ್ನು ಇಲ್ಲಿ ಮೊದಲು ಸ್ಮರಿಸಬೇಕು. ಹೈಡ್ರೊಜನ್ ಧಾತುವಿನ ಧನ ಅಯಾನುಗಳನ್ನು ಪ್ರಬಲವಾದ ಹಾಗೂ ಏಕಕಾಲದಲ್ಲೂ ಏಕಸ್ಥಳದಲ್ಲೂ ವರ್ತಿಸುವ ಸ್ಥಾಯಿ ವಿದ್ಯುಕ್ಷೇತ್ರ ಮತ್ತು ಕಾಂತಕ್ಷೇತ್ರಗಳ ಮೂಲಕ ಹಾಯಿಸಿದಾಗ ಎಲ್ಲ ಅಯಾನುಗಳಲ್ಲೂ ವಿದ್ಯುದಂಶ ಸಮಾನವಿದ್ದ ನಿಮಿತ್ತ ಇವುಗಳ ಭಾರಗಳಲ್ಲಿ ವ್ಯತ್ಯಾಸವಿದ್ದರೆ ಮಾತ್ರ ಇವು ಪ್ರತ್ಯೇಕ ಪಥಗಳಲ್ಲಿ ಮುಂಬರಿದು ಇವನ್ನು ಪರೀಕ್ಷಿಸುವ ಪರದೆಯ ಮೇಲೆ ಪ್ರತ್ಯೇಕ ಪ್ಯರಾಬೊಲಗಳನ್ನು ಗುರುತಿಸುತ್ತವೆ ಎಂದು ಊಹಿಸಿದ್ದ. ಈ ಊಹೆ ಪ್ರಯೋಗದಲ್ಲಿ ಸ್ಥಿರಪಟ್ಟಿತು—ಹೈಡ್ರೊಜನ್ ಧಾತುವನ್ನು ವಿರಳವಾಗಿ ತುಂಬಿಸಿದ ನಳಿಗೆಯೊಳಗಿನ ಪ್ರಯೋಗಗಳಲ್ಲಿ ಧಾತುವಿನ ಪರಮಾಣು ಮತ್ತು ಅಣುಗಳಿಗೆ ಅನುಗುಣವಾದ ಎರಡು ಪ್ಯರಾಬೊಲಗಳು ಕಂಡುಬಂದುವು. ಮುಂದೆ ನಿಯಾನ್ ಅನಿಲವನ್ನು ನಳಿಗೆಯೊಳಗೆ ಉಪಯೋಗಿಸಿದಾಗಲೂ ಇದೇ ಪರಿಸ್ಥಿತಿ ಉಂಟಾಯಿತು. ಗುಣಿಸಿ ನೋಡಿದಾಗ ಇಲ್ಲಿ e ಸಮಾನವಿರುತ್ತ ಪರಮಾಣು ಭಾರಗಳು 20 ಮತ್ತು 22ರಂತಿರಬೇಕು ಎಂದು ನಿಶ್ಚಯಿಸಲಾಯಿತು. ಇದೇ ಐಸೊಟೋಪುಗಳ ಆವಿಷ್ಕಾರದ ಮೊತ್ತಮೊದಲಿನ ಯಶಸ್ವಿಪ್ರಯೋಗ.

ಒಂದು ಪರಮಾಣುವಿನ ಐಸೊಟೋಪುಗಳನ್ನು ಪ್ರತ್ಯೇಕಿಸುವ ಇತರ ಪರಿಷ್ಕೃತ ಪ್ರಯೋಗಗಳನ್ನು ನಡೆಸಿದವರು ಎಫ್. ಡಬ್ಲ್ಯು. ಆಸ್ಟನ್, ಡೆಂಪ್‌ಸ್ಟರ್, ಬೈನ್‌ಬ್ರಿಡ್ಜ್ ಹಾಗೂ ನೀರ್. ಇವುಗಳಲ್ಲಿ ಆಯಾ ಧಾತುಗಳ ಅಯಾನುಗಳ ಚೂಪಾದ ಕಂಬಿಯೊಂದನ್ನು ಮೊದಲು ಪ್ರಬಲ ವಿದ್ಯುತ್ ಕ್ಷೇತ್ರದ ಮೂಲಕ ಹಾಯಿಸಿ ಅಲ್ಲಿ ಇವುಗಳ ವೇಗಕ್ಕೇ ಅನುಗುಣವಾಗಿ ವಿಸ್ತರಿಸಲಾಗುತ್ತಧೆ; ಮುಂದೆ ಇವು ಕಾಂತಕ್ಷೇತ್ರವನ್ನು ದಾಟುವಷ್ಟರಲ್ಲಿ ಆಸ್ಟನ್ನಿನ ದ್ರವ್ಯಮಾನರೋಹಿತಲೇಖಿಕದಲ್ಲಿ (ಮಾಸ್ ಸ್ಪೆಕ್ಟ್ರೋಗ್ರಾಫ್) ಒಂದೇ ಭಾರದ ಕಣಗಳು (ಇವುಗಳ ವೇಗಗಳಲ್ಲಿ ಹೆಚ್ಚು ಕಡಿಮೆ ಇದ್ದರೂ) ಒಂದೆಡೆ ಬಂದು ನಿಶ್ಚಿತ ಸ್ಥಳದಲ್ಲಿ ಇಡಲಾದ ಫೋಟೋಫಲಕದ ಮೇಲೆ ಎರಗುವುವು. ಪ್ರತ್ಯೇಕಭಾರದ ಕಣಗಳು ಇನ್ನೊಂದೆಡೆ, ಮತ್ತೊಂದು ಭಾರದ ಕಣಗಳು ಮತ್ತೊಂದೆಡೆ ಎಂಬಂತೆ ಬಂದೆರಗುವ ಕಾರಣ ಮೂಲ ಕಂಬಿಯಲ್ಲಿನ ಕಣಗಳು ತಂತಮ್ಮ ದ್ರವ್ಯಮಾನಕ್ಕೆ ಅನುಗುಣವಾಗಿ ಚದರಿಹೋಗುವುವು (ಸ್ಕ್ಯಾಟರ್) ಮತ್ತು ಪ್ರತ್ಯೇಕಗೊಳ್ಳುವುವು.

ಇವುಗಳ ಭಾರಗಳನ್ನು ನಿರ್ಣಯಿಸಬಹುದು. ಆಸ್ಟನ್ ತನ್ನ ಉಪರಕಣದಲ್ಲಿ $^{35}_{17}$ಕ್ಲೋರಿನ್ $\left(^{35}_{17}Cl\right)$ ಮತ್ತು $^{37}_{17}$ಕ್ಲೋರಿನ್ $\left(^{37}_{17}Cl\right)$ ಇವನ್ನು ಪ್ರತ್ಯೇಕಿಸಿದ; ಮುಂದೆ $^{20}_{10}$ನಿಯಾನ್ $\left(^{20}_{10}Ne\right)$ $^{21}_{10}$ನಿಯಾನ್ $\left(^{21}_{10}Ne\right)$, $^{22}_{10}$ನಿಯಾನ್ $\left(^{22}_{10}Ne\right)$ ಇವನ್ನೂ ಹಾಗೆಯೇ $^{36}_{18}$ಆರ್ಗಾನ್ $\left(^{36}_{18}A\right)$, $^{38}_{18}$ಆರ್ಗಾನ್ $\left(^{38}_{18}A\right)$, $^{40}_{18}$ಆರ್ಗಾನ್ $\left(^{40}_{18}A\right)$ ಇವನ್ನೂ ಬೇರೆಬೇರೆಯಾಗಿ ಗುರುತಿಸಿದೆ.

ಸ್ಥಿರ ಮತ್ತು ಅಸ್ಥಿರ ಐಸೊಟೋಪುಗಳು: ಹೆಚ್ಚೆಂದರೆ 104 ಪ್ರತ್ಯೇಕ ಧಾತುಗಳಿವೆ. ಇವುಗಳ ಪೈಕಿ ಪರಮಾಣುಸಂಖ್ಯೆ 83ರ ಅನಂತರದ ಧಾತುಗಳು ವಿಕಿರಣಶೀಲವಾಗಿರುವುದರಿಂದ ಅಸ್ಥಿರಗಳು. ಇವು ಅನವರತವೂ ಕಣಗಳನ್ನೂ ವಿಕಿರಣಗಳನ್ನೂ (ರೇಡಿಯೇಷನ್) ಕಕ್ಕುತ್ತ ಕೊನೆಗೆ 83 ಇಲ್ಲವೇ 82 ಪರಮಾಣು ಸಂಖ್ಯೆಯ ಧಾತುಗಳ ಐಸೊಟೋಪುಗಳಾಗಿ ಪರಿವರ್ತನೆ ಹೊಂದುತ್ತವೆ. ಎಂದ ಬಳಿಕ 104 ಧಾತುಗಳ ಸುಮಾರು 1,300 ಐಸೊಟೋಪುಗಳಲ್ಲಿ ಇಂಥ ಅಸ್ಥಿರ ಐಸೊಟೋಪುಗಳು ಇದ್ದೇ ಇರಬೇಕೆಂಬ ಭಾವನೆ ಮೊದಲಲ್ಲೇ ಬೆಳೆಯಲಾರಂಭಿಸಿತು. ಹೀಗೆಯೇ ಪ್ರಯೋಗಗಳನ್ನು ನಡೆಸಿದಲ್ಲಿ ಹೈಡ್ರೊಜನ್ನಿನಿಂದ ಬಿಸ್ಮತ್ ತನಕ ($_{1}$H ನಿಂದ $^{83}$Be ತನಕ) 270ಕ್ಕೂ ಮಿಕ್ಕಿದ ಸ್ಥಿರ ಐಸೊಟೋಪುಗಳು ದೊರೆತವು. ಇವೇ ಅಲ್ಲದೆ ಇಂಥ ಸ್ವಯಂವಿಕಿರಣಕ್ರಿಯಾಶೀಲವಲ್ಲದ (ನಾನ್‌ರೇಡಿಯೊಆಕ್ಟಿವ್) ಧಾತುಗಳ ಕೆಲವು ಐಸೊಟೋಪುಗಳು ಸಹ ವಿಕಿರಣಕ್ರಿಯೆಯನ್ನು ತೋರುತ್ತವೆ. ಕೆಳಗಿನ ಯಾದಿಯಲ್ಲಿ ಅವನ್ನು ನಕ್ಷತ್ರ ಬಿಹ್ನೆಯಿಂದ ಗುರುತಿಸಿದೆ.

ವಿಕಿರಣಕ್ರಿಯಾಶೀಲವಲ್ಲದ ಕೆಲವು ಧಾತುಗಳ ಐಸೊಟೋಪುಗಳ ಯಾದಿ.

| ಪರಮಾಣು | ಪರಮಾಣು ಸಂಖ್ಯೆ | ಐಸೊಟೋಪುಗಳು |
|---|---|---|
| ಹೈಡ್ರೊಜನ್, H | 1 | 1, 2 |
| ಹೀಲಿಯಂ, He | 2 | 3, 4 |
| ಲಿಥಿಯಂ Li, | 3 | 6, 7 |
| ಬೆರಿಲಿಯಂ, Be | 4 | 9 |
| ಬೋರಾನ್, B | 5 | 10, 11 |
| ಕಾರ್ಬನ್, C | 6 | 12, 13 |
| ನೈಟ್ರೊಜನ್, N | 7 | 14, 15 |
| ಆಕ್ಸಿಜನ್, O | 8 | 16, 17, 18 |
| ಫ್ಲೋರಿನ್, F | 9 | 19 |
| ನಿಯಾನ್, Ne | 10 | 20, 21, 22 |
| ಸೋಡಿಯಂ, Na | 11 | 23 |
| ಮೆಗ್ನೀಸಿಯಂ, Mg | 12 | 24, 25, 26 |
| ಅಲ್ಯೂಮಿನಿಯಂ, Al | 13 | 27 |
| ಸಿಲಿಕಾನ್, Si | 14 | 28, 29, 30 |
| ಫಾಸ್ಫರಸ್, P | 15 | 31 |
| ಸಲ್ಫರ್, S | 16 | 32, 33, 34, 36 |
| ಕ್ಲೋರಿನ್, Cl | 17 | 35, 37 |
| ಆರ್ಗಾನ್, A | 18 | 36, 38, 40 |
| ಪೊಟ್ಯಾಸಿಯಂ, K | 19 | 39, 40*, 41 |
| ಕ್ಯಾಲ್ಸಿಯಂ, Ca | 20 | 40, 42, 43, 44, 46, 48 |
| ಸ್ಕೇಂಡಿಯಂ, Sc | 21 | 45 |
| ಟೈಟೇನಿಯಂ, Ti | 22 | 46, 47, 48, 49, 50 |
| ವೆನೇಡಿಯಂ, V | 23 | 50*, 51 |
| ರುಬೀಡಿಯಂ, Rb | 37 | 85, 87* |
| ಟೆಕ್ನೀಶಿಯಂ, Tc | 43 | ...... |
| ಟಿನ್, Sn | 50 | 112, 114, 115, 116, 117, 118, 119, 120, 122, 124 |
| ಪ್ರೊಥಿಮೆಯಂ, Pm | 61 | ...... |
| ಥೂಲೀಯಂ, Tm | 69 | 169 |
| ಗೋಲ್ಡ್ (ಚಿನ್ನ), Au | 79 | 197 |
| ಲೆಡ್ (ಸೀಸ), Pb | 82 | 204, 206, 207, 208 |

ಹೀಗೆ ಸ್ಥಿರ ಐಸೊಟೋಪುಗಳು, ಅಸ್ಥಿರ ಐಸೊಟೋಪುಗಳು ಮತ್ತು ತೀರ ಅಸ್ಥಿರ ಐಸೋಟೋಪುಗಳು (ಅಂದರೆ ಕೃತಕವಾಗಿ ನಿರ್ಮಾಣಗೊಂಡ ಸ್ವಲ್ಪ ಸಮಯದಲ್ಲೇ ತಂತಮ್ಮ ವಿಕಿರಣಗಳ ಪರಿಣಾಮವಾಗಿ ಧಾತು ಪರಿವರ್ತನೆ ಹೊಂದುವ ಐಸೊಟೋಪುಗಳು) ಸುಮಾರು 1,000ವನ್ನೂ ಮಿಕ್ಕಿವೆ. ಇಂಥ ಐಸೊಟೋಪುಗಳ

ನ್ಯೂಕ್ಲಿಯಸುಗಳ ವಿವಿಧ ಕಣಗಳ ನಡುವೆ ಕಂಡುಬರುವ ವಿಷಮತೋಲದ ಕಾರಣದಿಂದ ಅಸ್ಥಿರತೆ ಇದೆ; ಇವು ಕಣಗಳನ್ನೋ ವಿಕಿರಣಗಳನ್ನೋ ಹೊರಗೆಡುಹುತ್ತ ಸ್ಥಿರತೆಯನ್ನು ಪಡೆಯುತ್ತವೆ.

ಇನ್ನು ಸ್ಥಿರ ಐಸೊಟೋಪುಗಳನ್ನು ಪರೀಕ್ಷಿಸಿದಾಗ ತಿಳಿದುಬಂದ ವಿಚಾರಗಳು ಹೀಗಿವೆ.

1. 20, 28, 50, 82 ಪರಮಾಣುಸಂಖ್ಯೆಗಳುಳ್ಳ ಧಾತುಗಳ ಐಸೊಟೋಪುಗಳು ಬಲು ಸ್ಥಿರವಾಗಿವೆ. ಉದಾಹರಣೆಗೆ Z=20 ಇರುವ ಕ್ಯಾಲ್ಸಿಯಮ್ ಧಾತುವಿನ ಐಸೊಟೋಪುಗಳು $^{40}_{20}Ca$, $^{42}_{20}Ca$, $^{43}_{20}Ca$, $^{44}_{20}Ca$, $^{46}_{20}Ca$, ಮತ್ತು $^{48}_{20}Ca$.

2. ಹೆಚ್ಚು ಭಾರವಿಲ್ಲದ ಧಾತುಗಳ ಐಸೊಟೋಪುಗಳೆಲ್ಲ ಸ್ಥಿರಗಳೇ. ಉದಾಹರಣೆಗೆ ಆವರ್ತಕೋಷ್ಟಕದಲ್ಲಿ ಪರಮಾಣುಸಂಖ್ಯೆ 18ರ ತನಕದ ಐಸೊಟೋಪುಗಳೆಲ್ಲ ಸ್ಥಿರಗಳೇ.

3. ಪರಮಾಣು ಸಂಖ್ಯೆ Z (ಪ್ರೋಟಾನುಗಳ ಸಂಖ್ಯೆ) ಮತ್ತು ನ್ಯೂಟ್ರಾನುಗಳ ಸಂಖ್ಯೆ ಪರಸ್ಪರ ಸಮಾನವಾಗಿ ಇರುವ ಕಣಗಳೆಲ್ಲವೂ ಸುಸ್ಥಿರಗಳೇ. ಇದು Z ಅಲ್ಪವಿರುವ ಎಲ್ಲ ಐಸೊಟೋಪುಗಳಿಗೆ ಅನ್ವಯಿಸುತ್ತದೆ. ಉದಾಹರಣೆಗೆ $^{2}_{1}H$ ಡ್ಯೂಟೀರಿಯಮ್, ಗುರುತರ ಹೈಡ್ರೊಜನ್), $^{4}_{2}He$ $^{16}_{8}O$ ಮೊದಲಾದವು ತೀರಸ್ಥಿರ ಐಸೊಟೋಪುಗಳು.

4.

| | | ಪ್ರೋಟಾನುಗಳ ಸಂಖ್ಯೆ (Z) | |
|---|---|---|---|
| | | ಸಮ | ಬೆಸ |
| ನ್ಯೂಟ್ರಾನುಗಳ ಸಂಖ್ಯೆ (N) | ಸಮ | 164 | 50 |
| | ಬೆಸ | 54 | 4 |

N, Zಗಳೆರಡೂ ಸಮಸಂಖ್ಯೆಗಳಾದ ಐಸೊಟೋಪುಗಳ ಸಂಖ್ಯೆ ಹೆಚ್ಚು (164). ಇವೆರಡೂ ಬೆಸಸಂಖ್ಯೆಗಳಾಗಿ ಉಳ್ಳ ಐಸೊಟೋಪುಗಳು ತೀರ ವಿರಳ (ನಾಲ್ಕು ಮಾತ್ರ), N, Zಗಳಲ್ಲಿ ಯಾವುದಾದರೊಂದು ಸಮ ಇನ್ನೊಂದು ಬೆಸಸಂಖ್ಯೆ ಉಳ್ಳ ಐಸೊಟೋಪುಗಳು ಸುಮಾರು 50, 54 ರಂತಿವೆ. ಎರಡೂ ಬೆಸಸಂಖ್ಯೆ ಉಳ್ಳ ಐಸೊಟೋಪುಗಳು ಈ ಕೆಳಗಿನ ನಾಲ್ಕು ಮಾತ್ರ



$$^{2}_{1}H,\ ^{6}_{3}Li,\ ^{10}_{5}B,\ ^{14}_{7}N$$

5. ಸಮ ಸಮಸಂಖ್ಯೆಯ ಪ್ರೋಟಾನ್ ಮತ್ತು ನ್ಯೂಟ್ರಾನುಗಳಿರುವ $^{13}_{8}O$ $^{24}_{12}Mg$, $^{28}_{14}Si$, $^{40}_{20}Ca$, $^{48}_{22}Ti$ ಮತ್ತು $^{56}_{26}Fe$ ಬಹಳ ಹೇರಳವಾಗಿವೆ. ಈ ಐಸೊಟೋಪುಗಳಿಂದಲೆ ಭೂಮಿಯ ಪೃಷ್ಠದ 80% ತುಂಬಿದೆ.

6. ಸಮಸಂಖ್ಯೆಯ Z ಉಳ್ಳ ಧಾತುವಿನ ಐಸೊಟೋಪುಗಳಲ್ಲಿ ಪರಮಾಣುಭಾರ ಸಮ ಆಗಿರುವಂಥವೇ ಹೆಚ್ಚು. ಉದಾಹರಣೆಗೆ Z=54 ಇರುವ ಕ್ಸೆನಾನಿನ ಐಸೊಟೋಪುಗಳಲ್ಲಿ 129, 131 ಮಾತ್ರ ಬೆಸಸಂಖ್ಯೆಯ ಭಾರದವು. ಉಳಿದವುಗಳ ಭಾರಗಳು 124, 126, 128, 130, 132, 134 ಮತ್ತು 136. ಇದು (4)ರಲ್ಲಿ ಪ್ರಸ್ತಾಪಿಸಿದ ವಿವರಗಳನ್ನೇ ಪುಷ್ಟೀಕರಿಸುತ್ತದೆ.

7. ತವರದ ಅನಂತರ ಬಿಸ್ಮತ್ ತನಕದ ಧಾತುಗಳಿಗೆ ಅನೇಕ ಐಸೊಟೋಪುಗಳಿವೆ.

ಐಸೊಟೋಪುಗಳ ಸಾಪೇಕ್ಷ ವೈಪುಲ್ಯ : ಯಾವ ಧಾತುಗಳಿಗೆ ವಿಪುಲ ಸಂಖ್ಯೆಯ ಐಸೊಟೋಪುಗಳಿವೆ? ಪರಮಾಣುಸಂಖ್ಯೆ 50 ಇರುವ ತವರದ 10 ಐಸೊಟೋಪುಗಳಿವೆ. ಇದರ ಅನಂತರದ ಎಲ್ಲ ಪರಮಾಣುಗಳಲ್ಲಿ ಇರುವ ಐಸೊಟೋಪುಗಳ ಸಂಖ್ಯೆಯೂ ಅಧಿಕವಾಗಿದೆ.

| ಧಾತು | ಪರಮಾಣುಸಂಖ್ಯೆ | ಐಸೊಟೋಪುಗಳ ಭಾರಗಳು |
|---|---|---|
| ಟಿನ್, Sn | 50 | 112, 114, 115, 116,1174 118, 119, 120, 122,12, |
| ಗೆಡೊಲೀನಿಯಂ, Gd | 64 | 152, 154, 155, 156,157, 158, 160 |
| ಟಂಗ್‌ಸ್ಟನ್, W | 74 | 180, 182, 183, 184,186 |
| ಪ್ಲ್ಯಾಟಿನಂ, Pt | 78 | 190, 192, 194, 195,196, 198 |
| ಮರ್ಕ್ಯುರಿ (ಪಾದರಸ), Hg | 80 | 196, 198,199, 200,201, 202, 204 |

ಇಲ್ಲಿ ನಾವು ಸ್ಥಿರ ಐಸೊಟೋಪುಗಳನ್ನು ಮಾತ್ರ ಪ್ರಸ್ತಾಪಿಸಿದ್ದೇವೆ. ಕೆಲವು ಧಾತುಗಳ ಸ್ಥಿರ ಐಸೊಟೋಪುಗಳನ್ನು ಮೇಲಿನ ಯಾದಿಯಲ್ಲಿ ಬರೆದಿದೆ. ಪರಮಾಣು ಸಂಖ್ಯೆ ಸುಮಾರು 50ರ ತರುವಾಯದ 90%ರಷ್ಟು ಧಾತುಗಳಲ್ಲಿ ಐಸೊಟೋಪುಗಳು ಅಧಿಕಸಂಖ್ಯಾತವಾಗಿವೆ ಎಂಬುದು ಸ್ಪಷ್ಟವಿದೆ.

ಒಂದೇ ಧಾತುವಿನ ಐಸೊಟೋಪುಗಳ ನಿಷ್ಪತ್ತಿ : ಒಂದೇ ಧಾತುವಿನ ವಿವಿಧ (ಸ್ಥಿರ) ಐಸೊಟೋಪುಗಳಲ್ಲಿ ಯಾವ ಐಸೊಟೋಪ್ ಅಧಿಕವಾಗಿದೆ, ಯಾವುದು ಕಡಿಮೆ ಇದೆ ಎನ್ನುವುದರ ವಿಚಾರ ಎರಡನೆಯದು. ಇದನ್ನು ಐಸೊಟೋಪುಗಳ ವೈಪುಲ್ಯ ಎನ್ನುವುದಕ್ಕಿಂತಲೂ, ಇತ್ತೀಚೆಗೆ, ವಿವಿಧ ಐಸೊಟೋಪುಗಳು ಒಂದೇ ಧಾತುವಿನಲ್ಲಿರುವ ಸೇಕಡಾ (ಇಲ್ಲವೆ ನಿಷ್ಪತ್ತಿ) ಎನ್ನುತ್ತಾರೆ. ಹೈಡ್ರೊಜನ್ನಿನ ಪರಮಾಣುಭಾರ 1.008 ; ಪರಮಾಣುಸಂಖ್ಯೆ 1 ; ಇದರಲ್ಲಿ ಸ್ಥಿರವಾದ ಐಸೊಟೋಪುಗಳು ಎರಡು $^{1}_{1}H$ ಮತ್ತು $^{2}_{1}H$ ಇವು 99.98% ಮತ್ತು 0.02% ರಂತೆ ಸಾಮಾನ್ಯ ಹೈಡ್ರೊಜನ್ನಿನಲ್ಲಿ ಕಂಡುಬರುತ್ತವೆ. ಹೈಡ್ರೊಜನ್ನಿನ ಇನ್ನೊಂದು ಐಸೊಟೋಪ್ $^{3}_{1}H$ (ಟ್ರೈಟಿಯಮ್ 3) ಇದರಲ್ಲಿ 1 ಪ್ರೋಟಾನ್, 2 ನ್ಯೂಟ್ರಾನುಗಳಿವೆ. ಆದರೆ ಇದು ವಿಕಿರಣಶೀಲ ನ್ಯೂಕ್ಲಿಯಸ್ ಇದ್ದು $\beta$ ಕಣಗಳನ್ನು ಕಕ್ಕುತ್ತ ಕ್ಷಯಿಸುವುದು ; ಸರಿಯಾಗಿ ಹೇಳುವುದಾದರೆ ಹೀಲಿಯಮ್ ಆಗಿ ಪರಿವರ್ತನೆಗೊಳ್ಳುತ್ತದೆ. ಇದರ ಅರ್ಧಾಯು(ಹಾಫ್ ಲೈಫ್) 12.1 ವರ್ಷಗಳು. ಅಂತೆಯೇ ಇನ್ನೂ ಕೆಲವು ಧಾತುಗಳ ಐಸೊಟೋಪುಗಳ ಕಕ್ಕುವ ವಿಕಿರಣಗಳನ್ನೂ ಹಾಗೆಯೇ ಅವುಗಳ ಅರ್ಧಾಯುಗಳನ್ನೂ ಮುಂದೆ ಕೊಟ್ಟಿದೆ.

| ಸಂಕೇತ | ಧಾತು | ಪರಮಾಣುಸಂಖ್ಯೆ Z | ಪರಮಾಣುಭಾರ | ಐಸೊಟೋಪುಭಾರ Z+N | ನಿಷ್ಪತ್ತಿ |
|---|---|---|---|---|---|
| H | ಹೈಡ್ರೊಜನ್ | 1 | 1.008 | 1 | 99.98 |
| | | | | 2 | 0.02 |
| Ne | ನಿಯಾನ್ | 10 | 20.183 | 20 | 90.00 |
| | | | | 21 | 0.27 |
| | | | | 22 | 9.73 |
| P | ಫಾಸ್ಪರಸ್ | 15 | 30.974 | 31 | 100.00 |
| Zn | ಝಿಂಕ್ (ಸತು) | 30 | 65.38 | 64 | 50.90 |
| | | | | 66 | 27.30 |
| | | | | 67 | 3.90 |
| | | | | 68 | 17.40 |
| | | | | 70 | 0.50 |

ಇನ್ನು ಇವೇ ಧಾತುಗಳ ಕೆಲವು ಅಸ್ಥಿರ (ವಿಕಿರಣಶೀಲ) ಐಸೊಟೋಪುಗಳ ವಿವರ ಹೀಗಿದೆ.

| ಧಾತು | ಅಸ್ಥಿರ ಐಸೊಟೋಪ್ | ವಿಕಿರಣ | ಅರ್ಧಾಯು |
|---|---|---|---|
| $_1$ಹೈಡ್ರೊಜನ್ | $^3_1H$ | $\beta^-$ ಕಣ | 12.3 ವರ್ಷಗಳು |
| $_{10}$ನಿಯಾನ್ | $^{19}_{10}Ne$ | $\beta^+$ ಕಣ | 18 ಸೆಕೆಂಡುಗಳು |
| | $^{23}_{10}Ne$ | $\beta^-$ ಕಣ | 38 ಸೆಕೆಂಡುಗಳು |
| $_{15}$ಫಾಸ್ಫರಸ್ | $^{29}_{15}P$ | $\beta^+$ ಕಣ | 4.3 ಸೆಕೆಂಡುಗಳು |
| | $^{30}_{15}P$ | $\beta^+$ ಕಣ | 2.5 ಮಿನಿಟುಗಳು |
| | $^{30}_{15}P$ | $\beta^-$ ಕಣ | 14.5 ದಿವಸಗಳು |
| | $^{34}_{15}P$ | $\beta^-$ ಕಣ | 12.4 ಸೆಕೆಂಡುಗಳು |
| $_{30}$ಝಿಂಕ್ | $^{65}_{30}Zn$ | $\beta^+$ ಕಣ ಮತ್ತು $\gamma$ | 245 ದಿವಸಗಳು |
| | $^{69}_{30}Zn$ | $\beta^-$ ಕಣ | 55 ಮಿನಿಟುಗಳು |
| | $^{71}_{30}Zn$ | $\beta^-$ ಕಣ | 2.2 ಮಿನಿಟುಗಳು |

ಐಸೊಟೋಪ್‌ಸಂಖ್ಯೆ (I) : ಒಂದು ನ್ಯೂಕ್ಲಿಯಸಿನಲ್ಲಿ ಭಾರ ಹೆಚ್ಚಿದಂತೆ ನ್ಯೂಟ್ರಾನುಗಳ ಸಂಖ್ಯೆ ಪ್ರೋಟಾನುಗಳ ಸಂಖ್ಯೆಗಿಂತ ಹೆಚ್ಚುತ್ತ ಹೋಗುತ್ತದೆ. ಇವುಗಳ ವ್ಯತ್ಯಾಸ ಅಂದರೆ (N–Z)ನ್ನು ಐಸೊಟೋಪ್ ಸಂಖ್ಯೆ ಎಂದು (ಸುಮಾರು 1921ರಿಂದ) ಕರೆಯಲಾಗುತ್ತಿದೆ. $N-Z=A-2Z$. ಇದಕ್ಕೆ ಐಸೊಟೋಪ್ ಸಂಖ್ಯೆ ಎಂದು ಹೆಸರು ಅನ್ವರ್ಥಕವಲ್ಲ. ಆದರೆ 1919–21ರ ನಡುವೆ ಐಸೊಟೋಪುಗಳ ಹೊಸತನ ಮೂಡಿದ ಸನ್ನಿವೇಶದಲ್ಲಿ ಮಾಡಿದ ನಾಮಕರಣ ಹಾಗೆಯೇ ಉಳಿದಿದೆ. ನ್ಯೂಕ್ಲಿಯಸಿನ ಒಟ್ಟು ಬಂಧಕ ಶಕ್ತಿಯನ್ನು ಎಣಿಸುವಾಗ ಇದರ ಲೆಕ್ಕಾಚಾರ ಕಂಡುಬರುತ್ತದೆ. ನ್ಯೂಟ್ರಾನುಗಳ ಆಧಿಕ್ಯದ ವರ್ಗಕ್ಕೆ ಅನುಪಾತಿತವಾದ ಶಕ್ತಿ ಒಟ್ಟು ಬಂಧಕ ಶಕ್ತಿಯಲ್ಲಿ ಕಡಿಮೆಯಾಗುತ್ತದೆ.

ರೋಹಿತಗಳಲ್ಲಿ ಐಸೊಟೋಪುಗಳ ಪರಿಣಾಮ : ರೋಹಿತದಲ್ಲಿ ಪ್ರತಿಯೊಂದು ಪರಮಾಣುವೂ ತನ್ನ ವಿಶಿಷ್ಟವಾದ ಬಣ್ಣದ ರೇಖೆಗಳನ್ನು ಪ್ರದರ್ಶಿಸುವುದು. ಈ ಕಾರಣದಿಂದಲೇ ಅತಿಸೂಕ್ಷ್ಮ ಪರಿಮಾಣದ ಧಾತುಗಳನ್ನು ಸಹ ಗುರುತಿಸಲು ಬರುತ್ತದೆ. ಪ್ರತಿ ಪರಮಾಣು ತೋರತಕ್ಕ ಬೆಳಕಿನ ತರಂಗಮಾನವನ್ನು ಕೊಡುವ ಸೂತ್ರವಿದೆ. ಇದರಲ್ಲಿ ರೈಡ್‌ಬರ್ಗ್‌ನ ಸ್ಥಿರಾಂಶವೆಂಬ ಸಂಖ್ಯೆ ಪರಮಾಣುವಿನ ನ್ಯೂಕ್ಲಿಯಸಿನ ಭಾರಕ್ಕೆ ಅನುಗುಣವಾಗಿ ಹೆಚ್ಚು ಕಡಿಮೆಯಾಗುತ್ತದೆ. ಉದಾಹರಣೆಗೆ $^4_2$ ಹೀಲಿಯಂನ $\left(^4_2He\right)$ಸ್ಥಿರಾಂಕ $R_\infty/(1+m/4M_H)$ ಎಂದಿದ್ದರೆ $^3_2$ ಹೀಲಿಯಂನ $\left(^3_2He\right)$ಸ್ಥಿರಾಂಕ ಅವಶ್ಯವಾಗಿಯೂ $R_\infty/(1+m/3M_H)$ ಎಂದಾಗುತ್ತದೆ. ಇದರ ಫಲವಾಗಿ ಈ ಐಸೊಟೋಪ್ ತೋರುವ ಬೆಳಕಿನ ತರಂಗಮಾನ ಪ್ರತ್ಯೇಕವೇ. ಅತ್ಯಲ್ಪ ಅಂತರವನ್ನು ಇದು ತೋರುತ್ತದೆ. ಹೀಗೆ ಹೀಲಿಯಂ ಧಾತುವಿನ ಬೆಳಕಿನ ತರಂಗಗಳು ಶುದ್ಧರೇಖೆಗಳಾಗಿರುವ ಬದಲು ತುಸು ಅಗಲಕ್ಕೆ ಹರಡಿರುವಂತೆ ಕಾಣುತ್ತವೆ. ಇದನ್ನು ಐಸೊಟೋಪುಗಳ ಪರಿಣಾಮ ಇಲ್ಲವೆ ಇವುಗಳ ದೆಸೆಯಿಂದ ತರಂಗಸ್ಥಾನಾಂತರ (ವೇವ್‌ಶಿಫ್ಟ್) ಎನ್ನುತ್ತಾರೆ.

ಅಣುಗಳಲ್ಲೂ ಶುದ್ಧ ಧಾತುಗಳ ಬದಲು ಇತರ ಐಸೊಟೋಪುಗಳು ಸೇರಿದ್ದಲ್ಲಿ ವಿವಿಧ ಅಣುಗಳು ತಂತಮ್ಮ ಅಕ್ಷಗಳ ಸುತ್ತಲೂ ಆವರ್ತಿಸುವ ವೇಗ ಅಲ್ಲಿನ ಐಸೊಟೋಪುಗಳ ಭಾರಾಧಿಕ್ಯ, ಭಾರದ ಕೊರತೆಯ ಕಾರಣ ವ್ಯತ್ಯಾಸವಾಗುತ್ತದೆ. ಇದರ ಫಲವಾಗಿ ಬೆಳಕಿನ ತರಂಗಗಳು ಅಗಲವಾಗುತ್ತವೆ. ಇದು ಕೂಡ ಇಂಥದೇ ಪರಿಣಾಮ. ದೃಶ್ಯಮಾನ ರೋಹಿತಲೇಖಕಗಳಲ್ಲಿ ಬೆಳಕಿನ ಜಾಗಗಳ ಇಂಥ ಅಗಲವಾಗುವಿಕೆಯನ್ನು ಅಳೆದು (ಮುಖ್ಯ ಅಲ್ಲಿನ ತರಂಗಗಳ ಉದ್ದಗಳನ್ನು ಅಳೆದು) ಐಸೊಟೋಪುಗಳ ಭಾರ ಹಾಗೂ ವೈಪುಲ್ಯಗಳನ್ನು ಅಳೆಯುವ ಕ್ರಮ ರೂಢಿಗೆ ಬಂದಿದೆ. ಅಂತೂ ಪರಮಾಣುವಿನ ಹಾಗೂ ಅಣುವಿನ ಸ್ಫುರಣೆ, ಸ್ಪಂದನ ಮತ್ತು ಆವರ್ತನಗಳಿಂದೊದಗುವ ಬೆಳಕಿನ ತರಂಗಗಳು ಅಗಲವಾಗುವುದಕ್ಕೆ ಐಸೊಟೋಪುಗಳೂ ಕಾರಣವಾಗಿವೆ.

ವಿಕಿರಣಶೀಲ ಐಸೊಟೋಪುಗಳು : ಇವು ಅಸ್ಥಿರ ಐಸೊಟೋಪುಗಳು. ನ್ಯೂಟ್ರಾನುಗಳು ನ್ಯೂಕ್ಲಿಯಸಿನಲ್ಲಿ ಹೆಚ್ಚು ಸಂಖ್ಯೆಯಲ್ಲಿದ್ದಾಗ $N>>Z$ ಆದಾಗ ನ್ಯೂಟ್ರಾನ್ ಪ್ರೋಟಾನ್ ಆಗಿ ಬೀಟಾ ಕಣವನ್ನು ತಳ್ಳುವುದು. ಹೀಗೆ ಧಾತು ಪರಿವರ್ತನೆ ಹೊಂದುತ್ತದೆ. ಇನ್ನೂ ಭಾರವಾದ ಐಸೊಟೋಪುಗಳು ಇತರ ವಿಕಿರಣಗಳನ್ನು ಕಕ್ಕುತ್ತವೆ. ಒಂದೇ ಧಾತುವಿನ ಐಸೊಟೋಪುಗಳ ನಿಷ್ಪತ್ತಿ ಎನ್ನುವ ಪರಿಚ್ಛೇದದಲ್ಲಿ ನಮೂದಿಸಿರುವ ಯಾದಿಯಲ್ಲಿ ಕೆಲವು ಸಾಮಾನ್ಯ ವಿಕಿರಣಶೀಲ ಐಸೊಟೋಪುಗಳ ವಿವರಗಳನ್ನು ಕೊಡಲಾಗಿದೆ. ಶತಮಾನಗಳ ಹಿಂದೆ ಕನಸಾಗಿದ್ದ ಧಾತುಪರಿವರ್ತನೆಯನ್ನು ಸಾಧ್ಯವೆಂದು ತೋರಿಸಿದ ರುದರ್‌ಫೋರ್ಡನ ಪ್ರಯೋಗಗಳು ಹೊಸ ಐಸೊಟೋಪುಗಳ ತಯಾರಿಕೆಗೆ ನೂತನ ಮಾರ್ಗವೊಂದನ್ನು ಕಲ್ಪಿಸಿದುವು.

ನೈಟ್ರೊಜನ್ ನ್ಯೂಕ್ಲಿಯಸನ್ನು ಆಲ್ಫಕಣದಿಂದ (ಹೀಲಿಯಂ ಬೀಜದಿಂದ) ತಾಡಿಸಿದಾಗ ಆಕ್ಸಿಜನ್ನಿನ 17 ಭಾರದ ಐಸೊಟೋಪ್ ಮತ್ತು ಒಂದು ಪ್ರೋಟಾನ್ (ಹೈಡ್ರೊಜನ್ನಿನ ನ್ಯೂಕ್ಲಿಯಸ್) ಬಿಡುಗಡೆಯಾದುವು.



$$^{14}_7N + {}^4_2He \rightarrow {}^{17}_8O + {}^1_1H$$

$^{17}_8O$ ಎಂಬುದು ಆಕ್ಸಿಜನ್ನಿನ ಸಾಕಷ್ಟು ಧಾರಾಳವಾಗಿರುವ ಸ್ಥಿರ ಐಸೊಟೋಪು. ಆದರೆ ಮುಂದೆ ಆಲ್ಫಕಣ, ಪ್ರೋಟಾನ್ ಮುಂತಾದವುಗಳೊಡನೆ ವಿದ್ಯುತ್ತಟಸ್ಥವಾದ ನ್ಯೂಟ್ರಾನುಗಳನ್ನು ಉಪಯೋಗಿಸಿ ಇಂಥ ಅಸಂಖ್ಯ ನ್ಯೂಕ್ಲಿಯರ್ ಕ್ರಿಯೆಗಳನ್ನು (ನ್ಯೂಕ್ಲಿಯರ್ ರಿಆಕ್ಷನ್ಸ್) ಸಾಧಿಸಿದರಲ್ಲದೆ ಅನೇಕ ವಿಕಿರಣಶೀಲ ಐಸೊಟೋಪುಗಳನ್ನೂ ಒದಗಿಸಿಕೊಂಡರು. ಇದೀಗ ಇಂಥ ನೂರುಗಟ್ಟಳೆ ವಿಕಿರಣಶೀಲ ಐಸೊಟೋಪುಗಳು ಇಂಥ ಕ್ರಿಯೆಗಳಲ್ಲೂ ಇಲ್ಲವೇ ನ್ಯೂಕ್ಲಿಯರ್ ರಿಯಾಕ್ಟರುಗಳಲ್ಲಿ ಹಲವು ನ್ಯೂಕ್ಲಿಯಸುಗಳನ್ನು ನ್ಯೂಕ್ಲಿಯಸ್ಸಿನ ಕಣಗಳಿಂದ (ಮುಖ್ಯ ನ್ಯೂಟ್ರಾನುಗಳಿಂದ) ತಾಡಿಸಿದುದರಿಂದಲೂ ಉತ್ಪತ್ತಿಯಾಗಿವೆ. ಇಲ್ಲಿ ಕೆಲವೇ ಉದಾಹರಣೆಗಳನ್ನು ಕೊಡಲಾಗಿದೆ :



$$^{14}_7N + {}^1_0n \rightarrow {}^{14}_6C + {}^1_1H$$

$^{14}_6C$ ವಿಕಿರಣಶೀಲ ಗುಣವುಳ್ಳ ಇಂಗಾಲದ ಐಸೊಟೋಪ್. ಇದರ ಅರ್ಧಾಯು 5,570 ವರ್ಷ ; ಇದು $\beta$ ಕಣಗಳನ್ನು ಕಕ್ಕುತ್ತದೆ.



$$^{23}_{11}Na + {}^1_1H \rightarrow {}^{22}_{11}Na + {}^1_1p + {}^1_0n$$

$^{22}_{11}Na$ ವಿಕಿರಣಶೀಲ ಸೋಡಿಯಂ ಧಾತು. ಇದು $\gamma$ ವಿಕಿರಣಗಳನ್ನು ಕಕ್ಕುತ್ತದೆ. ಇದರ ಅರ್ಧಾಯು 2·6 ವರ್ಷಗಳು.



$$^{27}_{13}Al + {}^4_2He \rightarrow {}^{30}_{15}P + {}^1_0n$$

($\alpha$ಕಣ)

ಅಲ್ಯೂಮಿನಿಯಮಿನಿಂದ ಒದಗಿದ ಫಾಸ್ಫರಸ್ 30 ವಿಕಿರಣಶೀಲವಿದ್ದು ಪಾಸಿಟ್ರಾನುಗಳನ್ನು ಕಕ್ಕುತ್ತದೆ. ಇದರ ಅರ್ಧಾಯು 3 ಮಿನಿಟುಗಳು.



$$^{75}_{33}As + {}^1_0n \rightarrow {}^{76}_{33}As + \gamma \text{ ವಿಕಿರಣ}$$

ಆರ್ಸೆನಿಕ್ 76 ವಿಕಿರಣಶೀಲವಿದ್ದು $\beta$ ಕಣ ಮತ್ತು $\gamma$ ವಿಕಿರಣಗಳನ್ನು ಕಕ್ಕುತ್ತದೆ. ಇದರ ಅರ್ಧಾಯು 26·8 ಗಂಟೆಗಳು.

ಒಂದೇ ಧಾತುವಿನ ಐಸೊಟೋಪುಗಳ ಪ್ರತ್ಯೇಕೀರಣ ವಿಧಾನಗಳು : ಈ ನೂರು ನಾಲ್ಕು ದಶಕಗಳಲ್ಲಿ ಹಲವು ವಿಧಾನಗಳು ಬಳಕೆಗೆ ಬಂದಿವೆ. ಅವುಗಳ ಸ್ಥೂಲಪರಿಚಯವನ್ನಷ್ಟೇ ಇಲ್ಲಿ ಕೊಡಲಾಗುವುದು.

ಅನಿಲಗಳ ವಿಸರಣ (ಡಿಫ್ಯೂಷನ್) ವಿಧಾನ : ಅನಿಲಗಳನ್ನು ಬೆರೆಸಿದಾಗ ಇವು ಪರಸ್ಪರ ವಿಸರಣೆಗೊಳ್ಳುವ ವೇಗಗಳು ಅವುಗಳ ಸಾಂದ್ರತೆಗಳ ವರ್ಗಮೂಲಗಳ ವಿಲೋಮನಿಷ್ಪತ್ತಿಯಲ್ಲಿವೆ. ಇಂಥವುಗಳಲ್ಲಿ ವಿವಿಧ ಐಸೊಟೋಪುಗಳಿದ್ದಾಗ ಈ ನಿಷ್ಪತ್ತಿಯಲ್ಲಿ ವ್ಯತ್ಯಾಸ ಕಂಡುಬರುತ್ತದೆ. ಐಸೊಟೋಪುಗಳು ತಂತಮ್ಮ ಭಾರ ಹಾಗೂ ಸಾಂದ್ರತೆಗಳಿಗನುಣವಾಗಿ ಪ್ರತ್ಯೇಕಗೊಳ್ಳುತ್ತವೆ. ಆಸ್ಟನ್ 1913ರಲ್ಲಿ $^{20}$ ನಿಯಾನ್ ಮತ್ತು $^{22}$ ನಿಯಾನುಗಳನ್ನೂ ಹಾರ್ಕಿನ್ಸ್ 1921ರಲ್ಲಿ $^{35}$ ಕ್ಲೋರಿನ್ ಮತ್ತು $^{37}$ ಕ್ಲೋರಿನುಗಳನ್ನೂ ಇಂಥದೇ ವಿಧಾನದಿಂದ ಪ್ರತ್ಯೇಕಿಸಿದರು. ಇದು ಬಹಳ ಸಾವಧಾನವಾಗಿ ಜರಗುವ ಕ್ರಿಯೆ.

ಚೂಪಾದ ನಳಿಗೆಯಿಂದ ನಿರ್ಗಮನ ವಿಧಾನ : ವಿವಿಧ ಐಸೊಟೋಪುಗಳನ್ನು ಒಳಗೊಂಡ ಅನಿಲಗಳನ್ನು ವಾತಾವರಣ ಒತ್ತಡಕ್ಕಿಂತಲೂ ಕಡಿಮೆ ಒತ್ತಡವಿರುವ ಆವರಣದೊಳಗೆ ಚೂಪಾದ ನಳಿಗೆಯ ಮೂಲಕ ಹರಿಯಗೊಟ್ಟಾಗ ಹೆಚ್ಚು ಭಾರದ ಐಸೊಟೋಪುಗಳು ಪ್ರತ್ಯೇಕಗೊಳ್ಳುತ್ತವೆ. ಪುನಃ ಮಧ್ಯಭಾಗದಲ್ಲಿ ಇನ್ನೊಂದು ನಳಿಗೆಯ ಮೂಲಕ ಹರಿಯಿಸಿ ಪುನಃ ಹೀಗೆಯೇ ಹರಿಯಗೊಟ್ಟು ಪುನಃ ಪ್ರತ್ಯೇಕೀಕರಣವನ್ನು ಹೆಜ್ಜೆಹೆಜ್ಜೆಯಾಗಿ, ಅಂದರೆ ಕ್ಯಾಸ್ಕೇಡ್ ಕ್ರಮದಲ್ಲಿ, ಸಾಧಿಸ ಬಹುದು.

ವಿದ್ಯುತ್ಕಾಂತಕ್ಷೇತ್ರಗಳ ನೆರವಿನಿಂದ ಪ್ರತ್ಯೇಕೀಕರಣ : ವಿದ್ಯುತ್ಕಾಂತಕ್ಷೇತ್ರ ಗಳನ್ನು ಐಸೊಟೋಪುಗಳ ಪಥದ ಸುತ್ತಲೂ ತಕ್ಕಂತೆ ಉಪಯೋಗಿಸಿ ವಿವಿಧ ಭಾರದ ಐಸೊಟೋಪುಗಳನ್ನು ಪ್ರತ್ಯೇಕಿಸಲಾಗಿದೆ.

ಉಷ್ಣತಾಪ್ರವಣದಲ್ಲಿ (ಟೆಂಪರೇಚರ್ ಗ್ರೇಡಿಯಂಟ್) ಐಸೊಟೋಪುಗಳ ವಿಸರಣ ವಿಧಾನ : ಸೀಮಿತ ಆವರಣದಲ್ಲಿ ಉಷ್ಣತಾಪ್ರವಣವನ್ನು ಒದಗಿಸಿಕೊಂಡಲ್ಲಿ ವಿವಿಧ ಭಾರವುಳ್ಳ ಐಸೊಟೋಪುಗಳಲ್ಲಿ ಕಡಿಮೆ ಭಾರದವು ಹೆಚ್ಚು ಉಷ್ಣತೆಯತ್ತ ಸರಿಯುತ್ತಲೂ ಪ್ರತ್ಯೇಕಗೊಳ್ಳುವುವು. ಕ್ಲಾಸಿಯಸ್ ಮತ್ತು ಡಿಕೆಲ್ ಎಂಬುವರು ಈ ವಿಧಾನದಿಂದ ನಿಯಾನ್ ಮತ್ತು ಕ್ಲೋರಿನುಗಳ ಐಸೊಟೋಪುಗಳನ್ನು ಪ್ರತ್ಯೇಕಿಸಿದರು.

ಕೇಂದ್ರಾಪಗಮನ (ಸೆಂಟ್ರಿಫ್ಯೂಗಲ್) ತಳ್ಳುವಿಕೆಯ ವಿಧಾನ : ವಿವಿಧ ಭಾರಗಳ ಐಸೊಟೋಪುಗಳ ಮಿಶ್ರಣವನ್ನು ಒಂದು ಸ್ತಂಭದಲ್ಲಿ ವೇಗವಾಗಿ ಆವರ್ತಿಸುವಂತೆ ಮಾಡಿದಾಗ ಭಾರತರ ಐಸೊಟೋಪುಗಳು ಅಕ್ಷದಿಂದ ದೂರಸರಿದು ಪ್ರತ್ಯೇಕ ಗೊಳ್ಳುವುವು, ಹಗುರವಾದವು ಅಕ್ಷದ ಹತ್ತಿರ ಕಲೆಯುವುವು. ಕ್ಲೋರಿನ್ ಮತ್ತು ಬ್ರೋಮಿನುಗಳ ಐಸೊಟೋಪುಗಳನ್ನು ಹೀಗೆ ಪ್ರತ್ಯೇಕಿಸಲಾಗಿದೆ.

ವಿದ್ಯುದ್ವಿಶ್ಲೇಷಣ (ಎಲೆಕ್ಟ್ರೊಲಿಟಿಕ್) ವಿಧಾನ : ಇದು ಹೈಡ್ರೊಜನ್, ಲಿಥಿಯಂ ಮೊದಲಾದ ಕಡಿಮೆ ಭಾರದ ಧಾತುಗಳ ಐಸೊಟೋಪುಗಳನ್ನು ಪ್ರತ್ಯೇಕಿಸಿದ ವಿಧಾನ. ನೀರಿನ ಮೂಲಕ ವಿದ್ಯುತ್ತನ್ನು ಹರಿಸಿದರೆ ಇದು ವಿಶ್ಲೇಷಣೆ ಹೊಂದುತ್ತದೆ. ಮೊತ್ತಮೊದಲು ಕ್ಯಾಥೋಡಿನತ್ತ ಹಗುರ ಹೈಡ್ರೊಜನ್ $\left( {}^{1}_{1}H \right)$ ಹರಿದು ನೀರಿನಲ್ಲಿ ಭಾರತರ ಹೈಡ್ರೊಜನ್ $\left( {}^{2}_{1}H \right.$ ಡ್ಯೂಟೇರಿಯಂ$\left. \right)$ ಉಳಿಯುವುದು. ಹೀಗೆ ಐಸೊಟೋಪುಗಳನ್ನು ಪ್ರತ್ಯೇಕಿಸಲಾಗಿದೆ. ಇದು ದೀರ್ಘ ಕಾಲಿಕ ಹಾಗೂ ಅಪರಿಮಿತ ವೆಚ್ಚದ ವಿಧಾನ.

ಆಂಶಿಕ ಆಸವನ (ಫ್ರಾಕ್ಷನಲ್ ಡಿಸ್ಟಿಲ್ಲೇಷನ್) ವಿಧಾನ : ಶಿಷ್ಟ ಒತ್ತಡ ಮತ್ತು ಉಷ್ಣತೆಗಳಲ್ಲಿ 100° ಸೆಂ. ನಲ್ಲಿ ಹಗುರನೀರು ($H_2O$) ಕುದ್ದರೆ ಭಾರತರ ನೀರು ($D_2O$) 101.4° ಸೆಂ.ನಲ್ಲಿ ಕುದಿಯತಕ್ಕುದು. ಹೀಗೆ 100° ಸೆಂ.ನಲ್ಲಿ ಎಲ್ಲ ಹಗುರ ಹೈಡ್ರೊಜನ್ ಐಸೊಟೋಪ್ ಪ್ರತ್ಯೇಕಗೊಳ್ಳುತ್ತದೆ. ಇದೇ ಆಂಶಿಕ ಆಸವನ ವಿಧಾನದಿಂದ ಕ್ಲೋರಿನ್, ಪೊಟಾಸಿಯಂ ಮೊದಲಾದ ಧಾತುಗಳ ಐಸೊಟೋಪುಗಳನ್ನು ಪ್ರತ್ಯೇಕಿಸಲಾಗಿದೆ.

ರಾಸಾಯನಿಕ ವಿನಿಮಯ ವಿಧಾನ : ಒಂದೇ ಧಾತುವಿನ ವಿವಿಧ ಐಸೊಟೋಪು ಗಳು ಏಕಪ್ರಕಾರದ ರಾಸಾಯನಿಕ ಲಕ್ಷಣಗಳನ್ನು ತೋರುತ್ತವೆಯಾದರೂ ಹಗುರವಾಗಿರುವ ಐಸೊಟೋಪುಗಳು ಇಂಥ ಕ್ರಿಯೆಗಳಲ್ಲಿ ವೇಗತರವಾಗಿ ಭಾಗ ವಹಿಸುತ್ತವೆ. ಭಾರತರ ನೀರಿನೊಳಗೆ $\frac{1}{1}$ ಹೈಡ್ರೊಜನನ್ನು $\left( {}^{1}_{1}H \right)$ ಕಳುಹಿಸಿದರೆ ಇದು ಆಕ್ಸಿಜನ್ನಿನೊಡನೆ ಬೆರೆತು ಭಾರತರ ಹೈಡ್ರೊಜನನ್ನು $\left( {}^{2}_{1}D \right)$ ಪ್ರತ್ಯೇಕಿಸುತ್ತದೆ. ಅಂತೂ ಇಂಥ ವಿಧಾನದಿಂದ $^{34}$ ಗಂಧಕದ ತನಕ ಹಗುರವಾದ ಐಸೊಟೋಪುಗಳನ್ನೆಲ್ಲ ಪ್ರತ್ಯೇಕಿಸಲು ಬಂದಿದೆ.

ಐಸೊಟೋಪುಗಳ (ಸ್ಥಿರ ಮತ್ತು ಅಸ್ಥಿರ) ಉಪಯೋಗಗಳು: ಹಲವು ಜೀವ ಕಾರ್ಯಗಳ ಅಧ್ಯಯನದಲ್ಲಿ ಡ್ಯೂಟೇರಿಯಮ್ $\left( {}^{2}_{1}D \right)$ $^{15}_{7}$ ನೈಟ್ರೊಜನ್ $\left( {}^{15}_{7}N \right)$ ಎಂಬ ಸ್ಥಿರ ಐಸೊಟೋಪುಗಳು ಬಹಳ ಉಪಯುಕ್ತವಾಗಿವೆ. ಮೊನ್ನೆ ಮೊನ್ನೆಯ ತನಕ ನಾವು ಸೇವಿಸಿದ ಆಹಾರ ಆಗಾಗಿನ ಆವಶ್ಯಕತೆಗಳಿಗೆ ಎಂದರೆ ಶಕ್ತಿಯ ಪೂರೈಕೆಗೆ ಮಾತ್ರ ಅವಶ್ಯವೆಂದು ತಿಳಿಯಲಾಗಿತ್ತು. ಹೈಡ್ರೊಜನ್ನಿನ ಬದಲು ಡ್ಯೂಟೇರಿಯಮ್ಮನ್ನೊಳಗೊಂಡ ಕೊಬ್ಬು, ಪ್ರೋಟೀನುಗಳನ್ನು ಸೇವಿಸಿ ದಾಗ ಇವು ಕೂಡಲೇ ವಿವಿಧ ಜಾಗಗಳನ್ನು ಸೇರುತ್ತವೆ; ಎಷ್ಟುಮಾತ್ರಕ್ಕೂ ಮಲ ಮೂತ್ರಗಳಲ್ಲಿ ಕೂಡಲೆ ವಿಸರ್ಜನೆಯಾಗುವುದಿಲ್ಲ ಎಂಬ ಜೀವಕಾರ್ಯದ ಹೊಸ ಕ್ರಾಂತಿಕಾರಕ ಶೋಧಕ್ಕೆ ಡ್ಯೂಟೇರಿಯಂ ನೆರವನ್ನಿತ್ತಿದೆ.

$^{15}$ನೈಟ್ರೊಜನನ್ನು ಉಪಯೋಗಿಸಿ ಜೀವಿಯಲ್ಲಿ ಕ್ರಿಯೇಟಿನ್ ಹೇಗೆ ಕ್ರಿಯೇಟಿನಿನ್ ಆಗಿ ಪರಿವರ್ತನೆ ಹೊಂದಬಲ್ಲುದೆಂದು ತಿಳಿದುಬಂದಿದೆ. ಇದನ್ನು ಉಪಯೋಗಿಸದೆ ಹೋದರೆ ಇಂಥ ಪ್ರಯೋಗಗಳು ಅಸಾಧ್ಯವೆನಿಸುತ್ತಿದ್ದುವು. ಕೊಬ್ಬಿನ ಪಚನ ಮತ್ತು ಆಸ್ವಾದನೆಗಳ ಅಧ್ಯಯನದಲ್ಲೂ ಡ್ಯೂಟೇರಿಯಂ ಮತ್ತು $^{15}$ನೈಟ್ರೊಜನ್ ನೆರವನ್ನಿತ್ತಿವೆ. ಸಾಮಾನ್ಯ ಕೆಂಪು ರಕ್ತಕಣವೊಂದರ ಜೀವಾವಧಿ ಎಷ್ಟು ಎಂಬ ನಿರ್ಣಯದಲ್ಲಿ ಕೂಡ ನೆರವನ್ನಿತ್ತ ಐಸೊಟೋಪುಗಳು $^{15}$ ನೈಟ್ರೊಜನ್. ರಕ್ತದಲ್ಲಿನ ಕೆಂಪುಕಣ ಸುಮಾರು 20 ದಿವಸಗಳಷ್ಟು ಕಾಲದಲ್ಲಿ ಬೆಳೆದು ಮುಂದೆ 80 ದಿವಸಗಳ ತನಕ ಉಳಿದು ಅನಂತರ ಕ್ಷಯಿಸುತ್ತದೆ. ಇಷ್ಟರಲ್ಲಿ ನಾಶವಾದ ರಕ್ತ ಕಣಗಳು ಪೂರೈಕೆಯಾಗಬೇಕು ಎಂದು ತಿಳಿದುಬಂದಿದೆ. $^{197}$ ಚಿನ್ನ ($^{197}Au$) ದಿಂದ $^{198}$ ಪಾದರಸ ($^{198}Hg$) ಎಂಬ ಐಸೊಟೋಪನ್ನು ಪಡೆಯಬಹುದು. ಇದರ ರೋಹಿತ ಅತ್ಯಂತ ಶುದ್ಧವಾಗಿದೆ. ಇದು ಸ್ಪಷ್ಟವಾದ ಮತ್ತು ಅಗಲವಾಗಿರದ ರೋಹಿತರೇಖೆಗಳನ್ನು ಕೊಡುವುದು. ರೋಹಿತಸಂಬಂಧವಾದ ಅಧ್ಯಯನಗಳಲ್ಲಿ ಇದು ಅಪಾರ ನೆರವನ್ನೀಯುತ್ತಿದೆ. (ಯು.ಎಲ್.ಐ.)

ಅಪಘಾತ ತಡೆಹಿಡಿಯಲು $^{60}Co$ ವನ್ನು ಉಪಯೋಗಿಸುತ್ತಾರೆ. ಮುದ್ರಣ ಯಂತ್ರಗಳಲ್ಲಿ ಮುದ್ರಿತವಾದ ಪ್ರತಿಗಳನ್ನು ಅಚ್ಚಿನೊಳಗಿಂದ ಹೊರತೆಗೆಯುವಾಗ ಅಥವಾ ಮುದ್ರಿತವಾಗಬೇಕಾದ ಪ್ರತಿಗಳನ್ನು ಅದರಲ್ಲಿಡುವಾಗ ತಡವಾದಲ್ಲಿ ಕೈ ಬೆರಳುಗಳು ಕತ್ತರಿಸಿಹೋಗುವ ಸಂಭವವಿರುತ್ತದೆ. ಈ ಅಪಘಾತ ತಪ್ಪಿಸಲು $^{60}Co$ ನಿಂದ ತಯಾರಿಸಲ್ಪಟ್ಟ ಉಂಗುರವನ್ನು ಉಪಯೋಗಿಸುವುದರಿಂದ ಉಂಗುರದಿಂದ ಹೊರಬರುವ ಗಾಮಾ ($\gamma$) ಕಿರಣಗಳ ಮೂಲಕ ವಿದ್ಯುನ್ಮಂಡಲ ಅಪೂರ್ಣವಾಗುವುದರಿಂದ ಯಂತ್ರದ ಕಾರ್ಯ ಸ್ಥಗಿತವಾಗಿ ಅಪಘಾತ ಸಂಭವಿಸು ವುದಿಲ್ಲ.

ಏಡಿಗಂತಿಯಿಂದ (ಕ್ಯಾನ್ಸರ್) ಬಳಲುವ ರೋಗಿಯ ಗಂತಿಸ್ಥಳಕ್ಕೆ $^{60}Co$ ನಿಂದ ಹೊರಟ ಗಾಮಾ ($\gamma$) ಕಿರಣಗಳನ್ನು ನಿರ್ದಿಷ್ಟ ಅವಧಿಯವರೆಗೆ ತಾಡಿಸಿ ರೋಗಿ ಯನ್ನು ಗುಣಪಡಿಸುತ್ತಾರೆ. ಐಸೊಟೋಪುಗಳ ಉಪಯೋಗದಿಂದ ಒಕ್ಕಲಿಗನಿಗೆ ಲಕ್ಷಾಂತರ ರೂಪಾಯಿ ಲಾಭವಾಗುತ್ತದೆ. ಬೆಳೆಗಳನ್ನು ನಾಶಮಾಡುವ ಮಿಡಿತೆ ಗಳಲ್ಲಿ ಒಂದನ್ನು ಹಿಡಿದು ಅದಕ್ಕೆ $^{60}Co$ ನಿಂದ ತಯಾರಿಸಲ್ಪಟ್ಟ ಬಣ್ಣವನ್ನು ಹಚ್ಚಿ ಬಿಟ್ಟುಬಿಡುತ್ತಾರೆ. ಸಂತಾನವೃದ್ಧಿ ಸಮಯದಲ್ಲಿ ಮಿಡಿತೆಗಳು ಒಟ್ಟಾಗುತ್ತವೆ. ಅಲ್ಲಿ ಈ ವರ್ಣಲೇಪಿತ ಮಿಡಿತೆಯೂ ಸೇರಿರುತ್ತದೆ. ಗುಣಕದ (ಕೌಂಟರ್) ಮೂಲಕ ಮಿಡಿತೆಗಳು ಒಟ್ಟಾಗಾದ ಸ್ಥಳವನ್ನು ಗುರುತಿಸಿ ಅಲ್ಪಕ್ರಿಮಿನಾಶಕಗಳನ್ನು ಉಪಯೋಗಿಸಿ ಅವನ್ನು ನಾಶಮಾಡುವರು.

ಬೆರಳುಗಳ ಅಗೋಚರ ಗುರುತುಗಳನ್ನು ಕಂಡುಹಿಡಿಯಲು ಐಸೊಟೋಪುಗಳನ್ನು ಉಪಯೋಗಿಸುತ್ತಾರೆ. ಆವರೆಗೆ ಪ್ರಚಲಿತವಿದ್ದ ವಿಧಾನ ಸೂಕ್ಷ್ಮವಾಗಿರಲಿಲ್ಲ. ಇಲ್ಲಿ $^{36}Cl$, $^{14}C$ ಐಸೊಟೋಪುಗಳನ್ನು ಉಪಯೋಗಿಸಿ ಆಟೊರೇಡಿಯೋಗ್ರಾಫಿಕ್ ವಿಧಾನ ದಿಂದ ಕೈಬೆರಳುಗಳ ಅಗೋಚರ ಗುರುತುಗಳನ್ನು ಚಿತ್ರಿಸುತ್ತಾರೆ. ಪರೀಕ್ಷಿಸಬೇಕಾದ ವಸ್ತುವನ್ನು ಒಂದು ಗಾಜಿನ ಕೊಳವೆಯಲ್ಲಿಟ್ಟು ಕೊಳವೆಯನ್ನು ನಿರ್ವಾತ ಮಾಡುವರು. $^{36}Cl$ನ್ನು $H^{36}Cl$ ರೂಪದಲ್ಲಿ ಕೊಳವೆಯಲ್ಲಿ ಬಿಡುವರು. ಒಂದು ವಾರದ ಅನಂತರ ವಸ್ತುವನ್ನು ಹೊರತೆಗೆದು ಅದರ ಛಾಯಾಚಿತ್ರ ತೆಗೆಯುವುದರಿಂದ ಅಗೋಚರವಾದ ಕೈಬೆರಳಿನ ಚಿತ್ರ ಸ್ಪಷ್ಟ ಕಾಣುತ್ತದೆ. ಈ ವಿಧಾನದಲ್ಲಿ $H^{36}Cl$ ದಲ್ಲಿಯ $^{36}Cl$ ಕೈಬೆರಳಿನ ಗುರುತಿನೊಳಗಿದ್ದ $Na^{35}Cl$ ಒಳಗಿನ $^{35}Cl$ ಒಂದಿಗೆ ವಿನಿಮಯಗೊಂಡಾಗ ಕೈ ಬೆರಳಿನ ಗುರುತಿನಲ್ಲೆ $Na^{36}Cl$ ಉಂಟಾಗಿ $^{36}Cl$ ನಿಂದ ಹೊರಬರುವ ಕಿರಣಗಳಿಂದ ಛಾಯಾಚಿತ್ರ ಪಟಲದ ಮೇಲೆ ಪರಿಣಾಮವಾಗಿ ಬೆರಳುಗಳ ಗುರುತುಗಳು ಸ್ಪಷ್ಟವಾಗಿ ಚಿತ್ರಪಟಲದ ಮೇಲೆ ಮೂಡುವುದರಿಂದ ಗುನ್ಹೆಗಾರನನ್ನು ಸುಲಭವಾಗಿ ಹಿಡಿಯಲು ಸಾಧ್ಯವಾಗುತ್ತದೆ.

$^{10}_{5}B$ ಐಸೊಟೋಪನ್ನು ಮಿದುಳಿನ ಏಡಿಗಂತಿಯನ್ನು ಗುಣಪಡಿಸಲು ಉಪಯೋಗಿಸುತ್ತಾರೆ. $^{10}_{5}B$ ಇರುವ ದ್ರಾವಣವನ್ನು ಶರೀರದಲ್ಲಿ ಬಿಟ್ಟರೆ ಅದು ಮಿದುಳಿನ ಗಂತಿಸ್ಥಳದಲ್ಲಿ ಹೋಗಿ ಸಂಗ್ರಹವಾಗುತ್ತದೆ. ರೋಗಿಯನ್ನು ಪರಮಾಣು ಕುಲುಮೆಯ ಮುಂದೆ ಕರೆತಂದು ಏಡಿಗಂತಿಯ ಸ್ಥಳವನ್ನು ನ್ಯೂಟ್ರಾನುಗಳಿಂದ ನಿರ್ದಿಷ್ಟ ಸಮಯದವರೆಗೆ ತಾಡಿಸಿದಾಗ ಕೆಳಗಿನ ಕ್ರಿಯೆಯಿಂದ



$$^{10}_{5}B + ^{1}_{0}n \rightarrow ^{7}_{3}Li + ^{4}_{2}He$$

ಅಲ್ಪಕಣ ಉತ್ಪತ್ತಿಯಾಗಿ ಅದು ರೋಗಪೀಡಿತವಾದ ಊತಕವನ್ನು ಸುಟ್ಟು ಹಾಕುತ್ತದೆ.

$^{131}I$ಯನ್ನು ಥೈರಾಯ್ಡ್ ಗ್ರಂಥಿ ಕಾರ್ಯವನ್ನು ಸರಿಪಡಿಸಲು ಉಪಯೋಗಿಸುತ್ತಾರೆ. ಗ್ರಂಥಿಗಳ ಅತಿ ಚಟುವಟಿಕೆಯಿಂದ ಹೈಪರ್ ಥೈರಾಯ್ಡಿಸಂ ಎಂಬ ರೋಗ ಉತ್ಪತ್ತಿಯಾಗುತ್ತದೆ. ಕಡಿಮೆ ಚಟುವಟಿಕೆಯಿಂದ ಹೈಪೊಥೈರಾಯ್ಡಿಸಂ ರೋಗ ಬರುತ್ತದೆ. ಈ ರೋಗಗಳಿಂದ ಮನುಷ್ಯನ ಪಚನಕ್ರಿಯೆಯ ಮೇಲೆ ಪರಿಣಾಮವಾಗುತ್ತದೆ. ಇವನ್ನು ಗುಣಪಡಿಸಲು $Na^{131}I$ ಲವಣವನ್ನು ನೀರಿನಲ್ಲಿ ಕೂಡಿಸಿ ಕುಡಿಸುವುದರಿಂದ $^{131}I$ ಗ್ರಂಥಿಗಳಲ್ಲಿ ಸಂಗ್ರಹವಾಗುತ್ತದೆ. $^{131}I$ ನಿಂದ ಹೊರಬಂದ ಗಾಮಾ ($\gamma$) ಕಿರಣದಿಂದ ಹೆಚ್ಚಿಗೆ ಬೆಳೆದಂಥ ಊತಕ ನಾಶವಾಗಿ ಗ್ರಂಥಿಗಳು ತಮ್ಮ ಕೆಲಸವನ್ನು ಎಂದಿನಂತೆ ಮಾಡಲಾರಂಭಿಸುತ್ತವೆ.

ತೈಲಶುದ್ಧೀಕರಣ ಕೇಂದ್ರಗಳಲ್ಲಿ ಒಂದೇ ನಳಿಗೆಯ ಮೂಲಕ ಬೇರೆ ಬೇರೆ ತರಹದ ಎಣ್ಣೆಗಳನ್ನು ದೂರದ ವರೆಗೆ ಕಳಿಸಬೇಕಾಗುತ್ತದೆ. ಇಂಥ ಮಿಶ್ರಿತ ಎಣ್ಣೆ ಬರತೊಡಗಿದೆಯೆಂಬುದನ್ನು ಈ ಮಿಶ್ರಣವನ್ನು ಬೇರ್ಪಡಿಸುವ ಸ್ಥಳದಲ್ಲಿ ಕಂಡುಹಿಡಿಯಲು ಐಸೊಟೋಪುಗಳು ಸಹಾಯಕವಾಗಿವೆ. ತೈಲ ಶುದ್ಧೀಕರಣ ಕೇಂದ್ರಗಳಲ್ಲಿ ಒಂದು ತರಹದ ಎಣ್ಣೆಯನ್ನು ಬಿಡುವಾಗ ಅದರ ಮುಂಭಾಗದಲ್ಲಿ ಐಸೊಟೋಪನ್ನು ಕೂಡಿಸುತ್ತಾರೆ. ಬೇರ್ಪಡಿಸುವ ಸ್ಥಳದಲ್ಲಿ ಗೈಗರ್ ಗುಣಕದ ನೆರವಿನಿಂದ ಬೇರೆ ತರಹದ ಪ್ರವಾಹ ಬರತೊಡಗಿದೆಯೆಂಬುದು ತಿಳಿಯುವುದು. ಬೇರ್ಪಡಿಸುವಾತ ಪ್ರತ್ಯೇಕವಾಗಿ ಬೇರೆ ಬೇರೆ ತರಹದ ಎಣ್ಣೆಗಳನ್ನು ಸಂಗ್ರಹಿಸುತ್ತಾನೆ. ಇದಕ್ಕಾಗಿ $^{81}Br$, $^{124}Sb$ ಐಸೊಟೋಪುಗಳನ್ನು ಉಪಯೋಗಿಸುತ್ತಾರೆ. ಭೂಮಿಯಲ್ಲಿ ಹುಗಿದ ನಳಿಗೆಯಲ್ಲಿ ಬಿರುಕುಬಿಟ್ಟು ಸೋರುತ್ತಿದ್ದ ಇಲ್ಲವೇ ಪ್ರವಾಹಕ್ಕೆ ತಡೆಯುಂಟಾದ ಸ್ಥಳಗಳನ್ನು ಸುಲಭವಾಗಿ ಕಂಡುಹಿಡಿಯಲು ಐಸೊಟೋಪುಗಳನ್ನು ಉಪಯೋಗಿಸುತ್ತಾರೆ. ನಳಿಗೆಯಲ್ಲಿ ಐಸೊಟೋಪ್ ಅನಿಲವನ್ನಾಗಲಿ, ಪ್ರವಾಹವನ್ನಾಗಲಿ ಒಂದು ಕಡೆಯಿಂದ ರಭಸದಿಂದ ಬಿಡುತ್ತಾರೆ. ನಳಿಗೆಯ ದಾರಿಯುದ್ದಕ್ಕೂ ಗೈಗರ್ ಗುಣಕದಿಂದ ಪರೀಕ್ಷಿಸಿ ಬಿರುಕುಬಿದ್ದ ಇಲ್ಲವೇ ಪ್ರವಾಹಕ್ಕೆ ತಡೆಯುಂಟಾದ ಸ್ಥಳವನ್ನು ಕಂಡುಹಿಡಿಯುತ್ತಾರೆ. ರಕ್ತದ ಚಲನೆಯ ಪರೀಕ್ಷೆಯಲ್ಲಿ ಇದೇ ತತ್ತ್ವವನ್ನು ಅನುಸರಿಸಲಾಗಿದೆ. ಇಲ್ಲಿ ಉಪಯೋಗವಾಗುವುದು $^{24}Na$ (ಅರ್ಧಾಯು 15 ಗಂಟೆಗಳು).

$^{59}Fe$ ಐಸೊಟೋಪನ್ನು ಕೊಂತದ ಉಂಗುರದ (ಪಿಸ್ಟನ್ ರಿಂಗ್) ಸವಕಳಿಯನ್ನು ಕಂಡುಹಿಡಿಯಲಿಕ್ಕೆ ಎಂಜಿನಿಯರರು ಉಪಯೋಗಿಸುತ್ತಾರೆ. ಕೊಂತದ ಉಂಗುರ ಕ್ರಿಯೆ ಎಸಗುವ ಮೊದಲು ಐಸೊಟೋಪನ್ನು ಅದರಲ್ಲಿ ಕೆಲವು ಅಂತರದ ಮೇಲೆ ಉಪಯೋಗಿಸುತ್ತಾರೆ. ಯಂತ್ರದೊಳಗಿನ ಘರ್ಷಣನಿವಾರಕ ಎಣ್ಣೆಯನ್ನು ಕೆಲವು ಸಮಯದ ಮೇಲೆ ಪರೀಕ್ಷಿಸಿದರೆ ಸವಕಳಿಯೆಷ್ಟಾಯಿತೆಂಬುದು ಗೊತ್ತಾಗುತ್ತದೆ.

ಮಿಶ್ರಲೋಹ, ಧಾತುಗಳಿಂದ ತಯಾರಿಸಿದ ಯಂತ್ರೋಪಕರಣಗಳಲ್ಲಿ ಎಲ್ಲಿಯಾದರೂ ರಂಧ್ರಗಳಾಗಿದ್ದರೆ ಇಲ್ಲವೆ ಬಿರುಕು ಬಿಟ್ಟದ್ದರೆ ಬರಿಗಣ್ಣಿನಿಂದ ಕಂಡುಹಿಡಿಯುವುದು ಅಸಾಧ್ಯ. ಈ ದೋಷಗಳನ್ನು ಕಂಡುಹಿಡಿಯಲು ರೇಡಿಯೋಗ್ರಫಿ ತತ್ತ್ವದಿಂದ ಐಸೊಟೋಪ್ $^{60}Co$, $^{193}Ta$, $^{88}Y$ ಗಳನ್ನು ಉಪಯೋಗಿಸುತ್ತಾರೆ. ಇದೇ ತತ್ತ್ವದ ಮೇಲೆ ಕಾಗದ, ಪಾಲಿಎಥಿಲೀನ್ ಮುಂತಾದವುಗಳ ದಪ್ಪಳತೆಗಳನ್ನು ಕಂಡುಹಿಡಿಯುತ್ತಾರೆ.

ಒಂದು ಮಿಶ್ರಲೋಹದ ಗುಣಧರ್ಮಗಳು ಅದರಲ್ಲಿ ಹರಡಿರುವ ಬೇರೆ ಬೇರೆ ತರಹದ ಧಾತುಗಳ ಪರಮಾಣುಗಳ ಸ್ಥಳಗಳ ಮೇಲೆ ಅವಲಂಬಿಸಿರುತ್ತವೆ. ಸಹಜಾತಿಯ ಒಂದು ಧಾತುವಿನ ವಿಕಿರಣಕಾರಿ ಗುಣವುಳ್ಳ ಕೆಲವು ಪರಮಾಣುಗಳನ್ನು ಮಿಶ್ರಲೋಹ ತಯಾರಿಸುವಾಗ ಉಪಯೋಗಿಸಿ ಹರಡಿರುವ ಸ್ಥಳಗಳನ್ನು ಛಾಯಾಚಿತ್ರಗಳಿಂದ ಕಂಡುಹಿಡಿಯಲಿಕ್ಕೆ ಬರುತ್ತದೆ. ಇದರಿಂದಾಗಿ ಮಿಶ್ರಲೋಹಗಳ ಗುಣಧರ್ಮ, ಧಾತುಗಳ ರಚನೆ ತಿಳಿಯುತ್ತದೆ. ಈ ಅಭ್ಯಾಸದಿಂದ ಮಿಶ್ರಲೋಹಗಳಿಗೆ ಹೊಸ ಗುಣಧರ್ಮ ತರಲು ಸಾಧ್ಯವಾಗುತ್ತದೆ.

ಇತ್ತಿತ್ತಲಾಗಿ ಒಕ್ಕಲುತನದಲ್ಲಿ ಐಸೊಟೋಪುಗಳ ಉಪಯೋಗ ಬಹಳವಾಗಿದೆ. $^{32}P$ ಐಸೊಟೋಪನ್ನು ಉಪಯೋಗಿಸಿ ಫಾಸ್ಫರಸ್ ಗೊಬ್ಬರವನ್ನು ಯಾವ ಸಮಯಕ್ಕೆ ಭೂಮಿಗೆ ಹಾಕಬೇಕೆಂಬುದನ್ನು ಕಂಡುಹಿಡಿಯಲಿಕ್ಕೆ ಬರುತ್ತದೆ. $^{32}P$ ಐಸೊಟೋಪನ್ನು $(NH_4)_3PO_4$ ಲವಣರೂಪದಲ್ಲಿ ಬೀಜೋತ್ಪತ್ತಿ ಸಮಯಕ್ಕೆ ಭೂಮಿಗೆ ಹಾಕುತ್ತಾರೆ. ಬೀಜೋತ್ಪತ್ತಿಯಾದ ಮೇಲೆ ಕೆಲವು ಸಸಿಗಳನ್ನು ಕತ್ತರಿಸಿ, ಭಸ್ಮಮಾಡಿ ಅವರ ಚಟುವಟಿಕೆಯನ್ನು ಗೈಗರ್ ಗುಣಕದ ಮೂಲಕ ಅಳೆಯುತ್ತಾರೆ. ಸಸಿ ಬೆಳೆದು ದೊಡ್ಡದಾಗುವ ವರೆಗೂ ಈ ಪ್ರಯೋಗವನ್ನು ಬೇರೆ ಬೇರೆ ಹಂತಗಳಲ್ಲಿ ಮಾಡಿ ನೋಡಲಾಯಿತು. ಇದರಿಂದ ಒಂದು ಮುಖ್ಯ ಅಂಶ ತಿಳಿಯಿತು. ಗೊಬ್ಬರದಿಂದ ಅದು ರಂಜಕವನ್ನು ಸೇವಿಸುವುದು ಸಸಿಯಾಗಿದ್ದಾಗ ಮಾತ್ರವೇ ವಿನಾ ಬೆಳೆದ ಮೇಲಲ್ಲ. ದೊಡ್ಡದಾದ ಮೇಲೆ ಭೂಮಿಯಲ್ಲಿರುವ ಲವಣಗಳಲ್ಲಿಯ ರಂಜಕವನ್ನು ಹೀರಿಕೊಳ್ಳುತ್ತದೆ. ಇದರಿಂದಾಗಿ ಸಸಿ ಬೆಳೆದ ಮೇಲೆ ಫಾಸ್ಫರಸ್ ಗೊಬ್ಬರವನ್ನು ಹಾಕಿದರೆ ಅದರ ಉಪಯೋಗ ವೇನೂ ಆಗುವುದಿಲ್ಲ.

ದ್ಯುತಿಸಂಶ್ಲೇಷಣ ಕ್ರಿಯೆಯಲ್ಲಿ ಹಸಿರು ವನಸ್ಪತಿಗಳು ನೀರು ಗೊಬ್ಬರ ಉಪಯೋಗಿಸಿ ಸೂರ್ಯಪ್ರಕಾಶದ ಸಹಾಯದಿಂದ ಪಿಷ್ಟಪದಾರ್ಥಗಳನ್ನು ತಯಾರಿಸಿ ಆಕ್ಸಿಜನ್ ಅನಿಲವನ್ನು ಹೊರಬಿಡುತ್ತವೆ. ಈ ಆಕ್ಸಿಜನ್ $H_2O$ದಿಂದ ಬಂದಿದೆಯೋ ಅಥವಾ $CO_2$ರಿಂದ ಬಂದಿದೆಯೋ ಎಂಬುದನ್ನು ಕಂಡುಹಿಡಿಯಲಿಕ್ಕೆ $^{18}O$ ಐಸೊಟೋಪನ್ನು ಉಪಯೋಗಿಸುತ್ತಾರೆ.

ಕೋಳಿಗಳು ತತ್ತಿಹಾಕುವ ಬಗೆಯನ್ನು ಕಂಡುಹಿಡಿಯಲು $^{40}Ca$ಯ ಕೆಲವು ಪರಮಾಣುಗಳನ್ನು ಅದರ ಆಹಾರದಲ್ಲಿ ಬೆರೆಸಿ ಪ್ರಯೋಗ ಮಾಡಿದಾಗ ಕೆಳಗಿನ ಸಂಗತಿ ತಿಳಿದುಬಂದಿದೆ. ಹಾಕಿದ ಆಹಾರದಲ್ಲಿಯ Caಧಾತುವಿನಿಂದ ತತ್ತಿಯ ಮೇಲಿನ ಕವಚ ಉತ್ಪನ್ನವಾಗುವುದಿಲ್ಲ. ಐಸೊಟೋಪುಗಳ ಉಪಯೋಗದ ಪೂರ್ವದಲ್ಲಿ ಇದರ ತದ್ವಿರುದ್ಧ ಕಲ್ಪನೆ ಜನರಲ್ಲಿ ಇತ್ತು. ತತ್ತಿಗಳ ಮೇಲಿನ ಕವಚ ಎಲುಬುಗಳಿಂದ ತಯಾರಾಗುತ್ತದೆ. ತತ್ತಿಹಾಕುವ ಕೋಳಿಗಳ ಶರೀರದಲ್ಲಿ ಎರಡು ತಿಂಗಳು ಅನಂತರ ಸಂಪೂರ್ಣ ಹೊಸ ಅಸ್ಥಿಪಂಜರ ತಯಾರಾಗುತ್ತದೆಂಬ ಸಂಗತಿ ಕೂಡ ತಿಳಿದುಬಂದಿದೆ.

ಪೆಟ್ರೋಲಿಯಂ ಬಾವಿಗಳಿರುವಲ್ಲಿ ಮಿಥೇನ್ ($CH_4$) ಅನಿಲ ಉತ್ಪನ್ನವಾಗುತ್ತದೆ. ಇದು ಕಂಡುಬರುವ ಸ್ಥಳಗಳಲ್ಲಿ ಭೂಗರ್ಭಶಾಸ್ತ್ರಜ್ಞರು ಪೆಟ್ರೋಲಿಯಂ ಬಾವಿಗಳಿವೆಯೆಂದು ತರ್ಕಿಸುತ್ತಾರೆ. ಹಾಗಾದರೆ ಈ ಅನಿಲ ಯಾವುದರಿಂದ ಉತ್ಪನ್ನವಾಗಿದೆಯೆಂಬುದನ್ನು ಕಂಡುಹಿಡಿಯಲು ಗಿಡಗಂಟೆಗಳಲ್ಲಿ ಸಂಗ್ರಹವಾದ $^{14}C$ ಉಪಯೋಗವಾಗುತ್ತದೆ.

ಭೂಮಿ ಹುಟ್ಟಿ ಎಷ್ಟು ವರ್ಷಗಳಾಗಿವೆಯೆಂಬುದನ್ನು ಕಂಡುಹಿಡಿಯಲಿಕ್ಕೆ U ಧಾತುವಿನ ವಿಘಟನೆಯಿಂದ ಉತ್ಪತ್ತಿಗೊಂಡ ಐಸೊಟೋಪುಗಳ ಅಭ್ಯಾಸದಿಂದ ಸಾಧ್ಯವಾಗುತ್ತದೆ. ಭೂಮಿಯಲ್ಲಿ ಹುಗಿದುಹೋದ ಇಂಗಾಲಯುಕ್ತ ಅವಶೇಷಗಳ ವಯಸ್ಸು ಎಷ್ಟಾಗಿದೆಯೆಂಬದನ್ನು $^{14}C$ ಐಸೊಟೋಪಿನ ಕಾರ್ಬನ್ ಡೇಟಿಂಗ್ (ಇಂಗಾಲಕಾಲನಿಷ್ಕರ್ಷೆ) ಎಂಬ ಹೊಸವಿಧಾನದಿಂದ ಅತಿಸುಲಭದಲ್ಲಿ ಹೇಳಲಿಕ್ಕೆ ಬರುತ್ತದೆ.

ರಾಸಾಯನಿಕ ವಿಜ್ಞಾನದಲ್ಲಿ ಐಸೊಟೋಪುಗಳ ಉಪಯೋಗ ಹೇಳತೀರದಷ್ಟಾಗಿದೆ. ಯಾವುದಾದರೂ ರಾಸಾಯನಿಕ ಕ್ರಿಯೆ ಹೇಗಾಗಿದೆಯೆಂಬುದನ್ನು ತಿಳಿಯಲು ಇವುಗಳಿಂದ ಸುಲಭಸಾಧ್ಯ. ಐಸೊಟೋಪುಗಳಿಂದ ಹೊರಬಂದ ಕಿರಣಗಳು ರಾಸಾಯನಿಕ ಕ್ರಿಯೆಯ ಮೇಲೆ ಪರಿಣಾಮ ಮಾಡಿದಾಗ ವಸ್ತುಗಳಲ್ಲಿ ಹೊಸ ಗುಣಧರ್ಮಗಳು ಉತ್ಪನ್ನವಾಗುತ್ತವೆ. ಉದಾಹರಣೆಗೆ, ಪಾಲಿಎಥಿಲೀನಿನ ಮೇಲೆ ಈ ಕಿರಣಗಳ ಪರಿಣಾಮವಾಗಿ ತಯಾರಿಸಲ್ಪಟ್ಟ ಪ್ರಯೋಗಶಾಲೆಯ ಉಪಕರಣಗಳಿಗೆ ಬೆಂಕಿ ನೀರು ವಿದ್ಯುತ್ತಿನ ಪರಿಣಾಮಗಳೇನೂ ಆಗುವುದಿಲ್ಲ. ಇಂಥ ಹೊಸ ಪ್ರಯೋಗಗಳು ಇನ್ನೂ ಸಂಶೋಧನೆಯ ಹಂತದಲ್ಲಿವೆ. ಪ್ರಯೋಗಶಾಲೆಯಲ್ಲಿ ಯಾವುದಾದರೊಂದು ಹೊಸ ಔಷಧವನ್ನು ತಯಾರಿಸಿದರೆ ಇದರ ಕ್ರಿಯೆ ಪ್ರಾಣಿಗಳ ಮೇಲೆ ಹೇಗಾಗುವುದೆಂಬುದನ್ನು ಕಂಡುಹಿಡಿಯಲು ಐಸೊಟೋಪುಗಳನ್ನು ಉಪಯೋಗಿಸುತ್ತಾರೆ. ಐಸೊಟೋಪುಗಳು ಪರಮಾಣುಯುಗದ ಕಾಣಿಕೆಗಳು.

ಭಾರತದಲ್ಲಿ ವಿಕಿರಣಶೀಲ ಐಸೊಟೋಪುಗಳ ತಯಾರಿಕೆ : ಮುಂಬಯಿ ನಗರದ ಟ್ರಾಂಬೆಯಲ್ಲಿರುವ ಭಾಭಾ ಅಟಾಮಿಕ್ ರಿಸರ್ಚ್ ಸೆಂಟರಿನಲ್ಲಿ ವಿಕಿರಣಶೀಲ ಐಸೊಟೋಪುಗಳನ್ನು ವ್ಯಾಪಾರಪ್ರಮಾಣದಲ್ಲಿ ತಯಾರಿಸಿ ಅರ್ಹತಾಪತ್ರ ಪಡೆದಿರುವ ಸಂಸ್ಥೆಗಳಿಗೆ ಅವನ್ನು ಪೂರೈಸಲಾಗುತ್ತಿದೆ. ವೈದ್ಯಕೀಯ, ಸಂಶೋಧನ, ಶೈಕ್ಷಣಿಕ ಮತ್ತು ಔದ್ಯಮಿಕ ಕ್ಷೇತ್ರಗಳಲ್ಲಿ ಇವುಗಳ ಉಪಯೋಗ ಅಧಿಕವಾಗುವುದೊಂದೇ ಅಲ್ಲ, ಇವುಗಳಿಗೆ ಬೇಡಿಕೆ ವರ್ಷದಿಂದ ವರ್ಷಕ್ಕೆ ಏರುತ್ತಲೇ ಇದೆ.

(ಎಸ್.ಎಸ್‌ಡಿ ಎಚ್.)

**ಐಸೊನಿಯಾಜ಼ಿಡ್ ಮತ್ತು ಇಪ್ರೊನಿಯಾಜ಼ಿಡ್:** ಕ್ಷಯರೋಗಾಣುಗಳ ನಾಶಕ್ಕೆ ನಿಯೋಜಿತವಾದ ಮದ್ದುಗಳು. ಇತರ ರೋಗಾಣುಗಳ ವಿರುದ್ಧ ಅವು ಕೆಲಸ ಮಾಡುವುದಿಲ್ಲ. ಮಾನವರಲ್ಲಿ ಕ್ಷಯರೋಗ ಚಿಕಿತ್ಸೆಗೆ ಇಪ್ರೊನಿಯಾಜ಼ಿಡಿನ



ನಿಕೊಟಿನ್ ಅಮೈಡು ಐಸೊನಿಯಾಜ಼ಿಡ್



ಇಪ್ರೊನಿಯಾಜ಼ಿಡ್

ಬಳಕೆ ಈಗ ಇಲ್ಲ. ಅದರ ದೀರ್ಘ ಉಪಯೋಗದಿಂದ ನಂಜುದೋಷ ಉಂಟಾಗುವುದೇ ಇದರ ಕಾರಣ. ಮಾನೊ ಅಮೀನ್ ಆಕ್ಸಿಡೇಸ್ ಎಂಬ ಕಿಣ್ವವನ್ನು ಇದು ನಿಷ್ಕ್ರಿಯಗೊಳಿಸುವುದರಿಂದ ಹೀಗಾಗಹುದೆಂದು ತರ್ಕಿಸಲಾಗಿದೆ. ಆದರೆ ಐಸೊನಿಯಾಜ಼ಿಡಿಗೆ ಈ ದುರ್ಗಣವಿಲ್ಲ. ಆದ್ದರಿಂದ ಅದು ಮಾತ್ರ ಕ್ಷಯರೋಗ ಚಿಕಿತ್ಸೆಯಲ್ಲಿ ಉಪಯೋಗವಾಗುತ್ತಿದೆ. ಸಾಮಾನ್ಯವಾಗಿ ಪ್ಯಾರಾಅಮೈನೋ ಸ್ಯಾಲಿಸಿಕಾಮ್ಲ ಮತ್ತು ಸ್ಟ್ರೆಪ್ಟೊಮೈಸಿನುಗಳೊಂದಿಗೆ ಐಸೊನಿಯಾಜ಼ಿಡನ್ನು ಕೂಡಿಸಿ ಪ್ರಯೋಗಿಸುವುದು ಪದ್ಧತಿ. ಖಿನ್ನತೆ, ವಿಷಣ್ಣತೆ, ಅಕಾರಣ ಭಯ ಮೊದಲಾದ ಮನೋವಿಕಾರಗಳಿಗೆ ತುತ್ತಾದ ರೋಗಿಗಳನ್ನು ಉಪಚರಿಸಲು, ಉತ್ತೇಜಕವಾಗಿ ಇಪ್ರೊನಿಯಾಜ಼ಿಡನ್ನು ಪ್ರಯೋಗಿಸುವುದು ಇತ್ತೀಚೆಗೆ ರೂಢಿಯಾಗಿದೆ.

ಬಿ ವರ್ಗದ ಜೀವಾತುಗಳಲ್ಲಿ ಒಂದಾದ ನಿಕೊಟಿನ್ ಅಮೈಡು ಕ್ಷಯರೋಗಾಣುವಿನ ಉತ್ಪತ್ತಿ ಮತ್ತು ಬೆಳೆವಣಿಗೆಯನ್ನು ಪರಿಣಾಮಕಾರಿಯಾಗಿ ತಡೆಯಬಲ್ಲದು ಎಂಬ ಮಹತ್ತ್ವದ ಶೋಧವಾದದ್ದು 1944ರಲ್ಲಿ. ರಚನೆಯಲ್ಲಿ ನಿಕೊಟಿನ್ ಅಮೈಡನ್ನು ಹೋಲುವ ಇತರ ಸಂಯುಕ್ತಗಳಿಗೂ ಇಂಥ ರೋಗನಿರೋಧಕ ಗುಣವಿರಬಹುದು ಎಂಬ ಭಾವನೆಯಿಂದ ಪ್ರೇರಿತರಾದ ಸಂಶೋಧಕರು ಸದೃಶ ರಾಸಾಯನಿಕಗಳ ಶೋಧದಲ್ಲಿ ತೊಡಗಿದರು. ಈ ಯತ್ನದ ಫಲವಾಗಿ ಐಸೊನಿಯಾಜ಼ಿಡ್(ಐಸೊನಿಕೋಟಿನಿಕ್ ಆಮ್ಲದ ಹೈಡ್ರಜೈಡ್) ಮತ್ತು ಇಪ್ರೊನಿಯಾಜ಼ಿಡ್ (ಅದರ ಐಸೊಪ್ರೊಪೈಲ್ ಎಸ್ಟರ್) ರೂಪುಗೊಂಡವು. ಇವನ್ನು ಕ್ಷಯ ರೋಗಾಣುಗಳ ವಿರುದ್ಧ ಉಪಯೋಗಿಸಿದಾಗ ಫಲಿತಾಂಶ ತೃಪ್ತಿಕರವಾಗಿತ್ತು. ಈ ಸಂಯುಕ್ತಗಳ ರಚನಾ ಸೂತ್ರವನ್ನು ಮೇಲೆ ಕೊಡಲಾಗಿದೆ. (ಎಚ್.ಜಿ.ಎಸ್.)

**ಐಸೊಪೋಡ:** ಸಂಧಿಪದಿಗಳ ವಂಶದ ಕ್ರಸ್ಟೇಸಿಯ ವರ್ಗದ ಮೆಲಕೊಸ್ಟ್ರೆಕ ಉಪವರ್ಗದ ಪೆರಕ್ಯಾರಿಡ ಗಣಕ್ಕೆ ಸೇರಿದ ಒಂದು ಉಪಗಣ.

ಈ ಪ್ರಾಣಿಗಳಲ್ಲಿ ಮುಂಭಾಗದಲ್ಲಿ ಶಿರಸ್ತ್ರಾಣವಾಗಲೀ ಕಣ್ಣುಗಳಿಗೆ ತೊಟ್ಟಾಗಲೀ (ಹಿಡಿ) ಇಲ್ಲ. ಎದೆಯ ಭಾಗದ ಉಪಾಂಗಗಳಿಗೆ ಎಕ್ಸೊಪೊಡೈಟುಗಳೂ ಇಲ್ಲ. ಮೊದಲನೆಯ ಜೊತೆ ಮ್ಯಾಕ್ಸಿಲ್ಲಿಪೀಡುಗಳಾಗಿ ಮಾರ್ಪಟ್ಟಿವೆ. ಮಿಕ್ಕವೆಲ್ಲವೂ ಒಂದೇ ತೆರನಾಗಿವೆ. ಪ್ಲಿಯೊಪಾಡುಗಳು ಉಸಿರಾಟದ ಅಂಗಗಳಾಗಿ ಮಾರ್ಪಟ್ಟಿವೆ. ಯೂರೊಪಾಡುಗಳು ಬಾಲದ ಈಜುರೆಕ್ಕೆಯೊಡನೆ ಭಾಗವಹಿಸುವುದಿಲ್ಲ. ಲಿಗಿಯ, ಆರ್ಮಡಿಲ್ಲಿಡಿಯಂ, ಎಸೆಲ್ಲಸ್ ಮತ್ತು ಐಡೊಟಿಯ–ಇವು ಮುಖ್ಯ ಉದಾಹರಣೆಗಳು.

ಲಿಗಿಯ ಎಂಬುದು ಕಡಲುಪ್ರಾಣಿ. ಉಬ್ಬರವಿಳಿತದ ಗುರುತಿನ ಹತ್ತಿರದಲ್ಲೆ ದೊರಕುತ್ತದೆ. ಸರ್ವಭಕ್ಷಕ ಜೀವಿಯಾದರೂ ಮುಖ್ಯವಾಗಿ ಫ್ಯೂಕಸನ್ನು ತಿನ್ನುತ್ತದೆ. ದೇಹ ಸಾಮಾನ್ಯವಾಗಿ ಚಪ್ಪಟೆಯಾಗಿ ಅಂಡಾಕಾರವಾಗಿದೆ. ತೊಟ್ಟಿಲ್ಲದ ಎರಡು ದೊಡ್ಡ ಕಣ್ಣುಗಳಿವೆ. ಎರಡು ಜೊತೆ ಕುಡಿಮೀಸೆಗಳಲ್ಲಿ ಒಂದು ಜೊತೆ ತುಂಬ ಚಿಕ್ಕದು ; ಇನ್ನೊಂದು ಜೊತೆ ಉದ್ದ. ಇವು ಭಿನ್ನ ಲಿಂಗಿಗಳು. ಬೆಳೆವಣಿಗೆಯಲ್ಲಿ ರೂಪಪರಿವರ್ತನೆ ಇಲ್ಲ.

ಆರ್ಮಡಿಲ್ಲಿಡಿಯಂ ಎಂಬುದು ಸಾಮಾನ್ಯವಾದ ಮರದ ಹೇನು. ಪೂರ್ಣ ಭೂವಾಸಿ. ಕುಡಿಮೀಸೆಗಳು ಚಿಕ್ಕವು. ಇದರಿಂದಾಗಿ ಶತ್ರುಗಳು ಆಕ್ರಮಿಸಿದಾಗ ಚೆಂಡಿನಂತೆ ಸುರುಳಿ ಸುತ್ತಿಕೊಳ್ಳಬಹುದು. ಹೆಸರು ಈ ಲಕ್ಷಣ ಪ್ರಧಾನವಾದ ಚಿಪ್ಪಿನ ಹಂದಿಯಿಂದ (ಆರ್ಮಡಿಲ್ಲೊ) ಎರವಲು ಪಡೆದದ್ದು.

ಈ ಉಪಗಣಕ್ಕೆ ಪರತಂತ್ರ ಜೀವನ ನಡೆಸುವ ಹಲವು ಪ್ರಾಣಿಗಳೂ ಸೇರಿವೆ. ಇವುಗಳಲ್ಲಿ ಪರತಂತ್ರ ಜೀವನದ ವಿವಿಧ ಹಂತಗಳನ್ನು ಕಾಣಬಹುದು. ಅಂಗಾಂಗಗಳು ಚೆನ್ನಾಗಿ ಬೆಳೆದ ತಾತ್ಕಾಲಿಕ ಪರತಂತ್ರಜೀವಿಗಳಿಂದ ಹಿಡಿದು ಪ್ರಬುದ್ಧಾವಸ್ಥೆಯಲ್ಲಿ ಕೇವಲ ತತ್ತಿಯ ಕೋಶ ಮಾತ್ರ ಉಳಿದಿರುವ ಪೂರ್ಣ ಪರತಂತ್ರಜೀವಿಗಳವರೆಗೂ ಈ ಉಪಗಣದಲ್ಲಿ ನಿದರ್ಶನಗಳು ದೊರೆಯುತ್ತವೆ. ಉದಾ: ಈಗ, ಮೀನಿನ ಹೇನು. (ಎಚ್.ಬಿ.ಡಿ.)

**ಐಸೊಪ್ರೀನ್:** ನೈಸರ್ಗಿಕ ಉತ್ಪನ್ನ ವಸ್ತುಗಳ ಸಂಯೋಜನೆಯಲ್ಲಿ ಅತ್ಯಂತ ಪ್ರಮುಖಪಾತ್ರ ವಹಿಸುವ ಒಂದು ಸರಳ ಅಪರ್ಯಾಪ್ತ ಹೈಡ್ರೊಕಾರ್ಬನ್.




ನೈಸರ್ಗಿಕ ರಬ್ಬರನ್ನು ನಾಶಕ ಆಸವನಕ್ಕೆ (ಡಿಸ್ಟ್ರಕ್ಟಿವ್ ಡಿಸ್ಟಿಲ್ಲೇಶನ್) ಒಳಪಡಿಸಿದಾಗ ಉತ್ಪತ್ತಿಯಾಗುವ ಪದಾರ್ಥಗಳಲ್ಲಿ ಐಸೊಪ್ರೀನ್ ಒಂದು. ಇದನ್ನು ಹಾಗೆಯೇ ಬಿಟ್ಟರೆ ಕ್ರಮೇಣ ಪುನಃ ರಬ್ಬರಿನಂಥ ಒಂದು ಪದಾರ್ಥ ಉತ್ಪತ್ತಿಯಾಗುತ್ತದೆ. ಆದ್ದರಿಂದ ರಬ್ಬರ್ ಐಸೊಪ್ರೀನಿನ ಪಾಲಿಮೆರೀಕರಣದಿಂದ (ಪಾಲಿಮೆರೈಸೇಷನ್) ಆಗಿರುವ ಪದಾರ್ಥವೆಂಬ ಅಭಿಪ್ರಾಯಕ್ಕೆ ಆಸ್ಪದವಾಯಿತು. ರಬ್ಬರಿನ ಓಜ಼ೋನ್ ವಿಶ್ಲೇಷಣೆಯೇ (ಓಜ಼ೋನೇಲಿಸಿಸ್) ಮುಂತಾದವು ಈ ಅಭಿಪ್ರಾಯಕ್ಕೆ ಬೆಂಬಲ ನೀಡಿದುವು. ರಬ್ಬರಿನ ಈ ಕೆಳಕಂಡ ರಚನೆ ಇಂದು ಸಾರ್ವತ್ರಿಕ ಮನ್ನಣೆ ಪಡೆದಿದೆ.




ರಬ್ಬರು ಮಾತ್ರವಲ್ಲ ; ಟರ್ಪೀನುಗಳು, ಕ್ಯಾರೊಟೀನ್ ವರ್ಣದ್ರವ್ಯಗಳು ಮೊದಲಾದ ವಿವಿಧ ಸಸ್ಯಮೂಲ ಪದಾರ್ಥಗಳಿಗೆಲ್ಲ ಐಸೊಪ್ರೀನ್ ಅಣುರಚನಾಘಟಕ (ಸ್ಟ್ರಕ್ಚರಲ್ ಯೂನಿಟ್) ಆಗಿರುವುದು ಈಗ ತಿಳಿದುಬಂದಿದೆ. ಅಂತೆಯೇ ಟರ್ಪೆಂಟೈನ್ ಮುಂತಾದ ಅನೇಕ ಪರಿಮಳ ತೈಲಗಳನ್ನು ಗಾಳಿಯ ಸಂಪರ್ಕವಿಲ್ಲದಂತೆ ಕಾಯಿಸಿದಾಗ ಐಸೊಪ್ರೀನ್ ಉತ್ಪತ್ತಿಯಾಗುತ್ತದೆ.

ಐಸೊಪ್ರೀನನ್ನು ಅಸಿಟೋನ್ ಮತ್ತು ಅಸಿಟಲೀನುಗಳನ್ನು ಉಪಯೋಗಿಸಿ ಸಂಶ್ಲೇಷಿಸಬಹುದು.




ಆದರೆ ಈಗ ಬಲುಮಟ್ಟಿಗೆ ಐಸೊಪ್ರೀನ್ ತಯಾರಿಕೆಗೆ ವಿಶೇಷವಾಗಿ ಬಳಸುತ್ತಿರುವ ವಿಧಾನವೆಂದರೆ ಪೆಟ್ರೋಲಿಯಂ ಉತ್ಪನ್ನಗಳ ಉಷ್ಣವಿಭಜನೆ (ಕ್ರ್ಯಾಕಿಂಗ್).

ಐಸೊಪ್ರೀನ್ ವರ್ಣರಹಿತ ದ್ರವ ; ಇದರ ಕುದಿಬಿಂದು 34°ಸೆಂ. ಐಸೊಪ್ರೀನಿನ ಪಾಲಿಮೆರೀಕರಣದಿಂದ ಸಂಶ್ಲೇಷಿತ ರಬ್ಬರನ್ನು ತಯಾರಿಸುವ ಮೊದಲ ಪ್ರಯತ್ನಗಳು ಯಶಸ್ವಿಯಾಗಲಿಲ್ಲ. ನೈಸರ್ಗಿಕ ರಬ್ಬರನ್ನು ಬಲುಮಟ್ಟಿಗೆ ಹೋಲುವ ಒಂದು ಬಗೆಯ ಕೃತಕ ರಬ್ಬರನ್ನು ಐಸೊಪ್ರೀನ್ ಪಾಲಿಮೆರೀಕರಣದಿಂದ ತಯಾರಿಸುವ ಒಂದು ವಿಧಾನವನ್ನು ಕೊನೆಗೆ 1955ರಲ್ಲಿ ಪ್ರಕಟಿಸಲಾಯಿತು. ಅತ್ಯಂತ ಶುದ್ಧವಾದ ಐಸೊಪ್ರೀನನ್ನು ಲೇಶಮಾತ್ರವೂ ಆಕ್ಸಿಜನ್ ಮತ್ತು ತೇವಾಂಶ

ವಿಲ್ಲದಿರುವಂಥ ವಾತಾವರಣದಲ್ಲಿ 35° ಸೆಂ. ಉಷ್ಣತೆಯಲ್ಲಿ ಸಣ್ಣಗೆ ವಿಭಾಗಿಸಿದ ಲಿಥಿಯಮಿನಿಂದ ಸಂಸ್ಕರಿಸಿದಾಗ ಈ ಕೃತಕ ರಬ್ಬರ್ ಉತ್ಪತ್ತಿಯಾಯಿತು.

(ಜೆ. ಆರ್. ಎಲ್.)

**ಐಸೊಪ್ರೀನ್ ನಿಯಮ :** ಟರ್ಪೀನುಗಳ ಅಣುರಚನೆಯಲ್ಲಿ ಕಂಡುಬರುವ ಕಾರ್ಬನ್ ಪರಮಾಣುಗಳ ಚೌಕಟ್ಟುಗಳು ಐಸೊಪ್ರೀನ್ ಅಣುವಿನಲ್ಲಿರುವ ಕಾರ್ಬನ್ ಚೌಕಟ್ಟನ್ನೇ ರಚನಾಘಟಕವಾಗಿಟ್ಟುಕೊಂಡು ರೂಪಿತವಾಗಿವೆ—ಎಂಬುದೇ ಈ ನಿಯಮ. ಇವನ್ನು ಮೊಟ್ಟಮೊದಲಿಗೆ 1887ರಲ್ಲಿ ಗಾಟಿಂಗೆನ್ ವಿಶ್ವವಿದ್ಯಾನಿಲಯದ ಪ್ರೊ. ಆಟೊ ವಲಾಖ್ ಎಂಬಾತ ಪ್ರತಿಪಾದಿಸಿದ. ಮಾನೊ ಟರ್ಪೀನುಗಳ ಅಣುಗಳು ($C_{10}$) ಎರಡೆರಡು ಐಸೊಪ್ರೀನ್ ಅಣುಗಳಿಂದಲೂ ಸೆಸ್ಕ್ವಿಟರ್ಪೀನುಗಳು ($C_{15}$) ಮೂರು ಐಸೊಪ್ರೀನ್ ಅಣುಗಳಿಂದಲೂ ಡೈಟರ್ಪೀನುಗಳು ($C_{20}$) ನಾಲ್ಕು ಐಸೊಪ್ರೀನ್ ಅಣುಗಳಿಂದಲೂ ರೂಪಿತವಾಗಿವೆ. ಟರ್ಪೀನುಗಳಲ್ಲಿ ಕಾರ್ಬನ್ ಪರಮಾಣುಗಳ ಸಂಖ್ಯೆ ಮಾತ್ರವಲ್ಲ, ಅವುಗಳ ಜೋಡಣೆಯೂ ಐಸೊಪ್ರೀನ್ ರಚನೆಯನ್ನು ಆಧರಿಸಿವೆ. ಐಸೊಪ್ರೀನ್ ಅಣುವಿನಲ್ಲಿ ಕಾರ್ಬನ್ ಪರಮಾಣು ಸರಣಿ ಶಾಖೆಯೊಡೆದಿರುವ ತುದಿಯನ್ನು ತಲೆ ಎಂದೂ ಇನ್ನೊಂದು ತುದಿಯನ್ನು ಬಾಲ ಎಂದೂ ಕರೆಯುವುದಾದರೆ



ಸಾಮಾನ್ಯವಾಗಿ ಎಲ್ಲ ಟರ್ಪೀನುಗಳ ರಚನೆಯಲ್ಲಿಯೂ ಈ ಮೂಲ ಘಟಕಗಳು ತಲೆ–ಬಾಲ–ತಲೆ–ಬಾಲ ಈ ಕ್ರಮದಲ್ಲಿ ಸೇರಿಕೊಂಡಿರುವುದನ್ನು ಗಮನಿಸಬಹುದು. ಉದಾಹರಣೆಗೆ,



ಸಿಟ್ರಾಲ್ ಚೌಕಟ್ಟು ಮೆಂಥಾಲ್ ಚೌಕಟ್ಟು ಜಿಂಜಿಬೆರೀನ್ ಚೌಕಟ್ಟು



ಏಬಿಯೆಟಿಕ್ ಆಮ್ಲದ ಚೌಕಟ್ಟು

ಈ ನಿಯಮಕ್ಕೆ ಹೊರತಾಗಿ ಕೆಲವು ಟರ್ಪೀನುಗಳಲ್ಲಿ ಮಾತ್ರ ಜೋಡಣೆ ಕ್ರಮ ತಲೆ–ಬಾಲ–ಬಾಲ–ತಲೆ ಇರುವುದು ಕಂಡುಬಂದಿದೆ. ಉದಾಹರಣೆಗೆ,



ಲೆವ್ಯಾಂಡುಲಾಲ್ ಚೌಕಟ್ಟು

ಆದರೆ ಇಂಥ ನಿದರ್ಶನಗಳು ವಿರಳ.

ಐಸೊಪ್ರೀನ್ ನಿಯಮದ ದೃಷ್ಟಿಯಿಂದ ಕ್ಯಾರೊಟೀನ್ ವರ್ಣದ್ರವ್ಯಗಳನ್ನು ಟೆಟ್ರಟರ್ಪೀನುಗಳೆಂದೂ ($C_{40}$) ರಬ್ಬರನ್ನು ಪಾಲಿಟರ್ಪೀನೆಂದೂ ಪರಿಗಣಿಸಬಹುದು.

(ಜೆ. ಆರ್. ಎಲ್.)

**ಐಸೊಪ್ರೊಪೈಲ್ ಅಸಿಟೇಟ್ :** ಸುವಾಸನೆ ಬೀರುವ ಬಣ್ಣವಿಲ್ಲದ ದ್ರವವಸ್ತು. ಅಣುಸೂತ್ರ $C_5H_{10}O_2$. ರಚನಾಸೂತ್ರ



0° ಸೆಂ. ಉಷ್ಣತೆಯಲ್ಲಿ ಸಾಂದ್ರತೆ 0.9166. ಕುದಿಯುವ ಬಿಂದು 88.2° ಸೆಂ. ನೀರಿನಲ್ಲಿ ಅದ್ರಾವ್ಯ. ಅನೇಕ ಸಾವಯವ (ಆರ್ಗ್ಯಾನಿಕ್) ಲೀನಕಾರಿಗಳೊಡನೆ ಬೆರೆಯುತ್ತದೆ. ಪ್ರೊಪೈಲೀನನ್ನು ಬಿಸಿಯಾದ ಅಸಿಟಿಕ್ ಮತ್ತು ಸಲ್ಫ್ಯೂರಿಕ್ ಆಮ್ಲಗಳ ಮಿಶ್ರಣದ ಮೂಲಕ ಹಾಯಿಸಿದಾಗ ಅಥವಾ ಆಮ್ಲ ಮಿಶ್ರಣದೊಡನೆ ಐಸೊಪ್ರೊಪೈಲ್ ಆಲ್ಕೊಹಾಲನ್ನು ಕಾಯಿಸಿದಾಗ ಈ ಎಸ್ಟರು ಉತ್ಪತ್ತಿಯಾಗುತ್ತದೆ. ಐಸೊಪ್ರೊಪೈಲ್ ಆಲ್ಕೊಹಾಲಿನೊಡನೆ (52.5%) ನಿಯತ ಕುದಿ ಮಿಶ್ರಣ (ಕುದಿಯುವ ಬಿಂದು 80.1° ಸೆಂ.) ಉಂಟುಮಾಡುವುದು. ಬಿಸಿ ಮಾಡಿದ ಕ್ಷಾರಗಳ ಸಂಪರ್ಕದಲ್ಲಿ ವಿಭಜನೆ ಹೊಂದಿ ಐಸೊಪ್ರೊಪೈಲ್ ಆಲ್ಕೊಹಾಲ್ ಮತ್ತು ಅಸಿಟೇಟುಗಳನ್ನು ಕೊಡುವುದು. ಸೆಲ್ಯುಲೋಸ್ ನೈಟ್ರೇಟ್ ಮತ್ತು ಬಹು ಪಾಲು ಅಂಟುಗಳು ಇದರಲ್ಲಿ ಲೀನವಾಗುವುವು, ಆದರೆ ಸೆಲ್ಯುಲೋಸ್ ಅಸಿಟೇಟ್ ಮಾತ್ರ ಲೀನವಾಗುವುದಿಲ್ಲ.

(ಎಚ್. ಜಿ. ಎಸ್.)

**ಐಸೊಪ್ರೊಪೈಲ್ ಆಲ್ಕೊಹಾಲ್ :** ಸುವಾಸನೆ ಬೀರುವ ಬಣ್ಣವಿಲ್ಲದ ದ್ರವವಸ್ತು. ಅಣುಸೂತ್ರ $C_3H_8O$. ರಚನಾಸೂತ್ರ



20° ಸೆಂ. ಉಷ್ಣತೆಯಲ್ಲಿ ಸಾಂದ್ರತೆ 0.7856. ಕುದಿಯುವ ಬಿಂದು 82.4° ಸೆಂ. ನೀರು ಮತ್ತು ಆರ್ಗ್ಯಾನಿಕ್ ಲೀನಕಾರಿಗಳೊಡನೆ ಬೆರೆಯುವುದು. ನೀರಿನೊಡನೆ ನಿಯತ ಕುದಿಮಿಶ್ರಣ (ಕುದಿಯುವ ಬಿಂದು 80.4° ಸೆಂ.) ಕೊಡುವುದು. ಈ ಮಿಶ್ರಣದಲ್ಲಿ ಗಾತ್ರಾನುಸಾರ 91% ಆಲ್ಕೊಹಾಲ್ ಇರುತ್ತದೆ. ಪೆಟ್ರೋಲಿಯಂ ಎಣ್ಣೆಯಲ್ಲಿ ಹಲವು ಭಾರವಾದ ಹೈಡ್ರೊಕಾರ್ಬನುಗಳಿರುತ್ತವೆ. ಇವನ್ನು ವಿಭಜನಾತಂತ್ರಕ್ಕೆ ಗುರಿಪಡಿಸಿದಾಗ ದೊರೆಯುವ ಕಿರಿಯ ಹೈಡ್ರೊಕಾರ್ಬನುಗಳಲ್ಲಿ ಪ್ರೊಪೈಲೀನ್ ಸಹ ಒಂದು. ಇದನ್ನು 90%–95% ಸಲ್ಫ್ಯೂರಿಕ್ ಆಮ್ಲದಲ್ಲಿ ವಿಲೀನಗೊಳಿಸಿ ಅನಂತರ ನೀರು ಸೇರಿಸಿ ಕುದಿಸಿದರೆ ಐಸೊಪ್ರೊಪೈಲ್ ಆಲ್ಕೊಹಾಲ್ ಬಟ್ಟಿ ಇಳಿಯುವುದು; ಸ್ವಲ್ಪ ಐಸೊಪ್ರೊಪೈಲ್ ಈಥರ್ ಉಪವಸ್ತುವಾಗಿ ದೊರೆಯುವುದು. ಈ ಕ್ರಿಯೆಗಳನ್ನು ಕೆಳಕಂಡ ಸಮೀಕರಣಗಳು ಸೂಚಿಸುತ್ತವೆ.



ಅಸಿಟೋನನ್ನು ಸೋಡಿಯಂ ಅಮಾಲ್ಗಂನಿಂದ ಅಪಕರ್ಷಿಸಿದಾಗ ಅಥವಾ 150°–180° ಸೆಂ. ಉಷ್ಣತೆಯಲ್ಲಿ ಒತ್ತಡ ಹೇರಿ ನಿಕ್ಕಲ್ ಅಥವಾ ತಾಮ್ರ ವೇಗವರ್ಧಕದ ಸಮ್ಮುಖದಲ್ಲಿ ಹೈಡ್ರೊಜನನ್ನು ಕೂಡಿಸಿದಾಗ ಐಸೊಪ್ರೊಪೈಲ್ ಆಲ್ಕೊಹಾಲ್ ಉಂಟಾಗುವುದು.



ಐಸೊಪ್ರೊಪೈಲ್ ಆಲ್ಕೊಹಾಲಿಗೆ ದ್ವಿತೀಯಕ ಆಲ್ಕೊಹಾಲುಗಳಿಗೆ ಇರಬೇಕಾದ ಸಮಸ್ತ ಲಕ್ಷಣಗಳೂ ಇವೆ. ಇದರ ಮುಖ್ಯ ಉಪಯೋಗ ಅಸಿಟೋನ್ ತಯಾರಿಕೆಯಲ್ಲಿ. ಸ್ಫೋಟಕಗಳು ಮತ್ತು ಪ್ಲಾಸ್ಟಿಕ್ಕುಗಳ ತಯಾರಿಕೆಯಲ್ಲಿ ಅಗಾಧ ಪ್ರಮಾಣದ ಅಸಿಟೋನ್ ಬೇಕಾಗುತ್ತದೆ. 300° ಸೆಂ. ಉಷ್ಣತೆಗೆ ಕಾಯಿಸಿದ ತಾಮ್ರದ ತಂತಿಬಲೆಯೊಂದರ ಮೂಲಕ ಐಸೊಪ್ರೊಪೈಲ್ ಆಲ್ಕೊಹಾಲಿನ ಆವಿಯನ್ನು ಹಾಯಿಸಿ ಅಸಿಟೋನ್ ಪಡೆಯುತ್ತಾರೆ.



ಐಸೊಪ್ರೊಪೈಲ್ ಆಲ್ಕೊಹಾಲ್ ನೀರು ಘನೀಭವಿಸುವುದನ್ನು ವಿರೋಧಿಸುತ್ತದೆ. ಆದ್ದರಿಂದ ಮೋಟಾರ್ ವಾಹನಗಳಲ್ಲಿ ಬಳಸುವ ನೀರು ಹೆಪ್ಪುಗಟ್ಟದಿರಲು ಇದನ್ನು ನೀರಿನೊಡನೆ ಸೇರಿಸುತ್ತಾರೆ. ಉಗುರಿನ ಪಾಲಿಷ್, ಕ್ಷೌರಕ್ಕೆ ಉಪಯೋಗಿಸುವ ಲೋಷನ್, ಅಂಗರಾಗಗಳು, ಸುಗಂಧಗಳು, ಥೈಮಾಲ್ ಇತ್ಯಾದಿಗಳ ತಯಾರಿಕೆಯಲ್ಲಿ ಐಸೊಪ್ರೊಪೈಲ್ ಆಲ್ಕೊಹಾಲಿನ ಪಾತ್ರವಿದೆ. ಇದರ ಎಸ್ಟರುಗಳು ಮೆರುಗೆಣ್ಣೆಗಳಿಗೆ (ಲಾಕ್ವರ್ಸ್) ಉತ್ತಮ ಲೀನಕಾರಿಗಳು. (ಎಚ್.ಜಿ.ಎಸ್.)

**ಐಸೊಪ್ರೊಪೈಲ್ ಈಥರ್ :** ಕರ್ಪೂರದ ವಾಸನೆಯಿರುವ ಬಣ್ಣವಿಲ್ಲದ ದ್ರವವಸ್ತು. ಅಣುಸೂತ್ರ $C_6H_{14}O$. ರಚನಾಸೂತ್ರ



20° ಸೆಂ. ಉಷ್ಣತೆಯಲ್ಲಿ ಇದರ ಸಾಂದ್ರತೆ 0.725. ಕುದಿಯುವ ಬಿಂದು 67.5° ಸೆಂ. ನೀರಿನಲ್ಲಿ ಅದ್ರಾವ್ಯ. ಅನೇಕ ಆರ್ಗ್ಯಾನಿಕ್ ಲೀನಕಾರಿಗಳೊಡನೆ ಬೆರೆಯುತ್ತದೆ. ಐಸೊಪ್ರೊಪೈಲ್ ಆಲ್ಕೊಹಾಲಿನ ತಯಾರಿಕೆಯಲ್ಲಿ ಉಪವಸ್ತುವಾಗಿ ದೊರೆಯುವುದು. ಈ ಆಲ್ಕೊಹಾಲನ್ನು ಪ್ರಬಲ ಸಲ್ಫ್ಯೂರಿಕ್ ಆಮ್ಲದೊಂದಿಗೆ ಕಾಯಿಸಿ ಐಸೊಪ್ರೊಪೈಲ್ ಈಥರನ್ನು ಪಡೆಯಬಹುದು. ದೀರ್ಘಾವಧಿ ಕೂಡಿಟ್ಟಾಗ ಈಥೈಲ್ ಈಥರಿನಂತೆ ಇದೂ ಪರಾಕ್ಸೈಡುಗಳನ್ನು ಕೊಡುವುದು. ಕೀಲೆಣ್ಣೆಗಳಲ್ಲಿರುವ ಮೇಣಗಳನ್ನು ಲೀನಮಾಡಿಕೊಂಡು ನಿವಾರಿಸಲು ಇದು ಸಹಾಯಕವಾಗಿದೆ. ಕೊಬ್ಬು ಮತ್ತು ತೈಲಗಳ ಶುದ್ಧೀಕರಣದಲ್ಲೂ ಇದರ ಉಪಯೋಗ ಇದೆ. (ಎಚ್.ಜಿ.ಎಸ್.)

**ಐಸೊಪ್ರೊಪೈಲ್ ಕ್ಲೋರೈಡ್ :** ಮಧುರ ವಾಸನೆಯಿರುವ ಬಣ್ಣವಿಲ್ಲದ ದ್ರವವಸ್ತು. ಅಣುಸೂತ್ರ $C_3H_7Cl$. ರಚನಾ ಸೂತ್ರ



20° ಸೆಂ. ಉಷ್ಣತೆಯಲ್ಲಿ ಸಾಂದ್ರತೆ 0.859. ಕುದಿಯುವ ಬಿಂದು 36.5° ಸೆಂ. ನೀರಿನಲ್ಲಿ ಅದ್ರಾವ್ಯ. ಅನೇಕ ಆರ್ಗ್ಯಾನಿಕ್ ಲೀನಕಾರಿಗಳೊಂದಿಗೆ ಬೆರೆಯುತ್ತದೆ. ನಿರ್ಜಲ ಸತುವಿನ ಕ್ಲೋರೈಡಿನ ಸಮ್ಮುಖದಲ್ಲಿ ಹೈಡ್ರೊಕ್ಲೋರಿಕ್ ಆಮ್ಲ ಮತ್ತು ಐಸೊಪ್ರೊಪೈಲ್ ಆಲ್ಕೊಹಾಲುಗಳು ಪರಸ್ಪರ ವರ್ತಿಸಿದಾಗ ಅಥವಾ ಆಲ್ಕೊಹಾಲ್ ಮತ್ತು ಹೈಡ್ರೊಜನ್ ಕ್ಲೋರೈಡುಗಳ ಮಿಶ್ರಣವನ್ನು ಆವಿಯ ರೂಪದಲ್ಲಿ ಕಾಯಿಸಿದ ಮೆಗ್ನೀಸಿಯಂ ಕ್ಲೋರೈಡಿನ ಮೇಲೆ ಹಾಯಿಸಿದಾಗ ಐಸೊಪ್ರೊಪೈಲ್ ಕ್ಲೋರೈಡು ದೊರೆಯುವುದು. ಕೈಗಾರಿಕಾ ಪ್ರಮಾಣದಲ್ಲಿ ಇದನ್ನು ತಯಾರಿಸುವುದು ಹೀಗೆಯೇ. ಕೊಬ್ಬುಗಳಿಗೆ ಇದು ಉತ್ತಮ ಲೀನಕಾರಿ ಎನಿಸಿಕೊಂಡಿದೆ. (ಎಚ್.ಜಿ.ಎಸ್.)

**ಐಸೊಬಾರ್ (ಹವಾಮಾನ ಶಾಸ್ತ್ರದಲ್ಲಿ) :** ಸಮಾನ ಒತ್ತಡದಲ್ಲಿರುವ ಎರಡು ಸ್ಥಳಗಳನ್ನು ಸೇರಿಸುವ ರೇಖೆ. ಉದಾಹರಣೆಗೆ ಹವಾಮಾನದ ನಕ್ಷೆಗಳಲ್ಲಿ ಈ ರೇಖೆಗಳನ್ನು ಕಾಣಬಹುದು. ಇಂಥ ಒಂದು ನಕ್ಷೆಯಲ್ಲಿ ಕಾಣುವ ಒತ್ತಡಗಳು ವೀಕ್ಷಣೆ ಮಾಡಿ ದೊರೆತ ಒತ್ತಡಗಳಲ್ಲ ; ಬದಲು, ಸಮುದ್ರಮಟ್ಟಕ್ಕೆ ಸಂಸ್ಕರಿಸಿದಂಥ ಬೆಲೆಗಳು.

1 ಬಾರ್ = ಚದರ ಸೆಂಟಿಮೀಟರಿಗೆ $10^6$ ಡೈನುಗಳು

1 ಮಿಲ್ಲಿಬಾರ್ = ಚದರ ಸೆಂಟಿಮೀಟರಿಗೆ $10^3$ ಡೈನುಗಳು

ಪ್ರತಿದಿವಸವೂ ಮುಖ್ಯಪಟ್ಟಣಗಳಲ್ಲಿ 01, 07, 13 ಮತ್ತು 18 ಗಂಟೆಗಳಲ್ಲಿ ವಾತಾವರಣದ ಒತ್ತಡಗಳನ್ನು ಅಳೆದು ಇವನ್ನು ಆ ಸ್ಥಳಗಳು ಸಮುದ್ರಮಟ್ಟದಲ್ಲಿದ್ದಿದ್ದರೆ ದೊರೆಯುತ್ತಿದ್ದ ಬೆಲೆಗಳಿಗೆ ಸಂಸ್ಕರಿಸಿ ಸಮಾನ ಒತ್ತಡವಿರುವ ಸ್ಥಳಗಳ ಮೇಲೆ ಒಂದೇ ಒತ್ತಡ ರೇಖೆಯನ್ನು (ಐಸೊಬಾರ್) ಎಳೆಯಲಾಗುತ್ತದೆ..




ಚಿತ್ರದಲ್ಲಿ ಕಾಣಿಸುವ ಸಂಖ್ಯೆಗಳು ಮಿಲ್ಲಿಬಾರುಗಳಲ್ಲಿವೆ

ಐಸೊಬಾರುಗಳನ್ನೆಳೆದು ಇವು ಆವರಿಸುವ ಕಡಿಮೆ ಒತ್ತಡ ಮತ್ತು ಅಧಿಕ ಒತ್ತಡದ ಜಾಗಗಳನ್ನು ಗುರುತಿಸಲಾಗುವುದು. ಕಡಿಮೆ ಇರುವ ಜಾಗಗಳ ಸುತ್ತಲೂ ಒತ್ತಡದ ಇಳಿತ ತೀವ್ರವಾಗಿರುವಲ್ಲಿ ಗಾಳಿ ವೇಗವಾಗಿ ಬೀಸುವುದು. ಭೂಮಿಯ ಆವರ್ತನೆ, ಸ್ಥಳದ ಉನ್ನತಿ ಮೊದಲಾದ ಕಾರಣಗಳಿಂದ ಈ ಗಾಳಿ ಸುಳಿಸುಳಿಯಾಗಿ ಬೀಸುತ್ತ ಚಂಡಮಾರುತವಾಗಿ ಸುಳಿಗಾಳಿಯಾಗಿ ಪರಿಣಮಿಸುತ್ತದೆ. ಥಟ್ಟನೆ ಒಂದೆಡೆ ಐಸೊಬಾರುಗಳು ಚಿಕ್ಕ ಭಾಗವನ್ನು ಆವರಿಸಿದರೆ ಅಲ್ಲಿ ಅನತಿಕಾಲದಲ್ಲೇ ಸುಳಿಗಾಳಿ ಬೀಸುವುದು ಎಂದು ಮುನ್ನೆಚ್ಚರಿಕೆ ಕೊಡಬಹುದು. ಅಧಿಕ ಒತ್ತಡವಿರುವಲ್ಲಿ ಉತ್ತಮ ಹವೆ ಇರುತ್ತದೆ. ಇನ್ನು ಇಂಥ ಚಿತ್ರಗಳಿಂದ ಗಾಳಿಯ ಬೀಸುವ ದಿಕ್ಕು ಏನು, ಗಾಳಿ ಹೇಗೆ ವೇಗಪೂರಿತವಾಗುತ್ತದೆ ಎಂಬುದನ್ನೆಲ್ಲ ಊಹಿಸಿ ಮುನ್ನೆಚ್ಚರಿಕೆ ನೀಡಲು ಸಾಧ್ಯ. ಹೀಗೆ ಶುಭ್ರಹವೆ, ಮೋಡ, ಗಾಳಿ, ಮಳೆ ಮುಂತಾದುವುಗಳನ್ನೆಲ್ಲ ಮುಂಚಿತವಾಗಿ ಸೂಚಿಸಲು ಇಂಥ ಐಸೊಬಾರುಗಳ ಚಿತ್ರಗಳು ಸಹಕಾರಿಗಳು. ಐಸೊಬಾರುಗಳು ಒದಗಿಸುವ ಜ್ಞಾನವನ್ನು ಸಮಾನೋಷ್ಣತಾ ರೇಖೆಗಳು (ಐಸೊಥರ್ಮಲ್ ಲೈನ್ಸ್), ಗಾಳಿ ಬೀಸುವ ದಿಕ್ಕು, ಸ್ಥಳದ ಉನ್ನತಿ, ಸಮುದ್ರಸಾಮೀಪ್ಯ ಮೊದಲಾದವುಗಳೊಡನೆ ತುಲನೆಮಾಡಿ ಹವೆಯನ್ನು ಕುರಿತ ಎಚ್ಚರಿಕೆಗಳನ್ನು ಕೊಡುತ್ತಾರೆ. (ಡಬ್ಲ್ಯು.ಎಲ್.ಎ.)

**ಐಸೊಬಾರುಗಳು (ಪರಮಾಣು ಭೌತಿಕ) :** ಒಂದೇ ದ್ರವ್ಯಮಾನ ಸಂಖ್ಯೆ (ಮಾಸ್ ನಂಬರ್) ಇರುವ ಆದರೆ ಭಿನ್ನ ವಿದ್ಯುದಂಶ (ಚಾರ್ಜ್) ಸಂಖ್ಯೆ ಇರುವ ಪರಮಾಣು ಬೀಜಗಳಿಗೆ ಈ ಹೆಸರಿದೆ (ನ್ಯೂಕ್ಲಿಯರ್ ಐಸೊಬಾರ್ಸ್). ಎಂದರೆ ಅವುಗಳಲ್ಲಿರುವ ನ್ಯೂಕ್ಲಿಯಾನುಗಳ ಸಂಖ್ಯೆ ಒಂದೇ ಆಗಿದ್ದು ತತ್ಸಂಬಂಧ ಪ್ರೋಟಾನ್ ಮತ್ತು ನ್ಯೂಟ್ರಾನುಗಳ ಸಂಖ್ಯೆಗಳು ಭಿನ್ನವಾಗಿವೆ.

ನೋಡಿ—ಪರಮಾಣು ಬಲಗಳು (ಡಬ್ಲ್ಯು.ಎಲ್.ಎ.)

**ಐಸೊಮರೇಸುಗಳು :** ಐಸೊಮರುಗಳ (ಸಮಘಟಕಗಳ) ಪರಸ್ಪರ ಪರಿವರ್ತನೆಯ ಕ್ರಿಯೆಯನ್ನು ವರ್ಧಿಸುವ ಕಿಣ್ವಗಳು. ಜೈವಿಕ ವ್ಯವಸ್ಥೆಯಲ್ಲಿ ಈ ಬಗೆಯ ಅನೇಕ ಕಿಣ್ವಗಳಿವೆ. ಅವುಗಳಲ್ಲಿ ಕೆಲವನ್ನೂ ಅವುಗಳು ವರ್ಧಿಸುವ ಕ್ರಿಯೆಗಳನ್ನೂ ಮುಂದೆ ಸೂಚಿಸಲಾಗಿದೆ.

1 ಅಮೈನೋ ಆಮ್ಲಗಳ ಮತ್ತು ಅವುಗಳ ಉತ್ಪನ್ನಗಳೊಡನೆ ವರ್ತಿಸುವ ಕಿಣ್ವಗಳು.

(a) ಅಲಾನಿನ್ ರೆಸಿಮೇಸ್



L ಅಲಾನಿನ್ $\rightleftharpoons$ D ಅಲಾನಿನ್

(b) ಲೈಸಿನ್ ರೆಸಿಮೇಸ್



L ಲೈಸಿನ್ $\rightleftharpoons$ D ಲೈಸಿನ್

2 ಹೈಡ್ರಾಕ್ಸಿ ಆಮ್ಲ ಮತ್ತು ಅವುಗಳ ವ್ಯುತ್ಪನ್ನಗಳೊಂದಿಗೆ ವರ್ತಿಸುವ ಕಿಣ್ವಗಳು.

(a) D ರಿಬ್ಯುಲೋಸ್–5–ಫಾಸ್ಫೇಟ್ 3 ಎಪಿಮರೇಸ್



D–ರಿಬ್ಯುಲೋಸ್–5–ಫಾಸ್ಫೇಟ್ $\rightleftharpoons$ D–ಕ್ಸೈಲ್ಯುಲೋಸ್ 5 ಫಾಸ್ಫೇಟ್

(b) UDP ಗ್ಲೂಕೋಸ್ 4–ಎಪಿಮರೇಸ್



UDP ಗ್ಲೂಕೋಸ್ $\rightleftharpoons$ UDP ಗ್ಯಾಲಾಕ್ಟೋಸ್

(ಎಡ್.ಎಸ್.ಎಸ್.)

**ಐಸೊಮಾರ್ಫಿಸಂ ಮತ್ತು ಪಾಲಿಮಾರ್ಫಿಸಂ :** ಸಂಯುಕ್ತಗಳು ಒಂದೇ ಆಕೃತಿಯಲ್ಲಿ ಅಥವಾ ತತ್ಸಮೀಪ ಜ್ಯಾಮಿತೀಯ ಆಕೃತಿಗಳಲ್ಲಿ ಸ್ಫಟಿಕೀಕರಿಸುವ ಪ್ರವೃತ್ತಿ (ಸಮರೂಪತೆ). ಇಂಥ ಸಂಯುಕ್ತಗಳ ಹೆಸರು ಐಸೊಮಾರ್ಫಸ್ ಸಂಯುಕ್ತಗಳು. ಉಪ್ಪಿನ ತುಣುಕೊಂದನ್ನು ಸೂಕ್ಷ್ಮದರ್ಶಕದಿಂದ ಪರೀಕ್ಷಿಸಿದರೆ ಅದರ ಪ್ರತಿಯೊಂದು ಹರಳೂ ಘನಾಕೃತಿಯಲ್ಲಿರುವುದು ವ್ಯಕ್ತವಾಗುತ್ತದೆ. ಹರಳನ್ನು ನುಣ್ಣಗೆ ಪುಡಿಮಾಡಿ ಎಷ್ಟು ವಿಭಾಗಗಳಾಗಿ ವಿಭಾಗಿಸಿದರೂ ದೊರೆಯುವ ಒಂದೊಂದು ಕಣವೂ ಘನಾಕೃತಿಯಲ್ಲಿಯೇ ಇರುವುದು. ಆದ್ದರಿಂದ ಘನಾಕೃತಿ ಉಪ್ಪಿನ ಸ್ವಭಾವಸಿದ್ಧ ಆಕಾರ ಎಂದಾಯಿತು. ಹೀಗೆ ಹರಳುರೂಪದ ಒಂದೊಂದು ವಸ್ತುವಿಗೂ ವಿಶಿಷ್ಟ ಆಕಾರ ಇದೆ. ಸ್ಫಟಿಕದಲ್ಲಿರುವ ಪರಮಾಣುಗಳು ಭಿನ್ನರೀತಿಯಲ್ಲಿ ಜೋಡಣೆಯಾದಾಗ ವಿವಿಧ ಸ್ಫಟಿಕಾಕೃತಿಗಳು ಮೈದಳೆಯುತ್ತವೆ. ಇದರ ವಿವರವಾದ ಪರಿಶೀಲನೆಯಿಂದ ಸೋಜಿಗದ ಸಂಗತಿಗಳು ಹೊರಬಿದ್ದಿವೆ.

ಆಲಂ ಒಂದು ಲವಣವರ್ಗದ ಹೆಸರು. ಇವು ಯುಗ್ಮಲವಣಗಳು (ಡಬಲ್ ಸಾಲ್ಟ್ಸ್). ನಿರ್ವರ್ಣವಾದ ಪಟಿಕಕ್ಕೆ ಪೊಟ್ಯಾಷ್ ಆಲಂ ಎಂಬುದು ರಾಸಾಯನಿಕ ಹೆಸರು. ಇದರ ಅಣುಸೂತ್ರ



$$K_2SO_4 \cdot Al_2(SO_4)_3 \cdot 24H_2O$$

ನೇರಿಳೆಬಣ್ಣದ ಕ್ರೋಮ್ ಆಲಂ ಇದೇ ಗುಂಪಿನದು. ಇದರ ಅಣುಸೂತ್ರ



$$K_2SO_4 \cdot Cr_2(SO_4)_3 \cdot 24H_2O$$

ಈ ಎರಡು ಲವಣಗಳಲ್ಲಿರುವ ಪರಮಾಣುಗಳ ಸಂಖ್ಯೆ ಒಂದೇ. ಸೂಕ್ಷ್ಮದರ್ಶಕದಿಂದ ಪರೀಕ್ಷಿಸಿದಾಗ ಅವುಗಳ ಸ್ಫಟಿಕಾಕೃತಿಯೂ ಒಂದೇ ಆಗಿರುವುದು ಕಂಡುಬರುತ್ತದೆ. ಅಲ್ಲದೆ ಪಟಿಕದ ಪರ್ಯಾಪ್ತದ್ರಾವಣದಲ್ಲಿಟ್ಟ ಕ್ರೋಮ್ ಆಲಂ ಹರಳು ಸರಾಗವಾಗಿ ಬೆಳೆಯುವುದು. ಕ್ರಮೇಣ ದ್ರಾಕ್ಷಿಯ ಬೀಜ ಹುದುಗಿರುವ ಕಡುಬಿನಂತೆ ಊದುವುದು. ಪಟಿಕ ಕ್ರೋಮ್ ಆಲಂ ಸುತ್ತ ಇಷ್ಟು ನಿರಾಳವಾಗಿ ಸಂಗ್ರಹಗೊಳ್ಳುವುದರಿಂದ ಅವೆರಡರ ಸ್ಫಟಿಕಾಕೃತಿಯಲ್ಲಿ ಎಷ್ಟು ನಿಕಟ ಹೋಲಿಕೆಯಿದೆ ಎಂಬುದು ವೇದ್ಯವಾಗುತ್ತವೆ. ಈ ಪ್ರವೃತ್ತಿಯೇ ಐಸೊಮಾರ್ಫಿಸಂ.

ಜರ್ಮನಿಯ ಭೂಶಾಸ್ತ್ರಜ್ಞನೂ ಸ್ಫಟಿಕಶಾಸ್ತ್ರ ಪರಿಣತನೂ ಆದ ಮಿಚೆರ್ಲಿಕ್ ಇಂಥ ಅನೇಕ ಹರಳುರೂಪದ ಸಂಯುಕ್ತಗಳ ಅಧ್ಯಯನದಿಂದ ಐಸೊಮಾರ್ಫಿಸಮನ್ನು ಕುರಿತ ಒಂದು ನಿಯಮವನ್ನು ಪ್ರತಿಪಾದಿಸಿದ (1819). ಈ ನಿಯಮದ ಪ್ರಕಾರ ಸಮಾನ ಸಂಖ್ಯೆಯ ಪರಮಾಣುಗಳು ಸಮಾನರೀತಿಯಲ್ಲಿ ಜೋಡಣೆಗೊಂಡಿರುವ ವಸ್ತುಗಳ ಹರಳುಗಳ ರೂಪಗಳಲ್ಲೂ ಸಾಮ್ಯವಿದೆ. ಆದರೆ ಈ ನಿಯಮದ ಯಾಥಾರ್ಥ್ಯದ ಬಗ್ಗೆ ಸಂಶಯ ಹುಟ್ಟಿಸುವ ಕೆಲವು ಸಾಕ್ಷ್ಯಗಳು ಇತ್ತೀಚಿಗೆ ಬೆಳಕಿಗೆ ಬಂದಿವೆ. ರಾಸಾಯನಿಕ ರಚನೆ ಮತ್ತು ಸ್ಫಟಿಕಾಕೃತಿಗಳಲ್ಲಿ ಹೋಲಿಕೆಯಿರುವ ಕೆಲವು ಸಂಯುಕ್ತಗಳಿವೆ. ಈ ಹೋಲಿಕೆ ಸ್ಥೂಲವಾಗಿದ್ದು ಸ್ಫಟಿಕಕೋನದಲ್ಲಿ ಅಲ್ಪ ಅಂತರವಿರುವುದು ವ್ಯಕ್ತಪಟ್ಟಿದೆ. ಉದಾಹರಣೆಗೆ, ಮೆಗ್ನೀಸಿಯಂ ಸಲ್ಫೇಟ್ ($MgSO_4.7H_2O$) ಮತ್ತು ಫೆರಸ್ ಸಲ್ಫೇಟ್ ($FeSO_4.7H_2O$) ಲವಣಗಳನ್ನು ಹೆಸರಿಸಬಹುದು. ಇವೆರಡು ಸಂಯುಕ್ತಗಳಲ್ಲಿ ಐಸೊಮಾರ್ಫಿಸಮಿಗೆ ಆಧಾರವಾದ ಎಲ್ಲ ಗುಣಗಳೂ ಇರುವುದು ನಿಜ. ಆದರೆ ಅವುಗಳ ಸ್ಫಟಿಕಾಂಗದ (ಕ್ರಿಸ್ಟಲ್ ಯೂನಿಟ್) ಆಯಾಮಗಳಲ್ಲಿ (ಡೈಮೆನ್ಷನ್ಸ್) ಮತ್ತು ಕೋನದಲ್ಲಿ ಸೂಕ್ಷ್ಮ ವ್ಯತ್ಯಾಸಗಳಿರುವುದನ್ನು ಕೆಳಕಂಡ ಪಟ್ಟಿಯಲ್ಲಿ ಗಮನಿಸಬಹುದು.

| ಸಂಯುಕ್ತ | a : b : c | $\beta$ |
|---|---|---|
| ಮೆಗ್ನೀಸಿಯಂ ಸಲ್ಫೇಟ್ | 1.2200 : 1 : 1.5820 | 104° 24′ |
| ಫೆರಸ್ ಸಲ್ಫೇಟ್ | 1.1828 : 1 : 1.5427 | 104° 15′ |

ಎರಡು ವಸ್ತುಗಳ ಹರಳು ರಚನೆಯಲ್ಲಿ ಪರಿಪೂರ್ಣ ಸಾಮ್ಯವಿರಲು ಸಾಧ್ಯವಿಲ್ಲ ಎಂಬ ಹಾಯನ ನಿಯಮ ಇದರಿಂದ ಸಮರ್ಥಿತವಾಗುತ್ತದೆ. ಅಲ್ಲದೆ ಐಸೊಮಾರ್ಫಿಸಂ ನಿಯಮವನ್ನು ಸರ್ವಸತ್ಯವೆಂದು ಅನ್ವಯಿಸಲಾಗದು ಎಂಬ ತೀರ್ಪು ಅನಿವಾರ್ಯವಾಗುತ್ತದೆ. ಮಿಚೆರ್ಲಿಕನ ಪ್ರಕಾರ ಐಸೊಮಾರ್ಫಸ್ ಸಂಯುಕ್ತಗಳಲ್ಲಿ ಸಮಸಂಖ್ಯೆಯ ಪರಮಾಣುಗಳಿರಬೇಕಷ್ಟೆ. ಇದಕ್ಕೂ ಅಪವಾದಗಳಿವೆ. ಅಮೋನಿಯಂ ಆಲಂನಲ್ಲಿ



$$(NH_4)_2SO_4 \cdot Al_2(SO_4)_3 \cdot 24H_2O$$

ಪೊಟ್ಯಾಷ್ ಆಲಂಗಿಂತ ಎಂಟು ಪರಮಾಣುಗಳು ಹೆಚ್ಚು ಇವೆ. ಆದರೆ ಇವೆರಡೂ ಐಸೊಮಾರ್ಫಸ್ ಸಂಯುಕ್ತಗಳು. ಇಂಥ ಅನೇಕ ನಿದರ್ಶನಗಳಿವೆ. ಈ ಪರಿಸ್ಥಿತಿಯಲ್ಲಿ ಮಿಚೆರ್ಲಿಕನ ನಿಯಮವನ್ನು ತಿದ್ದುಪಡಿಮಾಡದೆ ವಿಧಿಯಿಲ್ಲ. ಸಮಾನ ರಾಸಾಯನಿಕ ರಚನೆಯುಳ್ಳ ವಸ್ತುಗಳ ಸ್ಫಟಿಕಾಕೃತಿಯಲ್ಲೂ ಹೋಲಿಕೆ ಇರುವುದು ಸಂಭವನೀಯ ಎನ್ನುವುದು ಹೆಚ್ಚು ವಾಸ್ತವ.

ರಾಸಾಯನಿಕ ಗುಣಗಳಿಂತ ಹರಳಿನ ಒಳರಚನೆಯಲ್ಲಿರುವ ಹೋಲಿಕೆಯೇ ಐಸೊಮಾರ್ಫಿಸಮಿಗೆ ಕಾರಣವೆಂದು ಗೊತ್ತಾಗಿದೆ. ಪ್ರತಿಯೊಂದು ಹರಳುರೂಪದ ವಸ್ತುವೂ ಚಿಕ್ಕ ಘಟಕಗಳಿಂದ ಆಗಿರುತ್ತದೆ. ಈ ಘಟಕಗಳ ಜ್ಯಾಮಿತೀಯ ಆಕಾರ ಸಮನಾಗಿದ್ದರೆ ಸಾಕು. ಅಂಥ ವಸ್ತುಗಳು ಐಸೊಮಾರ್ಫಿಸಮನ್ನು ಪ್ರದರ್ಶಿಸಬಲ್ಲವು. ಇದಕ್ಕೆ ಕ್ಯಾಲ್ಸಿಯಂ ಕಾರ್ಬೊನೇಟ್ ($CaCO_3$) ಮತ್ತು ಸೋಡಿಯಂ ನೈಟ್ರೇಟ್ ($NaNO_3$) ಉದಾಹರಣೆಗಳು. ಆದ್ದರಿಂದ ಐಸೊಮಾರ್ಫಸ್ ಸಂಯುಕ್ತಗಳಲ್ಲಿರುವ ಆಯಾಮದಲ್ಲಿ ನಿಕಟ ಹೋಲಿಕೆಯಿರುವುದು ನಿಜ. ಆದರೆ ಎರಡು ಹರಳುಗಳ ಸ್ಫಟಿಕ ನಿಯತಾಂಕಗಳು (ಕ್ರಿಸ್ಟಲ್ ಕಾನ್‌ಸ್ಟೆಂಟ್ಸ್) ಒಂದಾಗಿದ್ದ ಮಾತ್ರಕ್ಕೆ ಅವು ಐಸೊಮಾರ್ಫಸ್ ಎನ್ನಲಾಗದು.

ಮಿಶ್ರಹರಳುಗಳನ್ನು ಉಂಟುಮಾಡುವ ಚೈತನ್ಯವನ್ನು ಐಸೊಮಾರ್ಫಿಸಮಿಗೆ ಪ್ರಮುಖ ಆಧಾರವಾಗಿ ಇಟ್ಟುಕೊಳ್ಳುವುದು ಸಂಪ್ರದಾಯ. ಎರಡು ವಸ್ತುಗಳು ಐಸೊಮಾರ್ಫಸ್ ಆಗಿದ್ದರೆ ಅವೆರಡನ್ನು ವಿವಿಧ ಪ್ರಮಾಣಗಳಲ್ಲಿ ಹೊಂದಿರುವ ಮಿಶ್ರಹರಳುಗಳನ್ನು ತಯಾರಿಸಬಹುದು. ಮುಂದಿನ ಉದಾಹರಣೆ ಇದನ್ನು ಸ್ಪಷ್ಟೀಕರಿಸುತ್ತದೆ. ಮೈಲುತುತ್ತ (ತಾಮ್ರದ ಸಲ್ಫೇಟ್) ಮತ್ತು ಅನ್ನಭೇದಿಗಳನ್ನು (ಫೆರಸ್ ಸಲ್ಫೇಟ್) ಒಳಗೊಂಡಿರುವ ದ್ರಾವಣವನ್ನು ಹಿಂಗಿಸುತ್ತ ನಡೆದರೆ ಸ್ಫಟಿಕೀಕರಿಸುವ ತಾಮ್ರದ ಸಲ್ಫೇಟಿನಲ್ಲಿ ಕಬ್ಬಿಣವಿರುತ್ತದೆ. ಈ ಸಂದರ್ಭದಲ್ಲಿ ಉತ್ಪತ್ತಿಯಾಗುವ $FeSO_4.5H_2O$ ಮತ್ತು ತಾಮ್ರದ ಸಲ್ಫೇಟ್ ಐಸೊಮಾರ್ಫಸ್ ಆಗಿರುವುದರಿಂದ ಹೀಗಾಗುತ್ತದೆ. ಇವುಗಳಿಂದಾದ ಮಿಶ್ರಹರಳುಗಳ ಸೂತ್ರವನ್ನು $(Cu_{1-n}Fe_n)\,SO_4.5H_2O$ ಎಂದು ಬರೆಯಬಹುದು. ಇಂಥ ದ್ರಾವಣ ಮಿಶ್ರಣದಿಂದ ಪರಿಶುದ್ಧ ತಾಮ್ರದ ಸಲ್ಫೇಟನ್ನು ಸ್ಫಟಿಕೀಕರಿಸುವುದು ಅಸಾಧ್ಯ. ದ್ರಾವಣಕ್ಕೆ ಪ್ರಬಲ ನೈಟ್ರಿಕ್ ಆಮ್ಲವನ್ನು ಹಾಕಿ ಕಾಯಿಸಿದರೆ ಫೆರಸ್ ಸಲ್ಫೇಟ್ ಫೆರಿಕ್ ಸ್ಥಿತಿಗೆ ಉತ್ಕರ್ಷಿತವಾಗುವುದು. ಇದರ ಹರಳು ರಚನೆ ತಾಮ್ರದ ಸಲ್ಫೇಟಿಗಿಂತ ಭಿನ್ನವಾಗಿರುವುದು. ಆದ್ದರಿಂದ ಈಗ ದ್ರಾವಣದಿಂದ ಕಬ್ಬಿಣವಿರದ ಪರಿಶುದ್ಧ ತಾಮ್ರದ ಸಲ್ಫೇಟನ್ನು ಸ್ಫಟಿಕೀಕರಿಸಬಹುದು.

ಐಸೊಮಾರ್ಫಸ್ ವಸ್ತುಗಳೆಲ್ಲ ಮಿಶ್ರಹರಳುಗಳನ್ನು ಕೊಡುವುದಿಲ್ಲ. ವಸ್ತುಗಳ ಅಣುಗಾತ್ರ ಪರಸ್ಪರ ಹೊಂದಿಕೊಂಡಷ್ಟೂ ಮಿಶ್ರಹರಳುಗಳ ಜನನ ಹೆಚ್ಚು ಸಂಭವನೀಯ. ಒಂದು ಹರಳಿನ ಮೇಲೆ ಮತ್ತೊಂದು ಸಂಗ್ರಹಿಸುವ ಸಾಮರ್ಥ್ಯವಿದ್ದರೆ ಅದು ಸಹ ಐಸೊಮಾರ್ಫಿಸಮಿಗೆ ಆಧಾರವೆನಿಸಿಕೊಳ್ಳುತ್ತದೆ. ಕೇವಲ ಅಣುಗಾತ್ರ ಸಮನಾಗಿದ್ದರೂ ಹೀಗಾಗುವುದರಿಂದ ಇದನ್ನೂ ನೆಚ್ಚುವಂತಿಲ್ಲ. ಒಟ್ಟಾರೆ– 1 ಸ್ಫಟಿಕಾಕೃತಿಯಲ್ಲಿ ಹೋಲಿಕೆ, 2 ಮಿಶ್ರಹರಳುಗಳ ಉತ್ಪತ್ತಿ, 3 ಒಂದರ ಮೇಲೊಂದು ಹರಳು ಬೆಳೆಯುವಿಕೆ—ಈ ಲಕ್ಷಣಗಳ ಪೈಕಿ ಯಾವುದೊಂದೂ ಐಸೊಮಾರ್ಫಿಸಮಿಗೆ ಮಾನದಂಡವಾಗಲಾರದು. ಈ ಗುಣಧರ್ಮಗಳಲ್ಲಿ ಒಂದಕ್ಕಿಂತ ಹೆಚ್ಚು ಲಕ್ಷಣಗಳನ್ನು ಪಡೆದಿರುವ ವಸ್ತುಗಳು ಮಾತ್ರ ಐಸೊಮಾರ್ಫಿಕ್ ವಸ್ತುಗಳು ಎನ್ನಲು ಬಾಧಕವಿಲ್ಲ.

ಐಸೊಪಾಲಿಮಾರ್ಫಿಸಂ : ಐಸೊಮಾರ್ಫಿಸಮಿನ ವಿಶೇಷ ಸಂದರ್ಭವಿದು. ಆರ್ಸೆನಿಯಸ್ ಆಕ್ಸೈಡಿನಲ್ಲಿ ಎರಡು ಬಗೆಯುಂಟು. ಒಂದರಲ್ಲಿ ಪ್ರತಿ ಪುಟ್ಟ ಹರಳಿಗೂ ಎಂಟು ಮುಖಗಳಿರುತ್ತವೆ. ಒಂದೊಂದು ಮುಖವೂ ಸರಳಘನಾಕೃತಿ

ಯದು. ಇದನ್ನು ಅಷ್ಟಮುಖೀರೂಪ (ಆಕ್ಟಹೆಡ್ರಲ್) ಎನ್ನುವರು. ಇನ್ನೊಂದು ಏಕನತರೂಪಿ (ಮಾನೊಕ್ಲಿನಿಕ್). ಆಂಟಿಮೊನಿಯಸ್ ಆಕ್ಸೈಡಿಗೆ ಇಂಥದೇ ಎರಡು ರೂಪಗಳಿವೆ. ಇವೆರಡರ ಅಷ್ಟಮುಖಿ ಮತ್ತು ಏಕನತ ಪರಳುಗಳು ಐಸೊಮಾರ್ಫಿಸಮನ್ನು ಪ್ರದರ್ಶಿಸುವುವು. ಈ ಗುಣವೈಚಿತ್ರ್ಯಕ್ಕೆ ಐಸೊಪಾಲಿಮಾರ್ಫಿಸಂ ಎಂದು ಹೆಸರು. ಐಸೊಮಾರ್ಫಿಸಮಿನಲ್ಲಿ ಮತ್ತೊಂದು ವಿಧವಿದೆ. ಅಯೊಡೀನ್ ಬ್ರೋಮೈಡ್ ಎಂಬ ಸಂಯುಕ್ತ ಅಯೊಡೀನ್ ಮತ್ತು ಬ್ರೋಮಿನಿನ ಪರಳು ರೂಪಗಳೆರಡನ್ನೂ ಹೋಲುವುದು. ಇದಕ್ಕೆ ಐಸೊಡೈಮಾರ್ಫಿಸಂ ಎಂದು ಹೆಸರು.

ಪಾಲಿಮಾರ್ಫಿಸಂ : ಘನವಸ್ತುಗಳು ಒಂದಕ್ಕಿಂತ ಹೆಚ್ಚು ಭೌತರೂಪಗಳಲ್ಲಿ ದೊರೆಯುವ ಪ್ರವೃತ್ತಿ (ಬಹುರೂಪತೆ). ಇಂಥ ಸಂಯುಕ್ತಗಳ ಹೆಸರು ಪಾಲಿಮಾರ್ಫಸ್ ಸಂಯುಕ್ತಗಳು. ಉದಾಹರಣೆಗೆ ಬೆಣಚುಕಲ್ಲು ಮರಳು ಇತ್ಯಾದಿಗಳು ಸಿಲಿಕದ ($SiO_2$) ಬಹುರೂಪಗಳು. ಹಾಗೆಯೇ ಅಮೃತಶಿಲೆ, ಸುಣ್ಣಕಲ್ಲು ಮತ್ತು ಸೀಮೆಸುಣ್ಣ ಕ್ಯಾಲ್ಸಿಯಂ ಕಾರ್ಬೊನೇಟಿನ ವಿವಿಧರೂಪಗಳು. ಪಾಲಿಮಾರ್ಫಿಸಮನ್ನು ಪ್ರದರ್ಶಿಸುವ ವಸ್ತುಗಳು ಮೂಲ ಧಾತುಗಳಾಗಿದ್ದರೆ ಆಗ ಅದು ಬಿನ್ನರೂಪತೆ (ಅಲಾಟ್ರೊಪಿ) ಎನಿಸಿಕೊಳ್ಳುತ್ತದೆ. ಕೆಂಪು ಮತ್ತು ಬಿಳಿಯ ರಂಜಕ, ಇಂಗಾಲ ರೂಪಿಗಳಾದ ವಜ್ರ ಮತ್ತು ಗ್ರಾಫೈಟ್, ಅಷ್ಟಮುಖಿ, ಏಕನತ ಮತ್ತು ಮೆದು ಗಂಧಕ ಮುಂತಾದುವುಗಳ ಪರಿಚಯ ನಮಗಿದೆ. ಆದರೆ ಆಕ್ಸಿಜನ್ ಮತ್ತು ಓಜೋನ್ ($O_3$) ಆರ್ಥೊ ಮತ್ತು ಪ್ಯಾರಾ ಹೈಡ್ರೊಜನ್, ಕ್ರಿಯಾಶಾಲಿ ಮತ್ತು ಸಾಮಾನ್ಯ ನೈಟ್ರೊಜನ್ ಇತ್ಯಾದಿ ಅಸ್ಫಟಿಕ ವಸ್ತುಗಳ ಭಿನ್ನರೂಪತೆ ಪಾಲಿಮಾರ್ಫಿಸಮಿನ ವ್ಯಾಪ್ತಿಯಲ್ಲಿ ಬರುವುದಿಲ್ಲ.

ಪಾಲಿಮಾರ್ಫಿಸಂ ಕೇವಲ ಸ್ಫಟಿಕರೂಪದ ವಸ್ತುಗಳಿಗೆ ಸೀಮಿತವಾದ ಗುಣ. ಸ್ಫಟಿಕರಚನೆಯಲ್ಲಿರುವ ವ್ಯತ್ಯಾಸಗಳ ಫಲವಾಗಿ, ಸಾಂದ್ರತೆ ಮುಂತಾದ ಭೌತ ಗುಣಗಳಲ್ಲಿ ವ್ಯತ್ಯಾಸಗಳಾಗಿ ಇದು ಪ್ರಾಪ್ತವಾಗುವುದು. ಅಂದರೆ ಉಪ್ಪಿನಂತೆ ($NaCl$) ಒಂದೇ ವಸ್ತು ಸರಳ ಘನಾಕೃತಿಯಲ್ಲಿ (ಚಿತ್ರ 1) ಅಥವಾ ಅಷ್ಟಮುಖಿಯಾಗಿ (ಚಿತ್ರ 2)ಸ್ಫಟಿಕೀಕರಿಸಬಹುದು. ಪಾಲಿಮಾರ್ಫಿಸಮಿಗೆ ಮರ್ಕ್ಯೂರಿಕ್ ಅಯೊ




ಐಸೊಮಾರ್ಫಿಸಂ ಮತ್ತು ಪಾಲಿಮಾರ್ಫಿಸಂ

ಡೈಡನ್ನು ಉದಾಹರಿಸುವುದು ವಾಡಿಕೆ. ಅದು ಒತ್ತರಿಸಿದಾಗ ಹಳದಿಯಾಗಿದ್ದು ತತ್‌ಕ್ಷಣ ಕೆಂಪಾಗುತ್ತದೆ. ಕೆಂಪುರೂಪವನ್ನು 126° ಸೆಂ. ಉಷ್ಣತೆಗೆ ಕಾಯಿಸಿದಾಗ ಹಳದಿಯ ರೂಪ ತಾಳಿ ತಣಿಸಿದಾಗ ಪುನಃ ಕೆಂಪಾಗುತ್ತದೆ. ಕೆಂಪುರೂಪ ಚತುಷ್ಕೋಣ ವ್ಯವಸ್ಥೆಯಲ್ಲಿ (ಟೆಟ್ರಗೊನಲ್ ಸಿಸ್ಟಂ) ಅಷ್ಟಮುಖಿಯಾಗಿರುತ್ತದೆ. ಹಳದಿರೂಪ ಚಪ್ಪಟೆಯಾಕೃತಿಹೊಂದಿದ್ದು ಆರ್ಥೊರಾಂಬಿಕ್ ವ್ಯವಸ್ಥೆಯಲ್ಲಿ ಸ್ಫಟಿಕೀಕರಿಸುತ್ತದೆ. ಕ್ಯುಪ್ರಿ ಮರ್ಕ್ಯೂರಿಕ್ ಅಯೊಡೈಡಿನಂಥ ಲವಣಗಳಲ್ಲಿ ಈ ಪರಿಣಾಮ ಎದ್ದು ಕಾಣುತ್ತದೆ. 70° ಸೆಂ. ಉಷ್ಣತೆಗೆ ಕಾಯಿಸಿದಾಗ, ಈ ಲವಣ ಕಪ್ಪಾಗಿ, ತಣಿಸಿದಾಗ ಪುನಃ ಕೆಂಪಾಗುವುದು.

ಪಾಲಿಮಾರ್ಫಸ್ ವಸ್ತುಗಳ ಶಕ್ತಿಪರಿಮಾಣ (ಎನರ್ಜಿ ಕಂಟೆಂಟ್) : ಹರಳಿನಲ್ಲಿ ಅಣು ಘಟಕಗಳು ಇರುವುದು ಸರಿಯಷ್ಟೆ. ಪ್ರತಿಯೊಂದು ಅಣುವಿನಲ್ಲಿರುವ ಪರಮಾಣುಗಳ ಸಂಖ್ಯೆ ಮತ್ತು ಜೋಡಣೆಯ ಕ್ರಮವನ್ನು ಅವಲಂಬಿಸಿ ಪಾಲಿಮಾರ್ಫಸ್ ವಸ್ತುಗಳಾಗುತ್ತವೆ. ಹರಳು ಜಾಲಕದಲ್ಲಿ (ಕ್ರಿಸ್ಟಲ್ ಲ್ಯಾಟ್ಟಿಸ್) ಅಣುಗಳ ಸ್ಥಾನ ಮತ್ತು ಮತ್ತು ಸಾಪೇಕ್ಷ ಚಲನೆಗೆ ಅನುಗುಣವಾಗಿ ಆಯಾ ರೂಪದ ಶಕ್ತಿ ನಿರ್ಧರವಾಗುತ್ತದೆ. ಅಣುಗಳಿಗೆ ಸಾಕಷ್ಟು ಶಕ್ತಿಯಿದ್ದರೆ ಅವುಗಳ ಕಂಪನಸ್ವಾತಂತ್ರ್ಯ ಹೆಚ್ಚಿ ಅವು ಜಾಲಕದಿಂದ ಆಯಾ ರೂಪದಲ್ಲಿ ತಪ್ಪಿಸಿಕೊಳ್ಳುತ್ತವೆ. ಆದ್ದರಿಂದ ಪರಳುವಸ್ತುವಿನ ಆವಿಯೊತ್ತಡ ಹೆಚ್ಚಾಗಿದ್ದದ್ದರೆ ಆ ರೂಪ ಅಸ್ಥಿರವಾಗಿರಬೇಕು. ಹಾಗೆಯೇ ಸ್ಥಿರರೂಪದ ಆವಿಯೊತ್ತಡ ಮತ್ತು ಕ್ರಿಯಾಶೀಲತೆ ಕಡಿಮೆಯಾಗಿರುತ್ತದೆ. ತಾತ್ತ್ವಿಕವಾಗಿ ವಸ್ತುಗಳಿಗೆ ಅಸ್ಥಿರ ಸ್ಥಿತಿಯಿಂದ ಸ್ಥಿರರೂಪಕ್ಕೆ ಜಾರಿಕೊಳ್ಳುವ ಸಹಜ ಪ್ರವೃತ್ತಿ ಇರುವುದು. ಆದರೆ ಸೂಕ್ತ ಪ್ರಚೋದನೆಯಿಲ್ಲದೆ ಹೀಗಾಗುವುದು ವಿರಳ. ಇಂಥ ಅನೇಕ ನಿದರ್ಶನಗಳಿವೆ. ಮರ್ಕ್ಯೂರಿಕ್ ಅಯೊಡೈಡ್ ಹಳದಿರೂಪದಲ್ಲಿ ಕೆಲಕಾಲ ಇರಬಲ್ಲುದು. ಅದನ್ನು ಒಂದು ಕಡ್ಡಿಯಿಂದ ಮುಟ್ಟಿದಾಗ ಅಥವಾ ಕೆರೆದಾಗ ಕೂಡಲೇ ಕೆಂಪಾಗುತ್ತದೆ. ಏಕನತ ಗಂಧಕವೂ ಹೀಗೆಯೇ ಉಜ್ಜಿದಾಗ ಅಷ್ಟಮುಖಿ ಗಂಧಕವಾಗಿ ಮಾರ್ಪಡುತ್ತದೆ. ಸ್ಥಿರರೂಪದಲ್ಲಿ ಇರಬೇಕಾದ ಸನ್ನಿವೇಶದಲ್ಲಿ ಹಾಗಿರದೆ ಸಂಧಿ ಸಮಸ್ಥಿತಿಯಲ್ಲಿರುವ (ಮೆಟಸ್ಟೇಬಲ್ ಸ್ಟೇಟ್) ವಸ್ತುಗಳಿವೆ. ಇದು ಲೋಹಗಳಿಗೆ ಬಹುತೇಕ ಅನ್ವಯಿಸುವುದು. ತವರದ ಮೂರು ರೂಪಗಳಲ್ಲಿ ಬೂದು ಮತ್ತು ಬಿಳಿಯ ತವರಗಳ ಪರಸ್ಪರ ಪರಿವರ್ತನೆ ಸ್ವಾರಸ್ಯವಾಗಿದೆ. ಉಷ್ಣತೆ 18° ಸೆಂ. ಮೀರಿದರೆ ಬಿಳಿಯ ತವರವೂ ಅದಕ್ಕಿಂತ ಕಡಿಮೆಯಾದರೆ ಬೂದು ತವರವೂ ಪ್ರಾಪ್ತವಾಗುವುವು. ಶೀತದೇಶಗಳಲ್ಲಿ ಚಳಿಗಾಲದಲ್ಲಿ ಈ ಪರಿವರ್ತನೆಯನ್ನು ಕಾಣಬಹುದು. ಉದಾಹರಣೆಗೆ ಚಳಿಗಾಲದಲ್ಲಿ ಇಂಗ್ಲೆಂಡಿನ ವಾತಾವರಣದ ಉಷ್ಣತೆ 18° ಸೆಂ.ಗಿಂತ ಕೆಳಗಿಳಿಯುವುದು ಸರ್ವಸಾಮಾನ್ಯ. ಆಗ ತಂಪಾದ ತವರ ಬೂದುಬಣ್ಣಕ್ಕೆ ತಿರುಗದೆ ಹಾಗೆಯೇ ಕೆಲಕಾಲ ಉಳಿದಿರುತ್ತದೆ. ಅದಕ್ಕೆ ಬೂದು ತವರದ ಒಂದು ಹರಳನ್ನು ಹಾಕಿದರೆ ಸಾಕು. ಪರಿವರ್ತನೆ ತತ್‌ಕ್ಷಣ ಪ್ರಾರಂಭವಾಗುತ್ತದೆ. ಬೂದು ತವರದ ಸಾಂದ್ರತೆ (5.7) ಬಿಳಿಯ ತವರದ ಸಾಂದ್ರತೆಗಿಂತ (7.28) ಕಡಿಮೆಯಾದುದರಿಂದ ಈ ಪರಿವರ್ತನೆಯಾದಾಗ ವಸ್ತು ವಿಕಸಿತವಾಗಬೇಕು. ತತ್ಫಲವಾಗಿ ಅದು ಹುಡಿಯಾಗುತ್ತದೆ. ಈ ಪರಿವರ್ತನೆಗೆ ತವರದ ಪ್ಲೇಗ್ ಎನ್ನುತ್ತಾರೆ. ಇದರ ಬಗ್ಗೆ ಐತಿಹಾಸಿಕ ಉಲ್ಲೇಖವಿದೆ. 1812ರಲ್ಲಿ ರಷ್ಯದ ವಿರುದ್ಧ ದಂಡಯಾತ್ರೆಯಲ್ಲಿ ವಿಫಲನಾದ ನೆಪೋಲಿಯನ್ ಚಕ್ರವರ್ತಿಯ ಸೈನ್ಯ, ಅಲ್ಲಿಯ ಅಸಾಧ್ಯ ಚಳಿಯ ದೆಸೆಯಿಂದ ಹಿಂತಿರುಗಬೇಕಾಯಿತು. ಫ್ರೆಂಚ್ ಸೈನಿಕರು ಧರಿಸಿದ್ದ ತವರದ ಪದಕಗಳು ಮತ್ತು ಸಮವಸ್ತ್ರದ ಗುಂಡಿಗಳೆಲ್ಲ ಬೂದು ಬಣ್ಣಕ್ಕೆ ತಿರುಗಿ ಹುಡಿಯಾಗಿ ಉದುರಿ ಹೋದುವಂತೆ. ಬೂದುರೂಪಕ್ಕೆ ಬಾರದೆ ಬಿಳಿಯ ತವರವಾಗಿಯೆ ಬಹುಕಾಲ ಉಳಿಯುವ ಚೈತನ್ಯ ಇರದಿದ್ದಲ್ಲಿ ಶೀತದೇಶಗಳಲ್ಲಿ ತವರದ ಉಪಯೋಗ ಹೇಳ ಹೆಸರಿಲ್ಲದೆ ಹೋಗುತ್ತಿತ್ತು. ಹೀಗೆ ಒಂದೇ ವಸ್ತುವಿನ ಎರಡು ರೂಪಗಳು ಸಮಸ್ಥಿರತೆಯನ್ನು ಹೊಂದಿರುವ ಉಷ್ಣತೆಗೆ ಅದರ ಪರ್ವಬಿಂದು (ಟ್ರಾನ್ಸಿಷನ್ ಟೆಂಪರೇಚರ್) ಎಂದು ಹೆಸರು. ಈ ಸ್ಥಿತಿಯಲ್ಲಿ ಎರಡು ರೂಪಗಳ ದ್ರಾವಣತೆ ಮತ್ತು ಆವಿಯೊತ್ತಡ ಸಮನಾಗಿರುತ್ತವೆ. ಆದ್ದರಿಂದ ಇವುಗಳಿಗೆ ಸಂಬಂಧಿಸಿದ ರೇಖೆಗಳು ಸಂಧಿಸುವ ಬಿಂದುವನ್ನು ಗುರುತಿಸಿಕೊಂಡು ಪರ್ವಬಿಂದುವನ್ನು ಕಂಡುಹಿಡಿಯಬಹುದು. ಪರಿಚಿತ ವಸ್ತುಗಳ ಪರ್ವಬಿಂದುಗಳ ವಿವರಗಳನ್ನು ಕೆಳಗೆ ಕೊಡಲಾಗಿದೆ.

| ವಸ್ತು | ರೂಪ | ಪರ್ವಬಿಂದು °ಸೆಂ. |
|---|---|---|
| ಗಂಧಕ | ಅಷ್ಟಮುಖಿ ⇄ ಏಕನತ | 95.6 |
| ತವರ | ಬೂದು ⇄ ಬಿಳಿ | 18.0 |
| ಸತು | ಆಲ್ಫಾ ⇄ ಬೀಟಾ | 174.0 |
| | ಬೀಟಾ ⇄ ಗ್ಯಾಮಾ | 322.0 |
| ಅಮೋನಿಯಂ ಕ್ಲೋರೈಡ್ | ಆಲ್ಫಾ ⇄ ಬೀಟಾ | 184.5 |
| ಮರ್ಕ್ಯೂರಿಕ್ ಅಯೊಡೈಡ್ | ಟೆಟ್ರಾಗೊನಲ್ ⇄ ಆರ್ಥೊ ರಾ ಬಿಕ್ | 126.0 . |
| ಸಿಲ್ವರ್ ನೈಟ್ರೇಟ್ | ರಾಂಬಿಕ್ ⇉ ರಾಂಬೊಹಿಡ್ರಲ್ | 160·0 |
| ಸಿಲ್ವರ್ ಅಯೊಡೈಡ್ | ಹೆಕ್ಸಾಗೊನಲ್ ⇄ ರೆಗ್ಯುಲರ್ | 146.5 |

ಪಾಲಿಮಾರ್ಫಿಸಮಿನ ವರ್ಗೀಕರಣ : 1 ಉಷ್ಣತೆ ಪರ್ವಬಿಂದುವಿಗಿಂತ ಹೆಚ್ಚು ಕಡಿಮೆಯಾದರೆ ವಸ್ತು ರೂಪಾಂತರ ಹೊಂದುವ ಪ್ರವೃತ್ತಿಗೆ ದ್ವಿಚರವರ್ತನೆ (ಎನಾಂಟಿಯೊಟ್ರುಪಿ) ಎಂದು ಹೆಸರು. ಗಂಧಕ, ತವರ ಮತ್ತು ಮರ್ಕ್ಯೂರಿಕ್ ಅಯೊಡೈಡುಗಳು ಈ ಗುಂಪಿಗೆ ಸೇರಿದವು.

2 ಕೆಲವು ವಸ್ತುಗಳಿಗೆ ನಿರ್ದಿಷ್ಟ ಪರ್ವಬಿಂದು ಎಂಬುದಿಲ್ಲ ; ಎಲ್ಲ ಉಷ್ಣತೆಯಲ್ಲೂ ಏಕಮುಖವಾಗಿ ಮಾತ್ರ ರೂಪಾಂತರವಾಗುವುವು. ಇದು ವಿಪರ್ಯಾಯ ಕ್ರಿಯೆಯಲ್ಲ. ಆದ್ದರಿಂದ ಏಕಚರಗಳು (ಮಾನೊಟ್ರಾಪಿಕ್) ಎನ್ನಬಹುದು. ಇದಕ್ಕೆ ಓಜೋನ್ ಉದಾಹರಣೆ. ಅದು ಎಲ್ಲ ಉಷ್ಣತೆಯಲ್ಲೂ ವಿಭಜಿಸಿ ಆಕ್ಸಿಜನ್ ಕೊಡುವುದು. ಆದರೆ ಸನ್ನಿವೇಶ ತಲೆಕೆಳಗಾದಾಗ ಆಕ್ಸಿಜನ್ ಓಜೋನ್ ಆಗುವುದಿಲ್ಲ.

3 ಗಂಧಕದ ವರ್ತನೆ ವಿಚಿತ್ರ. ಲ್ಯಾಮ್ಡಾ ಗಂಧಕ ($S\lambda$) ಮತ್ತು ಮ್ಯೂ ಗಂಧಕ ($S_{\mu}$) ಎಂಬ ಅದರ ಎರಡು ರೂಪಗಳು ರಾಸಾಯನಿಕ ಸಮಸ್ಥಿತಿಯಲ್ಲಿರಲು ಶಕ್ತವಾಗಿವೆ. ಈ ಸ್ಥಿತಿಯಲ್ಲಿ ಪ್ರತಿಯೊಂದು ರೂಪದ ಪ್ರಮಾಣ ಎಷ್ಟಿರುತ್ತದೆ ಎಂಬುದು ಉಷ್ಣತೆಗೆ ಅನುಗುಣವಾಗುತ್ತದೆ ಇದನ್ನು ಸಂಚಾಲಿತ ಭಿನ್ನರೂಪತೆ (ಡೈನಾಮಿಕ್ ಅಲಾಟ್ರೊಪಿ) ಎಂದು ಕರೆಯುವರು. (ಎಚ್. ಜಿ. ಎಸ್.)

**ಐಸೊಮೆಟ್ರಿಕ್ ವಿಭಾಗ:** ಸ್ಫಟಿಕಾಕ್ಷಗಳ ಗುಣಗಳನ್ನು ಅವಲಂಬಿಸಿ ಹರಳುಗಳನ್ನು ವಿಭಾಗಿಸಿರುವ ಆರು ಮುಖ್ಯ ವಿಭಾಗಗಳಲ್ಲಿ ಒಂದು. ಉಳಿದ ಐದು ವಿಭಾಗಗಳ ಹೆಸರು ಟೆಟ್ರಾಗೊನಲ್, ಹೆಕ್ಸಗೊನಲ್, ಆರ್ಥೊರಾಂಬಿಕ್, ಮಾನೊಕ್ಲಿನಿಕ್ ಮತ್ತು ಟ್ರೈಕ್ಲಿನಿಕ್. ಐಸೊಮೆಟ್ರಿಕ್ ವಿಭಾಗದ ಎಲ್ಲ ಹರಳುಗಳಲ್ಲೂ ಮೂರು ಸಮನಾದ ಅಕ್ಷಗಳಿದ್ದು ಅವು ಒಂದನ್ನೊಂದು ಕೇಂದ್ರದಲ್ಲಿ ಲಂಬಕೋನದಲ್ಲಿ ಛೇದಿಸುತ್ತವೆ. ಈ ಅಕ್ಷಗಳು ಪರಸ್ಪರಾನುವರ್ತಿಗಳಾಗಿರುವುದರಿಂದ ಇವನ್ನು $a$ ಎಂಬ ಅಕ್ಷರದಿಂದ ಸೂಚಿಸುವುದು ವಾಡಿಕೆ. ಈ ಮೂರು ಅಕ್ಷಗಳಲ್ಲಿ ಒಂದು ಶೀರ್ಷ ಅಕ್ಷ, ಉಳಿದೆರಡು ಸಮತಲ ಅಕ್ಷಗಳು. ನಿಯಮದಂತೆ ಕ್ರಮವಾಗಿ ಇವನ್ನು $a_1$, $a_2$, $a_3$ ಎಂಬುದಾಗಿ ಗುರುತಿಸಲಾಗುತ್ತದೆ. ಅಕ್ಷಗಳ ತುದಿಗಳನ್ನು + ಮತ್ತು – ಚಿಹ್ನೆಗಳಿಂದ ಸೂಚಿಸುವುದುಂಟು. ವೈಸ್ ಪದ್ಧತಿಯಂತೆ ಈ ವಿಭಾಗದ ಸಂಕೇತ $a : a : a$.



ಚಿತ್ರ 1

ಸಾಮಾನ್ಯವಾಗಿ ಹರಳಿನ ಮುಖಗಳು, ಅಂಚುಗಳು ಮತ್ತು ಸಾಂದ್ರಕೋನಗಳು ತಮ್ಮ ರಚನೆಯಲ್ಲಿ ಒಂದು ನಿರ್ದಿಷ್ಟವಾದ ಕ್ರಮವನ್ನು ತೋರಿಸುತ್ತವೆ. ಪ್ರತಿಯೊಂದು ವಿಭಾಗಕ್ಕೂ ವರ್ಗಕ್ಕೂ ನಿಖರವಾದ ಸಮಸೂತ್ರ ಹಾಗೂ ಉಪ ಸಮಸೂತ್ರ ಸಪಾಟಗಳೂ, ದ್ವಿ, ತ್ರಿ, ಚತುರ್, ಷಟ್ ಸಮಸೂತ್ರ ಅಕ್ಷಗಳೂ ಇರುತ್ತವೆ. ಸಮಸೂತ್ರ ಕೇಂದ್ರ ಇರಬಹುದು ಅಥವಾ ಇಲ್ಲದೇ ಇರಬಹುದು. ಈ ನಿಯಮಿತ ಕ್ರಮವೇ ಸಮಸೂತ್ರತೆ. ಖಚಿತವಾದ ಸಮಸೂತ್ರತೆ ಇರುವ ಆದರ್ಶ ಸ್ಫಟಿಕಗಳು ಪ್ರತಿ ವರ್ಗದಲ್ಲೂ ಇವೆ. ಇವುಗಳ ಆಧಾರದ ಮೇಲೆ ಐಸೊಮೆಟ್ರಿಕ್ ವಿಭಾಗದ ಹರಳುಗಳನ್ನು ನಾರ್ಮಲ್, ಪೈರಿಟೋ ಹೆಡ್ರಲ್, ಟೆಟ್ರಹೆಡ್ರಲ್, ಪ್ಲೆಜಿಯೊ ಹೆಡ್ರಲ್ ಮತ್ತು ಟೆಟಾಟೊ ಹೆಡ್ರಲ್ ಎಂದು ಐದು ವರ್ಗಗಳಾಗಿ ಮಾಡಲಾಗಿದೆ.

| | ವರ್ಗಗಳು | ಸಮಸೂತ್ರ ಕೇಂದ್ರ | ಸಮಸೂತ್ರ ಸಪಾಟಗಳು | | ಸಮಸೂತ್ರ ಅಕ್ಷ | | | | ಉದಾಹರಣೆ |
|---|---|---|---|---|---|---|---|---|---|
| | | | ಮುಖ್ಯ | ಉಪ | ದ್ವಿ | ತ್ರಿ | ಚತುರ್ | ಷಟ್ | |
| 1 | ನಾರ್ಮಲ್ | √ | 3 | 6 | 6 | 4 | 3 | – | ಗೆಲೀನಾ |
| 2 | ಪೈರಿಟೊ ಹೆಡ್ರಲ್ | √ | – | 3 | 3 | 4 | – | – | ಪೈರೈಟ್ |
| 3 | ಟೆಟ್ರ ಹೆಡ್ರಲ್ | × | – | 6 | 3 | 4 | – | – | ಟೆಟ್ರಹೆಡ್ರೈಟ್ |
| 4 | ಪ್ಲೆಜಿಯೊ ಹೆಡ್ರಲ್ | × | – | – | 6 | 4 | 3 | – | ಕುಪ್ರೈಟ್ |
| 5 | ಟೆಟಾಟೊ ಹೆಡ್ರಲ್ | – | – | – | 3 | 4 | – | – | ಉಲ್ಮನೈಟ್ |

ನಾರ್ಮಲ್ ವರ್ಗದ ಹರಳುಗಳಲ್ಲಿ ಮಿಕ್ಕೆಲ್ಲ ವರ್ಗದ ಹರಳುಗಳಿಗಿಂತ ಬಹು ಹೆಚ್ಚು ಸಮಸೂತ್ರತೆ ಇದೆ. ಈ ವರ್ಗದಲ್ಲಿ ಬಹುತೇಕ ಹರಳುಗಳನ್ನು ಪ್ರಾಮುಖ್ಯವಾಗಿ ಕಾಣಬಹುದು. ಪೈರಿಟೊಹೆಡ್ರಲ್ ಮತ್ತು ಟೆಟ್ರಹೆಡ್ರಲ್ ವರ್ಗಗಳಲ್ಲೂ ಅನೇಕ ಹರಳುಗಳು ರೂಪಗೊಂಡಿರುತ್ತವೆ. ಇವುಗಳಲ್ಲಿ ಪೈರಿಟೊ ಹೆಡ್ರನ್, ಡಿಪ್ಲಾಯಿಡ್ ಮತ್ತು ಟೆಟ್ರಹೆಡ್ರನ್ ಸ್ವರೂಪಗಳು ಮುಖ್ಯವಾದವು.


1


2


3


4


5


6


7

ಸ್ಫಟಿಕಾಕ್ಷಗಳಿಗೂ ಹರಳಿನ ಮುಖಗಳಿಗೂ ಇರುವ ಸಂಬಂಧದ ಆಧಾರದ ಮೇಲೆ ಏಳು ಪೂರ್ಣಸ್ವರೂಪಗಳನ್ನು ನಾರ್ಮಲ್ ವರ್ಗದಲ್ಲಿ ಕಾಣಬಹುದು. ಇವುಗಳ ಹೆಸರು: ಕ್ಯೂಬ್, ಆಕ್ಟಹೆಡ್ರನ್, ರಾಂಬಿಕ್‌ಡೊಡಿಕಹೆಡ್ರನ್, ಟೆಟ್ರಹೆಕ್ಸಹೆಡ್ರನ್, ಟ್ರಿಸ್‌ಆಕ್ಟಹೆಡ್ರನ್, ಟ್ರಪಿಸೊಹೆಡ್ರನ್ ಮತ್ತು ಹೆಕ್ಸಾಕ್ಟಹೆಡ್ರನ್.

ಕ್ಯೂಬ್ ಸ್ವರೂಪದಲ್ಲಿ ಆರು ಸದೃಶ ಮುಖಗಳಿದ್ದು ಪ್ರತಿ ಮುಖವೂ ಚದರವಾಗಿದ್ದು. ಎರಡು ಸ್ಫಟಿಕಾಕ್ಷಗಳಿಗೆ ಸಮಾಂತರವಾಗಿ ಮತ್ತೊಂದನ್ನು ಮೂಲಮಾನದಲ್ಲಿ ಸಂಧಿಸುತ್ತದೆ ($\infty a = a = \infty a$).

ಆಕ್ಟಹೆಡ್ರನ್ ಹರಳಿನಲ್ಲಿ ಒಂದೇ ಆಕಾರದ ಎಂಟು ಮುಖಗಳಿರುತ್ತವೆ. ಪ್ರತಿ ಮುಖವೂ ಸಮಬಾಹು ತ್ರಿಭುಜವಾಗಿದ್ದು ಮೂರು ಸ್ಫಟಿಕಾಕ್ಷಗಳನ್ನು ಮೂಲಮಾನದಲ್ಲಿ ಸಂಧಿಸುತ್ತದೆ ($a = a = a$).

ರಾಂಬಿಕ್‌ಡೋಡಿಕಹೆಡ್ರನ್ನಿನಲ್ಲಿ ಹನ್ನೆರಡು ಸಮ ವಜ್ರಾಕೃತಿ ಮುಖಗಳಿರುತ್ತವೆ. ಪ್ರತಿ ಮುಖವೂ ಎರಡು ಸ್ಫಟಿಕಾಕ್ಷಗಳನ್ನು ಮೂಲಮಾನದಲ್ಲಿ ಸಂಧಿಸಿ ಮತ್ತೊಂದಕ್ಕೆ ಸಮಾಂತರವಾಗಿರುತ್ತದೆ. ($a = a = \infty a$).

ಟೆಟ್ರಹೆಕ್ಸಹೆಡ್ರನ್ ಸ್ವರೂಪದಲ್ಲಿ 24 ಮುಖಗಳಿದ್ದು ಪ್ರತಿ ಮುಖವೂ ಸಮದ್ವಿಬಾಹು ತ್ರಿಭುಜವಾಗಿದ್ದು, ಒಂದು ಸ್ಫಟಿಕಾಕ್ಷವನ್ನು ಮೂಲಮಾನದಲ್ಲೂ, ಮತ್ತೊಂದನ್ನು $n$ ದೂರದಲ್ಲೂ ಸಂಧಿಸಿ ಮೂರನೆಯ ಅಕ್ಷಕ್ಕೆ ಸಮಾಂತರವಾಗಿರುತ್ತದೆ ($na = a = \infty a$).

ಟ್ರಸ್ಆಕ್ಟಹಿಡ್ರನ್ ಪರಳಿನಲ್ಲಿ 24 ಸಮದ್ವಿಬಾಹು ತ್ರಿಭುಜಗಳಿದ್ದು ಪ್ರತಿ ಮುಖವೂ ಎರಡು ಸ್ಫಟಿಕಾಕ್ಷಗಳನ್ನು ಮೂಲ ಮಾನದಲ್ಲೂ ಮತ್ತೊಂದನ್ನು $m$ ದೂರದಲ್ಲೂ ಸಂಧಿಸುತ್ತದೆ $(a : a : ma)$.

ಟ್ರಪಿಸೊಹಿಡ್ರನ್ ಸ್ವರೂಪದಲ್ಲಿ 24 ತ್ರಾಪಿಜ್ಯ ಆಕಾರದ ಮುಖಗಳಿದ್ದು ಪ್ರತಿ ಮುಖವೂ ಒಂದು ಅಕ್ಷವನ್ನು ಮೂಲಮಾನದಲ್ಲೂ, ಉಳಿದೆರಡು ಅಕ್ಷಗಳನ್ನು ಮೂಲಮಾನಕ್ಕಿಂತ ಹೆಚ್ಚಿನ ಏಕದೂರದಲ್ಲೂ ಅಂದರೆ $m$ ದೂರದಲ್ಲೂ ಸಂಧಿಸುತ್ತದೆ $(ma : a : ma.)$

ಹೆಕ್ಸಾಕ್ಟಹಿಡ್ರನಿನಲ್ಲಿ 48 ಸದೃಶ ಅಸಮ ತ್ರಿಭುಜಗಳಿದ್ದು ಒಂದು ಸ್ಫಟಿಕಾಕ್ಷವನ್ನು ಮೂಲಮಾನದಲ್ಲೂ, ಉಳಿದೆರಡನ್ನು ಮೂಲಮಾನಕ್ಕಿಂತ ಹೆಚ್ಚಿನ ವಿವಿಧ ದೂರಗಳಲ್ಲೂ ($n$ ಮತ್ತು $m$) ಸಂಧಿಸುತ್ತದೆ $(na : a : ma)$. (ಎಂ.ಎನ್.ಪಿ.)

**ಐಸೊಮೆರಿಸಂ (ಭೌತಶಾಸ್ತ್ರದಲ್ಲಿ) :** ಎರಡು ಅಥವಾ ಅನೇಕ ಪರಮಾಣು ನ್ಯೂಕ್ಲಿಯಸ್ ಜಾತಿಗಳು (ನ್ಯೂಕ್ಲೈಡ್ಸ್) ಪರಮಾಣು ಸಂಖ್ಯೆಯಲ್ಲಾಗಲೀ (ಅಟಾಮಿಕ್ ನಂಬರ್) ದ್ರವ್ಯಮಾನ ಸಂಖ್ಯೆಯಲ್ಲಾಗಲೀ (ಮಾಸ್ ನಂಬರ್) ಯಾವ ವ್ಯತ್ಯಾಸವನ್ನೂ ತೋರದೆ ತಮ್ಮ ಶಕ್ತಿಹಂತಗಳಲ್ಲಿ (ಎನರ್ಜಿ ಲೆವಲ್ಸ್) ಹಾಗೂ ವಿಕಿರಣತೆಯಿಂದ ಕ್ಷಯಿಸುವ ರೀತಿಗಳಲ್ಲಿ (ರೇಡಿಯೊ ಆಕ್ಟಿವ್ ಡಿಕೇ) ಮುಖ್ಯವಾಗಿ ಅರ್ಧಾಯುಗಳಲ್ಲಿ ವ್ಯತ್ಯಾಸ ತೋರುವಿಕೆ. ಅಂಥ ನ್ಯೂಕ್ಲಿಯಸ್ ಜಾತಿಗಳಿಗೆ ನ್ಯೂಕ್ಲಿಯರ್ ಐಸೊಮರುಗಳೆಂದು ಹೆಸರು.




ಪರಮಾಣುಸಂಖ್ಯೆ ಒಂದೇ ಇದ್ದು ದ್ರವ್ಯಮಾನ ಸಂಖ್ಯೆ ಬೇರೆ ಬೇರೆ ಇದ್ದರೆ ಅವನ್ನು ಐಸೊಟೋಪುಗಳೆಂದೂ ದ್ರವ್ಯಮಾನ ಸಂಖ್ಯೆ ಒಂದೇ ಇದ್ದು ಪರಮಾಣು ಸಂಖ್ಯೆ ಬೇರೆಬೇರೆಯಾಗಿದ್ದರೆ ಅವನ್ನು ಐಸೊಬಾರುಗಳೆಂದೂ ಕರೆಯುವುದು ಸರಿಯಷ್ಟೆ. ನ್ಯೂಕ್ಲಿಯಸ್ ಐಸೊಮರುಗಳು ಐಸೊಟೋಪುಗಳೂ ಅಲ್ಲ, ಐಸೊಬಾರುಗಳೂ ಅಲ್ಲ. ಅವುಗಳಲ್ಲಿನ ಪ್ರೋಟಾನುಗಳ ಸಂಖ್ಯೆ ಒಂದೇ ಆಗಿರುವುದರಿಂದ ಪರಮಾಣುಸಂಖ್ಯೆಯಲ್ಲಿ ವ್ಯತ್ಯಾಸವಿಲ್ಲ. ನ್ಯೂಟ್ರಾನುಗಳ ಸಂಖ್ಯೆಯೂ ಒಂದೇ ಆಗಿರುವುದರಿಂದ ದ್ರವ್ಯಮಾನ ಸಂಖ್ಯೆಯಲ್ಲೂ ವ್ಯತ್ಯಾಸವಿಲ್ಲ. ಆದರೆ ಅವುಗಳಲ್ಲಿ ಅಡಗಿರುವ ಶಕ್ತಿಯ ಮೊತ್ತ ಬೇರೆ ಬೇರೆ. ಮೇಲಿನ ಶಕ್ತಿಹಂತದಲ್ಲಿರುವ ನ್ಯೂಕ್ಲಿಯರ್ ಐಸೊಮರುಗಳಲ್ಲಿ ಸಾಮಾನ್ಯವಾಗಿ ಭೂಹಂತಕ್ಕಿಂತ (ಗ್ರೌಂಡ್ ಸ್ಟೇಟ್) ಹಲವಾರು ಸಾವಿರ ಅಥವಾ ಮಿಲಿಯನ್ ಎಲೆಕ್ಟ್ರಾನ್ ವೋಲ್ಟ್ ಹೆಚ್ಚುಶಕ್ತಿ ಇರುತ್ತದೆ.

ಅಧಿಕ ಶಕ್ತಿ ಇರುವ ಉದ್ರಿಕ್ತ ಪರಮಾಣು ನ್ಯೂಕ್ಲಿಯಸ್ ಸಹಜವಾಗಿಯೇ ಶಕ್ತಿಯನ್ನು ಕಳೆದುಕೊಳ್ಳಬೇಕಷ್ಟೆ. ಅವು ಗ್ಯಾಮ ಕಿರಣದ ರೂಪದಲ್ಲಿ ಶಕ್ತಿಯನ್ನು ಹೊರಸೂಸುವುವು. ಕೆಲವು ವೇಳೆ ಎಲೆಕ್ಟ್ರಾನ್ ಜೋಡಿಯನ್ನು ಹೊರಸೂಸುವುದು ಉಂಟು. ಅದರ ಪರಿಣಾಮವಾಗಿ ತಲಪಿದ ಭೂಹಂತ ಸ್ಥಿರವಾದುದಿರಬಹುದು (ಉದಾ. $^{107}Ag$). ಇಲ್ಲವೆ ಅದೂ ಅಸ್ಥಿರವಿರಬಹುದು (ಉದಾ. $^{69}Zn$). $10^{-6}$ ಸೆಕೆಂಡಿನಿಂದ ಹಲವಾರು ವರ್ಷಗಳವರೆಗಿನ ಅರ್ಧಾಯುಗಳಿರುವ 200ಕ್ಕೂ ಹೆಚ್ಚು ಸಂಖ್ಯೆಯ ನ್ಯೂಕ್ಲಿಯರ್ ಐಸೊಮರುಗಳು ಇದುವರೆಗೆ ಗೊತ್ತಾಗಿದೆ. (ಜಿ.ಆರ್.ಎಲ್.)

**ಐಸೊಮೆರಿಸಂ (ರಸಾಯನ ಶಾಸ್ತ್ರದಲ್ಲಿ) :** ಎರಡು ಅಥವಾ ಅನೇಕ ರಾಸಾಯನಿಕ ಸಂಯುಕ್ತಗಳ ಅಣುಸೂತ್ರ (ಮಾಲಿಕ್ಯುಲರ್ ಫಾರ್ಮ್ಯುಲ) ಒಂದೇ ಇದ್ದು ಅವುಗಳ ಗುಣಲಕ್ಷಣಗಳಲ್ಲಿ ವ್ಯತ್ಯಾಸವಿರುವಿಕೆ. ಇಂಥ ಸಂಯುಕ್ತಗಳಿಗೆ ಐಸೊಮರುಗಳು ಎಂದು ಹೆಸರು. ಒಂದು ಸಂಯುಕ್ತದಲ್ಲಿರುವ ರಾಸಾಯನಿಕ ಧಾತುಗಳು ಮತ್ತು ಅವುಗಳ ಪ್ರಮಾಣ—ಅಂದರೆ ಸಂಯುಕ್ತದ ಸಂಯೋಜನೆ (ಕಾಂಪೊಸಿಷನ್) ಅದರ ಗುಣಲಕ್ಷಣಗಳನ್ನು ನಿರ್ಧರಿಸುವುದೆಂದು ಒಂದು ಕಾಲದಲ್ಲಿ ನಂಬಲಾಗಿತ್ತು. ಇದು ಸರಿಯಿಲ್ಲವೆಂದು ಮುಂದೆ ವೇದ್ಯವಾಯಿತು. ಸಂಯುಕ್ತಗಳ ಸಂಯೋಜನೆ ಒಂದೇ ಆಗಿದ್ದು ಅವುಗಳ ಅಣುತೂಕಗಳಲ್ಲಿ ವ್ಯತ್ಯಾಸವಿರುವುದು ಸಾಧ್ಯವೆಂಬುದನ್ನು ರಸಾಯನ ವಿಜ್ಞಾನಿಗಳು ಬಲುಬೇಗ ಮನಗಂಡರು. ಅಸಿಟಲೀನ್ ಮತ್ತು ಬೆಂಜ಼ೀನ್ ಎರಡರಲ್ಲೂ ಅದೇ ಧಾತುಗಳು (ಕಾರ್ಬನ್ ಮತ್ತು ಹೈಡ್ರೊಜನ್) ಅದೇ ಪ್ರಮಾಣದಲ್ಲಿ (ಕಾರ್ಬನ್ನಿನ ಒಂದು ಪರಮಾಣು ಹೈಡ್ರೊಜನ್ನಿನ ಒಂದು ಪರಮಾಣು) ಇದೆ. ಎರಡಕ್ಕೂ ಮೂಲಸೂತ್ರ (ಎಂಪಿರಿಕಲ್ ಫಾರ್ಮ್ಯುಲ) ಒಂದೇ, CH. ಈ ಸೂತ್ರದಂತೆ ಯಾವುದೇ ಸಂಯುಕ್ತದ ಅಣುವಿನಲ್ಲಿ ಒಂದು ಕಾರ್ಬನ್ ಪರಮಾಣು ಮತ್ತು ಒಂದು ಹೈಡ್ರೊಜನ್ ಪರಮಾಣು ಇದ್ದುದೇ ಆದರೆ ಅಣುತೂಕ 13 ಆಗಿರಬೇಕಿತ್ತು. ಆದರೆ ಅಸಿಟಲೀನ್ ಅಣುತೂಕ 26 ; ಆದ್ದರಿಂದ ಅದರ ಅಣುಸೂತ್ರ $C_2H_2$. ಬೆಂಜ಼ೀನ್ ಅಣುತೂಕ 78 ; ಆದ್ದರಿಂದ ಅದರ ಅಣುಸೂತ್ರ $C_6H_6$. ಅಣುವಿನಲ್ಲಿರುವ ವಿವಿಧ ಬಗೆಯ ಪರಮಾಣುಗಳ ಸಂಖ್ಯೆಯನ್ನೂ ಸೂಚಿಸುವ ಈ ಅಣುಸೂತ್ರವೇ ಸಂಯುಕ್ತದ ಗುಣಲಕ್ಷಣಗಳನ್ನು ನಿರ್ಧರಿಸುವುದೆಂಬ ಭಾವನೆ ಬಲುಕಾಲ ರೂಢವಾಗಿತ್ತು. ಆರ್ಗ್ಯಾನಿಕ್ ರಸಾಯನಶಾಸ್ತ್ರ ಜನ್ಮತಾಳಿದ ಪ್ರಾರಂಭದಲ್ಲಿಯೇ ಈ ಭಾವನೆಯನ್ನೂ ಕೈಬಿಡಬೇಕಾಗಿ ಬಂತು. ಸಂಯುಕ್ತಗಳ ಅಣುಸೂತ್ರಗಳು ಒಂದೇ ಇದ್ದರೂ ಅಣುಗಳಲ್ಲಿರುವ ಪರಮಾಣುಗಳ ಜೋಡಣೆಯಲ್ಲಿ ವ್ಯತ್ಯಾಸವಿರಬಹುದಾದ್ದರಿಂದ ಒಂದೇ ಅಣುಸೂತ್ರವಿರುವ ಎರಡು ಅಥವಾ ಅನೇಕ ಸಂಯುಕ್ತಗಳಿರುವುದು ಸಾಧ್ಯ. ಆರ್ಗ್ಯಾನಿಕ್ ರಸಾಯನಶಾಸ್ತ್ರ ಬೆಳೆದಂತೆಲ್ಲ ಐಸೊಮೆರಿಸಂ ನಿದರ್ಶನಗಳು ಹೇರಳವಾಗಿ ದೊರೆತು ಅದರ ಅಧ್ಯಯನಕ್ಕೆ ಈ ಶಾಸ್ತ್ರವಿಭಾಗದಲ್ಲಿ ವಿಶೇಷ ಪ್ರಾಮುಖ್ಯ ಬಂದಿದೆ.

ಐಸೊಮರುಗಳ ಅಣುಗಳಲ್ಲಿರುವ ಬೇರೆ ಬೇರೆ ಬಗೆಯ ಪರಮಾಣುಗಳ ಸಂಖ್ಯೆ ಒಂದೇ ಆಗಿದ್ದು ಅವುಗಳ ಜೋಡಣೆಯಲ್ಲಿ ಮಾತ್ರ ವ್ಯತ್ಯಾಸವಿರುವುದಷ್ಟೆ. ಈ ವ್ಯತ್ಯಾಸ ಎದ್ದುಕಾಣಬಹುದು, ಇಲ್ಲವೆ ಬಲು ಸೂಕ್ಷ್ಮವಾಗಿರಬಹುದು. ಇವನ್ನು ಅನುಸರಿಸಿ ಬಗೆಬಗೆಯ ಐಸೊಮೆರಿಸಂಗಳನ್ನು ಗುರುತಿಸಿ ಅವುಗಳಿಗೆ ಬೇರೆ ಬೇರೆ ಹೆಸರುಗಳನ್ನು ಕೊಟ್ಟಿದ್ದಾರೆ.

ವಿವಿಧ ಬಗೆಯ ಐಸೊಮೆರಿಸಂಗಳನ್ನು ಸ್ಥೂಲವಾಗಿ ಎರಡು ಗುಂಪುಗಳಾಗಿ ವಿಂಗಡಿಸಬಹುದು : 1 ರಚನೀಯ ಐಸೊಮೆರಿಸಂ (ಸ್ಟ್ರಕ್ಚರಲ್ ಐಸೊಮೆರಿಸಂ); 2 ಸ್ಟೀರಿಯೊ ಐಸೊಮೆರಿಸಂ. ಐಸೊಮರುಗಳ ರಚನೆಯಲ್ಲಿಯೇ ವ್ಯತ್ಯಾಸವಿದ್ದರೆ ಅದನ್ನು ರಚನೀಯ ಐಸೊಮೆರಿಸಂ ಎನ್ನುತ್ತಾರೆ. ಇಲ್ಲಿ ರಚನೆ ಎಂಬ ಶಬ್ದವನ್ನು ಒಂದು ವಿಶಿಷ್ಟ ಪಾರಿಭಾಷಿಕ ಅರ್ಥದಲ್ಲಿ ಬಳಸಲಾಗಿದೆ. ಅಣುವಿನಲ್ಲಿರುವ ವಿವಿಧ ಪರಮಾಣುಗಳು, ಪರಮಾಣುಪುಂಜಗಳು ಮತ್ತು ವಿವಿಧ ಬಗೆಯ ಬಂಧಗಳು ಇವುಗಳ ಅನುಕ್ರಮಕ್ಕೆ ರಚನೆ ಎಂದು ಅರ್ಥ. ಉದಾಹರಣೆಗೆ, ಈಥೈಲ್ ಆಲ್ಕೊಹಾಲ್ ಮತ್ತು ಡೈಮೀಥೈಲ್ ಈಥರುಗಳ ರಚನೆಯಲ್ಲಿ ವ್ಯತ್ಯಾಸವಿದೆ.







ಇಲ್ಲಿ ಕಾಣಬರುವುದು ರಚನೀಯ ಐಸೊಮೆರಿಸಂ. ಅಂತೆಯೇ ಬ್ಯೂಟೀನ್ (1) ಮತ್ತು ಬ್ಯೂಟೀನ್ (2) ಗಳಲ್ಲಿ ಕಾಣಬರುವುದೂ ರಚನೀಯ ಐಸೊಮೆರಿಸಂ.







ಆದರೆ ಈಗ ಬ್ಯೂಟೀನ್ (2) ಸೂತ್ರವನ್ನು ಗಮನಿಸಿ. ಇದೇ ರಚನಾಸೂತ್ರವಿರುವ ಎರಡು ಸಂಯುಕ್ತಗಳಿವೆ. ಇವೆರಡರ ರಚನೆ (ಮೇಲೆ ಹೇಳಿದ ವಿಶಿಷ್ಟ




ಪಾರಿಭಾಷಿಕ ಅರ್ಥದಲ್ಲಿ) ಒಂದೇ. ಆದರೆ ಇವುಗಳ ಮೂರು ಆಯಾಮಗಳ ಮಾದರಿಗಳನ್ನು (ತ್ರೀಡೈಮೆನ್ಷನಲ್ ಮಾಡೆಲ್ಸ್) ಗಣನೆಗೆ ತೆಗೆದುಕೊಂಡಾಗ ಆಕಾಶದಲ್ಲಿ ಪರಮಾಣುಗಳ ಮತ್ತು ಪರಮಾಣು ಪುಂಜಗಳ ಹಂಚಿಕೆ ಬೇರೆಬೇರೆಯಾಗಿದೆ. ಇದು ಸ್ಟೀರಿಯೊ ಐಸೊಮೆರಿಸಂನ ಒಂದು ನಿದರ್ಶನ.

**ರಚನೀಯ ಐಸೊಮೆರಿಸಂ :** ವಿವಿಧ ಬಗೆಯ ರಚನೀಯ ಐಸೊಮೆರಿಸಂಗಳನ್ನು ಪುನಃ ಎರಡು ಗುಂಪುಗಳಾಗಿ ವಿಂಗಡಿಸಬಹುದು.

ಮೊದಲನೆಯದು ವರ್ತನಾ ಐಸೊಮೆರಿಸಂ (ಫಂಕ್ಷನಲ್ ಐಸೊಮೆರಿಸಂ). ಈ ಬಗೆಯ ಐಸೊಮೆರಿಸಂನಲ್ಲಿ ಐಸೊಮರುಗಳಿಗಿರುವ ವ್ಯತ್ಯಾಸ ಗಮನಾರ್ಹವಾದದ್ದು. ಅಂದರೆ ಅವುಗಳ ರಚನೆಗಳಲ್ಲಿರುವ ತೀವ್ರ ವ್ಯತ್ಯಾಸದ ಪರಿಣಾಮವಾಗಿ ಒಂದೊಂದರಲ್ಲೂ ಬೇರೆ ಬೇರೆ ಬಗೆಯ ಪರಮಾಣುಪುಂಜಗಳೋ ಬೇರೆ ಬೇರೆ ಬಗೆಯ ಬಂಧಗಳೋ ಇದ್ದು ಅವುಗಳ ರಾಸಾಯನಿಕ ವರ್ತನೆಯಲ್ಲಿ ಗಣನೀಯ ವ್ಯತ್ಯಾಸವಿರುತ್ತದೆ. ಐಸೊಮರುಗಳು ಬೇರೆ ಬೇರೆ ವರ್ಗದ ಸಂಯುಕ್ತಗಳೇ. ಈ ಹಿಂದೆ ಉದಾಹರಣೆಯಾಗಿ ಕೊಟ್ಟ ಈಥೈಲ್ ಆಲ್ಕೊಹಾಲ್–ಡೈಮೀಥೈಲ್ ಈಥರುಗಳ ಐಸೊಮೆರಿಸಂ ಈ ಬಗೆಯದೇ. ಗಮನ ಸೆಳೆವಂಥ ಇನ್ನೊಂದು ನಿದರ್ಶನವನ್ನು ಕೊಡುವುದಾದರೆ ನೈಟ್ರೊ ಟಾಲ್ವೀನ್ ಮತ್ತು ಆಂಥ್ರನಿಲಿಕ್ ಆಮ್ಲಗಳನ್ನು ಹೆಸರಿಸ






ನೈಟ್ರೊ ಟಾಲ್ವೀನ್ ಆಂಥ್ರನಿಲಿಕ್ ಆಮ್ಲ

ಬಹುದು. ಎರಡರ ಅಣುಸೂತ್ರವೂ ಒಂದೇ, $C_7H_7NO_2$. ಆದರೆ ಒಂದು ನೈಟ್ರೊ ಸಂಯುಕ್ತ, ಇನ್ನೊಂದರಲ್ಲಿ ಆಮ್ಲೀಯ ಗುಣದ ಕಾರ್ಬಾಕ್ಸಿಲ್ ಪುಂಜವೂ ಪ್ರತ್ಯಾಮ್ಲೀಯ ಗುಣದ ಅಮೈನೊ ಪುಂಜವೂ ಇರುವುದರಿಂದ ಈ ಎರಡು ಸಂಯುಕ್ತಗಳ ರಾಸಾಯನಿಕ ವರ್ತನೆಯಲ್ಲಿ ಬಹಳ ವ್ಯತ್ಯಾಸವಿದೆ.

ಟಾಟೊಮೆರಿಸಂ : ಕೆಲವೊಮ್ಮೆ ಒಂದು ನಿರ್ದಿಷ್ಟ ಸಂಯುಕ್ತದ ಗುಣಲಕ್ಷಣಗಳನ್ನು ಪರಿಶೀಲಿಸಿದಾಗ ಅದರ ಕೆಲವು ರಾಸಾಯನಿಕ ಗುಣಗಳನ್ನು ಒಂದು ರಚನೆಯ ಆಧಾರದ ಮೇಲೂ ಇನ್ನು ಕೆಲವು ರಾಸಾಯನಿಕ ಗುಣಗಳನ್ನು ಬೇರೊಂದು ರಚನೆಯ ಆಧಾರದ ಮೇಲೂ ವಿವರಿಸುವುದು ಸಾಧ್ಯವಾಗುತ್ತದೆ. ವಾಸ್ತವವಾಗಿ ಆ ಸಂಯುಕ್ತದಲ್ಲಿ ಬೇರೆ ಬೇರೆ ರಚನೆಯಿರುವ ಎರಡು ಬಗೆಯ ಅಣುಗಳಿದ್ದು ಅವು ಸತತವಾಗಿ ಪರಸ್ಪರ ಪರಿವರ್ತನೆ ಹೊಂದುತ್ತಿರುತ್ತವೆ. ಉದಾಹರಣೆಗೆ ಅಸಿಟೊ ಅಸಿಟಿಕ್ ಆಮ್ಲದ ಈಥೈಲ್ ಎಸ್ಟರ್. ಇದರ ಕೆಲವು ಗುಣಲಕ್ಷಣಗಳನ್ನು ಗಮನಿಸಿದರೆ ಇದರಲ್ಲಿ ಕೀಟೊ ಪುಂಜವಿರುವಂತೆ ಕಂಡುಬರುತ್ತದೆ $CH_3.CO.CH_2.COOC_2.H_5$. ಇನ್ನು ಕೆಲವು ಗುಣಲಕ್ಷಣಗಳನ್ನು ಗಮನಿಸಿದರೆ ಇದರಲ್ಲಿ ಒಂದು ದ್ವಿಬಂಧವೂ (ಡಬಲ್ ಬಾಂಡ್) ಒಂದು ಹೈಡ್ರಾಕ್ಸಿಲ್ ಪುಂಜವೂ ಇರುವಂತೆ ಕಂಡುಬರುತ್ತದೆ.



ವಾಸ್ತವವಾಗಿ ಈ ಸಂಯುಕ್ತದಲ್ಲಿ ಈ ಎರಡು ಬಗೆಯ ಅಣುಗಳೂ ಇದ್ದು ಸತತವಾಗಿ ಒಂದು ಇನ್ನೊಂದಕ್ಕೆ ಪರಿವರ್ತನೆ ಹೊಂದುತ್ತ ಗತಿ ಸಮತೋಲ (ಡೈನಮಿಕ್ ಈಕ್ವಿಲಿಬ್ರಿಯಮ್) ಸ್ಥಿತಿಯಲ್ಲಿರುತ್ತವೆ.



ಈ ಬಗೆಯ ಐಸೊಮೆರಿಸಂಗೆ ಟಾಟೊಮೆರಿಸಂ ಅಥವಾ ಗತಿ ಐಸೊಮೆರಿಸಂ (ಡೈನಾಮಿಕ್ ಐಸೊಮೆರಿಸಂ) ಎಂದು ಹೆಸರು.

ಎರಡನೆಯದು, ಐಸೊಮರುಗಳಲ್ಲಿ ಒಂದೇ ಬಗೆಯ ಪುಂಜಗಳೇ ಇದ್ದು ಸಂಯುಕ್ತಗಳ ರಾಸಾಯನಿಕ ವರ್ತನೆಯಲ್ಲಿ ಗಮನಾರ್ಹ ವ್ಯತ್ಯಾಸವೇನೂ ಇಲ್ಲದಿರುವ ರಚನೀಯ ಐಸೊಮೆರಿಸಂ ಸಾಧ್ಯ. ಅಂಥ ಐಸೊಮೆರಿಸಂಗಳನ್ನು ಈಗ ಪರಿಶೀಲಿಸಬಹುದು.

ಸರಣಿ (ಚೈನ್) ಐಸೊಮೆರಿಸಂ : ಆರ್ಗ್ಯಾನಿಕ್ ಸಂಯುಕ್ತಗಳ ಅಣುಗಳಲ್ಲಿ ಹೈಡ್ರೊಜನ್, ಆಕ್ಸಿಜನ್, ನೈಟ್ರೊಜನ್ ಮುಂತಾದ ಪರಮಾಣುಗಳನ್ನು ಗಣನೆಗೆ ತೆಗೆದುಕೊಳ್ಳದೆ, ಆ ಅಣುಗಳ ರಚನೆಗೆ ಆಧಾರಪ್ರಾಯವಾಗಿರುವ ಕಾರ್ಬನ್ ಪರಮಾಣುಗಳ ಸರಣಿಯ ಮೇಲೆ ನಮ್ಮ ದೃಷ್ಟಿಯನ್ನು ಕೇಂದ್ರೀಕರಿಸೋಣ. ಐಸೊಮರುಗಳ ಈ ಕಾರ್ಬನ್ ಚೌಕಟ್ಟುಗಳಲ್ಲೇ ವ್ಯತ್ಯಾಸವಿದ್ದರೆ ಅದಕ್ಕೆ ಸರಣಿ ಐಸೊಮೆರಿಸಂ ಎಂದು ಹೆಸರು. ಆಲ್ಕೇನ್ ವರ್ಗದ ಹೈಡ್ರೊಕಾರ್ಬನುಗಳಲ್ಲಿ ಈ ಬಗೆಯ ಐಸೊಮೆರಿಸಂನ ಪಾತ್ರ ಹೆಚ್ಚು. ಬ್ಯೂಟೇನಿನಲ್ಲಿ ($C_4H_{10}$) ಎರಡು ಐಸೊಮರ್ ಸಾಧ್ಯ.



ಬ್ಯೂಟೇನ್ ಐಸೊಬ್ಯೂಟೇನ್

ಈ ಅಣುಗಳಲ್ಲಿನ ಕಾರ್ಬನ್ ಪರಮಾಣು ಸರಣಿಗಳ ಮೇಲೆ ನಮ್ಮ ಗಮನವನ್ನು ಕೇಂದ್ರೀಕರಿಸುವುದಾದರೆ



ಬ್ಯೂಟೇನ್ ಐಸೊಬ್ಯೂಟೇನ್

ಪೆಂಟೇನಿನಲ್ಲಿ ಮೂರು ಐಸೊಮರುಗಳು ಸಾಧ್ಯ



ಪೆಂಟೇನ್ ಐಸೊಪೆಂಟೇನ್ ನಿಯೊಪೆಂಟೇನ್

ಹೀಗೆಯೇ ಹೆಕ್ಸೇನ್ $C_6H_{14}$ ರಲ್ಲಿ ಐದು, $C_7H_{16}$ ರಲ್ಲಿ ಒಂಬತ್ತು, $C_8H_{18}$ ರಲ್ಲಿ ಹದಿನೆಂಟು ಮತ್ತು $C_9H_{20}$ ಮೂವತ್ತೈದು ಐಸೊಮರುಗಳು ಸಾಧ್ಯ. ಇಲ್ಲಿ ಕಾರ್ಬನ್ ಪರಮಾಣುಗಳ ಸಂಖ್ಯೆ ಹೆಚ್ಚಾಗುತ್ತ ಹೋದಂತೆ ಐಸೊಮರುಗಳ ಸಂಖ್ಯೆ ಅಗಾಧವಾಗಿ ಬೆಳೆಯುತ್ತದೆ. $C_{20}H_{42}$ ಸೂತ್ರದ ಆಲ್ಕೇನಿನಲ್ಲಿ 3,66,319 ಐಸೊಮರುಗಳೂ $C_{40}H_{82}$ ಸೂತ್ರದ ಆಲ್ಕೇನಿನಲ್ಲಿ $6.25 \times 10^{13}$ ಐಸೊಮರುಗಳೂ ಸಾಧ್ಯವೆಂದು ಗಣಿತದ ಸಹಾಯದಿಂದ ಲೆಕ್ಕ ಹಾಕಿದ್ದಾರೆ. ಆದರೆ ಅವುಗಳಲ್ಲಿ ಕೆಲವನ್ನು ಮಾತ್ರ ತಯಾರಿಸಲಾಗಿದೆ.

ಮೆಟಮೆರಿಸಂ : ದ್ವಿವೇಲೆನ್ಸೀಯ (ಡೈವೆಲೆಂಟ್) ಅಥವಾ ತ್ರಿವೇಲೆನ್ಸೀಯ (ಟ್ರೈವಲೆಂಟ್) ಪರಮಾಣು ಅಥವಾ ಪರಮಾಣುಪುಂಜವೊಂದು ವಿವಿಧ ಉದ್ದಗಳ ಕಾರ್ಬನ್ ಸರಣಿಗಳಿಗೆ ಬಂಧಿತವಾಗಿ ಐಸೊಮರುಗಳನ್ನು ಉತ್ಪತ್ತಿಮಾಡಬಹುದು. ಈಥರುಗಳು, ಕೀಟೋನುಗಳು ಮತ್ತು ಅಮೀನುಗಳಲ್ಲಿ ಈ ಬಗೆಯ ಐಸೊಮೆರಿಸಂ ನಾವು ಕಾಣುತ್ತೇವೆ. ಉದಾಹರಣೆಗೆ



(i) ಡೈ ಈಥೈಲ್ ಈಥರ್ — ಮೀಥೈಲ್ ಪ್ರೊಪೈಲ್ ಈಥರ್

(ii) ಈಥೈಲ್ ಪ್ರೊಪೈಲ್ ಕೀಟೋನ್ — ಮೀಥೈಲ್ ಬ್ಯೂಟೈಲ್, ಕೀಟೋನ್

(iii) ಟ್ರೈ ಈಥೈಲ್ ಅಮೀನ್ — ಮೀಥೈಲ್ ಈಥೈಲ್, ಪ್ರೊಪೈಲ್, ಅಮೀನ್



ಡೈಮೀಥೈಲ್ ಬ್ಯೂಟೈಲ್ ಅಮೀನ್

ಈ ಬಗೆಯ ಐಸೊಮೆರಿಸಂಗೆ ಮೆಟಮೆರಿಸಂ ಎಂದು ಹೆಸರು.

ಸ್ಥಾನೀಯ (ಪೊಸಿಷನ್) ಐಸೊಮೆರಿಸಂ : ಈ ಬಗೆಯ ಐಸೊಮರುಗಳಲ್ಲಿ ಒಂದು ನಿರ್ದಿಷ್ಟ ಪರಮಾಣು ಅಥವಾ ಪರಮಾಣು ಪುಂಜದ ಇಲ್ಲವೇ ಒಂದು ನಿರ್ದಿಷ್ಟ ಬಂಧದ ಸ್ಥಾನ ಬೇರೆಬೇರೆಯಾಗಿರುತ್ತದೆ. ಆದ್ದರಿಂದಲೇ ಈ ಬಗೆಯ ಐಸೊಮೆರಿಸಂಗೆ ಸ್ಥಾನೀಯ ಐಸೊಮೆರಿಸಂ ಎಂದು ಹೆಸರು. ಉದಾಹರಣೆಗೆ,



ಪ್ರೊಪೈಲ್ ಆಲ್ಕೊಹಾಲ್ ಐಸೊಪ್ರೊಪೈಲ್ ಆಲ್ಕೊಹಾಲ್

ಬ್ಯೂಟೀನ್ (1) ಬ್ಯೂಟೀನ್ (2)ಗಳ ಐಸೊಮೆರಿಸಂ ಈ ಬಗೆಯದೇ. ಇಲ್ಲಿ ದ್ವಿಬಂಧದ ಸ್ಥಾನದಲ್ಲಿ ವ್ಯತ್ಯಾಸವಿದೆ.

ಚಕ್ರೀಯ ಸಂಯುಕ್ತಗಳಲ್ಲಿ (ಸೈಕ್ಲಿಕ್ ಕಾಂಪೌಂಡ್ಸ್) ಇನ್ನೊಂದು ಬಗೆಯ ಸ್ಥಾನೀಯ ಐಸೊಮೆರಿಸಮನ್ನು ಕಾಣುತ್ತೇವೆ. ಇಲ್ಲಿ ಯಾವುದೇ ಒಂದು ಆದೇಶಿ

(ಸಬ್‌ಸ್ಟಿಟ್ಯುಎಂಟ್) ಸ್ಥಾನ ಬೇರೆಬೇರೆಯಾಗಿರುವುದಿಲ್ಲ. ಎರಡು ಅಥವಾ ಅನೇಕ ಆದೇಶಗಳ ಸಾಪೇಕ್ಷಸ್ಥಾನ ಬೇರೆಬೇರೆಯಾಗಿರುತ್ತದೆ. ಬೆನ್‌ಜೀನ್‌ಜನ್ಯ ಸಂಯುಕ್ತಗಳಲ್ಲಿ ಈ ಬಗೆಯ ಐಸೊಮೆರಿಸಂ ಸರ್ವಸಾಮಾನ್ಯ. ಉದಾಹರಣೆಗೆ



ಕ್ಯಾಟಕಾಲ್



ರಿಸಾರ್ಸಿನಾಲ್



ಕ್ವಿನಾಲ್



ಪೈರೊಗೆಲಾಲ್



ಫ್ಲೊರೊಗ್ಲುಸಿನಾಲ್



ಹೈಡ್ರಾಕ್ಸಿಕ್ವಿನಾಲ್

**ಸ್ಟೀರಿಯೊ ಐಸೊಮೆರಿಸಂ :** ಅಣುರಚನೆ ಒಂದೇ ಇದ್ದು ಪರಮಾಣು ಮತ್ತು ಪರಮಾಣು ಪುಂಜಗಳ ಮೂರು ಆಯಾಮಗಳ ಹಂಚಿಕೆಯಲ್ಲಿ (ತ್ರೀಡೈಮೆನ್ಷನಲ್ ಡಿಸ್ಟ್ರಿಬ್ಯೂಷನ್) ವ್ಯತ್ಯಾಸವಿದ್ದರೆ ಅದಕ್ಕೆ ಸ್ಟೀರಿಯೊ ಐಸೊಮೆರಿಸಂ ಎಂದು ಕರೆಯುತ್ತಾರೆಂದು ಈಗಾಗಲೇ ಹೇಳಿದೆಯಷ್ಟೆ. ಇದರಲ್ಲಿ ಮುಖ್ಯವಾಗಿ ಎರಡು ಬಗೆ. ದ್ಯುತಿ ಐಸೊಮೆರಿಸಂ (ಆಪ್ಟಿಕಲ್ ಐಸೊಮೆರಿಸಂ) ಮತ್ತು ಜ್ಯಾಮಿತೀಯ ಐಸೊಮೆರಿಸಂ (ಜೊಮೆಟ್ರಿಕಲ್ ಐಸೊಮೆರಿಸಂ).

ದ್ಯುತಿ ಐಸೊಮೆರಿಸಂ : ಈ ಬಗೆಯ ಐಸೊಮರುಗಳ ಗುಣಲಕ್ಷಣಗಳಲ್ಲಿ ಕಂಡುಬರುವ ಮುಖ್ಯ ವ್ಯತ್ಯಾಸ ಧ್ರುವೀಕೃತ ಬೆಳಕಿನೊಡನೆ (ಪೋಲರೈಸ್ಡ್ ಲೈಟ್) ಅವು ವರ್ತಿಸುವ ರೀತಿಯಲ್ಲಿ. ಸಮತಲ ಧ್ರುವೀಕೃತ ಬೆಳಕಿನ (ಪ್ಲೇನ್ ಪೋಲರೈಸ್ಡ್ ಲೈಟ್) ರಶ್ಮಿಯನ್ನು ಆ ಸಂಯುಕ್ತಗಳ ಹರಳಿನ ಮೂಲಕ ಅಥವಾ ಅವುಗಳ ದ್ರಾವಣಗಳ ಮೂಲಕ ಹಾಯಿಸಿದರೆ ಧ್ರುವೀಕರಣ ಸಮತಲ (ಪ್ಲೇನ್ ಆಫ್ ಪೋಲರೈಸೇಷನ್) ಬಲಕ್ಕಾಗಲಿ ಎಡಕ್ಕಾಗಲಿ ತಿರುಗುತ್ತದೆ. ಧ್ರುವೀಕರಣ ಸಮತಲವನ್ನು ತಿರುಗಿಸಬಲ್ಲ ಸಂಯುಕ್ತ ದ್ಯುತಿಪಟುತ್ವ (ಆಪ್ಟಿಕಲ್ ಆಕ್ಟಿವಿಟಿ) ಉಳ್ಳದ್ದು ಎನ್ನಿಸಿಕೊಳ್ಳುತ್ತದೆ. ಹಾಗೆ ತಿರುಗುವ ಕೋನ ಈ ಐಸೊಮರುಗಳಲ್ಲಿ ಬೇರೆಬೇರೆಯಾಗಿರುತ್ತದೆ. ಈ ಕಾರಣದಿಂದಲೇ ಈ ಬಗೆಯ ಐಸೊಮೆರಿಸಂಗೆ ದ್ಯುತಿ ಐಸೊಮೆರಿಸಂ ಎಂಬ ಹೆಸರು ಬಂದಿರುವುದು.

ದ್ಯುತಿ ಐಸೊಮೆರಿಸಂನ ವಿಶದವಾದ ಚರ್ಚೆಗೆ ಪ್ರವೇಶಿಸುವ ಮೊದಲು ಸಮಾಂಗತೆ (ಸಿಮೆಟ್ರಿ) ಎಂಬುದರ ಅರ್ಥವನ್ನು ವಿವರಿಸುವುದು ಅಗತ್ಯ. ಒಂದು ಕಾಯ ಸಮಾಂಗವಾಗಿದ್ದರೆ (ಸಿಮೆಟ್ರಿಕಲ್) ಅದೂ ಅದರ ಕನ್ನಡಿಯ ಬಿಂಬವೂ (ಮಿರರ್ ಇಮೇಜ್) ಅನನ್ಯ (ಐಡೆಂಟಿಕಲ್). ಅಂದರೆ ಒಂದರ ಮೇಲೊಂದನ್ನಿಟ್ಟರೆ ಅವು ಸರಿಯಾಗಿ ಹೊಂದಿಕೊಳ್ಳುತ್ತವೆ. ಆ ಕಾಯ ಅಸಮಾಂಗವಾಗಿದ್ದರೆ (ಅಸಿಮೆಟ್ರಿಕಲ್) ಅದರ ಕನ್ನಡಿಯ ಬಿಂಬ ಮೊದಲ ನೋಟಕ್ಕೆ ಅದರಂತೆಯೇ ಕಂಡರೂ ಅವು ಅನನ್ಯವಲ್ಲ. ಇದಕ್ಕೆ ನಮ್ಮ ಕೈ ಬಲು ಒಳ್ಳೆಯ ಉದಾಹರಣೆ. ಎಡಗೈ ಕನ್ನಡಿಯ ಬಿಂಬ ಬಲಗೈ. ಮೊದಲ ನೋಟಕ್ಕೆ ಎರಡೂ ಒಂದೇ ಎಂಬಂತೆ ಕಂಡರೂ ಅವೆರಡೂ ಬೇರೆಬೇರೆ. ಇದಕ್ಕೆ ಕಾರಣ ಕೈ ಅಸಮಾಂಗ ಕಾಯ.

ಕೆಲವು ವೇಳೆ ಒಂದು ಸಂಯುಕ್ತದ ಅಣು ಯಾವುದೇ ಕಾರಣದಿಂದ ಅಸಮಾಂಗವಾಗಿರಬಹುದು. ಆಗ ಅದೂ ಅದರ ಕನ್ನಡಿಯ ಬಿಂಬದ ರೂಪವಿರುವ ಅಣುವೂ ಅನನ್ಯವಾಗಿರದೆ ಒಂದರಿಂದೊಂದು ಭಿನ್ನವಾಗಿರುತ್ತವೆ. ಈ ರೀತಿ ಅಣು ಅಸಮಾಂಗವಾಗಿರಲು ಸಾಮಾನ್ಯವಾಗಿ ಕಾಣಬರುವ ಒಂದು ಕಾರಣ ಅದರಲ್ಲಿರುವ ಯಾವುದೋ ಒಂದು ಕಾರ್ಬನ್ ಪರಮಾಣು ನಾಲ್ಕು ಬೇರೆ ಬೇರೆ ಪರಮಾಣು ಅಥವಾ ಪರಮಾಣುಪುಂಜಗಳಿಗೆ ಬಂಧಿತವಾಗಿರುವುದು. ಉದಾಹರಣೆಗೆ, ಲ್ಯಾಕ್ಟಿಕ್ ಆಮ್ಲದ ಅಣುವನ್ನು ಪರಿಶೀಲಿಸಿ.




ಅದರಲ್ಲಿ ಒಂದು ಕಾರ್ಬನ್ ಪರಮಾಣು $CH_3$, H, OH ಮತ್ತು COOHಗಳಿಗೆ ಬಂಧಿತವಾಗಿದೆ. ಕಾರ್ಬನ್ ಪರಮಾಣು ಸಮಚತುರ್ಮುಖಿಯೊಂದರ (ರೆಗ್ಯುಲರ್ ಟೆಟ್ರಹೆಡ್ರನ್) ಜ್ಯಾಮಿತೀಯ ಕೇಂದ್ರದಲ್ಲಿದ್ದು (ಜೊಮೆಟ್ರಿಕ್ ಸೆಂಟರ್) ಅದರ ನಾಲ್ಕು ವೇಲೆನ್ಸಿಗಳೂ ಚತುರ್ಮುಖಿಯ ನಾಲ್ಕು ಮೂಲೆಗಳ ಕಡೆ ಗುರಿ ಮಾಡಿಕೊಂಡಿವೆಯೆಂದು ನಂಬಲಾಗಿದೆ. ಇದರ ಆಧಾರದ ಮೇಲೆ ಲ್ಯಾಕ್ಟಿಕ್ ಆಮ್ಲದ ಅಣುವಿನ ಮಾದರಿಯನ್ನು ರೂಪಿಸಿಕೊಂಡರೆ ಅದು ಅಸಮಾಂಗವಾಗಿರುವುದನ್ನು ನೋಡಬಹುದು. ಒಂದಕ್ಕೊಂದು ಕನ್ನಡಿಯ ಬಿಂಬದಂತಿರುವ




ಎರಡು ಲ್ಯಾಕ್ಟಿಕ್ ಆಮ್ಲದ ಅಣುಮಾದರಿಗಳು ಸಾಧ್ಯ. ನಿರೀಕ್ಷಿಸಿದಂತೆ ಲ್ಯಾಕ್ಟಿಕ್ ಆಮ್ಲದ ಎರಡು ಐಸೊಮರುಗಳು ನಮಗೆ ದೊರೆತಿವೆ. ಇವುಗಳ ಗುಣಲಕ್ಷಣಗಳಿಗಿರುವ ವ್ಯತ್ಯಾಸ ಅತ್ಯಲ್ಪ. (i) ಅವುಗಳ ಹರಳುಗಳೂ ಒಂದಕ್ಕೊಂದು ಕನ್ನಡಿಯ ಬಿಂಬದಂತಿರುತ್ತವೆ. (ii) ಜೀವಿಗಳ ಮೇಲೆ ಅವು ಕೆಲವು ವೇಳೆ ಭಿನ್ನ ಪರಿಣಾಮ ಬೀರುತ್ತವೆ. (iii) ಒಂದು ಐಸೊಮರ್ ಧ್ರುವೀಕೃತ ಬೆಳಕಿನ ಸಮತಲವನ್ನು ಬಲಕ್ಕೆ ತಿರುಗಿಸಿದರೆ, ಅಂದರೆ ದಕ್ಷಿಣಾವರ್ತವಾದರೆ (ಡೆಕ್ಸ್ಟ್ರೋ ರೊಟೇಟರಿ) ಇನ್ನೊಂದು ವಾಮಾವರ್ತ (ಲೇವೋ ರೊಟೇಟರಿ). ಇಂಥ ಒಂದು ಜೊತೆ ಐಸೊಮರುಗಳಿಗೆ ಎನಾನ್ಷಿಯೋಮರುಗಳು ಅಥವಾ ದ್ಯುತಿಪ್ರತೀಪಕಗಳು (ಆಪ್ಟಿಕಲ್ ಆಂಟಿಪೋಡ್ಸ್) ಎಂದು ಹೆಸರು.

ನಾಲ್ಕು ಬೇರೆ ಬೇರೆ ಪರಮಾಣು ಅಥವಾ ಪರಮಾಣುಪುಂಜಗಳಿಗೆ ಬಂಧಿತವಾಗಿರುವ ಕಾರ್ಬನ್ ಪರಮಾಣುವು, ಅಣುವನ್ನು ಅಸಮಾಂಗವಾಗಿಸುವುದರಿಂದ ಅಂಥ ಕಾರ್ಬನ್ ಪರಮಾಣುವನ್ನೇ ಸಾಮಾನ್ಯವಾಗಿ ಅಸಮಾಂಗ ಕಾರ್ಬನ್ ಪರಮಾಣು ಎನ್ನುವುದು ವಾಡಿಕೆ. ಒಂದು ಅಣು ಅಸಮಾಂಗವಾಗಲು ಅದರಲ್ಲಿ ಇಂಥ ಅಸಮಾಂಗ ಕಾರ್ಬನ್ ಪರಮಾಣು ಇರಲೇ ಬೇಕಾದುದಿಲ್ಲ. ಕೆಲವು ವೇಳೆ ಬೇರೆ ಕಾರಣಗಳಿಂದಲೂ ಅಣು ಅಸಮಾಂಗವಾಗಬಹುದು. ಅಂಥ ಒಂದು ನಿದರ್ಶನವನ್ನು ಇಲ್ಲಿ ಕೊಡಬಹುದು. ಒಂದು ಕಾರ್ಬನ್ ಪರಮಾಣು ಎರಡು ಕಡೆಯೂ ಎರಡು ಕಾರ್ಬನ್ ಪರಮಾಣುಗಳಿಗೆ ದ್ವಿಬಂಧಗಳಿಂದ ಬಂಧಿತವಾಗಿದ್ದು ಆ ಎರಡು ಪರಮಾಣುಗಳು ಒಂದೊಂದೂ ಎರಡು ಭಿನ್ನ ಪರಮಾಣು ಪುಂಜಗಳಿಗೆ




ಬಂಧಿತವಾಗಿದ್ದರೆ ಅಂಥ ಅಣು ಅಸಮಾಂಗವಾಗುತ್ತದೆ. ಪರಿಣಾಮವಾಗಿ ಅದೇ ರಚನೆ ಇರುವ ಆದರೆ ಒಂದಕ್ಕೊಂದು ಕನ್ನಡಿ ಬಿಂಬಗಳಂತಿರುವ ಎರಡು ಮಾದರಿ ಸಾಧ್ಯವಾಗುತ್ತದೆ.

ಒಂದೇ ಅಣುವಿನಲ್ಲಿ ಒಂದಕ್ಕಿಂತ ಹೆಚ್ಚು ಅಸಮಾಂಗ ಕಾರ್ಬನ್ ಪರಮಾಣುಗಳಿದ್ದರೆ ಎರಡಕ್ಕಿಂತ ಹೆಚ್ಚು ಸಂಖ್ಯೆಯ ದ್ಯುತಿ ಐಸೊಮರುಗಳು ಸಾಧ್ಯ.

ಉದಾಹರಣೆಗೆ, ಎರಡು ಅಸಮಾಂಗ ಕಾರ್ಬನ್ ಪರಮಾಣುಗಳಿರುವ ಒಂದು ಅಣುವನ್ನು ತೆಗೆದುಕೊಳ್ಳೋಣ. ಪರಮಾಣು ಮತ್ತು ಪರಮಾಣು ಪುಂಜಗಳ



ಮೂರು ಆಯಾಮಗಳ ಹಂಚಿಕೆ ಬೇರೆಬೇರೆಯಾಗಿರುವ ಅದರ ಮಾದರಿಗಳನ್ನು ಸಮತಲ ಪ್ರಕ್ಷೇಪಣಗಳಿಂದ (ಪ್ಲೇನ್ ಪ್ರೊಜೆಕ್ಷನ್ಸ್) ಸೂಚಿಸಬಹುದಾದರೆ ಈ ಕೆಳಗೆ ಕಾಣುವ ನಾಲ್ಕು ಐಸೊಮರುಗಳು ಸಾಧ್ಯವಾಗುತ್ತವೆ.



ಇವುಗಳಲ್ಲಿ ಮೊದಲನೆಯದು ಮತ್ತು ನಾಲ್ಕನೆಯದು ಒಂದಕ್ಕೊಂದು ಕನ್ನಡಿಯ ಬಿಂಬಗಳು. ಆದ್ದರಿಂದ ಅವು ದ್ಯುತಿಪ್ರತೀಪಕಗಳು. ಒಂದು ದಕ್ಷಿಣಾವರ್ತ ವಾದರೆ ಇನ್ನೊಂದು ಅಷ್ಟೇ ಪ್ರಮಾಣದಲ್ಲಿ ವಾಮಾವರ್ತ. ಹಾಗೆಯೇ ಎರಡನೆಯದು ಮತ್ತು ಮೂರನೆಯದು ದ್ಯುತಿಪ್ರತೀಪಕಗಳು. ಇಲ್ಲಿ ಮೊದಲನೆ ಯದು ಮತ್ತು ಎರಡನೆಯದು ದ್ಯುತಿ ಐಸೊಮರುಗಳಾದರೂ (ಅಂದರೆ, ಒಂದೇ ರಚನೆಯಿದ್ದು, ದ್ಯುತಿಪಟುತ್ವ ಬೇರೆ ಬೇರೆ ಇರುವ ಐಸೊಮರುಗಳು) ಅವು ದ್ಯುತಿ ಪ್ರತೀಪಕಗಳಲ್ಲ. ಇಂಥ ಐಸೊಮರುಗಳಿಗೆ ಡಯಾಸ್ಟೀರಿಯೊ ಐಸೊಮರುಗಳೆಂದು ಹೆಸರು.

ಒಂದು ಅಣುವಿನಲ್ಲಿ $n$ ಅಸಮಾಂಗ ಕಾರ್ಬನ್ ಪರಮಾಣುಗಳಿದ್ದರೆ ಅಂಥ ಅಣುವಿನಲ್ಲಿ $2^n$ ಮೂರು ಆಯಾಮಗಳ ಮಾದರಿಗಳು ಸಾಧ್ಯ ಎಂದು ಲೆಕ್ಕಹಾಕಿ ತೋರಿಸಬಹುದು. ಅವುಗಳಲ್ಲಿ ದ್ಯುತಿಪ್ರತೀಪಕಗಳಾಗಿರುವ ಜೋಡಿಗಳನ್ನು ಲೆಕ್ಕ ಹಾಕಿದರೆ ಅದರ ಅರ್ಧಸಂಖ್ಯೆ ಜೋಡಿಗಳಿರುತ್ತವೆ. ಅಂದರೆ $2^{n-1}$ ಜೋಡಿ ದ್ಯುತಿ ಪ್ರತೀಪಕಗಳಿರುತ್ತವೆ.

ಜ್ಯಾಮಿತೀಯ ಐಸೊಮೆರಿಸಂ : ಎರಡು ಕಾರ್ಬನ್ ಪರಮಾಣುಗಳ ಮಧ್ಯೆ ಒಂದೇ ಬಂಧವಿದ್ದರೆ ಆ ಬಂಧವನ್ನೇ ಅಕ್ಷವಾಗಿ ಮಾಡಿಕೊಂಡು ಅಣು ತಿರುಗಲು ಸಾಧ್ಯ. ಅವೆರಡರ ನಡುವೆ ದ್ವಿಬಂಧ ಏರ್ಪಟ್ಟರೆ ಆ ತೆರನ ಭ್ರಮಣ ಸಾಧ್ಯ ವಾಗುವುದಿಲ್ಲ. ಆಗ ಕಾರ್ಬನ್ ವೇಲೆನ್ಸಿಗಳ ಚತುರ್ಮುಖೀಯ ಹಂಚಿಕೆಯ ಪರಿಣಾಮವಾಗಿ ಎರಡು ಕಾರ್ಬನ್ ಪರಮಾಣುಗಳೂ ದ್ವಿಬಂಧವೂ ಒಂದು ಸಮ ತಲದಲ್ಲಿದ್ದು ಆ ಪರಮಾಣುಗಳ ಉಳಿದ ಎರಡು ವೇಲೆನ್ಸಿಗಳು ಸಮತಲದ ಆ ಕಡೆ ಒಂದು, ಈ ಕಡೆ ಒಂದು ತಿರುಗಿಕೊಂಡಿರುತ್ತವೆ.



ಈಗ ಒಂದೊಂದು ಕಾರ್ಬನ್ ಪರಮಾಣುವೂ ಎರಡು ಬೇರೆ ಬೇರೆ ಪರಮಾಣು ಪುಂಜಗಳಿಗೆ ಬಂಧಿತವಾಗಿದ್ದರೆ ಎರಡು ಬಗೆಯ ಹಂಚಿಕೆ ಸಾಧ್ಯ. ದ್ವಿಬಂಧದ

ಸಮತಲದ ಒಂದೇ ಪಕ್ಕದಲ್ಲಿ ಸಾಮ್ಯವಿರುವ ಪರಮಾಣು ಪುಂಜಗಳಿದ್ದರೆ ಅದಕ್ಕೆ ಸಿಸ್ ಐಸೊಮರ್ ಎಂದೂ ಆ ಪಕ್ಕದಲ್ಲೊಂದು ಈ ಪಕ್ಕದಲ್ಲೊಂದು ಇದ್ದರೆ ಟ್ರಾನ್ಸ್ ಐಸೊಮರ್ ಎಂದೂ ಹೆಸರು. ಮೆಲೇಯಿಕ್ ಆಮ್ಲ ಮತ್ತು ಫ್ಯೂಮೆರಿಕ್ ಆಮ್ಲಗಳು ಇದಕ್ಕೆ ಒಳ್ಳೆಯ ನಿದರ್ಶನ. ಈ ಬಗೆಯ ಐಸೊಮೆರಿಸಂಗೆ



ಮೆಲೇಯಿಕ್ ಆಮ್ಲ ಫ್ಯೂಮೆರಿಕ್ ಆಮ್ಲ

ಜ್ಯಾಮಿತೀಯ ಐಸೊಮೆರಿಸಂ ಎಂದು ಹೆಸರು. ಕಾರ್ಬನ್–ನೈಟ್ರೊಜನ್ ದ್ವಿಬಂಧಗಳಿರುವ ಸಂಯುಕ್ತಗಳಲ್ಲೂ ಚಕ್ರೀಯ ಸಂಯುಕ್ತಗಳಲ್ಲೂ ಈ ಬಗೆಯ ಐಸೊಮೆರಿಸಮನ್ನು ಕಾಣಬಹುದು. C=N ಬಂಧದ ಸಂಯುಕ್ತಗಳಲ್ಲಿ ಜ್ಯಾಮಿ ತೀಯ ಐಸೊಮರುಗಳನ್ನು ಸಿಸ್, ಟ್ರಾನ್ಸ್ ಎಂದು ಕರೆಯುವ ಬದಲು ಸಿಸ್, ಆಂಟಿ ಎಂದು ಕರೆಯುವುದು ವಾಡಿಕೆ.



R – ಸಿಸ್ ಆಕ್ಸಿಮ್ R – ಆಂಟಿ ಆಕ್ಸಿಮ್

ಐಸೊಮೆರಿಸಂ ಆರ್ಗ್ಯಾನಿಕ್ ಸಂಯುಕ್ತಗಳಲ್ಲಿ ವಿಶೇಷವಾಗಿ ಕಾಣಬಹುದು. ನಿಜ. ಆದರೆ ಇನಾರ್ಗ್ಯಾನಿಕ್ ಸಂಯುಕ್ತಗಳಲ್ಲಿ ಐಸೊಮೆರಿಸಂ ಇಲ್ಲವೇ ಇಲ್ಲ ಎನ್ನುವಂತಿಲ್ಲ ರಚನೀಯ ಐಸೊಮೆರಿಸಂ, ಸ್ಟೀರಿಯೊ ಐಸೊಮೆರಿಸಂ—ಎರಡರ ನಿದರ್ಶನಗಳೂ ಇನಾರ್ಗ್ಯಾನಿಕ್ ಸಂಯುಕ್ತಗಳಲ್ಲಿ ಕಂಡುಬಂದಿವೆ.



ಸಿಸ್-1:2 ಡೈಕ್ಲೋರೋ ಸೈಕ್ಲೊಪೆಂಟೇನ್ ಟ್ರಾನ್ಸ್-1:2 ಡೈಕ್ಲೋರೋ ಸೈಕ್ಲೊಪೆಂಟೇನ್

ಇನಾರ್ಗ್ಯಾನಿಕ್ ಸಂಯುಕ್ತಗಳಲ್ಲಿ ರಚನೀಯ ಐಸೊಮೆರಿಸಂ ನಿದರ್ಶನವಾಗಿ ಈ ಕೆಳಗಿನ ಸಂಯುಕ್ತಗಳನ್ನು ಕೊಡಬಹುದು.




ಸ್ಟೀರಿಯೊ ಐಸೊಮೆರಿಸಮಿಗೆ ನಿದರ್ಶನವಾಗಿ ಕೆಳಗಿನ ಸಂಯುಕ್ತಗಳನ್ನು ಕೊಡ ಬಹುದು.




ಸಿಸ್




ಟ್ರಾನ್ಸ್

ಐಸೊಟೋಪುಗಳು ಇರುವ ಸಂಯುಕ್ತಗಳನ್ನು ಪರಿಶೀಲಿಸುವಾಗ ಯಾವುದೇ ಸಂಯುಕ್ತಗಳು ಐಸೊಮರುಗಳೇ ಅಲ್ಲವೇ ಎಂಬುದನ್ನು ನಿರ್ಧರಿಸಬೇಕಾದರೆ ಒಂದೇ ಧಾತುವಿನ ಬೇರೆ ಬೇರೆ ಐಸೊಟೋಪುಗಳನ್ನು ಬೇರೆ ಬೇರೆ ಧಾತುಗಳ ಪರಮಾಣುಗಳೆಂದೇ ಪರಿಗಣಿಸಬೇಕಾಗುವುದು. ಉದಾಹರಣೆಗೆ $CH_4$ ಮತ್ತು $CD_4$ ಗಳು ಐಸೊಮರುಗಳಲ್ಲ. ಅವು ಬೇರೆ ಬೇರೆ ಸಂಯುಕ್ತಗಳೇ. ಅಂತೆಯೇ $CH_3.^{18}OH$ ಮತ್ತು $CH_3.^{16}OH$.

$C_6H_5\overset{*}{C}HD.CH_3$ ರಲ್ಲಿ H ಮತ್ತು D ಗಳನ್ನು ಬೇರೆ ಬೇರೆ ಧಾತುಗಳ ಪರಮಾಣುಗಳೆಂದೇ ಪರಿಗಣಿಸಬೇಕಾಗುತ್ತದೆ. *ಈ ಗುರುತಿರುವ ಕಾರ್ಬನ್ ಪರಮಾಣು ಅಸಮಾಂಗ ಪರಮಾಣು. ಆದ್ದರಿಂದ ಈ ಸಂಯುಕ್ತ ದ್ಯುತಿ ಐಸೊಮೆರಿಸಮನ್ನು ಪ್ರದರ್ಶಿಸುತ್ತದೆ. ಅದರ ಎರಡು ದ್ಯುತಿ ಪ್ರತೀಪಕಗಳನ್ನೂ ಪ್ರತ್ಯೇಕಿಸಲಾಗಿದೆ. (ಜಿ.ಆರ್.ಎಲ್.; ಬಿ.ಸಿ.ಎಸ್.)

**ಐಸೊಯೆಟೀಸ್ :** ಐಸೊಯೆಟೇಲ್ಸ್ ಗಣದ, ಅರುವತ್ತು ಪ್ರಭೇದಗಳಿರುವ ಬೆಳ್ಳುಳ್ಳಿ ಗಿಡದಂತೆ ಕಾಣುವ ನೀರಿನಲ್ಲಿ ಅಥವಾ ಜವುಗು ಪ್ರದೇಶಗಳಲ್ಲಿ ಬೆಳೆಯುವ ಸಸ್ಯ. ನಮ್ಮ ದೇಶದಲ್ಲಿ ಐ. ಕೊರಮಂಡಲಿಯಾನ, ಐ. ಸಹ್ಯಾದ್ರಿಯೈ, ಐ. ದೀಕ್ಷಿತಿಯೈ, ಐ. ಇಂಡಿಕ, ಐ. ಪಂಚಾನನೈ ಮತ್ತು ಐ. ಸಂಪತ್ಕುಮಾರಿನೈ ಎನ್ನುವ ಆರು ಪ್ರಭೇದಗಳು ಬೆಳೆಯುತ್ತವೆ. ಐಸೊಯೆಟೀಸ್ ಸಸ್ಯವನ್ನು ಭೂಮಿಯ ಒಳಗೆ ಬೆಳೆಯುವ ಎರಡು ಮೂರು ಹಾಲೆಗಳಂತೆ (ಲೋಬ್ಸ್) ಹರಡಿರುವ ಗೆಡ್ಡೆ, ಅದರ ಸಂದುಗಳ ಕೆಳಭಾಗಗಳಿಂದ ಬೆಳೆಯುವ ಬೇರುಗಳು ಮತ್ತು ಗೆಡ್ಡೆಯ ಮೇಲ್ಭಾಗದಲ್ಲಿ 10–50 ಸೆಂ.ಮಿ. ಗಳ ಉದ್ದ ಬೆಳೆಯುವ ಗರಿಕೆ ಹುಲ್ಲಿನಂತೆ ಕಾಣುವ ಅಲೈಂಗಿಕ ಸಂತಾನ ಕಣಗಳ (ಸ್ಪೋರ್ಸ್) ಉತ್ಪಾದಕ ಎಲೆಗಳು ಎಂಬ ಮೂರು ಭಾಗಗಳಾಗಿ ವಿಂಗಡಿಸಬಹುದು. ಗೆಡ್ಡೆಯ ಬೆಳವಣಿಗೆ ಬಲು ನಿಧಾನ. ಇದು ಮೇಲ್ಭಾಗದಲ್ಲಿ ಎಲೆಗಳನ್ನೂ ಕೆಳಭಾಗದಲ್ಲಿ ಬೇರುಗಳನ್ನೂ ಉತ್ಪಾದಿಸುವುದರಿಂದ ಕೆಲವು ಸಸ್ಯ ಶಾಸ್ತ್ರಜ್ಞರು ಇದನ್ನು ಒಂದು ರೀತಿಯ ಮಿಶ್ರಕಾಂಡವೆಂದು ಅಭಿಪ್ರಾಯಪಡುತ್ತಾರೆ. ಗೆಡ್ಡೆಯ ಮೇಲ್ಭಾಗಕ್ಕೆ ರೈಸೊಮಾರ್ಫ್ ಎಂದೂ ಕೆಳಭಾಗಕ್ಕೆ ರೈಸೊಫೋರ್ ಎಂದೂ ಹೆಸರುಗಳಿವೆ. ಅಲ್ಲದೆ ಗೆಡ್ಡೆಯ ಅಂಗರಚನೆಯನ್ನು (ಅನಾಟಮಿ) ಪರೀಕ್ಷಿಸಿದಾಗ ಅದು ಮೇಲ್ಭಾಗದಲ್ಲಿ ಕಾಂಡದಂತೆಯೂ ಕೆಳಭಾಗದಲ್ಲಿ ಬೇರಿನಂತೆಯೂ ಕಾಣುವುದರಿಂದ ಮಿಶ್ರಕಾಂಡದ ಅಭಿಪ್ರಾಯವನ್ನು ಒಪ್ಪಬಹುದು.

ಬೇರಿನ ಅಂಗರಚನೆ : ನೀರು ಮತ್ತು ಆಹಾರ ಸರಬರಾಜು ಅಂಗಾಂಶಗಳು (ವ್ಯಾಸ್ಕ್ಯುಲರ್ ಟಿಶ್ಯೂಸ್) ಮಧ್ಯಭಾಗದಲ್ಲಿರದೆ ಒಂದು ಪಕ್ಕದಲ್ಲಿ C ಆಕಾರದಲ್ಲಿರುತ್ತವೆ. ಈ ಅಂಗಾಂಶದ ಎದುರು ಭಾಗದಲ್ಲಿ ಒಂದು ದೊಡ್ಡ ಕುಹರ (ಕ್ಯಾವಿಟಿ) ಇದೆ. ಈ ಅಂಗರಚನೆ ಸ್ಟಿಗ್‌ಮೇರಿಯ ಎಂಬ ಪ್ರಾಚೀನ ಸಸ್ಯದ ಬೇರಿನ ಅಂಗರಚನೆಯನ್ನು ಹೋಲುತ್ತದೆ. ಗೆಡ್ಡೆಯ ಹಾಲೆಗಳ ತುದಿ ಮತ್ತು ಸಂದು ಪ್ರದೇಶಗಳಲ್ಲಿರುವ ವರ್ಧನ ಅಂಗಾಂಶಗಳ (ಮೆರಿಸ್ಟಮ್ಯಾಟಿಕ್ ಟಿಶ್ಯೂಸ್) ಪ್ರಸರಣೆಯಿಂದ ಬೇರುಗಳ ಉತ್ಪಾದನೆಯಾಗುತ್ತದೆ.

ಅಲೈಂಗಿಕ ಸಂತಾನಕಣ ಉತ್ಪಾದಕ ಎಲೆಗಳು (ಸ್ಪೋರೋಫಿಲ್ಲುಗಳು) ಉದ್ದವಾಗಿವೆ. ಇವುಗಳ ಕೆಳಭಾಗ ಸ್ವಲ್ಪ ಅಗಲವಾಗಿ ಹೂಜಿ ಆಕಾರದಲ್ಲಿದೆ. ಆ ಭಾಗದಲ್ಲಿ ಸಣ್ಣ ಸಂತಾನಕಣಗಳ ಚೀಲ ಮತ್ತು ದೊಡ್ಡ ಸಂತಾನಕಣ ಚೀಲಗಳು ಉತ್ಪತ್ತಿಯಾಗುವುದರಿಂದ ಅಂಥ ಎಲೆಗಳಿಗೆ ಕ್ರಮವಾಗಿ ಸಣ್ಣಸಂತಾನಕಣ ಉತ್ಪಾದಕ ಎಲೆಗಳು (ಮೈಕ್ರೊಸ್ಪೋರೋಫಿಲ್ಸ್) ಮತ್ತು ದೊಡ್ಡ ಸಂತಾನಕಣ ಉತ್ಪಾದಕ ಎಲೆಗಳು (ಮೆಗಸ್ಪೋರೋಫಿಲ್ಸ್) ಎಂದು ಹೆಸರು. ಸಂತಾನಕಣ ಚೀಲದ ಮೇಲ್ಭಾಗದಲ್ಲಿ △ ಆಕಾರದ ಒಂದು ಸಣ್ಣ ಎಲೆಯಂಥ ಅಂಗವಿದೆ. ಇದಕ್ಕೆ ಲಿಗ್ಯೂಲ್ ಎಂದು ಹೆಸರು. ಇದರ ಕೆಳಭಾಗದಿಂದ ಬೆಳೆದ ಒಂದು ತೆಳುಪೊರೆ ಸಂತಾನಕಣ ಚೀಲವನ್ನು ಮುಚ್ಚಿಕೊಂಡಿರುತ್ತದೆ. ಈ ತೆಳುಪೊರೆಯ ಹೆಸರು ವೀಲಮ್. ಎಲೆಗಳ ಅಡ್ಡ ಸೀಳಿಕೆಗಳನ್ನು ಪರೀಕ್ಷಿಸಿದರೆ, ಮಧ್ಯದಲ್ಲಿ ಆಹಾರ-ನೀರು ಸರಬರಾಜು ಅಂಗಾಂಶ ಅಥವಾ ನಾಳಕೂರ್ಚ ಮತ್ತು ನಾಲ್ಕು ಮೂಲೆಗಳಲ್ಲಿ ನಾಲ್ಕು ವಾಯು ಕುಹರಗಳು ಕಾಣುತ್ತವೆ. ನೀರಿನ ಒಳಗೆ ಬೆಳೆಯುವ ಅಥವಾ ಅಂತರ್ಜಲ ಪ್ರಭೇದದ ಎಲೆಗಳಲ್ಲಿ ಹೊರಚರ್ಮ (ಎಪಿಡರ್ಮಿಸ್) ಅಂಗಾಂಶದಲ್ಲಿ ವಾಯುದ್ವಾರ ಇರುವುದಿಲ್ಲ. ಸಾಮಾನ್ಯವಾಗಿ ಅತ್ಯಂತ ಹೊರಸುತ್ತುಗಳಲ್ಲಿರುವ ಎಲೆಗಳು ಸ್ಪೊರಾಂಜಿಯಂಗಳನ್ನು ಉತ್ಪಾದಿಸುವುದಿಲ್ಲ. ಒಳಸುತ್ತುಗಳಲ್ಲಿ ಮೊದಲು ಮೆಗಸ್ಪೋರೋಫಿಲ್ಲುಗಳಿದ್ದು ಅವು ಮೈಕ್ರೋಸ್ಪೋರೋಫಿಲ್ಲುಗಳನ್ನು ಸುತ್ತುವರಿದುಕೊಂಡಿರುತ್ತವೆ. ಸ್ಪೊರಾಂಜಿಯಮುಗಳು ಹುರುಳಿ ಬೀಜದ ಆಕಾರದಲ್ಲಿರುವುವು ; ಮತ್ತು ವ್ಯಾಸ್ಕ್ಯುಲಾರ್ ಸಸ್ಯಗಳಲ್ಲಿ ಕಂಡುಬರುವ ಇತರ ಎಲ್ಲ ಸ್ಪೊರಾಂಜಿಯಮುಗಳಿಗಿಂತ ಅತ್ಯಂತ ದೊಡ್ಡ ಸ್ಪೊರಾಂಜಿಯಮುಗಳಾಗಿರುವುವು. ಸ್ಪೊರಾಂಜಿಯಮಿನ ಒಳಭಾಗದಲ್ಲಿ ಟ್ರೆಬ್ಯಾಕ್ಯುಲೇ ಎಂಬ ಅಡ್ಡ ಗೋಡೆಗಳಿವೆ. ಸ್ಪೊರಾಂಜಿಯಮುಗಳು ಕೆಲವು ವಿಶಿಷ್ಟ ಕೋಶಗಳ ವಿಭಜನೆಗಳಿಂದ ಉತ್ಪತ್ತಿಯಾಗಿ ಮುಂದೆ ಅಲೈಂಗಿಕ ಸಂತಾನಕಣಗಳನ್ನು ಉತ್ಪಾದಿಸುತ್ತವೆ. ಇಂಥ ಕೋಶಗಳಿಗೆ ಅಲೈಂಗಿಕ ಸಂತಾನಕಣ ಉತ್ಪಾದಕಕೋಶಗಳು (ಸ್ಪೊರಾಂಜಿಯಲ್ ಇನಿಷಿಯಲ್ಸ್) ಎಂದು ಹೆಸರು.

ಸ್ಪೊರಾಂಜಿಯಲ್ ಇನಿಷಿಯಲಿನ ವಿಭಜನೆಗಳಿಂದ ಹೊರಭಾಗದಲ್ಲಿ ಸ್ಪೊರಾಂಜಿಯಮಿನ ಗೋಡೆ ಮತ್ತು ಒಳಭಾಗದಲ್ಲಿ ಸಂತಾನಕಣ ತಾಯಿಕೋಶಗಳು (ಸ್ಪೋರ್ ಮದರ್ ಸೆಲ್ಸ್) ಉತ್ಪತ್ತಿಯಾಗುತ್ತವೆ. ಇವುಗಳಲ್ಲಿ ಮೈಕ್ರೊಸ್ಪೋರ್ ತಾಯಿಕೋಶಗಳು ಮತ್ತು ಮೆಗಸ್ಪೋರ್ ತಾಯಿಕೋಶಗಳು ಎಂಬ ಎರಡು ರೀತಿಯ ಕೋಶಗಳಿವೆ. ಮೈಕ್ರೊಸ್ಪೊರಾಂಜಿಯಮಿನಲ್ಲಿ ಸುಮಾರು ಒಂದು ಲಕ್ಷದಿಂದ ಹತ್ತು ಲಕ್ಷ ಮೈಕ್ರೊಸ್ಪೋರುಗಳು ಮತ್ತು ಮೆಗಸ್ಪೊರಾಂಜಿಯಮಿನಲ್ಲಿ ಕೇವಲ 30ರಿಂದ 50 ಮೆಗಸ್ಪೋರುಗಳು ಉತ್ಪತ್ತಿಯಾಗುವುವು. ಈ ಎರಡು ರೀತಿಯ ಸಂತಾನಕಣಗಳು (ಸ್ಪೋರ್ಸ್) ತಮ್ಮ ಬೆಳವಣಿಗೆಯಲ್ಲಿ 4 ರಂತೆ ಒಟ್ಟಾಗಿ ಸೇರಿ ಚತುಸ್ಸಂತಾನ ಕಣಗಳಾಗುತ್ತವೆ (ಟೆಟ್ರಾಡ್ಸ್ ಆಫ್ ಸ್ಪೋರ್ಸ್). ಸಂತಾನಕಣಗಳು ಗಾಳಿ ಮತ್ತು ನೀರುಗಳ ಮೂಲಕ ಪ್ರಸಾರವಾಗುತ್ತವೆ. ಮೈಕ್ರೊಸ್ಪೋರ್ ಮೊಳೆತು ಗಂಡು ಗ್ಯಾಮೀಟೊಫೈಟ್ ಸಸ್ಯವನ್ನು ಉತ್ಪಾದಿಸುತ್ತದೆ. ಈ ಸಸ್ಯ ಮೈಕ್ರೊಸ್ಪೋರಿನ ಒಳಗೆ ಬೆಳೆಯುವುದು ಮತ್ತು 256 ಗಂಡು ಗ್ಯಾಮೀಟುಗಳನ್ನು ಉತ್ಪಾದಿಸುತ್ತದೆ. ಪ್ರತಿ ಗ್ಯಾಮೀಟಿನಲ್ಲಿಯೂ ಅನೇಕ ಸ್ಪಂದನ ಲೋಮಾಂಗಗಳಿವೆ (ಸಿಲಿಯಾ). ಅವುಗಳ ಆಕಾರ ಕೊಕ್ಕೆಯಂತೆ. ಮೆಗಸ್ಪೋರ್ ಮೊಳೆತು ಹೆಣ್ಣು ಗ್ಯಾಮೀಟೊಫೈಟ್ ಸಸ್ಯವಾಗಿ ಬೆಳೆಯುತ್ತದೆ. ಈ ಸಸ್ಯ ಒಂದು ದೊಡ್ಡ ಅಂಡವನ್ನು ಉತ್ಪಾದಿಸುತ್ತದೆ. ನೀರಿನ ಮೂಲಕ ಗಂಡು ಗ್ಯಾಮೀಟು ಅಂಡದ ಜೊತೆ ಬೆರೆತಾಗ ಗರ್ಭಾಂಕುರವಾಗುತ್ತದೆ. ಈ ಭ್ರೂಣ ಬೆಳೆದು ಹೊಸ ಐಸೊಯೆಟೀಸ್ ಮೊಳಕೆಯಾಗುತ್ತದೆ. ಮೊಳಕೆ ಏಕದಳ ಸಸ್ಯದಂತೆ ಕಾಣುತ್ತದೆ.

**ಐಸೊಲೆಪಿಸ್ ಗ್ರಾಸಿಲಿಸ್ :** ಸೈಪರೇಸಿ ಕುಟುಂಬದ ಐಸೊಲೆಪಿಸ್ ಜಾತಿಯ ಒಂದು ಪ್ರಭೇದ. ಹೆಚ್ಚು ತೇವಾಂಶವಿರುವ ಪ್ರದೇಶಗಳಲ್ಲಿ ಹುಲ್ಲಿನಂತೆ ಬೆಳೆಯುವ ಒಂದು ಅಲಂಕಾರಸಸ್ಯ. ಇದನ್ನು ಉದ್ಯಾನವನಗಳಲ್ಲೂ ಹೆಚ್ಚು ತೇವಾಂಶವಿರುವ ಇತರ ಸ್ಥಳಗಳ ಅಂಚುಗಳಲ್ಲೂ ಬೆಳೆಸುತ್ತಾರೆ. ಕೆಲವು ಸಾರಿ ಇದನ್ನು ಕುಂಡಗಳಲ್ಲೂ ಬೆಳೆಸಿ ಸಮಾರಂಭಗಳಲ್ಲಿ ಅಲಂಕಾರವಸ್ತುಗಳನ್ನಾಗಿ ಬಳಸುವುದುಂಟು.

ಇದು 1′–1½′ ಎತ್ತರ ಬೆಳೆಯುವ ಬಹುವಾರ್ಷಿಕ ಪರ್ಣಸಸಿ. ಕಾಂಡದಲ್ಲಿ ಗಿಣ್ಣುಗಳಿವೆ. ನಡುಗಿಣ್ಣು ಟೊಳ್ಳು. ತುದಿಯಲ್ಲಿ ತುರಾಯಿ ಆಕಾರದ ಹೂಗೊಂಚಲಿದೆ. ಸಸ್ಯ ಎಳೆಯದಾಗಿದ್ದಾಗ ನೇರವಾಗಿ ನಿಂತಿದ್ದು, ವಯಸ್ಸಾದ ಅನಂತರ ಬಾಗುತ್ತದೆ. ಕೆಲವು ಸಸ್ಯಗಳಲ್ಲಿ ಎಲೆಗಳು ಇರುವುದಿಲ್ಲ, ಇದ್ದರೂ ಬಹು ಚಿಕ್ಕವಾಗಿರುತ್ತವೆ. ಸಸ್ಯದ ತುದಿಯಲ್ಲಿ ಅನೇಕ ಚೂಪು ತುದಿಯ ಸ್ಪೈಕ್ ಹೂಗೊಂಚಲುಗಳಿವೆ. ಅವುಗಳ ಮಧ್ಯೆ ಚಿಕ್ಕದಾಗಿರುವ ಉಪಎಲೆಗಳು ಇವೆ.

(ಡಿ.ಎಂ.)

**ಐಸೊಲ್ಯೂಸಿನ್ :** ಆರು ಇಂಗಾಲಗಳನ್ನುಳ್ಳ ಒಂದು $\alpha$–ಅಮೈನೋ ಆಮ್ಲ ಮತ್ತು ಲ್ಯೂಸಿನ್ನಿನ ಐಸೊಮರ್. ಐಸೊಲ್ಯೂಸಿನ್ನಿನ ಅಣುವಿನಲ್ಲಿ ಎರಡು ಅಸಮಾಂಗ (ಅಸಿಮೆಟ್ರಿಕ್) ಇಂಗಾಲಗಳಿರುವುದರಿಂದ ನಾಲ್ಕು ಸ್ಥಾನೀಯ (ಸ್ಪೇಶಿಯಲ್) ಐಸೊಮರುಗಳು ಸಾಧ್ಯ. ಅವುಗಳಲ್ಲಿ ಎರಡು D– ಮತ್ತು L–ಐಸೊಲ್ಯೂಸಿನ್. ಉಳಿದವೆರಡು D– ಮತ್ತು L–ಅಲ್ಲೊಐಸೊಲ್ಯೂಸಿನ್ ಅಣುಗಳು.




$$CH_3-CH_2-\underset{\displaystyle CH_3}{\underset{|}{CH}}-\underset{\displaystyle NH_2}{\underset{|}{CH}}-COOH$$

1904ರಲ್ಲಿ ಏರ್‌ಲಿಕ್ ಎಂಬ ವಿಜ್ಞಾನಿ (ನೋಡಿ —ಏರ್‌ಲಿಕ್, ಪಾಲ್) ಈ ಆಮ್ಲವನ್ನು ಮೊದಲ ಬಾರಿಗೆ ಬೇಟಿ ಕಾಕಂಬಿಯಿಂದಲೂ (ಮೊಲಾಸ್ಸಸ್) ಅನಂತರ ರಕ್ತದಲ್ಲಿನ ಪ್ರೋಟೀನಿನಿಂದಲೂ ಬೇರ್ಪಡಿಸಿದ. 1907ರಲ್ಲಿ ಅದರ ರಚನೆಯನ್ನೂ ಸಾಧಿಸಿದ. 1931ರ ವೇಳೆಗೆ ಈ ಸಂಯುಕ್ತದ ಸಂಯೋಜನೆಯೂ ನಾಲ್ಕು ಬಗೆಯ ಐಸೊಮರುಗಳ ಬೇರ್ಪಡೆಯೂ ಹಲವಾರು ವಿಜ್ಞಾನಿಗಳ ಪ್ರಯತ್ನದಿಂದ ಸಾಧ್ಯವಾಯಿತು.

ಪ್ರಕೃತಿಯಲ್ಲಿ ಲ್ಯೂಸಿನ್ ಮತ್ತು ಐಸೊಲ್ಯೂಸಿನುಗಳು ಒಟ್ಟಾಗಿ ದೊರೆಯುತ್ತವೆ. ಆದರೆ ಐಸೊಲ್ಯೂಸಿನಿನ ತಾಮ್ರಲವಣ ಲ್ಯೂಸಿನಿನ ತಾಮ್ರಲವಣಕ್ಕಿಂತ ನೀರಿನಲ್ಲಿ ಹೆಚ್ಚು ದ್ರಾವ್ಯವಾದ್ದರಿಂದ (ಸಾಲ್ಯುಬಲ್) ಅಂಶತಃ ಸ್ಫಟಿಕೀಕರಣ (ಫ್ರಾಕ್ಷನಲ್ ಕ್ರಿಸ್ಟಲೈಸೇಷನ್) ವಿಧಿಯಿಂದ ಬೇರ್ಪಡಿಸಬಹುದು. D– ಮತ್ತು L–ಐಸೊಮರುಗಳ ಮಿಶ್ರಣಗಳನ್ನು ಬೇರ್ಪಡಿಸಲು ನಿರ್ದಿಷ್ಟ ಏಕಾಣುಜೀವಿಗಳನ್ನೂ (ಬ್ಯಾಕ್ಟೀರಿಯ) ನಿರ್ದಿಷ್ಟ ತಳಿಗಳ ಯೀಸ್ಟನ್ನೂ ಉಪಯೋಗಿಸಲಾಗುತ್ತದೆ.

L–ಐಸೊಲ್ಯೂಸಿನಿನ ಕೊರತೆಯಿಂದ ಪ್ರಾಣಿಗಳ ರಕ್ತರಸದಲ್ಲಿನ (ಪ್ಲಾಸ್ಮಾ) ಪ್ರೋಟೀನ್ ಅಂಶದಲ್ಲಿ ವೈಪರೀತ್ಯವಾಗುತ್ತದೆಂದು ತಿಳಿದುಬಂದಿದೆ. ಐಸೊಲ್ಯೂಸಿನ್ ಅಥವಾ ಅದನ್ನುಳ್ಳ ಪ್ರೋಟೀನುಗಳ ಕೊಡುಗೆಯಿಂದ ಈ ವೈಪರೀತ್ಯ ಅಥವಾ ಕೊರತೆ ತುಂಬಿ ರಕ್ತರಸದಲ್ಲಿ ಪ್ರೋಟೀನ್ ಅಂಶ ವೃದ್ಧಿಯಾಗಿ ಸಹಜಸ್ಥಿತಿಯ ಮಟ್ಟವನ್ನು ಮುಟ್ಟುತ್ತದೆ.

(ಕೆ.ಟಿ.ಎಸ್.)

**ಐಸ್ಯಾಕ್ :** ಕ್ರಿ.ಪೂ. 1500. ಏಬ್ರಹಾಂ ಪ್ರವಾದಿಯ ಎರಡನೆಯ ಮಗ. ತಂದೆಯ ಅನಂತರ ಹೀಬ್ರು ಜನತೆಗೆ ಪ್ರವಾದಿ ನಾಯಕನಾದವ. ತಂದೆ ಏಬ್ರಹಾಂಗೆ ನೂರು ವರ್ಷ ತಾಯಿ ಸಾರಾಗೆ ತೊಂಬತ್ತು ವರ್ಷ ವಯಸ್ಸಾದಾಗ ಈತ ಜನಿಸಿದ. ಇಸ್ಲಾಮಿ ಭಾಷೆಯಲ್ಲಿ ಇಸ್‌ಹಾಕ್ ಎಂದು ಈತನ ಹೆಸರು. ಈ ಹೆಸರಿಗೆ ನಗು ಎಂದರ್ಥ. ಅಂಥ ವೃದ್ಧಾಪ್ಯದಲ್ಲಿ ತಮಗೆ ಮಕ್ಕಳಾಗುತ್ತದೆಂಬ ವಾರ್ತೆ ಬಂದಾಗ ತಂದೆ ತಾಯಿಗಳು ದೊಡ್ಡದಾಗಿ ನಕ್ಕರೆಂದೂ ಹುಟ್ಟಿದ ಮಗುವಿಗೆ ನಗು ಎಂದೇ ಹೆಸರಿಟ್ಟರೆಂದೂ ಕಥೆ. ದೇವರು ಏಬ್ರಹಾಂನ ಸತ್ತ್ವಪರೀಕ್ಷೆ ಮಾಡಲು ಚಿಕ್ಕಮಗುವನ್ನೇ ಬಲಿಯಾಗಿ ಕೇಳಿದನೆಂದೂ ಅದಕ್ಕೆ ಸಿದ್ಧನಾದಾಗ ತಾನೇ ಅದನ್ನು ಕನಿಕರದಿಂದ ತಪ್ಪಿಸಿದನೆಂದೂ ಹಳೆಯ ಒಡಂಬಡಿಕೆಯಲ್ಲಿ ಹೇಳಲಾಗಿದೆ. ಹಾರನ್ ಪ್ರದೇಶದ ರೆಬೆಕ ಎಂಬುವಳನ್ನು ಐಸ್ಯಾಕ್ ಮದುವೆಯಾದ. ಅವನಿಗೆ ಇಬ್ಬರು ಮಕ್ಕಳಾದರು. ಎರಡನೆಯವನಾದ ಯಾಕೂಬನು (ಜೇಕಬ್) ಯೆಹೂದಿ ಮನೆತನದ ಮೂಲಪುರುಷನಾದ. ಮೋಸಸ್ (ಮೂಸಾ), ಸಾಲೊಮನ್ (ಸುಲೇಮಾನ್), ಡೇವಿಡ್ (ದಾವೂದ್) ಇವರೆಲ್ಲ ಈ ವಂಶದವರೇ. (ಎಸ್.ಎ.ಟಿ.ಕೆ.)

**ಐಸ್‌ಲೆಂಡ್:** ಉತ್ತರ ಅಟ್ಲಾಂಟಿಕ್ ಸಾಗರದಲ್ಲಿ ಉತ್ತರ ಮೇರುವೃತ್ತಕ್ಕೆ ಹತ್ತಿಕೊಂಡಂತೆ ಇರುವ ಒಂದು ದ್ವೀಪ. ಗ್ರೀನ್‌ಲೆಂಡಿಗೆ 155 ನೌಕಾ ಮೈಲಿಗಳು ಮತ್ತು ಸ್ಕಾಟ್ಲೆಂಡಿಗೆ 430 ನೌಕಾ ಮೈಲಿಗಳು ದೂರದಲ್ಲಿದೆ. (ಒಂದು ನೌಕಾ ಮೈಲಿ=1852 ಮೀಟರುಗಳು). ತೀರದ ಸಣ್ಣಪುಟ್ಟ ದ್ವೀಪಗಳನ್ನೂ ನಡುಬಂಡೆಗಳನ್ನೂ ಬಿಟ್ಟು ಉಳಿದ ಪ್ರದೇಶದ ವಿಸ್ತೀರ್ಣ 39,698 ಚ.ಮೈ. ಅವನ್ನೂ ಸೇರಿಸಿಕೊಂಡರೆ ಒಟ್ಟು ಭೂಪ್ರದೇಶದ ವಿಸ್ತೀರ್ಣ 39,756 ಚ.ಮೈ. ಮುಖ್ಯ ದ್ವೀಪ ಉತ್ತರ ಅಕ್ಷಾಂಶ 63° 24′ ನಿಂದ 66° 33′ ವರೆಗೂ ಪಶ್ಚಿಮ ರೇಖಾಂಶ 13° 30′ ನಿಂದ 24° 32′ ವರೆಗೂ ಹಬ್ಬಿದೆ. ಇದು ಸ್ಥೂಲವಾಗಿ ಮೊಟ್ಟೆಯ ಆಕಾರ. ವಾಯುವ್ಯದಲ್ಲಿ ಇದಕ್ಕೆ ಅಂಟಿಕೊಂಡಂತೆ ಒಂದು ಪರ್ಯಾಯ ದ್ವೀಪವುಂಟು. ಅದರ ತೀರ ಬಲು ಅಂಕುಡೊಂಕು. ಐಸ್‌ಲೆಂಡ್ ತೃತೀಯ ಭೂಯುಗದಲ್ಲಿ ವ್ಯಾಪಕವಾದ ಅಗ್ನಿಪರ್ವತ ಪ್ರದೇಶವೊಂದರ ಭಾಗವಾಗಿತ್ತು. ಗ್ರೀನ್‌ಲೆಂಡ್ ಮತ್ತು ವಾಯುವ್ಯ ಬ್ರಿಟನ್ ವರೆಗೂ ಹಬ್ಬಿದ ಈ ಪ್ರದೇಶ ಮಧ್ಯ ತೃತೀಯ ಭೂಯುಗದಲ್ಲಿ ಕುಸಿದು ಸವೆತಕ್ಕೀಡಾಗಿಯಿತು. ಐಸ್‌ಲೆಂಡಿನ ಮಧ್ಯ ವಲಯ ಪ್ಲೈಯೊಸೀನ್ ಕಾಲದ ಜ್ವಾಲಾಮುಖಿಯ ಕ್ರಿಯೆಗೀಡಾಗಿ ಇಂದಿನ ವರೆಗೂ ಮುಂದುವರೆದಿದೆ.

**ಮೇಲ್ಮೈಲಕ್ಷಣ :** ಐಸ್‌ಲೆಂಡ್ ತೀರದ ಉದ್ದ 3,700 ಮೈಲಿ. ಇದರಲ್ಲಿ ಮೂರನೆಯ ಒಂದು ಭಾಗ ವಾಯುವ್ಯ ಪರ್ಯಾಯದ್ವೀಪದಲ್ಲಿದೆ. ದಕ್ಷಿಣ ತೀರ ನೇರ, ತಗ್ಗು ; ಮರಳಿನ ಸೆರಗುಗಳಿಂದ ಕೂಡಿದ್ದು. ಎತ್ತರದ ಕೋಡುಬಂಡೆಗಳು ಅಲ್ಲಲ್ಲಿ ಸಮುದ್ರದತ್ತ ಚಾಚಿವೆ. ತೀರದಲ್ಲಿರುವ ದ್ವೀಪಗಳು ಬಲು ಪುಟ್ಟವು.

ಐಸ್‌ಲೆಂಡ್ ಬಹುತೇಕ ಪ್ರಸ್ಥಭೂಮಿ ಪ್ರದೇಶ. ಇದರ ಸರಾಸರಿ ಎತ್ತರ 2,000′–3,000′. ಒರೇಫಯೊಕಲ್ ಅತ್ಯಂತ ಎತ್ತರ ಶಿಖರ (6,952′). ಒಟ್ಟು ನೆಲದ ಸೇಕಡಾ 7ರಷ್ಟು ಮೈದಾನ. ಇದರಲ್ಲಿ ಬಹುಭಾಗ ರೇಕ್‌ಯಾವೀಕಿಗೆ ಪೂರ್ವದಲ್ಲಿದೆ. ಪ್ರಸ್ಥಭೂಮಿಯ ಒಳಭಾಗ ಮರಳು, ಶಿಲಾಪ್ರವಾಹ ಮತ್ತು ನೀರ್ಗಲ್ಲು ಪ್ರದೇಶಗಳಿಂದ ಕೂಡಿದೆ. ವಾಟ್ನಾಯಕುಟ್ಲ್ ಯೂರೋಪಿನಲ್ಲೇ ಅತ್ಯಂತ ವಿಶಾಲವಾದ ಹಿಮಗಡ್ಡೆ ಪ್ರದೇಶ. ಇದರ ವಿಸ್ತಾರ 3,400 ಚ.ಮೈ. ಇದಲ್ಲದೆ ಇನ್ನೂ 36 ಹಿಮಗಡ್ಡೆ ಪ್ರದೇಶಗಳು ಇಲ್ಲಿ ಉಂಟು. ವಾಟ್ನಾಯಕುಟ್ಲ್ ಹಿಮಗಡ್ಡೆಯಡಿಯಲ್ಲಿ ಅಲ್ಲಲ್ಲಿ ತನ್ನ ಶೀತನಾಲಗೆಗಳನ್ನು ಚಾಚಿ ಕಣಿವೆಗಳಲ್ಲಿ ಮುನ್ನುಗ್ಗಿ ಹೆಚ್ಚು ಕಡಿಮೆ ಸಮುದ್ರದಂಡೆಯ ವರೆಗೂ ಬಂದಿರುವುದುಂಟು. ಹಿಮಪ್ರವಾಹಗಳು ಕಣಿವೆಗಳನ್ನು ತುಂಬಿ, ಗಡ್ಡೆಯಡಿಯ ನೀರು ರಭಸದಿಂದ ಮುನ್ನುಗ್ಗಿದಾಗ ಕೆಳಮಟ್ಟದ ನೆಲವೆಲ್ಲ ಪ್ರವಾಹಮಯವಾಗುತ್ತದೆ.

ಐಸ್‌ಲೆಂಡಿನಲ್ಲಿ ಮಳೆ ಹೆಚ್ಚು. ತೊರೆಗಳು ಅಸಂಖ್ಯಾತ. ಆದರೆ ಪ್ರಸ್ಥಭೂಮಿಯ ಮರಳುನೆಲ ಮಾತ್ರ ಬರಡು. ಅಲ್ಲಿ ಬಿದ್ದ ನೀರೆಲ್ಲ ತಳಕ್ಕೆ ಇಳಿದು ಹೋಗುತ್ತದೆ. ಇಲ್ಲಿಯ ನದಿಗಳು ಬೇಸಗೆಯಲ್ಲಿ ಹಿಮ ಕರಗಿದ ನೀರನ್ನೊಳಗೊಂಡು ರಭಸದಿಂದ ಹರಿಯುತ್ತವೆ. ಈ ನದಿಗಳಿಂದಾಗಿರುವ ಜಲಪಾತಗಳು ಅನೇಕ. ಇವುಗಳ ಪೈಕಿ ಹೈಫಾಸ್ ಜಲಪಾತ 425 ಅಡಿಗಳು.

ಕಳೆದ ಒಂದು ಸಾವಿರ ವರ್ಷಗಳಲ್ಲಿ ಇಲ್ಲಿ 25 ಜ್ವಾಲಾಮುಖಿಗಳು ಒಟ್ಟು ಎಂಬತ್ತು ಸಾರಿ ಬೆಂಕಿ ಕಾರಿವೆಯೆಂಬುದು ವ್ಯಕ್ತಪಟ್ಟಿದೆ. ಇವುಗಳ ಪೈಕಿ ಹೆಹ್‌ಕ್ಲಾ, ಲಾಕಿ ಮತ್ತು ಅಸ್ಕಯಾ ಮುಖ್ಯ. ನೆಲದ ಬಿರುಕುಗಳಿಂದ ಶಿಲಾಪ್ರವಾಹವೂ ಬೂದಿಯೂ ಹೊರಬರುತ್ತವೆ. ದಕ್ಷಿಣ ಐಸ್‌ಲೆಂಡಿನಲ್ಲಿ ಹಿಮಪ್ರವಾಹದ ಅಡಿಯಲ್ಲಿ ಜ್ವಾಲಾಮುಖಿಗಳು ಸ್ಫೋಟಿಸಿದಾಗ ಮಂಜುಗೆಡ್ಡೆ ಕರಗಿ ಪ್ರವಾಹಗಳು ಬಿರುಸಿನಿಂದ ಹರಿದು ಅನಾಹುತಕ್ಕೆ ಕಾರಣವಾಗುತ್ತವೆ. ಕಿರಿ ಆಳದ ಕಡಲ ತಳದಲ್ಲೂ ಸ್ಫೋಟಗಳು ಸಂಭವಿಸುವುದುಂಟು. 1783ರಲ್ಲಿ ನ್ಯೋ ಎಂಬ ಒಂದು ದ್ವೀಪವೇ ಸೃಷ್ಟಿಯಾದಾಗ ಡೇನಿಷ್ ಸರ್ಕಾರ ಅದ್ದೂರಿಯಿಂದ ಅದರ ಮೇಲೆ ತನ್ನ ಧ್ವಜ ಹಾರಿಸಿತು. ಆದರೆ ಒಂದೇ ವರ್ಷದಲ್ಲಿ ಆ ದ್ವೀಪವೇ ಕಾಣೆಯಾಯಿತು. ಐಸ್‌ಲೆಂಡಿನಲ್ಲಿ ಭೂಕಂಪಗಳೂ ಸಂಭವಿಸುತ್ತಿರುತ್ತವೆ. ಆದರೆ ಜನಸಂಖ್ಯೆ ವಿರಳವಾಗಿರುವುದರಿಂದ ಸಾವು ನೋವು ಕಡಿಮೆ.

ಬಿಸಿನೀರಿನ ಊಟೆಗಳು ಇಲ್ಲಿರುವಷ್ಟು ಬೇರೆಲ್ಲೂ ಇಲ್ಲ. ಮನೆಗಳನ್ನೂ ಸಸ್ಯಾಗಾರಗಳನ್ನೂ ಬೆಚ್ಚಗಿಡಲು ಇವುಗಳನ್ನು ಈಚೆಗೆ ಬಳಸಿಕೊಳ್ಳಲಾಗುತ್ತಿದೆ.

**ವಾಯುಗುಣ :** ಐಸ್‌ಲೆಂಡಿನದು ಸಾಗರಿಕ ವಾಯುಗುಣ. ಕರಾವಳಿಯ ಜನವಸತಿಯ ಪ್ರದೇಶ ಹೆಚ್ಚು ಹಿತಕರ. ಇಲ್ಲಿ ಉಷ್ಣತೆಯ ಅಂತರಗಳು ಕಡಿಮೆ. ದಕ್ಷಿಣ ಪಶ್ಚಿಮಗಳಲ್ಲಿ ಗಲ್ಫ್ ಉಷ್ಣೋದಕ ಪ್ರವಾಹದಿಂದ ವಾಯುಗುಣ ಸ್ವಲ್ಪ ಬೆಚ್ಚಗಿರುತ್ತದೆ. ಉತ್ತರ ಪೂರ್ವಗಳಲ್ಲಿ ಗ್ರೀನ್‌ಲೆಂಡಿನ ಕಡೆಯ ಶೀತೋದಕದಿಂದಾಗಿ ಚಳಿ ಹೆಚ್ಚು. ರೇಕ್‌ಯಾವೀಕ್ ಬಳಿ ಜನವರಿ ಜುಲೈಗಳಲ್ಲಿನ ಮಧ್ಯಸ್ಥ (ಮೀನ್) ಉಷ್ಣತೆಗಳು 30° ಫ್ಯಾ. ಮತ್ತು 51.7° ಫ್ಯಾ. ಉತ್ತರದಲ್ಲಿ ಆಕುರೇರಿ ಬಳಿ 27° ಫ್ಯಾ. ಮತ್ತು 50° ಫ್ಯಾ. ಅತ್ಯಂತ ಉತ್ತರದಲ್ಲಿ ಸೂರ್ಯ ಜೂನ್ ತಿಂಗಳಲ್ಲಿ 18 ದಿನ ದಿಗಂತದಿಂದ ಮೇಲೆ ಇರುತ್ತದೆ. ಮಳೆ ಹೆಚ್ಚಾಗಿ ಬೀಳುವುದು ಆಗ್ನೇಯದಲ್ಲಿ (70″). ರೇಕ್‌ಯಾವೀಕಿನಲ್ಲಿ 34″ ಮಳೆಯಾಗುತ್ತದೆ. ಅಲ್ಲಿ ವರ್ಷಕ್ಕೆ 80 ದಿನಗಳೂ ಉತ್ತರದಲ್ಲಿ 100–140 ದಿನಗಳೂ ನೆಲ ಹಿಮಾಚ್ಛಾದಿತವಾಗಿರುತ್ತವೆ. ಐಸ್‌ಲೆಂಡಿನ ಒಳಭಾಗದ ಪ್ರಸ್ಥಭೂಮಿ ಪ್ರದೇಶದ್ದು ಖಂಡಾಂತರ ವಾಯುಗುಣ. ಅಕ್ಟೋಬರಿನಿಂದ ಏಪ್ರಿಲ್ ವರೆಗೆ ಸರಾಸರಿ ಉಷ್ಣತೆ ನೀರಿನ ಘನೀಭವನಾಂಕಕ್ಕಿಂತ




ಕೆಳಕ್ಕಿಳಿಯುತ್ತದೆ. ಉತ್ತರದ ಕಡಲಿನಲ್ಲಿ ಹಿಮಗಡ್ಡೆ ತೇಲುತ್ತಿರುವುದುಂಟು. ಇದರಿಂದ ಹಡಗು ಸಂಚಾರ ವಿಘ್ನಮಯ.

**ಸ್ವಾಭಾವಿಕ ಸಸ್ಯ, ಪ್ರಾಣಿವರ್ಗಗಳು :** ಐಸ್‌ಲೆಂಡಿನ ಮೇಲೆ ಹಸಿರು ಹಬ್ಬಿರುವ ಭಾಗ ಬಲು ಕಿರಿದು. ತಗ್ಗು ನೆಲದಲ್ಲಿ ಕೂಡ ಶಿಲೆಯೂ ಮರಳೂ ಹೆಚ್ಚು. ಒಮ್ಮೆ ಕಾಡುಗಳು ಈಗಿಗ್ಗಿಂತ ಹೆಚ್ಚಾಗಿದ್ದುವು, ಈಗಿರುವ ಮರಗಳ ಪೈಕಿ ವಿಲೊ ಬರ್ಚ್, ಮೌಂಟನ್ ಆಷ್ ಸಾಮಾನ್ಯ. ಪುನರ್‌ವನನಿರ್ಮಾಣ ಯೋಜನೆಗೆ ಈಗ ಹೆಚ್ಚಿನ ಗಮನ ಕೊಡಲಾಗುತ್ತಿದೆ. 2,000 ಅಡಿಗಳಿಗಿಂತ ಎತ್ತರದ ನೆಲವೆಲ್ಲ ಮರುಭೂಮಿ.

ನರಿ ಮತ್ತು ಹಿಮಸಾರಗಗಳು ಮುಖ್ಯ ವನ್ಯಮೃಗಗಳು. ಹಿಮಕರಡಿಗಳೂ ಉಂಟು. ಐಸ್‌ಲೆಂಡ್ ಟಾಕಣಗಳು ಗಟ್ಟಿಮುಟ್ಟಾಗಿವೆ. ನೆಲದ ಮೇಲೆ ಸರಕು ಸಾಗಿಸಲು ಇವು ಮುಖ್ಯ ಸಾಧನ.

ಇಲ್ಲಿರುವ ಹಕ್ಕಿಗಳು ಅನೇಕ ಬಗೆ: ನೀರುಕೋಳಿ, ಕ್ರೌಂಚ, ಟಿಟ್ಟಿಭ, ಗಿಡುಗ, ಬಾತು ಮುಂತಾದವು.

ಸಮುದ್ರದಲ್ಲಿ ಜಲವ್ಯಾಘ್ರ (ಸೀಲ್), ತಿಮಿಂಗಿಲ, ಕಾಡ್, ಹೆಲಿಬಟ್, ಹೆರಿಂಗ್ ಮುಂತಾದವೂ ನದೀ ಸರೋವರಗಳಲ್ಲಿ ಸಾಲ್ಮನ್ ಮತ್ತು ಟ್ರಾಟ್ ಮೀನುಗಳೂ ಧಾರಾಳ.

ಈ ದ್ವೀಪದಲ್ಲಿ ಸುಮಾರು 30%ರಷ್ಟು ಜನ ವ್ಯವಸಾಯವನ್ನವಲಂಬಿಸಿದ್ದಾರೆ. ಮೇವು ಹುಲ್ಲು, ಓಟ್ಸ್, ಟರ್ನಿಪ್ ಮುಂತಾದವು ದೇಶದ ಬೆಳೆಗಳು. ತರಕಾರಿ, ಹಣ್ಣು, ಹೂವು, ಟೊಮ್ಯಾಟೊ, ಕುಂಬಳ ಮುಂತಾದವನ್ನು ಅಲ್ಲಿರುವ ಚಿಕ್ಕ ತೋಟಗಳಲ್ಲಿ ಬೆಳೆಯುತ್ತಾರೆ. ಅಂಥ ತೋಟಗಳಿಗೆ ಬೇಕಾಗುವ ಉಷ್ಣತೆಯನ್ನು ಬಿಸಿನೀರಿನ ಚಿಲುಮೆ ಮತ್ತು ವಿದ್ಯುಚ್ಛಕ್ತಿಗಳಿಂದ ಒದಗಿಸಲಾಗುವುದು. ಸುಮಾರು 16ರಷ್ಟು ಜನಕ್ಕೆ ಮೀನುಗಾರಿಕೆ ಮುಖ್ಯ ಉದ್ಯೋಗ. ಮೀನು, ಕಾಡ್ ಎಣ್ಣೆ, ಮೀನಿನ ಪುಡಿ ಮುಂತಾದವು ರಫ್ತಾಗುತ್ತವೆ. ದನ, ಕುರಿ ಮತ್ತು ಕುದುರೆಗಳನ್ನು ಹಾಲು, ಮಾಂಸ ಮತ್ತು ಸಾಗಾಣಿಕೆಗಳಿಗಾಗಿ ಸಾಕುತ್ತಾರೆ.

ಕಲ್ಲಿದ್ದಲು, ಗಂಧಕ ಮತ್ತು ಕ್ಯಾಲ್ಸೈಟುಗಳು ಈ ದೇಶದಲ್ಲಿ ಸಿಕ್ಕುವ ಖನಿಜಗಳು.

ಅಲ್ಲಲ್ಲಿ ಕಂಡುಬರುವ ಚಿಕ್ಕ ಜಲವಿದ್ಯುತ್ ಕೇಂದ್ರಗಳಿಂದ ಕೈಗಾರಿಕೆಗಳಿಗೂ, ಮನೆಬೆಳಕಿಗೂ, ಕೈತೋಟಗಳಿಗೂ ಉಷ್ಣಶಕ್ತಿಯನ್ನು ಒದಗಿಸಲಾಗಿದೆ. ಕೆಲವು ಬಿಸಿನೀರಿನ ಚಿಲುಮೆಗಳಿಂದ ಕೈತೋಟಗಳಿಗೂ ಈಜುಕೊಳಗಳಿಗೂ, ಬಟ್ಟೆ ಸ್ವಚ್ಛ ಮಾಡುವುದಕ್ಕೂ ಮನೆಗೂ ಉಷ್ಣಶಕ್ತಿ ಒದಗಿಸಿಕೊಳ್ಳುತ್ತಾರೆ.

ಈ ದೇಶದ ಸುಮಾರು 20% ರಷ್ಟು ಜನ ಕೆಲವು ಕೈಗಾರಿಕೆಗಳನ್ನವಲಂಬಿಸಿದ್ದಾರೆ. ಕೈಚೀಲ ತಯಾರಿಕೆ, ಮೀನಿನ ಬಲೆಯ ತಯಾರಿಕೆ, ಮೀನುಗಳ ಸಂಸ್ಕರಣ ಮತ್ತು ಶೈತ್ಯೀಕರಣ, ಮತ್ಸ್ಯತೈಲ ತಯಾರಿಕೆ, ಚರ್ಮದ ಸಾಮಾನುಗಳ ತಯಾರಿಕೆ, ಚಿಕ್ಕ ಹಡುಗು ನಿರ್ಮಾಣ, ಉಣ್ಣೆಬಟ್ಟೆ ತಯಾರಿಕೆ ಮುಂತಾದವು ಈ ದೇಶದ ಕೆಲವು ಕೈಗಾರಿಕೆಗಳು. ಬ್ರಿಟನ್, ಜರ್ಮನಿ, ಬ್ರಜಿಲ್, ಮತ್ತು ಕ್ಯೂಬ ಗಳಿಗೆ ಮೀನಿನ ಪದಾರ್ಥಗಳು ರಫ್ತಾಗುತ್ತವೆ.

ಈ ದ್ವೀಪದಲ್ಲಿ ಸುಮಾರು 5,700 ಮೈಲಿ ರಸ್ತೆಗಳಿವೆ. ಇದು ಯೂರೋಪಿನಿಂದ ಉತ್ತರ ಅಮೆರಿಕದ ವರೆಗಿರುವ ಜಲಮಾರ್ಗ ಹಾಗೂ ವಾಯುಮಾರ್ಗಗಳಲ್ಲಿದೆ. ಹಡಗುಗಳ ಮೂಲಕವೇ ವಾಣಿಜ್ಯ ಸಾಗುತ್ತದೆ. ರೇಕ್‌ಯಾವೀಕ್ ರಾಜಧಾನಿ. ಇದರ ಜನಸಂಖ್ಯೆ 71,037 (1959). ಮೀನಿನ ಮತ್ತು ಮಾಂಸದ ಸಂಸ್ಕರಣ, ಮೀನಿನ ಎಣ್ಣೆ ಮತ್ತು ಉಣ್ಣೆಬಟ್ಟೆ ತಯಾರಿಕೆ ಮುಂತಾದ ಕಾರ್ಖಾನೆಗಳನ್ನುಳ್ಳ ಕೈಗಾರಿಕಾ ಕೇಂದ್ರ ಮತ್ತು ವಿದ್ಯಾಕೇಂದ್ರ. ರಾಜಧಾನಿಯ ಸುಮಾರು ಅರ್ಧದಷ್ಟು ಭಾಗ ಬಿಸಿನೀರಿನ ಚಿಲುಮೆಗಳಿಂದ ಉಷ್ಣವನ್ನು ಪಡೆಯುತ್ತದೆ. ಅಕ್ರನೀಸ್, ಆಕುರೇರಿ, ಹಾನಾರ್ಫ್‌ಯಾರ್ಡುರ್, ಕಫ್ಲಾವಿಕ್ ಮುಂತಾದ 10 ದೊಡ್ಡ ಪಟ್ಟಣಗಳು ಈ ದೇಶದಲ್ಲಿವೆ.

ಐಸ್‌ಲೆಂಡಿನ ಜನಸಂಖ್ಯೆ 1,99,920 (1967). ಈ ಜನ ಲ್ಯೂಥರ್ ಚರ್ಚಿಗೆ ಸೇರಿದ ಕ್ರೈಸ್ತಮತೀಯರು. ಸೇಕಡಾ 78 ಮಂದಿ ಪಟ್ಟಣವಾಸಿಗಳು. (ಎ.ಕೆ.)

**ಚರಿತ್ರೆ :** ಯೂರೋಪಿನ ನಾವಿಕರನೇಕರಿಗೆ ಕ್ರಿ.ಶ. 4ನೆಯ ಶತಮಾನದಷ್ಟು ಹಿಂದೆಯೇ ಐಸ್ಲೆಂಡಿನ ವಿಚಾರ ಗೊತ್ತಿತ್ತು. ಆದರೆ ಒಂಬತ್ತನೆಯ ಶತಮಾನಕ್ಕೆ

ಮುಂಚೆ ಯಾರೂ ಇಲ್ಲಿ ನೆಲೆಸಿದಂತಿಲ್ಲ. ಐರ್ಲೆಂಡಿನ ವಲಸೆಗಾರರು ಎಂಟನೆಯ ಶತಮಾನದಲ್ಲಿ ಅಲ್ಲಲ್ಲಿ ವಾಸಿಸುತ್ತಿದ್ದರು. ಆದರೆ ಇವರ ಬಗ್ಗೆ ವಿವರಗಳು ಗೊತ್ತಿಲ್ಲ. ಇತರರು ಅಲ್ಲಿಗೆ ಬಂದಾಗ ಇವರು ಅಲ್ಲಿಂದ ಹೊರಟು ಹೋದರೆಂದು ಹೇಳಲಾಗಿದೆ. ಕ್ರಿ. ಶ. 870ರಲ್ಲಿ ಇಂಗೋಲ್ಫ್ ಅರ್ನಾರ್‌ಸನ್ ಎಂಬ ವೈಕಿಂಗ್ ಪ್ರಥಮ ವಸಾಹತನ್ನು ಸ್ಥಾಪಿಸಿದ. ಅನಂತರ 60 ವರ್ಷಗಳಲ್ಲಿ ಇನ್ನೂ ಅನೇಕ ವಸಾಹತುಗಳು ಬೆಳೆದುವು. ಪ್ರಾರಂಭದಲ್ಲಿ ಪ್ರತಿ ವಸಾಹತಿನ ಸರ್ಕಾರವನ್ನೂ ಅಲ್ಲಿಯ ದೇವಾಲಯದ ಮೇಲ್ವಿಚಾರಕ ನಡೆಸುತ್ತಿದ್ದ. ಅನಂತರ ಎಲ್ಲ ವಸಾಹತುಗಳಿಗೂ ಒಂದೇ ಸರ್ಕಾರ ಏರ್ಪಟ್ಟು ಶ್ರೀಮಂತರ ಆಡಳಿತ ಪ್ರಾರಂಭವಾಯಿತು. 981ರಲ್ಲಿ ಕಾಲಿಟ್ಟ ಕ್ರೈಸ್ತಮತ ಕ್ರಿ.ಶ. 1000ದ ವೇಳೆಗೆ ಶಾಸನಸಮ್ಮತ ಧರ್ಮವಾಗಿ ಶಾಲೆಗಳೂ ಚರ್ಚುಗಳೂ ಸ್ಥಾಪನೆಯಾದುವು. 19ನೆಯ ಶತಮಾನದಲ್ಲಿ ಜಾನ್ ಸಿಗುರ್ಡ್‌ಸನನ ನಾಯಕತ್ವದಲ್ಲಿ ರಾಷ್ಟ್ರೀಯ ಜಾಗೃತಿಯುಂಟಾಗಿ, ಜಾರನ್ ಜಾನ್ಸನ್, ಸ್ವೇನ್ ಜಾರ್ನ್‌ಸನ್, ಹಾನೆಸ್ ಹಾಫ್‌ಸ್ಟೀನ್ ಮುಂತಾದವರ ನೇತೃತ್ವದಲ್ಲಿ ದೇಶ ಆರ್ಥಿಕಾಭಿವೃದ್ಧಿ ಸಾಧಿಸಿತು. ಎರಡನೆಯ ಮಹಾಯುದ್ಧದಲ್ಲಿ ಜರ್ಮನರು ಇದನ್ನು ಆಕ್ರಮಿಸಿಕೊಂಡಿದ್ದರು. ಅನಂತರ ತಮ್ಮ ದೇಶಗಳ ರಕ್ಷಣಾ ದೃಷ್ಟಿಯಿಂದ ಅಮೆರಿಕ ಸಂಯುಕ್ತಸಂಸ್ಥಾನ ಮತ್ತು ಬ್ರಿಟನ್ ಇಲ್ಲಿ ಸೇನಾ ನೆಲೆಗಳನ್ನು ಸ್ಥಾಪಿಸಿ ಅಭಿವೃದ್ಧಿ ಕಾರ್ಯಗಳಿಗೆ ಬೆಂಬಲ ಕೊಟ್ಟುವು. 1380ರಿಂದ ಡೆನ್ಮಾರ್ಕಿಗೆ ಸೇರಿದ್ದ ಈ ದೇಶ 1944ರಲ್ಲಿ ಸ್ವತಂತ್ರವಾಯಿತು. ಇದೊಂದು ಗಣರಾಜ್ಯ.
(ಬಿ.ಎಸ್.ಎಸ್.)

**ಐಸ್ಲೆಂಡ್ ಸ್ಪಾರ್ :** ಕ್ಯಾಲ್ಸೈಟಿನ ಒಂದು ರೂಪ. ನಿರ್ವರ್ಣ, ಪಾರದರ್ಶಕ ವಸ್ತು. ಹೆಚ್ಚಾಗಿ ಐಸ್ಲೆಂಡಿನಲ್ಲಿ ಸಿಗುತ್ತದೆ. ಸಮಚತುರ್ಭುಜೀಯ ಆಕೃತಿಯ ಈ ಖನಿಜದ ಸಾಪೇಕ್ಷಸಾಂದ್ರತೆ 2.7 ; ಕಾಠಿಣ್ಯ 3. ಇದಕ್ಕಿರುವ ದ್ವಿವಕ್ರೀಭವನ (ಡಬಲ್ ರಿಫ್ರ್ಯಾಕ್ಷನ್) ಗುಣದ ಮೇಲೆ ಇದರ ಮೌಲ್ಯವನ್ನು ನಿರ್ಧರಿಸುತ್ತಾರೆ. ಧ್ರುವವರ್ಣದರ್ಶಕ (ಪೋಲಾರಿಸ್ಕೋಪ್), ನಿಕಾಲ್-ಅಶ್ರುಗ ಮತ್ತಿತರ ದೃಗುಪಕರಣಗಳಲ್ಲಿ ಇದರ ಬಳಕೆ ಹೆಚ್ಚು. ನೋಡಿ—ಕ್ಯಾಲ್ಸೈಟ್. *

**ಐಸ್ಲೆಂಡಿಕ್ ಸಾಹಿತ್ಯ :** ಐಸ್ಲೆಂಡಿಕ್ ಸಾಹಿತ್ಯ ಪ್ರಾಚೀನ ಸ್ಕ್ಯಾಂಡಿನೇವಿಯದ ಸಾಹಿತ್ಯ, ಸಂಸ್ಕೃತಿಗಳಿಂದ ಹುಟ್ಟಿದ್ದುದು. ಕೇವಲ ಶ್ರುತರೂಪದಲ್ಲಿದ್ದ ಪ್ರಾಚೀನ ಸ್ಕ್ಯಾಂಡಿನೇವಿಯದ ಸಾಹಿತ್ಯವನ್ನು ಐಸ್ಲೆಂಡಿನ ಸಾಹಿತ್ಯ ಎಂದು ಕರೆಯಬಹುದು. ಏಕೆಂದರೆ ಅದರ ಬಹುಭಾಗ ಐಸ್ಲೆಂಡಿನಲ್ಲೇ ಉಳಿದುಕೊಂಡು ಬಂದಿತು. ಅಲ್ಲದೆ ಕೆಲವು ಕೃತಿಗಳೂ ಐಸ್ಲೆಂಡಿನಲ್ಲೇ ರಚಿತವಾದುವು. ಒಂದನೆಯ ಹೆರಾಲ್ಡ್ ಫೇರ್‌ಹೇರ್ ಎಂಬ ಸ್ಕ್ಯಾಂಡಿನೇವಿಯದ ದೊರೆ ಶ್ರೀಮಂತ ವಿರೋಧವಾದ ಧೋರಣೆಯನ್ನು ತಾಳಿದನಾಗಿ ಹಲವು ಗಣ್ಯ ಶ್ರೀಮಂತ ಮನೆತನಗಳು ಐಸ್ಲೆಂಡಿಗೆ ವಲಸೆ ಹೋಗಿ ನೆಲೆಸಿದುವು. ಈ ಜನಾಂಗದ ಸಂಸ್ಕೃತಿಯ ಸಂಜಾತಗುಣ ಕಾವ್ಯಾಭಿರುಚಿ. ಈ ಪರಂಪರೆಯಲ್ಲಿ ಐಸ್ಲೆಂಡಿನ ಸಾಹಿತ್ಯ ವಿಕಾಸಗೊಂಡಿತು. ಗ್ರೀಕ್ ಕಾವ್ಯ, ಕ್ರೈಸ್ತಧರ್ಮ ಇವು ಯಾವುದರ ಪ್ರಭಾವವೂ ಬೀಳದ ಶುದ್ಧ ಜರ್ಮ್ಯಾನಿಕ್ ವೈಶಿಷ್ಟ್ಯದಲ್ಲೇ ಇದು ಆರಂಭವಾಯಿತು. ನಮಗೆ ದೊರೆಯುವ ಐಸ್ಲೆಂಡಿನ ಸಾಹಿತ್ಯದ ಕೃತಿಗಳು 9ನೆಯ ಶತಕದಿಂದೀಚಿನವು. ಇವೂ 12ನೆಯ ಶತಕದ ವರೆಗೂ ಕೇವಲ ಶ್ರುತ ರೂಪದಲ್ಲಿದ್ದು 13 ಮತ್ತು 16ನೆಯ ಶತಮಾನಗಳಲ್ಲಿ ಕಾವ್ಯ ಎಡ ಮತ್ತು ಗದ್ಯ ಎಡ ಎಂಬ ಎರಡು ಗ್ರಂಥಗಳ ಸಂಗ್ರಹದಲ್ಲಿ ಮೊದಲು ಪ್ರಕಟವಾದುವು. ನೋಡಿ—ಎಡ.

ಐಸ್ಲೆಂಡಿಕ್ ಸಾಹಿತ್ಯ ಚರಿತ್ರೆಯನ್ನು ಮುಖ್ಯವಾಗಿ ಮೂರು ಕಾಲ ವಿಭಾಗಗಳಲ್ಲಿ ಅವಲೋಕಿಸಬಹುದು : ಪ್ರಾಚೀನಕಾಲ (9ನೆಯ ಶತಕದಿಂದ 14ನೆಯ ಶತಕದ ವರೆಗೆ) ಮಧ್ಯಕಾಲ (14ನೆಯ ಶತಕದಿಂದ 19ನೆಯ ಶತಕದ ವರೆಗೆ) ಆಧುನಿಕ ಕಾಲ (19ನೆಯ ಶತಕದಿಂದ ಇಂದಿನವರೆಗೆ).

ಪ್ರಾಚೀನ ಸಾಹಿತ್ಯದಲ್ಲಿ ಎಡಸಾಹಿತ್ಯ, ಸ್ಕಾಲ್ಡಿಕ್ ಕಾವ್ಯ, ಸಾಗಾ (ವಂಶಾವಳಿ ಕಥನಕಾವ್ಯ) ಎಂಬ ಮೂರು ಪ್ರಕಾರಗಳನ್ನು ಕಾಣಬಹುದು. ಪೌರಾಣಿಕ ಅಂದರೆ ದೈವೀಮಹಿಮೆಗಳ ಕಥೆಯೊ ವೀರರ ಸಾಹಸಗಳ ಕಥೆಯೊ ಧರ್ಮ ಬೋಧೆಯೊ ವಸ್ತುವಾಗಿದ್ದ ಕಾವ್ಯ ಮೊದಲನೆಯದು. ಇವುಗಳ ಸಂಕಲನವೆ ಎಡ ಸಾಹಿತ್ಯವೆನಿಸಿತು. ಸರಳವಾದ ಛಂದಸ್ಸು, ಗಂಭೀರವಾದ ಗತಿ, ಪ್ರಾಸ-ಅನುಪ್ರಾಸಗಳ ಸರಣಿ—ಇವು ಈ ಕಾವ್ಯದ ಮುಖ್ಯ ಲಕ್ಷಣ. ಇವನ್ನು ಬರೆದ ಕವಿಗಳ ಬಗ್ಗೆ ಏನೂ ತಿಳಿದಿಲ್ಲ. ಸಂಗ್ರಹಿಸಿದವರು ಯಾರು ಎಂಬ ಬಗ್ಗೆಯೂ ವಾದವಿವಾದಗಳಿವೆ. 13ನೆಯ ಶತಕದಲ್ಲಿ ಗ್ರಂಥ ರೂಪದಲ್ಲಿ ಮೊದಲಬಾರಿಗೆ ಬೆಳಕು ಕಂಡ ಗದ್ಯ ಎಡದ ಸಂಗ್ರಹಕಾರ ಸ್ನೋರಿ ಸ್ಟ್ಯುರ್ಲ್ಯುಸನ್ ಎಂದೂ 16ನೆಯ ಶತಕದಲ್ಲಿ ಪ್ರಕಟವಾದ ಕಾವ್ಯ ಎಡದ ಸಂಗ್ರಹಕಾರ ಪಂಡಿತ ಸೀಮುಂಡ್ ಸೀಗ್‌ಫ್ಯುಸುನ್ ಎಂದೂ ತಿಳಿಯಲಾಗಿದೆ. ವಿಜಯಗೀತೆಗಳು, ಶೋಕಗೀತೆಗಳು, ಸುಭಾಷಿತಗಳು ಸಹ ಈ ಕಾವ್ಯಭಂಡಾರದಲ್ಲಿವೆ. ಪೌರಾಣಿಕ ಕಾವ್ಯಗಳಲ್ಲಿ ವಾಲ್ಯೂಸ್ಪಾ, ರಾಗ್ನೋರೋಕ್ ಮೊದಲಾದ ಶ್ರೇಷ್ಠಕೃತಿಗಳಿವೆ. ಇವುಗಳ ಕವಿ, ಕಾಲನಿರ್ಣಯಗಳ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಛಂದೋವೈವಿಧ್ಯ, ಪ್ರೌಢವಾದ ಭಾಷೆ, ಶೈಲಿ, ರಚನಾಪರಿಣತಿಗಳನ್ನು ಮೆಚ್ಚುವಲ್ಲಿ ಒಮ್ಮತವಿದೆ.

10ನೆಯ ಶತಕದಿಂದ 13ನೆಯ ಶತಕದ ವರೆಗೆ ಪ್ರಧಾನವಾಗಿ ಬೆಳೆದ ಸ್ಕಾಲ್ಡಿಕ್ ಕಾವ್ಯಮಾದರಿ ಆಸ್ಥಾನ ಕವಿಗಳ ಕಾಣಿಕೆ. ರಾಜರ ಇಲ್ಲವೆ ಶ್ರೀಮಂತರ ಕೃಪಾಪೋಷಿತರಾದ ಪಂಡಿತಕವಿಗಳು ತಮ್ಮ ಆಶ್ರಯದಾತರ ಸ್ತುತಿಯನ್ನೊ ಕೀರ್ತಿವಾಚನವನ್ನೊ ಸಾಹಸಗಳ ಕಥೆಯನ್ನೊ ರಂಜಕವಾಗಿ ಅಲಂಕಾರಿಕ ಭಾಷೆಯಲ್ಲಿ ಬರೆದರು. ಸಂಕೀರ್ಣ ರಚನೆಯೇ ಇವುಗಳ ವಿಶಿಷ್ಟ ಲಕ್ಷಣ. ರಚನೆಯಲ್ಲಿ ಕೇವಲ ಆಡಂಬರ, ಕಥನದಲ್ಲಿ ಒಂದೇ ಧಾಟಿ ಇದ್ದು ಅಂತಃಕರಣದ ಮಿಡಿತವೇ ಇಲ್ಲದ ಈ ಕಾವ್ಯಗಳಿಗೆ ಐತಿಹಾಸಿಕ ಮಹತ್ತ್ವವೊಂದು ಬಿಟ್ಟರೆ ಬೇರೆ ಯಾವ ಶ್ರೇಷ್ಠ ಸಾಹಿತ್ಯದ ಬೆಲೆಯೂ ಇಲ್ಲ. ಈ ಕಾವ್ಯಪರಂಪರೆಯ ಆದ್ಯಪ್ರವರ್ತಕ 9ನೆಯ ಶತಕದ ನಾರ್ವೆಯ ಬ್ರಾಗಿ ಎಂಬ ಕವಿ.

ಐಸ್ಲೆಂಡಿನಲ್ಲಿ ಈಗಿಲ್ ಸ್ಕ್ಯಾಲ್ಲಾಗ್ರಿಮ್‌ಸುನ್ (10ನೆಯ ಶತಕ) ಈ ಪರಂಪರೆಯ ಮೊದಲ ಹಾಗೂ ಶ್ರೇಷ್ಠ ಕವಿ. ಅನಂತರದ ಕವಿಗಳಲ್ಲಿ ಹಾಲ್ ಫ್ರೆಡ್ರ‍ಉಟ್ಟಾರ್ ಸುನ್, 11ನೆಯ ಶತಕದಲ್ಲಿ ಅಪಾರಮನ್ನಣೆ ಗಳಿಸಿದ ಸಿಗ್‌ಫಾತ್ರ‍ಥೂರ್‌ಡಾರ್‌ಸುನ್ (ಈತ ಓಲಾಫ್ ಹಾರಾಲ್ಡ್‌ಸುನ್ ದೊರೆಯ ಆಪ್ತಮಿತ್ರ ಮತ್ತು ಆಸ್ಥಾನಕವಿ.) ಮತ್ತು ಆರ್ನ್ಯೂರ್ ಯಾರ್ಲಾಸ್ಕಾಲ್ಡ್ ಮುಖ್ಯರು. 12ನೆಯ ಶತಕದ ಅನಂತರ ಈ ಬಗೆಯ ಕಾವ್ಯರಚನೆ ಕ್ರಮೇಣ ಶಿಥಿಲವಾಯಿತು. ಸ್ಕಾಲ್ಡಿಕ್ ಕಾವ್ಯಲಕ್ಷಣಗಳನ್ನೂ ವಿಶಿಷ್ಟ ಪ್ರಯೋಗವೆನಿಸಿದ ಕೇನ್ನಿಂಗ್ಸ್ ಎಂಬ ರೂಪಕ ನುಡಿಗಟ್ಟುಗಳ ಬಹು ಸೊಗಸಾದ ವಿವರಣೆಗಳನ್ನೂ ಗದ್ಯ ಎಡದಲ್ಲಿ ನೋಡಬಹುದು.

ಸಾಗಾ ಎಂಬುದು ಐಸ್ಲೆಂಡಿನ ವಿಶಿಷ್ಟ ಸೃಷ್ಟಿ. ಇಂಥ ಸಾಹಿತ್ಯರೂಪ ಬೇರೆ ಯಾವ ಸಾಹಿತ್ಯದಲ್ಲೂ ಇಲ್ಲ. ವೀರ ವಂಶಾವಳಿ ಕಥೆಯೇ ಸಾಗಾ ರೂಪ ತಾಳಿ ತಮ್ಮ ತಮ್ಮ ವಂಶದ ಬಗ್ಗೆ, ಕುಲಸ್ಥರ ಬಗ್ಗೆ ಇದ್ದ ಉತ್ಕಟವಾದ ಗೌರವ ಅಭಿಮಾನಗಳೇ ಅನೇಕ ತಲೆಮಾರುಗಳ ವಂಶಾವಳಿ ಕಥೆಗಳು ಬೆಳೆಯಲು ಕಾರಣವಾದುವು. ಐತಿಹಾಸಿಕ ಘಟನೆಗಳ ಸುತ್ತ ಹೆಣೆದ ರಮ್ಯವಾದ ಕಾಲ್ಪನಿಕ ಕಥೆ ಸಾಗಾದ ಸಾಧಾರಣ ಮಾದರಿ. 12ರಿಂದ 15ನೆಯ ಶತಕದ ವರೆಗೂ ಈ ಸಾಹಿತ್ಯ ಪ್ರಕಾರ ಬಹುಜನಪ್ರಿಯವಾಗಿತ್ತು. ಕಥನ ಕೌಶಲ ಐಸ್ಲೆಂಡಿನವರಲ್ಲಿ ರಕ್ತಗತವಾಗಿ ಬಂದದ್ದು. ಐರಿಷ್ ಪ್ರಭಾವದಿಂದ ಈ ನೈಪುಣ್ಯ ಹೆಚ್ಚು ಕಲಾತ್ಮಕವಾಯಿತು. ವಂಶಾವಳಿ ಕಥೆಗಳಲ್ಲಿ ಸುಮಾರು 35 ಕೃತಿಗಳು ಅಮೋಘವಾಗಿವೆ. ಕೆಲವು ಗಣ್ಯ ಮನೆತನಗಳ ಚರಿತ್ರೆ ಇವುಗಳ ವಸ್ತು. ಕಥೆಯ ಉದ್ದಕ್ಕೂ ಒಂದು ಬಗೆಯ ವಿಷಾದದ ಛಾಯೆ ಹರಡಿದರೂ ಅಲ್ಲಲ್ಲಿ ಹಾಸ್ಯ, ಶೃಂಗಾರಗಳ ಅಂಶಗಳೂ ಸೇರಿ ಉಲ್ಲಾಸವುಂಟು ಮಾಡುತ್ತವೆ. ಇವು ಉತ್ತಮ ಐತಿಹಾಸಿಕ ದಾಖಲೆಗಳಾಗದಿದ್ದರೂ ಅಂದಿನ ಜನಜೀವನ ಸಂಸ್ಕೃತಿಗಳನ್ನು ಬಹಳ ಚೆನ್ನಾಗಿ ಪ್ರತಿಬಿಂಬಿಸುತ್ತವೆ. ಸರಳವಾದ ಗದ್ಯದಲ್ಲಿರುವ ಈ ಕಥೆಗಳು ಅಚ್ಚುಕಟ್ಟಾಗಿವೆ, ಸ್ವಾರಸ್ಯವಾಗಿವೆ, ಪರಿಣಾಮಕಾರಿಯಾಗಿವೆ. ಕಥೆಗಾರ ಕಥೆಯ ಪಾತ್ರಗಳ ಘಟನೆಗಳ ಬಗ್ಗೆ ಯಾವ ಟೀಕೆ, ವ್ಯಾಖ್ಯಾನವನ್ನೂ ಮಾಡದೆ, ಯಾವ ನೀತಿ ತತ್ತ್ವಗಳ ಪ್ರತಿಪಾದನೆಗೂ ಕೈಹಾಕದೆ, ಕೇವಲ ವಸ್ತುನಿಷ್ಠವಾಗಿ ಕಥೆಯನ್ನು ಹೇಳುವುದು ಸಾಗಾ ಮಾದರಿಯ ವಿಸ್ಮಯಕರ ವಿಶೇಷ ಗುಣ. ನಿರ್ವಿಕಾರವಾಗಿ ಕಥೆ ಹೇಳುವುದಷ್ಟೆ ಕಥೆಗಾರನ ಕೆಲಸ. ಉಳಿದುದು ಓದುಗರ ಆಲೋಚನೆಗೆ, ಕಲ್ಪನೆಗೆ ಬಿಟ್ಟದ್ದು. ಸಂವಿಧಾನ ಕೌಶಲದಲ್ಲಿ ಸಂಭಾಷಣೆಯ ಚುರುಕಿನಲ್ಲಿ ಪ್ರತಿಭೆಯ ಹೊಳಪು ಕಾಣುತ್ತದೆ. ಕಥೆಯ ಘಟನೆಗಳೆಲ್ಲಕ್ಕೂ ವಿಧಿಯೇ ಅವ್ಯಕ್ತ ಸೂತ್ರಧಾರಿ ಎಂಬ ಮನೋಭಾವ ಕಥೆಗೆ ಗಾಂಭೀರ್ಯವನ್ನೊದಗಿಸುತ್ತದೆ. ಜೀವಪೂರ್ಣವಾದ ಪಾತ್ರಸೃಷ್ಟಿ ಇನ್ನೊಂದು ವಿಶೇಷ ಗುಣ. ನ್ಯಾಲ್ಸ್ ಸಾಗಾ ಈ ಎಲ್ಲ ಗುಣಗಳಿಂದಲೂ ಕೂಡಿದ ಶ್ರೇಷ್ಠ ಕೃತಿ. ಈಗಿಲ್ಸ್ ಸಾಗಾ, ಲಾಕ್ಸ್ ಡ್ಯೂಲ ಸಾಗಾ, ಗ್ರೆಟ್ಟಿಸ್ ಸಾಗಾ, ದಿ ವೊಲ್ಸ್ಯೂಂಗಾ ಸಾಗಾ, ಗುನ್ನಲೌಗ್ಸ್ ಸಾಗಾ ಮುಂತಾದುವು ಪ್ರಖ್ಯಾತವಾಗಿವೆ. 12-13ನೆಯ ಶತಕಗಳಲ್ಲಿ ರಚಿತವಾದ ಸಾಗಾಗಳಲ್ಲಿ ಐತಿಹಾಸಿಕ ಅಂಶ ಹೆಚ್ಚು. ಪೌರಾಣಿಕ ಮತ್ತು ರಮ್ಯಾದ್ಭುತ ಅಂಶ ಹೆಚ್ಚಾಗಿರುವ ಕೆಲವು ಕೃತಿಗಳೂ ಇವೆ. ಅನಂತರ 16ನೆಯ ಶತಕದ ವರೆಗೂ ಬಂದ ಕೃತಿಗಳಲ್ಲಿ ಅನುಕರಣೆಯೇ ಹೆಚ್ಚು. ಹಿಂದೆ ರಚಿತವಾದ ವಂಶಾವಳಿಗಳನ್ನು ಪ್ರತಿಮಾಡುವ, ಸಂಪಾದಿಸುವ ಕಾರ್ಯ ಈ ಕಾಲದಲ್ಲಾಯಿತು. ಕ್ರಮೇಣ ಕ್ರೈಸ್ತಧರ್ಮದ ಕಥೆಗಳೂ ಸಂತರ ಪವಾಡಗಳೂ ಸಾಗಾ ಬರೆವಣಿಗೆಗೆ ಸಾಮಗ್ರಿಯಾದುವು. ಪಾದ್ರಿ ಐನಾರ್ ಸ್ಕ್ಯೂಲಾಸುನ್‌ನ ಗೈಸ್ಲಿ, ಸಾಧು ಐಸ್ಟೈನ್ ಆಸ್‌ಗ್ರಿಮ್‌ಸುನ್‌ನ ಲೀಲ್ಯಾ ಅಮೋಘವಾದ ಕೃತಿಗಳು. ಲ್ಯೋಮ್ಯುರ್ ಸಾಗಾದ ಕರ್ತೃ ಪಾದ್ರಿಯೋನ್ ಆರಾಸುನ್ 16ನೆಯ ಶತಮಾನದ ಆದಿಯಲ್ಲಿ

ಒಂದು ಮುದ್ರಣಯಂತ್ರವನ್ನು ಬಳಕೆಗೆ ತಂದನಾಗಿ ಅನೇಕ ಧಾರ್ಮಿಕ ಹಾಗೂ ಸಾಹಿತ್ಯ ಗ್ರಂಥಗಳನ್ನು ಅನ್ಯಭಾಷೆಗಳಿಂದ ಐಸ್ಲೆಂಡಿಕ್ ಭಾಷೆಗೆ ಅನುವಾದ ಮಾಡಲಾಯಿತು.

ಮಧ್ಯಕಾಲ : 14ನೆಯ ಶತನೂನದಲ್ಲಿ ರಿಮ್ಯೂರ್ ಎಂಬ ಹೊಸಬಗೆಯ ಕಾವ್ಯವೊಂದು ಉದಯವಾಗಿ ಸುಮಾರು 500 ವರ್ಷಕಾಲ ಜನಪ್ರಿಯ ಕಾವ್ಯಮಾರ್ಗವಾಯಿತು. ಈ ಮಾದರಿಯಲ್ಲಿ ನೃತ್ಯಗೀತೆ, ಹಾಡು, ಗಾಥೆಗಳು ಹೆಚ್ಚು. ಪ್ರಣಯವೊ, ಸಾಹಸದ ಕಥನವೊ, ಹೀನವಿಡಂಬನೆಯೊ ಇವುಗಳ ವಸ್ತು. ಭಾಷೆ ಸಂಸ್ಕೃತಿಗಳ ಅಧ್ಯಯನದ ದೃಷ್ಟಿಯಿಂದ ಗಮನಾರ್ಹವಾಗಬಹುದಾದ ಈ ಕವನಗಳಲ್ಲಿ ಸಾಹಿತ್ಯಗುಣ ಕಡಿಮೆ. ಲೂಥರನ ಧರ್ಮಸುಧಾರಣೆಯ ಅನಂತರ ಈ ಕಾವ್ಯಪದ್ಧತಿ ಹೆಚ್ಚು ಬಳಕೆಗೆ ಬಂತು. 20ನೆಯ ಶತಮಾನದ ಆದಿಯ ವರೆಗೂ ಐಸ್ಲೆಂಡಿಕ್ ಸಾಹಿತ್ಯದ ಪ್ರಬಲ ಅಭಿವ್ಯಕ್ತಿ ಸಾಧನವಾಗಿದ್ದ ಈ ಕಾವ್ಯಶೈಲಿ ಕ್ರಮೇಣ ಸವೆದ ಜಾಡಾಗಿ ಕೃತಕವೂ ಸಾಂಪ್ರದಾಯಿಕವೂ ಆದ ಸಿದ್ಧರೂಪಪಡೆಯಿತು. ಈ ಸಂಪ್ರದಾಯದ ಹಾಡುಗಬ್ಬಗಳಲ್ಲಿ ಟಿಸ್ಟ್ರ್ಯಮ್ಸ್‌ಕ್ವೈದಿ ಮನಸೆಳೆವ ಕಥೆ ಮತ್ತು ಹಾಡಿನ ಮೋಡಿಗಳು ಮೇಳವಿಸಿದ ಸುಂದರಗಾಥೆ. ಧರ್ಮಸುಧಾರಣೆಯ ಪ್ರಭಾವದಿಂದ ಸ್ತೋತ್ರಗಳ ರಚನೆ ಜನಪ್ರಿಯವಾಯಿತು. ಪಾದ್ರಿ ಗ್ಯೂಡ್ ಬ್ರಾಂಡ್ಯೂರ್ ಥೂರ್‌ಲಾಕ್‌ಸೂನ್ ಅನೇಕ ಸುಂದರ ಸ್ತೋತ್ರಗಳನ್ನು ರಚಿಸಿದ. ಐನಾರ್ ಸಿಗ್ಯೂರ್ಡ್‌ಸೂನ್ 16ನೆಯ ಶತಕದ ಬಹುದೊಡ್ಡ ಕವಿ. ಇದೇ ಕಾಲದಲ್ಲಿ ವೀಕಿ ವಾಕರ್ ಎಂಬ ನವೀನ ಶೈಲಿಯ ಗಾಥೆಗಳು ಪ್ರಚಾರಕ್ಕೆ ಬಂದುವು. ಮುಂದೆ ಮೂರು ಶತಕಗಳ ಕಾಲ ಇವುಗಳ ಪ್ರಭಾವವಿತ್ತು. ಇತಿಹಾಸ ಪುರಾತತ್ವಗಳ ಬಗ್ಗೆ ಬೆಳೆದ ಆಸಕ್ತಿಯಿಂದ ಅನೇಕ ಇತಿಹಾಸ ವೃತ್ತಾಂತಗಳು ರಚಿತವಾದುವು. ಪ್ರಾಚ್ಯ ಗ್ರಂಥ ಸಂಪಾದನಕಾರ್ಯವೂ ಆಯಿತು. ಯೋನ್ ಎಸ್ಪೊಲಿನ್ನನ ಆನಲ್ಸ್ ಆಫ್ ಐಸ್ಲೆಂಡ್ ಸೂಕ್ಷ್ಮ ಐತಿಹಾಸಿಕ ಅವಲೋಕನವಾಗಿದೆ. ಉಜ್ಜ್ವಲ ಸಾಹಿತ್ಯಕೃತಿಯೂ ಆಗಿದೆ. ಪಾದ್ರಿ ಬ್ರಿನ್ಯೋಲ್ಫ್ ಸ್ವೀನ್ಸನ್ ಎಡ ಕಾವ್ಯವನ್ನು ಸಂಗ್ರಹಿಸಿ ಸಂಪಾದಿಸಿದ. 17ನೆಯ ಶತಕದ ಇಬ್ಬರು ಹಿರಿಯ ಕವಿಗಳಲ್ಲಿ ಹಾಲ್ ಗ್ರಿಮ್ಯೂರ್ ಪೀಟರ್‌ಸುನ್ ಸ್ತೋತ್ರಗೀತೆಗಳಲ್ಲಿ ಅಗ್ರಗಣ್ಯ. ಸ್ಟೀಫ್ಯಾನ್ ಓಲಾಫ್‌ಸುನ್ ಭಾವಗೀತೆಗಳಿಗೂ ನಿತ್ಯಜೀವನದ ವಾಸ್ತವಚಿತ್ರಣಕ್ಕೂ ಕೆಲವು ಹಾಸ್ಯ ವಿಡಂಬನ ಕೃತಿಗಳಿಗೂ ಖ್ಯಾತನಾದ. ಈ ಕಾಲ ಜ್ಞಾನಶೋಧನೆಗೆ ಹೆಸರಾದಂತೆ ವಾಮಾಚಾರಕ್ಕೂ ಪ್ರಸಿದ್ಧವಾಗಿತ್ತು. ಯೋನ್ ಗ್ಯೂಮ್ಯುಂಡ್‌ಸುನ್ನನ ವೈಜ್ಞಾನಿಕ ಗ್ರಂಥಗಳೂ ಯೋನ್ ಮಾಗ್ನೂಸುನ್‌ನ ಅಪ್ರತಿಮ ಕೃತಿ ಪೀಸ್‌ಲಾರ್ ಸಾಗಾ (ವಾಮಾಚಾರದ ವಿರುದ್ಧ ನಡೆಸಿದ ಹೋರಾಟದ ಕಥೆ), ಭಾರತಪ್ರವಾಸ ಮಾಡಿಬಂದ ಯೋನ್ ಊಲಾಫ್‌ಸುನ್ನನ ಐಫಿ ಸಾಗಾ ಎಂಬ ಆತ್ಮಕಥೆ ಈ ಯುಗದ ವಿವಿಧ ಮನೋಧರ್ಮಗಳನ್ನು ಚೆನ್ನಾಗಿ ಪ್ರತಿಬಿಂಬಿಸುತ್ತವೆ. 18ನೆಯ ಶತಮಾನ ವೈಚಾರಿಕ ವೈಜ್ಞಾನಿಕ ಯುಗ. ಭೂವಿವರಣೆ, ಬೇಸಾಯ, ಉದ್ಯಾನಕಲೆ ಮುಂತಾದವಲ್ಲಿ ಅನೇಕ ಶಾಸ್ತ್ರಗ್ರಂಥಗಳು ರಚಿತವಾದುದು ಈಗಲೇ. ಹಾಲ್ಫ್‌ಡ್ಯಾನ್ ಐನಾರ್‌ಸುನ್ ಬರೆದ ಐಸ್ಲೆಂಡಿನ ಸಮಗ್ರ ಇತಿಹಾಸ ಪ್ರಕಟವಾದದ್ದು ಈಗಲೇ. ಅನೇಕ ಸ್ವತಂತ್ರ ಕೃತಿಗಳಿಂದಲೂ ಅದಕ್ಕೂ ಮಿಗಿಲಾಗಿ ಮಿಲ್ಟನ್ ಮತ್ತು ಪೋಪರ ಇಂಗ್ಲಿಷ್ ಕಾವ್ಯಗಳ ಅನುವಾದದಿಂದಲೂ ಯೋನ್ ಥೂರ್‌ಲಾಕ್‌ಸುನ್ ಈ ಶತಕದ ಶ್ರೇಷ್ಠ ಕವಿಯೆನಿಸಿದ. ಮುಂದಿನ ಪೀಳಿಗೆಯ ಕವಿಗಳ ಮೇಲೆಲ್ಲ ಈತನ ಪ್ರಭಾವ ಬಿತ್ತು.

ಆಧುನಿಕ ಕಾಲ : ರಾಷ್ಟ್ರದ ಹಾಗೂ ಸಾಹಿತ್ಯದ ನವೋದಯಕಾಲ 19ನೆಯ ಶತಮಾನದೊಂದಿಗೇ ಆರಂಭವಾದರೂ ಅದರ ಪೂರ್ವ ಸೂಚನೆಗಳು 18ನೆಯ ಶತಕದ ಅಂತ್ಯಭಾಗದಲ್ಲೇ ಕಾಣತೊಡಗಿದ್ದವು. ಕೈಗಾರಿಕಾ ಕ್ರಾಂತಿ, ವಾಣಿಜ್ಯ ಸುಧಾರಣೆಗಳಿಂದ ಐಸ್ಲೆಂಡಿನ ಜನಜೀವನದಲ್ಲಿ ನವಜಾಗೃತಿಯುಂಟಾಯಿತು. ಹೊಸ ವಿಚಾರಧಾರೆಯ ಬಗ್ಗೆ ಹುಟ್ಟಿದ ಆಸಕ್ತಿ ಪ್ರಾಚೀನ ಪರಂಪರೆಯಲ್ಲಿ ಇದ್ದ ಅಪಾರ ಶ್ರದ್ಧೆಯನ್ನು ತಗ್ಗಿಸಲಿಲ್ಲ. ಜೊತೆಗೆ ಉತ್ಕಟ ರಾಷ್ಟ್ರೀಯ ಭಾವನೆ ಬದುಕಿಗೊಂದು ಧ್ಯೇಯವನ್ನು ಕಲ್ಪಿಸಿತು. ವೈವಿಧ್ಯಪೂರ್ಣವಾಗಿ ಸತ್ತ್ವಯುತವಾಗಿ ಸಾಹಿತ್ಯ, ಕಲೆ ಬೆಳೆದು ಸಮೃದ್ಧವಾದುವು. ಹೊಸ ಮುದ್ರಣಯಂತ್ರದ ಸ್ಥಾಪನೆ ಕ್ರೈಸ್ತಮಠಗಳ ಅಚ್ಚುಕೂಟದ ಏಕಸ್ವಾಮಿತ್ವವನ್ನು ಭಂಗಗೊಳಿಸಿ ಸಾಹಿತ್ಯದ ಹೊಸ ಯುಗದ ನಾಂದಿಯನ್ನು ಹಾಡಿತು. ಅನೇಕ ಸಾಹಿತ್ಯ ಸಂಸ್ಥೆಗಳು ಆರಂಭವಾಗಿ ಹಲವಾರು ಗ್ರಂಥಗಳ ಪ್ರಕಾಶನ ಕಾರ್ಯದಲ್ಲಿ ತೊಡಗಿದುವು. ರಾಸ್ಮುಸ್ ಕ್ರಿಶ್ಚಿಯನ್ ರಾಸ್ಕ್ ಎಂಬ ಡೇನಿಷ್ ಭಾಷಾಪಂಡಿತ ಸ್ಥಾಪಿಸಿದ ಐಸ್ಲೆಂಡಿಕ್ ಲಿಟರರಿ ಸೊಸೈಟಿ, ಆತ ಆರಂಭಿಸಿದ ಸ್ಕಿರ್‌ನಿರ್ ಎಂಬ ಸಾಹಿತ್ಯಪತ್ರಿಕೆ, ಯೋನ್ ಸಿಗ್ಯೂರೂಸುನ್ ನಡೆಸುತ್ತಿದ್ದ ಫ್ಯೊಲ್‌ನಿರ್ ಎಂಬ ರೊಮ್ಯಾಂಟಿಕ್ ಸಾಹಿತ್ಯ ಪತ್ರಿಕೆ ಐಸ್ಲೆಂಡಿಕ್ ಸಾಹಿತ್ಯ ಸಂಪತ್ತನ್ನು ಉಳಿಸಿ ಬೆಳೆಸುವುದರಲ್ಲಿ ಮುಖ್ಯಪಾತ್ರ ವಹಿಸಿದುವು. ಬ್ಯಾರ್ನಿ ಥೂರ್ ಆರೆನ್ಸನ್ ರೊಮ್ಯಾಂಟಿಕ್ ಕಾವ್ಯದ ಆದ್ಯಪ್ರವರ್ತಕನಾದ ಶ್ರೇಷ್ಠಕವಿ. ಯೋನಾಸ್ ಹಾಲ್ ಗ್ರಿಮ್‌ಸುನ್ ಬಹು ಅಚ್ಚುಮೆಚ್ಚಿನ ಇನ್ನೊಬ್ಬ ರೊಮ್ಯಾಂಟಿಕ್ ಕವಿ. ರಿಮ್ಯೂರ್ ಶೈಲಿಯ ಕಾವ್ಯರಚನೆಯಲ್ಲಿ ಮಹತ್ತಾದ ಯಶಗಳಿಸಿದ ಸಿಗ್ಯುರ್ದುರ್ ಬ್ರೀಡ್‌ಫೋರ್ಡ್, ಗತಕಾಲದ ಚಿತ್ರ ಕಣ್ಣಿಗೆ ಕಟ್ಟುವಂಥ ಐತಿಹಾಸಿಕ ಕವನಗಳನ್ನು ರಚಿಸಿದ ಗ್ರಿಮ್ಯೂರ್ ಥಾಮ್‌ಸುನ್, ತಾತ್ತ್ವಿಕ ಕವನಗಳಿಗೆ ಹೆಸರಾದ ಬ್ಯೂರ್ನ್ ಗುನ್ನಲಾಗ್‌ಸುನ್ ಇವರು ಕಾವ್ಯಭಂಡಾರಕ್ಕೆ ತಮ್ಮ ವಿಶಿಷ್ಟ ಕಾಣಿಕೆಗಳನ್ನು ಸಲ್ಲಿಸಿದರು. ಹಿರಿಯ ಬೆನಿಡಿಕ್ಟ್ ಗ್ರ್ಯೂಂದಾಲ್ ಹೆಚ್ಚಿನ ಮನ್ನಣೆಗಳಿಸಿದಂತೆ ಕಿರಿಯ ಬೆನಿಡಿಕ್ಟ್ ಗ್ರ್ಯೂಂದಾಲ್ ತನ್ನ ವಿಡಂಬನ ಕವಿತೆಗಳಿಂದ ಗಮನವನ್ನು ಸೆಳೆದ. ಗೈಸ್ಲಿ ಬ್ರಿನ್ಯೋಲ್ಫ್‌ಸುನ್ನನ ಪ್ರೇಮಗೀತೆಗಳು ಗಮನಾರ್ಹವಾದವು. ಸುಂದರವೂ ಲಲಿತವೂ ಆದ ಪ್ರೇಮಗೀತೆಗಳನ್ನೂ ಪ್ರಕೃತಿಗೀತೆಗಳನ್ನೂ ರಚಿಸಿ ಹೆಸರಾದ ಸ್ಟೈನ್ ಗ್ರಿಮ್ಯೂರ್‌ಥೂರ್ ಸ್ಟೈನ್‌ಸುನ್, ಅನೇಕ ಶ್ರೇಷ್ಠ ಚಾಟೂಕ್ತಿಗಳನ್ನೂ ವಿಡಂಬನ ಕವನಗಳನ್ನೂ ಬರೆದುದಲ್ಲದೆ ಷೇಕ್ಸ್‌ಪಿಯರನ ಕಿಂಗ್ ಲಿಯರ್ ನಾಟಕವನ್ನೂ ಅರೇಬಿಯನ್ ನೈಟ್ಸ್ ಕಥೆಗಳನ್ನೂ ಭಾಷಾಂತರಮಾಡಿ ಮೆಚ್ಚುಗೆ ಗಳಿಸಿದ. ಪಾದ್ರಿ ಮಾಥ್ಯಾಸ್ ಯೋಹ್ಯೂಮ್‌ಸುನ್ 19ನೆಯ ಶತಮಾನದ ಸರ್ವಶ್ರೇಷ್ಠ ಕವಿ. ಸೊಗಸಾದ ಭಾವಗೀತೆಗಳನ್ನೂ ಸ್ತೋತ್ರಗಳನ್ನೂ ನಾಟಕಗಳನ್ನೂ ಬರೆದಿದ್ದಾನೆ; ರೂಢಿಯಲ್ಲಿದ್ದ ಎಲ್ಲ ಕವನ ಮಾದರಿಗಳಲ್ಲೂ ಪ್ರಾವೀಣ್ಯವನ್ನು ಸಾಧಿಸಿದ್ದ ಈ ಕವಿ ತನ್ನದೇ ಆದ ಹೊಸ ಮಾದರಿಗಳನ್ನೂ ಸೃಷ್ಟಿಸಿದ. ಉದಾತ್ತ ಮಾನವೀಯತಾವಾದಿಯೂ ಅಸಾಧಾರಣ ಪ್ರತಿಭಾಶಾಲಿಯೂ ಆದ ವರಕವಿ ಈತ. ಕಿರಿಯ ಪ್ರಾಯದಲ್ಲೇ ಅಕಾಲ ಮೃತ್ಯುವಿಗೊಳಗಾದ ಕ್ರಿಸ್ಟ್ಯಾನ್ ಯೋನ್‌ಸುನ್ನನ ವರ್ಣನಾತ್ಮಕ ಭಾವಗೀತೆಗಳು ಉತ್ತಮ ದರ್ಜೆಯವು. ರಾಜಕಾರಣಿ ಪತ್ರಿಕೋದ್ಯಮಿ ಯೋನ್ ಊಲಾಫ್‌ಸುನ್ ಸಾಹಿತಿಯಾಗಿಯೂ ಕೀರ್ತಿವಂತನಾದ. ಈತನ ಸೋದರ ಪಾಲ್ ಊಲಾಫ್‌ಸುನ್ ಶಾಲಾಶಿಕ್ಷಣ ಪಡೆಯದಿದ್ದರೂ ಬಹು ಜನಪ್ರಿಯನಾದ ಕವಿಯೆನಿಸಿದ. ಹಾಸ್ಯ, ವಿಡಂಬನ, ಪ್ರೇಮಗಳನ್ನು ವಸ್ತುವಾಗುಳ್ಳ ಇವನ ಕವಿತೆಗಳು ಸಹಜಸ್ಫೂರ್ತಿಯಿಂದ ಹೊಮ್ಮಿದ ಗೀತಗಳಾಗಿ ಜನಸಾಮಾನ್ಯರ ನಾಲಗೆಯ ಮೇಲೆ ಸದಾ ನಲಿದಾಡಿದುವು. ಪಾದ್ರಿ ವಾಲ್ದಿಮ್ಯೂರ್ ಬ್ರೀಮನ ಸ್ತೋತ್ರಗಳೂ ಬೈಬಲಿಗೆ ಸಂಬಂಧಿಸಿದ ಹಾಡುಗಳೂ ಶ್ರೇಷ್ಠ ಪಂಕ್ತಿಯಲ್ಲಿ ನಿಲ್ಲತಕ್ಕವಾಗಿವೆ.

ಯೋನ್‌ಸ್ಟೈನ್ ಗ್ರಿಮ್‌ಸುನ್ನನ ಆತ್ಮಕಥೆ ಗದ್ಯಸಾಹಿತ್ಯದ ಒಂದು ಶ್ರೇಷ್ಠ ಕೃತಿ. ಯೋನ್ ಆರ್ನಾಸುನ್ ವಿಪುಲವಾಗಿ ಸಂಗ್ರಹಿಸಿದ ಜಾನಪದ ಕಥೆಗಳಲ್ಲಿ ಜನಸಾಮಾನ್ಯರ ನಾಡಿಯ ಮಿಡಿತವನ್ನು ಕೇಳಬಹುದು. ಉತ್ತಮ ಸಾಹಿತಿ ಎನ್ನಲಾಗದಿದ್ದರೂ ಸಿಗ್ಯುದ್ಯೂರ್ ಪೀಟರ್‌ಸುನ್ ನಾಟಕಸಾಹಿತ್ಯದ ಮೊದಲಿಗನಾಗಿ ಗಣ್ಯನಾಗಿದ್ದಾನೆ. ಸ್ಟೈನ್ ಯೋರ್ನ್ ಈಗಿಲ್‌ಸುನ್ನನ ಲೆಕ್ಸಿಕನ್ ಪೊಯೆಟಿಕಮ್ ಎಂಬ ಸ್ಕಾಲ್ಡಿಕ್ ಕಾವ್ಯದ ಅರ್ಥಕೋಶ ಒಂದು ಅಮೋಘವಾದ ಚಿರಸ್ಮರಣೀಯ ಕೃತಿ. ಈಗಿಲ್‌ಸುನ್ ಸ್ವತಃ ಕವಿ. ಆದರೆ ಸ್ವಂತ ಕವಿತೆಗಳಿಗಿಂತ ಈತ ಭಾಷಾಂತರಿಸಿದ ಹೋಮರನ ಕಾವ್ಯಗಳು ಅದ್ವಿತೀಯವಾಗಿವೆ.

19ನೆಯ ಶತಮಾನದ ಕೊನೆಯ ವೇಳೆಗೆ ಕಾವ್ಯದಿಂದ ಕಾದಂಬರಿಯ ಕಡೆಗೂ ಕಲ್ಪನಾವಿಲಾಸದಿಂದ ವಾಸ್ತವತೆಯ ಕಡೆಗೂ ಅಭಿರುಚಿ ವಾಲಿತು. ಯೋನ್ ಊಲಾಫ್‌ಸುನ್ನನ ಬರೆಹಗಳಲ್ಲಿ ಆಗಲೆ ವಾಸ್ತವ ಪಂಥದ ಸೂಚನೆಗಳು ಕಾಣಿಸಿದ್ದವು. ಜಾರ್ಜ್ ಬ್ರ್ಯಾಂಡಿಸ್ ವಾಸ್ತವತೆಯ ಮೊದಲ ಪ್ರವರ್ತಕ. ಈತ ಕೋಪನ್‌ಹೇಗನ್ ಕಾಲೇಜಿನಲ್ಲಿ ಶಿಕ್ಷಕನಾಗಿದ್ದ. ಈತನ ಪ್ರಭಾವದಿಂದ ಸ್ಫೂರ್ತಿಗೊಂಡ ಗೆಸ್ಟ್ಯೂರ್ ಪಾಲ್‌ಸುನ್ ಈನಾರ್ ಹ್ಯೋರ್ ಲೈಫ್‌ಸುನ್ ಕ್ವಾರನ್, ಕವಿ ಹ್ಯಾನಿಸ್ ಹಾಲ್ಫ್‌ಸ್ಟೈನ್ ತಮ್ಮ ಅತ್ಯುತ್ತಮ ಕಥೆ ಕಾದಂಬರಿಗಳಲ್ಲಿ ವಾಸ್ತವತೆಯನ್ನು ಎತ್ತಿಹಿಡಿದು ಪ್ರಸಿದ್ಧರಾದರು. 1882ರಲ್ಲಿ ಇವರೆಲ್ಲರೂ ಸೇರಿ ವೆರ್ಡಂಡಿ ಸಾಹಿತ್ಯಪತ್ರಿಕೆಯನ್ನು ವಾಸ್ತವತೆಯ ಪ್ರಸಾರಕ್ಕೆಂದೇ ಆರಂಭಿಸಿದರು. ಬಂದುದು ಅದರ ಒಂದೇ ಸಂಪುಟವಾದರೂ ಸಾಹಿತ್ಯವೃತ್ತಗಳಲ್ಲಿ ಅದು ಹೊಸ ವಿಚಾರದ ಕ್ರಾಂತಿಯನ್ನು ಪ್ರಚೋದಿಸಿತು. ಇಷ್ಟು ಪ್ರಗತಿಶೀಲವಾಗಿದ್ದರೂ ಸಾಂಪ್ರದಾಯಿಕ ಸಾಹಿತ್ಯದ ಬಗ್ಗೆ ಇದ್ದ ಶ್ರದ್ಧೆ ಕಡಿಮೆಯಾಗಲಿಲ್ಲ. ಹಾಲ್ಫ್‌ಸ್ಟೈನ್ ಈ ಕಾಲದ ಬಹು ಪ್ರತಿಭಾಶಾಲಿಯಾದ ಕವಿ. ಈತ ಐಸ್ಲೆಂಡ್ ರಿಪಬ್ಲಿಕ್ಕಿನ ಪ್ರಥಮ ದೇಶೀಯ ಪ್ರಧಾನಿ. ಈತನ ದೇಶಭಕ್ತಿಯ ಗೀತೆಗಳಲ್ಲೂ ಪ್ರೇಮಗೀತೆಗಳಲ್ಲೂ ಬಿಸಿರಕ್ತದ ಉತ್ಸಾಹ ಉಲ್ಲಾಸಗಳು ತುಂಬಿವೆ. ವೆರ್ಡಂಡಿ ಗುಂಪಿನವನಲ್ಲವಾದರೂ ಥೂರೆಸ್ಟೈನ್ ಎರ್ಲಿಂಗ್‌ಸುನ್ ವಾಸ್ತವ ಪಂಥದ ಅನುಯಾಯಿ. ದುರಭಿಮಾನದಿಂದ ಕೂಡಿದ ಜಾತೀಯತೆಯನ್ನೂ ಸಾಮಾಜಿಕ ಅನ್ಯಾಯಗಳನ್ನೂ ಈತ ತೀವ್ರವಾಗಿ ಖಂಡಿಸಿದ. ಬಹು ಸುಂದರವಾದ ದೇಶಭಕ್ತಿ ಗೀತೆಗಳನ್ನೂ ಪ್ರಕೃತಿ ಗೀತೆಗಳನ್ನೂ ರಚಿಸಿದ ; ಪ್ರಯೋಗಶೀಲನಾದರೂ ಸಾಂಪ್ರದಾಯಿಕ ಚೌಪದಿ ರಚನೆಯಲ್ಲಿ ಅದ್ವಿತೀಯನೆನಿಸಿದ.

ಡಾಕ್ಟರ್ ಯೋನ್‌ಥೂರ್ ಕೆಲ್ಸನ್, ಸಿಗ್ಯುರ್‌ಯೋನ್ ಫ್ರಿಡ್ ಯೋನ್‌ಸುನ್, ಥೂರ್ ಸ್ಟೈನ್ ಗೈಸ್ಲಾಸುನ್, ಗ್ಯೂಡ್ ಮ್ಯುಂಡ್ಯುರ್ ಫ್ರಿಡ್ ಯೋನ್‌ಸುನ್, ಗ್ಯೂಡ್‌ಮ್ಯುಂಡ್ಯುರ್ ಗ್ಯೂಡ್ ಮ್ಯುಂಡ್‌ಸುನ್, ಸಿಗ್ಯುದ್ಯೂರ್ ಸಿಗ್ಯೂರ್ಡ್‌ಸುನ್,

ಯೋರ್ನಿಯೋನ್‌ಸುನ್ ಮೊದಲಾದ ಹೆಸರಾಂತ ಸಾಹಿತಿಗಳಲ್ಲದೆ ಸಣ್ಣಕಥೆ ಕಾದಂಬರಿಗಳ ಕ್ಷೇತ್ರದಲ್ಲಿ ಅಗ್ರಗಣ್ಯನೆನಿಸಿದ ಗ್ಯೂಡ್ ಮ್ಯುಂಡರ್ ಮಾಗ್ನಾಸುನ್, ರಾಷ್ಟ್ರದ ಹಿರಿಯ ಕವಿಗಳ ಸಾಲಿನಲ್ಲಿ ನಿಲ್ಲುವ ಈನಾರ್ ಬೆನಿಡಿಕ್ಟ್‌ಸುನ್ ಮತ್ತು ಸ್ಟೀಫನ್ ಜಿ. ಸ್ಟೀಫನ್‌ಸುನ್ ಆಧುನಿಕ ಐಸ್ಲೆಂಡಿಕ್ ಸಾಹಿತ್ಯದ ಪ್ರಗತಿಗೆ ಕಾರಣರಾದರು. ಸ್ಟೀಫನ್‌ಸುನ್ ಕೆನಡ ಮತ್ತು ಅಮೆರಿಕಗಳಲ್ಲಿರುವ ಐಸ್ಲೆಂಡಿಕ್ ಸಾಹಿತಿಗಳಲ್ಲಿ ಅಗ್ರಪಂಕ್ತಿಯ ಕವಿ.

ಪ್ರಚಲಿತ ಸಾಹಿತ್ಯ : ವಾಸ್ತವವಾದ, ಸಮಾಜವಾದ, ನವರೊಮ್ಯಾಂಟಿಕ್ ಮಾರ್ಗ, ಸಮತಾವಾದ ಮುಂತಾದ ಹಲವಾರು ಮನೋಧರ್ಮಗಳನ್ನು ಇಂದಿನ ವಿವಿಧ ಸಾಹಿತ್ಯಾಭಿವ್ಯಕ್ತಿಗಳಲ್ಲಿ ಕಾಣಬಹುದು. ಅನೇಕ ಪ್ರತಿಭಾವಂತ ಸಾಹಿತಿಗಳು ತಮ್ಮ ವಿವಿಧ ಕಾಣಿಕೆಗಳಿಂದ ಪ್ರಚಲಿತ ಸಾಹಿತ್ಯಭಂಡಾರವನ್ನು ಶ್ರೀಮಂತಗೊಳಿಸಿದ್ದಾರೆ. ನವ್ಯಕಾವ್ಯ ವೈವಿಧ್ಯಪೂರ್ಣವಾಗಿದೆ. ಸಮೃದ್ಧವಾಗಿದೆ. ಊರ್ನ್ ಆರ್ನ್ನಾರ್‌ಸುನ್ (ಮಾಗ್ನುಸ್ ಸ್ಟೀಫ್ಯಾನ್‌ಸುನ್ 1884–1942) ಅವರ ಕಾವ್ಯದಲ್ಲಿ ಭಾವ ಭಾಷೆಗಳೆರಡರ ಮಧುರ ಸಂಗಮವನ್ನೂ ಗಮನ ಸೆಳೆಯುವ ತನ್ನತನವನ್ನೂ ಕಾಣಬಹುದು. ಯೇಕಬ್ ಯೋಹಾನ್ನಸುನ್ ಉತ್ಕೃಷ್ಟ ಸಾನೆಟ್ಟುಗಳನ್ನೂ ಆಧ್ಯಾತ್ಮಿಕ ಕವನಗಳನ್ನೂ ಪ್ರಬಂಧ ಹಾಗೂ ವಿಮರ್ಶಾಲೇಖನಗಳನ್ನೂ ಬರೆದಿದ್ದಾನೆ. ಯೋನ್ ಮಾಗ್ನಾಸುನ್ (1896–1944) ಐಸ್ಲೆಂಡ್ ಹಿರಿಮೆಗೆ ಶಾಶ್ವತ ಸಾಕ್ಷಿ ಎನ್ನಬಹುದಾದ ಬ್ಯೋರ್ನ್ ಎ ರೆಯ್‌ಡಾರ್ ಫೆಲ್ಲಿ ಎಂಬ ಮಹಾಕಾವ್ಯವನ್ನು ರಚಿಸಿದ್ದರೆ ಟೋಮಸ್ ಗ್ಯೂಡ್‌ಮ್ಯುಂಡ್‌ಸುನ್ (1901– ) ರಾಜಧಾನಿ ರಿಕ್‌ಝುವಿಕ್ ನಗರ ಜೀವನದ ವಿಲಕ್ಷಣ ಚಿತ್ರಗಳನ್ನು ತನ್ನ ಕವನಗಳಲ್ಲಿ ಸೆರೆ ಹಿಡಿದಿದ್ದಾನೆ. ಗ್ರಾಮಜೀವನ ಕುರಿತು ಬರೆದಿರುವ ಕವಿಗಳಲ್ಲಿ ಸ್ಟೈನ್ ಸ್ಟೈನಾರ್ ಪ್ರತ್ಯೇಕವಾಗಿ ನಿಲ್ಲಬಲ್ಲ ಸಮರ್ಥ. ಡೇವಿಡ್ ಸ್ಟೀಫ್ಯಾನ್‌ಸುನ್ ಈ ತಲೆಮಾರಿನ ಅತ್ಯಂತ ಜನಪ್ರಿಯ ಕವಿ. ನಾಟಕ ಕಾದಂಬರಿ ಕ್ಷೇತ್ರಗಳಲ್ಲೂ ಈತನ ಪ್ರತಿಭೆ ಹರಿದಿದೆ.

ಸಾಗಾ ಸಾಹಿತ್ಯ ಪ್ರಕಾರದ ತೌರಾಗಿದ್ದ ಐಸ್ಲೆಂಡಿನಲ್ಲಿ ಇಂದು ಕಾದಂಬರಿ ಅತ್ಯಂತ ಜನಪ್ರಿಯ ಸಾಹಿತ್ಯವಾಗಿರುವುದರಲ್ಲಿ ಆಶ್ಚರ್ಯವೇನಿಲ್ಲ. ಕಲ್ಪನಾಶೀಲ ಮನೋಭಾವಕ್ಕೂ ವಾಸ್ತವದೃಷ್ಟಿಗೂ ನಡೆವ ನಿರಂತರ ಘರ್ಷಣೆ ಈ ಕಾದಂಬರಿಗಳ ಸಾಮಾನ್ಯ ವಸ್ತು. ವಾಸ್ತವವಾದಿಗಳು ಸಣ್ಣಕಥೆ ಕಾದಂಬರಿಗಳಿಗೆ ಹೊಸ ಸೊಬಗನ್ನೂ ಔನ್ನತ್ಯವನ್ನೂ ತಂದು ಕೊಟ್ಟಿದ್ದಾರೆ. 19ನೆಯ ಶತಕದ ಮಧ್ಯಭಾಗದಲ್ಲೇ ಪ್ರಥಮ ಕಾದಂಬರಿಕಾರ ಯೋನ್‌ಥೂರ್ ಊಡ್‌ಸುನ್ ಸೊಗಸಾದ ಎರಡು ಕಾದಂಬರಿಗಳನ್ನು ಪ್ರಕಟಿಸಿ ದಾರಿಮಾಡಿದ್ದ. ಗ್ರಾಮಜೀವನದ ವಾಸ್ತವ ಚಿತ್ರಣ, ಜೀವಂತ ಪಾತ್ರಸೃಷ್ಟಿ, ಕಲಾತ್ಮಕವಾದ ರಚನೆ ಈತನ ಕಾದಂಬರಿಗಳನ್ನು ಶ್ರೇಷ್ಠವೆನಿಸಿದವು. 1882ರಲ್ಲಿ ಪ್ರಕಟವಾದ ಪ್ರಥಮ ಐತಿಹಾಸಿಕ ಕಾದಂಬರಿಯನ್ನು ಬರೆದದ್ದು—ಟೂರ್ಫ್ ಹಿಲ್ ದೂರ್ ಥೂರ್‌ಸ್ಟೈನ್ಸ್ ದೂತ್ತೀರ್ ಎಂಬ ಮಹಿಳೆ. ಐನಾರ್ ಹ್ಯೋರ್‌ಲೈಫ್‌ಸುನ್ ಕ್ವಾರನ್ ವಾಸ್ತವ ಪಂಥದ ಶ್ರೇಷ್ಠ ಕಾದಂಬರಿಕಾರ. ಹಾಲ್‌ಡ್ಯೂರ್ ಕೀಲ್ಯಾನ್ ಲಾಕ್ಸ್‌ನೆಸ್ ಅಸಾಧಾರಣ ಪ್ರತಿಭಾಶಾಲಿ. ಅತ್ಯುತ್ತಮ ಕಥೆ ಕಾದಂಬರಿಗಳನ್ನು ಬರೆದದ್ದು ಮಾತ್ರವಲ್ಲವೆ ಈತ ಅನೇಕ ಕಿರಿಯ ಲೇಖಕರ ಮೇಲೆ ಪ್ರಭಾವ ಬೀರಿದ್ದಾನೆ. ಈತನ ಕಾದಂಬರಿಗಳು ಇತರ ಭಾಷೆಗಳಿಗೂ ಅನು ವಾದವಾಗಿವೆ. ಊಲಾಫ್ಯೂರ್ ಯೋಹಾನ್ ಸಿಗ್ಯುರ್ಡ್‌ಸುನ್ (1918– ) ಪ್ರಖ್ಯಾತ ಕಾದಂಬರಿಕಾರ. ಕೆಲವು ಅತ್ಯುತ್ಕೃಷ್ಟ ಸಣ್ಣಕಥೆಗಳನ್ನೂ ಬರೆದಿದ್ದಾನೆ. ಗ್ಯೂಡ್ ಮುಂಡ್ಯೂರ್ ಗೀಸ್ಲಾಸುನ್ ಹಾಗಲಿಸ್ನ್ ಮತ್ತೊಬ್ಬ ಶ್ರೇಷ್ಠ ಕಥೆಗಾರ. ಆಕ್ಸೈಲ್ ಥೂರ್‌ಸ್ಟೈನ್ ಸುನ್ ಮೊದಲ ಮಹಾಯುದ್ಧಕ್ಕೆ ಸಂಬಂಧಿಸಿದ ವಸ್ತುಗಳ ಮೇಲೆ ಸಣ್ಣಕಥೆಗಳನ್ನು ಬರೆದಿದ್ದಾನೆ. ಹಾಲ್‌ಡೋರ್ ಸ್ಟೀಫ್ಯಾನ್‌ಸುನ್‌ನ ಕಥೆಗಳಲ್ಲಿ ಮಾನವೀಯ ಅನುಕಂಪ, ಮನೋವಿಶ್ಲೇಷಣೆ ಕಾಣುತ್ತವೆ.

ನಾಟಕ ಸಾಹಿತ್ಯದಲ್ಲೂ ಸಾಕಷ್ಟು ಕೃಷಿ ನಡೆದಿದೆ. 19ನೆಯ ಶತಕದ ದೊಡ್ಡ ನಾಟಕಕಾರ ಇಂಡ್ರಿಡಿ ಐನಾರ್ ಸುನ್ 20ನೆಯ ಶತಮಾನದ ನಾಟಕಗಳ ಪಿತಾಮಹ ಎನ್ನಬಹುದು. ಯೋಹಾನ್ ಸಿಗ್ಯುರ್‌ಯೋನ್ ಸುನ್ ಅತ್ಯಂತ ಶ್ರೇಷ್ಠ ನಾಟಕಕಾರ. ಅಂತರರಾಷ್ಟ್ರೀಯ ಮನ್ನಣೆಗೂ ಪಾತ್ರನಾದ ಪ್ರತಿಭಾಶಾಲಿ. ಐವಿಂಡ್ ಆಫ್ ದಿ ಹಿಲ್ಸ್ ಈತನ ಅತ್ಯಂತ ಹೃದಯಸ್ಪರ್ಶಿಯಾದ ದುರಂತನಾಟಕ. ಗ್ಯುಡ್ ಮ್ಯುಂಡುರ್ ಕಂಬಾನ್ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದ ಇನ್ನೊಬ್ಬ ನಾಟಕಕಾರ. ಕಾದಂಬರಿಯಲ್ಲೂ ಈತನ ಕೀರ್ತಿ ದೊಡ್ಡದು. ಸಿಗ್ಯುರೆಡ್ಯುರ್ ಎಗ್ಗೆರ್ಜ್ ಅನೇಕ ಸಾಂಕೇತಿಕ ನಾಟಕಗಳನ್ನು ಬರೆದಿದ್ದಾನೆ.

ಈ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಮಹಿಳೆಯರೇನೂ ಹಿಂದೆ ಬಿದ್ದಿಲ್ಲ. ಪ್ರಥಮ ಐತಿಹಾಸಿಕ ಕಾದಂಬರಿಯನ್ನು ಬರೆದದ್ದು ಒಬ್ಬ ಮಹಿಳೆ. ಊಲೂಫ್ ಸಿಗ್ಯುರ್ ಥೂರ್ ದೊತ್ತೀರ್. ಥಿಯೊಡೋರಾ ಥೂರ್ ಊಡ್‌ಸುನ್, ಗ್ಯೂಡ್ ಫಿನ್ನ್ಯಯೋನ್ಸ್ ದೊತ್ತೀರ್ ಮೊದಲಾದ ಕವಯಿತ್ರಿಯರಲ್ಲಿ ಊನ್ನೂರ್ ಬೆನೆಡಿಕ್ಟ್ ದೊತ್ತೀರ್ ಅಗ್ರಗಣ್ಯಳಾಗಿದ್ದಾಳೆ. ಈಕೆ ದೊಡ್ಡ ಕಾದಂಬರಿಯೊಂದನ್ನೂ ಸಣ್ಣಕಥೆ, ವ್ಯಕ್ತಿಚಿತ್ರ, ಅದ್ಭುತಕಥೆಗಳನ್ನೂ (ಫೇರಿ ಟೇಲ್ಸ್) ಬರೆದಿದ್ದಾಳೆ. ಕ್ರಿಸ್ಟಿನ್ ಸಿಗ್‌ಫ್ಯೂಸ್ ದೊತ್ತೀರ್ ಬರೆದಿರುವ ಉತ್ತಮ ನಾಟಕಗಳು ರಂಗದ ಮೇಲೂ ಯಶಸ್ವಿಯಾಗಿವೆ.

ಅನೇಕ ವಿದೇಶೀ ಪ್ರಭಾವಗಳಿದ್ದು, ರಾಜಕೀಯ ಒತ್ತಡಗಳ ವಿರುದ್ಧ ಹೋರಾಡುವುದರ ನಡುವೆಯೂ ಸಾಗಾ ಮತ್ತು ಕಾವ್ಯಗಳ ನೆಲೆವೀಡಾದ ಐಸ್ಲೆಂಡಿನ ಸಾಹಿತ್ಯಲೋಕವಲ್ಲಿ ಮಬ್ಬುಕವಿದಿಲ್ಲ. ಪ್ರಾಚೀನ ಸಾಹಿತ್ಯ ಈ ಪ್ರಬಲ ರಾಷ್ಟ್ರೀಯ ದೃಷ್ಟಿಗೂ ನವಸಾಹಿತ್ಯಸೃಷ್ಟಿಗೂ ನಿರಂತರ ಸ್ಫೂರ್ತಿಯ ಆಗರವಾಗಿದೆ. ಕಳೆದ ಒಂದು ಶತಕದಲ್ಲಿ ಐಸ್ಲೆಂಡ್ ಸಾಧಿಸಿರುವ ಸಾಹಿತ್ಯಸಿದ್ಧಿ ಅಪೂರ್ವವಾದುದು. ಒಂದೂಕಾಲು ಲಕ್ಷಕ್ಕೆ ಮೀರದಷ್ಟು ಮಾತ್ರ ಜನ ಇರುವ ಈ ಪುಟ್ಟ ದೇಶ ತನ್ನ ಮಿತಿಗೆ ಮೀರಿದ ಸಾಧನೆಯನ್ನು ತೋರಿದೆ. ಇಂದಿನ ಐಸ್ಲೆಂಡಿನ ಸಾಹಿತ್ಯ ಭಾಷಾಂತರ ಸೌಲಭ್ಯದಿಂದ ದೇಶವಿದೇಶಗಳಿಗೆಲ್ಲ ಪರಿಚಿತವಾಗುತ್ತಿದೆ. ಸಾಹಿತ್ಯ, ಜ್ಞಾನ, ವಿಜ್ಞಾನಗಳೆಲ್ಲದರ ಪ್ರಗತಿಯ ಕಾರ್ಯದಲ್ಲಿ 1911ರಲ್ಲಿ ಸ್ಥಾಪಿತವಾದ ಐಸ್ಲೆಂಡಿನ ವಿಶ್ವವಿದ್ಯಾನಿಲಯ ವಹಿಸುತ್ತಿರುವ ಪಾತ್ರ ಬಹು ದೊಡ್ಡದು. (ಕೆ.ಬಿ.ಪಿ.)

**ಐಹೊಳೆ :** ಮಲಪ್ರಭಾ ನದಿಯ ದಂಡೆಯ ಮೇಲೆ, ಬಿಜಾಪುರ ಜಿಲ್ಲೆಯ ಹುನಗುಂದ ತಾಲ್ಲೂಕಿನಲ್ಲಿ ಆ ನಗರಕ್ಕೆ 16 ಮೈಲಿ ಪೂರ್ವಕ್ಕಿರುವ ಹಳ್ಳಿ.



ಹುಚ್ಚುಮಲ್ಲಿ ಗುಡಿ

ಇದಕ್ಕೆ ಐಹೊಳ್ಳಿ. ಐವಳ್ಳಿ ಎಂದೂ ಹೆಸರುಗಳುಂಟು. ಇದೊಂದು ಪುರಾತನ ಗ್ರಾಮ. ಇಲ್ಲಿನ ಶಿಲ್ಪವೈಭವದಿಂದಾಗಿಯೂ ಇತಿಹಾಸೋಪಯುಕ್ತ ಶಾಸನ ಸಂದೋಹದಿಂದಾಗಿಯೂ ಇದಕ್ಕೆ ಪ್ರಾಶಸ್ತ್ಯ. ಸುಮಾರು ಐನೂರು ಗಜ ಅಗಲದ ಪ್ರದೇಶವನ್ನು ಸುತ್ತುವರಿದಿರುವ ಜೀರ್ಣ ಕೋಟೆಯ ನಡುವೆಯೂ ಅದರಿಂದಾಚೆಗೂ ಗತಕಾಲದ ಮೂಕಸಾಕ್ಷಿಗಳಾಗಿ ನಿಂತಿರುವ ಸುಮಾರು 70 ದೇವಾಲಯಗಳಿವೆ. ಕೋಟೆ ಕ್ರಿ.ಶ. 6ನೆಯ ಶತಮಾನದಲ್ಲಿ ಕಟ್ಟಿಸಿದ್ದು. ಆ ಕಾಲಕ್ಕೆ ಸಂಬಂಧಿಸಿದ ಕೆಲವು ಶಾಸನಗಳು ಅದರ ಮೇಲಿವೆ. ಊರಿನ ದಕ್ಷಿಣಕ್ಕಿರುವ ಗುಡ್ಡ ಇಲ್ವಲನೆಂಬ ದೈತ್ಯನ ದೇಹವೆಂದು ಪ್ರತೀತಿಯುಂಟು.

ಐವಳ್ಳಿ ಅಥವಾ ಐಯಹೊಳೆ ಎಂಬ ಹೆಸರು ಬರುವುದಕ್ಕೆ ಹೊಳೆಯ ದಂಡೆಯ ಮೇಲೆ ಈ ಹಳ್ಳಿಯಲ್ಲಿ ವಾಸಿಸುತ್ತಿದ್ದ ಗುರುಗಳು, ಅಯ್ಯಗಳು, ಕಾರಣವೆಂದು ಹೇಳಲಾಗಿದೆ. ಸಂಸ್ಕೃತದಲ್ಲಿ ಇದು ಆರ್ಯಪುರ. ಐಹೊಳೆಯ ಲಾಡಖಾನ ಗುಡಿಯ ಮೇಲಿನ 6–7ನೆಯ ಶತಮಾನಗಳ ಎರಡು ಶಾಸನಗಳಲ್ಲಿ ಆರ್ಯಪುರದ ಉಲ್ಲೇಖವುಂಟು. ಪುರಾಣದ ಪರಶುರಾಮ ಕ್ಷಾತ್ರವಧೆ ಪೂರೈಸಿದ ಮೇಲೆ ಮಲಪ್ರಭಾ ನದಿಗೆ ಬಂದು ಅದರ ನೀರಿನಲ್ಲಿ ತನ್ನ ಕೊಡಲಿ ತೊಳೆದನಂತೆ. ಹೊಳೆಯ ನೀರು ರಕ್ತವರ್ಣಕ್ಕೆ ತಿರುಗಿದ್ದನ್ನು ಕಂಡು 'ಐ ಹೊಳೆ!' ಎಂದು ಉದ್ಗರಿಸಿದನಂತೆ. ಆದ್ದರಿಂದ ಇದು ಐಹೊಳೆಯಾಯಿತೆಂದೂ ಪ್ರತೀತಿಯಿದೆ.

ಇಲ್ಲಿರುವ ರಾಮಲಿಂಗ ದೇವಾಲಯ ಪುರಾತನವೂ ಸುಂದರವೂ ಆದದ್ದು. ಫಾಲ್ಗುಣ ಶುಕ್ಲ ಸಪ್ತಮಿಯಂದು ಇದರ ರಥೋತ್ಸವ. ಹೊಳೆಯ ದಂಡೆಯ ಬಂಡೆಯ ಮೇಲೊಂದು ಶಾಸನವನ್ನು ಕೊರೆಯಲಾಗಿದೆ. ಇದಕ್ಕೂ ಊರಿಗೂ ನಡುವೆ ಇರುವ ಮುದಿಬೀದಿಯ ಆಚೀಚೆ ಬದಿಗಳಲ್ಲಿ ಮುರುಕು ದೇಗುಲಗಳ ಸಾಲುಗಳನ್ನು ಕಾಣಬಹುದು.

ಗುಡ್ಡದ ಮೇಲಿರುವ ದೇವಸ್ಥಾನದ ಹೆಸರು ಮೇಗುಡಿ (ಮೇಗುಟಿ). ಇದೊಂದು ಜೈನಮಂದಿರ. ದ್ರಾವಿಡ ಶೈಲಿಯಲ್ಲಿ ಇದನ್ನು ಕಟ್ಟಲಾಗಿದೆ. ಇದು

ಎರಡನೆಯ ಪುಲಿಕೇಶಿಯ ಕಾಲದ್ದು. ಈ ಗುಡಿಯು ಸುತ್ತ ಇರುವ ಕಲ್ಲಿನ ಗೋಡೆಯನ್ನು ಸ್ವಲ್ಪ ಕಾಲ ಕೋಟೆಯಂತೆ ಉಪಯೋಗಿಸುತ್ತಿದ್ದರೆಂದು ಕಾಣುತ್ತದೆ. ೫56ನೆಯ ಶಕವರ್ಷದ (ಕ್ರಿ.ಶ. 634) ಪ್ರಸಿದ್ಧ ಐಹೊಳೆ ಶಾಸನವಿರುವುದು ದೇಗುಲದ ಪ್ರಾಕಾರದ ಹೊರಗೆ—ಪೂರ್ವದ ಕಡೆಗೆ. ಚಾಳುಕ್ಯ ರಾಜ ಎರಡನೆಯ ಪುಲಿಕೇಶಿಯ ಆಸ್ಥಾನಕವಿ ರವಿಕೀರ್ತಿ ಇದನ್ನು ರಚಿಸಿದ. ಇದರಲ್ಲಿ ಇತಿಹಾಸಕ್ಕೆ ಸಂಬಂಧಿಸಿದ ಅನೇಕ ವಿವರಗಳಿವೆ. ಬಾದಾಮಿಯ ಚಾಳುಕ್ಯರ ಪೂರ್ವೇತಿಹಾಸಕ್ಕೆ ಆಧಾರವಾದ ಅನೇಕ ಸಂಗತಿಗಳು ಇದರಿಂದ ಗೋಚರವಾಗಿವೆ ಎನ್ನಬಹುದು. ಡಾ. ತಿಪ್ಪೇರುದ್ರಸ್ವಾಮಿಯವರು ಹೇಳುವ ಹಾಗೆ ಪುಲಿಕೇಶಿಯ ವೀರಜೀವನಕ್ಕೆ ಇದೊಂದು ಉಜ್ಜ್ವಲಸಾಕ್ಷಿ. ಕದಂಬವಂಶಕ್ಕೆ ಕುಬ್ಜಕವಿಯ ತಾಳಗುಂದ ಶಾಸನ ಎಷ್ಟು ಪ್ರಮುಖವಾಗಿ ಪರಿಣಮಿಸಿದೆಯೋ ಚಾಳುಕ್ಯ ವಂಶಕ್ಕೆ ರವಿಕೀರ್ತಿಯ ಐಹೊಳೆ ಶಾಸನ ಅಷ್ಟು ಪ್ರಮುಖವಾದುದು. ಬಾದಾಮಿಯ ಚಾಳುಕ್ಯರ ವಂಶಪರಂಪರೆ, ಎರಡನೆಯ ಪುಲಿಕೇಶಿಯ ಯುದ್ಧವಿವರಗಳು, ಅವನ ರಾಜ್ಯ ವಿಸ್ತಾರದ ವಿವರಗಳು---ಎಲ್ಲ ಇಲ್ಲಿ ದೊರೆಯುತ್ತವೆ. (ನೋಡಿ—ಪುಲಿಕೇಶಿ). ಚಾಳುಕ್ಯರು ಮೊದಲು ಸಪ್ತಮಾತೃಕೆಯರನ್ನು ಮತ್ತು ಕಾರ್ತಿಕೇಯನನ್ನು ತಮ್ಮ ಮನೆದೇವರೆಂದು ಪೂಜಿಸುತ್ತಿದ್ದು ಅನಂತರ ಅವರು ವೈಷ್ಣವ ಮತ ಸ್ವೀಕಾರ ಮಾಡಿದರಾದರೂ ಅವರು ಅನ್ಯಮತಸಹಿಷ್ಣುಗಳು ; ಜೈನರಿಗಾಗಿ ಬಸದಿಗಳನ್ನೂ ಶೈವರಿಗೆ ಶಿವಾಲಯಗಳನ್ನೂ ಕಟ್ಟಿಸಿದರು. (ನೋಡಿ—ಚಾಳುಕ್ಯರು)

ಮೇಗುಡಿಯ ಬಳಿ ನಿಂತು ನೋಡಿದರೆ ಐಹೊಳೆಯ ಸಮಗ್ರ ದರ್ಶನವಾಗುತ್ತದೆ. ಊರಿನ ತುಂಬ ಚೆಲ್ಲಾಡಿದಂತಿರುವ ದೇವಾಲಯಗಳ ಪೈಕಿ ಎತ್ತರವಾದದ್ದು ದುರ್ಗಿಯ ದೇಗುಲ. ಇದರ ಗರ್ಭಗುಡಿ ಬೌದ್ಧ ಚೈತ್ಯಗಳಂತೆ ಅರ್ಧವರ್ತುಲಾಕಾರವಾಗಿದೆ. ಅದಕ್ಕೆ ಸೇರಿದಂತೆ ಆಯಾಕಾರದ ಮಂಟಪವಿದೆ. ಇವೆರಡಕ್ಕೂ ಹೊಂದಿದಂತಿರುವ ಪ್ರದಕ್ಷಿಣಪಥ. ಗರ್ಭಗುಡಿಯ ಮುಂಭಾಗದಲ್ಲಿ ಮುಖಭದ್ರ



ದುರ್ಗಾಮಂದಿರ

(ಪೋರ್ಚ್). ಮೇಲೆ ಔತ್ತರೇಯ ಪದ್ಧತಿಯಲ್ಲಿ ಕಟ್ಟಲಾದ ಸಣ್ಣ ಶಿಖರ. ಇಲ್ಲಿ ಗಂಧರ್ವ ದಂಪತಿಗಳು, ಲಕುಳೀಶ, ಸಿಂಹ ಮುಂತಾದ ಮೂರ್ತಿಗಳು ಇವೆ. ಈ ದೇಗುಲದ ಕಾಲ ಕ್ರಿ. ಶ. ಸು. 500 ಎಂದು ಹೇಳಲಾಗಿದೆ.



ವರಾಹಮೂರ್ತಿ. ದುರ್ಗಾದೇವಾಲಯ

ಬೌದ್ಧ ಗುಹಾದೇವಾಲಯದ ನಿರ್ಮಾಣದಿಂದ ಜೈನ ಮತ್ತು ಬ್ರಾಹ್ಮಣ ಸಂಪ್ರದಾಯಗಳಿಗೆ ನಡೆದು ಬಂದ ಹಾದಿಯ ನಾನಾ ಮಜಲುಗಳನ್ನು ಉಳಿಸಿಕೊಂಡಿರುವ ದೇವಾಲಯ ಈಗ ತಿಳಿದಿರುವ ಮಟ್ಟಿಗೆ ಇದೊಂದೇ. ಇದು ಚೈತ್ಯಗುಹೆಗಳನ್ನು ಬಹಳ ಮಟ್ಟಿಗೆ ಹೋಲುತ್ತದೆ. ಬೌದ್ಧ ಚೈತ್ಯ ಶೈಲಿಯನ್ನು ಬ್ರಾಹ್ಮಣ ದೇವಸ್ಥಾನಕ್ಕೆ ಅಳವಡಿಸಿಕೊಳ್ಳುವ ಪ್ರಯತ್ನ ಇದಾಗಿರಬಹುದು. ಈ ದೇವಸ್ಥಾನದ ಮಹಾದ್ವಾರದ ಮೇಲಣ ಶಾಸನದಲ್ಲಿ ಕ್ರಿ.ಶ. 650 ರಿಂದ 680ರ ವರೆಗೆ ಆಳಿದ ಚಾಳುಕ್ಯ ವಿಕ್ರಮಾದಿತ್ಯನ ಹೆಸರನ್ನು ಕಾಣಬಹುದು. ಪಶ್ಚಿಮ ಭಾರತದ ದೇಗುಲ ಶಿಲ್ಪಗಳಲ್ಲಿ ಇದೇ ಹಳೆಯದೆಂದು ಈಚಿನ ವರೆಗೂ ನಂಬಲಾಗಿತ್ತು. ಆದರೆ ಇದೇ ಗ್ರಾಮದಲ್ಲಿರುವ ಮೇಗುಡಿ, ಲಾಡ್‍ಖಾನ್ ಮತ್ತು ಕೊಂತಗುಡಿಗಳು ಇದಕ್ಕಿಂತ ಹಳೆಯವೆಂಬುದಾಗಿ ತಿಳಿದುಬಂದಿದೆ. ಲಾಡ್‍ಖಾನ್ ಮತ್ತು ಕೊಂತಗುಡಿ ದೇಗುಲಗಳು ಬಾದಾಮಿಯ ಮೂರನೆಯ ಗುಹೆಗಿಂತಲೂ ಪ್ರಾಚೀನವಾದುವು. ಇವುಗಳ ಕಾಲ ಕ್ರಿ.ಶ. 578. ಕಂಬಗಳ ಮೇಲೆ ನಾನಾ ಚಿತ್ರಗಳನ್ನು ಕೊರೆಯಲಾಗಿದೆ. ಗುಡಿಯ ಗೋಡೆಯ ಗೂಡುಗಳಲ್ಲಿ ವಿಷ್ಣುವಿನ ಅವತಾರಗಳ ಮೂರ್ತಿಗಳಿವೆ. ನಡುನಡುವೆ ಜಾಲಂಧ್ರಗಳು. ಕೆಳಗಡೆ ಪುರಾಣದ ಕಥೆಗಳ ಸನ್ನಿವೇಶಗಳ ಚಿತ್ರ. ಶಿಲ್ಪದೃಷ್ಟಿಯಿಂದ ಈ ಗುಡಿಯ ಮೂರ್ತಿಗಳು ಅಷ್ಟೇನೂ ನಯವಾಗಿಲ್ಲ. ಆದರೆ ಅವುಗಳ ಸ್ವತಂತ್ರ ಅಭಿವ್ಯಕ್ತಿ ಅಸಾಧಾರಣ. ಗುಡಿಯ ತಳಭಾಗದಲ್ಲಿ ಏಳನೆಯ ಶತಮಾನದ ಕೊನೆಯ ಭಾಗದ್ದೆಂದು ಹೇಳಬಹುದಾದ ಕನ್ನಡ ಲಿಪಿಯ ಶಾಸನವೊಂದಿದೆ.

ಅತ್ಯಂತ ಪ್ರಾಚೀನವಾದ (ಕ್ರಿ.ಶ. 450) ಲಾಡ್‍ಖಾನ್ ಗುಡಿಯಲ್ಲಿ ದೊಡ್ಡ ಮಂಟಪವೂ ಮುಖಮಂಟಪವೂ ಇವೆ. ಗರ್ಭಗುಡಿ ಇರುವುದು ಮಂಟಪದೊಳಗೆ. ಮಂಟಪವನ್ನು ನಾಲ್ಕು ದಪ್ಪ ಚೌಕ ಕಂಬಗಳು ಹೊತ್ತು ನಿಂತಿವೆ. ಇದರ ಮಾಳಿಗೆಯ ಮೇಲೊಂದು ಗುಡಿಯುಂಟು. ಈ ಗುಡಿಯಲ್ಲಿ 8–9ನೆಯ ಶತಮಾನಗಳ ಎರಡು ಶಾಸನಗಳನ್ನು ಕಾಣಬಹುದು.

ಐಹೊಳೆಯಲ್ಲಿ ಎರಡು ಗುಹಾದೇವಾಲಯಗಳುಂಟು. ಇವುಗಳಲ್ಲಿ ಒಂದು ಜೈನ. ಇವೆರಡಲ್ಲದೆ ಇನ್ನೊಂದರ ಒಂದು ಭಾಗ ಗುಹಾದೇವಾಲಯ ; ಉಳಿದದ್ದು ನಿರ್ಮಿತ. ಜೈನ ಗುಹಾದೇವಾಲಯದ ಬೆಟ್ಟದ ಬಂಡೆಯ ಮುಖದಲ್ಲಿದೆ. ಪಡಸಾಲೆಯ ಮುಂದಿನ ಗೋಡೆ ದೊಡ್ಡ ಕಲ್ಲುಗಳಿಂದಾದದ್ದು. ಪಡಸಾಲೆಯ ತುದಿಯಲ್ಲಿ ಹಾವಿನ ಹೆಡೆಯ ಕೆಳಗೆ ಪಾರ್ಶ್ವನಾಥ–23ನೆಯ ಜೈನ ತೀರ್ಥಂಕರ ; ಇದರ ಇನ್ನೊಂದು ಕೊನೆಯಲ್ಲಿ ಇಬ್ಬರು ಸ್ತ್ರೀಮೂರ್ತಿಗಳೊಂದಿಗಿರುವ ಜಿನ ತೀರ್ಥಂಕರ ಮೂರ್ತಿಯ ಮಂದಿರವಿದು.

ಇನ್ನೊಂದು ಗುಹಾದೇವಾಲಯ ಬಾದಾಮಿಯ ಚಾಳುಕ್ಯರ ಕಾಲದ್ದು. ಇದರಲ್ಲಿ ಮಂಟಪ, ಎರಡು ಬದಿಯ ಮಂಟಪಗಳು, ಸುಕನಾಸಿ, ಗರ್ಭಗುಡಿ ಎಂಬ ಐದು ಭಾಗಗಳಿವೆ. ಬಲಭಾಗದ ಮಂಟಪದಲ್ಲಿ ಗಣಪತಿ, ಷಣ್ಮುಖ ಮತ್ತು ಪಾರ್ವತಿ ಇವರನ್ನು ಕೂಡಿಕೊಂಡು ನಟರಾಜ ನೃತ್ಯ ಮಾಡುತ್ತಿದ್ದಾನೆ. ಅವನ

ಜೊತೆಗೆ ಸಪ್ತಮಾತೃಕೆಯರೂ ನೃತ್ಯ ಮಾಡುತ್ತಿದ್ದಾರೆ. ಮೇಲ್ಭಾಗದ ಒಂದು ಮೂಲೆಯಲ್ಲಿ ಭೃಂಗಿ ಅಸ್ಥಿಪಂಜರ ರೂಪದಲ್ಲಿ ಕುಣಿಯುತ್ತಿದ್ದಾನೆ. ಹರಿಹರ, ಪಾರ್ವತೀ ಸಮೇತನಾದ ಶಿವ, ಅರ್ಧನಾರೀಶ್ವರ, ಮಹಿಷಾಸುರ ಮರ್ದಿನಿ ಇತ್ಯಾದಿ ಸುಂದರ ಮೂರ್ತಿಗಳನ್ನು ಈ ಗುಹಾದೇವಾಲಯದಲ್ಲಿ ಕೆತ್ತಿದ್ದಾರೆ. ವಿಷ್ಣುವಿನ ಅವತಾರಗಳಲ್ಲೊಂದಾದ ವರಾಹ ಮೂರ್ತಿಯನ್ನೂ ಇಲ್ಲಿ ಕಾಣಬಹುದು. ಇಲ್ಲಿನ ಶಿಲ್ಪ ಬಲು ಸರಳ. ಆರನೆಯ ಶತಮಾನದ ಆದಿಯಲ್ಲಿ ಇದನ್ನು ಕಟ್ಟಿರಬಹುದು. ಗರ್ಭಗುಡಿಯಲ್ಲಿ ಪೀಠಮಾತ್ರ ವಿದ್ದು ಅದರ ಮೇಲೆ ಉಪಾಸ್ಯ ದೇವತೆಯಿಲ್ಲ. ಇದಕ್ಕೆ ಸ್ವಲ್ಪ ದೂರ ದಲ್ಲಿರುವುದು ಹುಚ್ಚುಮಲ್ಲಿ ಗುಡಿ. ಇದು ಪಶ್ಚಿಮಾಭಿಮುಖಿ. ಇದರಲ್ಲಿ ಕಂಡುಬಂದಿರುವ ಹೊಸ ಅಂಶವೆಂದರೆ ಅಂತರಾಳ. ಈ ಗುಡಿಯಲ್ಲಿ ಎತ್ತರವಾದ ವಿಮಾನ, ಗರ್ಭಗುಡಿ, ಸುಕನಾಸಿ ಮಂಟಪ, ಪ್ರದಕ್ಷಿಣ ಪಥ, ಮುಖಮಂಟಪ—ಎಲ್ಲವೂ ಉಂಟು. ಸುಕನಾಸಿಯನ್ನು ರಚಿಸುವ ಪ್ರಥಮ ಪ್ರಯತ್ನವನ್ನೂ ಈ ಗುಡಿಯಲ್ಲೇ ಮಾಡಿದಂತೆ ತೋರುತ್ತದೆ. ಇಲ್ಲಿ ವಿಜಯಾದಿತ್ಯನ ಕಾಲದ (ಕ್ರಿ.ಶ. 708) ಶಾಸನವೊಂದುಂಟು. ಒರಿಸ್ಸ ರಾಜ್ಯದ ಭುವನೇಶ್ವರದಲ್ಲಿರುವ ಪರಶುರಾಮೇಶ್ವರ ದೇವಸ್ಥಾನದಂತೆಯೇ ಈ ದೇಗುಲವಿರುವುದು ಗಮನಾರ್ಹ.

ನಾರಾಯಣನ ಸುಂದರ ಪ್ರತಿಮೆ ಇರುವ ದೊಡ್ಡ ದೇವಾಲಯ ವೊಂದು ಸನಿಯದಲ್ಲೇ ಇದೆ. ಕೊಂತಗುಡಿ ಸಣ್ಣದಾದರೂ ಅದರಲ್ಲಿ ಅನೇಕ ಶಾಸನಗಳಿರುವುದರಿಂದ ಮುಖ್ಯವಾದದ್ದು. ಐಹೊಳೆಯ ದೇಗುಲಗಳ ಅನೇಕ ಮೂರ್ತಿಗಳನ್ನೂ ಕಂಬಗಳನ್ನೂ ನೆರೆಹೊರೆಯವರು ಸಾಗಿಸಿಕೊಂಡು ಹೋಗಿ ತಮ್ಮ ಸ್ಥಳಗಳಲ್ಲಿನ ಗುಡಿಗಳಿಗೆ ಉಪಯೋಗಿಸಿಕೊಂಡಿದ್ದಾರೆ.

ಐಹೊಳೆಯಲ್ಲಿ ಪ್ರಾಚೀನ ಕಾಲದಲ್ಲಿ ವಿದ್ಯಾಪೀಠ (ಅಧಿಷ್ಠಾನ) ಇದ್ದಂತೆ ತೋರುತ್ತದೆ. ಐಹೊಳೆ ಐದುನೂರು ಸ್ವಾಮಿಗಳ ವಣಿಕ್‌ಸಂಘದ ತವರೂರು. ಕ್ರಿ.ಶ. 8ನೆಯ ಶತಮಾನದಲ್ಲಿ ಇದು ಪುಲಿಗೆರೆ ಸಂಘದಂಥ ಘಟನೆ ಪಡೆದಿತ್ತು. ಲಾಡ್‌ಖಾನ್ ಗುಡಿಯಲ್ಲಿ 8ನೆಯ ಮತ್ತು 9ನೆಯ ಶತಮಾನಗಳ ಎರಡು ಶಾಸನಗಳಿದ್ದು 500 ಐಹೊಳೆ ಸ್ವಾಮಿಗಳ ಶ್ರೇಣಿ ಯನ್ನು (ಗಿಲ್ಡ್) ನಮೂದಿಸಲಾಗಿದೆ. ಇಲ್ಲಿಯ 2ನೆಯ ಚಾಳುಕ್ಯ ವಿಕ್ರಮಾದಿತ್ಯನ (733-744) ಶಾಸನವೊಂದರಲ್ಲಿ ಮಹಾಜನರು ಮತ್ತು ನಗರರನ್ನು ಉಲ್ಲೇಖಿಸಲಾಗಿದೆ. ಇನ್ನೊಂದು ಶಾಸನದಲ್ಲಿ 500 ಮಹಾ ಜನರು (ಚತುರ್ವೇದಿಗಳು), 8 ನಗರರು, 120 ಊರಳಿಗಳು ದುರ್ಗಾಭಗವತಿಗೆ ದತ್ತಿಕೊಟ್ಟ ವಿವರವಿದೆ. ಕ್ರಿ.ಶ. 1186ರ ಚಾಳುಕ್ಯ ತ್ರಿಭುವನಮಲ್ಲನ ಶಿರಸಂಗಿಯ ಶಾಸನದಿಂದ ಐಹೊಳೆ ದಕ್ಷಿಣ ಭಾರತದ ವಣಿಕ್ ಸಂಘದ ಕೇಂದ್ರವಾಗಿತ್ತೆಂದು ಗೊತ್ತಾಗುತ್ತದೆ. ಐದುನೂರು ಸ್ವಾಮಿಗಳು ಅದರ ಆಡಳಿತಾಧಿಕಾರಿಗಳಾಗಿದ್ದರು. ಕರ್ಣಾಟಕ, ಆಂಧ್ರ ಮತ್ತು ದ್ರಾವಿಡ ದೇಶಗಳು ಅದರ ಆಡಳಿತಕ್ಕೆ ಒಳ ಪಟ್ಟಿದ್ದುವು. ತಮಿಳು ಶಾಸನಗಳೂ ಈ ಮಾತನ್ನು ದೃಢೀಕರಿಸಿವೆ. ಜೈನ, ಶೈವ, ವೈಷ್ಣವ ಸಂಪ್ರದಾಯಗಳೆಲ್ಲ ಐಹೊಳೆಯಲ್ಲಿ ಸಹಕರಿಸಿದ್ದವೆಂಬುದು ಅಲ್ಲಿಯ ಅವಶೇಷಗಳಿಂದ ತಿಳಿದು ಬರುವ ಸಂಗತಿ.

(ಎ.ಎಂ.ಎ. ; ಜಿ.ಎಸ್.ಡಿ.)



ಕಾರ್ತಿಕೇಯ, ಹುಚ್ಚುಮಲ್ಲಿ ಗುಡಿ



ಚರಂತಿ ಮಠದ ಕಂಬಗಳ ಮೇಲಿನ ಶಿಲ್ಪಗಳು



ಕನ್ನಡ ವರ್ಣಮಾಲೆಯಲ್ಲಿ ಹನ್ನೆರಡನೆಯದು. ಹ್ರಸ್ವ ಸ್ವರಾಕ್ಷರ. ಅಶೋಕನ ಕಾಲದ ಬ್ರಾಹ್ಮೀ ಲಿಪಿಯಲ್ಲಿ ಈ ಅಕ್ಷರ ಒಂದು ಲಂಬರೇಖೆಯ ಮೇಲ್ತುದಿಯ ಎಡಭಾಗದಲ್ಲಿ ಮತ್ತು ಕೆಳತುದಿಯ ಬಲಭಾಗದಲ್ಲಿ ಅಡ್ಡರೇಖೆಗಳಿಂದ ಕೂಡಿರುತ್ತದೆ. ಶಾತವಾಹನರ ಕಾಲದಲ್ಲಿ ವಿಶೇಷ ಬದಲಾವಣೆಯಿಲ್ಲದೆ, ಮೂಲೆಗಳು ಗುಂಡಗಾಗುತ್ತವೆ. ಸ್ವತಂತ್ರವಾಗಿ ಈ ಅಕ್ಷರ ದೊರಕುವುದು ಕಷ್ಟವಾದುದರಿಂದ ಕ್ರಿ.ಶ. ಹನ್ನೆರಡನೆಯ ಶತಮಾನದವರೆಗಿನ ಇದರ ರೂಪ ಹೇಗಿದ್ದಿತೆಂದು ಹೇಳುವುದು ಕಷ್ಟ. ಕಲ್ಯಾಣಿ ಚಾಳುಕ್ಯರ ಶಾಸನಗಳಲ್ಲಿ ಇದು ಈಗಿರುವ ರೂಪಕ್ಕೆ ಬಹು ಸಮೀಪವಾಗಿಯೇ ಇರುವುದು ಕಂಡು ಬರುತ್ತದೆ. ಇದೇ ರೂಪ ಹೊಯ್ಸಳ, ವಿಜಯನಗರ ಕಾಲಗಳಲ್ಲಿಯೂ ಮುಂದುವರಿದು ಅಕ್ಷರದ ಪ್ರಸ್ತುತ ರೂಪ ಸ್ಥಿರವಾಗುತ್ತದೆ. ಈ ಅಕ್ಷರದ ಹ್ರಸ್ವ ಮತ್ತು ದೀರ್ಘ ರೂಪಗಳಿಗೆ ಅಷ್ಟಾಗಿ ವ್ಯತ್ಯಾಸಗಳು ಕಾಣಬರುವುದಿಲ್ಲ. ಮೊದಲ ರೂಪಗಳು ಸಂಸ್ಕೃತದಲ್ಲಿರುವಂತೆ ದೀರ್ಘವನ್ನೇ ಸೂಚಿಸುತ್ತವೆ. ಅನಂತರ ಕನ್ನಡ ಪದಪ್ರಯೋಗ ಹೆಚ್ಚಿದಂತೆಲ್ಲ ಹ್ರಸ್ವ ದೀರ್ಘಗಳ ರೂಪವ್ಯತ್ಯಾಸ ಖಚಿತವಾಗುತ್ತ ಬರುತ್ತದೆ. ಲಿಪಿಯ ದೃಷ್ಟಿಯಿಂದ ಈ ವ್ಯತ್ಯಾಸ ಯಾವಾಗ ಪ್ರಾರಂಭವಾಯಿತು ಎಂದು ಹೇಳುವುದು ಕಷ್ಟ. ಈ ಅಕ್ಷರ ಪಶ್ಚ ಅರ್ಧಸಂವೃತ ಗೋಲ ಸ್ವರವನ್ನು ಸೂಚಿಸುತ್ತದೆ. (ಎ.ವಿ.ಎನ್.)

ಅಶೋಕ. ಕ್ರಿ.ಪೂ. ೩ನೆಯ ಶತಮಾನ

ಶಾತವಾಹನ. ಕ್ರಿ.ಶ. ೨ನೆಯ ಶತಮಾನ

ಕಲ್ಯಾಣಿ ಚಾಳುಕ್ಯ. ಕ್ರಿ.ಶ. ೧೧ನೆಯ ಶತಮಾನ

ಸೇವುಣ. ಕ್ರಿ.ಶ. ೧೩ನೆಯ ಶತಮಾನ

ವಿಜಯನಗರ. ಕ್ರಿ.ಶ. ೧೫ನೆಯ ಶತಮಾನ

ಮೈಸೂರು ಅರಸರು. ಕ್ರಿ.ಶ. ೧೮ನೆಯ ಶತಮಾನ

**ಒಂಟೆ :** ಕಶೇರುಕ ವಂಶದ ಸಸ್ತನಿವರ್ಗದ ದ್ವಿಖುರಗಣದ ಕಮೆಲಿಡೀ ಕುಟುಂಬದ ಕಮೀಲಸ್ ಜಾತಿಯ ಪ್ರಾಣಿ (ಕ್ಯಾಮೆಲ್). ಲಕ್ಷಾಂತರ ವರ್ಷಗಳ ಹಿಂದೆ ಒಂಟೆಯ ಪೂರ್ವಜರು ಉತ್ತರ ಅಮೆರಿಕ, ಯೂರೋಪ್ ಖಂಡಗಳಲ್ಲಿ ವಾಸಿಸುತ್ತಿದ್ದುವು. ಅವುಗಳ ಅವಶೇಷಗಳು ಪಳೆಯುಳಿಕೆಯ ಎಲುಬುಗಳಾಗಿ ಉಳಿದಿವೆ. ಒಂಟೆಯ ಅತ್ಯಂತ ಪೂರ್ವನಿವಾಸಿ ಗಾತ್ರದಲ್ಲಿ ಮೊಲಕ್ಕಿಂತ ದೊಡ್ಡದಾಗಿರಲಿಲ್ಲ. ಇದರಲ್ಲಿ ಎರಡು ಪ್ರಭೇದಗಳಿವೆ: ಕಮೀಲಸ್ ಡಾವಿಡೆರಿಯಸ್ (ಅರೇಬಿಯದ ಒಂಟೆ) ಮತ್ತು ಕಮೀಲಸ್ ಬ್ಯಾಕ್ಟ್ರಿಯೆನಸ್. ಬ್ಯಾಕ್ಟ್ರಿಯನ್ ಒಂಟೆಯ ಬೆನ್ನಿನ ಮೇಲೆ ಎರಡು ಡುಬ್ಬಗಳೂ ಅರೇಬಿಯದ ಒಂಟೆಯ ಬೆನ್ನಿನ ಮೇಲೆ ಒಂದು ಡುಬ್ಬವೂ ಇವೆ. ಬ್ಯಾಕ್ಟ್ರಿಯನ್ ಒಂಟೆ ಅರೇಬಿಯದ ಒಂಟೆಗಿಂತ ಕುಳ್ಳು. ಪೂರ್ವ ತುರ್ಕಿಸ್ತಾನ ಮತ್ತು ಮಂಗೋಲಿಯ ಎರಡು ಡುಬ್ಬಗಳ ಒಂಟೆಗಳ ಜನ್ಮಸ್ಥಾನಗಳು. ಅಲ್ಲಿಯ ಅಪಾರವಾದ ಚಳಿಯನ್ನು ತಡೆಯಲು ಅನುಕೂಲವಾಗುವಂತೆ ಚಳಿಗಾಲದಲ್ಲಿ ಉದ್ದವಾದ ಕೂದಲುಗಳು ಹುಟ್ಟಿ ಇವುಗಳ ಶರೀರಗಳನ್ನು ರಕ್ಷಿಸುತ್ತವೆ. ವಸಂತಋತು ಪ್ರಾರಂಭವಾದ ಮೇಲೆ ಈ ಕೇಶರಾಶಿ ಮುದ್ದೆಮುದ್ದೆಯಾಗಿ ಉದುರಿಹೋಗುತ್ತದೆ. ಆಗ ಒಂಟೆಗಳು ಗೋಬಿ ಮರಳುಗಾಡಿನತ್ತ ಹೊರಡುತ್ತವೆ. ಸುಮಾರು 4,00,00,000 ವರ್ಷಗಳ ಹಿಂದೆ ಒಂಟೆಗಳು ಉತ್ತರ ಅಮೆರಿಕದಲ್ಲಿ ಜನಿಸಿ ಸುಮಾರು 10,00,000 ವರ್ಷಗಳಷ್ಟು ಹಿಂದೆ ದಕ್ಷಿಣ ಅಮೆರಿಕ ಹಾಗೂ ಏಷ್ಯಗಳಲ್ಲಿ ಹರಡಿದ್ದುವು. ಮುಂದೆ ಅವು ಅಮೆರಿಕ ಖಂಡದಲ್ಲಿ ನಿರ್ನಾಮಗೊಂಡವು. 1850ರಲ್ಲಿ ಅಮೆರಿಕದ ಸೈನ್ಯಬಲ ಒಂಟೆಯನ್ನು ಏಷ್ಯದಿಂದ ತಂದು ಆ ರಾಷ್ಟ್ರದಲ್ಲಿ ಉಪಯೋಗಿಸಲಾರಂಭಿಸಿತು. ಒಂಟೆ ನೋಡಲು ಕುರೂಪಿ. ಉದ್ದವಾದ ತಲೆ ಮತ್ತು ಕತ್ತು ಅದರ ವೈಶಿಷ್ಟ್ಯ. ಮರಳುಗಾಡಿನ ಜೀವನಕ್ಕೆ ಹೊಂದಿಕೊಳ್ಳುವಂತೆ ಅಂಗರಚನೆ ಮಾರ್ಪಾಡಾಗಿದೆ. ಮರಳು ದೂಳನ್ನು ಹೊರಗಿಡಲು ಮೂಗಿನ ರಂಧ್ರಗಳು ಮುಚ್ಚಿಕೊಳ್ಳಬಲ್ಲವು. ಕಣ್ಣುರೆಪ್ಪೆಯ ಕೂದಲುಗಳು ಬಲು ನೀಳವಾಗಿದ್ದು ಬಿಸಿಲಿನ ಧಗೆಯಿಂದ ಕಣ್ಣುಗಳನ್ನು ರಕ್ಷಿಸುತ್ತವೆ. ಮೇಲ್ತುಟಿಯ ಮಧ್ಯೆ ಆಳವಾಗಿ ಬಿರುಕುಬಿಟ್ಟಿದ್ದು ಅದು ಮೂಗನ್ನೂ ಬಾಯಿಯ ಶ್ಲೇಷ್ಮ ಒಂದುಗೂಡಿಸುತ್ತದೆ. ಮುಂಗಾಲು ಮತ್ತು ಹಿಂಗಾಲುಗಳಲ್ಲಿ ಎರಡೆರಡು (ಮೂರನೆಯ ಮತ್ತು ನಾಲ್ಕನೆಯ) ಬೆರಳುಗಳು ಮಾತ್ರ ಇವೆ; ಅವುಗಳಿಗೆ ಗೊರಸುಗಳಿವೆ. ಮಂಡಿಯ ಹೊರ ಆವರಣದಲ್ಲಿ ಚರ್ಮದ ಮೆತ್ತೆಗಳಿವೆ. ಒಂಟೆ ನಡೆಯುವಾಗ ಅದರ ಪಾದಗಳು ಅಗಲವಾಗಿ ಹಿಗ್ಗುವುದರಿಂದ ಮರಳಿನಲ್ಲಿ ಕಾಲುಗಳು ಹೂತುಕೊಳ್ಳುವುದಿಲ್ಲ.

ಮರಳುಗಾಡಿನಲ್ಲಿ ಬೆಳೆಯುವ ಮುಳ್ಳಿನ ಗಿಡಗಂಟೆಗಳೇ ಒಂಟೆಗಳ ಆಹಾರ. ತಿನ್ನಲು ಏನೂ ಸಿಕ್ಕದೆ ಇದ್ದಾಗ ಇವು ಮೀನು, ತೊಗಲು, ಹಣ್ಣು ಮತ್ತು ಬೀಜಗಳನ್ನು ಸಹ ತಿನ್ನುವುದುಂಟು. ಇವುಗಳ ದಂತಸೂತ್ರ—ಬಾಚಿಹಲ್ಲು 1/3, ಕೋರೆಹಲ್ಲು 1/1, ಮುಂದವಡೆ ಹಲ್ಲು 3/2, ಹಿಂದವಡೆ ಹಲ್ಲು 3/3= 34 ಹಲ್ಲುಗಳು. ಮೆಲುಕುಹಾಕುವ ಸಸ್ತನಿಯಾದ್ದರಿಂದ ಜಠರದಲ್ಲಿ ಮೂರು ಕೋಶಗಳಿವೆ. ಒಂಟೆ ನೀರನ್ನು ಜಠರದಲ್ಲಿ ಶೇಖರಿಸುತ್ತದೆ. ಜಠರದಲ್ಲಿ ಚಿಕ್ಕ ಚಿಕ್ಕ ಕುಜಾಯಿಯಂಥ ರಚನೆಗಳಿವೆ. ಇವುಗಳ ಬಾಯಿ ಬುಡದಲ್ಲಿ ಸಂಕುಚಿಸುವ ಮಾಂಸಖಂಡಗಳು ಸುತ್ತುವರಿದಿವೆ. ಒಂಟೆ ಕುಡಿದ ನೀರು ಜಠರದಲ್ಲಿ ತುಂಬಿಕೊಂಡೊಡನೆ ಕುಜಾಯಿ ರಚನೆಗಳ ಬಾಯಿಗಳು ತೆರೆದುಕೊಳ್ಳುತ್ತವೆ. ನೀರು ಅವುಗಳೊಳಗೆ ಶೇಖರಗೊಳ್ಳುತ್ತದೆ. ಈ ನೀರು ಅಲ್ಲೇ ಉಳಿದಿದ್ದು ಪ್ರಾಣಿಗೆ ನೀರು ಬೇಕಾದಾಗ ಅವುಗಳಿಂದ ತೊಟ್ಟಿಕ್ಕಲು ಪ್ರಾರಂಭಿಸುತ್ತದೆ. ಇವುಗಳಲ್ಲಿರುವ ನೀರು ಮುಗಿದ ಮೇಲೆ ಮತ್ತೂ ನೀರಿನ ಆವಶ್ಯಕತೆ ಇದ್ದರೆ ಆಗ ಒಂಟೆ ತನ್ನ ಡುಬ್ಬದಲ್ಲಿರುವ ಮೇದಸ್ಸಿನಿಂದ ನೀರನ್ನು ದೇಹದಲ್ಲಿಯೇ ಉತ್ಪತ್ತಿಸಿಕೊಳ್ಳಬಲ್ಲುದು. ಹಸಿವು ಬಾಯಾರಿಕೆಗಳಿಂದ ಪೀಡಿತವಾದ ಒಂಟೆಯ ಡುಬ್ಬ ಒಂದು ಕಡೆಗೆ ಜೋತು ಬಿದ್ದಿರುತ್ತದೆ. ಮಿಕ್ಕ ಎಲ್ಲ ಸಸ್ತನಿಗಳ ಕೆಂಪು ರಕ್ತಕಣಗಳು ದುಂಡಗಿದ್ದರೆ ಒಂಟೆಯವು ಅಂಡಾಕಾರವಾಗಿವೆ. ನಾಲ್ಕು ಸಹಸ್ರ ವರ್ಷಗಳಿಂದಲೂ ಒಂಟೆ ಮಾನವನ ಸೇವೆಯಲ್ಲಿದೆ. ಮರಳುಗಾಡಿನ ಜನರಿಗೆ ಇದರ ನೆರವಿಲ್ಲದೆ ಜೀವನ ಸಾಗಿಸಲು ಸಾಧ್ಯವಿಲ್ಲ. ಮರಳುಗಾಡಿನ ಏಕೈಕ ಸಂಪರ್ಕಸಾಧನ ಒಂಟೆ. ಇದರ ಕೂದಲಿನಿಂದ ಹಗ್ಗ, ಬಟ್ಟೆ, ಕಂಬಳಿಗಳನ್ನು ತಯಾರಿಸುತ್ತಾರೆ. ಈ ಪ್ರಾಣಿ ಎಷ್ಟು ಕುರೂಪಿಯೋ ಅಷ್ಟೇ ಮಂದಬುದ್ಧಿಯದೂ ಹೌದು. ಗಂಡು ಒಂಟೆ ಮದವೇರಿದಾಗ ಬಹು ಕ್ರೂರಿಯಾಗಿ ವರ್ತಿಸಬಲ್ಲದು. ಹೆಣ್ಣು ಒಂಟೆ 11 ತಿಂಗಳ ತನಕ ಗರ್ಭವನ್ನು ಧರಿಸಿ ಒಂದು ಮರಿಯನ್ನು ಈಯುತ್ತದೆ. ಒಂಟೆಯ ಆಯುಷ್ಯ ಸುಮಾರು 50 ವರ್ಷಗಳು.

ಒಂಟೆ 500–800 ಪೌಂಡುಗಳಷ್ಟು ಭಾರವನ್ನು ಹೊರಬಲ್ಲುದು. 125–150 ಮೈಲಿಗಳನ್ನು ಒಂದೇ ದಿವಸದಲ್ಲಿ ನಡೆಯಬಲ್ಲುದು. ಅರೇಬಿಯ ದೇಶದ ಹೈರೀ ಎಂಬ ತಳಿ ಟ್ಯೂನಿಸಿನಿಂದ ಟ್ರಿಪೋಲಿಗೆ ಪ್ರಯಾಣ ಮಾಡಲು ಕೇವಲ 4 ದಿವಸಗಳನ್ನು ತೆಗೆದುಕೊಂಡಿತು. ಈ ಎರಡು ಊರುಗಳಿಗೂ ಇರುವ ಅಂತರ 600 ಮೈಲಿಗಳು. ಪ್ರಯಾಣಕಾಲದಲ್ಲಿ ಅದು ಒಬ್ಬ ಸವಾರನನ್ನೂ 250 ಪೌಂಡು ಭಾರದ ಸಾಮಾನುಗಳನ್ನೂ ಹೊತ್ತು ನಡೆಯಿತು. ತುರ್ಕಿಸ್ತಾನ ಮತ್ತು ಸ್ಪೇನ್ ದೇಶದ ಮರಳುಗಾಡುಗಳಲ್ಲಿ ಕಾಡು ಒಂಟೆಗಳಿವೆ. (ಕೆ.ಎಂ.ಕೆ.)

ಭಾರತದ ಒಂಟೆಗಳು: ಭಾರತದ ಒಂಟೆಗಳು ಗಟ್ಟಿಮುಟ್ಟಾಗಿವೆ. 6.5′–7.25′ ಎತ್ತರದ ವರೆಗೆ ಇವು ಬೆಳೆಯುವುದುಂಟು. ಕಾಲು ಮತ್ತು ಕುತ್ತಿಗೆ ಉದ್ದವಾಗಿವೆ. ಬೆನ್ನಿನ ಮೇಲೆ ಕೇವಲ ಒಂದೇ ಒಂದು ಡುಬ್ಬವಿದೆ. ಭಾರತದಲ್ಲಿ ಇವು ಇರುವ ಸ್ಥಳಗಳು ರಾಜಾಸ್ಥಾನ, ಪಂಜಾಬ್ ಮತ್ತು ಉತ್ತರ ಪ್ರದೇಶಗಳು. ವ್ಯವಸಾಯಕ್ಕಾಗಿ ಕಾಡುಗಳನ್ನು ಕಡಿದು ಗಿಡಗಳನ್ನು ನಾಶ ಮಾಡುತ್ತಿರುವ ಪರಿಣಾಮವಾಗಿ ಪಂಜಾಬಿನಲ್ಲಿ ಒಂಟೆಯ ನಾನಾ ತಳಿಗಳು ನಾಶವಾಗುತ್ತಿವೆ. ಇವುಗಳಲ್ಲಿ ಅತಿಮುಖ್ಯ ತಳಿಗಳು ರೋಜನ್ ಮತ್ತು ಕಲಾಚಿತ್ತ. ರಾಜಾಸ್ಥಾನದಲ್ಲಿರುವ ಮುಖ್ಯ ತಳಿ ಬಿಕನೀರ್ ಒಂಟೆ. ಇದು ಸಾಮಾನ್ಯವಾಗಿ ಭಾರತದ ಎಲ್ಲೆಡೆಗಳಲ್ಲಿಯೂ ವಾಸಿಸಬಲ್ಲುದು. ಇದು ಸವಾರಿಗೆ ಬಹು ಚೆನ್ನ. ಮರುಭೂಮಿಯ ವಾಯುಗುಣವನ್ನು ತಡೆದುಕೊಳ್ಳುವಂತೆ ಇದನ್ನು ತಳೀಕರಿಸಲಾಗಿದೆ. ಶರೀರದ ಮೇಲೆ ಉತ್ತಮ ರೋಮಗಳಿಂದ ಕೂಡಿದ ಹೊದಿಕೆಯಿದೆ. ಮೂಗು ಮೇಲ್ಮುಖವಾಗಿದ್ದು ಮೂತಿ ಉದ್ದವಾಗಿದೆ. ಕಿವಿ ಚಿಕ್ಕವು. ಇದೇ ತಳಿಯನ್ನು ಹೋಲುವ ಮತ್ತೊಂದು ತಳಿ ಅಲ್‌ವಾರಿನಲ್ಲಿ ಕಂಡುಬರುತ್ತದೆ. ಆದರೆ ಇದರಲ್ಲಿ ಗುಡ್ಡಗಾಡಿನ ಒಂಟೆಯ ಲಕ್ಷಣಗಳೂ ಇವೆ. ಉತ್ತರ ಪ್ರದೇಶದಲ್ಲಿರುವ ತಳಿಗಳು ರೋಜನ್ ತಳಿಯನ್ನು ಹೋಲುತ್ತವೆ. 1945ರಲ್ಲಿ ಸುಮಾರು 65,000 ಒಂಟೆಗಳು ಭಾರತದಲ್ಲಿದ್ದುವೆಂದು ವರದಿಯಾಗಿದೆ.

ಒಂಟೆಗಳಿಗೆ ಬರುವ ರೋಗಗಳು : ಒಂಟೆಗಳಿಗೆ ಬರುವ ಕೆಲವು ವಿಶಿಷ್ಟ ರೋಗಗಳಲ್ಲಿ ಸಾಮಾನ್ಯವಾದದ್ದು ಸರ್ರಾ ರೋಗ. ಇದು ಹರಡಲು ಟ್ರಿಪನೋಸೋಮ ಇವ್ಯಾನ್ಸಿ ಎಂಬ ಏಕಕೋಶಿಕ ಜೀವಿ ಕಾರಣ. ಟಬಾನಿಡಿ ಕುಟುಂಬಕ್ಕೆ ಸೇರಿದ

ರಕ್ತ ಹೀರುವ ನೊಣಗಳಲ್ಲಿ ಈ ಜೀವಿಗಳು ಇರುತ್ತವೆ. ನೊಣ ತನ್ನ ಆಹಾರಕ್ಕಾಗಿ ಒಂಟೆಯ ರಕ್ತವನ್ನು ಹೀರುವಾಗ ಅದರ ಲಾಲಾರಸದಲ್ಲಿರುವ ಟ್ರಿಪನೋಸೊಮ ಇವ್ಯಾನ್ಸಿ ಜೀವಿಗಳು ಒಂಟೆಯ ರಕ್ತವನ್ನು ತಲಪುತ್ತವೆ. ಒಂದು ಒಂಟೆಯಿಂದ ಮತ್ತೊಂದು ಒಂಟೆಗೆ ಈ ರೋಗವನ್ನು ಹರಡಲು ಇವೇ ನೊಣಗಳು ಸಹಾಯ ಮಾಡುತ್ತವೆ. ಈ ರೋಗದ ಮುಖ್ಯ ಲಕ್ಷಣಗಳೆಂದರೆ ಬಿಟ್ಟು ಬಿಟ್ಟು ಜ್ವರ ಬರುವುದು, ಕೂದಲು ಉದುರಿಹೋಗುವುದು, ನಿಶ್ಶಕ್ತಿ ಮತ್ತು ರಕ್ತಹೀನತೆ. ಪಂಜಾಬ್ ಪ್ರಾಂತ್ಯದಲ್ಲಿನ ಸುಮಾರು 25% ಒಂಟೆಗಳು ಈ ರೋಗಕ್ಕೆ ತುತ್ತಾಗುತ್ತವೆ.

ಒಂಟೆಗೆ ಬರುವ ಇತರ ರೋಗಗಳು ನ್ಯುಮೋನಿಯ, ಅರ್ಟಿಕೇರಿಯ ಮಾಂಗೇ ಮುಂತಾದ ಚರ್ಮರೋಗಗಳು, ಕ್ಷಯ, ಫಿಲೇರಿಯಾಸಿಸ್, ಏಡಿಗಂತಿ, ಒಂಟೆಸಿಡುಬು ಇತ್ಯಾದಿ.

ಒಂಟೆಯ ಉಪಯೋಗ: ಏಷ್ಯ ಖಂಡ ಮತ್ತು ಆಫ್ರಿಕ ಖಂಡಗಳ ಮರಳುಗಾಡಿನಲ್ಲಿ ಈ ಪ್ರಾಣಿಗಳ ಬಳಕೆ ಹೆಚ್ಚು. ಒಂಟೆಯ ನಾನಾ ಜಾತಿಗಳನ್ನು ಭಾರತದಲ್ಲಿ ತಳೀಕರಿಸಿ ಸುಧಾರಿಸಿದ ತಳಿಗಳನ್ನು ಕೆಲಸಕ್ಕೆ ಉಪಯೋಗಿಸುತ್ತಾರೆ. ಸಾಮಾನ್ಯವಾಗಿ ಒಂಟೆಗಳನ್ನು ಸಾಮಾನು ಹೊರಲು ಬಳಸುತ್ತಾರೆ. ವ್ಯವಸಾಯ ಮಾಡಲು ಮತ್ತು ಸವಾರಿಗಾಗಿ ಒಂಟೆಗಳನ್ನು ಉಪಯೋಗಿಸುವ ಪದ್ಧತಿಯೂ ಇದೆ.



ಬ್ಯಾಕ್ಟ್ರಿಯನ್ ಒಂಟೆ



ಅರೇಬಿಯದ ಒಂಟೆ

ಒಂಟೆಗಳಿಂದ ಉತ್ಪತ್ತಿಯಾಗುವ ವಸ್ತುಗಳು: ಒಂಟೆಗಳಿಂದೊದಗುವ ಅತಿ ಮುಖ್ಯ ಉತ್ಪನ್ನಗಳೆಂದರೆ ಅದರ ರೋಮ ಮತ್ತು ಹಾಲು. ರೋಮ ಬಹಳ ಬೆಲೆ ಬಾಳುತ್ತದೆ. ಇದು ಮೃದು ಮತ್ತು ಹಗುರವಾಗಿದೆ. ಬಾಳಿಕೆ ಹೆಚ್ಚು. ದೇಹದ ಉಷ್ಣತೆಯನ್ನು ಚೆನ್ನಾಗಿ ಹಿಡಿದಿಡುತ್ತದೆ. ಭಾರತದ ಒಂಟೆಗಳ ರೋಮಗಳು ಮೇ ತಿಂಗಳಿಂದ ಜೂನ್ ತಿಂಗಳ ವರೆಗೆ ಉದುರುತ್ತವೆ. ಆಗ ಇವನ್ನು ಶೇಖರಿಸಲಾಗುತ್ತದೆ. ಅಲ್ಲದೆ ವರ್ಷಕ್ಕೊಮ್ಮೆ ಕತ್ತರಿಸಿಯೂ ಶೇಖರಿಸುತ್ತಾರೆ. ಬೆನ್ನು, ಕುತ್ತಿಗೆ, ತೊಡೆ ಮತ್ತು ಕಾಲುಗಳಲ್ಲಿನ ರೋಮಗಳು ಉದ್ದವಾಗಿದ್ದು ಉಪಯೋಗಕ್ಕೆ ಬರುತ್ತವೆ. ಶೀತವಲಯದ ಒಂಟೆಗಳು ವರ್ಷಕ್ಕೆ 12 ಪೌಂಡು ರೋಮ ಕೊಡುವುದುಂಟು. ಆದರೆ ಭಾರತದಲ್ಲಿ ಕೇವಲ 2 ಪೌಂಡು ಮಾತ್ರ ರೋಮ ಸಿಕ್ಕುತ್ತದೆ. ಈ ರೋಮಗಳಿಂದ ಮೇಲುಹಾಸು, ಕಂಬಳಿ ಮತ್ತು ಕೋಟು, ಗೌನುಗಳು ಮುಂತಾದುವನ್ನು ನೇಯುತ್ತಾರೆ. ಇವು ಇತರ ಉಣ್ಣೆಯ ಪದಾರ್ಥಗಳಿಗಿಂತ ಉತ್ತಮವಾಗಿವೆ.

ಒಂಟೆಯ ಹಾಲು ಅತ್ಯುತ್ತಮ ಆಹಾರ. ಎಮ್ಮೆ ಅಥವಾ ಹಸುವಿನಹಾಲಿನ ಹಾಗೆ ಇದನ್ನು ಬಳಸಬಹುದು. ಆರೋಗ್ಯವಾಗಿರುವ ಒಂಟೆ ಒಂದು ದಿವಸದಲ್ಲಿ 12 ಸೇರು ಹಾಲು ಕೊಡುತ್ತದೆ. ಇದರಲ್ಲಿ ಕೊಬ್ಬು ಬಲು ಕಡಿಮೆ. ಆದರೆ ನೈಟ್ರೊಜನ್ ಅಂಶಗಳು ಬಲು ಹೆಚ್ಚು. ಹಾಲಿಗೆ

ಒಂದು ರೀತಿಯ ವಾಸನೆ ಇದೆ. ಇದರ ಸೇವನೆ ಕೆಲವರಲ್ಲಿ ವಿರೇಚನವನ್ನುಂಟು ಮಾಡುತ್ತದೆ. ಇದರ ಸೇವನೆಯಿಂದ ಗುಲ್ಮರೋಗಗಳ ನಿವಾರಣೆಯಾಗುತ್ತದೆ ಯೆಂಬ ನಂಬಿಕೆ ಇದೆ. ಒಂಟೆಯ ಹಾಲಿನ ಹಲ್ವವನ್ನು ಪರ್ಷಿಯ ದೇಶದಿಂದ ಭಾರತಕ್ಕೆ ಆಮದು ಮಾಡಿಕೊಳ್ಳಲಾಗುತ್ತದೆ. ರಾಜಾಸ್ಥಾನ, ಪಂಜಾಬು ಮುಂತಾದ ಕಡೆಗಳಲ್ಲಿ ಮಕ್ಕಳು ಒಂಟೆಹಾಲು ಕುಡಿದೇ ಬೆಳೆಯುತ್ತವೆ. ಒಂಟೆಯ ಚರ್ಮ ಹೆಚ್ಚಿನ ಉಪಯೋಗಕ್ಕೆ ಬರುವುದಿಲ್ಲ. ಚರ್ಮದ ಪೆಟ್ಟಿಗೆಗಳು, ಪಟ್ಟಿಗಳು ಮುಂತಾದುವನ್ನು ಇದರಿಂದ ತಯಾರಿಸುತ್ತಾರೆ. ಇದರ ಚರ್ಮದ ಚೀಲಗಳಲ್ಲಿ ಎಣ್ಣೆ, ತುಪ್ಪ ಮುಂತಾದುವುಗಳನ್ನು ಶೇಖರಿಸುತ್ತಾರೆ. (ಎಲ್.ಎಸ್.ಜಿ.)

**ಒಂಟೆಪಡೆ:** ಮರಳುಗಾಡುಗಳಲ್ಲಿ ಯುದ್ಧಮಾಡುವಾಗ ಉಪಯೋಗಿಸುವ ಒಂಟೆಬಲ (ಕ್ಯಾಮೆಲ್ ಕೋರ್). ಸ್ವಾತಂತ್ರ್ಯಪೂರ್ವ ಭಾರತದಲ್ಲಿ ಬಿಕನೀರಿನ ಮಹಾರಾಜ ಯುದ್ಧ ಶಿಕ್ಷಣವಿತ್ತು ಬಿಕನೀರ್ ಒಂಟೆಯ ದಳ ಎಂಬ ಹೆಸರಿನ ಒಂದು ಪಡೆಯನ್ನು ತಯಾರಿಸಿದ್ದ. ಅದು ಒಂದನೆಯ ಮತ್ತು ಎರಡನೆಯ ಮಹಾ ಸಮರಗಳಲ್ಲಿ ಈಜಿಪ್ಟ್ ಮತ್ತು ಸೂಡಾನ್ ದೇಶಗಳಲ್ಲಿ ಗಣನೀಯ ಸೇವೆ ಸಲ್ಲಿಸಿತು. ಈ ಪಡೆಯ ರಚನೆ ಸಿಲ್ಲೇದಾರಿ ಕ್ರಮದಿಂದ. ಇದರ ಪ್ರಕಾರ ಸೈನಿಕ ತನ್ನ ಒಂಟೆಯನ್ನು ತಾನೇ ಕೊಂಡು ಕಾಪಾಡಿಕೊಂಡು ಬರಬೇಕು. ಇದಕ್ಕೆ ಪ್ರತಿಯಾಗಿ ರಾಜ್ಯಸರ್ಕಾರ ಆತನಿಗೆ ನಗದು ಪರಿಹಾರದ್ರವ್ಯವನ್ನು ಕೊಡುತ್ತದೆ. ಸ್ವಾತಂತ್ರ್ಯಾನಂತರದ ಭಾರತದಲ್ಲಿ ಕೇವಲ ಉತ್ಸವಾದಿಗಳಲ್ಲಿ ಉಪಯೋಗಿಸುವುದಕ್ಕಾಗಿ ಮಾತ್ರ ಅಲ್ಪಪ್ರಮಾಣದ ಒಂಟೆಪಡೆಯೊಂದನ್ನು ಉಳಿಸಿಕೊಳ್ಳಲಾಗಿದೆ. ಆಧುನಿಕ ಯುದ್ಧ ಕ್ರಮದಲ್ಲಿ ಕುದುರೆ ಅಥವಾ ಒಂಟೆಯನ್ನು ಉಪಯೋಗಿಸುವ ಅವಕಾಶ ಅತ್ಯಲ್ಪ. (ಎ.ಎನ್.ಎಸ್.ಎಂ.)

**ಒಂಟೆಹುಳು:** ಡಿಕ್ಟಿಯಾಪ್ಟೆರ ಗಣದ ಮ್ಯಾಂಟಿಡೇ ಉಪಗಣಕ್ಕೆ ಸೇರಿದ ಒಂದು ಕೀಟ (ಮ್ಯಾಂಟಿಸ್; ಪ್ರೇಯಿಂಗ್ ಮ್ಯಾಂಟಿಸ್). ಮಳ್ಳಿಕೀಟವೆಂದೂ ಕರೆಯುತ್ತಾರೆ. ಸಾಮಾನ್ಯವಾಗಿ ಬೇಲಿ, ಹಸಿರು ಗಿಡಮರಗಳು, ಹುಲ್ಲುನೆಲಗಳಲ್ಲಿ ಇದರ ವಾಸ. ಇದರ ಆಹಾರ ಇತರ ಕೀಟಗಳು. ಶರೀರ ನೀಳವಾಗಿದೆ. ಉದ್ದವಾದ ಮುಂಗಾಲುಗಳು ಆಹಾರಕೀಟವನ್ನು ಹಿಡಿದೆಳೆದುಕೊಳ್ಳಲು ಉಪಯುಕ್ತವಾಗಿವೆ. ಹಿನ್ನೆಲೆಯ ಬಣ್ಣಕ್ಕೆ ಹೊಂದಿಕೊಳ್ಳುವ ಗುಣ ಈ ಕೀಟಕ್ಕಿದೆ. ಸಾಮಾನ್ಯವಾಗಿ



ಹಸಿರು ಬಣ್ಣದವೇ ಹೆಚ್ಚು. ಈ ಕೀಟ ಮುಂದಿನ ಎರಡು ಕಾಲುಗಳನ್ನು ಮೇಲಕ್ಕೆತ್ತಿಕೊಂಡು ಅಲುಗಾಡದೆ ನಿಂತಿದ್ದು ಮುಂದೆ ಸುಳಿಯುವ ಪುಟ್ಟ ಕೀಟ ಮತ್ತು ದೊಡ್ಡ ಹುಳುಗಳ ಮೇಲೆ ಥಕ್ಕನೆ ಎರಗಿ ಹಿಡಿದು ಆಹಾರವಾಗಿ ಸೇವಿಸುತ್ತದೆ. ನೊಣ, ಚಿಟ್ಟೆ, ಚಿಟ್ಟೆಯ ಮರಿಗಳು ಇತ್ಯಾದಿ ಇದರ ಆಹಾರ. ಒಂಟೆಹುಳುವಿಗೆ ಎರಡು ಸಂಯುಕ್ತ ನೇತ್ರಗಳ ಜೊತೆಗೆ ಮೂರು ಸರಳ ನೇತ್ರಗಳೂ ಇವೆ. ಈ ಹುಳು ತನ್ನ ಮೊಟ್ಟೆಗಳನ್ನು ಸ್ಪಂಜಿನಂಥ ಮೊಟ್ಟೆಚೀಲಗಳಲ್ಲಿಡುತ್ತದೆ. (ಬಿ.ಪಿ.ಸಿ.)

**ಒಂದನೆಯ ಮಹಾಯುದ್ಧ:** ನಾಗರಿಕ ಪ್ರಪಂಚದ ಬಹುಭಾಗ ವನ್ನೊಳಗೊಂಡ ಪ್ರಪ್ರಥಮ ಮಹಾಸಂಗ್ರಾಮ. 1914ರ ಜುಲೈ 28 ರಿಂದ 1918ರ ನವೆಂಬರ್ 11ರ ವರೆಗೆ ನಡೆದ ಈ ಯುದ್ಧದಲ್ಲಿ ಜರ್ಮನಿ ಮತ್ತು ಆಸ್ಟ್ರಿಯ–ಹಂಗರಿಗಳು ಒಂದು ಕಡೆಯೂ ಫ್ರಾನ್ಸ್ ಮತ್ತು ಗ್ರೇಟ್ ಬ್ರಿಟನ್‌ಗಳು (ಮಿತ್ರಪಕ್ಷ) ಇನ್ನೊಂದು ಕಡೆಯೂ ಪ್ರಧಾನವಾಗಿ ಕಾದಿದುವು. 1917–18ರಲ್ಲಿ ಮಿತ್ರಪಕ್ಷದೊಂದಿಗೆ ಅಮೆರಿಕ ಸಂಯುಕ್ತಸಂಸ್ಥಾನವೂ ಸೇರಿಕೊಂಡಿತು. ಹತ್ತೊಂಬತ್ತನೆಯ ಶತಮಾನದ ದೃಷ್ಟಿ, ಪ್ರವೃತ್ತಿಗಳಿಗೆ ಭರತವಾಕ್ಯ ಹಾಡಿ ಹೊಸದೊಂದು ವಿಶ್ವದ ನಿರ್ಮಾಣಕ್ಕೆ ಕಾರಣವಾಗಿ ಪರಿಣಮಿಸಿ ಇದು ವಿಶ್ವೇತಿಹಾಸದ ಒಂದು ಮಹಾಘಟ್ಟವೆನಿಸಿದೆ.

ಈ ಲೇಖನವನ್ನು ಸ್ಥೂಲವಾಗಿ ಹೀಗೆ ವಿಂಗಡಿಸಲಾಗಿದೆ: 1 ಕಾರಣಗಳು, 2 ಭೂಯುದ್ಧ, 3 ಜಲವಾಯು ಯುದ್ಧಗಳು, 4 ಅಮೆರಿಕದ ಪ್ರವೇಶ, 5 ಏಷ್ಯದಲ್ಲಿ ಜಪಾನ್ ನಡೆಸಿದ ಯುದ್ಧ, 6 ಚೀನ–ಭಾರತ, 7 ಜರ್ಮನಿಯ ವಸಾಹತುಗಳಲ್ಲಿ ಯುದ್ಧ, 8 ಯುದ್ಧದ ಅಂತಿಮ ಘಟ್ಟ, 9 ಪರಿಣಾಮಗಳು, 10 ಶಾಂತಿ ಕೌಲುಗಳು. ಲೇಖನದ ಕೊನೆಯಲ್ಲಿ ಮಹಾಯುದ್ಧದ ಮುಖ್ಯ ಘಟನೆಗಳ ಪಟ್ಟಿಯೊಂದನ್ನು ಕೊಡಲಾಗಿದೆ.

**ಕಾರಣಗಳು:** ಒಂದನೆಯ ಮಹಾಯುದ್ಧಕ್ಕೆ ಅನೇಕ ಕಾರಣಗಳನ್ನು ಕೊಡುವುದು ಸಾಧ್ಯ. ಆಸ್ಟ್ರಿಯ–ಹಂಗರಿಗೂ ಸರ್ಬಿಯಕ್ಕೂ ನಡುವಣ ವಿರಸ ದಿಂದಾಗಿ ಆರಂಭವಾದ ಈ ಯುದ್ಧಕ್ಕೆ ಇದೇ ತತ್‌ಕ್ಷಣದ ಕಾರಣವಾದರೂ ಇಷ್ಟರಿಂದಲೇ ವಿಶ್ವದ ಅನೇಕ ರಾಷ್ಟ್ರಗಳು ಯುದ್ಧದ ಸುಳಿಯೊಳಕ್ಕೆ ಸಿಲುಕಿದುವೆನ್ನಲಾಗುವುದಿಲ್ಲ. ಇದರ ಹಿಂದೆ ಎರಡು ಮಹಾಬಣಗಳೇ ನಿರ್ಮಾಣವಾಗಿ ಬಲು ಹಿಂದಿನಿಂದಲೂ ಅವು ತಂತಮ್ಮಲ್ಲೆ ಮಸೆದಾಟಕ್ಕೆ ಆರಂಭಿಸಿದ್ದುವು. ದೀರ್ಘಕಾಲದ ಸ್ಪರ್ಧೆ, ಅಸೂಯೆ ಮತ್ತು ದ್ವೇಷಗಳ ಫಲವೇ ಒಂದನೆಯ ಮಹಾಯುದ್ಧ.

ಯುದ್ಧದ ದೀರ್ಘಕಾಲಿಕ ಕಾರಣಗಳಲ್ಲಿ ಬಹಳ ಮುಖ್ಯವಾದದ್ದೆಂದರೆ 1870ರ ಅನಂತರ ಯೂರೋಪಿನಲ್ಲಿ ಬಲಿಷ್ಠವಾದ ಮಹಾರಾಷ್ಟ್ರಗಳ ಮದೋನ್ಮತ್ತತೆ ಮತ್ತು ಆಕ್ರಮಣ ಮನೋಭಾವ. 1871ರಲ್ಲಿ ಜರ್ಮನ್ ಸಾಮ್ರಾಜ್ಯದ ನಿರ್ಮಾಣವಾದಾಗಲೇ ಒಂದನೆಯ ಮಹಾಯುದ್ಧದ ಮೊದಲ ಭೇರೀನಾದವಾಯಿತೆನ್ನಬೇಕು. ಉತ್ತರ ಮಧ್ಯ ಯೂರೋಪಿನಲ್ಲಿ ಈ ಮಹಾಶಕ್ತಿಯ ನಿರ್ಮಾಣವಾದೊಡನೆಯೇ ಇದರ ನೆರೆಹೊರೆಯ ರಾಷ್ಟ್ರಗಳಾದ ಫ್ರಾನ್ಸ್, ರಷ್ಯ, ಆಸ್ಟ್ರಿಯ–ಹಂಗರಿಗಳ ಗಡಿರೇಖೆಗಳುದ್ದಕ್ಕೂ ಬಿಸಿ ತಟ್ಟಿತು.

1871ರಲ್ಲಿ ಜರ್ಮನಿಯ ಛಾನ್ಸಲರ್ ಆದ ರಾಜಕುಮಾರ ಆಟೋ ಫಾನ್ ಬಿಸ್ಮಾರ್ಕ್ ಮಹಾಪ್ರತಿಭಾವಂತ (ನೋಡಿ : ಬಿಸ್‌ಮಾರ್ಕ್, ಆಟೊ ಫಾನ್). ಆತನಿಗೆ ನೆರೆರಾಷ್ಟ್ರಗಳೊಂದಿಗೆ ಯುದ್ಧಮಾಡುವ ಇಚ್ಛೆಯಿರಲಿಲ್ಲ. ರಷ್ಯ, ಆಸ್ಟ್ರಿಯ, ಬ್ರಿಟನ್ ಮತ್ತು ಇಟಲಿಗಳು ಜರ್ಮನಿಯ ವಿರುದ್ಧ ಒಂದಾಗುವಂತೆ ಮಾಡುವ ಉದ್ದೇಶದಿಂದ ಅವುಗಳ ಸ್ನೇಹ ಬಯಸಿದ. ಆದರೆ ಇಂಥ ಸ್ನೇಹದ ಒಡಂಬಡಿಕೆಗಳು ವಿಷಮ ಪರಿಸ್ಥಿತಿಯ ಸೂಚನೆಗಳೆಂದೇ ಹೇಳಬೇಕು. ಫ್ರಾನ್ಸಿಗೆ ಸೇರಿದ್ದ ಆಲ್ಸೇಸ್ ಮತ್ತು ಪೂರ್ವ ಲೊರೇನ್ ಪ್ರದೇಶಗಳನ್ನು ಜರ್ಮನಿ ವಶಪಡಿಸಿಕೊಂಡಿದ್ದರಿಂದ (1871) ಫ್ರಾನ್ಸಿಗೆ ಮುಖಭಂಗವಾಗಿತ್ತು. ಈ ಪ್ರದೇಶಗಳಲ್ಲಿರುವ ಬಹುಮಂದಿ ಜರ್ಮನ್ ಜನಾಂಗದವರೆಂಬುದೂ ಸ್ವರಕ್ಷಣೆಯ ದೃಷ್ಟಿಯಿಂದ ಇದು ಜರ್ಮನಿಗೆ ಸೇರಬೇಕೆಂಬುದೂ ಈ ಆಕ್ರಮಣಕ್ಕೆ ಕಾರಣ. ಫ್ರಾನ್ಸ್ ಒಂಟಿಯಾಗಿದ್ದರೂ ಸುಮ್ಮನಿರಲಿಲ್ಲ. ತನ್ನ ಭದ್ರತೆಗಾಗಿ ಅದು ಇತರ ರಾಷ್ಟ್ರಗಳ ಸ್ನೇಹಕ್ಕಾಗಿ ಕೈಚಾಚಿತು. ಬಿಸ್‌ಮಾರ್ಕ್‌ನ ಅನಂತರ 1894ರಲ್ಲಿ, ಫ್ರಾನ್ಸ್–ರಷ್ಯಗಳ ನಡುವೆ ಮೈತ್ರಿ ಏರ್ಪಟ್ಟಾಗ ಜರ್ಮನ್ ವಿರುದ್ಧ ಪಕ್ಷ ಬಲಗೊಂಡಿತೆನ್ನಬಹುದು. ಬಲಿಷ್ಠ ಜರ್ಮನಿಯಿಂದ ನೆರೆಹೊರೆಯ ರಾಷ್ಟ್ರಗಳ ನೆಮ್ಮದಿ ಭಂಗವಾಗಿದ್ದುದೂ ನಿಜ. ಯೂರೋಪಿನ ಪ್ರತಿಯೊಂದು ರಾಷ್ಟ್ರವೂ ಶಸ್ತ್ರಾಸ್ತ್ರ ಸಂಗ್ರಹಣೆಗೆ ತೊಡಗಿತು. ಇದರಿಂದ ರಾಷ್ಟ್ರಗಳ ನಡುವೆ ಭೀತಿ ಹೆಚ್ಚಲು ಕಾರಣವಾಯಿತೇ ಹೊರತು ಭದ್ರತೆ ಬೆಳೆಯಲಿಲ್ಲ. ಪ್ರತಿಯೊಂದು ರಾಷ್ಟ್ರವೂ ತನ್ನ ತರುಣರನ್ನು ಜಮಾಯಿಸಿ ಅವರಿಗೆ ಖಾಕಿ ತೊಡಿಸಿ ಕವಾಯತು ಮಾಡಿಸುತ್ತಿತ್ತು. ಯುದ್ಧ ಈಗಲೋ ಆಗಲೋ ಎಂಬ ಭಾವನೆ 19ನೆಯ ಶತಮಾನದ ಅಂತ್ಯದ ವೇಳೆಗೆ ಉದ್ಭವವಾಗಿತ್ತು.

ಇದೇ ಕಾಲಕ್ಕೆ ಯೂರೋಪಿನ ಆರ್ಥಿಕ ಸಾಮಾಜಿಕ ಕ್ಷೇತ್ರಗಳಲ್ಲಿ ಆಗಿದ್ದ ಬದಲಾವಣೆಗಳು ಅಗಾಧ. ಸಾರ್ವತ್ರಿಕ ವಿದ್ಯಾಭ್ಯಾಸ, ಪತ್ರಿಕಾಪ್ರಸಾರ ಮತ್ತು ಸಂಚಾರಸೌಲಭ್ಯ ವಿಸ್ತರಣೆಗಳಿಂದ ಜನರಲ್ಲಿ ರಾಷ್ಟ್ರಾಭಿಮಾನ ಬೆಳೆದಿತ್ತು. ಕೈಗಾರಿಕಾ ಕ್ರಾಂತಿಯ (ನೋಡಿ) ಫಲವಾಗಿ ಸಂಪತ್ತಿನ ಹೆಚ್ಚಳವೂ ಕಾರ್ಮಿಕರ ಬಲವೂ ಹೆಚ್ಚಿದ್ದುವು. ನೂತನವಾಗಿ ನಿರ್ಮಿತವಾದ ನಗರಗಳಿಂದ ಉದ್ಭವವಾದ ಸಮಸ್ಯೆಗಳೂ ಅನೇಕ. ಇವೆಲ್ಲ ಕಾರಣಗಳಿಂದಾಗಿ ಅಲ್ಲಿನ ಜನಜೀವನದಲ್ಲೂ ಒಂದು ಬಗೆಯ ನೆಮ್ಮದಿಭಂಗವೂ ಅಲ್ಲೋಲಕಲ್ಲೋಲವೂ ಆಗಿದ್ದುವು.

ಆಗ ಯೂರೋಪಿನ ಯಾವ ರಾಷ್ಟ್ರವೇ ಆಗಲಿ ನೆರೆ ರಾಜ್ಯಗಳನ್ನು ಗೆದ್ದು ಯೂರೋಪಿನ ಸಾರ್ವಭೌಮತ್ವ ಸ್ಥಾಪಿಸಬೇಕೆಂಬ ಇಚ್ಛೆ ಹೊಂದಿತ್ತೆನ್ನಲು ಆಧಾರಗಳಿಲ್ಲ. ಆದರೆ ಅಲ್ಲಿನ ಜನರಲ್ಲಿ ರಾಷ್ಟ್ರಾಭಿಮಾನ ಬೆಳೆದಿದ್ದುದಂತೂ ನಿಜ. ಇದರಿಂದಾಗಿ ರಾಷ್ಟ್ರಗಳ ನಡುವೆ ಪರಸ್ಪರ ಕೊಡು–ಕೊಳ್ಳುವ ಮನೋಭಾವ ಬೆಳೆಯಲವಕಾಶವಾಗಲಿಲ್ಲ. ಮೈತ್ರಿಯ ಧೋರಣೆಯಿಂದ ತಮ್ಮ ಅಭಿಮಾನಕ್ಕೆ ಕುಂದಾದೀತೇನೋ—ಎಂಬುದೇ ಅವುಗಳ ಅಂಜಿಕೆ.

ಯುದ್ಧಪೂರ್ವದ ಐರೋಪ್ಯ ರಾಷ್ಟ್ರಗಳ ಆರ್ಥಿಕ ಸಾಮ್ರಾಜ್ಯವಾದವನ್ನು ಈ ದೃಷ್ಟಿಯಿಂದ ನೋಡುವುದು ಅವಶ್ಯ. ವಸಾಹತುಗಳಿಂದ ತಮಗೆ ಲಾಭವೆಂಬುದನ್ನರಿತ ಐರೋಪ್ಯ ರಾಷ್ಟ್ರಗಳು ಇವುಗಳ ಸಂಪಾದನೆಗಾಗಿ 1881ರಿಂದ ಮುಂದೆ ತಂತಮ್ಮಲ್ಲೇ ಸ್ಪರ್ಧಿಸಿದುವೆಂಬುದು ನಿಜವಾದರೂ ಈ ಸ್ಪರ್ಧೆಯ ಹಿಂದೆ ಅವುಗಳ ಅಭಿಮಾನವೂ ಇತ್ತು. ಅವುಗಳಿಗೆ ಯೂರೋಪಿನಲ್ಲಿ ತಮ್ಮ ಪ್ರತಿಷ್ಠೆ ಉಳಿಸಿಕೊಳ್ಳಲು

ವಸಾಹತುಗಳು ಸಾಧನಗಳಾದುವು. ಯೂರೋಪಿನ ರಾಷ್ಟ್ರಗಳಿಗೆ ತಂತಮ್ಮ ವ್ಯಾಜ್ಯಗಳ ಪರಿಹಾರಕ್ಕೆ ಪಣವಾಗಿ ವಸಾಹತುಗಳು ಒದಗಿಬಂದುವು. ಇವಿಲ್ಲದಿದ್ದರೆ ಐರೋಪ್ಯ ರಾಷ್ಟ್ರಗಳ ನಡುವೆಯೇ ಪರಸ್ಪರ ಆಕ್ರಮಣ ಪ್ರಬಲವಾಗಿ 1914ಕ್ಕೂ ಮುಂಚೆಯೇ ಯುದ್ಧ ಸಂಭವಿಸಬಹುದಾಗಿತ್ತು. ಅಂತೂ ವಸಾಹತುಗಳ ಸ್ಪರ್ಧೆಯೂ ಐರೋಪ್ಯ ರಾಷ್ಟ್ರಗಳಲ್ಲಿ ಎರಡು ಬಣಗಳು ವೃದ್ಧಿಯಾಗಲು ಒಂದು ಮುಖ್ಯ ಕಾರಣ.

ಯುದ್ಧಪೂರ್ವ ಯೂರೋಪಿನ ದ್ವೇಷ-ಭೀತಿಗಳಿಗೆ ಬಹುಮಟ್ಟಿಗೆ ಜರ್ಮನಿಯೇ ಕಾರಣ. 1866ರಲ್ಲೂ 1870ರಲ್ಲೂ ಅದು ಗಳಿಸಿದ ವಿಜಯಗಳೂ ಅದರ ಸೈನಿಕ ಶಕ್ತಿಯೂ ಯುದ್ಧದ ಬೆದರಿಕೆ ಹಾಕಿ ಅನ್ಯರಾಷ್ಟ್ರಗಳನ್ನು ತನ್ನ ಪರತ್ತಿಗೆ ಒಪ್ಪಿಸಿಕೊಳ್ಳುತ್ತಿದ್ದ ವಿಧಾನವೂ ಅದರ ನೌಕಾಬಲವೃದ್ಧಿಯೂ ಜರ್ಮನ್ ಚಕ್ರವರ್ತಿ ಕೈಸ಼ರನ ಉದ್ರೇಕಪೂರಿತ ಭಾಷಣಗಳೂ ಆ ದೇಶದ ಉದ್ದೇಶಗಳ ಬಗ್ಗೆ ಇತರ ರಾಷ್ಟ್ರಗಳಲ್ಲಿ ಸಂದೇಹೋತ್ಪನ್ನ ಮಾಡಿದುವು. ಜರ್ಮನಿಯನ್ನು ತನ್ನ ಮಿತ್ರರಾಷ್ಟ್ರವೆಂದು ಪರಿಗಣಿಸಿದ್ದ ಬ್ರಿಟನ್ ಕೂಡ ಈ ಕಾರಣದಿಂದಾಗಿ 1904ರ ಅನಂತರ ಫ್ರಾನ್ಸ್–ರಷ್ಯಗಳ ಸಖ್ಯ ಬೆಳೆಸಿಕೊಂಡಿತು.

ಆರ್ಥಿಕ ದೃಷ್ಟಿಯಿಂದಲೂ ಪ್ರತಿಷ್ಠೆಯ ದೃಷ್ಟಿಯಿಂದಲೂ ಆಲ್ಸೇಸ್-ಲೊರೇನ್ ಪ್ರದೇಶಗಳನ್ನು ಮತ್ತೆ ಜರ್ಮನಿಯಿಂದ ಪಡೆದುಕೊಳ್ಳಲು ಫ್ರಾನ್ಸ್ ಹಾತೊರೆಯುತ್ತಿತ್ತು. ಈ ಪ್ರಾಂತ್ಯಗಳಲ್ಲಿ ದೊರಕುತ್ತಿದ್ದ ಖನಿಜಗಳಿಂದ ಜರ್ಮನಿಯ ಕೈಗಾರಿಕೆಗಳ ಬೆಳವಣಿಗೆಯಾಗುವುದು ಫ್ರಾನ್ಸಿನ ಕೈಗಾರಿಕಾಪ್ರಭೃತಿಗಳಿಗೆ ಹಿತವಾಗಿ ಕಾಣಲಿಲ್ಲ.

ಏಡ್ರಿಯಾಟಿಕ್ ಸಮುದ್ರಕ್ಕೆ ಪೂರ್ವದಲ್ಲಿನ ಬಾಸ್ನಿಯ ಮತ್ತು ಹರ್ಸಗೋವಿನ ಪ್ರಾಂತ್ಯಗಳು ಆಸ್ಟ್ರಿಯ–ಹಂಗರಿ ಮತ್ತು ಸರ್ಬಿಯಗಳ ನಡುವೆ ಪೈಪೋಟಿ ಮತ್ತು ವೈಮನಸ್ಯವನ್ನು ತಂದವು. ಜರ್ಮನಿಯ ನೆರೆ ರಾಷ್ಟ್ರವಾಗಿದ್ದ ಆಸ್ಟ್ರಿಯ–ಹಂಗರಿ ಸಾಮ್ರಾಜ್ಯವೊಂದು ಕಲಸುಮೇಲೋಗರ. ನಾನಾ ಜಾತಿಗಳ ನಾನಾ ಪ್ರದೇಶಗಳ ಸಮೂಹ. ಅಲ್ಲಿಯ ರಾಜ ನಿರಂಕುಶನಾಗಿದ್ದ. ಆತನ ಪ್ರಜೆಗಳಲ್ಲಿ ಜರ್ಮನರಲ್ಲದೆ ಮಗ್ಯಾರರೂ ಸ್ಲಾವರೂ ಇದ್ದರು. ಸ್ಲಾವ್ ಜನಾಂಗದವರೆಲ್ಲ ಒಂದುಗೂಡಬೇಕೆಂಬ ಚಳವಳಿ ಆ ರಾಜನ ಪ್ರಭುತ್ವಕ್ಕೆ ತೊಂದರೆ ಕೊಡತಕ್ಕುದಾಗಿತ್ತು. ಈ ಚಳವಳಿಗೆ ಸರ್ಬಿಯ ರಾಜ್ಯವೇ ಕೇಂದ್ರ. ಈ ರಾಜ್ಯ ಸ್ವತಂತ್ರವಾಗಿದ್ದುದು ಆಸ್ಟ್ರಿಯದ ಪ್ರಭುವಿಗೆ ಸರಿಬೀಳಲಿಲ್ಲ. ಸರ್ಬಿಯ ರಾಜ್ಯಕ್ಕೆ ಸಮುದ್ರತೀರ ಬೇಕೆನಿಸಿತ್ತು; ಆದರೆ ಅದನ್ನು ಆಸ್ಟ್ರಿಯ ಬಿಟ್ಟುಕೊಟ್ಟ ಹೊರತು ಸಿಕ್ಕುವಂತಿರಲಿಲ್ಲ. ಹೀಗೆ ಆಸ್ಟ್ರಿಯ-ಸರ್ಬಿಯಗಳಿಗೆ ವೈಷಮ್ಯವಿದ್ದಾಗ ಆಸ್ಟ್ರಿಯದ ಪ್ರಭುವೇ ಮೊದಲು ಜಗಳಕ್ಕೆ ಸಿದ್ಧನಾಗಿ, ಅದಕ್ಕೆ ರಷ್ಯನರು ಸಹಾಯ ನೀಡುವುದಕ್ಕೆ ಮೊದಲೇ ಸರ್ಬಿಯನರನ್ನು ಅಡಗಿಸಲು ಮನಸ್ಸು ಮಾಡಿ ಹೊಂಚುಹಾಕುತ್ತಿದ್ದ. ಇದಲ್ಲದೆ ಬಾಸ್ನಿಯ ಮತ್ತು ಹರ್ಸಗೋವಿನ ಪ್ರಾಂತ್ಯದ ಸ್ಲಾವ್ ಜನಾಂಗಕ್ಕೆ ಸೇರಿದ ಜನರೂ ಸಾಧ್ಯವಾದರೆ ಆಸ್ಟ್ರಿಯ–ಹಂಗರಿ ಸಾಮ್ರಾಜ್ಯದ ಹಿಡಿತದಿಂದ ಬಿಡಿಸಿಕೊಂಡು ಸರ್ಬಿಯದಲ್ಲಿ ನಡೆಯುತ್ತಿದ್ದ ಅಖಿಲ ಸ್ಲಾವ್ ಚಳವಳಿಗೆ ಸೇರಿಕೊಳ್ಳಬೇಕೆಂದು ಹವಣಿಸುತ್ತಿದ್ದರು. ಹೀಗೆ ಆಸ್ಟ್ರಿಯ-ಹಂಗರಿ ಸಾಮ್ರಾಜ್ಯದಲ್ಲಿದ್ದ ಉಗ್ರ ರಾಷ್ಟ್ರೀಯತಾ ಭಾವನೆಗಳು ಆ ಸಾಮ್ರಾಜ್ಯಕ್ಕೆ ಸೇರಿದ ವಿವಿಧ ಜನಾಂಗಗಳನ್ನು ಕೆಣಕಿದುವು.

1870ರಲ್ಲಿ ಇಟಲಿಯ ದೊರೆಯಾಗಿದ್ದ ಎರಡನೆಯ ವಿಕ್ಟರ್ ಎಮ್ಯಾನ್ಯುಯೆಲ್ ರೋಂ ನಗರ ಪ್ರವೇಶ ಮಾಡಿದಾಗ ಇಟಲಿಯ ಐಕ್ಯ ಸಂಪೂರ್ಣವಾಗಿ ಮುಗಿದಿರಲಿಲ್ಲ. ಆಸ್ಟ್ರಿಯ–ಹಂಗರಿ ಸಾಮ್ರಾಜ್ಯಕ್ಕೆ ಸೇರಿದ ಕೆಲವು ಪ್ರದೇಶಗಳನ್ನು ವಶಪಡಿಸಿಕೊಳ್ಳಬೇಕೆಂದು ಅದು ಹವಣಿಕೆ ನಡೆಸಿತ್ತು. ಆ ಪ್ರದೇಶಗಳಲ್ಲಿ ಇಟಾಲಿಯನರು ಹೆಚ್ಚಿನ ಸಂಖ್ಯೆಯಲ್ಲಿದ್ದರು. ಇದಲ್ಲದೆ ಇಟಲಿ ಏಡ್ರಿಯಾಟಿಕ್ ಸಮುದ್ರದ ಮೇಲೆ ತನ್ನ ಹತೋಟಿಯನ್ನು ಸ್ಥಾಪಿಸುವ ಪ್ರಯತ್ನದಲ್ಲಿ ಆಸ್ಟ್ರಿಯದೊಡನೆ ಪೈಪೋಟಿ ನಡೆಸಿತ್ತು.

1908ರಲ್ಲಿ ತುರ್ಕಿಯಲ್ಲಿ ಒಂದು ಪಲ್ಲಟ ನಡೆಯಿತು. ಅಬ್ದುಲ್ ಹಮೀದ್ ಸುಲ್ತಾನನ ಆಳ್ವಿಕೆಯನ್ನು ತರುಣ ತುರ್ಕಿ ಪಕ್ಷದವರು ಕೊನೆಗಾಣಿಸಿ ಕ್ರಮಬದ್ಧ ಆಡಳಿತವನ್ನು ಕಟ್ಟಲು ಉದ್ಯಮಿಸಿದರು. ಇವರ ಸೈನ್ಯಕ್ಕೆ ತರಬೇತಿ ಕೊಡಲು ಮುಂದೆ ಬಂದವರು ಜರ್ಮನರು. ಅಲ್ಲಿ ಸ್ವಲ್ಪ ಕಾಲ ಅವ್ಯವಸ್ಥೆ ತೋರಿದಂತಿದ್ದಾಗ ಆಸ್ಟ್ರಿಯದ ಪ್ರಭು ಆತುರಪಟ್ಟು ಹಿಂದೆ ತನಗೆ ಸೇರಿದ್ದ ಬಾಸ್ನಿಯ-ಹರ್ಸಗೋವಿನ ಪ್ರಾಂತ್ಯಗಳನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಇದರಿಂದ ರಷ್ಯನ್ ಚಕ್ರವರ್ತಿಗೆ ಅಸಮಾಧಾನವಾಯಿತು. ತುರ್ಕಿಯ ಮೇಲೆ ಬಿದ್ದು ಸಿಕ್ಕಿದಷ್ಟನ್ನು ದಕ್ಕಿಸಿಕೊಳ್ಳುವುದು ಜಾಣತನವೆಂದು ಐರೋಪ್ಯರಾಷ್ಟ್ರಗಳು ಭಾವಿಸಿದುವು. 1911ರಲ್ಲಿ ಇಟಲಿಯವರು ತುರ್ಕಿಯೊಡನೆ ಜಗಳ ತೆಗೆದು ಉತ್ತರ ಆಫ್ರಿಕದಲ್ಲಿ ಟ್ರಿಪೋಲಿ ಪ್ರದೇಶವನ್ನಾಕ್ರಮಿಸಿಕೊಂಡರು. ಅದೇ ಒಳ್ಳೆಯ ಸಮಯವೆಂದು ಗ್ರೀಸಿನ ನಾಯಕ ವೆನಿಜೆಲಸ್ ಬಲ್ಗೇರಿಯ, ಸರ್ಬಿಯ ಮತ್ತು ಮಾಂಟೆ ನೀಗ್ರೊಗಳೊಂದಿಗೆ ಸೇರಿ ತುರ್ಕಿಯ ವಿರುದ್ಧವಾಗಿ ಬಾಲ್ಕನ್ ಲೀಗ್ ಎಂಬ ವ್ಯೂಹ ಕಟ್ಟಿದ. 1912ರಲ್ಲಿ ಇದು ತುರ್ಕಿಯನ್ನು ಸೋಲಿಸಿತು. ಯೂರೋಪಿನಲ್ಲಿ ಸೇರಿದ್ದ ಭೂಭಾಗಗಳೆಲ್ಲವನ್ನೂ ತುರ್ಕಿ ಕಳೆದುಕೊಂಡಿತು. ಆದರೆ ವಿಜಯೀ ಬಾಲ್ಕನ್ ರಾಷ್ಟ್ರಗಳು 1913ರಲ್ಲಿ ತಂತಮ್ಮಲ್ಲೇ ಕಲಹವನ್ನಾರಂಭಿಸಿದುವು. ಆಗ ಬ್ರಿಟನ್, ರಷ್ಯ, ಜರ್ಮನಿಗಳ ಮಂತ್ರಿಪ್ರಮುಖರು ಸಂಧಾನ ನಡೆಸಿ ಆ ಜಗಳಗಳನ್ನು ಒಂದು ರೀತಿ ಪರಿಹರಿಸಿದರು. ಆದರೆ ಆಸ್ಟ್ರಿಯದ ಪ್ರಭು ಮಾತ್ರ ತನ್ನ ಆಸೆ ಆಕಾಂಕ್ಷೆಗಳನ್ನು ಬೆಳೆಸಿಕೊಳ್ಳುತ್ತಲೇ ಇದ್ದ.

ಹತ್ತೊಂಬತ್ತನೆಯ ಶತಮಾನದ ಯೂರೋಪಿನ ಚರಿತ್ರೆಯಲ್ಲಿ ಜರ್ಮನಿ, ಇಟಲಿ ದೇಶಗಳು ಐಕ್ಯವನ್ನೂ ಸ್ವಾತಂತ್ರ್ಯವನ್ನೂ ಪಡೆದದ್ದು ದೊಡ್ಡ ಘಟನೆಗಳು. ಫ್ರಾನ್ಸಿಗೆ ಸೇರಿದ್ದ ಆಲ್ಸೇಸ್-ಲೊರೇನ್ ಪ್ರಾಂತ್ಯಗಳನ್ನುಪಡೆದುಕೊಂಡ ಬಿಸ಼್‌ಮಾರ್ಕ್ ಫ್ರೆಂಚರ ವಿರುದ್ಧವಾಗಿ ಆಸ್ಟ್ರಿಯ ಮತ್ತು ಇಟಲಿಗಳೊಡನೆ ಸೇರಿ ಮಾಡಿಕೊಂಡಿದ್ದ ತ್ರಿಪಕ್ಷ ಮೈತ್ರಿಯೂ (ಟ್ರಿಪಲ್ ಅಲಯನ್ಸ್, 1882) ರಷ್ಯದೊಂದಿಗೆ ಹೊಂದಿದ್ದ ಎಚ್ಚರದ ಸ್ನೇಹಪರತೆಯೂ ಆತನ ಚಾಣಾಕ್ಷತನದ ದ್ಯೋತಕಗಳಾಗಿದ್ದುವು. ಆದರೆ ಅವನ ಅನಂತರ ಅಧಿಕಾರಕ್ಕೆ ಬಂದ ಜರ್ಮನ್ ಪ್ರಭುಗಳು ಆಸ್ಟ್ರಿಯದೊಂದಿಗೆ ಆಪ್ತತೆ ಕಾಪಾಡಿಕೊಂಡು ಬಂದರಾದರೂ ರಷ್ಯದ ವಿಚಾರದಲ್ಲಿ ಉಪೇಕ್ಷೆ ತಳೆದರು. ಬಾಲ್ಟಿಕ್ ಮತ್ತು ಕಪ್ಪು ಸಮುದ್ರಗಳ ಪ್ರದೇಶವನ್ನೂ ಪೆಸಿಫಿಕ್ ತೀರಗಳನ್ನೂ ಒಟ್ಟುಗೂಡಿಸುವ ರೈಲುದಾರಿ ಹಾಕಿಕೊಳ್ಳುವುದು ರಷ್ಯನರ ಇಷ್ಟವಾಗಿತ್ತು. ಫ್ರೆಂಚರು ಆ ಉದ್ಯಮದಲ್ಲಿ ಸಹಕರಿಸಿ ರಷ್ಯದವರ ಮೈತ್ರಿಯನ್ನು ಕಟ್ಟಿದರು. ಜರ್ಮನಿಯ ತ್ರಿಪಕ್ಷ ಮೈತ್ರಿಗೆ ವಿರುದ್ಧವಾಗಿ ಫ್ರಾನ್ಸ್–ರಷ್ಯಗಳ ದ್ವಿಪಕ್ಷ ಮೈತ್ರಿ (ಡ್ಯೂಯಲ್ ಅಲಯನ್ಸ್) ಏರ್ಪಟ್ಟಾಗ ಯುದ್ಧಮನೋಭಾವ ಬೆಳೆಯಲು ಕಾರಣವಾಯಿತು. ಎರಡೂ ಕಡೆಗಳವರೂ ತಮ್ಮ ಯುದ್ಧಸನ್ನಾಹಗಳಿಗೆ ಹೆಚ್ಚು ಹೆಚ್ಚು ಗಮನ ಕೊಟ್ಟು ದೊಡ್ಡ ದೊಡ್ಡ ಸೈನ್ಯ ಕಟ್ಟಲು ತೊಡಗಿದರು.

ಹತ್ತೊಂಬತ್ತನೆಯ ಶತಮಾನದ ಅಂತ್ಯದಲ್ಲಿ ಆಫ್ರಿಕ-ಏಷ್ಯಗಳಲ್ಲಿ ಸಾಮ್ರಾಜ್ಯ ಸಂಪಾದನೆಗೂ ವ್ಯಾಪಾರದ ಸವಲತ್ತುಗಳಿಗಾಗಿಯೂ ಐರೋಪ್ಯ ರಾಷ್ಟ್ರಗಳ ನಡುವೆ ತೀವ್ರ ಸ್ಪರ್ಧೆ ನಡೆದಿತ್ತು. ಇಂಗ್ಲಿಷರಿಗೂ ಫ್ರೆಂಚರಿಗೂ ನಡುವೆ ವಿರಸ ಬೆಳೆಯಿತು. ಸೂಡಾನ್ ಪ್ರದೇಶದಲ್ಲಿ ಬ್ರಿಟಿಷರು ನುಗ್ಗಿದಾಗ ಪಶ್ಚಿಮದ ಕಡೆಯಿಂದ ಫ್ರೆಂಚರು ಅಲ್ಲಿಗೆ ನುಗ್ಗಿಬಂದು ಆ ಪ್ರದೇಶ ತಮ್ಮದಾಗಬೇಕೆಂದು ಹಟಹೂಡಿದರು. ಆದರೆ ಆಫ್ರಿಕ-ಏಷ್ಯಗಳಲ್ಲಿ ಐರೋಪ್ಯರು ಪರಸ್ಪರವಾಗಿ ಹೊಡೆದಾಟ ನಡೆಸದೆ ಕೇವಲ ಸಂಧಾನಗಳಿಂದಲೇ ತಮ್ಮ ತಮ್ಮ ಸಾಮ್ರಾಜ್ಯವಿಸ್ತಾರಗಳನ್ನು ಗೊತ್ತುಮಾಡಿಕೊಂಡರು.

ಜರ್ಮನಿಯನ್ನು ಒಟ್ಟುಗೂಡಿಸಿದ ತರುವಾಯ ಬಿಸ಼್‌ಮಾರ್ಕ್ ದೂರಾಲೋಚನೆಯಿಂದ ಶಾಂತಿ ನೆಲೆಗೊಳಿಸಿ ಜರ್ಮನಿಯ ರೈಲುದಾರಿಗಳೂ ಕೈಗಾರಿಕೆಗಳೂ ಸ್ಥಲಜಲ ಸೈನ್ಯಗಳೂ ಅಭಿವೃದ್ಧಿಯಾಗಲು ಆಸ್ಪದವನ್ನು ಕಲ್ಪಿಸಿಕೊಟ್ಟ. 1884ರ ವರೆಗೂ ಹೊರಗಿನ ಸಾಮ್ರಾಜ್ಯಕ್ಕಾಗಿ ಜರ್ಮನರು ಉದ್ಯಮಿಸಲಿಲ್ಲ. ಆಫ್ರಿಕ-ಏಷ್ಯಗಳಲ್ಲಿ ಸಾಮ್ರಾಜ್ಯ ಪ್ರಯತ್ನವನ್ನು ಜರ್ಮನರು ಕೈಗೊಂಡದ್ದು ಸಾವಕಾಶವಾಯಿತು. ಆ ವೇಳೆಗೆ ಆಫ್ರಿಕದ ಉತ್ತಮ ಭಾಗಗಳು ಇತರರ ಪಾಲಾಗಿದ್ದುವು. ಆಫ್ರಿಕದ ವಾಯುವ್ಯಭಾಗವೆಲ್ಲವೂ ಫ್ರೆಂಚರದಾಗಿತ್ತು. ಆದ್ದರಿಂದ ಜರ್ಮನರಿಗೆ ಫ್ರೆಂಚರಲ್ಲಿ ಅಸಮಾಧಾನ ಬೆಳೆದದ್ದು ಅನಿರೀಕ್ಷಿತವಲ್ಲ. ಆ ಸಮಯದಲ್ಲಿ ಬ್ರಿಟನ್-ಜರ್ಮನಿಗಳು ಫ್ರೆಂಚರಿಗೆ ವಿರೋಧವಾಗಿ ಒಟ್ಟುಗೂಡಬಹುದಾಗಿತ್ತು. ಆದರೆ ವ್ಯಾಪಾರ ಪ್ರಪಂಚದಲ್ಲಿ ಬ್ರಿಟಿಷರಿಗೂ ಜರ್ಮನರಿಗೂ ಪೈಪೋಟಿ ಬೆಳೆಯುತ್ತಲೇ ಇತ್ತು. ಬ್ರಿಟಿಷರ ನೌಕಾಪ್ರಾಬಲ್ಯ ತಮ್ಮ ಅಭಿವೃದ್ಧಿಗೆ ಅಡ್ಡಿಯೆಂದು ಜರ್ಮನರು ಭಾವಿಸಿಕೊಂಡು ತಾವೂ ಹಡಗುಪಡೆಯನ್ನು ಬಲಪಡಿಸಿಕೊಳ್ಳುತ್ತಿದ್ದರು. ಹತ್ತೊಂಬತ್ತನೆಯ ಶತಮಾನದ ಕಡೆಕಡೆಗೆ ಬ್ರಿಟಿಷರೂ ಜರ್ಮನರೂ ಪೈಪೋಟಿಯ ಮೇಲೆ ಹಡಗುಗಳನ್ನು ಕಟ್ಟಿಕೊಳ್ಳುತ್ತಿದ್ದರು. 1904ರಲ್ಲಿ ಬ್ರಿಟಿಷರು ತಮ್ಮ ಪ್ರಧಾನ ನೌಕಾಬಲವನ್ನು ಭೂಮಧ್ಯಸಮುದ್ರದಿಂದ ಸಾಗಿಸಿ ಜರ್ಮನಿಗೆದುರಾಗಿ ಉತ್ತರ ಸಮುದ್ರದಲ್ಲಿಟ್ಟುಕೊಂಡರು.

ದೂರಪ್ರಾಚ್ಯದಲ್ಲಿ ಜಪಾನಿಗೂ ರಷ್ಯಕ್ಕೂ ವಿರಸ ಉಂಟಾಯಿತು. ಜಪಾನಿನೊಡನೆ ಯುದ್ಧಮಾಡುತ್ತ ರಷ್ಯದವರು ಪೂರ್ವಕ್ಕೆ ಮುಖಮಾಡಿಕೊಂಡಿದ್ದಾಗ ಜರ್ಮನರು ತಮ್ಮೊಡನೆ ಜಗಳ ತೆಗೆಯಬಹುದೆಂದು ಫ್ರೆಂಚರಿಗೆ ಭಯ. ಆದ್ದರಿಂದ ಫ್ರೆಂಚರು ಬ್ರಿಟಿಷರೊಂದಿಗೆ ಮೈತ್ರಿ ಬಯಸಿದರು. ಸಾಮ್ರಾಜ್ಯ ಸಂಪಾದನೆಯ ಪೈಪೋಟಿಯಲ್ಲಿ ಫ್ರೆಂಚರು ಬ್ರಿಟಿಷರಿಗೆ ಅನುಕೂಲರಾಗಿಯೇ ವರ್ತಿಸಿದ್ದರು. ಇವರ ನಡುವೆ ಸ್ನೇಹ ಬೆಳೆಯಿತು. ಮೊರಾಕೋ ಪ್ರಾಂತ್ಯದಲ್ಲಿ ಫ್ರೆಂಚರ ಪ್ರಾಬಲ್ಯವನ್ನೂ ಈಜಿಪ್ಟಿನಲ್ಲಿ ಬ್ರಿಟಿಷರ ಪ್ರಾಬಲ್ಯವನ್ನೂ ಆ ರಾಷ್ಟ್ರಗಳು ಪರಸ್ಪರವಾಗಿ ಒಪ್ಪಿದುವು. 1907ರಲ್ಲಿ ರಷ್ಯದವರು ಕೂಡ ಬ್ರಿಟಿಷರೊಂದಿಗೆ ಮೈತ್ರಿ ಬೆಳೆಸಿದರು. ಹೀಗೆ ಬ್ರಿಟನ್, ಫ್ರಾನ್ಸ್ ಮತ್ತು ರಷ್ಯಗಳದು ಒಂದು ವ್ಯೂಹವಾಯಿತು.

ಜರ್ಮನ್ ಚಕ್ರವರ್ತಿ 2ನೆಯ ವಿಲಿಯಂ ಮಹತ್ವಾಕಾಂಕ್ಷಿ. ಆ ರಾಷ್ಟ್ರದಲ್ಲಿ ಸೈನ್ಯಮುಖ್ಯರು ಅತ್ಯಂತ ಪ್ರಬಲರಾಗಿದ್ದರು. ಆಲ್ಸೇಸ್-ಲೊರೇನ್ ವಿಷಯದಲ್ಲಿ ಮಾತ್ರವಲ್ಲದೆ ಆಫ್ರಿಕದಲ್ಲೂ ಜರ್ಮನಿಗೆ ಫ್ರಾನ್ಸಿನ ಹಗೆತನವಿತ್ತು. ಸಾಮ್ರಾಜ್ಯ

ಕಟ್ಟುವ ಆಸೆ ಹೆಚ್ಚಾಗಿಯೇ ಇತ್ತು. ಜರ್ಮನಿಯ ಕೈಸರ್ ತುರ್ಕಿಯ ಸುಲ್ತಾನನ ಸ್ನೇಹ ಕಟ್ಟಿಕೊಂಡು ಬರ್ಲಿನ್ ನಗರದಿಂದ ತುರ್ಕಿಯ ಮೂಲಕ ಬಾಗ್ದಾದಿನ ವರೆಗೆ ರೈಲುದಾರಿ ಹಾಕಿಸುವ ಸಂಧಾನದಲ್ಲಿ ತೊಡಗಿದ್ದ. ಜರ್ಮನ್ ವಶದಲ್ಲಿರುವ ಈ ರೈಲುದಾರಿಯಿಂದ ಅದು ಸಮುದ್ರಮಾರ್ಗಗಳನ್ನು ತಪ್ಪಿಸಿಕೊಂಡು ಭೂಮಾರ್ಗಗಳ ಮೂಲಕವೆ ವ್ಯಾಪಾರ ನಡೆಸಬಹುದೆಂಬುದು ಕೈಸರನ ಆಲೋಚನೆ. ತುರ್ಕಿಯಲ್ಲಿ ಜರ್ಮನರ ಪ್ರವೇಶ ಬ್ರಿಟಿಷರಿಗೆ ಸರಿಬೀಳಲಿಲ್ಲ. ಹಿಂದೆ ರಷ್ಯದವರು ಪ್ರಬಲರಾಗಿ ತುರ್ಕಿಯನ್ನು ವಶಪಡಿಸಿಕೊಂಡಿದ್ದಿದ್ದರೆ ಯಾವ ಅಪಾಯ ತೋರಬಹುದಾಗಿತ್ತೋ ಅದೇ ಅಪಾಯ ಜರ್ಮನರಿಂದ ಸಂಭವಿಸುವಂತೆ ಆಯಿತು. ತುರ್ಕಿಯಲ್ಲಿ ಜರ್ಮನರು ಪ್ರಬಲರಾಗುವ ಅಂಶ ರಷ್ಯದವರಿಗೂ ಅನಿಷ್ಟವಾಗಿತ್ತು.

ಇಪ್ಪತ್ತನೆಯ ಶತಮಾನದ ಆದಿಯಲ್ಲಿ ಈ ರೀತಿ ಐರೋಪ್ಯ ರಾಷ್ಟ್ರಗಳಲ್ಲಿ ಎರಡು ಭಾರಿ ವ್ಯೂಹಗಳಾಗಿದ್ದು ಪ್ರತಿ ರಾಷ್ಟ್ರದವರೂ ತಮ್ಮ ಯೋಗ್ಯತೆ ಮೀರಿ ಯುದ್ಧಕ್ಕೆ ಅಣಿಮಾಡಿಕೊಳ್ಳುತ್ತಿದ್ದರು. ಒಬ್ಬರ ಮೇಲೊಬ್ಬರಿಗೆ ಅತೀವ ಸಂಶಯ, ಭಯ. ಜಗಳಕ್ಕೆ ಕಾರಣ ತೋರಿದೊಡನೆ ಎಲ್ಲರೂ ಸಭೆ ಸೇರಿ ಇತ್ಯರ್ಥಮಾಡಿಕೊಳ್ಳುವ ಪ್ರಯತ್ನ ನಡೆದರೂ ಅದು ಫಲದಾಯಕವಾಗಿ ಮುಗಿಯುತ್ತಿರಲಿಲ್ಲ. ಬಾಲ್ಕನ್ ಕ್ಷೇತ್ರಗಳ ವಿಷಯದಲ್ಲಿ ಆಸ್ಟ್ರಿಯಕ್ಕೂ ರಷ್ಯಕ್ಕೂ ಹಗೆತನವಿತ್ತು. ಆಲ್ಸೇಸ್-ಲೊರೇನ್ ಮತ್ತು ಉತ್ತರ ಆಫ್ರಿಕಗಳ ವಿಚಾರದಲ್ಲಿ ಜರ್ಮನಿಯೂ ಫ್ರಾನ್ಸೂ ವೈರಿಗಳು. ಕೈಗಾರಿಕೆ ವ್ಯಾಪಾರಗಳಲ್ಲಿಯೂ ನೌಕಾಬಲ ರಚನೆಯಲ್ಲಿಯೂ ಜರ್ಮನಿಯೂ ಬ್ರಿಟನೂ ವಿರೋಧಿಗಳು. ಹೀಗಿರುವಲ್ಲಿ ಯಾವ ಘಟನೆಯಿಂದಲೂ ಕದನ ಉದ್ಭವಿಸುವ ಪರಿಸ್ಥಿತಿಯಿತ್ತು. ಇಪ್ಪತ್ತನೆಯ ಶತಮಾನದ ಆದಿಭಾಗವೆಲ್ಲವೂ ಯುದ್ಧ ಪ್ರಾರಂಭವಾಗುವ ಮೊದಲು ಪ್ರತಿಕಕ್ಷಿಗಳು ನಡೆಸಬಹುದಾದ ದೃಷ್ಟಿಯುದ್ಧದಂತಿತ್ತು.

1904ರಲ್ಲಿ ಬ್ರಿಟನ್ ಮತ್ತು ಫ್ರಾನ್ಸ್‌ಗಳ ನಡುವೆ ಮೈತ್ರಿ ಏರ್ಪಟ್ಟಾಗ ಫ್ರೆಂಚರಿಗೆ ಮೊರಾಕೋ ಸೇರಬಹುದೆಂದು ಬ್ರಿಟಿಷರೊಪ್ಪಿದರಷ್ಟೆ. ಆದರೆ ಆ ಪ್ರಾಂತ್ಯದಲ್ಲಿ ಸ್ಪೇನಿಗೂ ಜರ್ಮನಿಗೂ ಆಸೆಯಿತ್ತು. ಟಾಂಜಿಯಾರಿನಲ್ಲಿ ಜರ್ಮನ್ ಕೈಸರ್ ಸ್ವತಃ ಬಂದಿದ್ದು ಜರ್ಮನರಿಗೆ ಅಲ್ಲಿ ಪ್ರದೇಶಲಾಭವಾಗಬೇಕೆಂಬುದನ್ನು ಸ್ಪಷ್ಟಪಡಿಸಿದ. ಮೊರಾಕೋ ಪ್ರಾಂತ್ಯದ ಇತ್ಯರ್ಥಕ್ಕಾಗಿ ಐರೋಪ್ಯರ ಸಮ್ಮೇಳನ ನಡೆಯಲೆಂಬುದು ಅವನ ಸೂಚನೆ. 1906ರಲ್ಲಿ ಅಲ್ಲಿಗೆ ಫ್ರಾನ್ಸು ಸೈನ್ಯ ಕಳುಹಿಸಿತು. ಆಗ ಕೈಸರನೂ ಅಲ್ಲಿಗೆ ಜರ್ಮನ್ ಯುದ್ಧದ ಹಡಗೊಂದನ್ನು ಕಳುಹಿಸಿದ. ಇವುಗಳ ನಡುವೆ ಯುದ್ಧ ಸಂಭವಿಸುವ ಪರಿಸ್ಥಿತಿ ಏರ್ಪಟ್ಟಿತು. ಆದರೆ ಫ್ರೆಂಚರು ಕಾಂಗೋ ಪ್ರದೇಶದಲ್ಲಿ ಜರ್ಮನರಿಗೆ ಸ್ವಲ್ಪ ಭಾಗ ಬಿಟ್ಟುಕೊಟ್ಟದ್ದರಿಂದ ಹೊಡೆದಾಟವಾಗುವುದು ತಪ್ಪಿತು.

ಯೂರೋಪಿನ ರಾಜ್ಯಗಳಲ್ಲಿ ವಸಾಹತುಗಳಿಗಾಗಿ ನಡೆದ ಈ ಪೈಪೋಟಿಗೆ ಆರ್ಥಿಕ ಕ್ಷೇತ್ರದಲ್ಲಾದ ಕ್ರಾಂತಿಯೆ ಮುಖ್ಯವಾದ ಕಾರಣ. ಹತ್ತೊಂಬತ್ತನೆಯ ಶತಮಾನದ ಕೊನೆಯ ಮತ್ತು ಇಪ್ಪತ್ತನೆಯ ಶತಮಾನದ ಆದಿಭಾಗದ ಇತಿಹಾಸವೆಲ್ಲ ಐರೋಪ್ಯ ರಾಷ್ಟ್ರಗಳು ಮಾರುಕಟ್ಟೆಗಳಿಗಾಗಿ, ಕಚ್ಚಾಪದಾರ್ಥಗಳ ಪೂರೈಕೆಗಾಗಿ, ಹೆಚ್ಚಿನ ಬಂಡವಾಳವನ್ನು ರೂಢಿಸುವ ಸಲುವಾಗಿ, ಹೆಚ್ಚಿನ ಜನಸಂಖ್ಯೆಯನ್ನು ರವಾನಿಸುವುದಕ್ಕಾಗಿ ವಸಾಹತುಗಳನ್ನು ಕಟ್ಟುವುದರಲ್ಲಿ ನಡೆಸಿದ ಪೈಪೋಟಿಗಳಿಂದ ತುಂಬಿದೆ. ಐರೋಪ್ಯ ರಾಷ್ಟ್ರಗಳು ಆಫ್ರಿಕವನ್ನು ತಮ್ಮತಮ್ಮಲ್ಲೆ ಹಂಚಿಕೊಂಡುವು. ಏಷ್ಯ ಮತ್ತು ಮಧ್ಯಪೂರ್ವದ ರಾಷ್ಟ್ರಗಳಿಗೂ ಐರೋಪ್ಯರ ವಸಾಹತು ಪೈಪೋಟಿ ಹಬ್ಬಿತು. ಇಂಥ ಹತೋಟಿಯಿಂದ ರಾಷ್ಟ್ರ-ರಾಷ್ಟ್ರಗಳಲ್ಲಿ ತಿಕ್ಕಾಟ ಹೆಚ್ಚಾಯಿತು. ಇಂಗ್ಲೆಂಡ್ ಮತ್ತು ಜರ್ಮನಿಗಳ ಮಧ್ಯೆ ವೈಮನಸ್ಯ ಬೆಳೆಯಲು ಈ ಪೈಪೋಟಿಯೂ ಒಂದು ಮುಖ್ಯ ಕಾರಣ. ಆಸ್ಟ್ರಿಯ-ಹಂಗರಿ ಮತ್ತು ರಷ್ಯಗಳ ನಡುವಣ ವಾಣಿಜ್ಯ ಪೈಪೋಟಿಯೂ ರಾಜಕೀಯ ದ್ವೇಷವಾಗಿ ಪರಿವರ್ತನೆಗೊಂಡಿತು. ಇಟಲಿ ಮತ್ತು ಆಸ್ಟ್ರಿಯಗಳ ನಡುವೆ ಇದೇ ಕಾರಣದಿಂದ ಮನಸ್ತಾಪ ಬೆಳೆಯಿತು.

1880ರ ತರುವಾಯ ಪ್ರತಿವರ್ಷವೂ ಇಂಗ್ಲೆಂಡಿನಲ್ಲಿ ಜರ್ಮನಿಯ ವಿರುದ್ಧ ಭಯ ಹೆಚ್ಚಾಯಿತು. ಜರ್ಮನಿ ಪ್ರಪಂಚದ ವಾಣಿಜ್ಯ ಮತ್ತು ವ್ಯಾಪಾರಕ್ಷೇತ್ರಗಳಲ್ಲಿ ತನ್ನನ್ನು ಹಿಂದೆ ಹಾಕಬಹುದೆಂಬ ಭಯ ಇಂಗ್ಲೆಂಡಿಗೆ ಇತ್ತು. 1900ರಿಂದ 1914ರ ವರೆಗಿನ ಕಾಲದಲ್ಲಿ ಬ್ರಿಟನಿನಲ್ಲಿ ಜರ್ಮನಿಯ ಬಗ್ಗೆ ಹೊರಡಿಸಿದ ಅನೇಕ ಹೇಳಿಕೆಗಳಲ್ಲಿ ಈ ಭಯ ಎದ್ದು ಕಾಣುತ್ತದೆ. ಬ್ರಿಟನಿನ ವ್ಯಾಪಾರಿವರ್ಗದವರೂ ಕೈಗಾರಿಕೋದ್ಯಮಿಗಳೂ ಜರ್ಮನಿಯ ಪ್ರಭಾವವನ್ನು ಕುಗ್ಗಿಸುವ ದಿಸೆಯಲ್ಲಿ ತಮ್ಮ ಸರ್ಕಾರ ಯಾವ ಕ್ರಮ ಕೈಗೊಂಡರೂ ಬೆಂಬಲ ನೀಡಲು ಸಿದ್ಧರಿದ್ದರು.

ಶಸ್ತ್ರಾಸ್ತ್ರಗಳ ಪೈಪೋಟಿಯೂ ಮಹಾಯುದ್ಧಕ್ಕೆ ಒಂದು ಪ್ರಬಲ ಕಾರಣವೆನ್ನಬಹುದು. ಯೂರೋಪಿನ ರಾಷ್ಟ್ರಗಳಲ್ಲಿ ಏರ್ಪಟ್ಟಿದ್ದ ಪರಸ್ಪರ ವೈಷಮ್ಯ ಮತ್ತು ಸಂಶಯಗಳು ಯುದ್ಧಸನ್ನಾಹಕ್ಕೆ ಎಡೆಮಾಡಿಕೊಟ್ಟು ಶಸ್ತ್ರಾಸ್ತ್ರಗಳ ಪೈಪೋಟಿಗೆ ಕಾರಣವಾಗಿದ್ದುವು. ಇದರಿಂದ ಪ್ರತಿಯೊಂದು ರಾಷ್ಟ್ರವೂ ಸೇನಾಸಿದ್ಧತೆಯಲ್ಲಿ ಮತ್ತು ವಿನಾಶಕಾರಕ ಶಸ್ತ್ರಾಸ್ತ್ರಗಳನ್ನು ತಯಾರಿಸುವುದರಲ್ಲಿ ತೊಡಗುವಂತಾಯಿತು. 1868 ರಿಂದ 1913ರವರೆಗೆ 45 ವರ್ಷಗಳ ಅವಧಿಯಲ್ಲಿ ಪ್ರಪಂಚದ ರಾಷ್ಟ್ರಗಳು ಶಸ್ತ್ರಾಸ್ತ್ರಗಳಿಗಾಗಿ ಮಾಡುತ್ತಿದ್ದ ವೆಚ್ಚ 460 ಮಿಲಿಯನ್ ಡಾಲರುಗಳಿಂದ 2,531 ಡಾಲರುಗಳಿಗೆ ಏರಿತು. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಇಡೀ ಯೂರೋಪೇ ಅಪರಿಮಿತ ಸೇನೆಯ ಬೀಡಾಗಿ ಮಾರ್ಪಟ್ಟಿತೆನ್ನಬಹುದು.

ಅಂತರರಾಷ್ಟ್ರೀಯ ಪ್ರಶ್ನೆಗಳನ್ನು ಶಾಂತಿಯುತವಾಗಿ, ಸಂಧಾನದ ಮೂಲಕ ಬಗೆಹರಿಸಲು ಶಕ್ತವಾದ ಅಂತರರಾಷ್ಟ್ರೀಯ ಸಂಸ್ಥೆಯೊಂದು ಇಲ್ಲದೆ ಹೋದುದು ಕೂಡ ಒಂದನೆಯ ಮಹಾಯುದ್ಧ ಪ್ರಾರಂಭವಾಗಲು ಒಂದು ಕಾರಣ. ಗುಟ್ಟಿನ ರಾಜತಾಂತ್ರಿಕ ಒಡಂಬಡಿಕೆಗಳಿಗೆ ಆಗಿನ ಅನಿಶ್ಚಿತತೆಯೆ ಮೂಲ. ಒಂದು ದೇಶಕ್ಕೂ ಇನ್ನೊಂದು ದೇಶಕ್ಕೂ ನಡುವೆ ಜಾರಿಯಲ್ಲಿದ್ದ ಒಪ್ಪಂದಗಳ ಅರಿವು ಆ ದೇಶಗಳ ಮಂತ್ರಿಗಳಲ್ಲೇ ಅನೇಕರಿಗೆ ಗೊತ್ತಿರುತ್ತಿರಲಿಲ್ಲ ; ಶಾಸನಸಭೆಗಳಿಗೂ ಅವುಗಳ ಅರಿವಿರುತ್ತಿರಲಿಲ್ಲ. ಕಳ್ಳತನ, ಮೋಸ, ಲಂಚಗುಳಿತನ, ಕಳ್ಳಕೈಬರೆಹ ಮೊದಲಾದವೇ ಪ್ರಪಂಚದ ಪ್ರತಿಯೊಂದು ವಿದೇಶಾಂಗ ಖಾತೆಯನ್ನೂ ತುಂಬಿದ್ದುವು.

1914ರಲ್ಲಿ ಯುದ್ಧದ ಮುನ್ನಾದಿನಗಳಲ್ಲಿ ಯೂರೋಪಿನಲ್ಲಿದ್ದ ಪರಿಸ್ಥಿತಿ ಇದು. ಇಡೀ ಖಂಡವೇ ಮದ್ದಿನ ಮನೆಯಾಗಿತ್ತು. ಯಾವುದೇ ಘಟನೆಯ ಒಂದು ಕಿಡಿ ಬಿದ್ದರೂ ಸಾಕು, ಅದು ಸ್ಫೋಟಿಸುವಂತಿತ್ತು.

**ಭೂಯುದ್ಧ :** 1914ರ ಜೂನ್ 28ರಂದು ಆಸ್ಟ್ರಿಯದ ರಾಜಕುಮಾರ ಫ್ರಾನ್ಸಿಸ್ ಫರ್ಡಿನೆಂಡ್ ಸರ್ಬಿಯದ ಸಾರಾಯೆವೊ ಪಟ್ಟಣದಲ್ಲಿ ಕೊಲೆಗೀಡಾದಾಗ



ಆಸ್ಟ್ರಿಯದ ರಾಜಕುಮಾರ ಫ್ರಾನ್ಸಿಸ್ ಫರ್ಡಿನೆಂಡ್

ಆಸ್ಟ್ರಿಯ–ಹಂಗರಿ ಸರ್ಕಾರ ಸರ್ಬಿಯಕ್ಕೆ ಪ್ರತಿಭಟನೆ ಸಲ್ಲಿಸಿದ್ದಲ್ಲದೆ ಕೊಲೆಗೆ ಪರಿಹಾರವಾಗಿ ಅನೇಕ ಷರತ್ತುಗಳನ್ನು ಹಾಕಿತು. ರಷ್ಯದ ಸಲಹೆಯ ಮೇರೆಗೆ ಸರ್ಬಿಯ ಅವುಗಳಲ್ಲಿ ಎರಡನ್ನು ಬಿಟ್ಟು ಉಳಿದವನ್ನೆಲ್ಲ ಒಪ್ಪಿಕೊಂಡಿತು. ಇದರಿಂದ ಆಸ್ಟ್ರಿಯ–ಹಂಗರಿಗೆ ತೃಪ್ತಿಯಾಗಲಿಲ್ಲ. ಅದು ಸರ್ಬಿಯದ ಆಕ್ರಮಣವನ್ನಾರಂಭಿಸಿತು. ಸರ್ಬಿಯದ ಪಕ್ಷಕ್ಕೆ ರಷ್ಯವೂ ಫ್ರಾನ್ಸೂ ಆಸ್ಟ್ರಿಯದ ಕಡೆಗೆ ಜರ್ಮನಿಯೂ ಸೇರಿ ಯುದ್ಧದಲ್ಲಿ ತೊಡಗಿದುವು. ಪೂರ್ವ-ಪಶ್ಚಿಮಗಳೆರಡರಲ್ಲೂ ಯುದ್ಧ ನಡೆಸುವ ಉದ್ದೇಶದಿಂದ ಜರ್ಮನ್ ಸೈನ್ಯ ಗಡಿ ದಾಟಿತು.

ಫ್ರಾನ್ಸಿನೊಡನೆ ಯುದ್ಧ ಎಂದಾದರೂ ಒದಗುವುದೆಂದು ತಿಳಿದಿದ್ದ ಜರ್ಮನಿಯ ಸೇನಾನಾಯಕರು ಯುದ್ಧದ ಪ್ರಾರಂಭದಲ್ಲೇ ಬೆಲ್ಜಿಯಂ ಮೂಲಕ ತಮ್ಮ ಸೈನ್ಯ ಕಳಿಸಿ ಉತ್ತರದಿಂದ ಮುತ್ತುವ ಯೋಜನೆ ಮಾಡಿಕೊಂಡಿದ್ದರು. ಅದರಂತೆ ಜರ್ಮನ್ ಸೈನ್ಯಗಳು ಬೆಲ್ಜಿಯಂ ದೇಶದಲ್ಲಿ ನುಗ್ಗಿದುವು. ಫ್ರೆಂಚರ ಸಹಾಯಕ್ಕೆ ಹೊರಡುವುದು ಕರ್ತವ್ಯವಾಗಿದ್ದರೂ ಬ್ರಿಟಿಷರು ನಿಧಾನಿಸಿದ್ದರು. ಬೆಲ್ಜಿಯಂ ರಾಜ್ಯ ಜರ್ಮನಿಯ ಪಾದಾಕ್ರಾಂತವಾದಾಗ ಬೆಲ್ಜಿಯಂ ಸಮುದ್ರತೀರ ಜರ್ಮನಿಗೆ ವಶವಾಗುವ ಸಂಭವ ಕಂಡಿತು. ಹಿಂದಿನಿಂದಲೂ ಆ ತೀರಪ್ರದೇಶ ಯಾವ



ಜರ್ಮನ್ ದಾಳಿಗೆ ತುತ್ತಾದ ಒಂದು ಭವ್ಯ ಮಂದಿರ

ಪ್ರಬಲ ಐರೋಪ್ಯ ರಾಷ್ಟ್ರಕ್ಕೂ ಸೇರದಿರಬೇಕೆಂದು ಬ್ರಿಟಿಷರ ಉದ್ದೇಶ. ಬೆಲ್ಜಿಯಂ ರಾಜ್ಯದ ತಾಟಸ್ಥ್ಯವನ್ನೆಲ್ಲರೂ ಗೌರವಿಸುವುದಾಗಿ ನಾಲ್ಕನೆಯ ವಿಲಿಯಂ ದೊರೆಯ ಕಾಲದಲ್ಲಿ ವಾಗ್ದಾನವಾಗಿತ್ತು. ಜರ್ಮನರು ಆ ವಾಗ್ದಾನವನ್ನು ಮುರಿದರೆಂದು ಬ್ರಿಟಿಷರು ಆಗಸ್ಟ್ ತಿಂಗಳಲ್ಲಿ ಯುದ್ಧಕ್ಕೆ ಸೇರಿದರು. ರಾಜಕಾರಣಿ ಸರ್ ಎಡ್ವರ್ಡ್ ಗ್ರೇ ಕಾಮನ್ಸ್ ಸಭೆಯಲ್ಲಿ ಭಾಷಣಮಾಡಿ ಆಗಿನ ಪರಿಸ್ಥಿತಿಯನ್ನು ವಿವರಿಸಿ ಯುದ್ಧಕ್ಕೆ ಪಾರ್ಲಿಮೆಂಟಿನ ಒಪ್ಪಿಗೆ ಪಡೆದ.

ಯುದ್ಧ ಮುಂದುವರಿದಂತೆ ಅನೇಕ ರಾಷ್ಟ್ರಗಳು ಇದರ ಸುಳಿಯಲ್ಲಿ ಸಿಲುಕಿದುವು. ಬ್ರಿಟನ್ ಯುದ್ಧಕ್ಕೆ ಕಾಲಿಟ್ಟ ಸ್ವಲ್ಪ ಕಾಲದಲ್ಲೇ ಜಪಾನು ಜರ್ಮನಿಗೆದುರಾಗಿ ಯುದ್ಧದಲ್ಲಿ ತೊಡಗಿತು. 1915ರಲ್ಲಿ ಇಟಲಿಯೂ ಜರ್ಮನಿಗೆ ವಿರೋಧವಾಗಿ ಯುದ್ಧವನ್ನಾರಂಭಿಸಿತು. 1916ರಲ್ಲಿ ಪೋರ್ಚುಗಲ್, ರೂಮೇನಿಯ. ಗ್ರೀಸ್‌ಗಳೂ 1917ರಲ್ಲಿ ಅಮೆರಿಕದ ಸಂಯುಕ್ತಸಂಸ್ಥಾನವೂ ಜರ್ಮನಿಗೆ ಹಗೆಗಳಾಗಿ ಯುದ್ಧದಲ್ಲಿ ಸೇರಿದುವು. ತರುವಾಯ ಮಿತ್ರರಾಷ್ಟ್ರಗಳ ಗುಂಪಿಗೆ (ಬ್ರಿಟನ್ ಮತ್ತು ಫ್ರಾನ್ಸ್) ಅಮೆರಿಕದ ಇನ್ನೂ ಹಲವಾರು ರಾಷ್ಟ್ರಗಳೂ ಸೇರಿದುವು. ಜರ್ಮನಿಯ ಪಕ್ಷವನ್ನು 1914ರಲ್ಲಿ ತುರ್ಕಿಯೂ 1915ರಲ್ಲಿ ಬಲ್ಗೇರಿಯವೂ ಸೇರಿಕೊಂಡುವು. ಕ್ಯೂಬ ಮತ್ತು ಪನಾಮಗಳು ಜರ್ಮನಿಯ ಮೇಲೆ ಏಪ್ರಿಲ್ 7, 1917ರಲ್ಲಿ ಯುದ್ಧ ಘೋಷಿಸಿದುವು. ಲ್ಯಾಟಿನ್ ಅಮೆರಿಕದಲ್ಲಿ ಮೊದಲು ಯುದ್ಧಕ್ಕೆ ಸೇರಿದ ದೇಶವೆಂದರೆ ಪನಾಮ. ಸಂಯುಕ್ತಸಂಸ್ಥಾನ ಯುದ್ಧ ಘೋಷಿಸಿದ ವಾರ



ಲಂಡನಿನ ಟ್ರಫಾಲ್ಗರ್ ಚೌಕದಲ್ಲಿ ಸೈನ್ಯಜವಾವಣೆ ಕಾರ್ಯ

ನೆಯ ದಿವಸವೇ ಪನಾಮವೂ ಯುದ್ಧ ಘೋಷಿಸಿತು. ಗ್ರೀಸ್, ಸಯಾಂ (ಈಗಿನ ಥೈಲೆಂಡ್), ಲೈಬೀರಿಯ, ಚೀನ ಮತ್ತು ಬ್ರೆಜಿಲ್ ದೇಶಗಳು ಜರ್ಮನಿ ಮತ್ತು ಅದರ ಮಿತ್ರರಾಷ್ಟ್ರಗಳ ಮೇಲೆ 1917ರಲ್ಲಿ ಯುದ್ಧ ಘೋಷಿಸಿದುವು. 1918ರಲ್ಲಿ ಗ್ವಾಟೆಮಾಲ, ನಿಕರಾಗ್ವ. ಕಾಸ್ಟರೀಕ, ಹೇಟಿ ಮತ್ತು ಹಾಂಡುರಾಸ್ ದೇಶಗಳು ಮಿತ್ರರಾಷ್ಟ್ರಗಳ ಗುಂಪಿಗೆ ಸೇರಿದುವು. ಒಟ್ಟು ಜರ್ಮನಿ ಮತ್ತು ಅದರ ಮಿತ್ರರಾಷ್ಟ್ರಗಳ ಎದುರಿಗೆ ಮಹಾಯುದ್ಧದಲ್ಲಿ ನಿಂತ ರಾಷ್ಟ್ರಗಳ ಸಂಖ್ಯೆ 23ಕ್ಕೆ ಏರಿತು. ಇವುಗಳ ವಿರುದ್ಧವಾಗಿದ್ದವು 4 ರಾಷ್ಟ್ರಗಳು ಮಾತ್ರ. ಇಂಥ ಯುದ್ಧ ಇತಿಹಾಸದಲ್ಲಿ ಹಿಂದೆಂದೂ ಆಗಿರಲಿಲ್ಲ. ಇಷ್ಟೊಂದು ರಾಷ್ಟ್ರಗಳು ಒಂದೇ ಯುದ್ಧದಲ್ಲಿ ಭಾಗವಹಿಸಿದ್ದು ಅದೇ ಮೊದಲು. ಸಂಖ್ಯೆಯ ದೃಷ್ಟಿಯಿಂದಲೂ ಪಕ್ಷಗಳ ಬಲಾಬಲಗಳ ದೃಷ್ಟಿಯಿಂದಲೂ ಇದೊಂದು ಮಹಾಯುದ್ಧ. ಇದರ ಪರಿಣಾಮ



ಕೈಸರ್ ವಿಲಿಯಂ ಮತ್ತು ಜಾರ್ಜ್ ದೊರೆ

ಗಳಂತೂ ಈ ಶತಮಾನದ ವಿಶ್ವದ ಇತಿಹಾಸದಲ್ಲಿ ವೈವಿಧ್ಯಪೂರ್ಣವಾಗಿವೆ; ಭೀಕರವಾಗಿವೆ. ಈ ಯುದ್ಧ ಹಲವು ವಿಧದಲ್ಲಿ ಮಾನವಸಂತತಿಗೆ ಪಾಠ ಕಲಿಸುವ ಉದಾಹರಣೆಯಾಗಿದೆ.

ಒಂದನೆಯ ಮಹಾಯುದ್ಧದ ರೀತಿಗೂ ಹಳೆಯ ಕಾಲದ ಯುದ್ಧಗಳ ರೀತಿಗೂ ಬಹಳ ವ್ಯತ್ಯಾಸಗಳಿದ್ದುವು. ಯುದ್ಧವೆಂಬುದು ಹಲಕೆಲವು ಸೈನ್ಯಗಳು ಎದುರುಬದುರಾಗಿ ಹೋರಾಡುವುದಲ್ಲ; ರಾಷ್ಟ್ರ-ರಾಷ್ಟ್ರಗಳು ಸರ್ವ ವಿಧಗಳಲ್ಲೂ ಹಗೆತನ



ಹಿಂಡನ್‌ಬರ್ಗ್ ರೇಖೆ ದಾಟಲು ಸಜ್ಜಾದ ಬ್ರಿಟಿಷ್ ಟ್ಯಾಂಕುಗಳು

ಸಾಧಿಸುತ್ತ ಪರಸ್ಪರವಾಗಿ ನಾಶಗೊಳಿಸುವುದಾಯಿತು. ಯುದ್ಧದ ವೆಚ್ಚ ಅಪರಿಮಿತ. ಆದ್ದರಿಂದ ಯುದ್ಧಕ್ಕೆ ತೊಡಗಿದ ರಾಷ್ಟ್ರದಲ್ಲಿ ತೆರಿಗೆಗಳು ಮಾತ್ರವಲ್ಲದೆ ಅವುಗಳ ಸಾಲಗಳೂ ಏರುತ್ತ ಹೋದುವು. ಆಯುಧಪ್ರಯೋಗದಲ್ಲಿಯೂ ದೊಡ್ಡ ವ್ಯತ್ಯಾಸ ತೋರಿತು. ಶಾಸ್ತ್ರಜ್ಞಾನ ಹೆಚ್ಚಿದಂತೆ ಬಂದ ಯಂತ್ರಾಯುಧಗಳು ಭಯಂಕರವಾದುವು. ಇಪ್ಪತ್ತನೆಯ ಶತಮಾನದ ಆದಿಯಲ್ಲಿ ವಿರಾಡ್ರೂಪದಿಂದ ಪ್ರಜ್ವಲಿಸಿದ ಒಂದನೆಯ ಮಹಾಯುದ್ಧದಲ್ಲಿ ಭಯಂಕರವಾದ ಅಸ್ತ್ರಗಳು ಮೊಟ್ಟಮೊದಲ ಬಾರಿಗೆ ಪ್ರಯೋಗಿಸಲ್ಪಟ್ಟವು. ಈ ಯುದ್ಧದಲ್ಲಿ ಆಕಾಶಗಾಮಿಗಳೂ ಜಲಾಂತರ್ಗಾಮಿಗಳೂ ಆದ ಯಂತ್ರಗಳಲ್ಲದೆ ಬಾಂಬು, ವಿಷವಾಯು, ಕೃತ್ರಿಮ ಮೋಡ, ಜಲಜ್ವಾಲೆ, ಟ್ಯಾಂಕು ಮುಂತಾದ ಅನೇಕಾನೇಕ ರಾಕ್ಷಸವಿಧಾನಗಳು ಪ್ರಯೋಗವಾದುವು. ಒಂದನೆಯ ಮಹಾಯುದ್ಧ ಪ್ರಪಂಚದ ಇತಿಹಾಸದಲ್ಲಿ ಮತ್ತೊಂದು ಯುಗವನ್ನೇ ಪ್ರಾರಂಭಿಸಿತು ಎಂದು ಹೇಳಬಹುದು. ಯುದ್ಧದ ರೀತಿನೀತಿಗಳಲ್ಲೇ ಕ್ರಾಂತಿಕಾರಕ ಬದಲಾವಣೆಗಳಾದುವು.

**1914**ರಲ್ಲಿ ಯುದ್ಧ ಪ್ರಾರಂಭವಾದಾಗ ಜರ್ಮನರು ಕೆಲವು ತಿಂಗಳುಗಳಲ್ಲಿ ಜಯಲಭಿಸಬಹುದೆಂದು ನಿರೀಕ್ಷಿಸಿದರು. ರಷ್ಯದ ಸೇನೆಗಳು ಒಟ್ಟುಗೂಡಿ ಓಡಾಡುವುದು ನಿಧಾನವಾದುದರಿಂದ ಜರ್ಮನರು ತಮಗೆ ಪೂರ್ವದ ಕಡೆಯಿಂದ ಆಪತ್ತು ತೋರಬಹುದೆಂದು ಚಿಂತಿಸುವ ಹಾಗಿರಲಿಲ್ಲ. ಫ್ರೆಂಚರು ರೋಷದಿಂದ ಯುದ್ಧ ನಡೆಸತಕ್ಕವರು. ಆದರೆ ಬೆಲ್ಜಿಯಂ ಮೂಲಕ ಫ್ರಾನ್ಸಿನ ವಾಯುವ್ಯ ದಿಕ್ಕಿನಲ್ಲಿ ಮುತ್ತಿದರೆ ಫ್ರೆಂಚರು ಬೇಗನೆ ಸೋತಾರೆಂದು ಜರ್ಮನರು ಭಾವಿಸಲು ಕಾರಣವಿತ್ತು. ಜರ್ಮನರ ಯುದ್ಧಸನ್ನಾಹ ವಾಸ್ತವವಾಗಿ ಅದ್ಭುತವಾಗಿತ್ತು. ರಷ್ಯದ ಸೈನ್ಯಗಳು ಒಟ್ಟುಗೂಡುವುದರೊಳಗಾಗಿ ಫ್ರಾನ್ಸಿನಲ್ಲಿ ವೇಗದಿಂದ ಮುತ್ತಿಗೆ ನಡೆಸಿ ಫ್ರೆಂಚರನ್ನು ಸೋಲಿಸಿ ತರುವಾಯ ರಷ್ಯವನ್ನು ಸೋಲಿಸುವ ಕ್ರಮವನ್ನು ಅವರು ಇಟ್ಟುಕೊಂಡರು. ಬ್ರಿಟಿಷರಿಗೆ ಐರ್ಲೆಂಡಿನಲ್ಲಿ ಅಂತರ್ಯುದ್ಧ ಹೊದಗುವಂತಿದ್ದುದರಿಂದಲೂ ನೌಕಾಬಲವೇ ವಿಶೇಷವಾಗಿದ್ದುದರಿಂದಲೂ ಜರ್ಮನರಿಗೆ ಈ ಕಾರ್ಯಕ್ರಮವೂ ಬೇಗನೆ ಮುಗಿದೀತೆಂದು ತೋರಿತು.

ಜರ್ಮನ್ ಸೈನ್ಯಗಳು ಬೆಲ್ಜಿಯಂಗೆ ನುಗ್ಗಿ ಅಲ್ಲಿಂದ ಹೊರಟು ಲೀಯೇಷ್ ಮುಂತಾದ ಪಟ್ಟಣಗಳನ್ನು ಒಂದೊಂದಾಗಿ ಹಿಡಿದುವು. ಬೆಲ್ಜಿಯಂ ರಾಜ್ಯವನ್ನು ದಾಟಿ ಫ್ರಾನ್ಸಿನೊಳಗೆ ಜರ್ಮನರು ಪ್ರವೇಶಿಸುವ ವೇಳೆಗೆ ಫ್ರೆಂಚರು ಅತಿಕ್ಷಿಪ್ರವಾಗಿ ಸಿದ್ಧರಾಗಿ ಅವರನ್ನೆದುರಿಸಿದರು. ಬ್ರಿಟಿಷರು ಬೇಗನೆ ಯುದ್ಧಭೂಮಿಗೆ ಸೈನ್ಯ ಕಳುಹಿಸಿದರು. ಜರ್ಮನರು ನಿರೀಕ್ಷಿಸಿದಷ್ಟು ವೇಗದಲ್ಲಿ ಜಯಲಾಭವಾಗಲಿಲ್ಲ. ಅತ್ತ ರಷ್ಯನರು ಪೂರ್ವ ಪ್ರಷ್ಯವನ್ನು ಮುತ್ತಲು ಎರಡು ದೊಡ್ಡ ಸೈನ್ಯಗಳನ್ನು ಕಳುಹಿಸಿದರು. ಆಗ ಜರ್ಮನರು ಫ್ರಾನ್ಸಿನಲ್ಲಿದ್ದ ತಮ್ಮ ಸೈನ್ಯಗಳಲ್ಲಿ ಎರಡು ಭಾಗಗಳನ್ನು ಅಲ್ಲಿಂದೆತ್ತಿ ಪೂರ್ವಕ್ಕೆ ಕಳುಹಿಸಬೇಕಾಯಿತು. ಈ ಕಾರಣದಿಂದ ಜರ್ಮನ್ ಸೈನ್ಯಗಳು ದುರ್ಬಲಗೊಂಡಿದ್ದಾಗ್ಯೂ ಅವು ಫ್ರಾನ್ಸಿನಲ್ಲಿ ನುಗ್ಗಿ ಪ್ಯಾರಿಸ್ ಕಡೆಗೆ ಹೊರಡುತ್ತಿದ್ದುವು. ಫ್ರೆಂಚ್ ಸರ್ಕಾರ ಪ್ಯಾರಿಸ್ ಬಿಟ್ಟು ಬಾರ್ಡೋ ಪಟ್ಟಣಕ್ಕೆ ಹೊರಟಿತು. ಮಾರ್ನ್ ನದಿಯ ಬಳಿ ಫ್ರೆಂಚರೂ ಬ್ರಿಟಿಷರೂ ಸೇರಿ ಜರ್ಮನರನ್ನು ತಡೆದು ಹಿಮ್ಮೆಟ್ಟಿಸಿದರು. ಹಿನ್ನಡೆದ ಜರ್ಮನ್ ಸೇನೆ ಏನ್ ನದಿಯ ಬಳಿ ನಿಂತು ಸಮುದ್ರತೀರದವರೆಗೂ ವ್ಯಾಪಿಸಿ, ಫ್ರಾನ್ಸಿಗೆ ಉತ್ತರದಲ್ಲಿ ಬೃಹದ್ರೂಪದ ಕೋಟೆ ಕಟ್ಟಿದಂತೆ ಕಂದಕಗಳನ್ನು ತೋಡಿ ಬೇಲಿ ಕಟ್ಟಿ ಬತ್ತೇರಿಗಳನ್ನಿಟ್ಟು ತನ್ನ ಸ್ಥಾನವನ್ನು ಭದ್ರಪಡಿಸಿಕೊಂಡಿತು. ಬ್ರಿಟಿಷರೂ ಫ್ರೆಂಚರೂ ಜರ್ಮನರ ಎದುರಿಗೆ ತಾವೂ ಕಂದಕಗಳನ್ನು ತೋಡಿಕೊಂಡರು. ಎದುರುಬದುರಾಗಿ ಭಾರೀ ಸೈನ್ಯಗಳು ಈ ರೀತಿಯಾಗಿ ಹಳ್ಳಗಳನ್ನು ತೋಡಿಕೊಂಡು ದೀರ್ಘಕಾಲ ಕಳೆಯಬೇಕಾಗಿ ಬಂತು.

ಪೂರ್ವದಲ್ಲಿ ಪ್ರಷ್ಯವನ್ನು ಮುತ್ತಿದ ರಷ್ಯದ ಸೈನ್ಯವನ್ನು ಜರ್ಮನ್ ದಂಡನಾಯಕರಲ್ಲಿ ಪ್ರಸಿದ್ಧರಾದ ಹಿಂಡನ್‌ಬರ್ಗ್ (ನೋಡಿ) ಮತ್ತು ಲೂಡೆನ್‌ಡಾರ್ಫ್ (ನೋಡಿ) ಎದುರಿಸಿದರು. ಟಾನೆನ್‌ಬರ್ಗ್ ಕದನದಲ್ಲೂ ಮಸೂರಿಯನ್ ಸರೋವರಗಳ ಬಳಿಯ ಹೋರಾಟದಲ್ಲೂ ರಷ್ಯ ಸೋತಿತು. ಇತರೆಡೆಗಳಲ್ಲಿ ರಷ್ಯನರು ಹಿಮ್ಮೆಟ್ಟ



ಯುದ್ಧದ ಮುಂಚೂಣಿಗೆ ಸಾಗುತ್ತಿರುವ ಫ್ರೆಂಚ್ ಪಡೆ



ತುರ್ಕಿಯ ಒಂಟಿಪಡೆ

ಆಗ್ನೇಯದಲ್ಲಿ ಬಾಲ್ಕನ್ ಕ್ಷೇತ್ರದಲ್ಲೂ ಜಯಶಾಲಿಗಳಾಗಿದ್ದರು. ಆದರೆ ಅದೇ ವರ್ಷ ಇಟಲಿಯವರು ಬ್ರಿಟಿಷರ ಕಡೆ ಸೇರಿ ಆಸ್ಟ್ರಿಯದ ಮೇಲೆ ಯುದ್ಧಕ್ಕೆ ಹೊರಟರು. ಬ್ರಿಟನಿನಲ್ಲಿ ಮಂತ್ರಿಮಂಡಲ ಪುನರ್ ವ್ಯವಸ್ಥೆಗೊಳಗಾಗಿ ಸರ್ವಪಕ್ಷಗಳ ಸರ್ಕಾರ ರಚಿತವಾಯಿತು.

ಬ್ರಿಟಿಷರೇ ತಮ್ಮ ಮುಖ್ಯ ಶತ್ರುಗಳೆಂದು ಜರ್ಮನರ ಭಾವನೆ. ಬ್ರಿಟಿಷರು ಬೆಲ್ಜಿಯಂ ಮತ್ತು ಫ್ರಾನ್ಸ್‌ಗಳಿಗೆ ಸೈನ್ಯದ ನೆರವು ನೀಡಿದ್ದಲ್ಲದೆ ಜರ್ಮನಿಯ ಶತ್ರುಗಳಿಗೆಲ್ಲರಿಗೂ ಸಾಲ ಕೊಡುತ್ತ ವ್ಯಾಪಾರ ಸರಕುಗಳನ್ನು ಸಮುದ್ರದ ಮೇಲೊಯ್ದು ಒದಗಿಸುತ್ತಲಿದ್ದರು. 1916ರಲ್ಲಿ ಜರ್ಮನರು ಮೊದಲು ಫ್ರೆಂಚರನ್ನು ರಭಸದಿಂದ ತಾಗಿ ಸೋಲಿಸಬೇಕೆಂದು ವರ್ದನ್‌ನಲ್ಲಿ ಫ್ರಾನ್ಸನ್ನು ಆಕ್ರಮಿಸಿದರು. ಎರಡು ಕಡೆಗಳಿಗೂ ಅಪಾರ ನಷ್ಟ ಸಂಭವಿಸಿತು. ಆದರೆ ಫ್ರೆಂಚರು ಶರಣೆನ್ನಲಿಲ್ಲ. ಆ ವೇಳೆಗೆ ಬ್ರಿಟಿಷರೂ ತಮ್ಮ ಸೈನ್ಯಗಳನ್ನು ಹೆಚ್ಚಿಸಿಕೊಂಡಿದ್ದರು. ಸಾಮ್ ನದಿಯ ಬಳಿ ಬ್ರಿಟಿಷರೂ ಫ್ರೆಂಚರೂ ಸೇರಿ ಜರ್ಮನರನ್ನು ಆಕ್ರಮಿಸಿದರು. ಮತ್ತೆ ಅಪಾರ ಪ್ರಾಣನಷ್ಟವಾಯಿತು. ಜಯಾಪಜಯಗಳು ನಿರ್ಧರವಾಗಲಿಲ್ಲ.

ಬೇಕಾಯಿತು. ಜರ್ಮನರು ಮುನ್ನಡೆದು ರಷ್ಯನ್ ಸಾಮ್ರಾಜ್ಯದೊಳಕ್ಕೆ ತಮ್ಮ ಸೈನ್ಯಗಳನ್ನು ನುಗ್ಗಿಸಿದರು. ಬಾಲ್ಟಿಕ್ ತೀರದಿಂದ ಕಾರ್ಪೇಥಿಯನ್ ಶ್ರೇಣಿಯ ವರೆಗಿರುವ ವಿಶಾಲ ಭೂಭಾಗದಲ್ಲಿ ಜರ್ಮನ್-ರಷ್ಯನ್ ಸೈನ್ಯಗಳು ಎದುರುಬದುರಾಗಿ ಹೊಂಚುತ್ತ ಹೋರಾಡುತ್ತಿರಬೇಕಾಯಿತು.

ಯುದ್ಧದ ಮೊದಲನೆಯ ವರ್ಷದಲ್ಲೇ ತುರ್ಕಿಯ ಸುಲ್ತಾನ ಜರ್ಮನಿಯ ಕಡೆ ಸೇರಿದ. ಆಗ ಬ್ರಿಟಿಷರು ತುರ್ಕಿಯನ್ನು ಎಲ್ಲಾದರೂ ಮುತ್ತುವ ಯೋಚನೆ ನಡೆಸಿದರು. ಡಾರ್ಡನೆಲ್ಸ್ ಮಾರ್ಗವನ್ನು ವಶಪಡಿಸಿಕೊಂಡು ರಷ್ಯದೊಡನೆ ಸೇರಿಸಿಕೊಳ್ಳುವ ಉದ್ದೇಶದಿಂದ ಸಣ್ಣ ಪರ್ಯಾಯದ್ವೀಪವಾದ ಗ್ಯಾಲಿಪೋಲಿಯನ್ನು ಮುತ್ತುವುದು ಅವರ ಯೋಚನೆಯಾಗಿತ್ತು. ಭೂ ಜಲಸೇನೆಗಳು ಒಟ್ಟುಗೂಡಿ ಆ ಪ್ರದೇಶವನ್ನು ಮುತ್ತಿದುವು. ಆದರೆ ಜಯ ಲಭಿಸಲಿಲ್ಲ. ಸಲೋನಿಕ ಒಂದು ಮಾತ್ರ ವಶವಾಯಿತು. ಅದೇ ವೇಳೆಗೆ ರಷ್ಯನರು ಪೋಲೆಂಡನ್ನು ಜರ್ಮನರಿಗೊಪ್ಪಿಸಿ ಹಿಮ್ಮೆಟ್ಟಿದರು. ಜರ್ಮನ್ ಪಕ್ಷ ಸೇರಿಕೊಂಡ ಬಲ್ಗೇರಿಯ ರಾಷ್ಟ್ರ ಸರ್ಬಿಯನರ ಮೇಲೆ ಯುದ್ಧ ಹೂಡಿತು. ಸರ್ಬಿಯನರು ಜರ್ಮನಿ, ಆಸ್ಟ್ರಿಯ ಮತ್ತು ಬಲ್ಗೇರಿಯಗಳನ್ನು ಎದುರಿಸಲಾರದೆ ಅಡಗಿಹೋದರು.

1915ರಲ್ಲಿ ಗ್ಯಾಲಿಪೋಲಿ ಮತ್ತು ಸರ್ಬಿಯಗಳಲ್ಲಿ ಬ್ರಿಟಿಷರ ಪಕ್ಷಕ್ಕೆ ಜಯವೊದಗಲಿಲ್ಲ. ಫ್ರಾನ್ಸಿನ ಉತ್ತರ ಭಾಗದಲ್ಲಿ ಕಂದಕಗಳ ಹೋರಾಟ ನಡೆಯುತ್ತಲೇ ಇತ್ತು. ಅತ್ತಕಡೆ ವೇಗದಿಂದ ಜಯ ಪಡೆಯಬೇಕೆಂದಿದ್ದ ಜರ್ಮನರ ಕಾರ್ಯಕ್ರಮಕ್ಕೆ ಅಡ್ಡಿಯೇನೋ ಆಯಿತು. ಆಯಿನ್ ನದಿಯ ಪಕ್ಕದಲ್ಲಿ ಜರ್ಮನರು ವ್ಯೂಹರಚನೆ ಮಾಡಿಕೊಂಡ ತರುವಾಯ ಸಮುದ್ರತೀರವನ್ನು ವಶಪಡಿಸಿಕೊಳ್ಳಲು ಯತ್ನಿಸಿ ಇಪ್ರೆಸ್ ಬಳಿ ಬ್ರಿಟಿಷರೊಡನೆ ಹೋರಾಟ ನಡೆಸಿದರು. ಬ್ರಿಟಿಷರು ಮುಂದೆ ನುಗ್ಗಿ ನವ್‌ಷಾಪೆಲ್ ಮತ್ತು ಲೂಸ್‌ಗಳಲ್ಲಿ ಜರ್ಮನರ ಮೇಲೆರಗಿದರು. ಫ್ರೆಂಚರು ಅದೇ ಸಮಯದಲ್ಲಿ ಷ್ಯಾಂಪೇನ್ ಮತ್ತು ಆರ್ಟ್‌ವಾ ಪ್ರದೇಶಗಳಲ್ಲಿ ಮುಂದೆ ನುಗ್ಗಿ ಆಕ್ರಮಿಸಲು ಪ್ರಯತ್ನಿಸಿದರು. ಉತ್ತರ ಸಮುದ್ರದಿಂದ ಸ್ವಿಟ್ಸರ್ಲೆಂಡ್‌ವರೆಗೆ ನೂರಾರು ಮೈಲಿಗಳ ಉದ್ದದ ಎದುರುಬದುರು ಕಂದಕಗಳಲ್ಲಿದ್ದ ಸೈನ್ಯಗಳು ಲಕ್ಷಗಟ್ಟಲೆ. ಪ್ರತಿಯೊಂದು ಗಜ ಮುಂದುವರಿಯಬೇಕಾದರೂ ಅನೇಕ ಪ್ರಾಣಗಳು ನಷ್ಟವಾಗುತ್ತಿದ್ದುವು. ಇಪ್ರೆಸ್ ಬಳಿ ಎರಡನೆಯ ಹೋರಾಟವಾದಾಗ ಜರ್ಮನರು ವಿಷವಾಯು ಪ್ರಯೋಗಿಸಿದರು.

1915ರಲ್ಲಿ ಬ್ರಿಟಿಷ್-ಫ್ರೆಂಚ್ ಪಕ್ಷಕ್ಕೆ ದೊಡ್ಡ ಜಯವಾವುದೂ ಲಭಿಸಲಿಲ್ಲ. ಜರ್ಮನರಾದರೋ ಪೂರ್ವದಲ್ಲಿ ರಷ್ಯದಲ್ಲೂ

ಪೋಲೆಂಡಿನಲ್ಲಿ ಪರಾಜಯ ಹೊಂದಿದ ಬಳಿಕ ರಷ್ಯನರು ಚೇತರಿಸಿಕೊಂಡು ಪುನಃ ಸನ್ನಾಹ ಮಾಡಿ ಆಸ್ಟ್ರಿಯ-ಹಂಗರಿ ರಾಷ್ಟ್ರವನ್ನು ಮುತ್ತಿದರು. ಇಟಲಿಯೂ ಆ ರಾಷ್ಟ್ರವನ್ನು ತೆಂಕಲಿಂದ ಮುತ್ತಿ ಇಸಾಂಟ್ಸೊ ನದಿಯ ಬಳಿ ಗೆಲವು ಪಡೆಯಿತು. ರಷ್ಯನರು ಜಯಶಾಲಿಗಳಾಗಬಹುದೆಂದು ಭಾವಿಸಿ ರೂಮೇನಿಯ ರಷ್ಯದ ಪಕ್ಷ ಸೇರಿ ಯುದ್ಧಪ್ರವೇಶ ಮಾಡಿತು. ಆಗ ಆಸ್ಟ್ರಿಯ-ಹಂಗರಿಯ ಸಹಾಯಕ್ಕಾಗಿ ಜರ್ಮನರು ಬಾಲ್ಕನ್ ಕ್ಷೇತ್ರಗಳ ಕಡೆಗೆ ತಮ್ಮ ಸೈನ್ಯ ಕಳಿಸಬೇಕಾಯಿತು. ವೇಗದಿಂದ ನುಗ್ಗಿಬಂದ ಜರ್ಮನರು ರಷ್ಯದವರನ್ನೋಡಿಸಿದ್ದಲ್ಲದೆ ರೂಮೇನಿಯವನ್ನು ಮುತ್ತಿ ಆ ರಾಷ್ಟ್ರದ ಅರ್ಧಭಾಗವನ್ನು ವಶಪಡಿಸಿಕೊಂಡರು.

ದೂರ ಪ್ರಾಚ್ಯದಲ್ಲಿ ಜಪಾನ್ 1914ರ ಆಗಸ್ಟ್ ತಿಂಗಳಲ್ಲೇ ಬ್ರಿಟಿಷರ ಪಕ್ಷ ಸೇರಿ ಚೀನ ತೀರದಲ್ಲಿ ಜರ್ಮನರು ಸಂಪಾದಿಸಿಕೊಂಡಿದ್ದ ರೆಯಾಟಾವನ್ನಾಕ್ರಮಿಸಿಕೊಂಡಿದ್ದರು. ಪೆಸಿಫಿಕ್ ಸಾಗರದಲ್ಲಿ ಜರ್ಮನರಿಗೆ ನೆಲೆಯೇ ಇಲ್ಲವಾಗಿತ್ತು. ಜರ್ಮನರು ದೊಡ್ಡ ಹಡಗುಪಡೆ ಕಟ್ಟಿಕೊಂಡಿದ್ದಾಗ್ಯೂ ಬ್ರಿಟಿಷರ ಬಲಕ್ಕೆ ಸಮನಾದ ಬಲ ಪಡೆದಿರಲಿಲ್ಲ. ಯುದ್ಧದ ಪ್ರಾರಂಭದಲ್ಲೇ ಯುದ್ಧನೌಕೆಗಳು



ಪ್ಯಾರಿಸಿನಿಂದ ಬರ್ಲಿನಿಗೆ : ಫ್ರೆಂಚ್ ಸೇನೆಯ ಪಾದಯಾತ್ರೆ



ಆಸ್ಟ್ರಿಯದ ಗಡಿಯಲ್ಲಿ ಹೋರಾಡುತ್ತಿರುವ ಇಟಾಲಿಯನ್ ಸೈನಿಕರು

ಜರ್ಮನ್ ಬಂದರುಗಳನ್ನು ಬಿಟ್ಟು ಹೊರಡದಂತೆ ಬ್ರಿಟಿಷ್ ನೌಕಾಬಲ ಅತಿಜಾಗೃತಿಯಿಂದ ದಿಗ್ಬಂಧನ ಹಾಕಿತ್ತು. ಅದು ಶತ್ರುಬಲವನ್ನು ಬಂಧನದಲ್ಲಿಡುವುದಲ್ಲದೆ ಬೇರೆ ಕಾರ್ಯಗಳನ್ನೂ ನಿರ್ವಹಿಸುತ್ತಿತ್ತು. ಬ್ರಿಟಿಷ್ ದ್ವೀಪಗಳ ಸುತ್ತಲೂ ಕೋಟೆ ಕಟ್ಟಿಕೊಂಡಂತೆ ಇದ್ದು ಸ್ವದೇಶರಕ್ಷಣೆಯನ್ನು ನಿರ್ವಹಿಸಿತು. ಬ್ರಿಟನಿನಿಂದ ಫ್ರಾನ್ಸಿಗೆ ಹಡಗುಗಳಲ್ಲಿ ಲಕ್ಷಾಂತರ ಸೈನಿಕರನ್ನು ಸಾಗಿಸಿಕೊಡುತ್ತಿತ್ತು. ಶತ್ರುಗಳ ವ್ಯಾಪಾರದ ಹಡಗುಗಳು ಯಾವ ಸಮುದ್ರದಲ್ಲೇ ಸಾಗುತ್ತಿರಲಿ ಅವನ್ನು ಬ್ರಿಟಿಷ್ ನೌಕಾಪಡೆ ತಡೆಯುತ್ತಿದ್ದುದರಿಂದ ಜರ್ಮನರ ಸಾಗರೋತ್ತರ ವ್ಯಾಪಾರವೇ ಸ್ಥಗಿತವಾಗಿತ್ತು. ಬ್ರಿಟನಿನ ಮಿತ್ರರಾಷ್ಟ್ರಗಳ ವ್ಯಾಪಾರ ಹಡಗುಗಳಿಗೆ ರಕ್ಷಣೆ ದೊರಕಿತ್ತು. ಎಲ್ಲಕ್ಕೂ ಮೇಲಾಗಿ ಸಮುದ್ರಮಾರ್ಗಗಳನ್ನು ತಮ್ಮ ಸ್ವಾಧೀನದಲ್ಲಿಟ್ಟುಕೊಂಡು ಬ್ರಿಟನಿಗೆ ಅತ್ಯಾವಶ್ಯಕವಾಗಿ ಹೊರಗಿನಿಂದಲೇ ಬರಬೇಕಾಗಿದ್ದ ಆಹಾರಪದಾರ್ಥ ಸರಬರಾಯಿಗೆ ಅಪೋಹ ಉಂಟಾಗಲಿಲ್ಲ.

**ಜಲ, ವಾಯು ಯುದ್ಧಗಳು :** ಜಗದ್ವ್ಯಾಪಿಯಾಗಿ ಬಲವತ್ತಮವಾಗಿದ್ದ ಬ್ರಿಟಿಷ್ ನೌಕಾಬಲಕ್ಕೆದುರಾಗಿ ಮೊದಮೊದಲು ಜರ್ಮನ್ ಯುದ್ಧದ ಹಡಗುಗಳು ಸೋಲಲಿಲ್ಲ. 1914ರಲ್ಲಿ ಭೂಮಧ್ಯಸಮುದ್ರದಲ್ಲಿ ಕಾಣಿಸಿದ ಎರಡೂ ಜರ್ಮನ್ ಹಡಗುಗಳು ಹೇಗೋ ತಪ್ಪಿಸಿಕೊಂಡು ಸುಳಿದಾಡುತ್ತಿದ್ದು ಕಡೆಗೆ ದಕ್ಷಿಣ ಅಮೆರಿಕದ ಬಳಿ ಫಾಕ್ಲೆಂಡ್ ದ್ವೀಪಗಳ ಒತ್ತಿನಲ್ಲಿ ಬ್ರಿಟಿಷರಿಗೆ ಸಿಕ್ಕಿ ಧ್ವಂಸವಾದುವು. 1905ರಲ್ಲಿ ಜರ್ಮನ್ ಹಡಗುಗಳು ಬ್ರಿಟನಿಗೆ ಉತ್ತರದಲ್ಲಿ ಅಲ್ಲಲ್ಲಿ ಗುಪ್ತವಾಗಿ ಸಂಚರಿಸುತ್ತಿದ್ದುವು. 1916ರಲ್ಲಿ ಡೆನ್ಮಾರ್ಕಿನ ಉತ್ತರದಲ್ಲಿ ಜಟ್ಲೆಂಡ್ ಬಳಿ ನೌಕಾಬಲಗಳ ಎದುರುಬದುರು ಹೋರಾಟ ನಡೆಯಿತು. ಎರಡೂ ಪಕ್ಷಗಳು ತಮಗೆ ಜಯವಾಯಿತೆಂದು ಭಾವಿಸಿದರೂ ಆ ಬಳಿಕ ಜರ್ಮನ್ ಹಡಗುಗಳು ಹೊರಗೆ ಕಾಣಿಸಿಕೊಳ್ಳದೇ ಇರಬೇಕಾಯಿತು.

ಸಮುದ್ರದ ಮೇಲೆ ಬ್ರಿಟಿಷರೊಂದಿಗೆ ಹೋರಾಡಲು ಜರ್ಮನಿಗಾಗಲಿಲ್ಲ. ಆದರೆ ಜರ್ಮನರು ಜಲಾಂತರ್ಗಾಮಿಗಳನ್ನು ನಿರ್ಮಿಸಿಕೊಂಡಿದ್ದುದಲ್ಲದೆ ಟಾರ್ಪಿಡೊ, ಮೈನ್ ಮುಂತಾದ ಅನೇಕ ಪ್ರಯೋಗಸಾಧನಗಳನ್ನು ಪಡೆದಿದ್ದರು. 1917ರಲ್ಲಿ ಜರ್ಮನರು ಬ್ರಿಟಿಷರ ವ್ಯಾಪಾರವನ್ನು ನಾಶಗೊಳಿಸಬೇಕೆಂದು ಉದ್ದೇಶಿಸಿದರು. ಬ್ರಿಟನಿಗೆ ಸರಕು ಹೊತ್ತು ತರುತ್ತಿದ್ದ ಹಡಗುಗಳನ್ನು ಸಮುದ್ರದಲ್ಲಿ ತಮ್ಮ ಜಲಾಂತರ್ಗಾಮಿಗಳಿಂದ ಮುಳುಗಿಸಲು ತೊಡಗಿದರು. ಬ್ರಿಟಿಷರ ಹಡಗುಗಳನ್ನಲ್ಲದೆ ಬ್ರಿಟನಿನೊಂದಿಗೆ ಮೈತ್ರಿಯಿಂದಿದ್ದ ದೇಶಗಳ ಹಡಗುಗಳಿಗೂ ಈ ಅಪಾಯ ತಟ್ಟಿತು. ಬ್ರಿಟನಿಗೆ ಸಾಮಾನು ಹೊರುತ್ತಿದ್ದ ಯಾವ ಹಡಗನ್ನಾದರೂ ಎಚ್ಚರಿಕೆ ಕೊಡದೆ ಧ್ವಂಸಗೊಳಿಸುವುದಾಗಿ ಜರ್ಮನರು ಪ್ರಕಟಿಸಿದರು. ಆ ಪ್ರಕಟನೆಯಿಂದ ಅಮೆರಿಕದವರಿಗೆ ಮೊದಲೇ ಇದ್ದ ಅಸಮಾಧಾನ ಹೆಚ್ಚಿತು. 1915ರಲ್ಲಿ ಲೂಸಿಟಾನಿಯ ಎಂಬ ಬ್ರಿಟಿಷ್ ಹಡಗು ಮುಳುಗಿದಾಗ ಅದರಲ್ಲಿದ್ದ ಅಮೆರಿಕನರು ಪ್ರಾಣ ಕಳೆದುಕೊಂಡಿದ್ದರು. ತಮ್ಮ ಜಲಾಂತರ್ಗಾಮಿಗಳನ್ನು ಸರ್ವತ್ರ ಉಪಯೋಗಿಸುವುದಾಗಿ ಜರ್ಮನಿ ಘೋಷಿಸಿದ್ದರಿಂದ ಆಗಿನ ಅಮೆರಿಕದ ಅಧ್ಯಕ್ಷ ವಿಲ್ಸನ್ ಜರ್ಮನಿಯ ಮೇಲೆ ಯುದ್ಧ ಹೂಡಿದ. ಅಮೆರಿಕನ್ ಸೈನ್ಯ ಅಟ್ಲಾಂಟಿಕ್ ದಾಟಿಬರುವುದರೊಳಗಾಗಿ ಬ್ರಿಟನಿನಲ್ಲಿ ಜನರಿಗೆ ಆಹಾರವಿಲ್ಲದಂತೆ ಮಾಡಬಹುದೆಂಬುದಾಗಿ ಜರ್ಮನಿ ಭಾವಿಸಿತ್ತು. ವಾಸ್ತವವಾಗಿ ಜರ್ಮನಿಯ ವ್ಯಾಪಾರವೂ ಬಂಧಿತವಾಗಿತ್ತು. ಜಲಾಂತರ್ಗಾಮಿಗಳ ಹಾವಳಿಯಿಂದ ಬ್ರಿಟನಿಗೂ ಕಷ್ಟಕಾಲ ಒದಗಿತು. 1917ರಲ್ಲಿ ಬ್ರಿಟನಿನಿಂದ ಹೊರಟ ಪ್ರತಿ ನಾಲ್ಕು ಹಡಗುಗಳಲ್ಲಿ ಒಂದು ಧ್ವಂಸವಾಗುತ್ತಿತ್ತು. ಆಹಾರಾಭಾವದಿಂದಾಗಿ ಪಡಿತರ ವ್ಯವಸ್ಥೆ ಏರ್ಪಡಿಸಿ ಬ್ರಿಟನ್ ಕಾಲಯಾಪನೆ ಮಾಡಬೇಕಾಯಿತು. ಆದರೆ ಅಮೆರಿಕನರು ಯುದ್ಧದಲ್ಲಿ ಸೇರಿಕೊಂಡು ತಮ್ಮ ಸಮಸ್ತ ಹಡಗುಗಳನ್ನು ಮಿತ್ರರಾಷ್ಟ್ರಗಳ ಉಪಯೋಗಕ್ಕೆ ಬಿಟ್ಟುಕೊಡಲು ಸಿದ್ಧರಾದರು. ಬ್ರಿಟಿಷರೂ ಅಮೆರಿಕನರೂ ಜಲಾಂತರ್ಗಾಮಿಗಳನ್ನು ಅಡಗಿಸುವ ಉಪಾಯ ಸಾಧಿಸಿದ್ದಲ್ಲದೆ ಬೇಗ ಬೇಗ ಹೊಸ ಹಡಗುಗಳನ್ನು ಕಟ್ಟಿಕೊಂಡು ತಮ್ಮ ವ್ಯಾಪಾರ ರಕ್ಷಣೆಗೆ ಹೊಸ ಏರ್ಪಾಟು ಮಾಡಿಕೊಂಡಿದ್ದರಿಂದ ಜರ್ಮನಿಯ ಆಸೆ ಸಂಪೂರ್ಣ ಫಲಿಸಲಿಲ್ಲ.

ತಮ್ಮ ಜಲಾಂತರ್ಗಾಮಿಗಳಲ್ಲಿ ಹೆಚ್ಚಿನ ಭರವಸೆ ಇಟ್ಟಿದ್ದ ಜರ್ಮನರು 1917ರಲ್ಲಿ ಪಶ್ಚಿಮ ರಣರಂಗದಲ್ಲಿ ಹೊಸ ಆಕ್ರಮಣ ಪ್ರಯತ್ನವನ್ನು ನಡೆಸದೆ ಹಿಂಡನ್‌ಬರ್ಗ್ ಮೋರೆಯನ್ನು ಭದ್ರಪಡಿಸಿಕೊಂಡು ಕಾಲ ನಿರೀಕ್ಷೆಯಲ್ಲಿದ್ದರು. ಬ್ರಿಟಿಷರೂ ಫ್ರೆಂಚರೂ ಆಗ ಜರ್ಮನರು ಬಿಟ್ಟ ಪಾಳುನೆಲವನ್ನು ವಶಪಡಿಸಿಕೊಂಡಿದ್ದಲ್ಲದೆ ಆಗಾಗ್ಗೆ ಜರ್ಮನರ ಸೇನಾನೆಲೆಗಳನ್ನು ಮುತ್ತುವುದಕ್ಕೂ ತೊಡಗಿದರು.



ಸೋತು ಬಳಲಿದ ಸರ್ಬಿಯನ್ ಸೈನಿಕರು

1916ರ ಮೇ 31ರಿಂದ ಜೂನ್ 1ರ ವರೆಗೆ ನಡೆದ ಜಟ್ಲೆಂಡ್ ನೌಕಾಯುದ್ಧವೇ ಒಂದನೆಯ ಮಹಾಯುದ್ಧದ ದೊಡ್ಡ ಜಲಯುದ್ಧವೆಂದು ಹೇಳಬಹುದು. ಇದರಲ್ಲಿ ಬ್ರಿಟನ್ ಮತ್ತು ಜರ್ಮನಿಗಳು ಭಾಗವಹಿಸಿದುವು. ಒಟ್ಟು ನೌಕಾಬಲಗಳ ಸಂಖ್ಯೆ, ತೂಕ ಮತ್ತು ಅಸ್ತ್ರಗಳ ಮೌಲ್ಯದಿಂದ ಇದು ಅಂದಿನ ವರೆಗಿನ ಇತಿಹಾಸದಲ್ಲೇ ಹೊಸ ದಾಖಲೆ ಸ್ಥಾಪಿಸಿತು. ಬ್ರಿಟಿಷರು ಈ ಕದನದಲ್ಲಿ 151 ಹಡಗುಗಳನ್ನು ತೊಡಗಿಸಿದ್ದರು. ಇದರಲ್ಲಿ 37 ವಾಣಿಜ್ಯ ಹಡಗುಗಳಿದ್ದವು. ಶತ್ರುಗಳ ಬಳಿ ಇದ್ದ ನೌಕೆಗಳ ಸಂಖ್ಯೆ 101. ಅವುಗಳಲ್ಲಿ 27 ವಾಣಿಜ್ಯ ಹಡಗುಗಳು. ಜರ್ಮನ್ ನೌಕಾಬಲಕ್ಕೆ ಶೇರ್ ನಾಯಕ. ಈ ಕದನದಲ್ಲಿ ಜರ್ಮನರ ಕಡೆ 11 ಹಡಗುಗಳು ನಷ್ಟವಾದುವು ; ಮಡಿದವರ ಸಂಖ್ಯೆ 2545. ಬ್ರಿಟಿಷರು 14 ಹಡಗುಗಳನ್ನೂ 6097 ಜನರನ್ನೂ ಕಳೆದುಕೊಂಡರು. ಆದರೂ ಕೊನೆಯ ವರೆಗೂ ಬ್ರಿಟನ್ ಸಮುದ್ರದ ಮೇಲೆ ತನ್ನ ಹತೋಟಿ ಬಿಟ್ಟುಕೊಡಲಿಲ್ಲ. ಈ ಕದನದಲ್ಲಿ ಜಲಾಂತರ್ಗಾಮಿಗಳನ್ನು ಧಾರಾಳವಾಗಿ ಬಳಸಲಾಯಿತು. ಜರ್ಮನರು ಸೈನಿಕರೆನ್ನದೆ, ನಾಗರಿಕರೆನ್ನದೆ ನಿರ್ದಾಕ್ಷಿಣ್ಯವಾಗಿ ಶತ್ರುಹಡಗುಗಳ ಮೇಲೆ ಇವುಗಳಿಂದ ದಾಳಿ ನಡೆಸುತ್ತಿದ್ದರು. 1917ರ ವರೆಗೆ ತಟಸ್ಥನೀತಿಯನ್ನು ಅನುಸರಿಸುತ್ತಿದ್ದ ಅಮೆರಿಕ ಈ ದಾಳಿಗಳಿಂದ ಕೋಪಗೊಂಡು ಯುದ್ಧದಲ್ಲಿ ಭಾಗವಹಿಸಲು ನಿರ್ಧರಿಸಿತು. ಒಟ್ಟಿನಲ್ಲಿ ನೌಕಾಬಲದಲ್ಲಿ ಬ್ರಿಟನ್ ಜರ್ಮನಿಗಿಂತ ಮುಂದಿತ್ತು. ಜರ್ಮನರ ನೌಕಾಪಡೆ ಶಸ್ತ್ರಾಸ್ತ್ರಸಜ್ಜಿತವಾಗಿ, ಒಳ್ಳೆಯ ಗುರಿ ಹೊಂದಿದ್ದರೂ ಬ್ರಿಟಿಷ್ ಪಡೆಗಳ ಮುಂದೆ ಅಂಥ ಶ್ರೇಷ್ಠ ಮಟ್ಟದ ಕಾರ್ಯಾಚರಣೆ ತೋರಿಸಲಾಗಲಿಲ್ಲ. ಒಂದನೆಯ ಮಹಾಯುದ್ಧದ ಸಮಯದಲ್ಲಿ ಮೊತ್ತಮೊದಲ ಬಾರಿಗೆ ವಿಮಾನಗಳನ್ನು ಬಳಸಲಾಯಿತು. ಅನೇಕ ಕಾಳಗಗಳು

ನಡೆದುವು. ಜರ್ಮನರು ಮೊದಲು ಶತ್ರುಸೇನೆಗಳ ವಿರುದ್ಧ ಇಂಥ ವಿಮಾನಪಡೆಗಳನ್ನು ಬಳಸಿದರು. 1915ರ ಮೊದಲ ಭಾಗದಲ್ಲಿ ಅವರು ಬೆಲೂನುಗಳ (ಜೆಪ್‌ಲಿನ್‌ಗಳು) ಮೂಲಕ ಇಂಗ್ಲೆಂಡಿನ ತೀರಪ್ರದೇಶಗಳ ಮೇಲೆ ಬಾಂಬುಗಳನ್ನು ಸುರಿಸಲಾರಂಭಿಸಿದರು. 1916ರ ಕೊನೆಯ ವರೆಗೆ ಇಂಥ ದಾಳಿಗಳು ನಡೆದುವು.



ಒಂದನೆಯ ಮಹಾಯುದ್ಧದಲ್ಲಿ ಬಳಸಲಾದ ಬಾಂಬರ್

ಅನಂತರ ಇವು ಕಡಿಮೆಯಾದುವು. ಏಕೆಂದರೆ ಬೆಲೂನುಗಳು ತಮ್ಮ ಬೃಹದ್ ಗಾತ್ರದಿಂದಾಗಿ ಸುಲಭವಾಗಿ ಶತ್ರುಗಳ ಬಂದೂಕುಗಳಿಗೆ ತುತ್ತಾಗುತ್ತಿದ್ದುವು. ಅನಂತರ ಕಂಡುಹಿಡಿದ ಸಿಡಿಗುಂಡುಗಳು ಇಂಥ ಬೆಲೂನುಗಳ ವಿರುದ್ಧ ದಾಳಿ ನಡೆಸಲು ಸಹಾಯಮಾಡಿದುವು.

ಜೆಪ್‌ಲಿನ್‌ಗಳ ಉಪಯೋಗ ತಗ್ಗಿದ ಮೇಲೆ ಚಿಕ್ಕದಾದ, ಸುಲಭ ಬೆಲೆಯ, ವೇಗವಾಗಿ ಚಲಿಸಬಲ್ಲ, ಗಾಳಿಗಿಂತ ಭಾರವಾದ ವಿಮಾನಗಳು ಬಳಕೆಗೆ ಬಂದುವು. 1917ರ ಮೊದಲ ಭಾಗದಿಂದ ಇಂಥ ವಿಮಾನಗಳನ್ನು ಜರ್ಮನರು ಬಳಸಿಕೊಂಡು ಇಂಗ್ಲೆಂಡಿನ ಮೇಲೆ, ಅದರಲ್ಲೂ ಲಂಡನ್ನಿನ ಮೇಲೆ ದಾಳಿ ನಡೆಸಲು ಆರಂಭಿಸಿದರು. ಇವುಗಳ ರಚನೆಯ ವಿಧಾನವನ್ನು ಮಿತ್ರರಾಷ್ಟ್ರಗಳು ಕಂಡುಹಿಡಿದುಕೊಂಡ ಮೇಲೆ ಎರಡು ಪಕ್ಷಗಳ ಸೇನಾಬಲಗಳಿಗೂ ಇವು ಕಣ್ಣುಗಳೆಂದೆನಿಸಿದುವು. ಶತ್ರುಬಲದ ಮೇಲೆ ಹಾರಾಟ ನಡೆಸಿ ಸೈನ್ಯದ ಚಟುವಟಿಕೆಗಳನ್ನು ವೀಕ್ಷಿಸಲೂ ಷೆಲ್ ದಾಳಿಯನ್ನು ಮುಂದಾಗಿ ತಿಳಿಸಲೂ ಶತ್ರುಸೈನ್ಯದ ಚಟುವಟಿಕೆಗಳ ಬಗ್ಗೆ ಚಿತ್ರ ತೆಗೆಯಲೂ ಶತ್ರುಗಳ ಮೇಲೆ ಮತ್ತು ನಗರಗಳ ಮೇಲೆ ಪ್ರಚಾರಚೀಟಿಗಳನ್ನು ಎರಚಲೂ ಇಂಥ ವಿಮಾನಗಳನ್ನು ಬಳಸುತ್ತಿದ್ದರು.



ರಾತ್ರಿ ಯುದ್ಧ

ಮೊದಮೊದಲು ವಿಮಾನಗಳಿಗೆ ಚಿಕ್ಕ ಕೋವಿಯನ್ನೂ ಚಿಕ್ಕ ಬಂದೂಕಗಳನ್ನೂ ಅಳವಡಿಸುತ್ತಿದ್ದರು. ಆದರೆ ಶೀಘ್ರದಲ್ಲೇ ಹಗುರವಾದ ಮೆಷಿನ್‌ಗನ್ನುಗಳನ್ನು ಅಳವಡಿಸಿದರು. ಮೇ 1915ರಲ್ಲಿ 25 ವರ್ಷದ ನೆದರ್‌ಲೆಂಡಿನ ಯುವಕ ಆಂಥೋನಿ ಫೊಕರ್ ಅವರೋಧಕ ಗಿಯರ್ (ಇಂಟರಪ್ಟರ್ ಗಿಯರ್) ಕಂಡುಹಿಡಿದ. ವಿಮಾನದ ಗಿಯರುಗಳಿಗೆ ಅಪಾಯವಾಗದಂತೆ ಮೆಷಿನ್‌ಗನ್ನುಗಳನ್ನು ಉಪಯೋಗಿಸಲು ಇದರಿಂದ ಸಹಾಯವಾಯಿತು. ಇಂಥ ಸಾಧನದಿಂದ ಕೆಲವು ಕಾಲ ಜರ್ಮನರಿಗೆ ಮಿತ್ರರಾಷ್ಟ್ರಗಳ ಮೇಲೆ ಹೆಚ್ಚಿನ ಬಲ ಸಿಕ್ಕಂತಿತ್ತು. ಮೊದಮೊದಲು ವಿಮಾನಕಾಳೆಗಗಳು ಆಕಾಶದಲ್ಲಿ ಇಬ್ಬರು ಚಾಲಕರ ನಡುವೆ ನಡೆಯುತ್ತಿದ್ದುವು. ವ್ಯಕ್ತಿಕಾಳೆಗಗಳು ಗುಂಪುಕಾಳೆಗಗಳಿಗೆ ಎಡೆಕೊಟ್ಟುವು. 10 ರಿಂದ 50 ವಿಮಾನಗಳ ದಳಗಳು ವಾಯುಕಾಳೆಗಗಳಲ್ಲಿ ಭಾಗವಹಿಸುತ್ತಿದ್ದವು. ಪ್ರತಿಯೊಂದು ವಿಮಾನ ತಂಡಕ್ಕೂ ಒಬ್ಬ ನಾಯಕನಿರುತ್ತಿದ್ದ. ಅವನು ತನಗೆ ಸೂಕ್ತವೆನಿಸಿದ ವಿಮಾನ ಚಾಲಕರನ್ನು ಆರಿಸಿಕೊಳ್ಳುತ್ತಿದ್ದ. ಅದಲ್ಲದೆ ತಾನೇ ಮುಂದಾಗಿ ಹೋಗಿ ಹೋರಾಡಿ ತನ್ನ ಹಿಂಬಾಲಕರಿಗೆ ಮಾದರಿಯಾಗಿರುತ್ತಿದ್ದ. ಶತ್ರುಗಳು ಹಿಮ್ಮೆಟ್ಟಿ ಓಡಿಹೋಗುತ್ತಿದ್ದಾಗ ಹಿಂಸಿಸಲೂ ತಮ್ಮ ಭೂಸೈನ್ಯಗಳು ಮುಂದಾಗಿ ಹೋಗಿ ಆಕ್ರಮಿಸಿಕೊಳ್ಳಲೂ ಈ ವಿಮಾನಗಳು ಸಹಾಯ ಮಾಡುತ್ತಿದ್ದುವು.



ವಿಮಾನ ಯುದ್ಧ

ಒಂದನೆಯ ಮಹಾಯುದ್ಧದಲ್ಲಿ ಜರ್ಮನರು ಮೊದಲು ವಿಷ ವಾಯುವನ್ನು ಒಂದು ಮಾರಕಾಸ್ತ್ರದಂತೆ ಬಳಸಿದರು. ಅನಂತರ ಎಲ್ಲ ಪಕ್ಷಗಳವರೂ ಇದನ್ನು ಪ್ರಯೋಗಿಸಿದರು. ಇವನ್ನು ಬಂದೂಕುಗಳ ಮೂಲಕವೋ ಕೈಬಾಂಬಿನ ಮೂಲಕವೋ ವಿಷಜ್ವಾಲೆ ಅಥವಾ ಹೊಗೆಕಾರುವ ಕಂದೀಲುಗಳ ಮೂಲಕವೋ ಶೆಲ್ಲುಗಳ ಮೂಲಕವೋ ವಿಮಾನದಿಂದ ಬಾಂಬಿನ ಮುಖಾಂತರವೋ ಬಳಸಲಾಗುತ್ತಿತ್ತು. ಇದರಿಂದ ಮರಣ ಹೊಂದಿದವರ ಸಂಖ್ಯೆ ನಿರ್ದಿಷ್ಟವಾಗಿ ಗೊತ್ತಿಲ್ಲ. ಅನೇಕರು ಇದರಿಂದ ತತ್‌ಕ್ಷಣ ಮಡಿಯದೆ ಇದ್ದರೂ ಅನಂತರ ಇದರ ಪ್ರಭಾವದಿಂದ ತೊಂದರೆಗೀಡಾದರು. ಅಮೆರಿಕನರೆ ಹೆಚ್ಚಾಗಿ ಈ ಬಾಧೆಗೆ ತುತ್ತಾದರು.

ಪ್ರತಿಯೊಂದು ದೇಶದಲ್ಲೂ ಸರ್ಕಾರದ ಪ್ರಚಾರ ಸಮಿತಿಯೊಂದು ಸ್ಥಾಪಿತವಾಯಿತು. ಶತ್ರುಕಾರ್ಯದ ಬಗ್ಗೆ ಉತ್ಪ್ರೇಕ್ಷೆಯಿಂದ ಕೂಡಿದ ಕಥೆಗಳೂ ಚಿತ್ರಗಳೂ ಪ್ರಚಾರವಾದುವು. ಇವು ಜನರನ್ನು ರೊಚ್ಚಿಗೆಬ್ಬಿಸಿದುವಲ್ಲದೆ ಅವರಲ್ಲಿ ದೇಶಪ್ರೇಮವನ್ನು ಕುದುರಿಸಿದುವು. ಇಂಥ ಪ್ರಚಾರ ಅನೇಕ ವೇಳೆ ಹಿಂಸಾಕೃತ್ಯಗಳನ್ನು ಪ್ರಚೋದಿಸುತ್ತಿದ್ದುದೂ ಉಂಟು. ಶತ್ರುವಿನ ಪಕ್ಷದವನೆಂದು ಸಂದೇಹಪಟ್ಟು, ಹಿಡಿದುಕೊಂಡು ಹೋಗಿ ತಪ್ಪಿತಸ್ಥರಲ್ಲದವರನ್ನು ಅನೇಕ ವೇಳೆ ಕ್ರೂರವಾಗಿ ದಂಡಿಸುತ್ತಿದ್ದುದುಂಟು.

ಒಂದನೆಯ ಮಹಾಯುದ್ಧ ಪ್ರಾರಂಭವಾದಾಗ ಅಮೆರಿಕ ಸಂಯುಕ್ತಸಂಸ್ಥಾನ ಐರೋಪ್ಯರ ಗೋಜೇ ಬೇಡ ಎಂಬ ತನ್ನ ನೀತಿಗೆ ಅನುಗುಣವಾಗಿ ತಾಟಸ್ಥ್ಯವನ್ನು ಸಾರಿಕೊಂಡಿತ್ತು. ಪ್ರಾರಂಭದಲ್ಲಿ ಜರ್ಮನರ ಕೈಯೇ ಮೇಲಾಗಿತ್ತು. ಅಸಹಾಯಕ ವಾದ ಸಣ್ಣ ಬೆಲ್ಜಿಯಂ ದೇಶವನ್ನು ನಿಪಾತಮಾಡಿ ಪ್ಯಾರಿಸಿನ ಬಾಗಿಲ ವರೆಗೆ ಬರುವ ತನಕ ಜರ್ಮನರು ಪ್ರಬಲರಾಗೇ ಇದ್ದರೂ ಜರ್ಮನರ ಮುನ್ನಡೆಗೆ ತಡೆ ಒದಗಿದ್ದು ಅಲ್ಲಿ. ಕೈಸರ್ ವಿಲಿಯಂ ನಿರ್ಮಿಸಿದ್ದ ಪ್ರಚಂಡ ಸೇನಾಯಂತ್ರದ ವಿರುದ್ಧ ವೀರ ಹೋರಾಟ ಹೂಡಿದ್ದುದರ ಸುದ್ದಿಯನ್ನು ಪತ್ರಿಕೆಗಳಲ್ಲಿ ಓದುತ್ತ ಬಹುಮಂದಿ ಅಮೆರಿಕನರು ಫ್ರೆಂಚ್ ಮತ್ತು ಬ್ರಿಟಿಷ್ ರಾಷ್ಟ್ರಗಳಿಗೆ ತಮ್ಮ ಸಹಾನು ಭೂತಿಯನ್ನು ವ್ಯಕ್ತಪಡಿಸುತ್ತಿದ್ದರು. ಮುಂಚಿನಿಂದ ಈ ದೇಶಗಳವರೊಡನೆ ಅಮೆರಿಕನರಿಗೆ ಋಣಾನುಬಂಧದ ವಾಂಛೆಯಿತ್ತು.

ನೆಪೋಲಿಯನನ ಯುದ್ಧಗಳ ಕಾಲದಲ್ಲಿ ಆದಂತೆ, ಯುದ್ಧ ನಿಂತರೂ ಪರಸ್ಪರ ವಾಗಿ ಇತರರ ಬಂದರುಗಳ ಮೇಲೆ ಬಹಿಷ್ಕಾರ ಹೂಡಿ, ಯುದ್ಧಕ್ಷೇತ್ರಗಳಿಗೆ ಆಹಾರ ವನ್ನೂ ಶಸ್ತ್ರಾಸ್ತ್ರಗಳನ್ನೂ ಹೊತ್ತು ತರುತ್ತಿದ್ದ ನೌಕೆಗಳನ್ನು ತಡೆಯುತ್ತಿದ್ದರು. ಬ್ರಿಟಿಷ್ ನಾವೆ ಸಮುದ್ರದ ಹತೋಟಿ ಹೊಂದಿ ತನ್ನ ಶತ್ರುವಿಗಾಗಿ ಉದ್ದಿಷ್ಟವಾದ ನೌಕೆಗಳನ್ನು ನಾಶಪಡಿಸದೆ ವಶಪಡಿಸಿಕೊಂಡರೆ, ಜರ್ಮನಿಯ ಜಲಾಂತರ್ಗಾಮಿಗಳು ನಿಶ್ಶಬ್ದವಾಗಿ ಸಾಗರದಾಳದಿಂದ ಮೇಲೆದ್ದು ನೌಕೆಗಳಿಗೆ ಟಾರ್ಪಿಡೊ ಬಾರಿಸಿ ನಾವಿಕ ರನ್ನೂ ಪ್ರಯಾಣಿಕರನ್ನೂ ಸಾಯಗೊಡುತ್ತಿದ್ದುವು.

ಇಂಗ್ಲೆಂಡಿನ ಲೂಸಿಟಾನಿಯ ಪ್ರಯಾಣಿಕ ಹಡಗಿನ ಮುಳುಗಡೆಯಲ್ಲಿ ಅಮೆರಿಕನರ ಪ್ರಾಣನಷ್ಟವಾದಾಗ ಆ ಪ್ರಸಂಗವೇ ಅಮೆರಿಕನರು ಯುದ್ಧಪ್ರವೇಶ ಮಾಡಲು ತತ್‌ಕ್ಷಣದ ಕಾರಣವಾಯಿತು. ಜಲಸಮಾಧಿಯಾದ 250 ಪ್ರಯಾಣಿಕರ ಪೈಕಿ 144 ಮಂದಿ ಅಮೆರಿಕನರು. ಈ ಮುಳುಗಡೆಗಾಗಿ ಜರ್ಮನರು ವಿಷಾದವನ್ನೇನೋ ವ್ಯಕ್ತ ಪಡಿಸಿದರು. ಆದರೆ ಆ ಹಡಗಿನಲ್ಲಿ ಪ್ರಯಾಣಿಕರ ಜೊತೆಗೆ ಮದ್ದುಗುಂಡುಗಳೂ ಇದ್ದುವೆಂದು ಜರ್ಮನಿಯ ವಾದ.

ಜಲಾಂತರ್ಗಾಮಿ ಸಮರದ ವಿರುದ್ಧ ಜರ್ಮನಿಗೆ ಅಮೆರಿಕನ್ ಅಧ್ಯಕ್ಷ ವಿಲ್ಸನ್ ಪ್ರತಿಭಟನೆ ಕಳಿಸಿದರೂ ಜರ್ಮನಿಯಿಂದ ಅಸ್ಪಷ್ಟವಾದ ಕ್ಷಮಾಪಣೆಗಳೋ ಇನ್ನಷ್ಟು ಕೆಣಕುತ್ತರಗಳೋ ಲಭ್ಯವಾಗುತ್ತಿದ್ದುವು. ಅಮೆರಿಕನರು ಮಿತ್ರರಾಷ್ಟ್ರಗಳಿಗೆ ಸಾಲ ಸೋಲ ಕೊಟ್ಟು ಆಹಾರವಸ್ತುಗಳನ್ನೂ ಶಸ್ತ್ರಾಸ್ತ್ರಗಳನ್ನೂ ಕೊಳ್ಳಲು ನೆರವು ನೀಡುತ್ತಿದ್ದಾರೆಂಬುದೇ ಜರ್ಮನಿಗೆ ಅಮೆರಿಕದ ಮೇಲಿದ್ದ ಆಗ್ರಹ. ಜರ್ಮನಿಯ ಪ್ರಹಾರ ಗಳಿಂದಾಗಿ ಅದರ ವಿರುದ್ಧ ಅಮೆರಿಕದಲ್ಲಿ ಸಾರ್ವಜನಿಕಾಭಿಪ್ರಾಯ ಉದ್ರೇಕಗೊಂಡಿತು. ಎಂಥ ಉದ್ರಿಕ್ತ ಪರಿಸ್ಥಿತಿಯಲ್ಲೂ ನಮ್ಮನ್ನು ಯುದ್ಧದಿಂದ ದೂರವಿಟ್ಟಿದ್ದಾನೆ—ಎಂಬ ಕಾರಣದಿಂದಾಗಿ ವಿಲ್ಸನ್ ಮತ್ತೆ 1916ರಲ್ಲಿ ಅಧ್ಯಕ್ಷನಾಗಿ ಆಯ್ಕೆಯಾದ.

**ಅಮೆರಿಕದ ಪ್ರವೇಶ :** ಆದರೆ ಹೆಚ್ಚು ಕಾಲ ಅಮೆರಿಕ ಯುದ್ಧದಿಂದ ಹೊರ ನಿಲ್ಲುವಂತಿರಲಿಲ್ಲ. ಅಮೆರಿಕ ಯುದ್ಧಪ್ರವೇಶ ಮಾಡಿದರೆ ಮೆಕ್ಸಿಕೋ ಜಪಾನು ಗಳು ಅದನ್ನು ಘಾತಿಸಬೇಕು ಎಂದು ಜರ್ಮನಿ ಚಿತಾವಣೆ ಮಾಡುತ್ತಿದ್ದುದೂ ಅಮೆರಿಕದ ಯುದ್ಧಕೈಗಾರಿಕೆಗಳನ್ನು ನಿಪಾತಮಾಡಲು ಪಿತೂರಿ ನಡೆಸುತ್ತಿದ್ದುದೂ ಗೂಢಚಾರರಿಂದ ಬಯಲಾದುವು. ಜರ್ಮನರು ತಮ್ಮ ಜಲಾಂತರ್ಗಾಮಿ ಯುದ್ಧ ವನ್ನು ಹೆಚ್ಚು ಮಾಡಿ ಇಂಗ್ಲೆಂಡನ್ನು ಸೋಲಿಸುವ ನಿಶ್ಚಯವನ್ನು ಘೋಷಿಸುತ್ತಲೇ ಅಧ್ಯಕ್ಷ ವಿಲ್ಸನ್ ಕಾಂಗ್ರೆಸಿಗೆ ಸಂದೇಶ ಕಳಿಸಿದ. 1917ನೆಯ ಏಪ್ರಿಲ್ 6ರಂದು ಅಮೆರಿಕದ ಕಾಂಗ್ರೆಸ್ ಯುದ್ಧ ಘೋಷಿಸಿತು.

ಅಮೆರಿಕ ಯುದ್ಧಪ್ರವೇಶ ಮಾಡಲು ಇದು ತತ್‌ಕ್ಷಣದ ಕಾರಣವಾದರೂ ಈ ಯುದ್ಧ ವಿಶ್ವದ ಪ್ರಜಾಪ್ರಭುತ್ವ ರಾಷ್ಟ್ರಗಳ ಉಳಿವು-ಅಳಿವಿನ ಹೋರಾಟವೆಂಬ ನಂಬಿಕೆ ಅಧ್ಯಕ್ಷ ವಿಲ್ಸನನಲ್ಲಿ ಬಲಗೊಳ್ಳತೊಡಗಿತ್ತು. ಪ್ರಜಾಪ್ರಭುತ್ವಗಳ ವಿರುದ್ಧ ವಾಗಿ ನಿರಂಕುಶ ಪ್ರಭುತ್ವಗಳು ಸಂಘಟಿಸಿ ಹೋರಾಡುತ್ತಿದ್ದುವು. ವಿಶ್ವವ್ಯವಹಾರ ಗಳಲ್ಲಿ ಅಮೆರಿಕದ ಪಾತ್ರ ಈ ಪ್ರಜಾಪ್ರಭುತ್ವಗಳನ್ನು ಜಯಗೊಳ್ಳುವಂತೆ ಪುಷ್ಟೀಕರಿಸು ವುದೇ ಎಂದೂ ಈ ಕಾರ್ಯವನ್ನು ಯಾರ ಮೇಲೂ ದ್ವೇಷ ಸಾಧಿಸದೆ ನೆರವೇರಿಸಿ, ವಿಜೇತ ಪರಾಜಿತ ರಾಷ್ಟ್ರಗಳನ್ನೆಲ್ಲ ರಾಷ್ಟ್ರಗಳ ಕೂಟದಲ್ಲಿ (ಲೀಗ್ ಆಫ್ ನೇಷನ್ಸ್) ಪ್ರಜಾ ಸತ್ತಾತ್ಮಕ ಲೋಕಸೌಭ್ರಾತೃತ್ವವನ್ನಾಗಿ ಒಟ್ಟುಗೂಡಿಸಬೇಕೆಂದೂ ವಿಲ್ಸನ್ ನಿಶ್ಚಯಿ ಸಿದ. ಇಂಥದೊಂದು ಕೂಟದಲ್ಲಿ ಎಲ್ಲ ಯುದ್ಧಗಳ ಮೂಲಕಾರಣಗಳಾದ ರಾಷ್ಟ್ರೀಯ ವಾದ, ಸಾಮ್ರಾಜ್ಯವಾದ, ಕರಾರುಗಳ ಮೂಲಕ ಸ್ಥಾಪಿತವಾದ ರಾಷ್ಟ್ರವ್ಯೂಹಗಳ ಸಮತೂಕ—ಮುಂತಾದ ಪ್ರವೃತ್ತಿಗಳನ್ನು ನಿವಾರಿಸಬೇಕು. ಈ ರೀತಿ ವಿಲ್ಸನ್ ಸೂಚಿಸಿದ ಹದಿನಾಲ್ಕು ಅಂಶಗಳ ಆಧಾರದ ಮೇಲೆ ಯುದ್ಧಾನಂತರದಲ್ಲಿ ಶಾಂತಿ ಕೌಲನ್ನು ಮಾಡಿಕೊಳ್ಳಲು ಸಾಧ್ಯ ಎಂದು ಆತ ಪ್ರತಿಪಾದಿಸಿದ.

ಈ ಉನ್ನತ ಧ್ಯೇಯಗಳಿಂದ ಪ್ರೇರಿತವಾಗಿ ಸಂಯುಕ್ತಸಂಸ್ಥಾನ ಮಹಾಯುದ್ಧ ವನ್ನು ಪ್ರವೇಶಿಸಿತು. ರಷ್ಯ ಸೋತು ಹಿಮ್ಮೆಟ್ಟಿದ್ದ ಕಾರಣ ಮಿತ್ರರಾಷ್ಟ್ರಗಳು ಕಷ್ಟಕ್ಕೆ ಸಿಕ್ಕಿಬಿದ್ದಿದ್ದುವು. ಸರ್ವಪ್ರಕಾರಗಳಲ್ಲೂ ಉತ್ಪಾದನೆ ಹೆಚ್ಚಿಸಲು, ಕೈಗಾರಿಕೆಗಳನ್ನು ಸ್ಥಾಪಿಸಲು ಅಧ್ಯಕ್ಷ ವಿಲ್ಸನನಿಗೆ ಅಧಿಕಾರ ಕೊಡಲಾಯಿತು. ಕಾರ್ಮಿಕ, ಬಂಡವಾಳಿಗ —ಹೀಗೆ ಉಭಯತ್ರರೂ ಸಹಕರಿಸಿದರು. ತಯಾರಕರು ಬೆಲೆನಿಯಂತ್ರಣಕ್ಕೆ ಒಪ್ಪಿದರು. ಕಾರ್ಮಿಕ ಸಂಸ್ಥೆಗಳು ಮುಷ್ಕರ ಹೂಡುವ ಅಧಿಕಾರವನ್ನು ತ್ಯಜಿಸಿದುವು.



ಅಮೆರಿಕನ್ ಸೇನಾನಿ ಜನರಲ್ ಪರ್ಷಿಂಗ್

ಅಮೆರಿಕ ತನ್ನ ಮಿತ್ರರಾಷ್ಟ್ರಗಳಿಗೆ ಕೋಟ್ಯಂತರ ಡಾಲರುಗಳಷ್ಟು ಸಾಲಗಳನ್ನೂ ಹಲವು ಹಡಗುಗಳ ತುಂಬ ಸರಬರಾಜನ್ನೂ ಮುಖ್ಯವಾಗಿ ಆಹಾರವಸ್ತುಗಳನ್ನೂ ನೀಡಬಹುದಾಗಿದ್ದರೂ ಸೈನಿಕರನ್ನು ಕಳಿಸುವುದೇ ದೊಡ್ಡ ಸಮಸ್ಯೆಯಾಗಿ ಕುಳಿತಿತ್ತು, ಇದ್ದ ಸೈನ್ಯ ಚಿಕ್ಕದು. ಸಾಕಷ್ಟು ಸೇನೆಯನ್ನು ಜಮಾಯಿಸಿ, ತರಬೇತು ಮಾಡಿ ಮೂರು ಸಾವಿರ ಮೈಲಿಗಳಾಚೆಯ ರಣರಂಗಗಳಿಗೆ ರವಾನಿಸುವ ಕಾರ್ಯವನ್ನು ಚಕಿತ ಗೊಳಿಸುವಷ್ಟು ತ್ವರೆಯಿಂದ ನಿರ್ವಹಿಸಲಾಯಿತು. ಇತರ ಪೌರರಂತೆ ಜರ್ಮನ್ ಮತ್ತು ಆಸ್ಟ್ರಿಯ–ಹಂಗರಿಯ ಮೂಲಕ್ಕೆ ಸೇರಿದ ಅಮೆರಿಕನ್ ಪೌರರೂ ಸೇನಾ ಜಮಾವಣೆಗೆ ನಮ್ರತೆಯಿಂದ ಬದ್ಧರಾದರು. ಒಂದೇ ವರ್ಷದ ಅವಧಿಯೊಳಗೆ ಫ್ರಾನ್ಸಿನಲ್ಲಿ ಜನರಲ್ ಜಾನ್ ಜೆ. ಪರ್ಷಿಂಗ್ ಕೈಕೆಳಗೆ 7 ಲಕ್ಷ ಸೈನಿಕರು ಸಿದ್ಧ ವಾಗಿದ್ದರು. ಮುಂದಿನ ಆರು ತಿಂಗಳೊಳಗೆ ಸೈನಿಕರ ಸಂಖ್ಯೆ 20 ಲಕ್ಷಕ್ಕೆ ಏರಿತು.

ಅಮೆರಿಕ ರಣಕ್ಕೆ ಸಿದ್ಧತೆಗೊಳ್ಳುತ್ತಿದ್ದ ವೇಗವನ್ನು ಕಂಡು ದಂಗುಬಡಿದ ಮಧ್ಯ ಐರೋಪ್ಯ ರಾಷ್ಟ್ರಗಳು 1918ರ ವಸಂತದಲ್ಲಿ ದೊಡ್ಡ ಆಘಾತ ಹೂಡಿ ಯುದ್ಧವನ್ನು ಮುಕ್ತಾಯಪಡಿಸಲು ಯತ್ನಿಸಿದುವು. ಮಿತ್ರಸೇನೆಗಳ ಉಚ್ಚಸೇನಾನಿ ಫ್ರಾನ್ಸಿನ ಮಾರ್ಷಲ್ ಫಾಕ್ ಅಗತ್ಯವಾದ ಕಡೆಯೆಲ್ಲ ಅಮೆರಿಕನ್ ಸೈನಿಕರನ್ನು ರಕ್ಷಣಾ ವ್ಯವಸ್ಥೆಗೆ ಬಳಸಿಕೊಂಡ. ಅಮೆರಿಕನ್ ಸೇನೆಗಳು ಶೌರ್ಯದಿಂದ ಹೋರಾಡಿ ಎಲ್ಲರ ಮೆಚ್ಚುಗೆಗಳಿಸಿದುವು.

ಜರ್ಮನರ ಆಘಾತವನ್ನು ತಡೆಗಟ್ಟಿದ ಕೂಡಲೆ ಅಮೆರಿಕನರು ಒಂದು ಪ್ರತ್ಯೇಕ ಸೇನೆಯಾಗಿ ಸಂಗ್ರಹಗೊಂಡು ತಮ್ಮ ಪಾಲಿಗೊಂದು ರಣರಂಗವನ್ನು ವಹಿಸಿ

ಕೊಂಡರು. ಅಮೆರಿಕನರು ಸೇಂಟ್ ಮಿಹೀಲ್ ವಿಭಾಗದಲ್ಲಿ ಜರ್ಮನ್ ರಕ್ಷಣಾ ವ್ಯವಸ್ಥೆಯೊಳಕ್ಕೆ ನುಗ್ಗಿ ಮೆಷಿನ್‌ಗನ್ ನಿಬಿಡವಾದ ಮ್ಯೂಕ್ ಆರ್ಗನ್ ವಿಭಾಗದ ಮೂಲಕ 12 ಲಕ್ಷ ಸೇನೆಯೊಡನೆ ಮುನ್ನುಗ್ಗಿದರು. ಜರ್ಮನರು ಹಿಮ್ಮೆಟ್ಟಿ ಇಡೀ ರಂಗದ ಉದ್ದಕ್ಕೂ ಪರಾಜಿತರಾದರು. 1918ನೆಯ ನವೆಂಬರ್ 11ರಂದು ಯುದ್ಧಸ್ತಂಭನ ಏರ್ಪಟ್ಟಿತು. ಸಂಯುಕ್ತಸಂಸ್ಥಾನ ಯುದ್ಧಕ್ಕೆ ತಡವಾಗಿ ಬಂದು, ಇತರರಿಗಿಂತ ಕಡಿಮೆ ಕಷ್ಟನಷ್ಟಗಳಿಗೆ ಒಳಗಾದರೂ ಅದು ಇಡೀ ಯುದ್ಧದ ತಕ್ಕಡಿಯನ್ನೇ ಏರುಪೇರು ಮಾಡಿತು. ಆಗಿನ ಕಾಲದ ಜನರು ನಂಬಿಕೊಂಡಂತೆ, ಪ್ರಜಾಪ್ರಭುತ್ವ ಲೋಕದಲ್ಲಿ ಕ್ಷೇಮವಾಗಿ ಉಳಿಯುವಂತೆ ಮಾಡಿದ ಕೀರ್ತಿ ಅಮೆರಿಕಕ್ಕೆ ಸಲ್ಲಬೇಕು.



ಅಮೆರಿಕನ್ ಸೈನಿಕರಿಂದ ಯುದ್ಧ ಪ್ರವೇಶ

**ಏಷ್ಯದಲ್ಲಿ ಜಪಾನ್ ನಡೆಸಿದ ಯುದ್ಧ :** ಆಗಸ್ಟ್ 1914ರಲ್ಲಿ ಜಪಾನ್ ಜರ್ಮನಿಯ ಮೇಲೆ ಯುದ್ಧ ಘೋಷಿಸಿತು. ಚೀನದಲ್ಲಿ ಜರ್ಮನರಿಗೆ ಸೇರಿದ್ದ ಪ್ರದೇಶವನ್ನು ಆಕ್ರಮಿಸಿಕೊಂಡಿತು. ಇದನ್ನು 1898ರಲ್ಲಿ ಚೀನ ಜರ್ಮನಿಗೆ ಗುತ್ತಿಗೆಯ ಮೇಲೆ ಕೊಟ್ಟಿತ್ತು. ಮೊದಲನೆಯ ಮಹಾಯುದ್ಧ ಪ್ರಾರಂಭವಾದ್ದು ಜಪಾನಿಗೆ ಅನುಕೂಲವೇ ಆಯಿತೆನ್ನಬಹುದು. ಅದು ಮಿತ್ರರಾಷ್ಟ್ರಗಳ ಪರ ಸೇರಿ ಪೂರ್ವ ಪ್ರಾಚ್ಯದಲ್ಲಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡಿತು. ಜರ್ಮನ್ ಸೈನ್ಯ ಈ ಭಾಗದಲ್ಲಿ ಸ್ವಲ್ಪ ಸಂಖ್ಯೆಯಲ್ಲಿದ್ದುದರಿಂದ ಅಂಥ ದೊಡ್ಡ ಕಾಳಗವೇನೂ ನಡೆಯಲಿಲ್ಲ. ಜರ್ಮನರು ಬೇಗ ಜಪಾನಿಗೆ ಶರಣಾಗತರಾದರು. ಜಪಾನು ಪಡೆದುಕೊಂಡ ಪ್ರದೇಶಗಳನ್ನು ಚೀನಕ್ಕೆ ವಾಪಸು ಮಾಡದೆ ತನ್ನ ಅಧೀನದಲ್ಲೇ ಉಳಿಸಿಕೊಂಡಿತು. ಅದಲ್ಲದೆ, ಐರೋಪ್ಯ ರಾಷ್ಟ್ರಗಳು ತಂತಮ್ಮ ಬದುಕಿಗಾಗಿ ಹೋರಾಟ ನಡೆಸುತ್ತಿದ್ದ ಇಂಥ ಕಠಿಣ ಸಂದರ್ಭಗಳನ್ನು ಉಪಯೋಗಿಸಿಕೊಂಡು, ಜಪಾನ್ ಚೀನದಲ್ಲಿ ತನ್ನ ಪ್ರಭಾವವನ್ನು ಹೆಚ್ಚಿಸಿಕೊಂಡಿತು. ಫೆಬ್ರುವರಿ 1917ರಲ್ಲಿ ಜಪಾನ್ ಮತ್ತು ಬ್ರಿಟನ್ ಒಂದು ರಹಸ್ಯ ಒಪ್ಪಂದ ಮಾಡಿಕೊಂಡುವು. ಇದರ ಪ್ರಕಾರ ಜಪಾನ್ ಮೆಡಿಟರೇನಿಯನ್ ಸಮುದ್ರಕ್ಕೆ ಕೆಲವು ಯುದ್ಧದ ಹಡಗುಗಳನ್ನು ಕಳುಹಿಸಬೇಕೆಂದೂ ಇದಕ್ಕೆ ಪ್ರತಿಯಾಗಿ ಬ್ರಿಟನ್ ಜರ್ಮನರಿಂದ ವಶಪಡಿಸಿಕೊಂಡಿದ್ದ ಷಾಂಟುಂಗಿನ ಮತ್ತು ಪೆಸಿಫಿಕ್ ಸಾಗರದಲ್ಲಿ ಜರ್ಮನರಿಗೆ ಸೇರಿದ್ದ ಕೆಲವು ದ್ವೀಪಗಳ ಮೇಲೆ ಅಧಿಕಾರ ಬಿಟ್ಟುಕೊಡಬೇಕೆಂಬ ಸೂಚನೆಗೆ ಶಾಂತಿ ಕೌಲಿನ ಸಮಯದಲ್ಲಿ ಬೆಂಬಲ ಸೂಚಿಸುವುದಾಗಿಯೂ ಬ್ರಿಟನ್ ಒಪ್ಪಿತು. ಫ್ರಾನ್ಸ್ ಮಾರ್ಚ್ 1917ರಲ್ಲಿ ಇಂಥದೇ ಕರಾರುಗಳಿಗೆ ಒಪ್ಪಿಗೆ ಕೊಟ್ಟಿತು. ಇದಕ್ಕೆ ಬದಲು ಜಪಾನು ಚೀನವನ್ನು ಮಹಾಯುದ್ಧದಲ್ಲಿ ತೊಡಗುವಂತೆ ಮಾಡಬೇಕೆಂದು ಒಡಂಬಡಿಕೆಯಾಯಿತು. ಕೆಲವು ದಿನಗಳ ತರುವಾಯ ರಷ್ಯವೂ ಅನಂತರ ಇಟಲಿಯೂ ಇದಕ್ಕೆ ತಮ್ಮ ಒಪ್ಪಿಗೆ ನೀಡಿದುವು.

ಈ ರೀತಿಯ ಲಾಭಗಳನ್ನು ಐರೋಪ್ಯ ರಾಷ್ಟ್ರಗಳಿಂದ ಪಡೆದ ಮೇಲೆ ಜಪಾನ್ ಚೀನವನ್ನು ಜರ್ಮನಿಯಿಂದ ಎಲ್ಲ ಸಂಪರ್ಕಗಳನ್ನೂ ಕಡಿದುಕೊಳ್ಳುವಂತೆ ಪ್ರೇರೇಪಿಸಿತು. ಅಮೆರಿಕ ಯುದ್ಧ ಪ್ರವೇಶಿಸಿದ ಮೇಲೆ ಏಪ್ರಿಲ್ ತಿಂಗಳಿನಲ್ಲಿ ಚೀನಕ್ಕೆ ಇಂಥದೇ ಸಲಹೆಯನ್ನು ನೀಡಿತು. ಒಟ್ಟಿನಲ್ಲಿ ಜಪಾನ್ ಯುದ್ಧದಿಂದ ಲಾಭ ಗಳಿಸಿತು. 1917ರಲ್ಲಿ ಯುದ್ಧ ಮಾಡುತ್ತಿದ್ದ ಮಿತ್ರರಾಷ್ಟ್ರಗಳ ಪರಿಸ್ಥಿತಿ ಹದಗೆಟ್ಟಿತ್ತು. ಆದ್ದರಿಂದ ಅವು ಅಮೆರಿಕದಿಂದ ಮಾತ್ರವಲ್ಲದೆ, ಏಷ್ಯದ ದೇಶಗಳಿಂದಲೂ ಸಹಾಯ ನಿರೀಕ್ಷಿಸುತ್ತಿದ್ದುವು. ಪೂರ್ವದ ರಾಷ್ಟ್ರಗಳು ಅಲ್ಲಿಯ ವರೆಗೆ ಅಂಥ ಹೆಚ್ಚಿನ ಸಹಾಯವನ್ನೇನೂ ಮಾಡಿರಲಿಲ್ಲ. ಚೀನ ತಟಸ್ಥ ನೀತಿ ಅನುಸರಿಸಿತ್ತು. ಜಪಾನು ಜರ್ಮನರಿಗೆ ಸೇರಿದ ಪ್ರದೇಶಗಳನ್ನು ವಶಪಡಿಸಿಕೊಂಡು, ಮಿತ್ರರಾಷ್ಟ್ರಗಳಿಗೆ ಯುದ್ಧಕ್ಕೆ ಬೇಕಾದ ಶಸ್ತ್ರಾಸ್ತ್ರಗಳನ್ನು ಮಾರುವುದರಲ್ಲಿ ಮಾತ್ರ ಸಹಾಯ ನೀಡಿತ್ತು. ಇಂಥ ಕಠಿಣ ಪರಿಸ್ಥಿತಿಯಲ್ಲಿ ಜಪಾನಿನ ಕೋರಿಕೆಗಳನ್ನೊಪ್ಪಿ ಅದರಿಂದ ಯುದ್ಧಕ್ಕೆ ಹೆಚ್ಚಿನ ಸಹಾಯ ಪಡೆಯಲು ಮಿತ್ರರಾಷ್ಟ್ರಗಳು ನಿರ್ಧರಿಸಿದುವು. ಆದ್ದರಿಂದ ಈ ಯುದ್ಧ ಜಪಾನಿಗೆ ಒಂದು ಸುಯೋಗವೆಂದೇ ಹೇಳಬಹುದು.

**ಚೀನ, ಭಾರತ :** ಯುದ್ಧ ಪ್ರಾರಂಭವಾಗುವ ಮೊದಲು, ಚೀನ ಯುದ್ಧದಲ್ಲಿ ಭಾಗವಹಿಸುವ ನಿಶ್ಚಯ ಹೊಂದಿತ್ತು. ಜಪಾನು ಯುದ್ಧವನ್ನು ನೆವವಾಗಿ ಉಪಯೋಗಿಸಿಕೊಂಡು ಚೀನದಲ್ಲಿ ತನ್ನ ಪ್ರಾಬಲ್ಯ ಹೆಚ್ಚಿಸಿಕೊಳ್ಳಬಹುದೆಂಬ ಭೀತಿ ಅದಕ್ಕಿತ್ತು. 1914 ಮತ್ತು 1915ರಲ್ಲಿ ಚೀನ ಮಿತ್ರರಾಷ್ಟ್ರಗಳ ಪರವಾಗಿ ಯುದ್ಧದಲ್ಲಿ ಭಾಗವಹಿಸುವುದು ಬೇಕಾಗಿರಲಿಲ್ಲ. ಇದಕ್ಕೆ ಕಾರಣವೇನೆಂದರೆ ಯುದ್ಧಕ್ಕೆ ಚೀನ ಇಳಿದು, ತನ್ನ ಸೈನ್ಯವನ್ನು ಬಲಪಡಿಸಿಕೊಂಡು ಸಂಪತ್ತನ್ನು ವೃದ್ಧಿಸಿಕೊಂಡು, ಶಾಂತಿಸಂಧಾನಗಳಲ್ಲಿ ಭಾಗವಹಿಸುವುದು ಜಪಾನಿಗೆ ಇಷ್ಟವಾಗಿರಲಿಲ್ಲ. ಆದ್ದರಿಂದ 1917ರ ತನಕ ಜಪಾನ್ ಚೀನವನ್ನು ಯುದ್ಧ ಪ್ರವೇಶಿಸದಂತೆ ತಡೆಹಿಡಿದಿತ್ತು. ಆದರೆ 1917ರಲ್ಲಿ ಜಪಾನ್ ತನ್ನ ನೀತಿಯನ್ನು ಬದಲಾಯಿಸಿ, ಮೇಲೆ ತಿಳಿಸಿದ ಕಾರಣಗಳಿಂದಾಗಿ ಚೀನವನ್ನು ಯುದ್ಧದಲ್ಲಿ ಭಾಗವಹಿಸಲು ಪ್ರೇರೇಪಿಸಿತು. 1917ರ ಆಗಸ್ಟ್ 14ರಂದು ಜರ್ಮನಿ ಮತ್ತು ಆಸ್ಟ್ರಿಯ–ಹಂಗರಿಗಳ ಮೇಲೆ ಚೀನ ಯುದ್ಧ ಘೋಷಿಸಿತು. ಆಗ ಚೀನದಲ್ಲಿ ಎರಡು ಸರ್ಕಾರಗಳಿದ್ದುವು. ಒಂದು ಉತ್ತರದ ಪೀಕಿಂಗ್‌ನಲ್ಲಿ, ಮತ್ತೊಂದು ದಕ್ಷಿಣದ ಕ್ಯಾಂಟನ್‌ನಲ್ಲಿ. ಎರಡೂ ಸರ್ಕಾರಗಳು ಪ್ರತ್ಯೇಕವಾಗಿ ಯುದ್ಧ ಘೋಷಿಸಿದುವು.

ಚೀನ ಒಂದನೆಯ ಮಹಾಯುದ್ಧದಲ್ಲಿ ಭಾಗವಹಿಸಿದ್ದರಿಂದ ಒಟ್ಟಿನಲ್ಲಿ ಅಂಥ ಹೆಚ್ಚಿನ ಪರಿಣಾಮ ಕಂಡುಬರಲಿಲ್ಲ. ಜರ್ಮನಿಗೆ ಸೇರಿದ್ದ ಯುದ್ಧನೌಕೆಗಳನ್ನು ಚೀನ ತನ್ನ ಬಂದರುಗಳಲ್ಲಿ ತಡೆಹಿಡಿದಿತ್ತು. ಅನಂತರ ಅವುಗಳನ್ನು ಮಿತ್ರರಾಷ್ಟ್ರಗಳಿಗೆ ಒಪ್ಪಿಸಿತು. ಚೀನದಿಂದ ಕೂಲಿಗಳು ಹೋಗಿ ಯುದ್ಧದ ಶಸ್ತ್ರಾಸ್ತ್ರಗಳನ್ನು ತಯಾರಿಸುವ ಕಾರ್ಖಾನೆಗಳಲ್ಲಿ ದುಡಿದರು. ಯುದ್ಧದಿಂದ ಜಪಾನಿಗೆ ತನ್ನ ದೇಶದಲ್ಲಿ ಹೆಚ್ಚಿನ ಪ್ರದೇಶಗಳನ್ನು ಬಿಟ್ಟುಕೊಡಬೇಕಾಯಿತು. ಯುದ್ಧ ಮುಗಿದ ಅನಂತರ ಚೀನಕ್ಕೆ ಪ್ಯಾರಿಸ್ ಸಮ್ಮೇಳನದಲ್ಲಿ ಭಾಗವಹಿಸಲು ಅವಕಾಶ ದೊರೆಯಿತು. ಅಲ್ಲಿ ಚೀನ ಜಪಾನ್‌ಗಳ ಚಕಮಕಿ ನಡೆಯಿತು. ಜಪಾನು ಜರ್ಮನಿಗೆ ಸೇರಿದ್ದ ಷಾಂಟುಂಗ್ ಪ್ರದೇಶಗಳು ತನಗೆ ಸೇರಬೇಕೆಂದು ಕೇಳಿತು. ಚೀನ ಇದನ್ನು ವಿರೋಧಿಸಿತು. ಯುದ್ಧದ ಸಮಯದಲ್ಲಿ ನಡೆದ ಗುಟ್ಟಾದ ಒಪ್ಪಂದಗಳ ಪ್ರಕಾರ, ಫ್ರಾನ್ಸ್ ಮತ್ತು ಇಂಗ್ಲೆಂಡ್ ಜಪಾನಿಗೆ ಬೆಂಬಲ ಕೊಡಬೇಕಾಯಿತು. ಕೊನೆಗೆ ಜಪಾನ್ ಷಾಂಟುಂಗ್ ಪ್ರದೇಶವನ್ನು ಆಕ್ರಮಿಸಿಕೊಂಡಿತು. ಉಳಿದ ಜರ್ಮನ್ ವಸಾಹತುಗಳ ಮೇಲೆ ಹತೋಟಿ ಪಡೆದುಕೊಂಡಿತು. ಆದುದರಿಂದ ಚೀನ ನಿರಾಶೆಗೊಂಡು ವರ್ಸೇಲ್ಸ್ ಒಪ್ಪಂದಕ್ಕೆ ಸಹಿ ಹಾಕಲು ಒಪ್ಪಲಿಲ್ಲ. ಅನಂತರ ಜರ್ಮನಿಯೊಡನೆ ಪ್ರತ್ಯೇಕ ಒಪ್ಪಂದ ಮಾಡಿಕೊಂಡಿತು. ಚೀನ ರಾಷ್ಟ್ರಗಳ ಕೂಟದ ಸದಸ್ಯರಾಷ್ಟ್ರವಾಯಿತು.

ಒಂದನೆಯ ಮಹಾಯುದ್ಧ ಆರಂಭವಾದ ಮೂರು ತಿಂಗಳಲ್ಲೇ ಭಾರತೀಯ ಸೈನಿಕರು ಪಶ್ಚಿಮ ರಣಕ್ಷೇತ್ರದಲ್ಲಿ ಕಾದಾಡುತ್ತಿದ್ದರು. ಭಾರತ ಉಳಿದ ಬ್ರಿಟಿಷ್ ವಸಾಹತುಗಳಂತೆ, ಯುದ್ಧದ ಸಮಯದಲ್ಲಿ ಇಂಗ್ಲೆಂಡಿಗೆ ಅಧೀನವಾಗಿ ನಡೆದುಕೊಂಡಿತು. ಯುದ್ಧಕ್ಕಾಗಿ ಭಾರತ ಒದಗಿಸಿದ ಸೈನಿಕರ ಮತ್ತು ಭಾರತೀಯ ಕಾರ್ಮಿಕರ ಸಂಖ್ಯೆ 13,00,000. ಈಜಿಪ್ಟ್, ಚೀನ, ಆಫ್ರಿಕ, ಅರೇಬಿಯ, ಬಾಲ್ಕನ್ ಪ್ರದೇಶ ಮತ್ತು ಫ್ರಾನ್ಸಿನಲ್ಲಿ ಭಾರತೀಯರು ಸೇವೆ ಸಲ್ಲಿಸಿದರು. ಭಾರತ ಸರ್ಕಾರ ಇದಲ್ಲದೆ ಬ್ರಿಟನಿಗೆ 50,00,00,000 ಡಾಲರುಗಳನ್ನು ಒಪ್ಪಿಸಿತು. ಯುದ್ಧನಿಧಿಗಾಗಿ ನೂರಾರು ರಾಜಮಹಾರಾಜರು ನೀಡಿದ ಕಾಣಿಕೆ 2,50,00,000 ಡಾಲರುಗಳು. ಯುದ್ಧ ಮುಗಿದ ಅನಂತರ ಬ್ರಿಟನು ಮಾಂಟೆಗು–ಚೆಮ್ಸ್‌ಫರ್ಡ್ ಸುಧಾರಣೆಗಳ ಮೂಲಕ ಭಾರತೀಯರಿಗೆ ಕೆಲವು ರಾಜಕೀಯ ಹಕ್ಕುಗಳನ್ನು ನೀಡಿತು.

**ಜರ್ಮನಿಯ ವಸಾಹತುಗಳಲ್ಲಿ ಯುದ್ಧ :** ಫ್ರಾನ್ಸ್ ಮತ್ತು ಇಂಗ್ಲೆಂಡ್‌ಗಳಂತೆ ಜರ್ಮನಿಗೂ ಏಷ್ಯ–ಆಫ್ರಿಕಗಳಲ್ಲಿ ಅನೇಕ ವಸಾಹತುಗಳಿದ್ದುವು. ಇವು ಜರ್ಮನಿಯ ಕೈಗಾರಿಕಾಭಿವೃದ್ಧಿಗೆ ಸಹಾಯಕವಾಗಿದ್ದುವು. ಜರ್ಮನಿಯು ಕೈಗಾರಿಕೆ

ಗಳಿಗೆ ಬೇಕಾದ ಕಚ್ಚಾಮಾಲುಗಳನ್ನು ಪೂರೈಸುತ್ತಿದ್ದುದು ಈ ವಸಾಹತುಗಳೇ. ಅಷ್ಟೇ ಅಲ್ಲದೆ ಇವು ಜರ್ಮನಿಯಲ್ಲಿ ತಯಾರಾದ ಸಿದ್ಧವಸ್ತುಗಳಿಗೆ ಮಾರುಕಟ್ಟೆಗಳು



ತಾಯಿನಾಡಿನಿಂದ ಹೊರಗೆ : ಗಾಯಗೊಂಡ ಭಾರತೀಯ ಯೋಧರು

ಕೂಡ. ಮಹಾಯುದ್ಧ ಪ್ರಾರಂಭವಾದಾಗ ಮಿತ್ರರಾಷ್ಟ್ರಗಳು ಇವನ್ನು ವಶಪಡಿಸಿಕೊಳ್ಳಲು ಸಂಚು ಹೂಡಿದುವು. ಇವುಗಳಿಂದ ದೊರಕುತ್ತಿದ್ದ ಅಮೂಲ್ಯವಾದ ಕಚ್ಚಾ ಸಾಮಗ್ರಿ ಜರ್ಮನಿಗೆ ರವಾನೆಯಾಗುವುದು ತಪ್ಪಿದರೆ ಆ ದೇಶದ ಆರ್ಥಿಕ ಸ್ಥಿತಿ ಕುಂಠಿತಗೊಂಡು ತಾವು ಯುದ್ಧದಲ್ಲಿ ಗೆಲ್ಲಲು ಸಹಾಯವಾಗುವುದೆಂಬುದು ಮಿತ್ರರಾಷ್ಟ್ರಗಳ ಆಲೋಚನೆ. ಈ ಯೋಚನೆಯ ಫಲವೇ ಜರ್ಮನಿಯ ವಸಾಹತುಗಳಲ್ಲಿ ನಡೆದ ಯುದ್ಧದ ರೂಪ ತಳೆಯಿತು.

ಪೂರ್ವ ಆಫ್ರಿಕದಲ್ಲಿ ಜರ್ಮನಿಗೆ ಸೇರಿದ ಅನೇಕ ವಸಾಹತುಗಳಿದ್ದುವು. ಇಲ್ಲಿ ನಡೆದ ಯುದ್ಧ ಸ್ವಲ್ಪ ದೀರ್ಘಕಾಲದ್ದಾಗಿದೆ. ಉಳಿದ ಜರ್ಮನ್ ವಸಾಹತುಗಳಲ್ಲಿ ಯುದ್ಧ ಬಹು ಶೀಘ್ರವೇ ಕೊನೆಗೊಂಡಿತು. ಚೀನದಲ್ಲಿ ಜರ್ಮನಿಗೆ ಸೇರಿದ ಪ್ರದೇಶಗಳನ್ನು ಜಪಾನ್ ಯುದ್ಧ ಘೋಷಿಸಿದ ತತ್‌ಕ್ಷಣ ಆಕ್ರಮಿಸಿಕೊಂಡಿತು. ಇಲ್ಲಿ ಜರ್ಮನರ ಸೇನಾಬಲ ಸ್ವಲ್ಪವೇ ಇದ್ದುದರಿಂದ ಜಪಾನೀಯರು ಬಹು ಸುಲಭವಾಗಿ ಜರ್ಮನರನ್ನು ಸೋಲಿಸಿದರು. ಅದಲ್ಲದೆ ದೂರದ ಯೂರೋಪಿನಿಂದ ಚೀನಕ್ಕೆ ಬೇಕಾದ ಶಸ್ತ್ರಾಸ್ತ್ರಗಳನ್ನು ಸಾಗಿಸುವುದು ಅಸಾಧ್ಯವಾಗಿತ್ತು. ಜಪಾನೀಯರಾದರೂ ಹತ್ತಿರವೇ ಇದ್ದ ತಮ್ಮ ದೇಶದಿಂದ ಬೇಕಾದ ಶಸ್ತ್ರಾಸ್ತ್ರಗಳನ್ನು ಸುಲಭವಾಗಿ ಸಾಗಿಸಬಹುದಾಗಿತ್ತು.

ಜರ್ಮನಿಗೆ ಸೇರಿದ ಅನೇಕ ದ್ವೀಪಗಳು ಪೆಸಿಫಿಕ್ ಮಹಾಸಾಗರದಲ್ಲಿದ್ದುವು. 1914ರಲ್ಲಿ ಜಪಾನ್, ಆಸ್ಟ್ರೇಲಿಯ ಮತ್ತು ನ್ಯೂಜಿಲೆಂಡ್‌ಗಳ ಸಹಾಯದಿಂದ ಬ್ರಿಟಿಷ್ ಯುದ್ಧನೌಕೆಗಳು ಜರ್ಮನಿಗೆ ಸೇರಿದ ಎಲ್ಲ ದ್ವೀಪಗಳನ್ನೂ ಆಕ್ರಮಿಸಿಕೊಳ್ಳುವುದೇನೂ ಕಷ್ಟವಾಗಲಿಲ್ಲ.

ಆಫ್ರಿಕದಲ್ಲಿ ಜರ್ಮನರಿಗೆ ಸೇರಿದ್ದ ವಸಾಹತುಗಳು ಮಿತ್ರರಾಷ್ಟ್ರಗಳ ವಶವಾದುವು. 1914ರಲ್ಲಿ ಫ್ರೆಂಚ್ ಮತ್ತು ಬ್ರಿಟಿಷ್ ವಸಾಹತು ಸೈನ್ಯಗಳಿಗೂ ಜರ್ಮನ್ ಸೈನ್ಯಗಳಿಗೂ ಆಫ್ರಿಕದ ಟೋಗೋಲ್ಯಾಂಡಿನಲ್ಲಿ ಯುದ್ಧ ನಡೆಯಿತು. ಯುದ್ಧದಲ್ಲಿ ಸೋತ ಜರ್ಮನಿ ಟೋಗೋಲ್ಯಾಂಡನ್ನು ಫ್ರೆಂಚ್ ಮತ್ತು ಬ್ರಿಟಿಷ್ ಸೇನೆಗಳಿಗೆ ಬಿಟ್ಟುಕೊಟ್ಟಿತು. ಇದೇ ರೀತಿ ಕ್ಯಾಮರೂನ್ಸ್ ಬ್ರಿಟಿಷ್ ಮತ್ತು ಫ್ರೆಂಚರ ವಶವಾದದ್ದು 1916ರಲ್ಲಿ. ಜರ್ಮನ್ ಪೂರ್ವ ಆಫ್ರಿಕದಲ್ಲಿ 1915ರಲ್ಲಿ ಯುದ್ಧ ನಡೆಯಿತು. ಜನರಲ್ ಜಾನ್ ಸಿ. ಸ್ಮಟ್ಸ್ ಬ್ರಿಟಿಷರ ಸೇನಾಧಿಪತಿಯಾಗಿ ಜರ್ಮನರ ವಿರುದ್ಧ ಧೈರ್ಯಸಾಹಸಗಳಿಂದ ಹೋರಾಡಿದ. ದಕ್ಷಿಣ ಆಫ್ರಿಕ, ಬೆಲ್ಜಿಯಂ ಕಾಂಗೋ, ಬ್ರಿಟಿಷ್ ಪೂರ್ವ ಆಫ್ರಿಕ, ರೊಡೀಷ್ಯಿಯ ಮತ್ತು ಪೋರ್ಚುಗೀಸ್ ಪೂರ್ವ ಆಫ್ರಿಕದ ಸೈನ್ಯಗಳಿಗೂ ಜರ್ಮನರಿಗೂ ನಡುವೆ 1918ರ ನವೆಂಬರ್ 14ರ ವರೆಗೆ ಎಂದರೆ (ಮಹಾಯುದ್ಧ ಕೊನೆಗೊಂಡ ಮೇಲೂ ಮೂರು ದಿನ) ಯುದ್ಧ ನಡೆಯಿತು.

**ಯುದ್ಧದ ಅಂತಿಮ ಘಟ್ಟ:** 1917ರಲ್ಲಿ ಯುದ್ಧ ಅಂತಿಮ ಘಟ್ಟ ಮುಟ್ಟಿತು. ರಷ್ಯದಲ್ಲಿನ ಮಹಾಕ್ರಾಂತಿ ಒಂದು ಮಹಾಘಟನೆಯಾಗಿ ಪರಿಣಮಿಸಿ ಅಲ್ಲಿ ಬಾಲ್ಷೆವಿಕ್ ರಾಷ್ಟ್ರ ಸ್ಥಾಪನೆಯಾಯಿತು. ಅದನ್ನು ಕಟ್ಟಿದ ಲೆನಿನ್ ಜರ್ಮನಿಯೊಡನೆ ಯುದ್ಧ ನಿಲ್ಲಿಸಿದ. 1918ರಲ್ಲಿ ರಷ್ಯನರು ಜರ್ಮನಿಯೊಡನೆ ಬ್ರೆಸ್ಟ್ ಲಿಟಾಫ್ಸ್ಕನಲ್ಲಿ ಒಪ್ಪಂದ ಮಾಡಿಕೊಂಡು ಹೋರಾಟದಿಂದ ದೂರವಾದರು. ಈ ಕಾರಣದಿಂದ ಜರ್ಮನರು ತಮ್ಮ ಸರ್ವಚೈತನ್ಯವನ್ನೂ ಪಶ್ಚಿಮದಲ್ಲಿ ಒಡ್ಡಲು ಸಾಧ್ಯವಾಯಿತು. ಕಾಪೊರೆಟ್ಟೊದಲ್ಲಿ ಜರ್ಮನ್ ಸೈನ್ಯಗಳು ಇಟಲಿಯನ್ನು ಸೋಲಿಸಿದುವು. ಬಾಲ್ಕನ್ ಕ್ಷೇತ್ರಕ್ಕೂ ಮೂಡಲಲ್ಲಿ ತುರ್ಕಿ ಆ ವೇಳೆಗೆ ಸೋತಿತ್ತು. ಬ್ರಿಟಿಷರು ಮೆಸೊಪೊಟೇಮಿಯದಲ್ಲೂ ಪ್ಯಾಲೆಸ್ಟೈನಿನಲ್ಲೂ ಜಯ ಗಳಿಸಿದರು. ಆದರೆ ಜರ್ಮನ್ ದಳಪತಿ ಲೂಡೆನ್‌ಡಾರ್ಫ್ ಪಶ್ಚಿಮ ರಣರಂಗದಲ್ಲಿ ದೊಡ್ಡ ಪ್ರಮಾಣದಲ್ಲಿ ಕಾರ್ಯಾಚರಣೆ ನಡೆಸಿದ. ಇದರಿಂದ ಮಿತ್ರರಾಷ್ಟ್ರಗಳಿಗೆ ಕಷ್ಟವಾಗಿದ್ದರೂ ಆಹಾರಾಭಾವದಿಂದ ಜರ್ಮನಿಯ ಸ್ಥಿತಿ ಹೆಚ್ಚು ಕಠಿಣವಾಗಿತ್ತು. ಆದ್ದರಿಂದ ಹೇಗಾದರೂ ಸಾಹಸಮಾಡದಿದ್ದರೆ ಅನಾಹುತ ಸಿದ್ಧವೆಂದು ತಿಳಿದು ಆ ದಳಪತಿ ಸರ್ವಶಕ್ತಿಯನ್ನೂ ವಿನಿಯೋಗಿಸಿ ಪಶ್ಚಿಮ ರಣರಂಗದಲ್ಲಿ ಬ್ರಿಟಿಷರನ್ನೂ ಫ್ರೆಂಚರನ್ನೂ ಗೆಲ್ಲಲು ಹವಣಿಸಿದ.

ಸಾಮ್ ನದಿಯ ಬಳಿಯಿದ್ದ ಬ್ರಿಟಿಷರ ಮೇಲೆ ಜರ್ಮನರು ಮೊದಲು ಬಿದ್ದು ಅವರನ್ನು ಹಿಮ್ಮೆಟ್ಟಿಸಿದರು. 1914ರಲ್ಲಿ ಜರ್ಮನರು ಆಕ್ರಮಿಸಿಕೊಂಡಿದ್ದ ಮಾರ್ನ್ ನದೀ ದಡದ ವರೆಗೆ ಈ ಸಾರಿಯೂ ವೇಗದಿಂದಲೂ ರಭಸದಿಂದಲೂ ನುಗ್ಗಿದರು. ಜರ್ಮನರನ್ನು ಕುರಿತು ಸಾಕಷ್ಟು ಅನುಭವ ಪಡೆದಿದ್ದ ಬ್ರಿಟಿಷರೂ ಫ್ರೆಂಚರೂ ರಣಭೂಮಿಯಲ್ಲಿ ತಮಗೆ ಏಕದಂಡನಾಯಕನಿರಬೇಕೆಂದು ನಿಶ್ಚಯ ಮಾಡಿ ಮಾರ್ಷಲ್ ಫಾಕನನ್ನು ಅಧಿಪತಿಯಾಗಿ ಗೊತ್ತುಮಾಡಿಕೊಂಡರು. ಅಮೆರಿಕದ ಸೈನ್ಯಗಳೂ ಬಂದಿಳಿದುವು. ಜುಲೈ ತಿಂಗಳ ವೇಳೆಗೆ ಫಾಕ್ ಎಲ್ಲ ಬಲವನ್ನೂ ಒಟ್ಟುಗೂಡಿಸಿಕೊಂಡು ಆಕ್ರಮಣದಲ್ಲಿ ತೊಡಗಿ ಜರ್ಮನರನ್ನು ಪುನಃ ಹಿಂಡೆನ್ಬರ್ಗ್ ರೇಖೆಗೆ ಅಟ್ಟಿದ.



ಫ್ರೆಂಚ್ ಸೇನಾನಿ ಜನರಲ್ ನಿವೆಲ್

ಆ ವೇಳೆಗೆ ಮೂಡಲಲ್ಲಿ ಬಲ್ಗೇರಿಯ ಸೋತಿತ್ತು. ಆಸ್ಟ್ರಿಯವೂ ಇಟಲಿಯಿಂದ ವಿಟ್ಟೊರಿಯೊ ವೇನೆಟೊದಲ್ಲಿ ಸೋತಿತ್ತು. ಆಸ್ಟ್ರಿಯ-ಹಂಗರಿ ರಾಷ್ಟ್ರ ಧ್ವಂಸವೇ ಆಗಿತ್ತು. ಇನ್ನು ಮೂಡಲಿಗೆ ಪ್ಯಾಲೆಸ್ಟೈನಿನಲ್ಲಿ ದಳಪತಿ ಅಲೆನ್ಬಿ ತುರ್ಕಿ ಸೈನ್ಯಗಳನ್ನು ನಾಶಗೊಳಿಸಿ ಸಿರಿಯವನ್ನು ಮುತ್ತಿ ದಮಾಸ್ಕಸ್ ನಗರವನ್ನು ಹಿಡಿದುಕೊಂಡಿದ್ದ. ಈ ರೀತಿ ಎಲ್ಲೆಲ್ಲೂ ಪರಾಜಯಗಳೇ ಸಂಭವಿಸಿದ್ದರಿಂದ ಜರ್ಮನ್ ಸೈನ್ಯಮುಖ್ಯರಲ್ಲಿ ನಿರಾಶೆ ಮೂಡಿತು. ಲೂಡೆನ್‌ಡಾರ್ಫ್ ರಾಜೀನಾಮೆ ಕೊಟ್ಟ. ಜರ್ಮನಿಯ ಒಳನಾಡಿನಲ್ಲಿ ಅಲ್ಲೋಲಕಲ್ಲೋಲವಾಯಿತು. ಚಕ್ರವರ್ತಿ ರಾಜಧಾನಿ ಬಿಟ್ಟು ಓಡಿದ. ಕೀಲ್ ಕಾಲುವೆಯಲ್ಲಿದ್ದ ಜರ್ಮನ್ ಹಡಗುಗಳ ನೌಕರರು ದಂಗೆಯೆದ್ದರು. ಮಿತ್ರರಾಷ್ಟ್ರಗಳು ತಾತ್ಕಾಲಿಕವಾಗಿ ಸ್ಥಾಪಿತವಾಗಿದ್ದ ಹೊಸ ಜರ್ಮನ್ ರಾಷ್ಟ್ರದೊಡನೆ ಹೋರಾಟ ನಿಲ್ಲಿಸಲೊಪ್ಪಿದುವು.



ಕಪ್ಪುಸಮುದ್ರದಲ್ಲಿ ರಷ್ಯನ್ ನೌಕೆಗಳು

1918ರ ನವೆಂಬರ್ 11ರಂದು ಯುದ್ಧ ಮುಕ್ತಾಯಮಾಡಲು ಗೊತ್ತುಮಾಡಿಕೊಂಡಾಗಲೇ ಜರ್ಮನರು ತಮ್ಮ ಯುದ್ಧದ ಹಡಗುಗಳನ್ನೂ ವಿಮಾನಗಳನ್ನೂ ಫಿರಂಗಿಗಳನ್ನೂ ಒಪ್ಪಿಸಬೇಕೆಂದು ನಿಶ್ಚಯವಾಗಿತ್ತು. ತಮ್ಮ ಯುದ್ಧದ ಹಡಗುಗಳನ್ನು ಜರ್ಮನರು ತಾವಾಗಿಯೇ ನಾಶಮಾಡಿಬಿಟ್ಟರು. ಆದ್ದರಿಂದ ಆ ಹಡಗುಗಳ ಹಂಚಿಕೆ ಹೇಗೆಂಬ ವ್ಯಾಜ್ಯಗಳಿಗೆ ಆಸ್ಪದವಿಲ್ಲವಾಯಿತು. ತಾವು ಯುದ್ಧ ಮಾಡಿದ್ದು ಮಹಾಪರಾಧ; ಇನ್ನುಮೇಲೆ ಯುದ್ಧಸನ್ನಾಹ ಮಾಡುವುದಿಲ್ಲ—ಎಂದು ಜರ್ಮನಿಯ ತಾತ್ಕಾಲಿಕ ಸರ್ಕಾರ ಪ್ರಮಾಣ ಮಾಡಿತಲ್ಲದೆ ಯುದ್ಧದಲ್ಲಿ ಗೆದ್ದಿದ್ದ ರಾಷ್ಟ್ರಗಳಿಗೆ ಪರಿಹಾರ ಕೊಡುವುದಕ್ಕೂ ಒಪ್ಪಿಕೊಂಡಿತು. ಮಿತ್ರರಾಷ್ಟ್ರಗಳಿಗೆ ಆಗಿದ್ದ ವ್ಯಾಪಾರನಷ್ಟಕ್ಕಾಗಿ ತನ್ನ ವ್ಯಾಪಾರ ಹಡಗುಗಳನ್ನೂ ಒಪ್ಪಿಸಬೇಕಾಯಿತು.

**ಪರಿಣಾಮಗಳು :** ಒಂದನೆಯ ಮಹಾಯುದ್ಧ 1565 ದಿನಗಳ ಕಾಲ ನಡೆಯಿತು. ಈ ಯುದ್ಧ ನಡೆಸಲು ಆದ ವೆಚ್ಚ ಅಗಾಧ. ಇದನ್ನು ನಡೆಸಲು ನಿಯೋಜಿತರಾದ ಜನರ ಸಂಖ್ಯೆ 6.5 ಕೋಟಿ. 1.3 ಕೋಟಿ ಜನ ಯುದ್ಧದಲ್ಲೋ ಯುದ್ಧದಿಂದ ಗಾಯಗೊಂಡೋ ಮರಣಕ್ಕೀಡಾದರು. ಸುಮಾರು 2,20,00,000 ಜನ (ಮೂವರಲ್ಲಿ ಒಬ್ಬರಂತೆ) ಗಾಯಗೊಂಡರು. ಇವರ ಪೈಕಿ 70,00,000 ಜನ ಸಂಪೂರ್ಣವಾಗಿ ದೇಹದ ಸ್ವಾಸ್ಥ್ಯ ಕಳೆದುಕೊಂಡರು. ಗಾಯಗೊಂಡ ಅನೇಕರು ಕೆಲವೇ ವರ್ಷಗಳಲ್ಲಿ, ದೇಹದ ಗಾಯುಗಳಿಂದಾಗಿ ಮಡಿದರು. ಷೆಲ್ ದಾಳಿಗೆ ಒಳಗಾದ ಮತ್ತು ವಿಷವಾಯು ಪ್ರಯೋಗಕ್ಕೆ ತುತ್ತಾದ ಅನೇಕರು ಹೇಗೋ ಜೀವಚ್ಛವಗಳಾಗಿ ಬದುಕಿದರು.



ಯುದ್ಧ ಚಿಂತಾನಿರತ ಜರ್ಮನ್ ಸೇನಾನಿ ಲೂಡೆನ್‌ಡಾರ್ಫ್!

1790 ರಿಂದ 1913ರ ವರೆಗೆ ನಡೆದ ನೆಪೋಲಿಯಾನಿಕ್ ಯುದ್ಧಗಳು, ಕ್ರಿಮಿಯನ್ ಯುದ್ಧ, ಡೇನಿಷ್ ಯುದ್ಧ, ಆಸ್ಟ್ರೋ-ಪ್ರಷ್ಯನ್ ಯುದ್ಧ, ಅಮೆರಿಕನ್ ಅಂತರ್ಯುದ್ಧ, ಫ್ರಾಂಕೊ-ಪ್ರಷ್ಯನ್ ಯುದ್ಧ, ಬೋಯರ್ ಯುದ್ಧ, ರಷ್ಯ-ಜಪಾನ್ ಯುದ್ಧ ಮತ್ತು ಬಾಲ್ಕನ್ ಯುದ್ಧಗಳೇ ಮೊದಲಾದ ಎಲ್ಲ ಯುದ್ಧಗಳಲ್ಲೂ ಮಡಿದವರ ಸಂಖ್ಯೆಯ ಎರಡರಷ್ಟು ಮಂದಿ ಈ ಯುದ್ಧದಲ್ಲಿ ಮಡಿದರು. ಅಲ್ಲದೆ ಅವೆಲ್ಲಕ್ಕಿಂತ ಇದು ಹೆಚ್ಚು ಉಗ್ರ. ಯುದ್ಧದಲ್ಲಿ ಮಡಿದ ನಾಗರಿಕರ ಸಂಖ್ಯೆ ಸೈನಿಕರ ಸಂಖ್ಯೆಗಿಂತ ಹೆಚ್ಚು. ಯುದ್ಧದಲ್ಲಿ ನೇರವಾಗಿ ಭಾಗವಹಿಸದೆ ಇದ್ದವರನೇಕರು ಹಸಿವು, ರೋಗರುಜಿನ, ಸಾಮೂಹಿಕ ಕೊಲೆ, ಸಾಂಕ್ರಾಮಿಕ ರೋಗ ಮತ್ತು ದಾಳಿಗಳಿಗೆ ತುತ್ತಾಗಿ ಮರಣಹೊಂದಿದರು. ಅನೇಕ ದೇಶಗಳಲ್ಲಿ ಜನಸಂಖ್ಯೆಯ ಏರಿಕೆಯ ವೇಗ ಕಡಿಮೆಯಾಯಿತು.

ಪ್ರಾಣಹಾನಿಗಳು ಇಷ್ಟು ಅಪಾರವಾಗಿದ್ದರೆ, ಯುದ್ಧಕ್ಕೆ ಮಾಡಿದ ವೆಚ್ಚದ ಮೊತ್ತ ಭಾರಿಯ ಗಾತ್ರದ್ದು. ಸಮುದ್ರದ ಮೇಲೂ ಭೂಮಿಯ ಮೇಲೂ ಅಪಾರ ಐಶ್ವರ್ಯ ನಷ್ಟವಾಯಿತು. ಯುದ್ಧದ ಮೊದಲ ಮೂರು ವರ್ಷಗಳಲ್ಲಿ ಯುದ್ಧದಲ್ಲಿ ಭಾಗವಹಿಸಿದ ಎಲ್ಲ ಪಕ್ಷ-ವಿಪಕ್ಷಗಳ ದೈನಂದಿನ ವೆಚ್ಚ 12,30,00,000 ಡಾಲರುಗಳು. 1918ರ ವೇಳೆಗೆ ಇದು 24.40,00,000 ಡಾಲರುಗಳಿಗೆ ಏರಿತು; ಅಂದರೆ ಒಂದು ಗಂಟೆಗೆ ಸುಮಾರು 1,00,00,000 ಡಾಲರ್. ಯುದ್ಧ ನಡೆಸಲು ಖರ್ಚು ಮಾಡಿದ ಒಟ್ಟು ಹಣ 18,600,00,00,000 ಡಾಲರುಗಳು. ಇದರಲ್ಲಿ ಮಿತ್ರರಾಷ್ಟ್ರಗಳು 12,600,00,00,000 ಡಾಲರುಗಳನ್ನೂ ಮಧ್ಯರಾಷ್ಟ್ರಗಳು 600,00,00,000 ಡಾಲರುಗಳನ್ನೂ ಖರ್ಚು ಮಾಡಿದುವು. ಭೂಮಿಯ ಮತ್ತು ಸಮುದ್ರದ ಮೇಲೆ ಕ್ರಮವಾಗಿ 3,000,00.00,000 ಡಾಲರ್ ಮತ್ತು 700.00,00,000 ಡಾಲರ್ ಮೌಲ್ಯದ ಆಸ್ತಿಗಳ ನಷ್ಟ ಸಂಭವಿಸಿತು. ಉತ್ಪತ್ತಿಯಲ್ಲಿ ಆದ ನಷ್ಟ ಸುಮಾರು 4,500,00,00,000 ಡಾಲರ್. ಯುದ್ಧದಲ್ಲಿ ನೀಡಿದ ನೆರವೂ ತಟಸ್ಥ ರಾಷ್ಟ್ರಗಳಿಗೆ ಸಂಭವಿಸಿದ ನಷ್ಟಕ್ಕೆ ನೀಡಿದ ಪರಿಹಾರವೂ 200,00,00,000 ಡಾಲರುಗಳಿಗಿಂತ ಹೆಚ್ಚಾಗಿದ್ದಿತು. ಒಟ್ಟು ಆರ್ಥಿಕ ನಾಶ 270,00,00,000 ಡಾಲರುಗಳು.

ಈ ಮೊತ್ತಕ್ಕೆ ಯುದ್ಧದಲ್ಲಿ ಸತ್ತವರ 67,00,00,000 ಡಾಲರುಗಳನ್ನು ಸೇರಿಸಿದರೆ, ಒಟ್ಟು 3.370,00,00,000 ಡಾಲರುಗಳಷ್ಟಾಗುತ್ತದೆ. ಈ ಎಣಿಕೆಯಲ್ಲಿ ಅಂಗವಿಕಲರಾದ ಸೈನಿಕರು ಮತ್ತು ನಾಗರಿಕರ ಲೆಕ್ಕ ಸೇರಿಲ್ಲ. ಯುದ್ಧಭಾಗಿ ರಾಷ್ಟ್ರಗಳು ಕೋಟ್ಯಂತರ ಡಾಲರುಗಳಷ್ಟು ಬಡ್ಡಿ ಹಣ ಕೊಡಬೇಕಾಗಿತ್ತು. ಇದೂ ಈ ಎಣಿಕೆಯಲ್ಲಿ ಸೇರಿಲ್ಲ. ಅನೇಕ ತಲೆಮಾರುಗಳ ವರೆಗೆ ಈ ಹಣ ತೆರಬೇಕಾಯಿತು. ಯುದ್ಧ ಮುಗಿದ ತರುವಾಯ ನಡೆದ ಶಾಂತಿಸಂಧಾನಗಳಲ್ಲಿ, ವಿವಿಧ ದೇಶಗಳ ನಾಯಕರ ಮೇಲೆ ಅಮಿತವಾದ ಜವಾಬ್ದಾರಿ ಬಿದ್ದಿತ್ತು. ಲಕ್ಷಾಂತರ ಜನಗಳನ್ನು ಬಲಿಕೊಟ್ಟು, ಕೋಟ್ಯಂತರ ಡಾಲರುಗಳಷ್ಟು ಹಣದ ವೆಚ್ಚದಲ್ಲಿ ಇಂಥ ಘೋರ ಯುದ್ಧ ನಡೆಸಿದ್ದಕ್ಕೆ ಪ್ರತಿಯಾಗಿ ಸರಿಯಾದ ಶಾಂತಿ ಒಪ್ಪಂದವನ್ನು ನಡೆಸುವುದೇ ನಾನಾ ದೇಶಗಳ ನಾಯಕರ ಮೇಲೆ ಆಗ ಬಿದ್ದ ಜವಾಬ್ದಾರಿ. ಅಪಾರ ನಷ್ಟ ಅನುಭವಿಸಿದ ರಾಷ್ಟ್ರಗಳು ಶಾಂತಿಯನ್ನು ಲಘುವಾಗಿ ಸ್ಥಾಪಿಸಲು ಇಷ್ಟಪಡಲಿಲ್ಲ. ಆದರೂ ತಮ್ಮ ತಮ್ಮ ದೇಶದ ಸ್ವಾರ್ಥಗಳನ್ನು ಮುಂದು ಮಾಡಿಕೊಂಡ ಶಾಂತಿ ಸಮ್ಮೇಳನದ ನಾಯಕರು ಅನೇಕ ವೇಳೆ ಆದರ್ಶವನ್ನೇ ಬಲಿಗೊಟ್ಟರು.

**ಶಾಂತಿ ಕೌಲುಗಳು :** ಹೋರಾಟ ನಿಲ್ಲಿಸಿದ ತರುವಾಯ ಮಿತ್ರರಾಷ್ಟ್ರಗಳ ಪ್ರತಿನಿಧಿಗಳು ಪ್ಯಾರಿಸ್ ನಗರದಲ್ಲಿ ಸೇರಿ ಶಾಂತಿಯ ಕೌಲುಗಳ ವಿಚಾರ ಪರ್ಯಾಲೋಚಿಸಲು ಮೊದಲಿಟ್ಟರು. ಮಿತ್ರರಾಷ್ಟ್ರಗಳಲ್ಲಿ ಸೇರಿದ್ದ ಪ್ರತಿ ರಾಷ್ಟ್ರದ ಪ್ರತಿನಿಧಿಯೂ ಅಲ್ಲಿಗೆ ಬಂದಿದ್ದ. ಅಮೆರಿಕನ್ ಅಧ್ಯಕ್ಷ ವಿಲ್ಸನ್, ಬ್ರಿಟಿಷ್ ಪ್ರಧಾನಿ ಲಾಯ್ಡ್ ಜಾರ್ಜ್, ಫ್ರೆಂಚ್ ಪ್ರಧಾನಿ ಕ್ಲೇಮೆನ್ಸೋ, ಇಟಲಿಯ ಪ್ರಧಾನ ಮಂತ್ರಿ ಆರ್ಲಾಂಡೋ ಇವರು ಈ ಮಾತುಕತೆಗಳಲ್ಲಿ ಭಾಗವಹಿಸಿದವರಲ್ಲಿ ಪ್ರಧಾನರು.



ರಷ್ಯನ್ ಕ್ರಾಂತಿ

ಪ್ಯಾರಿಸ್ ನಗರದಲ್ಲಿ ಸೇರಿದ ಮಿತ್ರಮಂಡಲಿಯ ಪ್ರಮುಖರು ಜಗತ್ತನ್ನೇ ಪುನಃ ಕಟ್ಟುವ ಕೆಲಸ ನಿರ್ವಹಿಸಬೇಕಾಗಿತ್ತು. ಅಧ್ಯಕ್ಷ ವಿಲ್ಸನ್ ಅಮೆರಿಕವನ್ನು



ಜರ್ಮನನೊಬ್ಬನ ಕೊಳೆತ ಹೆಣ

ಯುದ್ಧದಲ್ಲಿ ಸೇರಿಸುವ ಮೊದಲು ತನ್ನ ಉದ್ದೇಶಗಳನ್ನು ಎಲ್ಲರಿಗೂ ತಿಳಿಯಪಡಿಸಿದ್ದ. ಇಷ್ಟು ಪ್ರಳಯಕಾರಕ ಯುದ್ಧ ಪುನಃ ಸಂಭವಿಸದಂಥ ವ್ಯವಸ್ಥೆ ಏರ್ಪಡಬೇಕೆಂಬುದು ಎಲ್ಲರ ಮನಸ್ಸಿನಲ್ಲೂ ಇತ್ತು. ವಿಲ್ಸನ್ ದೂರದೃಷ್ಟಿಯುಳ್ಳವ. ರಾಷ್ಟ್ರಗಳು ಜಾತಿ ಬಂಧಗಳಂತಿದ್ದು ಅನ್ಯೋನ್ಯತೆಯಿಂದಿರಬೇಕು. ಮನಸ್ತಾಪಗಳು ತೋರಿದಾಗ ಅವು ನ್ಯಾಯ ರೀತಿಯಲ್ಲಿ ಪರಿಹಾರವಾಗಬೇಕು. ಮತ್ತೆ ಯುದ್ಧವೇ ಆಗಬಾರದು. ಇದು ಆತನ ಆಶಯ. ನಾನಾ ರಾಷ್ಟ್ರಗಳ ಮಧ್ಯೆ ಪಂಚಾಯತಿ ನಡೆಸಿ, ಜಗತ್ತಿನಲ್ಲಿ ನ್ಯಾಯ, ಶಾಂತಿಗಳನ್ನು ಕಾಪಾಡಬಲ್ಲ ಸಮಸ್ತ ರಾಷ್ಟ್ರಗಳ ಕೂಟವೊಂದು ಸ್ಥಾಪನೆಯಾಗಬೇಕೆಂಬುದಾಗಿ ಆತ ಹೇಳುತ್ತಿದ್ದ.

ಅಲ್ಲೋಲಕಲ್ಲೋಲವಾಗಿದ್ದ ಯೂರೋಪಿನಲ್ಲಿ ಒಂದೊಂದು ಕುಲವೂ ಜಾತಿಯೂ ಪ್ರತ್ಯೇಕವಾಗಿ ಸ್ವತಂತ್ರ ರಾಷ್ಟ್ರ ನಿರ್ಮಾಣ ಮಾಡಿಕೊಳ್ಳುವುದಾದರೆ ಸ್ವಾತಂತ್ರ್ಯ ಸಾಧನೆಯ ಯುದ್ಧಗಳಿಗೆ ಅವಕಾಶವಿಲ್ಲದಂತಾದೀತೆಂದು ವಿಲ್ಸನ್ ಭಾವಿಸಿದ್ದ. ಆದ್ದರಿಂದ ಆತ ಮಧ್ಯ ಯೂರೋಪಿನಲ್ಲಿ ಒಂದೊಂದು ಪಂಗಡವೂ ಪ್ರತ್ಯೇಕವಾಗಿ ಒಂದು ರಾಷ್ಟ್ರ ಕಟ್ಟಿಕೊಳ್ಳಲೆಂದು ವಾದಿಸಿದ. ಫ್ರೆಂಚರಿಗೆ ಆಲ್ಸೇಸ್–ಲೊರೇನ್ ಹಿಂತಿರುಗಿ ಬರಬೇಕಾಗಿತ್ತಲ್ಲದೆ ತಮಗಾದ ಅಪಾರ ನಷ್ಟವನ್ನು ಶತ್ರುಗಳಿಂದ ಕಟ್ಟಿಸಿಕೊಳ್ಳುವ ಉದ್ದೇಶವಿತ್ತು. ಬ್ರಿಟಿಷರಿಗೆ ಯೂರೋಪಿನಲ್ಲಿ ಭೂಮಿಯ ಆಸೆಯಿರಲಿಲ್ಲ. ಆದರೆ ಜಲಾಂತರ್ಗಾಮಿಗಳ ಹಾವಳಿ ಅನುಭವಿಸಿದ್ದುದರಿಂದ ಶತ್ರುಗಳು ನಡೆಸಿದ ದೌಷ್ಟ್ಯವನ್ನೆಲ್ಲ ಕ್ಷಮಿಸಿ ಮರೆಯುವುದು ಸಾಧ್ಯವಿರಲಿಲ್ಲ. ಜರ್ಮನರನ್ನು ದಂಡಿಸಿ ಅವರಿಂದ ತಮ್ಮ ನಷ್ಟಕ್ಕೆ ತಕ್ಕ ಪರಿಹಾರದ್ರವ್ಯ ಪಡೆಯಬೇಕೆಂದು ಫ್ರೆಂಚರಂತೆ ಬ್ರಿಟಿಷರೂ ಭಾವಿಸಿದರು. ಇತರ ಗಣ್ಯ ರಾಷ್ಟ್ರಗಳೂ ಜಯದಿಂದ ಲಾಭ ಗಿಟ್ಟಿಸುವ ಆಸೆ ಹೊಂದಿದ್ದುವು. ಯುದ್ಧದ ವೇಳೆಯಲ್ಲಿ ಪರಸ್ಪರವಾಗಿ ನೀಡಿದ ರಹಸ್ಯ ವಾಗ್ದಾನಗಳ ವಿಚಾರವನ್ನು ಬೇರೆ ಪರಿಶೀಲಿಸಬೇಕಾಗಿತ್ತು. ಸರ್ವರಿಗೂ ನ್ಯಾಯವೂ ಕ್ಷೇಮವೂ ಆಗಿರುವಂತೆ ಸಂಧಾನ ನೆರವೇರಿಸಬೇಕೆಂದಿದ್ದ ವಿಲ್ಸನನ ಬಳಿಗೆ ಪ್ರತಿಯೊಂದು ದೇಶವೂ ನಿಯೋಗಗಳನ್ನು ಕಳುಹಿಸಿಕೊಟ್ಟಿತು. ಆತನಿಗೂ ಇತರರಿಗೂ ಬರಬರುತ್ತಾ ಹೊಂದಿಕೆ ಕಡಿಮೆಯಾಯಿತು. ಆದರೆ ಯಾರೂ ತಮ್ಮ ಆಸೆಗಳನ್ನೆಲ್ಲ ಸಾಧಿಸಿಕೊಳ್ಳುವ ಹಾಗಾಗಲಿಲ್ಲ. ಎಷ್ಟೋ ಗೋಷ್ಠಿಗಳೂ ಚರ್ಚೆಗಳೂ ನಡೆದ ಬಳಿಕ ಪ್ಯಾರಿಸಿನಲ್ಲೇ ಈ ಬಗ್ಗೆ ಕೌಲುಗಳಾದುವು. ಈ ಎಲ್ಲ ಕರಾರುಗಳನ್ನೂ 'ವರ್ಸೇಲ್ಸ್ ಕೌಲುಗಳೆಂದು



ಯುದ್ಧ ಮುಗಿದ ಸಂಭ್ರಮ : ಕೋಳಿಯ ಊಟದ ನಿರೀಕ್ಷೆ

ಕರೆಯುವುದು ವಾಡಿಕೆಯಾದರೂ ಜರ್ಮನಿಯೊಂದಿಗೆ ಮಾಡಿಕೊಂಡ ಕೌಲಿಗೆ ಮಾತ್ರ ಈ ಹೆಸರು ಅನ್ವರ್ಥವಾದದ್ದು. ಅದು ಆದದ್ದು ಪ್ಯಾರಿಸಿನ ಬಳಿಯ ವರ್ಸೇಲ್ಸ್



ಹಸಿವಿನ ಬಾಧೆ ; ಹಸುವಿಗೆ ಬಾಧೆ

ನಗರದಲ್ಲಿ. ಆಸ್ಟ್ರಿಯ, ಬಲ್ಗೇರಿಯ, ತುರ್ಕಿ, ಹಂಗರಿಗಳೊಡನೆ ಬೇರೆಬೇರೆಯಾದ ಕೌಲುಗಳೇ ಆದುವು.

ವರ್ಸೇಲ್ಸ್ ಕೌಲು: 1919ರ ಜೂನ್ 28ರಂದು ಮಿತ್ರರಾಷ್ಟ್ರಗಳು ಜರ್ಮನಿಯೊಡನೆ ವರ್ಸೇಲ್ಸಿನಲ್ಲಿ ಕೌಲು ಮಾಡಿಕೊಂಡುವು. ಇದರ ಉದ್ದೇಶ ಅದರ ಪೀಠಿಕೆಯಲ್ಲಿ ಹೇಳಿರುವಂತೆ ಯುದ್ಧ ವಾತಾವರಣವನ್ನು ಕೊನೆಗಾಣಿಸಿ ಶಾಶ್ವತವಾದ ಶಾಂತಿ ಸ್ಥಾಪಿಸುವುದು. ಈ ಒಪ್ಪಂದ 15 ಭಾಗಗಳನ್ನು ಒಳಗೊಂಡಿದ್ದಿತು. ಇವಲ್ಲದೆ 140ರಷ್ಟು ಬೇರೆ ಬೇರೆ ಷರತ್ತುಗಳೂ ಅನೇಕ ಅನುಬಂಧಗಳೂ ಸೇರಿದ್ದುವು.

ಆಲ್ಸೇಸ್–ಲೊರೇನ್ ಪ್ರದೇಶವನ್ನು ಫ್ರಾನ್ಸಿಗೆ ಹಿಂದಿರುಗಿಸಲಾಯಿತು. ಬೆಲ್ಜಿಯಂ ಸರಕಾರ ನಡೆಸಿದ ಜನಮತಗಣನೆಯ ಆಧಾರದ ಮೇಲೆ ಆ ದೇಶಕ್ಕೆ 70,000 ಜನಸಂಖ್ಯೆಯುಳ್ಳ ಯೂಪೇನ್, ಮಾಲ್ಮೇಡೀ ಮತ್ತು ಮಾರ್ಸೆನಟ್‌ಗಳನ್ನು ಕೊಡಲಾಯಿತು. ಮತ್ತೊಂದು ಜನಮತಗಣನೆಯ ಆಧಾರದ ಮೇಲೆ ಡೆನ್ಮಾರ್ಕಿಗೆ ಉತ್ತರ ಷೆಲ್ಸ್‌ವಿಗ್ ಪ್ರಾಂತ್ಯ ಕೊಡಲಾಯಿತು. ಪ್ರಷ್ಯ ಮತ್ತು ಆಸ್ಟ್ರಿಯ ಈ ಪ್ರಾಂತ್ಯವನು 1864ರಲ್ಲಿ ಡೆನ್ಮಾರ್ಕಿನಿಂದ ಕಸಿದುಕೊಂಡಿದ್ದುವು. ದಕ್ಷಿಣ ಷೆಲ್ಸ್‌ವಿಗ್ ಮಾತ್ರ ಜರ್ಮನಿಯಲ್ಲೇ ಉಳಿಯಿತು. ಉತ್ತರ ಸೈಲೀಷಿಯ ಪ್ರಾಂತ್ಯದ ಒಂದು ಸಣ್ಣ ಭಾಗ ಹೋದದ್ದು ಚೆಕೊಸ್ಲೊವಾಕಿಯಕ್ಕೆ. ಹೊಸದಾಗಿ ಸ್ವಾತಂತ್ರ್ಯ ಪಡೆದ ಪೋಲೆಂಡಿಗೆ ಜರ್ಮನಿಯ ಪೋಸೆನ್ ಪ್ರಾಂತ್ಯದ ಹಲವು ಭಾಗಗಳು ಮತ್ತು ⅔ರಷ್ಟು ಪೋಲಿಷ್ ಜನಾಂಗದವರು ವಾಸಿಸುತ್ತಿದ್ದ 250 ಮೈಲಿಗಳಷ್ಟು ಉದ್ದ 80 ಮೈಲಿ ಅಗಲವಿದ್ದ ಪಶ್ಚಿಮ ಪ್ರಷ್ಯವನ್ನು ಕೊಡಲಾಯಿತು. ಜರ್ಮನ್ ಜನಾಂಗದವರೇ ಹೆಚ್ಚಾಗಿದ್ದ ಡ್ಯಾನ್‌ಸಿಗ್ ಪಟ್ಟಣವನ್ನು ರಾಷ್ಟ್ರಗಳ ಕೂಟದ ಕೈಕೆಳಗೆ ಸ್ವತಂತ್ರ ಪಟ್ಟಣವೆಂದು ಘೋಷಿಸಲಾಯಿತು. ಆದರೆ ಪೋಲೆಂಡಿಗೆ ಈ ನಗರದ ಮೇಲೆ ಹಲವು ತಾಂತ್ರಿಕ ಹಾಗೂ ಆರ್ಥಿಕ ಹಕ್ಕುಗಳು ದೊರಕಿದುವು.

ಜರ್ಮನರು ಯುದ್ಧಪೂರ್ವದಲ್ಲಿ ತಮಗೆ ಸೇರಿದ್ದ ವಸಾಹತುಗಳನ್ನು ಮಿತ್ರ ರಾಷ್ಟ್ರಗಳ ಸ್ವಾಧೀನಕ್ಕೆ ಒಪ್ಪಿಸಿದರು. ಇವು ರಾಷ್ಟ್ರಗಳ ಕೂಟದ ನಿಯುಕ್ತ ಪ್ರದೇಶಗಳಾಗಿ ಗ್ರೇಟ್‌ಬ್ರಿಟನ್, ಫ್ರಾನ್ಸ್, ಬೆಲ್ಜಿಯಂ, ಜಪಾನ್, ದಕ್ಷಿಣ ಆಫ್ರಿಕ ಒಕ್ಕೂಟ, ಆಸ್ಟ್ರೇಲಿಯ ಮತ್ತು ನ್ಯೂಜ಼ಿಲೆಂಡ್‌ಗಳ ವಶಕ್ಕೆ ಬಂದುವು. ಜರ್ಮನಿ ಚೀನದ ಕ್ವೇಚಾವ್ ಪ್ರಾಂತ್ಯದಲ್ಲಿ ಅನುಭವಿಸುತ್ತಿದ್ದ ವಿಶೇಷ ಹಕ್ಕು ಸೌಲಭ್ಯಗಳನ್ನು ಜಪಾನಿಗೆ ಬಿಟ್ಟುಕೊಡಬೇಕಾಯಿತು. ಚೀನ, ಥೈಲೆಂಡ್, ಲೈಬೀರಿಯ, ಮೊರಾಕ್ಕೋ ಮತ್ತು ಈಜಿಪ್ಟ್‌ಗಳಲ್ಲಿ ಜರ್ಮನಿ ಹೊಂದಿದ್ದ ಎಲ್ಲ ವಿಶೇಷ ಹಕ್ಕುಗಳನ್ನೂ ಕಿತ್ತುಕೊಳ್ಳಲಾಯಿತು. ಜರ್ಮನರಿಗೆ ತುರ್ಕಿ ಮತ್ತು ಬಲ್ಗೇರಿಯಗಳಲ್ಲಿ ಸೇರಿದ್ದ ಆಸ್ತಿಪಾಸ್ತಿಗಳೂ ಮುಟ್ಟುಗೋಲಾದುವು.

ಲಕ್ಸೆಂಬರ್ಗನ್ನು ಜರ್ಮನ್ ಒಕ್ಕೂಟದಿಂದ ಬೇರ್ಪಡಿಸಲಾಯಿತು. ಅಲ್ಲಿಯ ರೈಲ್ವೆಗಳನ್ನು ಬಳಸಿಕೊಳ್ಳುವ ಹಕ್ಕೂ ಮೊಟಕುಗೊಂಡಿತು. ಜರ್ಮನಿ ರೈನ್ ನದಿಯ ಎಡದಂಡೆಯಲ್ಲಾಗಲಿ ಬಲದಂಡೆಯಲ್ಲಾಗಲಿ ಯಾವುದೇ ವಿಧವಾದ ರಕ್ಷಣೆಗೆ, ಸೈನ್ಯಕಾರ್ಯಾಚರಣೆಗೆ ಸಂಬಂಧಪಟ್ಟಂಥ ಕಟ್ಟಡಗಳನ್ನು ಕೋಟೆ ಕೊತ್ತಲಗಳನ್ನು ಕಟ್ಟಕೂಡದೆಂದು ತೀರ್ಮಾನಿಸಲಾಯಿತು.

ಜರ್ಮನಿಯಿಂದ ಫ್ರಾನ್ಸಿಗೆ ಸಾರ್ ಕಲ್ಲಿದ್ದಲು ಗಣಿ ಪ್ರದೇಶ ವರ್ಗವಾಯಿತು. ಒಂದನೆಯ ಮಹಾಯುದ್ಧ ಕಾಲದಲ್ಲಿ ಅದು ಫ್ರಾನ್ಸಿನ ಉತ್ತರ ಭಾಗದ ಅನೇಕ ಕಲ್ಲಿದ್ದಲು ಗಣಿಗಳನ್ನು ನಾಶಮಾಡಿದ್ದಕ್ಕೆ ಇದು ಪರಿಹಾರ ; ಅಲ್ಲದೆ ಯುದ್ಧ ವೆಚ್ಚದ, ಒಂದು ಭಾಗಕ್ಕೆ ಇದು ಉತ್ತಾರ. ಇದಲ್ಲದೆ 15 ವರ್ಷಗಳ ಕಾಲ ಸಾರ್ ಆಡಳಿತವನ್ನು ರಾಷ್ಟ್ರಗಳ ಕೂಟದ ಒಂದು ಸಮಿತಿಯ ಕೈಗೆ ಒಪ್ಪಿಸಬೇಕೆಂದು ತೀರ್ಮಾನವಾಯಿತು. ಜರ್ಮನಿ ಆಸ್ಟ್ರಿಯದ ಸ್ವಾತಂತ್ರ್ಯವನ್ನು ಒಪ್ಪಿಕೊಳ್ಳಬೇಕಾಯಿತು.

ವರ್ಸೇಲ್ಸ್ ಒಪ್ಪಂದದ 5ನೆಯ ಭಾಗದಲ್ಲಿ ಸೈನ್ಯ, ಜಲನೌಕೆ ಮತ್ತು ವಿಮಾನ ದಳಗಳಿಗೆ ಸಂಬಂಧಪಟ್ಟಂಥ ಕಾನೂನುಗಳಿವೆ. ಜರ್ಮನ್ ಸೈನ್ಯಬಲ 4,000 ಸೇನಾನಾಯಕರೂ ಸೇರಿ 1,00,000ಕ್ಕಿಂತ ಮೀರಬಾರದೆಂದಾಯಿತು. ಒಳನಾಡಿನ ಶಾಂತಿಸ್ಥಾಪನೆಯಲ್ಲಿ ನೆರವು ನೀಡುವುದೂ ದೇಶದ ಮೇರೆಗಳನ್ನು ಕಾಪಾಡಿಕೊಂಡು ಬರುವುದೂ ಮಾತ್ರವೇ ಇದರ ಕರ್ತವ್ಯ.

ಸೈನ್ಯಕ್ಕೆ ಬೇಕಾದ ಶಸ್ತ್ರಾಸ್ತ್ರ, ಮದ್ದು ಗುಂಡುಗಳ ತಯಾರಿಕೆಯನ್ನೂ ಒಂದು ಮಿತಿಗಿಂತ ಹೆಚ್ಚಿಸುವಂತಿರಲಿಲ್ಲ. ಇವನ್ನು ಮಿತ್ರ ರಾಷ್ಟ್ರಗಳು ಸೂಚಿಸಿದ ಸ್ಥಳಗಳಲ್ಲಿ ಮಾತ್ರ ದಾಸ್ತಾನು ಮಾಡಬೇಕೆಂಬುದೂ ಒಂದು ಷರತ್ತು. ಯುದ್ಧಕ್ಕೆ ಸಂಬಂಧಪಟ್ಟ ಶಸ್ತ್ರಾಸ್ತ್ರಗಳನ್ನು ಆಮದು ಮಾಡಿಕೊಳ್ಳುವುದೂ, ವಿಷ ವಾಯುಗಳು ಶಸ್ತ್ರಾಸ್ತ್ರಸಜ್ಜಿತವಾದ ವಾಹನಗಳು ಮತ್ತು ಟ್ಯಾಂಕುಗಳನ್ನು ತಯಾರಿಸುವುದೂ ಕೊಳ್ಳುವುದೂ ನಿಷಿದ್ಧವೆನಿಸಿದುವು. ಬಲವಂತದಿಂದ ಸೈನ್ಯಕ್ಕೆ ಸೇರಿಸಿಕೊಳ್ಳುವ ಕಾನೂನನ್ನು ತೆಗೆದುಹಾಕಿ ಸ್ವಂತ ಇಚ್ಛೆಯಿಂದ ಬರುವವರಿಗೆ ಮಾತ್ರ ಅವಕಾಶ ಕಲ್ಪಿಸಲಾಯಿತು. ವಿದ್ಯಾಸಂಸ್ಥೆಗಳು, ವಿಶ್ವವಿದ್ಯಾನಿಲಯಗಳು, ನಿವೃತ್ತರಾದ ಸೈನಿಕರ ಸಂಘಗಳು, ಷೂಟಿಂಗ್ ಕ್ಲಬ್‌ಗಳು, ಪ್ರವಾಸಿ ಸಂಘಗಳೇ ಮೊದಲಾದ ಎಲ್ಲ ಬಗೆಯ ಸಂಘ ಸಂಸ್ಥೆಗಳು ಸೈನ್ಯಕ್ಕೆ ಸಂಬಂಧಪಟ್ಟ ವಿಷಯಗಳನ್ನು ಚರ್ಚಿಸುವುದನ್ನಾಗಲಿ, ಆ ವಿಷಯಗಳ ಬಗ್ಗೆ ಗಮನ ಹರಿಸುವುದನ್ನಾಗಲಿ ನಿಷೇಧಿಸಲಾಯಿತು.



ಯುದ್ಧ ವಿರಾಮಕ್ಕೆ ಸಹಿ ಬಿದ್ದದ್ದು ಈ ರೈಲುಗಾಡಿಯಲ್ಲಿ



ವರ್ಸೇಲ್ಸ್ ಕೌಲು

ನೌಕಾದಳಕ್ಕೆ ಸಂಬಂಧಪಟ್ಟ ಷರತ್ತುಗಳು ಅಷ್ಟೇ ಕಠಿಣ. ಆರು ಯುದ್ಧನೌಕೆಗಳನ್ನು ಮಾತ್ರ ಅದು ಇಟ್ಟುಕೊಳ್ಳಬಹುದಾಗಿತ್ತು ; ಜಲಾಂತರ್ಗಾಮಿಗಳನ್ನಿಟ್ಟುಕೊಳ್ಳುವಂತಿರಲಿಲ್ಲ. ಹೊಸದಾಗಿ ಯುದ್ಧನೌಕೆಗಳನ್ನು ಕಟ್ಟಬಾರದೆಂಬುದೂ ಒಂದು ವಿಧಿ. ನೌಕಾಬಲದ ಗಾತ್ರವನ್ನು 15,000ಕ್ಕೆ ಮಿತಿಗೊಳಿಸಲಾಯಿತು. ಈ ಸಂಖ್ಯೆಯಲ್ಲಿ 1500 ಜನ ಅಧಿಕಾರಿಗಳು. ವಾಣಿಜ್ಯನೌಕೆಯಲ್ಲಿ ಕೆಲಸ ಮಾಡುವ ಯಾವ ಜರ್ಮನನೂ ಯುದ್ಧನೌಕಾದಳದ ತರಬೇತಿ ತೆಗೆದುಕೊಳ್ಳುವಂತಿರಲಿಲ್ಲ. ಅನುಮತಿ ನೀಡಲಾದ ಸಂಖ್ಯೆಗಿಂತ ಹೆಚ್ಚಿಗೆ ಇದ್ದ ಎಲ್ಲ ನೌಕೆಗಳನ್ನೂ ಜರ್ಮನಿ ನಾಶಮಾಡಬೇಕಾಯಿತು. ಅದು ವಿಮಾನದಳ ಹೊಂದುವುದಕ್ಕೂ ಅವಕಾಶವಿರಲಿಲ್ಲ. ವಾಯುದಳಕ್ಕೆ ಸಂಬಂಧಪಟ್ಟ ಎಲ್ಲ ವಸ್ತುಗಳನ್ನೂ ಮಿತ್ರರಾಷ್ಟ್ರಗಳಿಗೆ ಹಿಂತಿರುಗಿಸಬೇಕಾಯಿತು.

ಜರ್ಮನಿ ಮತ್ತು ಅದರ ಮಿತ್ರರು ಮಹಾಯುದ್ಧಕ್ಕೆ ಕಾರಣರೆಂದು, ಆಕ್ರಮಣಕಾರರೆಂದು ಮತ್ತು ವಿನಾಶಕಾರಣರಾದವರೆಂದು ಘೋಷಿಸಲಾಯಿತು. ಯುದ್ಧದ ಸಾಮಾನ್ಯ ಕಾನೂನುಗಳನ್ನು ಮೀರಿ ಕ್ರೂರವಾಗಿ ವರ್ತಿಸಿದ ಎಲ್ಲರನ್ನೂ ಲೈಪ್‌ಜಿಗ್‌ನಲ್ಲಿ ವಿಚಾರಿಸಿ ಶಿಕ್ಷಿಸಬೇಕೆಂಬುದೂ ಈ ಒಪ್ಪಂದದ ಒಂದು ಅಂಶ. ಜರ್ಮನ್ ಚಕ್ರವರ್ತಿ ಎರಡನೆಯ ವಿಲಿಯಂನನ್ನು ಸಾರ್ವಜನಿಕವಾಗಿ ವಿಮರ್ಶಿಸಿ, ಅವನು ಅಂತರರಾಷ್ಟ್ರೀಯ ಸಂಬಂಧಗಳಲ್ಲಿ ನೈತಿಕ ಪತನವನ್ನುಂಟುಮಾಡಿದ ವ್ಯಕ್ತಿ ಎಂದು ಪರಿಗಣಿಸಲಾಯಿತು. ವಿಶೇಷ ಸಮಿತಿಯೊಂದನ್ನು ಸ್ಥಾಪಿಸಿ ಅವನನ್ನು ವಿಚಾರಣೆಗೆ ಗುರಿಮಾಡಬೇಕೆಂಬುದೂ ಇಲ್ಲಿ ಆದ ಒಂದು ನಿರ್ಣಯ.

ಜರ್ಮನಿ ಮಿತ್ರರಾಷ್ಟ್ರಗಳಿಗೆ ಚಿನ್ನ, ಹಡಗುಗಳು, ಸೆಕ್ಯೂರಿಟಿಗಳು ಮತ್ತು ಪದಾರ್ಥಗಳ ಮೂಲಕ ಸುಮಾರು 500,00,00,000 ಡಾಲರ್‌ಗಳಷ್ಟು ಪರಿಹಾರ ಕೊಡಬೇಕೆಂದು ತೀರ್ಮಾನಿಸಲಾಯಿತು.

ಇಷ್ಟು ಪರಿಹಾರಧನವನ್ನು ಪೂರ್ಣ ಹಣದ ರೂಪದಲ್ಲಿ ಕೊಡಲು ಜರ್ಮನಿ ಅಶಕ್ತವಾಗಿದ್ದುದರಿಂದ, ಅದು ಒಂದು ಭಾಗವನ್ನು ಮಿತ್ರರಾಷ್ಟ್ರಗಳು ಸೂಚಿಸುವ ಪದಾರ್ಥಗಳ ರೂಪದಲ್ಲಿ ಕೊಡಬಹುದಾಗಿತ್ತು. ಮಿತ್ರರಾಷ್ಟ್ರಗಳು ಕಳೆದುಕೊಂಡಿದ್ದ ನೌಕೆಗಳ ಬದಲಾಗಿ ಜರ್ಮನಿ ಕೊಡಬೇಕಾಗಿಬಂದ ವಾಣಿಜ್ಯನೌಕೆಗಳ ಸಂಖೆ 1600.

ಜರ್ಮನಿ ಪ್ರತಿವರ್ಷ ಈ ಕೆಳಕಂಡಂತೆ ಕಲ್ಲಿದ್ದಲನ್ನು 10 ವರ್ಷಗಳ ಕಾಲ ಕೊಡಬೇಕು : ಫ್ರಾನ್ಸಿಗೆ 70,00,000 ಟನ್ನುಗಳು ; ಬೆಲ್ಜಿಯಂಗೆ 80,00,000 ಟನ್ನುಗಳು ; ಇಟಲಿಗೆ 77,00,000 ಟನ್ನುಗಳು. ಇದಲ್ಲದೆ ಫ್ರಾನ್ಸಿಗೆ ಜರ್ಮನಿ ಮೂರು ವರ್ಷಗಳ ಕಾಲ 35,000 ಟನ್ ಬೆಂಜ಼ಾಲ್, 50,000 ಟನ್ ಕೋಲ್ ಟಾರ್ ಮತ್ತು 30,000 ಟನ್ ಅಮೋನಿಯಂ ಸಲ್ಫೇಟನ್ನೂ ಕೊಡಬೇಕೆಂದು ವಿಧಿಸಲಾಯಿತು.

ಒಟ್ಟಿನಲ್ಲಿ ವರ್ಸೇಲ್ಸ್ ಕೌಲಿನಿಂದ ಜರ್ಮನಿಯ ವಿಸ್ತೀರ್ಣ ಯೂರೋಪಿನಲ್ಲಿ $\frac{1}{8}$ರಷ್ಟು ಮೊಟಕಾಯಿತು. ಕಡಿಮೆಯಾದ ಜನಸಂಖ್ಯೆ 6,00,000. ಜರ್ಮನಿಯ ಎಲ್ಲ ವಸಾಹತುಗಳೂ ನಷ್ಟವಾದುವಲ್ಲದೆ ಹೊರದೇಶಗಳಲ್ಲಿ ತೊಡಗಿಸಿದ್ದ ಬಂಡವಾಳ, ಆಸ್ತಿಪಾಸ್ತಿಗಳಿಗೆ ಮುಟ್ಟುಗೋಲು ಹಾಕಲಾಯಿತು. 15.5% ವ್ಯವಸಾಯದ ಭೂಮಿಯನ್ನು, 12% ಜಾನುವಾರುಗಳನ್ನು ಮತ್ತು 10% ಕಾರ್ಖಾನೆಗಳನ್ನು ಜರ್ಮನಿ ಕಳೆದುಕೊಂಡಿತು. ಜರ್ಮನಿಯ ವಾಣಿಜ್ಯ ಹಡಗುಗಳನ್ನು 57,00,000 ಟನ್ನುಗಳಿಂದ 5,00,000 ಟನ್ನುಗಳಿಗೆ ಇಳಿಸಲಾಯಿತು. ಹಡಗುಬಲದಲ್ಲಿ ಅದು ಪಡೆದಿದ್ದ ಎರಡನೆಯ ಸ್ಥಾನ ನಷ್ಟವಾಯಿತು. ಜರ್ಮನಿಯ ಸೈನ್ಯ ಬೆಲ್ಜಿಯಂ ದೇಶದ ಸೈನ್ಯಕ್ಕಿಂತ ಸ್ವಲ್ಪ ಹೆಚ್ಚಾಗಿತ್ತಷ್ಟೆ. ಕೌಲಿನ ಪ್ರಕಾರ ಅದು ಐರೋಪ್ಯ ರಾಷ್ಟ್ರಗಳಿಗೆ ಪೊಟಾಷ್, ಕಬ್ಬಿಣ, ಕಲ್ಲಿದ್ದಲು, ಸತು, ಸೀಸ ಮುಂತಾದವನ್ನು ಕೊಡಬೇಕಾಗಿ ಬಂದದ್ದರಿಂದ ಅದು ಕೈಗಾರಿಕಾ ರಾಷ್ಟ್ರವಾಗಿ ತಲೆ ಎತ್ತುವುದು ಕಷ್ಟವಾಯಿತು. ವಸಾಹತುಗಳನ್ನು ಕಳೆದುಕೊಂಡಿದ್ದರಿಂದ ರಬ್ಬರ್, ಎಣ್ಣೆ ಮತ್ತು ಹತ್ತಿಗಳ ಪೂರೈಕೆಯೂ ತಪ್ಪಿತು. ಕೊನೆಯದಾಗಿ ಜರ್ಮನಿ ಖಾಲಿ ಚೆಕ್ಕನ್ನು ಕೊಟ್ಟು ಮಿತ್ರರಾಷ್ಟ್ರಗಳು ನಿರ್ಧರಿಸಿದಷ್ಟು ಪರಿಹಾರವನ್ನು ಕೊಡುವುದಕ್ಕೆ ಒಪ್ಪಿಕೊಳ್ಳಬೇಕಾದ್ದೊಂದು ದೊಡ್ಡ ನಷ್ಟ.

ಆಸ್ಟ್ರಿಯದೊಡನೆ ಸೆಂಟ್–ಜರ್ಮೇನ್ ಕೌಲು : ಅಮೆರಿಕ, ಬ್ರಿಟನ್, ಫ್ರಾನ್ಸ್ ಮತ್ತು ಇಟಲಿಗಳು ಆಸ್ಟ್ರಿಯದೊಡನೆ ಸೆಂಟ್-ಜರ್ಮೇನ್ ಒಪ್ಪಂದ ಮಾಡಿಕೊಂಡುವು. ಇದು ಮೂಲತಃ ವರ್ಸೇಲ್ಸ್ ಒಪ್ಪಂದವನ್ನೆ ಹೋಲುತ್ತಿತ್ತು. ಆಸ್ಟ್ರಿಯ ಇಟಲಿಗೆ ದಕ್ಷಿಣ ಟಿರೊಲುಟ್ರೆಂಟೀನೋ, ಟ್ರೀಯಸ್ಟ್, ಐಸ್ಟ್ರಿಯ ಮತ್ತು ಡಾಲ್ಮೇಷಿಯಕ್ಕೆ ಆಚೆ ಇದ್ದ ಕೆಲವು ದ್ವೀಪಗಳನ್ನು ಬಿಟ್ಟುಕೊಟ್ಟಿತು. ಯುದ್ಧಕ್ಕೆ ಪೂರ್ವದಲ್ಲಿ ಆಸ್ಟ್ರಿಯಕ್ಕೆ ಸೇರಿದ್ದ ಬೊಹಿಮಿಯ, ಮೊರಾವಿಯ, ದಕ್ಷಿಣ ಆಸ್ಟ್ರಿಯದ ಕೆಲವು ಭಾಗಗಳು ಆಸ್ಟ್ರಿಯನ್ ಸೈಲೀಷಿಯದ ಮುಕ್ಕಾಲು ಭಾಗ ಈ ಪ್ರದೇಶಗಳನ್ನು ಸೇರಿಸಿ ಚೆಕೊಸ್ಲೊವಾಕಿಯದ ಒಂದು ಭಾಗವನ್ನಾಗಿ ಮಾಡಲಾಯಿತು. ಹೆಚ್ಚಾಗಿ ಕೈಗಾರಿಕೆಗಳಿಂದ ಆವೃತವಾಗಿದ್ದ ಟೆಷೇನ್ ಡಿಸ್ಟ್ರಿಕ್ಟನ್ನು ಪೋಲೆಂಡ್ ಮತ್ತು, ಚೆಕೊಸ್ಲೊವಾಕಿಯಗಳಿಗೆ ಹಂಚಿಕೊಡಲಾಯಿತು. ಬುಕೋವಿನವನ್ನು ರೂಮೇನಿಯಕ್ಕೆ ಕೊಡಲಾಯಿತು. ಬಾಸ್ನಿಯ, ಹರ್ಸಗೋವಿನ ಮತ್ತು ಡಾಲ್ಮೇಷಿಯನ್ ತೀರಪ್ರದೇಶ ಮತ್ತು ದ್ವೀಪಗಳು ಯುಗೊಸ್ಲಾವಿಯಕ್ಕೆ ದೊರಕಿದುವು. ಒಟ್ಟಿನಲ್ಲಿ ಮೊದಲಿದ್ದುದಕ್ಕಿಂತ ಜನಸಂಖ್ಯೆಯಲ್ಲಿ ಮತ್ತು ವಿಸ್ತೀರ್ಣದಲ್ಲಿ $\frac{3}{4}$ರಷ್ಟು ಕಡಿಮೆಯಾಯಿತು. ಆಸ್ಟ್ರಿಯ ಸಂಪೂರ್ಣವಾಗಿ ತನ್ನ ನೌಕಾಬಲವನ್ನು ಕಳೆದುಕೊಂಡಿತು. ಉಳಿದದ್ದೆಂದರೆ ಡ್ಯಾನ್ಯೂಬ್ ನದಿಯ ಮೇಲೆ 3 ಪೋಲೀಸ್ ದೋಣಿಗಳು ಮಾತ್ರ. ಅದು ಇಟ್ಟುಕೊಳ್ಳಬಹುದಾಗಿದ್ದ ಸೈನ್ಯ 30,000.

ಬಲ್ಗೇರಿಯದೊಡನೆ ನ್ಯೂಯಿಲಿ ಕೌಲು : ಬಲ್ಗೇರಿಯದೊಡನೆ ನ್ಯೂಯಿಲಿ ಒಪ್ಪಂದವಾದ್ದು 1919ರ ನವೆಂಬರ್ 27ರಂದು. ರಕ್ಷಣೆ, ರೈಲ್ವೆ ಮೊದಲಾದ ಕಾರಣಗಳಿಂದ ಪಶ್ಚಿಮ ಬಲ್ಗೇರಿಯದ ನಾಲ್ಕು ಚಿಕ್ಕಪ್ರದೇಶಗಳು ಯುಗೊಸ್ಲಾವಿಯಕ್ಕೂ ಪಶ್ಚಿಮ ಥ್ರೇಸ್ ಗ್ರೀಸಿಗೂ ಸೇರಿದುವು. ಗ್ರೀಸ್-ಬಲ್ಗೇರಿಯ ಮೇರೆಗಳಲ್ಲಿ ಸೂಕ್ತವಾದ ಬದಲಾವಣೆಗಳೂ ಆದುವು. ಇದರಿಂದ ಬಲ್ಗೇರಿಯಕ್ಕೆ ಈಜಿಯನ್ ಸಮುದ್ರತೀರ ನಷ್ಟವಾಯಿತು. ಆರ್ಥಿಕ ಪ್ರಗತಿಗಾಗಿ ಮಾತ್ರ ಬಲ್ಗೇರಿಯಕ್ಕೆ ತೀರಪ್ರದೇಶಕ್ಕೆ ಪ್ರವೇಶ ದೊರಕಿಸಿಕೊಡಲು ಮಿತ್ರರಾಷ್ಟ್ರಗಳು ಒಪ್ಪಿಗೆ ಇತ್ತುವು.

ಬಲ್ಗೇರಿಯದ ಸೈನ್ಯದ ಸಂಖ್ಯೆಯನ್ನು 20,000ಕ್ಕೆ ಇಳಿಸಲಾಯಿತು. ಇವರ ಜೊತೆಗೆ ಅದು 13,000 ದಷ್ಟು ಸೈನ್ಯಾಧಿಕಾರಿಗಳನ್ನು ಇಟ್ಟುಕೊಳ್ಳಬಹುದಾಗಿತ್ತು. 33,000 ಕ್ಕಿಂತ ಹೆಚ್ಚಿನ ಬಂದೂಕಗಳನ್ನು ಬಲ್ಗೇರಿಯ ಇಟ್ಟುಕೊಳ್ಳುವಂತಿರಲಿಲ್ಲ. ವಿಸ್ತೀರ್ಣ ಮತ್ತು ಜನಸಂಖ್ಯೆಯ ದೃಷ್ಟಿಯಿಂದ ಬಲ್ಗೇರಿಯಕ್ಕೆ ಆದ ನಷ್ಟ ಅಂಥ ಹೆಚ್ಚಿನದೇನಲ್ಲ. ಆದರೆ ಬಲ್ಗೇರಿಯ ಸಮುದ್ರತೀರವನ್ನು ಹೊಂದದ ರಾಷ್ಟ್ರವಾಗಿ ಬದಲಾವಣೆಗೊಂಡದ್ದರಿಂದ, ಆ ದೇಶ ಬಾಲ್ಕನ್ ರಾಷ್ಟ್ರಗಳಲ್ಲೆಲ್ಲ ಬಹು ಅಶಕ್ತ ರಾಷ್ಟ್ರವಾಗಿ ಪರಿಣಮಿಸಿತು.

ಹಂಗರಿಯೊಂದಿಗೆ ಟ್ರಿಯನಾನ್ ಕೌಲು : ವರ್ಸೇಲ್ಸಿನ ಟ್ರಿಯನಾನ್ ಅರಮನೆಯಲ್ಲಿ 1920ರ ಜೂನ್ 4ರಂದು ಹಂಗರಿಯೊಡನೆ ಮಿತ್ರರಾಷ್ಟ್ರಗಳು ಒಪ್ಪಂದ ಮಾಡಿಕೊಂಡುವು. ಹಂಗರಿಯ ಸುತ್ತಮುತ್ತ ಇದ್ದ ರಾಜ್ಯಗಳಿಗೆ ಕೆಲವು ಸಣ್ಣಪುಟ್ಟ ಪ್ರದೇಶಗಳನ್ನು ಹಂಚಿಕೊಡಲಾಯಿತು. ಟ್ರಾನ್ಸಿಲ್‌ವೇನಿಯ ಮತ್ತು




1 ಬ್ರಿಟನ್ ಮತ್ತು ಅದರ ಮಿತ್ರರಾಷ್ಟ್ರಗಳು, 2 ಶತ್ರುರಾಷ್ಟ್ರಗಳು, 3 ತಟಸ್ಥ ರಾಷ್ಟ್ರಗಳು

ಸುಮಾರು 15 ಲಕ್ಷ ಮಗ್ಯಾರರನ್ನು ರೂಮೇನಿಯಕ್ಕೂ ತ್ರೋಪಿಯ-ಸ್ಲವೋನಿಯ ಪ್ರದೇಶಗಳನ್ನೂ 5 ಲಕ್ಷ ಮಗ್ಯಾರರನ್ನೂ ಯುಗೋಸ್ಲಾವಿಯಕ್ಕೂ ಸೇರಿಸಲಾಯಿತು. ಸ್ಲೊವಾಕಿಯ ಹೊಸದಾಗಿ ಸ್ಥಾಪಿಸಲ್ಪಟ್ಟ ಚೆಕೊಸ್ಲಾವಾಕಿಯ ಗಣರಾಜ್ಯದ ಭಾಗವಾಯಿತು. ಕಾರ್ಪೇಥಿಯನ್ ಪರ್ವತಗಳ ಪೂರ್ವ ಮತ್ತು ದಕ್ಷಿಣಕ್ಕಿದ್ದ ಕೆಲವು ಪ್ರದೇಶಗಳು ಸೇರಿದ್ದೂ ಚೆಕೊಸ್ಲಾವಾಕಿಯಕ್ಕೆ. ಸುಮಾರು 5 ಲಕ್ಷ ಮಗ್ಯಾರರೂ 5 ಲಕ್ಷ ರೂಥೇನಿಯನ್ ಜನರೂ ಈ ರೀತಿಯಾಗಿ ಚೆಕೊಸ್ಲಾವಾಕಿಯ ಗಣರಾಜ್ಯಕ್ಕೆ ಸೇರಿಹೋದರು. ಆಸ್ಟ್ರಿಯ ಪಶ್ಚಿಮ ಹಂಗರಿಯನ್ನು ಪಡೆಯಿತು. ಉಳಿದ ವಿಚಾರಗಳಲ್ಲಿ ಇದೂ ಆಸ್ಟ್ರಿಯ ಮತ್ತು ಬಲ್ಗೇರಿಯಗಳೊಡನೆ ಮಾಡಿಕೊಂಡ ಕೌಲುಗಳಂತೆಯೇ ಇದೆ. ಹಂಗರಿಯ ಸೈನ್ಯ ನಿಗದಿಯಾದ್ದು 35,000ಕ್ಕೆ. ಹಂಗರಿಯ ನೌಕಾಬಲವನ್ನು ಕೆಲವು ದೋಣಿಗಳಿಗೆ ಮಾತ್ರ ಸೀಮಿತಗೊಳಿಸಲಾಯಿತು. ಹಂಗರಿಯೂ ಪರಿಹಾರಧನ ಕೊಡಬೇಕಾಯಿತು.

ಒಂದನೆಯ ಮಹಾಯುದ್ಧ ಮತ್ತು ಪ್ಯಾರಿಸ್ ಶಾಂತಿಕೌಲುಗಳ ಪರಿಣಾಮಗಳಿವು:

1 ಜರ್ಮನಿ, ಆಸ್ಟ್ರಿಯ–ಹಂಗರಿ, ರಷ್ಯ ಮತ್ತು ತುರ್ಕಿಯ ಸಾಮ್ರಾಜ್ಯಗಳು ನಾಶವಾದುವು.

2 ರಾಜ–ಮಹಾರಾಜರುಗಳ ಆಡಳಿತ ಅಳಿಸಿಹೋಗಿ ಗಣರಾಜ್ಯಗಳ ಅಲೆಯೊಂದು ಯುರೋಪಿನ ಮೇಲೆ ಹಾದುಹೋಯಿತು. 1914ರಲ್ಲಿ ಯುರೋಪಿನಲ್ಲಿ, ಐದು ಗಣರಾಜ್ಯಗಳಿದ್ದುವು. ಆದರೆ ಯುದ್ಧದ ತರುವಾಯ 16 ಗಣರಾಜ್ಯಗಳು ಯುರೋಪ್ ಖಂಡದಲ್ಲಿ ಜನ್ಮತಳೆದುವು.

3 ಇದರ ಜೊತೆಗೆ ಪ್ರಜಾಪ್ರಭುತ್ವದ ಬಗ್ಗೆ ನಂಬಿಕೆಯೂ ಸಡಿಲಗೊಂಡಿತು. ಇದಕ್ಕೆ ಕಾರಣ ಯುದ್ಧಾನಂತರ ಹೊಸ ಸರ್ಕಾರಗಳಲ್ಲಿ ಉದ್ಭವಿಸಿದ ಕಠಿಣ ಸಮಸ್ಯೆಗಳು. ಇದರಿಂದ ಯುರೋಪಿನಲ್ಲಿ ಮುಂದೆ ಅನೇಕ ಸರ್ವಾಧಿಕಾರಿಗಳು ನಿರಂಕುಶ ಆಡಳಿತ ನಡೆಸಿ ತಮ್ಮ ಜನರನ್ನು ಕಾಪಾಡುವ ಯತ್ನದಲ್ಲಿ ವಿನಾಶಕ್ಕೆ ಕಾರಣರಾದರು.

4 ಬಾಲ್ಷೆವಿಸಂ, ಫ್ಯಾಸಿಸಂ, ನಾಟ್ಸಿಸಂ ಇವು ಆ ಕಾಲದಲ್ಲಿ ನಡೆದ ಮೂರು ದೊಡ್ಡ ರಾಜಕೀಯ–ಆರ್ಥಿಕ ಪ್ರಯೋಗಗಳು.

5 ಐರೋಪ್ಯ ರಾಷ್ಟ್ರಗಳಲ್ಲಿ ಪರಸ್ಪರ ಅಂತರವೇರ್ಪಟ್ಟು ಹೊಸ ರಾಷ್ಟ್ರಗಳು ಉದ್ಭವಿಸಿದವು. ಆಸ್ಟ್ರಿಯ–ಹಂಗರಿ ಸಾಮ್ರಾಜ್ಯ ನಾಶವಾಯಿತು. ಜರ್ಮನಿ ಮತ್ತು ರಷ್ಯಗಳ ಮೇರೆಗಳಲ್ಲಿ ಬದಲಾವಣೆಗಳಾದುವು. ಹೊಸ ಹೊಸ ದೇಶಗಳು ಉದ್ಭವವಾದವು. ಹೊಸ ರಾಷ್ಟ್ರಗಳಾದ ಪೋಲೆಂಡು, ಚೆಕೊಸ್ಲಾವಾಕಿಯ ಮತ್ತು ಯುಗೊಸ್ಲಾವಿಯಗಳು ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಹೆಚ್ಚಿನ ಪಾತ್ರ ಪಡೆದುವು. ಒಂದನೆಯ ಮಹಾಯುದ್ಧಕ್ಕೆ ಮುಂಚೆ ಆರು ದೊಡ್ಡ ರಾಷ್ಟ್ರಗಳು ಯುರೋಪಿನ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಪ್ರಾಮುಖ್ಯ ಪಡೆದಿದ್ದುವು. ಜರ್ಮನಿಯ ತಾತ್ಕಾಲಿಕ ಗ್ರಹಣದಿಂದಾಗಿ ಮತ್ತು ರಷ್ಯ ಮತ್ತು ಆಸ್ಟ್ರಿಯ–ಹಂಗರಿಗಳ ಅವನತಿಯಿಂದಾಗಿ ಯುರೋಪಿನ ಅಂತರರಾಷ್ಟ್ರೀಯ ವ್ಯವಹಾರದಲ್ಲಿ ಹೆಚ್ಚಿನ ಸಂಖ್ಯೆಯ (ಹೊಸ ರಾಷ್ಟ್ರಗಳು ಸೇರಿದಂತೆ) ರಾಷ್ಟ್ರಗಳು ಭಾಗವಹಿಸಲು ಸಾಧ್ಯವಾಯಿತು. ಇದರಿಂದ ಅಂತರರಾಷ್ಟ್ರೀಯ ವ್ಯವಹಾರದಲ್ಲಿ ಗಡಸುತನ ಹೆಚ್ಚಿತು. ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಹಿಡಿಯುವುದು ಒಂದು ಕಷ್ಟದ ಕೆಲಸವಾಯಿತು. ಜರ್ಮನಿಯ ಸುತ್ತಮುತ್ತ ಉದ್ಭವಿಸಿದ್ದ ಚಿಕ್ಕಪುಟ್ಟ ರಾಷ್ಟ್ರಗಳು ಆಕ್ರಮಣಕಾರಿ ನಾಟ್ಸಿಗಳ ಬಲೆಗೆ ಬಿದ್ದುವು.

6 ಒಂದನೆಯ ಮಹಾಯುದ್ಧ ರಾಷ್ಟ್ರೀಯತೆಯ ಭಾವನೆಗಳನ್ನು ಕೆರಳಿಸಿತೆನ್ನಬಹುದು. ವಿವಿಧ ಜನಾಂಗದವರು ಪ್ರತ್ಯೇಕವಾಗಿ ತಾವೊಂದು ರಾಷ್ಟ್ರವಾಗಿ ಸೇರಲು ಹಕ್ಕಿದೆ ಎಂದು ತಿಳಿದು ಹೊಸ ರಾಷ್ಟ್ರಗಳನ್ನು ಕಟ್ಟಿದರು. ಈ ಉಗ್ರ ರೀತಿಯ, ಸ್ವಾರ್ಥಮನೋಭಾವದ ರಾಷ್ಟ್ರೀಯ ಭಾವನೆಗಳಿಂದ ಅಂತರರಾಷ್ಟ್ರೀಯ ಸಂಬಂಧಗಳಲ್ಲಿ, ಹೆಚ್ಚಾಗಿ ಆರ್ಥಿಕ ಮತ್ತು ರಾಜಕೀಯ ಕ್ಷೇತ್ರಗಳಲ್ಲಿ ಉದ್ಭವಿಸಿದ ಸಮಸ್ಯೆಗಳು ಅನೇಕ. ಆರ್ಥಿಕಪೈಪೋಟಿ, ದ್ವೇಷ, ಅಸೂಯೆಗಳಿಂದಾಗಿ ಯುರೋಪಿನಲ್ಲಿ ಒಂದು ಹೊಸ ರೀತಿಯ ಮಾನಸಿಕ ಕಾಯಿಲೆ ಉಂಟಾಯಿತು.

7 ಒಂದನೆಯ ಮಹಾಯುದ್ಧ ಬಿತ್ತರಿಸಿದ ರಾಷ್ಟ್ರೀಯತೆಯ ಭಾವನೆಗಳು ಮತ್ತು ಒಂದು ಜನಾಂಗದವರು ಸರ್ಕಾರವನ್ನು ತಾವೇ ರಚಿಸಿಕೊಳ್ಳುವ ಹಕ್ಕು ಇದೆಯೆಂಬ ತತ್ತ್ವ ವಸಾಹತುಗಳಿಗೂ ಹಬ್ಬಿತು.

8 ಅನೇಕರು ಮುಂದೆ ಯುದ್ಧ ಸಂಭವಿಸುವುದಿಲ್ಲವೆಂದು ನಂಬಿದ್ದರೂ ಶಾಂತಿ ಒಪ್ಪಂದಗಳು ಹಳೆಯ ಗಾಯಗಳನ್ನು ವಾಸಿಮಾಡುವ ಬದಲು ಹೊಸ ಗಾಯಗಳನ್ನು ಸೃಷ್ಟಿಸಿದುವು. ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಸಂದೇಹ ಮತ್ತು ಭಯಗಳು ಸಂಪೂರ್ಣವಾಗಿ ನಿವಾರಣೆಯಾಗಲಿಲ್ಲ.

9 ಅಂತರರಾಷ್ಟ್ರೀಯ ಸಮಸ್ಯೆಗಳನ್ನು ಶಾಂತಿಯುತವಾಗಿ ಬಗೆಹರಿಸಲು ಮತ್ತು ರಾಷ್ಟ್ರ–ರಾಷ್ಟ್ರಗಳ ನಡುವೆ ಸಹಕಾರ ಮನೋಭಾವವನ್ನು ಹೆಚ್ಚಿಸಲು ರಾಷ್ಟ್ರಗಳಕೂಟ ಮತ್ತು ವಿಶ್ವನ್ಯಾಯಾಲಯಗಳನ್ನು ಸ್ಥಾಪಿಸಲಾಯಿತು. ಆದರೆ ಇಂಥ ಸಂಸ್ಥೆಗಳು ಅನೇಕ ವೇಳೆ ಅವುಗಳಿಗೆ ಅಗತ್ಯವಾದ ಬೆಂಬಲವನ್ನು ಪಡೆಯಲು ಆಗಲಿಲ್ಲ.

10 ಮಹಾಯುದ್ಧದ ಸಮಯದಲ್ಲಿ ಹೆಚ್ಚಿನ ತೊಂದರೆಗೆ ಒಳಗಾದದ್ದೆಂದರೆ ಶಿಕ್ಷಣ ವ್ಯವಸ್ಥೆ. ಈ ಪರಿಸ್ಥಿತಿ ಯುದ್ಧ ಮುಗಿದ ಅನಂತರವೂ ಮುಂದುವರಿಯಿತು. ಆದರೆ ಯುವಕರಿಗೆ ಸರಿಯಾದ ಶಿಕ್ಷಣ ಕೊಟ್ಟಲ್ಲಿ ಮುಂದಾಗಬಹುದಾದ ಅನಾಹುತವನ್ನು ತಪ್ಪಿಸಬಹುದೆಂಬ ಸಾಮಾನ್ಯ ಅಭಿಪ್ರಾಯ ಮೂಡಿತ್ತು. ಆದುದರಿಂದ ಮಕ್ಕಳ ಮತ್ತು ಯುವಕರ ವಿದ್ಯಾಭ್ಯಾಸಕ್ಕೆ ಹೆಚ್ಚಿನ ಗಮನ ಕೊಡಲಾಯಿತು. ವಿದ್ಯಾಭ್ಯಾಸಕ್ಕೆ ಹೆಚ್ಚಿನ ಧನಸಹಾಯ ನೀಡಲಾಯಿತು.

11 ಚೀನ, ಜರ್ಮನಿ, ಇಟಲಿ ಮತ್ತು ಸೋವಿಯತ್ ರಷ್ಯಗಳಲ್ಲಿ ಯುವಕರ ಚಳವಳಿಗಳಿಗೆ ಹೆಚ್ಚಿನ ಪ್ರಾಧಾನ್ಯ ದೊರೆಯಿತು. ಮಹಾಯುದ್ಧದಿಂದ ಹದಗೆಟ್ಟಿದ್ದ ಆರ್ಥಿಕ ಮತ್ತು ರಾಜಕೀಯ ಸ್ಥಿತಿಗಳಿಂದ ಪ್ರಭಾವಿತರಾಗಿ, ಪ್ರಪಂಚದ ಯುವಕ–ಯುವತಿಯರು ಸಮಸ್ಯೆಗಳ ಅಧ್ಯಯನಕ್ಕೆ ಹೆಚ್ಚಿನ ಗಮನ ಕೊಡಲು ಪ್ರಾರಂಭಿಸಿದರಲ್ಲದೆ ತಮ್ಮ ತಮ್ಮ ಜನಾಂಗಗಳಿಗೆ ಪ್ರತ್ಯೇಕ ರಾಷ್ಟ್ರಗಳನ್ನು ಕಟ್ಟಬೇಕೆಂದು ಆಶಿಸಿದರು,

12 ಒಂದನೆಯ ಮಹಾಯುದ್ಧ ರಾಷ್ಟ್ರಗಳಿಗೆ ಸಹಕಾರ ಮನೋಭಾವ ಮತ್ತು ಒಟ್ಟಾಗಿ ಕೆಲಸ ಮಾಡುವ ಗುಣಗಳನ್ನು ಕಲಿಸಿಕೊಟ್ಟಿತೆನ್ನಬಹುದು. ಈ ಮೌಲ್ಯಗಳು ಯುದ್ಧ ಮುಗಿದು ಶಾಂತಿ ಬಂದ ಮೇಲೂ ನಾಶವಾಗಲಿಲ್ಲ. ಅನೇಕ ಅಂತರರಾಷ್ಟ್ರೀಯ ಆರ್ಥಿಕ ಮತ್ತು ಸಾಮಾಜಿಕ ಸಮಸ್ಯೆಗಳನ್ನು ಬಗೆಹರಿಸುವಲ್ಲಿ ಯುದ್ಧಕಾಲದಲ್ಲಿ ಒಡಮೂಡಿದ್ದ ಸಹಕಾರ ಮನೋಭಾವವನ್ನು ಬಳಸಿಕೊಳ್ಳುವ ಪ್ರಯತ್ನ ಮಾಡಲಾಯಿತು. ವಿಶ್ವ ಸಮ್ಮೇಳನಗಳೂ ಸಾಮಾನ್ಯವಾದುವು. ಆದರೆ ಇಂಥ ವಿಶ್ವಸಮ್ಮೇಳನಗಳು ಯಾವಾಗಲೂ ಜಯಪ್ರದವಾಗುತ್ತಿದ್ದುವೆಂದು ಹೇಳಲಾಗದು.

13 ಒಂದನೆಯ ಮಹಾಯುದ್ಧದಿಂದ ವೈಜ್ಞಾನಿಕ ಹಾಗೂ ವಾಣಿಜ್ಯ ಬೆಳೆವಣಿಗೆಗಳಿಗೆ ದೊರಕಿದ ಉತ್ತೇಜನ ಅಗಾಧ. ಹೊಸ ಹೊಸ ಯಂತ್ರಗಳ ಬಳಕೆ, ಮಾರಕಾಸ್ತ್ರಗಳ ಪ್ರಯೋಗ, ವೈದ್ಯಕೀಯ ಕ್ಷೇತ್ರದಲ್ಲಿ ಹೊಸ ಪರಿಶೋಧನೆ. ಹಡಗು ನಿರ್ಮಾಣ, ವಿಮಾನಗಳ ರಚನೆ ಮತ್ತು ವಿನ್ಯಾಸಗಳಲ್ಲಿ ಬದಲಾವಣೆ, ಹೊಸ ಹೊಸ ಕೈಗಾರಿಕೆಗಳ ಸ್ಥಾಪನೆ—ಇವು ಇನ್ನು ಕೆಲವು ಪರಿಣಾಮಗಳು. ಯುದ್ಧದ ದೆಸೆಯಿಂದಾಗಿ ಹೊರದೇಶಗಳಿಂದ ಬರುತ್ತಿದ್ದ ಪದಾರ್ಥಗಳು ನಿಂತುಹೋದದ್ದರಿಂದ ಅನೇಕ ದೇಶಗಳು ತಾವೇ ತಮಗೆ ಬೇಕಾದ ಪದಾರ್ಥಗಳನ್ನು ತಯಾರಿಸಿಕೊಳ್ಳಲಾರಂಭಿಸಿದುವು.

14 ಮಹಾಯುದ್ಧ ತಟಸ್ಥರಾಷ್ಟ್ರಗಳನ್ನು ಒಳಗೊಂಡಂತೆ ಎಲ್ಲ ದೇಶಗಳ ಆರ್ಥಿಕ ಪರಿಸ್ಥಿತಿಗಳನ್ನು ಹದಗೆಡಿಸಿತ್ತು. ಇದರಿಂದಾಗಿ ಪ್ರಪಂಚದಾದ್ಯಂತ ಆರ್ಥಿಕ ಪುನಾರಚನೆಯ ಆವಶ್ಯಕತೆ ಕಂಡುಬಂತು. ಮೊದಲನೆಯ ಮಹಾಯುದ್ಧದ ಪ್ರಭಾವದಿಂದ 1929 ರ ಕೊನೆಯ ಭಾಗದಲ್ಲಿ ಒಂದು ದೊಡ್ಡ ಆರ್ಥಿಕ ಕುಸಿತ ಉಂಟಾಯಿತು.

1939ರ ಹೊತ್ತಿಗೆ ಮತ್ತೆ ಇನ್ನೊಂದು ಮೊದಲನೆಯ ಮಹಾಯುದ್ಧಕ್ಕೆ ಸನ್ನಾಹ ನಡೆದಿತ್ತು. ಇಂಥ ಭೀಕರ ಯುದ್ಧದಲ್ಲಿ ಉಂಟಾದ ಅಪಾರ ಸಾವುನೋವುಗಳನ್ನು ಮನಗಂಡ ರಾಷ್ಟ್ರಗಳು ಮತ್ತೊಂದು ಅಂಥ ಯುದ್ಧವಾಗದಂತೆ ಮಾಡಿ ಜಗತ್ತಿನಲ್ಲಿ ಶಾಂತಿ ಸ್ಥಾಪಿಸಲು ಪ್ರಯತ್ನ ನಡೆಸಿದುವು. ಯೂರೋಪಿನ ನಾಯಕರು, ರಾಜಕಾರಣಿಗಳು ಮತ್ತು ದಾರ್ಶನಿಕರು ಒಂದುಗೂಡಿ ಶಾಂತಿಸೌಹಾರ್ದಗಳ




1 ರಷ್ಯ ಕಳೆದುಕೊಂಡ ಪ್ರದೇಶ, 2 ಜನಮತಗಣನೆಯ ಆಧಾರದ ಮೇಲೆ ವರ್ಗಾಯಿಸಿದ ಅಥವಾ ರಾಷ್ಟ್ರಕೂಟ ಉಳಿಸಿಕೊಂಡ ಪ್ರದೇಶ. 3 ಮಿತ್ರರಾಷ್ಟ್ರಗಳಿಂದ ಆಕ್ರಮಿತವಾದ ರೈನ್‌ಲೆಂಡ್ ಪ್ರದೇಶ, 4 ಜರ್ಮನ್ ನಿಸ್ಸೇನೀಕೃತ ಪ್ರದೇಶ, 5 ಆಸ್ಟ್ರಿಯ-ಹಂಗರಿ ಕಳೆದುಕೊಂಡ ಪ್ರದೇಶ, 6 ಬಲ್ಗೇರಿಯ ಕಳೆದುಕೊಂಡ ಪ್ರದೇಶ. 7 ಜರ್ಮನಿ ಕಳೆದುಕೊಂಡ ಪ್ರದೇಶ.

ಆಧಾರದ ಮೇಲೆ ಒಂದು ನೂತನ ಸಮಾಜವನ್ನು ರೂಪಿಸಲು ಯತ್ನಿಸಿದರು. ಒಂದನೆಯ ಮಹಾಯುದ್ಧವಾದ ಸ್ವಲ್ಪ ಕಾಲ ಈ ಕಾರ್ಯದಲ್ಲಿ ವಿಶ್ವದ ಎಲ್ಲ ರಾಷ್ಟ್ರಗಳೂ ಮಗ್ನವಾಗಿದ್ದುವು. ಆದರೆ ಈ ಧ್ಯೇಯಸಾಧನೆಯಲ್ಲಿ ಏಕಮುಖತೆ ಕಂಡು ಬರಲಿಲ್ಲ. ಯೂರೋಪಿನ ರಾಷ್ಟ್ರಗಳ ಮುಖಂಡರು ಸಂಕುಚಿತ ಮನೋಭಾವ ತಳೆದರು. ತಮ್ಮ ತಮ್ಮ ದೇಶದ ಹಿತವೇ ಅವರಿಗೆ ಹೆಚ್ಚಾಯಿತು. ತಮ್ಮ ತಮ್ಮ ರಾಷ್ಟ್ರಗಳ ಪ್ರತಿಷ್ಠೆಯನ್ನು ಯಾವ ರೀತಿಯಲ್ಲಿ ಹೆಚ್ಚಿಸಬೇಕೆಂಬುದರ ಕಡೆ ಅವರ ಗಮನ ಹರಿದಿತ್ತೇ ವಿನಾ ಸುಭದ್ರ ಶಾಂತಿಯುತ ಸಮಾಜರಚನೆಯಲ್ಲಿ ಯಾವ ಬಗೆಯ ಆಸಕ್ತಿಯನ್ನೂ ಉತ್ಸಾಹವನ್ನೂ ಅವರು ತೋರಿಸಲಿಲ್ಲ. ಈ ಸಂಕುಚಿತ ಮನೋಭಾವದ ಪ್ರದರ್ಶನದಿಂದಲೇ ಇವರು ಕೈಗೊಂಡ ಕಾರ್ಯಕ್ರಮಗಳು ಫಲ ಕೊಡದೆ ಮತ್ತೊಂದು ಮಹಾಯುದ್ಧ ಅನಿವಾರ್ಯವಾಯಿತೆನ್ನಬಹುದು.

**ಒಂದನೆಯ ಮಹಾಯುದ್ಧದ ಘಟನೆಗಳು :**

28–6–1914 : ಸರ್ಬಿಯದ ಸಾರಾಯೆವೊದಲ್ಲಿ ಆಸ್ಟ್ರಿಯದ ರಾಜಕುಮಾರ ಫ್ರಾನ್ಸಿಸ್ ಫರ್ಡಿನೆಂಡನ ಕೊಲೆ. ಇದೇ ಒಂದನೆಯ ಮಹಾಯುದ್ಧಕ್ಕೆ ತತ್‌ಕ್ಷಣದ ಕಾರಣ.

5–7–1914 : ಆಸ್ಟ್ರಿಯ–ಹಂಗರಿಗೆ ಸಹಾಯ ಮಾಡುವುದಾಗಿ ಜರ್ಮನಿಯ ಭರವಸೆ.

23–7–1914 : ಸರ್ಬಿಯದಿಂದ ಆಸ್ಟ್ರಿಯದ 48 ಗಂಟೆಗಳ ಕಾಲದ ಕೊನೆ ಎಚ್ಚರಿಕೆಯ ಸ್ವೀಕಾರ.

28–7–1914 : ಸರ್ಬಿಯದ ಮೇಲೆ ಆಸ್ಟ್ರಿಯ–ಹಂಗರಿ ಯುದ್ಧಘೋಷಣೆ.

30–7–1914 : ಯುದ್ಧಸಿದ್ಧತೆ ನಡೆಸಲು ರಷ್ಯದ ಆಜ್ಞೆ.

1–8–1914 : ಜರ್ಮನಿಯಿಂದ ಯುದ್ಧಘೋಷಣೆ.

4–8–1914 : ಜರ್ಮನಿಯಿಂದ ಬೆಲ್ಜಿಯಂ ಪ್ರವೇಶ. ಜರ್ಮನಿಯ ವಿರುದ್ಧ ಗ್ರೇಟ್ ಬ್ರಿಟನ್ ಮತ್ತು ಫ್ರಾನ್ಸುಗಳಿಂದ ಯುದ್ಧ ಘೋಷಣೆ.

7–8–1914 : ಯುದ್ಧದಲ್ಲಿ ಸರ್ಬಿಯದೊಂದಿಗೆ ಮಾಂಟೆನಿಗ್ರೊ ಜೊತೆಗೂಡಿಕೆ.

23–8–1914 : ಜರ್ಮನಿಯ ವಿರುದ್ಧ ಜಪಾನಿನ ಯುದ್ಧಘೋಷಣೆ.

26 ರಿಂದ 31–8–1914 : ಟ್ಯಾನೆನ್‌ಬರ್ಗಿನಲ್ಲಿ ರಷ್ಯದ ವಿರುದ್ಧ ಜರ್ಮನ್ ಪ್ರಥಮ ವಿಜಯ.

6 ರಿಂದ 10–9–1914 : ಜರ್ಮನಿ ಮತ್ತು ಫ್ರಾನ್ಸುಗಳ ನಡುವೆ ಒಂದನೆಯ ಮಾರ್ನ್ ಯುದ್ಧ. ಜರ್ಮನಿಯನ್ನು ತಡೆಯಲು ಮಿತ್ರರಾಷ್ಟ್ರಗಳು ಮಾಡಿದ ಮೊದಲನೆಯ ಮಹಾ ಪ್ರಯತ್ನ. ಯುದ್ಧದ ಒಂದು ಮುಖ್ಯ ತಿರುಗುಬಿಂದು.

3–11–1914 : ತುರ್ಕಿಯ ವಿರುದ್ಧ ರಷ್ಯದ ಯುದ್ಧಘೋಷಣೆ. ಎರಡು ದಿವಸಗಳ ಅನಂತರ ಗ್ರೇಟ್ ಬ್ರಿಟನ್ ಮತ್ತು ಫ್ರಾನ್ಸುಗಳೂ ತುರ್ಕಿಯ ವಿರುದ್ಧ ಯುದ್ಧ ಘೋಷಿಸಿದುವು.

22–4–1915 : ಎರಡನೆಯ ಈಪ್ರ ಕದನ. ಇದರಲ್ಲಿ ಜರ್ಮನರಿಂದ ವಿಷ ವಾಯು ಪ್ರಯೋಗ.

7–5–1915 : ಜರ್ಮನಿಯಿಂದ ಲ್ಯೂಸಿಟ್ಯಾನಿಯ ಹಡಗಿನ ಮುಳುಗಡೆ. ಹನ್ನೆರಡು ಸಾವಿರ ಜನ ಮುಳುಗಿದರು. ನೂರಕ್ಕಿಂತ ಹೆಚ್ಚು ಅಮೆರಿಕನರ ಮರಣ.

9–3–1916 : ಪೋರ್ಚುಗಲಿನ ವಿರುದ್ಧ ಜರ್ಮನಿಯ ಯುದ್ಧಘೋಷಣೆ.

ಜೂನ್ 1916 : ವರ್ಡನ್ ಕದನ : ಫ್ರಾನ್ಸ್ ಮತ್ತು ಜರ್ಮನಿಗಳು ಸೇಡಿನಿಂದ ಕಾದಿದ್ದುವು. ಪೇಟ್ಯಾನನ ನೇತೃತ್ವದಲ್ಲಿ ಫ್ರೆಂಚರು ವೀರಾವೇಶದಿಂದ ಹೋರಾಡಿ ಕೊನೆಗೂ ವರ್ಡನ್ ನಗರವನ್ನು ರಕ್ಷಿಸಿದರು. ಎರಡು ಪಕ್ಷಗಳಲ್ಲೂ ಸತ್ತವರ ಸಂಖ್ಯೆ 10 ಲಕ್ಷ.

6–4–1917 : ಜರ್ಮನಿಯ ಮೇಲೆ ಅಮೆರಿಕನ್ ಯುದ್ಧ ಘೋಷಣೆ. ಮರುದಿವಸ ಕ್ಯೂಬ ಮತ್ತು ಪನಾಮಗಳೂ ಜರ್ಮನಿಯ ವಿರುದ್ಧ ಯುದ್ಧ ಘೋಷಿಸಿದುವು.

2–7–1917 : ಜರ್ಮನಿಯ ವಿರುದ್ಧ ಗ್ರೀಸಿನ ಯುದ್ಧಘೋಷಣೆ.

8–1–1918 : ಅಮೆರಿಕನ್ ಕಾಂಗ್ರೆಸಿನ ಮುಂದೆ ಅಧ್ಯಕ್ಷ ವುಡ್ರೊ ವಿಲ್ಸನನಿಂದ ಶಾಂತಿಕೌಲಿನ ಚತುರ್ದಶ ಸೂತ್ರ ಮಂಡನೆ.

ಮಾರ್ಚ್ 1918: ಎರಡನೆಯ ಮಾರ್ನ್ ಕದನ. ಹಿಂಡನ್‌ಬರ್ಗ್ ಸಾಲು ಎಂದು ಪ್ರಖ್ಯಾತವಾಗಿದ್ದ ಕಂದಕಗಳ ಸಾಲನ್ನು ಮಿತ್ರರಾಷ್ಟ್ರಗಳು ಮುರಿದುವು. 1914ರಿಂದ ಜರ್ಮನರು ಇವನ್ನು ಹಿಡಿದಿದ್ದರು.

29–9–1918 : 1915ರಿಂದ ಗ್ರೀಸಿನಲ್ಲಿದ್ದ ಮಿತ್ರರಾಷ್ಟ್ರಗಳ ಸೈನ್ಯದಿಂದ ಬಲ್ಗೇರಿಯದ ಮುತ್ತಿಗೆ; ಜರ್ಮನರ ಸೋಲು. ಜರ್ಮನ್ ಸೇನಾನಿ ಲೂಡೆನ್‌ಡಾರ್ಫನ ನಿರಾಶೆ. ವಿಲ್ಸನನ ಸೂತ್ರಗಳ ಆಧಾರದ ಮೇಲೆ ಶಾಂತಿಸಂಧಾನಕ್ಕೆ ಒಡಂಬಡಬೇಕೆಂದು ಬರ್ಲಿನಿಗೆ ಸೂಚನೆ.

2–10–1918 : ಶಾಂತಿ ಬಯಸಿ ಜರ್ಮನಿಯಿಂದ ಅಧ್ಯಕ್ಷ ವಿಲ್ಸನನಿಗೆ ಕೋರಿಕೆ.

3–10–1918 : ತುರ್ಕಿ, ಬಲ್ಗೇರಿಯ, ಆಸ್ಟ್ರಿಯ–ಹಂಗರಿಗಳ ಶರಣಾಗತಿ.

11-11-1918 : ಜರ್ಮನಿಯಿಂದ ನೆದರ್ಲೆಂಡ್ಸಿಗೆ ಕೈಸರನ ಪಲಾಯನ. ಮಿತ್ರರಾಷ್ಟ್ರಗಳೊಡನೆ ಯುದ್ಧ ನಿಲ್ಲಿಸುವ ಒಪ್ಪಂದಕ್ಕೆ ಜರ್ಮನರ ಸಹಿ.

29–6–1919 : ವರ್ಸೇಲ್ಸ್ ಕೌಲಿಗೆ ಜರ್ಮನಿಯ ಸಹಿ.

10–9–1919 : ಆಸ್ಟ್ರಿಯದೊಡನೆ ಸೆಂಟ್–ಜರ್ಮೇನ್ ಕೌಲು.

27–11–1919: ಬಲ್ಗೇರಿಯದೊಡನೆ ನ್ಯೂಯಿಲಿ ಕೌಲು.

4–6–1920 : ಹಂಗರಿಯೊಡನೆ ಟ್ರಿಯನಾನ್ ಕೌಲು.

10–8–1920 : ತುರ್ಕಿಯೊಡನೆ ಸೇವ್ರ್ ಕೌಲು. (ಎಸ್.ಕೆ.ಎಸ್.)

**ಒಂದೆಲಗ :** ಅಂಬೆಲಿಫೆರಿ ಕುಟುಂಬದ ಸೆಂಟೆಲ ಜಾತಿಗೆ ಸೇರಿದ ಮೂವತ್ತು ಮೂರು ಪ್ರಭೇದಗಳನ್ನುಳ್ಳ ಒಂದು ಸಸ್ಯಜಾತಿ. ಬ್ರಾಹ್ಮೀ, ತಿಮರೆ ಪರ್ಯಾಯಪದಗಳು. ಉಷ್ಣವಲಯದ ತೇವವಾದ ಪ್ರದೇಶಗಳಲ್ಲಿ ಕಳೆಯ ರೂಪದಲ್ಲಿ ಬೆಳೆಯುವ ಈ ಜಾತಿಯ ಕೆಲವು ಪ್ರಭೇದಗಳು ಆಯುರ್ವೇದ ಔಷಧ ಪದ್ಧತಿಯಲ್ಲಿ ಪ್ರಾಮುಖ್ಯ ಗಳಿಸಿವೆ. ಅವುಗಳಲ್ಲಿ ಸೆಂಟೆಲ ಏಷಿಯಾಟಿಕ ಎಂಬ ಪ್ರಭೇದ ಭಾರತದ ಆದ್ಯಂತವೂ ಸ್ವಾಭಾವಿಕವಾಗಿ ಬೆಳೆಯುವ ಔಷಧಿ ಸಸ್ಯ. ನೆಲದ ಮೇಲೆ ಹಬ್ಬಿಕೊಂಡು ಬೆಳೆಯುತ್ತದೆ. ನವುರಾದ ವಾಸನೆಯುಂಟು. ಕಾಂಡ ನೆಲದ ಮೇಲೆಯೇ ಹಬ್ಬುವುದರಿಂದ ರೆಂಬೆಗಳು ಎಲೆಯ ಕಂಕುಳಲ್ಲಿ ಬರುತ್ತವೆ. ಉದ್ದವಾದ ತೊಟ್ಟಿರುವ, ಮೂತ್ರಪಿಂಡದಾಕಾರದ ಎಲೆಗಳು ಕಾಂಡ ಮತ್ತು ರೆಂಬೆಗಳ ಮೇಲೆ ಬೆಳೆಯುತ್ತವೆ. ಈ ಎಲೆಗಳ ಅಂಚು ಹಲ್ಲುಗಳಂತೆ ಒಡೆದಿದ್ದು ನಾಳರಚನೆ ಹಸ್ತಾಕಾರದಲ್ಲಿರುತ್ತದೆ. ಹೂಗೊಂಚಲು ಛತ್ರಿ (ಅಂಬೆಲ್) ಮಾದರಿಯದು ; ಹೂಗಳಲ್ಲಿ 5 ಪುಷ್ಪಪತ್ರಗಳು, 5 ದಳಗಳು, 5 ಕೇಸರಗಳು ಇರುತ್ತವೆ ; ದಳಗಳ ಮೇಲೆ ಕೇಸರಗಳು ಪರ್ಯಾಯವಾಗಿರುತ್ತವೆ ; ಪರಾಗಕೋಶದಲ್ಲಿ ಎರಡು ಕೋಣೆಗಳಿರುತ್ತವೆ ; ಅಂಡಾಶಯ ಅಧಮಸ್ಥಿತಿಯದು ; ಫಲ ಸ್ಕೈಜೊಕಾರ್ಪ್ ಮಾದರಿಯದು. ಭಾರತೀಯ ಔಷಧ ಪದ್ಧತಿಯಲ್ಲಿ ಇದನ್ನು ಉತ್ತೇಜನಕಾರಿಯಾಗಿಯಲ್ಲದೆ ಶಕ್ತಿವರ್ಧಕವಾಗಿಯೂ ಉಪಯೋಗಿಸುವುದುಂಟು. ಕಾಯಕಲ್ಪ ಚಿಕಿತ್ಸೆಯಲ್ಲಿ ಇದರ ಪಾತ್ರ ಪ್ರಮುಖವಾದುದು. ಭಾರತದಲ್ಲೂ ಮಡಗಾಸ್ಕರದಲ್ಲೂ ಇದರ ಕಷಾಯವನ್ನು ಕುಷ್ಠರೋಗ ಚಿಕಿತ್ಸೆಯಲ್ಲಿ ಉಪಯೋಗಿಸುತ್ತಾರೆ.



ಈ ಸಸ್ಯದ ರಸದಲ್ಲಿ ಹಸಿರು ಬಣ್ಣದ ಒಂದು ಬಗೆಯ ಸುಗಂಧದ ಎಣ್ಣೆ, ಟ್ಯಾನಿನ್, ಆಸ್ಕಾರ್ಬಿಕ್ ಆಮ್ಲ, ಪೆಕ್ಟಿಕ್ ಆಮ್ಲ, ರಾಳದಂತಿರುವ ವಸ್ತು, ವೆಲ್ಲಾರಿನ್ ಎಂಬ ಕಹಿಪದಾರ್ಥ ಮತ್ತು ಏಷ್ಯಾಟಿಕೊಸೈಡ್ ಎಂಬ ವಿಶಿಷ್ಟವಸ್ತು—ಇವು ಇರುವುವೆಂದು ಕಂಡುಬಂದಿದೆ. ಇವುಗಳಲ್ಲೆಲ್ಲ ಏಷ್ಯಾಟಿಕೊಸೈಡ್ ಎಂಬ ವಸ್ತುವೇ ಕುಷ್ಠರೋಗ ಚಿಕಿತ್ಸೆಯಲ್ಲಿ ಪರಿಣಾಮಕಾರಿಯೆಂದು ಗೊತ್ತಾಗಿದೆ.

ಒಂದೆಲಗ ಔಷಧಿಗಳಲ್ಲಿ ಉಪಯುಕ್ತವೆನಿಸಿರುವಂತೆ ಮಾನವನ ಮತ್ತು ಪಶು ಪ್ರಾಣಿಗಳ ಆಹಾರವಾಗಿಯೂ ಉಪಯೋಗವಾಗುತ್ತಿದೆ; ಇದರ ಎಲೆಯನ್ನು ತರಕಾರಿಯಾಗಿ ಉಪಯೋಗಿಸುತ್ತಾರೆ. ತಂಬುಳಿ, ರಾಯತಗಳಿಗಿದು ಪ್ರಸಿದ್ಧ. ಈ ಸಸ್ಯದ ಹೂ ಮತ್ತು ಎಲೆಗಳು ಆಕರ್ಷಣೀಯವಾಗಿ ಕಾಣುವುದರಿಂದ ಒಂದೆಲಗವನ್ನು ಅಲಂಕಾರಸಸ್ಯವನ್ನಾಗಿಯೂ ಬೆಳೆಸುತ್ತಾರೆ. ಮಲಯದಲ್ಲಿ ಇದನ್ನು ತೋಟಗಳಲ್ಲಿ ಮಣ್ಣುಸವಕಲನ್ನು ತಡೆಗಟ್ಟಲು ಬೆಳೆಸುವರು. (ಕೆ.ಬಿ ಎಸ್.; ಡಿ.ಎಂ.)

**ಒ'ಕಾನೆಲ್, ಡೇನಿಯೆಲ್ :** 1775–1847. ಐರ್ಲೆಂಡಿನ ರಾಜಕೀಯ ನಾಯಕ, ವಿಮೋಚಕ. 19ನೆಯ ಶತಮಾನದ ಐರಿಷ್ ಸಂಸದೀಯ ಮುಖ್ಯರಲ್ಲಿ ಪ್ರಥಮ. 1775ರ ಆಗಸ್ಟ್ 6ರಂದು ಕೆರಿ ಕೌಂಟಿಯ ಕಹಿರ್ಸಿವೀನಿನಲ್ಲಿ ಇವನ ಜನನ. ಚಿಕ್ಕಪ್ಪನಿಗೆ ಈತ ದತ್ತುವಾದ. ಆತ ಫ್ರಾನ್ಸಿನೊಂದಿಗೆ ಕಳ್ಳವ್ಯಾಪಾರ ನಡೆಸಿ ಪ್ರವರ್ಧಮಾನಕ್ಕೆ ಬಂದಿದ್ದ. ಫ್ರಾನ್ಸಿನ ರೋಮನ್ ಕೆಥೊಲಿಕ್ ಕಾಲೇಜುಗಳಲ್ಲಿ ಒ'ಕಾನೆಲ್ ಶಿಕ್ಷಣ ಪಡೆಯುತ್ತಿದ್ದ ಸಮಯದಲ್ಲಿ ಫ್ರೆಂಚ್ ಕ್ರಾಂತಿಸೇನೆಗಳು ಆಸ್ಟ್ರಿಯನ್ ನೆದರ್ಲೆಂಡ್ಸನ್ನಾಕ್ರಮಿಸಿದುವು. ಒ'ಕಾನೆಲ್ ಆಗ ಇಂಗ್ಲೆಂಡಿಗೆ ಓಡಿಬಂದ. ಈ ಅನುಭವ ಈತನ ಮೇಲೆ ಪರಿಣಾಮ ಬೀರಿತು. ಜನತೆಯ ಸಾರ್ವಭೌಮಾಧಿಕಾರದಲ್ಲಿ ಇವನಿಗೆ ಸಂಪೂರ್ಣ ನಂಬಿಕೆಯಿತ್ತಾದರೂ ಹಿಂಸಾತ್ಮಕ ಅತಿರೇಕಗಳು ಇವನಿಗೆ ಹಿಡಿಸುತ್ತಿರಲಿಲ್ಲ. ಲಂಡನಿನಲ್ಲಿ ಈತ ನ್ಯಾಯಶಾಸ್ತ್ರವನ್ನೋದಿ 1798ರಲ್ಲಿ ಐರ್ಲೆಂಡಿನಲ್ಲಿ ವಕೀಲಿ ಹಿಡಿದ. ಐರಿಷ್ ಸಂಸತ್ತನ್ನು ವಿಸರ್ಜಿಸಿ ಐರ್ಲೆಂಡನ್ನು ಇಂಗ್ಲೆಂಡಿನೊಂದಿಗೆ ವಿಲೀನಗೊಳಿಸುವ ಕಾಯಿದೆಯನ್ನು ವಿರೋಧಿಸಿದಾಗಲೇ ಒ'ಕಾನೆಲ್ ಪ್ರಸಿದ್ಧನಾದದ್ದು. ಇಂಗ್ಲೆಂಡ್ ಜಾರಿಗೆ ತಂದಿದ್ದ ಕೆಥೊಲಿಕ್ ವಿರುದ್ಧವಾದ ಕಾಯಿದೆಗಳನ್ನೆಲ್ಲ ರದ್ದು ಮಾಡಬೇಕೆಂದು ಈತ ಚಳವಳಿ ಹೂಡಿದ. ಐರಿಷರ ಸಮಾನ ಹಕ್ಕುಗಳಿಗಾಗಿ ಹೋರಾಟ ನಡೆಸಿದ ಒ'ಕಾನೆಲನ ಧೈರ್ಯಸಾಹಸಗಳು ಹಲವರ ಮೆಚ್ಚುಗೆ ಅಭಿಮಾನಗಳನ್ನು ಗಳಿಸಿದುವು.

ಸರ್ಕಾರದ ದಬ್ಬಾಳಿಕೆಯ ವಿರುದ್ಧವಾಗಿ ದೇಶಾದ್ಯಂತ ಸಭೆ ನಡೆಸಿ, ಕೆಥೊಲಿಕರ ನ್ಯಾಯಬದ್ಧ ಬೇಡಿಕೆಗಳಿಗಾಗಿ ಈತ ಸಲ್ಲಿಸಿದ ಮನವಿಗೆ ಪ್ರಾಟೆಸ್ಟಂಟರೂ ಬೆಂಬಲ ನೀಡಿದರು. 1814ರಲ್ಲಿ ಜಾನ್ ಮ್ಯಾಗೀ ಎಂಬ ಪ್ರಾಟೆಸ್ಟಂಟ್ ಪತ್ರಿಕೋದ್ಯಮಿಗೆ ಸರ್ಕಾರ ಶಿಕ್ಷೆ ವಿಧಿಸಿದಾಗ ಆಗಿನ ವೈಸ್‌ರಾಯಿಯನ್ನು ಒ'ಕಾನೆಲ್ ಕಟುವಾಗಿ ಟೀಕಿಸಿ ಇಡೀ ಸರ್ಕಾರಿ ವ್ಯವಸ್ಥೆಯ ವಿರುದ್ಧವಾಗಿ ಪ್ರತಿಭಟನೆ ಸಲ್ಲಿಸಿದ. ಜಾನ್ ಮ್ಯಾಗೀ ಕೊನೆಗೂ ದಂಡ ತೆರಬೇಕಾಯಿತು. ಆಗ ಒ'ಕಾನೆಲನ ಶ್ರೀಮಂತ ಬೆಂಬಲಿಗರು ದೂರವಾದರೂ ಒ'ಕಾನೆಲ್ ಎದೆಗುಂದಲಿಲ್ಲ. ಲಾರ್ಡ್ ವೆಲೆಸ್ಲಿ ವೈಸ್‌ರಾಯಿಯಾಗಿ ನೇಮಕಗೊಂಡಾಗ (1821) ಒ'ಕಾನೆಲನ ಹೋರಾಟದ ಉತ್ಸಾಹ ಮತ್ತೆ ಹೊಮ್ಮಿತು. ಕೆಥೊಲಿಕ್ ಜನರಿಂದ ತಲಾ 1 ಪೆನಿಯಂತೆ ಮಾಸಿಕ ಚಂದಾ ವಸೂಲಿ ಮಾಡಿ ಚಳವಳಿ ಮುಂದುವರಿಸಿದ. ಕೆಥೊಲಿಕರ ಹಕ್ಕನ್ನು ಪುರಸ್ಕರಿಸುವ ಅನೇಕ ಮಸೂದೆಗಳು ಪಾರ್ಲಿಮೆಂಟಿನ ಮುಂದೆ ಬಂದು ಪರಾಜಿತವಾದುವು. ಆದರೆ ಐರ್ಲೆಂಡಿನಲ್ಲಿ ಸ್ವಾತಂತ್ರ್ಯಪ್ರಜ್ಞೆ ತಳೆದ ಹೊಸ ತಲೆಮಾರೊಂದರ ನಿರ್ಮಾಣವಾಯಿತು. 1828ರಲ್ಲಿ ಪಾರ್ಲಿಮೆಂಟಿಗೆ ನಡೆದ ಉಪಚುನಾವಣೆಯೊಂದರಲ್ಲಿ ಒ'ಕಾನೆಲ್ ಅದ್ಭುತ ಜಯಗಳಿಸಿದನಾದರೂ ಈತ ಸದಸ್ಯನಾಗಿ ಆಸನ ಸ್ವೀಕರಿಸುವುದು ಸಾಧ್ಯವಾಗಲಿಲ್ಲ. ಆದರೆ ಐರಿಷ್ ಜನಾಭಿಪ್ರಾಯ ಎತ್ತ ಸಾಗುತ್ತಿದೆಯೆಂಬುದು ಆಗ ಇಂಗ್ಲೆಂಡಿನ ಪ್ರಧಾನಿಯಾಗಿದ್ದ ಡ್ಯೂಕ್ ಆಫ್ ವೆಲಿಂಗ್ಟನನಿಗೆ ಅರಿವಾಗಿ, ಆತ 1829ರಲ್ಲಿ ಸುಧಾರಣೆಗಳನ್ನು ಜಾರಿಗೆ ತಂದ. ಒ'ಕಾನೆಲ್ ಕಾಮನ್ಸ್ ಸಭೆಯ ಸದಸ್ಯನಾಗಿ ಪ್ರತಿಷ್ಠಾಪಿತನಾದಾಗ ಆತನ ಪ್ರತಿಭೆಯೂ ವ್ಯಕ್ತಿತ್ವವೂ ಸಂಪೂರ್ಣವಾಗಿ ಪ್ರಕಟವಾದುವು. ಈತನ ಹಿಂಬಾಲಕರಾದ ಐರಿಷ್ ಸದಸ್ಯರು ಒ'ಕಾನೆಲನ ಬಾಲ ಎಂದೇ ಹೆಸರು ಗಳಿಸಿದರು. 1800ರ ವಿಲೀನವನ್ನು ರದ್ದುಗೊಳಿಸಬೇಕೆಂದು ಒ'ಕಾನೆಲ್ ಚಳವಳಿ ಹೂಡಿದ. ಈತ ವ್ಹಿಗ್ ಪಕ್ಷದೊಂದಿಗೆ ಸಹಕರಿಸಿದರೂ ಅದರಿಂದ ಹೆಚ್ಚಿನ ಪ್ರಯೋಜನವೇನೂ ಆಗಲಿಲ್ಲ. ಏತನ್ಮಧ್ಯೆ ಇಂಗ್ಲೆಂಡಿನ ಸರ್ಕಾರ ಇವನಿಗೆ ಸಾರ್ವಜನಿಕ ಹುದ್ದೆಗಳ ಆಸೆ ತೋರಿಸಿತು. ಆದರೆ ಒ'ಕಾನೆಲ್ ಆ ಆಮಿಷಕ್ಕೆ ಬಲಿ ಬೀಳಲಿಲ್ಲ. ಈತ ವಕೀಲಿವೃತ್ತಿಯನ್ನೂ ತ್ಯಜಿಸಿದ್ದರಿಂದ ಇವನ ಜೀವನೋಪಾಯಕ್ಕಾಗಿಯೂ ಚಳವಳಿಗಾಗಿಯೂ ಮಿತ್ರರು ಉದಾರವಾಗಿ ಹಣ ನೀಡಿದರು. ವಿದೇಶೀ ಸರ್ಕಾರದೊಂದಿಗೆ ಸಹಕರಿಸುವುದರಿಂದ ಫಲವಿಲ್ಲವೆಂಬುದು ಒ'ಕಾನೆಲ್‌ಗೆ ಮನವರಿಕೆಯಾದಾಗ ಪಾರ್ಲಿಮೆಂಟ್ ಸಭೆಗೆ ಹೋಗುವುದನ್ನೇ ನಿಲ್ಲಿಸಿದ. ಆಗ ಡಬ್ಲಿನಿನಲ್ಲಿ ಸೇರಲಿದ್ದ ಬೃಹತ್ ಸಭೆಯೊಂದನ್ನು ಸರ್ಕಾರ ನಿಷೇಧಿಸಿದ್ದಲ್ಲದೆ ಜನರನ್ನಡಗಿಸಲು ದಂಡನ್ನೇ ಸಜ್ಜಾಗಿ ನಿಲ್ಲಿಸಿತು. ಒ'ಕಾನೆಲ್ ಮತ್ತು ಆತನ ಸಹಚರಿಗಳು ಬಂಧನಕ್ಕೊಳಗಾದರು. ಲಾರ್ಡ್ಸ್ ಸಭೆಗೆ ಅಪೀಲು ಹೋದಾಗ ಶಿಕ್ಷೆ ರದ್ದಾಗಿ ಅವರು ಬಿಡುಗಡೆಗೊಂಡರು.

ಒ'ಕಾನೆಲಗೆ ಅರಿವಿಲ್ಲದೆ ಮುಪ್ಪು ಬಂತು, ಶಕ್ತಿ ಕುಂದಿತು. ತರುಣ ಐರ್ಲೆಂಡಿಗರು ಒ'ಕಾನೆಲನ ಸಾವಧಾನದ ನಾಯಕತ್ವವನ್ನೊಪ್ಪಲಿಲ್ಲ. ಬಿರುಗಾಳಿಯ ಜೀವವೊಂದು ಅವರಿಗೆ ತಲೆಯಾಳಾಗಬೇಕಾಗಿತ್ತು. ಐರ್ಲೆಂಡಿನಲ್ಲಿ ಆಲೂಗೆಡ್ಡೆಯ ಕ್ಷಾಮ ಹಬ್ಬಿದಾಗ ಸರ್ಕಾರದ ಪರಿಹಾರಕ್ಕಾಗಿ ಈತ ತನ್ನ ಮುಪ್ಪಿನಲ್ಲೂ ಶ್ರಮಿಸಿದ. ಹವಾ ಬದಲಾವಣೆಗಾಗಿ ರೋಮಿಗೆ ಹೋಗುತ್ತಿದ್ದಾಗ ಹಾದಿಯಲ್ಲೆ ಒ'ಕಾನೆಲ್ ತೀರಿಕೊಂಡ. ಆಗ ಐರ್ಲೆಂಡಿನಲ್ಲಿ ಏರ್ಪಟ್ಟ ಬೃಹತ್ ಸಭೆಗಳೂ ಪ್ರದರ್ಶನಗಳೂ ಈತನೆಷ್ಟು ಜನಪ್ರಿಯನಾಗಿದ್ದನೆಂಬುದರ ಸಂಕೇತಗಳಾಗಿದ್ದುವು. (ಎಸ್.ಎ.ಡಿ.)

**ಒಕಾಪಿ :** ಆಫ್ರಿಕದ ಉಷ್ಣವಲಯದ ಕಾಡುಗಳಲ್ಲಿ ಜೀವಿಸುವ ಜಿರಾಫೆಗಳ ಕುಲಕ್ಕೆ ಸೇರಿದ ಒಂದು ಅಪೂರ್ವವಾದ ಪ್ರಾಣಿ. ಕಾಂಗೋವಿನ ಸೆಮ್ಲಿಕಿ ಅರಣ್ಯದಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ಒಕಾಪಿಯ ಜಾನ್‌ಸ್ಟೊನಿ ಎಂಬುದು ಇದರ ವೈಜ್ಞಾನಿಕ ಹೆಸರು. ಇದರ ಗಾತ್ರ ದೊಡ್ಡದು; ಮೈಮೇಲೆ ದೊಡ್ಡದಾಗಿ ಎದ್ದು ಕಾಣುವ ಗೆರೆಗಳಿವೆ. ಆದರೂ ಇಂಥ ಪ್ರಾಣಿ ಒಂದಿದೆಯೆಂಬ ತಿಳಿವಳಿಕೆ ವಿಜ್ಞಾನ ಪ್ರಪಂಚಕ್ಕೆ 1900ರ ವರೆಗೂ ಇರಲಿಲ್ಲ. ಇದನ್ನು ಲೋಕಕ್ಕೆ ತಿಳಿಯ ಹೇಳಿದಾತ ಹ್ಯಾರಿ ಎಚ್. ಜಾನ್‌ಸನ್. ಪ್ರಾಯಶಃ ಕೆಲವು ಧೀರ ಪರಿಶೋಧಕರನ್ನು ಬಿಟ್ಟರೆ ಇಟೂರಿ ಕಾಡಿನ ಗುಜ್ಜಾರಿಗಳೇ ಇವನ್ನು ನಿಜವಾಗಿ ಕಂಡರಿತಿದ್ದವರು. ಇವರು ಈ ಪ್ರಾಣಿಗಳ ಜಾಡುಗಳನ್ನು ಪತ್ತೆಹಚ್ಚುವುದರಲ್ಲಿ ತುಂಬ ಗಟ್ಟಿಗರು.

ಇದು ಜಿರಾಫೆಗಿಂತ ಸಣ್ಣದು. ಎರಡಕ್ಕೂ ಕೂದಲು ಮತ್ತು ಚರ್ಮ ಮುಚ್ಚಿರುವ ಕೊಂಬುಗಳಿವೆ. ಎರಡಕ್ಕೂ ಉದ್ದವೂ ಹಿಡಿತವುಳ್ಳವೂ ಆದ ನಾಲಗೆಗಳೂ ಸೀಳು ಗೊರಸುಗಳೂ ಉಂಟು. ಸದ್ದು ಮಾಡದಿರುವುದೇ ಇವಕ್ಕೆ ರೂಢಿ. ಒಕಾಪಿಯ ಮೈ ಸಣ್ಣದು; ಎತ್ತರ 5′–5.5′ ವರೆಗೆ. ತಲೆ ಜಿರಾಫೆಯದಂತೆಯೇ ಇದೆ. ತೆಳುವಾದ ಚಿಪ್ಪಿನಂಥ ದೊಡ್ಡ ಕಿವಿಗಳಿವೆ. ಮೈಬಣ್ಣ ಚಾಕೋಲೇಟ್ ಅಥವಾ ನೀಲಿಗೆಂಪು. ಹಿಂಭಾಗದಲ್ಲಿ ಬಿಳಿಗೀರುಗಳೂ ಮುಖ ಕಾಲುಗಳ ಮೇಲೆ ಬಿಳಿ ಪಟ್ಟೆಗಳೂ ಇವೆ. ಹೆಣ್ಣುಗಳಿಗೆ ಕೊಂಬಿಲ್ಲ; ಆದರೆ ಗಾತ್ರ ದೊಡ್ಡದು; ಗೊರಸಿನ ಪ್ರಾಣಿಗಳಲ್ಲಿ ಸಾಮಾನ್ಯವಾಗಿ ಹೀಗಿರುವುದಿಲ್ಲ.



ಮರದೆಲೆಗಳನ್ನು ಚಿವುಟಿಕೊಳ್ಳಲು ತನ್ನ ತುಂಬ ಉದ್ದವಾದ ತಿರುಚು ನಾಲಗೆಯನ್ನು ಇದು ಜಿರಾಫೆಯಂತೆಯೇ ಉಪಯೋಗಿಸುತ್ತದೆ. ಹಗಲಿನಲ್ಲಿ ಈ ಪ್ರಾಣಿ ಕಾಡಿನ ನೀರವ ಗಹ್ವರಗಳಲ್ಲಿರುತ್ತದೆ. ಮೇಯುವಾಗ ಶತ್ರುಗಳು ಹಠಾತ್ತನೆ ಮೇಲೆರಗದಂತೆ ಸದ್ದಿನ ಸುಳಿವು ಸಿಗುವ ದೊಡ್ಡ ಒಂಟಿಮರಗಳನ್ನಿದು ಆಶ್ರಯಿಸುತ್ತದೆ. ಇದಕ್ಕೆ ಜಿರಾಫೆಯಷ್ಟು ತೀಕ್ಷ್ಣ ದೃಷ್ಟಿಯಿಲ್ಲ; ಆದರೆ ಶಬ್ದ

ಗ್ರಹಣಶಕ್ತಿ ಚುರುಕಾಗಿದೆ; ತುತ್ತೂರಿ ಆಕಾರದ ಕಿವಿಗಳೇ ಇದನ್ನು ಸೂಚಿಸುತ್ತವೆ. ಹೀಗೆ ತನ್ನ ಶ್ರವಣಬಲದಿಂದ ವೈರಿಯಿಂದ ಪಾರಾಗುತ್ತದೆ. ಇದರ ಆಹಾರ ಮರದ ಕೆಳಗಣ ಎಳೆಬಳ್ಳಿಗಳ ಎಲೆಗಳು. ಇದು ಹುಲ್ಲನ್ನು ಮುಟ್ಟುವುದಿಲ್ಲ.

ಒಕಾಪಿಗಳು ಒಂಟಿಯಾಗಿಯೋ ಜೋಡಿಯಾಗಿಯೋ ಇರುತ್ತವೆ. ಪುಕ್ಕಲು ಮತ್ತು ಸಾಧುಸ್ವಭಾವದ ಈ ಪ್ರಾಣಿಗಳ ಸಂಚಾರ ರಾತ್ರಿಯಲ್ಲಿ. ಇವು ಏಕಾಂತವನ್ನು ಪ್ರೀತಿಸುತ್ತವೆ. ಕಾಂಗೋ ಕಾಡಿನ ದುರ್ಗಮವೂ ದುರ್ಭೇದ್ಯವೂ ಆದ ಪ್ರದೇಶಗಳಲ್ಲಿ ಇವು ವಾಸಮಾಡುತ್ತವೆ. ಕಾಡಿನ ಅಂಚಿನಲ್ಲಿ ನೆಲೆಸಿರುವ ಗುಜ್ಜಾರಿಗಳೂ ಕೆಲವು ಬಾಂಟು ಕುಲದವರೂ ಇವುಗಳ ನೆಲೆಯನ್ನು ಪತ್ತೆಹಚ್ಚಿ, ಬೇಟೆಯಾಡಿ, ಇವುಗಳ ಮಾಂಸ ತುಂಬ ರುಚಿ ಎಂದು ಕಂಡುಕೊಂಡಿದ್ದರು. ಬಹು ಹಿಂದೆಯೆ ಬೆಲ್ಜಿಯಂ ಸರ್ಕಾರ ಈ ಅಪೂರ್ವ ಪ್ರಾಣಿ ನಾಶವಾಗದಂತೆ ಕಾಪಿಡುವುದಕ್ಕಾಗಿ ಕಾನೂನುಗಳನ್ನು ಮಾಡಿತ್ತು. ಇಟೂರಿ ಕಾಡಿನ ಮಧ್ಯದಲ್ಲಿ ಎಪುಲು ಎಂಬೆಡೆಯಲ್ಲಿರುವ ಒಕಾಪಿ ಕ್ಷೇತ್ರದಲ್ಲಿ ಬೇಟೆಯ ಇಲಾಖೆಯವರು ಇವುಗಳ ವಿಷಯದಲ್ಲಿ ವಿಸ್ತಾರವಾದ ಸಂಶೋಧನೆಗಳನ್ನು ನಡೆಸುತ್ತಿದ್ದಾರೆ. ಪ್ರಪಂಚದ ಅನೇಕ ಪ್ರಾಣಿಸಂಗ್ರಹಾಲಯಗಳಲ್ಲಿ ಇವನ್ನು ಯಶಸ್ವಿಯಾಗಿ ಸಾಕುತ್ತಿದ್ದಾರೆ. ಅಲ್ಲಿ ಇವು ಮರಿಗಳನ್ನೂ ಹಾಕುತ್ತಿವೆ. ಹೆಣ್ಣು ಒಕಾಪಿ ಪ್ರತಿ 40 ದಿವಸಗಳಿಗೊಮ್ಮೆ ಬೆದೆಗೆ ಬರುತ್ತದೆ. 425 ದಿನಗಳ ಗರ್ಭವಾಸದ ಅನಂತರ ಮರಿ ಹುಟ್ಟುತ್ತದೆ. ತಾಯಿ ಅದನ್ನು 3–4 ತಿಂಗಳ ತನಕ ಹಾಲೂಡಿ ಸಾಕುತ್ತದೆ. (ಎ.)

**ಒಕ್ಕಲಿಗರ ಪತ್ರಿಕೆ:** 1906ರಲ್ಲಿ ಬೆಂಗಳೂರಿನಲ್ಲಿ ಸ್ಥಾಪಿತವಾದ ಒಕ್ಕಲಿಗರ ಸಂಘದ ಮುಖಪತ್ರ. ಸಂಘದ ಧ್ಯೇಯೋದ್ದೇಶಗಳನ್ನು ಸಾಧಿಸಲು ಸಹಾಯಕವಾಗುವಂತೆ ಅದರ ಆಶ್ರಯದಲ್ಲಿ 1907ರ ಮಾರ್ಚ್ 15ರಂದು ಶುಕ್ರವಾರ ಈ ಪತ್ರಿಕೆಯ ಪ್ರಕಟನೆ ಆರಂಭವಾಯಿತು. ಆಗ ಬೆಂಗಳೂರಿನಲ್ಲಿ ಗಣ್ಯ ಅಡ್ವೊಕೇಟರಾಗಿದ್ದ ಸಿ. ಲಕ್ಷ್ಮಣಗೌಡ ಈ ಪತ್ರಿಕೆಯ ಪ್ರಥಮ ಸಂಪಾದಕರು. ಮೊದಲನೆಯ ಸಂಚಿಕೆಯ ಸಂಪಾದಕೀಯದಲ್ಲಿ ಈ ಪತ್ರಿಕೆಯ ಧ್ಯೇಯಧೋರಣೆಗಳನ್ನು ಕುರಿತು ಪ್ರಸ್ತಾಪಿಸುತ್ತ, ವರ್ತಮಾನಪತ್ರಿಕೆಗಳು ಯಾವ ದೇಶದಲ್ಲಿ ಹೆಚ್ಚುತ್ತ ಬರುತ್ತವೋ ಆ ದೇಶ ನವನಾಗರಿಕತೆಯಲ್ಲಿ ಉನ್ನತಸ್ಥಿತಿಗೆ ಬರುತ್ತಿರುವುದು ನಿಜ ಅಭಿಪ್ರಾಯ ಸೂಚಿಸಿ, ಜಪಾನ್ ದೇಶದಲ್ಲಿ ವೃತ್ತಪತ್ರಿಕೆಗಳು ದಿನದಿನಕ್ಕೆ ಹೆಚ್ಚಾದ ಕಾರಣ ಕೇವಲ 50 ವರ್ಷಗಳೊಳಗಾಗಿ ಜಪಾನ್ ದೇಶೀಯರು ಪ್ರಪಂಚದ ಪ್ರಮುಖ ದೇಶೀಯರೊಳಗೆ ತಾವೂ ಪ್ರಮುಖರಾಗಿ ಪ್ರಖ್ಯಾತಿ ಪಡೆದಿರುತ್ತಾರೆ ಎಂದು ಅವರು ವಾದಿಸಿದ್ದಾರೆ. ಮುಂದುವರಿಯುತ್ತ ಅವರು ಯಾವ ಜನರ ಕ್ಷೇಮವನ್ನು ಈ ಪತ್ರಿಕೆ ಮುಖ್ಯವಾಗಿ ಉದ್ದೇಶಿಸಿರುವುದೋ ಅವರ ಪುರೋಭಿವೃದ್ಧಿಯಿಂದ ದೇಶಕ್ಕೆ ಔನತ್ಯವುಂಟಾಗುವುದರಲ್ಲಿ ಸಂದೇಹವಿಲ್ಲ ಎಂದು ಹೇಳಿ, ಪಂಡಿತ–ಪಾಮರರು, ಹಳ್ಳಿಗರು–ಪಟ್ಟಣಿಗರ ಮಧ್ಯೆ ಅನ್ಯೋನ್ಯತೆ ಬೆಳೆಯುವುದು ದೇಶದ ಅಭಿವೃದ್ಧಿಗೆ ಅತ್ಯಂತ ಸಹಕಾರಿಯಾಗುವುದೆಂಬ ವಿಷಯ ಪ್ರಸ್ತಾಪಿಸಿ, ದೇಶೋನ್ನತಿ ಕಾರಣಭೂತವಾದ ಏರ್ಪಾಡುಗಳನ್ನು ಮಾಡಿಕೊಳ್ಳಬೇಕಾದರೆ ಇಂಥ ಅನ್ಯೋನ್ಯತೆ ಅತ್ಯಾವಶ್ಯಕವಾಗಿರುತ್ತದೆಂದು ಹೇಳಿ, ಐಕಮತ್ಯಕ್ಕೆ ನ್ಯೂನತೆ ಉಂಟಾಗದಂತೆ ಪ್ರಯತ್ನ ಪಡಬೇಕೆಂಬುವುದು ತಮ್ಮ ಉದ್ದೇಶವಾಗಿರುತ್ತದೆಂದು ಘೋಷಿಸಿ ಈ ತಮ್ಮ ಪ್ರಯತ್ನದಲ್ಲಿ "ಸರ್ವರೂ ಚೈತನ್ಯ ಕೊಟ್ಟು ಇದನ್ನು ಅಭಿವೃದ್ಧಿಪಡಿಸತಕ್ಕ ರೀತಿಗಳನ್ನು ತೋರಿಸಿಕೊಡುತ್ತ ಬರುವರೆಂದು ದೃಢವಾಗಿ ನಂಬಿದ್ದೇವೆ" ಎಂಬ ಆಶಯವನ್ನು ವ್ಯಕ್ತಪಡಿಸಿದ್ದಾರೆ.

ಒಕ್ಕಲಿಗರ ಪತ್ರಿಕೆ.

ಈ ಪತ್ರಿಕೆಯಲ್ಲಿ ಅನೇಕ ವಿಷಯಗಳನ್ನು ಕುರಿತು ಬಗೆಬಗೆಯ ಉತ್ತಮ ಲೇಖನಗಳಲ್ಲದೆ ಒಳದೇಶದ ವೃತ್ತಾಂತ, ವರ್ತಮಾನ ಸಂಗ್ರಹ, ಮೈಸೂರು ಗೆಜೆಟ್, ಇಂಡಿಯ ದೇಶದ ವೃತ್ತಾಂತ, ಸರ್ಕಾರಿ ಹುಕುಂಗಳು—ಎಂಬ ಶಿರೋನಾಮೆಗಳಲ್ಲಿ ಎಲ್ಲ ಕಡೆಗಳ ಮುಖ್ಯ ವಾರ್ತೆಗಳು ಪ್ರಕಟವಾಗುತ್ತಿದ್ದುವು. ಮೊದಲನೆಯ ಸಂಚಿಕೆಯಲ್ಲಿ ಪ್ರಕಟವಾದ ದವಸದ ಬ್ಯಾಂಕುಗಳು ಎಂಬ ಲೇಖನದ ಒಂದು ವಾಕ್ಯ ಹೀಗಿದೆ: ಗ್ರಾಮಸ್ಥರಿಗೆ ಸಾಧ್ಯವಾದ ಮಟ್ಟಿಗೂ ಬ್ಯಾಂಕುಗಳಿಂದಾಗುವ ಪ್ರಯೋಜನಗಳನ್ನು ಹೇಳಿ, ಅವರನ್ನು ಪರಸ್ಪರ ಸಹಾಯಕರನ್ನಾಗಿ ಮಾಡಿ, ಹಣಕ್ಕೆ ಬದಲಾಗಿ ದವಸವನ್ನು ಬಂಡವಾಳಕ್ಕೆ ಕೊಡುವಂತೆ ಬೋಧಿಸಿದರೆ ಸಾರ್ಥಕವಾಗುತ್ತದೆಂದು ತಿಳಿದು ನಮ್ಮ ಘನ ಸರ್ಕಾರದವರು ಗ್ರಾಮಗಳಲ್ಲಿ ದವಸದ ಬ್ಯಾಂಕುಗಳನ್ನು ಏರ್ಪಡಿಸುತ್ತಿದ್ದಾರೆ. ಸರಳ ನೇರ ನಿರೂಪಣೆ, ವಸ್ತುನಿಷ್ಠಾತ್ಮಕ ವಿವೇಚನೆ, ಸಾಮಾನ್ಯನ ಹಿತದೃಷ್ಟಿಯ ಪ್ರತಿಪಾದನೆ—ಇವುಗಳಿಗೆ ಈ ಪತ್ರಿಕೆಯ ಲೇಖನಗಳು ಹೆಸರಾಗಿವೆ. ಅನೇಕ ಎಡರುತೊಡರುಗಳನ್ನು ಎದುರಿಸಿಯೂ ನಿಲ್ಲದೆ ಪ್ರಕಟವಾಗುತ್ತಿರುವ ಕನ್ನಡ ಪತ್ರಿಕೆಯಿದು. (ಎಚ್.ಕೆ.ವಿ.)

**ಒಕ್ಕಲುತನ:** ಭೂಮಾಲೀಕರಿಗೂ ಅವರ ಭೂಮಿಯನ್ನು ಸಾಗುವಳಿ ಮಾಡುವ ಭೂರಹಿತ ರೈತರಿಗೂ ನಡುವಣ ಸಂಬಂಧವನ್ನು ಸೂಚಿಸುವ ಶಬ್ದ (ಟೆನನ್ಸಿ). ಭೂ ಹಿಡುವಳಿ, ಕೃಷಿ ಎಂಬ ಅರ್ಥಗಳಲ್ಲೂ ಈ ಶಬ್ದವನ್ನು ಪರ್ಯಾಯವಾಗಿ ಬಳಸಲಾಗುತ್ತಿದೆ. ಪ್ರಪಂಚದ ಸುಮಾರು ಐದನೆಯ ಮೂರರಷ್ಟು ಜನಕ್ಕೆ ವ್ಯವಸಾಯವೇ ಜೀವನಾಧಾರ. ಇವರಲ್ಲಿ ಬಹುಸಂಖ್ಯಾತರು ಜಮೀನಿನ ಒಡೆಯರಲ್ಲ. ಇವರು ಭೂಮಾಲೀಕರಿಂದ ಸಾಗುವಳಿ ಮಾಡುವ ಹಕ್ಕು ಪಡೆದಂಥವರು. ಇದನ್ನು ಪಡೆಯಲು ಇವರು ಭೂಮಾಲೀಕರಿಗೊ ಅವರ ಮಧ್ಯವರ್ತಿಗಳಿಗೊ ಉತ್ಪನ್ನದ ಒಂದು ಭಾಗವನ್ನೊ ಒಂದು ನಿರ್ದಿಷ್ಟ ಪ್ರಮಾಣದ ಹಣವನ್ನೊ ಸೇವೆಯನ್ನೊ ಸಲ್ಲಿಸುತ್ತಾರೆ. ಈ ಕಟ್ಟುಪಾಡಿನಂತೆ ಸಾಗುವಳಿ ಮಾಡುವುದೇ ಒಕ್ಕಲು ಪದ್ಧತಿ. ಜಮೀನುದಾರನಿಂದ ಸಾಗುವಳಿ ಹಕ್ಕನ್ನು ಪ್ರತಿಫಲ ಕೊಟ್ಟು ಪಡೆಯುವಾತನೆ ಒಕ್ಕಲು.

ಎಲ್ಲಿಯ ವರೆಗೆ ಜಮೀನಿನ ಹಂಚಿಕೆಯಲ್ಲಿ ಅಸಮಾನತೆ ಇರುತ್ತದೆಯೊ ಅಲ್ಲಿಯ ವರೆಗೆ ಒಕ್ಕಲುತನ ಇದ್ದೇ ಇರುತ್ತದೆ. ಹೀಗಾಗಿ ಒಕ್ಕಲುತನದಿಂದ ಜೀವಿಸುವವರ ಪ್ರಮಾಣ ಅನೇಕ ದೇಶಗಳಲ್ಲಿ ಸಾಕಷ್ಟು ಇದೆ. ಉದಾಹರಣೆಗೆ, ವ್ಯವಸಾಯವನ್ನೇ ಜೀವನಾಧಾರವಾಗಿಟ್ಟುಕೊಂಡಿರುವವರಲ್ಲಿ ಒಕ್ಕಲುಗಳ ಸೇಕಡಾ ಪ್ರಮಾಣ ಇಂಗ್ಲೆಂಡಿನಲ್ಲಿ 65, ಸ್ಕಾಟ್ಲೆಂಡಿನಲ್ಲಿ 77 ಮತ್ತು ಅಮೆರಿಕ ಸಂಯುಕ್ತಸಂಸ್ಥಾನದಲ್ಲಿ 20ಕ್ಕಿಂತ ಅಧಿಕ. ಭಾರತದಲ್ಲಿ ಮೊದಲನೆಯ ಪಂಚವಾರ್ಷಿಕ ಯೋಜನೆಯ ಉದ್ಘಾಟನೆಯ ಹೊತ್ತಿಗೆ 40%ರಷ್ಟು ಸಾಗುವಳಿ ಜಮೀನು ಮಧ್ಯವರ್ತಿ ಹಿಡುವಳಿ ಪದ್ಧತಿಯಲ್ಲೂ ಉಳಿದ ಜಮೀನು ರೈತವಾರಿ ಹಿಡುವಳಿ ಪದ್ಧತಿಯಲ್ಲೂ ಇತ್ತು. ಇದರ ಬಹುಪಾಲಿನ ಜಮೀನನ್ನು ಒಕ್ಕಲು ಪದ್ಧತಿಯಲ್ಲಿ ಸಾಗುವಳಿ ಮಾಡಲಾಗುತ್ತಿತ್ತು.

ಒಕ್ಕಲುತನದಿಂದ ಭೂಮಾಲೀಕನೂ ಒಕ್ಕಲೂ ಒಬ್ಬರಿಗೊಬ್ಬರು ಪೂರಕವಾಗಿ ಕೆಲಸ ಮಾಡಿ ತಮ್ಮ ಆರ್ಥಿಕ ಸ್ಥಿತಿಯನ್ನು ಉತ್ತಮಗೊಳಿಸಿಕೊಳ್ಳುವ ಅವಕಾಶ ಏರ್ಪಡುತ್ತದೆ. ಹೇಗೆಂದರೆ, ಬಂಡವಾಳ ಮತ್ತು ಕಾರ್ಯನಿರ್ವಾಹಕ ಸಾಮರ್ಥ್ಯವನ್ನು [illegible] [illegible] ಒದಗಿಸಬಹುದು. ಶ್ರಮವನ್ನೂ ನಿಷ್ಠೆಯನ್ನೂ

ತನಗೆ ಶಕ್ತಿಯಿದ್ದಷ್ಟು ಬಂಡವಾಳವನ್ನೂ ಒಕ್ಕಲು ಒದಗಿಸಬಹುದು. ಹೀಗಾಗಿ, ಇಬ್ಬರ ಸಹಕಾರದಿಂದಲೂ ವ್ಯವಸಾಯದ ಕಾರ್ಯನಿರ್ವಹಣೆ ಅತಿ ದಕ್ಷತೆಯಿಂದ ನಡೆಯುವ ಸಾಧ್ಯತೆಯಿರುತ್ತದೆ. ಆದರೆ ವಾಸ್ತವವಾಗಿ ನೋಡಿದರೆ ಈ ಪದ್ಧತಿಯ ಕೆಲವು ಅಂಶಗಳು ಸಾಗುವಳಿಯ ದಕ್ಷತೆಯನ್ನು ಕಡಿಮೆಗೊಳಿಸುವುದಕ್ಕೆ ಕಾರಣವಾಗಿವೆ. ಇವುಗಳಲ್ಲಿ ಮುಖ್ಯವಾದವು ಇವು :

1 ಈ ಪದ್ಧತಿಯಲ್ಲಿ ಜಮೀನಿನ ಒಡೆತನವೂ ಸಾಗುವಳಿ ಕಾರ್ಯವೂ ಬೇರ್ಪಟ್ಟಿರುವ ಕಾರಣ ಸಾಗುವಳಿ ದಕ್ಷತೆಯಿಂದ ನಡೆಯುವುದು ಸಂದೇಹಾಸ್ಪದ. ಜಮೀನಿನ ಒಡೆತನ ತನ್ನದಲ್ಲದ ಕಾರಣ ಒಕ್ಕಲಿಗೆ ಸಾಗುವಳಿಯ ವಿಷಯದಲ್ಲಿ ಅಧಿಕ ಪ್ರಮಾಣದ ಸ್ವಯಂ ಆಸ್ಥೆ ಇರುವುದಿಲ್ಲ. 2 ಒಕ್ಕಲುತನದ ಭದ್ರತೆ ನಿಶ್ಚಿತವಾದದ್ದಲ್ಲ. ಭೂಮಾಲೀಕ ಯಾವಾಗ ಬೇಕಾದರೂ ಒಕ್ಕಲನ್ನು ಜಮೀನಿನಿಂದ ಉಚ್ಚಾಟಿಸಬಹುದು. ಈ ಭಯದ ಪರಿಣಾಮವಾಗಿ ಒಕ್ಕಲು ದಕ್ಷತೆಯಿಂದ ಕೆಲಸ ಮಾಡುವುದಕ್ಕೆ ಸಾಧ್ಯವಾಗುವುದಿಲ್ಲ. 3 ನೆಲ ತನ್ನದಲ್ಲವಾದ್ದರಿಂದ ಒಕ್ಕಲಿಗೆ ತನ್ನಲ್ಲಿರುವ ಬಂಡವಾಳವನ್ನು ಜಮೀನಿನ ಅಭಿವೃದ್ಧಿಗಾಗಿ ಹೂಡುವ ಪ್ರೇರಣೆ ಇರುವುದಿಲ್ಲ. ಆತ ಒಂದು ವೇಳೆ ಬಂಡವಾಳವನ್ನು ಹೂಡಿದರೂ ನೆಲದೊಡೆಯನಿಂದ ಇದಕ್ಕೆ ತಕ್ಕ ಪರಿಹಾರ ಸಿಗದಿರಬಹುದು. 4 ಆರ್ಥಿಕ ದೃಷ್ಟಿಯಿಂದ ಜಮೀನಿನ ಒಡೆಯ ಅನುಕೂಲಸ್ಥನಾಗಿರುವ ಕಾರಣ ಒಕ್ಕಲಿನಿಂದ ಅಧಿಕ ಪ್ರಮಾಣದ ಗೇಣಿಯನ್ನು ಕಸಿದುಕೊಳ್ಳುತ್ತಾನೆ. ಈ ಕಾರಣದಿಂದ ಒಕ್ಕಲಿನಲ್ಲಿ ಹೆಚ್ಚಾಗಿ ಶ್ರಮವಹಿಸುವ ಪ್ರೇರಣೆ ಇಲ್ಲದಾಗುತ್ತದೆ. 5 ಒಕ್ಕಲಿನ ಬಂಡವಾಳವಿರಳತೆಯ ಕಾರಣ ಸಾಗುವಳಿ ವಿಧಾನ ಉತ್ತಮಗೊಳ್ಳುವ ಸಾಧ್ಯತೆ ಇಲ್ಲ. ತಾನು ಸಾಗುವಳಿ ಮಾಡುವ ಜಮೀನನ್ನು ಕೊಂಡುಕೊಳ್ಳಲು ಅಶಕ್ತನಾದ್ದರಿಂದ ಆತ ಎಂದೆಂದಿಗೂ ಒಕ್ಕಲಾಗಿಯೇ ಉಳಿಯುವ ಸಂಭವ ಹೆಚ್ಚು.

ಒಕ್ಕಲುತನದ ಸ್ಥಿತಿಯನ್ನು ಉತ್ತಮಪಡಿಸಲು ಕೈಗೊಳ್ಳುವ ಯಾವುದೇ ಸುಧಾರಣೆಯಾಗಲಿ ಅದು ಒಂದು ಮುಖ್ಯವಾದ ಧ್ಯೇಯವನ್ನು ಸಾಧಿಸುವಂಥದಾಗಿರಬೇಕು. ಅದೇನೆಂದರೆ, ಒಕ್ಕಲಿನಲ್ಲಿ ಅಧಿಕ ಉತ್ಪನ್ನ ಮಾಡುವ ಪ್ರೇರಣೆಯನ್ನು ಉತ್ತೇಜನಗೊಳಿಸುವುದು. ಈ ಧ್ಯೇಯ ಸಾಧಿಸುವಂಥ ಎರಡು ಬಗೆಯ ಸುಧಾರಣೆಗಳನ್ನು ಇಲ್ಲಿ ಪ್ರಸ್ತಾಪಿಸಬಹುದು : ಜಪಾನ್, ಅಮೆರಿಕ ಸಂಯುಕ್ತಸಂಸ್ಥಾನ ಮತ್ತು ಡೆನ್ಮಾರ್ಕ್‌ಗಳಲ್ಲಿನ ಹಾಗೆ ಕಾಲಕ್ರಮದಲ್ಲಿ ಒಕ್ಕಲೇ ತಾನು ಸಾಗುವಳಿ ಮಾಡುವ ಜಮೀನಿನ ಮಾಲೀಕ ಆಗುವಂಥ ಧೋರಣೆಗಳನ್ನು ಜಾರಿಗೆ ತರತಕ್ಕದ್ದು ಒಂದು ಬಗೆ. ಇಂಗ್ಲೆಂಡ್ ಹಾಗೂ ಭಾರತದಲ್ಲಿ ಕೈಗೊಂಡಿರುವಂತೆ ಒಕ್ಕಲು ಪದ್ಧತಿಯನ್ನೇ ಉತ್ತಮಪಡಿಸುವಂಥ ಸುಧಾರಣೆ ಇನ್ನೊಂದು ಬಗೆ. ಇಲ್ಲಿ ಒಕ್ಕಲಿಗೆ ಕಾಯಿದೆಯ ಮೂಲಕ ಒಡೆತನದ ಹಕ್ಕನ್ನೂ ಒಕ್ಕಲುತನದ ಭದ್ರತೆಯನ್ನೂ ಗೇಣಿಯ ಇಳಿತಗಳನ್ನೂ ಮಂಜೂರು ಮಾಡುವ ಪ್ರಯತ್ನ ಸಾಗಿದೆ.

**ಭಾರತದಲ್ಲಿ :** ಭಾರತದಲ್ಲಿ ಒಕ್ಕಲುತನ ಸುಧಾರಣೆಯ ಧ್ಯೇಯಗಳೆರಡು : 1 ಭೂಸ್ವಾಮ್ಯ ವ್ಯವಸ್ಥೆಯಲ್ಲಿ ಅಡಕವಾಗಿರುವ ಅಡಚಣೆಗಳ ನಿರ್ಮೂಲ. 2 ಭೂಸ್ವಾಮ್ಯಸಂಬಂಧ ಅರ್ಥವ್ಯವಸ್ಥೆಯಲ್ಲಿ ನಡೆಯುವ ಅನ್ಯಾಯವನ್ನು ಪರಿಹರಿಸುವುದು. ಇವನ್ನು ಸಾಧಿಸುವ ಸಲುವಾಗಿ ಗೇಣಿ ಪಡೆಯುವ ಮಧ್ಯವರ್ತಿಗಳನ್ನು ನಿವಾರಿಸುವ ಮತ್ತು ಒಕ್ಕಲುತನವನ್ನು ಸುಧಾರಿಸುವ ಸುಧಾರಣೆಗಳನ್ನು ಕೈಗೊಳ್ಳಲಾಗಿದೆ.

ಪ್ರಥಮ ಪಂಚವಾರ್ಷಿಕ ಯೋಜನೆಯ ಉದ್ಘಾಟನೆಯಾದಾಗಿನಿಂದ ರಾಜ್ಯ ಸರ್ಕಾರಗಳು ಕಾನೂನಿನ ಮೂಲಕ ಜಮೀನ್ದಾರರು, ಜಹಗೀರುದಾರರು ಹಾಗೂ ಇನಾಂದಾರರು—ಇಂಥ ಮಧ್ಯವರ್ತಿಗಳ ನಿವಾರಣೆಯ ಕಾರ್ಯಕ್ರಮದಲ್ಲಿ ತೊಡಗಿದ್ದು ಈ ಕಾರ್ಯ ಈಗ ಪೂರ್ಣವಾಗಿದೆ. ಇವರು ಸರ್ಕಾರಕ್ಕೆ ಒಂದು ನಿರ್ದಿಷ್ಟವಾದ ಸಲಿಕೆಯನ್ನು ಕೊಟ್ಟು ಜಮೀನಿನ ಒಡೆತನದ ಹಕ್ಕನ್ನು ಪಡೆದವರು. ಇವರು ಅಧಿಕ ಪ್ರಮಾಣದ ಗೇಣಿಯ ರೂಪದ ಪ್ರತಿಫಲಕ್ಕೆ ಜಮೀನಿನ ಸಾಗುವಳಿಯ ಹಕ್ಕನ್ನು ಒಕ್ಕಲಿಗೆ ಕೊಟ್ಟಿದ್ದರು. ಹೀಗಾಗಿ ರೈತರು ಮಧ್ಯವರ್ತಿಗಳೊಡನೆ ಸಂಬಂಧವನ್ನಿಟ್ಟುಕೊಂಡಿದ್ದರು. ಈ ಸುಧಾರಣೆಯಿಂದ ಸುಮಾರು ಎರಡು ಕೋಟಿ ರೈತರು ಈಗ ಸರ್ಕಾರದೊಡನೆ ನೇರ ಸಂಬಂಧವನ್ನು ಕಲ್ಪಿಸಿಕೊಂಡಿದ್ದಾರೆ. ಎಂದರೆ ಇವರು ನ್ಯಾಯಸಮ್ಮತವಾದ ಗೇಣಿಯನ್ನು ನೇರವಾಗಿ ಸರ್ಕಾರಕ್ಕೆ ಸಲ್ಲಿಸಿ ಜಮೀನನ್ನು ಸಾಗುವಳಿ ಮಾಡುತ್ತಿದ್ದಾರೆ.

ಮಧ್ಯವರ್ತಿಗಳ ನಿವಾರಣೆಯಿಂದ ರೈತರ ಸಮಸ್ಯೆಗಳು ಪರಿಹಾರವಾದಂತಾಗಲಿಲ್ಲ. ರೈತವಾರಿ ಪ್ರದೇಶದಲ್ಲಿ ಸ್ವತಃ ವ್ಯವಸಾಯ ಮಾಡದ ಸಣ್ಣಪುಟ್ಟ ಭೂಮಾಲೀಕರೊಡನೆ ನೇರ ಸಂಬಂಧವಿಟ್ಟಿರುವ ರೈತರು ಗೇಣಿ, ಒಕ್ಕಲುತನ ಭದ್ರತೆ ಹಾಗೂ ಒಡೆತನದ ಹಕ್ಕಿಗೆ ಸಂಬಂಧಪಟ್ಟ ಸಮಸ್ಯೆಗಳನ್ನು ಎದುರಿಸಲೇಬೇಕಿತ್ತು. ಇವನ್ನು ಪರಿಹರಿಸುವ ದೃಷ್ಟಿಯಿಂದ ಪ್ರತಿ ರಾಜ್ಯ ಸರ್ಕಾರವೂ ಒಕ್ಕಲು ಪದ್ಧತಿಯನ್ನು ಉತ್ತಮಗೊಳಿಸುವ ಕಾಯಿದೆ ಮಾಡಿದೆ.

ರಾಜ್ಯಸರ್ಕಾರಗಳ ಕಾಯಿದೆಗಳ ಪೂರ್ವದಲ್ಲಿ ಒಕ್ಕಲುಗಳು ಉತ್ಪನ್ನದ ಅರ್ಧ ಭಾಗಕ್ಕಿಂತ ಅಧಿಕ ಪ್ರಮಾಣವನ್ನು ಗೇಣಿಯಾಗಿ ಕೊಡುತ್ತಿದ್ದರು. ಇದರ ಜೊತೆಗೆ ಅವರು ಅನೇಕ ಸಲಿಕೆಗಳನ್ನು ಕೊಡುತ್ತಿದ್ದರು. ಈ ಪ್ರಮಾಣದ ಗೇಣಿ ನ್ಯಾಯಸಮ್ಮತವಾದುದಲ್ಲವೆಂದೂ ಗೇಣಿ ಉತ್ಪನ್ನದ $\frac{1}{4}$ ಇಲ್ಲವೆ $\frac{1}{5}$ ಭಾಗವಷ್ಟಿರಬೇಕೆಂದೂ ಪ್ರಥಮ ಯೋಜನೆ ಅಭಿಪ್ರಾಯಪಟ್ಟಿತು. ಅಲ್ಲಿಂದೀಚೆಗೆ ರಾಜ್ಯ ಸರ್ಕಾರಗಳು ಕಾಯಿದೆಯ ಮೂಲಕ ಗೇಣಿಯ ಪ್ರಮಾಣವನ್ನು ನಿರ್ಧರಿಸಿವೆ. ಗುಜರಾತ್, ಮಹಾರಾಷ್ಟ್ರ ಮತ್ತು ರಾಜಾಸ್ಥಾನಗಳಲ್ಲಿ ಗೇಣಿಯ ಪ್ರಮಾಣ ಗರಿಷ್ಠವಾಗಿ ಉತ್ಪನ್ನದ $\frac{1}{6}$ರಷ್ಟಿರಬೇಕೆಂದೂ ಅಸ್ಸಾಂ, ಕೇರಳ, ಒರಿಸ್ಸ ಮತ್ತು ಕೇಂದ್ರದ ಆಡಳಿತಕ್ಕೊಳಪಟ್ಟ ಪ್ರದೇಶಗಳಲ್ಲಿ $\frac{1}{4}$ ಭಾಗ ಇಲ್ಲವೆ ಕಡಿಮೆಯಾಗಿರಬೇಕೆಂದೂ ಇನ್ನು ಕೆಲವು ರಾಜಗ್ಯಳಲ್ಲಿ $\frac{1}{3}$ರಷ್ಟು ಎಂದೂ ನಿರ್ಧಾರ ಮಾಡಲಾಗಿದೆ.

ಉಚ್ಚಾಟನೆಯನ್ನು ತಡೆಗಟ್ಟಲು ಜಾರಿಗೆ ತಂದ ಕಾಯಿದೆಗಳು ಒಕ್ಕಲುತನದ ಭದ್ರತೆಯನ್ನು ನಿಶ್ಚಿತಪಡಿಸುವ ಧ್ಯೇಯವನ್ನಿಟ್ಟುಕೊಂಡಂಥವು. ಈ ಎಲ್ಲ ಕಾಯಿದೆಗಳಲ್ಲೂ ಕಂಡುಬರುವ ಮೂರು ಮುಖ್ಯ ಕಟ್ಟುಪಾಡುಗಳು ಇವು : 1 ಉಚ್ಚಾಟನೆ ಕಾನೂನಿನ ರೀತಿಯಲ್ಲಿ ಮಾತ್ರ ನಡೆಯತಕ್ಕದ್ದು. 2 ಸ್ವತಃ ಸಾಗುವಳಿ ಮಾಡುವ ಕಾರಣದಿಂದ ಮಾತ್ರ ಜಮೀನಿನ ಮಾಲೀಕ ಭೂಮಿಯನ್ನು ಒಕ್ಕಲಿನಿಂದ ಹಿಂದಕ್ಕೆ ಪಡೆಯಬಹುದು. 3 ಅಂಥ ಸಂದರ್ಭಗಳಲ್ಲಿ ಒಕ್ಕಲಿಗೆ ಕನಿಷ್ಠ ಪ್ರಮಾಣದ ನೆಲವನ್ನು ಗೇಣಿಯ ಆಧಾರದ ಮೇಲೆ ಸಾಗುವಳಿಗೆ ಬಿಟ್ಟುಕೊಡಬೇಕು. ಉತ್ತರ ಪ್ರದೇಶ, ದೆಹಲಿ ಮತ್ತು ಪಶ್ಚಿಮ ಬಂಗಾಳಗಳಲ್ಲಿ ಒಕ್ಕಲಿನಿಂದ ಜಮೀನನ್ನು ಹಿಂದಕ್ಕೆ ಪಡೆಯುವ ಅವಕಾಶವಿಲ್ಲ. ಬಿಹಾರ, ಗುಜರಾತ್, ಕೇರಳ, ಮಧ್ಯಪ್ರದೇಶ, ಮಹಾರಾಷ್ಟ್ರ, ಮೈಸೂರು, ಒರಿಸ್ಸ. ರಾಜಾಸ್ಥಾನ ಮತ್ತು ಮಣಿಪುರಗಳಲ್ಲಿ ಈ ಅನುಕೂಲವಿದೆ. ಆದರೆ ಅದು ಒಂದು ಕರಾರಿನ ಮೇಲೆ. ಅದೇನೆಂದರೆ, ಜಮೀನನ್ನು ಹಿಂದಕ್ಕೆ ಪಡೆಯಬೇಕಾದ ಸಂದರ್ಭದಲ್ಲಿ ಒಕ್ಕಲಿಗೆ ಜಮೀನಿನ ಒಂದು ಭಾಗವನ್ನು ಸಾಗುವಳಿಗಾಗಿ ಬಿಟ್ಟುಕೊಡಬೇಕು.

ಒಕ್ಕಲುತನದ ಭದ್ರತೆ ಹಾಗೂ ಗೇಣಿ ಇಳಿತ—ಇವು ಒಕ್ಕಲುತನ ಸುಧಾರಣೆಯ ಮೊದಲ ಹಂತ. ಇದರ ಮುಖ್ಯ ಧ್ಯೇಯ ಭೂಮಿಯ ಒಡೆತನದ ಹಕ್ಕನ್ನು ಆದಷ್ಟು ಮಂದಿ ಒಕ್ಕಲುಗಳಿಗೆ ಕೊಡಿಸುವಂಥದು. ಮಾಲೀಕರೆ ಹಿಂದಕ್ಕೆ ಪಡೆದು ಸಾಗುವಳಿ ಮಾಡುವ ಸಾಧ್ಯತೆ ಇಲ್ಲದಿರುವ ಜಮೀನನ್ನು ಸಾಗುವಳಿದಾರನೇ ಕೊಂಡುಕೊಳ್ಳಬಹುದಾಗಿದ್ದೂ ಆತ ಈ ಅವಕಾಶವನ್ನು ಬಳಸಿಕೊಳ್ಳದಿರುವುದರ ಕಾರಣ, ಸರ್ಕಾರವೇ ಇಂಥ ಜಮೀನನ್ನು ವಶಪಡಿಸಿಕೊಂಡು 'ಅನಂತರ ಒಕ್ಕಲುಗಳೊಡನೆ ನೇರ ಸಂಬಂಧ ಕಲ್ಪಿಸುವಂತೆ ಎರಡನೆಯ ಯೋಜನೆ ಸಲಹೆ ನೀಡಿತು. ಆ ಅವಧಿಯಲ್ಲಿ ಈ ದಿಕ್ಕಿನತ್ತ ಸ್ವಲ್ಪಮಟ್ಟಿನ ಪ್ರಗತಿ ಕಂಡಿತು. ಗುಜರಾತ್, ಮಹಾರಾಷ್ಟ್ರ, ಮಧ್ಯಪ್ರದೇಶ ಮತ್ತು ರಾಜಾಸ್ಥಾನಗಳಲ್ಲಿ ಅಂಥ ಜಮೀನಿನ ಸಾಗುವಳಿದಾರನೆ ಒಡೆಯನೆಂದು ಪ್ರಸಿದ್ಧಿಪಡಿಸಿ ಅವನೇ ಹಳೆಯ ಮಾಲೀಕನಿಗೆ ಪರಿಹಾರಧನ ಕೊಡುವಂತೆ ಕಾಯಿದೆ ಮಾಡಲಾಯಿತು. ದೆಹಲಿ ಮತ್ತು ಪಶ್ಚಿಮ ಬಂಗಾಳಗಳಲ್ಲಿ ಸರ್ಕಾರವೇ ಪರಿಹಾರ ಕೊಟ್ಟು ಭೂಮಿಯ ಮಾಲೀಕರಿಂದ ಒಡೆತನದ ಹಕ್ಕನ್ನು ಪಡೆದುಕೊಂಡು ಸಾಗುವಳಿದಾರರಿಗೆ ಭೂಮಿಯನ್ನು ವಹಿಸಿಕೊಡುವಂತೆಯೂ ಅವರಿಂದ ಪರಿಹಾರಧನವನ್ನು ತಾನೇ ಕಂತುಗಳಲ್ಲಿ ವಸೂಲಿ ಮಾಡಿಕೊಳ್ಳುವಂತೆಯೂ ಕಾಯಿದೆ ಮಾಡಲಾಗಿದೆ. ಕೇರಳ ಮತ್ತು ಉತ್ತರ ಪ್ರದೇಶಗಳಲ್ಲಿ ಸರ್ಕಾರ ಮಾಲೀಕರಿಂದ ಜಮೀನಿನ ಒಡೆತನದ ಹಕ್ಕನ್ನು ಪಡೆದುಕೊಂಡಿದೆ. ಇಲ್ಲಿ ರೈತರು ನ್ಯಾಯಸಮ್ಮತವಾದ ಗೇಣಿಯನ್ನು ಸರ್ಕಾರಕ್ಕೆ ಕೊಟ್ಟು ಜಮೀನನ್ನು ಸರ್ಕಾರಿ ಒಕ್ಕಲಿನಂತೆ ಸಾಗುವಳಿ ಮಾಡಬಹುದು. ಇಲ್ಲವೆ ಇವರು ಪರಿಹಾರದ್ರವ್ಯವನ್ನು ಕೊಟ್ಟು ಜಮೀನಿನ ಒಡೆತನವನ್ನು ಸರ್ಕಾರದಿಂದ ಪಡೆಯಬಹುದು. ಉಳಿದ ರಾಜ್ಯಗಳಲ್ಲಿ ಒಕ್ಕಲುಗಳೇ ಪರಿಹಾರದ್ರವ್ಯವನ್ನು ನೇರವಾಗಿ ಜಮೀನಿನ ಮಾಲೀಕರಿಗೆ ಕೊಟ್ಟು ಒಡೆತನದ ಹಕ್ಕನ್ನು ಪಡೆದುಕೊಳ್ಳುವಂತೆ ಅನುಕೂಲ ಮಾಡಿಕೊಡುವ ಕಾಯಿದೆಗಳನ್ನು ಮಾಡಲಾಗಿದೆ.

ಕಾಯಿದೆಯ ಮೂಲಕ ಸರ್ಕಾರ ಇಷ್ಟೆಲ್ಲ ಅನುಕೂಲಗಳನ್ನು ಮಾಡಿಕೊಟ್ಟಿದ್ದರೂ ಕಾರ್ಯರೂಪದಲ್ಲಿ ಒಕ್ಕಲಿನ ಪರಿಸ್ಥಿತಿ ಅಷ್ಟೇನೂ ಉತ್ತಮಗೊಂಡಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಮೊದಲನೆಯದಾಗಿ, ರೈತನಿಗೆ ಕಾಯಿದೆಯ ಕಟ್ಟುಪಾಡಿನ ಅರಿವಿಲ್ಲದ ಕಾರಣ ಆತ ಕಾಯಿದೆಯಿಂದ ಪ್ರಯೋಜನ ಪಡೆಯಲು ಪ್ರಯತ್ನಿಸುತ್ತಿಲ್ಲ. ಒಂದು ವೇಳೆ ಅಂಥ ಅರಿವಿದ್ದರೂ ಕಾಯಿದೆಯಿಂದ ಪ್ರಯೋಜನ ಪಡೆಯುವ ಪ್ರಯತ್ನ ಬಹಳ ವೆಚ್ಚ ತಗಲುವ ಕ್ರಮವೇ ಸರಿ. ಕೋರ್ಟು ಕಚೇರಿಗಳಿಗೆ ಓಡಾಡಲು ಬೀಳುವ ಖರ್ಚು ಅವನ ಸಾಮರ್ಥ್ಯಕ್ಕೆ ಮೀರಿದ್ದು. ಅಲ್ಲದೆ ಎಲ್ಲಿಯ ವರೆಗೆ ಜಮೀನಿನ ಮೇಲೆ ಒತ್ತಡವಿರುತ್ತದೆಯೊ ಅಲ್ಲಿಯ ವರೆಗೆ ಯಾವ ರೀತಿಯ ಕಾಯಿದೆಯೂ ಪರಿಣಾಮಕಾರಿಯಾಗುವುದಿಲ್ಲ. ಕಾಯಿದೆಯ ಕಟ್ಟುಪಾಡುಗಳಿಂದ

ತಪ್ಪಿಸಿಕೊಳ್ಳಲು ಅನೇಕ ಜಮೀನು ಮಾಲೀಕರು ತಮ್ಮ ಸಾಗುವಳಿದಾರರೊಂದಿಗೆ ಸುಳ್ಳು ಒಪ್ಪಂದಗಳನ್ನು ಮಾಡಿಸಿಕೊಂಡಿರುತ್ತಾರೆ. ತಮ್ಮ ಜೀವನಕ್ಕೆ ಜಮೀನೇ ಆಧಾರವಾದ್ದರಿಂದ ಸಾಗುವಳಿದಾರರು ಇಂಥ ಒಪ್ಪಂದಗಳಿಗೆ ಅನುಮತಿ ಕೊಡುವುದು ಸಹಜವೇ. ಉದಾಹರಣೆಗೆ, ಕಾಯಿದೆಯ ಕಟ್ಟುಪಾಡುಗಳಿಂದ ತಪ್ಪಿಸಿಕೊಳ್ಳುವ ದೃಷ್ಟಿಯಿಂದ ಅನೇಕ ಜಮೀನು ಮಾಲೀಕರು ತಮ್ಮ ಸಾಗುವಳಿದಾರರಿಂದ ಅವರು ಕೂಲಿಯಾಳುಗಳು ಮಾತ್ರ ಎಂಬುದಾಗಿ ಬರೆಸಿಕೊಳ್ಳುವುದುಂಟು. ಹಾಗೆಯೆ ಒಕ್ಕಲುತನದ ಭದ್ರತೆಯ ಕಟ್ಟುಪಾಡಿನಿಂದ ತಪ್ಪಿಸಿಕೊಳ್ಳಲು ಜಮೀನು ಮಾಲೀಕರು ಸಾಗುವಳಿದಾರರೊಂದಿಗೆ ಒಪ್ಪಂದಕ್ಕೆ ಬಂದು ಅವರೇ ಸ್ವಪ್ರೇರಣೆಯಿಂದ ಜಮೀನನ್ನು ಬಿಟ್ಟುಕೊಟ್ಟಂತೆ ಮಾಡಿ ಅಧಿಕ ಪ್ರಮಾಣದ ಉಚ್ಚಾಟನೆಗೆ ಕಾರಣರಾಗಿರುವುದೂ ಉಂಟು. ಇದನ್ನು ತಪ್ಪಿಸಲು ಎರಡನೆಯ ಯೋಜನೆ ಎರಡು ಸಲಹೆಗಳನ್ನು ನೀಡಿತು : 1 ಸ್ವಪ್ರೇರಣೆಯಿಂದ ಜಮೀನನ್ನು ಬಿಟ್ಟುಕೊಡುವ ಹಾಗಿದ್ದರೆ ರೆವೆನ್ಯು ಅಧಿಕಾರಿಯ ಮುಂದೆ ರಿಜಿಸ್ಟರ್ ಆಗದ ಹೊರತು ಅಂಥ ವ್ಯವಸ್ಥೆಯನ್ನು ಒಪ್ಪಕೂಡದು. 2 ಸ್ವಪ್ರೇರಣೆಯಿಂದ ಬಿಡಲಾದ ಜಮೀನಿನ ಬಗ್ಗೆ, ಮಾಲೀಕ ತಾನು ಹಿಂದಕ್ಕೆ ಪಡೆದುಕೊಳ್ಳಬಹುದಾದ ಹಕ್ಕು ಎಷ್ಟಿದೆಯೊ ಅಷ್ಟು ಮಾತ್ರ ಜಮೀನನ್ನು ಸ್ವಯಂ ಸಾಗುವಳಿಗೆ ಪಡೆದುಕೊಳ್ಳಬೇಕು. ಆದರೆ ಕಾಯಿದೆಗಳು ಈ ಸಲಹೆಗಳನ್ನು ಗಮನಕ್ಕೆ ತೆಗೆದುಕೊಂಡ ಹಾಗೆ ಕಾಣಲಿಲ್ಲ.

ಹೀಗಾಗಿ ಕಾನೂನಿನ ಪ್ರಯೋಜನಗಳು ಅನೇಕ ಸಾಗುವಳಿದಾರರಿಗೆ ಸಿಗುತ್ತಿಲ್ಲ. ಪ್ರಾಯಶಃ ಕಾಯಿದೆಗಳ ಕಟ್ಟುಪಾಡುಗಳನ್ನು ಸರ್ಕಾರ ದಕ್ಷತೆಯಿಂದ ಕಾರ್ಯರೂಪಕ್ಕೆ ತಂದರೆ ಒಕ್ಕಲುಗಳ ಸ್ಥಿತಿಗತಿಗಳು ಉತ್ತಮಗೊಳ್ಳಬಹುದು. ಒಕ್ಕಲುತನ ಸುಧಾರಣೆಯ ಕಟ್ಟುಪಾಡುಗಳನ್ನು ಕಾರ್ಯರೂಪಕ್ಕೆ ತಂದ ಪಕ್ಷದಲ್ಲಿ ರೈತರು ಅಧಿಕ ಉತ್ಪನ್ನ ಬೆಳೆಯಲು ಉತ್ತೇಜನ ನೀಡಬಹುದು. ಆದರೆ ಉತ್ಪಾದನೆಯನ್ನು ಅಧಿಕಗೊಳಿಸಲು ಒಕ್ಕಲುತನದ ಸಮಸ್ಯೆಗಳ ಪರಿಹಾರ ಒಂದು ಕ್ರಮ ಮಾತ್ರ. ಸಣ್ಣ ಪ್ರಮಾಣದ ಹಿಡುವಳಿಗಳು, ಸಾಗುವಳಿಗೆ ಬೇಕಾದ ಹಣಕಾಸಿನ ವಿರಳತೆ, ಸಾಂಪ್ರದಾಯಿಕ ಸಾಗುವಳಿ ವಿಧಾನಗಳು—ಇವು ಇದಕ್ಕೆ ಹೊಂದಿಕೊಂಡ ಇತರ ಸಮಸ್ಯೆಗಳು. ಈ ಎಲ್ಲ ಸಮಸ್ಯೆಗಳನ್ನೂ ಪರಿಹರಿಸಿದರೆ ಮಾತ್ರ ಉತ್ಪನ್ನದ ಪ್ರಮಾಣವನ್ನು ಅಧಿಕಗೊಳಿಸುವ ಸಾಧ್ಯತೆಯುಂಟು. ಇದಕ್ಕಾಗಿ ಸಹಕಾರಿ ಬೇಸಾಯವೇ ಮುಂತಾದ ನಾನಾ ಕ್ರಮಗಳನ್ನು ಸರ್ಕಾರ ಪ್ರಯೋಗಿಸುತ್ತಿದೆ.

(ಎಬಿ.ಎ.)

**ಒಕ್ಕುವ ಯಂತ್ರ :** ಪೈರಿನಿಂದ ಕಾಳುಗಳನ್ನು ಬೇರ್ಪಡಿಸುವ ಸಲಕರಣೆ. ಆದಿಮಾನವ ಕೃಷಿಯನ್ನು ಎಂದು ಆರಂಭಿಸಿದನೋ ತಿಳಿಯದು. ಆದರೆ ಅಂದೇ ಎರಡು ಮುಖ್ಯ ಸಮಸ್ಯೆಗಳನ್ನು ಎದುರಿಸಬೇಕಾಯಿತು—ಪೈರಿನ ಕೊಯ್ಲು ಹಾಗೂ (ಕೊಯ್ಲು ಮಾಡಿದ ಪೈರಿನಿಂದ) ಕಾಳುಗಳ ಒಕ್ಕಣೆ. ಈ ದಿಶೆಯಲ್ಲಿ ಅವನು ರಚಿಸಿದ ಮೊದಲ ಸಲಕರಣೆ ತೆನೆಗೋಲು. ಕೊಯ್ಲಿನ ಕೆಲಸದಲ್ಲಿ ಮಾತ್ರ ಉಪಯೋಗಿಸುವ ಕುಡುಗೋಲಿನ ಬಳಕೆ ಬಂದದ್ದು ಕ್ರಿ.ಪೂ. ಸುಮಾರು 3000 ವರ್ಷಗಳಿಂದೀಚೆಗೆ. ಕೋಲ್ಗತ್ತಿಯ ಬಳಕೆ ಇನ್ನೂ ಈಚಿನದು. ಈಗಲೂ ಭಾರತದಲ್ಲಿ ಪರಿಸ್ಥಿತಿ ಹೆಚ್ಚು ಸುಧಾರಿಸಿಲ್ಲ. ರೈತರಿಗೆ ಕಟಾವಿಗೆ ಕುಡುಗೋಲೇ ಸಾಧನ. ಕೊಯ್ದ ಪೈರನ್ನು ಬಡಿದೋ ರೋಣಗಲ್ಲು ಹಾಯಿಸಿಯೋ ದನಗಳಿಂದ ತುಳಿಸಿಯೋ ಕಾಳನ್ನು ಬೇರೆ ಮಾಡುತ್ತಾರೆ. ಅದನ್ನು ಗಾಳಿಗೆ ತೂರಿ ಕಾಳನ್ನೂ ಹೊಟ್ಟನ್ನೂ ಬೇರ್ಪಡಿಸಿ ಕಾಳು ಒಕ್ಕಣೆ ಮಾಡುತ್ತಾರೆ. ರೈತರ ದೇಹಶ್ರಮ ಮುಖ್ಯವಾಗಿ ಈ ಎಲ್ಲ ಕೆಲಸಗಳಿಗೂ ಆಧಾರ.

ಪಾಶ್ಚಾತ್ಯ ದೇಶಗಳಲ್ಲಿ ಕಳೆದ ಒಂದೂವರೆ ಶತಮಾನದಲ್ಲಿ ಬೇಸಾಯದ ಅನೇಕ ಕೆಲಸಗಳಿಗೆ ಯಂತ್ರಗಳ ಬಳಕೆ ಜಾರಿಗೆ ಬಂದಿದೆ. ಅಲ್ಲಿ ಬೇಸಾಯದ ಎಲ್ಲ ವಿಧಿಗಳಲ್ಲೂ ಟ್ರ್ಯಾಕ್ಟರ್ ಬಳಕೆಗೆ ಬಂದು ಎತ್ತಿನ ಸ್ಥಾನವನ್ನು ಆಕ್ರಮಿಸಿದೆ. ಹಸಿಹುಲ್ಲಿನ ಕೊಯ್ಲಿಗೆ, ವಿವಿಧ ಕಾಳುಬೆಳೆಗಳು, ಆಲೂಗೆಡ್ಡೆ, ಕಡಲೆಕಾಯಿ, ಸಕ್ಕರೆ ಬೀಟು, ಕಬ್ಬು ಮುಂತಾದ ಬೆಳೆಗಳ ಒಕ್ಕಣೆಗೆ ಯಂತ್ರಗಳು ಸಜ್ಜಾಗಿವೆ. ಅವುಗಳಲ್ಲಿ ಕೆಲವನ್ನು ಇಲ್ಲಿ ವಿವರಿಸಿದೆ.

ಹುಲ್ಲು ಕೊಯ್ಲಿನ ಯಂತ್ರ (ಮೋವರ್) : ಪಟ್ಟಣಗಳಲ್ಲಿನ ಉದ್ಯಾನಗಳಲ್ಲಿ ಹುಲ್ಲುಮೈದಾನ ಅಥವಾ ಹಸಲೆಯನ್ನು ಕತ್ತರಿಸಲು ಬಳಸುವ ಹಸಲೆ ಕತ್ತರಿಯ (ಲಾನ್ ಮೋವರ್) ಕತ್ತರಿಸುವ ಸಜ್ಜಿನಲ್ಲಿ ಒಂದು ಭದ್ರವಾದ ಉಕ್ಕಿನ ಅಗುಳಿ ಇದೆ. ಇದಕ್ಕೆ ಗುಳಿ ಹೊಡೆದ, ಮುಂದಕ್ಕೆ ಚಾಚಿರುವ ಬೆರಳಿನಾಕಾರದ ಪಟ್ಟಿಗಳನ್ನು ಹೊಂದಿಸಿದೆ. ಬೆರಳುಗಳಿಗೆ ತ್ರಿಕೋಣಾಕಾರದ ಉಕ್ಕಿನ ಅಲಗುಗಳನ್ನು ರಿವೆಟ್ ಮಾಡಲಾಗಿದೆ. ಉಕ್ಕಿನ ಅಗುಳಿ ನೆಲಕ್ಕೆ ಸಮೀಪದಲ್ಲಿ ಹಾದು ಅದರ ಬೆರಳುಗಳು ಹುಲ್ಲನ್ನು ಬಾಚುತ್ತವೆ. ಅಲಗುಗಳು ಹುಲ್ಲನ್ನು ಕಟಾಯಿಸುತ್ತವೆ. ಚೌಕಟ್ಟಿಗೆ ಜೋಡಿಸಿದ ಈ ಉಕ್ಕಿನ ಅಗುಳಿಯನ್ನು ಟ್ರ್ಯಾಕ್ಟರಿಗಾಗಲೀ ಕುದುರೆ ಅಥವಾ ಎತ್ತು ಎಳೆಯುವ ಯಾವುದೇ ಸಾಧನಕ್ಕಾಗಲೀ ಜೋಡಿಸುವುದು ಸಾಧ್ಯ. ಹೀಗೆ ಕಟಾವಾದ ಹುಲ್ಲನ್ನು ಉಪಕರಣಗಳಿಂದ ಕೂಡಿಸಿ, ಕತ್ತರಿಸಿ ಪಿಂಡಿ ಕಟ್ಟಿ ದಾಸ್ತಾನು ಮಾಡುತ್ತಾರೆ.

ಮೇವು ಕಟಾವು ಯಂತ್ರ : ಹುಲ್ಲು, ದ್ವಿದಳದ ಪೈರು, ಮೆಕ್ಕೆಜೋಳ ಮತ್ತಿತರ ಬೆಳೆಗಳನ್ನು ಕಟಾಯಿಸಿ, ಒಣಗಿಸದೆ ಹಸಿಯಾಗಿ ರಕ್ಷಿಸಿ ಕಳಿತ ಸ್ಥಿತಿಯಲ್ಲಿ ದನಗಳಿಗೆ ತಿನ್ನಿಸುವುದು ಪಾಶ್ಚಾತ್ಯ ದೇಶಗಳಲ್ಲಿ ಸಾಮಾನ್ಯ ಪದ್ಧತಿ. ಹಗೇವಿನಲ್ಲಿ ತುಂಬಬೇಕಾದರೆ ಮೇವನ್ನು ಸಣ್ಣಸಣ್ಣದಾಗಿ ಕತ್ತರಿಸುವುದು ಆವಶ್ಯಕ. ಆ ಯಂತ್ರಗಳಲ್ಲಿ ತುಂಡರಿಸುವ ಸಲಕರಣೆ, ಉಕ್ಕಿನ ಅಗುಳಿ ಮತ್ತು ತಿರುಗುವ ಕತ್ತರಿ ಅಥವಾ ಅಲಗುಗಳಿರುತ್ತವೆ. ತಮ್ಮ ಮಧ್ಯೆ ಸಿಕ್ಕಿದ ಪೈರನ್ನು ಇವು ತರಿಯುವುವು. ಕತ್ತರಿ ತಿರುಗುವ ವೇಗ ಇಲ್ಲವೇ ಅವುಗಳ ಸಂಖ್ಯೆಯ ಸೂಕ್ತ ಅಳವಡಿಕೆಯಿಂದ ಮೇವಿನ ತುಂಡನ್ನು ಬೇಕಾದಷ್ಟು ಉದ್ದಕ್ಕೆ ಕತ್ತರಿಸಬಹುದು. ಹೀಗೆ ತುಂಡರಿಸಿದ ಹುಲ್ಲು, ಕತ್ತರಿ ವ್ಯವಸ್ಥೆಯ ಅಂಗವಾದ ನಿಯಂತ್ರಣ ಚಕ್ರದ ಮೂಲಕವಾಗಿ ಹಾದು ಯಂತ್ರದ ಹಿಂಬದಿಯಲ್ಲಿ ಶೇಖರಣೆಯಾಗುತ್ತದೆ. ಯಂತ್ರದ ಕೆಲಸಕ್ಕೆ ಟ್ರ್ಯಾಕ್ಟರ್ ಇಲ್ಲವೇ ಡೀಸೆಲ್ ಎಣ್ಣೆ ಎಂಜಿನುಗಳನ್ನು ಬಳಸಬಹುದು. ಕಟಾವಾಗುವ ಮೇವಿಗೆ ಅನುಗುಣವಾಗಿ ವಿವಿಧ ಸಜ್ಜುಗಳನ್ನು ಯಂತ್ರಕ್ಕೆ ಅಳವಡಿಸುವುದು ಸಾಧ್ಯ.

ಧಾನ್ಯ ಕೊಯ್ಲು ಒಕ್ಕಣೆ ಯಂತ್ರ (ಗ್ರೇಯ್ನ್ ಕಂಬೈನ್) : ಧಾನ್ಯ ಅಥವಾ ಏಕದಳ ಪೈರುಗಳನ್ನು ಕಾಳು ಬಲಿತು ತಕ್ಕಮಟ್ಟಿಗೆ ಒಣಗಿದ ಮೇಲೆ ತೆಗೆಯುತ್ತಾರೆ. ಕೊಯ್ಲು ಮತ್ತು ಒಕ್ಕುವ ಕಾರ್ಯವನ್ನು ಒಂದೇ ಸಾರಿ ಮಾಡಬಲ್ಲ ಯಂತ್ರದ ಸಹಾಯದಿಂದ ಕಾಳನ್ನು ಬೇರ್ಪಡಿಸುತ್ತಾರೆ. ಕಾರ್ಯಾನುಕೂಲಕ್ಕೆ ಅನುಗುಣವಾಗಿ ಹೊರೆ ಕಟ್ಟುವುದಕ್ಕೆ, ತೆನೆ ಕೊಯ್ಯುವುದಕ್ಕೆ ಅಗತ್ಯವಾದ ಯಂತ್ರಸಾಧನಗಳು ಅಳವಟ್ಟಿವೆ. ಜಮೀನಿನಲ್ಲಿ ಯಂತ್ರ ಸಾಗುತ್ತಿದ್ದಂತೆಯೇ ಪೈರು ಕೊಯ್ಲು, ಕಾಳು, ಹುಲ್ಲು ಬೇರ್ಪಡೆ, ಹೊಟ್ಟನ್ನು ಕಾಳಿನಿಂದ ತೂರುವುದು–ಈ ಎಲ್ಲ ಕೆಲಸ ಆಗುತ್ತದೆ. ಈ ಯಂತ್ರದಲ್ಲಿ ಪೈರು ಕಟಾಯಿಸಿ ಹೊರೆ ಕಟ್ಟುವ ಸಾಧನವೂ ಅಳವಡಿಕೆಯಾಗಿರುತ್ತದೆ. ಹೀಗೆ ಕಟ್ಟಿದ ಹೊರೆ ಸಾಗಣೆ ಪಟ್ಟಿಯ (ಕನ್ವೇಯರ್ ಬೆಲ್ಟ್) ಮೂಲಕ ಯಂತ್ರದಲ್ಲೇ ಜೋಡಿಸಿರುವ ಒಕ್ಕಣೆ ಸಲಕರಣೆಗೆ ಹೋಗುವ ಏರ್ಪಾಡು ಇದೆ. ಚಲಿಸುತ್ತಿರುವಾಗಲೇ ಸಮರ್ಪಕವಾಗಿ ಕೆಲಸಮಾಡುವಂತೆ ಒಕ್ಕಣೆ ಸಲಕರಣೆ ಸಜ್ಜಾಗಿರುತ್ತದೆ. ಹೀಗೆ ಬೇರೆ ಮಾಡಿದ ಕಾಳನ್ನು ಜರಡಿ ಮತ್ತು ಬಿರುಸು ಗಾಳಿ ಮೂಲಕ ಹಾಯಿಸಿ ಒಪ್ಪಮಾಡುವ ಸಾಧನವೂ ಯಂತ್ರದಲ್ಲಿ ಹೊಂದಿಕೆಯಾಗಿದೆ. ಇಂದು ಎಲ್ಲ ಕೊಯ್ಲು ಒಕ್ಕಣೆಯಂತ್ರಗಳನ್ನೂ ಸ್ವಯಂಚಾಲಿತಗೊಳಿಸಲಾಗಿದೆ. ಇಳಿಮೇಡು ಭೂಮಿಗಳಲ್ಲಿ ಕೆಲಸಮಾಡುವಾಗ ಇವುಗಳಿಗೆ ನೀರಿನ ಒತ್ತಡ ನಾಳಿಗಳನ್ನು (ಹೈಡ್ರಾಲಿಕ್ ಸಿಲಿಂಡರುಗಳು) ಸಜ್ಜಿಸಿರುತ್ತಾರೆ. ಇದರಿಂದ ಯಂತ್ರದ ಭಾರ ಒಂದೇ ದಿಕ್ಕಿನಲ್ಲಾಗದೆ ಸಮತೋಲ ಉಳಿಯುವುದು ಸಾಧ್ಯ.

ಅರಳೆ ಒಕ್ಕುವ ಸಾಧನ : ಅರಳಿದ ಹತ್ತಿಕಾಯನ್ನು ಕೈನಿಂದ ಬಿಡಿಸುವುದೇ ಎಲ್ಲೆಡೆ ಇದ್ದ ವಾಡಿಕೆ. ಈ ಶತಮಾನದ ದ್ವಿತೀಯಾರ್ಧದಲ್ಲಿ ಇದಕ್ಕೂ ಯಂತ್ರ ಬಳಕೆ ಪ್ರಾರಂಭವಾಗಿದೆ. ಈ ಸಲಕರಣೆಯ ಮುಖ್ಯ ಅಂಶ ಒದ್ದೆಯಾಗಿರುವ ತಿರುಗಚ್ಚಿಗೆ ಹೊಂದಿಕೊಂಡು ಸುತ್ತುತ್ತಿರುವ ಪಿಪಾಯಿಗಳು. ಹತ್ತಿಗಿಡ ಇವುಗಳ ಮಧ್ಯೆ ಸೆಳೆಯಲ್ಪಡುವುದು. ತಿರುಗಚ್ಚಿಗೆ ಮೊಳೆಗಳಿವೆ. ಹತ್ತಿಕಾಯಲ್ಲಿನ ಅರಳೆ ತಿರುಗಚ್ಚಿನ ಸುತ್ತಲೂ ಅಂಟಿಕೊಳ್ಳುವುದು. ಅನಂತರ ತಿರುಗಚ್ಚಿನಿಂದ ಹತ್ತಿಯನ್ನು ಬೇರೆ ಮಾಡುವುದು ಸಾಧ್ಯ.

ಆಲೂಗೆಡ್ಡೆ ಅಗೆಯುವ ಯಂತ್ರ : ಈ ದಿಕ್ಕಿನಲ್ಲಿ ಮೊದಲು ಉಪಯೋಗಕ್ಕೆ ಬಂದದ್ದು ಗೆಡ್ಡೆಗಳನ್ನು ನೆಲದಿಂದ ಎತ್ತಲು ಅನುಕೂಲವಾಗುವಂತೆ ಗುಳಕ್ಕೆ ಕಬ್ಬಿಣದ ಕಂಬಿಗಳನ್ನು ಸಜ್ಜಿಸಿರುವ ನೇಗಿಲು. ನೇಗಿಲು ಸಾಗಿದಂತೆಲ್ಲ ಮಣ್ಣು ಸಡಿಲವಾಗಿ ಗೆಡ್ಡೆ ಮೇಲಕ್ಕೆ ಎಸೆಯಲ್ಪಡುತ್ತದೆ. ಇಂಥ ನೇಗಿಲಿನ ಜೊತೆಗೆ ಕುಲುಕುವ ಕಂಬಿಯ ಚೌಕಟ್ಟು ಇದೆ. ಗೆಡ್ಡೆ ಇದರಲ್ಲಿ ಕುಲುಕಿ ಮಣ್ಣು ಬೇರೆಯಾಗಿ ಚೀಲಕ್ಕೆ ತುಂಬಲು ಅನುಕೂಲಿಸುವಂತೆ ಸಾಲಿನಲ್ಲಿ ಗೆಡ್ಡೆ ಬೀಳುತ್ತದೆ.

ಗೆಡ್ಡೆ ಪೈರು ಕೊಯ್ಲು ಯಂತ್ರ : ಇದು ಒಂದೇ ಸಲ ಅಗೆದು, ಕಿತ್ತು, ಟ್ರಕ್ಕುಗಳಲ್ಲಿ ತುಂಬುವ ಕೆಲಸವನ್ನೆಲ್ಲ ಮಾಡಬಲ್ಲುದು. ಕೆಂಪು ಮೂಲಂಗಿ, ಬೀಟ್ ರೂಟ್ ಮುಂತಾದ ಗೆಡ್ಡೆಗಳ ಸುತ್ತ ಇರುವ ಮಣ್ಣನ್ನು ಒಂದು ವಿಶಿಷ್ಟ ರೀತಿಯ ಗುಳ ಸಡಿಲ ಮಾಡುವುದು. ಅನಂತರ ಅದನ್ನು ಆಸರೆ ಕಡ್ಡಿಯ ಸಹಾಯದಿಂದ ಮೇಲೆತ್ತಲಾಗುವುದು. ಬಂದ ಗಿಡದ ಕಾಂಡ ಎರಡು ರಬ್ಬರ್ ಪಟ್ಟಿಗಳ ಮಧ್ಯೆ ಭದ್ರವಾಗಿ ಹಿಂಡಲ್ಪಡುತ್ತದೆ. ಆಗ ಕಾಂಡ ಮತ್ತು ಗೆಡ್ಡೆ ಸೂಕ್ತ ಸಜ್ಜಿನ ಸಹಾಯದಿಂದ ಬೇರ್ಪಟ್ಟು ಕಾಂಡ ನೆಲಕ್ಕೆ ಬೀಳುತ್ತದೆ. ಗೆಡ್ಡೆ ಪಕ್ಕದಲ್ಲಿರುವ ಚಲಿಸುತ್ತಿರುವ ತೊಟ್ಟಿಯಂಥ ಸಾಧನಕ್ಕೆ ಎಸೆಯಲ್ಪಟ್ಟು ಮುಂದೆ ಟ್ರಕ್ಕಿಗೆ ರವಾನೆಯಾಗುತ್ತದೆ. ಇಂಥ ಯಂತ್ರಗಳು ದಿನ ಒಂದಕ್ಕೆ ಸುಮಾರು 10 ಎಕರೆ ಪ್ರದೇಶದ ಮೂಲಂಗಿ ಕೊಯ್ಲನ್ನು ಮಾಡಬಲ್ಲವು.

ಈರುಳ್ಳಿ ಅಗೆಯುವ ಯಂತ್ರದಲ್ಲಿ, ಗೆಡ್ಡೆ ತಳದಲ್ಲಿ ಮಣ್ಣು ಕತ್ತರಿಸಲು ಅಲಗು ಸಜ್ಜಾಗಿರುತ್ತದೆ. ಕತ್ತರಿಸಿದ ಬಳಿಕ ಮೇಲಿನ ಗಿಡ ಒಣಗುತ್ತದೆ. ಅನಂತರ ಯಂತ್ರ ಗೆಡ್ಡೆಯನ್ನು ಮೇಲಕ್ಕೆ ಎತ್ತಿಕೊಳ್ಳುತ್ತದೆ. ಕತ್ತರಿ-ಅಲಗು ಗೆಡ್ಡೆಯನ್ನು ಮೇಲ್ಭಾಗದಿಂದ ಬೇರ್ಪಡಿಸುತ್ತದೆ. ಬಿರುಸು ಗಾಳಿ ಈರುಳ್ಳಿ ಹುಲ್ಲನ್ನು ಹೊರ ಒಗೆಯುತ್ತದೆ. ಸಾಗಣೆಪಟ್ಟಿಯ ಮೂಲಕ ಸಾಗಿದ ಗೆಡ್ಡೆ ಒಂದು ಕಡೆ ಗುಡ್ಡೆಯಾಗುತ್ತದೆ.

ಹಣ್ಣುಗಳ ಕೊಯ್ಲು ಸಜ್ಜುಗಳು : ಭಾರತದಲ್ಲಿ ಸಾಮಾನ್ಯವಾಗಿ ಕಿತ್ತಳೆ, ಮಾವು ಮತ್ತಿತರ ಎಲ್ಲ ಹಣ್ಣುಗಳ ಕೊಯ್ಲು ಕೈಗಳಿಂದಲೇ ನಡೆಯುತ್ತದೆ. ಇತ್ತೀಚಿನ ದಿನಗಳಲ್ಲಿ ಪಾಶ್ಚಾತ್ಯ ದೇಶಗಳಲ್ಲಿ ಈ ಕೊಯ್ಲಿಗೂ ಯಂತ್ರಗಳು ಬಳಕೆಗೆ ಬರುತ್ತಿವೆ. ಯಂತ್ರಗಳ ಸಹಾಯದಿಂದ ಗಿಡಗಳನ್ನು ಅಲ್ಲಾಡಿಸಿ ನೆಲದ ಮೇಲೆ ಬಿದ್ದ ಹಣ್ಣುಗಳನ್ನು ಯಂತ್ರಗಳಿಂದ ಎತ್ತಿಕೊಳ್ಳುವ ಕ್ರಮ ಒಂದು. ಗಿಡಗಳನ್ನು ಅಲ್ಲಾಡಿಸಿ ಹಣ್ಣುಗಳನ್ನು ಜಾಲಗಳಲ್ಲಿ ಬೀಳಿಸಿ ಅವನ್ನು ಸಾಗಿಸಿ ಒಟ್ಟುಮಾಡುವುದು ಇನ್ನೊಂದು. ವಿವಿಧ ಜಾತಿಯ ಹಣ್ಣುಗಳ ಕೊಯ್ಲಿಗೆ ಸರಿಹೋಗುವಂತೆ ಸಜ್ಜುಗಳನ್ನು ಅಳವಡಿಸಿಕೊಳ್ಳುವ ಪ್ರಯತ್ನ ನಡೆದಿದೆ.

ತೋಟಗಳಲ್ಲಿ ಕೊಯ್ಲಿಗೆ ಯಂತ್ರಗಳನ್ನು ಬಳಸುವುದಾದರೆ, ಗಿಡಗಳನ್ನು ಸಾಕಷ್ಟು ಅಂತರದಲ್ಲಿ ನೆಡುವುದು ಅಗತ್ಯ. ಮಧ್ಯದ ನೆಲ ಮಟ್ಟಸವಾಗಿರಬೇಕು. ಗಿಡಗಳ ಮಧ್ಯೆ ಯಂತ್ರಗಳನ್ನು ಸರಿಸುವಾಗ ಅವು ರೆಂಬೆಗಳಿಗೆ ತಗುಲಿ ನಷ್ಟವಾಗದಂತೆ ನೋಡಿಕೊಳ್ಳುವುದು ಆವಶ್ಯಕ. ಎತ್ತರದ ಗಿಡಗಳಿಂದ ಹಣ್ಣು ಕೊಯ್ಯಲು ಯಂತ್ರಗಳ ಸಹಾಯದಿಂದ ಚಲಿಸುವ ಅಟ್ಟಣೆಗಳು ಬಳಕೆಯಲ್ಲಿವೆ. ಇದರಿಂದ ಮನುಷ್ಯ ಮರ ಹತ್ತಿ ಇಳಿಯುವುದು ತಪ್ಪುತ್ತದೆ. ಅಟ್ಟಣೆಗಳನ್ನು ವಿವಿಧ ಮಟ್ಟಕ್ಕೆ ಏರಿಸಿ, ಇಲ್ಲವೇ ಇಳಿಸಿ ಹಣ್ಣುಗಳನ್ನು ಹೆಚ್ಚು ಪ್ರಯಾಸವಿಲ್ಲದೆ ಕೀಳಬಹುದು.

ತರಕಾರಿ ಕೊಯ್ಲು ಯಂತ್ರಗಳು : ತರಕಾರಿ ಬಿಡಿಸುವುದು ಶ್ರಮದ ಕೆಲಸ. ಹೆಚ್ಚು ಆಳುಗಳು ಬೇಕಾಗುತ್ತಾರೆ. ಕೂಲಿ ಹೆಚ್ಚಾದೆಡೆ ವೆಚ್ಚ ಹೆಚ್ಚಾಗುವುದು ಸ್ವಾಭಾವಿಕ. ಕಾಯಿಗಳೆಲ್ಲ ಒಂದೇ ಸಮಕ್ಕೆ ಬಲಿತರೆ ಯಂತ್ರಗಳಿಂದ ಅವನ್ನು ಕೊಯ್ಯುವುದು ಸುಲಭ. ಈ ದಿಕ್ಕಿನಲ್ಲಿ ಬಂದಿರುವ ಮೊದಲ ಯಂತ್ರ ತಿಂಗಳ ಹುರುಳಿ ಕೊಯ್ಲಿನದು. ಸಸ್ಯವಿಜ್ಞಾನಿಗಳು ಇಂಥ ಜಾತಿಯ ಬೆಳೆಯನ್ನು ಶೋಧಿಸಿ ಬೆಳೆಸಬೇಕಾಯಿತು. ಇದರ ಎರಡು ಸಾಲು ಬೆಳೆಯನ್ನು ಒಟ್ಟಿಗೆ ಕೊಯ್ಯಬಲ್ಲ ಈ ಯಂತ್ರಗಳಲ್ಲಿ ಸುತ್ತುತ್ತಿರುವ ಎರಡು ರೋಣುಗಳಿವೆ. ಎಲೆ, ಗಿಡ ಇವುಗಳ ಮಧ್ಯೆ ಸಿಕ್ಕಿಕೊಂಡು ಕಾಯಿ ಗಿಡದಿಂದ ಬೇರೆಯಾಗುವುದು. ಸೊಪ್ಪು ನೆಲದ ಮೇಲೆ ಬೀಳುತ್ತದೆ. ಹಾಗೆಯೇ ಎಲೆಕೋಸು, ಸೌತೆಕಾಯಿ, ಇತರ ಬೆಳೆಗಳ ಕೊಯ್ಲಿಗೆ ಅನುಕೂಲವಾದ ಸಜ್ಜುಗಳನ್ನು ಅಳವಡಿಸಿದ್ದಾರೆ.

ಬಳಕೆಯಲ್ಲಿರುವ ಇತರ ಯಂತ್ರಗಳೆಂದರೆ ಕಬ್ಬುಕೊಯ್ಲಿನ ಯಂತ್ರ, ಮೆಕ್ಕೆಜೋಳ ಒಕ್ಕಣೆ ಯಂತ್ರ ಮುಂತಾದುವು. (ಬಿ.ಪಿ.ಪಿ.)

**ಒಗಟು :** ಜನಪದ ಸಾಹಿತ್ಯದಲ್ಲಿ ಒಂದು ಮುಖ್ಯವಾದ ಪ್ರಕಾರ(ರಿಡ್ಲ್). ಕನ್ನಡದಲ್ಲಿ ಒಡಪು, ಮುಂಡಿಗೆ ಎಂಬ ಬೇರೆ ಹೆಸರುಗಳೂ ಉಂಟು. ಒಗಟು ಎಂದರೆ ಒಬ್ಬರು ಮತ್ತೊಬ್ಬರಿಗೆ ಒಡ್ಡಿದ ಸವಾಲು, ಸಮಸ್ಯೆ. ಒಂದು ವಸ್ತುವನ್ನು ಮತ್ತೊಂದು ವಸ್ತುವಿನ ಮೂಲಕ ಚಮತ್ಕಾರವಾಗಿ ವರ್ಣಿಸಿ ಆ ಅವ್ಯಕ್ತ ವಸ್ತುವನ್ನು ಕಂಡುಹಿಡಿಯುವಂತೆ ಹೇಳುವುದು ಇದರ ಕ್ರಮ. ಒಗಟಿನಲ್ಲಿ ಎರಡು ಸದೃಶವಸ್ತುಗಳಿರಬೇಕು ; ಒಂದು ಉಪಮಾನ, ಮತ್ತೊಂದು ಉಪಮೇಯ. ಇಲ್ಲಿ ಉಪಮಾನ ವಾಚ್ಯವಾಗಿರುತ್ತದೆ ; ಉಪಮೇಯ ಅಸ್ಪಷ್ಟವಾಗಿ ರಹಸ್ಯವಾಗಿರುತ್ತದೆ. ಅದನ್ನು ಒಗಟೆಯ ಕರ್ತೃ ಬಹಳ ಜಾಣ್ಮೆಯಿಂದ ಬಚ್ಚಿಟ್ಟಿರುತ್ತಾನೆ. ಉಪಮಾನದ ಆಧಾರದಿಂದ ಉಪಮೇಯವನ್ನು ಪತ್ತೆಮಾಡಬೇಕಾಗುತ್ತದೆ. ಇದು ಬುದ್ಧಿಶಕ್ತಿಯ ಪರೀಕ್ಷೆಗೊಂದು ಒಳ್ಳೆಯ ಒರೆಗಲ್ಲು.

ಮಾನವಕುಲದ ಬಾಲ್ಯದಲ್ಲೆ ಒಗಟು ಹುಟ್ಟಿತೆಂದು ಹೇಳಬಹುದು. ಮಾತಿನ ಸಂಪ್ರದಾಯದಲ್ಲಿ ಒಗಟೆಯೇ ಎಲ್ಲಕಿಂತ ಮೊದಲಿನದೆಂಬ ಅಭಿಪ್ರಾಯವೂ ಉಂಟು. ಆದಿಮಾನವ ಪ್ರಕೃತಿಯ ವಸ್ತುಗಳಲ್ಲಿ ಗುರುತಿಸಿದ ಸಾದೃಶ್ಯವೆ ಒಗಟುಗಳ ನಿರ್ಮಾಣಕ್ಕೆ ತಳಹದಿ. ಅವನು ಸಾದೃಶ್ಯಜ್ಞಾನದಿಂದುಂಟಾದ ವಿಸ್ಮಯದಲ್ಲೆ ನಿಲ್ಲದೆ, ಅದನ್ನು ಹಾಸ್ಯ ಮತ್ತು ಮನೋರಂಜನೆಗಾಗಿ ಬಳಸಿಕೊಳ್ಳಲು ಮಾಡಿದ ಪ್ರಯತ್ನವೆ ಒಗಟಿನ ರೂಪ ತಳೆಯಿತು. ಈಗ ನಮಗೆ ಗೊತ್ತಿರುವ ಹಾಸ್ಯದ ಪ್ರಕಾರಗಳಲ್ಲಿ ಒಗಟೆಯೆ ಅತ್ಯಂತ ಪ್ರಾಚೀನವೆಂದೂ ಸಾದೃಶ್ಯಪ್ರಜ್ಞೆಯೆ ಇದಕ್ಕೆ ಮೂಲಕಾರಣವೆಂದೂ ವಿದ್ವಾಂಸರ ಅಭಿಪ್ರಾಯ. ಒಗಟುಗಳು ಬಹುಮಟ್ಟಿಗೆ ಬುದ್ಧಿಪೂರ್ವಕವಾದವು ; ಬುದ್ಧಿಯ ವಿಕಾಸಕ್ಕೆ ನೆರವಾಗುತ್ತವಾದರೂ ಕೇವಲ ಸಂತೋಷವೆ ಅವುಗಳ ಮುಖ್ಯವಾದ ಗುರಿ.

ಒಗಟುಗಳಲ್ಲಿ ಎರಡು ವಸ್ತುಗಳ ತರ್ಕಬದ್ಧ ಸಮೀಕರಣವಿರುತ್ತದೆ. ಆದ್ದರಿಂದ ಒಗಟುಗಳೆಂದರೆ ರೂಪಕಗಳು ಅಥವಾ ಪ್ರತಿಮೆಗಳು ಎನ್ನಬಹುದು. ಇವುಗಳಲ್ಲಿ ಕೆಲವಂತೂ ಸುಂದರವಾದ ಕಾವ್ಯಗಳೇ. ಲೋಕಾನುಭವ, ಸೂಕ್ಷ್ಮ ಸಂವೇದನೆ, ಕಲ್ಪನಾಶಕ್ತಿಗಳು ಉತ್ತಮವಾದ ಒಗಟುಗಳಲ್ಲಿ ಕಂಡುಬರುತ್ತವೆ. ವಸ್ತುಗಳ ಯಥಾರ್ಥ ಚಿತ್ರಗಳನ್ನು ಸಂಕ್ಷಿಪ್ತವಾಗಿ ಕೊರೆದು ನಿಲ್ಲಿಸುವ ಶಕ್ತಿ ಒಗಟುಗಳಲ್ಲುಂಟು. ಇವುಗಳಿಗೆ ವಿಷಯವಾಗದ ಪದಾರ್ಥವೇ ಜಗತ್ತಿನಲ್ಲಿಲ್ಲ.

ಎಷ್ಟೋ ವೇಳೆ, ಒಗಟುಗಳ ಅಂತರಾರ್ಥ ಸುಲಭವಾಗಿ ಹೊಳೆಯದಿದ್ದರೂ ಅವುಗಳ ಬಾಹ್ಯರೂಪ ಮಾತ್ರ ಆಕರ್ಷಕವಾಗಿ ಕುತೂಹಲ ಕೆರಳಿಸುವಂತಿರುತ್ತದೆ. ಒಗಟುಗಳಲ್ಲಿ ಹಲವು ಬಗೆಗಳಿವೆ; ಕೆಲವು ಪದ್ಯರೂಪದಲ್ಲಿದ್ದರೆ ಮತ್ತೆ ಕೆಲವು ಲಯಬದ್ಧ ಗದ್ಯದಲ್ಲಿರುತ್ತವೆ.

ಒಗಟುಗಳ ಇತಿಹಾಸ ಜಾಗತಿಕವಾದುದು. ಪ್ರಪಂಚದ ಅತ್ಯಂತ ಪ್ರಾಚೀನ ಜನಾಂಗಗಳಲ್ಲೆಲ್ಲ ಅವು ಬಳಕೆಯಲ್ಲಿದ್ದುವು. ಭರತಖಂಡದಲ್ಲಿ ಮಾತ್ರವಲ್ಲದೆ ಗ್ರೀಕ್, ರೋಮನ್, ಈಜಿಪ್ಷಿಯನ್ ಜನಾಂಗಗಳಲ್ಲಿ ಕೂಡ ಒಗಟುಗಳ ಸಾಹಿತ್ಯ ವಿಪುಲವಾಗಿತ್ತು. ಭಾರತವಲ್ಲಿ ವೈದಿಕ ವಾಙ್ಮಯದಲ್ಲೆ ಒಗಟುಗಳು ಸುಳಿಯುತ್ತವೆ. ಕುರಾನ್, ಬೈಬಲ್‌ಗಳಲ್ಲೂ ಅವು ಬಂದಿವೆಯೆಂದು ಹೇಳುತ್ತಾರೆ.

ಒಗಟುಗಳು ಜನಸಾಮಾನ್ಯರಲ್ಲಿ ಮನೋರಂಜನೆಗಾಗಿ ಬಳಕೆಗೊಳ್ಳುತ್ತಿದ್ದುವಾದರೂ ರಾಜಾಸ್ಥಾನಗಳಲ್ಲಿ ಪಂಡಿತಕವಿಗಳ ಕೈಯಲ್ಲಿ ಅವು ವಿದ್ವತ್ತಿನ ಸ್ಪರ್ಧೆಯ ಉದ್ದೇಶಕ್ಕೂ ಒದಗುತ್ತಿದ್ದುವು. ಪಾಂಡಿತ್ಯಪ್ರದರ್ಶನ, ಕೀರ್ತಿಸಂಪಾದನೆ, ಧನ ಲಾಭ, ಪ್ರಣಯಸಾಫಲ್ಯ ಮುಂತಾದ ಪ್ರಯೋಜನಗಳೂ ಇವುಗಳಿಂದ ಸಿದ್ಧಿಸುತ್ತಿದ್ದಂತೆ ತೋರುತ್ತದೆ. ಒಗಟುಗಳ ಮೇಲೆ ಪಣ ಕಟ್ಟಿ ಜೂಜಾಡುವ ಪದ್ಧತಿಯೂ ಕೆಲವೆಡೆ ಇದ್ದಂತೆ ತಿಳಿದುಬರುತ್ತದೆ. ಒಗಟಿಗೆ ಸಂಬಂಧಿಸಿದ ದ್ಯೂತ ಸ್ಪರ್ಧೆ, ಮೇಳ, ಸಮಾರಂಭಗಳು ಗ್ರೀಕರಲ್ಲಿ ವಿಪರೀತವಾಗಿದ್ದುವು. ಅನೇಕ ಗ್ರೀಕ್ ರುದ್ರನಾಟಕಗಳಲ್ಲಿ ಒಗಟುಗಳೆ ಕ್ರಿಯೆಗೆ ಚಾಲಕಶಕ್ತಿಯಾಗಿ ಕೆಲಸ ಮಾಡಿರುವುದುಂಟು. ಸ್ಫಿಂಕ್ಸ್‌ಭೂತ ಈಡಿಪಸನಿಗೆ ಒಡ್ಡಿದ ಸಮಸ್ಯೆ ಬಹಳ ವಿಖ್ಯಾತವಾದದ್ದು; ಅದು ಜಗತ್ತಿನ ಪುರಾತನ ಒಗಟುಗಳಲ್ಲೊಂದು. ಅದು ಹೀಗಿದೆ : ಬೆಳಗ್ಗೆ ನಾಲ್ಕು ಕಾಲು, ಮಧ್ಯಾಹ್ನ ಎರಡು ಕಾಲು, ಸಂಜೆ ಮೂರು ಕಾಲುಗಳಲ್ಲಿ ನಡೆಯುವ ಪ್ರಾಣಿ ಯಾವುದು? ಉತ್ತರ—ಮನುಷ್ಯ ! (ನೋಡಿ—ಈಡಿಪಸ್)

ಒಗಟುಗಳು ಪ್ರಾಚೀನಕಾಲದಿಂದಲೂ ಧಾರ್ಮಿಕ ವಿಧಿ ಉತ್ಸವಗಳಿಗೆ ಸಂಬಂಧಿಸಿದಂತೆ, ಅಲೌಕಿಕ ಉದ್ದೇಶಗಳಿಗೆ ಮಾಧ್ಯಮವಾಗಿ ಬಳಕೆಯಾಗುತ್ತ ಬಂದಿರುವುದು ಆಶ್ಚರ್ಯದ ಸಂಗತಿ. ಅವು ಆಧ್ಯಾತ್ಮಿಕ ಸತ್ಯಗಳಿಗೆ, ವೇದಾಂತ ರಹಸ್ಯಗಳಿಗೆ ಅಭಿವ್ಯಕ್ತಿ ನೀಡಿವೆ. ಗ್ರೀಕರಲ್ಲಿ ಡೆಲ್ಫಿಯ ಭವಿಷ್ಯವಾಣಿ ಪುರೋಹಿತರ ಮೂಲಕ ಒಗಟುಗಳ ರೂಪದಲ್ಲೆ ಹೊರಹೊಮ್ಮುತ್ತಿತ್ತು. ಭರತಖಂಡದ ವೈದಿಕ ಯಜ್ಞಯಾಗಾದಿಗಳಲ್ಲಿ ಒಗಟುಗಳ ಸಂಪ್ರದಾಯವಿದ್ದುದು ತಿಳಿದುಬರುತ್ತದೆ. ಕನ್ನಡದಲ್ಲಿ ಅಲ್ಲಮಪ್ರಭುವಿನ ಎಷ್ಟೋ ವಚನಗಳು ಬಹಳ ಗಹನವಾಗಿದ್ದು ಬೆಡಗಿನ ವಚನಗಳೆನಿಸಿಕೊಂಡು, ಅನುಭಾವಗಳಿಗೆ ಪ್ರತೀಕಗಳಾಗಿವೆ ; ಇವೂ ಒಗಟುಗಳೇ.

ಕನ್ನಡ ಜನಪದದಲ್ಲಿ ಪ್ರಚಲಿತವಾಗಿರುವ ಕೆಲವು ಒಗಟುಗಳನ್ನಿಲ್ಲಿ ಉದಾಹರಿಸಲಾಗಿದೆ : ಅಂಗೈ ಅಗಲದ ಗದ್ದೆ, ಗದ್ದೆಗೆ ನೀರು, ನೀರಿಗೆ ಬೇರು, ಬೇರಿಗೆ ಬೆಂಕಿ (ದೀಪ); ಚಿನ್ನದ ಪೆಟ್ಟಿಗೆಯಲ್ಲಿ ಬೆಳ್ಳಿ ಲಿಂಗ (ಹಲಸಿನ ತೊಳೆ); ಹಸುರು ಗಿಡದ ಮೇಲೆ ಮೊಸರು ಚೆಲ್ಲಿದೆ (ಮಲ್ಲಿಗೆ ಹೂ); ಗಿಡ್ಡಿ ಗುದ್ದಿದರೆ ಮನೆಯೆಲ್ಲ ಮಕ್ಕಳು (ಬೆಳ್ಳುಳ್ಳಿ); ಹಗ್ಗ ಹಾಸಿದೆ, ಕೋಣ ಮಲಗಿದೆ (ಕುಂಬಳಕಾಯಿ) ; ಸುತ್ತ ನೋಡಿದರೆ ಸುಣ್ಣದ ಗೋಡೆ, ಎತ್ತ ನೋಡಿದ್ರೂ ಬಾಗಿಲೇ ಇಲ್ಲ (ಕೋಳಿಮೊಟ್ಟೆ) ; ಕೆರೆಯೆಲ್ಲ ಕುರಿಹೆಜ್ಜೆ (ನಕ್ಷತ್ರ). (ಸಿ.ಪಿ.ಕೆ.)

ಒಗಟು ಕೇಳುಗರನ್ನು ಕುತೂಹಲಕ್ಕೆ ತಳ್ಳಿ, ಆಸಕ್ತಿಯನ್ನು ಅರಳಿಸಿ, ಅವರ ಬುದ್ಧಿಯನ್ನು ಕೆಣಕುತ್ತದೆ. ಕಂಬದ ಮೇಲೆ ನಿಂಬೆಹಣ್ಣು—ಎಂದಾಗ ಲವಂಗವೆಂಬ ಅರ್ಥ ಹೊಳೆಯುವುದು ಕಷ್ಟವಾಗಬಹುದು. ಹಾಗೆಯೇ ಮುದ್ದು ಮಗುವಿನ ಕೆನ್ನೆಯನ್ನು ತಿನ್ನಬಾರದ ಹಣ್ಣು ಬಲುರುಚಿ, ಬಲುರುಚಿ ಎಂದು ಬಣ್ಣಿಸಿ ಚಪ್ಪರಿಸುವುದೂ ಒಗಟಿನ ರೀತಿ. ಒಂದು ಪದಗಳ ಗುಂಪು, ಒಂದು ವಾಕ್ಯ ಅಥವಾ ಒಂದು ಇಡೀ ಪದ್ಯವೇ ಒಗಟಾಗಿರಬಹುದು. ಕೆಲವು ಕವಿಗಳಂತೂ ತಮ್ಮ ಕೃತಿಗಳಲ್ಲಿ ಇಂಥ ಚಾತುರ್ಯದ ಉಕ್ತಿಗಳನ್ನು ಸೊಗಸಾಗಿ ಬಳಸಿಕೊಂಡಿದ್ದಾರೆ. ಲಕ್ಷ್ಮೀಶನ ಈ ಸಾಲುಗಳನ್ನು ನೋಡಿ : ಹರಿಯೆನ್ನ ಭಾವ ; ವಿಧಿಯೆನಗೆ ಅಳಿಯ; ಜಲಧಿಯೆನಗೆ ಮಾತೆ ; ಲಕ್ಷ್ಮಿಯೆನಗೆ ಸೋದರಿ ; ಸುಧಾಕರ ನನಗೆ ಹಿರಿಯಣ್ಣ—ಈ ಐವರಿದ್ದೂ ನಾನೀ ತಿರುಕನ ಕೈಗೆ ಸಿಕ್ಕಿ ನರಳುವಂತಾಯ್ತು ಎಂಬಲ್ಲಿ ಹುದುಗಿದ ಹೂರಣದ ರುಚಿ ಎರಡು ವಿಧ. ಚತುರತೆಯ ಮಾತಿನ ಹಿಂದಿನ ಅರ್ಥಗ್ರಹಿಸಿದ ಆನಂದ ಒಂದು ಕಡೆ ; ಅದರ ಹಿಂದಿರುವ ನೀತಿಯ ಸೂಚನೆ ಮತ್ತೊಂದು ಕಡೆ. ಎರಡರಿಂದಲೂ ಸಂತೋಷ ಉಕ್ಕುತ್ತದೆ. ವಿಷ್ಣು ನನಗೆ ಭಾವ, ಬ್ರಹ್ಮ ಅಳಿಯ, ಸಮುದ್ರವೇ ತಾಯಿ, ಲಕ್ಷ್ಮಿ ಸೋದರಿ, ಚಂದ್ರನು ಅಣ್ಣ—ಇಂಥ ದೊಡ್ಡ ದೊಡ್ಡ ನಂಟರಿದ್ದರೂ ನನ್ನ ಹಣೆಯಬರಹ—ತಿರುಕನ ಕೈಯಲ್ಲಿ ಸಿಕ್ಕಿಕೊಂಡು ಅವನ ಬಾಯ ಉಸಿರಿಗೆ

ಪಕ್ಕಾಗಿ ನರಳಬೇಕಾಯಿತಲ್ಲ ಎಂದು ಶಂಖ ತನ್ನ ಗೋಳನ್ನು ತೋಡಿಕೊಳ್ಳುವ ಈ ಭಾಗ ತುಂಬ ರಸವತ್ತಾಗಿದೆ, ನೀತಿಯುತವಾಗಿದೆ. ಹೀಗೆಯೇ ಎಷ್ಟೋ ಒಗಟುಗಳು ನಾಣ್ಣುಡಿಗಳಾಗಿವೆ. ಮಾತಿನ ಚಕಮಕಿಯಿಂದಲೂ ಒಗಟುಗಳು ಸೃಷ್ಟಿಯಾಗುತ್ತವೆ. ಪೂರಸೀ, ಹೊರಸೀ, ಒಳಸೀ ಎಂಬ ಮೂರು ವಸ್ತುಗಳನ್ನು ತನ್ನಿರೆಂದು ಗುರು ಹೇಳಿದಾಗ ಶಿಷ್ಯರು ಒದ್ದಾಡಿದರಂತೆ. ಜಾಣನಾದ ಶಿಷ್ಯ ಮಾತ್ರ ಕಲ್ಲುಸಕ್ಕರೆ, ಖರ್ಜೂರ, ಬಾದಾಮಿಗಳನ್ನು ತಂದನಂತೆ. ಕಲ್ಲುಸಕ್ಕರೆ ಪೂರ ಸಿಹಿ, ಖರ್ಜೂರ ಹೊರಗೆ ಮಾತ್ರ ಸಿಹಿ, ಬಾದಾಮಿ ಒಳಗೆ ಮಾತ್ರ ಸಿಹಿ. ಇಂಥ ಒಗಟಿನ ಅನೇಕ ಕಥೆಗಳು ಪ್ರಚಾರದಲ್ಲಿವೆ. ಇಡೀ ಪದ್ಯದಲ್ಲಿ ಈ ರೀತಿಯ ಒಗಟನ್ನು ತುಂಬಿರುವ ಒಂದು ಉದಾಹರಣೆಯಾಗಿ ಕನಕದಾಸರ ಕೀರ್ತನೆಯ ಒಂದು ಭಾಗವನ್ನು ನೋಡಬಹುದು. ಅಂಧಕನನುಜನ ಕಂದನ ತಂದೆಯ, ಕೊಂದನ ಶಿರದಲ್ಲಿ ನಿಂದವನ । ಚಂದದಿ ಪಡೆದನ ನಂದನೆಯಳ ನಲ । ವಿಂದ ಧರಿಸಿದ ಮುಕುಂದನಿಗೆ ॥ ಧೃತರಾಷ್ಟ್ರನ ತಮ್ಮನಾದ ಪಾಂಡುವಿನ ಮಗ ಧರ್ಮರಾಯನ ತಂದೆಯಾದ ಯಮಧರ್ಮರಾಯನನ್ನು ನಿಗ್ರಹಿಸಿದ (ಮಾರ್ಕಂಡೇಯನ ಕಥೆಯಲ್ಲಿ) ಈಶ್ವರನ ತಲೆಯ ಮೇಲೆ ನಿಂದ ಚಂದ್ರನನ್ನು ಪಡೆದ ತಂದೆಯಾದ ಸಮುದ್ರರಾಜನ ಮಗಳಾದ ಲಕ್ಷ್ಮಿಯನ್ನು ಆನಂದದಿಂದ ಹೃದಯದಲ್ಲಿ ಧರಿಸಿದ ಮುಕುಂದನಿಗೆ ಮಂಗಳಂ—ಎಂದು ಕನಕದಾಸರು ಇಲ್ಲಿ ಒಗಟುಗಂಟನ್ನೇ ಸೃಜಿಸಿದ್ದಾರೆ. ಈಗಲೂ ಒಗಟುಗಳೆಂದರೆ ಮಕ್ಕಳಿಗೆ ಪ್ರಾಣ, ದೊಡ್ಡವರಿಗೆ ಆಸಕ್ತಿ. ಸಂಸ್ಕೃತ ಸಾಹಿತ್ಯದಲ್ಲಿನ ವಿಚಿತ್ರ ಪದಬಂಧಗಳು, ಸಮಸ್ಯಾಪೂರ್ಣ. ತೆಲುಗರಲ್ಲಿ ಹೆಚ್ಚು ಪ್ರಚಾರವಿರುವ ದಶಾವಧಾನ, ಶತಾವಧಾನ—ಇವುಗಳೆಲ್ಲ ಒಗಟಿನ ಬೃಹದ್ರೂಪಗಳು. ಮಹಾಕವಿಗಳು ಕೂಡ ಒಗಟುಗಳಿಂದ ಆಕರ್ಷಿತರಾಗಿರುವರು. ಭಾಸನ ನಾಟಕಗಳ ಮೊದಲ ಶ್ಲೋಕದಲ್ಲಿ ಶ್ಲೇಷೆಯ ಬಳಕೆಯಿಂದ ಒಗಟು ಸೃಷ್ಟಿಯಾಗಿದೆ. ಕಾಳಿದಾಸನಲ್ಲಿಯೂ ಇದನ್ನು ಕಾಣುತ್ತೇವೆ. ಪಂಪ, ಕುಮಾರವ್ಯಾಸ ಮುಂತಾದವರಲ್ಲಿಯೂ ಒಗಟುಗಳ ಬಳಕೆ ಸ್ಪಷ್ಟವಾಗಿದೆ. ಮಾತಿನ ಚಾಣಕ್ಯತನ ಇದ್ದಲ್ಲಿ ಯಕ್ಷಪ್ರಶ್ನೆಯಾಗಿ ಒಗಟು ಆವಿರ್ಭವಿಸುತ್ತದೆನ್ನಬಹುದು.

ಪ್ರಾಚೀನ ಗ್ರೀಕರಿಗೆ ಒಗಟು ನೀತಿಯ ನೆಲೆಗಟ್ಟಾಗಿತ್ತು. ಅನಂತರ ಗ್ರೀಕ್ ಮತ್ತು ರೋಮನರ ಭೋಜನಕೂಟಗಳಲ್ಲಿ ತಮಾಷೆ ಮಾಡಲೆಂದು ಒಗಟುಗಳನ್ನು ಬಿಡಿಸುವ ಪಂದ್ಯಗಳನ್ನಿಟ್ಟುಕೊಳ್ಳುತ್ತಿದ್ದರು. ಸಾಲೋಮನ್ ರಾಜನ ನಾಣ್ಣುಡಿಗಳು ನಿಜವಾಗಿ ಒಗಟುಗಳೇ. ಷೀಬದ ರಾಣಿ ಮುಂದೊಡ್ಡುವ ಸಮಸ್ಯೆಗಳು ಒಗಟಿನ ದೊಡ್ಡ ರೂಪದಲ್ಲಿವೆ. ಈಜಿಪ್ಟಿನ ದೈವವಾಣಿಗಳಂತೂ ಒಗಟಿನ ರೂಪದಲ್ಲಿಯೇ ಇವೆ. ಅಪುಲ್ಸಿಯಸ್ ಎಂಬಾತ ಒಗಟುಗಳ ಗ್ರಂಥವೊಂದನ್ನೇ ಬರೆದನೆಂದು ಪ್ರತೀತಿಯಿದೆ. ಆದರೆ ಈ ಗ್ರಂಥ ದೊರಕಿಲ್ಲ. ಇಂಗ್ಲೆಂಡ್, ಜರ್ಮನಿ, ಫ್ರಾನ್ಸ್ ಮುಂತಾದೆಡೆಗಳಲ್ಲಿ ಒಗಟು ತುಂಬ ಪ್ರಚಾರದಲ್ಲಿದೆ. ಹದಿನಾರನೆಯ ಶತಮಾನದ ವರೆಗೆ ಬಹಳ ಉಚ್ಛ್ರಾಯ ಸ್ಥಿತಿಯಲ್ಲಿದ್ದು ಒಂದು ಶತಮಾನ ಮರೆಯಾಗಿದ್ದ ಒಗಟು ಹದಿನೇಳನೆಯ ಶತಮಾನದ ಅನಂತರ ಮತ್ತೆ ಜನಪ್ರಿಯ ಮನರಂಜನೆಯಾಯಿತು. ಅಬ್ಬೆ ಕೋಟಿನ್ ಎಂಬ ಪಾದ್ರಿ ಹತ್ತು ಸಾವಿರಕ್ಕೂ ಹೆಚ್ಚು ಒಗಟುಗಳನ್ನು ಹೊಸೆದಿದ್ದನೆಂದು ಹೆಸರಾಗಿದ್ದಾನೆ. ಫ್ರಾನ್ಸಿನಲ್ಲಿ ಕವಿಗಳೆಲ್ಲರೂ ಒಗಟುಗಳನ್ನು ಬೆಳೆಸಿದರು. ಜರ್ಮನಿಯಲ್ಲಿ ಷಿಲ್ಲರ್ ಕವಿ ಇದಕ್ಕೆ ವಿಸ್ತಾರವಾದ ಹರಹು, ಗಾಂಭೀರ್ಯಗಳನ್ನು ಕೊಟ್ಟು ಗೌರವಸ್ಥಾನ ಕಲ್ಪಿಸಿದನೆನ್ನಲಾಗಿದೆ.

ಚೆರೇಡ್ ಎಂಬುದು ಇಂಗ್ಲೆಂಡಿನಲ್ಲಿ ಒಗಟು ಬೆಳೆದಿರುವ ಒಂದು ವಿಶಿಷ್ಟ ರೀತಿ. ಭೋಜನಕೂಟ ನಡೆಯುವಾಗ ಅಲ್ಲಿಯೇ ಒಂದು ತಂಡದವರು ಉಳಿದವರಿಗೆ ಒಗಟನ್ನು ನಾಟಕದ ದೃಶ್ಯಗಳ ರೂಪದಲ್ಲಿ ಒಡ್ಡುತ್ತಾರೆ. ಒಂದೊಂದು ದೃಶ್ಯಕ್ಕೆ ಒಂದೊಂದು ಪದ ಕೇಂದ್ರಬಿಂದುವಾಗಿರುತ್ತದೆ. ಉದಾಹರಣೆಗೆ, ಮಕ್ಕಳು ಎಂಬ ಪದಕ್ಕಾಗಿಯೇ ಒಂದು ದೃಶ್ಯದಲ್ಲಿ ಮಕ್ಕಳ ಮನೋಧರ್ಮ, ಮಕ್ಕಳ ಆಟ, ಮಕ್ಕಳ ಮಾತು ಮುಂತಾದುವನ್ನೇ ಒತ್ತಿ ಒತ್ತಿ ಹೇಳುವುದು. ನೋಟಕರು ದೃಶ್ಯದಿಂದ ಆ ಪದವನ್ನು ಊಹಿಸಬೇಕು. ಹಲವಾರು ದೃಶ್ಯಗಳ ಪದವನ್ನು ಗ್ರಹಿಸಿದಾಗ ಒಂದು ಪೂರ್ಣ ವಾಕ್ಯ ಸಿಗುತ್ತದೆ. ಅದೇ ಒಗಟು. ಇದು ಹದಿನೆಂಟು ಹತ್ತೊಂಬತ್ತನೆಯ ಶತಮಾನದಲ್ಲಿ ಬಹಳ ಜನಪ್ರಿಯವಾಗಿತ್ತು. ಯಾವುದು ಸುಲಭವಾಗಿ ಅರ್ಥವಾಗುವುದಿಲ್ಲವೋ ಅದು ಒಗಟು ಎಂಬ ಅರ್ಥದಲ್ಲಿಯೂ ಈ ಪದ ಎಲ್ಲ ದೇಶಗಳಲ್ಲಿಯೂ ಬಳಕೆಯಾಗುತ್ತಿರುವುದು ಅದರ ಗಟ್ಟಿತನವನ್ನು, ಬುದ್ಧಿಗೆ ಅದು ಎಸೆಯುವ ಸವಾಲನ್ನು ಒತ್ತಿ ತೋರಿಸುತ್ತದೆ. (ಎಸ್.ಎ.ಎನ್.)

ಮತ ಮತ್ತು ತತ್ತ್ವಶಾಸ್ತ್ರಗಳಲ್ಲಿ ಒಗಟುಗಳ ಪಾತ್ರ ದೊಡ್ಡದು. ಪ್ರಾಕ್ತನರ ಮತಗಳಲ್ಲೂ ನಾಗರಿಕ ಮತಗಳಲ್ಲೂ ಅವನ್ನು ಕಾಣಬಹುದು. ತತ್ತ್ವಕ್ಕೆ ಸಂಬಂಧಪಟ್ಟ ಒಗಟುಗಳು ಇರುತ್ತವೆಯಾದರೂ ಅವು ವಿಶೇಷವಾಗಿ ಕಾಣಿಸಿಕೊಳ್ಳುವುದು ಮತದ ಸಂಪ್ರದಾಯಗಳಲ್ಲಿ ಮತ್ತು ಸಂಸ್ಕಾರಗಳಲ್ಲಿ. ಪ್ರಾಕ್ತನರು ಒಂದು ಶವದ ಮುಂದೆ ಅಥವಾ ಕಣದ ರಾಶಿಗಳ ಮುಂದೆ ಗೂಢ ಪ್ರಶ್ನೆಗಳನ್ನು ಒಡ್ಡುವುದುಂಟು. ಆರು ದ್ವೀಪಸ್ತೋಮದಲ್ಲಿ ಶವವನ್ನು ಶವದ ಪೆಟ್ಟಿಗೆಯೊಳಗೆ ಇಡುವುದಕ್ಕೆ ಮುನ್ನ ಶವವನ್ನು ಕಾಯುವವರಲ್ಲಿ ಒಬ್ಬ ಇನ್ನೊಬ್ಬನಿಗೆ ಗೂಢ ಪ್ರಶ್ನೆಯನ್ನು ಹಾಕುತ್ತಾನೆ. ಹೀಗೆ ಗೂಢ ಪ್ರಶ್ನೆ ಕೇಳುವುದು ಆ ಶವದ ಪ್ರೇತಕ್ಕೆ ದಿಗ್ಭ್ರಮೆ ಹುಟ್ಟಿಸುವ ಸಲುವಾಗಿ. ಇಂಥ ಪದ್ಧತಿಯನ್ನು ಬ್ರಿಟನಿನಲ್ಲಿ ಈಗಲೂ ಕಾಣಬಹುದು. ಪೂರ್ವ ಆಫ್ರಿಕದ ಅಕಂಬ ಗುಂಪಿನ ಹುಡುಗ ಹುಡುಗಿಯರು ಪರಿವರ್ತನ ಕಾಲದಲ್ಲಿ ಗೂಢ ಸಮಸ್ಯೆಗಳನ್ನು ಒಡ್ಡುವುದು ವಾಡಿಕೆ. ಫಸಲನ್ನು ಬೆಳೆಸುವ ಕಾಲದಲ್ಲಿ ಮಧ್ಯ ಸಿಲಬಸಿನ ಪ್ರಾಕ್ತನರು ಒಗಟುಗಳನ್ನು ಮಂಡಿಸುತ್ತಾರೆ. ಬೆಳೆ ಚೆನ್ನಾಗಿ ಆಗುವುದಕ್ಕೆ ಅಥವಾ ಕೆಟ್ಟುಹೋಗುವುದಕ್ಕೆ ಒಗಟುಗಳನ್ನು ಬಿಡಿಸುವುದರಲ್ಲಿ ಗೆಲ್ಲುವುದು ಅಥವಾ ಸೋಲುವುದು ಕಾರಣವಾಗುತ್ತದೆಂದು ಅವರ ನಂಬಿಕೆ. ಡೆಲ್ಫಿಯಲ್ಲಿ ಕಣಿ ಹೇಳುವವರು ಒಗಟುಗಳ ಮೂಲಕ ಭವಿಷ್ಯ ನುಡಿಯುತ್ತಿದ್ದರು. ಡಯೋನೀಸಿಯಸ್ ದೇವರಿಗೆ ಪ್ರಿಯವಾದ ಅಗ್ರಿಯೋನಿಯ ಜಾತ್ರೆಯ ಕಾಲದಲ್ಲಿ ಜನರು ಸಾಮೂಹಿಕವಾಗಿ ಸಾಲುಸಾಲಾಗಿ ಕುಳಿತು ಊಟ ಮಾಡುವಾಗ ಒಂದು ಸಾಲಿನವರು ತಮ್ಮ ಎದುರು ಸಾಲಿನವರಿಗೆ ಗೂಢಪ್ರಶ್ನೆಗಳನ್ನೂ ಹಾಕುತ್ತಿದ್ದರು. ಎದುರು ಸಾಲಿನವರು ಉತ್ತರ ಹೇಳುತ್ತಿದ್ದರು. ಭಾರತದಲ್ಲೂ ಮತಸಂಸ್ಕಾರಗಳಿಗೆ ಸಂಬಂಧಪಟ್ಟಂತೆ ಒಗಟುಗಳು ಪ್ರಚಾರದಲ್ಲಿದ್ದುವು. ಶ್ರಾದ್ಧ ಸಂದರ್ಭದ ಊಟದ ಕಾಲದಲ್ಲಿ ಊಟ ಮಾಡುವ ಬ್ರಾಹ್ಮಣರಿಗೆ ಗೂಢ ಪ್ರಶ್ನೆಗಳನ್ನು ಹಾಕಬೇಕೆಂದು ಮನು ವಿಧಾಯಕ ಮಾಡಿರುತ್ತಾನೆ. ಏಕೆಂದರೆ ಹಾಗೆ ವೇದೋಕ್ತವಾದ ಗೂಢಪ್ರಶ್ನೆಗಳನ್ನು ಕೇಳುವುದು ಪಿತೃಗಳಿಗೆ ಇಷ್ಟಕರವಾದದ್ದು.

ವೇದಮಂತ್ರಗಳಲ್ಲಿ ಕಾಣಬರುವ ಒಗಟುಗಳಿಗೆ ಬ್ರಹ್ಮೋದ್ಯ ಅಥವಾ ಬ್ರಹ್ಮವದ್ಯ ಎಂದು ಹೆಸರು. ಒಂದು ಮಂತ್ರದಲ್ಲಿ ಅಗ್ನಿಯ ವರ್ಣನೆ ಒಂದು ಒಗಟಿನ ರೂಪದಲ್ಲಿ ಹೀಗೆ ಬಂದಿದೆ: ನಿಮ್ಮಲ್ಲಿ ಯಾರು ಆ ಗೂಢದೇವತೆಯನ್ನು ತಿಳಿದಿರುತ್ತೀರಿ ? ಆ ಕರು ತನ್ನ ತಾಯಿಯರನ್ನು ಈದಿದೆ. ತಾಯಿಯರಿಗೆ ಕಾರಣವಾದ ಗರ್ಭಾಣು ಎಲ್ಲವನ್ನು ನೋಡುವ ಆ ಮಹಿಮನು ಯಾರು ? ತನ್ನ ಸ್ವಶಕ್ತಿಯಿಂದಲೇ ಚಲಿಸುವ ಅವನು, ಚೇತನಯುತವಾದ ಅಣುಗಳಿಂದ ಮೇಲಕ್ಕೆ ಏಳುತ್ತಾನೆ. (ಇಲ್ಲಿ ಕರು ಅಗ್ನಿ, ತಾಯಂದಿರು ಆಪಗಳು). ದೀರ್ಘತಮಸ್ಸೆಂಬ ಋಷಿಯ ಒಂದು ಮಂತ್ರ ತತ್ತ್ವಕ್ಕೆ ಸಂಬಂಧಪಟ್ಟ ಒಗಟುಗಳಿಂದ ತುಂಬಿದೆ. ಆ ಮಂತ್ರ ಅಶ್ವಮೇಧ ಯಜ್ಞದ ಕಾಲದಲ್ಲಿ ಉಪಯೋಗಿಸುವಂಥದು. ಅದು ಪ್ರಶ್ನೋತ್ತರ ರೂಪದಲ್ಲಿದೆ. ಯಾಜಕರಲ್ಲಿ ಹೋತೃ ಪ್ರಶ್ನೆ ಕೇಳುತ್ತಾನೆ; ಅಧ್ವರ್ಯು ಉತ್ತರ ಹೇಳುತ್ತಾನೆ.

ಹೋತೃ ಈ ಪ್ರಶ್ನೆ ಕೇಳುತ್ತಾನೆ; ಏಕಾಕಿಯಾಗಿ ಸಂಚರಿಸುವವನು ಯಾವನು? ಯಾವನು ಮರಳಿ ಹುಟ್ಟುತ್ತಾನೆ ? ನೆಗಡಿಗೆ ಸಿದ್ಧೌಷದ ಯಾವುದು ? ಮಹಾರಾಶಿ ಯಾವುದು ?

ಅಧ್ವರ್ಯು ಹೀಗೆ ಉತ್ತರ ಕೊಡುತ್ತಾನೆ : ಏಕಾಕಿಯಾಗಿ ಸಂಚರಿಸುವವನು ಸೂರ್ಯ. ಪುನಃ ಪುನಃ ಹುಟ್ಟುವವನು ಚಂದ್ರ. ನೆಗಡಿಗೆ ಬೆಂಕಿ ಔಷಧ. ದೊಡ್ಡ ರಾಶಿ ಭೂಮಿ.

ಹೋತೃ ಕೇಳುವ ಇನ್ನೊಂದು ಪ್ರಶ್ನೆ : ಸೂರ್ಯನಿಗೆ ಸದೃಶವಾದ ಬೆಳಕು ಯಾವುದು ? ಸಾಗರಕ್ಕೆ ಸದೃಶವಾದ ಸಾಗರ ಯಾವುದು ? ಪೃಥ್ವಿಗಿಂತ ಮಹತ್ತರವಾದುದು ಯಾವುದು ? ಯಾವುದರ ಬೆಲೆ ಅಳತೆಗೆ ಮೀರಿದ್ದು ?

ಅದಕ್ಕೆ ಉತ್ತರ ಇದು : ಸೂರ್ಯನಿಗೆ ಸದೃಶವಾದ ಬೆಳಕು ಬ್ರಹ್ಮ. ಸಾಗರಕ್ಕೆ ಸದೃಶವಾದದ್ದು ಸ್ವರ್ಗ. ಇಂದ್ರ ಪೃಥ್ವಿಗಿಂತ ದೊಡ್ಡವನು. ಕಾಮಧೇನುವಿನ ಪ್ರಭಾವ ಅಳತೆಗೆ ಮೀರಿದ್ದು.

ಇನ್ನೊಂದು ಪ್ರಶ್ನೆ : ಪೃಥ್ವಿಯ ತುತ್ತತುದಿ ಯಾವುದು ? ವಿಶ್ವದ ಗುಂಬ ಯಾವುದು ? ವೀರ್ಯವತ್ತಾದ ಆ ಅಶ್ವದ ಬೀಜ ಯಾವುದು ? ವಾಕ್ಕಿನ ಮಹತ್ತರ ಸ್ವರ್ಗ ಯಾವುದು ?

ಅದಕ್ಕೆ ಉತ್ತರ : ಬಲಿಪೀಠ ಪೃಥ್ವಿಯ ತುತ್ತತುದಿ. ಯಜ್ಞ ವಿಶ್ವದ ಗುಂಬ. ಸೋಮ ಆ ವೀರ್ಯವತ್ತಾದ ಅಶ್ವದ (ಇಂದ್ರ) ಬೀಜ. ಬ್ರಹ್ಮ ವಾಕ್ಕಿನ ಮಹತ್ತರ ಸ್ವರ್ಗ.

ದೀರ್ಘತಮಸ್ ಋಷಿಯ ಸೂಕ್ತದಲ್ಲಿ ತತ್ತ್ವಕ್ಕೆ ಸಂಬಂಧಪಟ್ಟ ಒಗಟು ಇದು: ಸಹಚಾರಿಗಳಾದ, ಪರಸ್ಪರ ಸ್ನೇಹಿತರಾದ ಎರಡು ಹಕ್ಕಿಗಳು ಒಂದೇ ಮರದ ಮೇಲೆ ವಾಸಿಸುತ್ತವೆ. ಅವುಗಳಲ್ಲಿ ಒಂದು ಸಿಹಿಯಾದ ಅಂಜೂರದ ಹಣ್ಣನ್ನು ತಿನ್ನುತ್ತದೆ, ಇನ್ನೊಂದು ತಿನ್ನದೆ ಸುಮ್ಮನೆ ನೋಡುತ್ತದೆ. ಇಲ್ಲಿ ತಿನ್ನುವ ಹಕ್ಕಿ ಸಂಸಾರದಲ್ಲಿ ತೊಡಗಿರುವ ಜೀವ, ತಿನ್ನದ ಹಕ್ಕಿ ಪರಮಾತ್ಮ. ಇದೇ ಒಗಟು ಉಪನಿಷತ್ತುಗಳಲ್ಲೂ ಸಾಂಖ್ಯಕಾರಿಕದಲ್ಲೂ ಪುನರುಕ್ತವಾಗಿದೆ. (ಜಿ.ಎಚ್.)

**ಒಗೆಯುವ ಯಂತ್ರ :** ಬಟ್ಟೆಗಳನ್ನು ಒಗೆದು ಶುಚಿಗೊಳಿಸಿ ತಕ್ಕಮಟ್ಟಿಗೆ ಒಣಗಿಸಿ ಪೂರೈಸುವ ಸಲಕರಣೆ ( ವಾಷಿಂಗ್ ಮೆಷೀನ್ ). ಸ್ವಯಂಚಾಲಿತ,

ಅರೆಸ್ವಯಂಚಾಲಿತ. ಮನುಷ್ಯಶಕ್ತಿಯಿಂದ ಕೆಲಸಮಾಡುವ—ಹೀಗೆ ಭಿನ್ನವರ್ಗಗಳ ಯಂತ್ರಗಳು ಇಂದು ಮಾರುಕಟ್ಟೆಯಲ್ಲಿ ದೊರೆಯುತ್ತವೆ. ಒಗೆಯುವ ಯಂತ್ರವನ್ನು ರಚಿಸಿ ಅದರ ಏಕಸ್ವವನ್ನು ಪಡೆದವ ಅಮೆರಿಕ ದೇಶದ ಹ್ಯಾಮಿಲ್ಟನ್ ಇ. ಸ್ಮಿತ್ (1858).



ಒಗೆಯುವ ಯಂತ್ರ



ಒಣಗಿಸುವ ಯಂತ್ರ

ಒಗೆಯುವ ಯಂತ್ರಗಳ ಉಪಯೋಗದಿಂದ ಬಟ್ಟೆಗಳು ಬಾಳಿಕೆ ಬರುವುವು. ಕಲ್ಲಿಗೆ ಒಗೆದು ಅಥವಾ ಕೋಲಿನಿಂದ ಬಡಿದು ಒಗೆಯುವಾಗ ಬಟ್ಟೆಯ ನೂಲೆಳೆಗಳು ಶಿಥಿಲಗೊಂಡು ಬಾಳಿಕೆ ಕಡಿಮೆಯಾಗುತ್ತದೆ. ಚಿಕ್ಕ ಯಂತ್ರಗಳಲ್ಲಿ ಸುಮಾರು ಕಾಲು ಅಶ್ವಸಾಮರ್ಥ್ಯದ ಮೋಟಾರಿನಿಂದ ತಿರುಗಿಸಲಾಗುವ ತಿರುಚಿವ ಪ್ಲಾಸ್ಟಿಕ್ ಅಲಗುಗಳುಳ್ಳ ದಂಡವಿದೆ. ಇದರಿಂದ ಸಾಬೂನಿನ ನೀರು ಚಿಮ್ಮಲ್ಪಟ್ಟು ಬಟ್ಟೆಗಳ ಸಂದಿಗೊಂದಿಗೂ ಪ್ರವೇಶಿಸಿ ಕೊಳೆಯನ್ನು ಹೊರತೆಗೆದು ಹಾಕಲು ಅನುಕೂಲವಾಗುತ್ತದೆ. ಕೆಲವು ಯಂತ್ರಗಳಲ್ಲಿ ಬಟ್ಟೆಯ ಪಾತ್ರೆಯನ್ನೇ ಸಾಬೂನಿನ ನೀರಿನಲ್ಲಿ ಪಕ್ಕದಿಂದ ಪಕ್ಕಕ್ಕೆ ಆಂದೋಲನ ಮಾಡುವ ಸಂವಿಧಾನವಿರುತ್ತದೆ. ನಿರ್ದಿಷ್ಟಕಾಲ ಸುಮಾರು 70° ಸೆಂ. ಉಷ್ಣತೆ ನೀರಿನಲ್ಲಿ ಆಡಿಸಿ, ಬಿಸಿನೀರಿನಲ್ಲಿ ಜಾಲಿಸಿ ಅನಂತರ ತಣ್ಣೀರಿನಲ್ಲಿ ಜಾಲಿಸಿ, ಬಟ್ಟೆಗಳನ್ನು ಹೊರತೆಗೆದು ಯಂತ್ರದ ಮೇಲ್ಭಾಗದಲ್ಲಿರುವ ಲಟ್ಟಣಿಗೆಗಳ (ರೋಲರ್ಸ್) ನಡುವೆ ಹಾಯಿಸಿ ಹಿಂಡಿ ತೆಗೆದು ಒಣಗಿಸಬಹುದು. ಒಮ್ಮೆಗೆ ಒಂದೇ ತರಹದ ಬಟ್ಟೆಗಳನ್ನು ಮಾತ್ರ (ದಪ್ಪವಾದ ಬಟ್ಟೆಗಳನ್ನಾಗಲಿ ತೆಳ್ಳಗಿನ ಬಟ್ಟೆಗಳನ್ನಾಗಲಿ) ಒಗೆಯಬೇಕು. ಬಣ್ಣ ಬಿಡುವ ಬಟ್ಟೆಗಳನ್ನು ಬಿಳಿಯ ಅಥವಾ ಗಟ್ಟಿಬಣ್ಣದ ಬಟ್ಟೆಗಳೊಡನೆ ಒಗೆಯಬಾರದು.

ನವೀನ ಸಮಾಜದ ಬಿರುಸಿನ ಜೀವನದಲ್ಲಿ ದೈನಂದಿನಾವಶ್ಯಕತೆಗಳನ್ನು ಪೂರೈಸುವುದರಲ್ಲಿ ಬಟ್ಟೆ ಒಗೆಯುವ ಯಂತ್ರದ ಪಾತ್ರ ಮಹತ್ತ್ವದ್ದೆನಿಸಿದೆ. (ಬಿ.ಬಿ.ಎಸ್.)

**ಒಗ್ಗದಿಕೆ, ಮರೆಹಾರಿಕೆ :** ಒಂದು ಪ್ರಭೇದದ ವ್ಯಕ್ತಿಗಳ ಮೇಲೆ ಪರಕೀಯ ವಸ್ತುವಿನ ಪ್ರಭಾವ ಸಾಮಾನ್ಯವಾಗಿ ನಿರೀಕ್ಷಿಸಿದಂತೆ ಒಂದೇ ಬಗೆಯದಾಗಿರಬೇಕು. ಹಾಗಲ್ಲದೇ ಆ ಪ್ರಭೇದದ ಕೆಲವರ ದೇಹಗಳ ಊತಕಗಳು ಅಥವಾ ಅಂಗಾಂಶಗಳು ತೀರ ಭಿನ್ನವಾದ ಪ್ರತಿಕ್ರಿಯೆಗಳನ್ನು ವ್ಯಕ್ತಪಡಿಸಿದರೆ ಅವರು ಆ ಪರಕೀಯ ವಸ್ತುವನ್ನು ಕುರಿತು ಒಗ್ಗದಿಕೆ (ಅಲರ್ಜಿ) ಹೊಂದಿರುವರು ಎನ್ನುತ್ತಾರೆ. ಆದ್ದರಿಂದ ಒಗ್ಗದಿಕೆ ಎನ್ನುವುದು ವ್ಯಕ್ತಿವಿಶಿಷ್ಟವಾದ ಒಂದು ಲಕ್ಷಣ. ಊತಕಗಳ ಒಗ್ಗದಿಕೆಗೆ ಉದಾಹರಣೆಯಾಗಿ ಪರಾಗಜನಿತಜ್ವರ (ಹೇ ಫೀವರ್), ಆಸ್ತಮಾ, ಪಿತ್ತೀ (ಅರ್ಟಿಕೇರಿಯ), ಇಸಬು (ಎಕ್ಸೀಮ), ಸಂಪರ್ಕದಿಂದ ಒದಗುವ ಚರ್ಮಪ್ರತಿಕ್ರಿಯೆ (ಕಾಂಟ್ಯಾಕ್ಟ್ ಡರ್ಮಟೈಟಿಸ್), ಔಷಧಿಗಳಿಗೆ ಪ್ರತಿಕ್ರಿಯೆಗಳು—ಮುಂತಾದುವುನ್ನು ಹೆಸರಿಸಬಹುದು. ವಿಶೇಷ ಪ್ರಭಾವಗಳಿಂದ ಆಗುವ ಪ್ರತಿಕ್ರಿಯೆಗಳಿಗೆ ಅಲರ್ಜಿ ಎಂಬ ಪದವನ್ನು ಉಪಯೋಗಿಸಲು ಕ್ಲೆಮೆನ್ಸ್ ಫಾನ್ ಪಿರ್ಕ್ ಸೂಚಿಸಿದ (1906) ವಂಶಪಾರಂಪರ್ಯವಾಗಿ ಬಂದ ಅಥವಾ ವ್ಯಕ್ತಿಯ ಜೀವನದಲ್ಲೆ ಗಳಿಸಿದ, ಪರಕೀಯ ವಸ್ತುಗಳಿಗೆ ತೋರುವ ಮಿತಿಮೀರಿದ ಪ್ರತಿಕ್ರಿಯೆ ಎಂಬುದು ಅಲರ್ಜಿ ಎಂಬುದರ ಈಗಿನ ಅರ್ಥ. ಈಗ ವೈದ್ಯರಲ್ಲದವರಲ್ಲಿ ಕೆಲವರು ಗೂರಲು ಮುಂತಾದ ಬೇನೆಗಳಿಗೆ ಅಲರ್ಜಿ ಎಂದು ಹೇಳುವುದುಂಟು.

ಹಾವುಮೀನಿನ ಲಸಿಕೆಯನ್ನು ಎರಡನೆಯ ಬಾರಿ ಚುಚ್ಚಿದಾಗ ಕೆಲವು ವೇಳೆ ಪ್ರಾಣಿಯಲ್ಲಿ ಆಗುವ ಮರಣ ಪ್ರತಿಕ್ರಿಯೆಗೆ ಅನಾಫಿಲಾಕ್ಸಿಸ್ (ಮರೆಹಾರಿಕೆ) ಎಂಬ ಪದವನ್ನು ಚಾರ್ಲ್ಸ್ ರಿಜೆಟ್ ಬಳಕೆಗೆ ತಂದ (1898). ಲಸಿಕೆಯನ್ನು ಮೊದಲ ಸಲ ಚುಚ್ಚಿದಾಗ ಏನೂ ಕೆಟ್ಟದ್ದಾಗದುದರಿಂದ ಪ್ರೊಫೈಲಾಕ್ಸಿಸ್ (ಮರೆನೀಡುವೆ) ಎಂಬುದಕ್ಕೆ ವಿರುದ್ಧ ಅರ್ಥಕೊಡುವ ಅನಾಫಿಲಾಕ್ಸಿಸ್ ಪದವನ್ನು ಬಳಸಿದ. ಸಾಯಿಸಿದ ಕ್ರಿಮಿಗಳ ಅಥವಾ ಅವುಗಳ ವಿಷಗಳನ್ನು ಚುಚ್ಚುವುದರಿಂದ ಏಳುವ ರೋಗವನ್ನು ಪಡೆವುದೇ ಮರೆನೀಡುವೆ. ಉದಾಹರಣೆಗೆ, ಸಿಡುಬು ಹಾಕುವುದು ಮತ್ತು ಕಾಲರ ಲಸಿಕೆ. ಈ ಲಸಿಕೆಗಳನ್ನು ಹಾಕಿಸಿಕೊಂಡರೆ ಆಯಾ ರೋಗಗಳು ಬಂದು ಯಾರೂ ಸಾಯುವುದಿಲ್ಲ. ಪರಕೀಯ ಪ್ರೋಟೀನನ್ನು ಎರಡನೆಯ ಸಲ ಚುಚ್ಚಿದಾಗ ಪ್ರಾಣಿಗಳಲ್ಲಾಗುವ ಕೆಟ್ಟ ಪ್ರತಿಕ್ರಿಯೆಗೆ ಮರೆಹಾರಿಕೆ ಎಂಬುದು ಈಗಿನ ವೈಜ್ಞಾನಿಕ ಪದ.

ಒಗ್ಗದಿಕೆ ಮತ್ತು ಮರೆಹಾರಿಕೆ ಪ್ರತಿಕ್ರಿಯೆಗಳು ಪ್ರಾಣಿಗಳಲ್ಲೂ ಮನುಷ್ಯನಲ್ಲೂ ವಿವಿಧ ಪರಿಸ್ಥಿತಿಗಳಲ್ಲಿ ವಿವಿಧ ರೀತಿಯಲ್ಲಿ ವಿವಿಧ ಪರಿಣಾಮಗಳನ್ನೂ ಚಿಹ್ನೆಗಳನ್ನೂ ಉಂಟುಮಾಡುತ್ತವೆ. ಇವೆಲ್ಲವನ್ನೂ ಪ್ರಾಣಿ ತನ್ನ ಸುತ್ತಲಿನ ಸ್ಥಿತಿಗತಿಗಳಗೆ ಹೊಂದಿಕೊಳ್ಳುವ ಯುಕ್ತ ವ್ಯಾಪಾರಗಳೆಂದು ತಿಳಿಯಬಹುದು.

ಮರೆಹಾರಿಕೆ ಪ್ರತಿಕ್ರಿಯೆ : ಒಂದೊಂದು ಪ್ರಾಣಿಜಾತಿಗೂ ಇದು ವಿಶಿಷ್ಟ. ಪ್ರತಿಕ್ರಿಯೆಯನ್ನು ಕೆರಳಿಸುವ ಪರಕೀಯ ಪ್ರೊಟೀನಿನಿಂದ ಇದು ನಿಶ್ಚಿತವಾದುದಲ್ಲ. ಉದಾಹರಣೆಗೆ, ಗಿನಿ ಇಲಿಗೆ (ಗಿನಿ ಪಿಗ್) ಕುದುರೆಯ ರಕ್ತದ ರಸಿಕೆ (ಸೀರಂ) ಮೊಟ್ಟೆಯ ಬಿಳಿಲೋಳೆ ಅಥವಾ ಇತರ ಪ್ರೋಟೀನ್ ವಸ್ತುವನ್ನು ಮೇಲಿಂದ ಮೇಲೆ ಚುಚ್ಚುತ್ತಿದ್ದರೆ, ಅದು ಬರುಬರುತ್ತ ಮೈಗೆ ಒಗ್ಗದಂತಾಗಿ ಆ ಪ್ರೋಟೀನಿಗೆ ಬಲವಾಗಿ ಎದುರುಬೀಳುತ್ತದೆ. ಹೀಗಾಗಿ 10–12 ದಿವಸಗಳ (ಒಗ್ಗದಿಕೆ ಉಂಟಾಗುವ ಕಾಲ) ಮೇಲೆ ಮತ್ತೆ ಅದೇ ಪ್ರೋಟೀನಿನ ಚುಚ್ಚಿಕೆ ಮೈಗಾಗದೆ ಕೆಲವು ಮಿನಿಟುಗಳಲ್ಲಿ

ಆ ಪ್ರಾಣಿ ಸೀನುತ್ತದೆ, ಮೂಗನ್ನು ಕೆರೆದುಕೊಳ್ಳುತ್ತದೆ, ಪರದಾಡುತ್ತದೆ, ಸಾಧಾರಣವಾಗಿ ಉಚ್ಚೆ ಹೊಯ್ದುಕೊಂಡು, ಉಸಿರಾಡಲು ಬಲು ಕಷ್ಟಪಡುತ್ತದೆ. ಕಷ್ಟಪಟ್ಟರೂ ಆಕ್ಸಿಜನ್ ಸಾಕಷ್ಟು ಮೈಗೂಡದೆ, ಸಾಯುವ ತನಕ ಅದರ ಕಷ್ಟ ಹೆಚ್ಚಬಹುದು. ಪುಪ್ಪುಸಗಳಲ್ಲಿರುವ ಗಾಳಿಕೊಳವೆಗಳು ಕುಗ್ಗಿ ಮುಚ್ಚಿಕೊಳ್ಳುವುದರಿಂದ ಗಾಳಿ ಒಳಕ್ಕೆ ಹೋಗದೆ ಉಸಿರಾಟ ಕಷ್ಟವಾಗುತ್ತದೆ. ಅದೇ ನಾಯಿಯಲ್ಲಾದರೆ ಮುಖ್ಯ ಚಿಹ್ನೆಗಳು—ವಾಂತಿ, ಮಲವಿಸರ್ಜನೆ, ರಕ್ತದ ಒತ್ತಡ ತಗ್ಗುವಿಕೆ, ಜ್ಞಾನ ತಪ್ಪುವುದು ಮತ್ತು ರಕ್ತ ಗಡ್ಡೆಕಟ್ಟಿದಂತಾಗುವುದು. ಮೊಲದಲ್ಲಿ ಮುಖ್ಯ ಚಿಹ್ನೆಗಳು—ಕಿವಿಗಳು ಒಂದು ಸಲ ಕೆಂಪಗಾದರೆ ಒಂದು ಸಲ ಬಿಳಿಚಿಕೊಳ್ಳುವುದು, ಮಲಮೂತ್ರ ವಿಸರ್ಜನೆ, ಗುಂಡಿಗೆಯ ಅಕ್ರಮ ಬಡಿತ, ಸೆಳವು. ಇನ್ನೂ ಹಲವು ಚಿಹ್ನೆಗಳೂ ಈ ಪ್ರಾಣಿಗಳಲ್ಲಿ ಕಾಣುತ್ತವೆ ; ಉದಾಹರಣೆಗೆ, ಬಿಳಿ ರಕ್ತಕಣಗಳ ಸಂಖ್ಯೆ ಕುಸಿತ, ಹಾಲುರಸದ (ಲಿಂಫ್) ಹೆಚ್ಚಳಿಕೆ. ಪ್ರಾಣಿ ಇದರಿಂದ ಚೇತರಿಸಿಕೊಂಡು ಬದುಕಿದಲ್ಲಿ, 1–2 ದಿವಸಗಳು ಇನ್ನೊಂದು ಚುಚ್ಚುಗೆಗೆ ಕಷ್ಟಪಡದು. ಆಗ ಸುಲಭವಾಗಿ ಈಡಾಗದಿರುವುದರಿಂದ, ಅದು ಒಗ್ಗುವ ಸ್ಥಿತಿಯಲ್ಲಿರುತ್ತದೆ.

ಹೀಗೆ ಒಗ್ಗದಿಕೆ ತೋರುವ ಪ್ರಾಣಿಗಳಿಂದ ತೆಗೆದ ಮಾಂಸವಿಶೇಷಗಳೂ ಒಗ್ಗದಿಕೆಯ ಪ್ರತಿಕ್ರಿಯೆಗಳನ್ನು ತೋರುತ್ತವೆ. ಉದಾಹರಣೆಗೆ, ಗಿನಿ ಇಲಿಯ ಗರ್ಭಕೋಶ ಅಥವಾ ಕರುಳಿನ ತುಂಡನ್ನು ಬೆಚ್ಚಗೆ ಆಕ್ಸಿಜನ್ ಇರುವ ಮೈರಸದಂತಿರುವ ಲವಣ ದ್ರಾವಣದಲ್ಲಿ ತೂಗಹಾಕಿ, ಒಗ್ಗದಿಕೆ ಉಂಟುಮಾಡಿದ ಪರಕೀಯ ಪ್ರೋಟೀನನ್ನು ತೀರ ಸಣ್ಣ ಪ್ರಮಾಣದಲ್ಲಿ ತಾಕಿಸಿದರೂ ಆ ಭಾಗ ಬಲವಾಗಿ ಸೆಟೆದು ಮುದುಡಿಕೊಳ್ಳುತ್ತದೆ. ಇದಕ್ಕೆ ಷೂಲ್ಟ್ಜ-ಡೇಲ್ ಪರೀಕ್ಷೆ ಎಂದು ಹೆಸರು. ಇದು ಎಷ್ಟು ಸೂಕ್ಷ್ಮ ಮತ್ತು ವಿಶಿಷ್ಟವೆಂದರೆ ಆ ಪರಕೀಯ ಪ್ರೋಟೀನಿನ ಒಂದು ಮಿಲಿಗ್ರಾಮಿನ ಭಾಗಾಂಶವಿರುವುದನ್ನೂ ಈ ಪರೀಕ್ಷೆಯಿಂದ ಕಂಡುಹಿಡಿಯಬಹುದು. ಇತರ ಪ್ರೋಟೀನಿನಿಂದ ಈ ಪ್ರತಿಕ್ರಿಯೆ ಕಾಣದು.

ಕೆಲವು ಪ್ರಾಣಿಗಳಲ್ಲಿ ಮೈಯಲ್ಲಿ ಎಲ್ಲಾದರೂ ಒಂದೆಡೆ ಒಗ್ಗದಿಕೆಯ ವಿಚಿತ್ರಗಳನ್ನು ನೋಡಬಹುದು. ಚುಚ್ಚಿ ಒಗ್ಗದಂತೆ ಮಾಡಿದ ಮೊಲದ ಚರ್ಮದ ಕೆಳಗೆ ಅದೇ ವಿಶಿಷ್ಟ ಪ್ರೋಟೀನನ್ನು ಚುಚ್ಚಿದರೆ 48 ಗಂಟೆಗಳೊಳಗೆ ಆ ಭಾಗ ಊದಿ, ಗಡುಸಾಗಿ ಕೊಳೆಯಬಹುದು. ಮೊದಲು ಇದನ್ನು ಮಾರೀಸ್ ಆರ್ಥಸ್ ವರ್ಣಿಸಿದುದರಿಂದ ಈ ತಾವಿನ ಪ್ರತಿಕ್ರಿಯೆಗೆ ಆರ್ಥಸ್ ವಿಚಿತ್ರ ಎನ್ನುತ್ತಾರೆ.

ಒಗ್ಗದಿಕೆಯ ತೋರಿಕೆಗಳು : ಒಂದು ಪ್ರಾಣಿಜಾತಿಯಲ್ಲಿ ಕಾಣುವ ಒಂದೇ ತೆರನ ಮರೆಹಾರಿಕೆ ಪ್ರತಿಕ್ರಿಯೆಗೆ ಎದುರಾಗಿ ಮನುಷ್ಯನಲ್ಲಿ ಪ್ರತಿಕ್ರಿಯೆಗಳು ಬಗೆಬಗೆಯಾಗಿವೆ. ಕರಡಜ್ವರ (ನೋಡಿ), ಗೂರಲು, ಇಸಬುಗಳು ತೀರ ಸಾಧಾರಣ ಪ್ರತಿಕ್ರಿಯೆಗಳು. ಆದರೆ ಜ್ವರ, ತಿಮಿರ, ನವೆ, ದದ್ದುಗಳು, ತಲೆನೋವು, ಹೊಟ್ಟೆನುಲಿತ, ಭೇದಿ ಮತ್ತು ಇನ್ನೂ ಹಲವು ರೋಗಲಕ್ಷಣಗಳಿಗೆ ಒಗ್ಗದಿಕೆ ಮೂಲವಾಗಿರಬಹುದು ; ಮೂತ್ರಪಿಂಡದ ಉರಿತ (ನೆಫ್ರೈಟಿಸ್), ಕೀಲುವಾತದ ಜ್ವರ ಮುಂತಾದ ರೋಗಗಳು ಸರಕಾಯ್ಜೀವಿಗಳ (ಸ್ಟ್ರೆಪ್ಟೊಕಾಕೈ) ವಿಷಗಳ ಎದುರು ಒಗ್ಗದಿಕೆಯ ಪ್ರತಿಕ್ರಿಯೆಗಳೆಂದು ತಿಳಿಯಬಹುದು. ಯಾವುದಾದರೂ ಒಂದು ನಿರ್ದಿಷ್ಟ ರೋಗ ವಿಚಾರಕ್ಕೆ ಕನಿಷ್ಠವಾಗಿ ಮೂರು ಸಂಗತಿಗಳಿವೆ : 1 ಪರಕೀಯ ವಸ್ತು ಸೋಕುವ ಅಥವಾ ದೇಹದ ಒಳಹೊಗುವ ರೀತಿ, 2 ಒಗ್ಗದಿಕೆಜನಕವಾದ (ಅಲರ್ಜೆನ್) ಪರಕೀಯ ವಸ್ತುವಿನ ತಾವಿಗಂಟುವ ಗುಣ, 3 ಹೊರವಸ್ತುವಿನ ಹುಟ್ಟುಗುಣ. ಉದಾಹರಣೆಗೆ, ರ್‍ಯಾಗ್‌ವೀಡ್ ಗಿಡದ ಪರಾಗ ಸಾಧಾರಣವಾಗಿ ಮೊದಲು ಕಣ್ಣು ಮೂಗುಗಳಲ್ಲಿ ಹೊಕ್ಕು ಅಲ್ಲಿಯ ಮೈರಸಗಳೊಡನೆ ಬೆರೆತು ಅದೇ ತಾವಿನಲ್ಲಿ ಬೇನೆಯನ್ನುಂಟು ಮಾಡುತ್ತದೆ. ಆದರೆ ಕೆಲವರಲ್ಲಿ ರ್‍ಯಾಗ್‌ವೀಡಿನಿಂದ ಕರಡಜ್ವರವಲ್ಲದೆ ಗೂರಲೂ ಬರುವುದು ; ಅಪೂರ್ವವಾಗಿ ತಲೆನೋವು ಅಥವಾ ತುರುಚೆದದ್ದುಗಳು (ಆರ್ಟಿಕೇರಿಯ) ಕಾಣಬಹುದು. ಸೇವಿಸಿದ ಆಹಾರವಸ್ತುಗಳಿಂದ ಸಾಧಾರಣವಾಗಿ ಆಗುವ ಒಗ್ಗದಿಕೆ ಪ್ರತಿಕ್ರಿಯೆಗಳು—ಪೈತ್ಯಗಂದೆ ಅಥವಾ ದದ್ದುಗಳು ಚರ್ಮದಲ್ಲೇ ತೋರುತ್ತವೆ. ರ್‍ಯಾಗ್‌ವೀಡ್ ಪರಾಗದಿಂದ ಕರಡಜ್ವರವೂ ಮೀನು ತಿಂದರೆ ಪೈತ್ಯವೂ ಒಬ್ಬನಲ್ಲೇ ಕಾಣಬಹುದು. ಕೆಲವು ಮದ್ದುಗಳ ಸೇವನೆಯಿಂದಲೂ ಹೀಗೆ ದದ್ದುಗಳೇಳಬಹುದು. ಈ ಎಲ್ಲ ಪ್ರತಿಕ್ರಿಯೆಗಳ ಒಂದು ಸಾಮಾನ್ಯಗುಣವೆಂದರೆ ಒಂದು ವಸ್ತುವಿಗಾಗುವ ಒಗ್ಗದಿಕೆ ತೋರಿಕೆಗಳು ಅದೇ ಜಾತಿಯ ಹೆಚ್ಚು ಪ್ರಾಣಿಗಳಲ್ಲಿ ಸಾಮಾನ್ಯವಾಗಿ ಆಗುವ ವಿಪರೀತ ಅಥವಾ ಔಷಧ ಶಾಸ್ತ್ರದಲ್ಲಿರುವ ಪ್ರತಿಕ್ರಿಯೆಗಿಂತ ಬೇರೆಯಾಗಿರುತ್ತವೆ. ಉದಾಹರಣೆಗೆ, ಔಷಧ ಶಾಸ್ತ್ರದ ಪ್ರಕಾರ ಬಹುಜನರಲ್ಲಿ ಫೀನೋಬಾರ್ಬಿಟೋನಿಗೆ ಪ್ರತಿಕ್ರಿಯೆ ಮಂಪರು ; ಆದರೆ ಒಗ್ಗದಿಕೆಯಿಂದ ದದ್ದುಗಳೇಳಬಹುದು.

ಒಗ್ಗದಿಕೆ ರೋಗ ನಿರ್ಣಯ : ಮೊಟ್ಟಮೊದಲಾಗಿ, ಈ ಪ್ರತಿಕ್ರಿಯೆ ಒಗ್ಗದಿಕೆಯೇ ಅಲ್ಲವೇ ಎಂದು ನಿರ್ಧರಿಸಬೇಕು. ಒಗ್ಗದ ಕಾರಣವಸ್ತುವನ್ನು ಕಂಡುಹಿಡಿಯಬೇಕು. ಎರಡನೆಯದಕ್ಕೆ ಉತ್ತರ ಸಿಗದೆ ಮೊದಲಿನ ಪ್ರಶ್ನೆಗೆ ಉತ್ತರ ಕಾಣುವುದು ಅಸಂಭವ. ಪ್ರತಿಕ್ರಿಯೆಯ ಸ್ವಭಾವದಿಂದ (ಉದಾ.—ಪೈತ್ಯ) ಅಥವಾ ರೋಗವಿಲ್ಲದಿರುವ ಕಾಲಗಳ ನಡುವೆ ರೋಗ ಮತ್ತೆ ಕಾಣಿಸಿಕೊಳ್ಳುವುದರಿಂದ ಒಗ್ಗದಿಕೆಯನ್ನು ಶಂಕಿಸಬಹುದು. ಆದರೂ ಕಾರಕವನ್ನು ಕಂಡುಹಿಡಿಯದೆ ಒಗ್ಗದಿಕೆ ಖಚಿತವಿಲ್ಲ. ಜೀವಿಯಲ್ಲಿ ಪ್ರತಿಕ್ರಿಯಾಮಾರ್ಗಗಳು ಕೆಲವೇ ಇರುವುದೇ ಕಾರಣ, ಚೆಂಡನ್ನು ಆಡಿಸುವ ಶಕ್ತಿ ಪುಟಿದೇಳುವುದು ಅಥವಾ ಉರುಳುವುದು ಮಾತ್ರವೇ. ಹಾಗೇ, ಗಾಸಿಗೊಳಿಸುವ, ಅಪಾಯಕರ ಚೋದನೆಗಳಿಗೆ ಮೈಯ ಉತ್ತರ ಒಂದೇ ಇರಬಹುದು. ಉದಾಹರಣೆಗೆ, ರ್‍ಯಾಗ್‌ವೀಡ್ ಒಗ್ಗದಿದ್ದರೆ, ತಂಗಾಳಿಸೇವನೆ, ಕೆಮ್ಮು, ಪುಪ್ಪುಸನಾಳುರಿತ, ಹೃದ್ರೋಗ, ವ್ಯಾಕುಲಚಿತ್ತ, ಅಥವಾ ಉಸಿರ್ನಾಳವನ್ನು ಒತ್ತುವ ಗೆಡ್ಡೆ ಇವೆಲ್ಲಕ್ಕೂ ಒಂದೇ ಉತ್ತರವಾಗಿ ಸಾಮಾನ್ಯ ಗೂರಲು ಏಳಬಹುದು. ವಾಸ್ತವಿಕವಾಗಿ ಈ ಕಾರಣಗಳಲ್ಲಿ ಹಲವಾರು ಒಬ್ಬನಲ್ಲೇ ಆಗಾಗ ಒಟ್ಟಿಗೇ ತೋರುತ್ತವೆ.

ಒಗ್ಗದಿಕೆ ನಿರ್ಧಾರದಲ್ಲಿ ಕಾರಕವನ್ನು ತಿಳಿಯುವುದು ಮುಖ್ಯವಾದುದರಿಂದ ಒಗ್ಗದ ವಸ್ತುಗಳ ಹಲ ಬಗೆಗಳ ಸ್ವಲ್ಪ ಪರಿಚಯ ಅಗತ್ಯ. ಮದ್ದುಗಳು, ಹೂಪರಾಗ, ಬೂಷ್ಟು, ಗಾಯದ ಬಟ್ಟೆಗಳು, ಪ್ರಾಣಿಚರ್ಮಗಳ ಹೊಟ್ಟು, ತಲೆಹೊಟ್ಟು; ಕುಂಕುಮ, ಮುಖಪುಡಿ ಇತ್ಯಾದಿ ಅಲಂಕಾರದ್ರವ್ಯಗಳು, ಕೈಗಾರಿಕೆ ರಾಸಾಯನಿಕಗಳು, ಕ್ರಿಮಿಗಳು, ಆಹಾರದ್ರವ್ಯಗಳು ಮುಖ್ಯ ಕಾರಕಗಳು. ಈ ಪಟ್ಟಿಯಲ್ಲಿ ಒಬ್ಬನಿಗೆ ತಾಕಬಹುದಾದ ಎಲ್ಲ ವಸ್ತುಗಳಿದ್ದರೂ ಒಗ್ಗದಿಕೆ ಪ್ರತಿಕ್ರಿಯೆಯ ಸ್ವಭಾವ, ಕ್ರಮವನ್ನು ಗಮನಿಸುವುದರಿಂದ ಹೆಚ್ಚು ಸಂಗತಿಗಳು ತಿಳಿಯುತ್ತವೆ. ನಿಖರವಾದ ನಿರ್ಣಯಕ್ಕೆ ಬೇಕಾದುದು, ರೋಗಿಯ ಸರಿಯಾದ ಪೂರ್ಣ ಚರಿತ್ರೆ. ಹೂಪರಾಗ, ಬೂಜಲು ಮತ್ತಿತರ ಇಂಥ ಉಸಿರಲ್ಲಿ ಒಳಸೇರುವ ಪದಾರ್ಥಗಳಿಗೆ ಪ್ರತಿಕ್ರಿಯೆ ಕಣ್ಣು, ಮೂಗು ಉಸಿರ್ನಾಳಗಳಲ್ಲಿ ಚಿಹ್ನೆಗಳನ್ನು ತೋರುತ್ತದೆ. ಅಂಗರಾಗವಸ್ತುಗಳನ್ನು ಹಚ್ಚಿರುವ ಮುಖ ಕೈಗಳ ಮೇಲೆ ಪ್ರತಿಕ್ರಿಯೆಗಳಾಗುತ್ತವೆ. ಹೂವಿನ ಪರಾಗದ ಒಗ್ಗದಿಕೆಗೆ ಋತು ಪ್ರಭಾವವಿದೆ, ವಸಂತಋತುವಿನಲ್ಲಿ ಮರಗಳೂ ಸೆಕೆಗಾಲದ ಮೊದಲಲ್ಲಿ ಹುಲ್ಲೂ ಆಮೇಲೆ ಕಳೆಗಳೂ ಪರಿಣಾಮಕಾರಿ ಕಾರಕಗಳು.

ಶೋಧನೆಯ ಕ್ರಮಗಳು : ಎಷ್ಟೋ ವಸ್ತುಗಳು ಒಗ್ಗದೆನ್ನುವವರ ವಿಚಾರಗಳನ್ನು ವಿವರವಾಗಿ ತಿಳಿಯುವುದೂ ನಿಸರ್ಗದಲ್ಲಿನ ವಸ್ತುಗಳಿಂದಾಗುವ ಪ್ರತಿಕ್ರಿಯೆಗಳನ್ನು ಚಾಚೂ ತಪ್ಪದೆ ಅವನ್ನೇ ಮತ್ತೆ ಚೋದಿಸುವಂತಿರುವುದೂ ಮುಖ್ಯ. ಒಗ್ಗದೆನ್ನುವ ವಸ್ತು ತುಟಿರಂಗಿನಂಥ ಚರ್ಮಸ್ಪರ್ಶಿಯಾದರೆ ಅದನ್ನೇ ಚೆನ್ನಾಗಿರುವ ಬೇರೆ ಚರ್ಮಭಾಗಕ್ಕೆ ಹಚ್ಚಿದಾಗ ಪ್ರತಿಕ್ರಿಯೆಯಾದರೆ ತುಟಿರಂಗು ಆ ವ್ಯಕ್ತಿಗೆ ಒಗ್ಗದೆಂದೂ ಪ್ರತಿಕ್ರಿಯೆ ಇಲ್ಲದಿದ್ದರೆ ಒಗ್ಗುವುದೆಂದೂ ಅರಿಯಬಹುದು. ಒಂದು ಆಹಾರದ್ರವ್ಯವನ್ನು ಊಟದಲ್ಲೋ ತಿಂಡಿಯಲ್ಲೋ ಕೊಡಬಹುದು ಅಥವಾ ಕೊಡದಿರಬಹುದು. ಇದರಿಂದ ಒಗ್ಗದ ವಸ್ತು ಯಾವುದೆಂದು ಕಂಡುಹಿಡಿಯಬಹುದು. ಇದಕ್ಕೋಸ್ಕರ ವಿವರವಾಗಿ ತಿಂಡಿತಿನಿಸುಗಳ ದಿನಚರಿ ಪುಸ್ತಕಗಳನ್ನು ಎಚ್ಚರಿಕೆಯಿಂದ ಇಡಬೇಕು. ಕೆಲವು ರೋಗಿಗಳ ವಿಚಾರದಲ್ಲಿ ಕೆಲವೇ ಮಾತ್ರವಿರುವ ಅಪೂರ್ವ ಒಗ್ಗದಿಕೆ ಆಹಾರವಸ್ತುಗಳನ್ನು ಕಟ್ಟುನಿಟ್ಟಾಗಿ ಒಂದೊಂದನ್ನೇ ಬಿಟ್ಟುಬಿಡುವಂತಿರುವ ಊಟತಿಂಡಿಗಳಿರಬೇಕು. ಆಗ ಶಂಕಿಸಲಾದವನ್ನು ಒಂದೊಂದಾಗಿ ಸೇರಿಸಿ ಹೌದೋ ಅಲ್ಲವೋ ಎಂದು ನಿರ್ಧರಿಸಬಹುದು. ಕೆಲವೇಳೆ ಒಗ್ಗದ ವಸ್ತು ತಾಕುವುದಕ್ಕೂ ಒಗ್ಗದಿಕೆಯ ಪ್ರತಿಕ್ರಿಯೆಗೂ ನಡುವೆ ಕೆಲವು ದಿವಸಗಳು ಕಳೆಯಬಹುದು. ಈ ನಿಧಾನ ಪ್ರತಿಕ್ರಿಯೆಯಿಂದ ತೊಂದರೆಗಳಿವೆ. ಆಹಾರವಸ್ತುಗಳ ಒಗ್ಗದಿಕೆ ಕಂಡುಹಿಡಿಯಲು ಬಹಳ ಕಾಲ ಹಿಡಿಯಬಹುದು. ಚರ್ಮತಾಕಣೆ ಒಗ್ಗದಿಕೆ ವಿಚಾರದಲ್ಲಿ ಚೋದಕವಸ್ತುವನ್ನು ಒಂದು ಅಂಟು ತೇಪೆಗೆ ಬಳಿದು ಚರ್ಮಕ್ಕೆ ಮೆತ್ತಿ ಹಲವು ದಿನಗಳು ಬಿಡಬಹುದು. ಉಸಿರಲ್ಲಿ ನುಗ್ಗುವ ಪ್ರಚೋದಕಗಳಿಗೆ ಈ ವಿಧಾನ ಅಸಾಧ್ಯ. ಅಲ್ಲದೆ ಶಂಕಿಸಲಾದ ವಸ್ತುವನ್ನು ಮೂಸಿಸುವುದು ಹಲವು ವೇಳೆ ಅಪಾಯಕರ. ಈ ಸಂದರ್ಭದಲ್ಲಿ ಪ್ರಚೋದಕಗಳ ಕಷಾಯಗಳನ್ನೋ ದ್ರಾವಣವನ್ನೋ ಸಣ್ಣ ಕೆರೆದ ಗೀರಿನ ಮೂಲಕ ಚರ್ಮಕ್ಕೆ ಬಳಿಯಬಹುದು, ಸೂಜಿ ಜೀಕಳಿಯಿಂದ ಚರ್ಮದ ಮೇಲ್ಪದರಗಳಿಗೆ ಚುಚ್ಚಿ ಹೊಗಿಸಬಹುದು. ಈ ವಿಧಾನಗಳು ಅಷ್ಟು ನಂಬಲರ್ಹವಲ್ಲ.

ಒಗ್ಗದಿಕೆ ಪ್ರತಿಕ್ರಿಯೆಯ ತಂತ್ರ : ಇದನ್ನು ವಿವರಿಸುವುದರಲ್ಲಿ ಹಲವು ಅಭಿಪ್ರಾಯಸೂತ್ರಗಳಿವೆ. ಆದರೆ ಇವುಗಳಲ್ಲಿ ಯಾವುದರಿಂದಲೂ ಕಂಡ ವಿಚಿತ್ರಗಳಿಗೆ ತೃಪ್ತಿಕರ ಕಾರಣಗಳಾಗಲಿ ಉತ್ತರಗಳಾಗಲಿ ಸಿಗುವುದಿಲ್ಲ. ಇವಕ್ಕೀಡಾಗುವವನಲ್ಲಿ ಒಗ್ಗದ ವಸ್ತು ಸೇರುವುದರಿಂದ ಬಗೆಬಗೆಯ ವಿಚಾರಗಳು ನಡೆವಂತಿರುವುವು. ರಾಸಾಯನಿಕ ವಸ್ತುವಾದ ಹಿಸ್ಟಮೀನ್ ಕೆಲವೇಳೆ ಮೈಯಲ್ಲಿ ಏಳುತ್ತದೆ. ಇದು ಕರುಳಿನಂಥ ಅಂಗಗಳಲ್ಲಿರುವ ಮನಸ್ಸಿನ ಹತೋಟಿಯಲ್ಲಿಲ್ಲದ ನಯಸ್ನಾಯುವಿನ ಕುಗ್ಗು, ಲೋಮನಾಳಗಳ ಹಿಗ್ಗು ರಕ್ತದ ಒತ್ತಡದ ತಗ್ಗಿಸುವ ಬಹುಪ್ರಭಾವ ತೋರುವ ವಸ್ತು. ಅಡ್ರಿನಲಿನ್ ಚುಚ್ಚುಮದ್ದಿನ ಪ್ರಭಾವ ಇದಕ್ಕೆ ವಿರುದ್ಧ. ಇದರೊಂದಿಗೆ

ಉತ್ಪತ್ತಿಯಾಗುವ ಇತರ ವಸ್ತುಗಳಲ್ಲಿ ಅಸಿಟೈಲ್ ಕೋಲಿನ್, ಹೆಪರಿನ್ ಸಿರೋಟೋನಿನುಗಳೂ ಇರಬಹುದು. ಜೀವಕೋಶಗಳು ಹಾಳಾದಾಗ ಅವುಗಳಲ್ಲಿ ಈ ತೆರನ ಇನ್ನೂ ಹೆಚ್ಚಿನ ವಸ್ತುಗಳು ಹುಟ್ಟಬಹುದು. ಜೀವಕೋಶಗಳು ಹೇಗೆ ಹಾಳಾಗುತ್ತವೆಂದು ಅರಿವಿಗೆ ಎಟಕುವುದಿಲ್ಲ. ಆದರೂ ಒಗ್ಗದಿಕೆ ಚೋದಕಕ್ಕೂ ರೋಧವಸ್ತುವೆಂಬ (ಆಂಟಿಬಾಡಿ) ಮೈಯಲ್ಲಿನ ಒಂದು ಪ್ರೋಟೀನಿಗೂ ಆಗುವ ಪ್ರತಿಕ್ರಿಯೆಯೇ ಒಗ್ಗದಿಕೆಯ ಮೂಲ ತಂತ್ರ ಎಂದು ಹಲವು ವಿಜ್ಞಾನಿಗಳು ನಂಬಿದ್ದಾರೆ.

ಒಗ್ಗದಿಕೆ, ರೋಗತಡೆ (ಇಮ್ಯೂನಿಟಿ) : ರೋಗಾಣುಗಳಿಂದೇಳುವ ರೋಗಕ್ಕೆ ಒಬ್ಬನ ಸಾಮಾನ್ಯ ಪ್ರತಿಕ್ರಿಯೆ ಮೈಯಲ್ಲಿ ರೋಧವಸ್ತುಗಳ ಉತ್ಪತ್ತಿ. ಇವು ಒಳಹೊಗುವ ರೋಗಾಣುಗಳನ್ನು ತಡೆಗಟ್ಟುವ, ನಾಶಪಡಿಸುವ, ಕಾಪಿಡುವ ವಸ್ತುಗಳು. ಈ ರೋಧವಸ್ತುಗಳನ್ನು ಮೈಯಲ್ಲಿ ಹುಟ್ಟುವಂತೆ ಚೋದಿಸಿದ ರೋಗ ಮತ್ತೊಮ್ಮೆ ತಗಲಿದಲ್ಲಿ ಮೈಯಲ್ಲಿ ಮೊದಲೇ ಹುಟ್ಟಿಕೊಂಡ ರೋಧವಸ್ತುಗಳು ಮೈಗೆ ಮರೆಕೊಡುಗೆ (ಇಮ್ಯೂನಿಟಿ) ನೀಡುತ್ತವೆ. ರೋಧವಸ್ತುಗಳು ಬಹು ವಿಶಿಷ್ಟ ರೀತಿಯವು. ದಡಾರದ ರೋಧವಸ್ತು ಸೀತಾಳಸಿಡುಬಿನ ಎದುರು ಮರೆ ನೀಡುವುದಿಲ್ಲ. ವೈರಸುಗಳನ್ನೂ ರೋಗಾಣುಗಳನ್ನೂ ಮೈಯ ಇತರ ವಸ್ತುಗಳಿಂದಲೋ ಜೀವಕಣಗಳಿಂದಲೋ ನಾಶಿಸುವುದು ರೋಧವಸ್ತುವಿನ ಮುಖ್ಯ ಕೆಲಸ. ಸತ್ತ ವೈರಸ್ ಮತ್ತು ರೋಗಾಣುಗಳ ವಿಷಗಳಿಂದ ರೋಧವಸ್ತು ಹುಟ್ಟಬಹುದು. ಈ ವಿಷಯವೇ ಮರೆಕೊಡುಗೆಯ ಚೋದನಾ ವಿಧಾನಗಳ ಬುನಾದಿ. ದೇಹದ ಮಾಂಸ ವಿಶೇಷಗಳಲ್ಲಿ ಸೇರುವ ಅಪಾಯವಿಲ್ಲದ ವಸ್ತುಗಳಿಂದಲೂ ರೋಧವಸ್ತುಗಳು ಏಳುತ್ತವೆ. ಬದುಕಿ ಬಾಳಲು ಬೇಕೇಬೇಕಾಗಿ ಹೊಂದಿಕೊಳ್ಳುವ ತಂತ್ರವಾದ ರೋಧವಸ್ತುಪ್ರತಿಕ್ರಿಯೆ ಕೆಲವು ವೇಳೆ ಮರೆಕೊಡುವುದರ ಜೊತೆಗೆ ಒಗ್ಗದಿಕೆಯ ಕೆಟ್ಟ ಪರಿಣಾಮವನ್ನೂ ತೋರುತ್ತದೆ. ಅಪಾಯಕರ ಮತ್ತು ಅಪಾಯವಿಲ್ಲದ ವಸ್ತುಗಳನ್ನು ವಿವೇಚಿಸಲು ಮೈಗೆ ಶಕ್ತಿ ಇಲ್ಲದ್ದೂ ಒಗ್ಗದಿಕೆಗೆ ಒಂದು ಕಾರಣ. ಒಬ್ಬನನ್ನು ಎಚ್ಚರಿಸಿ ಅವನ ಮೈಕಾಪಿಡುವ ವ್ಯವಸ್ಥೆಗಳನ್ನು ಚೋದಿಸುವುದು ಕೆಟ್ಟ ರೋಗಾಣುಗಳು ವಿಷಪದಾರ್ಥಗಳಿಗಾಗುವ ಒಗ್ಗದಿಕೆ ಚಿಹ್ನೆಗಳ ಬಹುಮುಖ್ಯ ಕೆಲಸವೆಂಬುದು ಇನ್ನೊಂದು ಕಾರಣ.

ಚಿಕಿತ್ಸೆ : ವೈದ್ಯಶಾಸ್ತ್ರದಲ್ಲಿ, ಗೊತ್ತಿರುವ ಕಾರಣ ನಿವಾರಣೆಯೇ ಎಲ್ಲ ಚಿಕಿತ್ಸಾತಂತ್ರಗಳ ಮೂಲಸೂತ್ರ. ಒಗ್ಗದ ವಸ್ತು ಯಾವುದೆಂದು ತಿಳಿದ ಮೇಲೆ ರೋಗಿ ಅದನ್ನು ಹತ್ತಿರ ಸೇರಿಸಬಾರದು ; ಹಕ್ಕಿ, ಬೆಕ್ಕು, ನಾಯಿ, ಮತ್ತಿತರ ಪ್ರಾಣಿಗಳನ್ನು ಮನೆಯಲ್ಲಿಲ್ಲದಂತೆ ಮಾಡುವುದು, ತಲೆದಿಂಬಿನ ರೇಷ್ಮೆ ಗವುಸನ್ನು ಬದಲಾಯಿಸುವುದು, ಮನೆಯನ್ನು ಚೊಕ್ಕಟಮಾಡುವುದು, ದೂಳಿನ ಕಂಬಳಿ, ಜಮಖಾನೆ, ಹಳೆಯ ಮೆತ್ತೆ, ಸೋಫಾಗಳನ್ನು ಮನೆಯಿಂದ ತೆಗೆವುದು—ಈ ಕಾರ್ಯಕ್ರಮವೇ ಸಾಕಾಗಬಹುದು. ತನ್ನ ಹೆಂಡತಿ ಅವಳ ಮುಖಕ್ಕೆ ಪೂಸುವ ಅಂಗರಾಗದ ಸುವಾಸನೆ ಹುಡಿಯೇ ಗಂಡನಿಗೆ ಒಗ್ಗದಿರಬಹುದು ; ಆಗ ಅದನ್ನು ಪೂರ್ತಿಯಾಗಿ ಬಿಡಬೇಕು. ಚೋದಕವಸ್ತುವಿನ ಸುಳಿವು ರೋಗಿಯ ಚರಿತ್ರೆಯಲ್ಲಿರುವುದನ್ನು ಎಚ್ಚರದಿಂದ ಕಂಡುಕೊಳ್ಳಬೇಕು. ಈ ರೀತಿಯ ಕಾರಣ ಹೋಗಲಾಡಿಸಲಾಗದಿದ್ದಲ್ಲಿ, ವಿಶಿಷ್ಟ ಚೋದಕವಸ್ತುವನ್ನು ತೀರ ಸಣ್ಣ ಪ್ರಮಾಣಗಳಲ್ಲಿ ಒಂದು ವರಸೆಯಾಗಿ ಚುಚ್ಚುತ್ತ ಒಗ್ಗುವಂತೆ ಮಾಡಲು ಯತ್ನಿಸಬಹುದು. ಆದರೆ ಈ ಕೆಲಸ ಬಲು ಕಷ್ಟ. ಇದಕ್ಕೆ ತಾಳ್ಮೆ ಬೇಕು. ಹೆಚ್ಚು ರೋಗಿಗಳಲ್ಲಿ ಒಬ್ಬರೊಡನೊಬ್ಬರನ್ನು ಹೋಲಿಸಲು ಸುಲಭವಾದ್ದರಿಂದ ಕರಡಜ್ವರದಲ್ಲಂತೂ ಇದು ಹೆಚ್ಚು ಫಲಕಾರಿ. ಹೆಚ್ಚೇನೆಂದರೆ ಒಂದೇ ರೋಗಿಯನ್ನು ವರ್ಷವರ್ಷವೂ ನೋಡುತ್ತಿರುವುದರಿಂದ ಚುಚ್ಚುಗೆಗಳನ್ನು ತೀರ ಕಡಿಮೆ ಮಾಡಲು ಸಾಧ್ಯ. ಕೊನೆಗೆ ಚುಚ್ಚಬೇಕಿಲ್ಲದಂತೆ ಮಾಡಲೂ ಕೆಲವು ವೇಳೆ ಸಾಧ್ಯ.

1945ರಲ್ಲಿ ಮೊದಲಾಗಿ, ಒಂದೇ ಸಮನಾಗಿ ಬಳಕೆಯಲ್ಲಿರುವ ಹಿಸ್ಟಮೀನ್ ರೋಧಕ ಮದ್ದುಗಳನ್ನು ಕಂಡುಹಿಡಿಯಲಾಗಿ ಆ ದಿಸೆಯಲ್ಲಿ ಎಷ್ಟೊ ಮುನ್ನಡೆಯಾಗಿದೆ. ಅಷ್ಟೇ ಅಲ್ಲದೆ, 1949ರ ಮೇ ತಿಂಗಳಲ್ಲಿ ಅಮೆರಿಕದ ಮೇಯೋ ಚಿಕಿತ್ಸಾಲಯದಲ್ಲಿ ಫಿಲಿಪ್ ಎಸ್. ಹೆಂಚ್, ಎಡ್ವರ್ಡ್ ಸಿ. ಕೆಂಡಲ್ ಮತ್ತು ಅವರ ಸಂಗಡಿಗರು ಅಡ್ರಿನಲ್ ಗ್ರಂಥಿಯಿಂದ ತೆಗೆದ ಕಾರ್ಟಿಸೋನನ್ನೂ ಪಿಟುಯಿಟರಿ ಗ್ರಂಥಿಯಿಂದ ತೆಗೆದ ಒಂದು ಚೋದನಿಕವನ್ನೂ (ಅಡ್ರಿನೊಕಾರ್ಟಿಕೋಟ್ರೋಪಿಕ್ ಹಾರ್ಮೋನ್) ಕಂಡುಹಿಡಿದು ಪ್ರಕಟಿಸಿದರು. ಈ ಅದ್ಭುತ ಪ್ರಭಾವಯುತ ಮದ್ದುಗಳು ದೇಹದಲ್ಲಿ ಕಷ್ಟ ಪ್ರಯಾಸಗಳಿಂದಾಗುವ ಗಾಸಿಗಳ ವಿರುದ್ಧ ಏರ್ಪಡುವ ರಕ್ಷಣವ್ಯವಸ್ಥೆಯಲ್ಲಿ ನೈಸರ್ಗಿಕ ಮುಖ್ಯಪಾತ್ರಧಾರಿಗಳು. ಸಾಕಷ್ಟು ಪ್ರಮಾಣಗಳಲ್ಲಿ ರೋಗಿಗೆ ಕೊಟ್ಟಾಗ ಒಗ್ಗದಿಕೆ ರೋಗಗಳೇ ಅಲ್ಲದೆ ಇನ್ನೂ ಹಲವಾರು ತೊಂದರೆಗಳಿಗೆ ಶಾಮಕವಾಗಿವೆ. ಇವು ಒಗ್ಗದಿಕೆಯ ಪ್ರತಿಕ್ರಿಯೆಗಳನ್ನು ತಡೆಯದಿದ್ದರೂ ಅವುಗಳ ಪರಿಣಾಮಗಳನ್ನು ಯಾವುದೋ ರೀತಿಯಲ್ಲಿ ಸರಿಪಡಿಸುತ್ತವೆ. ಆದರೆ ಬಹುಕಾಲ ಕೊಡುತ್ತಲೇ ಇದ್ದರೆ ಈ ಮದ್ದುಗಳಿಂದ ಬಲು ಕೆಡುಕು. ಒಗ್ಗದಿಕೆಯ ಸಮಸ್ಯೆಗೆ ಅವೇನೂ ಕಡೆಯ ಉತ್ತರವಲ್ಲ.

ಈಚೆಗೆ ಇನ್ನೂ ಕೆಲವು ಮದ್ದುಗಳ ಸೃಷ್ಟಿಯಾಗಿದೆ. ಇವುಗಳಲ್ಲಿ ಮೂರು ವಿಧಗಳು : ಹಿಸ್ಟಮೀನ್ ಮುಂತಾದವನ್ನು ನಾಶಪಡಿಸುವವು ; ಅವು ಕೆಲಸ ಮಾಡುವ ದಾರಿಗೆ ಅಡ್ಡಿ ಬರುವವು ; ಅವುಗಳ ಕೆಲಸಕ್ಕೆ ಎದುರಾಗುವಂಥವು.

(ಎಂ.ಡಿ.; ಪಿ.ಆರ್.ಪಿ.ಎಚ್.)

**ಒಗ್ಗೂಡಿಕೆ :** ಒಂದು ಪದಾರ್ಥದ ಮಾರುಕಟ್ಟೆಯಲ್ಲಿ ಒಂದು ನಿರ್ದಿಷ್ಟ ಸಮಯದಲ್ಲಿರುವ ಬಹುತೇಕ ಎಲ್ಲ ಸರಕಿನ ಸರಬರಾಯಿಯನ್ನೂ ಒಬ್ಬ ವರ್ತಕ ಅಥವಾ ಕೆಲವು ವರ್ತಕರು ಕೂಡಿ ವಶಪಡಿಸಿಕೊಳ್ಳುವ ಕ್ರಮ (ಕಾರ್ನರಿಂಗ್). ಭಾವೀ ಮಾರುಕಟ್ಟೆಯಲ್ಲಿ ಅಲ್ಪಾವಧಿಯ ಮಾರಾಟಕ್ಕಿರುವ ಸರಕನ್ನೆಲ್ಲ ಕೊಂಡು, ಆ ವಾಯಿದೆ ತುಂಬಿದ ದಿನದಂದು ಅಥವಾ ಲೆಕ್ಕ ಚುಕ್ತ ಮಾಡುವ ದಿನದಂದು ಕೃತಕವಾಗಿ ಬೆಲೆ ಏರಿದಾಗ ಲಾಭ ಗಳಿಸುವ ಉದ್ದೇಶದಿಂದ ನಡೆಸುವ ಅಕ್ರಮ ಹಾಗೂ ಅನೀತಿಯುತ ವ್ಯವಹಾರವೂ ಇದರಲ್ಲಿ ಸೇರುತ್ತದೆ. ಒಗ್ಗೂಡಿಕೆ ಈಚೆಗೆ ಜಾರಿಗೆ ಬಂದ ವ್ಯವಹಾರವಲ್ಲ. ಪ್ರಾಚೀನಕಾಲದಿಂದಲೂ ಇದು ಪರಿಚಿತವಾದದ್ದೆ. ಕೆಲವರಾಗಲಿ, ಒಬ್ಬನೇ ಆಗಲಿ ಈ ಬಗೆಯ ವ್ಯವಹಾರದಲ್ಲಿ ತೊಡಗುತ್ತಿದ್ದುದನ್ನು ಕಾಣಬಹುದಿತ್ತು.

ಒಗ್ಗೂಡಿಕೆಯ ವ್ಯವಹಾರದಿಂದ ಸರಕುಗಳ ಕೃತಕ ಅಭಾವವೇರ್ಪಟ್ಟು, ಬೆಲೆಗಳು ಕೃತಕವಾಗಿ ಏರುವುದರ ಫಲವಾಗಿ ಕೈಗಾರಿಕೆ ವಾಣಿಜ್ಯಗಳ ಬೆಳೆವಣಿಗೆ ಕುಂಠಿತವಾಗುವುದರಿಂದ ಇದನ್ನು ತಪ್ಪಿಸುವ ಉದ್ದೇಶದಿಂದ ಭಾರತದಲ್ಲಿ 1956ರ ಬಂಡವಾಳಪತ್ರ ಕರಾರು ನಿಯಂತ್ರಣ ಕಾಯಿದೆಯೂ (ಸೆಕ್ಯೂರಿಟೀಸ್ ಕಾಂಟ್ರಾಕ್ಟ್ ರೆಗ್ಯುಲೇಷನ್ ಆಕ್ಟ್) ವಾಯದಾ ಕರಾರು ನಿಯಂತ್ರಣ ಕಾಯಿದೆಯೂ ಜಾರಿಗೆ ಬಂದಿವೆ. ಮಾರುಕಟ್ಟೆಯ ಸದಸ್ಯರು ತಮ್ಮ ಕೊಳ್ಳಿಕೆ ಹಾಗೂ ಮಾರಾಟಗಳನ್ನು ಕುರಿತ ದೈನಿಕ ವರದಿ ನೀಡಬೇಕು. ಷೇರುಕಟ್ಟೆಯ ನಿರ್ದೇಶಕ ಮಂಡಲಿಯೂ ಷೇರುಕಟ್ಟೆಯಲ್ಲಿನ ಇಂಥ ಅನೀತಿ ಪದ್ಧತಿಗಳನ್ನು ತಡೆಗಟ್ಟಲು ಎಚ್ಚರಿಕೆಯಿಂದ ನಿರೀಕ್ಷಣಕಾರ್ಯ ನಡೆಸುತ್ತದೆ.

(ಸಿ.ಸಿ.ಪಿ.; ಎ.ಕೆ.ಎಸ್ಎಚ್.)

**ಒಚಾವಾ, ಸೆವಿರೋ :** 1905– ಸ್ಪ್ಯಾನಿಷ್ ಅಮೆರಿಕನ್ ಜೈವಿಕಶಾಸ್ತ್ರ ವಿಜ್ಞಾನಿ. ವೈದ್ಯಕೀಯ ಶಾಸ್ತ್ರ ವಿಭಾಗದ ನೊಬೆಲ್ ಪ್ರಶಸ್ತಿ ವಿಜೇತ (1959).



ಸ್ಪೇನ್ ದೇಶದ ಉತ್ತರ ತೀರದ ಅಸ್ಟುರಿಯಾ ಜಿಲ್ಲೆಯ ಲಾರ್ಕಾ ಎಂಬ ಹಳ್ಳಿಯಲ್ಲಿ ಮೂರು ಜನ ಸಹೋದರರು ಮತ್ತು ಮೂರು ಜನ ಸಹೋದರಿಯರನ್ನೊಳಗೊಂಡ ತುಂಬು ಸಂಸಾರದಲ್ಲಿ ಇವನೇ ಕಡೆಯವನಾಗಿ ಹುಟ್ಟಿದ. ತಂದೆ ವಕೀಲ.

ಒಚಾವಾ ಏಳು ವರ್ಷದ ಅಣುಗನಾಗಿದ್ದಾಗಲೇ ಆತನ ತಂದೆ ತೀರಿಕೊಂಡ. ಮುಂದೆ ಈ ಕುಟುಂಬ ಸ್ಪೇನಿನ ದಕ್ಷಿಣ ತೀರದಲ್ಲಿರುವ ಮಲಾಗ ಎಂಬ ಊರಿಗೆ ಹೋಯಿತು. ಇಲ್ಲಿಯೇ ಒಚಾವಾನ ವಿದ್ಯಾಭ್ಯಾಸದ ಮೊದಲನೆಯ ಘಟ್ಟ ಮುಗಿದದ್ದು. 1921ರಲ್ಲಿ ಈತ ಬ್ಯಾಚಿಲರ್ ಆಫ್ ಆರ್ಟ್ಸ್ ಪದವಿ ಪಡೆದು ಮರುವರ್ಷ ಮ್ಯಾಡ್ರಿಡ್ ವಿಶ್ವವಿದ್ಯಾಲಯದ ಮೆಡಿಕಲ್ ಸ್ಕೂಲನ್ನು ಸೇರಿ 1929ರಲ್ಲಿ ಡಾಕ್ಟರ್ ಆಫ್ ಮೆಡಿಸನ್ ಪದವಿಯನ್ನು ಗಳಿಸಿದ.

ಒಚಾವಾ ವೈದ್ಯಕೀಯ ವಿದ್ಯಾರ್ಥಿಯಾಗಿದ್ದಾಗಲೇ ದೇಹಶಾಸ್ತ್ರದ (ಫಿಸಿಯಾಲಜಿ) ಪ್ರಯೋಗಶಾಲೆಯಲ್ಲಿ ಬೋಧಕನಾಗಿಯೂ ನೇಮಕಗೊಂಡಿದ್ದ. 1931ರಲ್ಲಿ ವೈದ್ಯಶಾಲೆಯಲ್ಲಿ ದೇಹಶಾಸ್ತ್ರ ಮತ್ತು ಜೈವಿಕರಸಾಯನಶಾಸ್ತ್ರದ ಅಧ್ಯಾಪಕನಾಗಿಯೂ 1935ರಲ್ಲಿ ಮ್ಯಾಡ್ರಿಡ್ ವಿಶ್ವವಿದ್ಯಾಲಯದ ನೂತನ ವೈದ್ಯಕೀಯ ಸಂಶೋಧನ ಸಂಸ್ಥೆಯ ಪ್ರಥಮ ಮುಖ್ಯಾಧಿಕಾರಿಯಾಗಿಯೂ ನೇಮಿತನಾದ. ಆದರೆ ಅವನ ಜ್ಞಾನತೃಷೆ ಇದರಿಂದ ಹಿಂಗಲಿಲ್ಲ. 1936ರಲ್ಲಿ ಒಚಾವಾ ಜರ್ಮನಿಯ ಹೀಡಲ್ ಬರ್ಗಿನ ಕೈಸ್ಟರ್ ವಿಲ್‌ಹೆಲ್ಮ್ ಸಂಸ್ಥೆಯನ್ನು ಸೇರಿದ. ಅಲ್ಲಿನ ಪ್ರಸಿದ್ಧ ವಿಜ್ಞಾನಿ ಮೇಯರ್ ಹಾಫ್‌ನ ಹಿರಿತನದಲ್ಲಿ ಸಂಶೋಧನೆ ಕೈಗೊಂಡ. 1937ರಲ್ಲಿ ಇಂಗ್ಲೆಂಡಿಗೆ ಹೋಗಿ ಕೊಂಚ ಕಾಲ ಪ್ಲಿಮತ್‌ನಲ್ಲಿ ಇದ್ದ. ಅನಂತರ ಆಕ್ಸ್‌ಫರ್ಡ್ ವಿಶ್ವವಿದ್ಯಾಲಯದಲ್ಲಿ ಪ್ರೊ॥ ಆರ್. ಪೀಟರ್ಸ್ ಒಂದಿಗೆ ಸಹಾಯಕ ಸಂಶೋಧಕನಾಗಿ ಕೆಲಸ ಮಾಡಿದ (1938–41). ಈ ವೇಳೆಗೆ (1941) ಮಿಸ್ಸೂರಿಯ ಸೇಂಟ್ ಲೂಯಿಸ್‌ನಲ್ಲಿರುವ ವಾಷಿಂಗ್‌ಟನ್ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಮೆಡಿಸನ್‌ನಲ್ಲಿ ಕೋರಿ ದಂಪತಿಗಳೊಂದಿಗೆ ಕೆಲಸ ಮಾಡುವ ಅವಕಾಶ ಒಚಾವಾನಿಗೆ ಲಭಿಸಿತು. ಅಮೆರಿಕ ದೇಶಕ್ಕೆ ವಲಸೆ ಹೋದ ಇವನಿಗೆ ನ್ಯೂಯಾರ್ಕ್ ವಿಶ್ವವಿದ್ಯಾಲಯದ ಸ್ಕೂಲ್ ಆಫ್ ಮೆಡಿಸನ್ ಸಂಸ್ಥೆಯಲ್ಲಿ ಸಹ–ಸಂಶೋಧಕನ ಕೆಲಸ ದೊರೆಯಿತು (1942). ಅಲ್ಲಿಯೇ 1945ರಲ್ಲಿ ಜೈವಿಕ ರಸಾಯನಶಾಸ್ತ್ರದ ಅಸಿಸ್ಟೆಂಟ್ ಪ್ರೊಫೆಸರ್ ಆಗಿಯೂ 1946ರಲ್ಲಿ ಫಾರ್ಮಕಾಲಜಿಯ ಪ್ರೊಫೆಸರ್ ಆಗಿಯೂ ನೇಮಿತನಾದ (1946–54). ಈಗ (1971) ಅದೇ ಸಂಸ್ಥೆಯಲ್ಲಿ ಜೈವಿಕಶಾಸ್ತ್ರದ ಪ್ರೊಫೆಸರ್ ಮತ್ತು ವಿಭಾಗದ ಮುಖ್ಯಾಧಿಕಾರಿ ಆಗಿ ಸೇವೆ ಸಲ್ಲಿಸುತ್ತಿದ್ದಾನೆ.

ಸಂಶೋಧನಕ್ಷೇತ್ರ ಮತ್ತು ಜೈವಿಕಶಾಸ್ತ್ರದ ಬೆಳೆವಣಿಗೆಗೆ ಈತನ ಕೊಡುಗೆ ಅಪಾರ. ವಿದ್ಯಾರ್ಥಿದೆಸೆಯಲ್ಲಿದ್ದಾಗಲೇ ಜೈವಿಕ ರಸಾಯನಶಾಸ್ತ್ರದ ಕ್ಷೇತ್ರದಲ್ಲಿ ಸಂಶೋಧನೆ ಮಾಡಲು ತನ್ನ ಜೀವನವನ್ನು ಮುಡುಪಾಗಿಡುವ ನಿರ್ಧಾರವನ್ನು ಈತ ಕೈಗೊಂಡ. ಎಡರುತೊಡರುಗಳನ್ನು ಲೆಕ್ಕಿಸದೆ ಗುರಿಯೆಡೆಗೆ ನಿಶ್ಚಲಧ್ಯೇಯದಿಂದ ಮುನ್ನಡೆಯುತ್ತ ಬಂದಿದ್ದಾನೆ ಒಚಾವಾ.

ಈತ ಪ್ರಾರಂಭದಲ್ಲಿ ಆರಿಸಿಕೊಂಡ ಕ್ಷೇತ್ರ ಮಾಂಸಖಂಡಗಳ ಸಂಕೋಚನದ ಅಧ್ಯಯನ. ಮೇಯರ್ ಹಾಫ್‌ನ ಪ್ರಯೋಗಶಾಲೆಯಲ್ಲಿ ಮಾಂಸಖಂಡಗಳ ಸಂಕುಚನ ಕ್ರಿಯೆಯ ಶಕ್ತಿಮೂಲಗಳನ್ನು ಕುರಿತು ಸಂಶೋಧನೆ ನಡೆಸಿದ. ಫಾಸ್ಫಾಜನ್ ವಸ್ತುವನ್ನು ಆಗ ತಾನೇ ಕಂಡುಹಿಡಿಯಲಾಗಿತ್ತು. ಇದೇ ವೇಳೆಗೆ ಲುಂಡ್ಸ್‌ಗಾರ್ಡ್ ಎಂಬಾತ ಮಾನೋಐಯೋಡೋ ಅಸಿಟಿಕ್ ಆಮ್ಲದಿಂದ ನಂಜುಗೊಳಿಸಿದ ಮಾಂಸಖಂಡಗಳು ಲ್ಯಾಕ್ಟಿಕ್ ಆಮ್ಲವನ್ನು ಉತ್ಪಾದಿಸದಂತೆಯೇ ಕೊಂಚ ಕಾಲ ಕೆಲಸ ಮಾಡಬಲ್ಲವು ಎಂದು ತೋರಿಸಿದ್ದ. ಇನ್ಸುಲಿನ್ ಪರಿಷ್ಕೃತವಾದ ಮತ್ತು ಗ್ಲೈಕೋಜನನ್ನು ಕಳೆದುಕೊಂಡಿದ್ದ ಕಪ್ಪೆಯ ಮಾಂಸಖಂಡಗಳು ಅದುವರೆಗೆ ಪರಿಚಿತವಾಗಿದ್ದವಕ್ಕಿಂತ ಭಿನ್ನವಾದ ಮೂಲಗಳಿಂದ ಶಕ್ತಿಯನ್ನು ದೊರಕಿಸಿಕೊಳ್ಳುತ್ತವೆಂದು ಒಚಾವಾ ತೋರಿಸಿದ.

ಇಂಗ್ಲೆಂಡಿಗೆ ಬಂದ ಮೇಲೆಯೂ ಮಾಂಸಖಂಡಗಳ ಸಂಕುಚನ ಕ್ರಿಯೆಯಲ್ಲಿ ಒಚಾವಾನ ಆಸಕ್ತಿ ಉಳಿದಿತ್ತು. ಜೊತೆಗೆ ಪೀಟರ್ಸ್ ಮತ್ತು ಆತನ ಸಹೋದ್ಯೋಗಿಗಳು ಅಭ್ಯಸಿಸುತ್ತಿದ್ದ ಪೈರೂವಿಕ್ ಆಮ್ಲದ ಚಯಾಪಚಯ ವಿಧಾನ ಕ್ರಮದಲ್ಲಿಯೂ ಆಸಕ್ತಿ ತಳೆದ. ಈತನ ಸಂಶೋಧನೆಗಳ ಫಲವಾಗಿ ಮಿದುಳಿನಿಂದ ಪೈರೂವಿಕ್ ಆಮ್ಲ ಉತ್ಕರ್ಷಿತವಾಗುವ ಕ್ರಿಯಾವೇಗವನ್ನು $C_4$ ಡೈ ಕಾರ್ಬಾಕ್ಸಿಲಿಕ್ ಆಮ್ಲಗಳು ತ್ವರಿತಗೊಳಿಸುತ್ತವೆಯೆಂದೂ ಈ ಕ್ರಿಯೆಯಲ್ಲಿ ವಿಟಮಿನ್ $B_1$ ಭಾಗ ವಹಿಸುತ್ತದೆಯೆಂದೂ ಕೋಕಾರ್ಬಾಕ್ಸಿಲೇಸ್ (ಥಯಾಮಿನ್ ಪೈರೋಫಾಸ್ಫೇಟ್) ವಿಟಮಿನ್ $B_1$ರ ಸಕ್ರಿಯಾರೂಪವೆಂದೂ ಗೊತ್ತಾಯಿತು. ಅಲ್ಲದೆ ಪೈರೂವಿಕ್ ಆಮ್ಲದ ಉತ್ಕರ್ಷಣ ಕ್ರಿಯೆಗೂ ಎಟಿಪಿಯ ಸಂಶ್ಲೇಷಣೆಗೂ ಇರುವ ನಿಕಟ ಸಂಬಂಧದ ಪರಿಚಯವೂ ಆಯಿತು.

1942ರಿಂದೀಚೆಗೆ ಒಚಾವಾ ನಡೆಸಿರುವ ಸಂಶೋಧನೆಗಳನ್ನು ಮುಖ್ಯವಾಗಿ ಮೂರು ವರ್ಗಗಳಾಗಿ ವಿಭಾಗಿಸಬಹುದು:

1 ಜೈವಿಕ ವ್ಯವಸ್ಥೆಯಲ್ಲಿ ನಡೆಯುವ ಕಾರ್ಬಾಕ್ಸಿಲೇಷನ್ (ಇಂಗಾಲದ ಡೈ ಆಕ್ಸೈಡನ್ನು ಸ್ವೀಕರಿಸುವ) ಮತ್ತು ಡೀಕಾರ್ಬಾಕ್ಸಿಲೇಷನ್ (ಇಂಗಾಲದ ಡೈ ಆಕ್ಸೈಡನ್ನು ವಿಮೋಚನೆಗೊಳಿಸುವ) ಕ್ರಿಯಾವಿಧಾನಗಳ ಅಧ್ಯಯನ ಮತ್ತು ಮ್ಯಾಲಿಕ್ ಕಿಣ್ವದ ಪರಿಶೋಧನೆ.

2 ಸಿಟ್ರಿಕ್ ಆಮ್ಲ ವರ್ತುಲಕ್ಕೆ ಸೇರಿದ ಕಿಣ್ವಗಳ ಕ್ರಿಯಾವಿಧಿಗಳ ಅಧ್ಯಯನ ಮತ್ತು ಘನಿಸುವ ಕಿಣ್ವದ ಪರಿಶೋಧನೆ.

3 ಪಾಲಿನ್ಯೂಕ್ಲಿಯೋಟೈಡುಗಳ ಕಿಣ್ವವರ್ಧಿತ ಸಂಶ್ಲೇಷಣೆ ಮತ್ತು ಪಾಲಿನ್ಯೂಕ್ಲಿಯೋಟೈಡ್ ಫಾಸ್ಫಾರಿಲೇಸ್ ಕಿಣ್ವದ ಪರಿಶೋಧನೆ.

ಈಚಿನ ವರ್ಷಗಳಲ್ಲಿ ಒಚಾವಾ ತನ್ನ ಸಹೋದ್ಯೋಗಿಗಳೊಂದಿಗೆ ಆನುವಂಶಿಕ ಸಂಕೇತದ ಸಮಸ್ಯೆಯನ್ನು ಬಿಡಿಸುವುದರಲ್ಲಿ ನಿರತನಾಗಿ ಈ ಕ್ಷೇತ್ರದಲ್ಲಿ ಅಮೂಲ್ಯವಾದ ಕೊಡುಗೆಯನ್ನು ನೀಡಿದ್ದಾನೆ. ಡಿಎನ್‌ಎ ಅಣುವಿನ 4 ಭಿನ್ನ ನ್ಯೂಕ್ಲಿಯೋಟೈಡುಗಳ ಅನುಕ್ರಮ ಪಾಲಿಪೆಪ್ಟೈಡಿನ (ಪ್ರೋಟೀನಿನ) 20 ಅಮೈನೋ ಆಮ್ಲಗಳ ಅನುಕ್ರಮವನ್ನು ಹೇಗೆ ನಿರ್ಧರಿಸುವುದೆಂಬುದೇ ಜೀವವಿಜ್ಞಾನಿಯ ಮುಂದಿರುವ ಸಮಸ್ಯೆ. ಡಿಎನ್‌ಎ ಯಲ್ಲಿ ಅಡಗಿರುವ ಆನುವಂಶಿಕ ಸಂದೇಶವನ್ನು ಅಮೈನೋ ಆಮ್ಲಗಳ ಭಾಷೆಗೆ ಕರಾರುವಾಕ್ಕಾಗಿ ತರ್ಜುಮೆ ಮಾಡುವ ಮತ್ತು ಸಂದೇಶದ ಪ್ರಕಾರ ಅಮೈನೋ ಆಮ್ಲಗಳನ್ನು ಜೋಡಿಸಿ ವಿಶಿಷ್ಟ ಪ್ರೋಟೀನನ್ನು ಸಿದ್ಧಗೊಳಿಸುವ ವಸ್ತು ಒಂದಿರಲೇಬೇಕು. ಆರ್‌ಎನ್‌ಎ ಸಂದೇಶವಾಹಕವಾಗಿಯೂ ಪ್ರೋಟೀನನ್ನು ಸಿದ್ಧಗೊಳಿಸುವ ಯಂತ್ರದಂತೆಯೂ ವರ್ತಿಸುತ್ತದೆಯೆಂದು ಪ್ರಯೋಗಗಳ ಮೂಲಕ ತಿಳಿದುಬಂದಿದೆ. ಜಟಿಲವಾದ ಕೋಶದಲ್ಲಿ ನಡೆಯುವ ಈ ಕ್ರಿಯೆಯನ್ನು ಪ್ರನಾಳದಲ್ಲಿ ನಡೆಸಬೇಕಾದರೆ, ನೈಸರ್ಗಿಕ ಆರ್‌ಎನ್‌ಎಯ ಕಾರ್ಯವನ್ನು ಅನುಕರಣೆ ಮಾಡಬಲ್ಲ ಕೃತಕ ಆರ್‌ಎನ್‌ಎ ಆವಶ್ಯಕವಾಗಿ ಬೇಕು. 1961ರಲ್ಲಿ ಒಚಾವಾ ಪ್ರಯೋಗಶಾಲೆಯಲ್ಲಿ ತಮ್ಮ ಪಾಲಿನ್ಯೂಕ್ಲಿಯೋಟೈಡ್ ಫಾಸ್ಫಾರಿಲೇಸ್ ಕಿಣ್ವದ ಸಹಾಯದಿಂದ ಎರಡು ಅಥವಾ ಹೆಚ್ಚಿನ ನ್ಯೂಕ್ಲಿಯೊಟೈಡುಗಳನ್ನೊಳಗೊಂಡ ಕೃತಕ ಕೋಪಾಲಿನ್ಯೂಕ್ಲಿಯೋಟೈಡುಗಳನ್ನು ಸಂಶ್ಲೇಷಿಸಿ ಕೋಶರಹಿತ ವ್ಯವಸ್ಥೆಯಲ್ಲಿ ಇವನ್ನು ಸಂದೇಶವಾಹಕಗಳಂತೆ ಉಪಯೋಗಿಸಿ ಅಮೈನೋ ಆಮ್ಲಗಳನ್ನೊಳಗೊಂಡ ಪ್ರೋಟೀನಿನಂಥ ವಸ್ತುವನ್ನು ತಯಾರಿಸುವುದರಲ್ಲಿ ಜಯಶೀಲನಾದ. ಪ್ರೋಟೀನಿನ ಯಾವುದೊಂದು ಸ್ಥಳದಲ್ಲಿ ಪ್ರವೇಶಿಸುವ ಅಮೈನೋ ಆಮ್ಲದ ಪ್ರಕೃತಿ ಕೃತಕ ಬಹ್ವಂಶಿಯ (ಪಾಲಿಮರ್) ಪ್ರತ್ಯಾಮ್ಲ ಅನುಕ್ರಮವನ್ನು ಅವಲಂಬಿಸುತ್ತದೆಂದು ಸಿದ್ಧಾಂತ ಮಾಡಿದ.

ವ್ಯಕ್ತಿತ್ವ : ವೈಜ್ಞಾನಿಕ ಸಂಶೋಧನೆಗೆ ತನ್ನ ಜೀವನವನ್ನೇ ಧಾರೆಯೆರೆದ ವ್ಯಕ್ತಿ ಒಚಾವಾ. ವಿಜ್ಞಾನದಲ್ಲಿರುವ ಈತನ ಉತ್ಸಾಹ, ಆಸಕ್ತಿಗಳಿಗೆ ಮೇರೆಯೇ ಇಲ್ಲ. ತನ್ನ ಸಹೋದ್ಯೋಗಿಗಳಿಗೆ ಸತತವಾಗಿ ಪ್ರೋತ್ಸಾಹವನ್ನು ನೀಡುವ ವೇಗವರ್ಧಕ ಈ ಉತ್ಸಾಹ. ಒಚಾವಾನ ದೃಷ್ಟಿಯಲ್ಲಿ ವಿಜ್ಞಾನ ಒಂದು ಬೌದ್ಧಿಕ ಸಾಹಸ. ಪ್ರಕೃತಿಯನ್ನು ಚೆನ್ನಾಗಿ ಅರ್ಥಮಾಡಿಕೊಳ್ಳಬೇಕೆಂಬ ಕುತೂಹಲವುಳ್ಳ ಆತನಿಗೆ ಸತ್ಯಕ್ಕೋಸ್ಕರವಾಗಿಯೇ ಅನ್ವೇಷಣೆ ಮಾಡಬೇಕೆಂಬುದು ಪರಮ ಗುರಿ. ಅನ್ವೇಷಣೆಯಿಂದ ವ್ಯಾವಹಾರಿಕ ಪ್ರಯೋಜನವಾಗುತ್ತದೆಯೋ ಇಲ್ಲವೇ ಎಂಬುದರ ಕಡೆಗೆ ಆತನದು ದಿವ್ಯ ನಿರ್ಲಕ್ಷ್ಯ. ವ್ಯಾವಹಾರಿಕ ಪ್ರಯೋಜನಗಳಾಗುತ್ತವೆಂಬ ಕಾರಣವನ್ನು ಮುಂದೊಡ್ಡಿ ವೈಜ್ಞಾನಿಕ ಸಂಶೋಧನೆಯನ್ನು ಸಮರ್ಥಿಸಿಕೊಂಡು ತಮ್ಮ ಬೌದ್ಧಿಕ ಪ್ರಾಮಾಣಿಕತೆಯನ್ನು ನೀಗಿಕೊಳ್ಳಲು ಅವನು ಸರ್ವಥಾ ಸಿದ್ಧನಲ್ಲ. 35 ವರ್ಷಗಳ ಸಾರ್ಥಕ ಸಂಶೋಧನೆಗಳ ಫಲವಾಗಿ ಇಂದು ಅವನು ಗೌರವದ ಉನ್ನತ ಶೃಂಗವನ್ನು ಮುಟ್ಟಿದ್ದರೂ ಒಚಾವಾ ಸ್ವಭಾವತಃ ನಿರಹಂಕಾರಿ ಹಾಗೂ ವಿನಯಶೀಲ. ಆತನ ಸೌಜನ್ಯ, ಮಾರ್ದವ ಮತ್ತು ನೈಜ ಕಾರುಣ್ಯಗಳು ಸಹೋದ್ಯೋಗಿಗಳ ಪ್ರೀತಿಯನ್ನೂ ವಿದ್ಯಾರ್ಥಿಗಳ ಗೌರವವನ್ನೂ ಒಚಾವಾನಿಗೆ ಸಂಪಾದಿಸಿಕೊಟ್ಟಿವೆ.

ಸ್ಪೇನಿನಲ್ಲಿ ಜನಿಸಿ, ಜರ್ಮನಿ ಮತ್ತು ಇಂಗ್ಲೆಂಡಿನಲ್ಲಿ ತರಬೇತಿ ಹೊಂದಿ ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಕೆಲಸ ಮಾಡುತ್ತಿರುವ ಈ ವಿಜ್ಞಾನಿ ವಿಜ್ಞಾನದ ಅಂತರರಾಷ್ಟ್ರೀಯತೆಯ ನೈಜಪ್ರತೀಕ. ಪ್ರಪಂಚದ ಎಲ್ಲ ದೇಶಗಳ ಶಿಷ್ಯರೂ ಇವನ ತಂಡದಲ್ಲಿ ಇದ್ದಾರೆ. ಪ್ರಪಂಚದ ನಾನಾ ವಿಶ್ವವಿದ್ಯಾನಿಲಯಗಳು ಈತನಿಗೆ ಗೌರವ ಪದವಿಗಳನ್ನು ಕೊಟ್ಟು ಪುರಸ್ಕರಿಸಿವೆ. ಒಚಾವಾ ಅನೇಕ ವೈಜ್ಞಾನಿಕ ಸಂಘಗಳ ಸದಸ್ಯನೂ ಹೌದು. 1961ರಲ್ಲಿ ಜೈವಿಕ ರಸಾಯನಶಾಸ್ತ್ರ ಅಂತರರಾಷ್ಟ್ರೀಯ ಸಂಘದ ಅಧ್ಯಕ್ಷನಾಗಿ ಈತ ಚುನಾಯಿತನಾದ. ಸಂಗೀತ, ಸಾಹಿತ್ಯ ಮತ್ತು ಕುಶಲಕಲೆಗಳಲ್ಲಿ ಈತನಿಗೆ ಅಭಿರುಚಿಯಿದೆ. ಬಿಡುವಿನ ವೇಳೆಯಲ್ಲಿ ಈಗಲೂ ಈತ ಇವುಗಳ ಸುಖಾನುಭವವನ್ನು ಪಡೆಯುತ್ತಾನೆ. ಶ್ರೇಷ್ಠ ವಿಜ್ಞಾನಿಯೊಬ್ಬ ಉತ್ತಮ ಮಾನವನೂ ಆಗಿದ್ದರೆ ಹೇಗಿರಬಹುದೆಂಬುದಕ್ಕೆ ಒಚಾವಾ ಜೀವಂತ ಸಾಕ್ಷಿ.

ನೋಡಿ:—ಕಿಣ್ವಗಳು.

(ಎಚ್.ಎಸ್.ಎಸ್.)

**ಒಟ್ಟುವ್ಯಾಪಾರಿ :** ಸರಕು ತಯಾರಕನಿಗೂ ಚಿಲ್ಲರೆ ವ್ಯಾಪಾರಿಗೂ ನಡುವಣ ಮಧ್ಯಸ್ಥಗಾರ (ಹೋಲ್‌ಸೇಲರ್). ತೋಕುವ್ಯಾಪಾರಿ, ಸಟ್ಟಾವ್ಯಾಪಾರಿ—ಎಂಬವು ಪರ್ಯಾಯ ಶಬ್ದಗಳು. ಕೊಂಡ ಸರಕಿನ ಅಂತಿಮ ಅನುಭೋಗಕ್ಕೆ

ಎಡೆಕೊಡದೆ ಆದನ್ನು ಮತ್ತೆ ಮಾರಾಟ ಮಾಡುವ ಅಥವಾ ತನ್ನ ಉದ್ಯಮದಲ್ಲಿ ಬಳಸುವ ಮತ್ತು ತತ್ಸಂಬಂಧವಾದ ಎಲ್ಲ ಕ್ರಿಯೆಗಳನ್ನೂ ಸ್ಥೂಲವಾಗಿ ಒಟ್ಟು ವ್ಯಾಪಾರವೆನ್ನಬಹುದು. ಉತ್ಪಾದಕರಿಂದ ಬೃಹದ್ಗಾತ್ರದಲ್ಲಿ ಪದಾರ್ಥಗಳನ್ನು ಕೊಂಡು, ಅವನ್ನು ಚಿಲ್ಲರೆ ವ್ಯಾಪಾರಿಗಳಿಗೆ (ನೋಡಿ—**ಚಿಲ್ಲರೆ ವ್ಯಾಪಾರ**) ಕಡಿಮೆ ಮೊತ್ತಗಳಲ್ಲಿ ಮಾರಾಟ ಮಾಡುವ, ಹೀಗೆ ಉತ್ಪಾದಕ ಮತ್ತು ಅನುಭೋಗಿಗಳ ನಡುವೆ ಕೊಂಡಿಯಾಗಿ ವರ್ತಿಸುವ, ವರ್ತಕನನ್ನು ಮಾತ್ರವೇ ಒಟ್ಟುವ್ಯಾಪಾರಿ ಯೆಂದು ವ್ಯಾಖ್ಯಿಸಲಾಗಿದೆ. ಮುತಾಲಿಕ (ನೋಡಿ), ಮಧ್ಯವರ್ತಿಗಳನ್ನು (ಏಜೆಂಟ್, ಮಿಡ್ಲ್‌ಮೆನ್) ಈ ವ್ಯಾಖ್ಯೆಯ ಪ್ರಕಾರ ಒಟ್ಟು ವ್ಯಾಪಾರಿಗಳೆನ್ನಲಾಗುವುದಿಲ್ಲ.

ಠೋಕುವ್ಯಾಪಾರಿಯ ಮುಖ್ಯ ಕಾರ್ಯಭಾಗಗಳು ಇವು : 1 ಗಾತ್ರವಿಭಜನೆ : ಉತ್ಪಾದಕರಿಂದ ಈತ ಹೆಚ್ಚು ಮೊತ್ತಗಳಲ್ಲಿ ಪದಾರ್ಥಗಳನ್ನು ಕೊಂಡು ಅಥವಾ ಸಂಗ್ರಹಿಸಿ ಅವನ್ನು ಕಡಿಮೆ ಗಾತ್ರಗಳಲ್ಲಿ ಚಿಲ್ಲರೆ (ಕಿರುಕುಳ) ವ್ಯಾಪಾರಿಗಳಿಗೆ ಮಾರುತ್ತಾನೆ. 2 ಸರಕು ದಾಸ್ತಾನು : ಬೇಡಿಕೆಯಲ್ಲಿ ಸಂಭವಿಸುವ ಏರಿಳಿತಗಳಿಗೆ ಅನುಗುಣವಾಗಿ ಸರಕಿನ ಪ್ರವಾಹವನ್ನು ನಿಯಂತ್ರಿಸಲು ಇದರಿಂದ ಸಾಧ್ಯವಾಗುತ್ತದೆ. 3 ಸರಕು ವಿತರಣೆಗೆ (ಡಿಸ್ಟ್ರಿಬ್ಯೂಷನ್) ಧನ ಪೋಷಣೆ (ಫಿನಾನ್ಸಿಂಗ್): ಚಿಲ್ಲರೆ ವಾಪಾರಿಗಳಿಗೆ ಈತ ಉದ್ದರಿ ನೀಡುತ್ತಾನೆ; ಆದರೆ ಅವರಿಂದ ಹಣ ವಸೂಲಾಗುವ ವರೆಗೂ ಉತ್ಪಾದಕರಿಗೆ ತಾನು ಕೊಡಬೇಕಾದ ಹಣವನ್ನು ಕೊಡದೆ ನಿಲ್ಲಿಸಿಕೊಳ್ಳುವುದಿಲ್ಲ. 4 ಅಗತ್ಯವಾದಾಗಲೆಲ್ಲ ಈತ ಪದಾರ್ಥಗಳ ವರ್ಗೀಕರಣ (ಗ್ರೇಡಿಂಗ್), ಸಂವೇಷ್ಟನ (ಪ್ಯಾಕಿಂಗ್) ಮತ್ತು ಅಂಕನ (ಬ್ರ್ಯಾಂಡಿಂಗ್) ಕಾರ್ಯವನ್ನೂ ನಿರ್ವಹಿಸುತ್ತಾನೆ. (ಎ.ಕೆ.ಎಸ್‌ಎಚ್)

ಒಟ್ಟುವ್ಯಾಪಾರಿಯ ಈ ಕಾರ್ಯಭಾರಗಳಿಂದಾಗಿ ಪದಾರ್ಥಗಳ ಉತ್ಪಾದಕರಿಗೂ ಚಿಲ್ಲರೆ ವ್ಯಾಪಾರಿಗಳಿಗೂ ಅನುಭೋಗಿಗಳಿಗೂ ಆಗುವ ಅನುಕೂಲಗಳು ಅನೇಕ. ಒಟ್ಟುವ್ಯಾಪಾರಿ ಪದಾರ್ಥಗಳನ್ನು ಹೆಚ್ಚಿನ ಮೊತ್ತಗಳಲ್ಲಿ ಕೊಳ್ಳುವುದರಿಂದ, ಅವಕ್ಕಾಗಿ ಆದೇಶ ನೀಡುವುದರಿಂದ, ಬೃಹದ್‌ಗಾತ್ರದ ಉತ್ಪಾದನೆ ಸಾಧ್ಯವಾಗುತ್ತದೆ. ಯಾರುಯಾರು ಎಷ್ಟೆಷ್ಟು ಪದಾರ್ಥ ಕೊಳ್ಳುವರೆಂಬ ಬಗ್ಗೆ ಉತ್ಪಾದಕ ತಲೆಕೆಡಿಸಿಕೊಳ್ಳಬೇಕಾದ್ದಿಲ್ಲ. ಕೊಳ್ಳುವವರಿಂದ ಬೇಡಿಕೆ ಬರುವುದನ್ನೇ ನಿರೀಕ್ಷಿಸಿ ಆತ ಸರಕು ದಾಸ್ತಾನು ಮಾಡಿ ಇಟ್ಟುಕೊಂಡಿರಬೇಕಾದ ಚಿಂತೆಯಿಲ್ಲ. ಅವನು ಉತ್ಪಾದನೆಯತ್ತ ಹೆಚ್ಚು ಗಮನ ಹರಿಸಿ ಅದರಲ್ಲೇ ವಿಶಿಷ್ಟ ಪ್ರಾವೀಣ್ಯ ಗಳಿಸಿಕೊಳ್ಳುವಂತೆ ಒಟ್ಟುವ್ಯಾಪಾರಿ ನೆರವಾಗುತ್ತಾನೆ. ಅನುಭೋಗಿಗಳ ರುಚಿಗಳನ್ನು ತಿದ್ದುವುದೂ ಅವನ್ನು ಅರಿತು ಉತ್ಪಾದಕನಿಗೆ ನಿವೇದಿಸುವುದೂ ಮಾರುಕಟ್ಟೆಯ ಪ್ರವೃತ್ತಿಗಳನ್ನು ಅಭ್ಯಸಿಸಿ ಮುನ್ನೆಚ್ಚರಿಸುವುದೂ ಸರಕುಗಳನ್ನು ದಾಸ್ತಾನು ಮಾಡಿ ಬೆಲೆಗಳಲ್ಲಿ ಸ್ಥಿರತೆಯನ್ನು ಕಾಪಾಡುವುದೂ ಒಟ್ಟುವ್ಯಾಪಾರಿಯ ಕೆಲಸ. ಒಟ್ಟುವ್ಯಾಪಾರಿಯಲ್ಲಿ ವಿವಿಧ ಸರಕುಗಳ ದಾಸ್ತಾನುಗಳಿರುವುದರಿಂದ ಚಿಲ್ಲರೆ ವ್ಯಾಪಾರಿಗೆ ಆಯ್ಕೆಯ ಸೌಲಭ್ಯವಿರುತ್ತದೆ. ಅವನಿಗೆ ಬೇಕಾದ ಸರಕು ಒಟ್ಟುವ್ಯಾಪಾರಿಯಲ್ಲಿ ಸರ್ವದಾ ಸಿದ್ಧ. ಈ ಸೌಲಭ್ಯದ ಜೊತೆಗೆ ಚಿಲ್ಲರೆ ವ್ಯಾಪಾರಿಗೆ ಉದ್ದರಿಯ ಸೌಲಭ್ಯವೂ ಉಂಟು. ಯಾವ ಸರಕಿನ ಗುಣವೇನು, ಯಾವುದನ್ನು ಸುಲಭವಾಗಿ ಮಾರಾಟ ಮಾಡಬಹುದು—ಎಂಬ ವಿಚಾರವಾಗಿ ಮುಫತ್ತಾದ ಸಲಹೆಯನ್ನೂ ಚಿಲ್ಲರೆ ವ್ಯಾಪಾರಿಗೆ ಈತ ನೀಡುತ್ತಾನೆ.

ಒಳವ್ಯಾಪಾರದಲ್ಲಿ ನಿರತರಾದ ಒಟ್ಟುವ್ಯಾಪಾರಿಗಳಲ್ಲಿ ನಾಲ್ಕು ಬಗೆಯುಂಟು : 1 ಪದಾರ್ಥವನ್ನು ಕೊಂಡು ದಾಸ್ತಾನು ಮಾಡಿಟ್ಟದ್ದು, ಅವನ್ನು ಅದೇ ರೂಪದಲ್ಲಿ ಮಾರುವವರು ; 2 ಪದಾರ್ಥವನ್ನು ಕೊಂಡು ದಾಸ್ತಾನು ಮಾಡುವುದೇ ಅಲ್ಲದೆ ಅದನ್ನು ಮಾರಾಟಕ್ಕಾಗಿ ಪರಿಷ್ಕರಿಸುವವರು ; 3 ಒಂದು ಪದಾರ್ಥದ ಹಂಚಿಕೆಯ ವ್ಯವಸ್ಥೆ ಮಾಡಿದರೂ ವಾಸ್ತವವಾಗಿ ಅದನ್ನು ನೇರವಾಗಿ ಕೊಂಡು ಮಾರದವರು ; ಉದಾ : ಮೋಟಾರ್ ಕಾರು ವ್ಯವಹಾರಸ್ಥರು ; 4 ಇತರ ಒಟ್ಟು ವ್ಯಾಪಾರಿಗಳ ಪರವಾಗಿ ಸರಕುಗಳನ್ನು ಕೊಳ್ಳುವ ಮಾರುವ ಕಾರ್ಯನಿರ್ವಹಿಸುವ ಮುತಾಲಿಕರು (ಏಜೆಂಟ್ಸ್), ದಳ್ಳಾಳಿಗಳು (ಬ್ರೋಕರ್ಸ್) ಮುಂತಾದ ಮಧ್ಯವರ್ತಿಗಳನ್ನೂ ಸ್ಥೂಲವಾಗಿ ಒಟ್ಟುವ್ಯಾಪಾರಿಗಳೆನ್ನಬಹುದು (ನೋಡಿ–ದಳ್ಳಾಳಿ).

ಹೊಲದಲ್ಲಿ ಬೆಳೆದ ಫಸಲೋ ಕಾರ್ಖಾನೆಯಲ್ಲಿ ಉತ್ಪಾದನೆಯಾದ ಸರಕೋ ಅಂತಿಮವಾಗಿ ಅನುಭೋಗಿಯ ಕೈಸೇರುವಾಗ ನಡುವೆ ಬರುವವರಲ್ಲಿ ಒಬ್ಬನಾದ ಒಟ್ಟುವ್ಯಾಪಾರಿಯನ್ನು ಸಂಪೂರ್ಣವಾಗಿ ನಿವಾರಿಸುವುದು ಸಾಧ್ಯವೆ ಎಂಬ ವಿಚಾರವಾಗಿ ವಿಪುಲವಾಗಿ ಜಿಜ್ಞಾಸೆ ಬೆಳೆದಿದೆ. ಸರಕಿನ ಹಂಚಿಕೆಯಲ್ಲಿ ಒಟ್ಟುವ್ಯಾಪಾರ ಒಂದು ಅವಶ್ಯ ಅಂಗ. ಒಟ್ಟುವ್ಯಾಪಾರಿಯನ್ನು ನಿವಾರಿಸಿಕೊಂಡರೂ ಆತನ ಕಾರ್ಯಭಾರವನ್ನು ಬೇರೆ ಯಾರಾದರೂ—ಎಂದರೆ ತಯಾರಕನೋ ಚಿಲ್ಲರೆ ವ್ಯಾಪಾರಿಯೋ—ವಹಿಸಿಕೊಳ್ಳುವುದು ಅವಶ್ಯವಾಗುತ್ತದೆ. ಚಿಲ್ಲರೆ ವ್ಯಾಪಾರಿಗಳೇ ಬೃಹದ್ಗಾತ್ರದಲ್ಲಿ ಉತ್ಪಾದಕರಿಂದ ಸರಕು ಕೊಳ್ಳಬಹುದು. ಕೊಂಡ ಸರಕಿನ ದಾಸ್ತಾನು, ತಮ್ಮ ಶಾಖೆಗಳಲ್ಲಿ ಹಂಚಿಕೆ ಮುಂತಾದ ಎಲ್ಲ ಕಾರ್ಯಗಳನ್ನೂ ನಿರ್ವಹಿಸುವ ಸಂಸ್ಥೆಗಳುಂಟು. ಅಂಕಿತ (ಬ್ರ್ಯಾಂಡೆಡ್) ಸರಕುಗಳನ್ನು ತಯಾರಿಸುವ ಅನೇಕ ಉತ್ಪಾದಕರು ತಮ್ಮ ಪದಾರ್ಥಗಳು ಎಲ್ಲೆಡೆಗಳಲ್ಲೂ ಪ್ರಸಾರವಾಗಬೇಕೆಂಬ ಉದ್ದೇಶದಿಂದ ತಾವೇ ಅವನ್ನು ಕಿರುಕುಳ ವ್ಯಾಪಾರಿಗಳಿಗೆ ನೇರವಾಗಿ ಹಂಚುವ ವ್ಯವಸ್ಥೆ ಇಟ್ಟುಕೊಂಡಿರುತ್ತಾರೆ. ಉತ್ಪಾದಕನಿಗೂ ಕಿರುಕುಳ ವ್ಯಾಪಾರಿಗೂ ನಡುವೆ ಒಬ್ಬನಿಗಿಂತ ಹೆಚ್ಚು ಒಟ್ಟುವ್ಯಾಪಾರಿಗಳಿರುವ ಸಂದರ್ಭಗಳೂ ಉಂಟು; ವಿತರಣ ವ್ಯವಸ್ಥೆ ಸಂಕೀರ್ಣವಾಗಿದ್ದಾಗ ಇವರ ಅಸ್ತಿತ್ವ ಅಗತ್ಯವಾಗಬಹುದು. *

**ಒಡಂಬಡಿಕೆ :** ಕೇವಲ ಲೌಕಿಕ ವ್ಯವಹಾರಗಳಲ್ಲಿ ಇಬ್ಬರು ಅಥವಾ ಎರಡು ಗುಂಪಿನವರು ತಮ್ಮೊಳಗೆ ಮಾಡಿಕೊಂಡ ಒಪ್ಪಂದವನ್ನಲ್ಲದೆ ಮತವಿಚಾರಗಳಲ್ಲಿ ಮಾಡಿಕೊಂಡ ಒಪ್ಪಂದವನ್ನೂ ಒಳಗೊಳ್ಳುತ್ತದೆ. ಎರಡನೆಯ ಬಗೆಯ ಒಪ್ಪಂದ ಪ್ರಧಾನವಾಗಿ ಕಾಣುವುದು ಹೀಬ್ರೂ ಮತದಲ್ಲಿ. ಹೀಬ್ರೂ ಭಾಷೆಯಲ್ಲಿ ಒಡಂಬಡಿಕೆಗೆ ಸಮಾನಾಂತರವಾದ ಪದ ಬೆರಿತ್. ಹೀಬ್ರೂ ಮತದಲ್ಲಿ ಈ ಪದ ದೇವರಿಗೂ ಮತ್ತು ಮಾನವರಿಗೂ ಅಥವಾ ದೇವರಿಗೂ ಮತ್ತು ಸೃಷ್ಟಿಯಾದ ಜಗತ್ತಿಗೂ ಏರ್ಪಟ್ಟ ಸಂಬಂಧವನ್ನು ನಿರ್ದೇಶಿಸುತ್ತದೆ. ಈ ಸಂಬಂಧ ಶಾಂತಿಜೀವನ, ವಿಧಿವತ್ತಾದ ಜೀವನ, ಪರಸ್ಪರ ಅಥವಾ ಏಕಪಕ್ಷೀಯ ಸಂರಕ್ಷಣೆ, ಭರವಸೆ ಮುಂತಾದುವನ್ನು ಒಳಗೊಳ್ಳುತ್ತದೆ. ಯೆಹೂದಿ ಮತದಲ್ಲಿ ಯಾಹವೆ ತಾನು ವಿಧಿಸಿದ ಹತ್ತು ಆಜ್ಞೆಗಳಿಗೆ ವಿಧೇಯರಾದ ಜನರನ್ನು ತನ್ನ ಜನವೆಂದು ಭಾವಿಸಿ ಅವರಲ್ಲಿ ಒಗ್ಗಟ್ಟನ್ನು ಏರ್ಪಡಿಸಿ ಅವರನ್ನು ಸಂರಕ್ಷಿಸಲು ಬದ್ಧನಾಗಿರುತ್ತಾನೆ. ಈ ಒಪ್ಪಂದ ಏಕಪಕ್ಷೀಯ ; ಜನರನ್ನು ತನ್ನವರನ್ನಾಗಿ ಆಯ್ದುಕೊಂಡವನೂ ಜನರಿಗೆ ಕಾನೂನನ್ನು ವಿಧಿಸಿದವನೂ ಪ್ರಭುವಾದ ಯಾಹವೆಯೇ. ರಕ್ಷಣೆಯ ಆಶ್ವಾಸನೆ ನೀಡಿದವನೂ ಅವನೇ. ಈ ಒಡಂಬಡಿಕೆಗೆ ಸಂಬಂಧಪಟ್ಟ ಮತಾಚರಣೆಯುಂಟು. ಅದರಲ್ಲಿ ಪುರೋಹಿತ ಪ್ರಭುವಿನ ಪ್ರತಿನಿಧಿಯಾಗಿ ಯಾಹವೆಯ ಕೃಪಾಪೂರ್ಣತೆಯನ್ನು ಹೊಗಳಿ ಅವನ ಆಜ್ಞಾನುಸಾರ ಬಾಳಬೇಕೆಂದು ಘೋಷಿಸುತ್ತಾನೆ. ಭಕ್ತರು ತಮ್ಮ ವಿಧೇಯತೆಯನ್ನು ಪ್ರಕಟಿಸಿದ ಅನಂತರ ಆ ಒಡಂಬಡಿಕೆಯ ಸಂಕೇತವಾಗಿ ಒಡಂಬಡಿಕೆಯ ರಕ್ತವನ್ನು ಪ್ರೋಕ್ಷಿಸುತ್ತಾನೆ. ಅನಂತರದಲ್ಲಿ ಪವಿತ್ರಭೋಜನ ನಡೆಯುತ್ತದೆ.

ಹೆಚ್ಚು ವಿವರಗಳಿಗೆ ನೋಡಿ—**ಒಡಂಬಡಿಕೆಗಳು** (ಜಿ.ಎಚ್.)

**ಒಡಂಬಡಿಕೆಗಳು, ಹಳೆಯ ಮತ್ತು ಹೊಸ :** ಕ್ರಿಸ್ತವೇದವಾದ ಬೈಬಲಿನ ಮುಖ್ಯ ಭಾಗಗಳು (ಟೆಸ್ಟಮೆಂಟ್ಸ್—ಓಲ್ಡ್ ಅಂಡ್ ನ್ಯೂ). ಮೊದಲನೆಯದು ಹಳೆಯ ಒಡಂಬಡಿಕೆ, ಎರಡನೆಯದು ಹೊಸ ಒಡಂಬಡಿಕೆ. ಇವು ಕಾಲದಿಂದ ಕಾಲಕ್ಕೆ ದೇವರು ಅಪ್ಪಣೆ ಕೊಟ್ಟ ವಿಧಾಯಕ ವಾಕ್ಯರೂಪದಲ್ಲಿವೆ. ಕ್ರೈಸ್ತ ಮತದ ತಾರುಣ್ಯದಲ್ಲಿ ಹೊಸ ಒಡಂಬಡಿಕೆಗೆ ಮಾತ್ರ ಪವಿತ್ರವಾದುದೆಂಬ ಭಾವನೆ ಇತ್ತು. ಹಳೆಯ ಒಡಂಬಡಿಕೆ ಮತ್ತು ಹೊಸ ಒಡಂಬಡಿಕೆ ಎರಡೂ ಪವಿತ್ರವಾದುವೇ ಎಂಬುದು ಈಗ ಕ್ರೈಸ್ತರಿಗೆ ಸಾಮಾನ್ಯವಾಗಿ ಒಪ್ಪಿಗೆಯಾಗಿರುವ ಅಭಿಪ್ರಾಯ. ಈ ಎರಡರಲ್ಲೂ ಪ್ರಕಟವಾಗಿರುವ ವಿಧಾಯಕ ವಾಕ್ಯಗಳು ಒಂದೇ ದೇವರ ವಾಕ್ಯಗಳು. ಆದರೂ ಈ ವಿಧಾಯಕ ವಾಕ್ಯಗಳಿಗೆ ಕೊಟ್ಟಿರುವ ಸ್ಥಾನಮಾನಗಳಲ್ಲಿ ವ್ಯತ್ಯಾಸವಿದೆ. ಹಳೆಯ ಒಡಂಬಡಿಕೆಯಲ್ಲಿರುವವು ಆಖೈರು ವಾಕ್ಯಗಳಲ್ಲ. ಹೊಸ ಒಡಂಬಡಿಕೆಯವು ಪೂರ್ಣವಾದುವು, ಅಂತಿಮವಾದುವು. ಮುಂದೆ ಉದ್ಧಾರಕನ ಅವತಾರವಾಗುವುದೆಂಬ ಭರವಸೆಯ ಮಾತುಗಳು ಹಳೆಯ ಒಡಂಬಡಿಕೆಯ ಉದ್ದಕ್ಕೂ ಬಂದಿವೆ. ಆ ಉದ್ಧಾರಕನೇ ಯೇಸು ಕ್ರಿಸ್ತ. ಅವನದು ಹಳೆಯ ಒಡಂಬಡಿಕೆಯ ಪ್ರವಾದಿಗಳ ದರ್ಜೆಗಿಂತ ಮೇಲಿನದು. ಪ್ರವಾದಿಗಳು ದೇವಪುತ್ರರಲ್ಲ. ಯೇಸುವಾದರೋ ಸಾಕ್ಷಾತ್ ದೇವಪುತ್ರ. ದೇವರೇ ಸಾಕ್ಷಾತ್ತಾಗಿ ಕ್ರೈಸ್ತನ ರೂಪದಲ್ಲಿ ಬಂದು ಜನತೆ ದೇವರಾಜ್ಯವನ್ನು ಸೇರುವ ಮಾರ್ಗವನ್ನು ತೋರಿಸಿರುತ್ತಾನೆ. ಯೇಸು ಕ್ರಿಸ್ತನ ಮುಖದಿಂದ ಹೊರಬಿದ್ದ ವಿಧಾಯಕ ವಾಕ್ಯಗಳು ಅಂತಿಮ ಸಂದೇಶದ ವಾಕ್ಯಗಳು. ಇವು ಹೊಸ ಒಡಂಬಡಿಕೆಯಲ್ಲಿವೆ.

ಮೊಟ್ಟಮೊದಲಿಗೆ ಒಪ್ಪಂದದ ಮಾತು ಕಾಣಿಸಿಕೊಳ್ಳುವುದು ಹಳೆಯ ಒಡಂಬಡಿಕೆಯ ಮೊದಲ ಭಾಗವಾದ ಜೆನಿಸಿಸ್ಸಿನಲ್ಲಿ. ಅಲ್ಲಿ ದೇವರು ನೋವಾ ಮತ್ತು ಅವನ ಮಕ್ಕಳಿಗೆ ಹೇಳಿದ ವಾಕ್ಯಗಳು ಇವು : ಇಗೋ, ನಾನು ನನ್ನ ಮತ್ತು ನಿನ್ನ ಮಕ್ಕಳೊಡನೆ ಮತ್ತು ನಿನ್ನ ಸಂತತಿಯೊಡನೆ, ನಿನ್ನ ಜೊತೆಯಲ್ಲಿರುವ ಎಲ್ಲ ಪ್ರಾಣಿಗಳು ಅಂದರೆ ಪಕ್ಷಿಗಳು, ದನಗಳು ಮತ್ತು ಭೂಮಿಯ ಮೇಲಿನ ಎಲ್ಲ ಪ್ರಾಣಿಗಳು ಈ ಎಲ್ಲರೊಡನೆ ನನ್ನ ಒಪ್ಪಂದವನ್ನು ಸ್ಥಾಪಿಸುತ್ತೇನೆ. ನನಗೂ ಮತ್ತು ಈ ಭೂಮಿಯ ಮೇಲಿರುವ ಎಲ್ಲದಕ್ಕೂ ಆದ ಈ ಒಪ್ಪಂದದ ಕುರುಹಾಗಿ ನಾನು ಮೋಡದಲ್ಲಿ ನನ್ನ ಬಿಲ್ಲನ್ನು ನೆಟ್ಟಿರುತ್ತೇನೆ.

ದೇವರು ಏಬ್ರಹಾಮನೊಡನೆ ಮಾಡಿಕೊಂಡ ಒಪ್ಪಂದ ಎರಡನೆಯದು. ಇದು ಜೆನಿಸಿಸ್ಸಿನ ಹದಿನೇಳನೆಯ ಅಧ್ಯಾಯದಲ್ಲಿ ಉಲ್ಲಿಖಿತವಾಗಿದೆ. ಏಬ್ರಮ್‌ಗೆ ತೊಂಬತ್ತೊಂಬತ್ತು ವಯಸ್ಸಾದಾಗ ಅವನಿಗೆ ದೇವರು ಕಾಣಿಸಿಕೊಂಡ. ದೇವರ

ಮುಂದೆ ಅಡ್ಡಬಿದ್ದಾಗ ದೇವರು ತನ್ನ ಒಪ್ಪಂದವನ್ನು ಅವನಿಗೆ ಹೇಳಿದ: ನೀನು ಅನೇಕ ಜನಾಂಗಗಳ ತಂದೆಯಾಗುವೆ. ಇನ್ನು ಮುಂದೆ ನಿನ್ನ ಹೆಸರು ಏಬ್ರಹಾಮ್–ಏಬ್ರಮ್ ಅಲ್ಲ. ಕ್ಯಾನನ್ ಪ್ರದೇಶವನ್ನು ನಿನ್ನ ಮತ್ತು ನಿನ್ನ ಪೀಳಿಗೆಯವರು ಸರ್ವಕಾಲಕ್ಕೂ ಅನುಭವಿಸುವಂತೆ ಒಪ್ಪಿಸಿರುತ್ತೇನೆ. ಈ ಒಡಂಬಡಿಕೆಯ ಗುರುತಾಗಿ ಹುಟ್ಟಿದ ಮಕ್ಕಳಿಗೆಲ್ಲರಿಗೂ ನೀನು ಹಣ ಕೊಟ್ಟು ಕೊಂಡವರಿಗೂ ನೀನು ಪರಿಕರ್ತನವೇರ್ಪಡಿಸಬೇಕು.

ಎಕ್ಸೋಡಸ್ಸಿನ ಹತ್ತೊಂಬತ್ತರಿಂದ ಇಪ್ಪತ್ತನಾಲ್ಕನೆಯ ಅಧ್ಯಾಯದ ವರೆಗಿನ ವುಗಳಲ್ಲಿ ಹೇಳಿರುವಂತೆ ಪ್ರಭು ಮೋಸೆಯೊಡನೆ ಮಾಡಿಕೊಂಡ ಒಪ್ಪಂದ ಮೂರನೆಯದು. ಇದರ ಇಪ್ಪತ್ತನೆಯ ಅಧ್ಯಾಯದಲ್ಲಿ ಪ್ರಭುವಿನ ಹತ್ತು ಆಜ್ಞೆಗಳು ವರ್ಣಿತವಾಗಿವೆ. ಈ ಒಪ್ಪಂದ ಹಿಂದಿನ ಒಪ್ಪಂದಗಳಿಗಿಂತ ಹೆಚ್ಚು ವಿಸ್ತಾರವಾಗಿದೆ.

ಜೆರೇಮಿಯಾದ ಮೂವತ್ತೊಂದರಿಂದ ಮೂವತ್ತನಾಲ್ಕನೆಯ ಅಧ್ಯಾಯಗಳಲ್ಲಿ ಹಳೆಯ ಒಡಂಬಡಿಕೆಗೆ ಹೊಸ ವಿವರಣೆಯನ್ನು ಕೊಟ್ಟು ಅದನ್ನು ಮುಂದೆ ಬರಲಿರುವ ಹೊಸ ಒಡಂಬಡಿಕೆ ಎಂದು ಕರೆದಿದೆ. ಈ ಹೊಸ ಒಡಂಬಡಿಕೆಯನ್ನು ಇಸ್ರೇಲ್ ಮನೆತನದವರೊಡನೆ ಮುಂದಿನ ಕಾಲದಲ್ಲಿ ಏರ್ಪಡಿಸುವುದಾಗಿಯೂ ಆಗ ತನ್ನ ನಿಯಮವನ್ನು ಅವರ ಹೃದಯದೊಳಗೆ ಬರೆಯುವುದಾಗಿಯೂ ಪ್ರಭು ಹೇಳಿರುತ್ತಾನೆ.

ಯೇಸು ಕ್ರಿಸ್ತ ಏರ್ಪಡಿಸಿದ ಹೊಸ ಒಡಂಬಡಿಕೆ ಹಳೆಯ ಒಡಂಬಡಿಕೆಯ ಪುನಃಸ್ಥಾಪನೆ. ಅದು ಪ್ರಭುವಿಗೂ ಭಕ್ತನಿಗೂ ಆಂತರಿಕ ಸಂಬಂಧವನ್ನು ಏರ್ಪಡಿಸುತ್ತದೆ. ಕ್ರಿಸ್ತನ ಜೀವನ ಮತ್ತು ಮರಣವನ್ನು ಈ ಹೊಸ ಒಡಂಬಡಿಕೆಯ ಬೆಳಕಿನಲ್ಲಿ ಅರ್ಥಮಾಡಿಕೊಳ್ಳಬೇಕು. ಮಾನವ ದೇವರಾಜ್ಯವನ್ನು ತನ್ನ ಅಂತರಂಗದಲ್ಲೇ ಕಾಣಬಹುದು ಎಂಬುದೂ ಮಾನವನಿಗೂ ದೇವರಿಗೂ ಇರುವ ಸಂಬಂಧ ಪ್ರೀತಿಯದು ಎಂಬುದೂ ಅದರ ತಳಹದಿಯ ಭಾವನೆಗಳು. ನಿಬಂಧನೆ (ಹತ್ತು ಆಜ್ಞೆಗಳು) ಮೋಸೆಯ ಮೂಲಕ ಬಂದುದಾದರೆ, ಕಾರುಣ್ಯ ಮತ್ತು ಸತ್ಯ ಕ್ರೈಸ್ತನಿಂದ ಬಂದುವು (ಸೇಂಟ್ ಜಾನ್). ಹಿಂದೆ ಯೋಹಾನ ನೀರಿನಿಂದ ದೀಕ್ಷೆ ಕೊಟ್ಟರೆ ಈಗ ಕ್ರಿಸ್ತ ಪವಿತ್ರಾತ್ಮದಿಂದ ದೀಕ್ಷೆ ಕೊಡುತ್ತಾನೆ (ಸೇಂಟ್ ಜಾನ್). ಹಿಂದೆ ಪ್ರಭು ಪ್ರವಾದಿಗಳ ಮೂಲಕ ತನ್ನ ಸಂದೇಶವನ್ನು ಕೊಟ್ಟ. ಈಗ ಪ್ರಭು ದೇವಪುತ್ರನಾಗಿ ಅವತರಿಸಿ ಜನರ ಮಧ್ಯೆ ಬಾಳಿ ಅವರಿಗೆ ತನ್ನ ಸಂದೇಶವನ್ನು ತಿಳಿಸಿರುತ್ತಾನೆ. ಅನೇಕ ಕಾಲದಿಂದ ಯೆಹೂದ್ಯರು ನಿರೀಕ್ಷಿಸಿದ್ದ ಉದ್ಧಾರಕ ಯೇಸು ಕ್ರಿಸ್ತನೇ ಎಂದು ಯೋಹಾನ ಸಾರುತ್ತಾನೆ. ಯೇಸು ಪರ್ವತಶಿಖರದಿಂದ ಮಾಡಿದ ಉಪದೇಶ ಹೊಸ ಒಡಂಬಡಿಕೆಯ ಸಾರ. ಪ್ರಭುಭೋಜನ ಹೊಸ ಒಪ್ಪಂದದ ಸಂಸ್ಕಾರ. ಈ ಸಂಸ್ಕಾರದಲ್ಲಿ ದ್ರಾಕ್ಷಾರಸ ಯೇಸುವಿನ ಪರಿತಾಪ ಮತ್ತು ಅವನ ರಕ್ತ ಹೊಸ ಒಪ್ಪಂದದ ಸಂಕೇತ. ಅನೇಕರಿಗಾಗಿ ಬಸಿದ ರಕ್ತ ನನ್ನ ಹೊಸ ಒಡಂಬಡಿಕೆಯ ಸಂಕೇತ—ಎಂಬ ಯೇಸುವಿನ ಹೇಳಿಕೆ ಸೇಂಟ್ ಮಾರ್ಕ್ ಮತ್ತು ಕೊರಿಂಥಿಯನ್ಸ್ ಎಂಬ ಹೊಸ ಒಡಂಬಡಿಕೆಯ ಪುಸ್ತಕಗಳಲ್ಲಿ ಉಲ್ಲಿಖಿತವಾಗಿದೆ. ನೋಡಿ—ಬೈಬಲ್ (ಜಿ.ಎಡ್.)

**ಒಡಂಬಡಿಕೆ, ನ್ಯಾಯಶಾಸ್ತ್ರದಲ್ಲಿ:** ಒಡಂಬಡಿಕೆ, ಒಪ್ಪಂದ ಮತ್ತು ಕರಾರು ಎಂಬ ಪದಗಳನ್ನು ಸಾಮಾನ್ಯವಾಗಿ ಒಂದೇ ಅರ್ಥದಲ್ಲಿ ಬಳಸಲಾಗುತ್ತಿದೆ. ಆದರೆ ನ್ಯಾಯಶಾಸ್ತ್ರದಲ್ಲಿ ಇವಕ್ಕೆ ವಿಶಿಷ್ಟ ಅರ್ಥಗಳಿವೆ. ಆಧುನಿಕ ಭಾರತದ ನ್ಯಾಯಸೂತ್ರಗಳು ಇಂಗ್ಲಿಷ್ ನ್ಯಾಯಸೂತ್ರಗಳ ಹಿನ್ನೆಲೆಯಲ್ಲಿ ಅಸ್ತಿತ್ವಕ್ಕೆ ಬಂದು ಇಂಗ್ಲಿಷ್ ಭಾಷೆಯಲ್ಲಿರುವ ಕಾರಣ ಒಡಂಬಡಿಕೆ, ಒಪ್ಪಂದ ಮತ್ತು ಕರಾರು ಶಬ್ದಗಳನ್ನು ಕ್ರಮವಾಗಿ ಇಂಗ್ಲಿಷಿನ ಕವಿನಂಟ್, ಅಗ್ರಿಮೆಂಟ್ ಮತ್ತು ಕರಾರು ಎಂಬ ಅರ್ಥಗಳಲ್ಲಿ ಇಲ್ಲಿ ಬಳಸಲಾಗಿದೆ. ಒಪ್ಪಂದ ಮತ್ತು ಕರಾರು—ಈ ಎರಡೂ ಪದಗಳನ್ನು ಭಾರತದ ಕರಾರುಗಳ ಕಾಯಿದೆಯಲ್ಲಿ ವಿವರಿಸಲಾಗಿದೆ. (ನೋಡಿ—ಒಪ್ಪಂದ; ಕರಾರು).

ಇಬ್ಬರು ಅಥವಾ ಹೆಚ್ಚು ಜನರು ಇಲ್ಲವೇ ಜನರ ಗುಂಪುಗಳು ಪರಸ್ಪರವಾಗಿ ಒಪ್ಪಿರುವುದೇ ಒಡಂಬಡಿಕೆ (ಕವಿನಂಟ್). ಒಡಂಬಡಿಕೆಯೂ ಒಪ್ಪಂದವೇ ಆದರೂ ಒಡಂಬಡಿಕೆ ಮಾಡಿಕೊಂಡ ಉಭಯ ಪಕ್ಷದವರಿಗೂ ತನ್ಮೂಲಕ ಪರಸ್ಪರ ಲಾಭ ಅಥವಾ ಪ್ರತಿಫಲ ದೊರೆಯಲೇಬೇಕಾಗಿಲ್ಲ. ಉಭಯ ಪಕ್ಷಗಳ ಒಪ್ಪಂದ ವಿವರಣಾತ್ಮಕವಾಗಿರುವುದು ಒಡಂಬಡಿಕೆಯ ಲಕ್ಷಣ. ಇವು ಒಂದು ಅಥವಾ ಹಲವು ವಿಷಯಗಳ ಸತ್ಯತೆಯ ಬಗ್ಗೆ ಒಪ್ಪಿರುವುದನ್ನು ಅಥವಾ ಏನನ್ನಾದರೂ ಮಾಡಲು ಇಲ್ಲವೆ ಮಾಡದಿರಲು ಒಪ್ಪಿರುವುದನ್ನು ಒಡಂಬಡಿಕೆ ಸ್ಪಷ್ಟೀಕರಿಸಿರುತ್ತದೆ. ಒಡಂಬಡಿಕೆಗೆ ನಿರ್ದಿಷ್ಟ ಸ್ವರೂಪ—ನಮೂನೆ (ಫಾರ್ಮ್)—ಅಥವಾ ಶಬ್ದಗಳ ಆವಶ್ಯಕತೆ ಇಲ್ಲ. ನಿರೂಪಣೆ ಸ್ಪಷ್ಟವಾಗಿದ್ದರೆ ಸಾಕು. ಯಾವೊಂದು ದೇಶದ ನ್ಯಾಯ ವ್ಯವಸ್ಥೆಯನ್ವಯ ಮಾಡಿಕೊಳ್ಳುವ ಒಡಂಬಡಿಕೆಗಳು, ಸಾಧಾರಣವಾಗಿ ವ್ಯಕ್ತಿಗೂ ಚರ ಮತ್ತು ಸ್ಥಿರ ಸ್ವತ್ತುಗಳಿಗೂ ಸಂಬಂಧಿಸಿರುತ್ತವೆ.

ಯಾವೊಬ್ಬ ವಿಶಿಷ್ಟ ವ್ಯಕ್ತಿಗೆ ಲಾಭದಾಯಕವಾಗುವ ಅಥವಾ ನಿರ್ದಿಷ್ಟ ವ್ಯಕ್ತಿಯೇ ಒಪ್ಪಂದದ ನಿರ್ವಹಣೆಗೆ ಹೊಣೆ ಎಂದು ಸೂಚಿಸುವ ಒಡಂಬಡಿಕೆಗಳು ವ್ಯಕ್ತಿಗತ ಒಡಂಬಡಿಕೆಗಳು. ಚರಾಸ್ತಿಗೆ ಸಂಬಂಧಿಸಿಯೂ ಒಡಂಬಡಿಕೆಗಳು ಇರುತ್ತವೆ. ಆದರೆ ನಿತ್ಯಜೀವನದಲ್ಲಿ ನಾವು ಕಾಣುವ ಅನೇಕ ಒಡಂಬಡಿಕೆಗಳು ಭೂಮಿಗೆ ಸಂಬಂಧಿಸಿರುತ್ತವೆ. ಇವುಗಳಲ್ಲಿ ಸಾಮಾನ್ಯವಾಗಿ ಮೂರು ರೀತಿಯವು ಇರುತ್ತವೆ. ಭೂಮಿಯ ವಿಕ್ರಯ ವಿಲೇಖದಲ್ಲಿ (ಕ್ರಯಪತ್ರ) ಹೇಳಿದ ಒಡೆತನದ ಹಕ್ಕುಬಾಧ್ಯತೆಗಳ ಬಗೆಗಿನ ಲೋಪದೋಷಗಳಿಗೆ ಪ್ರತಿಯಾಗಿ ಭದ್ರತೆ ಸೂಚಿಸುವ ಒಡಂಬಡಿಕೆಗಳು. ಗೇಣಿದಾರಿ ಮತ್ತು ಕೌಲು ಇವುಗಳ ಬಗೆಗಿನ ಒಡಂಬಡಿಕೆಗಳು. ಮೂರನೆಯದಾಗಿ ನಿರ್ಬಂಧಕ (ರಿಸ್ಟ್ರಿಕ್ಟಿವ್) ಒಡಂಬಡಿಕೆಗಳು. ಈ ನಿರ್ಬಂಧಕ ಒಡಂಬಡಿಕೆಗಳು ಭೂಮಿಗಳ ಸಂಬಂಧದಲ್ಲಿನ ಪರತ್ತುಗಳು ಮತ್ತು ಅವುಗಳ ಅನುಭೋಗದ ಹಕ್ಕುಗಳಿಗೆ ಸಂಬಂಧಿಸಿರುತ್ತವೆ. ಇಂಥ ಒಡಂಬಡಿಕೆಗಳು ಸಾಮಾನ್ಯವಾಗಿ ಭೂಮಿಗಳೊಂದಿಗೆ ಸಹಗಾಮಿ ಎಂದು ಹೇಳಬಹುದು.

ಹಾನಿಪೂರ್ತಿ ವಸೂಲಿಯ ದೃಷ್ಟಿಯಿಂದ ಒಡಂಬಡಿಕೆಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು. ಸ್ವತಂತ್ರ ಒಡಂಬಡಿಕೆ ಎಂದರೆ ಉಭಯ ಪಕ್ಷಗಳಲ್ಲಿ ಯಾರೊಬ್ಬರೂ ಇನ್ನೊಬ್ಬರು ಒಡಂಬಡಿಕೆಯನ್ನು ಮುರಿದಿರುವ ಕಾರಣದ ಮೇಲೆ, ಇನ್ನೊಬ್ಬರ ತತ್ಸಂಬಂಧದ ಹಕ್ಕುಗಳನ್ನು ಅವಲಂಬಿಸದೆ ಹಾನಿಪೂರ್ತಿಯನ್ನು ಪಡೆಯಲು ಸಾಧ್ಯವಾಗಿರುವಂಥ ಒಡಂಬಡಿಕೆ. ಒಂದು ಒಡಂಬಡಿಕೆ ತತ್ಪೂರ್ವದ ಒಡಂಬಡಿಕೆಯನ್ನು ಕಾರ್ಯಗತಗೊಳಿಸುವುದನ್ನು ಅವಲಂಬಿಸಿದ್ದರೆ ಅಂಥದನ್ನು ಆಶ್ರಿತ ಅಥವಾ ಅವಲಂಬಿ (ಡಿಪೆಂಡೆಂಟ್) ಒಡಂಬಡಿಕೆ ಎನ್ನುತ್ತಾರೆ. ಉಭಯ ಪಕ್ಷಗಳು ಏಕಕಾಲದಲ್ಲಿ ನಿರ್ವಹಿಸುವಂತೆ ಒಪ್ಪಿಕೊಂಡದ್ದು ಇನ್ನೊಂದು ಬಗೆಯ ಒಡಂಬಡಿಕೆ. ಇಂಥ ಒಡಂಬಡಿಕೆಯನ್ನು ಸಹಗಾಮಿ ಒಡಂಬಡಿಕೆ ಎನ್ನಲಾಗುತ್ತಿದೆ. (ಎಲ್.ಎಸ್.ಜಿ.)

**ಒಡಂಬಡಿಕೆ, ರಾಜಕೀಯ:** ಎರಡು ಅಥವಾ ಎರಡಕ್ಕೂ ಹೆಚ್ಚು ಪಕ್ಷಗಳು ಅಥವಾ ರಾಷ್ಟ್ರಗಳು ಯಾರ ಒತ್ತಾಯಕ್ಕೂ ಒಳಪಡದೆ, ಕೆಲ ಕಾರ್ಯಗಳನ್ನು ಮಾಡಲು ಅಥವಾ ಮಾಡದೆ ಇರಲು ಮಾಡಿಕೊಂಡ ಒಡಂಬಡಿಕೆಯ ಉದಾಹರಣೆಗಳನ್ನು ನಾವು ಇತಿಹಾಸ ಗ್ರಂಥಗಳಲ್ಲಿ ಕಾಣಬಹುದು. ಚಂದ್ರಗುಪ್ತನ ಮಂತ್ರಿಯಾಗಿದ್ದ ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ಮನು ಹಾಗೂ ಪ್ರಜೆಗಳ ನಡುವೆ ಆದ ಒಡಂಬಡಿಕೆಯನ್ನು ಚರ್ಚಿಸುತ್ತಾನೆ. ಪ್ರಜೆಗಳು ಅರಾಜಕ ಸ್ಥಿತಿಯಲ್ಲಿದ್ದಾಗ, ಮತ್ಸ್ಯನ್ಯಾಯದಿಂದಾಗಿ ತೊಂದರೆಗೊಳಪಡುತ್ತಿದ್ದ ಅವರು ಮನುವನ್ನು ತಮ್ಮ ದೊರೆಯನ್ನಾಗಿ ಚುನಾಯಿಸಿಕೊಂಡು, ತಾವು ಬೆಳೆದದ್ದರಲ್ಲಿ ⅙ ಭಾಗವನ್ನು ಆತನಿಗೆ ಒಪ್ಪಿಸುವುದಾಗಿಯೂ ದೊರೆ ಪ್ರಜೆಗಳ ರಕ್ಷಣೆಯ ಜವಾಬ್ದಾರಿಯನ್ನು ಹೊತ್ತುಕೊಳ್ಳಬೇಕಾಗಿಯೂ ಒಡಂಬಡಿಕೆಯಾಗಿತ್ತೆಂದು ಆತ ತಿಳಿಸುತ್ತಾನೆ. ಇಂಗ್ಲೆಂಡ್ ಮತ್ತು ಸ್ಕಾಟ್ಲೆಂಡ್‌ಗಳಲ್ಲಿ ಕ್ರೈಸ್ತ ಪ್ರೆಸ್ಬಿಟಿಯರಿಯನ್ ಮತಸ್ಥಾಪನೆ ಮಾಡಿದ ವಿಧಿವಿಹಿತವಾದ ಸಂಧಿ ಮತ್ತು ಒಡಂಬಡಿಕೆಗಳು ಪ್ರಸಿದ್ಧವಾಗಿವೆ.

ಭಾರತದ ಆಧುನಿಕ ಇತಿಹಾಸದಲ್ಲಿ ಇದಕ್ಕೆ ಒಂದು ನಿದರ್ಶನ ಕೊಡಬಹುದು. ಭಾರತದಲ್ಲಿ ಈಸ್ಟ್ ಇಂಡಿಯ ಕಂಪನಿ ಅಧಿಕಾರ ನಡೆಸುತ್ತಿದ್ದ ಕಾಲದಲ್ಲಿ ಅಧಿಕಾರಿ ವರ್ಗವನ್ನು ಹತೋಟಿಯಲ್ಲಿಟ್ಟುಕೊಳ್ಳಲು ಪ್ಲಾಸಿ ಯುದ್ಧದ ಅನಂತರ ಅದು ತನ್ನ ನೌಕರರೊಂದಿಗೆ ಒಡಂಬಡಿಕೆ ಮಾಡಿಕೊಂಡಿತು. ಅದರ ಪ್ರಕಾರ ನೌಕರರು ತಾವು ಕಂಪನಿಯೊಂದಿಗೆ ನಿಷ್ಠೆಯಿಂದ ನಡೆದುಕೊಳ್ಳುವುದಾಗಿ ವಚನ ನೀಡಿದರು.

ಅಂತರರಾಷ್ಟ್ರೀಯ ಕ್ಷೇತ್ರದಲ್ಲಿ ರಾಷ್ಟ್ರಗಳಕೂಟದ ಸ್ಥಾಪನೆಯ ಒಡಂಬಡಿಕೆ ಪ್ರಸಿದ್ಧವಾದದ್ದು. ಪ್ರಥಮ ಮಹಾಯುದ್ಧದ ಅಂತ್ಯದಲ್ಲಿ ಮುಂದೆ ಯುದ್ಧಗಳಾಗದಂತೆ ನೋಡಿಕೊಳ್ಳುವ ಪ್ರಯತ್ನದ ಅಂಗವಾಗಿ ರಾಷ್ಟ್ರಗಳ ಕೂಟದ ಒಡಂಬಡಿಕೆಗೆ ಹಲವು ರಾಷ್ಟ್ರಗಳು ಸಹಿ ಹಾಕಿದ್ದುವು. ಈ ಒಡಂಬಡಿಕೆಯಲ್ಲಿ 26 ನಿಬಂಧನೆಗಳಿದ್ದುವು. ವಿಶ್ವಶಾಂತಿ ಸೌಹಾರ್ದ ಸ್ಥಾಪನೆಯೇ ಅದರ ಉದ್ದೇಶ. ವಿಶ್ವಸಂಸ್ಥೆಯ ಸನ್ನದೂ ಪ್ರಪಂಚದ ರಾಷ್ಟ್ರಗಳ ನಡುವೆ ಆದ ಒಡಂಬಡಿಕೆಯೇ ಆಗಿದೆ. ಇವೇ ಅಲ್ಲದೆ ಅಂತರರಾಷ್ಟ್ರೀಯ ಸ್ವರೂಪದ ಅನೇಕ ಒಡಂಬಡಿಕೆಗಳನ್ನು ನಾವು ಕಾಣಬಹುದು. (ಎ.ಎಂ.ಆರ್.)

**ಒಡಿಸ್ಸಿ:** ಕ್ರಿ.ಪೂ. ಒಂಬತ್ತು ಅಥವಾ ಎಂಟನೆಯ ಶತಮಾನದ ಸುಮಾರಿನಲ್ಲಿ ಪ್ರಾಚೀನ ಗ್ರೀಕ್ ಕವಿ ಹೋಮರ್ ರಚಿಸಿದನೆಂದು (ಅಥವಾ ಸಂಕಲನ ಮಾಡಿದನೆಂದು) ಪ್ರಖ್ಯಾತವಾಗಿರುವ ಎರಡು ಮಹಾಕಾವ್ಯಗಳಲ್ಲಿ ಒಂದು. ಅವನ ಮೊದಲನೆಯ ಮಹಾಕಾವ್ಯ ಇಲಿಯಡ್ (ನೋಡಿ). ಅದರಲ್ಲಿ ಗ್ರೀಕರು ಟ್ರಾಯ್ ಪಟ್ಟಣಕ್ಕೆ ಮುತ್ತಿಗೆ ಹಾಕಿದ್ದು, ಅಕಿಲೀಸನ ಉಗ್ರಕೋಪ, ಅದು ಗ್ರೀಕರಿಗೂ ಟ್ರೋಜನರಿಗೂ ತಂದ ವಿಪತ್ಪರಂಪರೆಗಳು—ಮುಂತಾದುವುಗಳ ವಿಸ್ತಾರವಾದ ವರ್ಣನೆ ಇದೆ. ಅದರ ಕಥೆ ಒಡಿಸ್ಸಿಯಲ್ಲಿ ಮುಂದುವರಿದಿದೆ. ಹತ್ತು ವರ್ಷಗಳ ಭಯಂಕರ ಯುದ್ಧದ ಅನಂತರ ಒಡಿಸ್ಸಿಯಸ್ ಮನೆಗೆ ಹೊರಟವನು ದಾರಿಯಲ್ಲಿ ಅಕಸ್ಮಾತ್ತಾಗಿ ಒದಗಿದ ವಿಘ್ನಗಳನ್ನೆದುರಿಸಬೇಕಾಗಿ ಬಂದು ಅನೇಕ ಸಾಹಸಕಾರ್ಯ

ಗಳಲ್ಲಿ ತೊಡಗುತ್ತಾನೆ. ಪರಿಣಾಮವಾಗಿ ತನ್ನೊಡನೆ ತಾಯ್ನಾಡಿನಿಂದ ಬಂದು, ಯುದ್ಧದಲ್ಲಿ ಹೋರಾಡಿ, ಸುಖವಾಗಿ ಹಿಂತಿರುಗುತ್ತಿದ್ದ ಎಲ್ಲ ಗೆಳೆಯರನ್ನೂ ಕಳೆದುಕೊಳ್ಳುತ್ತಾನೆ. ಒಡಿಸ್ಸಿಯುಸನ ಹತ್ತು ವರ್ಷಗಳ ಬಗೆಬಗೆಯ ಅನುಭವಗಳನ್ನು ೨೪ ಕಾಂಡಗಳ ತನ್ನ ಒಡಿಸ್ಸಿ ಮಹಾಕಾವ್ಯದಲ್ಲಿ ಹೋಮರ್ ವರ್ಣರಂಜಿತವಾಗಿ ಚಿತ್ರಿಸಿದ್ದಾನೆ. ಹರಹು ಹತ್ತು ವರ್ಷದ್ದಾದರೂ ಇಲಿಯಡ್ಡಿನಂತೆ ಇಲ್ಲಿಯೂ ವರ್ಣಿತವಾಗಿರುವುದು ಕೇವಲ ನಲವತ್ತು ದಿನಗಳ ಕ್ರಿಯೆ. ಅದರಲ್ಲೂ ವಿವರವಾಗಿ ವರ್ಣಿತವಾಗಿರುವುದು ಕೆಲವೇ ದಿನಗಳದ್ದು.

ದೇವತೆಗಳ ಸಭೆಯೊಂದಿಗೆ ಕಾವ್ಯ ಪ್ರಾರಂಭವಾಗುತ್ತದೆ. ಒಡಿಸ್ಸಿಯುಸನ ವಿಷಯದಲ್ಲಿ ಮೊದಲಿನಿಂದಲೂ ವಿಶೇಷವಾದ ವಾತ್ಸಲ್ಯವನ್ನು ತಳೆದ ಅಥೀನಾ ದೇವತೆ (ಈ ವಿಷಯ ನಮಗೆ ತಿಳಿಯುವುದು ಇಲಿಯಡ್ ಕಾವ್ಯದಿಂದ) ಜ಼ೂಸ್ ದೇವತೆಗೆ ದೂರು ಕೊಡುತ್ತಾಳೆ. ಅದರ ಸಾರಾಂಶ ಇಷ್ಟು : ಟ್ರಾಯ್ ಪಟ್ಟಣ ಧೂಳೀಪಟವಾಗಿ ಹತ್ತು ವರ್ಷಗಳಾದುವು. ಆದರೂ ವೀರನಾದ ಒಡಿಸ್ಸಿಯುಸಿಗೆ ಮನೆ ಸೇರಲು ಸಾಧ್ಯವಾಗಿಲ್ಲ. ಅದಕ್ಕೆ ಕಾರಣ ಕಲಿಪ್ಸೋ (ಬಚ್ಚಿಡುವವಳು) ಎಂಬ ಉಪದೇವತೆಯೊಬ್ಬಳು ಅವನನ್ನು ತಡೆಹಾಕಿದ್ದಾಳೆ. ಇತ್ತ ಇಥಾಕದಲ್ಲಿ ಅವನ ಹೆಂಡತಿ ಪೆನೆಲೊಪೆ ಮತ್ತು ಅವನ ಮಗ ಟೆಲಿಮಾಕಸ್ ರಾಜ್ಯವನ್ನು ಉಳಿಸಿಕೊಳ್ಳಲು ಕಷ್ಟಪಡುತ್ತಿದ್ದಾರೆ. ಪೆನೆಲೊಪೆಯನ್ನು ವರಿಸಿ ರಾಜ್ಯವನ್ನು ದಕ್ಕಿಸಿಕೊಳ್ಳಲು ಜನ ನಾನು ಮುಂದು ತಾನು ಮುಂದು ಎಂದು ಹೋರಾಡುತ್ತಿದ್ದಾರೆ. ಇದನ್ನೆಲ್ಲ ಕೇಳಿದ ಜ಼್ಯೂಸ್ ದೇವತೆ ಅಥೀನಾ ದೇವತೆಗೆ ಪೂರ್ಣ ಸ್ವಾತಂತ್ರ್ಯ ನೀಡುತ್ತಾನೆ. ಆಕೆ ವೇಷ ಮರೆಸಿಕೊಂಡು ಟೆಲಿಮಾಕಸನ ಮನೆಗೆ ಅತಿಥಿಯಾಗಿ ಬರುತ್ತಾಳೆ. ಅವಳ ಸಲಹೆಯಂತೆ ಆತ ಪುರಜನರ ಸಭೆ ಕರೆದು ತಾನು ತನ್ನ ತಂದೆಯನ್ನು ಹುಡುಕಿಕೊಂಡು ಬರಲು ಹೋಗುವುದಾಗಿ ತಿಳಿಸುತ್ತಾನೆ. ಸಭೆಯಲ್ಲಿ ಕವಿ ಫೀಮಿಯಸ್ ಟ್ರಾಯ್ ಯುದ್ಧದ ಘಟನೆಯ ಭಾಗಗಳನ್ನು ಹಾಡುತ್ತಾನೆ. ಪತಿಯ ಬಗ್ಗೆ ನಿಷ್ಠೆಯಿದ್ದರೂ ಕಿಂಚಿತ್ ಚಂಚಲಳಾದ ಪೆನೆಲೊಪೆ ಕಂಬನಿಗರೆಯುತ್ತಾಳೆ. ಅವಳನ್ನು ಟೆಲಿಮಾಕಸ್ ಗದರಿಸಿ, ತನ್ನ ತಾಯಿಯ ಕೈ ಹಿಡಿಯಲು ತವಕಪಡುತ್ತಿರುವ ಯಾವನೊಬ್ಬನೂ ತಾನು ಹಿಂತಿರುಗುವವರೆಗೂ ತನ್ನ ಮನೆಗೆ ಕಾಲಿಡಕೂಡದೆಂದು ಕಟ್ಟಪ್ಪಣೆ ಮಾಡುತ್ತಾನೆ.

ಒಂದರಿಂದ ನಾಲ್ಕರ ವರೆಗಿನ ಕಾಂಡಗಳಲ್ಲಿ ಟೆಲಿಮಾಕಸ್ ನಡೆಸಿದ ಕಾರ್ಯಗಳ ವರ್ಣನೆಯಿದೆ. ಆತನಿಗೆ ತಂದೆಯ ವಿಷಯ ತಿಳಿಯಬಹುದಾದದ್ದು ಇಬ್ಬರಿಂದ ಮಾತ್ರ. ಒಬ್ಬ ಪೈಲಾಸಿನ ನೆಸ್ಟರ್. ಮತ್ತೊಬ್ಬ ಇತ್ತೀಚೆಗೆ ಸ್ಪಾರ್ಟಾಕ್ಕೆ ಹಿಂತಿರುಗಿದ್ದ ಮೆನೆಲಾಸ್. ಟೆಲಿಮಾಕಸ್ ಮೊದಲು ನೆಸ್ಟರನ್ನು ಕಂಡ. ಆತ ಊರಿಗೆ ಹಿಂತಿರುಗಿ ಬಹಳ ದಿನಗಳಾಗಿವೆ. ಒಡಿಸ್ಸಿಯುಸನಿಗೆ ಏನಾಯಿತು ಎಂಬುದು ಅವನಿಗೆ ತಿಳಿಯದು. ಬದಲಿಗೆ ಟ್ರಾಯ್ ಯುದ್ಧದ ವಿವರವಾದ ವರ್ಣನೆಯನ್ನೂ ಅಲ್ಲಿಂದ ಹಿಂತಿರುಗುತ್ತಿದ್ದ ವೀರರಿಗೆ ಒದಗಿದ್ದ ಅನಾಹುತಗಳ ವಿವರಗಳನ್ನೂ ಆತ ನೀಡುತ್ತಾನೆ. ಅದನ್ನೆಲ್ಲ ಕೇಳಿ ಟೆಲಿಮಾಕಸ್ ಲೆಸೆಡಮಾನಿನಲ್ಲಿದ್ದ ಮೆನೆಲಾಸನ ಭವ್ಯವಾದ ಅರಮನೆಗೆ ಬರುತ್ತಾನೆ. ಮೆನೆಲಾಸ್ ಆತನಿಗೆ ತಾನು ಈಜಿಪ್ಟಿನಲ್ಲಿ ನಡೆಸಿದ ಸಾಹಸಗಳನ್ನು ವರ್ಣಿಸುತ್ತಾನೆ. ಟ್ರಾಯ್ ಯುದ್ಧಕ್ಕೆ ಕಾರಣಳಾಗಿ ಅನೇಕ ಸಹಸ್ರ ಜನರ ಪ್ರಾಣವನ್ನು ಆಹುತಿಯಾಗಿ ಪಡೆದ ಹೆಲೆನಳ ಮೃತ್ಯುಸೌಂದರ್ಯವನ್ನು ಟೆಲಿಮಾಕಸ್ ಕಣ್ಣಾರೆ ಕಾಣುತ್ತಾನೆ. ಒಡಿಸ್ಸಿಯುಸ್ ಬದುಕಿದ್ದಾನೆಂದೂ ಶೀಘ್ರದಲ್ಲೇ ಮನೆಗೆ ಹಿಂತಿರುಗುವುದು ಖಂಡಿತವೆಂದೂ ಮೆನೆಲಾಸ್ ಟೆಲಿಮಾಕಸನಿಗೆ ಭರವಸೆ ನೀಡುತ್ತಾನೆ. ಈ ಎರಡು ಸ್ಥಳಗಳಿಗೆ ಬಂದದ್ದರಿಂದ ತಂದೆಯ ವಿಷಯ ತಿಳಿಯದಿದ್ದರೂ ಟೆಲಿಮಾಕಸನಿಗೆ ಜನರ ಸಂಪರ್ಕದಿಂದಾಗಿ ಹೆಚ್ಚಿನ ಲೋಕಾನುಭವ ದೊರೆತು ಮನಸ್ಸು ಪಕ್ವವಾಗುತ್ತದೆ.

ಇದ್ದಕ್ಕಿದ್ದಂತೆ ದೃಶ್ಯ ಬದಲಾಗಿ ನಾವು ಟೆಲಿಮಾಕಸನ ಅರಮನೆಯನ್ನು ಕಾಣುತ್ತೇವೆ. ಅಲ್ಲಿ ಮಗನೂ ಇಲ್ಲದೆ ಪೆನೆಲೊಪೆ ದುಃಖತಪ್ತಳಾಗಿದ್ದಾಳೆ. ಅವಳನ್ನು ಸಂತೈಸಲು ಅಥೀನೆ ಒಂದು ಸುಂದರವಾದ ಸ್ವಪ್ನವನ್ನು ಕರುಣಿಸುತ್ತಾಳೆ. ಪೆನೆಲೊಪೆಯನ್ನು ವರಿಸಲು ತವಕಿಸುತ್ತಿದ್ದವರು ಟೆಲಿಮಾಕಸ್ ಹಿಂತಿರುಗಿದಾಗ ಅವನಿಗೆ ಕೇಡುಮಾಡಲು ಹಡಗಿನಲ್ಲಿ ಕಾಯುತ್ತಿರುತ್ತಾರೆ. ಮುಂದೇನಾಗುತ್ತದೆ ಎಂಬುದನ್ನೂ ಹೇಳದೆ ಹದಿನೈದನೆಯ ಕಾಂಡದ ವರೆಗೆ ಕಲಾತ್ಮಕ ಕುತೂಹಲದಲ್ಲಿ ಕವಿ ನಮ್ಮನ್ನು ಕರೆದೊಯ್ಯುತ್ತಾನೆ.

ಒಡಿಸ್ಸಿಯುಸನಿಗೆ ಒದಗಿದ ವಿಧವಿಧವಾದ ಅನುಭವಗಳನ್ನು ಕವಿ ಅವನ ಬಾಯಿಯಿಂದಲೇ ಬೇರೆ ಬೇರೆ ಸಂದರ್ಭಗಳಲ್ಲಿ ಹೇಳಿಸಿದ್ದಾನೆ. ಸಹಜವಾದ ಮಾನವ ಲೋಕದಿಂದ ಆತ ನಂಬಲು ಕಷ್ಟವಾದ ಅನೇಕ ಪೌರಾಣಿಕ, ಅತಿ ಪ್ರಾಕೃತಿಕ ಪ್ರದೇಶಗಳಿಗೆಲ್ಲ ಹೋಗಬೇಕಾಗಿ ಬರುತ್ತದೆ. ಟ್ರಾಯ್ ಪಟ್ಟಣವನ್ನು ಬಿಟ್ಟಕೂಡಲೇ ಆತ ಸಿಸೋನಿಯರ ಪಟ್ಟಣವಾದ ಇಸ್ಮೇರಸಿಗೆ ಒಯ್ಯಲ್ಪಡುತ್ತಾನೆ. ಇವನೇನೋ ಆ ಪಟ್ಟಣವನ್ನು ಕೊಳ್ಳೆಹೊಡೆಯುತ್ತಾನೆ. ಆದರೆ ಆಶ್ಚರ್ಯಕರವಾದ ರೀತಿಯಲ್ಲಿ ತನ್ನ ಎಪ್ಪತ್ತೆರಡು ಜನ ಸಂಗಡಿಗರನ್ನು ಕಳೆದುಕೊಳ್ಳುತ್ತಾನೆ. ಮೇಲಿಂಹೊ ಭೂಪಿರವನ್ನು ಸುತ್ತುಹಾಕಬೇಕು ಎಂದು ಆತ ಯೋಚಿಸುತ್ತಿದ್ದಾಗ ಬಿರುಗಾಳಿ ಅವನನ್ನು ತಾವರೆ ದಿನಿಗಳ ದೇಶಕ್ಕೆ ಒಯ್ಯುತ್ತದೆ. ತಾವರೆಯ ಆಹಾರದ ಆಸೆಗೆ ತಮ್ಮ ಊರನ್ನು ಮರೆಯಲಿದ್ದ ತನ್ನ ಸಂಗಡಿಗರನ್ನು ಆತ ಬಲಾತ್ಕಾರವಾಗಿ ಎಳೆದುಕೊಂಡು ಅಲ್ಲಿಂದ ಹೊರಡುತ್ತಾನೆ. ಅಲ್ಲಿಂದ ಅವನ ಹಡಗು ಆ ಕಾಲದ ಗ್ರೀಕರಿಗೆ ತಿಳಿಯದಿದ್ದ ಪೌರಾಣಿಕ ಪ್ರದೇಶಗಳಿಗೆ ತೇಲುತ್ತದೆ. ಮೊದಲು ಅವನು ಹೋದದ್ದು ಸೈಕ್ಲೋಪರು ಇದ್ದ ಊರಿಗೆ. ಪಾಲಿಫೀಮಸ್ ಎಂಬ ಸೈಕ್ಲೊಪ್ ರಾಕ್ಷಸ ಇವನನ್ನೂ ಇವನ ಹನ್ನೆರಡು ಜನ ಸಂಗಾತಿಗಳನ್ನೂ ತನ್ನ ಗುಹೆಯಲ್ಲಿ ಕೂಡಿಹಾಕುತ್ತಾನೆ. ಒಡಿಸ್ಸಿಯಸ್ ಕೆಲವು ಸಂಗಡಿಗರನ್ನು ಕಳೆದುಕೊಂಡರೂ ರಾಕ್ಷಸನ ಕಣ್ಣನ್ನು ಕುರುಡಾಗಿಸಿ ಉಪಾಯದಿಂದ ತಪ್ಪಿಸಿಕೊಳ್ಳುತ್ತಾನೆ. ಆದರೆ ಇದರ ಪರಿಣಾಮ ಭೀಕರವಾಗುತ್ತದೆ. ಏಕೆಂದರೆ ಪಾಲಿಫೀಮಸನ ತಂದೆ ಸಮುದ್ರದೇವತೆಯಾದ ಪೊಸೈಡನ್ ಇವನ ಹಡಗು ಊರು ಸೇರದಂತೆ ಸರ್ವಪ್ರಯತ್ನವನ್ನೂ ಮಾಡುತ್ತಾನೆ. ವಾಯುವಿನ ಹತೋಟಿಗೆ ಕಾರಣನಾದ ಈಯೊಲಸನ ಆತಿಥ್ಯ ಒಡಿಸ್ಸಿಯುಸನಿಗೆ ದೊರಕುತ್ತದೆ. ಅಲ್ಲಿಂದ ಹೊರಡುವಾಗ ಪಶ್ಚಿಮ ಮಾರುತವೊಂದನ್ನುಳಿದು ಉಳಿದೆಲ್ಲ ಗಾಳಿಗಳನ್ನೂ ಈಯೊಲಸ್ ಒಂದು ಚರ್ಮದ ಚೀಲದಲ್ಲಿ ಹಾಕಿ ಒಡಿಸ್ಸಿಯುಸನಿಗೆ ಕೊಡುತ್ತಾನೆ. ಇದರಿಂದ ಆತ ಒಂಬತ್ತೇ ದಿನಗಳಲ್ಲಿ ಇಥಾಕವನ್ನು ಸೇರಬಹುದಿತ್ತು. ನಾಯಕ ವಿಶ್ರಾಂತಿ ಪಡೆಯುತ್ತಿದ್ದಾಗ ಅವನ ಮಿತ್ರರು, ಆ ಚೀಲದಲ್ಲಿ ಐಶ್ವರ್ಯ ತುಂಬಿದೆ ಎಂದು ಭಾವಿಸಿ ಅದನ್ನು ತೆರೆದುಬಿಡುತ್ತಾರೆ. ಕೂಡಲೆ ಆ ಗಾಳಿಗಳು ಅವರನ್ನೆಲ್ಲ ಹೊರಟಲ್ಲಿಗೇ ತಂದುಬಿಡುತ್ತವೆ. ಮುಂದೆ ಅವರು ರಾಕ್ಷಸಾಗಾರದ ನರಭಕ್ಷಕರ ಕೈಗೆ ಸಿಕ್ಕಿಕೊಳ್ಳುತ್ತಾರೆ. ಅವರು ಒಡಿಸ್ಸಿಯುಸನ ಹನ್ನೊಂದು ಹಡಗುಗಳನ್ನು ಒಡೆದು ಪುಡಿಪುಡಿ ಮಾಡುತ್ತಾರೆ. ಹನ್ನೆರಡನೆಯದು ಹೇಗೋ ಉಳಿಯುತ್ತದೆ. ಮುಂದೆ ಇವರು ಹೋದದ್ದು ಏಂಖಿಯಾ ದ್ವೀಪಕ್ಕೆ. ಅಲ್ಲಿದ್ದ ಮಾಟಗಾತಿ ಸರ್ಸೀ ಇವರ ಗುಂಪಿನಲ್ಲಿ ಕೆಲವರನ್ನು ಹಂದಿಗಳಾಗಿ ಮಾಡುತ್ತಾಳೆ. ಆಗ ಹರ್ಮೀಸ್ ದೇವತೆಯ ಕೃಪೆಯಿಂದ ಒಡಿಸ್ಸಿಯುಸ್ ಅವರನ್ನೆಲ್ಲ ಮತ್ತೆ ಮನುಷ್ಯರನ್ನಾಗಿ ಮಾಡಿ ಒಂದು ವರ್ಷ ಕಾಲ ಅವಳೊಡನೆ ಸುಖಸಂತೋಷಗಳಲ್ಲಿ ಇದ್ದುಬಿಡುತ್ತಾನೆ. ಊರಿಗೆ ಹೊರಟಾಗ ಸರ್ಸೀ ನಡುವೆ ಬಾಯಿಹಾಕಿ ಒಡಿಸ್ಸಿಯುಸ್ ಪಶ್ಚಿಮದ ತುತ್ತತುದಿಗೆ ಹೋಗಿ ಅಲ್ಲಿ ಕೆಳಜಗತ್ತಿನ ಪ್ರದೇಶದ ಬಳಿ ದಾರ್ಶನಿಕ ಟಿಕೀಷಿಯುಸನಿಂದ ತನ್ನ ಭವಿಷ್ಯವನ್ನು ತಿಳಿದುಕೊಳ್ಳಬೇಕೆಂದು ಸೂಚಿಸುತ್ತಾಳೆ. ಒಡಿಸ್ಸಿಯುಸ್ ಅದರಂತೆ ಮಾಡುತ್ತಾನೆ. ಅಲ್ಲದೆ ಅವನ ಭವಿಷ್ಯವಾಣಿ ನಿಜವಾಗುವ ಘಟನೆಗಳೂ ಮುಂದೆ ನಡೆಯುತ್ತವೆ.

ಒಡಿಸ್ಸಿಯುಸ್ ಮತ್ತೆ ಸರ್ಸೀಯ ದ್ವೀಪಕ್ಕೆ ಹಿಂತಿರುಗಿದಾಗ ಆಕೆ ಅವನಿಗೆ ಉಪಯುಕ್ತವಾದ ಸಲಹೆಗಳನ್ನೂ ಅನುಕೂಲ ಮಾರುತವನ್ನೂ ಮತ್ತೆ ಕರುಣಿಸುತ್ತಾಳೆ. ಮುಂದೆ ಹೊರಟಾಗ ಸೈರೆನರ ದ್ವೀಪಗಳಿಂದ ಮಧುರವಾದ ಸಂಗೀತ ಇವನ ಮತ್ತು ಇವನ ಗುಂಪಿನ ಜನರನ್ನು ಮೋಹಿಸುತ್ತದೆ. ಸೈರೆನರ ಉದ್ದೇಶ ಇವರನ್ನೆಲ್ಲ ಆಕರ್ಷಿಸಿ ನಾಶಮಾಡಬೇಕು ಎಂಬುದು. ಆದರೆ ಒಡಿಸ್ಸಿಯುಸ್ ಕ್ಷಣಮಾತ್ರದಲ್ಲಿ ವಿಷಯವನ್ನು ಗ್ರಹಿಸಿ ತನ್ನ ಸಂಗಾತಿಗಳ ಕಿವಿಗೆ ಅರಗನ್ನು ತುಂಬಿ ಅವರ ಕಿವಿಗೆ ಸಂಗೀತ ಬೀಳದಂತೆ ನೋಡಿಕೊಳ್ಳುತ್ತಾನಲ್ಲದೆ ತಾನು ಹಡಗಿನ ಧ್ವಜಸ್ತಂಭಕ್ಕೆ ನೇತುಬೀಳುತ್ತಾನೆ. ಹೀಗಾಗಿ ಅವರ ಹಡಗು ಸುಖವಾಗಿ ಮುಂದುಮುಂದಕ್ಕೆ ತೇಲುತ್ತದೆ. ಸಿಲ್ಲಾ ಮತ್ತು ಚಾರಿಬ್ಡಿಸ್‌ಗಳನ್ನು ದಾಟಿ ಅವರು ಥಿನೇಷಿಯಾ ದ್ವೀಪವನ್ನು ಸೇರುತ್ತಾರೆ. ಸಂಗಡಿಗರು ತುಂಬ ಬಲವಂತ ಮಾಡಿದ್ದರಿಂದ ಒಡಿಸ್ಸಿಯುಸ್ ಅವರ ಜೊತೆ ಆ ದ್ವೀಪದೊಳಗೆ ಹೋಗುತ್ತಾನೆ. ತಮ್ಮ ಪ್ರಯಾಣಕ್ಕೆ ವಿರೋಧವಾದ ಗಾಳಿ ಬೀಸತೊಡಗಿದ್ದರಿಂದ ಅವರೆಲ್ಲ ಅಲ್ಲೇ ಒಂದು ತಿಂಗಳವರೆಗೆ ಉಳಿಯುವುದು ಅನಿವಾರ್ಯವಾಗುತ್ತದೆ. ಹಸಿವು ಹೆಚ್ಚಿದಾಗ ಸಂಗಡಿಗರು ನಾಯಕನಿಗೆ ಕೊಟ್ಟಿದ್ದ ವಚನವನ್ನು ಮುರಿದು, ಅವನಿಲ್ಲದಾಗ ಘೆಲಿಯುಸನ ಅತ್ಯುತ್ತಮ ದನಗಳನ್ನು ಕೊಂದು ತಿನ್ನುತ್ತಾರೆ. ಈ ಅಪರಾಧಕ್ಕೆ ಶಿಕ್ಷೆಯಾಗಿ ಜ಼್ಯೂಸ್ ದೇವತೆ ಕೋಪದಿಂದ ಮಳೆ ಬಿರುಗಾಳಿಗಳನ್ನು ಕರೆಯಲಾಗಿ ಹೊರಟಿದ್ದ ಇವರ ಹಡಗು ಎರಡು ಹೋಳಾಗುತ್ತದೆ. ಒಡಿಸ್ಸಿಯುಸನ ಸಂಗಡಿಗರೆಲ್ಲ ನೀರುಪಾಲಾಗುತ್ತಾರೆ. ಅವನೊಬ್ಬ ಮಾತ್ರ ಉಳಿದುಕೊಳ್ಳುತ್ತಾನೆ. ಹಾಯಿಕಂಬಕ್ಕೆ ಜೋತುಬಿದ್ದಿದ್ದ ಆತ ಒಂಬತ್ತು ದಿನಗಳ ಬಳಿಕ ಒಗೀಜಿಯಾ ದ್ವೀಪವನ್ನು ಸೇರುತ್ತಾನೆ. ಅಟ್ಲಾಸನ ಮಗಳು ಕಲಿಪ್ಸೋವಿನ ಸ್ಥಳ ಅದು. ಏಳು ವರ್ಷಗಳಕಾಲ ಒಡಿಸ್ಸಿಯುಸ್ ಆಕೆಯ ಜೊತೆ ಇರುತ್ತಾನೆ. ತನ್ನ ಪತಿಯಾಗಿ ತನ್ನ ಜೊತೆಯಲ್ಲೇ ಇರಲು ಒಪ್ಪಿದರೆ ಅವನಿಗೆ ಅಮರತ್ವವನ್ನೂ ನಿರಂತರ ಯೌವನವನ್ನೂ ಕರುಣಿಸುವುದಾಗಿ ಆಕೆ ಪ್ರಲೋಭನೆ ಒಡ್ಡುತ್ತಾಳೆ. ಆದರೆ ಮನೆಯ ಕರೆ, ಸತಿಯ ನೆನಪು ತೀವ್ರವಾಗಿದ್ದುದರಿಂದ ಆಕೆ ತೋರಿಸಿದ ಆಸೆ ಅವನನ್ನು ಚಂಚಲಗೊಳಿಸುವುದಿಲ್ಲ. ಅದೇ ದಿನ ಆತ ಕಡಲ ತಡಿಯಲ್ಲಿ ಕುಳಿತು ಕಂಬನಿದುಂಬಿದ ಕಣ್ಣುಗಳಿಂದ ದಿಗಂತದತ್ತ ದೃಷ್ಟಿ ಹಾಯಿಸುತ್ತಾನೆ. ಸಾಯುವುದಕ್ಕೆ ಮೊದಲು ತನ್ನ ಮನೆಯಿಂದ ಮೇಲೆದ್ದ ಹೊಗೆಯನ್ನಾದರೂ ಒಮ್ಮೆ ನೋಡಬೇಕೆಂಬುದೇ ಆತನ ಉತ್ಕಟ ಬಯಕೆಯಾಗಿತ್ತು. ಅವನನ್ನು ಉದ್ದಕ್ಕೂ ರಕ್ಷಿಸುತ್ತ ಬಂದ ಅಥೀನೆ, ಪೊಸೈಡನ್ ಇಲ್ಲದಾಗ ದೇವತೆಗಳ

ಸಭೆಯಲ್ಲಿದ್ದ ಜ್ಯೂಸ್ ದೇವನನ್ನು ಒಡಿಸ್ಸಿಯಸ್ ಮನೆಗೆ ಹಿಂತಿರುಗುವಂತೆ ಕರುಣಿಸಬೇಕೆಂದು ಬೇಡುತ್ತಾಳೆ. ಇಷ್ಟರಲ್ಲಿ ಒಡಿಸ್ಸಿಯಸ್ ತಾನೇ ಕಟ್ಟಿಕೊಂಡ ಒಂದು ಹಡಗಿನಲ್ಲಿ ಮತ್ತೆ ಪ್ರಯಾಣ ಹೊರಟು ಹದಿನೆಂಟು ದಿನಗಳು ಯಾನಮಾಡಿ ಫೀಯೇಷಿಯನರ ದ್ವೀಪದ ಹತ್ತಿರಕ್ಕೆ ಬಂದು ಪೊಸೈಡನನ ಕಣ್ಣಿಗೆ ಬೀಳುತ್ತಾನೆ. ಕೂಡಲೇ ಪೊಸೈಡನ್ ಅವನ ಹಡಗನ್ನು ಚೂರು ಚೂರು ಮಾಡುತ್ತಾನೆ. ಆದರೂ ಆತ ಸುಖವಾಗಿ ನೆಲವನ್ನು ಕಾಣುತ್ತಾನೆ. ಅಲ್ಲಿ ಅವನಿಗೆ ರಾಜಕುಮಾರಿ ನೌಸಿಕಾಳ ಪರಿಚಯವಾಗುತ್ತದೆ. ಅವಳು ಅವನನ್ನು ಥೀಷಿಯಸ್ ನಗರಕ್ಕೆ ಒಯ್ದು ತನ್ನ ತಂದೆತಾಯಿಗಳ ಬಳಿ ನಿಲ್ಲಿಸುತ್ತಾಳೆ. ಅಲ್ಲಿ ಆತನಿಗೆ ಸೊಗಸಾದ ಆತಿಥ್ಯ ದೊರಕುತ್ತದಲ್ಲದೆ ಅಲ್ಲಿನ ಅತ್ಯುತ್ತಮ ಹಡಗಿನಲ್ಲಿ ಅವನಿಗೆ ಪ್ರಯಾಣದ ಯೋಗವೂ ದೊರಕಿ ಆತ ಸುಖವಾಗಿ ಊರು ಸೇರುತ್ತಾನೆ.

ಆತ ಸಕಾಲದಲ್ಲಿ ಊರಿಗೆ ಹಿಂತಿರುಗಿ ಬಂದದ್ದರಿಂದ ಅನೇಕ ವಿಪತ್‌ಪರಂಪರೆಗಳೇ ತಪ್ಪುತ್ತವೆ. ಆತ ಬರುವ ವೇಳೆ ಅವನ ತಾಯಿ ಆಂಟಿಕ್ಲಿಯ ಪುತ್ರಶೋಕದಿಂದ ತೀರಿಕೊಂಡಿದ್ದಳು. ನೂರಕ್ಕೂ ಹೆಚ್ಚಿನ ಯುವಕರು ಪೆನೆಲೊಪೆಯ ಕೈಹಿಡಿಯಲು ಸ್ಪರ್ಧಿಸುತ್ತಿದ್ದರು. ಸುಂದರಿಯಾದ ಪೆನೆಲೊಪೆ ಪತಿಯ ಆಗಮನಕ್ಕಾಗಿ ತವಕಪಡುತ್ತಿದ್ದಳು. ಯುವಕನಾದ ಮಗ ಟೆಲಿಮಾಕಸನನ್ನು ನೂರಕ್ಕೂ ಹೆಚ್ಚಿನ ಯುವಕರು ಹಿಂಸಿಸುತ್ತಿದ್ದುದನ್ನೂ ಅವಳು ಕಂಡು ಸಹಿಸಬೇಕಾಗಿತ್ತು. ತನ್ನ ಮಾವನಿಗೆ ಒಂದು ವಸ್ತ್ರವನ್ನು ಹೆಣೆದು ಮುಗಿಸುವ ವರೆಗೆ ತನಗೆ ಕಾಲಾವಕಾಶ ಕೊಡಬೇಕೆಂದು ತನ್ನನ್ನು ವರಿಸಲು ನಾ ಮುಂದು ತಾ ಮುಂದೆಂದು ಬರುತ್ತಿದ್ದ ಯುವಕರನ್ನು ಆಕೆ ಕೇಳಿಕೊಂಡಿದ್ದಳು. ಕಾಲ ತಳ್ಳುವ ಉದ್ದೇಶದಿಂದ ಹಗಲೆಲ್ಲ ಹೆಣೆದ ಹೆಣಿಗೆಯನ್ನು ಅವಳು ರಾತ್ರಿ ಬಿಚ್ಚಿಬಿಡುತ್ತಿದ್ದಳು. ನಾಲ್ಕನೆಯ ವರ್ಷದಲ್ಲಿ ಅವಳ ರಹಸ್ಯ ಬಯಲಾಗಿ ಹೋಗಿ ಅವಳು ವಸ್ತ್ರವನ್ನು ಮುಗಿಸಲೇಬೇಕಾಗಿಬಂತು. ಯಾರನ್ನಾದರೂ ವರಿಸದೆ ಗತ್ಯಂತರವೇ ಇಲ್ಲ ಎಂದಾಗ ಅವಳು ಒಂದು ಷರತ್ತು ಹಾಕಿದಳು : ತನ್ನ ಪತಿ ಒಡಿಸ್ಸಿಯಸನ ಬಿಲ್ಲನ್ನು ಹೆದೆಯೇರಿಸಿ ಬಾಣ ಹೂಡಿದವನನ್ನು ತಾನು ಮದುವೆಯಾಗುವುದಾಗಿ ಆಕೆ ಹೇಳಿದಳು. ಅದನ್ನು ಹೆದೆಯೇರಿಸುವಂಥ ವೀರರು ಯಾರೂ ಇಲ್ಲವೆಂದೇ ಅವಳ ನಂಬಿಕೆ. ಆ ಪರೀಕ್ಷೆ ನಡೆಯಬೇಕಾಗಿದ್ದ ದಿನದ ಹಿಂದಿನ ದಿನವೇ ಒಡಿಸ್ಸಿಯಸ್ ಇಥಾಕಕ್ಕೆ ಬಂದದ್ದು. ಅಥೀನೆಯ ಮಾತಿನಂತೆ ಆತ ಭಿಕ್ಷುಕನ ವೇಷದಲ್ಲಿ ಬಂದು ತನ್ನ ಹಳೆಯ ನಂಬಿಕಸ್ಥ ಹಂದಿವಳ ಯುಮೇಯುಸನಲ್ಲಿ ಆಶ್ರಯಪಡೆದ. ಭಿಕ್ಷುಕನ ವೇಷದಲ್ಲಿದ್ದವನನ್ನು ಅವನು ಗುರುತಿಸದಿದ್ದರೂ ಒಳ್ಳೆಯ ಆತಿಥ್ಯ ನೀಡಿದ. ಅಥೀನೆ ಅಲ್ಲಿಗೆ ಟೆಲಿಮಾಕಸನನ್ನು ಕರೆದು ತಂದಳು. ಇಪ್ಪತ್ತು ವರ್ಷಗಳ ಹಿಂದೆ ಒಡಿಸ್ಸಿಯಸ್ ಊರು ಬಿಟ್ಟು ಯುದ್ಧಕ್ಕೆ ಹೊರಟಿದ್ದಾಗ ಈತ ಇನ್ನೂ ಮಗು. ಇಪ್ಪತ್ತರ ಹರೆಯದ ತನ್ನ ಮಗನನ್ನು ಒಡಿಸ್ಸಿಯಸ್ ಹಿಗ್ಗುಹೆಮ್ಮೆಗಳಿಂದ ನೋಡಿದ. ಶತ್ರುಗಳು ಟೆಲಿಮಾಕಸನನ್ನು ತೀರಿಸಿಹಾಕಲು ಬೇಕಾದಷ್ಟು ಸಲ, ಅನೇಕ ರೀತಿಗಳಲ್ಲಿ ಪ್ರಯತ್ನಿಸಿದ್ದರು. ಆದರೆ ಅವೆಲ್ಲ ವಿಫಲವಾಗಿ ಆತ ಸುಖವಾಗಿದ್ದ. ಅದೇ ತಾನೆ ಊರಿಗೆ ಬಂದ ಒಡಿಸ್ಸಿಯಸ್ ಯಾರು ಎಂಬುದು ಯುಮೇರಿಯುಸನಿಗೂ ಟೆಲಿಮಾಕಸನಿಗೂ ಗೊತ್ತಾಯಿತು. ಇಲ್ಲಿ ಪ್ರತಿಯೊಂದು ಕ್ರಿಯೆಯಲ್ಲೂ ನಾಟಕೀಯತೆ ಉಂಟು. ಅನಂತರ ಮೂರು ಜನವೂ ಸೇರಿ ಪೆನೆಲೊಪೆಯನ್ನು ವರಿಸಲು ಒತ್ತಾಯ ಮಾಡುತ್ತಿದ್ದವರನ್ನು ಹೇಗೆ ನಾಶಗೊಳಿಸಬೇಕು ಎಂಬ ಬಗ್ಗೆ ಹಂಚಿಕೆ ಹಾಕಿದರು.

ಇಲ್ಲಿಗೆ ಹದಿನಾರು ಕಾಂಡಗಳು ಮುಗಿಯುತ್ತವೆ. ಹದಿನೇಳು ಮತ್ತು ಹದಿನೆಂಟನೆಯ ಕಾಂಡಗಳಲ್ಲಿ ಮೊದಲು ಟೆಲಿಮಾಕಸ್ ಅರಮನೆಯನ್ನು ಪ್ರವೇಶಿಸುವುದರ ವರ್ಣನೆಯಿದೆ. ಅನಂತರ ಭಿಕ್ಷುಕನ ವೇಷದಲ್ಲಿ ಒಡಿಸ್ಸಿಯಸ್ ಅರಮನೆಯನ್ನು ಸೇರುತ್ತಾನೆ. ಈ ಸಂದರ್ಭದಲ್ಲಿ ಅನೇಕ ಭಾವತುಮುಲಗಳ ಸಚಿತ್ರವರ್ಣನೆಯಿದೆ. ಒಡಿಸ್ಸಿಯಸನ ಹಳೆಯ ನಾಯಿ ಇಪ್ಪತ್ತು ವರ್ಷಗಳ ಅನಂತರ ಬಂದ ತನ್ನ ಸ್ವಾಮಿಯನ್ನು ಕಂಡು, ಹೃದಯ ತುಂಬಿ ಬಂದು, ಉದ್ರೇಕವನ್ನು ತಾಳಲಾರದೆ ಪ್ರಾಣಬಿಡುತ್ತದೆ. ಪೆನೆಲೊಪೆಯ ಭಾವೀ ಪತಿಗಳ ಔದ್ಧತ್ಯ, ದುರಹಂಕಾರಗಳನ್ನು ಹೋಮರ್ ಎತ್ತಿತೋರಿಸಿ ಅವರಿಗೆ ಮುಂದೆ ದೊರೆತ ಶಿಕ್ಷೆಗೆ ಅವರು ಸರ್ವದಾ ಅರ್ಹರು ಎಂಬುದನ್ನು ಇಲ್ಲಿ ಪ್ರತಿಪಾದಿಸಿದ್ದಾನೆ. ಒಡಿಸ್ಸಿಯಸ್ ಪೆನೆಲೊಪೆಯನ್ನು ಕಾಣುತ್ತಾನೆ. ಎಷ್ಟರಮಟ್ಟಿಗೆ ಅವನು ಪೆನೆಲೊಪೆಯ ಬಗೆಗೆ ಪ್ರೀತಿ, ಶತ್ರುಗಳ ಬಗೆಗೆ ದ್ವೇಷ—ಎರಡನ್ನೂ ದಮನಗೊಳಿಸಿಡಬಲ್ಲ ಎಂಬುದಕ್ಕೆ, ಅವನ ಪ್ರಚಂಡ ಇಂದ್ರಿಯನಿಗ್ರಹಕ್ಕೆ, ಈ ಕಾಂಡ ಒಳ್ಳೆಯ ಉದಾಹರಣೆಯಾಗಿದೆ.

ಹತ್ತೊಂಬತ್ತನೆಯ ಕಾಂಡದಲ್ಲಿ ಎರಡು ದಶಕಗಳ ಅನಂತರ ಮೊಟ್ಟಮೊದಲ ಸಲ ಒಡಿಸ್ಸಿಯಸ್ ಪೆನೆಲೊಪೆಯನ್ನು ಮಾತನಾಡಿಸುತ್ತಾನೆ. ಅವಳಿಗಿನ್ನೂ ಇವನು ಯಾರು ಎಂಬುದು ತಿಳಿಯದು. ಆದರೆ ವೃದ್ಧ ದಾದಿ ಯೂರಿಕ್ಲಿಯ ಇವನ ಕಾಲು ತೊಳೆಯುವಾಗ, ಯುವಕನಾಗಿದ್ದಾಗ ಈತ ಪಡೆದಿದ್ದ ಗಾಯದ ಗುರುತಿನಿಂದ ಇವನಾರೆಂಬುದನ್ನು ಕಂಡುಹಿಡಿಯುತ್ತಾಳೆ.

ಒಡಿಸ್ಸಿಯಸ್ ನಿದ್ರೆಯಿಲ್ಲದೆ ಕೋಪದಲ್ಲಿ ಕುದಿಯುತ್ತ ಕಳೆದ ರಾತ್ರಿಯ ವರ್ಣನೆಯಿದೆ, ಇಪ್ಪತ್ತನೆಯ ಕಾಂಡದಲ್ಲಿ. ಭಾವೀ ಪತಿಗಳಿಗೆ ಕಾದಿರುವ ಘೋರ ಶಿಕ್ಷೆಯನ್ನು ಒಬ್ಬ ಕಣಿ ಹೇಳುವವ ಸೂಚಿಸುತ್ತಾನೆ. ಆದರೂ ಅವರು ಅದನ್ನು ಗಮನಿಸದೆ ಉನ್ಮತ್ತರಾಗಿಯೇ ಇರುತ್ತಾರೆ. ಓದುಗರ ಕುತೂಹಲವನ್ನು ತುತ್ತ ತುದಿಗೇರಿಸುವುದು ಇಪ್ಪತ್ತೊಂದನೆಯ ಕಾಂಡ. ಅಥೀನೆಯ ಸಲಹೆಯಂತೆ ಧನುಸ್ಸನ್ನು ಹೆದೆಯೇರಿಸಿ ಬಾಣಪ್ರಯೋಗ ಮಾಡುವ ಪರೀಕ್ಷೆಗೆ ಎಲ್ಲ ಸಿದ್ಧತೆಗಳನ್ನೂ ಮಾಡುತ್ತಾರೆ. ಒಡಿಸ್ಸಿಯಸ್ ಚಿಕ್ಕವನಿದ್ದಾಗ ಇಫಿಟಸ್ ತನ್ನ ತಂದೆ ಯೂರಿಟಸನ ಧನುಸ್ಸನ್ನು ಅವನಿಗೆ ಬಹುಮಾನವಾಗಿ ಕೊಟ್ಟಿದ್ದ. ಅದೇ ಬಿಲ್ಲನ್ನು ಹೆದೆಯೇರಿಸಿ ಹನ್ನೆರಡು ಕೊಡಲಿಗಳ ಹಿಡಿಗಳ ಮೂಲಕ ಬಾಣವನ್ನು ತೂರಿಸಬೇಕಾಗಿತ್ತು. ಒಬ್ಬನಾದ ಮೇಲೊಬ್ಬನಂತೆ ಆ ಭಾವೀ ಪತಿಗಳೆಲ್ಲ ಪ್ರಯತ್ನಿಸಿದರು. ಬಾಣಪ್ರಯೋಗ ಮಾಡುವುದಿರಲಿ, ಒಬ್ಬನಿಗಾದರೂ ಬಿಲ್ಲಿಗೆ ಹೆದೆಯೇರಿಸುವುದು ಕೂಡ ಸಾಧ್ಯವಾಗಲಿಲ್ಲ. ಭಿಕ್ಷುಕನ ವೇಷದಲ್ಲಿದ್ದ ಒಡಿಸ್ಸಿಯಸ್ ಪ್ರಯತ್ನಿಸಲು ಮುಂದೆ ಬಂದ. ಈಗಾಗಲೇ ಅವಮಾನಿತರಾಗಿದ್ದ ತರುಣರೆಲ್ಲ ಕೂಡದು ಎಂದು ಕೂಗು ಹಾಕಿದರು. ಅದನ್ನು ಲೆಕ್ಕಿಸದೆ ಒಡಿಸ್ಸಿಯಸ್ ತನ್ನ ವಿಶ್ವಾಸದ ಸೇವಕರ ನೆರವಿನಿಂದ ಎಲ್ಲ ಬಾಗಿಲುಗಳನ್ನೂ ಭದ್ರಪಡಿಸಿದ. ಅನಂತರ ಲೀಲಾಜಾಲವಾಗಿ ಬಿಲ್ಲಿಗೆ ಹೆದೆಯೇರಿಸಿ ಬಾಣಪ್ರಯೋಗ ಮಾಡಿದ. ಮರುಕ್ಷಣವೇ ಜ್ಯೂಸ್ ದೇವತೆಯ ಗುಡುಗಿನ ಚಪ್ಪಾಳೆ ಕೇಳಿಸಿತು. ತತ್‌ಕ್ಷಣ ಒಡಿಸ್ಸಿಯಸ್ ಮೊದಲು ಉದ್ಧತನಾದ ಆಂಟಿನೋವಸನನ್ನು ಬಳಿಕ ಉಳಿದ ಭಾವೀ ಪತಿಗಳನ್ನು ಕೊಂದುಹಾಕಿದ. ಇಲ್ಲಿಗೆ ಇಪ್ಪತ್ತೆರಡು ಕಾಂಡಗಳು ಮುಗಿದುವು. ಅನೇಕರು ಕಾವ್ಯವೂ ಇಲ್ಲಿಗೆ ಮುಗಿಯಿತು ಎಂದು ತೀರ್ಮಾನ ಮಾಡಿದ್ದಾರೆ. ಆದರೆ ಮುಂದಿನ ಎರಡು ಕಾಂಡಗಳಲ್ಲಿ ಕಾವ್ಯ ರಂಜನೆಯೂ ಕಥಾಸ್ವಾರಸ್ಯವೂ ಇಲಿಯಡ್ ಮತ್ತು ಒಡಿಸ್ಸಿ ಎರಡೂ ಗ್ರಂಥಗಳ ದೃಷ್ಟಿಯಿಂದ ಮುಖ್ಯವಾದ ಅನೇಕ ಘಟನೆಗಳ ವರ್ಣನೆಯೂ ಉಂಟು. ಇಪ್ಪತ್ತ ಮೂರನೆಯ ಕಾಂಡದಲ್ಲಿ ಒಡಿಸ್ಸಿಯಸ್ ಮತ್ತು ಪೆನೆಲೊಪೆಯರ ನಿಜವಾದ ಪುನಸ್ಸಮಾಗಮ ನಡೆಯುತ್ತದೆ. ಟೆಲಿಮಾಕಸ್ ತನ್ನ ತಾಯಿ ಪೆನೆಲೊಪೆಯನ್ನು ಅತ್ಯಂತ ಕಠಿಣಹೃದಯಿ ಎಂದು ಕರೆಯುತ್ತಾನೆ. ಕೊನೆಗೆ ಅವಳು ಒಡಿಸ್ಸಿಯಸನನ್ನು ಗುರುತಿಸುತ್ತಾಳೆ. ಅತ್ಯಂತ ಮಧುರವಾದ, ನಿಜವಾದ, ಆತ್ಮೀಯವಾದ ಸುಖ ಸಮಾಗಮ ಅದು.

ಕೊನೆಯ ಕಾಂಡದಲ್ಲಿ—ಅನೇಕ ವಿಮರ್ಶಕರು ಅದನ್ನು ಪ್ರಕ್ಷಿಪ್ತ ಎಂದಿದ್ದಾರೆ—ಸತ್ತ ಭಾವೀ ಪತಿಗಳ ಆತ್ಮಗಳು, ಹೇಡೀಗೆ (ಅಧೋಲೋಕ) ಹೋಗುವುದು, ಒಡಿಸ್ಸಿಯಸ್ ತನ್ನ ವೃದ್ಧ ತಂದೆಯನ್ನು ಊರ ಹೊರಗಿನ ಅವನ ಜಮೀನಿನ ಮನೆಯಲ್ಲಿ ಸಂದರ್ಶಿಸುವುದು—ಮುಂತಾದವುಗಳ ವರ್ಣನೆಯಿದೆ. ಸತ್ತ ಭಾವೀ ಪತಿಗಳ ಬಂಧುಗಳು ಆಯುಧಗಳನ್ನು ಹಿಡಿದು ಒಡಿಸ್ಸಿಯಸನ ಮೇಲೆ ಸೇಡು ತೀರಿಸಿಕೊಳ್ಳಲು ಸನ್ನದ್ಧರಾಗುತ್ತಾರೆ. ಆದರೆ ಮೆಂಟರ್ ರೂಪ ಧರಿಸಿದ್ದ ಅಥೀನೆ ಅವರನ್ನೆಲ್ಲ ಸಮಾಧಾನಗೊಳಿಸಿ ಶಾಂತಿಯನ್ನು ಸ್ಥಾಪಿಸುತ್ತಾಳೆ.

ಗ್ರೀಕ್ ಸಾಹಿತ್ಯದಲ್ಲಿ ಆಚಾರ್ಯಸ್ಥಾನದಲ್ಲಿ ನಿಂತ ಮಹಾಕಾವ್ಯಗಳು ಇಲಿಯಡ್ ಮತ್ತು ಒಡಿಸ್ಸಿ. ಇಡೀ ಜಗತ್ತಿನ ಅನೇಕಾನೇಕ ಕವಿಗಳು, ನಾಟಕಕಾರರು, ಶಿಲ್ಪಿಗಳು, ಚಿತ್ರಕಾರರು ಈ ಕೃತಿಗಳಿಂದ ಪ್ರಭಾವಿತರಾಗಿದ್ದಾರೆ. ಕೆಲವು ವಿಮರ್ಶಕರ ದೃಷ್ಟಿಯಲ್ಲಿ ಒಡಿಸ್ಸಿಯೇ ಕಲಾದೃಷ್ಟಿಯಿಂದ ಹೆಚ್ಚು ಉತ್ಕೃಷ್ಟವಾದದ್ದು. ಇಲ್ಲಿನ ಕಥೆಯ ಹರಹು ದೊಡ್ಡದು. ಇದರಲ್ಲಿ ಜಾನಪದ ಮತ್ತು ಪೌರಾಣಿಕ ಕಥೆಗಳು ಕಲಾತ್ಮಕವಾಗಿ ಬೆರೆತಿವೆ. ನಾಟಕೀಯತೆಯಂತೂ ಪದೇ ಪದೇ ತಲೆದೋರಿ ಓದುಗರನ್ನು ಹರ್ಷಗೊಳಿಸುತ್ತದೆ. ಇಡೀ ಕಾವ್ಯವನ್ನು ಆಕ್ರಮಿಸಿ ಆಳುತ್ತಿರುವ ಮುಖ್ಯ ನೀತಿ ಯಾವುದು ಎಂಬುದನ್ನು ಮಾತ್ರ ಹೇಳುವುದು ಕಷ್ಟ. ಕೆಲವರು ಇದರಲ್ಲಿ ವ್ಯಕ್ತವಾಗುವುದು ಮನೆಯ ಗಿರ ಎಂದಿದ್ದಾರೆ. ಮತ್ತೆ ಕೆಲವರು ಇಲಿಯಡ್ ಶೌರ್ಯದ ಕಾವ್ಯವಾದರೆ ಇದು ಜಾಣ್ಮೆಯ ಕಾವ್ಯ ಎನ್ನುತ್ತಾರೆ. ಹೊರೆಸನಿಗಾದರೋ ಇಲ್ಲಿ ಮುಖ್ಯವಾಗಿ ಕಾಣುವುದು ಒಡಿಸ್ಸಿಯಸನ ಚಾರಿತ್ರ್ಯ.—ಅದರಲ್ಲಿಯೂ ಜಾಣ್ಮೆ, ವಿಶ್ವಾಸಾರ್ಹತೆ, ವಿಧವಿಧವಾಗಿ ಪೆಟ್ಟುಗಳನ್ನು ವಿಧಿ ನೀಡುತ್ತಿದ್ದರೂ ಅವುಗಳನ್ನೆಲ್ಲ ಸಹಿಸುವ ಧೃತಿ. ತಡವಾಗಿಯಾದರೂ ಕೊನೆಗೊಮ್ಮೆ ಧರ್ಮ ಗೆಲ್ಲುತ್ತದೆ ಎಂಬ ಗ್ರೀಕರ ನಂಬಿಕೆ ಆಧುನಿಕರಿಗೆ ಇದರಲ್ಲಿ ಪ್ರತಿಧ್ವನಿಸುತ್ತದೆ.

ನೋಡಿ—ಇಲಿಯಡ್ ; ಗ್ರೀಕ್ ಸಾಹಿತ್ಯ ; ಹೋಮರ್. (ಬಿ.)

**ಒಡೆತನ:** ನೋಡಿ—ಆಸ್ತಿ.

**ಒಡೆಯರ ಕಾಲದ ಕನ್ನಡ ಸಾಹಿತ್ಯ :** ಒಂದನೆಯ ರಾಜ ಒಡೆಯ ವಿಜಯನಗರದ ರಾಜ್ಯದ ಪರಮಾಧಿಕಾರವನ್ನು ಅಲ್ಲಗಳೆದು ಸ್ವತಂತ್ರವಾದಾಗಿನಿಂದ ಮೈಸೂರು ಒಡೆಯರ ಕಾಲ ಆರಂಭವಾಯಿತೆಂದು ತಿಳಿಯಬೇಕು. ಅಲ್ಲಿಂದ ಮೊದಲುಗೊಂಡು ಜಯಚಾಮರಾಜ ಒಡೆಯರ ಕಾಲದ ವರೆಗೂ ಕನ್ನಡ ಸಾಹಿತ್ಯದ ಸರ್ವತೋಮುಖವಾದ ಅಭಿವೃದ್ಧಿಗೆ ರಾಜಮಹಾರಾಜರಿಂದ ದೊರೆತ ಪ್ರೋತ್ಸಾಹದ

ವಿಷಯವನ್ನಿಲ್ಲಿ ಸಂಗ್ರಹವಾಗಿ ನಿರೂಪಿಸಿದೆ. ಚಿಕ್ಕದೇವರಾಯನ ವಂಶಾವಳಿಯೂ ರಾಜನೃಪಚರಿತ್ರೆಯಿಂದಲೇ ಆರಂಭವಾಗಿದೆ. ಈ ದೊರೆ ಶ್ರೀವೈಷ್ಣವ ಧರ್ಮವನ್ನು ಸ್ವೀಕರಿಸಿದ. ಈತನ ಪ್ರಧಾನ ಮಂತ್ರಿಯಾಗಿದ್ದ ತಿರುಮಲೆಯಾರ್ಯನೆಂಬ ಶ್ರೀವೈಷ್ಣವ ಕವಿ ಕರ್ಣವೃತ್ತಾಂತಕಥೆ ಎಂಬ ಸಾಗಂತ್ಯಕಾವ್ಯವನ್ನು ರಚಸಿದ್ದಾನೆ. ಇದು ಅಪೂರ್ವವಾದ ಕಾವ್ಯ. ಈಗ ದೊರೆತಿರುವ ಗ್ರಂಥದಲ್ಲಿ ಹನ್ನೊಂದು ಸಂಧಿಗಳೂ ಹನ್ನೆರಡನೆಯದರಲ್ಲಿ ಕೆಲವು ಪದ್ಯಗಳೂ ಇವೆ. ಮಹಾಭಾರತದ ಶಾಂತಿಪರ್ವದಲ್ಲಿ ಬಂದಿರುವ ಕರ್ಣನ ಚರಿತ್ರೆಯೇ ಈ ಗ್ರಂಥದ ವಸ್ತು.

ರಾಜ ಒಡೆಯನ ತರುವಾಯ ಪಟ್ಟಕ್ಕೆ ಬಂದ ಆರನೆ ಚಾಮರಾಜ ಒಡೆಯ ಚಾಮರಾಜೋಕ್ತಿವಿಲಾಸ ಎಂಬ ಹೆಸರಿನಲ್ಲಿ ವಾಲ್ಮೀಕಿ ರಾಮಾಯಣವನ್ನು ಸರಳಗನ್ನಡ ಗದ್ಯಕಾವ್ಯವಾಗಿ ಬರೆದಿದ್ದಾನೆ. ಇದು ಮೂಲ ಗ್ರಂಥಕ್ಕೆ ಅನುಸಾರವಾದ ಗದ್ಯಾನುವಾದ. ಈ ಗ್ರಂಥವನ್ನು ಲೋಕೋಪಕಾರಕ್ಕಾಗಿ ಧೀಮಂತ ವಿದ್ವಾಂಸನಾದ ವಿರೂಪಾಕ್ಷನಿಂದ ಅರಸ ಬರೆಯಿಸಿದನೆಂಬ ಅರ್ಥಬರುವ ಒಂದು ಸಂಸ್ಕೃತ ಶ್ಲೋಕ ಗ್ರಂಥದ ಆರಂಭದಲ್ಲಿಯೇ ಬಂದಿದೆ. ಆದ್ದರಿಂದ ಇದು ಅರಸನ ಹೆಸರಿನಲ್ಲಿ ಅವನ ಆಶ್ರಿತನಾದ ವಿದ್ವಾಂಸನೊಬ್ಬ ಬರೆದದ್ದಾಗಿರಬಹುದೆಂದು ತೋರುತ್ತದೆ. ಚಾಮರಾಜ ಮಗೆಪ್ರಕಾಶವೆಂಬ ಇನ್ನೊಂದು ಗ್ರಂಥವನ್ನೂ ರಚಿಸಿರುವನೆಂಬ ಪ್ರತೀತಿ ಇದೆ. ಆದರೆ ಅದು ಬ್ರಹ್ಮೋತ್ತರಖಂಡದ ಕನ್ನಡ ಟೀಕೆಯೇ ಹೊರತು ಕಾವ್ಯವಲ್ಲ. ಈ ಎರಡು ಕೃತಿಗಳೂ ಆ ಕಾಲಕ್ಕೆ ರಾಜ ಮತ್ತು ಪ್ರಜೆಗಳಿಬ್ಬರಿಗೂ ಸಂಸ್ಕೃತದಲ್ಲಿದ್ದ ವೈದಿಕಸಾಹಿತ್ಯವನ್ನು ಸಾಮಾನ್ಯ ಜನರಿಗೂ ಅರ್ಥವಾಗುವಂತೆ ಕನ್ನಡದಲ್ಲಿ ಬರೆಯುವ, ಬರೆಯಿಸುವ ಶ್ರದ್ಧೆ ಹೆಚ್ಚಿದ್ದಿತೆಂಬುದನ್ನು ಸ್ಪಷ್ಟಪಡಿಸುತ್ತವೆ. ಈ ರಾಜನ ಆಶ್ರಯದಲ್ಲಿದ್ದ ರಾಮಚಂದ್ರನೆಂಬ ವಿದ್ವಾಂಸ ಒಂದು ಅಶ್ವಶಾಸ್ತ್ರವನ್ನು ರಚಿಸಿದ್ದಾನೆ. ಶಾಲಿಹೋತ್ರಕೃತವಾದ ಸಂಸ್ಕೃತ ಗ್ರಂಥವನ್ನು ಬಾಲಕರಿರುವಂತೆ ಸಾಂಗೋಪಾಂಗವಾಗಿ ಕನ್ನಡಿಸಿ ಬರೆದ ಅನುವಾದವಿದು. ಪದ್ಮಣಪಂಡಿತ ಈ ರಾಜನ ಆಣತಿಯಂತೆ ಹಯಸಾರಸಮುಚ್ಚಯ ಎಂಬ ಪದ್ಯಗ್ರಂಥವನ್ನು ರಚಿಸಿದ್ದಾನೆ. ತಾನು ವಿದ್ವಜ್ಜನಮಂಡನನೆಂದೂ ವೈದ್ಯಸುವಂಶಾಂಬರ ಸೂರ್ಯನೆಂದೂ ಕವಿ ಹೊಗಳಿಕೊಂಡಿದ್ದಾನೆ.

ಚಾಮರಾಜನ ಅನಂತರ ಪ್ರಭುಪಟ್ಟಕ್ಕೆ ಬಂದ ಕಂಠೀರವ ನರಸರಾಜ ಒಡೆಯ ಮೈಸೂರಿನ ರಾಜ್ಯವನ್ನು ವಿಸ್ತರಿಸಿ ಅಂತಶ್ಶತ್ರುಗಳನ್ನೂ ಅಡಗಿಸಿ ಮೈಸೂರು ರಾಜ್ಯದ ಅಭ್ಯುದಯವನ್ನು ಸಾಧಿಸಿದ. ಈತನ ಆಸ್ಥಾನಕವಿಯಾದ ಗೋವಿಂದ ವೈದ್ಯ ಕಂಠೀರವನರಸರಾಜವಿಜಯಂ ಎಂಬ ವಿಸ್ತಾರವಾದ ಒಂದು ಸಾಂಗತ್ಯಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ತನ್ನ ಅರಸನ ಯುದ್ಧವಿಜಯಗಳನ್ನು ಹೊಗಳಿದ್ದಾನೆ. ರಣದುಲ್ಲಾಖಾನನೆಂಬ ಬಿಜಾಪುರದ ಮುಸಲ್ಮಾನ ಸರದಾರನ ಮೇಲೆ ಕಂಠೀರವ ನರಸರಾಜ ಗಳಿಸಿದ ಯುದ್ಧವಿಜಯ ಇಲ್ಲಿ ಪ್ರಧಾನವಾಗಿದೆ. ಇಪ್ಪತ್ತಾರು ಸಂಧಿಗಳುಳ್ಳ ಈ ಗ್ರಂಥದಲ್ಲಿ ರಾಜನ ವಂಶವರ್ಣನೆಯಿಂದ ತೊಡಗಿ ಅವನು ನಡೆಸಿದ ದಿಗ್ವಿಜಯ ಕಥೆಗಳನ್ನೆಲ್ಲ ವಿವರವಾಗಿ ನಿರೂಪಿಸಲಾಗಿದೆ. ಆನುಷಂಗಿಕವಾಗಿ ಶ್ರೀರಂಗಪಟ್ಟಣದ ವರ್ಣನೆ, ರಂಗನಾಥಸ್ವಾಮಿಯ ಮಹಿಮಾವರ್ಣನೆ, ಸ್ವಾಮಿಯ ರಥೋತ್ಸವ ವರ್ಣನೆ, ರಾಜಸಭೆಯ ವರ್ಣನೆ, ಜಂಬೂಸವಾರಿಯ ವರ್ಣನೆ—ಮೊದಲಾದ ಹಲವು ಸ್ವಾರಸ್ಯವಾದ ವರ್ಣನಾಭಾಗಗಳು ಈ ಕಾವ್ಯಕ್ಕೆ ಮೆರುಗನ್ನು ಕೊಟ್ಟಿವೆ. ಮುಖ್ಯ ಕಥೆಗೆ ಸಂಬಂಧಿಸಿದ ಮದನಮೋಹಿನಿಯ ಕಥೆ ಶೃಂಗಾರಭರಿತವಾಗಿದ್ದು ಓದುಗರಿಗೆ ಆಕರ್ಷಕವೆನಿಸಿದರೂ ಗ್ರಂಥದ ಮೂಲ ವಸ್ತುವಿನ ಏಕತೆಗೆ ಭಂಗ ತಂದಿದೆ. ಆದರೆ ತನ್ನ ಕಾವ್ಯದಲ್ಲಿ ಶೃಂಗಾರರಸ ನಿರೂಪಣೆಗೆ ಒಂದು ಅವಕಾಶ ಕಲ್ಪಿಸಿಕೊಳ್ಳುವ ಹವಣಿಕೆ ಕವಿಯದು.

> ದೇವತಾಸ್ತುತಿಯಲ್ಲ ಕೇಳ್ವೊಡೆ, ನರಸ್ತುತಿ
> ಯಾವ ವೆಗ್ಗಳವೆನಬೇಡ
> ನಾವಿಷ್ಣುಃ ಪೃಥಿವೀಪತಿಯೆಂದು ವೇ
> ದಾವಳಿಗಳು ಸಾರುತಿವೆ ಕೊ

ಎಂದು ಹೇಳಿ ಮಾನವ ಚರಿತ್ರೆಯನ್ನು ಬರೆಯಹೊರಟುದರ ಔಚಿತ್ಯವನ್ನು ಕವಿ ಸಮರ್ಥಿಸಿಕೊಂಡಿದ್ದಾನೆ. ಅಷ್ಟೇ ಅಲ್ಲದೆ ಇದು ಅಂದಿನ ನರಸಿಂಹಸ್ವಾಮಿ ಕಲಿಯುಗದ ಮನುಜರನ್ನು ಸಂಹರಿಸುವ ಸಲುವಾಗಿ ನರಜನ್ಮದಲ್ಲಿ ಬಂದು ಕಂಠೀರವ ನರಸರಾಜನಾದನಂತೆ. ನರಸಿಂಹಸ್ವಾಮಿ ಅವತರಿಸಿದ ತಿಂಗಳು, ತಿಥಿವಾರ, ಮುಹೂರ್ತಗಳಲ್ಲಿಯೇ ಈ ದೊರೆ ಹುಟ್ಟಿದನೆಂದು ಹೇಳಿ ತನ್ನ ಅರಸ ನರಸಿಂಹನ ಅವತಾರವೇ ಆಗಿರಬೇಕೆಂದು ಕವಿ ಸ್ವಾರಸ್ಯವಾಗಿ ತರ್ಕಿಸುತ್ತಾನೆ.

ಈ ಕೃತಿಯನ್ನು ರಚಿಸಿದ ಗೋವಿಂದವೈದ್ಯ ಶ್ರೀನಿವಾಸಪಂಡಿತನ ಮಗ. ವೇದಾಧ್ಯಯನಸಂಪನ್ನನೂ ಮಂತ್ರಶಾಸ್ತ್ರವೇತ್ತನೂ ಆದ ಗೋವಿಂದವೈದ್ಯ ಕಾವ್ಯ ನಾಟಕಾಲಂಕಾರಗಳನ್ನೂ ಚೆನ್ನಾಗಿ ಅಭ್ಯಾಸಮಾಡಿದ್ದ. ಇವನ ಹೆಸರಿನಲ್ಲಿಯೇ ವೈದ್ಯಶಬ್ದ ಸೇರಿಕೊಂಡಿದೆ. ಈತನ ತಂದೆಯೂ ಪಂಡಿತ. ಬಹುಶಃ ಇವರು ವೈದ್ಯವೃತ್ತಿಯವರೂ ಆಗಿದ್ದಿರಬಹುದು. ಅರಸನ ದಳವಾಯಿಯಾದ ನಂಜರಾಜೇಂದ್ರನ ಪ್ರೇರಣೆಯಂತೆ ಈ ಕಾವ್ಯವನ್ನು ರಚಿಸಿದುದಾಗಿ ಕವಿ ಪೀಠಿಕಾಸಂಧಿಯ ಕೊನೆಯಲ್ಲಿ ಹೇಳಿಕೊಂಡಿದ್ದಾನೆ.

ಗೋವಿಂದವೈದ್ಯ ತನ್ನ ಅರಸನ ಈ ಪುಣ್ಯಚರಿತ್ರೆಯನ್ನು ಬರೆದು ಭಾರತಿನಂಜ ಎಂಬ ಗಮಕಿಯಿಂದ ರಾಜಸಭೆಯಲ್ಲಿ ಓದಿಸಿದ. ಪೀಠಿಕಾಸಂಧಿಯಲ್ಲಿ

> ದೊರೆರಾಯ ನರಸರಾಜೇಂದ್ರನ ಚರಿತೆಯ
> ನೊರೆದ ಭಾರತಿ ನಂಜನೊಲಿದು

—ಎಂಬ ಹೇಳಿಕೆ ಇರುವುದರಿಂದ ಈ ಕೃತಿಯನ್ನು ಭಾರತಿನಂಜನೇ ರಚಿಸಿದನೆಂಬ ಭಾವನೆ ಬರಲು ಕಾರಣವಾಯಿತು. ಆದರೆ ಗ್ರಂಥಾಂತ್ಯದ ಗದ್ಯದಲ್ಲಿ ಗೋವಿಂದ ವೈದ್ಯ ಕಂಠೀರವನರಸರಾಜವಿಜಯವನ್ನು ವಿರಚಿಸಿ ಆಚಂದ್ರಾರ್ಕವಾಗಿ ಭೂಮಿಯೊಳಿರಲಿಯೆಂದು ಭಾರತಿನಂಜನ ಮುಖದಿಂದ ವಾಚಿಸಿ ರಾಜಾಸ್ಥಾನದಲ್ಲಿ ವಿಸ್ತಾರಪಡಿಸಿದುದು ಎಂಬ ಸ್ಪಷ್ಟವಾದ ಹೇಳಿಕೆಯಿದೆ.

ಪಂಪರನ್ನರು ಪೌರಾಣಿಕ ಕಥೆ ಹೇಳುತ್ತ ಹಿಂದಿನ ವೀರರೊಡನೆ ತಮ್ಮ ಅರಸರನ್ನು ಹೋಲಿಸಿ ಕವಿತೆ ಕಟ್ಟಿದರೆ ಈ ಕವಿ ಅಂಥ ತೊಡಕು ಏನೂ ಇಲ್ಲದೆ ನೇರವಾಗಿ ತನ್ನ ದೊರೆಯ ಕಥೆಯನ್ನೇ ವಸ್ತುವನ್ನಾಗಿ ಆರಿಸಿಕೊಂಡು ಸಮಕಾಲೀನ ಇತಿಹಾಸವನ್ನು ಬರೆದು ಕೃತಕೃತ್ಯನಾಗಿದ್ದಾನೆ. ಕವಿಯ ಕಾಲದ ಜನಜೀವನದ ಒಂದು ನೈಜ ಚಿತ್ರ ಇಲ್ಲಿ ಕಾಣಸಿಕ್ಕುತ್ತದೆ. ಕಾವ್ಯದ ಭಾಷೆಯೂ ಆಡುಮಾತಿಗೆ ಹೆಚ್ಚು ಹತ್ತಿರವಾಗಿದೆ. ಅಂದಿನ ಕಾಲಕ್ಕೆ ಕನ್ನಡದಲ್ಲಿ ಬಳಕೆಗೆ ಬಂದಿದ್ದ ಹಲವು ಉರ್ದು ಪದಗಳನ್ನು ಕವಿ ಬಳಸಲು ಹಿಂತೆಗೆದಿಲ್ಲ, ಪಾತ್ಸ್ಯಾವು, ದರವೇಸಿ, ಸಲಾಮು ಮೊದಲಾದ ಹಲವು ಶಬ್ದಗಳು ಅಲ್ಲಲ್ಲಿ ಕಾಣಿಸುತ್ತವೆ. ಇಡೀ ಪದ್ಯಗಳನ್ನೇ ಉರ್ದು ಪದಗಳಿಂದಲೇ ನಿರ್ವಹಿಸಿರುವ ನಿದರ್ಶನಗಳೂ ಇವೆ.

ಕಂಠೀರವ ನರಸರಾಜರ ತರುವಾಯ ಪಟ್ಟಕ್ಕೆ ಬಂದ ಶ್ರೀ ಚಿಕ್ಕದೇವರಾಜ ಒಡೆಯ ಈ ಕಾಲದ ಕನ್ನಡಸಾಹಿತ್ಯಪ್ರಪಂಚದಲ್ಲಿ ಅತ್ಯಂತ ಪ್ರಧಾನನೆಂದು ಹೇಳಬಹುದು. ಈ ರಾಜ ಮೈಸೂರಿನ ಸರಹದ್ದುಗಳನ್ನು ವಿಸ್ತರಿಸಿ ರಾಜ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ. ಹಲವಾರು ಶತ್ರುಗಳನ್ನು ನಿಗ್ರಹಿಸಿ ತನ್ನ ಯುದ್ಧ ಪರಾಕ್ರಮವನ್ನು ಮೆರೆದ. ಅದಕ್ಕಿಂತ ಹೆಚ್ಚಾಗಿ ಈ ದೊರೆ ಸ್ವಹಸ್ತ–ಪರ ಹಸ್ತಗಳಿಂದ ಸಾಹಿತ್ಯಕೈಂಕರ್ಯವನ್ನು ನಡೆಯಿಸಿ ಕೀರ್ತಿವಂತನಾದ. ಈತ ಸ್ವಯಂ ಕವಿ. ಚಿಕದೇವರಾಜಬಿನ್ನಪಂ, ಗೀತಗೋಪಾಲ, ಭಾಗವತ, ಶೇಷಧರ್ಮ, ಭಾರತ—ಎಂಬ ಗ್ರಂಥಗಳನ್ನು ರಚಿಸಿದನೆಂದು ತಿಳಿಯಬಂದಿದೆ. ಗೀತಗೋಪಾಲದಲ್ಲಿ ತಿರುಮಲಾರ್ಯನೆಂಬ ಆಸ್ಥಾನಕವಿಯಿಂದ ರಚಿತವಾದ ಕೆಲವು ಪದ್ಯಗಳೂ ಸೇರಿವೆಯಾದ್ದರಿಂದ ಅದನ್ನು ಅರಸನೇ ಬರೆದನೆ, ಎಂಬ ವಿಷಯದಲ್ಲಿ ಸಂಶಯ ಮೂಡಿದೆ.

ಗೀತಗೋಪಾಲ ಜಯದೇವನ ಗೀತಗೋವಿಂದವೆಂಬ ಸಂಸ್ಕೃತ ಗ್ರಂಥದ ಮಾದರಿಯಲ್ಲಿ ರಚಿತವಾದ ಉತ್ತಮ ಹಾಡುಗಳ ಸಂಕಲನ. ಮೋಕ್ಷೋಪಾಯವನ್ನು ಸಾಧಿಸುವುದಕ್ಕೆ ಉಪಾಯವಾದ ಪ್ರಪತ್ತಿಸ್ವರೂಪವನ್ನು ಕೀರ್ತನೆಗಳ ಮುಖಾಂತರ ಪ್ರಚಾರಮಾಡುವುದೇ ಇಲ್ಲಿ ಕವಿಯ ಧ್ಯೇಯ. ಗೋಪಿಕಾವೃತ್ತಾಂತವನ್ನು ವರ್ಣಿಸುವ ವ್ಯಾಜದಲ್ಲಿ ಕವಿ ಭಗವಂತನ ಗುಣಾತಿಶಯಗಳನ್ನು ಕೊಂಡಾಡಿದ್ದಾನೆ. ಈ ಕೀರ್ತನೆಗಳು ಸಂಗೀತಕ್ಕೆ ಬಹಳ ಚೆನ್ನಾಗಿ ಹೊಂದಿಕೊಳ್ಳುತ್ತವೆ. ಚಿಕ್ಕದೇವರಾಯ ಸಂಗೀತರಸಿಕನಾಗಿದ್ದನೆಂಬುದರಲ್ಲಿ ಸಂಶಯವಿಲ್ಲ. ಸಾಹಿತ್ಯ, ಸಂಗೀತ, ಸಮರಾಂಗಣಗಳಲ್ಲಿ ಈ ದೊರೆಗೆ ಸಮಾನವಾದ ಪ್ರಭುತ್ವ ಸಿದ್ಧಿಸಿತ್ತು. ಭಾಗವತವೇ ಮೊದಲಾದ ಪುರಾಣಗಳಲ್ಲಿನ ಭಕ್ತಭಾಗವತೋತ್ತಮರು ಉಪದೇಶಿಸಿದ ತತ್ತ್ವಗಳನ್ನೂ ತಮಿಳುನಾಡಿನ ಆಳ್ವಾರರ ತತ್ತ್ವಗಳನ್ನೂ ಆಳವಾಗಿ ಅಭ್ಯಾಸಮಾಡಿ ಅವುಗಳ ಸಾರವತ್ತಾದ ಅಂಶವನ್ನು ಈ ಕೀರ್ತನೆಗಳಲ್ಲಿ ಬಹಳ ಸರಳವಾದ ರೀತಿಯಲ್ಲಿ ದೊರೆ ನಿರೂಪಿಸಿದ್ದಾನೆ. ಕವಿ ಮೊದಲು ತಾನು ಹೇಳಬೇಕಾದ ತತ್ತ್ವವನ್ನು ವಚನದಲ್ಲಿ ಹೇಳಿ ಆಮೇಲೆ ಅದಕ್ಕೆ ಹೊಂದಿಕೆಯಾಗುವ ಕೀರ್ತನೆಯನ್ನು ಹೇಳಿದ್ದಾನೆ. ಮಹತ್ತ್ವದ ಸಂಗತಿಗಳನ್ನು ಸುಲಭ ಭಾಷೆಯಲ್ಲಿ, ಲಯಬದ್ಧವಾದ ಸಂಗೀತದ ಭಾಷೆಯಲ್ಲಿ ಹೇಳಿರುವುದು ಈ ರಾಜಕವಿಯ ಹಿರಿಮೆ.

ಚಿಕದೇವರಾಜಬಿನ್ನಪ ಒಂದು ಗದ್ಯಕಾವ್ಯ. ಮೇಲುಕೋಟೆಯ ಚೆಲುವ ನಾರಾಯಣಸ್ವಾಮಿಯ ತಿರುವಡಿಗಳಲ್ಲಿ ಅರಸ ಮಾಡಿಕೊಂಡ ಮೂವತ್ತು ಭಕ್ತಿಯ ಬಿನ್ನಪಗಳು ಇಲ್ಲಿ ಇವೆ. ಶ್ರೀವಿಶಿಷ್ಟಾದ್ವೈತತತ್ತ್ವಗಳ ನಿರೂಪಣೆ ಇಲ್ಲಿ ಕಾವ್ಯ ಶೈಲಿಯಲ್ಲಿ ರೂಪುಗೊಂಡಿದೆ. ಅರಸನಿಗೆ ವೈಷ್ಣವಧರ್ಮದಲ್ಲಿದ್ದ ವಿಶೇಷವಾದ ನಿಷ್ಠೆ, ಯದುಗಿರಿನಾರಾಯಣಸ್ವಾಮಿಯಲ್ಲಿದ್ದ ದೃಢಭಕ್ತಿ ಇಲ್ಲಿ ಸುವ್ಯಕ್ತವಾಗಿವೆ.

ಈತನ ಹೆಸರಿನಲ್ಲಿ ಪ್ರಸಿದ್ಧವಾಗಿರುವ ಭಾಗವತಕ್ಕೆ ಚಿಕದೇವರಾಜಸೂಕ್ತಿವಿಲಾಸ ಎಂಬ ಹೆಸರೂ ಇದೆ. ಸಂಸ್ಕೃತ ಭಾಗವತಕ್ಕೆ ಇದು ಒಂದು ಕನ್ನಡ ಟೀಕೆ. ಇವನ ಭಾರತವೂ ಅಷ್ಟೇ. ಶಾಂತಿಪರ್ವದಿಂದ ಮುಂದಿನ ಪರ್ವಗಳಿಗೆ ಮಾತ್ರ ಇದರಲ್ಲಿ

ಕನ್ನಡ ಟೀಕೆಯಿದೆ. ಶೇಷಧರ್ಮ ಅದೇ ಹೆಸರಿನ ಸಂಸ್ಕೃತ ಗ್ರಂಥಕ್ಕೆ ಕನ್ನಡ ಟೀಕೆ. ಈ ಕಾಲದಲ್ಲಿ ಶ್ರೀವೈಷ್ಣವರೂ ಇತರ ಬ್ರಾಹ್ಮಣಕವಿಗಳೂ ಸಂಸ್ಕೃತದ ಗ್ರಂಥಗಳನೇಕಕ್ಕೆ ಕನ್ನಡದಲ್ಲಿ ವ್ಯಾಖ್ಯಾನ ಬರೆಯುವ ಕೆಲಸದಲ್ಲಿ ತೊಡಗಿದರು. ಶ್ರೀವೈಷ್ಣವಧರ್ಮ ಪ್ರಚಾರ ಅವರ ಗುರಿಯಾಗಿತ್ತು.

ಚಿಕ್ಕದೇವರಾಯನಿಗೆ ಸಾಹಿತ್ಯವಿದ್ಯಾನಿಕಷಪ್ರಸ್ತರಂ, ರಸಿಕಜನಕರ್ಣರಸಾಯನೀಕೃತ ಸಂಗೀತವಿಸ್ತರಂ ಎಂಬ ಸಾರ್ಥಕವಾದ ಬಿರುದುಗಳಿದ್ದುವು. ಈತನ ವಿಷಯವಾಗಿ ಚಿಕದೇವರಾಜವಿಜಯಂ, ಚಿಕದೇವರಾಯವಂಶಾವಳಿ, ಚಿಕದೇವರಾಜಯಶೋ ಭೂಷಣಂ, ಚಿಕದೇವರಾಜವಂಶಪ್ರಭಾವ—ಮೊದಲಾದ ಹಲವು ಗ್ರಂಥಗಳು ಹುಟ್ಟಿವೆ. ಚಿಕ್ಕದೇವರಾಯನ ಪರಾಕ್ರಮ, ಶರಣಾಗತರಕ್ಷಣೆ, ಔದಾರ್ಯ ಮೊದಲಾದ ಗುಣಗಳನ್ನು ಹೊಗಳುವ ಕೆಲವು ತೆಲಗು ಚಾಟುಪದ್ಯಗಳೂ ಪ್ರಸಿದ್ಧ ವಾಗಿವೆ.

ಸ್ವಯಂ ಕವಿಯೂ ಸಂಗೀತಜ್ಞನೂ ಆದ ಚಿಕ್ಕದೇವರಾಜ ಅನೇಕ ಕವಿಗಳನ್ನು ತನ್ನ ಆಸ್ಥಾನದಲ್ಲಿ ಆದರಿಸಿ ಅವರಿಂದ ಕಾವ್ಯರಚನೆ ಮಾಡಿಸಿದ. ತಿರುಮಲಾರ್ಯ ಚಿಕುಪಾಧ್ಯಾಯ, ಶಿಂಗರಾರ್ಯ, ತಿಮ್ಮಕವಿ, ಮಲ್ಲರಸ, ಚಿದಾನಂದ, ವೇಣುಗೋಪಾಲ ವರಪ್ರಸಾದ—ಮೊದಲಾದ ಅನೇಕರು ಇವನ ಆಶ್ರಿತರಾಗಿದ್ದರು. ಶೃಂಗಾರಮ್ಮ, ಹೊನ್ನಮ್ಮ ಎಂಬ ಇಬ್ಬರು ಕವಯಿತ್ರಿಯರೂ ರಾಜಾಶ್ರಯದಲ್ಲಿ ಇದ್ದು ಕೃತಿರಚನೆ ಮಾಡಿದರು. ಲೋಕಪ್ರಸಿದ್ಧನಾದ ವಿಜಯನಗರದ ಶ್ರೀ ಕೃಷ್ಣದೇವರಾಯನ ಹಾಗೆಯೇ ಚಿಕ್ಕದೇವರಾಯ ಒಡೆಯನೂ ಸಾಹಿತ್ಯಸಂಗೀತ ಸಮರಾಂಗಣಸಾರ್ವಭೌಮನೆನಿಸಿಕೊಂಡ; ಕವಿಜನರಿಗೆ ಆಶ್ರಯದಾತನಾಗಿ ಮೈಸೂರು ಒಡೆಯರ ಪರಂಪರೆಯಲ್ಲಿ ಅತ್ಯಂತ ಮಹಿಮಾನ್ವಿತನಾಗಿ ರಾರಾಜಿಸಿದ.

ತಿರುಮಲಾರ್ಯ ಚಿಕ್ಕದೇವರಾಯನ ಮಂತ್ರಿ. ಈತ ಅಪ್ರತಿಮವೀರ ಚರಿತ್ರೆ ಎಂಬ ಅಲಂಕಾರಗ್ರಂಥವನ್ನೂ ಚಿಕದೇವರಾಯ ವಂಶಾವಳಿ ಎಂಬ ಗದ್ಯಕಾವ್ಯ ವನ್ನೂ ಚಿಕದೇವರಾಜವಿಜಯಂ ಎಂಬ ಒಂದು ಚಂಪೂಕಾವ್ಯವನ್ನೂ ಚಿಕದೇವರಾಜ ಶತಕವನ್ನೂ ರಚಿಸಿದ್ದಾನೆ. ಇವುಗಳಲ್ಲಿ ಶತಕ ಇನ್ನೂ ಸಿಕ್ಕಿಲ್ಲ. ಚಿಕದೇವರಾಯ ವಂಶಾವಳಿ ಅಪೂರ್ಣವಾಗಿದೆ. ಇದರಲ್ಲಿ ರಾಜನೃಪನಿಂದ ಹಿಡಿದು ದೊಡ್ಡ ದೇವರಾಜನ ವರೆಗಿನ ಮೈಸೂರು ಅರಸರ ಚರಿತ್ರೆಯನ್ನು ಕವಿ ಹೇಳಿದ್ದಾನೆ. ಯುವರಾಜ ಚಿಕ್ಕದೇವರಾಯನ ವಿಜಯಯಾತ್ರೆಯ ಕಥೆಯ ನಡುವೆ ಗ್ರಂಥ ನಿಂತು ಹೋಗಿದೆ. ತಿರುಮಲಾರ್ಯ ಬರೆದುದೇ ಇಷ್ಟುಮಾತ್ರವೊ ಅಥವಾ ಉಳಿದ ಗ್ರಂಥ ಭಾಗ ನಷ್ಟವಾಗಿ ಹೋಯಿತೋ ತಿಳಿಯದು. ಇದು ಹಳಗನ್ನಡದಲ್ಲಿ ರಚಿತವಾದ ಗದ್ಯಗ್ರಂಥ. ತಿರುಮಲಾರ್ಯನಿಗೆ ಇದ್ದ ಹಳಗನ್ನಡ ಪಾಂಡಿತ್ಯ ಇದರಲ್ಲಿ ಎದ್ದು ತೋರುತ್ತದೆ. ಅಲ್ಲಲ್ಲಿ ಶ್ರೀವೈಷ್ಣವಸಿದ್ಧಾಂತನಿರೂಪಣೆ ಬಂದಿದೆ. ಅಳಹಿಯ ಸಿಂಗರಾರ್ಯ ದೊಡ್ಡದೇವರಾಜನಿಗೆ ಉಪದೇಶಿಸಿದ ಗೀತಾರ್ಥವಿಚಾರ ಈ ಗ್ರಂಥ ಗಳಲ್ಲಿ ಅಡಕವಾಗಿದೆ. ಕನ್ನಡದಲ್ಲಿ ವಿರಳವಾದ ಗದ್ಯಗ್ರಂಥಗಳಲ್ಲಿ ಇದೂ ಒಂದು. ಕಥೆಗಿಂತ ವರ್ಣನೆಯೇ ಹೆಚ್ಚಾಗಿರುವುದರಿಂದ ಈ ಗದ್ಯಶೈಲಿ ಅಷ್ಟೇನೂ ರಮಣೀಯ ವೆನಿಸುವುದಿಲ್ಲ.

ತಿರುಮಲಾರ್ಯ ಚಿಕ್ಕದೇವರಾಯನ ಬಾಲ್ಯಸ್ನೇಹಿತನಾಗಿದ್ದು ಸಹಾಧ್ಯಾಯಿಯಾಗಿ ಕೊನೆಗೆ ಮಂತ್ರಿಯಾದವ. ಇವನಿಗೆ ತನ್ನ ಸ್ನೇಹಿತನಾದ ಅರಸನ ಮೇಲೆ ಅತ್ಯಂತ ಪ್ರೀತಿ. ಅವನ ಪರಾಕ್ರಮ, ಆಡಳಿತವಿಚಕ್ಷಣೆ, ನ್ಯಾಯನಿಷ್ಠೆ, ಧರ್ಮಶ್ರದ್ಧೆ ಮತ್ತು ಔದಾರ್ಯಗಳನ್ನು ಹತ್ತಿರದಿಂದ ನೋಡಿ ಬಲ್ಲ ಈ ಕವಿ ಅರಸನನ್ನು ಮೆಚ್ಚಿ ಮನಃಪೂರ್ವಕವಾಗಿ ಹೊಗಳಿ ಕಾವ್ಯಕಟ್ಟಿರುವುದು ಆಶ್ಚರ್ಯವಲ್ಲ. ಕನ್ನಡದ ಮೊದಲ ಕವಿಯೆನಿಸಿದ ಪಂಪ ತನ್ನ ಅರಸ ಅರಿಕೇಸರಿಯನ್ನು ಹಾರ್ದಿಕವಾಗಿ ಮೆಚ್ಚಿದಂತೆ ತಿರುಮಲಾರ್ಯ ಚಿಕ್ಕದೇವರಾಯನನ್ನು ಮೆಚ್ಚಿಕೊಂಡು ಚಿಕದೇವರಾಯ ವಿಜಯಂ ಎಂಬ ಚಂಪೂಕಾವ್ಯವನ್ನೇ ರಚಿಸಿದ್ದಾನೆ. ಈ ಕವಿಯ ಕಾಲಕ್ಕೆ ಚಂಪೂ ಸಂಪ್ರದಾಯ ಖಿಲವಾಗಿ ಷಟ್ಪದೀ ಸಾಂಗತ್ಯಗಳ ರಚನೆ ಹೆಚ್ಚು ಜನಪ್ರಿಯವಾಗಿತ್ತು. ಆಗಲೂ ಈ ಪಂಡಿತಕವಿ ಚಂಪೂ ಪುನರುಜ್ಜೀವನಕ್ಕೆ ಹವಣಿಸಿದಂತೆ ತೋರುತ್ತದೆ. ಬಹುಶಃ ಈ ವಿಷಯದಲ್ಲಿ ಇನ್ನೂ ಹೆಚ್ಚಿನ ಕೃಷಿಮಾಡಿದವ ಷಡಕ್ಷರದೇವ. ಆತ ತನ್ನ ಮೂರು ಕೃತಿಗಳನ್ನೂ ಚಂಪೂಕಾವ್ಯಗಳಾಗಿಯೇ ರಚಿಸಿದ. ಚಿಕದೇವರಾಜ ವಿಜಯಂ ಅಸಮಗ್ರವಾದ ಚಂಪೂಕಾವ್ಯ. ಆರು ಆಶ್ವಾಸಗಳು ಮಾತ್ರ ಸಿಕ್ಕಿವೆ. ಅಲ್ಲಲ್ಲಿ ತ್ರಿಪದಿ, ಸಾಂಗತ್ಯ ಮತ್ತು ಹಾಡುಗಳೂ ಬಂದಿವೆ. ಕವಿ ಅರಸನ ಬಾಲ್ಯದ ವಿದ್ಯಾಭ್ಯಾಸ ವೃತ್ತಾಂತವನ್ನೂ ಪರಾಕ್ರಮವನ್ನೂ ಈ ಕಾವ್ಯದಲ್ಲಿ ಹೊಗಳಿದ್ದಾನೆ. ಚಿಕ್ಕದೇವರಾಯನ ವೀಣಾವಾದನಕೌಶಲವನ್ನು ಅನೇಕ ಕಡೆ ಚೆನ್ನಾಗಿ ಬಣ್ಣಿಸಿ ದ್ದಾನೆ. ಈ ಕಾವ್ಯದಲ್ಲಿ ಕವಿಯ ವರ್ಣನಾವಿಲಾಸ ಮೆರುಗು ಕಂಡಿದೆ. ಇವನ ಚಂದ್ರವರ್ಣನೆ ಮೋಹಕವಾಗಿದೆ. ಚಂದ್ರನನ್ನು ಫಿರಂಗಿ ಗುಂಡಿಗೆ ಹೋಲಿಸುವು ದಕ್ಕೂ ಕವಿ ಹಿಂತೆಗೆದಿಲ್ಲ! ಬಲಿಚಕ್ರವರ್ತಿಯನ್ನು ತುಳಿಯಲು ತ್ರಿವಿಕ್ರಮಸ್ವಾಮಿ ಎತ್ತಿದ ಪಾದದ ಉಂಗುಷ್ಠದ ವೃತ್ತಾಕಾರದ ಉಗುರೇ ಚಂದ್ರನೆಂದು ಕವಿಯ ಇನ್ನೊಂದು ಕಲ್ಪನೆ.

ಅಪ್ರತಿಮವೀರ ಎಂಬುದು ಚಿಕ್ಕದೇವರಾಯನ ಬಿರುದಾವಳಿಯಲ್ಲಿ ಒಂದು. ತಿರುಮಲಾರ್ಯ ರಚಿಸಿದ ಅಲಂಕಾರಗ್ರಂಥವಾದ ಅಪ್ರತಿಮವೀರಚರಿತೆಯಲ್ಲಿ ಕೊಟ್ಟಿರುವ ದೃಷ್ಟಾಂತ ಪದ್ಯಗಳೆಲ್ಲ ಚಿಕ್ಕದೇವರಾಯನ ಸ್ತೋತ್ರರೂಪವಾದುವು. ಹೀಗೆ ಆ ಗ್ರಂಥಕ್ಕೆ ಅದು ಸಾರ್ಥಕ ನಾಮಧೇಯವಾಗಿದೆ. ಇದರಲ್ಲಿ ಕವಿ ಪ್ರಸಿದ್ಧವಾದ ಸಂಸ್ಕೃತ ಸೂತ್ರಗಳನ್ನು ಹೇಳಿ ಕನ್ನಡದಲ್ಲಿ ಸಂಗ್ರಹವಾಗಿ ಅರ್ಥ ಬರೆದು ಕನ್ನಡ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಶಬ್ದಾಲಂಕಾರ ಅರ್ಥಾಲಂಕಾರ ಗಳನ್ನೂ ರಸಾಲಂಕಾರಗಳನ್ನೂ ಹೇಳಿ ಧ್ವನಿಮೀಮಾಂಸೆಯನ್ನು ಕೈಬಿಟ್ಟಿದ್ದಾನೆ. ಚಿಕ್ಕದೇವರಾಯನ ಹೊಗಳಿಕೆಯೊಂದರ ಹೊರತು ಇದರಲ್ಲಿ ಹೊಸದೇನೂ ಇಲ್ಲವೆಂದೇ ಹೇಳಬೇಕು. ಅದುವರೆಗೆ ಪ್ರಸಿದ್ಧರಾಗಿದ್ದ ಸಂಸ್ಕೃತ ಲಾಕ್ಷಣಿಕರಲ್ಲಿ ಕೆಲವರ ಅಭಿಪ್ರಾಯಗಳೇ ಇಲ್ಲಿ ಬಂದಿವೆ.

ತಿರುಮಲಾರ್ಯನ ಕೃತಿಗಳು ಸಮಕಾಲೀನ ಚರಿತ್ರೆಯನ್ನು ತಿಳಿಯಲು ಸ್ವಲ್ಪ ಮಟ್ಟಿಗೆ ಸಹಾಯ ಮಾಡುತ್ತವೆ. ಆತ ಬರೆದ ಗದ್ಯಕಾವ್ಯ, ಅಲಂಕಾರಶಾಸ್ತ್ರ, ಚಂಪೂ, ಶತಕ—ಇವಿಷ್ಟರಲ್ಲಿಯೂ ಅರಸನ ಗುಣಕಥನವಿದ್ದು ಅವನ ಶೌರ್ಯ, ಔದಾರ್ಯ ಮತ್ತು ವೈದುಷ್ಯಗಳ ಪ್ರಶಂಸೆಯಿದೆ. ಈತ ಸ್ವತಃ ಕೃತಿರಚನೆ ಮಾಡಿದುದೇ ಅಲ್ಲದೆ ತನ್ನ ಅರಸನ ಕಾವ್ಯಸೃಷ್ಟಿಗೂ ನೆರವಾಗಿದ್ದಾನೆ. ಅರಸನ ಅತ್ಯಂತ ಸ್ನೇಹಾಭಿಮಾನಗಳಿಗೆ ಪಾತ್ರನಾದ ಈತ 'ಅವನೊಲ್ಮೆ ಪುಮಾಕೃತಿವೆತ್ತ ಪೊಲೆಸೆವ ಸುಕೃತಿ' ಎಂಬ ಪ್ರಶಂಸೆಯನ್ನು ಹೊಂದಿದ್ದಾನೆ.

ಚಿಕ್ಕದೇವರಾಯನ ಆಸ್ಥಾನದ ಇನ್ನೊಬ್ಬ ಮುಖ್ಯ ಕವಿ ಚಿಕುಪಾಧ್ಯಾಯ. ಇವನ ನಿಜವಾದ ಹೆಸರು ಲಕ್ಷ್ಮೀಪತಿ. ಈತ ಇಪ್ಪಂತ್ತೆಂಟಕ್ಕೂ ಹೆಚ್ಚಿನ ಕೃತಿ ಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಅನೇಕ ಮಾಹಾತ್ಮ್ಯಗ್ರಂಥಗಳು. ಯದುಗಿರಿ ಮಾಹಾತ್ಮ್ಯ, ವೆಂಕಟಗಿರಿ ಮಾಹಾತ್ಮ್ಯ, ಶ್ರೀರಂಗ ಮಾಹಾತ್ಮ್ಯ, ಹಸ್ತಿಗಿರಿ ಮಾಹಾತ್ಮ್ಯ, ಕಮಲಾಚಲ ಮಾಹಾತ್ಮ್ಯ—ಹೀಗೆ ಇವುಗಳಲ್ಲಿ ಕೆಲವು ಚಂಪೂಕಾವ್ಯ ಗಳು, ಇನ್ನು ಕೆಲವು ಸಾಂಗತ್ಯಗಳು. ಉಳಿದುವು ಗದ್ಯಗ್ರಂಥಗಳು. ಇವು ಸ್ಥಳಪುರಾಣಗಳಾಗಿದ್ದು ಶ್ರೀವೈಷ್ಣವಮತಸಿದ್ಧಾಂತನಿರೂಪಣೆಗೆ ಅನುಕೂಲವಾಗಿವೆ. ನೀತಿಪ್ರಚಾರ ಮತ್ತು ಭಗವದ್ಗುಣಗಾನಗಳೇ ಕಾವ್ಯೋದ್ದೇಶ. ಆ ಉದ್ದೇಶವನ್ನು ಚಿಕುಪಾಧ್ಯಾಯ ಸಾಧಿಸಿಕೊಂಡಿದ್ದಾನೆ.

ವಿಷ್ಣುಪುರಾಣವನ್ನು ಈ ಕವಿ ಚಂಪೂರೂಪದಲ್ಲಿಯೂ ಗದ್ಯರೂಪದಲ್ಲಿಯೂ ಬರೆದಿದ್ದಾನೆ. ರುಕ್ಮಾಂಗದ ಚರಿತ್ರೆ, ಸಾತ್ತ್ವಿಕ ಬ್ರಹ್ಮವಿದ್ಯಾವಿಲಾಸ ಮತ್ತು ದಿವ್ಯಸೂರಿಚರಿತೆ ಎಂಬ ಚಂಪೂಕೃತಿಗಳೂ ಇವನವೇ. ಕೊನೆಯ ಎರಡು ಗ್ರಂಥ ಗಳೂ ಶ್ರೀವೈಷ್ಣವಸಿದ್ಧಾಂತವನ್ನು ನಿರೂಪಿಸುತ್ತವೆ. ತಮಿಳುನಾಡಿನ ವೈಷ್ಣವ ಆಳ್ವಾರುಗಳ ಕಥೆಗಳನ್ನೇ ದಿವ್ಯಸೂರಿಚರಿತೆಯಲ್ಲಿ ಕವಿ ಹೇಳಿದ್ದಾನೆ. ಕಥೆ, ತತ್ತ್ವಗಳ ದೃಷ್ಟಿಯಿಂದ ಇವಕ್ಕೆ ಪ್ರಾಶಸ್ತ್ಯ ಸಲ್ಲಬಹುದು. ಆದರೆ ಇವುಗಳಲ್ಲಿ ಕಾವ್ಯಕ್ಕೆ ಜೀವಸ್ವರೂಪವಾದ ರಸಾನುಭವದ ದೃಷ್ಟಿಯಿಂದ ಮೆಚ್ಚುಗೆ ಸಲ್ಲಲಾರದು. ತಮಿಳಿನಿಂದ ಶ್ರೀವೈಷ್ಣವ ಗುರುಗಳ ಕಥೆಗಳನ್ನು ಕನ್ನಡಕ್ಕೆ ತಂದ ಉಪಕಾರ ಚಿಕುಪಾಧ್ಯಾಯನದು. ಕವಿ ತನ್ನ ಗ್ರಂಥಗಳಲ್ಲಿ ಕನ್ನಡನಾಡನ್ನು ಬಹಳ ಹೃದ್ಯವಾಗಿ ವರ್ಣಿಸಿದ್ದಾನೆ.

ಆ ಕಾಲದ ಗದ್ಯಶೈಲಿಯನ್ನು ತಿಳಿಯಲು ಚಿಕುಪಾಧ್ಯಾಯನ ಕೃತಿಗಳು ಉಪಯುಕ್ತವಾಗಿವೆ.

ಚಿಕುಪಾಧ್ಯಾಯನಷ್ಟು ಕೃತಿಗಳನ್ನು ಅದು ವರೆಗಿನ ಕನ್ನಡಕವಿಗಳು ಯಾರೂ ರಚಿಸಿಲ್ಲ. ಈತ ಪುರಾಣ ಪುಣ್ಯಕಥೆಗಳನ್ನೇ ಅಲ್ಲದೆ ವರ್ಣನಾಪ್ರಧಾನವಾದ ಕೆಲವು ಕೃತಿಗಳನ್ನೂ ಕಟ್ಟಿದ್ದಾನೆ. ರಂಗಧಾಮಸ್ತುತಿ ಸಾಂಗತ್ಯ ಶ್ರೀರಂಗನಾಥಸ್ವಾಮಿ ಯನ್ನು ಅಡಿಯಿಂದ ಮುಡಿಯ ವರೆಗೆ ವರ್ಣಿಸುತ್ತದೆ. ಶ್ರೀಕೃಷ್ಣರೂಪವನ್ನು ಈಕ್ಷಿಸಿದ ಸ್ತ್ರೀಯರ ಸರಸಸಲ್ಲಾಪದ ಇರವನ್ನು ವಿವರಿಸಿ ಬರೆಯುವುದೇ ಶೃಂಗಾರಶತಕ ಸಾಂಗತ್ಯದ ಧ್ಯೇಯ. ಈ ಕವಿ ಚಿತ್ರಕವಿತೆಯ ಕ್ಷೇತ್ರವನ್ನೂ ಬಿಟ್ಟಿಲ್ಲ. ಅಕ್ಷರ ಮಾಲಿಕಾಸಾಂಗತ್ಯ ಎಂಬ ಕಾವ್ಯ ರಂಗನಾಥ ದೇವರ ಮೇಲೆ ಕಕಾರದಿಂದ ಕ್ಷಕಾರ ಪರ್ಯಂತ ಅಕ್ಷರ ಮೊದಲಾಗಿಯೂ ಗುಣಿತದಿಂದಲೂ ಕಲ್ಪಿಸಿ ಹೇಳಿದ ಸಾಂಗತ್ಯ. ಚಿತ್ರಶತಕಸಾಂಗತ್ಯ ಎಂಬ ಹೆಸರಿನಿಂದಲೇ ಚಿಕುಪಾಧ್ಯಾಯ ಒಂದು ಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಕನ್ನಡ ಭಾಷೆಯನ್ನು ಕುರಿತು ಹೇಳಿರುವ ಕೆಲವು ಮಾತುಗಳು ಚಮತ್ಕಾರವಾಗಿವೆ.

ಈತನ ಕಾಮಂದಕನೀತಿ ಎಂಬುದು ಸಂಸ್ಕೃತದ ಕೃತಿಗೆ ಕನ್ನಡ ಟೀಕೆ. ಕವಿ ಇದಕ್ಕೆ ಉಪಾಧ್ಯಾಯನಿರಪೇಕ್ಷಾ ಎಂಬ ಹೆಸರು ಕೊಟ್ಟಿದ್ದಾನೆ. ಇದು ಆಧುನಿಕ ಯುಗದ ಅನೇಕ ಸ್ವಯಂಬೋಧಿನಿಗಳ ಮುನ್ಸೂಚನೆಯಂತೆ ತೋರುತ್ತದೆ.

ಚಿಕುಪಾಧ್ಯಾಯ ಗ್ರಂಥಕರ್ತನಷ್ಟೇ ಅಲ್ಲ ; ಅರಸನ ಕರಣಿಕಾಗ್ರೇಸರನಾಗಿಯೂ ಆಮೇಲೆ ಮಂತ್ರಿಯಾಗಿಯೂ ಇದ್ದು ಆಶ್ರಿತಕಲ್ಪತರುವಾಗಿ ಉನ್ನತ ಧ್ಯೇಯ ಜೀವನವನ್ನು ನಡೆಸಿದ ಶ್ರೀವೈಷ್ಣವ ಬ್ರಾಹ್ಮಣಕವಿ, ಪಂಡಿತ. ಈತ ತನ್ನ ಕೃತಿಗಳ ಆರಂಭದಲ್ಲಿ ತನ್ನ ಅರಸನನ್ನು ಕುರಿತು ಹೇಳಿರುವ ಸಂಗತಿಗಳನ್ನೆಲ್ಲ ಒಟ್ಟುಗೂಡಿಸಿದರೆ ಚಿಕ್ಕದೇವರಾಯನ ವ್ಯಕ್ತಿತ್ವಚಿತ್ರ ಲಭಿಸುತ್ತದೆ.

ಈ ಕಾಲದ ಇನ್ನೊಬ್ಬ ಮುಖ್ಯ ಕವಿ ಸಿಂಗರಾರ್ಯ. ಈತ ತಿರುಮಲಾರ್ಯನ ತಮ್ಮ. ಮಿತ್ರವಿಂದಾಗೋವಿಂದ ಎಂಬ ಕನ್ನಡದ ಮೊದಲ ನಾಟಕವನ್ನು ರಚಿಸಿದ ಕೀರ್ತಿ ಇವನಿಗೆ ಸಂದಿದೆ. ಶ್ರೀಹರ್ಷನ ರತ್ನಾವಳಿ ನಾಟಕದ ಭಾಷಾಂತರ ವಿದು. ಆದರೆ ವತ್ಸರಾಜನಿಗೆ ಪ್ರತಿಯಾಗಿ ಶ್ರೀಕೃಷ್ಣನೇ ಇಲ್ಲಿ ಕಥಾನಾಯಕ ; ರತ್ನಾವಳಿಯ ಪ್ರತಿಯಾಗಿ ಕೃಷ್ಣನ ಅಷ್ಟಮಹಿಷಿಯರಲ್ಲೊಬ್ಬಳಾದ ಮಿತ್ರವಿಂದೆಯೇ ಕಥಾನಾಯಿಕೆ. ಇವರ ಪ್ರಣಯಕಥೆ ಈ ನಾಟಕದ ವಸ್ತು. ಇದು ಸಂಸ್ಕೃತ ನಾಟಕವನ್ನೇ ಬಹಳ ಮಟ್ಟಿಗೆ ಅನುಸರಿಸಿದ್ದರೂ ಮಕ್ಕೀಕಾ ಮಕ್ಕಿ ಎನ್ನುವಂಥ ಅನುವಾದವಲ್ಲ. ಕವಿ ಕೆಲವು ವ್ಯತ್ಯಾಸಗಳನ್ನು ಮಾಡಿದ್ದಾನೆ. ನಾಯಕ ನಾಯಿಕೆಯರಿಗಷ್ಟೇ ಅಲ್ಲದೆ ಉಳಿದ ಪಾತ್ರಗಳಿಗೂ ಸೂಕ್ತವಾದ ನಾಮಾಂತರಗಳನ್ನು ಕಲ್ಪಿಸಿದ್ದಾನೆ.

ಚಿಕ್ಕದೇವರಾಯನ ಆಸ್ಥಾನಕವಿಗಳೇ ಅಲ್ಲದೆ ಅವನ ಪರಿವಾರಕ್ಕೆ ಸೇರಿದವರೂ ಕನ್ನಡದಲ್ಲಿ ಕೃತಿರಚನೆ ಮಾಡಿದ್ದಾರೆ. ಅವರಲ್ಲಿ ಹೊನ್ನಮ್ಮನೆಂಬ ಕಬ್ಬಿಗಿತಿ ಪ್ರಧಾನಳು. ಇವಳು ಚಿಕ್ಕದೇವರಾಯನ ಅಂತಃಪುರದ ಊಳಿಗಕ್ಕೆ ಸೇರಿದವಳು. ಸಂಚಿಯ ಹೊನ್ನಿ ಎಂದೇ ಇವಳ ಹೆಸರು. ಇವಳ ಗ್ರಂಥ ಹದಿಬದೆಯ ಧರ್ಮ ಎಂಬ ಸಾಂಗತ್ಯಕಾವ್ಯ. ಅಕ್ಕಮಹಾದೇವಿಯಾದ ಮೇಲೆ ಕನ್ನಡದಲ್ಲಿ ಶ್ರೇಷ್ಠ ಕಬ್ಬಿಗಿತಿ ಈಕೆಯೇ. ಹೊನ್ನಮ್ಮ ಆರಿಸಿಕೊಂಡಿರುವ ವಿಷಯ ಸ್ತ್ರೀಯರಿಗೆ ನೇರವಾಗಿ ಸಂಬಂಧಿಸಿದ್ದು. ಅದನ್ನು ಬರೆದಿರುವ ಛಂದಸ್ಸು ಕೂಡ ಸ್ತ್ರೀಯರಿಗೆ ಹಿತವಾದ ಸಾಂಗತ್ಯ. ಒಂಬತ್ತು ಸಂಧಿಗಳುಳ್ಳ ಈ ಗ್ರಂಥದಲ್ಲಿ ಹೊನ್ನಮ್ಮ ಮನ್ವಾದಿ ಧರ್ಮಶಾಸ್ತ್ರಗಳಲ್ಲಿಯೂ ರಾಮಾಯಣ ಮಹಾಭಾರತಗಳಲ್ಲಿಯೂ ಹೇಳಿರುವ ಅಂಶಗಳನ್ನೇ ಸಂಗ್ರಹಿಸಿ ಹೇಳಿರುವೆನೆಂದು ತಿಳಿಸಿದ್ದಾಳೆ. ಇಲ್ಲಿ ವರ್ಣಿತವಾಗಿರುವ ಸತೀಧರ್ಮ ಸಂಪ್ರದಾಯಾನುಸಾರವಾದುದು. ಆದರೆ ಅದನ್ನು ಹೊನ್ನಮ್ಮ ಹೇಳಿರುವ ರೀತಿ ಮನಮೋಹಕವಾಗಿದೆ. ಆಕೆ ಕೊಡುವ ಉಪಮೆಗಳು ಅವಳ ರಸಜ್ಞತೆ ಔಚಿತ್ಯಜ್ಞಾನಗಳಿಗೆ ಸಾಕ್ಷಿಯಾಗಿವೆ.

ಊಳಿಗದ ಹೆಣ್ಣೊಬ್ಬಳ ಕವಿತಾಪ್ರತಿಭೆಯನ್ನು ಕಂಡುಕೊಂಡು ಅವಳನ್ನು ಪ್ರೋತ್ಸಾಹಿಸಿ ಕಾವ್ಯರಚನೆಗೆ ಹುರಿದುಂಬಿಸಿದ ರಾಣಿ ದೇವಾಜಮ್ಮಣ್ಣಿ, ರಾಜ ಚಿಕ್ಕದೇವರಾಯ ಪ್ರಶಂಸೆಗೆ ಪಾತ್ರರು. ಅರಸ ಅವಳನ್ನು ಸರಸಸಾಹಿತ್ಯದ ವರ ದೇವತೆಯೆಂದು ಹೊಗಳಿದನಂತೆ. ಈ ಹೊಗಳಿಕೆ ಅಭಿಮಾನಪ್ರೇರಿತವಾಗಿದ್ದರೂ ತೀರ ನಿರರ್ಥಕವಲ್ಲ. ಹೊನ್ನಮ್ಮನ ಕವಿತಾರಚನೆ ಮಧುರವಾಗಿದೆ. ಹೆಣ್ಣಿನ ಸ್ಥಾನಮಾನಗಳನ್ನು ಸ್ಪಷ್ಟೋಕ್ತಿಯಿಂದ ವಿವರಿಸಿ 'ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು, ಕಣ್ಣುಕಾಣದ ಗಾವಿಲರು' ಎಂದು ಕಟುವಾಗಿ ಟೀಕಿಸುವ ಧೀರೆಯಾಗಿದ್ದಾಳೆ, ಹೊನ್ನಮ್ಮ.

ಪದ್ಮಿನೀಕಲ್ಯಾಣದಲ್ಲಿ ತಿರುಪತಿ ಶ್ರೀನಿವಾಸನಿಗೂ ಪದ್ಮಾವತಿಗೂ ನಡೆದ ವಿವಾಹ ವೈಭವವನ್ನು ಬಣ್ಣಿಸಿದ ಕಬ್ಬಿಗಿತಿ ಶೃಂಗಾರಮ್ಮನೂ ಚಿಕ್ಕದೇವರಾಯನ ಪೋಷ್ಯವರ್ಗಕ್ಕೆ ಸೇರಿದವಳೇ. ಇವಳ ಕೃತಿ ನೂರತೊಂಬತ್ತು ಪದ್ಯಗಳುಳ್ಳ ಪುಟ್ಟ ಸಾಂಗತ್ಯಕಾವ್ಯ.

ತಿಮ್ಮಕವಿ ಚಿಕ್ಕದೇವರಾಯನ ಆಶ್ರಿತನಾಗಿದ್ದು ಅವನ ಸೂಚನೆ ಹಾಗೂ ಚಿಕುಪಾಧ್ಯಾಯನ ಪ್ರೋತ್ಸಾಹಗಳಿಂದ ಯಾದವಗಿರಿ ಮಾಹಾತ್ಮ್ಯ, ವೆಂಕಟಗಿರಿ ಮಾಹಾತ್ಮ್ಯ, ಪಶ್ಚಿಮರಂಗ ಮಾಹಾತ್ಮ್ಯ ಎಂಬ ಮೂರು ಚಂಪೂಕಾವ್ಯಗಳನ್ನು ರಚಿಸಿದ್ದಾನೆ. ಈ ಕಾವ್ಯಗಳ ವಸ್ತುವನ್ನು ಚಿಕುಪಾಧ್ಯಾಯನೇ ಸಾಂಗತ್ಯರೂಪದಲ್ಲಿಯೂ ಗದ್ಯರೂಪದಲ್ಲಿಯೂ ಹೇಳಿದ್ದನಾದರೂ ಅದನ್ನೇ ಚಂಪೂಕಾವ್ಯವಾಗಿ ಹೇಳುವ ಉತ್ಸಾಹ, ಈ ಕವಿಗೆ. ಇದು ಚಂಪೂರೂಪದ ಪುನರುಜ್ಜೀವನದಂತೆ ತೊರಬಹುದು. ಅದಕ್ಕಿಂತ ಮಿಗಿಲಾಗಿ ಆ ಕಾಲದಲ್ಲಿ ಶ್ರೀವೈಷ್ಣವಧರ್ಮ ರಾಜಮನ್ನಣೆಯನ್ನೂ ಜನಾದರಣೆಯನ್ನೂ ಗಳಿಸಿದ್ದುದರಿಂದ ಅದಕ್ಕೆ ಸಂಬಂಧಿಸಿದ ಕೃತಿಗಳನ್ನು ಮತ್ತೆ ಮತ್ತೆ ರಚಿಸುವ ಉತ್ಸಾಹ ಶ್ರದ್ಧೆಗಳೂ ವಿಶೇಷವಾಗಿದ್ದುದು ವ್ಯಕ್ತವಾಗುತ್ತದೆ. ಮಲ್ಲಿಕಾರ್ಜುನನೆಂಬ ಇನ್ನೊಬ್ಬ ಕವಿ ಹನ್ನೆರಡು ಆಶ್ವಾಸಗಳುಳ್ಳ ಶ್ರೀರಂಗಮಾಹಾತ್ಮ್ಯವೆಂಬ ಇನ್ನೊಂದು ಚಂಪೂಕಾವ್ಯವನ್ನು ಕಟ್ಟಿದ್ದಾನೆ. ಅದರಲ್ಲಿ ಬ್ರಹ್ಮಾಂಡ ಪುರಾಣೋಕ್ತವಾದ ಶ್ರೀರಂಗಕ್ಷೇತ್ರದ ಮಹಿಮೆಯ ವರ್ಣನೆಯಿದೆ. ವೇಣುಗೋಪಾಲ ವರಪ್ರಸಾದನೆಂಬ ಹೆಸರಿನ ಕವಿಯೊಬ್ಬ ಚಿಕದೇವರಾಜವಂಶಾವಳಿ ಎಂಬ ಒಂದು ಪುಟ್ಟ ಚಂಪೂಕಾವ್ಯವನ್ನು ಕಟ್ಟಿ ಚಿಕ್ಕದೇವರಾಜನ ಪೂರ್ವಿಕರ ಕಥೆಯನ್ನು ಸಂಗ್ರಹವಾಗಿ ಹೇಳಿದ್ದಾನೆ. ನೂರಮೂವತ್ತೆಂಟು ಪದ್ಯಗಳು ಮಾತ್ರವಿರುವ ಈ ಚಿಕ್ಕ ಕಾವ್ಯದಲ್ಲಿ ಕಥೆಗಿಂತ ವರ್ಣನೆಯೇ ಹೆಚ್ಚಾಗಿದ್ದು ಸಂಸ್ಕೃತ ಸಮಾಸವಿಲಸಿತವಾದ ಪ್ರೌಢ ಶೈಲಿ ಎದ್ದುಕಾಣುತ್ತದೆ. ದಶಾವತಾರಚರಿತೆಯೆಂಬ ಚಂಪೂಕಾವ್ಯವೂ ಈ ಕಾಲದ್ದೇ. ಅದು ಕವಿಗಳ ಕರ್ಣ ರಸಾಯನ, ಸಮರಸಿಕರ ಜಿಹ್ವಾಮೃತ. ಇದರ ಕರ್ತೃ ಮಲ್ಲರಸನೂ ಚಿಕುಪಾಧ್ಯಾಯನ ಶಿಷ್ಯವರ್ಗಕ್ಕೆ ಸೇರಿದ್ದು ಅವನ ಆಜ್ಞಾನುಸಾರವಾಗಿ ಕೃತಿರಚನೆ ಮಾಡಿದ್ದಾನೆ.

ಈ ಕಾಲದ ಚಂಪೂಕವಿಗಳಲ್ಲೆಲ್ಲ ಶ್ರೇಷ್ಠನಾದವ ಷಡಕ್ಷರದೇವ. ಈತ ಅರಸನ ಆಸ್ಥಾನಕವಿಯಾಗಿರದಿದ್ದರೂ ಅರಸನ ತಾಯಿ ಅಮೃತಾಂಬೆಯ ಆಶ್ರಯ ಪಡೆದಿದ್ದನೆಂದು ತೋರುತ್ತದೆ. ರಾಜಶೇಖರವಿಲಾಸ, ಶಬರಶಂಕರವಿಲಾಸ, ವೃಷಭೇಂದ್ರವಿಜಯ ಎಂಬ ಮೂರು ಪ್ರೌಢ ಚಂಪೂಕಾವ್ಯಗಳನ್ನು ರಚಿಸಿ ಈತ ಕೀರ್ತಿವಂತನಾಗಿದ್ದಾನೆ. ರಾಜಶೇಖರವಿಲಾಸ ಚೋಳದೇಶದ ಅರಸನಾದ ಸತ್ಯೇಂದ್ರನ ಮಗ ಮಂತ್ರಲಕ್ಷ ಅಥವಾ ರಾಜಶೇಖರನ ಭಕ್ತಿಪರೀಕ್ಷೆಯ ಕಥೆ. ಇದನ್ನು ತಮಿಳಿನಿಂದ ಕನ್ನಡಕ್ಕೆ ಮೊದಲು ತಂದವ ಗುಬ್ಬಿಯ ಮಲ್ಲಣಾರ್ಯನೆಂಬ ಷಟ್ಪದಿ ಕವಿ. ಭಾವಚಿಂತಾರತ್ನವೇ ಮಲ್ಲಣಾರ್ಯನ ಕೃತಿ. ಆ ಕಥೆಯನ್ನೇ ಷಡಕ್ಷರಿ ಚಂಪೂರೂಪದಲ್ಲಿ ರಚಿಸಿದ್ದಾನೆ. ಹದಿನಾಲ್ಕು ಆಶ್ವಾಸಗಳಿಂದ ಕೂಡಿದ ಈ ದೊಡ್ಡ ಕಾವ್ಯ ಷಡಕ್ಷರಿಯ ಪ್ರೌಢಭಾಷೆ; ಕವಿತಾಚಾತುರ್ಯ ಮತ್ತು ವರ್ಣನಾಸಕ್ತಿಗಳಿಗೆ ಸಾಕ್ಷಿಯಾಗಿದೆ. ಕಥೆ ಸ್ವಲ್ಪ, ವರ್ಣನೆ ಬಹಳ. ಬಸವರಾಜವಿಜಯ ಅಥವಾ ವೃಷಭೇಂದ್ರವಿಜಯ ಶಿವಶರಣ ಬಸವಣ್ಣನ ಅವತಾರಕಥೆಯನ್ನು ಹೇಳುವ ಕಾವ್ಯ. ಕೊನೆಯಲ್ಲಿ ಆತ ಬರೆದದ್ದು ಶಬರಶಂಕರವಿಲಾಸ. ಇಂದ್ರಕೀಲದಲ್ಲಿ ತನ್ನನ್ನು ಕುರಿತು ತಪಸ್ಸು ಮಾಡಿದ ಅರ್ಜುನನಿಗೆ ವರ ಕೊಡಲು ಕಿರಾತ ವೇಷ ಧರಿಸಿ ಬಂದ ಶಂಕರನ ಲೀಲೆಯ ಕಥನವೇ ಇಲ್ಲಿನ ವಸ್ತು. ಶಿವನ ಪಂಚವಿಂಶತಿ ಲೀಲೆಗಳಲ್ಲಿ ಒಂದಾದ ಶಬರಲೀಲೆ ಕವಿಯ ಮನಸ್ಸನ್ನು ವಿಶೇಷವಾಗಿ ಆಕರ್ಷಿಸಿದೆ. ಷಡಕ್ಷರಿ ಮಹಾಶಿವಭಕ್ತ, ಪ್ರೌಢಪಂಡಿತ ಕವಿ. ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಇವನಿಗೆ ಸಮಾನವಾದ ಪಾಂಡಿತ್ಯವಿದೆ. ಇವನ ವಾಗ್ವೈಭವ ಮೆಚ್ಚತಕ್ಕದ್ದು. ಹಂಪೆಯ ಹರಿಹರನಂತೆ ಶಿವ, ಶಿವಭಕ್ತರನ್ನಲ್ಲದೆ ಅನ್ಯರನ್ನು ಹೊಗಳಬಾರದೆಂಬ ವ್ರತ ಷಡಕ್ಷರ ದೇವನಿಗೆ. ಚಮತ್ಕಾರವಾದ ವರ್ಣನೆಗಳು, ನಿರರ್ಗಳವಾದ ಶೈಲಿ ಈ ಕವಿಯ ವಿಶಿಷ್ಟ ಲಕ್ಷಣಗಳು.

ಚಿಕ್ಕದೇವರಾಯನ ಕಾಲದ ಕವಿಗಳು ಹೆಚ್ಚಾಗಿ ಸಾಂಗತ್ಯ, ಗದ್ಯ ಮತ್ತು ಚಂಪೂ ಕ್ಷೇತ್ರಗಳಲ್ಲಿ ಕೃಷಿಮಾಡಿದವರು. ಹೊನ್ನಮ್ಮ ಶೃಂಗಾರಮ್ಮರನ್ನು ಉಳಿದು ಮಿಕ್ಕೆಲ್ಲ ಕವಿಗಳೂ ಸಂಸ್ಕೃತ ಭಾಷಾಸಾಹಿತ್ಯಗಳ ಪರಿಚಯವಿದ್ದವರು. ಹಲವರು ದೊಡ್ಡ ಪಂಡಿತರೇ ಆಗಿದ್ದರು. ಶ್ರೀವೈಷ್ಣವ ಧರ್ಮಪ್ರಚಾರ ಪ್ರಬಲವಾಗಿ ನಡೆದಿದ್ದರೂ ಬೇರೆ ಮತಪಂಥಗಳಿಗೆ ಸೇರಿದವರೂ ಕೃತಿರಚನೆ ಮಾಡಿದ್ದಾರೆ. ಒಡೆಯರ ಕಾಲದ ಸಾಹಿತ್ಯೇತಿಹಾಸದಲ್ಲಿ ಚಿಕ್ಕದೇವರಾಯನ ಕಾಲ ವೈಭವೋಪೇತವಾದ ಅವಧಿ. ರಾಜ, ಮಂತ್ರಿ, ಊಳಿಗದವರು, ವಿದ್ವಾಂಸರು, ಸಂನ್ಯಾಸಿಗಳು, ಸ್ತ್ರೀಯರು—ಎಲ್ಲ ಬಗೆಯ ಜನರೂ ಕನ್ನಡ ಕಾವ್ಯದೇವಿಯ ಕೈಂಕರ್ಯವನ್ನು ಕೈಕೊಂಡು ಕೃತಿರಚನೆ ಮಾಡಿದ ಸುವರ್ಣಯುಗವೆಂದು ಅದನ್ನು ಹೇಳಬೇಕು. ಕನ್ನಡ ಈ ಕಾಲದಲ್ಲಿ ರಾಜಪೂಜ್ಯವೂ ಆಗಿತ್ತು, ಲೋಕಮಾನ್ಯವೂ ಆಗಿತ್ತು. ಈ ಕಾಲದ ಕನ್ನಡ ಸಾಹಿತ್ಯ ಪಂಡಿತ ಪಾಮರರಿಬ್ಬರಿಗೂ ರಂಜನೆಯನ್ನು ಕೊಡಬಲ್ಲ ಉತ್ತಮ ಸಾಹಿತ್ಯ.

ರಂಗಾವಧೂತ ಅಥವಾ ಮಹಲಿಂಗರಂಗನೆಂಬ ಈ ಕಾಲದ ಷಟ್ಪದಿ ಕವಿಯೊಬ್ಬ ಸ್ಮರಣಾರ್ಹನಾಗಿದ್ದಾನೆ. ಅವನ ಕೃತಿ ಅನುಭವಾಮೃತ. ಹನ್ನೊಂದು ಅಧ್ಯಾಯಗಳುಳ್ಳ ಈ ಭಾಮಿನೀಷಟ್ಪದಿಯ ಕಾವ್ಯದಲ್ಲಿ ಕವಿ 'ಅಖಿಳವೇದಾಂತಾರ್ಥವನ್ನು ಸಂಗ್ರಹಿಸಿ ಪೇಳುವೆ ಸಕಲರಿಗೆ ತಿಳಿವಂತೆ' ಎಂದು ಪ್ರತಿಜ್ಞೆ ಮಾಡಿದ್ದಾನೆ. ತಿಳಿಯಬೇಕಾದ ಧರ್ಮರಹಸ್ಯವನ್ನು ಕನ್ನಡದಿಂದಲೇ ತಿಳಿದುಕೊಳ್ಳುವುದು ಶಕ್ಯವಾದರೆ ಸಂಸ್ಕೃತದ ಅಗತ್ಯವೇನು? ಎಂದು ಮಹಲಿಂಗರಂಗನು ಪ್ರಶ್ನಿಸುವ ಸಾಹಸಮಾಡಿರುವುದು ಮೆಚ್ಚತಕ್ಕ ವಿಚಾರ. ಕನ್ನಡದ ಉಪಯುಕ್ತತೆ ಮತ್ತು ಪ್ರಾಶಸ್ತ್ಯಗಳನ್ನು ನಿರೂಪಿಸಿ ಈ ಕವಿ ಹೇಳುವ ಮಾತುಗಳನ್ನು ಸಂಸ್ಕೃತದ ದೂಷಣೆಯೆಂದು ತಿಳಿಯುವುದು ಅನುಚಿತ. ಇವನು ಅದ್ವೈತತತ್ತ್ವವನ್ನು ಬಹಳ ಸುಲಭಶೈಲಿಯ ತಿಳಿಗನ್ನಡದಲ್ಲಿ ವಿವರಿಸಿದ್ದಾನೆ. ಈ ಕೃತಿ ಸಂಸ್ಕೃತಕ್ಕೆ ಅನುವಾದವಾಗಿರುವಂತೆ ತಿಳಿದುಬಂದಿದೆ. ವಿಷಯ, ಭಾಷೆ ಎರಡೂ ರಂಗನಾಥನಿಗೆ ಕರಗತವಾಗಿವೆ. ಆದ್ದರಿಂದಲೇ ಇವನ ಈ ತತ್ತ್ವಗ್ರಂಥ ಲೋಕಪ್ರಿಯವಾಗಿದೆ. ಕನ್ನಡ ಸುಲಿದ ಬಾಳೆಯ ಹಣ್ಣಿನಂತೆ, ಸಿಗುರು ಕಳೆದ ಕಬ್ಬಿನಂತೆ, ಕಾದು ಆರಿದ ಹಾಲಿನಂತೆ, ಸುಲಭವಾಗಿರುವುದೆಂದು ಹೇಳಿದ ಕವಿ ಇವನೇ.

ಸುಮಾರು 1680ರಲ್ಲಿದ್ದ ಚಿದಾನಂದನೆಂಬ ಜೈನಕವಿ ಮುನಿವಂಶಾಭ್ಯುದಯವನ್ನು ರಚಿಸಿ ಜೈನಯತಿಪರಂಪರೆಯನ್ನು ವರ್ಣಿಸಿದ್ದಾನೆ. ಶ್ರುತಕೇವಲಿಯಾದ ಬಾಹುಬಲಿ ಮತ್ತು ಚಂದ್ರಗುಪ್ತರ ವೃತ್ತಾಂತ ಇಲ್ಲಿ ವರ್ಣಿತವಾಗಿದೆ. ಅದಕ್ಕಿಂತ

ಹೆಚ್ಚಾಗಿ ಈ ಸಾಂಗತ್ಯಕಾವ್ಯ ಚಿಕ್ಕದೇವರಾಯನ ವಂಶಾವಳಿಯನ್ನು ಹೊಗಳಿದೆ. ಮೈಸೂರಿನ ಅರಸರು ಶ್ರವಣಬೆಳಗೊಳದ ಜೈನಯತಿಗಳಿಗೆ ಮಾಡಿದ ಸಹಾಯದ ವರ್ಣನೆ ಈ ಕಾವ್ಯದಲ್ಲಿ ಬಂದಿದೆ. ಈ ಕಾವ್ಯ ಚಿಕ್ಕದೇವರಾಜನಿಗೆ ಸಂಬೋಧಿಸಿದಂತೆ ತೋರುತ್ತದೆ.

ಚಿಕ್ಕದೇವರಾಯನ ಕಾಲದಲ್ಲಿ ವಿಶೇಷವಾಗಿ ನಡೆದ ಸಾಂಗತ್ಯಕಾವ್ಯ ಮತ್ತು ಮಾಹಾತ್ಮ್ಯ ಗ್ರಂಥಗಳ ರಚನೆ ಮುಂದಿನ ಅರಸರ ಕಾಲಕ್ಕೂ ಮುಂದುವರಿಯಿತು. ದೊಡ್ಡ ಕೃಷ್ಣರಾಜನ ಧರ್ಮಪತ್ನಿಯಾದ ಚೆಲುವಾಂಬೆ ಎಂಬ ಕಬ್ಬಿಗಿತಿ ವರನಂದೀ ಕಲ್ಯಾಣ, ವೆಂಕಟಾಚಲಮಹಾತ್ಮೆ ಎಂಬ ಕಾವ್ಯಗಳನ್ನೂ ಕೆಲವು ಲಾಲಿ ಹಾಡುಗಳನ್ನೂ ರಚಿಸಿದ್ದಾಳೆ. ಕಳಲೆ ನಂಜರಾಜನೆಂಬ ಒಬ್ಬ ದಳವಾಯಿ (1740) ಅನೇಕ ಕನ್ನಡ ಕೃತಿಗಳನ್ನು ಬರೆದಿದ್ದಾನೆ. ಇವುಗಳಲ್ಲಿ ಹಲವು ಸ್ಥಳಪುರಾಣಗಳಂತಿರುವ ಮಹಾತ್ಮೆಗಳು. ಗರಳಪುರಿ, ಕಾಶಿ, ಭದ್ರಗಿರಿ, ಕಕುದ್ಗಿರಿ ಮೊದಲಾದ ಪುಣ್ಯಸ್ಥಳಗಳ ಮಹಿಮೆಯನ್ನು ಪ್ರಶಂಸಿಸುವ ಕಾವ್ಯಗಳು ಈ ಸೇನಾನಿಯ ಹೆಸರಿನಲ್ಲಿ ಪ್ರಸಿದ್ಧವಾಗಿವೆ. ಈತ ರಚಿಸಿರುವ ಹಾಲಾಸ್ಯಮಹಾತ್ಮೆ ಎಪ್ಪತ್ತೊಂದು ಅಧ್ಯಾಯಗಳನ್ನೊಳಗೊಂಡ ವಿಸ್ತಾರವಾದ ಗ್ರಂಥ. ಇದಕ್ಕೆ ನಂಜರಾಜವಾಣೀವಿಲಾಸ ಎಂಬ ಇನ್ನೊಂದು ಹೆಸರೂ ಇದೆ. ಇದರಲ್ಲಿ ಮಧುರೆಯ ಸುಂದರೇಶ್ವರಸ್ವಾಮಿಯ ಲೀಲಾಕಥನ ವಿಸ್ತಾರವಾಗಿ ಮೂಡಿಬಂದಿದೆ.

ನಂಜರಾಜ ಅನೇಕ ಕವಿಗಳಿಗೆ ಆಶ್ರಯ ಕೊಟ್ಟಿದ್ದನೆಂದು ದೇವಚಂದ್ರ ತನ್ನ ರಾಜಾವಳೀಕಥೆಯಲ್ಲಿ ನಿರೂಪಿಸಿದ್ದಾನೆ. ಈತ ಇಮ್ಮಡಿ ಕೃಷ್ಣರಾಜನಲ್ಲಿ ಸಂಧಿವಿಗ್ರಹಿಯಾಗಿದ್ದು ಸೇನಾಪತಿತ್ವವನ್ನೂ ನಿರ್ವಹಿಸಿದ. ಚಿಕುಪಾಧ್ಯಾಯನಂತೆಯೇ ಇವನೂ ಅನೇಕ ಗ್ರಂಥಗಳನ್ನು ಬರೆದಿದ್ದಾನೆ, ಅನ್ಯರ ಕೈಲಿ ಬರೆಯಿಸಿದ್ದಾನೆ.

ಶಾಲ್ಯದ ಕೃಷ್ಣರಾಜನೆಂಬ ಇನ್ನೊಬ್ಬ ಕವಿ ಸಂಸ್ಕೃತ ಕನ್ನಡ ಮತ್ತು ತೆಲುಗು ಭಾಷೆಗಳಲ್ಲಿ ಪಂಡಿತ. ಈತ ಚಿಕುಪಾಧ್ಯಾಯನಂತೆಯೇ ಹಲವು ಕಾವ್ಯಗಳನ್ನು ರಚಿಸಿದ್ದಾನೆ. ವಿವೇಕಾಭರಣ, ಯಯಾತಿ ಕಾವ್ಯ, ಸದಾಶಿವ ಶತಕ, ಅಪ್ರಸ್ತುತ ಪ್ರಶಂಸಾಶತಕ, ಅನುಭವರಸಾಯನ—ಮೊದಲಾದುವು ಇವನ ಮುಖ್ಯ ಕೃತಿಗಳು. ವಿವೇಕಾಭರಣ ಭಾಮಿನಿಷಟ್ಪದಿಯಲ್ಲಿದೆ. ಶತಕಗಳೆಲ್ಲ ವೃತ್ತಗಳನ್ನು ಒಳಗೊಂಡಿವೆ. ಅನುಭವರಸಾಯನ ಗದ್ಯಗ್ರಂಥ. ವೇದಾಂತಬೋಧನೆಯೇ ಪ್ರಧಾನ ಉದ್ದೇಶವಾದ ನಿಜದೀಪಿಕಾರತ್ನ, ಟೀಕಿನ ಕೀರ್ತನೆ ಎಂಬ ಗ್ರಂಥಗಳಲ್ಲಿ ಪದಗಳೂ ಅವಕ್ಕೆ ಟೀಕೆಯೂ ಇದ್ದು ಹಾಡು ವಚನ, ಸಾಂಗತ್ಯಗಳ ಬಳಕೆ ಕಂಡುಬರುತ್ತದೆ.

ಈ ಕಾಲದ ಸ್ಮರಣಾರ್ಹನಾದ ಇನ್ನೊಬ್ಬ ಕವಿ ವೆಂಕಾಮಾತ್ಯ. ಈತ ಹೈದರಲ್ಲಿಖಾನನಲ್ಲಿ ಮಂತ್ರಿಯಾಗಿದ್ದ. ಇಂದಿರಾಭ್ಯುದಯ, ಹನುಮದ್ವಿಲಾಸ ಮತ್ತು ರಾಮಾಯಣಗಳನ್ನು ಈತ ರಚಿಸಿದ್ದಾನೆ. ಆಂಜನೇಯನ ಅನುಗ್ರಹವಿಶೇಷದಿಂದ ಸರಸಸಾಹಿತ್ಯರಚನಸಾಮರ್ಥ್ಯವನ್ನು ಪಡೆದೆನೆಂದು ಹೇಳಿಕೊಂಡಿದ್ದಾನೆ. ಪೂರ್ವಕವಿಸ್ಮರಣೆ ಮಾಡುತ್ತ ಭಾಸನ ಹೆಸರನ್ನು ಹೇಳಿದ್ದಾನೆ. ಬೇರೆಯಾವ ಕನ್ನಡ ಕವಿಯೂ ಭಾಸನನ್ನು ಸ್ಮರಿಸಿಲ್ಲವೆನ್ನಬೇಕು. ಈತನ ರಾಮಾಯಣ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದ್ದು ಪ್ರೌಢ ಶೈಲಿಯಿಂದ ಕೂಡಿದೆ. ಇಂದಿರಾಭ್ಯುದಯ ಚಂಪೂ ಕಾವ್ಯ.

ಮುಮ್ಮಡಿ ಕೃಷ್ಣರಾಜ ಒಡೆಯ ಪ್ರಭುತ್ವವನ್ನು ಪಡೆದಮೇಲೆ ಕನ್ನಡಕ್ಕೆ ಹೆಚ್ಚಿನ ಪೋಷಣೆ ಲಭಿಸಿತು. ರಾಜಾಶ್ರಯದಲ್ಲಿ ಅನೇಕ ವಿದ್ವಜ್ಜನ ಕೃತಿರಚನೆ ಮಾಡಿದರು. ಆಡಳಿತ ಕೈತಪ್ಪಿದಾಗಲೂ ಕವಿ, ವಿದ್ವಾಂಸರನ್ನು ರಾಜ ಅನಾದರಣೆ ಮಾಡಲಿಲ್ಲ. ಕೃಷ್ಣರಾಜ ಒಡೆಯನೇ ಸ್ವಯಂ ಪಂಡಿತನೂ ಗ್ರಂಥಕರ್ತನೂ ಆಗಿದ್ದ. ಅವನ ಹೆಸರಿನಲ್ಲಿ ಸುಮಾರು ಐವತ್ತು ಗ್ರಂಥಗಳು ಪ್ರಸಿದ್ಧವಾಗಿವೆ. ಸಂಸ್ಕೃತದಲ್ಲಿನ ಪುರಾಣೇತಿಹಾಸ ನಾಟಕಾದಿಗಳನ್ನು ಕನ್ನಡದಲ್ಲಿ ಬರೆಯಿಸಿದ ಯಶಸ್ಸು ಮುಮ್ಮಡಿ ಕೃಷ್ಣರಾಜನದು. ಶ್ರೀ ಕೃಷ್ಣರಾಜ ವಾಣಿವಿಲಾಸ ಎಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಭಾರತ ಟೀಕೆಯನ್ನು ಈತ ಬರೆಯಿಸಿದುದಲ್ಲದೆ ಸೌಗಂಧಿಕಾಪರಿಣಯ ಎಂಬ ವಿಸ್ತಾರವಾದ ಕಾವ್ಯವನ್ನು ಗದ್ಯಪದ್ಯಾತ್ಮಕವಾಗಿ ತಾನೇ ರಚಿಸಿದ್ದಾನೆ. ದೂರ್ವಾಸಮುನಿಯ ಶಾಪದ ದೆಸೆಯಿಂದ ತನ್ನ ಪದವಿಯನ್ನು ಕಳೆದುಕೊಂಡ ದೇವೇಂದ್ರ ಸುಗಂಧ ರಾಯನೆಂಬ ಹೆಸರಿನಿಂದ ಹುಟ್ಟಿ ಸೌಗಂಧಿಕೆ ಎಂಬ ಹೆಸರಿನಿಂದ ಭೂಲೋಕದಲ್ಲಿ ಅವತರಿಸಿದ ಶಚೀದೇವಿಯನ್ನು ಮದುವೆಯಾದನೆಂಬುದೇ ಈ ಗ್ರಂಥದ ಕಥಾಸಾರ. ಇದನ್ನೇ ಕವಿ ಮೂವತ್ತಾರು ಆಶ್ವಾಸಗಳಾಗಿ ಬೆಳೆಸಿ ಆರು ಸಾವಿರಕ್ಕೂ ಹೆಚ್ಚಿನ ಪದ್ಯಗಳಿಂದ ಕೂಡಿದ ಮಹಾಕಾವ್ಯವನ್ನಾಗಿ ಮಾಡಿದ್ದಾನೆ.

ಅಧ್ಯಾತ್ಮರಾಮಾಯಣದ ಕನ್ನಡ ಟೀಕೆಯಲ್ಲಿ ಮೊದಲಿಗೆ ಮೈಸೂರು ಅರಸರ ಚರಿತ್ರೆಯನ್ನು ಸಂಗ್ರಹವಾಗಿ ಹೇಳಿದೆ. ಇದಲ್ಲದೆ ನಂಜುಂಡ ಶತಕ, ದೇವೀ ಮಾಹಾತ್ಮ್ಯ, ಶಂಕರಸಂಹಿತೆ, ಸಂಖ್ಯಾರತ್ನ ಮಾಲಾಟೀಕೆ ಎಂಬ ಗ್ರಂಥಗಳು ಜನಪ್ರಿಯವಾಗಿವೆ. ಶ್ರೀಧರೀಯ ವ್ಯಾಖ್ಯಾನವನ್ನು ಅನುಸರಿಸಿ ಭಾಗವತಕ್ಕೆ ಯಥಾತಥದಿಂದ ಕನ್ನಡ ಟೀಕೆಯನ್ನು ಕೃಷ್ಣದೇವರಾಯ ಬರೆದಿದ್ದಾನೆ. ಶಾಕುಂತಲ ನಾಟಕನವೀನಟೀಕೆ ಈತನ ಕೃತಿಗಳಲ್ಲಿ ಮುಖ್ಯವಾದದ್ದು. ಪುರಾಣ ಪುಣ್ಯಕಥೆಗಳಷ್ಟಕ್ಕೇ ಗಮನವನ್ನು ಮೀಸಲಾಗಿಡದೆ ನಾಟಕಗಳನ್ನೂ ಓದಿ ಸ್ವಾರಸ್ಯಾನುಭವ ಮಾಡಿ ಅವುಗಳ ಸಾರವನ್ನು ಕನ್ನಡಕ್ಕೆ ತರುವ ಪ್ರಯತ್ನವನ್ನಿಲ್ಲಿ ಮಾಡಲಾಗಿದೆ.

ಈ ರಾಜನ ಕಾಲದಲ್ಲಿನ ಇಬ್ಬರು ಗದ್ಯಕವಿಗಳು ಬಹಳ ಮುಖ್ಯರಾದವರು; ಒಬ್ಬ ರಾಜಾವಳೀ ಕಥೆಯನ್ನು ರಚಿಸಿದ ದೇವಚಂದ್ರ. ಇನ್ನೊಬ್ಬ ಮುದ್ರಾಮಂಜೂಷವನ್ನು ರಚಿಸಿದ ಕೆಂಪುನಾರಾಯಣ. ದೇವಚಂದ್ರ ಜೈನಕವಿ; ರಾಮಕಥಾವತಾರ ಮತ್ತು ರಾಜಾವಳೀ ಕಥೆ ಎಂಬ ಎರಡು ಗ್ರಂಥಗಳನ್ನು ಬರೆದಿದ್ದಾನೆ. ರಾಮಕಥಾವತಾರ ಜೈನ ಸಂಪ್ರದಾಯಾನುಸಾರವಾದ ರಾಮಾಯಣ. ವಿಶೇಷವಾಗಿ ನಾಗಚಂದ್ರ ವಿರಚಿತವಾದ ರಾಮಚಂದ್ರ ಚರಿತ ಪುರಾಣದ ಅನುಸರಣೆಯಾಗಿದೆ. ಅದರಲ್ಲಿನ ಹಲವು ಪದ್ಯಗಳನ್ನು ದೇವಚಂದ್ರ ಅನುವಾದ ಮಾಡಿದ್ದಾನೆ. ಇದಕ್ಕಿಂತ ಇವನ ರಾಜಾವಳೀ ಕಥೆ ಸಾಹಿತ್ಯ ಚರಿತ್ರೆಯ ದೃಷ್ಟಿಯಿಂದ ಮುಖ್ಯವಾಗಿದೆ. ಇದು ಬಹಳ ಮಟ್ಟಿಗೆ ಗದ್ಯದಲ್ಲಿದೆ. ಕೆಲವು ಶ್ಲೋಕಗಳೂ ಪದ್ಯಗಳೂ ಮಧ್ಯೆ ಮಧ್ಯೆ ಬಂದಿವೆ. ಇದರಲ್ಲಿ ದೇವಚಂದ್ರ ಜೈನಮತಕ್ಕೆ ಸಂಬಂಧಿಸಿದ ಹಲವು ಕಥೆಗಳನ್ನೂ ಅನೇಕ ರಾಜರ ಚರಿತ್ರೆಯನ್ನೂ ಹೇಳಿದ್ದಾನೆ. ಮೈಸೂರು ಒಡೆಯರ ವಂಶಾವಳಿಯ ಕಥೆಯೂ ಇದರಲ್ಲಿ ಸಂಕ್ಷೇಪವಾಗಿ ಬಂದಿದೆ. ಈ ಕವಿ ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಿತನಾದ ವೈದ್ಯಸೂರಿಪಂಡಿತನ ಪ್ರೋತ್ಸಾಹದಿಂದ ಸು. 1838ರಲ್ಲಿ ಗ್ರಂಥರಚನೆ ಮಾಡಿದಂತೆ ತಿಳಿಸಿದ್ದಾನೆ.

ಕೆಂಪುನಾರಾಯಣ ಹೊಯಿಸಣಿಗ ಕುಲದ ಬ್ರಾಹ್ಮಣ ಕವಿ (1823). ಇವನ ಗ್ರಂಥ ಮುದ್ರಾಮಂಜೂಷ. ಈ ಗದ್ಯಗ್ರಂಥ ಹಲವು ದೃಷ್ಟಿಗಳಿಂದ ಮುಖ್ಯವಾಗಿದೆ. ಆಧುನಿಕ ಗದ್ಯಶೈಲಿ ಈ ಗ್ರಂಥದಿಂದ ಆರಂಭವಾಯಿತೆಂದು ಹೇಳಿದರೆ ತಪ್ಪಲ್ಲ. ಸುಲಲಿತವಾದ ಸರಳಗನ್ನಡದ ವಚನರಚನೆಯನ್ನು ಇಲ್ಲಿ ಕಾಣಬಹುದು. ಚಾಣಕ್ಯ ಚಂದ್ರಗುಪ್ತರು ನಂದರ ವಿನಾಶವನ್ನು ಸಾಧಿಸಿ ಪಾಟಲೀಪುರದ ಸಿಂಹಾಸನವನ್ನು ವಶಪಡಿಸಿಕೊಂಡ ಕಥೆ ಈ ಗ್ರಂಥದ ಕಥಾವಸ್ತು. ಇದರ ಉತ್ತರಾರ್ಧಕ್ಕೆ ಸಂಸ್ಕೃತದ ಮುದ್ರಾರಾಕ್ಷಸವೆಂಬ ವಿಶಾಖದತ್ತನ ನಾಟಕ ಸ್ಫೂರ್ತಿಯನ್ನು ಒದಗಿಸಿದೆ. ಪೂರ್ವಾರ್ಧದ ಕಥೆಯನ್ನು ಕವಿ ಬೇರೆ ಆಧಾರಗಳಿಂದ ಪಡೆದು ಕೊಂಡಿದ್ದಾನೆ. ಈ ಕೃತಿ ಓದುಗರ ಮನಸ್ಸನ್ನು ಒಲಿಸಿ ನಲಿಸುವಂಥ ಕಥಾಸ್ವಾರಸ್ಯ, ಸನ್ನಿವೇಶ ರಚನಚಾತುರ್ಯ ಮತ್ತು ಪದಲಾಲಿತ್ಯಗಳಿಂದ ಕೂಡಿ ಅತ್ಯಂತ ಜನಪ್ರಿಯವಾಗಿದೆ.

ಮುಮ್ಮಡಿ ಕೃಷ್ಣರಾಜನ ಪೋಷಣೆಯಲ್ಲಿದ್ದು ಕೃತಿರಚನೆ ಮಾಡಿದ ಇನ್ನೊಬ್ಬ ಕವಿ ಅಳಿಯ ಲಿಂಗರಾಜ (1823—74) ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಚಂಪೂ ರೂಪದಲ್ಲಿರುವ ನರಪತಿಚರಿತವೆಂಬ ಅಲಂಕಾರಗ್ರಂಥ ಮುಖ್ಯವಾದದ್ದು. ಇದರ ಉದಾಹರಣಪದ್ಯಗಳೆಲ್ಲ ಮುಮ್ಮಡಿ ಕೃಷ್ಣರಾಜನ ಸ್ತುತಿರೂಪವಾಗಿವೆ. ತಿರುಮಲಾರ್ಯ ತನ್ನ ಅಲಂಕಾರ ಗ್ರಂಥದಲ್ಲಿ ಚಿಕ್ಕದೇವರಾಯನನ್ನು ಹೊಗಳಿದ ಮಾದರಿಯನ್ನು ಈ ಕವಿ ಅನುಕರಿಸಿದಂತೆ ತೋರುತ್ತದೆ. ಈತ ಚಂಪೂ, ಷಟ್ಪದಿ, ಸಾಂಗತ್ಯಗಳಲ್ಲಿ ಕೃತಿರಚನೆಮಾಡಿ ತನ್ನ ಕವಿತಾ ಪ್ರೌಢಿಮೆಯನ್ನು ಮೆರೆದಿದ್ದಾನೆ. ಪುತ್ರಕಾಮೇಷ್ಟಿಯೆಂಬ ಒಂದು ಯಕ್ಷಗಾನವನ್ನು ಮಹಲಿಂಗಶತಕ ಮತ್ತು ವೀರಭದ್ರಶತಕಗಳೆಂಬ ಎರಡು ಶತಕ ಗ್ರಂಥಗಳನ್ನು ಈತ ರಚಿಸಿದ್ದಾನೆ.

ಮುಮ್ಮಡಿ ಕೃಷ್ಣಭೂಪಾಲನ ತರುವಾಯ ರಾಜಪಟ್ಟವನ್ನೇರಿದ ಶ್ರೀ ಚಾಮರಾಜ ಒಡೆಯರು ಹಿರಿಯರ ಸಂಪ್ರದಾಯವನ್ನು ಅನುಸರಿಸಿ ವಿದ್ವತ್ಕವಿಪೋಷಕರಾಗಿ ಕೀರ್ತಿಗಳಿಸಿದರು. ಇವರ ಆಸ್ಥಾನ ಕವಿ ಬಸವಪ್ಪಶಾಸ್ತ್ರಿಗಳು ರಚಿಸಿದ ಕರ್ಣಾಟಕ ಅಭಿಜ್ಞಾನಶಾಕುಂತಲ ನಾಟಕ ಇಂದಿಗೂ ಪ್ರಸಿದ್ಧವಾಗಿದೆ. ಚಂಡಕೌಶಿಕ ಮತ್ತು ಉತ್ತರರಾಮಚರಿತೆ ಎಂಬ ಬೇರೆ ಎರಡು ಸಂಸ್ಕೃತನಾಟಕಗಳನ್ನೂ ಈ ಕವಿ ಕನ್ನಡಕ್ಕೆ ಅನುವಾದ ಮಾಡಿದ್ದಾನೆ. ಇವಲ್ಲದೆ ದಮಯಂತೀ ಸ್ವಯಂವರ, ಸಾವಿತ್ರೀ ಚರಿತ್ರೆ ಎಂಬ ಎರಡು ಕಾವ್ಯಗಳನ್ನೂ ರಚಿಸಿದ್ದಾನೆ. ಮೊದಲನೆಯದು ಚಂಪೂ, ಎರಡನೆಯದು ಷಟ್ಪದಿ. ಒಥೆಲೋ ಎಂಬ ಇಂಗ್ಲಿಷ್ ನಾಟಕವನ್ನು ಪರಿವರ್ತಿಸಿ ಶೂರಸೇನಚರಿತ್ರೆ ಎಂಬ ನಾಟಕವನ್ನು ರಚಿಸಿದುದಲ್ಲದೆ ಬಸವಪ್ಪ ಶಾಸ್ತ್ರಿಗಳು ಭರ್ತೃಹರಿ ಸುಭಾಷಿತವನ್ನೂ ಕನ್ನಡಿಸಿದ್ದಾರೆ.

ಶತಮಾನದಲ್ಲಿ ಕನ್ನಡಕ್ಕೆ ಒಡೆಯರ ವಂಶಜರು ನೀಡಿದ ದೊಡ್ಡ ಕಾಣಿಕೆ ಶ್ರೀಜಯಚಾಮರಾಜೇಂದ್ರ ಗ್ರಂಥಮಾಲೆ. ಶ್ರೀ ಜಯಚಾಮರಾಜ ಒಡೆಯರು ಋಗ್ವೇದವನ್ನೂ ಅನೇಕ ಪುರಾಣಗಳನ್ನೂ ಕನ್ನಡದಲ್ಲಿ ಅರ್ಥಸಮೇತವಾಗಿ ಪ್ರಕಟಣೆ ಮಾಡಿಸಿ ಕನ್ನಡ ಜನಕ್ಕೆ ಮಹೋಪಕಾರ ಮಾಡಿದ್ದಾರೆ. ವೈದಿಕ ಧರ್ಮದ ಮೂಲಾಧಾರಗಳಿಂದ ಈ ಪವಿತ್ರ ಗ್ರಂಥಗಳನ್ನು ಕನ್ನಡ ಲಿಪಿಯಲ್ಲಿ ಅಚ್ಚು ಮಾಡಿಸಿ ಯಥಾರ್ಥವಾದ ಕನ್ನಡ ಅನುವಾದವನ್ನೂ ಕೊಟ್ಟಿರುವುದು ಸಂಸ್ಕೃತ ಪಾಂಡಿತ್ಯವಿಲ್ಲದ ಕನ್ನಡಿಗರಿಗೂ ಜ್ಞಾನಭಂಡಾರದ ಬಾಗಿಲುಗಳನ್ನು ತೆರೆದಂತಾಗಿದೆ. ಹೀಗೆ ರಾಜ ಒಡೆಯನ ಕಾಲದಿಂದಲೂ ಒಡೆಯರ ಅರಸುಮನೆತನ ಸಾಹಿತ್ಯ, ಸಂಗೀತಾದಿ ಲಲಿತಕಲೆಗಳಿಗೆ ಅಪಾರ ಪ್ರೋತ್ಸಾಹವನ್ನು ಕೊಡುತ್ತ ಬಂದಿದೆ. (ಕೆ.ಎಚ್.)

**ಒಡೆಸ್ಸ[1] :** ಸೋವಿಯತ್ ಒಕ್ಕೂಟದ ಉಕ್ರೇನಿಯನ್ ಗಣರಾಜ್ಯದ ಬಂದರು. ಕಪ್ಪು ಸಮುದ್ರದ ಮೇಲಿದೆ. ಪ್ರಾದೇಶಿಕ ಆಡಳಿತ ಕೇಂದ್ರ.

ಉತ್ತರ ಅಕ್ಷಾಂಶ 46°29′ ಮತ್ತು ಪೂರ್ವ ರೇಖಾಂಶ 30°44′ ಗಳ ಮೇಲೆ ಈ ನಗರವಿದೆ. ಜನಸಂಖ್ಯೆ 6,67,182 (1959). ಇಲ್ಲಿರುವ ಹಡಗುನಿಲ್ದಾಣಗಳು ಒಟ್ಟು ಐದು.

ಇಲ್ಲಿಯದು ಖಂಡಾಂತರ ಮಾದರಿಯ ವಾಯುಗುಣ. ಜನವರಿ ತಿಂಗಳ ಸರಾಸರಿ ಉಷ್ಣತೆ 23.2° ಫ್ಯಾ. ಜುಲೈ ತಿಂಗಳ ಸರಾಸರಿ ಉಷ್ಣತೆ 72.8° ಫ್ಯಾ. ವಾರ್ಷಿಕ ಸರಾಸರಿ ಮಳೆ 14″. ವರ್ಷದ ಕೆಲವು ದಿನಗಳಲ್ಲಿ ಹಿಮದಿಂದ ಹೆಪ್ಪುಗಟ್ಟುವುದರಿಂದ ಆ ಕಾಲದಲ್ಲಿ ಸಮುದ್ರಯಾನಕ್ಕೆ ಅಡಚಣೆಯಾಗುತ್ತದೆ.

1803ರಲ್ಲಿ ಈ ಪಟ್ಟಣವನ್ನು ಮುಖ್ಯ ಬಂದರನ್ನಾಗಿ ಅಭಿವೃದ್ಧಿಗೊಳಿಸಲಾಯಿತು. 1926ರ ಹೊತ್ತಿಗೆ ಇದು ಕಪ್ಪು ಸಮುದ್ರದ ಮುಖ್ಯ ವಾಣಿಜ್ಯ ರೇವುಪಟ್ಟಣವಾಯಿತು.

ಈಚೆಗೆ ಸಾಪೇಕ್ಷವಾಗಿ ಒಡೆಸ್ಸದ ಪ್ರಾಮುಖ್ಯ ಕಡಿಮೆಯಾಗಿರುವುದಾದರೂ ಇದು ಮುಖ್ಯ ಕೈಗಾರಿಕಾ ಮತ್ತು ವಾಣಿಜ್ಯ ಕೇಂದ್ರ. ಉಪ್ಪು, ಗಾಜು, ಹೆಂಚು, ವ್ಯವಸಾಯದ ಉಪಕರಣಗಳು, ತವರ, ಬಿರಡೆ ಇವು ಮುಖ್ಯ ತಯಾರಿಕೆಗಳು. ಇತ್ತೀಚೆಗೆ ಚಲನಚಿತ್ರ ಯಂತ್ರ, ವಿಮಾನ, ಹಡಗು, ಎಣ್ಣೆಶುದ್ಧೀಕರಣ ಮುಂತಾದ ಕೈಗಾರಿಕೆಗಳು ಸ್ಥಾಪಿತವಾಗಿವೆ.

ಒಡೆಸ್ಸ ನಗರಕ್ಕೂ ರಷ್ಯದ ಮುಖ್ಯ ಪಟ್ಟಣಗಳಿಗೂ ನಡುವೆ ವಿಮಾನ ಮತ್ತು ರೈಲ್ವೆ ಸಂಪರ್ಕವಿದೆ. ಈ ಪಟ್ಟಣಕ್ಕೆ ನೀರು ಸರಬರಾಯಿಯಾಗುವುದು ನೀಪರ್ ನದಿಯಿಂದ. ರಷ್ಯನ್, ಉಕ್ರೇನಿಯನ್, ಯಹೂದಿ, ಪೋಲ್, ಜರ್ಮನ್, ಗ್ರೀಕ್, ಅಮೆರಿಕನ್, ಟಾರ್ಟರ್ ಮತ್ತು ತುರ್ಕೀಜನ ಇಲ್ಲಿದ್ದಾರೆ. ಹಿಂದಿನ ದಕ್ಷಿಣ ರಷ್ಯದ ವಿಶ್ವವಿದ್ಯಾನಿಲಯವನ್ನು ಈಗ ತಾಂತ್ರಿಕ ಶಿಕ್ಷಣ ಕೇಂದ್ರವನ್ನಾಗಿ ಪರಿವರ್ತಿಸಲಾಗಿದೆ. ಆರೋಗ್ಯಧಾಮಗಳು, ಆಹಾರ ಸಂಶೋಧನಾಲಯ ಕೇಂದ್ರಗಳು, ವ್ಯವಸಾಯ ಕಾಲೇಜುಗಳು, ಸಾರ್ವಜನಿಕ ಪುಸ್ತಕ ಭಂಡಾರಗಳು ಇಲ್ಲಿವೆ.

ಒಡೆಸ್ಸ ಬಂದರಿನ ಮುಖಾಂತರ ರಫ್ತಾಗುವ ಪದಾರ್ಥಗಳಲ್ಲಿ ಎಣ್ಣೆಕಾಳು, ಉಣ್ಣೆ, ದನಕರು, ಸಕ್ಕರೆ, ಮರದ ದಿಮ್ಮಿ ಮುಖ್ಯ. ಕಲ್ಲಿದ್ದಲು, ಕಬ್ಬಿಣ, ಯಂತ್ರೋಪಕರಣ, ವ್ಯವಸಾಯದ ಉಪಕರಣಗಳು, ಕಚ್ಚಾಹತ್ತಿ, ಹೊಗೆಸೊಪ್ಪು, ಚಹಾ, ಕಾಫಿ ಮುಖ್ಯ ಆಮದುಗಳು. (ಪಿ.ಎಚ್.)

**ಒಡೆಸ್ಸ[2] :** ಅಮೆರಿಕ ಸಂಯುಕ್ತಸಂಸ್ಥಾನದ ಪಶ್ಚಿಮ ಟೆಕ್ಸಾಸಿನಲ್ಲಿರುವ ಒಂದು ನಗರ. ಎಕ್ಟರ್ ಕೌಂಟಿಯ ಆಡಳಿತ ಕೇಂದ್ರ. 1884ರಲ್ಲಿ ಟೆಕ್ಸಾಸ್ ಮತ್ತು ಪೆಸಿಫಿಕ್ ರೈಲ್ವೆಯಿಂದ ಇದು ಸ್ಥಾಪಿತವಾಯಿತು. ಈ ನಗರದ ನಿವೇಶನಕ್ಕೆ ಒಡೆಸ್ಸ ಎಂದು ನಾಮಕರಣ ಮಾಡಿದವರು (1881) ರಷ್ಯನರು. ರೈಲು ರಸ್ತೆ ನಿರ್ಮಾಣಕ್ಕಾಗಿ ಅವರು ಇಲ್ಲಿಗೆ ಬಂದಿದ್ದಾಗ ಈ ಪ್ರದೇಶ ರಷ್ಯದಲ್ಲಿ ತಮ್ಮ ಸ್ಥಳವಾದ ಒಡೆಸ್ಸವನ್ನೇ ಹೋಲುತ್ತಿದ್ದುದರಿಂದ ಇದಕ್ಕೆ ಆ ಹೆಸರನ್ನೇ ಇಟ್ಟರು. ಅಮೆರಿಕ ಸಂಯುಕ್ತಸಂಸ್ಥಾನದ ಅತ್ಯಂತ ದೊಡ್ಡ ಉಲ್ಕಾಪಾತದ ಕುಳಿಗಳಲ್ಲೊಂದು ಈ ನಗರದ ಬಳಿ ಇದೆ. ಅದರ ವ್ಯಾಸ 600 ಅಡಿ, ಆಳ 150 ಅಡಿ.

ಇದು ಮುಖ್ಯ ವ್ಯಾಪಾರಕೇಂದ್ರ. ಉಣ್ಣೆ, ಪೆಟ್ರೋಲಿಯಂ ಮತ್ತು ದನಕರುಗಳನ್ನು ಹೆಚ್ಚಾಗಿ ನಿರ್ಯಾತ ಮಾಡಲಾಗುತ್ತದೆ. ರಾಸಾಯನಿಕ ವಸ್ತು, ಹಬೆಪಾತ್ರೆ, ಉಪಕರಣ ಪೆಟ್ಟಿಗೆ, ಅಣೆಕಟ್ಟು, ಸೀಸ, ಹಂಚು—ಇವು ಇಲ್ಲಿ ತಯಾರಾಗುವ ಮುಖ್ಯ ವಸ್ತುಗಳು. ಕಬ್ಬಿಣದ ಕಾರ್ಖಾನೆಯೂ ತೈಲಶುದ್ಧೀಕರಣ ಕೇಂದ್ರವೂ ಇವೆ. 1944ರಲ್ಲಿ ಒಂದು ದೊಡ್ಡ ತೈಲಶುದ್ಧೀಕರಣ ಕೇಂದ್ರವನ್ನು ಇಲ್ಲಿ ಸ್ಥಾಪಿಸಲಾಯಿತು.

ಸಭಾ-ವ್ಯವಸ್ಥಾಪಕ ಪದ್ಧತಿಯಲ್ಲಿ (ಕೌನ್ಸಿಲ್ ಮ್ಯಾನೇಜರ್) ಈ ನಗರದ ಆಡಳಿತ ನಡೆಯುತ್ತದೆ. ಸಭಾಸದಸ್ಯರನ್ನು ಎರಡು ವರ್ಷಗಳಿಗೊಂದು ಸಾರಿ ಆಯ್ಕೆ ಮಾಡಲಾಗುತ್ತದೆ. ನೀರು ಸರಬರಾಯಿ ಮತ್ತು ನಗರ ನೈರ್ಮಲ್ಯದ ಹೊಣೆ ಪುರಸಭೆಯದು. ಇಲ್ಲಿ ಎರಡು ದೊಡ್ಡ ಆರೋಗ್ಯಕೇಂದ್ರಗಳಿವೆ.

1920ರ ದಶಕದ ಉತ್ತರಾರ್ಧದಲ್ಲಿ ಇಲ್ಲಿ ತೈಲನಿಕ್ಷೇಪ ಪತ್ತೆಯಾದ ಮೇಲೆ ಒಡೆಸ್ಸ ಶೀಘ್ರವಾಗಿ ಬೆಳೆಯುತ್ತಿದೆ. 1930ರಲ್ಲಿ ಕೇವಲ 3,000 ಇದ್ದ ಜನಸಂಖ್ಯೆ ಮೂವತ್ತು ವರ್ಷಗಳಲ್ಲಿ (1960) 80,338 ಕ್ಕೆ ಏರಿದೆ. ಅತ್ಯಧಿಕ ತೈಲನಿಕ್ಷೇಪ ವಿರುವ ಪರ್ಮಿಯನ್ ಕೊಳ್ಳದ ಭೌಗೋಳಿಕ ಕೇಂದ್ರದಲ್ಲಿ ಇರುವುದರಿಂದ ಇದು ಪೆಟ್ರೋಲಿಯಂ ಕೈಗಾರಿಕೆಯ ಮುಖ್ಯ ವಿತರಣ ಮತ್ತು ಸೇವಾ ಸ್ಥಳವಾಗಿದೆ. (ಪಿ.ಎಚ್.)

**ಒಡ್ಡುದಾರಿ :** ಎತ್ತರಿಸಿರುವ ಕಟ್ಟೆಯ ಮೇಲಿನ ರಸ್ತೆ ; ಅಥವಾ ಜೌಗು ಅಥವಾ ತಗ್ಗಿನಲ್ಲಿರುವ ಜಾಗಕ್ಕೆ ಅಡ್ಡಲಾಗಿರುವ ಒಡ್ಡು ; ಎಂದರೆ ಪಾದಗಳಿಂದ ಭದ್ರವಾಗಿ ತುಳಿದಿರುವ ಒಂದು ರಸ್ತೆ ; ಅಥವಾ ಕಲ್ಲು ಹಾಕಿಸಿರುವ ಅಥವಾ ಮೇಲ್ಮೈ ಇರುವ ಕಾಲುದಾರಿ (ಕಾಸ್‌ವೇ). ಹರಿಯುವ ಪ್ರವಾಹಕ್ಕೆ ಅಡ್ಡಿಯಾಗದಂತೆ



ಚಿತ್ರ 1 ಮೇಲ್ಮಟ್ಟದ ಒಡ್ಡುದಾರಿ

ನೀರನ್ನು ಹರಿಯಬಿಟ್ಟು ಪ್ರವಾಹ ಅಥವಾ ಪಾತ್ರದ ಚಲನವಲನಗಳಿಂದ ರಸ್ತೆಗೆ ಅಪಾಯವಾಗದಂತೆ ನಿರ್ಮಿಸಲಾಗುವ ಅರ್ಥದಲ್ಲಿ ಎಂಜಿನಿಯರಿಂಗ್ ಶಾಸ್ತ್ರದಲ್ಲಿ ಈ ಪದವನ್ನು ಬಳಸಲಾಗುತ್ತದೆ. ಒಡ್ಡುದಾರಿಯನ್ನು ಸಾಮಾನ್ಯವಾಗಿ ನದಿಯ ಪಾತ್ರಮಟ್ಟದಲ್ಲೇ ಆ ಪಾತ್ರ ಸಂಕುಚಿಸದಂತೆ ಅಳವಡಿಸಲಾಗುತ್ತದೆ. ಇದೇ ಮಾದರಿಯ ರಸ್ತೆಯನ್ನು ನಿರ್ಮಿಸಿ ಅದನ್ನು ಸುವ್ಯವಸ್ಥೆಯಲ್ಲಿಟ್ಟುಕೊಳ್ಳುವ ಅರ್ಥದಲ್ಲಿಯೂ ಈ ಪದವನ್ನು ಬಳಸಲಾಗುತ್ತದೆ. (ಎಚ್.ಸಿ.)

ವ್ಯಾಪಕವಾಗಿ ಒಡ್ಡುದಾರಿಯೆಂದರೆ ಸಂಚಾರದ ರಸ್ತೆಯನ್ನು ಹಳ್ಳದ ಅಥವಾ ಹೊಳೆಯ ಮೇಲೆ ಮಳೆಗಾಲದಲ್ಲಿ ಸಾಗಿಸುವ ಕಟ್ಟಡ. ಇದು ಭಾರತದ ರಸ್ತೆಗಳ ಮೇಲೆ ತಯಾರಾದದ್ದು 19ನೆಯ ಶತಮಾನದಲ್ಲಿ. ಇದಕ್ಕೆ ಮುಂಚೆ ಹೊಳೆಗಳನ್ನು ಬೇಸಿಗೆಯಲ್ಲಿ ಕಾಲುನಡಿಗೆಯಿಂದಲೂ ಕೆಲವು ನಿರ್ದಿಷ್ಟವಾದ ಸ್ಥಳಗಳಲ್ಲಿ ಗಾಡಿಗಳ ಮೇಲೂ ದಾಟಬಹುದಾಗಿತ್ತು. ಆದರೆ ಸಾಮಾನ್ಯವಾಗಿ ದೋಣಿಗಳ ಮೇಲೆ ದಾಟುವುದೇ ರೂಢಿ. ಎರಡು ದೋಣಿಗಳನ್ನು ಪಕ್ಕದಲ್ಲಿ ಸೇರಿಸಿ ಕಟ್ಟಿದ ಹರಿಗೋಲಿನ (ಇದಕ್ಕೆ ಜಂಗಾಲ್, ತೆಪ್ಪ ಎಂಬ ಹೆಸರುಗಳಿವೆ) ಮೇಲೆ ಸಾಗಿಸಬೇಕಾಗಿತ್ತು. ಈಗಲೂ ಪಶ್ಚಿಮದ ಕರಾವಳಿಯಲ್ಲಿ ನದಿಗಳು ಸಮುದ್ರವನ್ನು ಸೇರುವ ಕೆಲವು ಕಡೆಗಳಲ್ಲಿ ಹೀಗೆಯೇ ದಾಟಬೇಕು. ಒಡ್ಡುದಾರಿಯ ಮುಂದಿನ ಹೆಜ್ಜೆಯೇ ಗಾಡಿಯ ಸೇತುವೆ. ಸ್ಕಾಟ್ಲೆಂಡಿನ ಮ್ಯಾಕಡಮ್ (1756–1836) ತನ್ನ ಹೆಸರಿನಲ್ಲಿ ಈಗ ಪ್ರಖ್ಯಾತವಾಗಿರುವ ರಸ್ತೆಯನ್ನು 1815ರಿಂದ 1829ರ ಅವಧಿಯಲ್ಲಿ ಲಂಡನ್ನಿನಿಂದ ಹಾಲಿಹೆಡ್ಡಿಗೆ ತಯಾರಿಸಿದ. ಇದೇ ರಸ್ತೆಯ ಮೇಲೆ ಟೆಲ್ಫರ್ಡ್ (1757-1834) 1826ರಲ್ಲಿ ಮಿನ್ಯೆ ಜಲಸಂಧಿಯ ಮೇಲೆ ಕಬ್ಬಿಣದ ತೂಗು



ಚಿತ್ರ 2 ತಳಮಟ್ಟದ ಒಡ್ಡುದಾರಿ : ಮೇಲು ಭಾಗದಲ್ಲಿ ಅದರ ಸಾಮಾನ್ಯ ನೋಟವನ್ನೂ ಕೆಳಭಾಗದಲ್ಲಿ ಅದರ ಲಾಕ್ಷಣಿಕ ನಕಾಸೆಯನ್ನೂ ಕೊಟ್ಟಿದೆ.

ಸೇತುವೆಯನ್ನು ಕಟ್ಟಿದ. ಆಮೇಲೆ ಎಲ್ಲೆಲ್ಲಿಯೂ ಭದ್ರವಾದ ರಸ್ತೆಗಳನ್ನೂ ಹೊಳೆಗಳಿಗೆ ಅಡ್ಡಲಾಗಿ ಸೇತುವೆಗಳನ್ನೂ ಕಟ್ಟುವುದು ಪ್ರಾರಂಭವಾಯಿತು.

ಸೇತುವೆಯನ್ನು ಕಟ್ಟಲು ಬೇಕಾಗುವ ಹಣ ದೊರಕದೆ ಇರುವ ಕಡೆಗಳಲ್ಲಿ ಒಡ್ಡುದಾರಿಗಳನ್ನು ಕಟ್ಟಿದ್ದಾರೆ. ಭಾರತದಲ್ಲಿ ಮೊದಲು ಪಕ್ಕ ರಸ್ತೆಗಳು ತಯಾರಾದದ್ದು ಬ್ರಿಟಿಷ್ ಸೇನೆಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವೇಗವಾಗಿ ಸಾಗಿಸುವುದಕ್ಕಾಗಿ. ಪೂರ್ವ ದಿಕ್ಕಿನಲ್ಲಿ ಕಲ್ಕತ್ತದಿಂದ ಪಶ್ಚಿಮದಲ್ಲಿ ಪೆಷಾವರಿನವರೆಗೆ 1500 ಮೈಲಿ ಉದ್ದದ ಗ್ರ್ಯಾಂಡ್ ಟ್ರಂಕ್ ರಸ್ತೆಯನ್ನು 1830ರಿಂದ 1835ರ ಅವಧಿಯಲ್ಲಿ ತಯಾರಿಸಿದರು. ಈ ರಸ್ತೆ ಗಂಗಾನದಿಯನ್ನು ಕಾಶಿಯ ಬಳಿಯಲ್ಲಿ ದಾಟಿ ಮುಂದೆ ಸಿಂಧು ನದಿಯನ್ನು ತಾತ್ಕಾಲಿಕವಾದ ದೋಣಿಯ ಸೇತುವೆಯ ಮೇಲೆ ಹಾಯುತ್ತಿತ್ತು. ಇದೇ ರಸ್ತೆಯ ಮೇಲೆ ಶೋಣಾ ನದಿಯ ಮೇಲೆ ಒಂದು ಒಡ್ಡುದಾರಿಯನ್ನು ಕಟ್ಟಿದ್ದಾರೆ. ಇದರ ಉದ್ದ 11,450′, ಅಗಲ 16′. ಮೊದಲು ನದಿಯ ದಡಗಳನ್ನು 20ಕ್ಕೆ ಒಂದರ ಇಳಿಜಾರಿನಲ್ಲಿ ಕತ್ತರಿಸಿ ನದಿಯ ತಳದಲ್ಲಿ ಎರಡು ಸಾಲು ದಸಿಗಳ (ಪೈಲ್ಸ್) ಮಧ್ಯೆ ಮರಳನ್ನು ಅಗೆಯುವಾಗ ಅದು ಜಾರದ ಹಾಗೆ ಬಿದಿರಿನ ಚೌಕಟ್ಟುಗಳು ಮತ್ತು ಚಾಪೆಗಳನ್ನು ನಿಲ್ಲಿಸಿ ಚೌಕಟ್ಟುಗಳನ್ನು ಭದ್ರವಾಗಿ ಹಿಡಿದು ನಿಲ್ಲಿಸುವುದಕ್ಕಾಗಿ ಒಡ್ಡುದಾರಿಯ ತಳಪಾಯದಲ್ಲಿ ಕಾಡುಮರದ ಕಂಬಗಳನ್ನು ಸಮಾಂತರವಾದ ಎರಡು ಸಾಲುಗಳಲ್ಲಿ 15′ ಆಳಕ್ಕೆ ಹೊಡೆದು ಇಳಿಸಿದ್ದಾರೆ. ತಳಪಾಯದ ಮೇಲೆ ಹೊಳೆಯ ಕಲ್ಲಿನ ಜೊತೆಗೆ ಸುಣ್ಣವನ್ನು ಬೆರೆಸಿ ತಯಾರಿಸಿದ ಕಾಂಕ್ರಿಟನ್ನು ಗೋಣಿ ಚೀಲಗಳಲ್ಲಿ ತುಂಬಿ ಹರಡಿದ್ದಾರೆ. ಅದರ ಮೇಲೆ $2\frac{1}{2}'$ ಮಂದವಾದ ಕಲ್ಲುಗಾರೆಯಿದೆ. ಇದು ನದಿಯ ಮಹಾ ಪ್ರವಾಹದಲ್ಲಿಯೂ ಕೊಚ್ಚಿ ಹೋಗದಷ್ಟು ಗಟ್ಟಿಯಾಗಿದೆ. ಈ ಕಲ್ಲುಗಾರೆಯ ಮೇಲೆ ಒಡ್ಡುದಾರಿಯ ಅಗಲದಲ್ಲಿ ಒಂದು 9′ ಉದ್ದ, ಇನ್ನೊಂದು 7′ ಉದ್ದದ ಚಪ್ಪಡಿಗಳನ್ನು ಎಸೆಯನ್ನು ತಪ್ಪಿಸಿ ಭದ್ರವಾಗಿ ಕೂರಿಸಿದ್ದಾರೆ. ಚಪ್ಪಡಿಗಳ ಅಗಲ $1\frac{1}{2}'$ ದಪ್ಪ 1′. ಈ ಒಡ್ಡುದಾರಿಗಳನ್ನು ಹೊಳೆ ಪ್ರವಾಹದಲ್ಲಿರುವಾಗ ಉಪಯೋಗಿಸುವುಕ್ಕಾಗುವುದಿಲ್ಲ.

ವಾಯವ್ಯ ಪ್ರಾಂತ್ಯ ಮತ್ತು ಸಿಂಧು ಪ್ರಾಂತ್ಯದಲ್ಲಿ ಬ್ರಿಟಿಷರು ಮೊದಲು ರಸ್ತೆಗಳನ್ನೂ ಒಡ್ಡುದಾರಿಗಳನ್ನೂ ಕೆಲವು ಕಡೆ ಮರದ ಇಲ್ಲವೆ ಕಲ್ಲುಗಾರೆಯ ಸೇತುವೆಗಳನ್ನೂ ತಯಾರಿಸಿದರು. 1840ರಲ್ಲಿ ಆಗ್ರಾದಿಂದ ಬೊಂಬಾಯಿಗೆ ಇಂದೂರ್, ಗ್ವಾಲಿಯರ್ ಮತ್ತು ನಾಸಿಕದ ಮಾರ್ಗವಾಗಿ ರಸ್ತೆಯ ತಯಾರಿ ಪ್ರಾರಂಭವಾಯಿತು. ಗ್ರೇಟ್ ಡೆಕ್ಕನ್ ರಸ್ತೆ 1956ರಲ್ಲಿ ಪ್ರಾರಂಭವಾಯಿತು. ಈ ರಸ್ತೆಗಳ ಮೇಲೆ ಅನೇಕ ಒಡ್ಡುದಾರಿಗಳಿದ್ದುವು.

1870ರಲ್ಲಿ ಮೈಸೂರು ಸೀಮೆಯಲ್ಲಿ 1800 ಮೈಲಿ ರಸ್ತೆಗಳಿದ್ದುವು. ಇವುಗಳಲ್ಲಿ 500 ಮೈಲಿ ರಸ್ತೆಗೆ ಜಲ್ಲಿಯನ್ನು ಹಾಕಿ ಹೊಳೆಗಳ ಮೇಲೆ ಸೇತುವೆಗಳನ್ನು ಕಟ್ಟಿದ್ದರು. ಬಯಲು ಸೀಮೆಯಲ್ಲಿ ಮಣ್ಣಿನ ರಸ್ತೆಗಳ ಮೇಲೆ ಒಡ್ಡುದಾರಿಗಳಿದ್ದುವು. ಮಲೆನಾಡಿನಲ್ಲಿ ಅವೂ ಇರಲಿಲ್ಲ. ದೋಣಿಗಳ ನೆರವಿನಿಂದ ಹೊಳೆಗಳನ್ನು ದಾಟಬೇಕಾಗಿತ್ತು. ಇಂದಿಗೂ ಬಯಲು ಸೀಮೆಯಲ್ಲಿ ಸಣ್ಣ ಹೊಳೆಗಳ ಮೇಲೆ ಒಡ್ಡುದಾರಿಗಳಿವೆ. ಇವುಗಳಲ್ಲಿ ಎತ್ತಿನ ಗಾಡಿಗಳ ಮತ್ತು ಮೋಟಾರಿನ ಚಕ್ರಗಳು ಉರುಳುವ ಕಡೆ ಎರಡು ಸಾಲುಗಳಲ್ಲಿ $1\frac{1}{2}'$ ಅಗಲವಾದ ಕಲ್ಲಿನ ಚಪ್ಪಡಿಗಳನ್ನು ಕಾಂಕ್ರಿಟಿನ ತಳಪಾಯದ ಮೇಲಿನ ಕಲ್ಲುಗಾರೆಯ ಮೇಲೆ ಉದ್ದವಾಗಿ ಹಾಸಿದ್ದಾರೆ. ಕೆಲವು ಕಡೆ ಚಪ್ಪಡಿಗಳ ಕೆಳಗಡೆ ಕಲ್ಲುಗಾರೆಯ ಕಂಬಗಳ ನಡುವೆ ಸುಮಾರಾದ ಪ್ರವಾಹ ಹರಿದು ಹೋಗುವ ಹಾಗೆ ಹಲವು ಕಿರಿದಾದ ಉದ್ದವಾದ ಕಣ್ಣುಗಳನ್ನು ಬಿಟ್ಟಿರುತ್ತಾರೆ. ಆದರೂ ನವೆಂಬರ್ ತಿಂಗಳಿನಲ್ಲಿ ಈಶಾನ್ಯ ಮಾರುತದ ಮಳೆ ಅನಿರೀಕ್ಷಿತವಾಗಿ ಬಲವಾಗಿ ಸುರಿದಾಗ ಕೋಲಾರ ಜಿಲ್ಲೆ ಮತ್ತು ಸುತ್ತಮುತ್ತಲಿನ ಪ್ರದೇಶಗಳಲ್ಲಿ ಹಳ್ಳ ತಾನಾಗಿ ಇಳಿಯುವವರೆಗೂ ಯಾವ ವಾಹನವೂ ಅದನ್ನು ದಾಟಲಾಗುವುದಿಲ್ಲ.

1853ರಲ್ಲಿ ಬೊಂಬಾಯಿಯಿಂದ ಠಾಣಾದವರೆಗೆ 20 ಮೈಲಿಯ ರೈಲ್ವೆ ಮಾರ್ಗವನ್ನು ಸಾರ್ವಜನಿಕರ ಉಪಯೋಗಕ್ಕಾಗಿ ತೆರೆದರು. ಸೈನ್ಯಗಳನ್ನು ಸಾಗಿಸುವುದಕ್ಕೂ ಜನಗಳು, ಸಾಮಾನು ಇವನ್ನು ಒಯ್ಯುವುದಕ್ಕೂ ರೈಲ್ವೆಯ ಉಪಯೋಗ ಹೆಚ್ಚೆಂದು ಕಾಣಿಸಿದ್ದರಿಂದ ಬ್ರಿಟಿಷ್ ಸರ್ಕಾರದ ಗಮನ ರೈಲ್ವೆಗಳ ಕಡೆಗೆ ತಿರುಗಿತು. 1893ರ ವೇಳೆಗೆ 17,000 ಮೈಲಿ ಉದ್ದದ ರೈಲ್ವೆ ಮಾರ್ಗಗಳನ್ನು ಸಾರ್ವಜನಿಕರ ಉಪಯೋಗಕ್ಕಾಗಿ ತೆರೆಯಲಾಯಿತು. ಈ ಸಂದರ್ಭದಲ್ಲಿ ಗಂಗಾ, ಯಮುನಾ, ಸಿಂಧು, ಗೋದಾವರಿ, ಕೃಷ್ಣ, ಕಾವೇರಿ ಮೊದಲಾದ ನದಿಗಳ ಮೇಲೆ ರೈಲ್ವೆ ಗರ್ಡರಿನ ಸೇತುವೆಗಳಿಗಾಗಿ ವಿಶೇಷ ಹಣ ವೆಚ್ಚವಾಯಿತು. ಆಮೇಲೆ ರೈಲ್ವೆಗೂ ರಸ್ತೆಗೂ ಪೈಪೋಟಿಯಾಗಿ ನದಿಗಳ ಮೇಲೆ ರಸ್ತೆಯ ಸೇತುವೆಗಳನ್ನು ಕಟ್ಟುವ ಕೆಲಸ ಸಾವಕಾಶವಾಯಿತು. ಆಗ ಹಳೆಯ ಒಡ್ಡುದಾರಿಗಳಿಂದ ಬಹಳ ಉಪಕಾರವಾಯಿತು. ಮತ್ತೆ ರಸ್ತೆಗೆ ಪ್ರಾಮುಖ್ಯ ಬಂದದ್ದು ಈ ಶತಮಾನದಲ್ಲಿ ಮೋಟಾರು ಕಾರು ಸಾರ್ವತ್ರಿಕವಾಗಿ ಉಪಯೋಗಕ್ಕೆ ಬಂದಮೇಲೆ. ಆಗ ನದಿಗಳ ಮೇಲೆ ಆಧುನಿಕ ಸೇತುವೆಗಳ ನಿರ್ಮಾಣ ಅನಿವಾರ್ಯವಾಯಿತು. ಆದರೂ ಈಗಲೂ ಹಳೆಯ ಒಡ್ಡುದಾರಿಗಳು ಕೆಲವು ಕಡೆ ಇನ್ನೂ ಬಳಕೆಯಲ್ಲಿವೆ. (ಎಚ್.ಸಿ.ಕೆ.)

**ಒಡ್ಡೋಲಗ :** ರಾಜನಾದವನು ಸಿಂಹಾಸನವನ್ನೇರಿ ಸಮಸ್ತ ಪ್ರಜಾಸಮೂಹಕ್ಕೆ ದರ್ಶನ ಕೊಡುವ ಮಹಾಸಭೆಗೆ ಈ ಹೆಸರಿದೆ. ಓಲಗವೆಂದರೆ ರಾಜಸಭೆ. ಒಡ್ಡು ಎಂಬ ಮಾತಿಗೆ ವಿಶಾಲವಾದದ್ದು, ಬಾಹುಳ್ಯವುಳ್ಳದ್ದು ಎಂಬ ಅರ್ಥ ಕನ್ನಡದಲ್ಲಿಯೂ ತೆಲುಗಿನಲ್ಲಿಯೂ ಇದೆ. ಪೇರೋಲಗಮು, ಒಡ್ಡೋಲಗಮು ಎಂಬ ಮಾತುಗಳನ್ನು ತೆಲುಗಿನ ಆದಿಕವಿಯಾದ ನನ್ನಯನೇ ಉಪಯೋಗಿಸಿದ್ದಾನೆ. ಸಭಾ ಮಂಟಪದೊಳೊಡ್ಡೋಲಗಂಗೊಟ್ಟು—ಎಂದು ಪಂಪ ಒಂದೆಡೆ ಹೇಳುತ್ತಾನೆ. ಸಭೆ ಸೇರುವುದಕ್ಕೆಂದೇ ಏರ್ಪಟ್ಟಿರುವ ವಿಶಾಲವಾದ ಭವನದಲ್ಲಿ ದೊರೆ ಪರಿವಾರ ಸಮೇತನಾಗಿ ಸೇರುವ ಸನ್ನಿವೇಶವೇ ಒಡ್ಡೋಲಗ. ಕನ್ನಡ ಕಾವ್ಯ ಹಾಗೂ ಚರಿತ್ರೆಗಳಲ್ಲಿ ನಿರೂಪಣೆಗೊಂಡಿರುವ ಒಡ್ಡೋಲಗಗಳ ಪ್ರಧಾನಾಂಶಗಳ ಆಧಾರದ ಮೇಲೆ ಅದರ ಸಾಮಾನ್ಯ ವರ್ಣನೆಯನ್ನಿಲ್ಲಿ ಕೊಡಲಾಗಿದೆ.

ಒಡ್ಡೋಲಗದಲ್ಲಿ ಮಂತ್ರಿಗಳು ದಂಡನಾಯಕರು ಎಲ್ಲ ಬಂದಿರುತ್ತಾರಾದರೂ ಅಲ್ಲಿ ಮಂತ್ರಾಲೋಚನೆಯೇನೂ ನಡೆಯುವುದಿಲ್ಲ. ಮಂತಣಸಾಲೆ ಬೇರೆ. ಅದು ಹೆಚ್ಚು ರಹಸ್ಯವಾದ ಮಂದಿರ. ಅಲ್ಲಿ ರಾಜ ಬಯಸಿದವರಿಗೆ ಮಾತ್ರ ಪ್ರವೇಶ. ಓಲಗದಲ್ಲಿದ್ದು ರಾಜಸೇವೆ ಮಾಡುವವನನ್ನು ಓಲಗಕಾಱನೆಂದು ಕರೆಯುವುದುಂಟು. ಓಲಗಿಸು, ಜಲಯಿಸು ಎಂಬ ಮಾತುಗಳು ರಾಜನನ್ನು ಆಶ್ರಯಿಸಿಕೊಂಡಿರುವವರು ಅವನ ಒಲವನ್ನು ಗಳಿಸಿಕೊಳ್ಳಲು ಅವನ ಸಾಮೀಪ್ಯದಲ್ಲಿದ್ದುಕೊಂಡು ಸೇವಿಸುವುದು ಎಂಬ ಅರ್ಥವನ್ನು ಕೊಡುತ್ತವೆ.

ಒಡ್ಡೋಲಗದಲ್ಲಿ ರಾಜಪರಿವಾರವೆಲ್ಲ ಕಲೆತಿರುತ್ತಾರೆ. ರಾಜನ ಸಾಮಂತರು, ದಂಡನಾಯಕರು, ಮಂತ್ರಿಗಳು, ಆಶ್ರಿತರು, ಬಂಧುಗಳು, ಆಹ್ವಾನಿತರು ಎಲ್ಲರೂ ಅವರವರ ಅಂತಸ್ತಿಗೆ ಅನುಗುಣವಾದ ಸ್ಥಾನಗಳಲ್ಲಿ ಮಂಡಿಸಿರುತ್ತಾರೆ. ದೇಶ ವಿದೇಶಗಳಿಂದ ಬಂದಿರಬಹುದಾದ ರಾಯಭಾರಿಗಳು, ನಿಯೋಗಿಗಳು ಮೊದಲಾದವರು ಅರಸನ ಸಂದರ್ಶನ ಪಡೆಯಲು ಒಡ್ಡೋಲಗದಲ್ಲಿ ಅವಕಾಶವುಂಟು. ಕೌರವನ ಮಹಾಸಭೆಯನ್ನು ವರ್ಣಿಸಲು ಹೊರಟ ಕುಮಾರವ್ಯಾಸ ನಾನಾ ದಿಗಂತದ ಧರಣಿಪರು ಸಚಿವರು ಪಸಾಯ್ತರು ನೆರೆದುದನ್ನು ವರ್ಣಿಸಿದ್ದಾನೆ.

ರಾಜದರ್ಶನಾಕಾಂಕ್ಷಿಗಳಾದ ಜನರೆಲ್ಲ ಬಂದು ಆಸ್ಥಾನಮಂಟಪದಲ್ಲಿ ಸಮುಚಿತಾಸನಗಳಲ್ಲಿ ಕುಳಿತಮೇಲೆ ಅರಸ ಪರಮಾಪ್ತರಾದವರ ಜೊತೆಯಲ್ಲಿ ಒಡ್ಡೋಲಗಕ್ಕೆ ಬಿಜಯ ಮಾಡಿಸುತ್ತಾನೆ. ಆ ಸಮಯಕ್ಕೆ ಸರಿಯಾಗಿ ನಾನಾ ಮಂಗಳ ವಾದ್ಯಗಳ ಧ್ವನಿ ಹೊಮ್ಮುತ್ತದೆ. ಅದು ಅರಸನ ಬರವಿನ ಸೂಚನೆ. ಆ ಶಬ್ದ ಕೇಳುತ್ತಲೆ ಓಲಗಾರ್ತರೆಲ್ಲ ಎದ್ದು ನಿಂತು ಜಯ ಘೋಷಮಾಡುತ್ತಾರೆ. ಹೊಗಳುಭಟ್ಟರು ಅರಸನ ಬಿರುದಾವಳಿಯನ್ನು ಉದ್ಘೋಷಿಸುತ್ತಾರೆ. 'ಅರಿರಾಜಗಿರಿವಜ್ರದಂಡ! ಸ್ನೇಹಿತನೃಪಸರಸಿಜವನಮಾರ್ತಾಂಡ! ಕನ್ನಡ ರಾಜ್ಯರಮಾರಮಣ! ಜಯ ಜಯ ಜಯತು!' ಈ ಬಗೆಯ ಹೆಗ್ಗಳಿಕೆಯ ಹೆಸರುಗಳನ್ನು ವಂದಿಮಾಗಧರು ಗಟ್ಟಿಯಾಗಿ ಹೇಳುತ್ತಿರುವಾಗಲೆ ಪ್ರಭು ಮೆಲ್ಲನೆ ನಡೆದು ಬಂದು ಸಿಂಹಾಸನಕ್ಕೆ ಪ್ರದಕ್ಷಿಣೆಮಾಡಿ ಆಪ್ತರ ಹಸ್ತಲಾಘವವನ್ನು ಸ್ವೀಕರಿಸಿ ಸಿಂಹಾಸನವನ್ನು ಏರುತ್ತಾನೆ. ಒಡನೆಯೇ ಮಂಗಳಾಷ್ಟಕವನ್ನು ಹೇಳುವ ವಿಪ್ರರ ಧ್ವನಿ ಕೇಳಿಸುತ್ತದೆ. ಸಿಂಹಾಸನದ ಇಕ್ಕೆಲಗಳಲ್ಲಿ ನಿಂತ ಸೇವಕರು ಚಾಮರಗಳನ್ನು ಡಾಳಿಸುತ್ತಿರುತ್ತಾರೆ.

ಆಮೇಲೆ ಗಾಯಕರು ತಕ್ಕ ಸಿದ್ಧತೆಯೊಡನೆ ಹಾಡತೊಡಗುತ್ತಾರೆ. ಅರಸನ ಸಮ್ಮುಖದಲ್ಲಿ ವೇದಜ್ಞರಾದ ಬ್ರಾಹ್ಮಣರು, ಶಾಸ್ತ್ರಜ್ಞರು ಮಂತ್ರೋದಯಾಢ್ಯರು ನಿಂತು ಆಶೀರ್ವಾದ ಮಾಡುತ್ತಾರೆ. ತಾರ್ಕಿಕರು, ವಾಚಕರು, ಭಾರತಿಗಳು (ಗಮಕಿಗಳು)–ಮೊದಲಾದ ವಿದ್ಯಾವಂತರು ಸಭೆಯಲ್ಲಿ ಮಂಡಿಸಿರುತ್ತಾರೆ. ಆಗ ದಳಪತಿ, ಮನ್ನೆಯರು, ಮಾಂಡಳಿಕರು, ರಾಯರಾವುತರು—ಮೊದಲಾದವರು ಅರಸನಿಗೆ ಇದಿರಾಗಿ ಬಂದು ಬಾಗಿ ಕೈಮುಗಿದು ತಮ್ಮ ಗೌರವ ಸಲ್ಲಿಸುತ್ತಾರೆ. ಒಡ್ಡೋಲಗದ ಒಂದೆಡೆಯಲ್ಲಿ ಗಾಯಕರು ತಂಬೂರಿ ಹಿಡಿದು ಗಾನಾಮೃತವನ್ನು ಸೂಚಿಸುತ್ತಿದ್ದರೆ ಇನ್ನೊಂದು ಕಡೆ ವೈಣಿಕರು ತಮ್ಮ ಕಲೆಯ ವೈಭವವನ್ನು ಮೆರೆಯಿಸುತ್ತಾರೆ. ಭಾರತ ರಾಮಾಯಣಾದಿ ಪುಣ್ಯ ಕಥೆಗಳನ್ನು ಭಾರತಿಗಳು ರಾಗವಾಗಿ ಹಿತವಾಗಿ ವಾಚನ ಮಾಡುತ್ತಾರೆ, ಇನ್ನೊಂದು ಕಡೆ ಭರತನಾಟ್ಯ ಬೆಳೆಯುತ್ತದೆ.

ಅರಸನ ಎಡಬಲಗಳಲ್ಲಿ ಸಾಲುಗಟ್ಟಿ ಕುಳಿತಿರುವ ಮಂತ್ರಿಗಳು ದಳಪತಿಗಳು ಪ್ರಭುವಿಗೆ ತಮ್ಮ ರಾಜಭಕ್ತಿ ಗೌರವಗಳನ್ನು ನಿವೇದಿಸಿ ವಂದನೆ ಸಮರ್ಪಿಸಿದ ಮೇಲೆ ರಾಜನ ಸಂದರ್ಶನಾಕಾಂಕ್ಷಿಗಳಾಗಿ ಬಂದ ಅನ್ಯರಾಜ್ಯಗಳ ನಿಯೋಗಿಗಳು ಎದ್ದು ವಂದಿಸಿ ಕಾಣಿಕೆಗಳನ್ನು ಒಪ್ಪಿಸಿ ತಮ್ಮ ಪ್ರಭುಗಳ ಸಂದೇಶಗಳನ್ನು ವರದಿಮಾಡಿ ಉಚಿತಾಸನಗಳಲ್ಲಿ ಕೂಡುತ್ತಾರೆ. ಎರಡನೆಯ ಪುಲಿಕೇಶಿಯ ಆಸ್ಥಾನದಲ್ಲಿ ಪರ್ಷಿಯದ ರಾಜ ನಿಯೋಗಿಗಳು ನಜರು ಒಪ್ಪಿಸುತ್ತಿರುವ ಶಿಲ್ಪವೊಂದು ದೊರೆತಿದೆ.

ಇದೇ ಸಮಯದಲ್ಲಿ ಸಭಾಮಂಟಪದ ಮುಂದೆ ಬಯಲಿನಲ್ಲಿ ತುರಗಾರೋಹಕರು ಗಜಾರೋಹಕರು ತಮ್ಮ ನಿಪುಣತೆಯ ಪ್ರದರ್ಶನ ನೀಡುತ್ತಿರುವರು. ಮಲ್ಲಯುದ್ಧಗಳು ನಡೆದು ವಿಜಯಿಗಳಿಗೆ ಪಾರಿತೋಷಕಗಳನ್ನು ಹಂಚುವ ಸಮಾರಂಭ ನಡೆಯುವುದು.

ಓಲಗದ ಕಾರ್ಯಕ್ರಮ ಮುಗಿಯುವ ಮುನ್ನ ಸಮಸ್ತ ಓಲಗಕಾರರಿಗೂ ವೀಳೆಯ, ಉಡುಗೊರೆಗಳನ್ನು ಪ್ರಭುವಿನ ಅಪ್ಪಣೆಯಂತೆ ಅಧಿಕಾರಿಗಳು ಸಲ್ಲಿಸುವರು. ಅನಂತರ ಪ್ರಭುಗಳು ಎದ್ದು ನಿಂತು ಎಲ್ಲರ ಜಯಘೋಷಣೆ ಕೇಳುತ್ತ ಸಿಂಹಾಸನದಿಂದ ಇಳಿದು ಆಪ್ತಪರಿವಾರದೊಡನೆ ಅಂತಃಪುರಕ್ಕೆ ದಯಮಾಡಿಸುವರು. ಆಮೇಲೆ ಓಲಗಕಾರರು ಚದರುವರು. (ಕೆ.ವಿಇ.)

**ಒ'ಡ್ವೈಯರ್, ಸರ್ ಮೈಕೇಲ್ :** ಒಂದನೆಯ ಮಹಾಯುದ್ಧದಲ್ಲಿ ಬ್ರಿಟನಿನ ಹಿಂದೆ ನಿಂತು ಅದರ ವಿಜಯಕ್ಕೆ ಎಲ್ಲ ಬಗೆಯ ನೆರವನ್ನೂ ನೀಡಿದ, ಭಾರತೀಯರ ಆಶೋತ್ತರಗಳನ್ನು ಪೂರೈಸುವ ಬದಲು ಕ್ರಿಮಿನಲ್ ನ್ಯಾಯ ತಿದ್ದುಪಡಿ ಕಾಯಿದೆಯನ್ನು (ರೌಲತ್ ಕಾಯಿದೆ) ಜಾರಿಗೆ ತಂದ, ಬ್ರಿಟಿಷ್ ಸರ್ಕಾರದ ವಿರುದ್ಧವಾಗಿ ಮಹಾತ್ಮಾ ಗಾಂಧಿಯವರು ಹೂಡಿದ ಸತ್ಯಾಗ್ರಹ ಸಮರವನ್ನು ಹತ್ತಿಕ್ಕುವ ಉದ್ದೇಶದಿಂದ ಪಂಜಾಬ್ ಪ್ರಾಂತ್ಯದ ಜಲಿಯನ್‌ವಾಲಾ ಬಾಗಿನಲ್ಲಿ ನಿರಸ್ತ್ರವೂ ಶಾಂತಿಯುತವೂ ಆದ ಗುಂಪಿನ ಮೇಲೆ 1913ರ ಏಪ್ರಿಲ್ 13ರಂದು ಗುಂಡು ಹಾರಿಸಿ ಭೀಕರ ಕೊಲೆ ನಡೆಸಿದ ಬ್ರಿಗೇಡಿಯರ್-ಜನರಲ್ ಡೈಯರಿಗೆ ಬೆಂಬಲವಾಗಿ ಪಂಜಾಬಿನ ಲೆಫ್ಟಿನೆಂಟ್-ಗವರ್ನರ್ ಆಗಿದ್ದಾತ. ಯುದ್ಧಕ್ಕಾಗಿ ಸುಮಾರು ಐದು ಲಕ್ಷ ಮಂದಿಯನ್ನೂ ಅಗಾಧ ಹಣವನ್ನೂ ಸಲ್ಲಿಸಿದ್ದ ಪಂಜಾಬಿನ ಜನರೂ ಬ್ರಿಟಿಷರ ದಮನನೀತಿಯನ್ನು ಪ್ರತಿಭಟಿಸಿದಾಗ, ತಮ್ಮ ಶಕ್ತಿಯೆಷ್ಟೆಂಬುದನ್ನು ತೋರಿಸುವ ಉದ್ದೇಶದಿಂದ ಒ'ಡ್ವೈಯರ್ ಈ ಮಾರ್ಗ ಅನುಸರಿಸಿದ. ಗಾಂಧಿಯವರ ಆತ್ಮಶಕ್ತಿಗಿಂತ ಮಿಗಿಲಾದ ಇನ್ನೊಂದು ಶಕ್ತಿಯುಂಟೆಂಬುದು ಈತನ ಅಹಂಕಾರ. ಜನರು ಹಿಂಸೆಯೆಸಗುವುದನ್ನೇ ಈತ ಸ್ವಾಗತಿಸಿದನೆಂದೂ ಹಾಗಾದಲ್ಲಿ ಅವರನ್ನು ಪುಡಿಪುಡಿ ಮಾಡಲು ತನಗೆ ಅವಕಾಶ ಸಿಗುವುದೆಂದು ಭಾವಿಸಿದ್ದನೆಂದೂ ಭಾರತ ರಾಷ್ಟ್ರೀಯ ಕಾಂಗ್ರೆಸಿನ ಪಂಜಾಬ್ ಉಪಸಮಿತಿಯ ಕಮಿಷನರ ವರದಿ ತಿಳಿಸುತ್ತದೆ. ಅಮೃತಸರ ಮತ್ತು ಲಾಹೋರ್‌ಗಳಲ್ಲಿ ಲಷ್ಕರಿ ಕಾಯಿದೆ ಜಾರಿಗೆ ಬರಬೇಕೆಂದು ಒ'ಡ್ವೈಯರನಿಗೆ ಜನರಲ್ ಡೈಯರ್ ಬರೆದಿದ್ದನೆಂದೂ ಜಲಿಯನ್‌ವಾಲಾ ಬಾಗಿನ ಹತ್ಯಾಕಾಂಡಕ್ಕೆ ಒ'ಡ್ವೈಯರನ ಒಪ್ಪಿಗೆಯಿತ್ತೆಂದೂ ಜನರಲ್ ಡೈಯರ್ ಸಾಕ್ಷ್ಯ ನುಡಿದಿದ್ದಾನೆ.

ಒ'ಡ್ವೈಯರ್ ಸಾಮ್ರಾಜ್ಯವಾದದ ಉಗ್ರಭಕ್ತ. ಪ್ರತಿಗಾಮಿಶಕ್ತಿಗಳ ಆದರ್ಶ ಮೂರ್ತಿಯಾಗಿ ಮೆರೆಯಬೇಕೆಂಬುದು ಇವನ ಅಭಿಲಾಷೆಯಾಗಿತ್ತು. ಭಾರತದ ಸ್ವಾಯತ್ತೆಯ ಹಕ್ಕಿನ ಬಗ್ಗೆ ಇವನಿಗೆ ಬಲು ತಿರಸ್ಕಾರವಿತ್ತು. ಸರ್ಕಾರದ ಸ್ವರೂಪಗಳಿಗಾಗಿ ಮುಟ್ಠಾಳರು ಸ್ಪರ್ಧಿಸಿಕೊಳ್ಳಲಿ—ಎಂದು ಅಭಿನವ ವಿದ್ವಾಂಸನಂತೆ ಈತ ಉದ್ಗಾರ ತೆಗೆದನೆಂದು ವಿ. ಬಿ. ಕುಲ್ಕರ್ಣಿ ತಮ್ಮ ಬ್ರಿಟಿಷ್ ಸ್ಟೇಟ್ಸ್‌ಮೆನ್ ಇನ್ ಇಂಡಿಯ ಪುಸ್ತಕದಲ್ಲಿ ಬರೆದಿದ್ದಾರೆ. ತನ್ನ ಅಭಿಪ್ರಾಯಗಳನ್ನು ಸಮರ್ಥವಾಗಿ ಪ್ರತಿಪಾದಿಸಬಲ್ಲ ಚಿಕ್ಕ ಒರಟು ಐರಿಷ್ ಮನುಷ್ಯನೀತ—ಎಂದು ಮಾಂಟೆಗೂ ಇವನನ್ನು ಬಣ್ಣಿಸಿದ್ದಾನೆ. ಪ್ರತಿಯೊಂದನ್ನೂ ವಿರೋಧಿಸುವ ಇವನ ಸ್ವಭಾವ ಮಾಂಟೆಗೂಗೂ ಹಿಡಿಸುತ್ತಿರಲಿಲ್ಲ. ಪಂಜಾಬಿಗಳು ನಿಷ್ಠಾವಂತರು, ಶೂರರು, ಉತ್ಸಾಹಿಗಳು, ಪ್ರಗತಿಪರರು—ಎಂದು ಒಮ್ಮೆ ಬಣ್ಣಿಸಿದ ಒ'ಡ್ವೈಯರನೇ ತನ್ನ ಪ್ರಾಂತ್ಯದಲ್ಲಿ ಲಷ್ಕರಿ ನಿಯಮವನ್ನು ಜಾರಿಗೆ ತರಲು ಸರ್ಕಾರದ ಒಪ್ಪಿಗೆ ಬೇಡಿ ಪಡೆದುಕೊಂಡದ್ದು ಇತಿಹಾಸದ ಒಂದು ವಿಪರ್ಯಾಸ. (ಬಿ.ಎಸ್.ಕೆ.)

**ಒಣಕಟ್ಟೆ :** ಹಡಗು ಕಟ್ಟುವ ಮತ್ತು ದುರಸ್ತಿಪಡಿಸುವ ಕೇಂದ್ರಗಳಲ್ಲಿರುವ ಬೋಗುಣಿಯಂಥ ಪ್ರದೇಶ (ಗ್ರೇವಿಂಗ್ ಡಾಕ್). ಇದರಲ್ಲಿ ನೀರನ್ನು ಒಳಕ್ಕೆ ಬಿಡಲು ಮತ್ತು ಹೊರಕ್ಕೆ ತಳ್ಳಲು ತಕ್ಕ ಬಾಗಿಲುಗಳ ಏರ್ಪಾಡುಗಳಿವೆ. ಹಡಗು ಇದರೊಳಗೆ ಪ್ರವೇಶಿಸಿದ ತರುವಾಯ ನೀರನ್ನು ಹೊರತಳ್ಳಲಾಗುವುದು. ಆಗ ಹಡಗು ತಳದಲ್ಲಿನ ದಿಮ್ಮಿಗಳ ಮೇಲೆ ನಿಲ್ಲುತ್ತದೆ. ಮುಂದೆ ದುರಸ್ತಿ ಮುಂತಾದ ಕ್ರಿಯೆಗಳನ್ನು ನೆರವೇರಿಸುವುದು ಸುಲಭ. ಪ್ರಪಂಚದಲ್ಲಿಯೇ ಅತ್ಯಂತ ದೊಡ್ಡದಾದ ಒಣಕಟ್ಟೆಯನ್ನು 1831ರಲ್ಲಿ ಇಂಗ್ಲೆಂಡಿನ ಸೌಥಾಂಪ್ಟನಿನಲ್ಲಿ ಕಟ್ಟಿದರು. ಈ ಕಟ್ಟೆಯಲ್ಲಿ 1200′ ಉದ್ದವೂ 1,00,000 ಟನ್ನುಗಳ ತೂಕವೂ ಇರುವ ಹಡಗುಗಳನ್ನು ನಿಲ್ಲಿಸಬಹುದು.

ಹಡಗು ಕಟ್ಟೆಗಳಲ್ಲಿ ಬೇರೆ ಎರಡು ಮಾದರಿಯವು ಇವೆ. ಮೊದಲನೆಯದು ತುಂಬು ಕಟ್ಟೆ (ವೆಟ್ ಡಾಕ್). ಇದರಲ್ಲಿ ಹೆಚ್ಚು ಉಬ್ಬರದ ಮಟ್ಟಕ್ಕೆ ನೀರನ್ನು ಯಾವಾಗಲೂ ಇಟ್ಟಿರುತ್ತಾರೆ. ಎರಡನೆಯದು ತೇಲು ಕಟ್ಟೆ (ಫ್ಲೋಟಿಂಗ್ ಡಾಕ್). ಗೋಡೆಗಳೂ ಒಳಗಿನಿಂದ ನೀರನ್ನು ಪಂಪುಗಳಿಂದ ಎತ್ತಲು ಅನುಕೂಲತೆಗಳೂ ಇರುವ ತೇಲು ಕಟ್ಟಡವಿದು. ಪ್ರಪಂಚದಲ್ಲಿಯೇ ಅತ್ಯಂತ ದೊಡ್ಡದಾದ ತೇಲು ಕಟ್ಟೆಗಳು ಇಂಗ್ಲೆಂಡಿನ ಥೇಮ್ಸ್ ನದಿಯ ಮೇಲೆ ಇವೆ. (ಎಚ್.ಸಿ.ಕೆ.)

**ಒಣಗಣ್ಣು :** ಕಣ್ಣುಗುಡ್ಡೆ ಮುಂಭಾಗವನ್ನು ಯಾವಾಗಲೂ ತೇವದಲ್ಲಿಡುವ ತೆಳುವಾದ ಮೇಲ್ಪೊರೆ ಈ ಬೇನೆಯಲ್ಲಿ ಒಣಗಿದಂತಿರುವುದು (ಕ್ಸಿರಾಫ್ಥಾಲ್ಮಿಯ). ಇದಕ್ಕೆ ಮುಖ್ಯಕಾರಣ ಮೈಯಲ್ಲಿ ಎ ಜೀವಾತಿನ ಕೊರೆ. ಇದರಿಂದ ಮೊಟ ಮೊದಲಾಗಿ ಮೈಯಲ್ಲಿ ಎಲ್ಲೆಲ್ಲೂ ಮೇಲ್ಪೊರೆಗಳಲ್ಲಿ ಆಗುವಂತೆ, ಚರ್ಮದಲ್ಲೂ ಕಣ್ಣುಗುಡ್ಡೆಯಲ್ಲೂ ಬದಲಾವಣೆಗಳಾಗುವುವು. ಕಣ್ಣುಗುಡ್ಡೆ ಒಣಗುವ ಮುನ್ನ ಮಬ್ಬು, ನಸುಕಿನ ಬೆಳಕು, ಇರುಳುಗಳಲ್ಲಿ ಕಣ್ಣಿನ ನೋಟ ಮಸಕಾಗುತ್ತ, ಕೊನೆಗೆ ಇರುಳುಗುರುಡು (ನೈಟ್ ಬ್ಲೈಂಡ್‌ನೆಸ್) ಆಗುತ್ತದೆ. ಇದು ಹೆಚ್ಚಿದಂತೆಲ್ಲ, ಕಣ್ಣಿನ ಕೂಡುಪೊರೆಯೂ (ಕಂಜಂಕ್ಟೈವ) ಅದರೊಂದಿಗೆ ಕಣ್ಣುಗುಡ್ಡೆಯ ಮುಂದಿರುವ ತಿಳಿಪೊರೆಯಾದ ಕೋಡುಪೊರೆ (ಕಾರ್ನಿಯ) ಕೂಡ ಹೊಳಪು ಕಳೆದುಕೊಂಡು ಒಣಗುತ್ತದೆ. ಬಹುಮಟ್ಟಿಗೆ ಕಣ್ಣೀರು ಸುರಿತ ಇಂಗುವುದರಿಂದ ಹೀಗಾಗುವುದು. ಆಮೇಲೆ ಬಿಳಿಯ ಕಣ್ಣುಗುಡ್ಡೆಯ ಮೇಲೆ ಪಕ್ಕಗಳಲ್ಲಿ ಸಾಬೂನು ನೊರೆ ಅಂಟಿಸಿದ ಹಾಗೆ ಹುರುಪೆ ಏಳುತ್ತದೆ. ಇದಕ್ಕೆ ಬಿಟಟನ ಮಚ್ಚೆಗಳು ಎಂದು ಹೆಸರಿದೆ. ಇದರೊಂದಿಗೆ ಸೋಂಕೂ ಹತ್ತಿದರೆ, ಕೋಡುಪೊರೆ ಹುಣ್ಣಾಗಿ ಮೆತ್ತಗಾಗಿ ಕೊಳೆತು ಕರಗಿ ಕಣ್ಣುಗುಡ್ಡೆಯೊಳಗಿನ ವಸ್ತುಗಳೆಲ್ಲ ಹೊರಬೀಳುತ್ತವೆ. ಹೀಗೆ ತೀರ ಹಾಳಾದ ಸ್ಥಿತಿಗೆ ಕೋಡುಪೊರೆಕಳಲು (ಕೆರಾಟೊಮೆಲೇಸಿಯ) ಎಂದು ಹೆಸರು. ರೋಗ ಕೈಮೀರುವ ಮುಂಚೆ ಸಾಕಷ್ಟು ಪ್ರಮಾಣಗಳಲ್ಲಿ ಎ ಜೀವಾತನ್ನು ಕೊಡುವುದೇ ಇದರ ಪರಿಣಾಮಕರ ಚಿಕಿತ್ಸೆ. (ಎಸ್.ಟಿ.ಪಿ.)

**ಒಣಗಿಸಿದ ಹುಲ್ಲು :** ಸಸ್ಯ ಹೂವಿಗೆ ಬರುವ ಸಮಯದಲ್ಲಿ ಕಟಾವು ಮಾಡಿ ಒಣಗಿಸಿ ಅದು ದೀರ್ಘಕಾಲ ಉಳಿದಿರುವಂತೆಯೂ ಅದರ ಆಹಾರಾಂಶಗಳು ವಿಶೇಷವಾಗಿ ನಷ್ಟವಾಗದಂತೆಯೂ ಸಂಗ್ರಹಿಸಿಟ್ಟಿರುವ ದನಗಳ ಮೇವು (ಹೇ). ಈ ಕ್ರಮದಿಂದ ಅದರ ಉಪಯುಕ್ತತೆ ಹೆಚ್ಚುವುದರ ಜೊತೆಗೆ ಸುಲಭ ಸಾಗಣೆಯ ಸೌಕರ್ಯವೂ ದೊರೆಯುತ್ತದೆ. ಸಸ್ಯದಲ್ಲಿ ಹೂ ಬೀಜವಾಗಿ ಕಾಳು ದೊರೆತ ಮೇಲೆ ಕಟಾವುಮಾಡಿ ಶೇಖರಿಸಿದ ಹುಲ್ಲಿನಲ್ಲಿ ಆಹಾರಾಂಶಗಳು ನಷ್ಟವಾಗಿರುತ್ತವೆ. ಒಣಗಿದ್ದರೂ ಇಂಥ ಹುಲ್ಲನ್ನು ಒಣಗಿಸಿದ ಹುಲ್ಲು ಎಂದು ಕರೆಯುವುದಿಲ್ಲ. ಒಣಗಿಸಿದ ಹುಲ್ಲನ್ನು ಪಡೆಯಬಹುದಾದ ಕೆಲವು ಸಸ್ಯಗಳು ಹೀಗಿವೆ : ಸೂಡಾನ್ ಹುಲ್ಲು, ಜಾನ್‌ಸನ್ ಹುಲ್ಲು, ಹರಿಯಾಳಿ, ಓಟ್ಸ್, ರೈ, ಸಿಹಿ ಅಥವಾ ಒಗರು ಜೋಳ, ತಿಮೋತಿ, ಆಲ್ಫಾಲ್ಫ, ಸೋಯಾಬೀನ್ಸ್, ಕೆಂಪು ಕ್ಲೋವರ್, ಅಲಸಂದೆ, ಕುಡ್ಜು, ನೆಲಗಡಲೆ, ಹೆಸರು, ಉದ್ದು ಮುಂತಾದುವು.

ಒಣಹುಲ್ಲನ್ನು ಸಿದ್ಧಪಡಿಸುವಾಗ ಹಸಿ ಹುಲ್ಲಿನಲ್ಲಿರುವ ನೀರಿನ ಅಂಶವನ್ನು ಕಡಿಮೆ ಮಾಡುವುದು ಅಥವಾ ತೆಗೆಯುವುದು ಮುಖ್ಯ. ಸಾಮಾನ್ಯವಾಗಿ ಹಸಿ ಹುಲ್ಲನ್ನು ಬಿಸಿಲಿನಲ್ಲಿ ಒಣಗಿಸುವುದೂ ಉಂಟು ; ಯಂತ್ರಗಳ ನೆರವಿನಿಂದ ಒಣಗಿಸುವುದೂ ಉಂಟು. ಹೀಗೆ ಮಾಡುವಾಗ ಹುಲ್ಲಿನಲ್ಲಿರುವ ಆಹಾರಾಂಶಗಳು ನಷ್ಟವಾಗದಂತೆ ಎಚ್ಚರವಹಿಸುವುದು ಅಗತ್ಯ.

ಒಣಹುಲ್ಲಿನ ತಯಾರಿಕೆಯಲ್ಲಿ ಹಸಿಹುಲ್ಲಿನ ಬೆಳೆವಣಿಗೆ ಹಾಗೂ ಕಟಾವಿನ ಕಾಲಾವಧಿ ಮುಖ್ಯಪಾತ್ರ ವಹಿಸುತ್ತದೆ. ಹುಲ್ಲು ತುಂಬ ಬಲಿತಂತೆ ಅದರಲ್ಲಿ ಪ್ರೋಟೀನ್ ಅಂಶ ಕಡಿಮೆ ಆಗುತ್ತದೆ. ಅಲ್ಲದೆ ಕಾಂಡದಲ್ಲಿ ನಾರಿನ ಭಾಗ ಹೆಚ್ಚುತ್ತದೆ. ಹುಲ್ಲಿನಲ್ಲಿ ಹೂ ಕಾಳಾಗುವ ಕಾಲ ಸಮೀಪಿಸಿದಂತೆಲ್ಲ ಅದರಲ್ಲಿರುವ ಆಹಾರಾಂಶಗಳನ್ನು ಜಾನುವಾರಗಳು ಜೀರ್ಣಿಸಿಕೊಳ್ಳುವುದು ಕಠಿಣವಾಗುತ್ತದೆ. ಆದ್ದರಿಂದ ಹಸಿ ಹುಲ್ಲು ಸಾಕಷ್ಟು ಎಳೆಯದಾಗಿರುವಾಗ, ಹೆಚ್ಚಿನ ಇಳುವರಿ ಕೊಡುವ ಕಾಲದಲ್ಲಿ, ಒಣಗಿಸುವುದಕ್ಕೆ ಅನುಕೂಲವಾದ ಹವಾಮಾನವಿರುವಾಗ, ಕಟಾವು ಮಾಡುವುದು ಉಚಿತ

ಹಸಿ ಹುಲ್ಲನ್ನು ಕಟಾವು ಮಾಡುವ ಕಾಲದಲ್ಲಿ ಸಾಕಷ್ಟು ದಿನಗಳ ವರೆಗೆ ಒಣಹವೆ ಇರಬೇಕು ; ಮತ್ತು ಹೊಲದಲ್ಲಿ ಕೊಯಿಲಿಗಿಟ್ಟಿರುವ ಹುಲ್ಲು ಮಳೆಗೆ ಸಿಕ್ಕಿ ಕೆಡಬಾರದು, ಮಳೆಗೆ ಸಿಕ್ಕಿದರೆ ಹುಲ್ಲಿನ ಗುಣ ಮತ್ತು ಉಪಯುಕ್ತತೆ ಕಡಿಮೆ ಆಗುತ್ತವೆ. ಹೊಲಗಳಲ್ಲಿ ಕೊಯ್ದು ಒಟ್ಟಿದ ಹಸಿಹುಲ್ಲು ಸರಿಯಾಗಿ ಒಣಗಬೇಕಾದರೆ ಅದನ್ನು ಆಗಾಗ್ಗೆ ತಿರುವಿ ಹಾಕಬೇಕು. ಅನಂತರ ರಾಶಿ ಮಾಡಬೇಕು. ಏನೇ ಆದರೂ ಬಿಸಿಲಲ್ಲಿ ಒಣಗಿಸಿದ ಹುಲ್ಲಿನಲ್ಲಿ ಪೌಷ್ಟಿಕಾಂಶ ಸಾಕಷ್ಟು ಕಡಿಮೆಯಾಗುತ್ತದೆ.

ಯಂತ್ರಗಳ ಸಹಾಯದಿಂದ ಬಿಸಿಗಾಳಿಯನ್ನು ಉತ್ಪತ್ತಿಮಾಡಿ ಹಸಿ ಹುಲ್ಲನ್ನು ಒಣಗಿಸಲಾಗುವುದು. ಈ ವಿಧಾನದಲ್ಲಿ ಹಸಿ ಹುಲ್ಲಿನಲ್ಲಿರುವ ಜೀವಕೋಶಗಳು ಬಲು ಬೇಗ ಒಣಗಿ ಹುಲ್ಲು ಜಾಗ್ರತೆ ಒಣಗುತ್ತದೆ. ಆದಕಾರಣ ಇಲ್ಲಿ ಆಗುವ ಬದಲಾವಣೆಗಳು ಅಷ್ಟು ಗಮನಾರ್ಹವಲ್ಲ. ಅಲ್ಲದೇ ಹೀಗೆ ಒಣಗಿಸಿದ ಹುಲ್ಲು ಬಣ್ಣಗೆಟ್ಟು ಹಳದಿಯಾಗದೆ ಹಸಿರಾಗಿಯೇ ಇರುತ್ತದೆ ; ಮತ್ತು ಅದರ ರಚನೆ ಹಾಗೂ ಆಹಾರಾಂಶವನ್ನು ಪೂರೈಸುವ ಶಕ್ತಿ ಎಲ್ಲವೂ ಹಸಿರು ಹುಲ್ಲಿನಲ್ಲಿರುವಂತೆಯೇ ಇರುತ್ತವೆ. ಈ ರೀತಿ ಕೃತಕ ಪದ್ಧತಿಯಿಂದ ಒಣಗಿಸಿ ತಯಾರಿಸಿದ

ಹುಲ್ಲಿನ ಆಹಾರಾಂಶ ಸಾಮಾನ್ಯವಾಗಿ ಬಿಸಿಲಿನಲ್ಲಿ ಒಣಗಿಸಿದ ಹುಲ್ಲಿನ ಆಹಾರಾಂಶಕ್ಕಿಂತ ಉತ್ತಮ. ಕೃತಕ ರೀತಿಯಲ್ಲಿ ತಯಾರಾದ ಒಣ ಹುಲ್ಲಿನಲ್ಲಿ ಕೆರೋಟೀನ್ ಆಹಾರಾಂಶ ನಾಶವಾಗುವುದಿಲ್ಲ; ಬಿ,ಡಿ ಜೀವಾತುಗಳೂ ಕುಂದುವುದಿಲ್ಲ. ಇಲ್ಲೂ ಅಷ್ಟೆ. ಒಣಗಿಸಿದ ಹುಲ್ಲಿನ ಮೆದೆಗಳನ್ನು ಮಳೆ ನೀರಿನಿಂದ ತೋಯದಂತೆ ಕಾಪಾಡಬೇಕು ಮತ್ತು ಕ್ರಮವರಿತು ಮೆದೆ ಹಾಕಬೇಕು. ಕ್ರಮವಿಲ್ಲದೆ ಮೆದೆ ಹಾಕಿದರೆ ಸುಲಭವಾಗಿ ಗಾಳಿ ಮಳೆಗಳ ಹೊಡೆತಕ್ಕೆ ಸಿಕ್ಕಿ ಹುಲ್ಲು ಕೆಡುತ್ತದೆ.

ಹಸಿ ಹುಲ್ಲಿನಲ್ಲಿ 70% ಭಾಗ ನೀರಿರುತ್ತದೆ. ಒಣಗಿಸಿದ ಹುಲ್ಲಿನಲ್ಲಿ ತೇವಾಂಶ ಸುಮಾರು 15% ಮಾತ್ರ ಇರುತ್ತದೆ; ಆದ್ದರಿಂದ ಹಸಿ ಹುಲ್ಲಿನಲ್ಲಿರುವುದಕ್ಕಿಂತ ಹೆಚ್ಚಾದ ಆಹಾರಾಂಶ ದೊರಕುತ್ತದೆ. ಕೆಲವು ಸಮಯದಲ್ಲಿ ಮಾತ್ರ ಯಥೇಚ್ಛವಾಗಿ ಸಿಕ್ಕುವ ಹಸಿ ಹುಲ್ಲನ್ನು ಕೊಯ್ದು ಒಣಗಿಸಿದ ಹುಲ್ಲನ್ನಾಗಿ ಮಾಡಿದರೆ ದನಕರುಗಳಿಗೆ ಹೆಚ್ಚಿನ ಪರಿಮಾಣದಲ್ಲಿ ಒಳ್ಳೆಯ ಮೇವು ಸಿಗುವಂತಾಗುತ್ತದೆ. ಹಸಿ ಹುಲ್ಲನ್ನು ಒಣಗಿಸಿದಾಗ ದೊರೆಯುವ ಪ್ರಮಾಣ ಮೊದಲಿನ ಪ್ರಮಾಣದ 20%–25% ಮಾತ್ರ.

(ಕೆ.ಕೆಆರ್.)

**ಒಣಫಲಗಳು :** ಅಂಡಾಶಯದ ಆವರಣ ರಸಭರಿತವಾಗಿರದೆ ಒಣಗಿ ಕಾಗದದಂತೆ ಆವರಿಸಿಕೊಂಡಿರುವ ಒಂದು ಫಲಪ್ರಭೇದ. ದೀರ್ಘಕಾಲ ಸುಲಭವಾಗಿ ಸಂಗ್ರಹಿಸಬಹುದಾದ ಈ ಫಲಗಳು ಪ್ರಾಣಿಗಳ ಮತ್ತು ಮಾನವರ ಆಹಾರದ ಪೂರೈಕೆಯಲ್ಲಿ ಪ್ರಮುಖವೆನಿಸಿವೆ. ಆದ್ದರಿಂದ ಇವುಗಳಿಗೆ ವಿಶೇಷ ಆರ್ಥಿಕ ಪ್ರಾಮುಖ್ಯವಿದೆ.



ಒಣಫಲಗಳು : ಮೇಲಿನ ಸಾಲು (ಎಡದಿಂದ ಬಲಕ್ಕೆ) : ಮೊದಲ ಎರಡು ಸಮಾರ; ಕ್ಯಾರಿಯಾಪ್ಸಿಸ್. ಕೆಳಗಿನ ಸಾಲು (ಎಡದಿಂದ ಬಲಕ್ಕೆ) : ಕ್ರೀಮೊಕಾರ್ಪ್; ಸಿಲಿಕ್ವ.

ಪರಾಗಾರ್ಪಣೆ ಇಲ್ಲವೆ ಗರ್ಭಾಂಕುರವಾದ ತರುವಾಯ ಅಂಡಾಶಯ ಬೆಳೆದು ಒಳಗಡೆ ಬೀಜಗಳು ರೂಪುಗೊಳ್ಳುತ್ತವಷ್ಟೆ. ಹೀಗೆ ಬೆಳೆದು ಪಕ್ವವಾದ ಅಂಡಾಶಯವೇ ಫಲ. ಕೆಲವು ಫಲಗಳಲ್ಲಿ ಅಂಡಾಶಯದ ಜೊತೆ ಹೂವಿನ ಇತರ ಭಾಗಗಳೂ ಬೆಳೆದು ಫಲದ ಭಾಗವಾಗುತ್ತವೆ. ಅಂಡಾಶಯದಿಂದ ಮಾತ್ರವೇ ರೂಪಗೊಂಡದ್ದು ನಿಜವಾದ ಫಲ. ಉಳಿದವು ಮಿಥ್ಯ ಫಲಗಳು. ಫಲಗಳಲ್ಲಿ ಒಂದೇ ಒಂದು ಬೀಜವಿರಬಹುದು. ಇಲ್ಲವೇ ಹೆಚ್ಚು ಬೀಜಗಳಿರಬಹುದು. ಫಲದಲ್ಲಿ ಬೀಜ ವಿನಾ ಉಳಿದ ಭಾಗ ಅಂಡಾಶಯದ ಗೋಡೆಯಂತಿರುವ ಆವರಣ. ಈ ಭಾಗಕ್ಕೆ ಪೆರಿಕಾರ್ಪ್ ಎಂದು ಹೆಸರು. ಕೆಲವು ಫಲಗಳಲ್ಲಿ ಪೆರಿಕಾರ್ಪ್ ಒಣಗಿ ಕಾಗದದಂತೆ ತೆಳುವಾಗಿರುತ್ತದೆ. ಇಲ್ಲವೇ ಮಂದವಾಗಿ ಗಡುಸಾಗಿರುತ್ತದೆ. ಇಂಥ ಪೆರಿಕಾರ್ಪನ್ನುಳ್ಳ ಫಲಗಳೇ ಒಣಫಲಗಳು. ಪೆರಿಕಾರ್ಪ್ ರಸದಿಂದ ತುಂಬಿಕೊಂಡಿರುವವುಗಳಿಗೆ ರಸಭರಿತ ಫಲಗಳೆಂದು ಹೆಸರು.

ಹೂವಿನಲ್ಲಿ ರೂಪುಗೊಳ್ಳುವ ಫಲದ ಸಂಖ್ಯೆಯ ಆಧಾರದ ಮೇಲೆ ಫಲವನ್ನು ಸರಳ ಫಲ, ಸಾಮೂಹಿಕ ಫಲ ಮತ್ತು ಸಂಯುಕ್ತ ಫಲಗಳೆಂದು ವಿಂಗಡಿಸಬಹುದು. ಒಂದು ಹೂವಿನಲ್ಲಿ ಒಂದೇ ಒಂದು ಫಲ ರೂಪುಗೊಂಡರೆ ಅದು ಸರಳ ಫಲ. ಉದಾಹರಣೆಗೆ ಮಾವಿನಹಣ್ಣು. ಅನೇಕ ಫಲಗಳು ರೂಪುಗೊಂಡರೆ ಅದು ಸಾಮೂಹಿಕ ಫಲ. ಉದಾಹರಣೆಗೆ ಸೀತಾಫಲ. ಈ ರೀತಿ ಸಾಮೂಹಿಕ ಫಲವಾಗಬೇಕಾದರೆ ಹೂವಿನ ಹಣ್ಣು ಭಾಗ ಅನೇಕ ಕಾರ್ಪೆಲ್ಲುಗಳಿಂದ ಕೂಡಿ ಅವು ಬಿಡಿ ಬಿಡಿಯಾಗಿರುತ್ತವೆ. ಇಡೀ ಹೂಗೊಂಚಲೇ ಒಂದು ಹಣ್ಣಾಗಿ ರೂಪುಗೊಂಡರೆ ಅದು ಸಂಯುಕ್ತಫಲ. ಉದಾಹರಣೆಗೆ ಹಲಸಿನ ಹಣ್ಣು, ಅನಾನಸ್.

ಒಣಫಲಗಳಲ್ಲಿ ಮೇಲೆ ತಿಳಿಸಿದ ಮೂರು ಬಗೆಯ ಫಲಗಳೂ ಉಂಟು. ಕೆಲವು ಒಣಫಲಗಳಲ್ಲಿ ಒಂದೇ ಒಂದು ಕಾಳಿರುತ್ತದೆ. ಇಂಥ ಫಲಗಳಲ್ಲಿ ಪೆರಿಕಾರ್ಪ್ ಬಿರಿಯುವುದಿಲ್ಲ. ಕಾಳನ್ನು ಸಿಪ್ಪೆ ಆವರಿಸಿರುತ್ತದೆ. ಇವಕ್ಕೆ ಒಡೆಯದ ಒಣಫಲಗಳೆಂದು ಹೆಸರು. ಹಲವು ಕಾಳುಗಳಿರುವ ಫಲಗಳಲ್ಲಿ, ಪೆರಿಕಾರ್ಪ್ ಒಡೆದು ಕಾಳು ಹೊರಬರುತ್ತದೆ. ಇವು ಒಡೆಯುವ ಒಣಫಲಗಳು.

ಒಂದೇ ಬೀಜವಿರುವ ಒಣಫಲಗಳಲ್ಲಿ ಐದು ವಿಧವುಂಟು : ಎಖೀನ್, ಕ್ಯಾರಿಯಾಪ್ಸಿಸ್, ಸಿಪ್ಸೆಲ, ಸಮಾರ ಮತ್ತು ನಟ್. ಎಖೀನ್ ಹಣ್ಣು ಉಚ್ಚಸ್ಥಾನದ ಒಂದೇ ಕಾರ್ಪೆಲ್ಲಿನ ಅಂಡಾಶಯದಿಂದ ರೂಪಿತವಾಗಿದೆ. ಪೆರಿಕಾರ್ಪ್ ಮತ್ತು ಬೀಜದ ಹೊರ ಸಿಪ್ಪೆ ಪ್ರತ್ಯೇಕವಾಗಿರುತ್ತವೆ. ಸಾಮಾನ್ಯವಾಗಿ ಸಾಮೂಹಿಕ ಫಲಗಳಲ್ಲಿ ಈ ರೀತಿಯ ಹಣ್ಣುಗಳಿವೆ. ರೆನನ್‌ಕುಲಸ್, ಕ್ಲಿಮಾಟಿಸ್ ಗಿಡಗಳಲ್ಲಿ ಇವನ್ನು ನೋಡಬಹುದು.

ಜೋಳ, ಗೋದಿ, ಅಕ್ಕಿ ಮತ್ತಿತರ ಆಹಾರ ಧಾನ್ಯಗಳ ಫಲಗಳಿಗೆ ಕ್ಯಾರಿಯಾಪ್ಸಿಸ್ ಎಂದು ಹೆಸರು. ಇದು ಎಖೀನ್ ಫಲದ ರಚನೆಯನ್ನೇ ಹೋಲಿದರೂ ಪೆರಿಕಾರ್ಪ್ ಬೀಜದ ಹೊರಸಿಪ್ಪೆಗೆ ಒಂದನ್ನೊಂದು ಪ್ರತ್ಯೇಕಿಸಲಾರದಷ್ಟು ಬಲವಾಗಿ ಅಂಟಿಕೊಂಡಿರುತ್ತದೆ.

ಸೂರ್ಯಕಾಂತಿ, ಹುಚ್ಚೆಳ್ಳು, ಕುಸುಬೆ ಜಾತಿಯ ಗಿಡದ ಫಲಗಳಿಗೆ ಸಿಪ್ಸೆಲ ಎಂದು ಹೆಸರು. ಇದು ಒಂದೇ ಕೋಣೆಯುಳ್ಳ ಎರಡು ಕಾರ್ಪೆಲ್ಲುಗಳ ಸಂಯುಕ್ತ ಅಂಡಾಶಯದಿಂದ ರೂಪಗೊಂಡ ಏಕಬೀಜದ ಫಲ. ಪೆರಿಕಾರ್ಪ್ ಮತ್ತು ಬೀಜದ ಹೊರ ಸಿಪ್ಪೆ ಅಂಟಿಕೊಂಡಂತಿದ್ದರೂ ಇವನ್ನು ಪ್ರತ್ಯೇಕಿಸಬಹುದು. ಈ ಫಲಗಳಲ್ಲಿ ಕೇಲಿಕ್ಸ್ ವಿವಿಧವಾಗಿ ರೂಪಭೇದ ಹೊಂದಿ ಅವುಗಳ ಪ್ರಸಾರಕ್ಕೆ ಸಹಾಯಕವಾಗಿದೆ.

ಮತ್ತಿಮರ, ಮಾಧವೀಲತೆ, ಟಿರೋಲೋಬಿಯಂ ಮೊದಲಾದ ಫಲಗಳಲ್ಲಿ ಒಂದೇ ಬೀಜವಿದ್ದರೂ ಅವು ಒಂಟಿ ಕಾರ್ಪೆಲ್ಲಿನ ಅಥವಾ ಸಂಯುಕ್ತ ಕಾರ್ಪೆಲ್ಲಿನ, ಉಚ್ಚಸ್ಥಾನದ ಇಲ್ಲವೇ ನೀಚಸ್ಥಾನದ ಅಂಡಾಶಯದಿಂದ ರೂಪುಗೊಂಡಿವೆ. ಅದಕ್ಕೆ ಸಮಾರ ಎಂದು ಹೆಸರು. ಫಲದ ಪೆರಿಕಾರ್ಪ್ ಅಗಲವಾಗಿ ರೆಕ್ಕೆಯಂತಿದ್ದು ಬೀಜ ಪ್ರಸಾರಕ್ಕೆ ಅನುಕೂಲವಾಗಿದೆ.



ಒಣಫಲಗಳು : ಮೇಲಿನ ಸಾಲು (ಎಡದಿಂದ ಬಲಕ್ಕೆ) : ಕ್ಯಾಪ್ಸ್ಯೂಲ್, ಫಾಲಿಕಲ್, ಕ್ಯಾಪ್ಸ್ಯೂಲ್ ಮತ್ತು ನಟ್.

ಕೆಳಗಿನ ಸಾಲು (ಎಡದಿಂದ ಬಲಕ್ಕೆ) : ಲೆಗ್ಯೂಮ್, ಮಧ್ಯದವೆರಡು ಕ್ಯಾಪ್ಸ್ಯೂಲುಗಳು, ಲೊಮೆಂಟಮ್.

ಚೆಸ್ಟ್‌ನಟ್, ಅಕ್ರೋಟ (ವಾಲ್‌ನಟ್), ಗೇರು ಈ ಸಸ್ಯಗಳ ಫಲಗಳಿಗೆ ನಟ್ ಎಂದು ಹೆಸರು. ಈ ಫಲಗಳಲ್ಲಿ ಪೆರಿಕಾರ್ಪ್ ಗಡುಸಾಗಿ ಬೀಜವನ್ನಾವರಿಸಿವೆ.

ಕೊಂಡಿದೆ. ಕೆಲವು ಫಲಗಳಲ್ಲಿ ಪುಷ್ಪಪಾತ್ರೆ (ಕೇಲಿಕ್ಸ್) ಉಳಿದುಕೊಂಡು ಗಟ್ಟಿಯಾಗಿ ಬೀಜವನ್ನು ಮುಚ್ಚಿಕೊಂಡಿರುತ್ತದೆ.

ಅನೇಕ ಬೀಜಗಳನ್ನುಳ್ಳ ಒಡೆಯುವ ಒಣಫಲಗಳನ್ನು ವಿವಿಧ ರೀತಿಯಾಗಿ ವಿಂಗಡಿಸಿದ್ದಾರೆ. ಹಣ್ಣು ರೂಪಿತವಾಗುವ ಅಂಡಾಶಯದ ರಚನೆ, ಒಡೆಯುವ ರೀತಿಗಳಿಗೆ ಅನುಗುಣವಾಗಿ ಅವುಗಳ ವರ್ಗೀಕರಣವನ್ನು ಮಾಡಲಾಗಿದೆ.

ಎಕ್ಕದ ಗಿಡದ ಫಲವನ್ನು ಫಾಲಿಕಲ್ ಎನ್ನುತ್ತಾರೆ. ಉಚ್ಚಸ್ಥಾನದ ಒಂದು ಕಾರ್ಪೆಲ್ಲಿನಿಂದ ರೂಪುಗೊಂಡ ಇದರ ಅಂಡಾಶಯದ ಒಳಗಡೆ ಅನೇಕ ಬೀಜಗಳಿರುತ್ತವೆ. ಈ ಫಲ ಕಾರ್ಪೆಲ್ಲಿನ ಅಂಚುಗಳು ಸೇರಿಕೊಂಡಿರುವ ಭಾಗದಲ್ಲಿ ಒಡೆಯುತ್ತದೆ. ಬೀಜಗಳು ಒಂದೊಂದಾಗಿ ಗಾಳಿಯಲ್ಲಿ ತೂರಿ ಹೋಗುತ್ತವೆ. ಸಂಪಿಗೆ ಮರದ ಫಲ ಸಾಮೂಹಿಕ ಫಾಲಿಕಲ್.

ಅವರೆ, ಉದ್ದು, ಹುರುಳಿ ಈ ಜಾತಿಯ ಗಿಡದ ಫಲಗಳು ರಚನೆಯಲ್ಲಿ ಫಾಲಿಕಲ್‌ಗಳಂತಿದ್ದರೂ ಅವುಗಳ ತಳ ಮತ್ತು ಮೇಲಿನ ಸೇರುವಿಕೆಯೆರಡರಲ್ಲೂ ಒಡೆದು ಬೀಜಗಳು ಸಿಡಿಯುತ್ತವೆ. ಇಂಥ ಫಲಗಳಿಗೆ ಲೆಗ್ಯೂಮ್ ಎಂದು ಹೆಸರು.

ಸಾಸುವೆ, ಕ್ಲಿಯೋಮ್, ಗೈನಾಂಡ್ರಾಪ್ಸಿಸ್ ಈ ಸಸ್ಯಗಳ ಫಲಕ್ಕೆ ಸಿಲಿಕ್ವ ಎಂದು ಹೆಸರು. ಈ ಫಲಗಳು ಉಚ್ಚಸ್ಥಾನದ ಎರಡು ಸಂಯುಕ್ತ ಕಾರ್ಪೆಲ್ಲುಗಳ ಅಂಡಾಶಯದಿಂದ ರಚಿತವಾಗಿರುತ್ತವೆ. ಪ್ರಾರಂಭದಲ್ಲಿ ಒಂದು ಕೋಣೆ ಇದ್ದು ಬೀಜಮೂಲಗಳು ಕಾರ್ಪೆಲ್ಲುಗಳು ಸಂಧಿಸದ ಎಡೆಯಲ್ಲಿರುತ್ತವೆ. ಅನಂತರ ಮಧ್ಯೆ ಒಂದು ಭಿತ್ತಿ ಬೆಳೆದು ಎರಡು ಕೋಣೆಗಳಾಗುತ್ತವೆ. ಈ ಭಿತ್ತಿಗೆ ರೆಪ್ಲಂ ಎಂದು ಹೆಸರು. ಕಾರ್ಪೆಲ್ಲುಗಳು ಅವು ಸೇರುವೆಡೆಯಲ್ಲಿ ತಳಭಾಗದಿಂದ ಒಡೆಯುತ್ತವೆ. ಬೀಜಗಳು ರೆಪ್ಲಂಗೆ ಅಂಟಿಕೊಂಡಿರುತ್ತವೆ. ಸಿಲಿಕ್ವ ಪುಟ್ಟದಾಗಿ ಚಪ್ಪಟೆಯಾಗಿದ್ದರೆ ಅದಕ್ಕೆ ಸಿಲಿಕುಲ ಎಂದು ಹೆಸರು.

ಬೆಂಡೆ, ಹತ್ತಿ, ಏಲಕ್ಕಿ ಈ ತರದ ಫಲಗಳಿಗೆ ಕ್ಯಾಪ್ಸ್ಯೂಲ್ ಎಂದು ಹೆಸರು. ಈ ಫಲ ಉಚ್ಚ ಅಥವಾ ಕೆಳಗಿನ ಸ್ಥಾನದ ಎರಡು ಅಥವಾ ಅದಕ್ಕಿಂತ ಹೆಚ್ಚಿನ ಸಂಯುಕ್ತ ಕಾರ್ಪೆಲ್ಲುಗಳ ಅಂಡಾಶಯದಿಂದ ರೂಪುಗೊಂಡು ಅನೇಕ ಬೀಜಗಳುಳ್ಳದ್ದಾಗಿರುತ್ತದೆ. ಫಲ ಒಡೆದು ಬೀಜಗಳು ಹೊರಬರುತ್ತವೆ. ಒಡೆಯುವ ರೀತಿ ಬೇರೆ ಬೇರೆ. ಗಸಗಸೆ ಫಲದ ಅಗ್ರಭಾಗದಲ್ಲಿ ರಂಧ್ರಗಳುಂಟಾಗಿ ಆ ಮೂಲಕ ಬೀಜಗಳು ಹೊರಬರುತ್ತವೆ. ಹತ್ತಿ ಮತ್ತು ಬೆಂಡೆ ಫಲಗಳಲ್ಲಿ ಕಾರ್ಪೆಲ್ಲಿನ ಮಧ್ಯಭಾಗ ಒಡೆದು ಸೀಳುತ್ತದೆ. ಏಲಕ್ಕಿಯಲ್ಲಿ ಕೋಣೆಗಳನ್ನು ವಿಭಾಗಿಸುವ ಭಿತ್ತಿ ಸೀಳುತ್ತದೆ.

ಸಂಯುಕ್ತ ಕಾರ್ಪೆಲ್ಲುಗಳಿಂದ ರೂಪುಗೊಂಡ ಕೆಲವು ಸರಳ ಫಲಗಳಲ್ಲಿ ಕಾರ್ಪೆಲ್ಲು ಒಂದೊಂದು ಬೀಜವನ್ನೊಳಗೊಂಡು ಪ್ರತ್ಯೇಕವಾಗುತ್ತದೆ. ಹೀಗೆ ಪ್ರತ್ಯೇಕವಾದ ಕಾರ್ಪೆಲ್ಲು ಎಖೀನ್ ಫಲವನ್ನು ಹೋಲುತ್ತದೆ. ಇಂಥ ಒಣ ಫಲಗಳಿಗೆ ಸ್ಕಿಜೋಕಾರ್ಪಿಕ್ ಫಲಗಳೆಂದು ಹೆಸರು. ವಿವಿಧ ರೀತಿಯ ಸ್ಕೀಜೋಕಾರ್ಪಿಕ್ ಫಲಗಳು ಈ ರೀತಿ ಇವೆ : ಕರಿಜಾಲಿ, ಸೀಗೆ ಈ ಸಸ್ಯಗಳ ಫಲಗಳಲ್ಲಿ ಬೀಜದ ಮಧ್ಯೆ ತಗ್ಗಿರುತ್ತದೆ. ಈ ತಗ್ಗಿರುವೆಡೆ ಫಲ ಒಡೆದು ಒಂದೊಂದು ಬೀಜವಿರುವ ಪ್ರತ್ಯೇಕ ಭಾಗಗಳಾಗುತ್ತವೆ. ಇಂಥ ಫಲವೇ ಲೊಮೆಂಟಮ್. ಇದು ಲೆಗ್ಯೂಮಿನ ರೂಪಭೇದವೆನ್ನಲೂ ಬಹುದು.

ಪುಳ್ಳಂಪಚ್ಚೆ, ಕೊತ್ತಂಬರಿ, ಈ ಜಾತಿಯ ಫಲಗಳು ಸಂಯುಕ್ತ ಕಾರ್ಪೆಲ್ಲುಗಳಿಂದ ರೂಪುಗೊಂಡು, ಒಂದೊಂದು ಕಾರ್ಪೆಲ್ಲಿನ ಕೋಣೆಯಲ್ಲೂ ಒಂದೊಂದು ಬೀಜವನ್ನು ತಳೆದಿರುತ್ತವೆ. ಇದು ಒಡೆಯುವಾಗ ಪ್ರತಿಯೊಂದು ಕಾರ್ಪೆಲ್ಲೂ ಹಾಗೆಯೇ ಪ್ರತ್ಯೇಕವಾಗುತ್ತದೆ. ಇಂಥ ಪೂರ್ಣಫಲಕ್ಕೆ ಕ್ರಿಮೋಕಾರ್ಪ್ ಎಂದೂ ಪ್ರತ್ಯೇಕವಾದ ಬಿಡಿ ಭಾಗಕ್ಕೆ ಮೆರಿಕಾರ್ಪ್ ಎಂದೂ ಹೆಸರು.

ಮೇಲೆ ನಮೂದಿಸಿರುವುವಲ್ಲದೆ ಕೆಲವು ರೀತಿಯ ರಸಭರಿತ ಒಣಫಲಗಳೂ ಉಂಟು—ಅವು ಸಕ್ಕರೆ ಬಾದಾಮಿ, ಬಾದಾಮಿ, ಅಂಜೂರ, ಉಪ್ಪುನೇರಳೆ, ಒಣದ್ರಾಕ್ಷಿ ಇತ್ಯಾದಿ. ಇವು ಮೇಲೆ ವರ್ಗೀಕರಿಸಿದ ಫಲಗಳಲ್ಲಿ ಸೇರುವುದಿಲ್ಲ. ಏಕೆಂದರೆ ಇವು ತಾವಾಗಿಯೆ ಒಣಗುವ ಫಲದ ಜಾತಿಯವಲ್ಲ. ಜನ ತಮ್ಮ ಅನುಕೂಲಕ್ಕಾಗಿ ಇವನ್ನು ಒಣಗಿಸಿ ಶೇಖರಿಸುತ್ತಾರೆ. ಆದರೂ ಸಾಮಾನ್ಯವಾಗಿ ಇವನ್ನೂ ಒಣ ಫಲಗಳೆಂದೇ ಕರೆಯುತ್ತಾರೆ. ಇವುಗಳ ವಿವರಗಳಿಗೆ ಆಯಾ ಶೀರ್ಷಿಕೆಗಳನ್ನು ನೋಡಿ.

(ಎಚ್‌.ಎನ್‌.ಸಿ.)

**ಒಣಹಿಮ :** ಇಂಗಾಲಾಮ್ಲ ($CO_2$) ಅನಿಲದ ಘನರೂಪ (ಡ್ರೈ ಐಸ್). ಇದೊಂದು ಶೈತ್ಯಕಾರಕ. ಇದು ವಿಷವಲ್ಲ ಮತ್ತು ಇತರ ಪದಾರ್ಥಗಳನ್ನು ಜೀರ್ಣಿಸುವುದಿಲ್ಲ (ನಾನ್‌ಕರೋಸಿವ್). ಘನರೂಪದಿಂದ ನೇರವಾಗಿ ಅನಿಲವಾಗುವುದರಿಂದ ಶೇಷ (ರೆಸಿಡ್ಯೂ) ಏನೂ ಇರುವುದಿಲ್ಲ. ಇದರ ಉಷ್ಣತೆ ಬಲು ಕಡಿಮೆ. ಈ ಗುಣಗಳು ಇದರ ಉಪಯುಕ್ತತೆಗೆ ಕಾರಣ. ಮಂಜುಗೆಡ್ಡೆಗಿಂತಲೂ ಇದು ಹೆಚ್ಚು ಪರಿಣಾಮಕಾರಿಯಾದ ಶೈತ್ಯಕಾರಕ. ಕೆಡುವ ಪದಾರ್ಥಗಳನ್ನು ಸಾಗಾಣಿಕೆಯಲ್ಲಿ ಕೆಡದಂತೆ ಸಂರಕ್ಷಿಸುವುದು, ಯಂತ್ರೋಪಕರಣಗಳ ಜೋಡಣೆ, ಪ್ರಯೋಗಶಾಲೆಯಲ್ಲಿ ಶೈತ್ಯ ವಾತಾವರಣದ ಕಲ್ಪನೆ, ಸೀರಂ ಮತ್ತು ರಕ್ತದ ಸಂರಕ್ಷಣೆ, ಮಳೆ ಕರೆಸಲು ಮೋಡಗಳ ಮೇಲೆ ಸೇಚನೆ (ಕೃತಕ ಮಳೆ) ಇತ್ಯಾದಿ ಅನೇಕ ಉಪಯೋಗಗಳುಂಟು.

(ಎನ್‌.ಎಸ್‌.ಕೆ.)

**ಒತ್ತಡ :** ಬಲ ಮತ್ತು ವಿಸ್ತೀರ್ಣದ ಪ್ರಮಾಣ (ಪ್ರೆಷರ್). ಸಂಮರ್ದ ಪರ್ಯಾಯ ಪದ. F ಬಲ A ವಿಸ್ತೀರ್ಣದಲ್ಲಿ ಪ್ರಯುಕ್ತವಾಗಿದ್ದರೆ ಆ ಬಲದ ಒತ್ತಡ P ಯ ಬೆಲೆಯನ್ನು $P = \frac{F}{A}$ ಸಮೀಕರಣ ಕೊಡುತ್ತದೆ. ಒತ್ತಡದ ಒಂದು ಮುಖ್ಯ ಗುಣವೆಂದರೆ ಯಾವುದಾದರೂ ಒಂದು ಬಿಂದುವಿನಲ್ಲಿ ಅದರ ಪ್ರಭಾವ ಎಲ್ಲ ದಿಕ್ಕುಗಳಲ್ಲಿಯೂ ಸಮಾನವಾಗಿದೆ. ಸೀಸೆಯಲ್ಲಿ ತುಂಬಿರುವ ನೀರಿನ ಒತ್ತಡ, ಬೆಲೂನಿನಲ್ಲಿ ತುಂಬಿರುವ ಅನಿಲದ ಒತ್ತಡ ಇದಕ್ಕೆ ಉದಾಹರಣೆಗಳು. ಸಮುದ್ರ ಮಟ್ಟದಲ್ಲಿ ವಾಯುಮಂಡಲದ ಒತ್ತಡ ಚದರ ಇಂಚಿಗೆ ಸುಮಾರು 14.7 ಪೌಂಡುಗಳು. ಒತ್ತಾಯ (ಸ್ಟ್ರೆಸ್) ಎನ್ನುವ ಇನ್ನೊಂದು ಪರಿಕಲ್ಪನೆಯನ್ನು ಇಲ್ಲಿ ಪ್ರತ್ಯೇಕಿಸಿ ತಿಳಿಯಬೇಕು. ಒಂದು ಕಂಬ ಒಂದು ಭಾರವನ್ನು ಎತ್ತಿ ಹಿಡಿದಿದ್ದರೆ ಆ ಭಾರವು ಕಂಬದ ಮೇಲೆ ಪ್ರಯುಕ್ತಿಸುವ ಬಲ ಒತ್ತಾಯ ; ಇದು ಏಕಮುಖಿಯಾಗಿದೆ; ಎಲ್ಲ ದಿಕ್ಕುಗಳಲ್ಲಿಯೂ ಸಮಾನವಾಗಿಲ್ಲ.

ಒಂದು ಅನಿಲದ ಒತ್ತಡವೂ (P) ಘನ ಗಾತ್ರವೂ (V, ವಾಲ್ಯೂಂ) ಪರಸ್ಪರ ವಿಲೋಮಾನುಘಾತದಲ್ಲಿವೆ. ಎಂದರೆ,

$$P \propto \frac{1}{V} \quad \text{ಅಥವಾ}$$

$$PV = \text{ಸ್ಥಿರಾಂಕ}$$

ಬಾಯಿಲನ ಸೂತ್ರವೆಂದು ಹೆಸರಿರುವ ಈ ಹೇಳಿಕೆಯಲ್ಲಿ ವಸ್ತುವಿನ ಉಷ್ಣತೆ ಸ್ಥಿರವಾಗಿದೆ ಎಂದು ಭಾವಿಸಲಾಗಿದೆ. ಉಷ್ಣತೆಯು ಒತ್ತಡದ ಮೇಲೆ ಗಮನಾರ್ಹ ಪ್ರಭಾವವನ್ನೇ ಬೀರುವುದು. ನೋಡಿ—ಅಧಿಕ ಸಂಮರ್ದ; ಅಲ್ಪ ಸಂಮರ್ದ. *

**ಒತ್ತಡ ಗುಂಪು :** ಸರ್ಕಾರದ ಮೂಲಕವೋ ಬೇರಾವ ವಿಧಾನಗಳಿಂದಲೋ ರಾಜಕೀಯ ಬದಲಾವಣೆ ತರಲು ಯತ್ನಿಸುವ, ಆದರೆ ವಿಧಾನ ಮಂಡಲದಲ್ಲಿ ಒಂದು ರಾಜಕೀಯ ಪಕ್ಷವೆಂದು ಕರೆಯಿಸಿಕೊಳ್ಳುವಂಥ ರೀತಿಯಲ್ಲಿ ಪ್ರಾತಿನಿಧಿಕವಾಗಿಲ್ಲದ ಒಂದು ಗುಂಪು (ಪ್ರೆಷರ್ ಗ್ರೂಪ್). ರಾಜಕೀಯ ಬದಲಾವಣೆಗಳಿಗಾಗಿ ಒತ್ತಡ ಹೇರುವ ಪ್ರವೃತ್ತಿ ಸಾರ್ವಕಾಲಿಕ, ಸಾರ್ವತ್ರಿಕ. ಸಂಬಂಧಪಟ್ಟ ವ್ಯಕ್ತಿಗಳ ಅಥವಾ ಅಧಿಕಾರಿಗಳ ಮೇಲೆ ಒತ್ತಡ ಹೇರಿ, ತಮ್ಮ ಗುರಿಯನ್ನು ಅಥವಾ ಅಭಿಲಾಷೆಯನ್ನು ಈಡೇರಿಸಿಕೊಳ್ಳುವುದು ಅಥವಾ ತಮ್ಮ ಹಿತ ರಕ್ಷಿಸಿಕೊಳ್ಳುವುದು ಒತ್ತಡ ಗುಂಪುಗಳ ವಿಧಾನ. ಆದರೂ ಇವು ರಾಜಕೀಯ ಪಕ್ಷಗಳಲ್ಲ. ಇವಕ್ಕೆ ಚುನಾಯಿತ ಪ್ರತಿನಿಧಿಗಳಿರುವುದಿಲ್ಲ. ಯಾವ ವ್ಯಕ್ತಿಯನ್ನೂ ತಮ್ಮ ಪ್ರತಿನಿಧಿಯೆಂದು ಇವು ಹೆಸರಿಸುವುದಿಲ್ಲ. ಯಾವ ಪತ್ರಿಕೆಗಳಲ್ಲೇ ಆಗಲಿ ಇವುಗಳ ಬಗ್ಗೆ ಜಾಹೀರಾತು ಇರುವುದಿಲ್ಲ. ಜೊತೆಗೆ ರಾಜಕೀಯ ಪಕ್ಷಗಳಲ್ಲಿರುವಂತೆ ಯಾವ ರೀತಿಯ ಒಡಂಬಡಿಕೆಯೇ ಆಗಲಿ ನೀತಿ ನಡೆವಳಿಕೆಗಳಾಗಲಿ ಇವಕ್ಕಿಲ್ಲ. ರಾಜಕೀಯ ಪಕ್ಷಗಳು ಜನರನ್ನು ಸಂಘಟಿಸಿ ಚಂದಾ ವಸೂಲು ಮಾಡಿ ಅವರನ್ನು ತಮ್ಮ ನಿಬಂಧನೆಗನುಸಾರವಾಗಿ ನಡೆಯುವಂತೆ ಒತ್ತಾಯಮಾಡುತ್ತವೆ. ಆದರೆ ಒತ್ತಡದ ಗುಂಪಿನಲ್ಲಿ ಇದು ಯಾವುದೂ ಇಲ್ಲ. ಇದು ಸದಸ್ಯರಿಲ್ಲದ ಗುಂಪು. ರಾಜಕೀಯ ಪಕ್ಷಕ್ಕಾದರೋ ತನ್ನದೇ ಆದ ಕಾರ್ಯಕ್ರಮವೊಂದುಂಟು ; ಅದನ್ನು ನಿರ್ದೇಶಿಸುವ ತತ್ತ್ವವುಂಟು. ಒತ್ತಡದ ಗುಂಪುಗಳು ಎರಡು ತೆರ : 1 ಹಿತ ಗುಂಪು (ಇಂಟರೆಸ್ಟ್ ಗ್ರೂಪ್)—ಒಂದು ಪಂಗಡದ ಜನಕ್ಕೆ ಸಾಮಾನ್ಯವಾಗಿರುವ ಹಿತಗಳ ರಕ್ಷಣೆಗಾಗಿ ರಚಿತವಾದದ್ದು. 2 ಮನೋಭಾವ ಗುಂಪು (ಆಟಿಟ್ಯೂಡ್ ಗ್ರೂಪ್)—ಖಚಿತವಾಗಿ ನಿರ್ದೇಶಿಸಲಾದ ಯಾವುದೋ ಒಂದು ಉದ್ದೇಶ ಅಥವಾ ಧ್ಯೇಯ ಸಾಧನೆಗಾಗಿ ರಚಿತವಾದದ್ದು. ಇದರ ಸದಸ್ಯರಿಗೆಲ್ಲ ಸಾಮಾನ್ಯವಾದ ಹಿತಗಳಿರಬೇಕೆಂಬ ನಿಯಮವಿಲ್ಲ. ಅವರಿಗೆ ಸಮಾನವಾದ ಮನೋಭಾವ ಅಥವಾ ಗುರಿಗಳಿರಬೇಕು.

ಒಂದೇ ಬಗೆಯ ಹಿತಗಳನ್ನು ಹೊಂದಿರುವವರು ಯಾರೆಂಬುದನ್ನು ನಿರ್ಣಯಿಸುವುದು ಹಲವು ವೇಳೆ ಸುಲಭಸಾಧ್ಯ. ಉದಾಹರಣೆಗೆ, ಮೋಟಾರು ವಾಹನಗಳ ಮಾಲೀಕರೆಲ್ಲ ಒಂದೇ ಬಗೆಯ ಹಿತಗಳನ್ನು ಹೊಂದಿದವರೆನ್ನಬಹುದು. ಆದರೆ ಒಂದೇ ಬಗೆಯ ಮನೋಭಾವ ಅಥವಾ ಗುರಿ ಹೊಂದಿದವರು ಯಾರೆಂಬುದನ್ನು ನಿರ್ಧರಿಸುವುದು ಕಷ್ಟ. ಇದು ಮಾನಸಿಕ. ಹಿತಗುಂಪು ಸಾಮಾನ್ಯವಾಗಿ ಶಾಶ್ವತ. ಆ ಹಿತಗಳನ್ನುಳ್ಳ ಪಂಗಡ ಇರುವವರೆಗೂ ಹಿತಗುಂಪು ಉಳಿಯುತ್ತದೆ. ಆದರೆ

ಮನೋಭಾವ ಗುಂಪು ಅಷ್ಟು ಸ್ಥಿರವಲ್ಲ. ಧ್ಯೇಯ ಅಥವಾ ಉದ್ದೇಶ ಪೂರೈಸುವ ವರೆಗೂ ಅದು ಮುಂದುವರಿಯಬಹುದು.

ಇಂದಿನ ಪ್ರಜಾಪ್ರಭುತ್ವಗಳಲ್ಲಿ ಸಂಘಗಳಿಗೆ ಅಥವಾ ಕೂಟಗಳಿಗೆ ಪ್ರಬಲವಾದ ಸಾಧನಗಳಿವೆ. ಒಂದೇ ಭಾವನೆಯುಳ್ಳ ಒಂದೇ ಬಗೆಯ ಹಿತಾಸಕ್ತಿಯುಳ್ಳ ಜನರನ್ನು ಒಂದುಗೂಡಿಸುವಂಥ ಪ್ರಚಾರ ಮತ್ತು ಸಂಪರ್ಕಸಾಧನಗಳೂ ಸಂಚಾರ ಸೌಲಭ್ಯಗಳೂ ಉಂಟು. ಈ ಗುಂಪುಗಳು ರಾಜ್ಯಮಟ್ಟದಿಂದ ರಾಷ್ಟ್ರ ಮತ್ತು ಅಂತರ ರಾಷ್ಟ್ರೀಯ ಮಟ್ಟಗಳನ್ನೇ ಮುಟ್ಟಬಹುದು. ಒತ್ತಡ ಗುಂಪುಗಳ ಪ್ರಭಾವ, ಅವುಗಳಲ್ಲಿರುವ ವ್ಯಕ್ತಿಗಳ ಮತ್ತು ಅವು ಸಾಧಿಸಬೇಕೆಂದಿರುವ ಗುರಿಯನ್ನೆ ಅವಲಂಬಿಸಿರುತ್ತದೆ. ಅದು ಜನರನ್ನು ಒಲಿಸಿಕೊಂಡು, ಸರ್ಕಾರ ಅದರ ಒತ್ತಡಕ್ಕೆ ಮಣಿಯುವಂತೆ ಮಾಡಿ ತನ್ನ ಗುರಿಯನ್ನು ಸಾಧಿಸಿಕೊಳ್ಳುತ್ತದೆ. ಗುಂಪಿನ ಗುರಿ ಸಾಧನೆಗಾಗಿ, ಜನರ ಮನ ಒಲಿಸಿಕೊಳ್ಳಲು ಬಾನುಲಿ, ಪತ್ರಿಕೆಗಳು, ಟೆಲಿವಿಷನ್ ಮತ್ತು ಜನಸಂಪರ್ಕ ಸಾಧನಗಳನ್ನು ಬಳಸಿಕೊಳ್ಳುವುದುಂಟು.

ಭಿನ್ನ ಹಿತ, ಭಿನ್ನ ರುಚಿ, ಭಿನ್ನ ದೃಷ್ಟಿ ಇರುವ ಜನಗಳನ್ನು ಹೊಂದಿರುವುದು ಈಗಿನ ಸಮಾಜದ ಲಕ್ಷಣ. ಅಭಿಪ್ರಾಯ ಸ್ವಾತಂತ್ರ್ಯವಿರುವ ರಾಜಕೀಯ ವ್ಯವಸ್ಥೆಗಳಿರಲಿ, ಇದಕ್ಕೆ ಮನ್ನಣೆ ನೀಡದ ಸರ್ವಾಧಿಕಾರಿ ಪ್ರಭುತ್ವಗಳಲ್ಲೂ ಒತ್ತಡದ ಗುಂಪುಗಳು ರಹಸ್ಯವಾಗಿಯಾದರೂ ಕೆಲಸ ಮಾಡುತ್ತಿರುತ್ತವೆ. ಇವು ರಾಜಕೀಯ ಮುಖಂಡರ ಮೇಲೆ, ಸರ್ಕಾರದ ಮತ್ತು ಸರ್ಕಾರಿ ಅಧಿಕಾರಿಗಳ ಮೇಲೆ, ಚುನಾಯಿತ ಪ್ರತಿನಿಧಿಗಳ ಮೇಲೆ ತಮ್ಮ ಹಿಡಿತ ಇಟ್ಟುಕೊಳ್ಳುತ್ತವೆ.

ಒಂದು ಪ್ರಜಾಪ್ರಭುತ್ವದಲ್ಲಿ ನಾನಾ ಕ್ಷೇತ್ರಗಳಿಂದ ಆಯ್ಕೆ ಹೊಂದಿದ ಶಾಸಕರು ದೇಶದ ಎಲ್ಲ ಪ್ರಜೆಗಳನ್ನೂ ಪ್ರತಿನಿಧಿಸಲಾರರು. ಎಲ್ಲರ ಬೇಕು ಬೇಡಗಳಿಗೆ ಗಮನವೀಯಲಾರರು. ಅವರ ದೃಷ್ಟಿ ಅನೇಕ ವೇಳೆ ತಂತಮ್ಮ ಚುನಾವಣಾ ಕ್ಷೇತ್ರಗಳಿಗೇ ಸೀಮಿತವಾಗಿರುತ್ತದೆ; ಅಲ್ಲದೆ ತಮ್ಮ ಪಕ್ಷದ ರೀತಿ ನೀತಿಗಳ ಚೌಕಟ್ಟಿಗೆ ಬದ್ಧವಾಗಿರುತ್ತದೆ.

ಆಗ ಒತ್ತಡ ಗುಂಪು ಜನರ ಬೇಕು ಬೇಡಗಳ ಬಗ್ಗೆ ಸರ್ಕಾರದ ಮತ್ತು ಶಾಸಕರ ಗಮನ ಸೆಳೆದು ಅವರ ಕಲ್ಯಾಣದ ಕಡೆಗೆ ಗಮನವೀಯುವಂತೆ ಒತ್ತಡ ಹಾಕುತ್ತದೆ. ಇದರ ಒತ್ತಡಕ್ಕೆ ಅನೇಕ ವೇಳೆ ಸರ್ಕಾರ ಮಣಿಯಬೇಕಾಗುವುದು. ಇದು ಕಾರ್ಮಿಕರ ಮತ್ತು ಉದ್ಯೋಗಸ್ಥರ ಪ್ರತಿನಿಧಿಯಂತೆ ವರ್ತಿಸಿ ಅವರ ಕ್ಷೇಮ ಸಾಧಿಸಬಹುದು. ಶಾಸನಸಭೆಯ ಅಧಿವೇಶನಗಳ ಅದರ ಸಮಿತಿ–ಉಪಸಮಿತಿಗಳ ಕಲಾಪಗಳಿಗೆ ಇದು ಸಾಮಗ್ರಿ ಒದಗಿಸಿ, ಸದಸ್ಯರಿಗೆ ಸಾಕಷ್ಟು ಕೆಲಸ ಕೊಟ್ಟು, ಸರ್ಕಾರ ಮತ್ತು ಜನತೆಯ ನಡುವೆ ಸಂಪರ್ಕವನ್ನುಂಟುಮಾಡುತ್ತದೆ. ಒಂದು ಚುನಾವಣೆಯಿಂದ ಇನ್ನೊಂದು ಚುನಾವಣೆಯ ವರೆಗಿನ ಕಾಲದಲ್ಲಿ ಒತ್ತಡ ಗುಂಪು ಜನರಲ್ಲಿ ಜಾಗೃತಿಯನ್ನುಂಟು ಮಾಡಿ, ಕೆಲವು ವಾಸ್ತವಿಕ ಸಮಸ್ಯೆಗಳತ್ತ ಸರ್ಕಾರದ ಗಮನ ಸೆಳೆಯುವ ಒಂದು ಸಾಧನವಾಗಿದೆ.

ಒಬ್ಬ ಪ್ರಭಾವಿತ ವ್ಯಕ್ತಿ ಕೆಲವು ವೇಳೆ ಹಣ ಮತ್ತು ಜನಬಲವನ್ನು ದುರುಪಯೋಗಪಡಿಸಿಕೊಂಡು ಒತ್ತಡ ಗುಂಪಿನ ಪ್ರಭಾವವನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳಲೂಬಹುದು. ಒಂದು ಗುಂಪಿಗೆ ಬೇಕು ಮತ್ತೊಂದು ಗುಂಪಿಗೆ ಬೇಡವಾದಾಗ ಈ ಎರಡು ಗುಂಪುಗಳ ನಡುವೆ ಘರ್ಷಣೆಗೆ ಅವಕಾಶವಿದೆ. ಅಲ್ಪ ಸಂಖ್ಯಾತರ ಹಿತ ಅಥವಾ ಗುರಿಸಾಧನೆಯಲ್ಲಿ ನಿರತವಾದ ಒತ್ತಡ ಗುಂಪು ಅನೇಕ ವೇಳೆ ಬಹುಜನರ ಕಲ್ಯಾಣಕ್ಕೆ ಧಕ್ಕೆ ತರಬಹುದು. ಇಂಥ ಒತ್ತಡ ಗುಂಪುಗಳು ರಾಜ್ಯವ್ಯವಸ್ಥೆಗಾಗಲಿ ಸಮಾಜ ವ್ಯವಸ್ಥೆಗಾಗಲಿ ಹಿತಕರವಲ್ಲ. ಮಾನವ ಶರೀರದಲ್ಲಿನ ರಕ್ತದ ಒತ್ತಡ ಯಾವುದೋ ಒಂದು ಮಟ್ಟವನ್ನು ಮೀರಿದಾಗ ದೇಹಕ್ಕೆ ಅಪಾಯ ಸಂಭವಿಸುವಂತೆ ಒತ್ತಡ ಗುಂಪುಗಳಿಂದಲೂ ದೇಶಕ್ಕೆ ಅಪಾಯ ಸಂಭವಿಸಬಹುದು. ಒಂದು ರಾಷ್ಟ್ರದ ಆಡಳಿತ ವ್ಯವಸ್ಥೆ ತುಂಬ ದುರ್ಬಲವಾಗಿದ್ದು ನಾನಾಬಗೆಯ ಒತ್ತಡಗಳಿಗೆ ಮಣಿಯುವಂತಿರುವುದು ಒಳ್ಳೆಯದಲ್ಲ. ಉಷ್ಣತೆ ಹೆಚ್ಚಾಗಿರುವ ಪ್ರದೇಶಗಳಲ್ಲಿ ಕಡಮೆ ಒತ್ತಡವಿರುವ ಕೇಂದ್ರದೆಡೆಗೆ ಎಲ್ಲ ಕಡೆಗಳಿಂದಲೂ ನುಗ್ಗಿದ ಗಾಳಿಯಿಂದ ಅನಾಹುತವಾಗುವಂತೆ ರಾಜಕೀಯ ಕ್ಷೇತ್ರದಲ್ಲೂ ಆಗುವುದು ಸಾಧ್ಯ. ಆದರೆ ಹೆಚ್ಚು ಒತ್ತಡಕ್ಕೆ ಮಣಿಯದ, ಆದರೆ ಅದರ ಪ್ರಭಾವಕ್ಕೆ ಒಳಗಾಗಿಯೂ ಇರುವ ವ್ಯವಸ್ಥೆಯೇ ಸುವ್ಯವಸ್ಥೆ. ಇಂಥ ವ್ಯವಸ್ಥೆಯಲ್ಲಿರುವ ನಾನಾ ಹಿತಗಳ, ಉದ್ದೇಶಗಳ ಮತ್ತು ಗುರಿಗಳ ಒತ್ತಡ ಗುಂಪುಗಳ ಪರಸ್ಪರ ಕ್ರಿಯೆ–ಪ್ರತಿಕ್ರಿಯೆಗಳ ಫಲವಾಗಿ ಒಂದು ಬಗೆಯ ಸಮತೋಲ ಏರ್ಪಡುವುದು ಸಾಧ್ಯ. ಆಗ ಈ ಗುಂಪುಗಳಿಂದ ಸಾರ್ವತ್ರಿಕ ಹಿತ ಸಾಧಿಸುತ್ತದೆ. ಈ ಬಗೆಯ ವೈಜ್ಞಾನಿಕ ಬೆಳೆವಣಿಗೆಗಳು ಹೆಚ್ಚು ಪ್ರಾಮುಖ್ಯ ಗಳಿಸುತ್ತವೆ. ಬ್ರಿಟನ್, ಅಮೆರಿಕ, ಫ್ರಾನ್ಸ್‌ಗಳಲ್ಲಿ ಒತ್ತಡ ಗುಂಪುಗಳು ಬಹು ಶಕ್ತಿಯುತವಾಗಿ ಕೆಲಸ ಮಾಡುತ್ತಿವೆ. ಭಾರತ, ಜಪಾನ್ ಮತ್ತು ಮಧ್ಯ ಐರೋಪ್ಯ ರಾಜ್ಯಗಳಲ್ಲಿ ಇವು ಈಚೆಗೆ ಹೆಚ್ಚು ಪ್ರಭಾವ ಬೀರಲಾರಂಭಿಸಿವೆ. (ಬಿ.ಎಸ್‌ಎಚ್.)

**ಒತ್ತಡದ ಬೀಸಣಿಗೆ :** ಭೂತಳ ಗಣಿಗಳಿಗೆ ಮೇಲಿನಿಂದ ಗಾಳಿಯನ್ನು ತಳ್ಳುವ ಸಲುವಾಗಿ ಉಪಯೋಗಿಸುವ ಸಾಧನ (ಫೋರ್ಸಿಂಗ್ ಫ್ಯಾನ್). ಇದನ್ನು ಇಳಿದುರಿ ಕೂಪಗಳ ಮೇಲಾಗಲಿ ಅಥವಾ ತಳದಲ್ಲಾಗಲಿ ಬೀಸಣಿಗೆಯ ಕೋಣೆಯಲ್ಲಿ ಅಳವಡಿಸಿರುತ್ತಾರೆ. ಭೂತಳ ಗಣಿಗಳಲ್ಲಿ ಗಾಳಿಯ ಚಲನೆ ಸಾಧ್ಯವಾಗಲು ಇಳಿದುರಿ ಕೂಪದಲ್ಲಿ (ಡೌನ್ ಕ್ಯಾಸ್ಟ್ ಷಾಫ್ಟ್) ಗಾಳಿಯನ್ನು ಒಳಗೆ ತಳ್ಳಬೇಕು. ಒತ್ತಡ ಬೀಸಣಿಗೆ ಯಾವಾಗಲೂ ವಾತಾವರಣದಿಂದ ಗಾಳಿಯನ್ನು ಗಣಿಯೊಳಕ್ಕೆ ತಳ್ಳುವುದರಿಂದ ಅಪಾಯಕಾರಿಯಾದ ಗಣಿಅನಿಲಗಳೊಡನಾಗಲಿ ಅಥವಾ ತೇವವಾದ ಗಾಳಿಯೊಡನಾಗಲಿ ಸಂಪರ್ಕವಿರುವುದಿಲ್ಲ. ಆದ್ದರಿಂದ ಇದರ ಜೀವಿತಕಾಲ ಹೆಚ್ಚಾಗಿದೆ. (ಟಿ.ಟಿ.)

**ಒತ್ತಡಮಾಪಕ :** ಒತ್ತಡವನ್ನು ಅಳೆಯುವ ಸಾಧನ (ಪ್ರೆಷರ್‌ಗೇಜ್). ವಾಯು ಮಂಡಲದ ಒತ್ತಡವನ್ನು ವಾಯುಭಾರಮಾಪಕದಿಂದ ಅಳೆಯುತ್ತಾರೆ.

ಒತ್ತಡಗಳ ಸಮಾನಾಂಕಗಳು

| | ವಾಯು ಮಂಡಲ (atm) | $Kg/cm^2$ | psi | ಪಾದರಸದಲ್ಲಿ (Hg) ಇಂಚುಗಳು* | ನೀರಿನಲ್ಲಿ($H_2O$) ಇಂಚುಗಳು† | ಪಾದರಸದಲ್ಲಿ ಮಿ.ಮೀ.* | mb | $\mu$Hg* |
|---|---|---|---|---|---|---|---|---|
| ವಾಯುಮಂಡಲಗಳು | 1.00000 | 1.03300 | 14.7000 | 29.9200 | 406.800 | 760.000 | 1013.00000 | |
| ಚದರ ಸೆಂ.ಮೀ.ಗೆ ಕಿಲೋಗ್ರಾಂಗಳು | 0.96780 | 1.00000 | 14.2200 | 28.9600 | 393.700 | 735.600 | 980.70000 | |
| ಚದರ ಇಂಚಿಗೆ ಪೌಂಡುಗಳು | 0.06800 | 0.07030 | 1.0000 | 2.0360 | 27.680 | 51.710 | 68.95000 | |
| ಪಾದರಸದ ಇಂಚುಗಳು* | 0.03340 | 0.03450 | 0.4910 | 1.0000 | 13.600 | 25.400 | 33.86000 | |
| ನೀರಿನ ಇಂಚುಗಳು† | 0.00246 | 0.00254 | 0.0361 | 0.0736 | 1.000 | 1.868 | 2.48600 | |
| ಪಾದರಸದ ಮಿಲಿಮೀಟರುಗಳು* | 0.00132 | 0.00136 | 0.0193 | 0.0394 | 0.53 | 1.000 | 1.33300 | 1000.0 |
| ಮಿಲಿ ಬಾರುಗಳು | | 0.00102 | 0.0145 | 0.0295 | 0.401 | 0.750 | 1.00000 | 750.1 |
| ಪಾದರಸದ ಮೈಕ್ರಾನುಗಳು* | | | | | | 0.001 | 0.00133 | 1.0 |

*32° ಫ್ಯಾ. (0° ಸೆಂ.) ನಲ್ಲಿ ; 60° ಫ್ಯಾ.ನಲ್ಲಿರುವ ಪಾದರಸಕ್ಕೆ ಪರಿವರ್ತಿಸಲು 1.00283 ರಿಂದ ಗುಣಿಸಿ.

† 39.2° ಫ್ಯಾ. (4° ಸೆಂ.) ನಲ್ಲಿ ; 60° ಫ್ಯಾ.ನಲ್ಲಿರುವ ನೀರಿಗೆ ಪರಿವರ್ತಿಸಲು 1.00096 ರಿಂದ ಗುಣಿಸಿ.

ಭೂಮಿಯ ಮೇಲ್ಭಾಗದ ಪ್ರತಿ ಚದರ ಅಂಗುಲದ ಮೇಲೂ ಸುಮಾರು 15 ಪೌಂಡ್ ತೂಕದಷ್ಟು ಒತ್ತಡವನ್ನು ವಾಯುಮಂಡಲ ಹೇರುತ್ತದೆ. ವಾಯುಭಾರಮಾಪಕವನ್ನು ಒಂದು ಸ್ಥಳ ಸಮುದ್ರಮಟ್ಟದಿಂದ ಎಷ್ಟು ಎತ್ತರದಲ್ಲಿದೆಯೆಂದು ಕಂಡುಹಿಡಿಯುವುದಕ್ಕೂ ಉಪಯೋಗಿಸುತ್ತಾರೆ. (ಎಚ್.ಸಿ.ಕೆ.)

**ಒತ್ತಡ ವರ್ಧಕ :** ಹೆಚ್ಚು ಪ್ರಮಾಣದ, ಆದರೆ ಕಡಿಮೆ ಒತ್ತಡದ ನೀರಿನಲ್ಲಿರುವ ಶಕ್ತಿಯನ್ನು ಉಪಯೋಗಿಸಿಕೊಂಡು, ನೀರಿನ ಒತ್ತಡವನ್ನು ವರ್ಧಿಸಲು ಬಳಸುವ ಸಾಧನ (ಇನ್‌ಟೆನ್ಸಿಫೈಯರ್). ಜಲಶಕ್ತಿಯಿಂದ ಚಲಿಸುವ ಯಂತ್ರಗಳಿಗೆ ಒದಗಿಸಲಾಗುವ ನೀರಿನ ಒತ್ತಡ ಕಡಿಮೆ ಇದ್ದರೆ, ಇಂಥ ಸಾಧನಗಳಿಂದ ಒತ್ತಡವನ್ನು ಹೆಚ್ಚಿಸಿಕೊಳ್ಳಬಹುದು. ಒತ್ತಡ ವರ್ಧಕದ ಜೋಡಣೆಯನ್ನು ಚಿತ್ರದಲ್ಲಿ ಕಾಣಿಸಿದೆ. ಸ್ಥಾಯೀ ಬೆಣೆಯ ಮಧ್ಯದಲ್ಲಿರುವ ರಂಧ್ರದ ಮೂಲಕ ಹೆಚ್ಚು ಒತ್ತಡದ ನೀರು ಹೊರ ಬರುತ್ತದೆ. ಬೆಣೆಯ ಹೊರಭಾಗದಲ್ಲಿ ಮೇಲಕ್ಕೂ ಕೆಳಕ್ಕೂ ಓಡಾಡಬಲ್ಲ ಒಂದು ಆಡುಬೆಣೆ ಇದೆ. ಇದರ ಒಳಭಾಗ ಪೊಳ್ಳು. ಇದರೊಳಗೆ ಒತ್ತಡದ ನೀರು ತುಂಬಿದೆ. ಕಡಿಮೆ ಒತ್ತಡದ ನೀರು ತುಂಬಿರುವ ಇನ್ನೊಂದು ಸ್ಥಿರ ಸಿಲಿಂಡರು ಆಡುಬೆಣೆಯ ಹೊರಗಡೆ ನಿಲ್ಲುವ ಹಾಗೆ ಏರ್ಪಡಿಸಿದೆ ; ಕಡಿಮೆ ಒತ್ತಡದ ನೀರು ಆಡುಬೆಣೆಯ ಮೇಲ್ಭಾಗವನ್ನು ಒತ್ತುತ್ತದೆ. ಇದರಿಂದ ಆಡುಬೆಣೆ ಕೆಳಗೆ ಇಳಿಯುತ್ತದೆ. ಆಗ ಹೆಚ್ಚು ಒತ್ತಡದ ನೀರು ಸ್ಥಾಯೀ ಬೆಣೆಯ ರಂಧ್ರದ ಮೂಲಕ ಹೊರಬರುತ್ತದೆ.




ಒತ್ತಡ ವರ್ಧಕದ ಜೋಡಣೆ : 1 ಕಡಿಮೆ ಒತ್ತಡದ ನೀರಿನ ಪ್ರವೇಶ, 2 ಸ್ಥಿರ ಸಿಲಿಂಡರ್, 3 ಆಡುಬೆಣೆ 4 ಸ್ಥಾಯೀ ಬೆಣೆ, 5 ಅಧಿಕ ಒತ್ತಡದ ನೀರು ಹೊರಬರುವ ಮಾರ್ಗ

$$[\text{ಹೆಚ್ಚು ಒತ್ತಡದ ತೀವ್ರತೆ}] = [\text{ಕಡಿಮೆ ಒತ್ತಡದ ತೀವ್ರತೆ}] \times \frac{[\text{ಆಡುಬೆಣೆಯ ಹೊರಭಾಗದ ವಿಸ್ತೀರ್ಣ}]}{[\text{ಸ್ಥಾಯೀ ಬೆಣೆಯ ವಿಸ್ತೀರ್ಣ}]}$$

ಆಡುಬೆಣೆ ತೀರ ಕೆಳಗೆ ಇಳಿದು ತನ್ನ ಹೊಡೆತದ ಕೊನೆಯಲ್ಲಿರುವಾಗ ಹೆಚ್ಚು ಒತ್ತಡದ ನೀರನ್ನು ಒಳಗೆ ಬಿಡುವ ಕವಾಟ ಮುಚ್ಚಿಕೊಳ್ಳುತ್ತದೆ. ಅನಂತರ ಕಡಿಮೆ ಒತ್ತಡದ ನೀರು ಆಡುಬೆಣೆಯ ಒಳಗೆ ನುಗ್ಗುತ್ತದೆ. ಆಗ ಸ್ಥಿರ ಸಿಲಿಂಡರಿನ ರಂಧ್ರ ಹೊರಗಡೆಗೆ ತೆರೆದಿರುವುದರಿಂದ ಆಡುಬೆಣೆ ಮೇಲೆ ಏಳುವುದು; ಮತ್ತು ತನ್ನ ಹೊಡೆತದ ಮೇಲ್ಭಾಗವನ್ನು ತಲಪಿದಾಗ ಹೆಚ್ಚು ಒತ್ತಡದ ನೀರನ್ನು ಯಂತ್ರದೊಳಗೆ ಬಿಡುವ ಕವಾಟ ತೆರೆಯುತ್ತದೆ. ಅಲ್ಲದೆ ಕಡಿಮೆ ಒತ್ತಡದ ನೀರನ್ನು ಆಡುಬೆಣೆಯ ಒಳಗಡೆ ಬಿಡುವ ಕವಾಟ ಮುಚ್ಚಿಕೊಳ್ಳುತ್ತದೆ. ಅದೇ ಸಮಯದಲ್ಲಿ ಸ್ಥಿರ ಸಿಲಿಂಡರಿಗೂ ಹೊರಗಡೆಗೂ ಇರುವ ಸಂಬಂಧ ತಪ್ಪಿ ಹೋಗುತ್ತದೆ ; ಮತ್ತು ಜಲಯಂತ್ರಗಳಿಗೆ ನೀರು ಪೂರೈಸುವ ಪ್ರಧಾನ ನಳಿಗೆಯೊಳಗಿನ ನೀರು ಸ್ಥಿರ ಸಿಲಿಂಡರಿನೊಳಗೆ ತುಂಬಿಕೊಳ್ಳುತ್ತದೆ. ಆಗ ನೀರಿನ ಒತ್ತಡದಿಂದ ಆಡುಬೆಣೆ ಕೆಳಗೆ ಇಳಿದು ವರ್ಧಿಸಿದ ಒತ್ತಡದ ನೀರನ್ನು ಯಂತ್ರಗಳೊಳಗೆ ನೂಕುತ್ತದೆ. ಹೀಗೆ ಏಕಮುಖವಾದ ಚಲನೆಯುಳ್ಳ ಈ ವರ್ಧಕಗಳು ತಮ್ಮ ಕೆಳಗಿನ ಹೊಡೆತದಲ್ಲಿ ಮಾತ್ರ ಹೆಚ್ಚು ಒತ್ತಡದ ನೀರನ್ನು ಒದಗಿಸಬಲ್ಲವು. ಈ ವರ್ಧಕಗಳಿಂದ ನೀರಿನ ಒತ್ತಡದ ತೀವ್ರತೆಯನ್ನು ಪ್ರತಿ ಚದರಂಗುಲಕ್ಕೆ 10 ಟನ್ನುಗಳಷ್ಟು ಹೆಚ್ಚು ಮಾಡಬಹುದು. ದ್ವಿಮುಖ ಚಲನೆಯುಳ್ಳ ವರ್ಧಕಗಳು ನಿರಂತರವಾಗಿ ಹೆಚ್ಚು ಒತ್ತಡದ ನೀರನ್ನು ಒದಗಿಸಬಲ್ಲವು. (ಬಿ.ಐ.ತೆ.)

**ಒತ್ತಾಯ :** ಯಾವನಾದರೊಬ್ಬ ಒಂದು ಒಪ್ಪಂದಕ್ಕೆ ತೊಡಗುವಂತೆ ಮಾಡುವ ಉದ್ದೇಶದಿಂದ, ಯಾವನೇ ಒಬ್ಬ ವ್ಯಕ್ತಿಗೆ ಹಾನಿಯಾಗುವ ರೀತಿಯಲ್ಲಿ, ಭಾರತೀಯ ದಂಡಸಂಹಿತೆಯಲ್ಲಿ (ಇಂಡಿಯನ್ ಪೀನಲ್ ಕೋಡ್) ನಿಷೇಧಿಸಲಾದ ಯಾವುದಾದರೂ ಕೃತ್ಯವನ್ನು ಮಾಡುವುದು ಅಥವಾ ಮಾಡುವುದಾಗಿ ಬೆದರಿಸುವುದು ಅಥವಾ ನ್ಯಾಯಬಾಹಿರವಾಗಿ ಯಾವುದಾದರೂ ಸ್ವತ್ತನ್ನು ನಿಲ್ಲಿಸಿಕೊಳ್ಳುವುದು ಅಥವಾ ನಿಲ್ಲಿಸಿಕೊಳ್ಳುವುದಾಗಿ ಬೆದರಿಸುವುದು—ಎಂದು ಇದನ್ನು (ಕೊಯರ್ಷನ್) ಭಾರತೀಯ ಕರಾರು ಕಾಯಿದೆಯ (ಇಂಡಿಯನ್ ಕಾಂಟ್ರಾಕ್ಟ್ ಆಕ್ಟ್) 15ನೆಯ ಕಲಮಿನಲ್ಲಿ ವ್ಯಾಖ್ಯಿಸಲಾಗಿದೆ. ಒಂದು ಒಪ್ಪಂದವನ್ನು ಕರಾರು ಎಂದು ಪರಿಗಣಿಸಬೇಕಾದರೆ ಅದಕ್ಕೆ ಸಂಬಂಧಪಟ್ಟ ಪಕ್ಷಗಳ ನಿರುಪಾಧಿಕ ಸಮ್ಮತಿ (ಖುದ್ದು ರಾಜಿ) ಇರಬೇಕಾದ್ದು ಒಂದು ಷರತ್ತು (ಕಲಂ 10). ಸಮ್ಮತಿಯ ನಿರುಪಾಧಿಕತೆಯನ್ನು ನಷ್ಟಗೊಳಿಸುವ ಕಾರಣಗಳಲ್ಲಿ ಒತ್ತಾಯವೂ ಒಂದು (ಕಲಂ 14).

ಒತ್ತಾಯವನ್ನು ಬಳಸಲಾದ ಸ್ಥಳದಲ್ಲಿ ಭಾರತೀಯ ದಂಡಸಂಹಿತೆ ಜಾರಿಯಲ್ಲಿರುವುದಾಗಲಿ ಇಲ್ಲದಿರುವುದಾಗಲಿ ಗಣನೀಯವಲ್ಲವೆಂದು ಈ ಕಾಯಿದೆಯಲ್ಲಿ ವಿವರಿಸಲಾಗಿದೆ. ಉದಾಹರಣೆ : ಭಾರತೀಯ ದಂಡಸಂಹಿತೆಯ ಪ್ರಕಾರದ ತಕ್ಸೀರಿನ ಬೆದರಿಕೆಯನ್ನು ಸಮುದ್ರದ ಮೇಲೆ ಸಾಗುತ್ತಿರುವ ಹಡಗಿನಲ್ಲಿ ಒಬ್ಬ ಇನ್ನೊಬ್ಬನ ಮೇಲೆ ಪ್ರಯೋಗಿಸಿ, ತನ್ಮೂಲಕ ಆ ಎರಡನೆಯಾತ ಒಪ್ಪಂದಕ್ಕೆ ಬರುವಂತೆ ಮಾಡುತ್ತಾನೆ. ಆದರೆ ಆತ ಒಪ್ಪಂದದಂತೆ ನಡೆಯಲಿಲ್ಲವೆಂದು, ಕರಾರು ಮುರಿದನೆಂದು, ಮೊದಲನೆಯವನು ಆತನ ಮೇಲೆ ಕಲ್ಕತ್ತದಲ್ಲಿ ದಾವೆ ಹೂಡುತ್ತಾನೆ. ಇಂಗ್ಲೆಂಡಿನ ನ್ಯಾಯದ ಪ್ರಕಾರ ಮೊದಲನೆಯವನ ಕೃತ್ಯ ಒತ್ತಾಯವಾಗದಿದ್ದರೂ ಭಾರತೀಯ ದಂಡಸಂಹಿತೆಯ ತತ್ಸಂಬಂಧಿ ಕಲಮು (506) ಆ ಕೃತ್ಯ ನಡೆದಾಗ, ನಡೆದಲ್ಲಿ ಜಾರಿಯಲ್ಲಿಲ್ಲದಿದ್ದರೂ ಮೊದಲನೆಯವ ಎರಡನೆಯವನ ಒಪ್ಪಿಗೆ ಪಡೆಯುವ ಸಲುವಾಗಿ ಒತ್ತಾಯ ಮಾಡಿದ್ದಾನೆಂದೇ ಹೇಳಬೇಕು. ಹೀಗೆಂದು ಭಾರತೀಯ ಕರಾರು ಕಾಯಿದೆಯ 15ನೆಯ ಕಲಮಿನಲ್ಲಿ ವಿವರಿಸಲಾಗಿದೆ.

ಭಾರತೀಯ ಕರಾರು ಕಾಯಿದೆಯ 15ನೆಯ ಕಲಮಿನಲ್ಲಿ ಒತ್ತಾಯದ ಬಗ್ಗೆ ಕೊಟ್ಟಿರುವ ವ್ಯಾಖ್ಯೆಯ ವಾಕ್ಯಾಂಗಭಾಗಗಳನ್ನೂ ಅದೇ ಕರಾರಿನ 72ನೆಯ ಕಲಮಿನ ವಿಚಾರಗಳನ್ನೂ ವಿವೇಚಿಸಿದಾಗ ವ್ಯಕ್ತವಾಗುವ ಮುಖ್ಯ ಅಂಶಗಳು ಇವು :

1 ಭಾರತೀಯ ದಂಡಸಂಹಿತೆಯಲ್ಲಿ ನಿಷೇಧಿಸಲಾದ ಕೃತ್ಯಗಳನ್ನು ಮಾಡಿಯೋ ಅಥವಾ ಮಾಡುವುದಾಗಿ ಬೆದರಿಸಿಯೋ ಸ್ವತ್ತನ್ನು ಬಿಡದೆಯೋ ಬಿಡುವುದಿಲ್ಲವಾಗಿ ಬೆದರಿಸಿಯೋ ಒಪ್ಪಂದಕ್ಕೆ ಬರುವಂತೆ ಮಾಡಿರಬೇಕು. ಒಪ್ಪಂದವಲ್ಲದೆ ಬೇರೆ ಯಾವುದಾದರೂ ಉದ್ದೇಶದಿಂದ ಹಾಗೆ ಮಾಡಿದರೆ ಅದು ಒಪ್ಪಂದದ ವಿಚಾರದಲ್ಲಿ ಗಮನಿಸತಕ್ಕ ವಿಷಯವಲ್ಲ.

2 ಆ ಕೃತ್ಯ ಯಾವನೊಬ್ಬನಿಗೆ ಯಾವ ರೀತಿಯಿಂದಲಾದರೂ ಹಾನಿಕಾರಕವಾಗಿರಬೇಕು. ಭಾವನಾತ್ಮಕ (ಸೆಂಟಿಮೆಂಟಲ್) ಹಾನಿಯನ್ನು ನ್ಯಾಯಾಲಯ ಗಮನಿಸುವುದಿಲ್ಲ. ಹಾನಿ ಕಾನೂನು ಪ್ರಕಾರದ್ದಾಗಿರಬೇಕು. ಒತ್ತಾಯಕ್ಕೊಳಗಾದವನಿಗೆ ಅಥವಾ ಬೇರೆ ಯಾರಿಗಾದರೂ ಅದರಿಂದಾಗಿ ನಷ್ಟ, ತೊಂದರೆ ಅಥವಾ ದೋಷವಾಗಿದ್ದು, ಒತ್ತಾಯಪಡಿಸಿದವನಿಗೆ ತನ್ಮೂಲಕ ಅನ್ಯಾಯದ ಲಾಭ ಗಿಟ್ಟಿರಬೇಕು.

3 ಅದು ಭಾರತೀಯ ದಂಡಸಂಹಿತೆಯಲ್ಲಿ ನಿಷೇಧಿಸಲಾದ ಕೃತ್ಯವಾಗಿದ್ದರೆ ಸಾಕು. ಭಾರತೀಯ ದಂಡಸಂಹಿತೆಯ ಪ್ರಕಾರ ಶಿಕ್ಷಾರ್ಹವಾದ—ಎಂಬುದಕ್ಕಿಂತ ಇದು ವಿಶಾಲವಾಗಿದೆ. ಒಬ್ಬ ಆತ್ಮಹತ್ಯೆ ಮಾಡಿಕೊಳ್ಳುವುದಾಗಿ ಹೆದರಿಸಿ ಅದರ ಕಾರಣದಿಂದ ಬೇರೆಯವರು ಒಪ್ಪಂದಕ್ಕೆ ಬರುವಂತೆ ಮಾಡಿದರೆ ಅಂಥ ಒಪ್ಪಂದ ಒತ್ತಾಯದ ಒಪ್ಪಂದವಾಗುತ್ತದೆ. ಒಂದು ಕ್ರಿಮಿನಲ್ ಮೊಕದ್ದಮೆ ಇರುವಾಗ ಅಥವಾ ಕ್ರಿಮಿನಲ್ ಮೊಕದ್ದಮೆಯ ಹೆದರಿಕೆಯಿಂದ ಒಪ್ಪಂದವಾದ ಪಕ್ಷದಲ್ಲಿ ಅದು ಒತ್ತಾಯದ ಪರಿಧಿಯಲ್ಲಿ ಬರಲಾರದು. ಫಿರ್ಯಾದಿ (ಕಂಪ್ಲೇನೆಂಟ್) ಅಥವಾ ಅವನಿಗಾಗಿ ಮತ್ತೆ ಯಾರಾದರೂ ಆರೋಪಿಯ (ಅಕ್ಯೂಸ್ಡ್) ಮನಃಸ್ಥಿತಿಯ ಉಪಯೋಗ ಪಡೆದುಕೊಂಡು ಆತ ಒಪ್ಪಂದಕ್ಕೆ ಬರುವಂತೆ ಅವನ ಮೇಲೆ ಒತ್ತಡ (ಪ್ರೆಷರ್) ತಂದಿರಬೇಕು. ನ್ಯಾಯಸ್ಥಾನದಲ್ಲಿ ತನಿಖೆಗಾಗಿ ಇರುವ ಕ್ರಿಮಿನಲ್ ಮೊಕದ್ದಮೆಯೊಂದನ್ನು ಹಿಂತೆಗೆದುಕೊಳ್ಳಲು ನಿರಾಕರಿಸಿದ ಪ್ರಯುಕ್ತ ಒಂದು ಒಪ್ಪಂದ ಉಂಟಾಗಿದ್ದರೆ ಅದು ಒತ್ತಾಯದ ಒಪ್ಪಂದ ಎನಿಸದು.

4 ದಂಡಸಂಹಿತೆ ನಿಷೇಧಿಸಿದ ಕೃತ್ಯವನ್ನು ಮಾಡಬೇಕೆಂದೇ ಇಲ್ಲ. ಮಾಡುವುದಾಗಿ ಬೆದರಿಸಿದರೂ ಸಾಕು. ಉದಾಹರಣೆಗಾಗಿ—ಒಪ್ಪಂದಕ್ಕೆ ಬರುವ ಬಗ್ಗೆ ಒಬ್ಬ

ಇನ್ನೊಬ್ಬನ ಕಾಲು ಕಡಿದು ಹಾಕುವುದಾಗಿ ಹೇಳುತ್ತಾನೆ. ಕಾಲು ಕಡಿದು ಹಾಕದಿದ್ದರೂ ಹಾಕುವ ಬೆದರಿಕೆಯಿಂದ ಒಪ್ಪಂದವಾಗಿದ್ದರೆ ಅದು ಒತ್ತಾಯದ ಒಪ್ಪಂದವಾಗುತ್ತದೆ.

5 ಯಾವುದಾದರೂ ಸ್ವತ್ತನ್ನು ಬಿಡದೆ ಅಥವಾ ಬಿಡುವುದಿಲ್ಲವಾಗಿ ಹೆದರಿಸಿ, ಯಾವನೊಬ್ಬನಿಗೆ ಹಾನಿ ಬರುವಂತೆ ಮಾಡಿ, ಒಪ್ಪಂದಕ್ಕೆ ಒಪ್ಪಿಸಿದರೆ ಅದು ಒತ್ತಾಯದ ಒಪ್ಪಂದವಾಗುತ್ತದೆ. ಇದರಿಂದ ಒಪ್ಪುವವನ ಮನಸ್ಸಿನ ಮೇಲೆ ಬಲ ಪ್ರಯೋಗವಾಗುತ್ತದೆ. ಮಗನ ಮೇಲೆ ವಿಧಿಸಲಾದ ಜುಲ್ಮಾನೆಯ ಹಣದ ವಸೂಲಿಯ ಬಗ್ಗೆ ತಂದೆ ಮತ್ತು ಮಕ್ಕಳ ಸಂಯುಕ್ತ ಹಕ್ಕಿನ ಸ್ವತ್ತನ್ನು ಜಪ್ತಿಪಡಿಸಿದ್ದು, ಆ ಸ್ವತ್ತನ್ನು ಮಾರಾಟದಿಂದ ಉಳಿಸಿಕೊಳ್ಳಲು ತಂದೆ ಹಣವನ್ನು ತೆತ್ತ ಪಕ್ಷದಲ್ಲಿ ಅದು ಒತ್ತಾಯದಿಂದ ತೆತ್ತ ಹಣ. ಅನ್ಯಾಯವಾಗಿ ತೆರಿಗೆಯನ್ನು ಹೊರಿಸಿದ್ದು, ಆಸ್ತಿಯನ್ನು ಮಾರಾಟ ಮಾಡುವ ಪ್ರಸಂಗವನ್ನು ತಪ್ಪಿಸುವ ಸಲುವಾಗಿ ತೆರಿಗೆಯನ್ನು ಕೊಟ್ಟಲ್ಲಿ ಅದನ್ನು ತಿರುಗಿ ನ್ಯಾಯಾಲಯಗಳ ಮುಖಾಂತರ ಪಡೆಯಬಹುದು. ಆದರೆ ಪ್ರತಿಯೊಂದು ಬೆದರಿಕೆಯೂ ಒತ್ತಾಯವೆನಿಸದು ; ಆ ಕಾರಣದಿಂದ ಒಪ್ಪಂದ ಒತ್ತಾಯದ್ದೆಂದು ತಳ್ಳಿಹಾಕಲಾಗುವುದು. ಹೆದರಿಸಿದ ಕಾರ್ಯ ಅನ್ಯಾಯದ್ದಿದ್ದರೆ ಮಾತ್ರ ಅದು ಒತ್ತಾಯವೆನಿಸುತ್ತದೆ. ಆದರೆ ವಿರಳವಾಗಿ ಇದಕ್ಕೆ ಅಪವಾದ (ಎಕ್ಸೆಪ್ಷನ್) ಇಲ್ಲದಿಲ್ಲ. ಉದಾಹರಣೆಗಾಗಿ, ಒಂದು ಕರಾರನ್ನು ಮುರಿಯುವ ಬೆದರಿಕೆ ಸ್ವತಃವ ಒತ್ತಾಯವಾಗಲಾರದಾದರೂ ಒಪ್ಪಿಕೊಂಡಂತೆ ನಡೆಯದಿದ್ದರೆ, ತುಂಬಲಾರದ ನಷ್ಟವಾಗುವಂತಿದ್ದರೆ, ಕರಾರಿನ ಮುರಿಯುವಿಕೆಯ ಹೆದರಿಕೆ ಹಾಕುವುದೂ ಒತ್ತಾಯದ ಸ್ವರೂಪ ತಾಳುತ್ತದೆ.

ಒಪ್ಪಂದಕ್ಕೆ ಸೇರಿದವರಲ್ಲಿ ಯಾರಾದರೂ ಅನ್ಯಾಯವಾಗಿ ಹೇರಿದ ಒತ್ತಾಯವನ್ನು ತಡೆಯಲು ಅಸಾಧ್ಯವಾಗುವ ಮಾನಸಿಕ ಅವಸ್ಥೆಯವರಾಗಿದ್ದರೆ ಒಪ್ಪಂದಕ್ಕೆ ಅವರ ಅನುಮತಿ ಇಲ್ಲವೆಂದು ತಿಳಿಯಬೇಕು. ಹಾಕಿದ ಬೆದರಿಕೆ, ಸಾಮಾನ್ಯ ಎದೆಗಾರಿಕೆ ಮತ್ತು ದೃಢತೆ ಇರುವ ಮನುಷ್ಯನನ್ನು ಒಪ್ಪುವಂತೆ ಮಾಡುವಷ್ಟು ಪರಿಣಾಮಕಾರಿಯಾಗಿರಬೇಕೆಂದು ನಿಯಮವಿಲ್ಲ.

ಇಂಗ್ಲಿಷ್ ನ್ಯಾಯದಲ್ಲಿ ಒತ್ತಾಯದಿಂದ ಸಂಭವಿಸಿದ ಒಪ್ಪಂದಗಳಿಗೆ ಬಲಾತ್ಕಾರದಿಂದ (ಡ್ಯೂರೆಸ್) ಆದ ಒಪ್ಪಂದಗಳೆಂದು ಹೇಳಲಾಗುತ್ತದೆ. ಭಾರತದ ಒತ್ತಾಯಕ್ಕೂ ಇಂಗ್ಲಿಷ್ ಕಾನೂನಿನ ಬಲಾತ್ಕಾರಕ್ಕೂ ಮುಖ್ಯವಾಗಿ ಎರಡು ವ್ಯತ್ಯಾಸಗಳಿವೆ:

1 ಒತ್ತಾಯವನ್ನು ಮನುಷ್ಯನ ಮೇಲಾಗಲಿ ಸ್ವತ್ತಿನ ಮೇಲಾಗಲಿ ಹೇರಬಹುದು. ಮನುಷ್ಯನ ಮೇಲೆ ಮಾಡಲಾದ ಒತ್ತಾಯವನ್ನು ಮಾತ್ರ ಬಲಾತ್ಕಾರ ಗಮನಕ್ಕೆ ತೆಗೆದುಕೊಳ್ಳುತ್ತದೆ.

2 ಕರಾರಿನ ಪಕ್ಷವಾದ ವ್ಯಕ್ತಿಯಿಂದ ಅಥವಾ ಅವನ ಪ್ರತಿನಿಧಿಯಿಂದ ಅಥವಾ ಆತನ ತಿಳಿವಳಿಕೆ ಮತ್ತು ಒಪ್ಪಿಗೆಯಿಂದ ಕಾರ್ಯಪ್ರವೃತ್ತನಾದವನಿಂದ ಬಲಾತ್ಕಾರ ಸಂಭವಿಸಿರಬೇಕು ; ಕರಾರಿನ ಇನ್ನೊಂದು ಪಕ್ಷಕ್ಕೆ ಅಥವಾ ಆತನ ಸತೀಸುತರಿಗೆ ಮಾತ್ರವೇ ಹಾನಿಯೊದಗಿರಬೇಕು ಎಂಬುದಾಗಿ ಭಾರತದ ಕಾಯಿದೆಯಲ್ಲಿ ಹೇಳಿಲ್ಲ. ಈ ದೃಷ್ಟಿಯಲ್ಲಿ ಭಾರತದ ಕಾಯಿದೆ ಹೆಚ್ಚು ವ್ಯಾಪಕವಾದದ್ದು.

ಒತ್ತಾಯದ ಒಪ್ಪಂದಗಳು ಎಂದೂ ಆರಂಭತಃ ಶೂನ್ಯವಾದ (ವಾಯ್ಡ್ ಅಬ್ ಇನಿಷಿಯೋ) ಒಪ್ಪಂದಗಳಾಗುವುದಿಲ್ಲ. ಯಾವಾತ ಅನ್ಯಾಯ ಹೊಂದುತ್ತಾನೋ ಅವನಿಗೆ ಕರಾರನ್ನು ಶೂನ್ಯಗೊಳಿಸುವ (ವಾಯ್ಡಬಲ್) ಹಕ್ಕು ಇರುತ್ತದೆ. ಒತ್ತಾಯಕ್ಕೆ ಒಳಗಾದವನು ಅವನ ಇಚ್ಛೆ ಇದ್ದಲ್ಲಿ ನ್ಯಾಯಸ್ಥಾನದಲ್ಲಿ ಒಪ್ಪಂದದಿಂದ ನಿವೃತ್ತಿ ಪಡೆಯಬಹುದು. ಒತ್ತಾಯದಿಂದ ಒಪ್ಪಂದವನ್ನು ತನ್ನ ಅನುಕೂಲಕ್ಕೆ ಪಡೆದವನು ಒಪ್ಪಂದಕ್ಕೆ ಚ್ಯುತಿ ಬಂದರೆ ನಿವೃತ್ತಿ ಪಡೆಯಲಾರ.

ಒತ್ತಾಯದ ಒಪ್ಪಂದವೆಂದು ದೃಢಪಡಿಸುವುದು (ಪ್ರೂವ್) ಹಾಗೆಂದು ವಾದ ಹೂಡಿದವನ ಹೊಣೆಗಾರಿಕೆಯಾಗುತ್ತದೆ. ಆತ ಒತ್ತಾಯಕ್ಕೆ ಸಂಬಂಧಿಸಿದ ಎಲ್ಲ ಸಂಗತಿಗಳನ್ನೂ ವಿವರಿಸಿ ಹೇಳಬೇಕಲ್ಲದೆ ಅದಕ್ಕೆ ರುಜುವಾತು ದೊರಕಿಸಿ ಕೊಡಬೇಕು. ಆದ್ದರಿಂದ ಒತ್ತಾಯಕ್ಕೆ ಸಂಬಂಧಪಟ್ಟ ಮೊಕದ್ದಮೆಗಳಲ್ಲಿ ತೀರ್ಪು ಆಯಾಯಾ ಮೊಕದ್ದಮೆಗಳ ವಿಶಿಷ್ಟ ಸಂಗತಿಗೆ ಅನುಗುಣವಾಗಿರುತ್ತದೆ. ಒತ್ತಾಯವನ್ನು ರುಜುವಾತು ಮಾಡಬೇಕಾದಲ್ಲಿ ಖಚಿತವಾದ ಪುರಾವೆ ಇರಬೇಕು.

ಒಂದು ಒಪ್ಪಂದ ಒತ್ತಾಯವನ್ನು ಹೇರಿದ್ದರ ಪರಿಣಾಮವೇ ಅಲ್ಲವೇ ಎಂಬ ವಿಚಾರ ಕಾನೂನು ಮತ್ತು ವಸ್ತುಸ್ಥಿತಿಗಳ ಸಮ್ಮಿಶ್ರ ಪ್ರಶ್ನೆ. ಒತ್ತಾಯದ ವ್ಯಾಖ್ಯೆಯಲ್ಲಿ ಹೇಳಿದ ಭಾಗಗಳು ಅಥವಾ ಅಂಶಗಳು ಇವೆಯೆ ಎಂಬುದು ವಸ್ತುಸ್ಥಿತಿಯ ಪ್ರಶ್ನೆ. ಹೇಳಿದ ಮತ್ತು ರುಜುವಾತು ಪಡೆದ ವಿಚಾರಗಳು ಒತ್ತಾಯವನ್ನು ದೃಢೀಕರಿಸುವುವೋ ಎಂಬುದು ಕಾನೂನಿನ ಪ್ರಶ್ನೆ. ಒತ್ತಾಯದ ವಿಚಾರ ಕುರಿತ ತೀರ್ಪು ನೀಡುವಾಗ ನ್ಯಾಯಾಲಯ ಇವೆರಡನ್ನೂ ಗಮನಿಸುತ್ತದೆ. (ಕೆ.ಜಿ.ಬಿ.)

**ಒತ್ತಾಯ ಕೇಂದ್ರೀಕರಣ :** ಕೆಲವು ರಚನೆಗಳಲ್ಲಿ ಜೋಡಣೆಯ ಅಥವಾ ರಚನೆಯ ಅನುಕೂಲತೆಗೋಸ್ಕರ ರಂಧ್ರ, ಕೋನ ಮತ್ತು ಗಾತ್ರ ವ್ಯತ್ಯಾಸಗಳು ಇರುತ್ತವೆ. ಇವುಗಳ ಒಟ್ಟು ಹೆಸರು ನ್ಯೂನತೆಗಳು (ಡಿಫೆಕ್ಟ್ಸ್). ಇಂಥ ವಸ್ತುಗಳ ಮೇಲೆ ಬಾಹ್ಯ ಬಲಗಳು ಪ್ರಯುಕ್ತವಾದಾಗ ನ್ಯೂನತೆಗಳ ಹತ್ತಿರ ಒತ್ತಾಯ ಸಮನ್ವಯಗೊಂಡಿರುವುದಿಲ್ಲ. ಸಾಮಾನ್ಯವಾಗಿ ಇರಬೇಕಾದುದಕ್ಕಿಂತ ಅನೇಕ ಬಾರಿ ಹೆಚ್ಚು ಒತ್ತಾಯ ಅಲ್ಲಿ ಕೇಂದ್ರೀಕೃತವಾಗಿರುವುದು. ಇದೇ ಒತ್ತಾಯ ಕೇಂದ್ರೀಕರಣ (ಸ್ಟ್ರೆಸ್ ಕಾನ್‌ಸೆಂಟ್ರೇಷನ್). ನ್ಯೂನತೆಗಳು ಒತ್ತಾಯವನ್ನು ಹೆಚ್ಚಿಸುವುದರಿಂದ ಅವುಗಳಿಗೆ ಒತ್ತಾಯ ವರ್ಧಕಗಳೆಂದು (ಸ್ಟ್ರೆಸ್ ರೇಸ್ಸರ್ಸ್) ಹೆಸರು.




ಉದಾಹರಣೆಗೆ ಒಂದು ಸಣ್ಣ ರಂಧ್ರವಿರುವ ಬಿಗಿಸರಳನ್ನು P ಎಂಬ ಬಾಹ್ಯ ಬಲ ಎಳೆದಾಗ ರಂಧ್ರದ ಮೂಲಕ ಹಾಯುವ ಸರಳಿನ ಅಡ್ಡ ಕೊಯ್ತದಲ್ಲಿನ ಒತ್ತಾಯವು ಸಾಮಾನ್ಯವಾಗಿರುವುದಕ್ಕಿಂತ ರಂಧ್ರದ ಪಕ್ಕದಲ್ಲಿ 2–3ರಷ್ಟು ಕೇಂದ್ರೀಕರಣಗೊಂಡಿರುತ್ತದೆ. (ವಿ.ಡಿ.ಪಿ.)

**ಒತ್ತಾಯ ಮತಾಂತರ :** ಸ್ವಪ್ರೇರಣೆಯಿಂದಲ್ಲದೆ ಬಲಾತ್ಕಾರವಾಗಿ ನಡೆಯುವ ಮತಪರಿವರ್ತನೆಗೆ ಈ ಹೆಸರಿದೆ. ಹಿಂದೂ ಮತ ಮೊದಲಿನಿಂದಲೂ ಇತರ ಮತದವರನ್ನು ಮತಾಂತರಗೊಳಿಸುವುದನ್ನು ನಿಷೇಧಿಸುತ್ತದೆ. ಆದರೆ ಕ್ರೈಸ್ತ ಮತ್ತು ಇಸ್ಲಾಂ ಮತಗಳು ಮತಪರಿವರ್ತನೆಯನ್ನು ಒಪ್ಪಿ ಮೊದಲಿನಿಂದಲೂ ಆ ಕೆಲಸವನ್ನು ಮಾಡುತ್ತ ಬಂದಿವೆ. ಕೊಲಂಬಸನ ಕಾಲದಿಂದಲೂ ಕ್ರೈಸ್ತ ಪಾದ್ರಿಗಳು ಅಮೆರಿಕ, ಆಫ್ರಿಕ, ಏಷ್ಯ ಮೊದಲಾದ ದೂರದೇಶಗಳಿಗೆ ಹೋಗಿ ನೆಲೆಸಿ ಧರ್ಮ ಪ್ರಚಾರ ಮಾಡುತ್ತ ಅಲ್ಲಿನ ಜನರಿಗೆ ಆರ್ಥಿಕ, ಸಾಮಾಜಿಕ ಪ್ರಲೋಭನಗಳನ್ನೊಡ್ಡಿ ಕ್ರಮೇಣ ಅವರನ್ನು ಮತಾಂತರಗೊಳಿಸಿ ಕ್ರೈಸ್ತರನ್ನಾಗಿ ಮಾಡುತ್ತ ಬಂದಿದ್ದಾರೆ. ಇಸ್ಲಾಂ ರಾಜ್ಯಗಳವರು ತಾವು ದಾಳಿ ನಡೆಸಿ ಗೆದ್ದ ರಾಷ್ಟ್ರಗಳಲ್ಲಿ ಒತ್ತಾಯದಿಂದ ತಮ್ಮ ಮತವನ್ನು ಹೇರಿ ಸೋತ ರಾಷ್ಟ್ರಗಳವರನ್ನು ಇಸ್ಲಾಂ ಮತಕ್ಕೆ ಸೇರಿಸುತ್ತ ಬಂದಿದ್ದಾರೆ. ರಾಜ್ಯಾಡಳಿತ ವ್ಯವಸ್ಥೆಯಲ್ಲಿ ಮತಧರ್ಮಗಳಿಗೇ ಪ್ರಾಶಸ್ತ್ಯವಿದ್ದ ಮಧ್ಯಯುಗದ ಯೂರೋಪಿನಲ್ಲಿ ಕ್ರೈಸ್ತರಿಗೂ ಮುಸ್ಲಿಮರಿಗೂ ಘೋರ ಯುದ್ಧಗಳಾಗಿವೆ. ಭಾರತದಲ್ಲಿ ಔರಂಗಜೇಬನಿಗೂ ಶಿವಾಜಿಗೂ ನಡೆದ ಸಂಗ್ರಾಮಕ್ಕೆ ಮತಪರಿವರ್ತನೆಯೂ ಒಂದು ಕಾರಣವಾಗಿದೆ.

ಒತ್ತಾಯ ಮತಾಂತರ ಸಾಧುವಲ್ಲ. ವ್ಯಕ್ತಿ ತನ್ನ ಅಂತಃಕರಣ ಒಪ್ಪಿದಲ್ಲಿ ಯಾವ ಮತಕ್ಕಾದರೂ ಪರಿವರ್ತನೆ ಹೊಂದಬಹುದು. ಅಷ್ಟಲ್ಲದೆ ಯಾರೂ ಆತನ ಮೇಲೆ ರಾಜಕೀಯ ಹಾಗೂ ಸಾಮಾಜಿಕ ಒತ್ತಾಯಗಳನ್ನು ಹೇರಿ ಬಲಾತ್ಕಾರದಿಂದಲಾಗಲಿ, ಬೆದರಿಕೆಯಿಂದಲಾಗಲಿ ಮತಾಂತರಗೊಳಿಸಬಾರದು. ಪ್ರಜಾಸತ್ತಾತ್ಮಕವಾದ ಸರ್ಕಾರಗಳು ಏರ್ಪಟ್ಟು ಜಾತ್ಯತೀತ ಭಾವನೆಗಳು ಬೆಳೆದಂತೆಲ್ಲ ಜಾತೀಯತೆ, ಮತೀಯತೆ, ಮತಾಂಧತೆಗಳು ಕಡಿಮೆಯಾಗುತ್ತಿವೆ ; ಮತಸಹಿಷ್ಣುತೆ ಮತಸಮಾನತೆಗಳು ಬೆಳೆಯುತ್ತಿವೆ. ಹರಿಜನರ ಸ್ಥಾನಮಾನಗಳು ಮತ್ತು ಮತಾಂತರದ ಬಗ್ಗೆ ಗಾಂಧೀಜಿಯವರೂ ಹಿಂದೂ ಮುಸಲ್ಮಾನ ಸೌಹಾರ್ದದ ಬಗ್ಗೆ ಅವರು ಮತ್ತು ಖಾನ್ ಅಬ್ದುಲ್ ಗಫಾರ್ ಖಾನರೂ ತಳೆದ ಧೋರಣೆ ಸ್ತುತ್ಯರ್ಹವಾಗಿದೆ. (ಜಿ.ಎಚ್.)

**ಒತ್ತಾಯ ಮತ್ತು ವಿಕೃತಿ :** ಶಿಲ್ಪ ಮತ್ತು ಯಂತ್ರ ರಚನೆಗಳೆಂದರೆ ವಿವಿಧ ಬಲಗಳ ನಿರೋಧ, ಸಮತೋಲನ ಇತ್ಯಾದಿ. ರಚನೆಯ ಪ್ರತಿಯೊಂದು ಭಾಗವೂ ಈ ಬಲಗಳ ವ್ಯಾಪ್ತಿಗೆ ಒಳಪಡುತ್ತದೆ. ಭಾಗದ ಪ್ರತಿ ಬಿಂದುವಿನಲ್ಲಿಯೂ ಬಲಗಳ ಕ್ರಿಯೆಯಿಂದ ಉಂಟಾಗುವ ಪ್ರತಿಬಲವೇ ಒತ್ತಾಯ (ಸ್ಟ್ರೆಸ್). ಪರಿಣಾಮವಾಗಿ ಇದರ ಜೊತೆಯಲ್ಲೇ ಆ ಭಾಗದ ರೂಪದಲ್ಲಿ ವ್ಯತ್ಯಾಸ ಉಂಟಾಗುತ್ತದೆ. ಇದು ವಿಕೃತಿ (ಸ್ಟ್ರೇನ್). ಸ್ಥಿತಿಸ್ಥಾಪಕ ವಸ್ತುಗಳಲ್ಲಿ ಒತ್ತಾಯಕ್ಕೂ ವಿಕೃತಿಗೂ ನೇರ ಸಂಬಂಧವಿದೆ. ಈ ಸಂಬಂಧವನ್ನು ಒತ್ತಾಯ–ವಿಕೃತಿ ಚಿತ್ರದಲ್ಲಿ ತೋರಿಸಬಹುದು.

ಒತ್ತಾಯ ಹಾಗೂ ವಿಕೃತಿಗಳ ಪ್ರಮಾಣವೇ ಸ್ಥಿತಿಸ್ಥಾಪಕತ್ವದ ನಿಯತಾಂಕ (ಮಾಡ್ಯುಲಸ್ ಆಫ್ ಎಲಾಸ್ಟಿಸಿಟಿ) ಅಥವಾ ಯಂಗನ ನಿಯತಾಂಕ. ಇದರ ಸಂಕೇತ E. ಚಿತ್ರದಲ್ಲಿ ಈ ನಿಯತಾಂಕವನ್ನು ಒತ್ತಾಯ–ವಿಕೃತಿ ವ್ಯತ್ಯಾಸರೇಖೆಯ




ಓಟ (ಸ್ಲೋಪ್) ನಿರ್ಣಯಿಸುತ್ತದೆ. ಇಲ್ಲಿ

$$\tan E = \frac{\text{ಒತ್ತಾಯ}}{\text{ವಿಕೃತಿ}} .$$

ಸ್ಥಿತಿಸ್ಥಾಪಕತ್ವದ ನಿಯತಾಂಕ Eಯು ರಚನಾವಸ್ತುಗಳ ಸಾಮರ್ಥ್ಯವನ್ನು ಅರಿಯಲು ಸಹಾಯವಾಗುತ್ತದೆ. (ಎ.ಡಿ.ಪಿ.)

**ಒತ್ತಿದ ಲೋಹಗಳು :** ಕಾಯಿಸದೆ ಒತ್ತುಯಂತ್ರಗಳ ನೆರವಿನಿಂದ ಬೇಕಾದ ಆಕಾರ ನೀಡಿದ ಲೋಹವಸ್ತುಗಳು (ಪ್ರೆಸ್ಡ್ ಮೆಟಲ್ಸ್). ಇಂಥ ಲೋಹಗಳಿಗೆ ಸಹ ಈ ಹೆಸರಿದೆ. ಲೋಹದ ತಗಡು ಅಥವಾ ತುಂಡನ್ನು ಒತ್ತುಯಂತ್ರಗಳಲ್ಲಿ ನಿರ್ದಿಷ್ಟ ಆಕಾರಕ್ಕೆ ಬಗ್ಗಿಸಬೇಕಾದರೆ ಅದರಲ್ಲಿ ಇಂಗಾಲಾಂಶ ಕಡಿಮೆ ಇರಬೇಕು. ಒತ್ತಿದ ಲೋಹವಸ್ತುಗಳ ತಯಾರಿಕೆಯಲ್ಲಿ ಬಳಸುವ ಲೋಹಗಳೆಂದರೆ ಅಲ್ಯೂಮಿನಿಯಂ ಮತ್ತು ಅದರ ಮಿಶ್ರಲೋಹಗಳು, ಇಂಗಾಲಾಂಶ ಕಡಿಮೆ ಇರುವ ಉಕ್ಕು, ತುಕ್ಕುಹಿಡಿಯದ ಉಕ್ಕು (ಸ್ಟೇನ್‌ಲೆಸ್ ಸ್ಟೀಲ್), ತವರ, ತಾಮ್ರ, ಹಿತ್ತಾಳೆ, ಕಂದುಬಣ್ಣದ ಕಂಚು, ಸತು, ಮೆಗ್ನೀಸಿಯಂ, ನಿಕಲ್, ಸರ್ಕೋನಿಯಂ—ಇತ್ಯಾದಿ. ಒತ್ತಿದ ಈ ಲೋಹಗಳಿಗೆ ಕೈಗಾರಿಕೆಗಳಲ್ಲಿ ವಿಶೇಷ ಪ್ರಾಮುಖ್ಯವಿದೆ. ವಾತಾವರಣದ ಉಷ್ಣತೆಯಲ್ಲಿಯೇ ಒತ್ತುಲೋಹಗಳ ತಯಾರಿಕೆ ಸಾಮಾನ್ಯವಾದರೂ ಕೆಲವು ಲೋಹಗಳು ಮತ್ತು ಮಿಶ್ರಲೋಹಗಳು ಏರಿದ ಉಷ್ಣತೆಯಲ್ಲಲ್ಲದೆ ವಾತಾವರಣದ ಉಷ್ಣತೆಯಲ್ಲಿ ಸಾಕಷ್ಟು ಮೆತುವಾಗಿರುವುದಿಲ್ಲ. ಆದ್ದರಿಂದ ಕೆಲವೊಮ್ಮೆ ಲೋಹದ ತಗಡು ಮತ್ತು ಛಾಪ (ಡೈ) ಇವೆರಡನ್ನೂ ಸುಮಾರು 255°–815° ಸೆಂ. ವರೆಗೆ ಕಾಯಿಸುವುದು ಅನಿವಾರ್ಯ. ಆಮೇಲೆ ಅದಕ್ಕೆ ಬೇಕಾದ ರೂಪ ನೀಡುವುದು ಸುಲಭ.

ಒತ್ತಿದ ಲೋಹಗಳಿಗೂ ಬೆಂಕಿಯಲ್ಲಿ ಕಾಯಿಸಿ ಬಡಿದ ಅಥವಾ ಎರಕ ಹೊಯ್ದ ಲೋಹಗಳಿಗೂ ಸ್ಪಷ್ಟವ್ಯತ್ಯಾಸವಿದೆ. ಎರಡನೆಯ ತರದ ಲೋಹದ ಘನಾಕೃತಿಯಲ್ಲಿ ವಿವಿಧ ಮಂದಗಳು ಇರಬಹುದು. ಒತ್ತಿದ ಲೋಹಕ್ಕೆ ಚಪ್ಪಟೆ ಅಥವಾ ಶಂಖರೀತಿಯ ಟೊಳ್ಳು ಆಕಾರ ಇರಬಹುದಾದರೂ ಅದರ ಗೋಡೆಗಳ ಮಂದ ಒಂದೇ ಇರುತ್ತದೆ. ಕೆಲವು ವಿಶಿಷ್ಟ ಉಪಕರಣಗಳನ್ನು ಬಳಸಿ ವಿವಿಧ ಮಂದದ ಗೋಡೆಗಳನ್ನು ಪಡೆಯಬಹುದು, ನಿಜ. ಆದರೂ ಸಾಮಾನ್ಯವಾಗಿ ಕಚ್ಚಾ ವಸ್ತುವಾಗಿ ಉಪಯೋಗಿಸಿದ ತಗಡಿನ ಮಂದ ⅛″ ಇದ್ದರೆ ರೂಪುಗೊಂಡ ಒತ್ತಿದ ಲೋಹದ ಗೋಡೆಯ ಮಂದವೂ ಅಷ್ಟೇ ಇರುವುದು.

ಲೋಹದ ಎರಕ ಹೊಯ್ಯುವಿಕೆ ಬಹಳ ಕಾಲದಿಂದಲೂ ಬಳಕೆಯಲ್ಲಿತ್ತು. ಆದರೆ ಅದು ಕೈಗಾರಿಕಾ ಪ್ರಪಂಚದಲ್ಲಿ ಪ್ರಮುಖ ಪಾತ್ರ ಗಳಿಸಿದ್ದು ಬೈಸಿಕಲ್ ಉತ್ಪಾದಕರಿಂದ. ಎರಕ ಹೊಯ್ದ ಲೋಹಗಳ ತೂಕ ಹೆಚ್ಚು ಮತ್ತು ಉತ್ಪಾದನೆಯ ವೆಚ್ಚ ಅಧಿಕ. ಬೈಸಿಕಲ್ಲುಗಳು ಜನಪ್ರಿಯವಾದಂತೆ ಅವುಗಳ ತೂಕ ಮತ್ತು ಉತ್ಪಾದನೆಯ ವೆಚ್ಚದ ನಿಯಂತ್ರಣ ಅನಿವಾರ್ಯವಾಯಿತು. ಆಗ ಒತ್ತಿದ ಲೋಹದ ಬಳಕೆ ಲಾಭದಾಯಕವೆನ್ನಿಸಿತು. ಇದು ಎರಕ ಹೊಯ್ದ ಮತ್ತು ಕಾಯಿಸಿ ಬಡಿದ ಲೋಹಗಳ ಸ್ಥಾನವನ್ನು ಸಂಪೂರ್ಣವಾಗಿ ಆಕ್ರಮಿಸಿತು. ಈ ಕ್ಷೇತ್ರದಲ್ಲಿ ಮಾತ್ರ ಅಲ್ಲ, ತಾಂಡವಾಳದ ಪಾತ್ರೆಪರಟೆಗಳ ಸ್ಥಾನವನ್ನು ಸಹ ಒತ್ತಿದ ಉಕ್ಕು ಬಲುಬೇಗ ಕಸಿದುಕೊಂಡಿತು. ಇಂದು ಅಲ್ಯೂಮಿನಿಯಂ ಮತ್ತು ತುಕ್ಕು ಹಿಡಿಯದ ಉಕ್ಕು ಆ ಸ್ಥಾನದಲ್ಲಿವೆ. ಒತ್ತಿದ ಲೋಹದ ಉಪಯೋಗವನ್ನು ಬಹಳಷ್ಟು ಹೆಚ್ಚಿಸಿದ ಕೀರ್ತಿ ಆಟೊಮೊಬೀಲುಗಳ ಉತ್ಪಾದಕರಿಗೆ ಸಲ್ಲಬೇಕು. 1930ರ ಸುಮಾರಿಗೆ ಎಂಜಿನ್ ಮತ್ತು ಮುಂದಿನ ಆಕ್ಸಲ್ ಗೇರುಗಳ ಹೊರತು ಮಿಕ್ಕೆಲ್ಲ ಮೋಟಾರಿನ ಭಾಗಗಳೂ ಒತ್ತಿದ ಲೋಹಗಳಿಂದಲೇ ತಯಾರಾದುವು. ಅದೇ ಸಮಯಕ್ಕೆ ಉಕ್ಕಿನ ತಗಡನ್ನು ಉರುಳಿಸುವ ವಿಧಾನ ಬಹಳವಾಗಿ ಸುಧಾರಿಸಿತು. ಇದರಿಂದಾಗಿ ಸಾಲುಯಂತ್ರಗಳಲ್ಲಿ 4″–5″ ಮಂದವಿರುವ ಲೋಹದ ಚಪ್ಪಡಿಗಳನ್ನು 3/32″ ಕಡಿಮೆ ಮಂದಕ್ಕೆ, ಒಂದೇ ಸಾರಿಗೆ ಇಳಿಸಲು ಸಾಧ್ಯವಾಯಿತು. ಇನ್ನೂ ಮುಂದುವರಿದು 3/32″ ಮಂದದ ತಗಡುಗಳನ್ನು ಜನಪ್ರಿಯ 1/10″ ಮುಂದಕ್ಕೆ ಪರಿವರ್ತಿಸುವುದು ಶಕ್ತಿಯುತ ಯಂತ್ರಗಳ ನಿರ್ಮಾಣದಿಂದಾಗಿ ಸಾಧ್ಯವಾಯಿತು. ಈ ರೀತಿ ಸಾಲುಯಂತ್ರಗಳಿಂದ ಹೊರಬಿದ್ದ ತಗಡುಗಳ ಉತ್ಪಾದನೆಯ ವೆಚ್ಚ ಕಡಿಮೆ; ಗುಣ ಹಿರಿಯುಮಟ್ಟದ್ದು. ಈಗ ಅಲ್ಯೂಮಿನಿಯಂ, ಹಿತ್ತಾಳೆ ಮತ್ತು ತಾಮ್ರದ ಕೈಗಾರಿಕೆಗಳಲ್ಲಿ ಸಾಲುಯಂತ್ರಗಳನ್ನು ಅಧಿಕವಾಗಿ ಬಳಸುತ್ತಾರೆ.

ಬೇರೆ ಉತ್ಪಾದಕರು ಒತ್ತಿದ ಲೋಹಗಳನ್ನು ಕಾಯಿಸಿ ಬಡಿದ ಮತ್ತು ಎರಕ ಹೊಯ್ದ ಲೋಹಗಳೊಂದಿಗೆ ಹೋಲಿಸಿದರು. ಒತ್ತಿದ ಲೋಹದ ಶ್ರೇಷ್ಠತೆ ಎದ್ದು ನಿಂತಿತು. ಕ್ಷೇತ್ರದಲ್ಲೂ ಅದನ್ನು ಬಳಸಲು ಪ್ರಯತ್ನಿಸಿದರು. ಪರಿಣಾಮವಾಗಿ ಇಂದು ಪಾತ್ರೆಪರಟೆಗಳು, ಕುರ್ಚಿ ಮೇಜುಗಳು, ಮೊಳೆ, ತಾಪಾಳು, ಒಳತಿರುಪು, ರೈಲ್ವೆ ಬೋಗಿಗಳು, ಜೆಟ್ ಎಂಜಿನುಗಳು, ವಿಮಾನಗಳ ರಚನೆ ಮುಂತಾದವನ್ನೆಲ್ಲ ಒತ್ತಿದ ಲೋಹಗಳಿಂದ ತಯಾರಿಸಲಾಗುತ್ತದೆ. (ಎಚ್.ಎಲ್.ಕೆ.)

**ಒತ್ತೆ :** ಕರಾರು ನೆರವೇರಿಕೆ, ಸಾಲ ಸಲುವಳಿ ಮೊದಲಾದವಕ್ಕೆ ಹೊಣೆಯಾಗಿ, ಕರಾರು ತಪ್ಪಿದರೆ ದಂಡವಾಗಿ ತೆಗೆದುಕೊಳ್ಳಬಹುದೆಂದು ಒಪ್ಪಿ, ಒಬ್ಬ ಇನ್ನೊಬ್ಬನಲ್ಲಿ ವಸ್ತುವನ್ನಿಡುವ ವ್ಯವಹಾರ (ಪ್ಲೆಜ್). ಹೀಗೆ ಇಟ್ಟ ವಸ್ತುವನ್ನೂ ಈ ಹೆಸರಿನಿಂದ ಕರೆಯುವ ವಾಡಿಕೆಯುಂಟು. ಅಡವು, ಈಡು, ಗಿರವಿ, ನ್ಯಾಸ, ಓಲು ಇವೂ ಪರ್ಯಾಯಪದಗಳಾಗಿ ಬಳಕೆಯಲ್ಲಿವೆ. ಈಚೆಗೆ ಒತ್ತೆ ಮತ್ತು ಗಿರವಿ ಎಂಬ ಶಬ್ದಗಳನ್ನು ಇಂಗ್ಲಿಷಿನ ಮಾರ್ಗೇಜ್ ಶಬ್ದದ ಅರ್ಥದಲ್ಲೂ ಬಳಸಲಾಗುತ್ತಿದೆ. ಈ ಶಬ್ದಗಳ ಪರಿಮಿತಾರ್ಥಕ್ಕೆ ಬ್ರಿಟಿಷರ ಆಳ್ವಿಕೆಯ ಕಾಲದ ಇಂಗ್ಲಿಷ್ ನ್ಯಾಯದ ಪ್ರಭಾವ ಕಾರಣ.

ಪುರಾತನ ಕಾಲದಿಂದಲೂ ಭಾರತದಲ್ಲಿ ಒತ್ತೆ ಇಡುವ ಪದ್ಧತಿ ಇತ್ತು ಎಂಬುದಕ್ಕೆ ಭಾರತೀಯ ಪ್ರಾಚೀನ ಸಾಹಿತ್ಯ ಮತ್ತು ಕೌಟಿಲ್ಯನ ಅರ್ಥಶಾಸ್ತ್ರಗಳಲ್ಲಿ ನಿದರ್ಶನಗಳಿವೆ. ಆಗ ಚರ–ಸ್ಥಿರ ಆಸ್ತಿಗಳನ್ನೂ ದನಕರುಗಳನ್ನೂ ಅಲ್ಲದೆ ಮನುಷ್ಯರನ್ನು ಕೂಡ ಒತ್ತೆ ಇಡಲಾಗುತ್ತಿತ್ತು. ಮನುಷ್ಯರನ್ನು ಅಡವಿಟ್ಟಾಗ, ಹಾಗೆ ಅಡವಿನ ವಸ್ತುಗಳಾದ ಮನುಷ್ಯರನ್ನು, ಅದರಲ್ಲೂ ಸ್ತ್ರೀಯರನ್ನು ಮತ್ತು ಕನ್ಯೆಯರನ್ನು ಅಡವು ಇಟ್ಟುಕೊಂಡವನು ಹೇಗೆ ನಡೆಯಿಸಿಕೊಳ್ಳಬೇಕು ಎಂಬ ಬಗ್ಗೆ ನಿಯಮಗಳು ಇದ್ದುವು. ಇತರ ವಸ್ತುಗಳ ಒತ್ತೆಯ ಬಗ್ಗೆಯೂ ನಿಯಮಗಳು ಇದ್ದುವು. ಅಂಥ ನಿಯಮಗಳನ್ನು ಅತಿಕ್ರಮಿಸಿದರೆ ದಂಡನೆಗಳು ಇದ್ದುವು. ಅಡವಾಗಿದ್ದ ವ್ಯಕ್ತಿ ಓಡಿಹೋದರೆ, ಕರಾರಿನ ಪ್ರಕಾರ ನಡೆದುಕೊಳ್ಳದಿದ್ದರೆ, ಆ ಸಂಬಂಧದ ಹಣವನ್ನು ಕೂಡಲೇ ವಾಪಸು ಕೊಡಬೇಕಾಗುತ್ತಿತ್ತು. ಮನುಷ್ಯರನ್ನು ಒತ್ತೆ ಇಡುವ ಪರಿಪಾಟಿ ಕಾಲಕ್ರಮದಲ್ಲಿ ನಿಂತುಹೋಯಿತು.

ಸ್ಥಿರಾಸ್ತಿಯ ಪರಭಾರೆ ಅಥವಾ ಹಸ್ತಾಂತರ, ಕರಾರುಗಳು, ಹಣದ ಲೇವಾದೇವಿ, ಒತ್ತೆ ಇಟ್ಟುಕೊಂಡು ಕೊಡುವ ಸಾಲ—ಈ ಕುರಿತ ಕಾಯಿದೆಗಳು ಬ್ರಿಟಿಷರ ಆಳ್ವಿಕೆಯ ಕಾಲದಲ್ಲಿ ಜಾರಿಗೆ ಬಂದುವು. ಇವುಗಳಲ್ಲಿ ಒತ್ತೆಯ ವಿವರಣೆಯಿದೆ.

ಒತ್ತೆಯನ್ನು ಕುರಿತ ನಿಯಮಗಳನ್ನು ಕರಾರುಗಳ ಬಗೆಗಿನ ಕಾಯಿದೆಯಲ್ಲಿ ಹೇಳಲಾಗಿದೆ. ಯಾವೊಬ್ಬ ವ್ಯಕ್ತಿಯ ಹತ್ತಿರ ಆತನಿಂದ ಪಡೆದ ಸಾಲದ ಹಣಕ್ಕೆ ಇಲ್ಲವೆ ಕೊಟ್ಟ ವಚನಪರಿಪಾಲನೆಯ ನಿಮಿತ್ತ ಈಡು ಅಥವಾ ಜಾಮೀನಿನಂತೆ ಚರಸ್ವತ್ತನ್ನು ವಹಿಸಿಕೊಡುವುದಕ್ಕೆ ಒತ್ತೆ ಎನ್ನಲಾಗುತ್ತದೆ. ಮಾರಾಟಕ್ಕೆ ವಸ್ತುವಾಗಬಲ್ಲ ಯಾವ ಚರಸ್ವತ್ತನ್ನೂ ಸಾಮಾನ್ಯವಾಗಿ ಒತ್ತೆ ಇಡಬಹುದು. ಹುಂಡಿ, ಷೇರು ಮುಂತಾದವನ್ನೂ ಒತ್ತೆ ಇಡಲು ಸಾಧ್ಯ. ನಗದು ಹಣ ಮಾತ್ರ ಒತ್ತೆಗೆ ಆಧಾರವಾಗಲಾರದು. ಈಡು ಇಟ್ಟ ವಸ್ತುವನ್ನು ಒತ್ತೆ ಇಟ್ಟುಕೊಳ್ಳುವವನ ಸ್ವಾಧೀನಕ್ಕೆ ವಹಿಸಿಕೊಡುವುದು ಒತ್ತೆಯ ಮುಖ್ಯ ಲಕ್ಷಣಗಳಲ್ಲಿ ಒಂದು. ಅದನ್ನು ವಾಸ್ತವವಾಗಿಯಲ್ಲದೆ ವಿಧಿಪೂರ್ವಕವಾಗಿಯೂ ಕೊಡಬೇಕು. ಆದರೆ ಕೇವಲ ಸ್ವಾಧೀನದಲ್ಲಿರುವ ಕಾರಣಕ್ಕಾಗಿ, ಯಾವೊಂದು ಸ್ವತ್ತನ್ನೂ ಒತ್ತೆಯ ಮಾಲು ಎಂದು ಹೇಳಲು ಬರುವುದಿಲ್ಲ. ಅನೇಕ ಕಾರಣಗಳಿಗಾಗಿ ಒಬ್ಬರ ಸ್ವತ್ತು ಇನ್ನೊಬ್ಬರ ಸ್ವಾಧೀನದಲ್ಲಿರಬಹುದು. ಸಾಲದ ಹಣವನ್ನು ಪಡೆಯುವಾಗ, ಇಲ್ಲವೆ ಕರಾರಿನ ಮೇರೆಗೆ ಪರಿಮಿತಕಾಲದಲ್ಲಿ ಒತ್ತೆಯ ಮಾಲಿನ ಸ್ವಾಧೀನವನ್ನು ಒತ್ತೆ ಇಟ್ಟುಕೊಳ್ಳುವವನಿಗೆ ವಹಿಸಿಕೊಡಬೇಕು. ಸ್ವತ್ತನ್ನೇ ವಹಿಸಿಕೊಡುವ ಆವಶ್ಯಕತೆ ಇಲ್ಲ. ಸ್ವತ್ತಿನ ಆಧಾರಪತ್ರಗಳನ್ನು, ಇಲ್ಲವೆ ರೈಲ್ವೆ ರಸೀದಿ ಮುಂತಾದವುಗಳನ್ನು ಸ್ವಾಧೀನ ಕೊಪ್ಪಿಸುವುದರ ಮೂಲಕ ಸ್ವತ್ತನ್ನು ಒತ್ತೆ ಇಡಬಹುದು.

ಒತ್ತೆ ಇಟ್ಟ ಸ್ವತ್ತಿನ ಸಾಮಾನ್ಯ ಒಡೆತನ ಒತ್ತೆದಾರನಲ್ಲಿ (ಒತ್ತೆ ಇಟ್ಟವ) ಇದ್ದರೂ ಒತ್ತೆಧಾರಿಗೆ (ಒತ್ತೆ ಇಟ್ಟುಕೊಂಡವ) ವಿಶೇಷ ಒಡೆತನ ಬರುತ್ತದೆ.

ಕರಾರುಗಳ ಬಗೆಗಿನ ಕಾಯಿದೆ ಮತ್ತು ಸ್ಥಿರಾಸ್ತಿಯ ಹಸ್ತಾಂತರದ ಬಗೆಗಿನ ಕಾಯಿದೆ, ಇವೆರಡರಲ್ಲೂ ಚರಾಸ್ತಿಯ ಅಡವುಗಳಿಗೆ ಸಂಬಂಧಪಟ್ಟಂತೆ ಏನೂ ಹೇಳಿಲ್ಲವಾದ ಕಾರಣ, ಇಂಥ ಚರಾಸ್ತಿಯ ಅಡವುಗಳನ್ನು ಭಾರತದ ನ್ಯಾಯಾಲಯಗಳು ಕ್ರಮಬದ್ಧ ಅಡವುಗಳು ಎಂದು ಪರಿಗಣಿಸಿವೆ. ಇಂಥ ಅಡವು ಮತ್ತು ಒತ್ತೆ ಇವುಗಳ

ಲ್ಲಿರುವ ಮುಖ್ಯ ವ್ಯತ್ಯಾಸಗಳು ಎರಡು. ಅಡವು ಇಟ್ಟಾಗ, ಒತ್ತೆಯ ಸಂದರ್ಭದಲ್ಲಿದ್ದ ಹಾಗೆ, ಅಡವಿನ ಸ್ವತ್ತನ್ನು ಅಡವು ಇಟ್ಟುಕೊಳ್ಳುವವನ ಸ್ವಾಧೀನಕ್ಕೆ ವಹಿಸಿಕೊಡಲೇ ಬೇಕಾಗಿಲ್ಲ. ಅಡವು ಇಟ್ಟ ವಸ್ತುಗಳ ಬಗೆಗಿನ ಹಲವು ಹಕ್ಕುಗಳು ಕೆಲವು ಷರತ್ತುಗಳಿಗಧೀನವಾಗಿ, ಅಡವಿಟ್ಟುಕೊಂಡವನಿಗೆ ಹಸ್ತಾಂತರವಾಗುತ್ತವೆ. ಒತ್ತೆ ಇಟ್ಟಾಗ, ಒತ್ತೆಯ ಮಾಲನ್ನು ಮಾರುವ ಅಧಿಕಾರದ ಹೊರತು ಬೇರೆ ಹಕ್ಕುಗಳ ಹಸ್ತಾಂತರವಾಗುವುದಿಲ್ಲ.

ಒತ್ತೆ ಇಡುವುದಕ್ಕೆ ಎಲ್ಲರೂ ಅರ್ಹರಿರುವುದಿಲ್ಲ. ಕರಾರುಗಳನ್ನು ಮಾಡಿಕೊಳ್ಳಲು ಶಕ್ತರಾಗಿರುವವರು, ಒತ್ತೆ ಇಡಲ್ಪಡುವ ವಸ್ತುವಿನ ಒಡೆತನವಿರುವವರು ಅಥವಾ ಹಾಗೆ ಒಡೆತನವಿರುವವರ ವ್ಯವಹಾರಗಳನ್ನು ನೋಡಿಕೊಳ್ಳುವ ಕಾರಭಾರಿಗಳು ಮತ್ತು ವರ್ತಕ ಮಂಡಳಿಯ ಪಾಲುಗಾರರು ಒತ್ತೆ ಇಡಬಹುದು. ಗಂಡಂದಿರ ಸ್ವತ್ತನ್ನು ಪತ್ನಿಯರೂ ಅಧಿಕಾರವಿಲ್ಲದ ಪಕ್ಷದಲ್ಲಿ ಮಾಲೀಕನ ಸ್ವತ್ತನ್ನು ಸೇವಕರೂ ಒತ್ತೆಯಿಡಲಾಗುವುದಿಲ್ಲ. ಹಲವು ಸಂದರ್ಭಗಳಲ್ಲಿ ವಾಣಿಜ್ಯ ಮುತಾಲಿಕರು (ಪ್ರತಿನಿಧಿಗಳು) ಒತ್ತೆ ಇಡಬಹುದು. ಕಮಿಷನ್ನಿನ ಮೇಲೆ ಮಾರಾಟಮಾಡುವವರಿಂದ ಸದುದ್ದೇಶದಿಂದ ಒತ್ತೆ ಇಟ್ಟುಕೊಂಡರೆ ತಪ್ಪೇನಿಲ್ಲ. ದಳ್ಳಾಳಿಗಳು ಇಡುವ ಒತ್ತೆಗಳಿಗೂ ಈ ತತ್ತ್ವ ಅನ್ವಯವಾಗುತ್ತದೆ. ಒತ್ತೆ ಇಡುವವನ ಸ್ವಾಧೀನಕ್ಕೆ ಒತ್ತೆಯ ಮಾಲು ಹೇಗೆ ಬಂತು ಎಂಬುದರ ಸರಿಯಾದ ಮಾಹಿತಿ ಇಲ್ಲದಾಗ ಮತ್ತು ಸದುದ್ದೇಶಪೂರಿತನಾಗಿ ಒತ್ತೆ ಇಟ್ಟುಕೊಂಡಿದ್ದರೆ, ಅಂಥ ಒತ್ತೆಯ ಕರಾರಿಗೆ ಒತ್ತೆಯ ಮಾಲಿನ ಒಡೆಯನೂ ಬಾಧ್ಯನಾಗುತ್ತಾನೆ. ಯಾವೊಬ್ಬ ವ್ಯಕ್ತಿಗೆ ಒತ್ತೆಯ ಮಾಲಿನಲ್ಲಿ ಪರಿಮಿತ ಹಿತವಿದ್ದರೂ ಆತ ಅದನ್ನು ಒತ್ತೆ ಇಟ್ಟಾಗ, ಅಂಥ ವ್ಯಕ್ತಿಯ ಹಿತದ ಮಟ್ಟಿಗೆ ಒತ್ತೆ ಸಿಂಧುವಾಗಿರುತ್ತದೆ.

ಒತ್ತೆದಾರ ಸಾಲದ ಹಣವನ್ನು ಮತ್ತು ತತ್ಸಂಬಂಧದ ಬಡ್ಡಿಯನ್ನು ಕೊಡುವ ವರೆಗೆ ಅಥವಾ ಕೊಟ್ಟ ವಚನವನ್ನು ಪೂರೈಸುವ ವರೆಗೆ ಮತ್ತು ಒತ್ತೆಯ ಮಾಲನ್ನು ಸ್ವಾಧೀನದಲ್ಲಿಟ್ಟುಕೊಂಡಿದ್ದರೆ ಆ ಸಂಬಂಧವಾಗಿ ಅಥವಾ ಅಂಥ ಸ್ವತ್ತಿನ ರಕ್ಷಣೆಯ ಸಂಬಂಧವಾಗಿ ತಗಲಿದ ಖರ್ಚುವೆಚ್ಚಗಳನ್ನು ಕೊಡುವ ವರೆಗೆ, ಒತ್ತೆಧಾರಿ ಒತ್ತೆಯ ಸ್ವತ್ತಿನ ಸ್ವಾಧೀನಕ್ಕೆ ಬಾಧ್ಯನಾಗಿರುತ್ತಾನೆ. ಸ್ವತ್ತಿನ ರಕ್ಷಣೆಯ ಸಂಬಂಧದಲ್ಲಿ ತಗಲಿದ ವಿಶೇಷ ವೆಚ್ಚಗಳನ್ನು ಕೂಡ ಒತ್ತೆದಾರ ಕೊಡಬೇಕು. ಒತ್ತೇದಾರ ವಚನ ಪರಿಪಾಲಿಸಿದರೆ ಇಲ್ಲವೆ ಸಾಲ ತೆಗೆದುಕೊಂಡಿದ್ದರೆ ಸಂದಾಯಮಾಡಬೇಕಾದುದನ್ನು ಸಲ್ಲಿಸಿದರೆ, ಒತ್ತೆ ಇಟ್ಟ ವಸ್ತುಗಳನ್ನು ವಾಪಸು ಪಡೆಯಲು ಬಾಧ್ಯನಾಗುತ್ತಾನೆ; ಒಂದು ವೇಳೆ ಬರಬೇಕಾದ ಒತ್ತೆಯ ಮಾಲು ವಾಪಸು ಬಾರದಿದ್ದರೆ, ಅವನು ಅದರ ವಾಪಸಾತಿಗಾಗಿ ದಾವೆ ಹಾಕಬಹುದು.

ಸಾಧಾರಣವಾಗಿ ಕರಾರುಗಳು ಇಲ್ಲದಿದ್ದಲ್ಲಿ ಒಂದು ಕಾರಣಕ್ಕೆ ಅಥವಾ ಮೊತ್ತಕ್ಕೆ ಒತ್ತೆ ಇಡಲಾದ ಸ್ವತ್ತನ್ನು ಬೇರೊಂದು ಕಾರಣಕ್ಕೆ ಅಥವಾ ಆಮೇಲೆ ತೆಗೆದುಕೊಂಡ ಸಾಲಕ್ಕೆ ಒತ್ತೆಯ ಮಾಲೆಂದು ಪರಿಗಣಿಸಲಾಗುವುದಿಲ್ಲ. ಆದರೆ ಅಂಥ ಸಂದರ್ಭಗಳಲ್ಲಿ ಆಮೇಲೆ ತೆಗೆದುಕೊಂಡ ಸಾಲಗಳಿಗೂ ಮೊದಲಿನ ಸಾಲದ ಒತ್ತೆಯ ಮಾಲಿಗೂ ಸಂಬಂಧವಿದೆ ಎಂದು ಊಹಿಸಬಹುದು.

ಒತ್ತೆ ಇಟ್ಟವನು ವಚನಭ್ರಷ್ಟನಾದರೆ, ಸಾಲದ ಹಣವನ್ನು ಸಲ್ಲಿಸದಿದ್ದರೆ, ಒತ್ತೆ ಇಟ್ಟುಕೊಂಡವನು ಒತ್ತೆಯ ಕರಾರು ಪೂರೈಕೆಗಾಗಿ ದಾವೆ ಹಾಕಬಹುದು. ಇಲ್ಲವೆ ಅವನಿಗೆ ಅವಕಾಶಕೊಟ್ಟು ಆಮೇಲೆ ಒತ್ತೆಯ ಮಾಲನ್ನು ಮಾರಬಹುದು. ಕರಾರು ಏನೇ ಇದ್ದರೂ ಅವಕಾಶ ಮಾತ್ರ ಕೊಡಲೇಬೇಕು. ಒತ್ತೆ ಇಟ್ಟವನ ಒಪ್ಪಿಗೆಯ ಮೇರೆಗೆ ಮಾರಾಟ ಮಾಡುವುದಾದರೆ, ಅವಕಾಶ ಕೊಡುವ ಪ್ರಶ್ನೆ ಬರುವುದಿಲ್ಲ. ಕೊಡಬೇಕಾದ ಸಮಯಕ್ಕೆ ಸಾಲವನ್ನು ಹಿಂತಿರುಗಿಸಲಿಲ್ಲ ಅಥವಾ ಕೊಟ್ಟ ವಚನ ಪಾಲಿಸಲಿಲ್ಲ—ಎಂಬ ಕಾರಣದಿಂದ ಒತ್ತೆಯ ಮಾಲನ್ನು ಬಿಡಿಸಿಕೊಳ್ಳುವ ಹಕ್ಕನ್ನು ಒತ್ತೆದಾರ ಕಳೆದುಕೊಳ್ಳುವುದಿಲ್ಲ. ಗಡು ತೀರಿದ್ದರೂ ಒತ್ತೆದಾರನ ಕರ್ತವ್ಯದಲ್ಲಿ ಲೋಪ ಉಂಟಾಗಿದ್ದರೂ ಸ್ವತ್ತಿನ ಮಾರಾಟದ ಬಗ್ಗೆ ಸೂಚನೆ ಕಳಿಸಿದ್ದರೂ ಕಡೆಯ ಗಳಿಗೆಯಲ್ಲಿ, ಆದರೆ ಸ್ವತ್ತಿನ ಮಾರಾಟಕ್ಕೆ ಮುಂಚೆ, ಒತ್ತೆದಾರ ತಾನು ನ್ಯಾಯಬದ್ಧವಾಗಿ ಕೊಡಬೇಕಾದ ಎಲ್ಲ ಬಾಕಿಯನ್ನೂ ಕೊಟ್ಟು ಒತ್ತೆಯ ಮಾಲನ್ನು ಬಿಡಿಸಿಕೊಳ್ಳಬಹುದು.

ಮಾರಾಟ ಮಾಡಿದ ಮೇಲೆ ಬಂದ ಹಣ ತನಗೆ ಸಲ್ಲಬೇಕಾದ ಹಣಕ್ಕಿಂತ ಕಡಿಮೆ ಇದ್ದರೆ ಬರಬೇಕಾದ ಉಳಿದ ಹಣವನ್ನು ಪಡೆಯಲು ಕ್ರಮ ಜರುಗಿಸಬಹುದು. ಬಂದ ಹಣ ಹೆಚ್ಚಿದ್ದರೆ, ಒತ್ತೆದಾರನಿಗೆ ಮಿಕ್ಕ ಹಣವನ್ನು ಸಂದಾಯ ಮಾಡಬೇಕು. ಒತ್ತೆಧಾರಿ ಒತ್ತೆಯ ಮಾಲನ್ನು ನ್ಯಾಯಾಲಯದ ಮೂಲಕ ಮಾರಾಟ ಮಾಡಿಸಿದರೆ ಅದರಲ್ಲಿ ಆತನೂ ಖರೀದಿದಾರನಾಗಬಹುದು. ಒತ್ತೆ ಇಟ್ಟ ಸರಕನ್ನು ಬೇರೆ ಬಗೆಯಲ್ಲಿ ಮಾರಾಟ ಮಾಡಿದರೆ ಆಗ ಆತ ಖರೀದಿದಾರನಾಗುವಂತಿಲ್ಲ.

ಅಮೃತಸರದಲ್ಲಿ ಒಂದು ಪದ್ಧತಿ ರೂಢಿಯಲ್ಲಿದೆ: ಒಬ್ಬ ವ್ಯಕ್ತಿ ಇನ್ನೊಬ್ಬನ ಬಳಿ ತನ್ನ ಸರಕನ್ನು ಇಡಗೊಟ್ಟು ಅವನಿಂದ ಹಣವನ್ನು ಸಾಲವಾಗಿ ಪಡೆದರೆ ಈ ಸಾಲವನ್ನು ಅವನಲ್ಲಿ ಬಿಟ್ಟಿರುವ ಸರಕಿನ ಆಧಾರದ ಮೇಲೆ ತೆಗೆದುಕೊಳ್ಳಲಾಗಿದೆಯೆಂದು ಭಾವಿಸಲಾಗುತ್ತದೆ. ಸಾಲ ಕೊಟ್ಟವನಿಗೆ ಒತ್ತೆಧಾರಿಯ ಎಲ್ಲ ಹಕ್ಕುಗಳೂ ಬರುತ್ತವೆ.

ಒತ್ತೆಯ ಕರಾರು ಸಾಲಸಲುವಳಿ ಇಲ್ಲವೆ ವಚನಪಾಲನೆ ಆದೊಡನೆಯೇ ಕೊನೆಗೊಳ್ಳುತ್ತದೆ. ಸಾಲವನ್ನು ಬೇರಾವುದೇ ಬಗೆಯಲ್ಲಿ ವಾಸ್ತವವಾಗಿಯಾಗಲಿ ನ್ಯಾಯಪ್ರವರ್ತನೆಯಿಂದಾಗಲಿ ತೀರಿಸಿದಾಗಲೂ ಕೊನೆಗೊಳ್ಳುತ್ತದೆ. ಒತ್ತೆ ಇಟ್ಟ ಸ್ವತ್ತಿಗೆ ಬದಲಾಗಿ ಬೇರೆ ಸ್ವತ್ತನ್ನು ಒತ್ತೆ ಇಟ್ಟಾಗಲೂ ಮೊದಲಿನದಕ್ಕಿಂತ ಹೆಚ್ಚಿನ ಈಡು ಒದಗಿಸಿದಾಗಲೂ ಕೊನೆಗೊಳ್ಳುತ್ತದೆ.

ಒತ್ತೆ ಇಟ್ಟುಕೊಂಡವನು ಒತ್ತೆ ಇಟ್ಟ ಸ್ವತ್ತನ್ನು ಜೋಪಾನವಾಗಿ ಇಟ್ಟುಕೊಳ್ಳುವುದು ಅಗತ್ಯ. ಅವನು ಅದನ್ನು ಬಳಸುವಂತಿಲ್ಲ. ಹಾಗೇನಾದರೂ ಬಳಸಿದರೆ ಅದರಿಂದಾದ ನಷ್ಟವನ್ನವನು ಕಟ್ಟಿಕೊಡಲು ಬಾಧ್ಯನಾಗುತ್ತಾನೆ. ಒತ್ತೆ ಇಟ್ಟ ಸ್ವತ್ತು ಗಳಿಸಿದ ಆದಾಯ, ಅದರಿಂದ ಬಂದ ಉತ್ಪನ್ನಗಳೇನಾದರೂ ಇದ್ದರೆ ಅವನ್ನು ಸಾಲ ತೀರಿದ ಮೇಲೆ ಒತ್ತೆ ಇಟ್ಟವನಿಗೆ ಕೊಡಬೇಕು.

(ಎಲ್.ಎಸ್.ಜಿ.; ಡಿ.ಎನ್.ಎಸ್.ಎಂ.)

**ಒತ್ತೆಯಾಳು :** ಎರಡು ವೈರಿರಾಷ್ಟ್ರಗಳು ಯುದ್ಧನಿರತರಾಗಿರುವಾಗ ಒಂದು ಒಪ್ಪಂದವನ್ನು ಕಾರ್ಯಗತಗೊಳಿಸಲೋಸ್ಕರ ಅಥವಾ ಒಂದರಿಂದ ಯುದ್ಧ ನಿಯಮದ ಅತಿಕ್ರಮವನ್ನು ತಡೆಹಿಡಿಯಲೋಸ್ಕರ ಒಂದು ರಾಷ್ಟ್ರ ಇನ್ನೊಂದಕ್ಕೆ ಒಪ್ಪಿಸಿದ ಅಥವಾ ಒಂದು ಇನ್ನೊಂದರಿಂದ ಸೆರೆಹಿಡಿದ ವ್ಯಕ್ತಿ (ಹಾಸ್ಟೇಜ್). ಈ ಪದ್ಧತಿ ಪುರಾತನ ರೋಮನ್ ಚಕ್ರಾಧಿಪತ್ಯ ಕಾಲದಿಂದ ನಡೆದುಬಂದಿದೆ. ಆಗ ಸಾಮಂತ ರಾಜ್ಯಗಳ ರಾಜಕುಮಾರರನ್ನು ಅವರಿಗೆ ವಿದ್ಯೆ ಕಲಿಸುವುದಕ್ಕೂ ಸಾಮಂತ ರಾಜರನ್ನು ವಿಧೇಯರನ್ನಾಗಿ ಇರಿಸಿಕೊಳ್ಳುವುದಕ್ಕೂ ರೋಮ್ ನಗರಕ್ಕೆ ಒಯ್ಯುತ್ತಿದ್ದರು. ಬ್ರಿಟಿಷರು ಭಾರತವನ್ನು ಆಕ್ರಮಿಸಿಕೊಂಡಿದ್ದಾಗ ಈ ಪದ್ಧತಿ ಬಳಕೆಯಲ್ಲಿತ್ತು.

ಆಧುನಿಕ ಕಾಲದಲ್ಲಿ ಶತ್ರುಗಳ ಕೈಯಲ್ಲಿ ಸೆರೆಸಿಕ್ಕಿರುವ ಗಾಯಗೊಂಡವರನ್ನೂ ಅಸ್ವಸ್ಥರನ್ನೂ ಅವರು ಚೆನ್ನಾಗಿ ನಡೆಸಿಕೊಳ್ಳುವುದನ್ನು ಖಾತರಿ ಮಾಡಿಕೊಳ್ಳಲು ಒತ್ತೆಯಾಳುಗಳನ್ನು ಇರಿಸಿಕೊಳ್ಳುವುದು ವಾಡಿಕೆ. ಯುದ್ಧದ ಒತ್ತೆಯಾಳುಗಳ ಮೇಲೆ ಸೇಡು ತೀರಿಸಿಕೊಳ್ಳಬಾರದೆಂದು ಜಿನೀವ ಸಮ್ಮೇಳನ ಕಟ್ಟುಪಾಡು ಮಾಡಿದೆ (1949). ಒತ್ತೆಯಾಳುಗಳನ್ನು ಇಟ್ಟುಕೊಳ್ಳುವ ಪದ್ಧತಿ ಈಗ ಪ್ರಾಯಶಃ ಕಡಿಮೆಯಾಗುತ್ತಿದೆ. (ಎ.ಎಫ್.ಎಸ್.ಎಂ.)

**ಒನಕೆವಾಡು :** ಸ್ತ್ರೀಯರು ಧಾನ್ಯವನ್ನು ಒರಳಿಗೆ ಹಾಕಿ ಒನಕೆಯಿಂದ ಕುಟ್ಟುವಾಗ ಹಾಡುತ್ತಿದ್ದ ಹಾಡಿಗೆ ಈ ಹೆಸರಿದೆ. ಇದು ಬಹಳ ಜನಪ್ರಿಯವೂ ಪ್ರಚುರವೂ ಆದ ಜನಪದಸಾಹಿತ್ಯದ ಒಂದು ಪ್ರಕಾರವಾಗಿದ್ದಂತೆ ತೋರುತ್ತದೆ. ಮನೆಮಾತಾದ ಯಾವುದೇ ವಿಷಯವನ್ನು ಕುರಿತು ಹೇಳುವಾಗ ಒನಕೆವಾಡಿನಂತೆ ಎಂದು ಹಿಂದೆ ಹೇಳುತ್ತಿದ್ದರೆಂದು ಊಹಿಸಬಹುದು. ಸಮಸ್ತಾವನಿಯ ಜನಂ ಒನಕೆವಾಡಪ್ಪಿನೆಗಂ ಸಲೆನುಡಿದ ನುಡಿ ಯಥಾರ್ಥಂ ನಿನ್ನೊಳ್—ಎಂಬ ದುರ್ಗಸಿಂಹನ (1031) ಪಂಚತಂತ್ರದ ಉಕ್ತಿ ಇದಕ್ಕೆ ಆಧಾರ. 8ನೆಯ ಶತಮಾನದ ಗಂಗದೊರೆ ಸೈಗೊಟ್ಟ ಶಿವಮಾರನ ಗಜಾಷ್ಟಕ ತನ್ನ ಸುಭಗಕವಿತಾಗುಣದಿಂದ ಓವನಿಗೆಯೂ ಒನಕೆವಾಡೂ ಆಯಿತೆಂದು 11ನೆಯ ಶತಮಾನದ ಶಾಸನವೊಂದರಲ್ಲಿ ಹೇಳಿದೆ. ಗಜಾಷ್ಟಕ ಸಿಕ್ಕಿಲ್ಲವಾದ್ದರಿಂದ ಅದರ ಸ್ವರೂಪ ತಿಳಿಯದು. ಆದರೆ ಒನಕೆವಾಡು ಸಾಮಾನ್ಯವಾಗಿ ತ್ರಿಪದಿಯ ರೂಪದಲ್ಲಿರುತ್ತಿತ್ತೆಂದು ಅನುಮಾನಿಸಲು ಅವಕಾಶವಿದೆ. ಏಕೆಂದರೆ ನೇಮಿಚಂದ್ರ (ಸು. 1170) ಲೀಲಾವತಿ ಕಾವ್ಯದಲ್ಲಿ ವೇಶ್ಯಾಸ್ತ್ರೀಯರು ಸೂಳೆ ಸಿದ್ಧಾಂತವನ್ನು ಒನಕೆವಾಡಾಗಿ ಮಾಡಿ ಹಾಡುತ್ತಿದ್ದರೆಂದು ಹೇಳಿ, ಆ ಸಂದರ್ಭದಲ್ಲಿ ಕೆಲವು ತ್ರಿಪದಿಗಳನ್ನು ಕೊಟ್ಟಿದ್ದಾನೆ. ಅಲ್ಲದೆ, ತ್ರಿಪದಿಯನ್ನು, ಧಾನ್ಯವನ್ನು ಒರಳಲ್ಲಿ ಹಾಕಿ ಕುಟ್ಟುವಾಗಲೂ (ಕಂಡನ) ಶೃಂಗಾರ ವಿಪ್ರಲಂಭಗಳನ್ನು ವರ್ಣಿಸುವಾಗಲೂ ಹಾಡಬೇಕು ಎಂದು ಸೋಮೇಶ್ವರನ (1130) ಮಾನಸೋಲ್ಲಾಸದಲ್ಲಿ ಹೇಳಲಾಗಿದೆ. ಒನಕೆವಾಡಿಗೂ ತ್ರಿಪದಿಗೂ ಸಂಬಂಧವಿತ್ತೆಂಬುದಕ್ಕೆ ಸುರಂಗಕವಿ, ಸೋಮರಾಜ ಮುಂತಾದ ಕವಿಗಳಲ್ಲೂ ಸಮರ್ಥನೆ ಸಿಕ್ಕುತ್ತದೆ. ಸಿರಿಯಾಳನ ಕಥೆಯನ್ನು ಸ್ತ್ರೀಯರು ಒನಕೆವಾಡಿನ ರೂಪದಲ್ಲಿ ಹಾಡುತ್ತಿದ್ದರೆಂದು ಭೀಮಕವಿಯ ಹೇಳಿಕೆ.

ಒಟ್ಟಿನಲ್ಲಿ ಒನಕೆವಾಡೆಂಬುದು ತ್ರಿಪದಿಯ ಛಂದಸ್ಸಿನಲ್ಲಿದ್ದ ಹಾಡೆಂದೂ ಯಾವುದೇ ವಿಷಯ ಅಥವಾ ಕಥೆ ಒನಕೆವಾಡಾಗಿ ಪರಿಣಮಿಸುವುದು ಅದರ ಜನಪ್ರಿಯತೆಗೆ ಸಾಕ್ಷಿಯಾಗುತ್ತಿತ್ತೆಂದೂ ನಿರ್ಧರಿಸಬಹುದು. (ಸಿ.ಪಿ.ಕೆ.)

**ಒನಿಕೊಫೊರ :** ಸಂಧಿಪದಿಗಳ ವಂಶದ ಒಂದು ವರ್ಗ. ಇದರಲ್ಲಿ ಸುಮಾರು ಏಳು ಜಾತಿಗಳಿದ್ದರೂ ಅವೆಲ್ಲವೂ ಒಂದನ್ನೊಂದು ಬಹಳಮಟ್ಟಿಗೆ ಹೋಲುವುದರಿಂದ ಎಲ್ಲವನ್ನೂ ಒಂದೇ ಜಾತಿಯೆಂದು ಭಾವಿಸುವುದು ಉಂಟು.

ಅದೇ ಪೆರಿಪೇಟಸ್ ಜಾತಿ. ಇದರಲ್ಲಿ ಹಲವಾರು ಪ್ರಭೇದಗಳಿವೆ. ಈ ಜಾತಿಗೆ ಸಕ್ರಮ (ಸಿಸ್ಟಮ್ಯಾಟಿಕ್) ಪ್ರಾಣಿಶಾಸ್ತ್ರದಲ್ಲಿ ಒಂದು ಮುಖ್ಯಸ್ಥಾನ ಇದೆ.

1826ರಲ್ಲಿ ಇವನ್ನು ಗಿಲ್ಡಿಂಗ್ ಎಂಬಾತ ಮೊದಲಬಾರಿಗೆ ಸಂಗ್ರಹಿಸಿದ. ಇತರ ಸಂಧಿಪದಿಗಳಿಗಿಂತ ಹೆಚ್ಚಾಗಿ ಇವು ಶಂಖವಿಲ್ಲದ ಬಸವನ ಹುಳುವನ್ನು (ಸ್ಲಗ್) ಹೋಲುವುದರಿಂದ ಇವನ್ನು ಮೃದ್ವಂಗಿಗಳಿರಬಹುದೆಂದು ಊಹಿಸಿದ. ಇವುಗಳಲ್ಲಿ ಸಂಧಿಪದಿ ವಂಶದ ಗುಣಲಕ್ಷಣಗಳನ್ನು ಕಂಡುಹಿಡಿದ ಕೀರ್ತಿ ಮೋಸ್ಲೆಗೆ ಸಲ್ಲುತ್ತದೆ.



ಪೆರಿಪೇಟಸ್ ಕೆಪೆನ್ಸಿಸ್

ಒಟ್ಟಾರೆ ನೋಡಿದಲ್ಲಿ ಭೌಗೋಳಿಕವಾಗಿ ಇವುಗಳ ವ್ಯಾಪ್ತಿ ವಿಸ್ತಾರವೆನಿಸಿದರೂ ಪ್ರಪಂಚದ ಉಷ್ಣದೇಶಗಳಲ್ಲಿ ಕೆಲವು ಪ್ರದೇಶಗಳಿಗೆ ಮಾತ್ರ ಸೀಮಿತಗೊಂಡಂತೆ ಇದರ ಪ್ರಭೇದಗಳು ಹರಡಿವೆ. ಈ ಜಾತಿಯ ಹಲವು ಮುಖ್ಯ ಉಪ ಜಾತಿಗಳು ಮತ್ತು ಅವುಗಳ ಹರಡಿಕೆ ಹೀಗಿವೆ.

1 ನಿಯೊ ಪೆರಿಪೇಟಸ್–ವೆಸ್ಟ್ ಇಂಡೀಸ್ ಮತ್ತು ಅಮೆರಿಕ, ಮೆಕ್ಸಿಕೋದಿಂದ ಹಿಡಿದು ರಯೋ ಡಿ ಜನಿರೋದವರೆಗೆ ಹರಡಿರುವ 29 ಪ್ರಭೇದಗಳು. 2 ಕಾಂಗೊ ಪೆರಿಪೇಟಸ್–ಪಶ್ಚಿಮ ಆಫ್ರಿಕದ ಕಾಂಗೋದ ಒಂದು ಪ್ರಭೇದ. 3 ಇಯೋ ಪೆರಿಪೇಟಸ್–ಮಲಯದಲ್ಲಿರುವ ಪ್ರಭೇದಗಳು. 4 ಕೇಪೋ ಪೆರಿಪೇಟಸ್–ನೇಟಾಲಿನಿಂದ ಕೇಪ್‌ಟೌನಿನವರೆಗಿನ 7 ಪ್ರಭೇದಗಳು. 5 ಮೆಲಾನೋ ಪೆರಿಪೇಟಸ್–ಮೆಲನೇಷ್ಯದಲ್ಲಿನ ಒಂದು ಪ್ರಭೇದ. 6 ಆಸ್ಟ್ರೋ ಪೆರಿಪೇಟಸ್–ಆಸ್ಟ್ರೇಲಿಯ, ನ್ಯೂಜಿಲೆಂಡ್ ಮತ್ತು ಟಾಸ್ಮೇನಿಯಗಳಲ್ಲಿರುವಂಥದು. 7 ಚಿಲಿಯೋ ಪೆರಿಪೇಟಸ್—ಚಿಲಿಯಲ್ಲಿನ ಒಂದು ಪ್ರಭೇದ. 8 ಟಿಫ್ಲೋಪೆರಿಪೇಟಸ್–ಭಾರತದ ಹಿಮಾಲಯದ ತಪ್ಪಲಲ್ಲಿರುವ ಒಂದು ಪ್ರಭೇದ.

ಇವು ಬಂಡೆಗಳು, ಎಲೆಗಳು ಅಥವಾ ತೊಗಟೆಗಳ ಕೆಳಗೆ ವಾಸಿಸುತ್ತವೆ. ಇವು ಬೆಳಕನ್ನು ಇಚ್ಛಿಸುವುದಿಲ್ಲವೆಂದು ತೋರುತ್ತದೆ. ಇವುಗಳ ಓಡಾಟವೆಲ್ಲ ರಾತ್ರಿಯಲ್ಲಿಯೇ. ಆದ್ದರಿಂದ ಇವು ಆಹಾರಕ್ಕೂ ರಾತ್ರಿಯಲ್ಲೇ ಹೊರಬರುತ್ತವೆ.

ಒನಿಕೊಫೊರ ಒಂದು ವಿಶಿಷ್ಟವರ್ಗ. ಕಾರಣ, ಇದು ವಲಯವಂತಗಳಿಗೂ ಸಂಧಿಪದಿಗಳಿಗೂ ನಡುವೆ ಇರುವ ಸಂಧಿವರ್ಗದಂತಿದೆ. ಸರಳವಾದ ಒಂದು ಜೊತೆ ದವಡೆಗಳು, ಪಸರಿಸಿದ ಶ್ವಾಸದ್ವಾರಗಳು, ಜನನೇಂದ್ರಿಯಗಳ ಸ್ಥಾನ, ಮೃದುವಾದ ಚರ್ಮದ ರಚನೆ ಮತ್ತು ಅಕ್ಕಪಕ್ಕದಲ್ಲಿರುವ ಖಂಡಗಳ ಸಾಮರಸ್ಯ –ಇವು ಒನಿಕೊಫೊರ ವರ್ಗದ ಹಲವು ವಿಶಿಷ್ಟ ಲಕ್ಷಣಗಳು. ಮೇಲ್ಭಾಗದಲ್ಲಿರುವ ಕೊಳವೆಯಂಥ, ಪೆರಿಕಾರ್ಡಿಯಮಿನೊಂದಿಗೆ ಸಂಪರ್ಕವುಳ್ಳ ಹೃದಯವೂ




A ಪೆರಿಪೇಟಸ್ ಪ್ರಾಣಿಯ ಹಿಂತುದಿ : 1 ಜನನೇಂದ್ರಿಯ, 2 ಮಲದ್ವಾರ ; B ಇದೇ ಪ್ರಾಣಿಯ ಮುಂತುದಿ : 1 ಬಾಯಿ, 2 ಸ್ಪರ್ಶಾಂಗ, 3 ಓರಲ್ ಪ್ಯಾಪಿಲೆ, 4 ಕಾಲು

ಜೀರ್ಣಾಂಗಗಳ ಸುತ್ತಲಿರುವ ಹಿಮೋಸೀಲಿಕ್ ದೇಹಾವಕಾಶವೂ ಶ್ವಾಸಾಂಗಗಳಾಗಿ ವರ್ತಿಸುವ ಟ್ರೇಕಿಯಲ್ ನಾಳಗಳೂ ಉಪಾಂಗಗಳಾಗಿ ಮಾರ್ಪಟ್ಟಿರುವ ದವಡೆಗಳೂ ಸಂಧಿಪದಿಗಳ ಗುಣಲಕ್ಷಣಗಳನ್ನು ಪ್ರತಿನಿಧಿಸುತ್ತವೆ. ಸ್ನಾಯುಭರಿತ ಮೈಚರ್ಮ, ಟೊಳ್ಳಾದ ಕಾಲುಗಳು, ಎರಡನೆಯ ಖಂಡದ ಹಿಂದೆ ಇರುವ ಜೊತೆ ಮೂತ್ರಜನಕಾಂಗಗಳು ಮತ್ತು ಜನನೇಂದ್ರಿಯದಲ್ಲಿ ಕಾಣುವ ಶಿಲಕೆಗಳು ಇವು ಒನಿಕೊಫೊರದ ವಲಯವಂತಗಳ ಗುಣವಿಶೇಷಗಳನ್ನು ಸೂಚಿಸುತ್ತವೆ.

ಪೆರಿಪೇಟಸ್ ಸುಂದರವಾದ ಬಣ್ಣಗಳುಳ್ಳ ಪ್ರಾಣಿ. ನೋಡುವುದಕ್ಕೆ ಕಂಬಳಿ ಹುಳುವಿನಂತೆ ಕಾಣುತ್ತದೆ. ಆದರೆ ಇದಕ್ಕೆ ಅನೇಕ ಪಾದ ಹಾಗೂ ಉಪಾಂಗಗಳಿವೆ. ಚರ್ಮದಲ್ಲಿ ಅನೇಕ ಮಡಿಕೆಗಳಿರುವುದರಿಂದ ಇದರ ಖಂಡಗಳು ಎಣಿಕೆಗೆ ಸಿಗುವುದಿಲ್ಲ. ಚರ್ಮ ಮೃದುವಾಗಿ ಮೇಲ್ಭಾಗದಲ್ಲಿ ಚಿತ್ರದಂತೆ ಸುಂದರವಾದ ಬಣ್ಣಗಳಿವೆ. ಇದರ ಕೆಳಭಾಗದ ಬಣ್ಣ ಮಾಂಸದಂತೆ. ಪ್ರಾಣಿಯ ಉದ್ದಕ್ಕೂ ಬೆನ್ನಿನ ಮಧ್ಯದಲ್ಲಿ ಒಂದು ಹೊಳಪಾದ ರೇಖೆ ಇದೆ. ತಲೆಯೇ ದೇಹದ ಮೊದಲನೆಯ ಖಂಡ. ಇದು ದೇಹದ ಉಳಿದ ಖಂಡಗಳಂತೆಯೇ ಮೇಲ್ನೋಟಕ್ಕೆ ಕಂಡರೂ ಮೂರು ಜೊತೆ ಉಪಾಂಗಗಳಿರುವುದರಿಂದ ಇದನ್ನು ಇತರ ಖಂಡಗಳಿಂದ ಸುಲಭವಾಗಿ ಗುರುತಿಸಬಹುದು. ಇದರಲ್ಲಿ ಒಂದು ಜೊತೆ ಸ್ಪರ್ಶಾಂಗಗಳೂ ಸ್ಲೈಂ ಗ್ರಂಥಿಗಳೊಡನೆ ಸಂಪರ್ಕವಿರುವ ಒಂದು ಜೊತೆ ಓರಲ್ ಪ್ಯಾಪಿಲೆಗಳೂ ಎರಡು ದವಡೆಗಳಿರುವ ಅಧೋಮುಖವಾಗಿ ತಿರುಗಿರುವ ಬಾಯೂ ಇವೆ. ಪಕ್ಕಗಳಲ್ಲಿ ಹೊಳೆಯುವ ಹರಳಿನಂಥ ಎರಡು ಕಣ್ಣುಗಳಿವೆ. ದವಡೆಗಳು ಬೇಟೆಯನ್ನು ಹರಿಯುವುದರಲ್ಲಿ ಸಹಾಯ ಮಾಡುತ್ತವೆ. ಸ್ಪರ್ಶನ ಶಕ್ತಿಯುಳ್ಳ ಸಣ್ಣ ಕೋಡುಗಳಂಥ ಸ್ಪರ್ಶಾಂಗಗಳು ದಾರಿಯನ್ನು ಮತ್ತು ಬೇಟೆಯನ್ನು ಗುರುತಿಸುವ ಅಂಗಗಳು. ಅಲ್ಲದೆ ಈ ಜೀವಿಯ ಚಲನೆಯನ್ನು ಅವು ನಿಯಂತ್ರಿಸುವಂತೆ ತೋರುತ್ತದೆ. ಈ ಅಂಗಗಳು ವಸ್ತುವನ್ನು ಸ್ಪರ್ಶಿಸದೆಯೇ ಅದನ್ನು ಗುರುತಿಸಬಲ್ಲಷ್ಟು ಚುರುಕಾಗಿರುತ್ತವೆ. ಪೆರಿಪೇಟಸ್ಸನ್ನು ಸ್ವಲ್ಪ ಕೆಣಕಿದರೆ ಸಾಕು, ತನ್ನ ಓರಲ್ ಪ್ಯಾಪಿಲೆಗಳ ಮುಖಾಂತರ ಸ್ಲೈಂ ಗ್ರಂಥಿಗಳಲ್ಲಿ ತಯಾರಾದ ಒಂದು ಬಗೆಯ ಅಂಟು ದ್ರವವನ್ನು ಸುರಿಸುತ್ತದೆ. ದೇಹದುದ್ದಕ್ಕೂ ಹಲವಾರು ಜೊತೆ ಕಾಲುಗಳಿವೆ. ಕಾಲುಗಳ ಸಂಖ್ಯೆಯಲ್ಲಿ ಒಂದು ಪ್ರಭೇದದಿಂದ ಇನ್ನೊಂದು ಪ್ರಭೇದಕ್ಕೆ ವ್ಯತ್ಯಾಸವಿದೆ. ಪೆರಿಪೇಟಸ್ ಕೆಪೆನ್ಸಿಸಿನಲ್ಲಿ 17 ಜೊತೆ ಕಾಲುಗಳೂ ಇವೆ. ಇನ್ನು ಕೆಲವು ಪ್ರಭೇದಗಳಲ್ಲಿ 29–43 ಜೊತೆಗಳವರೆಗೂ ಇರುವುದುಂಟು. ಕಾಲುಗಳು ದೇಹಕ್ಕೆ ಅಂಟಿರುವ ಭಾಗದಲ್ಲೆ, ಪ್ರತಿಯೊಂದು ಖಂಡದಲ್ಲೂ ಒಂದೊಂದು ಜೊತೆ ಶುದ್ಧೀಕರಣಾಂಗಗಳಾದ ನೆಫ್ರೀಡಿಯಾಗಳೂ ಇವೆ. ಅಲ್ಲದೆ ಕೆಲವು ಪ್ರಭೇದಗಳಲ್ಲಿ ಅದೂ ಗಂಡು ಹುಳುಗಳಲ್ಲಿ ಮಾತ್ರ ಕ್ರೂರಲ್ ಗ್ರಂಥಿಗಳೆಂಬ ವಿಶಿಷ್ಟ ಬಗೆಯ ಗ್ರಂಥಿಗಳು ಇವೆ. ಇವೂ ಸಹ ಶುದ್ಧೀಕರಣಾಂಗಗಳೆಂದು ಭಾವಿಸಲಾಗಿದೆ. ದೇಹದ ಕೊನೆಯಲ್ಲಿ ಮಲದ್ವಾರವೂ ಕೊನೆಯ ಜೊತೆ ಕಾಲುಗಳ ಮಧ್ಯೆ ಜನನೇಂದ್ರಿಯವೂ ಇವೆ.

ಪೆರಿಪೇಟಸ್ ಮಾಂಸಾಹಾರಿ. ಕೀಟಗಳು, ಗೆದ್ದಲುಹುಳುಗಳು ಇದರ ಆಹಾರ. ಇದರ ಬೇಟೆಯ ಕ್ರಮ ವಿಚಿತ್ರವಾಗಿದೆ. ಬಾಯಿಯಿಂದ ಅಂಟುದ್ರವ ಹೊರಬರುತ್ತದಷ್ಟೆ. ಹೀಗೆ ಹೊರಬಂದ ದ್ರವ ಕ್ಷಣಮಾತ್ರದಲ್ಲಿ ದಾರದ ಎಳೆಯಂತಾಗುತ್ತದೆ. ಇಂಥ ಎಳೆಗಳ ಜಾಲವೊಂದು ಏರ್ಪಟ್ಟು ಬೇಟೆ ಈ ಜಾಲದಲ್ಲಿ ಸೆರೆಯಾಗುತ್ತದೆ.

ದೇಹದುದ್ದಕ್ಕೂ ಹೀಮೋ ಸೀಲ್ ಎಂಬ ದೇಹಾವಕಾಶವಿದೆ. ಅದು ಸ್ನಾಯುಗಳಿಂದ ಮಧ್ಯದಲ್ಲಿ ಒಂದು ಅಕ್ಕಪಕ್ಕದಲ್ಲಿ ಎರಡು ಹೀಗೆ 3 ಕೋಣೆಗಳಾಗಿ ವಿಭಾಗವಾಗಿದೆ. ಮಧ್ಯದ ಕೋಣೆಯಲ್ಲಿ ಜೀರ್ಣಾಂಗವೂ ಜನನಾಂಗಗಳೂ ಸ್ಲೈಂ ಗ್ರಂಥಿಗಳೂ ಇವೆ. ಪಾರ್ಶ್ವದಲ್ಲಿನ ಕೋಣೆಗಳಲ್ಲಿ ನರವ್ಯೂಹವೂ ನೆಫ್ರೀಡಿಯಾಗಳೂ ಇವೆ.

ಜೀರ್ಣಾಂಗವು ಬಾಯಿಯಿಂದ ಮಲದ್ವಾರದವರೆಗೂ ಒಂದು ಸರಳ ಕೊಳವೆಯಂತಿದ್ದರೂ ಬಕ್ಕಲ್ ಅವಕಾಶ, ಫ್ಯಾರಿಂಕ್ಸ್, ಜಠರ ಮತ್ತು ಕರುಳುಗಳೆಂದು ವಿಭಾಗಿಸಬಹುದಾಗಿದೆ. ಬಕ್ಕಲ್ ಅವಕಾಶದ ಪಕ್ಕಗಳಲ್ಲಿ ಒಂದು ಜೊತೆ ಲಾಲಾ ಗ್ರಂಥಿಗಳಿವೆ.

ರಕ್ತಚಲನಾಂಗದ ರಚನೆ ಸಂಧಿಪದಿಗಳಲ್ಲಿರುವಂತೆಯೇ ಇದೆ. ಕೊಳವೆಯಂತಿರುವ ಹೃದಯವನ್ನು ಪೆರಿಕಾರ್ಡಿಯಮ್ ಆವರಿಸಿಕೊಂಡಿದೆ. ಖಚಿತವಾದ ರಕ್ತನಾಳಗಳಿಲ್ಲ. ಒಂದೊಂದು ಖಂಡದಲ್ಲೂ ಎರಡೆರಡು ರಂಧ್ರಗಳಿರುವ ಹೃದಯವೇ ರಕ್ತಪರಿಚಲನೆಯ ಏಕೈಕ ನಿರ್ದಿಷ್ಟ ಅವಕಾಶವಾಗಿದೆ.

ಇತರ ಸಂಧಿಪದಿಗಳಲ್ಲಿರುವಂತೆ ಪೆರಿಪೇಟಸ್ಸಿನಲ್ಲೂ ಶ್ವಾಸನಾಳಗಳು ಉಸಿರಾಡುವ ಅಂಗಗಳಾಗಿದ್ದರೂ ಅವುಗಳ ರಚನೆಯಲ್ಲಿ ಕೆಲವು ವೈಚಿತ್ರ್ಯಗಳು ಕಂಡುಬರುತ್ತವೆ. ಚರ್ಮದ ಮೇಲೆ ಇರುವ ಕೆಲವು ಕುಳಿಗಳಿಂದ ಗುಂಪಾಗಿ ಶ್ವಾಸನಾಳಗಳು ಹೊರಟು ಒಳಕ್ಕೆ ಸಾಗಿ ವಿವಿಧ ಅಂಗಗಳಿಗೆ ಸಂಬಂಧವನ್ನು ಕಲ್ಪಿಸುತ್ತವೆ. ಕುಳಿಗಳ ಮಧ್ಯೆ ಒಂದೊಂದು ಶ್ವಾಸದ್ವಾರವಿದ್ದು ಅದರ ಮುಖಾಂತರ ಉಸಿರಾಟ ಸಾಗುತ್ತದೆ.

ಪೆರಿಪೇಟಸ್ಸಿನ ಮಿದುಳು ಬಲು ಸರಳವಾಗಿದೆ. ಕೇವಲ ಅನ್ನನಾಳದ ಮೇಲಿನ ಎರಡು ನರಗ್ರಂಥಿಗಳೇ ಈ ಮಿದುಳು. ಇದರಿಂದ ಒಂದು ಜೊತೆ ಉದರ ಭಾಗದ ನರಹುರಿಗಳು ಹೊರಡುತ್ತವೆ. ಇವು ದೇಹದುದ್ದಕ್ಕೂ ಹರಡಿದ್ದು ಹೀಮೋಸೀಲಿಕ್ ದೇಹಾವಕಾಶದ ಪಾರ್ಶ್ವ ಕೋಣೆಗಳಲ್ಲಿ ಇರುತ್ತವೆ. ಅಲ್ಲಲ್ಲಿ ಇವುಗಳ ನಡುವೆ ಸಂಬಂಧಗಳಿರುತ್ತವೆ. ಮಿದುಳಿನಿಂದ ಚರ್ಮಕ್ಕೂ ಕಣ್ಣುಗಳಿಗೂ ಮತ್ತು ನರಹುರಿಗಳಿಂದ ದೇಹದ ಇತರ ಭಾಗಗಳಿಗೂ ನರಗಳು ಹೊರಡುತ್ತವೆ.

ಪೆರಿಪೇಟಸ್ಸಿನಲ್ಲಿ ಲಿಂಗಭೇದವಿದೆ. ಗಂಡಿನಲ್ಲಿ ಒಂದು ಜೊತೆ ಕೊಳವೆಯಂತಿರುವ ವೃಷಣಗಳಿವೆ. ಅವುಗಳಿಂದ ಹೊರಡುವ ಎರಡು ನಾಳಗಳು ಕೊಂಚ ದೂರ ದೇಹಾವಕಾಶದಲ್ಲೇ ಸಾಗಿ ಒಂದುಗೂಡಿ ಕೊನೆಯ ಜೊತೆ ಕಾಲುಗಳ ಮಧ್ಯೆ ಇರುವ ಜನನೇಂದ್ರಿಯದ ಮೂಲಕ ಹೊರಕ್ಕೆ ತೆರೆಯುತ್ತವೆ. ಹೆಣ್ಣುಹುಳುವಿನಲ್ಲಿ ಒಂದು ಜೊತೆ ಅಂಡಾಶಯಗಳಿವೆ. ಅವೂ ಕೂಡ ಕೊಳವೆಯಂತಿದ್ದು ಎರಡು ಗರ್ಭಾಶಯಗಳನ್ನು ಹೊಂದಿವೆ. ಗರ್ಭಾಶಯಗಳೆರಡೂ ಒಂದುಗೂಡಿ ಒಂದೇ ಕೊಳವೆಯಾಗಿ ಕೊನೆಯ ಜೊತೆ ಕಾಲುಗಳ ಮಧ್ಯದಲ್ಲಿನ ಜನನೇಂದ್ರಿಯದ ಮುಖಾಂತರ ಹೊರದೆರೆಯುತ್ತವೆ. ಗರ್ಭಾಂಕುರತೆ ದೇಹದ ಒಳಗೇ ನಡೆಯುವುದೆಂದು ತಿಳಿದಿದ್ದರೂ ವೀರ್ಯಾಣುಗಳು ಅಂಡಾಶಯವನ್ನು ಹೇಗೆ ತಲಪುತ್ತವೆ ಎಂಬುದೇ ತಿಳಿದುಬಂದಿಲ್ಲ. ಆಸ್ಟ್ರೇಲಿಯದಲ್ಲಿನ ಕೆಲವು ಪ್ರಭೇದಗಳು ಮೊಟ್ಟೆಗಳ ಮೂಲಕ ಮರಿ ಮಾಡಿದರೂ ಎಲ್ಲವೂ ನೇರವಾಗಿ ಮರಿಗಳಿಗೇ ಜನ್ಮವೀಯುತ್ತವೆ.

ಹೀಗೆ ಸಂಧಿಪದಿಗಳ ಮತ್ತು ವಲಯವಂತಗಳ ಹಲವಾರು ಗುಣಗಳನ್ನು ಹೊಂದಿರುವ ಪೆರಿಪೇಟಸ್ ತನ್ನ ದೇಹದ ಹೊರರಚನೆ ಹಾಗೂ ಒಳರಚನೆಗಳಲ್ಲಿ ಅನೇಕ ವೈಶಿಷ್ಟ್ಯಗಳನ್ನು ತೋರಿಸುತ್ತದೆ.

ವೆಲ್ವೆಟ್ಟಿನಂತೆ ಮೃದುವಾದ ಚರ್ಮ, ರಂಗುರಂಗಿನ ಮೇಲ್ಮೈ, ಎರಡು ರತ್ನಗಳನ್ನು ತಲೆಯ ಎರಡು ಕಡೆಯಲ್ಲೂ ನಿಸರ್ಗವೇ ಹುದುಗಿಸಿಟ್ಟಂತೆ ಕಾಣುವ ಕಣ್ಣುಗಳು—ಇವು ಈ ಪ್ರಾಣಿಯನ್ನು ಸಾಟಿಯಿಲ್ಲದ ಸೌಂದರ್ಯದ ಖನಿಯಂತೆ ಮಾಡಿವೆ ಎಂದು ಪ್ರೊ. ಸೆಜ್ವಿಕ್ ಇದನ್ನು ಮುಕ್ತಕಂಠದಿಂದ ಹೊಗಳಿದ್ದಾನೆ.

(ಎಂ.ಎಸ್.ಎಚ್.)

**ಒ'ನೀಲ್ :** ಐರ್ಲೆಂಡಿನ ಪ್ರಥಮ ದೊರೆಯಾಗಿದ್ದ ನಿಯಲನ ವಂಶನಾಮ. ಕ್ರಿ.ಶ. 405ರಲ್ಲಿ ಮರಣ ಹೊಂದಿದ ನಿಯಲನ ಕಾಲದಿಂದ ಹಿಡಿದು ಕ್ರಿ.ಶ. 1003ರ ವರೆಗೆ ಈ ವಂಶದವರು ಹೆಚ್ಚುಕಡಿಮೆ ಅವ್ಯಾಹತವಾಗಿ ಐರ್ಲೆಂಡನ್ನಾಳಿದರು. ಉಯಿ ನೀಲ್ ಎಂದು ಕರೆಯಲ್ಪಡುತ್ತಿದ್ದ ಇವರ ವಂಶ ಎರಡು ಕವಲುಗಳಾಗಿ, ಒಂದು ಕವಲು ಉತ್ತರ ಐರ್ಲೆಂಡಿನಲ್ಲೂ ಇನ್ನೊಂದು ದಕ್ಷಿಣ ಐರ್ಲೆಂಡಿನಲ್ಲೂ ಆಡಳಿತ ನಡೆಸಿದುವು. ಈ ವಂಶಕ್ಕೆ ಒ'ನೀಲ್ ಎಂಬ ಹೆಸರು ಬಂದದ್ದು ಕ್ರಿ.ಶ. 919ರಲ್ಲಿ ಕಾಲವಾದ ನಿಯಲ್ ಗ್ಲುಂಡಬನಿಂದ. ಈತನ ಮೊಮ್ಮಗ ಡಾನೆಲ್ ಒ'ನೀಲ್.

ಪ್ರಾಚೀನ ಒ'ನೀಲರ ಸಾಹಸಗಳು ಬುಕ್ ಆಫ್ ಲಿನ್ಸ್ಟರ್, ಆನಲ್ಸ್ ಆಫ್ ದಿ ಫೋರ್ ಮಾಸ್ಟರ್ಸ್ ಮುಂತಾದ ಕೃತಿಗಳಲ್ಲಿ ವಿಶದವಾಗಿ ಬಂದಿವೆ. 16ನೆಯ ಶತಮಾನಕ್ಕೆ ಹಿಂದೆ ಒ'ನೀಲರ ಅಲ್‌ಸ್ಟರ್ ರಾಜ್ಯದ ಮೇಲೆ ನಾರ್ಮನ್ನರ ಮತ್ತು ಇಂಗ್ಲಿಷರ ಪ್ರಭಾವ ಅಷ್ಟೇನೂ ಇರಲಿಲ್ಲ. ನಾಮಮಾತ್ರಕ್ಕೆ ಈ ದೊರೆಗಳು ಇಂಗ್ಲೆಂಡಿನ ದೊರೆಗಳಿಗೆ ಅಧೀನರೆಂದುಕೊಳ್ಳುತ್ತಿದ್ದರು. ಅಲ್‌ಸ್ಟರಿನ ಬಹುಭಾಗದ ಮೇಲೆ ಒಡೆತನ ಹೊಂದಿದ್ದ ಇವರು ಇತರ ಭಾಗಗಳ ಒಡೆಯರೊಂದಿಗೆ ಆಗಾಗ್ಗೆ ಕದನ ಮಾಡುತ್ತಿದ್ದರು. 16ನೆಯ ಶತಮಾನದಲ್ಲಿ ಕಾನ್ ಒ'ನೀಲ್ (1484–1559) ಇಂಗ್ಲಿಷರ ವಿರುದ್ಧವಾಗಿ ತಲೆಯೆತ್ತಲೆತ್ನಿಸಿ ವಿಫಲನಾಗಿ ಎಂಟನೆಯ ಹೆನ್ರಿಯ ಒಡೆತನವನ್ನೊಪ್ಪಿಕೊಂಡು ಟೈರೋನಿನ ಅರ್ಲ್ ಎನಿಸಿಕೊಂಡ. ಆತನ ಮಗ ಷೇನ್ ಮತ್ತು ಇತರರು ಈ ಅವಮಾನದ ವಿರುದ್ಧ ಸಿಡಿದೆದ್ದರು. ಕಾನನ ಅನೈತಿಕ ಪುತ್ರ ಮಾಥ್ಯೂನನ್ನು ಆತನ ಉತ್ತರಾಧಿಕಾರಿಯಾಗಿ ಇಂಗ್ಲೆಂಡ್ ದೊರೆ ನೇಮಿಸಿದ. ಇದು ಐರ್ಲೆಂಡಿನ ಕಟ್ಟಳೆಗೆ ವಿರುದ್ಧವಾದದ್ದೆಂಬ ಅಸಮಾಧಾನ ಹುಟ್ಟಿತು. ಷೇನನ ಕಡೆಯವರು ಮ್ಯಾಥ್ಯೂನನ್ನು ಕೊಂದರು. ಜಗಳಗಳೂ ಸಂಧಾನಗಳೂ ನಡೆದ ಅನಂತರ ಕೊನೆಗೆ ಇಂಗ್ಲೆಂಡಿನ ಒಂದನೆಯ ಎಲಿಜಬೆತ್ ರಾಣಿ ಷೇನ್ ಒ'ನೀಲನನ್ನು ಐರ್ಲೆಂಡಿನ ಮುಖ್ಯಸ್ಥನೆಂದು ಒಪ್ಪಿಕೊಂಡಳು.

ಈ ಕಾಲದಲ್ಲಿ ಐರ್ಲೆಂಡಿನಲ್ಲಿ ಒ'ನೀಲ್ ಮನೆತನದ ಮೂರು ಮಂದಿ ಪ್ರಮುಖರಿದ್ದರು. ಅವರು ಷೇನ್, ಟರ್ಲೊ ಮತ್ತು ಹ್ಯೂ. ಷೇನ್ ಲಂಡನಿನಲ್ಲಿದ್ದಾಗ ಅವನನ್ನು ಎತ್ತಿಹಾಕಿ ತಾನು ಐರಿಷ್ ಪಂಗಡದ ಮುಖ್ಯನಾಗಬೇಕೆಂದು ಟರ್ಲೊ ಸಂಚುಹೂಡಿದ. ಷೇನ್ ಐರ್ಲೆಂಡಿಗೆ ವಾಪಸು ಬಂದು ತನ್ನ ಅಧಿಕಾರವನ್ನು ಪುನಃ ಸ್ಥಾಪಿಸಿ, ತನ್ನ ವಿರುದ್ಧ ಸಂಚುಹೂಡಿದ್ದವರ ಮೇಲೆ ಸೇಡು ತೀರಿಸಿಕೊಳ್ಳುವ ಕಾರ್ಯದಲ್ಲಿ ಉದ್ಯುಕ್ತನಾದ. ಇಂಗ್ಲೆಂಡಿನ ರಾಣಿ ಕೊನೆಗೂ ಷೇನನ ಬೇಡಿಕೆಗಳನ್ನೆಲ್ಲ ಒಪ್ಪಿದಳು.

ಆದರೆ ಚಕ್ರ ಬದಲಾಯಿತು. ಷೇನನ ವಿರುದ್ಧಶಕ್ತಿಗಳು ಪ್ರಬಲವಾದುವು. ಕೊನೆಗೆ ಷೇನ್ ಸೋತು ಕೊಲೆಗೆ ಈಡಾದ.

ಷೇನನ ಅನಂತರ ಮುಖ್ಯಸ್ಥನಾದಾತ ಟರ್ಲೊ ಒ'ನೀಲ್ (ಸು. 1530-95). ಟರ್ಲೊ ತನ್ನ ದಾಯಾದಿ ಬ್ರಿಯಾನ್ ಒ'ನೀಲನನ್ನು ಕೊಲ್ಲಿಸಿ ಅಧಿಕಾರಕ್ಕೆ ಬಂದು ಹದಿನೆಂಟು ವರ್ಷ ಕಾಲ ಹಣಗಾಡಿ ಕೊನೆಗೆ ಪಂಗಡ ಮುಖ್ಯಸ್ಥನ (ಒ'ನೀಲ್) ಸ್ಥಾನವನ್ನು ಬ್ರಿಯಾನನ ಮಗ ಹ್ಯೂಗೆ ಒಪ್ಪಿಸಿದ.

ಹ್ಯೂ ಒ'ನೀಲ್ (ಸು. 1540–1616) ಟೈರೋನಿನ ಎರಡನೆಯ ಅರ್ಲ್. ಮಹಾ ಅರ್ಲ್ ಎಂದು ಈತನ ಖ್ಯಾತಿ. ಷೇನನ ಮರಣಾನಂತರ ಈತ ಟರ್ಲೊ ವಿರುದ್ಧ ಕಾದಾಡುತ್ತಿದ್ದು ಕೊನೆಗೂ ಒ'ನೀಲ್ ಸ್ಥಾನ ಗಳಿಸಿದ. ಹ್ಯೂಗೂ ಟರ್ಲೊವಿಗೂ ಪದೇ ಪದೇ ಬಡಿದಾಟಗಳಾಗುತ್ತಿದ್ದು ಇಂಗ್ಲಿಷರು ಟರ್ಲೊವಿಗೆ ಬೆಂಬಲ ನೀಡಿ ಇವರಿಬ್ಬರ ದ್ವೇಷವನ್ನು ಬಿಸಿಯಾಗಿಟ್ಟಿದ್ದರು. ಈ ಅಂತಃಕಲಹಗಳಿಂದ ಐರ್ಲೆಂಡಿನ ಶಕ್ತಿ ಕುಂದಿ ತಮ್ಮ ಪ್ರಭಾವ ಉಳಿಯುವುದೆಂದು ಅವರು ಬಗೆದಿದ್ದರು. ಆದರೆ ಹ್ಯೂ ಅಧಿಕಾರಕ್ಕೆ ಬಂದ ಮೇಲೆ ಅವರ ಮೇಲೆಯೇ ತಿರುಗಿಬಿದ್ದ. ಇಂಗ್ಲಿಷ್ ಅಧಿಕಾರಿ ಸರ್ ಜಾನ್ ನಾರಿಸನ ಸೋದರಿಯೊಂದಿಗೆ ಪ್ರಣಯಕಲಾಪ ನಡೆಸಿ ಅವಳೊಂದಿಗೆ ಓಡಿಹೋಗಿ, ಅನಂತರ ಸರ್ ಜಾನನ ಕಾದಾಟಗಳಲ್ಲಿ ಆತನಿಗೆ ನೆರವು ನೀಡಿ, ಮತ್ತೆ ತಿರುಗಿ ಬಿದ್ದು, ಸ್ಪೇನ್ ಸ್ಕಾಟ್ಲೆಂಡ್‌ಗಳ ನೆರವು ಬಯಸಿ ಇಂಗ್ಲಿಷರ ವಿರುದ್ಧ ಅವನ್ನು ಎತ್ತಿಕಟ್ಟಿದ. ಇವನನ್ನಡಗಿಸಲು ಇಂಗ್ಲಿಷರು ಸರ್ ಜಾನ್ ನಾರಿಸನನ್ನೇ ಕಳಿಸಿದರು. ಹ್ಯೂ ಮಣಿಯಲಿಲ್ಲ. ಅನಂತರ ಈತ ಇಂಗ್ಲಿಷರನ್ನು ಎದುರು ಹಾಕಿಕೊಳ್ಳದ ಎಚ್ಚರ ವಹಿಸಿ, ಸ್ಪೇನಿನ ಸಹಾಯಕ್ಕಾಗಿ ಕಾಯುತ್ತ ಕುಳಿತ. 1598ರಲ್ಲಿ ಇಂಗ್ಲೆಂಡಿನ ರಾಣಿಯಿಂದ ಕ್ಷಮಾದಾನ ದೊರಕಿತು. ಆದರೆ ಮತ್ತೆ ಇವನಿಗೂ ಇಂಗ್ಲಿಷರಿಗೂ ವಿರಸ ಬೆಳೆಯಿತು. ಕೊನೆಗೆ ಸೋತು ದೇಶತ್ಯಾಗ ಮಾಡಿ, ಸ್ಪೇನಿಗೆ ಹೋಗಬೇಕೆಂದು ಸಮುದ್ರಯಾನ ಮಾಡುತ್ತಿದ್ದಾಗ ಗಾಳಿ ನೆದರ್ಲೆಂಡ್ಸಿನತ್ತ ಹಡಗನ್ನು ಕೊಂಡೊಯ್ದಿತು. ಅಲ್ಲಿಂದ ಸಂಸಾರಸಮೇತ ರೋಮಿಗೆ ಹೋದ. ಈತ ಮರಣಹೊಂದಿದ್ದು ಅಲ್ಲೇ.

ಸರ್ ಫೆಲಿಮ್ ಒ'ನೀಲ್ (ಸು. 1604–53), ಓವೆನ್ ರೋ ಒ'ನೀಲ್ (ಸು. 1590—1649), ಡೇನಿಯಲ್ ಒ'ನೀಲ್ (ಸು. 1612–64) ಮತ್ತು ಹ್ಯೂ ಒ'ನೀಲ್ ಈ ವಂಶದ ಇತರ ಕೆಲವು ಪ್ರಮುಖರು.

ಮುಂದಿನ ತಲೆಮಾರಿನ ಒ'ನೀಲರು ಯೋಧರಾಗಿ ಪ್ರಾಮುಖ್ಯ ಗಳಿಸಿದ್ದರು.

(ಎಚ್.ಕೆ. ; ಪಿ.ಎಂ.)

**ಒ'ನೀಲ್ ಯುಜೀನ್ ಗ್ಲ್ಯಾಡ್‌ಸ್ಟನ್ :** 1888–1953. ಅಮೆರಿಕದ ಪ್ರಸಿದ್ಧ ನಾಟಕಕಾರ. 1936ರಲ್ಲಿ ಸಾಹಿತ್ಯಕ್ಕಾಗಿ ನೊಬೆಲ್ ಬಹುಮಾನ ಪಡೆದ ಸಾಹಿತಿ. ನ್ಯೂಯಾರ್ಕ್ ಪಟ್ಟಣದಲ್ಲಿ ಹುಟ್ಟಿದ. ಪ್ರಸಿದ್ಧ ನಟ ಜೇಮ್ಸ್ ಒ'ನೀಲನ ಮಗ. ಪ್ರಿನ್ಸ್‌ಟನ್ ಮತ್ತು ಹಾರ್ವರ್ಡ್ ವಿಶ್ವವಿದ್ಯಾನಿಲಯಗಳಲ್ಲಿ ವ್ಯಾಸಂಗ ಮಾಡಿ ಕೆಲಕಾಲ ಕಲಾಸಿಯಾಗಿಯೂ ಪತ್ರಿಕೆಯ ಬಾತ್ಮೀದಾರನಾಗಿಯೂ ನಟನಾಗಿಯೂ ಕೆಲಸಮಾಡಿದ. ಈ ಅನುಭವದ ಶ್ರೀಮಂತ ಹಿನ್ನೆಲೆಯಲ್ಲಿ ನಾಟಕಗಳ ರಚನೆಗೆ ಕೈಹಾಕಿದ. ಪ್ರಾರಂಭದ ನಾಟಕಗಳು ನಾವಿಕ ಜೀವನವನ್ನು ನಿರೂಪಿಸುವ ಏಕಪಾತ್ರಾಭಿನಯಗಳು. 1920ರಲ್ಲಿ ಪ್ರದರ್ಶನಗೊಂಡ ಬಿಯಾಂಡ್ ದಿ ಹೊರೈಜನ್ ಎಂಬ ನಾಟಕದಿಂದ ಪ್ರಸಿದ್ಧನಾದ. ನಾಟಕತಂತ್ರದಲ್ಲಿ ಪ್ರಯೋಗಶೀಲನಾದ ಈತನ ಶ್ರೇಷ್ಠ ನಾಟಕಗಳೆಂದರೆ ಅಭಿವ್ಯಕ್ತಿವಿಧಾನದಿಂದ ಕೂಡಿದ ವಿಲಕ್ಷಣ ಕಲ್ಪನೆಗಳೆನಿಸಿದ (ಫ್ಯಾಂಟಸೀಸ್) ದಿ ಎಂಪರರ್ ಜೋನ್ಸ್ ಮತ್ತು ದಿ ಹೇರಿ ಏಪ್. ಇವನ ಇನ್ನೊಂದು ಶ್ರೇಷ್ಠ ನಾಟಕಕೃತಿಯೆಂದರೆ ಈಸ್ಕಿಲಸನ ಪುರಾಣಕಥೆಯನ್ನು ಅವಲಂಬಿಸಿ ಆಧುನಿಕ ಮನೋವಿಜ್ಞಾನದ ಪರಿಭಾಷೆಯಲ್ಲಿ ನಿರೂಪಣೆಗೊಂಡ ಡಿಸೈರ್ ಅಂಡರ್ ದಿ ಎಲ್ಮ್ಸ್ (1924). ಸ್ಟ್ರೇಂಜ್ ಇಂಟರ್‌ಲ್ಯೂಡ್ (1928), ಮೌರ್ನಿಂಗ್ ಬೆಕಮ್ಸ್ ಎಲೆಕ್ಟ್ರ (1931) ಮತ್ತು ಲಾಂಗ್ ಡೇಸ್ ಜರ್ನಿ ಇಂಟು ನೈಟ್—ಇವು ಈತನ ನಾಟಕಗಳ ದೃಶ್ಯವೈವಿಧ್ಯ, ಪಾತ್ರವೈವಿಧ್ಯ, ತಂತ್ರವೈವಿಧ್ಯಗಳಿಗೆ ಹೆಸರಿಸಬೇಕಾದವು. ಮಾನವನ ಬೆನ್ನಟ್ಟಿಬರುವ ವಿಧಿಯ ವಿಲಕ್ಷಣ ಸ್ವಭಾವಗಳೇ ಈತನ ನಾಟಕಗಳ ವಸ್ತು. ಮನುಷ್ಯನ ಸ್ವಭಾವವನ್ನು ಕೆಣಕಿ ರಾಗೋದ್ದೀಪನಕ್ಕೆ ಒಳಗಾಗುವಂತೆ ಮಾಡುವ ಅಗ್ಗದ ನಾಟಕಗಳು ಇವನವೆಂಬ ಆಕ್ಷೇಪಣೆಯಿದ್ದರೂ ಈತ ಜೀವನದ ವಾಸ್ತವಿಕತೆಯನ್ನು ಸೂಕ್ಷ್ಮವಾಗಿ ನೋಡಿರುವ ಪ್ರಾಮಾಣಿಕ ನಾಟಕಕಾರ ಎಂಬ ಮಾತನ್ನು ಯಾರೂ ಅಲ್ಲಗಳೆಯುವಂತಿಲ್ಲ. ಈತ ಜೀವನವನ್ನು ನಿಷ್ಠುರವಾಗಿ ನೋಡಿದ್ದರೂ ಅಲ್ಲಿ ಅನುಕಂಪವಿಲ್ಲದಿಲ್ಲ. ಇದ್ದಾಗ ಈತ ಮೂರು ಬಾರಿ ಪುಲಿಟ್ಜರ್ ಬಹುಮಾನ ಪಡೆದನಲ್ಲದೆ ಇವನ ಮರಣಾನಂತರ ಪ್ರದರ್ಶಿತವಾದ ಇವನ ಲಾಂಗ್ ಡೇಸ್ ಜರ್ನಿ ಇಂಟು ನೈಟ್ ಎಂಬ ನಾಟಕಕ್ಕೆ ನಾಲ್ಕನೆಯ ಬಾರಿಯೂ ಅದೇ ಬಹುಮಾನ ಬಂತು.

ಜೀವನದಲ್ಲಿ ಮೂರು ಸಾರಿ ಈತ ಮದುವೆಯಾದ. ಈತನ ಮಗಳು ಓನಾ ಚಿತ್ರ ಜಗತ್ತಿನ ಹಾಸ್ಯಚಕ್ರವರ್ತಿ ಚಾರ್ಲಿ ಚಾಪ್ಲಿನನನ್ನು ಮದುವೆಯಾದಳು.

(ಎಂ.ಕೆ.ಎಸ್.)

**ಒಪಾಸಂ :** ಗರ್ಭದಲ್ಲಿನ ಮರಿ ಪೂರ್ಣ ಬಲಿಯುವ ಮುನ್ನವೇ ಈಯುವ ಸಂಚಿ ಸಸ್ತನಿ. ಆಕಾರ ಹೆಗ್ಗಣದಂತೆ. ಬಲುಚುರುಕಾದ ಪ್ರಾಣಿ. ಮಾನೊಟ್ರಿ



ಮಾಟ ವರ್ಗ, ಪಾಲಿಪ್ರೋಟೊಡಾಂಟಿಯ ಗಣ, ಡೈಡೆಲ್ಫಿಡೀ ಕುಟುಂಬ. ತಲೆಯಿಂದ ಬಾಲದವರೆಗೆ ಇದರ ಉದ್ದ ಸುಮಾರು 15". ಬಾಲ ಬೆಳ್ಳಗೆ ಅನಾವೃತವಾಗಿದೆ ; ಉದ್ದ 12". ಕೋತಿಯ ಬಾಲಕ್ಕೆ ಇರುವಂತೆ ಇದರ ಬಾಲಕ್ಕೂ ಗ್ರಾಹಕ ಶಕ್ತಿಯುಂಟು ; ಮರವನ್ನು ಹತ್ತುವಾಗ ಇದು ತುಂಬ ಉಪಯೋಗಕ್ಕೆ ಬರುತ್ತದೆ. ರೆಂಬೆಗೆ ಇದನ್ನು ಸುತ್ತು ಹಾಕಿಕೊಂಡು ಜೋತು ಬೀಳಬಹುದು. ಕಾಲುಗಳಿಗೂ ಹಿಡಿದು ಕೊಳ್ಳುವ ಶಕ್ತಿಯಿದೆ. ಇವು ನೆಲವನ್ನು ತೋಡಲೂ ಬಲ್ಲವು; ಮರಗಳನ್ನು ಹತ್ತಲೂ ಬಲ್ಲವು.

ದಕ್ಷಿಣ ಅಮೆರಿಕ, ಮಧ್ಯ ಮತ್ತು ಉತ್ತರ ಅಮೆರಿಕಗಳಲ್ಲಿ ಅನೇಕ ತರದ ಒಪಾಸಂಗಳಿವೆ. ಅವುಗಳಲ್ಲಿ ವರ್ಜೀನಿಯ ಒಪಾಸಂ, ನೀರಿನ ಒಪಾಸಂ, ತುಪ್ಪಟವುಳ್ಳ ಒಪಾಸಂ, ಇಲಿಯಂಥ ಒಪಾಸಂ ಇತ್ಯಾದಿ ಭೇದಗಳುಂಟು. ಸಾಮಾನ್ಯ ತರದ ಒಪಾಸಂಗಳು ಅಮೆರಿಕ ದೇಶದ ಉತ್ತರ ಭಾಗದಿಂದ ಹಿಡಿದು ಅರ್ಜಂಟೈನದ ವರೆಗೂ ಹರಡಿವೆ. ಆದರೆ ಗಾತ್ರ, ರೂಪ ಮತ್ತು ಬಣ್ಣಗಳಲ್ಲಿ ಅವು ಬೇರೆ ಬೇರೆಯಾಗಿವೆ. ಬೆಕ್ಕಿನ ಗಾತ್ರದಿಂದ ಹಿಡಿದು ಇಲಿಯ ಗಾತ್ರದವರೆಗೂ ಇರುವುವು. ಇವು ನಿಶಾಚರಿಗಳು. ಹಗಲಲ್ಲಿ ಮರದೆಲೆಗಳ ಮರೆಯಲ್ಲಿಯೊ ಪೊಟರೆಗಳಲ್ಲೊ ಅಡಗಿಕೊಂಡು ಕಾಲ ಕಳೆಯುತ್ತವೆ. ಯಾರಾದರೂ ತಮ್ಮನ್ನು ಹಿಡಿದುಕೊಂಡಾಗ ಅಥವಾ ಶತ್ರುಗಳು ಸಮೀಪ ಬಂದಾಗ ಸತ್ತಹಾಗೆ ನಟಿಸುತ್ತವೆ. ಅಂತೆಯೇ ಒಪಾಸಂ ನಟನೆ, ಎಂಬೊಂದು ಗಾದೆ ಜನರ ಬಾಯಲ್ಲಿ ಹುಟ್ಟಿಕೊಂಡಿದೆ.

ಇದು ತಿನ್ನದ ವಸ್ತುವೇ ಇಲ್ಲ ; ಹುಳು ಹುಪ್ಪಟೆಗಳನ್ನು ಹೆಚ್ಚಾಗಿ ಮೆಲ್ಲುತ್ತದೆ. ರುಚಿಯ ವಿಷಯದಲ್ಲಿ ತುಂಬ ಭೋಗಿಯಿದು. ಹಣ್ಣು ಅಥವಾ ಗೆಡ್ಡೆ, ಕರಟಕಾಯಿ, ಹಸಿರುಕಾಳು, ಮರಿಹುಳುಗಳು, ಪುಟ್ಟ ಹಕ್ಕಿಗಳ ಮೊಟ್ಟೆಗಳು—ಇವು ಇದಕ್ಕೆ ಬಹು ಹಿತಕರವಾದ ಆಹಾರ.

ಆಸ್ಟ್ರೇಲಿಯ ಖಂಡದಲ್ಲಿ ಅನೇಕ ಜಾತಿಯ ಸಂಚಿ ಪ್ರಾಣಿಗಳಿವೆ (ಮಾರ್ಸೂಪಿಯಲ್ಸ್). ಇವನ್ನು ಹಲವು ವೇಳೆ ಒಪಾಸಂಗಳೆಂದು ಕರೆಯುವುದುಂಟು. ಆದರೆ ಇವಕ್ಕೆ ಸಾಮಾನ್ಯವಾಗಿ ಫಲಾನ್‌ಜರ್ಸ್ ಎಂದು ಹೆಸರು. ಅಮೆರಿಕದ ಒಪಾಸಂಗಳಿಗಿಂತ ಇವು ತೀರ ಭಿನ್ನವಾಗಿವೆ ; ಇವುಗಳಿಗೆ ಚಟುವಟಿಕೆ ಹೆಚ್ಚು. ಕೂದಲು ಹೇರಳವಾಗಿದೆ. ಬಾಲ ಬಲು ಉದ್ದವಾಗಿ, ಹೊರಲಾರದಷ್ಟು ಕೂದಲಿನಿಂದ ಆವೃತವಾಗಿದೆ.

ಗರ್ಭಧಾರಣೆಯ ಅವಧಿ ಬಲು ಕಡಿಮೆ; ಗರ್ಭದಿಂದ ಹೊರ ಬರುವಾಗ ಮರಿಗಳು ಅರ್ಧಮಾತ್ರ ಬೆಳೆದಿರುತ್ತವೆ. ತಾಯಿ ಒಂದು ಸೂಲಿಗೆ ಹತ್ತರಿಂದ ಹದಿನೆಂಟರ ವರೆಗೆ ಮರಿ ಹಾಕುತ್ತದೆ. ಆದರೆ ಅದಕ್ಕೆ ಹದಿಮೂರೇ ಮೊಲೆತೊಟ್ಟುಗಳಿರುವುದರಿಂದ ಕೆಲವು ಮರಿಗಳನ್ನು ಅದು ಸಾಮಾನ್ಯವಾಗಿ ತ್ಯಜಿಸುತ್ತದೆ. ಬಲಿಯುವ ಮುನ್ನವೇ ಜನ್ಮತಾಳುವ ಮರಿಗಳನ್ನು ಬಹುತೇಕ ಒಪಾಸಂಗಳು ಹೊಟ್ಟೆಯ ಹಿಂಬದಿಯಲ್ಲಿರುವ ಸಂಚಿ ಅಥವಾ ಚೀಲಗಳಲ್ಲಿ ಇಟ್ಟುಕೊಂಡು ಬಲಿಯುವವರೆಗೂ ರಕ್ಷಿಸುತ್ತವೆ. ಹೊಟ್ಟೆಯ ಮೇಲೆ ಚೀಲ ಇಲ್ಲದಿರುವ ಜಾತಿಗಳಲ್ಲಿ ಮರಿಗಳು ತಾಯಿ ಮೊಲೆ ಕಚ್ಚಿಕೊಂಡೋ ತಾಯ ಮೈಯನ್ನು ತಬ್ಬಿಕೊಂಡೋ ಆಶ್ರಯ ಪಡೆಯುತ್ತವೆ.

(ಎ.)

**ಒಪ್ಪಂದ :** ಏನನ್ನಾದರೂ ಮಾಡುವುದಾಗಿ ಅಥವಾ ಮಾಡದೆ ಬಿಡುವುದಾಗಿ ಒಂದು ಗೊತ್ತುಪಾಡಿನ ವ್ಯಕ್ತಿಗಳ ಅಥವಾ ಪಕ್ಷಗಳ ನಡುವೆ ಏರ್ಪಟ್ಟ ಏಕಾಭಿಪ್ರಾಯ ; ಪರಸ್ಪರ ತಿಳಿವಳಿಕೆ, ನಿರ್ಣಯ, ಪರತ್ತು ; ಮನಸ್ಸುಗಳ ಕೂಡಿಕೆ (ಅಗ್ರೀಮೆಂಟ್). ಒಬ್ಬ ಅಥವಾ ಒಂದು ಪಕ್ಷ ಏನನ್ನಾದರೂ ಮಾಡಲು ಇಲ್ಲವೇ ಮಾಡದಿರಲು ಪ್ರಸ್ತಾಪ (ಪ್ರೊಪೋಸಲ್) ಮಾಡಲಾಗಿ, ಇನ್ನೊಬ್ಬ ಅಥವಾ ಇನ್ನೊಂದು ಪಕ್ಷ ಅದನ್ನು ಸ್ವೀಕರಿಸಿರುವುದನ್ನು ಅಥವಾ ಅದಕ್ಕೆ ಸಮ್ಮತಿಸಿರುವುದನ್ನು ಮತ್ತು ಆ ಬಗ್ಗೆ ಬರೆಯಲಾದ ಪತ್ರವನ್ನು ಒಪ್ಪಂದ ಎನ್ನಲಾಗುತ್ತದೆ. ಈ ಪದವನ್ನು ನ್ಯಾಯಶಾಸ್ತ್ರದಲ್ಲಿ ತಾತ್ಕಾಲಿಕ ವ್ಯವಸ್ಥೆ ಮತ್ತು ವ್ಯವಹಾರದ ಮುಕ್ತಾಯ ಎಂಬ ಎರಡರ್ಥದಲ್ಲಿ ಉಪಯೋಗಿಸಲಾಗುತ್ತದೆ. ಅದನ್ನು ಯಾವ ಅರ್ಥದಲ್ಲಿ ಬಳಸಲಾಗಿದೆ ಎಂಬುದನ್ನು ಒಪ್ಪಂದದ ಪತ್ರದ ಸಂದರ್ಭದಿಂದ ತಿಳಿಯಬಹುದು.

ಭಾರತದ ಕರಾರು ಕಾಯಿದೆಯಲ್ಲಿ ಒಪ್ಪಂದ ಪದದ ವಿವರಣೆಯುಂಟು. ಒಂದು ವಾಗ್ದಾನವನ್ನು ಅಥವಾ ಪರಸ್ಪರವಾಗಿ ಉಭಯಪಕ್ಷದವರಿಗೂ ಪ್ರತಿಫಲವಾಗಿ (ಕನ್ಸಿಡರೇಷನ್) ಪರಿಣಮಿಸುವ ವಾಗ್ದಾನಗಳ ಸಮೂಹವನ್ನು ಒಪ್ಪಂದವೆನ್ನಲಾಗಿದೆ. ಇದೇ ಕಾಯಿದೆಯಲ್ಲಿ ಪ್ರಸ್ತಾಪ, ಸ್ವೀಕಾರ (ಅಕ್ಸೆಪ್ಟೆನ್ಸ್), ವಚನ (ಪ್ರಾಮಿಸ್) ಪ್ರತಿಫಲ ಇತ್ಯಾದಿ ಶಬ್ದಗಳನ್ನೂ ವಿವರಿಸುವುದರ ಮೂಲಕ ಅವುಗಳಿಗೆ ಒಂದು ನಿರ್ದಿಷ್ಟ ಅರ್ಥವ್ಯಾಪ್ತಿಯನ್ನು ನೀಡಲಾಗಿದೆ.

ದಿವಾಣೀ ಸಂಹಿತೆಯ ಆದೇಶ 23ರ ನಿಯಮ 3ರಲ್ಲಿ ಹೇಳಿದ ನ್ಯಾಯಸಮ್ಮತ ಒಪ್ಪಂದ, ಕರಾರು ಕಾಯಿದೆಯ ಕಲಂ 2(h) ದಲ್ಲಿ ಹೇಳಿದ, ನ್ಯಾಯದ ಮೂಲಕ ಜಾರಿಗೆ ತರಬಹುದಾದ ಒಪ್ಪಂದ–ಈ ಉಭಯ ಪದಗುಂಫನಗಳ ಅರ್ಥ ಒಂದೇ ಆಗಿದೆ ಎಂದು ನ್ಯಾಯಾಲಯಗಳು ತೀರ್ಪು ಕೊಟ್ಟಿವೆ. ನ್ಯಾಯಿಕವಾಗಿ ಜಾರಿಗೆ ತರಲು ಸಾಧ್ಯವಿಲ್ಲದ್ದು ಶೂನ್ಯ ಒಪ್ಪಂದ (ವಾಯ್ಡ್ ಅಗ್ರೀಮೆಂಟ್). ನ್ಯಾಯದ ಬೆಂಬಲದ ಮೇಲೆ ಜಾರಿಗೆ ತರಬಹುದಾದ ಒಪ್ಪಂದವೇ ಕರಾರು (ಕಾಂಟ್ರಾಕ್ಟ್). ಒಪ್ಪಂದ ಹೀಗೆ ಕರಾರಿನಲ್ಲಿ ಪರ್ಯವಸಾನವಾಗುತ್ತದೆ. ಭಾರತದ ಕರಾರು ಕಾಯಿದೆಯಲ್ಲಿ ಒಪ್ಪಂದ ಮತ್ತು ಕರಾರು ಶಬ್ದಗಳ ವ್ಯತ್ಯಾಸಗಳನ್ನು ವಿವರಿಸಲಾಗಿದೆ. ನೋಡಿ—ಕರಾರು.

(ಎಲ್.ಎಸ್.ಕೆ.)

**ಒಪ್ಪಂದಗಳು, ಅನೌಪಚಾರಿಕ :** ವ್ಯವಹಾರದಲ್ಲಿ ಪೈಪೋಟಿ ನಡೆಸುತ್ತಿರುವ ವ್ಯಕ್ತಿಗಳು ಇಲ್ಲವೆ ಘಟಕಗಳು ಖಾಸಗಿಯಾಗಿ ಕಲೆತು ತಾವು ಯಾವ ಬೆಲೆಯನ್ನು ನಿಗದಿ ಮಾಡಬೇಕು, ಯಾವ ಪ್ರದೇಶದಲ್ಲಿ ವ್ಯವಹಾರ ನಡೆಸಬೇಕು, ಯಾವ ಸರಕನ್ನು ಹಿಡಿತದಲ್ಲಿ ಇಟ್ಟುಕೊಳ್ಳಬೇಕು ಅಥವಾ ಬಾರದು ಎಂಬ ಬಗ್ಗೆ ಮಾಡಿಕೊಂಡ ಒಪ್ಪಂದ. ಅನೌಪಚಾರಿಕ ಒಪ್ಪಂದ ಸಾಮಾನ್ಯವಾಗಿ ಸ್ಥಳೀಯ ಹಾಗೂ ತಾತ್ಕಾಲಿಕವಾಗಿರುತ್ತದೆ. ಇದಕ್ಕೆ ಯಾವ ಬಗೆಯ ಕಾಗದ, ಕರಾರಿನ ಆವಶ್ಯಕತೆಯೂ ಇರುವುದಿಲ್ಲ. ಪರಸ್ಪರ ವಿಶ್ವಾಸವೇ ಇದಕ್ಕೆ ಆಧಾರ. ಗೋಣು ಕುಯ್ಯುವ ಪೈಪೋಟಿ ತಡೆಯಲು, ಒಂದೇ ಬಗೆಯ ಸೇವೆ ನೀಡುವುದರಲ್ಲಿ ಅನೇಕರು ತೊಡಗುವುದನ್ನು ತಡೆಯಲು, ಇಂಥ ಒಪ್ಪಂದ ನೆರವಾಗುತ್ತದೆ.

ಅನೌಪಚಾರಿಕ ಒಪ್ಪಂದಕ್ಕೆ ಸಂಭಾವಿತರ ಒಪ್ಪಂದ, ಕ್ರಯ ಒಡಂಬಡಿಕೆ, ವ್ಯಾಪಾರಿ ಒಡಂಬಡಿಕೆ ಎಂಬ ಹೆಸರುಗಳೂ ಉಂಟು.

ಒಪ್ಪಂದದಲ್ಲಿ ಸೇರುವ ಘಟಕಗಳು ಸ್ವಲ್ಪಮಟ್ಟಿಗೆ ತಮ್ಮ ಸ್ವಾತಂತ್ರ್ಯವನ್ನು ಕಳೆದುಕೊಳ್ಳಬೇಕಾಗುತ್ತದೆ. ಆದರೆ ಅವುಗಳ ಒಡೆತನ ಮತ್ತು ನಿಯಂತ್ರಣ ಯಾವ ಬಗೆಯಲ್ಲೂ ಬಾಧಿತವಾಗುವುದಿಲ್ಲ. ಅನೌಪಚಾರಿಕ ಒಪ್ಪಂದ ಸರಳವಾಗಿ ಹಾಗೂ ಖರ್ಚಿಲ್ಲದೆ ಸಂಯೋಗದ ಫಲವನ್ನನುಭವಿಸುವ ಮಾರ್ಗವಾಗಿದೆ. ಸದಸ್ಯರು ಒಪ್ಪಂದಕ್ಕೆ ತಾವಾಗಿಯೇ ಮುಂದಾಗುತ್ತಾರೆ. ಸನ್ನಿವೇಶಕ್ಕೆ ತಕ್ಕಂತೆ ಒಪ್ಪಂದದಲ್ಲಿ ಬದಲಾವಣೆಮಾಡಿಕೊಳ್ಳುವುದು ಸುಲಭ. ಒಪ್ಪಂದ ಸದಸ್ಯರ ನಡುವೆ ಗುಟ್ಟಾಗಿ ಇರುತ್ತದೆ.

ಆದರೆ ಸಾಮಾನ್ಯ ಜನ ಇಂಥ ಒಪ್ಪಂದಗಳ ಸುಳಿವನ್ನರಿತು ಅವುಗಳ ಬಗ್ಗೆ ಸಂದೇಹ ತಾಳಬಹುದು. ಅವನ್ನು ಖಂಡಿಸಲೂ ಬಹುದು. ಇದಕ್ಕೆ ಕಾರಣ ಇಲ್ಲದೆ ಇಲ್ಲ. ಅನೌಪಚಾರಿಕ ಒಪ್ಪಂದಗಳು ಕೆಲವು ವೇಳೆ ಗ್ರಾಹಕರ ಹಿತವನ್ನು ಕಡೆಗಣಿಸಿ, ಅವರನ್ನು ಶೋಷಿಸಲು ನೆರವಾಗುತ್ತವೆ.

ಪರಸ್ಪರ ನಂಬಿಕೆ. ಕೊಟ್ಟ ಮಾತಿನಂತೆ ನಡೆಯುವಿಕೆ—ಇವೇ ಅನೌಪಚಾರಿಕ ಒಪ್ಪಂದಗಳಿಗೆ ಆಧಾರವಾದ್ದರಿಂದ ಅವುಗಳ ಯಶಸ್ಸು ಖಚಿತವಲ್ಲ. ಎಲ್ಲ ಸದಸ್ಯರೂ ಒಪ್ಪಂದದ ನಿಯಮಗಳನ್ನು ಪಾಲಿಸುತ್ತಾರೆಂಬ ಭರವಸೆಯಿಲ್ಲ. ಕೆಲವರು ಗುಟ್ಟಾಗಿ ನಿಯಮ ಮೀರಿ ನಡೆಯಬಹುದು. ಮೇಲಾಗಿ ಸದಸ್ಯರ ಇತರ ಚಟುವಟಿಕೆಗಳ ಮೇಲೆ ಹತೋಟಿಯಿಲ್ಲದಿರುವದರಿಂದ ಒಪ್ಪಂದದ ಉದ್ದೇಶ ನೆರವೇರದೆ ಇರಬಹುದು. ಉದಾಹರಣೆಗೆ ಒಪ್ಪಂದದಲ್ಲಿ ಕನಿಷ್ಠ ಮಾರುವ ಬೆಲೆ ಮಾತ್ರ ನಿಗದಿಯಾಗಿದ್ದು ಉತ್ಪಾದನೆ ಅನಿರ್ದಿಷ್ಟವಾಗಿ ಮುಂದುವರಿದರೆ ಮಾರುಕಟ್ಟೆಯಲ್ಲಿ ನೀಡಿಕೆ ಬೇಡಿಕೆಗಿಂತ ಅಧಿಕವಾಗಿ ಬೆಲೆ ಕುಸಿಯಬಹುದು.

ಅನೌಪಚಾರಿಕ ಒಪ್ಪಂದಗಳು ಸ್ವಾರ್ಥಸಾಧನೆಗೆ, ಗ್ರಾಹಕರ ಶೋಷಣೆಗೆ ಕೈಹಾಕಬಹುದಾದರೂ ಸೂಕ್ತ ವ್ಯಕ್ತಿಗಳ ನಡುವೆ ಆದ ಒಪ್ಪಂದಗಳು ಸಮಾಜದ ಹಿತದೃಷ್ಟಿಯಿಂದಲೂ ಸದಸ್ಯರಿಗೆ ಅನುಕೂಲ ಮತ್ತು ಮಿತವ್ಯಯಗಳನ್ನು ದೊರಕಿಸುವ ದೃಷ್ಟಿಯಿಂದಲೂ ಮುಖ್ಯವಾಗಿವೆ. (ಡಿ.ಎನ್.ಎಸ್.ಎಂ.)

**ಒಪ್ಪಿಗೆ :** ತೀರ್ಮಾನಿಸಬೇಕಾಗಿರುವ ಅಥವಾ ವಿಚಾರಣೆಗೆ ಸಂಬಂಧಿಸಿದ, ಸಂಗತಿಯ ಬಗ್ಗೆ ಒಂದು ಅನುಮಾನ (ಇನ್‌ಫರೆನ್ಸ್) ಸೂಚಿಸುವಂತೆ ಬಾಯಿಮಾತಿನಿಂದಾಗಲಿ ಬರೆಹದ ಮೂಲಕವಾಗಲಿ ಒಬ್ಬಾತ ಮಾಡುವ ಹೇಳಿಕೆ (ಅಡ್ಮಿಷನ್). ಇದು ಭಾರತೀಯ ಸಾಕ್ಷ್ಯ ಕಾಯಿದೆಯ (ಇಂಡಿಯನ್ ಎವಿಡೆನ್ಸ್ ಆಕ್ಟ್) 17ನೆಯ ಕಲಮಿನಲ್ಲಿ ಒಪ್ಪಿಗೆ ಶಬ್ದಕ್ಕೆ ಕೊಟ್ಟಿರುವ ವ್ಯಾಖ್ಯೆ.

B ಯಿಂದ ತನಗೆ 500 ರೂ. ಸಾಲ ಬರಬೇಕೆಂದು ಆತನ ಮೇಲೆ A ಹೂಡಿದ ಒಂದು ದಾವೆಯಲ್ಲಿ, ತಾನು ಆ ಸಾಲ ತೆಗೆದುಕೊಂಡಿಲ್ಲವೆಂದು B ವಾದ ಹೂಡಬಹುದು. Bಗೆ A ಸಾಲ ಕೊಟ್ಟಿದ್ದನೆ, ಎಂಬುದು ಈ ದಾವೆಯಲ್ಲಿ ತೀರ್ಮಾನವಾಗಬೇಕಾದ ಅಂಶ. ಇಲ್ಲಿ ತೀರ್ಮಾನಿಸಬೇಕಾದ ಅಂಶವನ್ನು ರುಜುವಾತು ಮಾಡುವ ಹೊಣೆ, Aಯ ಮೇಲಿದೆ. ಈ ಅಂಶವನ್ನು ರುಜುವಾತು ಮಾಡಲು A ಸಾಕ್ಷ್ಯ ಒದಗಿಸಬೇಕು. B ಯಾವಾಗಲಾದರೂ ಬಾಯಿಮಾತಿನ ಮೂಲಕ ಅಥವಾ ಬರೆವಣಿಗೆಯ ಮೂಲಕ ಸಾಲ ಪಡೆದಿದ್ದುದಾಗಿ ಒಪ್ಪಿಕೊಂಡಿದ್ದರೆ, ಅಂಥ ಹೇಳಿಕೆ ಒಪ್ಪಿಗೆಯೆನಿಸಿಕೊಳ್ಳುತ್ತದೆ. ಈ ದಾವೆಯಲ್ಲಿ B ತಾನು ಸಾಲ ಪಡೆದೇ ಇಲ್ಲ ಎಂದು ತಕರಾರು ಹೂಡಿದ ಪಕ್ಷದಲ್ಲಿ, Bಯಿಂದ ತನಗೇನೂ ಸಾಲ ಬರಬೇಕಾಗಿಲ್ಲವೆಂದು A ಎಂದಾದರೂ ಹೇಳಿದ್ದರೆ, ಆ ಹೇಳಿಕೆಯನ್ನು Aಯ ವಿರುದ್ಧವಾದ ರುಜುವಾತಾಗಿ ಉಪಯೋಗಿಸಬಹುದು. ಅದು Aಯ ಒಪ್ಪಿಗೆ ಎನಿಸುತ್ತದೆ. ಆದರೆ, ತನಗೆ B ಐದು ನೂರು ರೂಪಾಯಿ ಸಾಲ ಕೊಡಬೇಕು ಎಂದು A ಹೇಳಿದ್ದರೆ ಅಥವಾ Aಗೆ ತಾನೇನೂ ಸಾಲ ಕೊಡಬೇಕಾಗಿಲ್ಲ ಎಂದು B ಹೇಳಿದ್ದರೆ ಅದು ಒಪ್ಪಿಗೆಯೆನಿಸುವುದಿಲ್ಲ. ಅಂಥ ಹೇಳಿಕೆಯಿಂದ ಯಾವ ಪ್ರಯೋಜನವೂ ಇಲ್ಲ. ಯಾರು ಹೇಳಿಕೆ ನೀಡಿದ್ದಾನೋ ಅವನ ವಾದಕ್ಕೆ ಅವನ ಹೇಳಿಕೆಯೇ ವಿರುದ್ಧವಾಗಿದ್ದರೆ ಅದು ಒಪ್ಪಿಗೆಯಾಗುತ್ತದೆ.

ಈ ಬಗೆಯ ಹೇಳಿಕೆಗಳು ಸಿವಿಲ್ ಮೊಕದ್ದಮೆಯಲ್ಲಿ ಒಪ್ಪಿಗೆ (ಅಡ್ಮಿಷನ್) ಎನಿಸಿಕೊಳ್ಳುತ್ತವೆ. ಕ್ರಿಮಿನಲ್ ಮೊಕದ್ದಮೆಗಳಲ್ಲಿ ಆರೋಪಿಯಾದವನು ನ್ಯಾಯಾಲಯದಲ್ಲೇ ಆಗಲಿ, ಹೊರಗೇ ಆಗಲಿ (ಪೋಲೀಸರ ಸಮ್ಮುಖದಲ್ಲಿ ಮಾಡಿದ ಹೇಳಿಕೆಗಳ ಹೊರತಾಗಿ), ಬರೆವಣಿಗೆಯಲ್ಲಿ ಅಥವಾ ಬಾಯಿಮಾತಿನಲ್ಲಿ ಆರೋಪಿಸಿದ ಕೃತ್ಯ ತನ್ನಿಂದ ಆಯಿತೆಂಬ ಅನುಮಾನವನ್ನು ಸೂಚಿಸುವಂಥ ರೀತಿಯಲ್ಲಿ ಹೇಳಿಕೆ ಕೊಟ್ಟಿದ್ದರೆ ಅದು ತಪ್ಪೊಪ್ಪಿಗೆ (ಕನ್‌ಫೆಷನ್) ಎನಿಸುತ್ತದೆ.

ಒಪ್ಪಿಗೆ ಎರಡು ಬಗೆ. ಒಂದು, ಸಂದರ್ಭಕ್ಕೆ ಅನುಗುಣವಾಗಿ ಮಾಡಿದ ವಿಧ್ಯುಕ್ತ (ಫಾರ್ಮಲ್) ಒಪ್ಪಿಗೆ. ಇನ್ನೊಂದು, ಅವಿಧೀಯ ಅಥವಾ ಅನಿರ್ಬಂಧ (ಇನ್‌ಫಾರ್ಮಲ್) ಒಪ್ಪಿಗೆ. ಮೊದಲನೆಯದನ್ನು ಸಾಧಾರಣವಾಗಿ ನ್ಯಾಯಾಲಯದಲ್ಲಿ ಮಾಡಲಾಗುತ್ತದೆ. ತನಗೆ ಜೀವನಾಂಶ ಕೊಡಬೇಕೆಂದು Bಯ ಮೇಲೆ A ದಾವ ಹೂಡಿದರೆ, A ತನ್ನ ಹೆಂಡತಿ ಎಂಬುದಾಗಿ B ಒಪ್ಪಿಕೊಂಡರೆ, ಅದು ಆ ಸಂದರ್ಭಕ್ಕಾಗಿ ಒಪ್ಪಿಕೊಂಡ ಸಂಗತಿ. A ತನ್ನ ಹೆಂಡತಿಯೇ ಅಲ್ಲವೆಂದೂ ತಾನು ಜೀವನಾಂಶ ಕೊಡಲು ಬಾಧ್ಯನಲ್ಲವೆಂದೂ ಒಂದು ವೇಳೆ B ತಕರಾರು ಹೂಡಿದರೆ, ಆಕೆ Bಯ ಹೆಂಡತಿಯೆ—ಎಂಬುದು ತೀರ್ಮಾನಿಸಬೇಕಾದ ಅಂಶವಾಗುತ್ತದೆ. B ಯಾವಾಗಲೋ Aಗೆ ಪತ್ರ ಬರೆದು ಆಕೆಯನ್ನು ಪತ್ನಿಯೆಂದು ಕರೆದಿದ್ದರೆ ಅಥವಾ ಆಕೆಯ ಪ್ರೀತಿಯ ಪತಿಯೆಂದು ತನ್ನ ಬಗ್ಗೆ ಬರೆದುಕೊಂಡಿದ್ದರೆ Aಗೆ B ಬರೆದ ಈ ಪತ್ರವನ್ನು Bಯ ಒಪ್ಪಿಗೆ ಎಂದು ಕೋರ್ಟಿನಲ್ಲಿ ಹಾಜರುಪಡಿಸಬಹುದು. ಈ ಪತ್ರ ಬರೆದಾಗ A ಮತ್ತು Bಗಳ ಮಧ್ಯೆ ಯಾವ ವಿವಾದವೂ ಉಂಟಾಗಿರಲಿಲ್ಲ. ಅದು ಅನ್ಯ ಸಂದರ್ಭದಲ್ಲಿ ಮಾಡಿದ ಹೇಳಿಕೆ. ನ್ಯಾಯಾಧೀಶರ ಸಮ್ಮುಖದಲ್ಲಿ ಮಾಡಿದ ತಪ್ಪೊಪ್ಪಿಗೆ ಹೇಳಿಕೆಗಳು ನ್ಯಾಯಾಲಯದ ಹೊರಗೆ ಮಾಡಿದ ಹೇಳಿಕೆಗಳಿಗಿಂತ ಹೆಚ್ಚು ನಂಬಲರ್ಹವಾದವು.

ಯಾವುದೇ ಹೇಳಿಕೆಯನ್ನು ಇನ್ನೊಬ್ಬರ ವಿರುದ್ಧವಾಗಿ ಉಪಯೋಗಿಸಿಕೊಂಡು ಅದನ್ನು ಸಾಕ್ಷ್ಯವೆಂದು ಅಂಗೀಕರಿಸಬೇಕಾದರೆ ಅಂಥ ಹೇಳಿಕೆಯನ್ನು ಯಾರ ವಿರುದ್ಧ ಉಪಯೋಗಿಸಬೇಕಾಗಿದೆಯೋ ಅವರ ಸಮ್ಮುಖದಲ್ಲೇ ನ್ಯಾಯಾಲಯದಲ್ಲಿ ಮಾಡಿರಬೇಕು ; ಹಾಗೂ ಆ ಹೇಳಿಕೆಯ ಸತ್ಯಾಸತ್ಯತೆಗಳನ್ನು ಪಾಟಿ ಸವಾಲಿನ (ಕ್ರಾಸ್ ಎಕ್ಸಾಮಿನೇಷನ್) ಒರೆಗಲ್ಲಿಗೆ ಹಚ್ಚಿನೋಡಿಯೇ ತೀರಬೇಕು—ಎಂಬುದು ಸಾಕ್ಷ್ಯದ ಮೂಲಭೂತ ಸೂತ್ರ. ಬೆನ್ನ ಹಿಂದೆ, ನ್ಯಾಯಾಲಯದ ಹೊರಗೆ ಮಾಡಿದ, ಪಾಟಿ ಸವಾಲು ಮಾಡಿ ಪರೀಕ್ಷೆಗೆ ಗುರಿಪಡಿಸಿದ, ಹೇಳಿಕೆಗಳನ್ನು ಸಾಕ್ಷ್ಯದಲ್ಲಿ ಅಂಗೀಕರಿಸಕೂಡದು. ಆದರೆ ಒಪ್ಪಿಗೆಗಳನ್ನು, ಯಾವಾಗಲೋ ಯಾವುದೋ ಅನ್ಯ ಸಂದರ್ಭದಲ್ಲಿ ಮಾಡಿದ ಹೇಳಿಕೆಯನ್ನು ಪಾಟಿ ಸವಾಲು ಇಲ್ಲದೆಯೇ ಸಾಕ್ಷ್ಯದಲ್ಲಿ ಅಂಗೀಕರಿಸಬಹುದೆಂದು ನ್ಯಾಯಶಾಸ್ತ್ರ ಒಪ್ಪಿಕೊಂಡಿದೆ. ಒಪ್ಪಿಕೊಂಡ ಮಾತಿಗೆ ರುಜುವಾತು ಬೇಕಾಗುವುದಿಲ್ಲ. ತಾನು 500 ರೂ. ಕೊಡಬೇಕಾದುದುಂಟೆಂದು B ಒಪ್ಪಿಕೊಂಡರೆ Aಗೆ ಸಾಲ ಸಲ್ಲಬೇಕೇ ಸಲ್ಲಬಾರದೇ ಎಂಬ ಮುಂದಿನ ಮಾತೇ ಏಳಲಾರದು. ಹಾಗೆಯೇ B ತನಗೆ ಏನೂ ಕೊಡಬೇಕಾದುದಿಲ್ಲವೆಂದು A ಹೇಳಿದರೆ ಮುಂದಿನ ಮಾತೇ ಉಳಿಯುವುದಿಲ್ಲ. ಇಂಥ ಹೇಳಿಕೆಗಳನ್ನು ಪಾಟಿ ಸವಾಲು ಮಾಡಿ ಪರೀಕ್ಷಿಸಬೇಕಾದ ಅಗತ್ಯವಿಲ್ಲ. ಏಕೆಂದರೆ ನಿಜವಲ್ಲದ ಮಾತನ್ನು A ಆಗಲಿ B ಆಗಲಿ ಹೇಳುವುದಿಲ್ಲ. ಅಲ್ಲದೆ, ತನ್ನ ಹಿತಕ್ಕೆ ವಿರುದ್ಧವಾದ ಮಾತನ್ನು ಒಬ್ಬಾತ ಹೇಳಲಾರ. ಮನುಷ್ಯನ ಸ್ವಭಾವ ತನ್ನ ಸ್ವಾರ್ಥಕ್ಕೆ ಧಕ್ಕೆ ತಂದುಕೊಳ್ಳುವುದಲ್ಲ. ಹಾಗೆ ಧಕ್ಕೆ ಬರುವಂಥ ಮಾತನ್ನು ಆಡಿದರೆ ಅಂಥ ಕೃತಿ ಮಾಡಿದರೆ, ನಡತೆಯಲ್ಲಿ ತೋರಿಸಿಕೊಂಡರೆ, ಅದರಿಂದ ಆ ಮಾತು ಅಥವಾ ಕೃತಿ ನಿಜವಿರಬೇಕೆಂದೇ ಸ್ವಾಭಾವಿಕವಾಗಿ ತೀರ್ಮಾನಿಸಬೇಕಾಗುತ್ತದೆ. ಆ ಹೇಳಿಕೆಯನ್ನು ಪಾಟಿ ಸವಾಲು ಮಾಡುವವರೂ ಇರುವುದಿಲ್ಲ. ಪಾಟಿ ಸವಾಲಿನ ಹಕ್ಕು ವಿರುದ್ಧ ಪಕ್ಷದವರಿಗೆ ಸೇರಿದ್ದು. ತನ್ನ ಮಾತನ್ನು ತಾನೇ ಪಾಟಿ ಸವಾಲು ಮಾಡುವುದರ ಅಗತ್ಯವೇನೂ ಇಲ್ಲ.

ಒಪ್ಪಿಗೆಗಳು ಬಾಯಿಮಾತಿನಲ್ಲಿ ಇರಬಹುದು, ಬರೆವಣಿಗೆಯಲ್ಲಿರಬಹುದು. ಇವೆರಡೂ ಅಲ್ಲದೆ ಸಂಜ್ಞೆಗಳ ರೂಪದಲ್ಲಿಯೂ ಇರಬಹುದು. ಬರೆವಣಿಗೆಯ ಮೂಲಕ ವ್ಯಕ್ತಪಡಿಸಿದ ಹೇಳಿಕೆಗಳು ಅತ್ಯಂತ ಉತ್ತಮ ಒಪ್ಪಿಗೆಗಳು. ಬಾಯಿಮಾತಿನ ಮೂಲಕ ಮಾಡಿದ ಹೇಳಿಕೆಗಳನ್ನು ತುಂಬ ಪರೀಕ್ಷೆ ಮಾಡಿ, ಜಾಗರೂಕತೆಯಿಂದ ಅಂಗೀಕರಿಸಬೇಕಾಗುತ್ತದೆ. ಏಕೆಂದರೆ ಬಾಯಿಮಾತು ಒಬ್ಬರಿಂದ ಇನ್ನೊಬ್ಬರಿಗೆ ಮುಟ್ಟುವ ಹೊತ್ತಿಗೆ ಏನೇನು ರೂಪಾಂತರ ಹೊಂದುತ್ತದೆಯೋ ಹೇಳಲಿಕ್ಕೆ ಬಾರದು. ಮೂಕರು ಮಾಡಿದ ಸಂಜ್ಞೆಗಳು ಸರಿಯಾಗಿ ಅರ್ಥವಾಗುವಂತಿದ್ದರೆ ಒಪ್ಪಿಗೆಗಳಾಗಬಹುದು. ಮೌನವೂ ಒಪ್ಪಿಗೆಯಾಗಬಹುದು. ನ್ಯಾಯಾಲಯದಲ್ಲಿ ಕೇಳಿದ ಪ್ರಶ್ನೆಗೆ ಆರೋಪಿ ಅಥವಾ ಕಕ್ಷಿ ಉತ್ತರ ಕೊಡದೆ ಸುಮ್ಮನಿದ್ದರೆ ಸೂಚಿಸಿದ ಸಂಗತಿ ಸತ್ಯವಾದ್ದೆಂದು ಅನುಮಾನಿಸಬಹುದು. ಇನ್ನು ಕೆಲವು ಸಂದರ್ಭಗಳಲ್ಲಿ ಸಾಕ್ಷಿಯ ಅಥವಾ ಕಕ್ಷಿಯ ಅಥವಾ ಆರೋಪಿಯ ಮುಖಚರ್ಯೆ, ಇಲ್ಲವೆ ಅಂಗಭಂಗಿಯೂ ಒಪ್ಪಿಗೆಯನ್ನು ಸೂಚಿಸಬಹುದು. ಒಮ್ಮೊಮ್ಮೆ ಮಾತಿನಿಂದಲೂ ವ್ಯಕ್ತಪಡಿಸಲಾರದ ಸಂಗತಿಯನ್ನು ಒಬ್ಬನ ಮುಖಚರ್ಯೆ, ಅಂಗಭಂಗಿ ವ್ಯಕ್ತಪಡಿಸಬಹುದು. ಘೋರ ಅಪರಾಧ ಮಾಡಿದವನ ಮುಂದೆ ಯಾವುದೋ ಒಂದು ಮಾತನಾಡಿದರೆ, ಅವನ ಮನಸ್ಸಿಗೆ ಅದು ಚುಚ್ಚಿ ಅವನ ಮುಖಚರ್ಯೆಯಲ್ಲಿ ಅವನ ಮನಸ್ಸಿನ ಭಾವ ಸ್ಫುಟವಾಗಿ ವ್ಯಕ್ತವಾಗಬಹುದು. ಆಗ ಮಾತಿಗಿಂತ ಅವನ ಮುಖಚರ್ಯೆಯೇ ಬಹು ಪರಿಣಾಮಕಾರಿಯಾದ ಸಾಕ್ಷ್ಯವಾಗಬಹುದು. ಅದು ಒಂದು ಅರ್ಥದಲ್ಲಿ ಅವನ ಒಪ್ಪಿಗೆಯನ್ನು ಸೂಚಿಸುತ್ತದೆ. ಆದರೆ ಒಪ್ಪಿಗೆಗಳ ಗುಂಪಿಗೆ ಅವನ ನಡತೆಯನ್ನು ಸೇರಿಸಲಾಗದು. ಒಪ್ಪಿಗೆಗಳು ಹೇಳಿಕೆಗಳಾಗಿರಬೇಕು. ಆದರೆ ಬಾಯಿ ಬಿಡದೆ ಸಮ್ಮತಿ ಸೂಚಿಸುವುದೂ ಒಂದು ಬಗೆಯ ಹೇಳಿಕೆ ; ಅಥವಾ ತಲೆ ಆಡಿಸಿ ಸಮ್ಮತಿ ಸೂಚಿಸಬಹುದು. ಈ ಅರ್ಥದಲ್ಲಿ ಮೌನವೂ ಸಂಜ್ಞೆಯೂ ಒಪ್ಪಿಗೆಗಳಾಗಬಹುದು.

ಒಪ್ಪಿಗೆಗಳನ್ನು ಇಡಿಯಾಗಿ ನೋಡಬೇಕು. ಒಪ್ಪಿಕೊಂಡ ಮಾತಿಗೆ ರುಜುವಾತೇಕೆ—ಎಂಬ ಸೂತ್ರ ಇರುವುದರಿಂದ, ಒಂದು ಮಾತು, ಕೃತಿ, ನಡತೆ ಒಪ್ಪಿಗೆಯೋ ಅಲ್ಲವೋ ಎಂಬುದನ್ನು ಕೂಲಂಕಷವಾಗಿ ವಿಮರ್ಶಿಸಬೇಕಾಗುತ್ತದೆ. ಮೇಲೆ ಮೇಲೆ ನೋಡಿದರೆ ಒಪ್ಪಿಗೆ ಎಂಬಂತೆ ಕಾಣುವ ಎಷ್ಟೋ ಮಾತುಗಳು ಒಪ್ಪಿಗೆಯಾಗಿಲ್ಲದಿರಬಹುದು. ಒಂದು ಹೇಳಿಕೆಯನ್ನು ಒಪ್ಪಿಗೆ ಎಂದು ಅಂಗೀಕರಿಸುವುದರಿಂದ ಕಟು ಪರಿಣಾಮಗಳಿಗೆ ಎಡೆಕೊಡುವುದರಿಂದ ಆ ಒಪ್ಪಿಗೆಗಳನ್ನು ಇಡಿಯಾಗಿ ಪರಿಶೀಲನೆ ಮಾಡಿ ಅದರ ಅರ್ಥವನ್ನು, ಅದರಿಂದ ತೇಲುವ ಅಂಶವನ್ನು, ಸಮಗ್ರದೃಷ್ಟಿಯಿಂದ ನೋಡಬೇಕು. ಇಲ್ಲದೆ ಹೋದರೆ ಆ ಹೇಳಿಕೆ ನೀಡಿದವನ ಅಭಿಪ್ರಾಯವೇನು ಎಂಬುದು ಸರಿಯಾಗಿ ವ್ಯಕ್ತವಾಗಲಾರದು. ಒಬ್ಬ ಆರೋಪಿಯ ಮೇಲೆ ಖೂನಿ ಕೇಸಿನ ಆರೋಪಣೆ ಮಾಡಲಾಗಿದ್ದಾಗ, ಆತ ವಿಚಾರಕ ದಂಡಾಧಿಕಾರಿಯ (ಕಮಿಟಲ್ ಮ್ಯಾಜಿಸ್ಟ್ರೇಟ್) ಮುಂದೆ ಈ ಕೆಳಗಿನ ಹೇಳಿಕೆಯನ್ನು ಕೊಟ್ಟಿರಬಹುದು : ನಾನು ಹೊಲದಿಂದ ಮನೆಗೆ ಬಂದೆ. ಮನೆಯ ಬಾಗಿಲು ಮುಚ್ಚಿತ್ತು. ಬಾಗಿಲು ತಟ್ಟಿದೆ. ಕೂಡಲೇ ಬಾಗಿಲು ತೆರೆಯಲಿಲ್ಲ. ಒಂದೆರಡು ಬಾರಿ ಕೂಗಿದೆ. ಆಗಲೂ ತೆರೆಯಲಿಲ್ಲ. ಬಲವಾಗಿ ಬಾಗಿಲನ್ನು ಒದ್ದೆ. ಒಳಗಿನ ಅಗಳಿ ಮುರಿದು ಬಾಗಿಲು ತೆರೆಯಿತು. ಒಳಗೆ ಹೋದೆ. ನನ್ನ ಹೆಂಡತಿ ತನ್ನ ಸೀರೆಕುಪ್ಪಸ ಸರಿಪಡಿಸಿಕೊಳ್ಳುತ್ತಿದ್ದಳು. ಒಬ್ಬ ಗಂಡಸು ಒಂದು ಮೂಲೆಯಲ್ಲಿ ಪಂಚೆ ಉಟ್ಟುಕೊಳ್ಳುತ್ತ ನಿಂತಿದ್ದ. ಹಾಸಿಗೆ ಅಸ್ತವ್ಯಸ್ತವಾಗಿತ್ತು. ಸಂಶಯ ಬಂತು. ಅಲ್ಲಿಯೇ ನಾಗಂದಿಗೆಯ ಮೇಲೆ ಇಟ್ಟಿದ್ದ ಕುಡುಗೋಲು ತೆಗೆದುಕೊಂಡು ಒಮ್ಮೆ ಬೀಸಿದೆ. ಮೂಲೆಯಲ್ಲಿ ನಿಂತಿದ್ದವನ ಕುತ್ತಿಗೆ ಕತ್ತರಿಸಿ

ಹೋಯಿತು. ಈ ಹೇಳಿಕೆಯ ಕೊನೆಯ ಎರಡು ವಾಕ್ಯಗಳನ್ನೇ ಬಿಡಿಯಾಗಿ ತೆಗೆದುಕೊಂಡರೆ ಆ ಆರೋಪಿ ಖೂನಿ ಮಾಡಿದನೆಂದೇ ಅನುಮಾನ ಮಾಡಬೇಕಾಗುತ್ತದೆ. ಆದರೆ, ಆ ಹೇಳಿಕೆಯನ್ನು ಇಡಿಯಾಗಿ ತೆಗೆದುಕೊಂಡರೆ ಅದು ಖೂನಿ ಆಗುವುದಿಲ್ಲ ಎಂದು ಗೊತ್ತಾಗುತ್ತದೆ. ಆದ ಕಾರಣ ಒಪ್ಪಿಗೆಗಳನ್ನು ಇಡಿಯಾಗಿ ಪರಿಶೀಲಿಸಿದ ಮೇಲೆಯೇ ಬಳಸಿಕೊಳ್ಳಬೇಕು. ಅವುಗಳನ್ನು ಅಂಶತಃ ಹೆಕ್ಕಿ ತೆಗೆದು ಬಳಸಿಕೊಳ್ಳಬಾರದು.

ಒಪ್ಪಿಗೆಗಳನ್ನು ಇಡಿಯಾಗಿ ಪರಿಶೀಲಿಸಬೇಕಾಗಿರುವಂತೆಯೇ ಅವನ್ನು ಅತ್ಯಂತ ಸೂಕ್ಷ್ಮವಾಗಿ, ಜಾಗರೂಕತೆಯಿಂದ ಪರಿಶೀಲಿಸಬೇಕು. ಅದರಲ್ಲೂ ಬಾಯಿಮಾತಿನ ಒಪ್ಪಿಗೆಯಾದರೆ, ನ್ಯಾಯಾಲಯದ ಹೊರಗೆ ಮಾಡಿದಂಥ ಹೇಳಿಕೆಗಳಾದರೆ, ಇನ್ನೂ ಎಚ್ಚರಿಕೆಯಿಂದ ಪರಾಂಬರಿಸಬೇಕಾಗುತ್ತದೆ. ಒಬ್ಬ ಹೇಳಿದ ಮಾತನ್ನು ಇನ್ನೊಬ್ಬ ಇದ್ದಕ್ಕಿದ್ದಹಾಗೆ, ಒಂದಕ್ಷರವೂ ಬಿಡದೆ ಕೇಳಿ ನೆನಪಿಟ್ಟುಕೊಂಡರೂ ಆಡಿದ ಮಾತಿನ ಸಂದರ್ಭ, ಸನ್ನಿವೇಶ, ಉದ್ದೇಶ, ಭಾವ—ಇವನ್ನು ಗಣನೆಗೆ ತೆಗೆದುಕೊಳ್ಳದಿದ್ದರೆ, ಆಡಿದವನ ಮಾತಿನ ಧ್ವನಿಯೂ ಆಡಿದ ಮಾತಿನ ಮೂಲಾರ್ಥವನ್ನು ಭಾವವನ್ನು ಗ್ರಹಿಸದೆ ಹೋಗಬಹುದು. ಆಡಿದವನ ಧ್ವನಿಯು ಆಡಿದ ಮಾತಿನ ಅರ್ಥ ಮತ್ತು ಉದ್ದೇಶಗಳನ್ನು ವ್ಯಕ್ತಪಡಿಸುತ್ತದೆ. ಹೀಗಿರುವಾಗ ಬಾಯಿಮಾತಿನ ಒಪ್ಪಿಗೆಗಳನ್ನು ನಂಬಿ, ಅದರಿಂದ ತೇಲುವ ಅನುಮಾನವನ್ನು ನಿರ್ಧರಿಸುವುದು ಕಷ್ಟದ ಕೆಲಸ. ತೃಪ್ತಿಕರವಾಗಿ ನಿಸ್ಸಂಶಯವಾಗಿ ರುಜುವಾತು ಆದ ಒಪ್ಪಿಗೆಗಳಿಗೆ ಸಾಕ್ಷ್ಯದಲ್ಲಿ ದೊಡ್ಡ ಸ್ಥಾನವಿದೆ. ಅವುಗಳ ತೂಕ ಹೆಚ್ಚು. ಅವು ಬಹಳ ಮಟ್ಟಿಗೆ ಸತ್ಯವೇ ಎಂದು ನಿರ್ಧರಿಸಲಾಗುತ್ತದೆ. ಒಪ್ಪಿಕೊಂಡವನು ಅದರಿಂದ ಉದ್ಭವಿಸುವ ಎಲ್ಲ ಪರಿಣಾಮಗಳಿಗೂ ಬದ್ಧನಾಗುತ್ತಾನೆ.

ಹೇಗೆಂದರೆ ಒಪ್ಪಿಕೊಂಡವನು ತನ್ನ ಒಪ್ಪಿಗೆಯಿಂದ ತಪ್ಪಿಸಿಕೊಳ್ಳಲಾರನೇ ಎಂಬ ಪ್ರಶ್ನೆ ಏಳುತ್ತದೆ. ಒಪ್ಪಿಕೊಂಡವನು ತೃಪ್ತಿಕರವಾಗಿ ತನ್ನ ಒಪ್ಪಿಗೆಯನ್ನು ವಿವರಿಸಿ, ಅದರಿಂದ ತಾನು ಬದ್ಧನಲ್ಲ ಎಂದು ತೋರಿಸಿಕೊಟ್ಟರೆ ಆಗ ಮಾತ್ರ ಆತ ಬದ್ಧನಲ್ಲ. ಒತ್ತಾಯ, ವಂಚನೆ, ಮೋಸ, ಆಸೆ, ವಸೂಲಿ ಮುಂತಾದವುಗಳಿಗೆ ಒಳಗಾಗಿ ಮಾಡಿದ ಒಪ್ಪಿಗೆಗಳಿಂದ ಒಪ್ಪಿಕೊಂಡವನು ಬದ್ಧನಾಗಲಾರ. ಆದರೆ, ಹಾಗೆ ಅನುಚಿತ ಒತ್ತಾಯ, ವಂಚನೆ, ಮೋಸ, ಆಸೆ, ವಸೂಲಿಗಳಿಗೆ ಒಳಗಾದ ಸಂಗತಿಯನ್ನು ರುಜುವಾತು ಮಾಡುವ ಭಾರ, ಒಪ್ಪಿಕೊಂಡವನ ಮೇಲಿರುತ್ತದೆ.

ಒಂದು ವೇಳೆ ಒಪ್ಪಿಗೆ ಈ ಎಲ್ಲ ಕಟುಪರೀಕ್ಷೆಗಳಿಗೂ ಗುರಿಯಾಗಿ ಪಾರಾದರೂ ಅದನ್ನೊಂದೇ ನಂಬಿ ಸತ್ಯಾಸತ್ಯ, ನ್ಯಾಯಾನ್ಯಾಯಗಳನ್ನು ಖಂಡಿತವಾಗಿ ನಿರ್ಧರಿಸಲು ಬಾರದಿರಬಹುದು. ಒಪ್ಪಿಗೆಯೂ ಒಂದು ಸಾಕ್ಷ್ಯ ಎನಿಸಬಹುದು. ದತ್ತಕ ತೆಗೆದುಕೊಂಡಿದ್ದು ನಿಜವೇ ಅಲ್ಲವೆ ಎಂಬುದು ತೀರ್ಮಾನಿಸಬೇಕಾದ ಅಂಶವಾಗಿದ್ದಾಗ ದತ್ತು ತಂದೆ ಅಥವಾ ತಾಯಿ ದತ್ತು ಸ್ವೀಕಾರ ಸಮಾರಂಭದ ಅಚ್ಚಾದ ಆಹ್ವಾನ ಪತ್ರಿಕೆಯನ್ನು ಕಳುಹಿಸಿದ್ದುದಾಗಿ ಒಪ್ಪಿಕೊಳ್ಳಬಹುದು. ಆದರೆ ಅದೊಂದೇ ಒಪ್ಪಿಗೆಯಿಂದ ದತ್ತುಸ್ವೀಕಾರ ನಿಜ ಎಂದು ತೀರ್ಪುಹೇಳಲು ಬರುವುದಿಲ್ಲ. ವಾಸ್ತವವಾಗಿ ಹಡೆದ ತಂದೆ ಅಥವಾ (ತಂದೆ ಇಲ್ಲದಿದ್ದರೆ) ತಾಯಿ, ಮಗುವನ್ನು ದತ್ತು ತಂದೆ ಅಥವಾ ತಾಯಿಗೆ ವಾಸ್ತವವಾಗಿ ಕೊಟ್ಟುದನ್ನು ರುಜುವಾತು ಮಾಡಲೇಬೇಕು. ಅಚ್ಚಾದ ಆಹ್ವಾನ ಕೊಟ್ಟದ್ದು ನಿಜವೆಂದು ಹೇಳಿದ ಮಾತು ಒಂದು ಪ್ರಬಲವಾದ ಸಾಕ್ಷ್ಯವಾಗುತ್ತದೆ ಮಾತ್ರ.

ಒಂದು ವ್ಯಾಜ್ಯಕ್ಕೆ ಕಕ್ಷಿಗಳಾದವರು ಅಥವಾ ಅವರ ಅಧಿಕೃತ ಪ್ರತಿನಿಧಿಗಳು ಕೊಟ್ಟ ಹೇಳಿಕೆಗಳು ಒಪ್ಪಿಗೆಗಳು ಎನಿಸಿಕೊಳ್ಳುತ್ತವೆ. ಪ್ರಾತಿನಿಧಿಕವಾಗಿ ದಾವೆಯನ್ನು ಹೂಡಿದವರಾಗಲಿ, ಪ್ರಾತಿನಿಧಿಕವಾಗಿ ಪ್ರತಿಕಕ್ಷಿಯಾಗಿ ಆ ದಾವೆಯನ್ನು ಎದುರಿಸಿದವರಾಗಲಿ ಹೇಳಿಕೆ ಕೊಡುವಾಗ ಆಯಾ ಪ್ರಾತಿನಿಧಿಕ ಸ್ಥಾನ ಅವಲಂಬಿಸಿರಬೇಕು. ಅಲ್ಲದಿದ್ದರೆ ಅವು ಒಪ್ಪಿಗೆಗಳಾಗಲಾರವು. ಹಾಗೂ ವ್ಯಾಜ್ಯಕ್ಕೆ ಸಂಬಂಧಿಸಿದ ಸ್ವತ್ತಿನಲ್ಲಿ ಸ್ವಾಮ್ಯದ (ಪ್ರೊಪ್ರೈಟರಿ) ಅಥವಾ ಧನಸಂಬಂಧವಾದ (ಪೆಕ್ಯೂನಿಯರಿ) ಆಸಕ್ತಿ ಇರುವವರು ಕೊಟ್ಟ ಹೇಳಿಕೆಗಳು ಒಪ್ಪಿಗೆಗಳಾಗುತ್ತವೆ; ಅಥವಾ ವ್ಯಾಜ್ಯಕ್ಕೆ ಸಂಬಂಧಿಸಿದ ಆಸ್ತಿಯಲ್ಲಿ ಯಾರಿಗೆ ಸ್ವಾಮ್ಯ ಅಥವಾ ಧನಸಂಬಂಧಿ ಆಸಕ್ತಿ ಹಿಂದೆ ಇತ್ತೋ ಅಂಥವರು ಮಾಡಿದ ಒಪ್ಪಿಗೆಗೆ ಅದರಿಂದ ಆ ಸ್ವಾಮ್ಯದ ಅಥವಾ ಧನಸಂಬಂಧಿ ಆಸಕ್ತಿ ಪಡೆದವರು ಬದ್ಧರಾಗುತ್ತಾರೆ. (ಭಾರತೀಯ ಸಾಕ್ಷ್ಯ ಕಾಯಿದೆ : ಕಲಂ 18). ಭಾರತೀಯ ಸಾಕ್ಷ್ಯ ಕಾಯಿದೆಯ ಪ್ರಕಾರ ಯಾವುದು ಒಪ್ಪಿಗೆಯೆನಿಸಿಕೊಳ್ಳುತ್ತದೆ, ಯಾವುದು ಎನಿಸಿಕೊಳ್ಳುವುದಿಲ್ಲ, ಒಪ್ಪಿಗೆಯೆಂದು ಪರಿಗಣಿಸಬೇಕಾದ ಹೇಳಿಕೆಯಲ್ಲಿ ಎಷ್ಟು ಗ್ರಾಹ್ಯ—ಎಂಬ ವಿಚಾರಗಳನ್ನು ಸ್ಪಷ್ಟಪಡಿಸಲು ಕೆಲವು ಉದಾಹರಣೆಗಳನ್ನು ಮುಂದೆ ಕೊಟ್ಟಿದೆ.

ಒಂದು ಮನೆಯ ವಿಚಾರವಾಗಿ A ಮತ್ತು Bಗಳ ನಡುವೆ ವ್ಯಾಜ್ಯ ನಡೆಯುತ್ತದೆ. A ಮತ್ತು B ಇಬ್ಬರೂ ಕ್ರಮವಾಗಿ C ಮತ್ತು D ಎಂಬ ಇಬ್ಬರು ವಕೀಲರನ್ನು ಗೊತ್ತುಮಾಡಿ ಅವರ ಮೂಲಕ ಒಪ್ಪಿಗೆಗಳನ್ನು ಮಾಡಬಹುದು ಅಥವಾ ಅವರು ತಮ್ಮ ಮಕ್ಕಳಿಗೊ ಗುಮಾಸ್ತರಿಗೊ ಒಪ್ಪಿಗೆ ಕೊಡಲೆಂದೇ ಅಧಿಕಾರ ಕೊಡಬಹುದು. ಆ ಅಧಿಕಾರ ವ್ಯಕ್ತವಾಗಿರಬಹುದು ಅಥವಾ ಸೂಚ್ಯವಿರಬಹುದು.

ಒಂದು ಮಠದ ಮಠಾಧಿಕಾರಿಯಾಗಿ ಬಂದ ಒಬ್ಬ ಸ್ವಾಮಿ ಆ ಪೀಠಕ್ಕೆ ಕ್ರಮಬದ್ಧವಾಗಿ, ಬಂದಿಲ್ಲವೆನಿಸಿದಾಗ ಆ ಮಠದ ಅಸಂಖ್ಯಾತ ಭಕ್ತರೂ ಶಿಷ್ಯರೂ ವಾದಿಗಳಾಗಿ ದಾವಾ ಹೂಡುವುದು ಸಾಧ್ಯವಿಲ್ಲ. ಮಠದ ಶಿಷ್ಯರಲ್ಲಿ ಯಾರಾದರೂ ಐವರು ಪ್ರಾತಿನಿಧಿಕವಾಗಿ ದಾವಾ ಹೂಡಬಹುದು. ಹಾಗೆ ದಾವಾ ಹೂ ಅವರಿಗೆ ನ್ಯಾಯಾಲಯ ಅಪ್ಪಣೆ ಕೊಡಬೇಕು. ವಿಚಾರಣೆಯ ಕಾಲದಲ್ಲಿ ಅವರು ಕೊಟ್ಟ ಹೇಳಿಕೆಗಳು ಒಪ್ಪಿಗೆಗಳೆನಿಸಿಕೊಳ್ಳುತ್ತವೆ.

A ಒಂದು ಮನೆಯನ್ನು ಅದರ ಮಾಲೀಕನಾದ O ಯಿಂದ ಕೊಳ್ಳುತ್ತಾನೆ. ತರುವಾಯ B ತನ್ನ ಮನೆಯ ಮಾಳಿಗೆಯ ನೀರನ್ನು Aಯ ಮನೆಯ ಆವರಣದೊಳಗೆ ಹರಿಸಕೂಡದು ಎಂದು ದಾವಾ ಹೂಡುತ್ತಾನೆ. ಆಗ O ತನಗೆ ಬರೆದುಕೊಟ್ಟ ಕರಾರನ್ನು ತೋರಿಸಿ, ನೀರು ಹರಿಸುವ ಹಕ್ಕು ತನಗಿದೆಯೆಂದು B ಸಾಧಿಸಬಹುದು. ಆಗ Bಯೊಂದಿಗೆ O ಮಾಡಿಕೊಂಡ ಒಪ್ಪಿಗೆ Aಯ ಮೇಲೆ ಬದ್ಧವಾಗುತ್ತದೆ. ಒಂದುವೇಳೆ O ತನ್ನ ಮನೆಯನ್ನು Aಗೆ ಮಾರಿದ ಮೇಲೆ Bಗೆ ಒಪ್ಪಿಗೆ ಬರೆದುಕೊಟ್ಟರೆ ಅದು Aಯನ್ನು ಬದ್ಧಗೊಳಿಸಲಾರದು.

ವ್ಯಾಜ್ಯಕ್ಕೆ ಕಕ್ಷಿಗಳಾದವರು, ವ್ಯಾಜ್ಯದ ಸ್ವತ್ತಿನಲ್ಲಿ ಒಡೆತನದ ಆಸಕ್ತಿಯಿದ್ದವರು ಅಥವಾ ಅವರ ಪ್ರತಿನಿಧಿಗಳು ಕೊಟ್ಟ ಹೇಳಿಕೆಗಳು ಒಪ್ಪಿಗೆಗಳಾಗುವುದು ಸಹಜ. ಆದರೆ ಸದ್ಯದಲ್ಲಿ ಸ್ವತ್ತಿನಲ್ಲಿ ಆಸಕ್ತಿ ಇಲ್ಲದವರೂ ವ್ಯಾಜ್ಯಕ್ಕೆ ಕಕ್ಷಿಗಳಾಗಿಲ್ಲದವರೂ ಕೊಟ್ಟ ಹೇಳಿಕೆಗಳೂ ಕೆಲವು ಸಂದರ್ಭಗಳಲ್ಲಿ ಒಪ್ಪಿಗೆಗಳಾಗುತ್ತವೆ. ಉದಾಹರಣೆ: B ಯ ಮಗ A. C ಒಬ್ಬ ಸಾಹುಕಾರ. Aಯಿಂದ 1,000 ರೂ. ಬರಬೇಕೆಂದು C ದಾವಾ ಹೂಡುತ್ತಾನೆ. A ಸಾಲ ಪಡೆದೂ ಇಲ್ಲ, ಪತ್ರ ಬರೆದುಕೊಟ್ಟೂ ಇಲ್ಲ. Aಯ ತಂದೆ (B) ವಚನಪತ್ರ (ಪ್ರೋನೋಟು) ಬರೆದುಕೊಟ್ಟಿರುವುದರಿಂದ C ದಾವಾ ಹೂಡುತ್ತಾನೆ. Cಗೆ ಬರೆದುಕೊಟ್ಟ ವಚನಪತ್ರ Aಗೆ ವಿರುದ್ಧವಾಗಿ ಒಪ್ಪಿಗೆಯಾಗುತ್ತದೆ. ಇದು ಸ್ವೀಕಾರಾರ್ಹ ಒಪ್ಪಿಗೆ (ಕಲಂ 19).

ಕ್ರಿಮಿನಲ್ ಮೊಕದ್ದಮೆಗಳಲ್ಲಿ ತಪ್ಪೊಪ್ಪಿಗೆಗಳ ಪ್ರಸ್ತಾಪ ಬರುತ್ತದೆ. ನ್ಯಾಯಾಲಯದ ಹೊರಗೆ ಜುಲುಮೆ, ಒತ್ತಾಯ, ಹೆದರಿಕೆ, ಅಕ್ರಮ ವಸೂಲಿ, ಆಸೆ ಅಥವಾ ಆಮಿಷಕ್ಕೆ ಒಳಗಾಗಿ ಮಾಡಿದ ಯಾವ ತಪ್ಪೊಪ್ಪಿಗೆಯೂ ಸ್ವೀಕಾರಾರ್ಹವಲ್ಲ. ಅಧಿಕಾರ ಸ್ಥಾನದಲ್ಲಿರುವವರು ಕೊಡುವ ಬೆದರಿಕೆ, ಒತ್ತಾಯ, ಜುಲುಮೆ, ತೋರಿಸುವ ಆಸೆ—ಇಂಥವುಗಳಿಗೆ ಒಳಪಟ್ಟು ಮಾಡಿದ ಯಾವ ಹೇಳಿಕೆಯೂ ಒಪ್ಪಿಗೆ ಎನಿಸುವುದಿಲ್ಲ. ಯಾವನೇ ಆರೋಪಿ ಯಾವುದೋ ಪ್ರಾಪಂಚಿಕ ಪೀಡೆಯನ್ನು ತಪ್ಪಿಸಿಕೊಳ್ಳುವ, ಇಲ್ಲವೇ ಪ್ರಯೋಜನ ಪಡೆಯುವ ನಿರೀಕ್ಷೆಯಿಂದ ಮಾಡಿದ ತಪ್ಪೊಪ್ಪಿಗೆಗಳೂ ಸ್ವೀಕಾರಾರ್ಹವಲ್ಲ (ಕಲಂ 24).

ಪೋಲೀಸರ ಸಮ್ಮುಖದಲ್ಲಿ ಆರೋಪಿ ಮಾಡಿದ ಯಾವ ಹೇಳಿಕೆಯೂ ಸ್ವೀಕಾರಾರ್ಹವಲ್ಲ. ಹಾಗೆಯೇ ಪೋಲೀಸ್ ಅಧಿಕಾರಿಯ ಸ್ವಾಧೀನದಲ್ಲಿದ್ದಾಗ ಆರೋಪಿ ಮಾಡುವ ಹೇಳಿಕೆಯೂ ಆ ಮ್ಯಾಜಿಸ್ಟ್ರೇಟರ ಸಮ್ಮುಖದಲ್ಲಿ ಮಾಡಿದ ಹೇಳಿಕೆಯ ಹೊರತು ಯಾವ ಹೇಳಿಕೆಯೂ ಸ್ವೀಕಾರಾರ್ಹವಲ್ಲ (ಕಲಂ 25 ಮತ್ತು26). ಆದರೆ ಈ ನಿಯಮಕ್ಕೆ ಒಂದು ವಿನಾಯತಿ ಇದೆ. ಪೋಲೀಸ್ ಅಧಿಕಾರಿಯ ಸ್ವಾಧೀನದಲ್ಲಿದ್ದಾಗ ಕೊಟ್ಟ ವರ್ತಮಾನದ ಆಧಾರದ ಮೇಲೆ ಏನಾದರೂ ನಿರ್ದಿಷ್ಟ ವಸ್ತು ಅಥವಾ ಸಂಗತಿ ಪತ್ತೆಯಾದರೆ ಆ ಪತ್ತೆಗೆ ಕಾರಣವಾದ ವರ್ತಮಾನವಷ್ಟೇ ಕೋರ್ಟಿನಲ್ಲಿ ಸ್ವೀಕಾರಾರ್ಹವಾಗುತ್ತದೆ. ಉದಾಹರಣೆಗೆ : ಒಂದು ಖೂನಿ ಮೊಕದ್ದಮೆಯಲ್ಲಿ ಪೋಲೀಸರ ಕೈಗೆ ಸಿಕ್ಕಿಬಿದ್ದವನು ಹೇಳಿಕೆ ಕೊಟ್ಟು, ತಾನು ಅಡವಿಯಲ್ಲಿ ಒಬ್ಬನೇ ಹೋಗುತ್ತಿದ್ದಾಗ ಅಲ್ಲಿ ಒಬ್ಬ ಹುಡುಗಿ ದನ ಕಾಯುತ್ತ ಕುಳಿತಿದ್ದಳೆಂದೂ ಆಕೆಯ ಕಿವಿಯಲ್ಲಿ ಒಂದು ಜೊತೆ ಬೆಂಡೋಲೆ ಇದ್ದುವೆಂದೂ ತಾನು ಆಕೆಯ ಕತ್ತು ಹಿಸುಕಿ ಅವಳನ್ನು ಕೊಂದು ಕಿವಿಯಲ್ಲಿದ್ದ ಬೆಂಡೋಲೆ ಕಿತ್ತುಕೊಂಡು, ಆಕೆಯ ಹೆಣವನ್ನು ಹಳ್ಳದಲ್ಲಿ ಹೂತು ಮರಳು ಮುಚ್ಚಿ, ತರುವಾಯ ಬೆಂಡೋಲೆಯನ್ನು ತನ್ನೂರ ಅಕ್ಕಸಾಲಿಗನಲ್ಲಿ ಒತ್ತೆಯಿಟ್ಟುದಾಗಿಯೂ ತನ್ನನ್ನು ಕರೆದುಕೊಂಡು ಹೋದರೆ ಹೆಣವನ್ನೂ ಒತ್ತೆಯಿಟ್ಟುಕೊಂಡ ಅಕ್ಕಸಾಲಿಗನನ್ನೂ ತೋರಿಸುವುದಾಗಿಯೂ ತಿಳಿಸುತ್ತಾನೆ. ಈ ಹೇಳಿಕೆಯಲ್ಲಿ ಕೊನೆಯ ಎರಡು ವಾಕ್ಯಗಳ ಹೊರತು ಮತ್ತೇನನ್ನೂ ನ್ಯಾಯಾಲಯ ಸ್ವೀಕರಿಸುವುದಿಲ್ಲ. ಆರೋಪಿಯ ಈ ಹೇಳಿಕೆಯ ಆಧಾರದಿಂದ ಹಳ್ಳದಲ್ಲಿ ಹೆಣ ಇದ್ದುದೇ ಆದರೆ, ಅಕ್ಕಸಾಲಿಗನಲ್ಲಿ ಬೆಂಡೋಲೆ ಇದ್ದುದೇ ಆದರೆ, ಆಗ ಅಷ್ಟು ವರ್ತಮಾನ ಮಾತ್ರ ಸ್ವೀಕಾರಾರ್ಹವಾಗುತ್ತದೆ. ಇನ್ನುಳಿದ ಹೇಳಿಕೆಯನ್ನು ಸ್ವೀಕರಿಸುವುದಿಲ್ಲ. ಏಕೆಂದರೆ ಹಳ್ಳದಲ್ಲಿ ದೊರೆತ ಹೆಣ ಅಕ್ಕಸಾಲಿಗನಲ್ಲಿ ಸಿಕ್ಕ ಬೆಂಡೋಲೆ ಅಲ್ಲಿವೆ ಎಂಬುದು ಅವನಿಗೆ ಗೊತ್ತಿತ್ತು—ಎಂಬುದಷ್ಟೇ ಅವು ಸಿಕ್ಕಿದ್ದರಿಂದ ರುಜುವಾತಾಯಿತು. ಅವನೇ ಖೂನಿ ಮಾಡಿದನೋ ಅಥವಾ ಇನ್ನು

ಯಾರಾದರೂ ಖೂನಿ ಮಾಡಿದ ಸಂಗತಿ ಅವನಿಗೆ ಗೊತ್ತಿದ್ದೂ ಆ ರೀತಿ ವರ್ತಮಾನ ಕೊಟ್ಟನೋ ಹೇಳಲು ಬಾರದು. ಆದ ಕಾರಣ ಅವನ ಮಾತನ್ನು ಪೂರ್ಣ ನಂಬಿ ಅವನನ್ನು ತಪ್ಪಿತಸ್ಥ ಎಂದು ಹೇಳಲುಬಾರದು (ಕಲಂ 27).

ಇಬ್ಬರು ಕೂಡಿ ಮಾಡಿದ ಅಪರಾಧದಲ್ಲಿ ಒಬ್ಬ ತನ್ನ ಸಹಾಪರಾಧಿಯ ವಿರುದ್ಧ ವಾಗಿ ಕೊಟ್ಟ ಹೇಳಿಕೆಯನ್ನು ಹೇಳಿಕೆ ಕೊಡದ ಅಪರಾಧಿಯ ವಿರುದ್ಧವಾಗಿಯೂ ಉಪಯೋಗಿಸಬಹುದು (ಕಲಂ 30).

ಆದರೆ ಯಾವ ಒಪ್ಪಿಗೆಯೂ ಸಂಪೂರ್ಣವೂ ನಿರ್ಣಾಯಕವೂ ನಿಸ್ಸಂಶಯವೂ ಆದ ಪುರಾವೆಯಲ್ಲ (ಕಲಂ 31). (ಕೆ.ಸಿ.)

**ಒಪ್ಪಿಸಿದ ಲೆಕ್ಕ :** ಸಲ್ಲಿಸಿದ ಸರಕುಗಳ ಬಿಕರಿ ಪಟ್ಟಿಯನ್ನು ಹಿಂದೆಯೇ ಕಳುಹಿಸಲಾಗಿದ್ದು ಅದರಲ್ಲಿ ಸೂಚಿಸಲಾಗಿರುವ ಹಣವನ್ನು ಗ್ರಾಹಕ ಪಾವತಿ ಮಾಡದಿದ್ದಾಗ ಅದರ ವಸೂಲಿಗಾಗಿ ಗ್ರಾಹಕನಿಗೆ ವರ್ತಕ ಬರೆಯುವ ನೆನಪು ಪತ್ರದಲ್ಲಿ ಮತ್ತೊಮ್ಮೆ ಮಾರಾಟದ ವಿವರಗಳನ್ನೆಲ್ಲ ಬರೆಯುವ ಬದಲು ಈ ಒಕ್ಕಣೆ ಯನ್ನು (ಅಕೌಂಟ್ ರೆಂಡರ್ಡ್) ಬಳಸುವುದು ರೂಢಿಯಲ್ಲಿದೆ. ಹಿಂದೆಯೇ ಒಪ್ಪಿಸಿದ ಲೆಕ್ಕಕ್ಕಾಗಿ ನಿಮ್ಮಿಂದ ಬರಬೇಕಾದ ಇಂತಿಷ್ಟು ಹಣ ಇನ್ನೂ ಬಂದಿಲ್ಲ—ಎಂಬುದಾಗಿ ಆತ ಗ್ರಾಹಕನಿಗೆ ಬರೆಯುತ್ತಾನೆ; ಅಥವಾ ಒಪ್ಪಿಸಿದ ಲೆಕ್ಕಕ್ಕಾಗಿ ಬರಬೇಕಾದ ಬಾಕಿ ಇಷ್ಟು ಎಂದು ಯಾದಿಯಲ್ಲಿ ಸೂಚಿಸುತ್ತಾನೆ.

ಯಾವುದೋ ಒಂದು ಕರ್ತವ್ಯ ನಿರ್ವಹಣೆಯ ಸಂಬಂಧವಾಗಿ ತನಗೆ ನೀಡಲಾದ ಹಣ, ವಸೂಲಾದ ಮೊಬಲಗು, ಮಾಡಿದ ಪಾವತಿಗಳು ಮುಂತಾದ ವಿವರಗಳನ್ನೂ ಉಳಿದಿರಬಹುದಾದ ಹಣದ ವಿಲೆ ಹೇಗಾಯಿತೆಂಬುದನ್ನೂ ಸೂಚಿಸಿ ಒಬ್ಬಾತ ತನ್ನನ್ನು ನೇಮಿಸಿದವರಿಗೆ ಅಥವಾ ಸಂಬಂಧಪಟ್ಟವರಿಗೆ ನೀಡಿದ್ದೂ ಒಪ್ಪಿಸಿದ ಲೆಕ್ಕವೇ. (ಎ.ಕೆ.ಎಸ್‍ಎಚ್.)

**ಒಫಿಯೂಚಸ್ :** ಹರ್ಕ್ಯುಲೀಸ್ ಮತ್ತು ಸ್ಕಾರ್ಪಿಯಸ್ (ವೃಶ್ಚಿಕ) ನಕ್ಷತ್ರ ಪುಂಜಗಳ ನಡುವೆ ವಿಷುವದ್ವೃತ್ತವನ್ನು ಹಾಯ್ದು ವ್ಯಾಪಿಸಿರುವ ಉತ್ತರದ ಒಂದು ನಕ್ಷತ್ರಪುಂಜ. ನಮಗೆ ಅತ್ಯಂತ ಸಮೀಪವಿರುವ ನಕ್ಷತ್ರಗಳಲ್ಲಿ ಮೂರನೆ ಯದಾದ (ಸೂರ್ಯ ಮತ್ತು ಪ್ರಾಕ್ಸಿಮಾ ಸೆಂಟಾರಿ ಮೊದಲಿನ ಎರಡು) ಬಾರ್ನಾರ್ಡನ ನಕ್ಷತ್ರ ಈ ಪುಂಜದಲ್ಲಿದೆ. ಹಲವಾರು ನೋವ ನಕ್ಷತ್ರಗಳನ್ನು ಒಫಿಯೂಚಸಿನಲ್ಲಿ ನೋಡಲಾಗಿದೆ. ಕೆಪ್ಲರನ ನಕ್ಷತ್ರ ಎಂಬ ಮಹಾನೋವ (1604) ಇವುಗಳಲ್ಲಿ ಪ್ರಸಿದ್ಧವಾದದ್ದು. *

**ಒಬೆಲಿಸ್ಕ್ :** ಚಪ್ಪಟೆಯಾದ ನಾಲ್ಕು ಪಕ್ಕಗಳಿದ್ದು, ಮೇಲಕ್ಕೆ ಹೋದಂತೆಲ್ಲ ಸಪುರವಾಗಿ ತುತ್ತುತುದಿಯಲ್ಲಿ ಪಿರಮಿಡಿನಂತಿರುವ ಸ್ತಂಭ. ಈಜಿಪ್ಟಿನ ಹಳೆಯ ಪ್ರಭುತ್ವದಲ್ಲಿ ಗೋರಿಯ ಸ್ಮಾರಕವಾಗಿ ಇದನ್ನು ನೆಡುತ್ತಿದ್ದರು. ದೊರೆಗಳ ಜೈತ್ರ ಯಾತ್ರೆಯೇ ಮುಂತಾದ ಸಾಹಸಕೃತಿಗಳನ್ನು ಬಣ್ಣಿಸುವ ಚಿತ್ರಲಿಪಿಗಳನ್ನು ಇವುಗಳ ಮೇಲೆ ಕೆತ್ತಲಾಗುತ್ತಿತ್ತು. ಎಲಿಫೆಂಟೈನಿಯಲ್ಲಿ ಸಾಬುಯಿಯ ಗೋರಿಯ ಮುಂದೆ ಎರಡು ಸ್ತಂಭಗಳನ್ನು ನೆಡಲಾಗಿತ್ತು. ಥೀಬ್ಸಿನಲ್ಲಿ ದೊರೆಗಳ ಗೋರಿಗಳ ಮುಂದೆ ಒಂದೊಂದೇ ಸ್ತಂಭ ನೆಡುವ ಪದ್ಧತಿ ಬಂತು. ಉದ್ಯಾನಗಳಲ್ಲೂ ಅರಮನೆಗಳ ಮುಂದೂ ಇವನ್ನು ಸ್ಥಾಪಿಸುತ್ತಿದ್ದರು. ಇವು ಸಾಮಾನ್ಯವಾಗಿ ಅಷ್ಟೇನೂ ಎತ್ತರವಾಗಿರುತ್ತಿರಲಿಲ್ಲ. ಮೊದಲು ನೆಟ್ಟಿದ್ದ ಸ್ಥಳದಲ್ಲೆ ಈಗಲೂ ನಿಂತಿರುವ ಅತ್ಯಂತ ಪುರಾತನ ಸ್ತಂಭವೆಂದರೆ ಪುರಾತನ ಹೀಲಿಯಾಪೊಲಿಸ್‍ನ ಅಲ್ ಮಟಾರಿಯದಲ್ಲಿರುವ ಒಂದನೆಯ ಸೆನಸ್ರೆಟನ ಸ್ತಂಭ. ಇದರ ಎತ್ತರ 68 ಅಡಿ. ಅನಂತರದ ಸ್ತಂಭಗಳಂತೆ ಇದು ಮೇಲೆ ಬಲು ಹೆಚ್ಚಾಗಿ ಸಪುರವಾಗಿಲ್ಲ.

ಹೊಸ ಪ್ರಭುತ್ವಕಾಲದಲ್ಲಿ ಒಬೆಲಿಸ್ಕ್‍ಗಳಿಗೆ ದೇವಸ್ಥಾನದಲ್ಲಿ ಪ್ರಮುಖಸ್ಥಾನ ಲಭ್ಯವಾಯಿತು. 18ನೆಯ ಮನೆತನದ ಕಾಲದ ದೇವಸ್ಥಾನದಲ್ಲಿದ್ದ ಭಾಗಗಳು ಮುಖ್ಯವಾಗಿ ಮೂರು : ಮಹಾದ್ವಾರ, ಮುಖ ಮಂಟಪ ಮತ್ತು ಆರಾಧನ ಮಂದಿರ. ಕಾರ್ನಾಕಿನ ಅಮಾನ್ ದೇವಸ್ಥಾನದ ರಚನೆ ಈ ಬಗೆಯದು. ಈ ಸ್ತಂಭಗಳನ್ನು ಕಡೆದು ನಿಲ್ಲಿಸಲು ಏಳು ತಿಂಗಳುಗಳ ಕಾಲ ಬೇಕಾಯಿತೆಂದು ಅಲ್ಲಿನ ಒಂದು ಶಾಸನ ತಿಳಿಸುತ್ತದೆ. ಇಲ್ಲೂ ಒಂದೇ ಜೊತೆ ಸ್ತಂಭಗಳನ್ನು ನಿಲ್ಲಿಸುವ ಪದ್ಧತಿಯಿತ್ತು. ಈ ಪೈಕಿ ಒಂದನೆಯ ಥಟ್ಮೋಸ್ ನಿರ್ಮಿಸಿದ ಮಹಾದ್ವಾರದ ಮುಂದೆ ನಿಲ್ಲಿಸಿದ ಸ್ತಂಭಗಳೇ ಅತ್ಯಂತ ಪುರಾತನ. ಇವುಗಳ ಪೈಕಿ ಒಂದು ಇನ್ನೂ ಹಾಗೆಯೇ ನಿಂತಿದೆ. ಅದು 80 ಅಡಿಗಳಿಗಿಂತಲೂ ಮಿಗಿಲಾಗಿ ಎತ್ತರವಾಗಿದೆ; ಇದರ ಬುಡ ಆರು ಅಡಿಗಳ ಚಚ್ಚೌಕ ; ತೂಕ 325 ಟನ್.

ಹಳೆಯ ಒಬೆಲಿಸ್ಕ್‍ಗಳನ್ನು ಸಾಮಾನ್ಯವಾಗಿ ನಿರ್ಮಿಸುತ್ತಿದ್ದದ್ದು ಸ್ಮರಣಾರ್ಥ ವಾಗಿ. ಆದರೆ ಸೂರ್ಯಪೂಜೆಗೂ ಇವಕ್ಕೂ ಸಂಬಂಧವಿದೆಯೆಂದು ತೋರುತ್ತದೆ. ಗೀಜದ ಬಳಿಯ ಅಬೋಸಿರ್‍ನಲ್ಲಿನ ಒಂದು ದೇಗುಲದಲ್ಲಿ ಮಧ್ಯದ ಪೂಜಾಸ್ಥಾನ ದಲ್ಲಿ ತಲೆ ಕೊಚ್ಚಿದ ಪಿರಮಿಡ್ ಮಾದರಿಯ ವೇದಿಕೆಯ ಮೇಲೆ ಒಂದು ಒಬೆಲಿಸ್ಕ್ ಇದೆ. ಅದರ ಮುಂದೆ ಬಲಿಪೀಠ. ಇಂಥ ಸ್ತಂಭಗಳ ಪಿರಮಿಡಾಕಾರದ ತುದಿಯ ಮೇಲೆ ಬಿಸಿಲನ್ನು ಪ್ರತಿಫಲಿಸುವ ಗುಣವುಳ್ಳ ಬೆಳ್ಳಿ-ಚಿನ್ನ ಮಿಶ್ರಿತ ಲೋಹದ ಕವಚ ತೊಡಿಸಲಾಗುತ್ತಿತ್ತು. ಎಲಿಫೆಂಟೈನಿಯಲ್ಲಿ ಸಿಕ್ಕಿರುವ ಅನೇಕ ಸಣ್ಣ ಒಬೆಲಿಸ್ಕ್‍ಗಳು ಸೂರ್ಯಮತಸಂಬಂಧವಾದ ದೇವಮಂದಿರಗಳಲ್ಲಿದ್ದಂಥವು. ದೊಡ್ಡ ಒಬೆಲಿಸ್ಕ್ ಗಳನ್ನು ನಿರ್ಮಿಸಲು ಈಜಿಪ್ಟಿನ ಅಸ್ವಾನಿನ ಗ್ರ್ಯಾನೈಟನ್ನು ಬಳಸಲಾಗುತ್ತಿತ್ತು. ಅಲ್ಲಿ ನಿರ್ಮಿಸಿದ ಸ್ತಂಭಗಳನ್ನು ನೈಲ್ ನದಿಯ ಮೇಲೆ ನಿಯೋಜಿತ ಸ್ಥಳಕ್ಕೆ ಸಾಗಿಸು ವುದಕ್ಕೆಂದೇ ವಿಶಿಷ್ಟವಾದ ದೋಣಿಗಳನ್ನು ತಯಾರಿಸುತ್ತಿದ್ದರು.



ಪ್ಯಾರಿಸಿನ ದ ಲಾ ಕಾನ್‍ಕಾರ್ಡ್ ಸ್ಥಳದಲ್ಲಿ ಇಡಲಾಗಿರುವ ಒಂದು ಒಬೆಲಿಸ್ಕ್

ಈಜಿಪ್ಟಿಗೂ ಕೆನಾನ್‍ಗೂ ಏರ್ಪಟ್ಟ ನಿಕಟ ಸಂಬಂಧದ ಫಲವಾಗಿ ಕೆನಾ ನೈಟರೂ ಫಿನಿಷಿಯನರೂ ಒಬೆಲಿಸ್ಕ್ ಗಳನ್ನು ನಿರ್ಮಿಸಲಾರಂಭಿಸಿದರು. ಲೆಬ ನನಿನ ಬಿಬ್ಲಾಸಿನ ದೇವಸ್ಥಾನದಲ್ಲಿ ಇವು ಗಳ ಒಂದು ಸಾಲೇ ಇತ್ತು. (ಕ್ರಿ.ಪೂ. 2ನೆಯ ಸಹಸ್ರಮಾನ) ಅಸ್ಸಿರಿಯನರು ನಿರ್ಮಿಸುತ್ತಿದ್ದ ಒಬೆಲಿಸ್ಕ್‍ಗಳು ಕುಳ್ಳು ; ಅವುಗಳ ಶಿರೋಭಾಗ ಮೆಟ್ಟಿಲಿ ನಂತಿತ್ತು. ಈ ಭಾಗದಲ್ಲಿ ಇತಿಹಾಸದ ಒಂದು ಸನ್ನಿವೇಶವನ್ನೊ ಘಟನೆಯನ್ನೊ ನಿರೂಪಿಸಲಾಗುತ್ತಿತ್ತು. ಇನ್ನೊಂದು ಬಗೆಯ ಒಬೆಲಿಸ್ಕ್ ಸಹ ಇತ್ತು. ಅದರ ಎರಡು ಪಕ್ಕಗಳು ಕಿರಿದಾಗಿದ್ದು ತುದಿ ಬೋಳಾಕಾರ. ಒಂದನೆಯ ಸೆನ್‍ವೊರ್ಸ್ಟಿಗೆ ಸಂಬಂಧಿಸಿದ ಅಂಥ ಒಂದು ಒಬೆಲಿಸ್ಕ್, ಕೆತ್ತನೆಯ ಕೆಲಸ ದಿಂದಲೂ ಶಾಸನದಿಂದಲೂ ಕೂಡಿದ್ದು ಫಾಯೂಮಿನ ಎಬ್‍ಜೀಗಿನಲ್ಲಿ ಇದೆ. ಅಬಿಸೀನಿಯದಲ್ಲಿ ಅದ್ಭುತ ರೀತಿಯ, ಕಲಾತ್ಮಕವಾದ ಒಬೆಲಿಸ್ಕ್ ಮಾದರಿಯ ಸ್ಮಾರಕಗಳ ಶ್ರೇಣಿಯೇ ಇದೆ. ಇಸ್ರೇಲಿನ ಜೆಹು ದೊರೆಯ ಶರಣಾಗತಿಯನ್ನು ಚಿತ್ರಿಸುವ, ಕ್ರಿ.ಪೂ. 9ನೆಯ ಶತಮಾನದ ಸ್ತಂಭ ಒಂದು ಉದಾಹರಣೆ. ಇದು ಬ್ರಿಟಿಷ್ ವಸ್ತುಸಂಗ್ರಹಾಲಯದಲ್ಲಿದೆ.

ಗ್ರೀಕ್-ರೋಮನ್ ಪದ್ಧತಿಯಲ್ಲಿ ಈಜಿಪ್ಟಿನ ಒಬೆಲಿಸ್ಕ್‍ಗಳ ನಿರ್ಮಾಣ ಮುಂದುವರಿಯಿತು. ರೋಮ್ ಚಕ್ರಾಧಿಪತ್ಯದ ಕಾಲದಲ್ಲಿ ಅನೇಕ ಒಬೆಲಿಸ್ಕ್‍ಗಳನ್ನು ಇಟಲಿಗೆ ಸಾಗಿಸ ಲಾಯಿತು. ಒಂದನ್ನು ಮೊದಲನೆಯ ಥೀಯೊಡೋಷಿಯಸ್ ಕಾನ್‍ಸ್ಟಾಂಟಿ ನೋಪಲಿಗೆ ಸಾಗಿಸಿದ. ಅತಿಶಯ ರೀತಿಯಲ್ಲಿ ಉಳಿಸಿಕೊಂಡು ಬಂದಿರುವ ಒಬೆಲಿಸ್ಕೊಂದರ ಮುಂಭಾಗದಲ್ಲಿ ಎತ್ತರ ವಾದ ಬಲಿಪೀಠವಿದ್ದು ಅದರಲ್ಲಿ ಗುಂಡಿ ಗಳು ತೋಡಲ್ಪಟ್ಟಿವೆ. ಪಿತೃಗಳಿಗೆ ಬಲಿಗೊಟ್ಟ ಪ್ರಾಣಿಗಳ ರಕ್ತವನ್ನು ಗ್ರಹಿ ಸುವುದಕ್ಕೆಂದೇ ಆ ಗುಂಡಿಗಳಿದ್ದುದು. ಪ್ರಸಿದ್ಧವಾದ ಪುರಾತನ ಒಬೆಲಿಸ್ಕ್ ಗಳಲ್ಲಿ ಸುಮಾರು 30 ಉಳಿದಿವೆ. ಅವು ಗಳಲ್ಲಿ 12 ರೋಂನಲ್ಲಿವೆ. ವಾಸ್ತು ವಿನ್ಯಾಸದಲ್ಲಿ ಒಬೆಲಿಸ್ಕ್‍ಗಳನ್ನು ಹೊಂದಿ ಸುವ ಪದ್ಧತಿ 18ನೆಯ ಶತಮಾನದ ವೇಳೆಗೆ ಫ್ರಾನ್ಸ್ ಬ್ರಿಟನ್‍ಗಳಲ್ಲಿ ಪ್ರಚಾರ ದಲ್ಲಿತ್ತು. 19ನೆಯ ಶತಮಾನದಲ್ಲಿ ಕ್ಲಿಯೋಪಾತ್ರಳ ಸೂಜಿಗಳೆಂದು ಪ್ರಸಿದ್ಧ ವಾದ ಎರಡು ಒಬೆಲಿಸ್ಕ್‍ಗಳನ್ನು

ಲಂಡನ್ ಮತ್ತು ನ್ಯೂಯಾರ್ಕ್‌ಗಳಿಗೆ ಒಪ್ಪಿಸಲಾಯಿತು. ಕ್ರಿ.ಪೂ. 13ನೆಯ ಶತಮಾನದ ಒಂದು ಒಬೆಲಿಸ್ಕ್ ಪ್ಯಾರಿಸಿನ ದ ಲಾ ಕಾನ್‌ಕಾರ್ಡ್ ಸ್ಥಳದಲ್ಲಿದೆ. ಇದು ಈಜಿಪ್ಪಿನ ದೊರೆ ಮೆಹೆಮತ್ ಆಲಿಯ ಕೊಡುಗೆ (1831). ಕ್ರಿ.ಪೂ. 1500ರಲ್ಲಿ ಹೆಲಿಯೊಪೊಲಿಸ್‌ನಲ್ಲಿ ಮೂರನೆಯ ಥಟ್ಮೋಸ್ ಇವನ್ನು ನಿರ್ಮಿಸಿದ. ಇವು ಈಗ ಲಂಡನಿನಲ್ಲಿ ಥೇಮ್ಸ್ ದಂಡೆಯ ಮೇಲೂ ನ್ಯೂಯಾರ್ಕಿನ ಸೆಂಟ್ರಲ್ ಪಾರ್ಕಿನಲ್ಲೂ ನಿಂತಿವೆ. ಇವನ್ನು ತಮ್ಮ ಮೊದಲಿನ ಸ್ಥಾನದಿಂದ ಕ್ರಿ.ಪೂ. 14ರ ಸುಮಾರಿನಲ್ಲಿ ಆಗಸ್ಟಸ್ ಸೀಸರ್ ಕದಲಿಸಿ ಅಲೆಗ್ಸಾಂಡ್ರಿಯಕ್ಕೆ ಒಯ್ದಿದ್ದ. ಕ್ರಿ.ಪೂ. 1250ರ ಸುಮಾರಿನಲ್ಲಿದ್ದ ಎರಡನೆಯ ರಾಮ್ಸಿಸನ ಶಾಸನವನ್ನು ಇದರ ಮೇಲೆ ಕೆತ್ತಲಾಗಿದೆ. ಥೀಬ್ಸ್‌ನಗರದ ರಾಣಿ ಹಟ್‌ಷೆಪ್‌ಸಟಳ ದೇವಾಲಯದಲ್ಲಿರುವ ಕೆಲವು ಚಿತ್ರಗಳು ಒಬೆಲಿಸ್ಕ್‌ಗಳನ್ನು ಜಲಮಾರ್ಗವಾಗಿ ಸಾಗಿಸುತ್ತಿರುವುದನ್ನು ರೂಪಿಸುತ್ತವೆ. ಅಮೆರಿಕದ ವಾಷಿಂಗ್ಟನಿನಲ್ಲಿರುವ ವಾಷಿಂಗ್ಟನ್ ಸ್ಮಾರಕ ಆಧುನಿಕ ಒಬೆಲಿಸ್ಕಿನ ಉದಾಹರಣೆ. 555 ಅಡಿಗಳಿಗಿಂತಲೂ ಎತ್ತರವಿರುವ ಇದರ 500ನೆಯ ಅಡಿಯಲ್ಲಿ ಒಂದು ವೀಕ್ಷಣಾಲಯವಿದೆ. ಇಲ್ಲಿಗೆ ಹೋಗಲು ಕಟ್ಟಡದ ಒಳಗೇ ಮೇಲೆತ್ತಿಗೆಯೂ (ಎಲಿವೇಟರ್) ಮೆಟ್ಟಲುಗಳೂ ಉಂಟು. ನೋಡಿ .—ಗರುಡಗಂಬ

ಪಕ್ಕ ಟಿಪ್ಪಣಿ ಮುಂತಾದವುಗಳ ಕಡೆಗೆ ಗಮನ ಸೆಳೆಯಲು ಬಳಸುವ ಕಠಾರಿಯ ಗುರುತಿಗೂ (†) ಒಬೆಲಿಸ್ಕ್ ಎಂಬ ಹೆಸರಿದೆ. (ಎಂ.ವಿ.ಕೆ.; ಬಿ.ಕೆ.ಜಿ.)

**ಒ'ಬ್ರಿಯೆನ್, ವಿಲಿಯಂ:** 1852–1928. ಐರ್ಲೆಂಡಿನ ಪ್ರಖ್ಯಾತ ಸ್ವಾತಂತ್ರ್ಯ ಹೋರಾಟಗಾರ, ಪತ್ರಿಕೋದ್ಯಮಿ, ಸಂಯುಕ್ತ ಐರಿಷ್ ಲೀಗಿನ ಸ್ಥಾಪಕ. ಕಾರ್ಕ್ ಕೌಂಟಿಯಲ್ಲಿನ ಮಾಲೋ ಎಂಬಲ್ಲಿ ಜನಿಸಿದ. ಕಾರ್ಕಿನಲ್ಲಿ ಉನ್ನತ ಶಿಕ್ಷಣ ಪಡೆದು 1869ರಲ್ಲಿ ಪತ್ರಿಕೋದ್ಯಮವನ್ನವಲಂಬಿಸಿದ. ಯುನೈಟೆಡ್ ಐರ್ಲೆಂಡ್ ಪತ್ರಿಕೆಯ ಸಂಪಾದಕನಾದದ್ದು 1881ರಲ್ಲಿ. ಕೆಲವೇ ತಿಂಗಳುಗಳಲ್ಲಿ ಆ ಪತ್ರಿಕೆಯನ್ನು ಸರ್ಕಾರ ನಿಷೇಧಿಸಿತು. ಒ'ಬ್ರಿಯೆನನಿಗೆ ಜೈಲುವಾಸ ಲಭ್ಯವಾಯಿತು. ಗುತ್ತಿಗೆ ನಿಷೇಧ ಪ್ರಣಾಳಿಕೆಯನ್ನು ಈತ ಹೊರಡಿಸಿದ್ದು ಆಗಲೇ. ಅನಂತರ 1883ರ ಚುನಾವಣೆಯಲ್ಲಿ ಮಾಲೋ ಕ್ಷೇತ್ರದಿಂದ ಪಾರ್ಲಿಮೆಂಟಿಗೆ ಆಯ್ಕೆ ಹೊಂದಿ, 1895ರ ವರೆಗೂ ಅದರ ಸದಸ್ಯನಾಗಿದ್ದ. ಬಡರೈತರ ಉಳಿವಿಗಾಗಿ ಜಮೀನುದಾರರ ವಿರುದ್ಧ ಹೋರಾಟ ನಡೆಸಿ, ಸಮನ್ವಯ ಮತ್ತು ಸಹಿಷ್ಣುತೆಯ ತತ್ತ್ವವನ್ನು ಜನತೆಯ ಮುಂದಿಟ್ಟು, ಎಲ್ಲವೂ ಐರ್ಲೆಂಡಿಗಾಗಿ ಎಂಬ ಸಂಘವನ್ನು (ಆಲ್ ಫಾರ್ ಐರ್ಲೆಂಡ್ ಯೂನಿಯನ್) ಸ್ಥಾಪಿಸಿದ. 1910ರಲ್ಲಿ ಕಾರ್ಕ್ ಕೌಂಟಿಯಿಂದ ಪಾರ್ಲಿಮೆಂಟಿಗೆ ಮತ್ತೆ ಚುನಾಯಿತನಾದರೂ ಆ ವೇಳೆಗೆ ಐರ್ಲೆಂಡಿನ ತರುಣ ಪೀಳಿಗೆಗೆ ಸೌಮ್ಯ ಮಾರ್ಗದಲ್ಲಿ ನಂಬಿಕೆ ಕಡಿಮೆಯಾಗಿತ್ತು. ಒ'ಬ್ರಿಯೆನನ ಹಿಂಬಾಲಕರ ಸಂಖ್ಯೆ ಕಡಿಮೆಯಾಯಿತು. ಒಂದನೆಯ ಮಹಾಯುದ್ಧದಲ್ಲಿ ಐರ್ಲೆಂಡೂ ಭಾಗವಹಿಸಬೇಕೆಂದು ವಾದಿಸಿದ ಈತ ಆ ಯುದ್ಧಾನಂತರ ಸಾರ್ವಜನಿಕ ಜೀವನದಿಂದ ನಿವೃತ್ತನಾದ. ಈತ ಮರಣಹೊಂದಿದ್ದು 1928ರ ಫೆಬ್ರುವರಿ 25ರಲ್ಲಿ, ಲಂಡನ್ನಿನಲ್ಲಿ.

(ಬಿ.ಎಸ್.ಎ.)

**ಒರಗುವಿಕೆ (ಪೈರುಗಳ):** ಕೆಲವು ಬಗೆಯ ಪೈರುಗಳು ಬೆಳೆದು ವೃದ್ಧಿಯಾಗಿ ತೆನೆಗಳ ಭಾರದಿಂದ ಕಾಂಡ ನೆಲಕ್ಕೆ ಬೀಳುವ ಒಂದು ಪರಿಸ್ಥಿತಿ (ಲಾಡ್ಜಿಂಗ್). ಇದರಿಂದ ಕಾಳುಗಳ ನಾಶವೂ ಪೈರಿನಿಂದ ಕಾಳು ತೆಗೆದ ತರುವಾಯ ದೊರೆಯುವ ಮೇವಿನ ನಾಶವೂ ಸಾಕಷ್ಟು ಪ್ರಮಾಣದಲ್ಲಿ ಆಗಿ ರೈತನಿಗೆ ಉಭಯ ನಷ್ಟವಾಗುತ್ತದೆ. ಒರಗುವಿಕೆಯ ನಿವಾರಣೆ ಮಾಡುವ ದಾರಿಯಲ್ಲಿ ಎದುರಿಸಬೇಕಾದ ಪ್ರಶ್ನೆಗಳು—ಉತ್ತಮ ಫಸಲು ಮತ್ತು ಅದನ್ನು ಸಮರ್ಥವಾಗಿ ಧರಿಸಬಲ್ಲ ಪೈರಿನ ಕಾಂಡ.

ಒರಗುವ ಗುಣ ಆನುವಂಶಿಕವಾಗಿದ್ದರೂ ಅದನ್ನು ವೈಜ್ಞಾನಿಕ ವಿಧಾನಗಳಿಂದ ಸರಿಪಡಿಸಿಕೊಳ್ಳಬಹುದು. ಗಿಡ್ಡ ನಿಲುವಿನ ಜಾತಿಗಳು ಆಳವಾಗಿ ಬೇರೂರಿ ವಿಸ್ತಾರವಾದ ಕ್ಷೇತ್ರದಲ್ಲಿ ಬೇರುಗಳನ್ನು ಪಸರಿಸಿ ಭಾರವಾದ ತೆನೆಗಳನ್ನು ಹೊತ್ತು ಸೆಟೆದು ನಿಲ್ಲುವುವು. ಮಿಶ್ರತಳಿ ಜೋಳ ಹಾಗೂ ಸಜ್ಜೆಯ ಜಾತಿಗಳು, ಮೆಕ್ಸಿಕನ್ ಗೋದಿಯ ಹಾಗೂ ತೈವಾನ್ ಬತ್ತದ ಜಾತಿಗಳು ಒರಗದೆ ನೆಟ್ಟಗೆ ನಿಲ್ಲಬಲ್ಲವು. ಅವು ಅದ್ಭುತವಾದ ಇಳುವರಿಯನ್ನು ಕೊಡುವಲ್ಲಿ ಹೆಸರಾಗಿವೆ. ಆದ್ದರಿಂದ ಅಧಿಕೋತ್ಪಾದನೆಯ ಒಂದು ಪ್ರಧಾನ ಅಂಶ ಒರಗುವ ಗುಣದ ನಿವಾರಣೆ.

(ಸಿ.ವಿ.ಡಿ.)

**ಒರಟುಕಾಲು ಡೇಗೆ:** ಪಕ್ಷಿವಂಶದ ಫಾಲ್ಕನಿಫಾರ್ಮಿಸ್ ಗಣದ ಆಕ್ಸಿಪಿಟ್ರಿಡಿ ಕುಟುಂಬಕ್ಕೆ ಸೇರಿದ ಬ್ಯೂಟಿಯೊ ಜಾತಿಯ ಒಂದು ಪ್ರಭೇದ. ಇದನ್ನು ಬಸರ್ಡ್‌ಹಾಕ್ ಎಂಬ ಜನಪ್ರಿಯ ಹೆಸರಿನಿಂದ ಕರೆಯುವುದುಂಟು. ಇದರ ಶಾಸ್ತ್ರೀಯ ನಾಮ ಬ್ಯೂಟಿಯೊ ಲಗೋಪಸ್. ಈ ಪಕ್ಷಿಯ ಪಾದದ ಮೇಲಕ್ಕೆ ಮುಂಡಿಯ ಕೆಳಗೆ ಅಂದರೆ ಮೊಳಕಾಲಿನಲ್ಲಿ ಪುಕ್ಕಗಳು ಇರುವುದರಿಂದ ಇದಕ್ಕೆ ಒರಟುಕಾಲು ಡೇಗೆ ಎಂದು ಹೆಸರು. ಇದರ ಹೊರಮೈ ಬಣ್ಣ ಗಾಢ ಕಂದು ; ರೆಕ್ಕೆಗಳ ಕೆಳಗೆ ತಿಳಿಕಂದು ; ಬಾಲದ ರೆಕ್ಕೆಗಳು ಬಿಳುಪು. ಋತುಮಾಸದಲ್ಲಿ ಇವು ಎತ್ತರದ ಮರಗಳ ಮೇಲೆ ಅಥವಾ ಗುಡ್ಡಗಳ ಬಂಡೆಗಲ್ಲು ತುದಿಯಲ್ಲಿ ಗೂಡುಗಳನ್ನು ಮಾಡಿ 2–5 ಮೊಟ್ಟೆಗಳನ್ನಿಟ್ಟು ಮರಿಮಾಡುವುವು. ಈ ಡೇಗೆ ಉತ್ತರ ಯೂರೋಪಿನಿಂದ ಬ್ರಿಟನ್ ದೇಶಕ್ಕೆ ಬಂದು ಚಳಿಗಾಲವನ್ನು ಕಳೆಯುತ್ತದೆ. ಮಿಕ್ಕ ಕಾಲಗಳಲ್ಲಿ ಸೈಬೀರಿಯ ಮತ್ತು ಉತ್ತರ ಕೆನಡ ಪ್ರದೇಶಗಳಲ್ಲಿ ವಾಸಿಸುವುದು. ಬ್ರಿಟನ್ ದೇಶದಲ್ಲಿ ಇನ್ನೊಂದು ಪ್ರಭೇದವಾದ ಬ್ಯೂಟಿಯೊ ಬ್ಯೂಟಿಯೊವನ್ನು ಸಾಮಾನ್ಯವಾಗಿ ಬಸರ್ಡ್ ಎನ್ನುವರು. ಈ ಪ್ರಭೇದವೂ ಒರಟುಕಾಲು ಡೇಗೆಯೂ ಯೂರೋಪಿನಿಂದ ಜಪಾನಿನ ವರೆಗೂ ಹರಡಿವೆ. ಈ ಡೇಗೆಗಳು ಸಾಧಾರಣವಾಗಿ ಸಣ್ಣ ಸಸ್ತನಿಗಳನ್ನೂ ಕೆಲವು ಸಾರಿ ದುಂಬಿಗಳನ್ನೂ ಪಕ್ಷಿಗಳನ್ನೂ ಬೇಟೆಯಾಡುವುವು. ಇವುಗಳ ಮಿಕ್ಕೆಲ್ಲ ವ್ಯವಹಾರಗಳೂ ಇತರ ಡೇಗೆಗಳಂತೆಯೆ. (ಎನ್.ವಿ.ಎ.)

**ಒರಟು ಜಮಖಾನೆ:** ಹತ್ತಿ, ರೇಷ್ಮೆ, ನಾರು, ಸೆಣಬು ಇವುಗಳಲ್ಲಿ ಯಾವುದನ್ನೂ ಉಣ್ಣೆಯೊಡನೆ ಮಿಶ್ರಿಸಿ ತಯಾರಿಸಿರುವ ಒರಟು ಉಣ್ಣೆಯ ಬಟ್ಟೆ (ಡ್ರಗೆಟ್). ಫೆಲ್ಟ್ ಜಮಖಾನೆಗೆ ಬದಲಾಗಿ ಇದನ್ನು ಉಪಯೋಗಿಸುತ್ತಾರೆ. ಹಾಸುಗಂಬಳಿ ಎಂದೂ ಕರೆಯುವುದಿದೆ. ಉಣ್ಣೆಯನ್ನು ಹದ ಮಾಡಿದಾಗ ಉಳಿಯುವ ಅನುಪಯುಕ್ತ ಅಂಶವನ್ನು ಹಾಸುಗಂಬಳಿಯಾಗಿ ತಯಾರಿಸುವ ಕೈಗಾರಿಕೆ ಈಗ 90 ವರ್ಷಗಳ ಹಿಂದೆ ಮೈಸೂರು ರಾಜ್ಯದಲ್ಲಿ ಪ್ರಚಾರಕ್ಕೆ ಬಂದಿತು. ಬಡವರ ರತ್ನಗಂಬಳಿ ಅಥವಾ ಜಮಖಾನೆ ಎಂದು ಈ ಬಟ್ಟೆ ವಿದೇಶೀ ಮಾರುಕಟ್ಟೆಗಳಲ್ಲಿ ವಿಖ್ಯಾತವಾಯಿತು. ಅಲ್ಲಿ ಇವುಗಳಿಗೆ ಇಂಡಿಯ ಡ್ರಗೆಟ್ ಎಂದೇ ಹೆಸರು.

ಒರಟು ಜಮಖಾನೆಯನ್ನು ಒರಟಾದ ಉಣ್ಣೆಯಿಂದ ತಯಾರಿಸುತ್ತಾರೆ. ನೆಯ್ಗೆಯಲ್ಲಿ ಹತ್ತಿಯ ಹಾಸನ್ನೂ ಉಣ್ಣೆಯ ಹೊಕ್ಕನ್ನೂ ಉಪಯೋಗಿಸಿ ವೈವಿಧ್ಯಪೂರ್ಣವಾಗಿ ನೇಯುತ್ತಾರೆ. ಬಣ್ಣದ ದೃಷ್ಟಿಯಿಂದ ಇವನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ. ಅತ್ಯುತ್ತಮ ತರಗತಿಯವುಗಳ ಬಣ್ಣ ಕೆನೆಬಿಳಿ (ಕ್ರೀಂ ವೈಟ್). ಉತ್ತಮ ತರಗತಿಯವುಗಳ ಬಣ್ಣ ಕಂದುಬಿಳುಪು. ಮಧ್ಯಮ ತರಗತಿಯವುಗಳಿಗೆ ಬೂದು ಸಾರಂಗವರ್ಣ ಇದೆ.

ಈ ಬಗೆಯ ಜಮಖಾನೆಗಳನ್ನು ತಯಾರಿಸುವಾಗ ಹಾಳತವಾದ ಬಣ್ಣ ಮಿಶ್ರಣಕ್ಕೂ ಅಂತಿಮವಾಗಿ ಅದು ತೋರಬೇಕಾದ ನೆರಳು ಬೆಳಕಿನ ಛಾಯಾವಿನ್ಯಾಸಕ್ಕೂ ಆದ್ಯಗಮನ ಕೊಡುತ್ತಾರೆ. ಈ ಕೈಗಾರಿಕೆ ನಿಯತಕಾಲಿಕವಾದದ್ದು. ಪ್ರಾರಂಭ ಪ್ರತಿವರ್ಷದ ಮೇ ಅಥವಾ ಜೂನ್ ತಿಂಗಳಲ್ಲಿ ; ಅಂತ್ಯ ಜನವರಿಯಲ್ಲಿ. ಇದೊಂದು ಗುಡಿಕೈಗಾರಿಕೆ. ಇದನ್ನು ಪ್ರತಿ ನೇಕಾರನೂ ಇಬ್ಬರು ಅಥವಾ ಮೂವರು ಬಾಲಕರ ಸಹಾಯದಿಂದ ಕೈಮಗ್ಗದಲ್ಲಿ ನೇಯುತ್ತಾನೆ. ಈ ಬಾಲಕರೇ ಮುಂದೆ ನೇಕಾರರಾಗುತ್ತಾರೆ. ಒರಟು ಜಮಖಾನೆಯ ಕೈಗಾರಿಕೆ ಮೈಸೂರು ಮತ್ತು ತಮಿಳುನಾಡಿನ ಕೆಲವು ವಿಭಾಗಗಳಿಗೆ ವಿಶೇಷವಾಗಿ ಸೀಮಿತಗೊಂಡಿದೆ.

(ವಿ.ಎಸ್.ವಿ.)

**ಒರಾಂಗೂಟಾನ್:** ಕಪಿ ಜಾತಿಗೆ ಸೇರಿದ ಒಂದು ದೊಡ್ಡ ವಾನರ. ಮಲಯ ಭಾಷೆಯಲ್ಲಿ ಕಾಡುಮನುಷ್ಯ ಎಂದರ್ಥ. ಪ್ರಾಣಿಶಾಸ್ತ್ರದಲ್ಲಿ ಇದರ ಹೆಸರು ಪಾಂಗೊ ಪಿಗ್ಮೆಯಿಸ್. ಹಲವು ಸಹಸ್ರ ವರ್ಷಗಳ ಹಿಂದೆ ಆಗ್ನೇಯ ಏಷ್ಯದ ಕಾಡುಗಳಲ್ಲೆಲ್ಲ ಹರಡಿಕೊಂಡಿದ್ದರೂ ವಾತಾವರಣದಲ್ಲಾದ ಬದಲಾವಣೆಗಳಿಂದಲೂ ಮಾನವಶಕ್ತಿಗೆ ಮಣಿದೂ ಇವುಗಳ ಸಂಖ್ಯೆ ಈಗ ಬಹುವಾಗಿ ಇಳಿದಿದೆ. ಇಂದು ಬೋರ್ನಿಯೊ ಮತ್ತು ಸುಮಾತ್ರಗಳ ಜೌಗು ಕಾಡುಗಳಲ್ಲಿ ಮಾತ್ರ ಕಾಣಬಹುದಾದ ಇವುಗಳ ಸಂಖ್ಯೆ 5,000ಕ್ಕಿಂತ ಕಡಿಮೆ. ವಾಸ ಮರಗಳ ಮೇಲೆ. ಸಾಮಾನ್ಯವಾಗಿ ಗಂಡು ಹೆಣ್ಣುಗಳು ಜೊತೆಜೊತೆಯಾಗಿ ಬಾಳುತ್ತವೆ ; ಕೆಲವೊಮ್ಮೆ ಒಂಟಿಯಾಗಿಯೂ ಗುಂಪಿನಲ್ಲಿಯೂ ಇರಬಹುದು. ಮರಗಳ ಮೇಲೆ ರೆಂಬೆಗಳನ್ನು ಹೆಣೆದು ಗೂಡು ಕಟ್ಟಿಕೊಂಡು ಅಲ್ಲಿ ಮಲಗುತ್ತವೆ. ವಿಶ್ರಮಿಸುವಾಗ ಎಲೆಗಳಿಂದ ಮೈಯನ್ನು ಮುಚ್ಚಿಕೊಳ್ಳುವ ಅಭ್ಯಾಸ ಉಂಟು.

ಬಲಯುತವಾದ ದೇಹ, ಸಣ್ಣ ಕಿವಿಗಳು, ಗಿಡ್ಡ ಕಾಲುಗಳು, ಎದ್ದು ನಿಂತಾಗ ನೆಲ ಮುಟ್ಟುವಷ್ಟು ಉದ್ದವಾದ ಕೈಗಳು ಇದರ ವಿಶಿಷ್ಟ ಲಕ್ಷಣಗಳು. ಹೆಚ್ಚು ಕಡಿಮೆ ಗೋರಿಲ್ಲದಂತೆ ಕಾಣುತ್ತದೆ. ಇದರ ಚಿಕ್ಕ ಕಿವಿಗಳು, ಕಂದು ಚರ್ಮ, ಉದ್ದನೆಯ ವಿರಳ ಕೆಂಗೂದಲುಗಳಿಂದಾಗಿ ಇದು ಗೋರಿಲ್ಲಕ್ಕಿಂತ ಭಿನ್ನವೆನಿಸಿದೆ. ಗಂಡು ಸುಮಾರು 5½ ಅಡಿ ಎತ್ತರ ಬೆಳೆಯುವುದುಂಟು ; 165 ಪೌಂ. ತೂಗುತ್ತದೆ. ಪ್ರಾಣಿಸಂಗ್ರಹಾಲಯಗಳಲ್ಲಿ ಸಾಕಿದ ಒರಾಂಗೂಟಾನುಗಳು ವಿಪರೀತ ದಪ್ಪವಾಗಿ ಬೆಳೆದು 400ಕ್ಕೂ ಹೆಚ್ಚು ಪೌಂಡು ತೂಗುವುದುಂಟು. ಪ್ರಬುದ್ಧ ಗಂಡಿನಲ್ಲಿ ಗಡ್ಡ ಬೆಳೆಯುತ್ತದೆ. ಧ್ವನಿಪೆಟ್ಟಿಗೆಯಿಂದ ಉದ್ಭವಿಸಿದ ಗಾಳಿಯ ಚೀಲವೊಂದು ಕುತ್ತಿಗೆಯ ಭಾಗದಲ್ಲಿ ನೇತುಬಿದ್ದಿದೆ. ಅಲ್ಲದೆ ಎರಡು ಕೆನ್ನೆಗಳ ಬಳಿಯೂ ಕಪಿ ಸಾಮಾನ್ಯಕ್ಕಿರುವಂತೆ ಒಂದೊಂದು ಚೀಲವಿದೆ.

ನೆಲದ ಮೇಲೆ ಇದರ ನಡಿಗೆ ನಿಧಾನ ಅಲ್ಲದೆ ಇದು ನೆಲದ ಮೇಲೆ ನಡೆಯಲು ಇಚ್ಛಿಸುವುದೂ ಇಲ್ಲ. ಮರಗಳ ಮೇಲೆ, ರೆಂಬೆಯಿಂದ ರೆಂಬೆಗೆ ನೆಗೆದು

ಸಾಗುವುದೇ ಸಾಮಾನ್ಯ. ಸರಾಗವಾಗಿ ಗಂಟೆಗೆ 5–6 ಮೈಲಿ ದೂರ ಕ್ರಮಿಸುತ್ತದೆ.



ಒರಾಂಗೂಟಾನ್ ಸ್ವಾಭಾವಿಕವಾಗಿ (ಚಿಂಪಾಂಜಿಯಷ್ಟಲ್ಲದಿದ್ದರೂ) ಬಹು ಚುರುಕಾದ ಪ್ರಾಣಿ. ಸಾಕಿ ಶಿಕ್ಷಣವಿತ್ತಾಗ ಹೆಚ್ಚಿನ ಚುರುಕುತನ ಪ್ರದರ್ಶಿಸುತ್ತದೆ. ಮನುಷ್ಯರೊಂದಿಗೆ ಇದು ಸ್ನೇಹಪರ. ತನ್ನ ಆವರಣದ ಬಗ್ಗೆ ಕುತೂಹಲವನ್ನು ಪ್ರದರ್ಶಿಸುತ್ತದೆ.

ಈ ಪ್ರಾಣಿ ಸಂಪೂರ್ಣವಾಗಿ ಸಸ್ಯಾಹಾರಿ. ಮುಖ್ಯವಾಗಿ ಹಣ್ಣುಗಳು ಇದರ ಆಹಾರ. ಕೆಲವೊಮ್ಮೆ ಎಲೆ, ದಂಟುಗಳನ್ನೂ ತಿನ್ನುತ್ತದೆ.

ಗಂಡು 10 ವರ್ಷಗಳಲ್ಲಿಯೂ ಹೆಣ್ಣು 8 ವರ್ಷಗಳಲ್ಲಿಯೂ ಪ್ರೌಢಾವಸ್ಥೆ ತಲುಪುತ್ತವೆ. ಗರ್ಭಾವಧಿ 270 ದಿನಗಳು. ಒಮ್ಮೆಗೆ ಒಂದು ಮರಿಯನ್ನು ಮಾತ್ರ ಹೆರುತ್ತದೆ. (ಎಚ್.ಬಿ.ಡಿ.)

**ಒರಾಟಿಕ್ ಆಮ್ಲ :** ಇದೊಂದು ಸಾವಯವ ಆಮ್ಲ. ಇದರ ಅಣುಸೂತ್ರ $C_5H_4N_2O_4$. ರಚನಾಸೂತ್ರ ಚಿತ್ರದಲ್ಲಿ ತೋರಿಸಿದೆ. ಹಸುವಿನ ಹಾಲಿನಲ್ಲಿ ಇದನ್ನು ಮೊದಲು ಗುರುತಿಸಿದ್ದು ಮತ್ತು ಅದರಿಂದ ಬೇರ್ಪಡಿಸಿದ್ದು 1905ರಲ್ಲಿ. ಮೇಲ್ಮಟ್ಟದ ಜೀವಿಗಳಲ್ಲಿಯೂ ಕೆಳಮಟ್ಟದ ಜೀವಿಗಳಲ್ಲಿಯೂ ಇದು ಆರ್‌ಎನ್‌ಎ ಮತ್ತು ಡಿಎನ್‌ಎ ಪಿರಿಮಿಡೀನುಗಳ ಪೂರ್ವಗಾಮಿಯಾಗಿರುವುದೆಂದು 1958ರಲ್ಲಿ ಗೊತ್ತಾಯಿತು. ಆಹಾರದಲ್ಲಿ ಒರಾಟಿಕ್ ಆಮ್ಲ ಸೇಕಡ ಒಂದರಷ್ಟಿದ್ದರೆ ಬಿಳಿ ಇಲಿಗಳಲ್ಲಿ ಮೇದೋಭರಿತ ಯಕೃತ್ತನ್ನುಂಟುಮಾಡುವುದು ; ಆದರೆ ಸಾದಾ ಇಲಿಗಳಲ್ಲಿ, ಕೋತಿಗಳಲ್ಲಿ ಮತ್ತು ಕೋಳಿಗಳಲ್ಲಿ ಉಂಟುಮಾಡುವುದಿಲ್ಲ. ಈ ಮೇದೋಭರಿತ ಯಕೃತ್ತು ಅನೇಕ ರೀತಿಯಲ್ಲಿ ವಿಶಿಷ್ಟತೆಯುಳ್ಳದ್ದು. (1) ಅಧಿಕ ಪ್ರೋಟೀನು, ಕಡಿಮೆ ಮೇದಸ್ಸು ಮತ್ತು ಸಾಕಷ್ಟು ಕೋಲೀನ್ ಉಳ್ಳ ಆಹಾರವಿದ್ದಾಗ ಇದು ಕಂಡುಬಂದಿದೆ. (2) ಸಂಗ್ರಹವಾದ ಲಿಪಿಡ್ಡಿನಲ್ಲಿ ಹೆಚ್ಚಿನ ಪ್ರಮಾಣ ಕೊಲೆಸ್ಟೆರಾಲ್ ಇರುತ್ತದೆ. ಸೀರಮ್ಮಿನಲ್ಲಿ ಕೊಲೆಸ್ಟೆರಾಲ್ ಪ್ರಮಾಣ ಕಡಿಮೆ. (3) ಲಿಪಿಡ್ಡು ಯಕೃತ್ತಿನ ಬಾಯ ಸುತ್ತಲೂ ಹಂಚಿಕೊಂಡಿರುತ್ತದೆ. (4) ಅಡನೀನ್ ನ್ಯೂಕ್ಲಿಯೊಟೈಡುಗಳು ಕಡಿಮೆಯಾದಷ್ಟೂ ದ್ರಾವ್ಯ ಯುರಿಡೀನ್ ನ್ಯೂಕ್ಲಿಯೊಟೈಡು ಯಕೃತ್ತಿನಲ್ಲಿ ಹೆಚ್ಚಾಗುತ್ತದೆ. (5) ಅಡೆನೀನ್, ಆಕ್ಟಿನೊಮೈಸಿನ್ ಡಿ, ಗ್ಲೂಕೋಸಮೀನ್ 6–ಅಸಾಯುರಸಿಲ್, ಲ್ಯಾಕ್ಟೋಸ್, ಕ್ಯಾಲ್ಸಿಯಂ ಲ್ಯಾಕ್ಟೇಟುಗಳೂ ಅಡ್ರಿನಲ್ ಗ್ರಂಥಿಛೇದನೆಯೂ ಮೇದೋಭರಿತ ಯಕೃತ್ತನ್ನು ಪೂರ್ವಸ್ಥಿತಿಗೆ ತರುತ್ತವೆ.




(.ಪಿ.ಎಸ್.ಎಸ್‌ಎಚ್.)

**ಒರಿಯ ಭಾಷೆ :** ಒರಿಸ್ಸ ರಾಜ್ಯದ ಜನರ ಭಾಷೆ. ಭಾರತ ಸಂವಿಧಾನದಿಂದ ಮಾನ್ಯತೆ ಪಡೆದಿರುವ ಹದಿನೈದು ಭಾಷೆಗಳಲ್ಲಿ ಒಂದು. ಆರ್ಯಭಾಷಾ ಪರಿವಾರದ ಮುಖ್ಯ ಭಾಷೆಗಳಲ್ಲೊಂದಾಗಿದ್ದು ಮಾಗಧ ಅಪಭ್ರಂಶದಿಂದ ಬೆಳೆದು ಬಂದ ಬಂಗಾಳಿ, ಅಸ್ಸಾಮೀ ಭಾಷೆಗಳೊಂದಿಗೆ ನಿಕಟ ಸಂಬಂಧ ಪಡೆದಿದೆ. ಮೂವತ್ತೆರಡು ಸಾವಿರ ಚದರ ಮೈಲಿ ಪ್ರದೇಶದಲ್ಲಿ ವಾಸಿಸುವ ಮೂವತ್ತು ದಶಲಕ್ಷ ಜನ ಈ ಭಾಷೆಯನ್ನಾಡುತ್ತಾರೆ. ಭಾರತದ ಬಂಗಾಳ ಕೊಲ್ಲಿಯ ತೀರದಲ್ಲಿ ಪ್ರಚಾರದಲ್ಲಿರುವ ಈ ಭಾಷೆ ಉತ್ತರದಲ್ಲಿ ಬಂಗಾಳಿ, ವಾಯವ್ಯದಲ್ಲಿ ಬಿಹಾರಿ, ದಕ್ಷಿಣದಲ್ಲಿ ತೆಲುಗು ಭಾಷೆಗಳಿಂದಲೂ ನೈಋತ್ಯದಲ್ಲಿ ಮರಾಠಿಯ ಹಾಲ್ಬಿ ಮತ್ತು ಭತ್ರಿ ಉಪಭಾಷೆಗಳು ಮತ್ತು ಪೂರ್ವೀ ಹಿಂದಿಯ ಛತ್ತೀಸ್‌ಗಢಿ ಉಪಭಾಷೆಗಳಿಂದಲೂ ಆವರಿಸಲ್ಪಟ್ಟಿದೆ.

**ಭಾಷೆಯ ಹೆಸರು :** ಆಂಗ್ಲಭಾಷೆಯಲ್ಲಿ ಕ್ಯಾನರೀಸ್ ಎಂದು ಕರೆಯುವ ಭಾಷೆಯ ನಿಜವಾದ ಹೆಸರು ಕನ್ನಡವಾಗಿರುವಂತೆಯೇ ಆಂಗ್ಲಭಾಷೆಯಲ್ಲಿ ಒರಿಯ ಎನ್ನಿಸಿಕೊಂಡ ಭಾಷೆಯ ಸರಿಯಾದ ಹೆಸರು ಒಡಿಯ. ಶಬ್ದದ ಉತ್ಪತ್ತಿಯನ್ನು ನೋಡಿದರೆ ಒರಿಸ್ಸ ಶಬ್ದ ಒರಿಸು ಎನ್ನುವ (ಒಕ್ಕಲಿಗ, ರೈತ) ಶಬ್ದದಿಂದಲೂ ಒಡಿಯ ಜನ ಎಂಬ ಶಬ್ದ ಓಢ್ರ ಎಂಬ ಒರಿಸ್ಸದ ಪ್ರಾಚೀನ ನಿವಾಸಿಗಳ ಹೆಸರಿನಿಂದಲೂ ಬಂದಿವೆಯೆಂದು ಊಹಿಸಬಹುದು. ಈಗಲೂ ಎಷ್ಟೋ ಜನ ಈ ಶಬ್ದವನ್ನು ಉರಿಯ ಎಂದು ತಪ್ಪಾಗಿ ಉಚ್ಚರಿಸುತ್ತಾರೆ. ಕಳೆದ ಶತಮಾನದ ಇಂಡಿಯನ್ ಸಿವಿಲ್ ಸರ್ವಿಸಿಗೆ ಸೇರಿದ ಕೆಲವು ಭಾಷಾಶಾಸ್ತ್ರಜ್ಞರು ಒರಿಯ ಶಬ್ದವನ್ನು ಉಪಯೋಗಿಸುತ್ತಿದ್ದುದರಿಂದ ಅದೇ ಹೆಸರು ಬಳಕೆಗೆ ಬಂದಿರಬೇಕು.

**ಲಿಪಿ :** ಒರಿಯ ಭಾಷೆಗೆ ತನ್ನದೇ ಆದ ವಿಶಿಷ್ಟವಾದ ಲಿಪಿಯಿದೆ. ಈ ಲಿಪಿ ಬ್ರಾಹ್ಮೀಲಿಪಿಯಿಂದಲೇ ಬೆಳೆದುಬಂದುದಾಗಿದ್ದು ದೇವನಾಗರಿಯ ಸೋದರ ಲಿಪಿಯೆನಿಸಿಕೊಂಡಿದೆಯಾದರೂ ದೇವನಾಗರಿಯಿಂದ ತೀರ ಭಿನ್ನವಾಗಿದೆ. ಉತ್ತರ ಭಾರತದ ಮತ್ತು ದಕ್ಷಿಣ ಭಾರತದ ಲಿಪಿಗಳನ್ನು ಹೋಲುವ ಈ ಲಿಪಿ ಎರಡೂ ವರ್ಗದ ಲಿಪಿಗಳಿಗೆ ಮಧ್ಯವರ್ತಿಯಾಗಿದೆಯೆನ್ನಬಹುದು. ದಕ್ಷಿಣ ಲಿಪಿಗಳೊಡನೆ ಇದರ ಸಾಮ್ಯ ಹೆಚ್ಚೆಂದು ಹೇಳಬಹುದು. ಒರಿಯ ಅಕ್ಷರಗಳ ಈಗಿನ ರೂಪ ತೆಲುಗು, ಮಲಯಾಳ, ತಮಿಳು, ಸಿಂಹಳಿ ಮತ್ತು ಬರ್ಮೀ ಭಾಷೆಯ ಅಕ್ಷರಗಳನ್ನು ಬಹುಮಟ್ಟಿಗೆ ಹೋಲುತ್ತದೆ. ಒರಿಯದ ಪ್ರತಿ ಅಕ್ಷರದ ಮೇಲ್ಭಾಗದಲ್ಲಿ ಒಂದೇ ರೀತಿಯ ಅರ್ಧವೃತ್ತಾಕಾರವಿರುವುದರಿಂದ ಎಲ್ಲ ಅಕ್ಷರಗಳೂ ಒಂದೇ ಬಗೆಯಾಗಿರುವಂತೆ ಭಾಸವಾಗುತ್ತದೆ. ಕೆಲವು ವಿದೇಶೀಯರಂತೂ ನೋಡಿದೊಡನೆ ಎಲ್ಲ ಅಕ್ಷರಗಳೂ ಒಂದೇ ರೀತಿಯ ವೃತ್ತಾಕಾರಗಳಾಗಿವೆಯೆಂದು ಭಾವಿಸುತ್ತಾರೆ. ಆ ವೃತ್ತಾಕಾರಗಳ ಒಳಗೆ ಇನ್ನು ಕೆಲವು ಆಕಾರಗಳಿವೆಯೆಂಬುದನ್ನು ಕಾಣಲು ಅವರು ಇನ್ನಷ್ಟು ಸೂಕ್ಷ್ಮವಾಗಿ ಪರಿಶೀಲಿಸಿ ನೋಡಬೇಕಾಗುತ್ತದೆ. ಪ್ರಾಯಶಃ ತಾಳಪತ್ರದಲ್ಲಿ ಕಬ್ಬಿಣದ ಕಂಠದಿಂದ ಬರೆಯುತ್ತಿದ್ದುದರಿಂದ ಈ ರೀತಿ ಗುಂಡುಗುಂಡಾದ ಅಕ್ಷರಗಳು ಪ್ರಚಾರಕ್ಕೆ ಬಂದಿರಬೇಕು. ಇತ್ತೀಚೆಗೆ ಒಬ್ಬಿಬ್ಬರು ನೀಳವಾದ ತಲೆ ಕಟ್ಟುಗಳನ್ನು ಕೊಟ್ಟು ದೇವನಾಗರಿಯ ರೀತಿಯಲ್ಲಿ ಇದನ್ನು ಬರೆಯುವ ಪ್ರಯತ್ನ ಮಾಡಿದ್ದಾರಾದರೂ ಅದು ಫಲಕಾರಿಯಾಗಲಿಲ್ಲ. ಈಗ ಒರಿಸ್ಸ ಸರ್ಕಾರ ಲಿಪಿ ಸುಧಾರಣೆಯ ಸಾಧ್ಯತೆಯನ್ನು ಪರಿಶೀಲಿಸುತ್ತಿದೆ.

**ಲಿಖಿತ ರೂಪಗಳು :** ಕಳಿಂಗ ರಾಜನಾದ ಅನಂತವರ್ಮ ವಜ್ರಹಸ್ತ ದೇವನ ಶಿಲಾಶಾಸನವೇ (1051) ಒರಿಯದಲ್ಲಿ ಈವರೆಗೆ ದೊರೆತ ಅತಿ ಪ್ರಾಚೀನ ಶಾಸನ. ಇದಲ್ಲದೆ ಕ್ರಿ.ಪೂ. ಮೂರನೆಯ ಶತಮಾನದ ಅಶೋಕನ ಮತ್ತು ಕ್ರಿ. ಪೂ. ಮೊದಲ ಶತಮಾನದ ಖಾರವೇಲನ ಶಿಲಾಶಾಸನಗಳು ಕೂಡ ಒರಿಸ್ಸದಲ್ಲಿ ಸಿಕ್ಕಿವೆ. ಈ ಶಾಸನಗಳಿಂದ ಆ ಕಾಲದಲ್ಲಿ ಪಾಲಿ ಭಾಷೆ ಪ್ರಚಾರದಲ್ಲಿದ್ದುದು ಕಂಡುಬರುತ್ತದೆ. ಈ ಶಾಸನಗಳ ಮತ್ತು ನಮಗೆ ದೊರೆತ ಅತಿ ಪ್ರಾಚೀನ ಸಾಹಿತ್ಯಕೃತಿಗಳ ನಡುವಣ ಯುಗದಲ್ಲಿ ಓಢ್ರ ಎನ್ನುವ ಉಪಭಾಷೆಯ ಹೆಸರೂ ಕೇಳಿಬರುತ್ತದೆ. ಪಾಲಿ, ಪ್ರಾಕೃತಗಳ ಪ್ರಭಾವದಿಂದ ಬೆಳೆದುಬಂದ ಈ ಭಾಷೆಯನ್ನು ಬೌದ್ಧರು ಉಪಯೋಗಿಸುತ್ತಿದ್ದರು. ಎರಡನೆಯ ಶತಮಾನದ ಭರತನ ನಾಟ್ಯಶಾಸ್ತ್ರದಲ್ಲಿಯೂ ಏಳನೆಯ ಶತಮಾನದ ಹೂಯೆನ್‌ತ್ಸಾಂಗನ ಬರೆಹಗಳಲ್ಲಿಯೂ ಇದರ ಉಲ್ಲೇಖವಿದೆ. ಒರಿಯ ರಾಜ್ಯದ ಗಡಿಯೊಳಗೆ ಪ್ರಚಾರವಲ್ಲಿದ್ದ ಸಂಸ್ಕೃತ

ಮತ್ತು ದ್ರಾವಿಡ ಭಾಷೆಗಳಲ್ಲಿ ಬರುವ ಒರಿಯು ಶಬ್ದ ಮತ್ತು ನುಡಿಗಟ್ಟುಗಳಿಂದಲೂ ಏಳನೆಯ ಮತ್ತು ಒಂಬತ್ತನೆಯ ಶತಮಾನದ ಶಿಲಾಶಾಸನಗಳಿಂದಲೂ ಒರಿಯ

ଅ ಅ ଆ ಆ ଇ ಇ ଈ ಈ ଉ ಉ

ଊ ಊ ଋ ಋ ଏ ಏ ଐ ಐ ଓ ಓ

ଔ ಔ ଅଂ ಅಂ ଅଃ ಅಃ

କ ಕ ଖ ಖ ଗ ಗ ଘ ಘ ଙ ಙ

ଚ ಚ ଛ ಛ ଜ ಜ ଝ ಝ ଞ ಞ

ଟ ಟ ଠ ಠ ଡ ಡ ଢ ಢ ଣ ಣ

ତ ತ ଥ ಥ ଦ ದ ଧ ಧ ନ ನ

ପ ಪ ଫ ಫ ବ ಬ ଭ ಭ ମ ಮ

ଯ ಯ ର ರ ଳ ಳ ଲ ಲ ୱ ವ

ଶ ಶ ଷ ಷ ସ ಸ ହ ಹ କ୍ଷ ಕ್ಷ

ଡ଼ ಡ಼ ଢ଼ ಢ಼

ಅಕ್ಷರ ಮಾಲೆ

ಭಾಷೆಯ ಚಾರಿತ್ರಿಕ ಪ್ರಗತಿಯನ್ನು ಊಹಿಸಬಹುದು. ಹದಿಮೂರನೆಯ ಶತಮಾನದ ಭುವನೇಶ್ವರ ದೇವಸ್ಥಾನದ ಶಾಸನದಿಂದ ಒರಿಯು ಭಾಷೆ ಆ ವೇಳೆಗಾಗಲೆ ಕೆಲವು ಶತಮಾನಗಳಿಂದ ಅಭಿವೃದ್ಧಿಗೊಳ್ಳುತ್ತಿತ್ತೆಂದು ಸ್ಪಷ್ಟವಾಗಿ ತಿಳಿದುಬರುತ್ತದೆ. ಹತ್ತು ಹನ್ನೆರಡನೆಯ ಶತಮಾನಗಳ ಮಧ್ಯದಲ್ಲಿ ರಚಿಸಲಾಗಿದೆಯೆಂದು ಊಹಿಸಬಹುದಾದ ಸಾರಳಾದಾಸ ಕವಿಯ ಮಹಾಭಾರತವೇ ಉಪಲಬ್ಧ ಒರಿಯು ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು. ಈ ಗ್ರಂಥದ ನಿಜವಾದ ಕಾಲನಿಷ್ಕರ್ಷೆಯ ಬಗ್ಗೆ ವಾದವಿವಾದಗಳಿದ್ದು ಕೆಲವರು ಇದನ್ನು ಹದಿನೈದನೆಯ ಶತಮಾನದ ಕೃತಿಯೆಂದು ಊಹಿಸುತ್ತಾರೆ.

**ಭಾಷಾ ಪ್ರಭೇದಗಳು :** ಕಟಕ್ ಮತ್ತು ಪುರಿ ಪ್ರದೇಶಗಳಲ್ಲಿನ ಆಡುನುಡಿ ಈ ಭಾಷೆಯ ಮುಖ್ಯ ಪ್ರಭೇದವೆಂದೂ ಒರಿಯು ಮಾತಾಡುವ ಎಲ್ಲ ಜನರೂ ಈ ಪ್ರಭೇದವನ್ನು ಅರ್ಥಮಾಡಿಕೊಳ್ಳಬಲ್ಲರೆಂದೂ ಹೇಳಬಹುದು. ಒರಿಯದ ಉಪಭಾಷಾಪರಿವೀಕ್ಷಣೆ ಈ ವರೆಗೆ ನಡೆದಿಲ್ಲ. ಹೀಗಾಗಿ ಉಪಭಾಷೆಗಳ ವಿತರಣೆಗೆ ಸಂಬಂಧಿಸಿದಂತೆ ಯಾವ ಸಾಹಿತ್ಯವೂ ನಮಗೆ ದೊರೆಯುವುದಿಲ್ಲ. ಆದರೂ ಸ್ಥೂಲವಾಗಿ ಕೆಲವು ಪ್ರಧಾನ ಪ್ರಭೇದಗಳನ್ನು ಗುರುತಿಸಬಹುದು. ಸಂಬಲ್‌ಪುರ ಮತ್ತು ಅದರ ಆಸುಪಾಸಿನ ಜಿಲ್ಲೆಗಳ ಜನರ ಆಡುನುಡಿಯಾದ ಸಂಬಲ್‌ಪುರಿ ಈ ಭಾಷೆಯ ಪ್ರಧಾನ ಪ್ರಭೇದಗಳಲ್ಲಿ ಒಂದು. ಇದು ಛತ್ತೀಸ್‌ಗಢಿ ಮತ್ತು ಹಿಂದಿಯಿಂದ ಪ್ರಭಾವಿತವಾಗಿದೆ. ಇನ್ನೊಂದು ಪ್ರಭೇದ ಉತ್ತರ ಭಾಗದಲ್ಲಿ ಬಂಗಾಳದ ಗಡಿ ಪ್ರದೇಶದಲ್ಲಿ ಪ್ರಚಾರದಲ್ಲಿದೆ. ಇದು ಬಂಗಾಳಿಯಿಂದ ಎಷ್ಟು ಪ್ರಭಾವಿತವಾಗಿದೆಯೆಂದರೆ ಗ್ರಿಯರ್‌ಸನ್ನನ ಮಾತಿನಲ್ಲಿ ಹೇಳುವುದಾದರೆ ಈ ಭಾಗದ ಜನರ ಆಡುಮಾತಿನಲ್ಲಿ ಒರಿಯದಲ್ಲಿ ಪ್ರಾರಂಭವಾದ ವಾಕ್ಯ ಬಂಗಾಳಿಯಲ್ಲಿ ಕೊನೆಗೊಳ್ಳುತ್ತದೆ. ರಾಜ್ಯದ ಉತ್ತರ ಭಾಗದಲ್ಲಿ ಕೆಲವೆಡೆಯಂತೂ ಒರಿಯು ಪುಸ್ತಕಗಳು ಬಂಗಾಳಿ ಲಿಪಿಯಲ್ಲಿ ಅಧಿಕ ಸಂಖ್ಯೆಯಲ್ಲಿ ಮುದ್ರಿತವಾಗಿ ಸಾಮಾನ್ಯ ಜನತೆಯಲ್ಲಿ ಪ್ರಚಾರದಲ್ಲಿವೆ. ದಕ್ಷಿಣದ ಗಂಜಾಂ ಮತ್ತು ಕೋರಾಪುಟ್ ಜಿಲ್ಲೆಗಳಲ್ಲಿನ ಆಡುಮಾತು ತೆಲುಗು ಭಾಷೆಯಿಂದ ಪ್ರಭಾವಿತವಾಗಿದೆ. ಈ ಪ್ರಭೇದವನ್ನು ದಕ್ಷಿಣೀ ಎಂದು ಕರೆಯುತ್ತಾರೆ. ಕೋರಾಪುಟ್ ಜಿಲ್ಲೆಯ ಗಿರಿಜನರಲ್ಲಿ ಪ್ರಚಾರದಲ್ಲಿರುವ ಆಡುನುಡಿ ದಕ್ಷಿಣೀ ಭಾಷೆಯಿಂದ ಭಿನ್ನವಾಗಿದ್ದು ದೇಶೀಯ ವೆನ್ನಿಸಿಕೊಳ್ಳುತ್ತದೆ.

**ಶಬ್ದಸಂಪತ್ತು :** ಹಲವು ಶತಮಾನಗಳ ವರೆಗೆ ಒರಿಸ್ಸ ರಾಜ್ಯ ತೆಲಿಂಗ ರಾಜರ ಅಧೀನದಲ್ಲಿತ್ತು. ಇಪ್ಪತ್ತನೆಯ ಶತಮಾನದಲ್ಲೂ ಹಲವು ಕಾಲ ಅದರ ಒಂದು ಭಾಗ ಮದ್ರಾಸ್ ಸರಕಾರದ ಆಳ್ವಿಕೆಗೊಳಗಾಗಿತ್ತು. ಹೀಗಾಗಿ ಅನೇಕ ತಮಿಳು ಮತ್ತು ತೆಲುಗು ಶಬ್ದಗಳು ಒರಿಯು ಭಾಷೆಯಲ್ಲಿ ಸೇರಿಕೊಂಡಿವೆ. ಸುಮಾರು ಐವತ್ತು ವರ್ಷಗಳ ಕಾಲ ಒರಿಸ್ಸ ರಾಜ್ಯ ನಾಗಪುರದ ಭೋನ್‌ಸ್ಲೆ ರಾಜರ ವಶದಲ್ಲಿತ್ತು. ಹೀಗಾಗಿ ಒರಿಯು ಮರಾಠಿ ಶಬ್ದಗಳನ್ನೂ ಸ್ವೀಕರಿಸಿದೆ. ಒರಿಸ್ಸ ರಾಜ್ಯದ ಐದನೆಯ ಒಂದು ಪಾಲು ಜನಸಂಖ್ಯೆ ಗಿರಿಜನರಿಂದ ಕೂಡಿರುವುದರಿಂದ ಕೋಂಡ್, ಕೋಲ್ಹ, ಕುಯಿ, ಹೊ, ಸವರ, ಜುವಂಗ್ ಮುಂತಾದ ಭಾಷೆಗಳ ಶಬ್ದಗಳೂ ಒರಿಯದ ಭಂಡಾರಕ್ಕೆ ಸೇರಿಕೊಂಡಿವೆ. ಇವುಗಳ ಜೊತೆ ಸಂಸ್ಕೃತದ ತತ್ಸಮ ಮತ್ತು ತದ್ಭವ ಶಬ್ದಗಳು, ಅರೇಬಿಕ್ ಮತ್ತು ಪರ್ಷಿಯನ್ ಶಬ್ದಗಳೂ ಗಣನೀಯ ಪ್ರಮಾಣದಲ್ಲಿ ಸೇರಿಕೊಂಡಿವೆ. ಪೋರ್ಚುಗೀಸ್ ಮತ್ತು ಇತರ ವಿದೇಶೀ ಶಬ್ದಗಳು ನೇರವಾಗಿ ಅಥವಾ ಇತರ ಭಾರತೀಯ ಭಾಷೆಗಳ ಮೂಲಕ ಒರಿಯು ಶಬ್ದಭಂಡಾರಕ್ಕೆ ಬಂದು ಸೇರಿವೆ. ಇಂಗ್ಲಿಷ್ ಶಬ್ದಗಳಂತೂ ಆಬಾಲವೃದ್ಧರ ಆಡುನುಡಿಯಲ್ಲಿ ದಿನದಿನಕ್ಕೂ ಅಧಿಕ ಸಂಖ್ಯೆಯಲ್ಲಿ ಬಂದು ನೆಲೆಯೂರುತ್ತಿವೆ.

**ಧ್ವನಿ ವ್ಯವಸ್ಥೆ :** ಅನುವಂಶಿಕವಾಗಿ ಒರಿಯು ಭಾಷೆ ಬಂಗಾಳಿ ಮತ್ತು ಅಸ್ಸಾಮೀಗಳಿಗೆ ಸಮೀಪವಾಗಿದ್ದರೂ ಲಿಪಿ ಮತ್ತು ಧ್ವನಿವ್ಯವಸ್ಥೆಯಲ್ಲಿ ಈ ಭಾಷೆ ಅವಕ್ಕಿಂತ ಭಿನ್ನವಾಗಿದೆ. ಇದರ ಒಂದು ಪ್ರಧಾನವಾದ ಮತ್ತು ಮೂಲಭೂತವಾದ ವೈಶಿಷ್ಟ್ಯವೆಂದರೆ ಅಕ್ಷರಗಳು ಸ್ವರಾಂತವಾಗಿರುವುದು. ಒರಿಯದ ಶಬ್ದಗಳೂ ಸ್ವರದಲ್ಲಿ ಕೊನೆಗೊಳ್ಳುತ್ತವೆ (ಅಜಂತಗಳಾಗಿವೆ). ಸೋದರಭಾಷೆಗಳಲ್ಲಿ ಅಜಂತಗಳಲ್ಲದ ಶಬ್ದಗಳು ಒರಿಯದಲ್ಲಿ ಓ ಎಂಬ ವಿಶಿಷ್ಟವಾದ ವಿವೃತ ಒ ಕಾರದಲ್ಲಿ (ಎ) ಕೊನೆಗೊಳ್ಳುತ್ತವೆ. ಹಿಂದಿ ಮತ್ತು ಬಂಗಾಳಿಯ ಘರ್ ಎನ್ನುವ ಹಲಂತ ಶಬ್ದ ಒರಿಯದಲ್ಲಿ ಘೊರೊ (ghoro) ಎಂದು ಅಜಂತವಾಗುತ್ತದೆ. ಇದರಿಂದಾಗಿಯೆ ಗ್ರಿಯರ್‌ಸನ್ ಒರಿಯು ಭಾಷೆಯಲ್ಲಿ, ಬರೆವಣಿಗೆ ಮತ್ತು ಉಚ್ಚಾರಣೆ ಒಂದೇ ರೀತಿಯಾಗಿವೆಯೆಂದು ಹೇಳಿದ್ದಾನೆ. ಸ್ವರಗಳ ಹ್ರಸ್ವ ದೀರ್ಘ ರೂಪಗಳು ಪ್ರತ್ಯೇಕ ಸ್ವನಿಮಯಗಳಾಗಿಲ್ಲ. ಸಂಸ್ಕೃತ ಶಬ್ದಗಳಲ್ಲಿನ ದೀರ್ಘಸ್ವರಗಳು ಹ್ರಸ್ವ ಸ್ವರಗಳಾಗಿ ಉಚ್ಚರಿಸಲ್ಪಡುತ್ತವೆ. ಇನ್ನೆರಡು ವಿಚಾರಗಳಲ್ಲಿಯೂ ಒರಿಯು ಹಿಂದಿ ಮತ್ತು ಬಂಗಾಳಿಯಿಂದ ಭಿನ್ನವಾಗಿದೆ. ಹಿಂದಿ ಮತ್ತು ಬಂಗಾಳಿಯಲ್ಲಿಲ್ಲದ ಣ ಮತ್ತು ಳ ಒರಿಯದಲ್ಲಿದೆ. ಸ, ಶ, ಷ ಗಳೆಂಬ ಮೂರು ಊಷ್ಮಧ್ವನಿಗಳ ಸ್ಥಾನದಲ್ಲಿ ಬಂಗಾಳಿ ಭಾಷೆ ಶಕಾರವನ್ನು ಮಾತ್ರ ಬಳಸಿದರೆ ಒರಿಯು ಸಕಾರವನ್ನು ಮಾತ್ರ ಬಳಸುತ್ತದೆ. ಬರೆಹದಲ್ಲಿ ಬಕಾರ ಮತ್ತು ವಕಾರ ಪ್ರತ್ಯೇಕವಾಗಿ ಕಂಡು ಬಂದರೂ ಉಚ್ಚಾರಣೆಯಲ್ಲಿ ಈ ಎರಡರ ಸ್ಥಾನದಲ್ಲಿ ಓಷ್ಠ್ಯ ಬಕಾರ ಮಾತ್ರ ಬಳಕೆಯಲ್ಲಿದೆ. ಪದಾಘಾತ ಮತ್ತು ಸ್ವರವನ್ನು ಈ ತನಕ ಯಾರೂ ಅಧ್ಯಯನ ಮಾಡದಿದ್ದರೂ ಅವುಗಳ ವಿಚಾರವಾಗಿ ಒಂದೆರಡು ಮಾತುಗಳನ್ನು ಹೇಳಬಹುದು. ಶಬ್ದದ ಪ್ರಥಮಾಕ್ಷರಕ್ಕೆ ಆಘಾತವಿರುತ್ತದೆ. ಬಹ್ವಕ್ಷರೀ ಶಬ್ದಗಳಲ್ಲಿ ಪ್ರಥಮಾಕ್ಷರಕ್ಕೆ ಆಘಾತವಿಲ್ಲ. ವಾಕ್ಯದ ಕೊನೆಯಲ್ಲಿ ವಾಕ್ಯಸ್ವರ ಇಳಿಮುಖವಾಗುತ್ತದೆ.

**ವ್ಯಾಕರಣ :** ಒರಿಯದಲ್ಲಿ ಏಕ, ಬಹು ಎಂಬ ಎರಡು ವಚನಗಳಿವೆ. ಬಹುತ್ವವನ್ನು ದ್ಯೋತಿಸುವ ಶಬ್ದಗಳನ್ನು ಏಕವಚನ ರೂಪಕ್ಕೆ ಸೇರಿಸಿ ಬಹುವಚನ ರೂಪಗಳನ್ನು ಪಡೆಯಬಹುದು. ಸಂಸ್ಕೃತದ ಗಣ, ಕುಳ ಮತ್ತು ದ್ರಾವಿಡ ಭಾಷೆಗಳ ಗಳ್ ಇವುಗಳಿಂದ ಸಿದ್ಧಿಸಿದ ಗುಡಿ, ಗುಡಿಕ ಅಥವಾ ಗುಡಕ ಶಬ್ದಗಳು ಬಹುವಚನ ಸಾಧಕಗಳು. ಉದಾ. ಲೋಕ — ಮನುಷ್ಯ ; ಲೋಕಗುಡಿಕ, ಲೋಕಗುಡುಕ — ಮನುಷ್ಯರು. ಹಾಗೆಯೇ ಮನೆ, ಏ ಮುಂತಾದ ಪ್ರತ್ಯಯಗಳನ್ನು ಸೇರಿಸಿಯೂ ಲೋಕಮನೆ, ಲೋಕೆ ಮುಂತಾದ ಬಹುವಚನ ರೂಪಗಳನ್ನು ಪಡೆಯಬಹುದು. ಒರಿಯ ವ್ಯಾಕರಣದಲ್ಲಿ ಲಿಂಗ ವಿವಕ್ಷೆಯಿಲ್ಲ. ನೈಸರ್ಗಿಕ ಲಿಂಗ ವ್ಯವಸ್ಥೆಯ ಆಧಾರದ ಮೇಲೆ ಪುಲ್ಲಿಂಗ ಶಬ್ದಗಳಿಂದ ಸ್ತ್ರೀಲಿಂಗ ರೂಪಗಳನ್ನು ಸುಲಭವಾಗಿ ಸಾಧಿಸಬಹುದು. ನೈಸರ್ಗಿಕ ಲಿಂಗಭೇದಕ್ಕನುಸಾರವಾಗಿ ಸಜೀವ ವಾಚಕ ಶಬ್ದಗಳು ಸ್ತ್ರೀಲಿಂಗ ಪುಲ್ಲಿಂಗಗಳೆಂದು ವಿಭಾಗಿಸಲ್ಪಟ್ಟಿವೆ. ಪುಲ್ಲಿಂಗ ಶಬ್ದದಿಂದ ಸ್ತ್ರೀಲಿಂಗ ರೂಪ ಪಡೆಯಲು ಹಲವು ವಿಧಾನಗಳಿವೆ. ಗಂಡು ಮತ್ತು ಹೆಣ್ಣು ಶಬ್ದಗಳನ್ನು

ಆ ಶಬ್ದದ ಮುಂದೆ ಜೋಡಿಸುವುದು: ಒಂಡಿರಾ ಭೇಟಿ=ಹೋತ, ಮಾಯಿ ಭೇಟಿ=ಆಡು ; ಅಥವಾ ಸ್ತ್ರೀಲಿಂಗ ವಾಚಕವಾದ ಪ್ರತ್ಯೇಕ ಶಬ್ದವೊಂದನ್ನು ಬಳಸುವುದುಂಟು. ಕಾಕ=ಚಿಕ್ಕಪ್ಪ, ಖುಡಿ=ಚಿಕ್ಕಮ್ಮ ಇತ್ಯಾದಿ. ಸಾಮಾನ್ಯವಾಗಿ ಬರುವ ಸ್ತ್ರೀಲಿಂಗ ಪ್ರತ್ಯಯಗಳೆಂದರೆ ಇ, ಅಣಿ ಮತ್ತು ಉಣಿ. ಬುಢಾ=ಮುದುಕ, ಬುಢೀ=ಮುದುಕಿ, ಬಾಯ=ಹುಚ್ಚ, ಬಾಯಾಣಿ=ಹುಚ್ಚಿ, ಬಾಘೊ=ಹುಲಿ, ಬಾಘುಣಿ=ಹೆಣ್ಣುಹುಲಿ—ಇತ್ಯಾದಿ. ಒರಿಯದಲ್ಲಿ ಐದು ವಿಭಕ್ತಿಗಳಿವೆ. ಈ ವಿಭಕ್ತಿಗಳು ಪ್ರತ್ಯಯರೂಪದಲ್ಲಿರದೆ ಪರಸರ್ಗ ರೂಪದಲ್ಲಿವೆ. ದ್ವಿತೀಯೆ ಮತ್ತು ಚತುರ್ಥೀ ವಿಭಕ್ತಿಗಳಿಗೆ ಕು ಎನ್ನುವ ಒಂದೇ ರೂಪವಿದೆ. ಕ್ರಿಯಾಪದಗಳಲ್ಲಿ ಮೂರು ಕಾಲಭೇದಗಳಿವೆ. ವರ್ತಮಾನ, ಭೂತ, ಭವಿಷ್ಯದ್ ರೂಪಗಳು ಒಚ್ಛ್, ಲ ಮತ್ತು ಬ ಎನ್ನುವ ಪ್ರತ್ಯಯಗಳಿಂದ ಸಿದ್ಧಿಸುತ್ತವೆ. ಖಾವುಚ್ಛಿ=ತಿನ್ನುತ್ತಾನೆ, ಖಾಯಿಲಾ=ತಿಂದನು, ಖಾಯಿಬೊ=ತಿನ್ನುವನು—ಇತ್ಯಾದಿ. ಗ್ರಿಯರ್‌ಸನ್ನನ ಅಭಿಪ್ರಾಯದಂತೆ ಒರಿಯದ ಕ್ರಿಯಾಪದ ರೂಪಗಳು ತುಂಬ ಸರಳವಾಗಿಯೂ ವ್ಯವಸ್ಥಿತವಾಗಿಯೂ ಇವೆ. ಕಾಲಭೇದಗಳು ಬಹಳ ಇದ್ದರೂ ಅವು ತರ್ಕಬದ್ಧವಾಗಿದ್ದು ಅವುಗಳಲ್ಲಿ ಅಡಗಿರುವ ವ್ಯವಸ್ಥೆ ಬೇರೆ ಬೇರೆ ಕೃದಂತ ನಾಮಗಳಲ್ಲಿಯೂ ಕಂಡುಬರುತ್ತದೆ.

**ಸಾಹಿತ್ಯ :** ಸಾಹಿತ್ಯಭಾಷೆಯಾಗಿ ಒರಿಯ ಎಷ್ಟು ಸಮೃದ್ಧವಾಗಿ ಬೆಳೆದಿದೆಯೆನ್ನುವುದನ್ನು ಸೂಕ್ಷ್ಮವಾಗಿ ತೋರಿಸುವ ಸಲುವಾಗಿ ಮಾತ್ರ ಇಲ್ಲಿ ಸಾಹಿತ್ಯ ಭಾಗವನ್ನು ಸಂಗ್ರಹವಾಗಿ ಕೊಟ್ಟಿದೆ. ವಿವರಗಳಿಗೆ **ನೋಡಿ—ಒರಿಯ ಸಾಹಿತ್ಯ.**

ಒರಿಯ ಭಾಷೆಯ ಸಾಹಿತ್ಯ ತುಂಬ ಸಮೃದ್ಧವಾಗಿದೆ. ಅದು ಸಾಮಾನ್ಯ ಜನತೆಯ ಸಾಹಿತ್ಯ. ಈ ರಾಜ್ಯದಲ್ಲಿ ನೆಲೆನಿಂತ ಆಂಧ್ರರು, ಮರಾಠರು, ಬಂಗಾಳಿಗಳು, ಮುಸ್ಲಿಮರು, ಆದಿವಾಸಿಗಳು—ಎಲ್ಲರೂ ಇದಕ್ಕೆ ತಮ್ಮ ಕಾಣಿಕೆಗಳನ್ನರ್ಪಿಸಿದ್ದಾರೆ. ಜಗನ್ನಾಥ ದೇವರನ್ನು ವರ್ಣಿಸಿದ ಸಾಲಬೆಗ ಎನ್ನುವ ಮುಸ್ಲಿಂ ಕವಿ, ಮಧ್ಯಕಾಲೀನ ವೈಷ್ಣವ ಸಾಹಿತ್ಯವನ್ನು ಬೆಳೆಸಿದ ಚೈತನ್ಯ ಮಹರ್ಷಿಯ ಶಿಷ್ಯರಾದ ಬಂಗಾಳಿ ವೈಷ್ಣವರು ಜನತೆಯ ನಾಲಗೆಯಲ್ಲಿ ನಲಿದಾಡುವಂಥ ಸಂಗೀತ ರೂಪಕಗಳನ್ನು ರಚಿಸಿದ ಕುರುಡನಾದ ಖೊಂಡಕವಿ—ಇವರೆಲ್ಲ ಈ ಸಾಹಿತ್ಯಕ್ಕೆ ಅಪೂರ್ವವಾದ ಕಾಣಿಕೆಯನ್ನು ಸಲ್ಲಿಸಿದ್ದಾರೆ. ರಾಧಾನಾಥ ರೇ, ಆನಂದ ಶಂಕರ ರೇ ಮುಂತಾದ ಪ್ರತಿಭಾವಂತ ಬಂಗಾಳಿ ಕವಿಗಳು ಒರಿಯದಲ್ಲಿ ಗ್ರಂಥಗಳನ್ನು ರಚಿಸಿದ್ದಾರೆ. ಶತಮಾನಗಳುರುಳಿದಂತೆ, ರಾಜವಂಶಗಳು ಬದಲಾದಾಗ ಧಾರ್ಮಿಕ ವಿಶ್ವಾಸಗಳು ಬದಲಾದಂತೆ, ಸಾಹಿತ್ಯ ಸ್ವರೂಪವೂ ಮಾರ್ಪಾಟಾದುದು ಕಂಡುಬರುತ್ತದೆ. ಮೊದಲು ಜೈನ, ಆಮೇಲೆ ಬೌದ್ಧ, ತರುವಾಯ ಶೈವ ಮತ್ತು ಶಾಕ್ತಮತಗಳು ಪ್ರಭಾವಶಾಲಿಯಾಗಿದ್ದುವು. ಆಮೇಲೆ ಜನತೆಯ ಮೇಲೆ ತೀವ್ರ ಪರಿಣಾಮವನ್ನುಂಟುಮಾಡಿ ಅವರ ಮನಸ್ಸಿನಲ್ಲಿ ಬೇರೂರಿನಿಂತ ಧಾರ್ಮಿಕ ಸಂಪ್ರದಾಯವೆಂದರೆ ರಾಮಭಕ್ತಿ ಮತ್ತು ಕೃಷ್ಣಭಕ್ತಿ ಸಂಪ್ರದಾಯ. ಒರಿಯ ಸಾಹಿತ್ಯ ಇದರಿಂದ ತುಂಬ ಸಮೃದ್ಧವಾಗಿದೆ. ಒರಿಯದಲ್ಲಿ ಕಡಿಮೆಯೆಂದರೆ ಮೂವತ್ತು ರಾಮಾಯಣಗಳೂ ನಾಲ್ಕೈದು ಮಹಾಭಾರತಗಳೂ ಇವೆ. ಎಲ್ಲ ಪುರಾಣಗಳೂ ಇವೆ. ಮಧ್ಯಕಾಲದ ಅಲಂಕಾರಶಾಸ್ತ್ರಸಾಹಿತ್ಯವೂ ಸಾಕಷ್ಟು ಸಮೃದ್ಧವಾಗಿದೆ. ಪುರಾಣಗ್ರಂಥಗಳು ತಮ್ಮ ಕಥಾಪ್ರೌಢಿಮೆಯಿಂದಲೂ ಅಲಂಕಾರಗ್ರಂಥಗಳು ತಮ್ಮ ಭಾಷೆ, ಭಾವ ಮತ್ತು ಶಬ್ದಾರ್ಥಸೌಂದರ್ಯದಿಂದಲೂ ಜನರ ಮನಸ್ಸನ್ನು ಸೂರೆಗೊಂಡಿವೆ.

ಜನತೆಯ ಹೃದಯವನ್ನು ಆಕರ್ಷಿಸುವುದರಲ್ಲಿ ಪ್ರಾಚೀನ ಸಾಹಿತ್ಯದಷ್ಟು ಆಧುನಿಕ ಸಾಹಿತ್ಯ ಸಫಲವಾಗಿಲ್ಲ ಎಂದು ಹೇಳಬಹುದು. ಆದರೂ ಭಾಷೆ ಮತ್ತು ಕಲ್ಪನೆಗಳಲ್ಲಿ ಹೊಸ ಪ್ರಯೋಗಗಳನ್ನು ಮಾಡುತ್ತಿರುವ ಒರಿಯ ಸಾಹಿತ್ಯ ತನ್ನ ಆಧುನಿಕ ಬರೆವಣಿಗೆಗಳಲ್ಲಿ ಪರಿಪಕ್ವತೆಯನ್ನು ಹೊಂದಿದೆ. ಇದರ ಕೆಲವು ಅತ್ಯುತ್ತಮ ಗ್ರಂಥಗಳು ಭಾರತದ ಇತರ ಭಾಷೆಗಳಲ್ಲಿನ ಅತ್ಯುತ್ತಮ ಗ್ರಂಥಗಳ ಸಾಲಿನಲ್ಲಿ ನಿಲ್ಲಬಲ್ಲವಾಗಿವೆ.

(ಜಿ.ಬಿ.ಖ)

**ಒರಿಯ ಸಾಹಿತ್ಯ :** ವಿಪುಲವಾಗಿ ಬೆಳೆದಿರುವ ಒರಿಯ ಸಾಹಿತ್ಯಚರಿತ್ರೆಯನ್ನು ಪ್ರಾಚೀನ ಕಾಲದಿಂದ ಆಧುನಿಕ ಕಾಲದ ವರೆಗೆ ಸಂಗ್ರಹವಾಗಿ ನಿರೂಪಿಸಿ ಅದರಲ್ಲಿನ ಪ್ರಧಾನ ಘಟ್ಟಗಳನ್ನು ಪರಿಚಯ ಮಾಡಿಕೊಡುವುದೇ ಈ ಲೇಖನದ ಉದ್ದೇಶ. ಕ್ರಿ.ಶ. 15ನೆಯ ಶತಮಾನಕ್ಕೂ ಹಿಂದೆ ಅಂದರೆ ಸಾರಳಾದಾಸನಿಗಿಂತ ಹಿಂದೆ ಒರಿಯ ಸಾಹಿತ್ಯದ ಸ್ವರೂಪ ಹೇಗಿತ್ತೆಂಬುದನ್ನು ಸ್ವಲ್ಪಮಟ್ಟಿಗಾದರೂ ಅರಿತುಕೊಳ್ಳಲು ಯಾವ ಐತಿಹಾಸಿಕ ಆಧಾರಗಳೂ ದೊರೆತಿಲ್ಲ. ಆದರೂ ಸಾರಳಾದಾಸನ ಕವಿತ್ವದಲ್ಲಿ ವ್ಯಕ್ತವಾಗುವ ಪರಿಣತಿಯನ್ನು ನೋಡಿದರೆ ಆತನಿಗಿಂತ ಹಿಂದೆಯೂ ಸಾಹಿತ್ಯ ಬಹಳ ಚೆನ್ನಾಗಿ ಬೆಳೆದಿರಬೇಕೆಂಬುದನ್ನು ಸಯುಕ್ತಿಕವಾಗಿ ಊಹಿಸಬಹುದು. ಚೌತಿಸಾಫಗ. ಫಮಾಳಿ, ದಾಕವಚನ ಮತ್ತು ಇತರ ಜಾನಪದ ಸಾಹಿತ್ಯ ಪ್ರಕಾರಗಳು ಅವನ ಕಾಲಕ್ಕೆ ಬಹು ಹಿಂದೆಯೇ ರೂಪುಗೊಂಡು ವಿಕಾಸವಾಗಿದ್ದವೆನ್ನಬಹುದು. ಒರಿಯ ಕವಿತೆಯ ಹಳೆಯ ರೂಪವೊಂದನ್ನು ಪ್ರದರ್ಶಿಸುವ ಒಂದೇ ಒಂದು ಪ್ರಾಚೀನ ಗ್ರಂಥವೆಂದರೆ ಬೌದ್ಧಗಾನ ಓ ದೋಹ. ಎಂಬತ್ತುನಾಲ್ಕು ಕವಿಗಳಿಂದ ರಚಿತವಾಗಿದ್ದು ಬೌದ್ಧಮತಕ್ಕೆ ಸಂಬಂಧಿಸಿದ ಭಾವಗೀತಗಳು ಇಲ್ಲಿ ಸಂಕಲಿತವಾಗಿವೆ. ಇವರು ಬೌದ್ಧತಾಂತ್ರಿಕ ಪಂಥಕ್ಕೆ ಸೇರಿದವರು. ಈ ಭಾವಗೀತಗಳ ಕಾಲ ಕ್ರಿ.ಶ. ಏಳನೆಯ ಶತಮಾನದಿಂದ ಹನ್ನೆರಡನೆಯ ಶತಮಾನದವರೆಗೆ ಹರಡಿದೆ. ಇಲ್ಲಿನ ಭಾಷೆ ಅಪಭ್ರಂಶದ ಒಂದು ಮೃದುರೂಪ. ಮಧ್ಯಯುಗದ ಮತ್ತು ಆಧುನಿಕ ಕಾಲದ ಭಾಷೆಗಿಂತ ತೀರ ಭಿನ್ನವಾದ್ದು. ಇಲ್ಲಿನ ಗೀತಗಳನ್ನು ಹಳೆಯ ಬಂಗಾಳಿ ಮತ್ತು ಮೈಥಿಲೀ ಭಾಷೆಗಳ ಭಾವಗೀತೆಗಳೆಂದು ಪಂಡಿತರು ಹೇಳುವುದುಂಟು. ಇವು ಪ್ರಾಚೀನ ಒರಿಯ ಭಾವಗೀತೆಗಳೇ ಎಂದು ಡಾ. ಕಾರ್ ಗುರುತಿಸಿದ್ದಾರೆ (1950). ಈ ಗ್ರಂಥದಷ್ಟೆ ಪ್ರಾಚೀನ ಭಾಷೆಯಲ್ಲಿ ರಚಿತವಾದ ಶಿಶುವೇದವೆಂಬ ಮತ್ತೊಂದು ಗ್ರಂಥ ಬೆಳಕಿಗೆ ಬಂದಿದೆ. ಐತಿಹಾಸಿಕ ಸಾಕ್ಷ್ಯಗಳ ಕೊರತೆಯಿಂದ ಇದರ ಕಾಲವನ್ನು ನಿಷ್ಕೃಷ್ಟವಾಗಿ ತಿಳಿಯಲಾಗಿಲ್ಲ. ಆದರೂ ಇದು ಬೌದ್ಧಗಾನ ಓ ದೋಹಕ್ಕಿಂತ ಈಚಿನದೆಂದೂ ಸಾರಳಾದಾಸನಿಗೆ ಪೂರ್ವದ್ದೆಂದೂ ಸಾಮಾನ್ಯವಾಗಿ ಪರಿಗಣಿತವಾಗಿದೆ.

ಕೆಲವು ಗ್ರಂಥಗಳನ್ನು ಸಾರಳಾದಾಸನಿಗಿಂತ ಪೂರ್ವದವೆಂದು ಹೇಳಲು ಸರಿಯಾದ ಐತಿಹಾಸಿಕ ಆಧಾರಗಳು ಇಲ್ಲವಾದ್ದರಿಂದ ಸದ್ಯಕ್ಕೆ ಇಷ್ಟು ಹೇಳಬಹುದು. ಆ ಕಾಲದಲ್ಲಿ ಸಂಸ್ಕೃತ ಸಾಹಿತ್ಯದ ಪ್ರಭಾವ ಒರಿಯದಲ್ಲಿ ಪ್ರಬಲವಾಗಿತ್ತಲ್ಲದೆ ಪ್ರಾಂತೀಯ ಸಾಹಿತ್ಯ ಜಾಗರೂಕತೆಯಿಂದ ತನ್ನ ಸ್ವರೂಪವನ್ನು ಪಡೆಯುತ್ತಿತ್ತು. ಮೇಲೆ ಹೇಳಿದ ಗ್ರಂಥಗಳು ಅಪಭ್ರಂಶದ ಕಾಲ ಮುಗಿಯುತ್ತಿದ್ದಂತೆ ಹುಟ್ಟಿದವೆನ್ನಬಹುದು.

**ಸಾರಳಾ ಯುಗ :** ಒರಿಯ ಸಾಹಿತ್ಯದ ಜನಕನೆಂದು ಪ್ರಖ್ಯಾತನಾದ ಸಾರಳಾದಾಸ 15ನೆಯ ಶತಮಾನದಲ್ಲಿ, ಒರಿಸ್ಸದ ಗಜಪತಿಯಾದ ಕಪಿಳೇಂದ್ರ ದೇವನ ಆಳ್ವಿಕೆಯಲ್ಲಿದ್ದವ. ಮಹಾಭಾರತ, ಬಿಲಂಕಾ ರಾಮಾಯಣ ಮತ್ತು ಚಂಡೀ ಪುರಾಣಗಳು ಇವನ ಕೃತಿಗಳು. ಮಹಾಭಾರತದಲ್ಲಿ 18 ಭಾಗಗಳಿವೆ. ಅದು ಮೂಲ ಸಂಸ್ಕೃತ ಭಾರತಕ್ಕಿಂತ ವರ್ಣನೆಯಲ್ಲೂ ಉದ್ದೇಶದಲ್ಲೂ ಭಿನ್ನವಾಗಿದೆ. ದೇಶದ ದೈನಂದಿನ ಮತ್ತು ಸಾಮಾಜಿಕ, ಸಾಂಸ್ಕೃತಿಕ ಜೀವನವನ್ನು ಆಧರಿಸಿ ಕವಿ ಅದರಲ್ಲಿ ಅನೇಕ ತನ್ನದೇ ಆದ ಹೊಸ ಕಥೆಗಳನ್ನು ಅಳವಡಿಸಿದ್ದಾನೆ. ಅವು ಹೇರಳವಾಗಿ ಜನಪ್ರೀತಿಯನ್ನು ಗಳಿಸಿವೆ. ಪಾತ್ರಚಿತ್ರಣದಲ್ಲೂ ಪ್ರಕೃತಿವರ್ಣನೆಯಲ್ಲೂ ಕವಿ ತನ್ನ ಸಾಮರ್ಥ್ಯವನ್ನು ಪ್ರಕಟಿಸಿದ್ದಾನೆ. ಜೊತೆಗೆ ಈತನ ವೈಷ್ಣವ ತತ್ತ್ವಗಳು ಮಹಾಭಾರತದ ವಸ್ತುವಿನೊಂದಿಗೆ ಚೆನ್ನಾಗಿ ಮಿಳಿತವಾಗಿರುವುದು ಕಂಡುಬರುತ್ತದೆ. ಈತನ ವರ್ಣನೆಗಳಲ್ಲಿ ದೇಸೀಯತೆ ಕಂಪಿಟ್ಟಿದೆ. ಬಿಲಂಕಾ ರಾಮಾಯಣ ಸಂಸ್ಕೃತದ ಅದ್ಭುತರಾಮಾಯಣದ ಪ್ರಭಾವವನ್ನು ತೋರುವ ಗ್ರಂಥವೆಂದು ಕೆಲವು ಪಂಡಿತರ ಅಭಿಪ್ರಾಯ. ಮಹಾತಾಯಿ ಚಂಡಿಯ ಶಕ್ತಿಯನ್ನು ಪ್ರದರ್ಶಿಸಲು ರಚಿತವಾದ ಪೌರಾಣಿಕ ಕೃತಿ ಚಂಡೀಪುರಾಣ. ಯಮದೇವತೆ ತನ್ನನ್ನು ಕೊಲ್ಲಲಾಗದ ಮಟ್ಟಿಗೆ ಶಕ್ತಿವಂತನಾಗಿ ಬೆಳೆದ ಮಹಿಷಾಸುರನನ್ನು ದೇವತೆಗಳೆಲ್ಲರ ಪ್ರಾರ್ಥನಾಫಲವಾಗಿ ಎದ್ದ ಕಿಚ್ಚಿನಿಂದ ಮೂಡಿಬಂದ ಮಹಿಷಾಸುರಮರ್ದಿನಿ ನಿರ್ನಾಮ ಮಾಡಿದ ವಿಷಯ ಇಲ್ಲಿ ವರ್ಣಿತವಾಗಿದೆ.

ಸಾರಳಾದಾಸನ ಎಲ್ಲ ಕೃತಿಗಳಲ್ಲೂ ಯುದ್ಧದ ವರ್ಣನೆಗಳು ವಿಪುಲವಾಗಿವೆ. ಈ ವರ್ಣನೆಗಳು ಜೀವಕಳೆಯಿಂದ ತುಂಬಿದ್ದು ಓದುಗರ ಮನಸ್ಸಿನ ಮುಂದೆ ಆಯಾ ದೃಶ್ಯಗಳನ್ನು ಪರಿಣಾಮಕಾರಿಯಾಗಿ ತಂದು ನಿಲ್ಲಿಸಿಬಿಡುತ್ತವೆ. ತನ್ನ ರಾಜ್ಯವನ್ನು ವಿಸ್ತರಿಸುವುದಕ್ಕಾಗಿ ದೀರ್ಘಕಾಲದ ವರೆಗೂ ಹೋರಾಟದಲ್ಲೇ ತೊಡಗಿದ್ದ ಒರಿಸ್ಸದ ಪ್ರಭು ಕಪಿಳೇಂದ್ರನ ಕಾಲದಲ್ಲಿದ್ದ ಈ ಕವಿ ಚಿತ್ರಿಸಿರುವ ಯುದ್ಧಗಳು ಐತಿಹಾಸಿಕ ದೃಷ್ಟಿಯಿಂದ ಗಮನಾರ್ಹವಾಗಿವೆ.

ಸಾರಳಾದಾಸ ತೀರಿಕೊಂಡ ತರುಣದಲ್ಲೇ ಕಲಸ ಚೌತಿಸಾ ಎಂಬುದನ್ನು ರಚಿಸಿದ ಬಚ್ಛದಾಸನೆಂಬ ಮತ್ತೊಬ್ಬ ಕವಿ ಪ್ರವರ್ಧಮಾನಕ್ಕೆ ಬಂದ. ಈ ಕೃತಿಯ ವಸ್ತು ಪಾರ್ವತೀಪರಮೇಶ್ವರರ ವಿವಾಹ. ಹಾಸ್ಯರಸ ನಿರೂಪಣೆಯಲ್ಲಿ ಈ ಕವಿ ತನ್ನ ಚಾತುರ್ಯವನ್ನು ಪ್ರಕಟಿಸಿದ್ದಾನೆ. ಹಾಗೂ ಕಥಾನಾಯಕಿಯ ವರ್ಣನೆಯಲ್ಲಿ, ವಿವಾಹಪ್ರಸಂಗದಲ್ಲಿ ಒರಿಸ್ಸದ ರೂಪವತಿಯರ, ವಿವಾಹ ಪದ್ಧತಿಯ ವಿವರಗಳನ್ನು ತಂದಿದ್ದಾನೆ. ಹೆಸರೆತ್ತಿ ಹೇಳಬಹುದಾದ ಆ ಕಾಲದ ಮತ್ತೊಂದು ಚೌತಿಸಾ ಯಾವುದೆಂದರೆ ದಾಮೋದರ ಕವಿ ಪ್ರಣೀತವಾದ ರಾಸಕುಲ್ಯಾ. ಈ ಕೃತಿಯ ವಸ್ತು ರಾಧಾಕೃಷ್ಣರ ಪ್ರಣಯ. ರಾಧಾಕೃಷ್ಣರ ವಿರಹದ ವರ್ಣನೆಯನ್ನು ಓದುತ್ತಿರುವಾಗ ಓದುಗರ ಮನಸ್ಸು ಕರಗಿಹೋಗುತ್ತದೆ. ಅರ್ಜುನದಾಸನ ರಾಮ ಬಿಭಾ ಎಂಬ ಕೃತಿಯಲ್ಲಿ (1480–1510) ರಾಮಚಂದ್ರ ಪರಶುರಾಮನನ್ನು ಕಾಣುವ ಸಂದರ್ಭದವರೆಗಿನ ಕಥೆ ವರ್ಣಿತವಾಗಿದೆ. ಈ ಕೃತಿಯ ಮುಖ್ಯವಸ್ತು ರಾಮಾಯಣದಿಂದ ತೆಗೆದುಕೊಂಡದ್ದು. ಈ ಕಾಲದ ಇನ್ನೂ ಕೆಲವು ಕೃತಿಗಳಿರಬೇಕು. ಆದರೆ

ಖಚಿತವಾದ ಸಾಕ್ಷ್ಯಗಳಿಲ್ಲದ್ದರಿಂದ ಒರಿಯ ಭಾಷೆ ಮತ್ತು ಸಾಹಿತ್ಯವಿಮರ್ಶಕರು ಅಂಥವನ್ನು ಹೆಸರಿಸುವ ವಿಚಾರದಲ್ಲಿ ಮೌನ ತಾಳಿದ್ದಾರೆ.

**ವೈಷ್ಣವ ಅಥವಾ ಪಂಚಸಖಾಯುಗ :** ಹದಿನಾರನೆಯ ಶತಮಾನದ ಆದಿ ಭಾಗದಲ್ಲಿ ವೈಷ್ಣವ ಕವಿಗಳ ಕೈಯಲ್ಲಿ ಸಾಹಿತ್ಯ ಹೊಸ ರೂಪವನ್ನು ಪಡೆಯಿತು. ಸಾರಳಾದಾಸನ ಕಾಲದಲ್ಲೂ ವೈಷ್ಣವ ಸಂಪ್ರದಾಯವಿತ್ತಾದರೂ ಪ್ರಖ್ಯಾತ ವಿಷ್ಣು ಭಕ್ತನಾದ ಶ್ರೀಚೈತನ್ಯ ಬಂಗಾಳದಿಂದ ಪುರಿಗೆ ಬಂದಾಗ (1510) ಅದಕ್ಕೆ ಹೊಸ ರಂಗು ಬಂತು. ಒರಿಸ್ಸದ ವೈಷ್ಣವ ಪಂಥಕ್ಕಿಂತ ಭಿನ್ನವಾದ ಚೈತನ್ಯನ ಪಂಥ ಅಲ್ಲಿನ ವೈಷ್ಣವ ಕವಿಗಳ ಮೇಲೆ ಪ್ರಭಾವ ಬೀರಿತು. ಆದುದರಿಂದ ಆ ಎರಡು ಪಂಥ ಗಳೂ ಎಂದರೆ ಗೌಡೀಯ ಪಂಥ ಮತ್ತು ಒರಿಯ ಪಂಥಗಳು ಒರಿಸ್ಸದಲ್ಲಿ ಆ ಕಾಲ ದಿಂದಲೂ ಸ್ವೀಕೃತವಾದುವು. ಪುರಿಯ ಅಧಿದೈವ ಜಗನ್ನಾಥ ಒರಿಸ್ಸದ ಹೊರಗಣಿಂದ ಅನೇಕ ಉಪದೇಶಕರನ್ನು ತನ್ನತ್ತ ಸೆಳೆದನಲ್ಲದೆ ಎಲ್ಲ ವೈಷ್ಣವ ಪಂಥ ಗಳ ಭಕ್ತಿಮಾರ್ಗಗಳಿಗೂ ತಾನೇ ಆಕರನಾದ.

ಆ ಕಾಲದಲ್ಲಿ ಪಂಚಸಖರೆಂದು ಹೆಸರಾಂತ ಬಳರಾಮದಾಸ, ಜಗನ್ನಾಥದಾಸ, ಅಚ್ಯುತಾನಂದದಾಸ, ಜಸೋವಂತದಾಸ ಮತ್ತು ಅನಂತದಾಸ ಎಂಬ ಐವ ರಿದ್ದರು. ಜನರಿಗೆ ಉಪದೇಶಮಾಡಲು ಇವರು ಒಂದುಗೂಡಿದ್ದರ ಫಲವಾಗಿ ಒರಿಯ ಸಾಹಿತ್ಯ ಶ್ರೀಮಂತವಾಯಿತು. ಬಳರಾಮದಾಸನ ದಾಂಡಿ ರಾಮಾಯಣ, ಜಗನ್ನಾಥದಾಸನ ಒರಿಯ ಭಾಗವತ, ಅಚ್ಯುತಾನಂದದಾಸನ ಹರಿವಂಶ—ಎಂಬವು ಈ ಕಾಲದ ಮೂರು ರತ್ನಗಳು. ಇವುಗಳ ಜೊತೆಗೆ, ಈ ಸಾಧುಗಳು ತಮ್ಮ ಮತಪ್ರಚಾರಕ್ಕಾಗಿ ಧಾರ್ಮಿಕ ಕಾವ್ಯಗಳನ್ನು ವಿಪುಲವಾಗಿ ರಚಿಸಿದರು. ಈ ಸಾಧುಗಳ ಅನೇಕ ಕೃತಿಗಳಲ್ಲಿ ಜಗನ್ನಾಥ ಪ್ರಭುವೂ ಕೃಷ್ಣನೂ ವರ್ಣಿತ ರಾಗಿದ್ದಾರೆ. ಈ ಕೃತಿಗಳಲ್ಲಿ ಈ ಸಂತರ ದಿವ್ಯಶಕ್ತಿ ನೆಲೆಸಿದೆ. ಜಗನ್ನಾಥದಾಸನ ಒರಿಯ ಭಾಗವತ ದೇಶದಲ್ಲೆಲ್ಲ ತನ್ನ ಪ್ರಭಾವವನ್ನು ಬೀರಿದೆ. ಧರ್ಮದ ಕಠಿಣ ಸಮಸ್ಯೆಗಳೆಲ್ಲವನ್ನೂ ಸರಳವೂ ವಿಶದವೂ ಆದ ರೀತಿಯಲ್ಲಿ ದೈನಂದಿನ ಜನಜೀವನದ ಉದಾಹರಣೆಗಳಿಂದ ಈ ಕವಿ ಬಿಡಿಸಿದ್ದಾನೆ. ಭಾಗವತ ಎಷ್ಟು ಪವಿತ್ರ ಗ್ರಂಥ ವೆನಿಸಿತ್ತೆಂದರೆ ಅದನ್ನು ಪ್ರತಿಯೊಂದು ಹಳ್ಳಿಯಲ್ಲಿಯೂ ಒಂದು ಗುಡಿಯಲ್ಲೋ ಮಂದಿರದಲ್ಲೋ ಇಟ್ಟು ಜನ ಪೂಜಿಸುತ್ತಿದ್ದರು. ಗ್ರಾಮಗಳ ಪ್ರಾಥಮಿಕ ಶಾಲೆ ಗಳಲ್ಲಿ ಹುಡುಗರಿಗೆ ಒರಿಯ ಸಾಹಿತ್ಯವನ್ನು ಕಲಿಸಲು ಇದೇ ಪ್ರಧಾನ ಪಠ್ಯಪುಸ್ತಕ ವಾಗಿತ್ತು.

ದಾಂಡಿ ರಾಮಾಯಣ ಮತ್ತು ಹರಿವಂಶಗಳು ಒರಿಸ್ಸದಲ್ಲಿ, ಅದರಲ್ಲೂ ವೃದ್ಧ ಜನರ ಶಾಸ್ತ್ರಾಚರಣೆಗಳಲ್ಲಿ, ತುಂಬ ಪ್ರಾಶಸ್ತ್ಯ ಗಳಿಸಿದುವು. ಆದರೆ ಈ ಎರಡು ಗ್ರಂಥಗಳಿಗಿಂತ ಭಾಗವತ ನಿಸ್ಸಂದೇಹವಾಗಿ ಹೆಚ್ಚು ಜನಪ್ರಿಯವಾಗಿದ್ದ ಕೃತಿ.

ಆ ಕಾಲದ ಒರಿಯ ಸಾಹಿತ್ಯದಲ್ಲಿ ಗೀತಾ, ಸಂಹಿತಾ, ಮಳಿಕಾ, ಕೊಯಿಲಿ, ಮಾಹಾತ್ಮ್ಯ, ಸಂಬಾದ—ಮುಂತಾದ ಅನೇಕ ಸಾಹಿತ್ಯಪ್ರಕಾರಗಳು ಉದಿಸಿದುವು. ಅನೇಕ ಗ್ರಂಥಗಳ ರಚನೆಯಾಗಿ ತನ್ಮೂಲಕ ಜಾತಿಮತ ಭೇದವಿಲ್ಲದೆ ಅನೇಕ ಮಂದಿ ಓದು ಕಲಿತು ಅವನ್ನು ಓದುವಂತಾದುದು ಆ ಕಾಲದ ಮುಖ್ಯ ಧೋರಣೆ. ಆಗಿನ ಅರಸನಾದ ಪ್ರತಾಪರುದ್ರದೇವ ವೈಷ್ಣವಭಾವನೆಯಿಂದ ತುಂಬ ಪ್ರಭಾವಿತನಾಗಿದ್ದ. ಆಗಿನಿಂದ ಒರಿಸ್ಸದಲ್ಲಿ ವೈಷ್ಣವ ಮತ ಹರಡಿದ್ದರ ಫಲವಾಗಿ ಒರಿಸ್ಸದ ಸೈನಿಕರು ಕಾದುವುದರಲ್ಲಿ ಅನಾಸ್ಥೆಯನ್ನು ತಾಳಿ ಶತ್ರುಗಳ ಆಕ್ರಮಣಕ್ಕೆ ಅವಕಾಶ ಕೊಡು ವಂತಾದರೆಂದು ಒಂದು ಅಪವಾದವಿದೆ.

ಕೇಶವ ಕೊಯಿಲಿ ಎಂಬುದು ಕೃಷ್ಣನ ಅಗಲಿಕೆಯನ್ನು ತಾಳದೆ ಯಶೋದೆ ಪಟ್ಟ ಪರಿತಾಪವನ್ನು ವರ್ಣಿಸುವ ಕೃತಿ. ಈ ಕಾರಣಕ್ಕಾಗಿಯೇ ಇದು ತುಂಬ ಜನಪ್ರಿಯ ವಾಗಿದೆ. ಪಂಚಸಖರಿದ್ದ ಕಾಲದಲ್ಲೋ ಅವರ ತರುವಾಯವೋ ಇದು ರಚಿತವಾದು ದೆಂದು ಭಾವಿಸಲಾಗಿದೆ. ಈ ಕೃತಿಯ ಕವಿಯಾದ ಮಾರ್ಕಂಡದಾಸನ ವಿಚಾರವಾಗಿ ಯಾವ ಸಂಗತಿಯೂ ತಿಳಿದುಬಂದಿಲ್ಲ. ಗಜಪತಿ ಪ್ರತಾಪರುದ್ರನ ಕಾಲದಲ್ಲಿದ್ದ ರಾಯ ರಮಾನಂದ ಎಂಬ ವೈಷ್ಣವ ಕವಿ ಬ್ರಜಬೋಲಿಯಲ್ಲಿ ಅನೇಕ ಭಾವಗೀತಗಳನ್ನು ಬರೆದ. ಇದು ಚೈತನ್ಯದೇವನ ಜನಪ್ರಿಯ ತತ್ತ್ವವನ್ನು ಅನಕ್ಷರಸ್ಥರಾದ ಹಳ್ಳಿಯ ಜನರಲ್ಲಿ ಹರಡಲು ಮೊದಲ ಹೆಜ್ಜೆಯೆನಿಸಿತು. ರಾಮಾನಂದನ ಸಮಕಾಲೀನಳಾದ ಮಾಧಬಿ ದಾಸಿ ಕೂಡ ಬ್ರಜಬೋಲಿಯಲ್ಲಿ ಅನೇಕ ಗೀತಗಳನ್ನು ರಚಿಸಿದಳೆಂದು ಹೇಳ ಲಾಗಿದೆ. ಒರಿಸ್ಸದ ವೈಷ್ಣವ ಪಂಥದ ದಿವಾಕರದಾಸನೆಂಬಾತ ಜಗನ್ನಾಥದಾಸನೆಂಬ ಮಹಾ ವೈಷ್ಣವ ಭಕ್ತನ ಜೀವನಚರಿತ್ರೆಯಾದ ಜಗನ್ನಾಥಚರಿತಾಮೃತವನ್ನು ರಚಿ ಸಿದ. ಹದಿನಾರನೆಯ ಶತಮಾನದ ಆದಿಭಾಗದಲ್ಲಿದ್ದ ಶಿಶು ಶಂಕರದಾಸ ಉಷಾ ಬಿಲಾಸ ಎಂಬ ಕೃತಿಯನ್ನು ರಚಿಸಿದ. ಇದು ಬಾಣಾಸುರನ ಮಗಳಾದ ಉಷೆ ಮತ್ತು ಅನಿರುದ್ಧರ ವಿಚಾರವನ್ನು ಕುರಿತುದಾಗಿದೆ. ಇದರ ಕಥಾವಸ್ತುವನ್ನು ಕವಿ ಸಂಸ್ಕೃತ ಭಾಗವತ, ಸಾರಳಾ ಮಹಾಭಾರತ ಮತ್ತು ಹರಿವಂಶಗಳಿಂದ ತೆಗೆದುಕೊಂಡಿದ್ದಾನೆ. ಹರಿಹರದಾಸನ ಚಂದ್ರಾವತಿಬಿಲಾಸ ಎಂಬುದು ದುರ್ಯೋಧನನ ಮಗಳಾದ ಚಂದ್ರಾವತಿ ಶ್ರೀಕೃಷ್ಣನ ಮಗನೊಡನೆ ವಿವಾಹವಾದ ಪ್ರಸಂಗವನ್ನು ಅವಲಂಬಿಸಿ ರಚಿತ ವಾಗಿದೆ. ಇದರ ಸಂವಿಧಾನ ಮತ್ತು ಶೈಲಿ ಉಷಾಬಿಲಾಸದ ಹಾಗಿವೆ. ಕಾರ್ತಿಕ್ ದಾಸನ ರುಕ್ಮಿಣೀ ಬಿಭಾ ಎಂಬುದು ಶ್ರೀಕೃಷ್ಣರುಕ್ಮಿಣಿಯರ ವಿವಾಹವನ್ನು ನಿರೂಪಿ ಸುತ್ತದೆ. ಶಿಶುಪಾಲನೊಡನೆಯೂ ಜರಾಸಂಧನೊಡನೆಯೂ ಶ್ರೀಕೃಷ್ಣ ಹೋರಾಡಿ ದುದರ ವರ್ಣನೆ ತುಂಬ ಮನೋಹರವಾಗಿದೆ. ಪ್ರಕೃತಿ ಮತ್ತು ಸಾಮಾಜಿಕ ಸಂಪ್ರ ದಾಯಗಳ ವರ್ಣನೆಗಳಲ್ಲಿ ಕವಿ ತನ್ನ ಶಕ್ತಿಯನ್ನು ಪ್ರಕಟಿಸಿದ್ದಾನೆ.

ಕೃಷ್ಣಲೀಲಾ, ರಾಸಲೀಲಾ, ಗುಪ್ತಗೀತಾ ಎಂಬುವನ್ನು ರಚಿಸಿದ ಎರಡನೆಯ ಬಳರಾಮದಾಸ, ರಾಧಾಕೃಷ್ಣಲೀಲಾಮೃತವನ್ನು ಬರೆದ ದೀನಬಂಧು ದಾಸ, ಮಧುಪ ಚೌತಿಸಾವನ್ನು ರಚಿಸಿದ ಗೋಪೇಂದ್ರದಾಸ, ಶ್ರೀಕೃಷ್ಣನ ಮೇಲೆ ಅನೇಕ ಭಾವಗೀತೆಗಳನ್ನು ಬರೆದ ಸಾಲಬೇಗ, ಬಸ್ತ್ರ ಚೋರಿಯನ್ನು ಬರೆದ ಚಾಂದಕವಿ ಮುಂತಾದ ಕೆಲವು ಗೌಣಕವಿಗಳು ತಮ್ಮ ಕೃತಿಗಳನ್ನು ಈ ಕಾಲದ ಸಾಹಿತ್ಯಕ್ಕೆ ಅರ್ಪಿಸಿದ್ದಾರೆ.

ಹೀಗೆ ಹದಿನೈದನೆಯ ಮತ್ತು ಹದಿನಾರನೆಯ ಶತಮಾನಗಳ ಸುಮಾರು ಇನ್ನೂರು ವರ್ಷಗಳಿಗಿಂತಲೂ ಹೆಚ್ಚಿನ ಸಾಹಿತ್ಯಾವಧಿಯಲ್ಲಿ ರಾಧಾಕೃಷ್ಣರ ಪರವಾದ ಕಾವ್ಯವೇ ಬೆಳೆದು ಆ ಯುಗಕ್ಕೆ ವೈಷ್ಣವಯುಗವೆಂಬ ಹೆಸರನ್ನು ತಂದಿದೆ. ಈ ಪ್ರಸಂಗಗಳನ್ನೇ ಕವಿಗಳು ಏಕೆ ಆರಿಸಿಕೊಂಡರೆಂದರೆ ಅವರೆಲ್ಲರೂ ಪ್ರಧಾನವಾಗಿ ವೈಷ್ಣವರು. ಆದ್ದರಿಂದ ಅವರು ಸಹಜವಾಗಿಯೇ ದೇವರನ್ನು ಪ್ರಣಯಿಯೆಂದು ಭಾವಿಸಿ ಅವನೊಡನೆ ಒಡಗೂಡುವ ಅತೀಂದ್ರಿಯಾನುಭೂತಿಯನ್ನೇ ತಮ್ಮ ಪರಮ ಧ್ಯೇಯವಾಗಿಟ್ಟುಕೊಂಡಿದ್ದರು. ಈ ಉದ್ದೇಶಕ್ಕೆ ರಾಧಾಕೃಷ್ಣರ ಪ್ರಸಂಗಗಳು ಬಹು ಸಮೀಚೀನವಾಗಿ ಒದಗಿದ್ದವು.

ಒರಿಯ ಸಾಹಿತ್ಯದಲ್ಲಿ ಹದಿನೇಳನೆಯ ಶತಮಾನ ಎರಡು ಯುಗಗಳ ಸಂಧಿಕಾಲ ವಾಗಿತ್ತು. ಪಂಚಸಖಾ ಅಥವಾ ವೈಷ್ಣವ ಯುಗ ಕಳೆದ ತರುವಾಯದ ಮತ್ತು ಉಪೇಂದ್ರ ಭಂಜಯುಗ ಅಥವಾ ಕಾವ್ಯಸಾಹಿತ್ಯದ ಯುಗಕ್ಕೆ ಮುಂಚಿನ ಒಂದು ನೂರು ವರ್ಷಗಳ ಅವಧಿ ಸಾಹಿತ್ಯ ವಿಷಯಕವಾದ ಚರ್ಚೆಗೆ ತುಂಬ ಪ್ರಧಾನವಾಗಿದೆ. ಈ ಅವಧಿಯಲ್ಲಿ ಪ್ರಾಚೀನ ಒರಿಯ ಸಾಹಿತ್ಯದ ಮೇಲ್ಪಂಕ್ತಿಯನ್ನು ಅನುಸರಿಸಿ ಕೆಲವು ಕೃತಿಗಳು ರಚಿತವಾದುವು. ಕವಿಗಳಲ್ಲಿ ಅನೇಕರು ಸಂಸ್ಕೃತ ಕಾವ್ಯಸಾಹಿತ್ಯ ದಿಂದ ಪ್ರಭಾವಿತರಾಗಿದ್ದರು. ಈ ಶತಮಾನದಲ್ಲಿ ಕವಿಗಳು ಈ ರೀತಿಯಾಗಲು ದೇಶದ ಐತಿಹಾಸಿಕ ಪರಿಸ್ಥಿತಿ ಸಹಾಯಕವಾಗಿತ್ತು. ಇದು ಹೇಗಾದರೂ ಇರಲಿ, ಈ ಶತಮಾನದಲ್ಲಿ ಒರಿಯ ಕಾವ್ಯಸಾಹಿತ್ಯಕ್ಕೆ ಒಳ್ಳೆ ತಳಪಾಯ ಬಿದ್ದಿತು. ಇದು ಹದಿನೆಂಟನೆಯ ಶತಮಾನದಲ್ಲಿ ಉಪೇಂದ್ರ ಭಂಜನ ಕೈಯಲ್ಲಿ ಬೇರೆ ರೂಪ ಪಡೆಯಿತು. ಈ ಪ್ರಕಾರವಾಗಿ ಉಪೇಂದ್ರ ಭಂಜ ಹಾಕಿಕೊಟ್ಟ ಕಾವ್ಯಸಂಪ್ರದಾಯ ಸುಮಾರು ನೂರೈವತ್ತು ವರ್ಷಗಳ ಕಾಲ ನಡೆಯಿತು.

ಹದಿನೇಳನೆಯ ಶತಮಾನದ ಸಾಹಿತ್ಯವನ್ನು ಸರಳ ಮತ್ತು ಸುಂದರ ಶೈಲಿಗಳ ಸಮ್ಮಿಶ್ರಣವೆಂದು ಹೇಳಬಹುದು. ಕಾವ್ಯದ ಸಾಲುಗಳು ಕೆಲವು ವೇಳೆ ಯಾವ ಗೋಜುಗಳೂ ಇಲ್ಲದೆ ವಿಶದವಾಗಿದ್ದು ಪ್ರಾಚೀನ ಒರಿಯ ಸಾಹಿತ್ಯದ ಸುಂದರ ರತ್ನಗಳನ್ನು ನೆನಪಿಗೆ ತರುತ್ತವೆ. ಮತ್ತೆ ಕೆಲವು ಸಮಯ ಶ್ರೀಮಂತವೂ ವರ್ಣ ರಂಜಿತವೂ ಆಗಿದ್ದು ಅದು ಕಾವ್ಯಸಾಹಿತ್ಯದ ಒಂದು ಮಹಾಸುದಿನದ ಉಷಃಕಾಲವೋ ಎಂದು ಅಚ್ಚರಿಪಡುವಂತೆ ಮಾಡುತ್ತವೆ.

ಹದಿನೇಳನೆಯ ಶತಮಾನದ ಆದಿಭಾಗದಲ್ಲಿ ಇದ್ದ ರಾಮಚಂದ್ರ ಪಟ್ಟನಾಯಕನ ಸ್ವೋಪಜ್ಞಕೃತಿ ಹಾರಾವತಿ ಎಂಬುದು ಸಾಮಾನ್ಯ ಜನವರ್ಗದಿಂದ ಆಯ್ದುಕೊಂಡ ನಾಯಕನಾಯಕಿಯರಿಬ್ಬರ ಪ್ರಣಯ ಪ್ರಸಂಗವನ್ನು ಅವಲಂಬಿಸಿದೆ. ಹಾರಾವತಿ ಎಂಬ ಕಥಾನಾಯಕಿಯ ಹೆಸರನ್ನೇ ಕೃತಿಗೂ ಕೊಟ್ಟಿದೆ. ಹದಿನೇಳನೆಯ ಶತಮಾನದ ಆದಿಭಾಗದಲ್ಲಿದ್ದ ಪ್ರತಾಪರಾಯ್ ಎಂಬಾತನಿಂದ ವಿರಚಿತವಾದ ಶಶಿಸೇಣಾ ಎಂಬುದೂ ಶೃಂಗಾರರಸಭೂಯಿಷ್ಠವಾದ ಕಲ್ಪಿತ ಕಥೆ. ಒರಿಸ್ಸದಲ್ಲಿ ಜನಪ್ರಿಯವಾಗಿರುವ ಹಳಾಹಳ ಕುಮಾರನ ಕಥೆಯನ್ನು ಅವಲಂಬಿಸಿ ಇದು ರಚಿತವಾಗಿರುವಂತಿದೆ. ನಳ ದಮಯಂತಿಯ ಚರಿತೆಯನ್ನು ಹೇಳುವ ನಳಚರಿತ ಎಂಬ ಮತ್ತೊಂದು ಕೃತಿ ಯನ್ನು ಹದಿನೇಳನೆಯ ಶತಮಾನದ ಮಧ್ಯಭಾಗದಲ್ಲಿದ್ದ ಮಧುಸೂದನದಾಸ ರಚಿಸಿದ. ಅದೇ ಸುಮಾರಿನಲ್ಲಿದ್ದ ಕವಿ ಕಂಠದಾಸ ನಪಾಯ್, ಭಪಾಯ್ ಮುಂತಾದ ಅನೇಕ ಸಣ್ಣ ಸಣ್ಣ ಪದ್ಯಗಳನ್ನು ಬರೆದ. ಹದಿನೇಳನೆಯ ಶತಮಾನದ ಕವಿ ಈಶ್ವರ ದಾಸ ಒರಿಸ್ಸದಲ್ಲಿ ಚೈತನ್ಯನ ಜೀವನವನ್ನು ಕುರಿತ ಚೈತನ್ಯ ಭಾಗವತವೆಂಬ ಗ್ರಂಥ ವನ್ನು ಬರೆದಿದ್ದಾನೆ.

ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ದ್ವಾರಕದಾಸ ಒಬ್ಬ ಮುಖ್ಯ ವೈಷ್ಣವ ಕವಿ. ಗುಪ್ತಗೀತ, ಪರಭಗೀತ ಮತ್ತು ರಾಮರಸಚಂದ್ರಿಕಾ ಎಂಬವು ಈತನ ಮೂರು ಪ್ರಧಾನ ಕೃತಿಗಳು. ಈ ಕೃತಿಗಳ ತಳದಲ್ಲೆಲ್ಲ ಕಣ್ಣಿಗೆ ಕಾಣದಿರುವ

ತನ್ನ ಪ್ರದಯಾಧಿದೈವದೊಡನೆ ಕೂಡಿಕೊಳ್ಳಬೇಕೆಂಬ ಉತ್ಕಟಭಕ್ತಿಯಿಂದು ಒರಿಸ್ಸದ ವೈಷ್ಣವಧರ್ಮದ ತತ್ತ್ವಗಳೆಲ್ಲ ಉದ್ದಕ್ಕೂ ಪ್ರಕಟಗೊಂಡಿವೆ.

ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿದ್ದ ಮಹಾದೇವದಾಸ ಎಂಬ ಕವಿ ಕಾರ್ತಿಕ ಮಹಾತ್ಮ್ಯ, ಬೈಶಾಖ ಮಹಾತ್ಮ್ಯ, ಮಾಘ ಮಹಾತ್ಮ್ಯ ಮತ್ತು ಮಾರ್ಕಂಡೇಯ ಪುರಾಣಗಳನ್ನು ರಚಿಸಿದ. ಈ ಕಾಲದ ಭೀಮಾ ಧಿಬರ್ ಎಂಬ ಕವಿ ಮಹಾಭಾರತದ ಕಥೆಯೊಂದನ್ನು ಅವಲಂಬಿಸಿ ಕಪಟ ಪಸಾ ಎಂಬ ಕೃತಿಯನ್ನು ರಚಿಸಿದ.

ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿದ್ದ ಒರಿಸ್ಸದ ಬಾನ್‌ಪುರದ ಅರಸನಾಗಿದ್ದ ರಘುನಾಥ ಹರಿಚಂದನ್ ಲೀಲಾವತಿಯನ್ನು ಬರೆದ. ಈ ಕೃತಿಯಲ್ಲಿ ಕಾವ್ಯಸಾಹಿತ್ಯದ ಒಂದು ಲಕ್ಷಣವೂ ಕಠಿಣವೂ ಆದ ರೂಪವೊಂದು ಪ್ರಕಟವಾಗಿದೆ. ಈ ರೂಪ ಮುಂದಿನ ಶತಮಾನದಲ್ಲಿ ಪ್ರಾಮುಖ್ಯ ಪಡೆಯಿತು.

**ಕಾವ್ಯಸಾಹಿತ್ಯ ಯುಗ (ಉಪೇಂದ್ರ ಭಂಜನ ಯುಗ) :** ಹದಿನೆಂಟನೆಯ ಶತಮಾನದಲ್ಲಿ ಸಾಹಿತ್ಯದಲ್ಲುಂಟಾದ ಒಂದು ದೊಡ್ಡ ವ್ಯತ್ಯಾಸಕ್ಕೆ ಅಂದಿನ ಸಾಹಿತ್ಯ ಮತ್ತು ಸಂಸ್ಕೃತಿಗಳ ಪರಿಸ್ಥಿತಿಗಳು ಮುಖ್ಯ ಕಾರಣವಾಗಿವೆ. ಹದಿನಾರನೆಯ ಶತಮಾನದಿಂದ ಹದಿನೆಂಟನೆಯ ಶತಮಾನದ ಅಂತ್ಯಭಾಗದವರೆಗೆ, ಒರಿಸ್ಸ ಮುಸ್ಲಿಂ ಪ್ರಭುತ್ವಕ್ಕೆ ಒಳಗಾಗಬೇಕಾಯಿತು. ದೇಶದ ಅರಸರೂ ಅರಸುಕುಮಾರರೂ ಸಾಹಿತ್ಯ ವಿಷಯಕವಾದ ಜಿಜ್ಞಾಸೆಗಳಲ್ಲಿ ಆಸಕ್ತರಾಗಿದ್ದರು. ಅನೇಕ ಸಂಸ್ಕೃತ ವಿದ್ವಾಂಸರು ರಾಜರ ಆಸ್ಥಾನಗಳಲ್ಲಿದ್ದು ಈ ಚರ್ಚೆಗಳನ್ನು ಸಂಸ್ಕೃತದತ್ತ ಒಯ್ಯಲು ಸಹಾಯಕ ರಾದರು. ಅಲ್ಲದೆ ಸಾಮಾನ್ಯ ಓದುಗರಿಗೆ ಧರ್ಮಶ್ರವಣ ಮಾಡಿಸುವುದರಲ್ಲೇ ನಿರತವಾಗಿದ್ದ ಏಕಪ್ರಕಾರದ ಸಾಹಿತ್ಯ ಬೇಸರ ತಂದುದರಿಂದ ಅವರು ಬೇರೊಂದು ಬಗೆಯ ಕೃತಿಗಳಿಗಾಗಿ ಹಾತೊರೆಯುತ್ತಿದ್ದರು. ಆದುದರಿಂದ ಈ ಕಾಲದ ಕವಿಗಳು ಕಾಳಿದಾಸ, ಮಾಘ, ಶ್ರೀಹರ್ಷ ಮತ್ತು ಇತರ ಸಂಸ್ಕೃತ ಕವಿಗಳ ಕಾವ್ಯತಂತ್ರವನ್ನು ಅನುಸರಿಸಿದರು. ಕಾವ್ಯಸಂಪ್ರದಾಯವನ್ನು ಸಂಸ್ಥಾಪಿಸುವುದರಲ್ಲಿ ಉಪೇಂದ್ರ ಭಂಜನೊಬ್ಬನೇ ಮೂಲಕಾರಣನಾಗಿದ್ದವ. ಅವನ ಹಿಂದಿನವರು ಈ ಹೊಸ ದಾರಿಯಲ್ಲಿ ಅನೇಕ ಪ್ರಯೋಗಗಳನ್ನು ನಡೆಸಿದ್ದರು. ಅದೇ ದಾರಿಯಲ್ಲಿ ಉಪೇಂದ್ರ ಭಂಜ ನಡೆದು ಈ ಸಂಪ್ರದಾಯವನ್ನು ರೂಢಿಸಿದ. ಬಿಷ್ಣುದಾಸ ಮತ್ತು ಶ್ರೀಧರದಾಸ ಎಂಬಿಬ್ಬರು ಉಪೇಂದ್ರ ಭಂಜನಿಗೆ ಹಿಂದಿನವರಲ್ಲಿ ಪ್ರಸಿದ್ಧರಾದ ಕವಿಗಳು. ಬಿಷ್ಣುದಾಸ ಪ್ರೇಮಾಲೋಚನಾ ಎಂಬುದನ್ನೂ ಶ್ರೀಧರದಾಸ ಕಾಂಚನಲತಾ ಎಂಬುದನ್ನೂ ರಚಿಸಿದರು.

ಉಪೇಂದ್ರ ಭಂಜನ ತಾತನಾದ ಧನಂಜಯ ಭಂಜ ಒಬ್ಬ ಪ್ರಖ್ಯಾತ ಕವಿ. ಆತ ಬರೆದ ಕಾವ್ಯ ರಘುನಾಥವಿಲಾಸ; ರಾಮಾಯಣದಿಂದ ಆಯ್ದುಕೊಂಡ ರಾಮಚಂದ್ರನ ಚರಿತ್ರೆ ಈ ಗ್ರಂಥದ ವಸ್ತು. ಈ ಕೃತಿಯಲ್ಲಿ ಧನಂಜಯ ಸಂಸ್ಕೃತ ಕಾವ್ಯತಂತ್ರವನ್ನು ಅನುಸರಿಸಿದ. ತನ್ನ ಮೊಮ್ಮಗನಾದ ಉಪೇಂದ್ರ ಭಂಜನನ್ನು ಕವಿಯಾಗಲು ಪ್ರೋತ್ಸಾಹಿಸಿದ. ತಾತನ ಪ್ರೋತ್ಸಾಹ ಮತ್ತು ಪ್ರೇರಣೆಗಳಿಂದ ಉಪೇಂದ್ರ ಭಂಜ ಬೈದೇಹಿಸ ವಿಲಾಸವನ್ನು ಬರೆದನೆಂಬುದು ನಿಜ. ಇದು ಪ್ರಖ್ಯಾತವಾದ ಗ್ರಂಥ. ಧನಂಜಯ ಭಂಜ ಈ ಕೃತಿಯನ್ನು ನೋಡಿದಾಗ ಇದರ ಅಸಾಧಾರಣವಾದ ಕಾವ್ಯಗುಣಕ್ಕೆ ಮೆಚ್ಚಿ ತನ್ನ ಮೊಮ್ಮಗನನ್ನು ಅಭಿನಂದಿಸಿದನಂತೆ.

ಉಪೇಂದ್ರ ಭಂಜ ರಚಿಸಿದ ಕೃತಿಗಳ ಸಂಖ್ಯೆ ಇನ್ನೂ ಅನಿರ್ದಿಷ್ಟವಾಗಿದೆ. ಅವನ ಕಾಲ್ಪನಿಕ ಶೃಂಗಾರಕಾವ್ಯಗಳ ಪೈಕಿ ಲಾವಣ್ಯವತಿ, ಕೋಟಿಬ್ರಹ್ಮಾನಂದ ಸುಂದರಿ, ರಸಿಕ ಹಾರಾವಳಿ ಮತ್ತು ರಸಲೇಖಾ ಎಂಬವು ಗಮನಾರ್ಹವಾಗಿವೆ. ಆತನ ಪೌರಾಣಿಕ ಕೃತಿಗಳಲ್ಲಿ ಸುಭದ್ರಾಪರಿಣಯ, ಕಲಾಕೌತುಕ ಮತ್ತು ಬೈದೇಹಿಸ ವಿಲಾಸ ಎಂಬವು ಗಣ್ಯವಾಗಿವೆ. ಪೌರಾಣಿಕ ವಸ್ತುಗಳನ್ನು ಈತ ರಾಮಾಯಣ ಮಹಾಭಾರತಗಳಿಂದ ತೆಗೆದುಕೊಂಡಿದ್ದಾನೆ. ಛಾಂದಭೂಷಣ ಮತ್ತು ಚಿತ್ರಕಾವ್ಯ ಚೌಧೋದಯ ಮುಂತಾದ ಕೃತಿಗಳಲ್ಲಿ ಪ್ರತಿಭೆಗಿಂತ ಹೆಚ್ಚಾಗಿ ಶೈಲಿ ಮತ್ತು ರಚನಾ ಕೌಶಲಗಳನ್ನು ಕಾಣಬಹುದಾಗಿದೆ.

ಉಪೇಂದ್ರ ಭಂಜ ತನ್ನ ಸಣ್ಣ ಪದ್ಯಗಳಲ್ಲಿಯೂ ಜಯಶಾಲಿಯಾಗಿದ್ದಾನೆ. ಆತ ಅನೇಕ ಚೌತಿಸಾ, ಚೌಪದಿ, ಛಾಂದ ಮುಂತಾದವನ್ನು ಬರೆದಿದ್ದಾನೆ. ಇವೆಲ್ಲ ತುಂಬ ಜನಪ್ರಿಯವಾಗಿವೆ. ಸಂಸ್ಕೃತ ಅಲಂಕಾರಶಾಸ್ತ್ರವನ್ನು ಅಭ್ಯಾಸಮಾಡಿದವರಿಗೆ ಭಂಜನ ಕಾವ್ಯದ ರುಚಿ ನಿಲುಕುತ್ತದೆ. ಒರಿಯ ಸಾಹಿತ್ಯದಲ್ಲಿ ಉಪೇಂದ್ರ ಭಂಜ ಕವಿಸಮ್ರಾಟ್ ಎಂದು ಸಂಭಾವಿತನಾಗಿದ್ದಾನೆ.

ಉಪೇಂದ್ರ ಭಂಜನಿಂದ ಪ್ರತಿಷ್ಠಿತವಾದ ಕಾವ್ಯಸಾಹಿತ್ಯಕ್ಕೆ ಇತರ ಕೆಲವು ಕವಿಗಳೂ ಅನೇಕ ಗಣ್ಯಕೃತಿಗಳನ್ನು ನೀಡಿದ್ದಾರೆ.

ಧನಂಜಯ ಭಂಜನ ಕಿರಿಯ ತಮ್ಮನಾದ ಘೆನ ಭಂಜ ಹಾಡುಗಳನ್ನೂ ಪದ್ಯಗಳನ್ನೂ ರಚಿಸಿ ಖ್ಯಾತನಾಗಿದ್ದಾನೆ ; ಗೋವಿಂದವಿಳಾಸವೆಂಬ ಪೌರಾಣಿಕ ಕಾವ್ಯವನ್ನು ಸಹ ಬರೆದಿದ್ದಾನೆ. ರಸನಿಧಿ ಎಂಬ ಶೃಂಗಾರಕಾವ್ಯ ಅವನ ಕೃತಿಗಳ ಪೈಕಿ ವಿಶೇಷ ಉಲ್ಲೇಖಕ್ಕೆ ತಕ್ಕುದಾಗಿದೆ. ತ್ರೈಲೋಕ್ಯಮೋಹಿನಿ ಎಂಬ ಅವನ ಮತ್ತೊಂದು ಶೃಂಗಾರ ಕೃತಿ ಆ ಕಾಲದ ಸಾಮಾನ್ಯ ಪ್ರವೃತ್ತಿಗಿಂತ ಸ್ವಲ್ಪ ಭಿನ್ನವಾಗಿದೆ.

ಆ ಕಾಲದ ಪ್ರಖ್ಯಾತ ಕವಿಯಾದ ದೀನಕೃಷ್ಣದಾಸ ಅನೇಕ ಕಾವ್ಯಗಳನ್ನು ಬರೆದಿದ್ದಾನೆ. ರಸಕಲ್ಲೋಲ, ರಸವಿನೋದ, ನಾಮರತ್ನಗೀತಾ, ಜಗಮೋಹನ್ ಛಾಂದ—ಎಂಬವು ಆತನ ಗಣ್ಯಕೃತಿಗಳು. ಅತ್ಯುತ್ತಮ ಕೃತಿ ರಸಕಲ್ಲೋಲ. ಕವಿ ವೈಷ್ಣವ. ಹೀಗಾಗಿ ವೈಷ್ಣವ ಭಾವನೆಗಳು ಆತನ ಕೃತಿಗಳಲ್ಲಿ ಎದ್ದುಕಾಣುತ್ತವೆ. ಬಾಲ್ಯದಿಂದ ತೊಡಗಿ ಗೋಕುಲನಿರ್ಗಮನದ ವರೆಗಿನ ಕೃಷ್ಣ ಕಥೆಯನ್ನು ರಸಕಲ್ಲೋಲ ನಿರೂಪಿಸುತ್ತದೆ. ಕೃಷ್ಣ ಗೋಪಿಯರನ್ನು ತ್ಯಜಿಸಿ ಹೊರಟ ಬಳಿಕ ಗೋಪಿಯರ ಶೋಕವನ್ನು ಕುರಿತ ಕವಿಯ ವರ್ಣನೆ ಓದುಗರ ಹೃದಯವನ್ನು ಕರಗಿಸುತ್ತದೆ. ರಸವಿನೋದದಲ್ಲಿನ ಬಸಿಷ್ಠ ಭುಸಂಡರ ಸಂವಾದದಲ್ಲಿ ರಾಧಾ ಮತ್ತು ಕೃಷ್ಣರ ಪ್ರಣಯಪ್ರಸಂಗ ನಿರೂಪಿತವಾಗಿದೆ. ನಾಮರತ್ನಗೀತದಲ್ಲಿ ವೈಷ್ಣವದರ್ಶನದ ವರ್ಣನೆಯಿದೆ. ಪ್ರಭು ಜಗನ್ನಾಥನ ನಿತ್ಯಪೂಜಾವಿಧಿಗಳನ್ನೂ ವಿಶೇಷೋತ್ಸವಗಳನ್ನೂ ಸಂಗೀತಮಯವಾದ ಜಗಮೋಹನ ಛಾಂದ ಎಂಬ ಕೃತಿ ವರ್ಣಿಸುತ್ತದೆ.

ಲೋಕನಾಥ ಬಿದ್ಯಾಧರ ಎಂಬ ಆ ಕಾಲದ ಪ್ರಖ್ಯಾತ ಕವಿ ಮಕರಧ್ವಜ ಮತ್ತು ಪದ್ಮಾವತಿಯರನ್ನು ಕುರಿತ ಪದ್ಮಾವತೀ ಪ್ರಣಯವನ್ನು ಬರೆದ. ಆತನ ಚಿತ್ರಲೇಖಾ ಎಂಬುದು ಕಥಾನಾಯಕಿ ಚಿತ್ರಲೇಖೆ ತನ್ನ ಪ್ರಿಯನಾದ ರಾಜಪುತ್ರ ಸುದರ್ಶನನನ್ನು ಒಡಗೂಡಿದ ಸುಖಸನ್ನಿವೇಶವನ್ನೂ ಸರ್ವಾಂಗಸುಂದರಿ ಎಂಬ ಮತ್ತೊಂದು ಶೃಂಗಾರಕಾವ್ಯ ಅವನೀತಿಲಕನೆಂಬ ಕಥಾನಾಯಕನ ಪ್ರಣಯ ಪ್ರಸಂಗವನ್ನೂ ವರ್ಣಿಸುತ್ತವೆ. ಬೃಂದಾವನ ವಿಹಾರವೆಂಬುದು ಆತನ ಶೃಂಗಾರಕಾವ್ಯಗಳಿಂದ ಸ್ವಲ್ಪ ಭಿನ್ನವಾಗಿದೆ. ಅದು ವೈಷ್ಣವ ಕವಿತೆಯ ರಾಧಾಕೃಷ್ಣ ಪ್ರಸಂಗದ ಪ್ರತಿಧ್ವನಿ. ಈ ಕವಿ ತನ್ನ ಎಲ್ಲ ಕೃತಿಗಳನ್ನೂ ಕಲಾತ್ಮಕವಾದ, ಆಲಂಕಾರಿಕ ಶೈಲಿಯಲ್ಲಿ ರಚಿಸಿದ್ದಾನೆ.

ಆ ಕಾಲದ ಬೃಂದಾವತಿದಾಸಿ ಎಂಬ ಕವಯಿತ್ರಿ ಗೋಕುಲದಲ್ಲಿ ಕೃಷ್ಣನ ಜೀವಿತವನ್ನು ಕುರಿತ ಪೂರ್ಣತಮಚಂದ್ರೋದಯ ಎಂಬ ಕಾವ್ಯವನ್ನು ಬರೆದಿದ್ದಾಳೆ.

ಉಪೇಂದ್ರ ಭಂಜನ ಕಾಲದಲ್ಲಿ ಏಕಪ್ರಕಾರವಾಗಿರುವ ಕಾವ್ಯಶೈಲಿ ಸಾಹಿತ್ಯದಲ್ಲೆಲ್ಲ ವ್ಯಾಪಿಸಿತ್ತು ಎಂಬುದು ಸ್ಪಷ್ಟ. ಕವಿಗಳು ಅಂಥ ಶೈಲಿಯಲ್ಲೇ ಬರೆದು ತಮ್ಮ ಕವಿತಾಪ್ರೌಢಿಮೆಯನ್ನು ಮೆರೆಸಲು ಕಾತರರಾಗಿದ್ದರು. ಉಪೇಂದ್ರ ಭಂಜನ ತರುವಾಯ ಕೆಲವು ಕವಿಗಳು ಒರಿಯ ಸಾಹಿತ್ಯಕ್ಕೆ ಗಮನಾರ್ಹವಾದ ಕಾಣಿಕೆಯನ್ನು ಸಲ್ಲಿಸಿ ಖ್ಯಾತರಾಗಿದ್ದಾರೆ.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಜೀವಿಸಿದ್ದ ಸದಾನಂದ ಕವಿ ಸೂರ್ಯಬ್ರಹ್ಮ ವೈಷ್ಣವಧರ್ಮವನ್ನು ಸ್ವೀಕರಿಸಿದ ಮೇಲೆ ತನ್ನ ಹೆಸರನ್ನು ಸಾಧು ಚರಣದಾಸನೆಂದು ಮಾರ್ಪಡಿಸಿಕೊಂಡ. ಆತ ಪ್ರೇಮತರಂಗಿಣಿಯನ್ನೂ ಪ್ರೇಮ ಲಹರಿ, ಲಳಿತಲೋಚನಾ ಚೌರಚಿಂತಾಮಣಿ ಮತ್ತು ಜುಗಳರಸಾಮೃತಲಹರಿ ಎಂಬ ಮಧುರ ಮಂಜುಳ ಕೃತಿಗಳನ್ನೂ ಬರೆದಿದ್ದಾನೆ. ಅವಕ್ಕೆಲ್ಲ ಉಪೇಂದ್ರ ಭಂಜನೇ ಮೇಲುಪಂಕ್ತಿ.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿದ್ದ ಜನಾರ್ದನದಾಸನಿಗೆ ದನಾಯಿ ದಾಸನೆಂದೂ ಹೆಸರಿತ್ತು. ಆತ ಗೋಪೀ ಭಾಸವನ್ನು ಬರೆದ. ಇದರಲ್ಲಿ ಗೋಪ ಗ್ರಾಮದಲ್ಲಿನ ಸ್ತ್ರೀಯರು ಕೃಷ್ಣ ತಮ್ಮನ್ನು ಬಿಟ್ಟು ಮಧುರೆಗೆ ಹೊರಟಾಗ ಗೋಳಾಡಿದ ಬಗೆ ವರ್ಣಿತವಾಗಿದೆ.

ಆ ಕಾಲದ ರಾಮದಾಸ ಎಂಬ ಕವಿ ರಾಮರಸಾಮೃತ ಮತ್ತು ದಾರ್ಢ್ಯತಾ ಭಕ್ತಿ ಎಂಬವನ್ನು ಬರೆದಿದ್ದಾನೆ. ಮೊದಲನೆಯದು ರಾಮಚಂದ್ರನ ಚರಿತ್ರೆಯನ್ನೂ ಎರಡನೆಯದು ಒರಿಸ್ಸ ದೇಶದ ಸಾಧುಸಂತರ ಚರಿತ್ರೆಯನ್ನೂ ವರ್ಣಿಸುತ್ತವೆ.

ಬಿಸ್ವನಾಥ್ ಕುಂಟಿಯಾ ಎಂಬ ಕವಿ ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಜೀವಿಸಿದ್ದು ರಾಮಚಂದ್ರನ ಮಾಹಾತ್ಮ್ಯವನ್ನು ವರ್ಣಿಸುವ ಬಿಚಿತ್ರ ರಾಮಾಯಣ ಎಂಬ ಗ್ರಂಥವನ್ನು ಬರೆದಿದ್ದಾನೆ.

ಬ್ರಜನಾಥ ಬಡಜೆನಾ ಎಂಬಾತ ಹದಿನೆಂಟನೆಯ ಶತಮಾನದ ಉತ್ತರಾರ್ಧದಲ್ಲಿ ಜೀವಿಸಿದ್ದು ದೇಶಾಭಿಮಾನವನ್ನು ಉಕ್ಕಿಸುವಂಥ ಸಾಹಿತ್ಯ ನಿರ್ಮಿತಿಗಾಗಿ ಖ್ಯಾತನಾಗಿದ್ದಾನೆ. ಧೇಂಕನಾಳ್ ರಾಜ ಮರಾಠಿಗರೊಂದಿಗೆ ಯುದ್ಧಮಾಡಿದ ಪ್ರಸಂಗ ಈತನ ಸಮರತರಂಗದಲ್ಲಿ ವರ್ಣಿತವಾಗಿದೆ. ಈತನ ಶ್ಯಾಮರಾಸೋತ್ಸವ ಮತ್ತು ಅಂಬಿಕಾ ವಿಲಾಸ ಎಂಬವು ಪೌರಾಣಿಕ ವಸ್ತುವನ್ನು ಅವಲಂಬಿಸಿ ಬರೆದ ಕೃತಿಗಳು ; ಗುಂಡಿಛಾ ಬಿಜೆ ಎಂಬ ಹಿಂದೀ ಕೃತಿಯಲ್ಲಿ ಈತ ಪ್ರಭು ಜಗನ್ನಾಥನ ರಥೋತ್ಸವವನ್ನು ವರ್ಣಿಸಿದ್ದಾನೆ.

ಹನ್ನೆರಡನೆಯ ಶತಮಾನದ ಅಂತ್ಯಭಾಗದಲ್ಲಿ ಜೀವಿಸಿದ್ದ ಭಕ್ತಚರಣದಾಸನೆಂಬ ಕವಿ ಶ್ರೀಕೃಷ್ಣಚರಿತ್ರವನ್ನೂ ಆತನ ಪ್ರೇಮಪ್ರಸಂಗಗಳನ್ನೂ ವರ್ಣಿಸುವ ಮಥುರಾ ಮಂಗಳ ಎಂಬ ಕಾವ್ಯವನ್ನು ರಚಿಸಿದ್ದಾನೆ. ಮನಬೋಧ ಚೌತಿಸಾ ಎಂಬ

ಇನ್ನೊಂದು ಕೃತಿ ಒರಿಸ್ಸದಲ್ಲೆಲ್ಲ ಬಹಳವಾಗಿ ಜನರ ಮೆಚ್ಚುಗೆಗೆ ಪಾತ್ರವಾಗಿದೆ. ಕಳಾಕಳೀವರ ಚೌತಿಸಾ ಮತ್ತು ಮನಸಿಖ್ಯಾ ಎಂಬವೂ ಮತ್ತೆರಡು ಜನಪ್ರಿಯ ಕೃತಿಗಳು.

ಕಾವ್ಯಸಾಹಿತ್ಯವನ್ನು ಬೆಳೆಸಿದ ಇನ್ನೂ ಅನೇಕ ಸಣ್ಣಪುಟ್ಟ ಕವಿಗಳಿದ್ದಾರಾದರೂ ಅವರ ಉಲ್ಲೇಖ ಇಲ್ಲಿ ಅಪ್ರಕೃತ. ಈ ಅವಧಿಯಲ್ಲಿ ಧಾರ್ಮಿಕ ಸಂಪ್ರದಾಯವನ್ನು ಒತ್ತಟ್ಟಿಗಿರಿಸಿ ಕಾವ್ಯಸಂಪ್ರದಾಯವೇ ತುಂಬ ಪ್ರಸಿದ್ಧಿಗೆ ಬಂದಿತೆನ್ನಬಹುದು. ಇವುಗಳ ಜನಪ್ರಿಯತೆಗಿದ್ದ ಅತಿ ದೊಡ್ಡ ಕಾರಣ ಇವುಗಳ ಗೇಯಗುಣವೇ ಆಗಿದೆ.

**ಸಂಕೀರ್ಣ ಸಾಹಿತ್ಯದ ಯುಗ** (1800–1850) **:** ಉಪೇಂದ್ರ ಭಂಜನ ತರುವಾಯ ಕಾವ್ಯಸಂಪ್ರದಾಯ ಮಾರ್ಪಾಡುಹೊಂದಿತು. ಭಂಜನ ಪ್ರಭಾವವನ್ನು ತೋರುತ್ತ ಜೊತೆಗೆ ಆಧುನಿಕ ಒರಿಯ ಸಾಹಿತ್ಯೋದಯದ ಗುರಿಯನ್ನೂ ದ್ಯೋತಿಸುವ ಪ್ರವೃತ್ತಿಯೊಂದು ಆಗ ಗೋಚರಿಸಿತು.

ಈ ಕಾಲದ ಅಭಿಮನ್ಯು ಸಮಂತಸಿಂಘಾರ್ ಎಂಬ ಪ್ರಖ್ಯಾತ ಕವಿ ರಾಧಾಕೃಷ್ಣರ ಪ್ರಣಯವನ್ನು ಕುರಿತ ವಿದಗ್ಧ ಚಿಂತಾಮಣಿ ಎಂಬುದನ್ನು ಬರೆದ. ಇದರಲ್ಲಿನ ದಾರ್ಶನಿಕ ಭಾವಗಳನ್ನು ವರ್ಣಿಸುವಾಗ ಕವಿ ಸದಾನಂದ ಕವಿ ಸೂರ್ಯಬ್ರಹ್ಮನ ಪ್ರಭಾವಕ್ಕೆ ಒಳಗಾಗಿದ್ದಾನೆ. ಈತ ಉಪೇಂದ್ರ ಭಂಜನ ಲಲಿತ ಶೈಲಿಯನ್ನೇ ಅನುಸರಿಸಿದ್ದಾನೆ. ಗೋಪಾಲಕೃಷ್ಣ ಪಟ್ಟನಾಯಕ ಶ್ರೀಕೃಷ್ಣಲೀಲಾಪ್ರಸಂಗಗಳನ್ನು ಕುರಿತು ಅನೇಕ ಪದ್ಯಗಳನ್ನು ಬರೆದಿದ್ದಾನೆ. ಈತನ ಕೃತಿಗಳು ಸಾಹಿತ್ಯಕ್ಕಿಂತ ಹೆಚ್ಚಾಗಿ ಹಾಡುಗಳೆನಿಸಿ ಜನರೊಲವನ್ನು ಗಳಿಸಿವೆ.

ಜದುಮಣಿ ಮಹಪಾತ್ರ ಕವಿ ಮತ್ತು ವಿಡಂಬನಕಾರ. ಶ್ರೀಕೃಷ್ಣನ ಪ್ರಣಯ ಪ್ರಸಂಗವನ್ನು ಕುರಿತು ಪ್ರಬಂಧ ಪೂರ್ಣಚಂದ್ರ ಎಂಬ ಕಾವ್ಯವನ್ನು ರಚಿಸಿದ್ದಾನೆ. ಈತನೂ ಉಪೇಂದ್ರ ಭಂಜನ ಶೈಲಿಯನ್ನೇ ಅನುಕರಿಸಿದ್ದಾನೆ.

ಕಿಶೋರ ಚಂದ್ರಾನಂದ ಚಂಪು ಎಂಬುದನ್ನು ರಚಿಸಿದ ಕವಿ ಸೂರ್ಯ ಬಳದೇವ ರಥ ಒಬ್ಬ ಖ್ಯಾತ ಕವಿ. ಚೌತಿಸಾ ಮಾದರಿಯ ಮೂರು ನಾಲ್ಕು ಹಾಡುಗಳಿಂದ ಕೂಡಿದ ಈ ಕೃತಿ ಶ್ಲೇಷೆ ಮತ್ತು ಯಮಕಾಲಂಕಾರ ಭೂಯಿಷ್ಠವಾಗಿದೆಯಲ್ಲದೆ ಇಲ್ಲಿನ ಒಂದೊಂದು ಹಾಡಿಗೂ ಒಂದೊಂದು ಮಟ್ಟಿದೆ. ರಾಧಾಕೃಷ್ಣರ ಪ್ರಣಯ ಇದರ ವಸ್ತು.

ಮಹಿಮಾ ಪಂಥದ ಪ್ರಚಾರಕ್ಕಾಗಿ ಭೀಮಾ ಭೋಯ್ ಎಂಬ ಕವಿ ಅನೇಕ ಭಜನೆಗಳನ್ನು ರಚಿಸಿದ್ದಾನೆ.

ಈ ಐವತ್ತು ವರ್ಷಗಳಲ್ಲಿನ (1800–50) ಒರಿಸ್ಸ ಸಾಹಿತ್ಯದ ಮುನ್ನಡೆ ಮಿಕ್ಕ ಅವಧಿಗಳಿಗಿಂತ ಯಾವ ವಿಧದಲ್ಲೂ ಕಡಿಮೆಯದಲ್ಲ. ಈ ಕಾಲದಲ್ಲಿ ಮಹಾಕಾವ್ಯ, ಭಾವಗೀತ, ದೀರ್ಘಕಾವ್ಯಗಳು, ಲಘುಕಾವ್ಯಗಳು—ಇವನ್ನೆಲ್ಲ ರಚಿಸಲು ಪ್ರಯತ್ನಗಳು ನಡೆದಿವೆ. ರಾಜ್ಯ ಒಂದು ವಿದೇಶೀ ಆಳ್ವಿಕೆಗೆ ಒಳಗಾಗುವ ಮಹಾ ದುರವಸ್ಥೆಯ ಈ ಅವಧಿಯಲ್ಲಿ ಸಹ ಸಾಹಿತ್ಯಕ್ಷೇತ್ರ ಬಂಜರಾಗಿರಲಿಲ್ಲವೆಂಬುದೂ ಮಂಕಾಗಿ ಮಲಗದೆ ಚಟುವಟಿಕೆಯಿಂದ ಕೂಡಿತ್ತೆಂಬುದೂ ಇದರಿಂದ ಸಿದ್ಧವಾಗುತ್ತದೆ. ಈ ಕಾಲದ ವರೆಗೆ ಪ್ರಾಚೀನ ಮತ್ತು ಮಧ್ಯಯುಗದ ಸಾಹಿತ್ಯ ಪ್ರಕಾರಗಳು ನಡೆದುಕೊಂಡು ಬಂದುವು. ಇದರ ತರುವಾಯ ಸಾಹಿತ್ಯಕ್ಷೇತ್ರದಲ್ಲಿ ಒಂದು ಕ್ರಾಂತಿಯುಂಟಾಗಿ ಹೊಸ ದೃಷ್ಟಿಯೊಂದು ಮೂಡಿತು.

**ಆಧುನಿಕ ಒರಿಯ ಸಾಹಿತ್ಯ :** 1870ರಲ್ಲಿ ಅದು ಪಡೆದುಕೊಂಡ ಹೊಸ ದೃಷ್ಟಿಯೇ ಆಧುನಿಕ ಒರಿಯ ಸಾಹಿತ್ಯದಲ್ಲಿ ಗಮನಿಸಬೇಕಾದ ಪ್ರಧಾನ ಅಂಶ. ಬ್ರಿಟಿಷರ ಆಳ್ವಿಕೆಯಲ್ಲಿ ಜಾರಿಗೆ ಬಂದ ನವೀನ ವಿದ್ಯಾಭ್ಯಾಸ ಪದ್ಧತಿ ಇದಕ್ಕೆ ಕಾರಣವಾಯಿತು. ಒರಿಯ ಕವಿತೆಯ ಪ್ರಾಚೀನ ಸಂಪ್ರದಾಯವನ್ನು ಬದಿಗೊತ್ತಿ ರಾಧಾನಾಥ ರಾಯ್ ಹೊಸ ಸಂಪ್ರದಾಯವನ್ನು ಸ್ಥಾಪಿಸಿದ. ಈತನೊಬ್ಬ ಉಪಾಧ್ಯಾಯ. ವಿದ್ಯಾ ಇಲಾಖೆಯ ಅಧಿಕಾರಿಯಾದ ಮೇಲೆ ಈತ ತನ್ನ ಹೊಸ ಅಭಿರುಚಿಯನ್ನೂ ಕಾವ್ಯರಚನಾವಿಧಾನವನ್ನೂ ಸಾಮಾನ್ಯ ಓದುಗನ ಮೇಲೆ ಹೇರಲು ಸಮರ್ಥನಾದ.

ಈ ಕಾಲದ ಮುಖ್ಯ ಪ್ರವೃತ್ತಿಗಳನ್ನು ಕೆಲವು ದೃಷ್ಟಿಕೋನಗಳಿಂದ ನೋಡಿ ಗುರುತಿಸಬಹುದು. ರಾಧಾಕೃಷ್ಣ ಪ್ರಣಯ ಕಥೆಗಳು ಹಿಂದಾಗಿ ಸಾಮಾಜಿಕ ವಿಷಯಗಳು ಇಲ್ಲಿ ಕಾವ್ಯವಸ್ತುಗಳಾಗಿವೆ. ವಸ್ತುಗಳನ್ನು ಆರಿಸುವುದರಲ್ಲಿ ಕವಿಗಳ ವಿಶಾಲ ದೃಷ್ಟಿ ಗೋಚರಿಸುತ್ತದೆ. ಹಿಂದಿನ ವರ್ಷಗಳ ನಾಯಕ ನಾಯಕಿಯರ ಯಾಂತ್ರಿಕ ಪಡಿಯಚ್ಚಿನ ಚಿತ್ರಗಳ ಜಾಗವನ್ನು ಧೈರ್ಯ, ಪ್ರೇಮ ಮತ್ತು ಇತರ ಜೀವನ ಧ್ಯೇಯಗಳುಳ್ಳ ಪಾತ್ರಗಳು ಆಕ್ರಮಿಸಿಕೊಂಡಿವೆ. ದೇವತೆಗಳ ಮತ್ತು ಪ್ರಣಯಿಗಳ ಜೀವಿತಚಿತ್ರಣಕ್ಕೆ ಬದಲಾಗಿ ಸಾಮಾನ್ಯ ಮನುಷ್ಯನ ಬಾಳುವೆ ಕಾವ್ಯವಸ್ತುವಾಗಿದೆ.

ಪ್ರಕೃತಿ ವರ್ಣನೆಯೇ ಈ ಕಾಲದ ಸಾಹಿತಿಗಳ ಮುಖ್ಯ ಕಾಣಿಕೆ. ಸಮಯ ಸಂದರ್ಭಗಳಿಗೆ ತಕ್ಕಂತೆ ಅಲ್ಲಿ ಇಲ್ಲಿ ಪ್ರಕೃತಿಯನ್ನು ವರ್ಣಿಸುವ ರೂಢಿ ಹಿಂದಿನ ಕಾವ್ಯಗಳಲ್ಲಿ ಕಂಡುಬರುತ್ತದಾದರೂ ಈ ಕಾಲದಿಂದೀಚೆಗೆ ಪ್ರಕೃತಿಯೇ ಒಂದು ಪಾತ್ರದಂತೆ ವರ್ಣಿತವಾಗಿ ಕಣ್ಣಿಗೆ ಎದ್ದು ಕಾಣುತ್ತದೆ. ಛಂದಸ್ಸಿನಲ್ಲಿ ಕೂಡ ಹೆಚ್ಚಿನ ಬದಲಾವಣೆಯಾಗಿರುವುದು ಕಂಡುಬರುತ್ತದೆ.

ವಿಡಂಬನ, ಹಾಸ್ಯ, ಗದ್ಯಸಾಹಿತ್ಯ, ನಾಟಕ, ಸಾಹಿತ್ಯಪತ್ರಿಕೆಗಳು, ವಿಮರ್ಶೆ—ಇತ್ಯಾದಿಗಳಲ್ಲಿ ಆಗಿರುವ ವಿಕಾಸವೂ ಈ ಕಾಲದ ಲಕ್ಷಣವಾಗಿದೆ.

ಆಧುನಿಕ ಒರಿಯ ಸಾಹಿತ್ಯದ ಅಭಿವೃದ್ಧಿಗೆ ಮುಖ್ಯವಾಗಿ ಸಾಹಿತ್ಯಪತ್ರಿಕೆಗಳು ಕಾರಣವಾಗಿವೆ. ರಾಧಾನಾಥ ರಾಯ್, ಮಧುಸೂದನ ರಾವ್, ಗಂಗಾಧರ ಮೆಹರ್, ನಂದಕಿಶೋರ್ ಬಳ್, ಚಿಂತಾಮೊನಿ ಮೊಹಾಂತಿ, ರಾಮಶಂಕರ ರಾಯ್ ಮತ್ತು ಇತರರ ಲೇಖನಗಳು ಮೊದಲು ಪತ್ರಿಕೆಗಳಲ್ಲಿ ಅಚ್ಚಾಗಿ ಬಳಿಕ ಪುಸ್ತಕ ರೂಪದಲ್ಲಿ ಪ್ರಕಟವಾದುವು.

ಈ ಕಾಲದ ಪ್ರಖ್ಯಾತ ಕವಿ ರಾಧಾನಾಥ ರಾಯ್ ಕಾವ್ಯಗಳನ್ನು ರಚಿಸಿದ್ದಾನೆ. ಕೇದಾರಗೌರಿ, ಚಂದ್ರಭಾಗಾ ಮತ್ತು ಪಾರ್ವತಿಗಳ ಕಥಾವಸ್ತು ಗ್ರೀಕ್ ಮೂಲಗಳಿಂದ ಆಯ್ದುಕೊಂಡಂಥದು. ಒರಿಸ್ಸ ಜನ ಇವನ್ನು ಈತನ ಸ್ವಂತ ಕೃತಿಗಳೆಂದೇ ಪರಿಭಾವಿಸುವ ರೀತಿಯಲ್ಲಿ ಈತ ಇವನ್ನು ನಿರ್ವಹಿಸಿದ್ದಾನೆ. ಈತನ ಚಿಲಿಕಾ ಎಂಬ ಪ್ರಖ್ಯಾತ ಕಾವ್ಯ ಅದೇ ಹೆಸರಿನ ಸರೋವರದ ಪ್ರಕೃತಿ ಸೌಂದರ್ಯವನ್ನು ವರ್ಣಿಸುತ್ತದೆ. ಈತನ ಅಪೂರ್ಣ ಕೃತಿ ಮಹಾಯಾತ್ರಾ ಎಂಬುದು ಸರಳ ರಗಳೆಯಲ್ಲಿದೆ. ಕಾಳಿದಾಸನ ಸಂಸ್ಕೃತ ಕಾವ್ಯದ ಅನುವಾದವಾದ ಮೇಘಸಂದೇಶದ ವಿಶದ ಶೈಲಿ ಮತ್ತು ಮಧುರ ಪದಬಂಧಗಳು ಓದುಗನನ್ನು ಬೆರಗುಗೊಳಿಸುತ್ತವೆ. ರಾಧಾನಾಥ ಸಂಸ್ಥಾಪಿಸಿದ ಹೊಸ ಸಂಪ್ರದಾಯವನ್ನು ಈತನ ಸಮಕಾಲೀನರೂ ಮುಂದಿನ ಪೀಳಿಗೆಯವರೂ ಅನುಸರಿಸಿದರು. ಆದುದರಿಂದ ಈ ಕಾಲಾವಧಿಯನ್ನು ರಾಧಾನಾಥನ ಹೆಸರಿನಿಂದಲೇ ಕರೆಯಲಾಗಿದೆ.

ಭಕ್ತ ಕವಿ ಮಧುಸೂದನ್ ಬ್ರಾಹ್ಮಪಂಥದ ತತ್ತ್ವವನ್ನು ಹರಡುವ ಉದ್ದೇಶದಿಂದ ಹಲವು ಕಾವ್ಯಗಳನ್ನು ಬರೆದಂತೆ ಕಂಡುಬರುತ್ತದೆ. ಈತನ ಪದ್ಯಗಳು ಧ್ಯೇಯವಾದಿಗಳಾಗಿವೆ. ಈತನ ಜೀವನ ಚಿಂತ್, ರುಸಿಪ್ರಾಣೆ, ದೇವಾವತರಣಗಳು ಈತನ ತಪಸ್ವೀಭಾವನೆಗಳನ್ನು ಪ್ರಕಟಿಸುತ್ತವೆ. ಈತನ ಉತ್ತರರಾಮಚರಿತವೆಂಬುದು ಸಂಸ್ಕೃತ ಮಹಾನಾಟಕವೆಂಬ ಕೃತಿಯ ಒಂದು ಭಾಗದ ಅನುವಾದವಾಗಿದೆ.

ಗಂಗಾಧರ ಮೆಹರ್ ಕಾವ್ಯರಚನೆಯಲ್ಲಿ ಸಂಸ್ಕೃತ ಕಾವ್ಯಗಳ ಧ್ಯೇಯಗಳನ್ನೇ ಅನುಸರಿಸಿದ್ದಾನೆ. ಈತನ ಉತ್ಕಲಲಕ್ಷ್ಮಿ ಎಂಬುದರಲ್ಲಿ ಒರಿಸ್ಸ ದೇಶದ ಪ್ರಕೃತಿ ವರ್ಣನೆಯಿದೆ. ಕೀಚಕಬಧ, ಪ್ರಣಯ ಬಲ್ಲರಿ, ತಪಸ್ವಿನಿ, ಪದ್ಮಿನಿಗಳು ಈತನ ಇತರ ಕಾವ್ಯಗಳು. ಇವುಗಳ ವಸ್ತುಗಳನ್ನು ಕವಿ ಮಹಾಭಾರತ ರಾಮಾಯಣ ಮತ್ತು ಇತರ ಅಂಥ ಮೂಲಗಳಿಂದ ತೆಗೆದುಕೊಂಡಿದ್ದಾನೆ.

ಗ್ರಾಮಸೌಂದರ್ಯವನ್ನು ವರ್ಣಿಸುವ ಪ್ರಖ್ಯಾತವಾದ ಭಾವಗೀತೆಗಳನ್ನು ರಚಿಸಿ ನಂದಕಿಶೋರ್ ಬಳ್ ಕೀರ್ತಿವಂತನಾಗಿದ್ದಾನೆ. ಹಳ್ಳಿಗಳಲ್ಲಿನ ಪ್ರಕೃತಿಯ ಚೆಲುವನ್ನು ಈತ ರಸವತ್ತಾಗಿ ಚಿತ್ರಿಸಿದ್ದಾನೆ. ಜಜಾತಿ ಮತ್ತು ದೇವಜಾನಿಯರ ಪ್ರಣಯದ ಕಥೆಯನ್ನು ಅವಲಂಬಿಸಿ ಈತ ಶರ್ಮಿಷ್ಠಾ ಎಂಬ ದೊಡ್ಡ ಕಾವ್ಯವೊಂದನ್ನೂ ರಚಿಸಿದ್ದಾನೆ.

ಚಿಂತಾಮಣಿ ಮೊಹಾಂತಿಯೂ ಅನೇಕ ಬೃಹದ್ಗ್ರಂಥಗಳನ್ನು ಅರ್ಪಿಸಿದ್ದಾನೆ. ರಾಧಾನಾಥನ ಶೈಲಿಯ ಪ್ರಭಾವವನ್ನು ಈತನ ಕವಿತೆಗಳಲ್ಲಿ ಕಾಣಬಹುದು.

ಪದ್ಮಚರಣ್ ಪಟ್ಟನಾಯಕ ಹಲವಾರು ಭಾವಗೀತಗಳನ್ನೂ ಅಷ್ಟಪದಿಗಳನ್ನೂ ರಚಿಸಿದ್ದಾನೆ. ಕಲಾತ್ಮಕವಾದ ಒಳನೋಟ ಈತನ ವೈಶಿಷ್ಟ್ಯ. ಪದ್ಮಪಾಖುಡಾ, ಸೂರ್ಯಮುಖಿ, ಗೊಲಾಪಗುಚ್ಛ ಮತ್ತು ಆಸಾಮಂಜರಿ ಎಂಬವು ಈತ ಆಗಾಗ ಬರೆದ ಕವನಗಳ ಸಂಗ್ರಹಗಳು.

ಫಕೀರ್ ಮೋಹನ್ ಸೇನಾಪತಿ ಅನೇಕ ಕವನಗಳನ್ನು ಬರೆದನಲ್ಲದೆ ಹರಿವಂಶ, ರಾಮಾಯಣಗಳನ್ನು ಭಾಷಾಂತರಿಸಿದ. ಈತನ ಉತ್ಕಳ ಭ್ರಮನಂಗ್ ಎಂಬುದು ಕಾವ್ಯವಾಗಿದ್ದರೂ ಆ ಕಾಲದ ಒರಿಸ್ಸ ದೇಶದ ಅನೇಕ ಮಹಾಪುರುಷರನ್ನು ಇದು ನಿರ್ದಾಕ್ಷಿಣ್ಯವಾಗಿ ವಿಮರ್ಶಿಸುತ್ತದೆ.

**ಸತ್ಯವಾದೀ ಯುಗ :** ರಾಧಾನಾಥ್ ರಾಯ್ ದಿವಂಗತನಾದ (1908) ಬಳಿಕ, ಒರಿಯ ಸಾಹಿತ್ಯದಲ್ಲಿ ಹೊಸ ಲೇಖಕರ ಒಂದು ತಂಡ ಉದಿಸಿತು. ಇವರು ಮೂಲತಃ ದೇಶಭಕ್ತರು. ಗೋಪಬಂಧು ದಾಸ್, ನೀಳಕಂಠ ದಾಸ್, ಗೋದಾವರೀಶ್ ಮಿಶ್ರ, ಕೃಪಾಸಿಂಧು ಮಿಶ್ರ ಮತ್ತು ಬಸುದೇವ ಮಿಶ್ರ ಎಂಬ ಐವರು ಈ ತಂಡಕ್ಕೆ ಸೇರಿದವರು. ಗೋಪಬಂಧು ಈ ತಂಡದ ನಾಯಕ. ದೇಶಭಕ್ತರಾದುದರಿಂದ ಈ ಐವರೂ ರಾಧಾನಾಥನ ಸಾಹಿತ್ಯಕ್ಕೆ ಎದುರುಬಿದ್ದರು. ಏಕೆಂದರೆ ರಾಧಾನಾಥ್ ತನ್ನ ಸಾಹಿತ್ಯರಚನೆಗೆ ಹೊರಗಿನ ವಸ್ತುಗಳನ್ನು ತೆಗೆದುಕೊಂಡು ಒರಿಯ ಜನರ ಸಂಸ್ಕೃತಿಗೂ ಪ್ರತಿಷ್ಠೆಗೂ ಭಂಗತಂದನೆಂದು ಇವರು ಭಾವಿಸಿದರು. ರಾಧಾನಾಥನ ಕೃತಿಗಳನ್ನು ಇವರು ತೀವ್ರವಾಗಿ ಖಂಡಿಸಿ ಒರಿಸ್ಸದ ಪ್ರಾಚೀನ ವೈಭವವನ್ನು ತಮ್ಮ ಕೃತಿಗಳಲ್ಲಿ ಎತ್ತಿಹಿಡಿದರು.

ಪಂಡಿತ, ಗೋಪಬಂಧು ಎಂಬ ಲೇಖಕ ಕಾರಾ ಕವಿತಾ, ಬಂದಿರ ಆತ್ಮಕಥಾ, ಧರ್ಮಪದ, ನಚೀಕೇತ, ಗೋಮಾಹಾತ್ಮ್ಯ ಮತ್ತು ಅವಕ್ಷಚಿಂತಾ ಮುಂತಾದ ಕವಿತೆಗಳನ್ನು ರಚಿಸಿದ. ಈ ಕೃತಿಗಳೆಲ್ಲವೂ ಒರಿಸ್ಸ ಮತ್ತು ಅದರ ಜನರ ಹೆಮ್ಮೆಯನ್ನೂ ಠೇಂಕಾರವನ್ನೂ ತೋರಿಸುತ್ತವೆ. ಪಂಡಿತ ನೀಲಕಂಠ ದಾಸ ಕವಿ ಖಾರವೇಲ, ಕೊನಾರ್ಕ್, ದಾಸನಾಯಿಕ ಮುಂತಾದ ಕವಿತೆಗಳನ್ನು ರಚಿಸಿದ. ಇವುಗಳಲ್ಲಿ ಸಹ ಇದೇ ಭಾವನೆಗಳು ವ್ಯಕ್ತವಾಗಿವೆ. ಪಂಡಿತ ಗೋದಾವರೀಶ್ ಮಿಶ್ರ ಕಥನ ಕವಿತೆಗಳಿಗೂ ಭಾವಗೀತೆಗಳಿಗೂ ಪ್ರಸಿದ್ಧನಾದವ. ಈತನ ಕಿಸಳಯ, ಆಲೇಖಿಕಾ, ಕವಿತಾಯನ ಮತ್ತು ಭಯನಿಕಾ ಎಂಬವು ಕಥನಕವನ ಮತ್ತು ಭಾವ ಗೀತೆಗಳ ಸಂಗ್ರಹಗಳು. ಕೃಪಾಸಿಂಧು ಮಿಶ್ರ ಇತಿಹಾಸಕಾರ. ಬಸುದೇವ ಮಿಶ್ರ ಪ್ರಬಂಧಲೇಖಕ. ಇಬ್ಬರೂ ಸಮಾನಭಾವದಿಂದ ಇತಿಹಾಸವನ್ನೂ ಪ್ರಬಂಧ ಗಳನ್ನೂ ರಚಿಸಿದರು.

**ಸವುಜ ಯುಗ :** ದೇಶಭಕ್ತಿ ಸಾಹಿತ್ಯದ ತರುವಾಯ ಲೇಖಕರ ಮತ್ತೊಂದು ತಂಡ ಒರಿಸ್ಸದಲ್ಲಿ ಅಂಕುರಿಸಿತು. ಈ ತಂಡದವರು ಸವುಜ (ಹಸಿಯ) ಸಾಹಿತ್ಯ ವನ್ನು ನಿರ್ಮಿಸಿದರು. ಸವುಜವೆಂಬುದು ಬಂಗಾಳಿಯಿಂದ ತೆಗೆದುಕೊಂಡ ಶಬ್ದ. ಆ ಕಾಲದಲ್ಲಿ ಬಂಗಾಳದಲ್ಲೂ ತರುಣರ ಒಂದು ತಂಡ ಸವುಜದಳವೆಂಬ ಹೆಸರನ್ನಿಟ್ಟು ಕೊಂಡು ಬರೆಯತೊಡಗಿತ್ತು. ಅದರ ಪ್ರಭಾವ ಒರಿಯ ಸಾಹಿತ್ಯದ ಮೇಲೂ ಸಾಕಷ್ಟು ಆಯಿತು. ಕಾಳಿಂದೀಚರಣ ಪಾಣಿಗ್ರಾಹಿ, ಹರಿಹರ್ ಮಹಾಪಾತ್ರ, ಅನ್ನದಾ ಶಂಕರ ರಾಯ್, ಶರತ್‌ಚಂದ್ರ ಮುಖರ್ಜಿ ಮತ್ತು ಬೈಕುಂಠನಾಥ ಪಟ್ಟನಾಯಕ ಎಂಬ ಐದು ಮಂದಿ 1913ರಲ್ಲಿ ಕಾಲೇಜು ವಿದ್ಯಾರ್ಥಿಗಳಾಗಿದ್ದರು. ಈ ಐವರೂ ಒಂದು ಸಂಘವನ್ನು ಕಟ್ಟಿಕೊಂಡು ಅದಕ್ಕೆ ನಾನ್‌ಸೆನ್ಸ್ ಕ್ಲಬ್ ಎಂದು ನಾಮಕರಣ ಮಾಡಿ ಅದರ ವತಿಯಲ್ಲಿ ಪ್ರಣಯವನ್ನೇ ಮುಖ್ಯ ವಸ್ತುವಾಗುಳ್ಳ ಕವಿತೆಗಳನ್ನು ಬರೆಯಲು ತೊಡಗಿದರು. 1921ರಲ್ಲಿ ಈ ಸಂಘ ಸವುಜಸಾಹಿತ್ಯ ಸಮಿತಿಯಾಗಿ ಮಾರ್ಪಾಡು ಹೊಂದಿತು. ಆಗ ಇದಕ್ಕೆ ಇನ್ನೂ ಕೆಲವು ಮಂದಿ ಸದಸ್ಯರಾಗಿ ಸೇರಿದರು. ಐವರು ಲೇಖಕರ ಕವನಗಳನ್ನೊಳಗೊಂಡ ಸವುಜಕವಿತಾ ಎಂಬ ಕವನ ಸಂಗ್ರಹವೊಂದು ಪ್ರಕಟವಾಯಿತು. ಈ ಸಂಘದ ಹದಿಮೂರು ಮಂದಿ ಒಟ್ಟುಸೇರಿ ಬಾಸಂತಿ ಎಂಬ ಕಾದಂಬರಿಯನ್ನು ರಚಿಸಿದರು. ಇದರಲ್ಲಿ ಸಮಾಜಪರಿಷ್ಕರಣ ಭಾವನೆಗಳಿದ್ದುವು. ಈ ಕಾದಂಬರಿಯ ವೈಶಿಷ್ಟ್ಯವೇನೆಂದರೆ ಹದಿಮೂರು ಮಂದಿ ಲೇಖಕರು ಒಬ್ಬೊಬ್ಬರೂ ಎರಡು ಮೂರು ಅಧ್ಯಾಯಗಳನ್ನು ಬರೆದು ಈ ಕಥೆ ಯನ್ನು ಪೂರೈಸಿದುದು.

ಈ ಅವಧಿಯ (1913–1931) ವರೆಗಿನ ಕವಿಗಳು ತೊರೆದೋಡುವವರು (ಎಸ್‌ಕೇಪಿಸ್ಟ್ಸ್) ಎಂಬ ನಿಂದೆಗೆ ಪಾತ್ರರಾದರು. ಈ ಭೂಮಿ ಪ್ರೇಮಕ್ಕೆ ಯೋಗ್ಯ ವಾದ ಸ್ಥಾನವಲ್ಲವೆಂದು ಇವರು ಭಾವಿಸಿದ್ದರಲ್ಲದೆ ಈ ಲೋಕವನ್ನು ತ್ಯಜಿಸಿ ಪ್ರಣಯ ಕ್ಕಾಗಿ ಸ್ವರ್ಗಕ್ಕೇರಬಯಸಿದ್ದರು. ಹುರುಳಿಲ್ಲದ್ದರಿಂದ ಇಂಥ ಕಾವ್ಯ ಬಹಳ ಕಾಲ ಜೀವಿಸಲಾರದೆ ಹೋಯಿತು.

**ಸಮಕಾಲೀನ ಯುಗ :** ಈ ಯುಗದ ಕವಿತಾಕ್ಷೇತ್ರವನ್ನು ಮೊದಲು ಪರಿಶೀಲಿಸಬಹುದು. ಸವುಜ ಕಾಲದಲ್ಲಿ ಮೇಲಕ್ಕೆ ಬಂದವರಾದರೂ ಸವುಜ ಸಮಿತಿಗೆ ಸೇರದೆ ಇದ್ದ ಮಾಯಾಧರ್ ಮಾನಸಿಂಘ, ಸಚ್ಚಿ ತಾಕ್ರೆ, ಕುಂತಲ ಕುಮಾರಿ ಸಾಬತ್ ಮುಂತಾದ ಕೆಲವು ಕವಿಗಳು ಸಣ್ಣ ದೊಡ್ಡ ಸ್ವತಂತ್ರ ಕವಿತೆ ಗಳನ್ನು ಬರೆದಿದ್ದಾರೆ.

ಒರಿಸ್ಸ ಸಾಹಿತ್ಯದಲ್ಲಿ ಪ್ರಣಯ ಕವಿತೆಗೆ ಮಾಯಾಧರ್ ಮಾನಸಿಂಘ ಪ್ರಖ್ಯಾತ ನಾಗಿದ್ದಾನೆ. ಪ್ರಣಯದ ವಿಷಯದಲ್ಲಿ ಆತನ ಭಾವನೆಗಳನ್ನೂ ಅನುಭವಗಳನ್ನೂ ನಿಶ್ಶಂಕೆಯಿಂದ ರೂಪಿಸುವ ಪ್ರಣಯಪದ್ಯಗಳ ಸಂಕಲನವೆಂದರೆ ಆತನ ಧೂಪ ಎಂಬ ಗ್ರಂಥ. ಹೇಮಪುಷ್ಪ ಮತ್ತು ಹೇಮಸಸ್ಯ ಎಂಬವು ಇದೇ ತರದ ಪದ್ಯಗಳನ್ನೊಳ ಗೊಂಡ ಮತ್ತೆರಡು ಪುಸ್ತಕಗಳು. ಈಚೆಗೆ ಅಂದರೆ 1948ರ ತರುವಾಯ ಮಾನ ಸಿಂಘ ಕವಿತೆಯ ವಿಷಯದಲ್ಲಿ ತನ್ನ ದೃಷ್ಟಿಯನ್ನು ಬದಲಾಯಿಸಿದ್ದಾನೆ. ತಾಪಸ ಧ್ಯೇಯಗಳು ಈಗ ಆತನ ಕವಿತಾಮನೋಭಾವಕ್ಕೆ ವಿಷಯಗಳಾಗಿವೆ. ಈ ಪರಿವರ್ತಿತ ಮನೋಭಾವಕ್ಕೆ ಕಮಳಾಯನ ಎಂಬ ಗ್ರಂಥ ಅತ್ಯುತ್ತಮ ನಿದರ್ಶನವಾಗಿದೆ. ಪ್ರಣಯದ ಶಾರೀರಿಕ ಪ್ರಶಂಸೆಗೆ ಈತನ ಪೂರ್ವದ ಕವಿತೆಗಳು ಮೀಸಲಾಗಿದ್ದರೆ, ಇತ್ತೀಚಿನ ಕವಿತೆಗಳು ಪ್ರೇಮದ ಅಧ್ಯಾತ್ಮ ಸ್ವರೂಪವನ್ನು ಪ್ರಕಟಿಸುತ್ತವೆ.

ಕುಂತಳಕುಮಾರಿ ಸಾವತಳು ಬಗೆಬಗೆಯ ಭಾವಗಳನ್ನು ಕುರಿತು ಅನೇಕ ಪದ್ಯ ಗಳನ್ನು ಬರೆದಿದ್ದಾಳೆ. ಎಲ್ಲ ಧರ್ಮಗಳಲ್ಲೂ ಮಾನವತೆಯಲ್ಲೂ ವಿಶ್ವಾಸವಿಟ್ಟ ದೇಶಾಭಿಮಾನಿ ಈಕೆ ಸ್ಫುಲಿಂಗ ಎಂಬ ಕವನಸಂಗ್ರಹದಲ್ಲಿ ಈಕೆಯ ದೇಶಾಭಿಮಾನ ಮತ್ತು ಕ್ರಾಂತಿಕಾರಕ ಭಾವನೆಗಳು ಸಮರ್ಥವಾಗಿ ವ್ಯಕ್ತವಾಗಿವೆ. ಈಕೆಯ ಪ್ರೇಮಚಿಂತಾಮಣಿಯಲ್ಲಿ ರಾಧಾಕೃಷ್ಣರ ಆಧ್ಯಾತ್ಮಿಕ ಪ್ರೇಮ ವರ್ಣಿತವಾಗಿದೆ.

ಶ್ರೀ ಸಚ್ಚಿದಾನಂದ ರೌತ್ರೆ ಈ ಕಾಲದ ಅತ್ಯಂತ ಶಕ್ತನಾದ ಕವಿ. 1925ರಲ್ಲಿ ಈತ ಕವಿತೆಯನ್ನು ಬರೆಯಲು ತೊಡಗಿದ. ಎಳತನದಲ್ಲಿ ಪ್ರಣಯ ಕವಿತೆಗಳನ್ನು ಬರೆದ. 1931 ರಿಂದೀಚೆಗೆ ಈತ ಕ್ರಾಂತಿಕಾರಕ ಕವಿತೆಗಳನ್ನು ಬರೆದಾಗ ಈತನ ಭಾವನೆ ಬದಲಾಯಿಸಿರುವುದು ಬೆಳಕಿಗೆ ಬಂದಿತು. ಸಮಾಜದಲ್ಲಿ ವ್ಯಕ್ತಿ ವ್ಯಕ್ತಿ ಗಳಿಗೂ ಇರುವ ಅಸಮಾನತೆಯನ್ನು ಈತ ಖಂಡಿಸಿದ. ಮಾನವಪ್ರಕೃತಿಯ ವಿಷಯದಲ್ಲಿ ಈತನ ಭಾವನೆಗಳೆಂಥವೆಂಬುದನ್ನು ಪಾಂಡುಲಿಪಿ ಎಂಬ ಗ್ರಂಥ ತೋರಿ ಸುತ್ತದೆ. ಈತನ ಭಾನುಮತಿರ ದೇಶ ಎಂಬ ಕವಿತೆ ಸರಳ ರಗಳೆಯಲ್ಲಿ ರಚಿತ ವಾಗಿರುವ ಬಹುಶ್ರೇಷ್ಠ ಕವಿತೆ. ಇದು ಈತನಿಗೆ ಒರಿಸ್ಸ ಸಾಹಿತ್ಯದಲ್ಲಿ ಉನ್ನತ ಸ್ಥಾನ ಗಳಿಸಿಕೊಟ್ಟಿದೆ. ಬಾಜಿ ರೌತ್ ಎಂಬುದು ಒಂದು ಶ್ರೇಷ್ಠ ಪದ್ಯ. ಧೆಂಕ ನಾಳ್ ರಾಜ್ಯದಲ್ಲಿ ನಡೆದ ಉತ್ಕ್ರಾಂತಿಯಲ್ಲಿ ಬಾಜಿ ರೌತನ ಮರಣವೇ ಇದರ ವಸ್ತು. ಬಾಜಿ ರೌತ ಧೆಂಕನಾಳಿನ ಒಬ್ಬ ಚಿಕ್ಕ ಹುಡುಗ. ತಮ್ಮನ್ನು ದೋಣಿಯಲ್ಲಿ ಕೂರಿಸಿಕೊಂಡು ಹೋಗದಿದ್ದುದಕ್ಕಾಗಿ ಪೋಲೀಸಿನವರು ಇವನನ್ನು ಗುಂಡಿಕ್ಕಿ ಕೊಂದರು. ಇದನ್ನು ಕುರಿತ ಮೂಲ ಕವಿತೆ ಇಂಗ್ಲಿಷ್ ಮತ್ತು ಇತರ ಯೂರೋಪಿಯನ್ ಭಾಷೆಗಳಿಗೆ ಅನುವಾದಗೊಂಡಿದೆ (ದಿ ಬೋಟ್‌ಮನ್ ಬಾಯ್ ಅಂಡ್ ಫಾರ್ಟಿ ಅದರ್ ಪೊಯೆಮ್ಸ್).

ರಾಧಾಮೋಹನ್ ಗರ್‌ನಾಯಕ್ ಸಂಪನ್ನ ಶೈಲಿಯ ಒಬ್ಬ ಜನಪ್ರಿಯ ಕವಿ. ಜಾನಪದ ಕಥನಕವನಗಳಿಗಾಗಿ ಈತ ಪ್ರಖ್ಯಾತನಾಗಿದ್ದಾನೆ. ಇವು ಉತ್ಕಳಿಕಾ ಎಂಬ ಪುಸ್ತಕದಲ್ಲಿ ಪ್ರಕಟವಾಗಿವೆ. ಈತನ ಪಸುಪಖಿರ ಕಾವ್ಯ ಎಂಬುದು ಪ್ರಖ್ಯಾತ ಮೃಗಪಕ್ಷಿಗಳ ಮೇಲೆ—ಎಂದರೆ ವಾಲ್ಮೀಕಿ ಮಹರ್ಷಿಯ ಮುಂದೆಯೇ ಹತವಾದ ಕ್ರೌಂಚ ಪಕ್ಷಿ, ರಷ್ಯದ ರಾಕೆಟ್ಟಿನಲ್ಲಿ ಗಗನಯಾತ್ರೆ ಮಾಡಿದ ಲೈಕಾ ಎಂಬ ನಾಯಿ— ಮುಂತಾದುವುಗಳ ಮೇಲೆ ಬರೆದ ಪದ್ಯಗಳನ್ನು ಒಳಗೊಂಡಿದೆ.

ಅನಂತರದವರಲ್ಲಿ ಪಟ್ಟನಾಯಕ ಮತ್ತೊಬ್ಬ ಜನಪ್ರಿಯ ಕವಿ. ಈತನ ಕವಿತೆಗಳು ಅನೇಕ ಪತ್ರಿಕೆಗಳಲ್ಲಿ ಅಚ್ಚಾಗುತ್ತಿವೆ. ಈತನ ಶೈಲಿ ಗಡುಸು. ಈತನದು ಕ್ರಾಂತಿಯ ಮನೋಭಾವ. ಈಗಿನ ಸಾಮಾಜಿಕ ರೂಢಿಯನ್ನು ಪ್ರತಿಭಟಿಸುವುದೇ ಈತನ ಧ್ಯೇಯ. ಬಿನೋದ್ ಚಂದ್ರ ನಾಯಕನೂ ಅನೇಕ ಪದ್ಯಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಶೃಂಗಾರ ಕಲ್ಪನೆಯ ಪದ್ಯಗಳು ಅನೇಕವಾಗಿವೆ. ಈತನ ನೀಲಚಂದ್ರರ ಉಪತ್ಯಕಾ ಎಂಬುದು ಅಂಥದೊಂದು ಸಂಗ್ರಹ. ಕುಂಜ ಬಿಹಾರಿಯ ಹಲವಾರು ಗ್ರಂಥಗಳು ಪ್ರಕಟವಾಗಿವೆ. ಚಾರಣಿಕಾ ಎಂಬುದು ಆತನ ಅನೇಕ ಪದ್ಯಗಳ ಸಂಗ್ರಹ.

ಈ ಕಾಲದ ಪ್ರಖ್ಯಾತ ಕವಿಯಾದ ಗೋದಾವರೀಶ್ ಮಹಾಪಾತ್ರ ಸ್ವೋಪಜ್ಞ ಶೈಲಿಯನ್ನೂ ಪ್ರಬಲವಾದ ಪ್ರತಿಭೆಯನ್ನೂ ಪಡೆದಿದ್ದಾನೆ. ವಿಡಂಬನ ಕವಿತೆಗಳಿಗೂ ಈತ ಪ್ರಸಿದ್ಧ. ಈತನ ಕಂಟಾ ಓ ಫೂಲ ಮತ್ತು ಉಠ ಕಂಕಾಳ ಎಂಬವು ಕ್ರಾಂತಿ ಕಾರಕ ಭಾವನೆಯ ವಿಡಂಬನ ಕವಿತೆಗಳ ಸಂಗ್ರಹಗಳು. ಕಿರಿಯ ತಲೆಮಾರಿನವರ ಪೈಕಿ ಚಿಂತಾಮಣಿ ಬೆಹೆರಾ ಮತ್ತು ಜಾನಕಿ ಮೊಹಾಂತಿ ಎಂಬುವರು ಗಣನೀಯ ರಾಗಿದ್ದಾರೆ. ಬೆಹರಾನ ನೂತನ ಸ್ವಾಖ್ಯರ ಮತ್ತು ಮೊಹಾಂತಿಯ ತಿರ್ಜ್ಯಕ್ ಎಂಬ ಗ್ರಂಥಗಳು ಆಧುನಿಕ ಲೇಖಕರ ಶಕ್ತಿಸಾಮರ್ಥ್ಯಗಳಿಗೆ ನಿದರ್ಶನಗಳಾಗಿವೆ. ಕೇವಲ ಪತ್ರಿಕೆಗಳಿಗೆ ಮತ್ತು ಕಾಲಿಕಗಳಿಗೆ ಬರೆಯುವ ಅನೇಕ ಕವಿಗಳಿದ್ದಾರೆ. ಇವರ ಕಾಣಿಕೆ ಗಳೂ ಬೆಲೆಯುಳ್ಳವು.

ಕಾದಂಬರಿಗಳು : ಉಮೇಶಚಂದ್ರ ವಿರಚಿತ ಪದ್ಮಮಾಳಿ ಎಂಬುದೇ ಒರಿಯ ಭಾಷೆಯ ಪ್ರಥಮ ಕಾದಂಬರಿಯೆಂದು ಪರಿಗಣಿತವಾಗಿದೆ. ಇದು ಪದ್ಮಮಾಳಿ ಮತ್ತು ಪರಿಖಿತರ ಪ್ರಣಯ ಪ್ರಸಂಗವನ್ನು ವರ್ಣಿಸುತ್ತದೆ. ಗೋಪಾಲವಲ್ಲಭದಾಸ ಬರೆದ ಭೀಮಾ ಭುಯಾನ್ ಎಂಬ ಮತ್ತೊಂದು ಕಾದಂಬರಿ ಕಥಾನಾಯಕ ಭೀಮನ ಕಥೆ ಯನ್ನು ಕುರಿತುದಾಗಿದೆ. ಒರಿಸ್ಸ ಆದಿವಾಸಿ ಕುಲಗಳ ಸಾಮಾಜಿಕ ರೂಢಿಗಳು ಇಲ್ಲಿ ವರ್ಣಿತವಾಗಿವೆ. ರಾಮಶಂಕರ ರಾಯ್ ಬರೆದ ಬಿಬಾಸಿನಿ ಎಂಬುದು ಒಂದು ಐತಿ ಹಾಸಿಕ ಕಾದಂಬರಿ.

ಈ ಮೂರು ಕಾದಂಬರಿಗಳ ತರುವಾಯ, ಫಕೀರ್ ಮೋಹನ್ ಸೇನಾಪತಿಯ ಛ ಮಾಣ ಅಠಗುಂಠ ರಚಿತವಾಗುವ ವರೆಗೆ (1897) ಮತ್ತಾವ ಕಾದಂಬರಿಯೂ ಗೋಚರಿಸುವುದಿಲ್ಲ. ಈ ಕಾದಂಬರಿ ಒರಿಸ್ಸ ಸಾಹಿತ್ಯದಲ್ಲಿ ಒಂದು ಕ್ರಾಂತಿಕಾರಕ ಬದಲಾವಣೆಯನ್ನು ತಂದಿತು. ಭಗಿಯಾ ಎಂಬ ಒಬ್ಬ ಭೂಮಾಲೀಕ ಮತ್ತು ಸಾರಿಯಾ ಎಂಬ ಆತನ ಮಡದಿ ತಮ್ಮ ಭೂಮಿಯ ಸಲುವಾಗಿ ರಾಮಚಂದ್ರ ಮಂಗರಾಜನೆಂಬಾತನ ಕುಹಕ ತಂತ್ರಕ್ಕೆ ಸಿಕ್ಕಿ ಅನೇಕ ಕಷ್ಟಗಳನ್ನು ಅನುಭವಿಸಿದ ಪರಿಯನ್ನು ಈ ಕಾದಂಬರಿ ವರ್ಣಿಸುತ್ತದೆ. ಶೈಲಿ ಹಾಸ್ಯಮಯವಾಗಿದ್ದರೂ ಘಟನೆ ವಿಷಾದಾಂತವಾಗಿದೆ. ಲಛ್ಮಮಾ, ಮಾಮು ಮತ್ತು ಪ್ರಾಯಶ್ಚಿತ್ತ ಎಂಬ ಮೂರು ಇತರ ಕಾದಂಬರಿಗಳನ್ನೂ ಫಕೀರಮೋಹನ ಬರೆದ. ಎರಡು ಶತಮಾನಗಳ ವರೆಗಿನ, ಎಂದರೆ 18 ಮತ್ತು 19ನೆಯ ಶತಮಾನಗಳ ಒರಿಸ್ಸ ದೇಶದ ರಾಜಕೀಯ

ಮತ್ತು ಸಾಮಾಜಿಕ ಇತಿಹಾಸ ಈ ನಾಲ್ಕು ಕಾದಂಬರಿಗಳಲ್ಲಿ ಸಿಕ್ಕುತ್ತದೆ. ಈತನ ಸಮಕಾಲೀನರಾದ ಚಿಂತಾಮಣಿ ಮೊಹಾಂತಿ ಸನಿಸಪ್ರಾ ಮತ್ತು ಟಂಕಾಗಚ್ಚ ಎಂಬವನ್ನು ಬರೆದ. ಕನಕಲತೆ ಧನಂಜಯರಾಯನನ್ನು ಪ್ರೀತಿಸಿ ಮದುವೆಯಾದ ಪ್ರಸಂಗವನ್ನು ಕುರಿತ ಕನಕಲತಾ ಎಂಬ ಕಾದಂಬರಿಯನ್ನು ನಂದಕಿಶೋರ ಬಳ್ ರಚಿಸಿದ.

ಗೋದಾವರೀಶ್ ಮಿಶ್ರ ಹಲವಾರು ಕಾದಂಬರಿಗಳನ್ನು ರಚಿಸಿದ್ದಾನೆ. ಅವುಗಳಲ್ಲಿ ಕೆಲವು ಮೂಲ ಇಂಗ್ಲಿಷ್ ಕೃತಿಗಳ ಭಾಷಾಂತರಗಳು. ಆತನ ಅಭಾಗಿನಿ ಎಂಬುದು ವಿಕ್ಟರ್ ಹ್ಯೂಗೊನ ಲೇ ಮಿಸರಬ್ಲೇ ಕೃತಿಯ ಭಾಷಾಂತರ. ಕಮಲಾಕಾಂತ ದಾಸ ಅನೇಕ ಕಾಲ್ಪನಿಕ ಕಾದಂಬರಿಗಳನ್ನು ರಚಿಸಿದ. ಅವುಗಳಲ್ಲಿ ಚೌ ಎಂಬುದು ಅತ್ಯುತ್ತಮವಾಗಿದೆ. ಲಕ್ಷ್ಮೀಕಾಂತ ಮಹಾಪಾತ್ರ ಕಣಾಮಾಮು ಎಂಬ ಹಾಸ್ಯರಸಪ್ರಧಾನವಾದ ಕಾದಂಬರಿಯನ್ನು ಬರೆದ. ಬೈಷ್ಣಬ್ ಚರನ್ ದಾಸ ಮನೆ ಮನೆ ಎಂಬ ಕಾಲ್ಪನಿಕ ಕಾದಂಬರಿಯನ್ನು ರಚಿಸಿದ.

ರಾಜಕಿಶೋರ್ ಪಟ್ಟನಾಯಕ, ನಿತ್ಯಾನಂದ ಮಹಾಪಾತ್ರ, ಕಾನ್ಹುಚರಣ ಮೊಹಾಂತಿ, ಗೋಪಿನಾಥ್ ಮೊಹಾಂತಿ ಎಂಬುವರು ಆದ್ಯಕಾಲೀನ ಪ್ರಖ್ಯಾತ ಕಾದಂಬರಿಕಾರರು. ರಾಜಕಿಶೋರ್ ಪಟ್ಟನಾಯಕನ ಅನೇಕ ಕಾದಂಬರಿಗಳಲ್ಲಿ ಸಿಂದುರಗಾರ, ಕಜ್ಜಲಗಾರ, ಪಂಜುರಿ ಪಕ್ಷಿ, ಛಲಾ ಬಾಟ ಎಂಬುವು ಗಮನಾರ್ಹವಾದ ಕೆಲವು. ಕಾನ್ಹು ಚರಣ ಮೊಹಾಂತಿ ಈ ಕಾಲದ ಪ್ರಖ್ಯಾತ ಕಾದಂಬರಿಕಾರ. ಈತ ಇಪ್ಪತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ಬರೆದು ಕೀರ್ತಿವಂತನಾಗಿದ್ದಾನೆ. ಹಾ ಅನ್ನ, ಸಾಸ್ತಿ, ಝಡರ ಶೇಷ, ಝಂಜಾ, ಕಾ ಮತ್ತು ಬಜ್ರಬಾಹು ಎಂಬವು ಈತನ ಪ್ರಸಿದ್ಧ ಕಾದಂಬರಿಗಳು. ಆಧುನಿಕ ಒರಿಯ ಸಾಹಿತ್ಯದಲ್ಲಿ ಈತನ ಶೈಲಿ ವಿಲಕ್ಷಣವಾಗಿದೆ. ಫಕೀರ ಮೋಹನನ ತರುವಾಯ ಒರಿಯ ಲೇಖಕರ ಮೇಲೆ ತುಂಬ ಪ್ರಭಾವ ಬೀರಿರುವವ ಈತನೊಬ್ಬನೇ. ಪರಜಾ, ದಾಡಿ ಬುಢಾ, ಅಮೃತಸರ ಸಂತಾನ್, ಹರಿಜನ, ರಾಹುರ ಚ್ಛಾಯಾ ಮುಂತಾದುವು ಗೋಪೀನಾಥ ಮೊಹಾಂತಿಯ ಕೆಲವು ಕಾದಂಬರಿಗಳು. ಅವುಗಳ ಪೈಕಿ ಪರಜಾ ಎಂಬುದು ಅತ್ಯುತ್ತಮವಾಗಿದೆ. ಈತನ ಶೈಲಿ ಸರಳವೂ ವಿಶದವೂ ಸ್ವೋಪಜ್ಞವೂ ಆಗಿ ಒಳ್ಳೆಯ ಮಾದರಿಯಾಗಿದೆ.

ಕಾಳಿಂದೀಚರಣ ಪಾಣಿಗ್ರಾಹಿ ಎಂಬಾತ ಮಾಟಿರ ಮನಿಸ, ಲುಹಾರ ಮನಿಸ, ಮುಕ್ತಾ ಗದರ ಕ್ಷುಧಾ ಮತ್ತು ಅಮರ ಚಿತಾ ಎಂಬವನ್ನು ಬರೆದಿದ್ದಾನೆ. ಆತನ ಮಾಟಿರ ಮನಿಸ ಎಂಬುದು ವಾಸ್ತವ ಕಥೆಯೊಂದನ್ನು ಅವಲಂಬಿಸಿ ರಚಿತವಾಗಿದ್ದು ಜನಪ್ರಿಯವೆನಿಸಿದೆ. ಹರೇಕೃಷ್ಣ ಮಹತಾಬ್ ಬರೆದಿರುವ ಕಾದಂಬರಿಗಳಲ್ಲಿ ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಸುಧಾರಣೆಗಳ ಬಗೆಗೆ ಆತನಿಗಿದ್ದ ಒಲವು ಎದ್ದುಕಾಣುತ್ತದೆ. ಪ್ರತಿಭಾ ಮತ್ತು ಟಾರ್ಟರ್ ಎಂಬ ಆತನ ಕೃತಿಗಳು ಜನಪ್ರಿಯವಾಗಿವೆ.

ಸಣ್ಣ ಕಥೆಗಳು: ಫಕೀರ ಮೋಹನ್ ಸೇನಾಪತಿ ಬರೆದ ರೇಬತಿ ಎಂಬುದು ಒರಿಯ ಭಾಷೆಯ ಮೊದಲ ಸಣ್ಣ ಕಥೆ. ಈ ಕಥೆಯಲ್ಲಿ ಲೇಖಕ ಒರಿಸ್ಸ ದೇಶದಲ್ಲಿ ಸ್ತ್ರೀ ವಿದ್ಯಾಭ್ಯಾಸಕ್ಕಿದ್ದ ಕಷ್ಟಗಳನ್ನು ಎತ್ತಿ ತೋರಿಸಿದ್ದಾನೆ. ಕವಿಯ ಇಲ್ಲಿನ ಉದ್ದೇಶ ಸಮಾಜಸುಧಾರಣೆ. ಪೇಟೆಂಟ್ ಮೆಡಿಸನ್, ರಾಂಡೀಪುರ, ಅನಂತಾ, ಡಾಕ್ ಮುನ್ಶಿ, ಗಾರುಡಿಮಂತ್ರ, ಧುಳಿಯಾ ಬಾಬಾ ಮುಂತಾದುವೂ ಸುಧಾರಣಾದೃಷ್ಟಿಯಿಂದಲೇ ಬರೆದವಾಗಿವೆ. ಫಕೀರ ಮೋಹನನಿಗೆ ಮಾನವಸ್ವಭಾವದ ಸೂಕ್ಷ್ಮ ಜ್ಞಾನವಿತ್ತು. ಆತನ ಸಣ್ಣ ಕಥೆಗಳು ಜನರಿಗೆ ತುಂಬ ಮೆಚ್ಚಿಗೆಯಾಗಿವೆ.

ಗೋಪಾಲ ಚಂದ್ರಪ್ರಹರಾಜ ಕೆಲವು ಸಣ್ಣ ಕಥೆಗಳನ್ನು ಬರೆದಿದ್ದಾನೆ. ಆದರೆ ಅವು ಮುಖ್ಯವಾಗಿ ಜಾನಪದ ಕಥೆಗಳ ವರ್ಗಕ್ಕೆ ಸೇರುತ್ತವೆ. ಆದುದರಿಂದ ಅವುಗಳಲ್ಲಿ ಆಧುನಿಕ ಸಣ್ಣ ಕಥೆಗಳ ಲಕ್ಷಣ ಕಂಡುಬರುವುದಿಲ್ಲ. ರಾಜಕಿಶೋರ ರೇ ಎಂಬಾತ ಈ ಕಾಲದ ಪ್ರಖ್ಯಾತ ಕಥೆಗಾರ. ಈತ ತನ್ನ ಸ್ವಂತ ಅನುಭವಗಳನ್ನೇ ಕಥಾರೂಪದಲ್ಲಿ ಹಿಡಿದಿಟ್ಟಿದ್ದಾನೆ. ಮನರ ಮೃಣಾಳ ಮತ್ತು ನೀಳ ಲಹರಿ ಎಂಬವು ಆತನ ಕಥಾಸಂಗ್ರಹಗಳು. ಸುರೇಂದ್ರ ಮೊಹಾಂತಿ ಮತ್ತೊಬ್ಬ ಪ್ರಸಿದ್ಧ ಕಥೆಗಾರ. ಕೃಷ್ಣ ಚೂಡಾ, ಸವುಜ ಪತ್ರ ಓ ಧುಸರ ಗೋಲಾಪ ಎಂಬವು ಆತನ ಬೇರೆ ಬೇರೆ ಸಂಗ್ರಹಗಳು. ಬಸಂತ ಕುಮಾರಿ ಪಟ್ಟನಾಯಕಳು ವಿವಿಧ ಪತ್ರಿಕೆಗಳಿಗೆ ಕಥೆಗಳನ್ನು ಬರೆಯುತ್ತಾಳೆ. ಪಾಲಟಾ ಧೆಯು ಮತ್ತು ಸಭ್ಯತಾರ ಸಾಜ ಎಂಬವು ಆಕೆಯ ಎರಡು ಕಥಾಸಂಗ್ರಹಗಳು. ರಾಜಕಿಶೋರ್ ಪಟ್ಟನಾಯಕ, ನಿತ್ಯಾನಂದ ಮಹಾಪಾತ್ರ, ದೇವೇಂದ್ರ ಮೊಹಾಂತಿ, ಮನೋಜ್ ದಾಸ್, ಬಾಮಾ ಚರಣ್ ಮಿತ್ರ, ಸದಾನಂದ ದಾಸ್ ಮತ್ತು ಇತರ ಅನೇಕ ತರುಣ ಬರೆಹಗಾರರು ಅನೇಕ ಪತ್ರಿಕೆಗಳಲ್ಲಿ ಕಥೆಗಳನ್ನು ಪ್ರಕಟಿಸುತ್ತಿದ್ದಾರಲ್ಲದೆ ಅನೇಕರು ತಮ್ಮ ಕಥಾಸಂಗ್ರಹಗಳನ್ನು ಗ್ರಂಥರೂಪವಾಗಿ ಬೆಳಕಿಗೆ ತಂದಿದ್ದಾರೆ.

ಆಧುನಿಕ ಒರಿಯ ಸಾಹಿತ್ಯದಲ್ಲಿ ಸಣ್ಣ ಕಥೆಗಳು ತಕ್ಕಷ್ಟು ಉದಿಸಿವೆ. ಅವುಗಳಲ್ಲಿ ಹಲವಾರು ಮೇಲುಮಟ್ಟವನ್ನು ಮುಟ್ಟಿವೆ.

ನಾಟಕ : ಕಾಂಚಿ ಕಾವೇರಿ ಎಂಬ ಮೊಟ್ಟಮೊದಲಿನ ಒರಿಯ ನಾಟಕವನ್ನು ರಾಮ ಶಂಕರ ರಾಯ್ 1880ರಲ್ಲಿ ಬರೆದ. ಆತ ಬನಮಾಳಾ, ರಾಮ ಬನಬಾಸ್, ಜುಗಧರ್ಮ, ಲೀಳಾವತಿ ಮುಂತಾದ ಇತರ ಅನೇಕ ನಾಟಕಗಳನ್ನೂ ಬರೆದಿದ್ದಾನೆ. ಸಂಸ್ಕೃತ ಮತ್ತು ಇಂಗ್ಲಿಷ್ ಪ್ರಭಾವವನ್ನು ಸ್ಪಷ್ಟವಾಗಿ ಆತನಲ್ಲಿ ಕಾಣಬಹುದು. ಸೀತಾ ಬಿಬಾಹ ಎಂಬ ಮತ್ತೊಂದು ನಾಟಕ ಕಾಮಪಾಳ ಮಿಶ್ರನ ಕೃತಿ. ಕಟಕ ಬಿಜೊಯ ಎಂಬುದು ಭಿಕಾರಿಚರಣ ಪಟ್ಟನಾಯಕ ರಚಿಸಿದ ಐತಿಹಾಸಿಕ ನಾಟಕ. ಮೂವತ್ತಕ್ಕಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ನಾಟಕಗಳನ್ನು ಬರೆದಿರುವ ಗಣ್ಯನಾಟಕಕಾರ ಅಶ್ವಿನಿಕುಮಾರ್ ಘೋಷ್. ಆತನ ಕಳಾಪಾಹಡ, ಸಿರಿಯೋಜಿ, ಗೌಡ ಬಿಜೇತಾ ಎಂಬವು ಖ್ಯಾತವಾಗಿವೆ. ಗೋದಾವರೀಶ್ ಮಿಶ್ರ ಐತಿಹಾಸಿಕ ಪ್ರಸಂಗಗಳನ್ನು ತೆಗೆದುಕೊಂಡು ಪುರುಷೋತ್ತಮದೇವ ಮತ್ತು ಕಪಿಳೇಂದ್ರದೇವ ಎಂಬೆರಡು ನಾಟಕಗಳನ್ನು ಬರೆದಿದ್ದಾನೆ. ಆಧುನಿಕ ಕಾಲದ ಅತ್ಯುತ್ತಮ ನಾಟಕಕಾರನೆಂದು ಪರಿಗಣಿತನಾದವನೆಂದರೆ ಕಾಳಿಚರಣ್ ಪಟ್ಟನಾಯಕ. ಒರಿಸ್ಸದಲ್ಲಿ ಸ್ಥಿರವಾದ ರಂಗಮಂಟಪವನ್ನು ನಿರ್ಮಿಸಿದವ ಈತನೇ. ಸುಮಾರು ಹದಿನೈದು ನಾಟಕಗಳನ್ನು ಈತ ಬರೆದಿದ್ದಾನೆ. ಅವುಗಳಲ್ಲಿ ಅಭಿಜಾನ, ರಕ್ತಮಾಟಿ, ಭಾಟ, ಗರ್ಲ್ಸ್ ಸ್ಕೂಲ್— ಎಂಬವು ಪ್ರಖ್ಯಾತವಾಗಿವೆ. ಭಂಜಕಿಶೋರ್ ಪಟ್ಟನಾಯಕ ಮೂವತ್ತು ನಾಟಕಗಳನ್ನು ಬರೆದಿದ್ದಾನೆ. ಅವುಗಳಲ್ಲಿ ಬೆನಮಿ, ಮಾಣಿಕ ಜೋಡಿ ಮತ್ತು ಜೀವನ ಜುಅ ಎಂಬುವು ಜನಪ್ರಿಯವಾಗಿವೆ. ಭರಸಾ, ಪರಕಲಮ ಮತ್ತು ಅರ್ಧಾಂಗಿನಿ ಎಂಬವನ್ನು ರಚಿಸಿ ಒಳ್ಳೆಯ ನಾಟಕಕಾರನೆಂದೆನಿಸಿಕೊಂಡವ ಗೋಪಾಲ್ ಛೋಟ್ರಾಯ್. ಆಧುನಿಕ ನಾಟಕಕಾರರ ಪೈಕಿ ಮನೋರಂಜನ್ ದಾಸ್, ರಾಮಚಂದ್ರ ಮಿಶ್ರ, ಅದ್ವೈತ ಚರಣ ಮೊಹಾಂತಿ ಎಂಬವರು ಗಣನೀಯರು. ಪ್ರಾಣಬಂಧು ಕರ್ ಮತ್ತು ಜಾನಕೀ ಬಲ್ಲಭ ಮೊಹಾಂತಿ ಎಂಬುವರು ಫಕೀರ್ ಮೋಹನ್, ಕನ್ಹುಚರಣ ಮೊಹಾಂತಿ ಮತ್ತು ಗೋಪೀನಾಥ ಮೊಹಾಂತಿಗಳ ಕೆಲವು ಕಾದಂಬರಿಗಳನ್ನು ನಾಟಕಗಳಾಗಿ ಪರಿವರ್ತಿಸಿದ್ದಾರೆ. ಪ್ರಾಣಬಂಧುಕರ್ ತನ್ನ ಏಕಾಂಕ ನಾಟಕಗಳಿಗಾಗಿ ಕೀರ್ತಿವೆತ್ತಿದ್ದಾನೆ.

ವಿಮರ್ಶೆ : ಆಧುನಿಕ ಒರಿಯ ಸಾಹಿತ್ಯದಲ್ಲಿ ವಿಮರ್ಶೆ ಅತ್ಯುನ್ನತ ಸ್ಥಾನವನ್ನು ಪಡೆದಿದೆ. ಆರ್ತಬಲ್ಲಭ ಮೊಹಾಂತಿ ಮತ್ತು ಗಿರಿಜಾಶಂಕರ ರೇ ಎಂಬುವರು ಅನೇಕ ಮುಖ್ಯ ಸಮಸ್ಯೆಗಳನ್ನು ಕುರಿತು ಹಲವಾರು ಸಾಹಿತ್ಯ ವಿಮರ್ಶೆಗಳನ್ನು ಬರೆದಿದ್ದಾರೆ. ಪಂಡಿತ ನೀಲಕಂಠ ದಾಸ್ ಎಂಬ ವಿದ್ವಾಂಸ ಧಾರ್ಮಿಕ ಮತ್ತು ದಾರ್ಶನಿಕ ಜಿಜ್ಞಾಸೆಗಳಲ್ಲಿ ಪ್ರವೀಣನಾಗಿದ್ದಾನೆ. ನಟಬರ್ ಸಾಮಂತ ರಾಯ, ಗೌರೀಕುಮಾರ ಬ್ರಹ್ಮಾ, ಪ್ರಹ್ಲಾದ್ ಪ್ರಧಾನ್, ಬನ್ಸೀಧರ್ ಮೊಹಾಂತಿ, ಪಠಾನಿ ಪಟ್ಟನಾಯಕ್, ದೇವೇಂದ್ರ ಮೊಹಾಂತಿ ಮುಂತಾದವರು ಆಧುನಿಕ ಒರಿಯ ಸಾಹಿತ್ಯದ ವಿಮರ್ಶಕರೆಂದು ಪರಿಗಣಿತರಾಗಿದ್ದಾರೆ. ಸಾಮಂತ ರಾಯನ ವ್ಯಾಸ ಕವಿ ಫಕೀರ್ ಮೋಹನ್ ಎಂಬುದೂ ಜುಗ ಪ್ರಬರ್ತಕ ಸ್ರಸ್ತಾ ರಾಧಾನಾಥ್ ಎಂಬುದೂ ಆಧುನಿಕ ಒರಿಯ ಸಾಹಿತ್ಯದ ಮೇಲಣ ಎರಡು ಗಣ್ಯ ಗ್ರಂಥಗಳು. ಬ್ರಹ್ಮಾನ ಕೃತಿಗಳಾದ ಸಮಸ್ಯಾ ಓ ಸಮಾಧಾನ ಮತ್ತು ಚಿಲಿಕಾ ಓ ರಾಧಾನಾಥ್ ಎಂಬವು ಸಹ ಗಣನೀಯವಾಗಿವೆ. ಬನ್ಸೀಧರ್ ಮೊಹಾಂತಿ ಸಾರಳಾ ದಾಸನ ಸಾಹಿತ್ಯದಲ್ಲಿ ಪಂಡಿತನಾಗಿದ್ದಾನೆ. ಅನೇಕ ತರುಣ ವಿಮರ್ಶಕರ ಲೇಖನಗಳು ಪತ್ರಿಕೆಗಳಲ್ಲೂ ಕಾಲಿಕಗಳಲ್ಲೂ ಪ್ರಕಟವಾಗುತ್ತಿವೆ.

ಸಂಕೀರ್ಣ ವಿಷಯಗಳು : ಕುಲಮಣಿ ದಾಷ್ ಬರೆದ ಹಿಮಾಲಯ ಪಥ, ಜಿ. ಬಿ. ಧಾಲ್ ಬರೆದ ಆಮೆರಿಕ ಅನುಭೂತಿ, ಶ್ರೀಹರ್ಷ ಮಿಶ್ರನ ಪಶ್ಚಿಮ ಪಥಿಕ ಎಂಬವು ಗಣ್ಯವಾದ ಪ್ರವಾಸವರ್ಣನೆಗಳು. ಗೋಕುಲಾನಂದ ಮಹಾಪಾತ್ರ ವಿರಚಿತ ಸುನರ ಒಡಿಸಾ ಎಂಬುದು ಒಂದು ವೈಜ್ಞಾನಿಕ ಕಲ್ಪನೆಯ ಕಥೆ. ಫಕೀರ ಮೋಹನ್ ಸೇನಾಪತಿಯ ಫಕೀರ ಮೋಹನ್ ಆತ್ಮಚರಿತ ಮತ್ತು ಗೋದಾವರೀಶ್ ಮಿಶ್ರನ ಅರ್ಧ ಶತಾಬ್ದಿರ ಒಡಿಸಾ ಓ ತಹಿನ್ರೆ ಮೊ ಸ್ಥಾನ ಎಂಬವು ಗಮನಾರ್ಹವಾದ ಆತ್ಮಚರಿತೆಗಳು.

ಶ್ರೀರಾಮಚಂದ್ರ ದಾಷ್, ಸದಾಶಿವ ಮಿಶ್ರ ಮತ್ತು ಬೈದ್ಯನಾಥ ಮಿಶ್ರರು ಅರ್ಥಶಾಸ್ತ್ರದ ಮೇಲೂ ಬಸಂತಕುಮಾರ್ ಬೆಹೂರಾ, ಕೇಶವಚಂದ್ರ ಸಾಹು ಮತ್ತು ಇತರರು ವಿಜ್ಞಾನವಿಷಯಗಳ ಮೇಲೂ ಅನೇಕ ಪತ್ರಿಕೆಗಳಲ್ಲಿ ಬರೆದಿದ್ದಾರೆ.

ಬಿನೋದೆ ಕನೂಂಗೊ ಎಂಬಾತನ ಜ್ಞಾನಮಂಡಲ ಎಂಬ ಜನಪ್ರಿಯ ಒರಿಯ ವಿಶ್ವಕೋಶದ ಸಂಪುಟಗಳು ಪ್ರಕಟನೆಗೆ ಸಿದ್ಧವಾಗುತ್ತಲಿವೆ. ಇದರ ಮೊದಲ ಸಂಪುಟ 1960ರಲ್ಲಿ ಪ್ರಕಟಗೊಂಡಿತು. ಉತ್ಕಲ ವಿಶ್ವವಿದ್ಯಾನಿಲಯ ಇಷ್ಟರಲ್ಲಿಯೇ ತನ್ನ ಒರಿಯ ಜ್ಞಾನಕೋಶವನ್ನು ಪ್ರಕಟಿಸುವುದರಲ್ಲಿದೆ. ಒರಿಯ ಪತ್ರಿಕೆಗಳೂ ಕಾಲಿಕಗಳೂ ಒರಿಯ ಸಾಹಿತ್ಯದ ಅಭಿವೃದ್ಧಿಗೆ ನೆರವಾಗುತ್ತಿರುವುದು ಒಂದು

ಗಮನಾರ್ಹವಾದ ಸಂಗತಿ. ಇವುಗಳಿಂದ ಅನೇಕ ಬರೆಹಗಾರರು ಬೆಳಕಿಗೆ ಬಂದರಲ್ಲದೆ ಇವುಗಳಿಂದ ಅನೇಕ ಓದುಗರು ಜ್ಞಾನದ ವಿವಿಧ ಶಾಖೆಗಳ ತಿಳಿವಳಿಕೆಯನ್ನು ಪಡೆದುಕೊಳ್ಳುತ್ತಿದ್ದಾರೆ. (ಡಿ.ಎನ್.ಎಂ.)

**ಒರಿಯೊಸಿರಿಯಸ್ :** ಕಳ್ಳಿಗಳ ಕುಟುಂಬ. ಶಾಸ್ತ್ರನಾಮ ಕ್ಯಾಕ್ಟೇಸಿ. ಐದು ಪ್ರಭೇದಗಳಿವೆ. ಸಸ್ಯಗಳು ಬಲು ಆಕರ್ಷಕವಾಗಿರುವುದರಿಂದ ಇವನ್ನು ಕುಂಡಗಳಲ್ಲಿ ಬೆಳೆಸಿ ಮನೆಗಳಲ್ಲಿ ಅಲಂಕಾರಕ್ಕೋಸ್ಕರ ಇಡುವುದುಂಟು. ಕಾಂಡದಲ್ಲಿ ಏಣುಗಳು ಮತ್ತು ಮುಳ್ಳುಗಳಿವೆ. ಏಣುಗಳ ಮೇಲಿರುವ ಗಂಟುಗಳಿಂದ ಉದ್ದವಾದ ಬಿಳಿಯ ಬಣ್ಣದ ಕೂದಲುಗಳು ಹೊರಬರುತ್ತವೆ. ಹೂಗಳ ಆಕಾರ ಕೊಳವೆಯಂತೆ. ಇವು ಪ್ರತಿದಿನವೂ ಅರಳುವುವು. ಅಂಡಾಶಯದ ಸುತ್ತಲೂ ಬಿಲ್ಲೆಗಳಂತಿರುವ ಅಸಂಖ್ಯಾತ ಉಪದಳಗಳಿವೆ. ಉಣ್ಣೆಯಂತೆ ಹೆಣೆದುಕೊಂಡಿರುವ ಕೂದಲುಗಳು ಕಂಕುಳಲ್ಲಿ ಇರುವುದರಿಂದ ಹೂ ನೋಡಲು ಆಕರ್ಷಣೀಯವಾಗಿದೆ. ಅಸಂಖ್ಯಾತ ಕೇಸರಗಳು ಹೂದಳಗಳಷ್ಟು ಅಥವಾ ಅವುಗಳಿಗಿಂತ ಉದ್ದವಾಗಿರುತ್ತವೆ.

ಈ ಸಸ್ಯದ ಎರಡು ಮುಖ್ಯ ಪ್ರಭೇದಗಳು ಒ. ಸೆಲ್ಸಿಯಾನಸ್ ಮತ್ತು ಒ. ಫಾಸುಲೇಟಸ್. ಇವು ಬೊಲಿವಿಯ, ಪೆರು ಮತ್ತು ಚಿಲಿ ದೇಶಗಳ ಮೂಲವಾಸಿಗಳು. (ಬಿ.ಎ.ಸಿ.)

**ಒರಿಸ್ಸ :** ಭಾರತದ ಒಂದು ರಾಜ್ಯ. 17° 49′ ಉತ್ತರ ಅಕ್ಷಾಂಶದಿಂದ 22° 34′ ಉತ್ತರ ಅಕ್ಷಾಂಶದವರೆಗೂ 81° 27′ ಪೂರ್ವ ರೇಖಾಂಶದಿಂದ 87° 29′ ಪೂರ್ವ ರೇಖಾಂಶದ ವರೆಗೂ ಹಬ್ಬಿದೆ. ಭಾರತದ ಪೂರ್ವತೀರದಲ್ಲಿ ಹಬ್ಬಿರುವ ಈ ರಾಜ್ಯದ ಈಶಾನ್ಯದಲ್ಲಿ ಪಶ್ಚಿಮ ಬಂಗಾಳ, ಉತ್ತರದಲ್ಲಿ ಬಿಹಾರ, ಪಶ್ಚಿಮದಲ್ಲಿ ಮಧ್ಯಪ್ರದೇಶ, ದಕ್ಷಿಣದಲ್ಲಿ ಆಂಧ್ರಪ್ರದೇಶ ಮತ್ತು ಪೂರ್ವದಲ್ಲಿ ಬಂಗಾಳ ಕೊಲ್ಲಿ ಇವೆ. ವಿಸ್ತೀರ್ಣ 1,55,860 ಚ.ಕಿ.ಮೀ. ಜನಸಂಖ್ಯೆ 1,75,48,846 (1961). ರಾಜಧಾನಿ ಭುವನೇಶ್ವರ.




ಭೂರಚನೆಯ ದೃಷ್ಟಿಯಿಂದ ಒರಿಸ್ಸವನ್ನು 1 ಕರಾವಳಿ ಮೈದಾನ, 2 ಮಧ್ಯದ ಬೆಟ್ಟಪ್ರದೇಶ, 3 ಏರುನೆಲ, 4 ನದೀಕಣಿವೆ, 5 ತಗ್ಗಿನ ಪ್ರಸ್ಥಭೂಮಿ—ಎಂದು ವಿಂಗಡಿಸಬಹುದು.

ಮಹಾನದಿ, ವೈತರಣಿ, ಬ್ರಾಹ್ಮಣಿ, ಸ್ವರ್ಣರೇಖಾ, ಋಷಿಕುಲ್ಯ ಮತ್ತು ಬೂರಾಬಲಾಂಗ್—ಎಂಬ ಆರು ಮುಖ್ಯ ನದಿಗಳು ತಂದು ಹಾಕಿದ ಮೆಕ್ಕಲು ಮಣ್ಣಿನಿಂದ ಈ ರಾಜ್ಯದ ಕರಾವಳಿಯ ಮೈದಾನಗಳು ರಚಿತವಾಗಿವೆ. ಇವನ್ನು ಆರು ನದೀಮುಖಜಭೂಮಿಗಳ ಪ್ರದೇಶ ಎನ್ನಬಹುದು. ಆದರೂ ಅನೇಕ ನದಿಗಳು ನಿಜಾರ್ಥದಲ್ಲಿ ನದೀಮುಖಜಭೂಮಿಯ ವಿಶಿಷ್ಟತೆಯನ್ನು ಬೆಳೆಸುವುದರಲ್ಲಿ ನಿಷ್ಪ್ರಯೋಜಕವಾಗಿವೆ. ಸಮುದ್ರದಿಂದ ನುಗ್ಗಿ ಬರುವ ಪ್ರವಾಹಗಳು ಇದಕ್ಕೆ ಕಾರಣ.

ಒರಿಸ್ಸದ ಮುಕ್ಕಾಲು ಭಾಗ ಪರ್ವತ ಪ್ರದೇಶ. ಇದು ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರಾಗಿ ನಡೆದು ಅನಂತರ ಇದ್ದಕ್ಕಿದ್ದಂತೆ ಉತ್ಕರ್ಷಗೊಂಡು ಪೂರ್ವಘಟ್ಟಗಳಲ್ಲಿ ಲೀನವಾಗುತ್ತದೆ. ಜಲಪ್ರವಾಹ ವೈವಿಧ್ಯ ಮೇಲ್ಮೈಯ ನಿರ್ದಿಷ್ಟ ವಿನ್ಯಾಸಕ್ಕೆ ಅನುಗುಣವಾಗಿ ಅದರ ಜಲೋತ್ಸಾರಣ (ಡ್ರೇನೇಜ್) ಏರ್ಪಟ್ಟಿದೆ. 300, 600 ಮತ್ತು 900 ಮೀಟರುಗಳಲ್ಲಿ ಒರಿಸ್ಸದ ಪೂರ್ವಘಟ್ಟಗಳು ಮೂರು ಉತ್ಕರ್ಷತೆಗಳನ್ನು ಕಂಡಿವೆಯೆಂದು ನಂಬಲಾಗಿದೆ. ಇವು ಜಲೋತ್ಸಾರಣದ ಪ್ರಾಚೀನ ರೇಖೆಗಳ ಕುರುಹುಗಳನ್ನೆಲ್ಲ ಅಳಿಸಿಬಿಟ್ಟಿವೆಯೆನ್ನಬಹುದಾದರೂ ಈ ಬಗ್ಗೆ ವೈಜ್ಞಾನಿಕವಾಗಿ ಇನ್ನೂ ನಿರ್ಣಯವಾಗಿಲ್ಲ. ಪರ್ವತ ಪ್ರದೇಶವನ್ನು ಹೀಗೆ ವಿಭಾಗಿಸಬಹುದು : (1) ಸಿಮುಲಿಯ ಮತ್ತು ಮೇಘಾಸನಿ ಪರ್ವತಗಳು, (2) ಮಂಕರ್ನದ ಮಲಯಗಿರಿ ಮತ್ತು ಗಂಧಮಾರ್ದನ ಪರ್ವತಗಳು, (3) ಬ್ರಾಹ್ಮಣಿ ಮತ್ತು ಮಹಾನದಿ ಜಲಾನಯನ ಭೂಮಿ, (4) ಮಹಾನದಿ, ಋಷಿಕುಲ್ಯ ಮತ್ತು ವಂಶಧಾರಾ ನದಿಗಳ ಪ್ರದೇಶ, (5) ಪೊಟ್ಟಂಗಿ ಮತ್ತು ಚಂದ್ರಗಿರಿ ಪರ್ವತ ಸಾಲುಗಳು.

ಎತ್ತರದ ಪ್ರದೇಶಗಳು ಪ್ರಸ್ಥಭೂಮಿಗಿಂತ ಕಡಿಮೆ ಎತ್ತರದವು. ಅವು 148 ರಿಂದ 296 ಮೀಟರುಗಳ ವರೆಗೆ ಎತ್ತರವಾಗಿವೆ. ನದೀಕೊಳ್ಳಗಳಿಗೆ ಇವು ಆಶ್ರಯ ನೀಡಿವೆ. ಇವೆಲ್ಲವೂ ಪೂರ್ವಘಟ್ಟಗಳ ಪಶ್ಚಿಮದಲ್ಲಿ ವಿಸ್ತಾರವಾಗಿ ಬೆಳೆದಿವೆ. ಬ್ರಾಹ್ಮಣಿ, ಮಹಾನದಿ ಮತ್ತು ವಂಶಧಾರಾ ನದೀಕಣಿವೆಗಳು ಮುಖ್ಯವಾದವು. ವೈತರಣಿಯ ತಲೆಯೆಡೆಯ ಜಲಾನಯನ ಪ್ರದೇಶಗಳಾದ ಪಾಂಪೋಷ್–ಕಿಯೋಂಝರ್‌ಘರ್–ಪಲ್ಲಹರ ಪ್ರಸ್ಥಭೂಮಿಗಳೂ ಸಾಬರಿ ನದೀಪಾತ್ರದ ತಲೆಯೆಡೆಯ ಜಲಾನಯನ ಭೂಮಿಯಾದ ನವರಂಗಪುರ–ಜಯಪುರ ಪ್ರಸ್ಥಭೂಮಿಯೂ 296 ರಿಂದ 592 ಮೀಟರುಗಳ ವರೆಗೆ ಪ್ರಸ್ಥಭೂಮಿಗಳ ಪೈಕಿ ಮುಖ್ಯವಾದವು.

**ಸ್ವಾಭಾವಿಕ ಪ್ರದೇಶಗಳು :** ಒರಿಸ್ಸವನ್ನು 1 ತೀರದ ಮೈದಾನಗಳು, 2 ನದೀಕಣಿವೆ ಮತ್ತು ಪ್ರವಾಹಗಳ ಬಯಲು, 3 ಇಳಿಜಾರಾದ ಎತ್ತರದ ಪ್ರದೇಶಗಳು, 4 ಪ್ರಸ್ಥಭೂಮಿಗಳು ಮತ್ತು 5 ಪರ್ವತಗಳು ಎಂದು ವಿಭಾಗಿಸಬಹುದು. ತೀರದ ಮೈದಾನಗಳನ್ನು ಉತ್ತರ, ಮಧ್ಯ ಮತ್ತು ದಕ್ಷಿಣ ತೀರಗಳ ಬಯಲುಗಳೆಂದು ವಿಂಗಡಿಸಬಹುದಾಗಿದೆ. ನದೀಕಣಿವೆಗಳೂ ಪ್ರವಾಹದ ಬಯಲುಗಳೂ ಮುಖ್ಯನದಿಗಳ 76 ರಿಂದ 152 ಮೀಟರುಗಳ ವರೆಗಿನ ಮಟ್ಟರೇಖೆಗಳ ಎತ್ತರದಲ್ಲಿ ಕಂಡುಬರುತ್ತವೆ. 152 ರಿಂದ 304 ಮೀಟರುಗಳ ಮಧ್ಯದಲ್ಲಿ ಇಳಿಜಾರಾದ ಎತ್ತರದ ಪ್ರದೇಶಗಳು ಕಂಡುಬರುತ್ತವೆ. ರಾಯ್‌ರಂಗ್‌ಪುರ್ ಮತ್ತು ವೈತರಣಿ, ಬ್ರಾಹ್ಮಣಿ ಮತ್ತು ಮಹಾನದಿ ಕೊಳ್ಳಗಳು ಇಳಿಜಾರಾದ ಎತ್ತರದ ಪ್ರದೇಶಗಳು. ಪ್ರಸ್ಥಭೂಮಿಗಳಲ್ಲಿ ಕಿಯೋಂಝರ್‌ಘರ್–ಪಂಪೋಷ್ ಪ್ರಸ್ಥಭೂಮಿ, ನವರಂಗ್‌ಪುರ–ಜಯಪುರ ಪ್ರಸ್ಥಭೂಮಿ ಮತ್ತು ವಂಶಧಾರಾ ಮೇಲ್ದಂಡೆಯ ಪ್ರಸ್ಥಭೂಮಿಗಳು ಮುಖ್ಯವಾದವು.

ಒರಿಸ್ಸದ ಬೆಟ್ಟಗಳು ಪೂರ್ವಘಟ್ಟಗಳಿಗೆ ಸೇರಿವೆ. ಮಹಾನದಿ ಮತ್ತು ಬ್ರಾಹ್ಮಣಿ ಮುಂತಾದ ನದಿಗಳು ಈ ಬೆಟ್ಟಗಳನ್ನು ಛೇದಿಸುತ್ತವೆ. ಈಶಾನ್ಯ ದಿಕ್ಕಿನಲ್ಲಿನ

ಸಿಮುಲಿಪಲ್ ಮತ್ತು ಮೇಘಾಸನಿ ಎರಡು ಮುಖ್ಯ ಪರ್ವತಶಿಖರಗಳು. ಇವುಗಳ ಎತ್ತರ 1,165 ಮೀಟರುಗಳು. ವೈತರಣಿ-ಬ್ರಾಹ್ಮಣಿ ನದೀಪ್ರವಾಹಗಳ ತೆಕ್ಕೆನೆಲದಲ್ಲಿ ಪಲ್ಲಹರದ ಮಲಯಗಿರಿ ಅತ್ಯಂತ ಎತ್ತರ ಶಿಖರ. ಇದರ ಎತ್ತರ 1,186 ಮೀ. ಕೋರಾಪುಟ್ ಮತ್ತು ಕಾಲಾಹಂದಿ ಜಿಲ್ಲೆಗಳಲ್ಲಿನ ಪರ್ವತಗಳು ತುಂಬ ಎತ್ತರವಾದವು. ಆಂಧ್ರದ ಕರಾವಳಿಯ ಬಯಲಿನಿಂದ ಇವು ಇದ್ದಕ್ಕಿದ್ದಂತೆ ಮೇಲೆದ್ದಿವೆ. ಪೊಟ್ಟಂಗಿಯ ದೇವಮಾಲಿ ಬೆಟ್ಟಗಳಲ್ಲೂ ಎತ್ತರ ಶಿಖರಗಳಿವೆ (1667 ಮೀ.).

**ಭೂವಿಜ್ಞಾನ :** ತೀರದ ಮೈದಾನಗಳು ಮುಖ್ಯವಾಗಿ ಪ್ಲಿಸ್ಟೋಸೀನ್ ಮತ್ತು ಇತ್ತೀಚಿನ ಸಂಚಯನಗಳಿಂದಾಗಿವೆ. ಆಲಿಗೋಸೀನ್ ಮತ್ತು ಕೆಳ ಮಯೋಸೀನ್ ಕಾಲದ ಅವಶೇಷಗಳು ಪುರಿ ಜಿಲ್ಲೆಯಲ್ಲಿ ಕಂಡುಬರುತ್ತವೆ. ಮುಖ್ಯವಾಗಿ ಮೇಲ್ಭಾಗದ ಗೊಂಡ್ವಾನ ಶಿಲಾಸ್ತೋಮವನ್ನೊಳಗೊಂಡ ಜುರಾಸಿಕ್ ಶಿಲೆಗಳು ಮಹಾನದಿ ಮುಖಜಭೂಮಿಯ ಅಗ್ರದ ಉತ್ತರದಲ್ಲಿ ಕಂಡುಬರುತ್ತವೆ. ಅಂತ್ಯ ಕಾರ್ಬಾನಿಫರಸ್ (ಗೊಂಡ್ವಾನ ಶಿಲಾಸ್ತೋಮದ ಅಡಿಭಾಗಗಳು) ಸಂಚಯನಗಳು ಮಹಾನದಿ ಮತ್ತು ಬ್ರಾಹ್ಮಣಿ ನದಿಗಳ ಮಧ್ಯಂತರ ಪ್ರದೇಶಗಳಲ್ಲಿ ಕಂಡು ಬರುತ್ತವೆ. ಇವೇ ತಾಲ್‌ಚೆರ್ ಶಿಲಾಪದರಗಳು. ಇವುಗಳಲ್ಲಿ ಕಲ್ಲಿದ್ದಲಿನ ಭಾರಿಯ ಸಂಚಯನಗಳನ್ನು ಇತ್ತೀಚೆಗೆ ಕಂಡುಹಿಡಿಯಲಾಗಿದೆ. ಪಶ್ಚಿಮ ಒರಿಸ್ಸದ ಸಾಬರಿ ಮೇಲ್‌ಕಣಿವೆಯಲ್ಲಿ ಪ್ರಿ-ಕೇಂಬ್ರಿಯನ್ ಕಾಲದ ಕಡಪಶಿಲೆಗಳು ಕಂಡುಬರುತ್ತವೆ. ಧಾರ್ವಾಡೀಯ ಬಂಡೆಗಳು ಉತ್ತರ ಒರಿಸ್ಸದಲ್ಲಿ, ಮಯೂರ್‌ಭಂಜ್, ಕಿಯೋಂಝಾರ್ ಮತ್ತು ಸುಂದರಘರ್ ಜಿಲ್ಲೆಗಳಲ್ಲಿವೆ. ಇಲ್ಲಿನ ಕಬ್ಬಿಣದ ಅದುರಿನ ನಿಕ್ಷೇಪಗಳು ಜಂಷೆಡ್‌ಪುರ, ದುರ್ಗಾಪುರ ಮತ್ತು ರೂರ್ಕೆಲಗಳಲ್ಲಿನ ಉಕ್ಕಿನ ಕಾರ್ಖಾನೆಗಳಲ್ಲಿ ಅಧಿಕ ಬೇಡಿಕೆಗಳನ್ನು ಪೂರೈಸುತ್ತಿವೆ. ಇವು ರಫ್ತೂ ಆಗುತ್ತಿವೆ. ಫುಲ್‌ಬಾನಿ ಮತ್ತು ಉತ್ತರ ಗಂಜಾಂ ಜಿಲ್ಲೆಗಳಲ್ಲಿ ಖೊಂಡಲೈಟ್ ಸಿಗುತ್ತದೆ. ಕೋರಾಪುಟ್ ಜಿಲ್ಲೆಯ ಪೂರ್ವಘಟ್ಟಗಳ ಎತ್ತರದ ಪ್ರದೇಶ ಇವುಗಳಿಂದ ಉಂಟಾಗಿದೆ. ಇದೇ ಪ್ರದೇಶದ ಬಂಡೆಗಲ್ಲುಗಳ ಕೋಡುಭಾಗಗಳು ಮುಖ್ಯವಾಗಿ ಚಾರ್‌ನೊಕೈಟ್ ಶಿಲಾರೀತಿಗಳಿಂದ ಸಂಭವಿಸಿವೆ. ರಾಜ್ಯದ ಹೆಚ್ಚು ಭಾಗ ಗ್ರಾನೈಟ್ ಮತ್ತು ನೈಸ್ ಶಿಲೆಗಳಿಂದಾದದ್ದು. ಇಡೀ ಶ್ರೇಣಿಯಲ್ಲೇ ಇವು ಅತ್ಯಂತ ಪುರಾತನ ಶಿಲೆಗಳು.

**ಮಣ್ಣಿನ ಸ್ವರೂಪ :** ಒರಿಸ್ಸದಲ್ಲಿ ಸುಮಾರು ಹನ್ನೆರಡು ಬಗೆಯ ಮಣ್ಣುಗಳಿವೆ. ಸಮುದ್ರತೀರಕ್ಕೆ ಹೊಂದಿಕೊಂಡಿರುವಂಥ ಕಿರಿವಲಯದ ಮರಳು ಮಣ್ಣುಗಳಿವೆ. ಹೊಸ ಮತ್ತು ಹಳೆಯ ಮೆಕ್ಕಲುಮಣ್ಣುಗಳೆರಡೂ ಇಲ್ಲುಂಟು. ತೀರದ ಬಳಿ ನೂತನ ಮೆಕ್ಕಲು ಕಂಡುಬಂದರೆ, ಪುರಾತನ ಮೆಕ್ಕಲು ಒಳನಾಡಿನಲ್ಲಿ ಕಂಡುಬರುತ್ತದೆ. ಬ್ರಾಹ್ಮಣಿಯ ಅಗ್ರಭಾಗದ ಕಣಿವೆಯಲ್ಲೂ ಮಹಾನದಿ ಮತ್ತು ಬ್ರಾಹ್ಮಣಿಗಳ ತೆಕ್ಕೆನೆಲದಲ್ಲೂ ಭವಾನಿಪಟ್ನದ ಎತ್ತರ ಪ್ರದೇಶಗಳಲ್ಲೂ ಪ್ಲೇನೋಸಾಲ್ ಕಂಡುಬರುತ್ತದೆ. ಮಯೂರ್‌ಭಂಜ್, ಸುಂದರಘರ್ ಮತ್ತು ಕಿಯೋಂಝಾರ್ ಜಿಲ್ಲೆಗಳನ್ನೊಳಗೊಂಡ ಉತ್ತರ ಒರಿಸ್ಸದಲ್ಲಿ ಮುಖ್ಯವಾಗಿ ಕೆಂಪು ಮಣ್ಣಿದೆ. ಸಂಬಲ್‌ಪುರದ ಪೂರ್ವದಲ್ಲಿ, ಮಹಾನದಿಯ ದಂಡೆಯುದ್ದಕ್ಕೂ ಅದರ ಪ್ರವಾಹದ ದಿಕ್ಕಿನಲ್ಲಿ ಹಬ್ಬಿದ ಹಳದಿ ಮಣ್ಣಿನ ಪುಟ್ಟ ತೇಪೆಯೊಂದು ಕಾಣಬರುತ್ತದೆ. ಮುರಕಲ್ಲು ಮರಳಿನಲ್ಲಿ ಉನ್ನತ ಅವನತ ಮಟ್ಟದವೆಂದು ಎರಡು ವಿಧ. ಪುರಿ, ಕಟಕ್ ಮತ್ತು ಬಾಲಸೂರ್ ಜಿಲ್ಲೆಗಳಲ್ಲಿನ ಮೆಕ್ಕಲು ಮೈದಾನಗಳ ಪಶ್ಚಿಮದ ಅಂಚಿನಲ್ಲಿ ಕೆಳಮಟ್ಟದ ಮುರಕಲ್ಲು ಕಾಣುತ್ತದೆ, ಗಂಜಾಮಿನ ಪೂರ್ವಘಟ್ಟಗಳಲ್ಲಿ ಉನ್ನತ ಮಟ್ಟದ ಮುರಕಲ್ಲುಗಳು ಸಾಮಾನ್ಯವಾಗಿವೆ. ಕೆಂಪು ಮತ್ತು ಕಪ್ಪುಮಣ್ಣು ಪದ್ಮಪುರ್ ಮತ್ತು ಸಂಬಲ್‌ಪುರ್ ಜಿಲ್ಲೆಗಳಲ್ಲಿ ಝಾರ್‌ಸುಗುಡ ಪ್ರದೇಶದಲ್ಲಿ ಕಂಡುಬರುತ್ತದೆ. ಪೂರ್ವಘಟ್ಟಗಳ ಪಶ್ಚಿಮದ ಇಳಿಜಾರಿನಲ್ಲಿನ ಕೋರಾಪುಟ್ ಜಿಲ್ಲೆಯ ರಾಯಗಡ ಮತ್ತು ನವರಂಗಪುರ ಸಬ್‌ಡಿವಿಜನ್‌ಗಳಲ್ಲಿ ಬಾಕ್ಸೈಟ್ ಕಂಡುಬರುತ್ತದೆ. ಕಂದುಬಣ್ಣದ ಕಾಡು ಮರಳು ಫುಲ್‌ಬಾನಿ ಜಿಲ್ಲೆಯ ಬಲಿಗುಡ ಪ್ರದೇಶದಲ್ಲಿನ ವನಪ್ರದೇಶಗಳಲ್ಲಿದೆ. ಕಪ್ಪು ಮಣ್ಣು ಬೌಧ್-ಅತ್‌ಮಲ್ಲಿಕ್ ಪ್ರದೇಶದ ಮಹಾನದಿ ಕಣಿವೆಯಲ್ಲೂ ಬೋಲಾಂಗಿರ್ ಪ್ರದೇಶದಲ್ಲೂ ಖರಿಯಾರ್‌ನಲ್ಲಿ ತೆಲ್ ನದಿಯ ತಲೆಯೆಡೆಯ ಜಲಾನಯನ ಪ್ರದೇಶದಲ್ಲೂ ಉತ್ತರ ನವರಂಗಪುರದಲ್ಲೂ ಕಂಡು ಬರುತ್ತದೆ.

**ಜಲೋತ್ಸಾರಣ ವಿನ್ಯಾಸ :** ಮಹಾನದಿ, ಬ್ರಾಹ್ಮಣಿ, ವೈತರಣಿ, ಸುವರ್ಣರೇಖಾ, ಬೂರಾಬಲಾಂಗ್, ವಂಶಧಾರಾ, ನಾಗವಲ್ಲಿ, ಸಲೇರು ಮತ್ತು ಸಾಬರಿ—ಇವು ಒರಿಸ್ಸದ ಮುಖ್ಯ ನದಿಗಳು. ಎಲ್ಲ ನದಿಗಳೂ ಬಂಗಾಳ ಕೊಲ್ಲಿ ಸೇರುತ್ತವೆ. ಮಹಾನದಿಯನ್ನುಳಿದು ಎಲ್ಲ ನದಿಗಳೂ ಮಾನ್‌ಸೂನ್ ಕಾಲದಲ್ಲಿ ಮಾತ್ರ ತುಂಬಿ ಹರಿಯುತ್ತವೆ. ಉಳಿದ ಕಾಲದಲ್ಲಿ ಬತ್ತಿಹೋಗುತ್ತವೆ. ಆಗ ನಾವೆಗಳ ಸಂಚಾರ ಅಸಾಧ್ಯ. ಮಾನ್‌ಸೂನ್ ಕಾಲದಲ್ಲಿ ನದಿಗಳಲ್ಲಿನ ನೀರು ಹೆಚ್ಚು ವೇಗವಾಗಿ ಹರಿಯುವುದರಿಂದ ಕಚ್ಚಾ ದೋಣಿಗಳು ಅವುಗಳಲ್ಲಿ ಹೋಗಲಾಗುವುದಿಲ್ಲ. ಆದ್ದರಿಂದ ಸಾರಿಗೆಯ ದೃಷ್ಟಿಯಿಂದ ಈ ನದಿಗಳು ಅಷ್ಟು ಉಪಯುಕ್ತವಲ್ಲ. ಮಹಾನದಿಯಲ್ಲಿ ಮಾತ್ರ ಸಂಬಲ್‌ಪುರದ ವರೆಗೆ ನಾವೆಯ ಸಂಚಾರ ಸಾಧ್ಯ.

**ಭೂಬಳಕೆ :** ಒರಿಸ್ಸ ಪ್ರಧಾನವಾಗಿ ಏಕಬೆಳೆಯ ಪ್ರದೇಶ. ಬತ್ತ ಮುಖ್ಯ ಆಹಾರ ಬೆಳೆ. ಬತ್ತದ ಬಯಲುಗಳು ಮುಖ್ಯವಾಗಿ ನದೀಕಣಿವೆಗಳು ಮತ್ತು ತೀರದ ಮೈದಾನಗಳಲ್ಲಿ—ಅಲ್ಲಿ ಅನುಕೂಲ ಪರಿಸ್ಥಿತಿಗಳು ಇರುವುದರಿಂದ—ಹರಡಿವೆ. 1961-62ರಲ್ಲಿ ಆಹಾರ ಧಾನ್ಯ ಬೆಳೆಯುತ್ತಿದ್ದ 1.048 ಕೋಟಿ ಎಕರೆಗಳ ಪೈಕಿ ಸುಮಾರು 1.007 ಕೋಟಿ ಎಕರೆಗಳಲ್ಲಿ ಬತ್ತದ ಬೆಳೆ ಇತ್ತು. ಬತ್ತಕ್ಕೆ ಎರಡನೆಯದಾಗಿರುವ ಮುಖ್ಯ ಆಹಾರ ಬೆಳೆ ರಾಗಿ (1.8 ಲಕ್ಷ ಎಕರೆ). ದ್ವಿದಳ ಧಾನ್ಯಗಳಲ್ಲಿ ತೊಗರಿ, ಕಡಲೆ ಮುಖ್ಯ. ಎಳ್ಳು ಬೆಳೆಯುವ ನೆಲದ ವಿಸ್ತಾರ 2.3 ಲಕ್ಷ ಎಕರೆ. ಇವನ್ನು ನೀರಾವರಿ ಪ್ರದೇಶಗಳಲ್ಲೂ ನದೀಕಣಿವೆಗಳಲ್ಲೂ ಬೆಳೆಸುತ್ತಾರೆ. ನಾರಿನ ಬೆಳೆಗಳಲ್ಲಿ ಸಣಬು ಸುಮಾರು 1.1 ಲಕ್ಷ ಎಕರೆಗಳನ್ನು ಆವರಿಸಿಕೊಂಡಿದೆ. ಇದು ಮುಖ್ಯವಾಗಿ ಮಹಾನದಿ ಮುಖಜಭೂಮಿ ಮತ್ತು ಬಾಲಸೂರ್ ತೀರದ ಮೈದಾನಗಳಿಗೆ ಸೀಮಿತವಾಗಿದೆ. ಮುಖಜಭೂಮಿಯ ತರಿ ಪ್ರದೇಶದಲ್ಲೂ ಹಿರಾಕುಡ್



ಮಹಾನದಿಗೆ ಅಡ್ಡಲಾಗಿರುವ ಹಿರಾಕುಡ್ ಕಟ್ಟೆ

ಜಲವಸತಿ ಪ್ರದೇಶದಲ್ಲೂ (6.6 ಲಕ್ಷ ಎಕರೆ) ಕಬ್ಬನ್ನು ಬೆಳೆಸುತ್ತಾರೆ. ಪ್ರತಿ ವರ್ಷವೂ ಒರಿಸ್ಸ ಸುಮಾರು 37 ಲಕ್ಷ ಮೆಟ್ರಿಕ್ ಟನ್ ಅಕ್ಕಿ ಬೆಳೆಯುತ್ತದೆ. ಈ ವಿಚಾರದಲ್ಲಿ ಇದು ಸ್ವಯಂಪೂರ್ಣ ರಾಜ್ಯ. ಒಮ್ಮೊಮ್ಮೆ ಹೆಚ್ಚುವರಿ ರಾಜ್ಯವೂ ಹೌದು. ಆದರೆ ಬತ್ತದ ಬೆಳೆ ಪ್ರವಾಹವನ್ನೇ ಅವಲಂಬಿಸಿರುವುದರಿಂದ ಅನಾವೃಷ್ಟಿಯ ಕಾಲದಲ್ಲಿ ಅಥವಾ ಅತಿ ಪ್ರವಾಹದಿಂದ ಅಲ್ಲಿ ಅಕ್ಕಿಯ ಕೊರತೆ ಏರ್ಪಡುವುದೂ ಉಂಟು.

ಸಂಸ್ಥಾನದ ಅರಣ್ಯ ಸಂಪನ್ಮೂಲಗಳು ಅಗತ್ಯಕ್ಕಿಂತ ಹೆಚ್ಚಾಗಿವೆ. ಆದರೆ ಅವುಗಳ ನ್ಯೂನ ಹಂಚಿಕೆ ಒಂದು ದೊಡ್ಡ ಸಮಸ್ಯೆ. ಅಸಮರ್ಪಕ ರಸ್ತೆ ವ್ಯವಸ್ಥೆ, ವಿಪರೀತ ಏರುತಗ್ಗುಗಳಿಗೆ ಒಳಗಾಗುವ ಪ್ರವಾಹ, ಸರದಿಯ ಬೆಳೆಯ ಕೃಷಿಪದ್ಧತಿ ಅನುಸರಿಸುವ ಗಿರಿಜನ ಸಮೂಹ—ಈ ನಾನಾ ಕಾರಣಗಳಿಂದಾಗಿ ಅರಣ್ಯಪದಾರ್ಥಗಳ ಸಮರ್ಪಕ ಬಳಕೆ ಸಾಧ್ಯವಾಗಿಲ್ಲ. 1960-61ರಲ್ಲಿದ್ದ 66,800 ಚ. ಕಿಮೀ.

ಕಾಡುಗಳಲ್ಲಿ 22,400 ಚ. ಕಿ.ಮೀ. ಕಾದಿರಿಸಿದ ಕಾಡು ; 16,800 ಚ. ಕಿಮೀ. ರಕ್ಷಿತ ಅರಣ್ಯ. ಒರಿಸ್ಸದ ಕಾಡುಗಳನ್ನು ಉತ್ತರೋಷ್ಣವಲಯದ ಅರ್ಧ ನಿತ್ಯಹಸುರು ಕಾಡು ಮತ್ತು ಉತ್ತರೋಷ್ಣ ವಲಯದ ತೇವಪೂರಿತ ವಾಯು ಗುಣದ ಎಲೆ ಉದುರುವ ಮರಗಳ ಕಾಡು (ಸಾಲ, ಬಿದಿರು ಮುಂತಾದವು) ಎಂದು ವಿಂಗಡಿಸಬಹುದು. ಮಿಶ್ರಿತ ಅರಣ್ಯಗಳೂ ಅಲ್ಲುಂಟು. ಉತ್ತರೋಷ್ಣ ವಲಯದ ಒಣ ವಾಯುಗುಣದ ಎಲೆ ಉದುರುವ ಕಾಡೂ ಉಷ್ಣವಲಯದ ಹುಲ್ಲುಗಾವಲೂ ಭರತದ ಕಾಡುಗಳೂ ಇವೆ. ಉತ್ತರ ಒರಿಸ್ಸದಲ್ಲಿ ಉತ್ತರ ಉಷ್ಣ ವಲಯದ ಅರ್ಧ ನಿತ್ಯಹಸುರು ಮತ್ತು ಸಾಲಮರಗಳ ಕಾಡುಗಳೂ ಮಹಾನದಿ ಮತ್ತು ಬ್ರಾಹ್ಮಣಿ ನದಿಗಳ ನಡುನೆಲ ಮತ್ತು ಋಷಿಕುಲ್ಯದ ಮೇಲ್ಭಾಗದ ಪ್ರದೇಶದಲ್ಲಿ ಬಿದಿರು ಕಾಡುಗಳೂ ಇವೆ. ಉತ್ತರೋಷ್ಣವಲಯದ ಒಣ ವಾಯುಗುಣದ ಎಲೆ ಉದುರುವ ಮರಗಳು ಪಶ್ಚಿಮ ಒರಿಸ್ಸದ ಬೊಲಾಂಗಿರ್ ಮತ್ತು ಸಂಬಲ್‌ಪುರ್ ಜಿಲ್ಲೆಗಳಲ್ಲಿವೆ. ಭರತದ ಕಾಡುಗಳು ಮಹಾನದಿ ಮುಖಜಭೂಮಿ ಮತ್ತು ಚಿಲ್ಕಾ ಸರೋವರದ ದ್ವೀಪಗಳಿಗೆ ಸೀಮಿತವಾಗಿವೆ. ಅರಣ್ಯದ ಉತ್ಪನ್ನಗಳ ಒಟ್ಟು ವಾರ್ಷಿಕ ಮೌಲ್ಯ 286 ಲಕ್ಷ ರೂ. ಇದರಲ್ಲಿ ಮರದ ದಿಮ್ಮಿಗಳ ಮೌಲ್ಯ 175 ಲಕ್ಷ ರೂ. ಬಿದಿರು, ಸೌದೆ ಮತ್ತು ಕಂಡು ಎಲೆಗಳು ಇತರ ಮುಖ್ಯ ವಸ್ತುಗಳು.

ಮರಗೆಲಸ, ಮರ ಕೊಯ್ತ, ಬೀಡಿ, ಕಾಗದ, ಅರಗು, ಚರ್ಮ ಹದಗಾರಿಕೆ, ಕತ್ತಾಳೆ ನಾರು ಮುಂತಾದ ಅರಣ್ಯಮೂಲದ ಕೈಗಾರಿಕೆಗಳಿವೆ.

**ನೀರಾವರಿ :** 1960–61ರಲ್ಲಿದ್ದ ಒಟ್ಟು ಬೇಸಾಯದ ಭೂಮಿ 117.1 ಲಕ್ಷ ಎಕರೆಗಳ ಪೈಕಿ 25.7 ಲಕ್ಷ ಎಕರೆಗಳಲ್ಲಿ (ಒಟ್ಟು ಬೇಸಾಯದ ನೆಲದ 21.95%). ನೀರಾವರಿ ಅನುಕೂಲವಿತ್ತು. ಹಿರಾಕುಡ್ ಯೋಜನೆ (ವಾರ್ಷಿಕ ನೀರಾವರಿ ಸಾಮರ್ಥ್ಯ 2.2 ಲಕ್ಷ ಎಕರೆ), ಋಷಿಕುಲ್ಯ ಕಾಲುವೆ ಅಚ್ಚುಕಟ್ಟು (1.40 ಲಕ್ಷ ಎಕರೆ), ಸಾಲಂದಿ ಯೋಜನೆ (0.3 ಲಕ್ಷ ಎಕರೆ) ಇವು ರಾಜ್ಯದ ಮುಖ್ಯ ನೀರಾವರಿ ಯೋಜನೆಗಳು.

**ಸಾರಿಗೆ ವ್ಯವಸ್ಥೆ :** ಒರಿಸ್ಸದಲ್ಲಿ 31,300 ಕಿಮೀ. ರಸ್ತೆಗಳಿವೆ. ಇದರಲ್ಲಿ ಕೇವಲ 8,200 ಕಿಮೀ. ರಸ್ತೆಗಳು 1,55,800 ಚ.ಕಿಮೀ. ಪ್ರದೇಶದಲ್ಲಿದೆ. ಇವು ಏನೇನೂ ಸಾಲವು. ಕಚ್ಚಾ ರಸ್ತೆಗಳು ಮಳೆಗಾಲದಲ್ಲಿ ಗಾಡಿಗಳ ಸಂಚಾರಕ್ಕೆ ಪ್ರಯೋಜನಕ್ಕೆ ಬರುವುದಿಲ್ಲ. ಇವಲ್ಲದೆ 1,400 ಕಿಮೀ.ನಷ್ಟು ರಾಷ್ಟ್ರೀಯ ಹೆದ್ದಾರಿ ಇದೆ. ಇದರಲ್ಲಿ 1,200 ಕಿಮೀ. ಜಲ್ಲಿ ರಸ್ತೆ. ಒರಿಸ್ಸದ ರಸ್ತೆಗಳ ಮುಖ್ಯ ಸಮಸ್ಯೆ ಎಂದರೆ ಕರಾವಳಿಯ ರಸ್ತೆಗಳ ನಿರ್ಮಾಣ ಮತ್ತು ನಿರ್ವಹಣೆಗಳ ಅಧಿಕ ವೆಚ್ಚ. ವಾರ್ಷಿಕ ನೆರೆಹಾವಳಿಯೇ ಇದಕ್ಕೆ ಮುಖ್ಯ ಕಾರಣ. ಅನೇಕ ನದಿ ಹಾಗೂ ಕಾಲುವೆಗಳಿಗೆ ಸೇತುವೆಗಳನ್ನು ನಿರ್ಮಿಸಬೇಕಾಗಿದೆ. ಪರ್ವತ ಹಾಗೂ ಬೆಟ್ಟಪ್ರದೇಶಗಳಲ್ಲೂ ರಸ್ತೆಗಳ ಅಭಿವೃದ್ಧಿಯಾಗಿಲ್ಲ. ಒರಿಸ್ಸದ ಕರಾವಳಿಯಲ್ಲಿರುವ ಹೌರಾ–ಮದ್ರಾಸ್ ರೈಲುಮಾರ್ಗ ಮುಖ್ಯವಾದದ್ದು.

ವರ್ಷದ ಹೆಚ್ಚು ದಿನಗಳಲ್ಲಿ ನದಿಗಳಲ್ಲಿ ನಾವೆಯ ಸಂಚಾರ ಅಸಾಧ್ಯ. ತೀರದ ಬಳಿ ಕಡಲು ಆಳವಾಗಿಲ್ಲದೆ, ಮೇಲೆತ್ತಲ್ಪಟ್ಟದ್ದಾಗಿರುವುದರಿಂದ ಸ್ವಾಭಾವಿಕ ಬಂದರಿಗೆ ವಿಶಾಲ ಸ್ಥಳವಾವುದೂ ಇಲ್ಲ. ಮಹಾನದಿಯ ಅಳಿವೆಯಲ್ಲಿನ ಪರದೀಪ್ ಬಂದರನ್ನು ಸುಕಂದ ಗಣಿಗಳಿಂದ ಜಪಾನಿಗೆ ಕಬ್ಬಿಣದ ಅದುರನ್ನು ರವಾನಿಸಲು ಅನುಕೂಲವಾಗುವಂತೆ ಒಂದು ಮುಖ್ಯ ಬಂದರನ್ನಾಗಿ ಅಭಿವೃದ್ಧಿಗೊಳಿಸಲಾಗಿದೆ. ಮಹಾನದೀ ಮುಖಜಭೂಮಿಯ ಅಗ್ರದಲ್ಲಿರುವ ಕಟಕ್ ಬಳಿಯ ಜೋಬ್ರಾ ಅಣೆಕಟ್ಟೆಯ ಮೂಲದಿಂದ ಹೊರಡುವ ಕೆಲವು ಕಾಲುವೆಗಳಲ್ಲಿ ನಾವೆ ಸಂಚಾರವಿದೆ. ಚಾಂದ್‌ಬಾಲಿ ಮತ್ತು ಗೋಪಾಲ್‌ಪುರ ಇವುಗಳ ಮೇಲಣ ಸಣ್ಣ ಬಂದರುಗಳು. ಸಮುದ್ರದಲ್ಲಿ ಪ್ರಯಾಣ ಮಾಡುವ ಹಡಗುಗಳು ತೀರಕ್ಕೆ ಬರುವುದಿಲ್ಲ. ಭರ್ತಿ ಮತ್ತು ಖಾಲಿಮಾಡುವ ಕಾರ್ಯ ಚಟುವಟಿಕೆಗಳನ್ನು ಸಣ್ಣ ದೋಣಿಗಳಿಂದ ಕೊಲ್ಲಿಯ ಮಧ್ಯದಲ್ಲಿ ನಡೆಸಲಾಗುತ್ತದೆ.

**ಜನಸಂಖ್ಯೆ :** 1901ರಲ್ಲಿ ಒರಿಸ್ಸದ ಜನಸಂಖ್ಯೆ 62 ಲಕ್ಷವಿತ್ತು. 1961ರಲ್ಲಿ ಇದು 1.75ಕ್ಕೆ ಏರಿತು. ಆದರೆ ಇದು ರಾಜ್ಯದಾದ್ಯಂತ ಏಕರೀತಿಯಾಗಿ ಏರಿಲ್ಲ. ಇತ್ತೀಚಿನ ದಶಕಗಳಲ್ಲಿ ಒಳನಾಡಿನ ಪ್ರದೇಶವಾದ ಪಶ್ಚಿಮ ಒರಿಸ್ಸದಲ್ಲಿನ ಸಂಪನ್ಮೂಲಗಳು ವಿವಿಧ ರೀತಿಗಳಲ್ಲಿ ಉಪಯೋಗಿಸಲ್ಪಟ್ಟಿರುವುದರಿಂದ ಜನಸಂಖ್ಯೆ ಅತ್ಯಂತ ಹೆಚ್ಚಳವಾಗಿ ಬೆಳೆದಿದೆ. ಕೋರಾಪುಟ್ ಮತ್ತು ಕಾಲಾಹಂಡಿ ಜಿಲ್ಲೆಗಳ ದಂಡಕಾರಣ್ಯಪ್ರದೇಶ ಮತ್ತು ವೈತರಣಿಯ ತಲೆಭಾಗದಲ್ಲಿರುವ ಕಿಯೋಂಝರ್ ಮತ್ತು ಪನ್‌ಪೋಷ್ ಪ್ರದೇಶಗಳಲ್ಲೂ 100%ರಷ್ಟು ಜನಸಂಖ್ಯೆಯ ಹೆಚ್ಚಳವನ್ನು ಕಾಣಬಹುದು. ಬಾರೀಪದಾ ಮತ್ತು ಬೊಲಂಗಿರ್‌ಗಳ ಎತ್ತರದ ಪ್ರದೇಶಗಳಲ್ಲೂ ಸಾಕಷ್ಟು ಹೆಚ್ಚಾಗಿದೆ. ಮತ್ತೊಂದು ದೃಷ್ಟಿಯಿಂದ ನೋಡಿದರೆ ಅನೇಕ ವರ್ಷಗಳಿಂದ ಅಭಿವೃದ್ಧಿಯಾಗುತ್ತ ಬಂದಿರುವ ತೀರ ಪ್ರದೇಶಗಳ ಜನಸಂಖ್ಯೆ ಇಳಿದಿದೆ. ಬಾಲಾಸೂರ್, ಭದ್ರಕ್, ಕಟಕ್–ಕೇಂದ್ರಾಪಾರ, ಭುವನೇಶ್ವರ ಮತ್ತು ಬೆರ್‌ಹಾಂಪುರ್ ತೀರಪ್ರದೇಶಗಳು ಇಂಥವು. ಅತ್ಯಂತ ಹೆಚ್ಚಿನ ಜನಸಾಂದ್ರತೆ ಇರುವುದು ಮಹಾನದಿಯ ಮುಖಜಭೂಮಿಯಲ್ಲಿ. ಇಲ್ಲಿನ ಕೆಲವು ಕಡೆಗಳಲ್ಲಿ ಚ. ಕಿಮೀ.ಗೆ 1,000 ಜನರಿದ್ದಾರೆ.

ಹೆಚ್ಚಿನ ಜನಕ್ಕೆ ವ್ಯವಸಾಯವೇ ಆಧಾರ. ಇಂಥವರು ಒಟ್ಟು ಜನಸಂಖ್ಯೆಯ ಸೇಕಡಾ 79.3 ಇದ್ದಾರೆ. 1881ರಲ್ಲಿ ಸೇಕಡಾ 61.6 ಮಂದಿ ಬೇಸಾಯವನ್ನವಲಂಬಿಸಿದ್ದರು. 1961ರಲ್ಲಿ ಇವರ ಪ್ರಮಾಣ ಸೇಕಡಾ 79.3ಕ್ಕೆ ಏರಿತ್ತು.

**ಕೈಗಾರಿಕೆಗಳು ಮತ್ತು ಖನಿಜಗಳು :** ಎರಡನೆಯ ಪಂಚವಾರ್ಷಿಕ ಯೋಜನೆಯ ಕೊನೆಯಲ್ಲಿ ಮಾತ್ರವೇ ಒರಿಸ್ಸದ ಕೈಗಾರಿಕಾ ಯುಗದ ಆವಿರ್ಭಾವವಾಯಿತು. ಜವಳಿ ಗಿರಣಿಗಳು, ಸಕ್ಕರೆ ಕಾರ್ಖಾನೆಗಳು, ಕಾಗದ ಮತ್ತು ಕಾಗದದ ರಟ್ಟಿನ ಕಾರ್ಖಾನೆಗಳು ಮತ್ತು ಸತುಲೇಪಿತ ಕೊಳವೆ (ಗ್ಯಾಲ್ವನೈಸ್ಡ್ ಪೈಪ್) ಕಾರ್ಖಾನೆಗಳು ಸ್ಥಾಪಿತವಾದುವು. ರೂರ್ಕೆಲದಲ್ಲಿ ಉಕ್ಕಿನ ಕಾರ್ಖಾನೆ, ಸುಣ್ಣ ಕಲ್ಲು, ಅಲ್ಯೂಮಿನಿಯಂ ಮತ್ತು ವಿದ್ಯುತ್ ರಾಸಾಯನಿಕ ಕಾರ್ಖಾನೆಗಳಿವೆ. ಹಿರಾಕುಡ್ ಮತ್ತು ಮುಚಕುಂಡ್ ಯೋಜನೆಗಳಿಂದ ಈ ಕೈಗಾರಿಕೆಗಳಿಗೆ ವಿದ್ಯುತ್ತನ್ನು ಒದಗಿಸಲಾಗುತ್ತದೆ. ತಾಲ್‌ಚೆರ್‌ನಲ್ಲಿ ಕೆಳಮಟ್ಟದ ಕಲ್ಲಿದ್ದಲನ್ನು ಉಪಯೋಗಿಸಿಕೊಂಡು, ಬೃಹತ್ ಪ್ರಮಾಣದ ಉಷ್ಣ–ವಿದ್ಯುತ್ ಶಕ್ತಿಯನ್ನು ತಯಾರಿಸಲು ನಿಯೋಜಿಸಲಾಗಿದೆ. ಸೇಕಡಾ 60ಕ್ಕಿಂತ ಹೆಚ್ಚು ಪ್ರಮಾಣದ ಲೋಹ ಹೊಂದಿರುವ ಉತ್ತಮ ಮಟ್ಟದ ಕಬ್ಬಿಣದ ಅದುರನ್ನು ಉತ್ತರ ಒರಿಸ್ಸ ಹೆಚ್ಚಿನ ಪ್ರಮಾಣದಲ್ಲಿ ಜಮ್‌ಷೆಡ್‌ಪುರ, ದುರ್ಗಾಪುರ ಮತ್ತು ರೂರ್ಕೆಲ ಉಕ್ಕಿನ ಕಾರ್ಖಾನೆಗಳಿಗೆ ಒದಗಿಸುತ್ತದೆ. ಸುಂದರ್‌ಘರ್ ಪ್ರದೇಶದಲ್ಲಿ ಸುಣ್ಣಕಲ್ಲು ಹೇರಳವಾಗಿ ದೊರೆಯುತ್ತದೆ. ಇದನ್ನು ಉಕ್ಕಿನ ಕಾರ್ಖಾನೆಗಳಲ್ಲಿ ಕಬ್ಬಿಣ ಕರಗಿಸುವ ಮೂಸೆಗಳಲ್ಲಿ ಸ್ರಾವಕವಸ್ತುವನ್ನಾಗಿ (ಫ್ಲಕ್ಸ್) ಉಪಯೋಗಿಸುತ್ತಾರೆ. ಪಶ್ಚಿಮ ಒರಿಸ್ಸದಲ್ಲಿ ಬಾಕ್ಸೈಟ್ ಬೇಕಾದಷ್ಟು ದೊರೆಯುತ್ತದೆ. ಆದ್ದರಿಂದ ಹಿರಾಕುಡ್‌ನಲ್ಲಿ ಅಲ್ಯೂಮಿನಿಯಂ ಕಾರ್ಖಾನೆಯೊಂದನ್ನು ಪ್ರಾರಂಭಿಸಲಾಗಿದೆ. ಕಡಿಮೆ ಬೆಲೆಯಲ್ಲಿ ವಿದ್ಯುತ್ ದೊರೆಯುವುದರಿಂದ ಚೌದ್‌ವಾರ್ ಮತ್ತು ಬ್ರಜ್‌ರಾಜ್‌ನಗರಗಳಲ್ಲಿ ಕಾಗದದ ಕಾರ್ಖಾನೆಗಳನ್ನು ಸ್ಥಾಪಿಸಲು ಸಾಧ್ಯವಾಯಿತು. ಅಂತೆಯೆ ಕೋರಾಪುಟ್‌ನ ದಂಡಕಾರಣ್ಯ ಪ್ರದೇಶಗಳಲ್ಲಿ ಕಾಗದದ ತಯಾರಿಕೆಗೆ ಅನುಕೂಲಗಳುಂಟು. ಕೈಮಗ್ಗ, ನಕ್ಕಿ, ಕೊಂಬಿನ ಸಾಮಾನು, ಒಡವೆ—ಮುಂತಾದ ಗೃಹಕೈಗಾರಿಕೆಗಳು ವ್ಯಾಪಕವಾಗಿವೆ. ವಿದೇಶೀ ವಿನಿಮಯವನ್ನು ಸಂಪಾದಿಸಲು ಕಬ್ಬಿಣದ ಅದುರನ್ನು ಪರದೀಪ್ ಮತ್ತು ವಿಶಾಖಪಟ್ಟಣಗಳ ಮುಖಾಂತರ ಜಪಾನಿಗೆ ರಫ್ತುಮಾಡಲಾಗುತ್ತಿದೆ. ಒರಿಸ್ಸದ ಸ್ವಾಭಾವಿಕ ಸಂಪನ್ಮೂಲಗಳೊಂದಿಗೆ ಹೋಲಿಸಿದರೆ ಕೈಗಾರಿಕೆಗಳ ಬೆಳೆವಣಿಗೆಯ ವೇಗ ಮತ್ತು ತಲಾ ಆದಾಯ ತುಂಬಾ ಸೀಮಿತ. ಇನ್ನೂ ಹೆಚ್ಚಿನ ಮಟ್ಟದ ಕೈಗಾರಿಕೆಯ ಕಾರ್ಯಚಟುವಟಿಕೆಗಳಿಗಾಗಿ ಸಂಚಾರಮಾರ್ಗಗಳ ಅಭಿವೃದ್ಧಿ ಅತ್ಯಂತ ಆವಶ್ಯಕ. ಈ ದೃಷ್ಟಿಯಿಂದ ಒರಿಸ್ಸಕ್ಕೆ ಉತ್ತಮ ಭವಿಷ್ಯವಿದೆ.

**ಆಡಳಿತ :** ಒರಿಸ್ಸ ರಾಜ್ಯವನ್ನು 13 ಜಿಲ್ಲೆಗಳಾಗಿ ವಿಂಗಡಿಸಿದೆ. ಅವುಗಳ ವಿವರ ಈ ರೀತಿ ಇದೆ :

| ಜಿಲ್ಲೆ | ವಿಸ್ತೀರ್ಣ (ಚ.ಕಿಮೀ.) | ಜನಸಂಖ್ಯೆ | ಆಡಳಿತಕೇಂದ್ರ |
|---|---|---|---|
| 1 ಬಾಲಾಸೂರ್ | 6,475 | 14,15,923 | ಬಾಲಾಸೂರ್ |
| 2 ಚೌಧ್-ಖೊಂಡ್ ಮಾಲ್ಸ್ | 11,081 | 5,14,427 | ಫುಲ್‌ಬಾನಿ |
| 3 ಬೊಲಾಂಗಿರ್ | 8,902 | 10,68,686 | ಬೊಲಾಂಗಿರ್ |
| 4 ಕಟಕ್ | 10,973 | 30,60,320 | ಕಟಕ್ |
| 5 ಧೇನ್‌ಕಾನಾಲ್ | 10,828 | 10,28,935 | ಧೇನ್‌ಕಾನಾಲ್ |
| 6 ಗಂಜಾಂ | 12,517 | 18,72,530 | ಛತ್ರಪುರ್ |
| 7 ಕಾಲಾಹಂಡಿ | 12,080 | 10,09,654 | ಭವಾನಿಪಟ್ನ |
| 8 ಕಿಯೋಂಝರ್ | 8,302 | 7,43,315 | ಕಿಯೋಂಝರ್ |
| 9 ಕೋರಾಪುಟ್ | 26,695 | 14,98,271 | ಕೋರಾಪುಟ್ |
| 10 ಮಯೂರ್‌ಭಂಜ್ | 10,418 | 12,04,043 | ಬಾರಿಪದಾ |
| 11 ಪುರಿ | 10,355 | 18,65,439 | ಪುರಿ |
| 12 ಸಂಬಲ್‌ಪುರ್ | 17,518 | 15,08,686 | ಸಂಬಲ್‌ಪುರ್ |
| 13 ಸುಂದರ್‌ಘರ್ | 9,716 | 7,58,617 | ಸುಂದರ್‌ಘರ್ |

ರಾಜ್ಯದಲ್ಲಿ ಏಕಸದನವಿರುವ ವಿಧಾನಮಂಡಲವಿದೆ. ಪರದೀಪ್ ಮುಖ್ಯ ಬಂದರು ; ಭಾರತದ ಏಳು ದೊಡ್ಡ ಬಂದರುಗಳ ಪೈಕಿ ಒಂದು. ಭುವನೇಶ್ವರ್ ರಾಜಧಾನಿ (ಜನಸಂಖ್ಯೆ 38,211). ಇತರ ನಗರಗಳು ಮತ್ತು ಪಟ್ಟಣಗಳು : ಕಟಕ್ (ನೋಡಿ) (1,46,590), ರೂರ್ಕೆಲ (90,287), ಬೆರ್ಹಾಂಪುರ್ (76,931), ಪುರಿ (60,815), ಸಂಬಲ್‌ಪುರ್ (38,915), ಬಲಸೂರ್ (33,931), ಪರ್ಲಾಕಿಮಿಡಿ (22,708) ಮತ್ತು ಜಯ್‌ಪುರ್ (25,291).



ಒರಿಸ್ಸ ಸರ್ಕಾರದ ಆಡಳಿತ ಕಚೇರಿ, ಭುವನೇಶ್ವರ

1961ರ ಜನಗಣತಿಯ ಪ್ರಕಾರ ರಾಜ್ಯದ ಗಂಡಸರ ಪೈಕಿ 35% ಮತ್ತು ಹೆಂಗಸರಲ್ಲಿ 9% ಮಂದಿ ಅಕ್ಷರಸ್ಥರು. ರಾಜ್ಯದಲ್ಲಿದ್ದ ಶಿಕ್ಷಣ ಸಂಸ್ಥೆಗಳ ಸಂಖ್ಯೆ 22,597. ಇವುಗಳಲ್ಲಿ 42 ಕಾಲೇಜುಗಳು, 20,000 ಪ್ರಾಥಮಿಕ ಮತ್ತು ದ್ವಿತೀಯಕ (ಸೆಕಂಡರಿ) ಶಾಲೆಗಳು. ಕಟಕ್ ಉತ್ಕಲವಿಶ್ವವಿದ್ಯಾಲಯದ ಕೇಂದ್ರ. ಪುರಿ ಒಂದು ಮುಖ್ಯ ಯಾತ್ರಾಸ್ಥಳ. ಇಲ್ಲಿ ಜಗನ್ನಾಥನ ದೇವಾಲಯವಿದೆ. ಬ್ರಿಟಿಷ್ ಆಡಳಿತದ ಪ್ರಾರಂಭಕಾಲದಲ್ಲಿ ಮಹಾನದೀ ಮುಖಜಭೂಮಿಯನ್ನೂ ಹೂಗ್ಲಿ ನದಿಯನ್ನೂ ಸೇರಿಸುವ ಕಾಲುವೆಯೊಂದನ್ನು ಕಡಲಿಗೆ ಸಮಾನಾಂತರವಾಗಿ ನಿರ್ಮಿಸಲಾಗಿತ್ತು. ಬಾಲಾಸೂರ್ ರೇವು ನಿರ್ಮಾಣವಾಗಿದ್ದು ಇದರ ದಡದ ಮೇಲೆ. ಭುವನೇಶ್ವರ್ ಮತ್ತು ಕಟಕ್‌ಗಳು ಮುಖ್ಯ ವಿಮಾನಕೇಂದ್ರಗಳು. ಭಾರತದ ಎಂಟು ದೊಡ್ಡ ಬಂದರುಗಳ ಪೈಕಿ ಪರದೀಪ್ ಒಂದು. (ಬಿ.ಎಸ್.ಎಸ್.)

**ಒರಿಸ್ಸದ ಇತಿಹಾಸ :** ಒರಿಸ್ಸದ ಇತಿಹಾಸ ಪುರಾತನವಾದದ್ದು. ಪ್ರಾಚೀನ ಕಾಲದಲ್ಲಿ ಇದಕ್ಕೆ ಕಳಿಂಗ ಎಂಬ ಹೆಸರಿತ್ತು. ಗಂಗೆಯಿಂದ ಗೋದಾವರಿಯ ವರೆಗೆ ಪೂರ್ವಭಾರತದ ಕಡಲತಡಿಯ ನೆಲವೂ ಅದಕ್ಕೆ ಒಡಲಿನಂತಿರುವ ಪಶ್ಚಿಮದ ಪ್ರಸ್ಥಭೂಮಿಯೂ ಇದರಲ್ಲಿ ಸೇರಿದ್ದುವು. ಇಲ್ಲಿಯ ಪ್ರಾಚೀನ ನಿವಾಸಿಗಳು ಆದಿಕಾಲದ ಗಿರಿಜನರು. ಅನಂತರ ಇಲ್ಲಿಗೆ ದ್ರಾವಿಡರು ಬಂದು ನೆಲಸಿದರು. ವೇದ ಮತ್ತು ಬ್ರಾಹ್ಮಣಗಳ ಕಾಲದಲ್ಲಿ ಆರ್ಯರ ದಾಳಿ ಪ್ರಾರಂಭವಾಯಿತು. ಮಹಾಭಾರತ ಕಾಲಕ್ಕೆ ಕಳಿಂಗ, ಉತ್ಕಲ ಮತ್ತು ಓಢ್ರಗಳು ಶಕ್ತಿಯುತ ರಾಜ್ಯಗಳಾಗಿ ಆರ್ಯರ ರಾಜಕೀಯ ಸಾಮಾಜಿಕ ವ್ಯವಸ್ಥೆಗಳೊಂದಿಗೆ ಹೊಂದಿಕೊಂಡಿದ್ದುವು. ಮಹಾಭಾರತದಲ್ಲಿ ಕಳಿಂಗ, ಓಢ್ರ ಮತ್ತು ಉತ್ಕಲಗಳ ಬಗ್ಗೆ ಉಲ್ಲೇಖವಿದೆ. ಮಹಾಭಾರತದ ಕಾಲದಲ್ಲಿ ಶ್ರುತಾಯು ದೊರೆ ಕಳಿಂಗದ ಒಡೆಯನಾಗಿದ್ದ. ಈತ ಕೌರವರ ಪಕ್ಷ ಸೇರಿದ್ದನೆಂದು ಹೇಳಲಾಗಿದೆ. ಈತನ ಅನಂತರ ಮಹಾಪದ್ಮ ನಂದನ ವರೆಗೆ (ಕ್ರಿ.ಪೂ. ಸು. 350) 32 ಅರಸರು ಕ್ರಮವಾಗಿ ಈ ನಾಡನ್ನಾಳಿದರು. ಮಹಾವೀರ ಮತ್ತು ಬುದ್ಧರ ಕಾಲಕ್ಕೆ ಕಳಿಂಗ, ಉತ್ಕಲ ಪ್ರದೇಶಗಳು ಭಾರತದ ಪೂರ್ವತೀರದುದ್ದಕ್ಕೂ ಪ್ರಸಿದ್ಧಿ ಪಡೆದಿದ್ದುದೇ ಅಲ್ಲದೆ ಮಾನ್ಯತೆಯನ್ನೂ ಪಡೆದಿದ್ದುವು.

ಒರಿಸ್ಸದ ರಾಜಕೀಯ ಇತಿಹಾಸ ಮಗಧದ ನಂದ ಚಕ್ರವರ್ತಿಗಳ ಆಳ್ವಿಕೆಯಿಂದ ಪ್ರಾರಂಭವಾಗುತ್ತದೆ. ಉದಯಗಿರಿಯ ಬಳಿ ದೊರೆತಿರುವ ಖಾರವೇಲ ಚಕ್ರವರ್ತಿಯ ಹಾಥಿಗುಂಫ ಶಿಲಾಶಾಸನದಲ್ಲಿ ಒಬ್ಬ ನಂದ ದೊರೆಯನ್ನು ಎರಡು ಸಲ ಹೆಸರಿಸಲಾಗಿದೆ. ನಂದರನ್ನು ಸೋಲಿಸಿ ಚಂದ್ರಗುಪ್ತ ಮೌರ್ಯ ಸಿಂಹಾಸನವನ್ನು ಏರಿದಾಗ ಕಳಿಂಗ ಅವನ ಚಕ್ರಾಧಿಪತ್ಯದ ಒಂದು ಭಾಗವಾಗಿರಲಿಲ್ಲ. ಅಶೋಕನ ಕಳಿಂಗದ ದಾಳಿ ಪ್ರಾಚೀನ ಕಾಲದಲ್ಲಿನ ನೂತನ ಯುಗಾರಂಭದ ಘಟನೆಯಾಯಿತಲ್ಲದೆ, ಜಗತ್ತಿನ ಇತಿಹಾಸದಲ್ಲಿ ಅನೇಕ ಶತಮಾನಗಳ ವರೆಗೆ ಪರಿಣಾಮ ಬೀರಬಲ್ಲದಾಗಿತ್ತು. 13ನೆಯ ಶಿಲಾಸ್ತಂಭದ ಶಾಸನದಲ್ಲಿ ಸ್ವತಃ ಅಶೋಕನೇ ಹೀಗೆಂದು ವಿವರಿಸಿದ್ದಾನೆ. ಆ (ಕಳಿಂಗ) ದೇಶದಿಂದ 1½ ಲಕ್ಷ ಜನ ಕೊಲ್ಲಲ್ಪಟ್ಟರು ಮತ್ತು ಅದಕ್ಕಿಂತಲೂ ಹೆಚ್ಚು ಜನ ನಾಶವಾದರು. ಕಳಿಂಗವನ್ನು ಅಶೋಕ ಗೆದ್ದನಾದರೂ ಅಲ್ಲಿನ ಸಾವುನೋವುಗಳಿಂದ ಅವನ ಹೃದಯ ಪರಿವರ್ತನೆಗೊಂಡಿತು. ಇದರಿಂದ ಏಷ್ಯದ ಧಾರ್ಮಿಕ ಮತ್ತು ಸಾಂಸ್ಕೃತಿಕ ಪರಂಪರೆಯ ಪಥವೇ ಬದಲಾಯಿಸಿತೆನ್ನಬಹುದು.

ಅನಂತರದ ಮುಖ್ಯ ಘಟ್ಟವೆಂದರೆ ಕ್ರಿ.ಪೂ. 2ನೆಯ ಶತಮಾನದ ಮೊದಲರ್ಧದಲ್ಲಿದ್ದ ಖಾರವೇಲನ ಆಡಳಿತ. ಈತ ಸುತ್ತಮುತ್ತಣ ಪ್ರದೇಶಗಳನ್ನೆಲ್ಲ ಗೆದ್ದ. ತನ್ನ ಆಳ್ವಿಕೆಯ 13ನೆಯ ವರ್ಷದಲ್ಲಿ ರಾಜ್ಯಾಡಳಿತದಿಂದ ನಿವೃತ್ತಿಹೊಂದಿ ಭುವನೇಶ್ವರದ ಬಳಿಯ ಖಂಡಗಿರಿಗೆ ನಿಷ್ಕ್ರಮಿಸಿದ. ಆತ ಜೈನಮತಸ್ಥ.

ಖಾರವೇಲನ ಅನಂತರ ಒರಿಸ್ಸದ ಇತಿಹಾಸ ಅನೇಕ ಶತಮಾನಗಳ ವರೆಗೆ ಅಂಧಕಾರಮಯವಾಗಿತ್ತು. ಹ್ಯುಯೆನ್‌ತ್ಸಾಂಗ್ ನೀಡಿರುವ ವಿವರಣೆಯಿಂದ ಶಿಲಾದಿತ್ಯನ ರಾಜಕೀಯ ಪ್ರಭುತ್ವ ಒರಿಸ್ಸದ ವರೆಗೂ ಹರಡಿತ್ತೆಂದು ತಿಳಿದುಬರುತ್ತದೆ. ಒರಿಸ್ಸದ ತೀರದಲ್ಲಿ ವ್ಯಾಪಾರದ ಕೋಠಿಗಳು ಬಲು ಪ್ರವರ್ಧಮಾನ ಸ್ಥಿತಿಯಲ್ಲಿದ್ದುವೆಂದು ಗ್ರೀಕ್ ಭೂಗೋಳಶಾಸ್ತ್ರಜ್ಞ ಟಾಲೆಮಿ (ಕ್ರಿ.ಪೂ. 2ನೆಯ ಶತಮಾನ) ಬರೆದಿದ್ದಾನೆ. 8ನೆಯ ಶತಮಾನದಲ್ಲಿ ಒರಿಸ್ಸದ ಸಮುದ್ರಾಂತರ ವ್ಯಾಪಾರ ಚಟುವಟಿಕೆಗಳು ತುಟ್ಟತುದಿ ಮುಟ್ಟಿದ್ದುವು. ಆಗ ಮಲೇಷ್ಯದಲ್ಲಿ ಶೈಲೇಂದ್ರ ಚಕ್ರಾಧಿಪತ್ಯ ಸ್ಥಾಪಿತವಾಗಿತ್ತು. ಆಗಿನ ಆಳ್ವಿಕೆಯಲ್ಲಿ ವಿದೇಶೀಯರು ಮಲೇಷ್ಯವನ್ನು ಕಳಿಂಗವೆಂದೇ ಕರೆಯುತ್ತಿದ್ದರು. ಈ ಚಕ್ರಾಧಿಪತ್ಯದ ಎಲ್ಲೆಗಳು ಕಾಂಬೋಡಿಯ ಮತ್ತು ಅಸ್ಸಾಂಗಳಿಗೂ ವಿಸ್ತರಿಸಿದ್ದುವೆಂದು ಅರಬ್ಬೀ ಮೂಲಗಳು ತಿಳಿಸುತ್ತವೆ. ಶೈಲೇಂದ್ರ ಚಕ್ರಾಧಿಪತ್ಯದ ವೈಭವೋಪೇತ ಉಚ್ಛ್ರಾಯಸ್ಥಿತಿ ಕ್ರಿ.ಶ. 10ನೆಯ ಶತಮಾನದಲ್ಲೂ ಮುಂದುವರಿದಿತ್ತು. ಕ್ರಿ.ಶ. 8 ರಿಂದ 10ನೆಯ ಶತಮಾನದ ವರೆಗೆ ಇದನ್ನು ಭೌಮಕಾರ ರಾಜವಂಶ ಆಳಿತು. ಅದರ ರಾಜಧಾನಿ ಇಂದಿನ ಜಾಜ್‌ಪುರ. ಇದರ ಅನಂತರ ಸೋಮ ಮತ್ತು ಕೇಸರಿ ವಂಶಗಳು ಆಳಿದುವು. ಭುವನೇಶ್ವರದಲ್ಲಿನ ಲಿಂಗರಾಜ ದೇವಾಲಯವನ್ನು ಕಟ್ಟಲು ಆರಂಭಿಸಿದವನು ಯಯಾತಿ ಕೇಸರಿ. ಅವನ ಮುಂದಿನ ದೊರೆಗಳು ಅದನ್ನು ಪೂರ್ಣಗೊಳಿಸಿದರು.

ಮೆಗಾಸ್ತನೀಸ್ ವಿವರಿಸಿರುವಂತೆ ಗಂಗಾನದೀತೀರದಲ್ಲಿದ್ದ ಗಂಗರು ಕ್ರಮೇಣ ಒರಿಸ್ಸದಲ್ಲಿ ನೆಲಸಿದರು. ಅನಂತವರ್ಮ ಚೋಳಗಂಗದೇವನಿಗೆ (1078–1191) ಗಂಗಾನದಿಯಿಂದ ಗೋದಾವರಿ ವರೆಗೆ ಆಳಿದ ಗೌರವ ಸಲ್ಲುತ್ತದೆ. ಪರ್ಲಾಕಿಮಿಡಿಯಲ್ಲಿನ ಕಳಿಂಗನಗರದಿಂದ ಕಟಕ್‌ಗೆ ತನ್ನ ರಾಜಧಾನಿಯನ್ನು ಈತ ಬದಲಾಯಿಸಿದ. ವೈಷ್ಣವ ಧರ್ಮಕ್ಕೆ ರಾಜಾಶ್ರಯ ದೊರಕಿತು. ವೈಷ್ಣವ ದೇವಾಲಯಗಳು ಮುಖಲಿಂಗಂ, ಶ್ರೀಕೂರ್ಮಂ, ಸಿಂಹಾಚಲಂ ಮತ್ತು ಪುರಿಗಳಲ್ಲಿ ನಿರ್ಮಿತವಾದುವು. ಪುರಿ ದೇವಾಲಯವನ್ನು ಪೂರ್ಣಗೊಳಿಸಿದವನು ಅನಂಗಭೀಮ—13ನೆಯ ಶತಮಾನದಲ್ಲಿ. ಗಂಗ ಸಾಮ್ರಾಜ್ಯ ಮಹಮ್ಮದೀಯರ ದಾಳಿಯನ್ನು ಎದುರಿಸಿ ಅವರನ್ನು ಸೋಲಿಸಿತು.

13ನೆಯ ಶತಮಾನದಲ್ಲಿ ಉತ್ತರ ಭಾರತದಲ್ಲಿ ಹಿಂದೂ ವಾಸ್ತುಶಿಲ್ಪ ಕ್ಷೀಣಸ್ಥಿತಿಗೆ ಬರುತ್ತಿದ್ದಾಗ ಒರಿಸ್ಸದ ವಾಸ್ತುಶಿಲ್ಪ ಕೊಣಾರ್ಕದಲ್ಲಿ ಅರಳುತ್ತಿತ್ತು. ಅಲ್ಲಿಯ ಸುಪ್ರಸಿದ್ಧ ಸೂರ್ಯದೇವಾಲಯ ಆಗ ನಿರ್ಮಾಣವಾಯಿತು. ಒಂದನೆಯ ನರಸಿಂಹದೇವ (1238–1264) ಈ ದೇವಾಲಯವನ್ನು ನಿರ್ಮಿಸಿದ. ಗಂಗವಂಶದ ಆಡಳಿತ ಕೊನೆಗೊಂಡದ್ದು 1435ರಲ್ಲಿ. ಅನಂತರ ಆಡಳಿತಕ್ಕೆ ಬಂದ ಸೂರ್ಯವಂಶದ ಮೊಟ್ಟಮೊದಲ ದೊರೆಯಾದ ಗಜಪತಿ ಕಪಿಲೇಂದ್ರ ದೇವ (1435-1466) ದಕ್ಷ ಉತ್ಸಾಹಿ. ಗಂಗರಸರ ಕೊನೆಗಾಲದಲ್ಲಿ ಹೋಗಿದ್ದ ಕೀರ್ತಿಯನ್ನು ಒರಿಸ್ಸಕ್ಕೆ ಮತ್ತೆ ಸಂಪಾದಿಸಿಕೊಟ್ಟ. ಪ್ರಬಲರಾದ ವಿರೋಧಿಗಳನ್ನು ಅಡಗಿಸಿದ. ಬಿದರೆಯ ಬಹಮನಿ ಸುಲ್ತಾನರೊಡನೆ ಯುದ್ಧ ಮಾಡಿ ಗೆದ್ದ. ಇವನ ರಾಜ್ಯ ಗಂಗೆಯಿಂದ ಕಾವೇರಿಯ ವರೆಗೆ ವಿಸ್ತರಿಸಿತು. ಗೋಪೀನಾಥಪುರದ ಶಿಲಾಶಾಸನದಂತೆ ಈತ ವಿಜಯನಗರಕ್ಕೆ ಸೇರಿದ್ದ ಉದಯಗಿರಿಯನ್ನೂ ಕಂಚಿಯನ್ನೂ ವಶಪಡಿಸಿಕೊಂಡ.

ಈತನ ತರುವಾಯ ಪಟ್ಟಕ್ಕೆ ಬಂದ ಪುರುಷೋತ್ತಮನ ಆಳ್ವಿಕೆಯಲ್ಲಿ (1467–1497) ರಾಜ್ಯದಲ್ಲಿ ಒಡಕು ಹುಟ್ಟಿತು. ಗೋದಾವರಿಯ ದಕ್ಷಿಣದ ಭಾಗಗಳು ಕೈಬಿಟ್ಟುವು. ಕೃಷ್ಣಾನದಿಯ ದಕ್ಷಿಣಕ್ಕಿದ್ದ ಪ್ರದೇಶವನ್ನು ಸಾಳುವ ನರಸಿಂಹ ಗೆದ್ದುಕೊಂಡ. ಗೋದಾವರಿಯಿಂದ ಕೃಷ್ಣಾನದಿಯ ವರೆಗಿನ ಸೀಮೆ ಬಹಮನಿ ಸುಲ್ತಾನರ ವಶವಾಯಿತು. ಆದರೆ ಪುರುಷೋತ್ತಮ ತನ್ನ ಆಳ್ವಿಕೆಯ ಕಡೆಯ ಭಾಗದಲ್ಲಿ ಇವನ್ನು ಮತ್ತೆ ಗೆದ್ದು ರಾಜ್ಯವನ್ನು ಗುಂಟೂರಿನ ವರೆಗೂ ವಿಸ್ತರಿಸಿದ. ಆದರೂ ಆತನ ರಾಜ್ಯ ಕಪಿಲೇಂದ್ರನ ಕಾಲದಲ್ಲಿದ್ದಷ್ಟು ವಿಶಾಲವಾಗಿರಲಿಲ್ಲ.

ಪುರುಷೋತ್ತಮನ ಮಗನಾದ ಪ್ರತಾಪರುದ್ರ ಕ್ರಿ.ಶ. 1497 ರಿಂದ 1540ರ ವರೆಗೆ ಆಳಿದ. ಈತ ಭಕ್ತ ಚೈತನ್ಯನ ಶಿಷ್ಯ. ವಿಜಯನಗರದ ಕೃಷ್ಣದೇವರಾಯನ ದಿಗ್ವಿಜಯಗಳಿಂದಲೂ ಗೋಲ್ಕೊಂಡ ಅರಸರ ಪ್ರಾಬಲ್ಯದಿಂದಲೂ ಒರಿಸ್ಸ ಮುಂದುವರಿಯಲು ಅಸಾಧ್ಯವಾಯಿತು.

ಕೃಷ್ಣದೇವರಾಯ ತನ್ನ ರಾಜ್ಯದ ಒಳಗಿನ ವಿರೋಧಿಗಳನ್ನಡಗಿಸಿ ಅಸಂಖ್ಯಾತ ಸೈನ್ಯವೊಂದನ್ನು ಸಜ್ಜುಗೊಳಿಸಿ ಪ್ರಬಲ ಶತ್ರುಗಳನ್ನಡಗಿಸಲು ಉತ್ತರದ ಕಡೆ ಹೊರಟ. ಕೃಷ್ಣಾನದಿಯ ದಂಡೆಯಲ್ಲಿ ಷಾಹಿ ಸುಲ್ತಾನರು ಸೋತು ಓಡಿಹೋದರು. ಆಗ ಕೃಷ್ಣದೇವರಾಯ ಕೃಷ್ಣಾನದಿಯನ್ನು ದಾಟಿ ಮುಸಲ್ಮಾನ್ ರಾಜ್ಯಕ್ಕೆ ನುಗ್ಗದೆ, ಅವುಗಳಿಗೆ ಸಹಾಯಮಾಡುತ್ತಿದ್ದ ಗಜಪತಿ ರಾಜನ ರಾಜ್ಯದ ಕಡೆಗೆ ಹೊರಟ. ಉದಯಗಿರಿ ಕೋಟೆಯನ್ನು ವಶಪಡಿಸಿಕೊಳ್ಳುವುದಕ್ಕೆ 1½ ವರ್ಷಗಳು ಬೇಕಾದುವು. ಅಭೇದ್ಯವೆಂದು ಹೆಸರುಪಡೆದ ಕೋಟೆಯನ್ನೇ ಅಲ್ಲದೆ ಇತರ ಕೋಟೆಗಳಿಗೂ ಆತ ಮುತ್ತಿಗೆ ಹಾಕಿದ. ಕೊಂಡವೀಡು ಮುತ್ತಿಗೆ ಮುಂದುವರಿಯುತ್ತಿದ್ದಾಗ ಪ್ರತಾಪರುದ್ರ ಗಜಪತಿ ದೊಡ್ಡ ಸೈನ್ಯದೊಂದಿಗೆ ಬಂದು ಕೃಷ್ಣದೇವರಾಯನ ಸೈನ್ಯವನ್ನೆದುರಿಸಿದ. ಆದರೆ ಪೂರ್ಣವಾಗಿ ಸೋತುಹೋದ. ಗಜಪತಿಗೆ ಸೇರಿದ್ದ ಕೋಟೆಗಳು ಕೃಷ್ಣದೇವರಾಯನ ವಶವಾದುವು. ಪ್ರತಾಪರುದ್ರನ ಮಗ ವೀರಭದ್ರನೂ ದಳಪತಿಗಳೂ ಅವರಿಗೆ ಸಹಾಯ ಮಾಡುತ್ತಿದ್ದ ಮುಸಲ್ಮಾನ್ ಸೈನಿಕರೂ ಸೆರೆ ಸಿಕ್ಕಿದರು. ಕೃಷ್ಣದೇವರಾಯ ಇವರೆಲ್ಲರನ್ನೂ ವಿಜಯನಗರಕ್ಕೆ ಕಳುಹಿಸಿ ಗಜಪತಿಗೆ ನೆರವು ಕೊಡುತ್ತಿದ್ದ ಬಿದರೆ ಸುಲ್ತಾನನನ್ನು ಸೋಲಿಸಿ ಪುನಃ ಒರಿಸ್ಸಕ್ಕೆ ಬಂದು, ವಿಶಾಖಪಟ್ಟಣಕ್ಕೆ ಹತ್ತಿರವಿದ್ದ ಪೋತನೂರು ಮತ್ತು ಸಿಂಹಾದ್ರಿಗಳನ್ನು ವಶಪಡಿಸಿಕೊಂಡ. ಪ್ರತಾಪರುದ್ರ ಯುದ್ಧ ಮಾಡಲಿಲ್ಲ. ಆತ ವಿಜಯನಗರದ ಮಿತ್ರನಾಗಿ ಉಳಿಯುವುದಾದರೆ ಅವನ ರಾಜ್ಯವನ್ನು ಹಿಂತಿರುಗಿ ಪಡೆಯಬಹುದೆಂದು ಕೃಷ್ಣದೇವರಾಯ ಹೇಳಿ ಕಳುಹಿಸಿದ. ಗಜಪತಿ ಮಿತ್ರನಾಗಿರಲು ಒಪ್ಪಿಕೊಂಡು ತನ್ನ ಮಗಳಾದ ಜಗನ್ಮೋಹಿನಿಯನ್ನು ಕೃಷ್ಣದೇವರಾಯನಿಗೆ ಕೊಟ್ಟು ವಿವಾಹಮಾಡಿ ಮಗಳಿಗೆ ಬಳುವಳಿಯಾಗಿ ಕೃಷ್ಣಾನದಿಯ ದಕ್ಷಿಣಕ್ಕಿದ್ದ ಪ್ರದೇಶಗಳನ್ನೆಲ್ಲ ಕೊಟ್ಟ. ಕೃಷ್ಣದೇವರಾಯ ತಿರುಪತಿಯನ್ನು ಸಂದರ್ಶಿಸಿ ತನ್ನ ರಾಜ್ಯಕ್ಕೆ ಹಿಂತಿರುಗಿದ.

ಕ್ರಿ.ಶ. 1522ರಲ್ಲಿ ಗೋಲ್ಕೊಂಡ ರಾಜ್ಯದ ಸುಲ್ತಾನ ಒರಿಸ್ಸಕ್ಕೆ ಮುತ್ತಿಗೆ ಹಾಕಿದ. ಒರಿಸ್ಸ ಆಗ ಕ್ಷೀಣದೆಶೆಗೆ ಬರುತ್ತಿತ್ತು.

16ನೆಯ ಶತಮಾನದಿಂದೀಚೆಗೆ ಒರಿಸ್ಸ ರಾಜ್ಯ ತನ್ನ ಪ್ರಾಬಲ್ಯವನ್ನೂ ಕೀರ್ತಿಯನ್ನೂ ಕಳೆದುಕೊಂಡಿತು. ಕ್ರಿ.ಶ. 1541–42ರಲ್ಲಿ ಕಪಿಲೇಂದ್ರ ವಂಶವನ್ನು ಭೋಯ್ ಸಂತತಿಯವರು ಸೋಲಿಸಿದರು. ಈ ವಂಶದ ಸ್ಥಾಪಕ ಗೋವಿಂದ. ಈತ ಹಿಂದೆ ಪ್ರತಾಪರುದ್ರನ ಮಂತ್ರಿಯಾಗಿದ್ದ. ಈತ ಭೋಯ್ ಅಥವಾ ಕಾರಕೂನ ಉದ್ಯೋಗಕ್ಕೆ ಸೇರಿದ್ದ. ಗೋವಿಂದನ ಮಕ್ಕಳೂ ಮೊಮ್ಮಕ್ಕಳೂ ಕೆಲವು ವರ್ಷಗಳ ಕಾಲ ಆಳಿದರು. ಒರಿಸ್ಸದ ಕೊನೆಯ ಹಿಂದೂ ದೊರೆಯಾದ ಮುಕುಂದದೇವನನ್ನು ಬಂಗಾಳದ ಸುಲ್ತಾನ 1568ರಲ್ಲಿ ಸೋಲಿಸಿ ಆತನ ರಾಜ್ಯವನ್ನು ವಶಪಡಿಸಿಕೊಂಡ. 1576ರಲ್ಲಿ ಇದನ್ನು ಮೊಗಲರು ಜಯಿಸಿಕೊಂಡರು.

ಒರಿಸ್ಸದಲ್ಲಿ ಮೊಗಲರ ಆಳ್ವಿಕೆ ಹೆಚ್ಚುಕಡಿಮೆ ಒಂದು ಶತಮಾನ ಕಾಲ ನಡೆಯಿತು. ಔರಂಗಜೇಬನ ಆಳ್ವಿಕೆಯ ಕಾಲದಲ್ಲಿ ಮಯೂರ್‍ಭಂಜ್‍ನ ರಾಜ ಕೃಷ್ಣಚಂದ್ರ ಭಾಂಗನ ನೇತೃತ್ವದಲ್ಲಿ ಎದ್ದ ದಂಗೆಯನ್ನು ಕಷ್ಟದಿಂದ ಅಡಗಿಸಲಾಯಿತು. ಔರಂಗಜೇಬನ ಮರಣದ ಅನಂತರ ಮೊಗಲ್ ಸಾಮ್ರಾಜ್ಯ ಅವನತಿ ಹೊಂದಿದಾಗ ಒರಿಸ್ಸ ಬಂಗಾಳದ ಸ್ವತಂತ್ರ ನವಾಬರ ಆಳ್ವಿಕೆಯ ಅಡಿಗೆ ಬಂತು. ಬಂಗಾಳದ ನವಾಬ ಅಲಿವರ್ದಿಖಾನ್ ಇದನ್ನು ಮರಾಠರಿಗೆ 1751ರಲ್ಲಿ ಒಪ್ಪಿಸಿದ. ಇವರ ಆಳ್ವಿಕೆ ಅರ್ಧ ಶತಮಾನಕ್ಕಿಂತಲೂ ಹೆಚ್ಚು ಕಾಲವಿತ್ತು.

1803ರಲ್ಲಿ ನಡೆದ ಎರಡನೆಯ ಮರಾಠ ಯುದ್ಧದಲ್ಲಿ ಇದು ಬ್ರಿಟಿಷರ ಕೈಸೇರಿತು. ಇವರ ಆಡಳಿತ ಸಮರ್ಪಕವಾಗಿರಲಿಲ್ಲ. ಖುರ್ದದ ರಾಜನ ಮುಖ್ಯ ಸೇನಾಧಿಪತಿಯಾಗಿದ್ದ ಬಕ್ಷಿ ಜಗಬಂಧು ವಿದ್ಯಾಧರನ ನೇತೃತ್ವದಲ್ಲಿ ಒಂದು ಬಂಡಾಯ ನಡೆಯಿತು. 1817ರ ಏಪ್ರಿಲ್‍ನಲ್ಲಿ ಪುರಿ ಅವನ ವಶವಾಯಿತು. ಬ್ರಿಟಿಷರು ಕಟಕ್‍ಗೆ ಹಿನ್ನಡೆದರು. ಆದರೆ ಕೊನೆಯಲ್ಲಿ ಈ ದಂಗೆಯನ್ನು ತುಳಿದುಹಾಕಲಾಯಿತು. 1823ರಲ್ಲಿ ಬ್ರಿಟಿಷರು ಈ ರಾಜ್ಯವನ್ನು ಕಟಕ್, ಬಾಲಸೂರ್ ಮತ್ತು ಪುರಿ ಎಂಬ ಮೂರು ಜಿಲ್ಲೆಗಳಾಗಿ ವಿಂಗಡಿಸಿದರು. ಇವು ಬಂಗಾಳ ಆಧಿಪತ್ಯದ ಭಾಗಗಳಾದುವು. 1857ರ ಸಂಗ್ರಾಮದಲ್ಲಿ ಒರಿಸ್ಸದ ಸಂಬಲ್‍ಪುರ್ ವಹಿಸಿದ ಪಾತ್ರ ಪ್ರಮುಖವಾದದ್ದು. ಬ್ರಿಟಿಷ್ ಆಡಳಿತಕಾಲದ ಭೀಕರ ದುರಂತವೆಂದರೆ 1865–66ರಲ್ಲಿ ಸಂಭವಿಸಿದ ಕ್ಷಾಮ. ಅದರ ಫಲವಾಗಿ ಒರಿಸ್ಸದ ಜನಸಂಖ್ಯೆಯ ಕಾಲುಭಾಗ (10 ಲಕ್ಷ) ಜನ ಸಾವಿಗೆ ತುತ್ತಾದರು. 19ನೆಯ ಶತಮಾನದ ಉತ್ತರಾರ್ಧದಲ್ಲಿ ಇಲ್ಲಿ ಅನೇಕ ನೀರಾವರಿ ಯೋಜನೆಗಳನ್ನು ಕೈಗೊಳ್ಳಲಾಯಿತು. ಒರಿಯ ಭಾಷೆಯನ್ನಾಡುವ ಜನರಿರುವ ಪ್ರದೇಶಗಳನ್ನು ಒಂದುಗೂಡಿಸಿ ಒಂದು ಪ್ರತ್ಯೇಕ ಪ್ರಾಂತ್ಯ ನಿರ್ಮಾಣವಾಗಬೇಕೆಂಬ ಚಳವಳಿ 20ನೆಯ ಶತಮಾನದಲ್ಲಿ ಆರಂಭವಾಯಿತು. 1912ರಲ್ಲಿ ಒರಿಸ್ಸ ಪ್ರಾಂತ್ಯವನ್ನು ಬಂಗಾಳದಿಂದ ಪ್ರತ್ಯೇಕಿಸಿ ಬಿಹಾರದೊಂದಿಗೆ ಸೇರಿಸಿ, ಅದನ್ನು ಬಿಹಾರ ಮತ್ತು ಒರಿಸ್ಸ ಪ್ರಾಂತ್ಯವೆಂದು ಹೆಸರಿಸಲಾಯಿತು. ಆದರೂ ಚಳವಳಿ ನಿಲ್ಲಲಿಲ್ಲ. 1936ರ ಏಪ್ರಿಲಿನಲ್ಲಿ ಬ್ರಿಟಿಷರು ಒರಿಸ್ಸವನ್ನು ಪ್ರತ್ಯೇಕ ಪ್ರಾಂತ್ಯವಾಗಿ ಮಾಡಿದರು. 1950ರಲ್ಲಿ ಭಾರತ ಗಣರಾಜ್ಯದ ಸಂವಿಧಾನ ಜಾರಿಗೆ ಬಂದಾಗ ಒರಿಸ್ಸ ಅದರ ಒಂದು ರಾಜ್ಯವಾಯಿತು. 1956ರಲ್ಲಾದ ರಾಜ್ಯ ಪುನರ್ವಿಂಗಡಣೆಯ ಫಲವಾಗಿ ಒರಿಸ್ಸದ ಎಲ್ಲೆಯಲ್ಲೂ ಬದಲಾವಣೆಗಳಾದುವು.

(ಸಿ.ವಿ ಆರ್.; ಬಿ.ಎಸ್.ಎಸ್.)

**ಒರಿಸ್ಸದ ಪ್ರಾಗಿತಿಹಾಸ :** ಮಹಾನದಿ, ಬ್ರಾಹ್ಮಣಿ ಮತ್ತು ವೈತರಣಿ ನದಿಗಳ ಮುಖಜಭೂಮಿಗಳ ಅತ್ಯಂತ ಫಲವತ್ತಾದ ಪ್ರದೇಶವನ್ನೊಳಗೊಂಡಿರುವ ಒರಿಸ್ಸ ರಾಜ್ಯದಲ್ಲಿ ಇತಿಹಾಸಪೂರ್ವ ಕಾಲದಲ್ಲೂ ಜನ ವಾಸವಾಗಿದ್ದರೆಂಬುದಕ್ಕೆ ಅನೇಕ ಆಧಾರಗಳು ದೊರೆತಿವೆ.

ರಾಜ್ಯದ ಅನೇಕ ಪ್ರದೇಶಗಳಲ್ಲಿ ಪೂರ್ವಶಿಲಾಯುಗದ ಅವಶೇಷಗಳು ಕಂಡುಬಂದಿವೆ. ಭೂಶಾಸ್ತ್ರರೀತ್ಯ ಬಹಳ ಪುರಾತನವೆಂದು ಹೇಳಲಾದ ಇಲ್ಲಿಯ ಶಿಲಾಮಟ್ಟಗಳಲ್ಲಿ ಪೂರ್ವಶಿಲಾಯುಗಕ್ಕೆ ಸೇರುವ ಉಂಡೆಕಲ್ಲುಗಳಿಂದ ಮಾಡಿದ ಚಕ್ಕೆಕಲ್ಲಿನ ಆಯುಧಗಳು ಒರಟಾದ ಅಬ್ಬೆವಿಲ್ಲಿಯನ್ ಹಂತದ ಮತ್ತು ಸುಧಾರಿತ ಅಷ್ಯೂಲಿಯನ್ ಹಂತದ ಕೈಗೊಡಲಿಗಳು ದೊರಕಿವೆ. ಆದರೆ ಈ ಎಲ್ಲ ರೀತಿಯ ಆಯುಧಗಳ ತಯಾರಿಕೆಯಲ್ಲಿ ಯಾವುದೇ ರೀತಿಯ ಕ್ರಮಾಗತ ಸುಧಾರಣೆಗಳನ್ನೂ ಕಾಣುವಂತಿಲ್ಲ. ಆಕಾರ, ತಯಾರಿಕೆಯ ವಿಧಾನಗಳಿಂದ ಆಯುಧಗಳನ್ನು ಮೂರು ಗುಂಪುಗಳಾಗಿ ವಿಂಗಡಿಸಲಾಗಿದೆ. ಮೊದಲನೆಯ ಗುಂಪಿನಲ್ಲಿ ಕೈಗೊಡಲಿಗಳು ಹೆಚ್ಚಿದ್ದು ಒರಟಾಗಿ ಮಾಡಲ್ಪಟ್ಟಿವೆ. ಎರಡನೆಯ ಗುಂಪಿನ ಆಯುಧಗಳು ಸುಧಾರಿತ ರೀತಿಯವಾಗಿದ್ದು ತೆಳ್ಳಗೂ ಚಪ್ಪಟೆಯಾಗಿಯೂ ಇರುವುದರಿಂದ ಅಷ್ಯೂಲಿಯನ್ ಹಂತಕ್ಕೆ ಸೇರುತ್ತವೆ. ಮೂರನೆಯ ಗುಂಪಿನ ಆಯುಧಗಳು ಕುಶಲತೆಯಿಂದ ಮಾಡಲ್ಪಟ್ಟ ಸುಂದರ ವಸ್ತುಗಳಾಗಿವೆ. ಕೆಲವು ಉಂಡೆಕಲ್ಲಿನ ಆಯುಧಗಳು ದೊರೆತಿದ್ದರೂ ಅವನ್ನು ಪಂಜಾಬಿನ ಸೋಹನ್ ಸಂಸ್ಕೃತಿಗೆ ಸೇರಿಸಲಾಗುವುದಿಲ್ಲ. ಪೂರ್ವಶಿಲಾಯುಗದ ಕೊನೆಗಾಲದಲ್ಲಿ ಕೈಗೊಡಲಿಗಳು ಸಣ್ಣವಾಗುವುವಲ್ಲದೆ ಚಕ್ಕೆಕಲ್ಲಿನ ಆಯುಧಗಳು ಪ್ರಬಲವಾಗಿ ಮಧ್ಯಶಿಲಾಯುಗದ ಆರಂಭವನ್ನು ಸೂಚಿಸುತ್ತವೆ. ಪೂರ್ವಶಿಲಾಯುಗದ ಅವಶೇಷಗಳು ಧೇನ್‍ಕಾನಾಲ್, ಸುಂದರ್‍ಘರ್, ಸಂಬಲ್‍ಪುರ, ಕಿಯೋಂಝರ್ ಮತ್ತು ಮಯೂರ್‍ಭಂಜ್‍ಗಳಲ್ಲಿ ಹೆಚ್ಚಿಗೆ ದೊರೆಯುತ್ತವೆ.

ಮಧ್ಯಶಿಲಾಯುಗ ಕಾಲದಲ್ಲಿ ಒರಿಸ್ಸದ ಬಹುಭಾಗಗಳಲ್ಲಿ ಶಿಲಾಯುಗ ಮಾನವ ವಾಸಿಸುತ್ತಿದ್ದನೆಂಬುದಕ್ಕೆ ಸಾಕಷ್ಟು ಮಾಹಿತಿಗಳು ದೊರೆತಿವೆ. ಹೆಚ್ಚು ಸಂಖ್ಯೆಯ ಚಕ್ಕೆಕಲ್ಲಿನಆಯುಧಗಳೂ ಕೆಲವುಮಟ್ಟಿಗೆ ಆಯುಧಗಳಿಗೆ ಬಳಸುತ್ತಿದ್ದ ಉಂಡೆಕಲ್ಲುಗಳೂ ಮಯೂರ್‍ಭಂಜ್, ಕಿಯೋಂಝರ್, ಸುಂದರ್‍ಘರ್ ಮತ್ತು ಧೇನ್‍ಕಾನಾಲ್ ಪ್ರದೇಶಗಳಲ್ಲಿ ನದೀಮಟ್ಟ ಮತ್ತು ನದೀಪಾತ್ರಗಳಲ್ಲೂ ದೊರೆಯುತ್ತವೆ. ಆಯುಧಗಳಲ್ಲಿ ಸೇಕಡ 71ರಷ್ಟು ಒರೆಯುವ ಆಯುಧಗಳೂ 21ರಷ್ಟು ಮೊನೆಗಳೂ ಉಳಿದವು ಕೊರೆಯುವ ಮತ್ತಿತರ ಆಯುಧಗಳೂ ಆಗಿವೆ. ಸಾಧಾರಣವಾಗಿ ಚಕ್ಕೆಕಲ್ಲುಗಳೇ ಹೆಚ್ಚಾಗಿರುವ ಆಯುಧಗಳಲ್ಲಿ ಕ್ಲಾಕ್ಟೋನಿಯನ್ ರೀತಿಯ ಚಕ್ಕೆಗಳು ಹೆಚ್ಚಾಗಿದ್ದು, ಲೆವಾಲ್ವಾಷಿಯನ್ ಪದ್ಧತಿ ಹೆಚ್ಚು ಬಳಕೆಗೆ ಬಂದಂತೆ ಕಾಣುವುದಿಲ್ಲ. ಆಯುಧಗಳ ಅಂಚುಗಳಿಂದ ಪುಟ್ಟ ಚಕ್ಕೆಗಳನ್ನು ತೆಗೆದು ಅವನ್ನು ಪರಿಣಾಮಕಾರಿಯಾಗಿ ಮಾಡುತ್ತಿದ್ದರು.

ಅಂತ್ಯ ಅಥವಾ ಸೂಕ್ಷ್ಮಶಿಲಾಯುಧಕಾಲದಲ್ಲಿ ಈ ಪ್ರದೇಶದಲ್ಲಿ ಮಾನವನ ಚಟುವಟಿಕೆ ಸೀಮಿತವಾಗಿದ್ದಂತೆ ಕಾಣುತ್ತದೆ. ಮಯೂರ್‍ಭಂಜ್, ಕಿಯೋಂಝರ್ ಮತ್ತು ಸುಂದರ್‍ಘರ್ ಜಿಲ್ಲೆಗಳ ಹಲವು ಪ್ರದೇಶಗಳಲ್ಲಿ ಮಾತ್ರ ಸೂಕ್ಷ್ಮಶಿಲಾಯುಧಗಳನ್ನು ಸಂಗ್ರಹಿಸಲಾಗಿದೆ. ಇವು ಸಾಧಾರಣವಾಗಿ ನದೀದಂಡೆಗಳಲ್ಲೂ ಬೆಟ್ಟಗುಡ್ಡಗಳ ತಪ್ಪಲು ಅಥವಾ ಮೈದಾನ ಪ್ರದೇಶಗಳಲ್ಲೂ ದೊರೆತಿವೆ. ಈ ವರೆವಿಗೂ ಈ ನೆಲಗಳನ್ನು ವಿಧ್ಯುಕ್ತವಾಗಿ ಸಂಶೋಧಿಸದಿರುವುದರಿಂದ ಒರಿಸ್ಸದಲ್ಲಿನ ಸೂಕ್ಷ್ಮಶಿಲಾಯುಧ ಸಂಸ್ಕೃತಿಯ ವಿಷಯವಾಗಿ ಹೆಚ್ಚೇನೂ ಹೇಳಬರುವುದಿಲ್ಲ. ಇತ್ತೀಚೆಗೆ ಕೇಂದ್ರ ಪ್ರಾಕ್ತನಶಾಸ್ತ್ರ ಇಲಾಖೆಯವರು ಮಯೂರ್‍ಭಂಜ್ ಜಿಲ್ಲೆಯ

ಬಾರಿಪದಾ ಬಳಿ ನಡೆಸಿದ ಪ್ರಾಯೋಗಿಕ ಸಂಶೋಧನೆಗಳಲ್ಲಿ ನವಶಿಲಾಯುಗದ ಅವಶೇಷಗಳನ್ನುಳ್ಳ ಪದರಗಳ ಕೆಳಭಾಗದಲ್ಲಿ ಈ ಸಂಸ್ಕೃತಿಗಳ ಅವಶೇಷಗಳು ದೊರೆತಿರುವುದರಿಂದಲೂ ಮತ್ತು ಆ ಕಾಲದಲ್ಲಿ ಮಡಕೆಗಳ ಉಪಯೋಗ ಗೊತ್ತಿಲ್ಲದಿದ್ದು, ಸೂಕ್ಷ್ಮಶಿಲಾಯುಧಗಳು ಬಹಳ ಪುರಾತನ ರೀತಿಯವುಗಳಾಗಿದ್ದುದರಿಂದಲೂ ಸಾಕಷ್ಟು ಹಿಂದಿನ ಕಾಲದಲ್ಲೇ ಇಲ್ಲಿ ಈ ಸಂಸ್ಕೃತಿ ರೂಢಿಯಲ್ಲಿತ್ತೆಂದು ಹೇಳಬಹುದಾಗಿದೆ.

ಒರಿಸ್ಸದ, ಏಕೆ ಇಡೀ ಭಾರತದ, ಪ್ರಾಕ್ತನಶಾಸ್ತ್ರದಲ್ಲಿ ಬಗೆಹರಿಸಲಾಗದೇ ಉಳಿದಿರುವ ಒಂದು ಸಮಸ್ಯೆಯೆಂದರೆ ಗಂಗಾನದಿಯ ಬಯಲು, ಮಧ್ಯಪ್ರದೇಶ ಮತ್ತು ಒರಿಸ್ಸ ಪ್ರದೇಶಗಳಲ್ಲಿ ಆಕಸ್ಮಿಕವಾಗಿ ದೊರೆತಿರುವ ತಾಮ್ರದ ಉಪಕರಣಗಳ ಸಂಗ್ರಹಣೆಗಳದು. ಒರಿಸ್ಸದ ಗುಂಜೆರಿಯಾ, ದ್ರುನಿಯಾ, ಝುಷ್‍ಪುರ್, ಬಾಣಸುರಿಯ, ಬಸ್ಸಿಯಾ, ತಾಮಜೂರಿ, ಸಿತಾಭಂಜಿ, ದಶ್‍ಪಲ್ಲಾ—ಮುಂತಾದೆಡೆಗಳಲ್ಲದೆ ಬಿಹಾರ ಮತ್ತು ಮಧ್ಯಪ್ರದೇಶದ ಹಲವೆಡೆಗಳಲ್ಲೂ ಈ ರೀತಿಯ ಸಂಗ್ರಹಣೆಗಳು ಕಂಡುಬಂದಿವೆ. ಚಪ್ಪಟೆಯಾದ ಉಳಿ, ಭುಜಗಳುಳ್ಳ ಉಳಿ, ಉದ್ದನಾದ ಉಳಿ, ಪರಶು, ಇಬ್ಬದಿಯಲ್ಲೂ ಚೂಪಾಗಿರುವ ಕೊಡಲಿ, ಈಟಿಗಾಳ, ಮೋಟು ಕತ್ತಿ, ಗುರಾಣಿಯ ಮೊನೆ, ದೊಡ್ಡ ಉಂಗುರ, ಮಾನವಾಕಾರದ ಉಪಕರಣಗಳು–ಮುಂತಾದವು ಈ ಸಂಗ್ರಹಣೆಗಳಲ್ಲಿರುತ್ತಿದ್ದು ಭಾರತ ಅಥವಾ ಪ್ರಪಂಚದ ಮತ್ತಾವ ಭಾಗದಲ್ಲೂ ಇವನ್ನು ಹೋಲುವ ಆಯುಧೋಪಕರಣಗಳು ಈವರೆಗೆ ಕಂಡುಬಂದಿಲ್ಲ. ಮೇಲಿನ ಉಪಕರಣಗಳಲ್ಲಿ ಕೆಲವು ಇತರ ಪ್ರಾಕ್ತನಸಂಸ್ಕೃತಿಯ ಅವಶೇಷಗಳೊಡನೆ ದೊರೆತಿವೆ. ನವ್ದತೋಲಿ (ಮಧ್ಯ ಪ್ರದೇಶ), ಚಾರಿದೋಲಿ (ಮಹಾರಾಷ್ಟ್ರ) ಮತ್ತು ಖುರ್ದಿ (ರಾಜಾಸ್ಥಾನ) ಮುಂತಾದೆಡೆಗಳಲ್ಲಿ ಚಪ್ಪಟೆಯಾದ ಉಳಿ ದೊರೆತಿವೆ. ಭುಜಗಳುಳ್ಳ ಕಲ್ಲಿನ ಉಳಿ ಪೂರ್ವ ಭಾರತದ ನವಶಿಲಾಯುಗ ಸಂಸ್ಕೃತಿಗಳಲ್ಲಿ ವಿಶೇಷವಾಗಿ ಬಳಕೆಯಲ್ಲಿತ್ತು. ಮೋಟುಕತ್ತಿಗಳು ಪಶ್ಚಿಮ ಏಷ್ಯ ಮತ್ತು ಆಫ್ಘಾನಿಸ್ತಾನ ಪ್ರದೇಶಗಳಲ್ಲಿ ಬಳಕೆಯಲ್ಲಿದ್ದುವು. ಆದರೆ ಈ ಸಂಗ್ರಹಣೆಯಲ್ಲಿರುವ ಎಲ್ಲ ರೀತಿಯ ಆಯುಧಗಳು ಎಲ್ಲೂ ಒಟ್ಟಿಗೆ ದೊರೆತಿಲ್ಲ. ದುರದೃಷ್ಟವಶಾತ್ ಆ ಉಪಕರಣಗಳು ಯಾವ ಸಂಸ್ಕೃತಿಗೆ ಸೇರಿದುವೆಂದು ನಿರ್ದೇಶಿಸಲು ಬೇಕಾದ ಪ್ರಾಕ್ತನ ಆಧಾರಗಳು ಈವರೆಗೂ ಕಂಡುಬಂದಿಲ್ಲ. ಈ ಸಂಗ್ರಹಣೆಗಳು ದೊರೆತ ಎರಡು ನೆಲೆಗಳು—ಬಿಸೌಲಿ ಮತ್ತು ರಾಜ್‍ಪುರ್ ಪಾರ್ಸ್ಸು. ಇಲ್ಲಿ ನಡೆದ ಭೂಶೋಧನೆಗಳಲ್ಲಿ ಈ ಉಪಕರಣಗಳೊಂದಿಗೆ ಯಾವ ಸಂಬಂಧವಿಲ್ಲದಿದ್ದರೂ ತಳಗಿನ ಪದರಗಳಲ್ಲಿ ದೊರೆತಿರುವ ಕೆಮ್ಮಣ್ಣುಲೇಪಿತವಾಗಿರುವ ಮಡಕೆಚೂರುಗಳು ಹಸ್ತಿನಾಪುರ ನೆಲೆಯಲ್ಲಿ ಬೂದುಬಣ್ಣದ ವರ್ಣಲೇಪಿತ ಮಡಕೆಗಳು ದೊರೆತಿರುವುದಕ್ಕಿಂತಲೂ ಹಳೆಯ ಪದರಗಳಲ್ಲಿ ದೊರೆತಿರುವುದರಿಂದಲೂ ಬೂದುಬಣ್ಣದ ವರ್ಣಲೇಪಿತ ಮಡಕೆಗಳಿಗೆ ಸಂಬಂಧಿಸಿದ ಸಂಸ್ಕೃತಿ ಕ್ರಿ.ಪೂ. 2ನೆಯ ಸಹಸ್ರಮಾನದ ಉತ್ತರಾರ್ಧಕ್ಕೆ ನಿರ್ದೇಶಿತವಾಗಿರುವುದರಿಂದಲೂ ಈ ತಾಮ್ರದ ಉಪಕರಣಗಳನ್ನು ಕ್ರಿ.ಪೂ. 2ನೆಯ ಸಹಸ್ರಮಾನದ ಪೂರ್ವಾರ್ಧಕ್ಕೆ ತಾತ್ಕಾಲಿಕವಾಗಿ ನಿರ್ದೇಶಿಸಲಾಗಿದೆ. ಬಹುಶಃ ಹರಪ್ಪಾ ಸಂಸ್ಕೃತಿ ಅಳಿದ ಅನಂತರ ಸಿಂಧೂ ಬಯಲಿನಿಂದ ಪಲಾಯನಗೈಯುತ್ತಿದ್ದವರೋ ಭಾರತಕ್ಕೆ ವಲಸೆಬಂದ ಆರ್ಯಜನರ ಮೊದಲ ಪಂಗಡದವರೋ ಈ ಉಪಕರಣಗಳ ಕರ್ತೃಗಳಾಗಿರಬೇಕೆಂದು ಊಹಿಸಲಾಗಿದೆ.

ಒರಿಸ್ಸದಲ್ಲಿ ನೂತನಶಿಲಾಯುಗ ಸಂಸ್ಕೃತಿಯ ಅವಶೇಷಗಳು ವಿಪುಲವಾಗಿ ದೊರೆತಿರುವುದೇನೋ ನಿಜ. ಆದರೆ ಇತ್ತೀಚಿನ ವರೆಗೂ ಈ ಅವಶೇಷಗಳನ್ನು ಭೂಮಿಯ ಮೇಲ್ಭಾಗದಿಂದ ಮಾತ್ರ ಸಂಗ್ರಹಿಸಿರುವುದರಿಂದ ಅವುಗಳ ಸಾಂಸ್ಕೃತಿಕ ಹಂತ ಮತ್ತು ಐತಿಹಾಸಿಕ ಮಹತ್ತ್ವಗಳೇನೆಂಬುದನ್ನು ನಿರ್ಧರಿಸಲಾಗಿಲ್ಲ. ಈ ಅವಶೇಷಗಳು ಸಾಧಾರಣವಾಗಿ ಪೂರ್ವಭಾರತ ನವಶಿಲಾಯುಗದ ಅವಶೇಷಗಳನ್ನೇ ಹೋಲುವುದರಿಂದ ಈ ಸಂಸ್ಕೃತಿಯನ್ನು ಆ ಗುಂಪಿಗೆ ಸೇರಿಸಲಾಗಿದೆ. ಇತ್ತೀಚೆಗೆ ಮಯೂರ್‍ಭಂಜ್ ಜಿಲ್ಲೆಯಲ್ಲೂ ಸಂಜಯ್ ಮತ್ತು ಬರ್ಹಾಬಲಂಗ ನದೀಬಯಲುಗಳಲ್ಲೂ ಹೆಚ್ಚು ಸಂಖ್ಯೆಯಲ್ಲಿ ಈ ಆಯುಧಗಳನ್ನು ಸಂಗ್ರಹಿಸಿರುವುದಲ್ಲದೆ ಗಂಜಾಮ್ ಜಿಲ್ಲೆಯ ಜೌಗಡ ಎಂಬಲ್ಲಿ ನಡೆದ ಭೂಶೋಧನೆಗಳಲ್ಲಿ ಕ್ರಿ.ಪೂ. 300 ವರ್ಷಗಳ ಸುಮಾರಿನಲ್ಲಿ ರೂಢಿಯಲ್ಲಿದ್ದ ಕಬ್ಬಿಣಯುಗದ ಸಂಸ್ಕೃತಿ ಪದರಗಳಿಗಿಂತಲೂ ಹಳೆಯ ಪದರಗಳಲ್ಲಿ ಈ ಆಯುಧಗಳು ದೊರೆತಿವೆ. ಕೇಂದ್ರ ಪ್ರಾಕ್ತನಶಾಸ್ತ್ರ ಇಲಾಖೆಯವರು ಮಯೂರ್‍ಭಂಜ್ ಜಿಲ್ಲೆಯ ಬಾರಿಪದಾ ಬಳಿ ನಡೆಸಿದ ಭೂಶೋಧನೆಗಳಲ್ಲಿ ಪುರಾತನವಾದ ಸೂಕ್ಷ್ಮಶಿಲಾಯುಗದ ಸಂಸ್ಕೃತಿಯ ಅವಶೇಷಗಳು ದೊರೆತ ಪದರಗಳ ಅನಂತರದ ಮಟ್ಟದಲ್ಲಿ ನಯಗೊಳಿಸಿದ ಕಲ್ಲಿನ ಆಯುಧಗಳೂ ಒರಟಾದ ಮಡಕೆ ಚೂರುಗಳೂ ಚಕ್ಕೆಕಲ್ಲಿನ ಆಯುಧಗಳೂ ದೊರೆತು ಒರಿಸ್ಸದ ನವಶಿಲಾಯುಗದ ಸಂಸ್ಕೃತಿಗೆ ಸಾಕಷ್ಟು ಪುರಾತನತೆಯನ್ನು ದೊರಕಿಸಿಕೊಟ್ಟಿವೆ.

ಅನಂತರ ಕಬ್ಬಿಣಯುಗಕ್ಕೆ ಸೇರಿದ ಐತಿಹಾಸಿಕ ಆರಂಭಯುಗದ ಸಂಸ್ಕೃತಿಯ ಕುರುಹುಗಳು ಈ ಪ್ರಾಂತ್ಯದ ಹಲವಾರೆಡೆಗಳಲ್ಲಿ ದೊರೆತಿವೆ. ಭೂಶೋಧನೆ ನಡೆದಿರುವ ಎರಡು ನೆಲೆಗಳ ಮಾಹಿತಿಗಳನ್ನು ಇಲ್ಲಿ ಪರಿಶೀಲಿಸಬಹುದು. ನೆರೆಯ ಗಂಗಾನದೀ ಬಯಲಿನಲ್ಲಿ ಈ ವೇಳೆಗಾಗಲೇ ಚಾರಿತ್ರಿಕ ನಗರೀಕರಣ ರೂಢಿಗೆ ಬಂದಿದ್ದು ಸುವ್ಯವಸ್ಥಿತ ರಾಜ್ಯಾಡಳಿತ ಪದ್ಧತಿ ಜಾರಿಯಲ್ಲಿತ್ತೆಂಬುದನ್ನು ಇಲ್ಲಿ ಸ್ಮರಿಸಬಹುದು. ಭುವನೇಶ್ವರದ ಬಳಿಯಿರುವ ಶಿಶುಪಾಲಘರ್ ನೆಲೆಯಲ್ಲಿ ನಡೆದ ಭೂಶೋಧನೆಗಳಿಂದ ತಿಳಿದುಬಂದಿರುವಂತೆ ಇಲ್ಲಿ ಒಂದು ಬಲವಾದ ಮಣ್ಣಿನ ಕೋಟೆಯನ್ನು ಚಚ್ಚೌಕ ತಳಹದಿಯ ಮೇಲೆ ಕಟ್ಟಲಾಗಿತ್ತು. ಅದರ ಇಬ್ಬದಿಯ ಗೋಡೆಗಳೂ ಮುಕ್ಕಾಲು ಮೈಲಿ ಉದ್ದವಾಗಿದ್ದು ಅಲ್ಲಿ ನಯಮಾಡಿದ ಚಚ್ಚೌಕವಾದ ಕಲ್ಲಿನ ಕಂಬಗಳಿಂದ ಕೂಡಿದ್ದ ಮುನ್‍ಚಾಚಿದ ಎರಡು ಮಹಾದ್ವಾರಗಳಿದ್ದುವು. ಸುವ್ಯವಸ್ಥಿತ ಮತ್ತು ಸುಭದ್ರವಾಗಿರುವ ಈ ಕೋಟೆ ಪ್ರಭಾವಶಾಲಿ ಕೇಂದ್ರೀಕೃತ ಆಡಳಿತವಿದ್ದುದನ್ನು ಸೂಚಿಸುತ್ತದೆ. ಸುಮಾರು ಇದೇ ಕಾಲಕ್ಕೆ ನಿರ್ದೇಶಿಸಬಹುದಾದ ದಕ್ಷಿಣ ಒರಿಸ್ಸದ ಗಂಜಾಮ್ ಜಿಲ್ಲೆಯಲ್ಲಿ ಋಷಿಕುಲ್ಯ ನದೀದಂಡೆಯಲ್ಲಿರುವ ಜೌಗಡದಲ್ಲಿ 25 ಅಡಿಗಳೆತ್ತರದ ಮಣ್ಣಿನ ಕೋಟೆ ಮತ್ತು ಮುಂದುವರಿದ ಜನಜೀವನವನ್ನು ರೂಪಿಸುವ ಕಬ್ಬಿಣಯುಗದ ಸಂಸ್ಕೃತಿಯ ಅವಶೇಷಗಳು ಭೂಶೋಧನೆಗಳಲ್ಲಿ ಕಂಡುಬಂದಿವೆ. ಈ ನೆಲೆಯ ಬಳಿಯಲ್ಲಿ ಅಶೋಕ ಚಕ್ರವರ್ತಿಯ ಹದಿನಾಲ್ಕು ಶಿಲಾಶಾಸನಗಳ ಪ್ರತಿಗಳೂ ಇರುವುದರಿಂದ ಈ ವೇಳೆಗಾಗಲೇ ಐತಿಹಾಸಿಕ ಯುಗದ ಉದಯವಾಗಿತ್ತೆನ್ನಬಹುದು. (ಬಿ.ಕೆ.ಜಿ.)

**ಒರಿಸ್ಸದ ವಾಸ್ತುಶಿಲ್ಪ :** ಅತ್ಯಂತ ಪ್ರಾಚೀನ (ಕ್ರಿ.ಶ. 750–900) ದೇವಾಲಯಗಳಾದ ಪರಶುರಾಮೇಶ್ವರ ಮತ್ತು ವೈತಾಲ್ ದೇವಾಲಯಗಳು ಒರಿಸ್ಸ ಶೈಲಿಯ ಉಗಮವನ್ನು ತಿಳಿಯಲು ಬಹು ಸಹಾಯಕವಾಗಿವೆ. ಪರಶುರಾಮೇಶ್ವರ ದೇವಾಲಯ 48 ಅಡಿ ಉದ್ದವಾಗಿದ್ದು, 44 ಅಡಿ ಎತ್ತರದ ಶಿಖರವನ್ನು ಹೊಂದಿದೆ. ಶಿಖರ ನಾಜೂಕಾಗಿಲ್ಲ. ಕೆಲವು ವಿಷಯಗಳಲ್ಲಿ ಇದು ಐಹೊಳೆಯ ದೇವಾಲಯಗಳನ್ನು ಹೋಲಿದರೆ, ಮತ್ತೆ ಕೆಲವು ಅಂಶಗಳಲ್ಲಿ ಗುಪ್ತರ ಶೈಲಿಯ ಪ್ರಭಾವವನ್ನು ವ್ಯಕ್ತಪಡಿಸುತ್ತದೆ. ವೈತಾಲ್ ದೇವಾಲಯ ಸಣ್ಣದಾಗಿದ್ದರೂ ಪರಶುರಾಮೇಶ್ವರ ದೇವಾಲಯಕ್ಕಿಂತ ಅಂದವಾಗಿದ್ದು ಉತ್ತರ ಮತ್ತು ದಕ್ಷಿಣ ವಾಸ್ತುಶೈಲಿಗಳ ಸಮ್ಮಿಳನದಂತಿದೆ. ಭುವನೇಶ್ವರ ನಗರದ ಹೊರಗಿರುವ ಮುಕ್ತೇಶ್ವರ (ಕ್ರಿ.ಶ. 975),



ಭುವನೇಶ್ವರದಲ್ಲಿನ ಲಿಂಗರಾಜ ದೇವಾಲಯದಲ್ಲಿ ಸಣ್ಣ ಗುಡಿಯೊಂದರೊಳಗಿನ ಮೂರ್ತಿ


ಕೋಣಾರ್ಕದ ಸೂರ್ಯದೇವಾಲಯದ ಮುಂದೆ ಇರುವ ಕುದುರೆಯ ಶಿಲ್ಪಾಕೃತಿ


ಭುವನೇಶ್ವರದ ಸನಿಯದಲ್ಲಿರುವ ಧೌಲಿ ಶಿಲಾಶಾಸನದ ಒಂದು ಪಾರ್ಶ್ವದಲ್ಲಿರುವ ಆನೆ


ಕೋಣಾರ್ಕದಲ್ಲಿನ ಸೂರ್ಯದೇವಾಲಯದಲ್ಲಿರುವ ಒಂದು ಸೂರ್ಯಶಿಲ್ಪ


ಭುವನೇಶ್ವರದಲ್ಲಿನ ಲಿಂಗರಾಜ ದೇವಾಲಯ (ದಕ್ಷಿಣ ದಿಕ್ಕಿನಿಂದ)

ಭುವನೇಶ್ವರದ ಲಿಂಗರಾಜ (ಕ್ರಿ.ಶ. 1000) ಮತ್ತು ಪುರಿಯ ಜಗನ್ನಾಥ (ಕ್ರಿ.ಶ. 1100) ದೇವಾಲಯಗಳು ಒರಿಸ್ಸ ವಾಸ್ತುಶಿಲ್ಪದ ಎರಡನೆಯ ಹಂತಕ್ಕೆ ಉತ್ತಮ ಉದಾಹರಣೆಗಳು. ಮುಕ್ತೇಶ್ವರ ದೇವಾಲಯದಲ್ಲಿ ಒಳಗಿನ ಗೋಡೆಗಳು ಶಿಲ್ಪಗಳಿಂದ ಅಲಂಕೃತವಾಗಿರುವುದನ್ನು ಗಮನಿಸಬೇಕು. 520 ಅಡಿ ಉದ್ದ ಮತ್ತು 465 ಅಡಿ



ಕೆತ್ತನೆಯ ಕೆಲಸ (ಗೋಪಾಲಕೃಷ್ಣ)

ಅಗಲ ಪ್ರದೇಶದಲ್ಲಿರುವ ಲಿಂಗರಾಜ ದೇವಾಲಯ ಎತ್ತರವಾದ ಗೋಡೆಯಿಂದ ಆವೃತವಾಗಿದೆ. ಇದರಲ್ಲಿ ಮೂಲ ದೇವಾಲಯದ ಮಾದರಿಯಲ್ಲಿಯೇ ಇರುವ ಸಣ್ಣ ದೇವಾಲಯಗಳು ಅನೇಕವಿವೆ. ಲಿಂಗರಾಜ ದೇವಾಲಯದ ನಟಮಂದಿರ ಮತ್ತು ಭೋಗಮಂದಿರಗಳು ಮುಂದೆ ದೇವಾಲಯಕ್ಕೆ ಸೇರಿಸಲ್ಪಟ್ಟವು. ಇಲ್ಲಿನ ಮುಖ್ಯ ಆಕರ್ಷಣೆಯೆಂದರೆ ದೇವಾಲಯದ ಮೇಲಿರುವ 125 ಅಡಿ ಎತ್ತರದ ಶಿಖರ. ಒಳಬಾಗುಳ್ಳ ಅಲಂಕೃತವಾದ ಈ ಶಿಖರ ಅತ್ಯಂತ ಮನಮೋಹಕವಾಗಿದೆ. ದೇವಾಲಯದ ಹೊರ ಮತ್ತು ಒಳಗೋಡೆಗಳು ಸುಂದರ ಶಿಲ್ಪಗಳಿಂದ ತುಂಬಿವೆ. ಕ್ರಿ.ಶ. 1100ರಲ್ಲಿ ಅನಂತವರ್ಮ ಚೋಡಗಂಗ ರಾಜ ಪುರಿಯ ಜಗನ್ನಾಥ ದೇವಾಲಯದ ನಿರ್ಮಾಣ ಕಾರ್ಯವನ್ನು ಪ್ರಾರಂಭಿಸಿದ. ಇದು ಎಲ್ಲ ವಿಧಗಳಲ್ಲಿಯೂ ಲಿಂಗರಾಜ ದೇವಾಲಯವನ್ನೇ ಹೋಲುತ್ತದೆ. 310 ಅಡಿ ಉದ್ದ, 80 ಅಡಿ ಅಗಲವಿರುವ ಜಗನ್ನಾಥ ದೇವಾಲಯದ ಶಿಖರ 200 ಅಡಿ ಎತ್ತರವಿದೆ. ಇದು ಸಣ್ಣ ದಿಣ್ಣೆಯ ಮೇಲೆ ನಿರ್ಮಿತವಾಗಿರುವುದರಿಂದ, ಎತ್ತರದ ಈ ಶಿಖರ ಐದಾರು ಮೈಲಿಗಳ ದೂರದಿಂದಲೂ ಬೃಹದಾಕಾರವಾಗಿ ಎದ್ದು ಕಾಣುತ್ತದೆ. ಸಮುದ್ರದ ಗಾಳಿಯ ಹೊಡೆತಕ್ಕೆ ಸಿಕ್ಕಿರುವ ಈ ದೇವಾಲಯ ಲಿಂಗರಾಜ ದೇವಾಲಯದಷ್ಟು ಸುಂದರವಾಗಿ ಕಾಣುವುದಿಲ್ಲ. ಇಲ್ಲಿಯ ನಟಮಂದಿರ 80 ಅಡಿ ಪಾರ್ಶ್ವದ ಚೌಕಾಕಾರದಲ್ಲಿದ್ದು. ಇದರ ಚಾವಣಿ ಹದಿನಾರು ಕಂಬಗಳ ಮೇಲೆ ನಿಂತಿದೆ. ಒರಿಸ್ಸದಲ್ಲಿರುವ ಕೆಲವೇ ಸ್ತಂಭಮಂಟಪಗಳಲ್ಲಿ ಇದು ಮುಖ್ಯವಾದುದು. ಜಗನ್ನಾಥ ದೇವಾಲಯದ ಸುತ್ತಲೂ ಅನೇಕ ಸಣ್ಣ ದೇವಾಲಯಗಳಿವೆ. ಇವೆಲ್ಲವೂ ಸಮಾನಕೇಂದ್ರಕಗಳಾದ ಮೂರು ಗೋಡೆಗಳೊಳಗೆ ಇವೆ. ಈ ಗೋಡೆಗಳ ಮಧ್ಯದಲ್ಲಿ ಗೋಪುರಗಳಿವೆ.

ಒರಿಸ್ಸ ಶೈಲಿಯ ಮೂರನೆಯ ಹಂತ ಕ್ರಿ.ಶ. 1100–1250ರ ಅವಧಿಯಲ್ಲಿ ಬೆಳೆಯಿತು. ಈ ಹಂತದ ದೇವಾಲಯಗಳು ಸಾಮಾನ್ಯವಾಗಿ ಗಾತ್ರದಲ್ಲಿ ಮಧ್ಯಮವರ್ಗಕ್ಕೆ ಸೇರಿದವು. ಅಂದರೆ ಮುಕ್ತೇಶ್ವರದಷ್ಟು ಸಣ್ಣವೂ ಅಲ್ಲ, ಲಿಂಗರಾಜದಷ್ಟು



ಕೋಣಾರ್ಕದ ಸೂರ್ಯದೇವಾಲಯದ ಚಕ್ರವೊಂದರ ಅರದ ಮೇಲಿರುವ ಶಿಲ್ಪ



ಭುವನೇಶ್ವರದ ಲಿಂಗರಾಜ ದೇವಾಲಯದಲ್ಲಿರುವ ಸೂರ್ಯಮೂರ್ತಿ

ದೊಡ್ಡವೂ ಅಲ್ಲ. ಭುವನೇಶ್ವರದಲ್ಲಿಯೇ ಈ ರೀತಿಯ ಸುಮಾರು ಹನ್ನೆರಡು ದೇವಾಲಯಗಳಿವೆ. ಸಾಮಾನ್ಯವಾಗಿ ಅವುಗಳಲ್ಲಿ ಬಹು ಮುಖ್ಯವಾದ ದೇವುಲ್ ಮತ್ತು ಜಗಮೋಹನ್ ಎಂಬ ಭಾಗಗಳು ಮಾತ್ರ ಇರುತ್ತವೆ. ನಟಮಂದಿರಗಳು ಸಾಮಾನ್ಯವಾಗಿ ಇರುವುದಿಲ್ಲ. ಭುವನೇಶ್ವರದ ಅನಂತವಾಸುದೇವ ದೇವಾಲಯ 125 ಅಡಿ ಉದ್ದ 40 ಅಡಿ ಅಗಲವಿದ್ದು ಅದರ ಶಿಖರ 68 ಅಡಿ ಇದೆ. ಇದೇ ಹಂತದ ಮತ್ತೊಂದು ದೇವಾಲಯ, ಭುವನೇಶ್ವರದ ರಾಜರಾಣಿ ದೇವಾಲಯ. ಇದರಲ್ಲಿ ದೇವುಲ್ ಮಾತ್ರ ಪೂರ್ಣವಾಗಿದ್ದು, ಜಗಮೋಹನ್ ಪೂರ್ಣವಾಗಿ ನಿರ್ಮಾಣವಾಗಿಲ್ಲ.



ಕೆತ್ತನೆಯ ಕೆಲಸ (ಆಮೆ)

ಈ ಹಂತದ ಅತ್ಯಂತ ಮುಖ್ಯ ಉದಾಹರಣೆ ಕೋಣಾರ್ಕದ ಸೂರ್ಯದೇವಾಲಯ. ಸಮುದ್ರತೀರದಲ್ಲಿದ್ದು ಪುರಿಯಿಂದ ಇಪ್ಪತ್ತು ಮೈಲಿ ದೂರದಲ್ಲಿರುವ ಈ ದೇವಾಲಯ ನರಸಿಂಹದೇವನಿಂದ (ಕ್ರಿ.ಶ. 1238–63) ನಿರ್ಮಾಣ ಮಾಡಲ್ಪಟ್ಟಿತು. ಇದರ ಬಹುಭಾಗ ಈಗ ಹಾಳುಬಿದ್ದಿದೆ. ಇದು ಪೂರ್ಣವಾಗಿ ನಿರ್ಮಾಣವಾಗುವುದಕ್ಕೆ ಮೊದಲೇ ಇದರ ಅಸ್ತಿಭಾರ ಬಿರುಕುಬಿಟ್ಟಿತೆಂದೂ ಅದರಿಂದ ಇದರ ಮೇಲ್ಭಾಗಗಳು ನಿರ್ಮಾಣವಾಗಲಿಲ್ಲವೆಂದೂ ಕೆಲವರ ಅಭಿಪ್ರಾಯ. ದೇವಾಲಯ ಏಳು ಕುದುರೆಗಳನ್ನು ಹೂಡಿದ ರಥದಂತೆ ನಿರ್ಮಾಣವಾಗಿದೆ. ಎತ್ತರದ ಜಗಲಿಯ ಎರಡು ಕಡೆಗಳಲ್ಲಿಯೂ



ಭುವನೇಶ್ವರದ ಬಳಿಯಲ್ಲಿರುವ ಉದಯಗಿರಿಯ ರಾಣಿಗುಂಫದಲ್ಲಿನ ಶಿಲ್ಪಪಟ್ಟಿಕೆ
(ಕಾಲ : ಕ್ರಿ. ಪೂ. ಸು. 1ನೆಯ ಶತಮಾನ)

10 ಅಡಿ ಎತ್ತರದ ಹನ್ನೆರಡು ಚಕ್ರಗಳಿವೆ. ನಟಮಂದಿರ ಮತ್ತು ಜಗಮೋಹನಗಳೆರಡೂ ಇವೆ. ಅಕ್ಕಪಕ್ಕದಲ್ಲಿ ಸಣ್ಣ ಸಣ್ಣ ಇತರ ದೇವಾಲಯಗಳಿವೆ. ಇವೆಲ್ಲವೂ 875 ಅಡಿ ಉದ್ದ ಮತ್ತು 540 ಅಡಿ ಅಗಲದ ಅಂಗಳದಲ್ಲಿ ನಿರ್ಮಿತವಾಗಿವೆ. ಅಲ್ಲಲ್ಲಿ ಶಿಲ್ಪಗಳೂ ಶಿಲ್ಪಫಲಕಗಳೂ ಬಿದ್ದಿವೆ. ಇವೆಲ್ಲವನ್ನೂ ದೇವಾಲಯ ಪೂರ್ಣವಾದ ಮೇಲೆ ಉಪಯೋಗಿಸಲು ಮಾಡಿರಬೇಕೆಂದು ಕೆಲವರ ಅಭಿಪ್ರಾಯ. 'ಇದು ಅಸಾಧಾರಣ ಪ್ರತಿಭೆಯ ಕುರುಹು, ಈ ಘನ ಕಾರ್ಯ ಕಾರ್ಯಗತವಾಗದೇ ಇದ್ದುದರಿಂದ ಇದೊಂದು ದೊಡ್ಡ ಅಪಜಯ' ಎಂದು ಘನವಿದ್ವಾಂಸ ಪರ್ಸಿ ಬ್ರೌನ್ ಹೇಳಿದ್ದಾನಲ್ಲದೆ ಇದು ಭಾರತೀಯ ಶಿಲ್ಪಿಯ ಅತ್ಯಂತ ಸಾಹಸಮಯ ಕೆಲಸವೆಂದು ಹೊಗಳಿದ್ದಾನೆ. ಮತ್ತೆ ಒರಿಸ್ಸದ ವಾಸ್ತುಶಿಲ್ಪ ಈ ಸ್ಥಿತಿಯನ್ನು ಮುಟ್ಟಲೇ ಇಲ್ಲ.

(ಎಸ್‍ಯು.ಕೆ.; ಎ.ವಿ.ಎನ್.)

**ಒರಿಸ್ಸದ ಶಾಸನಗಳು, ನಾಣ್ಯಗಳು :** ಒರಿಸ್ಸದ ಪ್ರಾಚೀನ ಹಾಗೂ ಮಧ್ಯಕಾಲೀನ ಚರಿತ್ರೆಯನ್ನು ತಿಳಿಯಲು ಅಲ್ಲಿನ ನಾಣ್ಯಗಳಿಗಿಂತ ಶಿಲಾ ಮತ್ತು ತಾಮ್ರಶಾಸನಗಳು ಹೆಚ್ಚಿನ ಮಾಹಿತಿಯನ್ನೊದಗಿಸುತ್ತವೆ. ಒರಿಸ್ಸದ ಅತ್ಯಂತ ಪ್ರಾಚೀನ ಶಾಸನಗಳೆಂದರೆ ಮೌರ್ಯರಾಜನಾದ ಅಶೋಕನ ಕಾಲದವು. ಭುವನೇಶ್ವರದ ಸಮೀಪದಲ್ಲಿರುವ ಧೌಲಿ ಎಂಬಲ್ಲಿಯೂ ಮತ್ತು ಗಂಜಾಂ ಜಿಲ್ಲೆಯ ಜೌಗಡ ಎಂಬಲ್ಲಿಯೂ ಇವು ದೊರೆತಿವೆ. ಇವುಗಳಿಂದ ಈ ಭಾಗ ಮೌರ್ಯ ಚಕ್ರಾಧಿಪತ್ಯಕ್ಕೆ ಸೇರಿದ್ದಿತೆಂದೂ ಧೌಲಿ ಮತ್ತು ಜೌಗಡಗಳಿಂದ ಇದನ್ನು ಇಬ್ಬರು ಪ್ರಾಂತಾಧಿಕಾರಿಗಳು ಆಳುತ್ತಿದ್ದರೆಂದೂ ಗೊತ್ತಾಗುತ್ತದೆ. ಚೇದಿವಂಶದ ರಾಜನಾದ ಖಾರವೇಲನ ಹಾಥಿಗುಂಫ ಶಾಸನವೇ (ಕ್ರಿ.ಪೂ. ಎರಡನೆಯ ಶತಮಾನ) ಒರಿಸ್ಸದ ಶಾಸನಗಳಲ್ಲಿ ಮುಂದಿನದು. ಈ ಶಾಸನ ಪುರಿ ಜಿಲ್ಲೆಯ ಉದಯಗಿರಿಗೆ ಸಮೀಪದಲ್ಲಿರುವ ಗುಹೆಯೊಂದರಲ್ಲಿ ದೊರೆಯಿತು. ಖಾರವೇಲನ ದಿಗ್ವಿಜಯಗಳನ್ನು ಇದು ಕಾಲಕ್ರಮವಾಗಿ ವರ್ಣಿಸುತ್ತದೆ. ಒರಿಸ್ಸ ದೇಶದ ಅಂದಿನ ರಾಜಕೀಯ ಮತ್ತು ಸಾಂಸ್ಕೃತಿಕ ಚರಿತ್ರೆಯನ್ನು ತಿಳಿಯಲು ಈ ಶಾಸನ ಬಹು ಉಪಯುಕ್ತವಾಗಿದೆ.

ಶಿಲಾಶಾಸನಗಳು ಒರಿಸ್ಸದ ಪ್ರಾಚೀನ ಚರಿತ್ರೆಯನ್ನು ತಿಳಿಯಲು ಸಹಾಯಕವಾದರೆ, ತಾಮ್ರಶಾಸನಗಳು ಕ್ರಿ.ಶ. ನಾಲ್ಕನೆಯ ಶತಮಾನದಿಂದ ಈಚಿನ ಚರಿತ್ರೆಯನ್ನು ತಿಳಿಯಲು ಉಪಯುಕ್ತವಾಗಿವೆ. ಆಂಧ್ರದ ಶ್ರೀಕಾಕುಳಂ ಮತ್ತು ಗಂಜಾಂ ಜಿಲ್ಲೆಗಳಲ್ಲಿ ದೊರೆತಿರುವ ಶಿಲಾಶಾಸನಗಳು ದಕ್ಷಿಣ ಒರಿಸ್ಸದಲ್ಲಿ ಆಳಿದ ಮಠರರು, ವಸಿಷ್ಠರು ಮುಂತಾದ ರಾಜವಂಶಗಳ ಚರಿತ್ರೆಯನ್ನು ತಿಳಿಸುತ್ತವೆ. ಪುರಿ, ಕಟಕ್ ಮತ್ತು ಗಂಜಾಂ ಜಿಲ್ಲೆಗಳಲ್ಲಿ ದೊರಕಿರುವ ಶಿಲಾಶಾಸನಗಳು ಕ್ರಿ.ಶ. ಐದರಿಂದ ಏಳರವರೆಗೆ ಒರಿಸ್ಸದಲ್ಲಿ ಆಳಿದ ಶೈಲೋದ್ಭವ ರಾಜರ ಕಾಲದಲ್ಲಿದ್ದ ರಾಜಕೀಯ ಮತ್ತು ಸಾಂಸ್ಕೃತಿಕ ಸ್ಥಿತಿಗಳನ್ನು ವಿವರಿಸುತ್ತವೆ.

ಕ್ರಿ.ಶ. ಏಳನೆಯ ಶತಮಾನದ ಅನಂತರದ ಚರಿತ್ರೆಯನ್ನು ತಿಳಿಸುವ ತಾಮ್ರಶಾಸನಗಳು ಒರಿಸ್ಸದ ಎಲ್ಲೆಡೆಯಲ್ಲಿಯೂ ಬಹುಸಂಖ್ಯೆಯಲ್ಲಿ ದೊರೆತಿವೆ. ಒರಿಸ್ಸದಲ್ಲಿ ಬ್ರಿಟಿಷರು ಆಳ್ವಿಕೆಯನ್ನು ಸ್ಥಾಪನೆ ಮಾಡುವ ವರೆಗೂ ಆಗಿಹೋದ ರಾಜವಂಶಗಳ ಚರಿತ್ರೆಯನ್ನು ಈ ಶಾಸನಗಳಿಂದ ತಿಳಿಯಬಹುದು. ಈ ಶಾಸನಗಳಲ್ಲಿ ಬಹುಪಾಲು ಭುವನೇಶ್ವರ, ಪುರಿ, ಮುಖಲಿಂಗಂ, ಶ್ರೀಕೂರ್ಮಂ ಮತ್ತು ಸಿಂಹಾಚಲಂ ದೇವಾಲಯಗಳಲ್ಲಿ ದೊರೆತಿವೆ. ಇವು ಪ್ರಮುಖ ರಾಜಮನೆತನಗಳಾದ ಗಂಗರು, ಗಜಪತಿಗಳು ಮುಂತಾದವರ ಚರಿತ್ರೆಯನ್ನು ತಿಳಿಸುವುದಲ್ಲದೆ, ಇತರ ರಾಜಮನೆತನಗಳಾದ ಭೌಮ ಕರರು, ಭಾಂಜರು ಮತ್ತು ಕೇಸರಿಗಳ ಸಾಧನೆಗಳನ್ನೂ ತಿಳಿಸುತ್ತವೆ.

ಒರಿಸ್ಸದಲ್ಲಿ ದೊರೆತಿರುವ ಪ್ರಾಚೀನತಮ ನಾಣ್ಯ ಕುಶಾನ ರಾಜವಂಶಕ್ಕೆ ಸೇರಿದುದು. ಪುರಿ ಮತ್ತು ಗಂಜಾಂ ಜಿಲ್ಲೆಗಳಲ್ಲಿ ಕಾನಿಷ್ಕ ಮತ್ತು ಹುವಿಷ್ಕರ ತಾಮ್ರದ ನಾಣ್ಯಗಳು ದೊರೆತಿವೆ. ಭುವನೇಶ್ವರಕ್ಕೆ ಸಮೀಪದಲ್ಲಿರುವ ಶಿಶುಪಾಲಘರ್ ಎಂಬಲ್ಲಿ ಆದ ಅಗೆತದಲ್ಲಿ ಒಂದು ಕಡೆ ಕುಶಾನ ಚಿಹ್ನೆಯೂ ಮತ್ತೊಂದು ಕಡೆ ರೋಮನ್ನರದೆಂದು ಹೇಳಬಹುದಾದ ಚಿಹ್ನೆಯೂ ಉಳ್ಳ ಚಿನ್ನದ ನಾಣ್ಯವೊಂದು ಸಿಕ್ಕಿದೆ. ಈ ನಾಣ್ಯ ಕುಶಾನ ರಾಜವಂಶದ ವಾಸುದೇವನ ನಾಣ್ಯವೆಂದು ಆಲ್ತೇಕರರು ನಿರ್ಧರಿಸಿದ್ದಾರೆ. ಈ ಕುಶಾನರ ನಾಣ್ಯಗಳಿಂದ ಒರಿಸ್ಸ ಕ್ರಿಸ್ತಶಕೆಯ ಮೊದಲ ಶತಮಾನಗಳಲ್ಲಿ ಕುಶಾನರ ಆಳ್ವಿಕೆಗೆ ಒಳಪಟ್ಟಿದ್ದಿತೆಂದು ಗೊತ್ತಾಗುತ್ತದೆ.

ಮಯೂರ್ ಭಂಜ್‍ನಲ್ಲಿ ದೊರೆತಿರುವ ಚಿನ್ನದ ನಾಣ್ಯಗಳು ಗುಪ್ತರಾಜವಂಶಕ್ಕೆ ಸೇರಿದವು. ಇವುಗಳಿಂದ ಒರಿಸ್ಸದಲ್ಲಿ ಗುಪ್ತರ ಪ್ರಭಾವವಿದ್ದುದು ಗೊತ್ತಾಗುತ್ತದೆ. ಟಂಕೆಗಳೆಂದು ಕರೆಯಲಾಗುವ ನಾಣ್ಯಗಳು ಒರಿಸ್ಸದ ಅನೇಕ ಕಡೆಗಳಲ್ಲಿ ದೊರೆತಿವೆ. ಇವನ್ನು ವಿದ್ವಾಂಸರು ಪುರಿ–ಕುಶಾನ ನಾಣ್ಯವೆಂದು ಕರೆಯುತ್ತಾರೆ. ಏಕೆಂದರೆ ಇವಕ್ಕೂ ಕುಶಾನರ ನಾಣ್ಯಗಳಿಗೂ ಬಹು ಹೋಲಿಕೆಗಳಿವೆ. ಈ ನಾಣ್ಯಗಳು ಒರಿಸ್ಸದಲ್ಲಿ ಕ್ರಿ.ಶ. ನಾಲ್ಕನೆಯ ಶತಮಾನದಿಂದ ಏಳನೆಯ ಶತಮಾನದ ವರೆಗೆ ಆಳಿದ ಸ್ಥಳೀಯ ರಾಜರುಗಳ ನಾಣ್ಯಗಳೆಂದು ಹೇಳಬಹುದು.

ಗಂಗರ ಚಿನ್ನದ ನಾಣ್ಯಗಳನ್ನು ಫನಂ ಎಂದು ಕರೆಯುತ್ತಾರೆ. ಇವುಗಳ ಮೇಲೆ ಗಂಗರ ರಾಜಚಿಹ್ನೆಯಾದ ವೃಷಭದ ಚಿತ್ರವಿದೆ. ಗಂಗರಾಜರ ಕಾಲದಲ್ಲಿ ಒರಿಸ್ಸದ ಆರ್ಥಿಕ ಸ್ಥಿತಿ ಎಷ್ಟೊಂದು ಚೆನ್ನಾಗಿದ್ದಿತೆಂದು ಈ ಚಿನ್ನದ ನಾಣ್ಯಗಳಿಂದ ತಿಳಿಯುತ್ತದೆ. ಇವಲ್ಲದೆ ದೆಹಲಿಯ ಸುಲ್ತಾನರ ಅನೇಕ ನಾಣ್ಯಗಳೂ ಮತ್ತು ಮೊಗಲರ ಅನೇಕ ನಾಣ್ಯಗಳೂ ಒರಿಸ್ಸದ ವಿವಿಧ ಭಾಗಗಳಲ್ಲಿ ದೊರೆತಿವೆ. (ಎಸ್‌ಯು.ಕೆ.)

**ಒರಿಸ್ಸ ನೃತ್ಯಸಂಪ್ರದಾಯ :** ಭರತನಾಟ್ಯ, ಕಥಕ್, ಕಥಕಳಿ, ಮಣಿಪುರಿಗಳಂತೆ ಇದು ಒಂದು ಸ್ವತಂತ್ರ ನೃತ್ಯಕಲಾ ಪ್ರಕಾರ ಎಂಬ ವಾದವನ್ನು ಒಪ್ಪುವುದು ಕಷ್ಟವಾದರೂ ನೃತ್ಯಕಲೆ ಒರಿಸ್ಸದಲ್ಲಿ ಬಹುಪ್ರಾಚೀನ ಕಾಲದಿಂದಲೂ ಪುಷ್ಟವಾಗಿ ಬೆಳೆದಿದೆಯೆಂಬುದನ್ನೂ ಸ್ವಲ್ಪಮಟ್ಟಿಗೆ ಅದರ ಶಾಸ್ತ್ರ, ಕಲೆಗಳಲ್ಲಿನ ಪ್ರಾದೇಶಿಕ ವೈಶಿಷ್ಟ್ಯಗಳ ಮೂಲಕ ಇತರ ಸಂಪ್ರದಾಯಗಳಿಗಿಂತ ಸ್ವಲ್ಪ ಭಿನ್ನತೆಯನ್ನು ಪಡೆದುಕೊಂಡಿದೆಯೆಂಬುದನ್ನೂ ಒಪ್ಪಿಕೊಳ್ಳಬಹುದು. ಭರತಮುನಿ ತನ್ನ ನಾಟ್ಯಶಾಸ್ತ್ರದಲ್ಲಿ ಆವಂತಿ, ದಾಕ್ಷಿಣಾತ್ಯ, ಪಾಂಚಾಲೀ ಮತ್ತು ಓಢ್ರಮಾಗಧೀ ಎಂಬ ನಾಲ್ಕು ನಾಟ್ಯರೀತಿಗಳನ್ನು ಹೇಳಿದ್ದಾನೆ. ಪ್ರಸಿದ್ಧವಾದ ಹಾಥಿಗುಂಫ ಶಾಸನದಲ್ಲಿ ಗಾಂಧರ್ವ ವಿದ್ಯೆಯ ಉಲ್ಲೇಖವಿದೆ. ಕೇಸರಿ ಸಂತತಿಯಲ್ಲಿ ಗಾಂಧರ್ವ ಕೇಸರಿ 851–868ರಲ್ಲಿಯೂ ನೃತ್ಯಕೇಸರಿ 949–965ರಲ್ಲಿಯೂ ಓಢ್ರದೇಶವನ್ನಾಳಿದರು. ನೃತ್ಯಕಲೆಯನ್ನು ಶೈವತಂತ್ರ ರಾಜರ ವಿದ್ಯಾಭ್ಯಾಸದ ಅವಿಭಾಜ್ಯ ಅಂಗವಾಗಿ ವಿಧಿಸುತ್ತದೆ. ಕೇಸರಿ ಸಂತತಿಯವರೂ ಚೋಡ ಗಂಗದೇವನ ಸಂತತಿಯವರೂ ದೇವಾಲಯಗಳಲ್ಲಿ ನೂರಾರು ನಟ ಮಂದಿರಗಳನ್ನು ಕಟ್ಟಿಸಿದುದಲ್ಲದೆ ಸ್ವತಃ ನಾಟ್ಯಕಲೆಯ ಪ್ರೇಮಿಗಳೂ ಪೋಷಕರೂ ಆಗಿದ್ದರು. ಪುರಿಯ ಜಗನ್ನಾಥ ದೇವಾಲಯ ಇಂದಿಗೂ ರಂಗಪೂಜೆಯ ಅಂಗವಾಗಿ ಶುದ್ಧವಾದ ನಾಟ್ಯಸಂಪ್ರದಾಯವನ್ನು ಉಳಿಸಿಕೊಂಡು ಬಂದಿದೆ.

ಒರಿಸ್ಸದ ಶಿಲ್ಪದಲ್ಲಿ ನಾಟ್ಯಕಲೆಯನ್ನು ವಿಪುಲವಾಗಿ ಉಳಿಸಿಕೊಂಡು ಬರಲಾಗಿದೆ. ಹೀಗೆ ಖಾಂದಗಿರಿ ಉದಯಗಿರಿಗಳ ಜೈನ ಮಹಾದೇವಾಲಯಗಳು, ಭರತೇಶ್ವರದ ಶಿವದೇವಾಲಯ, ಪರಶುರಾಮೇಶ್ವರ ದೇವಾಲಯ, ಭುವನೇಶ್ವರದ ಮುಕ್ತೇಶ್ವರ ದೇವಾಲಯ, ರಾಜಾರಾಣಿ ದೇವಾಲಯ, ಪುರಿಯ ಜಗನ್ನಾಥ ದೇವಾಲಯ, ಕೋಣಾರ್ಕದ ಪ್ರಸಿದ್ಧ ಸೂರ್ಯದೇವಾಲಯ ಮುಂತಾದುವುಗಳಲ್ಲಿ ನೃತ್ಯಮಗ್ನವಾದ ಹಲವು ಸುಂದರ ಶಿಲ್ಪಗಳು ದೊರೆಯುತ್ತವೆ. ಹದಿನಾರನೆಯ ಶತಮಾನದಲ್ಲಿ ಪ್ರತಾಪರುದ್ರದೇವನ ಮಂತ್ರಿಯಾಗಿದ್ದ ರಾಯ ರಮಾನಂದ ಸಂಸ್ಕೃತ ನಾಟಕಕಾರನಾಗಿದ್ದುದಲ್ಲದೆ ಸ್ವತಃ ನರ್ತಕನಾಗಿದ್ದು ಹಲವು ದೇವದಾಸಿಯರಿಗೆ ನಾಟ್ಯಾಚಾರ್ಯನಾಗಿದ್ದ. ಒರಿಸ್ಸ ನೃತ್ತದಲ್ಲಿ ಅಭಿನಯವನ್ನು ಸೇರಿಸಿ ನೃತ್ಯವನ್ನಾಗಿಸಿದಾತ ಇವನೇ ಎಂದು ನಂಬಲಾಗಿದೆ. 13ನೆಯ ಶತಮಾನದಲ್ಲಿ ಕೋಣಾರ್ಕದ ದೇವಾಲಯವನ್ನು ಕಟ್ಟಿಸಿದ ನರಸಿಂಗದೇವನ ಮಗಳು ಚಂದ್ರಾದೇವಿ ಪ್ರಸಿದ್ಧ ನರ್ತಕಿಯಾಗಿದ್ದಳು. ಗಜಪತಿ ಕಪಿಲೇಂದ್ರ ಸಂಗೀತ ನೃತ್ಯ ಕಲೆಗಳ ಪೋಷಕನಾಗಿದ್ದು ಪರಶುರಾಮ ವಿಜಯವೆಂಬ ನೃತ್ತನಾಟಕವನ್ನು ಬರೆದು ಪುರಿಯ ಜಗನ್ನಾಥ ಮಂದಿರದಲ್ಲಿ ಅನೂಚಾನವಾಗಿ ಅಭಿನೀತವಾಗಲು ಏರ್ಪಾಡು ಮಾಡಿದ. ಹದಿನೇಳು, ಹದಿನೆಂಟನೆಯ ಶತಮಾನಗಳಲ್ಲಿ ವೈಷ್ಣವ ಸಂತರು ರಾಧಾಕೃಷ್ಣಪ್ರೇಮವನ್ನು ಅಮರವಾಗಿಸಿ ರಚಿಸಿದ ಹಾಡುಗಳಿಗೆ ಅಭಿನಯವನ್ನು ಅಳವಡಿಸಿ ಗೊತಿಪುವ ನಟರು ಲಾಸ್ಯತಾಂಡವ ಸಂಪ್ರದಾಯಗಳಲ್ಲಿ ಬೆಳೆಸಿಕೊಂಡು ಬಂದರು.

ಒರಿಸ್ಸದಲ್ಲಿ ನೃತ್ಯಸಂಪ್ರದಾಯ ಶೈವ ವೈಷ್ಣವ ಮತ್ತು ಬೌದ್ಧ ಮತಗಳ ಪ್ರಭಾವದಿಂದ ಬೆಳೆಯಿತು. ವೈಷ್ಣವ ಮತದಲ್ಲಿ ಮುಖ್ಯ ಚೈತನ್ಯಪಂಥದ ರಾಧಾಕೃಷ್ಣರ ಪ್ರೇಮ ವಿಷಯಕವಾದ ಅಭಿನಯಪೂರ್ಣ ಲಾಸ್ಯಪ್ರಕಾರಗಳು ನೃತ್ಯಕಲೆಯನ್ನು ಬೆಳೆಸಿದರೆ ಶೈವ ಬೌದ್ಧ ಮತಗಳಲ್ಲಿ ತಂತ್ರಶಾಸ್ತ್ರದಿಂದ ಪ್ರಭಾವಿತವಾದ ನೃತ್ತಸಂಪ್ರದಾಯ ಬೆಳೆಯಿತು. ಬೌದ್ಧಮತೀಯ ನೃತ್ತಶೈಲಿ ಮುಖ್ಯವಾಗಿ ಥೇರಗಾಥಾ ಮತ್ತು ಥೇರಿಗಾಥಾಗಳಿಂದ ಸ್ಫೂರ್ತಿ ಪಡೆದು ವಜ್ರಯಾನ ಪದ್ಧತಿಯಲ್ಲಿ ತನ್ನ ಪರಾಕಾಷ್ಠೆಯನ್ನು ಮುಟ್ಟಿತು. ಇದೇ ಅನಂತರದ ಟಿಬೆಟ್ ದೇಶದ ಪ್ರೇತನೃತ್ಯವಾಗಿ ಪರಿಣಮಿಸಿತೆನ್ನುತ್ತಾರೆ. ಹೀಗೆ ನೃತ್ಯವಿಷಯವುಳ್ಳ ಕಾಲಚಕ್ರ, ಹೇರುಕ, ಅಚಲ, ವಜ್ರಭೈರವ, ಸಂಭಾರ, ಮಹಾಕಾಲ ಮೊದಲಾದ ಬುದ್ಧ ಶಿಲ್ಪಗಳು ಒರಿಸ್ಸದಲ್ಲಿ ವಜ್ರಯಾನ, ಕಾಲಚಕ್ರಯಾನ, ಸಹಜಯಾನಗಳ ಪ್ರಭಾವವನ್ನು ಸೂಚಿಸುತ್ತವೆ. ಇವು ಶೈವರ ನಟರಾಜಕಲ್ಪನೆಯಿಂದ ಸ್ಫೂರ್ತಿ ಪಡೆದು ಜನ್ಮತಾಳಿದುವೆಂದು ಸ್ಥೂಲವಾಗಿ ಹೇಳಬಹುದು. ಶೈವರ ಕಾಪಾಲಿಕ, ಮತ್ತಮಯೂರ, ಪಾಶುಪತ, ತಾಂತ್ರಿಕ ಪಂಥಗಳು ನೃತ್ಯಕಲೆಯ ಶಿಲ್ಪಗಳಲ್ಲಿ ಪ್ರಭಾವ ಬೀರಿರುವುದನ್ನು ಅಲ್ಲಲ್ಲಿ ಕಾಣಬಹುದು. ಇದಲ್ಲದೆ ಜಯದೇವನ ಗೀತಗೋವಿಂದದ ಅಷ್ಟಪದಿ ಆಟ ಒರಿಸ್ಸ ನೃತ್ಯಕಲೆಯ ಮೇಲೆ ಅಚ್ಚಳಿಯದ ಪ್ರಭಾವ ಬೀರಿದೆ.

ಒರಿಸ್ಸ ನೃತ್ಯಕಲೆಗೆ ಮಹಾದೇವ ಮಹಾಪಾತ್ರನ ಅಭಿನಯಚಂದ್ರಿಕಾ, ಯದುನಾಥರಾಜಸಿಂಹನ ಸಂಗೀತಾಭಿನಯದರ್ಪಣಗಳೇ ಮೂಲ ಆಕರಗಳೆಂದು ಹೇಳಬೇಕು. ನಾರಾಯಣ ಮಿಶ್ರನ ದೇವದಾಸೀ ನೃತ್ಯಪದ್ಧತಿ, ಮಧು ಪಟ್ನಾಯಕನ ನಾಚುನಿವಿಧಿ, ಮುಕ್ತಾಮಹರಿಯ ನೀಲಾದ್ರಿನಾಚ ಎಂಬ ಅಪ್ರಕಟಿತ ಗ್ರಂಥಗಳು ದೇವದಾಸಿಯರ ನೃತ್ಯಕಲೆಯ ಮೇಲೆ ಸಾಕಷ್ಟು ಪ್ರಭಾವವನ್ನು ಮೂಡಿಸಿವೆ.

ಒರಿಸ್ಸ ನೃತ್ಯ ತನ್ನದೇ ಆದ ಕೆಲವು ಹಸ್ತಮುದ್ರೆಗಳು, ಭಂಗಿಗಳು, ಸ್ಥಾನಕಗಳು, ಭ್ರಮರಿಗಳು ಮತ್ತು ಚಾಲನಿಕಗಳನ್ನು ಸೃಷ್ಟಿಸಿಕೊಂಡು ಅಲ್ಪಸ್ವಲ್ಪ ವೈಶಿಷ್ಟ್ಯವನ್ನು ಪಡೆದುಕೊಂಡಿದೆ. ಒರಿಸ್ಸ ನೃತ್ತಸಂಪ್ರದಾಯದಲ್ಲಿ ನರ್ತಕಿ ಮೊದಲು ಭೂಮಿ ಮತ್ತು ನಾಟ್ಯಾಚಾರ್ಯರನ್ನು ವಂದಿಸಿ ರಂಗಾಧಿಪತಿಗಳಿಗೆ ನಮಿಸುತ್ತಾಳೆ. ಸಂಗೀತ ವಾದ್ಯಗಳಿಗೆ ನಮಿಸಿ ಅನಂತರ ವಿಘ್ನನಿವಾರಣಕ್ಕಾಗಿ ಗಣೇಶವಂದನೆಯನ್ನು ಕೈಗೊಳ್ಳುತ್ತಾಳೆ. ಇದಾದ ಅನಂತರ ಕಚೇರಿ ವಟುಕಭೈರವ ಪೂಜಾಸಂಕೇತವಾದ ವಟುನೃತ್ತದಿಂದ ಪ್ರಾರಂಭವಾಗುತ್ತದೆ ; ಇದರಲ್ಲಿ ಕ್ಲಿಷ್ಟವಾದ ತಾಂಡವನೃತ್ಯ ವಿನ್ಯಾಸಗಳೂ ಕ್ಲಿಷ್ಟ ಭಂಗಿಗಳೂ ಇರುತ್ತವೆ. ಇದರ ಅನಂತರ ಪಲ್ಲವಿಯ ನೃತ್ತಲಾಸ್ಯಭಂಗಿಗಳಿಂದ ಜರುಗುತ್ತದೆ. ಇದು ಕಚೇರಿಯ ಮುಖ್ಯ ರಸಕ್ಕೆ ಕರೆದೊಯ್ಯಲು ಪೋಷಕವಾದ ವಾತಾವರಣವನ್ನು ಸೃಷ್ಟಿಸುತ್ತದೆ. ಮದ್ದಳೆಯ ಪಾಟಾಕ್ಷರಗಳಿಗೆ ಕುಣಿಯುವಂಥದು ವಾದ್ಯಪಲ್ಲವಿ ; ಹಾಡಿಕೆಗೆ ಕುಣಿಯುವಂಥದು ಸ್ವರಪಲ್ಲವಿ ; ಎರಡರಲ್ಲಿಯೂ ಪಾಟಾಕ್ಷರಗಳೇ ಪ್ರಧಾನ. ಇದರ ಅನಂತರ ರಸನೃತ್ಯ ನಡೆಯುತ್ತದೆ. ಇದರಲ್ಲಿ ವನಮಾಲೀದಾಸ, ಉಪೇಂದ್ರಭಂಜ್, ಬಲದೇವ ರಥ ಮೊದಲಾದವರ ರಚನೆಗಳನ್ನು ಮತ್ತು ಜಯದೇವನ ಗೀತಗೋವಿಂದದ ಅಷ್ಟಪದಿಗಳನ್ನು ಆರಿಸಿಕೊಂಡು ಕಾವ್ಯರಸವನ್ನು ನೃತ್ತರಸ ಗೀತರಸಗಳಿಂದ ಬೆಳೆಸಲಾಗುತ್ತದೆ. ಇವುಗಳಲ್ಲಿ ಪ್ರತಿ ನುಡಿಯ ಅನಂತರವೂ ನರ್ತಕಿ ದ್ರುತಗತಿಯ ನೃತ್ತವನ್ನು ಮಾಡುತ್ತಾಳೆ. ಕಚೇರಿಯ ಅಂತ್ಯ ಭಾವನೃತ್ತದಿಂದಾಗುತ್ತದೆ. ಇದನ್ನು ಸಾಮಾನ್ಯವಾಗಿ ಝೂಲ, ಪಹಪಟತಾಳಗಳ ದ್ರುತಗತಿಯಲ್ಲಿ ಪಾಟಪ್ರಧಾನವಾಗಿ ನೃತ್ತದಿಂದ ಮಾಡಲಾಗುತ್ತದೆ. ಶಾಸ್ತ್ರೀಯ ಒರಿಸ್ಸ ನೃತ್ತದಲ್ಲಿ ಸ್ಥಾಯಿ, ನಟವರ, ಚೌಕ, ಚೀರ, ಲಕ್ಷ್ಮೀ, ಬೈತಿ, ಚೌರಸ್ ಮುಂತಾದ ಭಂಗಿಗಳನ್ನು ಪ್ರಧಾನವಾಗಿ ಬಳಸಲಾಗುತ್ತದೆ. ಗ್ರಂಥಪರಂಪರೆಯ ಇಪ್ಪತ್ತಾರು ಅಸಂಯುತ ಹಸ್ತಗಳೂ ಗುರುಪರಂಪರೆಯಿಂದ ಬಂದ ಎಂಟು ಅಸಂಯುತ ಹಸ್ತಗಳೂ ಸೇರಿ ಒಟ್ಟು ಮೂವತ್ತು ನಾಲ್ಕು ಅಸಂಯುತ ಹಸ್ತಗಳೂ ಅನೇಕ ನಾನಾರ್ಥ ಹಸ್ತಗಳೂ ಈ ನೃತ್ತಪರಂಪರೆಯಲ್ಲಿ ಸೇರಿವೆ. ಇವುಗಳಲ್ಲಿ ಬೇರೆ ಬೇರೆ ಲಕ್ಷಣಗಳಿರುವ ಹಲವಕ್ಕೆ ಒಂದೇ ಹೆಸರುಗಳೂ ಒಂದೇ ಲಕ್ಷಣವಿರುವ ಹಲವಕ್ಕೆ ಬೇರೆ ಬೇರೆ ಹೆಸರುಗಳೂ ನಾಟ್ಯಶಾಸ್ತ್ರ, ಅಭಿನಯ ದರ್ಪಣ, ಸಂಗೀತರತ್ನಾಕರ, ಭರತಾರ್ಣವ, ಸಂಗೀತಸುಧಾಕರ ಮುಂತಾದ ಗ್ರಂಥಗಳಲ್ಲಿ ದೊರೆಯುತ್ತವೆ. ಕಥಕಳಿಯಲ್ಲಿ ಬಳಸಲಾಗುವ ಕೆಲವು ಹಸ್ತಮುದ್ರೆಗಳೂ ಇಲ್ಲಿ ನಾಮಾಂತರದಿಂದ ಸೇರಿಹೋಗಿವೆ. ಹಸ್ತಮುದ್ರೆಗಳಿಗೆ ವಿನಿಯೋಗಗಳೂ ಅಲ್ಲಲ್ಲಿ ಬೇರೆಯಾಗಿವೆ. ಹೀಗೆ ಒರಿಸ್ಸ ನಾಟ್ಯಕಲೆ ನೃತ್ತಕ್ಕಿಂತ ನೃತ್ಯ ಪ್ರಧಾನವಾಗಿದೆ.

ಭರತನಾಟ್ಯದ ದೇವದಾಸಿ ಪದ್ಧತಿ ಒರಿಸ್ಸದಲ್ಲಿ ಮಹರಿಗಳಿಂದ ಮುಂದುವರಿದಿದೆಯೆನ್ನಬಹುದು. ಮಹರಿಗಳ ಕಲ್ಪನೆ ಮುಖ್ಯವಾಗಿ ಕರ್ಣಾಟಕದಿಂದಲೂ ಸ್ವಲ್ಪಮಟ್ಟಿಗೆ ತಮಿಳುನಾಡಿನಿಂದಲೂ ಬಂದುದು. ಈ ಪ್ರಾಂತ್ಯದಲ್ಲಿ ನೃತ್ತಸಂಪ್ರದಾಯ ಕಳೆದ ಸುಮಾರು ಸಾವಿರ ವರ್ಷಗಳಿಂದಲೂ ಉಳಿದು ಬೆಳೆದುಕೊಂಡು ಬರಲು ಮಹರಿಗಳು ಬಹುಮಟ್ಟಿಗೆ ಕಾರಣರಾಗಿದ್ದಾರೆ. ದೇವಾಲಯಗಳಲ್ಲಿ ನೃತ್ಯ ಸೇವೆಗೆಂದೇ ಮೀಸಲಾದ ಇವರಲ್ಲಿ ಬಾಹರ್ ಗನೀ (< ಗಣಿಕಾ), ಭೀತರ್‌ಗನೀ ಎಂಬ ಎರಡು ಬಗೆಯಿದೆ. ಇದರಲ್ಲಿ ಬಾಹರ್‌ಗನಿಗಳಿಗೆ ಗರ್ಭಗುಡಿಯ ಒಳಗೆ ಪ್ರವೇಶವಿಲ್ಲ ಹಾಗೂ ಅವರು ರಾಜದಾಸಿ, ಅಲಂಕಾರದಾಸಿಯರೂ ಆಗಿರಬಹುದು; ಆದರೆ ಭೀತರ್‌ಗನಿಗಳು ಕಟ್ಟುನಿಟ್ಟಾದ ನಿಯಮಗಳನ್ನು ಪಾಲಿಸಿ ಪವಿತ್ರಾತ್ಮರಾಗಿರಬೇಕು. ಇವರಿಗೆ ಪರಮಾತ್ಮನಲ್ಲದೆ ಅನ್ಯಪುರುಷ ಸಂಪರ್ಕವಿಲ್ಲ. ಇವರು ಗಾಯಕಿಯರೊಡನೆ ರಾಜಗುರುವಿನ ಮಾರ್ಗದರ್ಶನದಲ್ಲಿ ದೇವಾಲಯದ ಗರುಡಸ್ತಂಭದ ಬಳಿಗೆ ಬಂದು ಅಲ್ಲಿ ಅವನ ನೇತೃತ್ವದಲ್ಲಿ ದೈವವಂದನೆ, ರಾಜಗುರುವಂದನೆಯಾದ ಅನಂತರ ನರ್ತಿಸುತ್ತಾರೆ. ಸಾಮಾನ್ಯವಾಗಿ ಚೌಕ, ಮೀನದಂಡಿ, ವರ್ತುಲ, ಘೇರ ಮತ್ತು ದ್ವಿಮುಖ ಎಂಬ ಐದಂಕದ ವಿನ್ಯಾಸಗಳಲ್ಲಿಯೂ ಗೋಯ್‌ಧಿ, ಚಪುವನಿ ಕಡಾಪೋಸರ, ಥಿಯಾಪುಚಿ ಮತ್ತು ಪುಹಾನಿಯ ಎಂಬ ಆರು ಚಾರೀಕ್ರಮಗಳಲ್ಲಿಯೂ ಮಹರಿಯ ನೃತ್ಯ ನಡೆಯುತ್ತದೆ; ಇತರ ದೇವಸ್ಥಾನಗಳಲ್ಲಿ ಅಲ್ಲಲ್ಲಿ ರೂಢಿಯಲ್ಲಿದ್ದರೂ ಶೈವ ಹಾಗೂ ವೈಷ್ಣವ ದೇವಾಲಯಗಳಲ್ಲಿಯೇ ಮಹರೀ ಪದ್ಧತಿ ಹೆಚ್ಚು ಬಳಕೆಯಲ್ಲಿದ್ದು ಪುರಿಯ ಜಗನ್ನಾಥ ದೇವಾಲಯದಲ್ಲಿ ಅತ್ಯಂತ ಪ್ರಸಿದ್ಧವಾಗಿತ್ತು. ಭರತನಾಟ್ಯದಲ್ಲಿ ಆದಂತೆ ಇಲ್ಲಿಯೂ ಮಹರಿಗಳು ವೇಶ್ಯಾವೃತ್ತಿಗೆ ಇಳಿದುದರಿಂದ ಕಲೆಗೆ ಅಪಾರ ಹಾನಿತಟ್ಟಿತು.

ಒರಿಸ್ಸ ದೇಶದಲ್ಲಿ ಹಲವು ಸುಂದರವಾದ ಜಾನಪದ ನೃತ್ತಪ್ರಕಾರಗಳಿವೆ. ಇವುಗಳಲ್ಲಿ ಸಂಭಾಲಪುರದ ಕರಮಾ ಮತ್ತು ದಲಖಾಯ್‌ಗಳು ಬಹು ಸುಂದರವೂ ಪ್ರಸಿದ್ಧವೂ ಆಗಿವೆ. ಕೇಲಿಕಡ, ದಸರ, ಭಾಯಿಜಾಂತಿಯಾ, ಫಾಗುನ್‌ಪುನಿ ಮುಂತಾದ ಸಂದರ್ಭಗಳಲ್ಲಿ ಮಯೂರಭಂಜ್, ಸುಂದರಘಡ,

ಬೋಲಂಗೀರ್ ಮುಂತಾದ ಗುಡ್ಡಗಾಡುಗಳಲ್ಲಿ ಕರಮಾ ನೃತ್ಯವನ್ನು ಖರಿಯಾ, ಕಿಸಾನ್ ಮತ್ತು ಓರಾನ್ ಬುಡಕಟ್ಟಿನವರೂ ಇತರರೂ ಮಾಡುತ್ತಾರೆ. ದಲ ಖಾಯಿ ನೃತ್ಯವನ್ನು ಇದೇ ಸಂದರ್ಭಗಳಲ್ಲಿ ಬಿಂಝಾಲ್, ಸೌರ, ಕುಡನಿರ್ಧ ಪ್ರದೇಶಗಳಲ್ಲಿಯೂ ಕುಣಿಯಲಾಗುತ್ತದೆ. ಒರಿಸ್ಸ ದೇಶದಲ್ಲಿ ರಾಸ್ ಮತ್ತು ಗರಬಾ ನೃತ್ಯಗಳು ಸುಂದರವೂ ಪ್ರಸಿದ್ಧವೂ ಆಗಿವೆ. (ಆರ್.ಎಸ್.ಎಸ್.)

**ಒರೆ :** ಖನಿಜದ ಪುಡಿಯನ್ನು ನಯವಿಲ್ಲದ ಪಿಂಗಾಣಿ ತಟ್ಟೆಯ ಮೇಲೆ ಉಜ್ಜಿದಾಗ ಕಾಣುವ ಬಣ್ಣ (ಸ್ಟ್ರೀಕ್). ಈ ತಟ್ಟೆಯ ಹೆಸರು ಒರೆಗಲ್ಲು (ಸ್ಟ್ರೀಕ್ ಪ್ಲೇಟ್). ಪಾಲುಕಾಗದದ ಮೇಲೆ ಖನಿಜವನ್ನು ಇಟ್ಟು ಪುಡಿಮಾಡುವುದ ರಿಂದಲೂ ಇದರ ಪರೀಕ್ಷೆ ಸಾಧ್ಯವಿದೆ. ಎಲ್ಲ ಲೋಹಗಳೂ ಲೋಹಕಾಂತಿ ಇರುವ ಬಹುತೇಕ ಖನಿಜಗಳೂ ಇಡಿಯಾಗಿರಲಿ ಪುಡಿಯಾಗಿರಲಿ ಒಂದೇ ಬಣ್ಣವನ್ನು ಪ್ರದರ್ಶಿಸುತ್ತವೆ. ಆದರೆ ಸಿಲಿಕೇಟುಗಳು ಮತ್ತು ಲೋಹಕಾಂತಿ ಇರದ ಬಹುತೇಕ ಖನಿಜಗಳು ಈ ಸನ್ನಿವೇಶಗಳಲ್ಲಿ ಪ್ರದರ್ಶಿಸುವ ಬಣ್ಣಗಳು ಬೇರೆ ಬೇರೆ.

ಲೋಹಖನಿಜಗಳ ಅಧ್ಯಯನದಲ್ಲಿ ಒರೆ ಬಲುಮುಖ್ಯ ಭೌತಲಕ್ಷಣ. ಅದು ಇತರ ಲಕ್ಷಣಗಳನ್ನೆಲ್ಲ ಮೆಟ್ಟಿ ಎದ್ದು ನಿಲ್ಲುತ್ತದೆ. ಇದರ ಪರಿಶೀಲನೆಯಿಂದ ಲೋಹದ ಪರಿಶುದ್ಧತೆಯನ್ನು ಗ್ರಹಿಸಬಹುದು. ಒರೆಗಲ್ಲಿಗೆ ಉಜ್ಜಿ ಚಿನ್ನದ ಪರಿಶುದ್ಧತೆಯನ್ನು ಪರೀಕ್ಷಿಸುವುದು ಇದಕ್ಕೊಂದು ನಿದರ್ಶನ.

ಕೆಲವು ಖನಿಜಗಳಲ್ಲಿ ಒರೆಗೂ ಖನಿಜದ ಬಣ್ಣಕ್ಕೂ ನಿರ್ದಿಷ್ಟ ವ್ಯತ್ಯಾಸ ತೋರಿ ಬರುವುದುಂಟು. ಇಂಥವುಗಳಲ್ಲಿ ಮುಖ್ಯವಾದುವನ್ನು ಇಲ್ಲಿ ಹೆಸರಿಸಿದೆ.

| ಖನಿಜ | ಬಣ್ಣ | ಒರೆ |
|---|---|---|
| ಹಿಮಟೈಟ್ | ಕಪ್ಪು | ಚೆರಿಕೆಂಪು |
| ಚಾಲ್ಕೊಪೈರೈಟ್ | ಹಳದಿ | ಹಸಿರುಮಿಶ್ರಿತ ಕಪ್ಪು |
| ಸ್ಫಾಲರೈಟ್ | ಹಳದಿ, ಕಂದು | ಕಂದು ಛಾಯೆಯಿಂದ ತೆಳುಹಳದಿ |
| ಸಿನ್ನಬಾರ್ | ಕಾರ್ನಿಯಲ್ ಕೆಂಪು | ಸ್ಕಾರ್ಲೆಟ್ |
| ರಿಯಾಲ್ಗರ್ | ಅರೋರ ಕೆಂಪು ಕಿತ್ತಳೆ | ಅದೇ ತೆಳು ಛಾಯೆ |
| ಆರ್ಕಿಮೆಂಟ್ | ನಿಂಬೆ ಹಳದಿ | ಅದೇ ತೆಳು ಛಾಯೆ |

(ಎಂ.ಎಸ್.ಎಸ್.)

**ಒರೆಸ್ಟೀಸ್ :** ಗ್ರೀಕ್ ಮಹಾಪುರಾಣಗಳ ಪ್ರಕಾರ ಆಗಮೆಮ್ನಾನ್ ಮತ್ತು ಕ್ಲೈಟಮ್‍ನೆಸ್ಟ್ರರ ಮಗ. ಇಫಿಜೀನಿಯ ಮತ್ತು ಎಲೆಕ್ಟ್ರರ ಸಹೋದರ. ತಾಯಿ ಕ್ಲೈಟಮ್‍ನೆಸ್ಟ್ರ ತನ್ನ ಪ್ರಿಯ ಈಜಿಸ್ತಸನೊಡಗೂಡಿ ಗಂಡ ಆಗಮೆಮ್ನಾನ್‍ನನ್ನು ಕೊಲೆಮಾಡಿದಾಗ ಈತ ಸಹೋದರಿ ಎಲೆಕ್ಟ್ರಳ ಸಹಾಯದಿಂದ ಜೀವಸಹಿತ ಪಾರಾಗಿ ಹೋಗಿ ಸ್ಟ್ರೋಫಿಯಸ್ ದೊರೆಯ ಆಶ್ರಯ ಪಡೆದು ಅಲ್ಲೇ ಬೆಳೆಯುತ್ತಾನಲ್ಲದೆ ಆ ದೊರೆಯ ಮಗನಾದ ಪೈಲಾಡ್ಸನ ಆಪ್ತಮಿತ್ರನಾಗುತ್ತಾನೆ. ಕೊನೆಗೊಮ್ಮೆ ಆರ್ಗಾಸಿಗೆ ಬಂದು ತಂದೆಯನ್ನು ಕೊಂದ ತನ್ನ ತಾಯಿ ಮತ್ತು ಆಕೆಯ ಪ್ರಿಯನನ್ನು ಕೊಲೆಮಾಡುತ್ತಾನೆ. ತಾಯಿಯನ್ನು ಹತಮಾಡಿದ ಪಾಪ ತಟ್ಟಲಾಗಿ ಹುಚ್ಚನಂತಾಗಿ ಉಗ್ರದೇವತೆಗಳ ಪೀಡನೆಗೊಳಗಾಗಿ ದೇಶ ದೇಶ ತೊಳಲುತ್ತಾನೆ. ಕೊನೆಗೊಮ್ಮೆ ಅಥೆನ್ಸಿಗೆ ಬಂದಾಗ ಅವನಿಗೆ ಪಾಪವಿಮೋಚನೆಯಾಗುತ್ತದೆ. ಪ್ರಾಯಶ್ಚಿತ್ತಕ್ಕಾಗಿ ಟಾರಿಸ್‍ನಲ್ಲಿದ್ದ ಆರ್ಟೆಮಿಸಳ ಪ್ರತಿಮೆಯನ್ನು ತರಲು ಹೋದಾಗ ಅಲ್ಲಿ ತನ್ನ ಸಹೋದರಿ ಇಫಿಜೀನಿಯಳನ್ನು ಗುರುತಿಸುತ್ತಾನೆ. ಇಬ್ಬರೂ ಆರ್ಟೆಮಿಸಳ ಪ್ರತಿಮೆಯೊಂದಿಗೆ ಗ್ರೀಸಿಗೆ ಓಡಿಬರುತ್ತಾರೆ. ಅನಂತರ ಮೈಸೀನೀ ಮತ್ತು ಆರ್ಗಾಸಿನ ದೊರೆಯಾಗಿ ಮೆನೆಲಾಸನ ಮಗಳಾದ ಹರ್ಮಿಯೊನೆಯನ್ನು ಮದುವೆಯಾಗುತ್ತಾನೆ. *

**ಒರ್ರೈಯನ್ :** ಆಕಾಶದ 88 ನಕ್ಷತ್ರಪುಂಜಗಳಲ್ಲಿ (ಕಾನ್‍ಸ್ಟೆಲೇಷನ್ಸ್) ಸುಲಭಗ್ರಾಹ್ಯವೂ ಸುಪ್ರಸಿದ್ಧವೂ ಆಗಿರುವ ಪುಂಜ (ಮಹಾವ್ಯಾಧ). ಇದರ ವ್ಯಾಪ್ತಿ ವಿಷುವದ್ವೃತ್ತದ ಇಕ್ಕೆಲಗಳಲ್ಲಿಯೂ ಇದೆ. ವಿಷುವದಂಶ (ರೈಟ್ ಅಸೆನ್ಷನ್) 4 ಗಂ. 40 ಮಿ.–6 ಗಂ. 20 ಮಿ; ಘಂಟಾವೃತ್ತಾಂಶ (ಡೆಕ್ಲಿನೇಷನ್) 11°ದ.–23° ಉ. ಡಿಸೆಂಬರ್ ಜನವರಿ ತಿಂಗಳುಗಳ ಸಂಜೆಯ ಪೂರ್ವಾಕಾಶದಲ್ಲಿ ಕಾಣಿಸಿಕೊಳ್ಳುವ ಈ ಪುಂಜದ ಆಕಾರ, ಇದನ್ನು ರಚಿಸುವ ಬಿಡಿನಕ್ಷತ್ರಗಳ ಪ್ರಕಾಶ, ಇದರ ಹಿಂದೆ ಹಬ್ಬಿರುವ ಪೌರಾಣಿಕ ಕಥೆಗಳು ಎಲ್ಲವೂ ಇದನ್ನು ವಿಜ್ಞಾನಿಗಳಿಗೂ ಸಾಹಿತಿಗಳಿಗೂ ರಸಿಕರಿಗೂ ಅತ್ಯಂತ ಆತ್ಮೀಯವನ್ನಾಗಿಸಿವೆ. ಇದರ ಆಕಾರ ತ್ರಾಪಿಜ್ಯದಂತೆ—ಪಶ್ಚಿಮ ಹಾಗೂ ಪೂರ್ವಭುಜಗಳು ಸಮಾಂತರವಾಗಿವೆ; ಉತ್ತರ ಹಾಗೂ ದಕ್ಷಿಣ ಭುಜಗಳು ಮೇಲುನೋಟಕ್ಕೆ ಮೊದಲಿನವುಗಳಿಗೆ ಲಂಬವಾಗಿಯೇ ಇವೆ ಎಂದೆನ್ನಿಸುವುದು. ಅದ್ದರಿಂದ ಥಕ್ಕನೆ ನೋಡುವಾಗ ಒರ್ರೈಯನ್ ಒಂದು ಆಯತದಂತೆಯೂ ತೋರುವುದುಂಟು. ತ್ರಾಪಿಜ್ಯಾಕಾರವನ್ನು ರಚಿಸುವ ನಾಲ್ಕು ನಕ್ಷತ್ರಗಳ ವಿವರ ಹೀಗಿದೆ: ಪೂರ್ವ–ಉತ್ತರ ಮೂಲೆಯ ನಕ್ಷತ್ರ ಆರ್ದ್ರಾ (ಬೀಟ್ಲ್ ಜೂಸ್), ಪೂರ್ವ–ದಕ್ಷಿಣ ಮೂಲೆಯ ನಕ್ಷತ್ರ ಸೈಫ್. ಇವೆರಡರ ಜೋಡಣೆ ತ್ರಾಪಿಜ್ಯದ ಪೂರ್ವಭುಜ. ಪಶ್ಚಿಮ–ದಕ್ಷಿಣ ಮೂಲೆಯ ನಕ್ಷತ್ರ ರೈಗೆಲ್. ಪಶ್ಚಿಮ-ಉತ್ತರ ಮೂಲೆಯ ನಕ್ಷತ್ರ ಬೆಲ್ಲಾಟ್ರಿಕ್ಸ್. ಇವೆರಡರ ಜೋಡಣೆ ತ್ರಾಪಿಜ್ಯದ ಪಶ್ಚಿಮ ಭುಜ. ತ್ರಾಪಿಜ್ಯದ ಒಳಗೆ ಮೂರು ಉಜ್ಜ್ವಲ ನಕ್ಷತ್ರಗಳು ಒಂದೇ ಗೆರೆಯ ಮೇಲಿವೆ. ನಡುವಿನದು ಈ ಗೆರೆಯ ಮಧ್ಯಬಿಂದುವೂ ಹೌದು. ಇವುಗಳ ಒಟ್ಟು ಹೆಸರು ಮಹಾವ್ಯಾಧನ ನಡುಪಟ್ಟಿ (ಬೆಲ್ಟ್ ಆಫ್ ದಿ ಒರ್ರೈಯನ್). ಇದರಿಂದ ದಕ್ಷಿಣದ ಒತ್ತಿಗೆ (ತ್ರಾಪಿಜ್ಯದ ಒಳಗೆ) ಇರುವ ಬೆಳಕಿನ ತುಣುಕುಗಳ ಒಟ್ಟು ಹೆಸರು ಮಹಾವ್ಯಾಧನ ಖಡ್ಗ (ಡ್ಯಾಗರ್ ಆಫ್ ದಿ ಒರ್ರೈಯನ್). ಈ ವಲಯದಲ್ಲಿ ಬರಿಗಣ್ಣಿಗೆ ಕಾಣುವ ಒಂದು ನೆಬ್ಯುಲವಿದೆ. ಇದರ ಹೆಸರು ಒರ್ರೈಯನ್ ನೆಬ್ಯುಲ. ಶಾಸ್ತ್ರನಾಮ M42. ಆಕಾಶಗಂಗೆಯಲ್ಲಿ ಅತ್ಯಂತ ವಿಸ್ತೃತವಾದ ಈ ನೆಬ್ಯುಲದ ಗಾತ್ರ ಸುಮಾರು




10,000 ಜ್ಯೋತಿರ್ವರ್ಷಗಳು. ಇದರ ದೂರ ಸುಮಾರು 1,600 ಜ್ಯೋತಿರ್ವರ್ಷಗಳು. ನಕ್ಷತ್ರಾಂತರ ಅನಿಲವಿರುವ ಒಂದು ಬೃಹತ್ ಪ್ರದೇಶದ ಅತಿಸಾಂದ್ರ ಭಾಗವೇ ಒರ್ರೈಯನ್ ನೆಬ್ಯುಲವೆಂದು ಊಹೆ. ಈ ನೆಬ್ಯುಲದಿಂದ ರೇಡಿಯೊ ತರಂಗಗಳು ವಿಸರಣೆಯಾಗುತ್ತಿರುವುದನ್ನು ಗುರುತಿಸಲಾಗಿದೆ.

ಆರ್ದ್ರಾ ಒಂದು ರಕ್ತದೈತ್ಯನಕ್ಷತ್ರ. ದೃಗ್ಗೋಚರ ನಕ್ಷತ್ರಗಳನ್ನು ಪ್ರಕಾಶ ರೀತ್ಯಾ ಪಂಕ್ತಿಸಿದರೆ ಇದಕ್ಕೆ 13ನೆಯ ಸ್ಥಾನ ಲಭಿಸುವುದು (ಸೂರ್ಯನಿಗೆ ಪ್ರಥಮ ಸ್ಥಾನ). ಕಾಂತಿವರ್ಗ 0.4 ರಿಂದ 1.3ರ ವರೆಗೆ ವ್ಯತ್ಯಾಸಗೊಳ್ಳುವುದು. ಮೈಕೆಲ್‍ಸನ್ನನ ವ್ಯತಿಕರಣಮಾಪಕ ವಿಧಾನದಿಂದ ಮೊಟ್ಟಮೊದಲು ಈ ನಕ್ಷತ್ರದ ತೋರ್ಕೆ ವ್ಯಾಸವನ್ನು ಅಳೆದಿದ್ದಾರೆ (1920). ಮೇಲೆ ಹೇಳಿರುವ ಪಂಕ್ತಿಯಲ್ಲಿ ರೈಗೆಲ್ ನಕ್ಷತ್ರದ ಸ್ಥಾನ 8. ಇದರ ಕಾಂತಿವರ್ಗ 0.3. ದೂರ ಸುಮಾರು 543 ಜ್ಯೋತಿರ್ವರ್ಷಗಳು. ಇದೊಂದು ನೀಲ ಮಹಾದೈತ್ಯನಕ್ಷತ್ರ. ಸೂರ್ಯನಿಗಿಂತ 20,000 ಪಾಲು ಅಧಿಕ ಪ್ರಕಾಶಯುತವಾಗಿದೆ.




ಮಹಾವ್ಯಾಧನ ಖಡ್ಗದ ರೇಖೆಯನ್ನು ದಕ್ಷಿಣ–ಪೂರ್ವದೆಡೆಗೆ ಹಿಂದುವರಿಸಿದರೆ ಸ್ವಲ್ಪ ದೂರದಲ್ಲಿ ಆ ರೇಖೆಯ ಒತ್ತಿಗೆ ದಕ್ಷಿಣಕ್ಕೆ ಇರುವ ನೀಲಕಾಂತಿಯ ಮಹೋಜ್ಜ್ವಲ ನಕ್ಷತ್ರ ಲುಬ್ಧಕ (ಸಿರಿಯಸ್). ಸೂರ್ಯನಿಗೆ ಪ್ರಥಮಸ್ಥಾನವಿರುವ ನಕ್ಷತ್ರಪಂಕ್ತಿಯಲ್ಲಿ ಲುಬ್ಧಕದ ಸ್ಥಾನ ಎರಡನೆಯದು. ಲುಬ್ಧಕವಿರುವುದು ಮಹಾಶ್ವಾನ ನಕ್ಷತ್ರಪುಂಜದಲ್ಲಿ.

ನೋಡಿ—ಮಹಾಶ್ವಾನ.

ಆದ್ರ್ರಾ–ಬೆಲ್ಲಾಟ್ರಿಕ್ಸ್ ನಕ್ಷತ್ರಗಳ ಜೋಡಣೆ ಮಹಾವ್ಯಾಧ ಪುಂಜದ ಉತ್ತರ ಬಾಹು. ಇದರ ಒತ್ತಿಗೆ ತ್ರಾಪಿಜ್ಯದ ಹೊರಗೆ (ಎಂದರೆ ಉತ್ತರಕ್ಕೆ) ಇರುವ ಬೆಳಕಿನ ತುಣುಕುಗಳ (ಸುಮಾರು ಮೂರನ್ನು ಬಿಡಿಯಾಗಿ ಎಣಿಸಬಹುದು) ಒಟ್ಟು ಹೆಸರು ಮೃಗಶಿರಾ. ಆದ್ರ್ರಾ–ಮೃಗಶಿರಾ ರೇಖೆಯನ್ನು ಮುಂದುವರಿಸಿದರೆ (ಪಶ್ಚಿಮ) ಸಮೀಪದಲ್ಲಿಯೇ ಎದುರಾಗುವ ಕೆಂಪು ನಕ್ಷತ್ರ ರೋಹಿಣಿ (ಆಲ್ಡೆಬರಾನ್). ಇದು ಸಹ ಆದ್ರ್ರಾದಂತೆ ಒಂದು ಕೆಂಪು ನಕ್ಷತ್ರ. ಬೆಲ್ಲಾಟ್ರಿಕ್ಸ್–ರೋಹಿಣಿ ಜೋಡಣೆಯನ್ನು ಮುಂದುವರಿಸಿದರೆ (ಪಶ್ಚಿಮ) ಸುಮಾರು ಅಷ್ಟೇ ದೂರದಲ್ಲಿ ಎದುರಾಗುವ ಹಲವಾರು ನಕ್ಷತ್ರಗಳ ನಿಬಿಡ ಸಮೂಹ ಕೃತ್ತಿಕಾ ನಕ್ಷತ್ರ ಗುಚ್ಛ. ರೋಹಿಣಿ, ಕೃತ್ತಿಕಾ ನಕ್ಷತ್ರಗಳಿರುವ ವಲಯದ ಹೆಸರು ವೃಷಭರಾಶಿ.

ಹೀಗೆ ಒರೈಯನ್ ಅಥವಾ ಮಹಾವ್ಯಾಧ ನಕ್ಷತ್ರಪುಂಜದ ಪೂರ್ವ–ದಕ್ಷಿಣ ಭಾಗದಲ್ಲಿ (ಅಂದರೆ ಹಿಂದೆ) ಮಹಾಶ್ವಾನ ಪುಂಜವೂ ಪಶ್ಚಿಮ–ಉತ್ತರ ಭಾಗದಲ್ಲಿ (ಅಂದರೆ ಮುಂದೆ) ವೃಷಭರಾಶಿಯೂ ಇವೆ.

ಚಂದ್ರ ತಿಂಗಳಿಗೊಂದು ಸಲ ಮಹಾವ್ಯಾಧ ಪುಂಜದ ಉತ್ತರಪಾರ್ಶ್ವದಲ್ಲಿ ಸಮೀಪವಾಗಿ ಹಾಯುವ ಆಕಾಶಚಿತ್ರ ಆಕರ್ಷಣೀಯವಾಗಿದೆ.

ಈ ದೃಶ್ಯದ ಹಿನ್ನೆಲೆಯಲ್ಲಿ ಹೆಣೆದಿರುವ ಕಥೆಗಳು ಅಸಂಖ್ಯಾತ. ಒಂದೊಂದು ದೇಶದ ಒಂದೊಂದು ಕಾಲದ ಪುರಾಣಗಳು ಇದನ್ನು ಬಣ್ಣಿಸಿರುವ ಬಗೆ ಒಂದೊಂದು.

ಹಿಂದೂ ಪುರಾಣದ ಪ್ರಕಾರ ಚತುರ್ಮುಖ ಬ್ರಹ್ಮ ತಾನು ಸೃಷ್ಟಿಸಿದ ವಾಗ್ದೇವಿಯ ಸೌಂದರ್ಯದಿಂದ ಕಾಮುವಶನಾಗಿ ಆಕೆಯ ಬೆನ್ನಟ್ಟಿದ. ವಾಗ್ದೇವಿ ಹೆಣ್ಣುಜಿಂಕೆಯಾಗಿ ಓಡಲಾರಂಭಿಸಿದಾಗ ಬ್ರಹ್ಮ ಗಂಡು ಜಿಂಕೆ ರೂಪ ತಳೆದು ಅವಳನ್ನು ಹಿಂಬಾಲಿಸಿದ. ದೇವಲೋಕ ಬ್ರಹ್ಮನನ್ನು ಅತಿಯಾಗಿ ನಿಂದಿಸಿತು. ಆಗ ಶಂಕರ ಪಿನಾಕಪಾಣಿಯಾಗಿ ಮಹಾವ್ಯಾಧರೂಪದಿಂದ ಬಂದು ಮೃಗರೂಪಿಯಾಗಿದ್ದ ನಾಲ್ಮೊಗನ ಶಿರವನ್ನು ಕತ್ತರಿಸಿದ. ಜಿಂಕೆ ನೆಲಕ್ಕೆ ಕೆಡೆಯಿತು. ಅದರ ದೇಹದಿಂದ ನಿರ್ಗಮಿಸಿದ ತೇಜೋರಾಶಿ ಆಕಾಶದಲ್ಲಿ ಮೃಗಶಿರಾ (ಅಥವಾ ಮೃಗಶೀರ್ಷ) ನಕ್ಷತ್ರವೆಂದು ಪ್ರಖ್ಯಾತವಾಯಿತು. ಶಂಕರ ಆದ್ರ್ರಾನಕ್ಷತ್ರರೂಪಿಯಾಗಿ ಅದರ ಹಿಂದೆಯೇ (ಪೂರ್ವ) ನೆಲೆಸಿದ. ಸರಸ್ವತಿ ರೋಹಿಣಿನಕ್ಷತ್ರರೂಪ ಪಡೆದಳೆಂದು ಒಂದು ಹೇಳಿಕೆ; ಕೃತ್ತಿಕಾನಕ್ಷತ್ರರೂಪ ಪಡೆದಳೆಂದು ಇನ್ನೊಂದು ಹೇಳಿಕೆ. ಇವೆರಡೂ ಮೃಗಶಿರಾನಕ್ಷತ್ರದ ಪಶ್ಚಿಮಕ್ಕೆ (ಮೊದಲು ರೋಹಿಣಿ ಮತ್ತೆ ಕೃತ್ತಿಕಾ) ಇವೆ. ಇಲ್ಲಿ ಆದ್ರ್ರಾ ನಕ್ಷತ್ರವನ್ನು ಮಹಾವ್ಯಾಧನ ರೂಪವೆಂದು ಪರಿಗಣಿಸಿರುವುದು ತೋರುತ್ತದೆ.

ಇನ್ನೊಂದು ಕಲ್ಪನೆಯ ಪ್ರಕಾರ ಆದ್ರ್ರಾ ನಕ್ಷತ್ರವನ್ನು ಒಳಗೊಂಡಂತೆ ನಾಲ್ಕು ಸ್ಪಷ್ಟ ನಕ್ಷತ್ರಗಳು ರಚಿಸುವ ತ್ರಾಪಿಜ್ಯಾಕಾರ ಮತ್ತು ಅದರೊಳಗಿರುವ ಮೂರು ಉಜ್ಜ್ವಲಪ್ರಕಾಶದ ಏಕರೇಖಸ್ಥ ನಕ್ಷತ್ರಗಳು—ಇವಿಷ್ಟರ ಒಟ್ಟು ಹೆಸರು ಮಹಾವ್ಯಾಧ (ಒರೈಯನ್). ಈತ ಎದುರಿಗೆ (ಪಶ್ಚಿಮ) ಇರುವ ವೃಷಭವನ್ನು ಅಟ್ಟುತ್ತಿದ್ದಾನೆ. ವೃಷಭದ ಮುಖ ಮಹಾವ್ಯಾಧನ ಕಡೆಗೆ ಇರುವಂತೆ ಚಿತ್ರಿಸಿದ್ದಾರೆ. ಆಕಾಶದ ದೈನಂದಿನ ಆವರ್ತನೆಯಲ್ಲಿ ಮಹಾವ್ಯಾಧ ಮುಂದೆ ಮುಂದೆ ಸಾಗಿದಂತೆ ವೃಷಭ ಹಿಂದೆ ಹಿಂದೆ ಸರಿಯುವುದು.

ಮೂರನೆಯ ಕಲ್ಪನೆಯ ಪ್ರಕಾರ ಶಂಕರನ ಸ್ಥಾನ ಲುಬ್ಧಕ (ಬೇಟೆಗಾರ ಎಂದು ಅರ್ಥ) ನಕ್ಷತ್ರದಲ್ಲಿದೆ. ಮಗಳಾದ ರೋಹಿಣಿಯ ಬೆನ್ನಟ್ಟುತ್ತಿದ್ದ ಬ್ರಹ್ಮನಿಗೆ ಶಂಕರ ಬಾಣ ಎಸೆದ. ಆ ಬಾಣಗಳೇ ತ್ರಾಪಿಜ್ಯದ ಒಳಗಿರುವ ಮೂರು ಏಕರೇಖಸ್ಥ ನಕ್ಷತ್ರಗಳು (ನಡುಪಟ್ಟಿ).

ಪ್ರಾಚೀನ ಈಜಿಪ್ಟ್ ಹಾಗೂ ಗ್ರೀಕ್ ಪುರಾಣಗಳಲ್ಲಿ ಒರೈಯನ್ ಕಥೆಗಳು ಹಲವಾರು ಇವೆ. ಮೂರು ಪ್ರಸಿದ್ಧವಾದವನ್ನು ಇಲ್ಲಿ ಕೊಟ್ಟಿದೆ.



ಒರೈಯನ್ ನಕ್ಷತ್ರಪುಂಜದ ಮಹಾನೆಬ್ಯುಲ

ಚಂದ್ರನ ಸೌಂದರ್ಯದ ಸ್ತ್ರೀರೂಪ ಡಯಾನ. ಇವಳು ಷೋಡಶಿ, ಸುಂದರಿ, ಸಾಹಸಪ್ರಿಯೆ, ದೊಡ್ಡ ಬಿಲ್ಲುಗಾರ್ತಿ. ಡಯಾನ ಭೂಮ್ಯಾಕಾಶಗಳಲ್ಲಿ ಸ್ವತಂತ್ರವಾಗಿ ವಿಹರಿಸಬಲ್ಲವಳಾಗಿದ್ದಳು. ಆದರೆ ಈಕೆ ಒಂದು ಕರ್ತವ್ಯವನ್ನು ನಿರ್ವಹಿಸಬೇಕಾಗಿತ್ತು—ಚಂದ್ರನನ್ನು ಆಕಾಶದಲ್ಲಿ ಕ್ರಮಬದ್ಧವಾಗಿ ಸಾಗಿಸುವ, ಹೀಗೆ ಸಾಗಿಸುವಾಗ ಭೂಮಿಗೆ ಈ ಚಂದ್ರಪ್ರಭೆಯನ್ನು ಪಸರಿಸುವ ಹೊಣೆಗಾರಿಕೆ ಇವಳದು. ಇದು ಇವಳಿಗೆ ಬಲು ಸುಲಭದ ಕೆಲಸ. ಆದರೆ ಒಂದು ದಿನ ಅಕಸ್ಮಾತ್ತಾಗಿ ಒರ್ಸೈಯನನ್ನು (ಮಹಾವ್ಯಾಧ) ನೋಡಿದಳು. ಅವನ ಪರಾಕ್ರಮ, ಸೌಂದರ್ಯ, ಸಾಹಸಪ್ರವೃತ್ತಿ ಇವೆಲ್ಲವುಗಳಿಂದ ಅವಳು ಆತನಿಗೆ ಸಂಪೂರ್ಣವಾಗಿ ಮಾರುಹೋದಳು. ಈ ಪ್ರೇಮಿಗಳ ಮಧುರ ಸಂಗಮದ ಪರಿಣಾಮವಾಗಿ ಡಯಾನ ತನ್ನ ಕರ್ತವ್ಯವನ್ನು ಸಮರ್ಪಕವಾಗಿ ನೆರವೇರಿಸಲಿಲ್ಲ. ಚಂದ್ರನ ಚಲನೆಯಲ್ಲಿ ಏರುಪೇರುಂಟಾಯಿತು. ಇದರಿಂದ ಜನರಲ್ಲಿ ಉಂಟಾದ ಕ್ಷೋಭೆಯನ್ನು ನಿವಾರಿಸಲು ಅಪೊಲೊ ಒಂದು ಹಂಚಿಕೆ ಹೂಡಿದ. ಈತ ಸೂರ್ಯತೇಜಸ್ಸಿನ ಪುರುಷರೂಪ. ಡಯಾನಳ ಅಣ್ಣ. ತಂಗಿಯನ್ನು ಗುರಿಹೊಡೆಯುವುದರ ಸ್ಪರ್ಧೆಗೆ ಆಹ್ವಾನಿಸಿದ. ಅವರು ನಿಂತಿದ್ದುದು ಸಮುದ್ರದಂಡೆಯಲ್ಲಿ. ಆಗ ಸಂಜೆ ಬೆಳಕು ಮಾಸುತ್ತಿತ್ತು. ಸಮುದ್ರವಿಡೀ ಕುದಿಯುತ್ತಿರುವ ಚಿನ್ನದ ರಸದಂತೆ ಕ್ಷೋಭೆಯಿಂದ ಕೂಡಿತ್ತು. ಅತಿದೂರದಲ್ಲಿ ತೆರೆಗಳ ಮೇಲೆ ತೇಲುತ್ತಿದ್ದ ದೊಡ್ಡ ಬಿಳಿ ವಸ್ತುವಿನೆಡೆಗೆ ಗುರಿಹೊಡೆಯುವ ಸ್ಪರ್ಧೆ. ಮೊದಲ ಎಸೆತ ಡಯಾನಳದ್ದು. ಅವಳು ಹೊಡೆದ ಬಾಣ ವ್ಯರ್ಥವಾಗಲಿಲ್ಲ. ಆದರೆ ಅದರ ಹತಿಯಿಂದ ಮೃತನಾದವ ಆಕೆಯ ಪ್ರಿಯಕರ ಒರ್ಸೈಯನ್. ಡಯಾನ ಜೂಪಿಟರನ (ಬೃಹಸ್ಪತಿ) ಮರೆಹೊಕ್ಕಳು. ಅವನು ಒರ್ಸೈಯನನಿಗೆ ಸ್ಥಿರನಕ್ಷತ್ರಪದವಿ ಅನುಗ್ರಹಿಸಿ ಡಯಾನಳಿಗೆ (ಚಂದ್ರನಿಗೆ) ಈತನನ್ನು ತಿಂಗಳಿಗೊಂದು ಸಲ ಸಮಾಗಮಿಸುವ ಭಾಗ್ಯವನ್ನು ಕರುಣಿಸಿದ. ಚಂದ್ರಬಿಂಬ ಮಹಾವ್ಯಾಧನ ಒತ್ತಿಗೆ ಉತ್ತರಕ್ಕಾಗಿ ತಿಂಗಳಿಗೊಂದು ಸಲ ಚಲಿಸುವುದೆಂಬುದನ್ನು ಇಲ್ಲಿ ಸ್ಮರಿಸಬಹುದು. ಇನ್ನೊಂದು ಕಥೆಯ ಪ್ರಕಾರ ಒರ್ಸೈಯನನ ಮರಣ ಸಂಭವಿಸಿದ್ದು ಚೇಳು ಕುಟುಕಿದುದರಿಂದ. ಮುಂದೆ ಚೇಳಿಗೂ ಸ್ಥಿರನಕ್ಷತ್ರ ಪದವಿ ಪ್ರಾಪ್ತವಾಯಿತು. ಇದೇ ವೃಶ್ಚಿಕ ರಾಶಿ (ವಿಷುವದಂಶ 15 ಗಂ. 45 ಮಿ.—17 ಗಂ. 55 ಮಿ.). ಆಕಾಶಗೋಳದಲ್ಲಿ ಮಹಾವ್ಯಾಧ ಮತ್ತು ವೃಶ್ಚಿಕ ಸರಿಸುಮಾರಾಗಿ ವ್ಯಾಸೀಯ ವಿರುದ್ಧ ಪುಂಜಗಳು. ಆದ್ದರಿಂದ ಒಂದು ಆಕಾಶದಲ್ಲಿ ಇರುವಾಗ ಇನ್ನೊಂದು ಮುಳುಗಿರುವುದು. ಈ ವೈರಿಗಳು ಒಬ್ಬರನ್ನೊಬ್ಬರು ನಿರಂತರವಾಗಿ ಅಟ್ಟುತ್ತಿರುವಂತೆ ಬಗೆಗಣ್ಣು ಕಂಡಿದೆ.

ಗ್ರೀಕ್ ಪುರಾಣದಲ್ಲಿನ ಇನ್ನೊಂದು ಕಲ್ಪನೆ ಹೀಗಿದೆ: ಒರ್ಸೈಯನ್ ಒನೊಪಿಯಾನನ ಮಗಳಾದ ಮೆರೊಪಳನ್ನು ಪ್ರೀತಿಸಿದ್ದ. ಮೆರೊಪಳ ತಂದೆ ಈ ಮದುವೆಗೆ ಒಪ್ಪಲಿಲ್ಲ. ಆಕೆಯನ್ನು ಬಲಾತ್ಕಾರವಾಗಿ ಕೊಂಡೊಯ್ಯಲು ಉದ್ಯುಕ್ತನಾದಾಗ ಒನೊಪಿಯಾನ್ ಈತನ ಕಣ್ಣುಗಳನ್ನು ಕಿತ್ತುಹಾಕಿದ. ಆಗ ಒಂದು ದಿವ್ಯವಾಣಿ ಕೇಳಿಸಿತು. ಅದರ ಪ್ರಕಾರ ಸೂರ್ಯೋದಯ ಸಮಯದಲ್ಲಿ ಸೂರ್ಯಕಿರಣಗಳು ಒರ್ಸೈಯನನ ಕಣ್ಣುಗುಳಿಗಳಿಗೆ ತಾಗಿದರೆ ಮತ್ತೆ ಆತನಿಗೆ ದೃಷ್ಟಿ ಬರುತ್ತದೆಂದು ತಿಳಿಯಿತು. ಒರ್ಸೈಯನ್ ಅಲ್ಲಿಂದ ಲೆಮ್ನೊಸ್ ಕಡೆಗೆ ಹೊರಟು ಅಲ್ಲಿ ಹೆಫೆಸ್ಟಸನಿಂದ ಸೆಡಲಿಯಾನನನ್ನು ಮಾರ್ಗದರ್ಶಕನಾಗಿ ಪಡೆದು ಪೂರ್ವದ ಕಡೆಗೆ ಹೊರಡುತ್ತಾನೆ. ದಿವ್ಯವಾಣಿಯಂತೆ ಅವನ ಕಣ್ಣುಗಳನ್ನು ಮತ್ತೆ ಪಡೆದು ಆರ್ಟೆಮಿಸಳೊಂದಿಗೆ ಬೇಟೆಗಾರನಾಗಿ ಜೀವಿಸುತ್ತಾನೆ. ಅವನ ಮೃತ್ಯುವಿನ ಬಗ್ಗೆ ನಾನಾ ಪಾಠಾಂತರಗಳಿವೆ. ಅವನು ಚೇಳು ಕಡಿದು ಸತ್ತನೆಂದೂ ಇಯೊಸಳು ಈತನನ್ನು ಪ್ರೇಮಿಸಿದುದರಿಂದ ಆರ್ಟೆಮಿಸಳು ಈತನನ್ನು ಕೊಂದಳೆಂದೂ ಒರ್ಸೈಯನ್ ಆರ್ಟೆಮಿಸಳನ್ನು ಘಾಸಿಪಡಿಸಲು ಹೋದಾಗ ಆಕೆಯೇ ಈತನನ್ನು ಕೊಂದಳೆಂದೂ ಕಲ್ಪನೆಗಳಿವೆ.

ಆಕಾಶದ ದಿವ್ಯಸೌಂದರ್ಯ ಹಾಗೂ ಕ್ರಮಬದ್ಧತೆಗಳಿಗೆ ಮಾನವನ ಕಲ್ಪನೆ ಕೊಟ್ಟಿರುವ ರೂಪಗಳನ್ನಿವಲ್ಲಿ ಕಾಣಬಹುದು. *

**ಒರ್‌ವ್ಯೇಟೊ :** ಮಧ್ಯ ಇಟಲಿಯ ಟೆರ್ನಿ ಪ್ರಾಂತ್ಯದ ಅಂಬ್ರಿಯ ಪ್ರದೇಶದಲ್ಲಿರುವ ಐತಿಹಾಸಿಕ ನಗರ. ರೋಮಿನಿಂದ 126 ಕಿ.ಮೀ. (78 ಮೈ.) ದೂರದಲ್ಲಿದೆ. ಇದು ಟುಫಾ ಜ್ವಾಲಾಮುಖಿ ಪ್ರದೇಶದಲ್ಲಿ, ಸಮತಟ್ಟಾದ ಎತ್ತರವಾದ ಬೆಟ್ಟದ ಕಿರೀಟದಂತೆ, ಟೈಬರ್‌ನದಿಯ ಉಪನದಿಯಾದ ಪಾಗ್ಲಿಯದ ದಂಡೆಯ ಮೇಲಿದೆ. 12–13ನೆಯ ಶತಮಾನದಲ್ಲಿ ಕಟ್ಟಿದ ಮಧ್ಯಯುಗೀನ ಕಟ್ಟಡಗಳಿಗೂ ಇಕ್ಕಟ್ಟಾದ ಅಂಕುಡೊಂಕಾದ ರಸ್ತೆಗಳಿಗೂ ಇದು ಪ್ರಸಿದ್ಧ. ಈ ನಗರದ ಸುತ್ತಮುತ್ತ ಅತ್ಯುತ್ತಮ ಬೇಸಾಯ ನಡೆಯುವುದರಿಂದ ಇದು ಮುಖ್ಯವಾದ ಸ್ಥಳೀಯ ವ್ಯಾಪಾರಕೇಂದ್ರ. ರುಚಿಮಧುರ ವೈನ್ ಇಲ್ಲಿ ತಯಾರಾಗುತ್ತದೆ. ಕಲಾತ್ಮಕ ಹಂಚು, ಕಬ್ಬಿಣದ ಸಾಮಾನು, ಅಲಂಕಾರಯುಕ್ತವಾದ ಕಲಾಬತ್ತಿನ ದಾರ—ಇವನ್ನೂ ಇಲ್ಲಿ ತಯಾರಿಸಲಾಗುತ್ತದೆ. ರೋಮಿನಿಂದ ಫ್ಲಾರೆನ್ಸಿಗೆ ಹೋಗುವ ರೈಲುಮಾರ್ಗ ಈ ಕಣಿವೆ ಪ್ರದೇಶವನ್ನು ಹಾದುಹೋಗುತ್ತದೆ. ಇಲ್ಲಿರುವ ಪ್ರಸಿದ್ಧ ಕೆಥೆಡ್ರಲನ್ನು ಕಟ್ಟಲಾರಂಭಿಸಿದ್ದು 1290ರಲ್ಲಿ. ಮಧ್ಯಯುಗದ ಅನೇಕ ಚಿತ್ರಕಲಾವಿದರು ಇದನ್ನಲಂಕರಿಸಿದ್ದಾರೆ. ಉಳಿದ ಪ್ರೇಕ್ಷಣೀಯ ಮಂದಿರಗಳೆಂದರೆ ಸಾನ್ ಆಂಡ್ರ್ಯೂ ಚರ್ಚ್, ಪ್ಲಾಜೋ ಕಮ್ಯೂನೇಲ್ ಮತ್ತು ಪ್ಲಾಜೊ ಡೆಲ್ ಪೊಪೊಲೊ. ಆರನೆಯ ಕ್ಲೆಮೆಂಟನ ಕಾಲದಲ್ಲಿ ಕಟ್ಟಿದ ಸಾನ್ ಪ್ಯಟ್ರಿಜಿಯೊ ಕೂಡ ಪ್ರೇಕ್ಷಣೀಯ. ಈ ನಗರ ಹಿಂದೆ ಎಟ್ರುಸ್ಕನರದಾಗಿದ್ದು ಅನಂತರ ರೋಮನರ ಕೈಸೇರಿತು. ಇಲ್ಲಿ ಗಾಥಿಕರೂ ಬೈಜಾಂಟಿಯನ್ನರೂ ಲೊಂಬಾರ್ಡರೂ ಆಳಿದರು. *

**ಒಲವಿನ ಹಕ್ಕಿ :** ಗಿಳಿಯಂತೆ ತೋರುವ ಒಂದು ಬಗೆಯ ಹಕ್ಕಿ. ಸಾಧಾರಣವಾಗಿ ಆಫ್ರಿಕದ ಅಗಪೋರ್ನಿಸ್ ಜಾತಿಯವನ್ನು ಈ ಹೆಸರಿಂದ ಕರೆಯುತ್ತಾರೆ (ಲವ್ ಬರ್ಡ್). ಪ್ರಪಂಚದ ನಾನಾ ಭಾಗಗಳಲ್ಲಿ ಇವು ಹರಡಿವೆ. ಆಕಾರದಲ್ಲಿ ಚಿಕ್ಕದಾದರೂ ಉದ್ದ ಪುಕ್ಕಗಳಿಂದಾಗಿ ಹಕ್ಕಿ ದೊಡ್ಡದಾಗಿ ಕಾಣುತ್ತದೆ.



ಗರಿ ಮೃದು ನೀಲಿ ಬಣ್ಣದ್ದಾಗಿದ್ದು ಮೇಲೆ ಹಸಿರು, ಕೆಂಪು ಮತ್ತು ಬಿಳಿ ಮಚ್ಚೆಗಳಿವೆಯಾಗಿ ಹಕ್ಕಿ ನೋಡಲು ಬಲು ಚೆನ್ನ. ಗಂಡು ಹೆಣ್ಣು ಹಕ್ಕಿಗಳು ಯಾವಾಗಲೂ ಜೊತೆ ಜೊತೆಯಾಗಿದ್ದು ಒಂದನ್ನೊಂದು ಹಿಂಬಾಲಿಸುತ್ತ, ಒಂದರ ಸಾಮೀಪ್ಯವನ್ನು ಮತ್ತೊಂದು ಬಯಸಿ, ಸದಾ ಸರಸ ಸಲ್ಲಾಪದಲ್ಲಿರುತ್ತವಾದ ಕಾರಣ ಇವನ್ನು ಒಲವಿನ ಹಕ್ಕಿಗಳು ಎಂದು ಕರೆದಿರಬೇಕು. ಇವನ್ನು ಹಿಡಿದು ಮಾರುವುದುಂಟು. ಕೊಂಡು ಸಾಕುವವರೂ ಇದ್ದಾರೆ. (ಜಿ.ಎಂ.ಬಿ.)

**ಒಲಿಂಪಿಕ್ ಕ್ರೀಡೆಗಳು :** ಪುರಾತನ ಗ್ರೀಸಿನ ಒಲಿಂಪಿಯದಲ್ಲಿ ಅಖಿಲ ಹೆಲನಿಕ್ ಜನಪ್ರಿಯ ಉತ್ಸವಗಳಾಗಿ ಹಲವು ಶತಮಾನಗಳ ಕಾಲ ವಿಜೃಂಭಿಸಿ, ಆಧುನಿಕ ಯುಗದಲ್ಲಿ ವಿಶ್ವದ ಸಮಸ್ತ ರಾಷ್ಟ್ರಗಳ ಸ್ನೇಹವರ್ಧನೆಯ ಸಾಧನವಾಗಿ ಹಿರಿಯ ಪ್ರಮಾಣದಲ್ಲಿ ಪುನರವತರಿಸಿರುವ ಅಂತರರಾಷ್ಟ್ರೀಯ ಕ್ರೀಡಾಸ್ಪರ್ಧೆಗಳು (ಒಲಿಂಪಿಕ್ ಗೇಮ್ಸ್). ಕ್ರಿ.ಪೂ. 776ರಲ್ಲಿ ಇವು ಆರಂಭವಾದುವೆಂಬುದಾಗಿ ಹಿಂದಿನಿಂದಲೂ ನಂಬಿಕೊಂಡು ಬರಲಾಗಿದೆ. ಆ ವರ್ಷದಿಂದೀಚೆಗೆ ಇವು ಕ್ರಮವಾಗಿ ನಾಲ್ಕು ವರ್ಷಗಳಿಗೊಮ್ಮೆ ನಡೆಯುತ್ತಿದ್ದುವು. ಒಂದು ಉತ್ಸವದಿಂದ ಇನ್ನೊಂದು ಉತ್ಸವದ ವರೆಗಿನ ಅವಧಿಯನ್ನು ಒಲಿಂಪಿಕ್ ಶಕವೆಂದೇ (ಒಲಿಂಪಿಯಡ್) ಕರೆಯುವ ವಾಡಿಕೆಯಾಯಿತು. ಪ್ರತಿಯೊಂದು ಹೊಸ ಒಲಿಂಪಿಕ್ ಶಕದ ಉದಯದ ಆಚರಣೆಯಾಗಿ ಒಲಿಂಪಿಕ್ ಕ್ರೀಡೋತ್ಸವವನ್ನಾಚರಿಸಲಾಗುತ್ತಿತ್ತು. ಒಲಿಂಪಿಯದ ದೇವಸ್ಥಾನದ ಧಾರ್ಮಿಕ ವಿಧಿಗೂ ಒಲಿಂಪಿಕ್ ಕ್ರೀಡೆಗೂ ಹತ್ತಿರದ ಸಂಬಂಧವಿದ್ದರೂ ಇದು ಕೇವಲ ವಿಧಿಯಾಗಿಯೇ ಕೊನೆಗೊಳ್ಳುತ್ತಿರಲಿಲ್ಲ. ಕ್ರೀಡಾಸ್ಪರ್ಧೆಗಳ ಜೊತೆಗೆ ಅಲ್ಲಿ ಭಾಷಣ ಸಂಗೀತ ಕಾವ್ಯಗೋಷ್ಠಿ ಮುಂತಾದವಲ್ಲೂ ಮೇಲಾಟಗಳನ್ನೇರ್ಪಡಿಸಲಾಗುತ್ತಿತ್ತು.

ಪ್ರಾರಂಭದಲ್ಲಿ ಒಲಿಂಪಿಕ್ ಉತ್ಸವ ಕೇವಲ ಒಂದು ದಿನದ ಕಾರ್ಯಕ್ರಮವಾಗಿತ್ತು. ಆಗ ನಡೆಯುತ್ತಿದ್ದುದಾದರೂ ಒಂದೇ ಸ್ಪರ್ಧೆ: ಕ್ರೀಡಾಂಗಣದ (ಸ್ಟೇಡಿಯಂ) ಉದ್ದಕ್ಕೆ (ಸು. 202 ಗಜ) ಓಟ. ಕ್ರಮೇಣ ಸ್ಪರ್ಧೆಗಳ ಸಂಖ್ಯೆ ಹೆಚ್ಚಿತು. ಚಕ್ರದ (ಡಿಸ್ಕಸ್) ಎಸೆತ, ಈಟಿಯ (ಜಾವೆಲಿನ್) ಎಸೆತ, ಅಗಲನೆಗೆತ (ಬ್ರಾಡ್‌ಜಂಪ್), ಮುಷ್ಟಿ ಕಾಳಗ (ಬಾಕ್ಸಿಂಗ್), ಕುಸ್ತಿ, ಪೆಂಟಾಥ್ಲಾನ್, ರಥಗಳ ಸ್ಪರ್ಧೆ ಮುಂತಾದವು ಸೇರಿಕೊಂಡುವು. ಧಾರ್ಮಿಕ ವಿಧಿಗಳನ್ನೂ ಒಳಗೊಂಡು ಏಳು ದಿನಗಳ ಉತ್ಸವವಾಗಿ ಇದು ಬೆಳೆಯಿತು. ಮೊದಮೊದಲು ಗ್ರೀಕರಿಗೆ ಮಾತ್ರ ಸ್ಪರ್ಧೆಗೆ ಪ್ರವೇಶವಿತ್ತು. ಆದರೆ ಎಲ್ಲ ಗ್ರೀಕ್ ವಸಾಹತುಗಳಿಂದಲೂ ಸ್ಪರ್ಧಿಗಳು ಬರುತ್ತಿದ್ದರು. ಉತ್ಸವ ಕಾಲದಲ್ಲಿ ಸ್ಪರ್ಧಿಗಳು ನಿರ್ಭಯವಾಗಿ ಸಂಚರಿಸಲು ಸಾಧ್ಯವಾಗುವಂತೆ ಶಾಂತ ವಾತಾವರಣವನ್ನು ಏರ್ಪಡಿಸಲಾಗುತ್ತಿತ್ತು. ಸ್ಪರ್ಧೆ

ಯಲ್ಲಿ ಭಾಗವಹಿಸಲೂ ಅದನ್ನು ವೀಕ್ಷಿಸಲೂ ಸ್ತ್ರೀಯರಿಗೆ ಅವಕಾಶವಿರಲಿಲ್ಲ. ಡೆಮೆಟರಿನ ಪೂಜಾರಿಣಿಗಳು ಮಾತ್ರ ಈ ನಿಯಮಕ್ಕೆ ಅಪವಾದ; ಅವರು ಕ್ರೀಡೆಗಳನ್ನವಲೋಕಿಸಬಹುದಿತ್ತು. ಈ ನಿಯಮವನ್ನುಲ್ಲಂಘಿಸಿದ ಮಹಿಳೆಗೆ ಮರಣ ಶಿಕ್ಷೆ ವಿಧಿಸುತ್ತಿದ್ದರು. ಸ್ಪರ್ಧೆಯ ಪಾವಿತ್ರ್ಯವನ್ನು ಕಾಪಾಡುತ್ತೇವೆ; ನಿಷ್ಪಕ್ಷಪಾತವಾಗಿ ನಡೆದುಕೊಳ್ಳುತ್ತೇವೆ; ನ್ಯಾಯವಾದ ತೀರ್ಪು ನೀಡುತ್ತೇವೆ—ಎಂದು ಸ್ಪರ್ಧೆ ಪ್ರಾರಂಭವಾಗುವ ಮುನ್ನ ಎಲ್ಲ ಸ್ಪರ್ಧಿಗಳೂ ಅವರ ಕುಟುಂಬದವರೂ ಶಿಕ್ಷಕರೂ ತೀರ್ಪುಗಾರರೂ ಪ್ರತಿಜ್ಞಾವಿಧಿ ಸ್ವೀಕರಿಸಬೇಕಿತ್ತು.

ಆಗಿನ ಕಾಲದಲ್ಲಿ ಒಲಿಂಪಿಕ್ ಕ್ರೀಡೆಗಳು ಬಹಳ ಗೌರವದ ಸ್ಥಾನ ಪಡೆದಿದ್ದುವು. ತಂತಮ್ಮಲ್ಲೇ ಬಡಿದಾಡುತ್ತಿದ್ದ ಗ್ರೀಕ್ ರಾಷ್ಟ್ರಗಳು ಉತ್ಸವ ಕಾಲದಲ್ಲಿ ಪರಸ್ಪರ ಸಹಕರಿಸುತ್ತಿದ್ದದ್ದೂ ಅವು ಚತುರ್ವರ್ಷೀಯ ಕಾಲಚಕ್ರವನ್ನು ಪುರಸ್ಕರಿಸಿದ್ದೂ ಇದಕ್ಕೆ ಸಾಕ್ಷಿ. ಒಲಿಂಪಿಕ್ ಸ್ಪರ್ಧೆಯಲ್ಲಿ ಗೆದ್ದವರಿಗೆ ಲಭಿಸುತ್ತಿದ್ದುದಾದರೂ ಕಾಡು ಆಲಿವ್ ಮರದ ಎಲೆಗಳ ರೆಂಬೆಯ ಕಿರೀಟ. ಆದರೆ ಈ ಮರ್ಯಾದೆಗಾಗಿಯೇ ದೊರೆಗಳೂ ಸಾಮಾನ್ಯರೂ ಸಮಾನರಾಗಿ ಸ್ಪರ್ಧಿಸುತ್ತಿದ್ದರು. ರೋಮನ್ ಚಕ್ರವರ್ತಿ ನೀರೋ ಕೂಡ ಈ ಮರ್ಯಾದೆಗಾಗಿ ಹಾತೊರೆದನಂತೆ, ಸ್ಪರ್ಧೆಗಳಲ್ಲಿ ವಿಜಯ ಗಳಿಸಿದವರನ್ನು ರಾಷ್ಟ್ರವೀರರೆಂದು ಗೌರವಿಸಲಾಗುತ್ತಿತ್ತು. ಅವರ ಸಾಹಸಗಳು ಕಾವ್ಯಕ್ಕೆ ವಸ್ತುವಾಗುತ್ತಿದ್ದುವು; ಸಂಗೀತಕ್ಕೆ ಸ್ಫೂರ್ತಿ ನೀಡುತ್ತಿದ್ದುವು. ವಿಜಯಿಯ ಮೈಕಟ್ಟನ್ನೂ ಗಾಡಿಯನ್ನೂ ಶಿಲ್ಪಿಗಳು ಅಮೃತಶಿಲೆಯಲ್ಲಿ ಶಾಶ್ವತವಾಗಿ ಸೆರೆ ಹಿಡಿದಿಡುತ್ತಿದ್ದರು. ಸ್ಪರ್ಧೆಯಲ್ಲಿ ಭಾಗವಹಿಸುವುದು ಗೆಲ್ಲುವುದಕ್ಕಾಗಿ ಮಾತ್ರವಲ್ಲ, ಆಡುವುದಕ್ಕಾಗಿ—ಎಂಬುದು ಇಲ್ಲಿಯ ಧ್ಯೇಯ. ಕ್ರೀಡಾಪಟುವಿನ ನಿಜಮನೋಧರ್ಮ, ಆಟವಾಡುವ ಶೈಲಿಯ ಸೊಬಗು—ಇವಕ್ಕೆ ಇಲ್ಲಿ ಪ್ರಾಧಾನ್ಯ.

**ಉಗಮ :** ಕ್ರಿ.ಪೂ. 776ರಲ್ಲಿ ಒಲಿಂಪಿಕ್ ಶಕೆ ಆರಂಭವಾಯಿತೆಂಬುದು ಐತಿಹ್ಯವಾದರೂ ಅದಕ್ಕೂ ಹಿಂದೆಯೇ ಒಲಿಂಪಿಕ್ ಕ್ರೀಡೆಗಳು ಪ್ರಾರಂಭವಾದುವೆಂದು ಭಾವಿಸುವುದು ತಪ್ಪಾಗಲಾರದು. ಕ್ರೀಡಾಸ್ಪರ್ಧೆಗಳು ಹುಟ್ಟಿದ್ದೇ ಪುರಾತನ ಗ್ರೀಸಿನಲ್ಲಿ. ದೇವರ ಅಥವಾ ಸತ್ತ ವೀರನ ಗೌರವಾರ್ಥವಾಗಿ ಅಂಗ ಸಾಧನೆಯ ಸ್ಪರ್ಧೆಗಳನ್ನೇರ್ಪಡಿಸುವ ಪದ್ಧತಿಯಿಂದ ಒಲಿಂಪಿಯನ್ ಹಬ್ಬ ಬೆಳೆದು ಬಂದಿರಬಹುದು. ಆರಂಭದಲ್ಲಿ ಮೃತನ ಅಂತ್ಯ ಸಂಸ್ಕಾರದ ಸಂದರ್ಭದಲ್ಲಿ ಕ್ರೀಡೆಗಳನ್ನೇರ್ಪಡಿಸುವ ಪದ್ಧತಿಯಿದ್ದಿರಬಹುದು. (ಹೋಮರ್ ಕವಿಯ ಈಲಿಯಡಿನಲ್ಲಿ ಇಂಥ ಒಂದು ಪ್ರಸಂಗದ ವರ್ಣನೆಯಿದೆ) ಅನಂತರ ಇದು ಸಾಮೂಹಿಕವಾಗಿ ಪರಿಣಮಿಸಿ, ಒಂದು ಅವಧಿಯಲ್ಲಿ ಸತ್ತ ಎಲ್ಲ ವೀರರ ಗೌರವಾರ್ಥವಾಗಿ ಏರ್ಪಡಿಸುವ ಪದ್ಧತಿ ಬೆಳೆದು ಬಂದಿರಬಹುದು. ಇದರಿಂದ ಸ್ಪರ್ಧಿಗಳಲ್ಲಿ ನವಚೈತನ್ಯ ತುಂಬಿ ಅವರ ಯೌವನ ಪುನರ್ನವಗೊಳ್ಳುವುದೆಂದೂ ದೇವರುಗಳ ಶಕ್ತಿಗೆ ಚಾಲನೆ ದೊರಕುವುದೆಂದೂ ಸತ್ತವರಿಗೆ ನಷ್ಟವಾದ ಶಕ್ತಿ ಲಭಿಸುವುದೆಂದೂ ಭಾವಿಸಲಾಗಿತ್ತು. ಅಂಗ ಸಾಧನೆಯಿಂದ ಆರೋಗ್ಯ ಪ್ರಾಪ್ತಿ, ಹೋರಾಟಕ್ಕೆ ಸಿದ್ಧತೆ. ತತ್ತ್ವದರ್ಶನ ಮತ್ತು ಶೌರ್ಯಪರಾಕ್ರಮಗಳೆರಡನ್ನೂ ಏಕಪ್ರಕಾರವಾಗಿ ಪ್ರೀತಿಸುತ್ತಿದ್ದ ಗ್ರೀಕರ ಜೀವನದ ಆದರ್ಶಗಳಿಗೆ ಕ್ರೀಡೆಗಳೇ ತಳಹದಿ. ಆಯಾ ಸ್ಥಳದೇವತೆಗಳ ಗೌರವಾರ್ಥ ನಡೆಯುತ್ತಿದ್ದ ಧಾರ್ಮಿಕ ಉತ್ಸವಗಳೂ ಕ್ರೀಡಾಸ್ಪರ್ಧೆಗಳೊಂದಿಗೆ ಬೆರೆತುಕೊಂಡು ಕ್ರಮೇಣ ಒಲಿಂಪಿಯನ್ ಹಬ್ಬಕ್ಕೊಂದು ಸಾರ್ವತ್ರಿಕ ರೂಪ ಬಂದಿರಬೇಕು.

ಗ್ರೀಕರ ಜೀವನ ಧೋರಣೆ ಮತ್ತು ಅವರು ಕ್ರೀಡಾಸ್ಪರ್ಧೆಗಳನ್ನು ನಡೆಸುತ್ತಿದ್ದ ವಿಧಾನಗಳು ಹೋಮರನ ಈಲಿಯಡಿನಲ್ಲಿ ವರ್ಣಿತವಾಗಿವೆ. ಯುದ್ಧದಲ್ಲಿ ವೀರ ಮರಣ ಪಡೆದ ಪೆಟ್ರೋಕ್ಲಸನ ಚರಮಗೌರವವಾಗಿ ಟ್ರಾಯ್‌ನ ಹೊರವಲಯದಲ್ಲಿ ಕೆಲವು ಕ್ರೀಡಾಸ್ಪರ್ಧೆಗಳನ್ನು ಅಕಿಲೀಸ್ ಏರ್ಪಡಿಸಿದ. ಅದರಲ್ಲಿ ಭಾಗಿಗಳೂ ಪ್ರೇಕ್ಷಕರೂ ಸೈನಿಕರು. ರಥಸ್ಪರ್ಧೆಯೇ ಮುಖ್ಯ ಘಟನೆ (ಇವೆಂಟ್). ಕುಶಲಕಲೆಗಳನ್ನರಿತ ಸುಂದರ ಹೆಣ್ಣು ಮತ್ತು 22 ಪಿಂಟ್ ಹಿಡಿಸುವ, ಕಿವಿಯಂಥ ಹಿಡಿಗಳಿರುವ ಪಾತ್ರೆ—ಇದು ಅಕಿಲೀಸ್ ಇಟ್ಟಿದ್ದ ಪ್ರಥಮ ಬಹುಮಾನ. ದೇವತೆಗಳೇ ತೀರ್ಪುದಾರರು. ಅವರಲ್ಲೂ ಪೂರ್ವಾಗ್ರಹ, ಪಕ್ಷಪಾತ. ರಥಸ್ಪರ್ಧೆಯೇ ಅಲ್ಲದೆ ಮುಷ್ಟಿಕಾಳಗ, ಕುಸ್ತಿ, ಕಾಲೋಟ, ಬಾಣವಿದ್ಯೆ, ದ್ವಂದ್ವಯುದ್ಧ ಮುಂತಾದ ಇತರ ಕ್ರೀಡೆಗಳನ್ನೂ ಹೋಮರ್ ಬಣ್ಣಿಸಿದ್ದಾನೆ.

ಕವಿ ಪಿಂಡರನ ಪ್ರಕಾರ ಒಲಿಂಪಿಕ್ ಕ್ರೀಡೆಗಳನ್ನು ಸ್ಥಾಪಿಸಿದವನು ವೀರ ಹರ್ಕ್ಯುಲಿಸ್. ಆಜಿಯಸ್ ದೊರೆಯನ್ನು ಕೊಂದು ಈಲಿಸ್ ರಾಜ್ಯವನ್ನು ಗೆದ್ದ ಜ್ಞಾಪಕಾರ್ಥವಾಗಿ ಆತ ಇದನ್ನು ಆರಂಭಿಸಿದನಂತೆ. ರೋಗರುಜಿನಾದಿ ಉಪದ್ರವಗಳೂ ಪರಸ್ಪರ ವೈಷಮ್ಯವೂ ಕಚ್ಚಾಟವೂ ನಾಡಿನಲ್ಲೆಲ್ಲ ಹಬ್ಬಿದ್ದಾಗ, ದಿವ್ಯವಾಣಿಯ ಆಜ್ಞೆಯಂತೆ ಇಫಿಟಸ್ ಇವನ್ನು ಪ್ರಾರಂಭಿಸಿದನೆಂಬುದು ಇನ್ನೊಂದು ಐತಿಹ್ಯ. ಈ ಕಥೆಗೆ ಆಧಾರವಾಗಿ ಒಲಿಂಪಿಯದ ಹೇರಿಯಂನಲ್ಲಿರುವ ಕಂಚಿನ ಚಕ್ರವೊಂದನ್ನು ಗ್ರೀಕ್ ಪ್ರವಾಸಿ ಪಾಸೇನಿಯಸ್ ಉಲ್ಲೇಖಿಸಿದ್ದಾನೆ. ನಾನಾ ಆಟಗಳ ನಿಯಮಾವಳಿಗಳನ್ನೇ ಅಲ್ಲದೆ ಲಿಕರ್ಗಸ್ ಮತ್ತು ಇಫಿಟಸರ ಹೆಸರುಗಳನ್ನೂ ಇದರಲ್ಲಿ ಕೆತ್ತಿದೆ.

ಇಯಾನ್ ಹರ್ಕ್ಯುಲಿಸ್ ಒಲಿಂಪಿಕ್ ಕ್ರೀಡೆಗಳ ಜನಕನೆಂದೂ ಅವನೇ ಇವಕ್ಕೆ ಈ ನಾಮಕರಣ ಮಾಡಿದವನೆಂದೂ ಒಲಿಂಪಿಯದಲ್ಲಿ ಕಾಲೋಟದ ಸ್ಪರ್ಧೆಗೆ ಏರ್ಪಡಿಸಿದವನೆಂದೂ ಎಂದು ತನ್ನ ಸೋದರರಿಗೇ ಆತ ಸವಾಲು ಒಡ್ಡಿದನೆಂದೂ ಈಲಿಸಿನ ಜನದ ಪುರಾತನ ದಾಖಲೆಗಳು ಸಾರುತ್ತವೆಯೆಂದೂ ಪಾಸೇನಿಯಸ್ ಹೇಳುತ್ತಾನೆ. ಜ್ಯೂಸ್ ದೇವತೆ ಸ್ವರ್ಗದ ಒಡೆತನಕ್ಕಾಗಿ ಕ್ರೋನಸನೊಂದಿಗೆ ಒಲಿಂಪಿಯದಲ್ಲಿ ಸೆಣಸಿ ಗೆದ್ದನೆಂದೂ ಇದರ ಸ್ಮರಣಾರ್ಥವಾಗಿ ಒಲಿಂಪಿಕ್ ಕ್ರೀಡೆಗಳು ಆರಂಭವಾದುವೆಂದೂ ಪಾಸೇನಿಯಸನಿಂದ ತಿಳಿದು ಬರುತ್ತದೆ.

**ಬೆಳವಣಿಗೆ :** ಒಲಿಂಪಿಕ್ ಕ್ರೀಡೆಗಳ ಉಗಮ ಹೇಗಾಯಿತೆಂಬುದು ಸ್ಪಷ್ಟವಿಲ್ಲವಾದರೂ ಕ್ರಿ.ಪೂ. 776ರ ಹೊತ್ತಿಗೆ ಇವು ಸ್ಥಾಪಿತವಾಗಿದ್ದುವೆಂಬುದಂತೂ ನಿಜ. ಇವುಗಳ ಸ್ಥಳ ಒಲಿಂಪಿಯ—ಪೆಲೊಪೊನೀಸಸಿನ ವಾಯವ್ಯಭಾಗ. ಅಲ್ಫಿಯಾಸ್ ಮತ್ತು ಕ್ಲೇಡಿಯಸ್ ನದಿಗಳ ಪೂರ್ವ ಮತ್ತು ಉತ್ತರ ದಡಗಳ ಮೇಲೆ ಕ್ರೀಡಾಂಗಣವೂ ಜ್ಯೂಸ್ ದೇವಸ್ಥಾನವೂ ನಿರ್ಮಿತವಾಗಿದ್ದುವು. ಹೆಲನಿಕ್ ಯುಗದಲ್ಲಿ ಈ ಕ್ಷೇತ್ರ ಪ್ರಸಿದ್ಧವಾಯಿತು. ಗ್ರೀಕರ ದೈಹಿಕ ಸೌಂದರ್ಯಾರಾಧನೆಯ ಮತ್ತು ದೇಹ ಬುದ್ಧಿಗಳೆರಡರ ಸಮನ್ವಯದ ಸಂಕೇತವಾಯಿತು.

ಒಲಿಂಪಿಕ್ ಕ್ರೀಡೆಗಳು ಬಹಳ ಪ್ರಸಿದ್ಧವೂ ಪ್ರಮುಖವೂ ಆದದ್ದು ಕ್ರಿ.ಪೂ. 6ನೆಯ ಶತಮಾನದಿಂದೀಚೆಗೆ. ನಗರರಾಜ್ಯವಾದ ಪೀಸವೇ ಮೊದಲು ಇವನ್ನು ನಿಯಂತ್ರಿಸುತ್ತಿತ್ತು. ಆದರೆ ಕ್ರಿ.ಪೂ. 572ರ ವೇಳೆಗೆ ನೆರೆಯ ನಗರ ರಾಜ್ಯ ಈಲಿಸ್ ಇವುಗಳ ಹಿಡಿತ ಪಡೆದುಕೊಂಡಿತು. ಕ್ರಮೇಣ ಒಲಿಂಪಿಯ ಒಂದು ಒಕ್ಕೂಟದ ಕೇಂದ್ರವಾಯಿತು. ಈ ಕ್ರೀಡೆಗಳು ಸ್ಥಳೀಯ ಪ್ರಾಮುಖ್ಯದ ವ್ಯಾಪ್ತಿಯನ್ನು ಮೀರಿ ಅಂತರರಾಷ್ಟ್ರೀಯವೆನಿಸಿಕೊಂಡುವು. ಆಗ ಸ್ಪಾರ್ಟ ಪ್ರಬಲ ರಾಜ್ಯ. ಇದು ಈಲಿಸಿನೊಂದಿಗೆ ಸಖ್ಯ ಗಳಿಸಿಕೊಂಡಿತು. ಒಲಿಂಪಿಕ್ ಉತ್ಸವದ ಧಾರ್ಮಿಕ ವಿಧಿಗಳ ನಿಯೋಜನೆ ಈಲಿಸಿನದಾದರೆ, ಕ್ರೀಡೆಗಳ ಅಧಿಕೃತ ರಕ್ಷಣೆ ಸ್ಪಾರ್ಟದ್ದು. ಹೀಗೆ ಸ್ಪಾರ್ಟದ ಕೀರ್ತಿ ಪ್ರತಿಷ್ಠೆಗಳು ಬೆಳೆದುವು. ಯುದ್ಧಕಾಲದಲ್ಲಿ ಕೂಡ ಅಖಿಲ ಗ್ರೀಕ್ ಜನರು ಒಲಿಂಪಿಕ್ ಕ್ರೀಡೆಗಳಲ್ಲಿ ಭಾಗವಹಿಸಲು ಮತ್ತು ಅವನ್ನು ಪ್ರೇಕ್ಷಿಸಲು ನಾನಾ ಕಡೆಗಳಿಂದ ಬರುವುದು ಸಾಧ್ಯವಾಗುವಂತೆ ಶಾಂತ ವಾತಾವರಣ ರಚಿಸಿ ಪಾಲಿಸುವ, ಸುವ್ಯವಸ್ಥೆ ಏರ್ಪಡಿಸುವ ಹೊಣೆ ಸ್ಪಾರ್ಟದ್ದಾಯಿತು. ಹೀಗೆ ಈ ಕ್ರೀಡೆಗಳು ಎಲ್ಲ ಯುದ್ಧಗಳನ್ನೂ ಭಿನ್ನತೆ ವೈಷಮ್ಯಗಳನ್ನೂ ಮೀರಿದ ಅಂತರರಾಷ್ಟ್ರೀಯ ಸ್ನೇಹ ಸಂವರ್ಧನೆಯ ಐಕ್ಯಕ ಸೂತ್ರವಾಗಿ ಪರಿಣಮಿಸಿದುವು. ಕ್ರಿ.ಪೂ. 776ರಿಂದ 721ರ ವರೆಗೆ ವಿಜಯಿಗಳ ಪಟ್ಟಿಯಲ್ಲಿದ್ದವರು ಈಲಿಯನರು ಮತ್ತು ಅವರ ನೆರೆಹೊರೆಯವರು ಮಾತ್ರ. ಆದರೆ ಅನಂತರ ಅಥೀನಿಯನರೂ ಇತರರೂ ಪ್ರವೇಶಿಸಿದರು.

ಹೀಗೆ ಅಖಿಲ ಹೆಲನಿಕ್ ಏಕತೆಯ ಸಂಕೇತವಾಗಿ, ದೇಹ-ಮನಸ್ಸುಗಳ ಸುಮಧುರ ಹೊಂದಾಣಿಕೆಯ ಸಾಧನವಾಗಿ, ಜ್ಯೂಸ್ ದೇವತೆಯ ಆರಾಧನೋತ್ಸವವಾಗಿ ಇದು ಮುಂದುವರಿಯಿತು. ಗ್ರೀಕ್ ರಾಜ್ಯಗಳ ಸ್ವಾತಂತ್ರ್ಯಹರಣವಾದ ಮೇಲೂ—ಮೆಸೆಡೋನಿಯನ್ ಮತ್ತು ರೋಮನ್ ಚಕ್ರಾಧಿಪತ್ಯಗಳ ಕಾಲದಲ್ಲಿ ಕೂಡ—ಅನಸ್ಯೂತವಾಗಿ ನಡೆದುಕೊಂಡು ಬಂದುವು. ಕ್ರಿ.ಶ. 393ರ ಅನಂತರ ಇವು ನಿಂತುಹೋದುವೆಂದು 11ನೆಯ ಶತಮಾನದ ಗ್ರೀಕ್ ಲೇಖಕ ಸಿಡ್ರಿನಸ್ ಬರೆಯುತ್ತಾನೆ. ರೋಮನ್ ಚಕ್ರವರ್ತಿ ಥಿಯೊಡೋಸಿಯಸನ ಆಳ್ವಿಕೆಯ ಕಾಲದಲ್ಲಿ ಅವನ ಆಜ್ಞೆಯಂತೆ ಕ್ರೈಸ್ತರು ಅಥವಾ ಗಾಥರು ಜ್ಯೂಸ್ ದೇಗುಲವನ್ನು ನಾಶ ಮಾಡಿದರು. ಜ್ಯೂಸ್ ದೇವತೆಯ ವಿಗ್ರಹವನ್ನು ಕಾನ್‌ಸ್ಟಾಂಟಿನೋಪಲಿಗೆ ಸಾಗಿಸಲಾಯಿತು. ಅಲ್ಲಿ ಅದು ಕ್ರಿ.ಶ. 47ರಲ್ಲಿ ಅಗ್ನಿಗೆ ಆಹುತಿಯಾಯಿತು. ಅಂತೂ ಇಷ್ಟು ದೀರ್ಘಕಾಲ ಇಂಥ ಪ್ರಮಾಣದಲ್ಲಿ ಜನರ ಮೇಲೆ ಪ್ರಭಾವ ಬೀರಿದ ಮಾನವನಿರ್ಮಿತ ವ್ಯವಸ್ಥೆ ಇನ್ನೊಂದಿಲ್ಲ.

ಒಲಿಂಪಿಕ್ ಕ್ರೀಡೆಯನ್ನು ಐದು ದಿನಗಳ ಅವಧಿಗೆ ವಿಸ್ತರಿಸಿದ್ದು 77ನೆಯ ಉತ್ಸವದಲ್ಲಿ. ಏಕದಿನದ ಸ್ಪರ್ಧೆಗಳಲ್ಲಿ ಅಭ್ಯರ್ಥಿಗಳು ಉಷಃಕಾಲದಲ್ಲಿ ಪ್ರಮಾಣ ವಚನ ಸ್ವೀಕರಿಸಿದ ಮೇಲೆ ಅವರ ಬರಿ ಮೈಗಳಿಗೆ ತೈಲ ಹಚ್ಚಲಾಗುತ್ತಿತ್ತು. ಮಟ್ಟ ನೆಲದ ಓಟದ ಪಂದ್ಯಗಳಲ್ಲಿ ಪೂರ್ವಭಾವಿಯಾಗಿ (ಹೀಟ್ಸ್) ತಲಾ ನಾಲ್ವರನ್ನೋಡಿಸಿ, ಸೋತವರನ್ನು ಬಿಡುತ್ತಾ ಅಂತಿಮ (ಫೈನಲ್) ಹಂತಕ್ಕೆ ಸ್ಪರ್ಧಿಗಳನ್ನು ಆರಿಸಿಕೊಳ್ಳಲಾಗುತ್ತಿತ್ತು. ಮೊದಮೊದಲು ಇರುತ್ತಿದ್ದದ್ದು ಒಂದೇ ಓಟದ ಸ್ಪರ್ಧೆ (210 ಗಜ). 14ನೆಯ ಒಲಿಂಪಿಯಡಿನಿಂದ 220 ಗಜಗಳ ಓಟದ ಸ್ಪರ್ಧೆ ಸೇರಿಸಲಾಯಿತು. ದೂರದ (ಡಿಲೋಕಾಸ್) ಓಟ ಸ್ಪರ್ಧೆಯನ್ನು ಸೇರಿಸಿದ್ದು 15ನೆಯ ಕ್ರೀಡೆಗಳಿಂದ. ಇದರ ದೂರ 1,470 ಗಜ, 2520 ಗಜ ಅಥವಾ 5,040 ಗಜ (210 ಗಜಗಳ 7ರಷ್ಟು, 12ರಷ್ಟು ಅಥವಾ 24ರಷ್ಟು).

ಕುಸ್ತಿ ಮತ್ತು ಪೆಂಟಾಥ್ಲಾನ್ ಸ್ಪರ್ಧೆಗಳನ್ನಾರಂಭಿಸಿದ್ದು 18ನೆಯ ಉತ್ಸವದಲ್ಲಿ. ಅಗಲ ನೆಗೆತ, ಈಟಿಯ ಎಸೆತ, ಚಕ್ರದ ಎಸೆತ, ಮಟ್ಟನೆಲದ ಓಟ, ಕುಸ್ತಿ—ಈ ಐದೂ ಸೇರಿ ಪೆಂಟಾಥ್ಲಾನ್ ಎನಿಸಿಕೊಳ್ಳುತ್ತಿತ್ತು. ಮುಷ್ಟಿಕಾಳಗ ಸ್ಪರ್ಧೆಯನ್ನು

ಏರ್ಪಡಿಸಲಾರಂಭಿಸಿದ್ದು ಕ್ರಿ.ಪೂ. 688ರಲ್ಲಿ (23ನೆಯ ಉತ್ಸವ). ರಥ ಸ್ಪರ್ಧೆ ಬಂದದ್ದೂ ಆ ವರ್ಷವೇ. ಕುದುರೆಸವಾರಿ ಪಂದ್ಯವನ್ನು 33ನೆಯ ಉತ್ಸವದಲ್ಲಿ (ಕ್ರಿ.ಪೂ. 648) ಏರ್ಪಡಿಸಲಾಯಿತು. ಮುಷ್ಟಿಕಾಳಗ ಮತ್ತು ಕುಸ್ತಿಗಳ ಮಿಶ್ರಣವಾದ ಪ್ಯಾನ್‌ಕ್ರೇಷಿಯಮನ್ನು ಪ್ರಾರಂಭಿಸಿದ್ದೂ ಆ ವರ್ಷವೇ. ಬಾಲಕರಿಗೆ ಕ್ರೀಡಾಸ್ಪರ್ಧೆಗಳನ್ನೇರ್ಪಡಿಸಿದ್ದು ಕ್ರಿ.ಪೂ. 632ರಲ್ಲಿ. ಘೋಷಣೆ ಮತ್ತು ಕಹಳೆ ಸ್ಪರ್ಧೆಗಳನ್ನು ಕ್ರಿ.ಪೂ. 416ರಲ್ಲಿ (93ನೆಯ ಉತ್ಸವ) ಪಟ್ಟಿಯಲ್ಲಿ ಸೇರಿಸಲಾಯಿತು. ಯುದ್ಧಕವಚಧಾರಿಗಳ ಓಟದಪಂದ್ಯ ಆರಂಭಗೊಂಡಿದ್ದು ಕ್ರಿ.ಪೂ. 396ರಲ್ಲಿ. ಕ್ರಿ.ಪೂ. 490ರಲ್ಲಿ ಮ್ಯಾರತಾನ್ ಯುದ್ಧದ ವಿಜಯದ ವಾರ್ತೆಯನ್ನು ಹೊತ್ತು ಅಲ್ಲಿಂದ ಅಥೆನ್ಸ್ ಪಟ್ಟಣಕ್ಕೆ ಓಡಿದ ಗ್ರೀಕ್ ಸಾಹಸವನ್ನು ನೆನಪಿಗೆ ತಂದುಕೊಡುವ ದೂರದ ಓಟದ ಪಂದ್ಯವನ್ನು (ಮ್ಯಾರತಾನ್ ರೇಸ್) ಪುರಾತನ ಕ್ರೀಡಾಸ್ಪರ್ಧೆಗಳಲ್ಲಿ ಸೇರಿಸಿಯೇ ಇರಲಿಲ್ಲವೆಂಬುದು ಸ್ವಾರಸ್ಯದ ಸಂಗತಿ.

**ವಿವಿಧ ಪಂದ್ಯಗಳು :** ಪಂದ್ಯಗಳು ನಡೆಯುವುದಕ್ಕೆ ಒಂದು ತಿಂಗಳ ಹಿಂದಿನಿಂದಲೇ ಸ್ಪರ್ಧಿಗಳು ತೀವ್ರ ತರಬೇತಿ ಪಡೆಯುತ್ತಿದ್ದರು. ಚಕ್ರ ಮತ್ತು ಈಟಿಗಳು ಬಹಳ ಜನಪ್ರಿಯತೆ ಗಳಿಸಿದ್ದುವು. ಆಗಿನ ಚಕ್ರದ್ದು ಈಗಿನದಕ್ಕಿಂತ (2 ಕಿಲೊಗ್ರಾಂ) ಹೆಚ್ಚು ತೂಕ. ಅದನ್ನು ಎಸೆಯುತ್ತಿದ್ದದ್ದು ಒಂದು ವೃತ್ತದಿಂದಲ್ಲ; ಒಂದು ಸರಳರೇಖೆಯ ಹಿಂಬದಿಯಿಂದ. ಚಕ್ರವನ್ನೆಸೆಯುವ ಮುನ್ನ ಒಮ್ಮೆ ಪೂರ್ತಿಯಾಗಿ ಸುತ್ತುವ ಬದಲು ಗ್ರೀಕ್ ಎಸೆಗಾರ ಅದನ್ನು ಎರಡೂ ಕೈಗಳಿಂದ ತಲೆಯ ಮೇಲೆತ್ತಿ, ಬಲಗೈಯಲ್ಲಿ ಅದನ್ನು ಹಿಡಿದು ಥಟ್ಟನೆ ಬಲಕ್ಕೆ ಬಾಗಿ, ಅನಂತರ ಮತ್ತೆ ಮುಂದೆ ನಡೆದು ಎಸೆಯುತ್ತಿದ್ದ. ತತ್ಫಲವಾಗಿ ಚಕ್ರ ಎಸೆಯುವವರಿಗೆ ನಡುವಿನ ಮೇಲ್ಭಾಗದಲ್ಲಿ ಹೊಟ್ಟೆಯ ಬಳಿ ಮಾಂಸಖಂಡ ಬೆಳೆಯುತ್ತಿತ್ತು. ಆ ಕಾಲದ ಪ್ರತಿಮೆಗಳಲ್ಲಿ ಇದನ್ನು ಗಮನಿಸಬಹುದು.

ಈಟಿ ಎಸೆತದಲ್ಲಿ ಶಕ್ತಿಗಿಂತ ಯುಕ್ತಿಗೂ ನಿಷ್ಕೃಷ್ಟತೆಗೂ ಪ್ರಾಧಾನ್ಯ. ಇತರರಿಗಿಂತ ಹೆಚ್ಚು ದೂರ ಎಸೆಯುವುದು ಸ್ಪರ್ಧಿಯ ಉದ್ದೇಶವಲ್ಲ. ನೆಲದ ಮೇಲಿನ ಒಂದು ನಿರ್ದಿಷ್ಟ ಗುರಿಗೆ ಹೊಡೆಯಬೇಕಿತ್ತು. ಈಟಿ ಒಂದಾಳಿನ ಎತ್ತರವಾಗೂ ಬೆರಳಿನಷ್ಟು ಸಣ್ಣಗೂ ಇದ್ದು ಬಹಳ ಹಗುರವಾಗಿತ್ತು. ಅದರ ಹಿಡಿಗೆ ಸುಮಾರು ಒಂದು–ಒಂದೂವರೆ ಅಡಿ ಉದ್ದದ ಚರ್ಮದ ದಾರ ಸುತ್ತಲಾಗಿತ್ತು. ಪಂದ್ಯಗಾರ ಆ ದಾರದ ತುದಿಯ ವಂಕಿಯೊಳಗೆ ಬೆರಳುಗಳನ್ನು ತೂರಿಸಿ, ಈಟಿ ಬುಗುರಿಯಂತೆ ಗಿರುಗಿರನೆ ತಿರುಗುತ್ತ ಧಾವಿಸುವಂತೆ ಅದನ್ನು ಎಸೆಯುತ್ತಿದ್ದ.

ಒಲಿಂಪಿಕ್ ಕ್ರೀಡೆಗಳ ಏಕೈಕ ನೆಗೆತದ ಸ್ಪರ್ಧೆಯೆಂದರೆ ಪೆಂಟಾಥ್ಲಾನಿನ ಉದ್ದನೆಗೆತ (ಲಾಂಗ್‌ಜಂಪ್). ಇದನ್ನು ಮಾಡುತ್ತಿದ್ದುದು ಹೇಗೆಂಬುದು ಸ್ಪಷ್ಟವಾಗಿ ಗೊತ್ತಿಲ್ಲ. ಸುಮಾರು 2 ರಿಂದ 11 ಪೌಂಡುಗಳ ವರೆಗೆ ತೂಗುವ ಕಲ್ಲು ಅಥವಾ ಕಂಚಿನ ಎರಡು ಡಂಬ್‌ಬೆಲ್‌ಗಳನ್ನು ಸ್ಪರ್ಧಿ ತನ್ನೆರಡು ಕೈಗಳಲ್ಲೂ ಹಿಡಿದುಕೊಳ್ಳುತ್ತಿದ್ದನೆಂಬುದು ನಮಗೆ ಗೊತ್ತು. ಡಂಬ್‌ಬೆಲ್‌ಗಳನ್ನು ಮುಂದಕ್ಕೂ ಹಿಂದಕ್ಕೂ ಜೋಕಾಲೆಯಾಡಿಸಿ, ಅನಂತರ ನೆಗೆಯುತ್ತಿದ್ದುದು ರೂಢಿ. ನೆಗೆಯುವ ಮುನ್ನ ಓಡುತ್ತಿದ್ದುದೂ ಉಂಟು. ಓಡದೆ ನೇರವಾಗಿ ನೆಗೆಯುತ್ತಿದ್ದುದೂ ಉಂಟು. ಸ್ಪರ್ಧಿಗಳು 50 ಅಡಿಗಳಿಗೂ ಹೆಚ್ಚು ದೂರ ನೆಗೆದರೆಂದು ವರದಿಗಳುಂಟು. ಆದರೆ ಇದು ಹೇಗೆ ಸಾಧ್ಯವಾಯಿತೆಂಬುದೇ ಬಿಡಿಸಲಾಗದ ಒಗಟು. ಬಹುಶಃ ಇದು ಕೇವಲ ಒಂದೇ ನೆಗೆತದ ದೂರವಾಗಿರಲಾರದು. ಐದು ನೆಗೆತಗಳ ಒಂದು ಸರಣಿ ಇದ್ದಿರಬೇಕು.




ಈಟಿಯ (ಜ್ಯಾವೆಲಿನ್) ಎಸೆತ. ಅದರ ಹಿಡಿಗೆ ಬುಗರಿಯ ಹುರಿಯಂತೆ ಚರ್ಮದ ದಾರ ಸುತ್ತಲಾಗುತ್ತಿತ್ತು. ಸ್ಪರ್ಧಿ ತನ್ನ ಬೆರಳುಗಳನ್ನು ದಾರದ ವಂಕಿಯೊಳಗೆ ಹೊಗಿಸಿ (1), ಈಟಿ ಗಿರ್ರನೆ ತಿರುಗುತ್ತ ತೀವ್ರಗತಿಯಲ್ಲಿ ಗುರಿಯತ್ತ ಸಾಗುವಂತೆ ಅದನ್ನು ಚಕ್ಕನೆ ಎಸೆಯುತ್ತಿದ್ದ (2).

ಮುಷ್ಟಿಕಾಳಗ ಮತ್ತು ಕುಸ್ತಿಗಳ ಮಿಶ್ರಣವಾದ ಪ್ಯಾನ್‌ಕ್ರೇಷಿಯಂ ಎಂಬುದು ಈ ಎರಡೂ ಪಂದ್ಯಗಳ ಒರಟು ಅಂಶಗಳನ್ನೆಲ್ಲ ಒಳಗೊಂಡಿತ್ತು. ಗುದ್ದುವುದೂ ಒದೆಯುವುದೂ ನಿಷಿದ್ಧವಾಗಿರಲಿಲ್ಲ. ಆದರೆ ಎದುರಾಳಿಯ ಕಣ್ಣನ್ನು ಬೆರಳಿನಿಂದ ತಿವಿಯುವುದು ಕ್ರಮಬದ್ಧವಲ್ಲ. ಸ್ಪರ್ಧಿಗಳಲ್ಲೊಬ್ಬ ಸಂಪೂರ್ಣ ಅಸಹಾಯನಾಗಿ ಶರಣಾಗುವ ಘಟ್ಟ ಮುಟ್ಟುವ ವರೆಗೂ ಪಂದ್ಯ ನಡೆಯುತ್ತಿತ್ತು. ಸ್ಪರ್ಧಿಯ ತೂಕದ ಬಗ್ಗೆ ಯಾವ ನಿಬಂಧನೆಯೂ ಇಲ್ಲದ್ದರಿಂದ ಹಗುರ ದೇಹಿಯಾದವ ಗೆಲ್ಲುವ ಸಂಭವ ಇರಲಿಲ್ಲ.

**ಕಾರ್ಯಕ್ರಮ ಬಹುಮಾನ :** ಸ್ಪರ್ಧೆಗಳನ್ನು ಇದೇ ಕ್ರಮದಲ್ಲಿ ನಡೆಸಬೇಕೆಂಬ ಪದ್ಧತಿಯೇನೂ ಇರಲಿಲ್ಲ. ಎಲ್ಲ ಸ್ಪರ್ಧೆಗಳನ್ನೂ ಯಾವಾಗಲೂ ನಡೆಸುತ್ತಿರಲಿಲ್ಲ. ಹೊಸಹೊಸ ಸ್ಪರ್ಧೆಗಳನ್ನು ಸೇರಿಸಲಾಗುತ್ತಿತ್ತು. ಗ್ರೀಕ್ ಒಲಿಂಪಿಕ್ ಕ್ರೀಡೆಗಳು ಉಚ್ಛ್ರಾಯ ಸ್ಥಿತಿಯಲ್ಲಿದ್ದ ಕಾಲದಲ್ಲಿ ಸಾಮಾನ್ಯವಾಗಿ ಕಾರ್ಯಕ್ರಮ ಹೀಗಿರುತ್ತಿತ್ತು: ಮೊದಲನೆಯ ದಿನದಂದು ಬಲಿಗಳ ಅರ್ಪಣೆ, ಒಲಿಂಪಿಕ್ ಪ್ರತಿಜ್ಞಾವಿಧಿ ಸ್ವೀಕಾರ, ನಾನಾ ಸ್ಪರ್ಧೆಗಳಿಗೆ ಬಂದಿರುವ ಅಭ್ಯರ್ಥಿಗಳ ವಿಂಗಡಣೆ. ಎರಡನೆಯ ದಿನ ಓಟ, ಕುಸ್ತಿ, ಮುಷ್ಟಿ ಕಾಳಗ, ಪ್ಯಾನ್‌ಕ್ರೇಷಿಯಂ, ಪೆಂಟಾಥ್ಲಾನ್ ಮತ್ತು ಕುದುರೆ ಪಂದ್ಯಗಳಲ್ಲಿ ಹುಡುಗರ ಸ್ಪರ್ಧೆ. ಮೂರನೆಯ ದಿನ ವಯಸ್ಕರಿಗೆ ಮೀಸಲು : ಓಟ,




ಚಕ್ರದ (ಡಿಸ್ಕಸ್) ಎಸೆತ : ಎರಡು ಕೈಗಳಿಂದಲೂ ಚಕ್ರವನ್ನು ಮೇಲೆತ್ತಿ (1, 2), ಅನಂತರ ಇಳಿಸಿ ಬಲಮುಂದೋಳಿನ ಮೇಲಿರಿಸಿ, ಬಲಗಾಲು ಮುಂದಿಟ್ಟು ಅಥವಾ ಎಡಗಾಲು ಹಿಂದೆಳೆದು (3), ಚಕ್ರವನ್ನು ಬಲಗೈಯಿಂದ ಮೇಲೆತ್ತಿ (4), ಬೀಸಿ (5), ಮೈಯನ್ನು ಹಗ್ಗದಂತೆ ಎಡಕ್ಕೆ ತಿರಿವಿ ಚಕ್ರದ ಎಸೆತ (6)




ಗ್ರೀಕ್ ಒಲಂಪಿಕ್ಸ್ ಕಾಲದ ಉದ್ದ ನೆಗೆತ (ಲಾಂಗ್ ಜಂಪ್). ಓಡಿ ಬಂದು ನೆಗೆಯುವುದು, ಓಡದೆ ನೆಗೆಯುವುದು—ಎರಡೂ ಆಗ ವಾಡಿಕೆಯಲ್ಲಿದ್ದುವು. ಈ ಚಿತ್ರದಲ್ಲಿ ಓಟದಿಂದ ನೆಗೆತದ ಆರಂಭ. ಸ್ಪರ್ಧಿಯು ಕೈಗಳಲ್ಲಿ ತೂಕಗಳಿರುವುದನ್ನು ಗಮನಿಸಿ. ನೆಗೆತದ ನಾನಾ ಘಟ್ಟಗಳು ಈ ರೀತಿ ಇವೆ : 1 ಗೆರೆಯ ಬಳಿಗೆ ಸ್ಪರ್ಧಿಯ ಆಗಮನ; 2 ತೂಕಗಳನ್ನು ಮುಂದಕ್ಕೆ ಆಂದೋಲಿಸಿ ನೆಗೆತದ ಆರಂಭ; 3 ನೆಗೆತದ ಶಿಖರ; 4 ಹಿಂಗಡೆಗೆ ತೂಕಗಳ ಆಂದೋಲನ, ದೇಹದ ಅಂತಿಮ ತಳ್ಳುವಿಕೆ; 5 ನೆಲದ ಮೇಲೆ ಕಾಲೂರಿದಾಗ ಹಾಳತ ತಪ್ಪಿ ಹಿಂದಕ್ಕೆ ಬೀಳದಂತೆ ತೂಕಗಳ ಬಳಕೆ.

ಕುಸ್ತಿ, ಮುಷ್ಟಿಕಾಳಗ, ಪ್ಯಾನ್‌ಕ್ರೇಷಿಯಂ ಮತ್ತು ಹಾಪ್‌ಲೈಟ್ ಯುದ್ಧಕವಚದಲ್ಲಿ ಸ್ಪರ್ಧೆ. ನಾಲ್ಕನೆಯ ದಿನ ಪೆಂಟಾಥ್ಲಾನ್, ರಥ ಮತ್ತು ಕುದುರೆ ಜೂಜು, ಘೋಷಣೆ ಸ್ಪರ್ಧೆ. ಐದನೆಯ ದಿನ ಮೆರವಣಿಗೆ, ಬಲಿಗಳು, ವಿಜಯಿಗಳಿಗೆ ಔತಣ, ಆಲ್ಟಿಸಿಸಲ್ಲಿನ ಕಾಡು ಆಲಿವ್ ಮರದ ಎಲೆಗಳಿಂದ ಕಿರೀಟಧಾರಣೆ, ಜನಸ್ತೋಮಕ್ಕೆ ವಿಜಯಿಗಳ ದರ್ಶನ.

ವಿಜಯಿಗಳನ್ನು ರಾಷ್ಟ್ರವೀರರೆಂದು ಗೌರವಿಸಿ ಅವರ ಪ್ರತಿಮೆಗಳನ್ನು ರಚಿಸುತ್ತಿದ್ದುದು ಮಾತ್ರವೇ ಅಲ್ಲ, ಅವರಿಗೆ ತೆರಿಗೆ ವಿನಾಯಿತಿಯಿತ್ತು. ಒಲಿಂಪಿಕ್ ಕ್ರೀಡೆಗಳನ್ನು ವೃತ್ತಿಬಾಧೆಯಿಂದ ದೂರ ಇರಿಸಲಾಗಿತ್ತು. ಪ್ರೇಕ್ಷಕರಿಗಿಂತ ಸ್ಪರ್ಧಿಗಳಿಗಾಗಿಯೇ ಇವನ್ನು ಏರ್ಪಡಿಸುತ್ತಿದ್ದರು.

**ಆಧುನಿಕ ಒಲಿಂಪಿಕ್ ಕ್ರೀಡೆಗಳು :** ಆಧುನಿಕ ಯುಗದಲ್ಲಿ ಒಲಿಂಪಿಕ್ ಕ್ರೀಡೆಗಳ ಅವತಾರವಾಗುವುದಕ್ಕೆ ಕಾರಣನಾದವ ಬ್ಯಾರನ್ ಡಿ ಪಿಯರ್ ಡಿ ಕೂಬರ್ತಿನ (1863–1937). ಈತನೊಬ್ಬ ಫ್ರೆಂಚ್ ಗೃಹಸ್ಥ. 1887ರಲ್ಲಿ ಈತ ಇಂಗ್ಲೆಂಡಿಗೆ ಹೋಗಿದ್ದಾಗ ಅಲ್ಲಿಯ ವಿದ್ಯಾರ್ಥಿಗಳು ಅಂಗಸಾಧಕ ಕ್ರೀಡೆಗಳಲ್ಲಿ ಭಾಗವಹಿಸುತ್ತಿದ್ದುದನ್ನು ಪ್ರಥಮ ಬಾರಿಗೆ ನೋಡಿದ. ಅದು ಈತನ ಮೇಲೆ ತೀವ್ರ ಪರಿಣಾಮ ಬೀರಿತು. ತನ್ನ ದೇಶದವರಿಗಾಗಿಯೂ ಇಂಥ ಕ್ರೀಡೆಗಳನ್ನು ಏರ್ಪಡಿಸಬೇಕೆಂದು ಸಂಕಲ್ಪ ಮಾಡಿದ. ಇತರ ದೇಶಗಳನ್ನೂ—ಮುಖ್ಯವಾಗಿ ಅಮೆರಿಕವನ್ನು—ಸಂದರ್ಶಿಸಿ ಅಲ್ಲಿಯ ಅಂಗಸಾಧಕ ಚಳವಳಿಯನ್ನಭ್ಯಾಸಮಾಡಿದ. ಗ್ರೀಸಿನ ಸ್ವರ್ಣಯುಗ ವೈಭವಕ್ಕೆ ಅಲ್ಲಿಯ ಜನ ಅಂಗಸಾಧನೆಗೆ ನೀಡಿದ್ದ ಪ್ರಾಮುಖ್ಯವೂ ಅವರು ಪದೇ ಪದೇ ಏರ್ಪಡಿಸುತ್ತಿದ್ದ ಕ್ರೀಡಾ ಉತ್ಸವಗಳೂ ಒಂದು ಕಾರಣವೆಂದು ಆತನಿಗೆ ಮನವರಿಕೆಯಾಯಿತು. ಆದ್ದರಿಂದ ಎಲ್ಲ ರಾಷ್ಟ್ರಗಳ ಕ್ರೀಡಾಪಟುಗಳನ್ನು ನಾಲ್ಕು ವರ್ಷಗಳಿಗೊಮ್ಮೆ ಸೇರಿಸಿ ಸ್ಪರ್ಧೆಗಳನ್ನೇರ್ಪಡಿಸುವುದರಿಂದ ಒಳ್ಳೆಯದೇ ಆದೀತೆಂದು ಆತ ಕನಸು ಕಂಡ. 1889ರಲ್ಲಿ ಪ್ಯಾರಿಸಿನಲ್ಲಿ ದೈಹಿಕ ಶಿಕ್ಷಣ ಸಮ್ಮೇಳನವೊಂದನ್ನೂ ಅನಂತರ ಆಟ ವ್ಯಾಯಾಮ ಪಟುಗಳ ಸಂಘವನ್ನೂ ರಚಿಸಿ ಅನುಭವ ಪಡೆದಿದ್ದ ಕೂಬರ್ತಿಯ ಪ್ರಯತ್ನದಿಂದ 1894ರಲ್ಲಿ ಪ್ಯಾರಿಸಿನ ಸಾರ್‌ಬಾನಲ್ಲಿ ಒಂದು ಅಂತರರಾಷ್ಟ್ರೀಯ ಸಮ್ಮೇಳನವೇ ಸಮಾವೇಶಗೊಂಡಿತು. ಇದರಲ್ಲಿ ಒಂಬತ್ತು ರಾಷ್ಟ್ರಗಳ ಪ್ರತಿನಿಧಿಗಳು ಭಾಗವಹಿಸಿದ್ದರು. ಕೂಬರ್ತಿಯ ಯೋಜನೆಗೆ ಹಲವು ರಾಷ್ಟ್ರಗಳ ಸ್ವಾಗತ ದೊರಕಿತು. ಪ್ರಾಚೀನ ಒಲಿಂಪಿಕ್ ಕ್ರೀಡೆಗಳನ್ನು ನಡೆಸುತ್ತಿದ್ದ ಗ್ರೀಸಿನ ಗೌರವಾರ್ಥವಾಗಿ ಆಧುನಿಕ ಒಲಿಂಪಿಕ್ ಕ್ರೀಡೆಗಳ ಮೊದಲನೆಯ ಅಧಿವೇಶನವನ್ನೇರ್ಪಡಿಸಿದ್ದು ಅಲ್ಲಿಯ ಅಥೆನ್ಸಿನಲ್ಲಿ (1896). ಇದಕ್ಕಾಗಿ ಅಲ್ಲಿ ಅಮೃತಶಿಲೆಯ ಒಂದು ಹೊಸ ಕ್ರೀಡಾಂಗಣವನ್ನು ನಿರ್ಮಿಸಲಾಯಿತು. ಅದರಲ್ಲಿ ಭಾಗವಹಿಸಿದ ರಾಷ್ಟ್ರಗಳು 13. ಮುಂದಿನ ಸ್ಪರ್ಧೆಗಳು ಏರ್ಪಟ್ಟದ್ದು ಪ್ಯಾರಿಸಿನಲ್ಲಿ (1900). ಆದರೆ ಆ ವೇಳೆಗೆ ಅಲ್ಲಿ ವಿಶ್ವಪ್ರದರ್ಶನವೂ ನಡೆದುದರಿಂದ ಕ್ರೀಡೆಗಳ ಪ್ರಾಶಸ್ತ್ಯ ಸ್ವಲ್ಪ ಕುಂದಿತು. 1904ರಲ್ಲಿ ಈ ಉತ್ಸವ ಸೇಂಟ್ ಲೂಯಿಯಲ್ಲಿ ಏರ್ಪಾಡಾಗಿತ್ತು. ಅದೇ ಸಮಯದಲ್ಲಿ ಅಲ್ಲಿ ನಡೆದ ಪ್ರದರ್ಶನದಿಂದಾಗಿ ಇದೂ ಹಿನ್ನೆಲೆಗೆ ಸರಿಯಿತು. 1908ರಲ್ಲಿ ಲಂಡನಿನಲ್ಲಿ ನಡೆದ ಕ್ರೀಡೆಗಳು ಯಶಸ್ವಿಯಾದುವೆನ್ನಬಹುದು. 1912ರ ಕ್ರೀಡೆಗಳು (ಸ್ಟಾಕೋಂ) ಎಲ್ಲ ದೃಷ್ಟಿಯಿಂದಲೂ ಸಮರ್ಪಕ. ನಾನಾ ರಾಷ್ಟ್ರಗಳ ಸ್ಪರ್ಧಿಗಳೂ ಅಧಿಕಾರಿಗಳೂ ಪರಸ್ಪರವಾಗಿ ಸಹಕರಿಸಿ ಅಂತರರಾಷ್ಟ್ರೀಯ ಸೌಹಾರ್ದಕ್ಕೆ ಒಂದು ಮೆರಗುತಂದರು. ಏಳನೆಯ ಅಧಿವೇಶನ 1916ರಲ್ಲಿ ಬರ್ಲಿನಿನಲ್ಲಿ ನಡೆಯಬೇಕಿತ್ತು. ಆದರೆ ಆಗ ಒಂದನೆಯ ಮಹಾಯುದ್ಧ ನಡೆಯುತ್ತಿತ್ತು. ಪ್ರಾಚೀನ ಗ್ರೀಕರು ಜಾರಿಗೆ ತರುತ್ತಿದ್ದ ಪವಿತ್ರಶಾಂತಿಕಾಲಿನ ನಿಯಮವನ್ನು ಇಲ್ಲಿ ಅನುಸರಿಸಲಾಗಲಿಲ್ಲ. ಯುದ್ಧ ಮುಕ್ತಾಯವಾದ ಮೇಲೆ 1920ರಲ್ಲಿ ಆಂಟ್‌ವರ್ಪಿನಲ್ಲಿ ಮುಂದಿನ ಅಧಿವೇಶನ ಜರುಗಿತು. ಆದರೆ ಸೋತ ರಾಷ್ಟ್ರಗಳು ಇದರಲ್ಲಿ ಭಾಗವಹಿಸಲಿಲ್ಲ. 1924 ಮತ್ತು 1928ರಲ್ಲಿ ಇವು ಕ್ರಮವಾಗಿ ಪ್ಯಾರಿಸ್ ಆಂಸ್ಟರ್‌ಡಾಂಗಳಲ್ಲಿ ನಡೆದುವು. ವಿಶ್ವದಲ್ಲಿ ಮಹಾ ಆರ್ಥಿಕ ಮುಗ್ಗಟ್ಟಿದ್ದರೂ ಲಾಸ್ ಏಂಜಲೀಸ್‌ನಲ್ಲಿ 1932ರಲ್ಲಿ ನಡೆದ ಕ್ರೀಡೆಗಳು ಬಲು ಯಶಸ್ವಿಯಾದುವೆನ್ನಬಹುದು. 1936ರಲ್ಲಿ ಬರ್ಲಿನಿನಲ್ಲಿ ಜರುಗಿದ ಕ್ರೀಡೆಗಳನ್ನು ನಾಜ಼ಿಗಳು ಹಿಟ್ಲರನ ನೇತೃತ್ವದಲ್ಲಿ ಬಲು ಅದ್ದೂರಿಯಿಂದ ಏರ್ಪಡಿಸಿದ್ದರು. ಅಲ್ಲಿ ಆತನದೇ ಅಟಾಟೋಪ. ಎರಡನೆಯ ಮಹಾಯುದ್ಧದಿಂದಾಗಿ 1940ರಲ್ಲಿ ಹೆಲ್ಸಿಂಕಿಯ ಕ್ರೀಡೆಗಳು ನಡೆಯಲಿಲ್ಲ. 1948ರಲ್ಲಿ ಲಂಡನಿನಲ್ಲಿ ಸಮಾವೇಶಗೊಂಡಿದ್ದ ಪ್ರದರ್ಶನದಲ್ಲಿ ಜಪಾನ್ ಜರ್ಮನಿಗಳು ಪಾಲ್ಗೊಳ್ಳಲಿಲ್ಲ. 1952ರಲ್ಲಿ ಹೆಲ್ಸಿಂಕಿಯಲ್ಲಿ ನಡೆದ 15ನೆಯ ಒಲಿಂಪಿಯಡ್ (ವಾಸ್ತವವಾಗಿ ಅದು 13ನೆಯ ಸ್ಪರ್ಧಾಕೂಟ ; ಏಕೆಂದರೆ 1940 ಮತ್ತು 1944ರವು ಯುದ್ಧದಿಂದಾಗಿ ನಡೆ




400 ಮೀ. ಹರ್ಡಲ್ಸ್ ಬಂಗಾರಪದಕ ವಿಜೇತ ಡೇವಿಡ್ ಹೆಮರಿ (1968)

ಯಲಿಲ್ಲ) ಕೊಟ ಬಲು ಯಶಸ್ವಿಯಾಯಿತು. 1956, 1960, 1964 ಮತ್ತು 1968 ರಲ್ಲಿ ಕ್ರಮವಾಗಿ ಮೆಲ್ಬೋರನ್, ರೋಂ, ಟೋಕಿಯೊ ಮತ್ತು ಮೆಕ್ಸಿಕೋ ನಗರಗಳಲ್ಲಿ ನಡೆದ ಸ್ಪರ್ಧೆಗಳು ನಾನಾ ರಾಷ್ಟ್ರಗಳ ಯುವಕ ಯುವತಿಯರ ದೇಹಶಕ್ತಿ, ತಾಳ್ಮೆ, ವಿವೇಕ, ಸಾಧನೆ, ಸ್ಥೈರ್ಯಗಳ ಪ್ರತೀಕಗಳಾಗಿ, ಮಾನವನ ಸಾಹಸದ ಸೀಮೆಯನ್ನು ವಿಸ್ತರಿಸುತ್ತ ಸಾಗಿವೆ.

1920ರಲ್ಲಿ ಆಂಟ್‌ವರ್ಪಿನಲ್ಲಿ ಒಳಾಂಗಣದ ಸ್ಕೇಟಿಂಗ್ ರಿಂಕ್ ಒಂದರಲ್ಲಿ ಕೆಲವು ಚಳಿಗಾಲದ ಸ್ಪರ್ಧೆಗಳನ್ನೇರ್ಪಡಿಸಲಾಯಿತು. 1924ರಿಂದ ಮೊದಲ್ಗೊಂಡು ಪ್ರತಿಯೊಂದು ಚತುರ್ವಾರ್ಷಿಕ ಕ್ರೀಡಾಧಿವೇಶನಕ್ಕೂ ಹಿಂದಿನ ಫೆಬ್ರುವರಿಯಲ್ಲಿ ಯಾವುದಾದರೊಂದು ಚಳಿದಾಣದಲ್ಲಿ ಸ್ಕೇಟಿಂಗ್, ಸ್ಕೀಯಿಂಗ್, ಐಸ್ ಹಾಕಿ, ಬಾಬ್ ಸ್ಲೆಡಿಂಗ್ ಮುಂತಾದ ಪಂದ್ಯಗಳನ್ನೇರ್ಪಡಿಸುವ ಕ್ರಮ ಜಾರಿಗೆ ಬಂತು. ಒಲಿಂಪಿಕ್ ಚಳಿಗಾಲದ ಕ್ರೀಡೆಗಳು ನಡೆದ ಸ್ಥಳಗಳು ಇವು: ಸ್ವಿಟ್ಸರ್ಲೆಂಡಿನ ಸೇಂಟ್ ಮಾರಿಟ್ಸ್ (1928), ನ್ಯೂಯಾರ್ಕಿನ ಲೇಕ್ ಪ್ಲೇಸಿಡ್ (1932), ಜರ್ಮನಿಯ ಗಾರ್ಮಿಷ್-ಪಾರ್ಟೆನ್ ಕರ್ಚೆನ್ (1936), ಮತ್ತೆ ಸೇಂಟ್ ಮಾರಿಟ್ಸ್ (1948), ನಾರ್ವೆಯ ಆಸ್ಲೊ (1952), ಇಟಲಿಯ ಕಾರ್ಟಿನ ಡಿ ಅಂಪೆಟ್ಜೊ (1956), ಕ್ಯಾಲಿಫೋರ್ನಿಯದ ಸ್ಕ್ವಾ ವ್ಯಾಲಿ (1960) ಆಸ್ಟ್ರಿಯದ ಇನ್ಸ್‌ಬ್ರುಕ್ (1964) ಮತ್ತು ಫ್ರಾನ್ಸಿನ ಗ್ರಿನೋಬಲ್ (1968).

ವಿವಿಧ ರಾಷ್ಟ್ರಗಳ ಟೀಮುಗಳ ಗೆಲ್ಲಂಕಗಳನ್ನು (ಪಾಯಿಂಟ್ ಸ್ಕೋರ್ಸ್) ಅಧಿಕೃತವಾಗಿ ಮಾನ್ಯ ಮಾಡುವುದಿಲ್ಲವಾದರೂ ಯಾವ ಯಾವ ರಾಷ್ಟ್ರ ಎಷ್ಟೆಷ್ಟು ಅಂಕ ಪಡೆಯುವುವೆಂಬುದನ್ನು ಬಲು ಆಸಕ್ತಿಯಿಂದ ಗಮನಿಸಲಾಗುತ್ತದೆ. 1908ರಲ್ಲಿ ಬ್ರಿಟನ್, 1912ರಲ್ಲಿ ಸ್ವೀಡನ್, 1920ರಿಂದ 1932ರ ವರೆಗೆ ಏಕಪ್ರಕಾರವಾಗಿ ಅಮೆರಿಕ ಸಂಯುಕ್ತ ಸಂಸ್ಥಾನ, 1936ರಲ್ಲಿ ಜರ್ಮನಿ ಮತ್ತು 1948ರಲ್ಲಿ ಮತ್ತೆ ಅಮೆರಿಕ ಸಂಯುಕ್ತ ಸಂಸ್ಥಾನ ಅನಧಿಕೃತವಾಗಿ ಅಗ್ರತೆ (ಚಾಂಪಿಯನ್‌ಷಿಪ್) ಗಳಿಸಿದುವು. 1952ರಲ್ಲಿ ಕೊನೆಯ ದಿನದ ವರೆಗೂ ಸೋವಿಯತ್ ಒಕ್ಕೂಟ ಮುಂದಾಗಿದ್ದು ಅಮೆರಿಕಕ್ಕೆ ಅಗ್ರಸ್ಥಾನ ಬಿಟ್ಟುಕೊಟ್ಟಿತು.

**ನಿರ್ವಹಣೆ:** ಒಲಿಂಪಿಕ್ ಚಳವಳಿಯನ್ನು ನಿರ್ದೇಶಿಸುವ ಮತ್ತು ಕ್ರೀಡೆಗಳನ್ನು ನಿಯಂತ್ರಿಸುವ ಹೊಣೆ ಇರುವುದು ಅಂತರರಾಷ್ಟ್ರೀಯ ಒಲಿಂಪಿಕ್ ಸಮಿತಿಯಲ್ಲಿ (ಐ.ಒ.ಸಿ.) ಇದರ ಮುಖ್ಯ ಕಚೇರಿ ಸ್ವಿಟ್ಸರ್ಲೆಂಡಿನ ಲಾಸೇನಿನ ಮಾನ್ ರೆಪಾಸ್‌ನಲ್ಲಿದೆ. ಸಮಿತಿ ಕೂಲಂಕಷ ವಿಚಾರಣೆ ನಡೆಸಿ ಆಜೀವ ಸದಸ್ಯರನ್ನು ಆಯ್ಕೆ ಮಾಡುತ್ತದೆ. ಈ ಸಮಿತಿಯ ಒಂದು ವೈಶಿಷ್ಟ್ಯವೇನೆಂದರೆ: ಇದರ ಸದಸ್ಯರು ತಂತಮ್ಮ ರಾಷ್ಟ್ರಗಳನ್ನು ಪ್ರತಿನಿಧಿಸುವುದಿಲ್ಲ. ಪ್ರತಿಯಾಗಿ ಅವರು ಈ ಸಮಿತಿಯಿಂದ ತಂತಮ್ಮ ರಾಷ್ಟ್ರಗಳಿಗೆ ನಿಯೋಗಿಗಳಾಗಿರುತ್ತಾರೆ. ಯಾವ ರಾಷ್ಟ್ರದಿಂದಲೂ ಮೂರಕ್ಕಿಂತ ಹೆಚ್ಚು ಸದಸ್ಯರಿರತಕ್ಕದ್ದಲ್ಲ. ಸದಸ್ಯರ ಮತ ಸ್ವಾತಂತ್ರ್ಯಕ್ಕೆ ಧಕ್ಕೆ ತರುವಂಥ ಯಾವ ಸೂಚನೆಯನ್ನೂ ತಮ್ಮ ರಾಷ್ಟ್ರಗಳಿಂದಾಗಲಿ ಬೇರೆ ಯಾವ ಸಂಸ್ಥೆಯಿಂದಾಗಲಿ ಪುರಸ್ಕರಿಸಬಾರದು. ಈ ಸಮಿತಿಯ ಪ್ರಥಮ ಅಧ್ಯಕ್ಷ ಬ್ಯಾರನ್ ಪಿಯರ್ ಡಿ ಕೂಬರ್ತಿ (1925ರ ವರೆಗೆ). ಅನಂತರ ಬೆಲ್ಜಿಯಂನ ಹೆನ್ರಿ ಡಿ ಬೇಲೆಟ್ ಲ್ಯಾಟರ್ ಅಧ್ಯಕ್ಷನಾದ. 1942ರಲ್ಲಿ ಈತ ತೀರಿಕೊಂಡಾಗ ಈ ಸ್ಥಾನ ಸ್ವೀಡನಿನ ಜೆ. ಸಿಗ್‌ಫ್ರಿಡ್ ಎಡ್‌ಸ್ಟ್ರಾಂಗೆ ಬಂತು. 1952ರಲ್ಲಿ ಅಮೆರಿಕ ಸಂಯುಕ್ತಸಂಸ್ಥಾನದ ಆವರಿ ಬ್ರಂಡೇಜ್ ಆಯ್ಕೆಯಾದ.

ಒಲಿಂಪಿಕ್ ಸ್ಪರ್ಧೆಗಳಲ್ಲಿ ಭಾಗವಹಿಸುವವರು ಆ ಕ್ರೀಡೆಯನ್ನೇ ವೃತ್ತಿಯಾಗಿ ಮಾಡಿಕೊಂಡಿರಬಾರದು; ಅದು ಅವರ ಹವ್ಯಾಸವಾಗಿರಬೇಕು—ಎಂಬುದು ಒಂದು ನಿಯಮ. ಹವ್ಯಾಸಿ ಯಾರೆಂಬುದನ್ನು ವ್ಯಾಖ್ಯಿಸಲಾಗಿದೆ. ಕ್ರೀಡೆಯಲ್ಲಿ ಯಾವಾಗಲೂ ಯಾವ ಬಗೆಯ ಭೌತ ಲಾಭವನ್ನೂ ಪಡೆಯದೆ ಆಸಕ್ತಿ ತಳೆದು ಭಾಗವಹಿಸುತ್ತಿರುವವನೇ ಹವ್ಯಾಸಿ. ಅವನ ಸದ್ಯದ ಮತ್ತು ಭವಿಷ್ಯದ ಜೀವನೋಪಾಯವಾಗಿ ಮೂಲಭೂತವಾದ ಯಾವುದಾದರೊಂದು ಉದ್ಯೋಗ ಇಲ್ಲದವನು ಹವ್ಯಾಸಿ




[illegible] ಸ[illegible]ಗೆ (ಸ್ಟೀಪಲ್ ಚೇಸ್)



ಕೀನ್ಯದ ಓಟಗಾರ—ಕಿಪ್‌ಚೋಗೆ ಕೇನೊ (1968)

ಯೆನಿಸಿಕೊಳ್ಳಲಾರ. ಆಟದಲ್ಲಿ ಭಾಗವಹಿಸಲು ಸಂಭಾವನೆಯನ್ನೇನಾದರೂ ಆತ ಪಡೆದಿದ್ದರೆ ಅಥವಾ ಪಡೆಯುತ್ತಿದ್ದರೆ ಅವನೂ ಹವ್ಯಾಸಿಯೆನಿಸಿಕೊಳ್ಳಲು ಅನರ್ಹ. ಸಂಬಂಧಪಟ್ಟ ಅಂತರರಾಷ್ಟ್ರೀಯ ಒಕ್ಕೂಟದ ನಿಯಮಗಳನ್ನೂ ಅವುಗಳ ಅಧಿಕೃತ ವ್ಯಾಖ್ಯಾನವನ್ನೂ ಅನುಸರಿಸದವನೂ ಒಲಿಂಪಿಕ್ ಕ್ರೀಡೆಗಳಲ್ಲಿ ಸ್ಪರ್ಧಿಸಲು ಅರ್ಹ ನಲ್ಲ.

ಲಾಸ್ ಏಂಜೆಲ್ಸ್‌ನಲ್ಲಿ ನಡೆದ ಒಲಿಂಪಿಕ್ ಕ್ರೀಡೆಗಳಿಂದೀಚೆಗೆ ಬೆಳೆದುಕೊಂಡು ಬಂದಿರುವ ಒಂದು ಪದ್ಧತಿಯೆಂದರೆ ಈ ಕ್ರೀಡೆಗಳಿಗಾಗಿಯೇ ನಿರ್ಮಿಸಲಾಗುವ ಒಲಿಂಪಿಕ್ ಗ್ರಾಮ. ನಾನಾ ರಾಷ್ಟ್ರಗಳಿಂದ ಬಂದ ಎಲ್ಲ ಸ್ಪರ್ಧಿಗಳೂ ಒಂದೇ ಕ್ಷೇತ್ರದಲ್ಲಿ ವಾಸಿಸುವುದು ಇದರಿಂದ ಸಾಧ್ಯ. ಪ್ರಾಚೀನ ಗ್ರೀಸಿನಲ್ಲಿ ಕ್ರೀಡೆಗಳು ನಡೆಯುತ್ತಿದ್ದ ಸ್ಥಳವಾದ ಒಲಿಂಪಿಯದಿಂದ ತಂದ ಪಂಜಿನಿಂದ ಕ್ರೀಡಾಕೂಟದ ಸ್ಥಳ ದಲ್ಲಿ ಪವಿತ್ರ ಒಲಿಂಪಿಕ್ ಜ್ಯೋತಿಯನ್ನು ಹೊತ್ತಿಸಿ, ಕ್ರೀಡಾಧಿವೇಶನದ ಕಾಲದಲ್ಲಿ ಅದನ್ನು ನಂದಾದೀಪದಂತೆ ಉರಿಸುವುದು 1936ರ ಬರ್ಲಿನ್ ಕೂಟದಲ್ಲಿ ಆರಂಭ ವಾದ ಸಂಪ್ರದಾಯ.

ಒಲಿಂಪಿಕ್ ಕ್ರೀಡೆಗಳಲ್ಲಿ ಭಾಗವಹಿಸುವವರನ್ನು ಆಯ್ಕೆಮಾಡುವ ಹೊಣೆ ರಾಷ್ಟ್ರೀಯ ಒಲಿಂಪಿಕ್ ಸಮಿತಿಗಳಿಗೆ ಸೇರಿದ್ದು. ಒಲಿಂಪಿಕ್ ಸ್ಪರ್ಧೆಗಳಲ್ಲಿ ಸೇರಿಸ ಲಾಗಿರುವ ಎಲ್ಲ ಕ್ರೀಡೆಗಳ ರಾಷ್ಟ್ರೀಯ ಸಂಸ್ಥೆಗಳಿಗೂ ರಾಷ್ಟ್ರೀಯ ಒಲಿಂಪಿಕ್ ಸಮಿತಿಯಲ್ಲಿ ಪ್ರಾತಿನಿಧ್ಯ ಇರತಕ್ಕದ್ದು. ಈ ಸಮಿತಿಗಳು ಸ್ವತಂತ್ರವಾಗಿ ಸ್ವಯಂ ಆಡಳಿತಾಧಿಕಾರ ಹೊಂದಿರಬೇಕು. ರಾಜಕೀಯ ವಾಣಿಜ್ಯಿಕ ಅಥವಾ ಮತೀಯ ಒಲವುಗಳಿಗೆ ಮಣಿಯಬಾರದು. ಪ್ರತಿಯೊಂದು ಕ್ರೀಡೆಗೂ ರಾಷ್ಟ್ರೀಯ ಸಂಘ ಗಳ ಪ್ರತಿನಿಧಿಗಳನ್ನೊಳಗೊಂಡ ಅಂತರರಾಷ್ಟ್ರೀಯ ಮಹಾಸಂಘವೊಂದಿರುತ್ತದೆ. ಈ ಮಹಾಸಂಘಗಳ ನಿಯಂತ್ರಣಕ್ಕೆ ಅನುಸಾರವಾಗಿ ಆಯಾ ಕ್ರೀಡೆಗಳ ಸ್ಪರ್ಧೆಗಳ ನ್ನೇರ್ಪಡಿಸಲಾಗುತ್ತದೆ. ಅವಕ್ಕೆ ಸಂಬಂಧಪಟ್ಟ ನಿಯಮಗಳನ್ನು ರಚಿಸುವುದೂ ಮಹಾಸಂಘಗಳ ಹೊಣೆ.

ಒಲಿಂಪಿಕ್ ಕ್ರೀಡಾ ಧ್ವಜದ್ದು ಶುಭ್ರ ಶ್ವೇತವರ್ಣ. ಅದರ ಮೇಲೆ ಮಧ್ಯ ದಲ್ಲಿ ನೀಲಿ ಹಳದಿ ಕಪ್ಪು ಹಸಿರು ಕೆಂಪು ಬಣ್ಣಗಳ ಐದು ಉಂಗುರಗಳ ಸರಪಳಿ— ಏಷ್ಯ, ಆಫ್ರಿಕ, ಆಸ್ಟ್ರೇಲಿಯ, ಅಮೆರಿಕ ಮತ್ತು ಯೂರೋಪ್ ಖಂಡಗಳ ಪ್ರತೀಕ. 'ವೇಗ—ಉನ್ನತ—ಬಲಯುತ' ಎಂಬುದು ಒಲಿಂಪಿಕ್ ಧ್ಯೇಯವಾಕ್ಯ. ಇದನ್ನು ರೂಪಿಸಿದವನು ರೆವರೆಂಡ್ ಡಿಡಾ—ಕೂಬರ್ತಿಯ ಸ್ನೇಹಿತ.

**ಉತ್ಸವ ವರ್ಣನೆ:** ಒಲಿಂಪಿಕ್ ಕ್ರೀಡೆಗಳ ಪ್ರಾರಂಭೋತ್ಸವವೊಂದು ವೈಭವಯುತ ಸಮಾರಂಭ. ಕ್ರೀಡೆಗಳು ನಡೆಯುತ್ತಿರುವ ದೇಶದ ಅಧಿಪತಿಯ ಆಗಮನದೊಂದಿಗೆ ಉತ್ಸವ ಆರಂಭ. ಅಂತರರಾಷ್ಟ್ರೀಯ ಒಲಿಂಪಿಕ್ ಸಮಿತಿಯ ಅಧ್ಯಕ್ಷ ಆತನನ್ನು ಸ್ವಾಗತಿಸಿ, ವಿಶೇಷವಾಗಿ ನಿರ್ಮಿಸಿದ ವೇದಿಕೆಯ ಮೇಲಕ್ಕೆ ಕರೆ ದೊಯ್ಯುತ್ತಾನೆ. ಅಲ್ಲಿಯ ರಾಷ್ಟ್ರಗೀತೆಯ ವಾದನದೊಡನೆಯೇ ನಾನಾ ರಾಷ್ಟ್ರಗಳ ಸ್ಪರ್ಧಿಗಳ ಪ್ರದರ್ಶನ, ಉತ್ಸವ, ನಡಿಗೆ; ಅವರವರ ರಾಷ್ಟ್ರಗಳ ಸಮವಸ್ತ್ರದುಡಿಗೆ ತೊಡಿಗೆ; ಪ್ರತಿರಾಷ್ಟ್ರದ ತಂಡದ ಮುಂದುಗಡೆ ಆ ರಾಷ್ಟ್ರದ ಧ್ವಜ, ದೊಡ್ಡ ಫಲಕ ಹೊಂದಿರ ಮೇಲೆ ಆ ರಾಷ್ಟ್ರದ ಹೆಸರು. ಮೊಟ್ಟಮೊದಲು ಗ್ರೀಸ್ ತಂಡ, ಅನಂತರ ಅಕ್ಷರಾನುಕ್ರಮಣಿಕೆಯಲ್ಲಿ ಇತರ ರಾಷ್ಟ್ರಗಳ ತಂಡಗಳ ಪ್ರವೇಶ. ಪ್ರತಿ ತಂಡವೂ ಕ್ರೀಡಾಂಗಣದ ಮಾರ್ಗವನ್ನೊಮ್ಮೆ ಸುತ್ತಿದ ಮೇಲೆ ನಡುಗಡೆಯಲ್ಲಿ ನಿಲ್ಲುತ್ತದೆ. ಅದರ ಮುಂದೆ ತನ್ನ ರಾಷ್ಟ್ರಧ್ವಜ ಮತ್ತು ಹೆಸರು ಬರೆದ ಫಲಕ. ಅನಂತರ ಸಮಿತಿಯ ಅಧ್ಯಕ್ಷನಿಂದ ಸಂಗ್ರಹವಾದ ಸ್ವಾಗತ ಭಾಷಣ. ಕ್ರೀಡೆಗಳನ್ನುದ್ಘಾಟಿಸ ಬೇಕೆಂದು ರಾಷ್ಟ್ರಮುಖ್ಯನಿಗೆ ಪ್ರಾರ್ಥನೆ. ತತ್‌ಕ್ಷಣವೇ ತುತೂರಿಗಳ ನಿನಾದ. ಒಲಿಂಪಿಕ್ ಧ್ವಜಾರೋಹಣ. ಬಿಡುಗಡೆಗೊಂಡ ಪಾರಿವಾಳಗಳ ಸ್ವಚ್ಛಂದ ಹಾರಾಟ. ಕುಶಾಲು ತೋಪಿನ ಸಲಾಮೀ ಅಬ್ಬರ. ಆ ಕ್ಷಣಕ್ಕೆ ಸರಿಯಾಗಿ ಕ್ರೀಡಾಂಗಣದೊಳಕ್ಕೆ ಒಲಿಂಪಿಕ್ ಜ್ಯೋತಿಯ ಆಗಮನ. ಪವಿತ್ರವಾದ ನಂದಾಜ್ಯೋತಿಪುಂಜದ ಬೆಳಗುವಿಕೆ. ಸ್ವಸ್ತಿ ವಾಚನ. ಒಲಿಂಪಿಕ್ ಗೀತಗಾಯನ.

ಅದು ಮುಗಿಯುವ ವೇಳೆಗೆ ಸರಿಯಾಗಿ ಆತಿಥೇಯ ರಾಷ್ಟ್ರದ ಸ್ಪರ್ಧಿಗಳಲ್ಲೊಬ್ಬ ವೇದಿಕೆಯನ್ನೇರಿ ನಿಂತು, 'ಈ ಒಲಿಂಪಿಕ್ ಕ್ರೀಡೆಗಳಲ್ಲಿ ಭಾಗವಹಿಸುವ ನಾವು ನಿಜವಾದ ಕ್ರೀಡಾಮನೋಭಾವದಿಂದ ವರ್ತಿಸುತ್ತೇವೆ, ಕ್ರೀಡೆಯ ಕೀರ್ತಿ ಬೆಳಗುತ್ತೇವೆ, ನಮ್ಮ ತಂಡಗಳ ಗೌರವ ರಕ್ಷಿಸುತ್ತೇವೆ. ಒಲಿಂಪಿಕ್ ಕ್ರೀಡೆಗಳಿಗೆ ಸಂಬಂಧಿಸಿದ ಎಲ್ಲ ನಿಯಮಗಳನ್ನೂ ಗೌರವಿಸಿ ಅದಕ್ಕೆ ಬದ್ಧರಾಗಿರುತ್ತೇವೆ—ಎಂದು ಎಲ್ಲ ಸ್ಪರ್ಧಿಗಳ ಪರವಾಗಿ ನಾನು ಪ್ರತಿಜ್ಞೆ ಮಾಡುತ್ತೇನೆ' ಎಂಬುದಾಗಿ ಅಲ್ಲಿ ಸೇರಿರುವ ಎಲ್ಲ ಸ್ಪರ್ಧಿಗಳ ಪರವಾಗಿ ಪ್ರತಿಜ್ಞಾವಚನವನ್ನೋದುತ್ತಾನೆ. ಆಗ ರಾಷ್ಟ್ರ



ಗೆಲ್ಲಲು ಬಂದೀ ಹೆಜ್ಜೆ · 400 ಮೀ. ಸ್ಪರ್ಧೆಯಲ್ಲಿ (1964) ಬ್ರಿಟನಿನ ಕೆನ್ ಮ್ಯಾಥ್ಯೂಸ್

ಗೀತೆಯ ಮೇಳಗಾನವಾಗುತ್ತದೆ. ಸ್ಪರ್ಧಿಗಳು ಕ್ರೀಡಾಂಗಣದಿಂದ ನಿರ್ಗಮಿಸುತ್ತಾರೆ. ಆಗ ಸ್ಪರ್ಧೆಯ ಆರಂಭ.

**ಸ್ಪರ್ಧೆಗಳು :** ಅಂಗಸಾಧನೆ ಸ್ಪರ್ಧೆ ; ಮಾರ್ಗ ಮತ್ತು ಕ್ಷೇತ್ರ (ಟ್ರ್ಯಾಕ್ ಅಂಡ್ ಫೀಲ್ಡ್), ಗರುಡಿ ವಿದ್ಯೆ (ಜಿಮ್ನಾಸ್ಟಿಕ್ಸ್), ಮುಷ್ಟಿಕಾಳಗ, ಕತ್ತಿವರಿಸೆ, ಗುಂಡುಗಾರಿಕೆ (ಷೂಟಿಂಗ್), ಕುಸ್ತಿ, ಹುಟ್ಟುಹಾಕುವ ಸ್ಪರ್ಧೆ, ಈಜು, ಕುದುರೆ ಸವಾರಿ, ಆಧುನಿಕ ಪೆಂಟಾಥ್ಲಾನ್, ಸೈಕ್ಲಿಂಗ್, ಭಾರ ಎತ್ತುವಿಕೆ, ನೌಕಾಪಂದ್ಯ (ಯಾಟಿಂಗ್) ಇವು ಕಡ್ಡಾಯ ಸ್ಪರ್ಧೆಗಳು. ಕಾಲ್ಚೆಂಡಾಟ, ವಾಟರ್ ಪೋಲೊ, ಬಯಲು ಹಾಕಿ, ಬ್ಯಾಸ್ಕೆಟ್ ಬಾಲ್, ತೋಡುದೋಣಿ ಸ್ಪರ್ಧೆ—ಇವು ಐಚ್ಛಿಕ. ಕೆಲವು ಕಡೆಗಳಲ್ಲಿ ಕಲೆಗಳಲ್ಲೂ ಸ್ಪರ್ಧೆ ಏರ್ಪಡಿಸಿರುವುದುಂಟು. ಸ್ಕೀಯಿಂಗ್, ಸ್ಕೇಟಿಂಗ್, ಐಸ್ ಹಾಕಿ, ಬಾಬ್‌ಸ್ಲೆಡ್ ಇವು ಕೆಲವು ಚಳಿಗಾಲದ ಕ್ರೀಡೆಗಳು. ಮಾರ್ಗ ಮತ್ತು ಕ್ಷೇತ್ರ, ಕತ್ತಿವರಿಸೆ, ಗರುಡಿ ವಿದ್ಯೆ, ತೋಡುದೋಣಿ ಸ್ಪರ್ಧೆ, ನೌಕಾಪಂದ್ಯ, ಈಜು ಮತ್ತು ಲಲಿತ ಕಲೆಗಳಲ್ಲಿ ಸ್ತ್ರೀಯರು ಸ್ಪರ್ಧಿಸುತ್ತಾರೆ.

ಪ್ರತಿಯೊಂದು ಒಲಿಂಪಿಕ್ ಕೂಟದಲ್ಲಿ ಭಾಗವಹಿಸುತ್ತಿರುವ ರಾಷ್ಟ್ರಗಳ ಮತ್ತು ಸ್ಪರ್ಧಿಗಳ ಸಂಖ್ಯೆ ಹಿಂದಿನ ಕೂಟದ್ದಕ್ಕಿಂತ ಅಧಿಕವಾಗುತ್ತಿರುವುದೊಂದು ವೈಶಿಷ್ಟ್ಯ. 1896ರ ಪ್ರಥಮ ಕೂಟಕ್ಕೆ ಕೇವಲ 13 ರಾಷ್ಟ್ರಗಳಿಂದ 285 ಸ್ಪರ್ಧಿಗಳು ಬಂದಿದ್ದರು. ಆಂಟ್‌ವರ್ಪ್‌ನಲ್ಲಿ ಈ ಸಂಖ್ಯೆಗಳು ಕ್ರಮವಾಗಿ 29 ಮತ್ತು 2,543ಕ್ಕೆ ಏರಿದುವು ; ಲಂಡನಿನಲ್ಲಿ 59 ಮತ್ತು 4,304. ಟೋಕಿಯೋದಲ್ಲಿ 94 ರಾಷ್ಟ್ರಗಳಿಂದ 4,826 ಸ್ಪರ್ಧಿಗಳು ಬಂದಿದ್ದರು. ಮೆಕ್ಸಿಕೋದಲ್ಲಿ ಭಾಗವಹಿಸಿದ್ದ ರಾಷ್ಟ್ರಗಳ ಸಂಖ್ಯೆ 119 ; ಸ್ಪರ್ಧಿಗಳು ಸುಮಾರು 7,400.

ನಾನಾರಾಷ್ಟ್ರಗಳು ನಾನಾ ಕ್ರೀಡೆಗಳಲ್ಲಿ ವಿಶೇಷ ಪ್ರಾವೀಣ್ಯ ಗಳಿಸಿರುವುದು ಇನ್ನೊಂದು ಗಮನಾರ್ಹ ಅಂಶ. ಈ ಕ್ರೀಡೆಗಳಲ್ಲಿ ಉನ್ನತ ಸ್ಥಾನಗಳನ್ನುಳಿಸಿಕೊಳ್ಳಲು ಅವು ಬಹಳವಾಗಿ ಹೆಣಗುತ್ತವೆ. ಅವುಗಳೊಂದಿಗೆ ಸ್ಪರ್ಧಿಸಿ, ಅವನ್ನು ಆ ಸ್ಥಾನಗಳಿಂದ ಕೆಳಗಿಳಿಸಲು ಇತರ ರಾಷ್ಟ್ರಗಳು ಶ್ರಮಿಸುತ್ತವೆ. ಯಾವ ರಾಷ್ಟ್ರಕ್ಕೇ ಆಗಲಿ, ವರ್ಣಕ್ಕೇ ಆಗಲಿ, ಯಾವ ಸ್ಥಾನವೂ ಶಾಶ್ವತವಲ್ಲ.

ಒಂದೊಂದು ಕ್ರೀಡೆಯಲ್ಲಿ ಒಬ್ಬೊಬ್ಬ ವೀರ ತನ್ನ ಶೌರ್ಯ ಮೆರೆದು ತನ್ನ ಹೆಸರನ್ನು ಜ್ಯೋತಿರ್ರೇಖೆಯಲ್ಲಿ ಬರೆದಿಟ್ಟು ಹೋಗಿರುವುದು ಗಮನಾರ್ಹ. ಆಯಾ ಅಧಿವೇಶನಗಳೇ ಆಯಾ ವೀರರ ಹೆಸರುಗಳಿಂದ ಚಿರಸ್ಥಾಯಿಗಳಾಗಿವೆ. 1936ರ ಬರ್ಲಿನ್ ಒಲಿಂಪಿಕ್ಸ್‌ನಲ್ಲಿ ಹಿಟ್ಲರನ ಆರ್ಯಪ್ರತಿಷ್ಠೆಯ ಗುಳ್ಳೆಯನ್ನೊಡೆದವನು ಅಮೆರಿಕನ್ ನೀಗ್ರೊ ಜೆಸ್ಸಿ ಓವೆನ್ಸ್. ಈತ 100 ಮತ್ತು 200 ಮೀಟರ್ ಓಟ ಸ್ಪರ್ಧೆಯಲ್ಲಿ, ಅಗಲ ನೆಗೆತ ಮತ್ತು ರಿಲೇ ಸ್ಪರ್ಧೆಗಳಲ್ಲಿ ವಿಕ್ರಮ ಸ್ಥಾಪಿಸಿ ನಾಲ್ಕು ಚಿನ್ನದ ಪದಕಗಳನ್ನು ಪಡೆದ. ಅವನಿಗಿಂತ ಮುಂಚೆ, ಪ್ಯಾರಿಸ್ ಒಲಿಂಪಿಕ್ಸ್‌ನಲ್ಲಿ ಅತ್ಯಂತ ಹೆಚ್ಚಿನ ಸಂಖ್ಯೆಯ ವಿಶ್ವವಿಕ್ರಮಗಳನ್ನು (24) ಮುರಿದು 'ಹಾರುವ ಫಿನ್ನ' ನೆಂದು ಹೆಸರು ಗಳಿಸಿದವನು ಪ್ಯಾವೊ ನುರ್ಮಿ. 1952ರ ಹೆಲ್ಸಿಂಕಿಯ ಒಲಿಂಪಿಕ್ಸ್‌ನಲ್ಲಿ ಎಮಿಲ್ ಜ಼ಟೊಪೆಕ್ ಸಾಹಸದಿಂದಾಗಿ ಅವಕ್ಕೆ ಜಟೊಪೆಕ್ ಕ್ರೀಡೆಗಳೆಂದೇ



400 ಮೀ. ವಿಕ್ರಮಿ (1968) ಲೀ ಇವಾನ್ಸ್ (ಅಮೆರಿಕ)

ಅನ್ವಹೆಸರು ಬಂದಿದೆ. 5,000 ಮತ್ತು 10,000 ಮೀಟರುಗಳಲ್ಲಿ ಆಗ ಹೊಸ ವಿಕ್ರಮ ಸ್ಥಾಪಿಸಿದ ಈತನಿಗೆ 'ಮಾನವ ರೈಲು' (ಹ್ಯೂಮನ್ ಲೋಕೊಮೊಟಿವ್) ಎಂಬುದೇ ಅನ್ವರ್ಥನಾಮವಾಯಿತು. ಬಾಸ್ಟನಿನ ಜೇಮ್ಸ್ ಕಾನಲಿ ಆಧುನಿಕ ಒಲಿಂಪಿಕ್ಸ್‌ನ ಪ್ರಥಮ ಛಾಂಪಿಯನ್ (1896). ದೂರದ ಓಟದ ಸ್ಪರ್ಧೆಯಲ್ಲಿ (ಮ್ಯಾರತಾನ್) ಪ್ರಥಮನಾದವನು ಸ್ಪೈರಾಸ್ ಲೂಯಿಸ್ ಎಂಬ ಗ್ರೀಕ್ ಪ್ರಜೆ.

1964ರಲ್ಲಿ ಟೋಕಿಯೋದಲ್ಲಿ ನಡೆದ ಒಲಿಂಪಿಕ್ ಕ್ರೀಡೆಗಳು ವಿಷ್ಯದಲ್ಲೇ ಪ್ರಥಮ. ಈ ಸ್ಪರ್ಧೆಗಳಿಗಾಗಿ ವಿನಿಯೋಗವಾದ ಹಣವೂ ದುಡಿಮೆಯೂ ಸಂಘಟನೆಯೂ ಎಷ್ಟೊಂದು ಅಗಾಧವೆಂಬುದನ್ನು ಕೂಬರ್ತಿನ್ ಕನಸಿನಲ್ಲೂ ಊಹಿಸಿದ್ದಿರಲಾರ. ವಿಶ್ವದ ಸ್ಪರ್ಧಿಗಳನ್ನು ಸ್ವಾಗತಿಸಲು ಇಡೀ ಟೋಕಿಯೋ ನಗರವೇ ಹೊಸ ಉಡುಪು ಧರಿಸಿ ಸಿದ್ಧವಾಯಿತೆನ್ನಬಹುದು. ಇವಕ್ಕಾಗಿ ಹೊಸ ಮೋಟಾರು ರಸ್ತೆಗಳೂ ಸೇತುವೆಗಳೂ ನಿರ್ಮಾಣವಾದುವು. ಕ್ರೀಡಾಂಗಣವೂ ಕ್ರೀಡೋಪವನವೂ



ಉದ್ದನೆಗೆತದಲ್ಲಿ (1964) ಬ್ರಿಟನಿಗೆ ಬಂಗಾರ ಪದಕ ಗಳಿಸಿಕೊಟ್ಟ ಸುಂದರ ಗೃಹಿಣಿ-ಮೇರಿರ್ಯಾಂಡ್

ಉದಯವಾದುವು. ಅನೇಕ ಹೊಸ ಭವನಗಳನ್ನೇ ಕಟ್ಟಲಾಯಿತು. ಇವಕ್ಕೆಲ್ಲ ವೆಚ್ಚವಾದ ಹಣ ಇಪ್ಪತ್ತು ಕೋಟಿ ಡಾಲರ್. ಹಿಂದಿನ ಕ್ರೀಡೆಗಳಂತೆ ಟೋಕಿಯೋದಲ್ಲೂ ಅಮೆರಿಕ ಸಂಯುಕ್ತಸಂಸ್ಥಾನವೇ ಮಾರ್ಗ ಮತ್ತು ಕ್ಷೇತ್ರ ಸ್ಪರ್ಧೆಗಳಲ್ಲಿ ಮೇಲುಗೈ ಸ್ಥಾಪಿಸಿತು. ನ್ಯೂಜೀಲೆಂಡಿನ ಪೀಟರ್ ಸ್ನೆಲ್ ಮಾತ್ರ 800 ಮತ್ತು 1500 ಮೀಟರುಗಳಲ್ಲೂ ಬ್ರಿಟನಿನ ಲಿನ್ ಡೇವಿಸ್ ಉದ್ದನೆಗೆತದಲ್ಲೂ ಪ್ರಥಮರಾದರು.



ಜಿಮ್ಮಿ ಹೈನ್ಸ್ (ಅಮೆರಿಕ)

1968ರ ಒಲಿಂಪಿಕ್ ಕ್ರೀಡೆಗಳನ್ನು ಮೆಕ್ಸಿಕೋ ನಗರದಲ್ಲಿ ಸಮುದ್ರಮಟ್ಟದಿಂದ ಸುಮಾರು 7,000 ಅಡಿಗಳ ಎತ್ತರದಲ್ಲಿ—ಏರ್ಪಡಿಸಲಾಗಿತ್ತು. ಈ ಎತ್ತರದಲ್ಲಿ ಸ್ಪರ್ಧೆಗಳನ್ನು ನಡೆಸುವುದರ ಸಾಧ್ಯತೆಬಾಧ್ಯತೆಗಳನ್ನು ಕುರಿತು ವಿಪುಲವಾಗಿ ವಾದವೇ ನಡೆಯಿತು. ಆಮ್ಲಜನಕದ ವಿರಳತೆಯಿಂದಾಗಿ ಅಪಾಯ ಸಂಭವಿಸಬಹುದೆಂಬುದೇ ಭಯ. ಸ್ಪರ್ಧಿಗಳಿಗೆ ಆಮ್ಲಜನಕ ಒದಗಿಸಲಾಗಿತ್ತು. ಇದೇ ಬಗೆಯ ನಾಡುಗಳಿಂದ ಬಂದವರಿಗೆ ಈ ಎತ್ತರವೊಂದು ಅನುಕೂಲವಾಗಿಯೇ ಪರಿಣಮಿಸಿತೆನ್ನಬೇಕು. 800 ಮೀಟರ್ ಮತ್ತು ಹೆಚ್ಚಿನ ನಡುದೂರಗಳ ಓಟಗಳ ಸ್ಪರ್ಧೆಯಲ್ಲಿ ಕೀನ್ಯದವರು ಗೆದ್ದರು. ಅನೇಕ ಸ್ಪರ್ಧೆಗಳಲ್ಲಿ ಹಳೆಯ ವಿಶ್ವವಿಕ್ರಮಗಳು ಮುರಿದು ಬಿದ್ದುವು. ಅಮೆರಿಕದ ಬಾಬ್ ಬೀಮನ್ 29′ $2\frac{1}{2}$″ ಉದ್ದ ನೆಗೆದು ಅದ್ಭುತವಾದ ವಿಕ್ರಮ ಸ್ಥಾಪಿಸಿದ. ಇದು ಹಿಂದಿನ ವಿಕ್ರಮಕ್ಕಿಂತ 1′ $9\frac{3}{4}$″ ಹೆಚ್ಚು. ಪೂರ್ಣ ವೇಗದ ಓಟದಲ್ಲಿ (ಸ್ಪ್ರಿಂಟ್ಸ್) ಅಮೆರಿಕನ್ ನೀಗ್ರೊ ಸ್ಪರ್ಧಿಗಳದೇ ಮೇಲುಗೈ. ಇತರ ವಿಕ್ರಮಗಳು ಈ ರೀತಿ ಇವೆ: ಆಲ್ ಓರ್ಟರ್ (ಅಮೆರಿಕ): ಚಕ್ರ ಎಸೆತ; ಜ್ಯೋಮಿಯ ಟೈಯಸ್ (ಅಮೆರಿಕ): 100 ಮೀಟರ್ ಓಟ; ಡೇವಿಡ್ ಹೆಮರಿ (ಗ್ರೇಟ್ ಬ್ರಿಟನ್): 400 ಮೀ. ಪ್ರತಿಬಂಧಕ ಓಟ (ಹರ್ಡಲ್ಸ್): ರಾಲ್ಫ್ ಡೌಬೆಲ್ (ಆಸ್ಟ್ರೇಲಿಯ): 800 ಮೀ.; ಎತ್ತರ ನೆಗೆತದ ಪರಾಕ್ರಮಿ ಡಿಕ್ ಫಾಸ್‌ಬೆರಿ (ಅಮೆರಿಕ) ಹಿಮ್ಮೊಗನಾಗಿ ನೆಗೆದದ್ದೊಂದು ವೈಶಿಷ್ಟ್ಯ.

**ಒಲಿಂಪಿಕ್ಸ್‌ನಲ್ಲಿ ಭಾರತ :** ಒಲಿಂಪಿಕ್ ಕ್ರೀಡೆಗಳಲ್ಲಿ ಭಾರತದ ಸ್ಪರ್ಧಿಗಳು ಪ್ರಥಮ ಬಾರಿಗೆ ಭಾಗವಹಿಸಿದ್ದು 1920ರಲ್ಲಿ (ಆಂಟ್‌ವರ್ಪ್). ಆಗ ಸರ್ ದೊರಾಬ್ ತಾತಾ ಸ್ವಂತ ಖರ್ಚಿನಲ್ಲಿ ಮೂವರ ತಂಡವೊಂದನ್ನು ಕಳಿಸಿದ. 1900ರಷ್ಟು ಹಿಂದೆಯೇ ನಾರ್ಮನ್ ಪ್ರಿಚರ್ಡ್ ಎಂಬಾತ ಭಾರತದ ಪರವಾಗಿ ಭಾಗವಹಿಸಿ 200 ಮೀಟರ್ ನೇರ ಓಟ (ಡ್ಯಾಷ್) ಮತ್ತು 200 ಮೀಟರ್ ಪ್ರತಿಬಂಧಕ ಓಟಗಳಲ್ಲಿ ತಲಾ ಒಂದೊಂದು ರಜತಪದಕ ಪಡೆದನೆಂದು ಉಲ್ಲೇಖವಿದೆ. ಇದುವರೆಗೂ ಬೇರೆ ಯಾವ ಭಾರತೀಯನೂ ಈ ಸಾಧನೆ ಮಾಡಿಲ್ಲ.

ಆಂಟ್‌ವರ್ಪಿನಸ್ಲಿದ್ದ ಭಾರತೀಯ ತಂಡದಲ್ಲಿದ್ದವರು ಪಿ. ಬ್ಯಾನರ್ಜಿ (200 ಮತ್ತು 800 ಮೀ.), ಪಿ. ಎಫ್. ಚೌಗುಲೆ (10,000 ಮೀ.), ಮತ್ತು ಕೈಜಾಲಿ (ಕಾಡುಮೇಡು—ಕ್ರಾಸ್ ಕಂಟ್ರಿ). ಚೌಗುಲೆಗೆ 19ನೆಯ ಸ್ಥಾನ ಲಭಿಸಿತು. 1924ರ ಪ್ಯಾರಿಸ್ ಸ್ಪರ್ಧೆಗಳಲ್ಲಿ ಭಾಗವಹಿಸಿದ ತಂಡದಲ್ಲಿ ಆರು ಮಂದಿ ಇದ್ದರು. ಇವರ ಪೈಕಿ ನಾಲ್ವರು ಮೊದಲನೆಯ ಸುತ್ತಿನಲ್ಲೇ ಮುಕ್ತರಾದರು.

ಆಮ್ಸ್ಟರ್‌ಡಾಮಿನ ಸ್ಪರ್ಧೆಗಳಲ್ಲಿ (1928) ಭಾರತದ ಹಾಕಿ ತಂಡ ಪ್ರಥಮ ವಾಗಿ ಜಯ ಗಳಿಸಿ ಕೀರ್ತಿಪತಾಕೆ ಹಾರಿಸಿತು. ಮುಂದಿನ 32 ವರ್ಷಗಳ ಕಾಲ ಭಾರತ ಈ ಸ್ಥಾನ ಬಿಟ್ಟು ಕೊಡಲಿಲ್ಲ. 1960ರ ರೋಂ ಒಲಿಂಪಿಕ್ಸ್‌ನಲ್ಲಿ ಈ ಅಗ್ರ ಮರ್ಯಾದೆ ಪಾಕಿಸ್ತಾನಕ್ಕೆ ಹೋಯಿತು. 1964ರಲ್ಲಿ ಮತ್ತೆ ಭಾರತಕ್ಕೆ ಪ್ರಾಪ್ತವಾಯಿತು. 1968ರಲ್ಲಿ ಭಾರತದಿಂದ ಈ ಸ್ಥಾನವನ್ನು ಕಿತ್ತುಕೊಂಡದ್ದು ಆಸ್ಟ್ರೇಲಿಯ.

ಲಾಸ್‌ಏಂಜೆಲೆಸ್ (1932) ಮತ್ತು ಬರ್ಲಿನ್ (1936) ಕ್ರೀಡೆಗಳಲ್ಲೂ ಭಾರತೀಯ ಕ್ರೀಡಾಪಟುಗಳಿದ್ದರು. ಆದರೆ ಭಾರತ ಪ್ರಥಮವಾಗಿ ಸಂಪೂರ್ಣ ಪ್ರಾತಿನಿಧ್ಯ ಗಳಿಸಿದ್ದು 1948ರ ಲಂಡನ್ ಕ್ರೀಡೆಗಳಲ್ಲಿ. ಆಗ ಇದು ಹಾಕಿ, ಫುಟ್‌ಬಾಲ್, ಅಥ್ಲೆಟಿಕ್ಸ್, ಸೈಕ್ಲಿಂಗ್, ಮುಷ್ಟಿಕಾಳಗ, ಕುಸ್ತಿ, ಈಜು, ವಾಟರ್ ಪೋಲೊ, ಭಾರ ಎತ್ತುಗೆಗಳಲ್ಲಿ ಭಾಗವಹಿಸಿತು. ಆದರೆ ಹಾಕಿ ಒಂದು ಬಿಟ್ಟು ಉಳಿದ ಸ್ಪರ್ಧೆಗಳಲ್ಲಿ ಭಾರತ ಬಹು ಬೇಗ ನಿರ್ಗಮಿಸಿತು.

ಒಲಿಂಪಿಕ್ ಕ್ರೀಡೆಗಳಲ್ಲಿ ಮೊಟ್ಟಮೊದಲಿಗೆ ಭಾಗವಹಿಸಿದ ಮಹಿಳೆಯರೆಂದರೆ (1952) ಮೇರಿ ಡಿ'ಸೋಜ (100 ಮೀ. ಮತ್ತು 200 ಮೀ.), ನೀಲಿಮಾ ಘೋಷ್ (100 ಮೀ. ಮತ್ತು 80 ಮೀ. ಪ್ರತಿಬಂಧಕ), ಡಾಲಿ ನಜೀರ್ ಮತ್ತು ಆರತಿ ಸಹಾ (ಈಜು). ಆ ವರ್ಷ ಭಾರತೀಯ ಪುರುಷರೂ ಭಾಗವಹಿಸಿ ಹಿಂದಿನ ಬಾರಿಗಿಂತ ಹೆಚ್ಚು ಸಮರ್ಪಕ ಸ್ಥಾನ ಗಳಿಸಿದರೆನ್ನಬಹುದು.



ಓಟದ ಒಂದು ಭಂಗಿ—ಅಮೆರಿಕದ ಆರ್. ಸ್ಮಿತ್

1960ರ ರೋಂ ಕ್ರೀಡೆಗಳನ್ನು ಭಾರತದ ಕ್ರೀಡೆಯ ಇತಿಹಾಸದಲ್ಲಿ ಮರೆಯು ವಂತಿಲ್ಲ. ಹಾಕಿಯಲ್ಲಿ 1–0 ಗೋಲುಗಳಿಂದ ಪಾಕಿಸ್ತಾನದ ಎದುರು ಭಾರತ ಸೋತದ್ದು ಅಲ್ಲಿ. ಭಾರತಕ್ಕೆ ಚಿನ್ನದ ಪದಕ ದೊರಕಿಸಿ ಕೊಡುತ್ತಿದ್ದ ಆಟ ಇದೊಂದೇ. ಆದರೆ ಅಥ್ಲೆಟಿಕ್ ವಿಭಾಗದಲ್ಲಿ ಜ್ಯೋತಿ ಬೆಳಗಿದ ಕ್ರೀಡಾಪಟು ಮಿಲ್ಖಾಸಿಂಗ್. ಹಾರುವ ಸಿಖ್ ಎಂದು ಹೆಸರು ಗಳಿಸಿದ ಈತ 400 ಮೀ.



ಗೆಲವಿಗೆ ಇನ್ನೆಷ್ಟು ದೂರ?

ಓಟದಲ್ಲಿ ಕೊನೆಯ ಹಂತವನ್ನೂ ತಲಪಿದ. ಈತ, ದಕ್ಷಿಣ ಆಫ್ರಿಕದ ಮಾಲ್‌ಸ್ಪೆನ್ಸ್ ಇಬ್ಬರೂ ಗಡಿಯಾರದ ಪ್ರಕಾರ 45.6 ಸೆಕೆಂಡುಗಳಲ್ಲಿ ಓಡಿದರು. ಆದರೆ ಕೇವಲ ಟೇಪಿನಿಂದ ಗೆದ್ದವ ಮಾಲ್ ಸ್ಪೆನ್ಸ್.

1964ರ ಕ್ರೀಡೆಗಳಲ್ಲಿ ಭಾರತದ ಪ್ರದರ್ಶನ ಇನ್ನೂ ಉತ್ತಮವಾಗಿತ್ತು. ಭಾರತದ ಸ್ಪರ್ಧಿಗಳು 110 ಮೀ. ಪ್ರತಿಬಂಧಕ, 400 ಮೀ. ಪ್ರತಿಬಂಧಕ, ಮುಮ್ಮಡಿ ನೆಗೆತ (ಟ್ರಿಪಲ್ ಜಂಪ್), ಅಗಲ ನೆಗೆತ, ದೂರದ ಓಟ (ಮ್ಯಾರತಾನ್) ಮುಂತಾದವಲ್ಲಿ ಒಳ್ಳೆಯ ಮಟ್ಟ ಸ್ಥಾಪಿಸಿದರು. ಕುಸ್ತಿಯಲ್ಲಿ ಬ್ಯಾಂಟಮ್

ತೂಕದ ವರ್ಗದಲ್ಲಿ ಬಿಷಂಬರ್ ಸಿಂಗನದು ಆರನೆಯ ಸ್ಥಾನ. ರೋಮಿನಲ್ಲಿ ಮಿಲ್ಖಾ ಸಿಂಗನಂತೆ ಟೋಕಿಯೋದಲ್ಲಿ ಗುರ್‌ಬಚನ್ ಸಾಹಸ ಮೆರೆದ.

ಮೆಕ್ಸಿಕೋ ಕ್ರೀಡೆಗಳಿಗೆ ಹೋಗಿದ್ದ ಭಾರತೀಯ ತಂಡದಲ್ಲಿದ್ದವರು 18 ಹಾಕಿ ಆಟಗಾರರು, ಇಬ್ಬರು ಅಥ್ಲೀಟರು, ಇಬ್ಬರು ಎಸೆಗಾರರು, ಒಬ್ಬ ಮುಷ್ಟಿಕಾಳಗ ಪ್ರವೀಣ, ಒಬ್ಬ ಭಾರ ಎತ್ತುಗಾರ. ಭಾರತದ ಹಾಕಿ ತಂಡ ಆಸ್ಟ್ರೇಲಿಯಕ್ಕೆ ಸೋತದ್ದೊಂದು ದೊಡ್ಡ ಆಘಾತ.

**ಮೆಕ್ಸಿಕೋ ವಿಕ್ರಮಗಳು:** ಮೆಕ್ಸಿಕೋ ಒಲಿಂಪಿಕ್ಸ್‌ನಲ್ಲಿ ಟ್ರ್ಯಾಕ್ ಮತ್ತು ಫೀಲ್ಡ್ ವಿಭಾಗದಲ್ಲಿ ಹನ್ನೆರಡು ಮಂದಿ ಹೊಸ ವಿಕ್ರಮ ಸ್ಥಾಪಿಸಿದ ವಿವರಗಳು ಈ ರೀತಿ ಇವೆ: ಪುರುಷರು : 200 ಮೀ.—ಅಮೆರಿಕದ ಟಾಮಿ ಸ್ಮಿತ್ (19·8 ಸೆ.) ; 400 ಮೀ.—ಅಮೆರಿಕದ ಲೀ ಇವಾನ್ಸ್ (43·6 ಸೆ.) ; 400 ಮೀ. ಪ್ರತಿಬಂಧಕ—ಗ್ರೇಟ್ ಬ್ರಿಟನಿನ ಡೇವಿಡ್ ಹೆಮರಿ (48·1 ಸೆ.) ; ಉದ್ದ ನೆಗೆತ—ಅಮೆರಿಕದ ರಾಬರ್ಟ್ ಬೀಮನ್ (8·90 ಮೀ.) ; ಮುಮ್ಮಡಿ ನೆಗೆತ—ಸೋವಿಯತ್ ದೇಶದ ವಿಕ್ಟರ್ ಸೇನೀವ್ (17·39 ಮೀ.) ; ಬ್ರಜಿಲ್ಲಿನ ನೆಲ್ಸನ್ ಪ್ರೂಡೆನ್ಸಿಯೊ (17·27 ಮೀ.) ; ಇಟಲಿಯ ಗಿಸೆಪ್ಪೆ ಜೆಂಟೀಲ್ (17·10 ಮೀ.) ; 4×100 ಮೀ. ರಿಲೇ–ಜಮೈಕ (38·3 ಸೆ.), ಅಮೆರಿಕ (38·3 ಸೆ.) ; 4×400 ಮೀ. ರಿಲೇ—ಅಮೆರಿಕ (2 ಮಿ. 56·1 ಸೆ.) ; 800 ಮೀ.—ಆಸ್ಟ್ರೇಲಿಯದ ರಾಲ್ಫ್ ಡೌಬೆಲ್ (44·3 ಸೆ.) ಮಹಿಳೆಯರು : 100 ಮೀ.—ಅಮೆರಿಕದ ವೈಯೊಮಿಯ ಟೈಯಸ್ (11·0ಸೆ.) ; 200 ಮೀ.—ಪೋಲೆಂಡಿನ ಇರಿನಾ ಕಿರ್ಸೆನ್‌ಸ್ಟೀನ್ (22·5 ಸೆ.) ; ಲಾಂಗ್ ಜಂಪ್ ವೈಯೊರಿಕ ವಿಸೊಪೊಲೀನ (6·82 ಮೀ.) ; ಷಾಟ್ ಪುಟ್—ಮಾರ್ಗಿಟ ಗಮೆಲ್ (19·61 ಮೀ.) 4×100 ಮೀ. ರಿಲೇ—ಅಮೆರಿಕ (42·8 ಸೆ.) ; ಅಮೆರಿಕ ಮತ್ತು ಹಾಲೆಂಡ್ (43·4 ಸೆ.)

ಆಧುನಿಕ ಒಲಿಂಪಿಕ್ ಕ್ರೀಡೆಗಳು

| ಸ್ಥಳ | ವರ್ಷ | ಕ್ರೀಡೆಗಳು | ಸ್ಪರ್ಧೆಗಳು | ಸ್ಪರ್ಧಿಗಳು | ದೇಶಗಳು |
|---|---|---|---|---|---|
| ಅಥೆನ್ಸ್ | 1896 | 10 | 42 | 285 | 13 |
| ಪ್ಯಾರಿಸ್ | 1900 | 17 | 60 | 1,066 (6 ಮಹಿಳೆಯರು) | 20 |
| ಸೇಂಟ್ ಲೂಯಿ | 1904 | 15 | 67 | 496 | 11 |
| ಲಂಡನ್ | 1908 | 26 | 104 | 2.059 (36ಮಹಿಳೆಯರು) | 22 |
| ಸ್ಟಾಕೋಂ | 1912 | 19 | 106 | 2,541 (57 ,, ) | 28 |
| ಆಂಟ್‌ವರ್ಪ್ | 1920 | 24 | 154 | 2,006 (63 ,, ) | 29 |
| ಪ್ಯಾರಿಸ್ | 1924 | 24 | 137 | 3,092 (136 ,, ) | 44 |
| ಆಮ್‌ಸ್ಟರ್‌ಡ್ಯಾಂ | 1928 | 22 | 120 | 3,015 (290 ,, ) | 46 |
| ಲಾಸ್ ಏಂಜಲೆಸ್ | 1932 | 23 | 124 | 1,408 (127 ,, ) | 37 |
| ಬರ್ಲಿನ್ | 1936 | 27 | 142 | 4,069 (328 ,, ) | 49 |
| ಲಂಡನ್ | 1948 | 25 | 138 | 4,468 (438 ,, ) | 59 |
| ಹೆಲ್ಸಿಂಕಿ | 1952 | 25 | 149 | 5,867 (573 ,, ) | 69 |
| ಮೆಲ್ಬೋರ್ನ್ | 1956 | 26 | 148 | 3,329 (384 ,, ) | 67 |
| ರೋಂ | 1960 | 24 | 150 | 5,396 (537 ,, ) | 84 |
| ಟೋಕಿಯೋ | 1964 | 26 | 162 | 5,541 (719 ,, ) | 94 |
| ಮೆಕ್ಸಿಕೋ ನಗರ | 1968 | | | 7,500 | 112 |

ಮೆಕ್ಸಿಕೋ ಒಲಿಂಪಿಕ್ಸ್
ಮಾರ್ಗ ಮತ್ತು ಕ್ಷೇತ್ರ ಸ್ಪರ್ಧೆಗಳು

| ಸ್ಪರ್ಧೆ | ಸ್ಥಳ | ವರ್ಷ | ವಿಕ್ರಮಿ | ದೇಶ | ವಿಕ್ರಮ |
|---|---|---|---|---|---|
| 100 ಮೀ. ಡ್ಯಾಷ್ ... | ಟೋಕಿಯೋ | 1964 | ಆರ್. ಹೇಯ್ಸ್ | ಅಮೆರಿಕ | 10 ಸೆ. |
| 200 ಮೀ. ,, ... | ಮೆಕ್ಸಿಕೋ | 1968 | ಟಾಮಿ ಸ್ಮಿತ್ | ,, | 19·8 ಸೆ. |
| 400 ಮೀ. ಓಟ ... | ,, | 1968 | ಲೀ ಇವಾನ್ಸ್ | ,, | 43·8 ಸೆ. |
| 800 ಮೀ. ,, ... | ,, | 1968 | ರಾಲ್ಫ್ ಡೌಬೆಲ್ | ಆಸ್ಟ್ರೇಲಿಯ | 1 ಮಿ. 44·3 ಸೆ. |
| 1,500 ಮೀ. ,, ... | ರೋಂ | 1960 | ಎಚ್. ಎಲಿಯಟ್ | ,, | 3 ಮಿ. 35·6 ಸೆ. |
| 5,000 ಮೀ. ,, ... | ಮೆಲ್ಬೋರ್ನ್ | 1956 | ಪಿ. ಕಟ್ಸ್ | ಸೋವಿಯತ್ ದೇಶ | 13 ಮಿ. 39·6 ಸೆ. |
| 10,000 ಮೀ. ಓಟ ... | ಟೋಕಿಯೋ | 1964 | ಡಬ್ಲ್ಯು. ಮಿಲ್ಸ್ | ಅಮೆರಿಕ | 28 ಮಿ. 24·4 ಸೆ. |
| ಮ್ಯಾರಥಾನ್ ... | ,, | 1964 | ಅಬೆಬೆ ಬಿಕಿಲ | ಇಥಿಯೋಪಿಯ | 2 ಗಂ. 12 ಮಿ. 11·2 ಸೆ. |
| 110 ಮೀ. ಪ್ರತಿಬಂಧಕ ... | ಮೆಲ್ಬೋರ್ನ್ | 1956 | ಎಲ್. ಕ್ಯಾಲ್ಹಾನ್ | ಅಮೆರಿಕ | 13·5 ಸೆ. |
| 400 ಮೀ. ,, ... | ರೋಂ | 1968 | ಡೇವಿಡ್ ಹೆಮರಿ | ಬ್ರಿಟನ್ | 48·1 ಸೆ. |
| 3,000 ಮೀ. ಕಾಡುಮೇಡು ನಡಿಗೆ ... | ಟೋಕಿಯೋ | 1964 | ಜಿ. ರೋಲೆಂಟ್ಸ್ | ಬೆಲ್ಜಿಯಂ | 8 ಮಿ. 30·8 ಸೆ. |
| 400 ಮೀ. ರಿಲೇ ... | ಮೆಕ್ಸಿಕೋ | 1968 | ... | ಜಮೈಕ | 38·3 ಸೆ. |
| 1,600 ಮೀ. ರಿಲೇ ... | ,, | 1968 | ... | ಅಮೆರಿಕ | 28·3 ಸೆ. |
| ಎತ್ತರ ನೆಗೆತ ... | ಟೋಕಿಯೋ | 1964 | ವಿ. ಬ್ರುಮೆಲ್ | ಸೋವಿಯತ್ ರಾಜ್ಯ | 2·18 ಮೀ. |
| ಅಗಲ ನೆಗೆತ ... | ರೋಂ | 1960 | ಆರ್. ಬಾಸ್ಟನ್ | ಅಮೆರಿಕ | 8·12 ಮೀ. |
| ಪೋಲ್ ವಾಲ್ಟ್ ... | ಟೋಕಿಯೋ | 1964 | ಎಫ್. ಹ್ಯಾನ್‌ಸನ್ | ,, | 5·10 ಮೀ. |
| ಹಾಪ್, ಸ್ಟೆಪ್ ಮತ್ತು ಜಂಪ್ .... | ,, | 1964 | ಜೆ. ಷ್ಮಿಟ್ | ಪೋಲೆಂಡ್ | 16·85 ಮೀ. |
| ಷಾಟ್ ಪುಟ್ ... | ,, | 1964 | ಡಿ. ಲಾಂಗ್ | ಅಮೆರಿಕ | 20·33 ಮೀ. |
| ಚಕ್ರದ ಎಸೆತ ... | ,, | 1964 | ಎ. ಓರ್ಟರ್ | ,, | 61·00 ಮೀ. |
| ಈಟಿಯ ಎಸೆತ ... | ಮೆಲ್ಬೋರ್ನ್ | 1956 | ಇ. ಡ್ಯಾನಿಯೆಲ್‌ಸನ್ | ನಾರ್ವೇ | 85·71 ಮೀ. |
| ಸುತ್ತಿಗೆ ಎಸೆತ ... | ಟೋಕಿಯೋ | 1964 | ಆರ್. ಕ್ಲಿಂ | ಸೋವಿಯತ್ ದೇಶ | 69·74 ಮೀ. |
| ಡಿಕ್ಯಾತ್ಲಾನ್ ... | ರೋಂ | 1960 | ಜಾನ್ಸನ್ | ಅಮೆರಿಕ | 8,392 ಗೆಲ್ಲಾಂಕ (ಪಾಯಿಂಟ್ಸ್) |

ಮೆಕ್ಸಿಕೋ ಒಲಿಂಪಿಕ್ಸ್
5ಕ್ಕಿಂತ ಹೆಚ್ಚು ಪದಕ ಪಡೆದ ರಾಷ್ಟ್ರಗಳು

| | ಬಂಗಾರ | ಬೆಳ್ಳಿ | ಕಂಚು | ಒಟ್ಟು |
|---|---|---|---|---|
| ಅಮೆರಿಕ ಸಂಯುಕ್ತಸಂಸ್ಥಾನ ... | 45 | 28 | 34 | 107 |
| ಸೋವಿಯತ್ ಒಕ್ಕೂಟ ... | 29 | 32 | 30 | 91 |
| ಹಂಗರಿ ... | 10 | 10 | 12 | 32 |
| ಪಶ್ಚಿಮ ಜರ್ಮನಿ ... | 5 | 11 | 10 | 26 |
| ಪೂರ್ವ ಜರ್ಮನಿ ... | 9 | 9 | 7 | 25 |
| ಜಪಾನ್ ... | 11 | 7 | 7 | 25 |
| ಪೋಲೆಂಡ್ ... | 5 | 2 | 11 | 18 |
| ಆಸ್ಟ್ರೇಲಿಯ ... | 5 | 7 | 5 | 17 |
| ಇಟಲಿ ... | 3 | 4 | 9 | 16 |
| ಫ್ರಾನ್ಸ್ ... | 7 | 3 | 5 | 15 |
| ರೂಮೇನಿಯ ... | 4 | 6 | 5 | 15 |
| ಜೆಕೊಸ್ಲವಾಕಿಯ ... | 7 | 2 | 4 | 13 |
| ಗ್ರೇಟ್ ಬ್ರಿಟನ್ ... | 5 | 5 | 3 | 13 |
| ಬಲ್ಗೇರಿಯ ... | 2 | 4 | 3 | 9 |
| ಕೀನ್ಯ ... | 3 | 4 | 2 | 9 |
| ಮೆಕ್ಸಿಕೋ ... | 3 | 3 | 3 | 9 |
| ಡೆನ್ಮಾರ್ಕ್ ... | 1 | 4 | 3 | 8 |
| ಯೂಗೊಸ್ಲಾವಿಯ ... | 3 | 3 | 2 | 8 |
| ನೆದರ್ಲೆಂಡ್ಸ್ ... | 3 | 3 | 1 | 7 |

5 ಅಥವಾ ಕಡಿಮೆ ಪದಕ ಪಡೆದ ರಾಷ್ಟ್ರಗಳು

| | |
|---|---|
| ಕೆನಡ, ಇರಾನ್ (ಪರ್ಷಿಯ) ಮತ್ತು ಸ್ವಿಟ್ಸರ್ಲೆಂಡ್ | ತಲಾ 5 |
| ಆಸ್ಟ್ರಿಯ, ಕ್ಯೂಬ, ಫಿನ್‌ಲೆಂಡ್, ಮಂಗೋಲಿಯ ಮತ್ತು ಸ್ವೀಡನ್ | ,, 4 |
| ಬ್ರಜಿಲ್, ನ್ಯೂ ಜೀಲೆಂಡ್ .... ... | ,, 3 |
| ಅರ್ಜೆಂಟೀನ, ಬೆಲ್ಜಿಯಂ, ಇಥಿಯೋಪಿಯ, ನಾರ್ವೇ, ದ. ಕೊರಿಯ ಟ್ಯುನೀಷಿಯ, ತುರ್ಕಿ ಮತ್ತು ಉಗಾಂಡ | ,, 2 |
| ಕಾಮರೂನ್, ಫಾರ್ಮೋಸ, ಗ್ರೀಸ್, ಭಾರತ, ಜಮೈಕ, ಪಾಕಿಸ್ತಾನ ಮತ್ತು ವೆನಿಜ್ವೇಲ | ,, 1 |

(ಎಚ್.ಎಸ್.ಕೆ.; ಸಿ.ಎ.ಆರ್, ಟಿ.ಸಿ.ಬಿ.ಆರ್.)

**ಒಲಿಂಪಿಯ[1] :** ಪಶ್ಚಿಮ ವಾಷಿಂಗ್‌ಟನಿನ ರೇವುಪಟ್ಟಣ, ರಾಜಧಾನಿ. ಸಿಯಾಟಲಿನಿಂದ 60 ಮೈಲಿ ದೂರದಲ್ಲಿದೆ.

ಈ ಪಟ್ಟಣದ ವಿಸ್ತೀರ್ಣ 7.9 ಚ.ಮೈ. ನಗರವನ್ನು ತಗ್ಗಾದ ಹಸಿರು ಬೆಟ್ಟಗಳು ಸುತ್ತುವರಿದಿವೆ. ಉತ್ತರದಲ್ಲಿ ಹಿಮಾಚ್ಛಾದಿತ ಒಲಂಪಿಕ್ ಶಿಖರಗಳಿವೆ. ಇದರ ಜನಸಂಖ್ಯೆ 18,273 (1960).

ಪ್ರತಿವರ್ಷವೂ ಸುಮಾರು 5,00,000 ಟನ್‌ಗಳಷ್ಟು ಸರಕು ಒಲಿಂಪಿಯ ಬಂದರಿನ ಮೂಲಕ ಸಾಗುತ್ತದೆ. ಮರದ ದಿಮ್ಮಿ, ಪ್ಲೈವುಡ್, ಅರಣ್ಯಸಾಮಗ್ರಿ, ಅದುರುಗಳು, ಪೆಟ್ರೋಲಿಯಂ ಪದಾರ್ಥಗಳು, ಪಾನೀಯಗಳು, ಶಸ್ತ್ರಾಸ್ತ್ರ ಮತ್ತು ಸಂಸ್ಕರಿಸಿದ ಆಹಾರಗಳು ಇಲ್ಲಿಂದ ರಫ್ತಾಗುತ್ತವೆ.

ಒಲಿಂಪಿಕ್ ರಾಷ್ಟ್ರೀಯ ಅರಣ್ಯ ವ್ಯವಸ್ಥೆಯ ಕೇಂದ್ರ ಕಚೇರಿ ಇಲ್ಲೇ ಇದೆ. ಸೇಂಟ್ ಮಾರ್ಟಿನ್ಸ್ ಕಾಲೇಜು ಇದಕ್ಕೆ 3 ಮೈಲಿಗಳ ದೂರದಲ್ಲಿದೆ.

ಒಲಿಂಪಿಯದ ಬಳಿಯ ಟಮ್‌ವಾಟರ್ ಎಂಬಲ್ಲಿಗೆ ಅಮೆರಿಕನರು 1845ರಲ್ಲಿ ವಲಸೆ ಬಂದರು. ಆದರೆ 1849ರಲ್ಲಿ ಎಲ್ಲ ಜನರೂ ಕ್ಯಾಲಿಫೋರ್ನಿಯದ ಚಿನ್ನದ ಗಣಿಗಳಿಗೆ ನಡೆದು ಬಿಟ್ಟರು. 1850ರಲ್ಲಿ ಈಗಿನ ಒಲಿಂಪಿಯ ಪ್ರದೇಶದಲ್ಲಿ ನಗರವೊಂದು ಸ್ಥಾಪಿತವಾಯಿತು. ವಾಷಿಂಗ್‌ಟನ್ ಪ್ರದೇಶ ರಚನೆಯಾದಾಗ ಅದಕ್ಕೆ ಒಲಿಂಪಿಯ ರಾಜಧಾನಿಯಾಯಿತು (1853). ಇದಕ್ಕೆ ನಗರದ ಸನ್ನದು ದೊರೆತದ್ದು 1859ರಲ್ಲಿ.

(ಪಿ.ಎಚ್.)

**ಒಲಿಂಪಿಯ[2] :** ಗ್ರೀಸಿನ ಪಶ್ಚಿಮ ಪೆಲಿಪೊನೀಸ್‌ನ ಒಂದು ಸ್ಥಳ, ಪುರಾತನ ಗ್ರೀಕರ ಜ಼್ಯೂಸ್ ದೇವತಾಕ್ಷೇತ್ರ. ಸಮುದ್ರದಿಂದ ಸುಮಾರು 10 ಮೈಲಿ ದೂರದಲ್ಲಿ, ಆಲ್‌ಫೀಯಸ್ ಮತ್ತು ಕ್ಲೇಡಿಯಸ್ ನದಿಗಳ ಸಂಗಮದ ಬಳಿ, ಕ್ರೋನಿಯಸ್ ಬೆಟ್ಟದ ತಪ್ಪಲಿನ ವಿಶಾಲ ಕಣಿವೆಯ ಹಸಿರು ನೆಲದ ಮೇಲೆ, ಪ್ರಾಚೀನ ವೈಭವದ ಮೂಕಸಾಕ್ಷಿಯಾಗಿ ಪವಡಿಸಿದೆ. ಅನೇಕ ದೃಷ್ಟಿಗಳಲ್ಲಿ ಇದು ಅಧಿಕೃತ ಗ್ರೀಕ್ ಧರ್ಮದ ಕೇಂದ್ರವಾಗಿತ್ತು. ಅಖಿಲ ಗ್ರೀಕರ ಮಾನ್ಯಧರ್ಮವೆನಿಸಬೇಕೆಂದು ಸೆಣಸಾಡುತ್ತಿದ್ದ ಕೆಲವು ಪಂಗಡಗಳ ಪೈಕಿ ಇಲ್ಲಿಯದೂ ಒಂದು. ಅಷ್ಟೇ ಅಲ್ಲ, ಇದೇ ಪ್ರಧಾನವಾಗಿತ್ತು; ನಾಲ್ಕು ವರ್ಷಗಳಿಗೊಮ್ಮೆ ಇಲ್ಲಿ ನಡೆಯುತ್ತಿದ್ದ ಕ್ರೀಡೆಗಳಲ್ಲಿ ಪಾಲ್ಗೊಳ್ಳಲೂ ಅವನ್ನು ವೀಕ್ಷಿಸಲೂ ಇಡೀ ಗ್ರೀಕ್ ಪ್ರಪಂಚದಿಂದಲೇ ಅಲ್ಲದೆ ಹೊರಗಿನಿಂದಲೂ ಜನ ಬರುತ್ತಿದ್ದರು. ಪರಸ್ಪರವಾಗಿ ಕಾದಾಡುತ್ತಿದ್ದ ಗ್ರೀಕ್ ರಾಜ್ಯಗಳ ನಡುವೆ ಆಗ್ಗೆ ತಾತ್ಕಾಲಿಕವಾಗಿ ಶಾಂತಿ ಏರ್ಪಾಡಾಗುತ್ತಿತ್ತು.

ಒಲಿಂಪಿಯದ ದೇವಾಲಯದ ಐತಿಹ್ಯ ಅಷ್ಟೇನೂ ಸ್ಫುಟವಾಗಿಲ್ಲ. ಇದು ಆಶ್ಚರ್ಯಕರ. ಕ್ರಿ.ಪೂ. ಸು. 11ನೆಯ ಶತಮಾನದಲ್ಲಿ, ಡೋರಿಯನ್ ಆಕ್ರಮಣ ಕಾಲದಲ್ಲಿ ಇಲ್ಲಿಯ ಪಂಥ ಆರಂಭವಾಗಿರಬೇಕು. ಚತುರ್ವಾರ್ಷಿಕ ಕ್ರೀಡಾವ್ಯವಸ್ಥೆ ಕ್ರಿ.ಪೂ. 776ರಲ್ಲಿ ಸ್ಥಾಪಿತವಾದಾಗ ಗ್ರೀಕ್ ಪ್ರಪಂಚ ಈ ಚತುರ್ವಾರ್ಷಿಕ ಎಣಿಕೆ ಕ್ರಮವನ್ನು ಒಪ್ಪಿಕೊಂಡಿತು; ಸ್ಥಳೀಯ ಪಂಚಾಂಗ ಯಾವುದೇ ಇರಲಿ, ಪ್ರತಿಯೊಬ್ಬರೂ ಒಲಿಂಪಿಕ್ ಹಬ್ಬಗಳಿಗೆ ಅನುಗುಣವಾದ ಕಾಲಗಣನೆಯನ್ನು ಸ್ವೀಕರಿಸಿದರು. ಅಲ್ಲಿಂದ ಮುಂದೆ ಧಾರ್ಮಿಕವಾಗಿಯೂ ಶಿಲ್ಪದೃಷ್ಟಿಯಿಂದಲೂ ಇಲ್ಲಿಯ ದೇವಾಲಯ ಪರಿಪರಿಯಾಗಿ ಶೋಭಿಸಿತು. ಪ್ಲೇಂಛರ ಪವಿತ್ರ ಮಂದಿರಗಳನ್ನೆಲ್ಲ ನೆಲಸಮ ಮಾಡಬೇಕೆಂಬ ಥಿಯೋಡೋಷಿಯಸನ ಆಜ್ಞೆಗೆ ಅನುಸಾರವಾಗಿ ಇಲ್ಲಿಯ ದೇವಾಲಯಗಳು ಕ್ರಿ.ಶ. 426ರಲ್ಲಿ ನಾಶವಾದುವು. ಕ್ರಿ.ಶ. 393ರಲ್ಲಿ ನಡೆದದ್ದೇ ಪುರಾತನ ಒಲಿಂಪಿಯದ ಕೊಟ್ಟಕೊನೆಯ ಕ್ರೀಡೋತ್ಸವ. (ನೋಡಿ—ಒಲಿಂಪಿಕ್ ಕ್ರೀಡೆಗಳು).

ಒಲಿಂಪಿಯವಿದ್ದ ನಿವೇಶನವನ್ನು ಪತ್ತೆಹಚ್ಚಿದವನು (1723) ಫ್ರೆಂಚ್ ಪರಿಶೋಧಕ ಮಾಂಟ್‌ಫಾಕನ್. ಅನಂತರ ಅನೇಕ ಐರೋಪ್ಯ ಕುತೂಹಲಿಗಳು ಇಲ್ಲಿಗೆ ಬಂದು ಸ್ಥಳದಲ್ಲೆಲ್ಲ ಅಡ್ಡಾಡಿ ಪರಿಶೀಲನೆ ನಡೆಸಿದರು. ಇಲ್ಲಿ ಭಾರೀ ಪ್ರಮಾಣದಲ್ಲಿ ಉತ್ಖನನ ನಡೆದದ್ದು 1875–1881ರಲ್ಲಿ—ಜರ್ಮನ್ ಪುರಾತತ್ತ್ವ ಸಂಸ್ಥೆಯ ಅರ್ನೆಸ್ಟ್ ಕುರ್ಟಿಯಸ್ ನೇತೃತ್ವದಲ್ಲಿ. ಮತ್ತೆ ಜರ್ಮನರು 1936–38 ರಲ್ಲಿ ಸುದೀರ್ಘ ಉತ್ಖನನ ನಡೆಸಿ ಅನೇಕ ರಹಸ್ಯಗಳನ್ನು ಹೊರಗೆಡಹಿದರು.

ಬೆಟ್ಟದ ಬುಡದಲ್ಲಿ, 750′×570′ ವಿಸ್ತೀರ್ಣದ ವಿಷಮ ಚತುರಸ್ರಾಕಾರದ ಆವೃತ ಪ್ರದೇಶದಲ್ಲೇ ದೇವಮಂದಿರವಿದ್ದದ್ದು. ಈ ಇಡೀ ಭಾಗದ ಹೆಸರು ಅಲ್ಟಿಸ್. ಜ಼್ಯೂಸ್ ದೇವಾಲಯವೂ ಇತರ ಅನೇಕ ಪವಿತ್ರ ಮಂದಿರಗಳೂ ಧಾರ್ಮಿಕ ಶಾಸನಗಳೂ ಇಲ್ಲಿದ್ದುವು. ಅಲ್ಟಿಸಿನ ಹೊರಗೂ ಅನೇಕ ಕಟ್ಟಡಗಳಿದ್ದುವು. ದೇವಮಂದಿರಗಳ ಮತ್ತು ಚತುರ್ವಾರ್ಷಿಕ ಕ್ರೀಡೆಗಳ ಆಡಳಿತ ಕಚೇರಿಗಳು ಇಲ್ಲಿದ್ದುವು. ಯಾತ್ರಿಕರ ವಸತಿಗಾಗಿಯೂ ಸಾಕಷ್ಟು ಸೌಲಭ್ಯ ಕಲ್ಪಿಸಲಾಗಿತ್ತು. (ಪಿ.ಎಚ್.)

**ಒಲ್ಲಾರಿ :** ಮಧ್ಯದ್ರಾವಿಡ ಗುಂಪಿನ ಐದು ಉಪಭಾಷೆಗಳಲ್ಲೊಂದು. ಪರ್ಜಿ, ಗದಬ, ಕೋಲಾಮೀ, ನಾಯಕಿ ಇವು ಉಳಿದ ನಾಲ್ಕು. ಇವೆಲ್ಲ ಒಂದು ಪ್ರಧಾನ ಶಾಖೆಗೆ ಸೇರಿವೆ. ಒಲ್ಲಾರಿ ಮಾತನಾಡುವವರ ಸಂಖ್ಯೆ ಸುಮಾರು 1,000 ಇರಬಹುದು. 1931ನೆಯ ಜನಗಣತಿಯಂತೆ 797 ಮಾತ್ರ. ಇದು ಒರಿಸ್ಸದ ಕೋರಾಪುಟ್ ಜಿಲ್ಲೆಯ ಸುತ್ತಮುತ್ತ ಬಳಕೆಯಲ್ಲಿದೆ. 1951ರಲ್ಲಿ ಸುಧೀಭೂಷಣ ಭಟ್ಟಾಚಾರ್ಯ ಆ ಜಿಲ್ಲೆಯನ್ನು ಸಂದರ್ಶಿಸಿ ಈ ಉಪಭಾಷೆಯ ಪರಿಶೀಲನೆ ನಡೆಸಿದರು. ಭಾರತ ದೇಶದ ಪ್ರಕಟನ ವಿಭಾಗದಿಂದ ಪ್ರಚುರವಾದ (1956–57) ಇವರ ಗ್ರಂಥ ಒಲ್ಲಾರಿ, ಎ ಡ್ರವಿಡಿಯನ್ ಸ್ಪೀಚ್ ಎಂಬುದು ಈ ಭಾಷೆಯ ಬಗ್ಗೆ ಸಾಕಷ್ಟು ವಿವರಗಳನ್ನು ಕೊಡುತ್ತದೆ. ಒಲ್ಲಾರಿಯ ವ್ಯಾಕರಣ ಮತ್ತು ಶಬ್ದಭಂಡಾರ ದ್ರಾವಿಡ ಭಾಷೆಗಳ ಕಡೆ ವಾಲುತ್ತಿರುವುದನ್ನು ಸ್ಪಷ್ಟವಾಗಿ ಕಾಣಬಹುದು. ಅಂಬ್ (ಬಾಣ), ಕಿಸ್ (ಕಿಚ್ಚು), ಪಾಲ್ (ಹಾಲು), ಮರ್ದಿಲ್ (ಮದ್ದು), ಸುಪ್ (ಉಪ್ಪು), ಕಣ್ (ಕಣ್ಣು), ಕಿ (ಕೈ), ತಲ್ (ತಲೆ), ಪಲ್ (ಹಲ್ಲು)—ಇವು ದಿನಬಳಕೆಯ ಕೆಲವು ಶಬ್ದಗಳು. ಆನ್ (ನಾನು), ಆಮ್ (ನಾವು), ಈನ್ (ನೀನು), ಈಮ್ (ನೀವು), ಓಣ್ಡ (ಅವನು), ಒರ್ (ಅವರು–ಪುರುಷರು ಮಾತ್ರ), ಅದ್ (ಅವಳು)—ಇವು ಸರ್ವನಾಮಗಳು. ಇಂಡಿ (ಎರಡು), ಇರಲ್ (ಇಬ್ಬರು–ಸ್ತ್ರೀಯರು), ಇರುಲ್ (ಇಬ್ಬರು–ಪುರುಷರು), ಮೂಣ್ಡ್ (ಮೂರು)—ಇವು ಸಂಖ್ಯಾವಾಚಿಗಳು. ಅಟ್ (ಹೊಡಿ), ಅಡ್ (ಅಳು), ಇಡ್‌ಗೆ (ಇಳಿ), ಉನ್ (ಕುಡಿ), ಕಟ್ (ಕಟ್ಟು), ಕೂಯ್ (ಕರೆ, ಕೂಗು), ಮನ್ (ಇರು), ನಿಲ್ (ನಿಲ್ಲು), ವರ್ (ಬರು), ಸೀ (ಕೊಡು)—ಇವು ಕೆಲವು ಧಾತುಗಳು.

ಈ ಭಾಷೆಯ ವರ್ಣಗಳು ಹೀಗಿವೆ :

ಸ್ವರಗಳು : ಅ ಆ ಇ ಈ ಉ ಊ ಎ ಏ ಒ ಓ
ವ್ಯಂಜನಗಳು : ಕ್ ಗ್ ಙ್ ಚ್ ಜ್ ಞ್ ಟ್ ಡ್ ಣ್ ಪ್ ಬ್ ಮ್ ಯ್ ರ್ ಡ್ ಲ್ ವ್ ಚ್ ಜ್ ಸ್

ಈ ಭಾಷೆಯಲ್ಲಿ ಭೂತಕಾಲಿಕ ಪ್ರಯತ್ನಗಳು ಎ, ಒ. ಸೂಡ್ ಎನ್ (ನಾನು ನೋಡಿದೆ), ಸೂಡ್ ಎಮ್ (ನಾವು ನೋಡಿದೆವು), ಈಲ್ ಎನ್ (ಬಿದ್ದೆ), ಈಲ್ ಎಮ್ (ಬಿದ್ದೆವು), ಸೀನ್ ಒನ್ (ಕೊಟ್ಟೆ), ಸೀನ್ ಒಮ್ (ಕೊಟ್ಟೆವು). ಸಕರ್ಮಕ ಮತ್ತು ಪ್ರೇರಣಾರ್ಥಕ ಕ್ರಿಯಾಪದಗಳಲ್ಲಿ ಧಾತುವಿಗೆ ಭೂತಕಾಲದಲ್ಲಿ ತ್ ಪ್ರತ್ಯಯ ಸೇರುತ್ತದೆ. ಕಾತ್ ಒನ್ (ಕಾದಿದೆ), ಕಾತ್ ಒಮ್ (ಕಾದಿದೆವು). ವರ್ತಮಾನ ಮತ್ತು ಭವಿಷ್ಯತ್ತಿನಲ್ಲಿ ಧಾತುಗಳಿಗೆ ದ್ ಪ್ರತ್ಯಯ ಸೇರುತ್ತದೆ. ಸೀದ್ ಅನ್ (ಕೊಡುತ್ತೇನೆ) ಸೀದ್ ಅಮ್ (ಕೊಡುತ್ತೇವೆ). (ಬಿಎಚ್.ಕೆ.)

**ಒಸಡಿನ ರೋಗಗಳು :** ನಡುವಯಸ್ಸು ದಾಟಿದ ಮೇಲೆ ಹಲ್ಲು ಬೀಳಲು ಬಹುಮುಖ್ಯ ಕಾರಣ ಒಸಡಿನ ರೋಗಗಳು (ಪೆರಿಡಾಂಟಲ್ ಡಿಸೀಸಸ್). ಈ ರೋಗಗಳು ಮೊದಲು ಒಸಡಿನಲ್ಲಿ ಆರಂಭವಾಗಿ ಕ್ರಮೇಣ ಹಲ್ಲುಗಳಿಗೆ ಆಧಾರ ನೀಡುವ ಸುತ್ತಲಿನ ಅಂಗಭಾಗಗಳಿಗೆ ಅಂದರೆ ಹಲ್ಲು ಮತ್ತು ದವಡೆಯೊಳಗೆ ಸಂಬಂಧ ಕಲ್ಪಿಸುವ ದಂತಕೋಶದ ಎಳೆಗಳು, ಹಲ್ಲುಗಳನ್ನು ಹಿಡಿದಿಡುವ ಬಾಯಿ ಮೂಳೆಗಳು ಮತ್ತು ಹಲ್ಲಿನ ಬೇರನ್ನು ಮುಚ್ಚುವ ಸಿಮೆಂಟಿನಂಥ ವಸ್ತುಗಳಿಗೆ ಹರಡುತ್ತವೆ.

ಒಸಡಿನ ರೋಗಗಳು ಅತಿ ಪ್ರಾಚೀನವೆನ್ನಲು ನಿದರ್ಶನಗಳಿವೆ. ಇವುಗಳ ಬೆಳೆವಣಿಗೆ ಸಾಮಾನ್ಯವಾಗಿ ಎರಡು ಹಂತಗಳಲ್ಲಿ ಇದೆ. ಒಸಡಿನ ಉರಿತ ಮೊದಲು ಪ್ರಾರಂಭ ವಾಗಿ ಅದು ಉಬ್ಬಿ ಕೀವುಗಟ್ಟುತ್ತದೆ. ಅನಂತರ ಹಲ್ಲಿಗೆ ಆಧಾರ ನೀಡುವ ಅಂಗ ಭಾಗಗಳಿಗೆ ರೋಗ ಹರಡುತ್ತದೆ. ಒಸಡಿನ ಉರಿತಕ್ಕೆ ಬಾಯ ಸ್ಥಿತಿಗತಿಗಳೇ ಕಾರಣ. ಯಾಂತ್ರಿಕ ನ್ಯೂನತೆ, ಉಷ್ಣತೆಯ ಪ್ರಭಾವ, ರಾಸಾಯನಿಕ ಪದಾರ್ಥಗಳು, ಜೀವಾಣುಗಳು ಮತ್ತು ಶಿಲೀಂಧ್ರಗಳ ಕಾರ್ಯಚಟುವಟಿಕೆ ಮತ್ತು ಒಗ್ಗದಿರುವಿಕೆಯ ವಸ್ತುಗಳ ಸೇವನೆಯ ಫಲವಾಗಿ ರೋಗ ಬರಬಹುದು. ಜೊಲ್ಲಿನಲ್ಲಿನ ಖನಿಜಪದಾರ್ಥಗಳು ಮತ್ತು ಬಾಯಲ್ಲಿನ ಅಣುಜೀವಿಗಳು ಸೇರ್ಪಡೆಗೊಂಡು ದಪ್ಪನಾಗಿ, ಒರಟಾಗಿ ಪಕಳೆಯಂತೆ ಹಲ್ಲಿನ ಮೇಲೆ ಭದ್ರವಾಗಿ ನೆಲೆಯೂರಬಲ್ಲುವು. ಈ ಪಕಳೆ ಅಥವಾ ಹಲ್ಲುಗಾರೆ ಒಸಡಿನಿಂದ ಆವೃತವಾದ ಹಲ್ಲಿನ ಬೇರಿನವರೆಗೂ ಹರಡುತ್ತದೆ. ಇದು ಒಸಡಿನ ಉರಿತವನ್ನುಂಟುಮಾಡುತ್ತದೆ. ಒಮ್ಮೆ ಪ್ರಾರಂಭವಾಗಿ ಹಲ್ಲಿನ ಮೇಲೆ ನೆಲೆಯೂರಿದ ಹಲ್ಲುಗಾರೆಯನ್ನು ದಂತಮಂಜನದಿಂದ ತೆಗೆಯಲು ಸಾಧ್ಯವಿಲ್ಲ. ದಂತ ಶಸ್ತ್ರದ ಉಪಯೋಗದಿಂದ ಮಾತ್ರ ಅದನ್ನು ತೆಗೆಯಬಹುದು. ಸವಕಳಿಗೊಂಡ ಹಲ್ಲುಗಳು, ತುಂಬಿದ ಹಲ್ಲುಗಳು, ಕೊಳೆತ ಹಲ್ಲಿನೊಳಗಿನ ಪೊಳ್ಳಿನ ಚೂಪಾದ ಭಾಗಗಳು, ಬಾಯಿ ಮುಚ್ಚಿದಾಗ ಒಂದಕ್ಕೊಂದು ಸೇರಿಕೊಳ್ಳದ ಹಲ್ಲುಗಳು, ಜಗಿಯುವಾಗ ಹಲ್ಲು ಮತ್ತು ಒಸಡಿನ ಸಂದಿನಲ್ಲಿ ಸಿಕ್ಕಿಹಾಕಿಕೊಳ್ಳುವ ಆಹಾರ, ಮತ್ತು ಅಗಾಗ್ಗೆ ಹಲ್ಲಿನ ಮೇಲೆ ಬೀಳುವ ಪೆಟ್ಟಿನ ಪ್ರಭಾವ—ಇವೆಲ್ಲ ಒತ್ತಡಗಳಿಗೆ ಒಳಗಾಗುವ ಒಸಡಿನ ಮೃದುಭಾಗಗಳ ಉರಿತಕ್ಕೆ ಕಾರಣವಾಗಿ ಕ್ರಮೇಣ ಒಸಡಿನ ರೋಗವನ್ನುಂಟುಮಾಡುತ್ತವೆ. ನ್ಯೂನ ಆಹಾರ ಸೇವನೆ, ತನ್ಮೂಲಕ ಉಂಟಾದ ರೋಗನಿರೋಧ ಶಕ್ತಿಯ ಕುಂದುವಿಕೆಗಳು ರೋಗದ ಬೆಳೆವಣಿಗೆಗೆ ಚಾಲನೆಯನ್ನುಂಟುಮಾಡುತ್ತವೆ. ಈ ರೋಗಗಳಿಂದ ನರಳುವವರು ಸಹಜವಾಗಿ ಮೆತ್ತನೆಯ ಆಹಾರವನ್ನು ಆಯ್ದುಕೊಳ್ಳುತ್ತಾರೆ. ಅದು ಸವಕಳಿಗೆ ಮತ್ತಷ್ಟು ಉತ್ತೇಜನ ಕೊಡುತ್ತದೆ. ಬಾಯಿಯಿಂದ ಉಸಿರಾಟ ಮಾಡುವವರಲ್ಲಿ ಒಸಡು ಒಣಗುತ್ತದೆ. ಗರ್ಭಿಣಿಯರಲ್ಲಿ, ಆಹಾರದಲ್ಲಿನ ಸಿ ಜೀವಾತುವಿನ ಕೊರತೆಯಿಂದಾಗಿ, ರಕ್ತಗಂತಿಯಾದಾಗ ಮತ್ತು ಡೈಲಾಂಟಿನ್ ಔಷಧಿಯ ಸೇವನೆಯ ಫಲವಾಗಿ ಒಸಡಿನ ಉರಿತ ತೋರಿಬರಬಹುದಾಗಿದೆ.

ಒಸಡುಗಳು ಕೆಂಪಗೆ ಸ್ಪಂಜಿನಂತೆ ಉಬ್ಬಿ ಹಲ್ಲುಗಳನ್ನು ಮುಚ್ಚುವಷ್ಟು ಜೋರಾಗಿ ಬೆಳೆಯುತ್ತವೆ. ಹಲ್ಲುಜ್ಜಿದಾಗ ರಕ್ತ ಸುರಿಯುತ್ತದಲ್ಲದೆ, ಅನೇಕ ಬಾರಿ ಅವನ್ನು ಮುಟ್ಟಿದರೇ ರಕ್ತ ಒಸರುತ್ತದೆ. ಆದರೂ ಪ್ರಾರಂಭದಲ್ಲಿ ಅದು ಅಷ್ಟೊಂದು ತೊಂದರೆ ಕೊಡದು. ಆದ್ದರಿಂದ ಅನೇಕರು ಅದನ್ನು ಉಪೇಕ್ಷಿಸಿಬಿಡುತ್ತಾರೆ. ಆಗಾಗ್ಗೆ ಒಸಡು ದಪ್ಪನಾಗಿ, ರೋಗಾಣುಜೀವಿಗಳ ಬೆಳೆವಣಿಗೆಯ ಫಲವಾಗಿ ನೋವು ತೋರಿಬರಬಹುದು. ಇನ್ನು ಕೆಲವು ವೇಳೆ ಅಷ್ಟೊಂದು ತೀವ್ರತರವಲ್ಲದ ನೋವು ಆಹಾರವನ್ನು ಜಗಿಯುವಾಗ ಮತ್ತು ಅನಂತರ ತೋರಿಬರಬಹುದು. ರೋಗ ಒಳಗೇ ಬೆಳೆದು ಮುಂದೆ ಚಿಕಿತ್ಸೆಗೇ ಆತಂಕವನ್ನುಂಟುಮಾಡಬಹುದು. ದಿನೇ ದಿನೇ ಒಸಡಿನ ಉರಿತ ಹಲ್ಲಿನ ಬೇರಿನತ್ತ ಸಾಗಿಹೋಗುತ್ತದೆ. ಹಲ್ಲುಗಳು ಒಸಡಿನಿಂದ ಬೇರ್ಪಡೆಗೊಳ್ಳುತ್ತ ಅಲ್ಲಿ ಚಿಕ್ಕ ಚಿಕ್ಕ ಕೋಶಗಳು ರೂಪುಗೊಳ್ಳುತ್ತವೆ. ಆಹಾರದ ಚೂರುಗಳು, ಅಣುಜೀವಿಗಳು, ರೋಗಾಣುಜೀವಿಗಳು ಮತ್ತು ಕೆಲವು ಬಾರಿ ಕೀವು ಆ ಪ್ರದೇಶವನ್ನು ತುಂಬಿಕೊಳ್ಳುತ್ತವೆ. ರೋಗ ಬಲಿತಂತೆ, ದಂತಕೋಶದ ಎಳೆಗಳು ಸವಕಳಿಗೊಳ್ಳುವುದಲ್ಲದೆ, ಹಲ್ಲುಗಳಿಗೆ ಆಧಾರವನ್ನೊದಗಿಸಿದ ಮೂಳೆಗಳ ಅಸುವಳಿಕೆಯುಂಟಾಗುತ್ತದೆ. ಹಲ್ಲುಬೇರಿನ ಕುಳಿಗಳು ಸವೆದು ಹೋಗುತ್ತವೆ ; ಸಿಮೆಂಟು ಬೇರ್ಪಡೆಗೊಂಡು ಆಧಾರ ಸಡಿಲಗೊಳ್ಳುತ್ತದೆ. ರೋಗಿಷ್ಟ ಹಲ್ಲುಗಳು ಅಲುಗಾಡುತ್ತ ಕ್ರಮೇಣ ಬಿದ್ದುಹೋಗುತ್ತವೆ. ಈ ರೋಗ ಒಂದೇ ಹಲ್ಲಿನ ಇಲ್ಲವೇ ಅನೇಕ ಅಥವಾ ಎಲ್ಲ ಹಲ್ಲುಗಳ ಒಸಡಿನ ಪ್ರದೇಶವನ್ನು ಒಳಗೊಳ್ಳಬಹುದು.

ಚಿಕ್ಕ ವಯಸ್ಸಿನಲ್ಲಿ ಹಲ್ಲಿನ ಬಗ್ಗೆ ಯಾವ ಕಾಳಜಿಯನ್ನೂ ವಹಿಸದೆ, ಉಪೇಕ್ಷೆ ಮಾಡುವವರಲ್ಲಿ ಈ ರೋಗಗಳು ಹೆಚ್ಚಾಗಿ ತೋರಿಬರುತ್ತವೆ. ಒಸಡಿನ ಉರಿತಕ್ಕೆ ಚಿಕಿತ್ಸೆ ನೀಡದಿದ್ದರೆ ಅದು ಬೆಳೆದು ರೋಗವಾಗಿ ಪರಿಣಮಿಸುವುದು. ಹಲ್ಲುಗಳನ್ನು ಉಜ್ಜಿ ಚೊಕ್ಕಟವಾಗಿಟ್ಟುಕೊಳ್ಳುವಲ್ಲಿ ಶ್ರದ್ಧೆ ವಹಿಸಬೇಕು. ಆಹಾರಾಂಶಗಳು ಹಲ್ಲಿನ ಸಂದುಗೊಂದುಗಳಲ್ಲಿ ಸೇರ್ಪಡೆಗೊಳ್ಳದಂತೆ ಊಟ ಆದ ಮೇಲೆ ನೀರಿನಿಂದ ಬಾಯನ್ನು ಚೆನ್ನಾಗಿ ಮುಕ್ಕಳಿಸಿ ತೊಳೆಯಬೇಕು, ಇಲ್ಲವೆ ಹಲ್ಲುಜ್ಜಬೇಕು. ಹಲ್ಲುಗಾರೆ ಸೇರ್ಪಡೆಗೊಳ್ಳದಂತೆ ಅದನ್ನು ತೆಗೆಸಿಕೊಳ್ಳಬೇಕು. ಸಮತೋಲ ಆಹಾರ ಮತ್ತು ಬಿರುಸಾದ ಆಹಾರ ಸೇವನೆಯಿಂದ ಒಸಡುಗಳ ಭದ್ರತೆ ಹೆಚ್ಚುತ್ತದೆ. ಒಸಡಿನಿಂದ ರಕ್ತ ಸೋರಿಕೆ, ಬಾಯ ದುರ್ವಾಸನೆ, ಒಸಡಿನಿಂದ ಹಲ್ಲುಗಳ ಬೇರ್ಪಡಿಕೆ ಮತ್ತು ಅವುಗಳ ಅಲುಗಾಟ ತೋರಿಬಂದಾಗ ದಂತವೈದ್ಯರಿಂದ ಯೋಗ್ಯ ಚಿಕಿತ್ಸೆ ಪಡೆಯಬೇಕು. (ಪಿ.ಎಸ್.ಎಸ್.)

**ಒಹಾಯೊ :** ಅಮೆರಿಕ ಸಂಯುಕ್ತಸಂಸ್ಥಾನದ ಒಂದು ರಾಜ್ಯ. ಉ.ಅ. 38° 27′ ನಿಂದ 41° 57′ ವರೆಗೂ ಪ.ರೇ. 80° 34′ ನಿಂದ 84° 49′ ವರೆಗೂ ಇರುವ ಇದರ ಉತ್ತರದಲ್ಲಿ ಮಿಷಿಗನ್ ಮತ್ತು ಈರಿ ಸರೋವರವೂ ಪೂರ್ವದಲ್ಲಿ ಪೆನ್ಸಿಲ್




ವೇನಿಯ ಮತ್ತು ಒಹಾಯೊ ನದಿಯೂ ಪಶ್ಚಿಮದಲ್ಲಿ ಇಂಡಿಯಾನವೂ ಇವೆ. ಇದರ ದಕ್ಷಿಣದ ಅಂಚಿನ ಉದ್ದಕ್ಕೂ ಒಹಾಯೊ ನದಿಯೇ ಗಡಿರೇಖೆಯಂತೆ ಹರಿಯುತ್ತದೆ. ಈ ನದಿಯಿಂದಾಚೆಗೆ ಹಬ್ಬಿರುವ ರಾಜ್ಯಗಳು ಪಶ್ಚಿಮ ವರ್ಜಿನಿಯ

ಮತ್ತು ಕೆಂಟಕಿ. ಇದು ಹೆಚ್ಚು ಕಡಿಮೆ ಚೌಕಾಕಾರ. ವಿಸ್ತೀರ್ಣದಲ್ಲಿ ಇದು ಸಂಯುಕ್ತಸಂಸ್ಥಾನದಲ್ಲಿ 35ನೆಯ ರಾಜ್ಯ. (41,228 ಚ.ಮೈ.) ಆದರೆ ಜನಸಂಖ್ಯೆಯಲ್ಲಿ ಇದಕ್ಕೆ ಐದನೆಯ ಸ್ಥಾನ (97 06,397 [1960]) ರಾಜಧಾನಿ ಕೊಲಂಬಸ್.

(ಸಿ.ಎಂ.)

**ಮೇಲ್ಮೈಲಕ್ಷಣ :** ಭೌಗೋಳಿಕವಾಗಿ ಒಹಾಯೊ ರಾಜ್ಯವನ್ನು ಮೂರು ಮುಖ್ಯ ಪ್ರದೇಶಗಳಾಗಿ ವಿಂಗಡಿಸಬಹುದು : 1 ಸರೋವರ ಸಮೀಪದ ಬಯಲು; 2 ಮಧ್ಯದ ತಗ್ಗು ನೆಲ ; ಮತ್ತು 3 ಅಲೆಘನಿ ಪ್ರಸ್ಥಭೂಮಿ. ಈ ಮೂರು ಪ್ರದೇಶಗಳೂ ಕೀವ್‌ಲೆಂಡ್ ಬಳಿಯಲ್ಲಿ ಕೂಡುತ್ತವೆ. ಇಡೀ ರಾಜ್ಯದ ಸರಾಸರಿ ಎತ್ತರ ಸಮುದ್ರಮಟ್ಟದಿಂದ 850′. (ಅತ್ಯಂತ ಎತ್ತರದ ನೆಲ 1550′ ; ಅತಿ ತಗ್ಗಿನ ಪ್ರದೇಶ 433′) ಒಹಾಯೊವಿನ ನೀರ ನೆತ್ತಿ (ವಾಟರ್‌ಷೆಡ್) ಈ ರಾಜ್ಯದ ಪಶ್ಚಿಮದ ಅಂಚಿನ ನಡುವಿನಿಂದ ಆರಂಭವಾಗಿ ಈಶಾನ್ಯದ ಮೂಲೆಯ ವರೆಗೆ ಹೆಂಗಸಿನ ಬೈತಲೆಯಂತೆ ಸಾಗಿದೆ. ನೆತ್ತಿಯ ಉತ್ತರಪಾರ್ಶ್ವದ ನದಿಗಳು ಹರಿಯುವುದು ಉತ್ತರಾಭಿಮುಖವಾಗಿ. ಅವು ಸಣ್ಣ ; ಅಂಕುಡೊಂಕು. ದಕ್ಷಿಣಕ್ಕೆ ಹರಿಯುವ ನದಿಗಳು ಹೆಚ್ಚು ಉದ್ದ. ರಾಜ್ಯದ ಸೇಕಡಾ 70ರಷ್ಟು ನೆಲದ ನೀರನ್ನು ಈ ನದಿಗಳು ಸಾಗಿಸುತ್ತವೆ. ಒಹಾಯೊ ನದಿ ಈ ರಾಜ್ಯಕ್ಕೆ ಸೇರಿದ್ದಲ್ಲ. ಒಹಾಯೊ ಮತ್ತು ಇತರ ನದಿಗಳು ಕೆಲವೇಳೆ ದಡಮೀರಿ ಹರಿದು ಅನಾಹುತ ಮಾಡುವುದುಂಟು. 1913ರಲ್ಲಿ ಸಂಭವಿಸಿದ ಪ್ರವಾಹ ಭೀಕರವಾದದ್ದು. ಪ್ರವಾಹಗಳನ್ನು ನಿಯಂತ್ರಿಸುವ ಉದ್ದೇಶದಿಂದ ನದಿಗಳ ಮೇಲ್ಭಾಗಗಳಲ್ಲಿ ಕಟ್ಟೆಗಳನ್ನು ಕಟ್ಟಲು 1914ರಲ್ಲಿ ಸೂಕ್ತ ಕಾಯಿದೆ ಮಾಡಲಾಯಿತು. ಸಂಯುಕ್ತಸಂಸ್ಥಾನದಲ್ಲಿ ಈ ಬಗೆಯ ಕ್ರಮ ಇದೇ ಪ್ರಥಮ. ಒಹಾಯೊ ನದಿಗೆ ಅಡ್ಡಲಾಗಿ ಸಂಯುಕ್ತ ಸಂಸ್ಥಾನ ಸರ್ಕಾರ ನಿರ್ಮಿಸಿರುವ 19 ಕಟ್ಟೆಗಳಿಂದಾಗಿ ಈ ನದಿಯ ಹಾವಳಿ ಬಹಳ ಮಟ್ಟಿಗೆ ಕಡಿಮೆಯಾಗಿದೆ.

**ವಾಯುಗುಣ :** ಒಹಾಯೊವಿನ ಸರಾಸರಿ ವಾರ್ಷಿಕ ಉಷ್ಣತೆ 51.2°ಫ್ಯಾ. (ಉತ್ತರದಲ್ಲಿ 49° ಫ್ಯಾ. ಮತ್ತು ದಕ್ಷಿಣದಲ್ಲಿ 54° ಫ್ಯಾ.) ಬೇಸಗೆಯ ಸರಾಸರಿ ಉಷ್ಣತೆ 71.6° ಫ್ಯಾ. ; ಚಳಿಗಾಲದಲ್ಲಿ 29.8° ಫ್ಯಾ. ವರ್ಷವೆಲ್ಲ ಮಳೆಯುಂಟು. ಆದರೆ ಏಪ್ರಿಲ್ ಆದಿಯಿಂದ ಸೆಪ್ಟೆಂಬರ್ ಅಂತ್ಯದ ವರೆಗಿನ ಆರು ತಿಂಗಳುಗಳಲ್ಲಿ (ಸರಾಸರಿ 21″) ಉಳಿದ ಆರು ತಿಂಗಳುಗಳಲ್ಲಿ ಆಗುವುದಕ್ಕಿಂತ ಸ್ವಲ್ಪ (4″) ಹೆಚ್ಚು. ಕೊರೆಯುವ ಮಂಜು ಬೀಳದ ದಿವಸಗಳ ಸಂಖ್ಯೆಯು ಸರಾಸರಿ : ಉತ್ತರದ ತುದಿಯಲ್ಲಿ 140, ಆದರೆ ದಕ್ಷಿಣದ ಅಂಚಿನಲ್ಲಿ 180.

**ಸ್ವಾಭಾವಿಕ ಸಸ್ಯ, ಕೃಷಿ, ಖನಿಜ, ಕೈಗಾರಿಕೆ :** ಒಹಾಯೊವಿನ ಪೂರ್ವದಲ್ಲಿ ಚೆಸ್‌ನಟ್, ಚೆಸ್‌ನಟ್ ಓಕ್ ಮತ್ತು ಎಲ್ಲೊ ಪಾಪ್ಲರ್‌ಗಳಿಂದ ಕೂಡಿದ ಕಾಡುಗಳೂ ಪಶ್ಚಿಮಾರ್ಧದಲ್ಲಿ ಓಕ್ ಮತ್ತು ಹಿಕರಿಗಳ ಕಾಡುಗಳೂ ಇದ್ದುವು. ಬೆಟ್ಟಗುಡ್ಡಗಳಿಲ್ಲದ ಫಲವತ್ತಾದ ನೆಲದ ಕಾಡು ಕಡಿದು ಬೇಸಾಯ ಮಾಡಲಾಗುತ್ತಿದೆ. ಪೂರ್ವದ ಬೆಟ್ಟಗಾಡುಗಳ ಬೆಲೆಬಾಳುವ ಮರಗಳನ್ನು ಕಡಿದಿರುವುದರಿಂದ ಕಡಿಮೆ ಫಲವತ್ತಿನ ಈ ನೆಲಗಳು ಹಾಗೆಯೇ ಉಳಿದಿವೆ. ಇವುಗಳಲ್ಲಿ ಸ್ವಲ್ಪ ಭಾಗ ಮೇವು ನೆಲ. ಇಲ್ಲಿಯ ಮುಖ್ಯ ಬೆಳೆಗಳು. ಮುಸುಕಿನ ಜೋಳ ಮತ್ತು ಗೋದಿ, ಒಹಾಯೊವಿನ ಕೆಲವು ಭಾಗಗಳು ಆಲೂಗೆಡ್ಡೆಯನ್ನೂ ಇನ್ನು ಕೆಲವು ಸಕ್ಕರೆ ಬೀಟನ್ನೂ ಮತ್ತೆ ಕೆಲವು ಹಣ್ಣುಗಳನ್ನೂ ವಿಶೇಷವಾಗಿ ಬೆಳೆಯುತ್ತವೆ. ಹೈನು ಇನ್ನೊಂದು ಮುಖ್ಯ ಉತ್ಪನ್ನ. ಭೂಸವೆತ ಇಲ್ಲಿಯ ಒಂದು ಸಮಸ್ಯೆ.

ರಾಜ್ಯದಲ್ಲಿ ಖನಿಜಸಂಪತ್ತು ಹೇರಳವಾಗಿದೆ. ಇದರಲ್ಲಿ ಕಲ್ಲಿದ್ದಲು, ಪೆಟ್ರೋಲಿಯಂ ಮತ್ತು ನಿಸರ್ಗ ಅನಿಲ ಮುಖ್ಯವಾದವು. ಸುಣ್ಣಕಲ್ಲು ಮತ್ತು ಉಪ್ಪೂ ದೊರಕುತ್ತವೆ.

ಒಹಾಯೊ ಅಮೆರಿಕದ ಮುಖ್ಯ ಕೈಗಾರಿಕಾ ರಾಜ್ಯಗಳಲ್ಲೊಂದು. ಇದಕ್ಕೆ ರಾಜ್ಯದಲ್ಲಿ ದೊರಕುವ ಕಲ್ಲಿದ್ದಲು, ಎಣ್ಣೆ ಮತ್ತು ಅನಿಲ ಮುಖ್ಯ ಕಾರಣ. ಸುಪೀರಿಯರ್ ಸರೋವರಪ್ರದೇಶದಿಂದ ಕಬ್ಬಿಣದ ಅದುರನ್ನು ಇಲ್ಲಿಗೆ ಸುಲಭವಾಗಿ ತರಿಸಿಕೊಳ್ಳಬಹುದಾಗಿದೆ. ಕಲ್ಲಿದ್ದಲ ಕಿಟ್ಟ, ಬೀಡುಕಬ್ಬಿಣ ಮತ್ತು ಉಕ್ಕು ವಸ್ತುಗಳು ಹೆಚ್ಚಾಗಿ ತಯಾರಾಗುತ್ತವೆ. ನಿಸರ್ಗ ಅನಿಲ ಧಾರಾಳವಾಗಿ ಸಿಗುವುದರಿಂದ ಹಲವಾರು ಕಡೆಗಳಲ್ಲಿ (ಉದಾ : ಜ಼್ಯಾನ್‌ಸ್‌ವಿಲ್) ಗಾಜು ಮತ್ತು ಮೃತ್ಪಾತ್ರ ಕೈಗಾರಿಕೆಗಳು ಬೆಳೆದಿವೆ. ತೈಲ ಪರಿಷ್ಕರಣ ಇನ್ನೊಂದು ಮುಖ್ಯ ಕೈಗಾರಿಕೆ.

**ಸಂಚಾರಮಾರ್ಗ, ಜನಸಂಖ್ಯೆ, ಶಿಕ್ಷಣ :** ರಾಜ್ಯದ ಸಂಚಾರ ಸೌಲಭ್ಯ ಚೆನ್ನಾಗಿದೆ. ನಿಸರ್ಗದತ್ತವಾದ ಜಲಮಾರ್ಗಗಳೊಂದಿಗೆ (ಉದಾ : ಒಹಾಯೊ ನದಿ : 430 ಮೈ., ಸರೋವರ 230 ಮೈ.) ರಸ್ತೆ ಮತ್ತು ರೈಲುಮಾರ್ಗಗಳನ್ನು ಸಮರ್ಪಕವಾಗಿ ಹೊಂದಿಸಲಾಗಿದೆ. ಅಮೆರಿಕ ಸಂಯುಕ್ತಸಂಸ್ಥಾನದ ಜನಭರಿತ ಈಶಾನ್ಯಭಾಗಕ್ಕೆ ಈ ರಾಜ್ಯ ಹತ್ತಿರದಲ್ಲಿರುವುದು ಇನ್ನೊಂದು ಅನುಕೂಲ. ಈ ರಾಜ್ಯದ ವ್ಯಾಪಾರ ವರ್ಧಿಸಲು ಇವೆಲ್ಲ ಕಾರಣಗಳು.

ರಾಜ್ಯದಲ್ಲಿಯ ಜನರ ಸಂಖ್ಯೆಯಲ್ಲಿ 70% ನಗರವಾಸಿಗಳು. ನೀಗ್ರೋಗಳ ಸಂಖ್ಯೆ ಕ್ರಮೇಣ ಹೆಚ್ಚುತ್ತಿದೆ : 1920ರಿಂದ 1960ರವರೆಗಿನ ಅವಧಿಯಲ್ಲಿ ನಾಲ್ಮಡಿಯಾಗಿದೆ.

ರಾಜ್ಯದಲ್ಲಿ ಕಾಲೇಜುಗಳೂ ವಿಶ್ವವಿದ್ಯಾನಿಲಯಗಳೊ ಹೇರಳವಾಗಿವೆ. ವಿಶ್ವವಿದ್ಯಾನಿಲಯಗಳೇ ಐವತ್ತಕ್ಕೂ ಹೆಚ್ಚಾಗಿವೆ.

ಒಹಾಯೊ ರಾಜ್ಯ ವಿಶ್ವವಿದ್ಯಾನಿಲಯ (ಕೊಲಂಬಸ್) ಇಲ್ಲಿಯ ಮುಖ್ಯ ವಿಶ್ವವಿದ್ಯಾನಿಲಯಗಳಲ್ಲೊಂದು. ಒಹಾಯೊ ವಿಶ್ವವಿದ್ಯಾನಿಲಯ (ಅಥೆನ್ಸ್), ಮಿಯಾಮಿ ವಿಶ್ವವಿದ್ಯಾನಿಲಯ (ಆಕ್ಸ್‌ಫರ್ಡ್), ಕೆಂಟ್ ರಾಜ್ಯ ವಿಶ್ವವಿದ್ಯಾನಿಲಯ, ಬೌಲಿಂಗ್ ಗ್ರೀನ್ ಸ್ಟೇಟ್ ವಿಶ್ವವಿದ್ಯಾನಿಲಯ—ಇವು ಇತರ ಕೆಲವು ಪ್ರಸಿದ್ಧ ಹೆಸರುಗಳು.

ಒಹಾಯೊ ರಾಜ್ಯದ ಮುಖ್ಯ ನಗರಗಳು ಇವು (1960ರಲ್ಲಿದ್ದಂತೆ ಇವುಗಳ ಜನಸಂಖ್ಯೆಗಳನ್ನು ಆವರಣಗಳೊಳಗೆ ಕೊಟ್ಟಿದೆ) : ಕ್ಲೀವ್‌ಲೆಂಡ್ (8,76,050), ಸಿನ್‌ಸಿನ್ನಾಟಿ (5,02,550), ಕೊಲಂಬಸ್ (4,71,316), ಟೊಲೀಡೋ (3,18,003), ಆಕ್ರನ್ (2,90,351), ಡೇಟನ್ (2,62,332), ಯಂಗ್‌ಸ್ಟೌನ್ (1,66,689), ಕ್ಯಾಂಟನ್ (1,13,631), ಸ್ಪ್ರಿಂಗ್‌ಫೀಲ್ಡ್ (82,723), ಲೇಕ್‌ವುಡ್ (66,154), ಕ್ಲೀವ್‌ಲೆಂಡ್ ಹೈಟ್ಸ್ (61,813), ಹ್ಯಾಮಿಲ್ಟನ್ (72,354), ಲೊರೇನ್ (68,932) ಮತ್ತು ಲೈಮ (51,037). ರಾಜಧಾನಿ ಕೊಲಂಬಸ್.

**ಚರಿತ್ರೆ :** ಈಗ ಒಹಾಯೊ ಎನಿಸಿಕೊಂಡಿರುವ ಪ್ರದೇಶದಲ್ಲಿ ಇತಿಹಾಸಪೂರ್ವ ಕಾಲದಲ್ಲೇ ಜನ ಇದ್ದರೆಂಬುದರ ಕುರುಹುಗಳು ಸೈಯೋಟೋ ಮತ್ತು ಮ್ಯಯಾಮಿ ಕಣಿವೆಗಳಲ್ಲಿರುವ ಅನೇಕ ಮಣ್ಣುಗುಪ್ಪೆಗಳಡಿಯಲ್ಲಿ ದೊರಕಿವೆ. ಈ ಗುಪ್ಪೆಗಳಲ್ಲಿ ಸಮಾಧಿಗಳೇ ಹೆಚ್ಚು. ಇಲ್ಲಿ ಮೂರು ಸಂಸ್ಕೃತಿಗಳನ್ನು ಗುರುತಿಸಬಹುದಾಗಿದೆ (ಹೋಪ್‌ವೆಲ್, ಫೋರ್ಟ್ ಏನ್ಷೆಂಟ್ ಮತ್ತು ಅಡೀನ). ಈ ಜನಕ್ಕೆ ಏನಾಯಿತೆಂಬುದು ಗೊತ್ತಿಲ್ಲ. ಬಹುಶಃ ಇವರು ನಾಶವಾಗಿರಬೇಕು ; ಅಥವಾ ಹೆಚ್ಚು ಬಲಿಷ್ಠವೂ ಅಲೆಮಾರಿಯೂ ಆದ ಇಂಡಿಯನ್ ಪಂಗಡಗಳಲ್ಲಿ ಲೀನವಾಗಿರಬೇಕು. ಅಂತೂ ಬಿಳಿಯರನ್ನೆದುರಿಸಿದ ಇಂಡಿಯನರು ಈ ಪ್ರದೇಶಕ್ಕೆ ಬರಲು ಬಹಳ ಹಿಂದೆಯೇ ಹಿಂದಿನ ಜನ ಕಣ್ಮರೆಯಾಗಿದ್ದರು.

ಹದಿನೆಂಟನೆಯ ಶತಮಾನದ ಮಧ್ಯಭಾಗದಲ್ಲಿ ಫ್ರೆಂಚರೂ ಇಂಗ್ಲಿಷರೂ ಒಹಾಯೊವಿನ ಒಡೆತನಕ್ಕಾಗಿ ಬಡಿದಾಡಲಾರಂಭಿಸಿದಾಗ ಇಲ್ಲಿ ಹಲವಾರು ಇಂಡಿಯನ್ ಪಂಗಡಗಳಿದ್ದುವು. ಅವುಗಳ ಪೈಕಿ ಕೆಲವು ಈಚೆಗೆ ಬಂದಿದ್ದವು. ಅಂತೂ ಇಲ್ಲಿ ಇಂಡಿಯನರ ಒಟ್ಟು ಸಂಖ್ಯೆ ಬಹುಶಃ 15,000ಕ್ಕೂ ಹೆಚ್ಚಾಗಿರಲಿಲ್ಲ.

ಹದಿನೆಂಟನೆಯ ಶತಮಾನದಲ್ಲಿ ಇಲ್ಲಿಗೆ ಬಂದ ಫ್ರೆಂಚರೂ ಬ್ರಿಟಿಷರೂ ಒಂದು ಕೈಯಿಂದ ಇಂಡಿಯನರೊಂದಿಗೆ ಹೋರಾಡುತ್ತ ಇನ್ನೊಂದು ಕೈಯಿಂದ ತಂತಮ್ಮಲ್ಲಿ ಯುದ್ಧ ಮಾಡುತ್ತಿದ್ದರು. ಆ ಶತಮಾನದ ಅಂತ್ಯದ ವೇಳೆಗೆ ಹೊಸದಾಗಿ ರಚಿತವಾದ ಸಂಯುಕ್ತಸಂಸ್ಥಾನದ ಜನಸಂಖ್ಯೆ ಅಲೆಘನಿಯನ್ನು ದಾಟಿ ಹರಿಯಲಾರಂಭಿಸಿತು. ಒಹಾಯೊ ನದಿಯ ವಾಯವ್ಯಕ್ಕಿದ್ದ ಪ್ರದೇಶ ಎಲ್ಲ ರಾಜ್ಯಗಳಿಗೂ ಸೇರಿತ್ತು. ಅಮೆರಿಕದ ಕಾಂಗ್ರೆಸ್ 1785ರಲ್ಲಿ ಈ ಪ್ರದೇಶದ ಸಮೀಕ್ಷೆ ನಡೆಸಿ, ಕೆಲವು ಭಾಗಗಳನ್ನು ಕಂಪನಿಗಳಿಗೆ ಮಾರಿತು. ಜನ ಇಲ್ಲಿಗೆ ಹೆಚ್ಚಾಗಿ ವಲಸೆ ಬಂದರು. 1795ರಲ್ಲಿ ಇಂಡಿಯನರೊಂದಿಗೆ ಮಾಡಿಕೊಂಡ ಒಂದು ಕೌಲಿನಿಂದಾಗಿ ಶಾಂತಿ ಭದ್ರವಾಯಿತು. ಹೊಸ ನಗರಗಳು ಎದ್ದುವು.

1787ರಲ್ಲಿ ಅಮೆರಿಕದ ಕಾಂಗ್ರೆಸ್ ಈ ಪ್ರದೇಶದ ಆಡಳಿತಕ್ಕೆ ಸೂಕ್ತ ಆದೇಶವೊಂದನ್ನು ತಂದಿತು. ಕಾಂಗ್ರೆಸಿನ ಅಧ್ಯಕ್ಷ, ಜನರಲ್ ಆರ್ಥರ್ ಸೇಂಟ್ ಕ್ಲೇರನನ್ನು ಗವರ್ನರಾಗಿ ನಿಯೋಜಿಸಲಾಯಿತು. ಮೇರಿಯೆಟ್ಟವೇ ಆಗಿನ ಸರ್ಕಾರದ ಪೀಠ. ಮೂರು ಹಂತಗಳಲ್ಲಿ ಈ ಪ್ರದೇಶ ರಾಜ್ಯತ್ವ ಪಡೆಯಬೇಕೆಂಬುದು ಕಾಂಗ್ರೆಸ್ ಆದೇಶದ ಉದ್ದೇಶವಾಗಿತ್ತು. 1802ರ ನವೆಂಬರ್ 29ರಂದು ಸ್ವೀಕೃತವಾದ ಸಂವಿಧಾನಕ್ಕೆ ಅನುಗುಣವಾಗಿ ಮರುವರ್ಷದ ಮಾರ್ಚ್ 1ರಂದು ಒಹಾಯೊವೂ ಸಂಯುಕ್ತ ಸಂಸ್ಥಾನದ ಒಂದು ರಾಜ್ಯವಾಗಿ ಪರಿವರ್ತನೆ ಹೊಂದಿತು.

*

## ಒಹಾಯೊ ನದಿ:

**ಒಹಾಯೊ ನದಿ:** ಅಮೆರಿಕ ಸಂಯುಕ್ತಸಂಸ್ಥಾನದ ಒಂದು ನದಿ. ಒಹಾಯೊ ರಾಜ್ಯದ ದಕ್ಷಿಣ ಪೂರ್ವಗಳಲ್ಲಿ ಗಡಿರೇಖೆಯಂತೆ ಹರಿಯುತ್ತದೆ. ಮಿಸಿಸಿಪಿಯ ಏಕೈಕ ಮುಖ್ಯ ಉಪನದಿ. ಅಲೆಘನಿ ಮತ್ತು ಮನೊಗೆಹಲ ನದಿಗಳು ಪಿಟ್ಸ್‌ಬರ್ಗ್‌ನಲ್ಲಿ ಕೂಡಿ ಸಂಭವಿಸಿರುವ ಈ ನದಿಗೆ ಸುಮಾರು 2,14,000 ಚ. ಮೈ. ಜಲಾನಯನ ಪ್ರದೇಶವಿದೆ. ಉತ್ತರಾಭಿಮುಖವಾಗಿ ಹರಿಯುತ್ತಿದ್ದ ಅಪಲೇಷಿಯನ್ ತೊರೆಗಳಿಗೆ ಮಂಜುಗೆಡ್ಡೆಯಿಂದ ತಡೆಯುಂಟಾಗಿ, ತುಂಬಿದ ನೀರು ಒಂದು ಕಣಿವೆಯಿಂದ ಇನ್ನೊಂದು ಕಣಿವೆಗೆ ಬಿರುಕುಗಳ ಮೂಲಕ ಹರಿದದ್ದರಿಂದ ಸಂಭವಿಸಿದ ಕಣಿವೆಯಲ್ಲಿ ಈ ನದಿ ಹರಿಯುತ್ತದೆ. ತತ್ಫಲವಾಗಿ ಕೆಲವು ಕಡೆಗಳಲ್ಲಿ ಕಮರಿಗಳೇ ನದಿಯ ಪಾತ್ರ. ಒಮ್ಮೊಮ್ಮೆ ಇದು ಥಟ್ಟನೆ ತನ್ನ ದಿಕ್ಕನ್ನು ಬದಲಿಸುತ್ತದೆ. ಎತ್ತರದ ನೆಲದಿಂದ ಅತಿ ಹಳ್ಳದ ಪ್ರದೇಶಕ್ಕೆ ಅಂಬಿನಂತೆ ಜಾರುತ್ತದೆ. ಹೀಗಾಗಿ ಜಲಪಾತಗಳು ಸಂಭವಿಸಿವೆ.

ಒಹಾಯೊ ಒಳ್ಳೆಯ ಜಲಮಾರ್ಗ. ಪ್ರವಾಹಕಾಲದಲ್ಲಿ ಜಲಪಾತದ ಮೇಲೂ ಹಡಗುಗಳು ಸಾಗುತ್ತವೆ. ಇಂಥೆಡೆಗಳಲ್ಲಿ ಕಾಲುವೆ ತೋಡಿರುವುದರಿಂದ 1828ರಿಂದ ಜಲಪಾತಗಳ ಅಡಚಣೆಯೂ ಇಲ್ಲ. ಕೆಳ ಮಿಸಿಸಿಪಿಗೆ ಬರುವ ನೀರಿನ ಮುಕ್ಕಾಲು ಭಾಗ ಒಹಾಯೊವಿನಿಂದ ಲಭಿಸುತ್ತದೆ. ಒಹಾಯೊ ಕಣಿವೆಯಲ್ಲಿ ವಾರ್ಷಿಕ ಮಳೆಯ ಸರಾಸರಿ 44·7". ನದೀಪ್ರವಾಹ ಸುಮಾರು 2 ಅಡಿಗಳಿಂದ 40–50 ಅಡಿಗಳ ವರೆಗೆ ವ್ಯತ್ಯಾಸವಾಗುವುದುಂಟು. ಚಳಿಗಾಲದ ಕೊನೆಯಲ್ಲಿ ಅಥವಾ ವಸಂತದ ಆದಿಯಲ್ಲಿ ಪ್ರವಾಹದ ಹೆಚ್ಚಳ ಕಂಡುಬರುತ್ತದೆ. ಬೇಸಗೆಯಲ್ಲಿ ನೀರು ಆವಿಯಾಗುವುದರಿಂದ ಆ ಋತುವಿನ ಕೊನೆಯಲ್ಲಿ ಪ್ರವಾಹ ಬಹಳ ಇಳಿಯುತ್ತದೆ. ಪರಮಾವಧಿ ಪ್ರವಾಹ ಬಂದಿದ್ದುದು 1937ರಲ್ಲಿ.

ಒಹಾಯೊ ನದಿಯ ಮೇಲೆ 1782ರಷ್ಟು ಹಿಂದಿನಿಂದಲೂ ದೋಣಿಗಳು ಸಂಚರಿಸುತ್ತಿವೆ. ಪ್ರಯಾಣಿಕ ನೌಕೆ ಮೊಟ್ಟಮೊದಲು ಸಿನ್ಸಿನ್ಯಾಟಿಯಿಂದ ಪಿಟ್ಸ್‌ಬರ್ಗಿಗೆ 1794ರಲ್ಲಿ ಸಂಚಾರ ಮಾಡಿತು. 1880ರಲ್ಲಿ ಪಿಟ್ಸ್‌ಬರ್ಗ್ ಪ್ರದೇಶ ಕೈಗಾರಿಕೆಯಲ್ಲಿ ಮುಂದುವರಿದಂತೆ ಈ ಜಲಮಾರ್ಗವನ್ನು ಕಲ್ಲಿದ್ದಲು, ಮರದ ದಿಮ್ಮಿ ಮುಂತಾದವುಗಳನ್ನು ಸಾಗಿಸುವುದಕ್ಕೆ ಹೆಚ್ಚಾಗಿ ಬಳಸಿಕೊಳ್ಳಲಾಯಿತು. 1910ರಲ್ಲಿ ಅಮೆರಿಕ ಕಾಂಗ್ರೆಸ್ ಈ ಜಲಮಾರ್ಗವನ್ನು ಅಭಿವೃದ್ಧಿಪಡಿಸಲು ಯೋಚಿಸಿ ಅದಕ್ಕಾಗಿ ಒಂದು ಯೋಜನೆ ತಯಾರಿಸಿತು. ಅಲ್ಲಲ್ಲಿ ಕಟ್ಟೆಗಳನ್ನು ಕಟ್ಟಿ ಸದಾಕಾಲವೂ 9 ಅಡಿ ನೀರುಳ್ಳ ಕಾಲುವೆಯನ್ನು ಜಲಮಾರ್ಗಕ್ಕೆ ಒದಗಿಸಲಾಯಿತು. (ಬಿ.ಎಸ್‌ಎಚ್.)

**ಒ'ಹಾರಾ, ಜೆ. ಎಚ್. :** 1905-1970. ಅಮೆರಿಕದ ಕಾದಂಬರಿಕಾರ, ಪತ್ರಿಕೋದ್ಯಮಿ, ನಾಟಕಕಾರ, ಚಲನಚಿತ್ರ ಲೇಖಕ, ಸಣ್ಣಕಥೆಗಾರ ಮತ್ತು ವಿಮರ್ಶಕ. ಕೂಲಿಗಾರನಾಗಿ, ಉಕ್ಕಿನ ಕಾರ್ಖಾನೆಯಲ್ಲಿ ಕಾವಲುಗಾರನಾಗಿ, ಸೋಡಾ ಮಾರುವವನಾಗಿ, ವಿಹಾರಕೇಂದ್ರವೊಂದರ ರಕ್ಷಕನಾಗಿ, ಸುದ್ದಿಗಾರನಾಗಿ, ಸಹಸಂಪಾದಕನಾಗಿ—ಹೀಗೆ ಬೇರೆ ಬೇರೆ ವೃತ್ತಿಗಳಲ್ಲಿ ಪಳಗಿದ. ಅಪಾಯಿಂಟ್‌ಮೆಂಟ್ ಇನ್ ಸಮಾರಾ ಕಾದಂಬರಿ ಪ್ರಕಟವಾದೊಡನೆ (1934) ಅಮೆರಿಕದಲ್ಲಿ ಈತನ ಕೀರ್ತಿ ಹರಡಿತು. ಅನಂತರ ಬಂದ ಡಾಕ್ಟರ್ಸ್ ಸನ್ ಅಂಡ್ ಅದರ್ ಸ್ಟೋರೀಸ್ (1935) ಎಂಬ ಕಥಾಸಂಗ್ರಹ, ಬಟರ್‌ಫೀಲ್ಡ್ 8 ಎಂಬ ಕಾದಂಬರಿಗಳು ಸಾಹಿತ್ಯಕ್ಷೇತ್ರದಲ್ಲಿ ಇವನ ಸ್ಥಾನವನ್ನು ಭದ್ರಪಡಿಸಿದುವು. ಆಮೇಲೆ ಈತ ಪ್ರಮುಖ ಪತ್ರಿಕೆಯೊಂದಕ್ಕೆ ಫುಟ್‌ಬಾಲ್ ಪಂದ್ಯಗಳ ವಿವರಣೆ ಬರೆಯುವ ಕ್ರೀಡಾ ವಿಮರ್ಶಕನಾದ. ಗಟ್ಟಿಗಡಸು ಮೈ ಉಳ್ಳ ಈತ ಕುಸ್ತಿಯ ಅಂಗಣಕ್ಕೂ ಇಳಿದುದುಂಟು. ಹಾಲಿವುಡ್ಡಿನಲ್ಲಿ ಈತ ಚಿತ್ರಕಥೆ ಬರೆದು ಪ್ರಸಿದ್ಧನಾದ. ತನ್ನ ಕಾಲದ ಜನರ ಸಮಾಜದ ಬಗ್ಗೆ ಈತನಿಗಿದ್ದ ಅಪಾರ ಅರಿವು, ಅನುಕಂಪ, ತೀವ್ರ ಸಂವೇದನೆಗಳ ಜೊತೆಗೆ ಇವನ ಚಾಟಿಯಂಥ ಮಾತು, ಚುಚ್ಚುನುಡಿ, ಕಟು ವಿಮರ್ಶೆಗಳಿಂದಾಗಿ ಈತನ ಕೃತಿಗಳು ಜನಪ್ರಿಯವಾಗಿವೆ. ಪಾಲ್ ಜೋಯಿ (1940) ಟೆನ್ ನಾರ್ತ್ ಫ್ರೆಡರಿಕ್ (1955), ಸ್ವೀಟ್ ಅಂಡ್ ಸವರ್ (1954), ಸರ್ಮನ್ಸ್ ಎಂಡ್ ಸೋಡಾವಾಟರ್ (1961)—ಇವು ಈತನ ಪ್ರಮುಖ ಕೃತಿಗಳು.

ಈತನಿಗೆ ಬಣ್ಣಗುರುಡುತನ ಇದ್ದುದರಿಂದ ಈತನ ಕೃತಿಗಳಲ್ಲಿ ಬಿಳಿ ಮತ್ತು ಕಪ್ಪು ಬಣ್ಣಗಳನ್ನುಳಿದು ಬೇರೆ ಯಾವ ಬಣ್ಣಗಳ ವರ್ಣನೆಯೂ ಇಲ್ಲದಿರುವುದು ಒಂದು ವಿಚಿತ್ರ, ವೈಶಿಷ್ಟ್ಯ. ಹೂಗಳು, ಹಕ್ಕಿಗಳು ನಿಸರ್ಗ—ಇವುಗಳ ವರ್ಣನೆಗಳು ಇವನಲ್ಲಿ ಅಪೂರ್ವ. (ಎಸ್.ಎ.ಎನ್.)

**ಒಳಕೀವು :** ಮೈಯಲ್ಲಿ ಯಾವುದಾದರೂ ಒಂದು ಪೊಳ್ಳಿನೊಳಗೆ ಕೀವಿನ ತೆರನ ದ್ರವ ಸೇರಿರುವುದಕ್ಕೆ ವೈದ್ಯದಲ್ಲಿ ಈ ಹೆಸರಿದೆ (ಎಂಪಯೀಮ). ಮುಖ್ಯವಾಗಿ ಎದೆಗೂಡಿನ ಒಳಗೀವಿಗೆ ಮಾತ್ರ ಹೀಗೆ ಹೇಳುವುದು ಸಾಮಾನ್ಯ.

ನೋಡಿ—ಅಳ್ಳೆಪೊರೆಯ ರೋಗಗಳು. *

**ಒಳಕೂಟ :** ಒಂದು ಮಾರುಕಟ್ಟೆಯಲ್ಲಿರುವ ಸರಕನ್ನೆಲ್ಲ ಕೊಂಡು ಅದರ ಏಕಸ್ವಾಮ್ಯ ಪಡೆದು ಕೃತಕ ಅಭಾವ ಏರ್ಪಡಿಸಿ ಬೆಲೆ ಏರುವಂತೆ ಮಾಡಿ ಅಧಿಕ ಬೆಲೆಯಲ್ಲಿ ಸರಕನ್ನು ಮಾರಿ ಲಾಭ ಪಡೆಯುವ ಉದ್ದೇಶದಿಂದ ಹಲವು ಸಟ್ಟಾ ವ್ಯಾಪಾರಿಗಳು ತಂತಮ್ಮಲ್ಲೆ ರಚಿಸಿಕೊಂಡ ಕೂಟ (ರಿಂಗ್). ವ್ಯವಹಾರ ಕೂಟ ಅಥವಾ ಮಾರಾಟಕೂಟವೂ (ಕಾರ್ಟೆಲ್) ಒಳಕೂಟವೂ ಒಂದೇ ಎಂಬುದು ಸಾಮಾನ್ಯವಾಗಿರುವ ಭಾವನೆ. ಆದರೆ ಒಳಕೂಟದ ಸದಸ್ಯರು ಸ್ವತಂತ್ರ ಉದ್ಯಮಿಗಳಲ್ಲ. ಅವರದೊಂದು ಸಂಯುಕ್ತ ಸಾಹಸ. ಬೆಲೆಯನ್ನಾಗಲಿ, ಉತ್ಪಾದನೆಯನ್ನಾಗಲಿ, ಸರಬರಾಯಿಯನ್ನಾಗಲಿ ನಿಯಂತ್ರಣಗೊಳಿಸುವ ಪ್ರಶ್ನೆಯೇ ಇಲ್ಲಿ ಉದ್ಭವಿಸುವುದಿಲ್ಲ. ಎಲ್ಲ ಸರಕನ್ನೂ ಒಟ್ಟೈಸಿಕೊಂಡು, ಮಾರುಕಟ್ಟೆಯಿಂದ ಅದನ್ನು ಹಿಂತೆಗೆದುಕೊಂಡು ಕೃತಕಾಭಾವವನ್ನೇರ್ಪಡಿಸುವುದು ಸಹಜವಾದ ವ್ಯಾಪಾರಧರ್ಮವಲ್ಲ. ಸರಕನ್ನು ಕೊಳ್ಳಲು ಬಂದ ಇತರ ಎಲ್ಲರಿಗಿಂತಲೂ ಹೆಚ್ಚಿನ ಸವಾಲು ಹಾಕಿ, ಉತ್ಪಾದಕರಿಗೆ ಅತ್ಯಧಿಕ ಬೆಲೆ ಕೊಟ್ಟು, ನಷ್ಟಸಂಭವವನ್ನೂ ಎದುರಿಸಿ ನಿಂತು, ಲಾಭದ ರಾಶಿಯನ್ನೇ ದೋಚಿಕೊಳ್ಳುವುದು ಇದರ ಉದ್ದೇಶ. ಇದರ ಕಲಾಪಗಳಿಂದ ಬಳಕೆದಾರ ಹೆಚ್ಚು ಬೆಲೆ ತೆರಬೇಕಾಗಿ ಬರುವುದು ಅನಿವಾರ್ಯ. ಆದ್ದರಿಂದ ಇದು ನೀತಿಬಾಹಿರವಾದ ವ್ಯವಹಾರಕೂಟ. (ಸಿ.ಸಿ.ಪಿ; ಎ.ಕೆ.ಎಸ್‌ಎಚ್.)

**ಒಳಗಿವಿಗೂಡು :** ಕಿವಿಯ ಒಳಗಿನ ನಾಳದಲ್ಲಿರುವ, ನಾಳಕೋಶ (ವೆಸ್ಟಿಬ್ಯೂಲ್), ಅರೆಸುತ್ತಿನ ಸಾಗಾಲುವೆಗಳು (ಸೆಮಿಸರ್ಕುಲಾರ್ ಕೆನಾಲ್ಸ್), ಕಿವಿಸಂಕದ ಸಾಗುನಾಳ (ಕಾಕ್ಲಿಯಾರ್ ಡಕ್ಟ್), ಒಳಗಿವಿಕೋಶ (ಯೂಟ್ರಿಕಲ್), ಕಿರು ಚೀಲಗಳಲ್ಲಿ (ಸ್ಯಾಕ್ಯೂಲ್) ಒಳ ಹಾಲುರಸವಿರುವ (ಎಂಡೊಲಿಂಫ್) ಮೂಳೆಯ ಭಾಗ. ನೋಡಿ—ಕಿವಿ, ಕೇಳುವಿಕೆ. *

**ಒಳತಳಿಸಂತಾನೋತ್ಪಾದನೆ :** ಬಹಳ ಹತ್ತಿರದ ಬಂಧುಗಳ ನಡುವೆ ಸಂಭೋಗ ನಡೆಸಿ ಸಂತಾನೋತ್ಪಾದನೆ ಮಾಡುವ ಒಂದು ಕ್ರಮ. ಸೋದರಿಕೆಯ ಸಂಬಂಧಗಳು, ಅಕ್ಕನ ಮಗಳನ್ನು ವಿವಾಹವಾಗುವಿಕೆ ಮುಂತಾದವು ಈ ಗುಂಪಿಗೆ ಸೇರುತ್ತವೆ.

ಅನೇಕ ಸಸ್ಯಗಳಲ್ಲಿ ಸ್ವಕೀಯ ಪರಾಗಸ್ಪರ್ಶ ನಡೆಯುತ್ತದೆ. (ಉದಾ : ಗೋದಿ, ಬಾರ್ಲಿ, ಓಟ್ಸ್, ಜೋಳ, ಹತ್ತಿ ಮುಂತಾದವು). ಇಂಥ ಸಸ್ಯಗಳಲ್ಲಿ ಒಳತಳಿಸಂತಾನೋತ್ಪಾದನೆ ಸ್ವಾಭಾವಿಕವಾಗಿಯೇ ನಡೆಯುತ್ತದೆ. ಆದರೆ ಇನ್ನು ಕೆಲವು ಸಸ್ಯಗಳಲ್ಲಿ ಇದನ್ನು ತಡೆಯಲೆಂದೇ ಕೆಲವು ವಿಶಿಷ್ಟ ಮಾರ್ಪಾಟುಗಳು ಪುಷ್ಪಗಳಲ್ಲಿರುತ್ತವೆ. ಕೆಲವು ಕೆಳವರ್ಗದ ಪ್ರಾಣಿಗಳನ್ನು ಬಿಟ್ಟರೆ ಮೇಲ್ಮಟ್ಟದ ಪ್ರಾಣಿಗಳೆಲ್ಲ ಏಕಲಿಂಗಿಗಳಾದ್ದರಿಂದ ಅವುಗಳಲ್ಲಿ ಸ್ವಕೀಯ ಗರ್ಭಾಂಕುರತೆ ಅಸಾಧ್ಯ. ಅಂತೆಯೇ ಒಳತಳಿಸಂತಾನೋತ್ಪಾದನೆ ತೀರ ವಿರಳ. ಕೆಳವರ್ಗದ ಪ್ರಾಣಿಗಳಾದ ಲಾಡಿಹುಳುಗಳಂಥ ಕೆಲವು ಪ್ರಾಣಿಗಳಲ್ಲಿ ಸ್ವಕೀಯ ಗರ್ಭಾಂಕುರವೇ ನಿಯಮವಾಗಿರುತ್ತವೆ. ತೀರ ಹತ್ತಿರದ ಸಂಬಂಧಿಗಳ ನಡುವೆ ಅನೇಕ ಪೀಳಿಗೆಗಳ ವರೆಗೆ ಒಳತಳಿಸಂತಾನೋತ್ಪಾದನೆಯೇ ನಡೆಯುತ್ತಿದ್ದರೆ ಅದರ ಪರಿಣಾಮ ಅಪಾರ.

ಒಳತಳಿಸಂತಾನೋತ್ಪಾದನೆಯಿಂದ ಹಲವಾರು ಉಪಯೋಗಗಳುಂಟು. ಮುಖ್ಯವಾಗಿ, ಸಾಕುಪ್ರಾಣಿಗಳಲ್ಲಿ ನಮಗೆ ಬೇಕಾಗುವ ಗುಣಲಕ್ಷಣಗಳು ಸಮಜಂಪತಿ ಸ್ಥಿತಿಯಲ್ಲಿ ಉಳಿಯುವಂತಾಗಿ ಪೀಳಿಗೆಯಿಂದ ಪೀಳಿಗೆಗೆ ಹರಿದು ಬರುವುದು. ಈ ಮೂಲಕ ಮಾನವ ತನಗೆ ಬೇಕಾದ ಗುಣಗಳುಳ್ಳ ಪ್ರಾಣಿಗಳನ್ನು ಪಡೆಯಬಹುದಾಗಿದೆ. ಹೊರಗಡೆಯಿಂದ ಬರಬಹುದಾದ ಬೇಡವೆನಿಸುವ ಜೀನ್‌ಗಳ ಸಂಕರವನ್ನು ತಡೆಯಬಹುದು. ಈ ರೀತಿ ಹಲವಾರು ವರ್ಷಗಳ ಒಳತಳಿಸಂತಾನೋತ್ಪಾದನೆ ಕ್ರಮದಿಂದ ಪಡೆದ ಪ್ರಾಣಿಗಳ ಉತ್ತಮ ಉದಾಹರಣೆಯೆಂದರೆ ಆಸ್ಟ್ರೇಲಿಯದ ಮೆರಿನೊ ಕುರಿ, ಪಾಶ್ಚಿಮಾತ್ಯ ದೇಶಗಳ ಹರ್‌ಫೋರ್ಡ್ ಜಾತಿಯ ದನಗಳು ಹಾಗೂ ಪಂದ್ಯದ ಕುದುರೆಗಳು.

ಒಳತಳಿಸಂತಾನೋತ್ಪಾದನೆ ಅನೇಕ ರೀತಿಗಳಲ್ಲಿ ಅನುವಂಶೀಯತೆಯ ಮೇಲೆ ತನ್ನ ಪ್ರಭಾವವನ್ನು ಬೀರುತ್ತದೆ. ಇದರ ಪ್ರಪ್ರಥಮ ಪರಿಣಾಮ ಅನುವಂಶೀಯ ಶುದ್ಧತೆಯ ಹೆಚ್ಚಿಗೆ. ಪ್ರತಿ ಒಳತಳೀಕರಣದಿಂದಲೂ ಸಮಜಂಪತಿಗಳ ಮಿಳಿತದಿಂದಾಗಿ ಒಂದೇ ತೆರನ ಗುಣಗಳಿರುವ ಹೆಚ್ಚು ಹೆಚ್ಚು ಜೀನ್ ಜೋಡಿಗಳು ಉತ್ಪತ್ತಿಯಾಗುತ್ತವೆ. ಆದರೆ ಈ ವಿಷಯದಲ್ಲಿ ಒಂದನ್ನು ಮಾತ್ರ ನಾವು ಅಲ್ಲಗಳೆಯಲಾಗುವುದಿಲ್ಲ. ಅನುವಂಶೀಯ ಶುದ್ಧತೆ ಹೆಚ್ಚಿದಂತೆಲ್ಲ ಅನೇಕ ದುರ್ಬಲ ಜೀನ್‌ಗಳು ತಮ್ಮ ಪ್ರಭಾವವನ್ನು ತೋರಿಸಲು ಪ್ರಾರಂಭಿಸುತ್ತವೆ. ಸಾಮಾನ್ಯವಾಗಿ ಇವುಗಳ ಪೈಕಿ ಅನೇಕವು ಪ್ರಬಲ ಜೀನ್‌ಗಳ ಪ್ರಭಾವಗಳಂತೆ ಜೀವಿಗೆ ಆವಶ್ಯಕವಾಗಿರುವುದಿಲ್ಲ. ಆದ್ದರಿಂದ ಒಳತಳಿಸಂತಾನೋತ್ಪಾದನೆಯಿಂದ ನಿಧಾನವಾಗಿ ಬೆಳೆಯುವ, ದುರ್ಬಲತೆಗಳುಳ್ಳ, ನಿರಾಶಾದಾಯಕ ಮತ್ತು ನ್ಯೂನ ಸಂತಾನ ವರ್ಧಿಸುವ ಸಂಭವನೀಯತೆಯೇ ಹೆಚ್ಚು. ಈ ಕಾರಣಕ್ಕಾಗಿ ಅನೇಕ ತಳಿಶಾಸ್ತ್ರಜ್ಞರು ಈ ಕ್ರಮವನ್ನು ತಳೀಕರಣದ ಒಂದು ಅಪಾಯಕರ ಪ್ರಯೋಗವೆನ್ನುತ್ತಾರೆ. ಆದರೆ ಇವರಲ್ಲೇ ಕೆಲವರು ಅಂಥ ಪ್ರಯೋಗಗಳನ್ನು ಕೈಗೊಂಡು ತಮ್ಮವೇ ಆದ ಕೆಲವು ವಿಶಿಷ್ಟ ಗುಣಗಳಿರುವ ಪ್ರಾಣಿಗಳನ್ನು ಆಯ್ಕೆ ಮಾಡಿಕೊಂಡು ಅವನ್ನು ಪದೇ ಪದೇ ಒಳತಳಿಸಂತಾನೋತ್ಪಾದನೆಗೆ ಒಳಪಡಿಸಿ ಆ ಗುಣಗಳು ಅವಕ್ಕೇ ಮೀಸಲಾಗಿರುವಂತೆ ಮಾಡಿದ್ದಾರೆ.

ಒಳತಳಿಸಂತಾನೋತ್ಪಾದನೆಯಿಂದ ಜೀನ್‌ಗಳು ಬದಲಾವಣೆ ಹೊಂದುತ್ತವೆ ಎಂಬುದಾಗಲೀ ಅವುಗಳ ಆವರ್ತನ ವ್ಯತ್ಯಾಸವಾಗುವುದು ಎಂಬುದಾಗಲೀ ಸುಳ್ಳು. ಅಡ್ಡತಳಿಯೆಬ್ಬಿಕೆಯಲ್ಲಿ ಬರಲಾಗದ ಅವು ಸಾಮೀಪ್ಯ ಸಾಧಿಸಿ ಜೊತೆಗೂಡಲು ಇಲ್ಲಿ ಅನುಕೂಲವಿರುತ್ತದೆ ಅಷ್ಟೆ. ಆದ್ದರಿಂದಲೇ ಒಳತಳೀಕರಣ ಮುಂದುವರೆದಂತೆಲ್ಲ ಕುಟುಂಬಗಳು ಹೆಚ್ಚು ಹೆಚ್ಚು ವಿಶಿಷ್ಟಗೊಳ್ಳುತ್ತ, ಪ್ರತ್ಯೇಕಗೊಳ್ಳುತ್ತ ಹೋಗುತ್ತವೆ. ಅನುವಂಶೀಯ ಮತ್ತು ಬಾಹ್ಯ ಗುಣಲಕ್ಷಣಗಳಲ್ಲಿ ಪರಸ್ಪರ ಸಾಮ್ಯ ಈ ರೀತಿಯ ಸಂತಾನೋತ್ಪಾದನೆಯಿಂದ ಉದ್ಭವವಾದ ಕುಟುಂಬದ ಸಂತಾನಕ್ಕೆ ಒಂದು ಸಾಮಾನ್ಯ ಕುಟುಂಬದ ಸಂತಾನಕ್ಕಿಂತ ಹೆಚ್ಚು ಇರುತ್ತದೆ.

ಒಳತಳಿಸಂತಾನೋತ್ಪಾದನೆಯಿಂದ ಇನ್ನೂ ಕೆಲವು ಮುಖ್ಯ ಉಪಯೋಗಗಳುಂಟು. ಒಂದು ಗುಂಪಿನ ಇಲ್ಲವೆ ಒಂದು ಸಂತತಿಯ ಅಪ್ರಧಾನ ನ್ಯೂನತೆಗಳನ್ನು ಹೆಚ್ಚಿನ ಸಂಖ್ಯೆಯಲ್ಲಿ ಬೆಳಕಿಗೆ ತರುವ ಮೂಲಕ ಇದು ಸಂತತಿಯನ್ನು ಅನುವಂಶೀಯವಾಗಿ ಶುದ್ಧಗೊಳಿಸುತ್ತದೆ. ಅನುವಂಶೀಯ ಶುದ್ಧತೆಯ ಸಾಧನೆಗೆ ಇದೊಂದೇ ಮಾರ್ಗ. ನ್ಯೂನತೆಗಳಿರುವ ಜೀನ್‌ಗಳನ್ನು ಬೇರ್ಪಡಿಸಿದರೆ ಇಡೀ ಗುಂಪೇ ಈ ಅನಾವಶ್ಯಕ ದುರ್ಬಲತೆಗಳಿಂದ ವಿಮುಕ್ತವಾಗುತ್ತದೆ. ಅಲ್ಲದೆ ಕುಟುಂಬದ ಎಲ್ಲ ಸದಸ್ಯರುಗಳೂ ಪರಸ್ಪರ ಅನುವಂಶೀಯ ಗುಣಗಳಲ್ಲಿ ಸಾಮ್ಯ ಸಾಧಿಸಿಕೊಳ್ಳಬೇಕಾದಲ್ಲಿ ಒಳತಳಿಸಂತಾನೋತ್ಪಾದನೆಯಲ್ಲದೆ ಬೇರೆ ದಾರಿ ಇಲ್ಲ. ಈ ಮಾರ್ಗದಿಂದ ಒಂದು ಕುಟುಂಬ ತನ್ನದೇ ಆದ ಕೆಲವು ವಿಶಿಷ್ಟ, ಉತ್ಕೃಷ್ಟ ಅರ್ಹತೆಗಳನ್ನು ಅನುವಂಶೀಯವಾಗಿ ಮುಂದುವರಿಸಿಕೊಂಡು ಹೋಗಬಹುದು. ಮಿಶ್ರತಳಿಯ ಮುಸುಕಿನ ಜೋಳ ಮತ್ತಿತರ ಹೆಚ್ಚು ಫಸಲು ಕೊಡುವ ತಳಿಗಳನ್ನು ಬೆಳಕಿಗೆ ತರಬೇಕಾದರೆ ಒಳತಳಿಸಂತಾನೋತ್ಪಾದನೆಯ ಮೂಲಕ ವಿಕಾಸಗೊಳಿಸಿದ ಶುದ್ಧ ತಳಿಗಳಿಂದ ಆಗಿರುವ ಸೇವೆ ಅತ್ಯಪೂರ್ವ.

ಪ್ರಕೃತಿಯಲ್ಲೂ ಸ್ವಲ್ಪಮಟ್ಟಿಗೆ ಒಳತಳಿಸಂತಾನೋತ್ಪಾದನೆಯಾಗುವ ಅವಕಾಶಗಳಿವೆ. ಒಂದೇ ಪ್ರಭೇದದ ಅನೇಕ ವನ್ಯಜೀವಿಗಳು ಸಣ್ಣ ಸಣ್ಣ ಗುಂಪುಗಳಲ್ಲಿ ವಾಸಿಸುತ್ತವೆ. ಈ ಗುಂಪುಗಳ ನಡುವೆ ತಳೀಕರಣ ನಡೆಯುವುದು ಬಹು ಅಪೂರ್ವ. ಗುಂಪಿನೊಳಗೇ ಒಳತಳಿ ಸಂತಾನೋತ್ಪಾದನೆ ಮುಂದುವರಿದಂತೆಲ್ಲ ಗುಂಪಿನ ಎಲ್ಲ ಪ್ರಾಣಿಗಳಿಗೂ ಪರಸ್ಪರ ಸಂಬಂಧವೇರ್ಪಡುತ್ತದೆ. ಬೇರೊಂದು ಗುಂಪಿನ ಪ್ರಾಣಿಗಳು ಈ ಗುಂಪಿಗೆ ಬಂದು ಸೇರದಿದ್ದಲ್ಲಿ ಈ ಸಂಬಂಧ ನಿರಂತರವಾಗಿವಾಗಿ ಮುಂದುವರಿಯುತ್ತಲೆ ಇರುತ್ತದೆ ಮತ್ತು ತಳಿ ಶುದ್ಧೀಕರಣ ನಡೆಯುತ್ತಿರುತ್ತದೆ. ಗುಂಪುಗಳು ಭೌಗೋಳಿಕವಾಗಿ ಬೇರ್ಪಟ್ಟಿದ್ದರಂತೂ ಒಳತಳಿ ಸಂತಾನೋತ್ಪಾದನಕ್ರಮವೇ ಇವುಗಳ ಸಂತಾನ ನಿಯಮವಾಗಿರುತ್ತದೆ. ಈ ತರಹ ಅನೇಕ ಘಟನೆಗಳು ಪ್ರಕೃತಿಯಲ್ಲಿ ನಡೆದಿವೆ; ನಡೆಯುತ್ತಿವೆ. ಆದರೆ ಅವಕ್ಕೆ ವಿಕಾಸದಲ್ಲಿ ಎಷ್ಟು ಪ್ರಾಮುಖ್ಯ ಕೊಡಬೇಕು ? ಪ್ರಕೃತಿಯ ಆಯ್ಕೆಯ ಕೈವಾಡ ಈ ಗುಂಪುಗಳ ಮೇಲೆ ಯಾವ ರೀತಿಯಲ್ಲಿರುತ್ತದೆ ಎಂಬ ಬಗ್ಗೆ ಸ್ಪಷ್ಟ ಅಭಿಪ್ರಾಯಗಳು ಮೂಡಲು ಇನ್ನೂ ಸಂಶೋಧನೆಗಳು ನಡೆಯಬೇಕಾಗಿವೆ.

ಒಳತಳಿಸಂತಾನೋತ್ಪಾದನೆಯ ಬಗ್ಗೆ ವಾದಗಳು ಪ್ರತಿವಾದಗಳು ಪ್ರಾಣಿಗಳ ವಿಷಯಕ್ಕಿಂತಲೂ ಮಾನವನಲ್ಲಿ ಹೆಚ್ಚು ಪ್ರಾಮುಖ್ಯ ಪಡೆದಿವೆ. ಪುರಾತನ ಈಜಿಪ್ಟಿನ ರಾಜಕುಟುಂಬಗಳನ್ನು ಬಿಟ್ಟರೆ ಇತರ ಎಲ್ಲ ನಾಗರಿಕ ಜನಾಂಗಗಳೂ ಈ ಕ್ರಮವನ್ನು ನಿಷೇಧಿಸಿವೆ. ಸಹೋದರ ವಿವಾಹಗಳನ್ನು ಕೆಲವರು ಸಂಪೂರ್ಣವಾಗಿ ಕೈಬಿಟ್ಟಿದ್ದರೆ ಇನ್ನು ಕೆಲವು ವಿಶೇಷ ಮತವ್ಯವಸ್ಥೆಗಳು ಇವಕ್ಕೆ ವಿನಾಯಿತಿ ಕೊಟ್ಟಿವೆ. ಪೂರ್ವಜರು ಎಲ್ಲ ರೀತಿಯಲ್ಲೂ ಉತ್ಕೃಷ್ಟ ಅನುವಂಶೀಯ ಗುಣಗಳನ್ನು ಪಡೆದಿದ್ದಲ್ಲಿ ಈ ವ್ಯವಸ್ಥೆ ಜೀವಶಾಸ್ತ್ರದ ಪ್ರಕಾರ ಬಹು ಒಳ್ಳೆಯದು.

ನೋಡಿ—ಅಡ್ಡತಳಿಯೆಬ್ಬಿಕೆ ; ಏಕತಳಿ ಸಂತಾನೋತ್ಪಾದನೆ. (ಎಸ್.ಎನ್.ಆರ್.)

**ಒಳತೋಟಿ :** ವಿರೋಧವಾದ ಪ್ರೇರಣೆಗಳ ಅಥವಾ ಅಸಮಂಜಸವಾದ ಕ್ರಿಯೆಗಳ ಆಕರ್ಷಕ್ಕೆ ಅಥವಾ ಅಪಕರ್ಷಕ್ಕೆ ಸಿಕ್ಕಿಬಿದ್ದು ಯಾವ ಒಂದನ್ನು ಮಾಡಬೇಕು ಅಥವಾ ಬಗೆಹರಿಸಬೇಕು ಎಂದು ತೀರ್ಮಾನಿಸಲು ತೊಳಲಾಡುತ್ತಿರುವ ವ್ಯಕ್ತಿಯ ಮಾನಸಿಕ ಪರಿಸ್ಥಿತಿ (ಕಾನ್‌ಫ್ಲಿಕ್ಟ್). ಮನುಷ್ಯನಿಗೆ ಅನೇಕ ಆಸೆಗಳಿರುವುದರ ಜೊತೆಗೆ ಭೀತಿಯೂ ಇರುತ್ತದೆ. ಇವನ ಈ ಆಸೆಗಳಲ್ಲಿ ಕೆಲವು ಅಸಮಂಜಸವಾದವು. ಮತ್ತೆ ಕೆಲವುಗಳ ಮಧ್ಯೆ ಘರ್ಷಣೆ ಇರುತ್ತದೆ. ಈತ ಯಾವ ಗುರಿ ಮುಟ್ಟಲು ಇಚ್ಛಿಸುವನೋ ಅದೇ ಗುರಿಗೆ ಭಯಪಡುವ ಸಂಭವವೂ ಉಂಟು. ಉದಾಹರಣೆಗೆ ನಾಯಿಯನ್ನು ಮುಟ್ಟಲು ಇಚ್ಛಿಸುವ ಮಗು ಅದಕ್ಕೆ ಭಯಪಟ್ಟು ಹಿಂದೆ ಮುಂದೆ ಓಡಾಡುತ್ತದೆ. ಸಾಧಾರಣವಾಗಿ ಒಳತೋಟಿಯುಳ್ಳ ವ್ಯಕ್ತಿಯ ಮಾನಸಿಕಪರಿಸ್ಥಿತಿ ವ್ಯಸನ, ಅನಿಶ್ಚಯ ಮತ್ತು ಉದ್ವೇಗಗಳಿಂದ ತುಂಬಿರುತ್ತದೆ. ಒಳತೋಟಿ ಮನೋವಿಕೃತಿಯ–ತಂತ್ರಿಕಾತಾಪದ (ನ್ಯೂರಾಸಿಸ್)–ಮುಖ್ಯ ಕಾರಣವೆಂದು ಹೆಡ್ರಸನ್ ಮತ್ತು ಗೆಲೆಸ್ಪಿ ಹೇಳುತ್ತಾರೆ. ಭಗ್ನಮನೋರಥ ಮತ್ತು ಭೀತಿಗಳ ಹಾಗೆ ಒಳತೋಟಿಯೂ ಜೀವಿಗೆ ಒಂದು ಸಮಸ್ಯೆ. ಆದಕಾರಣ ಇವೆಲ್ಲವನ್ನೂ ಒಂದೇ ರೀತಿಯ ಸಮಸ್ಯೆಗಳೆಂದು ಹೇಳಬಹುದು. ಇದನ್ನು ಬಗೆಹರಿಸುವ ಮಾರ್ಗಗಳು ಸಾಮಾನ್ಯವಾಗಿ ವ್ಯಕ್ತಿಯ ಬುದ್ಧಿಶಕ್ತಿ, ಅನುಭವ ಮತ್ತು ತಲೆದೋರಿರುವ ಒಳತೋಟಿಯ ಜಟಿಲತೆಗಳನ್ನು ಅವಲಂಬಿಸುತ್ತವೆ.

ಕರ್ಷಣೆಗೆ (ವೇಲೆನ್ಸ್) ಅಥವಾ ಗುರಿಗೆ ಆಕರ್ಷಕ ಮತ್ತು ಅಪಕರ್ಷಕ ಗುಣಗಳಿರಡುಂಟು. ಒಂದು ಗುರಿ ಒಬ್ಬ ವ್ಯಕ್ತಿಗೆ ಹಿತವಾಗಿರಬಹುದು ಅಥವಾ ಅಹಿತವಾಗಿರಬಹುದು. ಕರ್ಷಣೆಯ ಈ ಎರಡು ಗುಣಗಳಿಂದ ಒಳತೋಟಿಯನ್ನು ಮೂಲತಃ ಮೂರು ಬಗೆಯಾಗಿ ವಿಂಗಡಿಸಬಹುದು :

ವ್ಯಕ್ತಿ ಎರಡು ಸರಿಸಮನಾದ ಆಕರ್ಷಕ ಗುಣವುಳ್ಳ ಗುರಿಗಳ ಮಧ್ಯೆ ಸಿಕ್ಕಿಬಿದ್ದು, ಯಾವುದು ಉತ್ತಮ, ಯಾವುದು ಅಲ್ಪವೆಂದು ಚಿಂತಿಸಿ ತೀರ್ಮಾನಿಸಲು ಕಷ್ಟಪಡುತ್ತಿರುವ ಪರಿಸ್ಥಿತಿ ಒಂದು. ಇದನ್ನು ಆಕರ್ಷಕ–ಆಕರ್ಷಕ ಒಳತೋಟಿ (ಅಪ್ರೋಚ್–ಅಪ್ರೋಚ್ ಕಾನ್‌ಫ್ಲಿಕ್ಟ್) ಎಂದು ಕರೆಯಲಾಗಿದೆ (ಚಿತ್ರ 1). ಕಾರಣ, ಎರಡು ಗುರಿಗಳೂ ಹಿತವಾದವು. ಅವುಗಳಲ್ಲಿ




ಚಿತ್ರ 1 ಆಕರ್ಷಕ-ಆಕರ್ಷಕ ಒಳತೋಟಿ. P: ವ್ಯಕ್ತಿ; + : ಆಕರ್ಷಕ ಗುರಿ

ಯಾವುದು ಹೆಚ್ಚು, ಯಾವುದು ಕಡಿಮೆ, ಎಂದು ತೀರ್ಮಾನಿಸಲು ಸಾಧ್ಯವಾಗುತ್ತಿಲ್ಲ. ಇದನ್ನು ತೀರ್ಮಾನಿಸಿದರೆ ಸಮಸ್ಯೆ ಪರಿಹಾರವಾದಂತೆಯೆ. ಉದಾಹರಣೆಗೆ ಭೂರಿಯನನ ಕತ್ತೆ ಎರಡು ಹುಲ್ಲುಮೆದೆಗಳ ಮಧ್ಯೆ ನಿಂತು ಯಾವುದು ಹೆಚ್ಚು, ಯಾವುದು ಕಡಿಮೆ ಎಂದು ತೀರ್ಮಾನಿಸಲಾಗದೆ ಪ್ರಾಣಬಿಟ್ಟಿತು ಎಂದು ಒಂದು ಕಟ್ಟುಕಥೆ ತಿಳಿಸುತ್ತದೆ. ಇದು ಜೀವನದಲ್ಲಿ ಸಾಧ್ಯವಿಲ್ಲ. ಏಕೆಂದರೆ ಯಾವ ವ್ಯಕ್ತಿಯೂ ಅಷ್ಟು ಮೂರ್ಖನಾಗಲಾರ. ಆದರೂ ಒಂದು ತೀರ್ಮಾನಕ್ಕೆ ಬರುವ ಮೊದಲೇ ಗುರಿಗಳೆರಡೂ ಇಲ್ಲದ ಹಾಗೆ ಆಗುವ ಸಂಭವ ನಿಜಜೀವನದಲ್ಲುಂಟು. ಅಲ್ಲದೆ ಯಾವುದಾದರೂ ಒಂದು ಕಾರಣದಿಂದ ಒಂದು ಗುರಿಯ ಕಡೆ ತಿರುಗಿದರೆ, ಆ ಗುರಿ ದೊಡ್ಡದಾಗಿಯೂ ಹೆಚ್ಚು ಆಕರ್ಷಕವಾಗಿಯೂ ಕಾಣಬಹುದು. ಆಗ ಆ ಗುರಿಯನ್ನು ಸಾಧಿಸಲಾಗುವುದು. ಸಾಧಾರಣವಾಗಿ ಈ ತರಹದ ಒಳತೋಟಿಯನ್ನು ಬೇಗನೆ ಮತ್ತು ಸುಲಭವಾಗಿ ಬಗೆಹರಿಸಬಹುದು.

ಎರಡನೆಯದನ್ನು ಅಪಕರ್ಷಕ–ಅಪಕರ್ಷಕ ಒಳತೋಟಿ (ಅವಾಯ್ಡೆನ್ಸ್–ಅವಾಯ್ಡೆನ್ಸ್ ಕಾನ್‌ಫ್ಲಿಕ್ಟ್) ಎಂದು ಕರೆಯಲಾಗಿದೆ (ಚಿತ್ರ 2). ಇದರಲ್ಲಿ ವ್ಯಕ್ತಿ




ಚಿತ್ರ 2 ಅಪಕರ್ಷಕ-ಅಪಕರ್ಷಕ ಒಳತೋಟಿ. —: ಅಪಾಯ

ಎರಡು ಅಹಿತಕರವಾದ ಅಥವಾ ಭಯಂಕರವಾದ ಸನ್ನಿವೇಶಗಳ ಮಧ್ಯೆ ಸಿಕ್ಕಿಕೊಂಡಿದ್ದಾನೆ. ಇವನಿಗೆ ಇರುವ ಎರಡು ಮಾರ್ಗಗಳಲ್ಲಿ ಯಾವ ಒಂದನ್ನು ಹಿಡಿದು ಹೋದರೂ ಅಪಾಯ ತಪ್ಪದು. ಬೇರೆ ಮಾರ್ಗವಿಲ್ಲದಿದ್ದರೆ, ವ್ಯಕ್ತಿ ಈ ಸಂದಿಗ್ಧ ಪರಿಸ್ಥಿತಿಯನ್ನು ಬಿಡಿಸುವ ಬಗ್ಗೆ ಚಿಂತಿಸಲು ಪ್ರಾರಂಭಿಸುತ್ತಾನೆ. ಒಂದನ್ನು ಎದುರಿಸಲು ಪ್ರಯತ್ನಿಸಿದರೆ, ಅದು ಅತಿ ದೊಡ್ಡದಾಗಿ ಮತ್ತು ಅತಿ ಭಯಾನಕವಾಗಿ ಕಾಣಿಸುತ್ತದೆ. ಮತ್ತೊಂದು ಕಡೆ ತಿರುಗಿದಾಗ ಅದೂ ಹಾಗೆಯೇ ಕಾಣುತ್ತದೆ. ಆದಕಾರಣ ಇಂಥ ಪರಿಸ್ಥಿತಿಗಳಿಗೆ ಒಳಪಟ್ಟ ವ್ಯಕ್ತಿ ಅತಿ ವ್ಯಸನ, ತ್ರಾಸ ಮತ್ತು ಒತ್ತಡಗಳಿಗೆ ತುತ್ತಾಗುತ್ತಾನೆ. ಇದನ್ನು ಬಗೆಹರಿಸಲು ಹೆಚ್ಚು ಕಾಲ ಸಹ ಬೇಕಾಗಿ ಮನಸ್ಸು ಡೋಲಾಯಮಾನವಾಗುತ್ತದೆ. ಅನಿಶ್ಚಯ, ಅಹಿತ ಮತ್ತು ಒತ್ತಡಗಳಿಂದ ವ್ಯಕ್ತಿತ್ವಕ್ಕೆ ಕೆಲವು ವೇಳೆ ತೊಂದರೆ ಬರಬಹುದು. ಇಂಥ ಸಂದಿಗ್ಧ ಪರಿಸ್ಥಿತಿಯಿಂದ ತಪ್ಪಿಸಿಕೊಂಡು ಹೋಗಲು ವ್ಯಕ್ತಿ ಕೆಲವು ವೇಳೆ ಯಾವ ಮಾರ್ಗವನ್ನಾದರೂ ಹುಡುಕಲು ಹೊರಡುತ್ತಾನೆ. ಕೆಲವು ವೇಳೆ ಇದರ ಫಲಿತಾಂಶವೇ ವಿಲೋಪನ ಮತ್ತು ಅಪರಾಧವೆಂದು ಗಮನಿಸಲಾಗಿದೆ.

ಮೂರನೆಯದನ್ನು ಆಕರ್ಷಕ–ಅಪಕರ್ಷಕ ಒಳತೋಟಿ ಎಂದು ಕರೆಯಲಾಗಿದೆ (ಚಿತ್ರ 3). ಇಲ್ಲಿ ಸಾಧಿಸಬೇಕಾದ ಗುರಿ ಒಂದೇ. ಆದರೆ ಅದು ಹಿತ ಮತ್ತು




ಚಿತ್ರ 3 ಆಕರ್ಷಕ-ಅಪಕರ್ಷಕ ಒಳತೋಟಿ

ಅಪಾಯಗಳೆರಡರಿಂದಲೂ ಕೂಡಿದೆ. ಉದಾಹರಣೆಗೆ ಒಬ್ಬ ಯುವಕ ಒಬ್ಬ ತರುಣಿಯನ್ನು ಪ್ರೇಮಿಸಲಿಚ್ಛಿಸುತ್ತಾನೆ. ಆದರೆ ಸಮಾಜದ ಬಹಿಷ್ಕಾರ ಮತ್ತು ಆಕೆ ತನ್ನನ್ನು ನಿರಾಕರಿಸಬಹುದೆಂಬ ಭಯದಿಂದ ಆಕೆಯನ್ನು ಕೇಳಲು ಭೀತಿಪಡುತ್ತಾನೆ. ಇದು ಫ್ರಾಯ್ಡನ ಪ್ರಕಾರ ಇಡ್ (ಸಹಜ ಪ್ರವೃತ್ತಿ) ಮತ್ತು ಅತಿ ಅಹಂಗಳ (ಸೂಪರ್ ಈಗೊ) ಮಧ್ಯೆ ಇರುವ ಘರ್ಷಣೆ. ಇದು ಸಹ ವ್ಯಕ್ತಿಯ ಮನ

ಸ್ಸಿನ ಮೇಲೆ ತ್ರಾಸವನ್ನುಂಟುಮಾಡುತ್ತದೆ. ಹಿಂದೆ ಹೇಳಿದ ಸಂದಿಗ್ಧ ಪರಿಸ್ಥಿತಿಯಿಂದ ತಪ್ಪಿಸಿಕೊಳ್ಳಬಹುದು. ಆದರೆ ಇಂಥ ಒಳತೋಟಿಯಿಂದ ಪಾರಾಗುವುದು ಅತಿ ಕಷ್ಟ. ವ್ಯಕ್ತಿ ಎಲ್ಲಿಗೆ ಹೋದರೂ ಅಲ್ಲಿಗೆ ಅದನ್ನು ಜೊತೆಯಲ್ಲಿಯೆ ಕೊಂಡು ಹೋಗುತ್ತಾನೆ. ಇದರಿಂದ ತಪ್ಪಿಸಿಕೊಂಡು ಓಡಿಹೋಗಲು ಸಾಧ್ಯವಿಲ್ಲ. ಸಮಸ್ಯೆ ಪರಿಹರಿಸಲೇಬೇಕು. ಇಲ್ಲವಾದರೆ, ವ್ಯಕ್ತಿತ್ವದ ಶಾಂತಿಗೆ ಇದು ಒಂದು ದೊಡ್ಡ ಹೊರೆಯಾಗುತ್ತದೆ.

ಆಕರ್ಷಕ–ಆಕರ್ಷಕ ಒಳತೋಟಿ ಕೆಲವು ವೇಳೆ ದ್ವಿ ಆಕರ್ಷಕ–ಅಪಕರ್ಷಕ ಒಳತೋಟಿ (ಡಬಲ್ ಅಪ್ರೋಚ್–ಅವಾಯ್ಡೆನ್ಸ್ ಕಾನ್‌ಫ್ಲಿಕ್ಟ್) ಆಗುವ ಸಂಭವವುಂಟು. ಈ ಆಕರ್ಷಕ ಗುರಿಗಳನ್ನು ಸಾಧಿಸಲಾಗದಿರುವುದು ಅಪಾಯಕರವೆಂದು ಭಾವಿಸಿದಾಗ ಹೀಗಾಗುತ್ತದೆ. ಉದಾಹರಣೆಗೆ ಒಬ್ಬ ವಿದ್ಯಾರ್ಥಿ ತರಗತಿ ಮತ್ತು ಆಟಗಳೆರಡರಲ್ಲಿಯೂ ಉನ್ನತ ಪದವಿ ಪಡೆಯಲು ಇಚ್ಛಿಸಿದಾಗ, ಒಂದನ್ನು ಗಳಿಸಲು ಮಾಡಿದ ಕಾಲವಿನಿಯೋಗದಿಂದ ಮತ್ತೊಂದನ್ನು ಗಳಿಸಲು ಅಡ್ಡಿಯಾಗುತ್ತದೆ. ಆಗ ಆತ ಎರಡರಲ್ಲಿ ಯಾವುದನ್ನೂ ಬಿಡಲು ಇಚ್ಛಿಸುವುದಿಲ್ಲ. ಹಾಗೆ ಬಿಡುವುದು ಅಪಾಯಕರವೆಂದು ಭಾವಿಸುತ್ತಾನೆ.

ಈ ಎಲ್ಲ ವಿಧದ ಒಳತೋಟಿಗಳಲ್ಲಿ ಒಂದು ಸಾಮಾನ್ಯ ಗುಣವನ್ನು ಕಾಣಬಹುದು. ಅದು ಭಾವತೀವ್ರತೆ, ಉದ್ವೇಗ. ಈ ಭಾವತೀವ್ರತೆ ಅಥವಾ ಉದ್ವೇಗವನ್ನು ಕಡಿಮೆ ಮಾಡುವುದು ವ್ಯಕ್ತಿಗೆ ಆವಶ್ಯಕ. ಇಂಥ ಸಂದರ್ಭಗಳಲ್ಲಿ ಪ್ರತ್ಯಕ್ಷಾನುಭವ (ಪರ್ಸೆಪ್ಷನ್), ಸಾಹಚರ್ಯ (ಅಸೋಸಿಯೇಷನ್), ಸ್ಮೃತಿ (ರಿಮೆಂಬರಿಂಗ್), ಸಮಸ್ಯಾಪರಿಹಾರ (ಪ್ರಾಬ್ಲೆಮ್ ಸಾಲ್ವಿಂಗ್), ಯೋಚನೆ (ಥಿಂಕಿಂಗ್) ಇವು ಸಹಾಯಕವಾಗುತ್ತವೆ. ಒಳತೋಟಿ ಭಗ್ನಮನೋರಥಕ್ಕೆ ಮಾರ್ಗವಾದಾಗ ಅನಂತರದ ಪರಿಹಾರದ ವಿಧಾನಗಳನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು. ಒಂದನೆಯದು ಪ್ರಚೋದನೆಯನ್ನು ಮಾರ್ಪಾಡು ಮಾಡುವ ವಿಸ್ಥಾಪನೆ ಅಥವಾ ಸ್ಥಾನಪಲ್ಲಟ (ಡಿಸ್‌ಪ್ಲೇಸ್‌ಮೆಂಟ್), ದಮನ (ರಿಪ್ರೆಷನ್), ಪ್ರತ್ಯಕ್ಷಾನುಭವ ಜಾಗರೂಕತೆ ಮತ್ತು ಪ್ರತ್ಯಕ್ಷಾನುಭವದ ರಕ್ಷಣೆ (ಪರ್ಸೆಪ್ಚುಯಲ್ ವಿಜಿಲೆನ್ಸ್) ಮತ್ತು ವಿವೇಚನಾಪರತೆ (ರ್‍ಯಾಷನಲೈಸೇಷನ್) ಅಂತಃಕ್ಷೇಪಣೆ (ಇನ್ಟ್ರೊಜೆಕ್ಷನ್) ಮತ್ತು ಪ್ರಕ್ಷೇಪಣೆಗಳನ್ನು (ಪ್ರೊಜೆಕ್ಷನ್) ಒಳಗೊಂಡಿದೆ. ಎರಡನೆಯದು ಪ್ರತಿಕ್ರಿಯೆಯನ್ನು ಮಾರ್ಪಾಡು ಮಾಡುವ ಪರಿಹಾರ (ಕಾಂಪೆನ್ಸೇಷನ್) ಅತಿ ಪರಿಹಾರ (ಓವರ್–ಕಾಂಪೆನ್ಸೇಷನ್) ಉದಾತ್ತೀಕರಣ (ಸಬ್ಲಿಮೇಷನ್) ಪ್ರತಿಕ್ರಿಯಾರೂಪಣ (ರಿಯಾಕ್ಷನ್ ಫಾರ್ಮೇಷನ್) ಪ್ರತಿಗಮನ (ರಿಗ್ರೆಷನ್) ಮತ್ತು ಇಚ್ಛಾಕಲ್ಪಿತ ಯೋಚನೆಗಳನ್ನು (ಆಸ್ಟಿಸ್ಟಿಕ್ ಥಿಂಕಿಂಗ್) ಒಳಗೊಂಡಿದೆ. ಇವೆಲ್ಲವೂ ಭಗ್ನಮನೋರಥವನ್ನು ಸ್ವಲ್ಪಮಟ್ಟಿಗೆ ಹಗುರಮಾಡುತ್ತವೆ. ಇದರಿಂದ ಸಮಸ್ಯೆ ಪೂರ್ಣವಾಗಿ ಬಗೆಹರಿಯಲಾರದು. ಭಗ್ನಮನೋರಥದಿಂದ ತಂತ್ರಿಕಾತಾಪ ಪ್ರಾರಂಭವಾಗಬಹುದು. ಈ ರೋಗದ ಲಕ್ಷಣವೂ (ಸಿಮ್ಟಂ) ಭಗ್ನಮನೋರಥದ ಭಾರವನ್ನು ಕಡಿಮೆ ಮಾಡಲು ಸಹಾಯ ಮಾಡುವುದು. ಕೊನೆಯದಾಗಿ, ಇಂಥ ವಿಷಮಸ್ಥಿತಿಗಳನ್ನು ಚಿಕಿತ್ಸೆ ಮಾಡುವ ಕಾಲದಲ್ಲಿ ಮನೋವಿಜ್ಞಾನಿ ಒಳತೋಟಿಯನ್ನು ಪಾರು ಮಾಡುವ ಅಥವಾ ಹೆಚ್ಚು ಮಾಡುವ ಈ ಕೆಳಗಿನ ನಾಲ್ಕು ನಿಯಮಗಳನ್ನು ತಿಳಿದಿರಬೇಕು : 1 ಗುರಿ ಹತ್ತಿರವಿದ್ದಷ್ಟೂ ಅದನ್ನು ತಲಪುವ ಆಕಾಂಕ್ಷೆ ಹೆಚ್ಚು. ಇದನ್ನು ಆಕರ್ಷಕ ಪ್ರವಣತೆ (ಅಪ್ರೋಚ್ ಗ್ರೇಡಿಯೆಂಟ್) ಎಂದು ಕರೆಯುತ್ತಾರೆ. 2 ಭೀತಿಯ ಸ್ಥಳ ಹತ್ತಿರವಿದ್ದಷ್ಟೂ ಅದರಿಂದ ತಪ್ಪಿಸಿಕೊಳ್ಳುವ ಆಕಾಂಕ್ಷೆ ಹೆಚ್ಚು. ಇದನ್ನು ಅಪಕರ್ಷಕ ಪ್ರವಣತೆ (ಅವಾಯ್ಡೆನ್ಸ್ ಗ್ರೇಡಿಯೆಂಟ್) ಎಂದು ಕರೆಯುತ್ತಾರೆ. 3 ಆಕರ್ಷಣ ಪ್ರವಣತೆಗಿಂತ ಅಪಕರ್ಷಣ ಪ್ರವಣತೆ ಜಾಸ್ತಿಯಾಗಿರುತ್ತದೆ. 4 ಆಕರ್ಷಕದ ಅಥವಾ ಅಪಕರ್ಷಕದ ಶಕ್ತಿ, ಅದಕ್ಕೆ ಆಧಾರವಾಗಿರುವ ಪ್ರೇರಣೆಗಳ ಶಕ್ತಿಯನ್ನು ಅವಲಂಬಿಸಿರುತ್ತದೆ. ಅಂದರೆ, ಪ್ರೇರಣೆಗಳ ಶಕ್ತಿ ಪ್ರಬಲವಾಗಿದ್ದಂತೆ ಆಕರ್ಷಕ–ಅಪಕರ್ಷಕ ಶಕ್ತಿಯೂ ಪ್ರಬಲವಾಗಿರುತ್ತದೆ. (ಎಚ್‌.ಎಚ್‌.)

**ಒಳದರ್ಶನ :** ಮೈ ಒಳಗಡೆ ಆಳದಲ್ಲಿರುವ, ಜಠರದಂಥ ಯಾವುದಾದರೂ ಒಂದು ಅಂಗವನ್ನು, ಬಾಯಿಯಂತೆ ಸಹಜವಾಗಿರುವ ಒಂದು ಕಂಡಿಯ ಮೂಲಕ ಕೊಳವೆ ತೂರಿಸಿ ಬೆಳಗಿಸಿ ನೋಡಿ ನಡೆಸುವ ಪರೀಕ್ಷೆ (ಎಂಡೊಸ್ಕೊಪಿ). ಕೊಳವೆ ತೂರಿಸಲು ಹಿಗ್ಗಿಸುವ ಭಾಗಗಳಲ್ಲಿ ನೋವಾಗದಂತೆ ಮದ್ದು ಹಾಕಿ ಅರಿವಿರದಂತೆ ಮಾಡಿರಬೇಕು. ಕೊಳವೆ ಲೋಹದ್ದೋ ಗಟ್ಟಿ ತಂತುವಿನದೋ ಆಗಿದ್ದು, ಆಯಾ ಅಂಗಗಳ ಸಹಜ ಅಂಕುಡೊಂಕುಗಳಿಗೆ ತಕ್ಕಂತೆ ಸುಲಭವಾಗಿ ಬಾಗುವಂತಿರುವುದು. ಕೆಲವೇಳೆ, ಕೇವಲ ಒಳಗಡೆ ನೋಡುವುದೇ ಅಲ್ಲದೆ, ಪರೀಕ್ಷೆಗಾಗಿ ರೋಗ ಹತ್ತಿರಬಹುದಾದ ಒಳಭಾಗದ ಒಂದು ಚೂರನ್ನೋ ರೋಗಿ ಆಕಸ್ಮಾತ್ ನುಂಗಿದ ಸೂಜಿ, ಮೊಳೆ, ಗೋಲಿ ಮುಂತಾದ ಹೊರವಸ್ತುವನ್ನೋ ಹೊರದೆಗೆಯಬಹುದು. ಒಳದರ್ಶಕಗಳಲ್ಲಿ (ಎಂಡೊಸ್ಕೋಪ್ಸ್) ಹಲವಾರು ಬಗೆಗಳಿವೆ. ದನಿನಾಳ, ಉಸಿರ್ನಾಳ, ಅನ್ನನಾಳ, ಜಠರಗಳನ್ನು ಪರೀಕ್ಷಿಸುವವನ್ನು ಬಾಯಿ ಮೂಲಕ ಒಳದರ್ಶಕವನ್ನು ಒಳತೂರಿಸ ಬೇಕಾಗುತ್ತದೆ. ಇವುಗಳ ಆಚೆ ತುದಿಯಲ್ಲಿ ವಿದ್ಯುತ್ತಿನ ಬೆಳಕು ಚೆಲ್ಲುತ್ತದೆ. ಸಾಮಾನ್ಯವಾಗಿ ಈ ಪರೀಕ್ಷೆಗಳನ್ನು ಆಸ್ಪತ್ರೆಗಳಲ್ಲಿ ಮಾತ್ರ ಮಾಡುವುದಾದರೂ ರೋಗಿ ಅಲ್ಲಿ ತಂಗಬೇಕಿಲ್ಲ. ಗುದ, ನೆಟ್ಟಗರುಳು, ಹೆಗ್ಗರುಳಿನ ಕೆಳಭಾಗಗಳ ಒಳಗಡೆ ನೋಡುವ ಒಳದರ್ಶಕ ತೂರಿಸಲು ಅರಿವಳಿಸಬೇಕಾಗಿಲ್ಲ. ಆದರೆ ಕಂಕೋಶದೊಳಕ್ಕೆ (ಮೂತ್ರಕೋಶ) ಮೂತ್ರನಾಳದ ಮೂಲಕ ತೂರಿಸಿ ನೋಡಲು ಅರಿವಳಿಸಲೇಬೇಕು. ಸಹಜ ಕಂಡಿಗಳು ಇಲ್ಲವಾದರೂ ಎದೆ, ಹೊಟ್ಟೆಗಳಲ್ಲಿನ ಜೀವಾಳದ ಒಳಾಂಗಗಳನ್ನು ಹೀಗೇ ಇಣಿಕಿನೋಡಲೂ ಸಾಧ್ಯ. ಆದರೆ ಇದಕ್ಕಾಗಿ ಶಸ್ತ್ರಕ್ರಿಯೆಯಿಂದ ಇರಿದು ಕಂಡಿ ಮಾಡಬೇಕಾಗುತ್ತದೆ. ಬೆಳಗುವ ಕೊಳವೆಯನ್ನು ಒಳತೂರಿಸಿ ಪರೀಕ್ಷಿಸಿದ ಮೇಲೆ ಆ ಕಂಡಿಯನ್ನು ಹೊಲಿಗೆ ಹಾಕಿ ಮುಚ್ಚಬೇಕು. ಕ್ಷಯರೋಗಿಗಳಲ್ಲಿ ಎದೆಗೂಡಿನ ಒಳಗೆ ಪುಪ್ಪುಸ ಗೋಡೆಗೆ ಬಲವಾಗಿ ಅಂಟಿಕೊಂಡಿದ್ದರೆ, ಅದನ್ನು ಬರೆಗುಣದಿಂದ (ಕಾಟರಿ) ಸುಟ್ಟು ಬಿಡಿಸಬಹುದು. ಇದಕ್ಕಾಗಿ ಒಳದರ್ಶಕವನ್ನು ಪಕ್ಕೆಲುಬುಗಳ ನಡುವೆ ತೂರಿಸಬೇಕು. ಹೊಕ್ಕುಳ ಕೆಳಗೆ ಹೊಟ್ಟೆಯ ಗೋಡೆಯಲ್ಲಿ ಕಂಡಿ ಇರಿದರೆ ಕೆಳಹೊಟ್ಟೆಯಲ್ಲಿರುವ ಹೆಂಗಸರ ಜನನಾಂಗಗಳ ಪರೀಕ್ಷೆಗೆ ಅನುಕೂಲ. ಅಲ್ಲದೆ, ಕೆಳಗಿನಿಂದ ಯೋನಿಯ ಮೇಲಿನ ಗೋಡೆಯ ಮೂಲಕವೂ ಒಳದರ್ಶಕವನ್ನು ತೂರಿಸಿದರೆ ಹೆಣ್ಣಿನ ಕಿಳ್ಗುಳಿಯ (ಪೆಲ್ವಿಸ್) ಜನನಾಂಗವನ್ನು ಸುಲಭವಾಗಿ ಪರೀಕ್ಷಿಸಬಹುದು. ಹಾಗೇ ಹೊಟ್ಟೆಕುಳಿಯಲ್ಲಿ (ಎಪಿಗ್ಯಾಸ್ಟ್ರಿಯಂ) ಸಣ್ಣದಾಗಿ ಕೊಯ್ದು ತೂರಿಸಿ, ಜಠರ, ಈಲಿ, ಪಿತ್ತಕೋಶ, ಮಾಂಸಲಿ, ತೊರಳೆ, ಸಣ್ಣ ಕರುಳು, ಹೆಗ್ಗರುಳೇ ಮುಂತಾದುವನ್ನು ಪರೀಕ್ಷಿಸಬಹುದು. ಕಣ್ಣೊಳಕ್ಕೆ ಬೆಳಕನ್ನು ಬಿಂಬಿಸಿ ಒಳಗಿರುವ ಕಣ್ಜಾಲವನ್ನು (ರೆಟೀನ) ನೋಡುವುದು ಕಣ್ಣುವೈದ್ಯರ ಮುಖ್ಯ ಕೆಲಸ. ಒಳಾಂಗದ ಕೆಲಸ ಕೆಟ್ಟಿರುವ ಅನುಮಾನ ಬಂದು, ಹೊರಗಿಂದ ನಡೆಸಿದ ಯಾವ ಪರೀಕ್ಷೆಗಳಿಂದಲೂ ಬೇನೆಯ ರೂಪ ನಿರ್ಧಾರವಾಗದೆ, ಶಸ್ತ್ರಕ್ರಿಯೆ ಮಾಡಿ ಕಣ್ಣಾರೆ ಕಾಣುವುದನ್ನು ತಪ್ಪಿಸುವುದೇ ಒಳದರ್ಶನದಿಂದ ದೊರೆವ ಮಹಾ ಅನುಕೂಲ. ಕೆಲವೇ ಮಿಲಿಮೀಟರುಗಳ ಗಾತ್ರದ ಭಾವಚಿತ್ರಕವನ್ನು (ಕ್ಯಾಮೆರ) ಒಳತೂರಿಸಿ, ಒಳಗೆಲ್ಲ ಚಿತ್ರಗಳನ್ನು ಹಿಡಿದು ಹೊರತರುವ ಹೊಸವಿಧಾನ ಇತ್ತೀಚೆಗೆ ಗೊತ್ತಾಗಿದೆ. ಹಾಗೆ ಒಳಗಿವಿಯಲ್ಲಿ ಶಸ್ತ್ರಕ್ರಿಯೆ ನಡೆಸಲು ಮೈಕ್ರೊಸ್ಕೋಪಿನ ಬಳಕೆ ಕಿವಿ ಮೂಗು ಗಂಟಲುವೈದ್ಯಪಟುವಿಗೆ ಒಂದು ಮಹಾ ವರ. (ಡಿ.ಎಸ್‌.ಎಸ್‌.)

**ಒಳದೂಡಿಕೆ :** ಮೊದಲೇ ಕೊರೆದ ರಂಧ್ರವನ್ನು ಮತ್ತಷ್ಟು ವಿಸ್ತರಿಸುವ ಕ್ರಿಯೆ (ರೀಮಿಂಗ್). ಕೊರೆವ ಆಯುಧವಾದ ಬೈರಿಗೆಯ ಅಲಗು ಸವೆದು



ಒಳದೂಡುವ ಸಲಕರಣೆಯ ವಿವಿಧ ಬಗೆಗಳು

ಹೋಗಿದ್ದರೆ ಅಥವಾ ಬೇರೆ ಯಾಂತ್ರಿಕ ದೋಷಗಳಿದ್ದರೆ ಆಗ ಕೊರೆದ ತೂತು ಅಳತೆಯ ಅನುಸಾರ ಇರುವುದಿಲ್ಲ. ಇಂಥ ರಂಧ್ರದೊಳಗೆ ಬೆಣೆಯನ್ನು ತೂರಲಾಗುವುದಿಲ್ಲ. ಈ ಸನ್ನಿವೇಶದಲ್ಲಿ ರಂಧ್ರವನ್ನು ಉಚಿತ ಪ್ರಮಾಣದಲ್ಲಿ ಹಿಗ್ಗಿಸಿ

ತೂರುಬೆಣೆಗೆ ಸರಿಯಾದ ಅವಕಾಶ ಒದಗಿಸುವುದೇ ಒಳದೂಡುವ ಆಯುಧದ ಕೆಲಸ. ಇದೊಂದು ಸಂವಾಟವಿರುವ (ಟೇಪರಿಂಗ್) ಆಯುಧ. ಸಾಮಾನ್ಯವಾಗಿ ಒಳದೂಡುವ ಆಯುಧವನ್ನು ಹೊಸ ತೂತುಗಳನ್ನು ಕೊರೆಯಲು ಬಳಸುವುದಿಲ್ಲ.

ಒಳದೂಡುವ ಕ್ರಿಯೆಯ ವೇಗ ಸಾಮಾನ್ಯವಾಗಿ ಬೈರಿಗೆಯ ವೇಗದ 2/3ರಷ್ಟು. ಈ ಕ್ರಿಯೆಯನ್ನು ಎಸಗುವಾಗ ವಹಿಸಬೇಕಾದ ಮುನ್ನೆಚ್ಚರಿಕೆಗಳು ಹೀಗಿವೆ: 1 ರಂಧ್ರವಿರುವ ವಸ್ತುವನ್ನು ಅಲುಗಾಡದಂತೆ ಬಿಗಿಹಿಡಿದಿರಬೇಕು. 2 ಮಾರ್ಗ ದರ್ಶಿಯ (ಗೈಡ್) ಆವಶ್ಯಕತೆಯಿದೆಯೇ ಎಂದು ಪರಿಶೀಲಿಸಬೇಕು. 3 ಕೈ ಆಯುಧಗಳನ್ನು ಉಪಯೋಗಿಸುವಾಗ ಸಮಾನ (ಯೂನಿಫಾರಂ) ಬಲ ಆಘೂರ್ಣ (ಟಾರ್ಕ್) ಹಾಗೂ ಅಕ್ಷಿಕ ಒತ್ತಡ (ಆಕ್ಷಿಯಲ್ ಪ್ರೆಶರ್) ಇರಬೇಕು. 4 ಒಳ ದೂಡುವ ಆಯುಧದಲ್ಲಿ ಕಂಪನ (ಚಾಟರಿಂಗ್) ಇಲ್ಲದಿರುವಂತೆ ಏರ್ಪಾಡಿರಬೇಕು. ಆವಶ್ಯಕವಾಗಿರುವ ಸ್ನೇಹಕಗಳನ್ನು (ಲ್ಯೂಬ್ರಿಕೆಂಟ್ಸ್) ಉಪಯೋಗಿಸಬೇಕು.

ಒಳದೂಡಬೇಕಾದ ಬೆಣೆಗಳು ಮತ್ತು ರಂಧ್ರಗಳ ಸ್ವಭಾವವನ್ನು ಅನುಸರಿಸಿ ಸಂದರ್ಭಾನುಸಾರ ನೇರನಾಳಾಯುಧ (ಸ್ಟ್ರೇಟ್ ಫ್ಲೂಟ್ ರೀಮರ್), ಕುಂಡಲೀ ನಾಳಾಯುಧ (ಹೆಲಿಕಲ್ ಫ್ಲೂಟ್ ರೀಮರ್), ಸಂವಾಟಾಯುಧ (ಟೇಪರ್ ರೀಮರ್), ವಿಸ್ತರಣಸಾಧ್ಯ ಆಯುಧ ಮುಂತಾದುವನ್ನು ಉಪಯೋಗಿಸಬಹುದು. ಈ ಆಯುಧಗಳನ್ನು ಯಂತ್ರಗಳೊಂದಿಗೆ ಅಥವಾ ಕೈಯಿಂದ ಉಪಯೋಗಿಸುವರು.

ಉತ್ತಮ ಫಲ ಪಡೆಯಲು ಆಯುಧಗಳ ಕರ್ತನಧಾರಗಳು (ಕಟ್ಟಿಂಗ್ ಎಡ್ಜಸ್) ಬಹಳ ಹರಿತವಾಗಿರಬೇಕು. ಇವನ್ನು ಬಹಳ ಗಡುಸಾದ (ಹಾರ್ಡ್) ಉಕ್ಕಿನಿಂದ ತಯಾರಿಸುತ್ತಾರೆ. ಆಯುಧ ರಂಧ್ರದೊಳಗೆ ಸುಲಭವಾಗಿ ಪ್ರವೇಶಿಸಲು ಅನುಕೂಲವಾಗುವಂತೆ ಹೆಚ್ಚಿನ ಆಯುಧಗಳ ತುದಿಗಳನ್ನು ಸಂವಾಟಗೊಳಿಸಿರುತ್ತಾರೆ. ಆಯುಧದ ಕರ್ತನಧಾರಗಳು ಸ್ವಲ್ಪ ಬಾಗಿರುವುದರಿಂದ ಚಲನೆ ಸಲೀಸಾಗುವುದು. ಕತ್ತರಿಸುವ ಅಲಗುಗಳ ನಡುವೆ ಇರುವ ನಾಳಗಳ ಮೂಲಕ ಕತ್ತರಿಸಲ್ಪಟ್ಟ ಲೋಹದ ಚೂರುಗಳು ಸರಿದುಹೋಗುತ್ತವೆ.

ಒಳದೂಡುವ ಆಯುಧಗಳು ಸತತ ಕಾರ್ಯದಿಂದ ಸವೆದಿದ್ದರೆ ಕರಾರುವಾಕ್ಕಾದ ಕೆಲಸಗಳಿಗೆ ಅವನ್ನು ಬಳಸಬಾರದು. ಸಾಣೆ ಹಿಡಿದು ಕಡಿಮೆ ಅಳತೆಯ ಆಯುಧ ಗಳಾಗಿ ಮಾರ್ಪಡಿಸಿ ಆ ಅಳತೆಗೆ ತಕ್ಕ ಕೆಲಸಗಳಿಗೆ ಬೇಕಾದರೆ ಅವನ್ನು ಉಪಯೋಗಿಸಬಹುದು. (ಕೆ.ಆರ್.ಎಂ.ಒ.)

**ಒಳನಾಡಿನ ವ್ಯಾಪಾರ :** ಒಂದು ದೇಶದ ಎಲ್ಲೆಯೊಳಗೆ ನಡೆಯುವ ವ್ಯಾಪಾರ (ಇನ್‌ಲೆಂಡ್ ಟ್ರೇಡ್ ; ಹೋಂ ಟ್ರೇಡ್). ಮಾರುವವ ಕೊಳ್ಳುವವ ರಿಬ್ಬರೂ ಒಂದೇ ದೇಶದಲ್ಲಿದ್ದು ತಂತಮ್ಮಲ್ಲಿ ನಡೆಸುವ ಈ ವ್ಯಾಪಾರ ಭಾರತ ದಂಥ ರಾಷ್ಟ್ರದಲ್ಲಿ ಅದರ ವಿದೇಶೀ ವ್ಯಾಪಾರಕ್ಕಿಂತ ಬಹುಪಾಲು ಹೆಚ್ಚಾಗಿರುತ್ತದೆ; ಅಧಿಕ ಪ್ರಾಮುಖ್ಯ ಪಡೆದಿರುತ್ತದೆ.

ಒಳದೇಶದ ವ್ಯಾಪಾರವನ್ನು ಸ್ಥೂಲವಾಗಿ ಒಟ್ಟುವ್ಯಾಪಾರ ಅಥವಾ ಥೋಕು ವ್ಯಾಪಾರ ಮತ್ತು ಚಿಲ್ಲರೆ ವ್ಯಾಪಾರ ಅಥವಾ ಕಿರುಕುಳ ವ್ಯಾಪಾರ ಎಂದು ಎರಡು ವಿಧವಾಗಿ ವಿಂಗಡಿಸಬಹುದು. ಉತ್ಪಾದಕನಿಂದ ಹೆಚ್ಚು ಮೊತ್ತಗಳಲ್ಲಿ ಪದಾರ್ಥ ಗಳನ್ನು ಕೊಂಡು ಅಥವಾ ಸಂಗ್ರಹಿಸಿ ಅವನ್ನು ಚಿಲ್ಲರೆ ವ್ಯಾಪಾರಿಗಳಿಗೆ ಮಾರುವುದು ಒಟ್ಟುವ್ಯಾಪಾರಿಯ ಮುಖ್ಯ ಕಾರ್ಯಭಾರ (ವಿವರಗಳಿಗೆ ನೋಡಿ—ಒಟ್ಟು ವ್ಯಾಪಾರ). ಅನುಭೋಗಿಯ ಬಯಕೆಗಳನ್ನು ಪೂರೈಸಲು ನಿರತವಾದ ಅರ್ಥವ್ಯವ ಸ್ಥೆಯ ಸರಪಳಿಯಲ್ಲಿ ಚಿಲ್ಲರೆ ವ್ಯಾಪಾರಿಯೇ ಕೊನೆಯ ಕೊಂಡಿ. ಅನುಭೋಗಿಯ ಅಗತ್ಯಗಳನ್ನು ನಿರೀಕ್ಷಿಸಿ ಅವುಗಳ ಪೂರೈಕೆಗಾಗಿ ಸರಕುಸೇವೆಗಳನ್ನು ಸಿದ್ಧವಾಗಿಟ್ಟು ಕೊಂಡಿದ್ದು ಸರಬರಾಜು ಮಾಡುವುದು ಇವನ ಕಾರ್ಯಭಾರ. ಸರಕನ್ನು ಹೊತ್ತು ತರುವವನ ಸಣ್ಣ ವ್ಯಾಪಾರದಿಂದ ಹಿಡಿದು ಬಗೆಬಗೆಯ ಪದಾರ್ಥಗಳನ್ನು ಸಂಗ್ರಹಿಸಿ ಮಾರಾಟ ಮಾಡುವ ಸಕಲಸರಕಿನ ಅಂಗಡಿಯ ವರೆಗೆ ಚಿಲ್ಲರೆ ವ್ಯಾಪಾರ ವೈವಿಧ್ಯಮಯವಾದದ್ದು. (ಇದರ ವಿವರಣೆಗೆ ನೋಡಿ—ಚಿಲ್ಲರೆ ವ್ಯಾಪಾರ) ಉತ್ಪಾದಕನಿಗೂ ಅನುಭೋಗಿಗೂ ನಡುವೆ ನಾನಾ ಬಗೆಯ ಮಧ್ಯವರ್ತಿಗಳೂ (ಮಿಡಲ್ ಮೆನ್) ವ್ಯವಹಾರ ನಡೆಸುತ್ತಾರೆ. (ವಿವರಗಳಿಗೆ ಆಯಾ ಶೀರ್ಷಿಕೆ ಗಳನ್ನು ನೋಡಿ). (ಪಿ.ವಿ.ಎನ್.)

**ಒಳಪಟ್ಟು ಕಟ್ಟಡ :** ಕಟ್ಟಡದ ಉದ್ದದಲ್ಲೂ ಅಡ್ಡದಲ್ಲೂ ನಿರ್ದಿಷ್ಟ ಅಂತರಗಳಲ್ಲಿ ಕಂಬಗಳನ್ನು ನಿಲ್ಲಿಸಿ ಅವನ್ನು ತೊಲೆಗಳಿಂದ ಸೇರಿಸಿ ಮಾಡುವ ರಚನೆ (ಫ್ರೇಮ್ಡ್ ಸ್ಟ್ರಕ್ಚರ್). ಕಂಬಗಳನ್ನು ಮತ್ತು ತೊಲೆಗಳನ್ನು ಒಂದು ಅಂತಸ್ತಿನಿಂದ ಮತ್ತೊಂದು ಅಂತಸ್ತಿಗೆ ಏರಿಸಿ ಅನೇಕ ಅಂತಸ್ತುಗಳಿರುವ ಕಟ್ಟಡಗಳನ್ನು ಕಟ್ಟ ಬಹುದು. ಇಂಥ ಅಂತಸ್ತುಗಳು 6–120ರ ವರೆಗೂ ಇರುವುದುಂಟು. ವೆಚ್ಚದ ಉಳಿಕೆಯ ದೃಷ್ಟಿಯಿಂದ ಆರು ಅಂತಸ್ತುಗಳಿಗಿಂತ ಕಡಿಮೆ ಇರುವ ಕಟ್ಟಡಗಳು ಲಾಭ ದಾಯಕವಲ್ಲ.

ಕಂಬಗಳನ್ನು ಕಬ್ಬಿಣದ ಕಂಬಿ ಮಿಶ್ರಿತ ಕಾಂಕ್ರೀಟಿನಿಂದ ಕಟ್ಟುತ್ತಾರೆ. ತೊಲೆ ಗಳನ್ನು ಈ ಕಂಬಗಳ ಮೇಲೆ ಅಳವಡಿಸಿದಾಗ ಕಟ್ಟಡದ ಅಸ್ಥಿಪಂಜರದ ನಿರ್ಮಾಣ ಪೂರ್ಣವಾಗುತ್ತದೆ. ಅಂತಸ್ತುಗಳ ಮತ್ತು ಗೋಡೆಗಳ ಭಾರವನ್ನು ತೊಲೆಗಳು ಈ ಕಂಬಗಳಿಗೆ ಸಾಗಿಸಿ ಅವುಗಳ ಮೂಲಕ ಭೂಮಿಗೆ ವರ್ಗಾಯಿಸುತ್ತವೆ. ಇಂಥ ಕಟ್ಟಡದ ಒಂದು ವೈಶಿಷ್ಟ್ಯ ಕಂಬ ಹಾಗೂ ತೊಲೆಗಳಲ್ಲಿಯೇ ಇದರ ಪೂರ್ಣ ಭಾರ ವಿತರಣೆಗೊಂಡಿರುವುದು. ಈ ಕಾರಣದಿಂದ ಗೋಡೆಗಳ ದಪ್ಪ ಸಾಂಪ್ರದಾಯಿಕ ಕಟ್ಟಡಗಳ ಗೋಡೆಗಳಿಗಿಂತ (ಇಲ್ಲಿ ಇವೇ ಭಾರವನ್ನು ಹೊರಬೇಕಾದುವು) ಕಡಿಮೆ ಇರುತ್ತದೆ. ಹೀಗಾಗಿ ಕಟ್ಟಡದ ಒಳಗಿನ ಜಾಗ ಹೆಚ್ಚು ದೊರೆತು ಲಾಭವಾಗುವುದು. ಅಲ್ಲದೆ ಬೇಕೆಂದಾಗ ಯಾವ ಗೋಡೆಯನ್ನಾಗಲಿ ತೆಗೆದುಬಿಟ್ಟರೂ ಕಟ್ಟಡಕ್ಕೆ ಯಾವ ತೊಂದರೆಯೂ ಆಗದು.



ಬೆಂಗಳೂರಿನಲ್ಲಿರುವ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ನೂತನ ಕಟ್ಟಡ. ಬಹು ಸೌಧಗಳನ್ನುಳ್ಳ ಇದು ಒಳಪಟ್ಟು ಕಟ್ಟಡಕ್ಕೆ ಯುಕ್ತ ನಿದರ್ಶನ

ಒಳಪಟ್ಟು ಕಟ್ಟಡದ ಭಾರ ಎಲ್ಲ ಕಂಬಗಳ ಮೂಲಕ ಭೂಮಿಗೆ ಸರಿಸಮಾನ ವಾಗಿ ಹಂಚಿಹೋಗುವುದರಿಂದ ಈ ಕಟ್ಟಡಕ್ಕೆ ವಿಶೇಷ ಭದ್ರತೆ ಒದಗುತ್ತದೆ. ಬಿರು ಗಾಳಿ ಮುಂತಾದ ಬಾಹ್ಯ ಬಲಗಳ ಪ್ರಹಾರ, ಭೂಕಂಪ ಮುಂತಾದವುಗಳಿಂದ ಉಂಟಾಗುವ ನೆಲದ ಅದಿರುವಿಕೆ—ಇವುಗಳಿಂದ ಕಟ್ಟಡಕ್ಕೆ ಸಂಭವಿಸುವ ಅಪಾಯ ಅತ್ಯಲ್ಪ. ಆದ್ದರಿಂದ ಭೂಕಂಪದ ಭಯವಿರುವ ಸ್ಥಳಗಳಲ್ಲಿ, ನಿವೇಶನದ ಬೆಲೆ ಹೆಚ್ಚು ಇರುವ ಮಹಾನಗರಗಳಲ್ಲಿ, ಒಳಪಟ್ಟು ಕಟ್ಟಡಗಳ ನಿರ್ಮಾಣ ಪ್ರಯೋಜನ ಕಾರಿ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ, ಅದರಲ್ಲೂ ಅಮೆರಿಕದಲ್ಲಿ ಬಹಳ ಹಿಂದಿನಿಂದಲೂ ಇಂಥ ಕಟ್ಟಡಗಳನ್ನು ಕಟ್ಟುತ್ತ ಬಂದಿದ್ದಾರೆ. ಈಚೆಗೆ ಬೆಂಗಳೂರು, ಮದ್ರಾಸು, ಬೊಂಬಾಯಿ, ಕಲ್ಕತ್ತ, ಚಂಡೀಘರ್, ದೆಹಲಿ ಮುಂತಾದ ಮಹಾನಗರಗಳಲ್ಲಿ ಇವುಗಳ ಬಳಕೆ ಸಾಧಾರಣವಾಗುತ್ತಿದೆ. ಬೆಂಗಳೂರಿನಲ್ಲಿ ಕೆಂಪೇಗೌಡ ರಸ್ತೆಯಲ್ಲಿರುವ ಸ್ಟೇಟ್ ಬ್ಯಾಂಕ್ ಆಫ್ ಮೈಸೂರಿನ ಕಟ್ಟಡ ಮಾದರಿಯ ಕಟ್ಟಡಕ್ಕೊಂದು ಒಳ್ಳೆಯ ನಿದರ್ಶನ. (ಜಿ.ಟಿ.ಜಿ.)

**ಒಳಪೊರೆ :** ಅಂಗರಚನಾಶಾಸ್ತ್ರದಲ್ಲಿ, ಗುಂಡಿಗೆ, ರಕ್ತನಾಳಗಳು, ಹಾಲು ರಸನಾಳಗಳ ಒಳಗಿನ, ಚಪ್ಪಟೆಯಾದ ಸರಳ ಜೀವಕಣಗಳಿಂದಾದ ಪದರ (ಎಂಡೊತೀಲಿಯಂ). ಅದರ ಕಣ್ಣಿನ ಮುಂಗೋಣೆ, ಎದೆಗೂಡು, ಗುಂಡಿಗೆಸುತ್ತು ಪೊರೆ, ಒಡಲುಗಳ ಒಳಗಿನ ಪೊಳ್ಳುಗಳ ಒಳವರಿಪೊರೆಗೂ ಒಳಪೊರೆ ಎನ್ನುವುದು

ವಾಡಿಕೆ. ಸಾಮಾನ್ಯವಾಗಿ ಇದು ಹಗರಿನ ಮೇಲುಪೊರೆಯನ್ನು (ಸ್ಕ್ವೇಮಸ್ ಎಪಿತೀಲಿಯಂ) ಹೋಲುವುದಾದರೂ ಪಿಂಡದ ವಿಕಾಸದಲ್ಲಿ ಇವೆರಡೂ ಬೇರೆ ಮೂಲಗಳ ಪೊರೆಗಳಿಂದ ಏಳುತ್ತವೆ. ನೋಡಿ—ಅಂಗಾಂಶಶಾಸ್ತ್ರ ; ಮೇಲುಪೊರೆ. *

**ಒಳಮಾಳಿಗೆ :** ಮಾಳಿಗೆಯ ಒಳಭಾಗಕ್ಕೆ ಈ ಹೆಸರಿದೆ (ಸೀಲಿಂಗ್). ಒಳ ಎಂದರೆ ಮನೆಯ ಒಂದು ಕೊಠಡಿಯಲ್ಲಿ ನಿಂತು ಮೇಲೆ ನೋಡಿದರೆ ಕಾಣುವ ಸೂರಿನ ಒಳಭಾಗ ಎಂದರ್ಥ. ಎಂದರೆ ಪೂರ್ವಕಾಲದಲ್ಲಿ ಮರದ ತೀರುಗಳನ್ನೆಳೆದು ಅವುಗಳ ಮೇಲೆ ಮರದ ಮಾಡನ್ನು ಕಟ್ಟುತ್ತಿದ್ದಾಗ ತೀರುಗಳು ಒಳಗಿನಿಂದ ಕಾಣದ ಹಾಗೆ ಮುಚ್ಚುವುದಕ್ಕಾಗಿ ಒಳಮಾಳಿಗೆಗಳನ್ನು ಮಟ್ಟವಾಗಿ ಮರದ ಹಲಗೆಗಳಿಂದ ಮಾಡುತ್ತಿದ್ದರು. ಈಚೆಗೆ ಉಕ್ಕಿನ ಸರಕಟ್ಟುಗಳಿಂದ ಮಾಡಿದ ಮಾಡಿನ ಕೆಳಗೂ ಇಂಥ ಒಳಮಾಳಿಗೆಗಳು ಅವಶ್ಯವಾಗುತ್ತಿವೆ. ಇವು ಕೇವಲ ಉಪಯೋಗಕ್ಕಾಗಿ ಮಾಡಿದ ಸರಳವಾದ ಒಳಮಾಳಿಗೆಗಳು.



ತೇಜಪಾಲ ದೇವಾಲಯದ ಒಳಮಾಳಿಗೆಯ ಅಲಂಕರಣ. ಕ್ರಿ.ಶ. 13ನೆಯ ಶತಮಾನ. ಅಬು ಪರ್ವತ, ರಾಜಸ್ಥಾನ.

ಪುರಾತನ ಕಾಲದಿಂದಲೂ ದೇವಾಲಯಗಳಲ್ಲಿಯೂ ಅರಮನೆಗಳಲ್ಲಿಯೂ ಒಳ ಮಾಳಿಗೆಗೆ ಬಣ್ಣ ಬಳಿದೊ ಇಲ್ಲವೆ ನಯವಾದ ಶಿಲ್ಪದ ಆಕೃತಿಗಳನ್ನು ಕಲ್ಲಿನಿಂದ ಕೊರೆದು ನಿಲ್ಲಿಸಿಯೊ ಬಗೆಬಗೆಯಾಗಿ ಅಲಂಕಾರ ಮಾಡುವ ವಾಡಿಕೆ ಇದೆ. ಈಜಿಪ್ಟಿನಲ್ಲಿ ಥೀಬ್ಸ್ ಮೊದಲಾದ ಕಡೆಗಳಲ್ಲಿ ಐಗುಪ್ತ ದೇವಾಲಯಗಳಲ್ಲಿಯೂ ಗೋರಿಗಳಲ್ಲಿಯೂ ಆಕಾಶದ ಪ್ರತೀಕವಾಗಿ (ಸಿಂಬಲ್) ಒಳಮಾಳಿಗೆಯನ್ನು ನಿರ್ಮಿಸಿದ್ದಾರೆ. ಯವನರು ಅಥೆನ್ಸಿನಲ್ಲಿ ದೇವಸ್ಥಾನಗಳ ಮುಖಮಂಟಪಗಳ ಮೇಲೆ ಅಮೃತಶಿಲೆಯ ಒಳಮಾಳಿಗೆಗಳಲ್ಲಿ ಗೋಡೆಗಳ ಅಂಚಿನಲ್ಲಿ ಗೋಲು ಕೆಲಸವನ್ನು ಮಾಡಿ, ನಡುವಿನಲ್ಲಿ ಎತ್ತರಿಸಿದ ಪುಟೀಪುಗಳಿಂದ ಅಲಂಕರಿಸುತ್ತಿದ್ದರು. ರೋಮನರ ಕಾಲದಲ್ಲಿ ಮನೆಗಳಲ್ಲಿಯೂ ಒಳಮಾಳಿಗೆಗಳಿಗೆ ಲಕ್ಷಣವಾಗಿ ಬಣ್ಣ ಹಾಕುತ್ತಿದ್ದರು.

ಭಾರತದ ಪುರಾತನ ದೇವಾಲಯಗಳಲ್ಲಿ ಎಲ್ಲೆಲ್ಲಿಯೂ ಕಾಣಬರುವ ಒಳಮಾಳಿಗೆಗಳು ಮೂರ್ತಿ ಹಾಗೂ ಚಿತ್ರ ಶಿಲ್ಪದಿಂದ ತುಂಬಿ ವಿಶಿಷ್ಟವಾದ ಕಲಾಕೃತಿಗಳಾಗಿವೆ. ಇಲ್ಲಿ ಯಾವ ಬಣ್ಣವನ್ನೂ ಉಪಯೋಗಿಸಿಲ್ಲ. ಹೊಯ್ಸಳ ಶೈಲಿಯ ದೇವಾಲಯಗಳಲ್ಲಿ ಹೊರಗೋಡೆಗಳ ಮೇಲೂ ಕಂಬಗಳ ಮೇಲೂ ಕಾಣಬರುವ ಅಸ್ವಾದೃಶವಾದ ಶಿಲ್ಪಕೌಶಲವೇ ಈ ಒಳಮಾಳಿಗೆಗಳ ಮೇಲೂ ಕಾಣಬರುತ್ತದೆ. ಚಿತ್ರವಿಚಿತ್ರವಾದ ಕಂಬಗಳ ಮೇಲೆ ಕೆತ್ತನೆಯ ಕೆಲಸ ಮಾಡಿದ ತೊಲೆಗಳು, ನಾಲ್ಕು ತೊಲೆಗಳ ನಡುವಣ ಅಂಕಣಗಳಲ್ಲಿ ಬಗೆಬಗೆಯ ಸಂವಿಧಾನಗಳು—ಹೀಗೆ ಒಳಮಾಡುಗಳ ಕೆಳಭಾಗದಲ್ಲಿ ಕಾಣುವ ಕಲೆಯ ವೈವಿಧ್ಯ ಆಶ್ಚರ್ಯಕರವಾಗಿದೆ. ಬೇಲೂರಿನ ಚನ್ನಕೇಶವ ದೇವಾಲಯದ ಹಜಾರದ ಒಳಮಾಳಿಗೆಗಳಲ್ಲಿ ಒಂದೊಂದು ಅಂಕಣದಲ್ಲಿ ಒಂದೊಂದು ಬಗೆಯ ಶಿಲ್ಪಕಲೆಯ ವಿನ್ಯಾಸವನ್ನು ಕಾಣಬಹುದು. ಗರ್ಭಗುಡಿಯ ಮುಂದಿನ ನಡುವಣ ಅಂಕಣದ ಒಳಮಾಳಿಗೆಯಿಂದ ಕೆಳಕ್ಕೆ ಮಧ್ಯದಲ್ಲಿ ಕಲ್ಲಿನ ದಿಂಡನ್ನು ಇಳಿಯಬಿಟ್ಟು ಅದರ ಸುತ್ತಲೂ ಅಲ್ಲದೆ ನಡುವೆಯೂ ವಿಗ್ರಹಗಳನ್ನು ಕೊರೆದಿದ್ದಾರೆ. ಈ ಲಂಬಕದ ಕೆಳಮುಖದಲ್ಲಿ ನಯವಾಗಿ ದೇವತಾ ವಿಗ್ರಹಗಳನ್ನು ಬಿಡಿಸಿದ್ದಾರೆ. ಇದೇ ರೀತಿಯ ಅಲಂಕಾರವನ್ನು ಹಳೇಬೀಡು, ಸೋಮನಾಥಪುರ ಮೊದಲಾದ ಕಡೆಗಳಲ್ಲಿ ಇರುವ ದೇವಾಲಯಗಳ ಒಳಮಾಡುಗಳಲ್ಲೂ ಕಾಣಬಹುದು.

ಯೂರೋಪಿನ ಗಾಥಿಕ್ ಚರ್ಚುಗಳಲ್ಲಿ ಅಡ್ಡತೊಲೆಗಳ ಕೆಳಗಡೆ ವರ್ಣರಂಜಿತವಾದ ನಯಗೆಲಸವನ್ನು ಮಾಡುತ್ತಿದ್ದರು. ಇಟಲಿಯ ಕಲೆಯ ಪುನರುಜ್ಜೀವನದ ಕಾಲದ ಶಿಲ್ಪಿಗಳು ನಯಗಾರೆಯಿಂದ ರಮಣೀಯವಾದ ಮಾದರಿಗಳಲ್ಲಿ ಒಳಮಾಳಿಗೆಗಳನ್ನು ಮಾಡಿ ಮನೋಹರವಾದ ಬಣ್ಣಗಳಿಂದ ಅಲಂಕರಿಸುತ್ತಿದ್ದರು. ಈ ಒಳಮಾಳಿಗೆಗಳಲ್ಲಿ ಮೂರು ನಮೂನೆಗಳನ್ನು ಕಾಣಬಹುದು. ಒಂದು ನಮೂನೆಯಲ್ಲಿ ಚೌಕವಾದ, ಎಂಟು ಮೂಲೆಗಳ, ಇಲ್ಲವೆ ಗುಂಡಾದ ಉಬ್ಬಾದ ಪುಟೀಪುಗಳನ್ನು ಮಾಡಿ ಅಂಚುಗಳಲ್ಲಿ ವಿಶೇಷವಾಗಿ ಅಲಂಕಾರ ಮಾಡುತ್ತಿದ್ದರು. ಎರಡನೆಯ ನಮೂನೆಯಲ್ಲಿ ಕಮಾನು ಚಾವಣಿಯನ್ನು (ವಾಲ್ಟ್) ಕಟ್ಟಿ ನಡುವೆ ಚಿತ್ರಗಳಿಂದ ತುಂಬುತ್ತಿದ್ದರು. ಮೂರನೆಯ ನಮೂನೆ ವೆನಿಸ್ ನಗರದ ವಿಶೇಷ ರಚನೆ. ಅಲ್ಲಿ ಒಳಮಾಳಿಗೆ ಒಂದು ಚೌಕಟ್ಟನ್ನು ಹಾಕಿದ ಚಿತ್ರದ ಹಾಗಿತ್ತು. ರ್‍ಯಾಫೆಲ್, ವೆರೋನೀಸ್ ಮೊದಲಾದ ಪ್ರಖ್ಯಾತ ಚಿತ್ರಗಾರರು ಅರಮನೆಗಳ ಒಳಮಾಳಿಗೆಗಳಲ್ಲಿ ಚಿತ್ರಗಳನ್ನು ಬರೆಯುತ್ತಿದ್ದರು. ಇಂಗ್ಲೆಂಡಿನಲ್ಲಿ ವೈಟ್‌ಹಾಲಿನ ಭೋಜನಶಾಲೆಯ ಮಾಳಿಗೆಗೆ ರ್‍ಯೂಬಿನ್ಸ್ ಈ ಬಗೆಯ ಅಲಂಕಾರವನ್ನು ಮಾಡಿದ. ಬಣ್ಣಬಣ್ಣದ ಎಲೆಗಳು ಮತ್ತು ಹೂಗಳಿಂದ ಅಲಂಕೃತವಾದ ನಯಗಾರೆಯ ಒಳಮಾಳಿಗೆಗಳು ಇಂಗ್ಲೆಂಡಿನಲ್ಲಿ ಸಾಮಾನ್ಯವಾಗಿದ್ದವು. ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ ನೆಬ್ರಾಸ್ಕ ಸಂಸ್ಥಾನದ ರಾಜಧಾನಿಯಲ್ಲಿ ಒಳಮಾಳಿಗೆಗಳಿಗೆ ಬಣ್ಣಗಳನ್ನು ಹಾಕಿ ಅಲಂಕಾರ ಮಾಡಿದ್ದಾರೆ.

ಆಧುನಿಕ ಶಿಲ್ಪಕಲೆಯಲ್ಲಿ ಒಳಮಾಳಿಗೆಗಳು ಬಹಳ ಸರಳವಾಗುತ್ತವೆ. ಭದ್ರ ಕಾಂಕ್ರೀಟಿನ ಮಟ್ಟವಾದ ಮಾಡು ಬಂದ ಮೇಲಂತೂ ಪ್ರತ್ಯೇಕವಾದ ಒಳಮಾಡೇ ಇಲ್ಲವಾಗಿದೆ. ಮಾಳಿಗೆಯ ಅಂಚಿನಲ್ಲಿ ತೆಳುವಾದ ಕಾರ್ನೀಸ್, ನಡುವೆ ಕೊಂಚ ಬಣ್ಣದ ವಿನ್ಯಾಸ ಇಷ್ಟರಲ್ಲಿ ಒಳಮಾಳಿಗೆಯ ಅಲಂಕಾರ ಮುಕ್ತಾಯವಾಗುತ್ತಿದೆ. ಇದಕ್ಕೆ ಬದಲಾಗಿ ಕೊಠಡಿಗಳ ಒಳಗೋಡೆಗಳ ಮೇಲೂ ಮನೆಯ ಹೊರಭಾಗದ ಗೋಡೆಯ ಮೇಲೂ ಬಣ್ಣಗಳಿಂದ ಮಾಡುವ ಅಲಂಕಾರ ರೂಢಿಗೆ ಬರುತ್ತಿದೆ. (ಎಚ್.ಸಿ.ಕೆ.)

**ಒಳವಕ್ಕೋಡು :** ಕೇರಳ ರಾಜ್ಯದ ಪಾಲ್‌ಘಾಟ್ ಜಿಲ್ಲೆಯಲ್ಲಿ ಪಾಲ್‌ಘಾಟಿನ ಉತ್ತರಕ್ಕೆ 3 ಮೈಲಿ ದೂರದಲ್ಲಿ ಕಣಿವೆಯಲ್ಲಿರುವ ಒಂದು ಸಣ್ಣ ಪಟ್ಟಣ. ದಕ್ಷಿಣ ರೈಲ್ವೆಯ ಒಳವಕ್ಕೋಡು ವಿಭಾಗದ ಕೇಂದ್ರ ಕಾರ್ಯಸ್ಥಾನ. ಮದ್ರಾಸು-ಮಂಗಳೂರು ಮಾರ್ಗವೂ ಪಾಲ್‌ಘಾಟ್ ಕವಲು ಮಾರ್ಗವೂ ಇಲ್ಲಿ ಸಂಧಿಸುತ್ತವೆ. ನೀರಾವರಿಯ ಉದ್ದೇಶದಿಂದ ನಿರ್ಮಿಸಲಾಗಿರುವ ಮಲಪುಷ್ಪಾ ಕಟ್ಟೆ ಇರುವುದು ಇದರ ಬಳಿಯಲ್ಲೆ. ಒಳವಕ್ಕೋಡಿನಿಂದ ರೈಲಿನ ಮೂಲಕ ಹೆಂಚು, ಮರದ ದಿಮ್ಮಿ ಮುಂತಾದವು ಹೊರಕ್ಕೆ ಸಾಗುತ್ತವೆ. (ಎನ್‌.ಎ.)

**ಒಳಸಂಚು :** ನ್ಯಾಯಬಾಹಿರವಾದ ಕಾರ್ಯವೊಂದನ್ನು ಮಾಡಲೋ ನ್ಯಾಯಬಾಹಿರ ಮಾರ್ಗದಿಂದ ನ್ಯಾಯವಾದ ಉದ್ದೇಶವೊಂದನ್ನು ಸಾಧಿಸಲೋ ಇಬ್ಬರು ಅಥವಾ ಹೆಚ್ಚು ವ್ಯಕ್ತಿಗಳು ತಮ್ಮಲ್ಲೇ ಮಾಡಿಕೊಂಡ ಒಪ್ಪಂದ (ಕನ್ಸ್‌ಪಿರಸಿ). ನ್ಯಾಯಾಲಯಗಳಾಗಲಿ ವಿಧಾನ ಮಂಡಲಗಳಾಗಲಿ ಅಪರಾಧದ ಒಳಸಂಚನ್ನು (ಕ್ರಿಮಿನಲ್ ಕನ್ಸ್‌ಪಿರಸಿ) ಕುರಿತ ನಿಷ್ಕೃಷ್ಟ ವ್ಯಾಖ್ಯೆ ನೀಡಿಲ್ಲ. ತಕ್ಸೀರು

ಅಥವಾ ಅಪರಾಧ (ಕ್ರಿಮಿನಲ್) ಕಾಯಿದೆಯ ಕ್ಷೇತ್ರದಲ್ಲಿ ಇದು ಸ್ಫುಟವಾಗಿ ಮೂಡಿಲ್ಲ.

ಒಳಸಂಚಿಗೆ ಸಂಬಂಧಿಸಿದ ಕಾನೂನು ಭಾರತೀಯ ದಂಡ ಸಂಹಿತೆಯ 34 ಮತ್ತು 121ಎ ಪ್ರಕರಣಗಳಲ್ಲಿ ಅಂತರ್ಗತವಾಗಿದೆ. ಪ್ರಮುಖವಾಗಿ ಐದನೆಯ ಭಾಗದಲ್ಲಿರುವ 107ನೆಯ ಪ್ರಕರಣದಲ್ಲಿ ದುಷ್ಪ್ರೇರಣೆಯ (ಅಬೆಟ್‌ಮೆಂಟ್) ಎರಡನೆಯ ರೂಪವನ್ನು ವಿವರಿಸುವ ಸಂದರ್ಭದಲ್ಲಿ ಒಳಸಂಚಿನ ವಿಚಾರ ಬಂದಿದೆ. 107ನೆಯ ಪ್ರಕರಣದ ಪ್ರಕಾರ ಅಪರಾಧಿಗೂ (ಕ್ರಿಮಿನಲ್) ಅಪರಾಧಕ್ಕೂ ಬಹಳ ಹತ್ತಿರದ ಸಂಬಂಧ ಇರಬೇಕಾಗುವುದರಿಂದ 1913ರ ಅಪರಾಧನ್ಯಾಯದ ತಿದ್ದುಪಡಿ ಕಾಯಿದೆ ಭಾರತೀಯ ದಂಡಸಂಹಿತೆಗೆ 5ಎ ಎಂಬ ಪ್ರಕರಣವನ್ನು ಸೇರಿಸಿ 120ಎ ಮತ್ತು 120ಬಿ ಪ್ರಕರಣಗಳನ್ನು ಜಾರಿಗೆ ತಂದಿತು. 120ಎ ಪ್ರಕರಣ ಅಪರಾಧದ (ತಕ್ಸೀರು) ಒಳಸಂಚು ಎಂಬ ವಿಶಿಷ್ಟ ಅಪರಾಧವನ್ನು ಸೃಷ್ಟಿಸಿದೆ. 120ಬಿ ಅದನ್ನು ಮಾಡಿದವರಿಗೆ ವಿಧಿಸಬೇಕಾದ ಶಿಕ್ಷೆಯನ್ನು ಹೇಳಿದೆ. ಈ ಪ್ರಕರಣಗಳಿಂದ ಇಂಗ್ಲಿಷ್ ಮತ್ತು ಭಾರತೀಯ ಕಾನೂನುಗಳನ್ನು ಈ ವಿಚಾರದಲ್ಲಿ ಸರಿಸಮಾನಗೊಳಿಸಲು ಪ್ರಯತ್ನಿಸಲಾಗಿದೆ. ಆದರೂ ಭಾರತದಲ್ಲಿಯ ಒಳಸಂಚಿನ ಕಾನೂನಿಗೂ ಇಂಗ್ಲಿಷ್ ಕಾನೂನಿಗೂ ಇನ್ನೂ ಭೇದವಿದೆ.

ಇಬ್ಬರು ಅಥವಾ ಹೆಚ್ಚು ಜನ ಯಾವುದಾದರೂ ಒಂದು ಕಾನೂನುಬಾಹಿರವಾದ ಕಾರ್ಯವನ್ನು, ಅಥವಾ ಕಾನೂನುಬಾಹಿರ ಮಾರ್ಗದ ಮೂಲಕ ಕಾನೂನುಬಾಹಿರವಲ್ಲದ ಕಾರ್ಯವನ್ನು, ಮಾಡಲು ಅಥವಾ ಮಾಡಿಸಲು ಒಪ್ಪಂದ ಮಾಡಿಕೊಂಡರೆ ಅದು ಒಳಸಂಚೆಂದು ಭಾರತೀಯ ದಂಡಸಂಹಿತೆಯ 120ನೆಯ ಪ್ರಕರಣದಲ್ಲಿ ಹೇಳಿದೆ. ಆದರೆ ಇದರ ಪರಂತುಕದಲ್ಲಿ (ಪ್ರೊವೈಸೊ) ಹೇಳಿರುವಂತೆ ಕಾನೂನಿನ ಪ್ರಕಾರ ಅಪಕೃತ್ಯವೆಂದು (ಅಫೆನ್ಸ್) ಗಣಿಸಲಾಗುವ ಕಾರ್ಯಗಳ ಹೊರತಾಗಿ ಬೇರೆ ಕಾರ್ಯಗಳಲ್ಲಿ ಒಪ್ಪಂದ ಮಾತ್ರವೇ ಅಲ್ಲದೆ ಆ ಒಪ್ಪಂದವನ್ನು ಅನುಷ್ಠಾನಕ್ಕೆ ತರಲು ಅದಕ್ಕೆ ಸೇರಿದವರಲ್ಲಿ ಒಬ್ಬ ಅಥವಾ ಹೆಚ್ಚು ಮಂದಿ ಏನಾದರೂ ಒಂದು ಸ್ಪಷ್ಟ ಕೃತ್ಯ (ಓವರ್ಟ್ ಆಕ್ಟ್) ಮಾಡಿರಬೇಕು. ಕಾನೂನುಬಾಹಿರವಾದ ಗುರಿ, ಗುರಿಯನ್ನು ಮುಟ್ಟಲು ಪೂರಕವಾದ ಮಾರ್ಗ—ಇವೆರಡರಲ್ಲಿ ಭೇದವನ್ನು ಕಲ್ಪಿಸದೆ ಅವುಗಳನ್ನು ಸರಿಸಮಾನವೆಂದೇ ಕಾಯಿದೆಯ ವಿವರಣೆ ಪರಿಗಣಿಸುತ್ತದೆ.

**ತಕ್ಸೀರಿನ ಒಳಸಂಚಿನ ಮುಖ್ಯ ಘಟಕಗಳು :** ಭಾರತೀಯ ದಂಡಸಂಹಿತೆಯ 120ಎ ಪ್ರಕರಣದ ಪ್ರಕಾರ ತಕ್ಸೀರಿನ ಒಳಸಂಚಿಗೆ ನಾಲ್ಕು ಮುಖ್ಯ ಘಟಕಗಳಿವೆ.

ಮೊದಲನೆಯದಾಗಿ, ಇಬ್ಬರು ಅಥವಾ ಹೆಚ್ಚು ಮಂದಿಗಳೊಳಗೆ ಒಪ್ಪಂದ : ಒಬ್ಬನ ಮೇಲೆ ಮಾತ್ರ ತಕ್ಸೀರಿನ ಒಳಸಂಚಿನ ತಪ್ಪು ಸ್ಥಾಪನೆಯಾಗಲು ಸಾಧ್ಯವಿಲ್ಲ. ಇಬ್ಬರು ಅಥವಾ ಹೆಚ್ಚು ಮಂದಿಯೊಳಗೆ ಒಪ್ಪಂದ ಅಗತ್ಯ. ಮನಸ್ಸಿನಲ್ಲಿ ಗುಪ್ತವಾಗಿದ್ದ ಇಚ್ಛೆ ಅಪಾದಿತರೊಳಗೆ (ಅಕ್ಯೂಸ್ಡ್) ಪರಸ್ಪರ ವಿಚಾರ ವಿನಿಮಯಕ್ಕೆ ಒಳಗಾಗಿ, ಆ ಇಚ್ಛೆ ಅವರೆಲ್ಲರದೂ ಆಗಬೇಕು. ಅಪಾದಿತರ ಮೇಲೆ ಹೊರಿಸಿದ ತಪ್ಪನ್ನು ಮಾಡಲು ಅಥವಾ ಮಾಡಿಸಲು ಒಪ್ಪಂದವಾಗಿರಬೇಕು. ಇಂಗ್ಲಿಷ್ ನ್ಯಾಯದಲ್ಲಿ ಇಂಥ ಒಪ್ಪಂದವನ್ನೇ ಸ್ಪಷ್ಟ ಕೃತ್ಯವೆಂದು ಭಾವಿಸಲಾಗಿದ್ದು ಒಳಸಂಚಿನ ತಪ್ಪು ಸ್ಥಾಪನೆಯಾಗುತ್ತದೆ. ಒಂದು ರೀತಿಯಲ್ಲಿ ಭಾರತದಲ್ಲಿ ಈ ಮಟ್ಟಿಗೆ ಒಳಸಂಚಿನ ವಿಚಾರದ ಕಾನೂನು ಇಂಗ್ಲಿಷ್ ಕಾನೂನಿನಿಂದ ಸಂಕುಚಿತವಾಗಿದೆ. ಆದರೆ ಇನ್ನು ಕೆಲವು ವಿಚಾರಗಳಲ್ಲಿ ಭಾರತದ ಕಾನೂನು ಇಂಗ್ಲಿಷ್ ಕಾನೂನಿಗಿಂತ ವಿಸ್ತಾರವಾದದ್ದು. ಇಲ್ಲಿ ತಕ್ಸೀರಿನ ಒಳಸಂಚು ಒಂದು ವಿಶಿಷ್ಟ ಅಪಕೃತ್ಯವಾಗಿ ಎಣಿಸಲ್ಪಟ್ಟು ಶಿಕ್ಷಾರ್ಹವಾಗಿದೆ. ಇಂಗ್ಲಿಷ್ ನ್ಯಾಯದಲ್ಲಿ ಗಂಡ ಮತ್ತು ಹೆಂಡತಿ ಒಬ್ಬರೆ ಎಂದು ಪರಿಗಣಿಸಲಾಗುತ್ತದೆ. ಇಲ್ಲಿ ಹಾಗಲ್ಲ. ಇಂಗ್ಲಿಷ್ ನ್ಯಾಯದಲ್ಲಾಗಲಿ ಭಾರತದ ದಂಡಸಂಹಿತೆಯಲ್ಲಾಗಲಿ ಒಪ್ಪಂದ ಅತಿ ಮುಖ್ಯ ಘಟಕ.

ಎರಡನೆಯದಾಗಿ, ಕಾನೂನುಬಾಹಿರವಾದ ಅಥವಾ ಕಾನೂನು ನಿಷೇಧಿಸುವ ಕೆಲಸಕ್ಕಾಗಿ ಒಪ್ಪಂದ ಆಗಿರತಕ್ಕದ್ದು. ಭಾರತೀಯ ದಂಡಸಂಹಿತೆಯ 43ನೆಯ ಪ್ರಕರಣದಲ್ಲಿ ಕಾನೂನುಬಾಹಿರ ಕೃತ್ಯದ ವಿವರವಿದೆ. ಅದರ ಪ್ರಕಾರ ಕಾನೂನು ನಿಷೇಧಿಸಿದ ಅಥವಾ ಕಾನೂನು ತಪ್ಪೆಂದು ನಿರ್ದೇಶಿಸಿದ, ಅಥವಾ ಸಿವಿಲ್ ಮೊಕದ್ದಮೆಗೆ ಬುನಾದಿಯ ರೂಪದ ಕೆಲಸಗಳು ಕಾನೂನುಬಾಹಿರ ಕೆಲಸಗಳು. ಒಂದು ಕೆಲಸವನ್ನು ಮಾಡದೆ ಬಿಡುವುದು ನ್ಯಾಯಬಾಹಿರವಾಗಿದ್ದಲ್ಲಿ ಅದು ಪ್ರತಿಯೊಬ್ಬನೂ ಮಾಡಲೇಬೇಕಾದ ಕೆಲಸವೆಂದು ತಿಳಿಯತಕ್ಕದ್ದು ಎಂದು ಅದೇ ಪ್ರಕರಣ ಹೇಳುತ್ತದೆ. ಆದ್ದರಿಂದ ನ್ಯಾಯಬಾಹಿರ ಕ್ರಿಯೆ ನ್ಯಾಯಬಾಹಿರ ನಿಷ್ಕ್ರಿಯೆಯನ್ನೂ (ಇಲ್ಲೀಗಲ್ ಒಮಿಷನ್) ಒಳಗೊಂಡಿದೆ. ಅಪರಾಧಿಯ ಒಳಸಂಚಿನ ಮೊಕದ್ದಮೆ ತಾಂತ್ರಿಕ (ಟೆಕ್ನಿಕಲ್) ತಪ್ಪಾದುದರಿಂದ ಈ ಘಟಕವನ್ನು ಸರಿಯಾಗಿ ರುಜುವಾತು ಪಡಿಸಬೇಕು. ಧರ್ಮಕ್ಕೆ ವಿರೋಧವಾದ, ಸಾರ್ವಜನಿಕ ಧೋರಣೆಗೆ (ಪಬ್ಲಿಕ್ ಪಾಲಿಸಿ) ವ್ಯತಿರಿಕ್ತವಾದ—ಹೀಗೆ ಮುಂತಾಗಿ ನ್ಯಾಯಾಲಯಗಳು ಜಾರಿ ಮಾಡದಿರುವ—ಒಪ್ಪಂದಗಳು ಕಾನೂನುಬಾಹಿರವೆಂದು ಗಣಿಸಲು ಸಾಧ್ಯವಿಲ್ಲ. ನ್ಯಾಯಬಾಹಿರ ಕೆಲಸ ಕಟ್ಟಕಡೆಯ ಗುರಿಯಾಗಿದ್ದರೂ ಸರಿ, ಅಥವಾ ಗುರಿಗೆ ಪ್ರಾಸಂಗಿಕವಾಗಿದ್ದರೂ (ಇನ್ಸಿಡೆಂಟಲ್) ಸರಿ, ಅಪಕೃತ್ಯ ಸ್ಥಾಪನೆಯಾಗುತ್ತದೆ. ಒಬ್ಬನಿಗೆ ಅಸಾಧ್ಯವಾದ ಅಪಕೃತ್ಯವಾಗಿದ್ದರೂ ಆ ವಿಚಾರ ಗಣನೀಯವಲ್ಲ. ಕೃತ್ಯ ತಕ್ಸೀರಿನದಾಗದಿದ್ದರೂ ಕಾನೂನುಬಾಹಿರವಾಗಿರಬಹುದು ಎಂಬುದನ್ನು ನೆನಪಿನಲ್ಲಿಡಬೇಕು. ತಪ್ಪು ತಿಳಿವಳಿಕೆ (ಮಿಸ್ಟೇಕ್), ಆಕಸ್ಮಿಕ ಘಟನೆ ಇತ್ಯಾದಿ ಕಾರಣಗಳನ್ನು ಮುಂದಿಟ್ಟು ನ್ಯಾಯಬಾಹಿರ ಕೃತಿಯನ್ನು ಸರಿಯೆಂದು ವಾದಿಸಲು ಅಸಾಧ್ಯವೆಂದು ಕಾಯಿದೆಯ ವಿವರಣೆ ಸ್ಪಷ್ಟಪಡಿಸುತ್ತದೆ.

ಮೂರನೆಯದಾಗಿ, ಅದು ಕಾನೂನುಬಾಹಿರ ಕೃತ್ಯವಲ್ಲದಿದ್ದರೂ ಅದನ್ನು ಮಾಡುವ ವಿಧಾನ ಕಾನೂನುಬಾಹಿರವಾಗಿದ್ದರೆ ಸಹ ತಕ್ಸೀರಿನ ಒಳಸಂಚಿನ ಅಪಕೃತ್ಯ ಸ್ಥಾಪಿತವಾಗುತ್ತದೆ. ಗುರಿ ಒಳ್ಳೆಯದಿದ್ದರೆ ಸಾಲದು, ಅದನ್ನು ಸಾಧಿಸುವ ರೀತಿಯೂ ಸಮಂಜಸವಾಗಿರಬೇಕು.

ನಾಲ್ಕನೆಯದಾಗಿ, ಸ್ಪಷ್ಟಕೃತ್ಯದ ಆವಶ್ಯಕತೆ : ಇಂಗ್ಲಿಷ್ ನ್ಯಾಯಕ್ಕೂ ಭಾರತದ ದಂಡಸಂಹಿತೆಗೂ ಈ ವಿಚಾರದಲ್ಲಿರುವ ಭೇದವನ್ನು ಹಿಂದೆಯೇ ಹೇಳಿದೆ. ಇಂಗ್ಲಿಷ್ ನ್ಯಾಯದ ಪ್ರಕಾರ ಒಳಸಂಚಿನ ಅಪಕೃತ್ಯದ ಸ್ಥಾಪನೆಗೆ ಮೇಲೆ ಹೇಳಿದ ಮೂರು ಘಟಕಗಳು ಸಾಕು. ಭಾರತದಲ್ಲಿ ಒಪ್ಪಂದ ಮಾತ್ರವಲ್ಲದೆ ಅದನ್ನು ಸರಿಯಾಗಿ ಬೇರ್ಪಡಿಸುವ ಸ್ಪಷ್ಟಕೃತ್ಯವೂ ಅಗತ್ಯ. ಯಾವುದು ಸ್ಪಷ್ಟಕೃತ್ಯ ಎಂಬುದು ಪ್ರತಿಯೊಂದು ಮೊಕದ್ದಮೆಯ ಸಂಗತಿಯಿಂದ ನಿರ್ಧಾರವಾಗತಕ್ಕ ವಿಚಾರ.

ಭಾರತದ ಕಾಯಿದೆಯಲ್ಲಿ ಎರಡು ಬಗೆಯ ಒಳಸಂಚುಗಳು ಸೇರಿವೆ. ಒಂದನೆಯದು, ಅಪಕೃತ್ಯ ಮಾಡಲು ಹೂಡಿದ ಒಳಸಂಚು. ಇದರಲ್ಲಿ ಸ್ಪಷ್ಟಕೃತ್ಯ ಮಾಡದಿದ್ದರೂ ಒಪ್ಪಂದವೇ ಒಳಸಂಚಿನ ತಪ್ಪಿಗೆ ಕಾರಣವಾಗುತ್ತದೆ. ಎರಡನೆಯದು, ಕಾನೂನುಬಾಹಿರ ಕೃತ್ಯವನ್ನು ಮಾಡಲು ಅಥವಾ ಕಾನೂನುಬಾಹಿರವಲ್ಲದ ಕೆಲಸವನ್ನು ಕಾನೂನುಬಾಹಿರ ರೀತಿಯಿಂದ ಮಾಡಲು ಮಾಡಿಕೊಂಡ ಒಪ್ಪಂದ. ಇದರಲ್ಲಿ ಒಪ್ಪಂದದ ಹೊರತಾಗಿ ಸ್ಪಷ್ಟಕೃತ್ಯವಾದರೆ ಮಾತ್ರ ಒಳಸಂಚಿನ ಅಪರಾಧಕ್ಕೆ ವ್ಯಕ್ತಿ ಗುರಿಯಾಗುತ್ತಾನೆ.

**ಒಳಸಂಚಿಗೂ ಬೇರೆ ಅಪಕೃತ್ಯಗಳಿಗೂ ಇರುವ ಭೇದ :** ಮಿಕ್ಕ ಅಪರಾಧಗಳಲ್ಲಿ ಉದ್ದೇಶವೇ (ಇನ್‌ಟೆನ್‌ಷನ್) ಅಪಕೃತ್ಯವಾಗುವುದಿಲ್ಲ. ಉದ್ದೇಶವನ್ನು ಕಾರ್ಯಗತ ಮಾಡಲು ಏನಾದರೂ ಕೆಲಸ ಮಾಡದೆ ಅಥವಾ ಕೆಲಸ ಮಾಡಲು ಪ್ರಯತ್ನಿಸದೆ ತಪ್ಪು ಸ್ಥಾಪನೆಯಾಗುವುದಿಲ್ಲ. ಆದರೆ ಒಳಸಂಚಿನ ಅಪಕೃತ್ಯ ಉದ್ದೇಶವನ್ನು ಮುಂದುವರಿಸುತ್ತದೆ. ಕಾರ್ಯವನ್ನು ಮಾಡಲಿ ಮಾಡದಿರಲಿ, ಒಳಸಂಚಿನ ಒಪ್ಪಂದವಾದೊಡನೆ ಅಪಕೃತ್ಯ ಸ್ಥಾಪಿತವಾಗುತ್ತದೆ.

ಭಾರತೀಯ ದಂಡಸಂಹಿತೆಯ 34ನೆಯ ಪ್ರಕರಣದಲ್ಲಿ ಸಮಾನ ಉದ್ದೇಶದಿಂದ (ಕಾಮನ್ ಇನ್‌ಟೆನ್‌ಷನ್) ಅಪಕೃತ್ಯ ಮಾಡಿದವರ ವಿಚಾರ ಹೇಳಲಾಗಿದೆ. ಅದರ ಪ್ರಕಾರ ಅನೇಕರು ಒಂದು ಅಪರಾಧದ ಕೃತ್ಯವನ್ನು ಸಾಮಾನ್ಯ ಉದ್ದೇಶದಿಂದ ಮಾಡಿದ್ದರೆ ಪ್ರತಿಯೊಬ್ಬನೂ ತಾನೊಬ್ಬನೇ ಅದನ್ನು ಮಾಡಿದನೆಂಬಂತೆಯೇ ಆ ಕೃತ್ಯಕ್ಕೆ ಜವಾಬ್ದಾರಿಯಾಗಿರುತ್ತಾನೆ. 120ಎ ಪ್ರಕರಣದ ಪ್ರಕಾರ ಕಾನೂನನ್ನು ಮುರಿಯುವ ಬಗ್ಗೆ ಸಂಭವಿಸಿದ ಕೂಡುವಿಕೆಗೆ ಪ್ರಾಮುಖ್ಯವುಂಟು ; ಕೃತ್ಯ ಮಾಡುವುದು ಗೌಣ. 34ನೆಯ ಪ್ರಕರಣದ ಪ್ರಕಾರ ಸಾಮಾನ್ಯ ಉದ್ದೇಶವನ್ನು ಪೂರೈಸುವ ಆಶಯದಿಂದ ಕೃತ್ಯ ಮಾಡುವುದು ಮುಖ್ಯ.

ಒಳಸಂಚಿಗೆ ಸೇರಿದ ಒಬ್ಬನೊಡನೆ ಅಥವಾ ಹಲವರೊಡನೆ ಒಬ್ಬಾತ ಕೂಡಿಕೊಂಡಿದ್ದು, ಒಂದು ಕ್ರಿಯೆ ಅಥವಾ ನಿಷ್ಕ್ರಿಯೆ ಆ ಒಳಸಂಚಿನ ಅನುಸಾರ ನಡೆದಲ್ಲಿ ಆ ಮನುಷ್ಯ ದುಷ್ಪ್ರೇರಣೆ (ಅಬೆಟ್‌ಮೆಂಟ್) ಮಾಡುತ್ತಾನೆಂದು ಭಾರತೀಯ ದಂಡಸಂಹಿತೆಯ 107ನೆಯ ಪ್ರಕರಣದ ಎರಡನೆಯ ಕಲಮು ಹೇಳುತ್ತದೆ. ಕೇವಲ ಒಪ್ಪಂದವೇ ದುಷ್ಪ್ರೇರಣೆಯನ್ನು ಸ್ಥಾಪಿಸಲು ಸಾಕಾಗುವುದಿಲ್ಲ. ಒಂದು ಕ್ರಿಯೆ ಅಥವಾ ನಿಷ್ಕ್ರಿಯೆ ಒಳಸಂಚಿನ ಪ್ರಕಾರ ನಡೆಯಬೇಕು. ತಕ್ಸೀರಿನ ಒಳಸಂಚಿನಲ್ಲಿ ಒಪ್ಪಂದವೇ ಮುಖ್ಯ. 107ನೆಯ ಪ್ರಕರಣದ ಪ್ರಕಾರ ಜನರ ಸಂಘಟನೆ ಅಥವಾ ಅವರೊಳಗೆ ಒಪ್ಪಂದ ಇದ್ದರೆ ಮಾತ್ರ ಸಾಲದು. 120ಎ ಪ್ರಕರಣದ ಒಪ್ಪಂದ ಅಪಕೃತ್ಯದ ಇರಾದೆಯಿಂದ ಕೂಡಿದ್ದರೆ ಸಾಕು.

ಭಾರತೀಯ ದಂಡಸಂಹಿತೆ ಕೆಲವು ಒಳಸಂಚುಗಳಿಗೆ ಪ್ರತ್ಯೇಕವಾದ ಶಿಕ್ಷೆ ವಿಧಿಸಿದೆ. ಈ ಕೆಳಗಿನ ಒಳಸಂಚುಗಳನ್ನು ಅದು ಹೇಳುತ್ತದೆ : 1 ಕೇಂದ್ರ ಸರ್ಕಾರ ಅಥವಾ ರಾಜ್ಯ ಸರ್ಕಾರದ ಮೇಲೆ ಯುದ್ಧದ ಒಳಸಂಚು (121ಎ), 2 ಅಪಕೃತ್ಯ ಮಾಡಲು ನಡೆಸಿದ ಒಳಸಂಚು, 3 ಕಾನೂನುಬಾಹಿರ ಕಾರ್ಯ ನಡೆಸಲು ಒಳಸಂಚು, 4 ಒಳಸಂಚಿನ ದುಷ್ಪ್ರೇರಣೆ (107), 5 ಡಕಾಯಿತರ ಗುಂಪಿನ ಸದಸ್ಯತ್ವ (402), 6 ಕಳ್ಳರ ತಂಡದ ಸದಸ್ಯತ್ವ (401) ಮತ್ತು 7 ಠಕ್ಕತನ (311). ಈ ಒಳಸಂಚುಗಳಿಗೆ ಭಾರತೀಯ ದಂಡಸಂಹಿತೆಯಲ್ಲಿ ಪ್ರತ್ಯೇಕವಾದ ಶಿಕ್ಷೆಗಳನ್ನು ಹೇಳಲಾಗಿದೆ.

(ಕೆ.ಜಿ.ಒ.)

**ಒಳಸುರಿಕ ಗ್ರಂಥಿಗಳು :** ಪ್ರಾಣಿಗಳಲ್ಲಿ, ಪ್ರೋಟೀನು ತೆರನ ವಿಶೇಷ ಬಗೆಯ ರಸಗಳನ್ನು ತಯಾರಿಸಿ, ನಾಳಗಳ ನೆರವಿಲ್ಲದೆ ನೇರವಾಗಿ ರಕ್ತಕ್ಕೇ ಸುರಿವ ಗ್ರಂಥಿಗಳಿವು ; ಇವನ್ನು ನಿರ್ನಾಳಗ್ರಂಥಿಗಳು ಎಂದೂ ಕರೆಯುತ್ತಾರೆ. (ಎಂಡೊಕ್ರಿನ್ ಗ್ಲ್ಯಾಂಡ್ಸ್). ಈ ಸುರಿಕೆಗಳಲ್ಲಿ ಬಲು ವಿಶಿಷ್ಟವಾದ, ಒಂದೋ ಹಲವೋ ಚೋದನಿಕಗಳೆಂಬ (ಹಾರ್ಮೋನ್ಸ್) ರಸಾಯನ ವಸ್ತುಗಳಿರುತ್ತವೆ. ಇವು ಬೇರೆ ಊತಕಗಳ, ಅಂಗಗಳ ಅಂಗಕ್ರಿಯೆಯ ಗತಿಗಳ ಮೇಲೆ ತೀರ ಕಿರಿಯ ಪ್ರಮಾಣಗಳಲ್ಲೇ ವಿಪರೀತ ಪ್ರಭಾವ ತೋರಿ ಚೋದಿಸುತ್ತವೆ. ಶಸ್ತ್ರಕ್ರಿಯೆಯಿಂದ ಒಂದು ಒಳಸುರಿಕ ಗ್ರಂಥಿಯನ್ನು ಪ್ರಾಣಿಯಲ್ಲಿ ಕೊಯ್ದು ತೆಗೆದುಹಾಕಿದರೆ ಗೊತ್ತಾದ ಕೊರೆಯ ಸ್ಥಿತಿ ತಲೆದೋರುವುದು. ಆಮೇಲೆ ಆ ಗ್ರಂಥಿಯ ಚೋದನಿಕವನ್ನು ಕೊಟ್ಟರೆ ಎಂದಿನ ಸ್ಥಿತಿ ಉಂಟಾಗುತ್ತದೆ. ನೋಡಿ—ಗ್ರಂಥಿಗಳು.




ಒಳಸುರಿಕ ಗ್ರಂಥಿಗಳು : 1 ಗುರಾಣಿಕ, 2 ಬದಿಗುರಾಣಿಕಗಳು, 3 ಓಮಗ್ರಂಥಿ. 4 ತೆಮುಡಿಕ, 5 ಅಡ್ರಿನಲ್, 6 ಮಾಂಸಲಿ, 7 ಅಂಡಾಶಯಗಳು, 8 ಹಳದಿಂಡು 9 ತರಡುಗಳು, 10 ಗ್ರಾಫನ ಕೋಶಿಕಗಳು

ಈಗ ಗೊತ್ತಿರುವಂತೆ, ಸಸ್ತನಿಗಳಲ್ಲಿ ತೆಮುಡಿಕ (ಪಿಟುಯಿಟರಿ) ಗ್ರಂಥಿಯ ಮುಂದಣ, ಹಿಂದಣ ಹಾಲೆಗಳು (ಲೋಬ್ಸ್), ಗುರಾಣಿಕ (ತೈರಾಯ್ಡ್), ಬದಿಗುರಾಣಿಕಗಳು (ಪ್ಯಾರತೈರಾಯ್ಡ್ಸ್), ಮಾಂಸಲಿಯ ದೀವುಗಳು (ಪ್ಯಾಂಕ್ರಿಯಾಟಿಕ್ ಐಲೆಟ್ಸ್), ಅಡ್ರಿನಲ್ ರಗಟೆ (ಕಾರ್ಟೆಕ್ಸ್), ಅಡ್ರಿನಲ್ ಕುಸುರಿ (ಮೆಡುಲ), ಅಂಡಾಶಯ (ಓವರಿ), ತರಡು (ಟೆಸ್ಟಿಸ್) ಗ್ರಂಥಿಗಳಿವೆ. ಬೆನ್ನೆಲುಬಿರದ ಜೀವಿಗಳಲ್ಲಿ ಮಾತ್ರ ಬೆಳವಣಿಗೆ, ರೂಪಬದಲಿಕೆಗಳಿಗಾಗಿ ಚೋದನಿಕಗಳನ್ನು ಸುರಿಸುವ ಒಳಸುರಿಕ ನರ ರಚನೆಗಳು ಇರುತ್ತವೆ. ಅಲ್ಲದೆ ರಚನೆಯಲ್ಲಿ ವಿಶೇಷ ಗ್ರಂಥಿಗಳಂತೆ ತೋರದ ಕೆಲವು ಊತಕಗಳು ಕೂಡ ಚೋದನಿಕ ವಸ್ತುಗಳನ್ನು ಸುರಿಸಬಹುದು. ರಸ ಸುರಿಸುವಂತೆ, ಚಲಿಸುವಂತೆ ಆಹಾರ ನಾಳಿಯನ್ನು ಚೋದಿಸುವ ರಸಗಳನ್ನು ಸುರಿಸುವ, ಕರುಳಿನಲ್ಲೇ ಇರುವ ಕೆಲವು ಜೀವಕಣ ತಂಡಗಳು ಇಂಥವೇ. ಕೇಂದ್ರದ ನರದ ಮಂಡಲದಲ್ಲಿ ಕೆಲವು ಜೀವಕಣ ತಂಡಗಳು ನರಕಣಗಳಾಗೂ ಚೋದನಿಕ ತಯಾರಕಗಳಾಗೂ ವರ್ತಿಸುತ್ತವೆ. ನೋಡಿ—ಚೋದನಿಕಗಳು.

ತೆಮುಡಿಕ : ಇಳಿಬೆಳವಿ (ಹೈಪೊತ್ಯಾಲಮಸ್) ಎಂದೂ ಹೆಸರಿರುವ, ಮಾನವನಲ್ಲಿ ಬಟಾಣಿಕಾಳಿನ ಗಾತ್ರದ ಕೇವಲ ಅರೆ ಗ್ರಾಂ ತೂಕವಿರುವ ಈ ಗ್ರಂಥಿ ಮಿದುಳಿನ ತಳದಲ್ಲಿ ನಟ್ಟನಡುವೆ ಒಂದು ತೊಟ್ಟಿಗೆ (ಸ್ಟಾಕ್) ತಗುಲಿಕೊಂಡು, ತಲೆಬುರುಡೆಯ ತಳದ ಒಂದು ಸಣ್ಣ ಗುಳಿಯಲ್ಲಿದೆ. ಅಂಗರಚನೆ, ಬೆಳವಣಿಗೆ, ನಿಜಗೆಲಸಗಳಲ್ಲಿ ಕೊನೆಯ ಪಕ್ಷ ಏಳು ಕ್ರಿಯಾಂಶಗಳನ್ನಾದರೂ ಸುರಿಸುವ ಮುಂದಣ ಹಾಲೆ ಇಲ್ಲವೇ ಗ್ರಂಥಿಭಾಗವೂ ಎರಡು ಚೋದನಿಕಗಳನ್ನು ಸುರಿಸುವ ಹಿಂದಣ ಹಾಲೆ ಇಲ್ಲವೇ ನರಭಾಗವೂ ಈ ಗ್ರಂಥಿಯಲ್ಲಿವೆ. ಬಣ್ಣವಸ್ತುಗಳಿಂದ ರಂಗೇರುವ ಗುಣದಿಂದ ಬೇರೆಬೇರೆಯಾಗಿ ವಿಂಗಡಿಸಬಹುದಾದ ಕೊನೆಯ ಪಕ್ಷ ಮೂರು ಬಗೆಯ ಜೀವಕಣಗಳನ್ನು ಮುಂದಣ ಹಾಲೆಯಲ್ಲಿ ಗುರುತಿಸಬಹುದು : ಕೆನ್ನೀಸರನುರಾಗಿಗಳು (ಇಯೋಸಿನೋಫಿಲ್ಸ್) ಇಲ್ಲವೇ ಆಮ್ಲಾನುರಾಗಿಗಳು (ಅಸಿಡೋಫಿಲ್ಸ್), ಮಾರಾಮ್ಲಾನುರಾಗಿಗಳು (ಬೇಸೋಫಿಲ್ಸ್), ಕ್ರೋಮಂಜುಕುಳಿಗಳು (ಕ್ರೋಮೋಫೋಬ್ಸ್). ಒಂದೊಂದು ಬಗೆಯ ಜೀವಕಣದಿಂದಲೂ ಇಂಥವೇ ಚೋದನಿಕಗಳು ಹುಟ್ಟುವುವೆಂದು ಹೇಳಲೂಬಹುದು.

ಕೆಳತಲೆಯರೆ : ಮಿದುಳಿನ ನಡುವಿನಲ್ಲಿ ಸಣ್ಣ ಅಂಕಣದಂತಿರುವ ಕೆಳತಲೆಯರೆ (ಹೈಪೊತ್ಯಾಲಮಸ್). ತೆಮುಡಿಕ ಗ್ರಂಥಿಯ ಹಿಂದಣ ಹಾಲೆಗೆ ಹೋಗುವ ನರಗಳು ಆ ಹಾಲೆಯ ಚಟುವಟಿಕೆಗಳನ್ನು ಅಂಕೆಗೊಳಿಸುತ್ತವೆ. ಹಾಗೇ ಕೆಳತಲೆಯರೆಯಿಂದ ಮುಂದಣ ಹಾಲೆಗೆ ಚೋದನಿಕ ರಸಗಳು ರಕ್ತದ ಮೂಲಕ ಸಾಗಿ ಅದರ ಕೆಲವು ರಸ ಸುರಿಕೆಗಳನ್ನೂ ನಿಯಂತ್ರಿಸುವುವು. ನೋಡಿ—ಕೆಳತಲೆಯರೆ.

ಗುರಾಣಿಕ : ಕೊರಳಲ್ಲಿ ಗೋಮಾಳೆಯ ಕೆಳಗಡೆ ನಡುವೆಯೂ ಉಸಿರ್ನಾಳದ ಇಪ್ಪಕ್ಕಗಳಲ್ಲೂ ಈ ಗ್ರಂಥಿ ಇದೆ. ಇದಕ್ಕೆ ರಕ್ತದ ಸರಬರಾಯಿ ಹೆಚ್ಚು. ಇದರ ನಡುಭಾಗ ಸಣ್ಣಗಿದ್ದು ಪಕ್ಕಗಳು ರೆಕ್ಕೆಯಾಕಾರದಲ್ಲಿರುವುವು. ನೋಡಿ—ಗುರಾಣಿಕ ಗ್ರಂಥಿ.

ಬದಿಗುರಾಣಿಕಗಳು : ಸಾಮಾನ್ಯವಾಗಿರುವ ಇದರ ನಾಲ್ಕೂ ಗ್ರಂಥಿಗಳೂ ಗುರಾಣಿಕ ಗ್ರಂಥಿಯ ಹಿಂಬದಿಯಲ್ಲೊ ಬದಿಯಲ್ಲೊ ಹುದುಗಿರುತ್ತವೆ. ಕೆಲವೇಳೆ ವಿರಳವಾಗಿ 2–6 ಗ್ರಂಥಿಗಳಿರಲೂಬಹುದು. ಇವು ಗುಲಗಂಜಿ ಗಾತ್ರಕ್ಕಿರುತ್ತವೆ. ಹೆಚ್ಚಾಗಿರುವವಲ್ಲಿ ಕೆಲವು ಎದೆಯೊಳಗಿರಬಹುದು.

ಮಾಂಸಲಿ : ಹೊಟ್ಟೆಯಲ್ಲಿ, ಹಿಂದಣ ಗೋಡೆಯ ಮೇಲೆ ಸಣ್ಣ ಕರುಳಿನ ಮೊದಲನೆಯ ಭಾಗವಾದ ದುರಾರ್ಗರುಳಿನ (ಡುಯೋಡಿನಂ) ತಿರುವಿನಲ್ಲಿ ಈ ಗ್ರಂಥಿಯಿದೆ. ಆಹಾರವನ್ನು ಅರಗಿಸುವ ಈ ಗ್ರಂಥಿಯ ರಸಗಳನ್ನು ನಾಳಗಳ ಮೂಲಕ ಸಣ್ಣ ಕರುಳಿಗೊಯ್ದರೂ ಉಳಿದ ಭಾಗದಲ್ಲಿ ತಯಾರಾಗುವ ಇನ್ಸುಲಿನ್ ಒಂದು ಚೋದನಿಕ. ಮೊದಲಿನದು ಹೊರಸುರಿಕ (ಎಕ್ಸೊಕ್ರಿನ್) ಎರಡನೆಯದು ಒಳಸುರಿಕ (ಎಂಡೊಕ್ರಿನ್) ರಸ. ಒಳಸುರಿಕ ಭಾಗ ಒಟ್ಟಾಗಿ ಒಂದೆಡೆಯಲ್ಲಿರದೆ ಅಲ್ಲಲ್ಲಿ ಜೀವಕಣ ತಂಡಗಳಾಗಿ ದ್ವೀಪಗಳಂತಿದೆ. ಇವಕ್ಕೆ ಲ್ಯಾಂಗರ್‌ಹ್ಯಾನ್ಸನ ದೀವುಗಳು ಎಂದು ಹೆಸರಿದೆ. ಈ ಜೀವಕಣಗಳಲ್ಲಿ ಆಲ್ಫ, ಬೀಟಗಳೆಂಬ ಎರಡು ಬಗೆಗಳಿರುವುವು.

ಅಡ್ರಿನಲುಗಳು : ಒಂದೊಂದು ಮೂತ್ರಪಿಂಡದ ಮೇಲ್ಗಡೆಯೂ ತ್ರಿಭುಜಾಕಾರಿ ಟೋಪಿಯಂತೆ ಅಂಟಿಕೊಂಡಿರುವ ಈ ಸಣ್ಣ ಗ್ರಂಥಿಗಳು ನಿಜವಾಗಿ ಒಂದೊಂದರಲ್ಲೂ ಎರಡು ಬೇರೆ ಬೇರೆ ಗ್ರಂಥಿಗಳಿವೆ : ಒಳಗಿನ ಭಾಗವಾದ ಕುಸುರಿ (ಮೆಡುಲ) ಹೊರಗಿನ ಭಾಗವಾದ ರಗಟೆ (ಕಾರ್ಟೆಕ್ಸ್). ಅನುವೇದನಾ ನರಮಂಡಲದ (ಸಿಂಪತೆಟಿಕ್ ನರ್ವಸ್ ಸಿಸ್ಟಂ) ನರಗಂಟುಗಳ (ಗ್ಯಾಂಗ್ಲಿಯ) ಬಳಿ ಹರಡಿ ಬಿದ್ದಿರುವ ತೆರನ ಕ್ರೋಮ್‌ನೆಂಟಿನ (ಕ್ರೋಮಫಿನ್) ಜೀವಕಣಗಳು ಅಡ್ರಿನನಿನಲ್ಲಿ ಕುಸುರಿಯಲ್ಲಿ ಇರುವುವು. ನೋಡಿ—ಅಡ್ರಿನಲ್ ಗ್ರಂಥಿಗಳು.

ತರಡುಗಳು : ಸಸ್ತನಿಗಳಲ್ಲಿ, ತೊಡೆಗಳ ನಡುವಣ ಸಂದಲ್ಲಿ ಇಳಿಬಿದ್ದಿರುವ ಚೀಲದಂತಿರುವ ಬೀಜಚೀಲದಲ್ಲಿ (ಸ್ಕ್ರೋಟಂ) ಪಕ್ಕಪಕ್ಕದಲ್ಲಿ ಬೇರೆಬೇರೆಯಾಗಿ ಎರಡಿರುತ್ತವೆ. ಮೈಕಾವಿಗಿಂತಲೂ ಇವು ತಣ್ಣಗಿರುವುವು. ರೇತು ಕಣಗಳು ವಿಕಾಸವಾಗಲು ಹೀಗೆ ತಣ್ಣಗಿರಲೇಬೇಕು. ರೇತುಸಾಗಿನ ಕಿರುನಾಳಗಳಲ್ಲಿ (ಸೆಮನಿಫೆರಸ್ ಟ್ಯೂಬ್ಯೂಲ್ಸ್) ರೇತು ಕಣಗಳು ವಿಕಾಸವಾಗುತ್ತವೆ. ಈ ಕಿರುನಾಳಗಳ

ನಡುವೆ ಇರುವ ಊತಕಾಂತರ (ಇಂಟರ್‌ಸ್ಟಿಷಿಯಲ್) ಜೀವಕಣ ತಂಡಗಳು ಪುಲ್ಲಿಂಗಿಕಾರಿ (ಟೆಸ್ಟೋಸ್ಟಿರೋನ್) ಚೋದನಿಕವನ್ನು ಸುರಿಸುತ್ತವೆ.

ಅಂಡಾಶಯಗಳು : ಕೆಳಹೊಟ್ಟೆಯ ಕಿಬ್ಬೊಳಿಯಲ್ಲಿ (ಪೆಲ್ವಿಸ್) ಗರ್ಭಕೋಶದ ಎರಡು ಪಕ್ಕಗಳಲ್ಲೂ ಒಂದೊಂದು ಅಂಡಾಶಯ ಗ್ರಂಥಿ ಇರುವುದು.

ಮಾಸು : ಬಸುರಿಯ ಗರ್ಭಕೋಶದಲ್ಲಿ ಪಿಂಡಗೂಸು (ಫೀಟಸ್) ಬೆಳೆದಂತೆಲ್ಲ ಅಂಡಾಶಯದ ಒಳಸುರಿಕ ಕೆಲಸವನ್ನು ಇದು ವಹಿಸಿಕೊಳ್ಳುವುದರಿಂದ ಇದೂ ಒಂದು ಒಳಸುರಿಕ ಗ್ರಂಥಿ ಎನ್ನಬಹುದು.

ನೋಡಿ—ಒಳಸುರಿಕೆಶಾಸ್ತ್ರ (ಎಂ.ಬಿ.)

**ಒಳಸುರಿಕೆಶಾಸ್ತ್ರ :** ಒಳಸುರಿಕ ಗ್ರಂಥಿಗಳ ರಚನೆ, ನಿಜಗೆಲಸ, ಆರೋಗ್ಯ ಮತ್ತು ರೋಗಗಳನ್ನು ತಿಳಿಸಿಕೊಡುವ ಶಾಸ್ತ್ರ (ಎಂಡೊಕ್ರಿನಾಲಜಿ). ತೆಮಡಿಕ (ಪಿಟುಯಿಟರಿ), ಗುರಾಣಿಕ (ತೈರಾಯ್ಡ್), ಮಾಂಸಲಿ (ಪ್ಯಾಂಕ್ರಿಯಾಸ್), ಅಡ್ರಿನಲುಗಳು, ಬದಿಗುರಾಣಿಕಗಳು (ಪ್ಯಾರತೈರಾಯ್ಡ್ಸ್), ಅಂಡಾಶಯಗಳು (ಓವರೀಸ್), ತರಡುಗಳು (ಟೆಸ್ಟೀಸ್), ಮಾಸು (ಪ್ಲಸೆಂಟ) ಇವಿಷ್ಟು ಈಗ ಗೊತ್ತಿರುವ ಮುಖ್ಯವಾದ ಒಳಸುರಿಕ ಗ್ರಂಥಿಗಳು. ಜೊಲ್ಲು, ಕಣ್ಣೀರು ಗ್ರಂಥಿಗಳು ರಸಗಳನ್ನು ನಾಳಗಳ ಮೂಲಕ ಸುರಿಸುತ್ತವೆ. ಆದರೆ ಮೇಲೆ ಹೇಳಿದ ಒಳಸುರಿಕ ಗ್ರಂಥಿಗಳು ರಸಗಳನ್ನು ನೇರವಾಗಿ ರಕ್ತದೊಳಕ್ಕೇ ಸುರಿದುಬಿಡುತ್ತವೆ. ಇವು ತಯಾರಿಸಿದ ರಸಗಳಿಗೆ ಚೋದನಿಕಗಳು (ಹಾರ್ಮೋನ್ಸ್) ಎಂದು ಹೆಸರು. ಇನ್ನೆಲ್ಲೋ ದೂರದ ಅಂಗಗಳ ಊತಕಗಳಲ್ಲಿ ಪ್ರಭಾವ ತೋರುವುದರಿಂದ ಇವನ್ನು ರಸದೂತಗಳು ಎನ್ನುವುದೂ ಉಂಟು. ರಕ್ತದಲ್ಲಿನ ಬಲು ಕಿರಿಯ ಪ್ರಮಾಣಗಳಲ್ಲಿ ಹಲವಾರು ಅಂಗಗಳ ಇಲ್ಲವೇ ಇಡೀ ಮೈಮೇಲೆ ಪ್ರಭಾವ ತೋರುವುದು ಹೆಚ್ಚಳಿಕೆ. (ನೋಡಿ—ಚೋದನಿಕಗಳು.)

ಚೋದನಿಕಗಳ ನಿಜಗೆಲಸಗಳು ಹಲವಾರಿವೆ. ಮೈ ಬೆಳೆವಣಿಗೆಯ ಹತೋಟಿ, ಜನನಾಂಗಗಳ ಲಿಂಗದ ಸುರಿಕೆಗಳಿಂದ ಗಂಡು ಹೆಣ್ಣುಗಳ ಮರುಚಲದ ಲಿಂಗ ಗುಣಗಳನ್ನು (ಸೆಕೆಂಡರಿ ಸೆಕ್ಸ್ ಕ್ಯಾರೆಕ್ಟರ್ಸ್) ಬೆಳೆಸಿ ನೆರವಂತೆ ಮಾಡುವುದೂ ಮುಖ್ಯ. ಇಡೀ ಜೀವಿಯ ಮೈಯೊಳಗಿನ ಆವರಣದಲ್ಲಿ ಏರುಪೇರಿಲ್ಲದಂತೆ ಒಂದೇ ಸಮನಾಗಿ ಇರಿಸುವುದೂ ಒಂದು ಮುಖ್ಯ ನಿಜಗೆಲಸ. ಇದಕ್ಕೆ ಸಮನಿಲುವೆ (ಹೋಮಿಯೊಸ್ಟೇಸಿಸ್) ಎಂದಿದೆ. ಒಳಸುರಿಕ ಗ್ರಂಥಿಗಳು ಈ ನಿಜಗೆಲಸಗಳಲ್ಲಿ ಒಂದಿಲ್ಲೊಂದು ರೀತಿಯಲ್ಲಿ ನೆರವಾಗುತ್ತವೆ. ಗಂಡಿನ ಚೋದನಿಕ ಗಂಡಿನ ಗುಣವನ್ನು ಹೊರದೋರುವಂತೆ ಮಾಡುವುದೇ ಅಲ್ಲದೆ, ಮೈಬೆಳೆತಕ್ಕೂ ಕಾರಣವಾಗಿರುತ್ತದೆ. ಇವು ಯಾವುವೂ ತಾವಾಗಿ ಯಾವ ಕೆಲಸವನ್ನೂ ಮೊದಲಿಡದಿದ್ದರೂ ಬೇರೆ ಅಂಗಗಳ ಕೆಲಸಗಳನ್ನು ನಿಯಂತ್ರಿಸುವುವು. ಈ ಅಂಕೆಯ ಗುಟ್ಟು ಏನೆಂದು ಚೆನ್ನಾಗಿ ಗೊತ್ತಿಲ್ಲವಾದರೂ ಜೀವಕಣಗಳಲ್ಲಿನ ಜೀವವೈಜ್ಞಾನಿಕ ಪ್ರತಿಕ್ರಿಯೆಗಳನ್ನು ಚೋದಿಸಿ ಇಲ್ಲವೇ ಕುಂದಿಸಿ ಕೆಲಸ ಮಾಡುತ್ತವೆ ಎನ್ನಬಹುದು.

ರಕ್ತದಲ್ಲಿ ಸುತ್ತಿಡುವ ಚೋದನಿಕಗಳ ಪ್ರಮಾಣ ಅವುಗಳ ಹುಟ್ಟು, ಹೊರದೂಡಿಕೆ ಇಲ್ಲವೇ ಚುರುಕಿಳಿತಗಳಿಗೆ ತಕ್ಕಂತೆ ಇರುವುದು. ಇದೇ ಅಲ್ಲದೆ, ಚೋದನಿಕದ ಬೇಡಿಕೆಯೂ ಊತಕಗಳ ಈಡುವಳಿಯೂ ಆಗಾಗ್ಗೆ ಹೆಚ್ಚು ಕಡಿಮೆ ಆಗುತ್ತಿರುವುದರಿಂದ ಸುರಿಕೆಯ ಹತೋಟಿ ಬಲು ಚೆನ್ನಾಗಿರುವುದು. ಅಡ್ರಿನಲ್ ಗ್ರಂಥಿ ಸುರಿಕೆ ಹಗಲೂ ರಾತ್ರಿ ಬದಲಾಗುತ್ತಿರುವುದು. ಬೆಳಗಿನಲ್ಲಿ ಕಡಿಮೆ ಇದ್ದುದು ಸಂಜೆ ಹೊತ್ತಿಗೆ ತೀರ ಹೆಚ್ಚಾಗುತ್ತದೆ. ಮಾಂಸಲಿಯ ಒಳಸುರಿತ ಆಹಾರದಲ್ಲಿನ ಹಿಟ್ಟು ಸಕ್ಕರೆಗಳ ಪ್ರಮಾಣಕ್ಕೆ ತಕ್ಕಂತಿರುವುದು. ಬಸಿರು ಇಲ್ಲವೇ ಮುಟ್ಟಿನ ಚಕ್ರವನ್ನು ಅಂಡಾಶಯ ಸುರಿತಗಳು ಅನುಸರಿಸುತ್ತವೆ. ಚೋದನಿಕಗಳ ಸುರಿಕೆಯ ಹತೋಟಿಯಲ್ಲಿ ಎರಡು ಬಗೆಗಳಿವೆ. ಮೊದಲಿನದಾಗಿ, ಹಿಂದುಂಬುವ ಯಾಂತ್ರಿಕ (ಫೀಡ್ ಬ್ಯಾಕ್ ಮೆಕ್ಯಾನಿಸಂ) ವಿಧಾನವಿದೆ. ರಕ್ತದಲ್ಲಿ ಸುತ್ತಾಡುತ್ತಿರುವ ಚೋದನಿಕದ ಪ್ರಮಾಣ, ಅದೇ ಚೋದನಿಕದ ಉತ್ಪತ್ತಿಯನ್ನು ಅಂಕೆಯಲ್ಲಿಡುತ್ತದೆ. ತೆಮಡಿಕ ಗ್ರಂಥಿಯ ಗುರಾಣಿಕ ಚೋದಕ (ತೈರಾಯ್ಡ್ ಸ್ಟಿಮ್ಯುಲೇಟಿಂಗ್) ರಸ ಗುರಾಣಿಕ ಗ್ರಂಥಿಯ ಸುರಿತವನ್ನು ಚೋದಿಸುವುದು. ಆದರೆ ಗುರಾಣಿಕ ಗ್ರಂಥಿಯ ರಸವಾದ ತೈರಾಕ್ಸಿನ್ ರಕ್ತದಲ್ಲಿ ಸುತ್ತಾಡುತ್ತಿರುವ ತನಕ ಗುರಾಣಿಕ ಚೋದಕ ರಸ ಸುರಿತವನ್ನೇ ತಗ್ಗಿಸಿಡುತ್ತದೆ. ಇದೇ ಹಿಂದುಂಬುವ ಯಾಂತ್ರಿಕತೆ. ಕೆಲವೇಳೆ ರಕ್ತದಲ್ಲಿನ ಹಲವು ರಾಸಾಯನಿಕಗಳೂ ಚೋದನಿಕದ ಸುರಿತವನ್ನು ನಿಯಂತ್ರಿಸುವುದುಂಟು. ರಕ್ತದ ಸಕ್ಕರೆಯ ಪ್ರಮಾಣ ಹೆಚ್ಚಿದ ಹಾಗೆಲ್ಲ ಇನ್ಸುಲಿನ್ನಿನ ಸುರಿತವೂ ಏರುತ್ತ ಹೋಗುವುದು ಇದರ ಒಂದು ಉದಾಹರಣೆ.

ಚೋದನಿಕಗಳ ಸುರಿಕೆಯ ಹತೋಟಿ ವಿಧಾನಗಳಲ್ಲಿ ಎರಡನೆಯದಾಗಿ, ನರ ಧಮನಿಗಳ ಮೂಲಕ ಹತೋಟಿಗೊಳಿಸುವುದಿದೆ. ತೆಮಡಿಕ ಗ್ರಂಥಿಯ ಹಿಂದಣ ಹಾಲೆಯನ್ನು ನರಗಳ ಮೂಲಕವೂ ಮುಂದಣ ಹಾಲೆಯನ್ನು ಅದರ ತೂರುಗೊಂದಿ ಮಂಡಲದ (ಪೋರ್ಟಲ್ ಸಿಸ್ಟಂ) ಧಮನಿಗಳ ಮೂಲಕವೂ ಚಟುವಟಿಕೆಯನ್ನು ಕೆಳತಲೆಯರೆ (ಹೈಪೊತ್ಯಾಲಮಸ್) ಅಂಕೆಗೊಳಿಸುವುದು. ಕೆಳತಲೆಯರೆಯಲ್ಲಿನ ನಡು ಬೀಜಗಳ (ನ್ಯೂಕ್ಲೈಯೈ) ತಂಡಗಳಿಂದ ಹೊರಟ ನರಗಳು ಈ ಧಮನಿಗಳ ಸುತ್ತ ಕೊನೆಗೊಳ್ಳುವುವು. ಇವುಗಳ ಕೊನೆಗಳಲ್ಲಿ ಕೆಲವು ರಸಾಂಶಗಳು ಸುರಿಯುತ್ತವೆ. ಇವಕ್ಕೆ ವಿಮೋಚಕ (ರಿಲೀಸಿಂಗ್) ಅಂಶಗಳು ಎಂದಿದೆ. ಈ ರಸಾಂಶಗಳು ರಕ್ತದ ಮೂಲಕ ತೆಮಡಿಕ ಗ್ರಂಥಿಯನ್ನು ಸೇರಿ ಅದರ ಚಟುವಟಿಕೆಯನ್ನು ಹೆಚ್ಚು ಕಡಿಮೆ ಮಾಡುತ್ತವೆ. ತೆಮಡಿಕ ಗ್ರಂಥಿಯ ಮುಂದಣ ಹಾಲೆಯಲ್ಲಿನ ಚೋದನಿಕಗಳು ಮೈಯಲ್ಲಿನ ಬಹುಪಾಲು ಎಲ್ಲ ಒಳಸುರಿಕ ಗ್ರಂಥಿಗಳ ಚಟುವಟಿಕೆಗಳನ್ನೂ ನಿಯಂತ್ರಿಸುವುದರಿಂದ ಇವೆಲ್ಲಕ್ಕೂ ಕೆಳತಲೆಯರೆಯದೇ ಮೇಲುಗೈ ಎನ್ನಬಹುದು.

ಅಡ್ರಿನಲ್ ಗ್ರಂಥಿಯ ಕುಸುರಿಯ (ಮೆಡುಲ) ಚಟುವಟಿಕೆ ಮುಖ್ಯವಾಗಿ ತನ್ನಂಕೆಯ ನರಮಂಡಲದ ಅಂಕೆಯಲ್ಲಿರುತ್ತದೆ.

ಒಳಸುರಿಕ ಗ್ರಂಥಿಗಳ ನಿಜಗೆಲಸಗಳಲ್ಲಿ ಏರುಪೇರಾದರೆ ಆಗಾಗ್ಗೆ ರೋಗಗಳು ತಲೆದೋರುತ್ತವೆ. ಹೀಗಾಗುವ ಕಾರಣಗಳೂ ಹಲಬಗೆಯವು, ಅಲ್ಲದೆ ವಿಚಿತ್ರವಾದುವು. ಮಿತಿಗೆಟ್ಟು ಬೆಳೆದರೆ, ಗಂತಿಗಳು ಒಳಗೆದ್ದರೆ, ಈ ಗ್ರಂಥಿಗಳ ಚಟುವಟಿಕೆ ಹೆಚ್ಚಿ ಚೋದನಿಕಗಳ ರಸ ಸುರಿವುದೂ ಏರುವುದು. ಹಾಳಿಡುವ ಗಂತಿಗಳಿಂದಲೂ ಗ್ರಂಥಿಗಳ ರಕ್ತನಾಳಗಳಿಗೆ ತಾಕುವ ರೋಗಗಳಿಂದಲೂ ಗೊತ್ತಿರದ ಕಾರಣಗಳಿಂದಾಗುವ ನವೆತದಿಂದಲೂ (ಅಟ್ರೊಫಿ) ಗ್ರಂಥಿಗಳು ಜಡವಾಗಿ ಕೆಲಸಗೆಡಬಹುದು. ಆಗ ಒಳಸುರಿಕ ರಸಗಳ ಕೊರತೆಯಾಗುವುದು, ಇಲ್ಲವೇ ಸುರಿತ ನಿಂತೇ ಹೋಗಬಹುದು.

ಒಳಸುರಿಕ ಗ್ರಂಥಿಗಳ ನಿಜಗೆಲಸಗಳನ್ನು ಕಂಡುಕೊಳ್ಳಲು ಕೆಲವು ಉಪಾಯಗಳಿವೆ; ಮೊದಲಾಗಿ, ಪ್ರಯೋಗದ ಪ್ರಾಣಿಗಳಲ್ಲಿ, ಗೊತ್ತಾದ ಗ್ರಂಥಿಯನ್ನು ಮೈಯಿಂದ ಕಿತ್ತೊಗೆದಾಗ ಆಗುವ ಬದಲಾವಣೆಗಳನ್ನು ಗುರುತಿಸುವುದು. ಆರೋಗ್ಯದ ಪ್ರಾಣಿಗೆ ಒಂದು ಗ್ರಂಥಿಯ ಸಾರಕವನ್ನು ಕೊಟ್ಟಾಗ ಏನೇನಾಗುವುದೆಂದು ತಿಳಿಯುವುದು. ಕೊನೆಯದಾಗಿ, ಗ್ರಂಥಿಗೆ ಹತ್ತುವ ರೋಗಗಳಲ್ಲಿನ ಅನಾರೋಗ್ಯದ ಶೋಧನೆ. ಇದಕ್ಕಾಗಿ ಹಲವಾರು ಶಾಸ್ತ್ರಪರಿಣತರ ನೆರವು ಬೇಕಾಗುವುದು.

**ತೆಮಡಿಕ :** ಈ ಗ್ರಂಥಿಯ ಮುಂದಣ ಹಾಲೆಯಲ್ಲಿ, ಆರು ಚೋದನಿಕಗಳು ತಯಾರಾಗುತ್ತವೆ : ಬೆಳೆತದ ಚೋದನಿಕ (ಗ್ರೋತ್ ಹಾರ್ಮೋನ್), ಗುರಾಣಿಕ ಚೋದಕ (ತೈರೊಟ್ರೋಪಿಕ್), ಅಡ್ರಿನಲ್ ರಗಟೆ ಚೋದಕ (ಅಡ್ರಿನೊಕಾರ್ಟಿಕೊಟ್ರೋಪಿಕ್), ಹಾಲೂರಿಗ (ಪ್ರೋಲ್ಯಾಕ್ಟಿನ್), ಜನನಗ್ರಂಥಿ ಚೋದಕ (ಗೊನಾಡೊಟ್ರೋಪಿಕ್), ಮೆಲಿನೊಸೈಟ್ ಚೋದಕ ಚೋದನಿಕಗಳು. ಇವೆಲ್ಲ ಬಹುಮಟ್ಟಿಗೆ ಬೇರೆ ಒಳಸುರಿಕ ಗ್ರಂಥಿಗಳನ್ನು ಹತೋಟಿಯಲ್ಲಿಡುತ್ತವೆ.

ಬೆಳೆತದ ಚೋದನಿಕ : ಮೈ ಬೆಳೆವಣಿಗೆಗೆ ಕಾರಣವಾದ ಈ ಚೋದನಿಕ ಇಯೋಸಿನೊಫಿಲ್ ಜೀವಕಣಗಳಲ್ಲಿ ತಯಾರಾಗಿ ಒಳಸುರಿವುದು. ಬಹುಮಟ್ಟಿಗೆ ಮೈಯಲ್ಲಿನ ಎಲ್ಲ ಊತಕಗಳ ಬೆಳೆವಣಿಗೆಗೂ ಇದೇ ಕಾರಣ. ಇದರ ಸುರಿತ ಕುಂದಿದರೆ ಬೆಳೆವಣಿಗೆಯೂ ಕುಗ್ಗುತ್ತದೆ. ಸುರಿತ ಏರಿದರೆ ಬೆಳೆವಣಿಗೆ ಕೂಡ ಜೋರಾಗುವುದು ಇಲ್ಲವೇ ಹದಗೆಡುವುದು. ಅಲ್ಲದೆ, ಹಿಟ್ಟು ಸಕ್ಕರೆ ಪ್ರೋಟೀನು ಕೊಬ್ಬುಗಳ ಜೀವವಸ್ತುಕರಣದ (ಮೆಟಬಾಲಿಸಂ) ಮೇಲೂ ಇದರ ಪ್ರಭಾವವಿದೆ.

ಅನೇಕ ಪ್ರಾಣಿಗಳಲ್ಲಿ ಈ ಚೋದನಿಕ ಚೊಕ್ಕ ರೂಪದಲ್ಲಿ ದೊರೆತಿದೆ. ಇದರ ರಾಸಾಯನಿಕ ರಚನೆಯೂ ಗೊತ್ತಿದೆ. ಮಾನವನ ಈ ಚೋದನಿಕದಲ್ಲಿ 188 ಅಮೈನೋ ಆಮ್ಲಗಳಿವೆ. ಇದನ್ನು ಚುಚ್ಚಿ ಹೊಗಿಸಿದರೆ, ಪ್ರಾಣಿಗಳು ಬೇಗನೆ ಬೆಳೆಯುತ್ತವೆ. ಮಾನವನ ಇಲ್ಲವೇ ಕೋತಿಗಳ ಚೋದನಿಕ ಮಾತ್ರ ಮಾನವನಲ್ಲಿ ಪ್ರಭಾವ ತೋರುವುದೇ ಹೊರತು ಬೇರೆ ಪ್ರಾಣಿಗಳವಲ್ಲ. ಬೇರೆ ಪ್ರಾಣಿಗಳಲ್ಲೂ ಇದು ಪ್ರಭಾವಿ.

ಇಯೋಸಿನೊಫಿಲ್ ಜೀವಕಣ ಭಾಗದಲ್ಲಿ ಗಂತಿ ಎದ್ದಿದ್ದರೆ, ಎಳೆಯದಲ್ಲಿ ತೋರ ಕಾಯವೂ (ಜೈಗ್ಯಾಂಟಿಸಂ), ಬೆಳೆದವರಲ್ಲಿ ತೋರ ಅವಯವತನವೂ (ಅಕ್ರೋಮೆಗಲಿ) ಕಂಡುಬರುವುದು. ತೋರ ಅವಯವತನದಲ್ಲಿ ಅಂಗೈ ಅಂಗಾಲು ಬೆರಳುಗಳೇ ಮುಂತಾದ ಅಂಗಗಳು ಮಿತಿಮೀರಿ ಬೆಳೆದು ವಿಕಾರರೂಪ ತಾಳುವುವು. ಯಾವ ಕಾರಣದಿಂದಲಾದರೂ ಈ ಜೀವಕಣ ಭಾಗದ ನಿಜಗೆಲಸ ಕೆಟ್ಟರೆ ರೋಗಿ ಗುಜ್ಜಾರಿಯಾಗುವನು.

ರಕ್ತದಲ್ಲಿ ಎಂದಿಗೂ ಇರುವ ಸಕ್ಕರೆ ಪ್ರಮಾಣವನ್ನು ಈ ಚೋದನಿಕ ಏರಿಸುತ್ತದೆ. ರಕ್ತದಲ್ಲಿಂದ ಅಮೈನೋ ಆಮ್ಲಗಳು ಜೀವಕಣಗಳ ಒಳಸಾಗುವುದನ್ನು ಸರಳಗೊಳಿಸಿ ಅಲ್ಲಿ ಪ್ರೋಟೀನು ತಯಾರಿಕೆಯನ್ನು ಹೆಚ್ಚಿಸುವುದು. ಪುಷ್ಟಿನೀಡಿ ಬೆಳೆಸುವ ಈ ನಿಜಗೆಲಸಕ್ಕೆ ಜೀವವಸ್ತುಚಯ (ಅನಬಾಲಿಸಂ) ಎಂದಿದೆ. ಮೈಯಲ್ಲಿ ಕೂಡಿಟ್ಟಿರುವ ಕೊಬ್ಬನ್ನು ಕೊಬ್ಬಿನ ಆಮ್ಲಗಳಾಗಿ ಇದು ಒಡೆಸುತ್ತದೆ.

ಕೆಳತಲೆಯರೆಯಲ್ಲಿ ಹುಟ್ಟುವ ಬೆಳೆತದ ಚೋದನಿಕದ ವಿಮೋಚಕ ಅಂಶ ಈ ಚೋದನಿಕ ಸುರಿವುದನ್ನು ಅಂಕೆಗೊಳಿಸುವುದು.

ಗುರಾಣಿಕ ಚೋದಕ ಚೋದನಿಕ : ಬೇಸೊಫಿಲ್ ಜೀವಕಣಗಳಲ್ಲಿ ಹುಟ್ಟಿ, ಗುರಾಣಿಕ ಗ್ರಂಥಿಯ ರಚನೆ ಬೆಳೆತ ಸುರಿತಗಳನ್ನು ಚೋದಿಸುತ್ತದೆ. ಈ ಚೋದನಿಕದ ಚಟುವಟಿಕೆ ಹೆಚ್ಚಿದರೆ ಗ್ರೇವ್ಸನ ರೋಗವೇಳುವುದು. ಬಿರುಗಣ್ಣು (ಎಕ್ಸಾಫ್ತಾಲ್ಮಸ್) ಇದರ ಒಂದು ಲಕ್ಷಣವಾಗಿದ್ದರೂ ಹಾಗಾಗಲು ಕಾರಣವಾಗಿ ಬಿರುಗಣ್ಣಾಗಿಸುವ ಅಂಶವೇ ಬೇರೊಂದು ಇರುವಂತೆ ತೋರುವುದು. ಮುಖ್ಯವಾಗಿ, ಗ್ರೇವ್ಸನ ರೋಗಕ್ಕೆ ತೆಮಡಿಕ ಗ್ರಂಥಿ ಸರಿಯಾಗಿ ಕೆಲಸ ಮಾಡದ್ದೇ ಕಾರಣ. ತೆಮಡಿಕ ಗ್ರಂಥಿಯಿಂದ ಗುರಾಣಿಕ ಚೋದಕ ರಸ ಸುರಿತದ ಹತೋಟಿ ಕೆಳತಲೆಯುರೆಯಲ್ಲಿನ ಗುರಾಣಿಕ ಚೋದಕ ವಿಮೋಚಕಾಂಶದಿಂದ ಆಗುವುದು.

ಅಡ್ರಿನಲ್ ರಗಟೆ ಚೋದಕ ಚೋದನಿಕ (ಎಸಿಟಿಎಚ್): ಬೇಸೊಫಿಲ್ ಜೀವಕಣಗಳಲ್ಲಿ ಇದು ತಯಾರಾಗುತ್ತದೆಂಬ ನಂಬಿಕೆಯಿತ್ತು. ಆದರೀಗ, ಕ್ರೋಮೋಫೋಬುಗಳೇ ತಯಾರಿಸುವಂತೆ ತೋರುವುದು. ಈ ಚೋದನಿಕವೂ ಚೊಕ್ಕರೂಪದಲ್ಲಿ ದೊರೆತು ರೋಗಚಿಕಿತ್ಸೆಯಲ್ಲಿ ಮದ್ದಾಗಿ ಬಳಕೆಯಲ್ಲಿದೆ. ಇದು ಅಡ್ರಿನಲ್ ಗ್ರಂಥಿಗಳ ರಗಟೆಯ (ಕಾರ್ಟೆಕ್ಸ್) ಬೆಳೆತ ನಿಜಗೆಲಸಗಳನ್ನು ಹೆಚ್ಚಿಸುತ್ತದೆ. ಆಲ್ಡೊಸ್ಟಿರೋನ್ ಸುರಿತವನ್ನು ಹೆಚ್ಚು ಕಡಿಮೆ ಮಾಡದು. ಈ ಚೋದನಿಕದ ಸುರಿತ ಮಿತಿಮೀರಿದರೆ, ಕಷಿಂಗನ ಲಕ್ಷಣಕೂಟ (ಕಷಿಂಗ್ಸ್ ಸಿಂಡ್ರೋಂ) ಕಾಣಿಸಿಕೊಳ್ಳುತ್ತದೆ. ಈ ಚೋದನಿಕ ರಸದ ಸುರಿತವನ್ನುಕೂಡ, ಕೆಳತಲೆಯುರೆಯಲ್ಲಿ ಹುಟ್ಟುವ ಅಡ್ರಿನಲ್ ರಗಟೆ ಚೋದಕ ವಿಮೋಚಕಾಂಶ ನಿಯಂತ್ರಿಸುವುದು.

ಹಾಲೂರಿಗ ಚೋದನಿಕ : ಇಯೋಸಿನೊಫಿಲ್ ಜೀವಕಣಗಳಲ್ಲಿ ಇದು ಹುಟ್ಟುವುದು. ಬೆಳೆದಿರುವ ಮೊಲೆಯಲ್ಲಿ ಇದು ಹಾಲೂರಿಸುತ್ತದೆ. ಹಾಲೂರಲು ಇದು ಬೇಕೇ ಬೇಕು. ಕೆಲವು ಪ್ರಾಣಿಗಳ ಅಂಡಾಶಯುಗಳಲ್ಲಿ ಹಳದಿಂಡು (ಕಾರ್ಪಸ್ ಲೂಟಿಯಂ) ರೂಪುಗೊಳ್ಳಲೂ ಇದೇ ಕಾರಣವೆನಿಸಿದೆ. ಇದರಿಂದಲೇ ಇದಕ್ಕೆ ಹಳದಿಂಡುಚೋದಕ (ಲೂಟಿಯೊ ಟ್ರೋಪಿಕ್) ಚೋದನಿಕವೆಂದು ಹೆಸರಿದೆ. ಇದು ಹೆಣ್ಣಲ್ಲೇ ಅಲ್ಲದೆ, ಗಂಡಲ್ಲೂ ಇರುವುದಾದರೂ ಗಂಡಿನಲ್ಲಿ ಇದರ ಪಾತ್ರ ಏನೆಂದು ಗೊತ್ತಿಲ್ಲ. ಕೆಳತಲೆಯುರೆಯಲ್ಲಿ ಇದನ್ನು ಕುಂದಿಸುವ ಅಂಶವೊಂದು ತಯಾರಾಗುವುದು.

ಜನನಗ್ರಂಥಿ ಚೋದನಿಕಗಳು : ಕೋಶಿಕ ಚೋದಕ (ಫಾಲಿಕಲ್ ಸ್ಟಿಮುಲೇಟಿಂಗ್), ಹಳದಿಂಡುಗೊಳಿಕ (ಲೂಟಿನೈಸಿಂಗ್) ಎಂದು ಎರಡು ಚೋದನಿಕಗಳಿವೆ. ಇವೆರಡೂ ಬೇಸೊಫಿಲ್ ಜೀವಕಣಗಳಲ್ಲಿ ಹುಟ್ಟುವುವು. ಇವು ಒಂದಕ್ಕೊಂದು ನೆರವಾಗುತ್ತವೆ.

ಹೆಂಗಸರ ಅಂಡಾಶಯುಗಳಲ್ಲಿ ಕೋಶಿಕ ಚೋದಕ ಚೋದನಿಕ ಗ್ರಾಫನ ಕೋಶಿಕಗಳನ್ನು (ಗ್ರಾಫಿಯನ್ ಫಾಲಿಕಲ್ಸ್) ಬೆ ಳೆ ಸು ವು ದು. ಹೆಣ್ಣುಲಿಂಗರಸವಾದ ಬೆದೆಜನಕವನ್ನು (ಈಸ್ಟ್ರೊಜನ್) ಈ ಕೋಶಿಕ ತಯಾರಿಸಿಬಿಡುತ್ತದೆ. ಅಲ್ಲದೆ, ಕೋಶಿಕ ಚೋದಕ ಚೋದನಿಕ ಸುರಿತದ ನಿಯಂತ್ರಣವೂ ಕೆಳತಲೆಯುರೆಯ ಕೈಯಲ್ಲೇ ಇದೆ. ರಕ್ತದಲ್ಲಿ ಬೆದೆಜನಕದ ಪ್ರಮಾಣ ಹೆಚ್ಚಾದರೆ, ಕೋಶಿಕ ಚೋದಕ ಚೋದನಿಕದ ಸುರಿತವೂ ಇಳಿದು, ಹಳದಿಂಡುಚೋದಕ ಚೋದನಿಕದ ಸುರಿವು ಏರುವುದು. ಪೂರ್ತಿಯಾಗಿ ಬೆಳೆದ ಗ್ರಾಫನ ಕೋಶಿಕ ಒಡೆದು ಒಳಗಿರುವ ಅಂಡಾಣುವನ್ನು ಅಂಡಾಶಯುದಿಂದ ಬಿಡುಗಡೆ ಮಾಡಿ ಕೋಶಿಕವಿದ್ದೆಡೆ ಹಳದಿಂಡು ಬೆಳೆವಂತೆ ಹಳದಿಂಡುಚೋದಕ ಚೋದನಿಕ ಚೋದಿಸುತ್ತದೆ. ಹೆಣ್ಣಿನ ಮತ್ತೊಂದು ಚೋದನಿಕವಾದ ಪ್ರೋಜೆಸ್ಟಿರೋನು ಹಳದಿಂಡು ಸುರಿಬಿಡುತ್ತದೆ. ಈ ಸುರಿತ ಕೂಡ ಹಳದಿಂಡುಚೋದಕ ಚೋದನಿಕದ ಹತೋಟಿಯಲ್ಲಿದೆ. ಮತ್ತೆ ಈ ಚೋದನಿಕದ ಸುರಿತ ಕೆಳತಲೆಯುರೆಯ ಅಂಕೆಯಲ್ಲಿದೆ. ಅಂಡಾಶಯುದಿಂದ ಹೊರಬಿದ್ದು ಗರ್ಭನಾಳದ ಮೂಲಕ ಗರ್ಭಕೋಶವನ್ನು ಹೋಗುವ ಅಂಡಾಣು ಫಲವಂತವಾಗದಿದ್ದಲ್ಲಿ ಹಳದಿಂಡು ಮುಗುಟಿಕೊಳ್ಳುತ್ತದೆ. ಆಗಲೇ ಹೆಂಗಸು ಮುಟ್ಟಾಗುವುದು. (ನೋಡಿ—ಮುಟ್ಟು.)

ಗಂಡಿನಲ್ಲಿ ಕೋಶಿಕ ಚೋದಕ ಚೋದನಿಕ ಮುಖ್ಯ ಪಾತ್ರ ತರಡುಗಳಲ್ಲಿ ರೇತುಕಣಗಳನ್ನು (ಸ್ಪರ್ಮಟೊಜೋವ) ಬೆಳೆಸುವುದರಲ್ಲಿದೆ. ಆದರೆ ಹಳದಿಂಡು ಚೋದಕ ಚೋದನಿಕ ಮಾತ್ರ ತರಡುಗಳಲ್ಲಿರುವ ಊತಕಾಂತರದ(ಇಂಟರ್‌ಸ್ಟಿಷಿಯಲ್) ಜೀವಕಣಗಳ ಬೆಳೆವಣಿಗೆ ಹೆಚ್ಚಿಸಿ ಅವು ಪುಲ್ಲಿಂಗಕಾರಿ (ಟೆಸ್ಟೊಸ್ಟಿರೋನ್) ಎಂಬ ಚೋದನಿಕ ಸುರಿವಂತೆ ಮಾಡುವುದು. ಆದ್ದರಿಂದಲೇ ಇದನ್ನು ಊತಕಾಂತರ ಜೀವಕಣಚೋದಕ ಚೋದನಿಕ ಎನ್ನುವುದೂ ಉಂಟು.

ಮೆಲಿನೊಸೈಟ್ ಚೋದಕ ಚೋದನಿಕ : ತೆಮಡಿಕ ಗ್ರಂಥಿಯ ನಡು ಹಾಲೆಯಲ್ಲಿ ಹುಟ್ಟುವುದು. ಇದರಿಂದ ಇದಕ್ಕೆ ಇಂಟರ್ಮೀಡಿನ್ ಎಂಬ ಹೆಸರೂ ಇದೆ. ಮುಖ್ಯವಾಗಿ ಇದರ ಪ್ರಭಾವ ಕಪ್ಪೆ ಮೀನುಗಳ ಚರ್ಮದಲ್ಲಿರುವ ಮೆಲನೊಫೋರುಗಳ ಮೇಲೆ ಕಾಣುವುದು. ಈ ಕರಿಯ ಜೀವಕಗಳು ಅಗಲವಾಗಿ ಹಿಗ್ಗಿದಾಗ ಚರ್ಮವೆಲ್ಲ ಕಪ್ಪೇರಿದಂತೆ ತೋರುತ್ತದೆ. ಮಾನವನಲ್ಲಿ ಇದರ ನಿಜಗೆಲಸವೇನೆಂದು ತಿಳಿದಿಲ್ಲ. ಆದರೂ ಮಾನವನಿಗೆ ಕೊಟ್ಟರೂ ಇದೇ ಪ್ರಭಾವವನ್ನು ಕಾಣಬಹುದು. ಈ ತೆರನ ಪ್ರಭಾವ ಅಡ್ರಿನಲ್ ರಗಟೆ ಚೋದಕ ಚೋದನಿಕದಿಂದಲೂ ತೋರುತ್ತದೆ.

ತೆಮಡಿಕ ಗ್ರಂಥಿಯ ಮುಂದಣ ಹಾಲೆ ಪೂರ್ತಿ ಹಾಳಾದರೆ ಸಿಮ್ಮಂಡ್ಸನ ರೋಗವೇಳುವುದು. ಈ ರೋಗದಲ್ಲಿ ಅಂಡಾಶಯುಗಳು ನವೆದುಹೋಗಿ ಗುರಾಣಿಕ, ಅಡ್ರಿನಲ್ ರಗಟೆ ಗ್ರಂಥಿಗಳ ನಿಜಗೆಲಸಗಳೂ ಕುಗ್ಗುತ್ತವೆ. ರೋಗಿ ಬಡಕಲಾಗಿ ನಿತ್ರಾಣಿಯಾಗುವನು. ರಕ್ತದಲ್ಲಿನ ಸಕ್ಕರೆ ಪ್ರಮಾಣ ಕುಗ್ಗಲೂಬಹುದು.

ತೆಮಡಿಕದ ಹಿಂದಣ ಹಾಲೆ ಚೋದನಿಕಗಳು : ಈ ಹಿಂದಣ ಹಾಲೆಯನ್ನು ಕೆಳತಲೆಯುರೆಯಿಂದ ಇಳಿದು ಬೆಳೆದ ಭಾಗವೆಂದೂ ಗಣಿಸಬಹುದು. ಕೆಳತಲೆಯುರೆಯಲ್ಲಿರುವ ಕಣ್ಣುಮೇಲಿನ (ಸುಪ್ರ ಆಪ್ಟಿಕ್) ಅಲ್ಲದೆ ಮಿದುಳ್ಗುಳಿ ಬದಿಯ (ಪ್ಯಾರಾವೆಂಟ್ರಿಕ್ಯುಲಾರ್) ನಡುಬೀಜಗಳಿಂದ ಹೊರಡುವ ನರಗಳು ತೆಮಡಿಕದ ಹಿಂದಣ ಹಾಲೆಯಲ್ಲಿ ಕೊನೆಗೊಳ್ಳುತ್ತದೆ. ಹಿಂದಣ ಹಾಲೆಯ ರಚನೆಯೂ ಮಿದುಳಿನದರ ಹಾಗೆಯೇ ಇರುವುದು. ನರಂಟು (ನ್ಯೂರೋಗ್ಲಿಯ) ಜೀವಕಣಗಳ ರೂಪ ಬದಲಾಗಿ ತೆಮಡಿಕ ಕಣಗಳಾಗುವುವು (ಪಿಟುಯಿಸೈಟ್). ಈ ಹಿಂದಣ ಹಾಲೆಯಲ್ಲಿ ಎರಡು ಚೋದನಿಕಗಳು ಸುರಿಯುತ್ತವೆ : ರಕ್ತನಾಳೊತ್ತುಕ (ವೇಸೊಪ್ರೆಸ್ಸಿನ್) ಇಲ್ಲವೇ ಮೂತ್ರಸುರಿಕ ರೋಧಕ (ಆಂಟಿ ಡೈಯುರೆಟಿಕ್) ಚೋದನಿಕ ಒಂದು; ಇನ್ನೊಂದು ಆಕ್ಸಿಟೋಸಿನ್. ಇವೆರಡು ಕೆಳತಲೆಯುರೆಯ ನರಕಣಗಳಲ್ಲಿ ತಯಾರಾಗಿ ನರಗಳ ಮೂಲಕ ಸಾಗಿಳಿದು ಬಂದು ಹಿಂದಣ ಹಾಲೆ ಸೇರಿಕೊಂಡು ತೆಮಡಿಕ ಕಣಗಳಲ್ಲಿ ಕೂಡಿದ್ದು ಬೇಕೆಂದಾಗ ಬಿಡುಗಡೆಯಾಗುವುವು.

ಹಿಂದಣ ಹಾಲೆಯ ಸಾರಕವನ್ನು ಪ್ರಾಣಿಗಳಿಗೆ ಚುಚ್ಚಿ ಹೊಗಿಸಿದರೆ ರಕ್ತನಾಳಗಳ ಸ್ನಾಯುಗಳು ಕುಗ್ಗಿ, ರಕ್ತದ ಒತ್ತಡವೇರುವುದು. ಅಷ್ಟೊಂದು ಚೋದಕ ಸುರಿಯದ್ದರಿಂದ ಸಾಮಾನ್ಯವಾಗಿ ಈ ಪ್ರಭಾವ ಆರೋಗ್ಯದಲ್ಲಿ ಕಾಣಬರದು. ಆದರೆ ಮೂತ್ರಸುರಿಕರೋಧಕ ಪ್ರಭಾವ ಮಾತ್ರ ಕೊಂಚ ಕೊಟ್ಟರೂ ತೋರುತ್ತದೆ. ಮೈಯಲ್ಲಿರುವ ಲವಣಗಳ ಸಾಂದ್ರತೆಮಟ್ಟಕ್ಕೆ ತಕ್ಕಂತೆ ಇದು ಸುರಿವುದು. ಮೈಯಲ್ಲಿನ ರಸಗಳಲ್ಲಿ ಉಪ್ಪು (ಸೋಡಿಯಂ ಕ್ಲೋರೈಡು) ಹೆಚ್ಚಿದಾಗ ರಸಗಳ ಆಸ್ಮೋಟಿಕ್ ಒತ್ತಡ ಏರುತ್ತದೆ. ಆಗ ಕೆಳತಲೆಯುರೆಯಲ್ಲಿರುವ ಆಸ್ಮೊರಿಸೆಪ್ಟಾರ್ಸ್ ಚೋದನೆಯಾಗಿ ಈ ಚೋದನಿಕವನ್ನು ಹಿಂದಣ ಹಾಲೆಯಲ್ಲಿ ಸುರಿವಂತೆ ಮಾಡುವುದು. ಮುಖ್ಯವಾಗಿ ಇದು ಮೂತ್ರಪಿಂಡದ ಕಿರ್ನಾಳಗಳು (ಟ್ಯೂಬ್ಯೂಲ್ಸ್) ನೀರನ್ನು ರಕ್ತಕ್ಕೆ ಮತ್ತೆ ಹೀರಿಕೊಳ್ಳುವಂತೆ ಮಾಡಿ ಮೂತ್ರ ಸುರಿವುದನ್ನು ತಗ್ಗಿಸುತ್ತದೆ. ಆಗ ನೀರು ಮೈಯಲ್ಲೇ ಉಳಿವುದು.

ಹಿಂದಣ ಹಾಲೆಯನ್ನು ಹಾಳುಮಾಡಿದರೆ, ಕಿತ್ತೊಗೆದರೆ, ರೋಗ ಹತ್ತಿದರೆ, ಸಪ್ಪನೆ ಬಹುಮೂತ್ರ (ಡಯಬೆಟಿಸ್ ಇನ್ಸಿಪಿಡಸ್) ಕಾಣಿಸಿಕೊಳ್ಳುತ್ತದೆ. ಈ ರೋಗದಲ್ಲಿ ಮೂತ್ರ ಬರೀ ನೀರುನೀರಾಗಿ ಹೆಚ್ಚೆಚ್ಚಾಗಿ ಹೋಗುತ್ತಿರುವುದು. ಮೂತ್ರದ ವಿಶಿಷ್ಟ ಗುರುತ್ವ ಇಳಿದಿರುವುದು. ಸಿಹಿಮೂತ್ರದಲ್ಲಿ (ಡಯಬೆಟಿಸ್ ಮೆಲ್ಲಿಟಸ್) ಇದ್ದಂತೆ ಮೂತ್ರದಲ್ಲಿ ಸಕ್ಕರೆ ಹೋಗದು. ಹಿಂದಣ ಹಾಲೆಯ ಮೂತ್ರಸುರಿಕರೋಧಕ ಚೋದನಿಕವನ್ನು ಚುಚ್ಚಿ ಹೊಗಿಸಿದರೆ ಇಲ್ಲವೇ ನಶ್ಯದ ಹಾಗೆ ಕೊಡುವುದರಿಂದ ರೋಗವನ್ನು ಅಂಕೆಯಲ್ಲಿಡಬಹುದು.

ಆಕ್ಸಿಟೋಸಿನ್ ಮುಖ್ಯವಾಗಿ ಹೆರಿಗೆಯಲ್ಲಿ ಗರ್ಭಕೋಶದ ಸ್ನಾಯುಗಳನ್ನು ಬಲು ಚುರುಕಾಗಿ ಕುಗ್ಗಿಸುತ್ತದೆ. ಹೆರಿಗೆಯಲ್ಲಿ ಇದು ಒಳ್ಳೆಯ ನೆರವು ಎನಿಸಿದರೂ ಇದು ಆಗಬೇಕೇ ಬೇಡವೇ ಎನ್ನುವುದು ಗೊತ್ತಿಲ್ಲ. ತುಂಬಿರುವ ಮೊಲೆಗಳಿಂದ ಹಾಲನ್ನು ಹೊರಡಿಸುವುದು ಈ ಚೋದನಿಕದ ಇನ್ನೊಂದು ನಿಜಗೆಲಸ. ಆದರೆ ಹಾಲನ್ನು ತಯಾರಿಸುವ ಹಾಗೆ ಚೋದಿಸದು. ಇದೊಂದು ಹಿಮ್ಮುರಿವ ವರ್ತನೆ (ರಿಫ್ಲೆಕ್ಸ್ ಆಕ್ಷನ್). ಮೊಲೆ ಚೂಚುಕವನ್ನು ಕೂಸು ಚೀಪಿದಾಗ ಈ ಆಕ್ಸಿಟೋಸಿನ್ ಸುರಿದು ಮೊಲೆಯ ಸಾಗುನಾಳಗಳ ಸುತ್ತಲೂ ಇರುವ ಸ್ನಾಯು ಮೇಲ್ಪೊರೆಯ (ಮಯೋ ಎಪಿತೀಲಿಯಲ್) ಜೀವಕಣಗಳನ್ನು ಕುಗ್ಗಿಸುವುದರಿಂದ ಹಾಲು ಹೊರಬರುವಂತೆ ಹಿಂಡುವುದು.

ಗಂಡಿನ ಬೀಜವಾದ ರೇತುಕಣ (ಸ್ಪರ್ಮಟಜೂನ್) ಗರ್ಭಕೋಶದೊಳಗೆ ಮುಂಸಾಗಲೂ ಇದು ನೆರವಾಗುವುದೆಂಬ ನಂಬಿಕೆಯಿದೆ.

**ಗುರಾಣಿಕ :** ಈ ಗ್ರಂಥಿ ತೈರಾಕ್ಸಿನ್, ಟ್ರೈಅಯೊಡೊತೈರೊನೀನ್ ಚೋದನಿಕಗಳನ್ನು ಸುರಿಸುವುದು. ಇವಲ್ಲಿ ಅಯೊಡೀನ್ ಧಾತು ಇರುತ್ತದೆ. ಸುತ್ತಲೂ ಇರುವ ಗೋಳಾಕಾರದ ಕೋಶಿಕಗಳ ಒಂಟಿ ಪದರದ ಒಳಗಡೆ ಗ್ಲಾಬ್ಯುಲಿನ್ ಪ್ರೋಟೀನಿನೊಂದಿಗೆ ಚೋದನಿಕ ಕೂಡಿ ತೈರೊಗ್ಲಾಬ್ಯುಲಿನ್ ಆಗಿ ಕೂಡಿರುವುದು. ಗುರಾಣಿಕ ಚೋದನಿಕ ಸುರಿವಾಗ ಗ್ಲಾಬ್ಯುಲಿನಿನಿಂದ ಬೇರ್ಪಟ್ಟು ರಕ್ತ ಸೇರುತ್ತವೆ.

ಈ ಗ್ರಂಥಿಯ ಚೋದನಿಕಗಳು ಮೈಯಲ್ಲಿನ ಎಲ್ಲ ಊತಕಗಳ ಜೀವವಸ್ತುಕರಣ ವೇಗವನ್ನು ಹೆಚ್ಚಿಸಿ ಚಟುವಟಿಕೆ ಏರುವಂತೆ ಮಾಡುವುವು. ಹಾಗಾದಾಗ ಆಮ್ಲಜನಕದ ಸೇವನೆ ಹೆಚ್ಚಿ ಬೇಡಿಕೆ ಬಹಳವಾಗಿ ಮೈಯಲ್ಲಿ ಕಾವೇರುತ್ತದೆ. ಮೈ ಮನಸ್ಸು

ಗಳ ಬೆಳವಣಿಗೆಗೂ ಈ ಚೋದನಿಕಗಳು ಬೇಕೇ ಬೇಕು. ಇವು ಸುರಿವುದರ ಹತೋಟಿ ತೆಮಡಿಕದ ಮುಂದಣ ಹಾಲೆಯ ಗುರಾಣಿಕ ಚೋದಕ ಚೋದನಿಕದ ಕೈಲಿದೆ.

ಗುರಾಣಿಕದ ಚಟುವಟಿಕೆ ಕುಂದಿದರೆ ಲೋಳುಬ್ಬರದ (ಮಿಕ್ಸಿಡೀಮ) ರೋಗ ವೇಳುವುದು. ಜೀವವಸ್ತುಕರಣವೇಗ ಕುಂದಿರುವುದರಿಂದ ರೋಗಿ ನಿತ್ರಾಣಿಯಾಗಿ ಮಂಕನಾಗಿ ಜಡವಾಗಿ ಬಿದ್ದಿರುವನು. ಚರ್ಮ ಒಣಕಲಾಗಿ ಕೂದಲುದುರುವುದು. ರೋಗಿ ಚಳಿಯನ್ನು ತಡೆಯಲಾರ. ಗುರಾಣಿಕ ಗ್ರಂಥಿ ಎಳೆತನದಲ್ಲಿ ಸರಿಯಾಗಿ ಬೆಳೆಯದಿದ್ದಲ್ಲಿ ಮಗು ಬೆಳೆಯದೆ ಗುಜ್ಜಾರಿಯಾಗಿ ಮಂಕಾಗುವುದು. ಇದಕ್ಕೆ ಹೆಡ್ಡ ಗುಜ್ಜು (ಕ್ರೆಟಿನಿಸಂ) ಎಂದು ಹೆಸರು. ಜನನಾಂಗಗಳು ಬೆಳೆಯಡೆ, ವಯಸ್ಸಾದರೂ ಎಳೆಯದಾಗೇ ಇರುವುವು. ಈ ರೋಗ ತಲೆದೋರಿದ 2–3 ತಿಂಗಳೊಳಗಾಗೇ ಕಂಡು ಗುರುತಿಸಿ ತೈರಾಕ್ಸಿನನ್ನು ಕೊಡುತ್ತಬಂದರೆ ಮಗುವಿನ ಬೆಳೆವಣಿಗೆ ಸರಿಹೋಗುತ್ತದೆ.

ಗುರಾಣಿಕದ ಚಟುವಟಿಕೆ ಮಿತಿಮೀರಿದರೆ, ಜೀವವಸ್ತುಕರಣ ಏರುತ್ತದೆ. ಹಸಿವು ವಿಪರೀತವಾಗಿ, ಬಹಳ ತಿನ್ನುವಂತಾಗುತ್ತದೆ. ಇಷ್ಟಾದರೂ ಮೈತೂಕವಿಳಿದು ಎದೆ ಗುಂಡಿಗೆ ಜೋರಾಗಿ ಬಡಿದುಕೊಳ್ಳುವುದು. ಮೈಕಾವೇರುವುದರಿಂದ ಯಾವಾಗಲೂ ಬೆವರುತ್ತಿರುವುದು. ರೋಗಿ ಬೇಸಗೆಯ ಬೇಗೆಯನ್ನು ತಡೆಯದಾಗುವನು. ಈ ಗ್ರಂಥಿ ಚುರುಕಿದ್ದಾಗಿನ ಗ್ರೇವ್ಸನ ರೋಗದಲ್ಲಿ ಬಿರುಗಣ್ಣು ಇರುವುದು.

ಚಟುವಟಿಕೆಯಿಂದ ಚೆನ್ನಾಗಿರಲು ಗುರಾಣಿಕಕ್ಕೆ ಅಯೊಡೀನಿನ ಸರಬರಾಜು ಸಾಕಷ್ಟಿರಬೇಕು. ಅಡುಗೆ ಉಪ್ಪಿನಲ್ಲಿ ಇದು ಮುಖ್ಯವಾಗಿ ಒದಗುತ್ತದೆ. ಮೈಗೆ ಅಯೊಡೀನಿನ ಕೊರತೆಯಾದರೆ, ಗುರಾಣಿಕ ಗ್ರಂಥಿ ದೊಡ್ಡದಾಗುತ್ತದೆ. ಇದಕ್ಕೆ ಸರಳ ಗಳಗಂಡ (ಸಿಂಪಲ್ ಗಾಯ್ಟರ್) ಎಂದಿದೆ. ಅಯೊಡೀನ್ ಸಾಕಷ್ಟು ದೊರೆಯದಾಗ ಗುರಾಣಿಕದ ಸುರಿಕೆಯೂ ತಗ್ಗುವುದು. ಹೀಗೆ ರಕ್ತದಲ್ಲೂ ಇದರ ಚೋದನಿಕಗಳು ಕಡಿಮೆಯಾದಾಗ, ತೆಮಡಿಕದ ಮುಂದಣ ಹಾಲೆಯ ಗುರಾಣಿಕ ಚೋದಕ ಚೋದನಿಕದ ಸುರಿತ ಹೆಚ್ಚುವುದರಿಂದ ಗುರಾಣಿಕ ದಪ್ಪನಾಗುತ್ತದೆ. ಇದರಿಂದಲೇ ಗುರಾಣಿಕದ ಚೋದನಿಕಗಳ ಸುರಿತ ಕುಂದಿಸುವ ಮದ್ದುಗಳ ಸೇವನೆಯಿಂದಲೂ ಗಳಗಂಡವಾಗುವುದು. ಬಲು ಚುರುಕಾಗಿರುವ ಗುರಾಣಿಕದ ಚೋದನಿಕಗಳ ಸುರಿತ ಕುಂದಿಸುವ ಮದ್ದುಗಳ ಸೇವನೆಯಿಂದಲೂ ಗಳಗಂಡವಾಗುವುದು. ಬಲು ಚುರುಕಾಗಿರುವ ಗುರಾಣಿಕದ ಚಟುವಟಿಕೆಯನ್ನು ಕುಂದಿಸುವ ತಯೊಯೂರಸಿಲ್ ಈ ಬಗೆಯ ಒಂದು ಮದ್ದು.

ಗುರಾಣಿಕದಿಂದ ಸುಣ್ಣವೇರಿಕ (ಕ್ಯಾಲ್ಸಿಟೊನಿನ್) ಚೋದನಿಕವೊಂದು ಸುರಿವುದೆಂದು ಇತ್ತೀಚೆಗೆ ಗೊತ್ತಾಗಿದೆ. ಮೂಳೆಗಳಲ್ಲಿನ ಸುಣ್ಣ ಕರಗಿ ಕಳೆವುದನ್ನು ತಪ್ಪಿಸಿ, ರಕ್ತದ ಸುಣ್ಣಧಾತು ಪ್ರಮಾಣವನ್ನು ಇದು ತಗ್ಗಿಸುವುದು. **ನೋಡಿ—ಗುರಾಣಿಕ ಗ್ರಂಥಿ ರೋಗಗಳು.**

ಬದಿಗುರಾಣಿಕಗಳು : ಇವು ಪ್ಯಾರಾತಾರ್ಮೋನ್ ಚೋದನಿಕವನ್ನು ಸುರಿಸುತ್ತವೆ. ಮೈಯಲ್ಲಿನ ಸುಣ್ಣಧಾತು, ರಂಜಕಗಳ ಜೀವವಸ್ತುಕರಣವನ್ನು ಈ ಚೋದನಿಕ ನಿಯಂತ್ರಿಸುವುದು. ಇದೊಂದು ಪ್ರೋಟೀನು. ಮೂಳೆಗಳಲ್ಲಿ ಕೂಡಿರುವ ಸುಣ್ಣಧಾತುವನ್ನು ತೆಗೆದು ರಕ್ತಕ್ಕೆ ಸೇರಿಸುವುದು. ಅಂತೆಯೇ ತೆಗೆದ ರಂಜಕವನ್ನು ಮೂತ್ರದಲ್ಲಿ ಹೊರದೂಡುತ್ತದೆ. ಬದಿಗುರಾಣಿಕ ಗ್ರಂಥಿಗಳು ತೆಮಡಿಕದ ಹತೋಟಿಯಲ್ಲಿಲ್ಲ. ರಕ್ತದಲ್ಲಿನ ಸುಣ್ಣಧಾತುವಿನ ಪ್ರಮಾಣಕ್ಕೆ ತಕ್ಕಹಾಗೆ ಇದರ ಚೋದನಿಕದ ಸುರಿತವೂ ಇರುವುದು. ರಕ್ತದಲ್ಲಿ ಸುಣ್ಣಧಾತು ಹೆಚ್ಚಾಗಿದ್ದರೆ ಇದರ ಸುರಿತ ಕುಗ್ಗುವುದು, ಕಡಿಮೆಯಾದರೆ ಸುರಿತ ಹೆಚ್ಚುತ್ತದೆ.

ಈ ಗ್ರಂಥಿಗಳ ಚಟುವಟಿಕೆ ಏರುವುದು, ಇವು ದೊಡ್ಡದಾಗಿ ಬೆಳೆದಾಗ ಇಲ್ಲವೇ ಒಳಗೆ ಗಂತಿ ಎದ್ದಾಗ ಆಗ ರಕ್ತದಲ್ಲಿನ ಸುಣ್ಣಧಾತು ಹೆಚ್ಚಿ, ರಂಜಕ ಪ್ರಮಾಣ ಇಳಿವುದು. ಇದರಿಂದ ಮೂಳೆಗಳಲ್ಲಿ ಸುಣ್ಣಧಾತು ಇಲ್ಲದಂತಾಗಿ ಟೊಳ್ಳಾಗಿ ಸುಲಭವಾಗಿ ಮುರಿಯಬಹುದು. ಇಲ್ಲವೆ ಸೊಟ್ಟನಾಗಬಹುದು. ಇದಕ್ಕೆ ರೆಕ್ಲಿಂಗ್ ಹೌಸೆನ್ನನ ರೋಗ ಎಂದಿದೆ. ಸುಣ್ಣದ ಲವಣಗಳು ಬಹಳವಾಗಿ ಮೂತ್ರಪಿಂಡಗಳ ಮೂಲಕ ಸಾಗುವುದರಿಂದ ಆ ಅಂಗದಲ್ಲೇ ಸುಣ್ಣಗೂಡಬಹುದು (ಕ್ಯಾಲ್ಸಿಫಿಕೇಷನ್). ಇದೇ ಸುಣ್ಣಕಲ್ಲುಗಳಂತಾಗಿರಲೂಬಹುದು.

ಬದಿಗುರಾಣಿಕಗಳ ಚಟುವಟಿಕೆ ಕುಂದಿದ್ದಾಗ, ರಕ್ತದಲ್ಲಿನ ಸುಣ್ಣಧಾತುವಿನ ಪ್ರಮಾಣವಿಳಿದು, ರಂಜಕದ ಪ್ರಮಾಣವೇರುತ್ತದೆ. ರಕ್ತದಲ್ಲಿ ಸುಣ್ಣಧಾತು ಸಾಕಷ್ಟಿರದೆ ಕೊರೆಯಾದಾಗ, ಮೈಯಲ್ಲಿ ಕೆಲವಡೆಗಳಲ್ಲಿ (ಮುಖ್ಯವಾಗಿ ಕೈಕಾಲುಗಳಲ್ಲಿ) ಸ್ನಾಯುಗಳು ಯಾವ ಚೋದನೆಯೂ ಇಲ್ಲದೆ ಕುಗ್ಗುತ್ತ ಸೆಡೆದುಕೊಳ್ಳುವುವು. ಇದಕ್ಕೆ ಎಡೆಸೆಡೆತ (ಟೆಟನಿ) ಎಂದಿದೆ. ಈ ರೋಗಿಗಳಿಗೆ ಕಣ್ಣುಪೊರೆಯೂ (ಕ್ಯಾಟರಾಕ್ಟ್) ಬರಬಹುದು. ಸುಣ್ಣಾಂಶವಿರುವ ಆಹಾರಸೇವನೆ, ಡಿ ಜೀವಾತುಗಳಿಂದ ಇದನ್ನು ಗುಣಪಡಿಸಬಹುದು. ಪ್ಯಾರತಾರ್ಮೋನ್ ಕೊಟ್ಟರೂ ಗುಣಕಾರಿಯೇ. ಆದರೆ ಇದರ ಪ್ರಭಾವ ಕಾಣುವುದು ಬಲು ನಿಧಾನ. ಕೊಡುತ್ತಲೇ ಇದ್ದರೆ ಕೆಲಸಕ್ಕೆ ಬಾರದಾಗುತ್ತದೆ. ನೋಡಿ—ಬದಿಗುರಾಣಿಕ ಗ್ರಂಥಿಗಳ ರೋಗಗಳು.

**ಮಾಂಸಲಿ :** ಈ ಗ್ರಂಥಿಯ ಒಳಸುರಿಕ ಭಾಗಗಳಾದ ಲ್ಯಾಂಗರ್ ಹ್ಯಾನ್ಸನ ದೀವುಗಳಲ್ಲಿರುವ ಅಲ್ಫ ಜೀವಕಣಗಳಲ್ಲಿ ಗ್ಲೂಕಗಾನ್, ಬೀಟ ಜೀವಕಣಗಳಲ್ಲಿ ಇನ್ಸುಲಿನ್ ತಯಾರಾಗುತ್ತವೆ. ಹಿಟ್ಟು ಸಕ್ಕರೆಗಳ ಜೀವವಸ್ತುಕರಣದ ಮೇಲೆ ಇವುಗಳ ಪ್ರಭಾವ ಮುಖ್ಯ.

ರಕ್ತದಲ್ಲಿನ ದ್ರಾಕ್ಷಿಸಕ್ಕರೆಯ (ಗ್ಲೂಕೋಸ್) ಪ್ರಮಾಣವನ್ನು ಇನ್ಸುಲಿನ್ ತಗ್ಗಿಸುವುದು. ಅಲ್ಲದೆ, ಈಲಿಯಲ್ಲೂ ಸ್ನಾಯುಗಳಲ್ಲೂ ದ್ರಾಕ್ಷಿಸಕ್ಕರೆಯನ್ನು ಮಿಗದಿಟ್ಟಾಗಿ (ಗ್ಲೈಕೊಜನ್) ಬದಲಿಸಿ ಕೂಡುತ್ತದೆ. ಕೆಲವು ಅಮೈನೊ ಆಮ್ಲಗಳೂ ಕೊಬ್ಬುಗಳಿಂದ ಬರುವ ಗ್ಲಿಸರಾಲೂ ಈಲಿಯಲ್ಲಿ ದ್ರಾಕ್ಷಿಸಕ್ಕರೆಯಾಗಿ ಬದಲಾಗುವ ಚಟುವಟಿಕೆಗೆ ನವಸಕ್ಕರೆಜನನ (ನಿಯೊಗ್ಲೂಕೊಜೆನಿಸಿಸ್) ಎಂದು ಹೆಸರು. ಈ ಚಟುವಟಿಕೆಯನ್ನು ಗ್ಲೂಕಾನ್ ಏರಿಸುತ್ತದೆ, ಇನ್ಸುಲಿನ್ ಕುಂದಿಸುತ್ತದೆ. ಆಗ ರಕ್ತದ ಸಕ್ಕರೆ ಪ್ರಮಾಣ ಇಳಿಯುತ್ತದೆ. ದ್ರಾಕ್ಷಿಸಕ್ಕರೆ ಜೀವಕಣಗಳ ಪೊರೆಗಳ ಮೂಲಕ ಒಳಸಾಗಲು ಅನುಗೊಳಿಸುವುದೇ ಇನ್ಸುಲಿನ್ನಿನ ಬಹುಮುಖ್ಯ ಪಾತ್ರ. ರಕ್ತದಲ್ಲಿ ಸಕ್ಕರೆಯ ಪ್ರಮಾಣ ಏರಿದರೆ, ಇನ್ಸುಲಿನ್ ಸುರಿಕೆ ಏರುವುದು, ಅದು ಇಳಿದರೆ ಇದೂ ಇಳಿವುದು.

ಇನ್ಸುಲಿನ್ನಿನ ಎದುರುವರ್ತನೆ ಗ್ಲೂಕಗಾನಿನದು. ರಕ್ತದಲ್ಲಿನ ದ್ರಾಕ್ಷಿಸಕ್ಕರೆ ಪ್ರಮಾಣವನ್ನು ಏರಿಸುತ್ತದೆ. ಈಲಿಯಲ್ಲಿ ಕೂಡಿಟ್ಟಿರುವ ಮಿಗದಿಟ್ಟನ್ನು ದ್ರಾಕ್ಷಿಸಕ್ಕರೆಗಿಳಿಸುತ್ತದೆ. ಇನ್ಸುಲಿನ್ ಎದುರಾಗಿ, ಗ್ಲೂಕಗಾನ್ ಒಂದೇ ಅಲ್ಲದೆ, ತೆಮಡಿಕದ ಮುಂದಣ ಹಾಲೆಯ ಬೆಳೆತ ಚೋದನಿಕ, ಅಡ್ರಿನಲ್ ರಗಟೆಯ ಸಕ್ಕರೆ ಕಾರ್ಟಿಕಾಯ್ಡುಗಳು, ಅಡ್ರಿನಲೀನ್ ಇವು ಕೂಡ ನವಸಕ್ಕರೆ ಜನನವನ್ನು ಹೆಚ್ಚಿಸುವುವು.

ಇನ್ಸುಲಿನ್ ಕೊರೆಯಿಂದ ಸಿಹಿಮೂತ್ರ ರೋಗವಾಗುವುದು. ಇದರಲ್ಲಿ ರಕ್ತದಲ್ಲಿನ ದ್ರಾಕ್ಷಿಸಕ್ಕರೆ ಪ್ರಮಾಣ ಎಂದಿನ ಸೇಕಡಾ 180 ಮಿಲಿ ಗ್ರಾಂಗಿಂತಲೂ ಹೆಚ್ಚಿದ್ದು, ಮೂತ್ರದಲ್ಲೂ ಹೊರಬೀಳುತ್ತಿರುವುದು. ಆಹಾರಸೇವನೆ ಆದಮೇಲೆ ಇನ್ನೂ ಹೆಚ್ಚು. ಮೈಯಲ್ಲಿ ಬಳಕೆಯಾಗದೆ ಮೂತ್ರದಲ್ಲಿ ಕಳೆದುಹೋಗುವುದರಿಂದಲೂ ಊತಕಗಳ ಜೀವವಸ್ತುಲಯ (ಕೆಟಬಾಲಿಸಂ) ಹೆಚ್ಚಾಗುವುದರಿಂದಲೂ ರೋಗಿ ಬಡಕಲನಾಗಿ ನಿತ್ರಾಣಿಯಾಗುವನು. ಮೂತ್ರದಲ್ಲಿ ಸಕ್ಕರೆ ಹೆಚ್ಚಾಗಿ ಹೊರಕಳೆಯಲು ಅದರೊಂದಿಗೆ ಬಹಳ ನೀರೂ ಹೊರಬೀಳಬೇಕಾಗುತ್ತದೆ. ಬಾಯಾರಿಕೆ ಹೆಚ್ಚುತ್ತದೆ. ಬರುಬರುತ್ತ ರೋಗಿಯ ಧಮನಿಗಳಲ್ಲಿ ಧಮನಿಪೆಡಸಣಿ (ಆರ್ಟಿರಿಯೊ ಸ್ಕ್ಲೀರೋಸಿಸ್) ತೋರುವುದು. ಕಣ್ಣುಪೊರೆಯೂ ಬರಬಹುದು.

ಇನ್ಸುಲಿನನ್ನು ಮಿತಿಮೀರಿ ಕೊಟ್ಟರೆ, ರೋಗಿಯ ರಕ್ತದಲ್ಲಿನ ಸಕ್ಕರೆ ಪ್ರಮಾಣ ತೀರ ಕುಸಿದು ನಿತ್ರಾಣ, ನಡುಕ, ಕಬ್ಬೆವರಿಕೆ, ಸೆಳವೂ ಆಗಿ ಕೊನೆಗೆ ಮಯಕ (ಕೋಮ) ಕಾಣಿಸಿಕೊಂಡು, ಚಿಕಿತ್ಸೆ ದೊರೆಯದಿದ್ದರೆ ಸಾಯಬಹುದು. ಕೆಲವು ಮನೋರೋಗಿಗಳಿಗೆ ಚಿಕಿತ್ಸಾಕ್ರಮವಾಗಿ ಸೆಳವುಕಾರಕವಾಗೂ ಇನ್ಸುಲಿನನ್ನು ರಕ್ತನಾಳಾಂತರ ಚುಚ್ಚಿ ಹೊಗಿಸುವುದುಂಟು. ಮಾಂಸಲಿಯಲ್ಲಿ ಇನ್ಸುಲಿನ್ ಹುಟ್ಟಿಸುವ ದೀವುಗಳಲ್ಲಿ ಗಂತಿ ಎದ್ದರೂ ಹೀಗಾಗುವುದು. ಈ ಲಕ್ಷಣಗಳ ಸೂಚನೆ ಕಂಡಕೂಡಲೇ ಒಂದಿಷ್ಟು ಸಕ್ಕರೆ ತಿಂದರೆ ಕೂಡಲೇ ಗುಣವಾಗುತ್ತದೆ. **ನೋಡಿ—ಇನ್ಸುಲಿನ್.**

**ಅಡ್ರಿನಲುಗಳು :** ಈ ಗ್ರಂಥಿಗಳಲ್ಲಿ ಒಂದೆಡೆಯಲ್ಲೇ ಇರುವ ಕುಸುರಿಯೂ (ಮೆಡುಲ), ರಗಟೆಯೂ (ಕಾರ್ಟೆಕ್ಸ್) ರಚನೆ, ನಿಜಗೆಲಸ, ಬಣ್ಣವೇರಿಕೆಗಳಲ್ಲಿ ತೀರ ಬೇರೆಬೇರೆಯಾದ್ದರಿಂದ ಇವೆರಡು ಭಾಗಗಳನ್ನೂ ಬೇರೆ ಬೇರೆ ಗ್ರಂಥಿಗಳಂತೆ ಗಣಿಸಬೇಕು. ಕುಸುರಿಯನ್ನು ಪ್ರಾಣಿಗಳಲ್ಲಿ ತೆಗೆದು ಹಾಕಿದರೆ ಪ್ರಾಣಾಪಾಯವಿಲ್ಲ. ಆದರೆ, ರಗಟೆಯನ್ನು ತೆಗೆದುಹಾಕಿದರೆ ಮಾತ್ರ ಕೆಲವೇ ದಿನಗಳಲ್ಲಿ ಸಾಯುವುವು. **(ನೋಡಿ—ಅಡ್ರಿನಲ್ ಗ್ರಂಥಿಗಳು.)**

ಅಡ್ರಿನಲ್ ಕುಸುರಿ : ಅನುವೇದನಾ ನರದ ಮಂಡಲದಲ್ಲಿನ (ಸಿಂಪತೆಟಿಕ್ ನರ್ವಸ್ ಸಿಸ್ಟಂ) ನರಗಂಟುಗಳಲ್ಲಿ (ಗಾಂಗ್ಲಿಯಾನ್ಸ್) ಇರುವ ಹಾಗೇ ಅಡ್ರಿನಲ್ ಗ್ರಂಥಿಯ ಕುಸುರಿಯಲ್ಲೂ ಕ್ರೋಂನಂಟಿನ ಜೀವಕಣಗಳಿವೆ. ಅಲ್ಲದೆ, ಆ ನರದ ಮಂಡಲದ ನರಗಳು ಈ ಕುಸುರಿಗೆ ಸಂಬಂಧಿಸಿವೆ. ಈ ಮಂಡಲದ ನರಗಳ ಚೋದನೆಯಾದಾಗ ಕುಸುರಿಯಿಂದ ಚೋದನಿಕ ರಸ ಸುರಿವುದು. ಈ ರಸದಲ್ಲಿ ಅಡ್ರಿನಲಿನ್, ನೋರಡ್ರಿನಲಿನ್ (**ನೋಡಿ**) ಇರುವುವು. ಮೊದಲಿನದು 70%–90% ರಷ್ಟೂ ಎರಡನೆಯದು 10%-30%ರಷ್ಟೂ ಇರುತ್ತವೆ. ಇವು ಮುಖ್ಯವಾಗಿ ಧಮನಿಗಳನ್ನು ಕುಗ್ಗಿಸುವುದರಿಂದ ರಕ್ತದ ಒತ್ತಡವೇರಿಸಿ, ಗುಂಡಿಗೆಯ ಚೋದನೆಯಿಂದ ಬಡಿತದ ವೇಗವೇರಿಸುತ್ತವೆ. ಆಗ ಗುಂಡಿಗೆಯಿಂದ ರಕ್ತದ ಇಳುವರಿ (ಔಟ್‌ಪುಟ್) ಏರುತ್ತದೆ. ಮೈಯಲ್ಲಿನ ಉಳಿದೆಲ್ಲ ಧಮನಿಗಳನ್ನು ಕುಗ್ಗಿಸಿದರೂ ಗುಂಡಿಗೆಯ ಕಿರೀಟಿಕ (ಕಾರೊನೆರಿ) ಧಮನಿಗಳನ್ನು ಮಾತ್ರ ಹಿಗ್ಗಿಸುತ್ತವೆ. ರಕ್ತದಲ್ಲಿನ ಸಕ್ಕರೆ ಪ್ರಮಾಣವನ್ನು ಅಡ್ರಿನಲಿನ್ ಹೆಚ್ಚಿಸುತ್ತದೆ. ಅಲ್ಲದೆ, ಗೂರಲಿನಲ್ಲಿ ಪಂಗುಸಿರ್ನಾಳದ ಕಿರ್ನಾಳಗಳನ್ನು ಹಿಗ್ಗಲಿಸಿ ಉಬ್ಬಸವನ್ನು ತಗ್ಗಿಸುತ್ತದೆ. ಮೈಗೆ

ಬಹಳ ಪೆಟ್ಟು ಗಾಯಗಳಾದಾಗ, ದಿಗಿಲು ಗಾಬರಿಗೊಂಡಾಗ, ಯಾವುದೇ ಒತ್ತರದಲ್ಲೂ (ಸ್ಟ್ರೆಸ್) ಅಡ್ರಿನಲಿನ್, ನೋರಡ್ರಿನಲಿನುಗಳ ಸುರಿಕೆ ಹೆಚ್ಚುತ್ತದೆ.

ಒಗ್ಗದಿಕೆಯ (ಅಲರ್ಜಿ) ಪ್ರತಿಕ್ರಿಯೆಗಳನ್ನು ಕೂಡಲೇ ಹೋಗಲಾಡಿಸುವುದರಲ್ಲಿ ಅಡ್ರಿನಲಿನ್ ಹೆಸರಾಗಿದೆ.

ಅಡ್ರಿನಲ್ ಗ್ರಂಥಿಯ ಕುಸುರಿಯಲ್ಲಿ ಫಿಯೊಕ್ರೋಮೊ ಸೈಟೋಮ ಎಂಬ ಗಂತಿ ಎದ್ದಿದ್ದರೆ, ರಕ್ತ ಒತ್ತಡವೇರಿ, ಸಿಹಿಮೂತ್ರ, ಎದೆಬಡಿತ ಮುಂತಾದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಈ ಗಂತಿಯನ್ನು ಶಸ್ತ್ರಕ್ರಿಯೆಯಿಂದ ಕೊಯ್ದು ತೆಗೆವುದೇ ತಕ್ಕ ಚಿಕಿತ್ಸೆ.

ಅಡ್ರಿನಲ್ ರಗಟೆ : ಇದರಲ್ಲಿ ಹುಟ್ಟುವ ಚೋದನಿಕಗಳನ್ನು ಮುಖ್ಯ ನಿಜ ಗೆಲಸಗಳಿಗೆ ತಕ್ಕಂತೆ ಮೂರು ಗುಂಪುಗಳಾಗಿ ವಿಂಗಡಿಸಬಹುದು. ಖನಿಜ (ಮಿನರಲೋ) ಕಾರ್ಟಿಕಾಯ್ಡುಗಳು, ಸಕ್ಕರೆ (ಗ್ಲೂಕೊ) ಕಾರ್ಟಿಕಾಯ್ಡುಗಳು, ಲೈಂಗಿಕ ಚೋದನಿಕಗಳು.

ಖನಿಜ ಕಾರ್ಟಿಕಾಯ್ಡುಗಳಲ್ಲಿ ಅಲ್ಡೊಸ್ಟಿರೋನೇ ಮುಖ್ಯವಾದದ್ದು. ಪೊಟ್ಯಾಸಿಯಂ ಅಯಾನುಗಳ ಪ್ರಮಾಣವನ್ನು ಮೈಯಲ್ಲಿರುವ ಸೋಡಿಯಂ ಎಂದಿನ ಸಮ ಮಟ್ಟದಲ್ಲಿ ಇರಿಸುವುದರಲ್ಲಿ ನೆರವಾಗುತ್ತದೆ. ಮುಖ್ಯವಾಗಿ ಮೂತ್ರ ಪಿಂಡದೊಳಗಿನ ಕಿರ್ನಾಳಗಳು ಸೋಡಿಯಮ್ಮನ್ನು ಹಿಡಿದಿಟ್ಟುಕೊಳ್ಳುವುದನ್ನೂ ಪೊಟ್ಯಾಸಿಯಮ್ಮನ್ನು ಬಿಟ್ಟುಬಿಡುವುದನ್ನೂ ಚೋದಿಸುತ್ತದೆ. ಮೈಯಲ್ಲಿ ಸೋಡಿಯಂ ಮಿತಿಮೀರಿ ಸೇರಿದರೆ ಮೈಯಲ್ಲಿ ಮತ್ತಷ್ಟು ನೀರು ಸೇರಿಕೊಳ್ಳುವುದು.

ಅಡ್ರಿನಲ್ ರಗಟೆ ಸುರಿಸುವ ಸಕ್ಕರೆ ಕಾರ್ಟಿಕಾಯ್ಡುಗಳಲ್ಲಿ ಕಾರ್ಟಿಸಾಲ್, ಕಾರ್ಟಿಕೊಸ್ಟಿರೋನ್ ಮುಖ್ಯವಾದುವು. ಈ ಗುಂಪಿನ ಚೋದನಿಕಗಳು ಹಿಟ್ಟು ಸಕ್ಕರೆ, ಪ್ರೋಟೀನು, ಕೊಬ್ಬುಗಳ ಜೀವವಸ್ತುಕರಣದ ಮೇಲೆ ಪ್ರಭಾವಿಗಳು. ಹಿಟ್ಟು ಸಕ್ಕರೆಗಳ ಜೀವ ವಸ್ತುಲಯವನ್ನು ತಗ್ಗಿಸಿ, ಪ್ರೋಟೀನುಗಳದನ್ನು ಏರಿಸುತ್ತವೆ. ನವಸಕ್ಕರೆ ಜನನವನ್ನು ಹೆಚ್ಚಿಸುತ್ತವೆ. ಇದರಿಂದಾಗಿ, ರಕ್ತದಲ್ಲಿನ ಪ್ರಮಾಣವೇರುತ್ತದೆ. ಮೊಗ, ಹೊಟ್ಟೆ, ಬೆನ್ನಿನ ಮೇಲುಗಡೆ ಕೊಬ್ಬುಗೂಡುತ್ತದೆ. ಈ ಭಾಗಗಳ ಹೊರತಾಗಿ ಬೇರೆಡೆಗಳಲ್ಲಿ ಕೂಡಿರುವ ಕೊಬ್ಬೆಲ್ಲ ಕೊಬ್ಬಿನಾಮ್ಲಗಳಾಗಿ ಕರಗುತ್ತವೆ. ಇವು ಮತ್ತೆ ವಿಷಕಾರಕಗಳಾದ ಕೀಟೋನು ವಸ್ತುಗಳಾಗಿ (ಕೀಟೋನ್ ಬಾಡೀಸ್) ಬದಲಾಗುವುವು. ಅಲ್ಲದೆ, ರಕ್ತದಲ್ಲಿ ಬಿಳಿ ರಕ್ತ ಕಣಗಳಾದ ಇಯೋಸಿನೊಫಿಲುಗಳನ್ನೂ ಹಾಲುರಸಕಣಗಳನ್ನೂ (ಲಿಂಫೊಸೈಟ್ಸ್) ತಗ್ಗಿಸುತ್ತವೆ. ಈ ಚೋದನಿಕಗಳನ್ನು ಚಿಕಿತ್ಸೆಯಲ್ಲಿ ಬಹುವಾಗಿ ಎಲ್ಲೆಲ್ಲೂ ಬಳಸುತ್ತಿರುವುದು ಮುಖ್ಯವಾಗಿ ಇವು ಗಾಯ, ಪೆಟ್ಟು, ಸೋಂಕು, ರೋಗಗಳಿಂದೇಳುವ ಉರಿತವನ್ನು (ಇನ್‌ಫ್ಲಮೇಷನ್) ತಗ್ಗಿಸಲು. ಅಲ್ಲದೆ ಇವನ್ನು ಕೊಡುತ್ತಿರುವಾಗ ಒಗ್ಗದಿಕೆಯ ಪ್ರತಿಕ್ರಿಯೆಗಳನ್ನೂ ಚೆನ್ನಾಗಿ ಅಡಗಿಸುತ್ತದೆ.

ಶಸ್ತ್ರಕ್ರಿಯೆಯೇ ಮುಂತಾದ ಯಾವುದಾದರೂ ಒತ್ತರಕ್ಕೆ ಮೈ ಸಿಲುಕಿದಾಗ ಖನಿಜ ಅಲ್ಲದೆ ಸಕ್ಕರೆ ಕಾರ್ಟಿಕಾಯ್ಡುಗಳು ಹೆಚ್ಚಾಗಿ ಸುರಿದು ಆ ಕಷ್ಟಸ್ಥಿತಿಯನ್ನು ಎದುರಿಸಲು ನೆರವಾಗುತ್ತವೆ.

ತೆಮಡಿಕದಲ್ಲಿ ಗಂತಿಯೆದ್ದಾಗ ಆಗುವಂತೆ, ಅಡ್ರಿನಲ್ ರಗಟೆಯಲ್ಲಿ ಎದ್ದಾಗಲೂ ಈ ಗ್ರಂಥಿಭಾಗ ಚುರುಕೇರಿದಾಗ ಕಷಿಂಗನ ರೋಗ ತಲೆದೋರುವುದು. ಆಗ ಪ್ರೋಟೀನುಗಳು ಬಹಳವಾಗಿ ಹಾಳಾಗಿ ಮೈತೂಕವಿಳಿದು, ಚರ್ಮ, ಚರ್ಮದಡಿಯ ಊತಕಗಳು ನವೆದು ತೆಳುವಾಗುತ್ತವೆ. ಕೊಬ್ಬುಗೂಡುವುದರಿಂದ ರೋಗಿ ಚಂದ್ರಮುಖನಾಗುವನು (ಮೂನ್ ಫೇಸ್). ಸಿಹಿಮೂತ್ರದ ಲಕ್ಷಣಗಳು ತೋರುವುವು. ರಕ್ತದ ಒತ್ತಡವೇರುವುದು. ಉರಿತದ ಪ್ರತಿಕ್ರಿಯೆಯನ್ನು ಅಡಗಿಸುವುದರಿಂದ ಗಾಯ, ಪೆಟ್ಟುಗಳು ವಾಸಿಯಾಗುವುದೂ ಇಲ್ಲ. ಕಲೆಗಟ್ಟಾಗುವುದೂ ಇಲ್ಲ.

ರೋಗ ಹತ್ತಿ ಈ ಗ್ರಂಥಿಭಾಗ ಹಾಳಾದರೆ, ಚೋದನಿಕಗಳ ಕೊರೆಯಾಗಿ ಅಡಿಸನ್ನನ ರೋಗ (ನೋಡಿ) ಬರುತ್ತದೆ. ಮೂತ್ರದಲ್ಲಿ ಸೋಡಿಯಂ ಉಪ್ಪಾಗಿ ಹೆಚ್ಚಾಗಿ ಹೊರಬೀಳುವುದು. ರಕ್ತದ ಒತ್ತಡ ಕುಸಿದು, ರಕ್ತಸಕ್ಕರೆಯ ಮಟ್ಟವೂ ಇಳಿಯಬಹುದು. ರೋಗಿ ನಿತ್ರಾಣಿಯಾಗುತ್ತಾನೆ. ಮೈಚರ್ಮ ಕಪ್ಪಿಡುತ್ತದೆ.

ಕಾನ್‌ನ ಲಕ್ಷಣಕೂಟದ ರೋಗದಲ್ಲಿ ಖನಿಜಕಾರ್ಟಿಕಾಯ್ಡುಗಳ ಸುರಿಕೆ ಹೆಚ್ಚಿರುವುದು. ಮೈಯಲ್ಲಿ ಊತಕಗಳ ರಸಗಳಲ್ಲಿ ಸೋಡಿಯಂ ಪ್ರಮಾಣವೇರಿ, ಪೊಟ್ಯಾಸಿಯಂ ಮಟ್ಟ ಇಳಿಯುತ್ತದೆ. ರಕ್ತದ ಒತ್ತಡವೇರುವುದು. ಮೂತ್ರಶಂಕೆ (ಪಾಲಿಯೂರಿಯ), ಎಡೆಸೆಡೆತಗಳೂ ಆಗುತ್ತವೆ.

ಸಕ್ಕರೆಕಾರ್ಟಿಕಾಯ್ಡುಗಳ ಸುರಿತ ಬಹುಮಟ್ಟಿಗೆ ತೆಮಡಿಕದ ಮುಂದಣ ಹಾಲೆಯಲ್ಲಿ ಸುರಿವ ಅಡ್ರಿನಲ್ ರಗಟೆ ಚೋದಕ ಚೋದನಿಕದ (ಎಸಿಟಿಎಚ್) ಹತೋಟಿಯಲ್ಲಿರುವುದು. ಆದರೆ ಖನಿಜಕಾರ್ಟಿಕಾಯ್ಡುಗಳ ಮೇಲೆ ಅಷ್ಟಾಗಿಲ್ಲ. ಈ ಚೋದನಿಕಗಳ ಸುರಿತ ಮುಖ್ಯವಾಗಿ ಜೀವಕಣ ಹೊರದ್ರುವದ (ಎಕ್ಸ್‌ಟ್ರ ಸೆಲ್ಯುಲಾರ್) ಘನ ಗಾತ್ರಕ್ಕೆ ತಕ್ಕಂತಿರುವುದು. ಈ ದ್ರುವದ ಪ್ರಮಾಣ ಇಳಿದಾಗ ಮೂತ್ರಪಿಂಡದಲ್ಲಿ ರೆನಿನ್ ಸುರಿಯುತ್ತದೆ. ರಕ್ತದಲ್ಲಿರುವ ರಕ್ತನಾಳ ಬಿಗುಪಿಕ ಜನಕವನ್ನು (ಆಂಜಿಯೊಟೆನ್ಸಿನೋಜನ್) ರಕ್ತನಾಳಬಿಗುಪಿಗ I (ಆಂಜಿಯೊಟೆನ್ಸಿನ್ I) ಆಗಿ ಬದಲಿಸುವುದು. ರಕ್ತದಲ್ಲಿ ಕೆಲವು ದೊಳೆಗಳು ಇದನ್ನು ರಕ್ತನಾಳ ಬಿಳುಪಿಗ 2 ಆಗಿಸುತ್ತದೆ. ಈ ವಸ್ತು ಅಡ್ರಿನಲ್ ರಗಟೆಯನ್ನು ಚೋದಿಸಿ ಅಲ್ಡೊಸ್ಟಿರೋನನ್ನು ಸುರಿವಂತೆ ಮಾಡುವುದು. ಇದರಿಂದ ಮೈಯಲ್ಲಿನ ಸೋಡಿಯಂ ಪ್ರಮಾಣ ಏರುವುದರಿಂದ ಜೀವಕಣ ಹೊರದ್ರುವವೂ ಹೆಚ್ಚಿ ಮೈಯೆಲ್ಲ ಉಬ್ಬರಿಸಿಕೊಳ್ಳುತ್ತದೆ.

ಡೈಹೈಡ್ರೊ ಎಪಿ ಆಂಡ್ರೊಸ್ಟಿರೋನ್ : ಬೆದೆಜನಕಗಳನ್ನು ಈ ಗ್ರಂಥಿಭಾಗ ಕೊಂಚವಾಗಿ ಸುರಿಸುತ್ತದೆ. ಆದ್ದರಿಂದ ಜನನಾಂಗಗಳ ಮೇಲೆ ಇವುಗಳ ಪ್ರಭಾವ ಎದ್ದುತೋರದು. ಆದರೂ ಕೆಲವು ರೋಗಗಳಲ್ಲಿ ಇವು ಮಿತಿಮೀರಿ ಸುರಿಯುತ್ತಿದ್ದರೆ ಜನನಾಂಗಗಳಲ್ಲಿ ಬದಲಾವಣೆಗಳು ತೋರುವುವು. ಇಂಥದಕ್ಕೆ ಅಡ್ರಿನಲ್ ಜನನಾಂಗ ಲಕ್ಷಣಕೂಟ (ಅಡ್ರಿನೊಜನೈಟಲ್ ಸಿಂಡ್ರೋಂ) ಎಂದು ಹೆಸರಿದೆ. ಈ ತೆರನ ಒಂದು ರೋಗದಲ್ಲಿ ಹುಡುಗನಲ್ಲೂ ಜನನಾಂಗಗಳು ದೊಡ್ಡವರಲ್ಲಿರುವ ಪರಿಮಾಣದಲ್ಲಿ ಬೆಳೆಯುತ್ತವೆ. ಇನ್ನೊಂದು ರೋಗವಾದ ಅಡ್ರಿನಲ್ ಗಂಡುತನದಲ್ಲಿ (ವಿರಿಲಿಸಂ) ಹೆಂಗಸು ಗಂಡಸಿನ ರೂಪಕ್ಕೆ ಬದಲಾಗುತ್ತಾಳೆ.

**ತರಡುಗಳು :** ಇವುಗಳಲ್ಲಿ ರೇತುಕಣಗಳು ವಿಕಸಿಸುವವಲ್ಲದೆ, ಗಂಡಿನ ಚೋದನಿಕವಾದ ಪುಲ್ಲಿಂಗಕಾರಿಯೂ ಹುಟ್ಟುವುದು. ಗಂಡುಲಿಂಗದ ಚೋದನಿಕಗಳಿಗೆ ಪುಂಜನಿಕಗಳೆಂದೂ (ಆಂಡ್ರೊಜನ್ಸ್) ಹೆಸರಿದೆ. ಹುಡುಗ ಬೆಳೆಯುತ್ತ ವಯಸ್ಸಿಗೆ ಬಂದ ಹಾಗೆಲ್ಲ ಪುಲ್ಲಿಂಗಕಾರಿಯಿಂದ ಮರುಚಲದ ಲಿಂಗ ಗುಣಗಳು ಚೆನ್ನಾಗಿ ಹೊರದೋರುತ್ತವೆ. ಅಂದರೆ ಹೊರಗಾಣುವ ಜನನಾಂಗಗಳು ಚೆನ್ನಾಗಿ ಬೆಳೆದು, ಮುನ್ನಿಲುಗ (ಪ್ರಾಸ್ಟೇಟ್), ರೇತು ಕಿಗ್ಗೋಶಗಳ (ಸೆಮಿನಲ್ ವೆಸಿಕಲ್ಸ್) ಗ್ರಂಥಿಗಳು ಬೆಳೆದು ಕಂಕುಳು, ಗಜ್ಜಲು, ತೊಡೆಸಂದುಗಳಲ್ಲಿ ಕೂದಲೂ ಗಡ್ಡ ಮೀಸೆಗಳೂ ಬೆಳೆವುವು. ಗಂಟಲೊಡೆದು ದನಿ ಗಡುಸಾಗುವುದು. ಈ ಚೋದನಿಕದಿಂದ ಜೀವವಸ್ತುಚಯದ ಪರಿಣಾಮ ತೋರುತ್ತದೆ. ಸ್ನಾಯುಗಳು, ಒಳಾಂಗಗಳು, ಮೂಳೆಗಳೇ ಮುಂತಾದವು ಚೆನ್ನಾಗಿ ಬೆಳೆದು ಮೈ ತುಂಬಿಕೊಳ್ಳುವುದು. ಇದರಿಂದಲೇ ಹೆಂಗಸರಿಗಿಂತಲೂ ಗಂಡಸಿನ ಮೈ ಬೆಳವಣಿಗೆ ಜೋರಾಗಿದ್ದು ಮೈಕಟ್ಟು ಗಟ್ಟಿಮುಟ್ಟಾಗುತ್ತದೆ. ಈ ಚೋದನಿಕದ ಸುರಿತ ಕೂಡ ತೆಮಡಿಕದ ಮುಂದಣ ಹಾಲೆ ಸುರಿಸುವ ಹಳದಿಂಡುಗೊಳಿಕ ಚೋದನಿಕದ ಅಂಕೆಯಲ್ಲಿರುವುದು. ಆದ್ದರಿಂದ ಅಂಕೆಗೊಳಿಸುವ ಈ ಚೋದನಿಕಕ್ಕೆ ಊತಕಾಂತರ ಕಣಚೋದಕ ಚೋದನಿಕ ಎನ್ನುವುದೂ ಉಂಟು.

ರೇತುಕಣಗಳ ಹುಟ್ಟು ತೆಮಡಿಕದ ಕೋಶಿಕ ಚೋದಕ ಚೋದನಿಕದ ಅಂಕೆಯಲ್ಲಿದ್ದರೂ ಇದರೊಂದಿಗೆ ಪುಲ್ಲಿಂಗಕಾರಿಯೂ ಬೇಕು.

ಪುಲ್ಲಿಂಗಕಾರಿಯ ಕೊರೆಯ ಮುಖ್ಯ ಕಾರಣಗಳು, ತೆಮಡಿಕದ ರೋಗ, ಇಲ್ಲವೇ ಊತಕಾಂತರ ಜೀವಕಣಗಳು ಕೆಲವು ಕೆಡುವುದು. ಎಳೆತನದಲ್ಲೇ ಕೊರೆಯಾದರೆ, ಆಮೇಲಿನ ಗಂಡಸಿನ ಗುಣಗಳು ಬೆಳೆದು ತೋರವು. ಬೆಳೆದವರಲ್ಲಿ ಹೀಗಾದರೆ, ಜನನಾಂಗಗಳು ಕೊಂಚಮಟ್ಟಿಗೆ ಕುಂದಬಹುದು. ಆಗ ಪುಲ್ಲಿಂಗಕಾರಿಯನ್ನು ಕೊಟ್ಟರೆ ಗುಣಕಾರಿ. ನೋಡಿ—ಜನನಾಂಗದ ಮಂಡಲ.

ಅಂಡಾಶಯಗಳು : ಮುಟ್ಟಿನ ಮಾಸಕ್ಕೊಂದು ಬಾರಿ ಸಾಮಾನ್ಯವಾಗಿ ಒಂದೊಂದು ಅಂಡಾಣು ವಿಕಾಸವಾಗಿ ನೆರೆದು ಇವುಗಳಿಂದ ಹೊರಬೀಳುವುದು. ಅಂಡಾಶಯದಲ್ಲಿ ಹುಟ್ಟುವ ಚೋದನಿಕಗಳು ಎರಡು : ಬೆದೆಜನಕ, ಬಸಿರಣಿಕ (ಪ್ರೊಜೆಸ್ಟಿರಾನ್). ಬೆದೆಜನಕದ ಹಾಗೇ ವರ್ತಿಸುವ ಹಲವಾರು ವಸ್ತುಗಳು ಮೈಯಲ್ಲಿನ ರಸಗಳಲ್ಲಿವೆ. ಅಂಡಾಶಯದಲ್ಲಿ ಹುಟ್ಟುವ ಬೆದೆಜನಕಕ್ಕೆ ಈಸ್ಟ್ರಾಡಿಯೋಲ್ ಎಂದಿದೆ. ಇದರಿಂದ ತಯಾರಾಗುವುವು ಈಸ್ಟ್ರಿಯೋಲ್, ಈಸ್ಟ್ರೋನುಗಳು. ಗರ್ಭಕೋಶ, ಗರ್ಭನಾಳಗಳು, ಯೋನಿ, ಮೊಲೆಗಳ ಬೆಳವಣಿಗೆಗೆ ಬೆದೆಜನಕ ಇದ್ದೇ ಇರಬೇಕು. ಹೆಣ್ಣಿನ ಜನನಾಂಗಗಳು ಚೆನ್ನಾಗಿ ಬೆಳೆಯಲು ಬಸಿರಣಿಕವೂ ಬೇಕು.

ಮುಟ್ಟಿನ ಚಕ್ರಕ್ಕೆ ತಕ್ಕಹಾಗೆ ಇವೆರಡು ಚೋದನಿಕಗಳ ಸುರಿತದಲ್ಲೂ ಏರಿಳಿತಗಳಾಗುತ್ತವೆ. ಮುಟ್ಟಿನ ತಿಂಗಳಲ್ಲಿ ಸರಾಸರಿಯಾಗಿ 28 ದಿನಗಳಿರುತ್ತವೆ. ಮುಟ್ಟು ಸುರಿಯಲಿಟ್ಟ ಮೇಲಿನ ಮೊದಲಿನ 4–5 ದಿನಗಳಲ್ಲಿ ಗರ್ಭದೊಳಪೊರೆ (ಎಂಡೊಮೆಟ್ರಿಯಂ) ಕಿತ್ತು ಹರಿದುಕೊಂಡು ರಕ್ತದೊಂದಿಗೆ ಹೊರಬೀಳುತ್ತದೆ. ಅದೇ ಮುಟ್ಟು ಎನಿಸಿಕೊಳ್ಳುವುದು. ಆ ಹೊತ್ತಿಗೆ ಕೋಶಿಕಚೋದಕ ಚೋದನಿಕವನ್ನು ತೆಮಡಿಕ ಸುರಿಸಲು ಮೊದಲಿಡುವುದು. ಇದರ ಪ್ರಭಾವದಿಂದ ಗ್ರಾಫನ ಕೋಶಿಕವೊಂದು ಬೆಳೆದು ವಿಕಾಸವಾಗಿ ಬೆದೆಜನಕವನ್ನು ಸುರಿಸುತ್ತದೆ. ಕಿತ್ತು ಹೋದ ಗರ್ಭದೊಳಪೊರೆಯನ್ನು ಮುಟ್ಟಿನ ಮಾಸದ ಮೊದಲ 14 ದಿನಗಳ ತನಕ ಮತ್ತೆ ಬೆಳೆಸುವುದು ಈ ಬೆದೆಜನಕವೇ. ಸರಾಸರಿ 14ನೆಯ ದಿನದ ಹೊತ್ತಿಗೆ ಗ್ರಾಫನ ಕೋಶಿಕ ಒಡೆದು ಅದರೊಳಗಿದ್ದ ನೆರೆದ ಅಂಡಾಣು ಹೊರಬೀಳುವುದು ಒಡೆದುಹೋದ ಈ ಕೋಶಿಕದ ಜಾಗದಲ್ಲಿ ಹಳದಿಂಡು ಕಟ್ಟಿಕೊಂಡು ಬೆಳೆಯುತ

ಬಸಿರಣಿಕವನ್ನು ಸುರಿಬಿಡುತ್ತದೆ. ಅಂಡಾಣು ಬಿಡುಗಡೆ, ಹಳದಿಂಡಿನ ರಚನೆಯೂ ನಿಜಗೆಲಸಗಳೂ ತೆಮಡಿಕದ ಹಳದಿಂಡುಗೊಳಿಕ ಚೋದನಿಕದ ಅಂಕೆಯಲ್ಲಿರುವುವು. ಗರ್ಭದೊಳಪೊರೆಯಲ್ಲಿ ಗ್ರಂಥಿಗಳು ಹುಲುಸಾಗಿ ಬೆಳೆದು ರಸದುಂಬಲು ಮುಖ್ಯಕಾರಣ ಬಸಿರಣಿಕ. ಅಂದರೆ, ಇದು ಗರ್ಭಕೋಶವನ್ನು ಬಸಿರಿಗಾಗಿ ಅಣಿ ಮಾಡುವುದು. ಹೆಂಗಸು ಆಗ ಬಸಿರಾದರೆ, ಹಳದಿಂಡು ಬಸಿರಣಿಕವನ್ನು ಸುರಿಸುತ್ತಲೇ ಇರುವುದು. ಬಸಿರಾಗದಿದ್ದಲ್ಲಿ 28 ದಿನಗಳಾದ ಮೇಲೆ ಹಳದಿಂಡು ಒಣಗಿ ನವೆಯುತ್ತದೆ. ಹೀಗೆ ಒಣಗಿದಾಗ ಬಸಿರಣಿಕ ಇಲ್ಲದಂತಾಗಿ, ಗರ್ಭದೊಳಪೊರೆ ಕಿತ್ತುಬಂದು ಮುಟ್ಟು ಹೊರಗಾಣಿಸುವುದು. ಹೀಗೇ ಮುಟ್ಟಿನ ಚಕ್ರ ನಡೆಯುತ್ತಿರುವುದು.

ಹೆಣ್ಣಿನಲ್ಲಿ ಅಂಡಾಶಯಗಳ ಕೆಲಸಗೆಟ್ಟರೆ ಹೆಣ್ಣಿನ ಹೆಚ್ಚಿನ ಗುಣಗಳು ಹೊರ ಗಾಣದೆ, ಜನನಾಂಗಗಳೂ ಬೆಳೆಯದೆ ಎಳಸಾಗೇ ಉಳಿವುವು. ಅಂಡಾಶಯಕ್ಕೆ ತಾಕುವ ರೋಗಗಳು, ತೆಮಡಿಕದ ಚೋದನಿಕಗಳ ಕೊರೆಯಿಂದ ಹೀಗಾಗಬಹುದು. 45 ವಯಸ್ಸಿನ ಸುಮಾರಿನಲ್ಲಿ ಅಂಡಾಶಯಗಳು ಅಂಡಾಣುಗಳ ತಯಾರಿಕೆಯನ್ನು ನಿಲ್ಲಿಸಿ ಬಿಡುತ್ತವೆ. ಹೀಗಾದಾಗ, ಗರ್ಭಕೋಶ, ಯೋನಿ ಬರುಬರುತ್ತ ನವೆಯುತ್ತವೆ.

ಹೆರಿಗೆ ಹೊತ್ತಿನಲ್ಲಿ ಕಿಳ್ಗುಳಿ (ಪೆಲ್ವಿಸ್) ಮೂಳೆಗಳನ್ನು ಕಟ್ಟಿಡುವ, ತಂತುಗಟ್ಟು ಗಳನ್ನು ಸಡಿಲಗೊಳಿಸುವ, ರಿಲ್ಯಾಕ್ಸಿನ್ ಎಂಬ ಚೋದನಿಕವನ್ನು ಅಂಡಾಶಯಗಳು ಸುರಿಬಿಡುವುವೆಂಬ ನಂಬಿಕೆಯಿದೆ. ಹೆರಿಗೆಯಲ್ಲಿ ಪಿಂಡಗೂಸು ಅಪಾಯವಿಲ್ಲದಂತೆ ಹೊರಬರುವಂತೆ ಗರ್ಭಕೋಶವನ್ನು ಹಿಗ್ಗಲಿಸುವುದೂ ಗರ್ಭಕೊರಳನ್ನು (ಸರ್ವಿಕ್ಸ್) ಮೆತುಗೊಳಿಸುವುದೂ ರಿಲ್ಯಾಕ್ಸಿನ್ನಿನ ಕೆಲಸವೇ.

**ಮಾಸು :** ಪಿಂಡಗೂಸನ್ನು ಕಾಪಿಡಲು ಬೆಳೆಯುತ್ತಿರುವ ಗರ್ಭಕೋಶದ ಮಾಸುವಿನ ಜನನಗ್ರಂಥಿಚೋದಕ (ಗೊನಾಡೊಟ್ರೋಪಿಕ್) ಚೋದನಿಕಗಳೂ ಲಿಂಗ ಚೋದಕ ಚೋದನಿಕಗಳೂ ಹುಟ್ಟುತ್ತವೆ. ಇದರ ಚೋದನಿಕಗಳಿಗೆ ಜರಾಯು ವಿನ (ಕೋರಿಯಾನಿಕ್) ಜನನಗ್ರಂಥಿ ಚೋದಕಗಳೆಂದು ಹೆಸರಿದೆ. ಗಂಡಸಲ್ಲಿ ಇದು ಹಳದಿಂಡುಗೊಳಿಕ ಚೋದನಿಕವನ್ನು ಹೋಲುವುದು. ಮಾಸುವಿನಿಂದಾಗಿ, ಬಸಿರಿನ ಮೊದಲಲ್ಲಿ ಹಳದಿಂಡು ನವೆಯದೆ ಹಾಗೇ ಉಳಿವುದು. ಮಾಸು ಸುರಿಸುವ ಬಸಿರಣಿಕ ಬೆದೆಜನಕ ಚೋದನಿಕಗಳ ಸುರಿಕೆಗಳಿಂದ ಗರ್ಭಕೋಶ, ಮೊಲೆಗಳು ಚೆನ್ನಾಗಿ ಬೆಳೆಯುತ್ತವೆ. ಆದ್ದರಿಂದಲೇ, ಮಾಸು ಸಾಕಷ್ಟು ಬೆಳೆದ ಮೇಲೆ, ಅಂದರೆ 4-5 ತಿಂಗಳ ಬಸುರಿನಲ್ಲಿ, ಅಂಡಾಶಯಗಳನ್ನು ತೆಗೆದು ಹಾಕಿದರೂ ಗರ್ಭ ದಲ್ಲಿರುವ ಪಿಂಡಗೂಸಿಗೆ ಅಪಾಯ ತಾಕದು.

**ಉಳಿದವು :** ಮೇಲೆ ಹೇಳಿದವಲ್ಲದೆ, ಬೇರೆ ಕೆಲವು ಗ್ರಂಥಿಗಳೂ ಒಳಸುರಿಕ ಗ್ರಂಥಿಗಳ ಹಾಗೇ ವರ್ತಿಸುತ್ತವೆ. ಮಿದುಳಲ್ಲಿರುವ ಕೆಳತಲೆಯರೆ ಇಂಥದೊಂದು. ವಿಮೋಚಕ ಅಂಶಗಳನ್ನು ರಕ್ತದೊಳಕ್ಕೆ ಸುರಿಸಿ ತೆಮಡಿಕದ ಮುಂದಣ ಹಾಲೆಯನ್ನು ನಿಯಂತ್ರಿಸುವುದು ಅಲ್ಲದೆ ಹಿಂದಣ ಹಾಲೆಯ ಚೋದನಿಕಗಳು ಈ ಅಂಗಭಾಗದ ನಡುಬೀಜ ತಂಡದಲ್ಲೇ ಹುಟ್ಟಿ ಕೆಳಗಿಳಿದು ಸಾಗುತ್ತವೆ.

ಮೂತ್ರಪಿಂಡಗಳಲ್ಲಿ ಗೊಂಡೆಬಂದಿಯ ರಚನೆಯಲ್ಲಿ (ಜಕ್ಸ್ಟಗ್ಲೊಮೆರುಲಾರ್ ಆಪರೇಟಸ್) ರೆನಿನ್ ಎಂಬ ವಸ್ತು ತಯಾರಾಗುವುದು. ಮೇಲೆ ತಿಳಿಸಿರುವಂತೆ, ಇದು ಆಲ್ಡೋಸ್ಟಿರೋನ್ ಚೋದನಿಕದ ಸುರಿತವನ್ನು ಅಂಕೆಗೊಳಿಸುತ್ತದೆ. ಆಮ್ಲ ಜನಕಿಳಿತದಲ್ಲಿ (ಹೈಪಾಕ್ಸಿಯ) ಮೂತ್ರಪಿಂಡಗಳು ರಕ್ತವಿಕಾಸವೆಂಬ (ಹೀಮೊಪಾಯಿ ಟಿನ್) ವಸ್ತುವನ್ನು ಸುರಿಸುವುವು. ಇದರಿಂದ ಕೆಂಪು ರಕ್ತಕಣಗಳ ಹುಟ್ಟು ಹೆಚ್ಚುತ್ತದೆ.

ದಾರುಸಂಕದ (ಪೈನಿಯಲ್) ಗ್ರಂಥಿ ಕರ್ವಣ್ಣಬಿಗುಪ (ಮೆಲಟೋನಿನ್) ಚೋದನಿಕವನ್ನು ಸುರಿಸಬಹುದು. ಇದು ಕಪ್ಪೆಗಳ ಚರ್ಮವನ್ನು ಬಿಳಿಚಿಸುತ್ತದೆ.

ಓಮೊಗ್ಗು (ತೈಮಸ್) ಗ್ರಂಥಿಯೂ ತೊರಳೆಯೂ (ಪ್ಲೀಹ) ಕೆಲವು ಸುರಿಕೆ ಗಳನ್ನು ಸುರಿಸಬಹುದು.

ನೋಡಿ—ಒಳಸುರಿಕ ಗ್ರಂಥಿಗಳು; ಜನನಾಂಗ ಮಂಡಲ. (ಎಂ.ಶಿ.)



ಕನ್ನಡ ವರ್ಣಮಾಲೆಯಲ್ಲಿ ಹದಿಮೂರನೆಯದು. ದೀರ್ಘಸ್ವರಾಕ್ಷರ. ಲಿಪಿಯ ದೃಷ್ಟಿಯಿಂದ ಒ ಮತ್ತು ಓಕಾರಗಳಲ್ಲಿ ಪ್ರಾಚೀನಕಾಲದ ಶಾಸನಗಳಲ್ಲಿ ಅಷ್ಟಾಗಿ ವ್ಯತ್ಯಾಸಗಳು ಕಾಣಬರುವುದಿಲ್ಲ. (ನೋಡಿ —ಒ.) ಬಹುಶಃ ಇವೆರಡಕ್ಕೂ ವ್ಯತ್ಯಾಸ ತೋರಿಸುವ ಪ್ರವೃತ್ತಿ ವಿಜಯನಗರ ಕಾಲಾಂನತರ ಬೆಳೆದುಬಂದಿರಬೇಕು. ಆದರೆ ಬರೆವಣಿಗೆಯಲ್ಲಿನ ಈ ವ್ಯತ್ಯಾಸ ಖಚಿತವಾಗಿ ಯಾವಾಗ ಪ್ರಾರಂಭವಾಯಿತು ಎಂದು ಹೇಳುವುದು ಕಷ್ಟ. ಕ್ರಿ.ಶ. ಹದಿನೆಂಟನೆಯ ಶತಮಾನದ ಶಾಸನಗಳಲ್ಲಿ ಈ ಅಕ್ಷರದ ಹ್ರಸ್ವ ಮತ್ತು ದೀರ್ಘಗಳಿಗೆ ಪ್ರತ್ಯೇಕ ರೂಪಗಳಿರುವುದು ಕಂಡುಬರುತ್ತದೆ.

| ಗೋ | ಮೋ | |
|---|---|---|
| — | — | ಅಶೋಕ. ಕ್ರಿ.ಪೂ. ೩ನೆಯ ಶತಮಾನ |
| — | [illegible] | ಶಾತವಾಹನ. ಕ್ರಿ.ಶ. ೨ನೆಯ ಶತಮಾನ |
| [illegible] | — | ಕದಂಬ. ಕ್ರಿ.ಶ. ೬ನೆಯ ಶತಮಾನ |
| — | — | ಗಂಗ. ಕ್ರಿ.ಶ. ೭ನೆಯ ಶತಮಾನ |
| — | [illegible] | ರಾಷ್ಟ್ರಕೂಟ. ಕ್ರಿ.ಶ. ೯ನೆಯ ಶತಮಾನ |
| — | [illegible] | ಕಲ್ಯಾಣಿ ಚಾಲುಕ್ಯ. ಕ್ರಿ.ಶ. ೧೧ನೆಯ ಶತಮಾನ |
| — | — | ಹೊಯ್ಸಳ. ಕ್ರಿ.ಶ. ೧೩ನೆಯ ಶತಮಾನ |
| — | ಮೊ | ವಿಜಯನಗರ. ಕ್ರಿ.ಶ. ೧೫ನೆಯ ಶತಮಾನ |
| ಗೊ | ಮೊ | ಮದಕರಿನಾಯಕ. ಕ್ರಿ.ಶ. ೧೮ನೆಯ ಶತಮಾನ |

ಅಶೋಕನ ಕಾಲದಲ್ಲಿ ಅಕ್ಷರದ ಮೇಲ್ಭಾಗದಲ್ಲಿ ಎಡಬಲಗಳಲ್ಲಿ ಅಡ್ಡ ಗೀಟುಗಳಿದ್ದುವು. ಕದಂಬರ ಕಾಲದಲ್ಲಿ ಮೇಲಿನ ಅಡ್ಡ ಗೀಟುಗಳು ಡೊಂಕಾದುವು. ಗಂಗರ ಕಾಲಕ್ಕೆ ಬಲಭಾಗದ ರೇಖೆ ಇನ್ನೂ ಕೆಳಕ್ಕೆ ಬಾಗಿತು. ಇದು ರಾಷ್ಟ್ರಕೂಟ ಕಾಲದಲ್ಲಿ ಇನ್ನೂ ಸ್ಪಷ್ಟ. ಚಾಲುಕ್ಯರ ಕಾಲಕ್ಕೆ ಎಡದ ರೇಖೆಯ ಪ್ರಾಮುಖ್ಯ ಹೋಗಿ ಬಲಗಡೆಯ ರೇಖೆ ಇನ್ನೂ ಖಚಿತವಾಯಿತು. ಮದಕರಿ ನಾಯಕನ ಕಾಲಕ್ಕಾಗಲೆ ಅಕ್ಷರದಲ್ಲಿ ಓತ್ವ ಮತ್ತು ದೀರ್ಘಗಳು ಈಗಿನಂತೆ ಸ್ಪಷ್ಟವಾಗಿ ಗೋಚರಿಸಿದುವು.

ಈ ಅಕ್ಷರ ಪಶ್ಚ ಅರ್ಧ ಸಂವೃತ ಗೋಲ ದೀರ್ಘ ಸ್ವರವನ್ನು ಸೂಚಿಸುತ್ತದೆ. (ಎ.ವಿ.ಎನ್.)

**ಓಂ:** ಒಂದು ಬೀಜಾಕ್ಷರ. ಓಂಕಾರವೆಂದೂ ಪ್ರಣವವೆಂದೂ ಇದನ್ನು ವ್ಯವಹರಿಸುವುದುಂಟು. ವೇದಾದಿ ಪವಿತ್ರ ಗ್ರಂಥಗಳ ಪಠನದ ಪ್ರಾರಂಭದಲ್ಲಿ ಇದನ್ನು ಉಚ್ಚರಿಸಬೇಕೆಂಬ ನಿಯಮವಿದೆ. ಮೊದಲು ಉಪನಿಷತ್ತುಗಳಲ್ಲಿ ಬೀಜಾಕ್ಷರವಾಗಿ ಕಂಡುಬರುವ ಇದರ ಅ, ಉ, ಮ ಎಂಬ ಧ್ವನಿಗಳೂ, ಒಟ್ಟಾಗಿ ಈ ಅಕ್ಷರವೂ ಆಧ್ಯಾತ್ಮಿಕ ಪ್ರಭಾವವುಳ್ಳವೆಂದೂ ಇದು ಪರಬ್ರಹ್ಮಸ್ವರೂಪವೆಂದೂ ಅಲ್ಲಿ ಪ್ರತಿಪಾದಿತವಾಗಿದೆ. ಮಾಂಡೂಕ್ಯೋಪನಿಷತ್ತಿನ ಓಮಿತ್ಯೇಕಾಕ್ಷರಮಿದಂ ಸರ್ವಂ ತಸ್ಯೋಪವ್ಯಾಖ್ಯಾನಂ ಭೂತಂ ಭವದ್ ಭವಿಷ್ಯದಿತಿ ಸರ್ವಮೋಂಕಾರ ಏವ । ಯಚ್ಚಾನ್ಯತ್ತ್ರಿಕಾಲಾತೀತಂ ತದಪ್ಯೋಂಕಾರ ಏವ ॥ (ಎಲ್ಲವೂ ಓಂ ಎಂಬ ಅಕ್ಷರವೇಯೆ : ಭೂತ ವರ್ತಮಾನ ಭವಿಷ್ಯತ್ತುಗಳು ಅದರ ವಿಸ್ಪಷ್ಟ ಪ್ರಕಥನಗಳು; ತ್ರಿಕಾಲಾತೀತವಾದುದೂ ಓಂಕಾರವೇಯೆ) ಎಂಬ ವಾಕ್ಯಗಳು ಅಂಥ ಪ್ರತಿಪಾದನೆಗೆ ನಿದರ್ಶನಗಳಾಗಿವೆ. ಬರಬರುತ್ತ ಇದರ ಅ, ಉ, ಮ ಇವು ಕ್ರಮವಾಗಿ ವಿಷ್ಣು, ಶಿವ, ಬ್ರಹ್ಮ ಇವರನ್ನು ಪ್ರತಿನಿಧಿಸುವಂತಾಗಿ ಇದು ಹಿಂದೂಮತದಲ್ಲಿ ತ್ರಿಮೂರ್ತಿಗಳ ಐಕ್ಯದ ಕಲ್ಪನೆಯನ್ನೂ ಸೂಚಿಸುತ್ತದೆ. ಹಾಗೆಯೇ ಇದನ್ನು ಮೂರು ವೇದಗಳಿಗೂ ಅನ್ವಯಿಸಿದ್ದಾರೆ. ಇದರ ಮತ್ತೊಂದು ಹೆಸರಾದ ಪ್ರಣವವೆಂಬುದು ನು (ಸ್ತುತಿಸು, ಶಬ್ದಮಾಡು) ಎಂಬ ಧಾತುವಿನಿಂದ ನಿಷ್ಪನ್ನವಾಗಿ, ಇದರಿಂದ ಆತ್ಮವೋ ಇಷ್ಟದೇವತೆಯೋ ಸ್ತುತಿಸಲ್ಪಡುವುದರಿಂದ ಪ್ರಣವವಾಗಿದೆಯೆಂದು ಅದಕ್ಕೆ ವಿವರಣೆ ಕಂಡುಬರುತ್ತದೆ. ಅಲ್ಲದೆ ನಮಸ್ಕರಿಸು ಎಂಬ ಅರ್ಥವುಳ್ಳ ನಮ್ ಧಾತುವಿನಿಂದ ಬಂದು, ತ್ರಿಮೂರ್ತಿಗಳ ವಿಚಾರದಲ್ಲಿ ನಮಸ್ಕಾರಾತ್ಮಕವಾಗಿರುವ ಇದು ಪ್ರಣವವಾಗಿದೆಯೆಂಬ ಮತ್ತೊಂದು ವಿವರಣೆಯನ್ನೂ ಗಮನಿಸಬಹುದು. (ಬಿ.ಕೆ.ಎಸ್.)

**ಓಕ್ :** ಫೇಗೇಸಿ ಕುಟುಂಬದ ಕ್ವರ್ಕಸ್ ಜಾತಿಗೆ ಸೇರಿದ ಸುಮಾರು ಮುನ್ನೂರಕ್ಕೂ ಹೆಚ್ಚು ಸಂಖ್ಯೆಯ ಪ್ರಭೇದಗಳನ್ನುಳ್ಳ ಮರಗಳು ಮತ್ತು ಪೊದರುಗಳು. ಈ ಜಾತಿ ಪ್ರಪಂಚದ ಉತ್ತರಾರ್ಧಗೋಳದ ಸಮಶೀತೋಷ್ಣ ವಲಯದಲ್ಲಿ ಪ್ರಮುಖವಾಗಿ ಬೆಳೆಯುತ್ತಿದ್ದರೂ ಏಷ್ಯ ಹಾಗೂ ಅಮೆರಿಕ ಖಂಡಗಳ ಉಷ್ಣವಲಯದ ಪ್ರದೇಶಗಳಲ್ಲೂ ಎತ್ತರವಾದ ಮತ್ತು ತಂಪಾದ ಹವೆಯುಳ್ಳ ಸ್ಥಳಗಳಲ್ಲಿ ಮುಖ್ಯವಾಗಿ, ಉತ್ತರ ಅಮೆರಿಕ, ಮೆಕ್ಸಿಕೋ, ಯೂರೋಪ್, ರಷ್ಯದ ಕಾಕಸಸ್ ಪರ್ವತಗಳು, ಮೆಡಿಟರೇನಿಯನ್ ಪ್ರದೇಶ ಮುಂತಾದುವುಗಳಲ್ಲೂ ಸ್ವಾಭಾವಿಕವಾಗಿ ಬೆಳೆಯುತ್ತದೆ. ಭಾರತದಲ್ಲಿ ಮುಖ್ಯವಾಗಿ ಹಿಮಾಲಯ ಪ್ರದೇಶದಲ್ಲಿ ಸುಮಾರು 23 ಪ್ರಭೇದಗಳು ಬೆಳೆಯುತ್ತವೆ. ಇದರಿಂದ ದೊರೆಯುವ ನಾಟ ಮತ್ತು ಚರ್ಮ ಹದ ಮಾಡುವುದಕ್ಕೆ ಉಪಯೋಗಿಸುವ ಟ್ಯಾನಿನುಗಳಿಗಾಗಿ ಇದನ್ನು ಅಮೆರಿಕ ಮತ್ತು ಇಂಗ್ಲೆಂಡುಗಳಲ್ಲಿ ವಿಶೇಷವಾಗಿ ಕಾಡುಗಳಲ್ಲಿ ಬೆಳೆಸುತ್ತಾರೆ.



ಕ್ವರ್ಕಸ್ ಸೆರ್ರಿಸ್ ಪ್ರಭೇದದ ಕಾಯಿಗಳು

ದೊಡ್ಡ ಮರವಾಗಿ ಬೆಳೆಯುವ ಓಕ್ ಸಾಮಾನ್ಯವಾಗಿ 60–80 ಅಡಿಗಳ ಎತ್ತರಕ್ಕೆ ಬೆಳೆಯುತ್ತದೆ. ಪರಿಸ್ಥಿತಿ ಅನುಕೂಲವಾಗಿದ್ದಲ್ಲಿ 100–150 ಅಡಿಗಳ ವರೆಗೂ ಬೆಳೆಯುವುದುಂಟು. ಕೆಲವು ಪ್ರಭೇದಗಳು ಮಾತ್ರ ದೊಡ್ಡ ಪೊದೆಯಂತೆ ಬೆಳೆಯುತ್ತವೆ. ಎತ್ತರದಲ್ಲಿ ಅದ್ವಿತೀಯವೆನಿಸದಿದ್ದರೂ ಒರಟೊರಟಾದ, ಭಾರಿ ಸುತ್ತಳತೆಯ ಬುಡವನ್ನೂ ಅಂಕುಡೊಂಕಾದ ರೆಂಬೆಗಳನ್ನೂ ಉಳ್ಳ ಈ ಮರಗಳು ನಿಜಕ್ಕೂ ಭವ್ಯವಾಗಿರುತ್ತವೆ. ಸಾಧಾರಣವಾಗಿ ಮೆಕ್ಕಲು ಮಣ್ಣಿನ ನೆಲದಲ್ಲಿ ಅಥವಾ ಜೇಡಿಮಣ್ಣಿನ ನೆಲದಲ್ಲಿ ಇವು ಸಮೃದ್ಧವಾಗಿ ಬೆಳೆಯುತ್ತವೆ. ಆದರೆ ಕೆಲವು ಬಗೆಯವು ಮರಳು ಅಥವಾ ಕಲ್ಲುನೆಲಗಳಿಗೇ ಸೀಮಿತಗೊಂಡಿದ್ದು ಸಣ್ಣ ಪೊದೆ ಅಥವಾ ಕುರುಚಲು ಗಿಡಗಳಂತೆ ಬೆಳೆಯುವುದುಂಟು. ಓಕ್ ಜಾತಿಯ ಕೆಲವು ಪ್ರಭೇದಗಳು ಚಳಿಗಾಲದಲ್ಲಿ ಎಲೆಗಳುದುರುವ ಮತ್ತೆ ಕೆಲವು ನಿತ್ಯಹರಿದ್ವರ್ಣದ ಮರಗಳ ಗುಂಪಿಗೆ ಸೇರಿವೆ. ಭಾರತದ ಪ್ರಭೇದಗಳಲ್ಲಿ ಬಹುಪಾಲು ಸಸ್ಯಗಳು ನಿತ್ಯಹರಿದ್ವರ್ಣದ ಗುಂಪಿಗೆ ಸೇರಿವೆ.

ಈ ಮರದ ಎಲೆಗಳು ಪರ್ಯಾಯ ಜೋಪಣೆ ಹೊಂದಿದ್ದು, ಸಾಮಾನ್ಯ ಪತ್ರಗಳಾಗಿರುತ್ತವೆ. ಅವುಗಳ ಅಂಚು ನಯವಾಗಿರಬಹುದು, ಹಲ್ಲಿನಂಥ ಏಣುಗಳನ್ನು ಹೊಂದಿರಬಹುದು ಅಥವಾ ಹಾಲೆಗಳಾಗಿ ಸೀಳಾಗಿರಬಹುದು. ಕಾಂಡದ ತೊಗಟೆಯ ಮೇಲ್ಮೈವಿನ್ಯಾಸವೂ ಒಂದೊಂದು ಪ್ರಭೇದದಲ್ಲೂ ಬೇರೆ ಬೇರೆಯಾಗಿ

ರುತ್ತದೆ. ಅದು ನಯವಾಗಿರಬಹುದು, ಶಲ್ಕಗಳಿಂದ ಕೂಡಿರಬಹುದು, ಸಣ್ಣ ಫಲಕಗಳಿಂದ ಕೂಡಿರಬಹುದು ಅಥವಾ ಅಸಮರೂಪದ ಏಣುಗಳನ್ನು ಹೊಂದಿರಬಹುದು. ಈ ಮರದ ಹೂಗಳು ಏಕಲಿಂಗಿಗಳು. ಒಂದೇ ಮರದಲ್ಲಿ ಬೇರೆ ಬೇರೆ ಹೂಗೊಂಚಲುಗಳಲ್ಲಿ ಬಿಡುತ್ತವೆ. ಗಂಡು ಹೂಗೊಂಚಲುಗಳು ರೆಂಬೆಗಳಿಂದ ಕೆಳಮುಖನಾಗಿ ತೂಗಾಡುತ್ತಿದ್ದು ಪ್ರತಿಯೊಂದರಲ್ಲಿಯೂ ಅನೇಕ ಹೂವುಗಳಿರುತ್ತವೆ. ಒಂದೊಂದು ಹೂವಿನಲ್ಲಿಯೂ 4-7 ಹಾಲೆಗಳುಳ್ಳ ಪುಷ್ಪಪತ್ರಗಳು, 4–12 ಕೇಸರಗಳು ಇರುತ್ತವೆ. ಹೆಣ್ಣುಹೂ ಗೊಂಚಲು ಕದಿರುಗೊಂಚಲು (ಸ್ಪೈಕ್) ಮಾದರಿಯದು. ಒಂದೊಂದು ಹೂವಿನಲ್ಲಿಯೂ 6 ಹಾಲೆಗಳ ಪುಷ್ಪಪತ್ರವೂ 3-5 ಕೋಶಗಳುಳ್ಳ ಅಂಡಾಶಯವೂ ಇರುತ್ತವೆ. ಪ್ರತಿ ಕೋಶದಲ್ಲಿರುವ ಅಂಡಕಗಳ ಸಂಖ್ಯೆ ಎರಡು. ಅಂಡಾಶಯವನ್ನು ಸುತ್ತುವರಿದಂತೆ ಅನೇಕ ಉಪಪತ್ರಗಳ (ಬ್ರ್ಯಾಕ್ಟ್ಸ್) ಇನ್‌ವಲ್ಯೂಕರ್ ಇರುತ್ತವೆ. ಕಾಯಿ ವಿಶಿಷ್ಟ ಬಗೆಯದಾಗಿದ್ದು ಒಂದೇ ಬೀಜವನ್ನು ಹೊಂದಿರುತ್ತದೆ. ಅದನ್ನು ಏಕಾರ್ನ್ ಎನ್ನುತ್ತಾರೆ.



ಕ್ವರ್ಕಸ್ ಪೆಟ್ರಿಯ ಪ್ರಭೇದದ ಕಾಯಿಗಳು

ಕೆಲವು ಶಾಸ್ತ್ರೀಯ ಗುಣಗಳ ಆಧಾರದ ಮೇಲೆ ಓಕ್ ಜಾತಿಯನ್ನು ಸೈಕ್ಲೊಬಲಾನಸ್, ಲ್ಯೂಕೊಬಲಾನಸ್ ಮತ್ತು ಎರಿತ್ರೊಬಲಾನಸ್ ಎಂಬ ಮೂರು ಉಪಜಾತಿಗಳನ್ನಾಗಿ ವಿಂಗಡಿಸಿದ್ದಾರೆ.

ಸೈಕ್ಲೊಬಲಾನಸ್ ಗುಂಪಿನ ಓಕ್‌ಗಳಲ್ಲಿ ಅಂಡಾಶಯವನ್ನು ಸುತ್ತುವರಿದಿರುವ ಉಪಪತ್ರಗಳು ಪರಸ್ಪರ ಕೂಡಿಕೊಂಡು ಉಂಗುರಗಳಂಥ ಇನ್‌ವಲ್ಯೂಕರ್‌ಗಳಾಗಿರುತ್ತವೆ.

ಲ್ಯೂಕೊಬಲಾನಸ್ ಗುಂಪಿನ ಓಕುಗಳಲ್ಲಿ ಅಂಡಾಶಯದ ಸುತ್ತ ಇರುವ ಉಪಪತ್ರಗಳು ಬಿಡಿಬಿಡಿಯಾಗಿದ್ದು, ಸುರುಳಿಯಾಕಾರದಲ್ಲಿ ಜೋಡಿಸಿಕೊಂಡಿರುತ್ತವೆ. ಕಾಯಿಗಳು ಒಂದೇ ಬೆಳೆವಣಿಗೆಯ ಕಾಲದಲ್ಲಿ (ಗ್ರೋಯಿಂಗ್ ಸೀಸನ್) ಪಕ್ವವಾಗುತ್ತವಲ್ಲದೆ, ಮರದಿಂದ ಉದುರಿದ ಕೆಲವೇ ದಿನಗಳಲ್ಲಿ ಮೊಳಕೆಯೊಡೆಯುತ್ತವೆ. ಈ ಉಪಜಾತಿಯ ಓಕ್‌ಗಳಿಗೆ ಬಿಳಿಯ ಓಕ್‌ಗಳೆಂದು ಹೆಸರು.

ಎರಿತ್ರೊಬಲಾನಸ್ ಉಪಜಾತಿಯ ಓಕ್‌ಗಳನ್ನು ಕೆಂಪು ಅಥವಾ ಕಪ್ಪು ಓಕ್‌ಗಳೆನ್ನುತ್ತಾರೆ. ಇವುಗಳಲ್ಲಿಯೂ ಅಂಡಾಶಯದ ಸುತ್ತ ಇರುವ ಉಪಪತ್ರಗಳು ಬಿಡಿಬಿಡಿಯಾಗಿದ್ದು ಸುರುಳಿಯಾಕಾರದಲ್ಲೇ ಜೋಡಿಸಲ್ಪಟ್ಟಿರುತ್ತವೆ. ಕಾಯಿಗಳು ಪಕ್ವವಾಗುವುದಕ್ಕೆ ಎರಡು ಬೆಳೆವಣಿಗೆಯ ಕಾಲವನ್ನು ತೆಗೆದುಕೊಳ್ಳುತ್ತವೆ. ಮೊಳಕೆಯೊಡೆಯುವುದು ಚಳಿಗಾಲ ಕಳೆದು, ಮತ್ತೆ ವಸಂತಕಾಲ ಬಂದಾಗ ಮಾತ್ರ.

ಓಕ್ ಮರಗಳು ದೀರ್ಘಕಾಲ ಬದುಕುವುವೆಂದು ಹೇಳುತ್ತಾರೆ. ಇಂಗ್ಲೆಂಡಿನಲ್ಲಿರುವ ಕೆಲವು ಓಕ್ ವೃಕ್ಷಗಳು 1,500ಕ್ಕೂ ಹೆಚ್ಚು ವಯಸ್ಸಿನವೆಂದು ತಿಳಿದಿದೆ. ಯಾರ್ಕ್‌ಶೈರಿನ ಹಳ್ಳಿಯೊಂದರಲ್ಲಿರುವ ಓಕ್ ಮರ ಕ್ರೈಸ್ತಮತದ ಉದಯಕ್ಕೂ ಮುಂಚಿನದೆಂದು ಹೇಳುತ್ತಾರೆ. ಎಪಿರಸ್ ಬೆಟ್ಟಗಳಲ್ಲಿರುವ ಡೋಡೋನಾದ ಓಕ್ ಮರದಡಿ ಗ್ರೀಕರ ಮುಖ್ಯದೇವತೆಯಾದ ಜ್ಯೂಸ್ ತನ್ನ ಆರಾಧಕರಿಗೆ ಬೋಧನೆ ಮಾಡಿದನೆಂದು ಪ್ರತೀತಿಯಿದೆ.

ಉಪಯುಕ್ತತೆಯ ದೃಷ್ಟಿಯಿಂದ ಓಕ್ ಮರದ ಪ್ರಭೇದಗಳು ಬಹಳ ಮುಖ್ಯವಾದವು. ಹಲವಾರು ಬಗೆಯ ಕೆಲಸಗಳಿಗೆ ಈ ಮರ ಉಪಯೋಗವಾಗುತ್ತದೆ. ಇದು ಅತ್ಯಂತ ಗಟ್ಟಿಮರಗಳಲ್ಲೊಂದಾಗಿ ದೃಢತೆಗೂ ಬಾಳಿಕೆಗೂ ಹೆಸರಾಗಿದೆ. ಇದರಲ್ಲಿನ ಎಳೆಗಳ ವಿನ್ಯಾಸ ತುಂಬ ಸೊಗಸಾಗಿರುವುದರಿಂದ ಉತ್ತಮ ತರದ, ಸುಂದರವಾದ ಮರದ ಸಾಮಾನುಗಳನ್ನು ಮಾಡಬಹುದು. ಒಂದು ಕಾಲದಲ್ಲಿ, ಉಕ್ಕು ಮತ್ತಿತರ ಲೋಹಗಳ ಬಳಕೆ ಬರುವುದಕ್ಕೆ ಮುನ್ನ, ಹಡಗು, ದೋಣಿಗಳ ನಿರ್ಮಾಣದಲ್ಲಿ ಈ ಮರ ಬಹುವಾಗಿ ಉಪಯೋಗವಾಗುತ್ತಿತ್ತು. ಅಲ್ಲದೆ ಪೀಪಾಯಿಗಳು, ಪೀಠೋಪಕರಣಗಳು, ವ್ಯವಸಾಯದ ಉಪಕರಣಗಳು, ಪೆಟ್ಟಿಗೆ, ಬೀರು, ಸಂಪುಟಗಳು, ಹಿಡಿಗಳು, ಗಣಿಗಳಲ್ಲಿ ಉಪಯೋಗಿಸುವ ಆಸರೆಗಂಬಗಳು, ಬೇಲಿಯ ಕಂಬಗಳು, ಮನೆ ಕಟ್ಟಲು ಉಪಯೋಗಿಸುವ ಹಲಗೆಗಳು, ತೊಲೆಗಳು, ರೈಲ್ವೆ ಸ್ಲೀಪರುಗಳು, ಕೊಡೆಗಳ ಹಿಡಿಗಳು, ಮರದ ಸೇತುವೆಗಳು ಇವೆಲ್ಲಕ್ಕೂ ಓಕ್ ಮರ ಬಳಕೆಯಾಗುತ್ತದೆ. ಮೇಲೆ ಹೇಳಿದ ಕೆಲಸಗಳಿಗೆ ಕೆಂಪು ಮತ್ತು ಬಿಳಿಯ ಬಗೆಯ ಓಕುಗಳೆರಡೂ ಬಳಕೆಯಾಗುತ್ತಿದ್ದರೂ ಬಿಳಿಯ ಓಕ್ ಉತ್ತಮ ದರ್ಜೆಯದೆಂದು ಹೆಸರಾಗಿದ್ದು ಅದರ ಉಪಯೋಗ ಹೆಚ್ಚಾಗಿದೆ. ಮುಖ್ಯವಾಗಿ ಬಿಳಿಯ ಓಕುಗಳಾದ ಕ್ವ.ಆಲ್ಬ, ಕ್ವ.ಸ್ಟೆಲ್ಲೇಟ, ಕ್ವ.ವರ್ಜಿನಿಯಾನ, ಕ್ವ.ಮ್ಯಾಕ್ರೊಕಾರ್ಪ, ಕ್ವ.ಮಾಂಟಾನ ಹಾಗೂ ಕೆಂಪು ಓಕ್‌ಗಳಾದ ಕ್ವ.ವೆಲುಟಿನ, ಕ್ವ.ಬೋರಿಯಾಲಿಸ್, ಕ್ವ.ಶುಮಾರ್ಡಿಯೈ, ಕ್ವ.ನೈಗ್ರ, ಕ್ವ.ಕಾಕ್ಸಿನಿಯ ಮತ್ತು ಭಾರತದ ಕ್ವ.ಡೈಲೆಟೇಟ ಪ್ರಭೇದಗಳನ್ನು ಈ ಕೆಲಸಗಳಿಗೆ ಉಪಯೋಗಿಸುತ್ತಾರೆ. ಇಂಗ್ಲೆಂಡಿನಲ್ಲಿ ಬೆಳೆಯುವ ಕ್ವ.ರೋಬರ್ ಮತ್ತು ಕ್ವ.ಪೆಟ್ರಿಯ ಇವನ್ನೂ ಬಳಸುತ್ತಾರೆ.

ಆರ್ಥಿಕವಾಗಿ ಅತಿಮುಖ್ಯವಾದ ಇನ್ನೊಂದು ಪ್ರಭೇದವೆಂದರೆ ಕ್ವ.ಸೂಬರ್ ಎಂಬುದು. ಕಾರ್ಕ್ ಓಕ್ ಎಂಬ ಸಾಮಾನ್ಯ ಹೆಸರುಳ್ಳ ಈ ಮರದಿಂದ ಕಾರ್ಕನ್ನು ತೆಗೆಯುತ್ತಾರೆ. ಸೀಸೆಗಳಿಗೆ ಬಿರಟೆಗಳು, ಪಾದರಕ್ಷೆಗಳ ತಳಗಳು, ಕೃತಕ ಕೈಕಾಲುಗಳು ಮತ್ತು ಲಿನೋಲಿಯಂ ಮುಂತಾದವುಗಳ ತಯಾರಿಕೆಯಲ್ಲಿ ಇದನ್ನು ಬಹಳವಾಗಿ ಉಪಯೋಗಿಸುತ್ತಾರೆ. ಈ ಮರವನ್ನು ಯೂರೋಪಿನ ಪೋರ್ಚುಗಲ್, ಸ್ಪೇನ್, ಫ್ರಾನ್ಸ್, ಇಟಲಿಗಳಲ್ಲಿ ಮತ್ತು ಉತ್ತರ ಆಫ್ರಿಕ ದೇಶಗಳಾದ ಆಲ್ಜೀರಿಯ ಮೊರಾಕೊ ಮತ್ತು ಟ್ಯೂನಿಸಿಯಗಳಲ್ಲಿ ವಿಸ್ತಾರವಾಗಿ ಬೆಳೆಸುತ್ತಾರೆ. ಈ ದೇಶಗಳಲ್ಲಿನ ಕಾರ್ಕ್ ಮರಗಳ ಕಾಡುಗಳ ವಿಸ್ತೀರ್ಣ ಸುಮಾರು 2 ದಶಲಕ್ಷ ಹೆಕ್ಟೇರುಗಳು ಮತ್ತು ಕಾರ್ಕಿನ ವಾರ್ಷಿಕ ಉತ್ಪನ್ನ ಸುಮಾರು 3,40,000 ಮೆಟ್ರಿಕ್ ಟನ್ನುಗಳು. ಇದರಲ್ಲಿನ ಸುಮಾರು ಅರ್ಧಪಾಲು ಪೋರ್ಚುಗಲ್ಲಿನಿಂದ ಬರುತ್ತದೆ. ಭಾರತ ವರ್ಷಕ್ಕೆ ಸುಮಾರು 2–3 ಮಿಲಿಯನ್ ರೂಪಾಯಿಗಳ ಬೆಲೆಬಾಳುವ 3,000 ಟನ್ ಕಾರ್ಕನ್ನು ಆಮದು ಮಾಡಿಕೊಳ್ಳುತ್ತದೆ. ಇಷ್ಟು ಮುಖ್ಯವಾದ ಕಾರ್ಕ್ ಓಕ್ ಮರವನ್ನು ಭಾರತದ ನೀಲಗಿರಿಯಲ್ಲಿ ಬೆಳೆಸುವ ಪ್ರಯತ್ನ ನಡೆಸಿದ್ದಾರೆ. ನೋಡಿ—ಕಾರ್ಕ್.

ಇನ್ನು ಕೆಲವು ಪ್ರಭೇದಗಳಾದ ಕ್ವ.ಏಜಿಲೋಪ್ಸ್, ಕ್ವ.ಮಾಂಟಾನ, ಕ್ವ.ವೆಲುಟಿನ ಹಾಗೂ ಭಾರತದಲ್ಲಿ ಬೆಳೆಯುವ ಕ್ವ.ಇನ್‌ಕಾನ, ಕ್ವ.ಇನ್‌ಫೆಕ್ಟೋರಿಯ ಹಾಗೂ ಕ್ವ.ಲ್ಯಾಮೆಲ್ಲೋಸ ಇವುಗಳ ತೊಗಟೆಯಿಂದ ಚರ್ಮ ಹದ ಮಾಡುವುದಕ್ಕೆ ಉಪಯೋಗಿಸುವ ಟ್ಯಾನಿನ್ ಎಂಬ ವಸ್ತುವನ್ನು ತೆಗೆಯುತ್ತಾರೆ.

ಓಕ್ ಮರದ ಕಾಯಿಗಳು ಕಾಡಿನ ಸಣ್ಣಪುಟ್ಟ ಮೃಗಗಳ ಪ್ರಧಾನವಾದ ಆಹಾರ; ಅಲ್ಲದೆ ಅವುಗಳಲ್ಲಿನ ಅಧಿಕ ಪೌಷ್ಟಿಕಾಂಶದಿಂದಾಗಿ ಹಂದಿಗಳಿಗೆ ಆಹಾರವಾಗಿಯೂ ಉಪಯೋಗಿಸುತ್ತಾರೆ.

ಹಲವಾರು ಪ್ರಭೇದಗಳನ್ನು ನೆರಳಿಗಾಗಿ ಮತ್ತು ಶೋಭೆಗೆಂದು ಇಂಗ್ಲೆಂಡು, ಅಮೆರಿಕಗಳಲ್ಲಿ ಉದ್ಯಾನಗಳಲ್ಲೂ ರಸ್ತೆಗಳ ಅಂಚಿನಲ್ಲೂ ಬೆಳೆಸುತ್ತಾರೆ. ಈ ರೀತಿ ಬೆಳೆಸುವ ಓಕ್ ಮರಗಳಲ್ಲಿ ಕ್ವ.ಇಲೆಕ್ಸ್, ಕ್ವ.ಸೆರ್ರಿಸ್, ಕ್ವ.ಬೋರಿಯಾಲಿಸ್, ಕ್ವ.ಅಗ್ರಿಫೋಲಿಯ, ಕ್ವ.ಕಾಕ್ಸಿನಿಯ, ಕ್ವ.ಪಾಲುಸ್ಟ್ರಿಸ್, ಕ್ವ.ಕ್ರೈಸೋಲೆಪಿಸ್, ಕ್ವ.ಮ್ಯಾಕ್ರೊಕಾರ್ಪ, ಕ್ವ.ನೈಗ್ರ ಮತ್ತು ಕ್ವ.ವೆಲುಟಿನ ಇವು ಮುಖ್ಯ ಪ್ರಭೇದಗಳು.

ಭಾರತದಲ್ಲಿ ಬೆಳೆಯುವ ಕ್ವರ್ಕಸ್ ಇನ್‌ಫೆಕ್ಟೋರಿಯ ಎಂಬ ಓಕ್ ಪ್ರಭೇದದ ರೆಂಬೆಗಳಲ್ಲಿ ಒಂದು ಜಾತಿಯ ಕೀಟ ಮೊಟ್ಟೆಗಳನ್ನಿಟ್ಟು, ಆ ರೆಂಬೆಗಳಲ್ಲಿ ಒಂದು ಬಗೆಯ ಸಣ್ಣ ಚೆಂಡಿನಂಥ ಗಂಟುಗಳು ಏಳುವಂತೆ ಮಾಡುತ್ತದೆ. ಈ ಗಂಟುಗಳಿಂದ ಟ್ಯಾನಿನ್ ಮತ್ತು ಹಳದಿ ಬಣ್ಣವನ್ನು ತೆಗೆಯುತ್ತಾರೆ. ಈ ಗಂಟುಗಳನ್ನು ಮೂಲವ್ಯಾಧಿ ರೋಗಕ್ಕೆ ಮುಲಾಮಿನ ತಯಾರಿಕೆಯಲ್ಲೂ ಅಜೀರ್ಣರೋಗಗಳ ಔಷಧಗಳಿಗೂ ಉಪಯೋಗಿಸುತ್ತಾರೆ.

ಓಕ್ ಮರದ ಹಲವಾರು ಕಳಪೆ ಭಾಗಗಳನ್ನು ಉರುವಲಾಗಿಯೂ ಇದ್ದಲಿನ ತಯಾರಿಕೆಯಲ್ಲೂ ಉಪಯೋಗಿಸುತ್ತಾರೆ. ಕೆಲವು ಬಗೆಯ ಓಕ್ ಎಲೆಗಳನ್ನು ದನಗಳಿಗೆ ಮೇವಾಗಿ ಉಪಯೋಗಿಸುತ್ತಾರೆ. ಕ್ವರ್ಕಸ್ ಇನ್‌ಕಾನ ಪ್ರಭೇದದ ಕಾಯಿಗಳನ್ನು ಔಷಧಿಯಾಗಿ, ಗುಹ್ಯರೋಗ ಚಿಕಿತ್ಸೆಯಲ್ಲಿಯೂ ಅಜೀರ್ಣರೋಗಗಳ ಚಿಕಿತ್ಸೆಯಲ್ಲಿಯೂ ಮೂತ್ರೋತ್ತೇಜಕವಾಗಿಯೂ ಉಪಯೋಗಿಸುತ್ತಾರೆ.

ಗ್ರೀಷ್ಮ ಋತುವಿನಲ್ಲಿ ಬಹುಪಾಲು ಬಗೆಯ ಓಕುಗಳು ತಮ್ಮ ಎಲೆಗಳ ಬಣ್ಣವನ್ನು ಬದಲಿಸುತ್ತವೆ. ಅಲ್ಲಿಯ ವರೆಗೂ ಹಸಿರು ಬಣ್ಣದಿಂದ ಕೂಡಿದ್ದ ಎಲೆಗಳು ಕಿತ್ತಳೆ, ಕಡುಗೆಂಪು, ಹಳದಿ, ನೇರಿಳೆ, ಕಂದು ಹೀಗೆ ಹಲವಾರು ಬಣ್ಣಗಳನ್ನು ತಾಳುತ್ತ ಹೋಗುತ್ತವೆ. ಈ ನೋಟವಂತೂ ಅತಿರಮ್ಯವಾಗಿರುತ್ತದೆ.

ಬೀಜಗಳನ್ನು ಅಥವಾ ತುಂಡುಗಳನ್ನು ನೆಟ್ಟು ಓಕ್ ಮರಗಳನ್ನು ಅಭಿವೃದ್ಧಿಗೊಳಿಸುತ್ತಾರೆ. ಅಲ್ಲದೆ ತೋಟಗಳಲ್ಲಿ ಬೆಳೆಸುವುದಕ್ಕೆ ಬೇಕಾದ ಕೆಲವು ತಳಿಗಳನ್ನು ಗ್ರಾಫ್ಟ್ ಮಾಡಿಯೊ ಲೇಯರುಗಳ ಮೂಲಕವೊ ಪಡೆದು ಬೆಳೆಸುತ್ತಾರೆ.

ಓಕ್ ಮರಗಳಿಗೆ ಹಲವಾರು ಬಗೆಯ ರೋಗಗಳು, ಪೀಡೆಗಳು ಅಂಟುತ್ತವೆ. ಮೈಕ್ರೋಸ್ಫೀರ ಕ್ವರ್ಸಿನ ಎಂಬ ಬೂಷ್ಟು ರೋಗ ತಗುಲಿ ಎಲೆಗಳ ಮೇಲೆ ಬಿಳಿಯ ಚುಕ್ಕಿಗಳನ್ನು, ಮಚ್ಚೆಗಳನ್ನು ಉಂಟುಮಾಡುತ್ತವೆ. ಕೆಲವು ಬಾರಿ ರೋಗ ಉಲ್ಬಣಗೊಂಡು ಓಕ್ ಮರಗಳು ಸಾಯುವುದೂ ಉಂಟು. ಈ ರೋಗವನ್ನು ಬೋರ್ಡೊ ಮಿಶ್ರಣವನ್ನು ಸಿಂಪಡಿಸುವುದರಿಂದ ತಡೆಯಬಹುದು. ಕೆಲವು ಓಕ್ ಮರಗಳ ಬೇರಿಗೆ ರೊಸೆಲಿನ ಕ್ವರ್ಸಿನ ಎಂಬ ಇನ್ನೊಂದು ಬಗೆಯ ಬೂಷ್ಟು ರೋಗವೂ ಅಂಟುತ್ತದೆ.

ಕೆಲವು ಜಾತಿಯ ಪತಂಗಗಳ ಕಂಬಳಿಹುಳುಗಳು, ಡಿಂಭಗಳು ಎಲೆಗಳನ್ನು ಸಂಪೂರ್ಣವಾಗಿ ತಿಂದುಹಾಕಿ ಮರಗಳಿಗೆ ವಿಶೇಷ ಹಾನಿಯನ್ನುಂಟುಮಾಡುತ್ತವೆ. ಟಾರ್ಟ್ರಿಕ್ಸ್ ವಿರಿಡಾನ ಎಂಬ ಪತಂಗ ಬ್ರಿಟನ್‌ನಲ್ಲಿ ಓಕ್‌ಮರಗಳಿಗೆ ತಗುಲಿ ಅವುಗಳ ಎಲೆಗಳು ಸುರುಟಿಕೊಳ್ಳುವಂತೆ ಮಾಡಿ ನಷ್ಟವನ್ನುಂಟುಮಾಡುತ್ತದೆ. ಇವೆಲ್ಲವನ್ನೂ ವಿಮಾನಗಳ ಮೂಲಕ ಕೀಟನಿರೋಧಕಗಳನ್ನು ಸಿಂಪಡಿಸುವುದರಿಂದ ತಡೆಗಟ್ಟಬಹುದು. (ಕೆ.ಬಿ.ಎಸ್.)

**ಓಕಿನಾವ :** ಜಪಾನಿನ ದಕ್ಷಿಣಕೊನೆಯಲ್ಲಿರುವ ರ್‍ಯುಕ್ಯುರೆಟ್ಟೊ ದ್ವೀಪ ಸಮುದಾಯದ ಅತಿ ದೊಡ್ಡ ದ್ವೀಪ. ಹಳೆಯ ಶಿಲೆಗಳ ಮೇಲೆ ಜ್ವಾಲಾಮುಖಿಯ ಭಸ್ಮಸಂಚಯನದಿಂದಾಗಿ ಈ ದ್ವೀಪ ಮೈತಳೆದಿದೆ. ಇದರ ಸುತ್ತಣ ದ್ವೀಪಗಳಲ್ಲಿ ಕೆಲವು ಹವಳದಿಂದಾದವು. ಕೆಲವಕ್ಕೆ ಹವಳದ ಅಂಚುಗಳಿವೆ. ಈ ದ್ವೀಪ ಸಾಮಾನ್ಯವಾಗಿ ಸಮಮಟ್ಟದ ಇಳಿಜಾರುಗಳಿಂದ ಕೂಡಿದೆ. ಆದರೆ ಇದರ ಉತ್ತರ ಭಾಗದಲ್ಲಿ ಏರುಪೇರುಗಳಿವೆ. ದಕ್ಷಿಣಭಾಗ ಮೈದಾನ. ದ್ವೀಪದ ಜನಸಂಖ್ಯೆಯ ಬಹುಪಾಲು ವಾಸಿಸುವುದು ಈ ಪ್ರದೇಶದಲ್ಲೇ. ಉಪೋಷ್ಣವಲಯದ ವಾಯುಗುಣ ಇದೆ. ಮಳೆ ವಿಪರೀತ. ಆಗಾಗ ಚೀನ ಸಮುದ್ರದಲ್ಲಿ ತಲೆದೋರುವ ಚಂಡಮಾರುತಕ್ಕೂ ಈ ದ್ವೀಪ ಬಲಿಯಾಗುವುದುಂಟು. ಬತ್ತ, ಕಪ್ಪುಸಕ್ಕರೆ, ಬಾಳೆಹಣ್ಣು, ಸಿಹಿಗೆಣಸು ಇವು ಇಲ್ಲಿಯ ಪ್ರಮುಖ ಕೃಷಿ ಉತ್ಪನ್ನಗಳು. ಪೈನಾಪಲ್ ಇನ್ನೊಂದು ಮುಖ್ಯ ಉತ್ಪನ್ನ. ಇದನ್ನು ಡಬ್ಬಿಗಳಲ್ಲಿ ತುಂಬಿ ರಫ್ತು ಮಾಡುತ್ತಾರೆ. ಮೀನುಗಾರಿಕೆ ಹಳೆಯ ಪ್ರಮುಖ ಉದ್ಯಮ. ಅರಗಿನ ಹಾಗೂ ಮಣ್ಣಿನ ವಸ್ತುಗಳನ್ನು ಮಾಡುವ ಕೈಗಾರಿಕೆ ಹಿಂದಿನಿಂದಲೂ ಬಂದದ್ದು. ತಿಮಿಂಗಿಲದ ವಸ್ತು ಹಾಗೂ ಗಂಧಕದ ಶುದ್ಧೀಕರಣ ಉದ್ಯಮಗಳು ಈಚೆಗೆ ಬೆಳೆಯುತ್ತಿವೆ.

ಎರಡನೆಯ ಮಹಾಯುದ್ಧಕ್ಕೆ ಮುಂಚೆ ಈ ದ್ವೀಪಸಮುದಾಯ ಜಪಾನಿನ ಒಂದು ಪ್ರಾಂತ್ಯವಾಗಿತ್ತು. ಎರಡನೆಯ ಮಹಾಯುದ್ಧದ ಸಮಯದಲ್ಲಿ ನಡೆದ ಅಮೆರಿಕ ಸಂಯುಕ್ತ ಸಂಸ್ಥಾನ ಹಾಗೂ ಜಪಾನ್‌ಗಳ ನಡುವಣ ಉಗ್ರಕದನದ ರುದ್ರಭೂಮಿಯಾಗಿತ್ತು. ಜಪಾನನ್ನು ಗೆಲ್ಲುವ ಯೋಜನೆಯ ಮೊದಲ ಹೆಜ್ಜೆಯಾಗಿ ಅಮೆರಿಕನರು ಇದನ್ನು 1945ರಲ್ಲಿ ಆಕ್ರಮಿಸಿದರು. ಯುದ್ಧದ ಅನಂತರ ಅಮೆರಿಕದ ಆಡಳಿತಕ್ಕೆ ಇದು ಒಳಪಟ್ಟಿತ್ತು. ಸೈನ್ಯಾಡಳಿತವಿದ್ದರೂ 29 ಸದಸ್ಯರ ವಿಧಾನಸಭೆಯಿದ್ದು, ಕಾರ್ಯಾಂಗದ ಮುಖ್ಯಸ್ಥನನ್ನು ಅದೇ ನೇಮಿಸುತ್ತಿತ್ತು. 1966ರಲ್ಲಿ ಕಾರ್ಯಾಂಗದ ಮುಖ್ಯಸ್ಥನನ್ನೂ ಆ ಸಭೆಯೇ ನೇಮಿಸುವಂತಾಯಿತು. ಈ ರೀತಿ ಸ್ವತಂತ್ರ ರ್‍ಯುಕ್ಯು ಸರ್ಕಾರ ಸ್ಥಾಪಿತವಾಯಿತು. ನಾಹಾ ಇದರ ರಾಜಧಾನಿ. ಶುರಿ ಇನ್ನೊಂದು ಪ್ರಮುಖ ಪಟ್ಟಣ. (ಕೆ.ಆರ್.ಆರ್.)

**ಓಕ್ಟನ್ಸ್ :** ಆಕಾಶದ 88 ನಕ್ಷತ್ರಪುಂಜಗಳಲ್ಲಿ ಒಂದು. ಬಲು ಕ್ಷೀಣ ನಕ್ಷತ್ರಗಳ ಸಮುದಾಯವಾಗಿರುವುದರಿಂದ ಈ ವಲಯವನ್ನು ಗುರುತಿಸುವುದು ಕಷ್ಟ. ದಕ್ಷಿಣ ಧ್ರುವಬಿಂದು ಇದೇ ಪುಂಜದಲ್ಲಿದೆ. ಘಂಟಾವೃತ್ತಾಂಶ 75°ದ. ದಿಂದ 90°ದ. (ದಕ್ಷಿಣಧ್ರುವ ಬಿಂದು) ವರೆಗೆ ಈ ಪುಂಜದ ವ್ಯಾಪ್ತಿ ಇದೆ. *

**ಓಕ್ಲಹೋಮ :** ಅಮೆರಿಕ ಸಂಯುಕ್ತಸಂಸ್ಥಾನದ ನೈಋತ್ಯ ಭಾಗದಲ್ಲಿರುವ ಒಂದು ರಾಜ್ಯ. ಪೂರ್ವದಲ್ಲಿ ಮಿಸ್ಸೂರಿ ಮತ್ತು ಆರ್ಕನ್ಸಾ, ದಕ್ಷಿಣದಲ್ಲಿ ಟೆಕ್ಸಸ್, ಪಶ್ಚಿಮದಲ್ಲಿ ಟೆಕ್ಸಸ್ ಮತ್ತು ನ್ಯೂ ಮೆಕ್ಸಿಕೋ ಮತ್ತು ಉತ್ತರದಲ್ಲಿ ಕ್ಯಾನ್ಸಸ್ ಮತ್ತು ಕಾಲೊರಾಡೋ ರಾಜ್ಯಗಳು ಸುತ್ತುವರಿದಿರುವ ಒಂದು ರಾಜ್ಯ. ವೈಶಾಲ್ಯದಲ್ಲಿ ಇದು ಸಂಯುಕ್ತಸಂಸ್ಥಾನದ ರಾಜ್ಯಗಳಲ್ಲಿ 18ನೆಯದು. ವಿಸ್ತೀರ್ಣ 69,919 ಚ.ಮೈ.; ಜನಸಂಖ್ಯೆ 23,28,284 (1960).

ಈ ಪ್ರದೇಶದ ಇಂಡಿಯನರ ಭಾಷೆಯಲ್ಲಿ ಓಕ್ಲಹೋಮ ಎಂದರೆ ಕೆಂಪು ಜನ. ಇಂಡಿಯನರು ವಾಸವಾಗಿದ್ದ ಭಾಗಕ್ಕೆ ಈ ಹೆಸರು 1866ರಲ್ಲಿ ಪ್ರಥಮವಾಗಿ ಅನ್ವಯವಾಯಿತು. 1889ರಲ್ಲಿ ಅಮೆರಿಕನ್ ಜನವಸತಿಗೆ ಈ ಪ್ರದೇಶದ ದ್ವಾರವನ್ನು ಅಧಿಕೃತವಾಗಿ ತೆರೆದಾಗ, ಕಾನೂನಿನ ಪ್ರಕಾರ ವಿಧಿಸಲಾಗಿದ್ದ ದಿನಕ್ಕೂ ಮುಂಚೆಯೇ ಒಬ್ಬ ವ್ಯಕ್ತಿ ಈ ಸ್ಥಳಕ್ಕೆ ಧಾವಿಸಿ ತನ್ನ ಹಕ್ಕನ್ನು ಸ್ಥಾಪಿಸಲು ಯತ್ನಿಸಿದನಂತೆ. ಆದ್ದರಿಂದ ಶೀಘ್ರ ರಾಜ್ಯ (ಸೂನರ್ ಸ್ಟೇಟ್) ಎಂಬುದು ಇದರ ಜನಪ್ರಿಯ ನಾಮ.

**ಮೇಲ್ಮೈ ಲಕ್ಷಣಗಳು :** ಆಗ್ನೇಯ ದಿಕ್ಕಿನ ಕಡೆಗೆ ಇಳಿಜಾರಾದ ಈ ಪ್ರದೇಶದ ವಾಯವ್ಯಮೂಲೆ ಸಮುದ್ರಮಟ್ಟದಿಂದ 5,000 ಅಡಿಗಳಷ್ಟು ಎತ್ತರವಾಗಿದ್ದರೆ, ರೆಡ್ ನದಿಯ ಪ್ರದೇಶದಲ್ಲಿ ಕೇವಲ 300 ಅಡಿಗಳ ಎತ್ತರವಿದೆ. ಪಶ್ಚಿಮ ಭಾಗಗಳಲ್ಲಿ ಮರಗಿಡಗಳಿಲ್ಲದ ಮೈದಾನಗಳಿದ್ದರೆ, ಪೂರ್ವಭಾಗದಲ್ಲಿ ಏರುತಗ್ಗುಗಳಿಂದಲೂ ದಟ್ಟವಾದ ಕಾಡುಗಳಿಂದಲೂ ಕೂಡಿರುವ ಪರ್ವತಗಳಿವೆ. ಪೂರ್ವ ದಕ್ಷಿಣ ಭಾಗಗಳಲ್ಲಿ ನಾಲ್ಕು ಪ್ರಮುಖ ಪರ್ವತಸ್ತೋಮಗಳುಂಟು. ಪಶ್ಚಿಮಕ್ಕೆ ಸಾಗಿದಂತೆ ಓಜಾರ್ಕ್ ಪರ್ವತದ ಎತ್ತರ ಕ್ರಮೇಣ ಕಡಿಮೆಯಾಗುತ್ತದೆ. ಆಗ್ನೇಯ ಭಾಗದಲ್ಲಿರುವುದು ವಾಷಿಟಾ ಪರ್ವತ. ದಕ್ಷಿಣ ಮಧ್ಯಪ್ರದೇಶದಲ್ಲಿ ಆರ್ಬಕಲ್ ಪರ್ವತಶ್ರೇಣಿಯೂ ಕೆಂಪು ಮತ್ತು ವಾಷಿಟಾ ನದೀಕಣಿವೆಗಳ ಮಧ್ಯಭಾಗದಲ್ಲಿ



ವಿಚಿಟಾ ಪರ್ವತಗಳೂ ಇವೆ. ಪಶ್ಚಿಮದ ಮೈದಾನಗಳಲ್ಲಿ ಜಿಪ್ಸಮ್ ನಿಕ್ಷೇಪಗಳು ಹೇರಳ. ವಾಯುವ್ಯಭಾಗದಲ್ಲಿ ಪ್ರಮುಖವಾಗಿರುವ ಚೌಳುಮಣ್ಣಿನ ಮೈದಾನಗಳು ಸಮತಲ ಪ್ರದೇಶಗಳು. ಒಂದೊಂದೂ $\frac{1}{2}$ದಿಂದ 3 ಮೈಲಿಗಳಷ್ಟು ಅಗಲವಾಗಿಯೂ 8 ಮೈಲಿಗಳಷ್ಟು ಉದ್ದವಾಗಿಯೂ ಇವೆ.

ಇಲ್ಲಿನ ಪ್ರಮುಖ ನದಿಗಳು ವಾಯುವ್ಯದಿಂದ ಆಗ್ನೇಯಕ್ಕೆ ಹರಿಯುತ್ತವೆ. ಆರ್ಕನ್ಸಾಸ ಮುಖ್ಯ ನದಿ. ಇದು ಉತ್ತರದಲ್ಲಿ ಪಶ್ಚಿಮ ರೇಖಾಂಶ 97°ಯ ಬಳಿ ರಾಜ್ಯವನ್ನು ಪ್ರವೇಶಿಸಿ ಪೂರ್ವದ ಎಲ್ಲೆಯ ಮಧ್ಯಭಾಗದಲ್ಲಿ ರಾಜ್ಯವನ್ನು ದಾಟಿ ಆರ್ಕನ್ಸಾಸ ರಾಜ್ಯದಲ್ಲಿ ಮುಂದುವರಿಯುತ್ತದೆ. ಬಹಳಮಟ್ಟಿಗೆ ಈ ರಾಜ್ಯದ ದಕ್ಷಿಣದ ಅಂಚಿನಲ್ಲೇ ಹರಿಯುವುದು ರೆಡ್ ನದಿ. ನಾರ್ತ್ ಫೋರ್ಕ್, ವಾಷಿಟಾ, ಬ್ಲೂ, ಬಾಗಿ, ಕಿಯಾಮಿಚಿ ಇವು ರೆಡ್ ನದಿಯ ಉಪನದಿಗಳು. ಆಗ್ನೇಯ ಭಾಗದಲ್ಲಿ ಲಿಟಲ್ ಇನ್ನೊಂದು ಮುಖ್ಯನದಿ. ಮೌಂಟನ್ ಫೋರ್ಕ್ ಇದರ ಒಂದು ಮುಖ್ಯ ಉಪನದಿ. ಲಿಟಲ್ ನದಿ ಓಕ್ಲಹೋಮದ ಗಡಿ ದಾಟಿ ಹರಿದು, ಆರ್ಕನ್ಸಾಸ ರಾಜ್ಯದಲ್ಲಿ ರೆಡ್ ನದಿಯಲ್ಲಿ ಸಂಗಮಿಸುತ್ತದೆ.

**ವಾಯುಗುಣ :** ಇಲ್ಲಿಯದು ಖಂಡಾಂತರ ವಾಯುಗುಣ. ಉಷ್ಣತೆ ಮತ್ತು ತೇವಗುಣಗಳಲ್ಲಿ ಬಹಳ ತರತಮಗಳುಂಟು. ಪಶ್ಚಿಮ ಮತ್ತು ಮಧ್ಯಭಾಗಗಳು ಸಾಮಾನ್ಯವಾಗಿ ಪೂರ್ವಭಾಗಕ್ಕಿಂತ ಹೆಚ್ಚು ತಂಪು, ಶುಷ್ಕ. ವಾಯುವ್ಯದಲ್ಲಿ ವರ್ಷದ ಸರಾಸರಿ ದೈನಿಕ ಉಷ್ಣತೆ 55° ಫ್ಯಾ. (ಸು. 13° ಸೆಂ.). ವಾರ್ಷಿಕ ಸರಾಸರಿ ಮಳೆ 16.51″. ಆಗ್ನೇಯದಲ್ಲಿ ಇವು ಕ್ರಮವಾಗಿ 63° ಫ್ಯಾ. ಮತ್ತು 46.53″. ರಾಜ್ಯದ ಮಧ್ಯದಲ್ಲಿರುವ ಓಕ್ಲಹೋಮ ನಗರದಲ್ಲಿ ವರ್ಷದ ಸರಾಸರಿ ದೈನಿಕ ಉಷ್ಣತೆ 60° ಫ್ಯಾ., ಸರಾಸರಿ ಮಳೆ 30.22″.

**ಸಸ್ಯ ಮತ್ತು ಪ್ರಾಣಿವರ್ಗ :** ಓಕ್ಲಹೋಮದ ಪೂರ್ವ ಭಾಗವನ್ನು ಬಹುತೇಕ ಕಾಡು ಆವರಿಸಿತ್ತು. ಅಲ್ಲಲ್ಲಿ ಹುಲ್ಲುಗಾವಲುಗಳಿದ್ದುವು. ಪೈನ್, ಜ್ಯೂನಿಫರ್, ಶಾಲ್ಮಲೀ, ಓಕ್, ವಿಲ್ಲೊ ಮುಂತಾದ ವೃಕ್ಷಜಾತಿಗಳು ಪ್ರಮುಖ. ಮಧ್ಯಭಾಗದಲ್ಲಿ ನದಿಗಳ ಆಚೀಚೆ ದಂಡೆಗಳಲ್ಲಿ ಮಾತ್ರ ಮರಗಳು ಬೆಳೆದಿವೆ. ಪಶ್ಚಿಮಭಾಗದಲ್ಲಿ ತೇವ ಇನ್ನೂ ಕಡಿಮೆ. ಅಲ್ಲಿ ಕೆಲವು ಕುಬ್ಜ ವೃಕ್ಷಗಳು ಮಾತ್ರ ಬೆಳೆಯುತ್ತವೆ. ಪ್ಲಂ, ನಳ್ಳಿಸೇಬು, ಚೆರಿ, ಬ್ಲ್ಯಾಕ್ ಬೆರಿ, ದ್ರಾಕ್ಷಿ, ಸ್ಟ್ರಾಬೆರಿ ಮುಂತಾದ ವನ್ಯಫಲಗಳು ಈ ರಾಜ್ಯದಲ್ಲಿ ಬೆಳೆಯುತ್ತವೆ. ವಿಚಿಟಾ ಕಾಡುಗಳಲ್ಲಿ ವನ್ಯಪ್ರಾಣಿಗಳ ನೆಲೆಯನ್ನು ಸರ್ಕಾರ ರಕ್ಷಿಸುತ್ತದೆ. ಜಿಂಕೆ, ತೋಳ, ಚಿರತೆ, ಕರಡಿ, ಮಿಂಕ್, ಒಪಾಸಂ, ಮೊಲ, ಅಳಿಲು, ಪಾರಿವಾಳ, ಬಾತುಕೋಳಿ ಇವು ಕಾಡುಗಳಲ್ಲಿ ಹೇರಳ. ಆದಿಕಾಲದಲ್ಲಿ ಕಾಡೆಮ್ಮೆಗಳು ಹೆಚ್ಚಾಗಿದ್ದುವು. ಸ್ವಚ್ಛಂದ ಮೃಗಯಾ ವಿಹಾರದ ಹಾವಳಿಯಿಂದ ಇವು ಈಗ ಕಡಿಮೆಯಾಗಿವೆ. ಅನೇಕ ಬಗೆಯ ಪಕ್ಷಿಗಳು ಇಲ್ಲಿವೆ. ಋತುಮಾನಕ್ಕೆ ಅನುಗುಣವಾಗಿ ಇವು ವಲಸೆ ಹೋಗುತ್ತವೆ.

**ಉದ್ಯಾನ ಮತ್ತು ಪ್ರೇಕ್ಷಣೀಯ ಸ್ಥಳಗಳು :** ಇಲ್ಲಿಯ ನದೀಪ್ರವಾಹಗಳನ್ನು ತಡೆಗಟ್ಟುವ ಸಲುವಾಗಿ ಹಲವಾರು ಜಲಾಶಯಗಳನ್ನು ನಿರ್ಮಿಸಲಾಗಿದೆ. ಅವುಗಳ ಪೈಕಿ ಯುಫಾಲ ಬಲು ದೊಡ್ಡದು. ಇದರ ನೀರು ಕೆನೆಡಿಯನ್ ನದಿ ಮತ್ತು ಉಪನದಿಗಳಲ್ಲಿ ಸುಮಾರು 130 ಮೈ. ಉದ್ದದ ವರೆಗೂ ಚಾಚಿದೆ. ಟೆಕ್ಸೋಮ ಇನ್ನೊಂದು. ರೆಡ್ ಮತ್ತು ವಾಷಿಟಾ ನದಿಗಳಲ್ಲಿ 100 ಮೈಲಿಗಳ ವರೆಗೆ ಇದರ ನೀರು ಹರಡಿದೆ. ಚೆರೊಕೀಸ್ ಸರೋವರದ ನೀರು ನಿಯೋಷೋ ನದಿಯಲ್ಲಿ 65 ಮೈಲಿಗಳ ವರೆಗೂ ಫೋರ್ಟ್ ಗಿಬ್ಸನ್ ನೀರು ಆರ್ಕನ್ಸಾಸ ಮತ್ತು ಸಿಮರಾನ್ ನದಿಗಳಲ್ಲಿ 40 ಮೈಲಿಗಳ ವರೆಗೊ ಟೆನ್ ಕಿಲರ್ ಸರೋವರದ ನೀರು ಇಲಿನಾಯ್ ನದಿಯಲ್ಲಿ 25 ಮೈಲಿಗಳ ವರೆಗೂ ಚಾಚಿವೆ. ಮೀನುಗಾರಿಕೆ ಮತ್ತು ದೋಣಿವಿಹಾರಗಳಿಗೆ ಅನುಕೂಲಕರವಾದ ಇಂಥ ಸರೋವರಗಳು ಲಕ್ಷಾಂತರ ಪ್ರವಾಸಿಗಳನ್ನು ಆಕರ್ಷಿಸುತ್ತವೆ. ಓಕ್ಲಹೋಮದ ಪ್ರಕೃತಿಸೌಂದರ್ಯದ ಬೀಡಾದ ಅನೇಕ ಉದ್ಯಾನಗಳಲ್ಲಿ ಅಲಬಾಸ್ಟರ್ ಗುಹೆಗಳು, ಕುದಿಯುವ ನೀರಿನ ಬುಗ್ಗೆಗಳು, ಬೀವರ್ಸ್ ಬೆಂಡ್ ಉದ್ಯಾನ, ಗ್ರೀನ್ ಲೀಫ್ ಉದ್ಯಾನ, ಲೇಕ್ ಮುರ್ರೆ ಉದ್ಯಾನ, ಒಸೇಜ್ ಬೆಟ್ಟಗಳ ಉದ್ಯಾನ, ರಾಬರ್ಸ್ ಕೇವ್ (ದರೋಡೆಗಾರರ ಗುಹೆ) ಉದ್ಯಾನ, ರೋಮನ್ ನೋಸ್ ಉದ್ಯಾನ, ಬಾಗಿ ಡಿಪೋ ಸ್ಮಾರಕ ಉದ್ಯಾನ, ಪ್ಲ್ಯಾಟ್ ರಾಷ್ಟ್ರೀಯ ಉದ್ಯಾನ ಮುಂತಾದವು ಸುಪ್ರಸಿದ್ಧವಾದವು. ವಸ್ತುಸಂಗ್ರಹಾಲಯ ಮತ್ತು ಗ್ರಂಥಾಲಯಗಳನ್ನು ಓಕ್ಲಹೋಮ ಇತಿಹಾಸ ಸಂಘ ನಡೆಸಿಕೊಂಡು ಬರುತ್ತಿದೆ. ಟಲ್ಸದಲ್ಲಿರುವ ಗಿಲ್‌ಕ್ರೀಸ್ ಕಲಾ ಮತ್ತು ಇತಿಹಾಸ ಸಂಸ್ಥೆ, ನಾರ್ಮನ್‌ನಲ್ಲಿರುವ ವಸ್ತುಸಂಗ್ರಹಾಲಯ, ಸ್ಟೊವಾಲ್ ವಸ್ತುಸಂಗ್ರಹಾಲಯ, ಬಾರ್ಟ್ಲೆಸ್‌ವಿಲ್ಲೆಯ ವುಲೆರಾಕ್ ವಸ್ತುಸಂಗ್ರಹಾಲಯ ಇವು ಇತರ ಕೆಲವು ಮುಖ್ಯ ಸಂಸ್ಥೆಗಳು.

**ಜನತೆ ಮತ್ತು ಜನಸಂಖ್ಯೆ :** ಬಿಳಿಯರು ಇಲ್ಲಿಗೆ ಬಂದಾಗ ಈ ಪ್ರದೇಶ ಅಮೆರಿಂಡಿಯನರ ಆವಾಸಸ್ಥಾನವಾಗಿತ್ತು. ಅಮೆರಿಕ ಸಂಯುಕ್ತಸಂಸ್ಥಾನ 1820ರ ಅನಂತರ ಇತರ ಗಿರಿಜನರನ್ನು ಈ ಪ್ರದೇಶದಲ್ಲಿ ನೆಲೆಸಲು ಪ್ರೇರೇಪಿಸಿತು. ಈ ವಲಸೆಗಾರರು ತಮ್ಮ ಸರ್ಕಾರ, ಶಾಲಾಪದ್ಧತಿ ಮತ್ತು ಇತರ ಪದ್ಧತಿಗಳನ್ನು ಇಲ್ಲಿ ಸ್ಥಾಪಿಸಿದರು. ಅನಂತರವೂ ಕೇಂದ್ರ ಸರ್ಕಾರದ ಉತ್ತೇಜನದಿಂದ ಇತರ ಜನರೂ ವಲಸೆ ಬಂದರು. ಇಪ್ಪತ್ತನೆಯ ಶತಮಾನದ ಮಧ್ಯಭಾಗದ ವೇಳೆಗೆ ಸಂಯುಕ್ತ ಸಂಸ್ಥಾನದ ಇಂಡಿಯನರಲ್ಲಿ $\frac{1}{3}$ ಭಾಗದಷ್ಟು ಜನ ಇಲ್ಲಿ ವಾಸಿಸುತ್ತಿದ್ದರು. ಕ್ರಮೇಣ ಅಂತರ್ಜನಾಂಗ ವಿವಾಹಗಳು ರೂಢಿಗೆ ಬಂದು ಜನಾಂಗಗಳ ಬೆರಕೆಯಾಯಿತು. ಇಂಡಿಯನರಿಗೆ ಕೊಟ್ಟು ಉಳಿದ ನೆಲವನ್ನು ಸರ್ಕಾರ ಇತರರಿಗೆ ಹಂಚಿತು. 1889ರಿಂದ 1910ರ ವರೆಗೆ ವಿಭಿನ್ನ ಐರೋಪ್ಯ ರಾಷ್ಟ್ರೀಯ ಮೂಲಗಳ ಜನ ಇಲ್ಲಿಗೆ ಬಂದು ನೆಲೆಸಿದರು. ಇದರಿಂದ ರಾಜ್ಯದ ಜನಸಂಖ್ಯೆ ಶೀಘ್ರಗತಿಯಲ್ಲಿ ಬೆಳೆಯಲಾರಂಭಿಸಿತು. 1907ರಲ್ಲಿ 14,14,177 ಇದ್ದ ಜನಸಂಖ್ಯೆ 1930ರ ವೇಳೆಗೆ 23,96,040ಕ್ಕೆ ಏರಿತು. 1950ರಲ್ಲಿ ಇದು 22,33,351ಕ್ಕೆ ಇಳಿಯಿತು. ವ್ಯವಸಾಯವನ್ನು ಯಾಂತ್ರೀಕರಣಗೊಳಿಸಿದ್ದರಿಂದ ಅನೇಕರು ಕೈಗಾರಿಕೆಯಲ್ಲಿ ಉದ್ಯೋಗ ದೊರಕಿಸಿಕೊಳ್ಳಲು ಇತರ ಪ್ರದೇಶಗಳಿಗೆ ವಲಸೆ ಹೋದುದೇ ಈ ಇಳಿತಕ್ಕೆ ಕಾರಣ. ಪುನಃ 1960ರ ವೇಳೆಗೆ ಜನಸಂಖ್ಯೆ 23,28,284ಕ್ಕೆ ಏರಿತು. ಎರಡನೆಯ ಮಹಾಯುದ್ಧದ ಅನಂತರ ನೀಗ್ರೊಗಳ ಜನಸಂಖ್ಯೆ ಬೆಳೆದಿದೆ. ಅಂತರ್ಯುದ್ಧಕ್ಕೆ ಮುನ್ನ ಗುಲಾಮರಾಗಿದ್ದು ಅನಂತರ ವಿಮೋಚನೆ ಪಡೆದ ನೀಗ್ರೊ ಜನರ ಸಂತತಿಯವರು ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿದ್ದಾರೆ.

**ಇತಿಹಾಸ :** 10,000 ವರ್ಷಗಳಿಗೂ ಮುನ್ನ ಮಾನವರು ಈ ರಾಜ್ಯದ ಪ್ರದೇಶದಲ್ಲಿ ಕಾಣಿಸಿಕೊಂಡು, ಓಜ಼ಾರ್ಕ್ ಬೆಟ್ಟಗಳ ಬಳಿಯ ನದೀದಂಡೆಗಳಲ್ಲೂ ಪಾನ್‌ಹ್ಯಾಂಡಲ್‌ನ ವಾಯುವ್ಯ ಪ್ರದೇಶದಲ್ಲಿರುವ ಗುಹೆಗಳಲ್ಲೂ ವಾಸಿಸುತ್ತಿದ್ದರೆಂಬುದು ಪ್ರಾಕ್ತನ ಸಂಶೋಧನೆಗಳಿಂದ ತಿಳಿದುಬಂದಿದೆ. ಕ್ಲೋವಿಸ್ ಸಂಸ್ಕೃತಿಗೆ ಸೇರುವ ಕಲ್ಲಿನ ಆಯುಧಗಳು ಆನೆಯೊಂದರ ಅವಶೇಷಗಳೊಂದಿಗೆ ಕ್ಯಾಡೋ ಜಿಲ್ಲೆಯಲ್ಲಿ ದೊರಕಿವೆ. 4,000 ವರ್ಷಗಳಷ್ಟು ಹಳೆಯದಾದ ವ್ಯವಸಾಯಜೀವಿ ಜನರ ಅವಶೇಷಗಳು ಪಾನ್‌ಹ್ಯಾಂಡಲ್ ಪ್ರದೇಶದಲ್ಲಿ ಬೆಳಕಿಗೆ ಬಂದಿವೆ. ಬುಟ್ಟಿಗಳು, ಚರ್ಮದ ಚೀಲಗಳು, ಕಲ್ಲಿನ ಹೆರೆಯುವ ಆಯುಧಗಳು ಮತ್ತು ಚಾಕು ಇವರ ಉಪಕರಣಗಳಾಗಿದ್ದುವು. ಒರಟು ಮಡಕೆಗಳೂ ಧಾನ್ಯಗಳೂ ಮೂಳೆಯ ಮೀನುಗಳೂ ಮೂಳೆ ಮತ್ತು ಕೊಂಬಿನ ಇತರ ಆಯುಧಗಳೂ ಇವರಲ್ಲಿ ಬಳಕೆಯಲ್ಲಿದ್ದುವು. ಕ್ರಿ.ಶ. 850ರ ಸುಮಾರಿಗೆ ಸೇರಿದ ಮಹತ್ತರ ದೇವಾಲಯದ ಅವಶೇಷಗಳನ್ನು ಲೇಫ್ಲೋರ್ ಜಿಲ್ಲೆಯ ಸ್ಪೈರೋ ನಗರದ ಬಳಿ ಕಾಣಬಹುದು. ಉನ್ನತ ನಾಗರಿಕತೆಯ ಕುರುಹುಗಳಿರುವ ಈ ಜನ ತಾಮ್ರ ಮತ್ತು ಕಲ್ಲಿನಾಯುಧಗಳನ್ನು ಬಳಸುತ್ತಿದ್ದರು.

1541ರಲ್ಲಿ ಸ್ಪ್ಯಾನಿಷರು ಇಲ್ಲಿ ಆಕ್ರಮಣಕಾರ್ಯ ನಡೆಸಿದರು. ಆಗ ಇದು ಐರೋಪ್ಯಸಂಪರ್ಕ ಪಡೆಯಿತು. 18ನೆಯ ಶತಮಾನದಲ್ಲಿ ಈ ಪ್ರದೇಶ ಫ್ರೆಂಚರ ಆಡಳಿತಕ್ಕೆ ಸೇರಿತ್ತು. ಈಗಲೂ ಫ್ರೆಂಚ್ ಹೆಸರುಗಳುಳ್ಳ ಪರ್ವತ ಮತ್ತು ನದಿಗಳನ್ನು ಇಲ್ಲಿ ಕಾಣಬಹುದು. 1830ರ ಶಾಸನದ ಪ್ರಕಾರ ಮಿಸಿಸಿಪಿ ನದಿಯ ಪೂರ್ವ ಪ್ರದೇಶಗಳಲ್ಲಿದ್ದ ಇಂಡಿಯನರನ್ನು ಅದರ ಪಶ್ಚಿಮಕ್ಕೆ ಕಳುಹಿಸಲಾಯಿತು. ನಾಗರಿಕ ಬುಡಕಟ್ಟುಗಳೆಂದು ಹೆಸರಾದ ಚೋಕ್ಟಾ, ಕ್ರೀಕ್ (ಮುಸ್ಕೋಗಿಯನ್), ಸೆಮಿನೋಲ್, ಚೆರೋಕೀ ಮತ್ತು ಚಿಕ್ಕಸಾ ಪಂಗಡಗಳನ್ನು ಇಂಡಿಯನರ ವಸಾಹತುಗಳಿಗೆ 1830–42ರಲ್ಲಿ ಸಾಗಿಸಲಾಯಿತು. ಇವರು ತಮ್ಮವೇ ಆದ ಆಡಳಿತಗಳನ್ನು ಏರ್ಪಡಿಸಿಕೊಂಡು ಕ್ರಮೇಣ ಅಭಿವೃದ್ಧಿ ಹೊಂದುತ್ತಿದ್ದರು. ಸಾಮಾನ್ಯವಾಗಿ ದಕ್ಷಿಣದ ಸಂಸ್ಥಾನಗಳೊಂದಿಗೆ ಸಾಮ್ಯ ಪಡೆದಿದ್ದ ಈ ಜನ ಗುಲಾಮ ಪದ್ಧತಿಯ ನಿವಾರಣೆಗಾಗಿ ನಡೆದ ಅಮೆರಿಕದ ಅಂತರ್ಯುದ್ಧದಲ್ಲಿ ತಾಟಸ್ಥ್ಯ ವಹಿಸಬೇಕೆಂದು ಬಯಸಿದರೂ ಕ್ರಮೇಣ ಇಲ್ಲಿ ದಕ್ಷಿಣದ ಒಕ್ಕೂಟ ರಾಜ್ಯಗಳ ಪರವಾದ ನೀತಿ ಬೆಳೆಯುತ್ತಿತ್ತು. 1861ರ ಅಕ್ಟೋಬರಿನಲ್ಲಿ ಈ ರಾಜ್ಯಗಳೊಂದಿಗೆ ಆಲ್ಬರ್ಟ್ ಪೈಕನ ನೇತೃತ್ವದಲ್ಲಿ ಒಪ್ಪಂದ ಮಾಡಿಕೊಳ್ಳಲಾಯಿತು. ಆದರೆ ಅದರ ವಿರೋಧಿಗಳು ಒಪೊತ್ಲೆಯ ಹೋಲಲ ನೇತೃತ್ವದಲ್ಲಿ ಈ ಒಕ್ಕೂಟದ ಸೈನ್ಯಗಳನ್ನು ಎದುರಿಸಿದರು. ಇವರು ಸೋತು ಕ್ಯಾನ್ಸಸ್ ಪ್ರದೇಶಕ್ಕೆ ಓಡಿಹೋದರು. 1862ರ ಅಂತ್ಯಭಾಗದಲ್ಲಿ ಸಂಯುಕ್ತಸಂಸ್ಥಾನದ ಏಕತಾ ಸೈನ್ಯ ಈ ಪ್ರದೇಶವನ್ನು ಪ್ರವೇಶಿಸಿ ಫೋರ್ಟ್ ಗಿಬ್ಬನ್ ಪ್ರದೇಶವನ್ನು ವಶಪಡಿಸಿಕೊಂಡಿತು. ಈ ಯುದ್ಧದ ಪರಿಣಾಮವಾಗಿ ರಾಜ್ಯಕ್ಕೆ ಹೆಚ್ಚು ನಷ್ಟವಾಯಿತಾದರೂ 1865ರ ಜೂನ್ 23ರಂದು ಅಂತಿಮವಾಗಿ ವಿಜಯ ಗಳಿಸಿದ ಏಕತಾ ಪಕ್ಷದ ಸಹಾಯದಿಂದ ಗುಲಾಮ ಪದ್ಧತಿ ನಿರ್ನಾಮವಾಯಿತು. ಪಶ್ಚಿಮದ ಕೆಲಪ್ರದೇಶಗಳು ಈ ರಾಜ್ಯದ ಕೈಬಿಟ್ಟುವು. ಈ ಪ್ರದೇಶಗಳಲ್ಲಿ ಬೇರೆ ಇಂಡಿಯನರನ್ನು ಸ್ಥಾಪಿಸಲಾಯಿತು. ಆಗಾಗ್ಗೆ ದಂಗೆಯೇಳುತ್ತಿದ್ದ ಈ ಜನರನ್ನು ಬಲಾತ್ಕಾರವಾಗಿ ಹದ್ದಿನಲ್ಲಿಡಬೇಕಾಗಿತ್ತು. 1875ರ ಜೂನ್ ತಿಂಗಳ ಫೋರ್ಟ್ ಸಿಲ್ ದಂಗೆಯೇ ಕೊನೆಯದು. ಅನಂತರ ಇಲ್ಲಿ ಶಾಶ್ವತ

ಶಾಂತಿಯೇರ್ಪಟ್ಟಿತು. ಕ್ರಮೇಣ ಇಲ್ಲಿ ಬಿಳಿಯರ ಪ್ರಭಾವ ಬೆಳೆಯಲಾರಂಭಿಸಿತು. 1872ರಲ್ಲಿ ಈ ಪ್ರದೇಶದ ಮೂಲಕ ರೈಲುಮಾರ್ಗ ರಚಿಸಲಾಯಿತು. ಐದು ನಾಗರಿಕ ಪಂಗಡಗಳ ಮತ್ತು ವಸತಿಕಾರರ ಮಧ್ಯೆ ವೈಮನಸ್ಯವುಂಟಾಗುತ್ತಿದ್ದುದರಿಂದ ಸರ್ಕಾರ ಆಗಾಗ್ಗೆ ತಲೆಹಾಕುತ್ತಿರಬೇಕಾಗಿತ್ತು. 1889ರ ಏಪ್ರಿಲಿನಲ್ಲಿ ಭೂಮಿಯನ್ನು ವಶಪಡಿಸಿಕೊಳ್ಳಲು ಸಾವಿರಾರು ಮಂದಿ ಧಾವಿಸಿ ಬಂದರು. ಗುತ್ರೀ ಮತ್ತು ಓಕ್ಲಹೋಮ ನಗರಗಳು ಹುಟ್ಟಿಕೊಂಡದ್ದು ಆಗ. 1890ರ ಮೇ 20ರಂದು ಪಶ್ಚಿಮದ ಪ್ರದೇಶಗಳನ್ನು ಓಕ್ಲಹೋಮ ರಾಜ್ಯವೆಂದು ಘೋಷಿಸಲಾಯಿತು. 1907ರ ನವೆಂಬರಿನಲ್ಲಿ ಇಂಡಿಯನರ ಪ್ರದೇಶಗಳನ್ನೂ ಓಕ್ಲಹೋಮವನ್ನೂ ಒಟ್ಟುಗೂಡಿಸಿ ಅದನ್ನು 46ನೆಯ ರಾಜ್ಯವನ್ನಾಗಿ ಸಂಯುಕ್ತಸಂಸ್ಥಾನಕ್ಕೆ ಸೇರಿಸಿಕೊಳ್ಳಲಾಯಿತು. ಈ ರಾಜ್ಯ ಸಂಯುಕ್ತಸಂಸ್ಥಾನದ ಅಂಗವಾಗಿ ಸರ್ವತೋಮುಖ ಅಭಿವೃದ್ಧಿ ಹೊಂದುತ್ತಿದೆ.

**ಆಡಳಿತ :** ಓಕ್ಲಹೋಮ ರಾಜ್ಯವನ್ನು 77 ಜಿಲ್ಲೆಗಳಾಗಿ ವಿಭಾಗಿಸಲಾಗಿದ್ದು, ಅಲ್ಲಿ 506 ಪಟ್ಟಣಗಳೂ ನಗರಗಳೂ 105 ವಿಶೇಷ ಪ್ರಾಂತ್ಯಗಳೂ ಇವೆ. ಜಿಲ್ಲೆಗಳು ವಿಸ್ತಾರದಲ್ಲಿ ವಿಭಿನ್ನವಾಗಿವೆ. ಅಂತೆಯೇ ಇಲ್ಲಿ ವಿರಳ ಜನಸಂಖ್ಯೆಯ ಜಿಲ್ಲೆಗಳೂ ತೀವ್ರ ಜನಸಾಂದ್ರ ಜಿಲ್ಲೆಗಳೂ ಇವೆ.

1907ರ ಸೆಪ್ಟೆಂಬರ್ 17ರಂದು ಅಸ್ತಿತ್ವಕ್ಕೆ ಬಂದ ಈ ರಾಜ್ಯದ ಸಂವಿಧಾನ 1959ರ ಹೊತ್ತಿಗೆ 42 ಬಾರಿ ತಿದ್ದುಪಡಿಗಳಿಗೊಳಗಾಯಿತು. ಮತದಾರರು ಸಂಯುಕ್ತಸಂಸ್ಥಾನದ ಪ್ರಜೆಗಳಾಗಿರಬೇಕು. 21 ವರ್ಷಕ್ಕೆ ಮೇಲ್ಪಟ್ಟಿದ್ದು, ಆ ರಾಜ್ಯದಲ್ಲಿ ಕನಿಷ್ಠಪಕ್ಷ ಒಂದು ವರ್ಷ, ಜಿಲ್ಲೆಯಲ್ಲಿ ಆರು ತಿಂಗಳು ಮತ್ತು ಕ್ಷೇತ್ರದಲ್ಲಿ 30 ದಿನಗಳಾದರೂ ವಾಸಿಸಿರಬೇಕು. ಎಲ್ಲ ಮುಖ್ಯ ಅಧಿಕಾರಿಗಳನ್ನೂ ಚುನಾಯಿಸಲಾಗುತ್ತದೆ. ಓಕ್ಲಹೋಮದಿಂದ ಇಬ್ಬರು ಸೆನೆಟರ್ ಮತ್ತು ಆರು ಪ್ರತಿನಿಧಿಗಳನ್ನು ಚುನಾಯಿಸಲಾಗುತ್ತದೆ.

ಗವರ್ನರ್ ಮುಖ್ಯ ಕಾರ್ಯನಿರ್ವಾಹಕ. ಈತನನ್ನು ಪ್ರತಿ ನಾಲ್ಕು ವರ್ಷಗಳಿಗೊಮ್ಮೆ ಆರಿಸಲಾಗುತ್ತದೆ. ಎರಡನೆಯ ಬಾರಿ ಚುನಾವಣೆಗೆ ಸ್ಪರ್ಧಿಸುವ ಅವಕಾಶವನ್ನು 1966ರ ತಿದ್ದುಪಡಿಯ ಪ್ರಕಾರ ಆತನಿಗೆ ನೀಡಲಾಗಿದೆ. ಆತನಲ್ಲದೆ ಲೆಫ್ಟಿನೆಂಟ್–ಗವರ್ನರ್, ರಾಜ್ಯಸಚಿವ, ಕೋಶಾಧಿಕಾರಿ, ನ್ಯಾಯಾಂಗ ಸಚಿವ, ವಿದ್ಯಾ ನಿರ್ವಾಹಕ, ಗಣಿಗಳ ನಿರ್ದೇಶಕ ಮುಂತಾದ ಹನ್ನೆರಡು ಅಧಿಕಾರಿಗಳನ್ನು ನಾಲ್ಕು ವರ್ಷಗಳಿಗೊಮ್ಮೆ ಆರಿಸಲಾಗುತ್ತದೆ. ಆಡಳಿತ ಕಾರ್ಯನಿರ್ವಹಣೆಗೆ ಇವರಲ್ಲದೆ 60ಕ್ಕೂ ಮೇಲ್ಪಟ್ಟ ಅಧಿಕಾರಿಗಳು, ಸಮಿತಿಗಳು, ಇಲಾಖೆಗಳು ಮತ್ತು ಮಂಡಳಿಗಳು ನೇಮಕವಾಗುತ್ತವೆ. ರಾಜ್ಯದ ಶಾಸಕಾಂಗದಲ್ಲಿ 48 ಸೆನೆಟರುಗಳೂ 99 ಪ್ರತಿನಿಧಿಗಳೂ ಇರುತ್ತಾರೆ. ಸಂಯುಕ್ತಸಂಸ್ಥಾನದ ಕಾಂಗ್ರೆಸಿಗೆ ಅರ್ಧಭಾಗ ಸೆನೆಟರುಗಳನ್ನೂ ಎಲ್ಲ ಪ್ರತಿನಿಧಿಗಳನ್ನೂ ಎರಡು ವರ್ಷಕ್ಕೊಮ್ಮೆ ಚುನಾಯಿಸಲಾಗುತ್ತದೆ. ನ್ಯಾಯನಿರ್ವಹಣೆ ಶ್ರೇಷ್ಠ ನ್ಯಾಯಾಲಯದ ಹೊಣೆ. ಆರು ವರ್ಷಗಳ ಅವಧಿಯಿರುವ 9 ಮಂದಿ ನ್ಯಾಯಾಧೀಶರನ್ನು ಈ ಸಂಸ್ಥೆಗೆ ಆಯ್ಕೆ ಮಾಡಲಾಗುತ್ತದೆ. ಇದರ ಸಹಾಯಕ್ಕೆ ಅಪರಾಧ ನ್ಯಾಯಾಲಯವೂ ಜಿಲ್ಲಾ ನ್ಯಾಯಾಲಯಗಳೂ ಇವೆ. ಇವಲ್ಲದೆ ಕೆಲವು ಜನನಿಬಿಡ ಜಿಲ್ಲೆಗಳಲ್ಲಿ ಉನ್ನತ ನ್ಯಾಯಾಲಯಗಳೂ ಇವೆ. 1965ರ ಮಸೂದೆಯ ಪ್ರಕಾರ ಜಿಲ್ಲಾ ನ್ಯಾಯಾಧಿಕಾರಿಗಳನ್ನು ಚುನಾಯಿಸಬಹುದಾಗಿದೆ.

ಜಿಲ್ಲೆಯ ಆಡಳಿತ ನಿರ್ವಹಣೆಗೆ ಕಮಿಷನರುಗಳನ್ನು ಆಯ್ಕೆ ಮಾಡಲಾಗುತ್ತದೆ. ಇವರಲ್ಲದೆ ಷರೀಫ್, ಅಟಾರ್ನಿ, ನ್ಯಾಯಾಧೀಶ, ಗುಮಾಸ್ತ, ನ್ಯಾಯಾಲಯದ ಗುಮಾಸ್ತ ಮುಂತಾದ ಹಲವಾರು ಜಿಲ್ಲಾಮಟ್ಟದ ಅಧಿಕಾರಿಗಳಿರುತ್ತಾರೆ. ಇವರನ್ನು ಎರಡು ವರ್ಷಗಳಿಗೊಮ್ಮೆ ಚುನಾಯಿಸಲಾಗುತ್ತದೆ. ರಾಜ್ಯ ಮತ್ತು ಸ್ಥಳೀಯ ಸಂಸ್ಥೆಗಳ ಆದಾಯಮೂಲಗಳು ಬೇರೆ ಬೇರೆ. ಖನಿಜೋತ್ಪನ್ನಗಳ ಮೇಲಿನ ತೆರಿಗೆಗಳು ರಾಜ್ಯಾದಾಯದ ಮುಖ್ಯ ಮೂಲ. ಸಾರಿಗೆ ವಾಹನಗಳ ಮೇಲಣ ಸುಂಕ ಮತ್ತು ವಿವಿಧ ಇಲಾಖೆಗಳ ಆದಾಯ ಇದಕ್ಕೆ ಪೂರಕ. ಸ್ಥಳೀಯ ಸಂಸ್ಥೆಗಳ ಆದಾಯ ಮುಖ್ಯವಾಗಿ ಆಸ್ತಿಯ ಮೇಲಣ ತೆರಿಗೆಗಳಿಂದ ಬರುತ್ತದೆ. 1965ರ ಕಾಯಿದೆಯಲ್ಲಿ ಮಾರಾಟ ತೆರಿಗೆಯನ್ನು ವಿಧಿಸಲು ಅವಕಾಶ ಮಾಡಿದೆ. ಈ ಆದಾಯ ಸ್ಥಳೀಯ ಸಂಸ್ಥೆಗಳಿಗೆ ಮೀಸಲು. ಸಾರಿಗೆ ಮಾರ್ಗ, ವಿದ್ಯಾಭ್ಯಾಸ, ಸಾಲದ ಬಿಡುಗಡೆ ಮತ್ತು ಜನೋಪಯೋಗಿ ಕಾರ್ಯ ಇವು ಮುಖ್ಯ ವ್ಯಯದ ಬಾಬುಗಳು.

**ವಿದ್ಯಾಭ್ಯಾಸ :** ಸಾರ್ವಜನಿಕ ವಿದ್ಯಾಸಂಸ್ಥೆಗಳು ರಾಜ್ಯ ಮತ್ತು ಜಿಲ್ಲಾ ವಿದ್ಯಾಧಿಕಾರಿಗಳ ಆಡಳಿತಕ್ಕೊಳಪಟ್ಟಿವೆ. ಸುಮಾರು 5,00,000 ವಿದ್ಯಾರ್ಥಿಗಳಿಗಾಗಿ 20,00,00,000 ಡಾಲರುಗಳ ಖರ್ಚು ಮಾಡಲಾಗುತ್ತದೆ. 1965ರಲ್ಲಿ ಸೇಕಡಾ 25 ರಷ್ಟು ಹೆಚ್ಚುವರಿ ಖರ್ಚಿಗೆ ಒಪ್ಪಿಗೆ ನೀಡಲಾಯಿತು. ರಾಜ್ಯಘಟಕ ಜಿಲ್ಲೆಗಳಿಗೆ ಹೊಸ ವಿದ್ಯಾತೆರಿಗೆಗಳನ್ನು ವಿಧಿಸಲು ಸಹ ಸಮ್ಮತಿ ನೀಡಲಾಯಿತು. ಪ್ರೌಢ ವಿದ್ಯಾಭ್ಯಾಸ ಎಲ್ಲ ವಿದ್ಯಾಸಂಸ್ಥೆಗಳ ಅಧಿಕಾರಿಗಳನ್ನೊಳಗೊಂಡ ಮಂಡಲಿಯೊಂದರ ನೇತೃತ್ವದಲ್ಲಿ ನಡೆಯುತ್ತದೆ. ಓಕ್ಲಹೋಮ ವಿಶ್ವವಿದ್ಯಾಲಯ 1892ರಲ್ಲಿ ಪ್ರಾರಂಭವಾಯಿತು. ಇದು ಕಲೆ, ವಿಜ್ಞಾನ, ಫಾರ್ಮಸಿ, ಎಂಜಿನಿಯರಿಂಗ್, ನ್ಯಾಯಾಂಗ, ವಾಣಿಜ್ಯ, ವೈದ್ಯ ಮತ್ತು ದಾದಿವಿದ್ಯೆಗಳಿಗೆ ಸಂಬಂಧಿಸಿದ ಶಾಲಾಕಾಲೇಜುಗಳನ್ನು ನಡೆಸುತ್ತದಲ್ಲದೆ, 1928ರಲ್ಲಿ ಸ್ಥಾಪಿತವಾದ ವಿಶ್ವವಿದ್ಯಾಲಯದ ಅಚ್ಚುಕೂಟ ತನ್ನ ಉತ್ತಮ ಪ್ರಕಟನೆಗಳಿಂದ ಅಪಾರ ಸೇವೆ ಸಲ್ಲಿಸುತ್ತಿದೆ. ಈ ಸಂಸ್ಥೆಗೆ ಸೇರಿದ ಬಾನುಲಿ ಸಂಸ್ಥೆಯೂ ಒಂದಿದೆ. ಓಕ್ಲಹೋಮ ಕೃಷಿ ಮತ್ತು ಅನ್ವಯ ವಿಜ್ಞಾನ ವಿಶ್ವವಿದ್ಯಾಲಯ 1890ರಲ್ಲಿ ಸ್ಥಾಪಿತವಾದ ಕೃಷಿ ಮತ್ತು ತಾಂತ್ರಿಕ ಕಾಲೇಜಿನಿಂದ ಬೆಳೆದು ಬಂದಿದೆ. ಇವಲ್ಲದೆ ಇನ್ನೂ ಹಲವಾರು ಉನ್ನತ ವ್ಯಾಸಂಗ ಸಂಸ್ಥೆಗಳು ಇಲ್ಲಿವೆ.

**ಆರೋಗ್ಯ ಮತ್ತು ಸಾರ್ವಜನಿಕ ಉಪಯೋಗ ಕಾರ್ಯಗಳು :** ರಾಜ್ಯ ಸರ್ಕಾರ ತಪ್ಪಿತಸ್ಥರ ಸುಧಾರಣಾ ಕೇಂದ್ರಗಳ ಮತ್ತು ಜನೋಪಯೋಗಿ ಸಂಸ್ಥೆಗಳ ಕಾರ್ಯಚಟುವಟಿಕೆಗಳ ನಿರ್ದೇಶನಕ್ಕೆ ಒಬ್ಬ ಅಧಿಕಾರಿಯನ್ನು ನೇಮಿಸಿದೆ. ಮನೋವ್ಯಾಧಿಗಳ ವೈದ್ಯಶಾಲೆ, ಕ್ಷಯರೋಗ ವೈದ್ಯಶಾಲೆ, ಮಕ್ಕಳ ಮಾನಸಿಕ ಸುಧಾರಣಾ ಶಾಲೆ ಮತ್ತು ಕಿವುಡ, ಕುರುಡ ಮತ್ತು ಅನಾಥ ಕೇಂದ್ರಗಳನ್ನು ಹಲವಾರು ಸ್ಥಳಗಳಲ್ಲಿ ಸ್ಥಾಪಿಸಲಾಗಿದೆ. ಇವಲ್ಲದೆ ಅಪರಾಧಿಗಳ ಸುಧಾರಣೆ ಮತ್ತು ಪುನರ್ವಸತಿ ಕಾರ್ಯದಲ್ಲೂ ಆಸಕ್ತಿ ವಹಿಸಿ ಹಲವಾರು ಸಂಸ್ಥೆಗಳನ್ನು ಸ್ಥಾಪಿಸಿ ಉತ್ತಮ ಕಾರ್ಯಗಳನ್ನು ಕೈಗೊಂಡಿದೆ. ರಾಜ್ಯದ 77 ಜಿಲ್ಲೆಗಳ ಪೈಕಿ ಐವತ್ತರಲ್ಲಿ ಆರೋಗ್ಯ ಇಲಾಖೆಗಳಿದ್ದು ಸೇಕಡಾ 80 ಜನರ ಆರೋಗ್ಯರಕ್ಷಣೆಯನ್ನು ನಿರ್ವಹಿಸುತ್ತವೆ. ಓಕ್ಲಹೋಮ ಸಾರ್ವಜನಿಕ ಕ್ಷೇಮಾಭ್ಯುದಯ ಇಲಾಖೆ ಆಶ್ರಿತ ಮಕ್ಕಳ, ವೃದ್ಧರ, ಅಂಗಹೀನರ, ಕುರುಡರ ಒಳಿತನ್ನು ಸಾಧಿಸಲು ಶ್ರಮಿಸುತ್ತಿದೆ.

**ಅರ್ಥವ್ಯವಸ್ಥೆ :** 1889ರಲ್ಲಿ ಬಿಳಿಯರ ಪ್ರವೇಶವಾಗುವುದಕ್ಕೆ ಮೊದಲು ಪಶುಪಾಲನೆ ಈ ಪ್ರದೇಶದ ಮುಖ್ಯ ಕಸಬಾಗಿತ್ತು. ಅನಂತರ ವ್ಯವಸಾಯ ಪ್ರಧಾನವಾಗಿ ಬೆಳೆಯಿತು. 1960ರ ವೇಳೆಗೆ 84,000 ಜಮೀನುಗಳೂ ಪಶುಪಾಲನ ಕ್ಷೇತ್ರಗಳೂ ಇದ್ದುವು. ಸಾಗುವಳಿಯಲ್ಲಿದ್ದ ನೆಲ 4,00,00,000 ಎಕರೆ. ಇದರಲ್ಲಿ 2/3 ಭಾಗದಲ್ಲಿ ಮಾಲೀಕರೇ ಸ್ವಂತ ಬೇಸಾಯ ನಡೆಸುತ್ತಿದ್ದರು. 1960ರ ಸುಮಾರಿನಲ್ಲಿ ವ್ಯವಸಾಯಕಾರ್ಯಗಳಲ್ಲಿ ಯಂತ್ರದ ಬಳಕೆ ಹೆಚ್ಚಿತು. ಇದರಿಂದ ಪ್ರಗತಿಯ ವೇಗ ಅಧಿಕವಾಗಿದೆ. ಭೂಸಾರ ರಕ್ಷಣೆ, ನೀರಾವರಿ ಪೂರೈಕೆ, ಪ್ರವಾಹಗಳ ಹಾವಳಿಯ ತಡೆ ಮುಂತಾದ ಕಾರ್ಯಗಳಿಗೆ ಹೆಚ್ಚಿನ ಗಮನ ಕೊಡಲಾಗಿದೆ.

ವ್ಯವಸಾಯೋತ್ಪನ್ನಗಳಲ್ಲಿ ಅಗ್ರಸ್ಥಾನ ಗೋದಿಯದು. ಹತ್ತಿಯೂ ಮುಖ್ಯ. ಓಟ್ಸ್, ಬಟಾಣಿ, ಧಾನ್ಯಗಳು, ಬಗೆಬಗೆಯ ಹಣ್ಣುಗಳು ಇತರ ಮುಖ್ಯ ಬೆಳೆಗಳು. ದನದ ಮಾಂಸದ ಕೈಗಾರಿಕೆ ಬಹಳ ಲಾಭದಾಯಕ. ಮಾಂಸಕ್ಕಾಗಿ ಸುಮಾರು 40,00,000 ದನಗಳನ್ನು ಸಾಕಲಾಗುತ್ತಿದೆ. ಹಂದಿ, ಕುರಿ, ಕುದುರೆ ಮತ್ತು ಹೇಸರಕತ್ತೆಗಳು ಇತರ ಸಾಕುಪ್ರಾಣಿಗಳು. ಮರದ ದಿಮ್ಮಿ ಆಗ್ನೇಯ ಭಾಗದ ಮುಖ್ಯ ಸಾಧನ. ಮರದ ಉತ್ಪನ್ನ ಕೈಗಾರಿಕೆ ಇಲ್ಲಿ ಬೆಳೆದಿದೆ. ವಾರ್ಷಿಕ ಮೌಲ್ಯ ಸುಮಾರು 80,00,000 ಡಾಲರುಗಳು.

ತೈಲೋತ್ಪಾದನೆಯೂ ಒಂದು ಮುಖ್ಯ ಉದ್ಯೋಗ. ಇದರ ವಾರ್ಷಿಕ ಉತ್ಪನ್ನದ ಮೌಲ್ಯ 70,00,00,000 ಡಾಲರುಗಳು. ಸಂಯುಕ್ತಸಂಸ್ಥಾನದ ತೈಲೋತ್ಪಾದನೆಯಲ್ಲಿ ಈ ರಾಜ್ಯದ್ದು ತೃತೀಯ ಸ್ಥಾನ. ತವರ, ಸೀಸ, ಲವಣ, ಡಾಲೊಮೈಟ್, ಗ್ರ್ಯಾನೈಟ್, ಮರಳು ಮತ್ತು ಜಲ್ಲಿಕಲ್ಲು, ಸುಣ್ಣಕಲ್ಲು, ವಿವಿಧ ರೀತಿಯ ಜೇಡಿಮಣ್ಣುಗಳು, ಜಿಪ್ಸಮ್, ಆಸ್ಫಾಲ್ಟ್, ಸಿಲಿಕ ಮುಂತಾದ ಖನಿಜಗಳು ರಾಜ್ಯದಲ್ಲಿ ದೊರಕುತ್ತವೆ. ಹೀಲಿಯಂ ಕೂಡ ಸಾಕಷ್ಟು ಪ್ರಮಾಣದಲ್ಲಿ ದೊರಕುತ್ತಿದ್ದು, ಸಂಯುಕ್ತಸಂಸ್ಥಾನದಲ್ಲಿ ಎರಡನೆಯ ಹೀಲಿಯಂ ಕಾರ್ಖಾನೆ 1959ರಲ್ಲಿ ಕೀಯೆಸ್‌ನಲ್ಲಿ ಸ್ಥಾಪಿತವಾಯಿತು.

ವ್ಯವಸಾಯ ಮತ್ತು ಖನಿಜ ಸಂಪತ್ತುಗಳ ಮೇಲೆ ಆಧಾರಿತವಾಗಿರುವ ಅನೇಕ ಕಾರ್ಖಾನೆಗಳು ರಾಜ್ಯದಲ್ಲಿವೆ. ಮಾಂಸಾಹಾರ ತಯಾರಿಕೆ, ಶೇಖರಣೆ, ಧಾನ್ಯಗಳಿಂದ ಹಿಟ್ಟು ತಯಾರಿಕೆ, ದನಗಳ ಆಹಾರ ತಯಾರಿಕೆ, ಬಟ್ಟೆ ತಯಾರಿಕೆ, ಗಾಜಿನ ತಯಾರಿಕೆ, ಲೋಹಗಾರಿಕೆ ಮುಂತಾದವು 95,000ಕ್ಕೂ ಹೆಚ್ಚು ಜನರಿಗೆ ಉದ್ಯೋಗ ಒದಗಿಸುತ್ತವೆ.

**ಸಾರಿಗೆ ವ್ಯವಸ್ಥೆ :** ಇಲ್ಲಿ ಸುಮಾರು 5,000 ಮೈಲಿಗಳಷ್ಟು ಉದ್ದದ ರೈಲು ರಸ್ತೆಗಳಿದ್ದು ರಾಜ್ಯದ ಎಲ್ಲ ಮೂಲೆಗಳಿಗೂ ಸಂಪರ್ಕ ಏರ್ಪಟ್ಟಿದೆ. ಮುಖ್ಯ ಸಾರ್ವಜನಿಕ ರಸ್ತೆಗಳ ಉದ್ದ 10,000 ಮೈಲಿಗಳು. ಪ್ರಮುಖ ನಗರಗಳಿಗೆ ವಿಮಾನಸಾರಿಗೆ ಸೌಕರ್ಯವಿದೆ. ಆರ್ಕನ್ಸಾ ನದಿಯ ಮುಖಾಂತರ ಸಾರಿಗೆ ವ್ಯವಸ್ಥೆಯನ್ನು ಅಭಿವೃದ್ಧಿಪಡಿಸುವ ಹೊಣೆ ಸಂಯುಕ್ತಸಂಸ್ಥಾನದ ಆಂತರಿಕ ಜಲಮಾರ್ಗ ಅಭಿವೃದ್ಧಿ ಸಂಸ್ಥೆಯ ಹೊಣೆ.

ಓಕ್ಲಹೋಮ ನಗರ ಇಲ್ಲಿಯ ರಾಜಧಾನಿ. ಜನಸಂಖ್ಯೆ 3,24,253 (1960). ಇತರ ಮುಖ್ಯ ನಗರಗಳು ಇವು (1960ರಲ್ಲಿದ್ದಂತೆ ಇವುಗಳ ಜನಸಂಖ್ಯೆಗಳನ್ನು ಆವರಣಗಳೊಳಗೆ ಕೊಟ್ಟಿದೆ): ಟಲ್ಸ (2,61,685); ಇದು ತೈಲಶುದ್ಧೀಕರಣ ಕೇಂದ್ರ. ಈನಿಡ್ (38,359) ತೈಲಶುದ್ಧೀಕರಣ ಮತ್ತು ಆಹಾರ ತಯಾರಿಕೆಗೆ ಪ್ರಸಿದ್ಧ. ಲಾಟನ್ (61,697) ಪಶುಪಾಲನೆ, ಗೋದಿ ಮತ್ತು ಹತ್ತಿ ಬೆಳೆಗಳ ಕೇಂದ್ರ. ಮಸ್ಕೋಗಿಯುಲ್ಲಿ (38,059) ಅಮೆರಿಂಡಿಯನರು ಹೆಚ್ಚಾಗಿದ್ದಾರೆ. ಓಕ್ಲಹೋಮ ವಿಶ್ವವಿದ್ಯಾಲಯ ಪೀಠವಿರುವುದು ನಾರ್ಮನಿನಲ್ಲಿ (33,412). (ಬಿ.ಕೆ.ಜಿ. ; ಎಸ್.ಎ.)

**ಓಕ್ಲಿ, ಕೆನೆತ್ ಪೇಜ್ :** ಬ್ರಿಟಿಷ್ ಪ್ರಾಕ್ತನಶಾಸ್ತ್ರಜ್ಞ. ಜನನ ಇಂಗ್ಲೆಂಡಿನ ಆಮರ್‌ಷಾಮ್ ಎಂಬಲ್ಲಿ (1911). ಲಂಡನ್ ವಿಶ್ವವಿದ್ಯಾನಿಲಯದಲ್ಲಿ ಮಾನವ ಮತ್ತು ಭೂವಿಜ್ಞಾನಗಳನ್ನು ಅಭ್ಯಸಿಸಿದ ಅನಂತರ ಬ್ರಿಟಿಷ್ ಮ್ಯೂಸಿಯಂನ ಪ್ರಕೃತಿಶಾಸ್ತ್ರ ಶಾಖೆಯಲ್ಲಿ ಕೆಲಸಕ್ಕೆ ಸೇರಿದ. ಭೂಮಿಯ ನೀರಿನಲ್ಲಿ ಕರಗಿರುವ ಫ್ಲೂರಿನನ್ನು ಭೂಮಿಯಲ್ಲಿ ಹೂತ ಎಲುಬು ಹೀರಿಕೊಳ್ಳುತ್ತದೆ. ಹೀರಿಕೆಯ ಪ್ರಮಾಣ ಮೂಳೆ ನೆಲದಲ್ಲಿ ಉಳಿದಿರುವ ಕಾಲಕ್ಕೆ ಅನುಗುಣವಾಗಿರುತ್ತದೆ. ಹಾಗಾಗಿ ಒಂದೇ ಸ್ಥಳದಲ್ಲಿ ಬೇರೆ ಬೇರೆ ಕಾಲದಲ್ಲಿ ಮೂಳೆಗಳು ಹೂಳಲ್ಪಟ್ಟಿದ್ದರೆ ಅವುಗಳಲ್ಲಿಯ ಫ್ಲೂರಿನ್ ಪ್ರಮಾಣ ಬೇರೆ ಬೇರೆ ಆಗಿರುತ್ತದೆ. ಈ ಪ್ರಮಾಣವನ್ನನುಸರಿಸಿ ಆ ಮೂಳೆಗಳಲ್ಲಿ ಯಾವುದು ಅತ್ಯಂತ ಪುರಾತನವಾದುದು ಎಂಬುದನ್ನು ನಿರ್ಣಯಿಸಬಹುದು. ಇದೇ ಫ್ಲೂರಿನ್ ಒರೆ (ಫ್ಲೂರಿನ್ ಟೆಸ್ಟ್). ಪ್ರಾಕ್ತನಶಾಸ್ತ್ರಕ್ಕೆ ಇದೇ ಈತನ ಮುಖ್ಯ ಕೊಡುಗೆ. 1888ರಲ್ಲಿ ಗುರುತಿಸಲಾದ ಗ್ಯಾಲಿ ಹಿಲ್ ತಲೆಬರುಡೆ ಅದೆಷ್ಟು ಪುರಾತನವಾದುದೆಂಬುದನ್ನು ಓಕ್ಲಿ ಪರಿಶೀಲಿಸಿದ. ಅದರಲ್ಲಿ ಫ್ಲೂರಿನ್ 0.5% ಮಾತ್ರ ಇದ್ದುದರಿಂದ ಅದು ಅಷ್ಟೊಂದು ಪುರಾತನವಾದುದಲ್ಲವೆಂದು ತೀರ್ಮಾನಿಸಿದ (1948). ಇದೇ ರೀತಿ 1935–36ರಲ್ಲಿ ದೊರೆತ ಸ್ವಾನ್ಸ್‌ಕೊಂಬ್ ತಲೆಬರುಡೆ 100,000 ವರ್ಷಗಳಿಗಿಂತಲೂ ಪುರಾತನವಾದುದೆಂದು ತೀರ್ಮಾನಿಸಿದ (1948). ಈ ಮೂಳೆಯಲ್ಲಿ 1.7% ಫ್ಲೂರಿನ್ ಇದ್ದುದನ್ನು ತೋರಿಸಿದ. ಇದೆ ಸಮಯದಲ್ಲಿ ಪಿಲ್ಟ್‌ಡೌನ್ ತಲೆಬುರುಡೆಯ ಪ್ರಾಚೀನತೆಯ ವಿಚಾರವಾಗಿ ಚರ್ಚೆ ಸಾಗುತ್ತಿತ್ತು. ಮಾನವನಂತೆ ಇರುವ ತಲೆಬರುಡೆಯಲ್ಲಿ ಮಂಗನಂತೆ ಇರುವ ದವಡೆ ಇದ್ದುದು ವಿಜ್ಞಾನಿಗಳಿಗೆ ಉತ್ತರಿಸಲಾಗದ ಪ್ರಶ್ನೆಯಾಗಿತ್ತು. ಇದನ್ನು ಪರಿಶೀಲಿಸಲು ಓಕ್ಲಿಯನ್ನೊಳಗೊಂಡ ಸಮಿತಿಯನ್ನು ರಚಿಸಲಾಯಿತು. ಸಮಿತಿ ದವಡೆ ನಕಲಿಯದೆಂದು ತೀರ್ಮಾನಿಸಿತು. ಇದನ್ನು ನಿರ್ಣಯಿಸಿದ್ದೂ ಫ್ಲೂರಿನ್ ಒರೆಯಿಂದಲೇ. ಈಗ ಯಾವ ತಲೆಬರುಡೆ ದೊರಕಿದರೂ ಅದಕ್ಕೆ ಫ್ಲೂರಿನ್ ಒರೆ ಹಾಕಿ ಅನಂತರವೇ ಅದರ ಪುರಾತನತೆಯನ್ನು ಒಪ್ಪಿಕೊಳ್ಳುತ್ತಾರೆ.

ಓಕ್ಲಿ ಅನೇಕ ಗ್ರಂಥಗಳನ್ನು ರಚಿಸಿದ್ದಾನೆ. ಈತನ ಸಂಶೋಧನಾತ್ಮಕ ಗ್ರಂಥಗಳಾದ ಮ್ಯಾನ್, ದಿ ಟೂಲ್ ಮೇಕರ್ ಮತ್ತು ಡೇಟಿಂಗ್ ಫಾಸಿಲ್ ಮ್ಯಾನ್ ಬಹಳ ಜನಪ್ರಿಯವಾಗಿವೆ. (ಎಸ್.ಎಂ.)

**ಓಜ಼ೋನ್ :** ದ್ವಿಪರಮಾಣಿಕ (ಡೈಆಟಾಮಿಕ್) ಆಕ್ಸಿಜನ್ ಅಣುವಿಗೆ ಶಕ್ತಿಯನ್ನು ಸೇರಿಸಿದಾಗ ದೊರೆಯುವ ಆಕ್ಸಿಜನ್ನಿನ ಅಪರರೂಪ (ಅಲ್ಲಾಟ್ರಾಪಿಕ್ ಫಾರ್ಮ್) ತ್ರಿಪರಮಾಣಿಕ ಅಣು, $O_3$. ಈ ಕ್ರಿಯೆಯನ್ನು ಸೂಚಿಸುವ ಸಮೀಕರಣ



$$3O_2 + 68\ K\ cal. \rightarrow 2O_3$$
$$(g) \qquad\qquad (g)$$

ಆಕ್ಸಿಜನ್ನಿನ ಅಪರರೂಪಗಳ ಗುಣಗಳನ್ನು ಮುಂದೆ ಬರೆದಿರುವ ಪಟ್ಟಿ ತೋರಿಸುತ್ತದೆ.

| ಗುಣ | $O_2$ | $O_3$ |
|---|---|---|
| ಅಣುಭಾರ (ಮಾಲೆಕ್ಯುಲರ್ ವೇಟ್), amu | 32.00 | 47.998 |
| ಬಂಧದೂರ, Å | 1.20 | 1.260 |
| ಮಾನಕ ಕರಗುವ ಬಿಂದು (ನಾರ್ಮಲ್ ಮೆಲ್ಟಿಂಗ್ ಪಾಯಿಂಟ್), °K | 54.30 | 23.600 |
| ಮಾನಕ ಕುದಿಯುವ ಬಿಂದು, °K | 90.20 | 161.700 |
| ಅವಧಿಕ (ಕ್ರಿಟಿಕಲ್) ಉಷ್ಣತೆ, °K | 154.00 | 268.000 |
| ದ್ರವಸಾಂದ್ರತೆ (90°K) ಗ್ರಾಂ/ಮಿ.ಲೀ. | 1.14 | 1.710 |

ಅತಿಯಾದ ವೋಲ್ಟೇಜಿನ ವಿದ್ಯುತ್ ಯಂತ್ರಗಳ ಬಳಿ ಒಂದು ವಿಧವಾದ ಮೀನಿನ ವಾಸನೆಯುಳ್ಳ ಒಂದು ಅನಿಲದ ಉತ್ಪತ್ತಿಯನ್ನು ಕೆಲವು ವಿಜ್ಞಾನಿಗಳು ಅರಿತಿದ್ದರು. ಷೊನ್‌ಬೆನ್ ಎಂಬಾತ ಇದಕ್ಕೆ ಗ್ರೀಕ್ ಭಾಷೆಯ ಓಜ಼ೋನ್ (ಎಂದರೆ ವಾಸನಾಯುತ) ಎಂದು ನಾಮಕರಣ ಮಾಡಿದ. ಈ ಅನಿಲ ಸಮುದ್ರತೀರದ ಗಾಳಿಯಲ್ಲಿ ಹೆಚ್ಚಾಗಿ ಇರುತ್ತದೆ. ಅತಿನೇರಳೆ ಕಿರಣಗಳು ಮತ್ತು ಮಿಂಚು ಸಿಡಿಲುಗಳಿಂದ ಇದು ಗಾಳಿಯಲ್ಲಿ ಉತ್ಪತ್ತಿಯಾಗುತ್ತದೆ. ಗಾಳಿಯಲ್ಲಿ ರಂಜಕದ ಸಾವಕಾಶದ ಉತ್ಕರ್ಷಣದಿಂದಲೂ ಇದು ತಯಾರಾಗುತ್ತದೆ. ಬ್ರಾಡಿ ಅಥವಾ ಸೀಮನ್ಸ್ ಓಜ಼ೊನೈಸರ್ ಎಂಬ ಉಪಕರಣಗಳನ್ನು ಉಪಯೋಗಿಸಿ ಇದನ್ನು ತಯಾರಿಸಬಹುದು. ನಿಶ್ಶಬ್ದ ವಿದ್ಯುತ್ ವಿಸರ್ಜನೆಯನ್ನು (ಡಿಸ್‌ಚಾರ್ಜ್) ಶುದ್ಧವಾದ ಗಾಳಿ ಅಥವಾ ಆಕ್ಸಿಜನ್ನುಗಳ ಮೂಲಕ ಹಾಯಿಸುವುದರಿಂದ ಓಜ಼ೋನ್ ಉತ್ಪತ್ತಿಯಾಗುತ್ತದೆ. ಸೀಮನ್ಸ್‌ನ ಉಪಕರಣದಲ್ಲಿ ಎರಡು ಏಕಕೇಂದ್ರೀಯ ಕೊಳವೆಗಳಿವೆ. ಹೊರಕೊಳವೆಯ ಹೊರಮೈಯನ್ನೂ ಒಳಕೊಳವೆಯ ಒಳಮೈಯನ್ನೂ ತವರದ ತೆಳುವಾದ ತಗಡಿನಿಂದ ಮುಚ್ಚಲಾಗಿದೆ. ಈ ಲೋಹಗಳನ್ನು ಹೆಚ್ಚು ವೋಲ್ಟೇಜಿನ ಪ್ರೇರಕ ಸುರುಳಿಗಳಿಗೆ (ಇಂಡಕ್ಷನ್ ಕಾಯಿಲ್) ಜೋಡಿಸಿದೆ. ವಿದ್ಯುತ್ ಸಂಬಂಧವನ್ನು ಕಲ್ಪಿಸಿ ಎರಡು ಕೊಳವೆಗಳ ಮಧ್ಯೆ ಶುದ್ಧವಾದ ಗಾಳಿ ಅಥವಾ ಆಕ್ಸಿಜನ್ನನ್ನು ಹಾಯಿಸಿದಾಗ ಸ್ವಲ್ಪ ಪ್ರಮಾಣದಲ್ಲಿ ಓಜ಼ೋನ್ ಬರುತ್ತದೆ.




ಸೀಮನ್ಸ್‌ನ ಉಪಕರಣ

ಬ್ರಾಡಿ ಓಜ಼ೋನೈಸರಿನಲ್ಲಿ ತವರದ ಬದಲು ಸಲ್ಫ್ಯೂರಿಕ್ ಆಮ್ಲವಿದೆ. ವಿದ್ಯುಚ್ಛಕ್ತಿ ಅಥವಾ 209 m$\mu$, ಅತಿನೇರಳೆ ತರಂಗಗಳುಳ್ಳಡಗಿರುವ ಶಕ್ತಿಯನ್ನು ಹೀರಿದಾಗ ಆಕ್ಸಿಜನ್ನಿನ ಅಣುಗಳು ಪರಮಾಣುಗಳಾಗಿ ಅನಂತರ ಓಜ಼ೋನ್ ಅಣುಗಳಾಗುತ್ತವೆ.



$$O_2 \rightarrow O + O$$
$$O + O + O \rightarrow O_3$$

1.1 ಸಾಂದ್ರತೆಯ ಸಲ್ಫ್ಯೂರಿಕ್ ಆಮ್ಲದ ಒಂದು ವಿಶೇಷ ರೀತಿಯ ವಿದ್ಯುದ್ವಿಭಜನೆಯಿಂದಲೂ ಈ ಅನಿಲವನ್ನು ಪಡೆಯಬಹುದು.

ಓಜ಼ೋನ್ ಉತ್ಪತ್ತಿಯಾಗುವಾಗ ಶಕ್ತಿಯನ್ನು ಹೀರುವುದರಿಂದ (ಎಂಡೋಥರ್ಮಿಕ್) ಇದಕ್ಕೆ ಸ್ಫೋಟಕ ಗುಣ ಉಂಟು. ಇದನ್ನು ಕಾಯಿಸಿದಾಗ (300° ಸೆಂ.) ಪೂರ್ಣವಿಭಜನೆಗೊಂಡು ಆಕ್ಸಿಜನ್ನನ್ನು ಕೊಡುತ್ತದೆ. ಗಾಜು, ಪ್ಲಾಟಿನಂ, ಬೆಳ್ಳಿ, ಮ್ಯಾಂಗನೀಸ್ ಡೈಆಕ್ಸೈಡ್ ಮುಂತಾದ ಪುಡಿಗಳು ವೇಗವರ್ಧಕಗಳಾಗಿ ಇದನ್ನು ವಿಭಜಿಸಿ ಆಕ್ಸಿಜನ್ನನ್ನು ಕೊಡುತ್ತವೆ. ಈ ಗುಣಗಳಲ್ಲಿ ಇದು ಹೈಡ್ರೊಜನ್ ಪೆರಾಕ್ಸೈಡನ್ನು ಹೋಲುತ್ತದೆ. ಶುದ್ಧ ಓಜ಼ೋನ್ ಸ್ಫೋಟಕವಸ್ತುವಾದ್ದರಿಂದ ಇದನ್ನು ಯಾವಾಗಲೂ ಆಕ್ಸಿಜನ್ ಮಿಶ್ರಣದೊಂದಿಗೆ ತಯಾರಿಸುತ್ತಾರೆ. ಇದನ್ನು ತಣ್ಣಗೆ ಮಾಡಿದಾಗ ಆಕ್ಸಿಜನ್ ದ್ರವವಾಗಿ ಅದರಲ್ಲಿ ಓಜ಼ೋನ್ ಕರಗಿ ನೀಲಿ ಬಣ್ಣದ ದ್ರಾವಣವಾಗುತ್ತದೆ. ಇನ್ನೂ ತಣ್ಣಗೆ ಮಾಡಿದಾಗ ಓಜ಼ೋನ್ ಕರಿಯ ಹರಳುಗಳಾಗಿ ಬೇರ್ಪಡುತ್ತದೆ. ಇದು ನೀರಿನಲ್ಲಿ ಆಕ್ಸಿಜನ್ನಿಗಿಂತಲೂ ಹೆಚ್ಚು ಕರಗುತ್ತದೆ. ಟರ್ಪೆಂಟೈನ್ ಮತ್ತು ಇತರ ಸುಗಂಧ ತೈಲಗಳಲ್ಲಿ (ಎಸೆನ್ಶಿಯಲ್ ಆಯಿಲ್ಸ್) ದ್ರಾವಣವಾಗುತ್ತದೆ. ಪಾದರಸವನ್ನು ಗಾಜಿಗೆ ಅಂಟುವಂತೆ ಮಾಡುವುದು ಇದರ ವಿಶೇಷ ಗುಣ. ನೀರಿನ ಇರವಿನಲ್ಲಿ ಈ ಮೇಲಿನ ಗುಣ ಇರುವುದಿಲ್ಲ. 1,20,000ಕ್ಕೂ ಹೆಚ್ಚಿನ ಪ್ರಮಾಣದಲ್ಲಿ ಇದು ಗಾಳಿಯಲ್ಲಿದ್ದರೆ ಆಗ ಗಂಟಲು ಮೂಗು ಉರಿಯುವ ಒಂದು ವಿಧವಾದ ವಾಸನೆಯ ಅನುಭವ ಆಗುವುದು. ಈ ಪ್ರಮಾಣದಲ್ಲಿ ಇದು ವಿಷ. ಇದು ಒಳ್ಳೆಯ ಉತ್ಕರ್ಷಣಕಾರಿ. ಪೊಟಾಸಿಯಂ ಅಯೊಡೈಡಿನಿಂದ ಅಯೊಡೀನನ್ನು ಬೇರ್ಪಡಿಸುತ್ತದೆ. ಗಂಧಕ, ರಂಜಕಗಳನ್ನು ಉತ್ಕೃಷ್ಟ ಆಮ್ಲಗಳಾಗಿ ಪರಿವರ್ತಿಸುತ್ತದೆ. ಸಸ್ಯಮೂಲವಾದ ಬಣ್ಣಗಳನ್ನು ಬಿಳಿಚುಮಾಡುತ್ತದೆ. ಇದು ರಬ್ಬರಿನಂಥ ಅಪರ್ಯಾಪ್ತ ಸಾವಯವ ರಸಾಯನ ಪದಾರ್ಥಗಳೊಡನೆ ಬೆರೆತು ಓಜ಼ೋನೈಡುಗಳೆಂಬ ಸಂಯುಕ್ತಗಳಾಗುತ್ತದೆ.

ಓಜ಼ೋನಿನ ಅಣುಭಾರ ಮತ್ತು ರಚನೆಗಳನ್ನು ಸೊರೆಟ್, ನ್ಯೂತ್ ಮತ್ತಿತರರು ಇದರ ವಿಭಜನೆಯಿಂದಲೂ ಮತ್ತು ವಿಸರಣ (ಡಿಫ್ಯೂಶನ್) ಶಕ್ತಿಯಿಂದಲೂ ಕಂಡು ಹಿಡಿದಿದ್ದಾರೆ. 20 ಸಿ.ಸಿ. ಓಜ಼ೋನ್ ವಿಭಜಿಸಿದಾಗ 30 ಸಿ.ಸಿ. ಆಕ್ಸಿಜನ್ನನ್ನು ಕೊಡುತ್ತದೆ. ಇದರ ವಿಸರಣಶಕ್ತಿ ಆಕ್ಸಿಜನ್ನಿಗಿಂತಲೂ ಕಡಿಮೆ. ಈ ಗುಣಗಳಿಂದ ಇದರ ಅಣು $O_3$ ಎಂದು ನಿರ್ಧರಿಸಲಾಗಿದೆ. ಇದರ ಅವಶೋಷಣರೋಹಿತದ (ಅಬ್‌ಸಾರ್ಪ್‌ಷನ್ ಸ್ಪೆಕ್ಟ್ರಂ) ತರಂಗಮಾನದ ಪ್ರಕಾರ ಇದರ ಅಣುರಚನೆ ಹೀಗಿದೆ.



ಈ ಅಣು ತ್ರಿಕೋನಾಕೃತಿಯಲ್ಲಿದೆ. ಇದರ ಕೋನ ಸುಮಾರು 117°. ದೊಡ್ಡ ಪ್ರದರ್ಶನಶಾಲೆಗಳಲ್ಲಿಯೂ ನೆಲದಡಿಯ ರೈಲ್ವೆ ಸಂಚಾರದಲ್ಲಿಯೂ ಗಾಳಿಯ ಶುದ್ಧೀಕರಣಕ್ಕೆ ಓಜ಼ೋನನ್ನು ಉಪಯೋಗಿಸುತ್ತಾರೆ. ಆಹಾರವಸ್ತುಗಳಲ್ಲಿ ಬಳಸುವ ವ್ಯಾನಿಲ ಎಂಬ ವಸ್ತುವಿನ ತಯಾರಿಕೆಯಲ್ಲಿಯೂ ಇದನ್ನು ಬಳಸಬಹುದು. (ಬಿ.ಎಸ್‌ಯು.)

ಭೂಮಟ್ಟದಿಂದ ಸರಾಸರಿ 1.5 ಮೈಲಿಗಳ ವರೆಗೆ ವಾಯುಮಂಡಲ ಕ್ರಮೇಣ ವಿರಳವಾಗುತ್ತ ವ್ಯಾಪಿಸಿದೆ. ಅಲ್ಲಿಂದ ಮೇಲೆ ವಾಯುಕಣಗಳು ತೀರ ವಿರಳವಾಗುತ್ತ ಹೋಗಿ 10–30 ಮೈಲಿಗಳ ವಲಯದಲ್ಲಿ ಒಂದು ಓಜ಼ೋನ್ ಗೋಳ ಏರ್ಪಡುವುದು. ವಾಯುಮಂಡಲದ ಆಕ್ಸಿಜನ್ನಿಗೂ ($O_2$) ಸೂರ್ಯನಿಂದ ಪ್ರವಹಿಸುವ ಅತಿನೇರಳೆ ಕಿರಣಗಳಿಗೂ ನಡೆಯುವ ರಾಸಾಯನಿಕ ಕ್ರಿಯೆಯ ಪರಿಣಾಮ ಈ ಗೋಳ. ಓಜ಼ೋನಿನ ಗರಿಷ್ಠ ಸಾಂದ್ರತೆ ಇರುವುದು 15 ಮೈಲಿಗಳ ಎತ್ತರದಲ್ಲಿ. ಓಜ಼ೋನ್ ಗೋಳದ ಇರವನ್ನು ಮೊದಲು ಕಂಡುಹಿಡಿದವ ಫ್ರಾನ್ಸಿನ ಭೌತಶಾಸ್ತ್ರಜ್ಞ ಚಾರ್ಲ್ಸ್ ಫಾಬ್ರಿ (1913). ಈ ಗೋಳದ ಭದ್ರ ಕವಚ ಸೌರವಿಸರಣೆಯನ್ನು ತಡೆದು ಸೋಸಿ ಬೆಳಕು ಉಷ್ಣ ಮುಂತಾದ ತರಂಗಗಳನ್ನು ಮಾತ್ರ ಒಳಗೆ ಬಿಡುವುದು. ಎಂದರೆ, ಈ ಗೋಳ ಅತಿನೇರಳೆ ತರಂಗಗಳಿಗೆ ಅಪಾರದರ್ಶಕ. ಓಜ಼ೋನ್ ಗೋಳದಿಂದ ಮೇಲೆ ಇರುವ ಅಯಾನ್ ಗೋಳದಲ್ಲಿ ಗಾಳಿಯ ಅಣುಗಳು ಅಯಾನೀಕೃತ ಸ್ಥಿತಿಯಲ್ಲಿರುವುವು. ಈ ಪರಿಸ್ಥಿತಿ 30 ಮೈಲಿಗಳಿಗಿಂತಲೂ ಎತ್ತರದಲ್ಲಿ. ಅಯಾನ್ ಮತ್ತು ಓಜ಼ೋನ್ ಗೋಳಗಳು ಒಟ್ಟಾಗಿ ಭೂಮಿಗೆ ತೊಡಿಸಿರುವ ಭದ್ರಕವಚದಂತಿದೆ. ಜೀವಿಗಳಿಗೆ ಅತ್ಯಪಾಯಕಾರಿಗಳಾದ ಅತಿನೇರಳೆ ತರಂಗಗಳನ್ನು ಈ ಕವಚ ತಡೆಹಿಡಿದು ನೀಡುವ ರಕ್ಷಣೆಗೆ ನಾವು ತೆರಬೇಕಾದ ದಂಡ ಆಕಾಶದ ಹಲವಾರು ವಿದ್ಯಮಾನಗಳನ್ನು ಕುರಿತ ನಮ್ಮ ಕುರುಡುತನ. ಈ ಕವಚ ವಿಶ್ವದ ಹಲವಾರು ಭಾಗಗಳನ್ನು ನಮ್ಮಿಂದ ಮುಚ್ಚಿಟ್ಟಿರುವ ಬಾಗಿಲು. ಇದರ ದೆಸೆಯಿಂದ ಸೂರ್ಯನಿಂದ ಅದರಂತೆಯೇ ಇತರ ಆಕಾಶಕಾಯಗಳಿಂದ ಭೂಮಿಗೆ ವಿಸರಿತವಾಗುವ ಅತಿನೇರಳೆ ತರಂಗಗಳು ನೆಲವನ್ನು ತಲುಪುವುದೇ ಇಲ್ಲ.

ನೋಡಿ—ಎಕ್ಸ್‌ಕಿರಣ ಖಗೋಳಶಾಸ್ತ್ರ. *

**ಓಜ಼ೋನಾಲಿಸಿಸ್:** ಅಪರ್ಯಾಪ್ತ ಸಂಯುಕ್ತಗಳಲ್ಲಿ C–C ದ್ವಿಬಂಧಸ್ಥಾನ ಪತ್ತೆಮಾಡಲು ಆರ್ಗ್ಯಾನಿಕ್ ರಸಾಯನಶಾಸ್ತ್ರದಲ್ಲಿ ಉಪಯೋಗಿಸುವ ಕ್ರಿಯೆ. ಇದರಲ್ಲಿ ಒಂದು ಅಪರ್ಯಾಪ್ತ ಸಂಯುಕ್ತವನ್ನು ಓಜ಼ೋನಿನೊಡನೆ ವರ್ತಿಸಿ ಅದರ ಓಜ಼ೋನೈಡನ್ನು (ನೋಡಿ) ಪಡೆಯಲಾಗುವುದು. ಈ ಓಜ಼ೋನೈಡನ್ನು ಜಲಜನಕೀಕರ್ಷಿಸಿದಾಗ (ಹೈಡ್ರೊಲೈಸ್) ಅಥವಾ ಆಮ್ಲದೊಂದಿಗೆ ವರ್ತಿಸಿದಾಗ ಆಲ್ಡಿಹೈಡ್, ಕೀಟೋನ್ ಅಥವಾ ಕಾರ್ಬಾಕ್ಸಿಲಿಕ್ ಆಮ್ಲಗಳ ಮಿಶ್ರಣವಾಗುತ್ತದೆ. ಹಾಗೆ ಉತ್ಪತ್ತಿಯಾದ ಆಲ್ಡಿಹೈಡುಗಳ ಮತ್ತು ಕೀಟೋನುಗಳ ರಚನೆ ಕಂಡುಹಿಡಿಯುವುದರಿಂದ ಮೂಲ ಅಪರ್ಯಾಪ್ತ ಸಂಯುಕ್ತದಲ್ಲಿನ C–C ದ್ವಿಬಂಧನ ಸ್ಥಾನವನ್ನು ನಿರ್ಧರಿಸಬಹುದು. ಉದಾಹರಣೆಗೆ $C_6H_{12}$ ಅಣುಸೂತ್ರವಿರುವ ಒಂದು ಓಲಿಫಿನ್ ಓಜ಼ೋನಾಲಿಸಿನಲ್ಲಿ ಅಸಿಟೋನ್ ಮತ್ತು ಪ್ರೊಪಿಯೊನಾಲ್ಡಿಹೈಡನ್ನು ಕೊಡುತ್ತದೆಂದಿಟ್ಟುಕೊಂಡರೆ ಆ ಓಲಿಫಿನ್ ರಚನೆ I ಯನ್ನು ಪಡೆದಿದೆ ಎಂಬುದಾಗಿ ಕೆಳಗಡೆ ತೋರಿಸಿರುವ ಯೋಜನೆಯ ಪ್ರಕಾರ ತೀರ್ಮಾನಿಸಬಹುದು.




ಸ್ವಾಭಾವಿಕ ವಸ್ತುಗಳ ಅದರಲ್ಲೂ ಟರ್ಪೀನುಗಳ ರಚನೆಯನ್ನು ಕಂಡುಹಿಡಿಯುವಲ್ಲಿ ಓಜ಼ೋನಾಲಿಸಿಸನ್ನು ಬಹಳವಾಗಿ ಉಪಯೋಗಿಸಲಾಗಿದೆ. ಆರೋಮ್ಯಾಟಿಕ್ ಸಂಯುಕ್ತಗಳ ರಚನೆಯನ್ನು ಕುರಿತಾದ ಅಭ್ಯಾಸಗಳಲ್ಲೂ ಅಪೂರ್ವ ಆಲ್ಡಿಹೈಡುಗಳ ಮತ್ತು ಕೀಟೋನುಗಳ ಸಂಶ್ಲೇಷಣೆಯಲ್ಲೂ ಓಜ಼ೋನಾಲಿಸಿಸನ್ನು ಅಳವಡಿಸಿಕೊಳ್ಳಲಾಗಿದೆ. ಉದಾಹರಣೆಗೆ ಓಲಿಯಿಕ್ ಆಮ್ಲವನ್ನು ಓಜ಼ೋನಾಲಿಸಿಸ್ ಮಾಡಿದಾಗ n–ನೋನಾನಾಲ್ (ಪೇಲಾರ್ಗಾನಿಕ್ ಆಲ್ಡಿಹೈಡ್ ಮತ್ತು ಅಸಿಲಾಯಿಕ್ ಸೆಮಿಆಲ್ಡಿಹೈಡ್) ಕೊಡುತ್ತದೆ.



$$CH_3(CH_2)_7CH{=}CH(CH_2)_7COOH \rightarrow CH_3(CH_2)_7CHO + OCH(CH_2)_7COOH$$

ಈ ಕ್ರಿಯೆಯನ್ನು ಉಪಯೋಗಿಸಿಕೊಂಡು ಗ್ಲೈಕಾಲ್ ಆಲ್ಡಿಹೈಡ್, ಸಕ್ಸಿನಾಲ್ಡಿಹೈಡ್, ಅನಿಸಾಲ್ಡಿಹೈಡ್, ಪ್ಥಾಲಾಲಿಹೈಡುಗಳನ್ನು ತಯಾರಿಸುತ್ತಾರೆ. ಓಜ಼ೋಕಿನಾಲಿಸಿಸಿನಿಂದ ಓಲಿಫಿನುಗಳನ್ನು ಆಲ್ಡಿಹೈಡುಗಳಾಗಿ ಪರಿವರ್ತಿಸುವ ಸಾಮಾನ್ಯ ವಿಧಾನ ಹೀಗಿದೆ.




ಓಜ಼ೋನಾಲಿಸಿಸ್ ಮೂಲಕ ಕೀಟೋನುಗಳನ್ನು ಓಲಿಫಿನುಗಳಿಂದ ತಯಾರಿಸುವ ಸಾಮಾನ್ಯ ವಿಧಾನ ಹೀಗಿದೆ :




ಒಂದು ಸಂಯುಕ್ತಕ್ಕೆ ಎರಡು ಅಥವಾ ಹೆಚ್ಚು ಈನಾಲ್ ರೂಪಗಳು ವಿವರಣೆಯ ದೃಷ್ಟಿಯಿಂದ ಸಾಧ್ಯವಾಗಿದ್ದರೆ ಓಜ಼ೋನಾಲಿಸಿಸ್ ಉಪಯೋಗಿಸಿಕೊಂಡು ಅದಕ್ಕೆ ಯಾವ ರೂಪದ ರಚನೆ ಇದೆ ಎಂಬುದನ್ನು ತೀರ್ಮಾನಿಸಬಹುದು. ಉದಾಹರಣೆಗೆ ಹೆಕ್ಸೆನ್ 2 : 4 ಡೈಯೊನ್, $CH_3COCH_2COCH_2CH_3$ಕ್ಕೆ ಎರಡು ಈನಾಲ್ ರೂಪಗಳು ಸಾಧ್ಯ.




II ಓಜ಼ೋನಾಲಿಸಿಸ್ ಮಾಡಿದಾಗ $CH_3COOH$ ಮತ್ತು $CH_3CH_2COCHO$ ಸಂಯುಕ್ತಗಳನ್ನೂ III $CH_3COCHO$ ಮತ್ತು $CH_3CH_2COOH$ ಸಂಯುಕ್ತಗಳನ್ನೂ ಕೊಡುತ್ತವೆ. ಈಗ ಈ ಸಂಯುಕ್ತಗಳನ್ನು ಗುರುತಿಸುವುದರಿಂದ II ಮತ್ತು IIIರಲ್ಲಿ ಯಾವುದಾದರೊಂದು ಅಥವಾ ಎರಡೂ ಈನಾಲ್ ರೂಪಗಳೇ ಎಂದು ನಿರ್ಧರಿಸಬಹುದು.

ಓಜ಼ೋನಾಲಿಸಿಸನ್ನು ಸ್ಟೀರಾಯಿಡ್ ರಸಾಯನಶಾಸ್ತ್ರದಲ್ಲೂ ಮತ್ತು ಸಿವಿಟೋನ್ ರಚನೆ ಸ್ಥಾಪನೆಯಲ್ಲೂ ವಿಶೇಷವಾಗಿ ಬಳಸಲಾಗಿದೆ. 1955ರಲ್ಲಿ ಸ್ಕ್ರಿಟ್ ಎಂಬಾತ ಫಿನಾಸ್ಥ್ರೀನಿನ ಸ್ಥಿರ ಓಜ಼ೋನೈಡನ್ನು ಈ ಕ್ರಿಯೆಯಿಂದಲೇ ತಯಾರಿಸಿದ. ಈ ಓಜ಼ೋನೈಡುಗಳ ವಿವರವಾದ ರಚನೆ ಇನ್ನೂ ಪರೀಕ್ಷಾಮಟ್ಟದಲ್ಲಿದೆ. ಖ್ಯಾತ ಅಭ್ಯಾಸಗಳನ್ನು ಮಾಡಿದ ಎಚ್. ಸ್ಟೌಡಿಂಗರ್ ಕೊಟ್ಟಿರುವ ರಚನೆಗಿಂತ ಅತಿ ವಿಶಾಲ ವೈವಿಧ್ಯ ರಚನೆಗಳು ಓಜ಼ೋನೈಡುಗಳಿಗೆ ಇರುವುದು ಸಾಧ್ಯವೆಂಬುದಾಗಿ ಇತ್ತೀಚಿನ ಸಂಶೋಧನೆಗಳು ಸೂಚಿಸುತ್ತದೆ. (ಪಿ.ಜಿ.ಆರ್.)

**ಓಜ಼ೋನೀಕರಣ:** ಓಲಿಫಿನ್ ಹೈಡ್ರೊಕಾರ್ಬನ್ನುಗಳನ್ನು ಛೇದಿಸಲು ನಿರ್ವಹಿಸುವ ಕ್ರಿಯೆ (ಓಜ಼ೋನೈಸ್ೕಷನ್). ಸಿ. ಹ್ಯಾರೀಸ್ ಎಂಬಾತ ಮೊದಲು ಈ ಕ್ರಿಯೆಯನ್ನು ಸಂಶೋಧಿಸಿದವ (1903). ಹಲವಾರು ಅಪರ್ಯಾಪ್ತ ಆರ್ಗ್ಯಾನಿಕ್ ಸಂಯುಕ್ತಗಳ ತಯಾರಿಕೆಯಲ್ಲೂ ರಚನೆಯ ಶೋಧನೆಯಲ್ಲೂ ಇದರ ಉಪಯೋಗ ಉಂಟು. ಅಪರ್ಯಾಪ್ತ ಸಂಯುಕ್ತದ ಆರ್ಗ್ಯಾನಿಕ್ ದ್ರಾವಣದ ಮೂಲಕ ಓಜ಼ೋನನ್ನು ಹಾಯಿಸಿದಾಗ ಓಜ಼ೋನೈಡ್ ದೊರೆಯುವುದು. ಇದನ್ನು ಹೈಡ್ರೋಜನ್ನಿನಿಂದ ಉತ್ಕರ್ಷಿಸಿದಾಗ ಅಥವಾ ಜಲವಿಶ್ಲೇಷಿಸಿದಾಗ (ಹೈಡ್ರೊಲಿಸಿಸ್) ಆಲ್ಡಿಹೈಡ್ ಅಥವಾ ಕೀಟೋನ್ ಸಿಕ್ಕುತ್ತದೆ. ಈ ವಸ್ತುಗಳ ಲಕ್ಷಣಗಳಿಂದ ಅಪರ್ಯಾಪ್ತ ಸಂಯುಕ್ತಗಳಲ್ಲಿರುವ ದ್ವಿಬಂಧ (ಡಬಲ್ ಬಾಂಡ್) ಸ್ಥಾನವನ್ನು ಪತ್ತೆಮಾಡಬಹುದು.




ಉದಾಹರಣೆಗೆ $C_6H_{12}$ ಅಣುಸೂತ್ರ ಪಡೆದಿರುವ ಒಂದು ಅಪರ್ಯಾಪ್ತ ಸಂಯುಕ್ತವನ್ನು ಓಜ಼ೋನೀಕರಿಸಿ ಜಲವಿಶ್ಲೇಷಿಸಿದಾಗ $C_2H_4O$ ಅಣುಸೂತ್ರವಿರುವ ಆಲ್ಡಿಹೈಡೂ $C_4H_8O$ ಅಣುಸೂತ್ರವಿರುವ ಕೀಟೋನೂ ಉತ್ಪತ್ತಿಯಾಗುತ್ತವೆಂದು ಭಾವಿಸೋಣ. ಆಗ $C_2H_4O$ ಆಲ್ಡಿಹೈಡಾಗಿರುವುದರಿಂದ ಅದರಲ್ಲಿ ಒಂದಾದರೂ $-CHO$ ಗುಂಪು ಇರಲೇಬೇಕು. ಅಂದರೆ ಅದರ ಅಣುಸೂತ್ರ $CH_3CHO$ (ಅಸಿಟಾಲ್ಡಿಹೈಡ್) ಎಂದಾಯಿತು. $C_4H_8O$ ಸಂಯುಕ್ತ ಕೀಟೋನಾಗಿರುವುದರಿಂದ ಅದರಲ್ಲಿ ಒಂದಾದರೂ $-CO-$ ಗುಂಪು ಇರಲೇಬೇಕು. ಅಂದರೆ ಅದರ ರಚನಾಸೂತ್ರ $CH_3-CO-C_2H_5$ (ಈಥೈಲ್ ಮಿಥೈಲ್ ಕೀಟೋನು) ಎಂದಾಯಿತು. $C_6H_{12}$ ಅಣುಸೂತ್ರ ಆಲ್ಕೀನಿನ ಸಾಮಾನ್ಯ ಸೂತ್ರ CnH2n ನ್ನು ಹೋಲುವುದರಿಂದ ಅದು ಒಂದು ಆಲ್ಕೀನ್. ಇದನ್ನು ಓಜ಼ೋನೀಕರಿಸಿ ಜಲವಿಶ್ಲೇಷಿಸಿದಾಗ ದ್ವಿಬಂಧಸ್ಥಾನದಲ್ಲಿ ಅಣು ಸೀಳಿ ಆಲ್ಡಿಹೈಡ್ ಮತ್ತು ಕೀಟೋನ್ ಕೊಡುತ್ತದೆ. ಇವುಗಳ ಅಣುಸೂತ್ರಗಳ ಪ್ರಕಾರ ದ್ವಿಬಂಧದ ಒಂದು ಪಾರ್ಶ್ವದಲ್ಲಿ ಎರಡು ಇಂಗಾಲ ಪರಮಾಣುಗಳು ಅಸಿಟಾಲ್ಡಿಹೈಡಿನಲ್ಲಿರುವಂತೆಯೂ ಮತ್ತೊಂದು ಪಾರ್ಶ್ವದಲ್ಲಿ ಇಂಗಾಲದ ನಾಲ್ಕು ಪರಮಾಣುಗಳು ಈಥೈಲ್ ಕೀಟೋನಿನಲ್ಲಿರುವಂತೆಯೂ ಇವೆ. ಅಂದರೆ ಸೂಕ್ಷ್ಮರಚನೆ ಹೀಗಿರಬೇಕು :



ಈಗ ಈ ಸೂತ್ರಕ್ಕೆ ಹೈಡ್ರೊಜನ್ ಪರಮಾಣುಗಳನ್ನು ಪ್ರತಿ ಇಂಗಾಲದ ನಾಲ್ಕು ವೇಲೆನ್ಸಿಯನ್ನು ಭರ್ತಿ ಮಾಡುವಂತೆ ಸೇರಿಸಿ ರಚನೆ ಬರೆದಾಗ $C_6H_{12}$ ಸಂಯುಕ್ತದಲ್ಲಿನ ದ್ವಿಬಂಧ ಸ್ಥಾನ ವೇದ್ಯವಾಗುತ್ತದೆ.



ಓಜ಼ೋನೀಕರಣ ಯುಗ್ಮಬಂಧವನ್ನು ಭೇದಿಸುವುದಕ್ಕೆ ಅಳವಡಿಸುವ ಬೇರೆ ಉತ್ಕರ್ಷಣ ವಿಧಾನಗಳಿಗಿಂತ ಉತ್ತಮವಾದುದು. ಕಾರಣ ಓಜ಼ೋನೈಡುಗಳನ್ನು ವಿಭಜಿಸುವ ಮೊದಲೇ ಓಜ಼ೋನನ್ನು ಪ್ರತಿಕ್ರಿಯೆಯ ಪರಿಮಿತಿಯಿಂದ ಹೊರ ತೆಗೆಯಬಹುದು. ಪ್ರಯೋಗಶಾಲೆಯಲ್ಲಿ ರಚನಾ ವಿಶ್ಲೇಷಣೆಗಾಗಿ ಓಜ಼ೋನೀಕರಣವನ್ನು ಹೇರಳವಾಗಿ ಅಳವಡಿಸುತ್ತಾರೆ. ಆಲ್ಡಿಹೈಡುಗಳು ಮತ್ತು ಆಮ್ಲಗಳ ಸಂಶ್ಲೇಷಣೆಯಲ್ಲಿ ವಾಣಿಜ್ಯದೃಷ್ಟಿಯಿಂದ ಹೆಚ್ಚು ಉಪಯೋಗವಿದೆ. ಆದರೆ ಕೆಲವು ಓಜ಼ೋನೈಡುಗಳು ಸ್ಫೋಟಕ ವಸ್ತುಗಳಾಗಿರುವುದು ಈ ಕ್ರಿಯೆಯ ಪ್ರಯೋಜನವನ್ನು ಮೊಟಕುಗೊಳಿಸಿದೆ. ಓಜ಼ೋನೈಡನ್ನು ಬೇರ್ಪಡಿಸದೆಯೂ ಅಥವಾ ಕಡಿಮೆ ಉಷ್ಣತೆಯಲ್ಲಿ ಓಜ಼ೋನೀಕರಿಸುವುದರಿಂದಲೂ ದ್ರಾವಣರೂಪದಲ್ಲಿ ವಿಭಜಿಸುವುದರಿಂದಲೂ ಓಜ಼ೋನೈಡುಗಳ ಸ್ಫೋಟನೆಯನ್ನು ನಿವಾರಿಸಬಹುದು. ಉತ್ಪನ್ನ ವಸ್ತುಗಳು ಉತ್ಕರ್ಷಣೆಗೆ ಒಳಗಾಗದಂತೆ ಮತ್ತು ಪಾಲಿಮರುಗಳಾಗದಂತೆ ತಡೆಯಲು ಓಜ಼ೋನೀಕರಣ ಕ್ರಿಯಾವಿನ್ಯಾಸ (ಮೆಕಾನಿಸಂ) ಮತ್ತು ಓಜ಼ೋನೈಡುಗಳ ವಿಭಜನೆಯ ಸಮರ್ಪಕ ತಾಂತ್ರಿಕ ಜ್ಞಾನ ಅತ್ಯವಶ್ಯ.

ಕ್ರಿಯಾವಿನ್ಯಾಸ : ಓಲಿಫಿನ್ನಿನೊಡನೆ ಓಜ಼ೋನಿನ ವರ್ತನೆ ಕೆಳಗೆ ತೋರಿಸಿರುವ ಪ್ರಕಾರದಲ್ಲಿರಬಹುದೆಂದು 1950ರ ವರೆಗೂ ಭಾವಿಸಲಾಗಿತ್ತು.




ಹೀಗೆ ಉತ್ಪತ್ತಿಯಾಗುವ ಅಂತ್ಯದ ನೈಜ ಓಜ಼ೋನೈಡು (II) ಅಪಕರ್ಷಣಕಾರಿ ಅಥವಾ ಉತ್ಕರ್ಷಣಕಾರಿಯ ಸಂಪರ್ಕದಲ್ಲಿ ಜಲವಿಶ್ಲೇಷಿಸಿ ಆಲ್ಡಿಹೈಡ್, ಕೀಟೋನ್ ಅಥವಾ ಆಮ್ಲವನ್ನು ಕೊಡುವುದು. ಓಜ಼ೋನು ಎಲೆಕ್ಟ್ರೋಫಿಲಿಕ್ ಕಾರಕವೆಂದೂ ಅದು ಕೆಳಗೆ ತೋರಿಸಿರುವ ರೀತಿಯಲ್ಲಿ ಧ್ರುವೀಕೃತ (ಪೋಲರೈಜ಼್ಡ್) ದ್ವಿಬಂಧವನ್ನು ಭೇದಿಸುವುದೆಂದೂ 1950 ರಿಂದೀಚೆಗೆ ಊಹಿಸಿದ್ದಾರೆ.




ರಚನೆ (III) ರಿಂದ ಆಕ್ಸಿಜನ್ ಅಣು ವಿಮೋಚನೆಯಾಗುವುದರಿಂದ ಎಪಾಕ್ಸೈಡುಗಳು ಉತ್ಪತ್ತಿಯಾಗುವುದನ್ನು ಸಮರ್ಥಿಸಬಹುದು. ಅಂದರೆ ಮೊದಲ ಓಜ಼ೋನೈಡು (I) ಹೀಗಿರಬಹುದು :




ಇದು ಆಲ್ಡಿಹೈಡ್ ಅಥವಾ ಕೀಟೋನ್ ಮತ್ತು ಕೆಳಗೆ ತೋರಿಸಿರುವ ಅನುರಣ (ರೆಸೊನೆನ್ಸ್) ರಚನೆ ಪಡೆದಿರುವ ಜ್ವಿಟ್ಟರೈಯಾನುಗಳಾಗಿ ವಿಭಜಿಸುತ್ತದೆ.



ನೀರು ಆಲ್ಕೊಹಾಲ್ ಅಥವಾ ಆಮ್ಲಗಳಂಥ ಅಯಾನುಕಾರಕ ದ್ರಾವಕಗಳೊಡನೆ (ಅಯಾನಿಕ್ ಸಾಲ್ವೆಂಟ್ಸ್) ಜ್ವಿಟ್ಟರೈಯಾನು ವರ್ತಿಸಿ ಆಕ್ಸಿಪೆರಾಕ್ಸೈಡ್ (IV) ಆಗಬಹುದು. ಇದರಲ್ಲಿ R ಇದೆ; ಅದು ಆಲ್ಕೈಲ್ ಗುಂಪು ಅಥವಾ ಅಸೈಲ್ ಗುಂಪು ಅಥವಾ H ಆಗಿರಬಹುದು. ಅಲ್ಲದೆ ಸ್ವಯಂವರ್ತಿಸಿ ಪೆರಾಕ್ಸೈಡ್ ಡೈಮರ್ (V) ಅಥವಾ ಪಾಲಿಮರಿಕ್ ಪೆರಾಕ್ಸೈಡನ್ನು (VI) ಕೊಡಬಹುದು. ಕಾರ್ಬನ್ ಟೆಟ್ರಕ್ಲೋರೈಡಿನಂಥ ಅಯಾನುಕಾರಕವಲ್ಲದ ದ್ರಾವಕಗಳ ಸಂಪರ್ಕದಲ್ಲಿ ಜ್ವಿಟ್ಟರೈಯಾನ್ ಆಲ್ಡಿಹೈಡ್ ಅಥವಾ ಕೀಟೋನಿನೊಡನೆ ಪರಿವರ್ತಿಸಿ ಪ್ರಥಮ ವರ್ಗದ ಓಜ಼ೋನೈಡನ್ನು (II) ಅಥವಾ ಪಾಲಿಮರಿಕ್ ಓಜ಼ೋನೈಡನ್ನು (III) ಕೊಡಬಹುದು.

ಆರೋಮ್ಯಾಟಿಕ್ ಸಂಯುಕ್ತಗಳಲ್ಲಿರುವ ದ್ವಿಬಂಧಕ್ಕಿಂತ ತೆರೆದ ಶ್ರೇಣಿಗಳ ಎಥಿಲೀನ್ ಬಂಧ ವಸ್ತುಗಳ ಮೇಲೆ ಓಜ಼ೋನೀಕರಣ ಸರಾಗವಾಗಿರುವುದು. ಒಂದು ಯುಗ್ಮ ಸ್ಥಿತಿಯಲ್ಲಿನ ಮೊದಲ ದ್ವಿಬಂಧದ ಮೇಲೆ ಓಜ಼ೋನ್ ನಿರಾಯಾಸವಾಗಿ ವರ್ತಿ



(IV)



(V)



VI



VII

ಸುವುದು ; ಎರಡನೆಯ ದ್ವಿಬಂಧದ ಮೇಲೆ ಇನ್ನೂ ನಿಧಾನವಾಗಿ ವರ್ತಿಸುವುದು. ಇಂಗಾಲ–ಇಂಗಾಲ ಪರಮಾಣುಗಳ ಮಧ್ಯದಲ್ಲಿರುವ ದ್ವಿಬಂಧದ ಮೇಲೆ ಇಂಗಾಲ –ಸಾರಜನಕ ದ್ವಿಬಂಧನಕ್ಕಿಂತ ಬೇಗನೆ ಓಜ಼ೋನೀಕರಣವಾಗುವುದು. ಹೆಚ್ಚಾಗಿ ಆದೇಶಿತ ಇಂಗಾಲ ಪರಮಾಣುಗಳಲ್ಲಿ ಅಥವಾ ಸ್ಟೀರಿಕ್ ತೊಡಕು ಇರುವ ಉಂಗುರ ಸಂಯುಕ್ತಗಳಲ್ಲಿ ಓಜ಼ೋನೀಕರಣ ಎಥಿಲೀನ್ ದ್ವಿಬಂಧದ ಮೇಲೆ ಆಗುವಷ್ಟು ಆಗುವುದಿಲ್ಲ. ಕೆಲವು ಸಂದರ್ಭಗಳಲ್ಲಿ ಪಾಲಿಮರ್ ಓಜ಼ೋನೈಡುಗಳಾಗುವುದುಂಟು. ದ್ರಾವಕಗಳ ಪ್ರಭಾವ ಸಾಕಷ್ಟು ಇದೆ. ಉದಾಹರಣೆಗೆ ಅಸಿಟಿಕ್ ಆಮ್ಲ ಒಂದು ಅಯಾನುಕಾರಕ ದ್ರಾವಕ. ಇದರಲ್ಲಿ ಮಾನೋಮರಿಕ್ ಓಜ಼ೋನೈಡುಗಳಾಗುವುವು. ಅಯಾನುಕಾರಕವಲ್ಲದ ದ್ರಾವಕಗಳಾದ ಕಾರ್ಬನ್ ಟೆಟ್ರಕ್ಲೋರೈಡಿನಲ್ಲಿ ಪಾಲಿಮರಿಕ್ ಓಜ಼ೋನೈಡುಗಳಾಗುವುದು ಸಾಮಾನ್ಯ. ಓಜ಼ೋನಿನ ಪ್ರಬಲತೆ ಅತಿ ಹೆಚ್ಚಾಗಿದ್ದರೆ ಅಥವಾ ಓಜ಼ೋನೀಕರಣವನ್ನು ಹೆಚ್ಚು ಕಾಲ ಮುಂದುವರಿಸಿದರೆ ಓಜ಼ೋನೈಡುಗಳು ವಿಭಜಿಸುವುವಲ್ಲದೆ ಉತ್ಪನ್ನ ವಸ್ತುಗಳ ಉತ್ಕರ್ಷಣೆ ಸುಲಭವಾಗಿ ನಡೆದಿರುತ್ತದೆ. ಓಜ಼ೋನೀಕರಣದಿಂದ ಓಜ಼ೋನೈಡನ್ನು ಪಡೆಯುವುದಕ್ಕಿಂತಲೂ ಅವುಗಳ ವಿಭಜನೆಯಿಂದ ಬೇಕಾದ ಅಂತ್ಯ ಪದಾರ್ಥ ಪಡೆಯುವುದು ಕಷ್ಟಸಾಧ್ಯವಾದುದು. ನೀರು ಅಥವಾ ಉತ್ಕರ್ಷಣಕಾರಿಗಳ ಸಂಪರ್ಕದಲ್ಲಿ ವಿಭಜಿಸಿದಾಗ ಆಮ್ಲಗಳನ್ನು ಪಡೆಯುವುದು ಸುಲಭ. ಆಲ್ಡಿಹೈಡುಗಳು ಬೇಕಾದರೆ ಅಪಕರ್ಷಣಕಾರಿಯನ್ನು ಉಪಯೋಗಿಸಲೇಬೇಕಾಗುವುದು.

ಕೈಗಾರಿಕಾ ಬಳಕೆ : ಈ ಶತಮಾನದ ಮೊದಲಿನಿಂದಲೂ ಓಜ಼ೋನೀಕರಣ ಉಪಯುಕ್ತ ವಿಶ್ಲೇಷಣ ಉಪಕರಣವಾಗಿ (ಅನಲಿಟಿಕಲ್ ಟೂಲ್) ಪ್ರಯೋಗಾಲಯಗಳಲ್ಲಿ ಬಳಕೆಯಲ್ಲಿದ್ದರೂ ಇತ್ತೀಚಿನವರೆಗೂ ಈ ಕ್ರಿಯೆ ಕೈಗಾರಿಕಾ ಕ್ಷೇತ್ರದಲ್ಲಿ ಅಷ್ಟಾಗಿ ಉಪಯೋಗವಾಗದಿರಲು ಕೆಲವು ಕಾರಣಗಳುಂಟು. ಓಜ಼ೋನನ್ನು ದೊಡ್ಡ ಪ್ರಮಾಣದಲ್ಲಿ ತಯಾರಿಸುವ ಸಮರ್ಥ ಸಲಕರಣೆಗಳ ಅಭಾವ ಒಂದು ಕಾರಣ. ಈಚಿನ ವರ್ಷಗಳಲ್ಲಿ ಇಂಥ ದಕ್ಷ ಉಪಕರಣವನ್ನು ನಿರ್ಮಿಸಿದ್ದಾರೆ ಮತ್ತು ಇಂದು ಓಜ಼ೋನನ್ನು ಎಷ್ಟು ಬೇಕಾದರೂ ಕಡಿಮೆ ಖರ್ಚಿನಲ್ಲಿ ಉತ್ಪಾದಿಸಲು ಸಾಧ್ಯವಿದೆ.

ವ್ಯಾನಿಲಿನನ್ನು ಐಸೋಯುಜಿನಾಲಿನಿಂದ ತಯಾರಿಸಿದ್ದೇ ಬಹುಶಃ ಓಜ಼ೋನೀಕರಣದ ಕೈಗಾರಿಕಾ ರಂಗದ ಪ್ರವೇಶವೆನ್ನಬಹುದು. ಮೊದಲನೆಯ ಮಹಾಯುದ್ಧಕ್ಕಿಂತ ಮೊದಲು ಈ ವಿಧಾನವನ್ನು ಯೂರೋಪ್ ಮತ್ತು ಸಂಯುಕ್ತಸಂಸ್ಥಾನಗಳಲ್ಲಿ ಅಲ್ಪಸ್ವಲ್ಪ ಯಶಸ್ಸಿನಿಂದ ನಡೆಸಿಕೊಂಡು ಬರಲಾಯಿತು. ಓಲಿಕ್ ಆಮ್ಲದ ಓಜ಼ೋನೀಕರಣದಿಂದ ಅಜ಼ಿಲೈಕ್ ಮತ್ತು ಪೆಲಾರ್ಗೋನಿಕ್ ಆಮ್ಲಗಳನ್ನು ವಾಣಿಜ್ಯಮಟ್ಟದಲ್ಲಿ ಉತ್ಪಾದಿಸುತ್ತಾರೆ. ಓಲಿಕ್ ಆಮ್ಲವನ್ನು ಅದರ ಅರ್ಧದಷ್ಟು ತೂಕ ಪೆಲಾರ್ಗೋನಿಕ್ ಆಮ್ಲದಲ್ಲಿ ಕರಗಿಸಿ 2%ರಷ್ಟು ಓಜ಼ೋನ್ ಇರುವ ಆಕ್ಸಿಜನ್ನಿನಿಂದ ಪ್ರತಿಪ್ರವಾಹವರ್ತಕ ಕೋಶದಲ್ಲಿ ಓಜ಼ೋನೀಕರಿಸುವುದು ; ಹೀಗೆ ಓಜ಼ೋನೀಕರಿಸಿದ ಮಿಶ್ರಣವನ್ನು ಆಕ್ಸಿಜನ್ ಪ್ರವಾಹದಲ್ಲಿ ಸತತವಾಗಿ ಕೆಲವು ಗಂಟೆಗಳ ಅವಧಿಯಲ್ಲಿ ಪಟು ಆಕ್ಸಿಜನ್ ಬಲು ಕಡಿಮೆಯಾಗುವ ವರೆಗೂ ಉತ್ಕರ್ಷಿಸುವುದು ; ಮತ್ತೆ ನಿರ್ವಾತದಲ್ಲಿ ಬಟ್ಟಿ ಇಳಿಸುವುದರಿಂದ ಪೆಲಾರ್ಗೋನಿಕ್ ಮತ್ತು ಅಜ಼ಿಲೈಕ್ ಆಮ್ಲಗಳನ್ನು ಉತ್ಪಾದಿಸಬಹುದು.

ಇಂಗ್ಲೆಂಡ್ ಮತ್ತು ಜಪಾನಿನಲ್ಲಿ ಓಲಾಯಿಲ್ ನೈಟ್ರೈಲ್ ಮತ್ತು ಓಲಾಯಿಲುಗಳ ಓಜ಼ೋನೀಕರಣದಿಂದ ಎ—ಅಮೈನೋಪೆಲಾರ್ಗೋನಿಕ್ ಆಮ್ಲ ಸಂಶ್ಲೇಷಿಸುವುದನ್ನು ವಿಶೇಷವಾಗಿ ಸಂಶೋಧಿಸುತ್ತಿದ್ದಾರೆ. ನೈಲಾನ್–9 ನೂಲನ್ನು ಲ್ಯಾಕ್ಟಮಿನಿಂದ ಉತ್ಪಾದಿಸುವುದನ್ನು ಜಪಾನೀಯರು ಕಂಡುಹಿಡಿದಿರುವುದಾಗಿ ತಿಳಿದು ಬಂದಿದೆ. ಕಾರ್ಟಿಸೋನು ಮತ್ತು ಹಾರ್ಮೋನುಗಳ ಸಂಶ್ಲೇಷಣೆಯಲ್ಲಿ ಓಜ಼ೋನೀಕರಣವನ್ನು ವಾಣಿಜ್ಯಮಟ್ಟದಲ್ಲಿ ಈಚೆಗೆ ಅಳವಡಿಸಿದ್ದಾರೆ. (ಪಿ.ಜಿ.ಆರ್.)

**ಓಟ್ :** ಗ್ರಾಮಿನಿ ಅಥವಾ ಪೋಯೇಸಿ ಕುಟುಂಬದ ಒಂದು ಧಾನ್ಯಸಸ್ಯ; ಶಾಸ್ತ್ರೀಯ ನಾಮ ಅವಿನ. ಓಟ್ಸ್ ಎಂದೂ ಕರೆಯುವುದುಂಟು. ಮುಖ್ಯವಾಗಿ ದನಕರುಗಳ ಮತ್ತು ಕುದುರೆಗಳ ಆಹಾರ. ಇದರ ಕಾಳುಗಳನ್ನು ಮಾನವನ ಕೆಲವು ಆಹಾರವಸ್ತುಗಳ ತಯಾರಿಕೆಯಲ್ಲೂ ಬಳಸಲಾಗುತ್ತಿದೆ. ಪ್ರಪಂಚದ ಪ್ರಧಾನ ಧಾನ್ಯಸಸ್ಯಗಳಲ್ಲಿ ಓಟ್ಸಿಗೆ ನಾಲ್ಕನೆಯ ಸ್ಥಾನ. (ಗೋದಿ, ಬತ್ತ, ಮುಸುಕಿನ ಜೋಳ ಮೊದಲಿನ ಮೂರು). ಓಟ್ ಸಸ್ಯ ಪಶ್ಚಿಮ ಯೂರೋಪಿನ ಮೂಲನಿವಾಸಿಯಾಗಿದ್ದು ಕ್ರಮೇಣ ಸಮಶೀತೋಷ್ಣವಲಯದ ಅನೇಕ ದೇಶಗಳಿಗೆ ಹರಡಿಕೊಂಡಿದೆ. ಇಂದು ಭಾರತ, ದಕ್ಷಿಣ ಆಫ್ರಿಕ, ಮೆಕ್ಸಿಕೋ ಮುಂತಾದ ಉಷ್ಣದೇಶಗಳಲ್ಲೂ ಬೆಳೆಯುತ್ತಿದೆ. ಓಟ್ಸಿನ ವ್ಯವಸಾಯ ಬಹು ಪುರಾತನವಾದುದೆಂದು ಹೇಳುತ್ತಾರೆ. ಒಂದಾನೊಂದು ಕಾಲದಲ್ಲಿ ಹೊಲಗಳಲ್ಲಿ ಕಳೆಯ ರೂಪದಲ್ಲಿ ಓಟ್ ಸಸ್ಯ ಬೆಳೆಯುತ್ತಿತ್ತೆಂದೂ ಕ್ರಮೇಣ ಇದರ ಕಾಳುಗಳ ಉಪಯುಕ್ತತೆಯನ್ನು ಕಂಡುಕೊಂಡ ಮಾನವ ಇದರ ಕೃಷಿಯನ್ನು ಕೈಗೊಂಡನೆಂದೂ ಭಾವಿಸಲಾಗಿದೆ.



ಓಟ್ ಸಸ್ಯದ ಹೂಗೊಂಚಲು : ಎಡಗಡೆಯದು—ಅಸಮರೂಪದ್ದು ; ಬಲಗಡೆಯದು—ಸಮರೂಪದ್ದು.

ಕಂಚಿನ ಯುಗದಲ್ಲಿ (ಕ್ರಿ.ಪೂ. 1500–500) ಇದರ ಕೃಷಿ ರೂಢಿಯಲ್ಲಿತ್ತೆಂದು ತಿಳಿದುಬಂದಿದೆ.

ಓಟ್ ಜಾತಿಯಲ್ಲಿ ಸುಮಾರು 70 ಪ್ರಭೇದಗಳಿವೆ—ಅವಿನ ಸೇಟಿವ (ಸಾಮಾನ್ಯ ಓಟ್), ಅ.ಬಿಜ಼ಾಂಟಿನ (ಕೆಂಪು ಓಟ್), ಅ.ಓರಿಯಂಟ್ಯಾಲಿಸ್, ಅ.ನ್ಯೂಡ, ಅ.ಬಾರ್ಬೇಟ, ಅ. ಫ್ಯಾಟ್ಯುವ, ಅ.ಸ್ಟೆರಿಲಿಸ್, ಅ.ಪ್ರೆಟೆನ್ಸಿಸ್ ಮತ್ತು ಅ.ಬ್ರೆವಿಸ್ ಪ್ರಭೇದಗಳು ಮುಖ್ಯವಾದುವು. ಇವುಗಳಲ್ಲಿ ಕೆಲವು ಚಳಿದೇಶಗಳಲ್ಲಿ ಚೆನ್ನಾಗಿ ಬೆಳೆದರೆ ಇನ್ನು ಕೆಲವು ಉಷ್ಣದೇಶಗಳಿಗೆ ಹೊಂದಿಕೊಂಡಿವೆ. ಕಾಳುಗಳಿಗಾಗಿ ಕೃಷಿಯಲ್ಲಿರುವವು ಸಾಮಾನ್ಯ ಓಟ್ ಮತ್ತು ಕೆಂಪು ಓಟ್. ಉಳಿದವನ್ನು ದನಕರುಗಳ ಮೇವಿಗಾಗಿ ಮಾತ್ರ ಬೆಳೆಸಲಾಗುತ್ತದೆ. ಇವಲ್ಲದೆ ಪ್ರಪಂಚದ ಬೇರೆ ಬೇರೆ ಪ್ರದೇಶಗಳ ವಾತಾವರಣಕ್ಕೆ ಹಾಗೂ ತನ್ನ ಬಳಕೆಗೆ ಹೊಂದಿಕೊಳ್ಳುವಂತೆ ತಳೀಕರಣ ಪ್ರಯೋಗಗಳಿಂದ ಮಾನವ ಬೆಳಕಿಗೆ ತಂದಿರುವ ಹಲವಾರು ಹೊಸ ತಳಿಗಳೂ ಇವೆ.

ಒಂದು ಕಾಲದಲ್ಲಿ ಪ್ರಪಂಚದ ಕೆಲವೇ ಪ್ರದೇಶಗಳಿಗೆ ಸೀಮಿತವಾಗಿದ್ದ ಓಟ್ ಸಸ್ಯ ತನ್ನ ಉಪಯುಕ್ತತೆ ಹಾಗೂ ತ್ರಾಣದಿಂದಾಗಿ ಬಹು ಜನಪ್ರಿಯವಾಗಿದೆ. ಆದ್ದರಿಂದ ಇಂದು ವಿಶ್ವದ ಎಲ್ಲ ಭಾಗಗಳಲ್ಲಿಯೂ ಇದರ ಕೃಷಿಯನ್ನು ಕಾಣಬಹುದು. ಅಮೆರಿಕ ಸಂಯುಕ್ತಸಂಸ್ಥಾನದ ದಕ್ಷಿಣಭಾಗ, ಮೆಡಿಟರೇನಿಯನ್ ಪ್ರದೇಶ, ದಕ್ಷಿಣ ಅಮೆರಿಕ, ಆಸ್ಟ್ರೇಲಿಯ ಮತ್ತು ಭಾರತಗಳಲ್ಲಿ ಕೆಂಪು ಓಟನ್ನು ಪ್ರಧಾನವಾಗಿ ಬೆಳೆಸುತ್ತಾರೆ. ಹಳದಿ ಓಟ್ಸ್ ಎಂಬ ತಳಿಯ ಕೃಷಿ ರಷ್ಯದ ನೈಋತ್ಯ ಪ್ರದೇಶಗಳಲ್ಲಿ, ಕೊಂಚಮಟ್ಟಿಗೆ ಅಮೆರಿಕದ ಸಂಯುಕ್ತಸಂಸ್ಥಾನದಲ್ಲಿ ವ್ಯಾಪಿಸಿದೆ. ಸಾಮಾನ್ಯ ಓಟ್ಸ್ (ಅ.ಸೇಟಿವ) ಯೂರೋಪಿಗೆ ವಿಶಿಷ್ಟವಾದ ಬಗೆ. ಭಾರತದಲ್ಲಿ ಈ ಪ್ರಭೇದವನ್ನು ಮೇವಿಗಾಗಿ ಮಾತ್ರ ಬೆಳೆಸುತ್ತಾರೆ. ಟಿಬೆಟ್, ತುರ್ಕಿ ಮತ್ತು ಚೀನದೇಶಗಳಲ್ಲಿ ಅ.ನ್ಯೂಡ ಎಂಬ ನಗ್ನಕಾಳುಗಳ ಪ್ರಭೇದ ಬೆಳೆಯುತ್ತದೆ. ಭಾರತದಲ್ಲಿ ತಂಪು ಹವೆಯುಳ್ಳ ಬೆಟ್ಟದ ಪ್ರದೇಶಗಳಾದ ಪಶ್ಚಿಮ ಹಿಮಾಲಯ, ಕುಮಾಂವ್, ಪಂಜಾಬ್, ಸಿಮ್ಲ ಮತ್ತು ಉತ್ತರ ಪ್ರದೇಶದ ಕೆಲವು ಭಾಗಗಳಲ್ಲಿ ಓಟ್ಸನ್ನು ಬೆಳೆಸುತ್ತಾರೆ.

ಓಟ್ ಸಸ್ಯದ ಹುಟ್ಟಿನ ಬಗ್ಗೆ ಹಲವಾರು ಅಭಿಪ್ರಾಯಗಳಿವೆ. ಸಾಮಾನ್ಯ ಬಗೆಯ ಅ.ಸೇಟಿವ ಪ್ರಭೇದ ಕಾಡು ಬಗೆಯ ಅ.ಫ್ಯಾಟ್ಯುವದಿಂದ ಜನ್ಮತಾಳಿತೆಂದೂ ಕೆಂಪು ಓಟ್ಸ್ (ಅ.ಬಿಜ಼ಾಂಟಿನ) ಅ.ಸ್ಟೆರಿಲಿಸ್ ಪ್ರಭೇದದಿಂದ ಬಂದುದೆಂದೂ ಕೆಲವರ ಅಭಿಮತ. ಆದರೆ ಅ.ಸ್ಟೆರಿಲಿಸ್ ಪ್ರಭೇದ ಇಂದಿನ ಎಲ್ಲ ಮುಖ್ಯವಾದ ಓಟ್ ಸಸ್ಯಗಳಿಗೆ ಮೂಲವೆಂದು ಕಾಫ್‍ಮನ್ ಎಂಬ ವಿಜ್ಞಾನಿ ತಳಿಶಾಸ್ತ್ರ ಮತ್ತು ಸಸ್ಯರೋಗಶಾಸ್ತ್ರಗಳ ಆಧಾರದ ಮೇಲೆ ಹೇಳುತ್ತಾನೆ.

ಸಸ್ಯ ವಿವರಣೆ : ಓಟ್ ಸಸ್ಯ ಒಂದು ವಾರ್ಷಿಕ ಹುಲ್ಲು. 2′–5′ ಎತ್ತರಕ್ಕೆ ಬೆಳೆಯುತ್ತದೆ. ಬೇರುಗಳು ಇತರ ಏಕದಳ ಸಸ್ಯಗಳಲ್ಲಿರುವಂತೆ ತೊಡುಕು ಬೇರಿನ ರೂಪದಲ್ಲಿವೆ. ಕಿರಿ, ತೆಳು ಮತ್ತು ಉದ್ದ ಎಲೆಗಳು. ಕಾಂಡದಲ್ಲಿ ಗಿಣ್ಣುಗಳೂ ಟೊಳ್ಳಾದ ಅಂತರ ಗಿಣ್ಣುಗಳೂ ಇವೆ. ಹೂಗೊಂಚಲು ಸಂಕೀರ್ಣ ಪುಷ್ಪಗುಚ್ಛದ (ಪ್ಯಾನಿಕಲ್) ಮಾದರಿಯದು. ಕೆಲವು ಪ್ರಭೇದಗಳಲ್ಲಿ ಕದಿರುಗೊಂಚಲಿನ (ಸ್ಪೈಕ್) ಅಥವಾ ಚೆಂಡಿನ ರೀತಿಯದಾಗಿರಬಹುದು. ಹೂಗೊಂಚಲುಗಳು ಎಲ್ಲ ಕಡೆಗೂ ಒಂದೇ ಸಮನಾಗಿ ಕವಲೊಡೆದು ಹರಡಿಕೊಂಡು ಸಮರೂಪವನ್ನು ಹೊಂದಿರಬಹುದು ಅಥವಾ ಒಂದೇ ಕಡೆ ಕವಲೊಡೆದು ಬಾಗಿಕೊಂಡು ಅಸಮರೂಪವನ್ನು ಹೊಂದಿರಬಹುದು. ಹೂಗೊಂಚಲಿನಲ್ಲಿ ಅನೇಕ ಕವಲುಗಳು ಮತ್ತು ಎರಡೆರಡು ಪುಟ್ಟ ಹೂಗಳನ್ನೊಳಗೊಂಡ ಹಲವಾರು ಅನುಶೂಕಿಗಳು (ಸ್ಪೈಕ್‍ಲೆಟ್ಸ್) ಇವೆ. ಹೂವಿನಲ್ಲಿ ಮೂರು ಕೇಸರಗಳೂ ಒಂದು ಅಂಡಕೋಶವೂ ಇವೆ. ಅವನ್ನು ಲೆಮ್ಮ ಮತ್ತು ಪೇಲಿಯ ಎಂಬ ಆವರಣಗಳು ಮುಚ್ಚಿಕೊಂಡಿವೆ. ಗರ್ಭಕಟ್ಟಿದ ಅಂಡಕೋಶ ಒಂದೇ ಒಂದು ಬೀಜವನ್ನುಳ್ಳ ಕ್ಯಾರಿಯೋಪ್ಸಿಸ್ ಎಂಬ ಧಾನ್ಯವಾಗುತ್ತದೆ. ಧಾನ್ಯಕ್ಕೆ ಗ್ರೋಟ್ ಎಂಬ ಹೆಸರೂ ಇದೆ. ಇದನ್ನು ಹುಸುಕು ಮುಚ್ಚಿಕೊಂಡಿರುತ್ತದೆ. ಹುಸುಕು ಬೇರೆಬೇರೆ ಪ್ರಭೇದಗಳಲ್ಲಿ ಬೇರೆಬೇರೆ ಬಣ್ಣದ್ದು. ಇದರ ಕಾರಣದಿಂದ ಅವುಗಳಿಗೆ ಹಳದಿ ಓಟ್ಸ್, ಬಿಳಿ ಓಟ್ಸ್, ಕೆಂಪು ಓಟ್ಸ್, ಕಪ್ಪು ಓಟ್ಸ್ ಮುಂತಾದ ಹೆಸರುಗಳು ಬಂದಿವೆ. ಕೆಲವು ಪ್ರಭೇದಗಳಲ್ಲಿ ಧಾನ್ಯ ಹುಸುಕಿಲ್ಲದೆ ನಗ್ನಫಲದ ರೂಪದಲ್ಲಿರುವುದೂ ಉಂಟು. ಉದಾಹರಣೆಗೆ ಅ.ನ್ಯೂಡ ಪ್ರಭೇದ.

ಓಟ್ ಸಸ್ಯದಲ್ಲಿ ಸ್ವಾಭಾವಿಕವಾಗಿ ಸ್ವಪರಾಗಸ್ಪರ್ಶಕ್ರಿಯೆಯೇ ನಡೆಯುತ್ತದೆ. ಅನ್ಯಪರಾಗಸ್ಪರ್ಶಕ್ರಿಯೆ ಬಹಳ ವಿರಳ.

ವರ್ಗೀಕರಣ : ಗೋದಿಯಲ್ಲಿರುವಂತೆ ಅವಿನ ಜಾತಿಯಲ್ಲಿ ಬಹುಗುಣಿತ ಸಂಖ್ಯೆಯ ಕ್ರೋಮೊಸೋಮುಗಳನ್ನುಳ್ಳ ಪ್ರಭೇದಗಳು ಇವೆ. ಜನನ ಕಣಗಳಲ್ಲಿ ಏಕಗುಣಿತ ($n$) ಕ್ರೋಮೊಸೋಮುಗಳ ಸಂಖ್ಯೆ 7, 14 ಮತ್ತು 21 ಹಾಗೂ ಸಸ್ಯಾಂಗ ಕಣಗಳಲ್ಲಿ ದ್ವಿಗುಣಿತ ($2n$) ಕ್ರೋಮೊಸೋಮುಗಳ ಸಂಖ್ಯೆ 14, 28 ಮತ್ತು 42 ಇರುತ್ತವೆ. ಈ ಮೂರು ಪ್ರಭೇದಗಳು ಅನುಗುಣವಾಗಿ ದ್ವಿಗುಣಿತ (ಡಿಪ್ಲಾಯ್ಡ್), ಚತುರ್ಗುಣಿತ (ಟೆಟ್ರಾಪ್ಲಾಯ್ಡ್) ಮತ್ತು ಷಡ್ಗುಣಿತ (ಹೆಕ್ಸಾಪ್ಲಾಯ್ಡ್) ಪ್ರಭೇದಗಳೆನಿಸಿವೆ. ವ್ಯವಸಾಯದಲ್ಲಿರುವ ಓಟ್ ಸಸ್ಯಗಳು ಷಡ್ಗುಣಿತ ಪ್ರಭೇದಕ್ಕೆ ಸೇರಿವೆ.

ವ್ಯವಸಾಯ : ಓಟ್ ಸಸ್ಯ ಇತರ ಧಾನ್ಯ ಸಸ್ಯಗಳಂತಲ್ಲದೆ ಎಂಥ ಮಣ್ಣಿನಲ್ಲಿ ಯಾದರೂ ಚೆನ್ನಾಗಿ ಬೆಳೆಯಬಲ್ಲುದು. ಭೂಮಿ ಕೊಂಚ ಫಲವತ್ತಾಗಿದ್ದು ಬೆಳವಣಿಗೆಯ ಕಾಲದಲ್ಲಿ ಸಾಕಷ್ಟು ತೇವವಿದ್ದರೆ ಒಳ್ಳೆಯ ಫಸಲು ಕೊಡುತ್ತದೆ. ಅಮೆರಿಕ ಸಂಯುಕ್ತಸಂಸ್ಥಾನಗಳಲ್ಲಿ ಓಟ್ಸಿನ ತಳಿಗೆ ಅನುಗುಣವಾಗಿ ವಸಂತ ಋತುವಿನಲ್ಲೋ ಚಳಿಗಾಲದಲ್ಲೋ ಬಿತ್ತನೆ ಮಾಡುತ್ತಾರೆ. ಭಾರತದಲ್ಲಿ ಬಿತ್ತನೆಯ ಕಾಲ ಅಕ್ಟೋಬರ್–ನವೆಂಬರ್ ತಿಂಗಳುಗಳು. ಎಕರೆಗೆ ಸುಮಾರು 30–45 ಕಿ.ಗ್ರಾಂ. ಬೀಜ ಬೇಕು. ಸ್ವಾಭಾವಿಕ ಗೊಬ್ಬರವನ್ನಾಗಲಿ, ರಾಸಾಯನಿಕ ಗೊಬ್ಬರವನ್ನಾಗಲಿ ಹಾಕಿದರೆ ಒಳ್ಳೆಯ ಫಸಲು ಪಡೆಯಬಹುದು. ನೆಲದ ಗುಣದ ಮೇಲೆ ಗೊಬ್ಬರದ ಆವಶ್ಯಕತೆ, ಪ್ರಮಾಣವನ್ನು ನಿರ್ಧರಿಸಬೇಕು. ಬೇಕಾದ ಪ್ರಮಾಣಕ್ಕಿಂತ ಹೆಚ್ಚು ಗೊಬ್ಬರ ಹಾಕಿದರೆ ಗಿಡಗಳು ಹೆಚ್ಚು ಎತ್ತರ ಬೆಳೆದು ನೆಟ್ಟಗೆ ನಿಲ್ಲಲಾಗದೆ ಒರಗಿಬಿಡಬಹುದು. ಆದರೂ ಹಸಿರು ಗೊಬ್ಬರದೊಂದಿಗೆ ಕೊಂಚ ಸೂಪರ್ ಫಾಸ್ಫೇಟನ್ನು ಮಿಶ್ರಮಾಡಿ ಉಪಯೋಗಿಸುವುದು ಒಳ್ಳೆಯದು. ಬಿತ್ತಿದ 3–4 ತಿಂಗಳುಗಳಲ್ಲಿ ಪೈರು ಕೊಯ್ಲಿಗೆ ಸಿದ್ಧವಾಗುತ್ತದೆ. ಧಾನ್ಯದ ಸರಾಸರಿ ಇಳುವರಿ ಅಮೆರಿಕದಲ್ಲಿ ಎಕರೆಗೆ 31 ಬುಷೆಲುಗಳು. ಪರಿಸ್ಥಿತಿ ಅನುಕೂಲವಿರುವ ಡೆನ್ಮಾರ್ಕ್, ಸ್ವೀಡನ್ ಮುಂತಾದೆಡೆಗಳಲ್ಲಿ ಎಕರೆಗೆ 71 ಬುಷೆಲ್‍ಗಳ ವರೆಗೂ ಇಳುವರಿಯಿದೆ. ಭಾರತದಲ್ಲಿ ಎಕರೆಗೆ 130–230 ಕಿ.ಗ್ರಾಂ. ಹುಲ್ಲಿನ ಉತ್ಪನ್ನವಿದೆ. ಭಾರತದಲ್ಲಿ ಕೆಲವು ಕಡೆ ಬರಿ ಮೇವಿಗಾಗಿ ಓಟನ್ನು ಬೆಳೆಸುತ್ತಾರೆ. ಅಂಥಲ್ಲಿ ಮೇವನ್ನು ಎರಡು ಮೂರು ಬಾರಿ ಕಟಾವು ಮಾಡುವುದುಂಟು. ಆಗ ಮೊದಲನೆಯ ಕಟಾವಿನಲ್ಲಿ ಸುಮಾರು 3800 ಕಿ.ಗ್ರಾಂ. ಮತ್ತು ಎರಡನೆಯ ಕಟಾವಿನಲ್ಲಿ ಸುಮಾರು 1300 ಕಿ.ಗ್ರಾಂ. ಹುಲ್ಲನ್ನು ಪಡೆಯಬಹುದು.

ಸಾಮಾನ್ಯವಾಗಿ ಓಟ್ಸನ್ನು ಪರ್ಯಾಯ ಬೆಳೆಯಾಗಿ ವ್ಯವಸಾಯ ಮಾಡುವುದೇ ವಾಡಿಕೆ. ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಮುಸುಕಿನಜೋಳ, ಹತ್ತಿ, ಸೋಯಾ ಬೀನ್ಸ್ ಅಥವಾ ಯಾವುದಾದರೂ ದ್ವಿದಳ ಸಸ್ಯದೊಂದಿಗೆ ಪರ್ಯಾಯ ಬೆಳೆಯನ್ನಾಗಿ ಬೆಳೆಸುತ್ತಾರೆ.

ರಾಸಾಯನಿಕ ಸಂಯೋಜನೆ ಮತ್ತು ಉಪಯೋಗ : ಓಟ್ಸ್ ತುಂಬ ಪುಷ್ಟಿದಾಯಕ ಆಹಾರವೆಂದು ಹೆಸರಾಗಿದೆ. ಇದರಲ್ಲಿ ಪ್ರೋಟೀನು, ಕೊಬ್ಬು ಹಾಗೂ ಬಿ ಮತ್ತು ಇ ಜೀವಾತುಗಳು ಹೆಚ್ಚಿನ ಪ್ರಮಾಣದಲ್ಲಿವೆ. ಓಟ್ ಹಿಟ್ಟಿನ ರಾಸಾಯನಿಕ ಸಂಯೋಜನೆ ಹೀಗಿದೆ : ಪ್ರತಿ 100 ಗ್ರಾಮಿಗೆ ತೇವಾಂಶ 8, ಪ್ರೋಟೀನು 14, ಕೊಬ್ಬು 7, ಕಾರ್ಬೊಹೈಡ್ರೇಟುಗಳು 68, ನಾರಿನ ಅಂಶ 1, ಬೂದಿಯ ಅಂಶ 1·7. ಬಿ ಜೀವಾತು 285–975 1ಗ್ರಾಂ. ಬಿ ಜೀವಾತುಗಳಲ್ಲಿ $ಬಿ_1$ ರಿಬೊಫ್ಲೇವಿನ್, ನಯಾಸಿನ್, ಕೋಲಿನ್ ಮತ್ತು ಪ್ಯಾಂಟೊಥಿನಿಕ್ ಆಮ್ಲ ಮುಖ್ಯವಾದುವು. ಸಿ ಮತ್ತು ಡಿ ಜೀವಾತುಗಳಿಲ್ಲ. ಇದ್ದರೂ ಅತ್ಯಂತ ಕಡಿಮೆ ಪ್ರಮಾಣದಲ್ಲಿವೆ.

ಓಟ್ಸನ್ನು ಹಸಿ ಹುಲ್ಲಿನ ರೂಪದಲ್ಲಾಗಲಿ ಒಣಗಿಸಿದ ಹುಲ್ಲಿನ ರೂಪದಲ್ಲಾಗಲಿ ದನಕರುಗಳ ಮೇವಾಗಿ ಉಪಯೋಗಿಸುತ್ತಾರೆ. ಅತ್ಯಂತ ಶ್ರೇಷ್ಠ ದರ್ಜೆಯದೆಂದು ಹೆಸರಾಗಿರುವ ಇದರ ಉತ್ಪನ್ನದ ಬಹುಭಾಗ ಮೇವಾಗಿಯೇ ವಿನಿಯೋಗವಾಗುವುದು. ಕಾಳುಗಳಂತೂ ಕುದುರೆಗಳಿಗೆ ಬಹಳ ಒಳ್ಳೆಯ ಮತ್ತು ಪ್ರಿಯವಾದ ತಿನಿಸು. ಕಾಳು ಮತ್ತು ಹುಸುಕು ಎರಡನ್ನೂ ಸಾಕುಪ್ರಾಣಿಗಳ ಮಿಶ್ರ ಆಹಾರವಾಗಿ (ಭೂಸ) ಬಳಸುತ್ತಾರೆ. ಕಾಳಿನಲ್ಲಿ ಅಧಿಕವಾಗಿ ಪೌಷ್ಟಿಕಾಂಶಗಳಿರುವುದರಿಂದ ಇದು ಮಾನವನ ಆಹಾರವಾಗಿಯೂ ಉಪಯೋಗವಾಗುವುದುಂಟು. ಬೆಳಗಿನ ಉಪಾಹಾರಕ್ಕಂತೂ ಇದು ಬಹಳ ಒಳ್ಳೆಯದು. ಓಟ್ ಹಿಟ್ಟಿನಿಂದ ಗಂಜಿ (ಪಾರಿಜ್), ಕುಕಿಸ್ (ಒಂದು ಬಗೆಯ ಸಣ್ಣ ರೊಟ್ಟಿ) ಮತ್ತು ಕಡುಬು (ಪುಡಿಂಗ್) ಮಾಡುತ್ತಾರೆ. ಆದರೆ ಬ್ರೆಡ್ ಮಾಡುವುದಕ್ಕೆ ಆಗುವುದಿಲ್ಲ. ಬ್ರೆಡ್ ತಯಾರಿಸಲು ಸಹಕಾರಿಯಾಗುವಂಥ ಗ್ಲೂಟೆನ್ ಎಂಬ ಪ್ರೋಟೀನು ಅದರಲ್ಲಿ ಇಲ್ಲದಿರುವುದೇ ಇದರ ಕಾರಣ. ಅಮೆರಿಕ ಸಂಯುಕ್ತಸಂಸ್ಥಾನಗಳಲ್ಲಿ ವರ್ಷಕ್ಕೆ ಸುಮಾರು 42 ದಶಲಕ್ಷ ಬುಷೆಲ್ ಓಟ್ಸನ್ನು ಉಪಾಹಾರ ತಯಾರಿಕೆಯಲ್ಲಿ ಬಳಸುತ್ತಾರೆಂದು ಅಂದಾಜು. ಓಟ್ ಹುಸುಕಿನಲ್ಲಿ ಸೆಲ್ಯೂಲೋಸ್, ಲಿಗ್ನಿನ್, ಪೆಂಟೊಸಾನ್ ಮುಂತಾದ ಕಾರ್ಬೊಹೈಡ್ರೇಟುಗಳು ಹೆಚ್ಚಾಗಿವೆ. ಇವನ್ನು ಸಲ್ಫ್ಯೂರಿಕ್ ಆಮ್ಲದೊಂದಿಗೆ ಸೇರಿಸಿ ಆವಿಯ ಒತ್ತಡದಲ್ಲಿ ಕುದಿಸಿ ಬಟ್ಟಿಯಿಳಿಸಿ ಫರ್‌ಫರಾಲ್ ಎಂಬ ಸಂಯುಕ್ತವನ್ನು ತಯಾರಿಸುತ್ತಾರೆ. ಕೃತಕ ರಾಳ (ರೆಸಿನ್), ಕೈಗಾರಿಕೆಗಳಲ್ಲಿ ಬಳಸಲಾಗುವ ವಿಲಯಕಗಳು, ನೈಲಾನ್ ತಯಾರಿಕೆಗೆ ಬೇಕಾಗುವ ಅಡಿಪೊನೈಟ್ರಿಲ್ ಸಂಯುಕ್ತ ಇವುಗಳ ತಯಾರಿಕೆಯಲ್ಲಿ ಫರ್‌ಫರಾಲಿನ ಉಪಯೋಗ

ಉಂಟು, ಆಸ್ಪಾಲ್ಟಿನೊಂದಿಗೆ ಫರಫರಾಲನ್ನು ಸೇರಿಸಿ ಅದರ ಅಂಟುವಿಕೆ ಹೆಚ್ಚಾಗುವಂತೆ ಮಾಡುತ್ತಾರೆ.

ರೋಗಗಳು : ಓಟ್ ಸಸ್ಯಕ್ಕೆ ಹಲವಾರು ಬಗೆಯ ಬೂಷ್ಟು ರೋಗಗಳು ತಗಲುತ್ತವೆ. ಇವುಗಳಲ್ಲಿ ಯುಸ್ಟಿಲಾಗೋ ಜಾತಿಯ ಬೂಷ್ಟಿನಿಂದ ಬರುವ ಕಾಡಿಗೆ (ಸ್ಮಟ್) ರೋಗ ಮತ್ತು ಪಕ್ಸೀನಿಯಾ ಜಾತಿಯ ಬೂಷ್ಟಿನಿಂದ ಬರುವ ಅರಿಸಿನ (ರಸ್ಟ್) ರೋಗ ಮುಖ್ಯವಾದುವು. ಕಾಡಿಗೆ ರೋಗಗಳಲ್ಲಿ ಲೂಸ್ ಸ್ಮಟ್ ಮತ್ತು ಕವರ್ಡ್ ಸ್ಮಟ್ ಮುಂತಾದ ಬಗೆಗಳಿವೆ. ಈ ರೋಗ ಬಂದ ಓಟ್ಸಿನಲ್ಲಿ ಕಾಳುಗಳೆಲ್ಲ ಪೌಷ್ಟಿಕಾಹಾರವಿಲ್ಲದೆ ಬೂಷ್ಟಿನ ಬೀಜಕಣಗಳಿಂದ ತುಂಬಿ ಕಪ್ಪಾಗುತ್ತವೆ. ಇವನ್ನು ನಿವಾರಿಸಲು ಸೆರೆಸಾನ್-ಎಂ, ಅಗ್ರಾಕ್ಸ್, ಪ್ಯಾನೊಜೆನ್ ಮುಂತಾದ ಔಷಧಿಗಳನ್ನು ಚಿಮುಕಿಸುತ್ತಾರೆ. ಅಲ್ಲದೆ ಕಾಡಿಗೆ ರೋಗನಿರೋಧಕ ಓಟ್ ತಳಿಗಳನ್ನು ಅಭಿವೃದ್ಧಿಪಡಿಸಿ ಬೆಳೆಯುವುದರಿಂದಲೂ ತಡೆಗಟ್ಟಬಹುದು. ಅರಿಸಿನ ರೋಗದಲ್ಲಿಯೂ ಕ್ರೌನ್ ರಸ್ಟ್, ಸ್ಟೆಮ್ ರಸ್ಟ್ ಮುಂತಾದ ವಿವಿಧ ಬಗೆಗಳಿವೆ. ಎಲೆ, ಕಾಂಡ ಮತ್ತು ಹೂಗೊಂಚಲುಗಳ ಮೇಲೆಲ್ಲ ಕಗ್ಗೆಂಪು ಅಥವಾ ಕಿತ್ತಳೆ ಬಣ್ಣದ ಚೊಕ್ಕೆಗಳೇಳುವುದು ಅರಿಸಿನ ರೋಗದ ಮುಖ್ಯ ಚಿಹ್ನೆಗಳು. ಈ ರೋಗ ನಿವಾರಣೆಗೆ ಯಾವ ರಾಸಾಯನಿಕವೂ ಇಲ್ಲ. ತಳೀಕರಣ ಪ್ರಯೋಗಗಳಿಂದ ಅಭಿವೃದ್ಧಿಪಡಿಸಿದ ಹೊಸ ರೋಗನಿರೋಧಕ ತಳಿಗಳನ್ನು ವ್ಯವಸಾಯ ಮಾಡುವುದೊಂದೇ ಅರಿಸಿನ ರೋಗವನ್ನು ತಡೆಗಟ್ಟಲು ಇರುವ ಮಾರ್ಗ. ಇವೆರಡು ರೋಗಗಳಲ್ಲದೆ ಇನ್ನೂ ಕೆಲವು ಬೂಷ್ಟು ರೋಗಗಳು ಓಟ್ಸಿಗೆ ಅಂಟುವುದುಂಟು. ಹೆಲ್ಮಿಂಥೋಸ್ಪೋರಿಯಮ್ ವಿಕ್ಟೋರಿಯಿ ಮತ್ತು ಹೆ.ಅವಿನಿ ಎಂಬ ಬೂಷ್ಟಿನಿಂದ ಬರುವ ವಿಕ್ಟೋರಿಯ ಬ್ಲೈಟ್ ರೋಗ ಮತ್ತು ಲೀಫ್‌ಬ್ಲಾಚ್ ರೋಗಗಳು ಇವುಗಳಲ್ಲಿ ಮುಖ್ಯವಾದುವು. ಎಲೆಗಳು ಹಳದಿ ಬಣ್ಣಕ್ಕೆ ತಿರುಗಿ ಕ್ರಮಕ್ರಮವಾಗಿ ಕೊಳೆಯುತ್ತ ಹೋಗುವುದು, ಅವುಗಳ ಮೇಲೆ ಕಂದು ಮಚ್ಚೆಗಳು ಕಾಣಿಸಿಕೊಳ್ಳುವುದು ಕಾಳುಗಳು ಚಿರಟಿ ಹೋಗುವುದು, ಎಳೆಗಳುದುರುವಿಕೆ ಮುಂತಾದುವು ಈ ರೋಗಗಳ ಮುಖ್ಯ ಲಕ್ಷಣಗಳು. ಸಣ್ಣ ಸಸಿಗಳಲ್ಲೇ ಕಾಣಿಸಿಕೊಳ್ಳುವ ಈ ರೋಗಗಳು ಬೀಜದ ಮೂಲಕ ಹರಡುತ್ತವೆ. ಆದ್ದರಿಂದ ಬೀಜ ಬಿತ್ತುವುದಕ್ಕೆ ಮುನ್ನ ಜೈವಿಕ-ಪಾದರಸ ಸಂಯುಕ್ತಗಳಿಂದ ಬೀಜಗಳನ್ನು ತೊಳೆಯುವುದರಿಂದ ಇವನ್ನು ತಡೆಗಟ್ಟಬಹುದು.

ಕೆಲವು ಬಾರಿ ಓಟ್ ಸಸ್ಯಕ್ಕೆ ಕೀಟಗಳೂ ಅಂಟುತ್ತವೆ. ಆಸಿನೆಲ್ಲ ಫ್ರಿಟ್ ಎಂಬ ಒಂದು ಬಗೆಯ ಫಲಮಕ್ಷಿಕ ಮತ್ತು ಟಾಕ್ಸಾಪ್ಟೆರ ಗ್ರಾಮಿನಮ್ ಎಂಬ ಹಸಿರು ತಿಗಣೆ ಮುಖ್ಯವಾದುವು. ಪ್ಯಾರಾಥಿಯಾನ್, ಟೆಟ್ರ ಈಥೈಲ್ ಪೈರೊಫಾಸ್ಫೇಟ್, ಆಲ್ಡ್ರಿನ್, ಟಾಕ್ಸಾಫೀನ್ ಮುಂತಾದ ಕೀಟನಿವಾರಕ ಔಷಧಿಗಳನ್ನು ಚಿಮುಕಿಸುವುದರಿಂದ ಇವನ್ನು ಹತೋಟಿಯಲ್ಲಿಡಬಹುದು. ಓಟ್ಸನ್ನು ಸಾಮಾನ್ಯವಾಗಿ ಬಿತ್ತುವುದಕ್ಕಿಂತ ಸ್ವಲ್ಪ ಮುಂಚಿತವಾಗಿಯೇ ಬಿತ್ತುವುದರಿಂದಲೂ ಇವನ್ನು ತಡೆಗಟ್ಟಬಹುದು. (ಎ.ಎನ್.ಎಸ್.)

**ಓಟ (ಗಣಿತಶಾಸ್ತ್ರದಲ್ಲಿ) :** $x$-ಅಕ್ಷದ ಧನ ದಿಶೆಯೊಡನೆ ಒಂದು ಸರಳರೇಖೆ ರಚಿಸುವ ಧನದಿಶಾತ್ಮಕ ಕೋನದ ಟ್ಯಾಂಜೆಂಟ್ (ಸ್ಲೋಪ್; ಗ್ರೇಡಿಯೆಂಟ್). ಪ್ರವಣತೆ ಪರ್ಯಾಯ ಪದ. ಚಿತ್ರದಲ್ಲಿ $l$ ಸರಳರೇಖೆಯು $Ox$ ನೊಡನೆ ರಚಿಸುವ ಈ ಕೋನ $\alpha$. ಇದರ ಹೆಸರು ರೇಖೆಯ ಬಾಗು ಅಥವಾ ಇಳಿಕಲು (ಇನ್‌ಕ್ಲಿನೇಷನ್). ಈಗ $\tan\alpha$ ಸರಳರೇಖೆಯ ಓಟ. ಸರಳ




ರೇಖೆಯ ವಿವಿಧ ವಿನ್ಯಾಸಗಳನ್ನು ಅನುಸರಿಸಿ $\alpha$ದ ಬೆಲೆ $0°$ಯಿಂದ $180°$ ವರೆಗೆ ಎಲ್ಲ ಬೆಲೆಗಳನ್ನು ಪಡೆಯಬಹುದು. ಆಗ $\tan\alpha$ದ ಬೆಲೆ $-\infty$ ಯಿಂದ $+\infty$ ವರೆಗೆ ಸಕಲ ಬೆಲೆಗಳನ್ನೂ ಪಡೆಯುವುದು. $\alpha$ ಕೋನವು $0°$ ಅಥವಾ $180°$ಗೆ ಉಪಸಮವಾಗಿರುವಾಗ ಸರಳರೇಖೆಯ ಓಟ $0$ಗೆ ಉಪಸಮವಾಗಿರುತ್ತದೆ; $90°$ಗೆ ಉಪಸಮವಾಗಿರುವಾಗ ಓಟ $-\infty$ ಅಥವಾ $+\infty$ ಗೆ ಉಪಸಮವಾಗಿರುತ್ತದೆ; $\alpha$ದ ಬೆಲೆಗಳು $0° < \alpha < 90°$ ಅಂತರದಲ್ಲಿರುವಾಗ ಓಟ ಧನಾತ್ಮಕವಾಗಿಯೂ $90° < \alpha < 180°$ ಅಂತರದಲ್ಲಿರುವಾಗ ಓಟ ಋಣಾತ್ಮಕವಾಗಿಯೂ ಇರುವುದು. ಬೀಜರೇಖಾಗಣಿತದಲ್ಲಿ ಓಟವನ್ನು $m$ ಅಕ್ಷರದಿಂದ ಸೂಚಿಸುತ್ತಾರೆ. $\tan\alpha = m$. $P(x_1, y_1)$ ಮತ್ತು $Q(x_2, y_2)$ ಎಂಬ ಎರಡು ದತ್ತ ಬಿಂದುಗಳ ಜೋಡಣೆಯಾದ $l$ ಸರಳರೇಖೆಯ ಓಟ $m$ನ ಬೆಲೆಯನ್ನು ಮುಂದಿನ ಸಮೀಕರಣ ಕೊಡುತ್ತದೆ—

$$m = \frac{y_1 - y_2}{x_1 - x_2} \text{ ಎಂದರೆ}$$

$$[\text{ಓಟ}] = \frac{[y\text{–ನಿರ್ದೇಶಕಗಳ ವ್ಯತ್ಯಾಸ}]}{[x\text{–ನಿರ್ದೇಶಕಗಳ ವ್ಯತ್ಯಾಸ}]}$$

ಈಗ $l$ ಸರಳರೇಖೆಯ ಸಮೀಕರಣ

$$y - y_1 = m\ (x - x_1)$$

ಎಂದಾಗುತ್ತದೆ.

ವಕ್ರರೇಖೆಗಳಲ್ಲಿ (ಕರ್ವ್ಸ್) ಓಟದ ಪರಿಕಲ್ಪನೆ : ವಕ್ರರೇಖೆಯ ಮೇಲಣ ಒಂದು ಬಿಂದುವಿನಲ್ಲಿ ಅದಕ್ಕೆ ಎಳೆದ ಸ್ಪರ್ಶಕದ (ಟ್ಯಾಂಜೆಂಟ್) ಓಟವೇ ಆ ಬಿಂದುವಿನಲ್ಲಿ ವಕ್ರರೇಖೆಯ ಓಟ. $P(x_1, y_1)$ ಬಿಂದುವಿನಲ್ಲಿ $y = f(x)$ ವಕ್ರರೇಖೆಯ ಓಟ PTಯ ಓಟವಾದ $\tan\alpha$ ಆಗಿದೆ. ಇಲ್ಲಿ PTಯನ್ನು PQವಿನಂಥ ಅಸಂಖ್ಯಾತ ಜ್ಯಾಗಳ ಪರಮಾ ಸ್ಥಿತಿ, ಈ ಸ್ಥಿತಿಯಲ್ಲಿ Q ಬಿಂದು ವಕ್ರರೇಖೆಯ




ಮೇಲೆ ಕ್ರಮೇಣ P ಎಡೆಗೆ ಸರಿದು ಅಂತಿಮವಾಗಿ Pಯಲ್ಲಿ ಐಕ್ಯವಾಗುವುದು ಎಂದು ಭಾವಿಸಿ ಕಲನಶಾಸ್ತ್ರದ ಪರಿಕಲ್ಪನೆಗಳನ್ನು ಬಳಸಿಕೊಳ್ಳುತ್ತೇವೆ. ಆಗ

$$\tan\alpha = \left(\frac{dy}{dx}\right)_P = [f'(x)]P = f'(x_1)$$

ಎಂಬ ಸಂಬಂಧ ದೊರೆಯುತ್ತದೆ. ಆದ್ದರಿಂದ $y = f(x)$ ವಕ್ರರೇಖೆಗೆ $(x_1, y_1)$ ಬಿಂದುವಿನಲ್ಲಿ ಎಳೆದ ಸ್ಪರ್ಶಕದ ಸಮೀಕರಣ

$$y - y_1 = f'(x_1)\ (x - x_1)$$

ಆಗುವುದು. ವಕ್ರರೇಖೆಯ ಸಮೀಕರಣ $f(x, y) = 0$ ಅಥವಾ $(x, y) = c$ ಇರುವಾಗ

$$\frac{dy}{dx} = -\left(\frac{\partial f}{\partial x}\right) \Big/ \left(\frac{\partial f}{\partial y}\right)$$

ಓಟವೆಂಬ ಪರಿಕಲ್ಪನೆ ಸಮತಳ (ಎಂದರೆ ಎರಡು ಆಯಾಮಗಳು) ಜ್ಯಾಮಿತಿಗೆ ಸೀಮಿತವಾಗಿದೆ. ಮೂರು ಆಯಾಮಗಳ ಜ್ಯಾಮಿತಿಯಲ್ಲಿ ದಿಕ್ಕೋಟಿಜ್ಯಾಗಳು (ನೋಡಿ) ಎಂಬ ಹೊಸ ಪರಿಕಲ್ಪನೆಯ ಪರಿಚಯ ಅನಿವಾರ್ಯವಾಗುವುದು.

ಭೂಪಟ ರಚನೆ ಮತ್ತು ಪಠನದಲ್ಲಿ ಓಟದ ಆವಶ್ಯಕತೆ ಬೇರೆ ಒಂದು ಕಾರಣದಿಂದ ಅಗತ್ಯ ಎನ್ನಿಸುತ್ತದೆ. ನೆಲದ ಮೇಲೆ ಒಂದು ನಿರ್ದಿಷ್ಟ ಎತ್ತರದಲ್ಲಿ—ಉದಾಹರಣೆಗೆ ಸಮುದ್ರಮಟ್ಟದಿಂದ 1,000 ಅಡಿಗಳ ಎತ್ತರದಲ್ಲಿ—ಇರುವ ಎಲ್ಲ ಬಿಂದುಗಳನ್ನು ಗುರುತಿಸಬೇಕು. ಒಂದು ಬೆಟ್ಟದ ಬುಡದಲ್ಲಿ ಅಥವಾ ಪೀಠ ಭೂಮಿಯಲ್ಲಿ ಈ ಕ್ರಿಯೆಯನ್ನು ನೆರವೇರಿಸಿದರೆ ಇವೆಲ್ಲ ಬಿಂದುಗಳೂ ಒಂದು ಸಂವೃತ ವಕ್ರರೇಖೆಯನ್ನು ರಚಿಸುವುದನ್ನು ಕಾಣಬಹುದು. $C_1$ ಇಂಥ ಒಂದು ವಕ್ರರೇಖೆ. ಸಾಮಾನ್ಯವಾಗಿ ಎತ್ತರವನ್ನು 50ರ ಅಪವರ್ತ್ಯಗಳಾಗಿ ವಿಭಾಗಿಸಿ ಪ್ರತಿ 50ರ ಏರಿಕೆಯಲ್ಲಿಯೂ ಇರುವ ಬಿಂದುಗಳನ್ನು ಹೀಗೆ ಜೋಡಿಸುವುದು ವಾಡಿಕೆ. ಎತ್ತರ ಏರಿದಂತೆ ವಕ್ರರೇಖೆಗಳು ಒಂದರೊಳಗೊಂದು ಸೇರಿಕೊಂಡು ಗಿರಿಶೃಂಗದಲ್ಲಿ ಒಂದು ಬಿಂದುವೋ ಒಂದು ಬಲು ಕಿರಿಯ ಸಂವೃತ ವಕ್ರರೇಖೆಯೋ ದೊರೆಯಬಹುದು. ಈ ವಕ್ರರೇಖೆಗಳ ಒಟ್ಟು ಹೆಸರು ಸಮೋನ್ನತಿ ರೇಖೆಗಳು






(ಕಾಂಟೂರ್ ಲೈನ್ಸ್). ಭೂಪಟದಲ್ಲಿ P ಬಿಂದು 1000 ಅಡಿಗಳ ಸಮೋನ್ನತಿ ರೇಖೆಯ ($C_1$) ಮೇಲಿದೆಯೆಂದೂ Q ಬಿಂದು 1400 ಅಡಿಗಳ ಸಮೋನ್ನತಿ ರೇಖೆಯ ($C_2$) ಮೇಲಿದೆಯೆಂದೂ ಭಾವಿಸೋಣ. PQ ಸರಳರೇಖೆಯ ಓಟ ಎಷ್ಟು ಎಂಬುದೊಂದು ಭೌಗೋಳಿಕ ಪ್ರಶ್ನೆ—ಸೈನ್ಯಶಿಕ್ಷಣದಲ್ಲಿ, ಶಿಲ್ಪಶಾಸ್ತ್ರದಲ್ಲಿ ಈ ಪ್ರಶ್ನೆ ಪ್ರಧಾನಪಾತ್ರ ವಹಿಸುತ್ತದೆ. ಆಗ ನಡೆಸಬೇಕಾದ ಗಣನೆಗಳಿಷ್ಟು. Q ಬಿಂದು ಬಿಂದುವಿನಿಂದ 400 ಅಡಿಗಳಷ್ಟು ಎತ್ತರದಲ್ಲಿದೆ. ಇದು ಅವುಗಳ ಊರ್ಧ್ವಾಂತರ (ವರ್ಟಿಕಲ್ ಇಂಟರ್ವಲ್ VI). ಇದು ಗಣನೆಯಿಂದ ತಿಳಿಯುವುದು. ಭೂಪಟದಲ್ಲಿ PQ ದೂರವನ್ನು ಅಳತೆಮಾಡಿ ಆ ಪಟದ ಮಾನಕದ (ಸ್ಕೇಲ್) ಅನುಸಾರ ಇದನ್ನು ವಾಸ್ತವಿಕ ದೂರಕ್ಕೆ ಪರಿವರ್ತಿಸಿ ಅದನ್ನು ಅಡಿಗಳಲ್ಲಿ ಬರೆಯಬೇಕು. 1 ಇಂಚ್=1 ಮೈಲಿ ಮಾನಕವಿರುವ ಭೂಪಟದಲ್ಲಿ PQ ಅಂತರ 0.25″ ಇದ್ದರೆ ವಾಸ್ತವಿಕವಾಗಿ PQ ಅಂತರ 1320 ಅಡಿಗಳಾಗುತ್ತವೆ. PQ ಅಂತರದ ಹೆಸರು ಕ್ಷಿತಿಜೀಯ ಸಮಾನಕ (ಹಾರಿಜಾಂಟಲ್ ಈಕ್ವಿವಲೆಂಟ್, HE). ಚಿತ್ರದಲ್ಲಿ PR ಈ ಬೆಲೆ ಆಗುತ್ತದೆ. ಈಗ PQವಿನ ಓಟ

$$= \frac{[VI]}{[HE]} = \frac{QR}{RP} = \frac{400}{1320} = \frac{10}{33}$$

ಈ ಬೆಲೆ ತಿಳಿದೊಡನೆಯೇ ಮುಂದಿನ ಎಂಜಿನಿಯರಿಂಗ್ ಅಥವಾ ಮಿಲಿಟರಿ ಅಥವಾ ಬೇರಾವುದೋ ಯೋಜನೆಗಳನ್ನು ಮುಂದುವರಿಸಲು ಸುಲಭವಾಗುತ್ತದೆ. *

**ಓಟ (ಭೂವಿಜ್ಞಾನದಲ್ಲಿ) :** ಶಿಲಾ ಬಂಡೆಗಳು ಅಥವಾ ಪ್ರಸ್ತರಗಳು ನೆಲದ ಮೇಲೆ ಹರಡಿರುವ ಉದ್ದ (ಸ್ಟ್ರೈಕ್). ಜಾಡು ಪರ್ಯಾಯ ಪದ. ಇದನ್ನು ಶಿಲಾಪ್ರಸ್ತರ ಅಥವಾ ಶಿಲೆಯ ಹೊರಜಾಡು ಸಮತಲವಾದ ನೆಲಮಟ್ಟವನ್ನು ಛೇದಿಸುವ ರೇಖೆ ಎಂದು ವಿವರಿಸಬಹುದು. ಪ್ರಸ್ತರಗಳು ಸಮತಟ್ಟಾಗಿರದೆ ನೆಲಮಟ್ಟದಿಂದ ಓರೆಯಾಗಿದ್ದಲ್ಲಿ ಓಟವನ್ನು ಸುಲಭವಾಗಿ ಗುರುತಿಸಬಹುದು. ಶಿಲೆಯ ಓಟ ಮತ್ತು ಓಲಿಕೆ ಪರಸ್ಪರ ಲಂಬವಾಗಿರುತ್ತವೆ. ಓಟವನ್ನು ಉತ್ತರ ದಿಕ್ಕಿಗೆ ಅನುಗುಣವಾಗಿ ಗುರುತಿಸಬೇಕು.

ಓಲಿರುವ ಶಿಲಾಪ್ರಸ್ತರಗಳನ್ನು ⊦60° ಚಿಹ್ನೆಯಿಂದಲೂ (ಅಂದರೆ ಶಿಲೆಯ ಓಟ ಉತ್ತರ–ದಕ್ಷಿಣ ಓಲಿಕೆ 60° ಎಂದರ್ಥ), ಮಟ್ಟಸವಾಗಿರುವ ಪ್ರಸ್ತರಗಳನ್ನು ⊕ ಚಿಹ್ನೆಯ ಮೂಲಕವೂ ಮತ್ತು ಊರ್ಧ್ವವಾಗಿರುವ (ವರ್ಟಿಕಲ್) ಪ್ರಸ್ತರಗಳನ್ನು † ಚಿಹ್ನೆಯಿಂದಲೂ ಗುರುತಿಸುತ್ತಾರೆ.




ಜಾಡು ಇಳಿಮೋರೆಗಳ ಚಿಹ್ನೆಗಳು : 1 ಶಿಲಾಪ್ರಸ್ತರದ ಜಾಡು ಉತ್ತರ–ದಕ್ಷಿಣವಾಗಿದ್ದು ಪಶ್ಚಿಮದತ್ತ 60° ಇಳಿಮೋರೆ. 2 ಶಿಲಾಪ್ರಸ್ತರ ಮಟ್ಟಸವಾಗಿದೆ. 3 ಶಿಲಾಪ್ರಸ್ತರ ಲಂಬವಾಗಿದೆ.

ಶಿಲೆಯ ಓಟವನ್ನು ಅಳೆಯಲು ಪ್ರವಣಮಾಪಕ (ಕಂಪಾಸ್ ಕ್ಲೈನೊಮೀಟರ್) ಎಂಬ ಉಪಕರಣವನ್ನು ಬಳಸಬೇಕು. ಉತ್ತರ–ದಕ್ಷಿಣ ರೇಖೆಗೆ ಅನುಗುಣವಾಗಿ ಇದನ್ನು ಅಳೆದು ನಿರ್ಧರಿಸಬೇಕು. ಉತ್ತರ–ದಕ್ಷಿಣ ಅಕ್ಷರೇಖೆಯಿಂದ ಪೂರ್ವ ಅಥವಾ ಪಶ್ಚಿಮದ ಕಡೆಗೆ ಎಷ್ಟು ಡಿಗ್ರಿ ವ್ಯತ್ಯಾಸವಿದೆ ಎಂಬ ಮೂಲಕ ಜಾಡನ್ನು ಗುರುತಿಸಬೇಕು. ಉದಾಹರಣೆಗೆ ಉ60°ಪ ಅಂದರೆ ಉತ್ತರ ದಿಕ್ಕಿನಿಂದ ಪಶ್ಚಿಮದತ್ತ 60°ಗಳಷ್ಟು ಸರಿದಲ್ಲಿ ಶಿಲೆಯ ಜಾಡು ಪ್ರಾರಂಭವಾಗುತ್ತದೆ ಎಂದರ್ಥ. ಇದನ್ನು ಭೂವಿಜ್ಞಾನಿಗಳು ಉ60°ಪ–ದ 60°ಪೂ ಎಂದು ವಿವರಿಸುತ್ತಾರೆ. ಇದನ್ನು ನಿರ್ಧರಿಸುವ ರೀತಿಯನ್ನು ಚಿತ್ರದಲ್ಲಿ ತೋರಿಸಿದೆ.



ಪ್ರವಣಮಾಪಕದ ಸಹಾಯದೊಡನೆ ಶಿಲೆಯ ಜಾಡನ್ನು ನಿರ್ಧರಿಸುವ ರೀತಿ

ಪ್ರವಣಮಾಪಕದಲ್ಲಿ ಗುರುತಿಸುವ *N–S* (ಉತ್ತರ-ದಕ್ಷಿಣ) ರೇಖೆಯನ್ನು ಶಿಲಾಪ್ರಸ್ತರದ ಉದ್ದಕ್ಕೆ (ಅಗಲಕ್ಕಲ್ಲ ಎಂಬುದನ್ನು ನೆನಪಿನಲ್ಲಿಡುವುದು ಬಹುಮುಖ್ಯ) ಸಮಾಂತರವಾಗಿಟ್ಟು ಉಪಕರಣಗಳನ್ನು ಮಟ್ಟಸವಾಗಿ ಹಿಡಿಯಬೇಕು. ಆಗ ಪ್ರವಣಮಾಪಕದ ದಿಕ್ಸೂಚಿಯ ಉತ್ತರದ ತುದಿಯಿಂದ ಮುದ್ರಿಸಿರುವ *N–S* ರೇಖೆಗೆ ಇರುವ ಅಂತರವನ್ನೂ (ಡಿಗ್ರಿಗಳಲ್ಲಿ) ದಿಕ್ಕನ್ನೂ ನಿರ್ಧರಿಸಬೇಕು. ಇದೇ ಶಿಲೆಯ ಓಟ ಅಥವಾ ಜಾಡು.

(ಬಿ.ವಿ.ಜಿ.)

**ಓಟಗಳು :** ನಿಯತ ದೂರವನ್ನು ಆದಷ್ಟು ಕಡಿಮೆ ಕಾಲದಲ್ಲಿ ಕ್ರಮಿಸುವ ಒಂದು ಪಂದ್ಯಮಾದರಿ (ಟ್ರ್ಯಾಕ್ ಇವೆಂಟ್ಸ್). ಎಳೆಯವರ ಆಟಗಳಲ್ಲಿ ಓಟವೂ ಸಹಜವಾಗಿ ಸೇರುತ್ತದೆ. ಲಗ್ಗೆ, ಕಣ್ಣಾಮುಚ್ಚಾಲೆ, ಹುಡದಿ, ಖೊಖೊ, ಗುಬಿ

ಚೆಂಡು ಮೊದಲಾದ ಆಟಗಳಲ್ಲಿ ಚುರುಕಿನ ಓಟ ಅಗತ್ಯ. ಹಿಂದೆ ಮಾನವ ತನ್ನ ಆತ್ಮರಕ್ಷಣೆಗಾಗೂ ಬೇಟೆಯನ್ನು ವಶಪಡಿಸಿಕೊಳ್ಳಲೂ ವೇಗವಾಗಿ ಓಡಬೇಕಿತ್ತು. ಈಚೆಗೆ ಓಟಗಳು ಲೋಕವಿಖ್ಯಾತ ಪಂದ್ಯಾಟಗಳಲ್ಲಿ ಬಹು ಮುಖ್ಯಭಾಗವೆನಿಸಿವೆ. ಪ್ರಾಣಿಗಳ ಮತ್ತು ವಾಹನಗಳ ನಡುವಿನ ಪಂದ್ಯಗಳನ್ನುಳಿದು ಕೇವಲ ಮನುಷ್ಯ ಮನುಷ್ಯರ ನಡುವಣ ಓಟದ ವಿಷಯವನ್ನು ಮಾತ್ರ ಇಲ್ಲಿ ಪರಿಶೀಲಿಸಿದೆ.



ಜಯಶಾಲಿ ಓಟಗಾರ ಗುರಿದಾರವನ್ನು ಮುಟ್ಟಿದಾಗ

ಓಟಗಳಲ್ಲಿ ಅಂತರ ಕಡಿಮೆ ಇರುವ ಓಟ, ಹೆಚ್ಚು ದೂರದ ಓಟಗಳು, ಮಜಲು ಓಟ (ರಿಲೆ ರೇಸ್) ಮತ್ತು ಮ್ಯಾರಥಾನ್ ಓಟ ಎಂಬ ಭಾಗಗಳಿವೆ. ಕಡಿಮೆ ದೂರದ ಓಟಗಳಲ್ಲಿ ಅಂದರೆ 50, 75, 100, 200, 400, ಮೀಟರ್ ದೂರದಲ್ಲಿ ಅತಿ ಹೆಚ್ಚಿನ ವೇಗದಿಂದ ಓಡಬೇಕಾಗುವುದು. ಹೆಚ್ಚು ದೂರದ ಓಟದಲ್ಲಿ ಅಂದರೆ 800, 1500, 3000, 5000, 10,000 ಮೀಟರ್ ದೂರದಲ್ಲಿ ತುಂಬ ಸಹನೆ ಅಗತ್ಯ. ಓಟ ಸಿದ್ಧಿಸಬೇಕಾದರೆ ಅದರ ಪ್ರಾರಂಭ, ನಿರ್ವಹಣೆ ಮತ್ತು ಮುಕ್ತಾಯಗಳು ಯುಕ್ತವಾಗಿರಬೇಕಾಗುತ್ತದೆ.

ಓಟಗಾರ ಜಯಶೀಲನಾಗಲು ತ್ವರಿತದ ಆರಂಭ ಅವಶ್ಯ. ಈ ಆರಂಭದಲ್ಲಿ ಎರಡು ಮುಖ್ಯ ವಿಧಾನಗಳಿವೆ: 1 ಬಂಚ, 2 ಮಧ್ಯಮ. ಸಾಮಾನ್ಯವಾಗಿ ಓಟದಲ್ಲಿ ಎದ್ದುನಿಂತ ಸ್ಥಿತಿಯಿಂದ ಆರಂಭ ಮಾಡುವುದಕ್ಕಿಂತ ನೆಲಕ್ಕೆ ಸಮವಾಗಿ ಬಾಗಿದ ಸ್ಥಿತಿಯಿಂದ ಆರಂಭಿಸುವುದು ಹೆಚ್ಚು ಒಳ್ಳೆಯದು.

ಓಡುವ ಮುನ್ನ ಪ್ರಾರಂಭದ ಗೆರೆಯ ಹಿಂದೆ, ಎದೆಯ ಅಂತರದಷ್ಟು ಅಗಲವಾಗಿ ನೆಲದ ಮೇಲೆ ಕೈಗಳನ್ನಿಟ್ಟು, ಮೊಣಕಾಲುಗಳನ್ನೂರಿ ಬೆನ್ನನ್ನು ನೆಲಕ್ಕೆ ಸಮಾನಾಂತರವಾಗಿರಿಸಿ ಅಂಬೆಗಾಲಿಕ್ಕಬೇಕು.ತುದಿಗಾಲು ಗೆರೆಯ ಅಂಚಿನಲ್ಲಿರಬೇಕು.

ಆರಂಭದ ರೇಖೆಯ ಹಿಂದೆ ಎರಡೂ ಬದಿಗಳಲ್ಲಿ ಸಾಕಷ್ಟು ಅಂತರ ಬಿಟ್ಟು ಹೆಬ್ಬೆಟ್ಟು ಒಳಗೆ ಮತ್ತು ಉಳಿದ ಬೆರಳುಗಳು ತ್ರಿಕೋನ ಆಕಾರದ ರೀತಿಯಲ್ಲಿ ಬೆರಳುಗಳ ಆಧಾರದ ಮೇಲೆ ಕೈಗಳನ್ನೂರಬೇಕು.

ಬಂದೂಕದ ಶಬ್ದ ಅಥವಾ ಸೀಟಿಯ ಶಬ್ದ ಕೇಳಿದ ಕೂಡಲೆ ಓಡುವಾತ ಮುಂದಿನ ಕಾಲನ್ನು ಸರಳಮಾಡಿ, ಎರಡು ಪಾದಗಳ ತುದಿಯಿಂದ ನೆಲವನ್ನು ಬಲವಾಗಿ ದೂಡಿ ಕೈಗಳನ್ನು ಬೀಸುತ್ತ ಮೊಣಕೈಗಳನ್ನು ಮಣಿಸಿ ಓಡಬೇಕು. ಕೈ ಮತ್ತು ಕಾಲುಗಳ ಚಲನೆಗೆ ಅತಿ ಹೆಚ್ಚು ಶಕ್ತಿಯನ್ನು ಉಪಯೋಗಿಸಬೇಕು.

ಅತಿ ವೇಗದಿಂದ ಓಡುವಾಗ ಓಟಗಾರ ಆರಂಭ ರೇಖೆಯಿಂದ 15–20 ಮೀಟರ್ ಅಂತರದಲ್ಲಿ ತನ್ನ ಪರಮಾವಧಿ ವೇಗವನ್ನು ಮುಟ್ಟುತ್ತಾನೆ. ಈ ಅಂತರದಲ್ಲಿ ಹೆಜ್ಜೆಗಳು ಕ್ರಮವಾಗಿ ಉದ್ದವಾಗುತ್ತವೆ. ಓಡುವಾಗ ದೇಹದ ಬಾಗು 25° ಇರಬೇಕು; ತೊಡೆಗಳನ್ನು ನೆಲಕ್ಕೆ ಸಮಾನಾಂತರವಾಗುವಷ್ಟು ಎತ್ತಬೇಕು. ಬೀಸಿದ ಪಾದ ಹಿಂದೆ ಕುಂಡೆಗಳಿಗೆ ತಗಲಬೇಕು.

ಮುಕ್ತಾಯದ ಘಟ್ಟ ಬಂದಾಗ ಹಿಂದಿನಂತೆ ಓಟವನ್ನು ಮುಂದುವರಿಸುತ್ತ ಮುಕ್ತಾಯದ ಗೆರೆಯ ಮೇಲೆ ಹಿಡಿದಿರುವ ದಾರವನ್ನು ಓಟಗಾರ ತನ್ನ ಎದೆಯಿಂದ ಮುಟ್ಟಬೇಕು.

ಓಡುವಾಗ ಯಾರೇ ಆಗಲಿ ತಮ್ಮ ಭುಜಗಳನ್ನು ಬಿಗಿ ಹಿಡಿಯಬಾರದು. ಬೆನ್ನನ್ನು ಡೊಂಗ (ಗೂನು) ಮಾಡಬಾರದು. ಓಡುವಾಗ ಎಡಬಲಕ್ಕಾಗಲಿ ಹಿಂದಕ್ಕಾಗಲಿ ನೋಡಬಾರದು. ನೇರ ಗುರಿಯ ಕಡೆಗೆ ಮುಖಮಾಡಿ ಓಡಬೇಕು.

ದೂರದ ಓಟಗಳಲ್ಲಿ ಭಾಗವಹಿಸುವಾಗ ಮಧ್ಯ ಅಂತರಗಳಲ್ಲಿ ಓಟದ ವೇಗವನ್ನು ಸಮಯಕ್ಕೆ ತಕ್ಕಂತೆ ಕಡಿಮೆ, ಹೆಚ್ಚು ಮಾಡಿಕೊಂಡು ಕೊನೆಯ ವೇಳೆಯಲ್ಲಿ 100 ಅಥವಾ 200 ಮೀಟರ್ ಇರುವಾಗ ವೇಗ ಓಟಗಳ ನಿಯಮದಂತೆ ಮುಕ್ತಾಯ ಮಾಡಬೇಕು.

ಮಜಲು ಓಟ : ಇವು 4 × 50 ಮೀ. 4 × 100 ಮೀ. 4 × 400 ಮೀ.ಗಳಲ್ಲಿ



ಜಯಶಾಲಿ ಓಟಗಾರ ಗುರಿದಾರವನ್ನು ಮುಟ್ಟುವ ಕೆಲವೇ ಸೆಕೆಂಡುಗಳ ಮೊದಲು

ರುತ್ತವೆ. ಈ ಓಟದ ಸ್ಪರ್ಧೆಯಲ್ಲಿ ವೇಗವಾಗಿ ಓಡುವ 4 ಓಟಗಾರರಿರಬೇಕು. ಜೊತೆಗೆ ದಂಡವನ್ನು (ಬ್ಯಾಟನ್) ಬದಲಿಸುವ ರೂಢಿ ಇರಬೇಕು. ಬದಲಾಯಿಸುವುದರಲ್ಲಿ ಎರಡು ರೀತಿಗಳಿವೆ. 1 ನೋಡುತ್ತ ಬದಲಿಸುವುದು, 2 ನೋಡದೆ ಬದಲಿಸುವುದು. ಈ ದಂಡ ಬದಲಾವಣೆ ಗೊತ್ತಾದ ಅಂತರದೊಳಗೇ ಆಗಬೇಕಾದುದರಿಂದ ಆ ಗುಂಪಿನವರು ತಮ್ಮ ಪಕ್ಷದ ಪಟು ಗೊತ್ತಾದ ಗುರುತನ್ನು ದಾಟಿದ ತತ್‌ಕ್ಷಣವೇ ಮುಂದೆ ಮುಖ ಹೊರಳಿಸಿ, ಸಾಧ್ಯವಾದಷ್ಟು ವೇಗದಿಂದ ಓಡಬೇಕು. ತನ್ನ ಬಲಗೈಯನ್ನು ಮೇಲೆ ಮಾಡಿ ಅಂಗೈಯನ್ನು ಚಾಚಿ ಓಡಬೇಕು. ಆಗ್ಗಿ ತನ್ನ ಪಕ್ಷದ ಓಟಗಾರ ತಂದ ದಂಡವನ್ನು ಚಾಚಿ ಬಲಗೈಯಲ್ಲಿ ಇಡುವನು. ಅನಂತರ ಆ ದಂಡವನ್ನು ಹಿಡಿದು ಓಡಬೇಕು.

ಮಜಲುಗಳ ಉದ್ದಳತೆಯನ್ನು ತೋರಿಸಲು, ಮತ್ತು ಪ್ರಾರಂಭದ ರೇಖೆಯನ್ನು ತೋರಿಸಲು, ಸುಣ್ಣದ ಗೆರೆಗಳನ್ನು ಹಾಕಬೇಕು. ಮತ್ತು ಮಜಲಿನ ಪ್ರಾರಂಭರೇಖೆಯ ಹಿಂದೆ ಅಥವಾ ಮುಂದೆ 10 ಮೀ. ಅಂತರದ ಮೇಲೆ ಬದಲಿಸುವ ಪ್ರದೇಶವನ್ನು ಬಣ್ಣದ ರಂಗೋಲೆಯಿಂದ ಗುರ್ತಿಸಬಹುದು. ಅಲ್ಲದೆ ಓಡುವ ಹಾದಿ 24 ಅಡಿ (7.32 ಮೀ.) ಇರಬೇಕು ; ಓಣಿಗಳು 4 ಅಡಿ ಅಗಲವಿರಬೇಕು.

ಮ್ಯಾರಥಾನ್ ಓಟ : ಓಡುವ ದೂರ 42,195 ಮೀ. ಅಥವಾ 26 ಮೈಲಿ 385 ಗಜವಿರುತ್ತದೆ. ಸಾಮಾನ್ಯವಾಗಿ ಈ ಪಂದ್ಯ ಕಠಿಣವಾದ ದೊಡ್ಡ ರಸ್ತೆಗಳಲ್ಲಿ ನಡೆಯುತ್ತದೆ. ಬಹುದೂರ ಓಡಬೇಕಾದ್ದರಿಂದ ಓಡುವಾತ ವೈದ್ಯರ ಸಲಹೆಯನ್ನು ಪಡೆದಿರಬೇಕಲ್ಲದೆ ಅರ್ಹತಾಪತ್ರವನ್ನೂ ಹೊಂದಿರಬೇಕು. ಈತನಿಗೆ ಮಧ್ಯದಲ್ಲಿ 11 ಕಿ.ಮೀ. ಅಥವಾ 7 ಮೈಲಿ ಆದ ಅನಂತರ ಕುಡಿಯಲು ನಿಯಮಕ್ಕನುಸಾರವಾಗಿ ಪಾನೀಯಗಳನ್ನು ಕೊಡಬಹುದು.

ತಡಕೆ ಓಟ : ಈ ಓಟದಲ್ಲಿ ಮಹಿಳೆಯರಿಗೆ 80 ಮೀ. ಅಥವಾ 100 ಮೀ., ಪುರುಷರಿಗೆ 100 ಮೀ. ಅಥವಾ 400 ಮೀ.ಗಳಲ್ಲಿ ಓಟವಿದೆ. ನಿಯತ ಸ್ಥಳಗಳಲ್ಲಿ ಎತ್ತರದ ತಡೆಗಳನ್ನು ಅಂದರೆ ಆತಂಕಗಳನ್ನು ದಾರಿಯುದ್ದಕ್ಕೂ ಇಟ್ಟಿರುತ್ತಾರೆ. ಓಡುವವ ಅವನ್ನು ದಾಟಿ ಹೋಗಬೇಕು. ಅಕ್ಕಪಕ್ಕದಿಂದಲಾಗಲಿ, ಕೆಳಗೆ ನುಸಿದಾಗಲೀ ಹೋಗುವಂತಿಲ್ಲ.

## ಓಟಪಂದ್ಯದ ವಿಕ್ರಮಗಳು

**(31–3–1969)**

ಪುರುಷರಿಗೆ

| ಪಂದ್ಯದ ವಿವರಗಳು | ಮೈಸೂರು | ಭಾರತ | ಏಷ್ಯ | ವಿಶ್ವ |
|---|---|---|---|---|
| 100 ಮೀ. ಓಟ ... | 10.5 ಸೆ. | 10.4 ಸೆ. | 10.4 ಸೆ. | 9.9 ಸೆ. |
| 200 ಮೀ. ಓಟ ... | 21.1 ಸೆ. | 20.8 ಸೆ. | 21.3 ಸೆ. | 19.8 ಸೆ. |
| 400 ಮೀ. ಓಟ ... | 48.4 ಸೆ. | 45.6 ಸೆ. | 46.6 ಸೆ. | 43.8 ಸೆ. |
| 800 ಮೀ. ಓಟ ... | 1 ಮಿ. 57.4 ಸೆ. | 1 ಮಿ. 49.4 ಸೆ. | 1 ಮಿ. 49.4 ಸೆ. | 1 ಮಿ. 44.3 ಸೆ. |
| 1,500 ಮೀ. ಓಟ ... | 3 ಮಿ. 59.3 ಸೆ. | 3 ಮಿ. 43.7 ಸೆ. | 3 ಮಿ. 47.3 ಸೆ. | 3 ಮಿ. 33.1 ಸೆ. |
| 5,000 ಮೀ. ಓಟ ... | 15 ಮಿ. 6.0 ಸೆ. | 14 ಮಿ. 24.6 ಸೆ. | 14 ಮಿ. 22.0 ಸೆ. | 13 ಮಿ. 16.6 ಸೆ. |
| 10,000 ಮೀ. ಓಟ ... | 32 ಮಿ. 1.2 ಸೆ. | 29 ಮಿ. 34.0 ಸೆ. | 30 ಮಿ. 21.4 ಸೆ. | 27 ಮಿ. 39.4 ಸೆ. |
| 3,000 ಮೀ. ಸ್ಟೀಪಲ್ ಓಟ ... | 10 ಮಿ. 0.3 ಸೆ. | 8 ಮಿ. 53.4 ಸೆ. | 8 ಮಿ. 53.6 ಸೆ. | 8 ಮಿ. 24.6 ಸೆ. |
| ಮ್ಯಾರಥಾನ್ ಓಟ ... | 2 ಗಂ. 31 ಮಿ. 4.8 ಸೆ. | 2 ಗಂ. 20 ಮಿ 26.4 ಸೆ. | 2 ಗಂ. 32 ಮಿ. 55.0 ಸೆ. | 2 ಗಂ. 12 ಮಿ. 11.2 ಸೆ. |
| 110 ಮೀ. ತಡಕೆ ಓಟ ... | 15.5 ಸೆ. | 14.0 ಸೆ. | 14.3 ಸೆ. | 13.2 ಸೆ. |
| 400 ಮೀ. ತಡಕೆ ಓಟ ... | 55.9 ಸೆ. | 52.2 ಸೆ. | 51.7 ಸೆ. | 48.1 ಸೆ. |
| 4×100 ಮೀ. ಮಜಲು ಓಟ ... | 42.3 ಸೆ. | 40.5 ಸೆ. | 40.6 ಸೆ. | 38.2 ಸೆ. |
| 4×400 ಮೀ. ಮಜಲು ಓಟ ... | 3 ಮಿ. 27.5 ಸೆ. | 3 ಮಿ. 8.8 ಸೆ. | 3 ಮಿ. 9.1 ಸೆ. | 2 ಮಿ. 56.1 ಸೆ. |

ಸ್ತ್ರೀಯರಿಗೆ

| ಪಂದ್ಯದ ವಿವರಗಳು | ಮೈಸೂರು | ಭಾರತ | ಏಷ್ಯ | ವಿಶ್ವ |
|---|---|---|---|---|
| 100 ಮೀ. ಓಟ ... | 12.4 ಸೆ. | 12.2 ಸೆ. | 11.8 ಸೆ. | 11.0 ಸೆ. |
| 200 ಮೀ. ಓಟ ... | 26.3 ಸೆ. | 25.3 ಸೆ. | 24.4 ಸೆ. | 22.5 ಸೆ. |
| 400 ಮೀ. ಓಟ ... | 61.1 ಸೆ. | 58.1 ಸೆ. | 56.3 ಸೆ. | 51.9 ಸೆ. |
| 800 ಮೀ. ಓಟ ... | 2 ಮಿ. 29.5 ಸೆ. | 2 ಮಿ. 17.4 ಸೆ. | 2 ಮಿ. 10.5 ಸೆ. | 2 ಮಿ. 0.5 ಸೆ. |
| 80 ಮೀ. ತಡಕೆ ಓಟ ... | 12.0 ಸೆ. | 11.2 ಸೆ. | 11.2 ಸೆ. | 10.3 ಸೆ. |
| 4×100 ಮೀ. ಮಜಲು ಓಟ .... | 52.0 ಸೆ. | 49.4 ಸೆ. | 47.1 ಸೆ. | 42.8 ಸೆ. |

(ಬಿ.ಎಲ್.ಆರ್.)

**ಓಟೋ ಆವರ್ತ :** ಉಷ್ಣಚಲನಶಾಸ್ತ್ರದ ಸೈದ್ಧಾಂತಿಕ ಆವರ್ತ (ಓಟೋ ಸೈಕಲ್). ಕಿಡಿ ಪ್ರಜ್ವಲಿತ (ಸ್ಪಾರ್ಕ್ ಇಗ್ನಿಷನ್) ಪೆಟ್ರೋಲ್ ಎಂಜಿನುಗಳ ಕ್ರಿಯೆ ಇದರ ಮೇಲೆ ಅವಲಂಬಿಸಿದೆ ; ಮತ್ತು ಆ ಎಂಜಿನುಗಳನ್ನು ತುಲನೆ ಮಾಡಲು ಆವರ್ತದ ದಕ್ಷತೆಯನ್ನು (ಎಫಿಶಿಯನ್ಸಿ) ಒಂದು ಮಾನಕವಾಗಿ ಆರಿಸಲಾಗಿದೆ. ಆವರ್ತದ ಕ್ರಿಯಾವಿಧಿ ಹೀಗಿದೆ—ಉಷ್ಣಾಪಾರಕ ಸಂಪೀಡನ (ಎಡಿಯಾಬೆಟಿಕ್ ಕಂಪ್ರೆಶನ್), ಸ್ಥಿರಘನಗಾತ್ರ ಉಷ್ಣ ಸೇರ್ಪಡೆ, ಉಷ್ಣಾಪಾರಕ ವಿಕಾಸ (ಎಕ್ಸ್‌ಪಾನ್ಶನ್) ಮತ್ತು ಸ್ಥಿರಘನಗಾತ್ರ ಉಷ್ಣವಿಸರ್ಜನೆ. ಈ ಆವರ್ತದ ಯಶಸ್ವೀ ಪ್ರಥಮ ಪ್ರಯೋಗ ಮಾಡಿದವ ಓಟೋ (1876).

ಲ್ಯೂನ್ವಾರ್ ಎಂಜಿನಿನ ಪರಿಶೋಧನೆಯ (1859) ತರುವಾಯ ಅದರ ದಕ್ಷತೆಯನ್ನು ವರ್ಧಿಸಲು ಹಲವಾರು ಪ್ರಯತ್ನಗಳನ್ನು ಮಾಡಲಾಯಿತು. ಈ ದಿಶೆಯಲ್ಲಿ ನಡೆಸಿದ ಸೈದ್ಧಾಂತಿಕ ಪರೀಕ್ಷೆಗಳ ಫಲಿತಾಂಶಗಳನ್ನು 1862ರಲ್ಲಿ ಪ್ರಕಟಿಸಿದರು. ಇವುಗಳ ಪ್ರಕಾರ ಉರುಳೆಯೊಳಗೆ (ಸಿಲಿಂಡರ್) ಆಸ್ಫೋಟನೆಗಳು ಹಾಗೂ ಕೊಂತದ (ಪಿಸ್ಟನ್) ನಾಲ್ಕು ಚಲನೆಗಳು—ಇವುಗಳ ಸಮಗ್ರ ಪರಿಣಾಮ ಯಶಸ್ವಿಯಾಗಬಲ್ಲುದೆಂದು ವೇದ್ಯವಾಯಿತು. ಕೊಂತ ಹೊರಮುಖವಾಗಿ ಚಲಿಸಿದಂತೆ (ಮೊದಲನೆ ಚಲನೆ) ಅನಿಲ ಮತ್ತು ಗಾಳಿಯ ಒಂದು ಮಿಶ್ರಣ ಉರುಳೆಯೊಳಗೆ ಸೆಳೆಯಲ್ಪಡುವುದು. ಕೊಂತ ಒಳಕ್ಕೆ ಚಲಿಸಿದಂತೆ (ಎರಡನೆ ಚಲನೆ) ಮಿಶ್ರಣ ಸಂಪೀಡನಗೊಳ್ಳುತ್ತದೆ. ಸಂಪೀಡನ ಗರಿಷ್ಠಮಿತಿ ತಲಪಿದಾಗ ಒಂದು ಕಿಡಿ ಆಸ್ಫೋಟನೆಯನ್ನು ಪ್ರಜ್ವಲಿಸುವುದು. ಇದರಿಂದ ಕೊಂತ ಹೊರತಳ್ಳಲ್ಪಡುತ್ತದೆ. (ಮೂರನೆಯ ಚಲನೆ ಮತ್ತು ಸಾಮರ್ಥ್ಯಘಾತ). ಮತ್ತೆ ಕೊಂತ ಒಳಚಲಿಸಿದಾಗ (ನಾಲ್ಕನೆಯ ಚಲನೆ) ನಿಷ್ಕಾಸಾನಿಲಗಳು ವಿಸರ್ಜಿತವಾಗುತ್ತವೆ. ಈ ಆವರ್ತ ಮುಂದೆ ಪುನರಾವರ್ತನೆಗೊಳ್ಳುತ್ತದೆ. ಇಂಥ ಒಂದು ಅಂತರ್ದಹನ ಎಂಜಿನನ್ನು ಮೊದಲು ಆವಿಷ್ಕರಿಸಿದವ ಓಟೋ (1876). ಈ ಕಾರಣದಿಂದ ಓಟೋ ಆವರ್ತವೆಂದೇ ಕ್ರಿಯೆಗೆ ಹೆಸರು ಬಂದಿದೆ.

ಉಷ್ಣ ಮತ್ತು ಕಾರ್ಯ ಶಕ್ತಿಯ ರೂಪಗಳು. ಉಷ್ಣವನ್ನು ಕಾರ್ಯವಾಗಿ ಮಾರ್ಪಡಿಸುವ ಸಾಧನಗಳಿಗೆ ಉಷ್ಣ ಎಂಜಿನುಗಳೆಂದು ಹೆಸರು. ಅಂತರ್ದಹನ ಎಂಜಿನುಗಳು ಈ ಜಾತಿಯವು. ಇವುಗಳಲ್ಲಿ ಇಂಧನ ಮತ್ತು ಗಾಳಿಯ ಮಿಶ್ರಣದ ದಹನದಿಂದ ಉಷ್ಣ ಅನಿಲಗಳು ಉತ್ಪತ್ತಿಯಾಗುತ್ತವೆ. ಇವು ಕೊಂತದ ಮೇಲೆ ಬಲ ಹೇರುವುದರಿಂದ ಕೊಂತ ಚಲಿಸಿ ಸಾಮರ್ಥ್ಯ (ಪವರ್) ಉತ್ಪತ್ತಿಯಾಗುತ್ತದೆ. ಎಂಜಿನುಗಳಲ್ಲಿ ಉಷ್ಣವು ಸಾಮರ್ಥ್ಯವಾಗಿ ಮಾರ್ಪಡಲು ನಿರ್ದಿಷ್ಟ ಕ್ರಿಯೆಗಳಾಗಬೇಕು. ಸತತವಾಗಿ ಸಾಮರ್ಥ್ಯ ಉತ್ಪಾದನೆಯಾಗಲು ಇವು ಮತ್ತೆ ಮತ್ತೆ ನಡೆಯಬೇಕು. ಹೀಗೆ ಒಮ್ಮೆ ನಡೆದ ಕ್ರಿಯೆಗಳೇ ಮತ್ತೆ ಮತ್ತೆ ಅದೇ ಕ್ರಮದಲ್ಲಿ ನಡೆದರೆ ಅದು ಆವರ್ತ ಎನಿಸಿಕೊಳ್ಳುತ್ತದೆ.

ಓಟೋ ಆವರ್ತವನ್ನು ಉಪಯೋಗಿಸುವ ಎಂಜಿನುಗಳು : ಎಂಜಿನಿನ ಮುಖ್ಯ ಭಾಗ ಉರುಳೆ. ಇದರೊಳಗೆ ಕೊಂತ ಪ್ರತ್ಯಾಗಮನಿಯಾಗಿ (ರೆಸಿಪ್ರೋಕಲ್) ಚಲಿಸುತ್ತದೆ. ವಕ್ರದಂಡಕ್ಕೆ (ಕ್ರ್ಯಾಂಕ್ ಷಾಫ್ಟ್) ಕೂಡು ಸರಳಿನ (ಕನೆಕ್ಟಿಂಗ್ ರಾಡ್) ಮೂಲಕ ಇದನ್ನು ಜೋಡಿಸಲಾಗಿದೆ. ಈ ಜೋಡಣೆಯಿಂದ ಕೊಂತದ ಪ್ರತ್ಯಾಗಮನ ಚಲನೆ ವಕ್ರದಂಡದ ಆವರ್ತನ ಚಲನೆಯಾಗಿ (ರೊಟೇಟರಿ ಮೋಷನ್) ಮಾರ್ಪಡುತ್ತದೆ. ಕೊಂತದ ಚಲನೆಯಲ್ಲಿ ಅದು ಎರಡೂ ದಿಕ್ಕುಗಳಲ್ಲಿ ಮುಟ್ಟುವ ತುತ್ತತುದಿಗಳಿಗೆ ನಿಶ್ಚಲಬಿಂದುಗಳೆಂದು (ಡೆಡ್‌ಸೆಂಟರ್ಸ್) ಹೆಸರು. ಒಂದು ನಿಶ್ಚಲ ಬಿಂದುವಿನಿಂದ ಇನ್ನೊಂದಕ್ಕೆ ಕೊಂತ ಚಲಿಸುವುದಕ್ಕೆ ಘಾತ (ಸ್ಟ್ರೋಕ್) ಎನ್ನುತ್ತಾರೆ. ಉರುಳೆಯ ಶೀರ್ಷ ಭಾಗದಲ್ಲಿ (ಕವರ್) ಎರಡು ಕವಾಟಗಳುಂಟು (ವಾಲ್ವ್ಸ್). ಕೊಂತದ ಚಲನೆಯನ್ನನುಸರಿಸಿ ಅವು ಮುಚ್ಚಿ ತೆರೆಯುತ್ತವೆ. ಉರುಳೆಯಲ್ಲಿ ಇಂಧನ ಮತ್ತು ಗಾಳಿಯ ಮಿಶ್ರಣವನ್ನು ಹೊತ್ತಿಸಲು ಬೇಕಾಗುವ ಕಿಡಿಯನ್ನು ಕಿಡಿಬೆಣೆ (ಸ್ಪಾರ್ಕ್ ಪ್ಲಗ್) ಉತ್ಪಾದಿಸುತ್ತದೆ. ಇಂಧನ ಮತ್ತು ಗಾಳಿಯನ್ನು ಸರಿಯಾದ ಪ್ರಮಾಣದಲ್ಲಿ ಸೇರಿಸಿ ಕಾರ್ಬುರೇಟರ್ ಎಂಬ ಭಾಗ ಉರುಳೆಗೆ ಸರಬರಾಜು ಮಾಡುತ್ತದೆ. ಸಾಮರ್ಥ್ಯವನ್ನು ಉತ್ಪಾದಿಸಲು ಎಂಜಿನು ಆವರ್ತಗಳಲ್ಲಿ ಕ್ರಿಯೆ ನಡೆಸುತ್ತದೆ ಎಂದು ಈಗಾಗಲೇ ಹೇಳಿದೆ. ಒಂದು ಆವರ್ತವನ್ನು ಪೂರ್ಣಗೊಳಿಸಲು ಕೊಂತ ನಾಲ್ಕು ಘಾತಗಳನ್ನು ಮಾಡಿದರೆ ಅಥವಾ ವಕ್ರದಂಡ ಎರಡು ಪರಿಭ್ರಮಣೆ (ರಿವೊಲ್ಯೂಷನ್) ಮಾಡಿದರೆ ಅದಕ್ಕೆ ನಾಲ್ಕು ಘಾತಗಳ ಆವರ್ತ ಎಂಜಿನು ಎಂದು ಹೆಸರು. ಕೊಂತದ ಎರಡು ಘಾತಗಳಿಂದಲೇ ಅಥವಾ ವಕ್ರದಂಡದ ಒಂದು ಪರಿಭ್ರಮಣೆಯಿಂದಲೇ ಆವರ್ತ ಪೂರ್ಣಗೊಂಡರೆ ಅದಕ್ಕೆ ಎರಡು ಘಾತಗಳ ಆವರ್ತ ಎಂಜಿನೆಂದು ಹೆಸರು.

ನೋಡಿ—ಎಂಜಿನ್. (ಕೆ.ಆರ್.ಎಂ.)

**ಓಡೊಂಟಾರ್ನಿಥಿಸ್ :** ಆರ್ಕಿಯಾಪ್ಟೆರಿಕ್ಸ್, ಹೆಸ್ಪೆರಾರ್ನಿಸ್ ಮತ್ತು ಇಕ್ಥಿಯಾರ್ನಿಸ್ ಎಂಬ ಮೂರು ಲುಪ್ತವಂಶಿ ಪಕ್ಷಿಗಳ ಗಣಕ್ಕೆ ಮಾರ್ಷ್ ಎಂಬುವನು 1880ರಲ್ಲಿ ಮೊದಲು ಬಳಸಿದ ಹೆಸರು. ಈತ ಕೊನೆಯ ಎರಡು ಪಕ್ಷಿಗಳ ಪಳೆಯುಳಿಕೆಗಳನ್ನು ಕಂಡುಹಿಡಿದು ಇವು ಮೂರೂ ಬೇರೆ ಬೇರೆ ಉಪಗಣಗಳಿಗೆ ಸೇರಿದವೆಂದು ಸೂಚಿಸಿದ. ಆದರೆ ಈ ವರ್ಗೀಕರಣವನ್ನು ಈಗ ಕೈಬಿಡಲಾಗಿದೆ. ಬದಲು ಜುರಾಸಿಕ್ ಯುಗದ ಆರ್ಕಿಯಾಪ್ಟೆರಿಕ್ಸ್ ಪಕ್ಷಿ ಆರ್ಕಿಯಾರ್ನಿಥಿಸ್ ಉಪವರ್ಗಕ್ಕೂ ಕ್ರಿಟೇಷಸ್ ಯುಗದ ಉಳಿದವೆರಡು ನಿಯಾರ್ನಿಥಿಸ್ ಉಪವರ್ಗಕ್ಕೂ ಸೇರಿದವೆಂದು ಭಾವಿಸಲಾಗಿದೆ. ಪಳೆಯುಳಿಕೆಗಳನ್ನು ಮಾತ್ರ ಬಿಟ್ಟಿರುವ ಈ ಮೂರು ವಿವಿಧ ಪಕ್ಷಿಗಳು ನಿಸರ್ಗದ ಒಂದು ಅಪೂರ್ವ ಕಾಣಿಕೆಯೆಂದು ಪಕ್ಷಿಶಾಸ್ತ್ರಜ್ಞರು ತಿಳಿದಿದ್ದಾರೆ. ಇವುಗಳಿಗೆ ಕೊಕ್ಕು ಇದೆ ; ಆದರೆ ಬಾಯಲ್ಲಿ ಹಲ್ಲಿರುವುದು ಒಂದು ವಿಶೇಷ ; ಮುಂಗೈ ಮಾರ್ಪಾಟಾಗಿ ರೆಕ್ಕೆಯಾಗಿರುವುದಲ್ಲದೆ ರೆಕ್ಕೆಯಲ್ಲಿ ಕೈಬೆರಳುಗಳೂ ಉಗುರೂ ಇರುವುದು ಒಂದು ಕೌತುಕದ ವಿಷಯ. ಬಾಲದ ಭಾಗ ಉದ್ದವಾಗಿದ್ದು ಅದರ ಎರಡೂ ಕಡೆ ಗರಿಗಳಿವೆ. ಈ ವೈಚಿತ್ರ್ಯವನ್ನು ಊಹಿಸಿದಾಗ ನಮಗೆ ಅರಿವಾಗುವುದು ಇವು ಅರ್ಧ ಉರಗ ಅರ್ಧ ಪಕ್ಷಿಗಳೆಂದು. ಇದರಿಂದಾಗಿ ಯಾವುದೂ ಒಂದು ಜಾತಿಯ ಉರಗ ಕಾಲಕ್ರಮದಲ್ಲಿ ಪಕ್ಷಿಯಾಗಿ ವಿಕಾಸ ಹೊಂದಿತು ಎಂಬ ಸಿದ್ಧಾಂತಕ್ಕೆ ಜೀವ ವಿಕಾಸಶಾಸ್ತ್ರಜ್ಞರು ಬಂದಿರುತ್ತಾರೆ.

ನೋಡಿ—ಆರ್ಕಿಯಾಪ್ಟೆರಿಕ್ಸ್ ; ಹೆಸ್ಪೆರಾರ್ನಿಸ್. (ಜಿ.ಎಂ.ಬಿ.)

**ಓಡೊನೇಟ :** ಕೊಡತಿ ಕೀಟ (ಡ್ರೇಗನ್ ಫ್ಲೈ), ಕನ್ಯಾಕೀಟ (ಡ್ಯಾಮ್ಸೆಲ್ ಫ್ಲೈ) ಮುಂತಾದ ಕೀಟಗಳನ್ನೊಳಗೊಂಡ ಒಂದು ಗಣ. ಇದರಲ್ಲಿ ಮೂರು ಉಪಗಣಗಳಿವೆ : 1 ಅನ್ನೈಸಾಪ್ಟೆರ, 2 ಜೈಗಾಪ್ಟೆರ, 3 ಅನ್ನೈಸೊಜೈಗಾಪ್ಟೆರ.

ಅನ್ನೈಸಾಪ್ಟೆರ ಉಪಗಣಕ್ಕೆ ಸೇರಿದ ಸುಮಾರು 1000 ಬೇರೆ ಬೇರೆ ಜಾತಿಯ ಕೀಟಗಳಿಗೆ ಸಾಮಾನ್ಯವಾಗಿ ಕೊಡತಿಹುಳು ಎಂಬ ಹೆಸರನ್ನು ಬಳಸುವುದುಂಟು. ಇನ್ನೊಂದು ಉಪಗಣವಾದ ಜೈಗಾಪ್ಟೆರಕ್ಕೆ ಸೇರಿದ ಕೀಟಗಳನ್ನು ಕನ್ಯಾಕೀಟಗಳೆಂದು ಕರೆಯುತ್ತಾರೆ. ಎರಡು ಗುಂಪಿನವೂ ಕೊಳ, ಕೆರೆ, ಹಳ್ಳಗಳ ಅಂಚಿನಲ್ಲಿ ಹಾರಾಡುವ ಸುಂದರ ಕೀಟಗಳು. ತಲೆ ದಪ್ಪ; ಅದರ ಇಕ್ಕೆಲಗಳಲ್ಲೂ ದೊಡ್ಡ ಹೊಳೆಯುವ ಕಣ್ಣುಗಳಿವೆ. ಎದೆ ದಪ್ಪ ಮತ್ತು ದೃಢವಾಗಿದೆ. ಹೊಟ್ಟೆ ನೀಳವಾಗಿದೆ. ಇದು 10 ಖಂಡಗಳಾಗಿ ವಿಭಾಗವಾಗಿದೆ. ಕಾಲುಗಳು ಆರು. ಸಮರೂಪದ ನಾಲ್ಕು ತೆಳುವಾದ ರೆಕ್ಕೆಗಳಿವೆ. ವಿಶ್ರಾಂತಸ್ಥಿತಿಯಲ್ಲಿ ಕೊಡತಿಕೀಟಗಳಲ್ಲಿ ರೆಕ್ಕೆಗಳು ಅಗಲವಾಗಿ ಹರಡಿಕೊಂಡಿರುತ್ತವೆ. ಆದರೆ ಕನ್ಯಾಕೀಟಗಳಲ್ಲಿ ಅವು ಜೊತೆಗೂಡಿರುತ್ತವೆ.

ಕೊಡತಿ ಮತ್ತು ಕನ್ಯಾಕೀಟಗಳ ಆಹಾರ ಸೊಳ್ಳೆಮರಿಗಳು ಹಾಗೂ ನೀರಿನಲ್ಲಿ ವಾಸಿಸುವ ಇತರ ಸಣ್ಣಪುಟ್ಟ ಕೀಟಗಳು. ಆದ್ದರಿಂದ ಸೊಳ್ಳೆಗಳ ನಿಯಂತ್ರಣದಲ್ಲಿ ಇವು ಬಹಳ ಸಹಕಾರಿಯಾಗಿವೆ.

ಮೊಟ್ಟೆಗಳ ಮೂಲಕ ಸಂತಾನಾಭಿವೃದ್ಧಿ. ಹೆಣ್ಣು ಕೀಟ ಮೊಟ್ಟೆಗಳನ್ನು ನೀರಿನಲ್ಲಿ ಅಥವಾ ಅದರ ಬಳಿ ಇಡುತ್ತದೆ. ಮೊಟ್ಟೆಯೊಡೆದು ಹೊರಬರುವ ಡಿಂಬ ಸಂಪೂರ್ಣ ಜಲವಾಸಿ. ಪ್ರೋಟೋಜೋವ ಗುಂಪಿನ ಜೀವಿಗಳೂ ಸಣ್ಣ ಸಣ್ಣ ಕೀಟಗಳೂ ಸೊಳ್ಳೆಮರಿಗಳೂ ಇದಕ್ಕೆ ಆಹಾರ. ಡಿಂಬದಿಂದ ವಯಸ್ಕ ಚಿಟ್ಟೆಗೆ ರೂಪಾಂತರ ಕ್ರಮೇಣ ಸಾಗುವುದು. ಇದರ ಅವಧಿ ಸುಮಾರು ಒಂದರಿಂದ ನಾಲ್ಕು ವರ್ಷಗಳು.

ಮೂರನೆಯ ಉಪಗಣವಾದ ಅನ್ನೈಸೊಜೈಗಾಪ್ಟೆರದಲ್ಲಿ ಕೇವಲ ಎರಡು ಪ್ರಭೇದಗಳಿವೆ.

ನೋಡಿ—ಕನ್ಯಾಕೀಟ ; ಕೊಡತಿಕೀಟ. (ಜಿ.ಪಿ.ಸಿ.)

**ಓಡೊವೇಸರ್ :** 433–493. ಇಟಲಿಯ ಮೊದಲನೆಯ ಗ್ರೀಕ್ ರೋಮನೇತರ (ಬರ್ಬರ) ದೊರೆ ; ಇಡಿಕೊವಿನ ಮಗ. ಡ್ಯಾನ್ಯೂಬ್ ನದಿಯ ಸಮೀಪದಲ್ಲಿ ಹುಟ್ಟಿದ. ಅಂತೂ ಈತ ಜರ್ಮನ್. ಈತ ಸ್ಕಿರಿಗಳ ಜೊತೆಯಲ್ಲಿ ಇಟಲಿಗೆ ಬಂದು ಚಕ್ರವರ್ತಿ ಅಂತಿಮಿಯಸನ ಸೇವೆಗೆ ಸೇರಿ ಬೇಗ ಮುಂದೆ ಬಂದ. ಇವನ ಜೊತೆಗಾರರು ಅಂತಿಮಿಯಸನನ್ನು ಗಾದಿಯಿಂದಿಳಿಸಲು ರಿಸಿಮರ್‌ಗೆ ನೆರವು ನೀಡಿದರು. ಚಕ್ರವರ್ತಿ ಜ್ಯೂಲಿಯಸ್ ನೀಪಾಸನನ್ನು ಪದಚ್ಯುತಿಗೊಳಿಸುವುದಕ್ಕೂ ಅವರು ಒರಿಸ್ಟಿಸ್‌ಗೆ ಬೆಂಬಲವಾಗಿ ನಿಂತರು. ಇದಕ್ಕೆ ಬಹುಮಾನವಾಗಿ ಆತ ರೋಮನ್ ಪ್ರಭುತ್ವದ ಜಮೀನಿನಲ್ಲಿ ಒಂದು ಭಾಗವನ್ನು ಅವರಿಗೆ ಕೊಡುವುದಾಗಿ ವಾಗ್ದಾನ ಮಾಡಿದ. ಆದರೆ ಕೊಟ್ಟ ಮಾತಿಗೆ ಒರಿಸ್ಟಿಸ್ ತಪ್ಪಿ ನಡೆದಾಗ ಅವರು ಓಡೊವೇಸರನ ನಾಯಕತ್ವದಲ್ಲಿ ದಂಗೆಯೆದ್ದರು. ಒರಿಸ್ಟಿಸ್ ಪಾವಿಯ ಪ್ರದೇಶದ ಟಿಸಿನಂನಲ್ಲಿ ತಲೆಮರೆಸಿಕೊಂಡ. ಓಡೊವೇಸರ್ ಅದರ ಮೇಲೆ ದಾಳಿಯಿಟ್ಟು ಒರಿಸ್ಟಿಸನನ್ನು ಹಿಡಿದು ಕೊಂದ (476) ; ಒರಿಸ್ಟಿಸನ ಮಗನೂ ಪಶ್ಚಿಮದ ಕೊಟ್ಟಕೊನೆಯ ರೋಮನ್ ಚಕ್ರವರ್ತಿಯೂ ಆದ ರಾಮ್ಯುಲಸ್ ಆಗಸ್ಟ್ಯುಲಸನನ್ನು ಪದಚ್ಯುತಿಗೊಳಿಸಿ ಆತ ಕ್ಯಾಂಪಾನಿಯದಲ್ಲಿ ಬದುಕಿಕೊಳ್ಳಲು ಅವಕಾಶಕೊಟ್ಟ. ನಾನಾ ರಾಷ್ಟ್ರೀಯರಿಂದ ಕೂಡಿದ ಓಡೊವೇಸರನ ಸೇನೆ ಇವನನ್ನು ದೊರೆಯೆಂದು 476ರ ಆಗಸ್ಟ್ 23ರಂದು ಘೋಷಿಸಿತು. ಕಾನ್‌ಸ್ಟ್ಯಾಂ

ಟಿನೋಪಲಿನಲ್ಲಿದ್ದ ಚಕ್ರವರ್ತಿಗೆ ಇಟಲಿ ಅಧೀನವಾಗಿದೆಯೆಂದು ನೆಪಮಾತ್ರಕ್ಕೆ ಒಪ್ಪಿಕೊಂಡು, ಅದನ್ನು ತನ್ನ ಆಡಳಿತದ ಮುಷ್ಟಿಯೊಳಗಿಟ್ಟುಕೊಳ್ಳಬೇಕೆಂಬುದು ಈತನ ಇಚ್ಛೆಯಾಗಿತ್ತು. ತನ್ನನ್ನು ಇಟಲಿಯಲ್ಲಿ ರೋಮನ್ ಚಕ್ರವರ್ತಿಯ ಶ್ರೀಮಂತ ಪ್ರತಿನಿಧಿಯೆಂದು (ಪಟ್ರಿಷನ್) ಪರಿಗಣಿಸಬೇಕೆಂದೂ ಇಟಲಿಯ ಆಡಳಿತವನ್ನು ತನಗೆ ಒಪ್ಪಿಸಬೇಕೆಂದೂ ಕೋರಿ ಕಾನ್‍ಸ್ಟ್ಯಾಂಟಿನೋಪಲಿನ ಜೀನೋಗೆ ನಿಯೋಗವೊಂದನ್ನು ಕಳಿಸಿದ. ಓಡೊವೇಸರನ ಮೊದಲನೆಯ ಬೇಡಿಕೆಗೆ ಒಪ್ಪಿಗೆ ದೊರಕಿತು. ಆದರೆ ಡ್ಯಾಲ್ಮೇಷಿಯದಲ್ಲಿದ್ದ ಜ್ಯೂಲಿಯಸನನ್ನು ಚಕ್ರವರ್ತಿಯೆಂದು ಸ್ವೀಕರಿಸಬೇಕೆಂದು ಜೀನೋ ಸೂಚಿಸಿದ. ಓಡೊವೇಸರ್ ಇದಕ್ಕೊಪ್ಪಲಿಲ್ಲ. ಅಷ್ಟರಲ್ಲೇ (480) ನೀಪಾಸ್ ಕೊಲೆಗೀಡಾದ. ರೋಮಿನ ಸೆನೆಟ್ ಓಡೊವೇಸರನಿಗೆ ಬೆಂಬಲ ನೀಡಿತು. ತನಗೆ ನೆರವಾದ ಜರ್ಮನಿಕರಿಗೆ ಓಡೊವೇಸರ್ ಜಮೀನು ಹಂಚಿಕೊಟ್ಟ. ಆದರೂ ಅವರಲ್ಲಿ ಅಶಾಂತಿಯಿತ್ತು. ಕೊನೆಗೂ ಓಡೊವೇಸರ್ ಅದನ್ನಡಗಿಸಿದ. ಜೀನೋ ವಿರುದ್ಧವಾಗಿ ತನಗೆ ನೆರವು ನೀಡಬೇಕೆಂದು ಓಡೊವೇಸರನ್ನು ಇಲಸ್ ಪ್ರಾರ್ಥಿಸಿದ. ಓಡೊವೇಸರ್ ಒಪ್ಪಲಿಲ್ಲ. ಇಲಸನ ಅಧೀನದಲ್ಲಿದ್ದ ಪ್ರಾಂತ್ಯಗಳನ್ನೇ ಮುತ್ತಿದ. ಓಡೊಹೇಸರ್ ಪ್ರಬಲನಾಗುತ್ತಿದ್ದುದನ್ನು ಜೀನೋವೂ ಸಹಿಸಲಿಲ್ಲ. ಇವನ ಬಲಗುಂದಿಸಲು ಲೆನ್ಜಿಗೂ ವಿಯೆನ್ನವಿಗೂ ನಡುವೆ ಇದ್ದ ರೂಗಿಯನ್ನು ಎತ್ತಿಕಟ್ಟಿದ. ಓಡೊವೇಸರ್ ಡ್ಯಾನ್ಯೂಬ್ ನದಿ ದಾಟಿ ರೂಗಿಯನ್ನು ಅವನ ನೆಲದಲ್ಲೇ ಸೋಲಿಸಿ ಅವನನ್ನೂ ಅವನ ಹೆಂಡತಿಯನ್ನೂ ಸೆರೆಹಿಡಿದು ಕೊಂದು ಸ್ವಲ್ಪ ಕಾಲಾನಂತರ ಅವನ ಮಗನನ್ನೂ ಸೋಲಿಸಿ ಅಡಗಿಸಿದ. ಡ್ಯಾನ್ಯೂಬ್ ಪ್ರದೇಶದಲ್ಲಿ ತನಗೆ ನೆಮ್ಮದಿಯಿಲ್ಲವೆಂದು ಓಡೊವೇಸರನಿಗೆ ಮನವರಿಕೆಯಾಯಿತು. ಆದ್ದರಿಂದ ಅಲ್ಲಿದ್ದ ರೋಮನರನ್ನು ಇಟಲಿಗೆ ಕರೆತರಿಸಿದ.

ಆ ವೇಳೆಗೆ ಯೂರಿಕ್ ದೊರೆ ಸ್ಪೇನ್ ಮತ್ತು ಪ್ರಾವಾನ್ಸ್‍ಗಳ ಬಹುಭಾಗವನ್ನಾಕ್ರಮಿಸಿಕೊಂಡು ಓಡೊವೇಸರನಿಗೆ ತಲೆನೋವಾದ. ಆವನ ಆಕ್ರಮಣವನ್ನು ಓಡೊವೇಸರ್ ಹಿಂತಳ್ಳಿದನಾದರೂ ಆಕ್ರಮಣಕ್ಕೊಳಗಾದ ಪ್ರದೇಶದಲ್ಲಿ ಕೆಲಭಾಗ ಅವನ ಕೈಯಲ್ಲೇ ಉಳಿಯಿತು.

489ರಿಂದ 439ರ ವರೆಗಿನ ಕಾಲದಲ್ಲಿ ಆಸ್ಟ್ರೋಗಾತ್‍ಗಳ ತಿಯೊಡೊರಿಕ್ ಮಾಡಿದ ದಾಳಿಗಳ ಫಲವಾಗಿ ಕ್ರಮೇಣ ಓಡೊವೇಸರನ ಶಕ್ತಿ ಕುಂದಿತು. ಈತನ ಅಧೀನದಲ್ಲಿದ್ದ ಪ್ರದೇಶಗಳು ಒಂದೊಂದಾಗಿ ಕೈಬಿಟ್ಟುವು. ಕೊನೆಗೆ 493ರಲ್ಲಿ ತಿಯೊಡೊರಿಕ್ ತನ್ನ ಕೈಯಿಂದಲೇ ಓಡೊವೇಸರನನ್ನು ಕೊಂದ. ಈತನ ಪರಿವಾರದವರೂ ಹಿಂಬಾಲಕರೂ ಸಾವಿಗೆ ಈಡಾದರು. ಇವನ ವಂಶವೇ ಅಳಿಸಿಹೋಯಿತು.

(ಎಚ್‍.ಆರ್‍.ಆರ್‍.ಐ.)

**ಓಡೋಮೀಟರ್ :** ದೂರಮಾಪನಸಾಧನವು ಗಮಿಸಿದ ದೂರವನ್ನು ನಿರ್ದಿಷ್ಟ ಸಂಖ್ಯೆಗಳಲ್ಲಿ ಸೂಚಿಸುವ ಉಪಕರಣ. ಕಾರ್, ಮೋಟಾರ್ ಮುಂತಾದ ಸಂಚಾರವಾಹನಗಳಲ್ಲಿಯೂ ಇದರ ಉಪಯೋಗವಿದೆ. ಅವುಗಳಲ್ಲಿ ವೇಗಮಾಪಕಕ್ಕೆ (ಸ್ಪೀಡೋಮೀಟರ್) ಇದನ್ನು ಲಗತ್ತಿಸಿರುತ್ತಾರೆ. ಭೂಮಿಯನ್ನು ಅಳತೆ ಮಾಡುವುದು ಭೂವಿಜ್ಞಾನದಲ್ಲಿಯೂ ಮೋಜಣಿಯಲ್ಲಿಯೂ ಒಂದು ಪ್ರಮುಖ ಕ್ರಿಯೆ. ಅಲ್ಲಿ ಟೇಪ್, ಚೈನ್ ಮುಂತಾದ ನೇರ ಸಾಧನಗಳೂ ಪಾಸೋಮೀಟರ್, ಪೆಡೋಮೀಟರ್, ಸ್ಪೀಡೋಮೀಟರ್ ಎಂಬ ಪರೋಕ್ಷವಾಗಿ ದೂರ ತಿಳಿಯಲಾಗುವ ಉಪಕರಣಗಳೂ ಬಳಕೆಯಲ್ಲಿವೆ. ಓಡೋಮೀಟರ್ ಇಂಥ ಒಂದು ಉಪಕರಣ.

ಓಡೋಮೀಟರನ್ನು ಚಲಿಸುವ ವಾಹನಕ್ಕೆ ಜೋಡಿಸುತ್ತಾರೆ. ವಾಹನ ಒಂದು ಸ್ಥಳದಿಂದ ಇನ್ನೊಂದು ಸ್ಥಳಕ್ಕೆ ಹೋಗಿರುವಾಗ ಅದರ ಚಕ್ರಗಳು ಎಷ್ಟು ಪೂರ್ಣ ಪರಿಭ್ರಮಣೆಗಳನ್ನು ಮಾಡಿವೆ ಎಂಬುದನ್ನು ಓಡೋಮೀಟರ್ ಸೂಚಿಸುವುದು. ಈ ಸಂಖ್ಯೆ $n$, ಮತ್ತು ಚಕ್ರದ ವ್ಯಾಸ $d$ (ಅಳೆಯಬಹುದು) ಆಗಿದ್ದರೆ ವಾಹನ ಸಂಚರಿಸಿದ ದೂರ $\pi dn$ ಎಂದು ಸುಲಭವಾಗಿ ತಿಳಿಯುತ್ತದೆ. ಮಟ್ಟಸ ನೆಲದ ಮೇಲೆ ಮಾತ್ರ ಈ ಉಪಕರಣ ಸಮರ್ಪಕ ಫಲಿತಾಂಶವನ್ನು ನೀಡಬಲ್ಲುದು. ಹಳ್ಳ ತಿಟ್ಟುಗಳಿಂದ ಕೂಡಿದ ನೆಲದ ಮೇಲೆ, ಗಾಲಿಗಳು ಉರುಳದೆ ಸರಿಯುವ ಅಥವಾ ಜಾರುವ ಎಡೆಗಳಲ್ಲಿ ಓಡೋಮೀಟರಿನಿಂದ ದೊರೆಯುವ ಫಲಿತಾಂಶ ಸಮರ್ಪಕ ಫಲಿತಾಂಶಕ್ಕಿಂತ ಸಹಜವಾಗಿ ಕಡಿಮೆ ಇರುತ್ತದೆ. (ಜಿ.ಟಿ.ಜಿ.)

**ಓಣಂ :** ಕೇರಳೀಯರ ಅತ್ಯಂತ ಪ್ರಮುಖ ಹಾಗೂ ಸಾಮೂಹಿಕ ಹಬ್ಬ. ಕೇರಳ ರಾಜ್ಯದಿಂದ ಹೊರಗಿರುವ ಮಲಯಾಳಿಗಳೂ ರಾಜ್ಯದ ಒಳಗೇ ಇರತಕ್ಕ ಮಲಯಾಳಿಗಳಲ್ಲದ ಇತರರೂ ಈ ಹಬ್ಬವನ್ನು ಕೇರಳದ ರಾಷ್ಟ್ರೀಯ ಹಬ್ಬವೆಂದು ಪರಿಗಣಿಸಿ, ಹಬ್ಬದ ಸಡಗರದಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪಾಲುದಾರರಾಗುತ್ತಾರೆ.

ಈ ಹಬ್ಬ ಮಲಯಾಳಿ ಶಕೆಯ ಕೊಲ್ಲ ವರ್ಷದ ಮೊದಲ ತಿಂಗಳಾದ ಚಿಂಙಮ್ (ಸಿಂಹ)ನಲ್ಲಿ ಬರುತ್ತದೆ. ರೋಮನ್ ಕ್ಯಾಲೆಂಡರ್ ಪ್ರಕಾರ ಇದು ಆಗಸ್ಟ್–ಸೆಪ್ಟೆಂಬರ್‍ನಲ್ಲೂ ಶಕವರ್ಷದ ಪ್ರಕಾರ ಶ್ರಾವಣಮಾಸದಲ್ಲೂ ಬೀಳುತ್ತದೆ.

ವಾಮನಾವತಾರದಂದು ಅವನ ಪದಘಾತದಿಂದಾಗಿ ಪಾತಾಳಗತನಾದ ಬಲಿಚಕ್ರವರ್ತಿ ವರ್ಷಕ್ಕೊಮ್ಮೆ ಈ ಹಬ್ಬದಂದು ಮತ್ತೆ ಭೂಲೋಕಕ್ಕೆ ಬರುವನೆಂದೂ ಪ್ರಜಾವತ್ಸಲನೂ ಧರ್ಮಿಷ್ಠನೂ ಆದ ಅವನ ಹೆಸರಿನಲ್ಲಿ ಜನ ಹಬ್ಬ ಆಚರಿಸಬೇಕೆಂದೂ ಐತಿಹ್ಯವಿದೆ.

ತಿರುವೋಣಂ ದಿನವನ್ನು ಕೇರಳೀಯರು ಅತ್ಯಂತ ಆಸಕ್ತಿಯಿಂದಲೂ ಕುತೂಹಲದಿಂದಲೂ ನಿರೀಕ್ಷಿಸುವರು. ಹೀಗೆ ಸ್ವಾಭಾವಿಕವಾಗಿಯೇ ಓಣಂ ಕೇರಳದ ಅತ್ಯಂತ ಶ್ರೇಷ್ಠ ನಾಡಹಬ್ಬವಾಗಿ ಪರಿಣಮಿಸಿದೆ. ದಾನದಯಾಸಂಪನ್ನನಾಗಿದ್ದ ತಮ್ಮ ಚಕ್ರವರ್ತಿಯ ಆಳ್ವಿಕೆಯಲ್ಲಿ ತಾವು ಅನುಭವಿಸಿದ ಸುಖಸಂತೃಪ್ತಿಗಳನ್ನು ಕೊಂಡಾಡುವ ಸಲುವಾಗಿ ಓಣಂ ಅನ್ನು ಆಚರಿಸುತ್ತಾರೆ, ಕೇರಳದ ಜನ. ಅಲ್ಲದೆ, ಹೆಚ್ಚು ಸಮೃದ್ಧವೂ ಸುಖಶಾಂತಿದಾಯಕವೂ ಆದ ಭವಿಷ್ಯವನ್ನು ತರುವ ಹರಿಕಾರನೆಂಬ ದೃಷ್ಟಿಯಿಂದಲೂ ಓಣಂ ಅವರಿಗೆ ಅರ್ಥಪೂರ್ಣವಾಗಿದೆ.

ಅತ್ತಂ (ಹಸ್ತಾ ನಕ್ಷತ್ರದ ದಿನ) ದಿನದಿಂದ, ಎಂದರೆ ತಿರುವೋಣಂಗಿಂತ ಹತ್ತು ದಿನಗಳಿಗಿಂತ ಮೊದಲೇ ಓಣಂ ಹಬ್ಬಕ್ಕೆ ಏರ್ಪಾಟುಗಳನ್ನು ಮಾಡತೊಡಗುತ್ತಾರೆ. ಹಳ್ಳಿ ದೊಡ್ಡ ಪಟ್ಟಣ ಎಂಬ ಭೇದವಿರದೆ ಎಲ್ಲೆಡೆಯೂ ಎಲ್ಲರೂ ಆ ದಿನಗಳಲ್ಲಿ ಬಗೆಬಗೆಯ ಹೂಗಳನ್ನಾಯ್ದು ವಿಧವಿಧವಾದ ಅಲಂಕಾರಗಳನ್ನು ಮಾಡುತ್ತಾರೆ. ಹೀಗೆ ಅಲಂಕಾರಗೊಳಿಸುವುದನ್ನು ಅತ್ತಪ್ಪೂವಿಡಲ್ ಎಂದೂ ಅಲಂಕೃತ ಭಾಗವನ್ನು ಅತ್ತಪ್ಪೂಕ್ಕಳಂ ಎಂದೂ ಹೇಳುವರು. ಈ ಪುಷ್ಪಾಲಂಕಾರಕ್ಕೆ ಸಾಮಾನ್ಯವಾಗಿ ಕೆಂಪು ದಾಸವಾಳ, ತುಂಬೆ, ತುಳಸಿ, ಮುಟ್ಟಿದರೆ ಮುನಿ ಗಿಡದ ಹೂ, ನೀಲಿ ಹೂ, ತಂಗಡಿ ಜಾತಿಯ ಹೂ, ಸೇವಂತಿಗೆ ಇತ್ಯಾದಿಗಳನ್ನು ಬಳಸುವುದು ರೂಢಿ.



ಹೆಂಗಸರು ಮಕ್ಕಳು ಉಯ್ಯಾಲೆ ಆಡುವುದು ಓಣಂ ಹಬ್ಬದ ಒಂದು ವಿಶೇಷ ಆಚರಣೆ



ಕೈಚಪ್ಪಾಳಿ ಆಟ—ಕೈಕೊಟ್ಟಿಕಳಿ

ಪಳ್ಳಿಗಳಲ್ಲಿ ಮಕ್ಕಳು ಓಣಂ ಹಬ್ಬದ ಮಹತ್ತ್ವವನ್ನೂ ಮಹಾಬಲಿಯ ಕೀರ್ತಿಯನ್ನೂ ವಿವರಿಸುವ ಜನಪದಗೀತೆಗಳನ್ನು ಹಾಡುತ್ತ ಮನೆಯಿಂದ ಮನೆಗೆ ಸಾಗುತ್ತಿರುವುದನ್ನು ಕಾಣಬಹುದು. ಉತ್ತರ ಕೇರಳದಲ್ಲಿ ಕೆಲವೆಡೆ, ಹೂವಿನ ಅಲಂಕಾರದ ಮಧ್ಯಭಾಗದಲ್ಲಿ ಮಣ್ಣಿನಿಂದ ರಚಿತವಾದ ಓಣತ್ತಪ್ಪನ (ಮಹಾಬಲಿಚಕ್ರವರ್ತಿ) ಮೂರ್ತಿಯನ್ನಿಡುವ ಪರಿಪಾಠವೂ ಉಂಟು. ದಕ್ಷಿಣ ಕೇರಳದಲ್ಲಿ (ಹಳೆಯ ದಕ್ಷಿಣ ತಿರುವಾಂಕೂರು ಪ್ರದೇಶ), ಮಣ್ಣಿನ ಪಾವಟಿಗೆಗಳ ಮೇಲೆ ದಿನದಿನವೂ ಹೂವಿನ ಅಲಂಕಾರ ಮಾಡಿ ತುತ್ತ ತುದಿಯ ಪಾವಟಿಗೆಯ ಮೇಲೆ ಸೆಗಣಿಯಿಂದ ಮಾಡಿದ ಎರಡೂವರೆ ಅಂಗುಲ ಎತ್ತರದ ಗಣಪನನ್ನೂ ಇಡಲಾಗುವುದು.

ಪುಷ್ಪಾಲಂಕಾರ ಹತ್ತು ದಿನಗಳ ತನಕ ನಡೆಯುತ್ತದೆ. ತಿರುವೋಣಂ ದಿನದ ಸಂಜೆಗೆ ಸಮಾರಂಭ ಕೊನೆಗೊಳ್ಳುತ್ತದೆ. ಪ್ರತಿದಿನವೂ ನಿರ್ಮಾಲ್ಯವನ್ನು ಹಸೆಯ ಮೇಲಿನಿಂದ ತೆಗೆದು ಮನೆಯ ಮಾಡದ ಮೇಲೆ ಎಸೆಯುವರು, ಇಲ್ಲವೇ ನೀರಿನಲ್ಲಿ ತೇಲಿಬಿಡುವರು. ಕೇರಳದಲ್ಲಿರುವ ಬಹುತೇಕ ಹಿಂದೂ ಧರ್ಮೀಯರು ಸ್ವ ಇಚ್ಛೆಯಿಂದ ಈ ಹಬ್ಬವನ್ನು ಆಚರಿಸುವರು. ಈ ಸಂದರ್ಭದಲ್ಲಿ ಅನ್ನ, ಬತ್ತ, ಬಾಳೆಹಣ್ಣು, ಎಳನೀರು, ಪಾಯಸ, ಪೂವಡ (ಅಕ್ಕಿ ಮತ್ತು ತಾಳೆಬೆಲ್ಲದಿಂದ ಮಾಡಿದ ಒಂದು ಬಗೆಯ ಕಡುಬು)—ಇವುಗಳನ್ನು ನೈವೇದ್ಯವಾಗಿ ಅರ್ಪಿಸುವ ರೂಢಿಯಿದೆ. ನಂದಾದೀಪಿಗೆಯೊಂದು ಉರಿಯುತ್ತಲೇ ಇರುತ್ತದೆ. ಕೆಲವೊಂದು ಪ್ರದೇಶಗಳಲ್ಲಿ ಬಿಲ್ಲುಬಾಣಗಳ ಪ್ರತಿರೂಪವನ್ನು ಇಟ್ಟು ಅದರಿಂದ ಪೂವಡ ಮತ್ತು ಗಣಪತಿಗಳನ್ನು ಹೊಡೆಯಲಾಗುತ್ತದೆ. ಬಳಿಕ, ನೆರೆದಿರುವ ಜನರಿಗೆ ಪ್ರಸಾದ ವಿನಿಯೋಗವಾಗುವುದು.

ಹಬ್ಬಕ್ಕೆ ಮೊದಲು ಮನೆಗಳಲ್ಲಿ ಸಾರಣೆಕಾರಣೆಗಳ ಏರ್ಪಾಟುಗಳು ನಡೆಯುತ್ತವೆ. ಮನೆಯಂಗಳ ಶುಚಿಯಾಗುತ್ತದೆ. ಸೆಗಣಿ ಸಾರಿಸಿ, ಮಹಾಬಲಿಯ ಆಗಮನಕ್ಕೆ ಚೊಕ್ಕಟವಾದ ಪರಿಸರ ನಿರ್ಮಿತವಾಗುತ್ತದೆ. ಗಂಡಸರು, ಹೆಂಗಸರು, ಮಕ್ಕಳು—ಎಲ್ಲರೂ ತಮ್ಮ ನೆಚ್ಚಿನ ಮಾವೇಲಿ ಮನ್ನನನ (ಮಹಾಬಲಿ ರಾಜ) ಸ್ವಾಗತಕ್ಕೋಸ್ಕರ ಸಡಗರದಿಂದ ಸನ್ನದ್ಧರಾಗುತ್ತಾರೆ. ತಿರುವೋಣಂ ದಿನ ಮಹಾಬಲಿ ಪ್ರತಿಯೊಬ್ಬರ ಮನೆಯನ್ನೂ ಸಂದರ್ಶಿಸುವನೆಂಬ ನಂಬಿಕೆಯಿಂದ ಎಲ್ಲರೂ ಉತ್ರಾಡಂ (ಉತ್ತರಾಷಾಢ) ದಿನದ (ತಿರುವೋಣದ ಹಿಂದಿನ ದಿನ) ಹೊತ್ತಿಗೆ ಎಲ್ಲವನ್ನೂ ಅಣಿಗೊಳಿಸುತ್ತಾರೆ. ಅಂದು ಜನ ಎಷ್ಟು ಸಡಗರದಲ್ಲಿರುತ್ತಾರೆಂದರೆ ಅದರ ಬಗೆಗೆ ಮಲಯಾಳದಲ್ಲಿ ಒಂದು ನುಡಿಗಟ್ಟೇ ಬೆಳೆದು ಬಂದಿದೆ: ಉತ್ರಾಡಪ್ಪಾಚ್ಚಿಲ್ (ಉತ್ತರಾಷಾಢದ ಧಾವಂತ) ಎಂದರೆ ಆ ಹಬ್ಬದ ಸಡಗರ ಎಂದರ್ಥ.

ಉಳಿದೆಲ್ಲಕ್ಕಿಂತ ಹೆಚ್ಚಾಗಿ ತಿರುವೋಣಂ ದಿನದ ಮಧ್ಯಾಹ್ನದ ಊಟಕ್ಕೂ ವಿಶೇಷತೆ ಇದೆ. ಶ್ರೀಮಂತರಾಗಲಿ ಬಡವರಾಗಲಿ ತಮ್ಮಿಂದಾದಷ್ಟು ಅದ್ದೂರಿಯಾಗಿ ಅಂದು ಔತಣವನ್ನು ಮಾಡುತ್ತಾರೆ. ಮಲಯಾಳದಲ್ಲಿ ಈ ಬಗೆಗೆ ಒಂದು ಹೇಳಿಕೆಯೇ ಇದೆ: ಕಾಣಂ ವಿಟ್ಟುಂ ಓಣಂ ಉಣ್ಣಣಂ (ಮನೆಯಲ್ಲಿರುವ ಯಾವುದೇ ಧಾನ್ಯವನ್ನು ಮಾರಿಯಾದರೂ ಓಣಂ ಹಬ್ಬದೂಟವನ್ನು ಮಾಡಬೇಕು). ಔತಣಕ್ಕೆ ಬೇರೆ ಬೇರೆ ಬಗೆಯ ಭಕ್ಷ್ಯಭೋಜ್ಯಗಳನ್ನೂ ಪಾಯಸವನ್ನೂ ಮಾಡುವರು. ಬಡಿಸುವವರ ವಿನಾ ಕುಟುಂಬದ ಎಲ್ಲ ಸದಸ್ಯರೂ ಒಟ್ಟಿಗೆ ಕುಳಿತು ಊಟಮಾಡುತ್ತಾರೆ. ಬಾಳೆಯೆಲೆಗಳಲ್ಲಿ, ಪುಳಿಶ್ಶೇರಿ, ಎರಿಶ್ಶೇರಿ, ಅವಿಯಲ್, ತೋರನ್, ಪಚ್ಚಡಿ, ಕಿಚ್ಚಡಿ ಮತ್ತು ಮಾವಿನಕಾಯಿ, ನಿಂಬೆಹಣ್ಣು, ಶುಂಠಿ, ನೆಲ್ಲಿಕಾಯಿ ಇವುಗಳಿಂದ ಮಾಡಿದ ಉಪ್ಪಿನಕಾಯಿಗಳನ್ನು ಬಡಿಸುವರು. ಅಗಲವಾದ ಹಪ್ಪಳಗಳು, ಉಪ್ಪೇರಿಗಳು (ಹಲಸು, ಬಾಳೆಗಳಿಂದಾದುವು), ನೇಂದ್ರಬಾಳೆಹಣ್ಣುಗಳು—ಇವೆಲ್ಲ ತಿರುವೋಣಂ ಹಬ್ಬದೂಟದಲ್ಲಿ ಕಾಣಸಿಗುವ ಪದಾರ್ಥಗಳು.

ಬಹುಮಾನ ವಿನಿಯೋಗ ಕೂಡ ಓಣಂ ಹಬ್ಬದ ಪ್ರಧಾನ ಅಂಗವಾಗಿದೆ. ಗುಡಿಸಲು ನಿವಾಸಿಗಳಾದ ಗೇಣಿದಾರರು (ಕುಡಿಯಾನ್) ಮತ್ತು ಸೇವಕರು ತಮ್ಮ ಧಣಿಗಳಿಗೆ (ಜನ್ಮಿ, ತಂಬುರಾನ್) ಬಹುಮಾನಗಳನ್ನು ತರುವರು. ಆಗ ಜಮೀನುದಾರ ಅವರಿಗೆ ಬತ್ತ, ತರಕಾರಿ, ಹೊಸ ಬಟ್ಟೆ—ಹೀಗೆ ಮರುಕಾಣಿಕೆಯನ್ನೂ ಸಲ್ಲಿಸುವನು. ಈ ಬಹುಮಾನ ವಿನಿಯೋಗ ಅವರವರ ಅಂತಸ್ತಿಗೆ ಅನುಗುಣವಾಗಿಯೇ ನಡೆಯುತ್ತದೆ. ಗೇಣಿದಾರರು ತಾವು ಬೆಳೆಸಿದ ಕುಂಬಳಕಾಯಿ, ಬಾಳೆಹಣ್ಣುಗಳನ್ನೂ ಕಮ್ಮಾರರೇ ಮೊದಲಾದವರು ತಾವು ನಿರ್ಮಿಸಿದ ಹತ್ಯಾರುಗಳನ್ನೂ ಯಜಮಾನನಿಗೆ ಕಾಣಿಕೆಯಾಗಿ ಅರ್ಪಿಸುವರು. ಈ ಬಹುಮಾನಗಳನ್ನು ಓಣಕ್ಕಾಟ್ಟ (ಓಣಂ ಕಾಣಿಕೆ) ಎಂದು ಕರೆಯುವರು. ಮಲಯಾಳಂ ಸಾಹಿತ್ಯದಲ್ಲಿ, ಹೇಗೆ ಗೇಣಿದಾರರು ತಮ್ಮ ಯಜಮಾನನಿಗೆ ಕಾಣಿಕೆಯೀಯುವ ಸಲುವಾಗಿ ಪ್ರೀತಿಯಿಂದ ಬಾಳೆಹಣ್ಣು, ಸೌತೆಕಾಯಿಗಳನ್ನು ಬೆಳೆಯುವರೆಂಬುದು ನಾನಾ ಕಡೆಗಳಲ್ಲಿ ವರ್ಣಿತವಾಗಿದೆ.

ಓಣಂ ಹಬ್ಬದ ಕಾಲದಲ್ಲಿ ಕುಟುಂಬದ ಸಕಲರೂ ಮನೆ ಸೇರುವುದು ಪದ್ಧತಿ. ಕಾರಣಾಂತರದಿಂದ ಮನೆಯಿಂದ ದೂರ ವಾಸಮಾಡಬೇಕಾಗಿ ಬಂದ ಮಕ್ಕಳು ಮರಿಗಳೂ ಆ ಹೊತ್ತಿಗೆ ಹೇಗೋ ಮನೆ ಸೇರಲು ಪ್ರಯತ್ನಿಸುವರು. ಅವರಿಗೆ ಬರಲಾಗದಿದ್ದರೆ ಅವರು ತಮ್ಮ ತಂದೆತಾಯಿಯರಿಗೆ, ಹಿರಿಯರಿಗೆ, ಸೋದರ ಸೋದರಿಯರಿಗೆ ಬಹುಮಾನಗಳನ್ನು ಕಳುಹಿಸಿಕೊಡುತ್ತಾರೆ. ತಂದೆತಾಯಿಯರು, ಮದುವೆಯಾದ ತಮ್ಮ ಮಗಂದಿರಿಗೆ ತರಕಾರಿ ಇತ್ಯಾದಿಗಳನ್ನು ಕಳುಹಿಸಿಕೊಡುವರು. ಸಾಮಾನ್ಯವಾಗಿ ತಂದೆತಾಯಿಯರಿಗೆ ಕಳುಹಿಸುವ ಬಹುಮಾನಗಳೆಂದರೆ ವೀಳೆಯದೆಲೆ,



ಮಕ್ಕಳು ಕೂಡಿ ಆಡುವ ಆಟ—ಕುಂಬಿತ್ತುಳ್ಳಲ್

ತಂಬಾಕು, ಹೊಸ ಬಟ್ಟೆಗಳು. ಹೊಸದಾಗಿ ಮದುವೆಯಾದ ದಂಪತಿಗಳು ತಮ್ಮ ತಂದೆ ತಾಯಿಯರಿಗೆ ಬಹುಮಾನ ಕಳುಹಿಸುವ ರೂಢಿಯೂ ಇದೆ. ಇದಕ್ಕೆ ಪ್ರತಿಯಾಗಿ ಆಭರಣ ಗಳನ್ನೂ ಹಣವನ್ನೂ ಹೊಸ ಬಟ್ಟೆಗಳನ್ನೂ ಮದುಮಕ್ಕಳಿಗೆ ಒದಿಸುವರು. ಓಣಂ ಕಾಲ ದಲ್ಲಿ ಕೊಡಲಾಗುವ ಹೊಸ ಬಟ್ಟೆಗಳನ್ನು ಓಣ ಕ್ಕೋಡಿ ಇಲ್ಲವೇ ಓಣಪ್ಪುಡವ ಎಂದು ಕರೆಯು ವುದಿದೆ. ತಂದೆತಾಯಿಯರನ್ನೂ ಹಿರಿಯರನ್ನೂ ಓಣಂ ಸಂದರ್ಭದಲ್ಲಿ ಸಂದರ್ಶಿಸಿ ಬಹುಮಾನ ಕೊಡುವ ಪದ್ಧತಿಯನ್ನು ಓಣಂ ಕಾಣಲ್ ಎಂದು ಕೆಲವೆಡೆ ಕರೆಯುತ್ತಾರೆ.

ಮನೋರಂಜನೆಯ ವಿಭಾಗದಲ್ಲೂ ಓಣಂ ಹಬ್ಬಕ್ಕೆ ತನ್ನದೇ ಆದ ಸ್ಥಾನವಿದೆ. ಗಂಡಸರು, ಹೆಂಗಸರು, ಮಕ್ಕಳು—ಇವರೆಲ್ಲ ಭಾಗವಹಿಸು ವುದಕ್ಕೆ ಅನುಕೂಲವಾದ ಅನೇಕ ಆಟೋಟ ಗಳ ಸ್ಪರ್ಧೆಗಳೂ ಸಾಂಸ್ಕೃತಿಕ ಚಟುವಟಿಕೆ ಗಳೂ ವಿಜೃಂಭಣೆಯಿಂದ ಜರುಗುತ್ತವೆ. ಉಯ್ಯಾಲೆಯಲ್ಲಿ ತೂಗುವುದು, ತಿರುವಾದಿರ ಕ್ಕಳಿ, ಕೋಲಾಟ, ತುಂಬಿತ್ತುಳ್ಳಲ್—ಇವೆಲ್ಲ ಹೆಂಗಸರ ಆಟಗಳು. ವರ್ತುಲಾಕಾರದಲ್ಲಿ ಮುತ್ತೈದೆಯರೂ ಅವಿವಾಹಿತ ತರುಣಿ ಯರೂ ನಿಂತು ಚಪ್ಪಾಳೆ ತಟ್ಟುತ್ತ ತಾಳಕ್ಕೆ ತಕ್ಕಂತೆ ಹಾಡು ಹೇಳಿಕೊಳ್ಳುತ್ತ ನೃತ್ಯವಾಡುತ್ತಾರೆ. ಗಂಡಸರಿಗೆ ಕುಟ್ಟಿಯುಂ ಕೋಲುಂ, ತಲಪ್ಪಂಡು, ಕಿಳಿಕಳಿ ಮೊದಲಾದ ಆಟಗಳಿವೆ. ಹಾಗೆಯೇ ಕಯ್ಯಾಂಗಳಿ, ಓಣತ್ತಲ್ ಮೊದಲಾದ ಸ್ಪರ್ಧೆಗಳೂ ಬಿರುಸಿನಿಂದ ಜರುಗುತ್ತವೆ. ಕುಮ್ಮಿ, ಪಱಿಕಳಿ, ವಟ್ಟುಕಳಿ, ಅಮ್ಮಾನ, ತಲಯಾಟ್ಟಂ ಕಳಿ, ಪಶುವುಂ ಪುಲಿಯುಂ—ಇತ್ಯಾದಿ ಆಟಗಳನ್ನು ಹುಡುಗಿಯರೂ ಹೆಂಗಸರೂ ಆಡುತ್ತಾರೆ.



ಓಣಂ ಹೂವಿನ ಹಬ್ಬ. ಇಲ್ಲಿ ಹೆಣ್ಣುಮಕ್ಕಳು ಹೂಗಳಿಂದ ಸೊಗಸಾದ ಅಲಂಕರಣವನ್ನು ಜೋಡಿಸುತ್ತಿದ್ದಾರೆ

ಹೀಗೆ ಹಬ್ಬದೂಟವುಂಡು, ಸಂತೋಷದಿಂದ ನಲಿದಾಡಿ ಕುಣಿದಾಡಿ ಜನ ತಮ್ಮ ಹಳೆಯ ಧರ್ಮಿಷ್ಠ ರಾಜನ ಆಗಮನದ ಸಂಭ್ರಮವನ್ನು ಸ್ನೇಹಾರ್ದ್ರಹೃದಯ ದಿಂದ ಆಚರಿಸುತ್ತಾರೆ. ಉತ್ತರಾಡದಿಂದ ಹಿಡಿದು ನಾಲ್ಕು ದಿನಗಳ ವರೆಗೆ ಹಬ್ಬದ ವೈಭವೋಪೇತ ವಾತಾವರಣವಿರುತ್ತದೆ. ಒನ್ನಾಂ ಓಣಂ (ಒಂದನೆಯ ಓಣಂ), ತಿರುವೋಣಂ, ಮೂನ್ನಾಂ ಓಣಂ, ನಾಲಾಂ ಓಣಂ—ಎಂಬುದಾಗಿ ಈ ದಿನಗಳನ್ನು ಹೆಸರಿಸುವರು. ನಾಲ್ಕು ದಿನಗಳ ಹಬ್ಬದ ಸಂಭ್ರಮ ಮುಗಿದ ತರುವಾಯ ಐದನೆಯ ದಿನ ಎಂದಿನಂತೆ ಕೇರಳದ ಜನ ತಮ್ಮ ದೈನಂದಿನ ಕೆಲಸಕಾರ್ಯಗಳಲ್ಲಿ ನಿರತರಾಗುತ್ತಾರೆ. ಅವರಲ್ಲಿ ರಜಾದಿನಗಳನ್ನು ಸುಖವಾಗಿ ಅನುಭವಿಸಿದ ಸಂತೃಪ್ತಿ ತಂಗಿರುತ್ತದೆ.

ಭಾರತಕ್ಕೆ ಸ್ವಾತಂತ್ರ್ಯ ಬರುವ ಮೊದಲು, ಕೇರಳ ಅನೇಕ ರಾಜಾಡಳಿತ ಪ್ರದೇಶಗಳಾಗಿ ವಿಭಜನೆಗೊಂಡಿತ್ತಷ್ಟೆ. ಆಗ ಓಣಂ ಹಬ್ಬವನ್ನು ದೇವಸ್ಥಾನಗಳಲ್ಲೂ ರಾಜಾಸ್ಥಾನಗಳಲ್ಲೂ ಆಚರಿಸುವ ರೂಢಿಯಿತ್ತು. ಕಥಕಳಿ, ಓಟ್ಟಂ ತುಳ್ಳಲ್, ಕುಮ್ಮಿ, ಕೊರತ್ತಿ ಯಾಟ್ಟಂ, ನಾದಸ್ವರ ಕಚ್ಚೇರಿ ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳೊಡನೆ ಓಣಂ ಸಂಭ್ರಮದಿಂದ ಅಂದು ನೆರವೇರುತ್ತಿತ್ತು. ರಾಜರು ತಮ್ಮ ಸಾಮಂತ ರಿಗೂ ಸೇವಕರಿಗೂ ಓಣಪ್ಪುಡವೆಗಳನ್ನು ಕೊಟ್ಟು ಸನ್ಮಾನಿಸುತ್ತಿದ್ದರು.



ಹಾವಿನಾಕಾರದ ದೋಣಿ ಓಟ—ಚುಂಡನ್ ವಳ್ಳಮ್

ಈಗಲೂ ಓಣಂ ಸಾರ್ವಜನಿಕವಾಗಿ ಆಚರಣೆ ಯಲ್ಲಿರುವ ಸ್ಥಳವೆಂದರೆ ಎರ್ನಾಕುಲಂ ನಗರದಿಂದ ಆರು ಮೈಲಿ ದೂರದಲ್ಲಿರುವ ತ್ರಿಕ್ಕಕ್ಕರ. ಇದು ಮಹಾಬಲಿಯ ಆವಾಸಸ್ಥಾನವೆಂಬ ನಂಬುಗೆ ಯುಂಟು. ತ್ರಿಕ್ಕಕ್ಕರ ಎಂಬ ಹೆಸರು ತ್ರಿಕ್ಕಾಲ್+ ಕರ=ಮೂರು ಕಾಲಿನ ಸ್ಥಳ — ಎಂಬುದರಿಂದ ಬಂದಿದೆಯೆನ್ನುತ್ತಾರೆ. ವಾಮನ ತನ್ನ ಕಾಲಿನಿಂದ ಮೂರು ಹೆಜ್ಜೆ ಅಳೆದು ಬಲಿಯನ್ನು ಪಾತಾಳ ಲೋಕಕ್ಕೆ ಕಳುಹಿಸಿದ ಸ್ಥಳವಿದಂತೆ. ಇಲ್ಲಿನ ದೇವ ಸ್ಥಾನದಲ್ಲಿ ಅನೇಕ ದೇವರುಗಳ ಮೂರ್ತಿಗಳಿವೆ. ಪ್ರಧಾನ ದೇವರುಗಳೆಂದರೆ ಶಿವ ಮತ್ತು ವಾಮನ. ರಾಜರು ಆಳುತ್ತಿದ್ದ ಕಾಲದಲ್ಲಿ ಓಣಂ ಹಬ್ಬ ಇಪ್ಪತ್ತೆಂಟು ದಿನಗಳಷ್ಟು ದೀರ್ಘಕಾಲ ನಡೆಯು ತ್ತಿತ್ತು; ಮಲೆಯಾಳ ಶಕೆಯಂತೆ ಕರ್ಕಾಟಕ ತಿಂಗಳಿನ ತಿರುವೋಣಂ ದಿನದಿಂದ ಆರಂಭಿಸಿ ಚಿಂಙಮ್ ತಿಂಗಳಿನ ತಿರುವೋಣಂ ದಿನಕ್ಕೆ ಅದು ಮುಕ್ತಾಯ

ಗೊಳ್ಳುತ್ತಿತ್ತು. ಹಬ್ಬದ ಆಚರಣೆಯ ಸಮಸ್ತ ಜವಾಬ್ದಾರಿಗಳನ್ನೂ ರಾಜರೇ ಹೊತ್ತುಕೊಳ್ಳುತ್ತಿದ್ದರು.

ಪ್ರಸ್ತುತ, ತ್ರಿಕ್ಕಕ್ಕರ ದೇವಸ್ಥಾನದಲ್ಲೂ ಓಣಂ ಹಬ್ಬವನ್ನು ಹತ್ತುದಿನ ಆಚರಿಸಲಾಗುತ್ತಿದೆ—ಚಿಂಜಮ್ ತಿಂಗಳ ಅತ್ತಂದಿಂದ ಹಿಡಿದು ತಿರುವೋಣಂ ತನಕ. ಅತ್ತಂ ದಿನ ದೇವಸ್ಥಾನದ ಬಾವುಟವನ್ನೇರಿಸುವುದರಿಂದ ಹಬ್ಬ ಪ್ರಾರಂಭವಾಗುತ್ತದೆ. ಹಸೆಯ ಮೇಲೆ ಪುಷ್ಪಾಲಂಕಾರಗಳನ್ನು ಮಾಡಲಾಗುತ್ತದೆ. ಪ್ರತಿದಿನ ಮೂರು ಪೂಜೆಗಳನ್ನು ನೆರವೇರಿಸುತ್ತಾರೆ. ಸ್ಥಳೀಕರ ಸಹಕಾರದೊಂದಿಗೆ ದೇವಸ್ಥಾನದ ಅಧಿಕಾರಿಗಳು ಹಬ್ಬದ ಆಚರಣೆಯಲ್ಲಿ ಹೆಚ್ಚಿನ ಎಚ್ಚರಿಕೆ ವಹಿಸಿರುತ್ತಾರೆ. ಸಂಜೆಯ ಪೂಜೆಯ ಬಳಿಕ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ.

ಆಲೆಪ್ಪಿ ತಾಲೂಕಿನ ಆರನ್ಮುಳ ಎಂಬ ಗ್ರಾಮದಲ್ಲಿ ನಡೆಯತಕ್ಕ ದೋಣಿಯ ಪಂದ್ಯ ಮತ್ತೊಂದು ವಿಶಿಷ್ಟ ಸಾರ್ವಜನಿಕ ಆಕರ್ಷಣೆಯಾಗಿದೆ. ದೋಣಿಗಳನ್ನು ಚುಂಡನ್ ವಳ್ಳಂ (ಹಾವು ದೋಣಿ) ಎಂದು ಕರೆಯುತ್ತಾರೆ. ಪ್ರತಿಯೊಂದು ದೋಣಿಯೂ ಆರನ್ಮುಳ ಹಳ್ಳಿಯ ಒಂದೊಂದು ವಿಭಾಗ ಇಲ್ಲವೇ ಕರೆಯನ್ನು ಪ್ರತಿನಿಧಿಸುತ್ತದೆ. ಈ ದೋಣಿಯ ಸ್ಪರ್ಧೆಗೆ ಹಿನ್ನಲೆಯಾಗಿ ಒಂದು ದಂತ ಕಥೆಯಿದೆ : ಆರನ್ಮುಳ ಗ್ರಾಮದಲ್ಲಿ ಒಂದು ಶಿವದೇವಾಲಯ ಅಸ್ತಿತ್ವದಲ್ಲಿದೆ. ಒಂದಾನೊಂದು ಕಾಲದಲ್ಲಿ ಉತ್ತರಾಡಂ ದಿನದಂದು, ದೇವಸ್ಥಾನಕ್ಕೆ ಬೇಕಾದ ಪರಿಕರಗಳನ್ನೊಳಗೊಂಡ ಮಾನವ ರಹಿತ ದೋಣಿಯೊಂದು ದೇವಸ್ಥಾನದ ಬಳಿ ಬಂದು ನಿಂತಿತಂತೆ. ಈಗಲೂ ಈ ಸನ್ನಿವೇಶವನ್ನು ಪುನರಭಿನಯ ಮಾಡುವಂತೆ, ತಿರುವಲ್ಲ ಎಂಬ ಗ್ರಾಮದಿಂದ (ಈ ಗ್ರಾಮ ಆರನ್ಮುಳದ ಪೂರ್ವಭಾಗದಲ್ಲಿದೆ) ನಂಬೂದಿರಿ ಬ್ರಾಹ್ಮಣನೊಬ್ಬ ದೇವಸ್ಥಾನಕ್ಕೆ ಬೇಕಾದ ಸಾಧನಸಾಮಗ್ರಿಗಳನ್ನು ಮನುಷ್ಯರಹಿತ ದೋಣಿಯೊಂದರಲ್ಲಿ ಕಳುಹಿಸುತ್ತಾನೆ. ದೋಣಿಯ ಜೊತೆಗೇ ಬಂದ ಕಾವಲುಗಾರ ದೇವಸ್ಥಾನದ ಸಮೀಪ ಇಳಿದುಬಿಟ್ಟು ದೋಣಿಯನ್ನು ದೇವಸ್ಥಾನದ ಕಡೆಗೆ ಹಾಗೆಯೇ ತೇಲಿಬಿಡುತ್ತಾನೆ. ಅನೇಕಾನೇಕ ಹಾವು ದೋಣಿಗಳು ಈ ದೋಣಿಯನ್ನು ವಂಜಿಪಾಟ್ ಹಾಡಿಕೊಂಡು ಸ್ವಾಗತಿಸಲು ಮುನ್ನುಗ್ಗುತ್ತವೆ. ಇದೇ ದೋಣಿ ಪಂದ್ಯ. ಇತ್ತೀಚಿನ ಕಾಲದಲ್ಲಿ ಈ ದೋಣಿ ಪಂದ್ಯ ಎಷ್ಟು ಪ್ರಾಧಾನ್ಯ ಪಡೆದಿದೆಯೆಂದರೆ, ದೋಣಿ ನಡೆಸಿ ಪ್ರಥಮ ಸ್ಥಾನ ಪಡೆದು ಜಯಶೀಲರಾದವರಿಗಾಗಿ ಪ್ರಧಾನಮಂತ್ರಿಯವರ ಒಂದು ಪಾರಿತೋಷಕವನ್ನು ಬಹುಮಾನವಾಗಿ ಇಡಲಾಗಿದೆ.

ಓಣಂ ಹಬ್ಬದ ಪ್ರಾಧಾನ್ಯವನ್ನು ಗುರುತಿಸಿ, ಕೇರಳ ಸರಕಾರದವರು ಅದನ್ನೊಂದು ರಾಷ್ಟ್ರೀಯ ಹಬ್ಬವನ್ನಾಗಿ ಪರಿಗಣಿಸಿದ್ದಾರೆ. 1961ರಲ್ಲಿ ಓಣಂ ಹಬ್ಬ ಸರಕಾರದ ನೇತೃತ್ವದಲ್ಲಿ ವಿಜೃಂಭಣೆಯಿಂದ ನೆರವೇರಿತು. ತ್ರಿಕ್ಕಕ್ಕರ ದೇವಸ್ಥಾನದಲ್ಲಿ ದೀಪಹಚ್ಚಿ, ಬಾವುಟವೇರಿಸುವುದರಿಂದ ಹಬ್ಬದ ಕಾರ್ಯಕ್ರಮಗಳು ಪ್ರಾರಂಭವಾದವು. ಸಾಮೂಹಿಕ ಔತಣಗಳು, ಮಕ್ಕಳ ಕೂಟಗಳು, ಆಟೋಟ ಸ್ಪರ್ಧೆಗಳು ಕೇರಳದಾದ್ಯಂತ ಜರುಗಿದುವು.

ಓಣಂ ಹಬ್ಬ ಪ್ರತಿಯೊಬ್ಬ ಮಲಯಾಳಿಗೂ ತನ್ನ ತಾಯ್ನಾಡಿನೊಂದಿಗೆ ತನಗಿರುವ ಬಾಂಧವ್ಯವನ್ನು ಎತ್ತಿತೋರಿಸುತ್ತದೆ ; ಆತನ ಮನಸ್ಸಿನಲ್ಲಿ ಆನಂದದ ಅಲೆಗಳನ್ನು ಎಬ್ಬಿಸುತ್ತದೆ. ಈ ಹಬ್ಬ ಎಷ್ಟು ಜನಪ್ರಿಯವಾಗಿದೆಯೆಂದರೆ ಅದನ್ನು ಕುರಿತು ಒಂದು ಪಡೆನುಡಿಯೇ ಮಲಯಾಳದಲ್ಲಿ ತಲೆದೋರಿದೆ. ಓಣಂ ಕೇರಾ ಮೂಲ—ಓಣಂ ಇರದ ಮೂಲೆ—ಎಂದರೆ ಯಾವ ದೈವತ್ವ ನಾಗರಿಕತೆಗಳೂ ಇಲ್ಲದ ಸ್ಥಳ ಎಂದು ಅರ್ಥ. ಓಣಂ ಇಲ್ಲದ ಮೂಲೆ ಇಲ್ಲ ಎಂಬುದು ತಾತ್ಪರ್ಯ.

ಮಹಾಬಲಿಯ ಮಹತ್ತ್ವವನ್ನು ಕುರಿತು ಜನಪದ ಗೀತೆಯೊಂದರಲ್ಲಿ (ಓಣಪಾಟ್) ಬರುವ ಈ ಕೆಳಗಿನ ಹಾಡನ್ನು ಸಾಮಾನ್ಯವಾಗಿ ಹೆಂಗಸರು ಉಯ್ಯಾಲೆ ಆಡುವಾಗಲೂ, ಮಕ್ಕಳು ಹೂ ಕೊಯ್ಯುವಾಗಲೂ(ಅತ್ತಪ್ಪೂ)ಹಾಡುವ ಬಳಕೆಯಿದೆ:

ಮಾವೇಲಿ ನಾಡ್ ವಾಣೀಡುಂ ಕಾಲಂ
ಮಾನುಷರೆಲ್ಲಾರು ಮೊನ್ನುಪೋಲೆ
ಕಳ್ಳವುಂ ಇಲ್ಲ, ಚದಿಯುಂ ಇಲ್ಲ
ಎಳ್ಳೋಳಮಿಲ್ಲ ಒಟಿವಚನಂ.

ಕನ್ನಡದಲ್ಲಿ ಇದರ ಅನುವಾದ ಹೀಗಾಗುತ್ತದೆ :

ಮಾಬಾಲಿ ನಾಡಾನು ಆಳೂವ ಕಾಲಾದಿ
ಮನುಷ್ಯರೆಲ್ಲಾರೂ ಒಂದೆ ರೀತಿ ;
ಕಳವೂ ಇಲ್ಲಾವು, ಮೋಸಾನೂ ಇಲ್ಲಾವು
ಸುಳ್ಳಂತೂ ಎಳ್ಳಷ್ಟೂ ಇರನಿಲ್ಲ. (ಎಸ್.ಎಸ್‌ಆರ್‌ಐ.)

**ಓತಿ :** ಸರೀಸೃಪ ವರ್ಗದ ಸ್ಕ್ವಮೇಟ ಗಣದ ಲ್ಯಾಸರ್ಟಿಲಿಯ ಉಪಗಣಕ್ಕೆ ಸೇರಿದ ಪ್ರಾಣಿ. ತೋಟದ ಹಲ್ಲಿ (ಗಾರ್ಡನ್ ಲಿಸರ್ಡ್) ಎಂದೂ ಕರೆಯುತ್ತಾರೆ. ಮನೆಯ ಹಿತ್ತಲು, ತೋಟ ಗದ್ದೆಗಳ ಬೇಲಿಗಳಲ್ಲಿ ಲಂಟಾನದ ಮೆಳೆಗಳಲ್ಲಿ ಸಾಮಾನ್ಯವಾಗಿ ಕಾಣಸಿಕ್ಕುತ್ತದೆ. ಮೈಸೂರು ರಾಜ್ಯದಲ್ಲಿ ಇರುವ ಓತಿ ಕೆಲೊಟಿಸ್ ವರ್ಸಿಕಲರ್ ಎಂಬ ಪ್ರಭೇದಕ್ಕೆ ಸೇರುತ್ತದೆ. ಇದು ಕೀಟಾಹಾರಿ. ಇದರ ದೇಹವನ್ನು ರುಂಡ, ಮುಂಡ ಮತ್ತು ಬಾಲ ಎಂದು ವಿಂಗಡಿಸಬಹುದು. ರುಂಡಕ್ಕೂ ಮುಂಡಕ್ಕೂ ನಡುವೆ ನಿರ್ದಿಷ್ಟವಾದ ಕುತ್ತಿಗೆಯಿದೆ. ದೇಹದಮೇಲೆ ಹುರುಪೆಗಳ ಹೊದಿಕೆಯುಂಟು. ಹುರುಪೆಗಳು ಒಂದರ ತುದಿ ಇನ್ನೊಂದರ ಬುಡವನ್ನು ಮುಚ್ಚುವಂತೆ (ಮನೆಯ ಹಂಚುಗಳಂತೆ) ಜೋಡಿಸಲ್ಪಟ್ಟಿವೆ. ಕುತ್ತಿಗೆ ಮತ್ತು ಮುಂಡದ ನಡು ಬೆನ್ನಿನ ಭಾಗದಲ್ಲಿರುವ ಹುರುಪೆಗಳ ಉದ್ದವಾದ ಮುಳ್ಳು ಶಿಖೆಗಳ ಸಾಲಿನಂತೆ ಬೆಳೆದಿವೆ. ಋತುಮಾಸದಲ್ಲಿ ಕತ್ತಿನ ತಳಭಾಗ ಗಂಡುಗಳಲ್ಲಿ ರಾಗರಂಜಿತವಾಗುತ್ತದೆ. ಈ ಬಣ್ಣದಿಂದಾಗಿ ಅವು ರಕ್ತಪಿಪಾಸುಗಳು ಎಂಬ ತಪ್ಪು ಭಾವನೆ ಬೆಳೆದುಬಂದಿದೆ.

ತಲೆಯ ಅಗ್ರಭಾಗದಲ್ಲಿ ಬಾಯಿ ಅಡ್ಡ ಸೀಳಿಕೆಯಂತಿದೆ. ಬಾಯ ಮೇಲ್ಗಡೆ ಒಂದು ಜೊತೆ ಹೊರನಾಸಿಕ ರಂಧ್ರಗಳೂ ತಲೆಯ ಪಕ್ಕಗಳಲ್ಲಿ ಒಂದು ಜೊತೆ ಕಣ್ಣುಗಳೂ ಇವೆ. ಒಂದೊಂದು ಕಣ್ಣಿಗೂ ದಪ್ಪವಾದ ಮೇಲು ರೆಪ್ಪೆ, ತೆಳುವಾದ ಕೆಳರೆಪ್ಪೆ ಮತ್ತು ಪಾರದರ್ಶಕವಾದ ನಿಮೇಷಕ ಪಟಲಗಳಿವೆ. ಕಣ್ಣುಗಳ ಹಿಂಭಾಗದಲ್ಲಿ ಕಿವಿಯ ತಮಟೆಯುಂಟು. ಇದು ಕಪ್ಪೆಯಂತೆ ದೇಹದ ಚರ್ಮದ ಮಟ್ಟದಲ್ಲಿಯೇ ಇಲ್ಲದೆ ಸ್ವಲ್ಪ ತಗ್ಗಾದ ಕುಳಿಯಲ್ಲಿದೆ. ಈ ಕುಳಿಗೆ ಕರ್ಣರಂಧ್ರ ಎಂದು ಹೆಸರು.

ಮುಂಡದ ತಳಭಾಗಕ್ಕೆ ಅಂಟಿದಂತೆ ಎರಡು ಜೊತೆ ಕಾಲುಗಳಿವೆ. ಮುಂಗಾಲುಗಳಲ್ಲಿ ತೋಳು, ಮುಂಗೈ, ಹಸ್ತ ಮತ್ತು ನಖಗಳುಳ್ಳ ಐದೈದು ಕೈಬೆರಳುಗಳಿವೆ. ಹಿಂಗಾಲುಗಳಲ್ಲಿ ತೊಡೆ, ಮುಂಗಾಲು, ಪಾದ ಮತ್ತು ಉಗುರಿರುವ ಐದು ಬೆರಳುಗಳಿವೆ. ಬುಡದ ಬಳಿ ಬಾಲ ದಪ್ಪನಾಗಿದ್ದು ಕ್ರಮೇಣ ಚೂಪಾಗುತ್ತ ಹೋಗುವುದು. ರುಂಡ ಮುಂಡಗಳ ಒಟ್ಟು ಉದ್ದದಷ್ಟೇ ಸುಮಾರಾಗಿ ಬಾಲದ ಉದ್ದವೂ ಇದೆ. ಬಾಲದ ಬುಡದ ಬಳಿ ಕ್ಲೋಯಕ ರಂಧ್ರವುಂಟು. ಇದು ಅಡ್ಡನಾಗಿ ಹರಡಿದ ಸೀಳಿಕೆಯಂತೆ ಕಾಣಬರುತ್ತದೆ. ಇದರ ಮೂಲಕ ಮಲಾಶಯ ಮತ್ತು ಮೂತ್ರ ಜನನೇಂದ್ರಿಯಗಳು ಹೊರಕ್ಕೆ ತೆರೆಯುತ್ತವೆ.

ಓತಿಗಳು ಭಿನ್ನಲಿಂಗಿಗಳು. ಗಂಡುಗಳಲ್ಲಿ ಕ್ಲೋಯಕದಿಂದ ಹೊರಕ್ಕೆ ಹರಡಿದಂತೆ, ಬಾಲದ ಅಧೋ ಭಾಗದಲ್ಲೆ, ಚರ್ಮದ ಒಳಗೆ ಒಂದು ಜೊತೆ ಆಲಿಂಗನಾಂಗಗಳಿವೆ. ಓತಿ ಅಂಡಜ. ಹೆಚ್ಚು ಭಂಡಾರವಿರುವ, ಬಿಳಿಯ ಸುಣ್ಣ ಚಿಪ್ಪಿನಿಂದಾವೃತವಾದ ಹತ್ತಾರು ಮೊಟ್ಟೆಗಳನ್ನಿಡುತ್ತದೆ. (ಎಚ್.ಬಿ.ಡಿ.)

**ಓದುಗಾರಿಕೆ :** ಲಿಖಿತ ಅಥವಾ ಮುದ್ರಿತ ಸಂಕೇತಗಳ ಮೂಲಕ ವ್ಯಕ್ತವಾಗುವ ಕೃತಿಕಾರನ ಅಭಿಪ್ರಾಯವನ್ನು ಗ್ರಹಿಸುವ ಮತ್ತು ಅದಕ್ಕೆ ಅನುಗುಣವಾಗಿ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವ ಮನೋವ್ಯಾಪಾರ. ಮಾನವನ ಅನುಭವ ಸಂಪತ್ತನ್ನು ಹೆಚ್ಚಿಸಿಕೊಳ್ಳಲು ಇರುವ ಬಹುಮುಖ್ಯ ಸಾಧನೆ. ಪ್ರತಿವ್ಯಕ್ತಿಯೂ ಶಿಕ್ಷಣದಿಂದ ತನ್ನ ವ್ಯಕ್ತಿತ್ವವನ್ನು ಪರಿಪೂರ್ಣವಾಗಿ ವಿಕಸಿಸುವಂತೆ ಮಾಡಿಕೊಳ್ಳುವುದು ಅಗತ್ಯವೆಂಬ ಅಭಿಪ್ರಾಯವಿರುವ ಈ ಕಾಲದಲ್ಲಿ ಓದುವುದಕ್ಕೆ ವ್ಯಾಸಂಗ ಕ್ರಮದಲ್ಲಿ ಪ್ರಧಾನ ಸ್ಥಾನವನ್ನು ಕೊಟ್ಟಿದೆ.

ಶಾಲಾಜೀವನದಲ್ಲಿ ವಿದ್ಯಾರ್ಥಿ ಈ ಕಲೆಯನ್ನು ಬೆಳೆಸಿಕೊಳ್ಳಲು ಸಾಕಷ್ಟು ಅವಕಾಶವಿರಬೇಕು. ವಿವಿಧ ಕ್ಷೇತ್ರಗಳಿಗೆ ಸಂಬಂಧಪಟ್ಟ ವಿಷಯಗಳನ್ನು ಪಠ್ಯ ಪುಸ್ತಕಗಳ ಮೂಲಕ, ಆಟಪಾಠಗಳ ಮೂಲಕ, ವಿಚಾರಗೋಷ್ಠಿಗಳ ಮೂಲಕ, ಅರಿಯಲು ಅನುಕೂಲವಿರಬೇಕು. ಈ ಎಲ್ಲ ಕಾರ್ಯಕ್ರಮಗಳಲ್ಲಿ ಅತ್ಯಗತ್ಯವಾಗಿ ಬೇಕಾದುದು ಓದಿನ ನೈಪುಣ್ಯ. ಹೀಗಾಗಿ ಶಾಲೆಯಲ್ಲಿ ಕಲಿಯುವ ಚರಿತ್ರೆ, ಭೂಗೋಳ, ಸಾಹಿತ್ಯ, ವಿಜ್ಞಾನ, ಲೆಕ್ಕ ಮುಂತಾದ ವಿಷಯಗಳಲ್ಲಿ ಉತ್ತಮ ಪ್ರಗತಿಯನ್ನು ಸಾಧಿಸಬೇಕಾದರೆ, ಒಳ್ಳೆಯ ಓದುಗಾರಿಕೆಯನ್ನು ಸಾಧಿಸಬೇಕು. ಅಂದರೆ ಓದುಗಾರಿಕೆಯ ಅನೇಕ ಉತ್ತಮ ಲಕ್ಷಣಗಳನ್ನು ಪರಿಚಯ ಮಾಡಿಕೊಟ್ಟು ಓದುವುದರಲ್ಲಿ ಅಭಿರುಚಿಯನ್ನು ಮಕ್ಕಳಲ್ಲಿ ಬೆಳಸಬೇಕು ; ಅದಕ್ಕಾಗಿ ವ್ಯಾಸಂಗ ಪದ್ಧತಿಯಲ್ಲಿ ಪರಿಣಾಮಕಾರಿಯಾಗಿ ಬೋಧಿಸುವ ಕ್ರಮವನ್ನು ರೂಢಿಸಿಕೊಳ್ಳುವುದು ಅಗತ್ಯ.

ಓದುಗಾರಿಕೆ ವ್ಯಕ್ತಿಯಲ್ಲಿ ಶಿಕ್ಷಣದಿಂದ ಮೂಡಬೇಕಾದ ಉಪಯುಕ್ತ ಕೌಶಲ್ಯವಾದರೂ ಅದನ್ನು ಬೋಧಿಸುವುದು ಸುಲಭದ ಕೆಲಸವೇನಲ್ಲ. ಏಕೆಂದರೆ ಅದು ಅನೇಕ ಸೂಕ್ಷ್ಮವೂ ಕ್ಲಿಷ್ಟಕರವೂ ಆದ ಅಂಶಗಳನ್ನು ಒಳಗೊಂಡಿದೆ. ವಿದ್ಯಾರ್ಥಿಯಲ್ಲಿ ಕಂಡುಬರುವ ಓದುಗಾರಿಕೆಯ ದೋಷಗಳನ್ನೂ ನ್ಯೂನತೆಗಳನ್ನು ನಿವಾರಿಸುವಂತೆ ಅದನ್ನು ಬೋಧಿಸುವುದು ಶಾಸ್ತ್ರೀಯವೂ ಕೌಶಲಪೂರ್ಣವೂ ಆದ ಕಾರ್ಯ. ಹಾಗೂ ಸಾಮೂಹಿಕವಾಗಿ ತೃಪ್ತಿಕರವಾದ ರೀತಿಯಲ್ಲಿ ಬೋಧಿಸುವುದು ಇನ್ನೂ ಕಷ್ಟದ ಕೆಲಸ. ಆದರೆ, ಅನೇಕ ಸಂಶೋಧನೆಗಳಿಂದ, ಹಲವಾರು ಬೋಧನ ತಂತ್ರಗಳು ಬೆಳಕಿಗೆ ಬಂದು ಓದುಗಾರಿಕೆಯನ್ನು ಪರಿಣಾಮಕಾರಿಯಾಗಿ ಬೋಧಿಸಬಲ್ಲ ವಿಧಾನಗಳು ಈಗ ರೂಪುಗೊಂಡಿವೆ. ಹಾಗೂ ಓದುಗಾರಿಕೆಯಲ್ಲಿ ಕಂಡು

ಬರುವ ಲೋಪದೋಷಗಳಿಗೆ ಕಾರಣವೆನಿಸುವ ವಿಶಿಷ್ಟ ದೌರ್ಬಲ್ಯಗಳನ್ನು ನಿವಾರಿಸುವ ವಿಧಾನಗಳೂ ಬಳಕೆಗೆ ಬರುತ್ತಿವೆ. (ಎ.ಎಂ.ಎಸ್.)

**ಓದುಗಾರಿಕೆಯ ಬೋಧನಕ್ರಮ :** ಪ್ರತಿ ಅಕ್ಷರಕ್ಕೂ ಪ್ರತ್ಯೇಕವೂ ವಿಶಿಷ್ಟವೂ ಆದ ಧ್ವನಿ ಕನ್ನಡದಂಥ ಕೆಲವು ಭಾಷೆಗಳಲ್ಲಿ ಹಿಂದಿನಿಂದಲೂ ಇದೆ ; ಮತ್ತೆ ಕೆಲವು ಭಾಷೆಗಳು ತಮ್ಮ ಈ ಕೊರತೆಯನ್ನು ತುಂಬಿಕೊಳ್ಳಲು ಉಚ್ಚಾರ ಚಿಹ್ನೆಗಳನ್ನು ಬಳಸಿಕೊಳ್ಳುವುದಲ್ಲದೆ ಹೊಸ ಕೆಲವು ಅಕ್ಷರಗಳನ್ನು ಸೇರಿಸಿಕೊಳ್ಳುವುದರ ಮೂಲಕ ತಮ್ಮ ವರ್ಣಮಾಲೆಯನ್ನೇ ಮಾರ್ಪಡಿಸಿಕೊಳ್ಳುತ್ತಿವೆ. ಇದರಿಂದ ಓದುಗಾರಿಕೆಯಲ್ಲಿ ನಿಷ್ಕೃಷ್ಟತೆ ಮೂಡುವುದರ ಜೊತೆಗೆ ಅದನ್ನು ಕಲಿಯುವುದೂ ಬೋಧಿಸುವುದೂ ಸರಳವಾಗುತ್ತದೆ. ಅಕ್ಷರ ಧ್ವನಿಯಿರುವ ಭಾಷೆಗಳಲ್ಲಿ ಓದುಗಾರಿಕೆಯನ್ನು ಅಕ್ಷರಾಭ್ಯಾಸದಿಂದ ಆರಂಭಿಸುವುದು ವಾಡಿಕೆ. ಭಾರತದಲ್ಲಿ ಪುರಾತನ ಕಾಲದಿಂದಲೂ ಈ ಕ್ರಮ ಬಳಕೆಯಲ್ಲಿದೆ. ಮಕ್ಕಳಿಗೆ ವರ್ಣಮಾಲೆಯ ಅಕ್ಷರಗಳನ್ನೂ ಅವುಗಳ ಹೆಸರುಗಳನ್ನೂ ಕಲಿಸಿ ಅನಂತರ ಕಾಗುಣಿತವನ್ನು ಹೇಳಿಕೊಟ್ಟು ಅಕ್ಷರಗಳನ್ನು ಜೋಡಿಸಿ ಅರ್ಥಪೂರ್ಣ ಪದಗಳನ್ನು ಓದುವುದನ್ನು ಕಲಿಸುತ್ತಿದ್ದರು. ಅಕ್ಷರಗಳನ್ನು ಗುರುತಿಸಿ ಪದಗಳ ಶಬ್ದೋಚ್ಚಾರಣೆಯ ಮೇಲೆ ಒಡೆತನ ಸಿದ್ಧಿಸಿದಂತೆ ಕ್ರಮವಾದ ಓದುಗಾರಿಕೆಯನ್ನು ಆರಂಭಿಸುವುದೇ ಅಕ್ಷರ ಮೂಲ ಬೋಧನಕ್ರಮ (ಎ.ಬಿ.ಸಿ. ಬೋಧನಕ್ರಮ). ಈ ಕ್ರಮದಲ್ಲಿ ಓದುಗಾರಿಕೆಯನ್ನು ಬೋಧಿಸುವುದು (ಧ್ವನ್ಯಾತ್ಮಕ) ಅಕ್ಷರವುಳ್ಳ ಭಾಷೆಗಳಲ್ಲೇನೋ ಸರಳವಾಗಿ ತೋರುತ್ತದೆ ; ಆದರೆ ಮಿಕ್ಕ ಭಾಷೆಗಳಲ್ಲಿ ಇದು ತೊಡಕಿನದೇ ಆಗುತ್ತದೆ. ಆದರೆ ಅಕ್ಷರಮೂಲ ಬೋಧನಕ್ರಮ ಮನಶ್ಶಾಸ್ತ್ರಸಮ್ಮತವಲ್ಲವೆಂಬ ವಿಷಯ ಪ್ರಚಾರವಾದಂತೆ ನೂತನ ಬೋಧನ ವಿಧಾನಗಳು ಬಳಕೆಗೆ ಬರುತ್ತಿವೆ. ಒಂದೊಂದು ಅಕ್ಷರದ ಧ್ವನಿಯನ್ನೂ ಪ್ರತ್ಯೇಕವಾಗಿ ಗುರುತಿಸುವ ಬದಲು ಮಕ್ಕಳು ಇಡೀ ಪದದ ಧ್ವನಿಯನ್ನೇ ಗುರುತಿಸುವರೆಂದೂ ಆದ್ದರಿಂದ ಧ್ವನಿಕವಲ್ಲದ ಭಾಷೆಗಳಾದರೆ ಪ್ರತಿ ಅಕ್ಷರವನ್ನೂ ಪ್ರತ್ಯೇಕವಾಗಿ ಓದುವುದನ್ನು ಕಲಿಸುವ ಬದಲು ಅವು ಪದದ ಸಮಗ್ರ ಧ್ವನಿನಿರೂಪಣೆಗೆ ಸಲ್ಲಿಸುವ ಪ್ರತ್ಯೇಕ ಧ್ವನಿಕೊಡುಗೆಯ ಸಂಯೋಜಿತ ರೂಪದಲ್ಲಿ ಇಡೀ ಪದದ ಧ್ವನಿಯನ್ನು ಗುರುತಿಸಿ ಓದುವುದನ್ನು ಕಲಿಸಬೇಕೆಂಬ ಪ್ರಚಾರ ನಡೆಯಿತು. ಅದಕ್ಕಾಗಿ ಒಂದೊಂದು ಪದದಲ್ಲೂ ಇರತಕ್ಕ ಅಕ್ಷರಗಳ ಧ್ವನಿಯನ್ನು ಗುರುತಿಸುವಾಗ ವಿಧವಿಧವಾದ ಸೂಚನೆಗಳನ್ನು ಮುದ್ರಣ ಪ್ರತಿಗಳಲ್ಲಿ ಕೊಡುವುದೂ ಆರಂಭವಾಯಿತು. ಒಂದೇ ಅಕ್ಷರ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರತಿನಿಧಿಸುವ ಬೇರೆ ಬೇರೆ ಧ್ವನಿಗಳನ್ನು ಗುರುತಿಸುವುದನ್ನು ಕಲಿಸುವುದು ಈ ಕಾರ್ಯದ ಉದ್ದೇಶವಾಗಿತ್ತು. ಧ್ವನಿಯ ಸಂಯೋಜನೆಗೆ ಪ್ರಾಧಾನ್ಯವುಳ್ಳ ಈ ಪದಮೂಲ ಬೋಧನಕ್ರಮ ಕಳೆದ ಶತಮಾನದ ಮಧ್ಯದ ವರೆಗೂ ಪ್ರಚಾರದಲ್ಲಿದ್ದರೂ ಅಕ್ಷರಮೂಲ ಕ್ರಮವನ್ನೂ ಅದರಲ್ಲೆ ಸೇರಿಸಿಕೊಳ್ಳುವುದು ಅಗತ್ಯವೆಂಬ ಅನುಭವ ಬೆಳೆಯಿತು. ಇದನ್ನು ಸಂಯೋಜನ (ಸಿಂತೆಟಿಕ್) ಕ್ರಮ ಎನ್ನುವುದುಂಟು.

ಅನಂತರ ನಡೆದ ಸಂಶೋಧನೆಗಳು ಮಕ್ಕಳು ಅಕ್ಷರವನ್ನು ಗುರುತಿಸಿ ಓದುವಷ್ಟೇ ಜಾಗ್ರತೆ ಪದಗಳನ್ನೂ ಗುರುತಿಸಿ ಓದುವರೆಂಬುದನ್ನು ತೋರಿಸಿಕೊಟ್ಟುವು ; ಆದ್ದರಿಂದ ಪದಗಳನ್ನು ದೃಷ್ಟಿಯಿಂದ ಗುರುತಿಸಿ ಓದುವುದನ್ನು ಅಕ್ಷರ ಧ್ವನಿಗಳನ್ನು ಗುರುತಿಸುವುದನ್ನು ಕಲಿಯುವ ಮುನ್ನವೆ, ಕಲಿಸುವುದು ಅಗತ್ಯವೆಂದು ಸಲಹೆ ಬಂತು. ಅನೇಕ ಶಾಲೆಗಳು ಈ ಕ್ರಮವನ್ನು ವಿಶ್ಲೇಷಣಕ್ರಮ ಎಂಬ ಹೆಸರಿನಿಂದ ಪ್ರಚಾರಕ್ಕೆ ತಂದುವು. ಇದನ್ನು ದೃಷ್ಟಿಪಠನಕ್ರಮ ಎಂದೂ ಕರೆಯುವರು. ಅನಂತರ ಇಡೀ ವಾಕ್ಯವನ್ನೇ ಗುರುತಿಸುವುದನ್ನು ಕಲಿಸುವ ಬೋಧನಕ್ರಮವೂ ಆರಂಭವಾಯಿತು. ಆಮೇಲೆ ಅದರ ಒಂದೊಂದು ಪದವನ್ನೂ ಗುರುತಿಸುವುದನ್ನು ಕಲಿಸುತ್ತಿದ್ದರು. ಈ ಎರಡು ಕ್ರಮಗಳಲ್ಲೂ ಸೌಲಭ್ಯಗಳಂತೆ ತೊಡಕುಗಳೂ ಇವೆ. ಆದ್ದರಿಂದ ಈಚೆಗೆ ಕಾರ್ಯನಿರತ ಅಧ್ಯಾಪಕರು ಇವೆರಡರ ಉತ್ತಮಾಂಶಗಳನ್ನೂ ಬಳಸಿಕೊಂಡು ಒಂದು ಸಮ್ಮಿಶ್ರ ವಿಧಾನವನ್ನು ಅನುಸರಿಸುತ್ತಿರುವರು.

ಓದುಗಾರಿಕೆಯ ಕಲಿವಿನಲ್ಲಿ ನೇತ್ರಚಲನೆಯ ಪಾತ್ರ : ಓದುಗಾರಿಕೆಯಲ್ಲಿ ನೇತ್ರಚಲನೆಯದೊಂದು ಬಹುಮುಖ್ಯ ಪಾತ್ರ; ಕಳೆದ ಶತಮಾನದ ಕೊನೆಕೊನೆಯ ವರೆಗೂ ಕಣ್ಣುಗಳು ಎಡದಿಂದ ಬಲಕ್ಕೆ ಪಂಕ್ತಿಯ ಮೇಲೆ ಒಂದೇ ಸಮನೆ ಚಲಿಸವುವು ಎಂದು ನಂಬಲಾಗಿತ್ತು. ಈಚಿನ ಸಂಶೋಧನೆಗಳು ಕಣ್ಣಿನ ನೋಟ ಎಡದಿಂದ ಬಲಕ್ಕೆ ನಿಂತು ನಿಂತು ಸಾಗುವುದೆಂದು ತೋರಿಸಿವೆ. ಈ ಒಂದೊಂದು ನಿಲುವೂ ಹಿಂದಿನ ಪದಗಳ ಅರ್ಥವನ್ನು ಕ್ರೋಡೀಕರಿಸಿಕೊಳ್ಳುವುದಕ್ಕೂ ಮುಂದಿನ ಪದಗಳ ಅರ್ಥವನ್ನು ಅದರೊಡನೆ ಸಮೀಕರಿಸಿ ಹೊಂದಿಸಿಕೊಳ್ಳುವುದಕ್ಕೂ ನೆರವಾಗುತ್ತದೆ. ಪಂಕ್ತಿ ಮುಗಿದೊಡನೆ ಕಣ್ಣು ವೇಗವಾಗಿ ಹಿಂಚಲನೆ ನಡೆಸುತ್ತದೆ. ಕಣ್ಣಿನ ಚಲನೆಯನ್ನೂ ಉಚ್ಚರಿಸುವ ಧ್ವನಿಯನ್ನೂ ಏಕಕಾಲದಲ್ಲಿ ಚಿತ್ರಿಸಿಕೊಂಡು ಪರಿಶೀಲಿಸುವ 'ದೃಶ್ಯ-ಶಬ್ದ' ಚಿತ್ರಣದ ತಂತ್ರ ಆರಂಭವಾದ ಮೇಲೆ ನಡೆಸಿದ ಪ್ರಯೋಗಗಳಿಂದ ಧ್ವನಿಗಿಂತ ಮುಂದೆ ಕಣ್ಣನೋಟ ಸಾಗುವುದೆಂಬುದು ವ್ಯಕ್ತಪಟ್ಟಿದೆ. ಮೌನವಾಚನವಾದರೆ ಕಣ್ಣಿನ ನೋಟದ ಚಲನೆ ಭಿನ್ನ ರೀತಿಯದಾಗುವುದೆಂಬುದೂ ಗೊತ್ತಾಗಿದೆ. ಅಂತೆಯೇ ಗಟ್ಟಿಯಾಗಿ ಓದುವ ಮತ್ತು ಮೌನವಾಗಿ ಓದುವ ಕ್ರಿಯೆಗಳಿಗಿರುವ ವ್ಯತ್ಯಾಸವೂ ಗೋಚರವಾಗಿದೆ. ಅದರ ಫಲವಾಗಿ ಅದುತನಕ ಕಡೆಗಣಿಸಿದ್ದ ಮೌನವಾಚನ ತಂತ್ರದ ಕಡೆ ಹೆಚ್ಚಿನ ಗಮನ ಹರಿಯಿತು ; ಹಾಗೆಯೆ, ಕೇವಲ ಧ್ವನಿಯನ್ನು ಉಚ್ಚರಿಸಿ ಅಕ್ಷರಶಃ ಓದುವುದೊಂದೇ ಓದುಗಾರಿಕೆಯ ಪೂರ್ಣ ಉದ್ದೇಶವಲ್ಲವೆಂಬುದೂ ಓದಿದ ಅಂಶದ ಭಾವನೆಗಳನ್ನು ಅರ್ಥಮಾಡಿಕೊಂಡು ಸೂಕ್ತಮನೋಭಾವ ತಾಳುವುದೂ ಅಗತ್ಯ ಎಂಬ ಅಂಶವೂ ಸಷ್ಟಪಟ್ಟಿರುವುದು.

ಓದುಗಾರಿಕೆಯ ಕಲಿವಿನ ಹಂತಗಳು : ಇದರಲ್ಲಿ ನಾಲ್ಕು ಮುಖ್ಯ ಅಂತಸ್ತುಗಳನ್ನು ಗುರುತಿಸಬಹುದು. 1 ಸಿದ್ಧತೆಯ ಹಂತ : ಜನನದಿಂದಲೇ ಈ ಸಿದ್ಧತೆ ಆರಂಭವಾಗುತ್ತದೆ ; ಅನುಭವಾರ್ಜನೆ, ಭಾಷೆಯ ಬೆಳವಣಿಗೆ, ಇತರರ ಮಾತನ್ನೂ ಓದನ್ನೂ ಕೇಳುವುದು, ಇತರರೊಡನೆ ಸಹಕರಿಸಿ ಕೆಲಸ ಮಾಡುವುದು, ಹೇಳಿದಂತೆ ಮಾಡುವುದು—ಇವೆಲ್ಲ ಓದುಗಾರಿಕೆಗೆ ಸಿದ್ಧತಾರೂಪದ ತರಬೇತು. ಜೊತೆಗೆ, ಮನೆಯಲ್ಲಿ ಹಿರಿಯರ ಜೀವನದಲ್ಲಿ ಓದುಗಾರಿಕೆ ವಹಿಸುವ ಪಾತ್ರದ ಪ್ರಭಾವವೂ ಅವರ ಮೇಲೆ ಬಿದ್ದು, ಆ ಮುಖವಾಗಿ ಅವರ ಆಸಕ್ತಿಯೂ ತದಂಗವಾಗಿ ಅವರಲ್ಲಿ ಆ ಕಾರ್ಯಕ್ಕೆ ಸಿದ್ಧತೆಯೂ ಮೂಡುತ್ತವೆ ; ಶಿಶುವಿಹಾರದ ಕಾರ್ಯಕ್ರಮಗಳು ಮಕ್ಕಳಲ್ಲಿ ಮಾತುಗಾರಿಕೆ ಮತ್ತು ಅನುಭವಗಳನ್ನು ರೂಢಿಸಿ ಆ ಸಿದ್ಧತೆಯನ್ನು ಬೆಳೆಸುತ್ತವೆ. ಸುಮಾರು ಆರು ವರ್ಷದ ಮಗುವಿನ ಸರಾಸರಿ ದೈಹಿಕ, ಭಾವಾತ್ಮಕ, ಸಾಮಾಜಿಕ ಮತ್ತು ಭಾಷಾರೂಪದ ಸಿದ್ಧತೆ ಓದುಗಾರಿಕೆಯ ಆರಂಭಕ್ಕೆ ಸೂಕ್ತ ಕಾಲವೆಂದು ಪರಿಗಣಿತವಾಗಿದೆ. 2 ಓದುವ ಅಂತಸ್ತು : ಸುಲಭ ಪದಗಳನ್ನು ಗುರುತಿಸುವುದೇ ಎರಡನೆಯ ಹಂತ. ಈ ಹಂತದ ಕೊನೆಯಲ್ಲಿ ಮೂರುನೂರು ಪದಗಳನ್ನು ಓದುವವರು. ಕಠಿಣವೂ ನೂತನವೂ ಆದ ಪದಗಳನ್ನು ಓದುವುದು ಕಷ್ಟವಾದರೂ ಕ್ರಮಕ್ರಮವಾಗಿ ಆ ಮುಖವಾಗಿ ಅಭಿವೃದ್ಧಿ ಸಾಧಿಸಬಲ್ಲರು. ಪ್ರಾಥಮಿಕ ಅಂತಸ್ತಿನ ಕೊನೆಗೆ ಸುಲಭ ಪಾಠಗಳನ್ನು ಸ್ವತಂತ್ರವಾಗಿ ಓದಬಲ್ಲರು. 3 ಶಬ್ದಾವಳಿಯ ಬೆಳವಣಿಗೆಯ ಹಂತ : ಕಠಿಣಪದಗಳನ್ನು ಓದುವ ಕೌಶಲ್ಯ ಬೆಳೆದಂತೆ ಶಬ್ದಾವಳಿ ಹೆಚ್ಚಿ ಅರ್ಥಜ್ಞಾನ ವಿಸ್ತರಿಸುತ್ತದೆ. ಮುಂದಿನ ಓದುಗಾರಿಕೆಗೆ ಇವೆರಡೂ ಸಹಾಯಮಾಡುತ್ತವೆ. ಜೊತೆಗೆ ವಿಜ್ಞಾನ, ಪ್ರವಾಸ, ಸಮಾಜಪಾಠ ಇತ್ಯಾದಿ ವಿಷಯಗಳ ಗ್ರಂಥಗಳನ್ನು ಓದಿ ಅರ್ಥಮಾಡಿಕೊಳ್ಳುವ ಶಕ್ತಿಯೂ ಮೂಡುತ್ತದೆ. ವೈಯಕ್ತಿಕ ಆಸಕ್ತಿಗಳನ್ನು ಈಡೇರಿಸಿಕೊಂಡು ಆನಂದಪಡಲು ಓದನ್ನು ಬಳಸುವುದು ಪ್ರೌಢಶಾಲೆಗಳಲ್ಲಿ ಆರಂಭವಾಗುತ್ತದೆ. 4 ಅಭಿರುಚಿಯನ್ನು ಬೆಳೆಸುವ ಓದುಗಾರಿಕೆ : ಹಿಂದೆ ಸಾಧಿಸಿರುವ ಓದುಗಾರಿಕೆಯ ಕೌಶಲ ಈಗ ಹೆಚ್ಚು ಪರಿಣಾಮಕಾರಿಯೂ ಪ್ರಭಾವಕಾರಿಯೂ ಆಗುತ್ತದೆ. ಪದಗಳ ಅರ್ಥವ್ಯಾಪ್ತಿ ವಿಸ್ತರಿಸುವುದಲ್ಲದೆ ಸ್ಪಷ್ಟತೆಯನ್ನೂ ಸಾಧಿಸುತ್ತದೆ. ಓದಿದ ವಿಷಯದಲ್ಲಿ ಜ್ಞಾನವನ್ನು ವಿವೇಚಿಸಿ ತನ್ನ ಜೀವನದಲ್ಲಿ ಬಳಸಿಕೊಳ್ಳುವ ಶಕ್ತಿಯೂ ಮೂಡುತ್ತದೆ. ಆಗ ಓದುಗಾರಿಕೆಯನ್ನು ವ್ಯಕ್ತಿಯ ಆಸಕ್ತಿಯ ವಿಶಿಷ್ಟ ಕ್ಷೇತ್ರದಲ್ಲಿ ಬಳಸುವುದು ಆರಂಭವಾಗುತ್ತದೆ.

ಓದುಗಾರಿಕೆಯ ಬೋಧನೆಗೆ ಸಿದ್ಧತೆ : ಕೆಲವು ಕುಟುಂಬಗಳಿಂದ ಶಾಲೆಗೆ ಬರುವ ಮಕ್ಕಳು ಓದುಗಾರಿಕೆಗೆ ಆಗಲೆ ಸಿದ್ಧತೆ ಪಡೆದಿರಬಹುದಾದರೂ ಮಿಕ್ಕ ಬಹುಮಂದಿ ಮಕ್ಕಳಿಗೆ ಅದು ಶಾಲೆಯಲ್ಲೇ ಆಗಬೇಕು. ಈಚಿನ ಕೆಲವು ಸಂಶೋಧನೆಗಳು ಸೂಚಿಸಿರುವಂತೆ, ಓದುಗಾರಿಕೆಗೆ ಪೂರ್ವಭಾವಿಯೆನ್ನಬಹುದಾದ ಕೆಲವು ಅಂಶಗಳನ್ನು ಅಧ್ಯಾಪಕರು ಗಮನದಲ್ಲಿರಿಸಿಕೊಂಡು ಕೆಲವು ಪೂರ್ವಭಾವಿ ಕಾರ್ಯಕ್ರಮಗಳನ್ನು ಏರ್ಪಡಿಸಿಕೊಂಡರೆ ಮಕ್ಕಳು ಮುಂದೆ ಓದುಗಾರಿಕೆಯನ್ನು ಸುಲಭವಾಗಿಯೂ ವೇಗವಾಗಿಯೂ ಕಲಿಯಬಲ್ಲರೆಂದು ಸ್ಪಷ್ಟಪಟ್ಟಿದೆ. ಆದ್ದರಿಂದ ಓದುಗಾರಿಕೆಯನ್ನು ಕಲಿಸುವ ಮುನ್ನ ಗಮನಿಸಬೇಕಾದ ಅಂಶಗಳನ್ನು ಇಲ್ಲಿ ಪರಿಶೀಲಿಸಬಹುದು.

ದೃಷ್ಟಿ ಮತ್ತು ಕೇಳುವಿಕೆ ಇವೆರಡೂ ಮಕ್ಕಳಲ್ಲಿ ತಮ್ಮ ಪಟುತ್ವವನ್ನು ಹೆಚ್ಚಿಸಿಕೊಳ್ಳುವಂತೆ ಸೂಕ್ತ ಚಟುವಟಿಕೆಗಳನ್ನು ಒದಗಿಸಬೇಕು. ಕಣ್ಣು ಮತ್ತು ಕಿವಿಗಳಲ್ಲೇನಾದರೂ ದೋಷವಿದ್ದರೆ ಅಗತ್ಯ ಚಿಕಿತ್ಸೆಯನ್ನೊದಗಿಸುವಂತೆ ಪೋಷಕರಿಗೆ ಸೂಚಿಸಬೇಕು; ಓದುಗಾರಿಕೆಯಲ್ಲಿ ಚಲನಕೌಶಲದ ಸಮಾಯೋಜನೆ ಪ್ರಮುಖ ಪಾತ್ರವಹಿಸುತ್ತದೆ. ಕೈಯನ್ನೂ ಕಣ್ಣನ್ನೂ ಎಡದಿಂದ ಬಲಕ್ಕೆ ಜೊತೆಗೂಡಿಸಿ ಓಡಿಸುವುದು ಅಭ್ಯಾಸವಾಗಬೇಕು. ಚಿತ್ರಗಳಿಗೆ ಬಣ್ಣ ತುಂಬಿಸುವುದು, ಚಿತ್ರಗಳ ಭಾಗಗಳನ್ನು ಕತ್ತರಿಸಿ ಬೇರ್ಪಡಿಸುವುದು, ಚಿತ್ರ ಬರೆದು ಬಣ್ಣ ತುಂಬುವುದು, ಮಣ್ಣಿನಿಂದ, ಮಣಿಗಳಿಂದ, ಕಡ್ಡಿಗಳಿಂದ ಚಿತ್ರ ರಚಿಸುವುದು—ಇಂಥ ಚಟುವಟಿಕೆಗಳಿಂದ ಕಣ್ಣು ಮತ್ತು ಕೈಗಳಿಗೆ ಆ ಬಗೆಯ ಸಿದ್ಧತೆ ಸಿದ್ಧಿಸುತ್ತದೆ. ಅಧ್ಯಾಪಕರು ಪ್ರಾಥಮಿಕ ಮೊದಲನೆಯ ತರಗತಿಯ ಆರಂಭದಲ್ಲಿ ಅಂಥ ಚಟುವಟಿಕೆಗಳನ್ನು ಒದಗಿಸಬೇಕು.

ಕೆಲವು ದೃಶ್ಯ ಮತ್ತು ಶ್ರವ್ಯಾನುಭವಗಳೂ ಸಿದ್ಧತೆಯ ಕಾಲದಲ್ಲಿ ದೊರಕಬೇಕು. ಸಮಾನ ಆಕೃತಿಯ ಗೆರೆ, ರೂಪ ಮುಂತಾದವನ್ನು ಗುರುತಿಸುವ ಮತ್ತು ಭಿನ್ನ ಆಕೃತಿಯವನ್ನು ಪ್ರತ್ಯೇಕಿಸುವ ಚಟುವಟಿಕೆಗಳನ್ನೂ ಒದಗಿಸಬೇಕು. ಧ್ವನಿಭೇದಗಳನ್ನು ಗುರುತಿಸಲಾರದ ಮಕ್ಕಳು ಓದುಗಾರಿಕೆಯನ್ನು ಕಲಿಯುವುದರಲ್ಲಿ ಹಿಂದುಳಿಯುವರು. ಆದ್ದರಿಂದ ಪದಗಳಲ್ಲಿ ಪಾತ್ರವಹಿಸುವ ಅಕ್ಷರಗಳ ಧ್ವನಿಗಳನ್ನು ಆಸಕ್ತಿಯಿಂದ ಮಕ್ಕಳು ಕೇಳುವಂತೆ ಮಾಡಿ ಆ ಮುಖವಾದ ಸಿದ್ಧತೆಯನ್ನೂ ರೂಢಿಸಿಕೊಳ್ಳಬೇಕು.

ಮಾತೃಭಾಷೆಯಲ್ಲಿ ಚೆನ್ನಾಗಿ ಮಾತಾಡುವುದೂ ಸರಿಯಾಗಿ ಪದಪ್ರಯೋಗ ಮಾಡುವುದೂ ಓದುಗಾರಿಕೆಯ ಕಲಿವಿಗೆ ತುಂಬ ನೆರವಾಗುತ್ತದೆ. ಆದ್ದರಿಂದ ಅಧ್ಯಾಪಕರು ಮಕ್ಕಳಿಗೆ ಕಥೆ ಹೇಳಿಸುವುದು, ಸಂವಾದ ನಡೆಸುವುದು, ತಮ್ಮ ಅನುಭವಗಳನ್ನು ಬಣ್ಣಿಸುವಂತೆ ಕೇಳುವುದು —ಇತ್ಯಾದಿ ಪೂರ್ವಭಾವಿ ಚಟುವಟಿಕೆಗಳನ್ನು ವ್ಯವಸ್ಥೆಗೊಳಿಸಬಹುದು.

ಇತರ ಮಕ್ಕಳೊಡನೆ ಸಹಕರಿಸಿ ಕೆಲಸಮಾಡುವುದು, ಹಿಡಿದ ಕಾರ್ಯವನ್ನು ಗಮನ ಕೊಟ್ಟು ಮಾಡುವುದು, ತಮ್ಮ ನಿತ್ಯಜೀವನದ ಆಸಕ್ತಿಗಳಿಗೆ ಓದುಗಾರಿಕೆ ಮುಖ್ಯ ಎಂದು ಅರಿಯುವುದು—ಇವು ಓದುಗಾರಿಕೆಗೆ ಮುನ್ನ ನಡೆಯಬೇಕಾದ ಇತರ ಕೆಲವು ಸಿದ್ಧತೆಗಳು.

ಬೋಧನಕ್ರಮ : ಓದುಗಾರಿಕೆಗೆ ಅಗತ್ಯವೆನಿಸುವ ಪೂರ್ವಸಿದ್ಧತೆ ನಡೆದಿದ್ದರೆ ಮಕ್ಕಳು ತಮ್ಮ ಅನುಭವಕ್ಕೆ ಬಂದಿರುವ ಪದಗಳನ್ನು ಚಿತ್ರ, ಕ್ರಿಯೆ, ವಿವರಣೆ ಇತ್ಯಾದಿ ನಿದರ್ಶನಗಳ ಜೊತೆಯಲ್ಲಾದರೆ ಸುಲಭವಾಗಿ ಗುರುತಿಸಬಲ್ಲರು ; ಬಾಲಬೋಧೆಯಲ್ಲಿ ಚಿತ್ರವನ್ನು ಮೇಲೆ ಕೊಟ್ಟು ಕೆಳಗೆ ಪದಗಳನ್ನು ಮುದ್ರಿಸಿರುವಾಗ ಮಕ್ಕಳು ಪದಗಳನ್ನು ಗುರುತಿಸುವರು ; ಹೊಸ ಹೊಸ ಪಾಠಗಳಲ್ಲಿ ಪದಗಳನ್ನು ಈ ರೀತಿ ಗುರುತಿಸಿದಂತೆ ಆಗಲೆ ಬಂದಿರುವ ಪದಗಳ ಪುನರಾವರ್ತನೆಯಾಗಿ ಅವನ್ನು ಗುರುತಿಸುವುದು ಸುಲಭವಾಗುತ್ತದೆ. ಬಾಲಬೋಧೆ ಮುಗಿಯುವ ವೇಳೆಗೆ ಅನೇಕ ಪದಗಳನ್ನು ಗುರುತಿಸುವುದು ಸಾಧ್ಯವಾಗುವುದು. ಪ್ರತಿ ಅಕ್ಷರಕ್ಕೂ ಸನ್ನಿವೇಶಕ್ಕೆ ತಕ್ಕಂತೆ ಧ್ವನಿ ವ್ಯತ್ಯಾಸವಾಗುವ ಇಂಗ್ಲಿಷಿನಂಥ ಭಾಷೆಯಲ್ಲಿ ಓದುಗಾರಿಕೆಯ ಬೋಧನೆಗೆ ಇದು ನಿಜವಾಗಿಯೂ ಅನುಕೂಲ. ಆದರೆ ಕನ್ನಡದಂಥ ಭಾಷೆಯಲ್ಲಿ ಪ್ರತಿ ಅಕ್ಷರಕ್ಕೂ ನಿರ್ದಿಷ್ಟ ಧ್ವನಿಯುಂಟು. ವರ್ಣಮಾಲೆಯ ಎಲ್ಲ ಅಕ್ಷರಗಳನ್ನೂ ಮೊದಲು ತಿದ್ದಿ ಹಾಕಿ ಕಲಿಸಿದರೆ ಒತ್ತಕ್ಷರ, ಕಾಗುಣಿತ ಇಲ್ಲದ ಎಲ್ಲ ಪದಗಳನ್ನೂ ಮಕ್ಕಳು ಓದಬಹುದಲ್ಲವೆ ? ಅಕ್ಷರಜ್ಞಾನವೇ ಇಲ್ಲದೆ ಪದಗಳನ್ನು ಓದಿಸಲು ನಡೆಸುವ ಯತ್ನ ಕಠಿಣವಲ್ಲವೆ ?—-ಎಂಬ ಪ್ರಶ್ನೆಗಳು ಏಳುತ್ತವೆ. ನಿಜ. ಕನ್ನಡದ ಬಗ್ಗೆ ಹೇಳುವುದಾದರೆ ಇಂಥ ಅಕ್ಷರಮೂಲ ಬೋಧನಕ್ರಮ ಲಾಭದಾಯಕವೆ. ಆದರೆ ಅಕ್ಷರವನ್ನು ಮಕ್ಕಳಿಗೆ ಕಲಿಸುವುದೂ ಅವರಿಗೆ ಅರ್ಥವಾಗದ ಸಂಕೇತಗಳಿಗೆ ಧ್ವನಿಯನ್ನು ಪರಿಚಯ ಮಾಡಿಕೊಡುವುದೂ ಅಷ್ಟೇ ಕಷ್ಟವಾಗುವುದಿಲ್ಲವೆ ? ಆದ್ದರಿಂದ ಈಚೆಗೆ ಅಕ್ಷರಮೂಲ ಮತ್ತು ಪದಮೂಲ ಬೋಧನಕ್ರಮಗಳೆರಡನ್ನೂ ಒಟ್ಟುಗೂಡಿಸುವ ಯತ್ನ ನಡೆಯುತ್ತಿದೆ. ಇದೇ ಕ್ರಮವನ್ನು ಬಾಲಬೋಧೆಯನ್ನು ರಚಿಸುವಾಗಲೂ ಅನುಸರಿಸಲಾಗುತ್ತಿದೆ. ಮಕ್ಕಳ ಆಸಕ್ತಿಗೆ ನಿಲುಕುವ ಪದಗಳನ್ನು ಓದುವುದರಿಂದಲೇ ಪಾಠವನ್ನು ಆರಂಭಿಸಿದರೂ ಆ ಪದಗಳಲ್ಲಿರುವ ಅಕ್ಷರಗಳ ಪರಿಚಯವನ್ನು ಅಂದಿಗಂದಿಗೆ ಮಾಡಿಕೊಡುವುದರಿಂದ ಕ್ರಮೇಣ ಎಲ್ಲ ಅಕ್ಷರಗಳನ್ನೂ ಗುರುತಿಸುವುದನ್ನು ಕಲಿಯುವರು. ಹಾಗೂ, ಮೊದಲು ಕಾಗುಣಿತರಹಿತವೂ ಒತ್ತಕ್ಷರಗಳಿಲ್ಲದವೂ ಆದ ಪದಗಳನ್ನು ಹಲವಾರು ಪಾಠಗಳಲ್ಲಿ ಕಲಿಸಿ ವರ್ಣಮಾಲೆಯ ಮುಖ್ಯ ಬಳಕೆಯ ಅಕ್ಷರಗಳನ್ನೆಲ್ಲ ಗುರುತಿಸುವಂತಾದ ಮೇಲೆ ಕ್ರಮಕ್ರಮವಾಗಿ ಕಾಗುಣಿತಾಕ್ಷರಗಳನ್ನೂ ಒತ್ತಕ್ಷರಗಳನ್ನೂ ಒಳಗೊಂಡ ಪದಗಳನ್ನು ತರುವುದು ಸೂಕ್ತವೆನಿಸುತ್ತದೆ. ಇದರಿಂದ ಮಕ್ಕಳ ಆಸಕ್ತಿಯನ್ನೂ ಬಳಸಿಕೊಂಡಂತಾಗುತ್ತದೆ—ಇದು ಮನಶ್ಶಾಸ್ತ್ರಕ್ಕೆ ಸಮ್ಮತವೆನಿಸುವ ಕ್ರಮ ; ಜೊತೆಗೆ, ವರ್ಣಮಾಲೆಯ ಅಕ್ಷರಗಳ ಧ್ವನಿ ನಿರ್ದಿಷ್ಟತೆಯ ಸೌಲಭ್ಯವನ್ನೂ ಬಳಸಿಕೊಂಡಂತಾಗುತ್ತದೆ. ಮೊದಲ ಪುಸ್ತಕ ಮುಗಿಯುವ ವೇಳೆಗೆ ಅಕ್ಷರಗಳನ್ನು ಗುರುತಿಸಿ ಕೂಡಿಸಿ ಪದಗಳನ್ನು ಉಚ್ಚರಿಸುವುದು ತಕ್ಕಮಟ್ಟಿಗೆ ಸಿದ್ಧಿಸುತ್ತದೆ. ಪುಸ್ತಕದ ಕೊನೆಯಲ್ಲಿ ಬರುವ ಕಥೆ, ಪ್ರವಾಸ, ವಿವರಣೆ ಇತ್ಯಾದಿ ಪಾಠಗಳು ಓದುಗಾರಿಕೆಗೆ ಪ್ರೇರಕವಾಗುವಂಥ ವಸ್ತುವಿನಿಂದ ರಚನೆಯಾಗಿದ್ದರೆ ಓದುವುದರಲ್ಲಿ ಅವರಿಗೇ ವಿಶೇಷ ಆಸಕ್ತಿ ಮೂಡುತ್ತದೆ. ಅಂದಿಗಂದಿಗೆ ಮಕ್ಕಳಿಗೆ ಅಭ್ಯಾಸ ರೂಪದಲ್ಲಿ ಹಾಕುವ ಪ್ರಶ್ನೆಗಳಿಂದಲೂ ಮುದ್ರಿತ ಪಾಠದಿಂದ ಉತ್ತರ ಹುಡುಕಿಸುವಾಗಲೂ ಈ ಆಸಕ್ತಿ ಹೆಚ್ಚುವುದಲ್ಲದೆ ಪದಗಳನ್ನು ಗುರುತಿಸುವ ಶಕ್ತಿಯೂ ಬಲಗೊಳ್ಳುತ್ತದೆ.

ಡೇನಿಯಲ್ ಕ್ರಮ : ಈಚೆಗೆ ಡೇನಿಯಲ್ ಎಂಬ ತಜ್ಞ ಇಂಗ್ಲಿಷನ್ನು ಕಲಿಸಲು ಇಡೀ ಪದದ ಧ್ವನಿಯನ್ನು ಒಂದು ಘಟಕವನ್ನಾಗಿ ಮಾಡಿಕೊಂಡು ಬೋಧಿಸುವ ಹೊಸ ಕ್ರಮವನ್ನು ರೂಪಿಸಿದ್ದಾನೆ. ಪರಿಚಿತ ಪದವೊಂದನ್ನು ಚಿತ್ರ, ಸಂಭಾಷಣೆ ಇತ್ಯಾದಿ ಸಾಧನಗಳಿಂದ ಕಲಿಸಿ ಆ ಪದದ ಸಮಗ್ರ ಧ್ವನಿ ನಿರೂಪಣೆಯಲ್ಲಿ ಪ್ರತಿ ಅಕ್ಷರದ ಧ್ವನಿಯನ್ನೂ ಪ್ರಯೋಗ ಕ್ಷೇತ್ರವನ್ನೂ ಪರಿಚಯ ಮಾಡಿಕೊಡಬೇಕು. ಆದರೆ ಮತ್ತೊಂದು ಪದವನ್ನು ಕಲಿಸುವಾಗ ಅನೇಕ ವೇಳೆ ಆ ಅಕ್ಷರಗಳು ಧ್ವನಿರೂಪಣೆಯಲ್ಲಿ ಅದೇ ಪಾತ್ರವನ್ನು ವಹಿಸದಿರಬಹುದು. ಆದ್ದರಿಂದ ನಿತ್ಯಜೀವನದಲ್ಲಿ ಬಳಸುವ ಅನೇಕ ಪದಗಳನ್ನು ಕಲಿಸಿ ಆಯಾ ಪದದಲ್ಲಿ ಪ್ರತಿ ಅಕ್ಷರವೂ ವಹಿಸುವ ಧ್ವನಿಪಾತ್ರವನ್ನು ಗುರುತಿಸುವುದನ್ನು ಕಲಿಸಬೇಕು. ಇದರಿಂದ ಸಾಮಾನ್ಯ ಪದಗಳನ್ನೂ ಪದಪುಂಜಗಳನ್ನೂ ಓದುವುದು ಸರಾಗವಾಗುತ್ತದೆ. ಈ ಸಂಯೋಜಿತ ಕ್ರಮದಲ್ಲಿ ಅಕ್ಷರಮೂಲ ಪದ್ಧತಿಯಂತೆ ಪದಮೂಲ ಪದ್ಧತಿಯನ್ನೂ ಬಳಸಿಕೊಂಡಿರುವುದು ಸ್ಪಷ್ಟಪಡುತ್ತದೆ.

ಪಿಟ್‌ಮನ್ನನ ಕ್ರಮ : ಈಚೆಗೆ ಎಂದರೆ ಕಳೆದ ದಶವಾನದಿಂದ ಇಂಗ್ಲೆಂಡಿನಲ್ಲೂ ಅಮೆರಿಕದಲ್ಲೂ ಹೊಸದೊಂದು ಯತ್ನ ನಡೆಯುತ್ತಿದೆ. ಪಿಟ್‌ಮನ್ ಎಂಬಾತ ಓದುಗಾರಿಕೆಯ ಪ್ರಥಮ ಬೋಧನೆಯ ವರ್ಣಮಾಲೆ ಐಟಿಎ (ಇನಿಷಿಯಲ್ ಟೀಚಿಂಗ್ ಆಲ್ಫಬೆಟ್) ಎಂಬ ಒಂದು ಪಟವನ್ನು ತಯಾರಿಸಿದ. ಅದರಲ್ಲಿ ಅಕ್ಷರಗಳು ರೋಮನ್ ಲಿಪಿಯಲ್ಲಿವೆ. ($q$ ಮತ್ತು $x$ ಇಲ್ಲ), ಜೊತೆಗೆ æ, EE ಇತ್ಯಾದಿ ಅಕ್ಷರಗಳ ಸಂಯೋಗದಿಂದ 14 ವಿಶಿಷ್ಟ ಧ್ವನಿಘಟಕಗಳ ಸಂಕೇತಗಳನ್ನೂ ರೂಪಿಸಿದ. ಇಂಗ್ಲೆಂಡ್ ಮತ್ತು ಕೆನಡ ದೇಶಗಳಲ್ಲಿ ಐಟಿಎ ವರ್ಣಮಾಲೆಯ ಕ್ರಮದಿಂದ ಬೋಧಿಸಲು ಯತ್ನಿಸಿ ಉತ್ತಮ ಫಲಿತಾಂಶ ಪಡೆಯಲಾಗಿದೆ. ಆದರೆ ಐಟಿಎ ಕೇವಲ ಒಂದು ಉಪಕರಣ, ಕೆಲವು ಅಕ್ಷರಗಳನ್ನೂ ಕೆಲವು ಪದಗಳನ್ನೂ ಗುರುತಿಸಲು ಮಾತ್ರ ಅದು ಅನುಕೂಲಿಸುವುದು ಎಂಬುದರ ಅರಿವಾದಂತೆ ಅದಕ್ಕಿದ್ದ ಪ್ರಾಮುಖ್ಯ ಕಡಿಮೆಯಾಗುತ್ತಿದೆ.

ಪ್ರಾಥಮಿಕ ಶಾಲೆಯಲ್ಲಿ ಮಕ್ಕಳು ತಮ್ಮ ಅನುಭವಕ್ಕೆ ಬಂದಿರುವ ಪದಗಳನ್ನು ಗುರುತಿಸುವುದನ್ನು ಕಲಿಯುವರು ; ಮಾಧ್ಯಮಿಕ ಅಂತಸ್ತಿನಲ್ಲಿ ಅನೇಕ ಹೊಸ ಪದಗಳು ಅವರ ಗಮನಕ್ಕೆ ಬರುತ್ತವೆ. ಅವನ್ನು ಓದಿ ಅರ್ಥ ಗ್ರಹಿಸಲು ನಿಘಂಟಿನ ಬಳಕೆ ಅಗತ್ಯವಾಗುತ್ತದೆ. ಅಂಥ ನೂತನ ಪದಗಳನ್ನು ವಿವರಣೆ, ಚಿತ್ರ ಮಾದರಿ ಇತ್ಯಾದಿಗಳ ಹಿನ್ನೆಲೆಯಲ್ಲಿ ಪರಿಚಯ ಮಾಡಿಕೊಡುವುದು ಸುಲಭ. ಆ ವೇಳೆಗೆ ಇತರ ವಿಷಯಗಳ ವ್ಯಾಸಂಗದಲ್ಲೂ ಓದುಗಾರಿಕೆಯ ಬಳಕೆಯಾಗಿ ಪದಸಂಪತ್ತು ವೃದ್ಧಿಯಾಗಿರುತ್ತದೆ. ಆ ಬಗ್ಗೆಯೂ ನಿರ್ದಿಷ್ಟ ಬೋಧನಕಾರ್ಯಕ್ರಮ ಅಗತ್ಯ. ಅಧ್ಯಾಪಕರು ನೂತನ ಪದಗಳನ್ನು ಅವರ ಗಮನಕ್ಕೆ ತರುವುದರ ಜೊತೆಗೆ ಅವುಗಳ ಅರ್ಥವನ್ನು ಪರಿಚಯ ಮಾಡಿಕೊಳ್ಳುವುದಕ್ಕೂ ಅವನ್ನು ಬಳಸುವುದಕ್ಕೂ ಅವಕಾಶ ಕಲ್ಪಿಸಬೇಕು.

ಅರ್ಥಗ್ರಹಣ ಮತ್ತು ಗುರುತಿಸಿ ಓದುವ ಕಾರ್ಯ ಪ್ರಾಥಮಿಕ ಶಾಲೆಯ ಕೊನೆಯ ದಿನಗಳಿಂದ ಹಿಡಿದು ಪ್ರೌಢಶಾಲೆಗಳಲ್ಲೂ ಕಾಲೇಜುಗಳಲ್ಲೂ ಮುಂದುವರಿಯುತ್ತದೆ. ಮೊದಮೊದಲ ಪದಗಳ ಅರ್ಥ ಅವರ ಅನುಭವಕ್ಕೆ ಬಂದವೇ ಆದರೂ ಕ್ರಮಕ್ರಮವಾಗಿ ನೂತನ ಪದಗಳ ಮೂಲಕ ಹೊಸ ಅನುಭವ ಅವರಿಗಾಗುತ್ತದೆ. ಮೇಲ್ಮಟ್ಟಕ್ಕೆ ಹೋದಂತೆ ಪಠ್ಯಗ್ರಂಥಗಳ ವಸ್ತುವೂ ಕಷ್ಟವಾಗುತ್ತ ಹೋಗುತ್ತದೆ ; ಪರಿಚಯವಿಲ್ಲದ್ದೂ ಆಗುತ್ತದೆ ; ಅಮೂರ್ತ ಸ್ವರೂಪದ್ದೂ ಆಗುವುದುಂಟು. ಸಾಹಿತ್ಯದ ಒಂದು ಕೃತಿಯನ್ನು ಓದಿದಾಗ ಅದರ ಪೂರ್ಣಾನುಭವ ಆಗದಿರಬಹುದು. ಅದರ ಅಭಿಪ್ರಾಯ, ಭಾವನೆ, ಕಥಾಕೌಶಲ್ಯ ಇವೆಲ್ಲ ಪರಿಚಯವಾಗಲು ಬೇರೆ ಬೇರೆ ವಿಷಯಕ್ಕೆ ಸಂಬಂಧಿಸಿದ ಪಾಠಗಳನ್ನು ಓದಬೇಕಾಗಬಹುದು. ಹೀಗೆ ಮೇಲ್ಮಟ್ಟದಲ್ಲಿ ಓದುಗಾರಿಕೆ ಹೆಚ್ಚಿದಂತೆ ಅರ್ಥಗ್ರಹಣ, ಪದಗಳನ್ನು ಗುರುತಿಸುವಿಕೆ, ಮುಖ್ಯಾಂಶಗಳ ಗ್ರಹಣ, ವಿವರಗಳ ಗ್ರಹಣ, ತೀರ್ಮಾನ ಕೈಕೊಳ್ಳುವುದು, ಅನುಕರಿಸುವುದು, ವಿಮರ್ಶೆ ಇತ್ಯಾದಿಯೆಲ್ಲವೂ ಸೇರಿಕೊಂಡು ಭಾಷೆಯ ಪ್ರಯೋಗದ ವಿವಿಧ ಮುಖಗಳಲ್ಲಿ ಅನುಭವ ಹೆಚ್ಚುತ್ತದೆ.

ಓದುಗಾರಿಕೆಯ ವೇಗ : ಪದಗಳನ್ನು ಗುರುತಿಸುವಿಕೆ, ಅರ್ಥಗ್ರಹಣ ಇವು ಉತ್ತಮಗೊಂಡಂತೆ ಓದುಗಾರಿಕೆಯ ವೇಗ ಹೆಚ್ಚುತ್ತಹೋಗುತ್ತದೆ. ಪ್ರಾಥಮಿಕ ಶಾಲೆಯ ಮಕ್ಕಳು ಮೌನವಾಗಿ ಓದುವಾಗ ಮಾಧ್ಯಮಿಕ ಶಾಲೆಯ ಮಕ್ಕಳಿಗಿಂತ ನಿಧಾನವಾಗಿ ಓದುತ್ತಾರೆ. ಏಕೆಂದರೆ ಅವರಿಗೆ ಓದುಗಾರಿಕೆಯ ಮೂಲಕೌಶಲ್ಯ ಆಗತಾನೇ ಸಿದ್ಧಿಸಿರುತ್ತದೆ. ವಯಸ್ಕರ ಓದುಗಾರಿಕೆಯ ವೇಗದಲ್ಲೂ ಇದೇ ರೀತಿಯ ವ್ಯತ್ಯಾಸ ಕಂಡುಬರುತ್ತದೆ. ಅಲ್ಲದೆ ಕೃತಿಯ ಕ್ಲಿಷ್ಟತೆಯನ್ನನುಸರಿಸಿ ಒಬ್ಬನೇ ಒಂದನ್ನು ವೇಗವಾಗಿಯೂ ಇನ್ನೊಂದನ್ನು ನಿಧಾನವಾಗಿಯೂ ಓದಬಹುದು. ಕಾದಂಬರಿಯಾದರೆ ನಿಮಿಷಕ್ಕೆ ಮುನ್ನೂರು ಪದ ಓದುವವರು ಅರ್ಥಶಾಸ್ತ್ರದಲ್ಲಿ ಇನ್ನೂರರಂತೆ ಓದಬಹುದು ; ತಾಂತ್ರಿಕ ವಿಷಯವಾದರೆ ನಿಮಿಷಕ್ಕೆ ನೂರು ಪದಗಳನ್ನು ಮಾತ್ರ ಓದಬಹುದು.

ತರಗತಿಯಲ್ಲಿ ಸೂಕ್ತ ಬೋಧನಕ್ರಮವನ್ನು ಅನುಸರಿಸಿ ಸರಾಗವಾಗಿ ಓದುವುದನ್ನು ಕಲಿಸುವುದರ ಜೊತೆಗೆ ಆ ಮುಖವಾಗಿ ಒಳ್ಳೆಯ ಅಭ್ಯಾಸಗಳನ್ನೂ ಮಕ್ಕಳಲ್ಲಿ

ಬೆಳೆಸಬೇಕು. ವಿರಾಮ ಕಾಲದಲ್ಲಿ ಆಸಕ್ತಿಯ ವಿಷಯಗಳನ್ನು ಕುರಿತ ತಮ್ಮ ಯೋಗ್ಯತೆಗೆ ನಿಲುಕುವಂಥ ಗ್ರಂಥಗಳನ್ನು ಓದಲು ಪ್ರೋತ್ಸಾಹಿಸಬೇಕು. ವಾಚನ ಗೋಷ್ಠಿಗಳನ್ನು ಮಾಡಿಕೊಳ್ಳಲು ಅವಕಾಶ ಕಲ್ಪಿಸಬೇಕು. ಗ್ರಂಥಾಲಯವೂ ಅವರ ಆಸಕ್ತಿಯ ವಿಷಯಗಳನ್ನು ಒದಗಿಸಬಲ್ಲ ಪುಸ್ತಕಗಳನ್ನು ಸಂಗ್ರಹಿಸಬೇಕು. ಶಾಲಾಕಾಲೇಜುಗಳು ಕ್ರಮಕ್ರಮವಾಗಿ ವಿದ್ಯಾರ್ಥಿಗಳಲ್ಲಿ ಓದುಗಾರಿಕೆಯ ಆಸಕ್ತಿಯನ್ನು ಗ್ರಂಥಾಭ್ಯಾಸದ ಮಟ್ಟದ ಆಸಕ್ತಿಯಾಗಿ ರೂಢಿಸಿಕೊಡಬೇಕು.

ಓದುಗಾರಿಕೆಗೆ ಸೂಕ್ತ ಸನ್ನಿವೇಶಗಳು : ಬೆಳಕು ಕಡಿಮೆಯಾದರೆ ಓದಲು ತೊಂದರೆಯಾಗುವುದು ; ತರಗತಿಯಲ್ಲಿ 10 ಫುಟ್ ಕ್ಯಾಂಡಲ್ ಬೆಳಕಿಗಿಂತ ಕಡಿಮೆಯಿರಬಾರದು. ಮುದ್ರಣವಾಗಿರುವ ಕಾಗದ ಹೊಳೆಯದಂತೆ ಸ್ವಲ್ಪ ಮಾಸಲು ಬಿಳುಪಾಗಿರುವುದು ಉತ್ತಮ. ವಿವಿಧ ಬಣ್ಣಗಳ ಬೆರಕೆಗಿಂತ ಬಿಳಿಯ ಕಾಗದದ ಮೇಲೆ ಕಪ್ಪು ಮುದ್ರಣವಿದ್ದಲ್ಲಿ ಓದುಗಾರಿಕೆಗೆ ತೀರ ಪರಿಣಾಮಕಾರಿಯಾದ ಹಿನ್ನೆಲೆ ದೊರೆತಂತಾಗುತ್ತದೆ.

ಮುದ್ರಣಾಕ್ಷರಗಳ ಆಕಾರ : ಸಿರಿಲ್ ಬರ್ಟ್ ಎಂಬ ಇಂಗ್ಲಿಷ್ ಶಿಕ್ಷಣ ಸಂಶೋಧಕ ಸೂಚಿಸುವಂತೆ 7 ವರ್ಷಕ್ಕೂ ಕಡಿಮೆ ಮಕ್ಕಳ ಪುಸ್ತಕ 24 ಪಾಯಿಂಟಿನಲ್ಲೂ 7–8 ವರ್ಷದವರಿಗೆ 18 ಪಾಯಿಂಟಿನಲ್ಲೂ 8–9 ವರ್ಷದವರಿಗೆ 16 ಪಾಯಿಂಟಿನಲ್ಲೂ 9–10 ವರ್ಷದವರಿಗೆ 14 ಪಾಯಿಂಟಿನಲ್ಲೂ 10–12 ವರ್ಷದವರಿಗೆ 12 ಪಾಯಿಂಟಿನಲ್ಲೂ 12 ವರ್ಷಗಳಿಗಿಂತ ಮೇಲ್ಪಟ್ಟವರಿಗೆ 11 ಪಾಯಿಂಟಿನಲ್ಲೂ ಇರುವುದು ಒಳ್ಳೆಯದೆಂದು ಸೂಚಿಸಿದ್ದಾನೆ. ಚಿಕ್ಕವರಿಗೆ ಪದಗಳ ನಡುವೆ ಹೆಚ್ಚು ಅಂತರ ಇರುವುದು ಅಗತ್ಯ. ಪಂಕ್ತಿ 3 ಅಂಗುಲಕ್ಕಿಂತ ಹೆಚ್ಚು ಉದ್ದವಾಗಿರಬಾರದು.

ಓದುಗಾರಿಕೆಯಲ್ಲಿ ಅಭಿರುಚಿ : ಹೆಣ್ಣು ಮತ್ತು ಗಂಡುಮಕ್ಕಳ ಓದುಗಾರಿಕೆಯ ಅಭಿರುಚಿಗಳಲ್ಲಿ ವ್ಯತ್ಯಾಸವಿದೆ. ಬಾಲಕರು ಸಾಹಸ, ರಚನೆ, ಹವ್ಯಾಸ, ವಿಜ್ಞಾನ ಇಂಥ ಪುಸ್ತಕಗಳನ್ನೋದುವರು. ಬಾಲಕಿಯರು ಮನೆಗೆಲಸ, ಕಲ್ಪನೆ, ಸಾಹಸ, ಮನೋರಂಜನೆ ಇತ್ಯಾದಿ ಕೃತಿಗಳನ್ನು ಓದುವರು. ಯುವತಿಯರು ಪ್ರಣಯದ ಕಥೆ, ಕಾದಂಬರಿ ಮತ್ತು ಯುವಜನರ ಕಥೆಗಳನ್ನು ಓದುವರು. ಅಂತರರಾಷ್ಟ್ರೀಯ ತಿಳಿವಳಿಕೆ, ವೈಯಕ್ತಿಕ ಆರೋಗ್ಯ—ಇವೆರಡನ್ನು ಕುರಿತ ಗ್ರಂಥಗಳ ವಾಚನ ಯುವಕ ಯುವತಿಯರಿಗೆ ಉಭಯಸಾಮಾನ್ಯ. ವಯಸ್ಕರ ಓದುವ ಅಭಿರುಚಿ ಅವರು ಪಡೆದಿರುವ ಶಿಕ್ಷಣ, ಮಾಡುತ್ತಿರುವ ಉದ್ಯೋಗ, ಲಿಂಗ ಮತ್ತು ವಾಸಿಸುವ ಸನ್ನಿವೇಶ—ಇವುಗಳನ್ನು ಅನುಸರಿಸಿ ಭಿನ್ನವಾಗಿರುತ್ತದೆ. ಅಧ್ಯಾಪಕರು ಈ ಅಂಶಗಳನ್ನೂ ಮನದಟ್ಟು ಮಾಡಿಕೊಂಡು ಅವರಿಗೆ ಓದುಗಾರಿಕೆಯಲ್ಲಿ ಸಲಹೆ ನೀಡಬೇಕು.

ಓದುಗಾರಿಕೆ ಮಾತಿಗೆ ಪ್ರಾಧಾನ್ಯವುಳ್ಳ ಕೌಶಲ. ಆದ್ದರಿಂದ ಅದನ್ನು ಬೋಧಿಸುವಾಗ ಯಾವ ಕ್ರಮವನ್ನೇ ಅನುಸರಿಸಲಿ ಸ್ಪಷ್ಟವಾಗಿ ಅಕ್ಷರಗಳನ್ನೂ ಪದಗಳನ್ನೂ ವಾಕ್ಯಗಳನ್ನೂ ಉಚ್ಚರಿಸುವ ಕಾರ್ಯಕ್ಕೆ ಅಧ್ಯಾಪಕರು ಮೊದಲಿಂದಲೂ ಗಮನ ಕೊಡುವುದು ಅಗತ್ಯ. ಓದುಗಾರಿಕೆಯ ಕಲಿವು ನೈಜ ಸನ್ನಿವೇಶದಲ್ಲಿ ಬರೆವಣಿಗೆಯೊಡನೆ ಜೊತೆಜೊತೆಯಾಗಿಯೆ ಸಾಗುತ್ತದೆ. ಆದ್ದರಿಂದ ಬರೆಯುವಾಗಲೂ ಸ್ಪಷ್ಟವಾಗಿ ಉಚ್ಚರಿಸುವುದನ್ನೇ ಕಲಿಸುತ್ತ ಹೋಗಬೇಕು. ನೂತನ ಪದಗಳನ್ನು ಅಧ್ಯಾಪಕರು ಆದರ್ಶವಾಗಿ ಉಚ್ಚರಿಸಿ ಮಕ್ಕಳಿಗೆ ಮಾರ್ಗದರ್ಶನ ನೀಡಬೇಕು. ಒಮ್ಮೆ ಹಾಗೆ ಕೇಳಿದ ಪದ, ಪದಪುಂಜ, ನುಡಿಗಟ್ಟು ಇತ್ಯಾದಿಗಳು ಮಕ್ಕಳ ಮನಸ್ಸಿನಲ್ಲಿ ಸ್ಫುಟಗೊಳ್ಳಬೇಕು. ಈಚೆಗೆ ಪದ್ಯ, ಗದ್ಯ, ಇತ್ಯಾದಿ ಕೃತಿಗಳನ್ನು ಆದರ್ಶವಾಗಿ ವಾಚಿಸಿರುವ ಧ್ವನಿಮುದ್ರಿಕೆಗಳನ್ನು ಈ ಕಾರ್ಯದಲ್ಲಿ ಬೋಧನೋಪಕರಣಗಳನ್ನಾಗಿ ಬಳಸಿಕೊಳ್ಳುತ್ತಿರುವರು. ಪ್ರಾಥಮಿಕ, ಮಾಧ್ಯಮಿಕ ಮತ್ತು ಪ್ರೌಢಶಾಲೆಗಳ ಅಂತಸ್ಸಿನಲ್ಲಿ ಭಾಷೆಯ ಬಳಕೆಯನ್ನೊಳಗೊಂಡ ವಿಧವಿಧವಾದ ಸಾಮೂಹಿಕ ಕಾರ್ಯಗಳಿಗೂ ಅವಕಾಶ ಕಲ್ಪಿಸಬಹುದು.

(ಎನ್.ಎಸ್.ವಿ.)

**ಓದುಗಾರಿಕೆಯಲ್ಲಿ ನಿವಾರಕ ಬೋಧನೆ :** ವಿದ್ಯಾರ್ಥಿಗಳ ಓದುಗಾರಿಕೆಯಲ್ಲಿ ಕಂಡುಬರುವ ವಿಶಿಷ್ಟ ದೋಷಗಳನ್ನು ನಿವಾರಿಸಲು ಯತ್ನಿಸುವಾಗ ಈ ತತ್ತ್ವಗಳನ್ನು ಅನುಸರಿಸಬೇಕು. (ಅ) ಪ್ರತಿ ವಿದ್ಯಾರ್ಥಿಯ ಓದಿನಲ್ಲಿ ಕಂಡುಬರುವ ದೋಷಗಳನ್ನೂ ಅವುಗಳ ಸ್ವಭಾವ ಮತ್ತು ಕಾರಣಗಳನ್ನೂ ಶಾಸ್ತ್ರೀಯವಾಗಿ ಪರಿಶೀಲಿಸಬೇಕು ; (ಆ) ಪ್ರತಿ ವಿದ್ಯಾರ್ಥಿಯ ಎಲ್ಲ ವಿವರಗಳನ್ನೂ ಅಂದರೆ, ಅವನ ಸ್ವಭಾವ, ಬುದ್ಧಿಶಕ್ತಿ, ಅಭಿರುಚಿಗಳು, ಕೌಟುಂಬಿಕ ಹಿನ್ನೆಲೆ, ಶಾಲಾ ಪ್ರಗತಿ—ಮುಂತಾದವುಗಳನ್ನು ಸಂಗ್ರಹಿಸಬೇಕು ; (ಇ) ಪ್ರತಿ ವಿದ್ಯಾರ್ಥಿಯ ದೋಷ ಮತ್ತು ಮಟ್ಟಕ್ಕನುಗುಣವಾಗಿ ಬೋಧನ ಕ್ರಮವನ್ನು ರೂಪಿಸಬೇಕು ; (ಈ) ನಿವಾರಕ ಪಾಠಕ್ರಮಗಳಲ್ಲಿ ಪ್ರತಿ ವಿದ್ಯಾರ್ಥಿ ಒಳ್ಳೆಯ ಮನೋಭಾವನೆಯನ್ನು ಬೆಳೆಸಿಕೊಳ್ಳುವಂತೆ, ಅವನಿಗೆ ಆಗಾಗ್ಗೆ ಈ ಕ್ರಮಗಳ ಉದ್ದೇಶ ಮತ್ತು ಅವನು ಸಾಧಿಸುತ್ತಿರುವ ಪ್ರಗತಿಯನ್ನು ತಿಳಿಸುತ್ತಿರಬೇಕು.

ಮೇಲೆ ತಿಳಿಸಿದ ಕೆಲವು ತತ್ತ್ವಗಳ ಆಧಾರದ ಮೇಲೆ ವೈಯಕ್ತಿಕ ಅಥವಾ ಸಾಮೂಹಿಕ ಸಂದರ್ಭಗಳಲ್ಲಿ ಕೈಗೊಳ್ಳುವ ನಿವಾರಕ ಕ್ರಮಗಳನ್ನು 3 ಹಂತಗಳನ್ನಾಗಿ ವಿಭಾಗಿಸಬಹುದು : 1 ದೋಷಗಳ ಸ್ವರೂಪ ನಿರ್ಣಯ ; 2 ಕೆಲವು ಶಾರೀರಿಕ ಮತ್ತು ಮಾನಸಿಕ ದೋಷಗಳ ನಿವಾರಣೆ ; 3 ನಿವಾರಕ ಬೋಧನಕ್ರಮದ ವ್ಯವಸ್ಥೆ.

1 ದೋಷಗಳ ಸ್ವರೂಪ ನಿರ್ಣಯ : ತಜ್ಞರು ವಿದ್ಯಾರ್ಥಿಗಳನ್ನು ವಿವರವಾಗಿ ಪರೀಕ್ಷಿಸಿ, ಓದಿನ ನ್ಯೂನತೆಗಳ ನಿರ್ದಿಷ್ಟ ಸ್ವರೂಪವನ್ನು ನಿರ್ಧರಿಸುವರು. ಮನಶ್ಶಾಸ್ತ್ರಜ್ಞರು, ವೈದ್ಯರು, ಸಮಾಜಸೇವಾ ಕಾರ್ಯಕರ್ತರು, ವಿಶೇಷ ತರಬೇತು ಪಡೆದ ಉಪಾಧ್ಯಾಯರು, ವಾಕ್‌ಚಿಕಿತ್ಸೆ ನಡೆಸಬಲ್ಲವರು ಈ ಕಾರ್ಯದಲ್ಲಿ ನೆರವಾಗಬೇಕು. ಹಲವು ಪ್ರಯೋಗಗಳ ಸಹಾಯದಿಂದ ಓದಿನ ದೋಷಗಳನ್ನೂ ಅವುಗಳ ಕಾರಣಗಳನ್ನೂ ಆರು ಮುಖ್ಯ ವಿಧದವನ್ನಾಗಿ ವಿಂಗಡಿಸಿದ್ದಾರೆ. ಆ ವಿಧಗಳಲ್ಲಿ ಮುಖ್ಯವಾದವನ್ನು ಮಾತ್ರ ಇಲ್ಲಿ ವಿವರಿಸಿದೆ. (ಅ) ಓದುವಾಗ ತೊಡರುವುದು, ಪದಗಳನ್ನು ಬಿಡುವುದು, ತಪ್ಪಾದ ಉಚ್ಚಾರಣೆ, ಒಂದು ಪದಕ್ಕೆ ಬದಲಾಗಿ ಮತ್ತೊಂದು ಪದವನ್ನು ಹೇಳುವುದು, ಹೊಸದಾಗಿ ಪದಗಳನ್ನು ಸೇರಿಸಿಕೊಂಡು ಓದುವುದು, ಪದಗಳ ಅನಾವಶ್ಯಕ ಪುನರುಚ್ಚಾರಣೆ—ಇವು ಪೂರ್ತಿಯಾಗಿ ಅರ್ಥಕೊಡುವ ಪದಪುಂಜಗಳನ್ನು ಓದದೆ, ಬಿಡಿಬಿಡಿಯಾಗಿ, ಅಕ್ಷರ ಅಥವಾ ಪದಗಳನ್ನು ಸೇರಿಸಿ ಓದುವ ಅಭ್ಯಾಸದಿಂದ, ಪದಸಂಪತ್ತಿನ ಅಭಾವದಿಂದ, ಅಜಾಗರೂಕತೆಯಿಂದ, ಕೇವಲ ಸಂದರ್ಭಕ್ಕೆ ತಕ್ಕಂತೆ ಪದಗಳನ್ನು ಊಹಿಸುವುದರಿಂದ, ಗಡಿಬಿಡಿಯಾಗಿ ಓದುವುದರಿಂದ ಮೂಡಿಕೊಳ್ಳುತ್ತವೆ. (ಆ) ಓದುವಾಗ ಬಹುಬೇಗ ಆಯಾಸಗೊಳ್ಳುವುದು, ಚಂಚಲತೆ, ಕಣ್ಣುಗಳಿಗೆ ಬಹು ಸಮೀಪದಲ್ಲಿ ವಸ್ತುಗಳನ್ನು ಹಿಡಿದುಕೊಳ್ಳುವುದು—ಇವು ಕಣ್ಣು ಅಥವಾ ಕಿವಿಗಳ ದೋಷಗಳಿಂದ, ಸಾಕಷ್ಟು ವಿಶ್ರಾಂತಿ, ನಿದ್ರೆಗಳ ಅಭಾವದಿಂದ, ಮೂಡಿಕೊಳ್ಳುತ್ತವೆ. (ಇ) ಪದಗಳನ್ನು ಉಚ್ಚರಿಸುವಾಗ ಅತಿ ಪ್ರಯಾಸಪಡುವುದು, ತೊದಲುವುದು, ಕೆಲವು ಶಬ್ದಗಳನ್ನು ಉಚ್ಚರಿಸಲು ಅಸಮರ್ಥನಾಗಿರುವುದು, ಕೆಲವು ಶಬ್ದಗಳನ್ನೇ ನುಂಗುವುದು—ಈ ರೀತಿಯ ತೊಂದರೆಗಳು ಮಾನಸಿಕ ಅಥವಾ ಶಾರೀರಿಕ ಕಾರಣಗಳಿಂದ ಬರುತ್ತವೆ. ಕಿವುಡು, ಗಂಟಲು ರೋಗಗಳು, ನಾಲಿಗೆ ಮತ್ತು ಹಲ್ಲುಗಳ ದೋಷ—ಇವು ಶಾರೀರಿಕ ಕಾರಣಗಳಲ್ಲಿ ಮುಖ್ಯವಾದುವು; ಮಂದಬುದ್ಧಿ, ಭಾವೋದ್ರೇಕ–ಅಂದರೆ ಅತಿಯಾಗಿ, ಅತಿಜಾಗ್ರತೆಯಾಗಿ ಉದ್ರೇಕಗೊಳ್ಳುವ ಅಥವಾ ಗಾಬರಿಪಡುವ ಸ್ವಭಾವ—ಇವು ಮಾನಸಿಕ ಕಾರಣಗಳು. (ಈ) ಓದಿದ ಅಂಶಗಳನ್ನು ಗ್ರಹಿಸುವುದರಲ್ಲಿ ಸಾವಕಾಶ ಅಥವಾ ತೊಂದರೆ, ಓದಿನಲ್ಲಿ ವಿಚಾರಶೀಲತೆಯ ಅಭಾವ, ಅಂಶಗಳ ಔಚಿತ್ಯವನ್ನು ನಿರ್ಧರಿಸಲು ಅಸಮರ್ಥನಾಗಿರುವುದು, ಉದ್ದೇಶಕ್ಕನುಸಾರವಾಗಿ ಓದಿನಲ್ಲಿ ಯಾವ ಮಾರ್ಪಾಟನ್ನೂ ತಾಳದಿರುವುದು—ಇವು ವಿದ್ಯಾರ್ಥಿಯ ಕೆಲವು ಅಹಿತಮನೋಭಾವಗಳಿಂದ ಬರುತ್ತವೆ. ಅಲ್ಲದೆ, ಓದುವಾಗ ಯಾವ ಉದ್ದೇಶವನ್ನೂ ಇಟ್ಟುಕೊಳ್ಳದೆ, ನಿರ್ಲಕ್ಷ್ಯದಿಂದ, ಅರ್ಥದ ಕಡೆಗೆ ಗಮನ ಕೊಡದೆ ಕೇವಲ ಅಕ್ಷರಗಳನ್ನು ಅಥವಾ ಪದಗಳನ್ನು ಗುರುತಿಸುವುದರಿಂದಲೂ ಈ ದೋಷಗಳು ಬೆಳೆಯುತ್ತವೆ. (ಉ) ಓದುವಾಗ ಸ್ಥಿರಮನಸ್ಕನಾಗಿರದಿರುವುದು, ಓದುವ ಮುನ್ನವೇ ವೃಥಾ ಕಾಲವ್ಯಯ ಮಾಡುವುದು, ಉದಾಸೀನ ಭಾವದಿಂದ ಕೂಡಿರುವುದು—ಇವು ವಿದ್ಯಾರ್ಥಿಯ ಆಸಕ್ತಿ ಮತ್ತು ಅಭಿರುಚಿಗಳಿಗೆ ತಕ್ಕಂತೆ ಪಠ್ಯಪುಸ್ತಕಗಳು ಹಾಗೂ ಓದುವ ಸಾಧನಗಳಿಲ್ಲದಿರುವುದು, ಏಕಾಗ್ರತೆಯನ್ನು ಕದಡುವ ಅಶಾಂತ ವಾತಾವರಣ, ಉತ್ತೇಜನದ ಅಭಾವ, ಶಾಲೆ ಮತ್ತು ಸ್ಥಳಗಳನ್ನು ಪದೇ ಪದೇ ಬದಲಾಯಿಸುವುದು, ವ್ಯಾಸಂಗ ಕ್ರಮದಲ್ಲಿನ ಅನೇಕ ದೋಷಗಳು, ಮಾನಸಿಕ ವ್ಯಾಕುಲತೆಗಳು—ಇವುಗಳಿಂದ ಬೆಳೆಯುತ್ತವೆ. (ಊ) ತನ್ನ ಓದಿಗೆ ಬೇಕಾದ ಆವಶ್ಯಕ ಆಧಾರ ಪುಸ್ತಕಗಳನ್ನು, ಶಬ್ದಸೂಚಿ, ನಿಘಂಟು ಮುಂತಾದ ಉಪಯುಕ್ತ ಸಹಾಯಕ ವಸ್ತುಗಳನ್ನು ಉಪಯೋಗಿಸಲು ಅಸಮರ್ಥನಾಗಿರುವುದು, ಇಂಥ ಸಾಮಾನ್ಯ ದೋಷಗಳು ವಿದ್ಯಾರ್ಥಿಯ ಅಲ್ಪ ಅನುಭವ, ಅಜ್ಞಾನ, ಓದುವ ಅಭ್ಯಾಸವನ್ನು ಸಾಕಷ್ಟು ಚೆನ್ನಾಗಿ ರೂಢಿಸಿಕೊಳ್ಳದೆ ಇರುವುದು—ಇವುಗಳಿಂದ ಬರುತ್ತವೆ.

ಓದುಗಾರಿಕೆಯ ದೋಷಗಳನ್ನು ಕಂಡುಹಿಡಿಯುವ ಮಾರ್ಗಗಳು : ಪಾಶ್ಚಾತ್ಯ ಮತ್ತು ಇತರ ಪ್ರಗತಿಪರ ದೇಶಗಳಲ್ಲಿ ಓದಿಗೆ ಸಂಬಂಧಪಟ್ಟ ಹಲವಾರು ಸಂಶೋಧನೆಗಳು ನಡೆದಿವೆ. ಇತ್ತೀಚೆಗೆ ಭಾರತದಲ್ಲೂ ಕೆಲವು ಪ್ರಯೋಗಗಳು ನಡೆಯುತ್ತಿವೆ. ಇವುಗಳ ಫಲವಾಗಿ, ಓದಿನ ಅಂಶಗಳನ್ನು—ಅಂದರೆ ಓದಿನ ವೇಗ, ವಿಷಯಗ್ರಹಣ, ಪದಪರಿಚಯ, ಕಣ್ಣುಗಳ ಚಲನೆ ಮುಂತಾದುವುಗಳನ್ನು–ಅಳೆಯುವ ಪರೀಕ್ಷೆಗಳು ಮತ್ತು ಉಪಕರಣಗಳೂ ಸಿದ್ಧವಾಗಿವೆ. ಇವುಗಳ ಸಹಾಯದಿಂದ ವಿದ್ಯಾರ್ಥಿಯ ಓದಿನ ಮಟ್ಟವನ್ನು ನಿರ್ದಿಷ್ಟವಾಗಿ ಅರಿಯಬಹುದು. ಇವುಗಳ ಜೊತೆಗೆ ವಿದ್ಯಾರ್ಥಿಯನ್ನು ಸಂದರ್ಶಿಸುವುದು, ಅವನು ಓದುವಾಗ ದೋಷಗಳನ್ನು ನೇರವಾಗಿ ಗಮನಿಸುವುದು—ಇವು ಸಾಮಾನ್ಯವಾಗಿ ಅನುಸರಿಸುವ ಇತರ ಮಾರ್ಗಗಳು,

ಮಾನಸಿಕ ಮತ್ತು ಶಾರೀರಿಕ ದೋಷಗಳ ನಿವಾರಣೆ ಇವು : ವಿದ್ಯಾರ್ಥಿಯನ್ನು ಪೂರ್ಣವಾಗಿ ಪರೀಕ್ಷಿಸಿದ ಅನಂತರ ನಿವಾರಕ ಬೋಧನ ಕ್ರಮಕ್ಕೆ ಮೊದಲು, ಕೆಲವು ಶಾರೀರಿಕ ಮತ್ತು ಮಾನಸಿಕ ದೋಷಗಳನ್ನು ನಿವಾರಿಸುವುದು ಅಗತ್ಯ. ಕಿವುಡುತನಕ್ಕೆ ಶ್ರವಣಗ್ರಾಹಕ ಸಾಧನಗಳನ್ನೂ ದೃಷ್ಟಿದೋಷಗಳಿಗೆ ಕನ್ನಡಕಗಳನ್ನೂ ಒದಗಿಸಬೇಕು. ಒಳ್ಳೆಯ ಆಹಾರ, ವಿಶ್ರಾಂತಿ, ಚಿಕಿತ್ಸೆಗಳ ಮೂಲಕ ಅವನ ಆರೋಗ್ಯವನ್ನು ಉತ್ತಮಪಡಿಸಬೇಕು. ವಿದ್ಯಾರ್ಥಿಯಲ್ಲಿ ಆತ್ಮವಿಶ್ವಾಸ, ಸಹಬಾಳ್ವೆ, ಸಂವೇಗಗಳ ಸಾಮರಸ್ಯವನ್ನು ಬೆಳೆಸಬೇಕು. ಈ ರೀತಿಯ ಕಾರ್ಯಕ್ರಮಗಳು ವಿದ್ಯಾರ್ಥಿಯನ್ನು ನಿವಾರಕ ಬೋಧನೆಗೆ ಸಿದ್ಧಗೊಳಿಸುವುವು.

ನಿವಾರಕ ಬೋಧನಕ್ರಮ : ನಿವಾರಣೆಯ ಯೋಜನೆಯ ಮೂರನೆ ಹಂತವಾಗಿ, ರಚನಾತ್ಮಕವೂ ಪರಿಣಾಮಕಾರಿಯೂ ಆದ ಬೋಧನಕ್ರಮದ ವ್ಯವಸ್ಥೆಯನ್ನು ರೂಪಿಸುವುದು ಅಗತ್ಯ. ಈ ವ್ಯವಸ್ಥೆಯನ್ನು ರಚಿಸುವಾಗ ಎರಡು ಬಗೆಯ ವಿದ್ಯಾರ್ಥಿಗಳನ್ನು ಗಮನದಲ್ಲಿಡುವುದು ಒಳ್ಳೆಯದು.

1 ಕೆಲವು ವಿದ್ಯಾರ್ಥಿಗಳ ಓದಿನ ಮಟ್ಟ ಅವರ ವಯಸ್ಸು ಅಥವಾ ತರಗತಿಗಳ ಮಟ್ಟಕ್ಕೆ ಕಡಿಮೆಯಾಗಿರುತ್ತದೆ. ಆದರೂ ಅವರ ಬುದ್ಧಿಶಕ್ತಿ, ಶಾರೀರಿಕ ಬೆಳೆವಣಿಗೆ, ವ್ಯಕ್ತಿತ್ವ, ಸಾಧಾರಣವಾಗಿರುತ್ತವೆ. ಇಂಥವರು ಸಾಮೂಹಿಕ ಕ್ರಮಗಳಿಗೆ ಹೊಂದಿಕೊಳ್ಳಬಲ್ಲರು.

2 ಇನ್ನು ಕೆಲವು ವಿದ್ಯಾರ್ಥಿಗಳ ಓದಿನ ಮಟ್ಟ ತೀವ್ರವಾಗಿ ಹಿಂದುಳಿದಿರುತ್ತದೆ. ಬುದ್ಧಿಶಕ್ತಿ ಮತ್ತು ವ್ಯಕ್ತಿತ್ವದಲ್ಲಿ ಅಸಾಧಾರಣ ದೋಷಗಳಿರುತ್ತವೆ. ಇವರಲ್ಲಿ ಅಂಗದೋಷಗಳೂ ಇರಬಹುದು. ಇಂಥವರು, ಸಾಮೂಹಿಕ ಕ್ರಮಗಳಿಗೆ ಹೊಂದಿಕೊಳ್ಳಲು ಸಾಧ್ಯವಿಲ್ಲ. ಇವರಿಗೆ ಪ್ರತ್ಯೇಕ ಚಿಕಿತ್ಸೆ ಅಗತ್ಯ.

ನಿವಾರಕ ಬೋಧನೆ ಶಾಲಾ ಕಾರ್ಯಕ್ರಮದ ಅತಿಮುಖ್ಯ ಅಂಗವಾಗಿರಬೇಕಲ್ಲದೆ, ಉಪಾಧ್ಯಾಯರ, ಪಠ್ಯಪುಸ್ತಕಗಳ, ಬೋಧನಕ್ರಮಗಳ ಮತ್ತು ಪರೀಕ್ಷಾವಿಧಾನಗಳ ಆಯ್ಕೆಯಲ್ಲಿ ಅನುಸರಿಸಬೇಕಾದ ತತ್ತ್ವಗಳಲ್ಲೂ ಸೂಕ್ತ ಬದಲಾವಣೆ ಅವಶ್ಯಕ. ಮನಶ್ಶಾಸ್ತ್ರ ಶರೀರಶಾಸ್ತ್ರಗಳಲ್ಲಿ ತರಪೇತು ಪಡೆದ ಉಪಾಧ್ಯಾಯರು, ವಿದ್ಯಾರ್ಥಿಗಳ ಅಭಿರುಚಿ ಮತ್ತು ಸಾಮರ್ಥ್ಯಗಳಿಗೆ ತಕ್ಕಂತೆ ರಚಿಸಿದ ಪುಸ್ತಕಗಳು ಮತ್ತು ವಿದ್ಯಾರ್ಥಿಯ ಪ್ರಗತಿಯನ್ನು ಅಳೆಯಬಲ್ಲ ಉತ್ತಮ ಪರೀಕ್ಷೆಗಳು ಅಗತ್ಯ.

ತರಗತಿಗಳಲ್ಲಿ ಇಲ್ಲಿ ಸೂಚಿಸಿದ ಕೆಲವು ಪ್ರಧಾನವಾದ ಅಂಶಗಳನ್ನು ಉಪನ್ಯಾಸ, ಸಂಘ, ಗೋಷ್ಠಿ ಮತ್ತು ವಿವಿಧ ವಿಷಯಗಳ ಅಭ್ಯಾಸ ಪಾಠ ಇವುಗಳ ಮೂಲಕ ವಿದ್ಯಾರ್ಥಿಗಳಿಗೆ ತಿಳಿಸಬಹುದು.

1 ಉತ್ತಮ ಓದಿನ ಆವಶ್ಯಕತೆ
2 ಉತ್ತಮ ಓದಿನ ಲಕ್ಷಣಗಳು
3 ಉದ್ದೇಶಪೂರ್ಣವಾದ ಓದು : ವಿವರಣಾತ್ಮಕ ಓದು, ಪರಿಚಯಾತ್ಮಕ ಓದು, ವಿಮರ್ಶಾತ್ಮಕ ಓದು
4 ವಿಷಯಗ್ರಹಣ ಮತ್ತು ಏಕಾಗ್ರತೆ
5 ಶಬ್ದಪರಿಚಯ ಮತ್ತು ಬೆಳೆವಣಿಗೆ
6 ಓದಿನ ಅಭಿರುಚಿಗಳು ಮತ್ತು ಅಭ್ಯಾಸಗಳು
7 ಸಹಾಯಕ ಪಠ್ಯ ವಸ್ತುಗಳ, ಎಂದರೆ, ಶಬ್ದಕೋಶ, ವಿಶ್ವಕೋಶ, ಆಧಾರ ಪುಸ್ತಕಗಳು ಮುಂತಾದವುಗಳ ಬಳಕೆ
8 ಆರೋಗ್ಯ ರಕ್ಷಣೆ ಮತ್ತು ಓದು
9 ಮಾನವನ ಪರಸ್ಪರ ಅರಿವು ಮತ್ತು ಹೊಂದಾಣಿಕೆಯಲ್ಲಿ ಓದಿನ ಪಾತ್ರ.

ಕೆಲವು ಗಮನಾರ್ಹವಾದ ಎಚ್ಚರಿಕೆಗಳು : 1 ನಿವಾರಕ ಬೋಧನ ವ್ಯವಸ್ಥೆ ವಿದ್ಯಾರ್ಥಿಯ ಮನೋರಂಜನೆ ಅಥವಾ ವಿರಾಮ ಕಾಲಕ್ಕೆ ಬದಲಾಗಿ ಇರಬಾರದು. 2 ಇವು ವಿದ್ಯಾರ್ಥಿಗಳ ದೋಷಗಳನ್ನೂ ನ್ಯೂನತೆಗಳನ್ನೂ ಎತ್ತಿ ಹಿಡಿಯುವ ಅಥವಾ ಅವುಗಳಿಗಾಗಿ ವಿಧಿಸುವ ದಂಡನೆಯ ಕ್ರಮವಾಗಿರಬಾರದು. 3 ತರಗತಿಗಳಿಗಾಗಿ ವಿನಿಯೋಗಿಸಲ್ಪಡುವ ಸಮಯ ಸಾಕಷ್ಟಿದ್ದು ಉತ್ತಮ ವಾತಾವರಣದಲ್ಲಿ ನಡೆಯಬೇಕು. 4 ಈ ಕಾರ್ಯಕ್ಕಾಗಿ ನಿಯಮಿಸಲ್ಪಟ್ಟ ಉಪಾಧ್ಯಾಯರು ಉತ್ತಮ ತರಪೇತು ಹೊಂದಿದವರೂ ಉತ್ಸಾಹಿಗಳೂ ಸಂದರ್ಭಗಳಿಗೆ ಬಹು ಸುಲಭವಾಗಿ ಹೊಂದಿಕೊಳ್ಳಬಲ್ಲ ಜಾಣ್ಮೆಯುಳ್ಳವರೂ ಆಗಿರಬೇಕು. 5 ಕಾರ್ಯಕ್ರಮಗಳು ಅತಿ ನಿಷ್ಕ್ರಿಯವಾಗಿರದೆ ಉಪಯುಕ್ತ ಬದಲಾವಣೆಗಳಿಗೆ ಅವಕಾಶವಿರಬೇಕು. ಕೆಲವು ಮಾರ್ಗಗಳು ವ್ಯರ್ಥವೆಂದು ತೋರಿಬಂದಲ್ಲಿ ಕೂಡಲೆ ಅವುಗಳನ್ನು ಬದಲಾಯಿಸಬೇಕು. 6 ವಿದ್ಯಾರ್ಥಿಯಲ್ಲಿ ಶ್ರದ್ಧೆ ಮೂಡಿಸಬಲ್ಲ ಹಾಗೂ ಓದಿನ ಅಭಿರುಚಿಗಳನ್ನು ಉಳಿಸಿ ಬೆಳೆಸಬಲ್ಲ ನಾನಾರೀತಿಯ ಅಭ್ಯಾಸ ಪಾಠಗಳಿರಬೇಕು. 7 ವ್ಯಾಸಂಗಕ್ಕೆ ಸಂಬಂಧಪಟ್ಟ ವಿಧಾನಗಳು ವಿದ್ಯಾರ್ಥಿಯಲ್ಲಿ ಸಾಕಷ್ಟು ಮೂಡುವ ವರೆಗೂ ನಿವಾರಕ ಕ್ರಮಗಳನ್ನು ಮುಂದುವರಿಸಬೇಕು.

4 ಪ್ರತಿಬಂಧಕ ಕಾರ್ಯ : ಓದಿನ ದೋಷಗಳನ್ನು ನಿವಾರಿಸಬಲ್ಲ ಪರಿಹಾರ ಕಾರ್ಯಗಳ ಜೊತೆಗೆ, ಅವುಗಳನ್ನು ತಡೆಗಟ್ಟಬಲ್ಲ ಪ್ರತಿಬಂಧಕ ಕಾರ್ಯಗಳೂ ಅಗತ್ಯ. ದೋಷಗಳ ಸೋಂಕು ಉತ್ತಮ ವಿದ್ಯಾರ್ಥಿಗಳಿಗೂ ಅಂಟದಂತೆ ಎಚ್ಚರಿಕೆ ವಹಿಸುವುದು ಅವಶ್ಯಕ. ಆದ್ದರಿಂದ ಶಾಲೆಯ ವಿವಿಧ ತರಗತಿಗಳಲ್ಲಿ ಓದನ್ನು ವಿಶೇಷ ವಿಷಯವನ್ನಾಗಿಟ್ಟುಕೊಳ್ಳಬೇಕು. ಮತ್ತು ಅದಕ್ಕೆ ತಕ್ಕಂತೆ ಅನುಭವಗಳನ್ನೂ ವಸ್ತುಗಳನ್ನೂ ಸಮಯವನ್ನೂ ಕಲ್ಪಿಸಬೇಕು. ಬೋಧನೆಯ ವ್ಯವಸ್ಥೆಯ ಉಪಯೋಗವನ್ನು ಎಲ್ಲ ವಿದ್ಯಾರ್ಥಿಗಳೂ ಪಡೆಯಬೇಕು.

ಓದುಗಾರಿಕೆಯನ್ನು ಪರಿಣಾಮಕಾರಿ ಉಪಕರಣವಾಗುವಂತೆ, ಪ್ರೌಢಕಲೆಯಾಗುವಂತೆ ಬೋಧಿಸುವುದು ಒಂದು ಶಾಲೆಯಲ್ಲೆ ಸಾಧ್ಯವಾಗುವ ಕಾರ್ಯವಲ್ಲ. ಅದು ಹಂತಹಂತವಾಗಿ ಸಾಗಬೇಕು. ಅಂಥ ಬೇರೆ ಬೇರೆ ಹಂತಗಳನ್ನೂ ಅಲ್ಲಿ ಸಾಧನೆಯಾಗಬೇಕಾದ ಓದುಗಾರಿಕೆಯ ಅಂಶಗಳನ್ನೂ ಇಲ್ಲಿ ಸೂಚಿಸಬಹುದು :

1 ಶಿಶುವಿಹಾರ, ಕಿಂಡರ್‌ಗಾರ್ಟನ್ ತರಗತಿಗಳಲ್ಲಿ ಓದು ಕಲಿಯಲು ಮಕ್ಕಳನ್ನು ಪ್ರೇರಿಸುವ ಅನುಭವಗಳನ್ನೂ ಶಿಕ್ಷಣವನ್ನೂ ಒದಗಿಸುವುದು. 2 ಪ್ರಾಥಮಿಕ ಶಾಲೆಯ ಮೊದಲನೆ ಮತ್ತು ಎರಡನೆ ತರಗತಿಗಳಲ್ಲಿ : ಈ ಮಟ್ಟದ ವಿದ್ಯಾರ್ಥಿಗಳಿಗಾಗಿ ನಿರ್ಮಿಸಿರುವ ಸುಲಭ ಪಾಠಗಳನ್ನು ಸ್ವತಂತ್ರವಾಗಿ ಓದುವ ಸಾಮರ್ಥ್ಯದ ಬೆಳೆವಣಿಗೆ ಮತ್ತು ವಿಚಾರವಿನಿಮಯಕ್ಕೆ ಓದು ಒಂದು ಪ್ರಬಲ ಸಾಧನವೆಂದು ತೋರಿಸಿಕೊಡುವುದು. 3 ಪ್ರಾಥಮಿಕ ಶಾಲೆಯ 3, 4, 5ನೆಯ ತರಗತಿಗಳಲ್ಲಿ ಓದಿಗೆ ಸಂಬಂಧಪಟ್ಟ ಮೂಲ ಅಭ್ಯಾಸಗಳನ್ನೂ ವಿಧಾನಗಳನ್ನೂ ಮನೋಭಾವಗಳನ್ನೂ ಬೆಳೆಸುವುದು. ಇವುಗಳ ಆಧಾರದ ಮೇಲೆ, ಓದಿದ ವಿಷಯಗಳ ಅರ್ಥವಿವರಣೆ ಮಾಡುವುದು, ಸ್ಪಷ್ಟವಾಗಿ ಹಾಗೂ ತಪ್ಪಿಲ್ಲದೆ ಓದುವುದು, ಗಟ್ಟಿಯಾಗಿಯೂ ಮತ್ತು ಮೌನವಾಗಿಯೂ ಚೆನ್ನಾಗಿ ಓದುವುದು —ಇವೆಲ್ಲ ಬೆಳೆಯುತ್ತವೆ. 4 ಪ್ರಾಥಮಿಕ ಶಾಲೆಯ 6 ಮತ್ತು 7ನೆಯ ತರಗತಿಗಳಲ್ಲಿ ವಿದ್ಯಾರ್ಥಿಯ ಅನುಭವ ವಿಶೇಷಗಳನ್ನು ವಿಸ್ತರಿಸುವುದು, ಅವನ ಅಭಿರುಚಿಗಳಲ್ಲಿ ವಿವೇಚನೆಯನ್ನು ಮೂಡಿಸುವುದು 5 ಪ್ರೌಢಶಾಲೆಯ 8,9ನೆಯ ಹಂತಗಳಲ್ಲಿ ಬೆಳೆದ ಅಭ್ಯಾಸ ಮತ್ತು ಅಭಿರುಚಿಗಳಲ್ಲಿ ನಯ ಮತ್ತು ಕುಶಲತೆಗಳನ್ನು ತುಂಬುವುದು. 6 ಪ್ರೌಢಶಾಲೆಯ 10 ಮತ್ತು 11ನೆಯ ಹಂತಗಳಲ್ಲಿ ಶ್ರೇಷ್ಠ ಸಾಹಿತ್ಯದಲ್ಲಿ ಅಭಿರುಚಿ ಮತ್ತು ವಿಚಾರಸಂಪತ್ತನ್ನು ಬೆಳೆಸುವುದರಲ್ಲಿ ಆಸಕ್ತಿ ಮೂಡುವಂತೆ ಮಾಡುವುದು. ಪತ್ರಿಕೆಗಳ, ಲೇಖನಗಳ, ಕಥೆಕಾದಂಬರಿಗಳ ಆಯ್ಕೆಯಲ್ಲಿ ವಿವೇಚನೆಯನ್ನು ಬೆಳೆಸುವುದು. ಮಾನವ ಇಂದಿನ ವೈಜ್ಞಾನಿಕ ಹಾಗೂ ತಾಂತ್ರಿಕ ಯುಗದಲ್ಲಿ ಸಾರ್ಥಕ್ಯವನ್ನು ಸಾಧಿಸಬೇಕಾದರೆ ಓದು ಒಂದು ಅನಿವಾರ್ಯ ಸಾಧನ. ಇದರ ಬೆಳೆವಣಿಗೆಯಲ್ಲಿ ಶಾಲೆಗಳು ಪ್ರಮುಖ ಪಾತ್ರವಹಿಸುತ್ತವೆ. ಈ ಮಾರ್ಗದಲ್ಲಿ ಕೈಗೊಳ್ಳುವ ಕಾರ್ಯಕ್ರಮಗಳ ವ್ಯವಸ್ಥೆ ಉತ್ತಮವಾಗಿರಬೇಕು. ವಿದ್ಯಾರ್ಥಿಯ ಓದಿನಲ್ಲಿ ಹೆಚ್ಚಿನ ದಕ್ಷತೆ ಮತ್ತು ಕುಶಲತೆಗಳನ್ನು ಬೆಳೆಸುವುದರ ಜೊತೆಗೆ, ಶಾಶ್ವತವಾದ ಅಭಿರುಚಿಗಳನ್ನು ಮೂಡಿಸುವುದು ಎಲ್ಲ ಬೋಧನಕ್ರಮಗಳ ಮುಖ್ಯ ಧೋರಣೆಯಾಗಿರಬೇಕು.

**ಓದುಗಾರಿಕೆಯ ಪ್ರಕಾರಗಳು :** ಓದುವ ಉದ್ದೇಶದ ಆಧಾರದ ಮೇಲೆ ಓದುಗಾರಿಕೆಯನ್ನು ಹಲವು ಬಗೆಗಳನ್ನಾಗಿ ಗುರುತಿಸಬಹುದು. ಕೇವಲ ಮನೋರಂಜನೆಯೇ ಪ್ರಧಾನ ಉದ್ದೇಶವಾಗಿರುವ ಓದುಗಾರಿಕೆಯನ್ನು ಮನೋರಂಜಕ ಓದುಗಾರಿಕೆಯೆಂದು ಕರೆಯುವರು. ಕಥೆ, ಕಾದಂಬರಿ, ನಿಸರ್ಗಚಿತ್ರ, ನಾಟಕ ಇತ್ಯಾದಿ ಸಾಹಿತ್ಯ ಕೃತಿಗಳ ವಾಚನ ಈ ಬಗೆಗೆ ಸೇರುತ್ತವೆ. ಸುದ್ದಿಗಳನ್ನು ತಿಳಿಯುವುದೇ ಮುಖ್ಯ ಉದ್ದೇಶದಿಂದ ಓದುವುದು ಸಮಾಚಾರಸಂಗ್ರಹ ವಾಚನ ; ವೃತ್ತಪತ್ರಿಕೆ, ಜಾಹೀರಾತು, ತಿಳಿವಳಿಕೆ ಪತ್ರ ಇವುಗಳ ವಾಚನ ಈ ಬಗೆಗೆ ಸೇರಿದ್ದು. ವಿಜ್ಞಾನ, ತಂತ್ರಶಾಸ್ತ್ರ, ಮಾನವಿಕ ವಿಷಯ ಇತ್ಯಾದಿಗಳಿಗೆ ಸಂಬಂಧಿಸಿದ ಜ್ಞಾನವನ್ನು ತಿಳಿದುಕೊಳ್ಳುವುದಕ್ಕಾಗಿ ಕೈಗೊಳ್ಳುವ ಓದುಗಾರಿಕೆಗೆ ಜ್ಞಾನಾರ್ಜನೆಯ ಓದುಗಾರಿಕೆ ಎನ್ನಬಹುದು. ಮನೋರೋಗದಿಂದ ನರಳುವ ಕೆಲವು ರೋಗಿಗಳಿಗೆ ವಿಶಿಷ್ಟ ರೀತಿಯಲ್ಲಿ ಬರೆದು ಮುದ್ರಿಸಿದ ವಾಚನವಸ್ತುವನ್ನು ಕೊಟ್ಟು ಓದಿಸಿ, ಆ ಮೂಲಕ ಅವರ ರೋಗನಿವಾರಣೆಗೆ ಯತ್ನಿಸುವರು. ಇದು ಚಿಕಿತ್ಸಾರೂಪದ ವಾಚನ.

ಓದುಗಾರಿಕೆ ವೈಯಕ್ತಿಕವಾಗಿಯೂ ಸಾಮಾಜಿಕವಾಗಿಯೂ ಪರಿಣಾಮ ಬೀರಬಲ್ಲ ಅಭ್ಯಾಸ. ವಾಚನವಸ್ತುವಿನ ಸ್ವರೂಪವನ್ನನುಸರಿಸಿ ಆ ಪರಿಣಾಮ ಕೆಟ್ಟದ್ದಾಗಿರಬಹುದು; ಒಳ್ಳೆಯದೂ ಆಗಿರಬಹುದು. ಹಾಸ್ಯ, ಆಶ್ಚರ್ಯ ಈ ಮನೋಗುಣಗಳನ್ನು ಪ್ರಚೋದಿಸಲು ವಿಕಾರವೂ ವಿಚಿತ್ರವೂ ಅಪರಾಧಪೂರ್ಣವೂ ಆದ ವರ್ಣನೆಗಳನ್ನೊಳಗೊಂಡ ವಾಚನವಸ್ತು ಓದುಗರಲ್ಲಿ ಕ್ಷುಲ್ಲಕ ಭಾವನೆಗಳನ್ನೂ ಅಪರಾಧದ ಕಾರ್ಯಗಳನ್ನು ಮಾಡುವ ಚಾಳಿಯನ್ನೂ ಬೆಳೆಸಬಹುದು. ಗಹನವೂ ಗಂಭೀರವೂ ರಮಣೀಯವೂ ಆದ ಕೃತಿಗಳು ವ್ಯಕ್ತಿಯಲ್ಲಿ ವಿಷಯಜ್ಞಾನ,

ಅಭಿಪ್ರಾಯನಿಷ್ಕೃಷ್ಟತೆ. ಧರ್ಮ ಮತ್ತು ತತ್ತ್ವನಿಷ್ಠೆ. ನ್ಯಾಯಪರತೆ. ಕಾರ್ಯತತ್ಪರತೆ. ಮಾನಸೀಯ ಮನೋಧರ್ಮ ಇತ್ಯಾದಿ ಲಕ್ಷಣಗಳನ್ನು ಪೋಷಿಸಬಲ್ಲವು. (ಎ.ಎಂ.ಎಸ್.)

**ಓದುನಾಟಕಗಳು :** ಮೂಲತಃ ಅಭಿನಯಕ್ಕಲ್ಲದೆ ಓದಿಗಾಗಿಯೇ ಸೃಷ್ಟಿಯಾದ ನಾಟಕಗಳು (ದಿ ಕ್ಲಾಸೆಟ್ ಪ್ಲೇಸ್). ನಾಟಕ, ರೂಪಕ, ಡ್ರಾಮ, ಪ್ಲೇ—ಎಂಬ ಮಾತುಗಳು ಆಡಿದ್ದು, ಮಾಡಿದ್ದು, ತೋರಿದ್ದು ಎಂಬ ಅರ್ಥವನ್ನೇ ಸೂಚಿಸುತ್ತವಾದರೂ ಕೆಲವು ನಾಟಕಗಳು ಶ್ರವ್ಯಕಾವ್ಯಗಳಂತೆ ಓದಿದಾಗಲೂ ಅಷ್ಟೇ ಆನಂದವನ್ನು ಕೊಡುತ್ತವೆಂದು ವಿಮರ್ಶಕರು ಅಭಿಪ್ರಾಯ ಪಟ್ಟಿದ್ದಾರೆ. ರೋಮನ್ ನಾಟಕಕಾರನಾದ ಸೆನಕನ ರೂಪಕಗಳು ವಾಚನಕ್ಕೋಸ್ಕರವೇ ಬರೆದ ಕೃತಿಗಳು. ಗಯಟೆಯ ಫೌಸ್ಟ್ ನಾಟಕ ರಂಗಭೂಮಿಯ ನಿರ್ಮಾಪಕರಿಗೊಂದು ದೊಡ್ಡ ಸವಾಲು. ಷೆಲ್ಲಿಯ ಪ್ರೊಮಿಥಿಯಸ್ ಅನ್‌ಬೌಂಡ್ ಕೇವಲ ಓದುವ ನಾಟಕ. ಥಾಮಸ್ ಹಾರ್ಡಿ ತನ್ನ ಅತ್ಯಮೋಘ ಕೃತಿಯೆಂದೆಣಿಸುವ ದಿ ಡೈನಾಸ್ಟ್ಸ್ ನಾಟಕವನ್ನು ಬರೆದುದು ಓದಿಗಾಗಿಯೇ. ಈ ನಾಟಕದ ವಸ್ತು ಅತಿ ಭವ್ಯವಾಗಿದ್ದು ವಿಸ್ತಾರವಾದ ಯುರೋಪಿನ ವಿವಿಧ ಕದನಕ್ಷೇತ್ರಗಳೇ ನಾಟಕದ ಕ್ರಿಯಾರಂಗಗಳಾಗಿವೆ. ಯುರೋಪಿನ ನಾನಾದೇಶಗಳ ವಿರುದ್ಧ ನೆಪೋಲಿಯನ್ ಹೂಡಿದ ಯುದ್ಧಗಳೇ ಈ ನಾಟಕದ ವಸ್ತು. ಹಾರ್ಡಿ ಇದನ್ನು ನಾಟಕೀಯವಾದ ಭವ್ಯ ಕಾವ್ಯ (ಡ್ರಾಮಾಟಿಕ್ ಎಪಿಕ್)—ಎಂದು ಕರೆದಿದ್ದಾನೆ. ಈ ನಾಟಕವನ್ನು ನಾವು ನಮ್ಮ ಕಲ್ಪನಾರಂಗದ ಮೇಲೆ ಒಳಗಣ್ಣಿನಿಂದ ಮಾತ್ರ ನೋಡಿ ಆನಂದಿಸಬಹುದು. ಇದೊಂದು ಉತ್ತಮ ಓದುನಾಟಕ. ನೋಡಲು ಅರ್ಹವಾದ ಅನೇಕ ನಾಟಕಗಳನ್ನು ಕೇವಲ ಓದಿನಿಂದ ಅರಿಯಲು ಸಾಧ್ಯವಾಗದಿರಬಹುದು. ಹಾಗೆಯೆ ನಾಟಕದ ವಿಚಿತ್ರ ತಂತ್ರ ಮತ್ತು ತುಂಬ ಹರಹಿನ ರಂಗಸ್ಥಳಗಳಿಂದಾಗಿ ಕೆಲವು ನಾಟಕಗಳನ್ನು ಆಡಲು ಕಷ್ಟವಾದರೂ ಅವು ಓದಿ ಅರಿಯಲು ಯುಕ್ತವಾಗಿರುತ್ತವೆ. ರುದ್ರನಾಟಕದ ಆನಂದ ನೋಡಿದಾಗ ಹೇಗೋ ಹಾಗೆ ಅದನ್ನು ಓದಿದಾಗಲೂ ಸಿಗುತ್ತದೆಂದು ಮಿಲ್ಟನ್ ತನ್ನ ಸ್ಯಾಮ್ಸನ್ ಅಗೊನಿಸ್ಟೀಸ್ ನಾಟಕದ ಮುನ್ನುಡಿಯಲ್ಲಿ ಹೇಳಿದ್ದಾನೆ.

ಕೆಲವೊಮ್ಮೆ, ಆಯಾ ಕಾಲದೇಶಗಳ ರಂಗಭೂಮಿಗೆ ಅನುಗುಣವಾದ ಉತ್ತಮ ನಾಟಕಗಳನ್ನು, ಬೇರೊಂದು ಕಾಲದ ರಂಗಭೂಮಿಗೆ ಅಳವಡಿಸಲು ಕಷ್ಟಸಾಧ್ಯವಾದಾಗ ಅವನ್ನು ಬೇರೆ ಕಾಲದ ವಿಮರ್ಶಕರು ತಪ್ಪಾಗಿ ಅರ್ಥಮಾಡಿಕೊಂಡು, ಅವು ಕೇವಲ ಓದಲು ಅರ್ಹವಾದ ನಾಟಕಗಳೆಂದೂ ರಂಗಭೂಮಿಯ ಮೇಲೆ ಪ್ರದರ್ಶಿಸಲು ಸಾಧ್ಯವಾಗದ ಕೃತಿಗಳೆಂದೂ ಅಭಿಪ್ರಾಯ ಪಟ್ಟಿದ್ದಾರೆ. ಷೇಕ್ಸ್‌ಪಿಯರನ ಗಂಭೀರ ನಾಟಕಗಳಲ್ಲಿನ ಉನ್ನತ ಪಾತ್ರಸೃಷ್ಟಿ, ವಿಭಾವನಾಯುತವಾದ ಉತ್ಕೃಷ್ಟ ಕಾವ್ಯಮಯ ದೃಶ್ಯಗಳನ್ನು ರಂಗಭೂಮಿಯ ಮೇಲೆ ಪ್ರದರ್ಶಿಸುವುದು ಅಸಾಧ್ಯವೆಂದು ಚಾರಲ್ಸ್ ಲ್ಯಾಮ್ ಹೇಳಿದ್ದಾನೆ. ಷೇಕ್ಸ್‌ಪಿಯರನ ಲಿಯರ್ ನಾಟಕವನ್ನು ಅಭಿನಯಿಸಿ ತೋರಿಸುವುದು ದುಸ್ಸಾಧ್ಯವೆಂದು ಅವನ ಮತ. ಲ್ಯಾಮ್‌ನ ಮಾತನ್ನು ಹ್ಯಾಜ್ಲಿಟ್ ಸಮರ್ಥಿಸುತ್ತ ಈ ನಾಟಕವನ್ನು ರಚಿಸಿದ ಕವಿ ತಾನು ನೆಯ್ದ ಕಲ್ಪನೆಯ ಬಲೆಯಲ್ಲಿ ತಾನೇ ಚೆನ್ನಾಗಿ ಸಿಕ್ಕಿಬಿದ್ದಿದ್ದಾನೆ—ಎನ್ನುತ್ತಾನೆ. ಈ ಇಬ್ಬರು ವಿಮರ್ಶಕರ ಮಾತನ್ನು ಸ್ವಲ್ಪ ತಿದ್ದುತ್ತ ಡಾ. ಬ್ರಾಡ್ಲೆ ಈ ನಾಟಕ ರಂಗಭೂಮಿ ಹಿಡಿಸಲಾರದಷ್ಟು ಅತ್ಯುನ್ನತ ಕೃತಿ—ಎನ್ನುತ್ತಾನೆ. ಆದರೆ ಈ ಶತಮಾನದ ಶ್ರೇಷ್ಠ ವಿಮರ್ಶಕ, ನಾಟಕಕಾರ ಹಾಗೂ ರಂಗಭೂಮಿಯ ನಿರ್ದೇಶಕನಾದ ಗ್ರೆನ್‌ವಿಲ್ ಬಾರ್ಕರ್ ಎಂಬಾತ ಲ್ಯಾಮ್, ಹ್ಯಾಜ್ಲಿಟ್, ಬ್ರಾಡ್ಲೆ ಮುಂತಾದವರ ತಪ್ಪು ಅಭಿಪ್ರಾಯವನ್ನು ತಿದ್ದಲು ಯತ್ನಿಸಿದ್ದಾನೆ. ಷೇಕ್ಸ್‌ಪಿಯರನ ನಾಟಕಗಳನ್ನು ಎಲಿಜûಬೆತ್ ಕಾಲದಲ್ಲಿದ್ದ ರಂಗಭೂಮಿಯನ್ನು ಸಜ್ಜುಗೊಳಿಸಿ ಅದರ ಮೇಲೆ ಸರಿಯಾಗಿ ಪ್ರಯೋಗಿಸಿದಾಗ ಮಾತ್ರ ಅವುಗಳ ಸ್ವಾರಸ್ಯ ನಮಗೆ ತಿಳಿಯುವುದು—ಎಂದು ಅವನ ಅಭಿಪ್ರಾಯ. ಅದರಲ್ಲೂ ಕಿಂಗ್ ಲಿಯರ್ ನಾಟಕದ ಉತ್ಕೃಷ್ಟ ಕಾವ್ಯಶೈಲಿಯನ್ನು ನಟರು ಚೆನ್ನಾಗಿ ಅರಿತುಕೊಂಡು ಮಾತುಗಳನ್ನು ಸರಿಯಾಗಿ ಆಡಿದಾಗ ಆ ನಾಟಕ ಎಷ್ಟೊಂದು ಯಶಸ್ವಿಯಾಗಬಲ್ಲುದೆಂಬುದನ್ನು ತನ್ನ ಪ್ರಯೋಗಗಳಿಂದ ಗ್ರೆನ್‌ವಿಲ್ ಬಾರ್ಕರ್ ತೋರಿಸಿಕೊಟ್ಟಿದ್ದಾನೆ. ಕನ್ನಡದಲ್ಲಿ ಕುವೆಂಪು ಅವರ ಶೂದ್ರತಪಸ್ವಿಯನ್ನಾಗಲಿ ಬೆರಳ್‌ಗೆ ಕೊರಳ್ ಅನ್ನಾಗಲಿ ಅಭಿನಯಿಸುವುದು ಕಷ್ಟಸಾಧ್ಯ. ಹಿನ್ನೆಲೆಯ ಸಜ್ಜಿಕೆಯ ಸಂಕೀರ್ಣತೆ ಮತ್ತು ಪ್ರಕೃತಿಯ ಪಾತ್ರವಹಿಸುವಿಕೆಯಿಂದಾಗಿ ಅವು ಅಭಿನಯಿಸಲು ಅಸಾಧ್ಯವಾದುವು ಎಂದರೂ ತಡೆಯುತ್ತದೆ. ಆದರೆ ಅವು ಉತ್ತಮ ಓದುನಾಟಕಗಳಾಗಿವೆ.

ಒಟ್ಟಿನಲ್ಲಿ ಓದುನಾಟಕದ ಭಾಷೆ, ತಂತ್ರಗಳು ರಂಗಭೂಮಿಯ ನಾಟಕಕ್ಕಿಂತ ಭಿನ್ನವಾದವು. ಕಾದಂಬರಿಯಲ್ಲಿದ್ದಂತೆ ಓದುನಾಟಕದ ಮಾತಿನ ಗತಿ, ಲಯ ಓದುವವನ ದೃಷ್ಟಿಯಿಂದ ರಚಿತವಾದುದು. ಅದರಿಂದ ಒಂದು ವೇಳೆ ಮಾತುಗಳಲ್ಲಿ ಕ್ಲಿಷ್ಟತೆ, ಅಸ್ಪಷ್ಟತೆಯಿದ್ದರೆ ಓದುವವ ಪುನಃ ಓದಿ ಅರ್ಥಮಾಡಿಕೊಳ್ಳಲು ಅವಕಾಶವಿದೆ. ಅಲ್ಲದೆ ರಂಗಸ್ಥಳ ನಿರ್ದೇಶನ ಅಥವಾ ಬೇರಾವ ರೀತಿಯ ಸೂಚನೆಗಳ ಮೂಲಕ ನಾಟಕಕಾರ ಮಾತುಗಳಿಗೂ ಘಟನೆಗಳಿಗೂ ವಿವರಣೆ ಕೊಟ್ಟು ವ್ಯಾಖ್ಯಾನ ಮಾಡಬಹುದು. ಇದಕ್ಕೆ ರಂಗಭೂಮಿಯ ನಾಟಕದಲ್ಲಿ ಅವಕಾಶವಿಲ್ಲ. (ಎಚ್.ಕೆ.ಆರ್.)

**ಓದು, ಬರೆಹ, ಲೆಕ್ಕ :** ಮಕ್ಕಳು ಪ್ರಾಥಮಿಕ ಶಾಲೆಯಲ್ಲಿ ಸಾಧಿಸಬೇಕೆಂದು ಪರಿಗಣಿತವಾಗಿದ್ದ ಮೂರು ಮೂಲಭೂತ ಕೌಶಲಗಳು (ದಿ ತ್ರಿ ಆರ್ಸ್). ಮಕ್ಕಳ ನಿತ್ಯಜೀವನಕ್ಕೆ ಓದುವುದು, ಬರೆಯುವುದು, ಲೆಕ್ಕಾಚಾರ—ಈ ಮೂರೇ ಸಾಕೆಂಬ ಶಿಕ್ಷಣದ ಸಂಕುಚಿತ ದೃಷ್ಟಿ ಈಚೆಗೆ ಮಾಯವಾಗುತ್ತಿದೆ. ಈ ಕೌಶಲಗಳು ಮುಂದಿನ ಸಾಧನೆಗೆ ಕೇವಲ ಉಪಕರಣಗಳು ಮಾತ್ರ ; ಅವೇ ಶಿಕ್ಷಣವಲ್ಲ—ಎಂಬ ದೃಷ್ಟಿ ಬೆಳೆದಂತೆ ಪ್ರಾಥಮಿಕ ಶಾಲೆಯಲ್ಲಿ ಅವುಗಳ ಜೊತೆಗೆ ಸಾಹಿತ್ಯಾಭ್ಯಾಸ, ಸಮಾಜ ಪರಿಚಯ, ಸಾಮಾನ್ಯವಿಜ್ಞಾನ, ಶಾರೀರಿಕ ಶಿಕ್ಷಣ, ಕೈಕೆಲಸ ಇತ್ಯಾದಿಗಳೂ ಈಗ ವ್ಯಾಸಂಗಕ್ರಮದಲ್ಲಿ ಸೇರಿಕೊಂಡಿವೆ.

ಆದರೆ ಓದು, ಬರೆಹ, ಲೆಕ್ಕಗಳು ಎಲ್ಲ ವ್ಯಾಸಂಗದ ಅಡಿಪಾಯವೆನ್ನುವ ವಿಷಯದಲ್ಲಿ ಭಿನ್ನಾಭಿಪ್ರಾಯವಿಲ್ಲ. ಇವಿಷ್ಟನ್ನಂತೂ ವಿದ್ಯಾರ್ಥಿ ಕಡ್ಡಾಯವಾಗಿ, ಖಚಿತವಾಗಿ ತಿಳಿಯಬೇಕು. ಆದರೆ ಇವನ್ನು ಮೇಲೆ ಸೂಚಿಸಿದ ಇತರ ಶಾಸ್ತ್ರಗಳ ಮುಖೇನ ಕಲಿಸಿದಲ್ಲಿ ವ್ಯಾಸಂಗ ವಿಶಾಲವಾಗುತ್ತದೆ. (ಎಂ.ಆರ್.ಆರ್.ಎ.)

**ಓಪರಾನ್ :** ಪಕ್ಕಪಕ್ಕದಲ್ಲಿರುವ ಮತ್ತು ಸಂಘಟಿತ ರೀತಿಯಲ್ಲಿ ವ್ಯಕ್ತವಾಗುವ ಜೀನುಗಳನ್ನೂ ಇಂಥ ಜೀನುಗಳನ್ನು ನಿಯಂತ್ರಿಸುವ ಮತ್ತು ಅವುಗಳೊಡನೆ ನಿಕಟ ಸಂಪರ್ಕವನ್ನು ಪಡೆದಿರುವ ಘಟಕಗಳನ್ನೂ ಒಳಗೊಂಡಿರುವ ಗುಚ್ಛ. ಜೀವಿಗಳ ಕೋಶಗಳಲ್ಲಿ ಪ್ರೋಟೀನಿನ ಸಂಶ್ಲೇಷಣೆ ಅವಿರತವಾಗಿ ನಡೆಯುವುದಿಲ್ಲ. ಈ ಕ್ರಿಯೆ ಜೀವಿಯ ಆವಶ್ಯಕತೆಯನ್ನು ಅವಲಂಬಿಸಿದೆ. ಇಂಥ ನಿಯಂತ್ರಣ ಇರಬೇಕಾದದ್ದು ಅಗತ್ಯ. ನಿಯಂತ್ರಣದ ವಿಧಾನವನ್ನು ಅರಿಯಲು ಸೂಕ್ಷ್ಮಜೀವಿಗಳ ವ್ಯವಸ್ಥೆಯಲ್ಲಿ ಅಧ್ಯಯನಗಳನ್ನು ನಡೆಸಲಾಗಿದೆ. ಎಷರೀಕಿಯಾ ಕೋಲೈ ಎಂಬ ಸೂಕ್ಷ್ಮಜೀವಿಯಲ್ಲಿ ಲ್ಯಾಕ್ಟೋಸ್ ಸಕ್ಕರೆಯ ಅಪಚಯಕ್ಕೆ ಬೇಕಾದ ಬೀಟಗ್ಯಾಲಾಕ್ಟೋಸೈಡೇಸ್ ಎಂಬ ಕಿಣ್ವ ಸಾಧಾರಣವಾಗಿ ಉತ್ಪತ್ತಿಯಾಗುವುದಿಲ್ಲ. ಆದರೆ ಬ್ಯಾಕ್ಟೀರಿಯ ಬೆಳೆಯುವ ಮಾಧ್ಯಮಕ್ಕೆ ಲ್ಯಾಕ್ಟೋಸ್ ಸಕ್ಕರೆಯನ್ನು ಸೇರಿಸಿದಾಗ ಈ ಕಿಣ್ವದ ಉತ್ಪತ್ತಿ ಪ್ರೇರೇಪಿತವಾಗುತ್ತದೆ. ಈಗ ಮಾಧ್ಯಮದಿಂದ ಸಕ್ಕರೆಯನ್ನು ತೆಗೆದರೆ ಅಷ್ಟೇ ಶೀಘ್ರವಾಗಿ ಕಿಣ್ವಸಂಶ್ಲೇಷಣೆ ನಿಂತು ಹೋಗುತ್ತದೆ. ಪ್ರೇರೇಪಿತ (ಇಂಡ್ಯೂಸ್ಡ್) ವ್ಯವಸ್ಥೆಯಲ್ಲಿ ಬೀಟಗ್ಯಾಲಾಕ್ಟೋಸೈಡೇಸ್ ಕಿಣ್ವ ಮಾತ್ರವಲ್ಲದೆ ಲ್ಯಾಕ್ಟೋಸನ್ನು ಕೋಶದೊಳಗೆ ಸಾಗಿಸಲು ಬೇಕಾದ ಪರ್ಮಿಯೇಸ್ ಕಿಣ್ವ ಮತ್ತು ಗ್ಯಲಾಕ್ಟೋಸೈಡ್-ಅಸಿಟೈಲೇಸ್ ಕಿಣ್ವ ಸಹ ಉತ್ಪತ್ತಿಯಾಗುತ್ತವೆ. ಇವು ಮೂರು ಕಿಣ್ವಗಳ ಸಂಶ್ಲೇಷಣೆಗಳು ಪರಸ್ಪರವಾಗಿ ನಿಯಮಿತವಾದ ಅನುಪಾತದಲ್ಲಿವೆ. ಇವನ್ನು ನಿರ್ದೇಶಿಸುವ $Z$ (ಬೀಟಗ್ಯಾಲಾಕ್ಟೋಸೈಡೇಸ್), $Y$ (ಪರ್ಮಿಯೇಸ್) ಮತ್ತು $a$ (ಅಸಿಟೈಲೇಸ್) ಜೀನುಗಳು ಪಕ್ಕಪಕ್ಕದಲ್ಲಿವೆ. ಈ ವ್ಯವಸ್ಥೆಯಲ್ಲಿ $Z$, $Y$, $a$ ಜೀನುಗಳು ಮಾತ್ರವಲ್ಲದೆ $i$ ಜೀನು ಒಂದಿದೆಯೆಂದೂ ಇದು $Y$ ಮತ್ತು $Z$ ಜೀನುಗಳೊಡನೆ ನಿಕಟ ಸಂಬಂಧವನ್ನು ಪಡೆದಿದೆಯೆಂದೂ ತಿಳಿದುಬಂದಿದೆ. $Z$ ಜೀನಿನ ಒಂದು ತುದಿಯಲ್ಲಿ ವಿಕೃತಿಯಾದರೆ (ಮ್ಯುಟೇಷನ್) ಮೂರು ಜೀನುಗಳ ಕರ್ತವ್ಯನಿರ್ವಹಣೆಯ ಸಾಮರ್ಥ್ಯದ ಮೇಲೆಯೂ ಅದರ ಪರಿಣಾಮ ಉಂಟಾಗುತ್ತದೆ. ಇಂಥ ಪ್ರದೇಶವನ್ನು ಚಾಲಕ (ಆಪರೇಟರ್) ಪ್ರದೇಶವೆಂದು ಕರೆಯಲಾಗಿದೆ. ಕಿಣ್ವಗಳ ಸಂಶ್ಲೇಷಣೆಗೆ ನೇರವಾದ ಜವಾಬ್ದಾರಿಯನ್ನು ಹೊತ್ತಿರುವ $Z$, $Y$ ಮತ್ತು $a$ ಗಳನ್ನು ರಚನಾತ್ಮಕ (ಸ್ಟ್ರಕ್ಚರಲ್) ಜೀನುಗಳೆಂದೂ $Z$, $Y$ ಮತ್ತು $a$ ಜೀನುಗಳು ವ್ಯಕ್ತವಾಗುವ ಬಗೆಯನ್ನು ನಿಯಂತ್ರಿಸುವ $i$ ಜೀನನ್ನು ನಿಯಂತ್ರಕ (ರೆಗ್ಯುಲೇಟರಿ) ಜೀನು ಎಂದೂ ಕರೆಯಲಾಗಿದೆ. ನಿಯಂತ್ರಕ ಜೀನು ಓಪರಾನಿನ ಹೊರಭಾಗದಲ್ಲಿಯೂ ಇರಬಹುದು. ಲ್ಯಾಕ್ಟೋಸ್ ಸಕ್ಕರೆಯ ಚಯಾಪಚಯ ಕ್ರಿಯೆಯಲ್ಲಿ ರಚನಾತ್ಮಕ ಮತ್ತು ನಿಯಂತ್ರಕ ಜೀನುಗಳೂ ಚಾಲಕವೂ ಒಂದು ಮಾನದಂತೆ ಪಾಲ್ಗೊಳ್ಳುವುದನ್ನು ವಿವರಿಸಲು ಜಾಕೊಬ್ ಮತ್ತು ಮೋನೋ ಓಪರಾನ್ ಕಲ್ಪನೆಯನ್ನು ಮುಂದಿಟ್ಟರು (1961). ಅವರ ವಾದದ ಪ್ರಕಾರ ಸರ್ವಸಾಧಾರಣವಾಗಿ ಸೂಕ್ಷ್ಮಜೀವಿಗಳಲ್ಲಿ ಪ್ರೇರೇಪಕವನ್ನೂ (ಉದಾಹರಣೆಗೆ ಲ್ಯಾಕ್ಟೋಸ್) ಈ ಮೂರು ಕಿಣ್ವಗಳಿಗೆ ವಿಶಿಷ್ಟವಾದ ರಚನೆಯೊಂದನ್ನೂ ಗುರುತಿಸಬಲ್ಲ ವಸ್ತುವೊಂದಿರಬೇಕು. ಇದು ಪ್ರೇರೇಪಕದಿಂದ ಬರುವ ಸಂದೇಶವನ್ನು ಸಾಗಿಸಿ ಈ ಮೂರು ಕಿಣ್ವಗಳ ಸಂಶ್ಲೇಷಣೆಯನ್ನು ಮಾತ್ರ ಉಂಟುಮಾಡಬಲ್ಲುದು. ಈ ವಸ್ತು ಎರಡು ವಿಧಗಳಲ್ಲಿ ಕೆಲಸ ಮಾಡಬಲ್ಲುದು. ಇಂಥ ಕೆಲಸ ಕಿಣ್ವದ ಸಂಶ್ಲೇಷಣೆಗೆ ಅವಶ್ಯವಾಗಿರಬಹುದು ಅಥವಾ ಕಿಣ್ವದ ಸಂಶ್ಲೇಷಣೆಯನ್ನು ದಮನಮಾಡಬಹುದು. ಮೊದಲನೆಯ ಸಂದರ್ಭದಲ್ಲಿ ನಿಯಂತ್ರಣ ಸಕಾರಾತ್ಮಕವಾದದ್ದು ಮತ್ತು ಪ್ರೇರೇಪಕ ಈ ವಸ್ತುವನ್ನು ಪಟುತ್ವಗೊಳಿಸುತ್ತದೆ. ಎರಡನೆಯ ಸಂದರ್ಭದಲ್ಲಿ ನಿಯಂತ್ರಣ

ನಕಾರಾತ್ಮಕವಾದದ್ದು ಮತ್ತು ಪ್ರೇರೇಪಕ ಈ ವಸ್ತುವನ್ನು ಪ್ರತಿರೋಧಿಸುತ್ತದೆ. i ಜೀನು ಈ ನಿಯಂತ್ರಕ ವಸ್ತುವನ್ನು ಉತ್ಪತ್ತಿಮಾಡುತ್ತದೆಂದು ಭಾವಿಸುವುದಾದರೆ, ನಿಯಂತ್ರಣದ ವಿಧಾನವನ್ನು ಸರಳವಾಗಿ ವಿವರಿಸಬಹುದು. ಸೂಕ್ಷ್ಮಜೀವಿಗಳ ವ್ಯತ್ಯಯಗಳಲ್ಲಿ (ಮ್ಯುಟೇಷನ್ಸ್) ನಡೆಸಿದ ಸಂಶೋಧನೆಗಳಿಂದ i ಜೀನಿನಿಂದ ಉತ್ಪತ್ತಿಯಾದ ಫಲಿತ ಕಿಣ್ವಗಳ ಸಂಶ್ಲೇಷಣೆಯನ್ನು ಪ್ರತಿರೋಧಿಸುತ್ತವೆಯೆಂದು ಗೊತ್ತಾಗಿದೆ. ಈ ವಸ್ತು ದಮನಕಾರಿಯಾಗಿರಬೇಕು ಮತ್ತು ಪ್ರೇರೇಪಕ ವಸ್ತು ಇದನ್ನು ನಿಷ್ಕ್ರಿಯೆಗೊಳಿಸುವುದರ ಮೂಲಕ ತನ್ನ ಕರ್ತವ್ಯವನ್ನು ನಿರ್ವಹಿಸಬೇಕು.

ಮೂರೂ ಕಿಣ್ವಗಳನ್ನೂ ನಿಯಂತ್ರಕ ದಮನಮಾಡುವುದರಿಂದ ಇವು ಮೂರಕ್ಕೂ ವಿಶಿಷ್ಟವಾದೊಂದು ರಚನೆಯನ್ನು ಗುರುತಿಸಬೇಕು. ಇದೇ ಚಾಲಕ. ಲ್ಯಾಕ್ಟೋಸ್ ವ್ಯವಸ್ಥೆಯ ಮೂರು ಜೀನುಗಳನ್ನೂ ಚಾಲಕ ಹತೋಟಿಯಲ್ಲಿಟ್ಟುಕೊಂಡಿದೆ. ದೂತ–ಆರ್‌ಎನ್‌ಎ ಮಟ್ಟದಲ್ಲಿ ಅಂದರೆ ಜೀನುಗಳ ಪ್ರತಿಕೃತಿ (ಟ್ರಾನ್ಸ್‌ಸ್ಕ್ರಿಪ್ಟ್) ಮಟ್ಟದಲ್ಲಿ ನಿಯಂತ್ರಣ ನಡೆಯುತ್ತದೆ. ದಮನಕ ಚಾಲಕದೊಂದಿಗೆ ಸಂಯೋಜಿತವಾಗಿ ಚಾಲಕದ ಕಾರ್ಯಕ್ಕೆ ಅಡ್ಡಿಮಾಡುವುದರಿಂದ ದೂತ–ಆರ್‌ಎನ್‌ಎ ಸಂಶ್ಲೇಷಣೆ ನಿಂತುಹೋಗುತ್ತದೆ. ಪ್ರೇರೇಪಕ ದಮನಕದೊಂದಿಗೆ ವರ್ತಿಸಿ ಅದನ್ನು ಪ್ರತಿರೋಧಿಸಿದಾಗ ದಮನಕ ಚಾಲಕದಿಂದ ನಿರ್ಗಮಿಸುತ್ತದೆ ಮತ್ತು ದೂತ–ಆರ್‌ಎನ್‌ಎ ಸಂಶ್ಲೇಷಣೆ ಮುಂದುವರಿಯುತ್ತದೆ. ಈಚಿನ ಅಭಿಪ್ರಾಯಗಳ ಪ್ರಕಾರ ಚಾಲಕ ಮತ್ತು ರಚನಾತ್ಮಕ ಜೀನುಗಳ ನಡುವೆ ಉತ್ತೀರ್ಣಕ (ಪ್ರಮೋಟರ್) ಪ್ರದೇಶವೊಂದಿದೆಯೆಂದೂ ದೂತ–ಆರ್‌ಎನ್‌ಎ ಸಂಶ್ಲೇಷಣೆ ಈ ಪ್ರದೇಶದಿಂದ ಪ್ರಾರಂಭವಾಗುವುದೆಂದೂ ಭಾವಿಸಲಾಗಿದೆ.

ದಮನಕ ಪ್ರೋಟೀನ್ ವಸ್ತುವಾಗಿರಬೇಕೆನ್ನುವುದಕ್ಕೆ ಸಾಕಷ್ಟು ಆಧಾರಗಳು ದೊರೆತಿವೆ. ಈಗ ಮೂರು ದಮನಕಗಳನ್ನು ಬೇರ್ಪಡಿಸಲಾಗಿದೆ. ದಮನಕ ಎರಡು ಸಕ್ರಿಯಾತ್ಮಕ ಪ್ರದೇಶಗಳನ್ನೊಳಗೊಂಡಿದೆ. ಒಂದು ಪ್ರದೇಶ (A-ಸೈಟ್) ಚಾಲಕದೊಂದಿಗೆ ಸೇರುತ್ತದೆ. ಇನ್ನೊಂದು ಪ್ರದೇಶ (S-ಸೈಟ್) ಚಾಲಕದೊಂದಿಗೆ ಸೇರುತ್ತದೆ. ಇನ್ನೊಂದು ಪ್ರದೇಶ (A-ಸೈಟ್) ಪ್ರೇರೇಪಕವನ್ನು ಬಂಧಿಸುತ್ತದೆ. ಪ್ರೇರೇಪಕದೊಂದಿಗೆ ಆಗುವ ಬಂಧನ ಪ್ರೋಟೀನಿನ ಆಕಾರದಲ್ಲಿ ವ್ಯತ್ಯಾಸವನ್ನು ಉಂಟುಮಾಡಿ ಚಾಲಕ-ದಮನಕಗಳಿಗಿರುವ ವಾತ್ಸಲ್ಯವನ್ನು ತಗ್ಗಿಸುತ್ತದೆ. ಈ ಅಭಿಪ್ರಾಯಗಳನ್ನು ಚಿತ್ರದಲ್ಲಿ ತೋರಿಸಿದೆ.




ಓಪರಾನ್ ಪ್ರಮೇಯ ಕೇವಲ ತಾತ್ತ್ವಿಕವಾಗಿಯೇ ಉಳಿದಿಲ್ಲ. ಎಷರೀಷಿಯಾ ಕೋಲೈ ಮತ್ತು ಸಾಲ್ಮೊನೆಲ್ಲಾ ಗುಂಪಿನ ಸೂಕ್ಷ್ಮ ಜೀವಿಗಳಲ್ಲಿ ಇದುವರೆಗೆ ಸುಮಾರು ಹತ್ತಕ್ಕೂ ಮಿಕ್ಕಿದ ಓಪರಾನುಗಳನ್ನು ಅಧ್ಯಯನ ಮಾಡಲಾಗಿದೆ. ಇವುಗಳ ಪೈಕಿ ಲ್ಯಾಕ್ಟೋಸ್ ಸಕ್ಕರೆಯ ಚಯಾಪಚಯ ಕ್ರಿಯೆಗೆ ಕಾರಣವಾದ ಲ್ಯಾಕ್ ಓಪರಾನ್, ಲ್ಯೂಸೀನ್ ಅಮೈನೋ ಆಮ್ಲದ ಸಂಶ್ಲೇಷಣೆಗೆ ಕಾರಣವಾದ ಲ್ಯೂ ಓಪರಾನ್, ಹಿಸ್ಟಿಡಿನ್ ಅಮೈನೋ ಆಮ್ಲದ ಸಂಶ್ಲೇಷಣೆಗೆ ಸಂಬಂಧಪಟ್ಟ ಹಿಸ್ ಓಪರಾನ್, ಅರಾಬಿನೋಸ್ ಸಕ್ಕರೆಯ ಚಯಾಪಚಯ ಕ್ರಿಯೆಗೆ ಸಂಬಂಧಪಟ್ಟ ಆರಾ ಓಪರಾನ್ ಇವನ್ನೂ ಇನ್ನೂ ಕೆಲವು ಓಪರಾನುಗಳನ್ನೂ ವಿಶದವಾಗಿ ಅಭ್ಯಸಿಸಲಾಗಿದೆ. 1969ರಲ್ಲಿ ಬೆಕ್‌ವಿತ್ ಮತ್ತು ಸಹೋದ್ಯೋಗಿಗಳು ಲ್ಯಾಕ್ ಓಪರಾನನ್ನು ಬೇರ್ಪಡಿಸುವುದರಲ್ಲಿ ಜಯ ಗಳಿಸಿದರು. ಇವೆಲ್ಲ ಅಧ್ಯಯನಗಳ ಫಲವಾಗಿ ಸೂಕ್ಷ್ಮಜೀವಿಗಳಲ್ಲಿ ನಿಯಂತ್ರಣ ವ್ಯವಸ್ಥೆಯ ಬಗ್ಗೆ ಕೆಲವು ವಿಷಯಗಳು ಬೆಳಕಿಗೆ ಬಂದಿವೆ. ಈಗಿರುವ ಅಭಿಪ್ರಾಯಗಳನ್ನು ಸಂಕ್ಷಿಪ್ತವಾಗಿ ಹೀಗೆ ತಿಳಿಸಬಹುದು. ಜಾಕೋಬ್ ಮತ್ತು ಮೋನೋರವರ ಪ್ರಮೇಯ, ಕೆಲವು ಮಾರ್ಪಾಡುಗಳೊಡನೆ, ಸೂಕ್ಷ್ಮಜೀವಿಗಳಲ್ಲಿರುವ ನಿಯಂತ್ರಣವ್ಯವಸ್ಥೆಯನ್ನೂ ವಿವರಿಸಬಲ್ಲದು ಎಂಬುದಕ್ಕೆ ಸಾಕಷ್ಟು ಸಾಕ್ಷ್ಯಗಳಿವೆ. ಆದರೆ ನಿಯಂತ್ರಣ ಸಕಾರಾತ್ಮಕವೇ ಅಥವಾ ನಕಾರಾತ್ಮಕವೇ ಎಂಬುದು ಇನ್ನೂ ಬಗೆಹರಿಯದ ವಿಷಯ. ಲ್ಯಾಕ್ ಓಪರಾನಿನ ಸಂದರ್ಭದಲ್ಲಿ ನಡೆದಿರುವ ಪ್ರಯೋಗಗಳಿಂದ ನಿಯಂತ್ರಣ, ದಮನವಾದ ಜೀನು ವ್ಯಕ್ತವಾಗದಂತೆ, ನಕಾರಾತ್ಮಕವೆಂದು ತೋರಿಬಂದಿದೆ. ತದ್ವಿರುದ್ಧವಾಗಿ ಅರಾಬಿನೋಸ್ ಓಪರಾನಿನಲ್ಲಿ ಸಕಾರಾತ್ಮಕ ನಿಯಂತ್ರಣವಿದೆಯೆನ್ನುವುದಕ್ಕೆ ಬಲವತ್ತರವಾದ ಆನುವಂಶಿಕ ಸಾಕ್ಷ್ಯಗಳು ದೊರೆತಿವೆ.

ಓಪರಾನ್ ಪರಿಕಲ್ಪನೆ (ಕಾನ್‌ಸೆಪ್ಟ್) ಸಾರ್ವತ್ರಿಕ ಮನ್ನಣೆಯನ್ನು ಪಡೆದಿದ್ದರೂ ಜಾಕೋಬ್ ಮತ್ತು ಮೋನೋರವರ ನಿಯಂತ್ರಣಕ್ರಿಯಾವಿಧಿ ಅಷ್ಟಾಗಿ ಪುರಸ್ಕೃತವಾಗಿಲ್ಲ. ಅನೇಕ ಸೂಕ್ಷ್ಮಜೀವಿಗಳ ಮೇಲೆ ನಡೆಸಿದ ಪ್ರಯೋಗಗಳಿಂದ ಪಡೆದ ಫಲಿತಾಂಶಗಳನ್ನು ಈ ವಿಧಿ ತೃಪ್ತಿಕರವಾಗಿ ವಿವರಿಸಲಾರದು. ಉದಾಹರಣೆಗೆ, ಧ್ರುವೀಯ ವ್ಯತ್ಯಯಗಳಲ್ಲಿ (ಪೋಲಾರ್ ಮ್ಯುಟೆಂಟ್ಸ್) ನಿಯಂತ್ರಣವು ತರ್ಜುಮೆಯ ಮಟ್ಟದಲ್ಲಿ ನಡೆಯುವ ಸೂಚನೆಗಳಿವೆ. 1964ರಲ್ಲಿ ಸ್ಟೆಂಟ್ ಎಂಬಾತ ಮೇಲಿನ ಪ್ರಮೇಯದಿಂದ ತೀರ ಭಿನ್ನವಾದ ಅಭಿಪ್ರಾಯಗಳನ್ನು ಮುಂದಿಟ್ಟ. ಇದರ ಪ್ರಕಾರ ಓಪರಾನ್ ದೂತ-ಆರ್‌ಎನ್‌ಎಯನ್ನು ಸೃಷ್ಟಿಸುವ ದರ, ದೂತ-ಆರ್‌ಎನ್‌ಎ ಪ್ರೋಟೀನಿಗೆ ತರ್ಜುಮೆಯಾಗುವ ದರವನ್ನವಲಂಬಿಸಿದೆ. ದಮನಕವು ತರ್ಜುಮೆಗೆ ಬೇಕಾದ ವರ್ಗಾವಣೆ-ಆರ್‌ಎನ್‌ಎಯ ವಿಶಿಷ್ಟ ಜಾತಿಯನ್ನು ಪ್ರತಿರೋಧಿಸುತ್ತದೆ. ಹೀಗಾಗಿ ತರ್ಜುಮೆಯೂ ತತ್ಪರಿಣಾಮವಾಗಿ ಓಪರಾನಿನ ಪ್ರತಿಕೃತಿಯೂ ನಿಂತುಹೋಗುತ್ತವೆ.

ವಿಧ್ವಂಸನ ಪ್ರಮೇಯವೆಂಬ (ಡಿಸ್ಟ್ರಕ್ಟಿವ್ ಹೈಪಾಥಿಸಿಸ್) ಇನ್ನೊಂದು ಪ್ರಮೇಯವನ್ನೂ ಸೂಚಿಸಲಾಗಿದೆ. ಇದರ ಪ್ರಕಾರ ರಚಿತವಾಗುವ ದೂತ-ಆರ್‌ಎನ್‌ಎ ಪ್ರೋಟೀನಿಗೆ ತರ್ಜುಮೆಯಾಗುವ ಮೊದಲೇ ದಮನಕದಿಂದ ನಾಶಗೊಳ್ಳುತ್ತದೆ. ಆದ್ದರಿಂದ ದಮನಕ ರೈಬೋ ನ್ಯೂಕ್ಲಿಯೇಸ್ ಕಿಣ್ವದಂತೆ ವರ್ತಿಸುತ್ತದೆ. ಅಲ್ಲದೆ ಇದು ಚಾಲಕದಲ್ಲಿ ದೂತ–ಆರ್‌ಎನ್‌ಎಗೆ ಪ್ರತಿಕೃತಿಯಾಗುವ ಪ್ರದೇಶದ ಪ್ರತ್ಯಾಮ್ಲ ಅನುಕ್ರಮವನ್ನು ಗುರುತಿಸಬಲ್ಲ ಸಾಮರ್ಥ್ಯವನ್ನು ಪಡೆದಿರಬೇಕು.

ಈ ಮೂರು ಪ್ರಮೇಯಗಳಿಗೆ ಮತ್ತು ಸೂಚಿತವಾಗಿರುವ ಇತರ ಪ್ರಮೇಯಗಳಿಗೆ ಇರುವ ಮೂಲಭೂತ ಭಿನ್ನತೆಯೆಂದರೆ ಚಾಲಕಕ್ಕೆ ವಹಿಸಿಕೊಟ್ಟಿರುವ ಕರ್ತವ್ಯಭಾರ. ಜಾಕೋಬ್ ಮತ್ತು ಮೋನೋ ಪ್ರಕಾರ ಚಾಲಕ ದೂತ-ಆರ್‌ಎನ್‌ಎಗೆ ಪ್ರತಿಕೃತಿಯಾಗುವುದಿಲ್ಲ; ವಿಧ್ವಂಸನ ಪ್ರಮೇಯದ ಪ್ರಕಾರ ಚಾಲಕ ದೂತ–ಆರ್‌ಎನ್‌ಎಗೆ ಪ್ರತಿಕೃತಿಯಾಗುತ್ತದೆಯಾದರೂ ಪ್ರೋಟೀನಿಗೆ ತರ್ಜುಮೆಯಾಗುವುದಿಲ್ಲ; ಸ್ಟೆಂಟನ ಪ್ರಕಾರ ಚಾಲಕ ಪ್ರತಿಕೃತಿಯಾಗುತ್ತದೆ ಮತ್ತು ಪ್ರೋಟೀನಿಗೆ ತರ್ಜುಮೆಯಾಗುತ್ತದೆ. ಸದ್ಯದಲ್ಲಿ ಈ ಮೂರು ಪ್ರಮೇಯಗಳನ್ನು ನೇರವಾದ ಪ್ರಯೋಗಗಳಿಂದ ಪರೀಕ್ಷಿಸಲು ಸಾಧ್ಯವಿಲ್ಲ. (ಎಚ್.ಎಸ್.ಎಸ್.)

**ಓಪನ್‌ಹೈಮರ್, ರಾಬರ್ಟ್ :** 1904–67. ಭೌತಶಾಸ್ತ್ರಜ್ಞ; ಅಮೆರಿಕ ದೇಶದ ನ್ಯೂ ಮೆಕ್ಸಿಕೊ ಪ್ರಾಂತ್ಯದ ಲಾಸ್ ಅಲಮಾಸಿನಲ್ಲಿ ಪರಮಾಣುಬಾಂಬನ್ನು ತಯಾರಿಸುವ ಖಚಿತ ಉದ್ದೇಶದಿಂದ ಸ್ಥಾಪಿತವಾದ (1943) ವಿಜ್ಞಾನ ಪ್ರಯೋಗ ಮಂದಿರದ ಪ್ರಥಮ ನಿರ್ದೇಶಕ. ಈ ಮಂದಿರವನ್ನು ಕಟ್ಟಿ ಅದರ ಚಟುವಟಿಕೆಗಳನ್ನು ದಿಗ್ದರ್ಶಿಸಿ (1943-45) ಮುಂದಿನ ಮೂರು ವರ್ಷಗಳ ಮೊದಲೇ ಸಿದ್ಧಿ ಪಡೆದ ವಿಜ್ಞಾನಿ-ಆಡಳಿತಗಾರ.

ನ್ಯೂಯಾರ್ಕ್ ನಗರದಲ್ಲಿ ಏಪ್ರಿಲ್ 22, 1904ರಲ್ಲಿ ಸುಸಂಸ್ಕೃತ ಹಾಗೂ ಶ್ರೀಮಂತ ಕುಟುಂಬದಲ್ಲಿ ಓಪನ್‌ಹೈಮರ್ ಜನಿಸಿದ. ಬಲು ತೀಕ್ಷ್ಣಮತಿ ಎಂದು ಚಿಕ್ಕಂದಿನಿಂದಲೇ ಹೆಸರಾಂತ ಈ ತರುಣನ ವಿಶ್ವವಿದ್ಯಾಲಯ ಮಟ್ಟದ ವಿದ್ಯಾಭ್ಯಾಸ ನಡೆದದ್ದು ಹಾರ್ವರ್ಡಿನಲ್ಲಿ (1925). ಸಹಜ ಒಲವು ಭೌತಶಾಸ್ತ್ರ ಸಂಶೋಧನೆಯ ಕಡೆಗೆ ಇತ್ತು. ಪ್ರಾರಂಭದಲ್ಲೇ ಶಕಲಸಿದ್ಧಾಂತ ಕ್ಷೇತ್ರದಲ್ಲಿ ಸಂಶೋಧನೆ ನಡೆಸಿ ಪ್ರಸಿದ್ಧಿಗೆ ಬಂದ. ವಿಶ್ವಕಿರಣಗಳು (ಕಾಸ್ಮಿಕ್ ರೇಸ್), ಪರಮಾಣು ಭೌತಶಾಸ್ತ್ರ, ಮೂಲಕಣಗಳು ಮತ್ತು ರಿಲೆಟಿವಿಟಿ—ಈ ಕ್ಷೇತ್ರಗಳಲ್ಲಿ ಗಮನಾರ್ಹ ಸಂಶೋಧನೆಗಳನ್ನು ಮಾಡಿದ್ದಾನೆ. 1929ರಲ್ಲಿ ಕ್ಯಾಲಿಫೋರ್ನಿಯ ವಿಶ್ವವಿದ್ಯಾನಿಲಯದಲ್ಲಿ ಸೈದ್ಧಾಂತಿಕ ಭೌತಶಾಸ್ತ್ರದ ಉಪಪ್ರಾಧ್ಯಾಪಕನಾಗಿ ಸೇರಿ 1936ರ ವೇಳೆಗೆ ಅಲ್ಲೇ ಪ್ರಾಧ್ಯಾಪಕನಾದ. ಇದರ ಜೊತೆಗೆ ಓಪನ್‌ಹೈಮರ್ ಕ್ಯಾಲಿಫೋರ್ನಿಯದ ಟೆಕ್ನಾಲಜಿ ಇನ್ಸ್‌ಟಿಟ್ಯೂಟಿನಲ್ಲಿ ಪಾಠ ಹೇಳುತ್ತಿದ್ದು (1929–47) ವಿಶ್ವಕಿರಣಗಳ ಸಂಶೋಧನೆಗಳಿಗೆ ಪ್ರಸಿದ್ಧವಾದ ಆ ಸಂಸ್ಥೆಯಲ್ಲಿ ನಡೆದ ಪ್ರಯೋಗದಲ್ಲಿ ಸಹಕರಿಸಿದ್ದ. ಮೀಸಾನ್ಸ್ ಎಂದು ಈಗ ಕರೆಯಲಾಗುತ್ತಿರುವ ಭಾರವಾದ ಕಣಗಳು ವಿಶ್ವಕಿರಣಗಳಲ್ಲಿವೆಯೆಂದು ಸೂಚಿಸಿದುದು ಮಾತ್ರವಲ್ಲದೇ ವಿಶ್ವಕಿರಣಗಳ ಸುರಿಮಳೆಗಳ (ಕಾಸ್ಮಿಕ್ ರೇ ಶವರ್ಸ್) ಉತ್ಪತ್ತಿಯಲ್ಲಿ ಮೀಸಾನ್ ಕಣಗಳು ವಹಿಸುವ ಪಾತ್ರಕ್ಕೆ ಒಂದು ವಾದವನ್ನೂ ಮಂಡಿಸಿದ. ಕೃತಕ ಬದಲಾವಣೆಗಳಿಗೆ

(ಆರ್ಟಿಫಿಶಿಯಲ್ ಟ್ರಾನ್ಸ್‌ಮ್ಯುಟೇಶನ್ಸ್) ಸಂಬಂಧಿಸಿದಂತೆ ಹಲವು ಪ್ರಯೋಗಗಳನ್ನು ವಿವರಿಸಲು ಈತ ಒಂದು ಹೊಸ ವಾದವನ್ನೇ ಮುಂದಿಟ್ಟ. ಡ್ಯೂಟ್ರಾನ್ ಕಣ ಪ್ರೋಟಾನ್ ಮತ್ತು ನ್ಯೂಟ್ರಾನುಗಳಿಂದ ಆಗಿದ್ದು ಒಂದು ನ್ಯೂಕ್ಲಿಯಸಿನ ವಿದ್ಯುತ್ ಕ್ಷೇತ್ರದಲ್ಲಿ ಅವು ಬೇರ್ಪಡುವುವೆಂದೂ ನ್ಯೂಕ್ಲಿಯಸಿನ ಧನವಿದ್ಯುತ್ತಿನಿಂದ ವಿಕರ್ಷಣಹೊಂದಿ ಪ್ರೋಟಾನ್ ಹೊರದೂಡಲ್ಪಡುವುದೆಂದೂ ನ್ಯೂಟ್ರಾನ್ ಆ ನ್ಯೂಕ್ಲಿಯಸನ್ನು ಪ್ರವೇಶಿಸುವುದೆಂದೂ ಓಪನ್‌ಹೈಮರ್ ಪ್ರತಿಪಾದಿಸಿದ. ಈ ಕ್ರಿಯೆಯನ್ನು ಓಪನ್‌ಹೈಮರ್-ಫಿಲಿಪ್ಸ್ ಕ್ರಿಯೆ ಎಂದು ಕರೆಯುವುದು ವಾಡಿಕೆ.

ಪರಮಾಣುಬಾಂಬಿನ ಪ್ರಥಮ ಯಶಸ್ವೀ ಪರೀಕ್ಷೆ ಮುಗಿದೊಡನೆಯೇ (1945) ಓಪನ್‌ಹೈಮರ್ ಪ್ರಯೋಗಮಂದಿರದ ನಿರ್ದೇಶಕತ್ವಕ್ಕೆ ರಾಜೀನಾಮೆಯಿತ್ತು ಹೊರಬಂದು ಕ್ಯಾಲಿಫೋರ್ನಿಯದಲ್ಲಿದ್ದ ತನ್ನ ಮೊದಲಿನ ಎರಡು ಪ್ರಾಧ್ಯಾಪಕ ಹುದ್ದೆಗಳಿಗೆ ಮರಳಿದ. ಮುಂದೆ ಪ್ರಿನ್ಸ್‌ಟನ್ನಿನ ಇನ್‌ಸ್ಟಿಟ್ಯೂಟ್ ಆಫ್ ಅಡ್ವಾನ್ಸ್‌ಡ್ ಸ್ಟಡಿ ಸಂಸ್ಥೆಯ ನಿರ್ದೇಶಕನಾಗಿ ನೇಮಕಗೊಂಡ (1947). ಯುದ್ಧೋತ್ತರ ಕಾಲದಲ್ಲಿ ಸೈದ್ಧಾಂತಿಕ ಭೌತಶಾಸ್ತ್ರದಲ್ಲಿ ಅಸಂಖ್ಯಾತ ಗಮನಾರ್ಹ ಕೊಡುಗೆಗಳನ್ನು ನೀಡಿದ ಏಕೈಕ ಸಂಸ್ಥೆಯಿದು. ಈ ಹುದ್ದೆಯಿಂದ 1966ರಲ್ಲಿ ನಿವೃತ್ತಿ ಪಡೆದು ಅದೇ ಸಂಸ್ಥೆಯಲ್ಲಿ ಪ್ರಾಧ್ಯಾಪಕನಾಗಿ ಮುಂದುವರಿದ. 1947 ರಿಂದ 1952ರ ವರೆಗೆ ಅಮೆರಿಕ ದೇಶದ ಪರಮಾಣುಶಕ್ತಿ ಆಯೋಗದ (ಅಟಾಮಿಕ್ ಎನರ್ಜಿ ಕಮಿಶನ್) ಅಧ್ಯಕ್ಷನಾಗಿ ಸಹ ಕೆಲಸಮಾಡಿದ. ನ್ಯಾಷನಲ್ ಅಕಾಡಮಿ ಆಫ್ ಸೈನ್ಸಸ್ ಸಂಸ್ಥೆ ಈತನನ್ನು 1941ರಲ್ಲಿ ತನ್ನ ಸದಸ್ಯನಾಗಿ ಚುನಾಯಿಸಿ ಗೌರವಿಸಿತು. ಓಪನ್‌ಹೈಮರ್ ಫೆಲೋ ಆಫ್ ದಿ ರಾಯಲ್ ಸೊಸೈಟಿ ಗೌರವವನ್ನು ಸಹ ಪಡೆದ. ಈತನ ಸಂಶೋಧನೆಗಳ ಹಿರಿಮೆಯನ್ನು ಗಮನಿಸಿ 1963ರ ಫರ್ಮಿ ಬಹುಮಾನವನ್ನು ನೀಡಲಾಯಿತು.

ಸೈದ್ಧಾಂತಿಕ ವಿಜ್ಞಾನಿಯಾಗಿ, ದಕ್ಷ ಆಡಳಿತಗಾರನಾಗಿ, ಸಂಸ್ಥೆಯನ್ನು ಕಟ್ಟಿ ಪೋಷಿಸುವ ಮಹಾಚೈತನ್ಯವಾಗಿ ಓಪನ್‌ಹೈಮರ್ ಸಾಧಿಸಿದ ಯಶಸ್ಸು ಅಪೂರ್ವವಾದದ್ದು. ಆದರೆ ಪರಮಾಣುಬಾಂಬಿನ ಮಾರಕ ಹತ್ಯಾಕಾಂಡವನ್ನು (ಎಂದರೆ ತನ್ನ ಪ್ರಯತ್ನಗಳ ಪ್ರತ್ಯಕ್ಷ ಫಲವನ್ನು) ಕಂಡ ಈತ (ಜಪಾನ್ ವಿರುದ್ಧ ಪರಮಾಣು ಬಾಂಬಿನ ಪ್ರಯೋಗವನ್ನು ಅನುಮೋದಿಸಿದ್ದರೂ) ಯುದ್ಧಾನಂತರದ ದಿವಸಗಳಲ್ಲಿ ಬಾಂಬಿನ ಅಂತರರಾಷ್ಟ್ರೀಯ ಹತೋಟಿಗೋಸ್ಕರ ಬಹಳವಾಗಿ ಹೆಣಗಾಡಿದ. ಹೈಡ್ರೊಜನ್ ಬಾಂಬಿನ ಆವಿಷ್ಕರಣದ ದಾರಿಯನ್ನು ವಿರೋಧಿಸಿದ. ಆದರೆ ಅಧ್ಯಕ್ಷ ಟ್ರೂಮನ್ ಈ ವಿರೋಧಗಳನ್ನು ನಿರಾಕರಿಸಿದುದರಿಂದ (1949) ಓಪನ್ ಹೈಮರನ ಮಾತು ನಡೆಯಲಿಲ್ಲ. ತಾನು ರಚಿಸಿ ಪೋಷಿಸಿದ ಪರಿಸರದಲ್ಲಿಯೇ ಪರಮಾಣುಶಕ್ತಿಗೆ ಸಂಬಂಧಿಸಿದಂಥ ವರ್ಗೀಕೃತ ವಿವರಗಳಿಗೆ (ಎಂದರೆ ಗುಪ್ತ ಫಲಿತಾಂಶಗಳು) ಪ್ರವೇಶ ದೊರೆಯದೇ ಒಂದು ವಿಧದ ಅಜ್ಞಾತವಾಸ ಈ ವಿಜ್ಞಾನಿಗೆ ಪ್ರಾಪ್ತವಾಯಿತು.

ಸೈಂಟಿಫಿಕ್ ಫೌಂಡೇಶನ್ಸ್ ಫಾರ್ ವರ್ಲ್ಡ್ ಆರ್ಡರ್ ಎಂಬ ಗ್ರಂಥವನ್ನು 1947ರಲ್ಲೂ ಸೈನ್ಸ್ ಅಂಡ್ ದಿ ಕಾಮನ್ ಅಂಡರ್‌ಸ್ಟೇಂಡಿಂಗ್ ಎಂಬ ಗ್ರಂಥವನ್ನು 1954ರಲ್ಲೂ ದಿ ಓಪನ್ ಮೈಂಡ್ ಎಂಬ ಗ್ರಂಥವನ್ನು 1955ರಲ್ಲೂ ಬರೆದು ಪ್ರಕಟಿಸಿದ್ದಾನೆ.

ಕೊನೆಯುಸಿರೆಳೆದದ್ದು ಪ್ರಿನ್ಸ್‌ಟನ್ನಿನಲ್ಲಿ, ಫೆಬ್ರುವರಿ 18, 1967. (ಅಂ.ಎ.ಎ.)

**ಓಪಿಎಂ :** ರಷ್ಯನ್ ಭಾಷೆಯಲ್ಲಿ ಪ್ರಾಯೋಗಿಕ ರಾಕೆಟ್ ಎಂಜಿನ್ ಎಂಬ ಪದಗಳ ಸಂಕ್ಷೇಪ ರೂಪ. 6—300 ಕಿ.ಗ್ರಾಂ. ನೂಕುಬಲ ಇರುವ ದ್ರವಚಾಲಿತ ರಾಕೆಟ್ ಎಂಜಿನುಗಳ ಸಮುದಾಯ ಓಪಿಎಂ. 1930 ರಿಂದ 33ರ ವರೆಗಿನ ಅವಧಿಯಲ್ಲಿ ಓಪಿಎಂ–1 ರಿಂದ ಓಪಿಎಂ–52 ವಿವಿಧ ರಾಕೆಟ್ ಎಂಜಿನುಗಳನ್ನು ರೂಪಿಸಿ ಸಿದ್ಧಪಡಿಸಿದರು. ಓಪಿಎಂ–53 ರಿಂದ ಓಪಿಎಂ–102 ಎಂಜಿನುಗಳನ್ನು ತಯಾರಿಸಿದ್ದು 1934–38ರ ಅವಧಿಯಲ್ಲಿ. *

**ಓಫಿಡೈಯಿಡೀ :** ಸಮುದ್ರದ ಮೀನುಗಳ ಒಂದು ಕುಟುಂಬ. ಓಫೀಡಿಯಾಯ್ಡಿಯ ಉಪಗಣದಲ್ಲಿನ ಮೂರು ಕುಟುಂಬಗಳಲ್ಲಿ ಒಂದು. ಈ ಕುಟುಂಬದ ಮೀನುಗಳು ಅಪ್ಪರ್ ಕ್ರಿಟೇಶಿಯಸ್ ಕಾಲದಿಂದ ಇಂದಿನವರೆಗೂ ಜೀವಂತವಾಗಿವೆ.

ಕಸ್ಕ್ ಈಲ್ (ಒರ್ಬಟ್ ಮೀನನ್ನು ಹೋಲುವ ಹಾವುಮೀನು) ಗಳೆಂದು ಕರೆಯುವ ಈ ಕುಟುಂಬದಲ್ಲಿ ಸುಮಾರು ಮೂವತ್ತು ಪ್ರಭೇದಗಳನ್ನು ಗುರುತಿಸಲಾಗಿದೆ. ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಸಾಗರಗಳ ಉಷ್ಣ ಮತ್ತು ಸಮಶೀತೋಷ್ಣ ವಲಯ ಪ್ರದೇಶಗಳಲ್ಲಿ ಮಾತ್ರ ಇವು ಹೆಚ್ಚಾಗಿ ದೊರೆಯುವುವು.

ಓಫಿಡೈಯಿಡೀ ಕುಟುಂಬದ ಮೀನುಗಳು ಸಾಮಾನ್ಯವಾಗಿ 12 ಅಂಗುಲಕ್ಕಿಂತಲೂ ಹೆಚ್ಚು ಬೆಳೆಯುವುದಿಲ್ಲ. ಆದರೆ ದೊಡ್ಡ ಗಾತ್ರಕ್ಕೆ ಬೆಳೆಯುವ ಕೆಲವು ಪ್ರಭೇದಗಳೂ ಉಂಟು. ದಕ್ಷಿಣ ಆಫ್ರಿಕದ ನೆರೆಯ ಸಮುದ್ರಗಳಲ್ಲಿನ ಕಿಂಗ್‌ಕ್ಲಿಪ್ 5 ಅಡಿಯಷ್ಟು ಉದ್ದ ಬೆಳೆಯುವುದು. ಈ ಮೀನು ಬಹಳ ರುಚಿಕರವೆಂದು ಹೆಸರಾಗಿದೆ. ಈ ಕುಟುಂಬದ ಇನ್ನೆರಡು ಪ್ರಭೇದಗಳು ಪೆರು ದೇಶದ ಸಮುದ್ರದ ಮೀನುಗಾರಿಕೆಯಲ್ಲಿ ಮುಖ್ಯವಾದುವು. ಈ ಎರಡು ಪ್ರಭೇದಗಳ ಮೀನುಗಳು 2½ ಅಡಿ ಉದ್ದ ಬೆಳೆಯುವುವು. ಈ ಮೀನುಗಳು ಸಾಮಾನ್ಯವಾಗಿ ಆಳವಾದ ಸಮುದ್ರದಲ್ಲಿ ಮಾತ್ರ ದೊರಕುವುವಾದರೂ ಕೆಲವೊಮ್ಮೆ ನದೀಮುಖಗಳಲ್ಲಿಯೂ ಸಮುದ್ರದ ಅಂಚಿನಲ್ಲಿಯೂ ಸಿಕ್ಕಿವೆ.

ಈ ಮೀನಿನ ದೇಹ ಪಕ್ಕದಿಂದ ಪಕ್ಕಕ್ಕೆ ಚಪ್ಪಟೆಯಾಗಿ ತೆಳುವಾಗಿರುವುದು. ಬೆನ್ನಿನ ಮತ್ತು ಗುದದ ರೆಕ್ಕೆಗಳು (ಅಥವಾ ಈಜ ರೆಕ್ಕೆ) ತಲೆಯ ಹಿಂಭಾಗದಲ್ಲಿ ಪ್ರಾರಂಭವಾಗಿ ಬಾಲದ ಕೊನೆಯ ವರೆಗೆ ವ್ಯಾಪಿಸಿದ್ದು ಅನೇಕ ರೇ ಗಳನ್ನು ಹೊಂದಿರುವುವು. ಈ ಕುಟುಂಬದ ಮೀನುಗಳನ್ನು ಗುರುತಿಸಲು ಸಹಾಯಕವಾದ ಅತಿ ಪ್ರಮುಖ ಲಕ್ಷಣವೆಂದರೆ ಪಕ್ಕೆಯ ಈಜುರೆಕ್ಕೆಗಳು. ಇವು ದೇಹದ ಮುಂಭಾಗದ ವರೆಗೂ (ಗಡ್ಡದಡಿಯಲ್ಲಿ) ಸಾಗಿ ಕೇವಲ ಒಂದು ಜೋಡಿ ಸೀಳಿದ ತಂತುಗಳಾಗಿ ಮಾರ್ಪಟ್ಟಿವೆ. ಅತಿಸೂಕ್ಷ್ಮವಾದ ಈ ತಂತುಗಳನ್ನು ಮೀನು ಸಮುದ್ರದ ತಳದಲ್ಲಿ ಚಲಿಸುವಾಗ ಕೆಳಭಾಗದಲ್ಲಿನ ಪರಿಸ್ಥಿತಿಯನ್ನು ಗ್ರಹಿಸಲು ಉಪಯೋಗಿಸುವುದು.

ಕ್ಯಾಲಿಫೋರ್ನಿಯದ ಸ್ಟೈನ್‌ಹಾರ್ಟ್ ಅಕ್ವೇರಿಯಂನ ಕ್ಯೂರೇಟರಾದ ಇ. ಎಸ್. ಹೆರಾಲ್ಡ್ ಈ ಕುಟುಂಬದ ಮೀನೊಂದರ ಬಗ್ಗೆ ಗಮನಾರ್ಹನಾದ ಅಂಶಗಳನ್ನು ಬೆಳಕಿಗೆ ತಂದಿದ್ದಾರೆ. ಕ್ಯಾಲಿಫೋರ್ನಿಯದ ನೆರೆಯ ಸಮುದ್ರದಲ್ಲಿ 600 ಅಡಿ ಆಳದಲ್ಲಿ ಹಿಡಿದ ಚುಕ್ಕಿ ಕಸ್ಕ್‌ಈಲ್ (ಓಟೋಫಿಡಿಯಂ ಟೈಲರಿ) ಮೀನು ಸಾಮಾನ್ಯವಾಗಿ ತನ್ನ ಬಾಲದ ಮೇಲೆ ನಿಲ್ಲುವ ಸ್ವಭಾವದ್ದೆಂದು ಇವರು ತಿಳಿಸಿರುವರು. ಅದು ಬಾಲವನ್ನೆ ಮುಂದಾಗಿ ಮಾಡಿಕೊಂಡು ಪೊಟರೆಗಳಲ್ಲಿ ನುಗ್ಗುವುದೆಂದೂ ಕೇವಲ ತಲೆಯನ್ನು ಮಾತ್ರ ಹೊರಗೆ ನೀಡುವುದೆಂದೂ ತಿಳಿದುಬಂದಿದೆ.

ಓಫಿಡೈಯಿಡೀ ಕುಟುಂಬದ ಮೀನುಗಳು ದಕ್ಷಿಣ ಆಫ್ರಿಕ, ಚಿಲಿ, ಪೆರು ಮತ್ತು ನ್ಯೂ ಜ಼ಿಲೆಂಡ್ ದೇಶಗಳ ಮೀನುಗಾರಿಕೆಯಲ್ಲಿ ಗಮನಾರ್ಹವಾದುವು. (ಸಿ.ಜಿ.ಕೆ.)

**ಓಫಿಯೂರಾಯ್ಡಿಯ :** ಕಂಟಕ ಚರ್ಮಿಗಳ (ಎಕಿನೊಡರ್ಮೇಟ) ವಂಶದ ಒಂದು ವರ್ಗ. ಸಮುದ್ರಜೀವಿಗಳಾದ ಪೆಡಸುನಕ್ಷತ್ರಗಳು (ಬ್ರಿಟಲ್ ಸ್ಟಾರ್ಸ್) ಇದಕ್ಕೆ ಉದಾಹರಣೆ. ದೇಹದಲ್ಲಿ ಮಧ್ಯದ ತಟ್ಟೆಯೂ ಕಿರಣಗಳಂತೆ ಚಾಚಿರುವ ಐದು ತೋಳುಗಳೂ ಇವೆ. ತೆಳುವಾದ ದುಂಡುತೋಳುಗಳು ಮಧ್ಯ ತಟ್ಟೆಯಿಂದ ಸ್ಪಷ್ಟವಾಗಿ ಭಿನ್ನತೆಯನ್ನು ಪ್ರದರ್ಶಿಸುತ್ತವೆ : ಇವು ಬಾಯ ವರೆಗೆ ಒಳಚಾಚಿಕೊಂಡು ಒಟ್ಟುಗೂಡಿ ಬಾಯಿಯ ಸುತ್ತಲೂ ಒಂದು ಆಧಾರ ಕಟ್ಟಿನಂತಾಗಿರುವುದು. ತೋಳುಗಳು ಬಿಡಿ. ತುದಿಯಲ್ಲಿ ಮೊನಚಾಗಿರುತ್ತವೆ. ಕೆಲವು ಪೆಡಸುನಕ್ಷತ್ರಗಳಲ್ಲಿ (ಯೂರಿಯೇಲಿ ಗಣದವು) ತೋಳುಗಳು ತುದಿಯಲ್ಲಿ ಕವಲೊಡೆದು ಸುತ್ತಲೂ ಒಂದು ರೀತಿಯ ಬಲೆಯನ್ನು ರಚಿಸಿಕೊಂಡಿವೆ.

ಬಾಯಿ ಮಧ್ಯ ತಟ್ಟೆಯ ಅಧೋಭಾಗದ ನಡುವೆ ಇದೆ. ಆಂಬುಲ್ಯಾಕ್ರಲ್ ಕಾಲುವೆಗಳಾಗಲಿ ಆಸನದ್ವಾರವಾಗಲಿ ಇರುವುದಿಲ್ಲ. ಮರಿಯಲ್ಲಿ ಊರ್ಧ್ವಭಾಗದಲ್ಲಿರುವ ಮ್ಯಾಡ್ರಿಪೊರೈಟ್ ತಟ್ಟೆ ಪ್ರೌಢಜೀವಿಯ ಅಧೋಭಾಗಕ್ಕೆ ಸ್ಥಳಾಂತರವಾಗುವುದು. ಮೈಮೇಲಿನ ಚರ್ಮದ ಕೆಳಗೆ ತೆಳುವಾದ ಸುಣ್ಣದ ರಚನೆಯ ಫಲಕಗಳಿವೆ. ಇವುಗಳ ಇಕ್ಕಡೆಗಳಲ್ಲಿ ಸಣ್ಣ ಅಥವಾ ಉದ್ದವಾದ ಮುಳ್ಳುಗಳಂಥ ರಚನೆಗಳು ಹೊರಬಾಗುತ್ತವೆ. ಕೆಲವು ಪೆಡಸುನಕ್ಷತ್ರಗಳಲ್ಲಿ ಫಲಕಗಳ (ಪ್ಲೇಟ್) ಬದಲು ಹರಳಿನಂಥ ಸುಣ್ಣದ ರಚನೆಗಳಿವೆ. ಅಧೋಭಾಗದಲ್ಲಿ 5 ಜೊತೆ ಸಣ್ಣ ಚೀಲಗಳಿವೆ. ಇವು ಜನನ ಕುಹರದೊಳಕ್ಕೆ ತೆರೆಯುತ್ತವೆ. ಜನನೇಂದ್ರಿಯಗಳಲ್ಲಿ ಉತ್ಪತ್ತಿಯಾಗುವ ಪ್ರಜನನ ಜೀವಕಣಗಳು ಇವುಗಳಲ್ಲಿ ಬಂದು ಸೇರುವುವು. ಆ ಕುಹರಗಳು ಉಸಿರಾಡುವ ಮತ್ತು ವಿಸರ್ಜಿಸುವ ಕಾರ್ಯಗಳನ್ನೂ ನಡೆಸುತ್ತವೆ. ತೋಳುಗಳ ಚರ್ಮದ ಒಳಭಾಗದಲ್ಲಿ ಇರುವ ಆಂಬುಲ್ಯಾಕ್ರಲ್ ಫಲಕಗಳು ಅವಕ್ಕೆ ಆಧಾರವಾಗಿರುವುವು. ನಳಿಕೆಪಾದಗಳು ತೋಳುಗಳ ಪಕ್ಕಗಳಲ್ಲಿನ ಫಲಕಗಳ ಮಧ್ಯದಲ್ಲಿರುವ ಸಂದಿಗಳಿಂದ ಹೊರಬರುವುವು. ಒಂದೊಂದು ತೋಳಿನೊಳಗೂ ದೇಹಾಂತರಾವಕಾಶ, ನರತಂತು, ಆಂಬುಲ್ಯಾಕ್ರಲ್ ನಾಳಗಳು ಇವೆಲ್ಲವೂ ಸಾಗಿ ಬಂದಿರುತ್ತವೆ. ದೇಹಾಂತರಾವಕಾಶ ಸೀಲಾಮಿಕ್ ಅನುಲೇಪಕ ಕಣಗಳಿಂದ ಆವೃತವಾಗಿದೆ. ದೇಹದ ಹೊದಿಕೆ ಹೊರ ಮತ್ತು ಒಳಪೊರೆಗಳ ಮಧ್ಯೆ ವ್ಯಾಪಿಸಿರುವುದು. ಆಂಬುಲ್ಯಾಕ್ರಲ್ ನಾಳಗಳಲ್ಲಿ ಚಲಿಸುವ ದ್ರವದಲ್ಲಿ ಹಿಮೊಗ್ಲೋಬಿನ್ ತುಂಬಿದ ಅಮೀಬಾಕಾರದ ಜೀವಕಣಗಳಿವೆ. ಆಸ್ಟೆರಾಯ್ಡಿಯ ವರ್ಗದ ಪ್ರಾಣಿಗಳಲ್ಲಿರುವ ಟೀಡ್‌ಮನ್ ಕೋಶಗಳು ಈ ಗುಂಪಿನವುಗಳಲ್ಲಿ ಇರುವುದಿಲ್ಲ.

ಜೀರ್ಣಾಂಗಗಳಲ್ಲಿ ಬಾಯಿ, ಅನ್ನನಾಳ ಮತ್ತು ಚೀಲದಂಥ ಜಠರವೂ ಇವೆ. ಗುದದ್ವಾರವಿಲ್ಲ.

ಜಲಪರಿಚಲನಾಂಗವ್ಯೂಹ (ವಾಟರ್ ವ್ಯಾಸ್ಕ್ಯುಲರ್ ಸಿಸ್ಟಮ್) : ಅಧೋಭಾಗದಲ್ಲಿರುವ ರಂಧ್ರಮಯವಾದ ಮ್ಯಾಡ್ರಿಪೊರೈಟ್ ತಟ್ಟೆಯಿಂದ ಮುಚ್ಚಲ್ಪಟ್ಟ ಶಿಲಾನಾಳ ಆಂಬ್ಯುಲ್ಯಾಕ್ರಲ್ ಉಂಗುರನಾಳವನ್ನು ಸೇರುವುದು. ಈ ನಾಳದಿಂದ

ಹೊರಡುವ 5 ಆಂಬ್ಯುಲ್ಯಾಕ್ರಲ್ ನಾಳಗಳು ತೋಳುಗಳೊಳಗೆ ಹಾದುಹೋಗಿರುತ್ತವೆ. ಆಂಬುಲ್ಯಾಕ್ರಲ್ ನಾಳಗಳ ಇಕ್ಕೆಲಗಳಲ್ಲಿ ನಳಿಕೆಪಾದಗಳಿವೆ. ನಳಿಕೆಪಾದಗಳಿಗೆ ಆಂಪ್ಯುಲೆಗಳಾಗಲಿ ಹೀರುಬಟ್ಟಲುಗಳಾಗಲಿ ಇರುವುದಿಲ್ಲ. ನಳಿಕೆಪಾದಗಳು ಪ್ರಾಣಿಯ ಚಲನೆಯಲ್ಲಿ ಪಾಲುಗೊಳ್ಳುವುದಕ್ಕಿಂತ ಹೆಚ್ಚಾಗಿ ಉಸಿರಾಟಕ್ಕೂ ಪರಿಸರದ ಅರಿವು ಪಡೆಯಲೂ ಸಹಕಾರಿಯಾಗಿವೆ. ಉಂಗುರ ನಾಳಕ್ಕೆ ಸೇರಿಕೊಂಡಂತೆ 4 ಪೋಲಿಯನ್ ಕೋಶಗಳಿವೆ (ವೆಸಿಕಲ್). ಜನನಕುಹರಗಳ ಒಳಮುಖ ಶಿಲಕೆಗಳುಳ್ಳ ಜೀವಕಣಗಳಿಂದ ಆವೃತವಾಗಿದೆ. ಅದರಲ್ಲಿ ಸಮುದ್ರದ ನೀರು ಯಾವಾಗಲೂ ಚಲಿಸುತ್ತಿರುತ್ತದೆ ; ಆದ್ದರಿಂದ ಅದು ಉಸಿರಾಡಲೂ ಸಹಕಾರಿಯಾಗಿರಬಹುದು.



ಆಸ್ಟಿರೊನಿಕ್ಸ್ ಎಕ್ಸ್ಕವೇಟ ಪ್ರಾಣಿ ಹವಳಕ್ಕೆ ಸುತ್ತಿಕೊಂಡಿರುವುದು

ನರಮಂಡಲ ಮತ್ತು ಅದರಿಂದ ಹೊರಡುವ ತೋಳಿನ ನರದ ತಂತುಗಳು ಫಲಕಗಳ ತಳಭಾಗದಲ್ಲಿರುವುವು.

ಪೆಡಸು ನಕ್ಷತ್ರಗಳು ಏಕಲಿಂಗಿಗಳು ; ಆದರೆ ಆಂಫಿಯೂರದಲ್ಲಿ ಹೆಣ್ಣು ಮತ್ತು ಗಂಡುಜನನಾಂಗಗಳು ಒಂದೇ ಜೀವಿಯಲ್ಲಿರುತ್ತವೆ. ಒಂದೇ ವೇಳೆಯಲ್ಲಿ ತತ್ತಿಗಳೂ ವೀರ್ಯಾಣುಗಳೂ ಉತ್ಪತ್ತಿಯಾಗುತ್ತವೆ. . ಉತ್ಪಾದನಾಂಗಗಳು ಜೋಡಿಜೋಡಿಯಾಗಿ ಕವಲೊಡೆದುಕೊಂಡು ತ್ರಿಜ್ಯಾಂತರ ಸ್ಥಾನಗಳಲ್ಲಿರುವುವು. ಪೆಂಟಸಿರಸ್ ಮತ್ತು ಇನ್ನು ಕೆಲವು ಜಾತಿಗಳಲ್ಲಿ 10 ಜೊತೆ ಉತ್ಪಾದನಾಂಗಗಳಿರುವುವು. ಇವು 10 ಜೊತೆ ಜನನ ಕುಹರಗಳಿಗೆ ಅಂಟಿರುವುವು. ಜೀವನ ಚರಿತ್ರೆಯಲ್ಲಿ ಉಭಯಪಾರ್ಶ್ವ ಸಮಾಂಗತೆಯನ್ನು ತೋರುವ ಓಫಿಯೋಪ್ಲೂಟಿಯಸ್ ಎಂಬ ಹೆಸರಿನ ಡಿಂಬದ ಅವಸ್ಥೆಯುಂಟು. ಇದು ರೂಪ ಪರಿವರ್ತನೆಯಾಗಿ ಆರೀಯ ಸಮಾಂಗತೆಯುಳ್ಳ (ರೇಡಿಯಲ್ ಸಿಮೆಟ್ರಿ) ಪ್ರೌಢಜೀವಿಯಾಗುವುದು. ಡಿಂಬದ ಅಂಗಾಂಗಗಳೆಲ್ಲವೂ ಪ್ರೌಢಜೀವಿಯಲ್ಲಿಯೂ ಮುಂದುವರಿಯುವುವು.





ಎಡಗಡೆಯುದು: ಓಫಿಯೊಲೆಪಿಸ್ ಪ್ರಾಣಿಯ ತಟ್ಟೆಯಭಾಗದ ಮೇಲುನೋಟ;
ಬಲಗಡೆಯುದು: ಓಫಿಯೊಮ್ಯೂಸಿಯಂ ಪ್ರಾಣಿಯ ತಟ್ಟೆಯಭಾಗದ ಕೆಳನೋಟ

ದಕ್ಷಿಣ ಧ್ರುವ ಸಮುದ್ರದಲ್ಲಿ ಜೀವಿಸುವ ಓಫಿಯೋಪ್ಲೂಕಸ್‌ಗಳು ಮರಿಗಳನ್ನೇ ಈದು ಅವನ್ನು ಸಾಕುತ್ತವೆ.

ಪೆಡಸುನಕ್ಷತ್ರಗಳು ಸಮುದ್ರದಲ್ಲಿ ಸರಾಗವಾಗಿ ಈಜಬಲ್ಲವು. ಕೆಲವು ವೇಳೆ ಬಹಳ ನಿಧಾನವಾಗಿ ಚಲಿಸುವುವು. ತೋಳುಗಳನ್ನು ಸುಲಭವಾಗಿ ಬಗ್ಗಿಸಬಲ್ಲವಾದುದರಿಂದ ಬಂಡೆಗಳ ಕಂಡಿಗಳನ್ನು ಹೊಕ್ಕು ಅಲ್ಲಿ ಜೀವಿಸುವುವು. ಸಾಮಾನ್ಯವಾಗಿ ಸಮುದ್ರತಳದ ಮರಳಿನಲ್ಲಿ ಹೂತಿದ್ದು ರಾತ್ರಿಯ ವೇಳೆ ಚುರುಕಾಗಿ ಓಡಾಡುವುವು.

ನೀರಿನಿಂದ ಹೊರತಂದಾಗ ಅಥವಾ ಇತರ ರೀತಿಯಲ್ಲಿ ಕಾಟ ಕೊಟ್ಟಾಗ ಪೆಡಸು ನಕ್ಷತ್ರಗಳು ತಮ್ಮ ಮಧ್ಯಭಾಗವಾದ ತಟ್ಟೆಯನ್ನು ಉಳಿಸಿಕೊಂಡು ತೋಳುಗಳನ್ನು ಸ್ವಲ್ಪಸ್ವಲ್ಪವಾಗಿ ಕಡಿದುಕೊಳ್ಳುವುವು. ಅನಂತರ ಸ್ವಲ್ಪಸ್ವಲ್ಪವಾಗಿ ಬೆಳೆದು ಮತ್ತೆ 5 ತೋಳುಗಳುಳ್ಳ ಜೀವಿಗಳಾಗುವುವು. ತನಗೆ ತಾನೇ ತನ್ನ ತೋಳುಗಳನ್ನು ಕಡಿದುಕೊಳ್ಳುವುದು ಈ ಪ್ರಾಣಿಗೆ ಸ್ವಾಭಾವಿಕ. ಕಡಿದುಹೋದ ಒಂದು ತೋಳು ಕೆಲವು ವೇಳೆ ಪೂರ್ಣವಾದ ಜೀವಿಯಾಗುವುದುಂಟು. ಇದು ಒಂದು ರೀತಿಯ ಪುನರುತ್ಪಾದನೆಯೆಂದು ಕರೆಯಬಹುದು.

ಓಫಿಯೂರಾಯ್ಡಿಯ ವರ್ಗದಲ್ಲಿ 4 ಉಪವರ್ಗಗಳಿವೆ. ಲಿಸೋಫಿಯೂರೆ, ಸ್ಟೆಪ್ಟೋಫಿಯೂರೆ, ಕ್ಲಾಡೊಫಿಯೂರೆ, ಜೈಗೋಫಿಯೂರೆ—ಇವೇ ಆ ನಾಲ್ಕು ಉಪವರ್ಗಗಳು. ಲಿಸೋಫಿಯೂರೆಯ ಪ್ರಾಣಿಗಳಲ್ಲಿ ಆಂಬುಲ್ಯಾಕ್ರಲ್ ಕೋಡುಗಳುಳ್ಳ ತೋಳುಗಳಿದ್ದವು. ಈ ಜೀವಿಗಳು ಸೈಲ್ಯೂರಿಯನ್ ಮತ್ತು ಡಿವೋನಿಯನ್ ಯುಗದಲ್ಲಿ ಅಳಿದುಹೋದುವು. ಸ್ಟೆಪ್ಟೋಫಿಯೂರೆಯ ಪ್ರಾಣಿಗಳಲ್ಲಿ ಆಂಬುಲ್ಯಾಕ್ರಲ್ ಫಲಕಗಳು, ಚಲನೆಗೆ ಎಡೆಕೊಡುವ ಕೀಲುಗಳಂತೆ ಜೋಡಣೆಯಾಗಿದ್ದವು. ಕ್ಲಾಡೊಫಿಯೂರೆಯ ಪ್ರಾಣಿಗಳಲ್ಲಿ ಆಂಬುಲ್ಯಾಕ್ರಲ್ ಫಲಕಗಳು ಕೂಡುವೆಡೆಗಳಲ್ಲಿ ಉಸುಬಿನ ಗಡಿಯಾರದಂಥ ಅಂಚುಗಳಿರುವುವು. ತೋಳುಗಳು ಕವಲೊಡೆದಿರಬಹುದು. ಜೈಗೋಫಿಯೂರೆಯ ಪ್ರಾಣಿಗಳಲ್ಲಿ ಫಲಕಗಳು ಹೆಚ್ಚಿನ ಚಲನಕ್ಕೆ ಅವಕಾಶವಿಲ್ಲದಂತೆ ಜೋಡಣೆಯಾಗಿವೆ. ಫಲಕಗಳ ಅಂಚುಗಳಲ್ಲಿ ಸಣ್ಣ ಸಣ್ಣ ದಿಬ್ಬಗಳು ಮತ್ತು ಅವುಗಳ ಅಳವಡಿಕೆಗೆ ಸೂಕ್ತವೆನಿಸುವ ಗುಳಿಗಳಲ್ಲಿ ಇರುವುವು. ಇತ್ತೀಚೆಗೆ ಓಫಿಯೂರಾಯ್ಡಿಯ ವರ್ಗವನ್ನು ಓಫಿಯೂರಿ ಮತ್ತು ಯೂರಿಯೇಲಿ ಎಂಬ ಎರಡು ಗಣಗಳಾಗಿ ವಿಂಗಡಿಸುತ್ತಾರೆ. ಮೊದಲನೆಯದರಲ್ಲಿ 12 ಕುಟುಂಬಗಳೂ ಎರಡನೆಯದರಲ್ಲಿ 4 ಕುಟುಂಬಗಳೂ ಇವೆ.

ಓಫಿಯೂರಾಯ್ಡಿಯ ವರ್ಗದಲ್ಲಿ ಸುಮಾರು 1700 ಪ್ರಭೇದಗಳಿವೆ. ಈ ಸಂಖ್ಯೆ ಎಕಿನೊಡರ್ಮೇಟ ವಂಶದ ಇತರ ವರ್ಗಗಳ ಸಂಖ್ಯೆಗಿಂತ ಬಹಳ ಹೆಚ್ಚಿನದಾಗಿದ್ದು ಪೆಡಸು ನಕ್ಷತ್ರಗಳು ಉಳಿದ ಎಕಿನೊಡರ್ಮ್ ಪ್ರಾಣಿಗಳಿಗಿಂತ ಬಹು ಯಶಸ್ವಿ ಗುಂಪೆಂದು ತೋರಿಸುತ್ತದೆ. ಬಹುಶಃ ಇದಕ್ಕೆ ಕಾರಣ ಅವುಗಳ ಪುಟ್ಟಗಾತ್ರ ಮತ್ತು ನಿಶಾಚರ ಸ್ವಭಾವ. ಇದರಿಂದಾಗಿ ಇವು ಬೇರೆ ಪ್ರಾಣಿಗಳ ಗಮನದಿಂದ ತಪ್ಪಿಸಿಕೊಂಡಿವೆ. ಪ್ರಪಂಚದ ಎಲ್ಲ ಸಾಗರಗಳಲ್ಲಿಯೂ ಹೇರಳವಾಗಿ ಕಾಣಬರುವ ಇವು ಬಹು ಚುರುಕಾದ ಪ್ರಾಣಿಗಳು. ಮುಖ್ಯವಾದ ಕೆಲವು ಉದಾಹರಣೆಗಳು : ಓಫಿಯೋನೇಮಿಸ್ ಮಾರ್ಶೊರೇಟ ಎಂಬುವು ಸಮುದ್ರದ ತಳದಲ್ಲಿ ಮರಳಿನಲ್ಲಿರುತ್ತವೆ. ಓಫಿಯಾಕ್ಟಿಸ್ ಸವಿನಿ, ಓಫಿಯೋಫ್ರಾಗ್ಮಸ್ ರೆಲಿಕ್ಟಸ್, ಓಫಿಯೋಕೋಮ ಸ್ಕೋಲೊಪೆಂಡ್ರಿನ ಮತ್ತು ಓಫಿಯೋತ್ರಿಕ್ಸ್ ಹಿರ್ಸುಟ—ಇವು ಭಾರತದ ಕೃಸಾಡೈ ಮತ್ತು ಪಾಂಬನ್ ಸಮುದ್ರಗಳಲ್ಲಿ ಜೀವಿಸುವುವು. ಆಸ್ಟರೋನಿಕ್ಸ್, ಓಫಿಯೊಲೆಪಿಸ್, ಓಫಿಯೊಮ್ಯೂಸಿಯಮ್ ಗಾರ್ಗನೊಸಿಫ್ಯಾಲಸ್ ಮುಂತಾದುವು ಪ್ರಪಂಚದ ಬೇರೆಡೆ ದೊರಕುವ ಕೆಲವು ಮುಖ್ಯ ಜಾತಿಗಳು.

(ಬಿ.ಎ.ಆರ್.)

**ಓಫಿಯೋಗ್ಲಾಸಮ್ :** ಓಫಿಯೋಗ್ಲಾಸೇಲಿಸ್ ಗಣದ ಓಫಿಯೋಗ್ಲಾಸೇಸಿ ಕುಟುಂಬಕ್ಕೆ ಸೇರಿದ ಒಂದು ಸಣ್ಣ ಜರಿಸಸ್ಯ. ಇದನ್ನು ಹಾವಿನ ನಾಲಿಗೆ ಜರಿಸಸ್ಯ ಎಂದು ಕರೆಯುವುದು ವಾಡಿಕೆ. ಸುಮಾರು ನಲವತ್ತು ಪ್ರಭೇದಗಳಿರುವ ಈ ಸಸ್ಯ ಹೆಚ್ಚಾಗಿ ಉಷ್ಣವಲಯದ ಕಾಡುಗಳಲ್ಲಿ ಬೆಳೆಯುತ್ತದೆ. ಆದರೆ ಸಮಶೀತೋಷ್ಣವಲಯದಲ್ಲಿ ಬೆಳೆಯುವ ಪ್ರಭೇದಗಳು ಇಲ್ಲದಿಲ್ಲ. ಕೆಲವನ್ನು ಬಿಟ್ಟು ಮಿಕ್ಕ ಎಲ್ಲ ಪ್ರಭೇದಗಳು ಸಸ್ಯಸಂಬಂಧವಾದ ಗೊಬ್ಬರ ಹೆಚ್ಚಾಗಿರುವ ನೆಲದಲ್ಲಿ ಬೆಳೆಯುತ್ತವೆ. ಓ.ಪೆಂಡುಲಮ್ ಪ್ರಭೇದ ಅಪ್ಪುಸಸ್ಯವಾಗಿ ಮರಗಳ ಕಾಂಡ ಮತ್ತು ಕೊಂಬೆಗಳ ಮೇಲೆ ಬೆಳೆಯುತ್ತದೆ. ಓ.ಪಾಮೇಟಮ್ ಎಂಬ ಪ್ರಭೇದ ಬೇರು ಬಿಟ್ಟಿರುವ ಮರದ ಕಾಂಡಗಳ ಮೇಲೆ ಬೆಳೆಯುತ್ತದೆ. ಓಫಿಯೊಗ್ಲಾಸಮ್ ಸಸ್ಯದ ಜೀವನದಲ್ಲಿ ಎಲ್ಲ ಜರಿಗಿಡಗಳಲ್ಲಿರುವಂತೆ ಸ್ಪೋರೋಫೈಟ್ ಮತ್ತು ಗ್ಯಾಮಿಟೊಫೈಟ್ ಎಂಬ ಎರಡು ಅವಸ್ಥೆಗಳುಂಟು. ನಮಗೆ ಕಾಣಬರುವ ಅವಸ್ಥೆಗೆ ಸ್ಪೋರೋಫೈಟ್ ಎಂದು ಹೆಸರು. ಇದರಲ್ಲಿ ಕವಲೊಡೆಯದ, ಚಿಕ್ಕದಾಗಿರುವ, ನೆಲದೊಳಗೆ ಬೆಳೆಯುವ ಪ್ರಕಂದವಿದೆ (ರೈಜೋಮ್). ಇದು ಅಪರೂಪವಾಗಿ ಕವಲೊಡೆದಿರುವುದುಂಟು. ಇದರ ಮೇಲೆ ಬೇರುರೋಮಗಳಿಲ್ಲದ ಹಲವು ಬೇರುಗಳಿವೆ.

ಪ್ರಕಂದದಿಂದ ಸಾಮಾನ್ಯವಾಗಿ ಒಂದು ಬೆಳೆವಣಿಗೆಯ ಋತುವಿನಲ್ಲಿ ಒಂದೇ ಒಂದು ಎಲೆ ಮೂಡುತ್ತದೆ. ಪೂರ್ತಿ ಬೆಳೆದ ಎಲೆಯಲ್ಲಿ ಅಲಗು ಮತ್ತು ತೊಟ್ಟುಗಳಿವೆ. ಎಲೆಯ ಅಲಗು ಅಗಲವಾಗಿ, ಸರಳವಾಗಿ (ಓ.ಪೆಂಡುಲಮ್ ಹೊರತು) ದೀರ್ಘವೃತ್ತಾಕಾರವಾಗಿದೆ. ಎಲೆಯ ನಾಳವಿನ್ಯಾಸ ದ್ವಿದಳಧಾನ್ಯ ಸಸ್ಯಗಳದ್ದನ್ನು ಹೋಲುತ್ತದೆ.

ಎಲೆಯ ಅಲಗು ಮತ್ತು ತೊಟ್ಟು ಸೇರುವ ಜಾಗದಲ್ಲಿ ಒಂದು ಸಣ್ಣದಾದ ಫಲವಂತಿಕೆ ಗೊಂಚಲು ಇದೆ (ಫರ್ಟೈಲ್ ಸ್ಪೈಕ್). ಇದರ ಎರಡೂ ಪಾರ್ಶ್ವದಲ್ಲಿ ಹಲವು ಬೀಜಕಣಕೋಶಗಳು ಒಂದರ ಮೇಲೊಂದರಂತೆ ಜೋಡಣೆಯಾಗಿವೆ. ಬಲಿತ ಬೀಜಕಣಕೋಶದಿಂದ ಪ್ರಸಾರವಾದ ಬೀಜಕಣಗಳು ಸೂಕ್ತ ಪರಿಸರದಲ್ಲಿ ಮೊಳೆತು ಗ್ಯಾಮಿಟೊಫೈಟುಗಳಾಗುತ್ತವೆ. ಗ್ಯಾಮಿಟೊಫೈಟುಗಳಿಗೆ ಬಣ್ಣವಿಲ್ಲ. ನೆಲದೊಳಗೆ ಪೂತಿಜನ್ಯ ಸಸ್ಯಗಳಂತೆ ಬೆಳೆಯುವ ಇವುಗಳಲ್ಲಿ ಹೆಣ್ಣು ಮತ್ತು ಗಂಡು ಜನನೇಂದ್ರಿಯಗಳಿರುತ್ತವೆ. ಇವುಗಳಿಂದ ಬಂದ ಗಂಡು ಮತ್ತು ಹೆಣ್ಣು ಜೀವಾಣುಗಳು ಪರಸ್ಪರ ಕೂಡಿ ಮುಂದೆ ಸ್ಪೋರೋಫೈಟುಗಳನ್ನು ಉತ್ಪತ್ತಿಮಾಡುತ್ತವೆ. ಹೀಗೆ ಜೀವಚಕ್ರ ಪೂರ್ತಿಯಾಗುತ್ತದೆ.

ಭಾರತದಲ್ಲಿ ಓಫಿಯೋಗ್ಲಾಸಮ್ಮಿನ ಏಳು ಪ್ರಭೇದಗಳಿವೆ. ಅವುಗಳಲ್ಲಿ ಓ.ವಲ್ಗೇಟಮ್, ಓ.ಪೆಂಡುಲಮ್ ಮತ್ತು ಓ.ರೆಟಿಕ್ಯುಲೇಟಮ್ ಮುಖ್ಯವಾದುವು.

ಓ.ವಲ್ಗೇಟಮ್ : ಹಿಮಾಲಯ, ಬಿಹಾರ, ಅಸ್ಸಾಂ ಮತ್ತು ಅಣ್ಣಾಮಲೈ ಬೆಟ್ಟಗಳಲ್ಲಿ 2,700 ಮೀಟರ್‌ಗಳ ವರೆಗೆ ಹರಡಿದೆ. ಈ ಗಿಡ ಪೂತಿನಾಶಕ, ಶುದ್ಧಿಕಾರಕ, ರಕ್ತಬಂಧಕ (ಸ್ಟಿಪ್ಟಿಕ್). ಅಲ್ಲದೆ ಗಾಯ ವಾಸಿಮಾಡುವ ಗುಣಗಳನ್ನೂ ಹೊಂದಿದೆ. ಈ ಸಸ್ಯದಿಂದ ಒಂದು ಬಗೆಯ ಅಂಟಾದ ಕಷಾಯವನ್ನು ತಯಾರಿಸಬಹುದು. ಅದನ್ನು ಗಂಟಲ ಊತ, ಎದೆಸೆಳವುಗಳಲ್ಲಿ ಹೆಚ್ಚಾಗಿ ಬಳಸುತ್ತಾರೆ. ಕಷಾಯವನ್ನು ಬಿಸಿ ಮಾಡಿ ದಕ್ಷಿಣ ಆಫ್ರಿಕದ ಸೂಟೊ ಜನಾಂಗದವರು ಹುಣ್ಣುಗಳಿಗೆ ಹಚ್ಚುತ್ತಾರೆ.

ಓ.ಪೆಂಡುಲಮ್ ಎಂಬುದು ಮುಖ್ಯವಾಗಿ ಅಸ್ಸಾಮಿನ ಕಾಡುಗಳಲ್ಲಿ ಬೆಳೆಯುತ್ತದೆ. ಕೊಬ್ಬರಿ ಎಣ್ಣೆಯೊಂದಿಗೆ ಮಿಶ್ರಮಾಡಿ ತಯಾರಿಸಿದ ಎಲೆಯ ಮುಲಾಮು ಕೂದಲು ಬೆಳೆಯಲು ಸಹಕಾರಿ.

ಓ.ರೆಟಿಕ್ಯುಲೇಟಮ್ ಪ್ರಭೇದ ಮಸ್ಸೂರಿ, ಬಿಹಾರ, ಬಂಗಾಳ, ಅಸ್ಸಾಂ ಮತ್ತು ದಕ್ಷಿಣ ಭಾರತದಲ್ಲಿ ಬೆಳೆಯುತ್ತದೆ. ಇಂಡೋನೇಷಿಯದಲ್ಲಿ ಈ ಪ್ರಭೇದವನ್ನು ತರಕಾರಿಯಾಗಿ ಉಪಯೋಗಿಸುವುದುಂಟು. ಮೈಸೂರು ರಾಜ್ಯದಲ್ಲಿ, ರಂಗನತಿಟ್ಟು ಪಕ್ಷಿಧಾಮ ಮತ್ತು ಮಲೆನಾಡುಗಳಲ್ಲಿ ಓಫಿಯೋಗ್ಲಾಸಮ್ಮಿನ ಕೆಲವು ಪ್ರಭೇದಗಳು ಕಾಣಬರುತ್ತವೆ. (ಎಸ್.ಆರ್.ಜಿ.)

**ಓಫ್ರಿಸ್ :** ಆರ್ಕಿಡೇಸಿ ಕುಟುಂಬಕ್ಕೆ ಸೇರಿದ ಒಂದ ಸಸ್ಯಜಾತಿ. ಇದರಲ್ಲಿ ಸುಮಾರು 30 ಪ್ರಭೇದಗಳಿವೆ. ಇವು ಪಶ್ಚಿಮ ಏಷ್ಯ, ಉತ್ತರ ಆಫ್ರಿಕ ಪ್ರದೇಶಗಳ ವಾಸಿಗಳು. ಭೂಮಿಯ ಮೇಲೆ ಮೂಲಿಕೆಗಳ ರೂಪದಲ್ಲಿ ಬೆಳೆಯುತ್ತವೆ. ಇವುಗಳಲ್ಲಿ ಎಲೆಗಳು ಗಿಡದ ಬುಡದಲ್ಲಿ ನೆಲದ ಮೇಲೆ ಹರಡಿಕೊಂಡಂತೆ ವರ್ತುಲಾಕಾರದಲ್ಲಿ ಜೋಡಣೆಗೊಂಡಿರುತ್ತವೆ. ಮಧ್ಯದಿಂದ ಒಂದು ಉದ್ದವಾದ ಕಾವುಳ್ಳ (ದಿಂಡು) ಹೂಗೊಂಚಲು ಹೊರಟಿರುತ್ತದೆ. ಎಲ್ಲ ಆರ್ಕಿಡ್ ಸಸ್ಯಗಳ ಪುಷ್ಪಗಳ ಗುಣಗಳೂ ಈ ಜಾತಿಯ ಗಿಡದ ಪುಷ್ಪದಲ್ಲೂ ಕಂಡುಬರುತ್ತವೆ. ಈ ಜಾತಿಯ ಗಿಡಗಳಲ್ಲಿ ಸ್ವಪರಾಗಸ್ಪರ್ಶಕ್ರಿಯೆಯನ್ನು ಕಾಣಬಹುದು. ಕೀಟಗಳ ಮುಖಾಂತರ ಪರಾಗ ಪ್ರಸಾರವಾಗದಿದ್ದರೆ ಕೇಸರದಿಂದ ಪರಾಗ ಅದೇ ಹೂವಿನ ಅಂಡಕೋಶದ ಮೇಲ್ಭಾಗಕ್ಕೆ ನೇರವಾಗಿ ಬಿದ್ದು ಶಲಾಕಾಗ್ರಕ್ಕೆ ತಗಲಿಕೊಳ್ಳುತ್ತದೆ. ಹೀಗೆ ಗಟ್ಟಿಯಾಗಿ ತಗಲಿಕೊಳ್ಳುವುದರಿಂದ ಜೋರಾಗಿ ಗಾಳಿ ಬೀಸಿದರೂ ಬಿದ್ದುಹೋಗುವುದಿಲ್ಲ. ಇದರ ಕೆಲವು ಪ್ರಭೇದಗಳಾದ ಓ.ಏಪಿಫೆರ, ಓ.ಅರಾನಿಫೆರ ಮತ್ತು ಓ.ಮಸ್ಸಿಫೆರಗಳ ಹೂಗಳು ಜೇನ್ನೊಣ, ಜೇಡ ಮುಂತಾದ ಕೀಟಗಳನ್ನು ಹೋಲುವುದರಿಂದ ಅವನ್ನು ಕ್ರಮವಾಗಿ ಬೀ ಆರ್ಕಿಡ್, ಸ್ಪೈಡರ್ ಆರ್ಕಿಡ್ ಹಾಗೂ ಫ್ಲೈ ಆರ್ಕಿಡ್ ಎಂದೂ ಕರೆಯುವ ವಾಡಿಕೆಯಿದೆ. ಇವುಗಳನ್ನು ತೋಟಗಳಲ್ಲಿ ಅಲಂಕಾರ ಸಸ್ಯಗಳನ್ನಾಗಿ ಬೆಳೆಸುತ್ತಾರೆ. (ಬಿ.ಪಿ.)

**ಓಬವ್ವ :** ಚಿತ್ರದುರ್ಗದ ಹೆಸರನ್ನು ಕೇಳಿದ ಒಡನೆಯೇ ಅಲ್ಲಿನ ಏಳುಸುತ್ತಿನ ಕೋಟೆಯ ನೆನಪಾಗುವುದು ಹೇಗೆ ಸಹಜವೋ ಹಾಗೆಯೇ ಇಂದಿಗೂ ಮನೆಮಾತಾಗಿ ಉಳಿದಿರುವ ಒನಕೆಯ ಕಂಡಿಯ ಓಬವ್ವನ ಪರಾಕ್ರಮವೂ ಕಣ್ಣಮುಂದೆ ಕಟ್ಟಿದಂತಾಗುತ್ತದೆ. ಓಬವ್ವನ ದೇಶಪ್ರೇಮವನ್ನು ಕುರಿತ ಕಥೆ ಹೀಗಿದೆ. ಚಿತ್ರದುರ್ಗದ ಪಾಳೆಯಗಾರರಲ್ಲಿ ಕಡೆಯವನಾದ ಮದಕರಿನಾಯಕನಿಗೂ (ಕ್ರಿ.ಶ. 1753–1778) ಹೈದರನಿಗೂ ನಡೆದ ಕಾಳಗ ಇತಿಹಾಸಪ್ರಸಿದ್ಧವಾಗಿದೆ. ಹೈದರ್ ಈ ಅಭೇದ್ಯ ದುರ್ಗವನ್ನು ತಿಂಗಳುಗಟ್ಟಲೆ ಮುತ್ತಿಗೆ ಹಾಕಿ ಸ್ವಾಧೀನಪಡಿಸಿಕೊಳ್ಳಲಾರದೆ ಹೋದ. ಕಡೆಗೆ ತನ್ನ ಶತ್ರುವನ್ನು ಭೇದೋಪಾಯದಿಂದಲೇ ಗೆಲ್ಲಬೇಕೆಂದು ಬಯಸಿ, ತನ್ನ ಬೇಹುಗಾರರನ್ನು ಕರೆದು ಕೋಟೆಯ ಕಳ್ಳದಾರಿಗಳನ್ನು ಪತ್ತೆಮಾಡಿ ತಿಳಿಸಬೇಕೆಂದು ಆಜ್ಞೆಮಾಡಿದ. ವೇಷಧಾರಿಗಳಾದ ಆ ಬೇಹುಗಾರರು ಕೋಟೆಯ ಸುತ್ತಮುತ್ತಲೂ ಸುಳಿದಾಡುತ್ತಿರುವಾಗ, ಒಂದು ಪಾರ್ಶ್ವದಲ್ಲಿ ಒಬ್ಬ ಹೆಂಗಸು ಮೊಸರಿನ ಮಡಕೆಯನ್ನು ತಲೆಯ ಮೇಲೆ ಹೊತ್ತುಕೊಂಡು ಆ ಕೋಟೆಯ ಕಡೆ ನಡೆದು ಅದೃಶ್ಯಳಾದದ್ದು ಗಮನಕ್ಕೆ ಬಂತು. ಚಾರರು, ಆ ದಿಕ್ಕಿನಲ್ಲಿ ಎಲ್ಲಿಯೊ ಕಳ್ಳಗಂಡಿಯಿರಬೇಕೆಂದು ತರ್ಕಿಸಿ ಹುಡುಕತೊಡಗಿದಾಗ, ಬಂಡೆಗಳ ಮಧ್ಯೆ ನುಸುಳಿಕೊಂಡು ಹೋಗುವಂತೆ ಒಂದು ಇಕ್ಕಟ್ಟಾದ ಮಾರ್ಗವಿರುವುದು ಸ್ಪಷ್ಟವಾಯಿತು. ಈ ಸುದ್ದಿಯನ್ನು ಕೇಳಿದ ನವಾಬನಿಗೆ ತುಂಬ ಸಂತೋಷವಾಯಿತು. ಶತ್ರುಸೈನಿಕರು ಒಬ್ಬೊಬ್ಬರಾಗಿ ಆ ದಾರಿಯ ಮೂಲಕ ಒಳಕ್ಕೆ ಹೋಗಲು ನಿಶ್ಚಯಿಸಿಕೊಂಡರು.

ಆ ಕಳ್ಳದಾರಿಯ ಒಳಭಾಗಕ್ಕೆ ಸ್ವಲ್ಪ ದೂರದಲ್ಲಿಯೇ ಒಂದು ಕೊಳವೂ ಕಾವಲುಗಾರನ ಒಂದು ಬತೇರಿಯೂ ಇದ್ದುವು. ಸರ್ಪಗಾವಲು ಕಾಯುತ್ತಿದ್ದ ಕಾವಲುಗಾರ ಸ್ವಲ್ಪ ಬಿಡುವು ಮಾಡಿಕೊಂಡು ತನ್ನ ಗುಡಿಸಿಲಿನಲ್ಲಿ ಊಟಮಾಡುತ್ತಿರುವಾಗ್ಗ ಅವನ ಹೆಂಡತಿ ಓಬವ್ವ ನೀರು ತರಲೆಂದು ಕೊಳದ ಬಳಿಗೆ ಬಂದಳು. ಆ ವೇಳೆಗೆ ಕಳ್ಳಗಂಡಿಯ ಸಮೀಪದಲ್ಲಿ ಶತ್ರುಸೈನಿಕರು ಹೊಂಚುಹಾಕಿ, ಪಿಸಿಪಿಸಿ ಮಾತುಗಳನ್ನಾಡುತ್ತಿದ್ದುದು ಅವಳಿಗೆ ಕೇಳಿಸಿತು. ಆಕೆಗೆ ಆ ಸೂಕ್ಷ್ಮದ ಅರಿವಾಗಿ, ಕೂಡಲೆ ಗುಡಿಸಿಲಿಗೆ ತೆರಳಿ ಒಂದು ಒನಕೆಯನ್ನು ತೆಗೆದುಕೊಂಡು ಬಂದು ಆ ಕಳ್ಳಗಂಡಿಯ ಬಳಿ ನಿಂತಳು. ಅತ್ತ ಶತ್ರುಸೈನಿಕರು ಒಬ್ಬೊಬ್ಬರಾಗಿ ನುಸುಳಿ ಬರುವುದೇ ತಡ, ಓಬವ್ವ ಅವರ ತಲೆಯನ್ನು ಒನಕೆಯಿಂದ ಹೊಡೆದು ಕೆಡವುತ್ತಿದ್ದಳು. ಈ ಹತ್ಯೆ ಕೆಲಕಾಲ ಹೀಗೆಯೇ ಸಾಗಿತು. ಓಬವ್ವನ ಗಂಡ ಮನೆಯಲ್ಲಿ ತನ್ನ ಹೆಂಡತಿಯನ್ನು ಕಾಣದೆ ಹುಡುಕಿಕೊಂಡು ಕಳ್ಳಗಂಡಿಯ ಹತ್ತಿರಕ್ಕೆ ಬಂದಾಗ ಆಕೆಯ ಮುಂದೆ ಬಿದ್ದಿದ್ದ ಹೆಣದ ರಾಶಿಯನ್ನೂ ಹರಿಯುತ್ತಿದ್ದ ಕೆನ್ನೀರಿನ ಕಾಲುವೆಯನ್ನೂ ಕಂಡು ಕಂಗೆಟ್ಟ. ಆಕೆಯ ಹೆಸರು ಹಿಡಿದು ಕೂಗುತ್ತ ಮುಂದುವರಿಯಲು, ವೀರಾವೇಶದಲ್ಲಿ ಮೈಮರೆತ್ತಿದ್ದ ಓಬವ್ವ ತನ್ನ ಗಂಡನನ್ನೂ ಹೊಡೆಯುವುದರಲ್ಲಿದ್ದಳು. ಗಂಡ ದೂರ ಸರಿದು, ಕೆಲಸ ಕೆಟ್ಟಿತೆಂದು ಎಣಿಸಿ ಕೂಡಲೆ ಕಹಳೆಯನ್ನು ಊದಿದ. ಆ ಎಚ್ಚರಿಕೆಯ ದನಿಯನ್ನು ಕೇಳಿದ ಒಡನೆಯೇ ಮದಕರಿನಾಯಕನ ಸೈನಿಕರು ಅತ್ತ ಧಾವಿಸಿಬಂದರು. ಶತ್ರುಸೈನಿಕರೊಂದಿಗೆ ಯುದ್ಧ ಮೊದಲಾಯಿತು. ಆ ಗೊಂದಲದಲ್ಲಿ ಶತ್ರುಸೈನಿಕನೊಬ್ಬನ ಪೆಟ್ಟಿಗೆ ಸಿಕ್ಕಿ ಓಬವ್ವ ಹತಳಾದಳು. ಮದಕರಿನಾಯಕನ ಆಳುಗಳ ಕೈಮೇಲಾಗಲು ಶತ್ರುಗಳು ಮತ್ತೆ ಹಿಮ್ಮೆಟ್ಟಿದರು. ಕ್ಷಣಮಾತ್ರದಲ್ಲಿ ಅಸದೃಶವಾದ ಕೆಚ್ಚನ್ನು ತೋರಿ ಕಾಳಗದಲ್ಲಿ ಬಲಿಯಾದ ಓಬವ್ವನ ಸಲುವಾಗಿ ಎಲ್ಲರೂ ಕಣ್ಣೀರು ಸುರಿಸಿದರು. ಕಾವಲುಗಾರನ ಹೆಂಡತಿಯಾದ ಓಬವ್ವನ ಆ ಪರಾಕ್ರಮದ ಕುರುಹಾಗಿ ಆ ಕಳ್ಳಗಂಡಿಗೆ ಒನಕೆಯ ಕಂಡಿ ಎಂಬ ಹೆಸರು ಇಂದಿಗೂ ಪ್ರಚಲಿತವಾಗಿದೆ. ಈ ಹೆಣ್ಣುಗಲಿಯನ್ನು ಕುರಿತು ಅನೇಕರು ಕನ್ನಡದಲ್ಲಿ ಕಥೆ ಕವಿತೆಗಳನ್ನು ಬರೆದಿರುತ್ತಾರೆ. ಅವುಗಳಲ್ಲಿ ಜಿ. ವರದರಾಜರಾಯರ ಕಥನಕವನ ತುಂಬ ಸೊಗಸಾಗಿದೆ. (ಎ.ಜಿ.)

**ಓಬೆರಾನ್ :** ಯುರೇನಸ್ ಗ್ರಹದ ಅತಿದೂರದ ಉಪಗ್ರಹ. ಸರ್ ವಿಲಿಯಂ ಹರ್ಷೆಲ್ ಎಂಬ ಖಗೋಳವಿಜ್ಞಾನಿ ಇದರ ಇರವನ್ನು 1787ರಲ್ಲಿ ಕಂಡ. ಮಾತೃಗ್ರಹದಿಂದ ಓಬೆರಾನಿನ ಸರಾಸರಿ ದೂರ 3,64,000 ಮೈಲಿಗಳು. ಒಂದು ಪರಿಭ್ರಮಣೆಯ ಅವಧಿ (ಅಂದರೆ ಉಪಗ್ರಹದ ವರ್ಷ) 13 ದಿ. 11 ಗಂ. 7 ಮಿ. ಓಬೆರಾನಿನ ವ್ಯಾಸ 500 ಮೈಲಿಗಳೆಂದು ಅಂದಾಜು. *

**ಓಮ್, ಜಾರ್ಜ್ ಸೈಮನ್ :** 1787-1854. ಜರ್ಮನ್ ಭೌತಶಾಸ್ತ್ರಜ್ಞ. ವಿದ್ಯುಚ್ಛಕ್ತಿಯ ಕ್ಷೇತ್ರದಲ್ಲಿ ಈತನ ಮೂಲಭೂತ ಸಂಶೋಧನೆಗಳು ಗಮನಾರ್ಹವಾದುವು. ವಿದ್ಯುನ್ಮಂಡಲದ ಬೇರೆ ಬೇರೆ ಭಾಗಗಳಲ್ಲಿ ವಿದ್ಯುಚ್ಚಾಲಕ ಶಕ್ತಿಯ (ಎಲೆಕ್ಟ್ರೋಮೋಟಿವ್ ಫೋರ್ಸ್) ವಿತರಣೆ ; ರೋಧತ್ವ (ರೆಸಿಸ್ಟೆನ್ಸ್), ವಿದ್ಯುತ್ಪ್ರವಾಹ ತೀವ್ರತೆ (ಎಲೆಕ್ಟ್ರಿಕ್ ಕರೆಂಟ್ ಸ್ಟ್ರೆಂಗ್ತ್) ಮತ್ತು ವಿದ್ಯುಚ್ಚಾಲಕ ಶಕ್ತಿ ಇವುಗಳಿಗೆ ಇರುವ ನಿರ್ದಿಷ್ಟ ಸಂಬಂಧವನ್ನು ಪಡೆದು ಅದರ ಸಾಧನೆ—ಇವೇ ಓಮನ ಮುಖ್ಯ ಸಂಶೋಧನೆಗಳು.

ಓಮನ ಜನನ ಜರ್ಮನಿಯ ಎರ್‌ಲಾಂಗೆನ್ ಎಂಬ ಊರಿನಲ್ಲಿ. ಇವನ ತಂದೆ ಒಬ್ಬ ಪ್ರಸಿದ್ಧನಾದ ಮೆಕ್ಯಾನಿಕ್. ತನ್ನ ಮಗನಿಗೆ ವಿಜ್ಞಾನಶಿಕ್ಷಣವನ್ನು ಕೊಡಿಸಬೇಕೆಂದು ಇವನಿಗೆ ಅಪಾರ ಆಸಕ್ತಿ ಇತ್ತು. ಇದರಿಂದ ಓಮನಿಗೆ ಪ್ರಾರಂಭದಿಂದಲೂ ಗಣಿತ ಮತ್ತು ಭೌತಶಾಸ್ತ್ರಗಳಲ್ಲಿ ವ್ಯಾಸಂಗವನ್ನು ಮುಂದುವರಿಸುವುದು ಸಾಧ್ಯವಾಯಿತು. ವಿದ್ಯಾಭ್ಯಾಸ ನಡೆದದ್ದು ಎರ್‌ಲಾಂಗೆನ್ ವಿಶ್ವವಿದ್ಯಾನಿಲಯದಲ್ಲಿ. ಮುಂದೆ 1813ರಿಂದ 1817ರ ವರೆಗೆ ಪಶ್ಚಿಮ ಜರ್ಮನಿಯಲ್ಲಿರುವ ಬ್ಯಾಂಬರ್ಗಿನ ಮಾಧ್ಯಮಿಕ ಶಾಲೆಯೊಂದರಲ್ಲಿ ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರದ ಉಪಾಧ್ಯಾಯನಾಗಿಯೂ 1817ರಿಂದ 1826ರ ವರೆಗೆ ಕೊಲೋನಿನ ಪ್ರೌಢಶಾಲೆಯೊಂದರಲ್ಲಿ ಬೋಧಕನಾಗಿಯೂ

ಕೆಲಸಮಾಡಿದ. ಈ ಕಾಲದಲ್ಲಿ ಇವನು ಪ್ರಕಟಿಸಿದ ವೈಜ್ಞಾನಿಕ ಲೇಖನಗಳಲ್ಲಿ ಬೆಳೆಸಿದ ಹೊಸ ವಾದಗಳಿಗೆ ವೈಜ್ಞಾನಿಕ ಪ್ರಪಂಚದಲ್ಲಿ ಮನ್ನಣೆ ಲಭಿಸಲಿಲ್ಲ. ಆದ್ದರಿಂದ ಓಮ್ ತಲೆತಗ್ಗಿಸುವಂತಾಗಿ ಮುಂದಿನ ಆರು ವರ್ಷಗಳ ವರೆಗೆ ಮನೆ ಮೇಷ್ಟ್ರಾಗಿ ಇಂಗ್ಲೆಂಡಿನಲ್ಲಿಯೂ ಬರ್ಲಿನ್ನಿನ ಮಿಲಿಟರಿ ಅಕೆಡಮಿಯಲ್ಲಿಯೂ ಕೆಲಸಮಾಡಿದ. ಆದರೆ ವಿದ್ಯುತ್ಪ್ರಕರಣದಲ್ಲಿ ಓಮನ ನಿಯಮವೆಂದು ಕರೆಯುವ ನಿಯಮವನ್ನು 1826ರಲ್ಲಿ ಪ್ರಚುರಪಡಿಸಿ ಪ್ರಸಿದ್ಧಿಹೊಂದಿದ. ಇದನ್ನು ಗಮನಿಸಿದ ರಾಯಲ್ ಸೊಸೈಟಿಯು ಕೋಪ್ಲಿ ಪದಕವನ್ನು ನೀಡಿ ಓಮನನ್ನು ಗೌರವಿಸಿತು (1841). ಅಲ್ಲದೇ ಮರುವರ್ಷ (1842) ಓಮನನ್ನು ತನ್ನ ಪರದೇಶದ ಸದಸ್ಯನನ್ನಾಗಿಯೂ ಆರಿಸಿತು. 1833ರಲ್ಲಿ ಇವನನ್ನು ನ್ಯೂರೆನ್‌ಬರ್ಗಿನಲ್ಲಿರುವ ಪಾಲಿಟೆಕ್ನಿಕ್ ಶಾಲೆಯ ನಿಯಂತ್ರಕನನ್ನಾಗಿ ನೇಮಿಸಿದರು. ಮ್ಯೂನಿಚ್ ವಿಶ್ವವಿದ್ಯಾಲಯದ ಭೌತಶಾಸ್ತ್ರದ ಮಹೋಪಾಧ್ಯಾಯ ಪೀಠ ಈತನಿಗೆ 1849ರಲ್ಲಿ ಲಭಿಸಿತು. ಮುಂದಿನ ವರ್ಷಗಳಲ್ಲಿ ಈ ಪೀಠವನ್ನು ಅಲಂಕರಿಸಿದವರು ರಂಟ್‌ಜನ್, ಸಮ್ಮರ್‌ಫೆಲ್ಡ್, ಡೀಬೈ ಮೊದಲಾದ ಸುಪ್ರಸಿದ್ಧ ವಿಜ್ಞಾನಿಗಳೆಂದು ಇಲ್ಲಿ ಸ್ಮರಿಸಬಹುದು. 1852ರ ವರೆಗೆ ಮ್ಯೂನಿಚ್ ವಿಶ್ವವಿದ್ಯಾಲಯದ ಮಹೋಪಾಧ್ಯಾಯ ಪೀಠದಲ್ಲಿಯೇ ಇದ್ದು 1854ರ ಜುಲೈ 7ನೆಯ ತಾರೀಖು ಓಮ್ ನಿಧನ ಹೊಂದಿದ.

ಜೀವನದ ಉತ್ಪಾದಕ ವರ್ಷಗಳಲ್ಲಿ ಹಣಕಾಸಿನ ತೊಂದರೆ ಓಮನಿಗೆ ಬಹಳವಾಗಿದ್ದುದರಿಂದ ಇವನು ಉಪಯೋಗಿಸುತ್ತಿದ್ದ ಪ್ರಾಯೋಗಿಕ ಉಪಕರಣಗಳು ಸಾಕಷ್ಟು ಸೂಕ್ಷ್ಮವಾಗಿರದೆ ಬಹಳ ಒಡ್ಡಾಗಿರುತ್ತಿದ್ದುವು. ಆದ್ದರಿಂದ ಇವನ ಸಂಶೋಧನೆಗಳು ಮೊದಮೊದಲಲ್ಲಿ ಅಪ್ರಧಾನವಾದ ಪ್ರಕಟಣೆಗಳಲ್ಲಿ ಮಾತ್ರ ಕಂಡುಬಂದುವು. ಇವನ ಅತ್ಯಂತ ಮಹತ್ತ್ವಪೂರಿತವಾದ ಕೊಡುಗೆ ವಿದ್ಯುತ್ತು ಏಕಮುಖವಾಗಿ ಹರಿಯುತ್ತಿದ್ದಾಗ ಅದರ ಹರಿವಿನ ಬಗ್ಗೆ ತಿಳಿಯಬಹುದಾದ ಸಂಶೋಧನೆಗಳಿಗೆ ಸಂಬಂಧಿಸಿತ್ತು. ವಿದ್ಯುತ್ತನ್ನು ದ್ರವಗಳ ಮೂಲಕ ಹರಿಸಿ ಅವುಗಳ ವಾಹಕತ್ವವನ್ನು ಅಳೆಯಲು ಇವನು ಅನೇಕ ಪ್ರಯೋಗಗಳನ್ನು ಮಾಡಿದ. ಮುಂದೆ ಇವನ ಆಸಕ್ತಿ ದ್ಯುತಿವಿಜ್ಞಾನ ಮತ್ತು ಶ್ರವಣವಿಜ್ಞಾನಗಳ ಸಂಶೋಧನೆಗಳಿಗೆ ತಿರುಗಿತು. ಅಲ್ಲಿ ಹರಳುಗಳಲ್ಲಾಗುವ ವ್ಯತಿಕರಣವನ್ನು (ಇಂಟರ್‌ಫಿಯರೆನ್ಸ್ ಇನ್ ಕ್ರಿಸ್ಟಲ್ಸ್) ಪ್ರಯೋಗಗಳ ಮೂಲಕ ಈತ ಅಭ್ಯಸಿಸಿದ. ಲೋಹಗಳ ಮೂಲಕ ಸಂಪರ್ಕ ವಿದ್ಯುತ್ತು ಹಾಯುವಾಗ ಅದು ಅನುಸರಿಸುವ ನಿಯಮಗಳನ್ನು ಸಾಧಿಸುವುದು ಹೇಗೆ ಎಂಬ ಗ್ರಂಥವನ್ನು 1826ರಲ್ಲೂ ಏಕಮುಖ ವಿದ್ಯುತ್ಪ್ರವಾಹದ ಗಣಿತೀಯ ಸಂಶೋಧನೆ ಎಂಬ ಗ್ರಂಥವನ್ನು 1827ರಲ್ಲೂ ಪ್ರಕಟಿಸಿದ. ಭೌತಶಾಸ್ತ್ರದ ಆಧಾರ ತತ್ತ್ವಗಳು ಎಂಬುದು ಇವನು ಸಾಯುವ ಮೊದಲು ಪ್ರಕಟಿಸಿದ ಗ್ರಂಥ (1854). ನೋಡಿ—ಓಮನ ನಿಯಮ. (ಸಿ.ಕೆ.ಎ.)

**ಓಮುಗ್ರಂಥಿ :** ನಿಜಗೆಲಸ ಏನೆಂದು ಸರಿಯಾಗಿ ಗೊತ್ತಿರದ, ಚಪ್ಪಟೆಯಾದರೂ ಅಡ್ಡಾದಿಡ್ಡಿಯಾಗಿ, ಮೆತ್ತಗಿರುವ ಗ್ರಂಥಿ (ತೈಮಸ್). ಎದೆಚಕ್ಕೆಯ (ಸ್ಟರ್ನ್‌ಂ) ಹಿಂದೆ, ಉಸಿರ್ನಾಳ, ದೊಡ್ಡ ರಕ್ತನಾಳಗಳು, ಗುಂಡಿಗೆಯ ಕವಚದ ಮುಂದೆ, ಇದರಲ್ಲಿ ಅಸಮಗಾತ್ರದ ಎರಡು ಹಾಲೆಗಳಿವೆ (ಲೋಬ್ಸ್). ಮಾಂಸಾಹಾರಿಗಳಿಗೆ ರುಚಿಕರವಾಗಿ ಮೆದುವಾಗಿ ಮಾಂಸ ತುಂಬಿದ ಅಂಗವಿದು. ಆದ್ದರಿಂದಲೇ ಇದನ್ನೂ ಮಾಂಸಲಿ (ಸ್ವೀಟ್ ಬ್ರೆಡ್) ಎನ್ನುವುದುಂಟು. ಹೊಟ್ಟೆಯೊಳಗೂ ಒಂದು ಮಾಂಸಲಿ (ಪ್ಯಾಂಕ್ರಿಯಾಸ್) ಇರುವುದರಿಂದ ತೈಮಸನ್ನು ಕೊರಳಿನ ಮಾಂಸಲಿ ಎಂದಿದೆ. ವಯಸ್ಸಾದಂತೆಲ್ಲ ಈ ಗ್ರಂಥಿಯ ಗಾತ್ರದಲ್ಲಿ ಬಹಳ ಬದಲಾವಣೆ ಆಗುವುದು. ಆಗತಾನೇ ಹುಟ್ಟಿದ ಕೂಸಿನಲ್ಲಿ ಬಲು ದೊಡ್ಡದಾಗಿ (10–15 ಗ್ರಾಂ ತೂಕ) ಕಾಣುವುದು. ಮೊದಲ ಎರಡು ವರ್ಷಗಳಲ್ಲಿ ಇದರ ಬೆಳೆವಣಿಗೆ ತೀವ್ರ. ವಯಸ್ಸಿಗೆ ಬರುವ ಹೊತ್ತಿಗೆ ತೂಕ ತುತ್ತತುದಿಗೇರುವುದು (40 ಗ್ರಾಂ). ಆಮೇಲೆ ಬರುಬರುತ್ತ ಮುರುಟಿಕೊಳ್ಳುತ್ತ ಹೋಗಿ ಕೊನೆಗೆ ನೆಪಮಾತ್ರವಾಗಿ (ಸುಮಾರು 6 ಗ್ರಾಂ) ಉಳಿದಿರುತ್ತದೆ. ಒಬ್ಬೊಬ್ಬರಲ್ಲೂ ಒಂದೊಂದು ಗಾತ್ರ, ತೂಕಕ್ಕಿರುವುದು. ಅದಕ್ಕದೇ ಹೀಗೆ ಮುರುಟಿಕೊಳ್ಳುವುದರ ಜೊತೆಗೆ, ಇದ್ದಕ್ಕಿದ್ದ ಹಾಗೆ ಸೋಂಕು, ವಿಷವೇರಿಕೆ, ಕಟ್ಟಾ ಉಪವಾಸಗಳಿಂದಲೂ ಹೀಗಾಗುವ ವರದಿಗಳಿವೆ.

ರಚನೆ : ಕೂಡಿಸುವ ಊತಕದ ಕವಚದಿಂದಾದ ಸೂಕ್ಷ್ಮ ವಿಭಾಗಗಳ ಒಳಗಡೆ ಸಾವಿರಾರು ಕಿರುಹಾಲೆಗಳಿರುವುವು (ಲಾಬ್ಯೂಲ್ಸ್). ಇವುಗಳ ಅಡ್ಡಳತೆ 2 ಮಿ.ಮೀ. ಮೀರಿರದು. ಕಿರುಹಾಲೆಗಳಲ್ಲಿನ ಗ್ರಂಥಿ ಹೊರಪದರದಂತಿರುವ ರಗಟೆಯಾಗಿಯೂ (ಕಾರ್ಟೆಕ್ಸ್) ಒಳಗಣ ಕುಸುರಿಯಾಗಿಯೂ (ಮೆಡುಲ) ವಿಂಗಡವಾಗಿ ಕಾಣುವುದು. ಇದರಲ್ಲಿ ಸವಿರ್ಜಾಲಕಣಗಳೂ (ರೆಟಿಕ್ಯುಲೋಸೈಟ್ಸ್) ಹಾಲುರಸಕಣಗಳೂ (ಲಿಂಫೊಸೈಟ್ಸ್) ಇವೆ. ಹಿರಿಯ ಸವಿರ್ಜಾಲಕಣಗಳ ಬಲೆಗಟ್ಟಿನಲ್ಲಿ ಹಾಲುರಸಕಣಗಳು ಸಿಕ್ಕಿಬಿದ್ದಂತಿರುವುವು. ಕಿರುಹಾಲೆಯ ರಗಟೆಯಲ್ಲಿ ಹಾಲುರಸಕಣಗಳು ದಟ್ಟವಾಗಿ ಕಿಕ್ಕಿರಿದಿವೆ. ಕುಸುರಿಯಲ್ಲಿ ಹಾಲುರಸಕಣಗಳಿಗಿಂತಲೂ ಸವಿರ್ಜಾಲಕಣಗಳೇ ಹೆಚ್ಚು. ಬೇರೆಡೆಯ ಸವಿರ್ಜಾಲಕಣಗಳಿಗೂ ಇಲ್ಲಿನವಕ್ಕೂ ಅವುಗಳ ವಿಕಾಸದಲ್ಲಿ ವ್ಯತ್ಯಾಸಗಳಿವೆ. ಪಿಂಡವಿಕಾಸದಲ್ಲಿ ಇಲ್ಲಿನವು ಮೇಲ್ಪೊರೆಯಿಂದ (ಎಪಿತೀಲಿಯಂ) ಬರುವುದೇ ಹೊರತು ಮಿಕ್ಕವಂತೆ ನಡುರಚನಾಂಶದಿಂದ (ಮೀಸೆಂಕೈಮ) ಹುಟ್ಟವು.



ಓಮುಗ್ರಂಥಿ

ಆಕಾರ, ವರ್ತನೆಗಳಲ್ಲೂ ಹಾಲುರಸಮಂಡಲದ ಹಾಲುರಸಕಣಗಳನ್ನೇ ಇವೆಲ್ಲವೂ ಹೋಲುವುವು. ಗ್ರಂಥಿಯ ನಡುಗಡೆಯಲ್ಲಿ ಹ್ಯಾಸಲನ ಗೋಳಕಗಳಿವೆ (ಕಾರ್ಪಸೆಲ್ಸ್). ಇವುಗಳ ಕೆಲಸವೇನೆಂದು ತಿಳಿದಿಲ್ಲ. ಓಮುಗ್ರಂಥಿಗೆ ರಕ್ತನಾಳ ಪೂರೈಕೆ ಅಪಾರ. ಇದು ಮುರುಟಿಕೊಂಡಾಗ ಗ್ರಂಥಿವಸ್ತುವೆಲ್ಲ ಬದಲಾಗಿ ಕೊಬ್ಬುಗೂಡಿರುವುದು. ರಗಟೆಯಲ್ಲಿ ಮೊದಲಾಗಿ ಕುಸುರಿಯಲ್ಲಿ ಕೊನೆಗೊಳ್ಳುತ್ತದೆ. ಕೊನೆಗೆ ಇಡೀ ಗ್ರಂಥಿ ಕೊಬ್ಬುಗೂಡಿ ನಟ್ಟನಡುವೆ ಉಳಿದ ಚೂರಲ್ಲಿ ಹ್ಯಾಸಲನ ಗೋಳಕಗಳಿರುತ್ತವೆ.

ಕೆಲವು ಅಸಹಜತೆಗಳು : ಕೆಲವು ವೇಳೆ ಈ ಗ್ರಂಥಿಯ ಊತಕ (ಟಿಶ್ಯೂ) ಇತರ ಅಂಗಗಳಲ್ಲಿಯೂ ಕಂಡುಬರುವುದು. ಉದಾಹರಣೆಗೆ—1 ಗುರಾಣಿಕ ಗ್ರಂಥಿ ಮತ್ತು ಶ್ವಾಸಕೋಶಗಳಲ್ಲಿ ; 2 ಗ್ರಂಥಿಯ ಒಂದು ಭಾಗ, ಕೆಲವು ವೇಳೆ ಎರಡು ಭಾಗಗಳೂ ಕಿರಿದಾಗಿರಬಹುದು ; 3 ಅಪೂರ್ವವಾಗಿ ಈ ಗ್ರಂಥಿ ಕೆಲವರಲ್ಲಿ ಇಲ್ಲದೆಯೇ ಹೋಗಬಹುದು.

ಹುಟ್ಟು ಅಥವಾ ಭ್ರೂಣಶಾಸ್ತ್ರ (ಎಂಬ್ರಿಯಾಲಜಿ) : ಓಮು ಗ್ರಂಥಿ ಮೂರನೆಯ ಬ್ರಾಂಕಿಯಲ್ ಪೌಚಿನಿಂದ ಉಗಮಗೊಳ್ಳುತ್ತದೆ. ಅದರಲ್ಲಿ ಎರಡು ಎಪಿಥೀಲಿಯಲ್ ಜೀವಕೋಶಗಳಿವೆ. ಇವು ಮೊದಲಿಗೆ ಕೊಳವೆಯಾಕಾರದಲ್ಲಿ ರೂಪ ತಾಳುತ್ತವೆ. ಅನಂತರ ಘನರೂಪ ತಳೆದು ಕೆಳಮುಖವಾಗಿ ಮೀಸೆಂಕೈಮದ ಆವರಣದೊಳಗೆ ಬೆಳೆಯುತ್ತವೆ. ಮೀಸೆಂಕೈಮದ ಲಸಿಕೆಯ ಜೀವಕೋಶಗಳು ಅದರೊಳಗೆ ಪ್ರವೇಶಿಸಿ ಮೊದಲೇ ಇದ್ದ ಒತ್ತುಕಟ್ಟಾದ ಎಪಿಥೀಲಿಯಲ್ ಜೀವಕೋಶಗಳನ್ನು ಬೇರ್ಪಡಿಸುತ್ತವೆ. ಇದರಿಂದಾಗಿ ಘನರೂಪದ ಜೀವಕೋಶಗಳು ಬಲೆಯಾಕಾರವನ್ನು ತಾಳುತ್ತವೆ. ಓಮುಗ್ರಂಥಿಯಲ್ಲಿ ಲಸಿಕೆಯ ಜೀವಕೋಶಗಳು ಮೊಟ್ಟಮೊದಲಿಗೆ ಕಾಣಿಸಿಕೊಳ್ಳುವುದು ಸಾಮಾನ್ಯವಾಗಿ ಭ್ರೂಣಾವಸ್ಥೆಯ ಮೂರನೆಯ ತಿಂಗಳಲ್ಲಿ.

ನಿಜಗೆಲಸ : 1 ಪ್ರತಿರೋಧಕ ಕಾರ್ಯಗಳು : ಪ್ರಾಣಿಗಳ ಮೇಲೆ ನಡೆಸಿದ ಪ್ರಯೋಗಗಳಿಂದ ಮತ್ತು ಮನುಷ್ಯದೇಹದಲ್ಲಿ ನಡೆಸಿದ ವೀಕ್ಷಣೆಗಳಿಂದ ಓಮುಗ್ರಂಥಿ ಪ್ರತಿರೋಧಕ ಶಕ್ತಿಯ ಬೆಳೆವಣಿಗೆಯಲ್ಲಿ ಪ್ರಮುಖಪಾತ್ರವನ್ನು ವಹಿಸುತ್ತದೆಂದು ತಿಳಿದುಬಂದಿದೆ. ಮಗುವಿನ ಜನನಪೂರ್ವದ ಅಥವಾ ಜನನಾಂತರದ ಕೆಲವು ದಿವಸಗಳಲ್ಲಿ ಇದರ ಪ್ರಭಾವ ಶರೀರದಲ್ಲಿ ಕಂಡುಬರುತ್ತದೆ. ಈ ಪ್ರಭಾವ ಕಂಡು ಬರುವ ಕಾಲ ಬೇರೆ ಬೇರೆ ಪ್ರಾಣಿಜಾತಿಗಳಲ್ಲಿ ವ್ಯತ್ಯಾಸ ಹೊಂದುತ್ತದೆ.

ವಯಸ್ಕ ಪ್ರಾಣಿಗಳಲ್ಲಿ ಓಮಗ್ರಂಥಿಯನ್ನು ತೆಗೆದಾಗ ಯಾವ ವಿಶೇಷ ಪರಿಣಾಮ ಉಂಟಾದುದೂ ಕಂಡುಬಂದಿಲ್ಲ. ಆದರೆ ಆಗತಾನೆ ಹುಟ್ಟಿದ ಇಲಿಗಳಲ್ಲಿ ಮತ್ತು ಇತರ ದಂಶಕವರ್ಗದ ಪ್ರಾಣಿಗಳಲ್ಲಿ ಈ ಗ್ರಂಥಿಯನ್ನು ತೆಗೆದುಹಾಕಿದಾಗ ರಕ್ತದಲ್ಲಿ ಮತ್ತು ಲಸಿಕೆಯಲ್ಲಿ ಲಸಿಕೆಯ ಜೀವಕೋಶಗಳು ವಿರಳವಾದುವಲ್ಲದೆ ಊತಕಗಳು ರೋಧವಸ್ತುಗಳನ್ನು (ಆಂಟಿಬಾಡೀಸ್) ಉತ್ಪತ್ತಿಮಾಡುವ ಶಕ್ತಿಯನ್ನು ಕಳೆದುಕೊಂಡುವು; ಮತ್ತು ಚರ್ಮದ ಸ್ವಜಾತಿ ಕಸಿಗೆ (ಹೋಮೋಗ್ರಾಫ್ಟ್) ಅವುಗಳಲ್ಲಿ ವಿರೋಧ ಕಂಡುಬರಲಿಲ್ಲ. ಕ್ರಮೇಣ ಆ ಪ್ರಾಣಿಗಳ ಬೆಳೆವಣಿಗೆ ಕುಗ್ಗಿ ಮೂರು ತಿಂಗಳೊಳಗೆ ಅವು ಸತ್ತುಹೋದುವು. ಮತ್ತೆ ಅದೇ ಬಗೆಯ ಓಮಗ್ರಂಥಿಗಳನ್ನು ಅವುಗಳ ದೇಹಕ್ಕೆ ಕಸಿ ಮಾಡಿದಾಗ ಮೇಲೆ ಹೇಳಿದ ದೋಷಗಳು ಕಡಿಮೆಯಾದುವು. ಇಲ್ಲವೆ ಅದೇ ಜಾತಿಯ ಲಸಿಕೆಯ ಜೀವಕೋಶ ಅಥವಾ ರಕ್ತದ ಜೀವಕೋಶಗಳನ್ನು ಉತ್ಪತ್ತಿಮಾಡುವ ಜೀವಕೋಶಗಳನ್ನು ಈ ಪ್ರಾಣಿಗಳಿಗೆ ಚುಚ್ಚಿದಾಗ ದೋಷಗಳು ಪೂರ್ಣವಾಗಿ ಮಾಯವಾದುದು ಕಂಡುಬಂದಿತು.

ರೋಧಶಕ್ತಿ ಓಮಗ್ರಂಥಿಗೆ ಹೇಗೆ ಪ್ರಾಪ್ತವಾಗುತ್ತದೆಂಬುದು ಖಚಿತವಾಗಿ ತಿಳಿದುಬಂದಿಲ್ಲ. ಈ ಗ್ರಂಥಿಯ ಲಸಿಕೆಯ ಜೀವಕೋಶಗಳು ಲಸಿಕೆಯ ಗ್ರಂಥಿ ಮತ್ತು ಗುಲ್ಮಗಳಿಗೆ ವಲಸೆಹೋಗುತ್ತವೆ. ದೇಹದ ಇತರ ಅಂಗಗಳಲ್ಲಿ ಉತ್ಪತ್ತಿಯಾಗುವ ಲಸಿಕೆಯ ಜೀವಕೋಶಗಳ ಮೇಲೂ ಈ ಗ್ರಂಥಿ ತನ್ನ ಪ್ರಭಾವ ಬೀರಬಹುದು. ಅಲ್ಲದೆ ಇದರಲ್ಲಿ ಒಂದು ಬಗೆಯ ವಸ್ತು (ಹ್ಯೂಮರಲ್ ಫ್ಯಾಕ್ಟರ್) ಉತ್ಪತ್ತಿಯಾಗಿ ಶಕ್ತಿಯನ್ನು ಇತರ ಲಸಿಕೆಯ ಕೇಂದ್ರಗಳಿಗೆ ಒಯ್ಯಬಹುದು.

2 ಒಳಸುರಿಕೆ ಕಾರ್ಯಗಳು (ಎಂಡೋಕ್ರೈನ್ ಫಂಕ್ಷನ್ಸ್): ಲಸಿಕೆಯ ಜೀವಕೋಶಗಳನ್ನು ಉತ್ಪತ್ತಿಮಾಡುವುದಲ್ಲದೇ ಗ್ರಂಥಿಯ ಬೇರೆ ಕಾರ್ಯವೇನೆಂಬುದು ಸರಿಯಾಗಿ ತಿಳಿದುಬಂದಿಲ್ಲ. ಇದು ಚೋದನಿಕಗಳನ್ನು (ಹಾರ್ಮೋನ್ಸ್) ಉತ್ಪತ್ತಿ ಮಾಡುವುದೇ ಇಲ್ಲವೆ ಎಂಬ ವಿಷಯದಲ್ಲಿ ಒಮ್ಮತವಿಲ್ಲ. ಓಮಗ್ರಂಥಿಗೂ ಇತರ ಒಳಸುರಿಕ ಗ್ರಂಥಗಳಿಗೂ ಅನೇಕ ವಿಧವಾದ ಪರಸ್ಪರ ಸಂಬಂಧವಿರುವುದು ಕಂಡುಬಂದಿದೆ. ಜನನಪೂರ್ವದ, ಜನನಾಂತರದ ಹಾಗೂ ವಯಸ್ಕ ಪ್ರಾಣಿಗಳಲ್ಲಿ ಆಡ್ರಿನಲ್ ಕಾರ್ಟಿಕಲ್ ಗ್ರಂಥಿಯ ಕಾರ್ಯಚಟುವಟಿಕೆಗೂ ಓಮಗ್ರಂಥಿಯ ಗಾತ್ರಕ್ಕೂ ಪ್ರತಿಲೋಮ ಸಂಬಂಧವಿರುವುದು (ಇನ್‌ವರ್ಸ್ ರಿಲೇಶನ್) ಕಂಡುಬಂದಿದೆ. ಆಡ್ರಿನಲ್ ಕಾರ್ಯಚಟುವಟಿಕೆ ಕುಗ್ಗಿದಾಗ ಇವುಗಳ ಗಾತ್ರ ಹೆಚ್ಚಾಗುತ್ತದೆ. ನಿರ್ವೀರ್ಯಕರಣದಿಂದ (ಕ್ಯಾಸ್ಟ್ರೇಶನ್) ಅಥವಾ ಗುರಾಣಿಕ ಗ್ರಂಥಿಯನ್ನು ತೆಗೆದು ಹಾಕುವುದರಿಂದ ಓಮಗ್ರಂಥಿಯ ಗಾತ್ರ ದೊಡ್ಡದಾಗುತ್ತದೆ. ಕೆಲವು ಪ್ರಾಣಿಗಳಲ್ಲಿ ಓಮಗ್ರಂಥಿಯನ್ನು ತೆಗೆದಾಗ ಜನನಾಂಗಗಳು, ಆಡ್ರಿನಲ್ ಕಾರ್ಟೆಕ್ಸ್ ಮತ್ತು ಗುರಾಣಿಕ ಗ್ರಂಥಿಗಳು ದೊಡ್ಡದಾಗುತ್ತವೆ ಮತ್ತು ದೈಹಿಕ ಬೆಳೆವಣಿಗೆ ಕುಗ್ಗುತ್ತದೆ. ಪ್ರಾಯಪೂರ್ವದಲ್ಲಿ ಈ ಗ್ರಂಥಿಯ ಬೆಳೆವಣಿಗೆ ಅತಿ ಹೆಚ್ಚಾಗಿರುವುದರಿಂದ ದೈಹಿಕ ಬೆಳೆವಣಿಗೆಯಲ್ಲಿ ಇದರ ಪಾತ್ರವಿರಬಹುದೆಂದು ಕೆಲವರು ಅಭಿಪ್ರಾಯಪಡುತ್ತಾರೆ.

ರೋಗಗಳು : ಓಮಗ್ರಂಥಿಯಿಂದ ದೇಹದ ಆರೋಗ್ಯದಲ್ಲಾಗುವ ಏರಿಳಿತಗಳು ಅಷ್ಟೇನೂ ಗಮನಾರ್ಹವಾದುವಲ್ಲ. ವಿರಳವಾಗಿ ಗ್ರಂಥಿಯಲ್ಲಿ ಗಂಟುಗಳು (ಟ್ಯೂಮರ್ಸ್) ಮತ್ತು ಹುಣ್ಣುಗಳು ಕಾಣಿಸಿಕೊಳ್ಳಬಹುದು. ಮಯಸ್ತೀನಿಯ ಕಾಯಿಲೆಗೂ ಇದು ಕೆಲವು ವೇಳೆ ಕಾರಣವಾಗಬಹುದು. ಓಮಗ್ರಂಥಿ ಉಸಿರುಗಟ್ಟುವಿಕೆಯಿಂದುಂಟಾಗುವ ಸಾವಿಗೆ ಕಾರಣವೆಂದು ಹಿಂದೆ ತಿಳಿದಿದ್ದರು. ಆದರೆ ಇದನ್ನು ದೃಢಪಡಿಸುವ ಖಚಿತ ಸಾಕ್ಷಿಗಳಿಲ್ಲ.

ಪ್ರಾಣಿಗಳಲ್ಲಿ ಈ ಗ್ರಂಥಿಯ ಅಭಾವದಿಂದ ಅಸಹಜವಾದ ಪ್ರತಿರೋಧಕ ಪ್ರತಿಕ್ರಿಯೆ (ಅಬ್‌ನಾರ್ಮಲ್ ಇಮ್ಯೂನ್ ರೆಸ್ಪಾನ್ಸಸ್) ಕಂಡುಬರುವುದೆಂದು ಈಚಿನ ಸಂಶೋಧನೆಗಳಿಂದ ತಿಳಿದುಬಂದಿದೆ. ಇದರ ಹಿಗ್ಗುವಿಕೆ ಮತ್ತು ಕುಗ್ಗುವಿಕೆಗಳು ದೈಹಿಕ ಆರೋಗ್ಯದಲ್ಲಿ ವಿವಿಧ ರೀತಿಯ ಬದಲಾವಣೆಗಳನ್ನು ತರುತ್ತವೆಯಾದರೂ ಅವುಗಳ ಕಾರ್ಯಕಾರಣಸಂಬಂಧ ನಿರ್ದಿಷ್ಟವಾಗಿಲ್ಲ.

ಅನಾವಶ್ಯಕ ಬೆಳೆವಣಿಗೆ ಅಥವಾ ಗಂಟುಗಳು : ಓಮಗ್ರಂಥಿಯ ಗಂಟುಗಳಿಗೆ ಥೈಮೋಮಾಸ್ ಎಂದು ಹೆಸರು. ಅವುಗಳಲ್ಲಿ ಕಂಡುಬರುವ ಪ್ರಮುಖ ಜೀವಕೋಶಗಳ ಆಧಾರದ ಮೇಲೆ ಗಂಟುಗಳನ್ನು ವಿಭಜಿಸಲಾಗುತ್ತದೆ. 20 ವರ್ಷ ವಯಸ್ಸಿಗಿಂತ ಕಡಿಮೆಯ ವ್ಯಕ್ತಿಗಳಲ್ಲಿ ಇವು ಕಾಣಿಸುವುದು ವಿರಳ. ಈ ಗಂಟುಗಳು ದೇಹದ ಇತರ ದೂರದ ಅಂಗಗಳಿಗೆ ವ್ಯಾಪಿಸುವುದು ಕಡಿಮೆ. ಆದರೆ ಅಕ್ಕಪಕ್ಕದ ಅಂಗಗಳು ಇದರ ಬಾಧೆಗೊಳಗಾಗಬಹುದು. ಈ ರೋಗದ ಚರ್ಯೆಯನ್ನು ಕೇವಲ ಅದರ ಜೀವಕೋಶಗಳ ರಚನೆಯ ಆಧಾರದಿಂದಲೇ ವಿವರಿಸಲಾಗುವುದಿಲ್ಲ. ಈ ಗಂಟುಗಳು ಕಾಣಿಸಿಕೊಂಡಾಗ ಎದೆಯ ಭಾಗದ ಅಂಗಗಳ ಮೇಲೆ ಒತ್ತಡವುಂಟಾದ ಅನುಭವವಾಗುತ್ತದೆ. ಮತ್ತೆ ಕೆಲವು ಬಾರಿ ಈ ಚಿಹ್ನೆಗಳು ಕಾಣಿಸಿಕೊಳ್ಳದೆಯೂ ಇರಬಹುದು. ಆಗ ಎಕ್ಸ್‌ಕಿರಣ ಪರೀಕ್ಷೆಯಿಂದ ಅದನ್ನು ಪತ್ತೆಹಚ್ಚಬಹುದು. ಶಸ್ತ್ರಕ್ರಿಯೆಯಿಂದ ತೆಗೆದುಹಾಕಿದಾಗ ಅದು ಇತರ ಭಾಗಗಳಿಗೆ ವ್ಯಾಪಿಸದಿದ್ದಲ್ಲಿ ದೇಹಕ್ಕೆ ಯಾವ ಅಪಾಯವೂ ಉಂಟಾಗದು.

ದೇಹದ ಇತರ ಅನೇಕ ಕಾಯಿಲೆಗಳ ಜೊತೆಗೆ ಈ ಗಂಟುಗಳೂ ಇರಬಹುದು. ಅವುಗಳ ನಡುವಣ ಸಂಬಂಧ ಕೇವಲ ಆಕಸ್ಮಿಕವಾಗಿರಬಹುದು ; ಕೆಲವು ವೇಳೆ ಆಕಸ್ಮಿಕವಲ್ಲದೆಯೂ ಇರಬಹುದು. 10%–20% ಮಯಸ್ತೀನಿಯ ಗ್ರೆವಿಸಿನಿಂದ ನರಳುತ್ತಿರುವ ರೋಗಿಗಳಲ್ಲಿ ಓಮಗ್ರಂಥಿಯ ಗಂಟುಗಳು ಕಂಡುಬಂದಿವೆ. ಕೆಲವರಲ್ಲಿ ಗ್ರಂಥಿಗಳು ದೊಡ್ಡದಾಗಿರುವುದೂ ಉಂಟು. ಈ ಗಂಟುಗಳನ್ನು ಶಸ್ತ್ರಚಿಕಿತ್ಸೆಯಿಂದ ತೆಗೆದಾಗ ಕಾಯಿಲೆಯಲ್ಲಿ ಗುಣ ಕಂಡುಬಂದಿತಲ್ಲದೆ ಕೆಲವರಿಗೆ ಪೂರ್ತಿ ವಾಸಿಯಾಗಿರುವುದೂ ಉಂಟು. ಈ ರೋಗದಿಂದ ಬಳಲುತ್ತಿರುವ 40 ವರ್ಷದ ಕೆಳಗಿನ ಹೆಂಗಸರಲ್ಲಿ ಓಮಗ್ರಂಥಿಯ ಗಂಟುಗಳಿಲ್ಲದಿದ್ದರೂ ಗ್ರಂಥಿಯನ್ನು ತೆಗೆದುಹಾಕಿದಾಗ ಕಾಯಿಲೆ ಗುಣವಾಗಿರುವುದು ಕಂಡುಬಂದಿದೆ. ಅಪರಿಹಾರ್ಯವಾದ ರಕ್ತಹೀನತೆಯಲ್ಲೂ ಓಮಗ್ರಂಥಿಯ ಪಾತ್ರವಿದೆಯೆಂಬುದು ಕಂಡುಬಂದಿದೆ. ಈ ಗಂಟುಗಳನ್ನು ತೆಗೆದಾಗ ಮೂರರಲ್ಲಿ ಒಂದು ಭಾಗ ರೋಗಿಗಳಲ್ಲಿ ಗುಣ ಕಂಡುಬಂದಿತು. ರಕ್ತದ ಏಡಿಗಂತಿಗೆ ಈ ಗ್ರಂಥಿ ಕೆಲವು ವೇಳೆ ಕಾರಣವಾಗಬಹುದೆಂದು ಪ್ರಾಣಿಗಳಲ್ಲಿ ನಡೆಸಿದ ಸಂಶೋಧನೆಯಿಂದ ತಿಳಿದುಬಂದಿದ್ದರೂ ಮನುಷ್ಯನ ವಿಷಯದಲ್ಲಿ ಅದು ಖಚಿತವಾಗಿಲ್ಲ.

ಥೈಮೊಲಿಪೊಮ : ಓಮಗ್ರಂಥಿಯಲ್ಲಿ ವಿರಳವಾಗಿ ಉಂಟಾಗುವ ಈ ಬಗೆಯ ಗಂಟು ವಿಶೇಷವಾಗಿ 10–15 ವರ್ಷದ ಮಕ್ಕಳಲ್ಲಿ ಕಂಡುಬರುತ್ತದೆ. ಇದು ಕೊಬ್ಬು ಮತ್ತು ಓಮಗ್ರಂಥಿಯ ಜಾಲಗಳಿಂದ ಕೂಡಿದೆ. ಇದಕ್ಕೆ ಹೊರಕವಚ ಇದೆ. ಕೆಮ್ಮು, ದಮ್ಮು, ಮತ್ತು ನೋವುಗಳಿಗೆ ಇದು ಕಾರಣವಾಗಬಹುದು. ಎಕ್ಸ್ ಕಿರಣ ಪರೀಕ್ಷೆಯ ಮೂಲಕ ಇದನ್ನು ಪತ್ತೆಹಚ್ಚಬಹುದು. ಈ ಗಂಟು ತುಂಬ ದೊಡ್ಡದಾಗಿ ಬೆಳೆದರೂ ಅಷ್ಟೇನು ಅಪಾಯಕಾರಿಯಲ್ಲ.

ಉಸಿರುಗಟ್ಟುವಿಕೆ : ಓಮಗ್ರಂಥಿ ಉಸಿರುಗಟ್ಟುವಿಕೆಗೆ ಕಾರಣವಾಗುತ್ತದೆಂಬ ಭಾವನೆ ಹಿಂದೆ ಇತ್ತು. ಆದರೆ ಸಂಶೋಧನೆಗಳಿಂದ ಅದು ನಿರಾಧಾರವೆನಿಸಿದೆ. ಉಸಿರುಗಟ್ಟುವಿಕೆಯಿಂದಾಗುವ ಸಾವಿಗೆ, ಓಮಗ್ರಂಥಿ ದೊಡ್ಡದಾಗಿದ್ದರೂ, ಬೇರೆಯೇ ಕಾರಣಗಳಿದ್ದುವು. ಕೆಲವು ವೇಳೆ ಚಿಕ್ಕ ಮಕ್ಕಳಲ್ಲಿ, ಓಮಗ್ರಂಥಿ ದೊಡ್ಡದಾಗಿದ್ದು ಶ್ವಾಸನಾಳದ ಮೇಲೆ ಒತ್ತುವುದರಿಂದ ಉಸಿರಾಡಲು ತೊಂದರೆಯಾಗಬಹುದು.

ಹುಟ್ಟಿನಿಂದುಂಟಾಗುವ ಪ್ರತಿರೋಧಕ ಕಾಯಿಲೆಗಳಿಗೆ ಓಮಗ್ರಂಥಿ ಕಾರಣವಿರಬಹುದೆಂದು ಕೆಲವರ ಅಭಿಪ್ರಾಯ. ಇಂಥ ಕಾಯಿಲೆಯಲ್ಲಿ ಎರಡು ವಿಧಗಳಿವೆ : 1 ಹುಡುಗರಲ್ಲಿ ಮಾತ್ರ ಕಂಡುಬರುವಂಥದು. 2 ಸ್ವಿಸ್ ಮಾದರಿಯ ಹುಡುಗ ಹುಡುಗಿಯರಲ್ಲಿ ಕಂಡುಬರುವಂಥದು. ಮೊದಲನೆಯದರಲ್ಲಿ ಓಮಗ್ರಂಥಿಗೆ ಸಂಬಂಧಿಸಿದಂತೆ ಯಾವ ದೋಷವೂ ಇರುವುದಿಲ್ಲ. ಆದರೆ ಎರಡನೆಯದರಲ್ಲಿ ಓಮಗ್ರಂಥಿ ಬಹಳ ಕಿರಿದಾಗಿರುತ್ತದೆ. ಜೊತೆಗೆ ಅದರಲ್ಲಿ ಲಸಿಕೆಯ ಜೀವಕೋಶಗಳು ತುಂಬ ಕಡಿಮೆ ಅಥವಾ ಇಲ್ಲದೆಯೇ ಇರಬಹುದು. ಈ ಕಾಯಿಲೆಯುಳ್ಳವರ ದೇಹದಲ್ಲಿ ರೋಧವಸ್ತುಗಳು ಉತ್ಪತ್ತಿಯಾಗುವುದಿಲ್ಲ ಮತ್ತು ಸ್ವಜಾತಿ ಕಸಿಯನ್ನು ವಿರೋಧಿಸುವ ಶಕ್ತಿಯೂ ಇರುವುದಿಲ್ಲ. ಇದರಿಂದ ನರಳುವವರು ಎರಡು ವರ್ಷ ಬದುಕಿದ್ದರೆ ಹೆಚ್ಚು. ಓಮಗ್ರಂಥಿಯನ್ನು ಶಸ್ತ್ರಕ್ರಿಯೆಯಿಂದ ತೆಗೆದು ಹಾಕಿದಾಗ ಈ ಕಾಯಿಲೆಗಳು ಪೂರ್ತಿ ವಾಸಿಯಾಗುತ್ತವೆಂದು ಹೇಳಲು ಬರುವುದಿಲ್ಲ. ಇದರ ಬಗ್ಗೆ ಸಂಶೋಧನೆ ಇನ್ನೂ ನಡೆಯುತ್ತಿದೆ. (ಪಿ.ಇ.ಸಿಎಚ್.)

**ಓಮನ ನಿಯಮ :** ಉಷ್ಣತೆ ಬದಲಾಗದಂತೆ ವಿದ್ಯುತ್ತು ಹರಿಯುತ್ತಿರುವಾಗ ವೋಲ್ಟೇಜಿಗೂ (V) ವಿದ್ಯುತ್ಪ್ರವಾಹಕ್ಕೂ (I) ಇರುವ ಪ್ರಮಾಣಾಂಕ ಸ್ಥಿರವಾಗಿದೆ ಎಂದು ತಿಳಿಸುವ ನಿಯಮ (ಓಮ್ಸ್ ಲಾ). ಸಾಂಕೇತಿಕವಾಗಿ $\frac{V}{I} = R$. R ಈ ಸ್ಥಿರಾಂಕ. ಉಷ್ಣತೆ ವ್ಯತ್ಯಾಸವಾಗದಂತೆ ಪದಾರ್ಥವನ್ನು ಇಟ್ಟಾಗ ಈ ನಿಯಮ ಪಾಲಿತವಾಗುವುದಾದರೂ ಇದು ಪದಾರ್ಥಗಳನ್ನು ಅವಲಂಬಿಸದೆ ಇರುವಂಥ ಭೌತ ನಿಯಮಗಳ ವಿಶೇಷ ಗುಂಪಿಗೆ ಸೇರಿಲ್ಲ.

ಎಲೆಕ್ಟ್ರಾನುಗಳು ಒಂದು ಪದಾರ್ಥದ ಮೂಲಕ ಪ್ರವಹಿಸುವಾಗ ಅದು ಪ್ರವಾಹದ ವಿರುದ್ಧ ಪ್ರದರ್ಶಿಸುವ ತಡೆಯೇ ಪದಾರ್ಥದ ರೋಧತ್ವ R. ಇದರ ಪ್ರಾಯೋಗಿಕ ಏಕಕವನ್ನು ಓಮ್ ಎಂದೇ ಹೆಸರಿಸಿ (1861) ವಿಜ್ಞಾನಿಗಳು ಓಮನಿಗೆ ಗೌರವ ಸಲ್ಲಿಸಿದ್ದಾರೆ. (ನೋಡಿ—ಓಮ್, ಜಾರ್ಜ್ ಸೈಮನ್). 0° ಸೆಂ. ಉಷ್ಣತೆಯಲ್ಲಿ 106·3 ಸೆಂ.ಮೀ. ಉದ್ದಕ್ಕೆ ಅಡ್ಡಕೊಯ್ತ (ಕ್ರಾಸ್‌ಸೆಕ್ಷನ್) ಒಂದೇ ಸಮನಾಗಿರುವಂತೆ ನಿಂತಿರುವ 14·4521 ಗ್ರಾಂ ಪಾದರಸದ ಸ್ತಂಭ ಅನಿಶ್ಚಿತವಲ್ಲದ ವಿದ್ಯುತ್ಪ್ರವಾಹಕ್ಕೆ ಒಡ್ಡುವ ರೋಧತ್ವವನ್ನು ಅಂತರರಾಷ್ಟ್ರೀಯ ಓಮೆಂದು (ವ್ಯಾವಹಾರಿಕ ಓಮೆಂದು) ಒಪ್ಪಿಕೊಳ್ಳಲಾಗಿದೆ. 0·76 ಸೆಂ.ಮೀ. ವ್ಯಾಸವಿರುವ

1 ಮೈಲಿ ಉದ್ದದ ತಾಮ್ರದ ತಂತಿಗೆ ರೋಧತ್ವ ಉಪಸಮವಾಗಿ 0.6 ಓಮ್ ಇರುವುದೆಂದೂ 220 ವೋಲ್ಟ್ ವಿದ್ಯುತ್ ಒತ್ತಡದಲ್ಲಿ 200 ವಾಟ್ ಶಕ್ತಿಯ ವಿದ್ಯುದ್ದೀಪ ಉರಿಯುವಾಗ ಅದರ ರೋಧತ್ವ 242 ಓಮ್ ಇರುವುದೆಂದೂ ನೆನಪಿನಲ್ಲಿಟ್ಟರೆ ಒಂದು ಓಮಿನ ಪ್ರಮಾಣ ಎಷ್ಟೆಂದು ತಿಳಿಯಬಹುದು.

ಓಮನ ನಿಯಮ ಮೇಲುನೋಟಕ್ಕೆ ಬಲು ಸರಳವಾಗಿ ಕಾಣುತ್ತದೆ. ಆದರೆ ಓಮ್ ಮೊದಲು ಮಂಡಿಸಿದಾಗ ಜನರು ಇದನ್ನು ನಂಬಲಿಲ್ಲ. ಆ ಮುಹೂರ್ತ ಬರಲು ಈ ವಿಜ್ಞಾನಿ 14 ವರ್ಷಗಳಷ್ಟು ದೀರ್ಘಕಾಲ ಅಜ್ಞಾತವಾಸ ಅನುಭವಿಸಬೇಕಾಯಿತು.

ಓಮನ ನಿಯಮ ಎಲ್ಲ ಪದಾರ್ಥಗಳಿಗೂ ಅನ್ವಯಿಸುವುದಿಲ್ಲ. ತಾಮ್ರ, ಅಲ್ಯುಮಿನಿಯಂ, ಕಬ್ಬಿಣ, ಟಂಗ್‌ಸ್ಟನ್, ಕಂಚು ಮುಂತಾದ ವಿದ್ಯುದ್ವಾಹಕಗಳಲ್ಲಿ ಈ ನಿಯಮ ಸರಿಹೊಂದುತ್ತದೆ. ವಿರುದ್ಧ ವಿದ್ಯುಚ್ಚಾಲಕ ಶಕ್ತಿ (ಬ್ಯಾಕ್ ಎಲೆಕ್ಟ್ರೋಮೋಟಿವ್ ಫೋರ್ಸ್) ಇಲ್ಲದ ಕೆಲವು ವಿದ್ಯುದ್ವಿಭಜನೀಯಗಳಲ್ಲಿ (ಎಲೆಕ್ಟ್ರೊಲೈಟ್ಸ್) ವೋಲ್ಟೇಜ್ ಕಡಿಮೆ ಇದ್ದಾಗ ಓಮನ ನಿಯಮ ಪಾಲಿತವಾಗುವುದು.

ಓಮನ ನಿಯಮಕ್ಕೆ ಕೆಲವು ಮುಖ್ಯವಾದ ಅಪವಾದಗಳು : 1 ವಿದ್ಯುತ್ ಪ್ರವಾಹದಿಂದ ಒಂದು ಪದಾರ್ಥ ಕಾದು ಬಿಸಿಯಾದಾಗ ಅದರ ರೋಧತ್ವ ಬದಲಾಗುತ್ತದೆ. ವಿದ್ಯುದ್ದೀಪದ ಬುರುಡೆಯೊಳಗಿರುವ ತಂತು ಉರಿಯುತ್ತಿರುವಾಗ ಅದರ ರೋಧತ್ವದಲ್ಲಾಗುವ ವ್ಯತ್ಯಾಸ ಎದ್ದುಕಾಣುತ್ತದೆ. ಟಂಗ್‌ಸ್ಟನ್ ತಂತುವಿನಲ್ಲಿ ವಿದ್ಯುತ್ಪ್ರವಾಹ ಹೆಚ್ಚಿದಂತೆ ರೋಧತ್ವ ಹೆಚ್ಚಾಗುವುದರಿಂದ ಪ್ರಯುಕ್ತವಾದ ವೋಲ್ಟೇಜಿನೊಡನೆ ವಿದ್ಯುತ್ಪ್ರವಾಹದ ಏರುವಿಕೆ ಕುಂಠಿತವಾಗುತ್ತದೆ. ಉಷ್ಣತೆ ಏರುವುದಕ್ಕಿಂತ ಮುಂಚೆ ಆಗುತ್ತಿದ್ದ ಹಾಗೆ ಶೀಘ್ರವಾಗಿ ಅದು ಏರುವುದಿಲ್ಲ. ಆದರೆ ಅರ್ಧವಾಹಕಗಳನ್ನು ಉನ್ನತ ಉಷ್ಣತೆಗಳಿಗೆ ಏರಿಸಿದಾಗ ಅವುಗಳ ರೋಧತ್ವ ತಗ್ಗುವುದಲ್ಲದೆ ಪ್ರಯುಕ್ತ ವೋಲ್ಟೇಜಿನೊಡನೆ ವಿದ್ಯುತ್ಪ್ರವಾಹದ ಪ್ರಮಾಣ ರೇಖೀಯವಾಗಿ ಹೆಚ್ಚುವುದಕ್ಕಿಂತ ಶೀಘ್ರವಾಗಿ ಹೆಚ್ಚುತ್ತದೆ.

2 ವಿದ್ಯುನ್ಮಂಡಲದಲ್ಲಿರುವ ಬೇರೆ ಬೇರೆ ಅವಯವಗಳು ಪರ್ಯಾಯ ವಿದ್ಯುತ್ಪ್ರವಾಹಕ್ಕೆ ಯಾವುದಾದರೊಂದು ಉಷ್ಣತೆಯಲ್ಲಿ ತೋರಿಸುವ ರೋಧತ್ವ ವಿದ್ಯುತ್ಪ್ರವಾಹದ ಪ್ರಮಾಣ, ಅದರ ಆವರ್ತನ ಸಂಖ್ಯೆ ಇವೆರಡರ ಉತ್ಪನ್ನ.

3 ವೋಲ್ಟೇಜ್ ಹೆಚ್ಚಿದಂತೆ ವಿದ್ಯುದ್ವಾಹಕಗಳ ಸಂಖ್ಯೆ ಹೆಚ್ಚಾಗುವಂತೆ ಆಯಾನುಗಳಿರುವ ಅನಿಲಗಳಲ್ಲಿ, ವಿದ್ಯುತ್ಪ್ರವಾಹದ ಪ್ರಮಾಣ ವೋಲ್ಟೇಜಿನೊಡನೆ ರೇಖೀಯವಾಗಿ ಏರುವುದಕ್ಕಿಂತ ಇನ್ನೂ ವೇಗವಾಗಿ ಹೆಚ್ಚುತ್ತದೆ.

4 ಟ್ರಯೋಡಿನಲ್ಲಿ (ಟ್ರಯೋಡ್ ವ್ಯಾಕೂಂ ಟ್ಯೂಬ್) ಉತ್ಪನ್ನವಾಗುವ ವಿದ್ಯುತ್ಪ್ರವಾಹದ ಎಷ್ಟು ಪ್ರಮಾಣವು ಫಲಕವನ್ನು (ಪ್ಲೇಟ್) ತಲುಪುತ್ತದೆಂಬುದು ಜಾಲ (ಗ್ರಿಡ್) ಕೊಡುವ ಪ್ರೋತ್ಸಾಹಕ್ಕನುಗುಣವಾಗಿರುತ್ತದೆ. ಕೆಲವು ನಿರ್ದಿಷ್ಟ ಪರಿಸ್ಥಿತಿಗಳಲ್ಲಿ ಫಲಕಕ್ಕೆ ಪ್ರಯೋಗಿಸಿರುವ ವೋಲ್ಟೇಜನ್ನು ಗಣನಾರ್ಹವಾಗಿ ಬದಲಾಯಿಸದೆ ಫಲಕವನ್ನು ತಲಪುವ ವಿದ್ಯುತ್ಪ್ರವಾಹದ ಪ್ರಮಾಣವನ್ನು ಹೆಚ್ಚಿಸಬಹುದು. ಅಂಥ ಸಂದರ್ಭಗಳಲ್ಲಿ ಟ್ರಯೋಡಿನ ಪ್ರಭಾವೀ ರೋಧತ್ವ (ಎಫೆಕ್ಟಿವ್ ರೆಸಿಸ್ಟೆನ್ಸ್) ಉಪಸಮವಾಗಿ ಸೊನ್ನೆಯಾಗುತ್ತದೆ.

5 ಅರೆವಾಹಕಗಳಲ್ಲಿ ದೊರೆಯುವಂಥ ವಿದ್ಯುದಾವೇಶಗಳನ್ನು (ಎಲೆಕ್ಟ್ರಿಕ್ ಚಾರ್ಜಸ್) ಹರಿಸಿದ ಮೇಲೆ ಪ್ರಯೋಗಿಸುತ್ತಿರುವ ವೋಲ್ಟೇಜನ್ನು ಹೆಚ್ಚಿಸಿದರೆ, ಪ್ರತಿಯೊಂದು ಸಲವೂ ಉಂಟಾಗುವ ವಿದ್ಯುತ್ಪ್ರವಾಹ ವೋಲ್ಟೇಜಿನ ಹೆಚ್ಚುವರಿಗೆ ಸರಳಾನುಪಾತದಲ್ಲಿರುವುದಿಲ್ಲ.

ಮೇಲೆ 3, 4, 5ರಲ್ಲಿ ತಿಳಿಸಿರುವಂತೆ ವರ್ತಿಸುವ ವಿದ್ಯುನ್ಮಂಡಲದ ಅವಯವಗಳನ್ನು ನಾನ್‌ಓಮಿಕ್ ಅವಯವಗಳೆನ್ನುತ್ತೇವೆ. ಎಲೆಕ್ಟ್ರಾನಿಕ್ಸಿನಲ್ಲಿ ಈ ಅವಯವಗಳಿಗೆ ಪ್ರಮುಖವಾದ ಉಪಯೋಗಗಳುಂಟು.

ಪರ್ಯಾಯ ವಿದ್ಯುನ್ಮಂಡಲಗಳಲ್ಲಿ ಉಪಯೋಗಿಸುವ ಪ್ರೇರಕತ್ವ (ಇಂಡಕ್ಟನ್ಸ್), ಸಂಗ್ರಾಹಕ (ಕೆಪಾಸಿಟರ್)—ಈ ರೀತಿಯ ಅವಯವಗಳನ್ನು ನಾನ್‌ಓಮಿಕ್ ಅವಯವಗಳೆನ್ನುತ್ತೇವೆ. $q$ ಎಂಬುದು ವಿದ್ಯುದಾವೇಶವಾದರೆ ಯಾವುದಾದರೊಂದು ರೋಧತ್ವದ ತುದಿಗಳಲ್ಲಿರುವ ವೋಲ್ಟೇಜ್ Vಯನ್ನು $V = R\frac{dq}{dt}$ ಎಂದೂ L ಪ್ರೇರಕತ್ವದ ತುದಿಗಳಲ್ಲಿರುವ ವೋಲ್ಟೇಜನ್ನು $V = L\frac{d^2q}{dt^2}$ ಎಂದೂ ಒಂದು ಸಂಗ್ರಾಹಕ ಫಲಕಗಳ ನಡುವೆ ಇರುವ ವೋಲ್ಟೇಜ್ Vಯನ್ನು $V = \frac{q}{C}$ ಎಂದೂ ಬರೆಯಬಹುದು. ಇಲ್ಲಿ C ಎಂಬುದು ಸಂಗ್ರಾಹಕದ ಸಂಗ್ರಾಹಕತ್ವವೆನಿಸಿಕೊಳ್ಳುತ್ತದೆ. (ಸಿ.ಕೆ.ಎ.; ಪಿ.ಎ.)

**ಓಮಹಾ :** ಅಮೆರಿಕ ಸಂಯುಕ್ತಸಂಸ್ಥಾನದ ನಿಬ್ರ್ಯಾಸ್ಕ ರಾಜ್ಯದ ಅತ್ಯಂತ ದೊಡ್ಡ ನಗರ, ಮುಖ್ಯ ವ್ಯಾಪಾರಕೇಂದ್ರ. ಈ ಸ್ಥಳದಲ್ಲಿ ಮೊದಲು ಓಮಹಾ (ಅಥವಾ ಮಹಾ) ಬುಡಕಟ್ಟಿನ ಇಂಡಿಯನರು ವಾಸಿಸುತ್ತಿದ್ದುದರಿಂದ ಇದಕ್ಕೆ ಈ ಹೆಸರು ಬಂದಿದೆ. ದೇಶದ ಮಧ್ಯದಲ್ಲಿರುವ ಈ ನಗರ ಅಲ್ಲಿಯ ಮಿಸೂರಿ ನದಿಯ ದಂಡೆಯ ಮೇಲಣ ಪ್ರಮುಖ ಬಂದರು; ರೈಲುನಿಲ್ದಾಣ. 1825ರಷ್ಟು ಹಿಂದಿನಿಂದಲೇ ಇದು ಇಂಡಿಯನರ ವ್ಯಾಪಾರಕೇಂದ್ರವಾಗಿ ಪ್ರಸಿದ್ಧಿ ಪಡೆದಿತ್ತು. ನಿಬ್ರ್ಯಾಸ್ಕ ಪ್ರದೇಶದಲ್ಲಿ ವಸತಿಗೆ ಅವಕಾಶ ನೀಡಿದಾಗ ಜನ ಇಲ್ಲಿ ನೆಲಸಿದರು; ಓಮಹಾ ಪಟ್ಟಣದ ಸ್ಥಾಪನೆಯಾಯಿತು (1854). 13 ವರ್ಷಗಳ ಅನಂತರ ಇದನ್ನು ನಗರವನ್ನಾಗಿ ಪರಿಗಣಿಸಲಾಯಿತು. 1867ರ ವರೆಗೆ ಇದು ಆ ಪ್ರದೇಶದ ಆಡಳಿತ ಕೇಂದ್ರವೂ ಆಗಿತ್ತು. ಜಾನುವಾರು ವ್ಯಾಪಾರಕೇಂದ್ರ, ಜೋಸ್ಲಿನ್ ವಸ್ತುಸಂಗ್ರಹಾಲಯ, 1868ರಲ್ಲಿ ನಿರ್ಮಿಸಲಾದ ಓಮಹಾ ಕೋಟೆ ಇವು ಇಲ್ಲಿಯ ಪ್ರೇಕ್ಷಣೀಯ ಕಟ್ಟಡಗಳು. ರೋಮನ್ ಕೆಥೊಲಿಕ್ ಮತ್ತು ಪ್ರಾಟೆಸ್ಟಂಟ್ ಪಂಥಗಳ ಚರ್ಚುಗಳೂ ಸೈನಿಕ ಮತ್ತು ಇತರ ಖಾತೆಗಳ ಪ್ರಾದೇಶಿಕ ಕೇಂದ್ರ ಕಚೇರಿಗಳೂ ಇಲ್ಲಿವೆ. ಸಂಯುಕ್ತಸಂಸ್ಥಾನದ ವಿಮಾನದಳದ ಯುದ್ಧತಂತ್ರ ವಿಭಾಗದ ಮುಖ್ಯ ಕಚೇರಿ ಇರುವುದು ನಗರಕ್ಕೆ 10 ಮೈಲಿ ದೂರದಲ್ಲಿ.

ಆಹಾರ ಸಂಸ್ಕರಣ ಮತ್ತು ಸಂವೇಷ್ಟನ, ರಸಾಯನ ಪದಾರ್ಥ, ವ್ಯವಸಾಯ ಯಂತ್ರ, ರೈಲುರಸ್ತೆ ಸಲಕರಣೆ, ಕೀಟನಾಶಕ ಮುಂತಾದ ಕೈಗಾರಿಕೆಗಳು ಇಲ್ಲಿವೆ. ಧಾನ್ಯ, ಜಾನುವಾರು ಮತ್ತು ರಾಕೀಪರ್ವತದ ಅದುರುಗಳ ಮಾರಾಟಕ್ಕೂ ಈ ನಗರ ಪ್ರಸಿದ್ಧ.

ಓಮಹಾ ಮುನಿಸಿಪಲ್ ವಿಶ್ವವಿದ್ಯಾನಿಲಯ, ಕ್ರೇಯ್ಟನ್ ವಿಶ್ವವಿದ್ಯಾನಿಲಯ, ನಿಬ್ರ್ಯಾಸ್ಕ ಮೆಡಿಕಲ್ ಮತ್ತು ನರ್ಸಿಂಗ್ ಕಾಲೇಜ್ ವಿಶ್ವವಿದ್ಯಾನಿಲಯ—ಈ ಮೂರು ಇಲ್ಲಿಯ ವಿಶ್ವವಿದ್ಯಾನಿಲಯಗಳು. (ಆರ್.ಡಿ.ಆರ್.)

**ಓಮಿಚಂದ್ :** ಹದಿನೆಂಟನೆಯ ಶತಮಾನದ ಮಧ್ಯಕಾಲದಲ್ಲಿ ಕಲ್ಕತ್ತದಲ್ಲಿ ವಾಸವಾಗಿದ್ದ ದ್ರೋಹಚಿಂತಕ ವ್ಯಾಪಾರಿ, ಲೇವಾದೇವಿಗಾರ. ಅಮೀರ್ ಚಂದ್ ಎಂದೂ ಈತನ ಹೆಸರು. ಈಸ್ಟ್ ಇಂಡಿಯ ಕಂಪನಿಯವರ ಜೊತೆ ಸೇರಿ ಕಳ್ಳ ಹಣವನ್ನೂ ಆಸ್ತಿಯನ್ನೂ ಸಂಪಾದಿಸಿ, ಕೊನೆಗೆ ತಾನೇ ಮೋಸಕ್ಕೆ ಬಲಿಯಾದ. ಸಿರಾಜ್–ಉದ್–ದೌಲನನ್ನು ಬಂಗಾಳದ ನವಾಬಗಿರಿಯಿಂದ ಪದಚ್ಯುತಿಗೊಳಿಸಿ ಮೀರ್ ಜಾಫರನನ್ನು ಆ ಸ್ಥಾನದಲ್ಲಿ ಕುಳ್ಳಿರಿಸುವ ಸಲುವಾಗಿ ಇಂಗ್ಲಿಷರೊಂದಿಗೆ ಸಂಧಾನ ನಡೆಸಿದ. ಇಂಗ್ಲಿಷರು ಇದಕ್ಕೊಪ್ಪಿ, ಈ ಸಂಚಿನಲ್ಲಿ ಪಾಲುದಾರರಾದರು. ಅವರನ್ನು ಸಿಕ್ಕಿಸಿಕೊಂಡ ಮೇಲೆ ಓಮಿಚಂದ್ ಹೊಸ ಪಟ್ಟು ತೆಗೆದ. ಮುರ್ಷಿದಾಬಾದಿನಲ್ಲಿ ನವಾಬನ ಭಂಡಾರದಲ್ಲಿ ಅಗಾಧ ಧನರಾಶಿಯೇ ಇಂಗ್ಲಿಷರ ವಶವಾಗುವುದೆಂದೂ ಅದರಲ್ಲಿ ಸೇಕಡಾ ಇಂತಿಷ್ಟೆಂದು ತನಗೆ ದಳ್ಳಾಳಿ ಕೊಡಬೇಕೆಂದೂ ಇದಕ್ಕೊಪ್ಪದಿದ್ದರೆ ಇಡೀ ಸಂಚನ್ನೇ ಸಿರಾಜ್–ಉದ್–ದೌಲನಿಗೆ ತಿಳಿಸುವುದಾಗಿಯೂ ಬೆದರಿಸಿದ. ರಾಬರ್ಟ್ ಕ್ಲೈವ್ ಈ ಠಕ್ಕಿಗೆ ಪ್ರತಿಠಕ್ಕು ಹೂಡಿದ. ಮೀರ್ ಜಾಫರನೊಂದಿಗೆ ಇಂಗ್ಲಿಷರು ಮಾಡಿಕೊಂಡರೆನ್ನಲಾದ ಒಪ್ಪಂದದ ಎರಡು ಭಿನ್ನ ಪ್ರತಿಗಳನ್ನು ತಯಾರಿಸಲಾಯಿತು. ಇದರಲ್ಲಿ ಒಂದು ನಿಜ ; ಇನ್ನೊಂದು ಖೋಟಾ. ಓಮಿಚಂದ್ ಕೇಳಿದ ರುಸುಮನ್ನು ಅವನಿಗೆ ಕೊಡಲು ಅಧಿಕಾರ ನೀಡಿರುವಂತೆ ಕಾಣಿಸಿದ್ದ ಖೋಟಾ ಒಪ್ಪಂದವನ್ನು ಓಮಿಚಂದನಿಗೆ ತೋರಿಸಲಾಯಿತು. ನಿಜ ಒಪ್ಪಂದದಲ್ಲಿ ಈ ಅಂಶ ಇರಲಿಲ್ಲ. ಖೋಟಾ ಒಪ್ಪಂದದ ಪ್ರತಿಗೆ ಅಡ್ಮಿರಲ್ ವಾಟ್ಸನ್ ಸಹಿ ಹಾಕಲಿಲ್ಲ. ರಾಬರ್ಟ್ ಕ್ಲೈವನೂ ವಾಟ್ಸನನನ್ನುಳಿದು ಕಂಪನಿಯ ಕಲ್ಕತ್ತ ಮಂಡಲಿಯ ಇತರ ಸದಸ್ಯರೂ ಸಹಿ ಹಾಕಿದರು. ವಾಟ್ಸನನ ಕಳ್ಳರುಜುವನ್ನು ಕ್ಲೈವನೇ ಮಾಡಿದ. ಪ್ಲಾಸಿ ಕದನ ಮುಗಿಯಿತು. ಇಂಗ್ಲಿಷರು ಮಾಡಿದ ಮೋಸ ಓಮಿಚಂದನಿಗೆ ಗೊತ್ತಾದದ್ದು ಆಗಲೇ. ಇದರಿಂದ ಮತಿಗೆಟ್ಟು ಓಮಿಚಂದ್ ಸತ್ತನೆಂದು (1767) ಪ್ರತೀತಿ. (ಪಿ.ಎಸ್.)

**ಓಮು :** ಅಂಬೆಲಿಫೆರಿ ಕುಟುಂಬಕ್ಕೆ ಸೇರಿದ ಟ್ರಾಕಿಸ್ಪರ್ಮಮ್ ಕಾಪ್ಟಿಕಮ್ ಎಂಬ ಏಕವಾರ್ಷಿಕ ಪ್ರಭೇದ. ಈಜಿಪ್ಟಿನ ಮೂಲವಾಸಿಯಾದ ಈ ಗಿಡವನ್ನು ಬೀಜಗಳಿಗಾಗಿ ಇರಾಕ್, ಇರಾನ್, ಆಫ್ಘಾನಿಸ್ಥಾನ ಹಾಗು ಭಾರತದಲ್ಲಿ ಬೆಳೆಸುತ್ತಿದ್ದಾರೆ. ವಾದಕ್ಕಿ, ಓಮಕ್ಕಿ ಅಥವಾ ಅಜ್ವಾನ ಪರ್ಯಾಯನಾಮಗಳು. ಇದರ ಬೀಜಗಳನ್ನು ಸಂಬಾರ ಪದಾರ್ಥವಾಗಿಯೂ ಔಷಧಿಯಾಗಿಯೂ ಬಳಸುತ್ತಾರೆ. ಭಾರತದಲ್ಲಿ ಸುಮಾರು 1 ಲಕ್ಷ ಎಕರೆಗಳಲ್ಲಿ ಇದರ ಸಾಗುವಳಿಯಾಗುತ್ತಿದೆ. ಓಮಿನ ಅಧಿಕ ಉತ್ಪನ್ನ ಬಂಗಾಳ ಹಾಗೂ ರಾಜಾಸ್ಥಾನಗಳಲ್ಲಿ. ಸಾಮಾನ್ಯವಾಗಿ ಬಯಲು ಹಾಗೂ ತಗ್ಗು ಪ್ರದೇಶದ ಬೆಳೆಯಾದರೂ ಎತ್ತರದ ಪ್ರದೇಶಗಳಲ್ಲೂ ಇದನ್ನು ಬೆಳೆಸಬಹುದು.

ಇದು ಎರಡರಿಂದ ಮೂರು ಅಡಿಗಳ ಎತ್ತರಕ್ಕೆ ಬೆಳೆಯುವುದು. ಕಾಂಡ ನುಣುಪು ಮತ್ತು ಬೂದು ಮಿಶ್ರಿತ ಹಸಿರು ಬಣ್ಣದ್ದು. ವಿರಳವಾಗಿ, ಪರ್ಯಾಯ

ವಾಗಿ ಜೋಡಣೆಗೊಂಡಿರುವ ಎಲೆಗಳು ಪುನಸ್ಸಂಯುಕ್ತವಾಗಿ ವಿಭಜನೆಹೊಂದಿವೆ. ಹೂಗಳು ಅಚ್ಚ ಬಿಳಿಯವೂ ಬಹಳ ಚಿಕ್ಕವೂ ಆಗಿದ್ದು ಸಂಯುಕ್ತ ಅಂಬೆಲ್ ಹೂ ಗೊಂಚಲುಗಳಲ್ಲಿ ಇರುತ್ತವೆ. ಪುಷ್ಪದಳಗಳು ಮತ್ತು ಕೇಸರಗಳು ಐದೈದು ಇವೆ. ಅಂಡಾಶಯ ನೀಚಸ್ಥಾನದಲ್ಲಿದ್ದು ಎರಡು ಕಾರ್ಪೆಲ್‌ಗಳಿಂದ ಕೂಡಿದೆ. ಕಾಯಿಗಳು ಬಹಳ ಸಣ್ಣ ಮತ್ತು ಒಂದೊಂದರಲ್ಲಿಯೂ ಎರಡು ಪುಟ್ಟ ಬೀಜಗಳಿವೆ.

ಸಾಮಾನ್ಯವಾಗಿ ಚಳಿಗಾಲದಲ್ಲಿ (ಅಕ್ಟೋಬರ್ ಅಥವಾ ನವೆಂಬರ್ ತಿಂಗಳುಗಳಲ್ಲಿ) ಬಿತ್ತನೆ ಆರಂಭಿಸುತ್ತಾರೆ. ಬೀಜ ಬಿತ್ತುವ ಮೊದಲು, ಭೂಮಿಯನ್ನು ಚೆನ್ನಾಗಿ ಉತ್ತು, ಹದ ಮಾಡಿ ದನದ ಗೊಬ್ಬರ ಹಾಕುತ್ತಾರೆ. ಬಿತ್ತಿದ 4–5 ದಿನಗಳಲ್ಲಿ ಬೀಜಗಳು ಮೊಳಕೆಯೊಡೆಯುತ್ತವೆ. ಆಗಿಂದಾಗ್ಗೆ ಲಘುವಾಗಿ ನೀರು ಹಾಯಿಸಿ, ಕಳೆ ಕಿತ್ತು, ಪೈರು ಚೆನ್ನಾಗಿ ಬೆಳೆಯುವಂತೆ ನೋಡಿಕೊಳ್ಳುತ್ತಾರೆ. ಎರಡು ತಿಂಗಳಲ್ಲಿ ಗಿಡಗಳು ಹೂಬಿಡಲು ಪ್ರಾರಂಭಿಸಿ, ಫೆಬ್ರವರಿ, ಮಾರ್ಚ್ ಹೊತ್ತಿಗೆ ಫಸಲು ಬರುತ್ತದೆ. ಗಿಡಗಳನ್ನು ಬೇರು ಸಹಿತ ಕಿತ್ತು, ಚಾಪೆಗಳ ಮೇಲೆ ಹರಡಿ, ಬಿಸಿಲಿನಲ್ಲಿ ಒಣಗಿಸುತ್ತಾರೆ. ಆಮೇಲೆ ಕೈಯಿಂದ ಉಜ್ಜಿಯೊ ಕಾಲಿನಿಂದ ತುಳಿದೊ ಬೀಜಗಳನ್ನು ಬೇರ್ಪಡಿಸುತ್ತಾರೆ. ಸಾಮಾನ್ಯವಾಗಿ ಎಕರೆಗೆ 90 ರಿಂದ 140 ಕಿ.ಗ್ರಾಂ. ಇಳುವರಿಯಾಗುತ್ತದೆ.

ಬೀಜಗಳಲ್ಲಿ ಒಂದು ಬಗೆಯ ತೈಲವಿರುತ್ತದೆ. ಬೀಜಗಳ ವಿಶಿಷ್ಟ ವಾಸನೆ ಮತ್ತು ರುಚಿಗೆ ಇದೇ ಕಾರಣ. ಈ ತೈಲದಲ್ಲಿ ಸುಮಾರು ಸೇಕಡಾ 50 ಭಾಗ ಥೈಮಾಲ್ ಎಂಬ ವಸ್ತುವಿರುತ್ತದೆ. ಬೀಜವನ್ನು ಪಚನಕಾರಿಯಾಗಿಯೂ ಉತ್ತೇಜಕವಾಗಿಯೂ ಬಳಸುತ್ತಾರೆ. ಅಜೀರ್ಣ, ಭೇದಿ, ಹೊಟ್ಟೆಶೂಲೆ ಮುಂತಾದ ಪಚನಾಂಗ ಸಂಬಂಧಿ ಕಾಯಿಲೆಗಳಿಗೆ ಇದು ತುಂಬ ಒಳ್ಳೆಯ ಔಷಧಿ. ಬೀಜಗಳನ್ನು ನೀರಿನೊಂದಿಗೆ ಕುದಿಸಿ, ಬಟ್ಟಿಯಿಳಿಸಿ ತಯಾರಿಸಿದ ಓಮು ನೀರನ್ನು ಕಾಲರಾ ಬೇನೆಯ ಪ್ರಥಮ ಹಂತಗಳಲ್ಲಿ ವಾಂತಿ, ಭೇದಿ ನಿಲ್ಲಿಸಲು ಉಪಯೋಗಿಸುತ್ತಾರೆ. ಶೀತ, ನೆಗಡಿಯಾಗಿದ್ದಾಗ ಬೀಜಗಳನ್ನು ಉಜ್ಜಿ ಅದರ ವಾಸನೆಯನ್ನು ಸೇವಿಸುವುದೂ ಉಂಟು. ಆಹಾರ ಪಚನ ಕ್ರಿಯೆಯಲ್ಲಿ ಸಹಕಾರಿಯಾಗಲು ಉಪಯೋಗಿಸುವ ಹಿಂಗ್ವಾಷ್ಟಕ ಚೂರ್ಣದಲ್ಲಿ ಓಮು ಪ್ರಮುಖವಾಗಿರುತ್ತದೆ ಅಲ್ಲದೆ ಓಮನ್ನು ತಾಂಬೂಲದೊಂದಿಗೂ ಉಪಯೋಗಿಸುತ್ತಾರೆ. ಓಮಿನ ಪುಡಿಯನ್ನು ಕಾರಸೇವು, ಓಮ್‌ಪುಡಿ ಮೊದಲಾದ ಖಾದ್ಯ ವಸ್ತುಗಳಿಗೆ ರುಚಿಕಟ್ಟಲು ಬಳಸುತ್ತಾರೆ. *

**ಓ-ಯೋಮ್ಯೆ ತತ್ತ್ವ:** ಅಂತರಾತ್ಮ ಭಾವನೆಗೆ, ನೇರ ಅಪರೋಕ್ಷಾನುಭವಕ್ಕೆ ಪ್ರಾಧಾನ್ಯವಿರುವ ಒಂದು ತತ್ತ್ವಪಂಥ. ಸು. ಹದಿನೇಳನೆಯ ಶತಮಾನದಿಂದ ಜಪಾನಿನಲ್ಲಿ ಬಳಕೆಯಲ್ಲಿದೆ. ಅಕಲುಷಿತವಾದ ಆದಿ ಅಂತರಾತ್ಮನೇ ವಿಶ್ವದ ಆತ್ಮ. ಅದು ಮಾನವರಲ್ಲಿ ಪ್ರತಿಫಲಿಸಿದಾಗ ಕಲುಷಿತವಾಗುತ್ತದೆ. ಕಲುಷಿತವಾದ ಅಂತರಾತ್ಮವನ್ನು ಕಲ್ಮಶದಿಂದ ಪ್ರತ್ಯೇಕಿಸಿ ಅದರ ಮೂಲರೂಪವನ್ನು ಸಾಕ್ಷಾತ್ಕರಿಸಿಕೊಳ್ಳಬೇಕು. ಈ ಸಾಕ್ಷಾತ್ಕಾರದ ಅನುಭವವೇ ನೇರವಾದ ಅಕಲುಷಿತವಾದ ಅಪರೋಕ್ಷಾನುಭವ. ಇದು ಈ ತತ್ತ್ವಪಂಥದ ತಿರುಳು.

ಈ ಪಂಥದ ಪ್ರವರ್ತಕ ಚೀನೀ ತಾತ್ತ್ವಿಕ ವಾಂಗ್ ಯಂಗ್ ಮಿಂಗ್ (1473–1529). ಬೌದ್ಧಿಕ ತತ್ತ್ವವಾದಿಗಳಲ್ಲದ ಜಪಾನೀಯರಿಗೆ ಅಪರೋಕ್ಷಾನುಭವವನ್ನು ಪ್ರತಿಪಾದಿಸಿದ ಈತ ತುಂಬ ಮೆಚ್ಚಿಗೆಯವನಾದನಲ್ಲದೆ ಟೊಕುಗಾವ ಅವಧಿಯಲ್ಲಿ (1615–1867) ಈ ಪಂಥವನ್ನವರು ತಮ್ಮಲ್ಲಿ ಪ್ರಚುರಗೊಳಿಸಿದರು. (ಜಿ.ಎಚ್.)

**ಓರ್ ಮೀನು:** ಎಲ್ಲ ಮಹಾಸಾಗರಗಳಲ್ಲಿಯೂ ಇರುವ ರೀಗೇಲಿಸಿಡೀ ಕುಟುಂಬದ ಮೀನು. ದೇಹ ಪಟ್ಟಿಯಂತೆ ಬಲು ಉದ್ದವಾಗಿದೆ. ಬೆನ್ನಿನ ರೆಕ್ಕೆ ದೇಹದ ಉದ್ದಕ್ಕೂ ವಿಸ್ತರಿಸಿದ್ದು ಇದರ ಮೊದಲ ಕೆಲವು ಎಳೆಗಳು ತಲೆಯ ಮೇಲೆ ನೀಳವಾದ ಶಿಖೆಯಂತೆ ಇವೆ. ನಡುವಿನ ರೆಕ್ಕೆಗಳು ದೀರ್ಘವಾದ ಎಳೆಗಳಾಗಿ ಮಾರ್ಪಟ್ಟು ಕೊನೆಯಲ್ಲಿ ಹುಟ್ಟಿನಂತೆ (ಓರ್) ಚಪ್ಪಟೆಯಾಗಿವೆ. ಇಂಥ ರಚನೆಯಿಂದಲೇ ಇವುಗಳಿಗೆ ಓರ್ (ಹುಟ್ಟು) ಮೀನುಗಳೆಂದು ಹೆಸರು ಬಂದಿದೆ.

ಕೆಲವು ಓರ್ ಮೀನುಗಳು 10–15 ಮೀ. ಉದ್ದ ಬೆಳೆಯುತ್ತವೆ. ಸಾಗರಗಳಲ್ಲಿ ಅಗಾಧವಾದ ಹಾವುಗಳಿರುವುವೆಂಬ ದಂತಕಥೆಗಳು ಈ ಮೀನುಗಳಿಂದ ಹುಟ್ಟಿರಬಹುದೆಂದು ಕಾಣುತ್ತದೆ. (ಸಿ.ಜಿ.ಕೆ.)

**ಓರಿನೋಕೋ:** ವೆನಿಜ್ವೇಲದ ದಕ್ಷಿಣ ಭಾಗದಲ್ಲಿರುವ ಪರಿಮ ಪರ್ವತಗಳಲ್ಲಿ ಹುಟ್ಟಿ ಟ್ರಿನಿಡಾಡ್ ದ್ವೀಪದ ದಕ್ಷಿಣದಲ್ಲಿ ಅಟ್ಲಾಂಟಿಕ್ ಸಾಗರ ಸೇರುವ ನದಿ ; ದಕ್ಷಿಣ ಅಮೆರಿಕದ ಅತ್ಯಂತ ದೊಡ್ಡ ನದಿಗಳ ಪೈಕಿ ಮೂರನೆಯದು. ಇದರ ಉದ್ದ 1281 ಮೈ. ಓರಿನೋಕೋ ನದಿಯ ಮೂಲವನ್ನು ಪತ್ತೆಹಚ್ಚಲು ಅನೇಕ ವರ್ಷಗಳಿಂದ ಪ್ರಯತ್ನ ನಡೆಯುತ್ತಿದ್ದು, 1951ರಲ್ಲಿ ಮೇಜರ್ ರಿಸ್‌ಕ್ವಿಸ್ ಇರಿಬಾರೆನ್ ಸಫಲನಾದ. ಇದು ಉತ್ತರ ಅಕ್ಷಾಂಶ 2° 19′ ಮತ್ತು ಪಶ್ಚಿಮ ರೇಖಾಂಶ 63° 22′ ಕೂಡುವೆಡೆಯಲ್ಲಿ—ಬ್ರಜಿಲ್ ಗಡಿಯ ಹತ್ತಿರ ಹತ್ತಿರ—ಹುಟ್ಟಿ, ಮೊದಲು ಪಶ್ಚಿಮಕ್ಕೆ ಹರಿದು, ಅನಂತರ ಉತ್ತರಕ್ಕೆ ಸಾಗಿ ಕೊಲಂಬಿಯ ಮತ್ತು ವೆನಿಜ್ವೇಲ ರಾಷ್ಟ್ರಗಳ ಗಡಿಯಾಗಿ ಪರಿಣಮಿಸುತ್ತದೆ. ಓರಿನೋಕೋ ನದಿಯ ಮುಖಜಭೂಮಿಯ ವಿಸ್ತೀರ್ಣ ಸುಮಾರು 5,000 ಚ.ಮೈ. ಇಲ್ಲಿ ಈ ನದಿ ಹಲವು ಕವಲುಗಳಾಗಿ ಒಡೆಯುತ್ತದೆ.

ಓರಿನೋಕೋ ನದಿಗೆ ಅನೇಕ ಉಪನದಿಗಳಿವೆ. ಇವುಗಳ ಪೈಕಿ ಅಟಪೊ ಮತ್ತು ಗ್ವವಿಯೇರ್ ಮುಖ್ಯ. ಇವುಗಳಿಂದ ಕೂಡಿ ಅರ್ಧ ದೂರ ಕ್ರಮಿಸುವ ವೇಳೆಗೆ ನದಿಯ ಪಾತ್ರ ಸುಮಾರು ಒಂದು ಮೈಲಿ ಅಗಲವಾಗುತ್ತದೆ. ಇದು ಅಲ್ಲಲ್ಲಿ ಕವಲೊಡೆದು ಕೂಡುವುದರಿಂದ ಸಂಭವಿಸಿರುವ ದ್ವೀಪಗಳು ಅನೇಕ. ಋತುಮಾನಕ್ಕನುಸಾರವಾಗಿ ಪ್ರವಾಹ ಹೆಚ್ಚುಕಡಿಮೆಯಾಗುತ್ತದೆ: ಜೂನ್ ತಿಂಗಳಿಂದ ಆಗಸ್ಟ್ ವರೆಗೆ ಅಧಿಕ, ನವೆಂಬರಿನಿಂದ ಏಪ್ರಿಲ್ ವರೆಗೆ ಕಡಿಮೆ. ಜಲಾನಯನ ಪ್ರದೇಶದ ವಿಸ್ತೀರ್ಣ 3,60,000 ಚ.ಮೈ.ಗಳಿಗೂ ಹೆಚ್ಚು. ಇದು ವೆನಿಜ್ವೇಲದ ವಿಸ್ತೀರ್ಣದ 4/5 ಭಾಗ. ಈ ನದಿ 3,523 ಅಡಿಗಳ ಎತ್ತರ ಪ್ರದೇಶದಿಂದ ಇಳಿದು ಬರುವಾಗ ಸಂಭವಿಸಿರುವ ಜಲಪಾತಗಳು ಹಲವಾರು. ಇದರಿಂದಾಗಿ ವೆನಿಜ್ವೇಲ ರಾಷ್ಟ್ರದಲ್ಲಿ ವಿದ್ಯುದುತ್ಪಾದನೆಯ ಅವಕಾಶ ಧಾರಾಳವಾಗಿದೆ. ಅಟುರಾಸ್ ನದೀಮುಖದಿಂದ ಮೇಲೆ 700 ಮೈಲಿಗಳ ವರೆಗೆ ನೌಕಾಯಾನ ಸಾಧ್ಯ. ಓರಿನೋಕೋ ನದಿಯ ದಕ್ಷಿಣಕ್ಕೆ ಉತ್ತಮವಾದ ಕಬ್ಬಿಣದ ಅದುರಿನ ನಿಕ್ಷೇಪವುಂಟು. ಇದನ್ನು ನದಿಯ ಮೇಲೆ ಸಾಗಿಸಲಾಗುತ್ತದೆ. (ಆರ್.ಬಿ.ಆರ್.)

**ಓರಿಯಾನಿ, ಆಲ್‌ಫ್ರೆಡೊ:** 1852–1909. ಇಟಲಿಯ ಕಾದಂಬರಿಕಾರ, ದಾರ್ಶನಿಕ, ನಾಟಕಕಾರ, ಕವಿ. ಇಪ್ಪತ್ತನೆಯ ಶತಮಾನದಲ್ಲಿ ಆ ದೇಶದಲ್ಲಿ ಬೆಳೆದುಬಂದ ಫ್ಯಾಸಿಸ್ಟ್ ತತ್ತ್ವದ ಮೇಲೆ ಪ್ರಭಾವ ಬೀರಿದ ವ್ಯಕ್ತಿ. ಪ್ರಾರಂಭದಲ್ಲಿ ಬರೆದ ಕಾದಂಬರಿಗಳಲ್ಲಿ ಜೀವನವನ್ನು ಕುರಿತ ವಿಕೃತ, ವಿಷಮ ದೃಷ್ಟಿಯಿದೆ. ಆದರೆ ಅನಂತರ ಬಂದ ಲ ಡಿಸ್ಫಾಟ (ಸೋಲು) ಎಂಬ ಕಾದಂಬರಿಯಲ್ಲಿ ಬಾಳಿನ ನೋವು, ನಿಸ್ಸಹಾಯಕತೆ, ಸಂಕಟಗಳ ಚಿತ್ರವಿದೆ, ಗಹನವಾದ ಚಿಂತನೆಯಿದೆ. ಇದು ಚಿರಕಾಲ ನಿಲ್ಲಬಲ್ಲ ಕೃತಿ. ಜರ್ಮನಿಯ ಹೆಗಲನ ಪ್ರಭಾವಕ್ಕೊಳಗಾಗಿ ಈತ ಬರೆದ ಲ ಲಾಟ ಪೊಲಿಟಿಕ ಇನ್ ಇಟಾಲಿಯ (ಇಟಲಿಯ ರಾಜಕೀಯ ಹೋರಾಟ) ಎಂಬ ಗ್ರಂಥವನ್ನು ಜನ ಕೆಲಕಾಲ ಅತಿಯಾಗಿ ಶ್ಲಾಘಿಸಿ, ಈತನನ್ನು ಫ್ಯಾಸಿಸ್ಟ್ ತತ್ತ್ವದ ಅಗ್ರದೂತನೆಂದು ಕೊಂಡಾಡಿದರು. (ಎಚ್.ಕೆ.ಆರ್.)

**ಓರೊಬ್ಯಾಂಕೇಸಿ:** ದ್ವಿದಳ ಸಸ್ಯಗಳ ವರ್ಗದ ಟ್ಯೂಬಿಫ್ಲೋರಿ ಗಣಕ್ಕೆ ಸೇರಿದ ಒಂದು ಕುಟುಂಬ. ಸುಮಾರು 14 ಜಾತಿ, 180 ಪ್ರಭೇದಗಳು ಇವೆ. ಸಾಮಾನ್ಯವಾಗಿ ಉತ್ತರ ಸಮಶೀತೋಷ್ಣವಲಯಕ್ಕೆ ಬಹುಪಾಲು ಸೀಮಿತಗೊಂಡಿರುವ ಇವುಗಳ ಕೆಲವು ಜಾತಿಗಳು ಯೂರೋಪು ಹಾಗೂ ಏಷ್ಯಾಗಳ ಕೆಲವು ಪ್ರದೇಶಗಳಲ್ಲೂ ಬೆಳೆಯುತ್ತವೆ. ಈ ಕುಟುಂಬದಲ್ಲಿ ಬರುವ ಸಸ್ಯಗಳಲ್ಲಿ ಸಾಮಾನ್ಯವಾಗಿ ಪತ್ರಹರಿತ್ತು ಇರುವುದಿಲ್ಲ. ಇದ್ದರೂ ಅತ್ಯಲ್ಪ ಪ್ರಮಾಣದಲ್ಲಿ ಇರುತ್ತದೆ. ಆದ್ದರಿಂದ ಈ ಸಸ್ಯಗಳು ಬೇರೆ ಸಸ್ಯಗಳ ಬೇರುಗಳ ಮೇಲೆ ಪರಾವಲಂಬಿಗಳಾಗಿ ಮೂಲಿಕೆಗಳ ರೂಪದಲ್ಲಿ ವಾರ್ಷಿಕ ಮತ್ತು ಬಹುವಾರ್ಷಿಕಗಳಾಗಿ ಬೆಳೆಯುತ್ತವೆ. ಎಲೆಗಳು ಹುರುಪೆ ಎಲೆಗಳ ರೂಪದಲ್ಲಿರುತ್ತವೆ. ಹೂಗಳು ಗೊಂಚಲುಗಳಲ್ಲಿರಬಹುದು ಅಥವಾ ಏಕಪುಷ್ಪಗಳಾಗಿರಬಹುದು. ಏಕಪುಷ್ಪವಾದರೆ ಸಸ್ಯದ ತುದಿಯಲ್ಲಿ ಬಿಡುತ್ತದೆ (ಫೆಲಿಪಿಯ), ಹೂಗೊಂಚಲಾದರೆ ಸಸ್ಯದ ತುದಿಯಲ್ಲಿ ಅಥವಾ ಎಲೆಯ ಕಂಕುಳಲ್ಲಿದ್ದು ರೆಸೀಮ್ ಅಥವಾ ಕದಿರುಗೊಂಚಲು (ಸ್ಪೈಕ್) ಮಾದರಿಯದ್ದಾಗಿರುತ್ತದೆ. ಹೂಗಳು ದ್ವಿಲಿಂಗಿ ಮತ್ತು ಉಭಯಪಾರ್ಶ್ವ ಸಮಾಂಗತೆ ಉಳ್ಳವು.

ಪ್ರತಿ ಹೂ ಒಂದು ಬ್ರ್ಯಾಕ್ಟ್ ಮತ್ತು ಸಾಮಾನ್ಯವಾಗಿ ಎರಡು ಬ್ರ್ಯಾಕ್ಟಿಯೋಲುಗಳನ್ನು ಹೊಂದಿರುತ್ತದೆ. ಹೂವಿನ ಪುಷ್ಪಪತ್ರ ಭಾಗ ವಿವಿಧ ರೀತಿಯಲ್ಲಿದ್ದು ಈ ಗುಣ ಕುಟುಂಬದಲ್ಲಿ ಬರುವ ಸಸ್ಯಗಳ ವರ್ಗೀಕರಣದಲ್ಲಿ ಬಲು ಸಹಾಯವನ್ನು ಮಾಡುತ್ತದೆ. ಸಾಮಾನ್ಯವಾಗಿ ಒಂದು ಹೂವಿನಲ್ಲಿ ಐದು ಪುಷ್ಪಪತ್ರಗಳಿರಬೇಕು. ಕೆಲವು ಪ್ರಭೇದಗಳಲ್ಲಿ ಅಕ್ಕಪಕ್ಕದಲ್ಲಿ ಅಥವಾ ಮುಂಭಾಗದಲ್ಲಿ ಬರುವ ಪುಷ್ಪಪತ್ರಗಳು ಇರುವುದಿಲ್ಲ. ಪುಷ್ಪದಳಗಳು ಐದು; ಎರಡು ತುಟಿಗಳಾಗುವಂತೆ ಕೂಡಿಕೊಂಡಿರುತ್ತವೆ. ಕೇಸರಗಳು ನಾಲ್ಕು. ಕೆಲವೊಮ್ಮೆ ಐದನೆಯದೂ ಇರುವುದುಂಟು. ಆದರೆ ಅದು ಬರಡಾಗಿರುತ್ತದೆ (ಸ್ಟ್ಯಾಮಿನೋಡ್). ಪರಾಗಕೋಶಗಳು ಉದ್ದಕ್ಕೂ ಬಿರುಕು ಬಿಟ್ಟುಕೊಳ್ಳುತ್ತವೆ. ಕ್ರಿಸ್ಟಿಸೋನಿಯಾ ಜಾತಿಯಲ್ಲಿ ಒಂದು ಕೇಸರದಲ್ಲಿ ಅರ್ಧ ಭಾಗ ಮಾತ್ರವಿರುತ್ತದೆ. ಅಂಡಾಶಯ ಉಚ್ಚಸ್ಥಾನದ್ದಾಗಿದ್ದು ಸಾಮಾನ್ಯವಾಗಿ ಎರಡು ಕಾರ್ಪೆಲುಗಳಿಂದ ಕೂಡಿರುತ್ತದೆ. ಪ್ರತಿ ಕಾರ್ಪೆಲಿನಲ್ಲೂ ಅಧಿಕ ಸಂಖ್ಯೆಯಲ್ಲಿರುವ ಅಂಡಕಗಳು ಅಂಡಾಶಯದ ಒಳಭಿತ್ತಿಗೆ ಅಂಟಿಕೊಂಡಿರುತ್ತವೆ. ಫಲ ಸಂಪುಟ (ಕ್ಯಾಪ್ಸೂಲ್) ಮಾದರಿಯದು. ಬೀಜಗಳು ತುಂಬ ಚಿಕ್ಕವು. ಅವುಗಳ ಪ್ರಸಾರ ಗಾಳಿಯ ಮುಖಾಂತರ. ಈ ಕುಟುಂಬದ ಪ್ರಭೇದಗಳು ಕೆಲವೇ ನಿರ್ದಿಷ್ಟ ಆಶ್ರಯ ಸಸ್ಯಗಳ ಮೇಲೆ ಬೆಳೆಯು

ತ್ತವೆ. ಉದಾಹರಣೆಗಾಗಿ ಓ. ಹೆಡರಿಯೇಯು ಐವಿ ಗಿಡದ ಮೇಲೂ ಓ. ಮೈನರ್ ಎಂಬುದು ಕ್ಲೋವರ್ ಗಿಡದ ಮೇಲೂ ಬೆಳೆಯುತ್ತವೆ.

ಓ.ಈಜಿಪ್ಟಿಯಾಕ ಮತ್ತು ಓ.ಸೆರ್ನುವ ಸಾಧಾರಣವಾಗಿ ಭಾರತದಲ್ಲಿ ಬೆಳೆಯುತ್ತವೆ. ದನಗಳ ಗಂಟಲಿನ ಹುಣ್ಣುಗಳನ್ನು ಹಾಗೂ ಡಯೇರಿಯ ರೋಗವನ್ನು ನಿಲ್ಲಿಸಲು ಓ. ಈಜಿಪ್ಟಿಯಾಕ ಗಿಡವನ್ನು ಔಷಧಿಯಾಗಿ ಉಪಯೋಗಿಸುತ್ತಾರೆ. ಕೆಲವು ಜಾತಿ ಹಾಗೂ ಪ್ರಭೇದಗಳು ಉಪಯುಕ್ತ ಸಸ್ಯಗಳ ಮೇಲೆ ಬೆಳೆದು ತುಂಬ ದುಷ್ಪರಿಣಾಮವನ್ನುಂಟುಮಾಡುತ್ತವೆ. ಸಾಮಾನ್ಯವಾಗಿ ಸಾಸಿವೆ ಜಾತಿಯ ಗಿಡಗಳು ಭಂಗಿ, ಬದನೆ, ಹೊಗೆಸೊಪ್ಪು, ಗಸಗಸೆ, ಮುಸುಕಿನ ಜೋಳ, ಕುಸುಬೆ ಗಿಡಗಳ ಮೇಲೆ ಪರಾವಲಂಬಿಗಳಾಗಿ ಬೆಳೆದು ಬೆಳೆಯನ್ನು ಹಾಳುಮಾಡುತ್ತವೆ. (ಬಿ.ಪಿ.)

**ಓಲಿಫಿನ್ನುಗಳು :** ಅಪರ್ಯಾಪ್ತ ಹೈಡ್ರೊಕಾರ್ಬನ್ನುಗಳು. ಅಂದರೆ ಇಂಗಾಲಪರಮಾಣುವಿನ ಚತುಸ್ಸಂಯೋಗಶಕ್ತಿ ಸ್ವಾಭಾವಿಕವಾಗಿ ತೃಪ್ತಿಯಾಗದಿರುವ ಸಂಯುಕ್ತಗಳು. ಇವುಗಳಲ್ಲಿ ಒಂದು ದ್ವಿಬಂಧವಿದೆ. ಇವುಗಳ ಕ್ರಿಯಾಶೀಲ ಗ್ರೂಪು (—C=C—) ಎಂದಾಯಿತು. ದ್ವಿಬಂಧದ ಇರವು ದೌರ್ಬಲ್ಯದ ಕುರುಹು. ಸಹಜವಾಗಿಯೇ ಇಂಥ ವಸ್ತುಗಳು ಇತರ ವಸ್ತುಗಳನ್ನು ಕೂಡಿಸಿಕೊಂಡು ಪರ್ಯಾಪ್ತಗೊಳಿಸಲು ಹವಣಿಸುತ್ತವೆ. ಪರಿಣಾಮವಾಗಿ ಓಲಿಫಿನ್ನುಗಳು ಕ್ರಿಯಾಶೀಲ ಹೈಡ್ರೊಕಾರ್ಬನ್ನುಗಳು ಎನಿಸಿಕೊಂಡಿವೆ. ಓಲಿಯಂ (ತೈಲ) ಮತ್ತು ಫಿಯಾಂಟ್ (ಜನಕ) ಎಂಬ ಲ್ಯಾಟಿನ್ ಪದಗಳಿಂದ ಓಲಿಫಿನ್ ಹುಟ್ಟಿದೆ. ಕ್ಲೋರಿನ್ ಅಥವಾ ಬ್ರೋಮಿನಿನೊಡನೆ ಈ ವರ್ಗದ ಮೊದಲನೆಯ ಸಂಯುಕ್ತವಾದ ಎಥಿಲೀನ್ ವರ್ತಿಸಿದಾಗ ಎಣ್ಣೆಯಂಥ ವಸ್ತುಗಳು ಉಂಟಾಗುವುದರಿಂದ ಈ ಹೆಸರು ಬರಲು ಕಾರಣವಾಯಿತು.

1949ರಲ್ಲಿ ಆಮ್‌ಸ್ಟರ್‌ಡ್ಯಾಂ ನಗರದಲ್ಲಿ ಸಮಾವೇಶಗೊಂಡಿದ್ದ ಅಂತರ ರಾಷ್ಟ್ರೀಯ ರಸಾಯನ ವಿಜ್ಞಾನಿಗಳ ಸಮ್ಮೇಳನದಲ್ಲಿ ಕೈಗೊಂಡ ತೀರ್ಮಾನದ ಪ್ರಕಾರ ಈ ಗುಂಪಿನ ಹೈಡ್ರೊಕಾರ್ಬನ್ನುಗಳನ್ನು ಆಲ್ಕೀನುಗಳು ಎಂದು ಕರೆಯಲಾಗುತ್ತದೆ. ಸದೃಶ ಪ್ಯಾರಫಿನ್ನುಗಳ (ಆಲ್ಕೇನುಗಳು) ಹೆಸರಿನಲ್ಲಿರುವ ಏನ್ ಪ್ರತ್ಯಯದ ಬದಲು ಈನ್ ಪ್ರತ್ಯಯ ಸೇರಿಸಿ ಈ ವರ್ಗದ ಹೈಡ್ರೊಕಾರ್ಬನ್ನುಗಳನ್ನು ಕರೆಯುವುದು ರೂಢಿ. ಉದಾಹರಣೆ—

| ಪ್ಯಾರಫಿನ್ (ಆಲ್ಕೇನ್) | ಓಲಿಫಿನ್ (ಆಲ್ಕೀನ್) |
|---|---|
| $C_2H_6$ ಈಥೇನ್ | $C_2H_4$ ಈಥೀನ್ |
| $C_3H_8$ ಪ್ರೋಪೇನ್ | $C_3H_6$ ಪ್ರೋಪೀನ್ |
| $C_4H_{10}$ ಬ್ಯೂಟೇನ್ | $C_4H_8$ ಬ್ಯೂಟೀನ್ |
| ಇತ್ಯಾದಿ | ಇತ್ಯಾದಿ |

ಪ್ಯಾರಫಿನ್ನುಗಳ ಸಾರ್ವತ್ರಿಕ ಅಣುಸೂತ್ರ $C_nH_{2n+2}$ ಆಗಿದ್ದರೆ ಓಲಿಫಿನ್ನುಗಳನ್ನು $C_nH_{2n}$ ಎಂಬ ಸೂತ್ರದಿಂದ ಸೂಚಿಸಬಹುದು. ನೇರಸರಣಿಯಲ್ಲಿರುವ ಇಂಗಾಲದ ಪರಮಾಣುಗಳ ಸಂಖ್ಯೆಗೆ ಅನುಗುಣವಾಗಿ ಆಲ್ಕೀನಿನ ಹೆಸರನ್ನು ನಿರ್ಧರಿಸಲಾಗುವುದು. ದ್ವಿಬಂಧಕ್ಕೆ ಒಳಗಾದ ಎರಡು ಇಂಗಾಲದ ಪರಮಾಣುಗಳ ಕ್ರಮಸಂಖ್ಯೆಗಳ ಪೈಕಿ ಕನಿಷ್ಠ ಸಂಖ್ಯೆಯಿಂದ ದ್ವಿಬಂಧದ ಸ್ಥಾನವನ್ನು ಸೂಚಿಸುವುದು ಪದ್ಧತಿ. ಕೆಳಗಿನ ಉದಾಹರಣೆಗಳಿಂದ ಇದು ಸ್ಪಷ್ಟವಾಗುತ್ತದೆ.

$$\overset{4}{CH_3}—\overset{3}{CH_2}—\overset{2}{CH}=\overset{1}{CH_2} \quad \text{ಬ್ಯೂಟೀನ್—1}$$

$$CH_3—CH=CH—CH_3 \quad \text{ಬ್ಯೂಟೀನ್—2}$$



ಕೆಲವು ಪರಿಚಿತ ಓಲಿಫಿನ್ನುಗಳ ರೂಢಿನಾಮಗಳನ್ನೂ ಅಣುಸೂತ್ರ ಮೊದಲಾದ ವಿವರಗಳನ್ನೂ ಕೆಳಗೆ ಪಟ್ಟಿಮಾಡಲಾಗಿದೆ.

| ಹೆಸರು | ಅಣು ಸೂತ್ರ | ರಚನಾ ಸೂತ್ರ | ಕುದಿಯುವ ಬಿಂದು °ಸೆಂ. |
|---|---|---|---|
| ಎಥಿಲೀನ್ | $C_2H_4$ | $CH_2=CH_2$ | −103 |
| ಪ್ರೊಪೈಲೀನ್ | $C_3H_6$ | $CH_3—CH=CH_2$ | −48 |
| ನಾರ್ಮಲ್ ಬ್ಯುಟಿಲೀನ್ | $C_4H_8$ | $CH_3—CH_2—CH=CH_2$ | −5 |
| ಐಸೊ ಬ್ಯುಟಿಲೀನ್ | $C_4H_8$ | $CH_3—CH=CH—CH_3$ | −6 |
| ನಾರ್ಮಲ್ ಅಮೈಲೀನ್ | $C_5H_{10}$ | $CH_3—CH_2—CH_2—CH=CH_2$ | 40 |
| ನಾರ್ಮಲ್ ಹೆಕ್ಸೈಲೀನ್ | $C_6H_{12}$ | $CH_3—CH_2—CH_2—CH_2—CH=CH_2$ | 64 |

ಓಲಿಫಿನ್ನುಗಳನ್ನು ತಯಾರಿಸಲು ರೂಢಿಯಲ್ಲಿರುವ ಸಾರ್ವತ್ರಿಕ ವಿಧಾನಗಳನ್ನು ಮುಂದೆ ವಿವರಿಸಲಾಗಿದೆ.

1 ಆಲ್ಕೊಹಾಲುಗಳ ನಿರ್ಜಲೀಕರಣ : ಇದರ ಸಲುವಾಗಿ ಜಲರಹಿತ ಜಿಂಕ್ ಕ್ಲೋರೈಡ್, ಪ್ರಬಲ ಸಲ್ಫ್ಯೂರಿಕ್ ಆಮ್ಲ, ಫಾಸ್ಫಾರಿಕ್ ಆಮ್ಲ, ಫಾಸ್ಫರಸ್ ಪೆಂಟಾಕ್ಸೈಡ್, ಅಲ್ಯೂಮಿನಾ ($Al_2O_3$) ಮೊದಲಾದ ನಿರ್ಜಲಕಾರಿಗಳನ್ನು ಬಳಸುವರು. ಈ ಕ್ರಿಯೆಯನ್ನು ಸೂ ಲವಾಗಿ ಕೆಳಕಂಡಂತೆ ಸೂಚಿಸಬಹುದು.





ಅಲ್ಯೂಮಿನಾ ತುಂಬಿರುವ 360° ಸೆಂ. ಉಷ್ಣತೆಗೆ ಕಾಯಿಸಿದ ಕೊಳವೆಯ ಮೂಲಕ ಆಲ್ಕೊಹಾಲಿನ ಆವಿಯನ್ನು ಹಾಯಿಸಿದಾಗ, ಗಣನೀಯ ಪ್ರಮಾಣದಲ್ಲಿ ಓಲಿಫಿನ್ ಉತ್ಪತ್ತಿಯಾಗುವುದು ಕಂಡುಬಂದಿದೆ.

2 ಪೊಟ್ಯಾಸಿಯಂ ಹೈಡ್ರಾಕ್ಸೈಡಿನ ಆಲ್ಕೊಹಾಲಿನ ದ್ರಾವಣ ಆಲ್ಕೈಲ್ ಹ್ಯಾಲೈಡುಗಳೊಡನೆ ವರ್ತಿಸಿ ಪಡೆಯಬಹುದು.





ಇದಕ್ಕೆ ಡೀಹೈಡ್ರೊಹ್ಯಾಲೊಜನೇಷನ್ ಕ್ರಿಯೆ ಎನ್ನುವರು.

3 ಜಮ್‌ಡೈಹ್ಯಾಲೈಡುಗಳಿಂದ (ಒಂದೇ ಇಂಗಾಲದ ಪರಮಾಣುವಿಗೆ ಎರಡು ಹ್ಯಾಲೋಜನ್ ಪರಮಾಣುಗಳು ಕೂಡಿರುವುದು) ಅಥವಾ ವಿಸಿನಾಲ್ ಡೈಹ್ಯಾಲೈಡುಗಳಿಂದ (ಅಕ್ಕಪಕ್ಕದ ಇಂಗಾಲದ ಪರಮಾಣುಗಳಿಗೆ ಒಂದೊಂದು ಹ್ಯಾಲೊಜನ್ ಪರಮಾಣು ಕೂಡಿರುವುದು) ಪಡೆಯಬಹುದು.



1:1 ಡೈಬ್ರೋಮೊ ಪ್ರೋಪೇನ್ (ಎಥೆನಾಲಿನ ದ್ರಾವಣ) ಪ್ರೊಪೈಲೀನ್



1:2 ಡೈಬ್ರೋಮೊ ಪ್ರೋಪೇನ್

ಈ ಕ್ರಿಯೆಗೆ ಡೀಹ್ಯಾಲೊಜನೇಷನ್ ಎಂದು ಹೆಸರು.





ಪೊಟ್ಯಾಸಿಯಂ ಸಕ್ಸಿನೇಟ್ ಎಥಿಲೀನ್

4 ಪರ್ಯಾಪ್ತ ದ್ವಿಪ್ರತ್ಯಾಮ್ಲೀಯ (ಡೈಬೇಸಿಕ್) ಆಮ್ಲಗಳ ಪೊಟ್ಯಾಸಿಯಂ ಲವಣಗಳ ದ್ರಾವಣಗಳನ್ನು ವಿದ್ಯುದ್ವಿಭಜನೆಗೆ ಗುರಿಪಡಿಸಿ ಪಡೆಯಬಹುದು.

ಸಾಮಾನ್ಯ ಗುಣಗಳು : $C_2$–$C_4$ ಹೈಡ್ರೊಕಾರ್ಬನ್ನುಗಳು ಅನಿಲಗಳು, $C_5$–$C_{15}$ ದ್ರವಗಳು. ಉನ್ನತ ಓಲಿಫಿನ್ನುಗಳು ಘನವಸ್ತುಗಳು, ಇವುಗಳಿಗೆ ಬಣ್ಣವಿಲ್ಲ. ಭೌತಗುಣಗಳಲ್ಲಿ ಪ್ಯಾರಫಿನ್ನುಗಳನ್ನು ಹೋಲುವುವು. ಅವುಗಳಂತೆ ಅಣುತೂಕ ಹೆಚ್ಚಿದಂತೆಲ್ಲ ಸಾಂದ್ರತೆ ದ್ರವೀಕರಣ ಅಥವಾ ಕುದಿಯುವ ಬಿಂದುಗಳಲ್ಲಿ ಕ್ರಮಬದ್ಧವಾದ ವ್ಯತ್ಯಾಸ ತೋರುವುದು. ನೀರಿನಲ್ಲಿ ಅದ್ರಾವ್ಯವೆನ್ನಬಹುದು. ಆಲ್ಕೊಹಾಲ್ ಮತ್ತು ಈಥರಿನಲ್ಲಿ ವಿಲೀನವಾಗುವುವು. ಪ್ರಕಾಶಮಾನವಾದ ಜ್ವಾಲೆಯಿಂದ ಉರಿದು ಗಾಳಿ ಅಥವಾ ಆಕ್ಸಿಜನ್ನಿನೊಡನೆ ಸ್ಫೋಟಕ ಮಿಶ್ರಣ ಕೊಡುತ್ತವೆ. ಅಂತಿಮವಾಗಿ ಇಂಗಾಲದ ಡೈಆಕ್ಸೈಡ್ ಮತ್ತು ನೀರಾಗುವುವು. ದ್ವಿಬಂಧಿತ ಇಂಗಾಲದ ಪರಮಾಣುಗಳಿರುವುದರಿಂದ ಸರಾಗವಾಗಿ ಸಂಯೋಗಕ್ರಿಯೆಗಳಲ್ಲಿ ಭಾಗವಹಿಸುತ್ತವೆ, ಕೆಲವು ಮಾದರಿ ಕ್ರಿಯೆಗಳನ್ನು ಮುಂದೆ ಸೂಚಿಸಲಾಗಿದೆ.

1 ಸಮಾಂಗಸಂಯೋಗ (ಸಿಮೆಟ್ರಿಕಲ್ ಅಡಿಶನ್) :

(i) ಹೈಡ್ರೊಜನ್—ಸೂಕ್ಷ್ಮಕಣಗಳ ರೂಪದಲ್ಲಿರುವ ಪ್ಲ್ಯಾಟಿನಂ ಅಥವಾ ಪೆಲೇಡಿಯಂ, ಉನ್ನತ ಉಷ್ಣತೆ ಒತ್ತಡಗಳಲ್ಲಿ ತಾಮ್ರ ಮತ್ತು ಕ್ರೋಮಿಯಂ ಆಕ್ಸೈಡುಗಳ ಮಿಶ್ರಣ, ನಿಕ್ಕಲ್, ಸಾಮಾನ್ಯ ಉಷ್ಣತೆ ಒತ್ತಡಗಳಲ್ಲಿ ರಾಣಿ ನಿಕ್ಕಲ್ ಇದಕ್ಕಾಗಿ ಉಪಯೋಗಿಸುವ ವೇಗ ವರ್ಧಕಗಳು



$$R—CH=CH_2 \xrightarrow{H_2} R—CH_2—CH_3$$

(ii) ಹ್ಯಾಲೊಜನುಗಳು—ಸಂಯೋಗಲಾಲಿತ್ಯ $Cl > Br > I$ ಕ್ರಮದಲ್ಲಿದ್ದು ಬೆಳಕು ಅಲ್ಯೂಮಿನಿಯಂ ಅಥವಾ ಫೆರಿಕ್ ಕ್ಲೋರೈಡುಗಳು ಕ್ರಿಯೆಯನ್ನು ಪ್ರಚೋದಿಸುವುವು.



$$CH_3—CH=CH_2 \xrightarrow{Cl_2} CH_3—CHCl—CH_2Cl$$

ಆದರೆ 400°–600° ಸೆಂ. ಉಷ್ಣತಾ ಮಿತಿಯಲ್ಲಿ ಆದೇಶಕ್ರಿಯೆ (ಸಬ್‌ಸ್ಟಿಟ್ಯೂಷನ್ ರಿಆಕ್ಷನ್) ನಡೆದು ಅಲ್ಲೈಲ್ ಕ್ಲೋರೈಡಿನ ($Cl—CH_2—CH=CH_2$) ಅಂಶ ಪ್ರಧಾನವಾಗಿರುವುದು. ದ್ವಿಬಂಧಕ್ಕೆ ಬ್ರೋಮಿನ್ ಕೂಡಿದಾಗ ಬ್ರೋಮಿನ್ ದ್ರಾವಣ ನಿರ್ವರ್ಣವಾಗುವುದು. ದ್ವಿಬಂಧದ ಇರವನ್ನು ಹೀಗೆ ಗುರುತಿಸಬಹುದು.

(iii) ಓಲಿಫಿನ್ನಿನ ದ್ವಿಬಂಧಕ್ಕೆ ಒಂದು ಓಜ಼ೋನ್ ಅಣು ಕೂಡಿ ಓಜ಼ೋನೈಡುಗಳಾಗುವುವು. ಈ ಕ್ರಿಯೆಯನ್ನು ಕ್ಲೋರೊಫಾರಂ ಅಥವಾ ಕಾರ್ಬನ್ ಟೆಟ್ರಕ್ಲೋರೈಡ್ ಮಾಧ್ಯಮದಲ್ಲಿ ನಡೆಸಬೇಕು.



ಓಜ಼ೋನೈಡ್

ಇಳಿಸಿದ ಒತ್ತಡದಲ್ಲಿ ಕುದಿಸಿ ಲೀನಕಾರಿಯನ್ನು ತೆಗೆದುಹಾಕಿದ ಅನಂತರ ನೀರು ಮತ್ತು ಸತುವಿನ ಧೂಳನ್ನು ಸೇರಿಸಿದರೆ ಓಜ಼ೋನೈಡ್ ವಿಭಜಿಸಿ ಆಲ್ಡಿಹೈಡ್ ಮತ್ತು ಕೀಟೋನುಗಳನ್ನು ಕೊಡುವುದು.



ಕೀಟೋನ್ ಆಲ್ಡಿಹೈಡ್

ಉತ್ಪತ್ತಿಯಾದ ಹೈಡ್ರೊಜನ್ ಪೆರಾಕ್ಸೈಡನ್ನು ಸತುವಿನ ಧೂಳು ನಾಶಪಡಿಸುತ್ತದೆ. ಇಲ್ಲದಿದ್ದರೆ ಅದು ಆಲ್ಡಿಹೈಡನ್ನು ಆಮ್ಲವಾಗಿ ಉತ್ಕರ್ಷಿಸುವುದು. ಓಲಿಫಿನ್ನಿನ ಇಂಗಾಲದ ಸರಣಿಯಲ್ಲಿ ದ್ವಿಬಂಧವಿದ್ದ ಸ್ಥಾನವನ್ನು ನಿರ್ಧರಿಸಲು ಈ ಕ್ರಿಯೆಗಳು ಸಹಾಯಕವಾಗಿವೆ.

ಅಸಮಾಂಗ ಸಂಯೋಗ (ಅನ್‌ಸಿಮೆಟ್ರಿಕಲ್ ಅಡಿಶನ್) :

(i) ಹೈಡ್ರೊಜನ್ ಹ್ಯಾಲೈಡುಗಳು : ಸಂಯೋಗ ಲಾಲಿತ್ಯದ ಕ್ರಮ $HI > HBr > HCl$. ದ್ವಿಬಂಧಿತ ಇಂಗಾಲದ ಪರಮಾಣುಗಳ ಪೈಕಿ ಹೆಚ್ಚಿನ ಸಂಖ್ಯೆ ಹೈಡ್ರೊಜನ್ ಪರಮಾಣುಗಳನ್ನು ಹೊಂದಿರುವ ಇಂಗಾಲ ಆಮ್ಲದ ಹೈಡ್ರೊಜನ್ ಭಾಗವನ್ನೂ ಮತ್ತೊಂದು ಇಂಗಾಲ ಹ್ಯಾಲೊಜನ್ ಭಾಗವನ್ನೂ ಕೂಡಿಸಿಕೊಳ್ಳುವುವು. ಇದೇ 1869ರಲ್ಲಿ ಪ್ರತಿಪಾದಿತವಾದ ಮಾರ್ಕೊನಿಕಾಫನ ನಿಯಮ. ಪ್ರೊಪೈಲೀನಿನೊಡನೆ ಹೈಡ್ರೊಜನ್ ಬ್ರೋಮೈಡ್ ವರ್ತಿಸಿದಾಗ ಹೀಗಾಗುತ್ತದೆ.



ಐಸೊ ಪ್ರೊಪೈಲ್ ಬ್ರೋಮೈಡ್

ಈ ನಿಯಮ ಪಾಲಿತವಾಗಬೇಕಾದರೆ ಓಲಿಫಿನ್ನಿನ ಅಣುವಿನ ಮಧ್ಯದಲ್ಲಿ ದ್ವಿಬಂಧವಿರಬಾರದು. ಆದರೆ ಆಕ್ಸಿಜನ್ ಅತಿನೇರಳೆ ಕಿರಣಗಳು ಮತ್ತು ಪೆರಾಕ್ಸೈಡುಗಳ ಸಂಪರ್ಕದಲ್ಲಿ ಹೈಡ್ರೊಜನ್ ಬ್ರೋಮೈಡ್‌ಮಾತ್ರ ಈ ನಿಯಮಕ್ಕೆ ವಿರೋಧವಾಗಿ ಓಲಿಫಿನ್ನಿಗೆ ಕೂಡುವುದು.



$$CH_3—CH=CH_2 + HBr \xrightarrow{\text{ಪೆರಾಕ್ಸೈಡ್}} CH_3—CH_2—CH_2.Br$$

ಇದಕ್ಕೆ ಪೆರಾಕ್ಸೈಡ್ ಪರಿಣಾಮ ಎಂದು ಹೆಸರು. ಪ್ರಾಯಶಃ ಪೆರಾಕ್ಸೈಡು ಬಿಡುಗಡೆ ಮಾಡುವ ಬ್ರೋಮಿನಿನ ಅಯಾನು ಪ್ರೊಪೈಲೀನಿನೊಡನೆ ವರ್ತಿಸಿ ಸ್ವತಂತ್ರ ರ್ಯಾಡಿಕಲ್ ನಿರ್ಮಾಣವಾಗುವುದು. ಇದು ಕೆಳಕಂಡ ಸರಪಳಿ ಕ್ರಿಯೆಯನ್ನು ಪ್ರೇರೇಪಿಸುವುದೆಂದು ನಂಬಲಾಗಿದೆ.



(ಇದು ಕ್ರಿಯೆಯನ್ನು ಪುನರಾವರ್ತಿಸುವುದು)

(ii) ನೀರು ಮತ್ತು ಸಲ್ಫ್ಯೂರಿಕ್ ಆಮ್ಲಗಳು ಸಹ ಮಾರ್ಕೊನಿ ಕಾಫನ ನಿಯಮದ ಅನುಸಾರವಾಗಿಯೇ ಕೂಡುವುವು.



ಐಸೊ ಪ್ರೊಪೆನಾಲ

(iii) ಹೈಪೊ ಹ್ಯಾಲಸ್ ಆಮ್ಲಗಳು : ಇವುಗಳ ಹ್ಯಾಲೊಜನ್ ಅಧಿಕ ಸಂಖ್ಯೆ ಹೈಡ್ರೊಜನ್ ಪರಮಾಣುಗಳಿರುವ ದ್ವಿಬಂಧಿತ ಇಂಗಾಲಕ್ಕೆ ಕೂಡುವುದು.



ಉತ್ಕರ್ಷಣ : 90%ಹೈಡ್ರೊಜನ್ ಪೆರಾಕ್ಸೈಡು ಅಸಿಟಿಕ್ ಅಥವಾ ಫಾರ್ಮಿಕ್ ಆಮ್ಲದ ದ್ರಾವಣದಲ್ಲಿ ಎರಡು ಹೈಡ್ರಾಕ್ಸಿಲ್ ಗ್ರೂಪುಗಳನ್ನು ಕೂಡಿಸುವುದು.



ಗ್ಲೈಕಾಲ್

ತಣ್ಣಗಿರುವ ಕ್ಷಾರ ಮಿಶ್ರಿತ ಪೊಟ್ಯಾಸಿಯಂ ಪರ್ಮ್ಯಾಂಗನೇಟು ಓಲಿಫಿನ್ನಿನಿಂದ ನಿರ್ವರ್ಣಗೊಳ್ಳುವುದು. ಆರ್ಗ್ಯಾನಿಕ್ ಸಂಯುಕ್ತಗಳ ಅಪರ್ಯಾಪ್ತತೆಯನ್ನು ಹೀಗೆ ಗುರುತಿಸಬಹುದು. ಇದಕ್ಕೆ ಬೇಯರ್ ಪರೀಕ್ಷಾ ಪ್ರಯೋಗ ಎನ್ನುವರು.



ಆಮ್ಲ ಮಿಶ್ರಿತ ಪೊಟ್ಯಾಸಿಯಂ ಪರ್ಮ್ಯಾಂಗನೇಟ್ ಅಥವಾ ಡೈಕ್ರೊಮೇಟುಗಳು ದ್ವಿಬಂಧ ಸ್ಥಾನದಲ್ಲಿ ಓಲಿಫಿನ್ನಿನ ಅಣುಛೇದನ ಮಾಡುವುವು.



ಐಸೊಮರೈಸೇಷನ್ : ಓಲಿಫಿನ್ನನ್ನು ಏಕಾಂಗಿಯಾಗಿ 500°–700° ಸೆಂ. ಉಷ್ಣತಾ ಮಿತಿಯಲ್ಲಿ ಅಥವಾ ಅಲ್ಯೂಮಿನಿಯಂ ಸಲ್ಫೇಟ್ ವೇಗವರ್ಧಕದ ಸಂಪರ್ಕದಲ್ಲಿ 200°–300° ಸೆಂ. ಉಷ್ಣತಾ ಮಿತಿಯಲ್ಲಿ ಕಾಯಿಸಿದರೆ ರೂಪಾಂತರ ಹೊಂದುವುದು. ದ್ವಿಬಂಧ ಇಂಗಾಲದ ಸರಣಿಯ ಕೇಂದ್ರಕ್ಕೆ ಸರಿಯುವ ಪ್ರವೃತ್ತಿಯಿಂದ ಅಥವಾ ಮೀಥೈಲ್ ಗ್ರೂಪಿನ ಸ್ಥಾನಪಲ್ಲಟದಿಂದ ಹೀಗಾಗಬಹುದೆಂದು ಭಾವಿಸಲಾಗಿದೆ.



ಪೊಲಿಮರೈಸೇಷನ್ (ಅಣುಸಂಘಟನೆ) : ಸೂಕ್ತ ಸನ್ನಿವೇಶದಲ್ಲಿ ಓಲಿಫಿನ್ನಿನ ಅಣುಗಳು ಸಂಘಟಿತವಾಗಿ ದೊಡ್ಡ ಅಣುಗಳನ್ನು ಕೊಡುವುವು. ಫಲಿತ ವಸ್ತುವಿನ ಅಂಗಮೂಲಧಾತುಗಳೂ ಅವುಗಳ ತೂಕ ಪ್ರಮಾಣವೂ ಮೂಲ ಓಲಿಫಿನ್ನಿನಂತೆಯೇ ಇದ್ದು ಅಣುತೂಕ ಮಾತ್ರ ವ್ಯತ್ಯಾಸವಾಗಿರುವುದು. ಈ ವಿಶೇಷ ಕ್ರಿಯೆಗೆ ಪೊಲಿಮರೈಸೇಷನ್ ಎಂದು ಹೆಸರು. ಉದಾಹರಣೆಗೆ 300° ಸೆಂ. ಉಷ್ಣತೆಯಲ್ಲಿ 1,500 ವಾಯುಮಂಡಲ ಒತ್ತಡದಲ್ಲಿ ಅಲ್ಪಪ್ರಮಾಣ ಆಕ್ಸಿಜನ್ನಿನ ಸಂಪರ್ಕದಲ್ಲಿ ದ್ರವಿತ ಎಥಿಲೀನ್ ಪಾಲಿಥೀನ್ ಎಂಬ ಉತ್ತಮ ಪ್ಲಾಸ್ಟಿಕ್ ಆಗುವುದು.



140° ಸೆಂ. ಉಷ್ಣತೆಯಲ್ಲಿ ಮೆದುವಾಗುವ ಈ ಶ್ರೇಷ್ಠ ಪ್ಲಾಸ್ಟಿಕ್ಕಿನಿಂದ ನಾನಾ ತರಹೆಯ ಸೀಸೆಗಳು ಮತ್ತು ಪ್ರಯೋಗಶಾಲೆಯ ಉಪಕರಣಗಳನ್ನು ಮಾಡುತ್ತಿದ್ದಾರೆ. ಇದು ವಿದ್ಯುತ್ ನಿರೋಧಕವಾಗಿಯೂ ಬಳಸಲ್ಪಡುತ್ತಿದೆ. ತಣ್ಣಗಿರುವ ಪ್ರಬಲ ಸಲ್ಫ್ಯೂರಿಕ್ ಆಮ್ಲದ ಸಂಪರ್ಕದಲ್ಲಿ ಐಸೊ ಬ್ಯುಟಲೀನು ಐಸೊ ಆಕ್ಟೀನಾಗಿ ಪರಿವರ್ತಿತವಾಗುವುದು ಮತ್ತೊಂದು ನಿದರ್ಶನ.



ಆಲ್ಕೈಲೇಷನ್ : ಆಮ್ಲೀಯ ವೇಗವರ್ಧಕಗಳಾದ ಅಲ್ಯೂಮಿನಿಯಂ ಕ್ಲೋರೈಡ್ ಮತ್ತು ಸಲ್ಫ್ಯೂರಿಕ್ ಆಮ್ಲಗಳ ಸಂಪರ್ಕದಲ್ಲಿ ಉನ್ನತ ಉಷ್ಣತೆ ಒತ್ತಡಗಳಲ್ಲಿ ಆಲ್ಕೇನುಗಳು ದ್ವಿಬಂಧಕ್ಕೆ ಸೇರುವ ಪ್ರಸಂಗವಿದು. ಐಸೊ ಬ್ಯುಟೇನ್ ಮತ್ತು ಐಸೋ ಬ್ಯುಟಲೀನ್ ಪರಸ್ಪರ ಕೂಡಿ ಐಸೊ ಆಕ್ಟೇನ್ ಆಗುವುದು ಇದಕ್ಕೆ ಉದಾಹರಣೆ.



ಉಪಯೋಗಗಳು : ಎಥಿಲೀನಿನಿಂದ ಆಲ್ಕೊಹಾಲ್ ಮತ್ತು ಮಸ್ಟರ್ಡ್ ಅನಿಲಗಳನ್ನು ಮಾಡುವರು. 1000 ಭಾಗ ಗಾಳಿಯಲ್ಲಿ ಒಂದು ಭಾಗ ಎಥಿಲೀನ್ ಇದ್ದರೆ ಸಾಕು. ಸಿಟ್ರಸ್ ವರ್ಗದ ಹಣ್ಣುಗಳು ಬೇಗ ಮಾಗುವುವು. ಆಲೂಗಡ್ಡೆಯ ಬೆಳವಣಿಗೆಗೆ ಉತ್ತೇಜಕವಾಗಿದೆ. ಟ್ರೈಕ್ಲೋರೊಎಥಿಲೀನ್ ಎಂಬುದು ಕೊಬ್ಬುಗಳಿಗೆ ಲೀನಕಾರಿ. ಸೋಡಿಯಂ ಟೆಟ್ರಸಲ್ಫೈಡ್ ($Na_2S_4$) ಮತ್ತು ಎಥಿಲೀನ್ ಕ್ಲೋರೈಡುಗಳ ಸಂಯೋಗದಿಂದ ಥಯೊಕಾಲ್ ಎಂಬ ಕೃತಕ ರಬ್ಬರ್ ಆಗುತ್ತದೆ. ಪಾಲಿಥೀನ್ ಪ್ಲ್ಯಾಸ್ಟಿಕ್ ವಿಷಯ ಆಗಲೇ ಪ್ರಸ್ತಾಪಿಸಲಾಗಿದೆ. ಟೆಟ್ರಫ್ಲೋರೋ ಎಥಿಲೀನಿನಿಂದ ($CF_2=CF_2$) ಟೆಫ್ಲಾನ್ $(C_2F_4)_n$ ಎಂಬ ಕೃತಕ ನೂಲಾಗುತ್ತದೆ. ಪ್ರೊಪೈಲೀನಿಂದ ಅಸಿಟೋನ್ ಮತ್ತು ಗ್ಲಿಸರಾಲುಗಳನ್ನು ಕೈಗಾರಿಕಾ ಪ್ರಮಾಣದಲ್ಲಿ ಉತ್ಪಾದಿಸಲಾಗುತ್ತಿದೆ. (ಎಚ್.ಜಿ.ಎಸ್.)

**ಓಲಿಯಿಕ್ ಆಮ್ಲ :** ಅಣುಸೂತ್ರ $C_{17}H_{33}$ CO.OH. ಕೊಬ್ಬು ಮತ್ತು ತೈಲಗಳಲ್ಲಿ ಗ್ಲಿಸರೈಡಾಗಿ ದೊರೆಯುತ್ತದೆ. ಆಲಿವ್ ಎಣ್ಣೆಯಲ್ಲಿ 76%–86% ಓಲಿಯಿಕ್ ಆಮ್ಲವಿದೆ. ತಿಳಿಹಳದಿ ಬಣ್ಣದ ರುಚಿ ವಾಸನೆಗಳಿಲ್ಲದ ದ್ರವ. 286°ಸೆಂ. ನಲ್ಲಿ ಕುದಿಯುತ್ತದೆ. ನೀರಿನಲ್ಲಿ ಅದ್ರಾವ್ಯ. ಆಲ್ಕೊಹಾಲ್ ಮತ್ತು ಈಥರುಗಳಲ್ಲಿ ಲೀನವಾಗುತ್ತದೆ. ವೇಗವರ್ಧಕದ ಸಂಪರ್ಕದಲ್ಲಿ ಹೈಡ್ರೊಜನ್ನನ್ನು ಹಾಯಿಸಿದಾಗ ಪರ್ಯಾಪ್ತಗೊಂಡು ಸ್ಟಿಯರಿಕ್ ಆಮ್ಲವಾಗುವುದು. ಗಾಳಿಯಲ್ಲಿರುವ ಆಕ್ಸಿಜನ್ನಿನಿಂದ ಉತ್ಕರ್ಷಿತವಾಗಿ ಕಮಟು ಹಿಡಿಯುತ್ತದೆ. ಸಿಸ್-ಟ್ರಾನ್ಸ್ ಅಥವಾ ಜ್ಯಾಮಿತೀಯ ರೂಪಾಂತರ (ಜೊಮೆಟ್ರಿಕ್ ಐಸೊಮೆರಿಸಂ) ಪ್ರದರ್ಶಿಸುವುದು ಇದರ ವೈಶಿಷ್ಟ್ಯ. ಓಲಿಯಿಕ್ ಆಮ್ಲದಲ್ಲಿ ಸಿಸ್ ರಚನೆಯಿದೆ. ಅಂದರೆ ದ್ವಿಬಂಧಿತ ಇಂಗಾಲದ ಪರಮಾಣುಗಳ ಒಂದೇ ಪಾರ್ಶ್ವದಲ್ಲಿ ಹೈಡ್ರೊಜನ್ನಿನ ಪರಮಾಣುಗಳು ಇರುತ್ತವೆ. ಇದರ ಪ್ರತಿರೂಪದ ಇಲೇಡಿಕ್ ಆಮ್ಲದಲ್ಲಿ ದ್ವಿಬಂಧದ ಇಕ್ಕೆಲಗಳಲ್ಲಿ ಹೈಡ್ರೊಜನ್ನಿನ ಪರಮಾಣುಗಳು ಇರುವುದನ್ನು ಗಮನಿಸಬಹುದು. ಈ ರೂಪಾಂತರಕ್ಕೆ ನೈಟ್ರಸ್ ಆಮ್ಲ ವೇಗವರ್ಧಕವಾಗಿ ವರ್ತಿಸುತ್ತದೆ. 180°–200°ಸೆಂ. ಉಷ್ಣತಾ ಮಿತಿಯಲ್ಲಿ ಸೆಲೆನಿಯಂ ಸಂಪರ್ಕದಲ್ಲಿ 66% ಪರಿವರ್ತನೆಯನ್ನು ಸಾಧಿಸಬಹುದು.



ಓಲಿಯಿಕ್ ಆಮ್ಲ ನೈಟ್ರಿಕ್ ಆಮ್ಲದಿಂದ ಉತ್ಕರ್ಷಣಗೊಂಡು ಪೆಲಾರ್ಗೋನಿಕ್ ಆಮ್ಲ $[CH_3.(CH_2)_7.COOH]$ ಮತ್ತು ಅಜ಼ಿಲೇಯಿಕ್ ಆಮ್ಲಗಳನ್ನು $[HOOC-(CH_2)_7-COOH]$ ಕೊಡುವುದು. ಆದ್ದರಿಂದ ಓಲಿಯಿಕ್ ಆಮ್ಲದಲ್ಲಿ 9 : 10 ಸ್ಥಾನದ ನಡುವೆ ದ್ವಿಬಂಧವಿರಬೇಕೆಂದು ಗೊತ್ತಾಗುತ್ತದೆ. ಓಲಿಯಿಕ್ ಆಮ್ಲದ ಪ್ರಧಾನ ಉಪಯೋಗ ಉಣ್ಣೆಯಿಂದ ನೂಲು ತೆಗೆಯುವುದರಲ್ಲಿ. ಇದರ ಸೋಡಿಯಂ ಮತ್ತು ಪೊಟ್ಯಾಸಿಯಂ ಲವಣಗಳೇ ಸಾಬೂನು. ಇತರ ಲೋಹಗಳ ಓಲಿಯೇಟುಗಳನ್ನು ಒತ್ತರ ವಿಧಾನದಿಂದ ತಯಾರಿಸುವರು. ಸೋಡಿಯಂ ಮತ್ತು ಪೊಟ್ಯಾಸಿಯಂ ಓಲಿಯೇಟುಗಳು ದ್ರಾವ್ಯ ವಸ್ತುಗಳು. ಇವುಗಳಿಗೆ ಖನಿಜಾಮ್ಲಗಳು ಇತರ ಲೋಹ ಲವಣಗಳ ದ್ರಾವಣಗಳನ್ನು ಸೇರಿಸಿದರೆ ಆಯಾ ಲೋಹದ ಓಲಿಯೇಟುಗಳು ಒತ್ತರಿಸುವುವು. ಇದಕ್ಕೆ ಅಗತ್ಯವಾದ 90% ಶುದ್ಧವಾದ ಓಲಿಯಿಕ್ ಆಮ್ಲ ಈಗ ಮಾರುಕಟ್ಟೆಯಲ್ಲಿ ದೊರೆಯುತ್ತಿದೆ. ಕ್ಯಾಡ್ಮಿಯಂ ಓಲಿಯೇಟು ಹಳದಿ, ತಾಮ್ರ ಮತ್ತು ನಿಕ್ಕಲ್ ಓಲಿಯೇಟುಗಳು ನೀಲಿ, ಕಬ್ಬಿಣದ ಓಲಿಯೇಟು ಹಸುರು ಮತ್ತು ಮ್ಯಾಂಗನೀಸ್ ಓಲಿಯೇಟು ತಿಳಿನೇರಿಳೆ ಬಣ್ಣದ ಲವಣಗಳು. ಪರಿಶುದ್ಧ ಸೋಡಿಯಂ ಓಲಿಯೇಟು ಬಿಳಿಯ ಪುಡಿ. ಇದು ಕೊಲೆಲಿಥಿಯಾಸಿಸ್ ರೋಗಕ್ಕೆ ಪರಿಣಾಮಕಾರಿಯಾದ ಮದ್ದು. ಪೊಟ್ಯಾಸಿಯಂ ಓಲಿಯೇಟಿನ ದ್ರಾವಣದಿಂದ ಕೀವು ತುಂಬಿದ ವ್ರಣಗಳನ್ನು ತೊಳೆಯುತ್ತಿದ್ದರೆ ಬೇಗ ವಾಸಿಯಾಗುವುವು. ಓಲಿಯಿಕ್ ಆಮ್ಲದ ಮೀಥೈಲ್ ಈಥೈಲ್ ಬ್ಯೂಟೈಲ್ ಮತ್ತು ಗ್ಲೈಕಾಲ್ ಎಸ್ಟರುಗಳು ಈಗ ಮಾರುಕಟ್ಟೆಯ ವಸ್ತುಗಳು. ಗ್ಲೈಕಾಲ್ ಓಲಿಯೇಟುಗಳು ಬಟ್ಟೆ, ಚರ್ಮ ಮತ್ತು ಪೆಟ್ರೋಲಿಯಂ ಉದ್ಯಮಗಳಲ್ಲಿಯೂ

ಕೀಟನಾಶಕಗಳು ಮತ್ತು ಅಂಗರಾಗಗಳ ತಯಾರಿಕೆಯಲ್ಲಿಯೂ ವ್ಯಾಪಕವಾಗಿ ಉಪಯೋಗವಾಗುತ್ತಿವೆ. (ಎಚ್.ಜಿ.ಎಸ್.)

**ಓಲೆಗ್ರಂಥಗಳು :** ತಾಳೆಯ ಮರದ ಗರಿಗಳನ್ನು ಹದಗೊಳಿಸಿ, ಅವುಗಳಲ್ಲಿ ಅಕ್ಷರಗಳನ್ನು ಕೊರೆದು ಸಿದ್ಧಪಡಿಸಿದ ಪುಸ್ತಕಗಳು. ಕಾಗದ ದೊರೆಯದಿದ್ದ ಪ್ರಾಚೀನ ಯುಗದ ಜ್ಞಾನ ತಲೆಮಾರಿನಿಂದ ತಲೆಮಾರಿಗೆ ಉಳಿದು ಬಂದಿರುವುದು ಇಂಥ ಗ್ರಂಥಗಳಿಂದಲೇ. (ನೋಡಿ—ಓಲೆಮರ)

ಓಲೆಗರಿಗಳನ್ನು ಬರೆವಣಿಗೆಗೆ ಉಪಯೋಗಿಸುತ್ತಿದ್ದುದನ್ನು ಪ್ಲಿನೀ (ಕ್ರಿ.ಶ. 23–79) ಎಂಬ ಪ್ರಕೃತಿಶಾಸ್ತ್ರಜ್ಞ ಉಲ್ಲೇಖಿಸಿದ್ದಾನೆ. ಭಾರತ ದೇಶವನ್ನು ಸಂದರ್ಶಿಸಿದ ಹ್ಯೂಯೆನ್ ತ್ಸಾಂಗ್ (ಕ್ರಿ. ಶ. 629–645) ಕೊಂಕಣಪುರದ ಉತ್ತರಕ್ಕೆ ತಾಳೆಮರಗಳ ಕಾಡಿರುವುದನ್ನೂ ಅವುಗಳ ಎಲೆಗಳನ್ನು ಜನ ಬರೆವಣಿಗೆಗಾಗಿ ಉಪಯೋಗಿಸುವುದನ್ನೂ ತಿಳಿಸಿದ್ದಾನೆ. ಸುಮಾರು ಕ್ರಿ.ಶ. 1030ರಲ್ಲಿ ಭಾರತಕ್ಕೆ ಬಂದಿದ್ದ ಅಲ್‌ಬೆರೂನಿ ಎಂಬ ಪ್ರವಾಸಿ ತಾಳೆ ಮತ್ತು ಭೂರ್ಜಪತ್ರಗಳನ್ನು ನೋಡಿದ್ದುದಾಗಿ ತಿಳಿಸಿದ್ದಾನೆ. ಖರ್ಜೂರ ಅಥವಾ ಉತ್ತುತ್ತೆ, ತೆಂಗಿನ ಮರಗಳನ್ನು ಹೋಲುವ ಒಂದು ಜಾತಿಯ ಮರಗಳು ದಕ್ಷಿಣ ದೇಶದಲ್ಲಿ ಬೆಳೆಯುತ್ತವೆ. ಅವುಗಳ ಹಣ್ಣುಗಳನ್ನು ತಿನ್ನುತ್ತಾರೆ. ಅವುಗಳ ಎಲೆಗಳು ಒಂದು ಗಜ ಉದ್ದವಾಗಿಯೂ ಮೂರು ಕೈಬೆರಳುಗಳಷ್ಟು ಅಗಲವಾಗಿಯೂ ಇವೆ. ಹೀಗೆಂದು ಆತ ಹೇಳಿದ್ದಾನೆ. ಜನ ಇವನ್ನು ತಾರೀ (ತಾಲ ಅಥವಾ ತಾರ) ಎಂದು ಕರೆಯುವರೆಂದೂ ಬರೆವಣಿಗೆಗೆ ಉಪಯೋಗಿಸುವರೆಂದೂ ಬರೆದಾದ ಮೇಲೆ ಎಲ್ಲ ಎಲೆಗಳನ್ನೂ ಅವುಗಳ ಮಧ್ಯದಲ್ಲಿ ಮಾಡಿದ ರಂಧ್ರದ ಮೂಲಕ ದಾರವನ್ನು ಹಾಕಿ ಒಟ್ಟಿಗೆ ಕಟ್ಟಿಡುವರೆಂದೂ ತಿಳಿಸಿದ್ದಾನೆ. ಸುಮಾರು ಕ್ರಿ.ಶ. 1441ರಲ್ಲಿ ಬಂದಿದ್ದ ಅಬ್ದುರ್ ರಜಾಕ್ ಎಂಬ ಪ್ರವಾಸಿ ವಿಜಯನಗರದಲ್ಲಿ ಓಲೆಗ್ರಂಥಗಳ ಬಳಕೆ ಇದ್ದುದನ್ನು ತಿಳಿಸಿ ಈ ಓಲೆಗರಿಗಳಲ್ಲಿ ತಾಲ ಮತ್ತು ಶ್ರೀತಾಲವೆಂಬ ಎರಡು ಬಗೆ ಇರುವುದನ್ನು ಗುರುತಿಸಿದ್ದಾನೆ. ತಾಲ ಎಲೆಯ ಮೇಲೆ ಕಬ್ಬಿಣದ ಕಂಠದಿಂದ ಬರೆಯುತ್ತಿದ್ದರೆಂದೂ ಶ್ರೀತಾಲದ ಎಲೆಯನ್ನು ಮೊದಲು ಕಪ್ಪುಮಾಡಿ, ಅದರ ಮೇಲೆ ಲೇಖನಿಯಂಥ, ಮೃದುವಾದ ಚೂಪು ಕಲ್ಲಿನಿಂದ ಬರೆಯುತ್ತಿದ್ದರೆಂದೂ ಆತ ತಿಳಿಸಿದ್ದಾನೆ. ಈ ರೀತಿ ಬರೆಯುತ್ತಿದ್ದುದನ್ನು ತಾನು ಕನ್ನಡ ಜಿಲ್ಲೆಗಳಲ್ಲಿಯೂ ದಕ್ಷಿಣ ಭಾರತದಲ್ಲಿಯೂ ಕಂಡುದಾಗಿ ಎ. ಹ್ಯಾಮಿಲ್ಟನ್ ಎಂಬಾತ ಹೇಳಿದ್ದಾನೆ. ರಾಜೇಂದ್ರಮಿತ್ರ ಅವರು ಬಂಗಾಲದಲ್ಲಿ ಚಂಡಿ ಗ್ರಂಥ ಓಲೆಯಲ್ಲಿರುವುದಾಗಿ ತಿಳಿಸಿದ್ದಾರೆ.



ಎಡದಿಂದ ಬಲಕ್ಕೆ 1, 3, 5 ಮೂರು ಬಗೆಯ ಕಂಠಗಳು. ಎರಡನೆಯದು ಕಂಠದ ಒರೆ. 4ನೆಯದು ಒರೆಯಲ್ಲಿ ಇಟ್ಟ ಕಂಠ.

ಈ ಓಲೆ ಅಥವಾ ತಾಳೆ ಗ್ರಂಥಗಳು ಭಾರತದ ವಿವಿಧ ಭಾಗಗಳಲ್ಲಿ ದೊರೆತರೂ ಒರಿಸ್ಸ, ಗುಜರಾತ್, ಮದ್ರಾಸು, ಕೇರಳ ಮತ್ತು ಮೈಸೂರು ಪ್ರಾಂತ್ಯಗಳಲ್ಲಿ ಹೇರಳವಾಗಿ ದೊರೆಯುತ್ತವೆ. ಮೈಸೂರಿನ ಕನ್ನಡ ಅಧ್ಯಯನ ಸಂಸ್ಥೆ ಮತ್ತು ಪ್ರಾಚ್ಯ ವಿದ್ಯಾ ಸಂಶೋಧನಾಲಯಗಳಲ್ಲಿ, ಮದ್ರಾಸು ಓರಿಯಂಟಲ್ ಮ್ಯಾನ್ಯುಸ್ಕ್ರಿಪ್ಟ್ಸ್ ಲೈಬ್ರರಿ ಮತ್ತು ಅಡಿಯಾರ್ ಲೈಬ್ರರಿಗಳಲ್ಲಿ, ತಿರುವಾಂಕೂರು ಸರಸ್ವತಿ ಮಹಲ್ ಲೈಬ್ರರಿಯಲ್ಲಿ ಬಹುಮಟ್ಟಿಗೆ ಹಸ್ತಪ್ರತಿಗಳೆಲ್ಲವೂ ಓಲೆಯಲ್ಲಿವೆ. ಅಂತೆಯೇ ಅನೇಕ ಮಠಗಳಲ್ಲಿ, ಮಂದಿರಗಳಲ್ಲಿ, ಮನೆಗಳಲ್ಲಿ ಇವನ್ನು ಕಾಣಬಹುದು.

ಗುಪ್ತರ ಲಿಪಿಯಲ್ಲಿ ಬರೆದ ಹಳೆಯ ಓಲೆಗ್ರಂಥವನ್ನು (6ನೆಯ ಶತಮಾನ) ಜಪಾನಿನ ಹೊರಿಂಜಿ ಎಂಬ ಮಠದಲ್ಲಿ ಕಾಪಾಡಲಾಗಿದೆ. ತಕ್ಲಮಕನ್ ಮರುಭೂಮಿಯಲ್ಲಿ ಇನ್ನೂ ಹಳೆಯ ಕಾಲದ ಓಲೆಗ್ರಂಥಗಳಿರಬಹುದೆಂದೂ ನಿಖರವಾಗಿ ಹೇಳಲು ಯಾವ ಆಧಾರಸಾಹಿತ್ಯವೂ ಇಲ್ಲವೆಂದೂ ಆದರೆ ನೇಪಾಳದಲ್ಲಿ ಗುಪ್ತಲಿಪಿಯ ಹಸ್ತಪ್ರತಿಗಳನ್ನು (7ನೆಯ ಶತಮಾನ) ನೋಡಿದುದಾಗಿಯೂ ಗುಜರಾತಿನಲ್ಲಿರುವ ಪಾಟನ್ ಹಸ್ತಪ್ರತಿಗಳ ಭಂಡಾರ ಅತ್ಯಂತ ಪ್ರಾಚೀನವಾದ ಹಸ್ತಪ್ರತಿಗಳನ್ನು ಹೊಂದಿದ್ದು, ಕ್ರಿ.ಶ. 1101ರ (ವಿ.ಸಂ. 1157) ನಿಶಿತಚೂರ್ಣಿ ಎಂಬ ಹಸ್ತಪ್ರತಿ ಇರುವುದಾಗಿಯೂ ಬರೋಡ ಓರಿಯಂಟಲ್ ಇನ್‌ಸ್ಟಿಟ್ಯೂಟಿನ ನಿರ್ದೇಶಕರಾದ ಬಿ. ಭಟ್ಟಾಚಾರ್ಯ ತಿಳಿಸಿದ್ದಾರೆ.

ಜಯಸಲ್ಮೀರ್‌ನಲ್ಲಿ ಜೈನತತ್ತ್ವಕ್ಕೆ ಸಂಬಂಧಪಟ್ಟ ಜ್ಞಾನಭಂಡಾರಗಳಿವೆ. ಪುರಾತನ ಓಲೆ ಹಸ್ತಪ್ರತಿಗಳ ಸಂಗ್ರಹ ಶಂಭುನಾಥ್ ಜೈನಮಂದಿರದ ಹತ್ತಿರವಿರುವ ಕೋಟೆಯಲ್ಲಿವೆ. ಇವುಗಳಲ್ಲಿ ಕುವಲಯಮಾಲಾ, ಮಹಾಪುರುಷ ಚರಿತ, ವಸುದೇವ ಹಿಂಡಿ ಮೊದಲಾದ ಮುಖ್ಯ ಗ್ರಂಥಗಳಿವೆ. ಪಂಚಮಿಕಹ ಎಂಬ ಗ್ರಂಥದ ಹಸ್ತಪ್ರತಿಯ ಕಾಲ (ವಿ.ಶ. 1109) ಕ್ರಿ.ಶ. 1053 ಎಂದು ಜೋಧಪುರದ ಜಿನಸಾಗರ ಸೂರಿ ಹೇಳುತ್ತಾರೆ.

ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಹಸ್ತಪ್ರತಿಗಳ ಕೋಶಾಗಾರದಲ್ಲಿ ಕಾಲ ಉಲ್ಲೇಖವಾಗಿರುವ ಪುರಾತನ ಗ್ರಂಥವೆಂದರೆ ಕ್ರಿ.ಶ. ಸುಮಾರು 1235ರಲ್ಲಿದ್ದ ಗುಣವರ್ಮನ ಪುಷ್ಪದಂತ ಪುರಾಣವೆಂಬ ಚಂಪೂಗ್ರಂಥ. ಈ ಪ್ರತಿಯ ಕಾಲ ಕ್ರಿ.ಶ. 1436. ಇದಕ್ಕಿಂತಲೂ ಹಿಂದಿನದಾದ ಓಲೆಗ್ರಂಥವೆಂದರೆ ಶ್ರವಣಬೆಳಗೊಳದ ಜೈನಮಠದಲ್ಲಿರುವ ಪಂಪನ ಆದಿಪುರಾಣ. ಪ್ರತಿಯ ಕಾಲ ಕ್ರಿ.ಶ. 1379. ಕಾಲ ನಮೂದಾಗಿರುವ ಮತ್ತೊಂದು ಮುಖ್ಯ ಪ್ರತಿಯೆಂದರೆ ಕ್ರಿ.ಶ. 1554ರಲ್ಲಿ ನಕಲಾಗಿರುವ ಗದುಗಿನ ನಾರಣಪ್ಪನ ಮಹಾಭಾರತದ ಪ್ರತಿ. ಇದರ ಪ್ರತಿ ಪತ್ರದ ಎರಡು ರಂಧ್ರಗಳಿಗೂ ಬೆಳ್ಳಿಯ ಉಂಗುರಗಳನ್ನು ಅಳವಡಿಸಲಾಗಿದೆ. ಕಟ್ಟಲು ಪೋಣಿಸುವ ದಾರವನ್ನು ಅತ್ತಿತ್ತ ಎಳೆಯುವಾಗ ಹರಿಯದಿರಲೆಂಬ ಶ್ರದ್ಧೆಯಿಂದ ಈ ಬೆಳ್ಳಿಯ ಉಂಗುರಗಳನ್ನು ಅಳವಡಿಸಿರುವುದು ಅತ್ಯಂತ ಮೆಚ್ಚುಗೆಯ ವಿಷಯವಾಗಿದೆ.

ಪ್ರಾಚ್ಯವಿದ್ಯಾ ಸಂಶೋಧನಾಲಯದಲ್ಲಿರುವ ದೇವೀಸ್ತೋತ್ರ ಮತ್ತು ರಾಮಾಯಣದ ಭಾಗವಾದ ಸುಂದರಕಾಂಡ ಓಲೆಗ್ರಂಥಗಳು ಸೂಕ್ಷ್ಮಲಿಪಿಗೆ ಪ್ರಸಿದ್ಧವಾಗಿವೆ. ದೇವೀಸ್ತೋತ್ರದಲ್ಲಿ ಒಟ್ಟು 90 ಪತ್ರಗಳಿದ್ದು ಪ್ರತಿ ಪತ್ರವೂ $3\frac{1}{8} \times 1\frac{1}{8}$ ಅಂಗುಲ ಅಳತೆಯುಳ್ಳದ್ದಾಗಿದೆ. ಬರೆವಣಿಗೆಯ ಅಳತೆ $2\frac{1}{8} \times 1\frac{1}{8}$ ಅಂಗುಲ. ಈ ಉದ್ದದಲ್ಲಿ 25 ಅಕ್ಷರಗಳನ್ನು ಕೊರೆದಿದ್ದಾರೆ. ಅಗಲದಲ್ಲಿ 18 – 23 ಪಂಕ್ತಿಗಳಿವೆ. ಇದು ತೆಲುಗು ಲಿಪಿಯಲ್ಲಿದೆ. ಸುಂದರಕಾಂಡ ಗ್ರಂಥಾಕ್ಷರದಲ್ಲಿದೆ. ಇದರ ಪ್ರತಿಪತ್ರವೂ $4\frac{1}{8} \times 1\frac{3}{8}$ ಅಂಗಲ ಅಳತೆಯುಳ್ಳದ್ದಾದರೂ ಬರೆವಣಿಗೆಯ ಭಾಗದ ಅಳತೆ $3\frac{3}{8} \times 1\frac{1}{8}$ ಅಂಗುಲ. ಈ ಉದ್ದದಲ್ಲಿ 47 ಅಕ್ಷರಗಳಿದ್ದು, ಅಗಲದಲ್ಲಿ 21 ರಿಂದ 25 ಸಾಲುಗಳಿವೆ. ಇವುಗಳ ಜೊತೆಗೆ ಇದೇ ಮಾದರಿಯಲ್ಲಿ ಬರೆದಿರುವ, ಹೆಸರು ತಿಳಿಯದ ಯಾವುದೋ ಗ್ರಂಥದ ಒಂದು ಪತ್ರದ ಅಳತೆ $18 \times 1\frac{1}{4}$ ಅಂಗುಲ; $1\frac{1}{4}$ ಅಂಗುಲ ಅಗಲದಲ್ಲಿ 22 ಪಂಕ್ತಿಗಳಿದ್ದು 18 ಅಂಗುಲ ಅಗಲದಲ್ಲಿ 420 ಅಕ್ಷರಗಳಿವೆ ಎಂದಾಗ ಬೆರಗು ಹುಟ್ಟಿ ಕುತೂಹಲ ಕೆರಳುವುದು ಸಹಜವಾಗಿದೆ.



ಓಲೆಗ್ರಂಥದ ಒಂದು ಮಾದರಿ

ತಾಲ ಮತ್ತು ಶ್ರೀತಾಲಗಳಲ್ಲಿ ತಾಳೆಗರಿಗಳನ್ನೇ ಹೆಚ್ಚಾಗಿ ಉಪಯೋಗಿಸಿರುವುದು ಕಂಡುಬರುತ್ತದೆ. ಏಕೆಂದರೆ ಇದು ಸ್ವಲ್ಪ ಮಂದವಾಗಿ ಅಗಲವಾದ ಕಬ್ಬಿಣದ ಸಲಾಕೆಯಂಥ ಕಂಠದಿಂದ ಕೊರೆಯಲು ಅನುಕೂಲವಾಗಿತ್ತು. ಒಂದು ಸಾರಿ ಕೊರೆದ ಅಕ್ಷರಗಳು ಮತ್ತೆ ಅಳಿಸಿಹೋಗುತ್ತವೆಂಬ ಹೆದರಿಕೆ ಇರಲಿಲ್ಲ. ಕೊರೆದ ಅಕ್ಷರಗಳ ಮೇಲೆ ಕಪ್ಪುಬಣ್ಣದ ಪುಡಿಯನ್ನು ಹಚ್ಚಿದರೆ ಕೊರೆದ ಭಾಗದಲ್ಲಿ ಆ ಬಣ್ಣ ಸೇರಿ ಅಕ್ಷರಗಳು ಸ್ಪಷ್ಟವಾಗಿ ಕಾಣುತ್ತಿದ್ದುವು. ಈ ಕಪ್ಪುಬಣ್ಣ ಮಾಸಿ ಹೋದಾಗ ಮತ್ತೆ ಆ ಬಣ್ಣವನ್ನೇ ಉಪಯೋಗಿಸಿ ಚೆನ್ನಾಗಿ ಕಾಣುವಂತೆ ಮಾಡಬಹುದಾಗಿತ್ತು.

ಶ್ರೀತಾಲ ಎಲೆ ಬಹಳ ತೆಳುವಾಗಿರುವುದರಿಂದ ಕೊರೆಯಲು ಸಾಧ್ಯವಾಗುತ್ತಿರಲ್ಲಿಲ್ಲ. ಆದರೆ ಇದು ನಯವಾಗಿ ಮೃದುವಾಗಿದ್ದು ಮಸಿಯನ್ನು ಸುಲಭವಾಗಿ ಹೀರಬಲ್ಲುದಾಗಿದ್ದಿತು. ಬರೆದಾಗ ಚೆನ್ನಾಗಿ ಕಂಡರೂ ಯಾವುದೇ ಕಾರಣದಿಂದ ಅಳಿಸಿಹೋದಾಗ ಅದನ್ನು ಮತ್ತೆ ತುಂಬುವುದು ಸಮಸ್ಯೆಯಾಗಿ ಪರಿಣಮಿಸುತ್ತಿತ್ತು. ಅಂತಹದೇ ಮತ್ತೊಂದು ಪ್ರತಿ ದೊರೆಯದೆ ಅದನ್ನು ತುಂಬುವಂತಿರಲಿಲ್ಲ. ಆದ್ದರಿಂದಲೇ ಶ್ರೀತಾಲಕ್ಕಿಂತ ಹೆಚ್ಚಾಗಿ ತಾಳೆಗರಿಯನ್ನೇ ಎಲ್ಲಡೆಯೂ ಬಳಸಿದ್ದಾರೆ.

ತಾಳೆ ಎಲೆಗಳನ್ನು ಒಣಗಿಸಿ ಬೇಯಿಸಿ ಅಥವಾ ನೀರಿನಲ್ಲಿ ನೆನೆಸಿ ಮತ್ತೆ ಒಣಗಿಸಿ ಬೇಕಾದ ಅಳತೆಗೆ ಕತ್ತರಿಸಿ ಬರೆಯಲು ಉಪಯೋಗಿಸುತ್ತಿದ್ದರು ಎಂಬುದಾಗಿ ರಾಜೇಂದ್ರಲಾಲ್ ಮಿತ್ರ ಅವರು ತಿಳಿಸುತ್ತಾರೆ. ಗಿಡದಿಂದ ಎಲೆಯ ಮೋತೆ ಹೊರಹೊರಟು ಇನ್ನೇನು ಬಿಚ್ಚಿ ಹರಡುತ್ತದೆ ಎನ್ನುವಷ್ಟರಲ್ಲಿ ಹಾಡೆಯನ್ನು ಕತ್ತರಿಸಿ



ಮಹಾಧವಳದ ಒಂದು ಪತ್ರ

ತಂದು, ಕೊನೆಯಪಕ್ಷ ಏಳು ದಿನಗಳ ವರೆಗಾದರೂ ಬಿಸಿಲಿನಲ್ಲಿ ಒಣಗಿಸುತ್ತಿದ್ದರು. ಅನಂತರ ಮೂರು ತಿಂಗಳವರೆಗಾದರೂ ನೆಲದಲ್ಲಿ ಹೂಳಿ, ತೆಗೆದು ಶುದ್ಧಗೊಳಿಸಿ, ಬೇಕಾದ ಆಳತೆಗೆ ಎಲೆಗಳನ್ನು ಕತ್ತರಿಸಿ ಅಡಿಗೆಮನೆಯ ಅಟ್ಟಗಳಲ್ಲಿಡುತ್ತಿದ್ದರು. ಅಡಿಗೆಮನೆಯ ಹೊಗೆಯಿಂದ ಅವು ಹದಗೊಳ್ಳುತ್ತಿದ್ದುವು. ಹೀಗೆ ಹದಗೊಂಡವನ್ನು ತಮಗೆ ಬೇಕಾದಾಗ ತೆಗೆದು ಉಪಯೋಗಿಸುತ್ತಿದ್ದರು—ಎಂಬುದಾಗಿ ಬಿ. ಭಟ್ಟಾಚಾರ್ಯರು ತಿಳಿಸುತ್ತಾರೆ.

ತಾಳೆಯ ಗರಿಗಳನ್ನು ಹಸಿದಾಗಿರುವಾಗ ಕುದಿನೀರಿನಲ್ಲಿ ಬೇಯಿಸಿ ನೆರಳಲ್ಲಿ ಒಣಗಿಸಿ ನುಣುಪಾದ ಗಾರೆಯ ಕಲ್ಲಿನಿಂದ ಉಜ್ಜಿ ಮೃದುವಾಗಿ ಮಾಡುತ್ತಾರೆ. ಆಗ ಅದರ ಎರಡು ಪಕ್ಕಗಳೂ ಸಮತಲವಾಗುತ್ತವೆ. ಬರೆಹಕ್ಕೆ ಯೋಗ್ಯವಾಗುತ್ತವೆ—ಎಂದು ಡಿ. ಎಲ್. ನರಸಿಂಹಾಚಾರ್ ತಿಳಿಸಿದ್ದಾರೆ.

ಹೀಗೆ ಓಲೆಗರಿಗಳನ್ನು ವಿವಿಧ ರೀತಿಯಲ್ಲಿ ಹದಗೊಳಿಸಿ ಬರೆವಣಿಗೆಗೆ ಉಪಯೋಗಿಸುವಾಗ ವಿಷಯದ ಜೊತೆಗೆ ವಿಷಯನಿರೂಪಣೆಗೆ ಸಹಾಯಕವಾಗಿ ಕೆಲವು ಪ್ರತಿಗಳಲ್ಲಿ ಅಲ್ಲಲ್ಲಿಯೇ ಚಿತ್ರಗಳನ್ನೂ ಕೊರೆದಿದ್ದಾರೆ. ಇಂಥ ಚಿತ್ರಗಳನ್ನು ಮೂಡಬಿದರೆ ಮಠದಲ್ಲಿರುವ ಅರ್ಧಮಾಗಧಿ ಭಾಷೆಯ ಕನ್ನಡ ಶಾಸನ ಲಿಪಿಯ ಜೈನ ಧವಳಗ್ರಂಥದಲ್ಲಿಯೂ ನೇಮಿಚಂದ್ರನ ನೇಮಿನಾಥಪುರಾಣ ಹಸ್ತಪ್ರತಿಯಲ್ಲಿಯೂ ಕಾಣಬಹುದಾಗಿದೆ.

ಈ ಓಲೆಗ್ರಂಥಗಳಲ್ಲಿ ವಿವಿಧ ರೀತಿಯ ಬರೆವಣಿಗೆಯನ್ನೂ ಒಂದೇ ಕೃತಿಯ ಹಲವಾರು ಪ್ರತಿಗಳನ್ನೂ ನಾವು ಕಾಣುತ್ತಿರುವುದು ಮೂಲಗ್ರಂಥಗಳನ್ನು ನಕಲುಮಾಡಿ ಜನರು ಉಪಯೋಗಿಸುತ್ತಿದ್ದುದರಿಂದ. ನಮಗೆ ಕೃತಿಕಾರನೇ ಬರೆದ ಪ್ರತಿಗಳು ದೊರೆಯುವುದು ದುರ್ಲಭ. ದೊರೆಯುವ ಪ್ರತಿಗಳೆಲ್ಲವೂ ನಕಲುಗಳೇ. ಇಂಥನಕಲುಗಳನ್ನು ಮಾಡುವಾಗ್ಗೆ ವಿವಿಧ ಪ್ರತಿಕಾರರು ವಿವಿಧ ರೀತಿಯ ಬರೆವಣಿಗೆಯನ್ನು ಮಾಡಿದ್ದಾರೆ. ಆಯಾ ಭಾಷಾಗ್ರಂಥಗಳಲ್ಲಿ ಆಯಾ ಭಾಷಾಲಿಪಿಯನ್ನೇ ಸಾಮಾನ್ಯವಾಗಿ ಉಪಯೋಗಿಸಿದರೂ ಓದುಗರ ಇಚ್ಛೆಗೆ ಅನುಸಾರವಾಗಿ, ಆಯಾ ಪ್ರಾಂತದ ವಿಭಾಗದ ಜನರ ರೂಢಿಗೆ ತಕ್ಕಂತೆ ಕನ್ನಡ, ತಮಿಳು, ತೆಲುಗು, ತುಳು, ತಿಗಳಾರಿ, ನಾಗರಿ, ಗ್ರಂಥ—ಮೊದಲಾದ ಹಲವಾರು ಲಿಪಿಗಳನ್ನು ಬೇರೆ ಬೇರೆ ಭಾಷಾಗ್ರಂಥಗಳಲ್ಲಿ ಬಳಸಿದ್ದಾರೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿರುವ ಭಾಷಾಭೂಷಣ ಹಸ್ತಪ್ರತಿ ಈ ಮಾದರಿಗೆ ಅತ್ಯಂತ ಉತ್ತಮ ನಿದರ್ಶನವಾಗಿದೆ. ಇದರಲ್ಲಿ ನೋಡುವುದು ಮಲಯಾಳಿ ಲಿಪಿಯನ್ನು, ಓದುವುದು ಸಂಸ್ಕೃತ ಭಾಷೆಯನ್ನು ತಿಳಿಯುವುದು ಕನ್ನಡ ವ್ಯಾಕರಣವನ್ನು.

ನಕಲುಮಾಡುವ ವ್ಯಕ್ತಿಗಳು ಬಹುಪ್ರಯಾಸದಿಂದ ಈ ಕೆಲಸ ನಿರ್ವಹಿಸುತ್ತಿದ್ದರು. ಕೆಲವರು ಅದನ್ನೇ ಒಂದು ವೃತ್ತಿಯನ್ನಾಗಿ ಮಾಡಿಕೊಂಡಿದ್ದರು. ನಕಲುಗಳನ್ನೆತ್ತಿದ ಪ್ರತಿಕಾರರು ಪ್ರತಿಗಳ ಕೊನೆಯಲ್ಲಿ ತಂತಮ್ಮ ವಿಳಾಸಗಳನ್ನು ಕೊಡುವುದರ ಜೊತೆಗೆ ಕೆಲವರು ತಿಥಿ ವಾರ ನಕ್ಷತ್ರಗಳನ್ನೂ ಕೊಟ್ಟಿದ್ದಾರೆ. ತಪ್ಪಿದ್ದರೆ ತಿದ್ದಿಕೊಳ್ಳಿರೆಂದು ಪ್ರಾರ್ಥಿಸಿದ್ದಾರೆ.

ರಾಸಾಯನಿಕ ಕ್ರಿಯೆಯಿಂದ ತಯಾರಾದ ಕಾಗದಕ್ಕಿಂತಲೂ ಪ್ರಕೃತಿಸಹಜವಾಗಿ ಬಂದ ಓಲೆಗರಿ ಹೆಚ್ಚು ಬಾಳಿಕೆ ಬರುವಂಥದೂ ಬಹುಬೇಗ ಹುಳುಗಳ ಹೊಡೆತಕ್ಕೆ ಬಲಿಯಾಗದುದೂ ಆದರೂ ಶೀತೋಷ್ಣಗಳಿಂದಲೂ ಹುಳುಗಳ ಕಾಟದಿಂದಲೂ ಹೊರತಾದುದಲ್ಲ. ಆದುದರಿಂದ ಈ ಅಮೂಲ್ಯ ಜ್ಞಾನಸಂಪತ್ತನ್ನು ರಕ್ಷಿಸುವಲ್ಲಿ ಹಲವರು ಹಲವು ಮಾರ್ಗಗಳನ್ನು ಅನುಸರಿಸಿದ್ದಾರೆ. ಕೆಲವರು ಅವನ್ನು ಬಣ್ಣದ ಬಟ್ಟೆಗಳಲ್ಲಿ ಸುತ್ತಿಟ್ಟು ದೂಳು ಮತ್ತು ಹುಳುಗಳಿಂದ ರಕ್ಷಿಸಿದ್ದಾರೆ. ಈ ಬಟ್ಟೆಯಲ್ಲಿ ಕೆಂಪು ಮತ್ತು ಹಳದಿ ಬಣ್ಣದವೂ ರೇಷ್ಮೆ ಬಟ್ಟೆಯೂ ಹುಳುಗಳನ್ನು ದೂರವಿಡಬಲ್ಲ ಶಕ್ತಿಯನ್ನು ಪಡೆದಿವೆಯೆಂದು ತಿಳಿದುಬರುತ್ತದೆ. ಕೆಲವರು ಓಲೆಕಟ್ಟಿನ ಆಕಾರಕ್ಕೆ ತಕ್ಕ ಮರದ ಪೆಟ್ಟಿಗೆಗಳಲ್ಲಿಟ್ಟು ಕಾಪಾಡಿದ್ದಾರೆ. ಮತ್ತೆ ಕೆಲವೆಡೆಗಳಲ್ಲಿ ಘೋಡಾವಚ, ಅದಕ್ಕಾಗಿಯೇ ಸಿದ್ಧಪಡಿಸಿದ ಎಣ್ಣೆ—ಮೊದಲಾದುವುಗಳನ್ನೂ ಉಪಯೋಗಿಸುತ್ತಿದ್ದಾರೆ. ಇವುಗಳ ಸಂಗ್ರಹ, ಸಂರಕ್ಷಣೆ ಮತ್ತು ಪ್ರಕಟಣೆಗಾಗಿ ಹಲವಾರು ಸಂಸ್ಥೆಗಳು ಸ್ಥಾಪಿತವಾಗಿ ಕೆಲಸಮಾಡುತ್ತಿವೆ. ನೋಡಿ—**ಶಪ್ಪೈರಸ್.** (ಎಸ್.ಬಿ.ಎಸ್.)

**ಓಲೆಮರ:** ಪಾಮೇಸೀ ಅಥವಾ ಅರಿಕೇಸೀ ಕುಟುಂಬಕ್ಕೆ ಸೇರಿದ ಕಾರಿಫ ಜಾತಿಯ ವೃಕ್ಷ. ಇದರಲ್ಲಿ ಸುಮಾರು 10 ಪ್ರಭೇದಗಳಿವೆ. ಇವುಗಳಲ್ಲಿ ಕಾರಿಫ ಟಾಲಿಯೇರ ಮತ್ತು ಕಾ.ಅಂಬ್ರ್ಯಾಕ್ಯುಲಿಫೆರ ಪ್ರಭೇದಗಳು ಮುಖ್ಯವಾದುವು. ಇವಕ್ಕೆ ಶ್ರೀತಾಲ, ತಾಲ, ತಾರ, ತಾಡಪತ್ರ ಮುಂತಾದ ಇತರ ಸಾಮಾನ್ಯ ಹೆಸರುಗಳೂ ಉಂಟು. ಏಷ್ಯದ ಉಷ್ಣಪ್ರದೇಶಗಳಲ್ಲೆಲ್ಲ ಇದು ವ್ಯಾಪಿಸಿದೆ. ದಕ್ಷಿಣ ಭಾರತ, ಮಲಯ, ಅಂಡಮಾನ್ ದ್ವೀಪಗಳು ಮುಂತಾದೆಡೆಗಳಲ್ಲಿ ಹೇರಳವಾಗಿ ಕಾಣಬರುತ್ತದೆ. ಸಿಂಹಳ, ಬರ್ಮಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುವುದಲ್ಲದೆ ಇದನ್ನು ನೆಟ್ಟು ಬೆಳೆಸುವುದೂ ಉಂಟು. ಉದ್ಯಾನಗಳಲ್ಲಿ ಅಲಂಕಾರಸಸ್ಯವಾಗಿ ಇದನ್ನು ಬೆಳೆಸಿರುವುದನ್ನು ಕಾಣಬಹುದು. ಬೆಳೆವಣಿಗೆ ಬಲು ನಿಧಾನ. ಸಸ್ಯ ತೆಂಗಿನಮರವನ್ನು ಹೋಲುತ್ತದೆ. ತೆಂಗಿನಂತೆ ಸುಮಾರು 60′–80′ ಎತ್ತರಕ್ಕೆ ಬೆಳೆಯುತ್ತದೆ. ಕಾಂಡ ಕಂಬದಂತೆ ನೇರ, ಕವಲೊಡೆಯುವುದಿಲ್ಲ. ತುದಿಯಲ್ಲಿ ಗರಿಗಳ ಮಕುಟವಿದೆ. ಎಲೆಗಳು ಹಸ್ತಾಕಾರದಲ್ಲಿದ್ದು (ಪಾಮೇಟ್) ಅಗಲವಾಗಿ ಬೀಸಣಿಗೆಯಂತೆ ಕಾಣುತ್ತವೆ. ಒಂದೊಂದಕ್ಕೂ ತುಂಬ ಉದ್ದವಾದ (5′–10′) ತೊಟ್ಟಿದೆ. ತೊಟ್ಟಿನ ಎರಡೂ ಅಂಚುಗಳಲ್ಲಿ ಮುಳ್ಳುಗಳಿರುವುದೊಂದು ವೈಶಿಷ್ಟ್ಯ. ಎಲೆಯ ಅಲಗು 80–100 ವಿಭಾಗಗಳಾಗಿ ಸೀಳುಗೊಂಡಿದೆ. ಕಾಂಡದ ತುದಿಯ ಸುತ್ತ ಹಸಿರು ಎಲೆಗಳ ಕೆಳಗೆ ಒಣಗಿದ ಗರಿಗಳು ತೂಗುಬಿದ್ದಿರುವುದುಂಟು. ಪ್ರಭೇದಕ್ಕನುಗುಣವಾಗಿ ಮರಕ್ಕೆ 20–80 ವರ್ಷ ವಯಸ್ಸಾದಾಗ, ಕಾಂಡದ ತುಟ್ಟತುದಿಯಲ್ಲಿ ಹೂಗೊಂಚಲು ಮೂಡಲು ಆರಂಭವಾಗುತ್ತದೆ. ಹೂ ಬಿಡುವ ಮುನ್ನ ಗರಿಗಳೆಲ್ಲ ಉದುರಿ ಹೋಗುವುದೂ ಮರ ತನ್ನ ಜೀವಿತದಲ್ಲಿ ಒಮ್ಮೆ ಮಾತ್ರ ಹೂ ಬಿಡುವುದೂ ಇದರ ಸೋಜಿಗಗಳು. ಹೂಗೊಂಚಲು ತಾಳ ಗುಚ್ಛ (ಸ್ಪೇಡಿಕ್ಸ್) ಮಾದರಿಯದು. ಬೃಹದಾಕಾರದ (ಉದ್ದ 10′–20′) ಇದು ವಿಪುಲವಾಗಿ ಕವಲೊಡೆದಿರುತ್ತದೆ. ಒಂದೊಂದು ಕವಲಿನಲ್ಲಿಯೂ ಹಲವಾರು ಕದಿರುಗೊಂಚಲುಗಳು (ಸ್ಪೈಕ್ಸ್) ಮತ್ತು ಅವುಗಳಲ್ಲಿ ಜೋಡಣೆಗೊಂಡಿರುವ ಅಸಂಖ್ಯಾತವಾದ ಪುಟ್ಟ ಹೂಗಳು ಇವೆ. ಹೂಗೊಂಚಲು ಹೊರಬಂದು ಸಂಪೂರ್ಣವಾಗಿ ಅರಳಿದಾಗ ಮರ ತೇರಿನಂತೆ ಬಹು ಅಂದವಾಗಿ ಕಾಣುತ್ತದೆ. ಬಹುಶಃ ಈ ಕಾರಣಕ್ಕಾಗಿಯೇ ಇದಕ್ಕೆ ಕಾರಿಫ ಎಂದು ಹೆಸರು ಬಂದಿರುವುದು (ಗ್ರೀಕ್ ಭಾಷೆಯಲ್ಲಿ ಕಾರಿಫ ಎಂದರೆ ತುದಿ ಎಂದು ಅರ್ಥ). ಹೂವಿನ ರಚನೆ ಈ ರೀತಿ ಇದೆ: ಮೂರು ಮೂರರಂತೆ ಜೋಡಣೆಗೊಂಡಿರುವ ಆರು ಪೆರಿಯಾಂತುಗಳು, ಆರು ಕೇಸರಗಳು ಮತ್ತು ಮೂರು ಕಾರ್ಪೆಲ್ಲುಗಳನ್ನೊಳಗೊಂಡ ಉಚ್ಚ ಸ್ಥಾನದ ಅಂಡಾಶಯ. ಅಂಡಕೋಶದಲ್ಲಿ 3 ಕೋಣೆಗಳಿವೆ. ಒಂದೊಂದರಲ್ಲಿಯೂ ಒಂದೊಂದು ಅಂಡಕವಿದೆ. ಮೆದುವಾಗಿ ಗುಂಡಾಗಿರುವ ಹಣ್ಣಿನಲ್ಲಿ ಒಂದೇ ಬೀಜವಿರುತ್ತದೆ. ಈ ಮಾದರಿಯನ್ನು ಅಷ್ಟಿಫಲ (ಡ್ರೂಪ್) ಎನ್ನುತ್ತಾರೆ. ಬೀಜಗಳು ಬಲಿತಾದ ಮೇಲೆ ಮರ ಸತ್ತುಹೋಗುತ್ತದೆ.



ಓಲೆಮರ ತೆಂಗಿನಮರದಂತೆಯೆ ತುಂಬ ಉಪಯುಕ್ತವಾದುದು. ಇದರ ಎಲೆಗಳನ್ನು ಛಾವಣಿಗಳನ್ನು ಮುಚ್ಚಲೂ ಬೀಸಣಿಗೆ, ಚಾಪೆ, ಕೊಡೆ, ಬುಟ್ಟಿ ಮುಂತಾದುವನ್ನು ಮಾಡಲೂ ಬಳಸುತ್ತಾರೆ. ಅಲ್ಲದೆ ಹಿಂದಿನ ಕಾಲದಲ್ಲಿ ಗರಿಗಳನ್ನು ಕತ್ತರಿಸಿ ಹದಗೊಳಿಸಿ ಬರೆವಣಿಗೆಗಾಗಿ ಉಪಯೋಗಿಸುತ್ತಿದ್ದರು (ನೋಡಿ—ಓಲೆ ಗ್ರಂಥಗಳು). ಗರಿಗಳ ತೊಟ್ಟಿನಿಂದ ದೃಢವಾದ ಕಂದುಬಣ್ಣದ ಕಾಗದ ತಯಾರಿಸುತ್ತಾರೆ. ಕಾಂಡದಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಪಿಷ್ಟವಿದೆ. ಅವನ್ನು ಹೊರತೆಗೆದು ಒಂದು ವಿಧದ ಅಕ್ಕಿಯನ್ನು (ಸ್ಯಾಗೊ) ತಯಾರಿಸುವುದುಂಟು. ಕಾಂಡದಿಂದ ನಾರನ್ನೂ ತೆಗೆಯಬಹುದು. ಕೆಲವು ಕಡೆ ಎಳೆಯ ಕಾಯಿಗಳನ್ನು ತಿನ್ನುವ

ರೂಢಿಯಿದೆ. ಅವು ಹಣ್ಣಾಗಿ ಬಲಿಯುತ್ತಹೋದಂತೆ ಬೀಜಗಳು ವಿಷಪೂರಿತವಾಗುತ್ತವೆ. ಇಂಥ ಬೀಜಗಳನ್ನು ಜಜ್ಜಿ ತಯಾರಿಸಿದ ಸರಿಯನ್ನು ಕೆರೆ, ನದಿಗಳಲ್ಲಿ ಕದಡಿದರೆ ಆ ನೀರು ಕುಡಿದ ಮೀನುಗಳು ನಿಶ್ಚೇತನಗೊಳ್ಳುತ್ತವೆ. ಮೀನುಗಳನ್ನು ಹಿಡಿಯಲು ಈ ವಿಧಾನವನ್ನನುಸರಿಸುತ್ತಾರೆ. ಬೀಜಗಳು ಗಟ್ಟಿಯಾಗಿ ಬಿಳಿಯ ಬಣ್ಣಕ್ಕಿರುತ್ತವೆ. ಇವುಗಳಿಂದ ಮಣಿಗಳನ್ನೂ ಗುಂಡಿಗಳನ್ನೂ ಮಾಡುತ್ತಾರೆ.

ಕಾರಿಫ ಜಾತಿಯ ಇನ್ನೊಂದು ಪ್ರಭೇದ ಕಾ.ಇಲೇಟ ಎಂಬುದು ಬರ್ಮ, ಜಾವ, ಅಂಡಮಾನ್ ದ್ವೀಪಗಳು ಮತ್ತು ಫಿಲಿಪೀನ್ಸ್‌ಗಳಲ್ಲಿ ಬೆಳೆಯುತ್ತದೆ. ಕಾ.ಟಾಲಿಯೇರ ಮತ್ತು ಕಾ.ಅಂಬ್ರಾಕ್ಯುಲಿಫೆರಗಳಂತೆಯೇ ಇರುವ ಇದೂ ಹಲವು ರೀತಿಯಿಂದ ಉಪಯುಕ್ತ. ಒರಟಾದ ಗರಿಗಳಿಂದ ಚಾಪೆ, ಹಾಯಿಪಟ ಮುಂತಾದುವನ್ನೂ ನಯವಾದ ಮತ್ತು ಉತ್ತಮವಾದ ಗರಿಗಳಿಂದ ಹ್ಯಾಟುಗಳನ್ನೂ ಬುಟ್ಟಿಗಳನ್ನೂ ಮಾಡುತ್ತಾರೆ. ಎಳೆಯ ಗರಿಗಳ ತೊಟ್ಟಿನಿಂದ ಪಡೆಯಬಹುದಾದ ನಾರನ್ನು ಬ್ಯಾಂಗ್‌ಕಾಕ್ ಹ್ಯಾಟ್ ಮಾಡುವುದಕ್ಕೂ ಒರಟು ಬಟ್ಟೆಯನ್ನು ನೇಯುವುದಕ್ಕೂ ಉಪಯೋಗಿಸುತ್ತಾರೆ. ಈ ಬಟ್ಟೆಯಿಂದ ಚೀಲಗಳು, ತೆರೆಗಳು ಮತ್ತು ಹೊದಿಕೆಗಳನ್ನು ತಯಾರಿಸಬಹುದು.

ಈ ಜಾತಿಯ ಸಸ್ಯಗಳನ್ನು ಬೀಜಗಳಿಂದ ವೃದ್ಧಿ ಮಾಡುತ್ತಾರೆ. ಜೌಗಿಲ್ಲದ, ಫಲವತ್ತಾಗಿರುವ ಗೋಡುಮಣ್ಣಿನಲ್ಲಿ ಇವು ಚೆನ್ನಾಗಿ ಬೆಳೆಯುತ್ತವೆ. (ಡಿ.ಎಂ.)

**ಓಲ್ಡನ್‌ಬರ್ಗ್, ಹರ್ಮನ್ :** 1854–1920. ಪ್ರಾಚೀನ ಭಾರತದ ವಿವಿಧ ಮುಖಗಳನ್ನು ಸಂಶೋಧನಾತ್ಮಕ ದೃಷ್ಟಿಯಿಂದ ಅಭ್ಯಸಿಸಿ ಅನೇಕ ಉದ್ಗ್ರಂಥಗಳನ್ನು ರಚನೆ ಮಾಡಿರುವ ವಿದ್ವಾಂಸ. ಬರ್ಲಿನ್‌ನಲ್ಲಿ ಪ್ರಾಧ್ಯಾಪಕನಾಗಿದ್ದುಕೊಂಡು ಗೃಹ್ಯಸೂತ್ರಗಳನ್ನೂ (1886) ಋಗ್ವೇದದ ಸೂತ್ರಗಳನ್ನೂ (1888) ಇಂಗ್ಲಿಷ್ ಭಾಷೆಗೆ ಪರಿವರ್ತಿಸಿ, ವೈದಿಕಧರ್ಮ (1894) ಋಗ್ವೇದ ಟಿಪ್ಪಣಿಗಳ ಎರಡು ಸಂಪುಟಗಳು (1909, 1912)—ಇತ್ಯಾದಿ ಉದ್ಗ್ರಂಥಗಳನ್ನು ಬರೆದಿದ್ದಾನೆ. ಮಹಾಭಾರತದ ಹಸ್ತಪ್ರತಿಗಳನ್ನು ಕಲೆಹಾಕಿ, ಅವನ್ನೆಲ್ಲ ಪರಿಶೀಲಿಸಿ ಮಹಾಭಾರತದ ಉತ್ಪತ್ತಿ ಹಾಗು ಬೆಳವಣಿಗೆಯ ಬಗ್ಗೆ ಒಂದು ಅಪೂರ್ವ ಗ್ರಂಥವನ್ನು ಜರ್ಮನ್ ಭಾಷೆಯಲ್ಲಿ ಬರೆದಿದ್ದಾನೆ. ಪ್ರಾಚೀನ ಗದ್ಯಗ್ರಂಥಗಳ ಶೈಲಿಯನ್ನು ಕುರಿತು ಈತ ರಚಿಸಿದ ಗ್ರಂಥ ಮಹತ್ತ್ವದ್ದಾಗಿದೆ.

ಇದಲ್ಲದೆ ಪಾಲೀ ಭಾಷೆಯ ಕ್ಷೇತ್ರದಲ್ಲಿ ಈತ ಮಾಡಿದ ಸಾಧನೆ ಭಾರತೀಯ ಸಾಹಿತ್ಯಚರಿತ್ರೆಯಲ್ಲಿ ಒಂದು ಮುಖ್ಯ ಮೈಲಿಗಲ್ಲು. ವಿನಯಪಿಟಕ, ದೀಪವಂಶ ಇತ್ಯಾದಿ ಬೌದ್ಧಗ್ರಂಥಗಳ ಪ್ರಕಟನೆ ಆಸಕ್ತರಿಗೆ ಕೈದೀವಿಗೆಯಾಗಿದೆ. ಲಂಡನ್ನಿನ ಇಂಡಿಯ ಆಫೀಸ್ ಗ್ರಂಥಾಲಯದಲ್ಲಿರುವ ಪಾಲೀ ಹಸ್ತಪ್ರತಿಸೂಚಿಯನ್ನು ಈತನೇ ಸಿದ್ಧಪಡಿಸಿದ್ದಾನೆ. ಗೌತಮ ಬುದ್ಧನ ಜೀವನ ಹಾಗೂ ತತ್ತ್ವಜ್ಞಾನದ ಬಗ್ಗೆ ಈತ ಬರೆದಿರುವ ಗ್ರಂಥ ಹೆಸರುಗಳಿಸಿದೆ. (ಬಿ.ಆರ್.ಎಂ.)

**ಓಲ್ಡುವೈ :** ಮಾನವನ ಉಗಮ ಮತ್ತು ಅವನ ಇತಿಹಾಸಪೂರ್ವ ಸಂಸ್ಕೃತಿಗಳನ್ನು ತಿಳಿಯಲು ಬಹಳ ಮುಖ್ಯವಾದ ಸ್ಥಳ. ಪೂರ್ವ ಆಫ್ರಿಕದ ಟ್ಯಾಂಜ಼ಾನಿಯದ (ಈಗಿನ ಟಾಂಗನೀಕ) ಆಗ್ನೇಯ ಭಾಗದಲ್ಲಿನ ಸೆರೆಂಗಟಿ ಮೈದಾನದ ಒಂದು ಭಾಗ. ಪ್ಲಿಸ್ಟೊಸೀನ್ ಯುಗದ ಪ್ರಾರಂಭದಲ್ಲಿ ಉದಿಸಿದ ಶಿಲಾಪದರಗಳು ಇಲ್ಲಿನ ಓಲ್ಡುವೈ ನದಿಯ ಬಯಲಿನಲ್ಲಿ ಹರಡಿವೆ. ಪ್ರವಾಹದ ಕೊರೆತದಿಂದ ಇಲ್ಲಿ ಸುಮಾರು 300 ಅಡಿಗಳ ಆಳವಿರುವ ಕಮರಿಯೊಂದು ಏರ್ಪಟ್ಟು, ಕಮರಿಯ ಪಕ್ಕಗಳಲ್ಲಿ ವಿವಿಧ ಶಿಲಾಪದರಗಳು ಕಂಡುಬಂದಿವೆ.

ಕಮರಿಯ ತಳದಿಂದ ಮೇಲಕ್ಕೆ ಕಂಡುಬರುವ ಪದರಗಳು ಈ ರೀತಿಯಾಗಿವೆ. ತಳದಲ್ಲಿ ಜ್ವಾಲಾಮುಖಿಯ ಸ್ಫೋಟದಿಂದ ಹುಟ್ಟಿದ ಬಸಾಲ್ಟ್ ಶಿಲೆಯ ದಪ್ಪನಾದ ಪದರಗಳಿದ್ದು, ಅದರ ಮೇಲೆ ಕೆಂಪು ಶಿಲೆಯ 100 ಅಡಿ ದಪ್ಪದ ಪದರವೂ ಅನಂತರ ಬೂದುಬಣ್ಣದ ಪದರವೂ ಮೇಲ್ಭಾಗದಲ್ಲಿ ಈಗಿನ ನೆಲಮಟ್ಟವೂ ಇವೆ. ಈ ಪ್ಲಿಸ್ಟೊಸೀನ್ ಶಿಲಾಪದರಗಳನ್ನು ನಾಲ್ಕು ಭಾಗಗಳಾಗಿ ವಿಂಗಡಿಸಬಹುದು. ತಳಗಿನಿಂದ ಮೊದಲನೆಯ ಪದರ ಮತ್ತು ಎರಡನೆಯ ಪದರದ ಕೆಳಭಾಗವನ್ನು ಒಂದು ಗುಂಪಾಗಿಯೂ ಎರಡನೆಯ ಪದರದ ಮೇಲ್ಭಾಗ, ಮೂರನೆಯ ಮತ್ತು ನಾಲ್ಕನೆಯ ಪದರಗಳನ್ನು ಮತ್ತೊಂದು ಗುಂಪಾಗಿಯೂ ಇತ್ತೀಚಿನ ಸಂಶೋಧನೆಗಳಿಂದ ನಿರ್ದೇಶಿಸಲಾಗಿದೆ. ಭೂವಿಜ್ಞಾನ ರೀತ್ಯ ಮೊದಲ ಮತ್ತು ಎರಡನೆಯ ಪದರಗಳ ಕೆಳಭಾಗದಲ್ಲಿ ಎಲ್ಲ ಫ್ರಾಂಚಿಯನ್ ಯುಗಕ್ಕೆ ಸೇರಿದ ಪ್ರಾಣಿಗಳ ಅವಶೇಷಗಳ ಮೊದಲ ನೆಲೆಗಳಲ್ಲಿ ಸಣ್ಣ ಆಕಾರದ ಸಸ್ತನಿಗಳು, ಪಕ್ಷಿಗಳು ಮತ್ತು ಸರೀಸೃಪಗಳು ಅನಂತರ ಕಾಲಕ್ಕೆ ಸೇರಿದ ವಿಶಾಲವಾದ ನೆಲೆಗಳಲ್ಲಿ ಬೃಹದಾಕಾರದ ಸಸ್ತನಿಗಳಾದ ಆನೆ, ಹಂದಿ, ಜಿಂಕೆ ಮತ್ತು ಮಾಂಸಭಕ್ಷಕ ಪ್ರಾಣಿಗಳ ಪಳೆಯುಳಿಕೆಗಳೂ ಈ ಗುಂಪಿನ ಪದರಗಳ ಅಂತ್ಯಕಾಲದ ನೆಲೆಗಳಲ್ಲಿ ಉಷ್ಣಹವೆಯಲ್ಲಿ ವಾಸಿಸುವ ಗಜ಼ೆಲ್ (ಆಡಿನ ಜಾತಿಗೆ ಸೇರಿದ ಒಂದು ಪ್ರಾಣಿ) ಜಿಂಕೆ ಮತ್ತು ಕುದುರೆಗಳ ಪಳೆಯುಳಿಕೆಗಳೂ ಕಂಡುಬಂದಿವೆ. ಎರಡನೆಯ ಗುಂಪಿನ ಪದರಗಳಲ್ಲಿ ಬೇರೆ ರೀತಿಯ ಪ್ರಾಣಿಗಳ ಅವಶೇಷಗಳು ಗೋಚರವಾಗಿವೆ. ಜೌಗು ಹವೆಯಿದ್ದ ಎರಡನೆಯ ಪದರದ ಮೇಲ್ಪಟ್ಟದಲ್ಲಿ ಹಿಪೊಪೊಟಮಸ್, ಹಂದಿ, ದೈತ್ಯಾಕಾರದ ಕುರಿ, ಕುದುರೆ, ಮಾಂಸಾಹಾರಿ ಪ್ರಾಣಿಗಳು, ರೈನಾಸರಸ್ ಮತ್ತು ಕಪಿಮಾನವವರ್ಗದ ಸಸ್ತನಿಗಳ ಅವಶೇಷಗಳು ಪ್ರಧಾನವಾಗಿವೆ.

ಈ ವಿವಿಧ ಪದರಗಳ ಹವಾಗುಣವನ್ನು ವಿದ್ವಾಂಸರು ಈ ರೀತಿಯಾಗಿ ನಿರ್ಧರಿಸಿದ್ದಾರೆ. ಮೊದಲು ಮತ್ತು ಎರಡನೆಯ ಪದರದ ಕೆಳಭಾಗಗಳನ್ನು ಹೆಚ್ಚು ಮಳೆ ಸುರಿಯುತ್ತಿದ್ದ, ತೇವ ಹವೆಯಿದ್ದ ಆಫ್ರಿಕದ ಎರಡನೆಯ ಪ್ಲೂವಿಯಲ್ ಯುಗಕ್ಕೂ ಎರಡನೆಯ ಪದರದ ಮೇಲ್ಮಟ್ಟವನ್ನು ಒಣಹವೆಯಿದ್ದ ಎರಡನೆಯ ಪ್ಲೂವಿಯಲ್ ಯುಗದ ಅಂತ್ಯಕಾಲಕ್ಕೂ (ಈ ಕಾಲದಲ್ಲಿ ಅಲ್ಲಿದ್ದ ಸರೋವರದಲ್ಲಿ ಅಡಿಗಡಿಗೆ ಪ್ರವಾಹಗಳೇರ್ಪಡುತ್ತಿದ್ದು ಆ ಪ್ರವಾಹಗಳಿಂದ ಉಂಟಾದ ಪದರಗಳನ್ನು ಇಲ್ಲಿ ಕಾಣಬಹುದು) ಮೂರನೆಯ ಪದರವನ್ನು ಉಷ್ಣಹವೆಯ ಎರಡನೆಯ ಅಂತರ ಪ್ಲೂವಿಯಲ್ ಯುಗಕ್ಕೂ ನಾಲ್ಕನೆಯ ಪದರವನ್ನು ಪುನಃ ಆ ಸರೋವರ ಪ್ರಬಲಿಸಿದ ತೇವ ಹವೆಯ ಮೂರನೆಯ ಪ್ಲೂವಿಯಲ್ ಯುಗಕ್ಕೂ ನಿರ್ದೇಶಿಸಲಾಗಿದೆ.

ಪೊಟ್ಯಾಸಿಯಂ ಆರ್ಗಾನ್ ಕಾಲಗಣನಾಪದ್ಧತಿಯ ರೀತ್ಯ ಮೊದಲ ಪದರ ಸುಮಾರು ಎರಡು ದಶಲಕ್ಷ ವರ್ಷಗಳಷ್ಟೂ ಎರಡನೆಯ ಪದರದ ಮೇಲ್ಭಾಗ ಸುಮಾರು 5 ಲಕ್ಷ ವರ್ಷಗಳಷ್ಟೂ ಪುರಾತನವೆಂದು ತಿಳಿದುಬಂದಿದೆ. ನಾಲ್ಕನೆಯ ಪದರದ ಮೇಲ್ಭಾಗ ಮಧ್ಯ ಪ್ಲಿಸ್ಟೊಸೀನ್ ಯುಗದ ಅಂತ್ಯ ಅಥವಾ ಅಂತ್ಯ ಪ್ಲಿಸ್ಟೋಸಿನ್ ಯುಗದ ಆರಂಭ ಕಾಲಕ್ಕೆ ಸೇರುತ್ತದೆ.

**ಮಾನವ ಜಾತಿಯ ಉಗಮ :** ಇಲ್ಲಿ ಆದಿ ಮಾನವನ ಉಗಮ ಮತ್ತು ವಿಕಾಸದ ಅಭ್ಯಾಸಕ್ಕೆ ಬಹಳ ಮುಖ್ಯವಾದ ಪುರಾವೆಗಳು ದೊರಕಿದ್ದು, ಪೂರ್ವ ಆಫ್ರಿಕ ಮಾನವ ಜನಾಂಗದ ಉಗಮಸ್ಥಾನವೆಂದು ತೋರಿಸಿಕೊಟ್ಟಿವೆ. ಇವುಗಳಲ್ಲಿ ಬಹಳ ಮುಖ್ಯವಾದುದು ಕ್ರಿ.ಶ. 1959ರಲ್ಲಿ ಮೊದಲ ಪದರದ ಮೇಲ್ಮಟ್ಟದಲ್ಲಿ ದೊರಕಿದ ಜಿಂಜಾಂಥ್ರೊಪಸ್ ಕಪಿಮಾನವ ಅವಶೇಷಗಳು. 17,50,000 ವರ್ಷಗಳಷ್ಟು ಹಳೆಯದಾದ ಈ ಮಾನವಾವಶೇಷಗಳು ಈ ವರೆಗೂ ಬೆಳಕಿಗೆ ಬಂದ ಮಾನವಸಂತತಿಯಲ್ಲಿ ಮೊದಲಿನವೆಂದು ಅಭಿಪ್ರಾಯಪಡಲಾಯಿತು. ಅದೇ ಸುಮಾರಿಗೆ ಸೇರಿದ ಇನ್ನೊಂದು ಗುಂಪಿನ ಮಾನವನ ಹೋಮೋ ಹ್ಯಾಬಿಲಿಸ್ ಅವಶೇಷಗಳೊಂದಿಗೆ ಮೊತ್ತಮೊದಲಿನ ಮಾನವನಿರ್ಮಿತ ಆಯುಧೋಪಕರಣಗಳೂ ಕೆಲವು ಜಲಚರಗಳ ಅವಶೇಷಗಳೂ ಈ ನೆಲೆಯಲ್ಲಿ ಕಂಡುಬಂದುವು. ಇಲ್ಲಿ ಕಂಡುಬಂದಿರುವ ಕಲ್ಲಿನ ಅರ್ಧವರ್ತುಲದ ಅವಶೇಷಗಳು ಆ ಮಾನವರ ವಸತಿಗಳ ಅವಶೇಷಗಳಿದ್ದಿರಬಹುದೆಂದು ಅಭಿಪ್ರಾಯಪಡಲಾಗಿದೆ. ಎರಡನೆಯ ಪದರದ ಕೆಳಮಟ್ಟದಲ್ಲಿ ಹೋಮೋ ಹ್ಯಾಬಿಲಿಸ್ ಮತ್ತು ಮೇಲ್ಮಟ್ಟದಲ್ಲಿ ಹೋಮೋ ಎರಕ್ಟಸ್ ಮಾನವಾವಶೇಷಗಳೂ ಆಯುಧೋಪಕರಣಗಳೂ ದೊರಕಿವೆ.

**ಸಾಂಸ್ಕೃತಿಕ ಅವಶೇಷಗಳು :** ಇಲ್ಲಿ ಕಂಡುಬಂದಿರುವ ಮಾನವ ನಿರ್ಮಿತ ಅವಶೇಷಗಳನ್ನು ಎರಡು ಸಾಂಸ್ಕೃತಿಕ ವಿಧಾನಗಳಿಗೆ ನಿರ್ದೇಶಿಸಲಾಗಿದೆ. ಮೊದಲ ಪದರ ಮತ್ತು ಎರಡನೆಯ ಪದರದ ಕೆಳಮಟ್ಟದಲ್ಲಿ, ಖಚಿತವಾಗಿ ಮಾನವ ನಿರ್ಮಿತವೆಂದು ಪರಿಗಣಿಸಲ್ಪಟ್ಟಿರುವ ಉಂಡೆಕಲ್ಲಿನಾಯುಧ, ತುಂಡುಕೊಡಲಿಗಳು ಹೇರಳವಾಗಿದ್ದು ಅದನ್ನು ಓಲ್ಡೋವನ್ ಸಂಸ್ಕೃತಿಯೆಂದು ಕರೆಯಲಾಗಿದೆ. ಎರಡೂ ಪಾರ್ಶ್ವಗಳಿಂದ ಚಕ್ಕೆಗಳನ್ನು ತೆಗೆದುದರಿಂದ ಉಂಟಾದ ಚೂಪಾದ ಆಯುಧಗಳ ಅಂಚಿನ ಮೇಲೆ ಉಪಯೋಗದಿಂದುಂಟಾದ ಚಿಹ್ನೆಗಳು ಕಂಡುಬರುತ್ತವೆ. ಈ ಆಯುಧಗಳ ತಯಾರಿಕೆಯಲ್ಲಿ ಬಂದ ಚಕ್ಕೆ ಕಲ್ಲುಗಳನ್ನು ಕೊಯ್ಯುವ ಮತ್ತು ಒರೆಯುವ ಸಾಧನಗಳನ್ನಾಗಿ ಉಪಯೋಗಿಸಿಕೊಂಡ ಮಾಹಿತಿಗಳು ಕಂಡುಬಂದಿವೆ. ಕ್ರಮೇಣ ಈ ಉಂಡೆಕಲ್ಲಿನಾಯುಧಗಳು ರೂಪಾಂತರ ಹೊಂದಿ, ಎರಡು ಪಾರ್ಶ್ವಗಳಿಂದ ಚಕ್ಕೆಗಳನ್ನು ತೆಗೆದಿರುವ ಮೊನೆಯಾದ ತುದಿಯಿರುವ ಮತ್ತು ದಪ್ಪನಾದ ಕೈಪಿಡಿಯಿರುವ, ಕೈಗೊಡಲಿಯ ಪೂರ್ವರೂಪದ ಆಯುಧಗಳು ತಲೆದೋರಿವೆ. ಆ ಸಂಸ್ಕೃತಿಯನ್ನು ಕೈಗೊಡಲಿ ಸಂಸ್ಕೃತಿಯೆಂದು ಕರೆಯಲಾಗಿದೆ. ಎರಡನೆಯ ಪದರದ ಮೇಲ್ಮಟ್ಟದಲ್ಲಿ ಉಂಡೆಕಲ್ಲಿನ ತುಂಡುಕೊಡಲಿಗಳು ಉಳಿದು ಬಂದಿದ್ದರೂ ಅಬ್ಬೆವಿಲ್ಲಿಯನ್ ಹಂತದ ಕೈಗೊಡಲಿಗಳು ಪ್ರಧಾನವಾಗಿವೆ. ಈ ಹಂತದಲ್ಲಿ ಕೆಲವು ಅಷ್ಯೂಲಿಯನ್ ಹಂತಕ್ಕೆ ಸೇರಿದ ಆಯುಧಗಳು ದೊರಕಿದ್ದರೂ ಅವು ಮೇಲಿನಿಂದ ಅಂತಸ್ಸರಿತವಾಗಿರಬಹುದೆಂದು ಅಭಿಪ್ರಾಯಪಡಲಾಗಿದೆ. ಈ ಪದರದ ಅಂತ್ಯಕಾಲದಲ್ಲಿ ಅಷ್ಯೂಲಿಯನ್ ರೀತಿಯ ಆಯುಧಗಳು ಮೊದಲ ಬಾರಿಗೆ ಬಳಕೆಗೆ ಬಂದುವು. ಮೂರನೆಯ ಪದರದಲ್ಲಿ ಅಬ್ಬೆವಿಲ್ಲಿಯನ್ ಅಷ್ಯೂಲಿಯನ್ ಆಯುಧೋಪಕರಣಗಳು ದೊರಕಿದ್ದರೂ ಅಷ್ಯೂಲಿಯನ್ ಸಂಸ್ಕೃತಿ ಪ್ರಧಾನವಾಗುತ್ತದೆ. ನಾಲ್ಕನೆಯ ಪದರದಲ್ಲಿ ಅಷ್ಯೂಲಿಯನ್ ಕೈಗಾರಿಕೆಯ ಆರು ಬೇರೆ ಬೇರೆ ಹಂತಗಳಿಗೆ ನಿರ್ದೇಶಿತವಾಗುವ ಆಯುಧಗಳು ದೊರಕುತ್ತವೆ.

ಕ್ಲೀವರ್ ರೀತಿಯ ಆಯುಧಗಳು ಎರಡನೆಯ ಪದರದಲ್ಲಿ ಮೊದಲ ಬಾರಿಗೆ ದೊರೆತರೂ ಈ ಕಾಲದಲ್ಲಿ ಅವನ್ನು ಹೆಚ್ಚು ಸಂಖ್ಯೆಯಲ್ಲಿ ಮತ್ತು ವಿವಿಧಾಕೃತಿಗಳಲ್ಲಿ ಮಾಡಿದುವಕ್ಕೆ ಸೂಚನೆಗಳಿವೆ. ಮೊನೆಯಾದ ತುದಿಯುಳ್ಳ ಅಂಡಾಕಾರದ ಮತ್ತು ಭಲ್ಲೆಯಾಕಾರದ ಕೈಗೊಡಲಿಗಳು ಈ ಕೈಗಾರಿಕೆಯ ವೈವಿಧ್ಯವನ್ನು ತೋರುತ್ತವೆ. ಈ ಪದರದ ಅಂತ್ಯಕಾಲದಲ್ಲಿ ಕೈಗೊಡಲಿ ಸಂಸ್ಕೃತಿ ಉಚ್ಛ್ರಾಯ ಸ್ಥಿತಿಯಲ್ಲಿದ್ದುದನ್ನು ನಯವಾಗಿ ಕಂಡರಿಸಿದ ಅನೇಕ ಉತ್ತಮ ಆಯುಧಗಳು ತೋರುತ್ತವೆ. (ಬಿ.ಕೆ.ಜಿ.)

**ಓಲ್ಡ್‌ಹ್ಯಾಂ, ಥಾಮಸ್:** ಭಾರತ ದೇಶದ ಜಿಯಲಾಜಿಕಲ್ ಸರ್ವೆ ಸಂಸ್ಥೆಯ ಪ್ರಥಮ ನಿರ್ದೇಶಕ. ಬ್ರಿಟಿಷ್ ಪ್ರಜೆ. ಮೊದಲು ಐರ್ಲೆಂಡಿನ ಜಿಯಲಾಜಿಕಲ್ ಸರ್ವೆಯ ನಿರ್ದೇಶಕನಾಗಿದ್ದ. 1850ರಲ್ಲಿ ಈತನನ್ನು ಬ್ರಿಟಿಷ್ ಸರ್ಕಾರ ಭಾರತದ ಈ ವರಿಷ್ಠ ಹುದ್ದೆಗೆ ವರ್ಗಮಾಡಿತು. ನವಸಂಸ್ಥೆಯೊಂದನ್ನು ಕಟ್ಟುವಲ್ಲಿ ಈತನ ಪ್ರತಿಭೆ ಅಸಾಮಾನ್ಯ ಮಟ್ಟದ್ದು. ದಕ್ಷರಾದ ಭೂವಿಜ್ಞಾನಿಗಳ ಒಂದು ಪಡೆಯನ್ನೇ ಈತ ರಚಿಸಿದ. ಅಂದಿನ ಭಾರತದ (ಪಾಕಿಸ್ತಾನ್-ಬರ್ಮ, ಸಿಂಹಳ ಎಲ್ಲವೂ ಭಾರತದ ಆಡಳಿತೆಗೆ ಒಳಪಟ್ಟಿದ್ದುವು) ಶಿಲಾ-ಖನಿಜ, ಸಂಪತ್ತನ್ನು ಪರಿಶೀಲಿಸಿ ಭಾರತದ ಭೂವಿಜ್ಞಾನದ ಇತಿಹಾಸದ ರಚನೆಗೆ ಸುಭದ್ರ ತಳಹದಿಯನ್ನು ಹಾಕಿದ. 1851 ರಿಂದ 1876 ರ ವರೆಗೆ ಇಪ್ಪತ್ತೈದು ವರ್ಷಗಳ ಕಾಲ ಈತ ಭಾರತದಲ್ಲಿ ನೆಲೆಸಿ ಅವಿರತವಾಗಿ ಕೆಲಸಮಾಡಿ ಆಧಾರಸಹಿತವಾದ ಭೂವಿದ್ಯಾನಕ್ಷೆಯನ್ನು (ಜಿಯಲಾಜಿಕಲ್ ಮ್ಯಾಪ್) ರಚಿಸಲು ಸರ್ವಪ್ರಯತ್ನವನ್ನೂ ಮಾಡಿದ. 1876ರಲ್ಲಿ ದೇಹಾಲಸ್ಯದಿಂದ ಈತ ವಿಶ್ರಾಂತನಾದ. ಮರುವರ್ಷವೇ ಭಾರತದ ಮೊದಲನೆಯ ಭೂವಿದ್ಯಾನಕ್ಷೆ ಪ್ರಕಟವಾಯಿತು. 1869ರಲ್ಲಿ ಕಾಚಾರ್ ಭೂಕಂಪವಾದ ಮೇಲೆ ಓಲ್ಡ್‌ಹ್ಯಾಂ ಭಾರತದ ಬಗ್ಗೆ ವಿಶೇಷ ಅಧ್ಯಯನ ಮಾಡಿ ಒಂದು ಗ್ರಂಥವನ್ನು ಪ್ರಕಟಿಸಿದ. ಇದು ಭೂಕಂಪಶಾಸ್ತ್ರಕ್ಕೇ ಆದಿಗ್ರಂಥ ಎನಿಸಿತು. ಭಾರತದ ಚಿಲುಮೆಗಳ (ಸ್ಪ್ರಿಂಗ್ಸ್) ಬಗ್ಗೆ ಒಂದು ಪುಸ್ತಕವನ್ನು ಬರೆದ. ಈತನ ಕೆಲಸವನ್ನು ಅಂದಿನ ಸರ್ಕಾರ ಬಲುವಾಗಿ ಮೆಚ್ಚಿಕೊಂಡಿತು.

1856ರಲ್ಲಿ ಓಲ್ಡ್‌ಹ್ಯಾಂ ತನ್ನ ಸಂಸ್ಥೆಯ ಪುನರ್ವ್ಯವಸ್ಥೆಗೆ ಕೊಟ್ಟ ಸಲಹೆಗಳನ್ನು ಸರ್ಕಾರ ಮಂಜೂರು ಮಾಡಿತು. ಬಂಗಾಲದ ಏಷ್ಯಾಟಿಕ್ ಸೊಸೈಟಿಯ ಅಧ್ಯಕ್ಷನಾಗಿದ್ದ ಈತನೇ ಕಲ್ಕತ್ತ ನಗರದ ಸೊಗಸಾದ ವಸ್ತುಸಂಗ್ರಹಾಲಯದ (ಮ್ಯೂಸಿಯಂ) ನಿರ್ಮಾಣಕ್ಕೆ ಕಾರಣ. 1867 ರಿಂದ 1876ರ ವರೆಗೆ ಓಲ್ಡ್‌ಹ್ಯಾಂ ಭಾರತ ವಸ್ತುಸಂಗ್ರಹಾಲಯಗಳ ನಿರ್ದೇಶಕನೂ ಆಗಿದ್ದ. ಈತ ಪ್ರಕಟಿಸಿದ 35 ಕೃತಿಗಳಿಂದ ವಿಜ್ಞಾನದ ಪ್ರಪಂಚದಲ್ಲಿ ಇವನಿಗೆ ಹಿರಿಯ ಪ್ರಶಸ್ತಿ ಲಭಿಸಿತು. ಪೂರ್ವಾರ್ಧಗೋಳದಲ್ಲಿ ಕಲ್ಲಿದ್ದಲು, ಮಧ್ಯಪ್ರಾಂತಗಳ ಭೂಚರಿತ್ರೆ, ಉಲ್ಕಾಶಿಲೆಗಳು ಇತ್ಯಾದಿ ಇವನ ಪ್ರಸಿದ್ಧ ಕೃತಿಗಳು. ತನ್ನ ದುಡಿಮೆಗೆ ಒಂದು ಅಚ್ಚುಕಟ್ಟಾದ ಶಾಶ್ವತ ರೂಪವನ್ನು ಕೊಡುವುದಕ್ಕೆ ಮೊದಲೇ ಕುಂದುತ್ತಿದ್ದ ದೇಹಾರೋಗ್ಯದ ನಿಮಿತ್ತವಾಗಿ ಈತನು ಕೆಲಸದಿಂದ ವಿಶ್ರಾಂತಿಪಡೆದು ಭಾರತವನ್ನು ಬಿಡಬೇಕಾಯಿತು. ಆದರೆ ಓಲ್ಡ್‌ಹ್ಯಾಮನ ಕಾಲು ಶತಮಾನದ ಕೆಲಸವೇ ಅವನ ಸೇವೆಯ ಮೌಲ್ಯದ ಶಾಶ್ವತವಾದ ದಾಖಲೆ ಎಂಬ ಈತನ ಉತ್ತರಾಧಿಕಾರಿಯ ಮಾತು ಯಥಾರ್ಥವಾದದ್ದು.

ಓಲ್ಡ್‌ಹ್ಯಾಂ ತನ್ನ ಅಧಿಕಾರಾವಧಿಯಲ್ಲಿ ಬರ್ಮ ದೇಶಕ್ಕೆ ಮೂರು ಸಲ ಭೇಟಿಯಿತ್ತು ಆದರ ಶಿಲಾ-ಖನಿಜಸಂಪತ್ತನ್ನು ಪರೀಕ್ಷಿಸಿದ. 1855ರಲ್ಲಿ ಎನಾಂಗ್‌ಯಾಂಗ್ ತೈಲಕ್ಷೇತ್ರವನ್ನು ಪರಿಶೀಲಿಸುತ್ತಿದ್ದಾಗ ಶಿಲೆಗಳ ಮಡಿಕೆಗಳ ರಚನೆಗೂ ತೈಲದ ಶೇಖರಣೆಗೂ ಇರುವ ಸಂಬಂಧವನ್ನು ಅವನು ಮೊಟ್ಟಮೊದಲು ಗುರುತಿಸಿದ. ಇದು ಮುಂದೆ ಪ್ರಪಂಚದಲ್ಲಿ ಖನಿಜ ತೈಲ ಉದ್ಯಮದ ಮುನ್ನಡೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿತು.

ಓಲ್ಡ್‌ಹ್ಯಾಮನ ಕಾಲದಲ್ಲಿಯೇ ಭಾರತದ ಭೂವಿಜ್ಞಾನ ಪರಿಭಾಷೆಯ ಅನೇಕ ಶಬ್ದಗಳು ಜನ್ಮ ತಾಳಿದುವು. ಉದಾಹರಣೆಗೆ ದಾಮೋದರ ಶಿಲಾಸ್ತೋಮ, ಧಾರವಾಡ ಶಿಲಾಸ್ತೋಮ, ದಖನ್‌ಲಾವಾ, ತಾಲ್‌ಚೇರ್ ಪದರ (ಹಿಮನದಿಯ ಸ್ಮಾರಕ), ಗೊಂಡ್ವಾನಾ ಶಿಲಾಸ್ತೋಮ ಇತ್ಯಾದಿ. ಹೀಗೆ ಭಾರತ ದೇಶದ ಭೂಚರಿತ್ರೆಯ ಇತಿಹಾಸದಲ್ಲಿ ಓಲ್ಡ್‌ಹ್ಯಾಂ ಚಿರಸ್ಮರಣೀಯ ಹೆಸರು. (ಎ.ಎನ್.ಎಸ್.ಐ.)

**ಓವರ್‌ಬರಿ, ಸರ್ ಥಾಮಸ್:** 1581–1613. ಆಂಗ್ಲಕವಿ ಮತ್ತು ಪ್ರಬಂಧಕಾರ. ವಾರ್‌ವಿಕ್‌ಷೈರಿನ ಕಾಂಪ್ಟನ್ ಸ್ಕಾರ್‌ಪಿಯನ್‌ನಲ್ಲಿ ಹುಟ್ಟಿದ. ಆಕ್ಸ್‌ಫರ್ಡ್‌ನಲ್ಲಿ ವಿದ್ಯಾಭ್ಯಾಸ ಮಾಡಿ ಚಕ್ರವರ್ತಿ ಒಂದನೆಯ ಜೇಮ್ಸ್‌ನ ಕೃಪಾಪಾತ್ರನಾದ ರಾಬರ್ಟ್ ಕಾರನ ಕಾರ್ಯದರ್ಶಿ ಹಾಗೂ ಆಪ್ತಸಲಹೆಗಾರನಾಗಿ ಕೆಲಸ ಮಾಡಿದ. ಕ್ರಮೇಣ ಕಾರ್ ಓವರ್‌ಬರಿಯ ಕೈಗೊಂಬೆಯಾದ. ಓವರ್‌ಬರಿಯ ಕೈಗೊಂಬೆ ಕಾರ್, ಕಾರ್‌ನ ಕೈಗೊಂಬೆ ಚಕ್ರವರ್ತಿ—ಎಂಬ ಮಾತು ಜನಜನಿತವಾಯಿತು.

ಕಾರ್ ರಾಚೆಸ್ಟರಿನ ಅರ್ಲ್ ಆದ ಮೇಲೆ ಎಸೆಕ್ಸಳೊಂದಿಗೆ ಪ್ರೇಮ ಬೆಳೆಸಿದ. ಮೊದಲಿಗೆ ಇವರಿಬ್ಬರ ಮದುವೆಯಿಂದ ಪರಸ್ಪರ ವ್ಯಕ್ತಿತ್ವ, ಘನತೆಗಳು ಹೆಚ್ಚುತ್ತವೆಂದು ಭಾವಿಸಿದ ಓವರ್‌ಬರಿ ಈ ಪ್ರೇಮಪ್ರಕರಣವನ್ನು ಪ್ರೋತ್ಸಾಹಿಸಿದನಾದರೂ ಅನಂತರ ಇವರಿಬ್ಬರ ಒಗ್ಗೂಡಿಕೆಯಿಂದ ಕಾರ್ ಎಸೆಕ್ಸಳ ಕೈಗೊಂಬೆಯಾಗುವನೆಂದೂ ಭಾವಿಸಿದ ಓವರ್‌ಬರಿ ಇವರ ಪ್ರೇಮಪ್ರಕರಣವನ್ನು ಬಯಲಿಗೆಳೆದು ಬಲವಾಗಿ ವಿರೋಧಿಸಿದ. ಅದೇ ಸಮಯದಲ್ಲಿ ಮದುವೆಯಾಗುವ ಯುವಕ ಎಂಥ ಹೆಂಡತಿಯನ್ನು ಬಯಸಬೇಕೆಂಬ ವಿಷಯಗಳನ್ನೊಳಗೊಂಡ ಎ ವೈಫ್ ಎಂಬ ಕವನವನ್ನು ರಚಿಸಿದ. ಇದು ಪರೋಕ್ಷವಾಗಿ ಎಸೆಕ್ಸಳ ವ್ಯಂಗ್ಯಚಿತ್ರವಾಗಿತ್ತು. ಇದರಿಂದಾಗಿ ಓವರ್‌ಬರಿ ಚಕ್ರವರ್ತಿಯ ಅಸಂತುಷ್ಟಿಗೆ ಪಾತ್ರನಾಗಬೇಕಾಯಿತು. ಪರಿಣಾಮವಾಗಿ ರಾಜದ್ರೋಹದ ಆಪಾದನೆಯ ಮೇಲೆ ಓವರ್‌ಬರಿಯನ್ನು ಕಾರಾಗೃಹಕ್ಕೆ ಅಟ್ಟಲಾಯಿತು. ಎಸೆಕ್ಸಳ ಕುತಂತ್ರದಿಂದಾಗಿ ಕಾರಾಗೃಹದ ಅಧಿಕಾರಿಯ ಮೂಲಕ ಓವರ್‌ಬರಿ ಕೊಲೆಯಾಯಿತು.

ಈ ಪ್ರಕರಣ ನಡೆದ ಒಂದು ವರ್ಷದ ಮೇಲೆ ಸತ್ಯ ಬೆಳಕಿಗೆ ಬಂದು ನ್ಯಾಯ ವಿಚಾರಣೆ ನಡೆಯಿತು. ನ್ಯಾಯಾಲಯ ಎಸೆಕ್ಸ್ ಹಾಗೂ ಕಾರ್ ಇಬ್ಬರಿಗೂ ಶಿಕ್ಷೆ ವಿಧಿಸಿತು. ಆದರೆ ದೊರೆಯ ಕೃಪೆಯಿಂದಾಗಿ ಇಬ್ಬರೂ ಬಿಡುಗಡೆಯಾದರು.

ಓವರ್‌ಬರಿ ಕಾರಾಗೃಹಕ್ಕೆ ಹೋದ ಅನಂತರ ಯಾರ ನೆರವೂ ಇಲ್ಲದೆ ಬರೆಹಗಾರನೆಂದು ಬೆಳಕಿಗೆ ಬಂದ. ಎ ವೈಫ್ ಎಂಬ ಅವನ ಕವನ 1614ರಲ್ಲಿ ಪ್ರಕಟವಾಗಿ ಅದೇ ವರ್ಷ ಅನೇಕ ಮುದ್ರಣಗಳನ್ನು ಕಂಡಿತು. ವ್ಯಕ್ತಿಚಿತ್ರಗಳನ್ನೊಳಗೊಂಡ ಇವನ ಕ್ಯಾರೆಕ್ಟರ್ಸ್ ಎಂಬ ಪ್ರಬಂಧಸಂಕಲನವೂ ಈತನಿಗೆ ಕೀರ್ತಿ ತಂದಿತು. (ಎಚ್.ಎಸ್.ಎಚ್.)

**ಓವಿಡ್:** ಕ್ರಿ.ಪೂ. 43–ಕ್ರಿ.ಶ. 18. ರೋಮ್ ದೇಶದ ಆಗಸ್ಟನ್ ಸಾಹಿತ್ಯ ಯುಗದ ಕೊನೆಯ ಕವಿ. ಪೂರ್ಣನಾಮ ಪ್ಲಬಿಯಸ್ ಓವಿಡಿಯಸ್ ನ್ಯಾಸೊ. ರಮಣೀಯವಾದ ಅಬ್ರುಜಿ ಮಲೆಗಳ ನಡುವೆ ಸಲ್ಮೋ ಎಂಬ ಊರಿನಲ್ಲಿ ಶ್ರೀಮಂತ ಜಮೀನ್ದಾರರ ಮನೆಯಲ್ಲಿ ಹುಟ್ಟಿದ, ಚೇತೋಹಾರಿಯಾದ ನಿಸರ್ಗದ ಚೆಲುವಿನಿಂದ ಪ್ರಭಾವಿತವಾಗಿಯೇ ಈ ಕವಿಚೇತನ ಬೆಳೆಯಿತು. ರೋಮಿನಲ್ಲಿ ಸಾಹಿತ್ಯಾಲಂಕಾರಶಾಸ್ತ್ರಪರಿಣಿತರಾದ ಆರೆಲ್ಲಿಯಸ್ ಫಸ್ಕಸ್ ಮತ್ತು ಪೋರ್ಷಿಯಸ್ ಲ್ಯಾಟ್ರೊ ಎಂಬ ಗುರುಗಳ ಬಳಿ ವ್ಯಾಸಂಗ ಮಾಡಿದ. ಮಗ ಉನ್ನತ ಅಧಿಕಾರಿಯಾಗಬೇಕೆಂಬ ಅಭಿಲಾಷೆಯಿಂದ ಅದಕ್ಕೆ ತಕ್ಕ ತರಬೇತಿಯನ್ನೇ ತಂದೆ ಕೊಡಿಸಿದ. ಆದರೆ ಮಗನ ಒಲವೆಲ್ಲ ಕಾವ್ಯದ ಕಡೆ ತಿರುಗಿತು. ಆಡಳಿತ, ಕಾನೂನು ಶಾಸ್ತ್ರಗಳಲ್ಲಿ ಶಿಕ್ಷಣವಾದ ಅನಂತರ ಸರ್ಕಾರದಲ್ಲಿ ಒಳ್ಳೆಯ ಕೆಲಸ ಸಿಕ್ಕಿತು. ಆಗ ನಾನು ಬರೆದುದೆಲ್ಲ ಅನಾಯಾಸವಾಗಿ ಛಂದೋರೂಪವನ್ನು ತಾಳುತ್ತಿತ್ತು. ತಂದೆಯ ಪ್ರೀತ್ಯರ್ಥವಾಗಿ ಕೆಲವು ಕಾಲ ಸರ್ಕಾರದ ನಾಲ್ಕಾರು ಕಿರಿಯ ಹುದ್ದೆಗಳಲ್ಲಿ ಕೆಲಸ ಮಾಡಿದೆನಾದರೂ ಕಡೆಗೂ ಕಾವ್ಯದೇವಿ ತನ್ನೆಡೆಗೆ ನನ್ನನ್ನು ಸಂಪೂರ್ಣವಾಗಿ ಸೆಳೆದುಕೊಂಡುಬಿಟ್ಟಳು—ಎಂದು ಕವಿ ತನ್ನ ಆತ್ಮಕಥೆಯಲ್ಲಿ ಹೇಳಿಕೊಂಡಿದ್ದಾನೆ.

ಎರಡು ಬಾರಿ ಮದುವೆ ಆದಾಗಲೂ ದಾಂಪತ್ಯದ ವಿರಸವನ್ನೇ ಅನುಭವಿಸಿದ ಕವಿ ಮೂರನೆಯ ಬಾರಿ ಫೇಬಿಯನ್ ಹಿರಿಯ ಮನೆತನದ ಹುಡುಗಿಯನ್ನು ಮದುವೆಯಾದ. ಈಕೆ ಮಾತ್ರ ಪ್ರೀತಿಯ ಮಡದಿಯಾಗಿ ಕೊನೆಯ ವರೆಗೂ—ಕವಿ ದೇಶಭ್ರಷ್ಟನಾಗಿ ಹೋದಾಗಲೂ—ನಿಷ್ಠೆಯ ಸತಿಯಾಗಿ ಇದ್ದಳು.

ಓವಿಡ್‌ನ ಆಕರ್ಷಣೀಯ ವ್ಯಕ್ತಿತ್ವದಿಂದಲೂ ಸ್ನೇಹಶೀಲ ಸ್ವಭಾವದಿಂದಲೂ ಹಲವರು, ಅದರಲ್ಲೂ ಹಿರಿಯ ಕಿರಿಯ ಕವಿಗಳೆಲ್ಲರೂ, ಅವನ ಮಿತ್ರರಾಗಿದ್ದರು. ಪ್ರೊಪರ್ಟಿಯಸ್ ಮತ್ತು ಟೈಬುಲಸರಂತೂ ಆತ್ಮೀಯರಾಗಿದ್ದರು. ಟೈಬುಲಸನ ಅಕಾಲಮರಣದಿಂದ ಬಹು ದುಃಖಿತನಾದ ಕವಿ ಒಂದು ಉತ್ಕೃಷ್ಟ ಶೋಕಗೀತೆಯನ್ನು ರಚಿಸಿದ್ದಾನೆ. ಮಹಾಕವಿ ವರ್ಜಿಲನನ್ನು ಒಮ್ಮೆ ನೋಡಿರುವೆ ಮಾತ್ರ ಎಂದು ಹೇಳುವ ಓವಿಡ್ ವರ್ಜಿಲನ ಪರಮ ಸ್ನೇಹಿತನಾಗಿದ್ದ ಈಮಿಲಿಯಸ್ ಮೇಸರನಿಗೆ ಅಚ್ಚುಮೆಚ್ಚಾಗಿದ್ದ. ಆತನೊಂದಿಗೆ ಮಾಡಿದ ಅಥೆನ್ಸ್, ಸಿಸಿಲಿಗಳ ಪ್ರವಾಸಗಳ ಮಧುರಸ್ಮೃತಿ ಓವಿಡ್‌ನ ಕೆಲವು ಕಾವ್ಯಗಳಲ್ಲಿ ಚಿರಂತನವಾಗಿ ಉಳಿದಿದೆ.

ಅಗಸ್ಟಸ್ ಚಕ್ರವರ್ತಿಯ ಕಾಲ ವೈಭವದ ಯುಗ. ಆಗ ರೋಮ್ ನಗರ ಸಕಲ ವಿಲಾಸವಿಭ್ರಮಗಳಿಂದ ಮೆರೆಯುತ್ತಿತ್ತು. ಅದಕ್ಕೆ ತಕ್ಕಂತಿತ್ತು ಅಂದಿನ ಬೆಡಗಿನ ನಾಗರಿಕ ಸಮಾಜ. ಎಲ್ಲ ಬಗೆಯ ಭೋಗವಿಲಾಸಗಳ ರಸಮಯ ಬದುಕೊಂದೇ ಹಿರಿಯ ಆದರ್ಶ. ನೀತಿಧರ್ಮಗಳ ಬದಲು ಥಳಕಿನ ಶಿಷ್ಟಾಚಾರ, ಚತುರ ಮಾತುಗಾರಿಕೆ, ಬುದ್ಧಿಯ ಜಾಣ್ಮೆ ಮುಖ್ಯವಾಗಿದ್ದುವು. ಭೋಗವನ್ನುಳಿದು ಎಲ್ಲವರ ಬಗ್ಗೆಯೂ ತಿರಸ್ಕಾರವಿತ್ತು. ಆಡಂಬರದಿಂದ ಕೂಡಿದ ಆಲಂಕಾರಿಕ ಭಾಷೆಯ ಕಾವ್ಯವೇ ಶ್ರೇಷ್ಠ ಎಂಬ ಅಭಿರುಚಿ ಎದ್ದು ಕಾಣುತ್ತಿತ್ತು. ಇಂಥ ಸಮಾಜದ ಅಚ್ಚುಮೆಚ್ಚಿನ ಕವಿ ಎನಿಸಿದ, ಓವಿಡ್.

ಆರ್ಸ್ ಅಮೋರ್ಸ್ ಎಂಬ ಕೃತಿ ಮೂರು ಸಂಪುಟಗಳಲ್ಲಿ ಪ್ರಕಟವಾಯಿತು. ಇದರ ವಸ್ತು ಪ್ರಣಯ. ಈ ಕಾವ್ಯ ಕೊರಿನ್ನಾ ಎಂಬ ಸುಂದರಿಯೊಬ್ಬಳನ್ನು ಲಕ್ಷ್ಯವಾಗಿಟ್ಟುಕೊಂಡು ಬರೆದುದು.

ಇನ್ನೊಂದು ಕೃತಿ, ಹಿರೋಯಿಡ್ಸ್. ಪ್ರಾಚೀನ ಗ್ರೀಕ್ ವೀರಯುಗದ ಸುಂದರಿಯರು ಬರೆದಂತೆ ಕಲ್ಪಿಸಿದ ಪ್ರಣಯಪತ್ರಗಳ ಸಂಕಲನ. ಇದು ಓವಿಡ್ ಬರೆದದ್ದೇ ಇಲ್ಲವೆ ಅವನ ಹೆಸರಿನಲ್ಲಿ ಬೇರೆ ಯಾರೋ ಬರೆದುದೇ ಎಂಬುದು ವಾದಗ್ರಸ್ತವಾಗಿದೆ.

ದ ಮೆಡಿಕಮೈನ್ ಫೇಸಿ ಎಂಬುದು ಮುಖದ ಸೌಂದರ್ಯ ಪ್ರಸಾಧನಕ್ಕೆ ಸಂಬಂಧಿಸಿದ ಪುಸ್ತಕ.

ಆರ್ಸ್ ಅಮೆಟೋರಿಯ ಎಂಬ ಮತ್ತೊಂದು ಕೃತಿ ಮೂರು ಸಂಪುಟಗಳಲ್ಲಿದೆ. ಇದರ ವಸ್ತುವೂ ಪ್ರಣಯವೇ, ಯುವತಿಯರ ಹೃದಯವನ್ನು ಆಕರ್ಷಿಸುವ ಕಲೆಯನ್ನು ಕವಿ ಇಲ್ಲಿ ಸ್ವಾರಸ್ಯವಾಗಿ ಬೋಧಿಸುತ್ತಾನೆ. ಇದು ಓವಿಡ್‌ನ ವಿಶಿಷ್ಟ ವ್ಯಕ್ತಿತ್ವವನ್ನು ಸಮರ್ಥವಾಗಿ ಪ್ರತಿಬಿಂಬಿಸುವ ಶ್ರೇಷ್ಠ ಕೃತಿ ಎಂದು ಮೆಕಾಲೆಯ ಅಭಿಪ್ರಾಯ. (ಬಹುಶಃ ಅಶ್ಲೀಲ ಸಾಹಿತ್ಯದಲ್ಲಿ ಇದನ್ನು ಮೀರಿಸುವ ಕೃತಿ ಮತ್ತೊಂದಿರಲಾರದು).

ರೆಮೆಡಿಯಾ ಅಮೋರ್ಸ್ ಪ್ರೇಮದ ತಾಪನಿವಾರಣೆ ಮಾಡಿಕೊಳ್ಳುವ ವಿಧಾನವನ್ನು ಕುರಿತದ್ದು. ಆರ್ಸ್ ಅಮೋರ್ಸ್‌ಗೆ ಚಿಕಿತ್ಸೆರೂಪವಾದ ಕಾವ್ಯ. ಅದರ ಅತಿರೇಕವನ್ನು ಸ್ವಲ್ಪ ಸರಿಪಡಿಸುವ ಯತ್ನ ಇದರಲ್ಲಿ ನಡೆದಿದೆ, ಅಶ್ಲೀಲದಲ್ಲಿ ಅದಕ್ಕೂ ಒಂದು ಕೈ ಮಿಗಿಲಾದರೂ ಮೊದಲ ಕಾವ್ಯದ ಪರಿಣತ ಶೈಲಿ ಇಲ್ಲಿ ಕಾಣುವುದಿಲ್ಲ.

ಮಿಡಿಯಾ ಎಂಬ ದುರಂತನಾಟಕವನ್ನು ಅನೇಕ ಪ್ರಾಚೀನ ವಿಮರ್ಶಕರು ಮೆಚ್ಚಿ ಉಲ್ಲೇಖಿಸಿರುವರಾದರೂ ಕೃತಿ ಇದುವರೆಗೆ ದೊರೆತಿಲ್ಲ.

ಮೆಟಾಮಾರ್ಫೋಸಿಸ್ ಎಂಬುದು ಗ್ರೀಕ್ ಪುರಾಣದಿಂದ ಸಂಗ್ರಹಿಸಿದ ಜಗತ್ತಿನ ಸೃಷ್ಟಿ-ವಿಕಾಸಗಳ ಕಥೆಗಳನ್ನು 15 ಸಂಪುಟಗಳಲ್ಲಿ ನಿರೂಪಿಸುವ ದೊಡ್ಡ ಕಾವ್ಯ ಕ್ರಿಸ್ತಶಕದ ಪ್ರಾರಂಭದಲ್ಲಿ ರಚಿತವಾಯಿತು. ಅನನುಕರಣೀಯವಾದ ಕಥನಶೈಲಿ, ಲಲಿತವಾದ ಬಂಧ, ಬೇರೆ ಬೇರೆ ಕಥೆಗಳನ್ನು ಸಹಜವಾಗಿ ಸುಸಂಬದ್ಧವಾಗಿ ಹೆಣೆದಿರುವ ಕೌಶಲ, ಈ ಕೃತಿಯ ಗುಣಾಂಶಗಳು. ಇಲ್ಲಿನ ಮೋಹಕ ಕಥನಶೈಲಿಗೆ ಮನ ಸೋಲದವರಿಲ್ಲ. ಷೇಕ್ಸ್‌ಪಿಯರ್, ಮಾರ್ಲೊ, ಮಿಲ್ಟನ್, ಡ್ರೈಡನ್ ಮುಂತಾದ ಶ್ರೇಷ್ಠ ಇಂಗ್ಲಿಷ್ ಕವಿಗಳ ಮೇಲೂ ಬಿದ್ದ ಈ ಕಾವ್ಯದ ಪ್ರಭಾವ ಅದ್ಭುತವಾದುದು. ಮಧ್ಯಯುಗದ ವರ್ಣಶಿಲ್ಪಿಗಳ ಚಿತ್ರಗಳ ವಸ್ತುಗಳಿಗೆ ಈ ಕಾವ್ಯ ಒಂದು ಸಮೃದ್ಧ ನಿಧಿಯಾಯಿತು.

ಫಾಸ್ಟಿ 12 ಸಂಪುಟಗಳಲ್ಲಿ ಪೂರೈಸಬೇಕಾಗಿದ್ದ ಬೃಹತ್ ಗ್ರಂಥ. ಆದರೆ ಬರೆದುದು 6 ಸಂಪುಟ ಮಾತ್ರ. ರೋಮಿನ ಪ್ರಮುಖ ಹಬ್ಬಗಳ ವೈಶಿಷ್ಟ್ಯವನ್ನು ವಿವರಿಸುವ ಸ್ವಾರಸ್ಯವಾದ ಕಾವ್ಯವಿದು. ಒಂದೊಂದು ಹಬ್ಬದ ಪೂರ್ವಕಥೆ, ಆಚರಿಸುವಾಗ ಅನುಸರಿಸುವ ಕ್ರಮ ವಿಧಿಗಳ ಅರ್ಥ, ಔಚಿತ್ಯ ಮೊದಲಾದುವನ್ನು ವ್ಯಾಖ್ಯಾನಿಸುವ ನೆಪದಲ್ಲಿ ಅನೇಕ ಮನೋರಂಜಕವಾದ ಕಥೆಗಳನ್ನು ಹೇಳಿರುವುದೇ ಇದರಲ್ಲಿನ ವಿಶೇಷ.

ಈ ಕಾವ್ಯವನ್ನು ಬರೆಯುತ್ತಿದ್ದಾಗಲೇ ಓವಿಡ್‌ನ ಮೇಲೆ ರಾಜಾಜ್ಞೆ ಸಿಡಿಲಿನಂತೆರಗಿತು. ಕವಿ ದೇಶಭ್ರಷ್ಟನಾಗಿ ಯೂಜಿನ್ ಬೆಂಗಾಡಿನ ಟೋಮಿ ಎಂಬ ಊರಿನಲ್ಲಿ ತನ್ನ ಉಳಿದ ಜೀವಿತವನ್ನು ಕಳೆಯಬೇಕಾಯಿತು. ರೋಮಿನ ಮೂರು ಮುಖ್ಯಗ್ರಂಥಭಂಡಾರಗಳಲ್ಲಿ ಆತನ ಕೃತಿಗಳನ್ನು ಬಹಿಷ್ಕರಿಸಿದರು. ಆತನ ಆಸ್ತಿಪಾಸ್ತಿಗಳನ್ನು ಸರ್ಕಾರ ಮುಟ್ಟುಗೋಲು ಮಾಡಿಕೊಳ್ಳಲಿಲ್ಲವಾದರೂ ಮುಂದೆ ಎಂದಾದರೊಮ್ಮೆ ಕ್ಷಮಾದಾನ ದೊರಕಿ ಕವಿಯನ್ನು ಹಿಂದಕ್ಕೆ ಕರೆಸಿಕೊಳ್ಳಬಹುದೆಂಬ ಭರವಸೆಯೇನೂ ಕಾಣಲಿಲ್ಲ. ಈ ಅನಿರೀಕ್ಷಿತ ಬಹಿಷ್ಕಾರಕ್ಕೇನು ಕಾರಣವೋ ತಿಳಿಯದು. ಚಕ್ರವರ್ತಿಯ ಮೊಮ್ಮಗಳಾದ ಜೂಲಿಯಾ ಮತ್ತು ಸಿಲೇನಸರ ರಹಸ್ಯ ಪ್ರಣಯದ ಪ್ರಕರಣದಲ್ಲಿ ಓವಿಡ್‌ನ ಕೈವಾಡವಿದ್ದರೂ ಅಸಂಭವವಲ್ಲ. ಬಹುಶಃ ಇದೇ ಚಕ್ರವರ್ತಿಯ ಆಗ್ರಹಕ್ಕೆ ಕಾರಣವಿರಬಹುದು.

ತನ್ನ ನೆಚ್ಚಿನ ರೋಮನ್ ಸಮಾಜದಿಂದ, ಪ್ರಿಯರಾದ ಗೆಳೆಯರಿಂದ, ಪುಸ್ತಕಗಳಿಂದ ದೂರವಾಗಿ ಕಾಲ ನೂಕಬೇಕಾಗಿ ಬಂದುದೇ ಕವಿಗೆ ದೊಡ್ಡ ಕೊರಗಾಯಿತು. ಆಗ ರಚಿಸಿದ ಕಾವ್ಯಗಳಲ್ಲಿ ಟ್ರಿಸ್ಟಿಯಾ ಎಂಬ 5 ಸಂಪುಟಗಳ ಆತ್ಮಕಥೆ ಮತ್ತು ಎಪಿಸ್ಟುಲೇ ಎಕ್ಸ್‌ಪೋಂಟೋ ಎಂಬ 4 ಸಂಪುಟಗಳ ಕೃತಿ ಮುಖ್ಯವಾದುವು. ಉಳಿದ ಅನೇಕ ಕೃತಿಗಳು ಕಳೆದುಹೋಗಿವೆ. ತನ್ನ ಪ್ರಿಯಪತ್ನಿಗೆ, ಆತ್ಮೀಯರಿಗೆ ಮತ್ತು ಆಗಸ್ಟಸ್ ಚಕ್ರವರ್ತಿಗೆ ಬರೆದ ಶೋಕಾರ್ತವಾದ, ಪತ್ರರೂಪದ, ಕವನಗಳಲ್ಲಿ ಕವಿಯ ಕೊರಗೂ ತಾಯ್ನಾಡಿಗೆ ಬೇಗನೆ ಹಿಂತಿರುಗಬೇಕೆಂಬ ಹಂಬಲವೂ ತೀವ್ರವಾಗಿ ಬಹು ಕರುಣಾಜನಕವಾಗಿ ವ್ಯಕ್ತವಾಗಿವೆ.

ಚಕ್ರವರ್ತಿಯ ಮನವನ್ನೊಲಿಸಿಕೊಳ್ಳಲು ಮಾಡಿದ ಅವನ ಪ್ರಯತ್ನಗಳೆಲ್ಲ ವಿಫಲವಾದುವು. ತಾನಿದ್ದ ಟೋಮಿ ಎಂಬ ಊರಿನ ಜನರ ಪ್ರೀತ್ಯಾದರಗಳಿಗೆ ಪಾತ್ರನಾಗಿದ್ದರೂ ತಾಯ್ನಾಡನ್ನೂ ಮನೆಯನ್ನೂ ಮತ್ತೆ ನೋಡಬೇಕೆಂಬ ಹಂಬಲ ಈಡೇರದ ಕೊರಗಿನಲ್ಲೇ ಕವಿ ಕೊನೆಯುಸಿರನ್ನೆಳೆದ.

ಮೃದುಮಧುರವಾದ ಭಾಷೆ, ಸುಂದರವಾದ ಶೈಲಿ, ರಂಜಕವಾದ ವೈವಿಧ್ಯ, ಸ್ವಚ್ಛಂದವಾದ ಕಲ್ಪನಾವಿಲಾಸ, ಕಣ್ಣಿಗೆ ಕಟ್ಟುವಂತೆ ಚಿತ್ರಿಸುವ ವರ್ಣನಾಸಾಮರ್ಥ್ಯಮನವನ್ನು ಸೆಳೆಯುವ ಕಥನಕಲೆ—ಇವು ಓವಿಡ್‌ನ ಸಾಹಿತ್ಯದ ಅಪೂರ್ವ ಗುಣಗಳು.

ಇಂದಿನ ಸಣ್ಣ ಕಥೆಗಳ ಕಲಾತ್ಮಕ ತಂತ್ರದ ಮೂಲವನ್ನು ಓವಿಡ್‌ನ ಕಥೆಗಳಲ್ಲಿ ಗುರುತಿಸಿದರೆ ಆಶ್ಚರ್ಯಪಡಬೇಕಾಗಿಲ್ಲ.

(ಕೆ.ಬಿ.ಪಿ.)

**ಓವೆನ್, ರಾಬರ್ಟ್:** 1771–1858. ಬ್ರಿಟನಿನ ಸಮಾಜವಾದಿ, ಸುಧಾರಕ. 1771ರ ಮೇ 14ರಂದು ವೇಲ್ಸ್‌ನ ಮಾಂಟ್ಗಮರಿಷೈರಿನ ನ್ಯೂಟೌನಿನಲ್ಲಿ ಹುಟ್ಟಿದ. ಒಂಬತ್ತನೆಯ ವರ್ಷದ ವರೆಗೆ ಇವನ ವಿದ್ಯಾಭ್ಯಾಸ ನಡೆದದ್ದು ಸ್ಥಳೀಯ ಶಾಲೆಗಳಲ್ಲೇ. ಹತ್ತೊಂಬತ್ತನೆಯ ವರ್ಷ ನಡೆಯುತ್ತಿದ್ದಾಗ ಓವೆನ್ ಮಾಂಚೆಸ್ಟರಿನ ಹತ್ತಿ ಗಿರಣಿಯೊಂದರ ವ್ಯವಸ್ಥಾಪಕನಾದ. ಶೀಘ್ರದಲ್ಲೇ ಅದು ಇಡೀ ಗ್ರೇಟ್ ಬ್ರಿಟನಿನ ಅತ್ಯುತ್ತಮ ಸಂಸ್ಥೆಯಾಯಿತು. ಅಮೆರಿಕದಿಂದ ಸೀ-ಐಲೆಂಡ್ ಹತ್ತಿಯನ್ನು ತರಿಸಿ ಗಿರಣಿಯಲ್ಲಿ ಪ್ರಥಮವಾಗಿ ಬಳಸಿದವನೀತನೇ. ಈತ ಚಾರ್ಲ್‌ಟನ್ ಟ್ವಿಸ್ಟ್ ಕಂಪನಿಯ ವ್ಯವಸ್ಥಾಪಕನೂ ಪಾಲುದಾರನೂ ಆದಾಗ ಇವನ ಸಲಹೆಯ ಮೇರೆಗೆ ನ್ಯೂ ಲ್ಯಾನಾರ್ಕ್ ಗಿರಣಿಯನ್ನು ಆ ಸಂಸ್ಥೆ ಕೊಂಡುಕೊಂಡಿತು. ಅಗ ಉತ್ಪಾದನೆ ನಡೆಸುತ್ತಿದ್ದ ಇತರ ಗಿರಣಿಗಳಿಗಿಂತ ಉನ್ನತವಾದ ತತ್ತ್ವಗಳನ್ನು ತನ್ನ ಗಿರಣಿಯಲ್ಲಿ ಜಾರಿಗೆ ತರಲು ಓವೆನ್ ಪ್ರಯತ್ನಿಸಿ ಯಶಸ್ವಿಯಾದ.

ಓವೆನನ ದೃಷ್ಟಿಯಲ್ಲಿ ಆ ಗಿರಣಿ ಕೇವಲ ಲಾಭಗಳಿಕೆಯ ಉದ್ಯಮವಾಗಿರಲಿಲ್ಲ ; ಅದು ನ್ಯೂ ಲ್ಯಾನಾರ್ಕಿನ ಸರ್ಕಾರ. ಗಿರಣಿಯೊಂದಕ್ಕೆ ಕೇವಲ ವ್ಯವಸ್ಥಾಪಕನಾಗಿರಲು ಅವನಿಗೆ ಇಷ್ಟವಿರಲಿಲ್ಲ. ಜನನಿರ್ವಹಣೆಯ ತತ್ತ್ವಗಳನ್ನು ಪ್ರಯೋಗಿಸುವುದು ಅವನ ಉದ್ದೇಶವಾಗಿತ್ತು. ಶೀಲ ರೂಪಿಸಬೇಕೆಂಬುದು ಆತನ ಹಂಬಲ. ಗಿರಣಿಯಲ್ಲಿ ಕೆಲಸಕ್ಕಿದ್ದ 2,000 ಜನರ ಪೈಕಿ 500 ಮಂದಿ ಮಕ್ಕಳು; ಎಡಿನ್‌ಬರೊ ಮತ್ತು ಗ್ಲ್ಯಾಸ್ಗೊಗಳ ದರಿದ್ರ ಗೃಹಗಳಿಂದ ಬಂದಿದ್ದವರು. ಹಿಂದಿನ ಮಾಲೀಕರು ಮಕ್ಕಳನ್ನು ಚೆನ್ನಾಗಿ ನೋಡಿಕೊಂಡಿದ್ದರಾದರೂ ಒಟ್ಟಿನಲ್ಲಿ ಜನರ ಪರಿಸ್ಥಿತಿ ಶೋಚನೀಯವಾಗಿತ್ತು. ಅಜ್ಞಾನ, ಕಶ್ಮಲ, ವ್ಯಾಧಿ, ಅಪರಾಧ, ಹೀನ ವಸತಿ, ಕುಡಿತ—ಇವು ಸಾಮಾನ್ಯವಾಗಿದ್ದುವು. ಕಾರ್ಖಾನೆಯೇ ಈ ಕೆಟ್ಟ ಚಾಳಿಗಳಿಗೆ ಪಾಠಶಾಲೆ. ಇವನ್ನೆಲ್ಲ ತೊಲಗಿಸಲು ಓವೆನ್ ಶಪಥ ಮಾಡಿದ. ಅವರಿಗೆ ಒಳ್ಳೆಯ ಜೀವನ ಬೋಧಿಸಿದ. ವಸತಿ ಉತ್ತಮಗೊಂಡಿತು. ಶುದ್ಧ ಸರಕುಗಳ ಮಾರಾಟಕ್ಕಾಗಿ ಓವೆನ್ ಜಿನಸಿ ಅಂಗಡಿ ತೆರೆಯಿಸಿದ. ಮದ್ಯದ ಮಾರಾಟಕ್ಕೆ ನಿರ್ಬಂಧ ವಿಧಿಸಲಾಯಿತು. ಮಕ್ಕಳ ವಿದ್ಯಾಭ್ಯಾಸಕ್ಕಾಗಿ ಶಾಲೆ ಪ್ರಾರಂಭಿಸಿದ. ದೊಡ್ಡವರಿಗೂ ವಿದ್ಯೆ ಕಲಿಸಬೇಕೆಂಬುದು ಇವನ ಮತವಾಗಿತ್ತು.

ಮೊದಮೊದಲು ಓವೆನನ ವಿಚಾರಗಳಲ್ಲಿ ಜನಕ್ಕೆ ನಂಬಿಕೆಯಿರಲಿಲ್ಲ. ಕ್ರಮೇಣ ಈತ ಅವರ ಅಭಿಮಾನಕ್ಕೆ ಪಾತ್ರನಾದ. ಆದರೆ ಇವನ ಅನೇಕ ಪ್ರಯೋಗಗಳು ಬಹಳ ದುಬಾರಿ ವೆಚ್ಚದವಾಗಿದ್ದುದರಿಂದ ಅವಕ್ಕೆ ಪಾಲುದಾರರ ಒಪ್ಪಿಗೆ ದೊರಕಿಸುವುದು ಅನೇಕ ಸಾರಿ ಕಷ್ಟವೇ ಆಗಿರುತ್ತಿತ್ತು. ಕೊನೆಗೆ ಓವೆನ್ ಬೇಸತ್ತು ಅವರಿಂದ ಬೇರ್ಪಟ್ಟು, ಬಂಡವಾಳದ ಮೇಲೆ ಸೇಕಡಾ 5ರಷ್ಟು ಲಾಭ ಪಡೆದು ತೃಪ್ತರಾಗಿರುವಂಥವರೊಂದಿಗೆ ಸೇರಿ ಉದ್ಯಮ ಸ್ಥಾಪಿಸಿದ. ಜೆರೆಮಿ ಬೆಂಥಮ್ ಮುಂತಾದ ವಿಚಾರಶೀಲ ಉದಾರವಾದಿಗಳನೇಕರು ಪಾಲುದಾರರಾದರು. ಓವೆನನ ಹೊಸ ದೃಷ್ಟಿಯನ್ನು ಕುರಿತ ಪ್ರಬಂಧಗಳು ಇವನ ಲೇಖನಿಯಿಂದ ಹೊರಬಿದ್ದುವು. ಒಬ್ಬನ ಲಾಭ, ಇನ್ನೊಬ್ಬನಿಗೆ ನಷ್ಟ ಎಂಬ ಸ್ಪರ್ಧಾವ್ಯವಸ್ಥೆಯ ಸೂತ್ರವನ್ನು ಈತ ನಿರಾಕರಿಸಿದ. ಸಹಕಾರ ತತ್ತ್ವದ ತಳಹದಿಯ ಮೇಲೆ ಹೊಸ ಸಮಾಜ ಕಟ್ಟುವುದು ಇವನ ಕನಸಾಗಿತ್ತು. ಮಾನವನ ಶೀಲಸಂವರ್ಧನಕ್ಕೆ ಆತನ ಪರಿಸರವೇ ಕಾರಣ. ಚಿಕ್ಕಂದಿನಿಂದಲೇ ಅವನನ್ನು ಸರಿಯಾಗಿ ಬೆಳೆಸಿದರೆ ಆತ ಆದರ್ಶ ಪ್ರಜೆಯಾಗುತ್ತಾನೆ—ಎಂಬುದು ಓವೆನನ ನಂಬಿಕೆಯಾಗಿತ್ತು. ಇವನ ಹೊಸ ಗಿರಣಿಯಲ್ಲಿ ಈ ಪ್ರಯೋಗ ಯಶಸ್ವಿಯಾಯಿತು. ಇಡೀ ಬ್ರಿಟನಿನಲ್ಲಿ ಮಾತ್ರವಲ್ಲದೆ ಯೂರೋಪಿನಲ್ಲೂ ಇದು ಪ್ರಸಿದ್ಧಿ ಗಳಿಸಿತು. ಅಗ ಸಮಾಜವಾದಿಗಳಿಗೆ ಓವೆನನ ಗಿರಣಿಯೊಂದು ಯಾತ್ರಾಸ್ಥಳ.

ಕಾರ್ಖಾನೆ ವ್ಯವಸ್ಥೆಯಲ್ಲಿ ಸುಧಾರಣೆ ತರಬೇಕೆಂಬುದು ಓವೆನನ ಆಶಯವಾಗಿತ್ತು. ಆದರೆ ಇವನ ಚಳವಳಿ ಫಲಿಸಲಿಲ್ಲ. ಅನೇಕರು ಇವನಿಗೆ ವಿರೋಧಿಗಳಾದರು. ಅವರ ಬೆಂಬಲ ಕುಸಿದುಬಿತ್ತು. ಯಂತ್ರದೊಂದಿಗೆ ಮಾನವನ ಸ್ಪರ್ಧೆಯೇ ನಿರಂತರ ಸಂಕಟಕ್ಕೆ ಕಾರಣ. ಆದ್ದರಿಂದ ಜನರೆಲ್ಲ ಸಂಘಟಿತರಾಗಬೇಕು, ಯಂತ್ರ

ಅವರಿಗೆ ಅಧೀನವಾಗಬೇಕು ಎಂಬುದು ಇವನ ಸೂತ್ರ. ತಲಾ ಸುಮಾರು 1,200 ಜನ ಒಟ್ಟಿಗೆ ವಾಸಿಸುವ ಸಾಮೂಹಿಕ ವ್ಯವಸ್ಥೆ ರಚಿಸಬೇಕೆಂಬುದಾಗಿ ಈತ ಸೂಚಿಸಿದ. ಇವನ ಕೆಲವು ಭಾವನೆಗಳಿಂದಾಗಿ ಅಲ್ಲಿಯ ಚರ್ಚು ಇವನಿಗೆ ವಿರೋಧವಾಯಿತು. ಓವೆನ್ ಅದನ್ನೂ ಟೀಕಿಸಲಾರಂಭಿಸಿದ. ಬ್ರಿಟನಿನ ಸಾರ್ವಜನಿಕ ಅಭಿಪ್ರಾಯ ಇವನಿಗೆ ಅಷ್ಟೇನೂ ಬೆಂಬಲ ನೀಡುವುದಿಲ್ಲವೆಂಬುದು ವೇದ್ಯವಾದಾಗ ಓವೆನ್ ಅಮೆರಿಕಕ್ಕೆ ಹೋದ (1824). ಇಂಡಿಯಾನದಲ್ಲಿ ಜಮೀನು ಕೊಂಡು ಅಲ್ಲಿ ತನ್ನ ಸಾಮೂಹಿಕ ವಸತಿಯೋಜನೆಯನ್ನು ಕಾರ್ಯರೂಪಕ್ಕೆ ತಂದ. ನ್ಯೂ ಹಾರ್ಮೊನಿ ಎಂದೇ ಅದರ ಹೆಸರು. ಮೊದಮೊದಲು ಇದು ಬಲು ಯಶಸ್ಸು ಗಳಿಸಿತು. ಆದರೆ ಕ್ರಮೇಣ ಅಲ್ಲೇ ಒಡಕು ಪ್ರಾರಂಭವಾಯಿತು. ಓವೆನ್ ನಿರಸನಗೊಂಡು ಹಿಂದೆ ಸರಿದ. ಆ ವೇಳೆಗೆ ಆತ ಗಳಿಸಿದ ಸಂಪತ್ತಿನಲ್ಲಿ ಐದನೆಯ ನಾಲ್ಕು ಭಾಗ ಕೈಬಿಟ್ಟುಹೋಗಿತ್ತು.

1829ರಲ್ಲಿ ಓವೆನ್ ಬ್ರಿಟನಿಗೆ ವಾಪಸು ಬಂದ. ಶ್ರಮಾಧಾರಿತ ಮೌಲ್ಯಮಾಪನ, ಸಹಕಾರಿ ಉತ್ಪಾದನೆ ಇವನ್ನು ಕುರಿತ ಓವೆನನ ಭಾವನೆಗಳಿಗೆ ಬ್ರಿಟನಿನಲ್ಲಿ ಆಗ ಕಾರ್ಮಿಕರ ವಲಯಗಳಲ್ಲಿ ಪುರಸ್ಕಾರ ದೊರಕಿತ್ತು. ಅಲ್ಲಿನ ಕಾರ್ಮಿಕ ರಾಜಕಾರಣದಲ್ಲಿ ಓವೆನ್ ನಾಯಕನೆಂದು ಪರಿಗಣಿತನಾದ. ಗ್ರ್ಯಾಂಡ್ ನ್ಯಾಷನಲ್ ಕನ್ಸಾಲಿಡೇಟೆಡ್ ಟ್ರೇಡ್ ಯೂನಿಯನ್ ರೂಪುಗೊಂಡಿತು. 1834ರಲ್ಲಿ ಇದಕ್ಕೆ ಐದು ಲಕ್ಷಕ್ಕೂ ಹೆಚ್ಚು ಮಂದಿ ಸದಸ್ಯರಿದ್ದರು.

ಆದರೆ ಉದ್ಯಮಪತಿಗಳ ವಿರೋಧ, ಸರ್ಕಾರದ ತೀವ್ರಕ್ರಮ ಇವುಗಳಿಂದಾಗಿ ಈ ಚಳವಳಿ ಕ್ಷೀಣಿಸಿತು. ಸಂಘದ ಸದಸ್ಯ ಸಂಖ್ಯೆ ಇಳಿಮುಖವಾಯಿತು. ಕಾರ್ಮಿಕರೇ ತಳಹದಿಯಾಗಿ, ಕಾರ್ಮಿಕ ವಿನಿಮಯ ವ್ಯವಸ್ಥೆಯೇ ಶಿಖರವಾಗಿ ಉಳ್ಳ ಉತ್ಪಾದಕ ವರ್ಗಗಳ ಭವ್ಯ ನೈತಿಕ ಸಂಘವೆಂಬ ಸಾಮಾಜಿಕ ಪಿರಮಿಡ್ ವ್ಯವಸ್ಥೆ ರಚಿಸಬೇಕೆಂಬ ಇವನ ಕನಸು ಕನಸಾಗಿಯೇ ಉಳಿಯಿತು.

1840ರ ದಶಕದಲ್ಲಿ ರಾಚ್‌ಡೇಲ್ ಪ್ರವರ್ತಕರ ನಾಯಕತ್ವದಲ್ಲಿ ಬೆಳವಣಿಗೆ ಹೊಂದಿದ ಕಾರ್ಮಿಕವರ್ಗದ ಸಹಕಾರ ಚಳವಳಿಗೆ ಓವೆನನ ಆದರ್ಶವೇ ಸ್ಫೂರ್ತಿಯ ನೆಲೆಯಾಗಿತ್ತು. ಆದರೂ ಓವೆನ್ ಕನಸುಗಾರ ಸಮಾಜವಾದಿ (ಯುಟೋಪಿಯನ್ ಸೋಷಿಯಲಿಸ್ಟ್) ಎಂದೇ ಅನೇಕರು ಭಾವಿಸಿದ್ದರು. ಈತ ಸಮಾಜವಾದಿಯೇ ಅಲ್ಲವೆಂದೂ ಕೆಲವರು ಸಾಧಿಸಿದ್ದುಂಟು. ಆದರೂ ಕೈಗಾರಿಕಾ ವ್ಯವಸ್ಥೆಯನ್ನು ಕ್ರಿಯಾತ್ಮಕವಾಗಿ ಟೀಕೆ ಮಾಡಿದವನೂ ಸಮಾಜವಾದದ ಪರಿಭಾಷೆಯನ್ನು ರೂಪಿಸಿದವನೂ ಕಾರ್ಮಿಕರು ಸಂಘಟಿಸಿ ಕಾರ್ಯಪ್ರವೃತ್ತರಾಗುವಂತೆ ಪ್ರೇರಣೆ ನೀಡಿದವನೂ ರಾಬರ್ಟ್ ಓವೆನ್. 1858ರ ನವೆಂಬರ್ 17ರಂದು ಈತ ಕಾಲವಾದ. (ಆರ್.ಎಸ್.ಪಿ.)

**ಓವೆನ್, ವಿಲ್‌ಫ್ರೆಡ್ :** 1893–1918. ಆಂಗ್ಲಕವಿ. ಶ್ರಾಪ್‌ಷೈರಿನ ಆಸ್‌ವೆಸ್ಟ್ರಿಯಲ್ಲಿ ಹುಟ್ಟಿದ. ಬರ್ಕನ್‌ಹೆಡ್ ಇನ್ಸ್ಟಿಟ್ಯೂಟ್ ಮತ್ತು ಲಂಡನ್ ವಿಶ್ವವಿದ್ಯಾನಿಲಯಗಳಲ್ಲಿ ಇವನ ವಿದ್ಯಾಭ್ಯಾಸ ನಡೆಯಿತು. 1913 ರಿಂದ 1915ರ ವರೆಗೆ ಬೋರ್ಡೊ ಬಳಿಯಲ್ಲಿದ್ದ ಒಂದು ಫ್ರೆಂಚ್ ಕುಟುಂಬದ ಉಪಾಧ್ಯಾಯನಾಗಿದ್ದ. ಒಂದನೆಯ ಮಹಾಯುದ್ಧಕಾಲದಲ್ಲಿ ಆರ್ಟಿಸ್ಟ್ಸ್ ಬಂದೂಕು ಪಡೆಗೆ ಈತ ಸೇರಿದ. ಅನಾರೋಗ್ಯದ ನಿಮಿತ್ತ 1917ರಲ್ಲಿ ಕ್ರೇಗ್‌ಲಾಕ್‌ಹಾರ್ಟ್ ಆಸ್ಪತ್ರೆಗೆ ಈತನನ್ನು ಕೊಂಡೊಯ್ಯಲಾಯಿತು. ಅಲ್ಲಿ ಇವನೊಂದಿಗಿದ್ದ ಸೀಗ್‌ಫ್ರಿಡ್ ಸಸೂನ್ ಎಂಬ ಖ್ಯಾತ ಕವಿ ಕವನಗಳನ್ನು ಬರೆಯಲು ಈತನನ್ನು ಉತ್ತೇಜಿಸಿದ. ಮುಂದೆ ಇವನನ್ನು ಒಂದು ಸೇನಾ ತುಕಡಿಯ ಅಧಿಕಾರಿಯಾಗಿ ಫ್ರಾನ್ಸಿಗೆ ಕಳುಹಿಸಿಕೊಡಲಾಯಿತು. ಈತ ಪ್ರದರ್ಶಿಸಿದ ಶೌರ್ಯಕ್ಕಾಗಿ ಸೇನಾಪದಕ ದೊರೆಯಿತಾದರೂ ಶಾಂತಿ ನೆಲೆಗೊಳ್ಳುವುದಕ್ಕೆ ಒಂದು ವಾರ ಮೊದಲೇ ಈತ ಯುದ್ಧರಂಗದಲ್ಲಿ ಗುಂಡಿನ ಏಟಿಗೆ ಬಲಿಯಾಗಿ ಸತ್ತ. ಸಸೂನ್ ಸಂಗ್ರಹಿಸಿರುವ ಈತನ ಕವನಸಂಗ್ರಹದಲ್ಲಿ (1920) ಪ್ರಾಸಕ್ಕಿಂತ ಸ್ವರಪ್ರಾಸಗಳು ಹೆಚ್ಚಾಗಿದ್ದು ಕವನಗಳ ಶೋಭೆಯನ್ನು ಹೆಚ್ಚಿಸಿವೆ. ಇದೇ ಧಾಟಿ ಮುಂದೆ ಬಂದ ಆಡೆನ್ ಮತ್ತು ಸ್ಪೆಂಡರ್ ಕವಿಗಳಿಗೆ ಒಂದು ಮಾದರಿಯನ್ನೊದಗಿಸಿತೆನ್ನಬಹುದು. ಪ್ರಧಾನವಾಗಿ ಓವೆನ್ ತನ್ನ ಕೃತಿಗಳಲ್ಲಿ ಯುದ್ಧದಿಂದ ಸಂಭವಿಸುವ ಅನಾಹುತಗಳನ್ನು ವಾಸ್ತವಿಕವಾಗಿ, ಮನಮುಟ್ಟುವಂತೆ ತೋರಿದ್ದಾನೆ.

(ಎನ್.ಎಸ್.ಎಲ್.)

**ಓವ್ರೆಗಾನಿಯ :** ಕ್ಯಾಕ್ಟೇಸಿ ಕುಟುಂಬಕ್ಕೆ ಸೇರಿದ ಒಂದು ಸಸ್ಯಜಾತಿ. ಇದರ ಪರಿಶೋಧನೆ ಈಚಿನದು. ಮೆಕ್ಸಿಕೋದ ಮೂಲವಾಸಿ. ಮೆಕ್ಸಿಕೋದ ಹೆಸರಾಂತ ಅಧ್ಯಕ್ಷ ಡಾನ್ ಅಲ್‌ವಾರೊ ಓವ್ರೆಗಾನ್ ಎಂಬಾತನ ಗೌರವಾರ್ಥವಾಗಿ ಇದಕ್ಕೆ ಈ ಹೆಸರು ಕೊಡಲಾಗಿದೆ. ಫಲವತ್ತಾಗಿರುವ ಸುಣ್ಣಕಲ್ಲುಗಳ ಮಧ್ಯದಲ್ಲಿ ಬೆಳೆದಿದ್ದ ಈ ಸಸ್ಯವನ್ನು ನೋಡಿದವ ಫ್ರಿಕ್ (1925). ಬಾಹ್ಯರೂಪದಲ್ಲಿ ಇದು ಎನ್‌ಸೆಫಲೊಕಾರ್ಪಸ್ ಸಸ್ಯವನ್ನು ಹೋಲುತ್ತದೆ. ಆದರೆ ಇದರ ಗಿಣ್ಣುಗಳು ಎಲೆಗಳಂತೆ ದಪ್ಪ ಮತ್ತು ಉದ್ದ. ಇವುಗಳಲ್ಲಿ ರಂಧ್ರಗಳಿವೆ (ಏರಿಯೋಲ್)

ಓವ್ರೆಗಾನಿಯ ಡಿನಿಗ್ರಿ ಎಂಬ ಪ್ರಭೇದಕ್ಕೆ ದಪ್ಪವಾದ ತಾಯಿಬೇರು ಇದೆ. ಇದರ ಗಿಣ್ಣುಗಳು ತ್ರಿಕೋನಾಕಾರದ ಬಿಲ್ಲೆಯಂತಿವೆ; ಬಣ್ಣ ಬೂದಿಮಿಶ್ರಿತ ಹಸಿರು; ಹಿಂಭಾಗದಲ್ಲಿ ಉಬ್ಬುಗಳಿವೆ. ಅವುಗಳ ತುದಿಯಲ್ಲಿ ದೃಢವಲ್ಲದ, ಹಿಂದಕ್ಕೆ ಬಾಗಿದ ಮುಳ್ಳುಗಳಿವೆ. ಬಿಳುಪು ಅಥವಾ ನಸುಗುಲಾಬಿ ಬಣ್ಣದ ಹೂಗಳು ಮುಕುಟದ ಮೇಲುಭಾಗದಲ್ಲಿ ಅರಳುತ್ತವೆ. ನೋಡಿ—ಕಳ್ಳಿ. (ಡಿ.ಎಂ.)

**ಓಷಿಯಾನಿಯ :** ಪೆಸಿಫಿಕ್ ಸಾಗರದ ದ್ವೀಪಗಳ ಪ್ರದೇಶಕ್ಕೆ ಸಾಮಾನ್ಯವಾಗಿ ಈ ಹೆಸರಿದೆ. ಏಷ್ಯ ಮತ್ತು ಅಮೆರಿಕ ಖಂಡಗಳ ನಡುವಣ ಎಲ್ಲ ಭೂಪ್ರದೇಶಗಳನ್ನೂ ಇದರ ವ್ಯಾಪ್ತಿಯೊಳಗೆ ಸೇರಿಸುವುದು ಕೆಲವು ಲೇಖಕರ ಪದ್ಧತಿ. ಇವರ ಪ್ರಕಾರ ಆಸ್ಟ್ರೇಲಿಯ ಮತ್ತು ನ್ಯೂಜ಼ೀಲೆಂಡ್ ಕೂಡ ಇದರಲ್ಲಿ ಸೇರುತ್ತವೆ. ಉಷ್ಣವಲಯ ಪ್ರದೇಶಗಳಲ್ಲದ ರ್‍ಯುಕ್ಯು ಮತ್ತು ಅಲ್ಯೂಷಿಯನ್ ದ್ವೀಪಗಳನ್ನೂ ಜಪಾನ್ ದ್ವೀಪಸ್ತೋಮವನ್ನೂ ಇದರಿಂದ ಹೊರಗು ಮಾಡುವುದು ಹೆಚ್ಚು ಸೂಕ್ತವೆನಿಸಬಹುದು. ಇಂಡೊನೇಷ್ಯ, ಫಿಲಿಪೀನ್ಸ್ ಮತ್ತು ಫಾರ್ಮೋಸ ದ್ವೀಪಗಳ ನಿವಾಸಿಗಳು ಏಷ್ಯನರ ನಿಕಟ ಸಂಬಂಧಿಗಳಾದ್ದರಿಂದ ಅವನ್ನೂ ಹೊರಗಿಡುವುದು ಇನ್ನೂ ನಿಷ್ಕೃಷ್ಟವೆನಿಸುತ್ತದೆ. ಹೀಗೆ ಮಾಡಿದರೆ ಪಾಲಿನೇಷ್ಯ, ಮೆಲನೇಷ್ಯ ಮತ್ತು ಮೈಕ್ರೊನೇಷ್ಯಗಳು ಓಷಿಯಾನಿಯವೆನಿಸಿಕೊಳ್ಳುತ್ತವೆ. ಈ ಪ್ರದೇಶದ ಭೂಪಟ ತಯಾರಿಸಿದ ಐರೋಪ್ಯರು ಓಷಿಯಾನಿಯವನ್ನು ನಾಲ್ಕು ಭಾಗಗಳಾಗಿ ವಿಂಗಡಿಸಿದ್ದಾರೆ. ಆಸ್ಟ್ರೇಲಿಯವೇ ಮೊದಲನೆಯದು. ನ್ಯೂಗಿನಿಯಿಂದ ಫೀಜಿಯ ವರೆಗಿನ ಪ್ರದೇಶವಾದ ಮೆಲನೇಷ್ಯ ಎರಡನೆಯ ಭಾಗ. ಮೂರನೆಯ ಮೈಕ್ರೊನೇಷ್ಯದಲ್ಲಿ ಮೇರಿಯಾನ, ಕ್ಯಾರೊಲೈನ್, ಮಾರ್ಷಲ್ ಮತ್ತು ಗಿಲ್ಬರ್ಟ್ ದ್ವೀಪಗಳು ಸೇರಿವೆ. ನಾಲ್ಕನೆಯದು ಪಾಲಿನೇಷ್ಯ. ಇದು ಹವಾಯಿ, ನ್ಯೂಜ಼ೀಲೆಂಡ್ ಮತ್ತು ಈಸ್ಟರ್‌ಗಳನ್ನೊಳಗೊಂಡ ಹಲವು ದ್ವೀಪಗಳ ಒಂದು ತ್ರಿಕೋಣ. ಸಾಗರಿಕ (ಓಷಿಯಾನಿಕ್) ಪ್ರದೇಶವನ್ನು ಮಾತ್ರವೇ ಓಷಿಯಾನಿಯವೆಂದು ಕರೆಯುವುದಾದರೆ ಉತ್ತರ ದಕ್ಷಿಣ ಅಕ್ಷಾಂಶ 30°ಗಳ ನಡುವಣ ದ್ವೀಪಗಳನ್ನೂ ಅಗ್ನಿಶಿಲಾಭೂಯಿಷ್ಠ ಜ್ವಾಲಾಮುಖಿಗಳನ್ನೂ ಹವಳ ದ್ವೀಪಗಳನ್ನೂ ಮಾತ್ರವೇ ಪರಿಗಣಿಸಬೇಕಾಗುತ್ತದೆ. (ಪಿ.ಎಚ್.)

ಓಷಿಯಾನಿಯದ ನಾನಾ ವಿಭಾಗಗಳ ಭೂವಿವರಣೆ, ಇತಿಹಾಸ ಮುಂತಾದುವಕ್ಕೆ ನೋಡಿ—ಆಸ್ಟ್ರೇಲಿಯ; ಟಾಸ್ಮೇನಿಯ; ಪೆಸಿಫಿಕ್ ದ್ವೀಪಗಳು; ಫೀಜಿ; ಪಾಲಿನೇಷ್ಯ; ಮೆಲನೇಷ್ಯ; ಮೈಕ್ರೊನೇಷ್ಯ; ಹವಾಯಿ.

ಓಷಿಯಾನಿಯ ಪ್ರದೇಶದಲ್ಲಿ ಚಿಕ್ಕ ದೊಡ್ಡ ದ್ವೀಪಗಳೂ ಜ್ವಾಲಾಮುಖಿಗಳ ಮತ್ತು ಹವಳದ ನೆಲಗಳೂ ಬೆಟ್ಟಗಳೂ ಮೈದಾನಗಳೂ ಇರುವುವಾದರೂ ಒಟ್ಟಿನಲ್ಲಿ ಇಲ್ಲಿರುವ ಜನರೆಲ್ಲರಿಗೂ ಸಮುದ್ರದ ಪ್ರಭಾವದ ಫಲವಾಗಿ ಒಂದೇ ಬಗೆಯ ಸಂಸ್ಕೃತಿಯಿದೆ. ನ್ಯೂಗಿನಿಯ ಮತ್ತು ಮೆಲನೇಷ್ಯದ ಇತರ ಪ್ರದೇಶಗಳ ಜನರ ಸಂಸ್ಕೃತಿ ಮಾತ್ರ ಭಿನ್ನ ಬಗೆಯದು. ಇಲ್ಲಿಯ ಪೊದೆವಾಸಿಗಳಿಗೂ ಸಮುದ್ರಕ್ಕೂ ಬಹಳ ದೂರ. ಸಾಗರಿಕ ಪದಾರ್ಥಗಳಿಗಾಗಿ ಇವರು 'ಉಪ್ಪುನೀರಿನ' ಜನರೊಂದಿಗೆ ವ್ಯಾಪಾರ ನಡೆಸುತ್ತಾರೆ. ಇವರನ್ನು ಬಿಟ್ಟರೂ ಒಟ್ಟಿನಲ್ಲಿ ಇಲ್ಲಿಯ ಮೂಲನಿವಾಸಿಗಳ ಕೆಲವು ಸಾಮಾನ್ಯ ಲಕ್ಷಣಗಳನ್ನು ಗುರುತಿಸುವುದು ಸಾಧ್ಯ.

**ಜನತೆ :** ಶರೀರ ಲಕ್ಷಣಗಳಿಗೆ ಅನುಗುಣವಾಗಿ ಓಷಿಯಾನಿಯದ ಜನರನ್ನು ಐದು ಗುಂಪುಗಳಾಗಿ ವಿಂಗಡಿಸಬಹುದು : 1 ಕಾಕಸಾಯಿಡ್ ವಿಭಾಗಕ್ಕೆ ಸೇರಿದ ಪಾಲಿನೇಷ್ಯನರು; 2 ಮಂಗೊಲಾಯಿಡರೆನ್ನಬಹುದಾದ ಮೈಕ್ರೊನೇಷ್ಯನರು; 3 ಮೆಲನೇಷ್ಯನರು ; 4 ಪ್ಯಾಪುವನರು ಮತ್ತು 5 ನಿಗ್ರಿಟೋಗಳು. ಇವರು ನೀಗ್ರಾಯಿಡರು. ನಿಗ್ರಿಟೋಗಳು ಸಾಗರಿಕ ಕುಬ್ಜರು ; ಬಲು ಹಿಂದುಳಿದವರು. ಇವರು ಪಾಪುವನರ ಪ್ರಾಚೀನ ಶಾಖೆಯೆಂದೇ ಅನೇಕರ ಮತ. ಇವರ ಸರಾಸರಿ ಎತ್ತರ 4′ 9″. ಕೂದಲು ತುಂಡ; ಉಣ್ಣೆಯ ತೆರ. ತಲೆ ದುಂಡು. ಮೂಗು ಅಗಲ. ಕಪ್ಪಿನಿಂದ ಹಳದಿ ಮಿಶ್ರಿತ ಕಂದಿನ ವರೆಗೆ ಮೈಬಣ್ಣ. ಪಾಪುವನರು ನ್ಯೂಗಿನಿಯ ಬಹು ಭಾಗದಲ್ಲೂ ಆಗ್ನೇಯದ ತುದಿಯಲ್ಲೂ ವಾಸವಾಗಿದ್ದಾರೆ. ಇವರದು ಮಿಶ್ರಮಾದರಿ. ಉದ್ದ ತಲೆ, ಹಿಂದೂಡಿದ ಹಣೆ, ದಪ್ಪ ಹುಬ್ಬು, ದೊಡ್ಡ ಮೂಗು, ದಟ್ಟ ಚಾಕೊಲೇಟಿನ ಮೈಬಣ್ಣ. ಉಣ್ಣೆ ಕೂದಲು. ಒತ್ತು ಗಡ್ಡ. 5′ 2″ ದಿಂದ 5′ 7″ ವರೆಗೆ ಎತ್ತರ. ನ್ಯೂಗಿನಿಯ ಆಗ್ನೇಯ ಭಾಗದಿಂದ ಫೀಜಿ ದ್ವೀಪಗಳ ವರೆಗೂ ಅಲ್ಲಿಂದ ನ್ಯೂ ಕ್ಯಾಲೆಡೋನಿಯದವರೆಗೂ ಇರುವ ಪ್ರದೇಶದ ಮೂಲನಿವಾಸಿಗಳು ಮೆಲನೇಷ್ಯನರು. ಇವರು ಬಹುಶಃ ಪಾಪುವನರಿಂದ ಬಂದವರು. ಆದರೆ ಇಲ್ಲಿಗೆ ವಲಸೆ ಬಂದ ಹಲವಾರು ಪಂಗಡಗಳೊಂದಿಗೆ ಮಿಶ್ರವಾಗಿ ವೈವಿಧ್ಯಮಯವಾಗಿದ್ದಾರೆ. ಇವರದೂ ಉದ್ದ ತಲೆ. ಚಿಕ್ಕದೂ ನೇರವೂ ಅಗಲವೂ ಆದ ಮೂಗು. ಮುಖ ಹೆಚ್ಚು ದುಂಡು. ತುಟಿ ದಪ್ಪ. ಸೊಟ್ಟ ಕಣ್ಣು. ಕಾಫಿಯ ಮೈಬಣ್ಣ. ಗುಂಗುರು ಕೂದಲು. ಇವರು ಸಾಧಾರಣವಾಗಿ ಕುಳ್ಳ. ನ್ಯೂಜ಼ೀಲೆಂಡ್, ಹವಾಯಿಯನ್ ದ್ವೀಪಗಳು ಮತ್ತು ಈಸ್ಟರ್ ದ್ವೀಪಗಳ ತ್ರಿಭುಜ ಪ್ರದೇಶದಲ್ಲಿರುವವರು ಪಾಲಿನೇಷ್ಯನರು. ಪೂರ್ವ ಪೆಸಿಫಿಕಿನಲ್ಲೂ ಮಧ್ಯ ಪೆಸಿಫಿಕಿನ ಬಹು ಭಾಗದಲ್ಲೂ ಇವರೇ ಇದ್ದಾರೆ. ಇತರರಿಗಿಂತ ಇವರಲ್ಲಿ ಸಮಾನ ಲಕ್ಷಣಗಳ

ಹೆಚ್ಚು. ಅಗಲವಾದ ಎತ್ತರ ಹಣೆ. ದೊಡ್ಡ ನೇರ ಮೂಗು. ಮಾಟವಾದ ತುಟಿ. ಅಲೆ ಅಲೆ ಕೂದಲು. ಬಿಳಿಯಿಂದ ಕಂದಿನ ವರೆಗೆ ಮೈಬಣ್ಣ. ಸರಾಸರಿಯಲ್ಲಿ 5' 9" ಎತ್ತರ. ಮೈಕ್ರೊನೇಷ್ಯನರೂ ಸ್ಥೂಲವಾಗಿ ಪಾಲಿನೇಷ್ಯನರನ್ನೇ ಹೋಲುತ್ತಾರೆ. ಪಶ್ಚಿಮದ ಕಡೆಯಲ್ಲಿರುವವರು ಮಂಗೋಲಾಯಿಡರ ಲಕ್ಷಣ ಪಡೆದಿದ್ದಾರೆ. ಸಾಮಾನ್ಯವಾಗಿ ಅವರದು ಉಬ್ಬಿದ ಉದ್ದ ಹಣೆ, ಅಗಲ ಕಪೋಲ ಮೂಳೆ, ದಪ್ಪ ಮೂಗು, ಅಗಲ ಬಾಯಿ. ನ್ಯೂ ಗಿನಿಯ ಉತ್ತರಕ್ಕೆ ಪೆಲೂ, ಕ್ಯಾರೊಲೈನ್, ಮಾರ್ಷಲ್ ಮತ್ತು ಗಿಲ್ಬರ್ಟ್ ದ್ವೀಪ, ಸಮೋವದ ಉತ್ತರದ ದ್ವೀಪಗಳು ಈ ಜನರ ವಾಸಸ್ಥಾನ.

ಈ ನಾನಾ ಬುಡಕಟ್ಟುಗಳ ಜನ ಎಲ್ಲಿಂದ ಬಂದರು, ಎಲ್ಲೆಲ್ಲಿ ಸಂಚರಿಸಿ ನೆಲೆಸಿದರು—ಎಂಬ ವಿಚಾರವಾಗಿ ನಾನಾ ವಾದಗಳುಂಟು. ಇಲ್ಲೊಂದು ದೊಡ್ಡ ಭೂಖಂಡ ಇತ್ತು ; ಅದು ಮುಳುಗಿಹೋಯಿತು ; ಅದರ ಪರ್ವತಶಿಖರಗಳು ಮಾತ್ರ ಉಳಿದಿವೆ; ಆದ್ದರಿಂದ ಈ ವಿಶಾಲ ಪ್ರದೇಶದ ದ್ವೀಪಗಳ ಜನರಲ್ಲಿ ಸಾಮಾನ್ಯಲಕ್ಷಣಗಳು ಇರುವುದು ಸಹಜ—ಎಂಬುದೊಂದು ವಾದ. ಆದರೆ ಈ ವಾದವನ್ನು ಸ್ಥಾಪಿಸಲು ಸಾಮಗ್ರಿಯೇನೂ ಇಲ್ಲ. ಕ್ಯಾರೊಲೈನ್‌ಗಳ ಪೋನಪೇ ಮತ್ತು ಕೂಸ್ಯೆಯೆಗಳಲ್ಲಿರುವ ಪಳೆಯುಳಿಕೆಗಳನ್ನು ಪರೀಕ್ಷಿಸಿರುವ ಕೆಲವರು ಇವಕ್ಕೂ ಈಜಿಪ್ಟಿನ ಪಿರಮಿಡುಗಳಿಗೂ ಸಂಬಂಧವುಂಟೆಂದೂ ಆ ಸೂರ್ಯಪುತ್ರರು ಬಲು ಹಿಂದೆ ಮುತ್ತು ಚಿನ್ನಗಳಿಗಾಗಿ ಇಲ್ಲಿಗೆ ಬಂದಿದ್ದಿರಬಹುದೆಂದೂ ಹೇಳುತ್ತಾರೆ. ಆದರೆ ಇದೂ ಬರಿಯ ಊಹೆ ಮಾತ್ರ. ಈ ಪಳೆಯುಳಿಕೆಗಳು ಆ ಕಾಲದಿಂದ ಬಲು ಈಚೆಗಿನ ಪಾಲಿನೇಷ್ಯನ್ ಸಂಸ್ಕೃತಿವಿನ್ಯಾಸಗಳೆಂಬುದು ಹೆಚ್ಚು ಸಮಂಜಸ. ಈಸ್ಟರ್ ದ್ವೀಪದ ಲಿಪಿಗೂ ಮೊಹೆಂಜೊದಾರೊದವಕ್ಕೂ ಸಂಬಂಧ ಕಲ್ಪಿಸುವ ಪ್ರಯತ್ನವೂ ನಡೆದಿದೆ. ಆದರೆ ಈ ಸಂಬಂಧ ಕೇವಲ ಬಾಹ್ಯವಾದದ್ದು. ಇವೆರಡಕ್ಕೂ ಸಮಾನವಾದ ಅಕ್ಷರಗಳಿಗಿಂತ ಭಿನ್ನವಾದವೇ ಅಧಿಕ. ಈಸ್ಟರ್ ದ್ವೀಪದ ಲಿಪಿಗೆ ಬಹುಶಃ ಧ್ವನಿಮೌಲ್ಯವಿದ್ದಿರಲಾರದು. ಅದು ನಿರೂಪಕನಿಗೆ ಅವನ ಅನುಭವವನ್ನು ನೆನಪಿಸಿಕೊಡುವ ಭಾವದ ಸೂಚಕವಾಗಿದ್ದಿರಬೇಕು. ಪಾಲಿನೇಷ್ಯನರ ಮೂಲಪುರುಷರು ಅಮೆರಿಕದಿಂದ ಬಂದವರು ಎಂಬುದಾಗಿ ಕಾನ್-ಟಿಕಿಯ ತೆಪ್ಪದ ಮೇಲೆ ಕುಳಿತು ಟೌಮೋಟು ದ್ವೀಪಸ್ತೋಮಕ್ಕೆ ಯಾನ ಮಾಡಿದ ಹೇಯರ್‌ಡಾಲ್ ಸ್ಥಾಪಿಸಲೆತ್ನಿಸಿದ್ದಾನೆ. ಆದರೆ ಅಮೆರಿಕದ ಪೆರುವಿನಲ್ಲಿ ಸಾಮಾನ್ಯವಾಗಿರುವ ತೆಪ್ಪಗಳು ಪಾಲಿನೇಷ್ಯದಲ್ಲಿ ಬಲು ವಿರಳ. ಪೆರುವಿನ ಸಾಮಾನ್ಯ ಉಪಕರಣ ಕೊಡಲಿ. ಆದರೆ ಪಾಲಿನೇಷ್ಯದ್ದು ಕೈಬಾಚಿ. ಪಾಲಿನೇಷ್ಯಕ್ಕೆ ಅಮೆರಿಕದೊಂದಿಗೆ ಇರುವ ಸಾಂಸ್ಕೃತಿಕ ಸಾಮ್ಯಕ್ಕಿಂತಲೂ ಏಷ್ಯದೊಂದಿಗಿನದೇ ಅಧಿಕ. ಅಮೆರಿಕದವರು ಇಲ್ಲಿಗೆ ಆಗಿಂದಾಗ್ಗೆ ಬಂದಿರಬಹುದೇ ಹೊರತು, ಇವರ ಸಾಮೂಹಿಕ ವಲಸೆ ಆಗಿದ್ದಿರಲಾರದು—ಎಂಬುದು ಹೇಯರ್‌ಡಾಲನ ಊಹೆಯ ಬಗ್ಗೆ ಇರುವ ಒಂದು ಟೀಕೆ.

ನೀಗ್ರಾಯಿಡ್ ಜನಾಂಗಗಳು ಏಷ್ಯದಲ್ಲಿನ ಒತ್ತಡದಿಂದಾಗಿ ಇಲ್ಲಿಗೆ ಬಂದಿದ್ದಿರಬಹುದು. ಮೊದಲು ಬಂದವರು ನಿಗ್ರೀಟೋ. ಆಮೇಲೆ ನೀಗ್ರಾಯಿಡರು ಬಂದು ಇವರನ್ನು ಒತ್ತರಿಸಿರಬಹುದು. ಕೆಲವರು ನ್ಯೂ ಗಿನಿಯಲ್ಲೆ ಉಳಿದು ಹೊಸಬರೊಂದಿಗೆ ರಕ್ತ ಸಂಬಂಧ ಬೆಳೆಸಿರುವುದೂ ಸಾಧ್ಯ. ಇತರರು ಸಾಹಸದಿಂದ ಮುಂದೆಮುಂದೆ ಸಾಗಿದ್ದಿರಬೇಕು. ಪಾಲಿನೇಷ್ಯನರು ಭಾರತದಿಂದ ಬಂದು, ಇಂಡೊನೇಷ್ಯದಲ್ಲಿ ಕೆಲ ಕಾಲ ತಂಗಿ, ಅಲ್ಲಿಯ ಭಾಷೆಯ ಕೆಲವು ಗುಣಗಳನ್ನು ಪಡೆದುಕೊಂಡು, ಮುಂದೆ ಸಾಗಿದ್ದಿರಬಹುದೆಂಬುದು ಸಕಾರಣವಾದ ಊಹೆ. ಪಾಲಿನೇಷ್ಯನರ ಅನಂತರ ಮಂಗೋಲಾಯಿಡರು ಇಲ್ಲಿಗೆ ಬಂದು, ಅವರಲ್ಲಿ ಕೆಲವರನ್ನು ಮುಂದೆ ತಳ್ಳಿ, ಕೆಲವರೊಂದಿಗೆ ವಿವಾಹಸಂಬಂಧ ಬೆಳೆಸಿದ್ದಿರಬಹುದು. ಮೈಕ್ರೊನೇಷ್ಯನರು ಹುಟ್ಟಿಕೊಂಡದ್ದು ಬಹುಶಃ ಹೀಗೆ. ಇವರಿಗೆ ಪಾಲಿನೇಷ್ಯನರ ಗುಣಲಕ್ಷಣಗಳು ಹಲವುಂಟು.

**ಸಂಸ್ಕೃತಿ :** ಈ ದ್ವೀಪಗಳ ನಡುವೆ ಬಹಳ ಮಟ್ಟಿಗೆ ಸಾಂಸ್ಕೃತಿಕ ಸಾಮ್ಯಗಳೂ ಇವೆ. ಸಮುದ್ರಕ್ಕೂ ವಾಸಸ್ಥಳಕ್ಕೂ ನಡುವಣ ದೂರ, ಸಾಧನ ಸಂಪತ್ತಿಯ ಲಭ್ಯತೆ—ಇವೇ ಸಂಸ್ಕೃತಿಯ ಸ್ವರೂಪದ ನಿರ್ಣಾಯಕ ಅಂಶ. ಜನಾಂಗಗಳ ಭಿನ್ನತೆಗನುಸಾರವಾಗಿ ಇಷ್ಟಷ್ಟು ವ್ಯತ್ಯಾಸಗಳುಂಟಾದರೂ ಮೂಲಾಂಶಗಳು ಎಲ್ಲಕ್ಕೂ ಸಮಾನ. ಸಾಮಾನ್ಯವಾಗಿ ಇಲ್ಲಿಯ ಜನ ಸಣ್ಣ ಸಣ್ಣ ಸಮುದಾಯಗಳಾಗಿ ವಿಂಗಡವಾಗಿರುತ್ತಾರೆ. ದೊಡ್ಡ ದ್ವೀಪಗಳಲ್ಲಿ ಹಳ್ಳಿಗಳುಂಟು. ಪೆಲೂದ ಹಳ್ಳಿಗಳಲ್ಲಿ ಎರಡೆರಡು ಚಾವಡಿಗಳುಂಟು. ನ್ಯೂ ಗಿನಿಯ ಅನೇಕ ಹಳ್ಳಿಗಳಲ್ಲಿ ಸಮುದಾಯ ಭವನಗಳಿವೆ. ಅಡ್ಮಿರಾಲ್ಟಿ ದ್ವೀಪಗಳಲ್ಲಿಯ ಕರಾವಳಿ ಹಳ್ಳಿಗಳನ್ನು ಸಾಮಾನ್ಯವಾಗಿ ಸಮುದ್ರದೊಳಕ್ಕೆ ಚಾಚಿದ ದಿಬ್ಬಗಳ ಮೇಲೆ ನಿರ್ಮಿಸಲಾಗಿದೆ. ಸ್ವಿಸ್ ಸರೋವರವಸತಿಗಳನ್ನೆ ಇವು ಹೋಲುತ್ತವೆ.

ಪಾಲಿನೇಷ್ಯನ್ ಹಳ್ಳಿಗಳಲ್ಲಿ ಮನೆಗಳು ಅಡ್ಡಾದಿಡ್ಡಿ. ಕುಣಿತದ ಕಣಗಳೂ ಇಲ್ಲಿರುವುದುಂಟು. ಇವು ಪವಿತ್ರ. ಇಲ್ಲಿಗೆ ಸ್ತ್ರೀಯರ ಪ್ರವೇಶ ನಿಷಿದ್ಧ. ಮನೆಗಳಿಗೆ ಮರದ ಕಂಬಗಳಿರುತ್ತವೆ. ಸಾಮಾನ್ಯವಾಗಿ ಇವುಗಳದು ಆಯತಾಕೃತಿ. ಸಮೋವದಲ್ಲಿ ದುಂಡನೆಯ ಮನೆಗಳು ಸಾಮಾನ್ಯ. ಮೇಲಂತಸ್ತಿನವರ ಮನೆಗಳ ಕಟ್ಟುಗಾರಿಕೆ ಉತ್ತಮತರ. ಅಂತಸ್ತಿಗೆ ತಕ್ಕಂತೆ ಎತ್ತರವಾಗಿರುವ ಕಲ್ಲಿನ ಜಗಲಿಗಳ ಮೇಲೆ ಅವುಗಳ ನಿರ್ಮಾಣ. ಹವಾಯಿಯಲ್ಲಿ ಇದೇ ತೆರನಾದ ಪವಿತ್ರ ವೇದಿಕೆಗಳಿವೆ. ಧಾರ್ಮಿಕ ವಿಧಿಗಳಿಗೆ ಇವನ್ನು ಬಳಸಲಾಗುತ್ತಿತ್ತು. ಇವುಗಳ ಮೇಲೆ ಬೃಹದಾಕಾರದ ಮರದ ಪ್ರತಿಮೆಗಳನ್ನು ಸ್ಥಾಪಿಸುತ್ತಿದ್ದದ್ದೂ ಉಂಟು. ಈ ಅಂಶದಲ್ಲಿ ಇವು ಈಸ್ಟರ್ ದ್ವೀಪಗಳ ವೇದಿಕೆಗಳನ್ನು ಹೋಲುತ್ತವೆ. ಪಾಲಿನೇಷ್ಯದಲ್ಲೆಲ್ಲ ಅಲ್ಲಲ್ಲಿ ಇಂಥ ಪಾಷಾಣವೇದಿಕೆಗಳಿವೆ. ಇಂಥವು ದೂರದ ಮಾಲ್ಡೆನ್ ದ್ವೀಪಗಳಲ್ಲಿದ್ದುದೂ ಉಂಟು. ಇವುಗಳ ಪಳೆಯುಳಿಕೆಗಳಿಂದಲೇ ಈ ಪ್ರದೇಶಕ್ಕೂ ಏಷ್ಯದೊಂದಿಗೆ ಈ ಪ್ರದೇಶದ ಸಂಬಂಧ ಹೆಚ್ಚಾಗಿದ್ದಿರಬಹುದೆಂಬುದು ಇಲ್ಲಿ ಹರಡಿರುವ ಕೆಲವು ಸಸ್ಯಗಳ ಪರಿಶೀಲನೆಯಿಂದ ಉದ್ಭವಿಸುವ ಅನುಮಾನ. ಪಾಲಿನೇಷ್ಯನರಿಗೆ ಬರೆವಣಿಗೆ ಗೊತ್ತಿರಲಿಲ್ಲ; ಆದರೆ ಅವರು ತಮ್ಮ ವಂಶವನ್ನು ನಿಖರವಾಗಿ ನೆನಪಿಟ್ಟುಕೊಂಡು ತಮ್ಮ ಇತಿಹಾಸದ ಸೂತ್ರವನ್ನು ಉಳಿಸಿಕೊಂಡಿದ್ದಾರೆ. ಪುರಾಣದಿಂದ ಆರಂಭವಾಗಿ ಇತಿಹಾಸದ ಪ್ರವಾಹವಾಗಿ ಹರಿಯುವ ಇವರ ಐತಿಹ್ಯಗಳು ಸಂಬಲಹರ್ಪ ವೇಬುದು ನಾನಾ ಪಾಕ್ಷಿಗಳಿಂದ ಸ್ಥಿರಪಟ್ಟಿವೆ. ಬಲು ಹಿಂದೆ




ಓಷಿಯಾನಿಯ ಪ್ರದೇಶದಲ್ಲಿ ಜನಾಂಗ ವಿಂಗಡಣೆ : ಜನ ವಲಸೆ ಹೋದ ಮಾರ್ಗಗಳನ್ನು ಬಾಣಗಳ ಚಿಹ್ನೆಯಿಂದ ತೋರಿಸಲಾಗಿದೆ. ಸಾಕಷ್ಟು ಸಾಕ್ಷ್ಯಾಧಾರಗಳಿಲ್ಲದ ಎಡೆಗಳಲ್ಲಿ ಪ್ರಶ್ನಾರ್ಥಕ ಚಿಹ್ನೆಗಳನ್ನು ತೋರಿಸಿದೆ.

ಈಜಿಪ್ಟಿಗೂ ಹಿಂದಿನ ಕಾಲದಲ್ಲಿ ಸಂಬಂಧವಿತ್ತೆಂಬುದಾಗಿ ಊಹಿಸಲಾಗಿತ್ತು. ಲೇಲಿ ಮತ್ತು ಮೆಟಲೇನಿಕ್ ದ್ವೀಪಗಳಲ್ಲಿ ಜೀರ್ಣವಾದ ನಗರಗಳೇ ಸಿಕ್ಕಿವೆ. ಇವುಗಳಲ್ಲಿ ಹಲವಾರು ಸೌಧಗಳ, ಕೋಟೆಗಳ ಮತ್ತು ಕಾಲುವೆಗಳ ಪಳೆಯುಳಿಕೆಗಳಿವೆ. ಇವನ್ನು ಕಟ್ಟಿದವರು ಯಾರೆಂಬುದು ಗೊತ್ತಿಲ್ಲ. ಇವು ಈಚಿನವೆಂದೂ ಈ ವಿಭಾಗದ ಇತರ ಕಟ್ಟಡಗಳಿಗೂ ಇವಕ್ಕೂ ಹೆಚ್ಚಿನ ವ್ಯತ್ಯಾಸಗಳಿದ್ದಿರಲಾರವೆಂದೂ ಅಭಿಪ್ರಾಯ ಪಡಲಾಗಿದೆ.

ಮೆಲನೇಷ್ಯ ಮತ್ತು ಮೈಕ್ರೊನೇಷ್ಯಗಳಲ್ಲಿ ಗೋತ್ರ ಪದ್ಧತಿ ಸಾಮಾನ್ಯವಾಗಿತ್ತು. ಪ್ರತಿಯೊಂದು ಗೋತ್ರಕ್ಕೂ ಹಕ್ಕಿಯೋ ಪ್ರಾಣಿಯೋ ಮೂಲಪುರುಷ. ಅವರವರ ಕುಲದೇವತಾ ಪ್ರಾಣಿಗಳ ಮಾಂಸದ ಸೇವನೆ ಅವರವರಲ್ಲಿ ನಿಷಿದ್ಧ. ಆಯಾ ಗೋತ್ರಗಳಿಗೆ ಆಯಾ ಕುಲದೇವತಾ ಪ್ರಾಣಿಗಳೇ ಲಾಂಛನ. ಸಗೋತ್ರ ವಿವಾಹ ನಿಷಿದ್ಧ. ಆದರೆ ಆಧುನಿಕ ಪರಿಸ್ಥಿತಿಯಲ್ಲಿ ಈ ಕಟ್ಟು ಮುರಿದು ಬೀಳುತ್ತಿದೆ. ಎರಡು ಅಥವಾ ಹೆಚ್ಚು ಗೋತ್ರಗಳ ಜನ ಒಂದೇ ಹಳ್ಳಿಯಲ್ಲಿ ವಾಸಿಸುವುದೂ ಸಾಮಾನ್ಯ.

**ಸಾಮಾಜಿಕ ರಾಜಕೀಯ ವ್ಯವಸ್ಥೆ :** ಎಲ್ಲ ದ್ವೀಪಗಳಿಗೂ ಸಾಮಾನ್ಯವಾದ ರೀತಿಯ ಸಾಮಾಜಿಕ ಸಂಘಟನೆಯಿಲ್ಲ. ಅಂತಸ್ತು ಮತ್ತು ಯಜಮಾನಿಕೆಗಳ ನಿಯಮಗಳಲ್ಲೂ ಗುಂಪಿನಿಂದ ಗುಂಪಿಗೆ ವ್ಯತ್ಯಾಸವುಂಟು. ಪಾಲಿನೇಷ್ಯದಲ್ಲಿ ಯಜಮಾನಿಕೆ ವಂಶಪಾರಂಪರ್ಯವಾದದ್ದು. ಮೆಲನೇಷ್ಯದ ಕೆಲಭಾಗಗಳಲ್ಲೂ ಈ ಪದ್ಧತಿಯುಂಟು. ಇನ್ನು ಕೆಲವೆಡೆಗಳಲ್ಲಿ ಧಾರ್ಮಿಕ ಮುಖಂಡ ಮತ್ತು ಯುದ್ಧ ನಾಯಕ ಎಂದು ಎರಡು ಸ್ಥಾನಗಳಿರುವುದುಂಟು.

ಅಮೆರಿಕದ ಆಡಳಿತ ಬರುವುದಕ್ಕೆ ಮುಂಚೆ, 19ನೆಯ ಶತಮಾನದಲ್ಲಿ ಹವಾಯಿಯ ಯಜಮಾನಿಕೆಗೆ ರಾಜತ್ವದ ಮಹತ್ತ್ವ ಬಂದಿತ್ತು. ಟಾಂಗ ರಾಜ್ಯದಲ್ಲಿ ಬಲು ಸಂಕೀರ್ಣವಾದ ರಾಜಪದ್ಧತಿ ಬೆಳೆಯಿತು. ಮೆಲನೇಷ್ಯದಲ್ಲಿ ದಕ್ಷ ಅನುಭವಿ ಹಿರಿಯರು ಯಜಮಾನರು. ಅಂತಸ್ತಿನ ವಿಚಾರದಲ್ಲೂ ಭಿನ್ನತೆಗಳುಂಟು. ಶ್ರೀಮಂತರು, ಸಾಮಾನ್ಯರು ಅಥವಾ ಸ್ವತಂತ್ರರು ಮತ್ತು ಗುಲಾಮರು—ಎಂಬ ಮೂರು ವಿಭಾಗಗಳು ಪಾಲಿನೇಷ್ಯದಲ್ಲೂ ಮೈಕ್ರೊನೇಷ್ಯದಲ್ಲೂ ಇದ್ದುವು. ಮೆಲನೇಷ್ಯನರದು ಭಿನ್ನಪದ್ಧತಿ. ಅಲ್ಲಿಯ ಕೆಲವು ಭಾಗಗಳಲ್ಲಿ ಹಲವು ಶ್ರೇಣಿಗಳು ವಿಕಾಸಗೊಂಡುವು.

**ಧಾರ್ಮಿಕ ವ್ಯವಸ್ಥೆ :** ಧಾರ್ಮಿಕ ವ್ಯವಸ್ಥೆಗಳೂ ನಂಬಿಕೆಗಳೂ ನಾನಾ ತೆರ. ಆದರೆ ಕೆಲವು ಲಕ್ಷಣಗಳು ಎಲ್ಲಕ್ಕೂ ಸಾಮಾನ್ಯ. ಯಜಮಾನರೂ ಶ್ರೀಮಂತರೂ ದೈವಿಕಶಕ್ತಿಸಂಪನ್ನರು. ಇವರೊಂದಿಗೆ ಇತರರ ಸಂಪರ್ಕ ವರ್ಜ್ಯ. ಪಾಲಿನೇಷ್ಯದಲ್ಲಿ ದೇವರುಗಳು ಅನೇಕ. ಇವರಲ್ಲೂ ತರತಮ. ಹವಾಯಿಯ ಜ್ವಾಲಾಮುಖಿಗಳು ಅಲ್ಲಿಯ ಅಗ್ನಿದೇವತೆಯ ರೂಪ. ಪ್ರತಿಯೊಂದು ಮರಕ್ಕೂ ಒಂದು ಅಧಿದೇವತೆ. ಸತ್ತವರ ಆತ್ಮಗಳು ಪಶ್ಚಿಮಾಭಿಮುಖವಾಗಿ ಹೋಗಿ ತಮ್ಮ ಶಾಶ್ವತ ನೆಲೆ ತಲಪುತ್ತವೆ. ಮೆಲನೇಷ್ಯದ ದೆವ್ವಗಳು ಎರಡು ತೆರ : ಸತ್ತವರ ಪ್ರೇತಗಳು ಮತ್ತು ದೇಹವನ್ನೇ ಹೊಗದವು. ಅನೇಕ ಕಡೆಗಳಲ್ಲಿ ಪ್ರತ್ಯೇಕ ಪುರೋಹಿತ ವರ್ಗವಿಲ್ಲ. ಯೋಗ್ಯತೆಯಿದ್ದವನು ಪುರೋಹಿತನಾಗಬಹುದು. ಆದರೆ ಪಾಲಿನೇಷ್ಯದಲ್ಲಿ ಹೀಗಲ್ಲ. ಅಲ್ಲಿ ಪ್ರತ್ಯೇಕ ಪುರೋಹಿತ ಜಾತಿ ಉಂಟು.

ಪರಿಶೋಧಕರು ಈ ಪ್ರದೇಶವನ್ನು ಮೊಟ್ಟಮೊದಲು ಕಂಡಾಗ ಇಲ್ಲಿಯ ಜನರಿನ್ನೂ ನವಶಿಲಾಯುಗದಲ್ಲೇ ಇದ್ದರು. ವ್ಯವಸಾಯ ಸರಳವಾಗಿತ್ತು. ಮೆಲನೇಷ್ಯನರ ಮತ್ತು ಪಾಲಿನೇಷ್ಯನರ ಇಡೀ ಅರ್ಥವ್ಯವಸ್ಥೆಗೆ ಮೀನುಗಾರಿಕೆ ಮತ್ತು ತೋಟಗಾರಿಕೆಗಳೇ ಕೇಂದ್ರಗಳಾಗಿದ್ದುವು.

ಉಡುಗೆಗಳು ಸಸ್ಯಮೂಲ. ನ್ಯೂ ಗಿನಿಯ ಕೆಲವೆಡೆಗಳಲ್ಲಿ ಸಂಪೂರ್ಣ ನಗ್ನತೆಯೂ ಇತ್ತು. ಅಲ್ಲಿ ಉಡುಗೆ ಕೇವಲ ಅಲಂಕಾರಕ್ಕೆ. ಹವಾಗುಣದ ಕಾರಣದಿಂದ ದಕ್ಷಿಣ ತುದಿಯ ಮಾವೊರಿ (ಮೌರಿ) ಜನ ಹೆಚ್ಚು ಉಡುಪು ಧರಿಸುತ್ತಿದ್ದರು. ಇನ್ನು ಕೆಲವು ಕಡೆಗಳಲ್ಲಿ ಸರಳವಾದ ನೇಯ್ಗೆಯ ವಿಧಾನವೂ ಗೊತ್ತಿತ್ತು.

ಉದ್ದನೆಯ ಮರಗಳ ತೋಡುದೋಣಿಗಳೇ ಇವರು ಬಳಸುತ್ತಿದ್ದ ಸಮುದ್ರ ಯಾನ ಸಾಧನಗಳು.

*

**ಓಷಿಯಾನಿಯ ಕಲೆ :** ಪೆಸಿಫಿಕ್ ಅಥವಾ ಶಾಂತಸಾಗರ, ಅದರ ಸುತ್ತ ಮುತ್ತಲಿನ ದ್ವೀಪ ಪ್ರಾಂತ್ಯಗಳ—ಅಂದರೆ, ಪಾಲಿನೇಷ್ಯ, ಮೆಲನೇಷ್ಯ, ಪಾಪುವಗಳ ಕಲೆಗಳು ಅತಿ ಪ್ರಾಚೀನವಾದುವು. ಪಾಲಿನೇಷ್ಯದ ಆದಿಪುರುಷರು ಮಲಯ ದ್ವೀಪಗಳ ಸಮೂಹವನ್ನು ದಾಟಿ ಭಾರತದಿಂದ ಬಂದರೆಂದೂ ಮೆಲನೇಷ್ಯದವರು ಏಷ್ಯ ಖಂಡದ ಆಗ್ನೇಯ ಭಾಗದಿಂದ ಬಂದರೆಂದೂ ಮೈಕ್ರೊನೇಷ್ಯದವರು ಪಾಲಿನೇಷ್ಯ ಮೆಲನೇಷ್ಯದವರ ಸಂಕೀರ್ಣ ಜಾತೀಯರೆಂದೂ ನ್ಯೂ ಗಿನಿಯ (ಪಾಪುವ) ಪ್ರದೇಶಕ್ಕೆ ಸೇರಿದವರ ಪೈಕಿ ಆಗ್ನೇಯ ಭಾಗದಲ್ಲಿರುವವರು ಮೆಲನೇಷ್ಯರೆಂದೂ ವಿದ್ವಾಂಸರ ಅಭಿಪ್ರಾಯ.

ಪಾಲಿನೇಷ್ಯದವರ ತೊಗಟೆ ಬಟ್ಟೆಗಳ ಮೇಲೆ ಛಾಪಿಸಿದ ಕ್ಷೇತ್ರಗಣಿತ ನಕ್ಷೆಗಳ ನಮೂನೆಗಳು ಸುಂದರವಾಗಿಯೂ ಅವರ ಉಪಕರಣಗಳ ನಿರೂಪಣೆ, ಕಾವಾಗಳು ಬಟ್ಟಲುಗಳ ಮೇಲಿನ ಸುರುಳಿಗಳು ಗಂಭೀರವಾಗಿವೆ. ಫಿಜಿ, ಸಾಮೂವ (ಹವಾಯಿ) ದ್ವೀಪಗಳ ಕಲಾಕೃತಿಗಳಂತೆ ಒಕ್ಕಲಿಗರ ಸರಳತೆಯನ್ನು ಪಡೆದಿರದೆ, ಅವು ಕುಲೀನ ಮಾದರಿಯಾಗಿವೆ. ಪಾಲಿನೇಷ್ಯ ಕಲಾಕೃತಿಗಳಲ್ಲಿ ಅತಿ ಸುಂದರವಾದುವು ಟೀಕೀ ಹೆಸರಿನ ತಿಮಿಂಗಿಲ ದಂತದಿಂದ ಕೊರೆದ ಕಂಠಾಭರಣದ ಪದಕಗಳು. ಮಯೋರೀಯರ ಹೀಟಿಕೀ ಪದಕಗಳು, ಗರ್ಭಪಿಂಡದ ರೂಪವನ್ನು ತಾಳಿದ್ದು, ಅವುಗಳ ಮೇಲೆ ಧರಿಸುವವರ ಹೆಸರುಗಳನ್ನು ಕೆತ್ತಲಾಗಿವೆ. ಮಯೋರೀಯರ ಮತ್ತೊಂದು ಕೆತ್ತನೆ, ಪಕ್ಷಿಮುಖವನ್ನು ತಾಳಿದ ಪಶುಮುಂಡದ ಮನಾಯಿಯಗಳು. ಅವರ ಪುರಾತನರ ಪ್ರತಿಮೆಗಳಿಗೆ ಎರಡು ಪಾರ್ಶ್ವದಲ್ಲಿಯೂ ಮನೆಯ ಮೇಲ್ಭಾಗಕ್ಕೂ ಇವನ್ನು ಅಂಟಿಸಲಾಗಿದೆ. ಗರಿ ಪೆಟ್ಟಿಗಳ ಮೇಲಿನ ಸುರಳಿ ಕೆತ್ತನೆ ಉತ್ಕೃಷ್ಟವಾಗಿವೆ. ಹರ್ವೇ ದ್ವೀಪಗಳ ದೋಣಿ ನಡೆಸುವ ಕೋಲುಗಳ ಅಲಂಕಾರದಲ್ಲಿ ಕ್ಷೇತ್ರಗಣಿತದ ನಕ್ಷೆಗಳನ್ನು ವಿಧ ವಿಧ ರೂಪದಲ್ಲಿ ಕೋಮಲವಾಗಿ ಕೆತ್ತಲಾಗಿದೆ. ಆದರೆ ಹವಾಯಿ ದ್ವೀಪದ ಶಿಲ್ಪಾಕೃತಿಗಳು ವಿಕಟವಾಗಿಯೂ ಬಿರುಸಾಗಿಯೂ ಕಾಣುತ್ತವೆ. ಈಸ್ಟರ್ ದ್ವೀಪಗಳ ಮಾನವ ಶಿಲ್ಪಾಕೃತಿಗೆ ದೊಡ್ಡ ತಲೆಯೂ ಸಮುದ್ರಪಕ್ಷಿಯ ಮುಖವೂ ಇವೆ. ಓಷಿಯಾನಿಯ ಕಲೆಯಲ್ಲಿ ಸಮುದ್ರಪಕ್ಷಿ ಜೀವಾತ್ಮನ ಸಂಕೇತ. ಕೊರೊಮೊರೊ ದಾರುವಿನಿಂದ ರಚಿಸಿದ ಪ್ರತಿಮೆಗಳು ಸುಂದರವಾಗಿವೆ.

ಮೈಕ್ರೊನೇಷ್ಯದವರ ಕಲೆಯಲ್ಲಿ ಅತಿ ಮುಖ್ಯವಾದುವು ಮರದಲ್ಲಿ ಕೆತ್ತಿದ ಪಶುಪ್ರಾಣಿಗಳ ಪ್ರತಿಮೆಗಳು. ಆದರೆ ನುಕುವಾರೊ ಮತ್ತು ಉತ್ತರದ ಫಿಲಿಪೀನ್ಸ್ ಪ್ರದೇಶಗಳಿಗೆ ಸೇರಿದ ಪ್ರತಿಮೆಗಳಲ್ಲಿ ಕೃತಕತೆ ಕಾಣುತ್ತದೆ. ಅವಕ್ಕೆ ರೂಪದ ಸ್ಪಷ್ಟತೆ ಇಲ್ಲ. ತಲೆಗಳು ಅಂಡಾಕಾರದಲ್ಲಿಯೂ ಕಾಲು ಕೈಗಳು, ಅವುಗಳ ಬೆರಳುಗಳು ಅಸ್ಪಷ್ಟವಾಗಿಯೂ ಇದ್ದು ಕೇವಲ ಅಮೂರ್ತಕಲಾಶೈಲಿಯನ್ನು ಪ್ರದರ್ಶಿಸುತ್ತವೆ. ಪಿಲ್ಯೂ ದ್ವೀಪಗಳ ಅಲಂಕಾರದಲ್ಲಿ ಎರಡು ತರಹವಿದ್ದು, ಮೊದಲನೆಯ ಜಾತಿಗೆ ನಾನಾವಿಧ ಬಣ್ಣಗಳಿಂದ ಕೂಡಿದ ಪುರಾಣೋಕ್ತ ಕೆತ್ತನೆ ಮತ್ತು ಮದುವೆಯಾಗದ ಪುರುಷರ ಮನೆಯ ಇಪ್ಪಾರುಗಳ ವಿನ್ಯಾಸ ಸೇರುತ್ತವೆ. ಎರಡನೆಯ ಜಾತಿಗೆ, ಇಂದಿನ ಶೈಲಿಯಲ್ಲಿ ಕೊರೆದ, ಕೆಮ್ಮಣ್ಣು ಬಳಿದ ಬಟ್ಟಲುಗಳು ಸೇರುತ್ತವೆ. ಈ ಬಟ್ಟಲುಗಳಿಗೆ ಸಸ್ಯದ್ರಾವಕದಿಂದ ಬಣ್ಣ ಕಟ್ಟಿದ್ದು ಅಲ್ಲಲ್ಲಿ ಕಪ್ಪೆಚಿಪ್ಪಿನ ಚೂರುಗಳ ಕುಂದಣ ಮಾಡಲಾಗಿದೆ.

ಮೆಲನೇಷ್ಯದ ದಕ್ಷಿಣ ಭಾಗಕ್ಕೆ ಸೇರಿದ ತೊಂಬಾರ ಪ್ರಾಂತ್ಯದಲ್ಲಿ ಕೀಳುಮಟ್ಟದ, ನ್ಯೂ ಐರ್ಲೆಂಡಿನ ಮಧ್ಯಭಾಗದಲ್ಲಿ ಮಧ್ಯಮ ಮಟ್ಟದ, ನ್ಯೂ ಐರ್ಲೆಂಡಿನ ಉತ್ತರದಲ್ಲಿ ಉನ್ನತ ಮಟ್ಟದ, ಕಲೆಗಳನ್ನು ಕಾಣಬಹುದು. ಮೆಲನೇಷ್ಯದ ದಕ್ಷಿಣ ಭಾಗದಲ್ಲಿ ಸೀಮೆಸುಣ್ಣದಲ್ಲಿ ಬಿಡಿಸಿದ ಪಿತೃಗಳ ಶಿಲ್ಪ ಮಧ್ಯಮ ಭಾಗದಲ್ಲಿ ಸ್ಮಾರಕ ಪ್ರತಿಮೆಗಳು, ಉತ್ತರದಲ್ಲಿ ಬಟ್ಟಲುಗಳು ಮತ್ತು ವಾಸಮಾಡುವ ಗುಡಿಸಲುಗಳ ಬಾಗಿಲಿನ ಪಕ್ಕಗಳಲ್ಲಿ ಇಡುವ ಮೇಲಿನ ಆಕೃತಿಗಳು ಸಂಪ್ರದಾಯಬದ್ಧ ಶೈಲಿಯಲ್ಲಿವೆ. ಮನುಷ್ಯ, ಮತ್ಸ್ಯ, ಪಕ್ಷಿಗಳ ರೂಪಾಂತರಗಳನ್ನಿಲ್ಲಿ ಕಾಣಬಹುದು. ಆರಾಧನೆಗೆ ಯೋಗ್ಯವಾದ, ಅಲ್ಲಿನ ಪದ್ಧತಿಗಳಿಗೆ ಅನುಗುಣವಾದ ಶೈಲಿ ಇಲ್ಲಿ ಎದ್ದು ತೋರುತ್ತದೆ. ಬಿರಾರಾ (ನ್ಯೂ ಬ್ರಿಟನ್) ಶಿಲ್ಪಾಕೃತಿಗಳು ಮೃದುವಾದ ಬೂದಿ ಬಣ್ಣದ ಕಲ್ಲಿನಿಂದ ಕೊರೆದವಾಗಿದ್ದು ಮಾಟ ಮಂತ್ರಗಳಿಗಾಗಿ ಬಳಕೆಯಾಗುವಂಥವಾಗಿವೆ. ಆದರೆ ಸಾಲೊಮನ್ ದ್ವೀಪಗಳ ದಾರುಶಿಲ್ಪ ಪ್ರತ್ಯೇಕ ಶೈಲಿಯಲ್ಲಿದ್ದು ನಾನಾ ವಿಧದ ರೇಖಾವಿಲಾಸಗಳನ್ನು ಪ್ರದರ್ಶಿಸುತ್ತದೆ. ಚಿಕ್ಕಪುಟ್ಟ ಪ್ರತಿಮೆಗಳನ್ನು ದೊಣ್ಣೆ, ಕಟ್ಟಿಗೆಗಳಿಂದ ಮಾಡಲಾಗಿದೆ. ಅವುಗಳಿಗೆ ಬಿಳಿ ಮತ್ತು ಕಪ್ಪು ಬಣ್ಣಗಳನ್ನು ಹಾಕಿದ್ದಾರೆ. ದಕ್ಷಿಣ ವಲಯದ ದ್ವೀಪಗಳಲ್ಲಿ, ಅವಕ್ಕೆ ಕಪ್ಪು ಬಣ್ಣ ಮಾತ್ರ ಹಾಕಿ ಅವುಗಳ ಮೇಲೆ ಮುಕ್ಕೋಣದ ಮುತ್ತಿನ ಚಿಪ್ಪಿನ ಚೂರುಗಳನ್ನು ಅನೇಕ ಆಕಾರಗಳಲ್ಲಿ ಅಂಟಿಸಿದ್ದಾರೆ. ದೋಣಿಗಳ ಮುಂಭಾಗಗಳಲ್ಲಿ ಮತ್ತು ಮಾನವ ಪ್ರತಿಮೆಗಳಲ್ಲಿ ಇದೇ ರೀತಿಯ ಕೆತ್ತನೆ ಮತ್ತು ಅಲಂಕರಣಗಳನ್ನು ಕಾಣಬಹುದು. ಮಾನವಾಕೃತಿಗಳಿಗೆ ಸುಂದರವಾದ ಮುತ್ತಿನ ಚಿಪ್ಪಿನ ಕಣ್ಣುಗಳಿವೆ. ಇವು ಭಾವಚಿತ್ರಗಳೆಂದು ನಿಸ್ಸಂಶಯವಾಗಿ ಹೇಳಬಹುದು. ಪ್ರಾಚೀನ ಕೋಲು ಶಿಲ್ಪದ ಮಾನವಾಕೃತಿಗಳಲ್ಲಿ ಮುಂಡ, ಕೈ, ಕಾಲುಗಳು ಪ್ರತ್ಯೇಕವಾಗಿರದೆ ಅಖಂಡವಾಗಿವೆ. ಇಲ್ಲಿನ ಕೋಲುಪ್ರತಿಮೆಗಳಲ್ಲಿ ಕಾಲು, ಕೈಗಳು ಪ್ರತ್ಯೇಕವಾಗಿದ್ದು ಮುಂಡಕ್ಕೆ ಅಂಟಿದಂತಿವೆ. ಆಕಾರದ ಶಿಲ್ಪ ಅತ್ಯುತ್ತಮವಾಗಿದ್ದು ಪ್ರತಿಮೆಗಳ ವೈಶಿಷ್ಟ್ಯ, ಕೋಮಲತ್ವ ಪ್ರಶಂಸನೀಯವಾಗಿವೆ.

ಪಾಪುವ ಪ್ರಾಂತ್ಯದ ಕಲಾವೈಶಿಷ್ಟ್ಯ ನೀಗ್ರೊ ಆಫ್ರಿಕ, ಮತ್ತು ಅಮೆರಿಕ ವಾಯುವ್ಯ ಭಾಗದ ಕಲಾವೈಶಿಷ್ಟ್ಯವನ್ನು ಮೀರಿಸುವಂತಿದೆ. ಗುಂಡಾದ ಶಿಲ್ಪ ಅಪರೂಪ. ಸಾಧಾರಣ ಉಪಕರಣಗಳು ಕೂಡ ಅಲಂಕಾರಮಯವಾಗಿವೆ.

ರೇಖೆಗಳಲ್ಲಿ ಬಣ್ಣಗಳು ತುಂಬಿವೆ. ಯಂತ್ರನಕ್ಷೆಗಳಿಂದೊಡಗೂಡಿರುವ ಈ ಅಲಂಕಾರ ಪುರಾಣೋಕ್ತವಾಗಿ, ಧಾರ್ಮಿಕವಾಗಿದ್ದು ಪೂರ್ವಿಕರ ಆರಾಧನೆಗೆ ಅನುಕೂಲತೆಯನ್ನು ಕಲ್ಪಿಸಿಕೊಡುತ್ತದೆ. ಡಚ್ಚರ ನ್ಯೂ ಗಿನಿಯ ಕಲಾಕೃತಿಗಳು ಇಂಡೊನೇಷ್ಯದ ಪ್ರತ್ಯೇಕವಾದ ಸುರುಳಿ ಸಂಪತ್ತನ್ನು ಹೊಂದಿವೆ. ಈ ಅಲಂಕಾರದಲ್ಲಿ ತೀಕ್ಷ್ಣವಾದ ಆಡಂಬರದ ವೈಖರಿ, ಅಂದರೆ ಕ್ಷೇತ್ರಗಣಿತ ನಕ್ಷೆಗಳು ಬೆರೆತ ಲತಾ ಸುರುಳಿಗಳು, ಪಶುಪ್ರಾಣಿಗಳ ರೂಪಗಳು ಕಂಡುಬರುತ್ತವೆ. ಇವುಗಳಲ್ಲಿ ಪಿತೃಗಳ ಕಪಾಲಗಳನ್ನು ಜೋಪಾನ ಮಾಡವುದಕ್ಕೆ ಉಪಯುಕ್ತವಾದ ಕೋರ್‌ವಾರ್ ಹೆಸರಿನ ಮರದ ಸಂಪುಟಗಳು ಗಣನೀಯವಾದುವು. ಪಿತೃಗಳ ಆತ್ಮಗಳು ಇವುಗಳಲ್ಲಿ ವಾಸಿಸುತ್ತವೆನ್ನುವ ಭಾವನೆ ಪ್ರಚಲಿತವಿದೆ.

ಸೆಪಿಕ್ ಮತ್ತು ರಾಮು ಕಣಿವೆಗಳಲ್ಲಿನ ಗುಂಡು ಪ್ರತಿಮೆಗಳ ಕೌಶಲ್ಯ ಹೆಚ್ಚಿನ ಮನ್ನಣೆ ಪಡೆದಿದೆ. ಇಲ್ಲಿನ ಜನರ ಮರದ ಬಟ್ಟಲುಗಳು ಅತಿ ಸುಂದರವಾಗಿವೆ. ಇವುಗಳ ಮೇಲೂ ಮಾನವ, ಪಶುರೂಪಾಲಂಕಾರ ಹೇರಳವಾಗಿದೆ. ಮುಖವಾಡಗಳು, ಕಟ್ಟಿಗೆಯ ಕಾಲುಮಣೆಗಳು ಮುಂತಾದುವು ಇತರ ಗಮನಾರ್ಹ ವಸ್ತುಗಳು. ರಾಮು ಕಣಿವೆಗೆ ಸೇರಿದ ವಾಟುಟ್ ಬುಲಾಲೊ ಪ್ರಾಂತ್ಯಗಳ ಕಲ್ಲಿನ ವಿಗ್ರಹಗಳು ನೋಡತಕ್ಕವು. ಮಾಸಿಂ ಮತ್ತು ಟೋಬ್ರಿಯನ್ಡ್ ದ್ವೀಪಗಳ ಕೈಪಿಡಿಗಳಿಗೆ ಮತ್ತು ದೋಣಿಯ ಮುಂಭಾಗಗಳಿಗೆ ಪ್ರತ್ಯೇಕವಾದ ಸುರುಳಿ ಅಲಂಕರಣದ ಸೊಬಗಿದೆ. ಇದನ್ನು ಹೆಣಿಗೆಗೊಂಡ ಪ್ರಶ್ನಾರ್ಥಕ ಚಿಹ್ನೆ ಸರಣಿ (ಇಂಟರ್‌ಲಾಕಿಂಗ್ ಕ್ವೆಶ್ಚನ್ ಮಾರ್ಕ್) ಎಂದು ಕರೆಯುತ್ತಾರೆ. ಈ ಅಲಂಕಾರ ಪುರಾಣೋಕ್ತವಾಗಿ ಆಗಲೀ ಯಾಂತ್ರಿಕವಾಗಿಯಾಗಲೀ ಇಲ್ಲ. ಸಾಂಕೇತಿಕ ಭೂಪ್ರದೇಶ ಚಿತ್ರಗಳ ಕೆತ್ತನೆ ಬಿದುರು ವಸ್ತುಗಳ ಮೇಲೆ ರಮ್ಯವಾಗಿ ಮೂಡಿ ನಿಂತಿದೆ. ಆಳವಾದ ನೀರು, ಗಾಳಿಯಿಂದ ಪಲ್ಲಟವಾದ ಸಮುದ್ರದ ಮೇಲೆ ಸುರಿಯುವ ಮಳೆ, ಸಮುದ್ರದ ಅಲೆಗಳಿಂದ ಹೊಡೆತ ತಿನ್ನುವ ಗುಡ್ಡಗಳು—ಮುಂತಾದುವು ತುಂಬ ಮನೋಹರವಾಗಿ ಕೊರೆಯಲ್ಪಟ್ಟಿವೆ. ದೋಣಿಗಳ ಮತ್ತು ನಾಟ್ಯದಲ್ಲಿ ಉಪಯೋಗಿಸುವ ಗುರಾಣಿಗಳ ಅಲಂಕಾರ ಸಹ ಸುಂದರವಾಗಿದೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಓಷಿಯಾನಿಯ ಕಲೆಯಲ್ಲಿ ಭಾರತದ ಸಂಸ್ಕೃತಿ ಮಧುರವಾಗಿ ಮುದ್ರಿತವಾಗಿದೆ. (ಪಿ.ಎಸ್.)

**ಓಸಜೋನುಗಳು :** ಫಿನೈಲ್ ಹೈಡ್ರಜೀನ್ ಪರಿವರ್ತಕದೊಡನೆ ಕೀಟೋನುಗಳು ಮತ್ತು ಆಲ್ಡಿಹೈಡುಗಳು ವರ್ತಿಸಿ ಫಿನೈಲ್ ಹೈಡ್ರಜೋನುಗಳಾಗಿ ಪರಿವರ್ತಿತವಾಗುತ್ತವೆ ; ಹೈಡ್ರಜೋನುಗಳು ಫಿನೈಲ್ ಹೈಡ್ರಜೀನಿನ ಮತ್ತೆರಡು ಅಣುಗಳೊಡನೆ ಸಂಯೋಜಿಸಿ ಓಸಜೋನುಗಳ ಉತ್ಪತ್ತಿಯಾಗುತ್ತದೆ.




ಓಸಜೋನುಗಳು ಹಳದಿ ಬಣ್ಣವುಳ್ಳ ಸ್ಫಟಿಕಾಕೃತಿಯ ಘನಗಳು. ನೀರಿನಲ್ಲಿ ಹೆಚ್ಚಾಗಿ ಕರಗುವುದಿಲ್ಲ. ನಿರ್ದಿಷ್ಟವಾದ ಕರಗುವ ಬಿಂದುಗಳಿವೆ. ಕರಗುವ ಉಷ್ಣತೆಯಲ್ಲಿ ಅವು ವಿಭಜನೆಗೊಳ್ಳುತ್ತವೆ. ಸಕ್ಕರೆಗಳನ್ನು ಗೊತ್ತುಪಡಿಸುವುದಕ್ಕೂ ಕೆಲವು ಸಂದರ್ಭಗಳಲ್ಲಿ ಅವನ್ನು ಬೇರ್ಪಡಿಸುವುದಕ್ಕೂ ಓಸಜೋನುಗಳ ಉಪಯೋಗವಿದೆ. –CO–CHOH– ಗುಂಪು ಇರುವ ಎಲ್ಲ ಆರ್ಗ್ಯಾನಿಕ್ ರಾಸಾಯನಿಕ ಸಂಯುಕ್ತಗಳೂ ಓಸಜೋನುಗಳನ್ನು ಕೊಡುತ್ತವೆ.

ಫಿನೈಲ್ ಹೈಡ್ರಜೀನ್ ಸಂಯೋಜಕವು ಶರ್ಕರಪಿಷ್ಟ ಪದಾರ್ಥಗಳೊಡನೆ ಹೈಡ್ರೊಕ್ಲೋರಿಕ್ ಆಮ್ಲದ ಸಂಪರ್ಕದಲ್ಲಿ ಸಂಯೋಜನೆಗೊಂಡು ಓಸಜೋನುಗಳ ಉತ್ಪತ್ತಿಯಾಗುವುದನ್ನು 1884ರಲ್ಲಿ ಫಿಶರ್ ಮೊಟ್ಟಮೊದಲ ಬಾರಿಗೆ ಕಂಡುಹಿಡಿದ. ಗ್ಲೂಕೋಸ್ ಮತ್ತು ಫ್ರುಕ್ಟೋಸುಗಳೆರಡೂ ಒಂದೇವಸ್ತು ಗ್ಲೂಕೋಸಜೋನನ್ನು ಉತ್ಪತ್ತಿಮಾಡುವುದನ್ನು ಸಹ ಈತ ಶೋಧಿಸಿದ. ಈ ರೀತಿಯಲ್ಲಿ ಓಸಜೋನ್ ಆಗುವುದಕ್ಕೆ ಸಮರ್ಪಕವಾಗಿ ವಿವರಿಸುವ ಸಿದ್ಧಾಂತವನ್ನು ಫಿಶರ್ ಕೊಟ್ಟಿದ್ದಾನೆ. ಫಿನೈಲ್ ಹೈಡ್ರಜೀನಿನ ಮೊದಲನೇ ಅಣು ಗ್ಲೂಕೋಸಿನಲ್ಲಿರುವ ಆಲ್ಡಿಹೈಡ್ ಗುಂಪಿನೊಂದಿಗೆ ಸಂಯೋಜಿಸಿ ಫಿನೈಲ್ ಹೈಡ್ರಜೋನಾಗುತ್ತದೆ. ಎರಡನೇ ಅಣು ಆ ಗುಂಪಿನ ಪಕ್ಕದಲ್ಲಿರುವ (ಅಂದರೆ 2ನೆಯ ಸ್ಥಾನದ) ಹೈಡ್ರಾಕ್ಸಿಲ್ ಗುಂಪನ್ನು ಉತ್ಕರ್ಷಿಸಿ ಕೀಟೋನಿಕ್ ಗುಂಪಾಗಿ ಪರಿವರ್ತಿಸುತ್ತದೆ. ಮೂರನೆಯ ಅಣು ಆ ಗುಂಪಿನೊಂದಿಗೆ ಸಂಯೋಜಿಸಿ ಗ್ಲೂಕೋಸಜೋನ್ ಉತ್ಪತ್ತಿಯಾಗುತ್ತದೆ. ಆದರೆ ಈ ವಿವರಣೆ ಸಮರ್ಪಕವಾಗಿಲ್ಲ. ಕಾರಣ, ಫಿನೈಲ್ ಹೈಡ್ರಜೀನ್ ಎಲ್ಲೂ ಉತ್ಕರ್ಷಣಕಾರಿಯಾಗಿ ವರ್ತಿಸುವುದು ಕಂಡುಬಂದಿಲ್ಲ. 1940ರಲ್ಲಿ ವೀಗ್ಯಾಂಡ್ ಎಂಬಾತ ಬೇರೆ ಸಿದ್ಧಾಂತವನ್ನು ಮಂಡಿಸಿದ್ದಾನೆ. ಅಣುವಿನೊಳಗಡೆಯೇ ಉತ್ಕರ್ಷಣ–ಅಪಕರ್ಷಣಗಳ ಪರಸ್ಪರ ಹೊಂದಾಣಿಕೆ (ಅಮೆಡೋರಿಯ ಪರಸ್ಪರ ಹೊಂದಾಣಿಕೆಯ ವಿಧಾನ) ಆಗುತ್ತದೆ. ತತ್ಫಲವಾಗಿ ಓಸಜೋನ್ ಉತ್ಪತ್ತಿಯಾಗುತ್ತದೆ.




ಈ ವಿವರಣೆ ಕೂಡ ಅಸಮರ್ಪಕವಾದುದು. ಏಕೆಂದರೆ ಇದರಿಂದ ಮೊದಲ ಎರಡೇ ಇಂಗಾಲದ ಪರಮಾಣುಗಳು ಈ ಕ್ರಿಯೆಯಲ್ಲಿ ಪಾಲ್ಗೊಳ್ಳುವ ಔಚಿತ್ಯದ ಮಿತಿಯನ್ನು ವಿವರಿಸಲಾಗದು. ಆದರೂ ಬ್ರ್ಯಾಡ್ಲಿ ಮತ್ತು ಮಿಚ್ಚೆಲ್ ಈ ವಿವರಣೆಯನ್ನೇ ಅಲ್ಪ ಬದಲಾವಣೆಯೊಂದಿಗೆ ಪುಷ್ಟೀಕರಿಸಿದ್ದಾರೆ (1955). ಎಲ್. ಮೆಸ್ಟರ್ ಎಂಬಾತ ಓಸಜೋನುಗಳು ಅಚಕ್ರೀಯ ವಸ್ತುಗಳು ಹಾಗೂ ಖಿಲೇಟ್ ಉಂಗುರ ಉಳ್ಳವಾದ್ದರಿಂದ ಸ್ಥಿರವಾದ ಸಂಯುಕ್ತಗಳು ಎಂಬುದನ್ನು ಸಮರ್ಥಿಸಿದ್ದಾನೆ (1955).

ಸಕ್ಕರೆ ಮತ್ತು ಫಿನೈಲ್ ಹೈಡ್ರಜೀನ್ ಅಸಿಟೇಟ್ ದ್ರಾವಣವನ್ನು ಒಂದು ಕುದಿಯುವ ನೀರಿನ ತಾಪಕದಲ್ಲಿ ಕಾಯಿಸಿದಾಗ ಓಸಜೋನ್ ಉತ್ಪತ್ತಿಯಾಗುತ್ತದೆ. ಈ ರೀತಿ ಸಕ್ಕರೆಗಳು ಓಸಜೋನುಗಳಾಗಿ ಪರಿವರ್ತನೆಯಾಗಲು ತೆಗೆದುಕೊಳ್ಳುವ ಕಾಲ ಮತ್ತು ಈ ಓಸಜೋನುಗಳ ದೃಢ ಕರಗುವ ಬಿಂದುಗಳನ್ನು ಕಂಡುಹಿಡಿಯುವುದರಿಂದ ಸಕ್ಕರೆಗಳನ್ನು ಗೊತ್ತುಪಡಿಸುತ್ತಾರೆ.

| ಓಸಜೋನಿನ ಹೆಸರು | ಕರಗುವ ಬಿಂದು °ಸೆಂ. | ಉತ್ಪತ್ತಿಯಾಗಲು ತೆಗೆದುಕೊಳ್ಳುವ ಕಾಲ (ಮಿನಿಟುಗಳು) |
|---|---|---|
| ಗ್ಲೂಕೋಸಜೋನ್ | 205 | 8·0 |
| ಫ್ರುಕ್ಟೋಸಜೋನ್ | 205 | 5·0 |
| ಮ್ಯಾನ್ನೋಸಜೋನ್ | 200 | 0·5 |
| ಗ್ಯಾಲಕ್ಟೋಸಜೋನ್ | 194 | 30·0 |
| ಅರಾಬಿನೋಸಜೋನ್ | 167 | 10·0 |
| ಗ್ಸೈಲೋಸಜೋನ್ | 163 | 7·0 |
| ಮಾಲ್ಟೋಸಜೋನ್ | 206 | ಶೈತ್ಯಗೊಳಿಸಿದ ಅನಂತರ |
| ಲ್ಯಾಕ್ಟೋಸಜೋನ್ | 200 | ಶೈತ್ಯಗೊಳಿಸಿದ ಅನಂತರ |
| ಸುಕ್ರೋಸಜೋನ್ (ಇಲ್ಲ) | — | — |

ಓಸಜ಼ೋನುಗಳ ಆವರ್ತಶಕ್ತಿ (ಸ್ಪೆಸಿಫಿಕ್ ರೊಟೇಶನ್) ಕೂಡ ಅವುಗಳ ಮುಖ್ಯ ಗುಣವಾಗಿದೆ. ಇದನ್ನು ಕಂಡುಹಿಡಿಯುವುದರಿಂದಲೂ ಸಕ್ಕರೆಗಳನ್ನು ಗುರುತಿಸಬಹುದು. ಓಸಜ಼ೋನುಗಳು ಹರಳುಗಳ ಆಕಾರದ ಘನವಸ್ತುಗಳು. ಅವನ್ನು ಸೂಕ್ಷ್ಮದರ್ಶಿಯಲ್ಲಿ ಪರೀಕ್ಷಿಸುವುದರಿಂದ, ಓಸಜ಼ೋನುಗಳ ಹರಳುಗಳ ವೈಶಿಷ್ಟ್ಯ, ಆಕಾರ ಗೊತ್ತಾಗುತ್ತವೆ. ಇದರಿಂದಲೂ ಓಸಜ಼ೋನು ಯಾವ ಸಕ್ಕರೆಯಿಂದಾದುದು ಎಂದು ಗೊತ್ತುಪಡಿಸುತ್ತಾರೆ.




ಓಸಜ಼ೋನುಗಳ ಹರಳುಗಳು (ಸೂಕ್ಷ್ಮ ದರ್ಶಿಯಲ್ಲಿ ನೋಡಿದಾಗ) :
1 ಗ್ಲೂಕೋಸಜ಼ೋನ್ (ಫ್ರಕ್ಟೋಸಜ಼ೋನ್), 2 ಮಾಲ್ಟೋಸಜ಼ೋನ್,
3 ಲ್ಯಾಕ್ಟೋಸಜ಼ೋನ್

ಓಸಜ಼ೋನನ್ನು ತಾಮ್ರದ ಸಲ್ಫೇಟ್ ದ್ರಾವಣದೊಡನೆ ಕಾಯಿಸಿದಾಗ, ಓಸೋಟ್ರೈಯಜ಼ೋಲ್ ಉತ್ಪತ್ತಿಯಾಗುತ್ತದೆ. ಈ ಸಂಯುಕ್ತಗಳೂ ಸಕ್ಕರೆಯನ್ನು ಗುರುತಿಸಲು ಸಹಾಯಕವಾಗಿವೆ. ಓಸಜ಼ೋನನ್ನು ಹೈಡ್ರೊಕ್ಲೋರಿಕ್ ಆಮ್ಲದಿಂದ ಜಲವಿಶ್ಲೇಷಣೆ ಮಾಡಿದಾಗ, ಫಿನೈಲ್ ಹೈಡ್ರಜ಼ೀನ್ ಬಿಡುಗಡೆ ಹೊಂದಿ, ಓಜ಼ೋನ್ ಎಂಬ ಸಂಯುಕ್ತ ಉತ್ಪತ್ತಿಯಾಗುತ್ತದೆ. ಓಜ಼ೋನ್ ಫಿನೈಲ್–ಹೈಡ್ರಜ಼ೀನಿನೊಡನೆ ವರ್ತಿಸಿದಾಗ ಓಸಜ಼ೋನ್ ತಯಾರಾಗುತ್ತದೆ.

ಓಸಜ಼ೋನುಗಳ ಉತ್ಪತ್ತಿ : $\alpha$–ಹೈಡ್ರಾಕ್ಸಿ ಕೀಟೋನುಗಳು ಉದಾಹರಣೆಗೆ ಬೆನ್ಜ಼ಾಯಿನ್ $C_6H_5CHOHCOC_6H_5$ ಮತ್ತು ಅಸಿಟಾಯಿನ್ $CH_3CHOHCOCH_3$ ಗಳ ಸಾಮಾನ್ಯಗುಣ. ಗ್ಲೈಕಾಲ್ಡಿಹೈಡ್ ಮತ್ತು ಗ್ಲೈಆಕ್ಸಾಲುಗಳೆರಡೂ ಒಂದೇ ಲಕ್ಷಣಗಳುಳ್ಳ ಓಸಜ಼ೋನನ್ನು ಕೊಡುತ್ತವೆ.

ಗ್ಲೂಕೋಸನ್ನು ಫ್ರಕ್ಟೋಸಾಗಿ ಪರಿವರ್ತಿಸುವ ರಾಸಾಯನಿಕ ಕ್ರಿಯೆಯಲ್ಲಿ ಓಸಜ಼ೋನ್ ತಯಾರಿಸುವುದು ಆ ಕ್ರಿಯೆಯ ಮೊದಲ ಘಟ್ಟ.

ಓಸಜ಼ೋನುಗಳಿಗೆ ತೆರೆದ ಸರಪಳಿ ಮತ್ತು ಚಕ್ರಾಕಾರಗಳ ರಚನೆ ಇರಬಹುದು ಎಂಬುದಕ್ಕೆ ಸಾಕಷ್ಟು ಪುರಾವೆಗಳಿವೆ. ಓಸಜ಼ೋನುಗಳ ರಚನೆಯ ಪ್ರಶ್ನೆ ಹಾಗೂ ಅವು ಉತ್ಪತ್ತಿಯಾಗುವ ವಿಧಾನದ ತಾಂತ್ರಿಕಜ್ಞಾನ ಸಂಪೂರ್ಣವಾಗಿ ಬಗೆಹರಿಸಲಾಗಿದೆ ಎಂದು ಹೇಳಲಾಗದು. ನೋಡಿ— **ಹೈಡ್ರಜ಼ೋನುಗಳು, ಫಿನೈಲ್ ಹೈಡ್ರಜ಼ೋನುಗಳು.** (ಪಿ.ಜಿ.ಆರ್.)

**ಓಸಾಕ :** ಜಪಾನಿನ ಅತ್ಯಂತ ಪುರಾತನ ನಗರಗಳಲ್ಲೊಂದು. ಗಾತ್ರದಲ್ಲಿ ಜಪಾನಿನಲ್ಲೇ ಎರಡನೆಯದು; ವಿಸ್ತೀರ್ಣದಲ್ಲಿ ಮೂರನೆಯದು. ವಾಣಿಜ್ಯ ಮತ್ತು ಕೈಗಾರಿಕಾ ಕೇಂದ್ರ. ಇದೇ ಹೆಸರಿನ ನಗರಪ್ರಾಂತ್ಯದ ಮುಖ್ಯಸ್ಥಳ. ಓಸಾಕ ಕೊಲ್ಲಿಯ ಮೇಲೆ, ಯೋಡೋ ನದಿಯ ಮುಖದ ಬಳಿ ಇದೆ (ಉತ್ತರ ಅಕ್ಷಾಂಶ 30° 32′, ಪೂರ್ವ ರೇಖಾಂಶ 135°). ಕೋಬೆ ನಗರ ಇರುವುದು ಇದರಿಂದ ಪಶ್ಚಿಮಕ್ಕೆ 8 ಮೈ. ದೂರದಲ್ಲಿ.

ಪೂರ್ವದಲ್ಲಿ ಇದು ನಾನಿವ ಅಥವಾ ಪ್ರಕ್ಷುಬ್ಧ ಅಲೆಗಳು ಎಂಬ ಹೆಸರಿನ ಒಂದು ಸಣ್ಣ ಹಳ್ಳಿಯಾಗಿತ್ತು. ಕ್ರಿ.ಶ. 300ರ ಸುಮಾರಿನಲ್ಲಿ ಓಜಿನ್ ಚಕ್ರವರ್ತಿನಿ ಇದರ ಎದುರಿಗಿನ ಬೆಟ್ಟದ ಮೇಲೆ ಅರಮನೆ ಕಟ್ಟಿಸಿದಳು. 16ನೆಯ ಶತಮಾನದಲ್ಲಿ ಹಿಡೆಯೋಷಿ ಇದನ್ನು ಬೆಳೆಸಿ ಇಲ್ಲಿ ದುರ್ಗವೊಂದನ್ನು ಕಟ್ಟಿಸಿದ. 1583ರಲ್ಲಿ ಇದು ಆತನ ರಾಜಧಾನಿಯಾಯಿತು. 1868ರಲ್ಲಿ ಈ ದುರ್ಗ ಬೆಂಕಿಗೆ ಆಹುತಿಯಾದಾಗ ಸಿಮೆಂಟಿನಿಂದ ಇದನ್ನು ಮತ್ತೆ ನಿರ್ಮಿಸಲಾಯಿತು. 1900ರಲ್ಲಿ ಈ ನಗರದ ಜನಸಂಖ್ಯೆ 8,81,000. ಸಾರಿಗೆ ಸಂಪರ್ಕಕ್ಕೆ ಅನೇಕ ಕಾಲುವೆಗಳನ್ನೇ ಅವಲಂಬಿಸಿದ್ದು, ಜಪಾನಿನ ವೆನಿಸ್ ಎನಿಸಿಕೊಂಡಿದ್ದ ಈ ನಗರ ಇಪ್ಪತ್ತನೆಯ ಶತಮಾನದ ಆರಂಭದ ವೇಳೆಗೆ ಪಾಶ್ಚಾತ್ಯ ಪಟ್ಟಣಗಳ ಮಾದರಿಯಲ್ಲಿ ಪರಿವರ್ತನೆಗೊಳ್ಳಲಾರಂಭಿಸಿತು. ಕಾಲುವೆಗಳ ಪ್ರಾಮುಖ್ಯವೂ ತಗ್ಗಿತು. 1930ರ ವೇಳೆಗೆ ಇದು ವಿಶ್ವದ ಆರನೆಯ ಪಟ್ಟಣವೆನಿಸಿಕೊಂಡಿತು. ಆಗ ಇದರ ಜನಸಂಖ್ಯೆ 24,53,000. ಈಗ ಇದು ಪೌರಸ್ತ್ಯ ಜಗತ್ತಿನ ಬೃಹತ್ತಮ ಕೈಗಾರಿಕಾ ನಗರ. ದಿಗಂತದಿಂದ ಮೇಲೆದ್ದು ಹೊಗೆ ಉಗುಳುವ ಸಾವಿರಾರು ಕಾರ್ಖಾನೆಗಳು ತಲೆಯೆತ್ತಿವೆ. 1940ರ ವೇಳೆಗೆ ಇಲ್ಲಿ 5,800 ಕಾರ್ಖಾನೆಗಳಿದ್ದುವು. ಇವುಗಳ ವಾರ್ಷಿಕ ಉತ್ಪನ್ನದ ಮೌಲ್ಯ 37,75,00,000 ಡಾಲರ್ ಆಗಿತ್ತು. ಹತ್ತಿ ಜವಳಿ, ಮೋಟಾರು, ರಸಾಯನ ಪದಾರ್ಥ, ಔಷಧಿ, ಪ್ರಸಾಧನ ಸಲಕರಣೆಗಳು (ಟಾಯ್ಲೆಟ್ ಗುಡ್ಸ್), ಯಂತ್ರಸ್ಥಾವರ (ಪ್ಲ್ಯಾಂಟ್), ಮುದ್ರಣಯಂತ್ರ, ರಟ್ಟು ಕಟ್ಟುವ ಯಂತ್ರ ಮುಂತಾದವು ಇಲ್ಲಿ ತಯಾರಾಗುತ್ತವೆ. ಆರಂಭದಲ್ಲಿ ಓಸಾಕದ ರಫ್ತಿನಲ್ಲಿ ಬಹು ಭಾಗ ಕೋಬೆ ಬಂದರಿನ ಮೂಲಕ ಸಾಗುತ್ತಿತ್ತು. ಆದರೆ ಎರಡನೆಯ ಮಹಾಯುದ್ಧಕ್ಕೆ ಮೊದಲೇ ಓಸಾಕದ ಬಂದರು ಅಭಿವೃದ್ಧಿ ಹೊಂದಿ, ಅದರ ಆಮದು ರಫ್ತುಗಳೆಲ್ಲ ಬಹುತೇಕ ಈ ಬಂದರಿನ ಮೂಲಕವೇ ಸಾಗಲಾರಂಭವಾದುವು. ಇದಕ್ಕಾಗಿ 1,200 ಎಕರೆಗಳಷ್ಟು ನೆಲವನ್ನು ಸಮುದ್ರದಿಂದ ಪುನರ್ವಶಪಡಿಸಿಕೊಳ್ಳಲಾಯಿತು. ಇಂದು ಓಸಾಕ ಜಪಾನಿನ ಬೃಹತ್ತಮ ಬಂದರಗಳಲ್ಲೊಂದು.

ಓಸಾಕ ಸೌಂದರ್ಯ ಕ್ಷೇತ್ರವೇನಲ್ಲ. ಆದರೆ ನಾಗರಿಕರ ಆಕರ್ಷಣೆಗಳೂ ಟಂಕಸಾಲೆ, ವಾಣಿಜ್ಯ ವಸ್ತುಪ್ರದರ್ಶನಾಲಯ ಮತ್ತು ಉದ್ಯಾನಗಳೂ ಇವೆ. ಟೆನ್ನೋಜಿ ಉದ್ಯಾನ ಐವತ್ತಾರು ಎಕರೆಗಳ ಪ್ರದೇಶ. ಇಲ್ಲಿ ಮೃಗಾಲಯ, ಸಸ್ಯಕ್ಷೇತ್ರ, ಟೆನಿಸ್ ಕ್ರೀಡಾರಂಗ, ಕತ್ತಿವರಿಸೆಯ ಭವನ, ಮನೋರಂಜನೆಯ ಕೇಂದ್ರ ಇವೆಲ್ಲ ಉಂಟು. ಇದು ಜಪಾನಿ ರಂಗಶಾಲೆಗಳ ತವರು. ಗೊಂಬೆಯಾಟದ ರಂಗಶಾಲೆ (ಬುನ್ರಾಕು) ಬಲು ಪ್ರಖ್ಯಾತ. ಓಸಾಕ ವಿಶ್ವವಿದ್ಯಾನಿಲಯ, ಓಸಾಕ ಪೌರಸಭಾ ವಿಶ್ವವಿದ್ಯಾನಿಲಯ, ಓಸಾಕ ಆರ್ಥಿಕ ವಿಶ್ವವಿದ್ಯಾನಿಲಯ, ಓಸಾಕ ಎಂಜಿನಿಯರಿಂಗ್ ವಿಶ್ವವಿದ್ಯಾನಿಲಯ, ಓಸಾಕ ವೈದ್ಯ ವಿಶ್ವವಿದ್ಯಾನಿಲಯ, ಓಸಾಕ ವಿದೇಶೀ ಭಾಷೆಗಳ ವಿಶ್ವವಿದ್ಯಾನಿಲಯ ಮುಂತಾದ ಅನೇಕ ವಿದ್ಯಾಸಂಸ್ಥೆಗಳು ಇಲ್ಲಿವೆ. ಎರಡನೆಯ ಮಹಾಯುದ್ಧ ಕಾಲದಲ್ಲಿ ಜಪಾನಿನ ಇತರ ನಗರಗಳಂತೆ ಇದೂ ದಾಳಿಗಳಿಗೆ ಗುರಿಯಾಗಿತ್ತು. 1940ರ ಅನಂತರ ಜನಸಂಖ್ಯೆ ಶೀಘ್ರವಾಗಿ ಇಳಿಯಲಾರಂಭಿಸಿತು. ಚೇತರಿಸಿಕೊಳ್ಳುವುದು ಬಲು ನಿಧಾನವೇ ಆಯಿತು. 1960ರಲ್ಲಿ ಇದರ ಜನಸಂಖ್ಯೆ 30,11,563. ಏಷ್ಯ ಖಂಡದೊಡನೆ ವ್ಯಾಪಾರದ ಇಳಿತ, ಸರ್ಕಾರದ ಹತೋಟಿಕ್ರಮಗಳ ಫಲವಾಗಿ ಟೋಕಿಯೋ–ಯೋಕೊಹಾಮ ಪ್ರದೇಶದಲ್ಲಿ ಹೊಸ ಕೈಗಾರಿಕೆಗಳ ಸ್ಥಾಪನೆ—ಇವು ಈ ನಗರದ ಮಂದ ಚೇತರಿಕೆಗೆ ಕಾರಣಗಳು. ನಗರದ ವಾಣಿಜ್ಯ ಕೇಂದ್ರವಿರುವುದು ದುರ್ಗದ ಭಾಗದಲ್ಲಿ. ಕೈಗಾರಿಕೆಗಳು ಸಮುದ್ರದಿಂದ ಪುನರ್ವಶವಾದ ಪ್ರದೇಶದಲ್ಲೂ ಯೋಡೋ ನದಿಯ ತಗ್ಗು ದಂಡೆಯ ಮೇಲೂ ಸಂದಣಿಗೊಂಡಿವೆ. ಕೋಬೆ, ನಿಷಿನೋಮಿಯಾ, ಆಮಾಗಾಸಾಕಿ, ಸಾಕೈ, ಕೈಜುಕ, ಕಿಷಿವಾಡಾ ಮುಂತಾದ ನಗರಗಳ ಮತ್ತು ಉಪನಗರಗಳ ಕೈಗಾರಿಕಾ ಪಟ್ಟಿಗೆ ಓಸಾಕವೇ ಕೇಂದ್ರ. ಇದು ಪಶ್ಚಿಮ ಜಪಾನಿನ ಹಣಕಾಸಿನ ಮತ್ತು ವಾಣಿಜ್ಯದ ಮುಖ್ಯ ಪಟ್ಟಣ. ಬೃಹದ್‌ಬ್ಯಾಂಕುಗಳೂ ವ್ಯಾಪಾರ ಸಂಸ್ಥೆಗಳೂ ಪಲಸರಕಿನಂಗಡಿಗಳೂ, ಒಟ್ಟು ವ್ಯಾಪಾರದಂಗಡಿಗಳೂ ಇಲ್ಲಿ ಕಿಕ್ಕಿರಿದಿವೆ. ಇದರ ಹತ್ತಿರದಲ್ಲೆ ಆಧುನಿಕ ವಿಮಾನ ನಿಲ್ದಾಣವನ್ನೂ ನೆಲೆಗೊಳಿಸಲಾಗಿದೆ.

1970ರ ಎಕ್ಸ್‌ಪೊ ಪ್ರದರ್ಶನ ನಡೆದದ್ದು ಈ ನಗರದ ಬಳಿಯಲ್ಲೆ.

**ನೋಡಿ**—ಎಕ್ಸ್‌ಪೊ. (ಬಿ.ಎಸ್‌ಎಚ್.)

**ಓಸಿಲಾಟ್ :** ಬೆಕ್ಕಿನ ಕುಟುಂಬಕ್ಕೆ (ಫೆಲಿಡೀ) ಸೇರಿದ ಫಿಲಿಸ್ ಪಾರ್ಡಾಲಿಸ್ ಎಂಬ ಪ್ರಾಣಿ. ದಕ್ಷಿಣ ಅಮೆರಿಕಾದ ಕೆಲವು ಪ್ರದೇಶಗಳಲ್ಲಿ ವಾಸಿಸುವುದು. ದೊಡ್ಡ ಪ್ರಮಾಣದ ಮನೆಯ ಬೆಕ್ಕಿಗಿಂತೇನೂ ಅತಿ ದೊಡ್ಡದಲ್ಲ. ಎತ್ತರ ಸುಮಾರು ಅರ್ಧ ಮೀಟರು, ಉದ್ದ ಸುಮಾರು ಒಂದು ಮೀಟರು. ದೇಹದ ಬಣ್ಣ ಬೂದು ಅಥವಾ ಕಂದು. ಮೈಮೇಲೆ ಕಪ್ಪು ಮಚ್ಚೆಗಳಿವೆ. ಕತ್ತಿನ ಮೇಲೆ ಕೆನ್ನೆಯ ಮೇಲೆ ಕಪ್ಪು ಪಟ್ಟೆಗಳಿವೆ. ಹೊಟ್ಟೆ ಬಿಳಿ. ಕಾಡಿನಲ್ಲಿ ವಾಸಿಸುವ ಇದನ್ನು ಕೆಲವರು ಮನೆಗಳಲ್ಲಿ ಸಾಕುವರು. ಮಾಂಸಾಹಾರಿ. ಬಹಳ ಚೆನ್ನಾಗಿ ಮರ ಹತ್ತಬಲ್ಲುದು. ತನ್ನ ಆಹಾರವನ್ನು ಬೇಟೆಯಾಡಿ ಹಿಡಿದು ತಿನ್ನುವುದು. ಹಿಡಿದ ಪ್ರಾಣಿಯ ಶರೀರವನ್ನು ಹರಿಯುವುದಕ್ಕೂ ಕತ್ತರಿಸುವುದಕ್ಕೂ ಅನುಕೂಲವಾದ ಹಲ್ಲುಗಳಿವೆ. ಮುಂದಿನ ಹಲ್ಲುಗಳು ಸಣ್ಣದಾಗಿವೆ. ಕೋರೆ ಹಲ್ಲುಗಳು ದೊಡ್ಡದಾಗಿ ಚೂಪಾಗಿವೆ. ದವಡೆ ಹಲ್ಲುಗಳಲ್ಲಿ ಮೊನಚಾದ ತುದಿಗಳಿರುವುದರಿಂದ ಕತ್ತರಿಯಂತೆ ಕತ್ತರಿಸುತ್ತವೆ. ತಲೆಬುರುಡೆಯ ಹಿಂಭಾಗ ಎತ್ತರವಾಗಿ ಮೊನಚಾಗಿದೆ. ಇದಕ್ಕೆ ಕತ್ತಿನ ಬಲವಾದ ಸ್ನಾಯುಗಳು ಸೇರಿಕೊಂಡಿವೆ. ಹಿಡಿದ ಬೇಟೆ ಒದ್ದಾಡಿ ತಪ್ಪಿಸಿಕೊಳ್ಳದಂತೆ ಇವು ಸಹಾಯಮಾಡುತ್ತವೆ. ಅಲ್ಲದೆ ಕೆಳದವಡೆ ಮೇಲಕ್ಕೆ ಕೆಳಗೆ ಮಾತ್ರ ಆಡಬಲ್ಲುದು, ಎಡಬಲಕ್ಕೆ ಆಡಲಾರದು. ಬೇಟೆ ತಪ್ಪಿಸಿಕೊಳ್ಳದಂತೆ ಇದು ಸಹ ಸಹಾಯ ಮಾಡುತ್ತದೆ. ಬೆರಳುಗಳಲ್ಲಿರುವ ಮೊನಚಾದ ಬಾಗಿದ ನಖಗಳನ್ನು ಮೃದುವಾದ ಚೀಲಗಳೊಳಗೆ ಎಳೆದುಕೊಳ್ಳಬಲ್ಲುದು. ಸಾಮಾನ್ಯವಾಗಿ ಒಂದು ಸಲಕ್ಕೆ ಎರಡು ಮರಿಗಳನ್ನು ಈನುತ್ತದೆ. (ಎಸ್.ಎನ್.ಕೆಯು.)

**ಓಸೈರಿಸ್ :** ಈಜಿಪ್ಟ್ ದೇಶದ ಪುರಾಣ ಕಥೆಗಳಲ್ಲಿ ಬರುವ ಪ್ರಸಿದ್ಧ ದೇವತೆ. ಗೆಬ್ (ಭೂದೇವತೆ) ಮತ್ತು ನಟ್ (ಜಲದೇವತೆ) ದೇವತೆಗಳ ನಾಲ್ವರು

ಮಕ್ಕಳಲ್ಲಿ ಮೊದಲನೆಯವ. ಉಳಿದ ಮೂವರು ಐಸಿಸ್ (ಹೆಣ್ಣು), ಸೆತ್ ಮತ್ತು ನೆಫ್ತಿಸ್. ಓಸೈರಿಸ್ ತನ್ನ ತಂಗಿ ಐಸಿಸ್‌ಳನ್ನೇ ಮದುವೆಯಾಗಿ ಹೋರಸನನ್ನು ಪಡೆದನೆಂದು ಪುರಾಣ ಕಥೆ. (ನೋಡಿ—ಐಸಿಸ್).

ಈಜಿಪ್ಟ್ ಜನರ ನಂಬಿಕೆಯಂತೆ ಭೂಮಿ ಗಂಡು, ಆಕಾಶ ಹೆಣ್ಣು. ಜಲ ಹಾಗೂ ಸಸ್ಯವರ್ಗಗಳ ಅಧಿದೇವತೆಯಾದ ಓಸೈರಿಸ್ ಅತ್ಯಂತ ಜನಪ್ರಿಯ ದೇವತೆ. ಈತ ಜೀವದಾತನೆಂದು ಪೂಜೆಗೊಳ್ಳುತ್ತಿದ್ದ. ಕೆಲ ವಿದ್ವಾಂಸರ ಮತದಂತೆ ಓಸೈರಿಸ್ ಕೆಳ ಈಜಿಪ್ಟನ್ನು ಆಳಿದ ದೊರೆ. ಬರಬರುತ್ತ ಪಶ್ಚಿಮದ ದೊರೆಯೆನಿಸಿದ. ಅಂದರೆ ಸತ್ತ ಅನಂತರ ಜೀವಾತ್ಮಗಳು ತಂಗುವ ಪರಲೋಕದ ಅರಸು—ಎಂದು ಪ್ರಸಿದ್ಧಿ ಪಡೆದ. ಪರಲೋಕ ಸೇರಿದ ಜೀವಾತ್ಮಗಳ ಧರ್ಮಕರ್ಮಗಳನ್ನು ನ್ಯಾಯದ ತಕ್ಕಡಿಯಲ್ಲಿ ತೂಗಿ ನೋಡುವ ಅಧಿದೈವ ಓಸೈರಿಸ್‌ನನ್ನು ಮರಣಾನಂತರ ಒದಗುವ ಒಳಿತು ಕೆಡಕುಗಳಲ್ಲಿ ಅಪಾರ ಶ್ರದ್ಧೆಯುಳ್ಳ ಈಜಿಪ್ಟಿನ ಜನ ಪ್ರಮುಖ ದೇವತೆಯೆಂದು ಪರಿಗಣಿಸಿದುದರಲ್ಲಿ ಔಚಿತ್ಯವಿತ್ತು.

ಕ್ರಿ.ಶ. ಸು. 85ರಲ್ಲಿ ರಚಿತವಾದ ಪ್ಲೂಟಾರ್ಕನ ಡಿ ಐಸೈಡ್ ಎಟ್ ಓಸಿರೈಡ್ ಗ್ರಂಥದ ಪ್ರಕಾರ ಓಸೈರಿಸ್‌ನನ್ನು ಸೆತ್ ಕೊಂದನೆಂದೂ ಅವನ ದೇಹವನ್ನು ಒಂದು ಪೆಟ್ಟಿಗೆಯಲ್ಲಿ ಹಾಕಿ ನೈಲ್ ನದಿಗೆ ಎಸೆಯಲಾಯಿತೆಂದೂ ಅದು ತೇಲಿಕೊಂಡು ಬಂದು ಸಿರಿಯದ ನದೀ ದಂಡೆಯ ಮೇಲಿದ್ದುದನ್ನು ಐಸಿಸ್ ಕಂಡು ಈಜಿಪ್ಟ್‌ಗೆ ತಂದಳೆಂದೂ ಅಲ್ಲಿ ಓಸೈರಿಸ್‌ನ ದೇಹದ ಎದೆಭಾಗ ಮಾತ್ರ ಇರುವುದನ್ನು ಗಮನಿಸಿದ ಐಸಿಸ್ ಆತನ ಉಳಿದೆಲ್ಲ ಭಾಗಗಳನ್ನು ಸಂಗ್ರಹಿಸಿ ಕೂಡಿಸಿದಳೆಂದೂ ಆಗ ದೇವತೆಗಳು ಓಸೈರಿಸ್‌ಗೆ ಜೀವದಾನಮಾಡಿ ದೇವತ್ವ—ಅಮರತ್ವಗಳನ್ನು ಕರುಣಿಸಿದರೆಂದೂ ಕಥೆ.

ವ್ಯವಸಾಯ ಮತ್ತು ಸೌಂದರ್ಯಾಭಿಜ್ಞತೆಯನ್ನು ಕರುಣಿಸುವ ಈ ದೇವತೆಯ ಆಕಾರ ಮಮ್ಮಿಯಂತಿದ್ದು ತಲೆಯಲ್ಲಿ ಕಿರೀಟ, ಕೈಯಲ್ಲಿ ಚಾವುಟಿ, ಮತ್ತೊಂದು ಕೈಲಿ ಬಾಗುದಂಡವಿದೆ. ಅಬಿಡಾಸ್ ನಗರ ಒಂದು ಕಾಲದಲ್ಲಿ ಈ ದೇವತೆಯ ಆರಾಧನೆಯ ಮುಖ್ಯ ಕೇಂದ್ರವಾಗಿತ್ತು. (ಬಿ.ಎಸ್‌ಎಚ್.)

**ಓಸ್ಕಲೂಸ :** ಅಮೆರಿಕ ಸಂಯುಕ್ತಸಂಸ್ಥಾನದ ಆಯೋವ ರಾಜ್ಯದ ಆಗ್ನೇಯ ಭಾಗದಲ್ಲಿರುವ ಒಂದು ಪಟ್ಟಣ. ಜನಸಂಖ್ಯೆ 11,124 (1950). ಪಶುಪಾಲನೆ ಮತ್ತು ಕೃಷಿಗಳ ಕೇಂದ್ರ ಮುಸುಕಿನ ಜೋಳ ಮುಖ್ಯ ಬೆಳೆ. ಕಲ್ಲಿದ್ದಲ ಪ್ರದೇಶದಲ್ಲಿದೆ. ಆಹಾರ ಪದಾರ್ಥ, ಅಗ್ನಿಶಾಮಕ ವ್ಯವಸ್ಥೆಗೆ ಬೇಕಾದ ನೀರಿನ ನಲ್ಲಿ, ಕವಾಟ (ವಾಲ್ವ್), ಬಟ್ಟೆ ಒಗೆಯುವ ಯಂತ್ರ, ಪಶು ಔಷಧ, ಆಟದ ಸಾಮಾನು ಮುಂತಾದವುಗಳ ಕೈಗಾರಿಕೆಗಳಿವೆ. ಸಂಗೀತ ಪ್ರಕಟಣೆಗಳಿಗೂ ಇದು ಪ್ರಸಿದ್ಧವಾಗಿದೆ. ಇದೊಂದು ವ್ಯಾಪಾರಸ್ಥಳ.

ಶಾಂತಿತತ್ತ್ವಗಳಲ್ಲಿ ನಿಷ್ಠೆಯುಳ್ಳ, ಸರಳ ನಡೆನುಡಿಯ, ಬಿರುದುಗಳನ್ನು ನಿರಾಕರಿಸುವ, ಕ್ರೈಸ್ತೇತರ ಮತಸೂಚಕ ಪದಗಳನ್ನು ಬಳಸಲೊಲ್ಲದ ಪುರೋಹಿತರಹಿತ ಧರ್ಮಸಭೆಗಳಲ್ಲಿ ಕೂಡುವ ಮಿತ್ರಮಂಡಲಿಯವರಾದ ಕ್ವೇಕರುಗಳಿಂದ 1843ರಲ್ಲಿ ಇಲ್ಲಿ ವಸತಿ ಏರ್ಪಟ್ಟಿತು. ಮಸ್ಕೋಜಿಯನ್ ಇಂಡಿಯನರ ಒಂದು ಪಂಗಡವಾದ ಸೆಮಿನೋಲರ ನಾಯಕನಾದ ಒಸ್ಸಿಯೋಲನಿಂದ ಓಸ್ಕಲೂಸ ಎಂಬ ಹೆಸರು ಬಂದಿದೆ. 1844ರಲ್ಲಿ ಇದು ಕೌಂಟಿಯ (ವಿಭಾಗದ) ಮುಖ್ಯಸ್ಥಳವಾಯಿತು. ಇದು ನಗರವೆನಿಸಿಕೊಂಡದ್ದು 1853ರಲ್ಲಿ. ವಿಲಿಯಂ ಪೆನ್ ಕಾಲೇಜ್ ಇಲ್ಲಿಯ ಮುಖ್ಯ ಶಿಕ್ಷಣಸಂಸ್ಥೆ. ಇದನ್ನು ಸ್ಥಾಪಿಸಿದವರೂ (1873) ಕ್ವೇಕರರೇ. ಈ ನಗರದಲ್ಲಿ ಕ್ವೇಕರರ ವಾರ್ಷಿಕ ಧಾರ್ಮಿಕ ಸಭೆ ನಡೆಯುತ್ತದೆ. (ಪಿ.ಎಚ್.)

**ಓಹಿಲಯ್ಯ :** ನೂತನ ವೀರಶೈವ ಶರಣರಲ್ಲಿ ಒಬ್ಬ. ಗುಜರಾತಿನ ವಿಲಾಸವತಿ ಪಟ್ಟಣದಲ್ಲಿ ರಾಜ್ಯಭಾರ ಮಾಡುತ್ತಿದ್ದ ನಿಃಕುಂಭರಾಜನ ಮಗ. ಹದಿನಾರು ವರ್ಷದವನಾದಾಗ ತಂದೆ ಶಿವೈಕ್ಯನಾದ. ಸಾವೆಂದರೆ ಏನೆಂಬುದನ್ನೆ ಅರಿಯದಿದ್ದ ಮುಗ್ಧ ಬಾಲಕ ತನ್ನ ತಂದೆ ಇನ್ನೆಂದಿಗೂ ಹಿಂದಿರುಗನೆಂಬುದನ್ನು ಕೇಳಿ ಅಂಥ ಸಾವಿನಿಂದ ಹೇಗೆ ಪಾರಾಗಬಹುದೆಂದು ಯೋಚಿಸಿ ಉಮ್ಮಳಿಸುತ್ತಾನೆ. ಈ ಸಾವಿನಿಂದ ತಪ್ಪಿಸಿಕೊಳ್ಳಲು ಸೌರಾಷ್ಟ್ರದ ಸೋಮೇಶ್ವರನ ಕೃಪೆಯೊಂದೇ ಮಾರ್ಗವೆಂಬುದನ್ನು ಶಿವಭಕ್ತನೊರ್ವನಿಂದ ತಿಳಿದ ಓಹಿಲಯ್ಯ ರಾಜ್ಯಕೋಶಗಳನ್ನು ತೊರೆದು ಸೋಮೇಶ್ವರಲಿಂಗದ ಪೂಜೆಯಲ್ಲಿ ತತ್ಪರನಾದ. ಒಮ್ಮೆ ಆತ ಧ್ಯಾನಮಗ್ನನಾಗಿದ್ದಾಗ ಪರಶಿವ ಕಾಣಿಸಿಕೊಂಡು ಹನ್ನೆರಡು ವರ್ಷಕಾಲ ತನಗೆ ಗುಗ್ಗುಳ ಸೇವೆಯನ್ನು ಸಲ್ಲಿಸಿದರೆ ಸಶರೀರನಾಗಿ ಆತನನ್ನು ಕೈಲಾಸಕ್ಕೆ ಕೊಂಡೊಯ್ಯುವುದಾಗಿ ತಿಳಿಸಿದ. ಓಹಿಲಯ್ಯ ಪರಮ ಸಂತೋಷದಿಂದ ತನ್ನ ಪ್ರಜೆಗಳಿಂದ ಗುಗ್ಗುಳವನ್ನು ತರಿಸಿ, ಹನ್ನೆರಡು ವರ್ಷ ಆ ವ್ರತವನ್ನಾಚರಿಸಿ, ಧೂಪದೋಹಿಲನೆಂಬ ಅನ್ವರ್ಥನಾಮವನ್ನು ಪಡೆದ. ಆದರೆ ಸೋಮೇಶ್ವರ ಅದರಿಂದ ತೃಪ್ತನಾಗದೆ ಓಹಿಲಯ್ಯನೇ ಕಾಲ್ನಡಿಗೆಯಿಂದ ಗುಗ್ಗುಳದ್ವೀಪಕ್ಕೆ ಹೋಗಿ ಗುಗ್ಗುಳವನ್ನು ಹೊತ್ತು ತಂದು, ಸೇವೆ ಸಲ್ಲಿಸಬೇಕೆಂದು ವಿಧಿಸಿದ. ಓಹಿಲಯ್ಯ ಅದಕ್ಕೂ ಹಿಂಜರಿಯದೆ, ಅತ್ಯಂತ ಕಷ್ಟದಿಂದ, ಪ್ರಾಣವನ್ನು ಪಣವಾಗಿ ಒಡ್ಡಿ ಈ ಕಾರ್ಯವನ್ನು ನೆರವೇರಿಸಿದ. ಓಹಿಲಯ್ಯನ ಇಂಥ ಅಚಲಭಕ್ತಿ, ಉಗ್ರನಿಷ್ಠೆಗಳಿಗೆ ಮೆಚ್ಚಿದ ಶಿವ ಆತನನ್ನು ವಿಮಾನದಲ್ಲಿ ಕೈಲಾಸಕ್ಕೆ ಕೊಂಡೊಯ್ದು ಗಣಪದವಿಯನ್ನಿತ್ತ. ದೈವಸಾಕ್ಷಾತ್ಕಾರಕ್ಕೆ ಉತ್ಕಟ ಭಾವ ಅತ್ಯಗತ್ಯವೆಂಬುದನ್ನು ಪ್ರತಿಮಿಸುತ್ತದೆ, ಓಹಿಲಯ್ಯನ ಕಥಾ ಚಿತ್ರಣ.

ಓಹಿಲಯ್ಯನ ಕಥೆ ತುಂಬ ಜನಪ್ರಿಯವಾದುದು. ಹರಿಹರ ಕವಿ ಆತನ ಕಥೆಯನ್ನು ರಗಳೆಯ ಛಂದಸ್ಸಿನಲ್ಲಿ ರಚಿಸಿದ್ದಾನೆ. ಅದವನ ಸ್ವತಂತ್ರಕೃತಿ. ಉತ್ತರದೇಶದ ಬಸವಲಿಂಗದೇವರು, ಪಾಲ್ಕುರಿಕೆ ಸೋಮನಾಥ, ಭೀಮಕವಿ, ಶಾಂತಲಿಂಗದೇಶಿಕ, ಲಕ್ಕಣ್ಣದಂಡೇಶ, ಸಿದ್ಧನಂಜೇಶ, ಗುಬ್ಬಿಯ ಮಲ್ಲಣಾರ್ಯ, ಅದೃಶ್ಯಕವಿ ಮೊದಲಾದ ಹಲವಾರು ವೀರಶೈವಕವಿಗಳು ಈತನ ಕಥೆಯನ್ನು ಭಕ್ತಿಯಿಂದ ಬಣ್ಣಿಸಿದ್ದಾರೆ.

(ಟಿ.ಎಸ್.ಎಸ್.ಆರ್.)

———



ಕನ್ನಡ ವರ್ಣಮಾಲೆಯಲ್ಲಿ ಹದಿನಾಲ್ಕನೆಯದು. ದೀರ್ಘ ಸ್ವರಾಕ್ಷರ. ವ್ಯಂಜನಗಳ ಜೊತೆ ಸೇರದೆ, ಸ್ವತಂತ್ರವಾಗಿ ದೊರಕುವುದು ಅಪೂರ್ವ. ಆದುದರಿಂದ ಈ ಅಕ್ಷರದ ಬ್ರಾಹ್ಮೀಲಿಪಿಯ ಸ್ವರೂಪವನ್ನು ತಿಳಿಯುವುದು ಕಷ್ಟ. ಕ್ರಿ.ಶ. ಹನ್ನೆರಡನೆಯ ಶತಮಾನದ ಕಲ್ಯಾಣಿ ಚಾಲುಕ್ಯರ ಶಾಸನಗಳಲ್ಲಿ ಈ ಅಕ್ಷರ ಈಗಿರುವಂತೆ ಇರುವುದನ್ನು ಗಮನಿಸಬಹುದು. ಆದುದರಿಂದ ಕ್ರಿ.ಶ. ಹನ್ನೆರಡನೆಯ ಶತಮಾನಕ್ಕಿಂತ ಮುಂಚೆಯೇ ಇದು ಬ್ರಾಹ್ಮೀಲಿಪಿಯಿಂದ ವಿಕಾಸವಾಗಿರಬೇಕು. ಕ್ರಿ.ಶ. ಹನ್ನೆರಡನೆಯ ಶತಮಾನದಿಂದ ಈ ಅಕ್ಷರದ ರೂಪ ಸ್ಥಿರವಾಗಿದ್ದು ಬದಲಾವಣೆಗಳಿಲ್ಲದೆ ಮುಂದುವರಿಯುತ್ತಿದೆ. ಐ ಎಂಬ ಅಕ್ಷರಕ್ಕೆ ಅಯ್ ಎಂಬ ಉಚ್ಚಾರಣೆ ಬರುವಂತೆ ಔಗೆ ಅವ್ ಎಂಬ ಉಚ್ಚಾರಣೆಯೂ ಇರುವುದು ಕಂಡುಬಂದಿದೆ. ಇದು ಸಂಯುಕ್ತಸ್ವರ. (ಎ.ವಿ.ಎನ್.)

ಕಲ್ಯಾಣಿ ಚಾಲುಕ್ಯ. ಕ್ರಿ.ಶ. ೧೨ನೆಯ ಶತಮಾನ

ಸೇವುಣ. ಕ್ರಿ.ಶ. ೧೩ನೆಯ ಶತಮಾನ

ವಿಜಯನಗರ. ಕ್ರಿ.ಶ. ೧೫ನೆಯ ಶತಮಾನ

ಮೈಸೂರು ಅರಸರು. ಕ್ರಿ.ಶ. ೧೮ನೆಯ ಶತಮಾನ

**ಔಚಿತ್ಯ :** ತಕ್ಕುದಾದ ಅಥವಾ ಸರಿಹೊಂದುವ ಎಂಬ ಅರ್ಥವನ್ನು ಕೊಡುವ ಉಚಿತ ಎಂಬುದರ ಭಾವ. ಇದರ ರೂಪಾಂತರ ಔಚಿತೀ. ಔಚಿತ್ಯದ ವ್ಯಾಪ್ತಿ ಅಪಾರವಾದುದು. ಸಂಸ್ಕೃತ ಸಾಹಿತ್ಯ ವಿಮರ್ಶೆಯಲ್ಲಿ ಆಲಂಕಾರಿಕರು ಇದನ್ನು ವಿಶೇಷವಾಗಿ ಗಮನಿಸಿದ್ದಾರೆ. ಸಾಮಾನ್ಯವಾಗಿ ವಸ್ತು, ಪಾತ್ರ ಮುಂತಾದುವುಗಳಲ್ಲಿ ಇರಲೇಬೇಕಾದ ಪರಸ್ಪರ ಸಮನ್ವಯದ ವಿಚಾರದಿಂದ ಅಲ್ಲಿ ಪ್ರಾರಂಭವಾಗಿ ಕಾವ್ಯಜೀವಿತವೆಂಬ ಪ್ರತಿಪಾದನೆಯ ಹಂತವನ್ನು ಕಡೆಯಲ್ಲಿ ಮುಟ್ಟುತ್ತದೆ.

ಕವಿಕರ್ಮಕ್ಕೆ ಸಂಬಂಧಪಟ್ಟಂತೆ ಭಾಷೆ, ಪದಗಳು, ರಚನೆ ಮುಂತಾದುವುಗಳಲ್ಲಿರಬೇಕಾದ ಔಚಿತ್ಯದ ಅರಿವು ಆಲಂಕಾರಿಕರಲ್ಲಿ ಬಹು ಹಿಂದಿನಿಂದಲೂ ಉಂಟಾಗಿ ಬೆಳೆದು ಬಂದಿದೆ; ಭರತಮುನಿಯಿಂದ ರಚಿತವಾದ ಮತ್ತು ಸಂಸ್ಕೃತಸಾಹಿತ್ಯ ಮೀಮಾಂಸೆಯಲ್ಲಿ ಆದಿಗ್ರಂಥವೆನಿಸಿಕೊಂಡಿರುವ ನಾಟ್ಯಶಾಸ್ತ್ರದಲ್ಲಿ ಇದರ ಆವಶ್ಯಕತೆ ಪ್ರಾಮುಖ್ಯಗಳ ಸೂಚನೆ ಇದೆ. ಅನಂತರ ಬಂದ ಭಾಮಹ, ದಂಡಿ, ರುದ್ರಟರಲ್ಲಿ ಇದರ ಅಭಿಪ್ರಾಯ ರೂಪುಗೊಳ್ಳುತ್ತದೆ.

ಸುಪ್ರಸಿದ್ಧ ಆಲಂಕಾರಿಕರಾದ ಆನಂದವರ್ಧನ ಮತ್ತು ಅಭಿನವಗುಪ್ತರ ಆಳವಾದ ಕಾವ್ಯತತ್ತ್ವಪರಿಶೀಲನೆಯಲ್ಲಿ ಇದಕ್ಕೆ ಬಹು ಮುಖ್ಯವಾದ ಸ್ಥಾನ ದೊರಕುತ್ತದೆ. ಅನೌಚಿತ್ಯಾದೃತೇ ನಾನ್ಯದ್ರಸಭಂಗಸ್ಯ ಕಾರಣಮ್ । ಪ್ರಸಿದ್ಧೌಚಿತ್ಯಬಂಧಸ್ತು ರಸಸ್ಯೋಪನಿಷತ್ಪರಾ ॥ (ಅನೌಚಿತ್ಯ ಹೊರತು ಬೇರೆ ಯಾವುದೂ ರಸಭಂಗಕ್ಕೆ ಕಾರಣವಲ್ಲ. ಔಚಿತ್ಯದ ಪ್ರಸಿದ್ಧ ನಿಯಮಗಳ ಅನುಸರಣೆಯೇ ರಸದ ಪರಮ ರಹಸ್ಯ)—ಎಂದು ಆನಂದವರ್ಧನ ಇದನ್ನು ತನ್ನ ಧ್ವನ್ಯಾಲೋಕದಲ್ಲಿ ಮನೋಜ್ಞವಾಗಿ ಪ್ರತಿಪಾದಿಸಿದ್ದಾನೆ. ತನ್ನ ಧ್ವನಿತತ್ತ್ವದಲ್ಲಿ ರಸಕ್ಕೇ ಪ್ರಾಧಾನ್ಯ ಕೊಡುವ ಆನಂದವರ್ಧನ ವಿಷಯ, ವಾಚ್ಯ, ವಾಚಕ ಮುಂತಾದುವು ರಸಕ್ಕನುಗುಣವಾಗಿರಬೇಕಾದ ಔಚಿತ್ಯವನ್ನು ಸಾಕಷ್ಟು ವಿಸ್ತಾರವಾಗಿ ನಿರೂಪಿಸಿದ್ದಾನೆ. ರಸವಿದ್ದಲ್ಲಿ ಔಚಿತ್ಯದೃಷ್ಟಿ ಇರಲೇಬೇಕೆಂಬುದು ಅಭಿನವಗುಪ್ತನ ಮತ; ಅದರಂತೆ ರಸ ಧ್ವನಿ ಔಚಿತ್ಯಗಳು ಕಾವ್ಯಜೀವಾಳದ ಮೂರು ಅಂಶಗಳೆನಿಸಿಕೊಂಡು ರಸೌಚಿತ್ಯದ ಸಿದ್ಧಾಂತ ಸ್ಥಾಪಿತವಾಗುತ್ತದೆ. ಕ್ರಮೇಣ ಕುಂತಕ, ಭೋಜ ಇವರು ಇದನ್ನು ಕಾವ್ಯತತ್ತ್ವದ ಒಂದು ಮೂಲಭೂತ ವಿಚಾರವೆಂದು ಪರಿಗಣಿಸಿದ್ದಾರೆ.

ಹೀಗೆ ರಸಕ್ಕನ್ವಯಿಸುವಂತೆ ಪ್ರತಿಪಾದಿತವಾದ ಔಚಿತ್ಯ ಕ್ರಮೇಣ ಮಹಿಮಭಟ್ಟನ ಒಪ್ಪಿಗೆಯನ್ನು ಪಡೆದು ಅನಂತರ ಬಂದ ಕ್ಷೇಮೇಂದ್ರನ ಔಚಿತ್ಯವಿಚಾರ ಚರ್ಚಾ ಎಂಬ ಗ್ರಂಥದಲ್ಲಿ ವ್ಯಾಪ್ತಿವೈಶಾಲ್ಯದಿಂದ ಕೂಡಿದ ಒಂದು ಸಿದ್ಧಾಂತವಾಗಿ ಪರಿಣಮಿಸಿತು. ಇದನ್ನು ವಿಶ್ಲೇಷಿಸಿ ನಿರೂಪಿಸಲು ಹೊರಟ ಕ್ಷೇಮೇಂದ್ರ ಮೊದಲು ಇದರ ಸಾಮಾನ್ಯಲಕ್ಷಣವನ್ನು ಉಚಿತಂ ಪ್ರಾಹುರಾಚಾರ್ಯಾಃ ಸದೃಶಂ ಕಿಲ ಯಸ್ಯ ಯತ್ । ಉಚಿತಸ್ಯ ಚ ಯೋ ಭಾವಸ್ತದೌಚಿತ್ಯಂ ಪ್ರಚಕ್ಷತೇ ॥ ಯಾವುದು ಯಾವುದಕ್ಕೆ ತಕ್ಕುದಾಗಿರುವುದೋ ಅದನ್ನು ವಿದ್ವಾಂಸರು ಉಚಿತವೆಂದಿದ್ದಾರೆ; ಉಚಿತದ ಭಾವವನ್ನು ಔಚಿತ್ಯವೆನ್ನುತ್ತಾರೆ—ಎಂಬ ಮಾತುಗಳಲ್ಲಿ ಹೇಳಿದ್ದಾನೆ. ಆನಂದವರ್ಧನ, ಅಭಿನವಗುಪ್ತರ ರಸದೃಷ್ಟಿಯನ್ನೊಪ್ಪಿಕೊಂಡಿರುವ ಕ್ಷೇಮೇಂದ್ರನಿಗೆ ಇದು ಸೌಂದರ್ಯಾಸ್ವಾದನೆಯಲ್ಲಿ ಚಮತ್ಕಾರಕಾರಿಯೂ ರಸಕ್ಕೆ ಪ್ರಾಣಸ್ವರೂಪವೂ ಆಗಿದೆ; ಅವನ ಅಭಿಪ್ರಾಯದಲ್ಲಿ ಇದು ರಸಸಿದ್ಧವಾದ ಕಾವ್ಯಕ್ಕೆ ಸ್ಥಿರವಾದ ಜೀವ (ಔಚಿತ್ಯಸ್ಯ ಚಮತ್ಕಾರಕಾರಿಣಶ್ಚಾರುಚರ್ವಣೇ । ರಸಜೀವಿತಭೂತಸ್ಯ ವಿಚಾರಂ ಕುರುತೇಽಧುನಾ ॥ ಅಲಂಕಾರಾಸ್ತ್ವಲಂಕಾರಾ ಗುಣಾ ಏವ ಗುಣಾಃ ಸದಾ । ಔಚಿತ್ಯಂ ರಸಸಿದ್ಧಸ್ಯ ಸ್ಥಿರಂ ಕಾವ್ಯಸ್ಯ ಜೀವಿತಮ್ ॥).

ಕ್ಷೇಮೇಂದ್ರನ ಪ್ರಕಾರ ಕಾವ್ಯಶರೀರಕ್ಕೆ ಜೀವವಾಗಿರುವ ಇದರ ವಿಂಗಡಣೆ ಈ ಇಪ್ಪತ್ತೇಳು ಪ್ರಕಾರಗಳಿಗೆ ಸಂಬಂಧಪಟ್ಟಿದೆ: ಪದ, ವಾಕ್ಯ, ಪ್ರಬಂಧಾರ್ಥ, ಗುಣ, ಅಲಂಕಾರ, ರಸ, ಕ್ರಿಯಾಪದ, ಕಾರಕ, ಲಿಂಗ, ವಚನ, ವಿಶೇಷಣ, ಉಪಸರ್ಗ, ನಿಪಾತ, ಕಾಲ, ದೇಶ, ಕುಲ, ವ್ರತ, ತತ್ತ್ವ, ಸತ್ತ್ವ, ಅಭಿಪ್ರಾಯ, ಸ್ವಭಾವ, ಸಾರಸಂಗ್ರಹ, ಪ್ರತಿಭೆ, ಅವಸ್ಥೆ, ವಿಚಾರ, ಹೆಸರು, ಆಶಂಸನೆ. ಈ ಎಲ್ಲ ಕಾವ್ಯಾಂಗಗಳಲ್ಲಿ ವ್ಯಾಪಿಯಾದ ಜೀವಾಳವೇ ಔಚಿತ್ಯ. ಅವನ್ನು ಉದಾಹರಣೆ ಪ್ರತ್ಯುದಾಹರಣೆಗಳ ಮೂಲಕ ವಿವರಿಸಿ ಕಾವ್ಯದ ಒಂದೊಂದು ಅಂಶದಲ್ಲೂ ಅವುಗಳ ಪರಸ್ಪರ ಹೊಂದಿಕೆಯಲ್ಲೂ ಸಹೃದಯಶ್ಲಾಘ್ಯವೂ ರಸಯುಕ್ತವೂ ಆದ ಕಾವ್ಯತ್ವಸಿದ್ಧಿಗೆ ಪ್ರಾಣಪ್ರದ ಔಚಿತ್ಯವಿರಬೇಕೆಂಬುದನ್ನು ಕ್ಷೇಮೇಂದ್ರ ತನ್ನ ಗ್ರಂಥದಲ್ಲಿ ವಿಶದಪಡಿಸಿದ್ದಾನೆ. ಇಂಥ ಪ್ರಯತ್ನ ಸಂಸ್ಕೃತ ಸಾಹಿತ್ಯಮೀಮಾಂಸೆಯಲ್ಲಿ ಅಪೂರ್ವವಾದ ಒಂದು ಪ್ರಾಯೋಗಿಕ ವಿಮರ್ಶೆಯಾಗಿರುವುದಲ್ಲದೆ ಅಭಿಪ್ರಾಯಗಳ ಸ್ಪಷ್ಟತೆಯಿಂದ ಕೂಡಿ ಮಹತ್ತ್ವಪಡೆದಿದೆ.

ಹೀಗೆ, ಒಂದು ವಸ್ತುವಿನ ಭಾಗಗಳಲ್ಲಿ ಮತ್ತು ಒಂದು ವಸ್ತುವಿಗೂ ಇನ್ನೊಂದಕ್ಕೂ ಇರಬೇಕಾದ ಪರಸ್ಪರ ಸಮನ್ವಯವೆಂಬ ಸಾಮಾನ್ಯಾರ್ಥವುಳ್ಳ ಔಚಿತ್ಯ ಅಲಂಕಾರಶಾಸ್ತ್ರದಲ್ಲಿ ಮೊದಮೊದಲು ವಸ್ತು, ಪಾತ್ರ ಮುಂತಾದುವುಗಳ ಸಮನ್ವಯದ ಸೂಚಕವಾಗಿದ್ದು ಕಡೆಯಲ್ಲಿ ಕಾವ್ಯತತ್ತ್ವನಿರೂಪಣೆಯ ದೃಷ್ಟಿಯಿಂದ ಕಾವ್ಯ ಜೀವಿತವೆಂಬ ಸಿದ್ಧಾಂತವಾಗಿ ಪರಿಣಮಿಸುತ್ತದೆ. ಹಿಂದಿನ ಪಂಥಗಳಾದ ಅಲಂಕಾರ, ಗುಣ, ರೀತಿ, ವಕ್ರೋಕ್ತಿ, ರಸ, ಧ್ವನಿ, ಅನುಮಾನ ಇವೆಲ್ಲವನ್ನೂ ಅಳವಡಿಸಿಕೊಂಡು ವ್ಯಾಪಕವಾಗಿರುವುದೇ ಇದರ ವೈಶಿಷ್ಟ್ಯ. ಪ್ರಾಚೀನ ಆಲಂಕಾರಿಕರು ಶಬ್ದಾರ್ಥಗಳ ಸಂಯೋಜನೆಯ ಬಾಹ್ಯಸ್ವರೂಪ ವಿಶ್ಲೇಷಣೆಯಲ್ಲಿ ಆಸಕ್ತರಾಗಿ ಅದರ ಕೆಲವು ಧರ್ಮಗಳಾದ ಅಲಂಕಾರ, ಗುಣ, ರೀತಿಗಳನ್ನು ಬೇರೆ ಬೇರೆಯಾಗಿ ಪ್ರತಿಪಾದಿಸಿದರು ; ಆದರೆ ನವೀನರು ಇವೆಲ್ಲಕ್ಕೂ ವಕ್ರೋಕ್ತಿ ವ್ಯಾಪಕವೆಂಬ ಮರ್ಮವನ್ನು ತಿಳಿದು, ಮುಂದೆ ರಸ ಧ್ವನಿ ಅನುಮಾನಗಳೆಂಬ ಸಿದ್ಧಾಂತಗಳಿಗೆ ಔಚಿತ್ಯ ವ್ಯಾಪಕವೆಂದು ನಿರ್ಣಯಿಸಿದುದಲ್ಲದೆ ಇವರಲ್ಲಿ ಮೇಲ್ಕಂಡ ಅಲಂಕಾರಾದಿ ಕಾವ್ಯತತ್ತ್ವಗಳು ಐಕ್ಯವಾಗಬಹುದಾದ ಸ್ಥಿತಿಯನ್ನೂ ಅರಿತುಕೊಂಡರು. ಈ ವಿಚಾರವನ್ನು ಎಸ್. ಕುಪ್ಪುಸ್ವಾಮಿಶಾಸ್ತ್ರಿಗಳು ಅರ್ಥಗರ್ಭಿತವಾದ ಶ್ಲೋಕವೊಂದರ ಮೂಲಕ ಹೀಗೆ ಪ್ರತಿಪಾದಿಸಿದ್ದಾರೆ:

ಔಚಿತೀಮನುಧಾವಂತಿ ಸರ್ವೇ ಧ್ವನಿರಸೋನ್ನಯಾಃ ।
ಗುಣಾಲಂಕೃತಿರೀತೀನಾಂ ನಯಾಶ್ಚಾನೃಜುವಾಙ್ಮಯಾಃ ॥

ಧ್ವನಿ ರಸ ಅನುಮಾನಗಳೂ ಗುಣ ಅಲಂಕಾರ ರೀತಿ ವಕ್ರೋಕ್ತಿಗಳೂ ಔಚಿತ್ಯವನ್ನೇ ಅನುಸರಿಸುತ್ತವೆ.

ಕಾವ್ಯತ್ವದ ಅತಿಮುಖ್ಯವಾದ ಒಂದು ಧರ್ಮವೆಂದು ಗೋಚರವಾದ ಔಚಿತ್ಯಕ್ಕೆ ಸಂಸ್ಕೃತಕಾವ್ಯಮೀಮಾಂಸೆಯಲ್ಲಿ ಹಿರಿದಾದ ಸ್ಥಾನವಿದೆ. ಇದು ಕಾವ್ಯತತ್ತ್ವಕ್ಕೆ ಮೂಲಭೂತವಾದ ಅಂಶವೆಂಬ ಪ್ರತಿಪಾದನೆ ಅಲ್ಲಿ ಉದ್ದಕ್ಕೂ ಕಂಡುಬರುತ್ತದೆ. ಕಡೆಕಡೆಗೆ ಆ ಅಂಶವೇ ಪುಷ್ಟಿಗೊಂಡು ಎಲ್ಲ ಕಾವ್ಯಾಂಗಗಳಿಗೂ ಇರಬಹುದಾದ ಪ್ರಾಮುಖ್ಯದ ದೃಷ್ಟಿಯಿಂದ ನಡೆಸಿದ ವಿಶೇಷ ಪರಿಶೀಲನೆಯ ಫಲವೇ ಔಚಿತ್ಯ—ಎಂಬ ಕಲ್ಪನೆ ಪ್ರಬಲಗೊಳ್ಳುತ್ತದೆ. (ಬಿ.ಕೆ.ಎಸ್.)

**ಔಟ್‌ರ್ಯಾಂ, ಸರ್ ಜೇಮ್ಸ್ :** 1803–1863. ಭಾರತದ ಹುಟ್ಟು ಧೈರ್ಯದ ಮಡ್ಡಿಮನುಷ್ಯ—ಎಂಬ ಖ್ಯಾತಿಯ ಈತ ಇಂಗ್ಲೆಂಡಿನ ಡರ್ಬಿಷೈರಿನ ಬಟರ್ಲಿಹಾಲ್ ಎಂಬಲ್ಲಿ 1803ರಲ್ಲಿ ಜನಿಸಿದ. ಬಾಲ್ಯದಿಂದಲೇ ಸೈನ್ಯಕ್ಕೆ ಸೇರಬೇಕೆಂಬ ಆಸೆಯಿತ್ತಲ್ಲದೆ ಇದಕ್ಕೆ ತಕ್ಕ ದೃಢಕಾಯ, ಶೌರ್ಯ ಅವನಲ್ಲಿದ್ದುವು. ಎಳವೆಯಿಂದಲೂ ಒಳ್ಳೆಯ ಆಟಗಾರನೆಂದು ಪ್ರಸಿದ್ಧಿ ಗಳಿಸಿದ್ದು ತನ್ನ ಹದಿನಾರನೆಯ ವರ್ಷದಲ್ಲಿ (1819) ಭಾರತದಲ್ಲಿದ್ದ ಬ್ರಿಟಿಷ್ ಸೈನ್ಯದಲ್ಲಿ ಕೆಡೆಟ್ ಆಗಿ ನೇಮಕಗೊಂಡ.

ಕಾಲಕಳೆದಂತೆ, ತನ್ನ ಯುಕ್ತಿ, ಶೌರ್ಯಗಳನ್ನು ಪ್ರದರ್ಶಿಸಿ ಬೊಂಬಾಯಿಯಲ್ಲಿದ್ದ ಬ್ರಿಟಿಷ್ ಸೇನೆಗೆ ಮುಖ್ಯ ಸೇನಾಧಿಪತಿಯಾದ. ಬ್ರಿಟಿಷರು ಸಿಂಧ್ ಮತ್ತು ಆಫ್ಘಾನಿಸ್ತಾನಗಳಲ್ಲಿ ನಡೆಸಿದ ಯುದ್ಧಗಳಲ್ಲಿ ಭಾಗವಹಿಸಿ ಆ ಯುದ್ಧರಂಗಗಳಲ್ಲಿನ ತನ್ನ ಅನುಭವಗಳನ್ನು ಪುಸ್ತಕ ರೂಪದಲ್ಲಿ ಪ್ರಕಟಿಸಿದ. 1856-57ರಲ್ಲಿ ಬ್ರಿಟಿಷರು ಪರ್ಷಿಯದೊಡನೆ ಯುದ್ಧ ನಡೆಸಿದ ಸಂದರ್ಭದಲ್ಲಿ ಮಹತ್ತ್ವದ ಪಾತ್ರವಹಿಸಿ ಬ್ರಿಟಿಷರು ಜಯಗಳಿಸಲು ನೆರವಾದ.

ಔಟ್‍ರ್‍ಯಾಂ ಯುದ್ಧರಂಗಗಳಲ್ಲಿ ಹೇಗೋ ಹಾಗೆ ಆಡಳಿತ ಕ್ಷೇತ್ರದಲ್ಲೂ ಒಳ್ಳೆಯ ಕೀರ್ತಿ ಗಳಿಸಿದ. ಭಾರತದಲ್ಲಿ ಬ್ರಿಟಿಷ್ ಸರ್ಕಾರ ಅವನಿಗೆ ಅನೇಕ ಸ್ಥಾನಮಾನಗಳನ್ನು ಕೊಟ್ಟಾಗ ಅಲ್ಲೆಲ್ಲ ತನ್ನ ಆಡಳಿತ ಶಕ್ತಿಯನ್ನು ಪ್ರದರ್ಶಿಸಿದ. 1847ರಲ್ಲಿ ಸರ್ಕಾರ ಅವನನ್ನು ಬರೋಡದ ರೆಸಿಡೆಂಟನಾಗಿ ನೇಮಿಸಿದಾಗ ಅಧಿಕಾರಿಗಳ ಭ್ರಷ್ಟಾಚಾರಗಳನ್ನು ಬಯಲಿಗೆಳೆದು ಆಡಳಿತ ಕ್ಷೇತ್ರದಲ್ಲಿ ಸೂಕ್ತವಾದ ಬದಲಾವಣೆಗಳನ್ನು ಮಾಡಿದ.

1854ರಿಂದ ಎರಡು ವರ್ಷ ಲಖ್‍ನೌ ರೆಸಿಡೆಂಟನಾಗಿ ಕೆಲಸ ಮಾಡಿದ. ಔಧ್ ಪ್ರಾಂತ್ಯವನ್ನು ಬ್ರಿಟಿಷ್ ಸಾಮ್ರಾಜ್ಯಕ್ಕೆ ಸೇರಿಸುವ ಕಾರ್ಯದಲ್ಲಿ ಮಹತ್ತ್ವದ ಪಾತ್ರವನ್ನು ವಹಿಸಿದ. 1857ರ ಬಂಡಾಯದ ಸಂದರ್ಭದಲ್ಲಿ ಅಂದಿನ ಸರ್ಕಾರದ ಪರವಾಗಿ ತುಂಬ ಶ್ರಮಿಸಿದ. ಲಖ್‍ನೌ ನಗರವನ್ನು ಮತ್ತೆ ಬ್ರಿಟಿಷರ ವಶಕ್ಕೆ ತರುವುದರಲ್ಲಿ ನೆರವಾದ. ಬಂಡಾಯ ಕೊನೆಗೊಂಡ ಮೇಲೆ ವೈಸರಾಯ್ ಕ್ಯಾನಿಂಗನಿಗೆ ಬೆಂಬಲವಾಗಿ ನಿಂತು ದೇಶದಲ್ಲಿ ಶಾಂತಿ ಸ್ಥಾಪಿಸಲು ನೆರವು ನೀಡಿದ. ಸರ್ಕಾರದ ನೀತಿ ಇವನ ಪ್ರಭಾವದಿಂದಾಗಿ ಉದಾರವಾಯಿತು. ರಾಜನಿಯೋಗಿಯಾಗಿ ದಕ್ಷಿಣ ಸಿಂಧ್ (1839) ಮತ್ತು ಉತ್ತರ ಸಿಂಧ್‍ಗಳಲ್ಲಿ ಕೆಲಸ ಮಾಡಿದ. ಅಲ್ಲಿನ ಜಮೀನುದಾರರ ಬಗ್ಗೆ ಸರ್ ಚಾರಲ್ಸ್ ನೇಪಿಯರ್ ತಳೆದ ಧೋರಣೆಯನ್ನು ತೀವ್ರವಾಗಿ ವಿರೋಧಿಸಿ ಅವನಿಂದ 'ಭಾರತದ ಹುಚ್ಚು ಧೈರ್ಯದ ಮಡ್ಡಿ ಮನುಷ್ಯ' ಎಂಬ ಟೀಕೆಗೆ ಒಳಗಾದ. ಔಟ್‍ರ್‍ಯಾಂನ ಸೇವೆಯನ್ನು ಮೆಚ್ಚಿದ ಸರ್ಕಾರ ಅವನನ್ನು 1858ರಲ್ಲಿ ಗೌರ್‍ನರ್ ಜನರಲ್ಲನ ಸಭೆಗೆ ಸದಸ್ಯನಾಗಿ ನೇಮಿಸಿತು. 1860ರ ವರೆಗೆ ಆ ಸ್ಥಾನದಲ್ಲಿದ್ದು ಅದೇ ವರ್ಷ ಇಂಗ್ಲೆಂಡಿಗೆ ಹಿಂತಿರುಗಿದ ಔಟ್‍ರಾಂ ಫ್ರಾನ್ಸಿನಲ್ಲಿ ಅಸು ನೀಗಿದ.

ಇತಿಹಾಸದಲ್ಲಿ ಔಟ್‍ರ್‍ಯಾಂ ಧೀರಯೋಧನೆಂದು ಪ್ರಖ್ಯಾತನಾಗಿದ್ದಾನೆ. ಆಗಿನ ಕಾಲದ ಯುವಕರಿಗೆ ಶೌರ್ಯದಲ್ಲಿ, ಸಾಹಸದಲ್ಲಿ ಆತ ಮಾದರಿಯಾಗಿದ್ದ. ಭಿಲ್ಲರೆಂಬ ಕಾಡುಜನರ ಮಧ್ಯೆ ತಂಗಿ, ಅವರನ್ನು ಸುರಕ್ಷಿತವಾಗಿ ಒಂದು ಕಡೆ ನೆಲೆಯೂರುವಂತೆ ಈತ ಒತ್ತಾಯಮಾಡಿದ. ಇವನ ಸಾಹಸಗಳಿಗೆ, ಸೇವೆಗಳಿಗೆ ಮಾರುಹೋದ ಬ್ರಿಟಿಷ್ ಸರ್ಕಾರ ಇವನಿಗೆ ಅನೇಕ ಬಿರುದಾವಳಿಗಳನ್ನು ಕೊಟ್ಟು ಗೌರವಿಸಿತು. ಅಷ್ಟೇ ಅಲ್ಲದೆ ಜ್ಞಾಪಕಾರ್ಥವಾಗಿ ಲಂಡನ್ ನಗರದಲ್ಲಿ ಇವನ ಶಿಲಾಪ್ರತಿಮೆಯನ್ನು ಸಂಸ್ಥಾಪಿಸಲಾಯಿತು. ಸರ್ ಫ್ರೆಡರಿಕ್ ಗೋಲ್ಡ್‍ಸ್ಮಿತ್ ಎಂಬಾತ ಔಟ್‍ರ್‍ಯಾಂನ ಜೀವನಚರಿತ್ರೆಯನ್ನು ಎರಡು ಸಂಪುಟಗಳಲ್ಲಿ ಬರೆದಿದ್ದಾನೆ. (ಬಿ.ಎಸ್.ಎ.; ಎಚ್.ಆರ್.)

**ಔಡಲ :** ಯೂಫೋರ್ಬಿಯೇಸಿ ಕುಟುಂಬಕ್ಕೆ ಸೇರಿದ ಮಧ್ಯಮ ಎತ್ತರಕ್ಕೆ ಬೆಳೆಯುವ ವಾರ್ಷಿಕ ಗಿಡ. ಬಹುವಾರ್ಷಿಕ ಬಗೆಗಳೂ ಉಂಟು. ರಿಸಿನಸ್ ಕಮ್ಯೂನಿಸ್ ಎಂಬುದು ವೈಜ್ಞಾನಿಕ ಹೆಸರು. ಹರಳು ಪರ್ಯಾಯ ನಾಮ. ಇದು ಮೂಲತಃ ಆಫ್ರಿಕದ್ದೆಂದು ಕೆಲವರೂ ಭಾರತದ್ದೆಂದು ಮತ್ತೆ ಕೆಲವರೂ ಅಭಿಪ್ರಾಯಪಡುತ್ತಾರೆ. ಈಚೆಗೆ ಉಷ್ಣ ಮತ್ತು ಸಮಶೀತೋಷ್ಣವಲಯದ ದೇಶಗಳಲ್ಲಿ ಇದನ್ನು ಹೇರಳವಾಗಿ ಬೆಳೆಸುತ್ತಾರೆ. ಇದು ಪೊದರು ಸಸ್ಯವಾಗಿಯೊ ಮರವಾಗಿಯೊ ಬೆಳೆಯುವುದು. ಉಷ್ಣವಲಯದಲ್ಲಿ ಅನೇಕ ಕಡೆ ಇದು 40'ಗಳಷ್ಟು ಎತ್ತರದ ಮರವಾಗಿ ಬೆಳೆಯುವುದೂ ಉಂಟು. ಸಾಮಾನ್ಯವಾಗಿ ಹೊಲಗಳಲ್ಲಿ ಬೆಳೆಸುವ ಔಡಲ ಸುಮಾರು 15'ಗಳಷ್ಟು ಎತ್ತರವಿರುತ್ತದೆ. ಕಾಂಡ ನಯ, ಬಣ್ಣ ನಸು ಊದಾ ಅಥವಾ ಹಸಿರು. ಕೆಲವು ತಳಿಗಳಲ್ಲಿ ಕಾಂಡದ ಮೇಲೆಲ್ಲ ಬಿಳಿಯ ಮೇಣದಂಥ ಲೇಪವಿರುತ್ತದೆ. ಗಿಡಕ್ಕೆ ವಯಸ್ಸಾದಂತೆಲ್ಲ ಕಾಂಡ ಟೊಳ್ಳಾಗುವುದು. ಎಲೆಗಳು ಅಗಲ, ಹಸ್ತಾಕಾರ ; ಪರ್ಯಾಯವಾಗಿ ಜೋಡಣೆಗೊಂಡಿವೆ. ಅಂಚು ಗರಗಸದ ಹಲ್ಲಿನಂತೆ. ಹೂಗಳು ಏಕಲಿಂಗಿಗಳು. ಗಂಡು ಮತ್ತು ಹೆಣ್ಣು ಹೂಗಳೆರಡೂ ದೊಡ್ಡದಾದ ಒಂದೇ ಸಂಕೀರ್ಣ ಪುಷ್ಪಗುಚ್ಛದಲ್ಲಿ ಜೋಡಣೆಗೊಂಡಿವೆ. ಕೆಲವು ಬಗೆಗಳಲ್ಲಿ ಕೇವಲ ಹೆಣ್ಣು ಹೂಗಳನ್ನು ಮಾತ್ರ ಒಳಗೊಂಡ ಪುಷ್ಪಗುಚ್ಛವಿರುತ್ತದೆ. ಈ ಗುಣವನ್ನು ಅಡ್ಡತಳಿಯೆಬ್ಬಿಕೆ ಪ್ರಯೋಗಗಳಲ್ಲಿ ಬಳಸಿಕೊಳ್ಳುವರು. ಹೂಗಳಿಗೆ ದಳಗಳಿಲ್ಲ, ಬರಿಯ ಪುಷ್ಪಪತ್ರ ಮಾತ್ರ ಉಂಟು. ಗಂಡು ಹೂವಿನಲ್ಲಿ ಕವಲೊಡೆದ ಹಲವಾರು ಕೇಸರಗಳಿವೆ. ಹೆಣ್ಣು ಹೂವಿನಲ್ಲಿ ಉಚ್ಚಸ್ಥಾನದ ಮೂರು ಕಾರ್ಪೆಲ್ಲುಗಳನ್ನೊಳಗೊಂಡ ಅಂಡಾಶಯವಿದೆ. ಅಂಡಕೋಶದಲ್ಲಿ ಮೂರು ಕೋಣೆಗಳಿವೆಯಲ್ಲದೆ ಒಂದೊಂದು ಕೋಣೆಯಲ್ಲಿ ಒಂದೊಂದರಂತೆ ಮೂರು ಅಂಡಕಗಳಿವೆ. ಕಾಯಿ ಸಂಪುಟ (ಕ್ಯಾಪ್ಸೂಲ್) ಮಾದರಿಯದು. ಮೇಲೆಲ್ಲ ಮುಳ್ಳುಗಳು, ಒಳಗೆ ಮೂರು ಬೀಜಗಳು ಇವೆ. ಬೀಜಗಳ ಮೇಲೆ ನಯವಾದ ಸಿಪ್ಪೆಯೂ ಅದರ ಮೇಲೆ ವಿವಿಧ ವರ್ಣವಿನ್ಯಾಸಗಳೂ ಇವೆ. ಕಾಯಿ ಬಲಿತಾಗ ಫಟ್ಟನೆ ಸಿಡಿದು ಬೀಜಗಳನ್ನು ಹೊರಕ್ಕೆ ಚಿಮ್ಮಿಸುತ್ತದೆ. ಅಲ್ಲದೆ ಕಾಯಿಗಳು ಒಂದೇ ಬಾರಿಗೆ ಬಲಿಯದೆ ಒಂದಾದಮೇಲೊಂದರಂತೆ ನಿಧಾನವಾಗಿ ಬಲಿತು ಬೀಜಗಳನ್ನು ಸಿಡಿಸುತ್ತವೆ. ಇದರಿಂದ ಬೀಜಸಂಗ್ರಹಣೆ ಕಷ್ಟ. ಈ ತೊಂದರೆಯನ್ನು ನಿವಾರಿಸಲೋಸುಗ ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ತಾವಾಗಿಯೇ ಒಡೆಯದ ಕಾಯಿಗಳುಳ್ಳ, ಗಿಡದ ಎಲ್ಲ ಕಾಯಿಗಳೂ ಏಕಕಾಲದಲ್ಲಿ ಬಲಿಯುವಂಥ ಗುಣವುಳ್ಳ ಹೊಸ ತಳಿಗಳನ್ನು ಅಭಿವೃದ್ಧಿಪಡಿಸಿದ್ದಾರೆ.



ಔಡಲಗಿಡದ ಕಾಯಿಗಳು ಮತ್ತು ಬೀಜಗಳು

ಔಡಲ ಒಂದು ಮುಖ್ಯವಾದ ವಾಣಿಜ್ಯ ಬೆಳೆ. ಇದರ ಬೀಜದಲ್ಲಿರುವ ಎಣ್ಣೆಗೋಸ್ಕರ ಇದು ಕೈಗಾರಿಕೆಗಳ ದೃಷ್ಟಿಯಿಂದ ಮಹತ್ತ್ವ ಪಡೆದಿದೆ. ಅಮೆರಿಕದ ಸಂಯುಕ್ತಸಂಸ್ಥಾನಗಳು, ಈಜಿಪ್ಟ್, ಸೂಡಾನ್, ಮಧ್ಯ ಹಾಗೂ ಪೂರ್ವ ಆಫ್ರಿಕ, ಭಾರತ, ಚೀನ, ಜಪಾನ್, ಬ್ರೆಜಿಲ್ ಮುಂತಾದ ದೇಶಗಳಲ್ಲಿ ಇದನ್ನು ವಿಸ್ತಾರವಾಗಿ ಬೆಳೆಸುತ್ತಿದ್ದಾರೆ. ಭಾರತದಲ್ಲಿ ಆಂಧ್ರಪ್ರದೇಶ, ಮೈಸೂರು ಮತ್ತು ತಮಿಳುನಾಡು ರಾಜ್ಯಗಳು ಇದರ ವ್ಯವಸಾಯಕ್ಕೆ ಹೆಸರಾದುವು. ಔಡಲ ಒಂದು ಒರಟು ಸಸ್ಯ. ಇದು ವಿವಿಧ ಮಣ್ಣು ಮತ್ತು ವಾತಾವರಣಗಳಲ್ಲಿ ಬೆಳೆಯಬಲ್ಲುದು. ಬೇರೆ ಏನನ್ನೂ ಬೆಳೆಯಲು ಸಾಧ್ಯವಾಗದ ಕಡೆಗಳಲ್ಲೂ ತೀರ ನಿಕೃಷ್ಟವಾದ ಮರಳಿನಂಥ ಮಣ್ಣಿನಿಂದ ಹಿಡಿದು ಬಹಳ ಉತ್ಕೃಷ್ಟವಾದ ಮೆಕ್ಕಲು ಮಣ್ಣಿನಲ್ಲಿಯೂ ಇದನ್ನು ಬೆಳೆಸಬಹುದು. ವಾರ್ಷಿಕ ಬೆಳೆಯಾದ ಇದು ಸಾಮಾನ್ಯವಾಗಿ 280 ದಿವಸಗಳ ಕಾಲ ಬದುಕಿರುತ್ತದೆ. ನೀರಾವರಿ ಸೌಕರ್ಯವಿದ್ದರೆ ಇದು ಬಹುವಾರ್ಷಿಕ ಸಸ್ಯವಾಗಿ ಬೆಳೆಯುವುದೂ ಉಂಟು. ಸಾಧಾರಣವಾಗಿ ಇದನ್ನು ಹತ್ತಿ, ಕಡಲೆಕಾಯಿ ಮುಂತಾದುವುಗಳೊಡನೆ ಮಿಶ್ರ ಬೆಳೆಯಾಗಿ ಬೆಳೆಸುತ್ತಾರೆ. ಬೀಜದ ಇಳುವರಿ ಎಕರೆಗೆ 400-900 ಪೌಂಡುಗಳು.

ಔಡಲ ಸಸ್ಯದಲ್ಲಿ ಹಲವಾರು ವಿಧಗಳಿವೆ. ಅವು ಬೀಜಗಳ ಗಾತ್ರ, ಬಣ್ಣ ಹಾಗೂ ಎಣ್ಣೆಯ ಪ್ರಮಾಣಗಳಲ್ಲಿ ವ್ಯತ್ಯಾಸವನ್ನು ತೋರುತ್ತವೆ. ಕೆಲವು ಬಗೆಗಳಲ್ಲಿ ಬೀಜದ ಗಾತ್ರ 3/16" ಇದ್ದರೆ ಇನ್ನು ಕೆಲವು ಬಗೆಗಳಲ್ಲಿ ½" ಅಥವಾ ¾" ಇರುತ್ತದೆ. ಹಾಗೆಯೇ ಕೆಲವು ವಿಧಗಳ ಬೀಜಗಳಲ್ಲಿ 56%ರಷ್ಟು ಎಣ್ಣೆಯಿದ್ದರೆ ಉಳಿದವುಗಳಲ್ಲಿ 48% ರಷ್ಟು ಎಣ್ಣೆಯಿರುತ್ತದೆ. ಸಾಧಾರಣವಾಗಿ ಶುಷ್ಕಭೂಮಿಯಲ್ಲಿ ಬೆಳೆಯುವ ಔಡಲ ಗಿಡಗಳು ವಾರ್ಷಿಕ ಸಸ್ಯಗಳು. ಅವುಗಳ ಬೀಜ ಸಣ್ಣಗಿದ್ದರೂ ಎಣ್ಣೆಯ ಪ್ರಮಾಣ ಅಧಿಕ. ದೊಡ್ಡ ಗಾತ್ರದ ಬೀಜಗಳನ್ನುಳ್ಳ ಔಡಲ ಗಿಡಗಳಲ್ಲಿ ಎಣ್ಣೆಯ ಪ್ರಮಾಣ ಕಡಿಮೆ. ಸ್ವಾಭಾವಿಕವಾಗಿ ಕಾಣಬರುವ ಈ ಬಗೆಗಳಲ್ಲದೆ ಅಡ್ಡತಳಿಯೆಬ್ಬಿಸಿ ಪಡೆದಿರುವ ಉತ್ತಮ ತಳಿಗಳೂ ವ್ಯವಸಾಯದಲ್ಲಿವೆ. ಸಾಮಾನ್ಯವಾಗಿ ಇವೆಲ್ಲವೂ ಅನಾವೃಷ್ಟಿ ಪರಿಸ್ಥಿತಿಗೆ ಪ್ರತಿರೋಧಕ ಶಕ್ತಿಯನ್ನು ಪಡೆದಿದ್ದು ಹೆಚ್ಚು ಇಳುವರಿ ಕೊಡುತ್ತವೆ.

ಔಡಲ ತನ್ನ ಬೀಜದಲ್ಲಿರುವ ಎಣ್ಣೆಯಿಂದಾಗಿ ಬಹಳ ಉಪಯುಕ್ತ ಬೆಳೆಯೆನಿಸಿದೆ. ಹಸಿಬೀಜಗಳನ್ನು ನೆಗ್ಗಿ ಅಥವಾ ಗಾಣಕ್ಕೆ ಕೊಟ್ಟು ಎಣ್ಣೆ ತೆಗೆಯುವರು. ಹರಳುಬೀಜಗಳನ್ನು ಕುಟ್ಟಿ ಬೇಯಿಸಿ ಎಣ್ಣೆ ತೆಗೆಯುವುದೂ ಹಿಂದಿನಿಂದ ರೂಢಿಯಲ್ಲಿರುವ ಗೃಹಕೈಗಾರಿಕೆ. ಹಸಿಬೀಜಗಳಿಂದ ತೆಗೆದ ಎಣ್ಣೆ ಬಣ್ಣರಹಿತ ಅಥವಾ ನಸುಹಳದಿ ಬಣ್ಣದ್ದಾಗಿರುತ್ತದೆ. ವಾಸನೆಯೂ ಕಡಿಮೆ. ಔಷಧಿ ರೂಪದಲ್ಲಿ ಬಳಸುವುದಕ್ಕೆ ಹಸಿಬೀಜದ ಎಣ್ಣೆಯೇ ಉತ್ತಮ. ಈಚೆಗೆ ಯಂತ್ರಗಳಿಂದ ಹಸಿ ಎಣ್ಣೆಯನ್ನು ಹಿಂಡಿ, ಶುದ್ಧೀಕರಿಸಿ, ಸ್ನಿಗ್ಧತೆಯನ್ನು ಕಡಿಮೆ ಮಾಡಿ, ಸುಗಂಧಗಳನ್ನೂ ಬಣ್ಣಗಳನ್ನೂ ಕೂಡಿಸಿ ಮನೋಹರವಾದ ಕೇಶತೈಲಗಳನ್ನು ಸಿದ್ಧಪಡಿಸುವ ಉದ್ಯಮ ಭಾರತದಲ್ಲಿ ವೇಗವಾಗಿ ಬೆಳೆಯುತ್ತಿದೆ. ಬೇಯಿಸಿ ತೆಗೆದ ಎಣ್ಣೆ ಸ್ವಲ್ಪ ಕೆಂಪಾಗಿರುತ್ತದೆ. ಔಡಲ ಎಣ್ಣೆಗೆ ಓಕರಿಕೆ ತರುವ ವಿಶಿಷ್ಟ ರುಚಿ ಉಂಟು. ಇದರ ಉಪಯೋಗಗಳು ಹಲವಾರು. ಆಯುರ್ವೇದ, ಸಿದ್ಧ ಹಾಗೂ ಯುನಾನಿ ಔಷಧಿ ಪದ್ಧತಿಗಳಲ್ಲೆಲ್ಲ ಹರಳೆಣ್ಣೆಯ ಉಪಯೋಗ ಇದ್ದೇ ಇದೆ. ಎಣ್ಣೆಯನ್ನು ಮೈಗೆ, ತಲೆಗೆ ಹಚ್ಚಿಕೊಂಡು ಅಭ್ಯಂಜನ ಸ್ನಾನ ಮಾಡುವುದು ಎಲ್ಲರಿಗೂ ತಿಳಿದದ್ದೇ. ಹಿಂದಿನ ಕಾಲದಿಂದಲೂ ಹರಳೆಣ್ಣೆ ಸುಖರೇಚಕವೆಂದು ಹೆಸರಾಗಿದೆ. ಎಳೆಯ ಮಕ್ಕಳಾಗಲಿ, ಮುದುಕರಾಗಲಿ ಇದನ್ನು ತೆಗೆದುಕೊಂಡರೆ ದೇಹದ ಮೇಲೆ ಯಾವುದೇ ರೀತಿಯ ದುಷ್ಪರಿಣಾಮವಾಗದು. ಹರಳೆಣ್ಣೆ ಜಠರರಸದೊಡನೆ ವರ್ತಿಸಿದಾಗ ರಿಸಿನೋಲಿಯಿಕ್ ಆಮ್ಲವೆಂಬ ಚುರುಗುಟ್ಟಿಸುವ ವಸ್ತು ಉತ್ಪತ್ತಿಯಾಗಿ ಕರುಳಿನ ಗೋಡೆ ಇರುಕಿಸುವಂತೆ ಮಾಡಿ ಭೇದಿಯುಂಟಾಗುತ್ತದೆ. ಎಣ್ಣೆ ಸೇವಿಸಿದ ನಾಲ್ಕು ಐದು ಗಂಟೆಗಳ ಅನಂತರ ವಿರೇಚನಕಾರ್ಯ ಆರಂಭವಾಗುತ್ತದೆ. ಗ್ಲಿಸರೀನಿನೊಂದಿಗೆ ಹರಳೆಣ್ಣೆ ಮಿಶ್ರಮಾಡಿ ಸೇವಿಸಿದರೆ ಪರಿಣಾಮ ಹೆಚ್ಚು. ಎಣ್ಣೆಯನ್ನು ಅತಿಸಾರ, ಮೂಲವ್ಯಾಧಿ, ಸಂಧಿವಾತ, ಕಟಿವಾಯು, ಹೊಟ್ಟೆನುಲಿತ ಮುಂತಾದ ರೋಗಗಳಲ್ಲೂ ಬಳಸುತ್ತಾರೆ. ಕೆಲವು ಬಗೆಯ ಕಣ್ಣಿನ ಊತಗಳಿಗೆ (ಕಂಜಂಕ್ಟಿವಿಟಿಸ್) ಹರಳೆಣ್ಣೆಯ ಬಳಕೆಯಿಂದ ತಾತ್ಕಾಲಿಕ ಪರಿಹಾರ ಸಿಗುತ್ತದೆ. ಎಣ್ಣೆಯೊಂದರಲ್ಲೇ ಅಲ್ಲದೆ ಬೇರು, ಬೀಜ, ಎಲೆ ಇವುಗಳಲ್ಲೂ ಔಷಧೀಯ ಗುಣಗಳಿವೆ. ಬೇರು ಮತ್ತು ಬೀಜಗಳಿಂದ ತಯಾರಿಸಿದ ಕಷಾಯವನ್ನು ಸಂಧಿವಾತ, ಕಟಿವಾಯುಗಳ ರೋಗನಿವಾರಣೆಗೆ ಉಪಯೋಗಿಸುತ್ತಾರೆ. ಹರಳೆಣ್ಣೆಯಿಂದ ಹಲವಾರು ಉತ್ಪನ್ನಗಳನ್ನು ಪಡೆಯಬಹುದು ಎಣ್ಣೆಯನ್ನು ಆಮ್ಲಜನಕದೊಡನೆ 80°-130° ಸೆಂ. ಉಷ್ಣತೆಯಲ್ಲಿ ವರ್ತಿಸುವಂತೆಮಾಡಿ ಉತ್ಕರ್ಷಿತ ತೈಲ (ಬ್ಲಾನ್ ಆಯಿಲ್) ತಯಾರಿಸುವರು. ಹರಳೆಣ್ಣೆಯನ್ನು ಕಾಯಿಸಿ, ವಿಭಜಿಸಿ, ಕ್ಷಾರಗಳಿಗೆ ಒಡ್ಡಿ ಸುಗಂಧದ್ರವ್ಯಗಳ ತಯಾರಿಕೆಗೆ ಬೇಕಾಗುವ ವಸ್ತುಗಳನ್ನೂ ಕೃತಕ ಗೋಂದಿನ ತಯಾರಿಕೆಗೆ ಬೇಕಾಗುವ ಡೈಬೇಸಿಕ್ ಆಮ್ಲವನ್ನೂ ಪಡೆಯಬಹುದು. ಮೆರುಗೆಣ್ಣೆ (ವಾರ್ನಿಷ್), ಮುದ್ರಣ ಬಣ್ಣ, ನೈಲಾನ್ ದಾರ ಮುಂತಾದುವುಗಳ ತಯಾರಿಕೆಯಲ್ಲಿ ಬಳಸುವರು. ಸಾಮಾನ್ಯವಾಗಿ ದ್ರವರೂಪದಲ್ಲಿರುವ ಹರಳೆಣ್ಣೆ ಉಚ್ಚ ಉಷ್ಣತೆಯಲ್ಲೂ ತನ್ನ ಸ್ನಿಗ್ಧತೆಯನ್ನು ಉಳಿಸಿಕೊಳ್ಳುವುದರಿಂದ ಬಹಳ ಉತ್ತಮವಾದ ಮೃದುಚಾಲಕವೆಂದು ಹೆಸರಾಗಿದೆ. ಇದನ್ನು ಮೃದುಚಾಲಕಗಳ (ಲೂಬ್ರಿಕೆಂಟ್ಸ್) ತಯಾರಿಕೆಯಲ್ಲಿ ಬಹಳವಾಗಿ ಉಪಯೋಗಿಸುತ್ತಾರೆ. ಇದರಲ್ಲಿ ಟೋಕೊಫೆರಾಲ್ ಪ್ರತಿಉತ್ಕರ್ಷಕಗಳು (ಆಂಟಿ ಆಕ್ಸಿಡೆಂಟ್ಸ್) ಇರುವುದರಿಂದ ಮತ್ತು ಇದರಲ್ಲಿನ ಗ್ಲಿಸರೈಡುಗಳಿಗೆ ಉತ್ಕರ್ಷಕ ಪ್ರತಿರೋಧಕ ಶಕ್ತಿಯಿರುವುದರಿಂದ (ರೆಸಿಸ್ಟೆನ್ಸ್ ಟು ಆಟೊಆಕ್ಸಿಡೇಷನ್) ಹರಳೆಣ್ಣೆಗೆ ಅತಿ ಹೆಚ್ಚಿನ ಸ್ಥಿರತೆ ಇದೆ. ಬೀಜದ ತಿರುಳಿನಲ್ಲಲ್ಲದೆ ಅದರ ಸಿಪ್ಪೆಯಲ್ಲಿಯೂ ಕೊಂಚ ಪ್ರಮಾಣದಲ್ಲಿ ಎಣ್ಣೆಯಿದೆ. ಈ ಎಣ್ಣೆಯಲ್ಲಿ ತಿರುಳಿನ ಎಣ್ಣೆಗಿಂತ ಹೆಚ್ಚಿನ ಪ್ರಮಾಣದಲ್ಲಿ ಓಲಿಯಿಕ್ ಮತ್ತು ಲಿನೋಲಿಯಿಕ್ ಆಮ್ಲಗಳೂ ಸ್ವಲ್ಪ ಪ್ರಮಾಣದಲ್ಲಿ ರಿಸಿನೋಲಿಯಿಕ್ ಆಮ್ಲವೂ ಇವೆ.

ಎಣ್ಣೆ ತೆಗೆದ ಮೇಲೆ ಉಳಿಯುವ ಔಡಲ ಹಿಂಡಿ (ಮಡ್ಡಿ) ಗೊಬ್ಬರವಾಗಿ ಬಳಕೆಯಾಗುತ್ತದೆ. ಇದರಲ್ಲಿ ರಿಸಿನ್ ಎಂಬ ರಕ್ತ ಹೆಪ್ಪುಗಟ್ಟಿಸುವಂಥ ವಿಷವಸ್ತುವಿರುವುದರಿಂದ ದನಗಳಿಗೆ ಮೇವಾಗಿ ಇದನ್ನು ಉಪಯೋಗಿಸುವುದಕ್ಕಾಗುವುದಿಲ್ಲ.

ಕಾಂಡದಿಂದ ಕಾಗದ ತಯಾರಿಕೆಗೆ ಬೇಕಾದ ಮೂಲ ವಸ್ತುವನ್ನು ತಯಾರಿಸಬಹುದು. ಎಲೆಗಳನ್ನು ಎರಿ ರೇಷ್ಮೆ ಹುಳುಗಳಿಗೆ ಆಹಾರವಾಗಿ ಹಾಕುತ್ತಾರೆ.

ಔಡಲ ಸಸ್ಯಕ್ಕೆ ಹಲವಾರು ಬಗೆಯ ರೋಗಗಳೂ ಪೀಡೆಗಳೂ ಅಂಟುವುದುಂಟು. ಮೆಲಾಂಸ್ಪೊರೆಲ್ಲಾ ರಿಸಿನಿ ಎಂಬ ಬೂಷ್ಟಿನಿಂದ ಬರುವ ಅರಿಸಿನ ರೋಗವೂ ಸರ್ಕೊಸ್ಪೊರಿನ ರಿಸಿನೆಲ್ಲ ಎಂಬುದರಿಂದ ಉಂಟಾಗುವ ಎಲೆರೋಗವೂ ಡಿಪ್ಲೋಡಿಯ ರಿಸಿನೆಲ್ಲ ಎಂಬ ಬ್ಯಾಕ್ಟೀರಿಯದಿಂದ ಬರುವ ಕೊಳೆರೋಗವೂ ಮುಖ್ಯವಾದುವು. ಇವಾವುವೂ ಅಂಥ ಹೆಚ್ಚಿನ ಪ್ರಮಾಣದಲ್ಲಿ ನಷ್ಟವನ್ನುಂಟುಮಾಡುವುದಿಲ್ಲ. ಕೀಟಗಳಲ್ಲಿ ಮುಖ್ಯವಾದುವು ಎಲೆ ತಿನ್ನುವ ಅಕೊಯಿಯ ಜೇನೇಟ ಮತ್ತು ಕಾಂಡ ಹಾಗೂ ಕಾಯಿಗಳನ್ನು ಕೊರೆಯುವ ಡೈಕೊಕ್ರೋಸಿಸ್ ಪಂಕ್ಟಿಫೆರಾಲಿಸ್ ಎಂಬುವು. ಕ್ಯಾಲ್ಸಿಯಂ ಆರ್ಸಿನೇಟ್ ಮತ್ತು ಗ್ಯಾಮೆಕ್ಸೀನ್ ಡಿ.025 ಔಷಧಿಗಳನ್ನು ಸಿಂಪಡಿಸುವುದರಿಂದ ಇವನ್ನು ತಡೆಗಟ್ಟಬಹುದು. ಅಲ್ಲದೆ ಔಡಲ ಬೆಳೆಯುವ ಭೂಮಿಯನ್ನು ಅಗೆದು ಈ ಹುಳುಗಳ ಡಿಂಭಗಳನ್ನು ಹೊರತೆಗೆದು ನಾಶಪಡಿಸುವುದರಿಂದಲೂ ಕೀಟರೋಗಗಳನ್ನು ತಡೆಗಟ್ಟಬಹುದು. (ಎಸ್.ಎಸ್.ಎಸ್‌ಐ.)

**ಔದಾಸೀನ್ಯ ರೇಖೆಗಳು :** ಅನುಭೋಗಿಗಳ ಬೇಡಿಕೆಯನ್ನು ವಿಶ್ಲೇಷಿಸಲು ಅರ್ಥಶಾಸ್ತ್ರದಲ್ಲಿ ಅನುಸರಿಸುವ ಒಂದು ವಿಧಾನ (ಇಂಡಿಫರೆನ್ಸ್ ಕರ್ವ್ಸ್). ಬೇಡಿಕೆಯ ದೃಷ್ಟಿಯಿಂದ ಈ ಜಗತ್ತಿನಲ್ಲಿ ಸರಕುಗಳು ವಿರಳವಾಗಿರುವುದರಿಂದ ಪ್ರತಿಯೊಬ್ಬನೂ ತನಗೆ ಸೂಕ್ತ ಕಂಡಂತೆ ಈ ಸರಕುಗಳನ್ನು ಆಯ್ಕೆ ಮಾಡಿಕೊಳ್ಳಬೇಕಾಗುತ್ತದೆ. ತನ್ನಲ್ಲಿರುವ ಹಣದಿಂದ ಯಾವ ಯಾವ ಸರಕುಗಳನ್ನು ಎಷ್ಟೆಷ್ಟು ಪ್ರಮಾಣದಲ್ಲಿ ಕೊಳ್ಳಬೇಕೆಂಬುದನ್ನು ನಿಷ್ಕರ್ಷಿಸಿಕೊಳ್ಳಬೇಕಾಗುತ್ತದೆ. ಒಬ್ಬ ಅನುಭೋಗಿಗೆ ಎರಡು ಸರಕುಗಳು ಮಾತ್ರವೇ ಲಭ್ಯವಿರುವುದೆಂದು ಭಾವಿಸುವುದಾದರೆ, ಅಥವಾ ಆತ ಎರಡು ಸರಕುಗಳನ್ನು ಕೊಳ್ಳಬೇಕೆಂದು ಬಯಸುವುದಾದರೆ, ತನ್ನ ಹಣದ ವರಮಾನದಿಂದ ಇವೆರಡನ್ನೂ ಯಾವುದೋ ಒಂದು ಗೊತ್ತಾದ ಪ್ರಮಾಣದಲ್ಲಿ ಕೊಳ್ಳಬೇಕೆಂದು ತೀರ್ಮಾನಿಸುತ್ತಾನೆ. ಈ ಎರಡು ಸರಕುಗಳ ಈ ಬಗೆಯ ಸಂಯೋಜನೆಯಿಂದ ಅವನಿಗೆ ದೊರಕುವಷ್ಟೇ ತೃಪ್ತಿ ಅಥವಾ ಉಪಯುಕ್ತತೆ ಅವನಿಗೆ ಇವೆರಡನ್ನೂ ಬೇರೆ ಬೇರೆ ಪ್ರಮಾಣಗಳಲ್ಲಿ ಸಂಯೋಜಿಸಿದರೂ ಲಭ್ಯವಾಗಬಹುದು; ಅಥವಾ ಆಗದಿರಬಹುದು. ಮೊದಲನೆಯ ಬಗೆಯ ಸಂಯೋಜನೆಯಿಂದ ಅವನಿಗೆ ಎಷ್ಟು ತೃಪ್ತಿ ಅಥವಾ ಉಪಯುಕ್ತತೆ ಲಭ್ಯವಾಗುವುದೋ ಅಷ್ಟೇ ಉಪಯುಕ್ತತೆ ಲಭ್ಯವಾಗುವಂತೆ ಈ ಎರಡು ಸರಕುಗಳನ್ನೂ ಬೇರೆ ಬೇರೆ ಪ್ರಮಾಣಗಳಲ್ಲಿ ಸಂಯೋಜಿಸಬಹುದು. ಹೀಗೆ ಏಕರೀತಿಯ ಉಪಯುಕ್ತತೆ ಲಭಿಸುವ ಸಂಯೋಜನೆಗಳನ್ನೆಲ್ಲ ಒಂದು ನಕ್ಷೆಯಲ್ಲಿ ಬಿಂದುಗಳಾಗಿ ಗುರುತಿಸಿ ಆ ಬಿಂದುಗಳನ್ನೆಲ್ಲ ಒಂದು ರೇಖೆಯಾಗಿ ಕೂಡಿಸಬಹುದು. ಆ ರೇಖೆಯ ಮೇಲೆ ಯಾವುದೇ ಬಿಂದುವಿನಿಂದ ಸೂಚಿತವಾಗುವ ಪ್ರಮಾಣಗಳಲ್ಲಿ ಆ ಎರಡು ಸರಕುಗಳನ್ನು ಪಡೆದುಕೊಂಡರೂ ಅವನಿಗೆ ಒಂದೇ ಸಮನಾದ ತೃಪ್ತಿ ಲಭಿಸುವುದರಿಂದ—ಆ ರೇಖೆಯಿಂದ ಸೂಚಿತವಾಗುವ ಸಂಯೋಜನೆಗಳೆಲ್ಲ ಒಂದೇ ಎಂಬ ಔದಾಸೀನ್ಯ ಅವನಿಗಿರುವುದರಿಂದ—ಆ ರೇಖೆಗೆ ಔದಾಸೀನ್ಯ ರೇಖೆಯೆಂದು ಹೆಸರು ಬಂದಿದೆ.

ತನಗೆ ಹಣದ ರೂಪದಲ್ಲಿ ಬಂದ ಕ್ಲುಪ್ತ ವರಮಾನದಿಂದ ಒಬ್ಬ ಅನುಭೋಗಿಗೆ ಆಹಾರ ಹಾಗೂ ಬಟ್ಟೆ ಕೊಳ್ಳಬೇಕೆನಿಸಬಹುದು. ಅವನಲ್ಲಿರುವ ಹಣದಿಂದ ಮೂರು ಕಿಲೋ ಅಕ್ಕಿ ಹಾಗೂ ಎರಡು ಮೀಟರ್ ಬಟ್ಟೆ ಕೊಳ್ಳಬಹುದು. ಅಥವಾ ಎರಡು ಕಿಲೋ ಅಕ್ಕಿ ಮತ್ತು ಮೂರು ಮೀಟರ್ ಬಟ್ಟೆ ಕೊಳ್ಳಬಹುದು. ಇವೆರಡು ಜೊತೆಗಳಲ್ಲಿ ಮೊದಲನೆಯ ಜೊತೆಯೇ ವಾಸಿಯೆಂದು ಆತ ಭಾವಿಸಬಹುದು; ಅಥವಾ ಎರಡನೆಯದು ವಾಸಿಯೆಂದು ಅವನಿಗೆ ತೋರಬಹುದು; ಇಲ್ಲವೇ ಇವೆರಡು ಬಗೆಯ ಸಂಯೋಜನೆಗಳಲ್ಲಿ ಯಾವುದಾದರೂ ಒಂದೇ ಎಂದೂ ಎನಿಸಬಹುದು.

ಇವೆರಡು ಸಂಯೋಜನೆಗಳು ಒಂದೇ ಎಂಬುದು ಅವನ ಭಾವನೆಯಾದರೆ, ಆಗ ಇದೇ ರೀತಿ ಎನಿಸುವ ಬೇರೆ ಬೇರೆ ಪ್ರಮಾಣಗಳ ಜೋಡಿಗಳನ್ನೂ ಭಾವಿಸಬಹುದು. ಹೀಗೆ ಅವನಿಗೆ ಒಂದೇ ಎನಿಸಬಹುದಾದ, ಅವುಗಳಲ್ಲಿ ಯಾವುದಾದರೂ ಸರಿಯೆಂದು ಅವನು ಉದಾಸೀನನಾಗಿರಬಹುದಾದ, ಸಂಯೋಜನೆಗಳನ್ನು ಮುಂದೆ ಕೊಟ್ಟಿದೆ :

| ಅಕ್ಕಿ (ಕಿಲೋ) | | ಬಟ್ಟೆ (ಮೀಟರ್) |
|---|---|---|
| 1 | ... | 6 |
| 2 | ... | 3 |
| 3 | ... | 2 |
| 4 | ... | $1\frac{1}{2}$ |

ಈ ಪಟ್ಟಿಯಲ್ಲಿ ಕೊಟ್ಟಿರುವ ಜೋಡಿಗಳನ್ನೇ ನಕ್ಷೆಯ ರೂಪದಲ್ಲಿ ತೋರಿಸಬಹುದು (ನಕ್ಷೆ 1):

ಹಿಂದಿನ ಯಾದಿಯಲ್ಲಿ ಕೊಟ್ಟಿರುವ ನಾಲ್ಕು ಸಂಯೋಜನೆಗಳು ಮೇಲಿನ ನಕ್ಷೆಯಲ್ಲಿ A, B, C, D ಎಂಬ ಬಿಂದುಗಳು. ಈ ಬಿಂದುಗಳನ್ನೆಲ್ಲ ಸೇರಿಸಿ ಎಳೆದ ರೇಖೆಯೇ ಔದಾಸೀನ್ಯ ರೇಖೆ. ಈ ಔದಾಸೀನ್ಯ ರೇಖೆಯ ಮೇಲೆ ಯಾವ ಬಿಂದುವನ್ನೇ ತೆಗೆದುಕೊಂಡರೂ—ಆ ಬಿಂದುವಿನಿಂದ ಸೂಚಿತವಾಗುವ ಪ್ರಮಾಣದಲ್ಲಿ ಅಕ್ಕಿ ಹಾಗೂ ಬಟ್ಟೆಯನ್ನು ಕೊಂಡರೂ—ಅವನಿಗೆ ಒಂದೇ ಎನಿಸುತ್ತದೆ. ಈ ರೇಖೆಯಿಂದ ಸೂಚಿತವಾಗುವ ಸಂಯೋಜನೆಗಳನ್ನು ಅವನ ಮುಂದೆ ಇಟ್ಟರೆ ಅವುಗಳಲ್ಲಿ ಯಾವುದನ್ನು ಆಯ್ಕೆ ಮಾಡಿಕೊಳ್ಳಬೇಕೆಂದು ತೀರ್ಮಾನಿಸಲು ಆತ ಅಶಕ್ತ.

ಈ ಔದಾಸೀನ್ಯ ರೇಖೆಯ ಕೆಲವು ಲಕ್ಷಣಗಳನ್ನು ಇಲ್ಲಿ ಗಮನಿಸಬೇಕು. ಇದು ಎಡದಿಂದ ಬಲಕ್ಕೆ ಇಳುಕಲಾಗುತ್ತ ಹೋಗುತ್ತದೆ. ಮೂಲ ಬಿಂದುವಿನ (O) ಕಡೆಗೆ

ಉಬ್ಬಿದೆ ; ಅಥವಾ ಮೇಲಿಂದ ನೋಡುವುದಾದರೆ ತಗ್ಗಿದೆ. ಈ ರೇಖೆಯ ಇಳಿಜಾರು ಮುಂದೆ ಕಡಿಮೆಯಾಗುತ್ತ ಹೋಗುತ್ತದೆ. ತಳದ ರೇಖೆಗೆ ಸಮಾನಾಂತರವಾಗುವ ಪ್ರವೃತ್ತಿ ತೋರುತ್ತದೆ. ಅನುಭೋಗಿ ತನ್ನ ನಿಯಮಿತ ವರಮಾನದಲ್ಲಿ ಎರಡು ಬದಲಿ ಸರಕುಗಳನ್ನು (ಸಬ್‌ಸ್ಟಿಟ್ಯೂಟ್ಸ್) ಬಳಸುವಾಗ ಒಂದು ವಸ್ತುವಿನ ಪ್ರಮಾಣವನ್ನು ಹೆಚ್ಚಿಸುತ್ತ ಹೋದಂತೆಲ್ಲ ಮತ್ತೊಂದು ಸರಕಿನ ಪ್ರಮಾಣವನ್ನು ಕಡಿಮೆ ಮಾಡುತ್ತ ಹೋಗಬೇಕಾಗುತ್ತದೆ. ಒಂದು ಸರಕು ವಿರಳವಾದಂತೆಲ್ಲ ಇನ್ನೊಂದು ಸರಕಿನ ದೃಷ್ಟಿಯಲ್ಲಿ ಮೊದಲನೆಯ ಸರಕಿನ ಪ್ರತಿನಿಧಾನದ ಮೌಲ್ಯ ಹೆಚ್ಚುತ್ತದೆ. ಹೆಚ್ಚು ವಿರಳವಾದ ಸರಕಿನ ಪರಿಸರದ ಉಪಯುಕ್ತತೆ ಹೆಚ್ಚು ಯಥೇಷ್ಟವಾಗಿರುವ ಸರಕಿನ ಪರಿಸರದ ಉಪಯುಕ್ತತೆಯ ದೃಷ್ಟಿಯಲ್ಲಿ ಅಧಿಕವಾಗುತ್ತದೆ (ನೋಡಿ—**ಪ್ರತಿನಿಧಾನದ ನಿಯಮ**). ಮೊದಲನೆಯ ನಕ್ಷೆಯಲ್ಲಿ ಕೊಟ್ಟಿರುವ ರೇಖೆಯ ಮೇಲೆ A ಬಿಂದುವಿನಲ್ಲಿ




ನಕ್ಷೆ 1 ಅನುಭೋಗಿಯ ಔದಾಸೀನ್ಯ ರೇಖೆ

ಸೂಚಿತವಾಗಿರುವ ಸನ್ನಿವೇಶದಲ್ಲಿ ಇನ್ನೊಂದು ಕಿಲೋ ಅಕ್ಕಿ ಪಡೆಯುವುದಕ್ಕಾಗಿ ಆರು ಮೀಟರ್ ಬಟ್ಟೆಯಲ್ಲಿ ಮೂರು ಮೀಟರನ್ನೆ ಬಿಟ್ಟುಕೊಡಲು ಅನುಭೋಗಿ ಸಿದ್ಧನಾಗಿರುತ್ತಾನೆ. ಆದರೆ B ಬಿಂದುವಿಗೆ ಬರುವ ವೇಳೆಗೆ ಇನ್ನೊಂದು ಕಿಲೋ ಅಕ್ಕಿಗಾಗಿ ಒಂದು ಮೀಟರ್ ಬಟ್ಟೆ ಮಾತ್ರ ಬಿಟ್ಟುಕೊಡಲು ಆತ ಸಿದ್ಧ. C ಗೆ ಬರುವ ವೇಳೆಗೆ ಆತ ಮತ್ತೊಂದು ಕಿಲೋ ಅಕ್ಕಿಗಾಗಿ ಕೇವಲ $\frac{1}{2}$ ಮೀಟರ್ ಬಟ್ಟೆ ಬಿಡಲು ತಯಾರು. ಬಟ್ಟೆ ಆ ವೇಳೆಗೆ ಅವನಲ್ಲಿ ಬಹಳ ವಿರಳವಾಗಿರುವುದರಿಂದ ಅವನಿಗೆ ಅದರ ಸಾಪೇಕ್ಷ ಉಪಯುಕ್ತತೆ ಬಹಳ ಹೆಚ್ಚು. ಈ ನಕ್ಷೆಯಲ್ಲಿ Aಗೂ Bಗೂ ನಡುವಿನ ಇಳುಕಲಿನ ಅಳತೆ 3 ; Bಗೂ Cಗೂ ನಡುವಿನ ಇಳುಕಲು 1 ಮಾತ್ರ; Cಗೂ Dಗೂ ನಡುವೆ ಇರುವ ಇಳುಕಲು ಕೇವಲ $\frac{1}{2}$. ಅಕ್ಕಿಗೂ ಬಟ್ಟೆಗೂ ನಡುವಣ ಪ್ರತಿನಿಧಾನದ ಗತಿಯನ್ನು ಹೀಗೆ ಅಳೆಯಬಹುದು. ಇದನ್ನೇ ಹೀಗೆ ತೋರಿಸಬಹುದು :

| ಸಂಯೋಜನೆ | | ಬಟ್ಟೆ (ಮೀಟರು) | ಅಕ್ಕಿ (ಕಿಲೋ) | | ಬದಲಿಸುವ (ಪ್ರತಿನಿಧಾನದ) ಪ್ರಮಾಣ (ಬಟ್ಟೆ: ಅಕ್ಕಿ) |
|---|---|---|---|---|---|
| A | ... | 6 | 1 | ... | 3 : 1 |
| B | ... | 3 | 2 | ... | 1 : 1 |
| C | ... | 2 | 3 | ... | $\frac{1}{2}$ : 1 |
| D | ... | $1\frac{1}{2}$ | 4 | ... | |

ನಕ್ಷೆ (1)ರಲ್ಲಿ ತೋರಿಸಿರುವ ಔದಾಸೀನ್ಯ ರೇಖೆಯಲ್ಲಿ ಒಂದು ಕಿಲೋ ಅಕ್ಕಿ ಮತ್ತು ಆರು ಕಿಲೋ ಬಟ್ಟೆಯ ಸಂಯೋಜನೆಯಿಂದ ಒಬ್ಬ ಅನುಭೋಗಿಗೆ ಲಭ್ಯವಾಗುವ ಉಪಯುಕ್ತತೆಯನ್ನು ಗುರುತಿಸಿ, ಅಷ್ಟೇ ಉಪಯುಕ್ತತೆ ಲಭ್ಯವಾಗುವ ನಾನಾ ಸಂಯೋಜನೆಗಳನ್ನು ಸೂಚಿಸುವ ರೇಖೆಯನ್ನು ರಚಿಸಿದೆ. 1 ಕಿಲೋ ಅಕ್ಕಿ ಮತ್ತು 6 ಮೀಟರ್ ಬಟ್ಟೆಯಿಂದ ಆರಂಭಿಸುವ ಬದಲು 2 ಕಿಲೋ ಅಕ್ಕಿ ಹಾಗೂ 7 ಮೀಟರ್ ಬಟ್ಟೆಯಿಂದಾಗಲಿ, 3 ಕಿಲೋ ಅಕ್ಕಿ ಮತ್ತು 7 ಮೀಟರ್ ಬಟ್ಟೆಯಿಂದಾಗಲಿ ಆರಂಭಿಸಬಹುದು. ಈ ಒಂದೊಂದು ಜೋಡಿಯಿಂದಲೂ ಒಂದೊಂದು ಪ್ರಮಾಣದ ಉಪಯಕ್ತತೆ ಅನುಭೋಗಿಗೆ ಲಭ್ಯವಾಗುತ್ತದೆ. ಅಷ್ಟಷ್ಟೇ ಉಪಯುಕ್ತತೆಗಳಿರುವ ನಾನಾ ಸಂಯೋಜನೆಗಳನ್ನು ಗುರುತಿಸಿ ಅವುಗಳನ್ನೂ ನಕ್ಷೆಯ ಮೇಲೆ ತೋರಿಸಬಹುದು. ಆಗ ಈ ಔದಾಸೀನ್ಯ ರೇಖೆಗಳು ಹೀಗೆ ಕಾಣುತ್ತವೆ:




ನಕ್ಷೆ 2. ಔದಾಸೀನ್ಯ ರೇಖೆಗಳು

ಈ ರೇಖೆಗಳಲ್ಲಿ $I_3$ ಎಂಬುದು ನಕ್ಷೆ 1ರಲ್ಲಿ ಕೊಟ್ಟಿರುವ ರೇಖೆ. ಈ ರೇಖೆಗಳಲ್ಲಿ ಒಂದೊಂದು ಒಂದೊಂದು ಪ್ರಮಾಣದ ತೃಪ್ತಿಯನ್ನು ನೀಡುವ ಸಂಯೋಜನೆಗಳನ್ನು ಸೂಚಿಸುತ್ತವೆ. ಒಂದು ರೇಖೆಯ ಮೇಲೆ ಎಲ್ಲೇ ಆದರೂ ಒಂದೇ ರೀತಿಯ ತೃಪ್ತಿ ದೊರಕುತ್ತದೆ. ನಕ್ಷೆಯಲ್ಲಿ ಸೂಚಿತವಾಗಿರುವ ಎರಡು ಸರಕುಗಳನ್ನು ಹೆಚ್ಚಿಸಿದಂತೆಲ್ಲ ತೃಪ್ತಿಯ ಮಟ್ಟ ಏರುತ್ತ ಹೋಗುತ್ತದೆ. ನಕ್ಷೆ 2ರಲ್ಲಿ ಇದನ್ನು ಕಾಣಬಹುದು. $I_1$ ಕ್ಕಿಂತ $I_2$ರ ತೃಪ್ತಿಯ ಮಟ್ಟ ಹೆಚ್ಚು. ಅದಕ್ಕಿಂತ ಹೆಚ್ಚಿನವು $I_3$, $I_4$ ... ಹೀಗೆ. O ಬಿಂದುವಿನಿಂದ ಆರಂಭಿಸಿ ಈಶಾನ್ಯದಿಕ್ಕಿಗೆ ಸಾಗಿದಂತೆಲ್ಲ ಹಲವಾರು ಔದಾಸೀನ್ಯ ರೇಖೆಗಳನ್ನು ದಾಟಿ ಹೋಗಬೇಕಾಗುತ್ತದೆ.

ಒಬ್ಬ ಅನುಭೋಗಿ ತನ್ನ ನಿಯಮಿತ ವರಮಾನದಿಂದ ಈ ಎರಡು ಸರಕುಗಳನ್ನೂ ಯಾವುದೇ ಒಂದು ಪ್ರಮಾಣದಲ್ಲಿ ಕೊಂಡರೆ ಮಾತ್ರವೇ ಅವನಿಗೆ ಪರಮ ತೃಪ್ತಿ




ನಕ್ಷೆ 3. ಅನುಭೋಗ ಸಾಧ್ಯತೆಯ ರೇಖೆ

ಅಥವಾ ಉಪಯುಕ್ತತೆ ಲಭಿಸುತ್ತದೆ. ಇಂಥ ಸ್ಥಿತಿಯೇ ಸಮತೋಲ ಸ್ಥಿತಿ (ಈಕ್ವಿಲಿಬ್ರಿಯಂ ಪೊಸಿಷನ್). ಅವನ ವರಮಾನದಿಂದ ಈ ಎರಡು ಸರಕುಗಳನ್ನು ಎಷ್ಟೆಷ್ಟು ಕೊಳ್ಳುವುದು ಸಾಧ್ಯವೆಂಬುದನ್ನು ಪಟ್ಟಿಮಾಡಿ ಆ ಸಾಧ್ಯತೆಗಳನ್ನೆಲ್ಲ ನಕ್ಷೆಯ

ಮೇಲೆ ಗುರುತಿಸಬಹುದು. ಹೀಗೆ ಎಳೆದ (ಸರಳ) ರೇಖೆಯ ಮೇಲೆ ಸಾಗಿದರೆ ಅದು O ಬಿಂದುವಿನಿಂದ ಸಾಧ್ಯವಾದಷ್ಟು ಹೆಚ್ಚು ದೂರದಲ್ಲಿ—ಅತ್ಯಂತ ಹೆಚ್ಚಿನ ತೃಪ್ತಿ ಕೊಡಬಲ್ಲ—ಔದಾಸೀನ್ಯ (ವಕ್ರ) ರೇಖೆಯನ್ನು ಎಲ್ಲಿ ಸೋಕುವುದೋ ಆ ಸ್ಪರ್ಶಬಿಂದುವೇ (ಟ್ಯಾಂಜೆಂಟ್ ಪಾಯಿಂಟ್) ಆ ಬೆಲೆ ಹಾಗೂ ವರಮಾನಗಳ ಮಟ್ಟದಲ್ಲಿ ಸಾಧ್ಯವಿರುವ ಸಮತೋಲ ಸ್ಥಿತಿ.

ನಕ್ಷೆ (1) ಮತ್ತು (2)ರಲ್ಲಿ ತೋರಿಸಿರುವ ಸರಕುಗಳಿಗೆ ಸಂಬಂಧಿಸಿದಂತೆ ಇದನ್ನು ಹೀಗೆ ವಿವರಿಸಬಹುದು : ಒಬ್ಬನಿಗೆ ದಿನಕ್ಕೆ ಆರು ರೂಪಾಯಿ ವರಮಾನವಿದ್ದು, ಅಕ್ಕಿ ಕಿಲೋಗೆ ಒಂದೂವರೆ ರೂಪಾಯಿಯೂ ಬಟ್ಟೆ ಮೀಟರಿಗೆ ಒಂದು ರೂಪಾಯಿಯೂ ಇದ್ದರೆ ಆಗ ಆತ ತನ್ನ ವರಮಾನದಿಂದ ನಾಲ್ಕು ಕಿಲೋ ಅಕ್ಕಿಯನ್ನೇ ಕೊಳ್ಳುವುದು ಸಾಧ್ಯ (P) ; ಅಥವಾ ಆರು ಮೀಟರ್ ಬಟ್ಟೆಯನ್ನೆ ಕೊಳ್ಳಬಹುದು. (Q) ಈ ಎರಡು ಪರಮಾವಧಿಗಳ ನಡುವೆ, ತನ್ನಲ್ಲಿರುವ ಹಣದ ಒಂದು ಭಾಗದಿಂದ ಅಕ್ಕಿಯನ್ನೂ ಉಳಿದ ಭಾಗದಿಂದ ಬಟ್ಟೆಯನ್ನೂ ನಾನಾ ಪ್ರಮಾಣಗಳಲ್ಲಿ ಕೊಳ್ಳಬಹುದು. P ಮತ್ತು Q ಬಿಂದುಗಳನ್ನು ಸೇರಿಸಿ ಎಳೆದ ರೇಖೆಯೇ ಬೆಲೆ–ವರಮಾನ ರೇಖೆ (ಪ್ರೈಸ್–ಇನ್‌ಕಂ ಲೈನ್)ಅಥವಾ ಅನುಭೋಗ ಸಾಧ್ಯತೆಯ ರೇಖೆ (ಕನ್ಸಂಪ್ಷನ್ ಪಾಸಿಬಿಲಿಟಿ ಲೈನ್). ಇದೇ ಅವನ ಬಜೆಟ್ ರೇಖೆ.




ನಕ್ಷೆ 4 ಅನುಭೋಗಿಯ ಪ್ರಶಸ್ತ ಸಮತೋಲ ಸ್ಥಿತಿ

ಈ ನಕ್ಷೆಯಲ್ಲಿ PQ ರೇಖೆ $I_1$ ಮತ್ತು $I_2$ ಔದಾಸೀನ್ಯ ರೇಖೆಗಳನ್ನು ಹಾದು ಹೋಗುತ್ತದೆ. $I_3$ ರೇಖೆಯನ್ನು E ಎಂಬಲ್ಲಿ ಸ್ಪರ್ಶಿಸುತ್ತದೆ. ಈ ಮೂರು ರೇಖೆಗಳಲ್ಲಿ ಅತ್ಯಂತ ಬಲಗಡೆಗೆ ಅತ್ಯಂತ ಎತ್ತರದ ಔದಾಸೀನ್ಯ ರೇಖೆ ಯಾವುದೋ ಆ ರೇಖೆಯನ್ನು ($I_3$) ಸ್ಪರ್ಶಿಸುವ ಅನುಭೋಗಿಗೆ ಆತನ ವರಮಾನದಿಂದ (ಆ ಬೆಲೆಗಳಲ್ಲಿ) ಪರಮಾವಧಿ ತೃಪ್ತಿ ಸಾಧ್ಯ. ಈ ಬಿಂದುವೇ ಅನುಭೋಗಿಯ ಸಮತೋಲ ಸ್ಥಿತಿಯನ್ನು ತೋರಿಸುತ್ತದೆ.

ಅನುಭೋಗಿಯ ಸಮತೋಲ ಸ್ಥಿತಿ ಯಾವಾಗಲೂ ಸ್ಥಿರವಾಗಿರುವುದಿಲ್ಲ. ಕೆಳಗಿನ ಸಂದರ್ಭಗಳಲ್ಲಿ ಅವನ ಸಮತೋಲ ಸ್ಥಿತಿಯಲ್ಲಿ ವ್ಯತ್ಯಾಸವಾಗುವುದುಂಟು :

1 ಅನುಭೋಗಿಯ ವರಮಾನ ಸ್ಥಿರವಿದ್ದು ಆತ ಬಳಸುವ ಸರಕುಗಳ ಬೆಲೆಗಳಲ್ಲಿ ವ್ಯತ್ಯಾಸವಾದಾಗ : (a) ಬೆಲೆ ಹೆಚ್ಚಿದಾಗ ಕೆಳಮಟ್ಟದ ಔದಾಸೀನ್ಯರೇಖೆಯ ಮೇಲೆ ಸಮತೋಲ ಸ್ಥಿತಿ ಏರ್ಪಡುತ್ತದೆ. (b) ಬೆಲೆ ಇಳಿದಾಗ ಮೇಲ್ಮಟ್ಟದ ಔದಾಸೀನ್ಯ ರೇಖೆಯ ಮೇಲೆ ಸಮತೋಲ ಸ್ಥಿತಿ ಏರ್ಪಡುತ್ತದೆ.

2 ಸರಕುಗಳ ಬೆಲೆಗಳು ಸ್ಥಿರವಿದ್ದು ಅನುಭೋಗಿಯ ವರಮಾನದಲ್ಲಿ ವ್ಯತ್ಯಾಸವಾದಾಗ : (a) ವರಮಾನ ಹೆಚ್ಚಿದಾಗ ಮೇಲ್ಮಟ್ಟದ ಔದಾಸೀನ್ಯ ರೇಖೆಯ ಮೇಲೆ ಸಮತೋಲ, (b) ವರಮಾನ ತಗ್ಗಿದಾಗ ಕೆಳಮಟ್ಟದ ಔದಾಸೀನ್ಯ ರೇಖೆಯ ಮೇಲೆ ಸಮತೋಲ.

ಹೀಗೆ ಸರಕುಗಳ ಬೇರೆ ಬೇರೆ ಬೆಲೆಗಳ ಮಟ್ಟದಲ್ಲಿ ಅನುಭೋಗಿ ಪಡೆಯುವ ಬೇರೆ ಬೇರೆ ಸಮತೋಲ ಸ್ಥಿತಿಗಳ ಮೇಲಿಂದ (ಎಂದರೆ ಅವನು ಕೊಳ್ಳುವ ಸರಕುಗಳ ಪ್ರಮಾಣಗಳಿಂದ) ಅವನ ಬೇಡಿಕೆಯ ರೇಖೆಯನ್ನು ಕಂಡುಹಿಡಿಯುವುದು ಸಾಧ್ಯ. (ನೋಡಿ—ಬೇಡಿಕೆ.)

ವ್ಯಕ್ತಿಯ ಬೇಡಿಕೆಯ ಸಿದ್ಧಾಂತವನ್ನು ವಿವರಿಸಲು ಈ ಔದಾಸೀನ್ಯ ರೇಖೆಯ ವಾದಸರಣಿಯನ್ನು ಮಂಡಿಸಿದಾತ ಜೆ. ಆರ್. ಡಿ. ಆಲೆನ್ ಎಂಬ ಆಧುನಿಕ ಅರ್ಥಶಾಸ್ತ್ರಜ್ಞ. ಇವನ ಈ ವಿಶ್ಲೇಷಣೆ ಆಲ್ಫ್ರೆಡ್ ಮಾರ್ಷಲ್ ಮಂಡಿಸಿದ ಬೇಡಿಕೆಯ ಸಿದ್ಧಾಂತಕ್ಕಿಂತ ಭಿನ್ನವಾಗಿದೆ. ಒಂದೇ ಸರಕಿನ ಉಪಯುಕ್ತತೆ ಎಲ್ಲರಿಗೂ ಒಂದೇ ಸಮನಾಗಿರುವುದಿಲ್ಲ. ಪ್ರತಿಯೊಬ್ಬನೂ ಒಂದಕ್ಕಿಂತ ಹೆಚ್ಚು ಸರಕುಗಳನ್ನು ಬಳಸುತ್ತಾನೆ. ಆತ ಅನುಭೋಗಿಸುವ ಸರಕುಗಳನ್ನು ಯಾವ ಪ್ರಮಾಣದಲ್ಲಿ ಸಂಯೋಜಿಸಿದರೆ ಅದರಿಂದ ಎಷ್ಟು ತೃಪ್ತಿ ಲಭಿಸಬಹುದೆಂಬುದನ್ನು ಹೋಲಿಕೆಯ ವಿಧಾನದಿಂದ ತಿಳಿಯಬಹುದಲ್ಲದೆ ಆ ತೃಪ್ತಿಯನ್ನೇ ನಿರ್ದಿಷ್ಟವಾಗಿ ಅಳೆಯುವುದು ಸಾಧ್ಯವಿಲ್ಲವೆಂಬ ವಾದದ ಮೇಲೆ ಈ ವಿಶ್ಲೇಷಣೆಯ ವಿಧಾನವನ್ನು ಅಳವಡಿಸಲಾಗಿದೆ. (ಕೆ.ಆರ್.ಎಂ.)

**ಔದ್ಯೋಗಿಕ ಮಾರ್ಗದರ್ಶನ :** ಬೇರೆ ಬೇರೆ ವೃತ್ತಿಗಳಲ್ಲಿ ಇರುವ ಉದ್ಯೋಗಾವಕಾಶ, ಆಯಾ ವೃತ್ತಿಗೆ ಅಗತ್ಯವಾಗುವ ಸಾಮರ್ಥ್ಯ, ಕೌಶಲ್ಯ, ಮೊದಲಾದ ಅರ್ಹತೆ, ಅದಕ್ಕಾಗಿ ಸಮಾಜ ಅಥವಾ ರಾಷ್ಟ್ರ ವ್ಯವಸ್ಥೆಗೊಳಿಸಿರುವ ತರಬೇತಿ ಕಾರ್ಯಕ್ರಮ ಇತ್ಯಾದಿ ವಿವರಗಳನ್ನು ನೀಡಿ, ವ್ಯಕ್ತಿ ಉದ್ಯೋಗ ದೊರಕಿಸಿಕೊಳ್ಳಲು ನೆರವಾಗಿ, ಅನಂತರ ಆ ಕೆಲಸದಲ್ಲಿ ಹೊಂದಿಕೊಳ್ಳಲು ನೀಡುವ ಸಲಹಾ ಸಹಾಯ (ವೊಕೇಷನಲ್ ಗೈಡೆನ್ಸ್). ಇದು ಶೈಕ್ಷಣಿಕ ಮಾರ್ಗದರ್ಶನದ ಒಂದು ವಿಶಿಷ್ಟ ಮುಖವಾಗಿದ್ದು ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ವ್ಯವಸ್ಥೆಗೊಳಿಸಬಹುದಾದ ಕಾರ್ಯಕ್ರಮವಾಗಿದೆ. ತಂದೆತಾಯಿಗಳು, ನೆಂಟರಿಷ್ಟರು, ಸ್ನೇಹಿತರು, ಸಮಾಜ, ರಾಷ್ಟ್ರ–ಇವೆಲ್ಲ ಮೂಲಗಳಿಂದಲೂ ಮಾರ್ಗದರ್ಶನ ದೊರಕಬಹುದಾದರೂ ಶಾಲಾಕಾಲೇಜುಗಳು ಇದನ್ನೊಂದು ನಿರ್ದಿಷ್ಟವೂ ವ್ಯವಸ್ಥಿತ ರೀತಿಯದೂ ಆದ ಸೇವಾಸೌಲಭ್ಯವನ್ನಾಗಿ ಏರ್ಪಡಿಸಿಕೊಂಡಿವೆ. ವಿದ್ಯಾರ್ಥಿಗಳು ತಮ್ಮ ಶಕ್ತಿಸಾಮರ್ಥ್ಯಗಳನ್ನು ಪರಿಪೂರ್ಣವಾಗಿ ಬೆಳೆಸಿಕೊಂಡು ತಮ್ಮ ಅಗತ್ಯವನ್ನೂ ಆಶೋತ್ತರಗಳನ್ನೂ ಪೂರೈಸಿಕೊಳ್ಳುವಂತೆ ನೆರವಾಗುವುದೇ ಇದರ ಉದ್ದೇಶ. ವ್ಯಕ್ತಿಯ ಅಭಿರುಚಿ ಆಸಕ್ತಿಗಳನ್ನು ನಿರ್ಧರಿಸಿ, ಅವುಗಳ ಆಧಾರದ ಮೇಲೆ, ವ್ಯಕ್ತಿ ತನಗೆ ಯುಕ್ತನಾದ ಉದ್ಯೋಗವೊಂದನ್ನು ಆರಿಸಿಕೊಳ್ಳಲು ನೆರವಾಗುವ ಈ ಸೇವಾ ಕಾರ್ಯದಲ್ಲಿ ಶಾಸ್ತ್ರೀಯ ವಿಧಾನವನ್ನು ಅನುಸರಿಸಲಾಗುವುದು. ಆ ಕಾರ್ಯದಲ್ಲಿ ಸಂಚಿತಾಭಿವೃದ್ಧಿ ದಾಖಲೆ, ಪ್ರಶ್ನಾವಳಿ, ಆಸಕ್ತಿಸೂಚಿ, ವೈಯಕ್ತಿಕ ಅಥವಾ ಸಾಮೂಹಿಕ ಭೇಟಿ, ಮನೋಭಾವ ಮಾಪಕ, ಪ್ರಮಾಣೀಕರಿಸಿದ ಶಿಕ್ಷಣಾಭಿವೃದ್ಧಿ ಪರೀಕ್ಷಣಗಳು, ಸಾಮರ್ಥ್ಯ ಪರೀಕ್ಷಣ, ಕೌಶಲ್ಯ ಪರೀಕ್ಷಣ—ಇತ್ಯಾದಿ ಉಪಕರಣಗಳನ್ನು ಬಳಸಲಾಗುವುದು. ಆ ಮೂಲಕ ಸಂಗ್ರಹಿಸುವ ಆಧಾರಾಂಶಗಳನ್ನು ಬಳಸಿಕೊಂಡು ಯುಕ್ತ ರೀತಿಯ ಮಾರ್ಗದರ್ಶನ ನೀಡಲಾಗುವುದು. ಹಾಗೆ ನೀಡಿದ ಸಲಹೆ ಎಷ್ಟರಮಟ್ಟಿಗೆ ಫಲಕಾರಿಯಾಗಿದೆ, ಎಷ್ಟರಮಟ್ಟಿಗೆ ವ್ಯಕ್ತಿ ತನ್ನ ಉದ್ಯೋಗದಲ್ಲಿ ಯಶಸ್ಸನ್ನು ಸಾಧಿಸುವಂತೆ ಮಾಡಿದೆ ಎಂಬುದನ್ನು ಅರಿತುಕೊಳ್ಳಲು ಅನಂತರವೂ ಅನುವರ್ತಿ (ಫಾಲೊ ಅಪ್) ಪರೀಕ್ಷೆಯನ್ನು ನಡೆಸಲಾಗುವುದು.

ಇತಿಹಾಸ : ತಂದೆತಾಯಿಗಳೂ ಬಂಧುಬಳಗದವರೂ ವ್ಯಕ್ತಿಗೆ ತಾನು ಅನುಸರಿಸಬೇಕಾದ ಉದ್ಯೋಗದ ಬಗ್ಗೆ ಮಾರ್ಗದರ್ಶನ ನೀಡುವುದು ಪ್ರಾಚೀನ ಕಾಲದಿಂದ ನಡೆದು ಬಂದಿದ್ದರೂ ಅದಕ್ಕೊಂದು ಶಾಸ್ತ್ರೀಯ ವಿಧಾನ ಆರಂಭವಾಗಿ ತಾಂತ್ರಿಕ ಚೌಕಟ್ಟು ದೊರೆತದ್ದು ಈ ಶತಮಾನದ ಆರಂಭದಿಂದ ಮಾತ್ರ. ಮೊದಲ ಮಹಾಯುದ್ಧಕಾಲದಲ್ಲಿ, ವ್ಯಕ್ತಿಗೆ ಅವನ ಶಕ್ತಿಸಾಮರ್ಥ್ಯಗಳಿಗೊಪ್ಪುವಂಥ ಕಾರ್ಯವನ್ನು ವಹಿಸುವುದು ವ್ಯಕ್ತಿಯ ಮತ್ತು ಸಮಾಜದ ಹಿತದೃಷ್ಟಿಗಳೆರಡರಲ್ಲೂ ಎಷ್ಟು ಮುಖ್ಯವೆಂಬುದು ವ್ಯಕ್ತಪಟ್ಟಿತು. ಮನೋವೈಜ್ಞಾನಿಕ ಪರೀಕ್ಷಣಗಳ ಫಲಿತಾಂಶಗಳ ಆಧಾರದ ಮೇಲೆ ಅಮೆರಿಕದ ಸೈನಿಕರಿಗೆ ಯುದ್ಧಕ್ಷೇತ್ರದಲ್ಲಿ ಅವರವರಿಗೊಪ್ಪುವ ಕಾರ್ಯವನ್ನು ವಹಿಸಿ ಅದು ಫಲಕಾರಿಯಾದಂದೇ ಆಧುನಿಕ ಔದ್ಯೋಗಿಕ ಮಾರ್ಗದರ್ಶನದ ಇತಿಹಾಸ ಆರಂಭವಾಯಿತೆನ್ನಬಹುದು. 1920ರ ವೇಳೆಗೆ ಪ್ರತಿ ವ್ಯಕ್ತಿಯೂ ನಿರ್ದಿಷ್ಟ ವೃತ್ತಿಯೊಂದನ್ನನುಸರಿಸುವುದು ಸಾಧ್ಯವೆಂಬ ಭಾವನೆ ಬೆಳೆದು, ಮೊದಮೊದಲು ವ್ಯಕ್ತಿಯ ಬುದ್ಧಿಶಕ್ತಿ ಮತ್ತು ಕೌಶಲ್ಯಗಳನ್ನು ಮಾತ್ರ ಗಣನೆಗೆ ತೆಗೆದುಕೊಂಡು ಮಾರ್ಗದರ್ಶನ ನೀಡುವ ಕಾರ್ಯ ಆರಂಭವಾಯಿತು. ಆಗ ನೀಡಿದ ಸಲಹೆಗಳು ಅನೇಕ ವೇಳೆ ವಿಫಲವಾಗುತ್ತಿದ್ದುದನ್ನು ಕಂಡ ಮನೋವಿಜ್ಞಾನಿಗಳು ಆ ಕಾರ್ಯದಲ್ಲಿ ಇತರ ಅಂಶಗಳ ಪರಿಗಣನೆಯೂ ಅಗತ್ಯವೆಂಬುದನ್ನು ಕಂಡುಕೊಂಡರು. ಬುದ್ಧಿಶಕ್ತಿ ಕೌಶಲ್ಯಗಳಂತೆ ವ್ಯಕ್ತಿಯ ಪ್ರೇರಣೆ, ಚಿತ್ತಪ್ರವೃತ್ತಿ, ಇತ್ಯಾದಿ ಅಂಶಗಳೂ ವ್ಯಕ್ತಿಯ ಕಾರ್ಯನಿರ್ವಹಣಾಸಾಮರ್ಥ್ಯಕ್ಕೆ ಕಾರಣವೆಂಬುದನ್ನು ಸಂಶೋಧನೆಗಳು ಸೂಚಿಸಿದುವು. ಜೊತೆಗೆ, ವೃತ್ತಿಗಳ ಸ್ವರೂಪದಲ್ಲಿ ತೀವ್ರವೇಗದ ಬದಲಾವಣೆಗಳಾಗುತ್ತಿರುವ ಈ ಕಾಲದಲ್ಲಿ ವ್ಯಕ್ತಿಗೆ ಸಂಕುಚಿತ ಕ್ಷೇತ್ರದ ಒಂದು ನಿರ್ದಿಷ್ಟ ವೃತ್ತಿಯನ್ನನುಸರಿಸುವಂತೆ ಸಲಹೆ ನೀಡುವುದು ಸೂಕ್ತವಾಗದೆಂಬ ಅಂಶವೂ ವ್ಯಕ್ತಗೊಟ್ಟಿತು ; ಅಲ್ಲದೆ, ತೀರ ಚಿಕ್ಕ ವಯಸ್ಸಿನಲ್ಲೇ ನಿರ್ದಿಷ್ಟ ವೃತ್ತಿಯೊಂದಕ್ಕೆ ವ್ಯಕ್ತಿ

ಯನ್ನು ಕಟ್ಟಿಹಾಕುವುದು ಅಪಾಯಕಾರಿಯೆಂಬ ಅಂಶವೂ ಗಮನಕ್ಕೆ ಬಂತು. ಇವೆಲ್ಲವರ ಫಲವಾಗಿ ಪ್ರತ್ಯೇಕವಾಗಿ ಪರಿಗಣಿಸಲಾಗುತ್ತಿದ್ದ ಔದ್ಯೋಗಿಕ ಮಾರ್ಗದರ್ಶನವನ್ನು ಶೈಕ್ಷಣಿಕ ಮಾರ್ಗದರ್ಶನದ ಒಂದು ಅಂಗವಾಗಿ ಪರಿಗಣಿಸಿ, ವ್ಯಕ್ತಿಯ ಇಡೀ ಶೈಕ್ಷಣಿಕ ಜೀವನದಲ್ಲಿ ಆ ಸಲಹೆಯನ್ನು ನೀಡುತ್ತ ಹೋಗುವ ಹೊಸ ಸಂಪ್ರದಾಯ ಆರಂಭವಾಯಿತು. 1920ರ ಅನಂತರ ಈ ಕಾರ್ಯಕ್ಕಾಗಿ ವಿವಿಧ ಉಪಕರಣಗಳನ್ನು ರೂಢಿಸುವ ಯತ್ನ ನಡೆಯಿತು. ಈ ಕಾರ್ಯ ಮುಖ್ಯವಾಗಿ ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಆರಂಭವಾಯಿತು. ರಾಷ್ಟ್ರದ ರಕ್ಷಣೆಯ ದೃಷ್ಟಿಯಿಂದಲ್ಲದೆ ಆರ್ಥಿಕ ಪ್ರಗತಿ ಮತ್ತು ಸಾಮಾಜಿಕ ನೆಮ್ಮದಿಯ ದೃಷ್ಟಿಯಿಂದಲೂ ಔದ್ಯೋಗಿಕ ಮಾರ್ಗದರ್ಶನ ಬಹುಮುಖ್ಯ ಕಾರ್ಯಕ್ರಮವೆಂದು ಪರಿಗಣಿಸಿ ಆ ಕಾರ್ಯಕ್ಕಾಗಿ ಅಗತ್ಯವಾದ ಧನಸಹಾಯವನ್ನು ಸರ್ಕಾರ ಒದಗಿಸಿತು. ಶೈಕ್ಷಣಿಕ ಮಾರ್ಗದರ್ಶನ ಪ್ರೌಢಶಾಲೆಗಳಲ್ಲೂ ಕಾಲೇಜುಗಳಲ್ಲೂ ಬಹುಬೇಗ ಜನಪ್ರಿಯವಾಯಿತು. ಎರಡನೆಯ ಮಹಾಯುದ್ಧದ ಕಾಲದಲ್ಲೂ ಅನಂತರವೂ ಈ ಸೌಲಭ್ಯವನ್ನು ಸೈನಿಕರಿಗೆ ಕೆಲಸಗಳನ್ನು ಹಂಚುವಾಗ ಬಳಸಿಕೊಂಡು ಪ್ರಚಾರಕ್ಕೆ ತರಲಾಯಿತು. 1960ರ ವೇಳೆಗೆ ನಗರಗಳ ಪ್ರತಿ ಪ್ರೌಢಶಾಲೆಗೂ ಒಬ್ಬೊಬ್ಬ ಮಾರ್ಗದರ್ಶನ ತಜ್ಞರನ್ನು ನೇಮಿಸಿಕೊಳ್ಳಲಾಯಿತು. ಈಚೆಗೆ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ನೀಡುವುದರ ಜೊತೆಗೆ ಅವರಿಗೆ ಉದ್ಯೋಗವೊದಗಿಸುವ ಕಾರ್ಯವನ್ನೂ ಈ ಸೇವಾಸೌಲಭ್ಯದ ಅಂಗವಾಗಿ ಕೈಕೊಳ್ಳಲಾಗುತ್ತಿದೆ. ಅಲ್ಲಿ ಅಂದಿಗಾಗಲೆ ಅಸ್ತಿತ್ವಕ್ಕೆ ಬಂದಿದ್ದ ಉದ್ಯೋಗ ವಿನಿಮಯ ಕಚೇರಿ, ತರಪೇತಿ, ಮರುತರಪೇತಿ ಮತ್ತು ಸಲಹಾ ಕಚೇರಿಗಳು, ಪುನರ್ವಸತೀಕರಣ ಸಂಸ್ಥೆ, ಔದ್ಯೋಗಿಕ ಸಿಬ್ಬಂದಿಯ ಕಚೇರಿ ಇತ್ಯಾದಿ ಸಾರ್ವಜನಿಕ ಸಂಸ್ಥೆಗಳೂ ಯುವಜನರಿಗೆ ತಕ್ಕಮಟ್ಟಿಗೆ ಔದ್ಯೋಗಿಕ ಮಾರ್ಗದರ್ಶನವನ್ನು ಈಗ ನೀಡುತ್ತಿವೆ ; ಸ್ವಲ್ಪಮಟ್ಟಿಗೆ ವೈಯಕ್ತಿಕ ಸಮಸ್ಯೆಗಳ ಬಗ್ಗೆಯೂ ಅವು ಮಾರ್ಗದರ್ಶನ ನೀಡುತ್ತವೆ. ಏಕೆಂದರೆ, ಔದ್ಯೋಗಿಕ ಜೀವನದ ಯಶಸ್ಸು ಮತ್ತು ನೆಮ್ಮದಿಗಳಿಗೂ ವೈಯಕ್ತಿಕ ಅಂಶಗಳಿಗೂ ನಿಕಟಸಂಬಂಧವಿದೆ.

ಮೊದಮೊದಲು ಮಾರ್ಗದರ್ಶನ ಪ್ರೌಢಶಾಲೆಯನ್ನು ಮಧ್ಯೆ ಬಿಡುವವರಿಗೆ ಮಾತ್ರ ಮೀಸಲಾಗಿತ್ತು. ಆಗ ಅವರನ್ನು ಸುಮ್ಮನೆ ಭೇಟಿ ಮಾಡಿ, ವೃತ್ತಿಯೊಂದರ ಅನುಸರಣೆಗೆ ಸ್ಥೂಲವಾಗಿ ಸಲಹೆ ನೀಡಲಾಗುತ್ತಿತ್ತು. 1930ರ ಅನಂತರ ಅದಕ್ಕಾಗಿ ಶಾಸ್ತ್ರೀಯ ರೀತಿಯ ಉಪಕರಣಗಳನ್ನು ಬಳಸಿಕೊಂಡು, ವ್ಯಕ್ತಿಯ ಯೋಗ್ಯತೆಗಳನ್ನು ನಿರ್ಧರಿಸಿ, ಅವನ್ನು ಉದ್ಯೋಗಗಳ ಆವಶ್ಯಕತೆಗಳೊಡನೆ ಸರಿಹೊಂದಿಕೊಂಡು ಸಲಹೆ ನೀಡಲಾಗುತ್ತಿದೆ. ಜೊತೆಗೆ, ಈಚೆಗೆ ಉನ್ನತ ಶಿಕ್ಷಣ ಸಂಸ್ಥೆಗಳಿಗೂ ಅದನ್ನು ವಿಸ್ತರಿಸಿದೆ.

ಇಂಗ್ಲೆಂಡಿನಲ್ಲಿ ಹಾಗೂ ಯುರೋಪಿನ ರಾಷ್ಟ್ರಗಳಲ್ಲಿ ಔದ್ಯೋಗಿಕ ಮಾರ್ಗದರ್ಶನ ಅಷ್ಟು ತಾಂತ್ರಿಕ ಸ್ವರೂಪವನ್ನು ತಾಳದಿದ್ದರೂ ಕಾರ್ಯರೂಪದಲ್ಲಿ ಫಲಕಾರಿಯಾಗುವಂತೆ ವ್ಯವಸ್ಥೆಗೊಂಡಿದೆ. ಪ್ರೌಢಶಾಲೆಗಳಲ್ಲೂ ತಾಂತ್ರಿಕ ಶಿಕ್ಷಣ ಸಂಸ್ಥೆಗಳಲ್ಲೂ ಮುಖ್ಯೋಪಾಧ್ಯಾಯರೂ ಉದ್ಯೋಗಗಳ ಪ್ರತಿನಿಧಿಗಳೂ ವಿದ್ಯಾರ್ಥಿಗಳನ್ನು ಭೇಟಿಮಾಡಿ ಆಯಾ ಉದ್ಯೋಗಕ್ಕೆ ಸೂಕ್ತರಾದವರನ್ನು ಆರಿಸಿಕೊಳ್ಳುವ ಸಂಪ್ರದಾಯ ಹಿಂದಿನಿಂದಲೂ ನಡೆದುಕೊಂಡು ಬರುತ್ತಿದೆ. ಈ ಭೇಟಿಯಲ್ಲಿ ಪೋಷಕರೂ ಹಾಜರಿರುವುದುಂಟು. ಈಚೆಗೆ ಮನೋವೈಜ್ಞಾನಿಕ ಉಪಕರಣಗಳನ್ನೂ ಆ ಕಾರ್ಯಕ್ಕೆ ಬಳಸಿಕೊಳ್ಳಲಾಗುತ್ತಿದೆ. ವ್ಯಕ್ತಿಗಳಿಗೆ ಉದ್ಯೋಗಗಳನ್ನು ದೊರಕಿಸಿಕೊಡಲು ವ್ಯವಸ್ಥೆಗೊಂಡಿರುವ ಸಾರ್ವಜನಿಕ ಮತ್ತು ವಾಣಿಜ್ಯ ದೃಷ್ಟಿಯ ಉದ್ಯೋಗ ವಿನಿಮಯ ಸಂಸ್ಥೆಗಳೂ ಈ ಕಾರ್ಯವನ್ನು ತಕ್ಕಮಟ್ಟಿಗೆ ನಿರ್ವಹಿಸುತ್ತಿವೆ.

**ಮಾರ್ಗದರ್ಶನ ಒಂದು ತಾಂತ್ರಿಕ ಕಾರ್ಯ :** ಔದ್ಯೋಗಿಕ ಮಾರ್ಗದರ್ಶನವನ್ನು ಶೈಕ್ಷಣಿಕ ಮಾರ್ಗದರ್ಶನದ ಅಂಗವಾಗಿಯೇ ನೀಡಲಿ, ಪ್ರತ್ಯೇಕವಾಗಿಯೇ ನೀಡಲಿ, ಅದನ್ನು ನೀಡತಕ್ಕವರು ಅಗತ್ಯವಾದ ತರಪೇತನ್ನೂ ನೈಪುಣ್ಯವನ್ನೂ ಹೊಂದಿರಬೇಕು. ಈಗಾಗಲೆ ಆ ಕಾರ್ಯದಲ್ಲಿ ಬಳಸಲು ರೂಪುಗೊಂಡಿರುವ ಶಾಸ್ತ್ರೀಯ ಉಪಕರಣಗಳ ಬಳಕೆ, ಅವು ದೊರಕಿಸುವ ವ್ಯಕ್ತಿಗೆ ಸಂಬಂಧಿಸಿದ ಆಧಾರಾಂಶಗಳ ವಿಶ್ಲೇಷಣೆ, ವಿವಿಧ ವೃತ್ತಿಗಳಿಗೆ ಅಗತ್ಯವಾಗುವ ಅರ್ಹತೆಗಳ ಪರಿಚಯ—ಇವೆಲ್ಲ ಅಂಶಗಳ ಬೆಳಕಿನಲ್ಲಿ ವ್ಯಕ್ತಿಗೆ ಸಲಹೆ ನೀಡುವ ಕೌಶಲ್ಯ—ಈ ಎಲ್ಲದರಲ್ಲೂ ಮಾರ್ಗದರ್ಶಕರು ಪಳಗಿರಬೇಕು ; ಮನೋವಿಜ್ಞಾನದ ಪರಿಚಯ, ಆಧುನಿಕ ಸಮಾಜ ಜೀವನದಲ್ಲಿ ಉದ್ಯೋಗಾವಕಾಶದಲ್ಲಾಗುತ್ತಿರುವ ಬದಲಾವಣೆಗಳು, ವೃತ್ತಿವಿಶ್ಲೇಷಣದಿಂದ ಬೇರೆ ಬೇರೆ ವೃತ್ತಿಗಳಿಗೆ ಅಗತ್ಯವೆಂದು ನಿರ್ಧರಿಸಲಾಗಿರುವ ಕೌಶಲ್ಯಾದಿ ಅರ್ಹತೆಗಳು ಇತ್ಯಾದಿ ವಿವರಗಳನ್ನೂ ಅರಿತಿರಬೇಕು. ಅವರು ತಮ್ಮ ಕರ್ತವ್ಯವನ್ನು ಸರಿಯಾಗಿ ನಿರ್ವಹಿಸಬೇಕಾದರೆ ಈ ಎಲ್ಲ ಪೂರ್ವಸಿದ್ಧತೆಯೂ ಅಗತ್ಯ. ಮಾರ್ಗದರ್ಶನ ಇಷ್ಟು ಸಂಕೀರ್ಣವೂ ತಾಂತ್ರಿಕವೂ ಆದ ಕ್ರಿಯೆಯಾದ್ದರಿಂದ ಈಚೆಗೆ ಅನೇಕ ದೇಶಗಳಲ್ಲಿ ಅಧ್ಯಾಪಕರ ವೃತ್ತಿಶಿಕ್ಷಣ ಸಂಸ್ಥೆಗಳು ಅದನ್ನೊಂದು ಅಧ್ಯಯನ ವಿಷಯವನ್ನಾಗಿ ಗೊತ್ತುಮಾಡಿಕೊಂಡಿವೆ.

**ಭಾರತದಲ್ಲಿ ಔದ್ಯೋಗಿಕ ಮಾರ್ಗದರ್ಶನ :** ಭಾರತದಲ್ಲಿ ಎರಡನೆಯ ಮಹಾಯುದ್ಧದ ಅನಂತರ ನಿಧಾನವಾಗಿ ಪ್ರಚಾರಕ್ಕೆ ಬಂದ ಔದ್ಯೋಗಿಕ ಮಾರ್ಗದರ್ಶನ ಕೆಲವು ರಾಜ್ಯಗಳ ಪ್ರೌಢಶಾಲೆಗಳಲ್ಲಿ ಆಚರಣೆಗೆ ಬರಲಾರಂಭಿಸಿತು. 1953ರಲ್ಲಿ ಮೊದಲಿಯಾರ್ ಶಿಕ್ಷಣ ಆಯೋಗ ಆ ಬಗ್ಗೆ ನಿರ್ದಿಷ್ಟ ಸಲಹೆಯನ್ನು ಮಂಡಿಸಿತು. ಆ ಸಲಹೆಯನ್ನನುಸರಿಸಿ 1954ರಲ್ಲಿ ಕೇಂದ್ರ ಶಿಕ್ಷಣ ಸಚಿವಾಲಯ ದೆಹಲಿಯಲ್ಲಿ ಶೈಕ್ಷಣಿಕ ಮತ್ತು ಔದ್ಯೋಗಿಕ ಮಾರ್ಗದರ್ಶನದ ಕಾರ್ಯಾಲಯವನ್ನು ಆರಂಭಿಸಿತು; ಪ್ರತಿ ರಾಜ್ಯದಲ್ಲೂ ಒಂದೊಂದು ಮಾರ್ಗದರ್ಶನದ ಕಾರ್ಯಾಲಯವನ್ನು ಆರಂಭಿಸಲು ನೆರವು ನೀಡಿತು. ಈಗಾಗಲೆ ಅಂಥ ಕಾರ್ಯಾಲಯಗಳು ಹದಿನೈದು ರಾಜ್ಯಗಳಲ್ಲಿ ಆರಂಭವಾಗಿವೆ. ಕೇಂದ್ರದಲ್ಲಿ ಮತ್ತು ರಾಜ್ಯಗಳಲ್ಲಿ ಆರಂಭವಾಗಿರುವ ಈ ಸಂಸ್ಥೆಗಳು ಸುಶಿಕ್ಷಿತ ಮಾರ್ಗದರ್ಶಕರ ಮತ್ತು ವೃತ್ತಿತಜ್ಞರ ಸಹಾಯದಿಂದ ಪ್ರೌಢಶಾಲೆಗಳ ಬಾಲಕಬಾಲಕಿಯರಿಗೆ ವೃತ್ತಿಶಿಕ್ಷಣದಲ್ಲಿ ಮಾರ್ಗದರ್ಶನ ನೀಡುವ ಕಾರ್ಯವನ್ನು ತಕ್ಕಮಟ್ಟಿಗೆ ನಿರ್ವಹಿಸುತ್ತಿವೆ. ಈಗಾಗಲೆ ಸುಮಾರು ಮೂರೂವರೆ ಸಾವಿರ ಪ್ರೌಢಶಾಲೆಗಳಲ್ಲಿ ಈ ಕಾರ್ಯ ಆರಂಭವಾಗಿದೆ. ಆದರೆ ಸದ್ಯಕ್ಕೆ ಅಲ್ಲಿ ಅವರಿಗೆ ವೃತ್ತಿಗಳಿಗೆ ಸಂಬಂಧಿಸಿದ ವಿವರಗಳನ್ನು ಮಾತ್ರ ಒದಗಿಸುತ್ತಿರುವರು. ಎಲ್ಲೋ ಕೆಲವು ಪ್ರೌಢಶಾಲೆಗಳಲ್ಲಿ ಮಾತ್ರ ಪೂರ್ಣಕಾಲದ ತರಪೇತು ಪಡೆದ ಮಾರ್ಗದರ್ಶಕರಿರುತ್ತಾರೆ. ಅಂಥ ಶಾಲೆಗಳಲ್ಲಿ ಮಾತ್ರ ಶಾಸ್ತ್ರೀಯ ರೀತಿಯಲ್ಲಿ ಪರೀಕ್ಷೆಗಳನ್ನು ನಡೆಸಿ, ವಿದ್ಯಾರ್ಥಿಗಳಿಗೆ ಸೂಕ್ತ ರೀತಿಯಲ್ಲಿ ಅವರವರು ಕೈಕೊಳಬಹುದಾದ ವೃತ್ತಿಶಿಕ್ಷಣದ ಮತ್ತು ಉದ್ಯೋಗಗಳ ಬಗ್ಗೆ ಸಲಹೆ ನೀಡಲಾಗುತ್ತಿದೆ.

ಸುಮಾರು ಹದಿನೈದು ವರ್ಷಗಳ ಹಿಂದೆ ಔದ್ಯೋಗಿಕ ಮಾರ್ಗದರ್ಶನದ ಬಗ್ಗೆ ನಿರ್ದಿಷ್ಟ ಯತ್ನ ಆರಂಭವಾಗಿದ್ದರೂ ಅದು ಅಷ್ಟು ಹುರುಪಿನಿಂದಾಗಲಿ ವ್ಯಾಪಕವಾಗಿಯಾಗಲಿ ನಡೆಯುತ್ತಿಲ್ಲ. ಇನ್ನೂ ಸುಮಾರು 20,000 ಪ್ರೌಢಶಾಲೆಗಳಿಗೆ ಆ ಸೌಲಭ್ಯವನ್ನು ದೊರಕಿಸಬೇಕಾಗಿದೆ. ಜೊತೆಗೆ, ಶಾಲೆಯ ಸಾಮಾನ್ಯ ಅಧ್ಯಾಪಕರು ಅಷ್ಟಿಷ್ಟು ತರಪೇತು ಪಡೆದು ಹಾಗೂ ಹೀಗೂ ಆ ಕಾರ್ಯವನ್ನು ಅನೇಕ ಶಾಲೆಗಳಲ್ಲಿ ನಡೆಸುತ್ತಿದ್ದಾರೆ. ಅಲ್ಲದೆ, ಆ ಕಾರ್ಯಕ್ಕೆ ಅಗತ್ಯವಾಗುವ ವಿವಿಧ ಪರೀಕ್ಷೋಪಕರಣಗಳೂ ಸಿದ್ಧವಾಗಿಲ್ಲ. ಇದರ ಫಲವಾಗಿ ಔದ್ಯೋಗಿಕ ಮಾರ್ಗದರ್ಶನ ತಕ್ಕಷ್ಟು ಪ್ರತಿಫಲ ನೀಡುತ್ತಿಲ್ಲವೆಂದೇ ಹೇಳಬೇಕಾಗುತ್ತದೆ.

ಪ್ರತಿ ಪ್ರೌಢಶಾಲೆಗೂ ಪೂರ್ಣಾವಧಿಯ ತರಪೇತು ಪಡೆದ ಒಬ್ಬೊಬ್ಬ ಮಾರ್ಗದರ್ಶಕನನ್ನು ನೇಮಿಸಿಕೊಂಡು ಅಲ್ಲಿನ ವಿದ್ಯಾರ್ಥಿಗಳಿಗೆ ಔದ್ಯೋಗಿಕ ಮಾರ್ಗದರ್ಶನದ ಸೇವಾಸೌಲಭ್ಯವನ್ನು ಒದಗಿಸಬೇಕೆಂಬುದನ್ನು ಅಂತಿಮ ಉದ್ದೇಶವನ್ನಾಗಿ ಇಟ್ಟುಕೊಂಡಿದ್ದರೂ ಅದಕ್ಕೆ ಅಗತ್ಯವಾದ ಆರ್ಥಿಕ ಬೆಂಬಲ ದೊರಕುತ್ತಿಲ್ಲ ; ಅಧಿಕ ಸಂಖ್ಯೆಯಲ್ಲಿ ಮಾರ್ಗದರ್ಶಕರಿಗೆ ತರಪೇತು ನೀಡಬಲ್ಲ ಸಂಸ್ಥೆಗಳೂ ಏರ್ಪಟ್ಟಿಲ್ಲ. ಆದ್ದರಿಂದ ಸದ್ಯಕ್ಕೆ ಆ ಯೋಜನೆಯನ್ನು ಮಾರ್ಪಡಿಸಿಕೊಂಡು ತಾತ್ಕಾಲಿಕ ವ್ಯವಸ್ಥೆಯೊಂದನ್ನು ಆಚರಣೆಗೆ ತರುವ ಯತ್ನ ಕೆಲವು ರಾಜ್ಯಗಳಲ್ಲಿ ಆರಂಭವಾಗಿದೆ. ಪ್ರತಿ ಹತ್ತು–ಹದಿನೈದು ಪ್ರೌಢಶಾಲೆಗಳಿಗೆ ಒಬ್ಬೊಬ್ಬರು ಮಾರ್ಗದರ್ಶಕನನ್ನು ನೇಮಿಸಿಕೊಂಡು ಸರದಿಯ ಪ್ರಕಾರ ಪ್ರತಿ ಶಾಲೆಯಲ್ಲೂ ಮಾರ್ಗದರ್ಶನ ನೀಡುವ ಕಾರ್ಯ ನಡೆಯುತ್ತಿದೆ. ಆಯಾ ರಾಜ್ಯದಲ್ಲಿ ಆರಂಭವಾಗಿರುವ ಮಾರ್ಗದರ್ಶನದ ಕಾರ್ಯಾಲಯ ಶಾಲೆಗಳಲ್ಲಿ ಕೆಲಸ ಮಾಡುತ್ತಿರುವ ಮಾರ್ಗದರ್ಶಕರಿಗೆ ಅಗತ್ಯವೆನಿಸುವ ತಾಂತ್ರಿಕ ಸಲಹೆ ಸಹಕಾರಗಳನ್ನು ಒದಗಿಸುತ್ತಿದೆ ; ವಿವಿಧ ವೃತ್ತಿಗಳ ಬಗ್ಗೆ ಪರಿಶೀಲನೆ ನಡೆಸಿ, ವೃತ್ತಿವಿಶ್ಲೇಷಣವನ್ನು ಕೈಕೊಂಡು ಆಯಾ ವೃತ್ತಿಗೆ ಅಗತ್ಯವೆನಿಸುವ ಕೌಶಲ್ಯ, ಸಾಮರ್ಥ್ಯ, ಮನೋಭಾವ, ಚಿತ್ತವೃತ್ತಿ ಇತ್ಯಾದಿಗಳನ್ನು ನಿರ್ಧರಿಸುತ್ತಿದೆ ; ಕಾರ್ಯಕರ್ತರಿಗೆ ಪ್ರಚಾರಪತ್ರ, ಕಿರುಹೊತ್ತಿಗೆ, ನಿಯತಕಾಲಿಕ ಪತ್ರಿಕೆ ಇತ್ಯಾದಿ ಪ್ರಕಟಣೆಗಳ ಮೂಲಕ ಆ ವಿವರಗಳನ್ನು ಒದಗಿಸುತ್ತಿದೆ. ರಾಜ್ಯದಲ್ಲಿ ದೊರಕತಕ್ಕ ಉದ್ಯೋಗಾವಕಾಶಗಳ ಬಗ್ಗೆಯೂ ವಿವರಗಳನ್ನು ಪ್ರಕಟಿಸುತ್ತಿದೆ. ಈಚೆಗೆ ಪ್ರೌಢಶಾಲೆಯ ಎಲ್ಲ ಅಧ್ಯಾಪಕರೂ ಶೈಕ್ಷಣಿಕ ಮತ್ತು ಔದ್ಯೋಗಿಕ ಮಾರ್ಗದರ್ಶನದಲ್ಲಿ ತಕ್ಕಮಟ್ಟಿನ ತರಪೇತು ಪಡೆಯುವ ಸೌಲಭ್ಯವನ್ನೂ ಕಲ್ಪಿಸಲಾಗುತ್ತಿದೆ. ರಾಷ್ಟ್ರೀಯ ಉದ್ಯೋಗ ಸೇವಾ ಶಾಖೆಯ (ನ್ಯಾಷನಲ್ ಎಂಪ್ಲಾಯ್ಮೆಂಟ್ ಸರ್ವಿಸ್) ತಜ್ಞರೂ ಆ ಕಾರ್ಯದಲ್ಲಿ ನೆರವು ನೀಡುತ್ತಿದ್ದಾರೆ. ಈಚೆಗೆ ವಿಶ್ವವಿದ್ಯಾನಿಲಯಗಳಲ್ಲಿ ದೀರ್ಘಾವಧಿಯ ತರಪೇತು ಕಾರ್ಯಕ್ರಮವನ್ನು ವ್ಯವಸ್ಥೆಗೊಳಿಸುವ ಯೋಜನೆಯೂ ಆರಂಭವಾಗಿದೆ. ಆದರೆ ಆ ಕಾರ್ಯಕ್ಕೆ ತಕ್ಕಷ್ಟು ಸಂಖ್ಯೆಯಲ್ಲಿ ತಜ್ಞರು ದೊರಕುತ್ತಿಲ್ಲವಾಗಿ ಯೋಜನೆ ಕುಂಟುತ್ತ ಸಾಗುತ್ತಿದೆ. ಸದ್ಯಕ್ಕೆ ರಾಜ್ಯದ ಮಾರ್ಗದರ್ಶನದ ಕಾರ್ಯಾಲಯಗಳೇ ಅಂದಿಗಂದಿಗೆ ಅಲ್ಪಾವಧಿಯ ತರಪೇತು ಕಾರ್ಯಕ್ರಮಗಳನ್ನು ವ್ಯವಸ್ಥೆಗೊಳಿಸುತ್ತಿವೆ. ರಾಷ್ಟ್ರೀಯ ಮಟ್ಟದಲ್ಲಿ ಕೇಂದ್ರ ಮಾರ್ಗದರ್ಶನ ಕಾರ್ಯಾಲಯವೂ ನ್ಯಾಷನಲ್ ಕೌನ್ಸಿಲ್ ಆಫ್ ಎಜುಕೇಷನಲ್ ರಿಸರ್ಚ್ ಅಂಡ್ ಟ್ರೇನಿಂಗ್ (ಎನ್.ಸಿ.ಇ.ಆರ್.ಟಿ.) ಸಂಸ್ಥೆಯೂ ಈ ಕ್ಷೇತ್ರಕ್ಕೆ ಸಂಬಂಧಿಸಿದ ಸಂಶೋಧನೆಗಳನ್ನು ನಡೆಸುವ ಮತ್ತು ಉಪಕರಣಗಳನ್ನು ಸಿದ್ಧಪಡಿಸುವ

ಕಾರ್ಯದಲ್ಲಿ ತೊಡಗಿವೆ. ಮಾರ್ಗದರ್ಶಕರಿಗೆ ಔದ್ಯೋಗಿಕ ಮಾರ್ಗದರ್ಶನದಲ್ಲಿ ಬಳಸುವ ಉಪಕರಣಗಳೂ ಆ ಕಾರ್ಯಕ್ಕೆ ಸಂಬಂಧಿಸಿದ ಪಾರಿಭಾಷಿಕ ಸಾಹಿತ್ಯವೂ ದೇಶೀಯ ಭಾಷೆಗಳಲ್ಲಿ ಇನ್ನು ಮೇಲೆ ಸೃಷ್ಟಿಯಾಗಿ ಪ್ರಕಟವಾಗಬೇಕು. ಸದ್ಯದಲ್ಲಿ ಮಾರ್ಗದರ್ಶಕರು ಬಳಸುತ್ತಿರುವ ಪರೀಕ್ಷಣ, ಪ್ರಶ್ನಾವಳಿ, ಆಸಕ್ತಿಸೂಚಿ, ಸಾಮರ್ಥ್ಯ ಪರೀಕ್ಷಣ ಮತ್ತು ಇತರ ಸಾಹಿತ್ಯ—ಇವೆಲ್ಲ ಇಂಗ್ಲಿಷಿನಲ್ಲಿ ಅನ್ಯದೇಶಗಳಲ್ಲಿ ಪ್ರಕಟವಾಗಿದ್ದು, ಭಾರತೀಯ ಸನ್ನಿವೇಶಗಳಿಗೆ ಅಷ್ಟಾಗಿ ಸೂಕ್ತವಾಗಿಲ್ಲ. ಅವನ್ನೆಲ್ಲ ನಮ್ಮ ನಾಡಿನ ಜನಜೀವನ, ಸಾಮಾಜಿಕ ಪರಿಸ್ಥಿತಿ, ಉದ್ಯೋಗಗಳ ಸ್ವರೂಪ, ಉದ್ಯೋಗಾವಕಾಶ ಇತ್ಯಾದಿಗಳಿಗೆ ಸರಿಹೊಂದುವಂತೆ ಮಾರ್ಪಡಿಸಿಕೊಳ್ಳುವ ಕಾರ್ಯವೂ ನಡೆಯಬೇಕು. ಇಲ್ಲಿ ಈಚೆಗೆ ಹೊಸ ಹೊಸ ಉದ್ಯೋಗಗಳು ಆರಂಭವಾಗುತ್ತಿವೆ; ಬೇರೆ ಬೇರೆ ಕ್ಷೇತ್ರಗಳಿಗೆ ಸಂಬಂಧಿಸಿದ ವಿವಿಧ ಉದ್ಯೋಗಗಳಲ್ಲಿ ಇರುವ ಅವಕಾಶ, ದೊರಕುವ ಸಂಬಳ ಭತ್ಯಾದಿಗಳು, ಒಂದೊಂದು ಉದ್ಯೋಗಕ್ಕೂ ಅಗತ್ಯವೆನಿಸುವ ಸಾಮಾನ್ಯ ವಿದ್ಯಾರ್ಹತೆ, ವಿಶಿಷ್ಟ ತರಪೇತು, ಅಗತ್ಯ ಕೌಶಲ್ಯ, ಬುದ್ಧಿಶಕ್ತಿಯ ಮಟ್ಟ, ಮನೋಭಾವದ ಸ್ವರೂಪ, ಆ ಉದ್ಯೋಗಕ್ಕೆ ಸಿದ್ಧತೆ ನೀಡಲು ವ್ಯವಸ್ಥೆಗೊಳಿಸಿರುವ ತರಪೇತು ಸಂಸ್ಥೆಗಳು, ಉದ್ಯೋಗವನ್ನು ದೊರಕಿಸಿಕೊಡಲು ನೆರವಾಗುತ್ತಿರುವ ಸಂಸ್ಥೆಗಳು ಇತ್ಯಾದಿ ವಿವರಗಳನ್ನೂ ವ್ಯವಸ್ಥಿತ ರೀತಿಯಲ್ಲಿ ಸಂಗ್ರಹಿಸಿ ಪ್ರಕಟಿಸಬೇಕು. ಆ ವಿಷಯವನ್ನು ಯುವಜನರಿಗೆ ಒದಗಿಸಲು ಉಪನ್ಯಾಸ, ಪ್ರದರ್ಶನ, ಪ್ರಸಾರ ಮುಂತಾದ ಕಾರ್ಯಕ್ರಮಗಳನ್ನು ಏರ್ಪಡಿಸಬೇಕು. ಸದ್ಯದಲ್ಲಿ ಅಲ್ಲಲ್ಲಿ ಏರ್ಪಟ್ಟಿರುವ ಉದ್ಯೋಗ ವಿನಿಮಯ ಕೇಂದ್ರಗಳೂ ಮಾರ್ಗದರ್ಶನ ಕಾರ್ಯಾಲಯಗಳೂ ರೇಡಿಯೋ ಪ್ರಸಾರ ಕೇಂದ್ರಗಳೂ ಅಧ್ಯಾಪಕರ ಕಾಲೇಜುಗಳೂ ಈ ಕಾರ್ಯವನ್ನು ಸ್ವಲ್ಪಮಟ್ಟಿಗೆ ನಿರ್ವಹಿಸುತ್ತಿವೆ. ಎಲ್ಲಕ್ಕೂ ಮಿಗಿಲಾಗಿ ಈಗಾಗಲೇ ಕೇಂದ್ರದಲ್ಲೂ ರಾಜ್ಯಗಳಲ್ಲೂ ಆ ಕಾರ್ಯಕ್ಕಾಗಿ ಆರಂಭವಾಗಿರುವ ವಿವಿಧ ಸಂಸ್ಥೆಗಳಲ್ಲೂ ಕಾರ್ಯಾಲಯಗಳಲ್ಲೂ ಸಮಾಯೋಜನೆಯುಂಟು ಮಾಡಬೇಕು.

ಪ್ರೌಢಶಾಲೆಗಳಲ್ಲಿ ಮಾರ್ಗದರ್ಶನ ನೀಡುವುದರ ಜೊತೆಗೆ ಆ ಸೇವಾಸೌಲಭ್ಯದ ಅಂಗವಾಗಿ ಭಾಗಶಃ ಕಾಲದ ಉದ್ಯೋಗಗಳನ್ನು ಕೊಡಿಸುವ ವ್ಯವಸ್ಥೆಯನ್ನೂ ಕೈಕೊಳ್ಳಬೇಕು. ಆ ಮೂಲಕ ವಿದ್ಯಾರ್ಥಿಗಳು ತಾವು ಯಾವ ಕೆಲಸಕ್ಕೆ ಸೂಕ್ತರೆಂಬುದನ್ನು ಪ್ರಾಯೋಗಿಕವಾಗಿ ಅರಿತುಕೊಳ್ಳಬಹುದಾದ ಅವಕಾಶವನ್ನು ದೊರಕಿಸಿದಂತಾಗುತ್ತದೆ. ವಿಶ್ವವಿದ್ಯಾನಿಲಯ, ಕಾಲೇಜು, ತಾಂತ್ರಿಕ ಮತ್ತು ವೃತ್ತಿಶಿಕ್ಷಣ ಸಂಸ್ಥೆಗಳು ಇತ್ಯಾದಿ ಉನ್ನತ ಶಿಕ್ಷಣ ಸಂಸ್ಥೆಗಳಿಗೆ ಹೋಗತಕ್ಕ ವಿದ್ಯಾರ್ಥಿಗಳಿಗೆ ಮಾರ್ಗದರ್ಶನ ಇನ್ನೂ ಹೆಚ್ಚಿನ ಅಗತ್ಯ. ಪ್ರತಿ ದೊಡ್ಡ ಶಿಕ್ಷಣ ಸಂಸ್ಥೆಗೂ ಒಬ್ಬೊಬ್ಬ ಮಾರ್ಗದರ್ಶನ ಪ್ರವೀಣನನ್ನು ನೇಮಿಸಿಕೊಳ್ಳುವ ಅಗತ್ಯವನ್ನು ಕೊಠಾರಿ ಶಿಕ್ಷಣ ಆಯೋಗ ಸೂಚಿಸಿದೆ. ಹೇಗೊ ಹಣವನ್ನು ಒದಗಿಸಿಕೊಂಡರೂ ಆ ಜಾಗಕ್ಕೆ ತಕ್ಕ ತಜ್ಞರು ಸಿಕ್ಕುವುದು ದುರ್ಲಭವಾಗುತ್ತಿದೆ. ಈ ಕೊರತೆಯನ್ನು ನಿವಾರಿಸಲು ತಕ್ಕಷ್ಟು ಸೌಲಭ್ಯವುಳ್ಳ ಯಾವುದಾದರೂ ವಿಶ್ವವಿದ್ಯಾನಿಲಯ ಪದವೀಮಟ್ಟದಲ್ಲಿ ಇದನ್ನೊಂದು ಐಚ್ಛಿಕ ವಿಷಯವನ್ನಾಗಿ ಗೊತ್ತುಮಾಡಬಹುದು. ಆ ಮೂಲಕ ಕೆಲವೇ ವರ್ಷಗಳಲ್ಲಿ ಆ ವಿಷಯವನ್ನು ಇತರ ವಿಶ್ವವಿದ್ಯಾನಿಲಯಗಳೂ ಆರಂಭಿಸಲು ಸಹಾಯವಾಗುತ್ತದೆ; ಜೊತೆಗೆ, ನಮ್ಮ ಪ್ರೌಢಶಾಲೆಗಳಿಗೂ ಉನ್ನತ ಶಿಕ್ಷಣ ಸಂಸ್ಥೆಗಳಿಗೂ ಮಾರ್ಗದರ್ಶನದಲ್ಲಿ ತರಪೇತು ಪಡೆದ ತಜ್ಞರೂ ದೊರಕುವಂತಾಗುತ್ತದೆ.

ಕೆಲವು ವಿಶ್ವವಿದ್ಯಾನಿಲಯಗಳಲ್ಲಿ ರಾಷ್ಟ್ರೀಯ ಉದ್ಯೋಗಾವಕಾಶ ಸೇವಾಶಾಖೆಯ ಉದ್ಯೋಗ, ಸಮಾಚಾರ ಮತ್ತು ಮಾರ್ಗದರ್ಶನ ಕಾರ್ಯಾಲಯಗಳೂ ವಿದ್ಯಾರ್ಥಿ ಸಲಹಾ ಮಂಡಲಿಗಳೂ ಸ್ವಲ್ಪಮಟ್ಟಿಗೆ ಔದ್ಯೋಗಿಕ ಮಾರ್ಗದರ್ಶನವನ್ನು ನಿರ್ವಹಿಸುತ್ತವೆ. ಅವು ಬೇರೆ ಬೇರೆ ರಾಜ್ಯಗಳಲ್ಲಿರುವ ಉದ್ಯೋಗಾವಕಾಶವನ್ನು ಸಂಗ್ರಹಿಸಿ, ಪ್ರಕಟಿಸಿ, ಸೂಕ್ತವಾದ ಅಭ್ಯರ್ಥಿಗಳ ಅರ್ಜಿಗಳನ್ನು ಸ್ವೀಕರಿಸಿ, ಸಂಬಂಧಿಸಿದವರಿಗೆ ಕಳಿಸಿ ಕೆಲಸ ದೊರಕಿಸಲು ಸಹಾಯ ಮಾಡುತ್ತಿವೆ. ಅಲ್ಲದೆ, ಆಗಾಗ ಬೇರೆ ಬೇರೆ ಉದ್ಯೋಗಗಳ ಬಗ್ಗೆ ಉಪನ್ಯಾಸಗಳನ್ನು ಏರ್ಪಡಿಸಿ, ಉದ್ಯೋಗಾರ್ಥಿಗಳಿಗೆ ವಿವರಗಳನ್ನೂ ಮಾರ್ಗದರ್ಶನವನ್ನೂ ಒದಗಿಸುತ್ತಿವೆ. ಬೇರೆ ಬೇರೆ ಉದ್ಯೋಗಗಳಿಗೆ ಬೇಕಾದ ತರಪೇತು, ಅವನ್ನು ಒದಗಿಸುವ ಸಂಸ್ಥೆಗಳು, ಅದಕ್ಕಾಗಿ ದೊರೆಯುವ ವಿದ್ಯಾರ್ಥಿ ವೇತನ, ಉಮೇದುವಾರಿ ಶಿಕ್ಷಣ ಇತ್ಯಾದಿಗಳ ಬಗ್ಗೆಯೂ ತಜ್ಞರಿಂದ ಭಾಷಣಗಳನ್ನು ಏರ್ಪಡಿಸುತ್ತಿವೆ. ಕೇಂದ್ರ ಸಚಿವಾಲಯ ಮೊದಲು, ಪರದೇಶಗಳಲ್ಲಿ ಶಿಕ್ಷಣಕ್ಕಾಗಿ ಇರುವ ಸೌಲಭ್ಯಗಳನ್ನು ವಿದ್ಯಾರ್ಥಿಗಳಿಗೆ ತಿಳಿಸಲು ಈ ವಿದ್ಯಾರ್ಥಿ ಸಲಹಾ ಸೇವಾ ಕಚೇರಿಗಳನ್ನು (ಸ್ಟೂಡೆಂಟ್ಸ್ ಅಡ್ವೈಸರಿ ಬ್ಯೂರೊ) ಆರಂಭಿಸಿತು. ಈಗ ಅವು ಭಾರತದಲ್ಲಿ ಸಾಮಾನ್ಯ ಮತ್ತು ವೃತ್ತಿ ಶಿಕ್ಷಣಗಳಲ್ಲಿ ಇರತಕ್ಕ ಸೌಲಭ್ಯಗಳನ್ನು ಕುರಿತ ವಿವರಗಳನ್ನೂ ಒದಗಿಸುತ್ತಿವೆ. ಮೇಲಿನ ಎರಡು ವಿಧವಾದ ಕಾರ್ಯಾಲಯಗಳೂ ಒಂದಕ್ಕೊಂದಕ್ಕೆ ಪೂರಕವಾಗಿ ಕೆಲಸ ಮಾಡುತ್ತಿವೆ. ಆದ್ದರಿಂದ ಅವೆರಡನ್ನೂ ಒಟ್ಟುಗೂಡಿಸಿ, ಶೈಕ್ಷಣಿಕ ಮತ್ತು ಔದ್ಯೋಗಿಕ ಮಾರ್ಗದರ್ಶನಗಳೆರಡನ್ನೂ ತಮ್ಮ ಕಾರ್ಯಕ್ರಮಗಳಲ್ಲಿ ಸೇರಿಸಿಕೊಳ್ಳುವ ಯತ್ನ ನಡೆಯುತ್ತಿದೆ.

ವ್ಯಕ್ತಿ ತಾನು ಯಶಸ್ಸನ್ನು ಸಾಧಿಸಬಲ್ಲ, ತನ್ನ ಮನಸ್ಸಿಗೆ ತೃಪ್ತಿಯಾಗಿ ಜೀವನದಲ್ಲಿ ನೆಮ್ಮದಿಯನ್ನು ದೊರಕಿಸುವಂಥ ಉದ್ಯೋಗವನ್ನು ಅವಲಂಬಿಸುವುದು ರಾಷ್ಟ್ರದ ಆರ್ಥಿಕ ಪ್ರಗತಿಗೆ ಅಗತ್ಯವೆನಿಸುತ್ತದೆ. ಹಾಗೆ ವ್ಯಕ್ತಿ ಸೂಕ್ತ ಉದ್ಯೋಗವನ್ನು ಆರಿಸಿಕೊಳ್ಳುವ ಕಾರ್ಯದಲ್ಲಿ ಔದ್ಯೋಗಿಕ ಮಾರ್ಗದರ್ಶನ ಒಳ್ಳೆಯ ನೆರವಾಗಿ ಪರಿಣಮಿಸಬಲ್ಲದು. ನೋಡಿ—ಉದ್ಯೋಗ ವಿನಿಮಯ ವ್ಯವಸ್ಥೆ (ಎಪ್.ಎಸ್.ಎ.)

**ಔಪಯೋಗಿಕ ಮನಶ್ಶಾಸ್ತ್ರ :** ಮಾನವನ ವರ್ತನೆಯನ್ನು ಕುರಿತ ವಾಸ್ತವಿಕ ಸಮಸ್ಯೆಗಳ ಪರಿಹಾರದಲ್ಲಿ ವೈಜ್ಞಾನಿಕ ಮನಶ್ಶಾಸ್ತ್ರದ ಕಾಣಿಕೆಗಳ ಮತ್ತು ವಿಧಾನಗಳ ಉಪಯೋಗದ ವಿವರಣೆ (ಅಪ್ಲೈಡ್ ಸೈಕಾಲಜಿ). ಅನ್ವಯ ಮನಶ್ಶಾಸ್ತ್ರವೆಂದೂ ಇದನ್ನು ಕರೆಯಲಾಗಿದೆ. ನಿರ್ದಿಷ್ಟ ಉಪಯುಕ್ತತೆಗಳನ್ನು ಗಮನದಲ್ಲಿಟ್ಟುಕೊಂಡು ಪ್ರಯೋಗಾಲಯದಲ್ಲಿ ನಡೆಸುವ ಪರೀಕ್ಷೆಗಳಿಂದ ಹಿಡಿದು, ತೊಂದರೆಗೆ ಈಡಾದ ವ್ಯಕ್ತಿಗಳಿಗೆ ನೀಡಲಾಗುವ ನೇರ ಸೇವೆಗಳ ವರೆಗೆ ವಿಭಿನ್ನ ರೀತಿಯಲ್ಲಿ ಇದು ವ್ಯಾಪಿಸಿದೆ.

ಮನಶ್ಶಾಸ್ತ್ರಕ್ಕೂ ಔಪಯೋಗಿಕ ಮನಶ್ಶಾಸ್ತ್ರಕ್ಕೂ ನಿಜವಾದ ವ್ಯತ್ಯಾಸವಿದು: ಮಾನವವರ್ತನೆಯ ವಾಸ್ತವಿಕ ಮತ್ತು ನಿರ್ದಿಷ್ಟ ಸಂದರ್ಭಗಳನ್ನು ಅಧ್ಯಯನ ಮಾಡುವುದು ಔಪಯೋಗಿಕ ಮನಶ್ಶಾಸ್ತ್ರಜ್ಞನ ಕರ್ತವ್ಯ. ಈ ಅಧ್ಯಯನದಿಂದ ಆತ ಸಾಮಾನ್ಯ ಸೂತ್ರಗಳನ್ನೇನೂ ರಚಿಸುವ ಹವ್ಯಾಸಕ್ಕೆ ಹೋಗಬೇಕೆಂದಿಲ್ಲ. ಅನೇಕ ವೇಳೆಗಳಲ್ಲಿ ಪ್ರಯೋಗಶಾಲೆಯ ಹೊರಗೇ ಆತನಿಂದ ಇಂಥ ವರ್ತನೆಯ ಅವಲೋಕನ, ಅಧ್ಯಯನ ನಡೆಯುತ್ತವೆ. ಆದರೆ ಪ್ರಾಯೋಗಿಕ ಮನಶ್ಶಾಸ್ತ್ರಜ್ಞ ಹೀಗಲ್ಲ. ಕೆಲವು ಸಂದರ್ಭಗಳನ್ನು ಗಮನಿಸಿ ಅವುಗಳಿಂದ ಸಾಮಾನ್ಯ ಸೂತ್ರಗಳನ್ನು ರಚಿಸುವುದು ಅವನ ಹವ್ಯಾಸ. ಆತನ ಚಟುವಟಿಕೆ ಪ್ರಯೋಗಶಾಲೆಗೇ ಸೀಮಿತ. ಉದಾಹರಣೆಗೆ ಹೇಳುವುದಾದರೆ, ಒಂದು ಸಂಸ್ಥೆಯ ಮತ್ತು ಅದರಲ್ಲಿನ ಹುದ್ದೆಯ ಆವಶ್ಯಕತೆಗಳನ್ನು ಪೂರೈಸುವ ಉದ್ದೇಶದಿಂದ ಅಭ್ಯರ್ಥಿಯ ಆಯ್ಕೆಯ ವೈಜ್ಞಾನಿಕ ವಿಧಾನಗಳನ್ನು ರೂಪಿಸಿ, ಆ ಸಂಸ್ಥೆಯ ಸಿಬ್ಬಂದಿಸಮಸ್ಯೆಗೆ ಪರಿಹಾರ ದೊರಕಿಸುವುದು ಔಪಯೋಗಿಕ ಮನಶ್ಶಾಸ್ತ್ರಜ್ಞನ ಕಾರ್ಯಭಾರ. ಈ ರೀತಿಯ ವಿಧಾನ ಅದರ ಎಲ್ಲ ವಿವರಗಳ ದೃಷ್ಟಿಯಿಂದ ಮತ್ತೊಂದು ಉದ್ಯಮಸಂಸ್ಥೆಗೆ ಸಮರ್ಪಕವಾಗಬಹುದು ಅಥವಾ ಆಗದಿರಬಹುದು. ಮತ್ತೊಂದು ಕಡೆ ಮನೋಮಾಪನ ತಜ್ಞ (ಸೈಕೊಮೆಟ್ರಿಷಿಯನ್) ಒಂದು ಕಸುಬಿನ ಮತ್ತು ಉದ್ಯಮಸಂಸ್ಥೆಯ ವೈಶಿಷ್ಟ್ಯವನ್ನು ಪರಿಗಣಿಸದೆ ಮೂಲ ಸಮಸ್ಯೆಯತ್ತ ತನ್ನ ಗಮನ ಹರಿಸುತ್ತಾನೆ. ತದ್ವಿರುದ್ಧವಾಗಿ ಚಿಕಿತ್ಸಾ ಮನಶ್ಶಾಸ್ತ್ರಜ್ಞ (ಕ್ಲಿನಿಕಲ್ ಸೈಕಾಲಜಿಸ್ಟ್) ಮನೋರೋಗಿಯ ತೊಂದರೆಗಳನ್ನು ಅರ್ಥಮಾಡಿಕೊಳ್ಳಲು ಮತ್ತು ಒಂದು ಚಿಕಿತ್ಸಾ ಕ್ರಮವನ್ನು ಕಾರ್ಯಗತಗೊಳಿಸಲು ತನ್ನಲ್ಲಿರುವ ಮನೋವೈಜ್ಞಾನಿಕ ತಿಳಿವನ್ನು ಉಪಯೋಗಿಸುತ್ತಾನೆ. ಒಬ್ಬ ರೋಗಿಯನ್ನು ಅರ್ಥಮಾಡಿಕೊಂಡಾಗ ದೊರಕಿದ ಅರಿವು ಒಂದು ಮನೋರೋಗ ಅಥವಾ ಅದರ ಚಿಕಿತ್ಸೆಗೆ ಸಂಬಂಧಪಟ್ಟ ಒಂದು ಸಿದ್ಧಾಂತವನ್ನೇ ರೂಪಿಸಲು ಸಹಕಾರಿಯಾಗಬಹುದು. ಆದರೆ ಇತರ ರೋಗಿಗಳಿಗೂ ಅದನ್ನು ಸಾಮಾನ್ಯೀಕರಿಸಲು ಅದು ನೆರವಾಗುವುದಿಲ್ಲ. ಇದೇ ರೀತಿಯಲ್ಲಿ ಒಬ್ಬ ಶಾಲಾಮನಶ್ಶಾಸ್ತ್ರಜ್ಞ (ಸ್ಕೂಲ್ ಸೈಕಾಲಜಿಸ್ಟ್) ಒಂದು ಶಾಲೆಯ ಶೈಕ್ಷಣಿಕ ಕಾರ್ಯಕ್ರಮಕ್ಕೆ ನೆರವಾಗಬಹುದು. ಆ ಕಾರ್ಯದಲ್ಲಿ ಆತ ತನಗೆ ಗೊತ್ತಿರುವ ಎಲ್ಲ ಮನೋವೈಜ್ಞಾನಿಕ ವಿಧಾನಗಳನ್ನೂ ತಿಳಿವನ್ನೂ ಉಪಯೋಗಿಸುತ್ತಾನೆ. ಆದರೆ ಎಲ್ಲ ಶಾಲೆಗಳಿಗೆ ಹಾಗೂ ವಿದ್ಯಾರ್ಥಿಗಳಿಗೆ ಸರಿಹೊಂದುವ ಸಾಮಾನ್ಯ ನಿರ್ಣಯಗಳನ್ನು ಸೂಚಿಸುವುದರಲ್ಲಿ ಮೂಲತಃ ಆತನ ಗಮನವಿರುವುದಿಲ್ಲ.

ಇದರಿಂದಾಗಿ ಒಬ್ಬ ಮನಶ್ಶಾಸ್ತ್ರಜ್ಞನಿಗೆ ದೊರಕಬೇಕಾದ ತರಬೇತಿ ವಿಶಾಲ ತಳಹದಿಯ ಮೇಲೆ ನಿಂತಿರಬೇಕಲ್ಲದೆ ಅದು ಮನಶ್ಶಾಸ್ತ್ರ ಸಿದ್ಧಾಂತ ಹಾಗೂ ವಿಧಾನಗಳು, ಅಂಕಿಅಂಶ ವಿಧಾನಗಳು ಮತ್ತು ಸಂಶೋಧನ ವಿಧಾನಗಳಿಗೆ ಸಂಬಂಧಪಟ್ಟಂತೆ ಸ್ಪಷ್ಟವಾದ ಜ್ಞಾನವನ್ನು ಒಳಗೊಂಡಿರಬೇಕೆಂಬುದು ವ್ಯಕ್ತವಾಗುತ್ತದೆ.

**ಬೆಳೆವಣಿಗೆ :** ಔಪಯೋಗಿಕ ಮನಶ್ಶಾಸ್ತ್ರ ಇಪ್ಪತ್ತನೆಯ ಶತಮಾನದ ಫಲ. ಮಾನವನ ಆರ್ಥಿಕ, ರಾಜಕೀಯ, ಸಾಮಾಜಿಕ ಮತ್ತು ಸಾಂಸ್ಕೃತಿಕ ಜೀವನದಲ್ಲಿ ಬೆಳೆಯುತ್ತಿರುವ ಜಟಿಲತೆಯಿಂದಾಗಿ ಮನಶ್ಶಾಸ್ತ್ರದ ಬೆಳವಣಿಗೆಯಲ್ಲೇ ಅಲ್ಲದೆ ಅನೇಕ ಮನಶ್ಶಾಸ್ತ್ರಜ್ಞರು ವಾಸ್ತವಿಕ ಸಮಸ್ಯೆಗಳ ಪರಿಹಾರಕಾರ್ಯದಲ್ಲೂ ತಮ್ಮ ಗಮನವನ್ನು ಹರಿಸತೊಡಗುವುದು ಅನಿವಾರ್ಯವಾಗಿದೆ. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ 1908ರಷ್ಟು ಹಿಂದೆಯೇ ಜಾಹೀರಾತು ಮನಶ್ಶಾಸ್ತ್ರದ ಮೇಲೆ ಒಂದು ಗ್ರಂಥ ಪ್ರಕಟವಾಯಿತು. 1915ರಲ್ಲಿ ಅಮೆರಿಕದ ಕಾರ್ನೆಗಿ ತಂತ್ರಜ್ಞಾನ ಸಂಸ್ಥೆಯಲ್ಲಿ (ಕಾರ್ನೆಗಿ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿ) ನೇಮಕಗೊಂಡ ಮನಶ್ಶಾಸ್ತ್ರದ ಮೊಟ್ಟಮೊದಲ ಪ್ರಾಧ್ಯಾಪಕ ಬಹುಶಃ ಡಬ್ಲ್ಯು. ಡಿ. ಸ್ಕಾಟ್. ಮನಶ್ಶಾಸ್ತ್ರದ

ಮೊಟ್ಟಮೊದಲನೆಯ ನಿಯತಕಾಲಿಕ ಪತ್ರಿಕೆ 1917ರಲ್ಲಿ ಪ್ರಕಟವಾಯಿತು. ಒಂದನೆಯ ಮಹಾಯುದ್ಧದ ಕಾಲದಲ್ಲಿ (1914-18), ಸೈನ್ಯದ ತುರ್ತು ಅವಶ್ಯಕತೆಗಳನ್ನು ಪೂರೈಸಲು, ವಾಸ್ತವ ಸಮಸ್ಯೆಗಳಿಗೆ ಪರಿಹಾರಗಳನ್ನು ಕಂಡುಹಿಡಿಯಲು ಮನಶ್ಶಾಸ್ತ್ರವನ್ನು ಅಧಿಕ ಪ್ರಮಾಣದಲ್ಲಿ ಉಪಯೋಗಿಸಲಾಯಿತೆಂದು ಹೇಳಬಹುದು. ಅಮೆರಿಕದ ವ್ಯಾಪಾರ ಮತ್ತು ಉದ್ಯಮಗಳಲ್ಲಿ ಮನಶ್ಶಾಸ್ತ್ರವನ್ನು ಬಳಸಲು ಕೈಗಾರಿಕಾಕರಣ ಮತ್ತು ನಗರೀಕರಣಗಳು (ಅರ್ಬನೈಸೇಷನ್) ಮುಖ್ಯವಾದ ಪ್ರಚೋದನೆಗಳಾದುವೆಂದು ಕಾಣುತ್ತದೆ. ಆದ್ದರಿಂದ ಇಪ್ಪತ್ತನೆಯ ಶತಮಾನದ ಮೊದಲ ಎರಡು ದಶಕಗಳಲ್ಲಿ ಮನಶ್ಶಾಸ್ತ್ರ ಸೈನಿಕವಿಜ್ಞಾನ, ವ್ಯಾಪಾರ, ಉದ್ಯಮ, ಶಿಕ್ಷಣ ಮತ್ತು ಮನೋರೋಗ ನಿದಾನ (ಸೈಕೋಪೆಥಾಲಜಿ) ಮೊದಲಾದ ಕ್ಷೇತ್ರಗಳಲ್ಲಿ ಮೊದಲು ಪ್ರವೇಶಿಸಿತು. ಮೊಟ್ಟಮೊದಲ ಮಾನಸಿಕ ಚಿಕಿತ್ಸಾಲಯ ಸ್ಥಾಪಿತವಾದದ್ದು ಈ ಕಾಲದಲ್ಲಿ. ಇಂದು ಅಮೆರಿಕದ ಮನೋವೈಜ್ಞಾನಿಕ ಸಂಘದಲ್ಲಿ ಅರ್ಧಕ್ಕಿಂತ ಹೆಚ್ಚು ಸಂಖ್ಯೆಯಲ್ಲಿ ಔದ್ಯೋಗಿಕ ಮನಶ್ಶಾಸ್ತ್ರಜ್ಞರೇ ಸದಸ್ಯರಾಗಿದ್ದಾರೆ. ಇದಲ್ಲದೆ ಇಪ್ಪತ್ತಕ್ಕಿಂತ ಹೆಚ್ಚು ಶಾಖೆಗಳಲ್ಲಿ ಎರಡು ಅಥವಾ ಮೂರು ಶಾಖೆಗಳು ಮಾತ್ರ ಈ ಕ್ಷೇತ್ರಗಳಿಗೆ ಸಂಬಂಧಪಟ್ಟಿಲ್ಲ. ಮನಶ್ಶಾಸ್ತ್ರ ಕ್ಷೇತ್ರದಲ್ಲಿ ಆರು ದಶಕಗಳಲ್ಲಿ ಆಗಿರುವ ಚೈತನ್ಯಪೂರ್ಣ ಬೆಳೆವಣಿಗೆಗೆ ಎರಡು ಮಹಾಯುದ್ಧಗಳು ಎಷ್ಟು ಕಾರಣವೋ ವಿಜ್ಞಾನ ಮತ್ತು ತಂತ್ರಜ್ಞಾನಗಳಲ್ಲಿ ಆಗಿರುವ ತೀವ್ರ ಪ್ರಗತಿಯೂ ಅಷ್ಟೇ ಕಾರಣ. ಆಧುನಾಕರಣ ಪ್ರಕ್ರಿಯೆ ಮತ್ತು ವಿಶ್ವದಾದ್ಯಂತ ಆಗುತ್ತಿರುವ ಸಾಮಾಜಿಕ ಮತ್ತು ಆರ್ಥಿಕ ಬದಲಾವಣೆಗಳೊಡನೆ ವಿಜ್ಞಾನ ಮತ್ತು ತಂತ್ರಜ್ಞಾನಗಳು ಸೇರಿಕೊಂಡು, ವಾಸ್ತವಿಕ ಸಮಸ್ಯೆಗಳಲ್ಲಿ ಮಾನವಾಂಶ ಎಷ್ಟೆಂಬುದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿವೆ.

**ಭಾರತದಲ್ಲಿ :** ಎರಡನೆಯ ಮಹಾಯುದ್ಧದ ಅವಧಿಯಲ್ಲಿ ಸೈನಿಕ ಆಯ್ಕೆ ಮಂಡಳಿ ಸ್ಥಾಪಿತವಾದುದರಿಂದ ಭಾರತದಲ್ಲಿ ಔಪಯೋಗಿಕ ಮನಶ್ಶಾಸ್ತ್ರದ ಇತಿಹಾಸ ಆರಂಭವಾಯಿತು. ರಕ್ಷಣಾ ಇಲಾಖೆಯ ಪ್ರಮುಖ ಮನಶ್ಶಾಸ್ತ್ರಜ್ಞನಾಗಿ ನೇಮಕಗೊಂಡ ಮೊಟ್ಟಮೊದಲ ಭಾರತೀಯ ಡಾ॥ ಸೋಹನ್ ಲಾಲ್. ಭಾರತೀಯ ವಿಶ್ವವಿದ್ಯಾನಿಲಯವೊಂದರಲ್ಲಿ ಔಪಯೋಗಿಕ ಮನಶ್ಶಾಸ್ತ್ರ ವಿಭಾಗ ಮೊಟ್ಟ ಮೊದಲಿಗೆ ಆರಂಭವಾದದ್ದು 1945ರಲ್ಲಿ, ಪಟ್ನಾ ವಿಶ್ವವಿದ್ಯಾನಿಲಯದಲ್ಲಿ. ಆದರೆ ಕಲ್ಕತ್ತ ವಿಶ್ವವಿದ್ಯಾಲಯದ ಮನಶ್ಶಾಸ್ತ್ರ ವಿಭಾಗದ ಅನ್ವಯ ಕ್ಷೇತ್ರಗಳಲ್ಲಿ ಈ ಬಗೆಯ ಕೆಲಸ ಇದಕ್ಕೂ ಮುಂಚೆಯೇ ಆರಂಭವಾಗಿತ್ತು.

**ಮುಖ್ಯ ವಿಭಾಗಗಳು :** ಔಪಯೋಗಿಕ ಮನಶ್ಶಾಸ್ತ್ರದ ಮುಖ್ಯವಾದ ಕ್ಷೇತ್ರಗಳಿವು : 1 ಕೈಗಾರಿಕೆ, 2 ವ್ಯವಹಾರ, 3 ಆರೋಗ್ಯ, 4 ಶಿಕ್ಷಣ, 5 ಸಮಾಜ ಕಲ್ಯಾಣ, 6 ಕೃಷಿ, 7 ರಕ್ಷಣೆ ಮತ್ತು 8 ನ್ಯಾಯ ಮತ್ತು ಸುವ್ಯವಸ್ಥೆ.

ಬುದ್ಧಿಶಕ್ತಿಯ ಮನೋವೈಜ್ಞಾನಿಕ ಪರೀಕ್ಷೆಗಳನ್ನು ಈ ಶತಮಾನದ ಆದಿಭಾಗದಲ್ಲಿ ರೂಪಿಸಿದ ತರುಣದಲ್ಲೇ ಕೈಗಾರಿಕೆ ಮತ್ತು ಸೈನ್ಯ ಇವೆರಡರಲ್ಲೂ ಸಿಬ್ಬಂದಿಯ ಆಯ್ಕೆಯ ವಿಧಾನಗಳ ಅಗತ್ಯ ಕಂಡುಬಂತು. ಆದ್ದರಿಂದ ಅನ್ವಯಮನಶ್ಶಾಸ್ತ್ರದ ಅತ್ಯಂತ ಆರಂಭಿಕ ಕಾರ್ಯಭಾರಗಳಲ್ಲಿ ಸಿಬ್ಬಂದಿಯ ಆಯ್ಕೆಯೂ ಒಂದು. ಉದ್ಯೋಗಿಗಳ ಅನುಸ್ಥಾಪನ (ಓರಿಯೆಂಟೇಷನ್) ಮತ್ತು ತರಬೇತಿ ಕಾರ್ಯವೂ ಅನಂತರ ಇದಕ್ಕೆ ಕೂಡಿಕೊಂಡಿತು. ಔಪಯೋಗಿಕ ಮನಶ್ಶಾಸ್ತ್ರದ ಪ್ರಮುಖ ಕ್ಷೇತ್ರಗಳಲ್ಲಿ ಕೈಗಾರಿಕಾಮನಶ್ಶಾಸ್ತ್ರವೂ ಒಂದು. ಬುದ್ಧಿಶಕ್ತಿ ಮತ್ತು ನಿರ್ದಿಷ್ಟ ಸಾಮರ್ಥ್ಯ ಮತ್ತು ಕೌಶಲಗಳಲ್ಲಿ ವೈಯಕ್ತಿಕ ವ್ಯತ್ಯಾಸಗಳ ಅಳತೆಯಿಂದ ಇದು ಪ್ರಾರಂಭವಾಯಿತಾದರೂ ಅಲ್ಪಕಾಲದಲ್ಲಿಯೇ ಮನಶ್ಶಾಸ್ತ್ರದ ಒಂದು ಪ್ರಮುಖ ಶಾಖೆಯಾಗಿ ಅಭಿವೃದ್ಧಿ ಹೊಂದಿತು. ಮಾನವ ಶಿಲ್ಪ, ಯಜಮಾನ–ನೌಕರ ಸಂಬಂಧ ಇವೂ ಇದರ ವಿಷಯವಾಯಿತು. ಉದ್ಯೋಗನಿರತರ ಸರಳ ವರ್ಗೀಕರಣ, ಮಂದಬೆಳಕು, ಗದ್ದಲ ಮುಂತಾದವುಗಳಿಂದ ಕಾರ್ಮಿಕನ ಕಾರ್ಯವೇಗದ ಮೇಲೆ ಆಗುವ ಪರಿಣಾಮದ ಪರಿಶೀಲನೆ ಮೊದಲಾದವು ಮಾತ್ರ ಕೈಗಾರಿಕಾ ಮನಶ್ಶಾಸ್ತ್ರದ ಆರಂಭಿಕ ಅಧ್ಯಯನದ ಕ್ಷೇತ್ರಗಳಾಗಿದ್ದುವು. ಆದರೆ ಇಂದು ಅದು ಹೆಚ್ಚು ತೊಡಕಿನ ವಿಧಾನಗಳನ್ನಳವಡಿಸಿಕೊಂಡು ಜಟಿಲ ಸಮಸ್ಯೆಗಳನ್ನೆಲ್ಲ ಬಿಡಿಸಲು ತೊಡಗುತ್ತಿದೆ. ಮಾನವ ಸಂಬಂಧಗಳು, ಪ್ರೇರಣೆಗಳು, ನೈತಿಕ ಸ್ಥೈರ್ಯ, ಉತ್ಪಾದಕತೆ ಮತ್ತು ಸಂಘಟನೆ ಇವು ಸೇರಿಕೊಂಡು ಕೈಗಾರಿಕಾ ಮನಶ್ಶಾಸ್ತ್ರಕ್ಕೆ ಹಲವು ಹೊಸ ಆಯಾಮಗಳನ್ನೆ ಸೃಷ್ಟಿಸಿವೆ. ಅನ್ವಯಮನಶ್ಶಾಸ್ತ್ರದ ಇತರ ಕ್ಷೇತ್ರಗಳಂತೆ ಕೈಗಾರಿಕಾ ಮನಶ್ಶಾಸ್ತ್ರವಾದರೂ ಕೈಗಾರಿಕಾ ಚೌಕಟ್ಟಿನಲ್ಲಿ ಉದ್ಭವಿಸುವ ಸಮಸ್ಯೆಗಳ ಪರಿಹಾರಕ್ಕೆ ಮನೋವಿಜ್ಞಾನದ ಪರಿಕಲ್ಪನೆಗಳನ್ನೂ ವಿಧಾನಗಳನ್ನೂ ಅನ್ವಯಿಸಲು ಯತ್ನಿಸುತ್ತದೆ.

ಭಾರತದಲ್ಲಿ ಮೊಟ್ಟಮೊದಲಿಗೆ ಎರಡನೆಯ ಮಹಾಯುದ್ಧದ ಕೊನೆಯ ಹೊತ್ತಿಗೆ ಜಮ್‌ಷೆಡ್‌ಪುರದಲ್ಲಿರುವ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಯಲ್ಲಿ ಕೈಗಾರಿಕಾ ಮನಶ್ಶಾಸ್ತ್ರಜ್ಞರ ನೇಮಕವಾಯಿತು. ಯುದ್ಧ ಕಳೆದ ಕೂಡಲೇ ಅಹಮದಾಬಾದ್ ಜವಳಿ ಕೈಗಾರಿಕೆಗಳ ಸಂಶೋಧನ ಸಂಘದಲ್ಲಿ ಮಾನವಸಂಬಂಧಗಳ ವಿಭಾಗವೊಂದನ್ನು ಸ್ಥಾಪಿಸಲಾಯಿತು. ಇತ್ತೀಚೆಗೆ ಫೋರ್ಡ್ ಪ್ರತಿಷ್ಠಾನದ ನೆರವಿನಿಂದ ಕಲ್ಕತ್ತ ಮತ್ತು ಅಹಮದಾಬಾದ್‌ಗಳಲ್ಲಿ ಒಂದೊಂದು ಕೈಗಾರಿಕಾ ವ್ಯವಸ್ಥಾಪನ ಶಿಕ್ಷಣಸಂಸ್ಥೆಗಳು ಸ್ಥಾಪಿತವಾದುವು. ಇಲ್ಲಿ ಕೈಗಾರಿಕಾ ಮನಶ್ಶಾಸ್ತ್ರಜ್ಞರು ವ್ಯವಸ್ಥಾಪಕ ಸಿಬ್ಬಂದಿಗೆ ತರಬೇತಿ ನೀಡುತ್ತಾರೆ. ಕೆಲವು ಖಾಸಗಿ ಉದ್ಯಮಸಂಸ್ಥೆಗಳಲ್ಲೂ ಕೈಗಾರಿಕಾ ಮನಶ್ಶಾಸ್ತ್ರಜ್ಞರು ಕಾರ್ಯನಿರತರಾಗಿದ್ದಾರೆ.

ಅನುಭೋಗಿಗಳ ಸಂಪರ್ಕ, ಅವರ ಮುನ್ನೊಲವುಗಳು (ಪ್ರಿಫರೆನ್ಸಸ್), ಜಾಹೀರಾತಿನ ಅಂಶಗಳು, ಹೊಸ ಉತ್ಪನ್ನಗಳ ಜನಪ್ರಿಯಕರಣ ಮತ್ತು ಮಾರಾಟ— ಮುಂತಾದವನ್ನು ಕುರಿತು ಅಧ್ಯಯನ ಮಾಡುವುದು ವ್ಯಾವಹಾರಿಕ ಮನಶ್ಶಾಸ್ತ್ರದ ಕ್ಷೇತ್ರ.

ಶಾಲೆ, ಕಾರ್ಖಾನೆ, ಕಚೇರಿ ಮತ್ತು ಸಂಸಾರಗಳಲ್ಲಿ ವ್ಯಕ್ತಿಗಳ ಹೊಂದಿಕೆಯ ಸಮಸ್ಯೆಗಳನ್ನು ಪರಿಹರಿಸಲು ಮನಶ್ಶಾಸ್ತ್ರದ ಇತಿಹಾಸದ ಆದಿಯಲ್ಲೇ ಮನಶ್ಶಾಸ್ತ್ರಜ್ಞರಿಗೆ ಬೇಡಿಕೆ ಬಂದಿತ್ತು. ಮಕ್ಕಳ, ಕಿಶೋರರ (ಅಡೊಲೆಸೆಂಟ್ಸ್) ಮತ್ತು ವಯಸ್ಕರ ಮಾನಸಿಕ ಆರೋಗ್ಯದ ಸಮಸ್ಯೆಗಳು ಅನೇಕ ಮನಶ್ಶಾಸ್ತ್ರಜ್ಞರನ್ನು ಆಕರ್ಷಿಸಿದುವು. ಅನ್ವಯಮನಶ್ಶಾಸ್ತ್ರದ ಇನ್ನೊಂದು ಮುಖ್ಯ ಕ್ಷೇತ್ರವಾಗಿ ಚಿಕಿತ್ಸಾಮನಶ್ಶಾಸ್ತ್ರ (ಕ್ಲಿನಿಕಲ್ ಸೈಕಾಲಜಿ) ಅಭಿವೃದ್ಧಿ ಹೊಂದಿತು. ಮತ್ತೆ ಇಲ್ಲೂ ಯುದ್ಧ ಪರಿಸ್ಥಿತಿಯ ತುರ್ತು ಅವಶ್ಯಕತೆಗಳ ಕಾರಣದಿಂದಾಗಿ ಶೀಘ್ರ ಬೆಳೆವಣಿಗೆಯಾಯಿತು. ಮನೋರೋಗ ನಿದಾನ ಮತ್ತು ಚಿಕಿತ್ಸೆಗಳೇ ಚಿಕಿತ್ಸಾಮನಶ್ಶಾಸ್ತ್ರಜ್ಞನ ಪ್ರಮುಖ ಕರ್ತವ್ಯ.

ಸಲಹಾ (ಕೌನ್ಸೆಲಿಂಗ್) ಮನಶ್ಶಾಸ್ತ್ರ ಒಂದು ಕಡೆಯಲ್ಲಿ ಚಿಕಿತ್ಸಾಮನಶ್ಶಾಸ್ತ್ರದಿಂದಲೂ ಮತ್ತೊಂದು ಕಡೆಯಲ್ಲಿ ಪರೀಕ್ಷಾವಿಧಾನಗಳಿಂದಲೂ ಪ್ರಭಾವಿತವಾಗಿ, ಕುಟುಂಬ, ಸಮಾಜ, ಶಾಲಾಕಾಲೇಜುಗಳು ಮತ್ತು ಕೆಲಸದ ಸನ್ನಿವೇಶದಲ್ಲಿ ಕಂಡುಬರುವ ತಪ್ಪು ಹೊಂದಾವಣೆಯ (ಮಾಲ್–ಅಡ್ಜಸ್ಟ್‌ಮೆಂಟ್) ಸಮಸ್ಯೆಗಳ ವಿಶೇಷ ಕ್ಷೇತ್ರವನ್ನೇ ಒಳಗೊಂಡಿದೆ. ಸಹಜ ಪ್ರವೃತ್ತಿಗಳ (ಆಪ್ಟಿಟ್ಯೂಡ್ಸ್) ಪರೀಕ್ಷೆಗಳ ಆಧಾರದ ಮೇಲೆ ಮೊದಮೊದಲು ರೂಪಿತವಾದ ಮಾರ್ಗದರ್ಶನ ಕಾರ್ಯಕರ್ತರ ಅನುಸ್ಥಾಪನ (ಓರಿಯೆಂಟೇಷನ್) ಪದ್ಧತಿ ಬಹಳ ಮಟ್ಟಿಗೆ ಬದಲಾವಣೆಗೊಂಡು ಈಗ ಅದು ಸಲಹೆಯ ರೂಪು ತಳೆದಿದೆ. ಈ ರೀತಿ ಈಗ ಉದ್ಯೋಗ, ವಿವಾಹ ಮುಂತಾದವನ್ನು ಕುರಿತ ಸಲಹೆಗಳನ್ನು ನೀಡುವ ಪರಿಪಾಟಿಯಿದೆ. ಸಲಹಾನ್ವೇಷಿ (ಕೌನ್ಸೆಲೀ) ತನ್ನ ಸಮಸ್ಯೆಗಳಿಗೆ ಪರಿಹಾರ ದೊರಕಿಸಿಕೊಳ್ಳಲು ನುರಿತ ಸಲಹೆಗಾರ (ಕೌನ್ಸೆಲರ್) ನೆರವಾಗುತ್ತಾನೆ.

ಮಾನಸಿಕ ಆರೋಗ್ಯವೇ ಅಲ್ಲದೆ, ಸಾರ್ವಜನಿಕ ಆರೋಗ್ಯ ಕ್ಷೇತ್ರದಲ್ಲೂ ಮನಶ್ಶಾಸ್ತ್ರಜ್ಞರು ಆಸ್ಪತ್ರೆಗಳ ಆಡಳಿತ, ವೈದ್ಯಕೀಯ ಸೇವೆಗಳು, ಸಿಬ್ಬಂದಿಯ ಆಯ್ಕೆ, ಮಾನವ ಸಂಬಂಧಗಳು, ಮನೋಭಾವಗಳು ಮುಂತಾದ ಸಮಸ್ಯೆಗಳ ಅಧ್ಯಯನದಲ್ಲಿ ತೊಡಗಿದ್ದಾರೆ. ಉದಾಹರಣೆಗೆ ಹೇಳುವುದಾದರೆ ನಮ್ಮ ದೇಶದಲ್ಲಿ ಕುಟುಂಬ ಯೋಜನೆಗೆ ವಿರೋಧದ ಕಾರಣಗಳನ್ನು ಅರ್ಥಮಾಡಿಕೊಳ್ಳಲು ಈ ಕಾರ್ಯಕ್ರಮದಲ್ಲಿ ಮನೋವಿಜ್ಞಾನಿಗಳ ಸಹಾಯವನ್ನು ಕೋರಲಾಗಿದೆ.

ಮನಶ್ಶಾಸ್ತ್ರವನ್ನು ಬಹಳ ಹಿಂದೆಯೇ ಬಳಸಿಕೊಂಡ ಕ್ಷೇತ್ರಗಳಲ್ಲಿ ಶಿಕ್ಷಣವೂ ಒಂದು. ಶಿಕ್ಷಣದ ಒಂದು ತುರ್ತು ಆವಶ್ಯಕತೆಯಿಂದ—ಎಂದರೆ ಮಾನಸಿಕವಾಗಿ ಹಿಂದುಳಿದವರ ಶಿಕ್ಷಣದ ಅಗತ್ಯದಿಂದ—ಇದು ಕುಡಿಯೊಡೆಯಿತು. ಬುದ್ಧಿಶಕ್ತಿಯ ಪ್ರಥಮ ವೈಯಕ್ತಿಕ ಮಾಪನವಿಧಾನವನ್ನು ರೂಪಿಸಿದವನು ಫ್ರೆಂಚ್ ಮನಶ್ಶಾಸ್ತ್ರಜ್ಞ ಆಲ್‌ಫ್ರೆಡ್ ಬೀನೇ (1857–1911) ಎಂಬುದು ಈಗಾಗಲೇ ಪ್ರಸಿದ್ಧವಾಗಿದೆ. ಮಾನಸಿಕವಾಗಿ ಹಿಂದುಳಿದ ಮಕ್ಕಳ ಶಿಕ್ಷಣಸಮಸ್ಯೆಯನ್ನು ಆತ ಎದುರಿಸಬೇಕಾಗಿತ್ತು. ಕಲಿಕೆಯ ವರ್ಗಾವಣೆಯನ್ನು (ಟ್ರಾನ್ಸ್‌ಫರ್ ಆಫ್ ಟ್ರೇನಿಂಗ್) ಕುರಿತು ಕೊಲಂಬಿಯ ವಿಶ್ವವಿದ್ಯಾನಿಲಯದಲ್ಲಿ ಆರ್. ಎಲ್. ಥಾರ್ನ್‌ಡೈಕ್ ಮಾಡಿದ ಸಂಶೋಧನೆಯಿಂದ ಶಿಕ್ಷಣದ ಮೇಲೆ ತತ್‌ಕ್ಷಣದ ಪರಿಣಾಮವುಂಟಾಯಿತು. ಇತ್ತೀಚೆಗೆ ಸ್ಕಿನ್ನರನ ಸಂಶೋಧನೆಗಳಿಂದ ಕಾರ್ಯಕ್ರಮಬದ್ಧ ಕಲಿಕೆಯ (ಪ್ರೋಗ್ರಾಮ್ಡ್ ಲರ್ನಿಂಗ್) ಬೆಳೆವಣಿಗೆಯಾಗಿದೆ.

ಬುದ್ಧಿಶಕ್ತಿ, ಸಹಜ ಪ್ರವೃತ್ತಿ, ಸಾಧನೆ ಮತ್ತು ಅಭಿರುಚಿಗಳಲ್ಲಿ ವೈಯಕ್ತಿಕ ವ್ಯತ್ಯಾಸಗಳು, ಶಾಲಾ ವಿದ್ಯಾರ್ಥಿಗಳ ವ್ಯಕ್ತಿತ್ವ, ಕಲಿಕೆಯ ಮೇಲೆ ಇವುಗಳ ಪರಿಣಾಮ--ಇವನ್ನೆಲ್ಲ ಅಳೆಯುವುದು ಶಿಕ್ಷಣ ಮನಶ್ಶಾಸ್ತ್ರದ ಕೆಲಸ. ಪಠ್ಯ ವಿಷಯಗಳ ಕಲಿಕೆ, ಶೀಲರಚನೆ, ಸೂಕ್ತಮನೋಭಾವಗಳ ಮತ್ತು ಮೌಲ್ಯಗಳ ಸಂವರ್ಧನೆ—ಇವನ್ನು ಕುರಿತ ಸಮಸ್ಯೆಗಳು ಸಾಮಾನ್ಯವಾಗಿ ಶಿಕ್ಷಣಮನಶ್ಶಾಸ್ತ್ರಜ್ಞರ ಹವ್ಯಾಸ. ಇದರಿಂದಾಗಿ ಅಮೆರಿಕದ ಮನಶ್ಶಾಸ್ತ್ರ ಸಂಘದಲ್ಲಿ ಒಂದು ವಿಶೇಷ ವಿಭಾಗದ ಆರಂಭವಾಗಿದೆ. ಶಾಲಾಮನಶ್ಶಾಸ್ತ್ರಜ್ಞನೊಬ್ಬ ಶಿಕ್ಷಣಜ್ಞನೇ ಆಗ್ತಾನೆ.

ಮಕ್ಕಳ ಹೊಂದಾವಣೆಯ ಸಮಸ್ಯೆಗಳಲ್ಲಿ ಆತನ ಆಸಕ್ತಿ. ಇವನ್ನು ಅರಿಯಬೇಕಾದರೆ ಮಗುವಿನ ಸಾಮಾಜಿಕ ಒತ್ತಡಗಳನ್ನೂ ಅದು ನಿರ್ವಹಿಸಬೇಕಾದ ಕರ್ತವ್ಯಗಳನ್ನೂ ತಿಳಿದುಕೊಳ್ಳುವುದೇ ಅಲ್ಲದೆ, ಅದರ ಬೆಳೆವಣಿಗೆಗೆ ಸಂಬಂಧಿಸಿದ ಒತ್ತಡ ಮತ್ತು ತಿಕ್ಕಾಟಗಳನ್ನೂ ಅರ್ಥಮಾಡಿಕೊಳ್ಳುವುದು ಅತ್ಯಾವಶ್ಯಕ. ಉದ್ಯಮಕ್ಷೇತ್ರವನ್ನು ಪ್ರವೇಶಿಸಿರುವ ಸಾಮಾಜಿಕ ವಿಜ್ಞಾನ ಈ ಕ್ಷೇತ್ರದಲ್ಲೂ ಕಾಲಿಟ್ಟಿದೆ. ಆದ್ದರಿಂದ ಶಿಕ್ಷಣಮನಶ್ಶಾಸ್ತ್ರಜ್ಞನಾದವನು ಶಾಲಾ ಆಡಳಿತ ಮತ್ತು ಸಂಘಟನೆ, ಬೋಧಕರ ಪ್ರಭಾವ, ಬೋಧನೆಯ ವಿವಿಧ ವಿಧಾನಗಳ ಪರಿಣಾಮಕತೆ ಮತ್ತು ಬೋಧಕರ ತರಬೇತಿಗಳಿಗೆ ಸಂಬಂಧಿಸಿದ ಸಮಸ್ಯೆಯನ್ನು ಅಧ್ಯಯನ ಮಾಡಬೇಕಾಗುತ್ತದೆ.

ಪಠ್ಯವಿಷಯಗಳ ಆಯ್ಕೆ ಮತ್ತು ಉದ್ಯೋಗದ ಆಯ್ಕೆಗಳ ವಿಚಾರವಾಗಿ ಶಾಲಾ ಬಾಲಕಬಾಲಕಿಯರಿಗೆ ಮಾರ್ಗದರ್ಶನ ನೀಡುವ ಕಾರ್ಯದಲ್ಲಿ ತೊಡಗಿರುವ ಸಂಸ್ಥೆ (ಬ್ಯೂರೊ) ಭಾರತದ ಪ್ರತಿಯೊಂದು ರಾಜ್ಯದಲ್ಲೂ ಇದೆ. ಶಿಕ್ಷಕರ ಶಿಕ್ಷಣ ತರಗತಿಗಳಲ್ಲಿ ಶಿಕ್ಷಣಮನಶ್ಶಾಸ್ತ್ರವೂ ಒಂದು ಪಠ್ಯವಿಷಯ. ಶೈಕ್ಷಣಿಕ ಸಂಶೋಧನೆ ಮತ್ತು ತರಬೇತಿಯ ರಾಷ್ಟ್ರೀಯ ಸಂಸ್ಥೆಯಲ್ಲಿ ಈ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಒಂದು ಪೂರ್ಣ ವಿಭಾಗವನ್ನೇ ತೆರೆಯಲಾಗಿದೆ.

ಸಮಾಜಕಲ್ಯಾಣಕ್ಷೇತ್ರವೂ ಮನಶ್ಶಾಸ್ತ್ರಜ್ಞನಿಗೆ ಹೊರಗಾದುದಲ್ಲ. ಮಾನವನ ಸಂಕಟವನ್ನು ಪರಿಹರಿಸಲು ಸಹಕಾರಿಯಾಗಿರುವ ಅನೇಕ ಸಾಮಾಜಿಕ ಸಂಸ್ಥೆಗಳೊಂದಿಗೆ ಮನಶ್ಶಾಸ್ತ್ರಜ್ಞರೂ ಕಾರ್ಯಪ್ರವೃತ್ತರಾಗಿದ್ದಾರೆ. ಕುಂಟ ಹೆಳವ ಮಕ್ಕಳು, ಕುರುಡರು, ಕಿವುಡರು ಮುಂತಾದ ನತದೃಷ್ಟ ಜೀವಿಗಳಿಗೆ ನೆರವೀಯುವ ಅನೇಕ ಸಂಸ್ಥೆಗಳಿವೆ. ಸಂವೇಗಾತ್ಮಕ (ಇಮೋಷನಲ್) ಹೊಂದಾವಣೆ, ಕುಶಲತೆಯ ಕಲಿಕೆ—ಮುಂತಾದವಕ್ಕೆ ಸಂಬಂಧಿಸಿದ ಸಮಸ್ಯೆಗಳ ಪರಿಹಾರಕ್ಕಾಗಿ ಈ ಸಂಸ್ಥೆಗಳಲ್ಲಿ ಮನಶ್ಶಾಸ್ತ್ರಜ್ಞರನ್ನು ನೇಮಿಸಲಾಗಿರುತ್ತದೆ. ಸಮಾಜಕಲ್ಯಾಣಕ್ಷೇತ್ರದಲ್ಲಿ ಮುಪ್ಪಿನ ಸಮಸ್ಯೆಯ ಕಡೆಗೂ ಮನಶ್ಶಾಸ್ತ್ರಜ್ಞನ ಗಮನ ಹರಿದಿದೆ. ಇದೂ ಸಮಾಜಕಲ್ಯಾಣದ ಒಂದು ವಿಷಯ. ವಿವಾಹ ಮತ್ತು ಸಂಸಾರ ಸಮಸ್ಯೆಗಳ ಬಗ್ಗೆ ಜನಕ್ಕೆ ಸಲಹೆ ನೀಡುವ ಸಂಸ್ಥೆಗಳೂ ಉಂಟು.

ಭಾರತದ ಕೃಷಿಸಂಶೋಧನ ಸಂಸ್ಥೆಗಳಲ್ಲಿ ಒಬ್ಬ ಮನಶ್ಶಾಸ್ತ್ರಜ್ಞ ಕಾರ್ಯನಿರತನಾಗಿದ್ದಾನೆಂಬುದು ಗಮನಾರ್ಹ ವಿಷಯ. ಕೃಷಿಕ್ಷೇತ್ರದಲ್ಲಿ ನವೀನ ವಿಧಾನಗಳ ಅನ್ವಯದ ಬಗ್ಗೆ ರೈತರ ಮನೋಭಾವ ಮತ್ತು ಅವರ ವಿರೋಧಗಳನ್ನು ಅರ್ಥಮಾಡಿಕೊಳ್ಳಲು ಮನಶ್ಶಾಸ್ತ್ರದ ಜ್ಞಾನವನ್ನು ಬಳಸಿಕೊಳ್ಳುವುದನ್ನು ಭಾರತದಲ್ಲಿ ಒಪ್ಪಿಕೊಳ್ಳುತ್ತಿರುವುದು ಇದೇ ಮೊದಲು. ಕೃಷಿಪದ್ಧತಿಗಳನ್ನು ಸುಧಾರಿಸಲು ಇಂಥ ಅರಿವಿನಿಂದ ಮಾತ್ರ ಸಾಧ್ಯ.

ಭಾರತದಲ್ಲಿ ರಕ್ಷಣಾ ವಿಭಾಗ ಅತ್ಯಧಿಕ ಸಂಖ್ಯೆಯಲ್ಲಿ ಮನಶ್ಶಾಸ್ತ್ರಜ್ಞರನ್ನು ನೇಮಿಸಿಕೊಂಡಿದೆ. ದೆಹಲಿಯ ರಕ್ಷಣಾ ವಿಜ್ಞಾನ ಸಂಸ್ಥೆಯಲ್ಲಿ ಸೈನಿಕ ಸಮಸ್ಯೆಗಳನ್ನು ಕುರಿತು ಅಧ್ಯಯನ ನಡೆಸುತ್ತಿರುವ ಅನೇಕ ಮನಶ್ಶಾಸ್ತ್ರಜ್ಞರಿರುವ ಮನೋವೈಜ್ಞಾನಿಕ ಸಂಶೋಧನ ನಿರ್ದೇಶನ ಮಂದಿರವೇ ಇದೆ. ಇದಲ್ಲದೆ ಭಾರತದ ಅನೇಕ ಕೇಂದ್ರಗಳಲ್ಲಿ ಕೆಲಸ ಮಾಡುತ್ತಿರುವ ಆಯ್ಕೆ ಮಂಡಳಿಗಳಲ್ಲಿ ಮನಶ್ಶಾಸ್ತ್ರಜ್ಞರಿದ್ದಾರೆ. ಸೈನ್ಯದ ಹುದ್ದೆಗಳಲ್ಲಿ ಸೂಕ್ತ ಆಯ್ಕೆ ನಡೆಸುವಲ್ಲಿ ನೆರವಾಗುವುದು ಅವರ ಕರ್ತವ್ಯ. ವಿಮಾನಚಾಲಕರ ತರಬೇತಿ ಮತ್ತು ಸಮಸ್ಯೆಗಳಿಗೂ ಹಾರಾಟ ಸುರಕ್ಷೆಗೂ ಸಂಬಂಧಿಸಿದ ಆಕಾಶಯಾನ ಮನಶ್ಶಾಸ್ತ್ರವನ್ನು ಕುರಿತು ಕಾರ್ಯಪ್ರವೃತ್ತರಾದ ಮನಶ್ಶಾಸ್ತ್ರಜ್ಞರು ವಿಮಾನಪಡೆಯ ಪ್ರಧಾನ ಕಚೇರಿಯಲ್ಲಿದ್ದಾರೆ. ನೌಕಾಪಡೆಯಲ್ಲೂ ಮನಶ್ಶಾಸ್ತ್ರಜ್ಞರು ಕೆಲಸ ಮಾಡುತ್ತಿದ್ದಾರೆ. ಸಿಬ್ಬಂದಿಯ ಆಯ್ಕೆ ಮತ್ತು ತರಬೇತಿಗಳು ಮಾತ್ರವೇ ಅಲ್ಲದೆ ಅವರ ಕೌಶಲವನ್ನು ಉತ್ತಮಗೊಳಿಸುವುದೂ ಇವರ ಕಾರ್ಯಭಾರ. ನೈತಿಕ ಸ್ಥೈರ್ಯ, ಮಾನಸಿಕ ಯುದ್ಧ ಮುಂತಾದವುಗಳನ್ನೂ ಒತ್ತಡದ ಸಂದರ್ಭದಲ್ಲಿ ಯೋಧರ ಪ್ರತಿಕ್ರಿಯೆಗಳನ್ನೂ ಕುರಿತ ಸಮಸ್ಯೆಗಳ ಅಧ್ಯಯನವೇ ರಕ್ಷಣಾಕ್ಷೇತ್ರಗಳಲ್ಲಿ ಮನಶ್ಶಾಸ್ತ್ರಜ್ಞರ ಕಾರ್ಯಭಾರ. ಸೂಪರ್‌ಸಾನಿಕ್ ವಿಮಾನದ ನಿರ್ಮಾಣ ಮತ್ತು ಹಿಮಾಲಯದ ಎತ್ತರದ ಗಡಿಯಲ್ಲಿ ರಾಷ್ಟ್ರರಕ್ಷಣೆಯ ಅಗತ್ಯಗಳ ಫಲವಾಗಿ ಈ ಉನ್ನತ ಮಟ್ಟದಲ್ಲಿ ಮನುಷ್ಯರ ಪ್ರತಿಕ್ರಿಯೆಗಳೇನೆಂಬುದನ್ನು ಅಧ್ಯಯನ ಮಾಡುವುದು ಅವಶ್ಯವಾಗಿದೆ.

ಪ್ರತಿಯೊಂದು ಸಮಾಜಕ್ಕೂ ಅಪರಾಧಿಯದೊಂದು ನಿರಂತರ ಸಮಸ್ಯೆ. ಅಪರಾಧಿಗಳ ಪತ್ತೆ, ಸುಧಾರಣೆ ಮತ್ತು ಪುನರುತ್ಥಾನ—ಇವುಗಳಲ್ಲೂ ಮನಶ್ಶಾಸ್ತ್ರಜ್ಞರು ನಿರತರಾಗಿದ್ದಾರೆ. ಅನೇಕ ದೇಶಗಳಲ್ಲಿ ಬಾಲಾಪರಾಧ ಒಂದು ಜಟಿಲ ಸಮಸ್ಯೆಯಾಗಿ ಪರಿಣಮಿಸುತ್ತಿದೆ. ಇದರ ಫಲವಾಗಿ ಅನೇಕ ಮನೋವಿಜ್ಞಾನಿಗಳು ಬಾಲಾಪರಾಧಿಗಳನ್ನು ತಿದ್ದುವ ಕಾರ್ಯದಲ್ಲಿ ತೊಡಗಿದ್ದಾರಲ್ಲದೆ ಕಾನೂನಿನ ದೃಷ್ಟಿಯಲ್ಲಿ ತಪ್ಪಿತಸ್ಥರಾದ ಕಿರಿಯರ ಬಂಧನಾವಧಿಯಲ್ಲಿ ಅವರ ಹಿತರಕ್ಷಣೆಯ ಹೊಣೆ ವಹಿಸುತ್ತಾರೆ. ಸಾಕ್ಷ್ಯ ಮತ್ತು ರುಜುವಾತುಗಳನ್ನು ವಿಶ್ಲೇಷಿಸುವ ಕಾರ್ಯದಲ್ಲೂ ಮನಶ್ಶಾಸ್ತ್ರಜ್ಞರು ನಿರತರಾಗಿದ್ದಾರೆ. (ಎಸ್.ಕೆ.ಎಂ.)

**ಔರಂಗ್‌ಜೇಬ್ :** 1618–1707. ಭಾರತದ ಆರನೆಯ ಮೊಗಲ್ ಚಕ್ರವರ್ತಿ, ಷಾ ಜಹಾನನ (ನೋಡಿ) ಮೂರನೆಯ ಮಗ. 1618ರ ನವೆಂಬರ್



2–3 ರಂದು ಗುಜರಾತಿನ ದೋಹಾದಿನಲ್ಲಿ ಜನಿಸಿದ. ತಾಯಿ ಮುಮ್ತಾಜ್ ಮಹಲ್ ಚಿಕ್ಕಂದಿನಲ್ಲಿ ಈತ ಒಳ್ಳೆಯ ಶಿಕ್ಷಣ ಪಡೆದ. ಅರಬೀ ಮತ್ತು ಪಾರಸೀ ಭಾಷೆಯನ್ನು ಚೆನ್ನಾಗಿ ಅರಿತ. ಈತನ ತಾಯಿನುಡಿ ಉರ್ದು. ಹಿಂದಿ ಮತ್ತು ತುರ್ಕಿಭಾಷೆಗಳಲ್ಲಿ ಮಾತಾಡಬಲ್ಲವನೂ ಆಗಿದ್ದ. 1636ರಲ್ಲಿ ದಖನ್ ಪ್ರಾಂತ್ಯಗಳ ವೈಸ್‌ರಾಯಿಯಾಗಿ ನೇಮಕವಾದಾಗಲೇ ಈತನ ಯೋಗ್ಯತೆ ಪ್ರಥಮವಾಗಿ ಪ್ರಕಾಶಕ್ಕೆ ಬಂತು. ಆದರೆ ಅಣ್ಣನಾದ ದಾರಾಗೂ ಈತನಿಗೂ ಮನಸ್ತಾಪ ಬಂದುದರಿಂದ ಔರಂಗ್‌ಜೇಬ್ ಈ ಹುದ್ದೆಗೆ ರಾಜೀನಾಮೆ ಕೊಟ್ಟ. ಮರುವರ್ಷ ಇವನಿಗಾಗಿ ಗುಜರಾತಿನ ರಾಜ್ಯಪಾಲ ಹುದ್ದೆ ಕಾದಿತ್ತು. 1647ರಲ್ಲಿ ಇವನನ್ನು ಬಲ್ಖ್ ಮತ್ತು ಬಡಕ್‌ಷಾನ್ ಪ್ರದೇಶಕ್ಕೆ ಕಳಿಸಲಾಯಿತು. ಮಧ್ಯ ಏಷ್ಯದಲ್ಲಿ ಮೊಗಲರಿಗೆ ಹಿಂದೆ ಸೇರಿದ್ದ ಪ್ರಾಂತ್ಯಗಳನ್ನು ಗೆಲ್ಲಬೇಕೆಂದು ತಂದೆ ಷಾ ಜಹಾನನ ಆಕಾಂಕ್ಷೆಯಾಗಿತ್ತು. ಆದರೆ ಈ ಯುದ್ಧಗಳು ನಿರ್ಣಾಯಕವಾಗಿ ಪರಿಣಮಿಸಲಿಲ್ಲ. ಖಜಾನೆ ಬರಿದಾಯಿತು. ಔರಂಗ್‌ಜೇಬನ ಶೌರ್ಯಕೌಶಲಗಳು ಅಸಾಧಾರಣವಾದುವಾಗಿದ್ದರೂ ಆ ಚಳಿನಾಡಿನಲ್ಲಿ ಹೋರಾಟ ಮುಂದುವರಿಸುವುದು ಸೂಕ್ತವೆನಿಸಲಿಲ್ಲವಾದ್ದರಿಂದ ತಂದೆ ಇವನನ್ನು ಹಿಂದಕ್ಕೆ ಕರೆಯಿಸಿಕೊಂಡ. 1648ರಲ್ಲಿ ಈತ ಮುಲ್ತಾನಿನ ರಾಜ್ಯಪಾಲನಾದ. ಮರುವರ್ಷ ಸಿಂಧ್ ಕೂಡ ಇವನ ಆಡಳಿತಕ್ಕೆ ಒಳಪಟ್ಟಿತು. ಪರ್ಷಿಯನರು ಏರಿಬಂದಿದ್ದ ಕಾಂದಹಾರಿನ ವಿಮೋಚನೆಗಾಗಿ 1649ರಲ್ಲಿ ಇವನನ್ನು ಸೈನ್ಯದೊಂದಿಗೆ ಕಳಿಸಲಾಯಿತು. ಆದರೆ ಔರಂಗ್‌ಜೇಬ್ ಹೋಗುವ ವೇಳೆಗೆ ಅದು ಅವರಿಗೆ ಅಧೀನವಾಗಿತ್ತು. ಪರ್ಷಿಯನ್ನರನ್ನು ಜಗ್ಗಿಸಲು ಇವನ ಸೈನ್ಯದಿಂದಾಗಲಿಲ್ಲ. ಮೂರು ವರ್ಷಗಳ ಅನಂತರ ಮತ್ತೆ ನಡೆಸಿದ ಯತ್ನವೂ ವಿಫಲವಾಯಿತು. 1652ರಲ್ಲಿ ಈತ ಮತ್ತೆ ದಖನಿನ ವೈಸ್‌ರಾಯಿಯಾದ. ಅಲ್ಲಿಯ ಆಡಳಿತವನ್ನು ಸುಧಾರಿಸಿ, ವರಮಾನ ಹೆಚ್ಚಿಸಿದ. ಗೋಲ್ಕೊಂಡ ಮತ್ತು ಬಿಜಾಪುರಗಳ ಮೇಲೆ ಕ್ರಮವಾಗಿ 1656 ಮತ್ತು 1657ರಲ್ಲಿ ದಂಡೆತ್ತಿಹೋದ. ಆದರೆ ಷಾ ಜಹಾನ್ ಅಡ್ಡಬಂದುದರಿಂದ ಈ ಆಕ್ರಮಣಗಳನ್ನು ಔರಂಗ್‌ಜೇಬ್ ಮುಂದುವರಿಸಲಾಗಲಿಲ್ಲ.

ಅಷ್ಟರಲ್ಲಿ (1657) ಷಾ ಜಹಾನ್ ಕಾಯಿಲೆ ಮಲಗಿದ. ತನ್ನ ಹಿರಿಯ ಮಗ ದಾರಾ ಷುಕೋ ಚಕ್ರವರ್ತಿಯಾಗಬೇಕೆಂಬುದು ಷಾ ಜಹಾನನ ಇಚ್ಛೆಯಾಗಿತ್ತು. ಆತ ತಂದೆಯೊಡನೆಯೇ ದೆಹಲಿಯಲ್ಲಿದ್ದ. ಎರಡನೆಯ ಮಗ ಷೂಜಾ ಬಂಗಾಳದಲ್ಲಿ ವೈಸ್‌ರಾಯಿಯಾಗಿದ್ದ. ಔರಂಗ್‌ಜ಼ೇಬನ ತಮ್ಮ—ಷಾ ಜಹಾನನ ಕೊನೆಯ ಮಗ—ಮುರಾದ್ ಇದ್ದದ್ದು ಗುಜರಾತಿನಲ್ಲಿ, ವೈಸ್‌ರಾಯಿಯಾಗಿ. ತಂದೆಯ ಜಡ್ಡಿನ ಸುದ್ದಿ ಬಂದೊಡನೆಯೇ ಷೂಜಾ ಬಂಗಾಳದ ಚಕ್ರವರ್ತಿಯೆಂದು ಸಾರಿಕೊಂಡ. ಮುರಾದನೂ ಷೂಜಾನ ಮಾರ್ಗವನ್ನೇ ಅನುಸರಿಸಿದ. ಈ ಸ್ಪರ್ಧೆಯಲ್ಲಿ ಔರಂಗ್‌ಜ಼ೇಬ್ ಹಿಂದೆ ಬೀಳಲಿಲ್ಲ. ಸಾಮ್ರಾಜ್ಯವನ್ನು ಎರಡು ಭಾಗ ಮಾಡಿ ತನಗೊಂದು ಪಾಲು ಕೊಡಬೇಕೆಂಬ ಷರತ್ತಿನ ಮೇಲೆ ಮುರಾದನಿಗೆ ಜೊತೆಯಾದ. ಇವರಿಬ್ಬರ ಸಂಯುಕ್ತ ಸೇನೆಗಳಿಗೂ ಷಾ ಜಹಾನನ ಸೇನೆಗೂ ನಡುವೆ ಯುದ್ಧಗಳು ನಡೆದುವು. ದಾರಾ ಷುಕೋ ಸೋತು ಆಗ್ರಕ್ಕೆ ಪಲಾಯನ ಮಾಡಿದ. ಔರಂಗ್‌ಜ಼ೇಬ್-ಮುರಾದರ ಸೈನ್ಯಗಳು ಬೆನ್ನಟ್ಟಿ ನಡೆದು, ಆಗ್ರವನ್ನು ಮುತ್ತಿ ಗೆದ್ದುವು (1658ರ ಜೂನ್ 8). ಷಾ ಜಹಾನ್ ಆಮರಣಾಂತ ಬಂದಿಯಾದ. 1657ರಲ್ಲಿ ಗುಜರಾತಿನಲ್ಲಿ ತನ್ನ ದಿವಾನನ ಕೊಲೆ ಮಾಡಿಸಿದನೆಂಬ ಅಪವಾದವನ್ನು ಮುರಾದನ ಮೇಲೆ ಔರಂಗ್‌ಜ಼ೇಬ್ ಹೊರಿಸಿ ಅವನನ್ನು ಮರಣಕ್ಕೆ ಗುರಿಪಡಿಸಿದ. ಈ ನಡುವೆ ದಾರಾನ ಮಗನಿಂದ ಹಿಂದೆಯೇ ಸೋತಿದ್ದ ಷೂಜಾ ಗರಿಗೂಡಿಸಿಕೊಳ್ಳುತ್ತಿದ್ದದ್ದನ್ನು ಅರಿತ ಔರಂಗ್‌ಜ಼ೇಬ್ ಅವನ ವಿರುದ್ಧವಾಗಿ ಖುದ್ದಾಗಿ ಯುದ್ಧ ನಡೆಸಿದಾಗ ಷೂಜಾ ಸೋತ. ಓಡಿಹೋಗುತ್ತಿದ್ದ ಅವನನ್ನು ಔರಂಗ್‌ಜ಼ೇಬನ ಸೈನ್ಯ ಬೆನ್ನಟ್ಟಿತು. ಆತ ದಖನಿಗೆ ಹೋಗಿ ಅಲ್ಲಿಂದ ಅರಕಾನಿಗೆ ಪಲಾಯನ ಮಾಡಿದ. ಅವನೂ ಅವನ ಸಂಸಾರದವರೂ ಅಲ್ಲಿ ನಾಶಹೊಂದಿದರು. ಇನ್ನುಳಿದಿದ್ದವ ದಾರಾ ಮಾತ್ರ. ಆಗ್ರದಿಂದ ಓಡಿಹೋಗಿದ್ದ ಅವನೊಂದಿಗೆ ಔರಂಗ್‌ಜ಼ೇಬನ ಸೈನ್ಯ ಕಾದಿ ಅವನನ್ನು ಹಿಡಿತಂದಿತು. ದಾರಾಗೆ ಔರಂಗ್‌ಜ಼ೇಬನಿಂದ ಆದ ಅವಮಾನ ಅಷ್ಟಿಷ್ಟಲ್ಲ. ಧರ್ಮಭ್ರಷ್ಟನೆಂಬ ಅಪವಾದದ ಮೇಲೆ ಅವನನ್ನು ವಿಚಾರಣೆಗೆ ಗುರಿಪಡಿಸಲಾಯಿತು. ತಪ್ಪು ಸಾಬೀತಾಯಿತು. 1659ರ ಆಗಸ್ಟ್ 30ರಂದು ಆತ ಮರಣದಂಡನೆಗೆ ಗುರಿಯಾದ. ಔರಂಗ್‌ಜ಼ೇಬನ ಸೋದರರೆಲ್ಲ ನಿರ್ನಾಮವಾದ ಮೇಲೆ ಅವನಿಗೆ ನಿರಾತಂಕವಾಯಿತು. 1658ರ ಜುಲೈ 21ರಂದೇ—ಷಾ ಜಹಾನ್ ಬಂಧನಕ್ಕೊಳಗಾದಾಗ—ಅನೌಪಚಾರಿಕವಾಗಿ ಕಿರೀಟಧಾರಿಯಾಗಿದ್ದ ಔರಂಗ್‌ಜ಼ೇಬನ ಕೈ ತಡೆಯುವವರು ಯಾರೂ ಇರಲಿಲ್ಲ. 1659ರ ಜೂನಿನಲ್ಲಿ ಆತ ಅಲಂಗೀರ್ (ವಿಶ್ವವಿಜೇತ) ಎಂಬ ಬಿರುದು ತಾಳಿ ಅಧಿಕೃತವಾಗಿ ಸಿಂಹಾಸನವನ್ನೇರಿ ದೀರ್ಘಕಾಲ ಆಳ್ವಿಕೆ ನಡೆಸಿದ.

ತನ್ನ ಹಿರಿಯರಂತೆ ಔರಂಗ್‌ಜ಼ೇಬನೂ ಭಾರತದಲ್ಲಿ ಮೊಗಲ್ ಚಕ್ರಾಧಿಪತ್ಯವನ್ನು ವಿಸ್ತರಿಸಿದ. ಇವನ ಆಳ್ವಿಕೆಯ ಮೊದಲ ಭಾಗ (1658–1681) ಉತ್ತರ ಭಾರತದಲ್ಲಿ ತನ್ನ ಅಧಿಕಾರವನ್ನು ಕ್ರೋಡೀಕರಿಸಿಕೊಳ್ಳುವುದಕ್ಕೇ ವಿನಿಯೋಗವಾಯಿತು. 1662ರಲ್ಲಿ ಪಶ್ಚಿಮ ಅಸ್ಸಾಂ ಇವನ ಅಧೀನವಾಯಿತು. ಔರಂಗ್‌ಜ಼ೇಬ್ 1666 ರಲ್ಲಿ ಚಿತ್ತಗಾಂಗನ್ನು ವಶಪಡಿಸಿಕೊಂಡ. ವಾಯುವ್ಯಗಡಿನಾಡಿನಲ್ಲಿ ದಂಗೆಯೆದ್ದ (1667) ಆಫ್ಘನರನ್ನು 1675ರ ವೇಳೆಗೆ ಅಡಗಿಸಲಾಯಿತು. ಅನೇಕ ವಿದೇಶೀ ಮುಸ್ಲಿಂ ರಾಜ್ಯಗಳು ಇವನೊಂದಿಗೆ ರಾಯಭಾರ ಸಂಬಂಧ ಬೆಳೆಸಿದುವು. 1679ರಲ್ಲಿ ರಜಪೂತರೊಂದಿಗೆ ಔರಂಗ್‌ಜ಼ೇಬ್ ಯುದ್ಧ ಹೂಡಿದ. 1681ರಲ್ಲಿ ಮೇವಾಡದ ರಾಣನೊಂದಿಗೆ ಶಾಂತಿಯ ಒಪ್ಪಂದ ಮಾಡಿಕೊಳ್ಳಲಾಯಿತು.

ಅನಂತರ ಔರಂಗ್‌ಜ಼ೇಬನ ಗಮನ ದಕ್ಷಿಣದತ್ತ ತಿರುಗಿತು. 1685ರಲ್ಲಿ ಈತ ಬಿಜಾಪುರದ ಮುಸ್ಲಿಂ ಷಿಯ ರಾಜ್ಯಗಳನ್ನು ಗೆದ್ದುಕೊಂಡ. 1689ರಲ್ಲಿ ಗೋಲ್ಕೊಂಡ ಇವನ ಬಗಲಿಗೆ ಬಿತ್ತು. ಹೀಗೆ ಇವನ ಚಕ್ರಾಧಿಪತ್ಯ ಕೋರಮಂಡಲದಿಂದ ಚಿತ್ತಗಾಂಗಿನ ವರೆಗೂ ಉತ್ತರದಲ್ಲಿ ಹಿಂದೂಕುಷ್ ವರೆಗೂ ಹಬ್ಬಿತಾದರೂ ದಖನ್ ಪ್ರದೇಶ ಇವನಿಗೆ ತೊಂದರೆ ಕೊಡುತ್ತಲೇ ಇತ್ತು. ಮರಾಠರನ್ನು ಅಡಗಿಸುವುದು ಸಾಧ್ಯವಾಗಲಿಲ್ಲ. 1689ರಲ್ಲಿ ಶಿವಾಜಿಯ ಮಗನಾದ ಶಂಭುಜಿಯನ್ನು ಹಿಡಿದು ಕೊಲ್ಲಲಾಯಿತು. ರಾಜಧಾನಿ ರಾಯಗಢವೂ ವಶವಾಯಿತು. ಶಿವಾಜಿಯ ಕಿರಿಯ ಮಗ ಸಾಹುವನ್ನು ಔರಂಗ್‌ಜ಼ೇಬ್ ಸೆರೆಯಲ್ಲಿಟ್ಟ. ತಂಜಾವೂರು ತಿರುಚಿನಾಪಳ್ಳಿಗಳ ಹಿಂದೂ ರಾಜರು ಔರಂಗ್‌ಜ಼ೇಬನ ಸಾಮಂತರಾದರು. ಆದರೂ ಔರಂಗ್‌ಜ಼ೇಬನಿಗೆ ನೆಮ್ಮದಿ ದೊರಕಲಿಲ್ಲ. ಇವನ ಮಹಾಸಾಮ್ರಾಜ್ಯದ ಅತಿಯಾದ ವಿಸ್ತೀರ್ಣವೇ ಒಂದು ಹೊರೆಯಾಯಿತು. ಇದರ ಮೇಲೆ ಹತೋಟಿ ಇಟ್ಟುಕೊಳ್ಳುವುದು ಸುಲಭವಾಗಲಿಲ್ಲ. ಒಂದು ಕೇಂದ್ರದಿಂದ ಒಬ್ಬನ ನಿರ್ವಹಣೆಗೆ ಇದನ್ನೆಲ್ಲ ಒಳಪಡಿಸುವುದು ಅಸಾಧ್ಯವೇ ಎನಿಸಿತು. 1667–75ರ ಆಫ್ಘನ್ ಯುದ್ಧಗಳಿಂದಾಗಿ ಔರಂಗ್‌ಜ಼ೇಬನ ಬೊಕ್ಕಸ ಬರಿದಾಗಿತ್ತು. ಆಫ್ಘನ್ ಸಿಪಾಯಿಗಳನ್ನು ಯುದ್ಧಕ್ಕೆ ಬಳಸಿಕೊಳ್ಳುವುದಂತೂ ಸಾಧ್ಯವಿರಲಿಲ್ಲ. ಶಿವಾಜಿಯ ವಿರುದ್ಧವಾಗಿ ಸೆಣಸುವುದು ಕಠಿಣವಾದುದಕ್ಕೆ ಇದೂ ಒಂದು ಕಾರಣ. 1669ರಲ್ಲಿ ಮಥುರಾದಲ್ಲಿ ಜಾಟರೂ 1671ರಲ್ಲಿ ಬುಂದೇಲ್‌ಖಂಡ ಮತ್ತು ಮಾಳ್ವದಲ್ಲಿ ಬುಂದೇಲರೂ 1672ರಲ್ಲಿ ಪಟಿಯಾಲದ ಶತನಾಮಿಗಳೂ ಆಳ್ವಾರದ ಮೇವಟಿಗಳೂ ದಂಗೆಯೆದ್ದರು. ಇವರನ್ನೆಲ್ಲ ನಿರ್ದಯೆಯಿಂದ ಔರಂಗ್‌ಜ಼ೇಬ್ ಅಡಗಿಸಿದ. ಆದರೂ ಈ ದಂಗೆಗಳು ಮೊಗಲ್ ಆಳ್ವಿಕೆಯ ವಿರುದ್ಧ ಎದ್ದ ಶಕ್ತಿಗಳ ಪ್ರತೀಕಗಳಾಗಿದ್ದುವು. ಪಂಜಾಬಿನಲ್ಲಿ ಸಿಕ್ಖರಲ್ಲಿ ಜಾಗೃತಿ ಉಂಟಾಗಿತ್ತು. ಅವರೂ ಸಂಘಟಿತರಾಗುತ್ತಿದ್ದರು. 1663ರಲ್ಲಿ ತಮ್ಮ ಮೇಲೆ ಹೊರಿಸಲಾಗಿದ್ದ ಕೌಲನ್ನು ಅಸ್ಸಾಮಿನ ಅಹೋಂಗಳು ಕಿತ್ತೊಗೆದು 1671ರಲ್ಲಿ ತಮ್ಮ ನೆಲವನ್ನು ಮತ್ತೆ ಗೆದ್ದುಕೊಂಡರು. ಮರಾಠರಾದರೂ ಸುಮ್ಮನಿರಲಿಲ್ಲ. ಶಂಭೂಜಿಯ ತಮ್ಮ ರಾಜಾರಾಮನೂ ಅವನ ಮರಣಾನಂತರ ಅವನ ಪತ್ನಿ ತಾರಾಬಾಯಿಯೂ ಮೊಗಲರ ವಿರುದ್ಧ ಹೋರಾಟ ಮುಂದುವರಿಸಿದರು. ಔರಂಗ್‌ಜ಼ೇಬನ ಕಣ್ಣ ಮುಂದೆಯೇ ಎಷ್ಟೋ ಪ್ರದೇಶಗಳು ಮರಾಠರ ವಶವಾದುವು. ಹೀಗೆ ಔರಂಗ್‌ಜ಼ೇಬನ ಆಳ್ವಿಕೆಯ ಕಾಲದ ಉತ್ತರಾರ್ಧವನ್ನೆಲ್ಲ (1681–1707) ಆತ ದಖನನ್ನು ಮೆಟ್ಟಿನಿಲ್ಲುವುದಕ್ಕೇ ವಿನಿಯೋಗಿಸಬೇಕಾಯಿತು. ಇದಕ್ಕಾಗಿ ಮಾಡಬೇಕಾಗಿಬಂದ ವೆಚ್ಚ ಅಗಾಧ. ಈ ಘಟನೆಗಳು ಮೊಗಲ್‌ಸಾಮ್ರಾಜ್ಯವನ್ನು ವಿನಾಶದ ಹಾದಿಯಲ್ಲಿ ಕೊಂಡೊಯ್ದುವು. 1679–80ರ ರಜಪೂತ ಯುದ್ಧದಲ್ಲಿ ಔರಂಗ್‌ಜ಼ೇಬ್ ಗೆದ್ದಿದ್ದನಾದರೂ ಅಲ್ಲೂ ಈತ ಹಿಂದೂ ದೊರೆಗಳ ವಿರೋಧ ಗಳಿಸಿಕೊಂಡ. ಅಕ್ಬರನ ಸ್ನೇಹಮಾರ್ಗವನ್ನು ಈತ ಅನುಸರಿಸಲಿಲ್ಲ. ರಾಷ್ಟ್ರವೇ ಮತಕ್ಕೆ ಅಧೀನವಾಯಿತು. ಕುರಾನಿನ ನ್ಯಾಯಕ್ಕನುಸಾರವಾಗಿ ರಾಜ್ಯವಾಳಲು ಯತ್ನಿಸಿದ ಈ ಸುನ್ನಿ ಮುಸಲ್ಮಾನ ಬುದ್ಧಿವಂತನಾದರೂ ಅವಿವೇಕಿ ; ವಾಸ್ತವದೃಷ್ಟಿಹೀನ ; ಮತಾಂಧ. ನಿಷ್ಠಾವಂತ ಮುಸ್ಲಿಮನ ನಿಷ್ಠುರ ನಿಯಮಗಳನ್ನೆಲ್ಲ ಈತ ತನ್ನ ಮೇಲೆ ವಿಧಿಸಿಕೊಂಡನಷ್ಟೇ ಅಲ್ಲ ; ಇಡೀ ಚಕ್ರಾಧಿಪತ್ಯವನ್ನೇ ಇಸ್ಲಾಂ ಸಾಮ್ರಾಜ್ಯವಾಗಿ (ದಾರ್–ಉಲ್–ಇಸ್ಲಾಂ) ಪರಿವರ್ತಿಸಲೆತ್ನಿಸಿದ. ಇದರಿಂದ ಉದ್ಭವವಾದ ಅಸಹನೆಯ ನೆಲಗಟ್ಟಿನ ಮೇಲೆ ಆಡಳಿತ ನಡೆಸಲು ಯತ್ನಿಸಿದ್ದೇ ಔರಂಗ್‌ಜ಼ೇಬನ ಆಳ್ವಿಕೆಯ ಮಹಾದುರಂತ. 1564ರಲ್ಲಿ ಅಕ್ಬರ್ ರದ್ದುಮಾಡಿದ್ದ ಜೆಸ಼ಿಯಾ ಕಂದಾಯವನ್ನು ಈತ 1679ರಲ್ಲಿ ಮತ್ತೆ ವಿಧಿಸಿದ. ಉನ್ನತ ಹುದ್ದೆಗಳಿಗೆ ಹಿಂದೂಗಳನ್ನು ನೇಮಿಸಿಕೊಳ್ಳುವುದನ್ನು ನಿಷೇಧಿಸಿದನೆಂದೂ ಅನೇಕ ಹಳೆಯ ಹಿಂದೂ ದೇವಸ್ಥಾನಗಳನ್ನು ನಾಶಗೊಳಿಸಿದನೆಂದೂ ಹೊಸದಾಗಿ ದೇಗುಲಗಳ ನಿರ್ಮಾಣ ಮಾಡಕೂಡದೆಂದು ವಿಧಿಸಿದನೆಂದೂ ಜೋಧಪುರದ ದೊರೆಯಾಗಿದ್ದ ಜಸ್ವಂತ್‌ಸಿಂಗನ ಮಗನನ್ನು ಬಲಾತ್ಕಾರದಿಂದ ಹಿಡಿದು ಇಸ್ಲಾಂ ಮತಕ್ಕೆ ಪರಿವರ್ತಿಸಲು ಪ್ರಯತ್ನಿಸಿದನೆಂದೂ ಹೇಳಲಾಗಿದೆ.

ವಿ. ರಾಘವೇಂದ್ರರಾಯರು ಹಿಂದೂ ಮುಸ್ಲಿಂ ಮೈತ್ರಿಯನ್ನು ಬೆಳೆಸಿದ ರಾಜರು ಎಂಬ ಪುಸ್ತಕದಲ್ಲಿ ಔರಂಗ್‌ಜ಼ೇಬನ ರಾಜ್ಯಭಾರದ ಬಗ್ಗೆ ಹೀಗೆ ಹೇಳುತ್ತಾರೆ: 'ಔರಂಗ್‌ಜ಼ೇಬನ ರಾಜ್ಯವ್ಯವಹಾರ ಭಿನ್ನಾಭಿಪ್ರಾಯಗಳಿಗೆ ಗುರಿಯಾಗಿದೆ. ಮುಸಲ್ಮಾನರು ಇವನನ್ನು ಒಬ್ಬ ಪೀರ್ ಅಂದರೆ ಸಂತನೆಂದು ತಿಳಿದಿರುವರು. ಕೆಲವು ಹಿಂದೂಗಳು ಇವನನ್ನು ಆಸುರೀ ಸ್ವಭಾವದವನೆಂದು ತಿಳಿದಿದ್ದಾರೆ. ಇವನಿಗೆ ಹಿಂದೂಗಳ ಮೇಲೆ ವೈಷಮ್ಯವಿದ್ದುದೇನೋ ನಿಜ. ಆದರೆ ಅದು ಅವನ ಮನಸ್ಸಿನಲ್ಲಿ ಏಕಾಏಕಿ ಹುಟ್ಟಲಿಲ್ಲ. ಪಟ್ಟಾಭಿಷಿಕ್ತನಾಗಿ ಹತ್ತು ವರ್ಷಕಾಲ ಹಿಂದೂಗಳನ್ನು ರಕ್ಷಣೆ ಮಾಡಲು ಪ್ರಯತ್ನಪಟ್ಟ. ಕಾಶಿ ದೇವಾಲಯದ ಅರ್ಚಕರಿಗೆ ಅವರ ಹಕ್ಕು ಬಾಧ್ಯತೆಗಳನ್ನು ಸುರಕ್ಷಿತವಾಗಿ ಪಾಲಿಸುವೆನೆಂದು ಒಂದು ಅಭಯಪತ್ರ ಕೊಟ್ಟ. ಕಾಲಕ್ರಮದಲ್ಲಿ ಮತಬೋಧಕರ ಕೈಯ ಸೂತ್ರದ ಬೊಂಬೆಯಾದ. ಹಿಂದೂಗಳ ಮೇಲೆ ಜೆಸ಼ಿಯಾ ತಲೆಗಂದಾಯವನ್ನು ಹಾಕಿದ. ಇಸ್ಲಾಮೀ ರಾಜನೀತಿಯಲ್ಲಿ ಜಿಮ್ಮಿಗಳ ಪುರಾತನ ದೇವಾಲಯಗಳನ್ನು ಸುರಕ್ಷಿತವಾಗಿ ಇಡಬಹುದು ; ಆದರೆ ಹೊಸ ದೇವಸ್ಥಾನಗಳ ಸ್ಥಾಪನೆಗೆ ಅವಕಾಶವಿಲ್ಲ. ಈ ನೀತಿಯನ್ನು ಅನುಸರಿಸಿ ಔರಂಗ್‌ಜ಼ೇಬ್ ಅರ್ವಾಚೀನ ದೇವಸ್ಥಾನಗಳನ್ನು ನೆಲಸಮ ಮಾಡಬೇಕೆಂದು ಆಜ್ಞೆ ಇತ್ತ. ಇದೊಂದು ಸುಸಮಯವೆಂದು ತಿಳಿದು ಅಶಿಕ್ಷಿತರಾದ ಇವನ ಅಧಿಕಾರಿಗಳು ಹಿಂದಿನವು ಇಂದಿನವು ಎಂದು ಎಣಿಸದೆ ಎಲ್ಲಾ ದೇವಸ್ಥಾನಗಳನ್ನೂ ಲೂಟಿಮಾಡಿ ತಮ್ಮ ಚಕ್ರವರ್ತಿಯನ್ನು ಅಪಕೀರ್ತಿಗೆ ಗುರಿಮಾಡಿದರು; ರಾಜ್ಯದಲ್ಲಿ ದೊಡ್ಡ ಕ್ರಾಂತಿಯ ಬೀಜ ಬಿತ್ತಿದರು.

'ಔರಂಗ್‌ಜ಼ೇಬನಿಗೆ ಹಿಂದೂಗಳಲ್ಲಿ ವ್ಯಕ್ತಿಶಃ ದ್ವೇಷವಿರಲಿಲ್ಲ. ರಜಪೂತರಾಜರು ಮೊದಲಿನಂತೆ ಇವನ ಸೈನ್ಯದಲ್ಲಿ ದುಡಿದರು ; ಇವನಿಗೋಸ್ಕರ ಕಾಬೂಲ್ ಪ್ರಾಂತ್ಯದಲ್ಲೂ ದಖನ್ ಪ್ರಾಂತ್ಯದಲ್ಲೂ ತಮ್ಮ ಜೀವಗಳನ್ನು ಅರ್ಪಿಸಿದರು. ಇವನ ಖಾಸ ಕಾರ್ಯದರ್ಶಿ ವಾಲೀರಾಮ್ ಹಿಂದೂ ಇವನ ಹಣಕಾಸಿನ ಮಂತ್ರಿಗಳಲ್ಲಿ ಒಬ್ಬನಾದ ರಘುನಂದನರಾಯನೂ ಹಿಂದೂವೇ. ಈ ಚಕ್ರವರ್ತಿ ಕೇವಲ ಸಂಕುಚಿತ ಮನಸ್ಕನಾಗಿ ಸ್ವಂತ ಮಕ್ಕಳನ್ನು ಕೂಡ ನಂಬಲಿಲ್ಲ. ಆದ್ದರಿಂದಲೇ ಇವನ ತನುಜರೂ ಇವನ ಮುಸಲ್ಮಾನ್ ಸರದಾರರೂ ಇವನ ಮೇಲೆ ದಂಗೆ ಎದ್ದು ರಾಜ್ಯವನ್ನು ಚೂರುಚೂರಾಗಿ ಮಾಡಿದರು. ಇವರು ಹಾಕಿದ ಮೇಲ್ಪಂಕ್ತಿಯನ್ನು ರಜ

ಪೂತರೂ ಮರಾಟರೂ ಸಿಕ್ಖರೂ ಅನುಸರಿಸಿದರು. ಇವರ ದಂಗೆ ಸ್ವರಾಜ್ಯಸ್ಥಾಪನೆ ಗೋಸ್ಕರ ಕೈಗೊಂಡದ್ದು; ಮತವೈಷಮ್ಯದಿಂದ ಉದಿಸಿದುದು ಎಂಬುದು ನಿರಾಧಾರ ವಾದ ತಪ್ಪಿನ ಅಭಿಪ್ರಾಯ. ಮುಸಲ್ಮಾನರೂ ದಂಗೆಯೆದ್ದರು. ಹಿಂದುಗಳೊಬ್ಬರೇ ಔರಂಗ್‌ಜ಼ೇಬನನ್ನು ಹಾಳು ಮಾಡಿದರೆಂಬುದು ತಪ್ಪಭಿಪ್ರಾಯ.'

ಈ ವಿಚಾರ ಹೇಗಾದರೂ ಇರಲಿ. ಔರಂಗ್‌ಜ಼ೇಬ್ ದಖನನ್ನು ಹತೋಟಿ ಯಲ್ಲಿಟ್ಟುಕೊಳ್ಳುವ ಪ್ರಯತ್ನದಲ್ಲೇ ಅಹಮದ್‌ನಗರದಲ್ಲಿ ಸತ್ತ (1707ರ ಮಾರ್ಚ್ 3); ಅಶಾಂತಿಯ ಗೊಂದಲವನ್ನೆಬ್ಬಿಸಿ ಚಕ್ರಾಧಿಪತ್ಯವನ್ನು ತನ್ನ ಉತ್ತರಾಧಿಕಾರಿಗಳಿಗೆ ಬಿಟ್ಟುಹೋದ. ಇವನ ಜೀವಮಾನ ಕಾಲದಲ್ಲೇ ಐರೋಪ್ಯ ಶಕ್ತಿಗಳು ಭಾರತದ ಮೇಲೆ ಕಣ್ಣುಹಾಕಿದ್ದುವು. ಈ ಸುಪ್ತ ಅಪಾಯವನ್ನು ಔರಂಗಜ಼ೇಬ್ ಕಂಡರಿಯ ಲಿಲ್ಲ. ಹಿಂದೂ–ಮುಸ್ಲಿಂ, ಷಿಯಾ–ಸುನ್ನಿ ಮುಂತಾದ ಬಗೆಬಗೆಯ ಒಡಕುಗಳನ್ನು ಹೆಚ್ಚಿಸಿ ಭಾರತವನ್ನು ಪಾಶ್ಚಾತ್ಯರ ಕೈಯಲ್ಲಿಡಲು ಈತನೂ ತನಗರಿವಿಲ್ಲದೆಯೇ ಕಾರಣನಾದ.

ಔರಂಗ್‌ಜ಼ೇಬನ ಮುಖ್ಯ ಪತ್ನಿ ದಿಲ್‌ರಸ್ ಬಾನು ಬೇಗಂ. ಇವನಿಗೆ ಐವರು ಮಕ್ಕಳಿದ್ದರು. ತಾನು ತನ್ನ ತಂದೆಗೆ ಮಾಡಿದ್ದನ್ನೆ ತನ್ನ ಮಕ್ಕಳು ತನಗೂ ಮಾಡಿಯಾರೆಂದು ಈತ ಬಹಳ ಅಂಜಿದ್ದ. ಅವರನ್ನು ಆದಷ್ಟು ದೂರ ಇಟ್ಟಿದ್ದ. ಯಾರನ್ನೇ ಆಗಲಿ ನಂಬುವುದು ಇವನ ಸ್ವಭಾವವೇ ಅಲ್ಲ. ಈತನ ಮಕ್ಕಳ ಪೈಕಿ ಮುಹಮ್ಮದ್ 1676ರಲ್ಲಿ ಗುಪ್ತ ಕೊಲೆಗೀಡಾದ. ಔರಂಗ್‌ಜ಼ೇಬನ ಅನಂತರ ಅಧಿಕಾರಕ್ಕೆ ಬಂದಾತ ಮುಅಜ಼ಮ್. ಮೂರನೆಯವ ಅಜ಼ಂ. ಸಿಂಹಾಸನಕ್ಕಾಗಿ ನಡೆಸಿದ ಹೋರಾಟದಲ್ಲಿ ಈತ ಮಡಿದ. ನಾಲ್ಕನೆಯ ಮಗ ಅಕ್ಬರ್ ತಂದೆಯ ವಿರುದ್ಧವಾಗಿ ದಂಗೆ ಎದ್ದು ದೇಶಭ್ರಷ್ಟನಾಗಿ ಪರ್ಷಿಯಕ್ಕೆ ಹೋಗಿ ಅಲ್ಲಿ ಸತ್ತ (1704). ಕೊನೆಯ ಕಾಂ ಬಕ್ಷನೂ ಸಿಂಹಾಸನಕ್ಕಾಗಿ ನಡೆದ ಬಡಿದಾಟದಲ್ಲಿ 1709 ರಲ್ಲಿ ಪ್ರಾಣ ತೆತ್ತ. (ಎಚ್.ಜಿ.ಆರ್.)

**ಔರಂಗಾಬಾದ್ :** ಮಹಾರಾಷ್ಟ್ರದಲ್ಲಿರುವ ಒಂದು ನಗರ. ಔರಂಗಾ ಬಾದ್ ಜಿಲ್ಲೆಯ ಕೇಂದ್ರ. 1956ರ ವರೆಗೂ ಇದು ಹೈದರಾಬಾದ್ ರಾಜ್ಯದಲ್ಲಿತ್ತು.



ಔರಂಗಾಬಾದಿನ ರಬಿಯಾ ದೌರಾನಿ ಗೋರಿ

ಪೂನಕ್ಕೆ ಈಶಾನ್ಯದಲ್ಲಿ 138 ಮೈ. ದೂರದಲ್ಲಿ, ಬೊಂಬಾಯಿಗೆ ಪೂರ್ವ ಈಶಾನ್ಯಗಳ ನಡುವೆ 207 ಮೈ. ದೂರದಲ್ಲಿ ಕೌನ್ ನದಿಯ ದಡದ ಮೇಲಿದೆ. ಹೈದರಾಬಾದ್–ಮನ್‌ಮಾಡ್ ರೈಲುಮಾರ್ಗದಲ್ಲಿ ಔರಂಗಾಬಾದ್ ಒಂದು ನಿಲ್ದಾಣ. ನಗರದ ಜನಸಂಖ್ಯೆ 97,701.

ಔರಂಗಾಬಾದಿನ ಪೂರ್ವದ ಹೆಸರು ಖಿಡ್ಕಿ (ಖಿರ್ಕಿ). ಅಹಮದ್ ನಗರದ ಪ್ರಧಾನಿಯಾಗಿದ್ದ ಮಲಿಕ್ ಅಂಬರ್ (ನೋಡಿ) 1601ರಲ್ಲಿ ಇದನ್ನು ಸ್ಥಾಪಿಸಿದ. 1636ರಲ್ಲಿ ದಖನ್ ಪ್ರಾಂತ್ಯಗಳ ವೈಸ್‌ರಾಯಿಯಾಗಿ ಬಂದ ಔರಂಗ್‌ಜ಼ೇಬ್ (ನೋಡಿ) ಇದನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡು ಇದಕ್ಕೆ ಈಗಿನ ಹೆಸರಿಟ್ಟ. ನಿಜ಼ಾ ಮರು ದೆಹಲಿಯ ಸಾಮ್ರಾಜ್ಯದಿಂದ ಸ್ವತಂತ್ರರಾದ ಮೇಲೆ ಈ ನಗರ ಅವರ ರಾಜಧಾನಿಯಾಗಿ ಮುಂದುವರಿಯಿತಾದರೂ ಮುಂದೆ ಅವರು ತಮ್ಮ ರಾಜಧಾನಿ ಯನ್ನು ಹೈದರಾಬಾದಿಗೆ ವರ್ಗಾಯಿಸಿದಾಗಿನಿಂದ ಈ ನಗರದ ಪ್ರಾಮುಖ್ಯ ಕುಂದ ಲಾರಂಭಿಸಿತು. 1956ರಲ್ಲಿ ಭಾರತದ ರಾಜ್ಯಪುನರ್ವಿಂಗಡಣೆಯಾದಾಗ ಇದೂ ಔರಂಗಾಬಾದ್ ಜಿಲ್ಲೆಯೂ ಬೊಂಬಾಯಿ ರಾಜ್ಯದಲ್ಲಿ ಸೇರಿದುವು. 1960ರಲ್ಲಿ ಇವು ಮಹಾರಾಷ್ಟ್ರದಲ್ಲಿ ಮುಂದುವರಿದುವಲ್ಲದೆ ಈ ವಿಭಾಗಕ್ಕೆ ಔರಂಗಾಬಾದ್ ನಗರವೇ ಕೇಂದ್ರವಾಯಿತು. ಔರಂಗಾಬಾದ್ ನಗರದ ಸುತ್ತಲೂ ಕಲ್ಲಿನಿಂದ ಕಟ್ಟಿದ ಭದ್ರ ವಾದ ಕೋಟೆಯಿದೆ. ನಗರಕ್ಕೆ ನಾಲ್ಕು ದಿಕ್ಕುಗಳಲ್ಲೂ ನಾಲ್ಕು ಮಾರ್ಗಗಳುಂಟು. ಇಲ್ಲಿ ಮರಾಠ್‌ವಾಡಾ ವಿಶ್ವವಿದ್ಯಾನಿಲಯವೂ ಹತ್ತಿ ಗಿರಣಿಯೂ ಇವೆ.

ಪ್ರಾಚೀನವಾದ ಪ್ರತಿಷ್ಠಾನಪುರ–ಉಜ್ಜಯಿನಿ ವಾಣಿಜ್ಯಮಾರ್ಗ ಔರಂಗಾಬಾದಿನ ಬಳಿಯಲ್ಲಿ ಹಾದುಹೋಗುತ್ತದೆ. ಬೃಹತ್ ಪರ್ವತಶ್ರೇಣಿಗಳ ಮಧ್ಯೆ ವಿಶಾಲ ಬಯಲಿನಲ್ಲಿರುವ ಔರಂಗಾಬಾದ್ ಪ್ರಾಚೀನ ಅವಶೇಷಗಳಿಗೆ ಪ್ರಸಿದ್ಧವಾದದ್ದು. ಇಲ್ಲಿ ಬೆಟ್ಟಸಾಲಿನಲ್ಲಿ ಕೊರೆದ ಬೌದ್ಧರ 11 ಚೈತ್ಯ ಮತ್ತು ವಿಹಾರ ಗುಹೆಗಳಿವೆ. 4ನೆಯ ಗುಹೆಯಲ್ಲಿ ಕ್ರಿ.ಶ. 2ನೆಯ ಶತಮಾನದ ಹೀನಯಾನ ಪಂಥದ ಭವ್ಯ ಬುದ್ಧನ ಮೂರ್ತಿಯುಳ್ಳ ಚೈತ್ಯ ಹಾಗೂ ಚೈತ್ಯವಿಹಾರಗಳಿವೆ. 1, 8, 9ನೆಯ ಗುಹೆಗಳು ಅಪೂರ್ಣ. ಗರ್ಭಗುಡಿಯನ್ನು ಹಿಂದಿನ ಗೋಡೆಯಿಂದ ಬೇರ್ಪಡಿಸಿ, ಪ್ರದಕ್ಷಿಣ ಪಥವಿಟ್ಟಿರುವುದು ಈ ಚೈತ್ಯಗಳಲ್ಲಿ ಹೆಚ್ಚಾಗಿ ಕಾಣುತ್ತದೆ. 3ನೆಯ ಗುಹೆಯಲ್ಲಿರುವ ಸುತಸೋಮಜಾತಕದ ನಿರೂಪಣೆ, ಸ್ತಂಭಗಳ ವೈವಿಧ್ಯಮಯ ಕುಸುರಿ ಕೆಲಸ, ಭಕ್ತ ವೃಂದ ಇವೂ 6ನೆಯ ಗುಹೆಯಲ್ಲಿ ಬೋಧಿಸತ್ತ್ವನೊಡನೆ ಇರುವ ಸ್ತ್ರೀಮೂರ್ತಿಗಳ ಸಾಲು, ಅವಲೋಕಿತೇಶ್ವರ ಪದ್ಮಪಾಣಿ, ತಾರಾವೃಂದದ ಚೌಕಟ್ಟು ಮತ್ತು ನೃತ್ಯ ಗೋಷ್ಠಿ ಇವೂ ಅಂಗಸೌಷ್ಠವ, ಚೆಲುವು, ಶಿಲ್ಪಕಲೆಯ ಪ್ರತಿಭೆ ಮತ್ತು ಕುಶಲತೆಯ ಅತ್ಯುನ್ನತಿಯ ಗುರುತುಗಳಾಗಿವೆ. ಅಜಂತ ಗುಹೆಗಳಲ್ಲಿರುವ ಹಾಗೆ ಅಲ್ಲಲ್ಲಿ ವರ್ಣಚಿತ್ರ ಗಳ ತುಣುಕುಗಳಿವೆ. ಇತ್ತೀಚೆಗೆ ದೃಷ್ಟಿಗೋಚರವಾದ ಎರಡು ಗುಹೆಗಳ ಪೈಕಿ ಒಂದರಲ್ಲಿ ವೀರಭದ್ರ, ಸಪ್ತಮಾತೃಕೆಯರು, ಗಜಾನನ, ದುರ್ಗಾ ಮತ್ತು ಬುದ್ಧನ ಮೂರ್ತಿಗಳಿರುವುದು ಒಂದು ವಿಶೇಷ.

ದಖನಿನ ತಾಜ್‌ಮಹಲ್ ಎಂದು ಪ್ರಸಿದ್ಧವಾಗಿರುವ ಬೀಬೀಕಾ-ಮುಕ್‌ಬರಾದಲ್ಲಿ ಔರಂಗ್‌ಜ಼ೇಬನ ಪತ್ನಿ ದಿಲ್‌ರಸ್ ಬಾನು ಬೇಗಮಳ (1660) ಗೋರಿಯಿದೆ. ಅತುಲ್ಲಾ ಮತ್ತು ಹನ್‌ಸ್ಪತ್ ರೈ ಇದರ ವಾಸ್ತುಶಿಲ್ಪಿಗಳೆಂದು ಮುಖದ್ವಾರದ ಬಲಬಾಗಿಲಿನ ಲೋಹಶಾಸನದಲ್ಲಿದೆ. ಗುಮ್ಮಟದ ಸುತ್ತಲೂ ಒತ್ತಾಗಿ ಸಣ್ಣ ಸಣ್ಣ ಗುಮ್ಮಟಗಳಿದ್ದು, ಎತ್ತರ ಅಗಲಗಳು ಹದವಾಗಿರದೆ, ತಾಜ್‌ಮಹಲಿನ ಸನ್ನಿವೇಶ, ಪ್ರಮಾಣಬದ್ಧ ವಾಸ್ತುಶಿಲ್ಪ, ವೈಶಾಲ್ಯ, ಚೆಲುವು ಮತ್ತು ಕಲಾಭಿ ರುಚಿಗಳಿಗೆ ಇದು ಸರಿಗಟ್ಟದಿದ್ದರೂ ಒಂದು ವಿಧವಾದ ಬಿಳಿಗಾರೆಯಿಂದ ರಚಿಸಿದ (ಸ್ಟಕೊ ಪ್ಲಾಸ್ಟರ್) ಆಲಂಕಾರಿಕ ಚಿತ್ರಗಳಿಗೂ ಲಾವಣ್ಯಕ್ಕೂ ಉದಾಹರಣೆ ಯಾಗಿರುವ ಮೊಗಲರ ಶೈಲಿಯ ಘನವಾದ ಕಟ್ಟಡ.

ಕೆಲವು ಮಸೀದಿಗಳು, ನೌಖಂಡ್ ಅರಮನೆ, ಕಲ್ಲಿನ ಕೋಟೆಗಳಲ್ಲದೆ, ಮಲಿಕ್ ಅಂಬರನ ಕಾಲದಲ್ಲಿ ನೀರು ಪೂರೈಸುವ ಯೋಜನೆಯ ಭಾಗವಾಗಿ ಅದರ ಸರಳತೆ ಯಷ್ಟೆ ಚತುರತೆಯಿಂದ ಕಟ್ಟಿದ ನೀರಿನ ಕಾಲುವೆಯುಳ್ಳ ಯಂತ್ರ ಪಂಚಕ್ಕಿ ಕುತೂ ಹಲಜನಕವಾಗಿದೆ.

ಔರಂಗಾಬಾದ್ ಜಿಲ್ಲೆಯ ವಿಸ್ತೀರ್ಣ 6,314 ಚ.ಮೈ. ಜನಸಂಖ್ಯೆ 15.31,457 (1961). ಈ ಜಿಲ್ಲೆಯ ಉತ್ತರದಲ್ಲಿರುವುದೇ ಸಹ್ಯಾದ್ರಿಶ್ರೇಣಿ. ಅಜಂತ ಮತ್ತು ಜಾಸ್ನ ಬೆಟ್ಟಗಳು ಇದರಲ್ಲಿವೆ. ಗೋದಾವರಿ ನದಿ ಈ ಜಿಲ್ಲೆಯ ನದಿ. ಇದರ ಕೆಲವು ಉಪನದಿಗಳು ಈ ಜಿಲ್ಲೆಯಲ್ಲಿ ಹರಿಯುತ್ತವೆ. ಪರ್ವತಗಳ ಇಳಿಜಾರಿನಲ್ಲಿ ದಟ್ಟ ವಾದ ಕಾಡುಗಳಿವೆ. ಕಾಡುಹಂದಿ, ಕರಡಿ, ತೋಳ ಮುಂತಾದವು ಅಲ್ಲಿರುವ ವನ್ಯ ಮೃಗಗಳು. ಹುಲಿ ಚಿರತೆಗಳನ್ನೂ ಕಾಣಬಹುದು. ಈ ಜಿಲ್ಲೆಯ ಭೂಮಿ ಮಸಬು ಮತ್ತುಮಿಲ್ವಾ ಎಂಬ ಎರಡು ರೀತಿಯದು. ಜೋಳ, ಸಜ್ಜೆ ಮತ್ತು ಗೋದಿ ಇಲ್ಲಿಯ ಮುಖ್ಯ ಆಹಾರ ಬೆಳೆಗಳು. ದ್ವಿದಳಧಾನ್ಯ ಮತ್ತು ಬತ್ತವನ್ನೂ ಬೆಳೆಯು ತ್ತಾರೆ. ಹತ್ತಿ ಮತ್ತು ಎಣ್ಣೆಕಾಳುಗಳನ್ನೂ ಬೆಳೆಯುವುದುಂಟು. ನೇಯ್ಗೆ, ಕಿನ್‌ಕಾಪು ಕೆಲಸ, ಎಣ್ಣೆ ತಯಾರಿಕೆ ಮುಖ್ಯ ಕೈಗಾರಿಕೆಗಳು. ಸಾಗವಾನಿ ಮುಖ್ಯ ಅರಣ್ಯೋತ್ಪನ್ನ. ಜಗತ್ಪ್ರಸಿದ್ಧ ಎಲ್ಲೋರ (ನೋಡಿ) ಮತ್ತು ಅಜಂತ (ನೋಡಿ) ಗುಹೆಗಳು ಇರುವುದು ಈ ಜಿಲ್ಲೆಯಲ್ಲೇ. 13ನೆಯ ಶತಮಾನದ ಕೋಟೆಯುಳ್ಳ ದೌಲತಾಬಾದ್ (ನೋಡಿ) ಇದೇ ಜಿಲ್ಲೆಯಲ್ಲಿದೆ. ಔರಂಗಾಬಾದಿನಿಂದ ಒಂಬತ್ತು

ಮೈಲಿಗಳ ದೂರದಲ್ಲಿ ಬೆಟ್ಟವೊಂದರ ಮೇಲಿರುವ ಈ ನಗರದ ಪೂರ್ವದಹೆಸರು ದೇವಗಿರಿ. 14ನೆಯ ಶತಮಾನದಲ್ಲಿ ದೆಹಲಿಯ ಸುಲ್ತಾನನಾಗಿದ್ದ ಮಹಮ್ಮದ್ ತೊಗಲಖ್ ತನ್ನ ರಾಜಧಾನಿಯನ್ನು ಇಲ್ಲಿಗೆ ಬದಲಾಯಿಸಿ ಇದಕ್ಕೆ ದೌಲತಾಬಾದ್ (ವೈಭವನಗರ) ಎಂದು ಹೆಸರಿಟ್ಟ. ಗೋದಾವರಿ ನದಿಯ ದಡದಲ್ಲಿರುವ ಪೈಠಣ ಒಂದು ಯಾತ್ರಾಸ್ಥಳ. 17ನೆಯ ಶತಮಾನದಲ್ಲಿದ್ದ ವೈಷ್ಣವ ಸಂತ ಏಕನಾಥ ದೇಹತ್ಯಾಗ ಮಾಡಿದ್ದು ಇಲ್ಲೇ. ಔರಂಗಾಬಾದ್ ನಗರಕ್ಕೆ 17 ಮೈಲಿ ದೂರದಲ್ಲಿರುವ ಖುಲ್ದಾಬಾದಿನಲ್ಲಿ ಚಕ್ರವರ್ತಿ ಔರಂಗ್‌ಜ಼ೇಬನ ಸಮಾಧಿಯಿದೆ. ಅದೊಂದು ತೀರ ಸರಳವಾದ ಗೋರಿ. ತಾನು ಬಟ್ಟೆ ಹೊಲಿದು ಸಂಪಾದಿಸಿದಷ್ಟು ಹಣದಿಂದ ಮಾತ್ರ ತನ್ನ ಗೋರಿ ನಿರ್ಮಿಸಬೇಕೆಂದು ಔರಂಗಜ಼ೇಬ್ ಸೂಚನೆ ನೀಡಿದ್ದನೆಂದು ಪ್ರತೀತಿ.

(ಎ.ಎಸ್‌ಯು.;ಬಿ.)

**ಔರಸತ್ವ ಮತ್ತು ಔರಸೀಕರಣ :** ಒಂದು ಮಗುವಿನ ಜನನ ಸಮಯದಲ್ಲಿ ಅದರ ತಂದತಾಯಿಯರು ನ್ಯಾಯಬದ್ಧವಾಗಿ ವಿವಾಹವಾಗಿದ್ದ ಪಕ್ಷದಲ್ಲಿ ಈ ರೀತಿ ಪ್ರಾಪ್ತವಾದ ಸಂತಾನವನ್ನು ಔರಸ ಸಂತಾನವೆಂದು ಕರೆಯಲಾಗುತ್ತದೆ. ಈ ಗುಣ ಅಥವಾ ಕಾನೂನುಬದ್ಧ ಸ್ಥಿತಿಯೇ ಔರಸತ್ವ (ಲೆಜಿಟಿಮೆಸಿ). ಜಾರಜ ಅಥವಾ ಅನೌರಸ ಸಂತಾನವನ್ನು ಔರಸ ಅಥವಾ ಧರ್ಮಸಂತಾನವೆಂದು ಪರಿವರ್ತನ ಮಾಡುವ ಕ್ರಮವೇ ಔರಸೀಕರಣ (ಲೆಜಿಟಿಮೇಷನ್).

ವಿವಾಹ ಬಂಧನದ ಹೊರಗೆ—ಎಂದರೆ ಅಧರ್ಮ ಅಥವಾ ಅನೀತಿಯ ಸಂಬಂಧದಿಂದ—ಹುಟ್ಟಿದ ಮಗು ಜಾರಜ ಅಥವಾ ಅನೌರಸ ಸಂತಾನ (ನೋಡಿ—ಜಾರಜ). ಅದು ಮದುವೆಯಾಗದ ಹೆಂಗಸಿನ ಅಥವಾ ಗಂಡಸಿನ ಮಗುವಾಗಿರಬಹುದು; ಹೆಂಗಸು (ಗಂಡಸು) ಮದುವೆಯಾಗಿದ್ದರೂ ಗಂಡನಲ್ಲದೆ (ಹೆಂಡತಿಯಲ್ಲದೆ) ಬೇರೆಯವರ ಸಂಪರ್ಕದಿಂದ ಹುಟ್ಟಿದ ಮಗುವಾಗಿರಬಹುದು.

ಧರ್ಮ ಅಥವಾ ನ್ಯಾಯದೃಷ್ಟಿಯಿಂದ ಎಲ್ಲ ಸಂತಾನವೂ ಔರಸ ಸಂತಾನವೆಂದೇ ಪರಿಗಣಿಸುವ ಧೋರಣೆಯನ್ನು ಎಲ್ಲ ಸುಶಿಕ್ಷಿತ ರಾಷ್ಟ್ರಗಳೂ ಅನುಸರಿಸುತ್ತಿವೆ. ಎಲ್ಲ ಸಂತಾನವೂ ಧರ್ಮೋತ್ಪನ್ನವೆಂದು ವ್ಯಾವಹಾರಿಕವಾಗಿ ಹೇಳಲು ಸಾಧ್ಯವಾದರೆ ಅದನ್ನು ಧರ್ಮಸಂತಾನವೆಂದು ಪರಿಗಣಿಸಬೇಕೆಂದು ಕಾನೂನಿನ ಧೋರಣೆ. ಯಾವುದೇ ಮಗು ಅನೌರಸ ಅಥವಾ ಅಧರ್ಮಸಂತಾನವೆಂದು ಸ್ಥಿರಪಡದಿದ್ದರೆ ಅಂಥ ಮಗು ಔರಸ ಅಥವಾ ಧರ್ಮಸಂತಾನವೆಂದೇ ಪರಿಗಣಿಸಲ್ಪಡಬೇಕಾಗುತ್ತದೆ.

ಯಾವುದೇ ಮದುವೆಯ ಸಮಾರಂಭ ಆದದ್ದರ ಬಗ್ಗೆ ಸಾಕ್ಷ್ಯ ದೊರೆತರೆ ಆ ಮದುವೆ ನ್ಯಾಯಬದ್ಧವಾಗಿದೆಯೆಂದು ಪ್ರಥಮತಃ ಗ್ರಹಿಸಬೇಕು. ಈ ಬಗೆಯ ಗ್ರಹಿಕೆಯ ವಿರುದ್ಧ ಯಾವುದೂ ನಿರ್ಣಾಯಕ ಸಾಕ್ಷ್ಯ ಇಲ್ಲದಿದ್ದಲ್ಲಿ ಈ ಗ್ರಹಿಕೆಯನ್ನು ಸ್ಥಿರವೆಂದು ಪರಿಗಣಿಸಲಾಗುವುದು.

ವಿವಾಹದ ಅನಂತರ ದಂಪತಿಗಳಿಗೆ ಜನಿಸಿದ ಸಂತತಿ ಧರ್ಮಸಂತತಿಯೆಂದು ಕಾಯಿದೆ ಪರಿಗಣಿಸುತ್ತದೆ. ಗರ್ಭಧಾರಣೆಯ ಕಾಲಕ್ಕೆ ಗಂಡನ ಸಂಪರ್ಕ ವ್ಯಾವಹಾರಿಕವಾಗಿ ಸಾಧ್ಯವಾಗಿರದಿದ್ದರೂ ಅಂಥ ಸಂತಾನ ಧರ್ಮಸಂತಾನವೆಂದೇ ಅಂಗೀಕರಿಸಬೇಕೆಂಬ ಅಭಿಮತವಿದೆ. ಅಲ್ಲದೆ ಗರ್ಭಧಾರಣೆ ಹೆಂಡತಿಯ ದುಶ್ಶೀಲದ ಫಲವಿರಬಹುದೆಂಬ ಸಂಶಯವಿದ್ದರೂ ಆ ಮಗು ಧರ್ಮಸಂತಾನವೆಂದೇ ತಿಳಿಯಬೇಕಾಗುತ್ತದೆ. ವೈವಾಹಿಕ ಸಂಬಂಧ ಕಡಿಯಲ್ಪಡದಿರುವಾಗ ಅಥವಾ ಕೊನೆಗೊಳ್ಳದಿರುವಾಗ ಜನ್ಮತಾಳಿದ ಸಂತತಿಯನ್ನು ಧರ್ಮಸಂತತಿಯೆಂದೇ ಗಣಿಸಲಾಗುವುದು—ಎಂಬ ನಿರ್ಧಾರ ನಿರ್ಣಯಾತ್ಮಕವಲ್ಲ. ಹೀಗೆ ಮಾಡುವ ನಿರ್ಧಾರ ತಪ್ಪೆಂದು ತೋರಿಸಲು ಭಾರತೀಯ ಸಾಕ್ಷ್ಯ ಕಾಯಿದೆಯ 112 ಹಾಗೂ 114ನೆಯ ಕಲಮುಗಳ ಪ್ರಕಾರ ಅವಕಾಶವಿದೆ. ಅನೀತಿಯ ಮದುವೆಯಿಂದ ಉತ್ಪನ್ನವಾದ ಸಂತತಿ ಪಾಶ್ಚಾತ್ಯ ದೇಶಗಳ ಕಾನೂನಿನ ಪ್ರಕಾರ ಅನೌರಸ ಅಥವಾ ಅಧರ್ಮದ್ದೆಂದು ತಿಳಿಯಲಾಗುವುದು. ಅಂಥ ಸಂತತಿಯನ್ನು ಕಾನೂನಿನ ಆಧಾರದ ಮೇಲೆ ಔರಸೀಕರಣ ಅಥವಾ ಧರ್ಮಸಂತತಿಯೆಂದು ನಿರ್ಣಯಿಸಲು ಅವಕಾಶವಿದೆ. ರದ್ದು ಮಾಡಿಸಿಕೊಳ್ಳಬಹುದಾದಂಥ ಮದುವೆಯಿಂದ ಹುಟ್ಟಿದ ಸಂತತಿಯನ್ನು ಔರಸ ಅಥವಾ ಧರ್ಮಸಂತತಿಯೆಂದೇ ಗಣಿಸಲಾಗುತ್ತದೆ. ಆ ಮಗು ಹುಟ್ಟಿದ ಅನಂತರ ಆ ಮದುವೆ ರದ್ದಾದರೆ ಅಥವಾ ಆ ಮದುವೆ ಅನೀತಿಪರವೆಂದು ನಿರ್ಣೀತವಾದರೆ ಆ ಮಗು ಮಾತ್ರ ಔರಸಸಂತತಿಯೆಂದೇ ಪರಿಗಣಿತವಾಗುತ್ತದೆ. ಆ ಮಗುವಿನ ಗರ್ಭಧಾರಣೆಯ ಕಾಲಕ್ಕಿದ್ದ ಅದರ ತಂದೆತಾಯಿಗಳ ಸಂಬಂಧದ ಸ್ವರೂಪದ ಆಧಾರದ ಮೇಲೆ ಮಗು ಧರ್ಮಸಂತತಿಯೋ ಅಥವಾ ಅಧರ್ಮಸಂತತಿಯೋ ಎಂಬುದರ ನಿರ್ಣಯವಾಗುತ್ತದೆ. ಎಂದರೆ ಎಲ್ಲ ಪಾಶ್ಚಾತ್ಯ ರಾಷ್ಟ್ರಗಳ ಕಾಯಿದೆಗಳೂ ಎಲ್ಲ ಸಂತಾನವೂ ಧರ್ಮಸಂತಾನವೆಂದು ಮನ್ನಿಸುವ ಧೋರಣೆಯನ್ನು ಅನುಸರಿಸಿದ್ದು, ಯಾವುದೇ ಸಂತಾನ ಅಧರ್ಮ ಅಥವಾ ಜಾರಜ ಸಂತಾನವೆಂದು ಶಾಶ್ವತವಾಗಿ ಪರಿಗಣಿಸುವ ಬಗ್ಗೆ ಸಮ್ಮತಿ ನೀಡುವ ಮನಃಪ್ರವೃತ್ತಿಯನ್ನು ಹೊಂದಿಲ್ಲ.

ಮದುವೆಗಳು ಅಧರ್ಮ ಅಥವಾ ಅನೀತಿಯವೆಂದು ರದ್ದಾಗಲು ಅನೇಕ ಕಾರಣಗಳಿವೆ. ಮದುವೆಯ ಕಾಲಕ್ಕೆ ಮೊದಲಿನ ಗಂಡ ಅಥವಾ ಹೆಂಡತಿ ಜೀವಂತವಾಗಿದ್ದು ಹಾಗೆ ಜೀವಂತವಿಲ್ಲವೆಂದು ನೆರೆನಂಬಿ ಮದುವೆಯಾಗಿದ್ದರೆ ಆ ಸಂಬಂಧದಿಂದ ಹುಟ್ಟಿದ ಮಗುವನ್ನು ಔರಸ ಅಥವಾ ಧರ್ಮಸಂತಾನವೆಂದು ತಿಳಿಯಬೇಕೆಂದು ಕೆಲವು ರಾಷ್ಟ್ರಗಳ ಕಾನೂನುಗಳು ಹೇಳುತ್ತವೆ. ಮೊದಲನೆಯ ಮದುವೆ ಮುಕ್ತಾಯವಾಗಿದೆ ಅಥವಾ ರದ್ದಾಗಿದೆ ಎಂದು ಭಾವಿಸಿ, ಇಲ್ಲವೆ ಮೊದಲನೆಯ ಮದುವೆಯಾಗಿರುವ ಬಗ್ಗೆ ತಿಳುವಳಿಕೆಯೇ ಇಲ್ಲದಿದ್ದಾಗ ಮದುವೆಯಾಗಿ ಆ ಮದುವೆಯ ಸಂಬಂಧದಿಂದ ಮಗು ಹುಟ್ಟಿದರೆ ಮುಂದೆ ಆ ಮದುವೆ ರದ್ದಾದರೂ ಆ ಮಗು ಮಾತ್ರ ಔರಸ ಅಥವಾ ಧರ್ಮಸಂತಾನವೆಂದೇ ತಿಳಿಯಬೇಕೆಂದು ಕೆಲವು ರಾಷ್ಟ್ರಗಳ ಕಾನೂನುಗಳು ಹೇಳುತ್ತವೆ. ಮಗುವಿನ ತಾಯಿ ಆ ಮಗುವಿನ ತಂದೆಯಾದ ಗಂಡನಿಂದ ಬಿಡುಗಡೆ ಪಡೆಯದೆ, ಮದುವೆಯನ್ನು ರದ್ದುಪಡಿಸಿಕೊಳ್ಳದೆ, ಮತ್ತೊಬ್ಬನನ್ನು ಮದುವೆಯಾದರೆ ಅಂಥ ಮಗುವನ್ನು ಜಾರಜ ಅಥವಾ ಅಧರ್ಮಸಂತಾನವೆಂದು ಪರಿಗಣಿಸಲಾಗದು.

ಒಂದು ಸಲ ಆದ ಮದುವೆ ಮುಂದೆ ರದ್ದಾದರೆ ಹಾಗೆ ರದ್ದಾಗುವುದಕ್ಕೆ ಮುಂಚೆ ಹುಟ್ಟಿದ ಮಗು ಜಾರಜನೆಂದಾಗುವುದಿಲ್ಲ. ಮದುವೆಯನ್ನು ರದ್ದುಪಡಿಸುವ ನಿರ್ಣಯದಿಂದ ಆ ಮಗುವಿನ ಔರಸತ್ವವನ್ನು ಅಥವಾ ಧರ್ಮಜನನವನ್ನು ಅಲ್ಲಗಳೆಯಲಾಗುವುದಿಲ್ಲ. ಇಂಥ ನಿರ್ಣಯದಲ್ಲಿ ಆ ಮಗುವಿನ ಔರಸತ್ವವನ್ನು ಮನ್ನಿಸಿ ಅದರ ಸ್ಥಾನವನ್ನು ರಕ್ಷಿಸುವಂತೆ ನಿರ್ದೇಶಿಸಿ ಮದುವೆಯನ್ನು ರದ್ದುಪಡಿಸುವುದಕ್ಕೆ ಅವಕಾಶವಿದೆ. ಮದುವೆ ಆದ ಅತ್ಯಲ್ಪಕಾಲದಲ್ಲಿ ಮಗುವಿನ ಜನ್ಮವಾದರೆ ಅದು ವಿವಾಹಪೂರ್ವದ ಸಂಬಂಧದಿಂದ ಹುಟ್ಟಿದುದು ಎಂದು ಖಚಿತವಾಗಿದ್ದರೂ ಮಗು ಹುಟ್ಟಿದಾಗ ಆ ತಾಯಿಯ ಮದುವೆಯಾಗಿರುವುದರಿಂದ ಆ ಮಗುವನ್ನು ಔರಸ ಅಥವಾ ಧರ್ಮಸಂತಾನವೆಂದೇ ಪರಿಗಣಿಸಲಾಗುವುದು. ಈ ಔರಸತ್ವದ ಬಗ್ಗೆ ಮಾಡುವ ಪ್ರಥಮ ನಿರ್ಧಾರ ನಿರ್ಣಾಯಕವೆಂದು ತಿಳಿಯತಕ್ಕದ್ದಲ್ಲ. ಈ ಗ್ರಹಿಕೆಯನ್ನು ಅಲ್ಲಗಳೆಯುವಾಗ ಗಂಡ ಷಂಡನೆಂದು ಅಥವಾ ತಾಯಿಯಾದ ಹೆಂಡತಿಯ ಸಂಗಡ ಆತನ ಸಂಪರ್ಕವಿದ್ದಿಲ್ಲವೆಂದು ಇಲ್ಲವೇ ವಿವಾಹಪೂರ್ವದಲ್ಲಿ ಗಂಡ ಹೆಂಡತಿಯೊಡನೆ ಸುರತಸಂಬಂಧವನ್ನಿಟ್ಟಿರಲಿಲ್ಲವೆಂದು ತೋರಿಸಲು ಅವಕಾಶವಿದೆ.

ಬಹಳ ಕಾಲದ ವರೆಗೆ ಔರಸತ್ವವನ್ನು ಅನುಮೋದಿಸುವುದರಿಂದ ಅಥವಾ ಬಹಳ ಕಾಲದ ವರೆಗೆ ಅದನ್ನು ವಿರೋಧಿಸಿಲ್ಲವೆಂಬ ಕಾರಣದಿಂದ ಔರಸತ್ವಪ್ರತಿಪಾದನೆಗೆ ಬಲ ಬರುತ್ತದೆ. ಸಂಬಂಧಪಟ್ಟ ದಂಪತಿಗಳು ಸತ್ತುಹೋಗಿದ್ದರೆ ಈ ನಿರ್ಧಾರ ವಿಶೇಷವಾಗಿ ಸತ್ಯವೆಂದು ಕಂಡುಬರುವುದು. ಮತ್ತು ಇಂಥ ಸಂದರ್ಭಗಳಲ್ಲಿ ಅನೌರಸತ್ವದ ಗ್ರಹಿಕೆ ಉಳಿಯುವುದಿಲ್ಲ.

ತಾಯಿಯಲ್ಲದ ಬೇರೆ ಹೆಂಗಸಿನ ಪೋಷಣೆಯಲ್ಲಿ ಮಗು ಇದ್ದುದು ಕಂಡುಬಂದರೂ ಅದು ಆ ಮಗುವಿನ ಪೋಷಣೆ ಮಾಡುವ ಹೆಂಗಸಿನ ಹಾಗೂ ಅವಳ ಗಂಡನ ಸಂಯೋಗದಿಂದ ಹುಟ್ಟಿದ ಮಗುವೆಂದು ಗ್ರಹಿಸಲು ಸಾಧ್ಯವಿಲ್ಲ.

ಮೇಲಿನ ತತ್ತ್ವಗಳು ಪಾಶ್ಚಾತ್ಯ ದೇಶಗಳಲ್ಲಿ ಅನುಸರಣೆಯಲ್ಲಿದ್ದು ಭಾರತದಲ್ಲಿಯೂ ಇತ್ತೀಚೆಗೆ ಕೆಲವು ಮಟ್ಟಿಗೆ ಇವನ್ನು ಅನುಸರಿಸಲಾಗಿದೆ. ಮದುವೆಯಾದ ಗಂಡಹೆಂಡಿರ ಪೈಕಿ ಒಬ್ಬರು ಬೇಡಿದ ಕಾರಣದಿಂದ ದಾಂಪತ್ಯಸಂಬಂಧ ಕೊನೆಗೊಂಡಿತೆಂದು ನಿರ್ಣಯವಾದರೂ ವೈವಾಹಿಕ ಸಂಬಂಧ ಉಳಿದಿದ್ದ ಕಾಲದಲ್ಲಿ ಹುಟ್ಟಿದ ಸಂತತಿ ಎಲ್ಲ ಉದ್ದಿಶ್ಯಗಳಿಗಾಗಿ ಆ ದಂಪತಿಗಳ ಔರಸ ಅಥವಾ ಧರ್ಮಸಂತಾನವೆಂದೇ 1955ರ ಹಿಂದೂ ವಿವಾಹ ಕಾಯಿದೆಯ 16ನೆಯ ಕಲಮಿನನ್ವಯ ಪರಿಗಣಿಸಲಾಗುವುದು. ಆದರೆ ಆ ಕಲಮಿನ ಅಪವಾದದ ಮೂಲಕ ಆ ಸಂತತಿ ತನ್ನ ತಂದೆತಾಯಿಯರ ಹೊರತು ಬೇರೆ ಯಾವುದೇ ವ್ಯಕ್ತಿಯ ಆಸ್ತಿಯಲ್ಲಿ ಹಿತಸಂಬಂಧವನ್ನು ಪಡೆಯುವ ಹಕ್ಕುಳ್ಳದ್ದಾಗುವುದಿಲ್ಲ. ಕೋರ್ಟಿನ ನಿರ್ಣಯವಿದ್ದರೂ ಈ ಪರಿಣಾಮ ಉಂಟಾಗುವುದಿಲ್ಲ. ರದ್ದಾಗಬಹುದಾದಂಥ ಮದುವೆಯನ್ನು ಅಲ್ಲಗಳೆಯುವ ಅಧಿಕಾರ ಆ ಮದುವೆಗೆ ಸಂಬಂಧಿಸಿದ ಇಬ್ಬರಿಗೂ ಇರುತ್ತದೆ. ಮದುವೆಗೆ ಸಂಬಂಧಪಟ್ಟ ಇಬ್ಬರೂ ಜೀವಂತವಿರುವ ವರೆಗೆ ಮಾತ್ರ ಆ ಮದುವೆಯನ್ನು ಅಲ್ಲಗಳೆಯುವ ಅಧಿಕಾರ ಯಾರೊಬ್ಬರಿಗೂ ಉಂಟಾಗಬಹುದು. ಈ ಇಬ್ಬರಲ್ಲಿ ಒಬ್ಬರು ಮರಣ ಹೊಂದಿದ ಅನಂತರ ಈ ಮದುವೆಯನ್ನು ಅಲ್ಲಗಳೆಯುವ ಅಧಿಕಾರ ಇನ್ನೊಬ್ಬರಿಗೂ ಉಳಿಯುವುದಿಲ್ಲ. ಅಂಥ ಮದುವೆಯಿಂದ ಉಂಟಾದ ಸಂತಾನ ಔರಸ ಅಥವಾ ಧರ್ಮಸಂತಾನವೆಂದೇ ಪರಿಗಣಿಸಲ್ಪಟ್ಟು ಆ ಪ್ರಕಾರ ರಕ್ಷಿಸಲ್ಪಡುತ್ತದೆ.

**ಔರಸೀಕರಣ :** ಒಮ್ಮೆ ಅನೌರಸವಾಗಿ ಪಡೆದ ಸಂತಾನದ ತಂದೆತಾಯಿಯರು ಅನಂತರ ಪರಸ್ಪರ ಮದುವೆ ಮಾಡಿಕೊಂಡು ಅದನ್ನು ಔರಸಸಂತಾನವಾಗಿ ಪರಿವರ್ತಿಸುವುದು ಸಾಧ್ಯವಿಲ್ಲವೆಂಬುದು ಇಂಗ್ಲೆಂಡಿನ ಸಂಪ್ರದಾಯ ನ್ಯಾಯದ ಕಟ್ಟಳೆಯಾಗಿತ್ತು. ಅನೌರಸಸಂತಾನದ ಅವಿವಾಹಿತ ತಂದೆತಾಯಿಯರು ಮದುವೆ

ಯಾದ ಕೂಡಲೇ ಆ ವಿವಾಹದ ಫಲವಾಗಿ ಆ ಸಂತಾನ ಔರಸವಾಗುತ್ತದೆಯೆಂಬುದಾಗಿ 1926ರಲ್ಲಿ ಕಾಯಿದೆಯಿಂದ ಸಿದ್ಧವಾಯಿತು. 1959ರ ಕಾಯಿದೆ ಇನ್ನೂ ಉದಾರವಾಗಿದೆ. ಮಗುವಿನ ತಂದೆ ಅಥವಾ ತಾಯಿ ಇನ್ನೊಂದು ವ್ಯಕ್ತಿಯೊಂದಿಗೆ ಮದುವೆಯಾಗಿದ್ದ ಪಕ್ಷದಲ್ಲಿ, ಅವರ ಪರಸ್ಪರ ಮದುವೆಯಾದ ಕೂಡಲೇ ಆ ಮಗು ಔರಸ ಸಂತಾನವಾಗುತ್ತದೆಂದು ಅದರಲ್ಲಿ ಹೇಳಲಾಗಿದೆ. ವಿವಾಹ ಬಂಧನ ಕಾಲದಲ್ಲಿ ಮಗು ಹುಟ್ಟಿತೆಂಬುದೇ ಅದರ ಔರಸತ್ವ ಸ್ಥಾಪನೆಗೆ ಸಾಕಷ್ಟು ಕಾರಣವೆಂದು ಅಮೆರಿಕ ಸಂಯುಕ್ತಸಂಸ್ಥಾನದ ಕಾನೂನು ಸಾರುತ್ತದೆ. ಆದರೆ ತಂದೆಯ ನಪುಂಸಕತ್ವ, ಗರ್ಭಧಾರಣೆಯ ಕಾಲದಲ್ಲಿ ಆತನ ಸಂಪರ್ಕರಾಹಿತ್ಯ—ಇಂಥ ಯಾವುದಾದರೂ ರುಜುವಾತು ಕೊಟ್ಟು ಅದನ್ನು ಅನೌರಸಸಂತಾನವೆಂದು ಸ್ಥಾಪಿಸಬಹುದಾಗಿದೆ. ಅನೌರಸಸಂತಾನವನ್ನು ಅನಂತರದ ಮದುವೆಯಿಂದ ಔರಸೀಕರಣಗೊಳಿಸಬಹುದೆಂಬ ತತ್ತ್ವವನ್ನು ಅಮೆರಿಕದಲ್ಲೂ ಮಾನ್ಯಮಾಡಲಾಗಿದೆ. ಮದುವೆಯಾಗದಿದ್ದರೂ ತಂದೆತನವನ್ನೊಪ್ಪಿಕೊಂಡು ಮಗುವನ್ನು ಔರಸಸಂತಾನವೆಂದು ಸ್ಥಾಪಿಸಬಹುದೆಂಬ ಕಾನೂನು ಅಮೆರಿಕದ ಅನೇಕ ರಾಜ್ಯಗಳಲ್ಲಿ ಜಾರಿಗೆ ಬಂದಿದೆ. ಒಮ್ಮೆ ಅನೌರಸವೆನಿಸಿಕೊಂಡಿದ್ದು ಅನಂತರ ಔರಸೀಕರಣವಾದ ಸಂತಾನಗಳ ವಾರಸು ಹಕ್ಕುಗಳನ್ನು ಪುರಸ್ಕರಿಸುವ ಕಾಯಿದೆಗಳೂ ಇವೆ.

ಔರಸೀಕರಣದ ಕ್ರಮ ಅನೌರಸ ಸಂತಾನದ ತಂದೆಯ ಖಾಯಂ ವಾಸಸ್ಥಳದ ಕಾಯಿದೆಯನ್ನು ಅವಲಂಬಿಸಿರುತ್ತದೆ. ಆದ್ದರಿಂದ ಔರಸೀಕರಣದ ವೇಳೆಯಲ್ಲಿಯ ವಾಸಸ್ಥಳದ್ದೇ ಪ್ರಾಮುಖ್ಯ. ಒಮ್ಮೆ ಅಲ್ಲಿಯ ಕಾಯಿದೆಯ ಪ್ರಕಾರ ಔರಸೀಕರಣವಾದಲ್ಲಿ ಮುಂದೆ ಆ ತಂದೆ ಯಾವ ದೇಶಕ್ಕೆ ವಾಸಸ್ಥಳವನ್ನು ಬದಲಾಯಿಸಿದರೂ ಔರಸೀಕರಣ ರದ್ದಾಗುವುದಿಲ್ಲ. ವಾಸಸ್ಥಳದ ಬದಲಾವಣೆಯಿಂದ ಒಮ್ಮೆ ಪಡೆದ ಔರಸೀಕರಣ ನಿರುಪಯೋಗಿ ಅಥವಾ ನಿರರ್ಥಕವಾಗುವುದಿಲ್ಲ. ಉದಾಹರಣಾರ್ಥವಾಗಿ, ತಂದೆತಾಯಿಗಳು ಮಗುವಿನ ಜನನದ ಅನಂತರ ಮದುವೆ ಮಾಡಿಕೊಂಡರೆ ಇಲ್ಲವೆ ಆಗಿರುವ ಅಧರ್ಮದ ಮದುವೆಗೆ ಮನ್ನಣೆ ಪಡೆದರೆ ಅಥವಾ ಅನೌರಸ ಸಂತಾನವನ್ನೂ ಔರಸೀಕರಣಗೊಳಿಸಿದರೆ ಅಂಥ ಸಂತಾನದ ಬದಲಾದ ಸ್ಥಿತಿ ತಂದೆಯ ವಾಸಸ್ಥಾನ ಬದಲಾದರೂ ಅಬಾಧಿತವಾಗಿ ಮುಂದುವರಿಯುತ್ತದೆ. ಔರಸೀಕರಣದ ಮೂಲಕ ಪ್ರಾಪ್ತವಾದ ಔರಸತ್ವ ತಂದೆಯ ವಾಸಸ್ಥಾನ ಅಥವಾ ಕಾಯಿದೆಯ ಬದಲಾವಣೆಯಿಂದ ನಷ್ಟವಾಗುವುದಿಲ್ಲ. ಸಾಮಾನ್ಯವಾಗಿ ಔರಸೀಕರಣದಿಂದ ಸಂತಾನದ ಪರಿಸ್ಥಿತಿ ಬದಲಾಗುತ್ತದೆ. ಅಧರ್ಮ ಅಥವಾ ಅನೀತಿಯ ಸಂತಾನ ಔರಸೀಕರಣದಿಂದ ಧರ್ಮಸಂತಾನವೆಂದು ಪರಿಗಣಿತವಾಗುವುದಲ್ಲದೆ ಧರ್ಮಸಂತಾನಕ್ಕೆ ಸಲ್ಲಬೇಕಾದ ಸಾರ್ವಜನಿಕ, ಸಾಮಾಜಿಕ ಮತ್ತು ನ್ಯಾಯಸಮ್ಮತವಾದ ಎಲ್ಲ ಹಕ್ಕುಗಳೂ ಅದಕ್ಕೆ ಪ್ರಾಪ್ತವಾಗುತ್ತವೆ. ಅಂದರೆ ಇಂಥ ಸಂತಾನದ ಕಾನೂನು ಅಥವಾ ಸಾಮಾಜಿಕ ಸ್ಥಿತಿ ನೈಸರ್ಗಿಕ (ಜನಕ) ತಂದೆಯ ಔರಸಸಂತಾನದ ಸ್ಥಿತಿಯಂತೆ ಬದಲಾಗುವುದು. ಒಮ್ಮೆ ಒಂದು ಮಗುವಿನ ಔರಸೀಕರಣವಾದರೆ ಅದರ ಸ್ಥಿತಿ ಸರ್ವಕಾಲಿಕ, ಸಾರ್ವತ್ರಿಕ ಹಾಗೂ ಸರ್ವ ಉದ್ದೇಶಗಳಿಗಾಗಿ ಸ್ಥಾಪಿತವಾದ ಹಾಗೆ. ತಂದೆ ತೆಗೆದುಕೊಂಡ ಕ್ರಮದಿಂದ ಈ ಔರಸೀಕರಣ ಉಂಟಾಗಿದ್ದರೆ ಔರಸೀಕೃತ ಸಂತಾನ ವಾರಸು ಹಕ್ಕು ಸಹಿತವಾಗಿ ಔರಸಸಂತಾನದ ಎಲ್ಲ ಹಕ್ಕುಗಳನ್ನೂ ಪಡೆಯುತ್ತದೆ. ಒಮ್ಮೆ ಔರಸೀಕರಣವಾದ ಮೇಲೆ ಆ ತಂದೆಗೆ ಔರಸೀಕರಣವನ್ನು ಅಲ್ಲಗಳೆಯಲು ಹಾಗೂ ತಾನು ಔರಸೀಕರಣಕ್ಕಾಗಿ ತೆಗೆದುಕೊಂಡ ಕ್ರಮ ತಪ್ಪು ಎನ್ನಲು ಮತ್ತು ಅಂಥ ಸಂತಾನ ಅನೌರಸವೆಂದು ಸಾಧಿಸಲು ಕಾಯಿದೆಯ ಪ್ರತಿಬಂಧಕವಿರುತ್ತದೆ.

ಅಂಥ ಮಗು ವಾರಸುಹಕ್ಕನ್ನು ಪಡೆಯುವುದಲ್ಲದೆ ಮುಂದಿನ ಸಂತತಿಗೆ ವಾರಸು ಹಕ್ಕನ್ನು—ತನ್ನ ತಂದೆಯ ವಾರಸು ಹಕ್ಕು ಸಹಿತವಾಗಿ—ನೀಡಲು ಸಮರ್ಥವಾಗುತ್ತದೆ. ಇಂಥ ಕಾನೂನಿನ ಮೂಲಕ ಯಾವುದೇ ವ್ಯಕ್ತಿ ಔರಸನೆಂದು ಮನ್ನಿಸಲ್ಪಟ್ಟಿದರೆ ಮತ್ತು ಕೆಲವೊಂದು ಹಕ್ಕುಗಳಿಗೆ ಬಾಧ್ಯಸ್ಥನಾಗಿದ್ದರೆ ಇನ್ನೊಂದು ಕಾನೂನಿನ ಅರ್ಥ ಹಾಗೂ ಪರಿಣಾಮವನ್ನು ವಿಚಾರಿಸಬೇಕಾದಾಗ ಇಂಥ ಸಂತಾನ ಯಾವುದೇ ಸೂಚ್ಯಾರ್ಥದ ಮೂಲಕ, ವಾದದ ಮೂಲಕ ಇಲ್ಲವೇ ಅರ್ಥವಿವರಣೆಯ ಮೂಲಕ ಜಾರಜನೆಂದು ತಿಳಿಯಲಾಗದೆಂಬ ದೃಷ್ಟಿ ಬೆಳೆದು ಬಂದಿದೆ ಮತ್ತು ಆ ವ್ಯಕ್ತಿಗೆ ಪ್ರಾಪ್ತವಾದ ಹಕ್ಕುಗಳನ್ನು ಆ ವ್ಯಕ್ತಿ ಅನಂತರ, ಆದರೆ ಅವನ ತಂದೆಯ ಮರಣದ ಪೂರ್ವದಲ್ಲಿ, ಕಾಯಿದೆಯಲ್ಲಿ ಉಂಟಾಗಬಹುದಾದ ಬದಲಾವಣೆಯ ಮೂಲಕ ಕಸಿದುಕೊಳ್ಳಬಾರದೆಂಬ ದೃಷ್ಟಿಯೂ ಬೆಳೆದು ಬಂದಿದೆ.

ವಾರಸುಹಕ್ಕಿನಿಂದ ಒಮ್ಮೆ ಔರಸಸಂತಾನಕ್ಕೆ ಬಂದ ಆಸ್ತಿ ಅದರ ಅನಂತರದಲ್ಲಿ ಔರಸೀಕೃತವಾದ ಜಾರಜನಿಗೆ ಸಲ್ಲತಕ್ಕದ್ದಲ್ಲ.

ಜಾರಜಸಂತಾನವನ್ನು ಔರಸೀಕರಣ ಮಾಡುವುದಕ್ಕಾಗಿ ಹಿಂದೂ ಕಾಯಿದೆ ಯಾವ ನಿಯಮಗಳನ್ನೂ ಮಾಡಿದಂತೆ ಕಾಣುವುದಿಲ್ಲ. ದ್ವಿಜರಲ್ಲಿ ಜಾರಜರಿಗೆ ವಾರಸುಹಕ್ಕು ಪ್ರಾಪ್ತವಾಗುವುದಿಲ್ಲ. ಆದರೆ ಹಿಂದೂ ಕಾಯಿದೆ ದಾಸೀಪುತ್ರ—ಖಾಯಂ ಆಗಿ ಇಟ್ಟುಕೊಂಡವಳ (ಅವಿರುದ್ಧ ಸ್ತ್ರೀ) ಮಗು—ಮತ್ತು ಜಾರಜತನದಿಂದ ಹುಟ್ಟಿದ ಮಗು ಇವರಲ್ಲಿ ಅಂತರವನ್ನು ಪರಿಗಣಿಸುತ್ತದೆ. ಮೇಲೆ ಹೇಳಿದ ಇಬ್ಬರಲ್ಲಿ ಮೊದಲನೆಯ ಮಾದರಿಯ ಜಾರಜನಿಗೆ ಕೆಲವೊಂದು ಹಕ್ಕುಗಳನ್ನು ಹಿಂದೂ ಕಾಯಿದೆ ಕಲ್ಪಿಸಿದೆ; ಮತ್ತು ಅವನ್ನು ಕಾನೂನಿನಿಂದ ಸ್ಥಾಪಿಸಿಕೊಳ್ಳಲು ಅವಕಾಶವಿದೆ. ಇಂಥ ಸಂತಾನಕ್ಕೆ ಅವಿಭಾಜ್ಯ ಹಿಂದೂ ಸಂಸಾರದಲ್ಲಿ ಯಾವ ಸ್ಥಾನವೂ ಇಲ್ಲದಿದ್ದಾಗ್ಯೂ ಅವನ ಜೀವಮಾನದ ವರೆಗೆ ಜೀವನಾಂಶ ಅಥವಾ ಪೋಟಗಿ ಪಡೆಯುವ ಹಕ್ಕನ್ನು ಮಾನ್ಯಮಾಡಲಾಗಿದೆ. ಮತ್ತು ದ್ವಿಜರಲ್ಲದವರಲ್ಲಿ ಜಾರಜನಿಗೂ ಕೂಡ–ಅವನು ದಾಸೀಪುತ್ರನಾಗಿದ್ದರೆ–ತನ್ನ ತಂದೆಯ ಆಸ್ತಿಯಲ್ಲಿ ಪಾಲು ಕೇಳುವ ಹಕ್ಕಿದೆ. ಆದರೆ ಅವನಿಗೆ ಬರುವ ಪಾಲು ಔರಸನಿಗೆ ಬರುವ ಪಾಲಿಗೆ ಸಮವಾಗಿರಬಹುದು. 1956ರ ಹಿಂದೂ ದತ್ತಕ ಹಾಗೂ ಜೀವನಾಂಶ ಕಾಯಿದೆಯ ಕಲಮು 20ರ ಪ್ರಕಾರ ಹಿಂದೂ ತಂದೆ ಇಲ್ಲವೆ ತಾಯಿಗೆ ತನ್ನ ಜೀವಮಾನದ ವರೆಗೆ ತನ್ನ ಜಾರಜ ಸಂತಾನವನ್ನು ಪೋಷಣೆ ಮಾಡುವ ಜವಾಬ್ದಾರಿ ಇರುತ್ತದೆ. ಮತ್ತು ಜಾರಜ ತಾನು ಅವಯಸ್ಕನಾಗಿರುವಷ್ಟು ಕಾಲ ತನ್ನ ತಂದೆ ಇಲ್ಲವೆ ತಾಯಿಯಿಂದ ಪೋಟಗಿ ಪಡೆಯಲು ಅಧಿಕಾರ ಉಳ್ಳವನಾಗಿರುತ್ತಾನೆ. ಜಾರಜರ ಜೀವನಾಂಶದ ಹಕ್ಕು ಅವರ ವೈಯಕ್ತಿಕ ಹಕ್ಕಾಗಿದ್ದು ಅವರ ಮರಣದ ಅನಂತರ ಅವರ ಸಂತತಿಗೆ ಉತ್ತರಾಧಿಕಾರ ಕ್ರಮದಿಂದ ಮುಂದುವರಿಯುವುದಿಲ್ಲ.

"ಅಂಗೀಕಾರ" ಮಾಡುವುದರ ಮೂಲಕ ಜಾರಜಸಂತಾನವನ್ನು ಔರಸವೆಂದು ಪರಿಗಣಿಸುವ ನಿಯಮ ಮಹಮ್ಮದೀಯರ ಕಾಯಿದೆಯಲ್ಲಿದೆ. ಈ ಅಂಗೀಕಾರ ಪದ್ಧತಿಯಿಂದ ವಾರಸುಹಕ್ಕೂ ಪ್ರಾಪ್ತವಾಗುತ್ತದೆ. ಅಂಗೀಕಾರ ಪ್ರಕಟವಾಗಿರಬಹುದು ಇಲ್ಲವೆ ಸೂಚ್ಯವಾಗಿರಬಹುದು. ಒಬ್ಬ ಒಂದು ಮಗುವನ್ನು ನಿರಾತಂಕವಾಗಿ ಹಾಗೂ ಬಹಿರಂಗವಾಗಿ ಔರಸಸಂತಾನವೆಂದು ಪರಿಗಣಿಸಿದರೆ ಆ ಮೂಲಕ ಅವನನ್ನು ಔರಸಸಂತಾನವೆಂದು ಅಂಗೀಕರಿಸಿದಂತೆಂದು ತಿಳಿಯಬೇಕು. ಅಂಗೀಕಾರದಿಂದ ವಾರಸುಹಕ್ಕು ನೀಡಿದಂತೆ. ಒಮ್ಮೆ ಅಂಗೀಕಾರವಾದ ಮೇಲೆ ಅದನ್ನು ರದ್ದುಪಡಿಸಲು ಅಥವಾ ಮುರಿದುಕೊಳ್ಳಲು ಕಾಯಿದೆಯಿಂದ ಅವಕಾಶವಿಲ್ಲ.

(ಎಂ.ಕೆ.ಎಸ್‌ಡಬ್ಲ್ಯು.)

**ಔರ್‌ಬಾಹ್ ಬೆರ್ಥೋಲ್ಡ್ :** 1812–1882. 19ನೆಯ ಶತಮಾನದ ಮಧ್ಯಭಾಗದಲ್ಲಿ ಬಹು ಜನಪ್ರಿಯನಾಗಿದ್ದ ಜರ್ಮನ್ ಕಾದಂಬರಿಕಾರ. ಬ್ಲಾಕ್ ಫಾರೆಸ್ಟ್‌ನ ವುರ್ಟೆಮ್‌ಬೆರ್ಗ್ ಭಾಗದ ನಾರ್ಡ್‌ಸ್ಟೆಟನ್ ಎಂಬ ಊರಿನ ಯೆಹೂದಿ ಕುಟುಂಬವೊಂದರಲ್ಲಿ ಜನಿಸಿದ. ಯೆಹೂದಿ ಧಾರ್ಮಿಕ ಮಡಿವಂತಿಕೆಯ ಕಟ್ಟನ್ನು ಬಹುಬೇಗ ಕಳಚಿಕೊಂಡು ಟ್ಯೂಬಿಂಗನ್ ವಿಶ್ವವಿದ್ಯಾನಿಲಯದಲ್ಲಿ ಒಂದು ವರ್ಷವಿದ್ದು ವ್ಯಾಸಂಗಮಾಡಿದ. ಆಗಲೇ ಈತನಿಗೆ ಸುವಿಖ್ಯಾತ ತತ್ತ್ವಜ್ಞನಾಗಿದ್ದ ಸ್ಪಿನೋಜ಼ನಲ್ಲಿ ಆಸಕ್ತಿಯುಂಟಾಯಿತು. ಮೆಚ್ಚುಗೆಯೂ ಆಯಿತು. ಆತನನ್ನೇ ನಾಯಕನನ್ನಾಗಿ ಮಾಡಿಕೊಂಡು ಸ್ಪಿನೋಜ಼ ಎಂಬ ತನ್ನ ಮೊದಲ ಕಾದಂಬರಿಯನ್ನು ಬರೆದು ಪ್ರಕಟಿಸಿದ (1837). 18ನೆಯ ಶತಕದ ಯೆಹೂದಿ ಜೀವನವನ್ನಾಧರಿಸಿ ದಿಷ್ಟರ್ ಊಂಡ್ ಕಾಫ್‌ಮನ್ ಎಂಬ ಮತ್ತೊಂದು ಕಾದಂಬರಿಯನ್ನು ಪ್ರಕಟಿಸಿದ (1839).

ಷ್ವಾರ್ಜ್‌ವಾಲ್ಡೆರ್ ಡೋರ್ಫ್ ಗೆಷಿಷ್ಟೆನ್ ಎಂಬ ಬೃಹತ್ ಕಾದಂಬರಿಯ ಮೊದಲ ಭಾಗ 1843ರಲ್ಲೇ ಬಂದರೂ ಅದನ್ನು ಪೂರ್ಣವಾಗಿ ಬರೆಯಲು ಹತ್ತು ವರ್ಷ ಹಿಡಿಯಿತು. ಮೊದಲ ಭಾಗ ಪ್ರಕಟವಾಗುತ್ತಲೆ ಅದರ ಕೀರ್ತಿ ಹಬ್ಬಿತು. ಸಮಾಜದಲ್ಲಿ ಕ್ರಾಂತಿಯುತ ಮಾರ್ಪಾಟಾಗಬೇಕು ಎಂಬ ಉದ್ದೇಶವಿಟ್ಟುಕೊಂಡೇ ಬರೆಯುತ್ತಿದ್ದವರ ಕಾದಂಬರಿಗಳನ್ನೇ ಓದಿ ಓದಿ ಸಾಕಾಗಿಹೋಗಿದ್ದ ವಾಚಕರಿಗೆ ಹಳ್ಳಿಗಾಡಿನ ಬದುಕನ್ನು ಕುರಿತ ಈ ಕಾದಂಬರಿ ಅಪೇಕ್ಷಣೀಯ ಸಮಯಕ್ಕೆ ಬೀಸಿದ ಹಿತವಾದ ತಂಗಾಳಿಯಂತೆ ಸ್ವಾಗತಾರ್ಹವಾಯಿತು.

ಹಳ್ಳಿಯ ಜೀವನವನ್ನು ಚಿತ್ರಿಸುವಂಥ ಕಾದಂಬರಿಗಳನ್ನು ಬರೆದ ಮೊದಲಿಗರಲ್ಲಿ ಈತನೂ ಒಬ್ಬ. ಆಗ ಜರ್ಮನ್ ಸಾಹಿತ್ಯದಲ್ಲಿ ವಾಸ್ತವತಾವಾದದ ಹೊಸ ದೃಷ್ಟಿ ಪ್ರಮುಖವಾಗಿತ್ತು. ಯಾವ ಅತಿರೇಕಕ್ಕೂ ವಾಲದೆ ವಾಸ್ತವತೆ ಹಾಗೂ ರಮ್ಯತೆಯ ಮಧುರ ಮಿಶ್ರಣವನ್ನು ತನ್ನ ಕೃತಿಗಳಲ್ಲಿ ಬಳಸಿಕೊಂಡ ಔರ್‌ಬಾಹ್ ಜನಪ್ರಿಯನಾದ.

ತನ್ನ ಸಮಕಾಲೀನ ಬದುಕಿನ ಸಾಮಾಜಿಕ, ಆರ್ಥಿಕ ಸಮಸ್ಯೆಗಳನ್ನು ಎತ್ತಿಕೊಂಡು ಶ್ರೀಸಾಮಾನ್ಯನ ಅಂತರಂಗವನ್ನು ಚೆನ್ನಾಗಿ ಅರ್ಥಮಾಡಿಕೊಂಡು ಈತ ಕೃತಿರಚನೆ ಮಾಡಿದ್ದಾನೆನ್ನುವುದು ಸುವ್ಯಕ್ತವಾಗಿದೆ. ಈತ ಸೃಜಿಸಿದ ಹಳ್ಳಿಗರಿಗೆ ಸಮಕಾಲೀನ ಪ್ರಜ್ಞೆ ಇಲ್ಲದಿರಲಿಲ್ಲ. ಆಗಿನ ಯುವಜನರ ವಿಚಾರದ ಗಾಳಿ ಅವರ ಮೇಲೂ ಬೀಸಿ ಅವರು ಪ್ರಗತಿಶೀಲರಾಗಿದ್ದರು. ಕಾದಂಬರಿಕಾರನ ಮನೋಧರ್ಮ, ವಿಚಾರ ದೃಷ್ಟಿಗಳೇ ಸಾಕಷ್ಟು ಅವರಲ್ಲಿ ತುಂಬಿದ್ದುವು. ಈತನ ಕಾದಂಬರಿಗಳಲ್ಲಿ ಪ್ರಜ್ಞಾಪೂರ್ವಕವಾದ ಭಾವಾತಿರೇಕವಿರುವುದು ಎದ್ದುಕಾಣುತ್ತದೆ. ಕ್ರಮೇಣ ಈ ಭಾವುಕತೆ ವಾಸ್ತವತೆಯ ಕಡೆ ಬಾಗುತ್ತದೆ. ಆದರೆ ಮೊದಲಲ್ಲಿ ಔರ್‌ಬಾಹ್ ಭಾವಪ್ರಧಾನವಾಗಿ ಬರೆದ ಕಾದಂಬರಿಗಳು ಓದುಗರ ಚಿತ್ತವನ್ನು ತುಂಬ ಆಕರ್ಷಿಸಿದುವಲ್ಲದೆ, ಅಂಥ ಕಾದಂಬರಿಗಳನ್ನೇ ಅಪೇಕ್ಷಿಸುವ, ಓದುವ, ಗೀಳನ್ನು ಹೊತ್ತಿಸಿದುವು.

ಈತನ ಅತ್ಯಂತ ಜನಪ್ರಿಯ ಕೃತಿಗಳಲ್ಲಿ ಡೈ ಫ್ರಾವ್ ಪ್ರೊಫೆಸ್ಸೊರಿನ್ (1846), ಬಾರ್ಫ್ಯೂಸ್ಸೆಲೆ (1856), ಡೈ ಗೆಷಿಷ್ಟೆ ಡೆಸ್ ಡೀಥೆಲ್ಮ್ ಫೋನ್ ಬ್ಯೂಷೆನ್‌ಬೆರ್ಗ್ (1852), ಔಫ್ ಡರ್ ಹೋಹೆ (1865) ಮತ್ತು ಡಾಸ್ ಲ್ಯಾನ್‌ಧೌಸ್ ಆಮ್ ರೈನ್ ಎಂಬೀ ಕಾದಂಬರಿಗಳನ್ನು ಹೆಸರಿಸಬಹುದು. (ಕೆ.ಬಿ.ಪಿ.)

**ಔಲು ಮೀನು :** ಓಫಿಸಿಫ್ಯಾಲಿಡೀ ಕುಟುಂಬಕ್ಕೆ ಸೇರಿದ ಸಿಹಿನೀರಿನ ಎಲುಬು ಮೀನುಗಳ ಒಂದು ಪ್ರಭೇದ. ಹಾವಿನತಲೆ ಮೀನುಗಳೆಂದು ಪ್ರಸಿದ್ಧ



ವಾಗಿವೆ. ಸಾಮಾನ್ಯವಾಗಿ ಹೂಮೀನೆಂದೂ ಇಂಗ್ಲಿಷಿನಲ್ಲಿ ಮರಲ್ ಎಂದೂ ಕರೆಯಲಾಗುವ ಇದರ ಶಾಸ್ತ್ರೀಯ ನಾಮ ಓಫಿಸಿಫ್ಯಾಲಸ್ ಮರೂಲಿಯಸ್ (ಚಾನ್ನಾ ಮರೂಲಿಯಸ್). ಇದು ಮಧ್ಯ ಆಫ್ರಿಕ, ಭಾರತ, ದಕ್ಷಿಣ ಚೀನಗಳ ಮೂಲನಿವಾಸಿ ; ಮೈಸೂರು ರಾಜ್ಯದ ಎಲ್ಲ ಕೆರೆಗಳಲ್ಲೂ ಸಾಮಾನ್ಯವಾಗಿ ಸಿಕ್ಕು ತ್ತದೆ. ಆಹಾರಪದಾರ್ಥವಾಗಿ ಉಪಯೋಗ ಉಂಟು.

ಬೆಳವಣಿಗೆ ನಿಧಾನ. ಸಾಮಾನ್ಯವಾಗಿ 120 ಸೆಂ.ಮೀ. ವರೆಗೂ ಬೆಳೆಯು ವುದು. ದೇಹ ಸ್ವಲ್ಪ ದುಂಡಗೆ ನೀಳವಾಗಿ ಬಾಲದ ಭಾಗದಲ್ಲಿ ಕೊಂಚ ಚಪ್ಪಟೆ ಯಾಗಿದೆ. ಮೈಮೇಲೆ ಸೈಕ್ಲಾಯ್ಡ್ ಅಥವಾ ಟೀನಾಯ್ಡ್ ಹುರುಪೆಗಳಿವೆ. ದೇಹ ದುದ್ದಕ್ಕೂ ಮೂರು ಪಂಕ್ತಿಗಳಲ್ಲಿ ಜೋಡಣೆಗೊಂಡಿರುವ ದೊಡ್ಡ ಮಚ್ಚೆಗಳಿವೆ. ಉದರಭಾಗದ ಎರಡನೆಯ ಜೊತೆ ಈಜುರೆಕ್ಕೆಗಳು ಕೊಂಚ ಮುಂದಕ್ಕಿವೆ. ಮಿಕ್ಕ ಹಾವಿನತಲೆ ಮೀನುಗಳಲ್ಲಿರುವಂತೆ ಇದರಲ್ಲಿಯೂ ಗಾಳಿಯನ್ನು ಸೇವಿಸಲು ಕಿವಿರುಕೋಣೆಯಲ್ಲಿ ಸಹಕಾರಿ ಶ್ವಾಸಾಂಗಗಳಿವೆ. ಇವು ಇರುವುದರಿಂದಲೇ ಈ ಜಾತಿಯ ಮೀನುಗಳು ನೀರಿನ ಹೊರಗೂ ಹೆಚ್ಚು ಕಾಲ ಬದುಕಬಲ್ಲುವು. ಈ ಮೀನಿನ ಆಹಾರ ಸಾಧಾರಣವಾಗಿ ಇತರ ಸಣ್ಣ ಮೀನುಗಳು ಮತ್ತು ನೀರಿನಲ್ಲಿ ವಾಸಿಸುವ ಕೀಟಗಳು.

ಗಂಡು ಮತ್ತು ಹೆಣ್ಣುಮೀನುಗಳಿಗೆ ಬಾಹ್ಯರೂಪದಲ್ಲಿಯಾಗಲಿ ಬಣ್ಣದಲ್ಲಾಗಲಿ ವ್ಯತ್ಯಾಸವಿಲ್ಲ. ನೀರಿನಲ್ಲಿನ ಜೊಂಡಿನ ಮಧ್ಯೆ ಹೆಣ್ಣುಮೀನು ಮೊಟ್ಟೆಯಿಡುತ್ತದೆ. ಮೊಟ್ಟೆಯಿಡಲು ಹೆಣ್ಣಿಗೆ ಗಂಡುಮೀನು ಜೊಂಡಿನ ಮಧ್ಯೆ ಸ್ಥಳ ಮಾಡಿಕೊಡು ವುದಲ್ಲದೆ ಮೊಟ್ಟೆಯೊಡೆದು ಮರಿಗಳು ಹೊರಬರುವ ತನಕ ಮೊಟ್ಟೆಗಳ ರಕ್ಷಣೆ ಯನ್ನು ವಹಿಸಿಕೊಳ್ಳುವುದೂ ಉಂಟು. (ಎನ್.ಪಿ.ಐ.)

**ಔಲೂಕ್ಯ :** ಉಲೂಕನಿಂದ ಪ್ರತಿಪಾದಿತವಾದ ವೈಶೇಷಿಕ ದರ್ಶನಕ್ಕೆ ಈ ಹೆಸರಿದೆ. ನೋಡಿ—ವೈಶೇಷಿಕ ದರ್ಶನ. *

**ಔನೆನ್‌ಬ್ರುಗ್ಗರ್, ಲಿಯೋಪಾಲ್ಡ್ ಜೋಸೆಫ್, ಫಾನ್ :** 1722–1809. ಎದೆಯ ಮೇಲೆ ಬೆರಳುಗಳಿಂದ ಬಡಿದು ತಿಳಿವ ರೋಗನಿದಾನ ವಿಧಾನವನ್ನು ತೋರಿಸಿಕೊಟ್ಟ ವಿಯನ್ನದ ವೈದ್ಯ. ಅಲ್ಲಿನ ಆಸ್ಪತ್ರೆಯಲ್ಲಿದ್ದಾಗ ಇಂಥ ಪ್ರಯೋಗಗಳನ್ನು ನಡೆಸಿ ಒಳಗಿರುವ ಅಂಗಗಳ ಸ್ಥಿತಿಯನ್ನು ಅರಿವುದನ್ನು ಕಂಡುಕೊಂಡು ಒಂದು ಕಿರುಹೊತ್ತಗೆಯನ್ನು ಪ್ರಕಟಿಸಿದ (1761). ಈತ ಸಾಯು ವುದಕ್ಕೆ ಒಂದು ವರ್ಷ ಮೊದಲು (1808) ಕಾರ್ವಿಸಾರ್ಟ್ ಆ ಪುಸ್ತಕವನ್ನು ಫ್ರೆಂಚ್ ನುಡಿಗೆ ಇಳಿಸುವ ತನಕವೂ ಇದನ್ನು ಬಹುಪಾಲು ಯಾರೂ ಗಮನಿಸಿರಲಿಲ್ಲ. ಇದಲ್ಲದೆ ಗುಂಡಿಗೆಯ ಸುತ್ತಲೂ ಅದರ ಕವಚದೊಳಗಡೆ ನೀರು ತುಂಬಿಕೊಂಡಾಗ ಹೊಟ್ಟೆಮುಗುಳು (ಎಪಿಗ್ಯಾಸ್ಟ್ರಿಯಂ) ಉಬ್ಬಿಕೊಂಡಿರುವ ಚಿಹ್ನೆಯನ್ನೂ ಈತ ವಿವರಿಸಿದ್ದಾನೆ. *

**ಔಷಧಗಾರಿಕೆ :** ವೈದ್ಯವಿಜ್ಞಾನದಲ್ಲಿ ಔಷಧಗಳ ಗುರುತಿಸುವಿಕೆ, ಜಮಾವಣೆ, ತಯಾರಿಕೆ, ಜೋಪಾಸನೆ, ಹಂಚಿಕೆ ಮತ್ತು ಶಿಷ್ಟೀಕರಣದ ಶಾಸ್ತ್ರ (ಫಾರ್ಮಸಿ). ಔಷಧಶಾಸ್ತ್ರದಲ್ಲಿ (ಫಾರ್ಮಕಾಲಜಿ) ಇದೊಂದು ಭಾಗ. ಮದ್ದುಗಳನ್ನು ತಯಾರಿಸಲು ಗಿಡಮರಗಳನ್ನು ಬೆಳೆಸುವುದೂ ರಾಸಾಯನಿಕ ವಸ್ತುಗಳನ್ನು ಹೊಸದಾಗಿ ತಯಾರಿಸುವುದೂ ರೋಗನಿವಾರಣೆ, ಪರೀಕ್ಷೆ, ಚಿಕಿತ್ಸೆಗಳಲ್ಲಿ ಮದ್ದು ಗಳಾಗಿ ಬಳಕೆಯಾಗುವ ವಸ್ತುಗಳ ಬಿಡಿಪರೀಕ್ಷೆ, ಗುಣಮಟ್ಟ ನಿರ್ಧರಿಸುವುದೂ ಔಷಧಗಾರನ (ಫಾರ್ಮಸಿಸ್ಟ್) ಕೆಲಸಗಳೇ. ಗುಳಿಗೆ, ಮಾತ್ರೆ, ಲೇಪ, ಮುಲಾಮು, ದ್ರವ, ಮುಚ್ಚರೆಗಳು (ಕ್ಯಾಪ್ಸೂಲ್ಸ್) ಚುಚ್ಚಿ ಹೊಗಿಸುವ ಕ್ರಿಮಿಶುದ್ಧ (ಸ್ಟರಿಲೈಸ್ಡ್) ಮದ್ದುಗಳೇ ಮುಂತಾದವನ್ನು ಈತ ವೈದ್ಯನ ನಿಯಮಗಳಿಗೆ (ಪ್ರಿಸ್ಕ್ರಿಪ್ಷನ್ಸ್) ಸರಿ ಯಾಗಿ ತಯಾರಿಸಿ ಕೊಡುತ್ತಾನೆ.

ಔಷಧಗಾರಿಕೆ ಹೇಗೆ ಚಿಗುರಿತೆಂಬುದನ್ನು ಸುಲಭವಾಗಿ ಊಹಿಸುವಂತಿಲ್ಲ. ಗಾಯ ವಾದಾಗ ಸೊಪ್ಪುಸದೆ ಹಾಕಿ ಕಟ್ಟಿದಾಗ, ವಾಂತಿಭೇದಿ ಆದವನಿಗೆ ನೀರು ಕುಡಿಸಿ ದಾಗ ಔಷಧಗಾರಿಕೆ ಮಾಡಿದಂತಾಯಿತು ಎನ್ನಬಹುದು. ಗ್ರೀಕರ ಪುರಾಣದಲ್ಲಿ, ಈಸ್ಕುಲೇಪಿಯಸ್ (ನೋಡಿ) ಮದ್ದುಗಳನ್ನು ತಯಾರಿಸಿ ನೀಡುವ ಕೆಲಸವನ್ನು ಸುಂದರಿ ಆರೋಗ್ಯದೇವತೆಗೆ ವಹಿಸಿದ್ದನಂತೆ. ಈಜಿಪ್ಟಿನ ಪೂಜಾರಿ ವೈದ್ಯರಲ್ಲೂ ಔಷಧಗಾರರಿದ್ದರು.

ಹಿಂದಿನ ಕಾಲದಲ್ಲಿ ವೈದ್ಯರೆಲ್ಲರೂ ಔಷಧಗಾರಿಕೆಯನ್ನು ಕಲಿತಿರಬೇಕಿತ್ತು. ಪುರಾತನ ಗ್ರೀಕರೂ ರೋಮನ್ ವೈದ್ಯರೂ ಔಷಧಗಾರಿಕೆಗೂ ವೈದ್ಯಕಲೆಗೂ ವ್ಯತ್ಯಾಸ ಕಂಡಿದ್ದರು. ಮಧ್ಯಕಾಲದ ಯೂರೋಪಿನಲ್ಲಿ ಈ ವ್ಯತ್ಯಾಸ ಅಷ್ಟಾಗಿರದೆ ವೈದ್ಯರು ತಮ್ಮ ಮದ್ದುಗಳನ್ನು ತಾವೇ ಮಾಡಿಕೊಳ್ಳುತ್ತಿದ್ದರು. ಆದರೆ ಮೂರ್ ಜನರ ಪ್ರಭಾವದಿಂದ ಔಷಧಗಾರಿಕೆ ಬೇರೆಯಾಯಿತು. 18ನೆಯ ಶತಮಾನದ ನಡುವಿನಲ್ಲಿ ಫ್ರಾನ್ಸಿನ ಸೇನೆಯಲ್ಲಿ ಔಷಧಗಾರನ ಖಾತೆಯೊಂದನ್ನು ತೆರೆಯಲಾಯಿತು. ಪೆನ್ಸಿಲ್ವೇನಿಯ ಆಸ್ಪತ್ರೆಯಲ್ಲಿ ಮದ್ದುಗಳನ್ನು ತಯಾರಿಸಿಕೊಡಲು ಬೇರೊಬ್ಬ ಗಂದಿಗ ನನ್ನು (ಅಪೊತೆಕರಿ) ನೇಮಿಸಿ ಇದನ್ನು ಜಾರಿಗೆ ತಂದವ ಬೆಂಜಮಿನ್ ಫ್ರಾಂಕ್‌ಲಿನ್.

ವೈದ್ಯಶಾಸ್ತ್ರದೊಂದಿಗೇ ಔಷಧಗಾರಿಕೆ ಶಾಸ್ತ್ರವೂ ಮುಂದುವರಿಯುತ್ತಿದೆ. ಮೊಟ್ಟಮೊದಲು ಔಷಧಗಾರಿಕೆಯ ಕಾಲೇಜನ್ನು ತೆರೆದುದು (1821) ಅಮೆರಿಕದ ಫಿಲಡೆಲ್ಫಿಯದಲ್ಲಿ. ಆಮೇಲೆ ಬ್ರಿಟನ್, ಯೂರೋಪುಗಳಲ್ಲೂ ತೆರೆಯಲಾಯಿತು. ಹಲವು ವಿಶ್ವವಿದ್ಯಾನಿಲಯಗಳಲ್ಲೂ ಇದರ ವ್ಯಾಸಂಗಗಳು ಮೊದಲಾದುವು. ಪ್ರಪಂಚದಲ್ಲಿ ಎಲ್ಲೆಲ್ಲೂ ಈಗ ಬೇರೆಯಾಗಿಯೇ ಎಷ್ಟೋ ಔಷಧಗಾರಿಕೆಯ ಶಾಲೆ, ಕಾಲೇಜುಗಳು ಕೆಲಸ ಮಾಡುತ್ತಿವೆ.

**ಶಿಕ್ಷಣ :** ಔಷಧಗಾರಿಕೆಯ ಪದವಿ ವ್ಯಾಸಂಗದ ಅವಧಿ ನಾಲ್ಕು ವರ್ಷಗಳಿಗೂ ಮೀರಿ ಇದೆ. ಇದರಲ್ಲಿ ಮುಂದೆ ಡಾಕ್ಟೊರೇಟ್ ಪದವೀಧರರಾಗಲು ಅವಕಾಶ ಗಳಿವೆ. ಈ ಪದವೀಧರರು ಮುಖ್ಯವಾಗಿ ಸಂಶೋಧನೆ, ಕೃತಕ ತಯಾರಿಕೆ, ಶಿಕ್ಷಣಗಳಿಗಾಗಿ ಇರುವವರು.

ಬೇನೆ ಬಿದ್ದವರ ಚಿಕಿತ್ಸೆ ಮಾಡಲು ಮದ್ದುಗಳನ್ನು ನೀಡುವವರ ಔಷಧಗಾರಿಕೆಯ ಶಿಕ್ಷಣಕ್ಕೆ ಜೀವ, ರಸಾಯನ, ಭೌತಶಾಸ್ತ್ರಗಳ ತಿಳಿವಳಿಕೆ ಚೆನ್ನಾಗಿರಲೇಬೇಕು. ಔಷಧ ಗಾರಿಕೆ ಕಾಲೇಜುಗಳ ಮೂಲ ಶಿಕ್ಷಣದಲ್ಲಿ ಭೌತ, ರಸಾಯನ, ಜೀವ, ಏಕಾಣುಜೀವಿ, ಶಿಲ್ಪತಂತ್ರ, ಅಂಗಕ್ರಿಯೆ, ಔಷಧ, ಔಷಧನೀಡಿಕೆ—ಇವೇ ಮುಂತಾದ ಹಲವಾರು ಶಾಸ್ತ್ರಗಳಲ್ಲಿ ಕಡ್ಡಾಯವಾಗಿ ಶಿಕ್ಷಣ ದೊರೆಯುತ್ತದೆ. ಅಲ್ಲದೆ, ಸಾಮಾನ್ಯ ಅರಿವೂ ನುಡಿಯ ತಿಳಿವೂ ಇರಬೇಕು. ಔಷಧಗಾರಿಕೆಯ ಕಸಬಿನಲ್ಲಿ ವ್ಯಾಪಾರ ಉದ್ಯಮಗಳೂ ಸೇರಿರುವುದರಿಂದ ಆ ಸಂಬಂಧದಲ್ಲೂ ಹೆಚ್ಚಿನ ತಿಳಿವನ್ನು ಕೊಡುವರು. ಮೈಸೂರು ರಾಜ್ಯದಲ್ಲಿ ಬೆಂಗಳೂರು, ಮಣಿಪಾಲಗಳಲ್ಲಿ ಔಷಧಗಾರಿಕೆ ಕಾಲೇಜುಗಳಿವೆ.

**ಕಾಯಿದೆ ಕಟ್ಟಳೆ :** ಔಷಧಗಾರಿಕೆ ನಡೆಸಬೇಕೆನ್ನುವವರು ಮೊದಲು ಸರಕಾರ ದಿಂದ ನೇಮಿತವಾದ ಔಷಧಗಾರಿಕೆಯ ಮಂಡಲಿಯಿಂದ ಸೂಚಿತವಾದ ಔಷಧ ಗಾರಿಕೆ ಕಾಲೇಜನಿಂದ ಅರ್ಹತಾಪತ್ರ (ಡಿಪ್ಲೊಮ) ಇಲ್ಲವೇ ಪದವಿಯ ಅರ್ಹತೆ, ಅನುಭವ ಪಡೆದಿರಬೇಕು. ಆಗ ಔಷಧಗಾರಿಕೆ ನಡೆಸಲು ಕಾನೂನಿನಂತೆ ಹಕ್ಕು ಬಾಧ್ಯತೆಗಳು ಇರುತ್ತವೆ. ಇಂಥವನು ನೋಂದಾಯಿತ ಔಷಧಗಾರ (ರಿಜಿಸ್ಟರ್ಡ್ ಫಾರ್ಮಸಿಸ್ಟ್). ಔಷಧಗಾರಿಕೆಯ ಕಾಯಿದೆಗಳಲ್ಲಿ ಔಷಧಗಾರಿಕೆ ನಡೆಸಲು ಮುಖ್ಯ ವಾಗಿ ಪಾಲಿಸಬೇಕಾದ ನಿಯಮಗಳು ಇರುವುವಲ್ಲದೆ ವಿಷ ವಸ್ತುಗಳನ್ನು ಮಾರಲೂ ಮಂಪರಿಕ (ನಾರ್ಕೋಟಿಕ್) ಮದ್ದುಗಳನ್ನು ಕೊಡಲೂ ಅಪಾಯಕರ ಮದ್ದುಗಳ ಮೇಲೆ ಹಾಗೆಂದು ನಮೂದಿಸಿ ಮಾರಲೂ ಗೊತ್ತಾದ ಇನ್ನೂ ಕೆಲವು ಕಾಯಿದೆ ಗಳಿವೆ. ಈ ಕಾಯಿದೆಗಳಲ್ಲಿ ಮದ್ದುಗಳ ವಿಚಾರ ಬಂದಾಗಲೆಲ್ಲ ಆಯಾ ದೇಶದ ಅಧಿಕೃತ ಔಷಧಮಂಜರಿಯಲ್ಲಿ (ಫಾರ್ಮಕೋಪಿಯ) ಸೂಚಿಸಿರುವ ಮದ್ದುಗಳ ಗುಣಮಟ್ಟಗಳನ್ನು ಪಾಲಿಸುವುದು ಕಡ್ಡಾಯ.

1948ರ ಔಷಧಗಾರಿಕೆ ಕಾಯಿದೆಯ ಪ್ರಕಾರ ಭಾರತದ ಔಷಧಗಾರಿಕೆಯ ಮಂಡಲಿ ನೇಮಕವಾಗಿದೆ. ಔಷಧಗಾರಿಕೆಯ ಕಸಬು, ಆಚರಣೆಗಳನ್ನು ಚೆನ್ನಾಗಿಯೂ ಔಷಧಗಾರಿಕೆಯ ಕಾಯಿದೆಯನ್ನು ಪೂರ್ತಿಯಾಗಿಯೂ ಜಾರಿಗೆ ತರುವುದು, ಔಷಧ ಗಾರಿಕೆಯಲ್ಲಿ ಹೆಚ್ಚಿನ ಮಟ್ಟದ ತರಬೇತು ಮುಂದುವರಿಸಲು ಉತ್ಸಾಹ ಕೊಡುವುದು, ಈ ಕಸಬಿನ ವಿಚಾರವಾಗಿ ಜನರಿಗೆ ಸರಿಯಾದ ತಿಳಿವಳಿಕೆ ಕೊಡುವುದು—ಈ ಮಂಡಲಿಯ ಮುಖ್ಯ ಗುರಿಗಳು.

ಭಾರತದಲ್ಲಿ ಹೊರಗಿನಿಂದ ತರಿಸಿಕೊಂಡ, ದೇಶದಲ್ಲಿ ತಯಾರಿಸಿದ, ಮಾರುವ, ಹಂಚುವ ಮದ್ದುಗಳ ಗುಣಮಟ್ಟದ ಮೇಲಿನ ಹತೋಟಿಯು ಔಷಧಗಳ ಕಾಯಿದೆ, 1940 ಮತ್ತೆ 1955, 1961, 1962ರ ತಿದ್ದುಪಡಿಗಳೂ ಮತ್ತದರ ಮೇಲೆ ರಚಿಸಿದ ಕಟ್ಟಳೆಗಳ ಕೈಯಲ್ಲಿದೆ. ಮುಖ್ಯವಾಗಿ ಇದು ರಾಜ್ಯಗಳ ಜವಾಬ್ದಾರಿ. ಈ ಕಾಯಿದೆ ಸುಗಮವಾಗಿ ಆಚರಣೆಗೆ ಬರುವಂತೆ ಹಲವು ಅಧಿಕೃತ ಸಮಿತಿಗಳನು

ಕೇಂದ್ರ ಸರ್ಕಾರ ನೇಮಿಸಿದೆ. ಕಲ್ಕತ್ತದಲ್ಲಿರುವ ಕೇಂದ್ರ ಔಷಧಗಳ ಪ್ರಯೋಗಾಲಯ ಮೊಟ್ಟಮೊದಲನೆಯ ಸಮಿತಿಯಾಗಿ, ಅಲ್ಲಿಗೆ ಕೇಂದ್ರ ಸರ್ಕಾರ ಇಲ್ಲವೇ ರಾಜ್ಯಗಳ ಅಧಿಕಾರಿಗಳು ಕಳುಹಿಸಿದ ಔಷಧಗಳ ಮಾದರಿಗಳನ್ನು ಬಿಡಿಪರೀಕ್ಷೆ ಮಾಡಿ ವರದಿ ಸಲ್ಲಿಸುವುದು. ಔಷಧಿಗಳ, ಚಮತ್ಕಾರೀ ಪರಿಹಾರಗಳ (ಆಕ್ಷೇಪಕರ ಜಾಹೀರಾತುಗಳು) ಕಾಯಿದೆ, 1954ರ ಪ್ರಕಾರ ಕಾಮಚೋದಕಗಳು, ಎಂಥೆಂಥ ಮೇಹರೋಗಗಳು, ಹೆಂಗಸರ ಕಾಯಿಲೆಗಳಿಗೂ ಸುಲಭ ಗುಣಕಾರಿ ಎನ್ನುವ ಜಾಹೀರಾತುಗಳನ್ನು ಪ್ರಕಟಿಸುವಂತಿಲ್ಲ.

**ಸಂಸ್ಥೆಗಳು :** ಔಷಧಗಾರರ ರಾಷ್ಟ್ರೀಯ ಸಂಸ್ಥೆಗಳು ಬಹಳ ಇವೆ. 1841ರಲ್ಲಿ ಸ್ಥಾಪನೆಯಾದ ಗ್ರೇಟ್ ಬ್ರಿಟನ್ನಿನ ಔಷಧತಯಾರಿಕಾ ಸಂಘ ಇಂಥದೊಂದು ಮಾದರಿ. ಅಮೆರಿಕದ ಔಷಧ ತಯಾರಿಕಾ ಸಂಘದಲ್ಲಿ ಈ ಶಾಖೆಯ ಎಲ್ಲ ವಿಭಾಗಗಳೂ ಸೇರಿವೆ. ಭಾರತದಲ್ಲೂ 1938ರಿಂದಲೇ ಇಂಥ ಒಂದು ಸಂಘವಿದೆ. ಇವಲ್ಲದೆ ಔಷಧ ಮಾರಾಟಗಾರರ ಸಂಘಗಳೂ ಇವೆ. 1912ರಲ್ಲಿ ಆರಂಭವಾದ ಅಂತರ ರಾಷ್ಟ್ರೀಯ ಔಷಧ ತಯಾರಿಕಾ ಸಂಘದಲ್ಲಿ ಸುಮಾರು 35 ರಾಷ್ಟ್ರೀಯ ಸಂಘಗಳು ಒಂದುಗೂಡಿವೆ.

ಈ ಸಂಘ, ಸಂಸ್ಥೆಗಳ ನೀತಿಸೂತ್ರಗಳು ಅಮೆರಿಕದಲ್ಲಿರುವಂತೆ ಎಲ್ಲೆಲ್ಲೂ ಜಾರಿಯಲ್ಲಿವೆ. ಮದ್ದುಗಳ ತಯಾರಿಕೆ, ದಾಸ್ತಾನು, ಕೊಡುಗೆಗಳಲ್ಲಿ ಗುಣಮಟ್ಟವನ್ನು ಕಾಪಾಡಿ ಜನರಿಗೆ ಸೇವೆ ಸಲ್ಲಿಸುವುದು ಮುಖ್ಯ ನೀತಿ. ಔಷಧಗಾರ ಇಷ್ಟಪಟ್ಟು ಮದ್ದುಗಳ ವಿಷಯದಲ್ಲಿನ ತನ್ನ ಹೆಚ್ಚಿನ ತಿಳಿವಳಿಕೆಯನ್ನು ಇತರ ಆರೋಗ್ಯ ಶಾಖೆಗಳವರಿಗೆ ನೀಡುವನು. ಔಷಧಗಾರ ತಾನಾಗಿ ಯಾವ ರೋಗಿಯನ್ನೂ ಪರೀಕ್ಷಿಸುವುದೂ ಇಲ್ಲ; ಮದ್ದನ್ನು ನಿಯಮಿಸುವುದೂ ಇಲ್ಲ. ಅಂಥ ಸಲಹೆ ಬೇಕೆಂದವರನ್ನು ಸುರಿತ ವೈದ್ಯರಲ್ಲಿಗೆ ಕಳುಹಿಸಿಕೊಡುವನು. ಅವನು ವೈದ್ಯ ನಿಯಮಿಸಿದ ಪಟ್ಟಿಯಂತೆ ಮದ್ದನ್ನು ಚಾಚೂ ತಪ್ಪದೆ ಎಚ್ಚರಿಕೆಯಿಂದ ಚೆನ್ನಾಗಿ ತಯಾರಿಸಿ ನೀಡುತ್ತಾನೆ.

ಮುಖ್ಯವಾಗಿ ಔಷಧಗಾರಿಕೆ ಶಾಲೆಗಳಲ್ಲೂ ಔಷಧ ತಯಾರಕರ ಪ್ರಯೋಗಾಲಯಗಳಲ್ಲೂ ಔಷಧ ತಯಾರಿಕೆಯಲ್ಲಿ ಸಂಶೋಧನೆ ನಡೆಯುತ್ತದೆ. ಮದ್ದುಗಳಾಗಿ ಬಳಸುವ ಹೊಸ ರಾಸಾಯನಿಕಗಳ ತಯಾರಿಕೆಯೂ ಗಿಡಮೂಲಿಕೆಗಳಿಂದ ಕ್ರಿಯಾಂಶಗಳನ್ನು ಚೊಕ್ಕ ರೂಪದಲ್ಲಿ ಬೇರ್ಪಡಿಸುವುದೂ ಇದರಲ್ಲಿ ಸೇರಿದೆ. ಮದ್ದುಗಳ ಗುಣಮಟ್ಟದ ನಿರ್ಧಾರವೂ ಮುಖ್ಯ ಕೆಲಸಗಳಲ್ಲಿ ಒಂದು. ಮದ್ದುಗಳ ತಯಾರಿಕೆ, ಬಳಕೆಗಳಿಗೆ ರಸಾಯನಶಾಸ್ತ್ರದ ಅನ್ವಯವಿದು. ಇವೆಲ್ಲವೊಂದಿಗೆ ಮದ್ದುಗಳ ರೂಪ, ರುಚಿ, ರೋಗಿಗೆ ಹಿಡಿಸುವಂತೆ ಮಾಡುವ, ಒಪ್ಪುವಂತೆ ಕೊಡುವ ವಿಧಾನಗಳು, ಕೆಡದಂತೆ ಇರಿಸುವಿಕೆ, ಕರಗುವಿಕೆ ಮುಂತಾದವುಗಳ ಸಂಶೋಧನೆಯೂ ನಡೆವುದು.

ನೋಡಿ—ಔಷಧಮಂಜರಿ; ಔಷಧಶಾಸ್ತ್ರ. (ಡಿ.ಎಸ್.ಎಸ್.)

**ಔಷಧಮಂಜರಿ :** ಒಂದು ದೇಶಕ್ಕೆ ಅನ್ವಯಿಸುವಂತೆ ಮದ್ದುಗಳನ್ನು ಗುರುತಿಸುವ ಶಿಷ್ಟಮಾನಕಗಳನ್ನೂ ಮದ್ದುಗಳ ಗುಣಮಟ್ಟ, ಪ್ರಮಾಣಗಳನ್ನೂ ನಿಗದಿಯಾಗಿ ಸೂಚಿಸುವ ಪುಸ್ತಕ (ಫಾರ್ಮಕೋಪಿಯ). ಸರಕಾರದ ಅಧಿಕೃತ ಸಮಿತಿ ಇಲ್ಲವೇ ಸರಕಾರ ಒಪ್ಪಿದ ಸಂಘ ಪ್ರಕಟಿಸುವ, ಕಾನೂನುಬದ್ಧವಾಗುವ ಪುಸ್ತಕವಿದು. ಯಾರೇ ಆಗಲಿ ಮದ್ದುಗಳನ್ನು ಬಳಸುವಾಗ ಅದಕ್ಕಾಗಿ ನಿಯಮಿತವಾಗಿರುವ ಗುಣಮಟ್ಟ, ಪ್ರಮಾಣಗಳ ಮದ್ದುಗಳನ್ನು ಪಟ್ಟಿಯಲ್ಲಿ ವಿವರಿಸುವುದೇ ಔಷಧಮಂಜರಿಯ ಮುಖ್ಯ ಗುರಿ. ಇದರಲ್ಲಿ ಹೇಳಿರುವ ಗುಣಮಟ್ಟಕ್ಕೆ ಬರುವ ಮದ್ದುಗಳನ್ನು ಗುರುತಿಸಲು ಆಯಾ ದೇಶದ ಔಷಧಮಂಜರಿಯ ಹೆಸರನ್ನು ಮದ್ದುಗಳಿಗೆ ಜೋಡಿಸುವುದುಂಟು. ಅಮೋನಿಯಂ ಕಾರ್ಬೊನೇಟ್, ಐ.ಪಿ. (ಫಾರ್ಮಕೋಪಿಯ ಆಫ್ ಇಂಡಿಯ), ಅಮೋನಿಯ ಕಾರ್ಬೊನೇಟ್, ಬಿ.ಪಿ. (ಬ್ರಿಟಿಷ್ ಫಾರ್ಮಕೋಪಿಯ) ಇತ್ಯಾದಿ. ಮದ್ದುಗಳಾಗಿ ಬಳಕೆಗೆ ಬರುವ ವಸ್ತುಗಳನ್ನು ಗುರುತಿಸಲೂ ಗುಣಮಟ್ಟ ನಿರ್ಧರಿಸಲೂ ರಾಸಾಯನಿಕ ಭೌತ ಜೀವಿಗಳ ಮೇಲಿನ ಪರೀಕ್ಷೆಗಳು, ಕೆಲವು ಮಿಶ್ರಣಗಳ ವಿವರಗಳೂ ಇವೆ. ಔಷಧಮಂಜರಿಯಲ್ಲಿ ಮದ್ದುಗಳ ವರ್ತನೆಯಾಗಲಿ, ಅವುಗಳ ವಿಷವೇರಿಕೆಯ ವಿಷಯವಾಗಲಿ ಸಿಗದು. ಔಷಧಗಳನ್ನು ತಯಾರಿಸುವವರೂ ಮಾಡಿ ಕೊಡುವವರೂ ಆಯಾ ದೇಶದಲ್ಲಿ ಜಾರಿಯಲ್ಲಿರುವ ಹೊಸ ಅಧಿಕೃತ ಔಷಧಮಂಜರಿಯಲ್ಲಿರುವುದನ್ನು ಕಾನೂನುಬದ್ಧವಾಗಿ ಆಚರಿಸುವುದು ಕಡ್ಡಾಯವಿದೆ. ಜನರಿಗೆ ವಿಷಕರ, ಕೆಟ್ಟ, ಕಳಪೆ ಮದ್ದುಗಳನ್ನು ಕೊಡದಿರುವಂತೆ ಮಾಡುವುದೇ ಇದರ ಮುಖ್ಯ ಉದ್ದೇಶ.

ಸಾಮಾನ್ಯವಾಗಿ ಜನರ ಒಳಿತಿಗಾಗಿ ದುಡಿವ ಒಂದು ಸಂಸ್ಥೆ ಇಲ್ಲವೇ ಸಮಿತಿ ಔಷಧಮಂಜರಿಯ ಪ್ರಕಟಣೆಯ ಭಾರವನ್ನು ಹೊತ್ತುಕೊಂಡು ವೈದ್ಯ, ರಸಾಯನ, ಔಷಧಗಾರಿಕೆ, ಔಷಧ ತಯಾರಿಕೆ ಶಾಸ್ತ್ರಗಳಲ್ಲಿ ಪರಿಣತರಾದವರ ನೆರವಿನಿಂದ ಅದನ್ನು ಪ್ರಕಟಿಸುವುದು. ಭಾರತದಲ್ಲಿರುವಂತೆ, ಬಹಳ ದೇಶಗಳಲ್ಲಿ ಸರ್ಕಾರವೇ ಒಂದು ಅಧಿಕೃತ ಸಮಿತಿಯ ಮೂಲಕ ಈ ಕೆಲಸದ ಜವಾಬ್ದಾರಿಯನ್ನು ಕೈಗೊಳ್ಳುತ್ತದೆ. ಆದರೆ ಬ್ರಿಟನ್ ಮತ್ತು ಅಮೆರಿಕ ಸಂಯುಕ್ತಸಂಸ್ಥಾನಗಳಲ್ಲಿ ಸರ್ಕಾರದ ಒಪ್ಪಿಗೆ ಪಡೆದ ಖಾಸಗಿ ಸಂಘಗಳು ಇದನ್ನು ಲಾಭವಿಲ್ಲದೆ ಪ್ರಕಟಿಸುತ್ತವೆ. ಇವನ್ನು ಮಾರಿ ಬಂದ ಆದಾಯದಿಂದ ತಿದ್ದುಪಡಿಗಳ ಪ್ರಕಟಣೆ ಕೆಲಸಗಳಿಗೆ ಹಣ ಒದಗುವುದು. ತಿದ್ದುಪಡಿಯಾದಾಗ ಹಳೆಯ ಕೆಲವು ಔಷಧಗಳನ್ನು ಮಂಜರಿಯಿಂದ ತೆಗೆದುಹಾಕಿ ಕೆಲವು ಹೊಸವನ್ನು ಸೇರಿಸಲಾಗುವುದು.

ಔಷಧಮಂಜರಿಯ ರೂಪದಲ್ಲಿ ದೊರೆತಿರುವ ತೀರ ಪುರಾತನ ಕಾಲದ ದಾಖಲೆಯೆಂದರೆ ಕ್ರಿ.ಪೂ. ಸುಮಾರು 1700ರಲ್ಲಿ ಕೆತ್ತಿರಬಹುದಾದ ಪುರಾತನ ಬ್ಯಾಬಿಲೋನಿಯದ ಕಲ್ಲುಬಿಲ್ಲೆ. ಯೂರೋಪಿನಲ್ಲಿ ನಿಜವಾದ ಔಷಧಮಂಜರಿ ಮೊದಲು ಬಂದುದು ಫ್ಲಾರೆಂಟೀನಿನದು (1498). ಅಧಿಕೃತವಾಗಿ ಸರ್ಕಾರದ ವತಿಯಿಂದ ಮೊಟ್ಟಮೊದಲು (1542) ಪ್ರಕಟಿಸಿದವ ವೆಲೇರಿಯಸ್ ಕಾರ್ಡಸ್. ಈಗಿರುವವಲ್ಲಿ ಬಲು ಹಳೆಯದು ಡೇನರದು (1772). ಲಂಡನ್ನಿನಲ್ಲಿ 1618ರಲ್ಲೂ ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ 1821ರಲ್ಲೂ ಭಾರತದಲ್ಲಿ 1958ರಲ್ಲೂ ಔಷಧಮಂಜರಿಗಳು ಮೊದಲು ಪ್ರಕಟವಾದುವು. ಬೇರೆ ಬೇರೆ ದೇಶಗಳಲ್ಲಿ ಜಾರಿಯಲ್ಲಿರುವ ಔಷಧ ಮಂಜರಿಗಳಿವು : ಅಮೆರಿಕದ ಸಂಯುಕ್ತಸಂಸ್ಥಾನಗಳು (1955), ಅರ್ಜಂಟೀನ (1957), ಆಸ್ಟ್ರಿಯ (1906), ಭಾರತ (1968), ಇಟಲಿ (1940), ಈಜಿಪ್ಟ್ (1953), ಗ್ರೀಸ್ (1924), ಚಿಲಿ (1941), ಚೀಣ (1953), ಚೆಕೋಸ್ಲೊವಾಕಿಯ (1958), ಜಪಾನ್ (1951), ಜರ್ಮನಿ (1951), ಡೆನ್ಮಾರ್ಕ್ (1954), ತುರ್ಕಿ (1948), ನಾರ್ವೆ (1953), ನೆದರ್ಲೆಂಡ್ಸ್ (1958), ಪರಗ್ವೆ (1945), ಪೋರ್ಚುಗಲ್ (1946), ಪೋಲೆಂಡ್ (1954), ಫ್ರಾನ್ಸ್ (1954), ಫಿನ್ಲೆಂಡ್ (1956), ಬ್ರಿಟನ್ (1969), ಬೆಲ್ಜಿಯಂ (1953), ಬ್ರೆಜಿಲ್ (1947), ಮೆಕ್ಸಿಕೋ (1952), ಯುಗೋಸ್ಲಾವಿಯ (1951), ರಷ್ಯ (1952), ರೂಮೇನಿಯ (1956), ವೆನಜ್ವೇಲ (1942), ಸ್ಪೇನ್ (1954), ಸ್ವೀಡನ್ (1946), ಹಂಗರಿ (1954). ತಮ್ಮ ದೇಶದ್ದೇ ಬೇರೆ ಒಂದು ಔಷಧಮಂಜರಿ ಇಲ್ಲವಾದರೆ ಅಂಥ ನಾಡುಗಳು ನೆರೆಯ ದೇಶದ್ದನ್ನೋ ಅಂತರ ರಾಷ್ಟ್ರೀಯವಾದದ್ದನ್ನೋ ಅನುಸರಿಸಬಹುದು. ಇಥಿಯೋಪಿಯ, ಇಸ್ರೇಲುಗಳು ಅಂತರರಾಷ್ಟ್ರೀಯವಾದದ್ದನ್ನು ಅನುಸರಿಸುತ್ತಿವೆ.

ಒಂದು ದೇಶದಲ್ಲಿ ಮದ್ದುಗಳ ಗುಣಮಟ್ಟ ಹೇಗಿರಬೇಕೆಂದು ನಿರ್ಧರಿಸಲು ಮೂಲಾಧಾರ ಈ ಔಷಧಮಂಜರಿಯೇ. ಆಯಾ ದೇಶದ ವೈದ್ಯಗಾರಿಕೆ, ಔಷಧಗಾರಿಕೆ, ಜನಾರೋಗ್ಯಗಳು ಇದರಲ್ಲಿ ಸೂಚಿಸಿರುವ ಗುಣಮಟ್ಟಗಳನ್ನವಲಂಬಿಸಿವೆ. ಆದರೆ ಕೆನಡದಂಥ ದೇಶವನ್ನು ಬಿಟ್ಟು ಉಳಿದೆಡೆಗಳಲ್ಲಿ ಗುಣಮಟ್ಟಗಳನ್ನು ನಿರ್ಧರಿಸುವವರೇ ಬೇರೆ. ಅವು ಜಾರಿಯಲ್ಲಿ ಬಂದು ಎಲ್ಲರೂ ಪಾಲಿಸುವಂತೆ ನೋಡಿಕೊಳ್ಳುವವರೇ ಬೇರೆ. ಮೈಸೂರು ರಾಜ್ಯದಲ್ಲಿರುವ ಹಾಗೆ ಭಾರತದ ಇತರೆಡೆಗಳಲ್ಲೂ ಔಷಧ ಹತೋಟಿ ತನಿಖಾಧಿಕಾರಿಗಳು (ಡ್ರಗ್ ಕಂಟ್ರೋಲ್ ಇನ್‌ಸ್ಪೆಕ್ಟರ್ಸ್) ನೇಮಕವಾಗಿರುವರು. ಔಷಧಗಳು ಮತ್ತು ಅಂಗರಾಗಗಳ ಕಾನೂನುಗಳ ರೀತಿ ಸರಿಯಾದ ಗುಣಮಟ್ಟದ ಮದ್ದುಗಳು ಕೆಡದಂತೆ ದಾಸ್ತಾನಿವೆಯೇ, ವೈದ್ಯನ ನಿಯಮಚೀಟಿಗಳಿಗೆ ಸರಿಯಾಗಿ ಮದ್ದು ವಿಲೇವಾರಿ ಆಗುವುದೇ ಮುಂತಾದವನ್ನು ನೋಡಿಕೊಳ್ಳುವುದೇ ಔಷಧ ಹತೋಟಿ ತನಿಖೆಯ ಇಲಾಖೆಯ ಮುಖ್ಯ ಕೆಲಸಗಳು. ಔಷಧಗಾರರು ಮಾರಾಟಕ್ಕಾಗಿ ಇಟ್ಟುಕೊಂಡಿರುವ ಮದ್ದುಗಳ ಮಾದರಿಗಳನ್ನು ಆಗಿಂದಾಗ್ಗೆ ತೆಗೆದುಕೊಂಡು ಹೋಗಿ, ಸೀಸೆಗಳ ಮೇಲೆ ನಮೂದಿಸಿರುವ ಮದ್ದು, ಪ್ರಮಾಣಗಳಂತೆ ಒಳಗಿರುವುವೇ ಎಂದು ಇವರು ಪ್ರಯೋಗಾಲಯಗಳಲ್ಲಿ ಪರೀಕ್ಷಿಸುವರು. ಇವುಗಳಲ್ಲಿ ಹೊಂದಾಣಿಕೆ ಇಲ್ಲವಾದರೆ ಕಾನೂನಿಗೆ ತಕ್ಕಂತೆ ಅಪರಾಧದ ತಕ್ಷೀರು ಹಾಕಬೇಕಾಗುತ್ತದೆ. ಈ ತೆರನ ಹತೋಟಿ ಕಾನೂನುಗಳು ಕೆಲವು ಔಷಧಗಳ ವಿಷಯದಲ್ಲಿ ಒಂದೊಂದು ದೇಶದಲ್ಲೂ ಒಳರಾಜ್ಯಗಳಲ್ಲೂ ಬಗೆಬಗೆಯಾಗಿರುವುವು. ಒಂದು ಮದ್ದನ್ನು ರೋಗಿ ಬೇರೆ ಬೇರೆ ದೇಶಗಳಲ್ಲಿ ಕೊಂಡು ಬಳಸಬೇಕಾದರೆ ಹಲಬಗೆಯ ಗುಣಮಟ್ಟಗಳ ಮದ್ದನ್ನು ಕೊಳ್ಳಬೇಕಾಗುವುದೊಂದು ತೊಡಕೇ ಸರಿ. ಇನ್ಸುಲಿನ್ ಒಂದು ಒಳ್ಳೆಯ ಉದಾಹರಣೆ. ಗುಣಮಟ್ಟ ಹೆಚ್ಚು ಕಡಿಮೆಯಾದರೆ ರೋಗಿಯ ಪ್ರಾಣಕ್ಕೇ ಊನವಾಗಬಹುದು. ಪ್ರಾಣಿಗಳಿಂದ ಪಡೆದ ಇನ್ಸುಲಿನ್ನನ್ನು ಮೊದಲು ಮೊಲ, ಚಿಟ್ಟಿಲಿಗಳಿಗೆ ಕೊಟ್ಟು ಶಿಷ್ಟೀಕರಣ ಮಾಡಿ ನಿರ್ಧರಿಸಬೇಕು. ಶೀತಕದಲ್ಲಿ ತಣ್ಣಗಿರಿಸದಿದ್ದಲ್ಲಿ ಅದು ಬೇಗನೆ ಕೆಡುತ್ತದೆ. ಆದರೆ ಇನ್ಸುಲಿನ್ ವಿಚಾರದಲ್ಲಿ ಅಂತರ ರಾಷ್ಟ್ರೀಯ ಶಿಷ್ಟಪ್ರಮಾಣಗಳು ಇರುವುದರಿಂದ ಅಂಥ ಭಯವಿಲ್ಲ.

ಪ್ರಪಂಚದಲ್ಲಿ ಹಲವಾರು ದೇಶಗಳಲ್ಲಿ ಮದ್ದುಗಳ ಹೆಸರುಗಳು, ಗುಣಮಟ್ಟಗಳು ಲೆಕ್ಕವಿಲ್ಲದಷ್ಟಿವೆ. ಕೆಲವು ಮದ್ದುಗಳಿಗೆ 15–20 ಹೆಸರುಗಳಿರುವುದೂ ಹೆಚ್ಚಲ್ಲ. ಮದ್ದುಗಳ ಹೆಸರುಗಳನ್ನು ಸಾಮಾನ್ಯೀಕರಿಸುವುದರೊಂದಿಗೆ ಟಿಂಕ್ಚರುಗಳ ಮತ್ತು ಊರಿದ ಸಾರಗಳ (ಇನ್‌ಫ್ಯೂಷನ್ಸ್) ಗುಣಮಟ್ಟವನ್ನಾದರೂ ಶಿಷ್ಟೀಕರಿಸಲು ಮೊಟ್ಟಮೊದಲಾಗಿ ಬ್ರುಸೆಲ್ಸ್ ಒಪ್ಪಂದವಾಯಿತು (1906). ಇವನ್ನು ವಿಸ್ತರಿಸಿ ಬಳಕೆಯಲ್ಲಿರುವ ಇನ್ನಷ್ಟು ಮದ್ದುಗಳಿಗೆ ಮುಂದೆ (1925) ಅನ್ವಯ

ಮಾಡಲಾಯಿತು. ಈ ನಿಟ್ಟಿನಲ್ಲಿ ರಾಷ್ಟ್ರಗಳ ಒಕ್ಕೂಟದ (ಲೀಗ್ ಆಫ್ ನೇಷನ್ಸ್) ಮತ್ತೆ ಕೈಗೊಂಡಿಲ್ಲ. ಆದರೆ ಇದರ ಜಾಗಕ್ಕೆ ಬಂದ ವಿಶ್ವಸಂಸ್ಥೆಯ ವಿಶ್ವ ಆರೋಗ್ಯ ಸಂಸ್ಥೆ ಅಂತರರಾಷ್ಟ್ರೀಯ ಔಷಧಮಂಜರಿಯನ್ನು ಪ್ರಕಟಿಸಿದೆ (1951). ಈಚೆಗೊಂದು ಇದರ ಪುರವಣಿಯೂ (1958) ಹೊರಬಂದಿದೆ. ಇದು ಇಂಗ್ಲಿಷ್, ಫ್ರೆಂಚ್, ಸ್ಪಾನಿಷ್ ನುಡಿಗಳಲ್ಲಿದೆ. (ಡಿ.ಎಸ್.ಎಸ್.)

**ಔಷಧಶಾಸ್ತ್ರ :** ಔಷಧವಾಗಿ ಬಳಸಬಹುದಾದ ಎಲ್ಲ ವಸ್ತುಗಳ ಗುಣ, ತಯಾರಿಕೆ, ವರ್ತನೆ, ಪ್ರಭಾವಗಳೇ ಮುಂತಾದ ವಿಷಯಗಳನ್ನು ಕುರಿತ ಶಾಸ್ತ್ರ (ಫಾರ್ಮಕಾಲಜಿ). ಮದ್ದುಗಳ ವಿಷಯವಾಗಿ ಎಲ್ಲ ತೆರನ ತಿಳಿವಳಿಕೆಯನ್ನೂ ಒದಗಿಸುತ್ತದೆ. ಒಂದು ರೀತಿಯಲ್ಲಿ ನೋಡಿದರೆ ಇದು ಪ್ರಾಣವಿರುವ ಎಲ್ಲ ಬಗೆಗಳ ಜೀವಿಗಳ ಮೇಲೂ ರಾಸಾಯನಿಕ ವಸ್ತುಗಳ ಪ್ರಭಾವವನ್ನು ತಿಳಿಸುವ ಶಾಸ್ತ್ರ ಎನ್ನಬಹುದು. ಕೆಲವೇಳೆ ಮದ್ದುಗಳ ಕೇವಲ ಮೈಯಲ್ಲಿನ ವರ್ತನೆಗೆ ಅಂದರೆ ಅವುಗಳ ಪ್ರಭಾವಗಳ ತಿಳಿವಳಿಕೆಗೆ ಇದನ್ನು ಮಿತಿಗೊಳಿಸುವುದುಂಟು. ಇದರಿಂದಲೇ ವೈದ್ಯವಿಜ್ಞಾನದಲ್ಲಿ ಇದರ ಹಿರಿಯ ಪಾತ್ರ ಗೊತ್ತಾಗುವುದು. ಬಳಸುವ ರೂಪದಲ್ಲಿ ಮದ್ದುಗಳನ್ನು ಒದಗಿಸುವ ಔಷಧಗಾರಿಕೆ (ಫಾರ್ಮಸಿ) ಔಷಧಶಾಸ್ತ್ರದ ಒಂದು ವಿಭಾಗ. ಅಷ್ಟೇ ಅಲ್ಲದೆ, ಇದರಲ್ಲಿ ರೋಗಚಿಕಿತ್ಸೆಶಾಸ್ತ್ರ (ತೆರಪ್ಯೂಟಿಕ್ಸ್), ವಿಷಶಾಸ್ತ್ರವೂ (ಟಾಕ್ಸಿಕಾಲಜಿ) ಸೇರಿವೆ. ಒಂದು ರೀತಿಯಲ್ಲಿ ಪ್ರಯೋಗಾಲಯದಲ್ಲಿ ಪ್ರಾಣಿಗಳ ಮೇಲೆ ಪರೀಕ್ಷಿಸಿ ಮದ್ದುಗಳನ್ನು ಚಿಕಿತ್ಸೆಗಾಗಿ ಸೂಚಿಸುವ ಶಾಸ್ತ್ರ ಎನ್ನಲೂಬಹುದು.

**ಹುಟ್ಟು, ಮೂಲ :** ರೋಗ ನಿವಾರಣೆಗಾಗಿನ ಚಿಕಿತ್ಸೆ ಮಾನವನ ಆದಿಯಿಂದಲೇ ಹುಟ್ಟಿರಬಹುದಾದರೂ ವಿಜ್ಞಾನದ ಅರಿವು ಹೆಚ್ಚಿ ಬಂದ ಕಳೆದ ಶತಮಾನದ ತನಕ ಬಹುಮಟ್ಟಿಗೆ ಕುರುಡು ನಂಬಿಕೆ, ಮಂತ್ರ, ತಂತ್ರ, ಧರ್ಮಗಳನ್ನು ನೆಚ್ಚಿಕೊಂಡಿದ್ದು, ಕೇವಲ ಮದ್ದನ್ನು ಸುಮ್ಮನೆ ಕೊಟ್ಟು ಒಪ್ಪುತಪ್ಪು ನೋಡುವುದರ ಮೇಲಿತ್ತು. ಯೂರೋಪಿನಲ್ಲಿ ಪುರಾತನ ಗ್ರೀಕರಿಗಿಂತೂ ಕ್ರಿಸ್ತಶಕದ ಮೊದಲ ಶತಮಾನಗಳಲ್ಲಿ ಗ್ಯಾಲೆನನ (131-201) ತತ್ತ್ವಗಳೇ ವೇದವಾಕ್ಯಗಳಾಗಿದ್ದುವು. ಅವನ ನೂರಾರು ಬರೆಹಗಳಲ್ಲೂ ಅವನವೇ ಕಣ್ಣರಿಕೆಗಳೊಂದಿಗೆ ಎಷ್ಟೊ ಮದ್ದುಗಳನ್ನು ಸೂಚಿಸಿರುವುದರೊಂದಿಗೆ ಅವನ ಮೊಂಡು ವಾದಗಳೂ ತುಂಬಿದ್ದುವು. ಈ ಬರೆಹಗಳನ್ನು ಸಾವಿರಾರು ವರ್ಷಗಳ ತನಕ ಯಾರೂ ಎದುರಿಸಲಾರದೆ ಅವು ಅಧಿಕೃತಗೊಂಡು ಯಾರಾದರೂ ಪ್ರಯೋಗ ನಡೆಸಲೂ ಕಂಡದ್ದನ್ನು ಕಂಡಹಾಗೇ ಹೇಳಲೂ ಹಿಂಜರಿಯುತ್ತಿದ್ದರು. ಆದರೆ ಗ್ಯಾಲೆನನ ಯುಗದ ಎದುರು ಮೊದಲು ಎದೆಗಾರಿಕೆ ತೋರಿ ಕಟುವಾಗಿ ಟೀಕಿಸಿದವ ಪ್ಯಾರಸೆಲ್ಸಸ್ (1493–1541). ಉತ್ತರ ಯೂರೋಪಿನಲ್ಲಿ ಅಲೆದಾಡುತ್ತಿದ್ದ ಈ ಬಾಯಿಬಡಕ ಅಲ್ಲಲ್ಲಿ ಕೀಟಲೆ ಎಬ್ಬಿಸಿ ತೊಡರುತ್ತಿದ್ದರೂ ತನ್ನ ಸಫಲ ಮದ್ದುಗಾರಿಕೆಯ ಕಾರಣದಿಂದ ಪಾರಾಗುತ್ತಿದ್ದ. ಮಿಶ್ರಣಗಳಲ್ಲಿ ಹತ್ತಾರು ಮದ್ದುಗಳನ್ನು ಗ್ಯಾಲೆನ್ ಬೆರೆಸುತ್ತಿದ್ದೆಡೆಯಲ್ಲಿ ಇವನು ಕೆಲವೇ ಕೆಲವು ಹೊಸವನ್ನು ಹಾಕಿ ಪರಿಣಾಮಕಾರಿ ಆಗುವುದನ್ನು ತೋರಿಸಿಕೊಟ್ಟ.

ಆರೋಗ್ಯದಲ್ಲೂ ರೋಗಗಳಲ್ಲೂ ಮೈ ಅಂಗರಚನೆ, ನಿಜಗೆಲಸಗಳ ತಿಳಿವಳಿಕೆ ಮುಂದಿನ 3 ಶತಮಾನಗಳಲ್ಲಿ ಕೂಡಿಬಂದಿತಾದರೂ ರೋಗಚಿಕಿತ್ಸೆ ಮಾತ್ರ ಒಂದು ಕಲೆಯಾಗಿತ್ತೇ ಹೊರತು ಶಾಸ್ತ್ರವಾಗಿರಲಿಲ್ಲ. ವೈದ್ಯದಲ್ಲಿ ಬಳಸುವ ಮದ್ದುಗಳಿಗೇ ಡೇಲ್ (1692) ಫಾರ್ಮಕಾಲಜಿ (ಔಷಧಶಾಸ್ತ್ರ) ಪದವನ್ನು ಮೊದಲು ಬಳಸಿದ್ದ. ಆಗಿನ ಕಾಲದಲ್ಲಿ ಒಣಗಿಸಿದ ಕರಿನಾಗರ, ನರಿಗಳ ಪುಪ್ಪುಸ, ಗಲ್ಲಿಗೇರಿದವರ ತಲೆ ಸುಂಡುಗಳ ಜೊತೆಗೆ ಕೆಲವು ಗುಣಕಾರಿ ಮದ್ದುಗಳೂ ವೈದ್ಯದಲ್ಲಿ ಬಳಕೆಯಲ್ಲಿದ್ದುವು. 1850ರ ಸುಮಾರಿನಲ್ಲಿ ಫ್ರೆಂಚ್ ಅಂಗಕೆಲಸ ವಿಜ್ಞಾನಿ ಫ್ರಾಂಕಾಯ್ಸ್ ಮೆಜೆಂಡಿ ತೋರಿಸಿಕೊಡುವ ತನಕ ಮದ್ದುಗಳ ವರ್ತನೆಯನ್ನು ತಿಳಿಯಲು ಪ್ರಯೋಗಾಲಯದ ಶೋಧನೆಗಳ ಸುಳಿವೇ ಇರಲಿಲ್ಲ. ಮೈಯಲ್ಲಿ ನಡೆಯುತ್ತಿರುವ ನಿಜಗೆಲಸಗಳಲ್ಲಿನ ಬದಲಾವಣೆಗಳನ್ನು ಗುರುತಿಸಿ ಅಳೆಯುವಂಥ ವಿಧಾನಗಳನ್ನು ಹೊಸ ಅಂಗಕೆಲಸ ವಿಜ್ಞಾನಿಗಳು ಹೊರತಂದ ಮೇಲೆ ರಾಸಾಯನಿಕ ವಸ್ತುಗಳ ಮೈಮೇಲಿನ ಪ್ರಭಾವಗಳನ್ನು ಗುರುತಿಸುವಂತಾಯಿತು. ಇದಕ್ಕೂ ಹೆಚ್ಚಿನದಾಗಿ, ರಸಾಯನಶಾಸ್ತ್ರದಲ್ಲಿ ಬಹಳ ಮುನ್ನಡೆಯಾಗಿತ್ತು. ಒಂದೊಂದೂ ಒಂದೊಂದು ತೆರನಾಗಿದ್ದುದರಿಂದ ಕಚ್ಚಾಮದ್ದು, ಮೂಲಿಕೆಗಳ ಕಷಾಯಗಳಿಂದ ಪ್ರಯೋಗ ಈಡೇರುತ್ತಿರಲಿಲ್ಲ. 19ನೆಯ ಶತಮಾನದ ಮೊದಲಲ್ಲಿ ಫ್ರಾನ್ಸ್, ಜರ್ಮನಿಗಳ ರಸಾಯನ ವಿಜ್ಞಾನಿಗಳು ಗಿಡಮರಗಳಿಂದ ಚೊಕ್ಕ ರೂಪದಲ್ಲಿ ಕ್ವಿನೀನು, ಮಾರ್ಫೀನು, ಸ್ಟ್ರಿಕ್ನೀನು, ಅಟ್ರೊಪೀನುಗಳೇ ಮುಂತಾದುವನ್ನು ಬೇರ್ಪಡಿಸಿದಾಗ ಸ್ಥಿತಿ ಉತ್ತಮವಾಯಿತು.

ಚೊಕ್ಕ ರೂಪದಲ್ಲಿ ಮದ್ದುಗಳು ದೊರಕುವಂತಾಯಿತು. ಜರ್ಮನಿಯಲ್ಲಿ ಮುಖ್ಯವಾಗಿ ಬಣ್ಣವಸ್ತುಗಳ ತಯಾರಿಕೆಯಲ್ಲಿ ಉಪಉತ್ಪನ್ನಗಳಾಗಿ ಬಂದವೇ ಹೊಸ ಮದ್ದುಗಳ ವಿಕಾಸಕ್ಕೆ ಮೂಲವಾದುವು. ಗುಂಡಿಗೆಯ ಬಡಿತ ವೇಗ, ಉಸಿರಾಟದ ಕ್ರಮ, ಮೂತ್ರಸುರಿಕೆ, ಜೊಲ್ಲು ಸುರಿತವೇ ಮುಂತಾದ ಅಂಗಕೆಲಸಗಳ ಮೇಲೆ ಈ ಹೊಸ ರಾಸಾಯನಿಕಗಳ ಪ್ರಭಾವ ಕಂಡ, ಇಲ್ಲವೇ ಅಂಗಕೆಲಸಗಳನ್ನು ಶೋಧಿಸುವುದರಲ್ಲಿ ಇವನ್ನು ಮೊದಮೊದಲಲ್ಲಿ ಬಳಸಿದ ಜನರೇ ಅಂದಿನ ಔಷಧ ವಿಜ್ಞಾನಿಗಳಾಗಿದ್ದರು. ಹೀಗಿರುವಾಗ ಔಷಧಶಾಸ್ತ್ರದಲ್ಲೇ ಪ್ರಯೋಗಗಳನ್ನು ನಡೆಸಲೆಂದೇ ಡೊರ್ಪಾರ್ಟಿನಲ್ಲಿ ಮೊದಲು ಕಾಲಿಟ್ಟ ಬುಖೀಂ (1846–47) ಮೈಯಲ್ಲಿ ಮದ್ದುಗಳ ಪ್ರಭಾವವನ್ನು ಸುಮ್ಮನೆ ವಿವರಿಸುವುದೇ ಅಲ್ಲದೆ ಅರ್ಥವನ್ನೂ ಹೇಳಬೇಕೆಂದ. ತನ್ನ ಕಾಲಿನ ಮೇಲೇ ತಾನು ನಿಂತ ಪ್ರಯೋಗಶಾಸ್ತ್ರವಾಗಿ ಔಷಧಶಾಸ್ತ್ರವನ್ನು ನೆಲೆಗೊಳಿಸಿದವ ಜರ್ಮನಿಯ ಮಹಾವಿಜ್ಞಾನಿ ಆಸ್ವಾಲ್ಡ್ ಸ್ಮೀಡರ್‌ಬರ್ಗ್. ಆಹಾರ ವಸ್ತುಗಳನ್ನು ಬಿಟ್ಟರೆ ಮೈಮೇಲೆ ರಾಸಾಯನಿಕಗಳಿಂದಾಗುವ ಕೆಡುಕನ್ನು ತಿಳಿವುದೇ ಇದರ ಉದ್ದೇಶವೆಂದು ವಿವರಿಸಿದ. ಔಷಧಶಾಸ್ತ್ರದ ಮೊಟ್ಟಮೊದಲ ಪಠ್ಯಪುಸ್ತಕವನ್ನು ಬರೆದವನೂ ಇವನೇ. ಔಷಧಶಾಸ್ತ್ರದಲ್ಲಿನ ಪ್ರಯೋಗಗಳ ವರದಿಗಳಿಗೇ ಮೀಸಲಾದ ಮೊದಲ ಪತ್ರಿಕೆ ಹೊರಡಿಸಲು ನೆರವಾಗಿ ಸ್ಟ್ರಾಸ್‌ಬರ್ಗಿನಲ್ಲಿ ಔಷಧಶಾಸ್ತ್ರಕ್ಕಾಗಿ ಒಂದು ಶಾಲೆಯನ್ನು ತೆರೆದವನೂ ಇವನೇ. ಈ ಶಾಲೆ ಪ್ರಪಂಚದ ಎಲ್ಲೆಡೆಗಳಿಂದಲೂ ಕಲಿತವರನ್ನು ಸೆಳೆಯಿತು. ಪ್ರಪಂಚದ ಬೇರೆ ಬೇರೆ ದೇಶಗಳ ವಿಶ್ವವಿದ್ಯಾನಿಲಯಗಳಲ್ಲಿ ಔಷಧಶಾಸ್ತ್ರ ಇಲಾಖೆಗಳನ್ನು ತೆರೆದವರು ಒಂದಿಲ್ಲೊಂದು ರೀತಿಯಲ್ಲಿ ಇಲ್ಲಿ ಕಲಿತು ಚಿಗುರಿ ಮೊಳೆತವರೇ.

**ಗುರಿ, ವಿಧಾನಗಳು :** ಮದ್ದುಗಳಿಂದ ಮೈಮೇಲೆ ಆಗುವ ಪ್ರಭಾವಗಳನ್ನು ಚೆನ್ನಾಗಿ ತಿಳಿಯಬೇಕಾದರೆ ಮೊದಲು ಅಂಗಗಳ ನಿಜಗೆಲಸಗಳನ್ನು ತಿಳಿದುಕೊಂಡು ಅಳೆಯುವುದು ಗೊತ್ತಿರಬೇಕು. ಅಲ್ಲದೆ, ಪೆಟ್ಟು, ಗಾಯ, ರೋಗಗಳಿಂದ ಅಂಗರಚನೆ, ನಿಜಗೆಲಸಗಳಲ್ಲಿ ಆಗುವ ಬದಲಾವಣೆಗಳನ್ನು ತಿಳಿಸಿಕೊಡುವ ರೋಗಶಾಸ್ತ್ರದ (ಪೆಥಾಲಜಿ) ಅರಿವು ಚೆನ್ನಾಗಿರಬೇಕು. ಇದನ್ನು ತಿಳಿಯಲು ಬದುಕಿರುವ ಪ್ರಾಣಿಗಳ ಅಂಗಗಳನ್ನು ಬರಿಗಣ್ಣಿನಿಂದ ನೋಡುವುದಲ್ಲದೆ ಊತಕಗಳು, ಜೀವಕಣಗಳನ್ನು ಸೂಕ್ಷ್ಮದರ್ಶಿಯ ಅಡಿಯಲ್ಲೂ ಮೈರಸಗಳು, ಮಲ, ಮೂತ್ರ, ಬೆವರೇ ಮುಂತಾದವನ್ನು ರಾಸಾಯನಿಕವಾಗೂ ಪರೀಕ್ಷಿಸಬೇಕಾಗಬಹುದು. ಮೈಯೊಳಗಿನ ನಿಜಗೆಲಸಗಳ ಮೇಲೆ ಮದ್ದುಗಳ ಪ್ರಭಾವ ಗೊತ್ತಾಗಬೇಕಾದರೆ ಜೀವರಸಾಯನಶಾಸ್ತ್ರ ತಿಳಿದಿರಲೇಬೇಕು. ನಂಜುರೋಧಕಗಳು (ಆಂಟಿಸೆಪ್ಟಿಕ್ಸ್), ಜೀವಿರೋಧಕ (ಆಂಟಿಬಯೊಟಿಕ್) ಮದ್ದುಗಳ ಪ್ರಭಾವ ಕಾಣಬೇಕಾದರೆ ಏಕಾಣುಜೀವಿವಿಜ್ಞಾನದ (ಬ್ಯಾಕ್ಟೀರಿಯಾಲಜಿ) ಕಲ್ಪನೆ, ವಿಧಾನಗಳ ತಿಳಿವಳಿಕೆ ಇರಲೇಬೇಕು. ಗಿಡಮೂಲಿಕೆ, ನಾರುಬೇರುಗಳಲ್ಲಿನ ಮದ್ದುಗಳನ್ನು ಪಡೆಯಲು ರಸಾಯನಶಾಸ್ತ್ರ, ಸಸ್ಯಶಾಸ್ತ್ರಗಳು ಗೊತ್ತಿರಬೇಕಾಗುತ್ತದೆ.

ಒಂದು ಮದ್ದಿನ ರಾಸಾಯನಿಕ ರಚನೆಗೂ ಮೈಯಲ್ಲಿ ಅದರ ವರ್ತನೆಗೂ ನಿಕಟ ಸಂಬಂಧ ಇರುವುದನ್ನು ಔಷಧಶಾಸ್ತ್ರಪರಿಣತರು ಬಲುಬೇಗನೆ ಕಂಡುಕೊಂಡರು. ರಸಾಯನಶಾಸ್ತ್ರಪಟುಗಳು ಮೂಲದವನ್ನು ಹೋಲುವ ಹೊಸ ಮದ್ದುಗಳನ್ನು ತಯಾರಿಸಿದಂತೆಲ್ಲ ಇದು ಇನ್ನಷ್ಟು ಖಚಿತವಾಗುತ್ತ ಬಂದಿದೆ. ಮದ್ದುಗಳಲ್ಲಿ ಗೊತ್ತಾದ ಪ್ರಭಾವಕ್ಕೆ ಕಾರಣವಾದ ರಾಸಾಯನಿಕ ರಚನೆಯ ಅಣ್ವಂಶ ತಿಳಿದರೆ, ಕೊಂಚಮಟ್ಟಿಗೆ ಬದಲಿಸಿ ಇನ್ನೂ ಒಳ್ಳೆಯ ನಿರಪಾಯಕರ ಮದ್ದುಗಳನ್ನು ಕೃತಕವಾಗಿ ತಯಾರಿಸಲು ಅನುಕೂಲ. ಬಳಕೆ ಮದ್ದುಗಳಲ್ಲಿ ಬಹುಪಾಲು ಇಂಗಾಲ ಪರಮಾಣುಗಳಿರುವುದರಿಂದ ಜೈವಿಕ ರಸಾಯನಶಾಸ್ತ್ರದ ಪರಿಣತೆಯೂ ಇರಬೇಕು.

ಎರಡನೆಯ ಮಹಾಯುದ್ಧ ಮುಗಿದ ಮೇಲಿನ ಶಾಂತ ಕಾಲದಲ್ಲಿ ಪರಮಾಣು ಮೂಲಗಳು ಔಷಧಶಾಸ್ತ್ರಜ್ಞರಿಗೂ ದೊರೆತುದರಿಂದ ಶಾಸ್ತ್ರದ ಮೇಲೆ ಹೊಸ ಬೆಳಕು ಬಿತ್ತು. ನಾವು ಸೇವಿಸಿದ ಮದ್ದು ಮೈಯಲ್ಲಿ ಯಾವಾಗ, ಎಲ್ಲಿ ಏನಾಗುತ್ತದೆಂದು ವಿವರವಾಗಿ ತಿಳಿಯುವುದು ಆ ತನಕ ಸುಲಭವಾಗಿರಲಿಲ್ಲ. ಪ್ರಭಾವಿ ಮದ್ದುಗಳು, ವಿಷಕರ ವಸ್ತುಗಳನ್ನು ಕೊಡುವುದೇ ಬಹು ಸ್ವಲ್ಪ ಪ್ರಮಾಣದಲ್ಲಿ. ಅಷ್ಟು ಕೊಂಚ ಮೈಯಲ್ಲೆಲ್ಲ ಹರಡಿಕೊಂಡರೆ ಒಂದು ಊತಕದಲ್ಲೋ ಅಂಗದಲ್ಲೋ ಸಾಂದ್ರವಾಗಿ ಇರುವಷ್ಟನ್ನು ಕೂಡ ಅಳೆಯುವಂತಿಲ್ಲ. ಅದು ಎಷ್ಟು ಕಾಲ ಉಳಿದಿರುವುದೆಂದೂ ಗೊತ್ತಾಗದು. ಇದಕ್ಕೆ ಉತ್ತರವೆಂಬಂತೆ 1945ರಿಂದಲೂ ವಿಕಿರಣಶೀಲ ಸಮಸ್ಥಾನಿಗಳು (ರೇಡಿಯೊ ಆಕ್ಟಿವ್ ಐಸೊಟೋಪ್ಸ್) ಕೈಲಿವೆ. ಇವುಗಳ ವಿಕಿರಣತೆ ತೀರ ಕೊಂಚವಾದ್ದರಿಂದ ಜೀವಿಗಂತೂ ಯಾವ ತೊಂದರೆಯೂ ಇಲ್ಲ. ಪರೀಕ್ಷಿಸಬೇಕಿರುವ ಮದ್ದುಗಳೊಂದಿಗೆ ಇವನ್ನು ಬೆರೆಸಿಕೊಟ್ಟು ಗೀಗರ್ ಗುಣಕದಿಂದ ಮೈಯಲ್ಲಿನ ಬೇರೆ ಬೇರೆ ಅಂಗಗಳಲ್ಲಿ ಮದ್ದಿನ ಸುಳಿವನ್ನು ಹಿಡಿಯಬಹುದು. ಸುಳಿವಿಡಿಕ ಸಂಯುಕ್ತಗಳನ್ನು (ಟ್ರೇಸರ್ ಕಾಂಪೌಂಡ್ಸ್) ಕೃತಕ ರಾಸಾಯನಿಕಗಳಾಗಿ ತಯಾರಿಸುವುದುಂಟು. ಆದಾಗದಿದ್ದಲ್ಲಿ ಗಿಡಮರವನ್ನೋ ಜೀವಿಯನ್ನೋ ವಿಕಿರಣತೆಗೊಡ್ಡಿ ಬೇಕಿರುವ ವಿಕಿರಣಶೀಲ ಸಂಯುಕ್ತಗಳು ತಯಾರಾಗುವಂತೆ ಮಾಡಿ ಹೊರತೆಗೆದು ಚೊಕ್ಕಪಡಿಸಬಹುದು.

ಒಟ್ಟಿನಲ್ಲಿ ಮದ್ದನ್ನು ಕೊಟ್ಟರೆ ಅಂಗಗಳ ನಿಜಗೆಲಸಗಳಲ್ಲಾಗುವ ವ್ಯತ್ಯಾಸಗಳನ್ನು ಗುರುತಿಸುವುದೂ ಮದ್ದಿನ ಗತಿ ಏನಾಗುವುದೆಂದು ತಿಳಿವುದೂ ಔಷಧಶಾಸ್ತ್ರದ ಪ್ರಯೋಗಗಳ ಮುಖ್ಯ ಗುರಿ. ಈ ವ್ಯತ್ಯಾಸಗಳನ್ನು ಅಂಗಕ್ರಿಯಾಶಾಸ್ತ್ರ, ರಸಾಯನಶಾಸ್ತ್ರ, ಭೌತಶಾಸ್ತ್ರಗಳ ವಿಧಾನಗಳಲ್ಲಿ ವಿವರಿಸಬೇಕು. ರಸಾಯನ ಶಾಸ್ತ್ರ ರೀತಿಯಾಗಿ ರಾಸಾಯನಿಕ ವರ್ತನೆಗಳನ್ನು ಮೈಯಲ್ಲಿ ನಡೆವವಕ್ಕೆ ಅನ್ವಯಿಸಿದರೆ ಜೀವರಸಾಯನಶಾಸ್ತ್ರವಾಯಿತು. ಇದರಿಂದ ಅಂಗಕ್ರಿಯಾಶಾಸ್ತ್ರ ಮತ್ತಿತರ ಜೀವಶಾಸ್ತ್ರಗಳ ತಿಳಿವಳಿಕೆ ಹೆಚ್ಚುತ್ತದಲ್ಲದೆ ಮದ್ದುಗಳನ್ನು ಇನ್ನೂ ಚೆನ್ನಾಗಿ ಬಳಸಬಹುದು. ಮದ್ದುಗಳಲ್ಲಿನ ಹೆಚ್ಚಿನ ಗುಣಗಳು ಗೊತ್ತಾಗಿ ಕೆಡುಕಿಲ್ಲದವನ್ನು ತಯಾರಿಸಲು ಅನುವಾಗುತ್ತದೆ. ಕೈಗಾರಿಕೆಯ, ಬೇಸಾಯ ಗಾರಿಕೆಯ, ಮನೆಬಳಕೆಯ ವಸ್ತುಗಳನ್ನು ಸಹ ಹೀಗೆ ರೂಪಿಸಬಹುದು.

**ಸಂಶೋಧನೆ :** ವೈದ್ಯ, ಔಷಧಗಾರಿಕೆ, ದಂತವೈದ್ಯ, ದನವೈದ್ಯಗಳನ್ನು ಕಲಿವವರ ಪಾಠಕ್ರಮಗಳಲ್ಲಿ ಔಷಧಶಾಸ್ತ್ರವೂ ಒಂದು. ಆದ್ದರಿಂದ ಇವನ್ನು ಶಾಲಾ ಕಾಲೇಜುಗಳಲ್ಲಿ ಕಲಿಸುತ್ತಾರೆ. ಅಲ್ಲದೇ ಕೆಲವು ಮೂಲ ವಿಷಯಗಳ ಮೇಲೆ ಸಂಶೋಧನೆಯೂ ನಡೆಯುತ್ತದೆ. ಆಸ್ಪತ್ರೆಗಳಲ್ಲಿ ರೋಗಿಗಳಿಗೆ ಕೊಟ್ಟು ರೋಗ ಚಿಕಿತ್ಸೆಯಲ್ಲಿ ಮದ್ದುಗಳ ಆಗುಹೋಗುಗಳನ್ನು ಕಂಡುಕೊಳ್ಳಲು ಅವಕಾಶವಿದೆ.

**ಕೈಗಾರಿಕೆಯಲ್ಲಿ:** ರಾಸಾಯನಿಕಗಳ ತಯಾರಿಕೆ ಸಂಸ್ಥೆಗಳ ಸಂಶೋಧನಾಲಯ ಗಳಲ್ಲೂ ಔಷಧಗಳ ಮುಖ್ಯವಾದ ಮೂಲಶೋಧನೆ ನಡೆವುದು. ಅಮೆರಿಕ ಸಂಯುಕ್ತ ಸಂಸ್ಥಾನಗಳಲ್ಲಂತೂ 40 ವರ್ಷಗಳಿಂದೀಚೆಗೆ ಔಷಧ ಕೈಗಾರಿಕೆಗಳಲ್ಲಿ ಸಂಶೋಧನೆ ಅಪಾರವಾಗಿ ನಡೆಯುತ್ತಿದೆ. ಕೈಗಾರಿಕೆಯ ಹಣಕಾಸು, ವಿಶ್ವವಿದ್ಯಾ ನಿಲಯಗಳು, ಆಸ್ಪತ್ರೆಗಳು, ಸಂಶೋಧನೆ ಸಂಘಗಳ ಒಗ್ಗಟ್ಟಿಂದ ಬೇಗನೆ ಹೆಚ್ಚಿನ ಮುನ್ನಡೆಯಾಗಿ ಎಷ್ಟೊ ತೊಡಕುಗಳು ಬಗೆಹರಿದಿವೆ. ಸಲ್ಫಮದ್ದುಗಳು, ಜೀವಿ ವಿರೋಧಕಗಳು, ಕಾರ್ಟಿಸೋನ್ ತೆರನವು, ನೆಮ್ಮದಿಕಾರಿಗಳು (ಟ್ರಾಂಕ್ವಿಲೈಸರ್ಸ್), ಮೂತ್ರಕಾರಿಗಳು, ಸಿಹಿಮೂತ್ರರೋಧಕಗಳು, ರಕ್ತದ ಬದಲಿಗಳು, ಏಡಿಗಂತಿ ರೋಧಕಗಳೇ ಮುಂತಾದವು ಉದಾಹರಣೆಗಳು. ಔಷಧಶಾಸ್ತ್ರದ ಮೂಲ ತಿಳಿವಳಿಕೆಯೂ ಅಪಾರವಾಗಿ ಹೆಚ್ಚಿದೆ.

ರೋಗಿಗಳ ಬಳಕೆಗೆ ಹೊಸ ಹೊಸ ಮದ್ದುಗಳನ್ನು ತಯಾರಿಸಿ ವೈದ್ಯನ ಕೈಗೆ ಕೊಡುವ ಮುನ್ನ ಅವು ವಿಷಕರವಲ್ಲವೆಂದು ಖಚಿತ ಮಾಡಿಕೊಳ್ಳಲು, ಪ್ರಾಣಿಗಳ ಮುಖ್ಯವಾದ ಎಲ್ಲ ಅಂಗಗಳು, ಮಂಡಲಗಳ ಮೇಲೂ ಅವುಗಳ ಪ್ರಭಾವವನ್ನು ತಿಳಿಯಲು ಪರೀಕ್ಷೆಗಳನ್ನು ಸಾಂಗವಾಗಿ ಮಾಡಿ ಮುಗಿಸಿರಬೇಕು. ಯಾವ ಮದ್ದನ್ನೇ ಆಗಲಿ ಮೊಟ್ಟಮೊದಲು ಪ್ರಯೋಗದ ಪ್ರಾಣಿಗಳಿಗೆ ಕೊಟ್ಟು ನೋಡಿದ ಮೇಲೆ ಮಾತ್ರವೇ ರೋಗಿಗೆ ಕೊಡುವುದು. ಬಳಸುವ ಮದ್ದುಗಳ ಗುಣಮಟ್ಟ ಒಂದೇ ಸಮನಾಗಿ ಇರುವಂತೆ ನೋಡಿಕೊಳ್ಳಲು ತಯಾರಾದವನ್ನು ಮೇಲಿಂದ ಮೇಲೆ ಪರೀಕ್ಷಿಸುತ್ತಿರಲೇಬೇಕು. ಮದ್ದುಗಳಾದ ಅಚ್ಚರಾಸಾಯನಿಕ ವಸ್ತುಗಳನ್ನೇನೋ ರಾಸಾಯನಿಕ ಪರೀಕ್ಷೆಗಳಿಂದ ಶಿಷ್ಟೀಕರಿಸಬಹುದು. ಆದರೆ ಇನ್ಸುಲಿನ್, ಪ್ರಾಣಿಗಳು ಇಲ್ಲವೇ ಗಿಡಮರಗಳಿಂದ ಪಡೆದ ಕಚ್ಚ ಉತ್ಪನ್ನಗಳಾದ ಡಿಜಟ್ಯಾಲಿಸಿನಂಥವನ್ನು ಇಷ್ಟು ಸರಳವಾಗಿ ಪರೀಕ್ಷಿಸುವಂತಿಲ್ಲ. ಖಚಿತವಾಗಿ ಅಧಿಕೃತವಾಗಿ ಗೊತ್ತು ಪಡಿಸಿಟ್ಟುಕೊಂಡಿರುವ ಗುಣಮಟ್ಟದವೊಂದಿಗೆ ಹೋಲಿಸಿನೋಡಿ ಒರೆಹಚ್ಚಿ ನಿರ್ಧರಿಸ ಬೇಕು. ಈ ಪರೀಕ್ಷೆಗಳನ್ನು ಯಾವುದಾದರೂ ಬದುಕಿರುವ ಪ್ರಾಣಿಯಲ್ಲಿ ಮಾಡ ಬೇಕು. ಇನ್ಸುಲಿನ್ನನ್ನು ಮೊಲದ ರಕ್ತದ ಸಕ್ಕರೆಮಟ್ಟ ಇಳಿಸುವುದರಿಂದಲೂ ಡಿಜಿಟ್ಯಾಲಿಸನ್ನು ಬೆಕ್ಕಿನ ಗುಂಡಿಗೆಯನ್ನು ನಿಲ್ಲಿಸುವುದರಿಂದಲೂ ನಿರ್ಧರಿಸುವುದು ವಾಡಿಕೆಯಲ್ಲಿವೆ. ಹೀಗೆ ಜೀವಿಗಳಲ್ಲಿ ಒರೆಹಚ್ಚಿ ನೋಡುವುದಕ್ಕೆ ಜೀವದೊರೆ (ಬಯೊಅಸ್ಸೆ) ಎಂದಿದೆ. ಬಹುಪಾಲು ಜೀವಾತುಗಳಿಗೂ ಜೀವದೊರೆ ಹಚ್ಚ ಬೇಕಾಗುತ್ತದೆ.

**ಜನಾರೋಗ್ಯ:** ಕೈಗಾರಿಕೆಗಳಲ್ಲಿ ಹೊಸ ಹೊಸ ಉತ್ಪನ್ನಗಳನ್ನೂ ವಿಧಾನಗಳನ್ನೂ ಹೊರತರುವಾಗ ಅಲ್ಲಿನ ಕೆಲಸಗಾರರ ಆರೋಗ್ಯಕ್ಕೆ ಕೆಲವೇಳೆ ಕೆಡುಕಾಗುವುದುಂಟು. ಅವರಿಗಾಗುವ ಅಪಾಯಗಳನ್ನು ತಿಳಿಯಲೋಸುಗ ಔಷಧಶಾಸ್ತ್ರದ ಪ್ರಯೋಗ ವಿಧಾನಗಳನ್ನೇ ಹೆಚ್ಚಿನ ರೀತಿಯಲ್ಲಿ ಅನುಸರಿಸಬೇಕಾಗುತ್ತದೆ. ಗಿಡಮರಗಳ, ಪ್ರಾಣಿಗಳ ಆರೋಗ್ಯಕ್ಕಾಗಿ ಕೀಟನಾಶಕಗಳನ್ನು ಬೇಸಾಯದಲ್ಲಿ ಬಳಸುವಾಗ ಅನ್ವಯ ವಾಗುವುದೂ ಔಷಧಶಾಸ್ತ್ರದ ವಿಭಾಗವಾದ ವಿಷಶಾಸ್ತ್ರಕ್ಕೆ ಸಂಬಂಧಿಸಿದ್ದೇ. ನಾಶಕ ಮದ್ದುಗಳು ಕೀಟಗಳನ್ನು ಹೇಗೆ ಸಾಯಿಸುವುವೆಂದು ಔಷಧಶಾಸ್ತ್ರದ ಪ್ರಯೋಗ ಗಳನ್ನು ಮಾಡಿನೋಡುವರು. ಇಲಿವಿಷಗಳಲ್ಲಿ ಕೆಲವು, ಇಲಿಗಳಲ್ಲಿ ರಕ್ತ ಸುರಿಸಿ ಸಾಯಿಸುತ್ತವೆ. ಡಿಡಿಟಿ ತೆರನ ಮದ್ದುಗಳು ತಾಕುವುದರಿಂದಲೇ ಸೊಳ್ಳೆ ಚಿಗಟಗಳು ಸಾಯುತ್ತವೆ. ಮದ್ದು ಕೆಲಸಮಾಡುವ ರೀತಿ ಸರಿಯಾಗಿ ಗೊತ್ತಾದರೆ ಇನ್ನೂ ಪ್ರಭಾವೀ ರಾಸಾಯನಿಕಗಳನ್ನು ತಯಾರಿಸಲು ಅನುಕೂಲ. ಇವುಗಳ ತಯಾರಿಕೆಯ ಕೆಲಸಗಾರರು, ಸಾಗಿಸುವವರು, ಮುಟ್ಟಿಕೊಳ್ಳುವವರು, ದೂಳಿಗೆ ಸಿಕ್ಕುವವರಿಗೆ ಯಾವ ಅಪಾಯಗಳಾಗಬಹುದೆಂದೂ ಆಕಸ್ಮಾತ್ ವಿಷವೇರಿದರೆ ತಕ್ಕ ಚಿಕಿತ್ಸೆ ಮತ್ತು ಕಟ್ಟುಮದ್ದುಗಳನ್ನೂ (ಆಂಟಿಡೋಟ್ಸ್) ಕಂಡುಕೊಳ್ಳಬಹುದು. **ನೋಡಿ— ಅಪಾಯಕರ ವೃತ್ತಿಗಳು ; ಔಷಧಗಾರಿಕೆ ; ಔಷಧಮಂಜರಿ.** (ಡಿ.ಎಸ್.ಎಸ್.)

**ಔಷಧಿಸಸ್ಯಗಳು :** ಮಾನವನ ಮತ್ತು ಪಶುಪಕ್ಷಿಗಳ ಯಾವುದೇ ರೀತಿಯ ರೋಗಗಳನ್ನು ಶಮನ ಮಾಡುವ ಕಾರ್ಯದಲ್ಲಿ ಉಪಯುಕ್ತವೆನಿಸಬಲ್ಲ ಉತ್ಪನ್ನಗಳನ್ನು ನೀಡುವ ಗಿಡ, ಬಳ್ಳಿ, ಮರ, ಮೂಲಿಕೆ ಮುಂತಾದ ಸಸ್ಯಗಳು (ಮೆಡಿಸನಲ್ ಪ್ಲ್ಯಾಂಟ್ಸ್). ಪ್ರಾಚೀನ ಕಾಲದಿಂದಲೂ ಔಷಧಕ್ಕೆ ಬರತಕ್ಕ ಅಂಥ ಅನೇಕ ಸಸ್ಯಗಳು ಮಾನವನಿಗೆ ಗೊತ್ತಾಗಿವೆ. ಅನುಭವದಿಂದ ಕಂಡುಕೊಂಡ ಅವುಗಳ ರೋಗಪರಿಹಾರಕ ಗುಣ ದೃಢಪಟ್ಟಂತೆಲ್ಲ ಅವುಗಳ ಬಳಕೆಯೂ ಹೆಚ್ಚುತ್ತ ಬಂದಿದೆ. ಮಾನವನ ನಾಗರಿಕತೆ ಹಾಗೂ ಜ್ಞಾನ ಬೆಳೆದಂತೆಲ್ಲ ಈ ಔಷಧಗಳ ತಯಾರಿಕಾ ವಿಧಾನಗಳೂ ರೂಪಗಳೂ ಸುಧಾರಿಸುತ್ತ ಬಂದಿವೆ. ಆಯುರ್ವೇದ ಮತ್ತು ಯುನಾನಿ ಪದ್ಧತಿಯ ಔಷಧಗಳಲ್ಲೆಲ್ಲ ಸಸ್ಯಗಳ ಒಂದಲ್ಲ ಒಂದು ಭಾಗ ಬಳಕೆಯಾಗುವುದುಂಟು. ಅನೇಕ ಅಲೊಪತಿಕ್ ಔಷಧಗಳೂ ಸಸ್ಯಗಳ ಉತ್ಪನ್ನ ಗಳಿಂದಲೇ ಸಿದ್ಧವಾಗುತ್ತವೆ. ಸಸ್ಯಗಳಿಂದ ದೊರಕಿದ ಭಾಗಗಳೆಲ್ಲ ನೇರವಾಗಿ ರೋಗಪರಿಹಾರಕ್ಕೆ ಯೋಗ್ಯವಾಗಿಲ್ಲದಿರಬಹುದು ; ಅವುಗಳಲ್ಲಿ ಕೆಲವನ್ನು ವಿಶೇಷ ರೀತಿಯಿಂದ ಪರಿಷ್ಕರಿಸುವುದು ಅವಶ್ಯವಾಗುತ್ತದೆ.

ಔಷಧಿಸಸ್ಯಗಳೆಲ್ಲ ನಿಸರ್ಗದಲ್ಲಿ ಹೆಚ್ಚಾಗಿ ಸ್ವೇಚ್ಛೆಯಾಗಿಯೇ ಬೆಳೆಯುತ್ತವೆ. ಕೆಲವೊಂದನ್ನು ಪ್ರಯತ್ನಪೂರ್ವಕವಾಗಿಯೂ ಬೆಳೆಸುವುದುಂಟು. ಕೆಲವು ವಿಶಿಷ್ಟ



ಹೂತಬೇವು

ಸಸ್ಯಗಳ ವಿವಿಧ ಭಾಗಗಳನ್ನು ಸಂಗ್ರಹಿಸಿ ಅವನ್ನು ಪರಿಷ್ಕರಿಸಿ ಔಷಧರೂಪಕ್ಕೆ ಪರಿವರ್ತಿಸುವ ತಯಾರಿಕಾ ಸಂಸ್ಥೆಗಳಿಗೆ ಕಳುಹಿಸಿ ಕೊಡುವುದುಂಟು. ಸಸ್ಯಗಳ ಬೇರು, ಕಾಂಡ, ಎಲೆ, ಹೂ, ಹಣ್ಣು, ಕಾಯಿ, ಬೀಜ ಮತ್ತು ತೊಗಟೆ ಇತ್ಯಾದಿ ಭಾಗಗಳೆಲ್ಲವನ್ನೂ ಔಷಧತಯಾರಿಕೆಯಲ್ಲಿ ಬಳಸಲಾಗುತ್ತದೆ. ಸಸ್ಯಗಳ ವಿವಿಧ ಭಾಗಗಳಲ್ಲಿರುವ ಕೆಲವು ನಿರ್ದಿಷ್ಟ ರಾಸಾಯನಿಕ ಘಟಕಗಳಿಂದಲೇ ಅವಕ್ಕೆ ರೋಗ ಪರಿಹಾರಕ ಸಾಮರ್ಥ್ಯ ಒದಗುತ್ತದೆ. ಈ ರಾಸಾಯನಿಕ ಘಟಕಗಳು ಮಾನವನ ಶರೀರದಲ್ಲಿ ಕೆಲವು ವಿಶಿಷ್ಟ ರೀತಿಯ ಜೈವಿಕ ಕ್ರಿಯೆ ನಡೆಸಿ ರೋಗಶಮನ ಮಾಡ ಬಲ್ಲವು. ಇಲ್ಲಿ ಪ್ರಾತಿನಿಧಿಕವಾಗಿರುವಂತೆ ಪ್ರಮುಖ ಹಾಗೂ ನಿತ್ಯಬಳಕೆಯ ಕೆಲವು ಔಷಧಿಸಸ್ಯಗಳನ್ನು ಮಾತ್ರ ಪ್ರಸ್ತಾಪಿಸಲಾಗುವುದು.

ಔಷಧಿಸಸ್ಯಗಳನ್ನು ಎರಡು ವರ್ಗಗಳಾಗಿ ವಿಂಗಡಿಸಬಹುದು : ಕೆಳವರ್ಗದ ಸಸ್ಯಗಳಿಂದ ಅಂದರೆ ಬೂಷ್ಟು (ಫಂಗೈ) ಮತ್ತು ಪಾಚಿ(ಆಲ್ಗೆ)ಗಳಿಂದ ಉತ್ಪಾದನೆ

ಯಾಗುವ ಔಷಧಗಳು ; ಮೇಲುವರ್ಗದ ಸಸ್ಯಗಳಿಂದ ಉತ್ಪಾದನೆಯಾಗುವ ಔಷಧಗಳು.

**ಕೆಳವರ್ಗದ ಸಸ್ಯಗಳಿಂದ ಉತ್ಪಾದನೆಯಾಗುವ ಔಷಧಗಳು:** 1 ಪೆನಿಸಿಲಿನ್: ಇದು ಅಲೊಪತಿಕ್ ಪದ್ಧತಿಯ ರೋಗಚಿಕಿತ್ಸಾಕ್ರಮ ಹಾಗೂ ಔಷಧಗಳಲ್ಲಿ ಒಂದ ಪ್ರಸಿದ್ಧ ಜೀವಿರೋಧಕ (ಆಂಟಿಬಯಾಟಿಕ್). ಪೆನಿಸಿಲಿಯಂ ನೊಟೇಟಂ ಎಂಬ ಹಸಿರು ಬೂಷ್ಟಿನಿಂದ ತಯಾರಾಗುತ್ತದೆ. ಈ ಬೂಷ್ಟನ್ನು ಕೊಳೆಯುವ ಹಣ್ಣು ಹಂಪಲು ಮತ್ತಿತರ ಕೃತಕ ಮಾಧ್ಯಮಗಳಲ್ಲಿ ಬೆಳೆಸಬಹುದು. ಇದಿರುವ ಸಸ್ಯ ದೇಹದಲ್ಲಿ ಸೊಂಪಾಗಿ ಮತ್ತು ಶಾಖೋಪಶಾಖೆಗಳಾಗಿ ಕವಲೊಡೆದ ಎಳೆಗಳಿರುತ್ತವೆ. ಅವುಗಳಿಗೆ ಹೈಫೆ ಎಂದು ಹೆಸರು. ಅವು ಬೆಳೆಯುವ ಮಾಧ್ಯಮದಲ್ಲಿ ಪೆನಿಸಿಲಿನ್ ಎಂಬ ವಸ್ತುವನ್ನು ಸ್ರವಿಸುತ್ತವೆ. ಈ ವಸ್ತುವನ್ನು ಮುಂದೆ ಬೇರ್ಪಡಿಸಿ ಶುದ್ಧೀಕರಿಸಲಾಗುತ್ತದೆ. ಪೆನಿಸಿಲಿಯಂ ಕ್ರೈಸೊಜಿನಂ ಎಂಬ ಇನ್ನೊಂದು ವಿಶಿಷ್ಟ ಬಗೆಯ ಬೂಷ್ಟಿನಿಂದಲೂ ಪೆನಿಸಿಲಿನ್ ಸಿದ್ಧವಾಗುತ್ತದೆ. ಪೆನಿಸಿಲಿನ್ ಎಂಬ ಔಷಧವನ್ನು ವ್ಯಾಪಕವಾಗಿ ಅನೇಕ ರೀತಿಯಲ್ಲಿ ಬಳಸಲಾಗುತ್ತದೆ. ಬ್ಯಾಕ್ಟೀರಿಯಗಳಿಂದಾಗುವ ಸಂಸರ್ಗದೋಷಗಳಿಗೂ ಗನೋರಿಯ, ನ್ಯೂಮೋನಿಯ ಮುಂತಾದ ರೋಗಗಳಿಗೂ ಕೆಲವು ಸ್ಥಳೀಯ ಸಂಸರ್ಗದೋಷಗಳಿಗೂ ಯಶಸ್ವೀ ಔಷಧವಾಗಿ ಪೆನಿಸಿಲಿನ್ ಬಳಕೆಯಾಗುತ್ತಿದೆ.

ಸ್ಟ್ರೆಪ್ಟೊಮೈಸಿಸ್ ಗ್ರಿಸಿಯಸ್ ಎಂಬ ಬೂಷ್ಟಿನಿಂದ ಸ್ಟ್ರೆಪ್ಟೊಮೈಸಿನ್ ಎಂಬ ಜೀವಿರೋಧಕ ಔಷಧವೂ ಸ್ಟ್ರೆಪ್ಟೊಮೈಸಿಸ್ ವೆನಿಜ಼ೂಲೆ ಎಂಬುದರಿಂದ ಕ್ಲೋರೊಮೈಸಿಟಿನ್ ಎಂಬುದೂ ಸ್ಟ್ರೆಪ್ಟೊಮೈಸಿಸ್ ಆರಿಯೊಫೇಸಿಯನ್ಸ್ ಎಂಬುದರಿಂದ ಆರಿಯೊಮೈಸಿನ್ ಎಂಬುದೂ ಸ್ಟ್ರೆಪ್ಟೊಮೈಸಿಸ್ ರಿಮೊಸಸ್ ಎಂಬುದರಿಂದ ಟೆರಮೈಸಿನ್ ಎಂಬುದೂ ಸಿದ್ಧವಾಗುತ್ತವೆ. ಈ ಬಗೆಯ ಬೂಷ್ಟುಗಳೆಲ್ಲ ಪೂತಿಜನ್ಯ (ಸ್ಯಾಪ್ರೊಫೈಟ್) ಸಸ್ಯಗಳಾಗಿದ್ದು, ಅವುಗಳನ್ನು ಕೃತಕ ಮಾಧ್ಯಮಗಳಲ್ಲಿ ಬೆಳೆಸಬಹುದು. ಸ್ಟ್ರೆಪ್ಟೊಮೈಸಿನ್ ಎಂಬುದನ್ನು ನ್ಯುಮೋನಿಯ, ಕ್ಷಯ, ಮಿದುಳುಜ್ವರ (ಮೆನಿನ್ಜೈಟಿಸ್) ಮತ್ತು ಕೆಲವು ಸ್ಥಳೀಯ ರೂಪದ ಸೋಂಕುಗಳಿಗೆ ಪರಿಣಾಮಕಾರಿಯಾಗಿ ಬಳಸಲಾಗುತ್ತದೆ. ಕ್ಲೋರೊಮೈಸಿಟಿನ್ ಎಂಬುದನ್ನು ಟೈಫಾಯಿಡ್ ಜ್ವರ ಮತ್ತು ನ್ಯೂಮೋನಿಯಗಳಿಗೆ ಬಳಸುತ್ತಾರೆ. ಹನಿಗಳ ರೂಪದಲ್ಲಿ ಕಿವಿಯೊಳಕ್ಕೂ (ಇಯರ್ ಡ್ರಾಪ್ಸ್) ಬಳಸುವುದುಂಟು. ಆರಿಯೊಮೈಸಿನ್ ಎಂಬುದನ್ನು ವೈರಸ್ ಸಂಬಂಧದ ನ್ಯೂಮೋನಿಯ, ನಾಯಿಕೆಮ್ಮು ಮತ್ತು ಕಣ್ಣಿನ ಸೋಂಕುಗಳಿಗೆ ಬಳಸುವುದುಂಟು. ಟೆರಮೈಸಿನ್ ಎಂಬುದನ್ನು ರಿಕೆಟ್ಸಿಯ (ಮೆದುಮೂಳೆ) ಎಂಬ ರೋಗಕ್ಕೆ ಬಳಸಲಾಗುತ್ತದೆ.

2 ಎರ್ಗಟ್ : ಕ್ಲಾವಿಸೆಪ್ಸ್ ಪರ್ಪ್ಯೂರಿಯ ಎಂಬ ಬೂಷ್ಟಿನಿಂದ ತಯಾರಾಗುವ ವಸ್ತು. ಈ ಸಸ್ಯ ರೈ, ಬಾರ್ಲಿ, ಓಟ್ಸ್ ಮತ್ತು ಇತರ ಧಾನ್ಯಗಿಡಗಳ ಮೇಲೆ ಪರೋಪಜೀವಿಯಾಗಿ ಬೆಳೆಯುತ್ತದೆ. ಆ ಗಿಡಗಳ ಮೇಲೆ ಧಾನ್ಯಕ್ಕೆ ಬದಲು ಸ್ಕ್ಲಿರೋಷಿಯಂ ಎಂಬ ಕುಡುಗೋಲಿನಾಕಾರದ ಚಿಕ್ಕ ಶುಷ್ಕಫಲಗಳು ನಿರ್ಮಾಣವಾಗುತ್ತವೆ. ಇವಕ್ಕೆ ಎರ್ಗಟ್ ಎಂದು ಹೆಸರು. ಇದನ್ನು ವಿಶಿಷ್ಟರೀತಿ ಪರಿಷ್ಕರಿಸಿ ಸ್ತ್ರೀಯರ ಗರ್ಭಾಶಯ ಸಂಬಂಧದ ರೋಗಗಳಿಗೂ ರಕ್ತಸ್ರಾವಕ್ಕೂ ರಕ್ತದ ಒತ್ತಡವನ್ನು ವರ್ಧಿಸುವುದಕ್ಕೂ ಔಷಧ ರೂಪದಲ್ಲಿ ಬಳಸಲಾಗುತ್ತದೆ. ವಿಶೇಷವಾಗಿ ಸ್ತ್ರೀಯರಲ್ಲಿ ಜನನಕಾಲದ ಅನಂತರ ಇದರ ಬಳಕೆ ಹೆಚ್ಚು.

ಪಾಚಿಯಿಂದ ದೊರೆಯುವ ಔಷಧಗಳು : 1 ಅಗಾರ್: ಇದು ಜಿಲೆಟಿನ್ನಂಥ ಒಂದು ಅಂಟು ವಸ್ತು. ಇದನ್ನು ಜಿಲಾಡಿಯಂ ಕಾಂಡ್ರಸ್, ಗ್ರಾಸಿಲೇರಿಯ ಮತ್ತು ಇನ್ನೂ ಹಲವಾರು ಬಗೆಯ ಪಾಚಿಗಳಿಂದ ತಯಾರಿಸಲಾಗುತ್ತದೆ. ಅಗಾರ್ ಎಂಬುದನ್ನು ಔಷಧಗಳಲ್ಲಿ ಸುಲಭವಾಗಿ ಹೀರಿಕೊಳ್ಳುವ ಮತ್ತು ನುಣುಪಾಗಿ ಜಾರುವ ವಸ್ತುಗಳಂತೆ ಬಳಸುವುದು ಹೆಚ್ಚು. ಇದನ್ನು ಸೂಕ್ಷ್ಮಜೀವಿಗಳ ಬೆಳವಣಿಗೆಗೆ ಪ್ರಯೋಗ ಮಂದಿರಗಳಲ್ಲಿ ಕೃತಕ ಮಾಧ್ಯಮವಾಗಿ ಬಳಸುವುದೂ ಉಂಟು.

2 ಕ್ಯಾಲ್ಪಿಯೊಮಿನ್ : ಕೆಲವು ಬಗೆಯ ಪಾಚಿಗಳಿಂದ ದೊರೆಯುವ ಇದನ್ನು ಸಂಧಿವಾತಗಳಿಗೆ (ಗೌಟ್) ಔಷಧರೂಪದಲ್ಲಿ ಬಳಸುವುದುಂಟು.

3 ಅಯೊಡೀನ್ : ಇದು ಲ್ಯಾಮಿನೇರಿಯ, ಫ್ಯೂಕಸ್, ಎಕ್‍ಲೋನಿಯ ಮುಂತಾದ ಕೆಲವು ಬಗೆಯ ಸಮುದ್ರ ಪಾಚಿಗಳಿಂದ ದೊರೆಯುತ್ತದೆ. ರಷ್ಯ ದೇಶದಲ್ಲಿ ಫಿಲ್ಲೋಫೋರಾ ಎಂಬ ಒಂದು ಬಗೆಯ ಕೆಂಪು ಪಾಚಿಯಿಂದಲೂ ಇದು ಸಿದ್ಧವಾಗುತ್ತದೆ. ಇದನ್ನು ಹೆಚ್ಚಾಗಿ ಗಳಗಂಡ (ಗಾಯ್ಟರ್) ರೋಗಕ್ಕೂ ಸಾಮಾನ್ಯ ಆರೋಗ್ಯಕ್ಕೂ ಬಳಸುವುದುಂಟು.

3 ಕ್ಲೊರೆಲ್ಲಿನ್ : ಇದು ಕ್ಲೊರೆಲ್ಲ ಎಂಬ ಒಂದು ಬಗೆಯ ಹಸಿರು ಪಾಚಿಯಿಂದ ತಯಾರಾಗುವ ಜೀವಿರೋಧಕ. ಇದನ್ನು ಕೆಲವು ಬಗೆಯ ಬ್ಯಾಕ್ಟೀರಿಯಗಳ ವಿರುದ್ಧ ಯಶಸ್ವಿಯಾಗಿ ಬಳಸಲಾಗುತ್ತದೆ.

**ಮೇಲ್ಮಟ್ಟದ ಸಸ್ಯಗಳಿಂದ ಉತ್ಪಾದನೆಯಾಗುವ ಔಷಧಗಳು :**

ಅ. ಬೇರು ಮತ್ತು ಕಂದ–ಗೆಡ್ಡೆಗಳಿಂದ ದೊರೆಯುವ ಔಷಧಗಳು : ಈ ಬಗೆಯ ಔಷಧಗಳನ್ನೆಲ್ಲ ಬೇರು ಇಲ್ಲವೆ ಭೂಮಿಯೊಳಗಿರುವ ಕಂದ–ಗೆಡ್ಡೆಗಳಿಂದ ಉತ್ಪಾದಿಸಲಾಗುತ್ತದೆ.

1 ಅಕೊನಿಟಂ : ಇದು ರ್‍ಯಾನನ್‍ಕ್ಯುಲೇಸಿ ಕುಟುಂಬಕ್ಕೆ ಸೇರಿದ ಸಸ್ಯ. ಇದರ ಸುಮಾರು 20 ಜಾತಿಯ ಸಸ್ಯಗಳು ಪರ್ವತದ ತಪ್ಪಲು ಪ್ರದೇಶಗಳಲ್ಲಿ ಬೆಳೆಯುತ್ತವೆ. ಅವುಗಳಲ್ಲಿ ಕೆಲವು ಉಪಯುಕ್ತ ಔಷಧಿ ಸಸ್ಯಗಳಾಗಿರುವಂತೆ ಕೆಲವು ವಿಷಪೂರಿತ ಸಸ್ಯಗಳೂ ಆಗಿರುವುದುಂಟು. ಅಮೆರಿಕ ದೇಶದಲ್ಲಿ ಅಕೊನಿಟಂ ನೇಪೆಲ್ಲಸ್ ಎಂಬ ಜಾತಿಯೂ ಭಾರತದಲ್ಲಿ ಅಕೊನಿಟಂ ಹೆಟರೊಫಿಲ್ಲಂ (ಅತಿವಿಷ) ಎಂಬುದೂ ಮುಖ್ಯ ಪ್ರಭೇದಗಳೆನಿಸಿವೆ. ಈ ಸಸ್ಯಗಳ ಬೇರು ಮತ್ತು ಎಲೆಗಳಿಂದ ದೊರೆಯುವ ಔಷಧಗಳಿಂದಾಗಿ ಇವಕ್ಕೆ ಮಹತ್ತ್ವ ಬಂದಿದೆ. ಇವುಗಳಲ್ಲಿರುವ ಕ್ಷಾರೀಯ (ಅಲ್ಕಲಾಯಿಡ್) ಘಟಕಗಳಿಂದ ಅಕೊನೈಟ್ ಎಂಬ ಔಷಧವನ್ನು ತಯಾರಿಸುತ್ತಾರೆ. ಅದು ಬಾವು ಮತ್ತು ಜಠರ ಸಂಬಂಧದ ರೋಗಗಳಿಗೆ ಉಪಯುಕ್ತವೆನಿಸಿದೆ. ಅದನ್ನು ಕ್ವಿನೈನಿಗೆ ಬದಲಾಗಿಯೂ ಮತ್ತು ಜ್ವರ ನಿಂತ ಮೇಲೆ ಸೂಕ್ತ ಶಕ್ತಿವರ್ಧಕವಾಗಿಯೂ ಬಳಸಲಾಗುತ್ತದೆ.

2 ಪೋಡೊಫಿಲ್ಲಂ : ಇದು ಬರ್ಬೆರಿಡೇಸಿ ಕುಟುಂಬಕ್ಕೆ ಸೇರಿದ ಒಂದು ಚಿಕ್ಕ ಮೂಲಿಕೆಯಂತಿದ್ದು ನಿರಂತರ ಕಾಲ ಬೆಳೆಯುವ ಬೇರು ಮತ್ತು ಕಂದ–ಗೆಡ್ಡೆಗಳನ್ನು ಒಳಗೊಂಡಿರುತ್ತದೆ. ಇದು ಹಿಮಾಲಯದ ತಪ್ಪಲಿನ ಸಮಶೀತೋಷ್ಣ ಪ್ರದೇಶಗಳಲ್ಲಿ, ಅಂದರೆ, ಪಂಜಾಬು, ಹಿಮಾಚಲಪ್ರದೇಶ ಮತ್ತು ಕಾಶ್ಮೀರಗಳಲ್ಲಿ ವಿಶೇಷವಾಗಿ ಬೆಳೆಯುತ್ತದೆ. ಭಾರತದ ಈ ಸಸ್ಯಗಳಿಗೆ ಮೊದಲು ಅಷ್ಟಾಗಿ ಬೇಡಿಕೆ ಇರಲಿಲ್ಲ. ಆದರೆ ಕಳೆದ ಮಹಾಯುದ್ಧದಲ್ಲಿ ಅಮೆರಿಕದಿಂದ ಪೂರೈಕೆ ನಿಂತುಹೋದಾಗ ಇಲ್ಲಿನ ಸಸ್ಯಗಳಿಗೆ ವಿಶೇಷ ಬೇಡಿಕೆ ಬಂದಿತು. ಇದರಲ್ಲಿ ಒಂದು ಬಗೆಯ ಪೋಡೊಫಿಲ್ಲಿನ್ ಎಂಬ ರಾಳ ಅಥವಾ ಅಂಟು (ರೆಸಿನ್) ಇರುತ್ತದೆ. ಇದನ್ನು ಯಕೃತ್ತಿನ ಉತ್ತೇಜಕವಾಗಿಯೂ ಪಿತ್ತರಸ ಹೆಚ್ಚು ಉತ್ಪತ್ತಿಯಾಗುವಂತೆ ಮಾಡಿ ಅದು ಕರುಳಿನೊಳಕ್ಕೆ ಸುರಿಯುವಂತೆ ಮಾಡುವುದಕ್ಕೂ ವಿರೇಚಕವಾಗಿಯೂ ಬಳಸಲಾಗುತ್ತದೆ.

3 ಕೋಷ್ಟ : ವಾಣಿಜ್ಯದ ದೃಷ್ಟಿಯಿಂದ ಮಹತ್ತ್ವದ್ದಾದ ಇದು ಸಾಸುರಿಯಾ ಲೆಪ್ಪ ಮತ್ತು ಸಾ.ಕ್ಯಾಂಡಿಕೆನ್ಸ್ ಎಂಬ ಬಹುವಾರ್ಷಿಕ ಮೂಲಿಕೆಗಳ ಬೇರುಗಳಿಂದ ದೊರೆಯುತ್ತದೆ. ಇವು ಕಂಪಾಸಿಟಿ ಕುಟುಂಬದ ಸಸ್ಯಗಳಾಗಿದ್ದು ಕಾಶ್ಮೀರ ಪ್ರದೇಶಗಳಲ್ಲಷ್ಟೇ ಬೆಳೆಯುತ್ತವೆ. ಬೇರುಗಳನ್ನು ಸೆಪ್ಟೆಂಬರ್ ಅಕ್ಟೋಬರ್ ತಿಂಗಳುಗಳಲ್ಲಿ ಸಂಗ್ರಹಿಸಿ, 2–3 ಅಂಗುಲಗಳಷ್ಟು ಉದ್ದುದ್ದವಾಗಿರುವಂತೆ ಕತ್ತರಿಸುತ್ತಾರೆ. ಬೇರಿನಿಂದ ದೊರೆಯುವ ಘಟಕಗಳನ್ನು ಕೆಮ್ಮು, ದಮ್ಮು ಮತ್ತು ಚರ್ಮರೋಗಗಳಿಗೆ ಬಳಸಲಾಗುತ್ತದೆ. ಸುಗಂಧ ದ್ರವ್ಯಗಳ ತಯಾರಿಕೆಯಲ್ಲಿಯೂ ಇದರ ಬಳಕೆ ಹೆಚ್ಚು. ಕಾಶ್ಮೀರದಲ್ಲಿ ಶಾಲುಗಳನ್ನು ಕೀಟಗಳಿಂದ ರಕ್ಷಿಸಲೂ ಇದನ್ನು ಬಳಸುವುದುಂಟು. ಈ ಸಸ್ಯಗಳಿಂದ ದೊರೆಯುವ ಔಷಧಗಳಲ್ಲಿ ಕ್ಷಾರೀಯ ವಸ್ತುಗಳು (ಗ್ಲೂಕೊಸೈಡ್) ಮತ್ತು ಸಾರ (ಎಸೆನ್ಷಿಯಲ್) ತೈಲ ಮುಂತಾದ ಅಂಶಗಳು ಇರುತ್ತವೆ.

4 ಕಾಲ್ಚಿಕಮ್ : ಇದು ಲಿಲಿಯೇಸಿ ಕುಟುಂಬದ ಸಸ್ಯ. ಕಾಲ್ಚಿಕಮ್ ಆಟಮ್ನೇಲ್ ಮತ್ತು ಕಾ.ಲ್ಯೂಟಿಯಂ ಎಂಬ ಸಸ್ಯಗಳ ಶುಷ್ಕ ಕಂದ-ಗೆಡ್ಡೆಗಳಿಂದ ಕಾಲ್ಚಿಸಿನ್ ಔಷಧ ತಯಾರಿಸಲಾಗುತ್ತದೆ. ಅವುಗಳನ್ನು ವಾತ (ರುಮ್ಯಾಟಿಸಂ) ಮತ್ತು ಸಂಧಿವಾತಗಳಿಗೆ (ಗೌಟ್) ಔಷಧದ ರೂಪದಲ್ಲಿ ಬಳಸಲಾಗುತ್ತದೆ. ಬಾವು ಮತ್ತು ನೋವುಗಳನ್ನು ಶಮನ ಮಾಡಲೂ ಬಾಹ್ಯ ಲೇಪನಗಳಂತೆ ಬಳಸುವುದುಂಟು. ಆಧುನಿಕ ತಳಿವಿಜ್ಞಾನ ಪರಿಶೀಲನೆಗಳಲ್ಲಿ ಕ್ರೋಮೊಸೋಮುಗಳ ಸಂಖ್ಯೆಯನ್ನು ಇಮ್ಮಡಿಗೊಳಿಸಲು ಸಹ ಕಾಲ್ಚಿಸಿನನ್ನು ಬಳಸಲಾಗುತ್ತದೆ.

5 ಜಲಪ್ : ಇದು ಎಕ್ಸೊಗೋನಿಯಂ ಪರ್ಗ ಎಂಬ ಸಸ್ಯದ ಹಸಿರು ಬೇರುಗಳಿಂದ ತೆಗೆದ ಅಂಟಿನಂಥ ಔಷಧ. ಇದನ್ನು ಭಾರತ, ಮೆಕ್ಸಿಕೋ, ಜಮೈಕಾ ಮುಂತಾದ ಕಡೆಗಳಲ್ಲಿ ಬೆಳೆಸಲಾಗುತ್ತದೆ. ಇದಕ್ಕೆ ಉತ್ತಮ ರೇಚಕಗುಣ ಉಂಟು.

6 ಜೆನ್ಶಿಯನ್ : ಇದು ಜೆನ್ಶಿಯಾನಾ ಲ್ಯೂಟಿಯ (ಕಿರಿಯಾತು) ಎಂಬ ಸಸ್ಯದ ಕಂದ-ಗೆಡ್ಡೆ ಮತ್ತು ಬೇರುಗಳಿಂದ ದೊರೆಯುತ್ತದೆ. ಅವನ್ನು ತುಂಡರಿಸಿ ಒಣಗಿಸಿ ಮಾರಾಟಕ್ಕೆ ಸಿದ್ಧಪಡಿಸುವರು. ಈ ಸಸ್ಯಗಳು ಯೂರೋಪ್ ಖಂಡದ ಪರ್ವತ ಪ್ರದೇಶಗಳಲ್ಲಿ ಹೆಚ್ಚಾಗಿ ಬೆಳೆಯುತ್ತವೆ. ಜೆನ್ಶಿಯನ್ ಎಂಬುದರಲ್ಲಿ ಕೆಲವು ಬಗೆಯ ಗ್ಲೂಕೊಸೈಡ್ಸ್ ಎಂಬ ಘಟಕಗಳಿವೆ. ಜೆನ್ಶಿಯನನ್ನು ಒಂದು ಶಕ್ತಿವರ್ಧಕವಾಗಿ ಬಳಸುವುದು ವಾಡಿಕೆ.

7 ಸ್ಕ್ವಿಲ್ಸ್ : ಇವು ಅರ್ಜಿನಿಯ ಮ್ಯಾರಿಟಿಮ ಮತ್ತು ಅ.ಇಂಡಿಕ ಎಂಬ ಸಸ್ಯಗಳ ಲಶುನಗಳಿಂದ (ಬಲ್ಬ್ಸ್) ದೊರೆಯುತ್ತವೆ. ಲಿಲಿಯೇಸಿ ಕುಟುಂಬಕ್ಕೆ

ಸೇರಿದ ಸಸ್ಯಗಳಿವು. ಇವುಗಳಲ್ಲಿ ಕೆಲವು ಬಗೆಯ ಗ್ಲೂಕೊಸೈಡ್ ಎಂಬ ಘಟಕಗಳಿವೆ. ಹ ದಯಕ್ರಿಯೆಯನ್ನು ಉದ್ದೀಪನಗೊಳಿಸಬಲ್ಲ ಶಕ್ತಿ ಇವುಗಳಿಗಿದೆ. ಇವನ್ನು ಶ್ವಾಸನಾಳ ಸಂಬಂಧದ ಹಾಗೂ ದೀರ್ಘಕಾಲದ ರೋಗಗಳಿಗೆ ಪಾಕದ ರೂಪದಲ್ಲಿ (ಸಿರಪ್) ಔಷಧವಾಗಿ ಬಳಸಲಾಗುತ್ತದೆ.

8 ಅಬ್ರೊಮ ಅಗಸ್ಟ : ಇದು ಸ್ಟರ್‌ಕ್ಯೂಲಿಯೇಸಿ ಕುಟುಂಬಕ್ಕೆ ಸೇರಿದ ಸಸ್ಯ. ಇದರ ಬೇರುಗಳಿಂದ ತೆಗೆದ ವಸ್ತು ಸ್ತ್ರೀಯರ ಗರ್ಭಕೋಶದ ತೊಂದರೆಗಳು ಮತ್ತು ಮುಟ್ಟುದೋಷಗಳಿಗೆ ಸಿದ್ಧ ಔಷಧ. ಈ ಔಷಧವನ್ನು ನೀರು ಮತ್ತು ಮೆಣಸಿನೊಡನೆ ಕೂಡಿಸಿ ಸರಿಯ ರೂಪದಲ್ಲಿ ಬಳಸುವುದುಂಟು.

9 ಅರಿಸಿನ : ಇದು ಜಿಂಜಿಬರೇಸಿ ಕುಟುಂಬಕ್ಕೆ ಸೇರಿದ ಕರ್ಕ್ಯೂಮ ಲಾಂಗ ಮತ್ತು ಕರ್ಕ್ಯೂಮ ಡೊಮೆಸ್ಟಿಕ ಎಂಬ ಸಸ್ಯಗಳಿಂದ ದೊರೆಯುತ್ತದೆ. ಈ ಸಸ್ಯಗಳು ಎತ್ತರ ಬೆಳೆಯುವ ಮೂಲಿಕೆಗಳಂತಿದ್ದು, ಭೂಮಿಯೊಳಗೆ ಕಂದ–ಗೆಡ್ಡೆಗಳನ್ನು ಉತ್ಪಾದಿಸುತ್ತವೆ. ಇವುಗಳನ್ನು ಅನೇಕ ಕಡೆ ಮಲೆನಾಡಿನ ಪ್ರದೇಶಗಳಲ್ಲಿ ಬೆಳೆಸುವರು. ಇವುಗಳ ಕಂದಗಳಿಂದ ದೊರೆಯುವ ಈ ವಸ್ತುವಿಗೆ ಉದ್ದೀಪನ ಶಕ್ತಿ, ವಾತಹರ ಶಕ್ತಿ, ರಕ್ತಶುದ್ಧೀಕರಣ ಶಕ್ತಿ ಇತ್ಯಾದಿ ವಿಶೇಷ ಗುಣಗಳಿವೆ. ಇದನ್ನು ಭೇದಿ, ಬಿಟ್ಟು ಬಿಟ್ಟು ಬರುವ ಜ್ವರ, ಕಾಮಾಲೆ ಮತ್ತು ಯಕೃತ್ತಿನ ದೋಷಗಳು ಇತ್ಯಾದಿಗಳಿಗೂ ಬಳಸುವುದುಂಟು. ಕೆಲವು ಚರ್ಮರೋಗಗಳಿಗೆ ಗೆಡ್ಡೆಯ ರಸ ಅಥವಾ ಪುಡಿಯನ್ನು ಬಾಹ್ಯಲೇಪನವಾಗಿ ಉಪಯೋಗಿಸಲಾಗುತ್ತದೆ.

10 ಇಂಗು : ಇದು ಅಂಬೆಲಿಫೆರಿ ಎಂಬ ಕುಟುಂಬಕ್ಕೆ ಸೇರಿದ ಫೆರುಲ ಫೀಟಿಡ ಮತ್ತು ಫೆ. ನಾರ್ತೆಕ್ಸ್ ಎಂಬ ಸಸ್ಯಗಳ ಕಾಂಡದ ಕೆಳಭಾಗದಿಂದ (ಭೂಮಿಯೊಳಗಿರುವ ಭಾಗ) ಹೊರಬರುವ ಒಂದು ಅಂಟಿನಂಥ ದ್ರವ್ಯ. ವಾಣಿಜ್ಯ ಹಾಗೂ ಬಳಕೆಯ ದೃಷ್ಟಿಯಿಂದ ಇದನ್ನು ಇಂಗು ಅಥವಾ ಹಿಂಗು ಎಂದು ಕರೆಯುವುದುಂಟು. ಈ ಸಸ್ಯಗಳು ದೀರ್ಘಕಾಲ ಬೆಳೆಯುವ ಮೂಲಿಕೆಗಳಾಗಿದ್ದು ವಿಶೇಷವಾಗಿ ಕಾಶ್ಮೀರ ಮತ್ತು ಪಂಜಾಬ್ ರಾಜ್ಯಗಳಲ್ಲಿ ಬೆಳೆಯುತ್ತವೆ. ಇಂಗು ಸಂಬಾರ ಪದಾರ್ಥಗಳಲ್ಲೊಂದು. ಇದಕ್ಕೆ ವಾತಹರ, ಪಚನಕಾರಿ, ಉಪಶಾಮಕ, ಮೂತ್ರವರ್ಧಕ ಇತ್ಯಾದಿ ಪರಿಹಾರ ಗುಣಗಳಿವೆ. ಇದನ್ನು ಉದರಶೂಲೆ (ಹೊಟ್ಟೆ ನೋವು), ಅಗ್ನಿಮಾಂದ್ಯ, ಅಜೀರ್ಣ, ಚಿತ್ತೋದ್ರೇಕ, ಕಾಲರ ಇತ್ಯಾದಿಗಳಿಗೆ ಸಿದ್ಧೌಷಧವಾಗಿ ಬಳಸುವುದುಂಟು.

11 ಶುಂಠಿ : ಇದು ಜಿಂಜಿಬರೇಸಿ ಕುಟುಂಬಕ್ಕೆ ಸೇರಿದ ಜಿಂಜಿಬರ್ ಅಫಿಸಿನೇಲ್ ಎಂಬ ಸಸ್ಯದ ಪ್ರಕಂದಗಳಿಂದ ದೊರೆಯುತ್ತದೆ. ಇದನ್ನು ಭಾರತದಾದ್ಯಂತ ಅನೇಕ ಕಡೆ ಬೆಳೆಸಲಾಗುತ್ತದೆ. ಪ್ರಕಂದಗಳಿಂದ ದೊರೆಯುವ ವಸ್ತು ವಾತಹರ, ಉದ್ದೀಪಕ ಹಾಗೂ ಚುರುಕುಗೊಳಿಸುವಂಥದು ಮತ್ತು ವಿಶಿಷ್ಟ ತೀಕ್ಷ್ಣ ವಾಸನೆಯುಳ್ಳದ್ದು. ಇದನ್ನು ಜಠರ ಮತ್ತು ಕರುಳು ಸಂಬಂಧದ ದೋಷಗಳು, ಅಜೀರ್ಣ, ಹೊಟ್ಟೆನೋವು, ವಾಂತಿ, ಆಮಶಂಕೆ ಮತ್ತು ಕಾಲರ ಇತ್ಯಾದಿ ರೋಗಗಳಿಗೆ ಒಳ್ಳೆಯ ಔಷಧವಾಗಿ ಬಳಸಲಾಗುತ್ತದೆ.

12 ಈರುಳ್ಳಿ : ಇದು ಲಿಲಿಯೇಸಿ ಕುಟುಂಬಕ್ಕೆ ಸೇರಿದ ಅಲ್ಲಿಯಂ ಸೀಪಾ ಎಂಬ ಸಸ್ಯದ ಲಶುನ. ಇದನ್ನು ವಿಶೇಷವಾಗಿ ಆಹಾರಕ್ಕೂ ಕೆಲವು ಔಷಧಿಗಳಿಗೂ ಬಳಸಲಾಗುತ್ತದೆ. ಸಸ್ಯದ ಕೆಳಭಾಗದಲ್ಲಿ ಹಲವಾರು ಲಶುನಗಳ ಗೆಡ್ಡೆಯಿದ್ದು ಮೇಲ್ಭಾಗದಲ್ಲಿ ನೀಳ ಹಾಗೂ ಕೊಳವೆಯಾಕಾರದ ಹಸಿರೆಲೆಗಳಿವೆ. ಕಾಂಡದ ಭಾಗ ಬಹಳ ಕ್ಷೀಣಿಸಿದ್ದು, ಒಂದು ಚಿಕ್ಕ ತಟ್ಟೆಯಂತಿದೆ. ಅದರ ಸುತ್ತ ಹಾಗೂ ಮೇಲೆ ಅನೇಕ ರಕ್ಷಕ ಪತ್ರಗಳು ಇವೆ. ಈ ಸಸ್ಯಮೂಲಿಕೆಯನ್ನು ಒಂದು ವಾಣಿಜ್ಯ ಬೆಳೆಯಾಗಿ ಭಾರತದಲ್ಲಿ ಎಲ್ಲೆಡೆಯೂ ಬೆಳೆಸಲಾಗುತ್ತದೆ. ಲಶುನಗಳು ಉದ್ದೀಪಕಗಳೂ ಮೂತ್ರವರ್ಧಕಗಳೂ ಕಫ ಕತ್ತರಿಸುವಂಥವುಗಳೂ ಕಾಮೋದ್ದೀಪಕಗಳೂ ಆಗಿರುವಂತೆ ವಿಶಿಷ್ಟ ಪರಿಹಾರಗುಣಗಳನ್ನೂ ಹೊಂದಿವೆ. ಅದರಲ್ಲಿ ಬಾಷ್ಪೀಭವನವಾಗುವ ಒಂದು ಬಗೆಯ ಎಣ್ಣೆ ಇದ್ದು ಅದು ಕಾಮಾಲೆ, ಮೂಲವ್ಯಾಧಿ, ಜ್ವರ, ಕೆಮ್ಮು ಮತ್ತು ಉದರಶೂಲೆ ಇತ್ಯಾದಿಗಳಿಗೆ ಸಿದ್ಧೌಷಧವೆಂದು ಬಳಕೆಯಾಗುತ್ತದೆ. ಗೆಡ್ಡೆಯನ್ನು ಜಜ್ಜಿ ಹೊರ ತೆಗೆದ ರಸವನ್ನು ಕೆಲವು ಚರ್ಮರೋಗಗಳಿಗೆ ಲೇಪನದಂತೆ ಉಪಯೋಗಿಸುವುದುಂಟು. ರಸವನ್ನು ಕಾಯಿಸಿ ಕಿವಿಯಲ್ಲಿ ಹಾಕಿದರೆ ಕಿವಿನೋವು ಶಮನವಾಗುತ್ತದೆ.

13 ಬೆಳ್ಳುಳ್ಳಿ : ಇದು ಲಿಲಿಯೇಸಿ ಕುಟುಂಬದ ಅಲ್ಲಿಯಂ ಸೇಟಿವಮ್ ಎಂಬ ಸಸ್ಯದಿಂದ ದೊರೆಯುತ್ತದೆ. ಸಸ್ಯ ವಿಶಿಷ್ಟ ಹಾಗೂ ತೀವ್ರವಾಸನೆಯುಳ್ಳದ್ದಾಗಿ ಲಶುನಗಳಿಂದಾದ ಈರುಳ್ಳಿ ಗಡ್ಡೆಯಂತೆಯೇ ಒಂದು ಮೂಲಿಕೆಯಾಗಿ ಬೆಳೆಯುತ್ತದೆ. ಲಶುನದಿಂದ ಇಲಕುಗಳನ್ನು ಬೇರ್ಪಡಿಸಿ ಅಡುಗೆ ಮತ್ತು ಆಹಾರಗಳಲ್ಲಿ ರುಚಿ ಮತ್ತು ವಾಸನೆಗಾಗಿಯೂ ಕೆಲವು ಔಷಧಗಳ ತಯಾರಿಕೆಗೂ ಬಳಸುವುದುಂಟು. ಇದನ್ನು ಭಾರತದಲ್ಲಿ ಎಲ್ಲ ಕಡೆಯೂ ಬೆಳೆಸುತ್ತಾರೆ. ಲಶುನಗಳನ್ನು ಉದ್ದೀಪಕ, ಮೂತ್ರವರ್ಧಕಗಳಾಗಿಯೂ ಅಜೀರ್ಣಸಂಬಂಧದ ದೋಷಗಳು ಮತ್ತು ಜಠರಶೂಲೆ, ಜ್ವರ, ಕೆಮ್ಮು, ಚಿತ್ತೋದ್ರೇಕಗಳ ಶಮನಕ್ಕೂ ಕಾಮ ಮತ್ತು ಹಸಿವಿನ ಉದ್ದೀಪನಕ್ಕೂ ಸಿದ್ಧೌಷಧವಾಗಿ ಬಳಸಲಾಗುತ್ತದೆ.

14 ಚಿರೆಟ್ಟಾ : ಜೆನ್ಶಿಯನೇಸಿ ಕುಟುಂಬಕ್ಕೆ ಸೇರಿದ ಸ್ವರ್ಟಿಯ ಚಿರಾಟಾ ಎಂಬ ಇಡಿ ಸಸ್ಯವೇ ಔಷಧೀಯ ದೃಷ್ಟಿಯಿಂದ ಹೆಸರುವಾಸಿಯಾಗಿದ್ದರೂ ಅದರ ಬೇರಿಗೆ (ಚಿರೆಟ್ಟಾ) ವಿಶೇಷ ಮಹತ್ತ್ವವಿದೆ. ಈ ಸಸ್ಯಗಳು ಕಾಡಿನಲ್ಲಿ ಬೆಳೆಯುತ್ತಿದ್ದು ನೇಪಾಳ, ಭೂತಾನ, ಕಾಶ್ಮೀರ ಮತ್ತು ಹಿಮಾಲಯ ಪ್ರದೇಶಗಳಲ್ಲಿ 4–5 ಸಾವಿರ ಅಡಿಗಳ ಎತ್ತರದಲ್ಲೂ ಸಿಕ್ಕುವೆ. ಬೇರಿನಲ್ಲಿ ಒಫೀಲಿಕ್ ಆಮ್ಲ ಮತ್ತು ಚಿರಾಟಿನ್ ಎಂಬ ವಿಶಿಷ್ಟ ಘಟಕಗಳಿವೆ. ಅವು ವಿರೇಚಕಗಳೂ ಹೌದು. ಜಠರ ಸಂಬಂಧದ ದೋಷಗಳಿಗೂ ಪರಿಣಾಮಕಾರಿ. ಅವುಗಳನ್ನು ಅಜೀರ್ಣ, ಓಕರಿಕೆ ಮತ್ತು ಯಕೃತ್ತು ಹಾಗೂ ಪ್ಲೀಹ ದೋಷಗಳಿಗೆ ಔಷಧಗಳಂತೆ ಬಳಸುವುದುಂಟು.

15 ಸೆನೆಗಾ : ಇದು ಪಾಲಿಗೆಲೇಸಿ ಕುಟುಂಬಕ್ಕೆ ಸೇರಿದ ಪಾಲಿಗೆಲ ಸೆನೆಗಾ ಎಂಬ ಸಸ್ಯದ ಒಣಗಿದ ಬೇರಿನಿಂದ ದೊರೆಯುತ್ತದೆ. ಇದರಲ್ಲಿ ಗ್ಲೂಕೊಸೈಡ್ ಎಂಬ ಘಟಕವಿದ್ದು ಅದನ್ನು ಹಾವಿನ ಕಡಿತಕ್ಕೂ ಉದ್ದೀಪಕವಾಗಿಯೂ ಕಫ ಕತ್ತರಿಸುವುದಕ್ಕೂ ವಾಂತಿಕಾರಕ ಔಷಧವಾಗಿಯೂ ಬಳಸಲಾಗುತ್ತದೆ.

16 ರಾವುಲ್ಫಿಯ (ಸೂತ್ರನಾಭಿ, ಪಾತಾಳಗರುಡ) : ಇದು ಅಪೋಸೈನೇಸಿ ಕುಟುಂಬಕ್ಕೆ ಸೇರಿದ ರಾವುಲ್ಫಿಯ ಸರ್ಪೆಂಟಿನ ಎಂಬ ಪೊದರು ಸಸ್ಯದ ಬೇರುಗಳಿಂದ ದೊರೆಯುತ್ತದೆ. ಇದು ಅಸ್ಸಾಂ ಮತ್ತು ಹಿಮಾಚಲ ಪ್ರದೇಶಗಳಲ್ಲಿ ವಿಶೇಷವಾಗಿ ಬೆಳೆಯುತ್ತದೆ. ಇದರಲ್ಲಿ ರಾವುಲ್ಫಿನ್ ಎಂಬ ಕ್ಷಾರೀಯ ಘಟಕವಿದ್ದು, ಇದು ಕೃತಕ ನಿದ್ರೆ ಬರಿಸುವಂಥ, ದುಗುಡ ಮನಸ್ಸನ್ನು ಶಾಂತಗೊಳಿಸುವಂಥ ವಸ್ತುವಾಗಿದೆ. ಹೀಗಾಗಿ ಇದನ್ನು ರಕ್ತದ ಅಧಿಕ ಒತ್ತಡ ಮತ್ತು ಮಾನಸಿಕ ಅಸಮ ತೋಲನ ಇತ್ಯಾದಿಗಳಿದ್ದ ರೋಗಿಗಳಿಗೆ ಕೊಡುವುದುಂಟು.

17 ಇಪಿಕ್ಯಾಕ್ : ಇದು ಸಿಫ್ಯಾಲಿಸ್ ಇಪಿಕ್ಯಾಕ್ಯುವಾನ ಎಂಬ ಸಸ್ಯದ ಬೇರುಗಳಿಂದ ದೊರೆಯುವ ಔಷಧ. ಬೇರಿನ ಮೇಲೆ ಉಂಗುರ ಅಥವಾ ವಲಯಗಳಂಥ ಗುರುತುಗಳು ಇರುವುದು ಈ ಗಿಡದ ವೈಶಿಷ್ಟ್ಯ. ಬೇರಿನಲ್ಲಿ 2–3% ರಷ್ಟು ಎಮೆಟಿನ್ ಎಂಬ ವಾಂತಿಕಾರಕ ಹಾಗೂ ಕ್ಷಾರೀಯ ಘಟಕವಿದೆ. ಬೇರನ್ನು ನುಣ್ಣಗೆ ಪುಡಿಮಾಡಿ ಔಷಧ ರೂಪದಲ್ಲಿ ಅಮೀಬಾಗಳಿಂದಾದ ಆಮಶಂಕೆ, ರಕ್ತದ ಅಧಿಕ ಒತ್ತಡ, ಜಠರ ರಸದ ಉತ್ಪಾದನೆಯನ್ನು ನಿಯಂತ್ರಿಸುವಿಕೆ ಇತ್ಯಾದಿಗಳಿಗೆ ಬಳಸುವುದುಂಟು.

18 ವ್ಯಾಲೇರಿಯನ್ : ಇದಕ್ಕೆ ಹಿಂದೂಸ್ತಾನಿಯಲ್ಲಿ ಸೋಮರಾಜ್ ಎಂದು ಹೇಳುವುದುಂಟು. ಇದು ಕಂಪಾಸಿಟೆ ಕುಟುಂಬಕ್ಕೆ ಸೇರಿದ ವರ್ನೋನಿಯ ಎಂಬ ವಾರ್ಷಿಕ ಸಸ್ಯದ ಮೂಲಿಕೆಯ ಬೇರುಗಳಿಂದ ದೊರೆಯುತ್ತದೆ. ಈ ಔಷಧವನ್ನು ಕೆಮ್ಮು, ಬಿಳಿತೊನ್ನು, ಜಂತುಹುಳು, ಬೊಜ್ಜು, ಜಲೋದರ ಇತ್ಯಾದಿಗಳಿಗೆ ಬಳಸುವುದುಂಟು.

ಆ. ತೊಗಟೆಯಿಂದ ದೊರೆಯುವ ಔಷಧಗಳು : 1 ಕ್ವಿನೀನು : ಇದು ಭಾರತದಲ್ಲಿ ವಿಶೇಷ ಬಳಕೆಯಲ್ಲಿರುವ ಔಷಧಗಳಲ್ಲಿ ಒಂದೆನ್ನಬಹುದು. ರೂಬಿಯೇಸಿ ಎಂಬ ಕುಟುಂಬಕ್ಕೆ ಸೇರಿದ ಸಿಂಕೋನ ಜಾತಿಯ ವಿವಿಧ ಪ್ರಭೇದಗಳಾದ ಸಿಂಕೋನ ಕ್ಯಾಲಿಸಾಯ, ಸಿಂಕೋನ ಅಫಿಷಿನಾಲಿಸ್, ಸಿಂಕೋನ ಲೆಡ್ಜೇರಿಯಾನ ಇತ್ಯಾದಿ ಸಸ್ಯಗಳ ತೊಗಟೆಗಳಿಂದ ಕ್ವಿನೀನನ್ನು ತಯಾರಿಸಲಾಗುತ್ತದೆ. ಇದರ ಮೂಲಸ್ಥಾನ ದಕ್ಷಿಣ ಅಮೆರಿಕ. ಇದು ಎತ್ತರ ಹಾಗೂ ಸುಂದರವಾಗಿ ಬೆಳೆಯುವ ಒಂದು ಮರ. 1638ರಲ್ಲಿ ಮೊಟ್ಟಮೊದಲು ಬಳಕೆಗೆ ಬಂದ ಇದು ಮಲೇರಿಯ ರೋಗಕ್ಕೆ ರಾಮಬಾಣವೆನಿಸಿಕೊಂಡಿದೆ. ಕೆಲವು ಬಗೆಯ ಜ್ವರಗಳಿಗೂ ಇದು ಸಿದ್ಧೌಷಧವೇ ಟಾನಿಕ್, ಪೂತಿನಾಶಕ ಇತ್ಯಾದಿಗಳ ರೂಪದಲ್ಲಿಯೂ ಇದರ ಬಳಕೆ ಇದೆ. ಮರ 12 ವರ್ಷಗಳ ವರೆಗೆ ಬೆಳೆದ ಮೇಲೆ ಅದನ್ನು ಕಡಿದು ಕಾಂಡ ಮತ್ತು ಬೇರುಗಳ ಮೇಲಿರುವ ತೊಗಟೆಯನ್ನು ಬೇರ್ಪಡಿಸಲಾಗುತ್ತದೆ. ಈ ತೊಗಟೆಯಲ್ಲಿ ಸುಮಾರು 30 ಬಗೆಯ ಕ್ಷಾರೀಯ ಘಟಕಗಳಿದ್ದು ಅವು ಕ್ವಿನೀನ್ ಎಂಬ ಹೆಸರಿನಲ್ಲಿ ಔಷಧೀಯ ದೃಷ್ಟಿಯಿಂದ ಮಹತ್ತ್ವದವಾಗಿವೆ. ಕ್ವಿನೀನ್ ಎಂಬುದು ಬಿಳಿ ರವೆಯ ಕಣಗಳಂತಿದೆ. ಇದು ಬಹು ಕಹಿವಸ್ತು. ಬ್ರಿಟನ್ ಮತ್ತು ನೆದರ್ಲೆಂಡ್ಸಿನಿಂದ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಇದು ರಫ್ತಾಗುತ್ತಿತ್ತು. ಈಗಲೂ ಜಗತ್ತಿನ ಪೂರೈಕೆಯಲ್ಲಿ 90%ರಷ್ಟು ನೆದರ್ಲೆಂಡ್ಸಿನಿಂದಲೇ ಬರುತ್ತದೆ.

2 ದಾಲಚಿನ್ನಿ ಅಥವಾ ಚಕ್ಕೆ (ಸಿನ್ನಮಾನ್) : ಲಾರೇಸಿ ಕುಟುಂಬಕ್ಕೆ ಸೇರಿದ ಸಿನಮೋಮಮ್ ಜ಼ಿಲಾನಿಕಂ ಎಂಬ ಮರದಿಂದ ದೊರೆಯುವ ಚಕ್ಕೆ ಅಥವಾ ತೊಗಟೆಯೇ ದಾಲಚಿನ್ನಿ. ಇದಕ್ಕೆ ತೀಕ್ಷ್ಣವೂ ವಿಶಿಷ್ಟವೂ ಆದ ವಾಸನೆ ಇದೆ. ರುಚಿ ಒಗಚುಳ್ಳ ಸಿಹಿ. ಇದು ವಾತಹರ. ಇದನ್ನು ಅತಿಸಾರ ಮತ್ತು ಆಮಶಂಕೆಗಳಿಗೆ

ಶಮನಕಾರಿಯಾಗಿ ಕಷಾಯ ರೂಪದಲ್ಲಿ ಬಳಸುವುದುಂಟು.

3 ಕ್ಯಾಷಿಯ ತೊಗಟೆ : ಇದೂ ಲಾರೇಸಿ ಕುಟುಂಬಕ್ಕೆ ಸೇರಿದ ಸಿನಮೋಮಮ್ ತಮುಲಾ ಎಂಬ ಸಸ್ಯದಿಂದ ದೊರೆಯುವ ತೊಗಟೆ. ಈ ಸಸ್ಯಗಳು ಬಂಗಾಳ ಮತ್ತು ಖಾಸಿ ಗುಡ್ಡಗಳಲ್ಲಿ ಸಾಮಾನ್ಯ. ಔಷಧ ಮತ್ತು ಸುಗಂಧ ದ್ರವ್ಯಗಳ ತಯಾರಿಕೆಯಲ್ಲಿ ಇವುಗಳ ಬಳಕೆ ಹೆಚ್ಚು.

4 ಆಲದ ಮರದ ಚಕ್ಕೆ : ಮೊರೇಸಿ ಕುಟುಂಬಕ್ಕೆ ಸೇರಿದ ಫೈಕಸ್ ಬೆಂಗಲೆನ್ಸಿಸ್ ಎಂಬ ಮರದ ತೊಗಟೆ. ತೊಗಟೆ ಅಥವಾ ಚಕ್ಕೆಯ ರಸವನ್ನು ನೀರಿನಲ್ಲಿ ಕೂಡಿಸಿ ಮಧುಮೇಹ ರೋಗಕ್ಕೆ ಮತ್ತು ಲ್ಯುಕೋರಿಯ ಅಥವಾ ಶ್ವೇತಪ್ರದರವೆಂಬ ಸ್ತ್ರೀರೋಗಗಳಿಗೆ ಔಷಧವಾಗಿ ಬಳಸುವುದುಂಟು.

5 ಬಿಳಿಸೆ ಅಥವಾ ಬಾಹಿನಿಯ : ಲೆಗ್ಯುಮಿನೋಸಿ ಕುಟುಂಬಕ್ಕೆ ಸೇರಿದ ಬಾಹಿನಿಯ ವೇರಿಗೇಟ ಎಂಬ ಸಸ್ಯದ ತೊಗಟೆ ಅಥವಾ ಚಕ್ಕೆಗೆ ಮಹತ್ತ್ವವಿದೆ. ತೊಗಟೆಯ ಕಷಾಯವನ್ನು ಕೆಲವು ರೋಗಗಳಿಗೆ (ಉದಾ : ಸಿಫಿಲಿಸ್, ತೊನ್ನು, ವ್ರಣ ಮತ್ತು ಚರ್ಮರೋಗ) ಔಷಧವಾಗಿ ಹೊಟ್ಟೆಗೆ ತೆಗೆದುಕೊಳ್ಳುವುದುಂಟು. ಈ ಸಸ್ಯಗಳು ಅಸ್ಸಾಂ, ಮಧ್ಯಪ್ರದೇಶ, ಸಿಕ್ಕಿಂ, ಭೂತಾನ್ ಇತ್ಯಾದಿ ಪ್ರದೇಶಗಳಲ್ಲಿ ಬೆಳೆಯುತ್ತವೆ.

6 ಸಪ್ತಪರ್ಣ : ಇದು ಅಪೊಸೈನೇಸಿ ಕುಟುಂಬಕ್ಕೆ ಸೇರಿದ ಆಲ್‌ಸ್ಟೋನಿಯ ಸ್ಕೊಲಾರಿಸ್ ಎಂಬ ಎತ್ತರವಾಗಿ ಬೆಳೆಯುವ ಹಾಗೂ ನಿತ್ಯಹರಿದ್ವರ್ಣದ ಮರ. ಇದು ಜವುಗು ಮತ್ತು ತಂಪು ಪ್ರದೇಶಗಳಲ್ಲಿ ಬೆಳೆಯುತ್ತದೆ. ಇದರ ತೊಗಟೆಯನ್ನು ದೀರ್ಘಕಾಲದ ಆಮಶಂಕೆಗೆ ಬಳಸಲಾಗುತ್ತದೆ. ಯುದ್ಧಕಾಲದಲ್ಲಿ ಇದು ಕ್ವಿನೀನಿಗೆ ಬದಲಿ ವಸ್ತುವಾಗಿ ಬಳಕೆಯಾಗುತ್ತಿತ್ತು. ಇದಕ್ಕೆ ಜಂತಾಲ ಮರ, ಮದ್ದಾಲೆ, ಏಳೆಲೆಬಾಳೆ, ಕೋಡಾಲೆ, ಬಂತಲೆ ಎಂಬ ಇತರ ಹೆಸರುಗಳಿವೆ.

7 ಅಶೋಕ ಮರದ ಚಕ್ಕೆ : ಈ ಗಿಡ ಲೆಗ್ಯುಮಿನೋಸಿ ಕುಟುಂಬಕ್ಕೆ ಸೇರಿದ ಸರಕ ಇಂಡಿಕ ಎಂಬ ಹೆಸರಿನ, ನಿತ್ಯಹರಿದ್ವರ್ಣದ ಎತ್ತರ ಬೆಳೆಯುವ ಮರ. ಇದನ್ನು ಎಲ್ಲೆಡೆಯಲ್ಲೂ ಅಲಂಕಾರ ಸಸ್ಯವಾಗಿ ಬೆಳೆಸುವುದುಂಟು. ಇದಕ್ಕೆ ಕೆಂಕಾಳಿ, ಆಚಂಗೆ ಇತ್ಯಾದಿ ಹೆಸರುಗಳೂ ಉಂಟು. ತೊಗಟೆ ಒಗರಾಗಿದ್ದು ಗರ್ಭಕೋಶದ ತೊಂದರೆಗಳಿಗೆ ಪರಿಣಾಮಕಾರಿಯಾಗಿದೆ.

8 ಕ್ಯಾಸ್ಕಾರಾ : ಇದು ರ್ಯಾಮ್ನೇಸಿ ಕುಟುಂಬಕ್ಕೆ ಸೇರಿದ ರ್ಯಾಮ್ನಸ್ ಪುರ್ಷಿಯಾನಾ ಎಂಬ ಮರದ ತೊಗಟೆಯಿಂದ ದೊರೆಯುವ ಔಷಧ. ಉದ್ವನೆಯ ಪಟ್ಟಿಯಂತಿರುವ ಈ ತೊಗಟೆಯನ್ನು ಒಣಗಿಸಿ, ಒಂದು ವರ್ಷ ಕಾಲ ಇಟ್ಟ ಮೇಲೆ ಔಷಧವಾಗಿ ಉಪಯೋಗಕ್ಕೆ ಬರುತ್ತದೆ. ಇದನ್ನು ಶಕ್ತಿವರ್ಧಕ ಮತ್ತು ರೇಚಕವಾಗಿಯೂ ಬಳಸುವುದುಂಟು.

9 ಬಾರಿ ಅಥವಾ ಎಲಚಿ : ಇದು ರ್ಯಾಮ್ನೇಸಿ ಕುಟುಂಬದ ಜಿಜಿಫಸ್ ಜುಜೂಬ ಎಂಬ ಮರ. ಇದರ ತೊಗಟೆಯನ್ನು ಆಮಶಂಕೆ, ಅತಿಸಾರ, ಕರುಳು ಬೇನೆ, ವಸಡು ನೋವು ಇತ್ಯಾದಿಗಳಿಗೆ ಬಳಸುವುದುಂಟು.

10 ಚಳ್ಳೆಮರ : ಇದು ಬೊರ್ರ್ಯಾಜಿನೇಸಿ ಕುಟುಂಬಕ್ಕೆ ಸೇರಿದ ಕಾರ್ಡಿಯ ಡೈಕಾಟೊಮಾ ಎಂಬ ಮರ. ಇದರ ತೊಗಟೆಯ ರಸವನ್ನು ಹಾಲಿನಲ್ಲಿ ಕೂಡಿಸಿ, ಶಕ್ತಿವರ್ಧಕವಾಗಿಯೂ ಕರುಳುಬೇನೆಗಳಿಗೆ ಶಮನಕಾರಿಯಾಗಿಯೂ ಬಳಸುವುದುಂಟು.

ಇ. ಕಾಂಡದಿಂದ ದೊರೆಯುವ ಔಷಧಗಳು : 1 ಎಫಿಡ್ರಿನ್: ಇದನ್ನು ಅನಾವೃತ ಬೀಜ ಸಸ್ಯಗಳ ಗುಂಪಿಗೆ ಸೇರಿದ ಎಫಿಡ್ರ ಎಂಬ ಜಾತಿಯ ವಿವಿಧ ಪ್ರಭೇದಗಳಿಂದ ಉತ್ಪಾದಿಸಲಾಗುತ್ತದೆ. ಸಸ್ಯ ಎಲೆಯೇ ಇಲ್ಲದ ಹಸಿರು ಬಣ್ಣದ ಕಂಟೆಯಂತಿದೆ ಎಫಿಡ್ರಿನ್ ಎಂಬ ಕ್ಷಾರೀಯ ಘಟಕವುಳ್ಳ ಈ ಔಷಧವನ್ನು ಶೀತ, ದಮ್ಮು, ಜ್ವರ ಇತ್ಯಾದಿಗಳಿಗೆ ಬಳಸುವುದುಂಟು.

2 ಬಿಳಿ ಗಂಧದ ಮರ (ಸ್ಯಾಂಡಲ್‌ವುಡ್) : ಇದು ಸ್ಯಾಂಟಲೇಸಿ ಕುಟುಂಬಕ್ಕೆ ಸೇರಿದ ಸ್ಯಾಂಟಲಂ ಆಲ್ಬಂ ಎಂಬ ಹೆಸರಿನ ಮರ. ಇದಕ್ಕೆ ಗಂಧದ ಮರ ಅಥವಾ ಚಂದನತರು ಎಂದೂ ಹೆಸರಿದೆ. ಮರದ ಕಾಂಡ ಮತ್ತು ಅದರಿಂದ ತೆಗೆದಎಣ್ಣೆ ಎರಡೂ ಔಷಧೋಪಯೋಗಿ ವಸ್ತುಗಳು. ಅವು ಸುಗಂಧ ವಾಸನೆಯುಳ್ಳವು ತಂಪು ಮತ್ತು ಶಮನಕಾರಿಗಳು. ಕಟ್ಟಿಗೆ ಪುಡಿಯನ್ನು ಗನೋರಿಯ ಮತ್ತು ಜ್ವರಗಳಿಗೆ ಔಷಧವಾಗಿ ಬಳಸುತ್ತಾರೆ. ಗಂಧವನ್ನು ತೇಯ್ದು ಬಾಹ್ಯ ಲೇಪನವಾಗಿ ಕುರು, ಹುಣ್ಣು, ಹುರುಪೆ ಇತ್ಯಾದಿ ಚರ್ಮರೋಗಗಳಿಗೆ ಹಚ್ಚುತ್ತಾರೆ. ಗಂಧದ ಎಣ್ಣೆಯನ್ನು ಅನ್ನ ಮತ್ತು ಜೇನುತುಪ್ಪದೊಡನೆ ಕೂಡಿಸಿ ಸೇವಿಸಿದಾಗ ಮಿತಿಮೀರಿದ ನೀರಡಿಕೆ ಮತ್ತು ಆಮಶಂಕೆ ನಿವಾರಣೆಯಾಗುತ್ತವೆ.

3 ಕೆಂಪು ಗಂಧದ ಮರ : ಇದು ಲೆಗ್ಯುಮಿನೋಸಿ ಕುಟುಂಬಕ್ಕೆ ಸೇರಿದ ಟೀರೊಕಾರ್ಪಸ್ ಸ್ಯಾಂಟಲಿನಸ್ ಎಂಬ ಮರದಿಂದ ಕೆಂಪು ಅಥವಾ ರಕ್ತಚಂದನ ಕಟ್ಟಿಗೆಯಾಗಿ ದೊರೆಯುತ್ತದೆ. ಇದಕ್ಕೆ ಬಿಳಿ ಗಂಧದ ಕಟ್ಟಿಗೆಯಂತೆಯೇ ಕೆಲವು ಔಷಧೀಯ ಗುಣಗಳಿವೆ. ಕಟ್ಟಿಗೆಯನ್ನು ತೇಯ್ದು, ಕಣ್ಣುಬೇನೆಗಳಿಗೆ ಹಚ್ಚುವುದುಂಟು.

4 ಎಕ್ಕದ ಗಿಡ : ಇದು ಆಸ್ಕ್ಲೀಪಿಯಡೇಸಿ ಕುಟುಂಬದ ಕ್ಯಾಲೊಟ್ರೊಪಿಸ್ ಪ್ರೊಸಿರ ಎಂಬ ಚಿಕ್ಕ ಗಿಡ. ಇದರಿಂದ ದೊರೆಯುವ ಬಿಳಿದ್ರವದಿಂದ(ಲ್ಯಾಟೆಕ್ಸ್) ಸಂಧಿವಾತ, ತೊನ್ನು, ಜಲೋದರ, ಟೈಫಸ್ ಜ್ವರ, ಸಿಫಿಲಿಸ್, ಹುಳುಕಡ್ಡಿ, ಗಜಕರ್ಣ, ಹಲ್ಲುನೋವು ಇತ್ಯಾದಿಗಳ ನಿವಾರಣೆಯಾಗುತ್ತದೆ. ಒಣಗಿಸಿದ ಬಿಳಿದ್ರವ ಕಫಹಾರಿಯಾಗಿದ್ದು, ನರಗಳಿಗೆ ಉತ್ತಮ ಶಕ್ತಿವರ್ಧಕ ಕೂಡ ಆಗಿದೆಯೆಂದು ಭಾವಿಸಲಾಗಿದೆ.

5 ಬಿದಿರು : ಇದು ಗ್ರಾಮಿನೇಸಿ ಕುಟುಂಬಕ್ಕೆ ಸೇರಿದ ಬ್ಯಾಂಬೂಸಾ ಬ್ಯಾಂಬಾಸ್ ಎಂಬ ಮರ ಅಥವಾ ಮೆಳೆ. ಕಾಂಡದ ಕಿರುಳಿಗೆ ಅನೇಕ ಔಷಧೀಯ ಗುಣಗಳಿವೆ. ಎಳೆಯ ಕಾಂಡದಲ್ಲಿ ಬೆಂಜೊಯಿಕ್ ಮತ್ತು ಹೈಡ್ರೊಸಯನಿಕ್ ಆಮ್ಲಗಳಿದ್ದು, ಶ್ವಾಸಸಂಬಂಧದ ರೋಗಗಳಿಗೆ ಪರಿಣಾಮಕಾರಿಯೆನಿಸಿವೆ. ನೀರಿನಲ್ಲಿ ಕುದಿಸಿದ ಎಳೆಯ ಕಾಂಡಗಳು ಗಾಯಗಳನ್ನು ತೊಳೆಯಲು ಉಪಯುಕ್ತ. ಕಾಂಡದ ಗಂಟುಗಳಿಂದ ತೆಗೆದ ಕಷಾಯ ಎಲುಬು ಸಂಧಿಗಳ ಬಾವನ್ನು ಶಮನಗೊಳಿಸುತ್ತದೆ.

6 ಪಾಪಾಸು(ಡಬ್ಬು)ಕಳ್ಳಿ : ಹಸಿರು ಹಾಗೂ ಚಪ್ಪಟೆಯಾದ ಈ ಪಾಪಾಸು ಕಳ್ಳಿಯಲ್ಲಿ ಇರುವ ಲೋಳೆಯಂಥ ದ್ರವಕ್ಕೆ (ಮ್ಯೂಸಿಲೇಜ್) ವಿಶೇಷ ಔಷಧೀಯ ಗುಣವುಂಟು. ಅದನ್ನು ಬಿಸಿಮಾಡಿ ಬೆಚ್ಚಗಿರದಂತೆ ಉಪಯೋಗಿಸಿದರೆ ಕುರು ಹುಣ್ಣು, ಬಾವು ಇತ್ಯಾದಿ ಶಮನಗೊಳ್ಳುತ್ತವೆ.

ಈ ಎಲೆಗಳಿಂದ ದೊರೆಯುವ ಔಷಧಗಳು. 1 ಬೇವು (ನೀಮ್) : ಮೀಲಿಯೇಸಿ ಎಂಬ ಕುಟುಂಬಕ್ಕೆ ಸೇರಿದ ಅಜಾದಿರಕ್ತ ಇಂಡಿಕ ಎಂಬ ಹೆಸರಿನ ಮರಗಳ ಎಲೆಗಳ ಜೊತೆಗೆ ಕಾಂಡ, ತೊಗಟೆ ಮತ್ತು ಫಲಗಳೂ ಉಪಯುಕ್ತವೇ. ಇದು ಭಾರತದಲ್ಲಿ ಎಲ್ಲೆಡೆಯೂ ಬೆಳೆಯುವಂಥ ಮರ. ನೋಡಿ— ಬೇವು.

2 ಬೆಲ್ಲಡೋನಾ: ಇದು ಸೊಲನೇಸಿ ಕುಟುಂಬದ ಅಟ್ರೊಪಾ ಬೆಲ್ಲಡೋನಾ ಮತ್ತು ಅ. ಅಕ್ಯೂಮಿನೇಟಾ ಎಂಬ ಸಸ್ಯಗಳ ಒಣ ಎಲೆಗಳಿಂದ ದೊರೆಯುತ್ತದೆ. ಸಸ್ಯ ನೇರ ಹಾಗೂ ಎತ್ತರ ಬೆಳೆಯುವ ಮೂಲಿಕೆಯಾಗಿದ್ದು, ಅದನ್ನು ಭಾರತ, ಯೂರೋಪ್ ಮತ್ತು ಅಮೆರಿಕ ಸಂಯುಕ್ತಸಂಸ್ಥಾನಗಳಲ್ಲಿ ಎಲ್ಲೆಡೆ ಬೆಳೆಸಲಾಗುತ್ತದೆ. ಹೂ ಬಿಡುವ ಕಾಲಕ್ಕೆ ಎಲೆಗಳನ್ನು ಕಿತ್ತು ಒಣಗಿಸುತ್ತಾರೆ. ಎಲೆಯಲ್ಲಿ ಹಯೊಸಯಾಮಿನ್ ಮತ್ತು ಅಟ್ರೊಪಿನ್ ಎಂಬ ಎರಡು ರಾಸಾಯನಿಕ ಘಟಕಗಳಿವೆ. ಎಲೆಗಳಿಂದ ತಯಾರಿಸಿದ ಔಷಧಗಳನ್ನು ಅಫೀಮು ಸೇವನೆಯಿಂದಾದ ವಿಷಪರಿಣಾಮವನ್ನು ನಿವಾರಿಸುವುದು, ಸ್ರಾವಕ ಗ್ರಂಥಿಗಳ ಕ್ರಿಯೆಗಳನ್ನು ನಿಯಂತ್ರಿಸುವುದು, ಬಾಹ್ಯಲೇಪನದಿಂದ ನೋವು ಕಡಿಮೆ ಮಾಡುವುದು, ಅಸ್ತಮಾ, ಉದರ ಶೂಲೆ, ಮೂತ್ರಕೋಶದ ದೋಷಗಳು, ಕಣ್ಣಿನ ಪರೀಕ್ಷೆ ನಡೆಸುವಾಗ ಕಣ್ಪಾಪೆಯನ್ನು ಹಿಗ್ಗಿಸುವುದು—ಇತ್ಯಾದಿ ಹಲವಾರು ಉದ್ದೇಶಗಳಿಗೆ ಬಳಸಲಾಗುತ್ತದೆ.

3 ನೀರು ಬ್ರಾಹ್ಮಿ : ಇದು ಸ್ಕ್ರೊಫ್ಯುಲೇರಿಯೇಸಿ ಕುಟುಂಬಕ್ಕೆ ಸೇರಿದ ಬೆಕೋಪ ಮಾನಿಯೆರ ಎಂಬ ಸಸ್ಯದ ಎಲೆಗಳಿಂದ ದೊರೆಯುತ್ತದೆ. ಸಸ್ಯ ಭೂಮಿಗೆ ಹತ್ತಿದಂತೆ ಅಡ್ಡಡ್ಡಲಾಗಿ ಬೆಳೆಯುವ ಮೂಲಿಕೆಯಾಗಿದ್ದು ಗಿಣ್ಣುಗಳಿಂದ ಆಗಂತುಕ ಬೇರುಗಳನ್ನು ಉತ್ಪಾದಿಸುತ್ತದೆ. ಮಳೆ ಹಾಗೂ ಚಳಿಗಾಲಗಳಲ್ಲಿ ಮಾತ್ರ ಈ ಸಸ್ಯ ಕಾಣಿಸಿಕೊಳ್ಳುತ್ತದೆ. ಎಲೆಯ ರಸವನ್ನು ಶ್ವಾಸನಾಳದ ದೋಷಗಳು, ಅತಿಸಾರ, ನೆಗಡಿ ಇತ್ಯಾದಿಗಳಿಗೆ ಬಳಸುವುದುಂಟು.



ನೀಲಗಿರಿ ಗಿಡದ ರೆಂಬೆ

4 ನೀಲಗಿರಿ ಎಣ್ಣೆ : ಮಿರ್ಟೇಸಿ ಕುಟುಂಬಕ್ಕೆ ಸೇರಿದ ಯೂಕಲಿಪ್ಟಸ್ ಜಾತಿಯ ಸಸ್ಯಗಳಿಂದ ತೆಗೆದ ಒಂದು ಸಾರತೈಲ. ಔಷಧೀಯ ದೃಷ್ಟಿಯಿಂದ ಮಹತ್ತ್ವದ್ದಾಗಿದೆ. ಭಾರತದಲ್ಲಿ ಹಲವಾರು ಪ್ರಭೇದದ ನೀಲಗಿರಿ ತೈಲದ ಮರಗಳನ್ನು ಬೆಳೆಸಲಾಗುತ್ತಿದೆ. ಇದರ ಸಾರತೈಲ ಪೂತಿನಾಶಕವಾಗಿದ್ದು, ಸಂಧಿವಾತ, ಅಸ್ತಮಾ ಮತ್ತು ಶ್ವಾಸನಾಳ ವಿಕಾರಗಳು, ಮೂಗು ಗಂಟಲು ಬೇನೆಗಳು ಇತ್ಯಾದಿಗಳಿಗೂ ಸುಟ್ಟ ಗಾಯಗಳಿಗೆ ಲೇಪನ ರೂಪದಲ್ಲಿಯೂ ಬಳಕೆಯಲ್ಲಿದೆ.

5 ಉಮ್ಮತ್ತಿ : ಸೊಲನೇಸಿ ಕುಟುಂಬಕ್ಕೆ ಸೇರಿದ ಈ ದತ್ತೂರ ಸ್ಟ್ರಮೋನಿಯಮ್ ಎಂಬ ಸಸ್ಯದಿಂದ ವಾಣಿಜ್ಯಮಹತ್ತ್ವದ ದತ್ತೂರ ದೊರೆಯುತ್ತದೆ. ಸಸ್ಯವೂ ದೊಡ್ಡ ಗಾತ್ರದ ಮೂಲಿಕೆಯಾಗಿದ್ದು, ದೊಡ್ಡ ದೊಡ್ಡ ಹೂಗಳನ್ನು ಬಿಡುತ್ತದೆ. ಅದು ಸಾಮಾನ್ಯವಾಗಿ ಎಲ್ಲೆಡೆ ಕಾಡುಗಿಡದಂತೆ (ವೀಡ್) ಬೆಳೆಯುತ್ತದೆ. ಎಲೆ ಮತ್ತು ಕಾಯಿಗಳು ಔಷಧ ದೃಷ್ಟಿಯಿಂದ ಮಹತ್ತ್ವದ್ದಾಗಿವೆ. ಎಲೆಗಳನ್ನು ಬಾಹ್ಯಲೇಪನಕ್ಕಾಗಿಯೂ ಮಾದಕ ವಸ್ತುವಿನಂತೆಯೂ ನೋವುಶಮನಕಾರಿಯಾಗಿಯೂ (ವೇದನಾಹರ) ಕಫ ಕತ್ತರಿಸುವುದಕ್ಕೂ ಬಳಸಲಾಗುತ್ತದೆ. ಅವುಗಳಲ್ಲಿ ಹಯೊಸಿನ್, ಹಯೊಸಯಾಮಿನ್ ಮತ್ತು ಅಟ್ರೊಪಿನ್ ಎಂಬ ರಾಸಾಯನಿಕ ಘಟಕಗಳಿವೆ. ಅವುಗಳ ಬಳಕೆ ಅಸ್ತಮಾ ರೋಗದಲ್ಲಿ ವಿಶೇಷ. ಎಲೆಗಳಿಂದ ತಯಾರಿಸಿದ ಬೆಚ್ಚಾರ ಸಂಧಿವಾತ, ಬಾತು ನೋವುಂಟುಮಾಡುವ ಗೆಡ್ಡೆ, ಸಿಡುಬು, ದಡಾರ ಇತ್ಯಾದಿಗಳಿಗೆ ಪರಿಣಾಮಕಾರಿ. ಫಲಗಳು ಅಜೀರ್ಣ, ಉದರಶೂಲೆ, ಅಸ್ತಮಾ, ಧನುರ್ವಾತ (ಟಿಟಾನಸ್), ಬೆನ್ನುಫಣಿ ಇತ್ಯಾದಿಗಳಿಗೆ ಸಿದ್ಧೌಷಧ.

6 ಡಿಜಿಟ್ಯಾಲಿಸ್ : ಸ್ಕ್ರಾಫ್ಯುಲೇರಿಯೇಸಿ ಕುಟುಂಬಕ್ಕೆ ಸೇರಿದ ಡಿಜಿಟ್ಯಾಲಿಸ್ ಪರ್ಪ್ಯೂರಿಯ ಎಂಬ ಈ ಮೂಲಿಕೆಯ ಎಲೆಗಳನ್ನು ಒಣಗಿಸಿ ಸಂಗ್ರಹಿಸಲಾಗುತ್ತದೆ. ಈ ಸಸ್ಯ ಯೂರೋಪ್ ಖಂಡದಲ್ಲಿ ಬೆಳೆಯುವುದು ಹೆಚ್ಚು. ಇವು ಡಿಜಿಟ್ಯಾಕ್ಸಿನ್ ಎಂಬ ರಾಸಾಯನಿಕ ಘಟಕವಿದೆ. ಎಲೆಗಳಿಂದ ತಯಾರಿಸಿದ ಔಷಧಗಳು ಹೃದಯ ಕ್ರಿಯೆಯ ಪ್ರಚೋದಕಗಳು. ಇದರಿಂದ ಅನೇಕ ಬಗೆಯ ಹೃದ್ರೋಗಗಳಿಗೆ ಔಷಧ ತಯಾರಿಸುವರು.

7 ಕೊಕೇನ್ : ಎರಿತ್ರೊಕ್ಸೈಲೇಸಿ ಕುಟುಂಬಕ್ಕೆ ಸೇರಿದ ಎರಿತ್ರೊಕ್ಸೈಲಾನ್ ಕೋಕೊ ಎಂಬ ಸಸ್ಯದಿಂದ ತಯಾರಾದ ಔಷಧ. ಇದನ್ನು ಶಸ್ತ್ರ ಚಿಕಿತ್ಸೆಯಲ್ಲಿ ಸ್ಥಳೀಯ ಅರಿವಳಿಕವಾಗಿ (ಲೋಕಲ್ ಅನೀಸ್ತೀಸಿಯ), ಬಳಸುವುದುಂಟು.

8 ಗಾಂಜಾ (ಇಂಡಿಯನ್ ಹೆಂಪ್): ಕ್ಯಾನಬಿನೇಸಿ ಕುಟುಂಬಕ್ಕೆ ಸೇರಿದ ಕ್ಯಾನಬಿಸ್ ಸಟೈವ ಎಂಬ ಸಸ್ಯದ ಒಣಗಿದ ಎಲೆಗಳಿಗೆ ಗಾಂಜಾ ಅಥವಾ ಭಂಗಿ ಎಂದು ಹೇಳುವುದುಂಟು. ಈ ಎಲೆಗಳನ್ನು ಅರೆದು ನೀರಿನೊಡನೆ ಕೂಡಿಸಿ ಹೊಟ್ಟೆಗೆ ತೆಗೆದುಕೊಳ್ಳುವುದು ಹೆಚ್ಚು. ಅದರಿಂದ ಅರೆನಿಶೆಯುಂಟಾಗುತ್ತದೆ. ಸಸ್ಯ 5–6 ಅಡಿ ಎತ್ತರಕ್ಕೆ ಬೆಳೆಯುವ ಒಂದು ವಾರ್ಷಿಕ ಮೂಲಿಕೆ. ಉತ್ತರ ಭಾರತದಲ್ಲಿ ಅನೇಕ ಕಡೆ ಬೆಳೆಯುತ್ತದೆ. ಎಲೆಗಳಿಗೆ ಉಪಶಾಮಕ, ಪಚನಕ್ರಿಯೆ ಚೋದಕ, ಮೂತ್ರವರ್ಧಕ ಗುಣಗಳಿವೆ. ಅದರಿಂದ ಇವುಗಳನ್ನು ಆಮಶಂಕೆ, ಅತಿಸಾರ, ಅಜೀರ್ಣ ಮುಂತಾದ ದೋಷಗಳಿಗೆ ಬಳಸುವುಟು. ವೈದ್ಯಕೀಯ ದೃಷ್ಟಿಯಿಂದ ಸಸ್ಯದ ಕರಕು, ಗಾಂಜಾ ಇತ್ಯಾದಿಗಳು ಮಹತ್ತ್ವದವು.



ತುಳಸಿ

9 ತುಳಸಿ : ಲೇಬಿಯೇಟಿ ಕುಟುಂಬಕ್ಕೆ ಸೇರಿದ ಆಸಿಮಮ್ ಸ್ಯಾಂಕ್ಟಮ್ ಎಂಬ ಸಸ್ಯ ; ಭಾರತೀಯರಿಗೆ ಪವಿತ್ರವಾದುದು. ಔಷಧೀಯ ದೃಷ್ಟಿಯಿಂದಲೂ ಮುಖ್ಯವಾಗಿದೆ. ಇದನ್ನು ಭಾರತದಲ್ಲಿ ಎಲ್ಲೆಡೆ ಹಿಂದೂ ಜನರು ಮನೆಗಳ ಆವರಣದಲ್ಲಿ ಬೆಳೆಸುತ್ತಾರೆ. ಎಲೆಗಳಿಗೆ ಹಸಿವು ವೃದ್ಧಿಮಾಡುವ, ಕಫ ಕತ್ತರಿಸುವ, ಉದ್ದೀಪಕ, ಸುವಾಸನೆಕೊಡುವ, ಶೀತಹರ ಇತ್ಯಾದಿ ಗುಣಗಳಿವೆ. ಎಲೆಗಳನ್ನು ಅರೆದು ಜೇನುತುಪ್ಪ ಮತ್ತು ಕರಿಮೆಣಸಿನೊಡನೆ ಕೂಡಿಸಿ ಚಳಿಜ್ವರ, ಯಕೃತ್ತಿನ ವಿಕಾರಗಳು, ನೆಗಡಿ, ಕೆಮ್ಮು, ಗಂಟಲುಬೇನೆ ಇತ್ಯಾದಿಗಳಿಗೆ ಬಳಸುವುದುಂಟು. ಮಲೇರಿಯ ಜ್ವರಕ್ಕೆ ಮೆಣಸು, ಶುಂಠಿ ಮತ್ತು ತುಳಸಿ ಎಲೆಗಳನ್ನು ಕೂಡಿಸಿ ಕೊಡುವುದುಂಟು. ಆಮಶಂಕೆ, ವಾಂತಿ, ರಕ್ತಸ್ರಾವ ಇತ್ಯಾದಿಗಳನ್ನೂ ಅದು ಗುಣಪಡಿಸಬಲ್ಲದು.

10 ವೀಳೆಯದೆಲೆ (ಬೀಟಲ್‌ಲೀಫ್) : ಪೈಪರೇಸಿ ಕುಟುಂಬಕ್ಕೆ ಸೇರಿದ ಪೈಪರ್ ಬೀಟಲ್ ಅಥವಾ ಬೀಟಲ್ ವೈನ್ ಎಂಬ ಬಳ್ಳಿಯ ಎಲೆಗಳಿಗೆ ವೀಳೆಯದೆಲೆ ಅಥವಾ ತಿನ್ನುವ ಎಲೆ ಎಂದೂ ಹೇಳಲಾಗುತ್ತದೆ. ಅವುಗಳಿಗೆ ವಾತಹರ, ಸುವಾಸನೆಕೊಡುವ ಮತ್ತು ಪ್ರಚೋದಕ ಗುಣಗಳಿವೆ. ಎಲೆಯ ರಸವನ್ನು ಜೇನುತುಪ್ಪದೊಡನೆ ಕೂಡಿಸಿ ಮಕ್ಕಳಿಗೆ ಹಲ್ಲು ಬರುವಾಗ ಕೊಡುವುದುಂಟು. ರಸವನ್ನು ಹಸಿ ಶುಂಠಿಯೊಡನೆ ಸೇವಿಸಿದಾಗ ಶ್ವಾಸನಾಳದ ದೋಷಗಳು, ನೆಗಡಿ, ಅಜೀರ್ಣ ಇತ್ಯಾದಿ ಮಾಯವಾಗುತ್ತವೆ. ರಸವನ್ನು ಕಣ್ಣಿಗೆ ಹಾಕಿಕೊಂಡರೆ ಇರುಳು ಕುರುಡು ಮತ್ತಿತರ ಕಣ್ಣಿನ ದೋಷಗಳು ಪರಿಹಾರವಾಗುವುವು. ಎಲೆಗೆ ಎಣ್ಣೆ ಸವರಿ ಬಿಸಿಮಾಡಿ ಕುರು, ಹುಣ್ಣುಗಳ ಮೇಲಿಟ್ಟು ಕಟ್ಟಿದರೆ, ಅವು ಮೆತ್ತಗಾಗಿ ಒಡೆಯುವಂತೆ ಮಾಡುತ್ತದೆ.

11 ಸೆನ್ನ ಅಥವಾ ಸೋನಾಮುಖಿ : ಲೆಗ್ಯುಮಿನೋಸಿ ಕುಟುಂಬಕ್ಕೆ ಸೇರಿದ ಕ್ಯಾಷಿಯ ಅಕ್ಯುಟಿಫೋಲಿಯ ಮತ್ತು ಕ್ಯಾಷಿಯ ಅಂಗಸ್ಟಿಫೋಲಿಯ ಎಂಬ ಸಸ್ಯಗಳ ಸಣ್ಣೆಲೆಗಳು (ಪರ್ಣಿಕೆ) ಮತ್ತು ಕಾಯಿಗಳಿಂದ ಈ ಔಷಧವಸ್ತು ದೊರೆಯುತ್ತದೆ. ಇದು ಒಳ್ಳೆಯ ಪರಿಣಾಮಕಾರಿ ರೇಚಕ. ಇದನ್ನು ಭಾರತ, ಈಜಿಪ್ಟ್ ಮತ್ತು ಅರೇಬಿಯ ದೇಶಗಳಲ್ಲಿ ಹೆಚ್ಚಾಗಿ ಬೆಳೆಸಲಾಗುತ್ತದೆ. ಇದಕ್ಕೆ ಸಂಧಿವಾತ, ಶೋಣಿತವಾಯು, ಯಕೃತ್ತನ್ನು ಚುರುಕುಗೊಳಿಸುವುದು, ಕರುಳಿನ ಜಂತುಗಳನ್ನು ನಾಶಪಡಿಸುವುದು, ಮೊಡವೆ, ಕೆಲವು ಬಗೆಯ ಚರ್ಮರೋಗಗಳನ್ನು ಗುಣಪಡಿಸುವುದು ಇತ್ಯಾದಿ ಗುಣಗಳಿವೆ.

12 ಮಲ್ಲಿಗೆ : ಓಲಿಯೇಸಿ ಕುಟುಂಬಕ್ಕೆ ಸೇರಿದ ಜಾಸ್ಮಿನಮ್ ಗ್ರಾಂಡಿಫ್ಲೋರಮ್, ಜಾ.ಅಫಿಷಿನೇಲ್ ಜಾತಿಯ ಈ ಸಸ್ಯಪ್ರಭೇದಗಳನ್ನು ಎಲ್ಲ ಕಡೆ ಹೂವಿಗಾಗಿ ಬೆಳೆಸುವರು. ಎಲೆಗಳು ಒಗರಾಗಿದ್ದು, ಅವುಗಳನ್ನು ಅಗಿದಾಗ ವಸಡು ಮತ್ತು ದಂತಸಂಬಂಧದ ನೋವು, ಬಾಯಿಹುಣ್ಣು ಇತ್ಯಾದಿಗಳು ಗುಣವಾಗುತ್ತದೆ. ಎಲೆಯನ್ನು ಅರೆದು ರಸ ಅಥವಾ ಸರಿಯನ್ನು ಕಾಲ್ಬೆರಳುಗಳ ನಡುವಿನ ಹುಣ್ಣು (ಕೆಸರುಹುಣ್ಣು) ಮತ್ತಿತರ ಬಗೆಯ ಸಣ್ಣಪುಟ್ಟ ವ್ರಣಗಳನ್ನು ಮಾಯಿಸಲು ಉಪಯೋಗಿಸುವರು.

13 ಎಕ್ಲಿಪ್ಟ ಅಥವಾ ಗರುಗದ ಗಿಡ : ಕಂಪಾಸಿಟಿ ಕುಟುಂಬಕ್ಕೆ ಸೇರಿದ ಎಕ್ಲಿಪ್ಟ ಅಲ್ಬ ಎಂಬ ಈ ಗಿಡಕ್ಕೆ. ಹಿಂದೂಸ್ತಾನಿಯಲ್ಲಿ ಭಿಂಗ್‌ರಾಜ ಎಂದು ಹೆಸರು. ಇದರ ಎಲೆಗಳನ್ನು ಚರ್ಮರೋಗಗಳು, ಕೆಮ್ಮು, ತಲೆಶೂಲೆ, ಯಕೃತ್ತು ಮತ್ತು ಗರ್ಭಕೋಶದ ವಿಕಾರಗಳು ಹಾಗೂ ಕಾಮಾಲೆ ರೋಗಗಳಿಗೆ ಸಿದ್ಧೌಷಧವೆಂದು ಬಳಸುವುದುಂಟು.

14 ಸೀಮೆ ಅಗಸೆ : ಲೆಗ್ಯುಮಿನೋಸಿ ಕುಟುಂಬಕ್ಕೆ ಸೇರಿದ ಕ್ಯಾಷಿಯ ಅಲಾಟಾ ಎಂಬ ಸಸ್ಯ ದೊಡ್ಡ ಕಂಟಿಯಾಗಿದ್ದು ಭಾರತದಲ್ಲಿ ಎಲ್ಲೆಡೆ ಬೆಳೆಯುತ್ತದೆ. ಇದರ ಎಲೆಗಳು ಒಗರಾಗಿದ್ದು, ಸೌಮ್ಯರೇಚಕ ಮತ್ತು ಶಕ್ತಿವರ್ಧಕದಂತೆ ಕಾರ್ಯಮಾಡುತ್ತವೆ. ಮಕ್ಕಳಿಗೆ ಹಲ್ಲು ಬರುವಾಗ ಎಲೆಗಳ ಕಷಾಯವನ್ನು (ಕಾಡೆ) ಕೊಡಲಾಗುತ್ತದೆ. ವಿಶೇಷವಾಗಿ ಹುಳಕಡ್ಡಿ, ಗಜಕರ್ಣ ಇತ್ಯಾದಿ ಚರ್ಮರೋಗಗಳಿಗೆ ಇದು ಸಿದ್ಧೌಷಧ. ಪರೋಪಜೀವಿಗಳ ಶತ್ರುವೂ ಅಹುದು (ಆಂಟಿಪ್ಯಾರಾಸೈಟಿಕ್).

15 ಲಕ್ಕಿಗಿಡ : ವರ್ಬಿನೇಸಿ ಕುಟುಂಬಕ್ಕೆ ಸೇರಿದ ವೈಟೆಕ್ಸ್ ನಿಗಂಡೋ ಎಂಬ ಸಸ್ಯ. ಇದಕ್ಕೆ ನೀಲಪುಷ್ಪ ಎಂಬ ಹೆಸರೂ ಉಂಟು. ಇದರ ಎಲೆಗೆ ಸುವಾಸನೆ ಇದೆ. ಇದಕ್ಕೆ ಹಲವು ಔಷಧೀಯ ಗುಣಗಳಿವೆ. ಎಲೆಗಳನ್ನು ಮೆಣಸಿನೊಡನೆ ಕೂಡಿಸಿ ಸೇವಿಸಿದರೆ ನೆಗಡಿ, ಜ್ವರ ಗುಣವಾಗುತ್ತವೆ. ಒಣ ಎಲೆಗಳನ್ನು ತಂಬಾಕಿನಂತೆ ಸೇವಿಸಿದರೆ ತಲೆಶೂಲೆ ಇಲ್ಲವಾಗುತ್ತದೆ. ಎಲೆಗಳನ್ನು ಅರೆದು ಸಂದುಗಳ ಬಾವು,

ಹಿಗ್ಗಿದ ಯಕೃತ್ತು ಮತ್ತು ಪ್ಲೀಹ ಮತ್ತು ಕೆಲವು ಬಗೆಯ ಗಾಯುಗಳಿಗೆ ಬಳಸುವುದುಂಟು. ಕೂದಲು ಬೆಳೆಯಲೂ ಎಲೆಗಳನ್ನು ಉಪಯೋಗಿಸಲಾಗುತ್ತದೆ.

ಉ. ಪುಷ್ಪಗಳಿಂದ ದೊರೆಯುವ ಔಷಧಗಳು : 1 ಮದುಗಣಿಕೆ ಅಥವಾ ಉಮ್ಮತ್ತಿ : ಸೊಲನೇಸಿ ಕುಟುಂಬಕ್ಕೆ ಸೇರಿದ ದತೂರ ಸ್ಟ್ರಮೋನಿಯಂಗೆ ಮದುಗಣಿಕೆ ಅಥವಾ ಉಮ್ಮತ್ತಿ ಎಂತಲೂ ಹೆಸರು, ಅದರ ಒಣಗಿಸಿದ ಎಲೆ ಮತ್ತು ಹೂಗಳಿಂದ ಸ್ಟ್ರಮೋನಿಯಂ ಎಂಬ ಔಷಧವಸ್ತು ದೊರೆಯುತ್ತದೆ. ಅದು ಅತ್ಯಂತ ವಿಷಪೂರಿತವಾಗಿದ್ದು, ಕೆಲವು ವೇಳೆ ಬೆಲ್ಲಡೋನಾಕ್ಕೆ ಬದಲಿ ವಸ್ತುವಾಗಿ ಇದನ್ನು ಬಳಸುವುದುಂಟು.

2 ಸ್ಯಾಂಟೊನಿನ್ : ಇದು ಕಂಪಾಸ್ಟಿಟಿ ಕುಟುಂಬಕ್ಕೆ ಸೇರಿದ ಆರ್ಟಿಮಿಸಿಯ ಸೈನ ಮತ್ತು ಆ.ಆಬ್‌ಸಿಂತಿಯಮ್ ಎಂಬ ಸಸ್ಯಗಳ ಎಲೆ ಮತ್ತು ಹೂಗಳಿಂದ ದೊರೆಯುವ ಔಷಧವಸ್ತು. ಇದು ರಷ್ಯ ಮತ್ತು ತುರ್ಕಿಸ್ತಾನಗಳಿಂದ ಪರದೇಶಗಳಿಗೆ ಹೆಚ್ಚು ರಫ್ತಾಗುತ್ತದೆ. ಇದು ಉದರಶೂಲೆ ಮತ್ತು ಜಂತುಹುಳುಗಳಿಗೆ ಪರಿಣಾಮಕಾರಿ ಔಷಧ.

3 ಎಕ್ಕ : ಆಸ್ಕ್ಲೆಪಿಯಡೇಸಿ ಕುಟುಂಬಕ್ಕೆ ಸೇರಿದ ಕೆಲೊಟ್ರೊಪಿಸ್ ಪ್ರೊಸಿರ, ಕೆ.ಜೈಗಾಂಟಿಯ ಇತ್ಯಾದಿ ಸಸ್ಯಗಳು. ಇವು ದೊಡ್ಡ ಪೊದರು



ಎಕ್ಕ

ಅಥವಾ ಕಂಟಿಯಂತೆ ಬೆಳೆಯುವುವು. ಹೂಗಳನ್ನು ಹೊಟ್ಟೆಗೆ ಶಕ್ತಿವರ್ಧಕದಂತೆಯೂ ಅಸ್ತಮಾ, ಶೀತ, ತೊನ್ನು, ಸಿಫಿಲಿಸ್ ಮತ್ತು ಗನೋರಿಯ ಮುಂತಾದ ರೋಗಗಳಿಗೂ ಬಳಸುತ್ತಾರೆ.

4 ದಾಳಿಂಬ : ಪ್ಯೂನಿಕೇಸಿ ಕುಟುಂಬಕ್ಕೆ ಸೇರಿದ ಪ್ಯೂನಿಕ ಗ್ರನೇಟಂ ಎಂಬ ಸಸ್ಯ. ಇದರ ಹೂ,ಮೊಗ್ಗುಗಳನ್ನು ಪರಿಷ್ಕರಿಸಿ ಬಿಳಿಸ್ರಾವ, ಅತಿಸಾರ, ಆಮಶಂಕೆ, ಶ್ವಾಸನಾಳದೋಷ ಇತ್ಯಾದಿಗಳಿಗೂ ಎಳೆಯ ಹಾಗೂ ಒಣಗಿದ ಹೂಗಳ ಪುಡಿಯನ್ನು ಜಂತುಹುಳುಗಳ ನಾಶ, ಮೂಗಿನಿಂದ ರಕ್ತಹರಿಯುವಿಕೆ ಇತ್ಯಾದಿಗಳಿಗೂ ಔಷಧರೂಪದಲ್ಲಿ ಬಳಸಲಾಗುತ್ತದೆ. ಗಿಡ ಒಂದು ದೊಡ್ಡ ಪೊದರು ಅಥವಾ ಕಂಟಿಯಂತೆ ಬೆಳೆಯುತ್ತದೆ. ಹಿಂದೂಸ್ತಾನಿಯಲ್ಲಿ ಅದಕ್ಕೆ ಗುಲ್‌ನಾರ್ ಎಂತಲೂ ಹೆಸರು.

5 ಚೆಂಡುಹೂ : ಕಂಪಾಸ್ಟಿಟಿ ಎಂಬ ಕುಟುಂಬಕ್ಕೆ ಸೇರಿದ ಕ್ಯಾಲೆಂಡ್ಯೂಲ ಅಫಿಸಿನಾಲಿಸ್ ಅಥವಾ ಚೆಂಡುಹೂವಿನ ಹೂಪಕಳೆಗಳನ್ನು ನೋವು, ಕೀಟಗಳು ಕಡಿಯುವುದರಿಂದಾಗುವ ತುರಿಕೆ, ಉಳುಕು ಇತ್ಯಾದಿಗಳಿಗೆ ಔಷಧವಾಗಿ ಬಳಸುತ್ತಾರೆ.

6 ವಯೊಲಾ : ವಯೊಲೇಸಿ ಕುಟುಂಬಕ್ಕೆ ಸೇರಿದ ವಯೊಲಾ ಓಡೊರೇಟ ಎಂಬ ಸಸ್ಯ. ಈ ಪ್ರಭೇದದಲ್ಲಿ ಹಲವಾರು ಬಗೆಗಳಿವೆ. ಇವು ರೇಚಕ ಮತ್ತು ಮೂತ್ರವರ್ಧಕ ಗುಣವುಳ್ಳವು. ಇವುಗಳನ್ನು ಕೆಮ್ಮು, ಗಂಟಲುನೋವು, ಯಕೃತ್ತಿನ ಹಾಗೂ ಮೂತ್ರಪಿಂಡಗಳ ವಿಕಾರಗಳು, ವಿವಿಧ ರೀತಿಯ ಬಾವು–ನೋವುಗಳಿಗೆ ಉಪಯೋಗಿಸಲಾಗುತ್ತದೆ.

7 ಕುಂಕುಮಕೇಸರಿ : ಇರಿಡೇಸಿ ಕುಟುಂಬಕ್ಕೆ ಸೇರಿದ ಕ್ರಾಕಸ್ ಸಟೈವಸ್ ಎಂಬ ಮೂಲಿಕೆಯ ಹೂಗಳಲ್ಲಿ 3 ಶಾಖೆಗಳಿಂದಾದ ದೊಡ್ಡ ಶಲಾಕಾಗ್ರವೊಂದು ಇದೆ. ಈ ಶಲಾಕಾಗ್ರದ ತುದಿಯಲ್ಲಿ ಇರುವ ಕಿತ್ತಳೆಬಣ್ಣದ ಭಾಗವೇ ಶುದ್ಧವಾದ ಕೇಸರಿ. ಉಳಿದ ಭಾಗಗಳು ಅಶುದ್ಧ. ಕೇಸರಿಯನ್ನು ಮಿಠಾಯಿ, ಸಿಹಿ ಮತ್ತು ಮಸಾಲೆ ತಿಂಡಿತಿನಸುಗಳಲ್ಲಿ ಸುವಾಸನೆ ಮತ್ತು ಆಕರ್ಷಕ ಬಣ್ಣಕ್ಕೆ ಬಳಸುವುದುಂಟು. ಔಷಧೀಯ ದೃಷ್ಟಿಯಿಂದಲೂ ಇದು ಮುಖ್ಯವಾಗಿದ್ದು, ಮಕ್ಕಳಿಗೆ ಶೀತ, ನೆಗಡಿ ಮುಂತಾದುವುಗಳಿಗೆ ಬಳಸುವುದುಂಟು.

ಎಫ್. ಫಲ–ಬೀಜಗಳಿಂದ ದೊರೆಯುವ ಔಷಧಿಗಳು : 1 ಜೀರಿಗೆ : ಅಂಬೆಲಿಫೆರಿ ಕುಟುಂಬಕ್ಕೆ ಸೇರಿದ ಕ್ಯುಮಿನಂ ಸೈಮಿನಂ ಎಂಬ ಸಸ್ಯಗಳ ಫಲಗಳೇ ಜೀರಿಗೆ. ಇವುಗಳಿಗೆ ವಾತಹರ, ಮೂತ್ರವರ್ಧಕ, ಪ್ರಚೋದಕ, ಹಸಿವನ್ನು ಉಂಟುಮಾಡುವುದು ಇತ್ಯಾದಿ ವಿಶೇಷ ಗುಣಗಳಿವೆ. ಇವನ್ನು ಅತಿಸಾರ, ಅಗ್ನಿಮಾಂದ್ಯ ಮತ್ತು ಹಾಲು ಉತ್ಪಾದನೆಯನ್ನು ತೀವ್ರಗೊಳಿಸುವುದು ಇತ್ಯಾದಿಗಳಿಗೆ ಔಷಧವಾಗಿ ಬಳಸುತ್ತಾರೆ. ಇವು ದ್ವೈವಾರ್ಷಿಕ ಮೂಲಿಕೆಗಳು.

2 ಬಾಲಮೆಣಸು : ಪೈಪರೇಸಿ ಕುಟುಂಬಕ್ಕೆ ಸೇರಿದ ಪೈಪರ್ ಲಾಂಗಮ್ ಎಂಬ ಬಳ್ಳಿಯ ಫಲ ಔಷಧ ಗುಣವುಳ್ಳದ್ದು. ಅದಕ್ಕೆ ಹೃದಯಕ್ರಿಯೆಯನ್ನು ಉತ್ತೇಜನಗೊಳಿಸುವ ರೇಚಕ, ವಾತಹರ, ಜೀರ್ಣಕಾರಿ, ಪೂತಿನಾಶಕ ಇತ್ಯಾದಿ ಗುಣಗಳಿವೆ. ಒಣಗಿಸಿದ ಫಲ ಅಥವಾ ಕಾಳನ್ನು ಅರೆದು ಜೇನುತುಪ್ಪದೊಡನೆ ಕೂಡಿಸಿ ಅಗ್ನಿಮಾಂದ್ಯ, ಕೆಮ್ಮು, ಶ್ವಾಸನಾಳ ದೋಷಗಳು, ಅಸ್ತಮಾ, ಅಜೀರ್ಣ ಮುಂತಾದ ರೋಗಗಳಿಗೆ ಔಷಧವಾಗಿ ಕೊಡುವುದುಂಟು. ಅಂತೆಯೇ ಕಪ್ಪುಮೆಣಸು (ಪೈಪರ್ ನಿಗ್ರಮ್) ಕಾಳುಗಳಲ್ಲಿ ಪೈಪರಿನ್ ಎಂಬ ಕ್ಷಾರೀಯ ಘಟಕವುಂಟು. ಮೆಣಸಿನ ಬೆಳೆ ಪಶ್ಚಿಮಘಟ್ಟದ



ಬಾಲಮೆಣಸು

ಪ್ರದೇಶಗಳು ಮತ್ತು ಕೇರಳದಲ್ಲಿ ಹೆಚ್ಚು. ಮೆಣಸನ್ನು ಸಾಮಾನ್ಯ ನಿಶ್ಶಕ್ತಿ, ಅತಿಸಾರ, ಕಾಲರಾ, ಚಳಿಜ್ವರ, ಗಂಟಲುಬೇನೆ, ಪಾರ್ಶ್ವವಾಯು, ತಲೆಶೂಲೆ, ಹಲ್ಲುನೋವು, ಮೂಲವ್ಯಾಧಿ (ಪೈಲ್ಸ್), ಶೋಣಿತವಾಯು, ಚರ್ಮರೋಗಗಳು ಇತ್ಯಾದಿಗಳಿಗೆ ಔಷಧವಾಗಿ ಬಳಸುವುದುಂಟು.

3 ನೆಲ್ಲಿ : ಯುಫೋರ್ಬಿಯೇಸಿ ಕುಟುಂಬಕ್ಕೆ ಸೇರಿದ ಎಂಬ್ಲಿಕ ಅಫಿಸಿನಾಲಿಸ್ ಎಂಬುದಕ್ಕೆ ನೆಲ್ಲಿಕಾಯಿ ಎಂತಲೂ ಹೆಸರು. ಈ ಫಲಗಳಲ್ಲಿ ವಿಟಮಿನ್ ಸಿ ಅಂಶ ಹೆಚ್ಚು. ಇವುಗಳಿಗೆ ಶೈತ್ಯಕ, ರೇಚಕ, ಮೂತ್ರವರ್ಧಕ ಇತ್ಯಾದಿ ಗುಣಗಳಿವೆ. ಪಚನವಿಕಾರಗಳಿಗೆ ಇವು ಪರಿಣಾಮಕಾರಿ. ದೇಹವನ್ನು ತಂಪುಗೊಳಿಸುವುದೂ ಉಂಟು. ಅದರಿಂದ ಇವುಗಳ ಉಪಯೋಗ ಉಷ್ಣಕಾಲದಲ್ಲಿ ... ಕೇಶತೈಲ ಇತ್ಯಾದಿಗಳಲ್ಲಿ ಹೆಚ್ಚು.



ಚೆಟ್ಟಿ ನೆಲ್ಲಿ

4 ಅಳಲೆಕಾಯಿ (ಮಿರೊಬೊಲನ್) : ಕಾಂಬ್ರಿಟೇಸಿ ಕುಟುಂಬಕ್ಕೆ ಸೇರಿದ ಟರ್ಮಿನೇಲಿಯ ಚೆಬುಲ ಎಂಬುದಕ್ಕೆ ಅಳಲೆಕಾಯಿ ಎಂತಲೂ ಹಿಂದೂಸ್ಥಾನಿಯಲ್ಲಿ



ಅಳಲೆಕಾಯಿ

ಹರ್ ಎಂತಲೂ ಹೆಸರು. ಈ ಮರದ ಫಲಗಳಿಗೆ ವೈದ್ಯಕೀಯ ಮಹತ್ತ್ವ ಹೆಚ್ಚು. ಇವುಗಳಿಗೆ ತೀಕ್ಷ್ಣರೇಚಕಶಕ್ತಿ ಇದ್ದು, ಇವುಗಳನ್ನು ಮೂಲವ್ಯಾಧಿ, ಆಮಶಂಕೆ, ಅಸ್ತಮಾ, ವಾಂತಿ, ಬೆಳೆದ ಯಕೃತ್ತು ಮತ್ತು ಪ್ಲೀಹಗಳಂಥ ವಿಕಾರಗಳಿಗೆ ಔಷಧವಾಗಿ ಬಳಸುವುದುಂಟು. ಕಾಯಿಯ ಪುಡಿಯನ್ನು ಹುಣ್ಣು, ಗಾಯ, ಒಸಡುಸ್ರಾವ ಇತ್ಯಾದಿಗಳಿಗೂ ಕಾಯಿಯನ್ನು ತೇಯ್ದು ಸುಟ್ಟ ಗಾಯ, ಮೂಲವ್ಯಾಧಿ ಇತ್ಯಾದಿಗಳಿಗೂ ಕಾಯನ್ನು ನೀರಿನಲ್ಲಿ ಕುದಿಸಿ, ಅದರ ಕಷಾಯವನ್ನು ರಕ್ತ ಸೋರುವ ಮೂಲವ್ಯಾಧಿಯನ್ನು ನಿಲ್ಲಿಸುವುದಕ್ಕೂ ಮತ್ತು ಬಾಯಿ ಮುಕ್ಕಳಿಸುವುದಕ್ಕೂ ಬಳಸುವುದುಂಟು.

5 ಅಜವಾನ (ಬಿಷಪ್ಸ್ ವೀಡ್) : ಅಂಬೆಲಿಫೆರಿ ಕುಟುಂಬಕ್ಕೆ ಸೇರಿದ ಕೇರಂ ಕಾಪ್ಟಿಕಮ್ ಎಂಬ ದ್ವೈವಾರ್ಷಿಕ ಮೂಲಿಕೆಯ ಫಲ ಮತ್ತು ಬೀಜಗಳಿಗೆ ಅಜವಾನ ಎಂದು ಹೆಸರು. ಓಮು ಎಂದೂ ಕರೆಯುತ್ತಾರೆ. ಇವುಗಳಿಗೆ ವಾತಹರ, ಕಫನಿರ್ಮೂಲನ ಮತ್ತು ಉತ್ತೇಜಕ ಗುಣಗಳಿವೆ. ಇವುಗಳನ್ನು ಅಗ್ನಿಮಾಂದ್ಯ, ಉದರಶೂಲೆ, ಅತಿಸಾರ, ಕಾಲರಾ ಇತ್ಯಾದಿಗಳಿಗೂ ಸಿದ್ಧೌಷಧವೆಂದು ಬಳಸುವುದುಂಟು.

6 ಹೊಂಗೆ : ಪ್ಯಾಪಿಲಿಯೊನೇಸಿ ಎಂಬ ಉಪ ಕುಟುಂಬಕ್ಕೆ ಸೇರಿದ ಪೊಂಗೆಮಿಯ ಗ್ಲಾಬ್ರ ಅಥವಾ ಪೊ. ಪಿನ್ನೇಟ ಎಂಬ ಈ ಸಸ್ಯಗಳಿಗೆ ಹಿಂದೂಸ್ಥಾನಿಯಲ್ಲಿ



ಹೊಂಗೆಕಾಯಿಗಳುಳ್ಳ ಒಂದು ರೆಂಬೆ

ಕಾರಂಜ್ ಎನ್ನುತ್ತಾರೆ. ಈ ಮರದ ಬೀಜಗಳನ್ನು ನಾಯಿಕೆಮ್ಮು ಮತ್ತು ಮೂಲಶ್ವಾಸನಾಳ ದೋಷಗಳಿಗೆ ಔಷಧವಾಗಿ ವಿಶೇಷವಾಗಿ ಬಳಸುವುದುಂಟು. ಬೀಜಗಳನ್ನು ನುಣ್ಣಗೆ ಅರೆದು ತೊನ್ನು, ಚರ್ಮರೋಗಗಳು, ಶೋಣಿತವಾಯು, ಮುಂತಾದುವುಗಳಿಗೂ ಬಳಸಲಾಗುತ್ತದೆ. ಹೊಂಗೆ ಬೀಜದ ಎಣ್ಣೆಯನ್ನು ಕಜ್ಜಿ, ತುರಿಕೆ ಇತ್ಯಾದಿಗಳಿಗೂ ಉಪಯೋಗಿಸುವುದುಂಟು.

7 ಬಿಲ್ವಪತ್ರೆಕಾಯಿ : ರುಟೇಸಿ ಕುಟುಂಬಕ್ಕೆ ಸೇರಿದ ಈಗಲ್ ಮಾರ್ಮೆಲೋಸ್ ಎಂಬ ಮರದ ಕಾಯಿ. ಬಿರುಸು ಕವಚವುಳ್ಳ ಈ ಫಲದ ಬಳಕೆ ವೈದ್ಯಕೀಯದಲ್ಲಿ ಬಹಳ. ಹಣ್ಣಿನ ತಿರುಳು ಒಗರು. ಬಲವರ್ಧಕ ಮತ್ತು ಸೌಮ್ಯರೇಚಕ. ಅದನ್ನು ಬೇಸಿಗೆಯಲ್ಲಿ ತಂಪು ಪಾನೀಯವಾಗಿಯೂ ಬಳಸುವುದುಂಟು. ತಿರುಳನ್ನು ಅತಿಸಾರ, ಕರುಳಿನ ದೋಷಗಳು, ಮಲಬದ್ಧತೆ ಇತ್ಯಾದಿಗಳಿಗೂ ಔಷಧವಾಗಿ ಉಪಯೋಗಿಸಲಾಗುತ್ತದೆ.

8 ಮೆಂತ್ಯ : ಲೆಗ್ಯುಮಿನೋಸಿ ಕುಟುಂಬಕ್ಕೆ ಸೇರಿದ ಟ್ರೈಗೊನೆಲ್ಲ ಫೀನಂಗ್ರೀಕಂ ಎಂಬ ಸಸ್ಯಮೂಲಿಕೆ. ಈ ಮೂಲಿಕೆಯ ಬೀಜದಲ್ಲಿ ಟ್ರೈಗೊನೆಲ್ಲಿನ್ ಎಂಬ ರಾಸಾಯನಿಕ ಘಟಕವುಂಟು. ಇದು ಮೂತ್ರವರ್ಧಕವೂ ಆಹಾರ ದೃಷ್ಟಿಯಿಂದ ಪೋಷಕವೂ ಆದುವು. ಬೀಜಗಳನ್ನು ವಿವಿಧ ರೀತಿಯಲ್ಲಿ ಹುರಿದು, ಬೇಯಿಸಿ, ಅರೆದು, ಔಷಧವಾಗಿ ಕೆಮ್ಮು, ಅತಿಸಾರ, ಆಮಶಂಕೆ, ಅಗ್ನಿಮಾಂದ್ಯ, ಉದರಶೂಲೆ, ಜಲೋದರ, ಕರುಳುಬೇನೆ, ಕುರು, ಕೇಶತೈಲ ಇತ್ಯಾದಿಗಳಿಗೆ ಬಳಸುತ್ತಾರೆ.

9 ಸ್ಟ್ರಿಕ್ನಿನ್ : ಇದು ಲೊಗಾನಿಯೇಸಿ ಕುಟುಂಬಕ್ಕೆ ಸೇರಿದ ಸ್ಟ್ರಿಕ್ನಾಸ್ ನಕ್ಸ್ ವಾಮಿಕ ಎಂಬ ಮರದ ಬೀಜಗಳಿಂದ ದೊರೆಯುತ್ತದೆ. ಈ ಮರಗಳು ಹೆಚ್ಚಾಗಿ ದಕ್ಷಿಣ ಭಾರತ, ಒರಿಸ್ಸ, ಬಂಗಾಲ, ಸಿಲೋನ್ ಮತ್ತು ಚೀನ ದೇಶಗಳಲ್ಲಿ ಬೆಳೆಯುತ್ತವೆ. ತಾಜಾ ಫಲಗಳನ್ನು ಸಂಗ್ರಹಿಸಿ ಒಣಗಿಸುತ್ತಾರೆ. ಬೀಜದಲ್ಲಿ ಸ್ಟ್ರಿಕ್ನಿನ್ ಮತ್ತು ಬ್ರೂಸಿನ್ ಎಂಬ ಕ್ಷಾರೀಯ ಘಟಕಗಳಿವೆ. ಈ ಔಷಧ ಮಿತಿಮೀರಿದರೆ ಅತ್ಯಂತ ವಿಷಪೂರಿತವೂ ಹೌದು. ಇದನ್ನು ಜಗತ್ತಿನಾದ್ಯಂತ ಒಳ್ಳೆಯ ಶಕ್ತಿವರ್ಧಕವಾಗಿ ಬಳಸುವುದುಂಟು. ಪಾರ್ಶ್ವವಾಯು, ಶೋಣಿತವಾಯು, ಮಲಬದ್ಧತೆ, ಚಿತ್ತೋದ್ರೇಕ, ಅತಿಸಾರ, ಉದರಶೂಲೆ ಮುಂತಾದುವುಗಳಿಗೂ ಇದು ಸಿದ್ಧೌಷಧ.



ಬಿಲ್ವಪತ್ರೆಕಾಯಿ ಮತ್ತು ಹೋಳುಗಳು

10 ಅಫೀಮು (ಓಪಿಯಂ) : ಪಪಾವರೇಸಿ ಕುಟುಂಬಕ್ಕೆ ಸೇರಿದ ಪಪಾವರ್ ಸಾಮ್ನಿಫೆರಂ ಎಂಬ ವಾರ್ಷಿಕ ಮೂಲಿಕೆಯಿಂದ ದೊರೆಯುವ ವಸ್ತು. ಈ ಗಿಡ ಭಾರತ, ಚೀನಗಳಲ್ಲಿ ಹೆಚ್ಚು ಬೆಳೆಯುತ್ತದೆ. ಕಚ್ಚಾ ಫಲಗಳಮೇಲೆ ಸಣ್ಣ ಸಣ್ಣ ಕಚ್ಚುಗಳನ್ನು ಮಾಡಿ ಹೊರಬರುವ ಹಾಲನ್ನು ಒಣಗಿಸಿ ಸಂಗ್ರಹಿಸುತ್ತಾರೆ. ಈ ಹಾಲೇ ಅಫೀಮು. ಇದರಲ್ಲಿ ಸುಮಾರು 25 ಬಗೆಯ ಕ್ಷಾರೀಯ ಘಟಕಗಳಿವೆ. ಅವುಗಳಲ್ಲಿ ಮುಖ್ಯವಾಗಿ ಮಾರ್ಫಿನ್, ಕೋಡಿಯಿನ್, ನಾರ್ಕೊಟಿನ್, ಥಿಬೇನ್, ನಾರ್ಸಿಯಿನ್ ಇತ್ಯಾದಿ ಘಟಕಗಳಿವೆ. ಇವು ಉಪಶಾಮಕ ಮತ್ತು ಮಾದಕ ವಸ್ತುಗಳು. ನಿದ್ರೆ ಬರಿಸುವುದಕ್ಕೇ ಇವುಗಳ ಬಳಕೆ ಹೆಚ್ಚು. ಬೀಜದಿಂದ ತೆಗೆದ ಎಣ್ಣೆಯನ್ನು ಔಷಧವಾಗಿ ಹಲವಾರು ರೀತಿ ಬಳಸುವುದುಂಟು. ಕರುಳುಬೇನೆ, ಅತಿಸಾರ, ಆಮಶಂಕೆ ಇತ್ಯಾದಿಗಳಿಗೂ ಇವು ಉಪಯುಕ್ತ. ಅಲ್ಪ ಪ್ರಮಾಣದಲ್ಲಿ ಇದನ್ನು ಔಷಧವಾಗಿ ಉಪಯೋಗಿಸುವುದು ವಾಡಿಕೆ.

11 ಔಡಲ ಅಥವಾ ಹರಳು : ಯುಫೋರ್ಬಿಯೇಸಿ ಕುಟುಂಬಕ್ಕೆ ಸೇರಿದ ರಿಸಿನಸ್ ಕಮ್ಯೂನಿಸ್ ಎಂಬ ಚಿಕ್ಕ ಮರದ ಬಣಫಲಗಳಿಂದ ತೆಗೆದ ಬೀಜಗಳು. ಇದು ಭಾರತದಲ್ಲಿ ಕೆಲವು ಕಡೆ ತಾನಾಗಿಯೇ ಬೆಳೆದರೂ ಅನೇಕ ಕಡೆ ಅದನ್ನು ಉದ್ದೇಶಪೂರ್ವಕವಾಗಿಯೂ ಬೆಳೆಸುತ್ತಾರೆ. ಬೀಜವನ್ನು ಒತ್ತಡಕ್ಕೊಳಪಡಿಸಿಯೋ ಇಲ್ಲವೆ ನೀರಿನಲ್ಲಿ ಕುದಿಸಿಯೋ ಎಣ್ಣೆಯನ್ನು ತೆಗೆಯುತ್ತಾರೆ. ಬೀಜದಲ್ಲಿ ರಿಸಿನಿನ್ ಎಂಬ ಕ್ಷಾರೀಯ ಘಟಕವಿದೆ. ಇದು ಎಲ್ಲ ವಯಸ್ಕರಿಗೂ ಉತ್ತಮ ರೇಚಕ. ಎಣ್ಣೆಯನ್ನು ಆಮಶಂಕೆ, ಕರುಳಿನ ಬಾಧೆ, ಅಸ್ತಮಾ, ಜಲೋದರ ಇತ್ಯಾದಿಗಳಿಗೂ ವಿವಿಧ ರೀತಿ ಬಳಸಲಾಗುತ್ತದೆ. ಎಲೆ ಅಥವಾ ಬೀಜಗಳಿಂದ ತಯಾರಿಸಿದ ಬೆಚ್ಚಾರವನ್ನು ಕುರು, ಬಾವು ಮುಂತಾದುವುಗಳಿಗೂ ಉಪಯೋಗಿಸುವುದುಂಟು.

12 ಚೌಲಮೂಗ್ರ ಎಣ್ಣೆ : ಇದು ಫ್ಲಕೂರ್ಟಿಯೇಸಿ ಕುಟುಂಬಕ್ಕೆ ಸೇರಿದ ಗೈನೋಕಾರ್ಡಿಯ ಓಡೊರೇಟ, ಹಿಡ್ನೊಕಾರ್ಪಸ್ ಕುರ್ಜಿ ಮತ್ತು ಹಿ.ವೈಟಿಯಾನ ಎಂಬ ನಿತ್ಯಹರಿದ್ವರ್ಣ ಮರಗಳ ಬೀಜಗಳಿಂದ ತೆಗೆದ ಎಣ್ಣೆ. ಶತಮಾನಗಳಿಂದ ಈ ಎಣ್ಣೆಯನ್ನು ತೊನ್ನು ನಿವಾರಣೆಗೂ ಇಸುಬು, ಕಜ್ಜಿ ಮುಂತಾದ ಕೆಲವು ಚರ್ಮ ರೋಗಗಳಿಗೂ ಬಳಸಲಾಗುತ್ತಿದೆ. ಈಗೀಗ ಶೋಣಿತವಾಯು, ಸಿಫಿಲಿಸ್, ಸಂಧಿವಾತ ಇತ್ಯಾದಿಗಳಿಗೂ ಔಷಧವಾಗಿ ಬಳಸಲಾಗುತ್ತದೆ.

13 ಇಸ್ಪಗೋಲ : ಪ್ಲಾಂಟಾಜಿನೇಸಿ ಕುಟುಂಬಕ್ಕೆ ಸೇರಿದ ಪ್ಲಾಂಟಾಗೋ ಜಾತಿಯ ಮೂಲಿಕೆಗಳ (ಉದಾ. ಪ್ಲಾ.ಓವೇಟಾ, ಪ್ಲಾ.ಇಂಡಿಕ. ಪ್ಲಾ.ಸಿಲಿಯಂ ಇತ್ಯಾದಿ) ಬೀಜಗಳಿಂದ ಉತ್ಪಾದನೆಯಾಗುವ ಔಷಧ. ಬೀಜದ ಆವರಣದಲ್ಲಿ ಲೋಳೆಯಂಥ ವಸ್ತುವೊಂದು ಇರುತ್ತದೆ. ಇದು ರೇಚಕ ಹಾಗೂ ಇತರ ಔಷಧೀಯ ಗುಣಗಳುಳ್ಳದ್ದು. ಇದನ್ನು ಜಠರ ಮತ್ತು ಕರುಳಿನ ಸಂಬಂಧದ ಬೇನೆಗಳು, ಮಲ ಬದ್ಧತೆ, ಆಮಶಂಕೆ, ಅತಿಸಾರ, ಉದರಶೂಲೆ ಇತ್ಯಾದಿಗಳಿಗೆ ಬಳಸಲಾಗುತ್ತದೆ. ಬೀಜ ಮತ್ತು ಎಣ್ಣೆಯನ್ನು ಕೂಡಿಸಿದ ಬೆಚ್ಚಾರವನ್ನು ಸಂಧಿವಾತ, ಬಾವು ಮುಂತಾದುವುಗಳಿಗೆ ಶಮನಕಾರಿಯಾಗಿ ಬಳಸುವುದುಂಟು.

14 ಕಕ್ಕೆಗಿಡ : ಲೆಗ್ಯುಮಿನೋಸಿ ಗುಂಪಿಗೆ ಸೇರಿದ ಕ್ಯಾಷಿಯ ಫಿಸ್ಟುಲ ಎಂಬ ಈ ಕಂಟಿಗೆ ಅಮಲ್ತಾಸ್ ಎಂದೂ ಹೆಸರು. ಇದು ಆಯುರ್ವೇದ ಮತ್ತು ಯುನಾನಿ ಪದ್ಧತಿಯ ಔಷಧಗಳಲ್ಲಿ ಪ್ರಾಮುಖ್ಯವಾಗಿದೆ. ಇದರ ಕಾಯಿ ಫಲಗಳು ಸೌಮ್ಯರೇಚಕ. ಇದು ಉದರಶೂಲೆ, ಜೊಬ್ಬು ಇತ್ಯಾದಿಗಳಿಗೆ ಉಪಯುಕ್ತ. ಬಾದಾಮಿ ಎಣ್ಣೆ ಅಥವಾ ಅಗಸೆ ಎಣ್ಣೆಯೊಡನೆ ಕರುಳಿನ ದೋಷಗಳಿಗೂ ಬಳಸಲಾಗುತ್ತದೆ.

15 ಪರಂಗಿ ಹಣ್ಣು ಮತ್ತು ಬೀಜ (ಪಪಾಯ) : ಕ್ಯಾರಿಕೇಸಿ ಕುಟುಂಬಕ್ಕೆ ಸೇರಿದ ಕ್ಯಾರಿಕ ಪಪಾಯ ಎಂಬ ಮರದ ಹಣ್ಣು ಮತ್ತು ಬೀಜಗಳು ಔಷಧೀಯ ಗುಣವುಳ್ಳವು. ಅಪಕ್ವವಾದ ಹಣ್ಣಿನಿಂದ ಬರುವ ಹಾಲಿನಲ್ಲಿ ಪಪಾಯಿನ್ ಎಂಬ ಘಟಕವುಂಟು. ಇದು ಜಂತುಹುಳುನಾಶಕ. ಕರುಳುಬೇನೆ, ಬೆಳೆದ ಯಕೃತ್ತು ಮತ್ತು ಪ್ಲೀಹ ಮುಂತಾದುವುಗಳಿಗೂ ಪರಮೌಷಧ. ಬೀಜಗಳಲ್ಲಿ ಕ್ಯಾರಿಸಿನ್ ಎಂಬ ಘಟಕವಿದೆ. ಇದು ರಕ್ತ ಚಿಮ್ಮುವ ಮೂಲವ್ಯಾಧಿ, ಹುಳುಕಡ್ಡಿ, ಮತ್ತಿತರ ಚರ್ಮರೋಗಗಳಿಗೆ ಪರಿಣಾಮಕಾರಿ ಔಷಧ.



ಪರಂಗಿ ಕಾಯಿಯ ಒಳಭಾಗ

16 ಕುಸುಬೆ : ಇದು ಕಂಪಾಸಿಟಿ ಕುಟುಂಬಕ್ಕೆ ಸೇರಿದ ಕಾರ್ಥಮಸ್ ಟಿಂಕ್ಟೋರಿಯಸ್ ಎಂಬ ಚಿಕ್ಕ ಕಂಟಿ ಗಿಡಗಳ ಬೀಜಗಳಿಂದ ದೊರೆಯುವ ಎಣ್ಣೆ. ಇದು ಸೌಮ್ಯರೇಚಕ. ಬೀಜದ ಬೆಚ್ಚಾರದಿಂದ ಗರ್ಭಕೋಶದ ಬಾವು ಶಮನಗೊಳ್ಳುತ್ತದೆ. ಎಣ್ಣೆಯನ್ನು ವ್ರಣ ಮತ್ತು ವಾತ ಎಲುಬು ಸಂಧಿಗಳಲ್ಲಿ ನೋವು ಕಡಿಮೆ ಮಾಡಲು ಬಳಸಲಾಗುತ್ತದೆ.

ಔಷಧಿಸಸ್ಯಗಳು ಅನೇಕಾನೇಕ. ಅವುಗಳಲ್ಲಿ ಗೊತ್ತಿಲ್ಲದಿರುವುದು ಇಲ್ಲವೆ ಇನ್ನೂ ಬಳಕೆಗೆ ಬಂದಿಲ್ಲದಿರುವುವು ಎಷ್ಟೋ ಇವೆ. ದಿನಬಳಕೆಯ ಎಷ್ಟೋ ಮಸಾಲೆ ಮತ್ತು ಸಾಂಬಾರವಸ್ತುಗಳೂ ಕೆಲಮಟ್ಟಿಗೆ ಔಷಧೀಯ ಗುಣಗಳನ್ನು ಪಡೆದಿರುತ್ತವೆ.

(ಎ.ಎಸ್.ಎಸ್.ಆರ್.)



ಕನ್ನಡ ವರ್ಣಮಾಲೆಯಲ್ಲಿನ ವರ್ಗೀಯ ವ್ಯಂಜನಗಳ ಸರಣಿಯಲ್ಲಿ ಮೊದಲನೆಯದು. ಕ್ ಮತ್ತು ಅ ಸೇರಿ ಆಗಿದೆ. ಲಂಬರೇಖೆ ಮತ್ತು ಸಮತಲರೇಖೆಗಳಿಂದ ಕೂಡಿದ ಈ ಅಕ್ಷರದ ಬ್ರಾಹ್ಮೀಸ್ವರೂಪ, ಶಾತವಾಹನರ ಕಾಲದಲ್ಲಿ ಕೆಲವು ಬದಲಾವಣೆಗಳನ್ನು ಹೊಂದುತ್ತದೆ. ಲಂಬರೇಖೆ ಎಡಭಾಗಕ್ಕೆ ಸ್ವಲ್ಪ ಬಾಗುತ್ತದೆ ಮತ್ತು ಸಮತಲರೇಖೆ ಸಣ್ಣದಾಗುತ್ತದೆ. ತ್ರಿಕೋಣಾಕೃತಿಯ ತಲೆಕಟ್ಟು ಕಾಣಬರುತ್ತದೆ. ಕದಂಬರ ಕಾಲದಲ್ಲಿ ಚೌಕ ತಲೆಯ ತಲೆಕಟ್ಟಿನ ಜೊತೆಗೆ ಲಂಬರೇಖೆ ಇನ್ನೂ ಬಾಗುತ್ತದೆ. ಕ್ರಿ. ಶ. ಒಂಬತ್ತನೆಯ ಶತಮಾನದಲ್ಲಿ ಲಂಬರೇಖೆಯ ಕೆಳಭಾಗ ವೃತ್ತವಾಗುವ ಪ್ರವೃತ್ತಿಯನ್ನು ವ್ಯಕ್ತಪಡಿಸುತ್ತದೆಯಲ್ಲದೆ ತಲೆಕಟ್ಟು ಸ್ಪಷ್ಟಗೊಳ್ಳುತ್ತದೆ. ಕ್ರಿ. ಶ. ಹದಿಮೂರನೆಯ ಶತಮಾನದಲ್ಲಿ ಅಕ್ಷರದ ಆಕಾರ ಗುಂಡಾಗಿ ಅದೇ ರೂಪ ಮುಂದಿನ ಶತಮಾನಗಳಲ್ಲಿ ಮುಂದುವರಿಯುತ್ತದೆ.

ಅಶೋಕ. ಕ್ರಿ.ಪೂ. ೩ನೆಯ ಶತಮಾನ
ಶಾತವಾಹನ. ಕ್ರಿ.ಶ. ೨ನೆಯ ಶತಮಾನ
ಕದಂಬ. ಕ್ರಿ.ಶ. ೫ನೆಯ ಶತಮಾನ
ಗಂಗ. ಕ್ರಿ.ಶ. ೬ನೆಯ ಶತಮಾನ
ಬಾದಾಮಿ ಚಾಳುಕ್ಯ ಕ್ರಿ.ಶ. ೬ನೆಯ ಶತಮಾನ
ರಾಷ್ಟ್ರಕೂಟ. ಕ್ರಿ.ಶ. ೯ನೆಯ ಶತಮಾನ
ಕಲ್ಯಾಣ ಚಾಳುಕ್ಯ. ಕ್ರಿ.ಶ. ೧೦ನೆಯ ಶತಮಾನ
ಕ — ಕ — ಕ ಕಳಚೂರಿ, ಹೊಯ್ಸಳ ಮತ್ತು ಸೇವುಣ. ಕ್ರಿ.ಶ. ೧೩ನೆಯ ಶತಮಾನ
ವಿಜಯನಗರ. ಕ್ರಿ.ಶ. ೧೫ನೆಯ ಶತಮಾನ
ಮೈಸೂರು ಅರಸರು. ಕ್ರಿ.ಶ. ೧೮ನೆಯ ಶತಮಾನ

ಈ ಅಕ್ಷರ ಕಂಠ್ಯ ಅಘೋಷ ಸ್ಪರ್ಶ ಸ್ವರವನ್ನು ಸೂಚಿಸುತ್ತದೆ. (ಎ.ವಿ.ಎನ್.)

**ಕಂಕ:** ಅಜ್ಞಾತವಾಸ ಕಾಲದಲ್ಲಿ ವಿರಾಟನ ಆಸ್ಥಾನದಲ್ಲಿ ಯತಿವೇಷದಿಂದ ಇದ್ದ ಯುಧಿಷ್ಠಿರನ ಹೆಸರು. ಗೋಹರಣ ಮಾಡಿದ ಕೌರವರನ್ನು ಜಯಿಸುವುದಕ್ಕಾಗಿ ಬೃಹನ್ನಳೆಯ ಸಾರಥ್ಯದಲ್ಲಿ ಹೋದ ಉತ್ತರಕುಮಾರ ಜಯಶೀಲನಾಗಿ ಹಿಂತಿರುಗಿದ ವಾರ್ತೆಯನ್ನು ಕೇಳಿದ ವಿರಾಟ ಕಂಕನೊಡನೆ ತನ್ನ ಮಗನ ಶೌರ್ಯವನ್ನು ಹೊಗಳತೊಡಗಿದ. ವಾಸ್ತವಾಂಶವನ್ನು ಅರಿತಿದ್ದ ಕಂಕಭಟ್ಟ ವಿರಾಟನನ್ನು ವಿರೋಧಿಸಲಾಗಿ ಕುಪಿತನಾದ ವಿರಾಟ ಪಗಡೆ ದಾಳಗಳಿಂದ ಹೊಡೆದಾಗ ಕಂಕನ ಕೆನ್ನೆಯಲ್ಲಿ ರಕ್ತ ಚಿಮ್ಮಿತು. ಯಾರೇ ಆಗಲಿ ಯುಧಿಷ್ಠಿರನ ದೇಹದಿಂದ ಒಂದು ತೊಟ್ಟು ರಕ್ತ ನೆಲಕ್ಕೆ ಬೀಳಿಸಿದರೂ ಆತ ಬದುಕಲಾರನೆಂಬ ಅಂಶವನ್ನು ತಿಳಿದಿದ್ದ ಸೈರಂಧ್ರಿ (ದ್ರೌಪದಿ) ತತ್ಕ್ಷಣವೇ ಅಲ್ಲಿಗೆ ಬಂದು ತನ್ನ ಸೆರಗಿನಿಂದಲೇ ಆ ರಕ್ತವನ್ನು ಒರಸಿದಳು. ಅನಂತರ ನಿಜಾಂಶವನ್ನು ತಿಳಿದ ವಿರಾಟ ಯುಧಿಷ್ಠಿರನ ಕ್ಷಮಾಪಣೆ ಕೇಳಿದನಲ್ಲದೆ ಅರ್ಜುನನ ಮಗನಾದ ಅಭಿಮನ್ಯುವಿಗೆ ತನ್ನ ಮಗಳು ಉತ್ತರೆಯನ್ನು ಕೊಟ್ಟು ಲಗ್ನಮಾಡಿದ. (ಎಸ್.ಎಸ್.ಆರ್.ಬಿ.)

**ಕಂಕಂಟಿ ಪಾಪರಾಜು:** ಹದಿನೆಂಟನೆಯ ಶತಮಾನದ ಕೊನೆಯಲ್ಲಿದ್ದ ಈ ಆಂಧ್ರ ಕವಿ ಇಂದಿನ ನೆಲ್ಲೂರು ಮಂಡಲಕ್ಕೆ ಸೇರಿದವನೆಂಬ ಒಂದು ಹೇಳಿಕೆ ಇದೆ. ಅನಂತಪುರ ಮಂಡಲದ ಕಂಕಂಟಿ ಎಂಬ ಹೆಸರಿನ ಗ್ರಾಮದವನೆಂದೂ ಕೆಲವರು ನಂಬುತ್ತಾರೆ. ಕಂಕಂಟಿಯಲ್ಲಿ ಹುಟ್ಟಿ ನೆಲ್ಲೂರಿಗೆ ಹೋಗಿ ಸೇರಿರಬಹುದೆಂಬ ಊಹೆಗೆ ಅವಕಾಶವಿದೆ. ನೆಲ್ಲೂರು ಜಿಲ್ಲೆಯ ಗೂಡೂರು ತಾಲ್ಲೂಕಿನಲ್ಲಿ ವಾಸವಾಗಿದ್ದು ಆಗ ತಾನೆ ವ್ಯಾಪಾರಾರ್ಥವಾಗಿ ಭಾರತಕ್ಕೆ ಬಂದ ಡಚ್ಚರಿಗೂ ಇಂಗ್ಲಿಷರಿಗೂ ದುಭಾಷಿಯಾಗಿದ್ದುಕೊಂಡು ಚೆನ್ನಾಗಿ ಸಂಪಾದನೆ ಮಾಡಿದನೆಂದು ಆರುದ್ರರು ಆಂಧ್ರ ಸಾಹಿತ್ಯ ಚರಿತ್ರೆಯಲ್ಲಿ ತಿಳಿಸುತ್ತಾರೆ. ಕಂಕಂಟಿವಂಶಪಯಃಪಾರವಾರಪರಿಪೂರ್ಣಸುಧಾಕರನೆಂದು ಕವಿ ತನ್ನ ವಿಷಯವಾಗಿ ಹೇಳಿಕೊಂಡಿರುವುದರಿಂದ ಅವನ ಮನೆತನಕ್ಕೆ ಕಂಕಂಟಿಯವರೆಂಬ ಹೆಸರಿದ್ದಿತೆಂದು ಸ್ಪಷ್ಟವಾಗುತ್ತದೆ.

ಈ ಕವಿ ಆರವೇಲು ನಿಯೋಗಿ ಪಂಗಡಕ್ಕೆ ಸೇರಿದ ಶ್ರೀವತ್ಸ ಗೋತ್ರದ ಬ್ರಾಹ್ಮಣ. ತನ್ನ ಕಾವ್ಯದಲ್ಲಿ ಆ ಪಂಗಡವನ್ನು ಬಹಳವಾಗಿ ಪ್ರಶಂಸೆ ಮಾಡಿಕೊಂಡಿದ್ದಾನೆ. ಅಖಿಲ ರಾಜಾಧಿರಾಜಾಸ್ಥಾನಸಜನಹೃದ್ಯವಿದ್ಯಾವಿಹಾರಿಗಳು—ಆರವೇಲಿನವರು ! ಅವರು ಬಲಿ, ಕರ್ಣರಂತೆ ವಿತರಣೋದಾರಿಗಳಂತೆ ! ಘನದುರ್ಘಟ ಸ್ವಾಮಿಕಾರ್ಯ ನಿರ್ವಹಣ ಪ್ರವೀಣರವರು ! ಎಲ್ಲಕ್ಕಿಂತ ಮಿಗಿಲಾಗಿ ಅವರು ವಿಮತಗರ್ವಾಪಹರು ! ಇಂಥ ಶ್ರೇಷ್ಠವಾದ ಪಂಗಡದಲ್ಲಿ ಕೀರ್ತಿಶಾಲಿಯಾದ ಅಪ್ಪಯಾಮಾತ್ಯನ ಸುಪುತ್ರ, ಕವಿ ಪಾಪರಾಜು. ಈತ ರಾಜನೀತಿ ಮತ್ತು ಗಣಿತಶಾಸ್ತ್ರಗಳಲ್ಲಿ ನಿಷ್ಣಾತನೂ ರಾಜಸನ್ಮಾನಿತನೂ ಆಗಿದ್ದನೆಂದು ಹೇಳಿಕೊಂಡಿದ್ದಾನೆ.

ಪಾಪರಾಜು ವಿಷ್ಣುಮಾಯಾವಿಲಾಸ ಎಂಬ ಒಂದು ಯಕ್ಷಗಾನವನ್ನೂ ಉತ್ತರ ರಾಮಾಯಣ ಎಂಬ ಪ್ರೌಢಪ್ರಬಂಧಕಾವ್ಯವನ್ನೂ ರಚಿಸಿದ್ದಾನೆ. ಮೊದಲು ರಚಿಸಿದ್ದು ಯಕ್ಷಗಾನ. ಭರತಭೂಮಿಯ ಮೇಲೆ ಬ್ರಾಹ್ಮಣನಾಗಿ ಹುಟ್ಟಿ ಕವಿತಾ ಪ್ರತಿಭೆಯನ್ನು ಪಡೆದಿದ್ದು ಇಹಪರಸಾಧಕವಾದ ಶ್ರೀರಾಮಕಥೆಯನ್ನು ಹೇಳದೆ ಅಸತ್ಕಥೆಗಳನ್ನೆಷ್ಟು ಬರೆದರೂ ಜನ್ಮ ವ್ಯರ್ಥವೆಂದು ಕವಿಯ ತ್ರಿಕರಣಪೂರ್ವಕವಾದ ನಂಬಿಕೆ. ಆದ್ದರಿಂದಲೇ ಈತ ಉತ್ತರರಾಮಾಯಣವನ್ನು ರಚಿಸಲು ಸಂಕಲ್ಪಿಸಿದ. ಆಂಧ್ರ ಮಹಾಭಾರತಕರ್ತರಲ್ಲಿ ಒಬ್ಬನಾದ ತಿಕ್ಕನ ಸೋಮಯಾಜಿ ನಿರ್ವಚನೋತ್ತರ ರಾಮಾಯಣ ಎಂಬ ಹೆಸರಿನಿಂದ ಈ ರಾಮಚರಿತೆಯನ್ನೇ ಪದ್ಯಕಾವ್ಯವಾಗಿ ರಚಿಸಿದ್ದಾನೆ. ಕ್ರಿ.ಶ. 1300ರ ಸುಮಾರಿನಲ್ಲಿ ಜೀವಿಸಿದ್ದ ಕಾಚ ಮತ್ತು ವಿಠಲರೆಂಬ ರಾಜಕವಿಗಳು ಉತ್ತರರಾಮಚರಿತೆಯನ್ನು ದ್ವಿಪದಕಾವ್ಯವಾಗಿ ರಚಿಸಿದರು. ಇಷ್ಟಿದ್ದರೂ ಪಾಪರಾಜು ಈ ಕಾವ್ಯರಚನೆಗೆ ಸಂಕಲ್ಪಿಸಿದ. ಶ್ರೀರಾಮನ ಚರಿತ್ರೆಯನ್ನು ಎಷ್ಟು ವಿಧಗಳಲ್ಲಿ ಹೇಳಿದರೂ ಸಾಲದೆಂದು ಕವಿಯ ತಿಳಿವಳಿಕೆ. ಸುಧೀಪರಿಷತ್ಸಂತತಸೇವ್ಯವಾದ ಉತ್ತರರಾಮಾಯಣವನ್ನು ಮೃದುವಚೋಧಾರಾರ್ಥಸಂದರ್ಭನಿರ್ಭರವಾದ ರೀತಿಯಲ್ಲಿ ಬರೆಯುವೆನೆಂದು ಪ್ರತಿಜ್ಞೆ ಮಾಡಿ ಪಾಪರಾಜು ಬಹಳ ಉತ್ತಮವಾದ ಶೈಲಿಯಲ್ಲಿ ಕೃತಿರಚನೆ ಮಾಡಿ ಸತ್ಯಸಂಕಲ್ಪನಾಗಿದ್ದಾನೆ.

ತೆಲುಗಿನಲ್ಲಿ ಇದುವರೆಗೆ ಲಭಿಸಿರುವ ಉತ್ತರರಾಮಾಯಣಗಳಲ್ಲೆಲ್ಲ ಈ ಕೃತಿಯೇ ದೊಡ್ಡದು. ಎಂಟು ಆಶ್ವಾಸಗಳುಳ್ಳ ವಿಸ್ತಾರವಾದ ಪ್ರೌಢಪ್ರಬಂಧ ಕಾವ್ಯವಿದು. ಇದರಲ್ಲಿ ರಾಮ ಪಟ್ಟಾಭಿಷಿಕ್ತನಾದ ಮೇಲೆ ಸೀತೆಯನ್ನು ಅಡವಿಗೆ ಕಳುಹಿಸಿದ ಕಥೆ ಮುಖ್ಯವಾದರೂ ಕವಿ ಸಿಂಹಾವಲೋಕನ ಕ್ರಮದಿಂದ ರಾವಣೇಶ್ವರನ ಪೂರ್ವಚರಿತ್ರೆಯನ್ನೂ ಆಂಜನೇಯನ ಕಥೆ, ವೃತ್ರಾಸುರ ವಧೆಯಿಂದ ಸಂಭವಿಸಿದ ಬ್ರಹ್ಮಹತ್ಯಾದೋಷ ಪರಿಹಾರವಾದ ಬಗೆ—ಮೊದಲಾದ ಹಲವು ಉಪಾಖ್ಯಾನಗಳನ್ನೂ ಅಚ್ಚುಕಟ್ಟಾಗಿ ಜೋಡಿಸಿ ಹೇಳಿದ್ದಾನೆ. ರಂಭಾ ರಾವಣ ಸಂವಾದ, ಸೀತಾ ವನವಾಸ, ಮೊದಲಾದ ಭಾಗಗಳು ಬಹು ಸ್ವಾರಸ್ಯವಾಗಿವೆ. ಭಾರತ ಭಾಗವತಗಳನ್ನು ಬಿಟ್ಟರೆ ಈ ಕೃತಿಯೇ ತೆಲುಗು ದೇಶದಲ್ಲಿ ಹೆಚ್ಚಿನ ಜನಪ್ರಿಯತೆಯನ್ನು ಗಳಿಸಿದ ಕಾವ್ಯವೆಂದು ಹೇಳಬೇಕು. ರಾಯಲಸೀಮೆಯಲ್ಲಂತು ಉತ್ತರರಾಮಾಯಣ ಬಹಳ ಪ್ರಚಾರದಲ್ಲಿದ್ದು ಜನಮನ್ನಣೆ ಗಳಿಸಿದೆ.

ಪಾಪರಾಜು ಪ್ರೌಢ ಪಂಡಿತಕವಿ. ಇವನ ಬರೆವಣಿಗೆಯಲ್ಲಿ ಸಂಸ್ಕೃತದ ಬಳಕೆ ಹೆಚ್ಚು. ಆದರೂ ಇವನ ಕಥನಕೌಶಲ, ವರ್ಣನಾವಿಲಾಸಗಳಿಂದ ಈ ಕಾವ್ಯ ಸರ್ವಜನಾದರಣೀಯವಾಗಿದೆ. ಶ್ರಾವ್ಯವೂ ರಸಭರಿತವೂ ಆದ ಈ ಕೃತಿಯಲ್ಲಿ ಕವಿಯ ನಿರರ್ಗಳವಾದ ಪದರಚನೆ ಸುಪ್ರಕಟವಾಗಿದೆ; ಲೋಕೋಕ್ತಿಗಳು, ಶಬ್ದಾಲಂಕಾರ, ಅರ್ಥಾಲಂಕಾರಗಳು ಹೇರಳವಾಗಿದ್ದು ಪಂಡಿತಪಾಮರರಿಬ್ಬರಿಗೂ ರಂಜಕವಾಗಿದೆ.

ಪಾಪರಾಜು ಹೀಗೆ ರಾಘವೇಶ್ವರಚರಿತವನ್ನು ರಚಿಸಿ ಅದನ್ನು ಯಾರಿಗೆ ಅಂಕಿತ ಮಾಡುವುದೆಂದು ಯೋಚಿಸುತ್ತಿದ್ದಾಗ ಒಂದು ರಾತ್ರಿ ಕನಸಿನಲ್ಲಿ ಅವನ ಇಷ್ಟದೈವನಾದ ಮದನಗೋಪಾಲಸ್ವಾಮಿ ದರ್ಶನ ಕೊಟ್ಟು ವತ್ಸ, ನಿನ್ನ ಪ್ರಬಂಧವನ್ನು ನನಗೆ ಅಂಕಿತ ಮಾಡಿ ಅರ್ಪಿಸು, ನೀನು ಕೃತಾರ್ಥನಾಗುವೆ. ನಿನ್ನ ಕೃತಿಯೂ ಆತಾರಾರ್ಕವಾಗಿ ಬೆಳಗುತ್ತದೆ. ಹಿಂದೆ ನೀನು ವಿಷ್ಣುಮಾಯಾವಿಲಾಸವನ್ನು ನನಗೆ ಸಮರ್ಪಿಸಿದೆ. ಅಂದಿನಿಂದ ನಿನ್ನ ಸುಧಾನುಸಾರಿಯಾದ ವಾಕ್ಯಗಳನ್ನು ಸವಿಯುತ್ತಿದ್ದೇನೆ ಎಂದು ಹೇಳಿಕೊಂಡನಂತೆ ! ಅದರಂತೆ ಕವಿ ತನ್ನ ಈ ಬೃಹತ್ಕಾವ್ಯವನ್ನು ಸುಜನೈಕಕೃಪಾಳುವಾದ ಮದನಗೋಪಾಲನಿಗೆ ಭಕ್ತಿಯಿಂದ ಸಮರ್ಪಿಸಿದ್ದಾನೆ.

ಕೃತಿರಚನೆಯಲ್ಲಿ ತನಗೆ ಪುಷ್ಪಗಿರಿ ತಿಮ್ಮನನೆಂಬ ಕವಿಮಿತ್ರ ವಿಶೇಷವಾದ ಸಹಾಯ ಮಾಡಿದನೆಂದು ಹೇಳಿ ಅವನ ಉಪಕಾರವನ್ನು ಕವಿ ಕೊಂಡಾಡಿದ್ದಾನೆ. (ಕೆ.ಎಸ್‌ಯುಬಿ.)

**ಕಂಕಣಗ್ರಹಣ:** ಸೂರ್ಯಗ್ರಹಣದಲ್ಲಿ ಚಂದ್ರಬಿಂಬ ಸೂರ್ಯಬಿಂಬದ ಅಂಚನ್ನು ಮಾತ್ರ ತೆರಪು ಬಿಟ್ಟು ಉಳಿದ ಮಧ್ಯ ಭಾಗವನ್ನು ನಮ್ಮ ದೃಷ್ಟಿಯಿಂದ ಮರೆಮಾಡುವ ಒಂದು ವಿಶೇಷ ಪರಿಸ್ಥಿತಿ (ಆನ್ಯುಲರ್ ಎಕ್ಲಿಪ್ಸ್). ಸೂರ್ಯಬಿಂಬದ ಹೊಳೆವ ಭಾಗ ಒಂದು ಬಳೆಯಂತೆ ಕಾಣುವುದರಿಂದ ಈ ಹೆಸರು ಬಂದಿದೆ. ಚಂದ್ರಗ್ರಹಣದಲ್ಲಿ ಕಂಕಣಗ್ರಹಣ ಸಂಭವಿಸುವುದಿಲ್ಲ.

ಸೂರ್ಯಚಂದ್ರರ ಗಾತ್ರದಲ್ಲಿನ ತೀವ್ರವ್ಯತ್ಯಾಸ ಸೂರ್ಯ-ಭೂಮಿ ದೂರದ ಅಗಾಧತೆ ಹಾಗೂ ಚಂದ್ರ-ಭೂಮಿ ಸಾಮೀಪ್ಯ ಈ ಕಾರಣಗಳಿಂದ ಅಪೂರ್ವವಾಗಿ



ಸೂರ್ಯಗ್ರಹಣದ ಎರಡು ಬಗೆಗಳು: ಚಂದ್ರಬಿಂಬ ಸೂರ್ಯ ಬಿಂಬಕ್ಕಿಂತ ದೊಡ್ಡದಾಗಿದ್ದರೆ ಸೂರ್ಯಗ್ರಹಣವೂ (ಎಡಗಡೆಯ ಚಿತ್ರ) ಚಿಕ್ಕದಿದ್ದರೆ ಕಂಕಣಗ್ರಹಣವೂ ಒದಗುತ್ತದೆ (ಬಲಗಡೆಯ ಚಿತ್ರ)

ಭೂಮಿಯ ಮೇಲಣ ಕೆಲವು ಪ್ರದೇಶಗಳಲ್ಲಿ ಕಂಕಣಗ್ರಹಣ ಕೇವಲ ಕೆಲವು ಮಿನಿಟುಗಳ ಕಾಲ ಕಾಣಿಸಿಕೊಳ್ಳುವುದುಂಟು. ಯಾವುದೇ ಪ್ರದೇಶದಲ್ಲಿ ಸೂರ್ಯಗ್ರಹಣ ದರ್ಶನವೇ ಒಂದು ಅಪೂರ್ವ ಘಟನೆ. ಅದರಲ್ಲೂ ಕಂಕಣಗ್ರಹಣ ತೀರ ವಿರಳ. 1971 ರಿಂದ 1990ರ ವರೆಗೆ ಸಂಭವಿಸಲಿರುವ ಕಂಕಣಗ್ರಹಣಗಳ ವಿವರಗಳನ್ನು ಮುಂದಿನ ಯಾದಿಯಲ್ಲಿ ಬರೆದಿದೆ.

| ಕ್ರಮ ಸಂಖ್ಯೆ | ತಾರೀಖು | | ಕಂಕಣಗ್ರಹಣ ಕಾಣುವ ಪ್ರದೇಶ |
|---|---|---|---|
| 1 | 1971 | ... | ಇಲ್ಲ |
| 2 | 1972 ಜನವರಿ 16 | ... | ಮೇರಿ ಬರ್ಡ್‌ಲೆಂಡ್ ಮತ್ತು ಪೂರ್ವ ಅಂಟಾರ್ಕ್‌ಟಿಕ್ |
| 3 | 1973 ಜನವರಿ 4 | ... | ದಕ್ಷಿಣ ಪೆಸಿಫಿಕ್, ದಕ್ಷಿಣ ಅಮೆರಿಕದಿಂದ ದಕ್ಷಿಣ ಅಟ್ಲಾಂಟಿಕ್ ಕಡೆಗೆ |
| 4 | 1973 ಡಿಸೆಂಬರ್ 24 | ... | ದಕ್ಷಿಣ ಅಮೆರಿಕದ ಉತ್ತರಭಾಗದ ಮೂಲಕ ಅಟ್ಲಾಂಟಿಕ್ ಸಾಗರಕ್ಕಾಗಿ ಉತ್ತರ ಆಫ್ರಿಕದಲ್ಲಿ ಅಂತ್ಯ |
| 5 | 1976 ಏಪ್ರಿಲ್ 29 | ... | ಅಟ್ಲಾಂಟಿಕ್, ಉತ್ತರ ಆಫ್ರಿಕ, ಮೆಡಿಟರೇನಿಯನ್ ಸಮುದ್ರ ದಕ್ಷಿಣ-ಮಧ್ಯ ಏಷ್ಯ |
| 6 | 1977 ಏಪ್ರಿಲ್ 18 | ... | ದಕ್ಷಿಣ ಅಟ್ಲಾಂಟಿಕ್, ದಕ್ಷಿಣ ಆಫ್ರಿಕದ ಮೂಲಕ ಹಿಂದೂ ಸಾಗರಕ್ಕೆ |
| 7 | 1979 ಆಗಸ್ಟ್ 22 | ... | ಆಮುಂಡ್‌ಸೆನ್ ಸಮುದ್ರದ ಮೂಲಕ ಪಶ್ಚಿಮ ಅಂಟಾರ್ಕ್‌ಟಿಕಕ್ಕೆ |
| 8 | 1980 ಆಗಸ್ಟ್ 10 | ... | ಮಧ್ಯ ಪೆಸಿಫಿಕ್ ಸಾಗರದ ಮೂಲಕ ಬ್ರೆಜಿಲ್‌ಗೆ |
| 9 | 1981 ಫೆಬ್ರವರಿ 4 | ... | ಪೆಸಿಫಿಕ್ ಸಾಗರ, ಆಸ್ಟ್ರೇಲಿಯದ ದಕ್ಷಿಣ ಭಾಗದಿಂದ ದಕ್ಷಿಣ ಅಮೆರಿಕದ ಕರಾವಳಿ ಸಮೀಪದ ವರೆಗೆ |
| 10 | 1983 ಡಿಸೆಂಬರ್ 4 | ... | ಉತ್ತರ ಅಟ್ಲಾಂಟಿಕ್ ಸಾಗರ, ಮಧ್ಯ ಆಫ್ರಿಕದ ಮೂಲಕ |
| 11 | 1987 ಸೆಪ್ಟೆಂಬರ್ 22 | ... | ಮಧ್ಯ ಏಷ್ಯದಿಂದ ಮಧ್ಯ ಪೆಸಿಫಿಕ್ ಸಾಗರಕ್ಕೆ |
| 12 | 1988 ಸೆಪ್ಟೆಂಬರ್ 11 | ... | ಪಶ್ಚಿಮ ಹಿಂದೂ ಸಾಗರದಿಂದ ನ್ಯೂಜಿಲೆಂಡಿನ ದಕ್ಷಿಣದ ಪೆಸಿಫಿಕ್ ವರೆಗೆ |
| 13 | 1990 ಜನವರಿ 26 | ... | ದಕ್ಷಿಣ ಹಿಂದೂ ಸಾಗರ ಮತ್ತು ದಕ್ಷಿಣ ಅಟ್ಲಾಂಟಿಕ್ ಸಾಗರ |

ಇದೇ ಅವಧಿಯಲ್ಲಿ ಸಂಭವಿಸುವ ಪೂರ್ಣ ಸೂರ್ಯಗ್ರಹಣಗಳ ಸಂಖ್ಯೆ 16. *

**ಕಂಕರ್ (ಸುಣ್ಣದ ಕಲ್ಲು) :** ವಿವಿಧ ಗಾತ್ರದ ಉಂಡೆಗಳ ರೂಪದಲ್ಲಿರುವ ಸುಣ್ಣಕಲ್ಲಿನ ಒಂದು ಬಗೆ. ಕಂಕರೆ ಎಂದೂ ಕರೆಯುವುದುಂಟು. ಭಾರತದಂಥ ಉಷ್ಣವಲಯ ಪ್ರದೇಶಗಳಲ್ಲಿ ಕೆಲವೆಡೆ ದೊರೆಯುತ್ತದೆ. ಇದು ಕ್ಯಾಲ್ಸಿಯಂ ಫೆಲ್ಡ್‌ಸ್ಪಾರ್ ಮತ್ತು ಇತರ ಸುಣ್ಣದ ಸಿಲಿಕೇಟ್ ಖನಿಜಗಳ ರಾಸಾಯನಿಕ ಬದಲಾವಣೆಯಿಂದಲೂ ಅಮ್ಲ ಗ್ರಾನೈಟಿನಿಂದ ಹಿಡಿದು ಪ್ರತ್ಯಾಮ್ಲ ಒಡ್ಡುಗಳ ವರೆಗೆ ಇರುವ ವಿವಿಧ ಶಿಲೆಗಳ ರಾಸಾಯನಿಕ ಶೈಥಿಲ್ಯದಿಂದಲೂ ಉಂಟಾಗಿ ಭೂಮಟ್ಟದಲ್ಲಿಯೂ ನೆಲದ ಮಣ್ಣಿನಲ್ಲಿಯೂ ಉಂಡೆಗಳಂತೆ ಶೇಖರಗೊಳ್ಳುತ್ತದೆ. ಉಂಡೆಗಳ ಗಾತ್ರ 2″-3″. ಸುಣ್ಣಕಲ್ಲಿನಂತೆ ಇದು ಬದ್ಧವಾದ ಶಿಲಾಸ್ತರಗಳಾಗುವುದಿಲ್ಲ. ಭೂಮಿಯೊಳಗಡೆ ಇಂಗಾಲಾಮ್ಲದಿಂದ ಒಡಗೂಡಿದ ಅಂತರ್ಜಲ ($H_2O + CO_2$) ಶಿಲಾಸ್ತರಗಳ ಬಿರುಕುಗಳ ಮೂಲಕ ಹರಿಯುವಾಗ ಅವುಗಳಲ್ಲಿರುವ ಕ್ಯಾಲ್ಸಿಯಂ ಆಕ್ಸೈಡ್ ನೀರಿನಲ್ಲಿರುವ ಇಂಗಾಲಾಮ್ಲದೊಡನೆ ಸೇರಿ ಕ್ಯಾಲ್ಸಿಯಂ ಕಾರ್ಬೊನೇಟ್ ($CaCO_3$) ಆಗಿ ಭೂಮಿಯ ಮೇಲ್ಭಾಗದಲ್ಲಿ ಕಣ ರೂಪವಾಗಿಯೂ ಗಂಟುಗಳಂತೆಯೂ ಸಂಗ್ರಹವಾಗುತ್ತದೆ. ಶುದ್ಧವಾದ ಸುಣ್ಣಕಲ್ಲಿನಲ್ಲಿ 95%-98% ಭಾಗದಷ್ಟು ಕ್ಯಾಲ್ಸಿಯಂ ಕಾರ್ಬೊನೇಟ್ ಇರುತ್ತದೆ. ಗ್ರಾನೈಟ್ ಶ್ರೇಣಿ ಶಿಲೆಗಳಿಂದ (ನೀಸ್), ಉತ್ಪತ್ತಿಯಾದ ಸುಣ್ಣಕಲ್ಲಿನಲ್ಲಿ ಕ್ಯಾಲ್ಸಿಯಂ ಕಾರ್ಬೊನೇಟ್ 80%-85% ಭಾಗಕ್ಕಿಂತ ಹೆಚ್ಚಾಗಿರುವುದಿಲ್ಲ.

ಮೈಸೂರು ರಾಜ್ಯದಲ್ಲಿ ಸುಣ್ಣಕಲ್ಲಿನ ನಿಕ್ಷೇಪಗಳು ವಿಸ್ತಾರವಾಗಿ ಹರಡಿವೆ. ಬಿಜಾಪುರ ಜಿಲ್ಲೆಯ ಮಲಪ್ರಭಾ ನದಿಯ ಎಡದಂಡೆ, ಧಾರವಾಡ ಜಿಲ್ಲೆಯ ಗದಗ್ ತಾಲ್ಲೂಕು ಮತ್ತು ಹಿರೇಕೆರೂರು ತಾಲ್ಲೂಕಿನ ಅಣಜಿ, ಗುಡ್ಡದ ಮಾದಾಪುರ, ನಾಗವಂದ, ಮೈದೂರ್, ಕಾಮಲಾಪುರ ಮತ್ತು ಚಟ್ಟಹಳ್ಳಿ (ಇಲ್ಲಿನ ನಿಕ್ಷೇಪ ಸುಮಾರು 5 ಲಕ್ಷ ಟನ್ನುಗಳಷ್ಟು ಆಗಬಹುದು). ಬೆಳಗಾಂ ಜಿಲ್ಲೆಯ ಹುಕ್ಕೇರಿ, ಬೈಲಹೊಂಗಲು ಮತ್ತು ಅಥಣಿ ತಾಲ್ಲೂಕುಗಳು (ಇಲ್ಲಿನ ನಿಕ್ಷೇಪ ಸುಮಾರು 3 ಲಕ್ಷ ಟನ್ನುಗಳಷ್ಟು ಆಗಬಹುದು) ಇತ್ಯಾದಿ ಸ್ಥಳಗಳು ಇಂಥ ನಿಕ್ಷೇಪಗಳಿರುವ ಪ್ರದೇಶಗಳು. ಬೈಲಹೊಂಗಲು ಮತ್ತು ಅಥಣಿ ನಿಕ್ಷೇಪಗಳು ಅತ್ಯುತ್ಕೃಷ್ಟವಾದವು ; ಸಾಕಷ್ಟು ಪ್ರಮಾಣದಲ್ಲಿ ಇಲ್ಲಿ ಸುಣ್ಣಕಲ್ಲು ದೊರೆಯುತ್ತದೆ. ಚಿಕ್ಕಮಗಳೂರು, ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳಲ್ಲಿಯೂ ಕಂಕರ್ ಸಿಕ್ಕುವುದು. ತುಮಕೂರಿನ ಓಬಳಾಪುರದ ಬಳಿ ಮತ್ತು ಮೈಸೂರು ತಾಲ್ಲೂಕಿನಲ್ಲಿ ಅತಿ ವಿಪುಲವಾಗಿ ದೊರೆಯುವ ಕಂಕರನ್ನು ಅಧಿಕ ಪ್ರಮಾಣದಲ್ಲಿ ತೆಗೆದು ಪರಸ್ಥಳಗಳಿಗೆ ರವಾನಿಸುತ್ತಾರೆ. ಇದರ ಗುಣಮಟ್ಟ ಉತ್ತಮವಾಗಿದೆ. ಇದರಿಂದ ಅನೇಕ ರಾಸಾಯನಿಕ ವಸ್ತುಗಳನ್ನು ಮುಖ್ಯವಾಗಿ ಕ್ಯಾಲ್ಸಿಯಂ ಅಸಿಟೇಟನ್ನು ತಯಾರಿಸಬಹುದು. (ಜಿ.ಎಸ್.ಐ.)

**ಕಂಕಾಳ ಜ್ವರ :** ಮೂತ್ರದಲ್ಲಿ ರಕ್ತಬಣ್ಣಕ (ಹಿಮೋಗ್ಲೋಬಿನ್) ಹೋಗುತ್ತಿರುವ ವಿಷಮ ಬಗೆಯ ಮಲೇರಿಯ ಜ್ವರ (ಬ್ಲ್ಯಾಕ್ ವಾಟರ್ ಫೀವರ್). ಮಲೇರಿಯ ತೀವ್ರವಾಗಿರುವ ಪ್ರದೇಶಗಳಲ್ಲಿ ಈ ಜ್ವರವೂ ಹರಡಿರುವಂತಿದೆ. ರೋಗಿಯ ಮೂತ್ರ ಕರಿ ಶಾಯಿಯಂತಿರುವುದರಿಂದ ಈ ಹೆಸರಾಗಿದೆ. ರಕ್ತದಲ್ಲಿ ಸುತ್ತಾಡುತ್ತಿರುವ ಕೆಂಪು ರಕ್ತಕಣಗಳಲ್ಲಿ ಅರೆಪಾಲಿಗೂ ಹೆಚ್ಚಾಗಿ ಒಂದೇ ಬಾರಿ ಇಲ್ಲವೇ ಕೊಂಚಕೊಂಚವಾಗಿ ಮೇಲಿಂದ ಮೇಲೆ ರಕ್ತನಾಳಗಳೊಳಗೇ ಒಡೆದುಕೊಂಡು ಹಾಳಾಗುತ್ತಿರುತ್ತವೆ. ಸಾಮಾನ್ಯವಾಗಿ ಈ ರೋಗ ಹತ್ತಿದವನು ಉಳಿವುದಿಲ್ಲ. ಮೇಲಿಂದ ಮೇಲೆ ಮಲೇರಿಯಗ್ರಸ್ತನಾದ ರೋಗಿ (ಕನಿಷ್ಠ ಪಕ್ಷ ನಾಲ್ಕು ಸಲ) ಅದೇ ಸ್ಥಳದಲ್ಲಿ (ಅಂದರೆ ಮಲೇರಿಯ ಪೀಡಿತ ಸ್ಥಳ) ಆರು ತಿಂಗಳ ಕಾಲ ಇದ್ದಾಗ ಆತನಿಗೆ ಕಂಕಾಳ ಜ್ವರ ಬರುವುದನ್ನು ಗಮನಿಸಿದ್ದಾರೆ. ಇಂದು ಮಲೇರಿಯ ನಿರೋಧ ಸಾಕಷ್ಟು ಪರಿಣಾಮಕಾರಿಯಾಗಿರುವುದರಿಂದಲೂ ಹೊಸ ಮದ್ದುಗಳು ಬಂದಿರುವುದರಿಂದಲೂ ಈ ರೋಗದ ಸುಳಿವೇ ಇಲ್ಲ.

**ನೋಡಿ—ಮಲೇರಿಯ.** (ಡಿ.ಎಸ್.ಎಸ್.)

**ಕಂಕೋಶ :** ಮೂತ್ರಪಿಂಡಗಳಿಂದ ಮೂತ್ರಕನಾಳಗಳ (ಯೂರೀಟರ್ಸ್) ಮೂಲಕ ಕೆಳಗೆ ಹರಿದು ಬರುತ್ತಿರುವ ಮೂತ್ರವನ್ನು ಕೆಲಕಾಲ ಕೂಡಿಟ್ಟುಕೊಳ್ಳುವ ಸ್ನಾಯುಗಳಿಂದಾದ, ಲೋಳಿಪದರ ಒಳವರಿಯಾಗಿರುವ ಕೋಶ (ಬ್ಲಾಡರ್). ಇಲ್ಲಿಂದ ಇಷ್ಟಪಟ್ಟಾಗ ಮೂತ್ರನಾಳದ (ಯೂರಿತ್ರ) ಮೂಲಕ ಮೂತ್ರವನ್ನು ಹೊರಸುರಿಬಿಡುವುದು. **ನೋಡಿ—ಮೂತ್ರಮಂಡಲ.** *

**ಕಂಕೋಶ ಹುಳು :** ಒರೆತೂರಿಸಿದ (ಇನ್‌ವೆಜಿನೇಟೆಡ್) ಒಂಟಿ ಕೊಂದಲೆಯೂ (ಸ್ಕೊಲೆಕ್ಸ್) ಒಂದು ದೊಡ್ಡ ಜಿಟ್ಟೆಯೂ (ಸಿಸ್ಟ್) ಇರುವ ಲಾಡಿಹುಳುವಿನ ಕೀಟಕ (ಲಾರ್ವಲ್) ರೂಪ (ಬ್ಲಾಡರ್ ವರ್ಮ್). ಗೋಳದಂತಿರುವ ಜಿಟ್ಟೆ ಭಾಗ ಕಂಕೋಶವನ್ನು ಹೋಲುವುದರಿಂದ ಈ ಹೆಸರಾಗಿದೆ. ಕಂಕೋಶಹುಳುವಿಗೆ ವೈದ್ಯದಲ್ಲಿ ಸಂಚಿಬಾಲ (ಸಿಸ್ಟಿಸರ್ಕಸ್) ಎಂದು ಹೆಸರು. ಕಂಕೋಶಹುಳುವಾಗುವುದು ಲಾಡಿಹುಳುಗಳ ಒಂದು ವಿಶೇಷ ಲಕ್ಷಣ. ಹಂದಿಗಳ ಮತ್ತು



ಕಂಕೋಶ ಹುಳು

ದನಗಳ ಮಾಂಸಗಳಲ್ಲಿ ಕಂಕೋಶ ಹುಳುವಿನ ಸೋಂಕಾಗುವುದು ಸಾಮಾನ್ಯ. ಹಂದಿಯಲ್ಲಿನ ಈ ಸೋಂಕು ಮಾನವನಿಗೂ ಹತ್ತಬಹುದು. ಯಾವ ಅಂಗದಲ್ಲಿ ನೆಲೆಸಿರುವುದೋ ಅದಕ್ಕೆ ತಕ್ಕ ರೋಗ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಮಿದುಳಲ್ಲಿ ನೆಲೆಸಿತೆಂದರೆ ಮೊಲ್ಲಾಗರದ ಸೆಳವುಗಳು ಕಾಣಿಸಿಕೊಳ್ಳಬಹುದು. (ಡಿ.ಎಸ್.ಎಸ್.)

**ಕಂಗೊಂದಿ ಬಳ್ಳಿ:** ಸಿಲ್ಯಾಸ್ಟ್ರೇಸಿ ಕುಟುಂಬದ ಒಂದು ಪ್ರಭೇದ (ಸಿಲ್ಯಾಸ್ಟ್ರಸ್ ಪ್ಯಾನಿಕ್ಯುಲೇಟಸ್). ಭಾರತ, ಸಿಂಹಳ, ಮಲಯ ಹಾಗೂ ಫಿಲಿಪೀನ್ಸ್ ದ್ವೀಪಗಳಲ್ಲಿ ಕಾಣಬರುತ್ತದೆ. ಸಾಮಾನ್ಯವಾಗಿ ಗುಡ್ಡಗಾಡು ಜಿಲ್ಲೆಗಳಿಗೆ ಸೀಮಿತಗೊಂಡಿದ್ದು ಸುಮಾರು 4,000′ಎತ್ತರದ ಪ್ರದೇಶಗಳಲ್ಲೂ ಬೆಳೆಯುತ್ತದೆ. ಬಳ್ಳಿಯಂತೆ ಹಬ್ಬಿ ಬೆಳೆಯುವ ಪೊದೆಸಸ್ಯವಿದು. ಬೆಳೆಯುತ್ತಿರುವ ಕವಲುಗಳ ಮೇಲೆ ಮಸೂರದ ಆಕಾರದ (ಲೆನ್ಸ್ ಆಕಾರದ) ಗಂಟುಗಳಿವೆ. ಮುಳ್ಳುಗಳಿಲ್ಲ. ಪರ್ಯಾಯ ಮಾದರಿಯಲ್ಲಿ ಜೋಡಣೆಗೊಂಡಿರುವ ಎಲೆಗಳಿವೆ. ಅವು ಅಂಡಾಕಾರ ಅಥವಾ ದೀರ್ಘವೃತ್ತಾಕಾರದವು. ಅಲಗಿನ ತುದಿ ಮೊನಚು. ಅಂಚು ಗರಗಸದ ಹಲ್ಲಿನಂತೆ. ನೈನುಣುಪು. ಹೂಗೊಂಚಲು ಸಂಕೀರ್ಣ ಪುಷ್ಪಗುಚ್ಛ ಮಾದರಿಯದು; 2″–6″ ಉದ್ದ. ಹೂಗೊಂಚಲಿನ ತೊಟ್ಟಿನ ಮೇಲೆ ಮೃದು ತುಪ್ಪುಳದ ಹೊದಿಕೆಯಿದೆ. ಹೂಗಳು ಏಕಲಿಂಗಿಗಳು. ಬಣ್ಣ ಹಳದಿ ಅಥವಾ ಹಸಿರುಮಿಶ್ರಿತ ಬಿಳಿ. ಹೂಗಳಲ್ಲಿ ಬೇಗ ಉದುರಿಹೋಗುವಂಥ ಅನೇಕ ಚಿಕ್ಕ ಚಿಕ್ಕ ಉಪಪತ್ರಗಳು (ಬ್ರಾಕ್ಟ್ಸ್) ಇರುವುದು ಈ ಬಳ್ಳಿಯ ವೈಶಿಷ್ಟ್ಯ. ಪುಷ್ಪಪತ್ರ (ಸೆಪಲ್ಸ್) ಮತ್ತು ಪುಷ್ಪದಳಗಳ (ಪೆಟಲ್ಸ್) ಸಂಖ್ಯೆ ತಲಾ ಐದು. ಗಂಡು ಹೂವಿನಲ್ಲಿ ದಳಗಳಿಂದ ಆವರಿಸಿಕೊಂಡಂತೆ ಒಂದು ತಟ್ಟೆಯಿದೆ (ಡಿಸ್ಕ್). ಇದರ ಬುಡಕ್ಕೆ ಐದು ಕೇಸರಗಳು ಅಂಟಿಕೊಂಡಿವೆ. ಕೆಲವೊಮ್ಮೆ ಗಂಡುಹೂವಿನಲ್ಲಿ ಬಂಜೆ ಅಂಡಾಶಯ (ಪಿಸ್ಟಿಲೋಡ್) ಇರುವುದೂ ಉಂಟು. ಹೆಣ್ಣುಹೂವಿನಲ್ಲಿ ಗಂಡು ಹೂವಿನಲ್ಲಿರುವಷ್ಟೇ ಸಂಖ್ಯೆಯ ಪುಷ್ಪಪತ್ರ ಮತ್ತು ದಳಗಳೂ ಮೂರು ಕಾರ್ಪೆಲುಗಳನ್ನೊಳಗೊಂಡ ಉಚ್ಚಸ್ಥಾನದ ಅಂಡಾಶಯವೂ ಇವೆ. ಶಲಾಕೆ ಚಿಕ್ಕದು. ಶಲಾಕಾಗ್ರ ಮೂರು ಭಾಗಗಳಾಗಿ ಒಡೆದಿದೆ. ಕಾಯಿ ಸಂಪುಟ ಮಾದರಿಯದು. ಬಣ್ಣ ಅಚ್ಚಹಳದಿ. ಒಳಗೆ 1–6 ಅಂಡಾಕಾರದ ಕಂದು ಬಣ್ಣದ ಬೀಜಗಳಿವೆ. ಬೀಜದ ಸುತ್ತ ಕಂದುಗೆಂಪು ಬಣ್ಣದ, ಮೃದುವಾದ, ತಿರುಳಿನಂಥ ಹೊರಹೊದಿಕೆಯಿದೆ (ಏರಿಲ್).

ಕಂಗೊಂದಿ ಬಳ್ಳಿಯಲ್ಲಿ ಹಲವಾರು ಔಷಧವಸ್ತುಗಳಿವೆ. ಇದರಿಂದಾಗಿ ಈ ಬಳ್ಳಿ ತುಂಬ ಉಪಯುಕ್ತವೆನಿಸಿದೆ. ಮಿತಿಮೀರಿದ ಅಫೀಮು ಸೇವನೆಯಿಂದ ಉಂಟಾದ ವಿಷಕಾರಿ ಪರಿಣಾಮದ ಪರಿಹಾರಕ್ಕೆ ಎಲೆಗಳ ರಸವನ್ನು ಬಳಸುತ್ತಾರೆ. ತೊಗಟೆಯಲ್ಲಿ ಗರ್ಭ ಸ್ರಾವಕಗುಣವಿದೆ. ಬೀಜಕ್ಕೆ ಕಾಮೋದ್ದೀಪಕ ಹಾಗೂ ಸ್ವೇದಕಾರಿ ಗುಣಗಳಿವೆ. ಕಹಿಯಾದ್ದರಿಂದ ತಿಂದರೆ ವಾಂತಿಯಾಗುತ್ತದೆ. ಹಸಿ ಬೀಜಗಳನ್ನು ಜಜ್ಜಿ ತೆಗೆದ ಕೆಂಪು ಮಿಶ್ರಿತ ಹಳದಿ ಬಣ್ಣದ ಎಣ್ಣೆಯನ್ನು ಪಾರ್ಶ್ವವಾಯು, ಕುಷ್ಠರೋಗ ಮತ್ತು ಸಂಧಿವಾತ ರೋಗಗಳಿಗೆ ಸಿದ್ಧೌಷಧವಾಗಿ ಉಪಯೋಗಿಸುತ್ತಾರೆ. ಬೀಜಗಳನ್ನು ಜಜ್ಜಿ ಬಟ್ಟಿಯಿಳಿಸುವುದರಿಂದ ಒಂದು ಬಗೆಯ ಕಪ್ಪು ಬಣ್ಣದ ಎಣ್ಣೆ ಬರುವುದು. ಇದಕ್ಕೆ ಓಲಿಯಮ್ ನೈಗ್ರುಮ್ ಎಂಬ ಔಷಧಶಾಸ್ತ್ರೀಯ ಹೆಸರಿದೆ. ಇದನ್ನು ಸ್ವೇದಕಾರಿಯಾಗಿ ಉಪಯೋಗಿಸುತ್ತಾರೆ. ಬೀಜಗಳಲ್ಲಿ ಹಲವಾರು ಬಗೆಯ ಸ್ನಿಗ್ಧ ಆಮ್ಲಗಳೂ ಅದರ ಹೊರಹೊದಿಕೆಯಲ್ಲಿ (ಏರಿಲ್) ಸಿಲ್ಯಾಸ್ಟ್ರಿನ್ ಮತ್ತು ಪ್ಯಾನಿಕುಲೇಟಿನ್ ಎಂಬ ಸಸ್ಯಕ್ಷಾರಗಳೂ ಇವೆ. (ಕೆ.ಎಸ್.ಎನ್.ಎ.)

**ಕಂಚಲದೇವಿ:** ಕಲ್ಯಾಣಿ ಚಾಳುಕ್ಯ ದೊರೆ ಎರಡನೆಯ ಸೋಮೇಶ್ವರ ಭುವನೈಕಮಲ್ಲನ (1068–1076) ಹಿರಿಯ ಹೆಂಡತಿ. ಪೆರಿಯರಸಿ ಕಂಚಲದೇವಿ ಮೂಲಗುಂದ ನಾಡನು ಆಳುತ್ತಿದ್ದಳೆಂಬುದಾಗಿ ಕ್ರಿ.ಶ. 1072 ರ ಗುಡಿಗೇರಿ ಶಾಸನದಿಂದ ತಿಳಿದುಬರುತ್ತದೆ. ನೋಡಿ—ಸೋಮೇಶ್ವರ II. (ಜಿ.ಆರ್.ಆರ್.)

**ಕಂಚಿ:** ಭಾರತದ ಮಹಾ ಪುಣ್ಯಕ್ಷೇತ್ರಗಳಲ್ಲಿ ಒಂದು. ಪ್ರಾಚೀನ ಸಂಸ್ಕೃತಿಯ ನೆಲೆವೀಡಾಗಿದ್ದು ಭವ್ಯ ದೇವಾಲಯಗಳ ಪಟ್ಟಣವೆಂದು ಪ್ರಸಿದ್ಧಿ ಪಡೆದಿದೆ. ದಕ್ಷಿಣ ಭಾರತದ ಇತಿಹಾಸದಲ್ಲಿ ಸಾಕಷ್ಟು ಪ್ರಸಿದ್ಧವೆನಿಸಿದೆ. ಕಾಂಚೀಪುರ, ಕಾಂಜೀವರಂ ಎಂಬ ಹೆಸರುಗಳೂ ಇವೆ. ಮದ್ರಾಸಿನಿಂದ ನೈಋತ್ಯಕ್ಕೆ 75 ಕಿ.ಮೀ. ದೂರದಲ್ಲಿ, ಪಾಲಾರ್ ನದಿಯ ದಡದಲ್ಲಿ ಚೆಂಗಲ್‌ಪಟ್ಟಿಗೆ 35 ಕಿ.ಮೀ. ದೂರದಲ್ಲಿದೆ. ಉತ್ತರ ಅಕ್ಷಾಂಶ 12–50, ಪೂರ್ವ ರೇಖಾಂಶ 79–75. ಜನಸಂಖ್ಯೆ ಲಕ್ಷಕ್ಕೆ ಮೀರಿದೆ. ಪ್ರಾಚೀನ ಕಾಲದಿಂದಲೂ ಅನೇಕ ಸಂತರು, ಭಕ್ತರು, ಕಲಾವಿದರು, ರಾಜಕಾರಣಿಗಳು, ಸಂಗೀತಗಾರರು, ಶ್ರವಣರು ಹಾಗೂ ತಾತ್ತ್ವಿಕರಿಗೆ ವಿದ್ಯಾಕೇಂದ್ರವೂ ಜನ್ಮಸ್ಥಳವೂ ಆಗಿದೆ. ಅರ್ಥಶಾಸ್ತ್ರ ರಚಿಸಿದ ಚಾಣಕ್ಯ ಮತ್ತು ಕರ್ಣಾಟಕ ಸಂಗೀತದ ಪಿತಾಮಹರೆನಿಸಿದ ಶಾಮಶಾಸ್ತ್ರಿಗಳು ಇಲ್ಲಿ ಜನ್ಮವೆತ್ತಿದ್ದಾರೆ.



ಕಾಮಾಕ್ಷಿ ದೇವಸ್ಥಾನದ ಗೋಪುರ

ತಮಿಳುನಾಡಿನ ಚೆಂಗಲ್‌ಪಟ್ಟು ಜಿಲ್ಲೆಯ ಆಡಳಿತಕೇಂದ್ರವಿದು. ಮದ್ರಾಸಿಗೆ ಹತ್ತಿರದಲ್ಲಿರುವುದರಿಂದ ಹೆಚ್ಚಿನ ಪ್ರಾಮುಖ್ಯ ಪಡೆದಿದೆ. ವ್ಯಾಪಾರ ಮತ್ತು ವಾಣಿಜ್ಯಕೇಂದ್ರ. ಇಲ್ಲಿಯ ಗುಡಿಗೋಪುರಗಳು ಬೃಹತ್ ಪ್ರಮಾಣದಲ್ಲಿದ್ದು ತಮ್ಮ ಶಿಲ್ಪಕಲೆಯ ಭವ್ಯತೆಯಿಂದ ಅದ್ಭುತ ಎನಿಸಿವೆ. ಶಿವಕಂಚಿ, ವಿಷ್ಣುಕಂಚಿ ಎಂದು ನಗರ ಎರಡು ವಿಭಾಗಗಳಾಗಿದೆ. ಶಿವಕಂಚಿಯಲ್ಲಿ ಸುಪ್ರಸಿದ್ಧ ಕಾಮಾಕ್ಷಿ, ಏಕಾಂಬರೇಶ್ವರ, ಕೈಲಾಸನಾಥ ದೇವಸ್ಥಾನಗಳಿವೆ. ಶಂಕರಾಚಾರ್ಯರ ಪೀಠಗಳಲ್ಲಿ ಒಂದಾದ ಕಾಮಕೋಟಿ ಪೀಠವಿರುವುದೂ ಇಲ್ಲೆ. ವಿಷ್ಣುಕಂಚಿಯಲ್ಲಿ ವರದರಾಜಸ್ವಾಮಿ ದೇವಸ್ಥಾನವಿದೆ. ವರ್ಷಂಪ್ರತಿ ಇಲ್ಲಿ ನಡೆಯುವ ಉತ್ಸವಗಳಿಗೆ ದಕ್ಷಿಣ ಭಾರತದಿಂದಲೇ ಅಲ್ಲದೆ ಉತ್ತರ ಭಾರತದಿಂದಲೂ ಅಸಂಖ್ಯಾತ ಯಾತ್ರಾರ್ಥಿಗಳು ಆಗಮಿಸುತ್ತಾರೆ. ಇದು ವಿದ್ಯಾಕೇಂದ್ರವೆನಿಸಿದೆ. ಇಲ್ಲಿ ಧರ್ಮದರ್ಶಿಗಳು ನಡೆಸುವ ಎರಡು ಕಾಲೇಜುಗಳಲ್ಲದೆ, ಏಳು ಪ್ರೌಢಶಾಲೆಗಳಿವೆ. ಭಕ್ತವತ್ಸಲಂ ತಾಂತ್ರಿಕ ಶಿಕ್ಷಣಶಾಲೆಯೊಂದು ಸ್ಥಾಪಿತವಾಗಿದೆ. ಸಂಸ್ಕೃತ ವಿದ್ಯೆಗೆ ಹೇಗೊ ಹಾಗೆ ತಮಿಳು ವಿದ್ಯಾಸಾಹಿತ್ಯಗಳಿಗೂ ಈ ಪಟ್ಟಣ ಹೆಸರುವಾಸಿಯಾಗಿದೆ. ಇದು ಆಧುನಿಕ ಜೀವನದ ಎಲ್ಲ ಸೌಲಭ್ಯಗಳೂ ಇರುವ ಪ್ರವಾಸಿಕೇಂದ್ರ ಎನಿಸಿದೆ. ಇಲ್ಲಿ ಉತ್ತಮವಾದ ಜಿಲ್ಲಾ ಮಟ್ಟದ ಗ್ರಂಥಾಲಯವಿದೆ. 32 ನಗರಸಭಾಸದಸ್ಯರುಗಳನ್ನೊಳಗೊಂಡ ಪ್ರಥಮ ದರ್ಜೆಯ ನಗರಸಭೆಯಿದೆ. ಸಿಮೆಂಟ್ ಹಾಗೂ ಟಾರು ರಸ್ತೆಗಳು ವಿಪುಲವಾಗಿವೆ. ಬಸ್ಸು ಹಾಗೂ ರೈಲು ಸೌಕರ್ಯಗಳಿವೆ.

ಇದು ರೇಷ್ಮೆ ನೇಯ್ಗೆಯಲ್ಲಿ ಜಗದ್ವಿಖ್ಯಾತವೆನಿಸಿದೆ. ಇಲ್ಲಿ ತಯಾರಾದ ರೇಷ್ಮೆ ಸೀರೆಗಳಿಗೆ ವಿದೇಶಗಳಿಂದ ಹೆಚ್ಚಿನ ಬೇಡಿಕೆಯಿದೆ. ಇಲ್ಲಿ 8,000ಕ್ಕೂ ಮೇಲ್ಪಟ್ಟು ರೇಷ್ಮೆ ಕೈಮಗ್ಗಗಳಿವೆ. ಅಲ್ಲದೆ ಸಹಕಾರಿ ಬೆಂಕಿಕಡ್ಡಿ ಕಾರ್ಖಾನೆಯಿದೆ. ಇಲ್ಲಿನ ವ್ಯವಸಾಯೋತ್ಪನ್ನಗಳಿಗೆ ಅತಿ ಹೆಚ್ಚಿನ ಮಾರುಕಟ್ಟೆಯಿದೆ. ಬೊಂಬಿನಿಂದ ತಯಾರಾಗುವ ಹಲವು ವಸ್ತುಗಳು, ಬುಟ್ಟಿ ಹೆಣಿಗೆ, ಮಣ್ಣಿನ ಪಾತ್ರೆಗಳು ಮುಂತಾದ ಕುಶಲ ಕೈಗಾರಿಕೆಗಳಿಗೆ ಪ್ರಸಿದ್ಧಿ ಪಡೆದಿದೆ. (ಎಸ್.ಎ.; ಎಂ.ಎ.ಕೆ.)

ಈ ಪುರಾತನ ಪಟ್ಟಣದ ಇತಿಹಾಸ ಗಮನಾರ್ಹ. ದಕ್ಷಿಣ ದೇಶದ ಮತಚರಿತ್ರೆಯಲ್ಲಿ ಇದರ ಪಾತ್ರ ಮಹತ್ತರವಾದುದು. ಇದು ಎರಡು ಸಾವಿರ ವರ್ಷಗಳ ಹಿಂದೆ ದಕ್ಷಿಣದಲ್ಲಿ ಬೌದ್ಧಮತದ ಮುಖ್ಯ ಕೇಂದ್ರವಾಗಿತ್ತು. ಶಂಕರಾಚಾರ್ಯರು ಇದನ್ನು ಶೈವ ಮತ್ತ ವೈಷ್ಣವ ಕೇಂದ್ರವಾಗಿ ಪರಿವರ್ತಿಸಿದರು. ಕಂಚಿಯ ಒಂದು ಭಾಗದಲ್ಲಿ ಬೌದ್ಧಸ್ತೂಪಗಳಿದ್ದುವೆಂದು ಹ್ಯೂಯೆನ್‌ತ್ಸಾಂಗ್ ಹೇಳಿದ್ದಾನಾದರೂ ಅವಕ್ಕೆ ಸರಿಯಾದ ರುಜುವಾತುಗಳು ಇನ್ನೂ ಸಿಕ್ಕಿಲ್ಲ. ಊರಿನ ಇನ್ನೊಂದು ಭಾಗ ಶೈವದೇವಾಲಯಗಳುಳ್ಳದ್ದು, ಮತ್ತೊಂದು ವೈಷ್ಣವ ದೇವಾಲಯಗಳುಳ್ಳದ್ದು. ಕಾಮಾಕ್ಷಿ ದೇವಾಲಯ ಶಂಕರಾಚಾರ್ಯರಿಂದ ಸ್ಥಾಪಿತವಾದುದೆಂದು ಪ್ರಸಿದ್ಧವಾಗಿದೆ. ವೈಷ್ಣವ ದೇವಾಲಯಗಳಲ್ಲಿ ವರದರಾಜಸ್ವಾಮಿಯ ದೇವಸ್ಥಾನ ಪ್ರಸಿದ್ಧವಾದುದ್ದು. ರಾಮಾನುಜಾಚಾರ್ಯರು ಶ್ರೀರಂಗಕ್ಕೆ ಹೋಗುವುದಕ್ಕೆ













1 ಉಲಗಳಂದ ಪೆರುಮಾಳ್ ದೇವಸ್ಥಾನ

2 ಸಿಂಹಾಕೃತಿಯ ಕಂಬಗಳುಳ್ಳ ಮೊಗಸಾಲೆ (ವೈಕುಂಠ ಪೆರುಮಾಳ್ ದೇವಸ್ಥಾನ)

3 ಕಚ್ಛಪೇಶ್ವರಸ್ವಾಮಿದೇವಸ್ಥಾನ

4 ನೂರುಕಂಬಗಳಮಂಟಪದಲ್ಲಿನ ಶಿಲ್ಪಕೃತಿಗಳು (ವರದರಾಜಸ್ವಾಮಿ ದೇವಸ್ಥಾನ)

5 ಶ್ರೀ ಕುಮಾರ ಕೋಟ್ಟಂ ಸುಬ್ರಹ್ಮಣ್ಯಸ್ವಾಮಿ ದೇವಸ್ಥಾನ

6 ಕೈಲಾಸನಾಥ ದೇವಸ್ಥಾನದ ಒಂದು ಭಾಗ

ಮುಂಚೆ ಕಂಚೀಪೂರ್ಣರ ಶಿಷ್ಯರಾಗಿ ವರದರಾಜಸ್ವಾಮಿಗೆ ಸೇವೆ ಸಲ್ಲಿಸುತ್ತಿದ್ದರು. ಶಂಕರಾಚಾರ್ಯರು ಜೈನವಿದ್ವಾಂಸರೊಡನೆ ಚರ್ಚೆ ನಡೆಸಿದರೆಂದು ಐತಿಹ್ಯವಿರುವುದರಿಂದ ಆ ಕಾಲದಲ್ಲಿ ಕಂಚಿಯಲ್ಲಿ ಜೈನಮತದವರೂ ಗಣ್ಯರಾಗಿದ್ದಿರಬೇಕು. ಈಗಲೂ ಕಂಚಿಯಲ್ಲಿ ಒಂದು ಪುರಾತನ ಜೈನ ದೇವಾಲಯವಿದೆ. ಗುರುನಾನಕ್ ಕಂಚಿಯಲ್ಲಿ ತನ್ನ ಮತಪ್ರಚಾರ ಮಾಡಿದನೆಂದು ಐತಿಹ್ಯವಿದೆ. ಇದಕ್ಕೆ ಸಾಕ್ಷಿಯಾಗಿ ಇಲ್ಲಿ ಒಂದು ಸಿಕ್ಖರ ಮಠವಿದೆ. ಕಾಲಕ್ರಮದಲ್ಲಿ ಕಂಚಿ ಮುಸಲ್ಮಾನರ ದಾಳಿಗೆ ಸಿಕ್ಕಿ ಅಪಾರ ನಷ್ಟಕ್ಕೊಳಗಾಯಿತು. ಇಲ್ಲಿಯ ಕೆಲವು ದೇವಸ್ಥಾನಗಳು ನೆಲಸಮವಾದುವು. ದೊಡ್ಡ ಮಂಟಪಗಳು ಮಸೀದಿಗಳಾಗಿ ಮಾರ್ಪಟ್ಟುವು. ಮದ್ರಾಸ್ ಪ್ರಾಂತ್ಯ ಬ್ರಿಟಿಷರ ಆಳಿಕೆಗೆ ಒಳಪಟ್ಟ ಮೇಲೆ ಕ್ರೈಸ್ತರ ಚರ್ಚುಗಳು ನಿರ್ಮಾಣವಾದುವು.

(ಜಿ.ಎಚ್.)

ಕ್ರಿ.ಪೂ. 150ರಲ್ಲೇ ಪತಂಜಲಿ ಕಂಚಿಯ ವಿಚಾರವನ್ನು ಪ್ರಸ್ತಾಪಿಸಿದ್ದಾನೆ. ದಕ್ಷಿಣ ಭಾರತದಲ್ಲಿ ಐದನೆಯ ಶತಮಾನದಲ್ಲಿದ್ದ ತೊಂಡಮಂಡಲಂ ಪ್ರದೇಶಕ್ಕೆ ಕಂಚಿ ರಾಜಧಾನಿಯಾಗಿತ್ತು. ಶಾಸನಾಧಾರದಂತೆ ಈ ಪ್ರದೇಶವನ್ನು ಪಲ್ಲವರು ಆಳುತ್ತಿದ್ದರೆಂದು ಗೊತ್ತಾಗುವುದು. ಇವರಿಗೆ ತೊಂಡಮಾನ್ ರಾಜರೆಂದು ಹೆಸರಿತ್ತೆಂದು ತಮಿಳು ಸಾಹಿತ್ಯದಿಂದ ತಿಳಿದುಬರುತ್ತದೆ. ವಿಷ್ಣುಗೋಪ ಎಂಬಾತ ಪಲ್ಲವ ರಾಜನಾಗಿದ್ದನೆಂದೂ ಉತ್ತರದಿಂದ ದಂಡೆತ್ತಿ ಬಂದ ಸಮುದ್ರಗುಪ್ತ ಇವನನ್ನು ಸೋಲಿಸಿದನೆಂದೂ ಇತಿಹಾಸ ಹೇಳುತ್ತದೆ. ಉತ್ತರದಲ್ಲಿ ಕೃಷ್ಣಾನದಿಯ ವರೆಗೂ ದಕ್ಷಿಣದಲ್ಲಿ ಪಾಂಡ್ಯರ ಮಧುರೆ ಹೊರವಲಯದ ವರೆಗೂ ಪಲ್ಲವರ ಆಳ್ವಿಕೆ ಹರಡಿತ್ತು. ಈ ಸಮುದ್ರದಲ್ಲಿ ಕಂಚಿ ದಕ್ಷಿಣದ ಮಹತ್ತ್ವದ ಪಟ್ಟಣವೆನಿಸಿತ್ತು; ಉತ್ತಮ ಶಿಕ್ಷಣ ಹಾಗೂ ವಿಶ್ವವಿದ್ಯಾನಿಲಯ ಕೇಂದ್ರವಾಗಿತ್ತು. ಪಲ್ಲವರು ಸಂಸ್ಕೃತದ ಅಭಿಮಾನಿಗಳೂ ಪ್ರತಿಪಾದಕರೂ ಆಗಿದ್ದು ಅವರ ಶಾಸನಗಳೆಲ್ಲ ಆ



ಏಕಾಂಬರನಾಥ ದೇವಸ್ಥಾನದ ಗೋಪುರ

ಭಾಷೆಯಲ್ಲೇ ಇವೆ. ಅಂದು ಕಂಚಿಯಿಂದ ಸಂಸ್ಕೃತಪ್ರಸಾರ ಅವ್ಯಾಹತವಾಗಿ ನಡೆದಿತ್ತು. ದಕ್ಷಿಣದಲ್ಲಿ ಮಾತ್ರವಲ್ಲದೆ, ದೂರಪ್ರಾಚ್ಯದಲ್ಲಿದ್ದ ಭಾರತೀಯ ಸ್ವಾಸ್ಥ್ಯಗಳಿಗೂ ಅದು ಹರಡಿ ಜನಪ್ರಿಯತೆ ಗಳಿಸಿತ್ತು. ಪಲ್ಲವರು ತಮ್ಮದೇ ಆದ ವೈಶಿಷ್ಟ್ಯಮಯ ಶಿಲ್ಪಕಲಾವೈಭವವನ್ನು ನಿರ್ಮಾಣ ಮಾಡಿದರು. ಮುಂದೆ ಆಕ್ರಮಣ ನಡೆಸಿದ ರಾಜವಂಶೀಕರು ಇಲ್ಲಿನ ಕಲಾವೈಭವಕ್ಕೆ ಮುಗ್ಧರಾಗಿ ತಮ್ಮ



ಕೈಲಾಸನಾಥ ದೇವಸ್ಥಾನ

ರಾಜ್ಯಗಳಲ್ಲಿ ಇದನ್ನು ಬೆಳೆಸಿ ಪೋಷಿಸಿದ ನಿದರ್ಶನಗಳು ಕಂಡುಬರುತ್ತವೆ. ಹೂಯೆನ್‌ತ್ಸಾಂಗ್ ಇಲ್ಲಿನ ವಿಶ್ವವಿದ್ಯಾನಿಲಯದ ಶ್ರೇಷ್ಠತೆಯನ್ನು ಕೊಂಡಾಡಿದ್ದಾನೆ. ತರ್ಕಶಾಸ್ತ್ರನಿಪುಣನೂ ನ್ಯಾಯಭಾಷ್ಯದ ಕರ್ತೃವೂ ಆದ ವಾತ್ಸಾಯನ ಕಂಚಿಯಲ್ಲಿ ಅಂದು ಪಂಡಿತನಾಗಿದ್ದನೆಂದೂ ಆತ ಹೇಳಿದ್ದಾನೆ. ಇಂಥ ಶಿಕ್ಷಣಕೇಂದ್ರವಾದ ಈ ಪಟ್ಟಣದಲ್ಲಿ ಅನೇಕ ಮಹಿಮಾನ್ವಿತರು ಶಿಕ್ಷಣ ಪಡೆದರು. ವಿಶಿಷ್ಟಾದ್ವೈತ ಮತಸ್ಥಾಪನಾಚಾರ್ಯರಾದ ರಾಮಾನುಜಾಚಾರ್ಯರು ಮೊಟ್ಟಮೊದಲು ಇಲ್ಲಿ ಶಿಕ್ಷಣ ಹೊಂದಿದರು. ಐದನೆಯ ಶತಮಾನದಲ್ಲಿ ಕದಂಬಕುಲದ ಮಯೂರಶರ್ಮ ಉನ್ನತಶಿಕ್ಷಣಕ್ಕಾಗಿ ಕಂಚಿಗೆ ಬಂದಿದ್ದನೆಂದು ಶಾಸನಗಳು ತಿಳಿಸುತ್ತವೆ. ಈ ಸಂದರ್ಭದಲ್ಲಿ ನಡೆದ ಒಂದು ಘಟನೆ ಅತ್ಯಂತ ಗಮನಾರ್ಹ. ಶಿವಮೊಗ್ಗ ಜಿಲ್ಲೆಯ ತಾಳಗುಂದದ ಬ್ರಾಹ್ಮಣ ವರ್ಗದ ಈ ಮಯೂರಶರ್ಮ ತನ್ನ ಗುರು ವೀರಶರ್ಮನೊಂದಿಗೆ ಕಂಚಿಯ ಘಟಿಕಾಶ್ರಮದಲ್ಲಿ ವೇದಾಧ್ಯಯನ ಮಾಡಲು ತೆರಳಿದಾಗ ಅಲ್ಲಿನ ಪಲ್ಲವರಾಜನ ಅಶ್ವಾರೋಹಿ ಕಾವಲುಗಾರರಿಂದ ಅವಮಾನಿತನಾಗಿ ನೊಂದನೆಂದೂ ಆಗ್ಗೆ ಅವನಲ್ಲಿ ಸೇಡಿನ ಕಿಡಿ ಹೊತ್ತಿ, ಕಡೆಗೆ ಯುದ್ಧಕಲೆಯನ್ನು ಹಸ್ತಗತ ಮಾಡಿಕೊಳ್ಳಲು ನಿರ್ಧರಿಸಿದನೆಂದೂ ಹೇಳಲಾಗಿದೆ. ಕಡೆಗೆ ತನ್ನ ನಿರ್ಧಾರದಂತೆ ಅವನು ಖಡ್ಗವನ್ನು ಹಿಡಿದು ದಿಗ್ವಿಜಯಕ್ಕೆ ಹೊರಟು ಪಲ್ಲವರಾಜ್ಯದ ಗಡಿಯನ್ನು ರಕ್ಷಿಸುತ್ತಿದ್ದ ಕಾವಲು ಅಧಿಕಾರಿಗಳನ್ನು ಸೋಲಿಸಿ ಅನೇಕ ಪ್ರದೇಶಗಳನ್ನು ಆಕ್ರಮಿಸಿಕೊಂಡನೆಂತಲೂ ಆಗ್ಗೆ ಪಲ್ಲವರು ಮಣಿಯ ಬೇಕಾಯಿತೆಂದೂ ಇತಿಹಾಸ ಹೇಳುತ್ತದೆ. ಕಂಚಿಯ ಚರಿತ್ರೆಯಲ್ಲಿ ಈ ಘಟನೆ ಅತಿ ಮುಖ್ಯವಾಗಿ ಪರಿಣಮಿಸಿತು.

ಇಷ್ಟೇ ಅಲ್ಲ, ಇನ್ನೊಂದು ಬಗೆಯಲ್ಲಿಯೂ ಕಂಚಿ ಗಮನಾರ್ಹವಾದುದು. ಚಾಳುಕ್ಯ ಅರಸನಾದ ಎರಡನೆಯ ಪುಲಿಕೇಶಿಯನ್ನು ಪಲ್ಲವ ನರಸಿಂಹ ಸೋಲಿಸಿದ್ದರಿಂದ ಚಾಳುಕ್ಯರ ಆಳ್ವಿಕೆಗೆ ಭಾರಿ ಪೆಟ್ಟು ಬಿದ್ದಂತಾಯಿತು. ಆದರೆ ಚಾಳುಕ್ಯರ ಎರಡನೆಯ ವಿಕ್ರಮಾದಿತ್ಯ ಸೇಡು ತೀರಿಸಿಕೊಳ್ಳಲು ಸಮಯ ಕಾಯುತ್ತಿದ್ದು, ಕಡೆಗೊಮ್ಮೆ ದಂಡೆತ್ತಿಬಂದು ಕಂಚಿಯನ್ನು ವಶಪಡಿಸಿಕೊಂಡ; ಪಲ್ಲವ ಸಿಂಹಾಸನಕ್ಕೆ ಹಾತೊರೆಯುತ್ತಿದ್ದ ವಿರೋಧವಾದಿಗಳಿಗೆ ಸಿಂಹಾಸನ ದಕ್ಕುವಂತೆ ಮಾಡಿದ. ಈ ಸಂದರ್ಭದಲ್ಲಿ ವಿಕ್ರಮಾದಿತ್ಯ ಕಂಚಿಯಿಂದ ಹಿಂತಿರುಗುವಾಗ ಅಲ್ಲಿನ ಪ್ರಖ್ಯಾತ ಶಿಲ್ಪಿ ಸರ್ವಸಿದ್ಧಿ ಆಚಾರ್ಯನನ್ನು ಕರೆದೊಯ್ದು ಅವನಿಂದ ದೇವಾಲಯಗಳನ್ನು ತನ್ನ ರಾಜ್ಯದಲ್ಲಿ ನಿರ್ಮಿಸಿದನೆಂದು ಇತಿಹಾಸದಿಂದ ತಿಳಿದುಬರುತ್ತದೆ.

ಪಲ್ಲವರ ತರುವಾಯ ಚೋಳರು ಮುನ್ನೂರು ವರ್ಷಗಳ ತನಕ ಅಲ್ಲಿ ರಾಜ್ಯಭಾರ ನಡೆಸಿದರು. ಅಷ್ಟರಲ್ಲೇ ಮುಸಲ್ಮಾನರ ದಾಳಿ ಮೊದಲಾಯಿತು. ಕ್ವಿಲಾನಿನ ವೀರ ರವಿವರ್ಮನ್ ಕುಲಶೇಖರ ಅವರ ದಾಳಿಯನ್ನು ಅಡಗಿಸಿ ಕಂಚಿಯಲ್ಲಿ ತಾನೇ ಅರಸನಾಗಿ ಪಟ್ಟಾಭಿಷಿಕ್ತನಾದ. ಇದಕ್ಕೂ ಪೂರ್ವದಲ್ಲಿ ರಾಷ್ಟ್ರಕೂಟದ ಮೂರನೆಯ ಕೃಷ್ಣ ಕಂಚಿಯನ್ನು ವಶಪಡಿಸಿಕೊಂಡಿದ್ದನೆಂದು ಇತಿಹಾಸ ಹೇಳುತ್ತದೆ. ಹೀಗೆ ಕಂಚಿ ಇತಿಹಾಸಪ್ರಸಿದ್ಧವಾಗಿ ಕೆಲವು ರಾಜವಂಶೀಕರ ಹಸ್ತಕ್ಷೇಪಕ್ಕೆ ಒಳಗಾಯಿತು.

(ಎಂ.ಎ.ಕೆ.)

ಹದಿನಾಲ್ಕನೆಯ ಶತಮಾನದಲ್ಲಿ ಕಂಚಿ ವಿಜಯನಗರ ರಾಜ್ಯದ ರಾಜಧಾನಿಯಾಗ ದಿದ್ದರೂ ತೊಂಡಮಂಡಲದ ಮುಖ್ಯಪಟ್ಟಣವಾಗಿ ಶೋಭಿಸಿತು. ವಿಜಯನಗರದ ರಾಜರು ಇಲ್ಲಿಗೆ ಪದೇ ಪದೇ ಬಂದು ಇಲ್ಲಿನ ದೇವರುಗಳಿಗೆ ಸೇವೆ ಸಲ್ಲಿಸುತ್ತಿದ್ದರು. ಕೆಲವು ರಾಜರ ಪಟ್ಟಾಭಿಷೇಕ ಕಂಚಿಯಲ್ಲಿ ನಡೆಯಿತು. ಈ ರಾಜರ ಕಾಲದಲ್ಲಿ ಕಂಚಿಯ ದೇವಸ್ಥಾನಗಳು ತುಂಬ ವಿಸ್ತರಿಸಿದುವು.

ಈಗಲೂ ಕಂಚಿ ಪ್ರಸಿದ್ಧ ಯಾತ್ರಾಸ್ಥಳವೆನಿಸಿದೆ. ಇಲ್ಲಿನ ಏಕಾಂಬರ ದೇವ ಸ್ಥಾನ ಇಡೀ ಭಾರತದಲ್ಲೇ ಅತ್ಯಂತ ದೊಡ್ಡ ದೇವಸ್ಥಾನ. ಅದರ ಗೋಪುರದ ಎತ್ತರ 188 ಅಡಿ. ಅದರ ಪೌಳಿಯ ಗೋಡೆ ಇಪ್ಪತ್ತೈದು ಎಕರೆ ಪ್ರದೇಶವನ್ನು ಒಳಗೊಂಡಿದೆ. ಕೇಂದ್ರ ದೇವಸ್ಥಾನದ ಸುತ್ತ ಅರುವತ್ತುಮೂರು ಪುರಾತನರ ವಿಗ್ರಹಗಳಿವೆ. ಇತ್ತೀಚೆಗೆ ನಾಟುಕೋಟೆ ಶೆಟ್ಟರು ಶಿಥಿಲವಾಗಿದ್ದ ಭಾಗಗಳನ್ನು ಹತ್ತಿಪ್ಪತ್ತು ಲಕ್ಷ ರೂಪಾಯಿ ವೆಚ್ಚದಲ್ಲಿ ಸರಿಪಡಿಸಿರುತ್ತಾರೆ.

ಏಕಾಂಬರನಾಥ ದೇವಸ್ಥಾನವನ್ನು ಬಿಟ್ಟರೆ ಉಳಿದ ಶೈವ ದೇವಸ್ಥಾನಗಳಲ್ಲಿ ಕಾಮಾಕ್ಷಿ ದೇವಸ್ಥಾನ ಪ್ರಸಿದ್ಧವಾದುದು. ಮೊದಲಿಗೆ ಈ ದೇವಸ್ಥಾನದಲ್ಲಿ ಪಶು ಬಲಿ ಯಥೇಷ್ಟವಾಗಿ ನಡೆಯುತ್ತಿತ್ತು. ಶಂಕರಾಚಾರ್ಯರು ಈ ದುಷ್ಟ ಸಂಪ್ರ ದಾಯವನ್ನು ತಪ್ಪಿಸಿ ಸಾತ್ತ್ವಿಕ ಪೂಜೆ ನಡೆಯುವಂತೆ ಕಟ್ಟುಮಾಡಿದರು. ಇಲ್ಲಿದ್ದ ಪೂಜಾರಿಗಳನ್ನು ಓಡಿಸಿ ತಮ್ಮ ಸ್ಥಳದಿಂದ ನಂಬೂದರಿ ಬ್ರಾಹ್ಮಣರನ್ನು ಕರೆಸಿ ಅವ ರನ್ನು ಅರ್ಚಕರನ್ನಾಗಿ ನೇಮಿಸಿದರು. ಈಗಲೂ ಇಲ್ಲಿನ ಅರ್ಚಕರು ಆ ಸಂತತಿ ಯವರೇ ಆಗಿದ್ದಾರೆ.


ವರದರಾಜಸ್ವಾಮಿ ದೇವಸ್ಥಾನ

ವಿಷ್ಣುಕಂಚಿಯಲ್ಲಿ ತುಂಬ ಪ್ರಸಿದ್ಧವಾದದ್ದು ವರದರಾಜಸ್ವಾಮಿ ದೇವಸ್ಥಾನ. ಅದರಲ್ಲಿ ಚೋಳರ ಮತ್ತು ವಿಜಯನಗರ ರಾಜರ ಶಾಸನಗಳಿವೆ. ದೇವಸ್ಥಾನದ ಉದ್ದ 1,200 ಅಡಿ, ಅಗಲ 800 ಅಡಿ. ವಿಸ್ತಾರದಲ್ಲಿ ಇದು ಇತರ ದೇವಸ್ಥಾನ ಗಳಿಗಿಂತ ದೊಡ್ಡದಾದರೂ ಏಕಾಂಬರನಾಥ ದೇವಸ್ಥಾನದಷ್ಟು ದೊಡ್ಡದಲ್ಲ. ಏಕಾಂಬರನಾಥ ದೇವಸ್ಥಾನದಲ್ಲಿ ಶೈವಪುರಾತನರಿಗೆ ಪೂಜೆ ಸಲ್ಲುವಂತೆ ಈ ದೇವಸ್ಥಾನ ದಲ್ಲಿ ವಿಷ್ಣುಭಕ್ತರಾದ ಆಳ್ವಾರುಗಳಿಗೆ ಮತ್ತು ರಾಮಾನುಜಾಚಾರ್ಯರಿಗೆ ಪೂಜೆ ಸಲ್ಲುತ್ತದೆ. ಕಂಚಿಯಲ್ಲಿ ನಡೆಯುವ ಉತ್ಸವಗಳಲ್ಲೆಲ್ಲ ವರದರಾಜಸ್ವಾಮಿಯ ಉತ್ಸವಗಳು ತುಂಬ ಜನಮೆಚ್ಚಿನವು. ನಿತ್ಯೋತ್ಸವ, ಮಾಸೋತ್ಸವಗಳು ವಿಜೃಂಭ ಣೆಯಿಂದ ಜರುಗುತ್ತವೆ. ಇಲ್ಲಿನ ಸಂವತ್ಸರೋತ್ಸವ ಹತ್ತುಹನ್ನೆರಡು ದಿನಗಳ ಕಾಲ ನಡೆಯುತ್ತದೆ. ಇಲ್ಲಿ ನಡೆಯುವ ದೇವರ ಮೆರವಣಿಗೆಯ ಬಳಸು ಆರು ಮೈಲಿ; ಉತ್ಸವ ವಿಷ್ಣುಕಂಚಿಯಿಂದ ಶಿವಕಂಚಿಗೆ ಹೋಗಿ ಮತ್ತೆ ವಿಷ್ಣುಕಂಚಿಗೆ ಹಿಂತಿರುಗುತ್ತದೆ. ಇಲ್ಲಿಯ ಸ್ಥಳಪುರಾಣದ ಪ್ರಕಾರ ಶಿವನೂ ವಿಷ್ಣುವೂ ಭಾವ ಮೈದುನರು. ವಾರ್ಷಿಕೋತ್ಸವದ ಏಳನೆಯ ದಿವಸ ಹೊರಟ ಮೆರವಣಿಗೆ ಕೆಲವು ಕಾಲ ಏಕಾಂಬರ ದೇವಾಲಯದ ಮುಂದೆ ತಂಗುತ್ತದೆ. (ಜಿ.ಎಚ್.)

**ಉತ್ಖನನಗಳು :** ಇಲ್ಲಿ ಹಲವಾರು ಬಾರಿ ನಡೆದ ಪ್ರಾಕ್ತನ ಶಾಸ್ತ್ರೀಯ ಉತ್ಖನನಗಳು ಕಂಚಿಯ ಇತಿಹಾಸದ ಆರಂಭಕಾಲದ ಮಾಹಿತಿಗಳನ್ನು ಒದಗಿಸಿಕೊಡು ತ್ತವೆ. ಪಾಲೆಯುರ ದಿಬ್ಬ ಅಥವಾ ಪಲ್ಲವ ಮೇಡು ಎಂಬ ಎತ್ತರವಾದ ಸ್ಥಳದಲ್ಲಿ 1952–53ರಲ್ಲಿ ನಡೆಸಿದ ಉತ್ಖನನದಿಂದ ಪಲ್ಲವರ ಕಾಲಕ್ಕೆ ನಿರ್ದೇಶಿಸಬಹುದಾದ ಯಾವ ಮಾಹಿತಿಗಳೂ ದೊರೆಕಿರಲಿಲ್ಲ. ಅನೇಕ ಶಂಖಗಳೂ ಶಂಖಗಳಿಂದ ಮಾಡಿದ ಬಳೆಯ ಚೂರುಗಳೂ ದೊರಕಿದುವು. ಅನಂತರ 1965–66ರಲ್ಲಿ ಅದೇ ಇಲಾಖೆ ಯವರು ಉತ್ಖನನ ನಡೆಸಿದರು. ಇತ್ತೀಚೆಗೆ 1968–69 ಮತ್ತು 1969–70ರಲ್ಲಿ ಮದ್ರಾಸು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗ ದವರು ಉತ್ಖನನಗಳನ್ನುನಡೆಸಿದರು. ಈ ಸಂಶೋಧನೆಗಳಿಂದ ಕಂಚಿ ಕ್ರಿಸ್ತಶಕೆಯ ಆರಂಭ ಕಾಲದಿಂದಲೂ ನಾಗರಿಕತೆಯ ಕೇಂದ್ರವಾಗಿತ್ತೆಂದು ತಿಳಿದು ಬರುತ್ತದೆ. ಕ್ರಿ.ಶ. ಮೊದಲೆರಡು ಶತಮಾನಗಳಲ್ಲಿ ರೋಮನರು ದಕ್ಷಿಣ ಭಾರತದೊಡನೆ ವಾಣಿಜ್ಯ ಸಂಬಂಧ ಪಡೆದಿದ್ದ ಸಂಗತಿ ಪೂರ್ವತೀರದಲ್ಲಿ ಪಾಂಡಿಚೇರಿಯ ಬಳಿಯಿರುವ ಅರಿಕಮೇಡು ಮತ್ತು ಕಾವೇರಿಯ ಮುಖಜಭೂಮಿಯಲ್ಲಿರುವ ಕಾವೇರಿ ಪೂಂಪಟ್ಟಿನಮ್ ಉತ್ಖನನಗಳಿಂದ ತಿಳಿದು ಬಂದಿದೆ. (ನೋಡಿ—ಅರಿಕಮೇಡು ; ಕಾವೇರಿಪೂಂಪಟ್ಟಿನಮ್) ಒಳಪ್ರದೇಶದಲ್ಲಿ ಅವರ ವ್ಯಾಪಾರ ಕೇಂದ್ರಗಳಿದ್ದುದಕ್ಕೆ ದಕ್ಷಿಣ ಭಾರತದ ಹಲವಾರು ಭಾಗಗಳಲ್ಲಿ ದೊರೆತಿರುವ ಅವರ ನಾಣ್ಯಗಳು ಮತ್ತಿತರ ಅವಶೇಷಗಳು ಸಾಕ್ಷಿಗಳಾಗಿವೆ. ಚಿತ್ರದುರ್ಗದ ಪರಿಸರದಲ್ಲಿರುವ ಚಂದ್ರ ವಳ್ಳಿ, ಕಾವೇರಿ ದಂಡೆಯಲ್ಲಿ ತಿರುಚಿರಾಪಳ್ಳಿಯ ಭಾಗವಾದ ಪ್ರಾಚೀನ ಚೋಳ ರಾಜಧಾನಿ ಉರ್ಯೆಯೂರುಗಳಲ್ಲಿ ನಡೆದ ಉತ್ಖನನಗಳೂ ಈ ವಿಷಯಕ್ಕೆ ಸಂಬಂಧಿಸಿದ ಮಾಹಿತಿಗಳನ್ನೊದಗಿಸಿವೆ. ಪ್ರಸ್ತುತ ಕಂಚಿ ಉತ್ಖನನಗಳು ಸಹ ಸಮಕಾಲೀನ ರೋಮನರ ಅವಶೇಷಗಳನ್ನು ಒದಗಿಸಿವೆ. ಕ್ರಿಸ್ತಶಕೆಯ ಆರಂಭಕಾಲಕ್ಕೆ ನಿರ್ದೇ ಶಿಸಬಹುದಾದ ಪದರಗಳಲ್ಲಿ ರೋಮನರು ಎಣ್ಣೆ ಮತ್ತು ಮದ್ಯಗಳ ದಾಸ್ತಾನಿಗೆ ಉಪಯೋಗಿಸುತ್ತಿದ್ದ ಸುಟ್ಟ ಮಣ್ಣಿನ ನೀಳವಾದ ಹೂಜಿಗಳು (ಆಂಫೋರ) 36ಕ್ಕೂ ಹೆಚ್ಚು ಸಂಖ್ಯೆಯಲ್ಲಿ ದೊರಕಿ, ಇಲ್ಲಿದ್ದ ರೋಮನರ ವ್ಯಾಪಾರಕೋಠಿಯಪ್ರಾಮುಖ್ಯ ವನ್ನು ತೋರಿಸುತ್ತವೆ. ಸುಮಾರು ಅದೇ ಕಾಲಕ್ಕೆ ನಿರ್ದೇಶಿಸಬಹುದಾದ ಸುಟ್ಟ ಇಟ್ಟಿಗೆಯ ಕಟ್ಟಡವೊಂದರ ಅವಶೇಷಗಳೂ ಬೆಳಕಿಗೆ ಬಂದಿವೆ. ಸರಾಸರಿ $18 \times 9 \times 3$ ಅಂಗುಲಗಳ ಅಳತೆಯ ಇಟ್ಟಿಗೆಗಳು ದಕ್ಷಿಣ ಭಾರತದಲ್ಲಿಶಾತವಾಹನರ ಕಾಲದಿಂದ ಹಲವಾರು ಶತಮಾನಗಳವರೆಗೂ ಬಳಕೆಯಲ್ಲಿದ್ದುವು. ಈ ಉತ್ಖನನಗಳಲ್ಲಿ ಬೆಳಕಿಗೆ ಬಂದ ಮತ್ತೊಂದು ಮುಖ್ಯ ಸಂಗತಿಯೆಂದರೆ ಮಧ್ಯ ಚಾರಿತ್ರಿಕ ಯುಗಕ್ಕೆ ನಿರ್ದೇಶಿಸಬಹುದಾದ ಸುಟ್ಟಮಣ್ಣಿನ ಬಳೆಯಾಕಾರದ ವಲಯಗಳಿಂದ ಪಕ್ಕಗಳನ್ನು ಭದ್ರಪಡಿಸಿದ ನೀರಿನ ಬಾವಿಗಳು. ಈ ರೀತಿಯ ಬಾವಿಗಳು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದ್ದುವು. ಇವಲ್ಲದೆ ವಿವಿಧ ರೀತಿಯಮಡಕೆ ಚೂರುಗಳು, ಮಣಿಗಳು, ಬಳೆ ಚೂರುಗಳು, ಸುಟ್ಟಮಣ್ಣಿನ ವಸ್ತುಗಳು ಮತ್ತು ಕೆಲವು ಪುರಾತನ ನಾಣ್ಯಗಳು ದೊರಕಿ ಅಂದಂದಿನ ಜನಜೀವನದ ಮೇಲೆ ಬೆಳಕನ್ನು ಬೀರಿವೆ.

**ಪ್ರಾಕ್ತನ ವಿಚಾರ:** ಕ್ರಿ.ಶ. 2ನೆಯ ಶತಮಾನಕ್ಕೂ ಮೊದಲು ಮರ, ಇಟ್ಟಿಗೆ, ಗಾರೆಗಳಿಂದ ಕಟ್ಟಿದುವೆಂದು ಹೇಳಲಾದ ಏಕಾಂಬರೇಶ್ವರ, ತಿರುವೇಕ್ಕಾ, ತಿರು ಮೇಟ್ರಳಿ, ಕಚ್ಛಪೇಶ್ವರ ಮುಂತಾದ ದೇವಾಲಯಗಳ ವಿಷಯ ಪ್ರಸ್ತಾಪವಾಗಿದ್ದರೂ ಅವುಗಳ ಜೀರ್ಣೋದ್ಧಾರಕಾಲದಲ್ಲಿ ಕಲ್ಲನ್ನು ಬಳಸಲಾಗಿದೆ. ಮೊಟ್ಟಮೊದಲಿಗೆ ಈ ಪ್ರಾಂತ್ಯದಲ್ಲಿ ದೇವಾಲಯ ನಿರ್ಮಾಣಕ್ಕೆ ಕಲ್ಲನ್ನು ಉಪಯೋಗಕ್ಕೆತಂದ ಮೊದಲನೆಯ ಮಹೇಂದ್ರ ಪಲ್ಲವನ ಕಾಲದ (ಕ್ರಿ.ಶ. 610–630) ದೇವಾಲಯವಾವುದೂ ಕಂಚಿಯಲ್ಲಿ ಈಗಿಲ್ಲದಿದ್ದರೂ ಅವನ ಕಾಲದ ದೇವಾಲಯವೊಂದರ ಶಾಸನಗಳಿಂದೊಡಗೂಡಿದ ಕೆಲವು ಕಂಬಗಳು ಏಕಾಂಬರೇಶ್ವರ ದೇವಾಲಯದಲ್ಲಿ ಕಂಡುಬಂದಿವೆ.

ಇಲ್ಲಿಯ ದೇವಮಂದಿರಗಳು, ಮೂರ್ತಿಗಳು ದಕ್ಷಿಣ ಭಾರತದ ಕಲಾವೈಭವದ ಔನ್ನತ್ಯವನ್ನು ಸೂಚಿಸುತ್ತವೆ. ಪಲ್ಲವ ರಾಜಸಿಂಹ ಕಟ್ಟಿಸಿದ ರಾಜಸಿಂಹೇಶ್ವರಗೃಹವೇ (ಕ್ರಿ.ಶ. 7ನೆಯ ಶತಮಾನ) ಕೈಲಾಸನಾಥ ದೇವಾಲಯ. ಎರಡನೆಯ ವಿಕ್ರಮಾದಿತ್ಯ ಕಂಚಿಯನ್ನು ಗೆದ್ದು ಅಲ್ಲಿಯ ಸಂಪ ತ್ತನ್ನು ಸ್ವಾಧೀನಪಡಿಸಿಕೊಂಡು ಈ ಭವ್ಯವೂ ಸುಂದರವೂ ಆದ ಶಿವಾಲಯವನ್ನು ನೋಡಿ ಭಕ್ತಿಭರದಿಂದ ಆ ಸಂಪತ್ತನ್ನೆಲ್ಲ ಈ ದೇವಾಲಯಕ್ಕೆ ದಾನಮಾಡಿದನೆಂದು ಅಲ್ಲಿಯೇ ಕೊರೆದಿರುವ ಅವನ ಕನ್ನಡ ಶಾಸನದಿಂದ ಗೊತ್ತಾಗುತ್ತದೆ. ಈ ದೇವಾಲಯ ಶುದ್ಧವಾದ ದ್ರಾವಿಡ (ದಕ್ಷಿಣ) ಶೈಲಿಯಲ್ಲಿ ಕಟ್ಟಿದ್ದಾಗಿದೆ. ಇದಕ್ಕೆ ಪಲ್ಲವ ಶೈಲಿಯೆಂದೂ ಹೆಸರಿದೆ. ಇಲ್ಲಿಯ ಶಿವ, ಸೋಮಸ್ಕಂದ ಮೂರ್ತಿಗಳೂ ಮಹಿಷಾಸುರಮರ್ದಿನಿಯ ಮೂರ್ತಿಯೂ ನಟರಾಜನ ವಿಗ್ರಹಗಳೂ ಪಲ್ಲವಶಿಲ್ಪದ ಖ್ಯಾತ ಮಾದರಿಗಳು. ವೈಕುಂಠ ಪೆರುಮಾಳ್, ಮುಕ್ತೇಶ್ವರ, ಮತಂಗೇಶ್ವರ, ಐರಾವತೇಶ್ವರ ಮೊದಲಾದ ದೇವಸ್ಥಾನಗಳು ಪಲ್ಲವಶೈಲಿಯಲ್ಲಿದ್ದು ಗರ್ಭಗೃಹ, ಅರ್ಧಮಂಟಪ, ವಿಮಾನಗಳಿಂದಲೂ ಕುಸುರಿ ರೇಖಾಚಿತ್ರಗಳುಳ್ಳ ಕಂಬ ಮತ್ತು ವಿವಿಧ ಸುಂದರ ಸ್ತ್ರೀಪುರುಷರ ಶಿಲ್ಪಗಳಿಂದಲೂ ಅಲಂಕೃತವಾಗಿ ಸುಂದರವಾಗಿವೆ.

ಚೋಳರು ತಮ್ಮದೇ ಆದ ವಿಶಿಷ್ಟ ಶೈಲಿಯಲ್ಲಿ ಇಲ್ಲಿ ಅನೇಕ ದೇವಮಂದಿರ ಗಳನ್ನು ಕಟ್ಟಿಸಿದ್ದಾರೆ. ಸೊಕ್ಕೀಶ್ವರ, ಪಾಂಡವ ಪೆರುಮಾಳ್, ಜ್ವರಹರೇಶ್ವರ, ಕಾಮಾಕ್ಷಿ ದೇವಾಲಯಗಳು ತಮ್ಮ ಎತ್ತರವಾದ ಭವ್ಯ ವಿಮಾನಗಳಿಂದ ಕಲಾವಿದರ ಚಿತ್ತವನ್ನು ಆಕರ್ಷಿಸುತ್ತವೆ. ವಿಜಯನಗರದ ಅರಸರು ಹೊಸತಾಗಿ ದೇವಾಲಯ

ಗಳನ್ನು ಕಟ್ಟಿಸದಿದ್ದರೂ ಹಳೆಯ ಮಂದಿರಗಳನ್ನು ಜೀರ್ಣೋದ್ಧಾರಮಾಡಿ, ಅನೇಕ ಮಂಟಪ, ಪ್ರಾಕಾರ, ಗೋಪುರಗಳನ್ನು ಜೋಡಿಸಿ ವಿಸ್ತಾರಗೊಳಿಸಿ ಅಲ್ಲಿನ ವಾಸ್ತು



ವೈಕುಂಠ ಪೆರುಮಾಳ್ ದೇವಸ್ಥಾನ

ಶಿಲ್ಪದ ಭವ್ಯತೆಯನ್ನು ಹೆಚ್ಚಿಸಿದ್ದಾರೆ. ಕೃಷ್ಣದೇವರಾಯ ಏಕಾಂಬರೇಶ್ವರ ದೇವಾಲಯದ ದಕ್ಷಿಣಗೋಪುರವನ್ನು ಕಟ್ಟಿಸಿದ. ಇದು ದಕ್ಷಿಣ ಹಿಂದೂಸ್ಥಾನ ದಲ್ಲಿಯೇ ಎಲ್ಲಕ್ಕೂ ಎತ್ತರವೂ ಅಗಲವೂ ಆದುದಾಗಿದೆ. ಹಂಪೆಯ ವಿಜಯ ವಿಟ್ಠಲನ ಗುಡಿಯ ಕಲಾಕುಶಲತೆಯನ್ನು ಇಲ್ಲಿ ಕಾಣಬಹುದು. ಹರಿಹರ (ಕ್ರಿ.ಶ. 1393) ಕಾಮಾಕ್ಷಿ ಗುಡಿಯ ವಿಮಾನವನ್ನು ಕಟ್ಟಿಸಿದ. ಇಲ್ಲಿಯ ಕಲ್ಲಿನ ಮಂಟಪದಲ್ಲಿ ಕೂಡಿಸಲ್ಪಟ್ಟ ಕೂರ್ಮನ ವಿಗ್ರಹ ಅತ್ಯಂತ ಸುಂದರವಾಗಿದೆ. ನೂರುಕಂಬದ ವರದ ರಾಜಮಂದಿರದ ಭವ್ಯವಾದ ಮಂಟಪ ಕೆತ್ತನೆಯ ಕುಶಲತೆಯ ಪರಕಾಷ್ಠೆಯನ್ನು ತೋರಿಸುತ್ತದೆ. ಏಕಾಂಬರೇಶ್ವರ ಗುಡಿ, ಕಾಮಾಕ್ಷಿ ಗುಡಿ ಮತ್ತು ವರದರಾಜ ಮಂದಿರಗಳು ಶಿಲ್ಪಕಲೆಯ ಆಗರಗಳೆನಿಸಿವೆ.



ತಂತ್ರೋದ್ರೀಶ್ವರ ದೇವಾಲಯದ ಒಂದು ಭಾಗದ ಪಲ್ಲವ ಕಲಾಕೃತಿ

ಕಂಚಿಯಲ್ಲಿ ಶೈವ, ವೈಷ್ಣವ ಮಂದಿರಗಳಲ್ಲದೆ ಜೈನ ತೀರ್ಥಂಕರರ ಮತ್ತು ಬುದ್ಧನ ವಿಗ್ರಹಗಳೂ ವಿಶೇಷವಾಗಿ ಸಿಕ್ಕಿವೆ. ಜೈನರ ಚಂದ್ರಪ್ರಭ ಮತ್ತು ವರ್ಧಮಾನರ ಬಸದಿಗಳು ಪಲ್ಲವಶೈಲಿಯಲ್ಲಿ ಕಟ್ಟಿದವಾಗಿವೆ. ವರ್ಧಮಾನ ಬಸದಿಯ ಗೋಡೆಗಳ ಮೇಲೆ ತೀರ್ಥಂಕರರ ಕಥೆಗಳು ಅಂದವಾಗಿ ಕೆತ್ತಲ್ಪಟ್ಟಿವೆ. ಇಲ್ಲಿಯ ಸಂಗೀತ ಮಂಟಪದ ಒಳಛತ್ತಿನಲ್ಲಿಯೂ ಮುಖಮಂಟಪದಲ್ಲಿಯೂ 11ನೆಯ ಶತಮಾನದ ಬಣ್ಣದ ಚಿತ್ರಗಳು ತೀರ್ಥಂಕರರ ಜೀವನಚರಿತ್ರೆಯನ್ನು ಚಿತ್ರಿಸುತ್ತವೆ.

ಕಾಂಚೀನಗರ ದಕ್ಷಿಣದ ವಾಸ್ತು ಮತ್ತು ಮೂರ್ತಿಶಿಲ್ಪದ ಬೆಳವಣಿಗೆಯ ಕ್ರಮ ವನ್ನು ತೋರಿಸುವ ಭವ್ಯ ಪ್ರದರ್ಶನಾಲಯವೆಂದು ಹೇಳಬಹುದು. ಬಾದಾಮಿ, ಪಟ್ಟದಕಲ್ಲು, ಐಹೊಳೆಗಳು ಚಾಳುಕ್ಯಶಿಲ್ಪದ ಮಾದರಿಗಳಾದರೆ ಕಂಚಿ, ಮಹಾಬಲಿ ಪುರ, ತಿರುಕ್ಕುಳಿಕ್ಕುನ್ರಂ ಮೊದಲಾದ ಕ್ಷೇತ್ರಗಳು ಪಲ್ಲವ ಮತ್ತು ಚೋಳರ ಶಿಲ್ಪಕ್ಕೆ ಮಾದರಿಗಳಾಗಿವೆ. (ಆರ್.ಎಸ್.ಪಿ.)

ಅನಂತರದ 2ನೆಯ ನರಸಿಂಹವರ್ಮ ರಾಜಸಿಂಹನಿಂದ (ಕ್ರಿ.ಶ. 690–728) ನಿರ್ಮಿ ಸಲ್ಪಟ್ಟ ರಾಜಸಿಂಹೇಶ್ವರ ಅಥವಾ ಕೈಲಾಸನಾಥ ದೇವಾಲಯ ಪಲ್ಲವನಿರ್ಮಿತ ವಾಸ್ತುಶಿಲ್ಪಗಳಲ್ಲೇ ಅತ್ಯಂತ ಸುಂದರವಾದುದು. ಸುಂದರವಾದ ಗರ್ಭಗುಡಿಯ ಮೇಲಿರುವ ವಿಮಾನ, ಕಂಬಗಳಿಂದ ಕೂಡಿದ ಮಂಟಪ, ಮುಂಭಾಗ ಮತ್ತು ಸುತ್ತಲೂ ಪ್ರಾಕಾರದಲ್ಲಿರುವ 58 ಪುಟ್ಟ ಗುಡಿಗಳೂ ಅವುಗಳಲ್ಲಿರುವ ಮೆದುವಾದ ಮರಳುಗಲ್ಲಿನಿಂದ ಮಾಡಲ್ಪಟ್ಟಿರುವ ಶಿವ ವಿಗ್ರಹಗಳೂ ಈ ದೇವಾಲಯದ ಹಿರಿಮೆಯ ಪ್ರತೀಕಗಳು. ಮೊದಲಿಗೆ ಈ ವಿಗ್ರಹಗಳನ್ನು ಅಲಂಕರಿಸಲು ಬಳಸಿದ ಆ ಬಣ್ಣಗಳ ಚಿಹ್ನೆಗಳು ಮಾತ್ರ ಈಗ ಉಳಿದುಬಂದಿವೆ. ಈ ಮಂದಿರದ ಕಂಬ ವೊಂದರ ಮೇಲೆ ಚಾಳುಕ್ಯ ಅರಸ 2ನೆಯ ವಿಕ್ರಮಾದಿತ್ಯ ಕಂಚಿಯನ್ನು ಗೆದ್ದಾಗ ಕೆತ್ತಿಸಿದ ಕನ್ನಡ ಶಾಸನ ಕಂಡುಬರುತ್ತದೆ.

ಅನಂತರ ನಿರ್ಮಿತವಾದ ವೈಕುಂಠ ಪೆರುಮಾಳ್ ದೇವಾಲಯ ಅಮೋಘ ವಾಗಿದ್ದು ಚಾರಿತ್ರಿಕ ದೃಷ್ಟಿಯಲ್ಲಿ ಪಲ್ಲವನಿರ್ಮಿತ ಮಂದಿರಗಳಲ್ಲಿ ಅತ್ಯಂತ ಗಣ್ಯ ವಾದುದಾಗಿದೆ. ನಂದಿವರ್ಮ ಪಲ್ಲವ ಮಲ್ಲನಿಂದ ನಿರ್ಮಿತವಾದ ಇದಕ್ಕೆ ಪರಮೇಶ್ವರ ವಿಣ್ಣಗರವೆಂದೂ ಹೆಸರಿದೆ. ಗರ್ಭಗುಡಿ, ಅಂತರಾಳ, ಕಂಬಗಳಿಂದ ಕೂಡಿದ ಮಂಟಪ ಮತ್ತು ಚಾವಣಿಯುಳ್ಳ ಮೊಗಸಾಲೆಗಳಿಂದ ಕೂಡಿರುವ ಈ ದೇವಾಲಯದ ವಿಮಾನ ನಾಲ್ಕಂತಸ್ತುಗಳುಳ್ಳದ್ದಾಗಿದೆ. ಸುತ್ತಲಿನ ಪ್ರಾಕಾರ ಗೋಡೆಗಳ ಒಳಮುಖದ ಮೇಲೆ ಪಲ್ಲವರ ಇತಿಹಾಸವನ್ನು ಚಿತ್ರಿಸುವ ಭಿತ್ತಿಫಲಕ ಗಳನ್ನು ಕೆತ್ತಲಾಗಿದೆ. ಗರ್ಭಗುಡಿಯ ಮೇಲಿನ ವಿಮಾನದ ನಾಲ್ಕಂತಸ್ತುಗಳಲ್ಲಿ ಪ್ರತಿಯೊಂದರಲ್ಲೂ ಒಂದು ಗುಡಿಯಿದ್ದು ಎರಡಂತಸ್ತುಗಳಿಗೊಂದರಂತೆ ಪ್ರದಕ್ಷಿಣೆ ಪಥವೂ ಇದೆ. ಇಲ್ಲಿ ಅನೇಕ ಶಿಲಾಶಾಸನಗಳಿವೆ. ಪಲ್ಲವ ವಾಸ್ತುಶೈಲಿಯ ಔನ್ನತ್ಯವನ್ನು ಈ ದೇವಾಲಯದಲ್ಲಿ ನೋಡಬಹುದು. ಮೇಲಿನೆರಡು ದೇವಾಲಯ ಗಳೂ ರಾಜಸಿಂಹಶೈಲಿಗೆ ಸೇರಿದುವು.

ಅನಂತರ ನಿರ್ಮಿತವಾದ ನಂದಿವರ್ಮ ಪಲ್ಲವ ಮಲ್ಲನ ಶೈಲಿಗೆ ಸೇರಿದ ಮತ್ತು ಆತನ ರಾಣಿಯಿಂದ ನಿರ್ಮಿತವಾದ ಮುಕ್ತೇಶ್ವರ ಶಿವಾಲಯ ಮಹಾದೇವೀಶ್ವರ ವೆಂದು ಶಾಸನಗಳಲ್ಲಿ ಕರೆಯಲ್ಪಟ್ಟಿದೆ. ಎತ್ತರವಾದ ಜಗತಿಯ ಮೇಲಿರುವ ಈ ಮಂದಿರದಲ್ಲಿ ಗರ್ಭಗೃಹವಿದ್ದು ಮುಂಭಾಗದಲ್ಲಿ ಅಂತರಾಳಗಳಿವೆ. ಶಿವಲಿಂಗದ ಹಿಂಬದಿಯ ಗೋಡೆಯ ಮೇಲೆ ಸೋಮಾಸ್ಕಂ ವಿಗ್ರಹ ಕೆತ್ತಲ್ಪಟ್ಟಿದೆ. ಇಲ್ಲಿನ ಕಂಬಗಳ ಬುಡದಲ್ಲಿ ಸಿಂಹಗಳು ರೂಪಿತವಾಗಿವೆ. ಈ ಎರಡೂ ರಾಜಸಿಂಹ ವಾಸ್ತುಶೈಲಿಯ ಲಕ್ಷಣಗಳು. ಅಂತರಾಳದಲ್ಲಿ ರಾವಣಾನುಗ್ರಹ ಮತ್ತು ನೃತ್ಯ ಭಂಗಿಯಲ್ಲಿರುವ ಶಿವಮೂರ್ತಿಗಳ ಕೆತ್ತನೆಗಳಿವೆ. ಪಕ್ಕದಲ್ಲಿರುವ ಮಾತಂಗೇಶ್ವರ ದೇವಾಲಯ ನಂದಿವರ್ಮನ ಕಾಲಕ್ಕೆ ಸೇರಿದುದು. ಪುಟ್ಟದಾದ ವಾಲೀಶ್ವರನ ಮಂದಿರವೂ ಈ ಕಾಲಕ್ಕೆ ಸೇರುತ್ತದೆ. ಇಲ್ಲಿನ ಲಿಂಗದ ಮೇಲೆ 32 ಪಟ್ಟಿಗಳಿವೆ. ಹಿಂಬದಿಯ ಗೋಡೆಯಲ್ಲಿ ಸೋಮಾಸ್ಕಂಧ ಫಲಕದ ಬದಲು ಉಮಾಮಹೇಶ್ವರರ ಕೆತ್ತನೆಯಿದೆ. ಇದಲ್ಲದೆ ಐರಾವತೇಶ್ವರ, ತ್ರಿಪುರಾಂತಕೇಶ್ವರ, ಜಲಂಧರೇಶ್ವರ ಮೊದಲಾದ ಹಲವಾರು ದೇವಾಲಯಗಳು ಪಲ್ಲವರ ಕಾಲಕ್ಕೆ ಸೇರುತ್ತವೆ.

ಅನಂತರ ಬಂದ ಚೋಳರ ಕಾಲದ ಹಲವಾರು ದೇವಾಲಯಗಳು ಇಲ್ಲಿವೆ. ಅವು ಗಳಲ್ಲಿ ಮುಖ್ಯವಾದುವೆಂದರೆ ಚೊಕ್ಕೀಶ್ವರ, ಅನೇಕ ತಂಗಾವಥ, ಜ್ವರಹರೇಶ್ವರ ಪಾಂಡವ ಪೆರುಮಾಳ್ ಮುಂತಾದುವು. ಚೊಕ್ಕೀಶ್ವರ ದೇವಾಲಯ ಮೊದಲ ಪರಾಂತಕನ ಕಾಲಕ್ಕೆ ಸೇರುತ್ತದೆ. ಅನೇಕ ತಂಗಾವಥ ದೇವಾಲಯದ ಕರ್ತೃ ಮೊದಲನೆಯ ಕುಲೋತ್ತುಂಗ ಚೋಳ.

ಈಗ ಜನಪ್ರಿಯವಾಗಿ ಪೂಜೆಗೊಳ್ಳುತ್ತಿರುವ ಮುಖ್ಯ ದೇವಾಲಯಗಳಾದ ಏಕಾಂಬರೇಶ್ವರ, ವರದರಾಜ ಪೆರುಮಾಳ್ ಮತ್ತು ಕಾಮಾಕ್ಷಿ ದೇವಾಲಯಗಳು ವಿಜಯನಗರದ ಕಾಲದಲ್ಲಿ ಬಹುಮಟ್ಟಿಗೆ ಜೀರ್ಣೋದ್ಧಾರಗೊಂಡಿವೆ. ಏಕಾಂಬರೇಶ್ವರ

ದೇವಾಲಯದ ಒಳಭಾಗ, ಗರ್ಭಗೃಹ ಮತ್ತು ಅದರ ಪರಿಸರಗಳು ಮೂರನೆಯ ಕುಲೋತ್ತುಂಗನ ಕಾಲಕ್ಕೆ ಸೇರಬಹುದು. ಈ ವಿಶಾಲ ದೇವಾಲಯ ಕಂಚಿಯಲ್ಲೇ ಅತ್ಯಂತ ಎತ್ತರವಾದ ಗೋಪುರಗಳನ್ನು ಹೊಂದಿದೆ. ಒಂಬತ್ತು ಅಂತಸ್ತುಗಳುಳ್ಳ ದಕ್ಷಿಣ ಭಾರತದ ಎತ್ತರವಾದ ಗೋಪುರಗಳಲ್ಲೊಂದಾದ ದಕ್ಷಿಣದ ಗೋಪುರ ಶ್ರೀಕೃಷ್ಣ ದೇವರಾಯ ನಿರ್ಮಿತ. ಆದಿಶಂಕರಾಚಾರ್ಯರ ಕಾಲಕ್ಕಿಂತಲೂ ಇದು ಹಳೆಯದೆಂದೂ ಇಲ್ಲಿರುವ ಶ್ರೀಚಕ್ರ ಅವರಿಂದ ಸ್ಥಾಪಿಸಲ್ಪಟ್ಟಿತೆಂದೂ ಪ್ರತೀತಿಗಳಿದ್ದರೂ ಈಗಿನ ಕಟ್ಟಡದ ಹಲಭಾಗಗಳು ಕ್ರಿ.ಶ. 12ನೆಯ ಶತಮಾನಕ್ಕೆ ಸೇರುತ್ತವೆ. ಮತ್ತೊಂದು ಮುಖ್ಯ ಮಂದಿರವಾದ ವರದರಾಜ ದೇವಾಲಯ ಹಸ್ತಿಗಿರಿ ಎಂಬ ಗುಡ್ಡದ ಮೇಲೆ ಸ್ಥಾಪಿತವಾಗಿದೆ. ಈ ಮಂದಿರದ ವಿಶಿಷ್ಟ ಲಕ್ಷಣವೆಂದರೆ ಗರ್ಭಗುಡಿ ಎರಡನೆಯ ಅಂತಸ್ತಿನಲ್ಲಿದೆ. ವಿಜಯನಗರ ವಾಸ್ತುಶೈಲಿಯ ಮುಖ್ಯ ಲಕ್ಷಣಗಳನ್ನು ಇಲ್ಲಿ ಕಾಣಬಹುದು. ಕಂಬಗಳ ಮೇಲಿನ ಮೂರ್ತಿಶಿಲ್ಪಗಳು ಜೀವಂತಸುಂದರ ಕಲಾಕೃತಿಗಳಾಗಿವೆ.

ಇದರ ಪಕ್ಕದಲ್ಲಿರುವ ಜೈನಕಂಚಿಯೆಂದು ಹೆಸರಾದ ತಿರುಪ್ಪರುತ್ತಿ ಕುಂಡ್ರುಮ್ ಜೈನಬಸದಿಗಳಿಂದಲೂ ಇತರ ಅವಶೇಷಗಳಿಂದಲೂ ಕೂಡಿದೆ. ಇಲ್ಲಿರುವ ಎರಡು ಬಸದಿಗಳಲ್ಲಿ ಸಣ್ಣದಾದ ಚಂದ್ರಪ್ರಭಾಲಯ ಪಲ್ಲವ ಕಾಲಕ್ಕೂ ದೊಡ್ಡದಾದ ವರ್ಧಮಾನ ಬಸದಿ ಚೋಳರ ಕಾಲಕ್ಕೂ ಸೇರುತ್ತದೆ. (ಎಚ್.ಎಸ್.ಆರ್.)

**ಕಂಚಿನ ಯುಗ :** ಪೂರ್ವಶಿಲಾಯುಗ, ನವಶಿಲಾಯುಗ ಸಂಸ್ಕೃತಿಗಳ ಅನಂತರ ರೂಢಿಗೆ ಬಂದ ಸಂಸ್ಕೃತಿಯನ್ನು ಸೂಚಿಸುವ ಯುಗ. ತವರ ಮತ್ತು ತಾಮ್ರಗಳ ಮಿಶ್ರಲೋಹವಾದ ಕಂಚಿನಿಂದ ಮಾಡಿದ ಆಯುಧೋಪಕರಣಗಳ ಬಳಕೆ ಪ್ರಧಾನವಾಗಿದ್ದುದರಿಂದ ಈ ಯುಗಕ್ಕೆ ಕಂಚಿನ ಯುಗವೆಂದು ಹೆಸರು. ಈ ಕಾಲದಲ್ಲೂ ಕಲ್ಲಿನಾಯುಧಗಳು ಬಳಕೆಯಲ್ಲಿ ಮುಂದುವರಿಯುತ್ತಿದ್ದುವು. ಈ ಸಂಸ್ಕೃತಿಯ ಮೊದಲ ಹಂತದಲ್ಲಿ ಶುದ್ಧವಾದ ತಾಮ್ರದಿಂದ ಮಾಡಿದ ಮತ್ತು ಕಲ್ಲಿನ ಆಯುಧೋಪಕರಣಗಳು ರೂಢಿಯಲ್ಲಿದ್ದುದರಿಂದ, ಆ ಕಾಲವನ್ನು ತಾಮ್ರ ಶಿಲಾಯುಗವೆಂದು ಪುರಾತತ್ವಜ್ಞರು ಕರೆದಿದ್ದಾರೆ. ಮೆಸೊಪೊಟೇಮಿಯದ ಪ್ರಾಗೈತಿಹಾಸಿಕ ಯುಗಕ್ಕೆ ಸೇರಿದ ಹಲಾಫ್ ಸಂಸ್ಕೃತಿಯಲ್ಲೂ (ಕ್ರಿ.ಪೂ. 4000 ವರ್ಷಗಳ ಸುಮಾರು) ಇರಾನಿನಿಂದ ಸೈಲೀಷಿಯದ ವರೆಗಿನ ಸಮಕಾಲೀನ ಸಂಸ್ಕೃತಿಗಳಲ್ಲೂ ಮೊದಲ ಬಾರಿಗೆ ತಾಮ್ರ ಉಪಯೋಗಿಸಲ್ಪಟ್ಟಿತು. ಕ್ರಿ.ಪೂ. 4ನೆಯ ಸಹಸ್ರಮಾನದಲ್ಲಿ ಲೋಹಗಾರಿಕೆ ಬಹಳ ಮುಂದುವರಿದು ಅನೇಕ ರೀತಿಯ ಆಯುಧೋಪಕರಣಗಳು ಬಳಕೆಗೆ ಬಂದು ಮೆಸೊಪೊಟೇಮಿಯದಲ್ಲಿ ನಗರೀಕರಣ ಕಾರ್ಯ ಆರಂಭವಾಯಿತು. ಕ್ರಿ.ಪೂ. 2000 ವರ್ಷಗಳ ಸುಮಾರಿನಲ್ಲಿ ಮಧ್ಯ ಪ್ರಾಚ್ಯದ ಎಲ್ಲೆಡೆಗಳಲ್ಲೂ ಯೂರೋಪಿನ ನವಶಿಲಾಯುಗ ಸಂಸ್ಕೃತಿನೆಲೆಗಳಲ್ಲೂ ತಾಮ್ರದ ಉಪಯೋಗ ರೂಢಿಗೆ ಬಂತು. ಈ ಮೊದಲ ಹಂತದ ಸಂಸ್ಕೃತಿಗಳನ್ನು ತಾಮ್ರಯುಗೀನ ಸಂಸ್ಕೃತಿಯೆಂದು ಕರೆಯಬಹುದಾದರೂ ಬಹುತೇಕ ವಿದ್ವಾಂಸರು ಇದನ್ನು ಕಂಚಿನ ಯುಗದ ಸಂಸ್ಕೃತಿಗಳ ಮೊದಲ ಹಂತವೆಂದು ಪರಿಗಣಿಸುತ್ತಾರೆ. ತಾಮ್ರದೊಂದಿಗೆ ತವರ ಅಥವಾ ಸೀಸವನ್ನು ಮಿಶ್ರಮಾಡಿ ತಯಾರಿಸಿದ ಕಂಚಿನ ಉಪಯೋಗ ಕ್ರಿ.ಪೂ. 2000ಕ್ಕೂ ಮೊದಲು ಎಲ್ಲೂ ಕಂಡುಬಂದಿಲ್ಲ. ಅನಂತರವೂ ಹಲವು ಶತಮಾನಕಾಲ ಇದರ ಬಳಕೆ ಬಹಳ ಕಡಿಮೆಯಾಗಿತ್ತು. ' ಬೇರೆ ಬೇರೆ ಪ್ರದೇಶಗಳಲ್ಲಿ ಬೇರೆ ಬೇರೆ ಕಾಲಗಳಲ್ಲಿ ರೂಢಿಗೆ ಬಂದರೂ ಕ್ರಿ.ಪೂ. ಮೂರನೆಯ ಸಹಸ್ರಮಾನದಲ್ಲಿ ಏಷ್ಯ ಮೈನರ್, ಗ್ರೀಸ್, ಮೆಸೊಪೊಟೇಮಿಯ ಮತ್ತು ಭಾರತಗಳ ಮುಂದುವರಿದ ನಾಗರಿಕತೆಗಳಲ್ಲಿ ಕಂಚಿನ ಉಪಯೋಗ ವಿಶೇಷವಾಗಿ ಕಂಡುಬರುತ್ತದೆ.

ಮೊದಲಿಗೆ ಪ್ರಾಕೃತಿಕವಾಗಿ ತಾಮ್ರದೊಂದಿಗೆ ತವರ ಅಥವಾ ಸೀಸ ಮಿಶ್ರಣವಾಗಿ ಕಂಚಾಗಿದ್ದಿರಬಹುದು. ಕ್ರಿ.ಪೂ. ಮೂರನೆಯ ಸಹಸ್ರಮಾನದಲ್ಲಿ ತವರದ ನಿಕ್ಷೇಪಗಳ ಪತ್ತೆಯಾದ ಅನಂತರ ಉದ್ದೇಶಪೂರ್ವಕವಾಗಿ ತಯಾರಿಸಿದ ಕಂಚಿನ ಬಳಕೆ ರೂಢಿಗೆ ಬಂದಿರಬೇಕು. ಮೊದಲಿಗೆ ಅನಟೋಲಿಯದ (ಈಗಿನ ತುರ್ಕಿ) ಪ್ರದೇಶದಲ್ಲಿ ಇಂಥ ಕಂಚಿನ ಆಯುಧಗಳು ಉಪಯೋಗದಲ್ಲಿದ್ದುವು. ಪ್ರಾಕ್ತನ ಜಗತ್ತಿನಲ್ಲಿ ತವರವನ್ನು ವಿಶೇಷವಾಗಿ ಒದಗಿಸುತ್ತಿದ್ದ ಇಂಗ್ಲೆಂಡಿನ ಕಾರ್ನ್‌ವಾಲ್ ಪ್ರಾಂತ್ಯದ ನಿಕ್ಷೇಪಗಳು ಕ್ರಿ.ಪೂ. ಎರಡನೆಯ ಸಹಸ್ರಮಾನದಲ್ಲಿ ಕಂಡುಹಿಡಿಯಲ್ಪಟ್ಟು ಬಳಕೆಗೆ ಬಂದುವು. ಈ ರೀತಿ ಸುಮಾರು 2,000 ವರ್ಷಗಳ ಕಾಲ ಮೊದಲಿಗೆ ತಾಮ್ರ, ಅನಂತರ ಕಂಚಿನ ಬಳಕೆ ಪ್ರಮುಖವಾಗಿದ್ದು ಕ್ರಿ.ಪೂ. 2ನೆಯ ಸಹಸ್ರಮಾನದಂತ್ಯದಿಂದ ಕಬ್ಬಿಣದ ಆವಿಷ್ಕಾರ ನಡೆದು ಕಬ್ಬಿಣದ ಯುಗ ಹುಟ್ಟಿಕೊಂಡಿತು.

ಈ ಕಾಲದಲ್ಲಿ ವ್ಯಾಪಾರ ಮತ್ತು ವೃತ್ತಿನಿಪುಣತೆಗಳು ಬೆಳೆದುಬಂದುವು. ಲೋಹದ ಕೆಲಸಗಾರರು, ಅದುರಿನ ನಿಕ್ಷೇಪಗಳನ್ನು ಅಗೆದು ತೆಗೆಯುತ್ತಿದ್ದವರು ತಮ್ಮ ಕಾರ್ಯಕ್ಷೇತ್ರಗಳಲ್ಲಿ ನಿಷ್ಣಾತರಾಗಿದ್ದು ವ್ಯವಸಾಯಾದಿ ಆಹಾರಸಂಪಾದನ ಕಾರ್ಯದಲ್ಲಿ ಭಾಗವಹಿಸಬೇಕಾಗಿರಲಿಲ್ಲ. ತಮ್ಮ ಉತ್ಪನ್ನಗಳನ್ನು ರೈತರಿಗೊದಗಿಸಿ, ಅವರಿಂದ ಆಹಾರ ಅಥವಾ ಇತರ ವಸ್ತುಗಳನ್ನು ಅವರು ಪಡೆದುಕೊಳ್ಳುತ್ತಿದ್ದರು. ಈ ರೀತಿ ಅದಲುಬದಲು ವ್ಯಾಪಾರ ಬೆಳೆಯಿತು. ಅದುರಿನಿಂದ ಲೋಹವನ್ನು ಬೇರ್ಪಡಿಸುವುದು ಮತ್ತು ಆವಶ್ಯಕವಾದ ಆಯುಧೋಪಕರಣಗಳನ್ನು ನಿರ್ಮಿಸುವುದು ಕುಶಲಕಲೆಗಳಾಗಿ ಬೆಳೆದುವು. ಆಯಾ ವೃತ್ತಿಗೆ ಸಂಬಂಧಿಸಿದ ಕುಶಲ ಕೆಲಸಗಾರರ ಸಂಘಗಳು ಹುಟ್ಟಿಕೊಂಡವು. ವೃತ್ತಿಸಂಬಂಧವಾದ ರಹಸ್ಯಗಳನ್ನು ಅವುಗಳ ಸದಸ್ಯರು ಜತನದಿಂದ ಕಾಪಾಡಿಕೊಳ್ಳುತ್ತಿದ್ದರು. ನವಶಿಲಾಯುಗದಲ್ಲಿ ಪ್ರತಿಯೊಂದು ಕುಟುಂಬ ಮತ್ತು ಪಂಗಡ ಸ್ವಯಂಪೂರ್ಣವಾಗಿರುತ್ತಿದ್ದರೆ ಈ ಕಾಲದಲ್ಲಿ ಸಮಾಜದ ವ್ಯಕ್ತಿಗಳು ಪರಸ್ಪರಾವಲಂಬನೆಯಿಂದ ಜೀವಿಸುತ್ತಿದ್ದುದು ಮಾತ್ರವಲ್ಲ, ದೂರಪ್ರದೇಶಗಳಲ್ಲಿ ಉತ್ಪಾದಿಸುತ್ತಿದ್ದ ವಸ್ತುಗಳನ್ನು ವ್ಯಾಪಾರ ಮುಖೇನ ಪಡೆಯಬೇಕಾಗಿತ್ತು. ಪ್ರತಿಯೊಂದು ವೃತ್ತಿಯವರೂ ತಮಗೆ ಬೇಕಾದುದಕ್ಕಿಂತ ಹೆಚ್ಚಿನ ಉತ್ಪನ್ನಗಳನ್ನು ಇತರರಿಗೆ ನೀಡಿ ಅವರಿಂದ ಅವರ ಉತ್ಪನ್ನಗಳನ್ನು ತಾವು ಪಡೆಯುತ್ತಿದ್ದರು. ಇದರಿಂದ ಒಂದು ರೀತಿಯ ಸಹಕಾರೀ ಸಾಮಾಜಿಕ ಜೀವನ ರೂಢಿಗೆ ಬಂತು. ಈ ಯುಗದ ಮತ್ತೆರಡು ಬಹಳ ಮುಖ್ಯ ಆವಿಷ್ಕಾರಗಳೆಂದರೆ ವ್ಯವಸಾಯದ ಪ್ರಗತಿಗೆ ಸಾಧಕವಾಗಿದ್ದು ಎತ್ತುಗಳಿಂದ ಎಳೆಯಲ್ಪಡುತ್ತಿದ್ದ ನೇಗಿಲು ಮತ್ತು ವ್ಯಾಪಾರದ ಸಾಮಾನುಗಳನ್ನು ದೂರ ಪ್ರದೇಶಗಳಿಂದ ಸಾಗಿಸಲು ಅತ್ಯುಪಯುಕ್ತವಾದ ಗಾಡಿಯ ಚಕ್ರ. ಈ ಎರಡು ಶೋಧನೆಗಳಿಂದ ಜನಜೀವನ ರೀತಿಯಲ್ಲಿ ಕ್ರಾಂತಿಕಾರೀ ಬದಲಾವಣೆಗಳು ಸಂಭವಿಸಿ ಸಂಪದಭಿವೃದ್ಧಿಗೆ ಕಾರಣವಾಯಿತು. (ಬಿ.ಕೆ.ಜಿ.;ಎ.ವಿ.ಎನ್.)

**ಕಂಚು :** ತಾಮ್ರ ಮತ್ತು ತವರ ಲೋಹಗಳ ಯುಕ್ತ ಮಿಶ್ರಣದಿಂದ ದೊರೆಯುವ ಸಂಯುಕ್ತ ಲೋಹ (ಬ್ರಾನ್ಜ಼್). ಇವರಲ್ಲಿ ತಾಮ್ರ ಮತ್ತು ತವರದ ಅಂಶ ಇಂತಿಷ್ಟೇ ಇರಬೇಕೆಂಬ ನಿರ್ಬಂಧ ಇಲ್ಲ. ಆದರೆ ಸಾಮಾನ್ಯವಾಗಿ ತವರದ ಅಂಶ 5%–25% ಮತ್ತು ತಾಮ್ರದ ಅಂಶ 95%–75%. ಕಂಚನ್ನು ಮೆದುಗೊಳಿಸಲು ಕೆಲವೊಮ್ಮೆ ಸತು, ಬೆಳ್ಳಿ, ಸೀಸ ಮುಂತಾದ ಲೋಹಗಳನ್ನು ಬೆರೆಸುವುದೂ ಉಂಟು. ಕಂಚು ಗುಣದಲ್ಲಿ ಗಡಸು. ಆದ್ದರಿಂದ ಇದು ಮೇಲ್ಮೈಸವೆತವನ್ನು ತಡೆದುಕೊಳ್ಳಬಲ್ಲುದು. ಇದನ್ನು ಬೇಕಾದ ರೂಪಕ್ಕೆ ಎರಕ ಹೊಯ್ಯಬಹುದು ಹಾಗೂ ಉರುಳೆಯಂತ್ರಗಳಲ್ಲಿ ತಂತಿ, ಸರಳು ಮತ್ತು ತಗಡುಗಳನ್ನಾಗಿ ಒತ್ತಬಹುದು. ಕಂಚನ್ನು ಪಾತ್ರೆ ಪರಟು. ಅಚ್ಚಿನ ಭಾಗ, ರೇಚಕ ಅಸ್ತರಿ (ಪಂಪ್ ಲೈನಿಂಗ್) ಮುಂತಾದವನ್ನು ಮಾಡಲು ಉಪಯೋಗಿಸುತ್ತಾರೆ.

ಕಂಚಿನಲ್ಲಿರುವ ಅನೇಕ ವಿಧಗಳಲ್ಲಿ ಬಹಳವಾಗಿ ಬಳಕೆಯಲ್ಲಿರುವುವು ಐದು :

1 ರಂಜಕ ಕಂಚು (ಫಾಸ್ಫರ್ ಬ್ರಾನ್ಜ಼್) : ಕಂಚಿನಲ್ಲಿ ರಂಜಕ ಇದ್ದರೆ ಅದು ರಂಜಕ ಕಂಚು. ಇದರಲ್ಲಿ ಸಾಮಾನ್ಯವಾಗಿ 93·7% ತಾಮ್ರ, 6% ತವರ ಮತ್ತು 0·3% ರಂಜಕ ಇರುತ್ತವೆ. ಆದರೆ ಎರಕ ಹೊಯ್ಯಲು ಅನುಕೂಲವಾದ ರಂಜಕ ಕಂಚಿನಲ್ಲಿ 11% ತವರ, 0·3% ರಂಜಕ ಮತ್ತು 88·7% ತಾಮ್ರ ಇರಬೇಕು. ಈ ಪ್ರಮಾಣದಲ್ಲಿ ತಾಮ್ರ, ತವರ ಹಾಗೂ ರಂಜಕಗಳಿರುವ ಕಂಚನ್ನು ಅತಿ ಹೆಚ್ಚಿನ ಭಾರವನ್ನು ಹೊರಬೇಕಾದ ಅಚ್ಚಿನ ಭಾಗ, ಅಳವಡಿಕೆ, ನಟ್ಟು ಹಾಗೂ ಇನ್ನಿತರ ಯಂತ್ರಭಾಗಗಳನ್ನು ಮಾಡಲು ವಿಶೇಷವಾಗಿ ಉಪಯೋಗಿಸುತ್ತಾರೆ. ಕೆಲವೊಮ್ಮೆ ಸಿಡಿಗಳನ್ನು ಮಾಡಲೂ ರಂಜಕ ಕಂಚನ್ನು ಉಪಯೋಗಿಸುವುದುಂಟು.

2 ಸಿಲಿಕಾನ್ ಕಂಚು : ಇದರಲ್ಲಿ 96% ತಾಮ್ರ, 3% ಸಿಲಿಕಾನ್ ಮತ್ತು 1% ಮ್ಯಾಂಗನೀಸ್ ಅಥವಾ ಸತು ಇವೆ. ಹೆಚ್ಚಿನ ಶಕ್ತಿ ಮತ್ತು ತುಕ್ಕುನಿರೋಧಕ ಗುಣದ ಆವಶ್ಯಕತೆ ಎಲ್ಲೆಲ್ಲಿ ಇದೆಯೊ ಅಲ್ಲೆಲ್ಲ ಸಾಮಾನ್ಯ ಸಿಲಿಕಾನ್ ಕಂಚಿನಿಂದ ಮಾಡಿದ ಬಿಡಿ ಭಾಗಗಳನ್ನು ಬಳಸುತ್ತಾರೆ. ಉದಾಹರಣೆಗೆ ಸ್ಟೌ, ಗುಡಾಣ ಇವುಗಳ ಕೆಲವು ಭಾಗಗಳು.

3 ಬಂದೂಕ ಲೋಹ (ಗನ್ ಮೆಟಲ್) : ಇದರಲ್ಲಿ 10% ತವರ, 88% ತಾಮ್ರ ಮತ್ತು 2% ಸತು ಇವೆ. ಬಂದೂಕದ ಲೋಹ ತಣ್ಣಗಿನ ಸ್ಥಿತಿಯಲ್ಲಿರುವಾಗ ಅದನ್ನು ಬಡಿದು ಬೇಕಾದ ರೂಪ ಕೊಡಲು ಸಾಧ್ಯ ಇಲ್ಲ. ಆದರೆ ಅದು 600° ಸೆಂ. ಉಷ್ಣತೆಯಲ್ಲಿರುವಾಗ ಹಾಗೆ ಮಾಡಲು ಸಾಧ್ಯ. ಬಂದೂಕ ಲೋಹ ಬಹಳ ಗಡಸು. ಗಾಳಿ, ನೀರುಗಳಿಂದ ಇದು ತುಕ್ಕುಹಿಡಿಯುವುದಿಲ್ಲ. ಬಹಳ ಹಿಂದೆ ಬಂದೂಕ ಲೋಹದ ಉಪಯೋಗ ಬಂದೂಕಗಳನ್ನು ಎರಕ ಹೊಯ್ಯಲು ಮಾತ್ರ ಸೀಮಿತವಾಗಿದ್ದು ಅದರಿಂದಲೇ ಈ ಹೆಸರು ಬಂದಿದೆ. ಆದರೆ ಇತ್ತೀಚಿನ ದಿನಗಳಲ್ಲಿ ಅಚ್ಚುಗುಡಾಣ ಮುಂತಾದೆಡೆಗಳಲ್ಲಿ ಇದನ್ನು ಯಥೇಚ್ಛವಾಗಿ ಬಳಸುತ್ತಿದ್ದಾರೆ.

4 ಗಂಟೆಲೋಹ (ಬೆಲ್ ಮೆಟಲ್) : ಇದರಲ್ಲಿ 20% ತವರ ಹಾಗೂ 80% ತಾಮ್ರ ಇವೆ. ಇದನ್ನು ಗಂಟೆ, ಜಾಗಟೆ, ಪಾತ್ರೆ ಮುಂತಾದುವುಗಳನ್ನು ಮಾಡಲು ಉಪಯೋಗಿಸುತ್ತಾರೆ.

ಸಿ ಮ್ಯಾಂಗನೀಸ್ ಕಂಚು : ಇದು ತಾಮ್ರ, ಸತು, ಸೀಸ ಮತ್ತು ಸ್ವಲ್ಪ ಭಾಗ ಮ್ಯಾಂಗನೀಸ್ ಇವುಗಳ ಮಿಶ್ರಣ. ಇದು ಅತ್ಯುತ್ತಮ ತುಕ್ಕುನಿರೋಧಕ. ಇದನ್ನು ಸಾಮಾನ್ಯವಾಗಿ ಉಳಿಬಳೆ (ಬುಶಸ್), ಆಡುಬೆಣೆ (ಪ್ಲಂಜರ್), ಸರಳು ಮುಂತಾದುವುಗಳನ್ನು ಮಾಡಲು ಉಪಯೋಗಿಸುತ್ತಾರೆ. (ಎಚ್.ಎಲ್.ಕೆ.)

**ಕಂಚಿನ ಎರಕ :** ಕಂಚನ್ನು ಎರಕಹೊಯ್ದು ವಿವಿಧ ಆಕಾರದ ಪಾತ್ರೆಗಳನ್ನೂ ಸುಂದರವಾದ ಮೂರ್ತಿಗಳನ್ನೂ ಮಾಡುವುದು ಸಾಧ್ಯ. ಮೂರ್ತಿಶಿಲ್ಪದಲ್ಲಿ ಶಿಲೆಯ ಬಳಿಕ ಎರಡನೆಯ ಸ್ಥಾನ ಕಂಚಿಗೆ. ಕಂಚಿನ ಮೂರ್ತಿಗಳಲ್ಲಿ ಭಾವ ಪ್ರದರ್ಶನ ಸುಲಭಸಾಧ್ಯವಾದ್ದರಿಂದಲೂ ಕಂಚು ಶಾಶ್ವತ ಲೋಹವಾದ್ದರಿಂದಲೂ ಮೂರ್ತಿಶಿಲ್ಪಿಗಳಿಗೆ ಇದು ಬಹಳ ಪ್ರಿಯವಾದ ಲೋಹ. ಕಂಚಿನ ಹೊರಮೈಗೆ ಹಲವು ವಿಧದ ಮೆರುಗನ್ನು ಕೊಡುವುದು ಸಾಧ್ಯ.

ಎರಕಹೊಯ್ಯಲು ಉಚ್ಚಮಟ್ಟದ ತಾಂತ್ರಿಕ ನೈಪುಣ್ಯ ಮತ್ತು ಹಲವು ವಿಶಿಷ್ಟ ಉಪಕರಣಗಳು ಅತ್ಯಗತ್ಯ. ಎರಕಹೊಯ್ಯುವ ಕ್ರಮದಲ್ಲಿ ಮುಖ್ಯವಾಗಿ ಎರಡು ವಿಧಗಳು ಪ್ರಚಲಿತವಿವೆ : ಲಾಕ್ಷಾ ವಿಧಾನ ಮತ್ತು ಮರಳು ವಿಧಾನ.

ಲಾಕ್ಷಾ ವಿಧಾನ : ಶಿಲ್ಪಕೃತಿ ಎರಕದ ಮನೆಗೆ ಬಂದಾಗ ಪ್ರಥಮವಾಗಿ ಜಿಲೆಟಿನ್ ಅಚ್ಚನ್ನು ತಯಾರಿಸಬೇಕಾಗುವುದು. ಶಿಲ್ಪಕೃತಿಯ ಆಕಾರ ಕಿರಿದಾಗಿದ್ದರೆ ಒಂದೇ ಒಂದು ಅಚ್ಚು ಸಾಕು. ದೊಡ್ಡದಾಗಿದ್ದರೆ ಅದನ್ನು ಹಲವು ಭಾಗಗಳಾಗಿ ವಿಂಗಡಿಸಿ ಆಯಾ ಭಾಗಕ್ಕೆ ಪ್ರತ್ಯೇಕವಾಗಿ ಅಚ್ಚನ್ನು ತಯಾರಿಸಬೇಕಾಗುವುದು. ಶಿಲ್ಪಕೃತಿಯ ಎಲ್ಲ ರೇಖಾವಿನ್ಯಾಸಗಳೂ ಜಿಲೆಟಿನ್ ಅಚ್ಚಿನಲ್ಲಿ ಹಿಮ್ಮೊಗವಾಗಿ ಮುದ್ರಿಸಲ್ಪಟ್ಟಿರುತ್ತವೆ. ಈ ಅಚ್ಚನ್ನು ಬಳಿಕ ಚೊಕ್ಕಟಗೊಳಿಸಿ ಅರಗಿನ ಎರಕಕ್ಕೆ ಅಣಿಗೊಳಿಸುತ್ತಾರೆ. ಅರಗಿನ ಎರಕವನ್ನು ಪಡೆಯಲು, ಜಿಲೆಟಿನ್ ಅಚ್ಚಿನ ಒಳಭಾಗಕ್ಕೆ ದ್ರವೀಕೃತ ಅರಗಿನ ಲೇಪನವನ್ನು ಕೊಟ್ಟು ಬಳಿಕ ಅದರ ಮೇಲೆ ಬಿಸಿ ಅರಗಿನ ಹಾಳೆಗಳನ್ನು ಹೊಂದಿಸುತ್ತಾರೆ. ಇಂಥ ಅರಗಿನ ಹಾಳೆಯ ದಪ್ಪ, ಕಂಚಿನ ಮೂರ್ತಿಯಲ್ಲಿ ನಾವು ಅಪೇಕ್ಷಿಸುವ ಕಂಚಿನ ದಪ್ಪಕ್ಕಿಂತ ಹೆಚ್ಚಿರಬಾರದು. ಈಗ ಜಿಲೆಟಿನ್ ಅಚ್ಚನ್ನು ತೆಗೆದುಬಿಟ್ಟರೆ, ಶಿಲ್ಪಕೃತಿಯ ಪ್ರತಿರೂಪ ಅರಗಿನಲ್ಲಿ ಉಳಿಯುವುದು. ಅರಗಿನ ಈ ಪ್ರತಿರೂಪ ಒಳಗೆ ಟೊಳ್ಳಾಗಿರುವುದು. ಅಂತಿಮವಾಗಿ ಅಚ್ಚನ್ನು ಕುಲುಮೆಯಲ್ಲಿ ಸುಡುವ ಸಮಯದಲ್ಲಿ ಕರಗಿದ ಅರಗನ್ನು ಹೊರಬಿಡಲು ಅನುಕೂಲವಾಗುವಂಥ ದ್ವಾರಗಳನ್ನು ಕಲ್ಪಿಸಲು ಮೇಲೆ ಹೇಳಿದ ಅರಗಿನ ಮಟ್ಟಿ ಕಂಬಿಯನ್ನು ಸೇರಿಸಿರುತ್ತಾರೆ.

ಈಗ ಉಷ್ಣನಿರೋಧಕವಾದ ಅರ್ಧದ್ರವೀರೂಪದ ಸಿಲಿಕಾಮಿಶ್ರಣವನ್ನು ಅರಗಿನ ಅಚ್ಚಿನ ಒಳಭಾಗಕ್ಕೆ ಹೊಯ್ದಾಗ ಒಂದು ಅಂತರ್ಭಾಗ ಉಂಟಾಗುತ್ತದೆ. ಸಿಲಿಕಾ ಮಿಶ್ರಣವನ್ನು ಅರಗಿನ ಅಚ್ಚಿನ ಹೊರಮೈಗೆ ಲೇಪಿಸಿದಾಗ ಒಂದು ಹೊರ ಕವಚ ಉಂಟಾಗುತ್ತದೆ. ಈಗ ಇದನ್ನು ಕುಲುಮೆಯಲ್ಲಿಟ್ಟು ಅರಗು ಸಂಪೂರ್ಣವಾಗಿ ಕರಗಿಹೋಗುವ ತನಕ ಸುಡುತ್ತಾರೆ. ಕುಲುಮೆಯಿಂದ ಹೊರತೆಗೆದ ಅಚ್ಚಿಗೆ ಮರಳು ಮತ್ತು ಮಣ್ಣನ್ನು ಸವರುತ್ತಾರೆ. ಬಳಿಕ ಅಚ್ಚಿನಲ್ಲಿರುವ ತೂತಿನ ಮೂಲಕ ದ್ರವೀರೂಪದ ಕಂಚನ್ನು ಅಚ್ಚಿಗೆ ಹೊಯ್ಯುತ್ತಾರೆ. ಅರಗು ಕರಗಿ ಹೋಗಿ ತೆರವು ಮಾಡಿದ ಸ್ಥಳವನ್ನು ದ್ರವೀರೂಪದಲ್ಲಿರುವ ಕಂಚು ಆವರಿಸುವುದು. ಕಂಚು ತಣಿದ ಅನಂತರ ಸಿಲಿಕಾದ ಹೊರಕವಚ ಮತ್ತು ಅಂತರ್ಭಾಗವನ್ನು ತೆಗೆಯಲಾಗುವುದು. ತರುವಾಯ ಶುದ್ಧೀಕರಣಕ್ಕಾಗಿ ಕಂಚನ್ನು ಆಮ್ಲದಲ್ಲಿ ಮುಳುಗಿಸುವರು. ಈ ಶುದ್ಧೀಕೃತ ಶಿಲ್ಪಕೃತಿಯ ಅನಪೇಕ್ಷಿತ ಭಾಗಗಳನ್ನು ಕೆತ್ತಿ ತೆಗೆದು ಅದಕ್ಕೆ ಹೊಳಪನ್ನು ಕೊಡಲಾಗುವುದು.

ಮರಳು ವಿಧಾನ : ತೇವವಿರುವ ಫ್ರೆಂಚ್ ಮರಳನ್ನು (ಆವೆಮಣ್ಣು, ಸಿಲಿಕಾ ಮತ್ತು ಅಲ್ಯೂಮಿನಾಗಳ ಮಿಶ್ರಣ) ಶಿಲ್ಪಿಯ ಮೂಲಕೃತಿಗೆ ಒತ್ತುವುದರಿಂದ ಅಚ್ಚು ಸಿದ್ಧವಾಗುವುದು. ಈ ತರಹದ ಅಚ್ಚಿನಲ್ಲಿ ಸಾಮಾನ್ಯವಾಗಿ ಎರಡು ಭಾಗಗಳಿವೆ.—ಒಂದು ಭಾಗ ಮೂಲ ಕೃತಿಯ ಮುಂಭಾಗದ ಪಡಿಯಚ್ಚು, ಇನ್ನೊಂದು ಹಿಂಭಾಗದ ಪಡಿಯಚ್ಚು. ಈ ಮರಳಿನ ಅಚ್ಚಿನ ಒಳಭಾಗದಲ್ಲಿ ಮರಳಿನಿಂದ ಇನ್ನೊಂದು ಅಂತರ್ಭಾಗವನ್ನು ನಿರ್ಮಿಸುತ್ತಾರೆ. ಇವೆರಡರ ಮಧ್ಯೆ ದ್ರವೀರೂಪದ ಕಂಚನ್ನು ಸುರಿಯಲು ಎಡೆಯಿರುತ್ತದೆ. ಕರಗಿದ ಕಂಚನ್ನು ಹೊಯ್ಯಲು ಮತ್ತು ಉತ್ಪನ್ನವಾದ ಅನಿಲಗಳನ್ನು ವಿಸರ್ಜಿಸಲು ಅನುಕೂಲವಾಗುವಂತೆ ಅಚ್ಚಿನಲ್ಲಿ ತೂತುಗಳನ್ನು ಕೊರೆದಿರುತ್ತಾರೆ. ಅಚ್ಚು ಮತ್ತು ಅಂತರ್ಭಾಗ ಇವೆರಡೂ ಗಟ್ಟಿಯಾಗಲು ಅವನ್ನು ಹಲವು ಗಂಟೆಗಳ ತನಕ ಬೆಂಕಿಯಲ್ಲಿ ಸುಡುತ್ತಾರೆ. ಕರಗಿಸಲ್ಪಟ್ಟ ಕಂಚನ್ನು ಅಚ್ಚಿನೊಳಗಡೆ ಸುರಿದಾಗ ಅಚ್ಚಿನ ಹೊರಭಾಗ ಮತ್ತು ಅಂತರ್ಭಾಗಗಳ ನಡುವಣ ಎಡೆಯನ್ನು ಅದು ತುಂಬುವುದು. ಇದು ತಣಿದ ಬಳಿಕ ಹೊರಗಣ ಮರಳಿನ ಅಚ್ಚನ್ನು ಒಡೆಯಲಾಗುವುದು. ಕೊನೆಯ ಅಂಗವಾಗಿ ಹೊರಮೈಯನ್ನು ನುಣುಪು ಮಾಡುತ್ತಾರೆ.

ಕಂಚಿಗೆ ಹೊಳಪು ಕೊಡುವುದು : ಕಂಚು ನೈಸರ್ಗಿಕವಾಗಿ ಗಾಢವಾದ (ಡಾರ್ಕ್) ಸುಂದರ ವರ್ಣವನ್ನು ಪಡೆಯುವುದು. ಆದರೆ ಇದಕ್ಕೆ ಅಧಿಕ ಕಾಲಾವಕಾಶ ಬೇಕಾಗುವುದು. ಹೀಗಾಗಿ ಶಿಲ್ಪಿಗಳು ಸಾಮಾನ್ಯವಾಗಿ ತಮ್ಮ ಕೃತಿಗಳಿಗೆ ಒಪ್ಪುವ ಬಣ್ಣವನ್ನು ಲೇಪಿಸುತ್ತಾರೆ. ಕಂಚಿನಲ್ಲಿರುವ ತಾಮ್ರದ ಮಿಶ್ರಣದಿಂದಾಗಿ ಅದಕ್ಕೆ ವೈವಿಧ್ಯಮಯವಾದ ಹಸಿರು, ಕೆಂಪು, ಕಪ್ಪು, ಕಂದು ಮತ್ತು ನೀಲಿಬಣ್ಣದ ಚೆಡಗನ್ನು ಕೊಡುವುದು ಸಾಧ್ಯವೆನಿಸುವುದು. ಕಂಚಿಗೆ ಹೊಳಪು ಕೊಡುವ ಒಂದು ವಿಧಾನದಲ್ಲಿ ಅದನ್ನು ಕಾಯಿಸುತ್ತಿದ್ದಂತೆಯೇ ಅದಕ್ಕೆ ಕುಂಚದ ಮೂಲಕ ಆಮ್ಲದ ಲೇಪನವನ್ನು ಕೊಡುತ್ತಾರೆ. ಈ ಲೇಪನದ ದಪ್ಪ ಅಧಿಕವಾಗದಂತೆ ತಡೆಯಲು ಕಂಚನ್ನು ಆಗಾಗ ನೀರಿನಿಂದ ತೊಳೆಯಬೇಕು. (ಕೆ.ಸಿ.ಜಿ.)

**ಕಂಚುಕಗಳು :** ಚಿದ್ರೂಪಿಯಾದ ಆತ್ಮನ ಸ್ವರೂಪಾವರಣಗಳು. ಇವು ಸಂಖ್ಯೆಯಲ್ಲಿ ಆರು. ಇವುಗಳಲ್ಲಿ ಮೊದಲನೆಯದಾದ ಮಾಯೆಯ ಪ್ರಭಾವದಿಂದ ಆತ್ಮನ ಸ್ವರೂಪಾಭಿನ್ನವಾಗಿರುವ ಸರ್ವಜ್ಞತ್ವ, ಸರ್ವಕರ್ತೃತ್ವ, ಪೂರ್ಣತ್ವ, ವ್ಯಾಪಕತ್ವ, ನಿತ್ಯತ್ವ ಶಕ್ತಿಗಳು ಸಂಕುಚಿತವಾಗಿ ವಿದ್ಯಾ, ಕಲಾ, ರಾಗ, ಕಾಲ, ನಿಯತಿರೂಪಗಳಿಂದ ಮಾರ್ಪಟ್ಟವು. ಇವನ್ನು ಕಂಚುಕಪಂಚಕಗಳೆನ್ನುತ್ತಾರೆ. ಈ ಐದು ತತ್ತ್ವಗಳು ಬಟ್ಟೆಗೆ ಬಣ್ಣ ಅಂಟಿಕೊಂಡಿರುವ ಹಾಗೆ ಜೀವಾತ್ಮನಿಗೆ ಅಂಟಿಕೊಂಡಿರುವಂಥವು. ಭೇದದೃಷ್ಟಿ, ಭೇದಭಾವ, ಭೇದಜ್ಞಾನವನ್ನುಂಟುಮಾಡುವ ಶಕ್ತಿವಿಶೇಷವೇ ಮಾಯೆ. ಈ ಆರು ಕಂಚುಕಗಳು ಆತ್ಮನ ಸ್ವರೂಪವನ್ನು ಮರೆಮಾಚಿ ಶಕ್ತಿಗಳನ್ನು ಸಂಕೋಚಗೊಳಿಸಿ ಆತ್ಮನನ್ನು ಬದ್ಧಜೀವವನ್ನಾಗಿ ಮಾಡುತ್ತವೆ. ಈ ಸಂಪುಟದಲ್ಲಿ ಸಿಲುಕಿದ ಜೀವಾತ್ಮ ಜನನಮರಣ, ಕಷ್ಟಸುಖಗಳಿಗೆ ಗುರಿಯಾಗುತ್ತಾನೆ. ಶಕ್ತಿಗಳ ಸಂಪೂರ್ಣ ವಿಕಾಸವಾದಾಗ ಶಿವನಾಗುತ್ತಾನೆ.

ಶೈವಸಿದ್ಧಾಂತದಲ್ಲಿನ ಮೂವತ್ತಾರು ತತ್ತ್ವಗಳಲ್ಲಿ ಈ ಆರನ್ನು ಮಿಶ್ರ ತತ್ತ್ವಗಳು ಎನ್ನಲಾಗಿದೆ. (ಜಿ.ಆರ್; ಎಂ.ಜಿ.ಎಚ್.)

**ಕಂಚುಗಾರ ಕುಕ್ಕ :** ಪಕ್ಷಿವರ್ಗದ ಸಿಕೊನಿಯಿಫಾರ್ಮಿಸ್ ಗಣದ ಸಿಕೋನಿಯೀ ಉಪಗಣದ ಸಿಕೊನೈಯಿಡೀ ಕುಟುಂಬಕ್ಕೆ ಸೇರಿದ ಪಕ್ಷಿ (ಸ್ಟಾರ್ಕ್). ಇದಕ್ಕೆ ನೀಳವಾದ ಕತ್ತು, ಉದ್ದನೆಯ ದಪ್ಪನಾಗಿ ನೇರವಾಗಿರುವ ಕೊಕ್ಕು, ಉದ್ದ



ಯೂರೋಪ್ಪಿನ ಕಂಚುಗಾರ ಕುಕ್ಕಗಳು ; ನೆಟ್ಟಗೆ ನಿಂತಿರುವುದು ಬಿಳಿಕುಕ್ಕ. ನಸುಬಾಗಿರುವುದು ಕರಿಕುಕ್ಕ

ವಾದ ಕಾಲುಗಳಿವೆ. ಪಾದಗಳಲ್ಲಿ ಬಲೆ ಸಂಪೂರ್ಣವಾಗಿಲ್ಲ. ಉಗುರುಗಳು ಚಪ್ಪಟೆಯಾಗಿ ಸಣ್ಣವಾಗಿವೆ. ಕಾಲನ್ನು ಒರಟಾಗಿರುವ ವಡಿವತ್ತಳೆಯ ಮೇಲೆ ಊರುವುದು. ರೆಕ್ಕೆಗಳು ಅಗಲವಾಗಿಯೂ ಉದ್ದವಾಗಿಯೂ ಇವೆ. ಬಾಲದ ರೆಕ್ಕೆಗಳು ಸಣ್ಣ. ಫರ್ಕುಲ U—ರೀತಿ ಇರುವುದು. ನಾಲಗೆ ಸಣ್ಣ.

ಇವು ಸಾಧಾರಣವಾಗಿ ಪುಕ್ಕಲು ಸ್ವಭಾವದ ಹಕ್ಕಿಗಳು. ಸಾಮಾನ್ಯವಾಗಿ ವನ್ಯ ಅಥವಾ ಹುಲ್ಲುಗಾವಲು ಪ್ರದೇಶಗಳಲ್ಲಿ ನೀರಿರುವ ಸ್ಥಳಗಳಲ್ಲಿರುತ್ತವೆ. ಇವುಗಳ ಹಾರಾಟ ಆಕರ್ಷಕವಾಗಿರುವುದು. ಇವು ಬಲವಾಗಿ ತ್ವರಿತವಾಗಿ ಆದರೆ ಶಬ್ದಮಾಡದೆ ಹಾಗುತ್ತವೆ. ಹಾರುವಾಗ ಕತ್ತನ್ನೂ ಕಾಲುಗಳನ್ನೂ ತಮ್ಮ ದೇಹದ ನೇರಕ್ಕೆ ಚಾಚಿ ಸುತ್ತುಸುತ್ತಾಗಿ ಹಾರಿ ಬಹಳ ಎತ್ತರಕ್ಕೆ ಏರುತ್ತವೆ. ನೆಲದ ಮೇಲೆ ಸುಲಭವಾಗಿ ನಡೆಯಬಲ್ಲವು. ವಿಶ್ರಮಿಸುವಾಗ ಅಂಗಾಲನ್ನು ನೆಲದ ಮೇಲೂರುತ್ತವೆ. ಹಗಲಿನಲ್ಲಿ ಶಾಖ ಹೆಚ್ಚಿದ್ದಾಗ ನಿಶ್ಚಲವಾಗಿ ಕೂತಿರುತ್ತವೆ. ಮೀನು, ಸರೀಸೃಪಗಳು, ದ್ವಿಚರಿಗಳು, ಕಠಿಣಚರ್ಮಿಗಳು, ಮೃದ್ವಸ್ಥಿಗಳು, ಮಿಡತೆಗಳು ಮತ್ತು ಜೀರುಂಡೆಗಳು ಇವುಗಳ ಆಹಾರ. ಕೆಲವು ವೇಳೆ ಚಿಕ್ಕ ಸಸ್ತನಿಗಳು ಅಥವಾ ಮೊಟ್ಟೆಗಳು ಮತ್ತು ಸಣ್ಣ ಹಕ್ಕಿಗಳನ್ನೂ ತಿನ್ನುತ್ತವೆ. ಇವನ್ನು ಪಳಗಿಸಿ ಸಾಕಬಹುದು.

ಸಾಮಾನ್ಯವಾಗಿ ಎತ್ತರವಾದ ಮರಗಳಲ್ಲಿ, ಗುಡ್ಡಗಳಲ್ಲಿ, ಬಂಡೆಗಳ ಸಣ್ಣಗವಿಗಳಲ್ಲಿ ಅಥವಾ ಗುಡ್ಡಗಳ ಮೇಲಿನ ಚಪ್ಪಟೆ ಜಾಗಗಳಲ್ಲಿ ಗೂಡುಗಳನ್ನು ಕಟ್ಟುತ್ತವೆ. ಗೂಡನ್ನು ಸಣ್ಣ ಕಡ್ಡಿಗಳಿಂದ ಕಟ್ಟಿ ಅದರ ಮೇಲೆ ಅನೇಕ ವೇಳೆ ಒಂದು ಪದರ ಹುಲ್ಲನ್ನೋ ಎಲೆಗಳನ್ನೊ ಅಥವಾ ಪುಕ್ಕಗಳನ್ನೊ ಹರಡುತ್ತವೆ. ಕೆಲವು ಸಾರಿ ಇವನ್ನು ಹರಡದೆಯೂ ಇರಬಹುದು. ಗೂಡು ಕಟ್ಟಲು ಜೇಡಿಮಣ್ಣನ್ನು ಉಪಯೋಗಿಸುವುದೂ ಉಂಟು. ಸಾಧಾರಣವಾಗಿ ಋತುಕಾಲದಲ್ಲಿ ಅನೇಕ ಹಕ್ಕಿಗಳು ಒಂದೇ ಕಡೆ ಗುಂಪು ಸೇರುತ್ತವೆ. ಕೆಲವು ಬಗೆಗಳು ಮಾತ್ರ ದೂರದೂರವಾಗಿ ಗೂಡು ಕಟ್ಟುವುದೂ ಉಂಟು. ಇವು ಒಂದು ಸಲಕ್ಕೆ 3–6 ಬಿಳುಪಾದ ಮೊಟ್ಟೆಗಳನ್ನಿಡುತ್ತವೆ. ಗಂಡುಹೆಣ್ಣುಗಳೆರಡೂ ಮೊಟ್ಟೆಗಳಿಗೆ ಸಾಧಾರಣವಾಗಿ 4 ವಾರ ಕಾಲ ಕಾವನ್ನು ಕೊಡುವುವು. ತಾಯಿ ಮರಿಗಳಿಗೆ ಗುಟುಕು ಕೊಡುವಾಗ ಗಂಡು ಅವನ್ನು ಕಾಯುವುದು. ಮಿಕ್ಟೀರಿಯ ಸೆನಗಲೆನ್ಸಿಸ್ ಮತ್ತು ಮಿಕ್ಟೀರಿಯ ಇಂಡಿಕ ಪ್ರಭೇದಗಳ ಗಂಡುಪಕ್ಷಿಗಳು ತಮ್ಮ ಸಂಗಾತಿಗಳ ಪ್ರೀತಿ ಸಂಪಾದಿಸಲು ಅವುಗಳ ಸುತ್ತ ನೃತ್ಯವನ್ನು ಮಾಡುತ್ತವೆ. ಮಿ.ಇಂಡಿಕ ಗಂಡು ತನ್ನ ರೆಕ್ಕೆಗಳನ್ನು ವಿಸ್ತರಿಸಿ ಅವುಗಳನ್ನು ಬಡಿಯುತ್ತ ತನ್ನ ಸಂಗಾತಿಯನ್ನು ಮುಟ್ಟುವುದು. ಮಿ.ಸೆನಗಲೆನ್ಸಿಸ್ ಕುಪ್ಪಳಿಸುತ್ತ ತಲೆಯನ್ನು ಬಾಗಿಸಿ ನಾಟ್ಯಮಾಡುತ್ತದೆ. (ಎನ್.ವಿ.ಎ.)

**ಕಂಚುಪ್ರಾಂತಿ :** ಯೂಫೋರ್ಬಿಯೇಸೀ ಕುಟುಂಬದ ಮಕರಂಗ ಪೆಲ್ಟೇಟ ಎಂಬ ವೈಜ್ಞಾನಿಕ ಹೆಸರಿನ ಮರ. ಮಕರಂಗ ಟೊಮೆಂಟೋಸ ಎಂಬುದು ಇದರ ಪರ್ಯಾಯ ನಾಮ. ಕನ್ನಡದಲ್ಲಿ ಚಂದಕನ್ನೆ ಎಂದೂ ಕರೆಯುವುದುಂಟು.

ಮಧ್ಯಮ ಎತ್ತರದ ಈ ಮರ ಬಂಗಾಳ, ಬಿಹಾರ, ಒರಿಸ್ಸ ಮತ್ತು ದಕ್ಷಿಣ ಭಾರತದ ಬೆಟ್ಟಗುಡ್ಡಗಳಲ್ಲಿ ಬೆಳೆಯುತ್ತದೆ. ಕೊಂಬೆಗಳು ಒರಟು. ಎಳೆಯ ರೆಂಬೆಗಳು ತುಪ್ಪುಳಭರಿತವಾಗಿವೆ. ತೊಗಟೆ ನಸುಕಪ್ಪು ಬಣ್ಣದ್ದು. ಎಲೆಗಳ ಉದ್ದ 5"–8"; ಅಗಲ $3\frac{1}{4}$"–$5\frac{1}{2}$"; ಅಂಡಾಕಾರ ಅಥವಾ ದೀರ್ಘವೃತ್ತಾಕಾರವಾಗಿವೆ. ತಾವರೆ ಎಲೆಯಲ್ಲಿರುವಂತೆ ಎಲೆಯ ಅಲಗಿನ ತಳಭಾಗದ ಮಧ್ಯದಲ್ಲಿ ಅಂಟಿಕೊಂಡಿರುವ ಉದ್ದನೆಯ ತೊಟ್ಟಿದೆ. ಅಲಗು ಸರಳ. ಎಲೆಯ ಮೇಲ್ಭಾಗ ಹೊಳೆಯುತ್ತದೆ. ಕೆಳಭಾಗದಲ್ಲಿ ಅಂಟು ಸ್ರವಿಸುವ ರೋಮಗ್ರಂಥಿಗಳಿವೆ. ಎಲೆಗಳಲ್ಲಿ ಹಿಂದಕ್ಕೆ ಬಾಗಿರುವ, ಬೇಗ ಉದುರಿಹೋಗುವಂಥ ವೃಂತಪರ್ಣಗಳಿವೆ. ಹೂಗಳು ಏಕಲಿಂಗಿಗಳು; ಸಂಕೀರ್ಣ ಪುಷ್ಪಗುಚ್ಛದಲ್ಲಿ ಜೋಡಣೆಗೊಂಡಿವೆ. ಪುಷ್ಪಪತ್ರಗಳ ಸಂಖ್ಯೆ ಮೂರು. ಕೇಸರಗಳು 2-3. ಹೆಣ್ಣು ಹೂವಿನಲ್ಲಿ ಅಂಟಾದ ದ್ರವದಿಂದ ಆವೃತವಾಗಿರುವ, ಒಂದೇ ಕೋಣೆಯನ್ನುಳ್ಳ ಅಂಡಾಶಯವಿದೆ. ಕಾಯಿ ಸಂಪುಟ ಮಾದರಿಯದು. ದುಂಡಗಿದೆ ಹಾಗೂ ರಸಗ್ರಂಥಿಗಳನ್ನು ಹೊಂದಿದೆ. ಬೀಜಗಳು ಗುಂಡಗೆ, ಗಟ್ಟಿಯಾಗಿ ಒರಟಾಗಿವೆ; ಬಣ್ಣ ಕಂದು. ವಂಶಾಭಿವೃದ್ಧಿ ಬೀಜಗಳ ಮೂಲಕ. ಮರದಿಂದ ಪ್ರಸಾರವಾದ ಬೀಜಗಳು ಮುಂಗಾರು ಮಳೆಯ ಸಮಯದಲ್ಲಿ ಮೊಳೆತು ಹುಲುಸಾಗಿ ಬೆಳೆಯುತ್ತವೆ.

ಕಂಚುಪ್ರಾಂತಿಯ ಎಲೆಗಳನ್ನೂ ಸಣ್ಣ ರೆಂಬೆಗಳನ್ನೂ ಪಶ್ಚಿಮ ಕರಾವಳಿಯಲ್ಲಿ ಬತ್ತದ ಗದ್ದೆಗಳಿಗೆ ಹಸಿರು ಗೊಬ್ಬರವಾಗಿ ಬಳಸುತ್ತಾರೆ. ಎಲೆಗಳಲ್ಲಿ ಪೊಟ್ಯಾಷ್ ಹಾಗೂ ಸಾರಜನಕಗಳು ಅಧಿಕ ಪ್ರಮಾಣದಲ್ಲಿವೆ. ಈ ಮರವನ್ನು ಕಾಫಿತೋಟಗಳಲ್ಲಿ ನೆರಳಿಗಾಗಿ ಬೆಳೆಸುವುದೂ ಉಂಟು. ಎಲೆಯ ಕಾಂಡ, ಕಾಯಿ, ತೊಟ್ಟಿನ ಬುಡ ಮತ್ತು ಕತ್ತರಿಸಿದ ರೆಂಬೆಗಳಿಂದ ಒಂದು ಬಗೆಯ ಕೆಂಪು ಬಣ್ಣದ ಅಂಟುದ್ರವ ಒಸರುತ್ತದೆ. ಇದನ್ನು ಶೇಖರಿಸಿ ಮುದ್ದೆಗಳಂತೆ ಮಾಡಿ ಅಂಗಡಿಗಳಲ್ಲಿ ಮಾರುವುದುಂಟು. ನಾಣ್ಯ, ಎಲೆ, ಪದಕ ಮುಂತಾದುವುಗಳ ಪಡಿಯಚ್ಚು ತೆಗೆಯಲು ಇದನ್ನು ಬಳಸುತ್ತಾರೆ; ಗೋಂದಿನಂತೆಯೂ ಉಪಯೋಗಿಸಬಹುದು. ಗುಹ್ಯರೋಗದ ವ್ರಣಗಳಿಗೆ ಲೇಪಿಸಲು ಇದರಿಂದ ತಯಾರಿಸಿದ ಸರಿಯನ್ನು (ಪೇಸ್ಟ್) ಉಪಯೋಗಿಸುತ್ತಾರೆ. ಎಲೆ ಮತ್ತು ತೊಗಟೆಯಿಂದ ಪಡೆದ ಕಷಾಯವನ್ನು ಹುಣ್ಣುಗಳನ್ನು ತೊಳೆಯಲು ಉಪಯೋಗಿಸುವುದುಂಟು. ಸ್ವಲ್ಪ ಕಂದು ಬಣ್ಣವುಳ್ಳ ಈ ಮರದ ಚೌಬೀನೆಯನ್ನು ಬೆಂಕಿಕಡ್ಡಿ ಮತ್ತು ಕಾಗದದ ಪಲ್ಪಿನ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ. (ಎಸ್.ಆರ್.ಕೆ.)

**ಕಂಚುವಾಳ :** ಲೆಗ್ಯುಮಿನೋಸೀ ಕುಟುಂಬದ ಸಿಸಾಲ್ಪಿನೀ ಉಪಕುಟುಂಬಕ್ಕೆ ಸೇರಿದ ಒಂದು ಬಹುವಾರ್ಷಿಕ ಸಸ್ಯಜಾತಿ. ಇದರಲ್ಲಿ ಸುಮಾರು 250 ಪ್ರಭೇದಗಳಿವೆ. ಅವುಗಳಲ್ಲಿ ಪೊದರು, ಅಡರುಬಳ್ಳಿ ಮತ್ತು ಮರ ಇತ್ಯಾದಿಗಳೆಲ್ಲ ಇವೆ. ಭಾರತದಲ್ಲಿ ಮುಖ್ಯವಾಗಿ ಬಾಹಿನಿಯ ಪರ್ಪ್ಯೂರಿಯ (ಕಂಚುವಾಳ ಮರ), ಬಾ.ವಾಹ್ಲಿ (ಬಿಳೀ ಕಂಚುವಾಳ ಅಥವಾ ಕಂಬಿಹೂ), ಬಾ.ವೇರಿಗೇಟ(ಉಳಿಪೆ), ಬಾ.ಮಲಬಾರಿಕ (ಬಸವನ ಪಾದ) ಮತ್ತು ಬಾ.ಟೊಮೆಂಟೋಸ (ಆನೆಪಾದ) ಪ್ರಭೇದಗಳು ಬೆಳೆಯುತ್ತವೆ. ಭಾರತ ಮತ್ತು ಚೀನದೇಶಗಳ ಮೂಲನಿವಾಸಿಯಾದ ಕಂಚುವಾಳ ಮರವನ್ನು ರಸ್ತೆಗಳ ಪಕ್ಕದಲ್ಲೂ ಮನೆಗಳ ಆವರಣಗಳಲ್ಲೂ ಉದ್ಯಾನವನಗಳಲ್ಲೂ ಬೆಳೆಸುವುದುಂಟು.



ಕಂಚುವಾಳದ ಮರ : ಒಳಚಿತ್ರ : ಎಲೆ ಮತ್ತು ಕಾಯಿಯನ್ನು ದೊಡ್ಡದಾಗಿ ತೋರಿಸಿದೆ

ಇದು ಸುಮಾರು 30′ ಎತ್ತರ ಬೆಳೆಯುವ ಮಧ್ಯಮಗಾತ್ರದ ಸದಾ ಹಸಿರಾಗಿರುವ ಮರ. ಎಲೆ 3" ರಿಂದ 6" ಉದ್ದ. ಆಕಾರ ಕರನೆಯಂತೆ. ಅಂಚು ನಯ. ತುದಿಯಿಂದ ಅರ್ಧಭಾಗದ ವರೆಗೆ ಮಧ್ಯದಲ್ಲಿ ಸೀಳಿರುವುದು ಇದರ ವೈಶಿಷ್ಟ್ಯ. ಈ ಸಸ್ಯ ಸೆಪ್ಟೆಂಬರ್ ತಿಂಗಳಿನಿಂದ ಡಿಸೆಂಬರ್ ತಿಂಗಳ ವರೆಗೆ ಹೂ ಬಿಡುತ್ತದೆ. ಬಿಳುಪು ಅಥವಾ ಕೆಂಪು ಬಣ್ಣದ ಅಂತ್ಯಾರಂಭಿ ಹೂಗೊಂಚಲು ಬಹಳ ಸುಂದರವಾಗಿದೆ. ಕೇಸರಗಳು 10. ಇವುಗಳಲ್ಲಿ 3-4 ಮಾತ್ರ ಫಲವತ್ತಾಗಿವೆ; ಉಳಿದವು ಬರಡು. ಅಂಡಾಶಯ ಬಹು ಅಂಡಕಗಳನ್ನೊಳಗೊಂಡ ಉಚ್ಚ ಮಾದರಿಯದು. ಫಲ ಬಹುಬೀಜವಿರುವ ಸುಮಾರು 1′ ಉದ್ದದ ಪಾಡ್ ಮಾದರಿಯದು.

ಕಂಚುವಾಳ ಮರವನ್ನು ಬೀಜಗಳಿಂದ ವೃದ್ಧಿಮಾಡಬಹುದು. ಇದರ ಕಾಂಡದಲ್ಲಿ ಸಿಕ್ಕುವ ಗೋಂದಿಗೆ ವಾಣಿಜ್ಯ ಪ್ರಾಮುಖ್ಯವಿದೆ. ಚೌಬೀನೆ ಕಂದು ಬೂದು ಮಿಶ್ರಿತ ಬಣ್ಣದ್ದು; ಹಗುರ ಮತ್ತು ಮೃದು. ಗೆದ್ದಲು ಮತ್ತು ಕುಟ್ಟೆ ಹುಳು ತಿಂದುಹಾಕುವುದು ಸಾಮಾನ್ಯ. ವ್ಯವಸಾಯೋಪಕರಣಗಳ ತಯಾರಿಕೆಯಲ್ಲೂ ಬಡಬಗ್ಗರು ಒಮ್ಮೊಮ್ಮೆ ಮನೆ ಕಟ್ಟಲೂ ಇದನ್ನು ಬಳಸುವರು. ಹೂವನ್ನು ತರಕಾರಿಯಾಗಿ ಮತ್ತು ಉಪ್ಪಿನಕಾಯಿಗಳಲ್ಲಿ ಉಪಯೋಗಿಸುವುದೂ ಉಂಟು. ಗೋಂದನ್ನು ಬಟ್ಟೆ ಮತ್ತು ಕಾಗದದ ತಯಾರಿಕೆಯಲ್ಲಿ ಉಪಯೋಗಿಸುವರು. ಬೇರು, ಕಾಂಡದ ತೊಗಟೆ ಮತ್ತು ಹೂಗಳನ್ನು ಸ್ಥಳೀಯ ಔಷಧಗಳಲ್ಲಿ ಉಪಯೋಗಿಸುತ್ತಾರೆ. ಬೇರುಗಳ ಮೇಲಿನ ತೊಗಟೆ ವಿಷಪೂರಿತವಾದದ್ದು. ಎಲೆಗಳು ದನಕರುಗಳಿಗೆ ಒಳ್ಳೆಯ ಆಹಾರ.

ವಾಹ್ಲಿ (ಬಿಳೀ ಕಂಚುವಾಳ) ಎಂಬ ಪ್ರಭೇದ ಒಂದು ಭೀಷ್ಮಬಳ್ಳಿ. ನಮ್ಮ ದೇಶದ ಕಾಡುಗಳಲ್ಲಿ ಬೆಳೆಯುತ್ತದೆ. ಬಳ್ಳಿಯ ನಾರನ್ನು ಹಗ್ಗವಾಗಿ ಉಪಯೋಗಿಸುವರು. ಬೀಜಗಳು ಗೇರುಬೀಜದ ರುಚಿ ಕೊಡುವುದರಿಂದ ಹುರಿದು ತಿನ್ನುವುದುಂಟು. ಎಲೆ ಅಗಲವಾಗಿರುವುದರಿಂದ ತಿಂಡಿ ತಿನ್ನಲೂ ಊಟ ಮಾಡಲೂ ಗುಡಿಸಿಲ ಮೇಲ್ಛಾವಣಿಗೆ ಹೊದಿಸಲೂ ಬರುತ್ತದೆ.

ಇನ್ನೊಂದು ಪ್ರಭೇದವಾದ ವೇರಿಗೇಟ (ಉಳಿಪೆ) ಎಂಬುದು ಸುಮಾರು 10-15 ಮೀಟರು ಎತ್ತರ ಬೆಳೆದು ಬೇಸಗೆಯಲ್ಲಿ ಹೂಬಿಡುತ್ತದೆ. ಇದನ್ನು ಉದ್ಯಾನವನಗಳಲ್ಲಿ ಗಿಡವಾಗಿ ಬೆಳೆಸುವರು. ಗೋಂದು ಚೆರಿ ಗೋಂದಿನಂತಿದೆ. ವಿವಿಧ ಬಣ್ಣಗಳನ್ನು ಕಟ್ಟಲು ತೊಗಟೆಯನ್ನು ಬಳಸಲಾಗುವುದು.

ಬಿಳಿಯ ಹೂಬಿಡುವ ಬಾಹಿನಿಯ ಆಲ್ಬ, ಬಾ.ಕ್ಯಾಂಡಿಡ, ಬಾ.ಹುಕರಿ, ಬಾ. ಅಕ್ಯುಮಿನೇಟ ಪ್ರಭೇದಗಳನ್ನೂ ಕಗ್ಗೆಂಪು ಹೂ ಬಿಡುವ ಬಾ.ಗಾಲ್ಪಿನಿ ಪ್ರಭೇದವನ್ನೂ ಅಲಂಕಾರಕ್ಕೋಸ್ಕರ ಉದ್ಯಾನಗಳಲ್ಲಿ ಬೆಳೆಸುವುದೂ ಉಂಟು.

(ಎಚ್.ಎಸ್.ಸಿ. ; ಬಿ.ಎ.ಸಿ.)

**ಕಂಚುಶಿಲ್ಪ :** ಅಚ್ಚುಗಳಲ್ಲಿ ಎರಕಹೊಯ್ದು ಆಕೃತಿಗಳನ್ನು ತಯಾರಿಸುವುದಕ್ಕೆ ಅತ್ಯಂತ ಪ್ರಶಸ್ತ ಲೋಹವಾದ ಕಂಚಿನಿಂದ ಶಿಲ್ಪಕಲಾಕೃತಿಗಳನ್ನು ರೂಪಿಸುವ ವಿಧಾನ. ಕಂಚಿನಿಂದ ವಿಗ್ರಹಗಳು ಮುಂತಾದ ಕಲಾವಸ್ತುಗಳ ತಯಾರಿಕೆ ಬಹು ಹಿಂದಿನ ಕಾಲದಿಂದಲೇ ನಡೆದು ಬಂದಿದೆ. ಈ ಮಿಶ್ರಲೋಹ ಗಟ್ಟಿ, ಹೊಳಪು ಹೊಂದಿದೆ. ಗಾಳಿಗೆ ಶೀತೋಷ್ಣಗಳಿಗೆ ಒಡ್ಡಿದರೂ ಬೇಗ ಹೊಳಪನ್ನು ಕಳೆದುಕೊಳ್ಳುವುದಿಲ್ಲ. ಅಲ್ಲದೆ ಅಚ್ಚಿನ ಎಲ್ಲ ಸಂದು ಬಿರುಕುಗಳಿಗೂ ಹರಿದು ಅಚ್ಚಿನಲ್ಲಿರುವ ಆಕೃತಿಯನ್ನೇ ತಾಳುತ್ತದೆ. ನವಶಿಲಾಯುಗ (ನಿಯೋಲಿಥಿಕ್ ಏಜ್) ಮತ್ತು ಕಬ್ಬಿಣಯುಗಗಳ ಮಧ್ಯದ ಅವಧಿಯಲ್ಲಿ ಕಂಚಿನ ತಯಾರಿಕೆ ಪ್ರಾರಂಭವಾಯಿತೆಂದು ತಿಳಿದುಬಂದಿದೆ. ಚರಿತ್ರಪೂರ್ವಕಾಲದಲ್ಲೇ ಏಷ್ಯದ ಮತ್ತು ಯೂರೋಪಿನ ಅನೇಕ ದೇಶಗಳಲ್ಲಿ ಕಂಚನ್ನು ಆಯುಧಗಳನ್ನು ಮತ್ತು ಅನೇಕ ಅಲಂಕಾರ ಪದಾರ್ಥಗಳನ್ನು ಮಾಡುವುದಕ್ಕೆ ಉಪಯೋಗಿಸುತ್ತಿದ್ದರು. ಕ್ರಿಸ್ತಪೂರ್ವ ಮೂವತ್ತು ಶತಮಾನಗಳಷ್ಟು ಹಿಂದೆಯೇ ಕಂಚನ್ನು ಕರಗಿಸಿ ಆಯುಧಗಳು ಮುಂತಾದುವನ್ನು ತಯಾರಿಸುವ ಕ್ರಮ ಭಾರತದಲ್ಲಿ ತಿಳಿದಿತ್ತೆಂಬುದು ಮೊಹೆಂಜೊದಾರೊದಲ್ಲಿ ನಡೆಸಿದ ಉತ್ಖನನಗಳಿಂದ ತಿಳಿದುಬಂದಿದೆ.

ದೇವರುಗಳ ಮತ್ತು ದೇವತಾಂಶ ಸಂಭೂತರಾದ ರಾಜರ, ಸಂತರ, ಭಕ್ತಾದಿಗಳ ವಿಗ್ರಹಗಳು; ಪೂಜಾನುಕೂಲತೆಯನ್ನು ಒದಗಿಸಿಕೊಡುವ ಸಲಕರಣೆಗಳು, ಉಪಕರಣಗಳು, ದೇವಸ್ಥಾನದ ಕವಾಟಗಳು, ಬಾಗಿಲುಗಳು, ಶವಾಗಾರಗಳು, ಕಲ್ಲಿನ ಗೋರಿ ಅಲಂಕಾರ, ದೀಪದ ಮಲ್ಲಿಗಳು, ಹಲಗಾರತಿಗಳು, ತಟ್ಟೆಗಳು, ಅರ್ಘ್ಯ ಪಾತ್ರೆಗಳು, ಉದ್ಧರಣೆಗಳು, ದೀಪಸ್ತಂಭಗಳು, ಸ್ತೂಪಗಳು ಮತ್ತು ಕುದುರೆಗಾಡಿಗಳ ಮಸ್ತೀಬು, ಮೇಣದ ಬತ್ತಿಗಳನ್ನಿಡುವ ಗೆಲಿಂಚೆಗಳು, ಹೊಗೆಬತ್ತಿಯ ಮತ್ತು ಹೂವಿನ ಕರಂಡಕಗಳು, ಬಾಗಿಲ ಚಿಲಕ ಬೀಗಗಳು, ಮಕ್ಕಳ ಆಟದ ಸಾಮಾನುಗಳು, ದುಂಡಾದ ಮುದ್ರೆಗಳು—ಮುಂತಾದ ಅನೇಕಾನೇಕ ವಸ್ತುಗಳು ಕಂಚುಶಿಲ್ಪಕ್ಕೆ ಉತ್ತಮ ಉದಾಹಾರಣೆಗಳಾಗಿವೆ.

ಪ್ರಾಚ್ಯ ಮತ್ತು ಪಾಶ್ಚಾತ್ಯ ಕಂಚುಶಿಲ್ಪಗಳಲ್ಲಿನ ಪ್ರಮುಖ ವ್ಯತ್ಯಾಸಗಳಿಗೆ ಅಲ್ಲಲ್ಲಿನ ಧಾರ್ಮಿಕ, ಸಾಂಸ್ಕೃತಿಕ ಹಾಗೂ ನಾಗರಿಕ ಧೋರಣೆಗಳಲ್ಲಿನ ವ್ಯತ್ಯಾಸಗಳೇ ಕಾರಣಗಳಾಗಿವೆ. ಪಾಶ್ಚಾತ್ಯ ಕಲೆಯಲ್ಲಿ ಕಾಲಾನುಕಾಲಕ್ಕೆ ಗಮನಾರ್ಹವಾದ ಮಾರ್ಪಾಟುಗಳಾಗಿದ್ದರೂ ಕಂಚುಶಿಲ್ಪ ಮಾತ್ರ ಆಧುನಿಕ ಕಾಲದ ವರೆಗೆ ತನ್ನ ಅಭಿಜಾತ ಗುಣವನ್ನು ಉಳಿಸಿಕೊಂಡು ಬಂದಿದೆ ಎನ್ನಬಹುದು.

ಏಷ್ಯ ಖಂಡಕ್ಕೆ ಸೇರಿದ ಚೀನ, ಜಪಾನ್, ಟಿಬೆಟ್, ಭೂತಾನ್, ನೇಪಾಳ, ಮಲಯ, ಕೊರಿಯ, ಇಂಡೊನೇಷ್ಯ, ಬರ್ಮ ಮುಂತಾದ ಪ್ರದೇಶಗಳ ಕಲಾಸಂಸ್ಕೃತಿಗಳು, ದೇಶೀಯವೆನ್ನಬಹುದಾದ ಸವರಣೆಗಳಿಗೆ ಒಳಪಟ್ಟಿದ್ದರೂ ಹೆಚ್ಚಾಗಿ ಮತ್ತು ಮುಖ್ಯವಾಗಿ ಭಾರತದ ಕಲಾಸಂಸ್ಕಾರವನ್ನೇ ಪ್ರತಿಬಿಂಬಿಸುತ್ತವೆ. ಏನಾದರೂ ಅಂತರಗಳಿದ್ದಲ್ಲಿ, ಅವು ಈಚಿನ ಪಾಶ್ಚಾತ್ಯ ಪ್ರಭಾವಕ್ಕೆ ಅನುಗುಣವಾದುವಾಗಿವೆ.

**ಪ್ರಾಚ್ಯ ಕಂಚುಗಳು :** ಕಂಚನ್ನು ಕರಗಿಸಿ ಮೂರ್ತಿಗಳನ್ನೂ ಆಯುಧಗಳನ್ನೂ ಇತರ ಪದಾರ್ಥಗಳನ್ನೂ ತಯಾರುಮಾಡುವ ಕಲೆ ಮೊತ್ತಮೊದಲು (ಕ್ರಿ.ಪೂ. 3000) ಭಾರತ ಮತ್ತು ಅಸ್ಸೀರಿಯಗಳಲ್ಲಿ ಬೆಳೆಯಿತು. ತಾಮ್ರದೊಂದಿಗೆ ಇತರ ಲೋಹ ಬೆರೆಸಿ ಕರಗಿಸಿ ಕಂಚು ಮಾಡುವುದರಲ್ಲಿ ಭಾರತೀಯರು ಮುಂದುವರಿದಿದ್ದರೂ ಅಂದವಾದ, ಕಲಾವೈಶಿಷ್ಟ್ಯಹೊಂದಿದ ಪದಾರ್ಥಗಳನ್ನು ತಯಾರಿಸುವುದರಲ್ಲಿ ಅಸ್ಸೀರಿಯನ್ನರು ಹೆಚ್ಚು ನೈಪುಣ್ಯಹೊಂದಿದ್ದರು. ಕ್ರಮೇಣ ಇದರಲ್ಲೂ ಭಾರತೀಯರು ಮೇಲ್ಮೆ ಪಡೆದರು. ಹಿಂದೂ ದೇವತಾಮೂರ್ತಿಗಳು ಎಲ್ಲ ಕಡೆ ತಯಾರಾದುವು. ಬೌದ್ಧ ಮತ್ತು ಜೈನಮುನಿಗಳ ಮೂರ್ತಿಗಳೂ ಹೊರಬಂದುವು. ಪ್ರತಿಯೊಂದು ದೇವಾಲಯದಲ್ಲೂ ದೇವತಾಮೂರ್ತಿಗಳು, ಹೆಚ್ಚಾಗಿ ಉತ್ಸವಮೂರ್ತಿಗಳು ಕಂಚಿನಿಂದಲೇ ತಯಾರಾದುವು. ಸಿಲೋನ್, ಆಗ್ನೇಯ ಏಷ್ಯ ದೇಶಗಳು, ಟಿಬೆಟ್—ಹೀಗೆ ನೆರೆದೇಶಗಳಿಗೂ ಈ ಕಂಚು ಕಲೆ ಹರಡಿತು. ಈಗ ಉತ್ತರ ಭಾರತದ ಮಧ್ಯಪ್ರದೇಶ, ಜಯಪುರ ಮುಂತಾದ ಕೆಲವು ಕಡೆಗಳಲ್ಲಿ, ದಕ್ಷಿಣದ ಕುಂಭಕೋಣಂ, ತಿರುವನಂತಪುರ, ತಂಜಾವೂರು ಪ್ರದೇಶಗಳಲ್ಲಿ, ದೇವತಾಮೂರ್ತಿಗಳನ್ನಲ್ಲದೆ ಪಾತ್ರೆಗಳು, ದೀಪಸ್ತಂಭಗಳು ಮುಂತಾದ ಪೂಜೋಪಕರಣಗಳು, ಮಕ್ಕಳ ಆಟದ ಸಾಮಾನುಗಳು ಮುಂತಾದುವನ್ನೂ ತಯಾರು ಮಾಡುತ್ತಾರೆ. ಭಾರತದಲ್ಲಿ ಈ ಕಲೆ ಇಂದಿಗೂ ಜೀವಂತವಾಗುಳಿದಿದೆಯಲ್ಲದೆ ನಿತ್ಯೋಪಯೋಗಿ ಸಾಮಾನುಗಳೊಂದಿಗೆ ಶ್ರೀಮಂತ ಕಲಾಭಿರುಚಿಯನ್ನು ತೃಪ್ತಿಪಡಿಸುವ ಕಲಾವಸ್ತುಗಳ ನಿರ್ಮಾಣವೂ ಸೇರಿ ಅನೇಕಾನೇಕ ಕಾರ್ಮಿಕ ಕುಟುಂಬಗಳಿಗೆ ಜೀವನ ನಿರ್ವಹಣೆ ಒದಗಿದಂತಾಗಿದೆ.

ಭಾರತದ ದೇವತಾಸ್ವರೂಪಗಳಲ್ಲಿ ನಟರಾಜ, ಉಮಾಮಹೇಶ್ವರ, ಶಿವಶಕ್ತಿ, ಶಿವ ಮತ್ತು ರಾಮಪಂಚಾಯತನ ಮೂರ್ತಿಗಳು, ಸಂಧ್ಯಾರಾಗಮೂರ್ತಿ,ದಕ್ಷಿಣಾಮೂರ್ತಿ, ವೀರಭದ್ರ, ಭೈರವ, ದತ್ತಾತ್ರೇಯ ಮುಂತಾದ ಪ್ರತಿಮೆಗಳು, ದೇವೀಸ್ವರೂಪದ



ನಟರಾಜಮೂರ್ತಿ

ದುರ್ಗೆ, ದಾಕ್ಷಾಯಿಣಿ, ಅನ್ನಪೂರ್ಣ, ಮಹಿಷಾಸುರಮರ್ದಿನಿ, ಕಾಳಿ, ಪಾರ್ವತಿ, ಇಂದ್ರಾಣಿ, ಭೈರವಿ, ವಾರಾಹಿ, ವೈಷ್ಣವೀ, ಶಿವಕಾಮಿನಿಗಳು, ಸಪ್ತಮಾತೃಕೆಗಳು, ಲಕ್ಷ್ಮಿ, ಸರಸ್ವತಿ, ಗಜಲಕ್ಷ್ಮಿ, ಭೂದೇವಿ, ಭಾರತಿ ಮೊದಲಾದುವು, ಗಣೇಶ, ಸೋಮಸ್ಕಂಧ, ವೇಣುಗೋಪಾಲ, ಸುಬ್ರಹ್ಮಣ್ಯ, ನಾರಸಿಂಹ, ಲಕ್ಷ್ಮೀನರಸಿಂಹ, ರಾಧೆ, ಕೃಷ್ಣ, ಆಂಜನೇಯ, ಗರುಡ, ಅಷ್ಟದಿಕ್ಪಾಲಕರು, ನವಗ್ರಹಮೂರ್ತಿಗಳು, ವಿಷ್ಣು, ರಂಗನಾಥ, ಶೇಷಶಾಯಿ, ಸತ್ಯನಾರಾಯಣ ಮುಂತಾದ ದೇವಸ್ವರೂಪಗಳು, ಗೌತಮಬುದ್ಧ, ಅಮಿತಾಭ, ರತ್ನಸಂಭವ, ಅಮೋಘಸಿದ್ಧಿ ಮುಂತಾದ ಧ್ಯಾನಿಬುದ್ಧರು, ಅವರ ಕುಟುಂಬಕ್ಕೆ ಸೇರಿದ ಹೇಣುಕಾ, ಏಕಜಾತ, ನೈರಾತ್ಮಾ, ಮಾರೀಚೀ, ವಜ್ರವಾರಾಹಿ, ಲೋಕೇಶ್ವರ, ಜಂಭಲ, ವಸುಧಾರಾ, ಪರ್ಣಶವರೀ ಪ್ರಜ್ಞಾಪಾರಮಿತಾ, ಮಂಜುಶ್ರೀ, ಮೈತ್ರೇಯ ಮುಂತಾದುವೂ ಜೈನಮತಕ್ಕೆ ಸಂಬಂಧಿಸಿದಂತೆ ಆದಿನಾಥ, ಜೀವಂಧರ ಮುಂತಾದವರು; ಭಕ್ತವರ್ಯರಾದ ಸುಂದರ ಸುಂದರಮೂರ್ತಿ, ಮಾಣಿಕ್ಯವಾಚಕರ್ ಮುಂತಾದವರು. ಚರಿತ್ರ ಪುರುಷರಾದ ಶ್ರೀಕೃಷ್ಣದೇವರಾಯ ಮತ್ತು ಅವನ ರಾಣಿಯರು—ಇಂಥ ಶಿಲ್ಪಗಳು ಅಸಂಖ್ಯಾತವಾಗಿವೆ. ಭಾವದರ್ಶನದಲ್ಲಿ ಕಲಾದೃಷ್ಟಿಯಲ್ಲಿ ಅತ್ಯಂತ ಲೋಕಮಾನ್ಯತೆ ಪಡೆದ ವಿಗ್ರಹಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಹೆಸರಿಸಬಹುದು.

1 ಶ್ರೀಶೈಲ, ತಂಜಾವೂರು, ಕಾಳಹಸ್ತಿ ತಿರುಮಂಗಳಗಳ ನಟರಾಜರು, ಸಂಧ್ಯಾರಾಗಮೂರ್ತಿಗಳು, ಭಿಕ್ಷಾಟನಶಿವರು ; ಲೇಪಾಕ್ಷಿಯ ಭಿಕ್ಷಾಟನ ಶಿವ, ವೀರಭದ್ರ, ಉಮಾಮಹೇಶ್ವರರು. 2 ಶ್ರೀಶೈಲದ ದಕ್ಷಿಣಾಮೂರ್ತಿ. 3 ಸಿಂಹಳದ ಮತ್ತು ತಂಜಾವೂರಿನ ಸುಂದರಮೂರ್ತಿ, ಮಾಣಿಕ್ಯವಾಚಕರ್. 4 ನೇಪಾಳದ ಶಿವಶಕ್ತಿ ಸ್ವರೂಪಗಳು, ಬೋಧಿಸತ್ತ್ವರು. 5 ಕುರ್ಕಿಹಾರಿನ ಪದ್ಮಪಾಣಿವಿಗ್ರಹ. 6 ಚಂಪದೇಶದ ಬುದ್ಧ. 7 ಜಾವ ಮತ್ತು ನಳಂದಗಳ ಪ್ರಜ್ಞಾಪಾರಮಿತ. 8 ನಾಗಪಟ್ಟಣದಲ್ಲಿನ ಬುದ್ಧನ ವಿಗ್ರಹ, ವಿಷಾಪಹರಣ ಮೂರ್ತಿ. 9 ಚೋಳಯುಗದ ಪಾರ್ವತಿ, ಶಿವಕಾಮಿನಿ ವಿಗ್ರಹಗಳು. 10 ನಳಂದ ಪ್ರದೇಶದ ತಾರಾ, ಮಂಜುಶ್ರೀ, ಪ್ರತಿಮೆಗಳ ಮಧ್ಯದಲ್ಲಿರುವ ಬುದ್ಧ ಮತ್ತು ಅವಲೋಕಿತೇಶ್ವರರು. ಅದೇ ಪ್ರದೇಶದ ಪದ್ಮಪಾಣಿ ಮತ್ತು ಸಿಂಹನಾದರು. 11 ಟಿಬೆಟ್ ಮತ್ತು ನೇಪಾಳ ಪ್ರದೇಶಗಳ ವಜ್ರಪಾಣಿ, ಪದ್ಮಪಾಣಿ, ವಜ್ರಧಾರಾ, ಲೋಕೇಶ್ವರರು. 12 ಸಿಂಹಳದ್ವೀಪದ ಬೋಧಿಸತ್ತ್ವರು, ನಾಟ್ಯವಿಗ್ರಹ, ಅನುರಾಧಾಪುರದ ವಜ್ರಸತ್ತ್ವ ಸ್ವರೂಪ. 13 ಚೀನದ ಆಸನಸ್ಥ ಬುದ್ಧ ಪ್ರತಿಮೆಗಳು, ಕ್ವಾನ್‌ಇನ್, ಸಿಂಹನಾದ ಅವಲೋಕಿತೇಶ್ವರರು. 14 ನೇಪಾಳದ ಅಮಿತಭಾತ್ರಿ ಮೂರ್ತಿ, ಬುದ್ಧನ ಜನನ ಶಿಲ್ಪ. 15 ಸಿಕ್ಕಿಂ ದೇಶದ ಪಂಚಲೋಹದ ಶಾಕ್ಯಶಿಲ್ಪ, ಮಿಲರೇಪ ತಾರಾ ಮುಂತಾದುವು. 16 ಜಪಾನಿನ ದೊಡ್ಡ ಪ್ರಮಾಣದ ಬುದ್ಧ ಅವಲೋಕಿತೇಶ್ವರ, ತಾರಾ, ಮಂಜುಶ್ರೀ ವಿಗ್ರಹಗಳು. 17 ಭೂತಾನ್ ದೇಶದ ದೀಪಂಕರ ಮೈತ್ರೇಯ, ಪದ್ಮಸಂಭವ, ರತ್ನಸಂಭವ ಮುಂತಾದ ಬೋಧಿಸತ್ತ್ವರು. 18 ತಿರುಪತಿಯಲ್ಲಿಯ ಶ್ರೀಕೃಷ್ಣದೇವರಾಯ ಮತ್ತು ಅವನ ರಾಣಿಯರ ಪ್ರತಿಮೆಗಳು.

ದಕ್ಷಿಣ ಭಾರತದಲ್ಲಿ ತಂಜಾವೂರು, ಕುಂಭಕೋಣಂ, ತಿರುವನಂತಪುರ ಪ್ರದೇಶಗಳಲ್ಲೂ ಉತ್ತರದಲ್ಲಿ ಮಧ್ಯಪ್ರದೇಶ, ಜಯಪುರ, ಆಗ್ರ, ಅಯೋಧ್ಯ ಮೊದಲಾದ ಕಡೆಯೂ ಕಂಚುಶಿಲ್ಪದ ಕೆಲಸ ಚೆನ್ನಾಗಿ ನಡೆಯುತ್ತದೆ. ಮಧ್ಯ ಪ್ರದೇಶದವುಗಳಲ್ಲಿ ನವಿಲುಗಳು, ನಂದಿಗಳು, ಸರ್ಪಗಳು, ವಿಧವಿಧವಾದ ದೇವತಾ ಸ್ವರೂಪಗಳು, ಚಿಕ್ಕಪುಟ್ಟ ದೇವಾಲಯಗಳು, ಶಿವಶಕ್ತಿ ಸ್ವರೂಪಗಳು, ಶಿವ ಮತ್ತು ಬುದ್ಧನ ಮುಖಗಳು, ಗಂಟೆಗಳು, ಕೈಯಲ್ಲಿ ಬೆಣ್ಣೆಯ ಮುದ್ದೆಯನ್ನು ಹಿಡಿದು ಅಂಬೆಗಾಲಿಡುವ ಬಾಲಕೃಷ್ಣಾಕೃತಿಗಳು——ಮುಂತಾದುವು ಬಹು ರಮ್ಯವಾಗಿವೆ. ಈ ದೇವತೆಗಳ ದೊಡ್ಡ ರೂಪಗಳೇ ಉತ್ಸವಮೂರ್ತಿಗಳಾಗಿ ದೇವಾಲಯಗಳಲ್ಲಿ ಬಳಕೆಯಲ್ಲಿವೆ. ಉತ್ತರಕ್ಕಿಂತ ದಕ್ಷಿಣದಲ್ಲಿ ಶಾಸ್ತ್ರಾಂಶಕ್ಕೆ ಹೆಚ್ಚು ಪ್ರಾಧಾನ್ಯ. ದಕ್ಷಿಣ ಭಾರತದ ದೀಪಸ್ತಂಭಗಳಿಗೆ ಹಂಸ, ಕಿನ್ನರ, ಆಂಜನೇಯ, ಗರುಡ, ಕಲ್ಪವೃಕ್ಷ ಮುಂತಾದ ನಮೂನೆಗಳನ್ನು ಹೊಂದಿಸಿರುತ್ತಾರೆ. ಹಿನ್ನೆಲೆಯಲ್ಲಿ ತುಪ್ಪ, ಎಣ್ಣೆ ತುಂಬಲು ಮಾಡಿರುವ ಬುಡ್ಡಿಗಳ ಅಲಂಕಾರ ತಗಡಿನಲ್ಲಿ ನಿರ್ಮಿಸಿ ಒತ್ತಿ ಅಂಟಿಸಿದ ಗಜಲಕ್ಷ್ಮಿ, ಲಕ್ಷ್ಮಿ, ಸರಸ್ವತಿ, ಮೂರು, ಐದು, ಏಳು, ಒಂಬತ್ತು ಹೆಡೆಗಳುಳ್ಳ ಆದಿಶೇಷ ಮುಂತಾದ ಆಕೃತಿಗಳನ್ನೊಳಗೊಂಡಿರುತ್ತವೆ. ಸರ್ಪಾಕೃತಿಯ ದೀಪಗಳಿಗೆ ನಾಗದೀಪಗಳೆಂದು ಹೆಸರು. ಸಂಪೂರ್ಣವಾಗಿ ಗುಂಡುಗುಂಡಾಗಿಯೂ ಇರುವ ಪ್ರತಿಮಾಶಿಲ್ಪವಲ್ಲದೆ ಕಂಚುತಗಡಿನ ಶಿಲ್ಪ ಕೂಡ ಬಳಕೆಯಲ್ಲಿತ್ತು. ಈ ಕೆಲಸ ಕವಾಟಸ್ತಂಭಗಳ ಅಲಂಕಾರಕ್ಕೂ ಬಾಗಿಲುಗಳ ಅಲಂಕಾರಕ್ಕೂ ಸರಿಹೋಗುತ್ತಿತ್ತು. ಶ್ರೀಶೈಲ ದೇವಸ್ಥಾನದ ಗೋಡೆಗಳಲ್ಲಿ ಇಂಥ ಅಲಂಕರಣವನ್ನು ಕಾಣಬಹುದು. ಪಾಶ್ಚಾತ್ಯ ದೇಶಗಳಲ್ಲಿ ಕೂಡ ಈ ನಮೂನೆಯ ಅಲಂಕಾರ ಕವಾಟಗಳಿಗೂ ಬಾಗಿಲುಗಳಿಗೂ ಬಲಿಪೀಠಗಳಿಗೂ ಪ್ರಾರ್ಥನಾಭಾಗಗಳಿಗೂ ಅಳವಟ್ಟಿದೆ.

ಪರ್ಷಿಯದ ಲ್ಯೂರಿಸ್ತಾನ್ ಮತ್ತು ರಷ್ಯಕ್ಕೆ ಸೇರಿದ ಅಜ಼ರ್ ಬೈಜಾನ್‌ಗಳಲ್ಲೂ ಕಂಚುಕಲೆ ಮೊಹೆಂಜೊದಾರೋ ಕಾಲದಲ್ಲೇ ಪ್ರಾರಂಭವಾಯಿತೆನ್ನಬಹುದು. ಲ್ಯೂರಿಸ್ತಾನದ ತಯಾರಿಕೆ ಮೇಲ್ಮಟ್ಟದ್ದು. ದೇವತಾವಿಗ್ರಹಗಳು ಕೊಂಚಮಟ್ಟಿಗೆ ಗ್ರೀಕರ ಡಯಾನಾ ವಿಗ್ರಹದ ಮಾದರಿಯವು. ಅವರ ಕುದುರೆ ಪ್ರತಿಮೆಗಳು ಉಚ್ಚ ಮಟ್ಟದ ಕಲಾಪ್ರತಿಭೆಯನ್ನು ತೋರಿಸುತ್ತವೆ. ಭಾರತದ ನೆರೆರಾಜ್ಯವಾದ್ದರಿಂದ ಪರ್ಷಿಯನ್ನರ ಕಲಾದೃಷ್ಟಿ ಆಧ್ಯಾತ್ಮಿಕವಾಗಿಯೂ ಇತ್ತು. ಅವರ ಜೀವನವೃಕ್ಷ (ಟ್ರೀ ಆಫ್ ಲೈಫ್) ಸಾಂಕೇತಿಕ; ಭಾರತದ ಆಧ್ಯಾತ್ಮಿಕ ಧೋರಣೆಗಳನ್ನೊಳಗೊಂಡಿದೆ.

**ಪಾಶ್ಚಾತ್ಯ ಕಂಚುಗಳು :** ಪಾಶ್ಚಾತ್ಯ ಕಲಾಧೋರಣೆಗಳಿಗೂ ಧ್ಯೇಯಗಳಿಗೂ ಗ್ರೀಸ್ ದೇಶದ ಕಲಾಸಂಸ್ಕೃತಿ ಆಧಾರವಾಗಿದೆ. ಗ್ರೀಸಿನ ಪ್ರಭಾವ ಒಂದು ಕಾಲದಲ್ಲಿ ಹೆಚ್ಚಾಗಿಯೂ ಮತ್ತೊಂದರಲ್ಲಿ ಕಡಿಮೆಯಾಗಿಯೂ ಇರುತ್ತಲೇ ಬಂದಿದೆ. ಈ ಪ್ರಭಾವಕ್ಕೆ ಅಭಿಜಾತ ಧೋರಣೆ ಎನ್ನುತ್ತಾರೆ. ಕ್ರಿ.ಶ. 13ನೆಯ ಶತಮಾನದ ವರೆಗೂ ಇದು ತಾನೇ ತಾನಾಗಿದ್ದು ಗಾಥಿಕ್ ವೈಖರಿ ಜಾರಿಗೆ ಬಂದ ಅನಂತರ ಕಡಿಮೆಯಾಗಿ ಮತ್ತೆ ಯೂರೋಪಿನ ಸಾಹಿತ್ಯ ಕಲೆಗಳ ಪುನರುಜ್ಜೀವನ ಕಾಲದಲ್ಲಿ ಹೆಚ್ಚಾಗಿ ದೇಶೀಯ ಸಂಸ್ಕೃತಿಗಳಿಗೆ ಒಳಪಟ್ಟು ನವೀನ ಅಭಿಜಾತ ಮಾರ್ಗ ಎಂಬ ಹೆಸರನ್ನು ಪಡೆದು ಈಗ ಅತಿ ನವೀನ ಧೋರಣೆಗಳಾದ ಕ್ಯೂಬಿಸಂ, ಮುಂತಾದ ಧೋರಣೆಗಳಿಂದಾಗಿ ಹಿಂದೆ ಬಿದ್ದಿದೆ.

ಗ್ರೀಸ್ ಪ್ರದೇಶದ ಕಂಚುಶಿಲ್ಪ ಅಮೃತಶಿಲೆಯ ಶಿಲ್ಪದಷ್ಟು ವಿಪುಲವಾಗಿಲ್ಲದಿದ್ದರೂ ರಚನೆಯ ವಿಧಾನದಲ್ಲಾಗಲಿ ಅಥವಾ ಕಲಾಧ್ಯೇಯಗಳಲ್ಲಾಗಲಿ ಉಚ್ಚ ಮಟ್ಟದ್ದಾಗಿದೆ. ಅಮೃತಶಿಲೆ ಮತ್ತಿತರ ವಸ್ತುಗಳಲ್ಲಿ ಸಾಧಿಸಿದ ಕಲಾಶ್ರೇಷ್ಠತೆಯನ್ನವರು ಕಂಚುಶಿಲ್ಪದಲ್ಲೂ ಸಾಧಿಸಿದರು. ಅವರ ಕಲಾಪ್ರೌಢಿಮೆಗೆ ನಿದರ್ಶನವಾಗಿ ಅನೇಕ ಕಂಚುಪ್ರತಿಮೆಗಳು ಇಂದಿಗೂ ಉಳಿದಿವೆ.

ಇವುಗಳಲ್ಲಿ ಕೆಲವು ಮುಖ್ಯಕೃತಿಗಳೆಂದರೆ—ಆರ್ಮೀನಿಯ ಪ್ರದೇಶದಲ್ಲಿ ಸಿಕ್ಕ ಆರ್ಟೆಮಿಸ್ ದೇವತೆಯ ದೊಡ್ಡ ಪ್ರಮಾಣದ ತಲೆ . ಸೇಬನ್ನು ಹಿಡಿದ ಹರ್ಕ್ಯುಲಿಸ್, ಪಾಲಿಕ್ಲೀಟಸ್ ರಚಿಸಿದ ಅಮೆಜ಼ಾನ್ ವಿಗ್ರಹ, ತಗಡಿನ ಉಬ್ಬು ಕೆತ್ತನೆಯ ಸಿರಿಯಸ್, ಪಾಂಪೇ ಪ್ರದೇಶದ ಆರ್ಟೆಮಿಸ್, 20″ ಎತ್ತರದ ನಾರ್ಸಿಸಸ್ ವಿಗ್ರಹಗಳು. ಈ ವಿಗ್ರಹಗಳಲ್ಲಿನ ಕೂದಲಿನ ರಚನೆ ಗಮನಾರ್ಹವಾದ್ದು. ಉದಾಹರಣೆಗೆ, ಜುಪಿಟರ್‌ನ ಪ್ರತಿಮೆಯಲ್ಲಿ ತಲೆಗೂದಲು ಸಿಂಹದ ಕೇಸರಗಳಂತೆ ಸುರುಳಿ ಸುರುಳಿಯಾಗಿದ್ದರೆ ಅಪೊಲೊ ವಿಗ್ರಹದಲ್ಲಿ ಕೂದಲು ಕಂಠದ ಮೇಲೆ ಮತ್ತು ಕಪಾಲದ ಮೇಲೆ ಹರಿದಿದೆ. ಬ್ಯಾಕಸ್ ವಿಗ್ರಹದಲ್ಲಿ ಕೂದಲಿನ ಉಂಗುರಗಳು ಕಂಠದ ಮೇಲೆ ಮಾತ್ರ ಬಿದ್ದಿವೆ.

ಪ್ರಾಟೆಸ್ಟೆಂಟ್ ಧರ್ಮ ಹೆಚ್ಚಾಗಿ ವ್ಯಾಪಿಸಿರುವ ಕ್ರೈಸ್ತ ದೇಶಗಳಲ್ಲಿ ಕಂಚು ಪ್ರತಿಮೆಗಳು ಹೆಚ್ಚಾಗಿ ಸಂಸಾರಜೀವನಕ್ಕೆ ಸಂಬಂಧಿಸಿದುವು. ಆದರೆ, ರೋಮನ್ ಕೆಥೊಲಿಕ್ ಧರ್ಮ ವ್ಯಾಪಕವಾಗಿರುವ ದೇಶಗಳಲ್ಲಿ ಆರಾಧನೆಗಾಗಿ ನಿರ್ಮಾಣವಾದ ಮೇರಿ ಅವಳ ಶಿಶು ಮತ್ತು ಸಂತರು, ದೇವದೂತರು—ಇವರ ವಿಗ್ರಹಗಳು ಭಾವಗರ್ಭಿತವಾಗಿವೆ. ಪ್ರಾಚ್ಯದೇಶಗಳಲ್ಲಿರುವಂತೆ ಇವುಗಳಲ್ಲಿ ದೇವತಾಂಶ ಪ್ರಧಾನ.

**ಗಾಥಿಕ್ ಯುಗದ ಕಂಚುಗಳು :** ಇಂಗ್ಲೆಂಡಿನಲ್ಲಿ ಸಾಧಾರಣವಾಗಿ ರಾಜರ ಮತ್ತು ಶ್ರೀಮಂತರ ಪ್ರತಿಮೆಗಳು ಮಾತ್ರ ಕಂಚಿನವಾಗಿವೆ. ಇವಕ್ಕೆ ಚಿನ್ನದ ಲೇಪನ ಮಾಡಿದೆ. ಫ್ರಾನ್ಸಿನಲ್ಲಿ 13–14 ಶತಮಾನಗಳಲ್ಲಿ ಗೋರಿಗಳ ಅಲಂಕಾರಕ್ಕಾಗಿ ಪ್ರತಿಮೆಗಳು ನಿರ್ಮಿತವಾದುವು. ಇವರ ಕಲಾವೈಶಿಷ್ಟ್ಯ ಇಂಗ್ಲೆಂಡಿಗೂ ಹರಡಿತು. ಇವುಗಳಲ್ಲಿ ಉಲ್ಲೇಖಾರ್ಹವಾದುದೆಂದರೆ 15ನೆಯ ಶತಮಾನದಲ್ಲಿ ರಚಿತವಾದ ರಿಚರ್ಡ್ ಬ್ಯೂಷಾಂನ ವಿಗ್ರಹ. ಬಹು ಸುಂದರವಾದ ಇದಕ್ಕೆ ನೆದರ್ಲೆಂಡಿನ ಅಕ್ಕಸಾಲೆ ಬಾರ್ತ್‌ಲೋಮ್ಯೂ ಲ್ಯಾಂಬ್‌ಸ್ಪ್ರಿಂಗ್ ಚಿನ್ನದ ಲೇಪ ಕೊಟ್ಟಿದ್ದಾನೆ.

15, 16ನೆಯ ಶತಮಾನಗಳಲ್ಲಿ, ನ್ಯೂರೆಂಬರ್ಗ್, ಆಗ್ಸ್‌ಬರ್ಗ್, ಇನ್ಸ್‌ಬ್ರುಕ್ ಮುಂತಾದ ಅನೇಕ ನಗರಗಳಲ್ಲಿ ಅತ್ಯಂತ ಸುಂದರವಾದ ಕಂಚುಕಲಾಕೃತಿಗಳು ತಯಾರಾದುವು. ಚಕ್ರವರ್ತಿ ಮ್ಯಾಕ್ಸಿಮಿಲಿಯನ್ನನ ಸಮಾಧಿಯ ಮೇಲಿರುವ ಇಪ್ಪತ್ತೆಂಟು ಮೂರ್ತಿಗಳಿಂದಲಂಕೃತವಾಗಿರುವ ಕೃತಿಯಂತೂ ಮೋಹಕ ಕಲಾ ಸೌಂದರ್ಯವನ್ನು ಹೊಂದಿದೆ. ಇಟಲಿ, ನೆದರ್ಲೆಂಡ್ಸ್ ಮುಂತಾದ ಇತರ ದೇಶಗಳಲ್ಲೂ ರಚಿಸಲ್ಪಟ್ಟು ಇಂದಿಗೂ ಪ್ರೇಕ್ಷಕರನ್ನು ಬೆರಗುಗೊಳಿಸುತ್ತಿರುವ ಕಂಚು ಪ್ರತಿಮೆಗಳು ಇಂಥ ಉತ್ಕೃಷ್ಟ ಕಲಾಪ್ರೌಢಿಮೆಗೆ ನಿದರ್ಶನಗಳು.

ಈ ಕಾಲದಲ್ಲಿ ಇಂಗ್ಲೆಂಡಿನಲ್ಲಿ ರಚಿತವಾದ ಕಂಚು ಕೃತಿಗಳು ಕಲಾಪ್ರೌಢಿಮೆಯಲ್ಲಿ ಇನ್ನೂ ಉನ್ನತಮಟ್ಟವನ್ನು ಸಾಧಿಸಿದವು. ಪುನರುಜ್ಜೀವನಯುಗದಲ್ಲಿ ಅಂದರೆ ಹದಿನೈದನೆಯ ಶತಮಾನಗಳಲ್ಲಿ ರಚಿತವಾದ ಕೆಲವು ಕಲಾಕೃತಿಗಳು—ಉದಾಹರಣೆಗೆ ಏಳನೆಯ ಹೆನ್ರಿಯ ಸಮಾಧಿಯ ಮೇಲಿರುವ ಪ್ರತಿಮಾ ಪುಂಜ, ಉಬ್ಬು ಆಕೃತಿಗಳು, ರಿಚ್ಮಂಡನ ಮಾರ್ಗರೆಟ್ ಪ್ರತಿಮೆ—ಶವಗಳಿಂದಲೇ ಅಚ್ಚು ತಯಾರಿಸಿ

ಎರಕಹೊಯ್ದು ಮಾಡಿದುವೋ ಎಂಬಂತೆ ಯಥಾವತ್ತಾದ ಮೂಲಪ್ರತಿಬಿಂಬನೆ ಪಡೆದು ರಮ್ಯವಾಗಿವೆ. ಇದೇ ಕಾಲದಲ್ಲಿ ಇಟಲಿ, ಫ್ರಾನ್ಸ್, ಸ್ಪೇನ್‍ಗಳಲ್ಲಿ ರಚಿತವಾದ ಕಂಚುಪ್ರತಿಮೆಗಳು, ಇಂಥ ನೈಸರ್ಗಿಕತೆಯನ್ನೂ ಚೆಲುವನ್ನೂ ಹೊಂದಿಲ್ಲವೆನ್ನಬೇಕು.

ಹತ್ತೊಂಬತ್ತನೆಯ ಶತಮಾನದಿಂದೀಚೆಗೆ ಪೂರ್ವಸಂಪ್ರದಾಯಗಳ ವಿಶ್ವಾಸಗಳ ನಿರ್ಬಂಧವಿಲ್ಲದೆ ವಾಸ್ತವಿಕತೆಯ ಮತ್ತು ಅದರ ಹಿನ್ನೆಲೆಯ ಭಾವನೆಗಳ ಮತ್ತು ರಾಗವಿಶೇಷಗಳ ನಿರೂಪಣೆ ಹೆಚ್ಚಾಗಿ ಬೆಳೆಯಿತು; ಸಂಕೇತ ಪ್ರಯೋಗ ಕ್ರಮ ಕಲಾಪ್ರಪಂಚಕ್ಕೂ ಹರಡಿತು. ತ್ವರಿತಗತಿಯಿಂದ ಬೆಳೆಯುತ್ತಿದ್ದ ವಿಜ್ಞಾನ ಸಾಧನಗಳೂ ಕಲಾಸೃಷ್ಟಿಗೆ ನೆರವಾದವು. ಹೀಗೆ ಈ ಕಾಲದಲ್ಲಿ ರಚಿತವಾದ ಕಂಚು ಪ್ರತಿಮೆಗಳಲ್ಲಿ ಇನ್ನೂ ಹೆಚ್ಚು ವಾಸ್ತವಿಕತೆ, ಸಂಕೇತಾರ್ಥ ನಿರೂಪಣೆಗಳನ್ನು ಕಾಣಬಹುದು. ಈ ಬೆಳವಣಿಗೆ ಹೆಚ್ಚಾಗಿ ಫ್ರಾನ್ಸ್, ಇಂಗ್ಲೆಂಡ್‍ಗಳಲ್ಲಿ ಕಂಡು ಬರುತ್ತದೆ. (ಪಿ.ಎಸ್.)

**ಕಂಚುಕೊಲಿಯರು :** ಶಾಕ್ತೇಯರಲ್ಲಿ ಒಂದು ಗುಂಪಿನವರು. ಮದ್ರಾಸು ಮತ್ತು ಬೊಂಬಾಯಿ ಪ್ರಾಂತ್ಯಗಳಲ್ಲಿ ವಿಶೇಷವಾಗಿದ್ದಾರೆ. ಮದ್ರಾಸು ಭಾಗದಲ್ಲಿ ಇವರನ್ನು ಕಂಚುಲಿಯರು ಎಂದು ಕರೆಯುತ್ತಾರೆ. ಕಂಚುಲಿಯರು ವಾಮ ಪಕ್ಷಕ್ಕೆ ಸೇರಿದವರು. ಮದ್ಯಸೇವನೆ, ಮಾಂಸಭಕ್ಷಣ ಮತ್ತು ಸ್ವೇಚ್ಛಾರತಿ ಇವರ ಮತಾಚಾರಗಳಲ್ಲಿ ಮುಖ್ಯವಾದುವು. ಇವರು ತಮ್ಮದೇ ಆದ ರಹಸ್ಯಕೂಟಗಳಲ್ಲಿ ಸೇರಿ ಘಟಕಂಚುಕಿ, ಎಂದರೆ ಗಡಿಗೆ ಮತ್ತು ರವಿಕೆ ಎಂಬ ವ್ರತವನ್ನು ಆಚರಿಸುತ್ತಾರೆ. ಈ ರಹಸ್ಯಕೂಟದಲ್ಲಿ ಗಂಡಸರ ಮತ್ತು ಹೆಂಗಸರ ಸಂಖ್ಯೆ ಸಮನಾಗಿರುತ್ತದೆ. ಅಲ್ಲಿ ಸೇರಿದ ಹೆಂಗಸರೆಲ್ಲ ತಮ್ಮ ಕುಪ್ಪಸಗಳನ್ನು ಬಿಚ್ಚಿ ಪೂಜಾಸ್ಥಳದ ನಡುವೆ ಇಟ್ಟಿರುವ ಗಡಿಗೆಯಲ್ಲಿ ಹಾಕುತ್ತಾರೆ. ಅನಂತರ ಭಕ್ತಾದಿಗಳು ದೇವರ ಪ್ರಸಾದ ರೂಪವಾಗಿ ಮಾಂಸವನ್ನು ಭಕ್ಷಿಸಿ ಮದ್ಯಸೇವನೆ ಮಾಡುತ್ತಾರೆ. ಅನಂತರ ಒಬ್ಬೊಬ್ಬ ಗಂಡಸೂ ಗಡಿಗೆಯಲ್ಲಿರುವ ಒಂದು ಕುಪ್ಪಸವನ್ನು ತೆಗೆಯುತ್ತಾನೆ. ಆ ಕುಪ್ಪಸ ತೊಟ್ಟಿದ್ದವಳೊಡನೆ ಅವನು ಆ ರಾತ್ರಿ ಕಳೆಯುತ್ತಾನೆ. (ಜಿ.ಎಚ್.)

**ಕಂಟಕಚರ್ಮಿಗಳು :** ನೋಡಿ—ಎಕಿನೋಡರ್ಮೇಟ.

**ಕಂಠಸ್ಥ ಸಂಪ್ರದಾಯ :** ಗ್ರಂಥಸ್ಥಮೂಲವನ್ನು ಅವಲಂಬಿಸದೆ ತಲೆಮಾರಿನಿಂದ ತಲೆಮಾರಿಗೆ ಕರ್ಣಾಕರ್ಣಿಯಾಗಿ ಭಾಷೆ, ಸಂಗೀತ, ಸಾಹಿತ್ಯ ಮೊದಲಾದ ಎಲ್ಲ ಬಗೆಯ ಜ್ಞಾನವನ್ನೂ ಕಾಪಾಡಿಕೊಂಡು ಬರುವ ಕ್ರಮ. ತಾಯಿಯಿಂದ ಮಗಳಿಗೆ, ತಂದೆಯಿಂದ ಮಗನಿಗೆ, ಗುರುವಿನಿಂದ ಶಿಷ್ಯನಿಗೆ, ಹಿರಿಯ ತಲೆಮಾರಿನಿಂದ ಕಿರಿಯ ತಲೆಮಾರಿಗೆ, ಪೈಕದಿಂದ ಪೈಕಕ್ಕೆ ಈ ಸಂಪ್ರದಾಯದ ಮೂಲಕ ಪರಂಪರಾನುಗತ ಜ್ಞಾನವನ್ನು ಅರ್ಪಿಸುವ ಬಗೆ ಮಾನವಕುಲಕ್ಕೆ ಸಹಜವಾಗಿ ಬಂದ ಒಂದು ವರವಾಗಿದೆ. ಪ್ರಾಣಿಕುಲಕ್ಕೂ ಮಾನವಕುಲಕ್ಕೂ ಇರುವ ಮೂಲಭೂತ ಅಂತರವನ್ನು ಇದು ಶ್ರುತಪಡಿಸುತ್ತದೆ. ಓದು, ಬರೆಹ ಬೆಳೆದಂತೆಲ್ಲ ಈ ಸಂಪ್ರದಾಯದೊಂದಿಗೆ ಗ್ರಂಥಸ್ಥ ಸಂಪ್ರದಾಯವೂ ಬೆಳೆದು ಬಂದಿತೆಂದು ತೋರುತ್ತದೆ.

ಜಾನಪದ ಸಮಗ್ರ ಸಂಸ್ಕೃತಿಯ ಎರಡು ಅಂಗಗಳೆಂದು ಜಾನಪದ ವಿದ್ವಾಂಸರು ಗುರುತಿಸಿರುವ ಶಿಷ್ಟಸಂಸ್ಕೃತಿ ಹಾಗೂ ಜನಪದ ಸಂಸ್ಕೃತಿಗಳು ಪರಸ್ಪರ ಸ್ವೀಕರಣಕ್ಕೆ ಬದ್ಧವಾಗಿದ್ದರೂ ಎರಡೂ ನಡೆದು ಬಂದಿರುವ ದಾರಿ ಬೇರೆ ಬೇರೆ. ಎರಡರಲ್ಲಿಯೂ ಪರಂಪರೆಯ ಮುದ್ರೆ ಇದ್ದೇ ಇದೆ. ಅದರ ಶಿಷ್ಟಸಂಸ್ಕೃತಿ ಗ್ರಂಥಗಳಿಂದ, ವಿದ್ವಾಂಸರಿಂದ, ಧಾರ್ಮಿಕ ವಿಧಿಗಳಿಂದ ಪರಿಷ್ಕಾರಗೊಂಡದ್ದು, ಗೊತ್ತಾದ ಮೂಲದಿಂದ ಇದು ಶಿಷ್ಟರೂಪದಲ್ಲಿ ಉಳಿದು ಬರುತ್ತದೆ. ಜನಪದ ಸಂಸ್ಕೃತಿ ವ್ಯಾಪಕವಾದುದು, ಕಂಠಸ್ಥಮೂಲದಲ್ಲಿ ಮಾತ್ರ ಉಳಿದು ಬರತಕ್ಕುದು. ಮೊದಲಿನದರಲ್ಲಿ ವ್ಯಷ್ಟಿಯ ಪಾತ್ರ ಹೆಚ್ಚಾದರೆ ಎರಡನೆಯದರಲ್ಲಿ ಸಮಷ್ಟಿಯ ಪಾತ್ರ ಹಿರಿದು.

ಸಹಸ್ರಾರು ವರ್ಷಗಳ ಮಾನವ ಜೀವನದ ಸುದೀರ್ಘ ಇತಿಹಾಸದಲ್ಲಿ ಅಕ್ಷರ ಜ್ಞಾನ ಬಂದದ್ದು ತೀರ ಇತ್ತೀಚೆಗೆ, ಒಂದು ಅರ್ಥದಲ್ಲಿ ನೆನ್ನೆ ಮೊನ್ನೆ. ಅದ್ದರಿಂದ ಗ್ರಂಥಸ್ಥಸಂಪ್ರದಾಯ ಕಂಠಸ್ಥಸಂಪ್ರದಾಯಕ್ಕಿಂತ ತುಂಬ ಇತ್ತೀಚಿನದು. ಮೊದಲಿಗೆ ಸಮಗ್ರ ಮಾನವ ವ್ಯವಹಾರಗಳ ಏಕೈಕವಾಹಕವಾಗಿದ್ದುದು ಕಂಠಸ್ಥ ಸಂಪ್ರದಾಯವೇ. ಮಾನವ ಅಕ್ಷರ ಜ್ಞಾನವನ್ನು ಪಡೆದ ಮೇಲೆ ತನ್ನ ಅನುಭವದ ಸ್ವಲ್ಪ ಭಾಗವನ್ನು ಮಾತ್ರ ಗ್ರಂಥಸ್ಥಗೊಳಿಸಲು ಸಾಧ್ಯವಾಯಿತು. ಅವನ ಅನಂತಜ್ಞಾನ ರಾಶಿ ಪರಂಪರಾನುಗತವಾಗಿ ಮುಂದುವರಿಯುತ್ತ ಬಂದಿರುವುದು ಕಂಠಸ್ಥ ಸಂಪ್ರದಾಯದಿಂದಲೇ.

ಅನಕ್ಷರಸ್ಥ ಸಮಾಜಗಳಲ್ಲಿ ಕಂಠಸ್ಥಸಂಪ್ರದಾಯದ ಪಾತ್ರ ವಿಶಿಷ್ಟವಾದುದು. ಬದುಕಿಗೆ ಬೇಕಾಗುವ ಸಕಲವಿದ್ಯೆ ಹಾಗೂ ವ್ಯವಹಾರ ಜ್ಞಾನವನ್ನು ಈ ಸಂಪ್ರದಾಯದಿಂದಲೇ ಗ್ರಹಿಸಬೇಕಾಗುತ್ತದೆ. ಮನೋರಂಜನೆ ಹಾಗೂ ದೈನಂದಿನ ಆವಶ್ಯಕತೆಗಳ ಪೂರೈಕೆಗೆ ಕಂಠಸ್ಥಸಂಪ್ರದಾಯದಲ್ಲಿಯೇ ಬಂದ ಜ್ಞಾನ ನೆರವಾಗುತ್ತದೆ. ಪುರಾಣ, ಐತಿಹ್ಯ, ಕಥೆ, ಗಾದೆ, ಒಗಟು, ಹಾಡು, ಲಾವಣಿ, ಭಾಷೆ, ನಂಬಿಕೆ, ಆಚರಣೆ, ಕಲೆ, ವೈದ್ಯ, ವ್ಯವಸಾಯದ ಕ್ರಮ, ಅಡಿಗೆಗಳ ರೀತಿ, ಬೇಟೆಯಾಡುವ ವಿಧಾನ, ಆಟ, ಮಂತ್ರ, ಮಾಟ—ಹೀಗೆ ಎಲ್ಲವೂ ಕೇಳಿ ನೆನಪಿಡುವುದರ ಮೂಲಕ, ನೋಡಿ ಅನುಕರಿಸುವುದರ ಮೂಲಕ ಹಿರಿಯ ತಲೆಮಾರಿನಿಂದ, ಕಿರಿಯ ತಲೆಮಾರಿಗೆ ಹರಿದು ಬರುತ್ತವೆ. ಇಲ್ಲಿ ನೋಡಿ ಅನುಕರಿಸುವ ಕೆಲವು ವಿಷಯಗಳನ್ನು ಬಿಟ್ಟರೆ ಮಿಕ್ಕ ಎಲ್ಲ ವಿಷಯಗಳೂ ಕಂಠಸ್ಥ ಮೂಲದಲ್ಲಿಯೇ ಸಾಗಿ ಬರುತ್ತವೆ. ಅನುಕರಣೆಯ ಮೂಲಕ ಕಲಿಕೆ ಹಾಗೂ ಕಂಠಸ್ಥ ಸಂಪ್ರದಾಯದ ಪರಂಪರಾನುಗತ ಜ್ಞಾನವನ್ನೇ ಜಾನಪದ (ಫೋಕ್‍ಲೋರ್) ಎಂದು ಕರೆಯಲಾಗಿದೆ.

ಕಂಠಸ್ಥ ಸಂಪ್ರದಾಯದಲ್ಲಿ ಬಂದದ್ದೆಲ್ಲವೂ ಜಾನಪದವಾಗಬೇಕಿಲ್ಲ. ಬರವಣಿಗೆಯಿಲ್ಲದ ಸಂಸ್ಕೃತಿಯಲ್ಲಿ ಎಲ್ಲ ವ್ಯವಹಾರಗಳೂ ಕಂಠಸ್ಥಸಂಪ್ರದಾಯದಲ್ಲೇ ನಡೆಯುತ್ತವೆ. ರೇಡಿಯೋವನ್ನು ತಿರುಗಿಸುವ ಬಗೆ, ಬೈಸಿಕಲ್ಲನ್ನು ಸರಿಪಡಿಸುವ ಬಗೆ, ಬ್ರಷ್ಷಿನಿಂದ ಹಲ್ಲನ್ನು ಉಜ್ಜುವ ಬಗೆ—ಇವುಗಳ ಜ್ಞಾನವೂ ಕಂಠಸ್ಥಸಂಪ್ರದಾಯದಲ್ಲೇ ಬಂದರೂ ಇವನ್ನು ಜಾನಪದ ಎಂದು ಕರೆಯಲಾಗುವುದಿಲ್ಲ. ಜಾನಪದವಲ್ಲದ ಇತರ ವಿಷಯಗಳೂ ಈ ಸಂಪ್ರದಾಯದಲ್ಲಿ ಬರುವ ಸಾಧ್ಯತೆ ಇರುವುದರಿಂದ ಜಾನಪದವನ್ನು ನಿರ್ಧರಿಸಲು ಇದೊಂದೇ ಅಳತೆಗೋಲಲ್ಲ. ಆದರೆ ಯಾವುದೇ ಜಾನಪದ ಪ್ರಕಾರ ಕಂಠಸ್ಥಮೂಲದಲ್ಲಿ ಒಮ್ಮೆಯಾದರೂ ಪ್ರಸರಣವಾಗದಿದ್ದರೆ ಅದು ಜಾನಪದವಾಗಲಾರದು.

ಜಾನಪದ ಎಲ್ಲಿಯೂ ಎಂದೂ ಗ್ರಂಥಸ್ಥವಾಗಿರುವುದಿಲ್ಲ. ಆದರೆ ಕೆಲವು ಗಾದೆಗಳು, ಕಥೆಗಳು, ಗೀತೆ, ಲಾವಣಿ, ಸಂಪ್ರದಾಯಗಳು ಲೇಖಕನೊಬ್ಬನ ಕೃತಿಯಲ್ಲಿ ಸೇರಿಕೊಂಡಿರಬಹುದು. ಇವುಗಳ ಜಾನಪದತ್ವವನ್ನು ನಿರ್ಧರಿಸಲು ಕಂಠಸ್ಥಸಂಪ್ರದಾಯದ ಭಿನ್ನರೂಪಗಳನ್ನೇ ಮತ್ತೆ ತೌಲನಿಕವಾಗಿ ಅಭ್ಯಾಸ ಮಾಡಬೇಕಾಗುತ್ತದೆ.

ದೈಹಿಕ ಚಲನೆಗಳಿಗೆ ಸಂಬಂಧಿಸಿದಂತೆ ಕೆಲವು ಜಾನಪದ ಪ್ರಕಾರಗಳು ಸಾಗಿಬರುತ್ತವೆ. ಕುಣಿತಗಳು, ಸಂಜ್ಞೆಗಳು, ಆಟಗಳು, ಆಚರಣೆಗಳು ಮುಂತಾದುವನ್ನು ಹೇಳಿಸಿಕೊಂಡು ಕಲಿಯುವ ಅಗತ್ಯವಿಲ್ಲ. ನಿರೀಕ್ಷಣೆಯಿಂದಲೇ ಅಭ್ಯಾಸದಿಂದಲೇ ಅವು ಕರಗತವಾಗುತ್ತವೆ. ಶಾಬ್ದಿಕರೂಪದಲ್ಲಿ ಇವು ಪ್ರವಹಿಸುವುದಿಲ್ಲವಾದುದರಿಂದ ಶುದ್ಧ ಕಂಠಸ್ಥ ಸಂಪ್ರದಾಯವನ್ನು ಇಲ್ಲಿ ಅರಸಬೇಕಾದುದಿಲ್ಲ. ಆದರೆ ಜಾನಪದದ ಸಾಹಿತ್ಯಿಕ ಬಗೆ, ಭಾಷಿಕ ಬಗೆಗಳು ಮಾತ್ರ ಕಂಠಸ್ಥಸಂಪ್ರದಾಯದಿಂದಲೇ ಬರತಕ್ಕವು.

ಜಾನಪದವನ್ನು ಸಂಗ್ರಹಿಸಿ, ಸಂಪಾದಿಸಿ ಪ್ರಕಟಿಸುವ ಹವ್ಯಾಸ ಎಲ್ಲ ದೇಶಗಳಲ್ಲೂ ಕಂಡು ಬಂದಿದೆ. ಕಥೆ, ಗೀತೆ, ಲಾವಣಿಗಳು ಬರವಣಿಗೆಗೆ ಇಳಿದಾಗ ಅವುಗಳ ಸಾಹಿತ್ಯಿಕ ಸ್ವರೂಪ ಮಾತ್ರ ಉಳಿದಂತಾಗುತ್ತದೆ. ಆದರೆ ಸಂಗೀತದ ಅಂಶವೂ ಅವುಗಳಲ್ಲಿ ಪ್ರಧಾನವಾದುದರಿಂದ, ಒಂದೊಂದು ಪ್ರಕಾರಕ್ಕೂ ವಿಶಿಷ್ಟವಾದ ಮಟ್ಟುಗಳು ಪರಂಪರೆಯಿಂದಲೇ ಬಂದಿರುವುದರಿಂದ ಅವುಗಳ ಮೂಲಧಾಟಿಗಳನ್ನು ಉಳಿಸುವ ಸಾಹಸವನ್ನೂ ವೈಜ್ಞಾನಿಕವಾಗಿ ಮಾಡಲಾಗುತ್ತಿದೆ. ಹೀಗೆ ಮಾಡಲು ಕಂಠಸ್ಥಪರಂಪರೆಯನ್ನು ಮರೆಹೊಗುವುದು ಅನಿವಾರ್ಯವಾಗುತ್ತದೆ. ಗ್ರಂಥಸ್ಥಮೂಲದಲ್ಲಿಯೂ ಕಂಠಸ್ಥಸಂಪ್ರದಾಯದ ಪ್ರಭಾವ ಇದ್ದೇ ಇದೆ. ಅಕ್ಷರಗಳಲ್ಲಿ ಹಿಡಿದಿಡಲಾಗದ ನಾದದ ಅಂಶ, ಓದುಗಾರಿಕೆಯ ವಿನ್ಯಾಸ ಮುಂತಾದುವು ಇಲ್ಲಿ ಕಂಠಸ್ಥ ಸಂಪ್ರದಾಯದಲ್ಲಿಯೇ ಬರಬೇಕಾಗುತ್ತದೆ. ಅಂಶಗಣ ಘಟಿತವಾದ ತ್ರಿಪದಿ, ಸಾಂಗತ್ಯ ಮುಂತಾದುವನ್ನು ಓದುವ ಧಾಟಿ ಪರಂಪರಾನುಗತವಾಗಿ ಬಂದದ್ದು. ಗದ್ಯವನ್ನು ವಾಚನಮಾಡುವುದರಲ್ಲಿಯೂ ಪರಂಪರಾನುಗತ ವಿನ್ಯಾಸವನ್ನು ಕಾಣಬಹುದು.

ಆಡುಮಾತಿನ ಗತ್ತು, ಉಚ್ಚಾರಣೆಯ ವೈಖರಿಗಳು ಮುಂತಾದವುಗಳಿಗೂ ಈ ಮಾತು ಅನ್ವಯವಾಗುತ್ತದೆ. ಪ್ರದೇಶದಿಂದ ಪ್ರದೇಶಕ್ಕೆ ಆಡುಮಾತಿನಲ್ಲಿ ಕಾಣಬರುವ ವೈವಿಧ್ಯವನ್ನು ಉಪಭಾಷಾ ಪರಿವೀಕ್ಷಣೆಯಿಂದ ವಿದ್ವಾಂಸರು ಗುರುತಿಸಿದ್ದಾರೆ. ಮಾತಿನ ಬೆಡಗು, ಬಿನ್ನಾಣಗಳನ್ನು ಪುಸ್ತಕ ಎಂದೂ ಹಿಡಿದಿಡಲು ಸಾಧ್ಯವಿಲ್ಲ. ಅವು ಕಂಠಸ್ಥ ಮೂಲದಲ್ಲಿ ತಾವಾಗಿಯೇ ಸಾಗಿಬರುತ್ತವೆ. ಹುಟ್ಟು, ವಿವಾಹ, ಮರಣ ಸಂಬಂಧವಾದ ಆಚರಣೆಗಳಲ್ಲಿ, ಹಬ್ಬಹರಿದಿನ, ಆರಾಧನೆ ಮುಂತಾದ ಸಂಪ್ರದಾಯಗಳಲ್ಲಿ ಕಂಠಸ್ಥ ಸಂಪ್ರದಾಯದ ಪಾತ್ರ ಸ್ವಲ್ಪ ಮಟ್ಟಿಗಾದರೂ ಇದ್ದೇ ಇರುತ್ತದೆ. ಮದುವೆ, ಒಸಗೆ ಮುಂತಾದುವನ್ನು ಕ್ರಮವತ್ತಾಗಿ ನಿರೂಪಿಸುವ ಸಾಹಿತ್ಯ ಪರಂಪರಾನುಗತವಾಗಿ ಬರುತ್ತವೆ. ಇಲ್ಲಿ ಯಾವ ಶಾಸ್ತ್ರವೂ ಕ್ರಮ ತಪ್ಪದೆ ನಡೆದುಕೊಂಡು ಬರಲು ಇದು ನೆರವಾಗುತ್ತದೆ. ಆದ್ದರಿಂದ ಆಚರಣೆ, ಸಂಪ್ರದಾಯಗಳ ಮೇಲೂ ವಾಕ್ಸಂಪ್ರದಾಯದ ಪ್ರಭಾವ ಗಣನೀಯವಾದದ್ದು.

ಪಾಶ್ಚಾತ್ಯರಲ್ಲಿ ಜನಪದ ಭಾಷೆಯ ಅಭ್ಯಾಸದಲ್ಲಿ ಕಂಠಸ್ಥ ಸಂಪ್ರದಾಯ ಎಂಬ ಮಾತಿನ ಬಳಕೆ ಇದ್ದರೂ ಕ್ರಮೇಣ ಅದು ಜನಪದ ಸಂಗೀತಕ್ಕೂ ಅಳವಟ್ಟಿತು. ಆದರೆ ಅದರ ವ್ಯಾಪ್ತಿ ಇತರ ಕ್ಷೇತ್ರವನ್ನು ಒಳಕೊಳ್ಳುವುದು ಗಮನಾರ್ಹ. ಶಿಷ್ಟ ಅಥವಾ ಶಾಸ್ತ್ರೀಯ ಸಂಗೀತದ ಮೇಲೂ ಕಂಠಸ್ಥಸಂಪ್ರದಾಯದ ಪ್ರಭಾವ ಇದ್ದೇ ಇದೆ. ತುಟಿಯಿಂದ ತುಟಿಗೆ ಹರಿದು ಬಂದ ರಾಗವಿನ್ಯಾಸ ಗುರು ಶಿಷ್ಯರ, ಹೇಳಿಕೆ ಕಲಿಕೆ ಗಳನ್ನೇ ಅವಲಂಬಿಸಿರುತ್ತದೆ. ಎಷ್ಟೋ ಪ್ರಸಿದ್ಧವಾದ ಕೀರ್ತನೆಗಳಲ್ಲಿ ಲಂಬೋದರ ಲಕುಮಿಕರ ಎಂಬಂತೆ ಆಯಾ ಮಾತುಗಳನ್ನೇ ಬಳಸಿ ಕಂಠಸ್ಥ ಸಂಪ್ರದಾಯದ ಹಿನ್ನೆಲೆಯಲ್ಲಿ ನಡೆದ ರಚನೆಗಳನ್ನೂ ಗಮನಿಸಬಹುದು.

ಕಂಠಸ್ಥಸಂಪ್ರದಾಯ ಜಾನಪದಕ್ಕೆ ಸಂಬಂಧಿಸಿದಂತೆ ವಿಶಿಷ್ಟವಾಗಿ ಕಂಡರೂ ಇತರ ಕ್ಷೇತ್ರಗಳಲ್ಲಿ ಅದರ ಪ್ರಭಾವ ಗೌಣವಾದುದೇನಲ್ಲ ಎಂಬ ಅಂಶ ಸ್ಪಷ್ಟ. (ಜಿ.ಎಸ್.ಐ.)

**ವೇದಪಾಠಕ್ರಮ :** ಭಾರತ ದೇಶದಲ್ಲಿ ಬಹು ಪವಿತ್ರವೆಂದು ಪರಿಗಣಿತ ವಾಗಿರುವ ವೇದರೂಪದ ಜ್ಞಾನಭಂಡಾರ ಅತ್ಯಂತ ಪ್ರಾಚೀನವೆಂಬುದು ಸರ್ವ ಸಮ್ಮತವಾಗಿದೆ. ಅದನ್ನು ಇದ್ದಂತೆ ಇರಿಸಿ ಮುಂದುವರಿಸಿಕೊಂಡು ಬರುವ ಹೊಣೆ ಹೊತ್ತ ಪೂರ್ವಜರಿಗೆ ಪ್ರಾಚೀನ ಕಾಲದಲ್ಲಿ ವೇದದ ಎಲ್ಲ ಭಾಗಗಳೂ ಶ್ರುತಪಟ್ಟು ಕಂಠಗತವಾದುವು. ಶ್ರುತದ ಆಧಾರದ ಮೇಲೆ ಕಂಠಗತ ಮಾಡಿಕೊಳ್ಳುವ ಈ ಪದ್ಧತಿ ಆಯಾ ಕಾಲದಲ್ಲಿ ಗುರು ಶಿಷ್ಯ, ತಂದೆ ಮಗ ಮುಂತಾದವರಿಂದ ಅನು ಸರಿಸಲ್ಪಟ್ಟಿತು. ಅಲ್ಲದೆ, ಮುಂದೆ ಮುಂದೆ ವಂಶಪರಂಪರೆಯಲ್ಲಿ ಅದು ರೂಢಿಸಿ, ಇಂದಿಗೂ ವಿಪುಲವಾದ ವೈದಿಕಸಾಹಿತ್ಯ ಕಂಠಸ್ಥವಾಗಿ ನಿಂತಿರುವ ವಿಚಾರ ಗಮನಾರ್ಹ ವಾಗಿದೆ. ಅಂದರೆ ವೇದಕ್ಕಿರುವ ಶ್ರುತಿ ಎಂಬ ಹೆಸರಿಗೆ ತಕ್ಕಂತೆ ಆದರ ಪಾಠ ವಿನಿಮಯದ ತತ್ತ್ವ ಕಿವಿಯಿಂದ ಕೇಳಿ ಕಂಠಗತ ಮಾಡಿಕೊಳ್ಳತಕ್ಕದ್ದು. ವೇದದ ಪ್ರಾರಂಭದ ಕಾಲವೆಂದು ಹೇಳಲಾಗಿರುವ ಕ್ರಿ.ಪೂ. ಸುಮಾರು 2500 ರಿಂದ ಕ್ರಿ.ಪೂ. ಸುಮಾರು 500ರ ವರೆಗೆ ಅದೆಲ್ಲವನ್ನೂ ಕಂಠಸ್ಥ ಮಾಡಿಕೊಳ್ಳಬೇಕಾದುದಕ್ಕೆ ಲಿಪಿಯ ಮತ್ತು ಲೇಖನ ಸಾಮಗ್ರಿಗಳ ಅಭಾವವೆಂಬ ಚಾರಿತ್ರಿಕ ಕಾರಣವಿದ್ದರೂ ಪವಿತ್ರತೆಯ ಉಚ್ಚಸ್ಥಾನವನ್ನು ಉಚ್ಚಾರಣೆ ಮೊದಲಾದವುಗಳ ಶುದ್ಧತೆ ನಿಷ್ಕೃಷ್ಟತೆ ಗಳಿಂದ ಅಚ್ಚಳಿಯದೆ ಸದಾ ಇರಿಸಿಕೊಂಡು ಬರಬೇಕೆಂಬ ಮಹತ್ತ್ವಾಕಾಂಕ್ಷೆ ಆ ಸಂಪ್ರದಾಯವನ್ನು ರೂಪಿಸಿದೆಯೆಂಬುದು ಅತಿ ಮುಖ್ಯ ವಿಚಾರವಾಗಿದೆ. ಹೀಗೆ ವೈದಿಕಗ್ರಂಥಗಳನ್ನು ಕಂಠಸ್ಥಮಾಡಿಕೊಂಡು ಬಂದಿರುವ ಸಂಪ್ರದಾಯದಲ್ಲಿ ಪವಿತ್ರ ವಸ್ತು ರಕ್ಷಣೆಯ ಪ್ರಯತ್ನದ ಶಾಶ್ವತತೆಯ ದೃಷ್ಟಿ ಗಮನಾರ್ಹವಾದುದು.

ಸಹಸ್ರಾರು ವರ್ಷಗಳಲ್ಲಿ ಒಂದೊಂದು ತಲೆಮಾರಿನವರೂ ಕಲಿತು, ಕಲಿತು ಅದನ್ನು ಮುಂದುವರಿಸಲು ಸಹಾಯ ಮಾಡಿರುವ ಈ ಸಂಪ್ರದಾಯದಲ್ಲಿ ಕೆಲವು ವೈಶಿಷ್ಟ್ಯಗಳಿವೆ. ಅದು ಆಯಾ ಕೃತಿಯನ್ನು ಕಂಠಗತಮಾಡಿಕೊಳ್ಳುವ ಪ್ರಯತ್ನ ಮಾತ್ರವಲ್ಲ; ಮೂಲಪಾಠದ ಅಕ್ಷರ, ಪದ, ಪದರಚನೆ, ಸ್ವರ ಇವೆಲ್ಲವೂ ಚಾಚೂ ತಪ್ಪದೆ, ವ್ಯತ್ಯಾಸವಾಗದೆ ಇರುವಂತೆ ಮಾಡುವ ವ್ಯವಸ್ಥೆಯನ್ನೂ ಆ ಸಂಪ್ರದಾಯ ಒಳಗೊಂಡಿದೆ. ಅದಕ್ಕೋಸ್ಕರ ಸಂಹಿತಾಪಾಠವೆಂದು ಕರೆಯಲ್ಪಟ್ಟಿರುವ ಮೂಲ ವನ್ನು ಕಂಠಗತಮಾಡಿಕೊಳ್ಳುವುದರ ಜೊತೆಗೆ ಅದನ್ನು ಪದಗಳಾಗಿ ವಿಂಗಡಿಸಿ ಬಂದ ಪದ ಪಾಠವೂ ಕಂಠಗತವಾಗಬೇಕು—ಅಂದರೆ, ಒಂದು ಮಂತ್ರದ ಸಂಹಿತಾಪಾಠದಲ್ಲಿ ಇರುವ ಅಕ್ಷರಗಳ ಸಂಖ್ಯೆ ಹನ್ನೆರಡು ಎನ್ನೋಣ, ಅವುಗಳಲ್ಲಿ ಒಂದೊಂದನ್ನೂ ಸಂಧಿ ಮುಂತಾದವುಗಳ ದೃಷ್ಟಿಯಿಂದ ಬೇರ್ಪಡಿಸಿ ಹೇಳಬೇಕು. ಅನಂತರ ಮೊದಲಿ ನಿಂದ ಪ್ರಾರಂಭಿಸಿ ಒಂದನೆಯ ಪದವನ್ನೂ ಎರಡನೆಯದನ್ನೂ ಪಠಿಸಿ ಮುಂದೆ ಎರಡು ಮೂರು, ಮೂರು ನಾಲ್ಕು ಈ ವಿಧವನ್ನನುಸರಿಸಿ ಬಂದಿರುವ ಕ್ರಮಪಾಠ, ಆಮೇಲೆ ಒಂದು ಎರಡು, ಎರಡು ಒಂದು, ಒಂದು ಎರಡು, ಎರಡು ಮೂರು— ಹೀಗೆ ಮಂತ್ರದ ಹನ್ನೆರಡು ಪದಗಳಲ್ಲೂ ಮುಂದುವರಿಯುವ ಜಟಾಪಾಠ, ಬಳಿಕ, ಒಂದು ಎರಡು, ಎರಡು ಒಂದು, ಒಂದು ಎರಡು ಮೂರು, ಮೂರು ಎರಡು ಒಂದು, ಒಂದು ಎರಡು ಮೂರು—ಈ ರೀತಿಯ ಘನಪಾಠ.

ಹೀಗೆ ಕಂಠಗತ ಮಾಡಿಕೊಳ್ಳಬೇಕಾದ ಪಾಠಗಳು—ಸಂಹಿತಾ, ಪದ, ಕ್ರಮ, ಜಟಾ, ಘನ—ಈ ಐದು ಹೆಚ್ಚು ಬಳಕೆಯಲ್ಲಿರತಕ್ಕವು. ಇವಲ್ಲದೆ ಮಾಲಾ, ಶಿಖಾ, ರೇಖಾ, ಧ್ವಜ, ದಂಡ, ರಥ ಎಂಬ ಪಾಠಗಳೂ ಇವೆ. ಪದಗಳ ಕ್ರಮಬದ್ಧ ಪುನರುಚ್ಚಾರಣೆಯೇ ಈ ಎಲ್ಲ ಪಾಠಗಳ ಮುಖ್ಯನಿಯಮ.

ಅತಿ ವಿಸ್ತಾರವಾಗಿರುವ ಸಂಹಿತಾಪಾಠವೊಂದನ್ನಲ್ಲದೆ, ಈ ನಾನಾ ಪಾಠಗಳನ್ನೂ ಅಷ್ಟೇ ಏಕೆ, ವೈದಿಕ ಸಾಹಿತ್ಯವೆಲ್ಲವನ್ನೂ ಸಂಸ್ಕೃತಸಾಹಿತ್ಯದ ಬಹುಭಾಗಗಳನ್ನೂ ಇಂದಿನವರೆಗೂ ಕಂಠಸ್ಥ ಮಾಡಿಕೊಂಡು ಬಂದಿರತಕ್ಕ ಈ ಸಂಪ್ರದಾಯ ಜಗತ್ತಿನ ಅಚ್ಚರಿಗಳಲ್ಲೊಂದಾಗಿದೆ. (ಬಿ.ಕೆ.ಎಸ್.)

**ಕಂಠೀರವ :** 1919ರ ಏಪ್ರಿಲ್ ಒಂದನೆಯ ತಾರೀಖು ಯುಗಾದಿ ದಿನದಂದು ಮಂಗಳೂರಿನಿಂದ ಪ್ರಕಟವಾದ ವಾರಪತ್ರಿಕೆ. ಕೆಲಕಾಲ ದ್ವೈವಾರ ಪತ್ರಿಕೆಯಾಗಿ ನಡೆದು (1933–53) 1967ರ ನವೆಂಬರ್ ತಿಂಗಳಲ್ಲಿ ನಿಂತು ಹೋಯಿತು.


Registered No. M. 1933 "KANTEERAVA" High Class Kannada Weekly

ಕಂಠೀರವ

ಪ್ರತಿ ಮಂಗಳವಾರ ಪ್ರಕಟವಾಗುವ ಶ್ರೇಷ್ಠತರದ

ವಾರ್ತಾಪತ್ರಿಕೆ.

7TH JULY 1931.

ಸಂಪುಟ ೧೩ (Vol XIII) ಮಂಗಳೂರು ೧೯೩೧ನೇ ಇಸವಿ ಜುಲಾಯಿ ತಾರೀಕು ೭ನೇ ಮಂಗಳವಾರ ಸಂಚಿಕೆ ೧೪ (No. 14)

ಕಂಠೀರವ ಪತ್ರಿಕೆಯ ಮುಖಪುಟದ ಮೇಲುಭಾಗ

ಬೋಳಾರು ವಿಠಲರಾಯರು ಇದರ ಪ್ರಥಮ ಸಂಪಾದಕರು ಹಾಗೂ ಪ್ರಕಾಶಕರು. ಪ್ರಾರಂಭಕಾಲದಲ್ಲಿ ಸಂಪಾದಕ ವಿಭಾಗಕ್ಕೆ ಹುರುಳಿ ಭೀಮರಾಯರು, ಕಡೆಕಾರು ಗೋಪಾಲಕೃಷ್ಣರಾಯರು, ಬೆನಗಲ್ ರಾಮರಾಯರು, ಡಿ. ಕೆ. ಭಾರದ್ವಾಜರು ಬರೆಯುತ್ತಿದ್ದರು. ಮೊದಲಿನಿಂದಲೂ ಸಂಪಾದಕೀಯವನ್ನು ಬರೆಯುತ್ತಿದ್ದ ಹುರುಳಿ ಭೀಮರಾಯರೇ ಕ್ರಿ.ಶ. 1943ರಲ್ಲಿ ಸಂಪಾದಕತ್ವವನ್ನು ವಹಿಸಿಕೊಂಡರು.

ಪ್ರಾರಂಭವಾದಾಗ ಪತ್ರಿಕೆ ಮಂಗಳೂರಿನ ಧರ್ಮಪ್ರಕಾಶ ಮುದ್ರಣಾಲಯದಲ್ಲಿ ಅಚ್ಚಾಯಿತು. ಮುಂದೆ 1923ರಿಂದ 1938ರ ವರೆಗೆ ಸರಸ್ವತಿ ಪ್ರಿಂಟಿಂಗ್ ವರ್ಕ್ಸ್ ಲಿಮಿಟೆಡ್ ಮುದ್ರಣಾಲಯದಲ್ಲಿ ಅಚ್ಚಾಗುತ್ತಿದ್ದು 1939ರಲ್ಲಿ ಒಂದು ವರ್ಷ ಮಾತ್ರ ಮಂಗಳೂರಿನ ಬಾಸೆಲ್ ಮಿಶನ್ ಪ್ರೆಸ್ಸಿನಲ್ಲಿ ಮುದ್ರಣಗೊಂಡಿತು. ಬಳಿಕ 1941ರಿಂದ ಆಚೆ ಮಂಗಳೂರು ಪ್ರೆಸ್ಸಿನಲ್ಲಿ ಮುದ್ರಣವಾಗತೊಡಗಿತು. 1943ರಿಂದ ಮಂಗಳೂರು ಪ್ರೆಸ್ಸಿನ ಒಡೆಯರಾದ ಎಂ. ಬಾಬುರಾಯ ಪ್ರಭು ಕಂಠೀರವದ ಪ್ರಕಾಶಕರಾದರು.

ಹದಿನಾರು ಪುಟಗಳ ಪತ್ರಿಕೆಯಾಗಿ ಹೊರಟ ಕಂಠೀರವ ಜನಪ್ರಿಯವಾಗಿ ಅಭಿವೃದ್ಧಿಗೊಂಡು ಒಂದು ಕಾಲಕ್ಕೆ ಮೂವತ್ತೆರಡು ಪುಟಗಳ ಪತ್ರಿಕೆಯಾಯಿತು.

ಕಳೆದ ವಾರ, ಅದಿಷ್ಟು ಇದಿಷ್ಟು, ಅದೂ ಇದೂ ಎಲ್ಲವೂ—ಎಂಬ ಒಂದಲ್ಲ ಒಂದು ಶೀರ್ಷಿಕೆಯಲ್ಲಿ ವಾರದ ವಿಶೇಷ ವಿಚಾರಗಳು ; ಮಧ್ಯಪುಟದಲ್ಲಿ ಸಂಪಾದಕೀಯದ ಬಳಿಕ ವಿದೇಶ, ಹಿಂದೂದೇಶ, ಕರ್ಣಾಟಕ, ದಕ್ಷಿಣಕನ್ನಡ ಮತ್ತು ತಾಲ್ಲೂಕುಗಳ ವಾರ್ತಾಸಂಗ್ರಹ; ದಾಸಯ್ಯನ ಜೋಳಿಗೆ, ಮಿಸ್ಟರ್ ತಿಪ್ಪಯ್ಯನ ಡೈರಿ, ಮಹಮ್ಮದ್ ಸಾಹೇಬನ ಸೂಕ್ತಗಳು, ಗುಂಡನ ಗಜೇಟು ಎಂಬ ಶೀರ್ಷಿಕೆಗಳಲ್ಲಿ ಹುರುಳಿ ಭೀಮರಾಯರು ವ್ಯಂಗ್ಯಲೇಖನಗಳನ್ನು ಬರೆಯುತ್ತಿದ್ದರು. ಈ ಶೀರ್ಷಿಕೆಗಳು ಕಾಲದಿಂದ ಕಾಲಕ್ಕೆ ಬದಲಾಗುತ್ತ ಬಂದು ಪತ್ರಿಕೆಯ ಕೊನೆಯ ದಿನಗಳಲ್ಲಿ ಗುಂಡನ ಗಜೇಟು ಎಂಬ ಶೀರ್ಷಿಕೆಯು ಮಾತ್ರ ಉಳಿಯಿತು. ಇವುಗಳಲ್ಲದೆ ಆಗಾಗ್ಗೆ ವ್ಯಕ್ತಿಪರಿಚಯಗಳೂ ಸಣ್ಣಕಥೆಗಳೂ ಕವನಗಳೂ ಧಾರಾವಾಹಿ ಕಾದಂಬರಿಗಳೂ ಪ್ರಕಟವಾಗುತ್ತಿದ್ದುವು. ಪತ್ರವ್ಯವಹಾರ ಎಂಬ ವಿಭಾಗ ಯಾವಾಗಲೂ ಇರುತ್ತಿತ್ತು. ದ್ವೈವಾರಪತ್ರಿಕೆಯಾದಾಗ ಶುಕ್ರವಾರದ ಸಂಚಿಕೆಯಲ್ಲಿ ವಿಶೇಷ ಲೇಖನ ಮತ್ತು ಪತ್ರವ್ಯವಹಾರಗಳಿಗಿಂತ ವಾರ್ತೆಗೇ ಹೆಚ್ಚಿನ ಪ್ರಾಶಸ್ತ್ಯವಿತ್ತು.

1919ರಲ್ಲಿ ಪ್ರಾರಂಭವಾಗುವಾಗ ಮೊದಲ ಪುಟದ ಮೇಲ್ಗಡೆಯಲ್ಲಿ ಕಂಠೀರವ ಎಂಬ ಹೆಸರಿನ ಇಕ್ಕಡೆಗಳಲ್ಲಿ ಯೂನಿಯನ್ ಜಾಕ್ ಎಂಬ ಆಂಗ್ಲ ಸಾಮ್ರಾಜ್ಯಧ್ವಜವನ್ನೆತ್ತಿ ಹಿಡಿದ ಸಿಂಹಗಳು ಕುಳಿತ ಚಿತ್ರವಿತ್ತು. ಅದರ ಕೆಳಗಡೆಯಲ್ಲಿ ಸಂಸ್ಕೃತ ಕನ್ನಡಗಳಲ್ಲಿ ಕೆಳಗಿನ ಸೂಕ್ತಿಯಿತ್ತು :

> ಶ್ರೀಮದ್ಭೂಮಿತಲೇಷು ಭಾರತಮಹೀಭಾಗಃ ಪ್ರಶಾಸನ್ಮಹೀ
> ಪಾಲೇಷ್ವಾಂಗಲನಾಯಕೋ ನರಕುಲವ್ರಾತೇಷು ಚಾರ್ಯಾನ್ವಯಃ
> ಶಸ್ತಸ್ತದ್ವದಮೀಸು ಸಂವ್ಯವಹೃತಿ ಪ್ರಾಗಲ್ಭ್ಯ ಮತ್ಯೋಽನ್ವಹಂ
> ಜೀಯಾದ್ವಿಶ್ವಜನೀನ ವೃತ್ತಿಚ ತುರಶ್ಮಿ್ರೀಕಂಠಕಂಠೀರವಃ
>
> ನರರ ಕುಲಗಳೊಳಾರ್ಯವಂಶವು, ಧರೆಯ ದೇಶಗಳೊಳಗೆ ಭಾರತ,
> ಅರಸುತನಗಳೊಳಾಂಗ್ಲರೊಡೆತನ, ನುಡಿಗಳೊಳು ಮೆರೆವಾ
> ತಿರುಳುಗನ್ನಡವೊಂದಕ್ಕೊಂದೊಪ್ಪಿರುವ ತೆರ, ಕಂಠೀರವನು ಮೆರೆ
> ದಿರಲಿ ವಂಶಕೆ ಧರೆಗೆ ಅರಸಗೆ ನುಡಿಗೆ ಸೊಬಗೆನಿಸೀ

ಇದಲ್ಲದೆ ಮಧ್ಯಪುಟದಲ್ಲಿ ಸಂಪಾದಕೀಯದ ಮೇಲ್ಗಡೆ ಪತ್ರಿಕೆಯ ಹೆಸರಿನ ಕೆಳಗೆ

> ವಿನಾ ನವಾರುಣಂ ನದೀನಾಯತೇ ನಿಶಾ
> ನವಾನಿಲಂ ವಿನಾ ಶಿಶಿರೋ ನ ಪುಷ್ಪವಾನ್

ಎಂದು ಮೊದಲಾಗುವ ಒಂದು ಶ್ಲೋಕವಿತ್ತು. ಮುಂದೆ ದೇಶದ ರಾಜಕೀಯ ವಾತಾವರಣಕ್ಕನುಗುಣವಾಗಿ ಕಂಠೀರವ ತನ್ನ ಧೋರಣೆಯನ್ನು ಬದಲಾಯಿಸಿಕೊಂಡಾಗ ಸಿಂಹಗಳು ಹಿಡಿದಿದ್ದ ಆಂಗ್ಲ ಸಾಮ್ರಾಜ್ಯಧ್ವಜ ಬಿದ್ದುಹೋಗಿ ಬರೇ ಸಿಂಹಗಳೆರಡು ಮಾತ್ರ ಉಳಿದುವು. ಅದರೊಂದಿಗೆ ಸಂಸ್ಕೃತ ಕನ್ನಡ ಶ್ಲೋಕಗಳೂ ಮಾಯವಾದುವು.

ಈ ಪತ್ರಿಕೆಯಲ್ಲಿ ಮೊದಮೊದಲು ಪಂಜೆ ಮಂಗೇಶರಾವ್, ಮಂಜೇಶ್ವರ ಗೋವಿಂದ ಪೈ, ಎಂ. ಎನ್. ಕಾಮತ್, ಉಳ್ಳಾಲ ಮಂಗೇಶರಾವ್ ಮುಂತಾದವರು ಬರೆಯುತ್ತಿದ್ದರು. ಆಮೇಲೆ ಜೆ. ವಾಮನಭಟ್ಟ, ಕಡೆಂಗೋಡ್ಲು ಶಂಕರಭಟ್ಟ, ಕುಡ್ಪಿ ವಾಸುದೇವ ಶೆಣೈ, ಬಿ. ಶಂಕರಭಟ್ಟ ಮುಂತಾದವರೂ ಬರೆಯುತ್ತಿದ್ದರಲ್ಲದೆ ಜಿಲ್ಲೆಯ ಹೊರಗಿನ ವಿದ್ವಾಂಸರು ವಿಶೇಷ ಲೇಖನಗಳನ್ನೂ ಬರೆಯುತ್ತಿದ್ದರು. ಕಂಠೀರವ ದಸರಾ ವಿಶೇಷ ಸಂಚಿಕೆಗಳನ್ನೂ ರಾಜ್ಯೋತ್ಸವ ವಿಶೇಷ ಸಂಚಿಕೆಗಳನ್ನೂ ಪ್ರಕಟಿಸಿದೆ.

ಸ್ಪಷ್ಟವಾದ ಹಾಗೂ ತೀಕ್ಷ್ಣವಾದ ಸಂಪಾದಕೀಯಕ್ಕಾಗಿ ಕಂಠೀರವ ಪ್ರಸಿದ್ಧವಾಗಿತ್ತು. ಅದರಲ್ಲಿನ ಪತ್ರವ್ಯವಹಾರ ಅದೇ ರೀತಿಯಲ್ಲಿ ಸತ್ಯ ಸಂಗತಿಗಳ ಮೇಲೆ ಬೆಳಕು ಚೆಲ್ಲುತ್ತಿತ್ತು. ತನ್ನ ಧೋರಣೆ ಹಾಗೂ ಬರೆಹಗಳಿಗಾಗಿ ಕೆಲಕಾಲ ಅಂದಿನ ಮೈಸೂರು ಸಂಸ್ಥಾನದಲ್ಲಿ ಈ ಪತ್ರಿಕೆ ಬಹಿಷ್ಕಾರಕ್ಕೊಳಗಾಗಿತ್ತು.

ಕರ್ಣಾಟಕ ಏಕೀಕರಣ ಎಂಬ ಸಂಪಾದಕೀಯದ (23–5–1933) ಒಂದು ವಾಕ್ಯ ಹೀಗಿದೆ :

ಹಲವು ಸರ್ಕಾರಗಳ ಆಡಳಿತಕ್ಕೆ ಒಳಪಟ್ಟು ಯಾವ ಮುಖಂಡ ಮಹನೀಯರ ಬೆಂಬಲವೂ ಇಲ್ಲದ ನಮ್ಮ ಅನಾಥ ದರಿದ್ರಕರ್ಣಾಟಕ ಈ ಮಹತ್ಕಾರ್ಯವನ್ನು ಸಾಧಿಸುವುದೆಂದರೆ ಸ್ವಪ್ನಪ್ರಾಯವಲ್ಲವೇ ಎಂದು ಹಲವರು ಬಗೆಯಬಹುದಾದರೂ ಕನ್ನಡಿಗರು ತಮ್ಮ ನಿದ್ರಾವಸ್ಥೆಯಿಂದ ಎಚ್ಚತ್ತು ಏಕೀಕರಣ ಸದ್ಯದಲ್ಲೇ ಸಾಧಿಸದಿದ್ದರೂ ಅದು ಸಮೀಪಗತವಾಗುವುದರಲ್ಲಿ ಸಂದೇಹವಿಲ್ಲ.

1964 ಗಣರಾಜ್ಯೋತ್ಸವದ ದಿನದಂದು ದೀಕ್ಷಾದಿನವೆಂದು ಬರೆದ ಅಗ್ರಲೇಖನದ ಭಾಗ ಒಂದು ಹೀಗಿದೆ :

ಈಹೊತ್ತು ನಮ್ಮದು ಪ್ರಜಾರಾಜ್ಯ. ಅದನ್ನು ಉಳಿಸಿ ಬೆಳೆಸಲು, ಆ ಕರ್ತವ್ಯ ಸಾಧಿಸಲು ನಾವು ಇಂದು ದೀಕ್ಷಾಬದ್ಧರಾಗಬೇಕಾಗಿದೆ. ಕಷ್ಟ ಕಾರ್ಪಣ್ಯ, ದುಃಖ ಯಾತನೆ, ಲೋಕಕ್ಕೆಲ್ಲ ಇರುವಂತೆ ನಮಗೂ ತಪ್ಪಿದ್ದಲ್ಲ. ಅದೇನಿದ್ದರೂ ಅದು ವ್ಯಕ್ತಿಗೂ ಸಮಾಜಗಳಿಗೂ ಅನ್ವಯಿಸುವಂಥದು. ರಾಷ್ಟ್ರ, ಅಂಥ ವ್ಯಕ್ತಿಗಳಿಗೂ ಸಮಾಜಗಳಿಗೂ ಅತಿ ಹೆಚ್ಚಿನದು. ಆ ರಾಷ್ಟ್ರ ಕಲ್ಯಾಣವಾದರೇನೇ ಆ ರಾಷ್ಟ್ರದ ಮತ್ತು ಸಮಾಜದ ಹಿತಸಾಧನೆಯಾಗುತ್ತದೆ. ಇದಕ್ಕೆ ಬೇರೆ ದಾರಿಯಿಲ್ಲ. ಅಂತಲೇ ನಾವು ಇಂದು ರಾಷ್ಟ್ರ ಉದ್ಧಾರದ ದಿಸೆಯಲ್ಲಿ ಕೆಲಕೆಲವು ದೀಕ್ಷಾಕ್ರಮಗಳನ್ನು ಕೈಕೊಳ್ಳಲೇಬೇಕಾಗುವುದು. (ಪಿ.ಕೆ.ಎಸ್.)

**ಕಂಠೀರವ ನರಸರಾಜ I :** ಆಳ್ವಿಕೆ: 1638–1659. ಮೈಸೂರು ಒಡೆಯರ ಸಂತತಿಯ ಹೆಸರಾಂತ ರಾಜರಲ್ಲಿ ಒಬ್ಬ. ಬೆಟ್ಟದ ಚಾಮರಾಜ ಒಡೆಯನ ಮಗ. ಬೋಳ ಚಾಮರಾಜನ ಅನಂತರ ಬೆಟ್ಟದ ಚಾಮರಾಜನೇ ಸಿಂಹಾಸನಕ್ಕೆ ಬಂದಿದ್ದರೂ ಆಡಳಿತ ಸಾಮರ್ಥ್ಯದ ಅಭಾವದಿಂದಾಗಿ ತನ್ನ ತಮ್ಮನಾದ ರಾಜ ಒಡೆಯನಿಗೆ ಅಧಿಕಾರ ಬಿಟ್ಟುಕೊಟ್ಟಿದ್ದ. ಅವನ ಅನಂತರ ಸಿಂಹಾಸನವನ್ನೇರಿದ ಇಮ್ಮಡಿ ರಾಜ ಒಡೆಯ ವಿಷಪ್ರಾಶನದಿಂದ ಕೊಲೆಗೀಡಾದಾಗ ಪಟ್ಟಕ್ಕೆ ಬಂದವನೇ ಒಂದನೆಯ ಕಂಠೀರವ ನರಸರಾಜ. ಈತನೂ ಇವನ ತಂದೆಯಂತೆಯೇ ಅಸಮರ್ಥನೆಂದೂ ಇದರಿಂದ ತನ್ನ ಹಾದಿ ಸುಗಮವಾದೀತೆಂದೂ ಇಮ್ಮಡಿ ರಾಜ ಒಡೆಯನನ್ನು ಕೊಲೆ ಮಾಡಿಸಿದ ದಳವಾಯಿ ವಿಕ್ರಮರಾಯನ ಭಾವನೆಯಾಗಿತ್ತು. ಆದರೆ ಈ ನಿರೀಕ್ಷೆ ಸುಳ್ಳಾಯಿತು. ಕಂಠೀರವ ನರಸರಾಜ ಅಜ್ಞಾತನಾಗಿದ್ದಾಗಲೇ ತನ್ನ ಪರಾಕ್ರಮವನ್ನು ಮೆರೆದಿದ್ದ. ತಿರುಚಿನಾಪಳ್ಳಿಯ ಜಟ್ಟಿಯೊಂದಿಗೆ ಕಾದಾಡಿ ಅವನನ್ನು ಸೋಲಿಸಿ ಕೊಂದು ಅಲ್ಲಿಯ ರಾಜನ ಯಾವ ಮರ್ಯಾದೆಯನ್ನೂ ಸ್ವೀಕರಿಸದೆ ಗುಟ್ಟಾಗಿ ಹಿಂತಿರುಗಿದ್ದನೆಂಬುದಾಗಿ ಖ್ಯಾತಿ ಗಳಿಸಿದ್ದ. ಈತ ಸಿಂಹಾಸನವನ್ನೇರಿದ ಕೂಡಲೇ ದಳವಾಯಿ ವಿಕ್ರಮರಾಯನನ್ನು ಕೊಲ್ಲಿಸಿ ಪೂರ್ಣ ಅಧಿಕಾರ ವಹಿಸಿಕೊಂಡ. ಆ ವೇಳೆಗೆ ವಿಜಯನಗರದ ಅಧಿಕಾರ ಕ್ಷೀಣಿಸಿ, ಬಿಜಾಪುರದ ಸುಲ್ತಾನನೂ ಮೊಗಲರೂ ಕನ್ನಡ ನಾಡಿನ ಮೇಲೆ ತಮ್ಮ ಅಧಿಕಾರ ಸ್ಥಾಪಿಸುವ ಹವಣಿಕೆಯಲ್ಲಿದ್ದರು. ಬಿಜಾಪುರದ ಸುಲ್ತಾನ ಪ್ರಸಿದ್ಧ ದಳಪತಿಯಾದ ರಣದುಲ್ಲಾಖಾನನ ನೇತೃತ್ವದಲ್ಲಿ ಶ್ರೀರಂಗಪಟ್ಟಣವನ್ನು ಮುತ್ತಲು ಒಂದು ಸೈನ್ಯವನ್ನು ಕಳುಹಿಸಿದ. ಕಂಠೀರವ ನರಸರಾಜ ಒಡೆಯ ಪರಾಕ್ರಮದಿಂದ ಹೋರಾಡಿ ಅವನನ್ನು ಸೋಲಿಸಿ ಹಿಂತಿರುಗುವಂತೆ ಮಾಡಿದ.

ಅನಂತರ ಈತ ದಕ್ಷಿಣದ ಜಿಲ್ಲೆಗಳ ಮೇಲೆ ದಂಡೆತ್ತಿಹೋಗಿ ಮಧುರೆಯ ನಾಯಕನನ್ನು ಸೋಲಿಸಿ ಸತ್ಯಮಂಗಲವನ್ನೂ ದಣ್ಣಾಯಕನ ಕೋಟೆಯನ್ನೂ ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಪೆರಿಯಪಟ್ಟಣ ಮತ್ತು ಇಕ್ಕೇರಿಯ ಪಾಳೆಯಗಾರರೂ ಇವನಿಗೆ ಸೋತರು. ಮೂಗುಗಳಿಗಾಗಿ ಮಾಡಿದ ಯುದ್ಧವೆಂದು ಇದನ್ನು ಪ್ರೋನೇಜ ಎಂಬ ಪಾದ್ರಿ ವರ್ಣಿಸಿದ್ದಾನೆ. ಎದುರಾಳಿಗಳ ಮೂಗುಗಳನ್ನು ಕತ್ತರಿಸಬೇಕೆಂದು ಕಂಠೀರವ ನರಸರಾಜ ಆಜ್ಞೆಯಿತ್ತನೆಂಬುದಾಗಿ ಆತನ ಅಭಿಪ್ರಾಯ. ತನ್ನ ಸ್ವಾಮಿಯ ವಿರುದ್ಧ ಬಂಡಾಯವೆದ್ದ ದ್ರೋಹಿಯೆಂದು ತಿರುಮಲನಿಗೆ ಈ ಶಿಕ್ಷೆಯನ್ನು ಕಂಠೀರವ ನರಸರಾಜ ವಿಧಿಸಿದ್ದ. ವಿಶ್ವಾಸಘಾತಕರಿಗೆ ಈ ಬಗೆಯ ಶಿಕ್ಷೆ ನೀಡುವುದು ಆಗ ಸಾಮಾನ್ಯವಾಗಿತ್ತು. ನರಸರಾಜನ ರಾಜ್ಯ ಕೊಡಗಿನ ಗಡಿ ಮತ್ತು ಹಾಸನ ಜಿಲ್ಲೆಗಳ ವರೆಗೂ ವಿಸ್ತಾರವಾಯಿತು. ನಾಗಮಂಗಲದಲ್ಲಿ ಅಧಿಕಾರ ನಡೆಸುತ್ತಿದ್ದ ದೊಡ್ಡಯ್ಯ ಇವನ ವಿರುದ್ಧವಾಗಿ ಒಳಗೊಳಗೆ ಪಿತೂರಿ ನಡೆಸುತ್ತಿದ್ದನೆಂಬುದು ಗೊತ್ತಾಗಿ ಅವನನ್ನು ಶಿಕ್ಷಿಸಿದ. ಮಾಗಡಿ ಕೆಂಪೇಗೌಡನನ್ನು ಯಲಹಂಕದ ಬಳಿ ಸೋಲಿಸಿ ಅವನಿಂದಲೂ ಕಪ್ಪ ವಸೂಲು ಮಾಡಿದ. ವಿಜಯನಗರದ ಶ್ರೀರಂಗರಾಯನಿಗೆ ಬೇಲೂರಿನಲ್ಲಿ ನರಸರಾಜನ ಆಶ್ರಯ ದೊರಕಿತು. ವಿಜಯನಗರದ

ನಾಮಮಾತ್ರ ಸಾರ್ವಭೌಮತ್ವ ಸಂಪೂರ್ಣ ನಶಿಸಿಹೋಗುವ ಸ್ಥಿತಿಯಲ್ಲಿದ್ದುದನ್ನು ಮನಗಂಡ ಕಂಠೀರವ ನರಸರಾಜ ಆ ಸಮಯಕ್ಕೆ ಸರಿಯಾಗಿ ಸ್ವಾತಂತ್ರ್ಯವನ್ನು ಘೋಷಿಸಿಕೊಂಡ. ಇದರ ಸಂಕೇತವಾಗಿ ಶ್ರೀರಂಗಪಟ್ಟಣದಲ್ಲಿ ಟಂಕಸಾಲೆಯನ್ನು ಸ್ಥಾಪಿಸಿದನಲ್ಲದೆ ತನ್ನ ಹೆಸರಿನಲ್ಲಿ ನಾಣ್ಯಗಳನ್ನು ಅಚ್ಚು ಹಾಕಿಸಿದ. ಇವಕ್ಕೆ ಕಂಠೀರಾಯಹಣ ಎಂದು ಹೆಸರು. ಕಂಠೀರಾಯ ಎಂಬ ಕನ್ನಡ ಅಕ್ಷರಗಳು ನಾಣ್ಯಗಳ ಮೇಲಿವೆ. ಈ ನಾಣ್ಯಗಳು ಹೈದರ್ ಮತ್ತು ಟಿಪ್ಪು ಅಧಿಕಾರಕ್ಕೆ ಬರುವ ವರೆಗೂ ಚಲಾವಣೆಯಲ್ಲಿದ್ದುವು.

ಜನರಿಗೆ ಕಿರುಕುಳ ಕೊಡುತ್ತಿದ್ದ ಶ್ರೀಮಂತರನ್ನೂ ದುಷ್ಟರನ್ನೂ ಈತ ಸೂಕ್ತವಾಗಿ ಶಿಕ್ಷಿಸಿದ. ಆಡಳಿತ ಸುಧಾರಣೆ ಮಾಡಿ, ತೆರಿಗೆ ವಸೂಲಿಯನ್ನು ಬಿಗಿಗೊಳಿಸಿದ್ದರಿಂದ ಬೊಕ್ಕಸಕ್ಕೆ ಹೆಚ್ಚು ಹಣ ಬಂತು. ಇದರಿಂದ ಶ್ರೀರಂಗಪಟ್ಟಣದ ಕೋಟೆಯನ್ನು ವಿಸ್ತರಿಸಿ ಭದ್ರಪಡಿಸಲಾಯಿತು. ಅಲ್ಲಿ ನರಸಿಂಹ ದೇವಾಲಯವನ್ನು ಕಟ್ಟಿಸಿದವನೀತನೇ. ಈ ದೇವಾಲಯದಲ್ಲಿ ಕಂಠೀರವ ನರಸರಾಜನ ಪ್ರತಿಮೆಯನ್ನು ಕಡೆದು ನಿಲ್ಲಿಸಲಾಗಿದೆ. ಲಕ್ಷ್ಮೀನರಸಿಂಹದೇವರ ಪ್ರೀತ್ಯರ್ಥವಾಗಿ ಏಕಾದಶಿ ವ್ರತ ವಿಜೃಂಭಣೆಯಿಂದ ನಡೆಯುವಂತೆ ಈತ ಏರ್ಪಾಡು ಮಾಡಿದನೆಂದು ಪ್ರತೀತಿಯಿದೆ. ಈತ ಕೃಷ್ಣನ ಅವತಾರವೆಂದು ಹೊಗಳಿರುವ ಒಂದು ಶಾಸನವೂ ಉಂಟು. ಈತ ಅನೇಕ ಅಗ್ರಹಾರಗಳನ್ನು ಕಟ್ಟಿಸಿ ದಾನದತ್ತಿಗಳನ್ನು ಕೊಟ್ಟ. ಆರನೆಯ ಚಾಮರಾಜ ಒಡೆಯರಿಗೆ ಬಂಗಾರದೊಡ್ಡಿ ಎಂಬ ಮೆಚ್ಚಿನ ಪ್ರೇಯಸಿಯಿದ್ದಳೆಂದೂ ಅವಳ ಜ್ಞಾಪಕಾರ್ಥವಾಗಿ ಕಂಠೀರವ ನರಸರಾಜ ಶ್ರೀರಂಗಪಟ್ಟಣದ ಬಳಿಯ ಬಂಗಾರದೊಡ್ಡಿ ನಾಲೆಯನ್ನು ನಿರ್ಮಿಸಿದನೆಂದೂ ಹೇಳುತ್ತಾರೆ. ದಳವಾಯಿಗಳು ಅಧಿಕಾರವನ್ನು ದುರುಪಯೋಗ ಪಡಿಸಿಕೊಳ್ಳದಂತೆ ಈತ ಸೂಕ್ತಕ್ರಮ ಕೈಗೊಂಡನಲ್ಲದೆ, ಯಾವೊಬ್ಬ ದಳವಾಯಿಯೂ ಹೆಚ್ಚು ವರ್ಷಗಳ ಕಾಲ ಅಧಿಕಾರದಲ್ಲಿ ಮುಂದುವರಿಯದಂತೆ ಎಚ್ಚರಿಕೆ ವಹಿಸಿದ. ಇವನ 20 ವರ್ಷಗಳ ಆಳ್ವಿಕೆಯ ಕಾಲದಲ್ಲಿ ಸುಮಾರು ಹತ್ತು ಜನ ದಳವಾಯಿಗಳು ಅಧಿಕಾರದಲ್ಲಿದ್ದು ಹೋದರು.

ಕಂಠೀರವ ನರಸರಾಜ ವಿದ್ವಾಂಸರಿಗೂ ಕವಿಗಳಿಗೂ ಪ್ರೋತ್ಸಾಹ ನೀಡುತ್ತಿದ್ದ. ಭಾಸ್ಕರ ವಿರಚಿತ ಬೇಹಾರ ಗಣಿತ, ತಿಮ್ಮರಸಕವಿಯ ಮಾರ್ಕಂಡೇಯ ರಾಮಾಯಣ,' ಗೋವಿಂದ ವೈದ್ಯನ ನರಸರಾಜವಿಜಯ—ಇವು ಈತನ ಕಾಲದಲ್ಲಿ ರಚಿತವಾದ ಕೆಲವು ಗ್ರಂಥಗಳು. ನರಸರಾಜವಿಜಯ ಆಗಿನ ಇತಿಹಾಸಕ್ಕೆ ಒಂದು ಆಕರ ಗ್ರಂಥ. ಅನೇಕ ಶಾಸನಗಳಲ್ಲಿ ಕಂಠೀರವ ನರಸರಾಜನ ಸಾಹಸ ಪರಾಕ್ರಮಗಳ ವರ್ಣನೆಯುಂಟು. ಈತ ರಣಧೀರ ಕಂಠೀರವ ಎಂದೂ ಪ್ರಸಿದ್ಧನಾಗಿದ್ದಾನೆ. ಕಂಠೀರವ ನರಸರಾಜ 1659ರಲ್ಲಿ ಕಾಲವಾದ. ಇವನಿಗೆ ಮಕ್ಕಳಿರಲಿಲ್ಲ. (ಜಿ.ಆರ್.ಆರ್.)

**ಕಂಠೀರವ ನರಸರಾಜ II :** 1704–1713. ಮೈಸೂರಿನ ದೊರೆ. ಚಿಕ್ಕದೇವರಾಜನ ಮಗ. ಜನ್ಮತಃ ಕಿವುಡ, ಮೂಗ. ಆದ್ದರಿಂದ ಮೂಕರಸು ಎಂದೇ ಈತನನ್ನು ಕರೆಯುತ್ತಿದ್ದರು. ಆದರೂ ಅಮಾತ್ಯ ತಿರುಮಲೈಯಂಗಾರ್ಯನ ಪ್ರಭಾವದಿಂದ ಈತ ಸಿಂಹಾಸನವನ್ನೇರಿದ. ಇವನ ಕಾಲದಲ್ಲಿ ದಳವಾಯಿ ಕಂಠೀರವನೆಂಬವನು ಚಿಕ್ಕಬಳ್ಳಾಪುರವನ್ನು ಮುತ್ತಿ ಅದನ್ನು ಮಣಿಸಲು ಯತ್ನಿಸಿ ಆ ಪ್ರಯತ್ನದಲ್ಲಿ ಪ್ರಾಣ ತೆತ್ತ. ಅನಂತರ ಅವನ ಮಗ ಬಸವರಾಜ ಆ ಮುತ್ತಿಗೆಯನ್ನು ಮುಂದುವರಿಸಿ, ಅದನ್ನು ಬಗ್ಗಿಸಿ ಕಪ್ಪ ವಸೂಲು ಮಾಡಿದನೆಂದು ಹೇಳಲಾಗಿದೆ. ಬೆಂಗಳೂರು ಕೋಟೆಯ ಬಳಿಯಲ್ಲಿ ಚಿಕ್ಕದೇವರಾಜ ಕಟ್ಟಿಸಿದ ವೆಂಕಟೇಶ್ವರ ದೇವಾಲಯಕ್ಕೆ ಕಂಠೀರವ ನರಸರಾಜ ಭೂಮಿಯ ದತ್ತಿ ಕೊಟ್ಟನೆಂದು 1705ರ ಒಂದು ಶಾಸನವಿದೆ. ಈತನ ತರುವಾಯ ಇವನ ತಮ್ಮ ದೊಡ್ಡ ಕೃಷ್ಣರಾಜ (ಒಂದನೆಯ ಕೃಷ್ಣರಾಜ) ಪಟ್ಟಕ್ಕೆ ಬಂದ. (ಜಿ.ಆರ್.ಆರ್.)

**ಕಂಠೀರವ ನರಸಿಂಹರಾಜ ಒಡೆಯರ್ :** 1888–1940. ಮೈಸೂರಿನ ಮಹಾರಾಜ ಚಾಮರಾಜೇಂದ್ರ ಒಡೆಯರ (1863–1894) ಎರಡನೆಯ ಮಗ; ಕೃಷ್ಣರಾಜ ಒಡೆಯರ (1884–1940) ತಮ್ಮ. ಮೈಸೂರಿನ ಯುವರಾಜ. 1888ರ ಜುಲೈ 5ರಂದು ಇವರ ಜನನ. ಅಣ್ಣನೊಂದಿಗೆ ಸರ್ ಸ್ಟ್ಯೂಯರ್ಟ್ ಫ್ರೇಸರನಲ್ಲಿ ಬೇಸಗೆ ಅರಮನೆಯಲ್ಲಿ ವ್ಯಾಸಂಗ ನಡೆಯಿತು. ಪಿ. ರಾಘವೇಂದ್ರರಾವ್ ಇವರ ಇನ್ನೊಬ್ಬ ಗುರು. ರಾಜಯೋಗ್ಯವಾದ ಇತರ ವಿಷಯಗಳಲ್ಲೂ ಇವರಿಗೆ ಶಿಕ್ಷಣ ದೊರಕಿತು. ಓದಿನ ಜೊತೆಗೆ ಅಂಗಸಾಧನೆ, ಕುದುರೆ ಸವಾರಿ, ಷಿಕಾರಿ, ಕ್ರಿಕೆಟ್, ಟೆನಿಸ್, ಪೋಲೋ ಮೊದಲಾದವುಗಳಲ್ಲೂ ಒಡೆಯರಿಗೆ ವಿಶೇಷ ಆಸಕ್ತಿಯಿತ್ತು. ಚಿಕ್ಕ ವಯಸ್ಸಿನಲ್ಲೇ ರಾಜ್ಯದಲ್ಲೆಲ್ಲ ಪರ್ಯಟನ ಕೈಗೊಂಡದ್ದರಿಂದ ದೇಶದ ಸ್ಥಿತಿಯೂ ಜನಜೀವನದ ಪರಿಚಯವೂ ದೊರಕಿದ್ದುವು. ಅಣ್ಣನೊಂದಿಗೆ ಬರ್ಮದಲ್ಲಿ ಸಂಚರಿಸಿ ಬಂದರು. 1903ರಲ್ಲಿ ಉನ್ನತ ವ್ಯಾಸಂಗಕ್ಕಾಗಿ ಅಜ್ಮೀರಿನ ಮೇಯೋ ರಾಜಕುಮಾರ್ ಕಾಲೇಜನ್ನು ಸೇರಿದರೂ ಅನಾರೋಗ್ಯದ ದೆಸೆಯಿಂದ ಮರುವರ್ಷ ಮೈಸೂರಿಗೆ ಮರಳಿ ಅಲ್ಲೇ ಕ್ಯಾಪ್ಟನ್ ಆರ್. ಜೆ. ಡಬ್ಲ್ಯು. ಹೀಲ್ ಮತ್ತು ಎಂ. ಎ. ನಾರಾಯಣ ಐಯಂಗಾರ್ಯರಲ್ಲಿ ವಿದ್ಯಾಭ್ಯಾಸವನ್ನು ಮುಂದುವರಿಸಿದರು. ಕರ್ನಲ್ ಡ್ರೇಕ್‌ಬ್ರಾಕ್ಮನನ ಜೊತೆಯಲ್ಲಿ ಕಾಶ್ಮೀರ ಪ್ರವಾಸ ಮಾಡಿದ್ದು 1908ರಲ್ಲಿ.

ನಾಲ್ವಡಿ ಕೃಷ್ಣರಾಜ ಒಡೆಯರು ಮೈಸೂರು ಸಂಸ್ಥಾನದ ರಾಜಸೂತ್ರ ವಹಿಸಿದಾಗ (1902) ಇವರು ಯುವರಾಜ ಪದವಿಯನ್ನಲಂಕರಿಸಿದರು. 1908–09ರಲ್ಲಿ ಜಪಾನ್ ದೇಶಕ್ಕೆ ಭೇಟಿಯಿತ್ತು ಆ ದೇಶದ ತಾಂತ್ರಿಕ ಮುನ್ನಡೆಯನ್ನು ಸಂದರ್ಶಿಸಿ ಹಿಂತಿರುಗಿದರು. ಒಡೆಯರ ವಿವಾಹವಾದದ್ದು 1910ರಲ್ಲಿ—ಸರದಾರ್ ದಳವಾಯಿ ದೇವರಾಜೇ ಅರಸರ ನಾಲ್ಕನೆಯ ಮಗಳು ಕೆಂಪು ಚಲುವಾಜಮ್ಮಣ್ಣಿಯೊಂದಿಗೆ. 1911ರಲ್ಲಿ ಇವರು ದೆಹಲಿಯಲ್ಲಿ ನಡೆದ ದರ್ಬಾರಿಗೆ ಅಣ್ಣನೊಡನೆ ಹೋಗಿದ್ದರು. ಬ್ರಿಟಿಷ್ ದೊರೆಯಿಂದ ಇವರಿಗೆ ನೈಟ್ ಕಮಾಂಡರ್ ಪ್ರಶಸ್ತಿ ದೊರಕಿತು. 1913ರಲ್ಲಿ ಐರೋಪ್ಯ ಪ್ರವಾಸ ಕೈಕೊಂಡು ಇಂಗ್ಲೆಂಡ್, ಫ್ರಾನ್ಸ್, ಸ್ವಿಟ್ಸರ್‌ಲೆಂಡ್ ಮತ್ತು ಬೆಲ್ಜಿಯಂ ರಾಷ್ಟ್ರಗಳನ್ನು ಸಂದರ್ಶಿಸಿದರು. ಪ್ರವಾಸದಿಂದ ಹಿಂತಿರುಗಿದ ಅನಂತರ ಇವರಿಗೆ ಮಹಾರಾಜರ ಸಚಿವ ಮಂಡಲಿಯ ವಿಶೇಷ ಸದಸ್ಯತ್ವ ದೊರಕಿತು. ಸೇನಾ ಖಾತೆಯನ್ನು ಇವರಿಗೆ ವಹಿಸಲಾಯಿತು. ಒಂದನೆಯ ಮಹಾಯುದ್ಧದ ಕಾಲದಲ್ಲಿ ಸೈನ್ಯ ಸರಬರಾಜಿನ ಕಾರ್ಯವನ್ನು ಯಶಸ್ವಿಯಾಗಿ ಇವರು ನೆರವೇರಿಸಿದರು. 1915ರಲ್ಲಿ ಬ್ರಿಟಿಷ್ ಸರ್ಕಾರದಿಂದ ಇವರಿಗೆ ಜಿ.ಸಿ.ಐ.ಇ. ಬಿರುದೂ 1918ರಲ್ಲಿ ಹಿಸ್ ಹೈನೆಸ್ ಪ್ರಶಸ್ತಿಯೂ ಲಭ್ಯವಾದುವು.

ಕೃಷ್ಣರಾಜ ಒಡೆಯರ ಅನಂತರ ಮೈಸೂರು ಸಂಸ್ಥಾನದ ರಾಜರಾದ ಜಯಚಾಮರಾಜ ಒಡೆಯರು ಇವರ ಪುತ್ರ (ಜನನ 1918ರ ಜುಲೈ 18).

ಕಂಠೀರವ ನರಸಿಂಹರಾಜ ಒಡೆಯರಿಗೆ ಸಂಸ್ಥಾನದ ಆರ್ಥಿಕ ಮತ್ತು ಸಾಮಾಜಿಕ ಪ್ರಗತಿ ಕಾರ್ಯಗಳಲ್ಲಿ ವಿಶೇಷ ಆಸಕ್ತಿಯಿತ್ತು. ಇವರು ಸಂಸ್ಥಾನದ ಸ್ಕೌಟ್ ಚಳವಳಿಯ ಮುಖ್ಯರಾಗಿದ್ದುದಲ್ಲದೆ ರೆಡ್‌ಕ್ರಾಸ್ ಸಂಸ್ಥೆಯ ಸದಸ್ಯರಾಗಿದ್ದರು. ಗರ್ಭಿಣಿ ಮತ್ತು ಶಿಶು ಸಂರಕ್ಷಣ ಕಾರ್ಯದಲ್ಲಿ ವಿಶೇಷ ಆಸ್ಥೆ ವಹಿಸಿದ್ದು ಈ ಕ್ಷೇತ್ರದಲ್ಲಿ ಅನೇಕ ಚಿಕಿತ್ಸಾಲಯಗಳ ಸ್ಥಾಪನೆಗೆ ಕಾರಣರಾದರು. ಕಿವುಡ ಮತ್ತು ಕುರುಡರ ಶಿಕ್ಷಣಕ್ಕೆ ಇವರಿಂದ ವಿಶೇಷ ಪ್ರೋತ್ಸಾಹ ಲಭಿಸಿತು. ದೀನದಲಿತರಲ್ಲಿ ಇವರು ತೋರಿಸುತ್ತಿದ್ದ ಔದಾರ್ಯ ವಿಶೇಷ. ಆ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ಹಲವು ಕಡೆಗಳಲ್ಲಿ ಸ್ಥಾಪಿತವಾದ ಹರಿಜನ ವಿದ್ಯಾರ್ಥಿ ನಿಲಯಗಳಿಗೆ ಇವರ ಹೆಸರನ್ನಿಡಲಾಗಿದೆ. ಸಂಗೀತ ಮತ್ತು ಸಾಹಿತ್ಯದಲ್ಲಿ ಇವರಿಗೆ ಹೆಚ್ಚಿನ ಅಭಿರುಚಿಯಿತ್ತು. ಇವರು ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪಕ-ಅಧ್ಯಕ್ಷರೂ ಮಿಥಿಕ್ ಸೊಸೈಟಿಯ ಮುಖ್ಯ ಉಪಪೋಷಕರೂ ಮೈಸೂರು ವಿಶ್ವವಿದ್ಯಾನಿಲಯದ ಪ್ರೊ-ಛಾನ್ಸೆಲರೂ ಆಗಿದ್ದರು. ಕಂಠೀರವ ನರಸಿಂಹರಾಜ ನಾಮಾಂಕಿತ ಕಟ್ಟಡಗಳೂ ರಸ್ತೆಗಳೂ ಬಡಾವಣೆಗಳೂ ಗ್ರಾಮಗಳೂ ಹಳೆಯ ಮೈಸೂರಿನಲ್ಲಿವೆ. ಇವರು 1940ರ ಮಾರ್ಚ್ 11ರಂದು ಬೊಂಬಾಯಿಯಲ್ಲಿ ನಿಧನ ಹೊಂದಿದರು. (ಜಿ.ಆರ್.ಆರ್.)

**ಕಂಡಗರಿಗೆ :** ಮೀಲಿಯೇಸೀ ಕುಟುಂಬಕ್ಕೆ ಸೇರಿದ ಸೆಡ್ರೆಲ ಟೂನ ಅಥವಾ ಟೂನ ಸಿಲಿಯೇಟ ಎಂಬ ವೈಜ್ಞಾನಿಕ ಹೆಸರುಳ್ಳ ದೊಡ್ಡ ಮರ. ಮಂಡುಕರಿಕೆ ಪರ್ಯಾಯ ನಾಮ. ಇಂಗ್ಲಿಷಿನಲ್ಲಿ ರೆಡ್ ಸಿಡಾರ್ ಎನ್ನುತ್ತಾರೆ. ಪ್ರಮುಖವಾಗಿ ಹಿಮಾಲಯದ ಅರಣ್ಯಗಳಲ್ಲಿ 4,000′ ಎತ್ತರದವರೆಗೂ ಹರಡಿರುವ ಇದು ಬಂಗಾಳ, ಅಸ್ಸಾಂ ಮತ್ತು ಪಶ್ಚಿಮಘಟ್ಟಗಳಲ್ಲೂ ಕಾಣಬರುತ್ತದೆ. ಮೈಸೂರು ರಾಜ್ಯದಲ್ಲಿ ಕೊಡಗಿನ ಕಾಫಿತೋಟಗಳಲ್ಲಿ ಇದನ್ನು ಬೆಳೆಸಿರುವುದನ್ನು ನೋಡಬಹುದು. ಇದು ತೇವಪೂರಿತ ಗೋಡುಮಣ್ಣಿನ ನೆಲದಲ್ಲಿ ಮತ್ತು ವರ್ಷಕ್ಕೆ 45″–160″ ಮಳೆಬೀಳುವ ಪ್ರದೇಶಗಳಲ್ಲಿ ಚೆನ್ನಾಗಿ ಬೆಳೆಯುವುದು. ವಾತಾವರಣದ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ತಡೆದುಕೊಳ್ಳುವ ಶಕ್ತಿ ಇದಕ್ಕೆ ಇದೆ.

ಸುಮಾರು 70′–100′ ಎತ್ತರಕ್ಕೆ ಬೆಳೆಯುವ ಈ ಮರಕ್ಕೆ 6′–10′ ದಪ್ಪದ ಕಾಂಡವಿದೆ. ಎಲೆಗಳು ಬೇವಿನ ಎಲೆಯಂತೆ. ಜೋಡಣೆ ಪರ್ಯಾಯ ರೀತಿಯದು. ಚಳಿಗಾಲದಲ್ಲಿ ಉದುರಿಹೋಗುತ್ತವೆ. ಫೆಬ್ರವರಿ-ಏಪ್ರಿಲ್ ತಿಂಗಳುಗಳು ಹೂ ಬಿಡುವ ಕಾಲ. ಹೂಗಳು ದ್ವಿಲಿಂಗಿಗಳು. ಬಣ್ಣ ಬಿಳಿ. ಸಣ್ಣ ರೆಂಬೆಗಳ ತುದಿಯಲ್ಲಿನ ಸಂಕೀರ್ಣ ಪುಷ್ಪಗುಚ್ಛದಲ್ಲಿ ಜೋಡಣೆಗೊಂಡಿವೆ. ಪುಷ್ಪದಳ ಐದು, ಬಿಡಿಬಿಡಿಯಾಗಿವೆ. ಕೇಸರಗಳು 4–6, ಬಿಡಿಯಾಗಿವೆ. ಕೆಲವೊಮ್ಮೆ ಬರಡು ಕೇಸರಗಳೂ ಇರುವುದುಂಟು. ಅಂಡಾಶಯ ಉಚ್ಚಸ್ಥಾನದ್ದು; ಅಂಡಕೋಶದಲ್ಲಿ ಐದು ಕೋಣೆಗಳಿವೆ: ಒಂದೊಂದು ಕೋಣೆಯಲ್ಲಿಯೂ 8–12 ಅಂಡಕಗಳಿವೆ. ಕಾಯಿ ಸಂಪುಟ (ಕ್ಯಾಪ್ಸ್ಯೂಲ್) ಮಾದರಿಯದು. ಬೀಜಗಳು ಬಲು ಸಣ್ಣವು (ಸುಮಾರು 15,300 ಬೀಜಗಳು ಕೇವಲ ಒಂದು ಔನ್ಸು ತೂಗುತ್ತವೆ). ಸಹಜವಾಗಿ ಬೀಜ ಮೊಳೆಯುವುದು ತುಂಬ ಕಡಿಮೆ. ಶೇಖರಿಸಿ ನರ್ಸರಿಗಳಲ್ಲಿಬಿತ್ತಿದರೆ ಸುಮಾರು 70 % ರಷ್ಟು ಬೀಜಗಳು ಮೊಳೆತು ಸಸಿಗಳಾಗುತ್ತವೆ.

ಕಂಡಗರಿಗೆಯ ರಸಕಾಷ್ಠ (ಸ್ಯಾಪ್‌ವುಡ್) ಸ್ವಲ್ಪ ಕೆಂಪು ಅಥವಾ ಬೂದುಮಿಶ್ರಿತ ಬಿಳಿ ಬಣ್ಣದ್ದು. ಚೇಗು (ಹಾರ್ಟ್‌ವುಡ್) ಹೊಸದಾಗಿ ಕತ್ತರಿಸಿದಾಗ ಕೆಂಪು ಬಣ್ಣದ್ದಾಗಿದ್ದು ಕ್ರಮೇಣ ಕಂದು ಮಿಶ್ರಿತ ಕೆಂಪು ಬಣ್ಣಕ್ಕೆ ತಿರುಗುತ್ತದೆ. ಚೌಬೀನೆ

ಹಗುರ ನೇರ ಕಣ ವಿನ್ಯಾಸ ಮತ್ತು ಮಧ್ಯಮದರ್ಜೆಯ ಗಡುಸುಳ್ಳದ್ದು. ಇದನ್ನು ಪೀಠೋಪಕರಣ, ಮೇಲ್ಛಾವಣಿ, ಬಾಗಿಲು, ಟೀ ಪೆಟ್ಟಿಗೆಗಳು ಮುಂತಾದವನ್ನು ಮಾಡಲೂ ನೆಲದ ಮೇಲೆ ಹಾಸಲೂ ಉಪಯೋಗಿಸುತ್ತಾರೆ. ಹೂಗಳಲ್ಲಿ ನಿಕ್ಟ್ಯಾಂತಿನ್ ಎಂಬ ಕೆಂಪುಬಣ್ಣದ ವಸ್ತು ಹಾಗೂ ಫ್ಲೇವೋನ್ ಮತ್ತು ಫ್ಲೇವೊನಾಲ್ ಎಂಬ ಬಣ್ಣಗಳೂ ಇವೆ. ಬಂಗಾಳದಲ್ಲಿ ಹೂಗಳಿಂದ ಗುನಾರಿ ಎಂಬ ಬಣ್ಣವನ್ನು ತಯಾರಿಸುತ್ತಾರೆ. ಅಲ್ಲದೆ ಅವನ್ನು ಕುಸುಬೆ ಹೂ ಮತ್ತು ಅರಿಸಿನಗಳ ಜೊತೆಯಲ್ಲಿ ಸೇರಿಸಿ ಬಸಂತಿ ಎಂಬ ಗಂಧಕದ ಹಳದಿ ಬಣ್ಣವನ್ನು ಪಡೆಯಬಹುದು. ಆಯುರ್ವೇದ ಔಷಧ ಪದ್ಧತಿಯಲ್ಲಿ ಕಂಡಗರಿಗೆಯ ಉಪಯೋಗ ಉಂಟು. ಇದರ ತೊಗಟೆಗೆ ಬಂಧಕ (ಆಸ್ಟ್ರಿಂಜೆಂಟ್) ಮತ್ತು ಕಾಲಿಕ ಜ್ವರರೋಧಕ (ಆ್ಯಂಟಿಪೀರಿಯಾಡಿಕ್) ಗುಣಗಳಿವೆ. ಇದನ್ನು ಎಳೆಯಕೂಸುಗಳಿಗೆ ಬರುವ ಆಮಶಂಕೆಯ ನಿವಾರಣೆಗೂ ವ್ರಣಗಳ ಬಾಹ್ಯಲೇಪನಕ್ಕೂ ಬಳಸುತ್ತಾರೆ. (ಎಸ್.ಆರ್.ಜಿ.)

**ಕಂಡಬತ್ತದ ಹುಲ್ಲು :** ಏಕದಳ ಸಸ್ಯ ಕುಟುಂಬಗಳಲ್ಲಿ ಬಹು ದೊಡ್ಡದಾದ ಗ್ರಾಮಿನಿ ಕುಟುಂಬಕ್ಕೆ ಸೇರಿದ ಬಹುವಾರ್ಷಿಕ ತೃಣಸಸ್ಯ ; ವೈಜ್ಞಾನಿಕ ಹೆಸರು ಡೈಕ್ಯಾಂತಿಯಮ್ ಎಂದು. ಇರುವ 5-6 ಪ್ರಭೇದಗಳಲ್ಲಿ ಡಿ. ಆನ್ಯುಲೇಟಮ್ ಮತ್ತು ಡಿ. ಕ್ಯಾರಿಕೋಸಮ್ ಮುಖ್ಯವಾದುವು.

ಡಿ. ಆನ್ಯುಲೇಟಮ್ ಎಂಬುದು ಆಂಡ್ರೊಪೋಗಾನ್ ಆನ್ಯುಲೇಟಸ್ ಎಂಬುದರ ಪರ್ಯಾಯನಾಮ ; ನೆಟ್ಟಗೆ ಗೊಂಚಲಾಗಿ ಬೆಳೆಯುತ್ತದೆ. ಎತ್ತರ ಸುಮಾರು ಮೂರು ಅಡಿಗಳು. ಭಾರತದ ಪ್ರಸ್ಥಭೂಮಿ ಮತ್ತು 5,000 ಅಡಿಗಳಷ್ಟು ಎತ್ತರದವರೆಗಿನ ಬೆಟ್ಟಗಳಲ್ಲಿ ಕಂಡುಬರುತ್ತದೆ. ಬೇಲಿ, ರಸ್ತೆಬದಿ ಮತ್ತು ಹುಲ್ಲುಗಾವಲುಗಳಲ್ಲಿ ಬೆಳೆಯುವುದು ಸಾಮಾನ್ಯ. ಎಲೆಗಳ ಉದ್ದ 3″-12″ ಮತ್ತು ಅಗಲ ⅛″-¼″. ತುದಿ ಮೊನಚು, ಹೊಳಪು. ಕೆಲವು ತುಪ್ಪುಳ ರಹಿತವಾದರೆ ಕೆಲವು ಬುಡ ದಪ್ಪವಿರುವ ಸಣ್ಣ ಕೂದಲುಗಳಿಂದ ಆವೃತವಾಗಿವೆ. ಹೂಗೊಂಚಲು ಅಂತ್ಯಾರಂಭಿ ; ಉದ್ದ 1″ರಿಂದ 1½″. ಬಣ್ಣ ತಿಳಿಗೆಂಪು ಅಥವಾ ಬಿಳಿ.

ಚೆನ್ನಾಗಿ ಕುಯ್ಯುಲು ಬರುವ ಡಿ. ಆನ್ಯುಲೇಟಮ್ ಮೇವಿನ ಹುಲ್ಲುಗಳಲ್ಲೆಲ್ಲ ವಿಶಿಷ್ಟಸ್ಥಾನವನ್ನು ಹೊಂದಿದೆ. ಎಕರೆಗೆ ಸುಮಾರು 8,000 ಪೌಂಡುಗಳಷ್ಟು ಇಳುವರಿ ಸಿಗುವುದು. ಹೂ ಬಿಡುವುದಕ್ಕೆ ಮುಂಚೆ ಕತ್ತರಿಸಿ ಒಣಗಿಸಿದ ಒಣ ಹುಲ್ಲು ದನಗಳಿಗೆ ಒಳ್ಳೆಯ ಆಹಾರ.

ಡಿ. ಕ್ಯಾರಿಕೋಸಮ್ (ಆಂಡ್ರೊಪೋಗಾನ್ ಕ್ಯಾರಿಕೋಸಮ್) ಪ್ರಭೇದವನ್ನು ಮೈಸೂರಿನ ಕೆಲವು ಭಾಗಗಳಲ್ಲಿ ಉರುಕನ ಹುಲ್ಲು ಎಂದು ಕರೆಯುವುದು ರೂಢಿ. ಬಹಳವಾಗಿ ಡಿ. ಆನ್ಯುಲೇಟಮ್ಮನ್ನು ಹೋಲುತ್ತದೆ. ಪ್ರಸ್ಥಭೂಮಿ ಮತ್ತು 3,000 ಅಡಿಗಳವರೆಗಿನ ಸಣ್ಣ ಬೆಟ್ಟಗಳಲ್ಲಿ ಬೆಳೆಯುವುದು ಸಾಮಾನ್ಯ. ಒಣ ಮತ್ತು ಮರಳುಮಿಶ್ರಿತ ತಾಣಗಳಲ್ಲಿ, ಬತ್ತದ ಗದ್ದೆಗಳ ತೆವರಿನ ಮೇಲೆ ಮತ್ತು ನೆರಳಿರುವ ಸ್ಥಳಗಳಲ್ಲಿ ವಿಶೇಷವಾಗಿ ಹರಡಿರುತ್ತದೆ. ಕ್ಷಾಮ ಪರಿಸ್ಥಿತಿಯಲ್ಲೂ ಬದುಕಬಲ್ಲದು. ಎಲೆಯ ತುದಿ ಮೊನಚು ; ಉದ್ದ 6″-8″. ಅಗಲ 1/10″-⅛″. ಹೂಗೊಂಚಲು ಅಂತ್ಯಾರಂಭಿ. ಉದ್ದ 1″-4″. ಬಣ್ಣ ತಿಳಿಹಸಿರು ಅಥವಾ ಹೊಳೆಯುವ ಬಿಳುಪು. ಎಕರೆಗೆ ಸುಮಾರು 8,000 ಪೌಂಡುಗಳಿಗಿಂತ ಮಿಗಿಲಾಗಿ ಇಳುವರಿ ಕೊಡುತ್ತದೆ. (ಎಸ್.ಆರ್.ಜಿ.)

**ಕಂಡಿ :** ತಡೆಗೋಡೆಯಲ್ಲಿ ರಚಿತವಾಗಿರುವ ತರಲನಿರ್ಗಮದ್ವಾರ (ಆರಿಫಿಸ್). ದ್ರವ ಮತ್ತು ಅನಿಲ ಪದಾರ್ಥಗಳ ಒಟ್ಟು ಹೆಸರು ತರಲ (ಫ್ಲೂಯಿಡ್). ಒಂದು ಶೇಖರಣಪ್ರದೇಶದಲ್ಲಿನ ತರಲದಲ್ಲಿ ಸಂಚಯಿತವಾಗಿರುವ ಸ್ಥಿತಿಶಕ್ತಿಯನ್ನು ಗತಿಶಕ್ತಿಯನ್ನಾಗಿ ಪರಿವರ್ತಿಸುವ ಸಾಧನ ಕಂಡಿ. ಇಲ್ಲಿ ಆಗುವುದಿಷ್ಟು; ಶೇಖರಣೆಯಲ್ಲಿನ ತೀವ್ರಸಂಮರ್ದ ಅದರ ಸ್ಥಿತಿಶಕ್ತಿ; ಅದರ ತಳದಲ್ಲಿರುವ ಕಿರಿಯ ಕಂಡಿ ತರಲಕ್ಕೆ ನಿರ್ಗಮದ್ವಾರವಾಗುತ್ತದೆ. ಇದರ ಮೂಲಕ ಅದು ಅಧಿಕ ವೇಗದಿಂದ ಪ್ರವಹಿಸುತ್ತದೆ. ಸೈದ್ಧಾಂತಿಕವಾಗಿ ಈ ವೇಗ $v$ ಯ ಬೆಲೆಯನ್ನು $v=\sqrt{2gH}$ ಸಮೀಕರಣ ನೀಡುವುದು. $H$ ಇಲ್ಲಿ ತರಲದ ಮೇಲುಭಾಗದಿಂದ ಕಂಡಿಯ ಆಳ. ಆದರೆ ಕಂಡಿಯಲ್ಲಿ ತರಲಕ್ಕೆ ಒದಗುವ ಘರ್ಷಣೆಯ ಪರಿಣಾಮವಾಗಿ ತರಲಧಾರೆಯ ವೇಗದ ವಾಸ್ತವ ಬೆಲೆ $V$ ಸೈದ್ಧಾಂತಿಕಬೆಲೆ $v$ ಗಿಂತ ಕಡಿಮೆ. $V:v$ ಅನುಪಾತದ ಹೆಸರು ವೇಗ ಗುಣಕ $\rho$.

$$\rho = \frac{V}{v}$$

ಹೊರಗೆ ಧಾವಿಸಲು ಕಂಡಿಯೆಡೆಗೆ ಮುನ್ನುಗ್ಗುವ ತರಲದ ಅಣುಗಳು ಕಂಡಿಯ ಗಾತ್ರಾನುಸಾರ ಸಂಕೋಚಗೊಂಡು ಒಂದು ಧಾರೆಯ ರೂಪದಲ್ಲಿ ಹೊರ ಚಿಮ್ಮುತ್ತವೆ. ಧಾರೆಯ ಪ್ರಾರಂಭ ಅಡ್ಡಕೊಯ್ತ ಕಂಡಿಯ ಗಾತ್ರಕ್ಕಿಂತ ಸ್ವಲ್ಪಮಟ್ಟಿಗೆ




ಕಂಡಿಗಳ ವಿವಿಧ ಬಗೆಗಳು : ಚೂಪು ಅಂಚುಳ್ಳ ಕಂಡಿಯ ಪಾರ್ಶ್ವನೋಟದಲ್ಲಿ [ಎಡಗಡೆಯದು] ಧಾರಾಸಂಕೋಚನನ್ನೂ (1), ಧಾರೆಯ ಹಾದಿಯನ್ನೂ (2) ತೋರಿಸಿದೆ. ದುಂಡು ಕಂಡಿಯನ್ನು (3) ಮತ್ತು ಬೋರ್ಡ ನೂದರಿಯದನ್ನು (4) ಬಲಗಡೆಯಲ್ಲಿ ತೋರಿಸಿದೆ.

ಕಿರಿದಾಗಿರುವುದು. ಇದರ ಹೆಸರು ಧಾರಾಸಂಕೋಚ (ವೇನಾ ಕಂಟ್ರಾಕ್ಟ). ಮುಂದೆ ಇದರ ಗಾತ್ರ ಹಿಗ್ಗುತ್ತದೆ. ಧಾರಾಸಂಕೋಚದ ಗಾತ್ರ $S$ ಮತ್ತು ಕಂಡಿಯ ಗಾತ್ರ $A$ ಆಗಿದ್ದರೆ $S:A$ ಅನುಪಾತದ ಹೆಸರು ಸಂಕೋಚ ಗುಣಕ, $\sigma$.

$$\sigma = \frac{S}{A}$$

ಕಂಡಿಯ ಮೂಲಕ ಹರಿಯುವ ಪ್ರವಾಹವು ವೇಗ ಮತ್ತು ಗಾತ್ರಗಳ ಗುಣಲಬ್ಧ. ಇದರ ವಾಸ್ತವ ಬೆಲೆ $SV$, ಎಂದರೆ ಧಾರಾಸಂಕೋಚ ಹಾಗೂ ವಾಸ್ತವ ವೇಗ ಇವುಗಳ ಗುಣಲಬ್ಧ. ಇದರ ಸೈದ್ಧಾಂತಿಕ ಬೆಲೆ $Av$ ಎಂದರೆ ಕಂಡಿಯ ಗಾತ್ರ ಹಾಗೂ ಸೈದ್ಧಾಂತಿಕ ವೇಗ ಇವುಗಳ ಗುಣಲಬ್ಧ. ಇವೆರಡು ಗುಣಲಬ್ಧಗಳ ಅನುಪಾತ $\tau$ ಆಗಿದ್ದರೆ ಆಗ

$$\tau = \frac{SV}{Av} = \sigma\rho$$

$\tau$ ದ ಹೆಸರು ಪ್ರವಾಹ ಗುಣಕ. ಇದರ ಬೆಲೆ ಸಂಕೋಚ ಗುಣಕ ಹಾಗೂ ವೇಗ ಗುಣಕಗಳ ಗುಣಲಬ್ಧವೆಂದು ಮೇಲಿನ ಸಮೀಕರಣದಿಂದ ತಿಳಿಯುತ್ತದೆ. ಸಾಮಾನ್ಯವಾಗಿ ಬಳಕೆಯಲ್ಲಿರುವ ಹರಿತ ಅಂಚಿನ ಕಂಡಿಯಲ್ಲಿ $\tau$ ದ ಬೆಲೆ ಸುಮಾರು 0.61. ಆಗ $a$ ಗಾತ್ರವಿರುವ ಒಂದು ಕಂಡಿಯಿಂದ ನಿರ್ಗಮಿಸುವ ಪ್ರವಾಹ Qವಿನ ಬೆಲೆ

$$Q = 0.61.a\sqrt{2gH}$$

ಆಗುತ್ತದೆ.

ಕಂಡಿಯಿಂದ ಹೊರಬಿದ್ದ ಧಾರೆ ಇತರ ಬಾಹ್ಯ ಬಲಗಳ ಪ್ರಭಾವವಿಲ್ಲದೇ ಕೇವಲ ಗುರುತ್ವಾಕರ್ಷಣ ಬಲವೊಂದರಿಂದಲೇ ಪ್ರಭಾವಿತಗೊಂಡಾಗ ಅದರ ಪಥ ಪ್ಯರಾಬೊಲ.

ತರಲ ಪ್ರವಾಹಮಾಪನ, ಎತ್ತರದ ಜಲಾಶಯಗಳಿಂದ ತಗ್ಗಿಗೆ ನೀರು ಹಾಯಿಸುವಿಕೆ, ಎಂಜಿನ್ನಿನಲ್ಲಿ ಕಾರ್ಬುರೇಟರಿಗೆ ಇಂಧನ ಒದಗಿಸುವಿಕೆ ಮುಂತಾದ ಕ್ರಿಯೆಗಳಲ್ಲಿ ಕಂಡಿಯ ಉಪಯೋಗ ಉಂಟು. (ಎಡ್.ಸಿ.ಕೆ.)

**ಕಂತಿ :** ಕನ್ನಡದ ಪ್ರಥಮ ಕವಯಿತ್ರಿ. ನಾಗಚಂದ್ರನ ಸಮಕಾಲೀನಳೆಂದೂ (1140) ದೋರರಾಯನ ಆಸ್ಥಾನದಲ್ಲಿದ್ದಳೆಂದೂ ಹೇಳಲಾಗಿದೆ. ಈಕೆಯ ಹೆಸರಿನಲ್ಲಿ ಕಂತಿ–ಹಂಪನ ಸಮಸ್ಯೆಗಳು ಎಂಬ ಪುಟ್ಟ ಕೃತಿಯೊಂದು ಸಿಕ್ಕಿದೆ. 16ನೆಯ ಶತಮಾನದ ಬಾಹುಬಲಿ ಎಂಬ ಕವಿ ಅಭಿನವವಾಗ್ದೇವಿಯಾದ ಕಂತಿಕೆಯನ್ನು ಹೊಗಳಿದ್ದಾನೆ. 19ನೆಯ ಶತಮಾನದ ದೇವಚಂದ್ರ ತನ್ನ ರಾಜಾವಳಿ ಕಥೆಯಲ್ಲಿ ಇವಳ ಬಗ್ಗೆ ಈ ಕಥೆ ಹೇಳಿದ್ದಾನೆ. ದೋರರಾಯನ ಮಂತ್ರಿಯಾದ ಧರ್ಮಚಂದ್ರನ ಮಗ ಉಪಾಧ್ಯಾಯನಾಗಿ ಪಾಠ ಹೇಳುತ್ತಿದ್ದು, ಮಕ್ಕಳ ಮತಿಪ್ರಕಾಶಕ್ಕಾಗಿ

ಜ್ಯೋತಿಷ್ಮತೀತೈಲವನ್ನು ಮಾಡಿ ಕುಡಿಕೆಯಲ್ಲಿಟ್ಟುಕೊಂಡು ಮಂದಮತಿಗಳಿಗೆ ಅರೆಬಿಂದುವನ್ನು ಮಾತ್ರ ಸೇವಿಸಲು ಕೊಡುತ್ತಿದ್ದ. ಕಂತಿ ಎಂಬ ಮನೆಗೆಲಸದವಳು ಅರಿಯದೆ ಆ ತೈಲವೆಲ್ಲವನ್ನೂ ಸೇವಿಸಲಾಗಿ ಉರಿ ಹತ್ತಿ ಬಾವಿಯಲ್ಲಿ ಬಿದ್ದಳು. ಅಲ್ಲಿ ಕಂಠಪ್ರಮಾಣದ ನೀರಿದ್ದುದರಿಂದ ಆಕೆ ಸಾಯದೆ ಉಳಿದಳಲ್ಲದೆ ವಿದ್ಯಾ ವಿಶಾರದೆಯಾಗಿ ಕಾವ್ಯಕಟ್ಟಿ ಹೇಳುತ್ತಿರಲಾಗಿ ದೋರರಾಯನ ಆಸ್ಥಾನದ ಪಂಪಕವಿ ಒಂದು ಸಾವಿರ ಪ್ರಶ್ನೆಗಳನ್ನು ಕೇಳಿದ. ಅವಕ್ಕೆಲ್ಲ ಅವಳು ಸಮಂಜಸವಾಗಿ ಉತ್ತರ ಕೊಡಲಾಗಿ, ಅವಳನ್ನು ರಾಜಸಭೆಗೆ ಕರೆಸಲಾಯಿತು. ಅಲ್ಲಿ ಅವಳು ವಿದ್ವತ್ಸ ಮೂಹದಲ್ಲಿ ಅಧಿಕ ಕವೀಶ್ವರಿಯಾದಳು.

ರಾಜಾಸ್ಥಾನದಲ್ಲಿ ಅಭಿನವಪಂಪನಿಗೂ ಕಂತಿಗೂ ಬಹಳ ಸಂವಾದಗಳೂ ಕವಿತ್ವ ಸ್ಪರ್ಧೆಗಳೂ ನಡೆಯುತ್ತಿದ್ದಂತೆ ತೋರುತ್ತದೆ. ಕಂತಿಯ ಬಾಯಲ್ಲಿ ಹೊಗಳಿಸಿ ಕೊಳ್ಳಬೇಕೆಂಬ ಉದ್ದೇಶದಿಂದ ನಾಗಚಂದ್ರ ಒಮ್ಮೆ ಸತ್ತಂತೆ ನಟಿಸಿದನೆಂದೂ ಆಗ ಕಂತಿ ಬಂದು ಅವನನ್ನು ಕೊಂಡಾಡುತ್ತ ಪ್ರಲಾಪಿಸಿದಳೆಂದೂ ಅವನು ತನ್ನ ಪಂಥ ಗೆದ್ದಿತು ಎಂದು ಎದ್ದು ಕುಳಿತನೆಂದೂ ಕಥೆಯಿದೆ.

ಕಂತಿಯ ವಿಷಯವೆಲ್ಲ ದಂತಕಥೆಯೆಂದೂ ಆ ಹೆಸರಿನ ಕವಯಿತ್ರಿ ಇರಲೇ ಇಲ್ಲ ವೆಂದೂ ಒಂದು ವಾದವಿದೆ. ಇದನ್ನು ಸಮರ್ಥಿಸುವ ಅಂಶಗಳಿವು: ಕಂತಿಯೆಂದರೆ ಜೈನ ಸಂನ್ಯಾಸಿನಿಯೆಂದರ್ಥ. ಅದು ಒಬ್ಬಳ ಹೆಸರು ಎನ್ನುವುದು ಕಷ್ಟ. ನಾಗ ಚಂದ್ರನ ಕೃತಿಗಳಲ್ಲಾಗಲಿ ಬೇರೆ ಕಡೆಗಳಲ್ಲಾಗಲಿ ಕಂತಿಯ ಉಲ್ಲೇಖವಿಲ್ಲ. ಬಾಹು ಬಲಿ, ದೇವಚಂದ್ರರು ಇತ್ತೀಚಿನವರಾದುದರಿಂದ ಅವರ ಹೇಳಿಕೆ ವಿಶ್ವಸನೀಯವಲ್ಲ. ದೋರರಾಯ ಎಂಬ ಹೆಸರಿನ ಯಾವ ರಾಜನೂ ಆಳಿದಂತೆ ಚರಿತ್ರೆಯಿಂದ ತಿಳಿದು ಬರುವುದಿಲ್ಲ. ಆದ್ದರಿಂದ ಕಂತಿಯದೆಲ್ಲ ಕಟ್ಟುಕಥೆ, ಕಂತಿ ಹಂಪನ ಸಮಸ್ಯೆಗಳನ್ನು ಈಚೆಗೆ ಯಾರೋ ಬರೆದು ಕಂತಿಗೆ ಆರೋಪಿಸಿದ್ದಾರೆ ಎನ್ನಬೇಕಾಗುತ್ತದೆ. ಅವುಗಳ ಶೈಲಿಯೂ ಸಂಶಯಾಸ್ಪದವಾಗಿದೆ. ಅವಳ ಅಸ್ತಿತ್ವವೇ ಕಲ್ಪಿತವಾದುದೆನ್ನುವುದು ಸಮರ್ಪಕವಾಗಲಿಕ್ಕಿಲ್ಲ ಎಂಬ ಅಭಿಪ್ರಾಯವೂ ಉಂಟು.

ಕಂತಿ–ಹಂಪನ ಸಮಸ್ಯೆಗಳಲ್ಲಿ ಪ್ರತಿಭೆಯಿಂದ ಮೂಡಿದ ಕವಿತ್ವವಿಲ್ಲ. ಬುದ್ಧಿಯ ಚಮತ್ಕಾರವಷ್ಟೆ ಎದ್ದು ಕಾಣುತ್ತದೆ. ಒಂದು ಉದಾಹರಣೆಯನ್ನು ನೋಡ ಬಹುದು. ದನಮಂ ಕಡಿ ಕಡಿದು ಬಸದಿಗೆಳೆಯುತ್ತಿರ್ದರ್ ಎಂಬ ಒಗಟನ್ನು ಪಂಪ ಮುಂದಿಟ್ಟನಂತೆ. ಅದನ್ನು ಕಂತಿ ಬಿಡಿಸಿದ ಬಗೆ ಹೀಗೆ :

> ವನದೊಳಗೆ ಪುಟ್ಟಿ ಬೆಳೆಯುತೆ
> ತನಿಗಂಪಂ ಪತ್ತುದೆಸೆಗೆ ಬೀಱುತ್ತಿರ್ಪಾ
> ಘನತರ ಸುರುಚಿರ ಸಚ್ಚಂ
> ದನಮಂ ಕಡಿ ಕಡಿದು ಬಸದಿಗೆಳೆಯುತ್ತಿರ್ದರ್

ಕಂತಿ ಎಂಬ ಕಬ್ಬಿಗಿತಿ ನಾಗಚಂದ್ರನ ಕಾಲದಲ್ಲಿ ನಿಜವಾಗಿಯೂ ಇದ್ದಳು ಎಂದು ಒಪ್ಪುವುದಾದರೆ, ಅವಳು ಜೈನಮತೀಯಳೆಂದೂ ಅವಳ ಕಾಲ ಸುಮಾರು ಕ್ರಿ. ಶ. 1140 ಎಂದೂ ಹೇಳಬೇಕಾಗುತ್ತದೆ. (ಸಿ.ಪಿ.ಕೆ.)

**ಕಂತು ವಿಕ್ರಯ :** ಗ್ರಾಹಕ ಕೊಂಡ ಪದಾರ್ಥದ ಕ್ರಯವನ್ನು ಒಂದು ಗೊತ್ತಾದ ಅವಧಿಯಲ್ಲಿ ಸಮಾನ ಕಂತುಗಳಲ್ಲಿ ಪಾವತಿ ಮಾಡಬಹುದೆಂದು ವ್ಯವ ಹಾರದ ಉಭಯ ಪಕ್ಷಗಳೂ ಸಮ್ಮತಿಸಿ, ಸಾಮಾನ್ಯವಾಗಿ ಪ್ರಥಮ ಕಂತನ್ನು ಕೊಟ್ಟ ಕೂಡಲೇ ಪದಾರ್ಥವನ್ನು ಗ್ರಾಹಕನಿಗೆ ಒಪ್ಪಿಸುವ ಮಾರಾಟ (ಇನ್‌ಸ್ಟಾಲ್‌ಮೆಂಟ್ ಸೇಲ್). ಬಾಡಿಗೆ ಕೊಳ್ಳಿಕೆಗೂ (ಹೈರ್ ಪರ್ಚೇಸ್) ಇದಕ್ಕೂ ಒಂದು ಮುಖ್ಯ ವ್ಯತ್ಯಾಸವುಂಟು (ನೋಡಿ—ಬಾಡಿಗೆ ಕೊಳ್ಳಿಕೆ). ಈ ಒಪ್ಪಂದವಾದೊಡನೆಯೇ ಪದಾರ್ಥ ಗ್ರಾಹಕನ ಸ್ವತ್ತಾಗುತ್ತದೆ. ಆದರೆ ಬಾಡಿಗೆ ಕೊಳ್ಳಿಕೆಯಲ್ಲಿ ಹಾಗಲ್ಲ. ಅದರ ಪ್ರಕಾರ ಕೊಳ್ಳುವಿಕೆಯಲ್ಲಿ ಗ್ರಾಹಕ ಮೊದಲ ಕಂತನ್ನು ಕೊಟ್ಟು ಪದಾರ್ಥ ವನ್ನು ಸ್ವಾಧೀನಕ್ಕೆ ತೆಗೆದುಕೊಳ್ಳುವನಾದರೂ ಕೊನೆಯ ಕಂತು ಪಾವತಿ ಮಾಡುವ ವರೆಗೂ ಪದಾರ್ಥದ ಮಾಲೀಕತ್ವ ಮಾತ್ರ ಮಾರಾಟಗಾರನಲ್ಲೇ ಮುಂದುವರಿಯು ತ್ತದೆ. ಪೂರ್ಣವಾಗಿ ಕಂತು ಪಾವತಿಯಾಗದಿದ್ದರೆ ಅದುವರೆಗೆ ಗ್ರಾಹಕ ಕೊಟ್ಟ ಹಣವೆಲ್ಲ ಪದಾರ್ಥದ ಬಾಡಿಗೆಯೆನಿಸಿಕೊಳ್ಳುತ್ತದೆ. ಪದಾರ್ಥವನ್ನು ಮಾಲೀಕ ವಾಪಸು ಪಡೆಯಬಹುದು.

ಕಂತು ವಿಕ್ರಯ ಪದ್ಧತಿಯಲ್ಲಿ ಮೊದಲ ಕಂತನ್ನು ಪಾವತಿ ಮಾಡಿದ ಕೂಡಲೇ ಕೊಳ್ಳುವವನು ವಸ್ತುವಿನ ಮಾಲೀಕನಾಗುವುದರಿಂದ ಈ ವ್ಯವಹಾರವನ್ನು ವ್ಯಾಪಾರ ವೆಂದೇ ಪರಿಗಣಿಸಬಹುದು. ಮುಂದೆ ಆತ ಉಳಿದ ಕಂತುಗಳನ್ನು ಕಟ್ಟದೆ ಹೋದರೆ ಆ ವಸ್ತುವಿನ ಮಾರಾಟಗಾರ ಕೊಂಡವನ ಮೇಲೆ ನ್ಯಾಯಾಲಯದಲ್ಲಿ ದಾವೆ ಹೂಡಬಹುದು.

ಎಲ್ಲ ವಸ್ತುಗಳೂ ಕಂತು ವಿಕ್ರಯ ಅಥವಾ ಬಾಡಿಗೆ ಕೊಳ್ಳಿಕೆಗೆ ಹೊಂದಿಕೊಳ್ಳು ವುದಿಲ್ಲ. ಮೊದಲನೆಯದಾಗಿ ಆ ವಸ್ತು ಹೆಚ್ಚು ಬೆಲೆಯದಾಗಿರಬೇಕು, ಕಂತುಗಳ ಅವಧಿಗಿಂತ ಹೆಚ್ಚುಕಾಲ ಬಾಳುವಂತಿರಬೇಕು. ಆದ್ದರಿಂದ ಅಣಿಕಟ್ಟು (ಫರ್ನಿಚರ್), ಹೊಲಿಗೆ ಯಂತ್ರ, ಪಿಯಾನೊ, ಗ್ರಾಮೋಫೋನ್, ರೇಡಿಯೊ, ಮೋಟಾರ್ ಕಾರ್, ಬೆರಳಚ್ಚುಯಂತ್ರ, ಶೀತಕ ಇತ್ಯಾದಿ ವಸ್ತುಗಳನ್ನು ಮಾತ್ರ ಈ ರೀತಿಯಲ್ಲಿ ಮಾರಬಹುದು.

ಕಂತು ವಿಕ್ರಯದ ಅಥವಾ ಬಾಡಿಗೆ ಕೊಳ್ಳಿಕೆಯ ಪ್ರಧಾನ ಗುಣಗಳು ಎರಡು: ಹೆಚ್ಚು ಬೆಲೆಯ ಪದಾರ್ಥಗಳನ್ನು ಒಂದೇ ಮೊತ್ತದಲ್ಲಿ ಹಣ ಪಡೆದು ಮಾರಾಟ ಮಾಡುವುದು ಕಠಿಣ. ಕಂತು ಸೌಲಭ್ಯ ಇರುವುದರಿಂದ ಇವನ್ನು ಮಾರುವುದು ಸುಲಭ. ಎರಡನೆಯದಾಗಿ ಇದರಿಂದ ಅನುಭೋಗಿಗಳಲ್ಲಿ ಉಳಿತಾಯಕ್ಕೆ ಪ್ರೋತ್ಸಾಹ ದೊರಕುತ್ತದೆ. ಏಕೆಂದರೆ ಕೊಂಡ ಪದಾರ್ಥಕ್ಕಾಗಿ ಕಂತು ಪಾವತಿ ಮಾಡಲು ಅನುಭೋಗಿ ತನ್ನ ವೆಚ್ಚ ತಗ್ಗಿಸುವುದು ಅಗತ್ಯವಾಗುತ್ತದೆ.

ಆದರೆ ಈ ಪದ್ಧತಿಗಳಲ್ಲಿ ಹಲವು ದೋಷಗಳೂ ಇವೆ : ಕೆಲವು ಜನರಿಗೆ ಹಣ ಉಳಿಸಲು ಮತ್ತು ಕಂತುಗಳನ್ನು ಸಲ್ಲಿಸಲು ಸಾಧ್ಯವಾಗದೆ ಹೋಗಬಹುದು. ಅಂಥ ಸಂದರ್ಭಗಳಲ್ಲಿ ಮಾರಾಟಗಾರನಿಗೆ ಸಲ್ಲಬೇಕಾದ ಕಂತುಗಳು ಸಲ್ಲದೆ ಆತ ನಷ್ಟ ಹೊಂದುತ್ತಾನೆ. ಜನ ತಮ್ಮ ಆದಾಯವನ್ನು ಮೀರಿದ ಜೀವನವನ್ನು ನಡೆಸಲು ಈ ಪದ್ಧತಿ ಉತ್ತೇಜಿಸಬಹುದು. ಏಕೆಂದರೆ ಒಂದು ಪದಾರ್ಥವನ್ನು ಈ ರೀತಿ ಕೊಂಡ ಒಡನೆಯೇ ಈಗಿನ ಅನುಕೂಲಕ್ಕಾಗಿ ಅನುಭೋಗಿ ತನ್ನ ಮುಂದಿನ ವರ ಮಾನವನ್ನು ಆಧಾರ ಮಾಡುತ್ತಾನೆ. ತಮ್ಮ ತಿಂಗಳ ವೇತನದ ಬಹುಭಾಗವನ್ನು ಕಂತು ಕಟ್ಟಲು ಉಪಯೋಗಿಸುವ ಅಮೆರಿಕನ್ ಸಂಸಾರಗಳು ಇದಕ್ಕೆ ನಿದರ್ಶನ.

ಅದೇನೇ ಇರಲಿ, ಈ ಪದ್ಧತಿಯನ್ನು ಬಹು ಜಾಣ್ಮೆಯಿಂದ ಉಪಯೋಗಿಸಿದರೆ ಮತ್ತು ಕೊಳ್ಳುವವರನ್ನು ಅತ್ಯಂತ ಜಾಗರೂಕತೆಯಿಂದ ಆರಿಸಿದರೆ, ಗ್ರಾಹಕ ವರ್ತಕರಿಬ್ಬರಿಗೂ ಇದು ಉಪಯುಕ್ತವಾಗುತ್ತದೆ.

ಕಂತು ವಿಕ್ರಯಕ್ಕಿಂತ ಬಾಡಿಗೆ ಕೊಳ್ಳಿಕೆ ಪದ್ಧತಿ ಈಚೆಗೆ ಹೆಚ್ಚು ಜನಪ್ರಿಯ ವಾಗುತ್ತಿದೆ. ಭಾರತದಲ್ಲೂ ಈಚೆಗೆ ಕಂತು ವಿಕ್ರಯವೂ ಬಾಡಿಗೆ ಕೊಳ್ಳಿಕೆಯೂ ಹೆಚ್ಚು ಬಳಕೆಗೆ ಬರುತ್ತಿವೆ. ಆದರೆ ಕಂತು ಪಾವತಿ ಮಾಡದಿದ್ದರೆ ಪದಾರ್ಥ ವಾಪಸು ಪಡೆಯಲು ಸಾಧ್ಯವಾಗದ—ಎಂದರೆ ಸೇವೆಯೇ ಪ್ರಮುಖವಾದ—ವ್ಯವ ಹಾರಗಳಲ್ಲಿ ಕಂತು ವಿಕ್ರಯ ಪದ್ಧತಿಯೇ ಉಳಿದುಕೊಂಡು ಬರುತ್ತಿದೆ. ಉದಾಹರಣೆ: ಕಂತುಗಳಲ್ಲಿ ಹಣ ಪಾವತಿ ಮಾಡಬಹುದಾದ ವಿಮಾನ ಪ್ರಯಾಣ ದರ. (ಡಿ.ಕೆ.ಬಿ.)

**ಕಂದ[1] :** ಒಂದು ಮಾತ್ರಾವೃತ್ತ. ಕನ್ನಡ ಮತ್ತು ತೆಲುಗು ಚಂಪೂಕಾವ್ಯ ಗಳಲ್ಲಿ ಇದರ ಬಳಕೆ ವಿಶೇಷವಾಗಿ ಕಾಣುತ್ತದೆ. ಕನ್ನಡದಲ್ಲಿಯಂತೂ ಕಂದವನ್ನೇ ಮುಖ್ಯ ಛಂದಸ್ಸಾಗಿಟ್ಟುಕೊಂಡು ರಚಿಸಿರುವ ಕೃತಿಗಳೇ ಇವೆ. ಲಕ್ಷಣಗ್ರಂಥಗಳ ಸೂತ್ರಗಳು ಸಾಮಾನ್ಯವಾಗಿ ಕಂದದಲ್ಲಿಯೇ ಕಟ್ಟಿದವಾಗಿವೆ. ಉದಾಹರಣೆಗೆ, ಜನ್ನಕವಿಯ ಯಶೋಧರ ಚರಿತೆ (ಕ್ರಿ. ಶ. 1209), ಕೇಶಿರಾಜನ ಶಬ್ದಮಣಿ ದರ್ಪಣ (ಕ್ರಿ.ಶ. ಸು. 1260) ಇಂಥವನ್ನು ಹೇಳಬಹುದು. ಹೀಗೆ ಕನ್ನಡ ಕವಿಗಳಿಗೆ ಕಂದ ಅಚ್ಚುಮೆಚ್ಚಿನ ಛಂದಸ್ಸು. ಕಂದಂಗಳಮೃತ ಲತಿಕಾ। ಕಂದಂಗಳ್।... ಕಂದಂಗಳ್ ವಾಗ್ವನಿತೆಯ। ಕಂದಂಗಳ್... ಎಂದು ಮುಂತಾಗಿ ಹರಿಹರ, ಸುರಂಗಕವಿ ಮೊದಲಾದ ಒಬ್ಬಿಬ್ಬರು ಕವಿಗಳು ತಮ್ಮ ಮೆಚ್ಚಿಗೆಯನ್ನು ವ್ಯಕ್ತವಾಗಿಯೇ ತಿಳಿಸಿದ್ದಾರೆ.

ಕನ್ನಡದಲ್ಲಿ ಕಂದದ ಬಳಕೆಗೆ ದೀರ್ಘವಾದ ಇತಿಹಾಸವಿದೆ. ಪ್ರಾಚೀನ ಕನ್ನಡ ಶಾಸನಗಳಲ್ಲಿಯೇ ಅದು ತಲೆದೋರಿದೆ. ಕವಿರಾಜಮಾರ್ಗದಲ್ಲಿಯ (ಕ್ರಿ.ಶ.ಸು. 850) ಸೂತ್ರೋದಾಹರಣೆಗಳಲ್ಲಿ ಅದು ವಿಪುಲವಾಗಿ ಬಳಕೆಯಾಗಿದೆ. ಅದರ ಬಂಧದ ಸೊಗಸು ನೆನೆಯುತಕ್ಕದ್ದಾಗಿದೆ. ಅಲ್ಲಿಂದೀಚೆಗೆ ಪಂಪ ಮೊದಲಾದ ಕನ್ನಡ ಚಂಪೂ ಕವಿಗಳು ತಮ್ಮ ಕೃತಿಗಳಲ್ಲಿ ಕಂದವನ್ನು ಇತರ ವೃತ್ತಜಾತಿಗಳಿಗಿಂತ ಪ್ರಾಯಃ ಹೆಚ್ಚಾಗಿಯೇ ಎನ್ನುವಂತೆ ಹೇರಳವಾಗಿ ಬಳಸಿದ್ದಾರೆ. ಕವಿರಾಜ ಮಾರ್ಗದ ಕರ್ತೃವೂ ಪಂಪ, ಜನ್ನ, ಷಡಕ್ಷರಿ ಈ ಮೊದಲಾದ ಕೆಲವರೂ ಕಂದ ಪದ್ಯವನ್ನು ಸೊಗಸಾಗಿ ಬರೆಯಬಲ್ಲವರೆಂದು ಹೆಸರಾಗಿದ್ದಾರೆ. ಅದು ಹಳಗನ್ನಡ ಸಾಹಿತ್ಯದ ಜೀವಾಳವಾದ ಛಂದಸ್ಸು. ಅದರ ಲಕ್ಷಣದಲ್ಲಿ, ನಡುಗನ್ನಡದ ಕಾಲದಿಂದೀಚೆಗೆ ಅಗಾಗ ಶೈಥಿಲ್ಯಗಳು ತಲೆದೋರದಿದ್ದರೂ ಇಂದಿಗೂ ಅದರ ರಚನೆ ನಿಂತಿಲ್ಲ.

ಕಂದಪದ್ಯ ಸಂಸ್ಕೃತದ ಮಾತ್ರಾವೃತ್ತಗಳಲ್ಲಿ ದ್ವಿಪದಿಯಾದ ಆರ್ಯಾ ಅಥವಾ ಪ್ರಾಕೃತದ ಮಾತ್ರಾವೃತ್ತಗಳಲ್ಲಿ ದ್ವಿಪದಿಯಾದ ಗಾಥಾ ಎಂಬ ವೃತ್ತಜಾತಿಯ ವರ್ಗಕ್ಕೆ ಸೇರಿದ್ದಾಗಿದೆ. ಆರ್ಯೆಯ ಸಾಮಾನ್ಯಲಕ್ಷಣ ಹೀಗೆ : ಎರಡು ಅರ್ಧಗಳು : ಪೂರ್ವಾರ್ಧದಲ್ಲಿ 7 ಚತುರ್ಮಾತ್ರಾಗಣ + 1 ಗುರು (=30 ಮಾತ್ರೆ) ; ಉತ್ತ ರಾರ್ಧದಲ್ಲಿ 5 ಚತುರ್ಮಾತ್ರಾಗಣ+1 ಲಘು+1 ಚತುರ್ಮಾತ್ರಾಗಣ+1 ಗುರು (=27 ಮಾತ್ರೆ) ; ಎರಡೂ ಅರ್ಧಗಳ ವಿಷಮಸ್ಥಾನಗಳಲ್ಲಿ ಮಧ್ಯಗುರುವಿನ ಗಣ (ಜಗಣ) ಬರಕೂಡದು ; ಪೂರ್ವಾರ್ಧದಲ್ಲಿ 6ನೆಯ ಗಣಸ್ಥಾನದಲ್ಲಿ ತಪ್ಪದೆ ಮಧ್ಯ

ಗುರುವಿನ ಗಣ (ಜಗಣ) ಅಥವಾ ಸರ್ವಲಘುವಿನ ಗಣ ಬಂದಿರಬೇಕು ; ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ 2ನೆಯ ಲಘುವಿಂದ ಹೊಸಪದ ಆರಂಭವಾಗಿರಬೇಕು ; ಆದರೆ ಪೂರ್ವಾರ್ಧದ 7ನೆಯ ಗಣ ಅಥವಾ ಉತ್ತರಾರ್ಧದ 5ನೆಯ ಗಣ ಇವು ಸರ್ವಲಘು ರೀತಿಯದಾಗಿದ್ದರೆ 1ನೆಯ ಲಘುವಿಂದಲೇ ಹೊಸಪದ ಆರಂಭವಾಗಬೇಕು. ಚತುರ್ಮಾತ್ರಾಗಣಗಳ ಕಟ್ಟು ಕೆಡಬಾರದು.

ಗಾಥಾದ ಲಕ್ಷಣವೂ ಇದೇ ರೀತಿಯಾಗಿರುತ್ತದೆ. ಆರ್ಯಾ ಮತ್ತು ಗಾಥಾ ಎರಡರಲ್ಲಿಯೂ ಲಕ್ಷಣದ ಚೌಕಟ್ಟನ್ನು ಹೀಗೆಯೇ ಉಳಿಸಿಕೊಂಡು ಮಾತ್ರಾಸಂಖ್ಯೆಯಲ್ಲಿ ಮಾತ್ರ ಅದಲು ಬದಲು ಮಾಡಿಕೊಳ್ಳುವುದರ ಮೂಲಕ, ಅಲ್ಪಸ್ವಲ್ಪ ವ್ಯತ್ಯಾಸವನ್ನು ಮಾಡಿಕೊಳ್ಳುವುದರ ಮೂಲಕ, ಕೆಲವು ಪ್ರಭೇದಗಳನ್ನು ಕಲ್ಪಿಸಿಕೊಂಡಿದೆ. ಆರ್ಯಾದಲ್ಲಿ :– ಗೀತಿ 30, 30 ; ಉದ್ಗೀತಿ 27, 30 ; ಉಪಗೀತಿ 27, 27 ; ಆರ್ಯಾಗೀತಿ–32, 32 ಇತ್ಯಾದಿ. ಹೀಗೆಯೇ ಗಾಥಾದಲ್ಲಿ ಕೂಡ.

ಸಂಸ್ಕೃತದ ಆರ್ಯಾಪ್ರಭೇದಗಳಲ್ಲಿ ಆರ್ಯಾಗೀತಿ ಎಂಬುದೂ ಪ್ರಾಕೃತ ಗಾಥಾ ಪ್ರಭೇದಗಳಲ್ಲಿ ಸ್ಕಂಧಕ ಎಂಬುದೂ ಕನ್ನಡ ತೆಲುಗುಗಳ ಕಂದವನ್ನು ಹತ್ತಿರದಿಂದ ಹೋಲತಕ್ಕವಾಗಿವೆ. ಆದುದರಿಂದ ಅವುಗಳ ಸ್ವರೂಪವನ್ನು ಸ್ವಲ್ಪ ಗಮನಿಸಬೇಕಾಗುತ್ತದೆ.

ಸಂಸ್ಕೃತದಲ್ಲಿ ಆರ್ಯಾಗೀತಿ ಎಂದು ಹೇಳಿರುವುದನ್ನೇ ಪ್ರಾಕೃತದಲ್ಲಿ ಸ್ಕಂಧಕ ಎಂದಿರುತ್ತದೆ. ಭರತಪಿಂಗಲಾದ್ಯರು ಆರ್ಯಾಗೀತಿಯ ಲಕ್ಷಣವನ್ನೂ ಸ್ವಯಂಭು ಹೇಮಚಂದ್ರಾದ್ಯರು ಸ್ಕಂಧಕದ ಲಕ್ಷಣವನ್ನೂ ನಿರೂಪಿಸಿದ್ದಾರೆ. ಅವುಗಳ ಲಕ್ಷಣ ಒಂದೇ. ಅದು ಹೀಗೆ : ಎರಡು ಅರ್ಧಗಳು ; ಪ್ರತಿಯರ್ಧದಲ್ಲಿಯೂ 8 ಚತುರ್ಮಾತ್ರಾಗಣಗಳಿರುತ್ತವೆ. ಎರಡೂ ಅರ್ಧಗಳ 6ನೆಯ ಗಣಸ್ಥಾನದಲ್ಲಿ ತಪ್ಪದೆ ಮಧ್ಯಗುರುವಿನ ಗಣವೋ (ಜಗಣ) ಸರ್ವಲಘುವಿನ ಗಣವೋ ಬಂದಿರುತ್ತದೆ. (ಸುಲ್ಹಣ ಮೊದಲಾದ ಕೆಲವರು ಆರ್ಯೆಯನ್ನೆ 2 ಮಾತ್ರೆಗಳಿಂದ ಬೆಳೆಸಿದ್ದು ಎಂಬುದಾಗಿ ಹೇಳಿರುವುದುಂಟು. ಆಗ ಮಾತ್ರಾ ಸಂಖ್ಯೆ ಕ್ರಮವಾಗಿ 32, 29 ಆಗುವುದು. ಆದರೆ 32 ಮಾತ್ರೆಗಳ 2 ಸಮಾರ್ಧಗಳಾಗಿ ತಿಳಿಯುವುದೇ ಸಾಮಾನ್ಯ).

ಆರ್ಯಾ ಅಥವಾ ಗಾಥಾಭೇದವಾದ, ಎರಡು ಸಮಾರ್ಧಗಳನ್ನುಳ್ಳ, ಗೀತಿಯ (30,30) ಎರಡೂ ಅರ್ಧಗಳ ಕೊನೆಯ ಗುರುವಿಗೆ ಇನ್ನೊಂದು ಗುರುವನ್ನು ಸೇರಿಸಿ ಒಂದು ಚತುರ್ಮಾತ್ರಾಗಣವನ್ನಾಗಿ ಮಾಡಿಕೊಂಡದ್ದು (32, 32) ಆರ್ಯಾಗೀತಿ ಅಥವಾ ಸ್ಕಂಧಕಯೆನಿಸಿದಂತೆ ತೋರುತ್ತದೆ. ಆರ್ಯೆ (ಗಾಥೆಯ) ಗೀತಿಯಾದಾಗ ಆರ್ಯೆಯ (ಗಾಥೆಯ) ಪೂರ್ವಾರ್ಧದ ಲಕ್ಷಣ ಗೀತಿಯ ಪೂರ್ವಾರ್ಧ ಉತ್ತರಾರ್ಧಗಳಿಗೂ ಅನ್ವಯಿಸಿದಂತೆ, ಗೀತಿ ಆರ್ಯಾಗೀತಿಯಾದಾಗ (ಸ್ಕಂಧಕವಾದಾಗ) ಗೀತಿಯ ಲಕ್ಷಣ ಆರ್ಯಾಗೀತಿಗೂ (ಸ್ಕಂಧಕಕ್ಕೂ) ಅನ್ವಯಿಸಿತೆಂದು ಸಹಜವಾಗಿಯೇ ತಿಳಿಯಬಹುದು. ಮುಖ್ಯವಾಗಿ, ಸೂತ್ರಕಾರರೂ ವ್ಯಾಖ್ಯಾನಕಾರರೂ ಆರ್ಯಾಗೀತೆ (ಸ್ಕಂಧಕ) ಪ್ರತಿಯರ್ಧದಲ್ಲಿ 8 ಚತುರ್ಮಾತ್ರಾಗಣಗಳಿಂದ ಕೂಡಿದ್ದು, ಆದರ 6ನೆಯ ಗಣ ಸ್ಥಾನದಲ್ಲೆಲ್ಲ ಮಧ್ಯಗುರುವಿನ ಗಣ (ಜಗಣ) ಅಥವಾ ಸರ್ವಲಘುವಿನ ಗಣ ಬರತಕ್ಕದ್ದು ಎಂಬುದನ್ನು ಒತ್ತಿ ಹೇಳಿದ್ದಾರೆ. ಆರ್ಯಾದ ಅಥವಾ ಗಾಥಾದ (ಗೀತಿಯ) 7ನೆಯ ಗಣದ ಲಕ್ಷಣಾಂಶವನ್ನು ಎತ್ತಿರುವಂತೆ ತೋರುವುದಿಲ್ಲ. ಆದರೆ ಎರಡೂ ಅರ್ಧಗಳ 6 ಮತ್ತು 7ನೆಯ ಗಣಗಳು ಸರ್ವಲಘುವಿನ ಗಣಗಳಾದಾಗ ಪಾಲಿತವಾಗಬೇಕಾದ ನಿಯಮವನ್ನು ಕೂಡ ಆರ್ಯಾಗೀತಿಗೆ (ಸ್ಕಂಧಕಕ್ಕೆ) ಅವರು ಒಪ್ಪಿದ್ದಾರೆಂಬುದು ಗ್ರಹಿಸಬಹುದು.

ಮೊದಲು ಪ್ರಾಯಃ ಸಂಸ್ಕೃತದಲ್ಲಿ ಆರ್ಯಾಪ್ರಭೇದವಾಗಿ ಆರ್ಯಾಗೀತಿ ಕಾಣಿಸಿಕೊಂಡಿರಬೇಕು. ಅದೇ ಅನಂತರದಲ್ಲಿ ಪ್ರಾಕೃತಕ್ಕೆ ಸ್ಕಂಧಕವೆಂಬ ಹೆಸರಿಂದ ಗಾಥಾ ಪ್ರಭೇದಗಳ ಸಾಲಿಗೆ ಸ್ವೀಕೃತವಾಗಿರಬೇಕು. ಆರ್ಯಾಗೀತಿಯ ಲಕ್ಷಣವನ್ನು ಭರತ, ಪಿಂಗಲ ಮೊದಲಾದ ಪ್ರಾಚೀನರು ಹೇಳಿರುವುದು ಈ ಭಾವನೆಗೆ ಅವಕಾಶಕೊಡುತ್ತದೆ. ಆದರೆ ಈ ಪೌರ್ವಾಪರ್ಯವನ್ನು ಹೀಗೆಯೇ ಸರಿ ಎನ್ನುವುದು ಕಷ್ಟ.

ಈಗ ಆರ್ಯಾಗೀತಿಗೂ ಸ್ಕಂಧಕಕ್ಕೂ ಒಂದೊಂದು ಉದಾಹರಣೆಯನ್ನು ನೋಡಬಹುದು.

1 ಆರ್ಯಾಗೀತಿಗೆ : ಅಜಮುಜ। ರಮುಮರ। ಮೇಕಂ। ಪ್ರತ್ಯ। ।ಕ್ಚೈತ।
ನ್ಯಮೀಶ್ವ। ರಂ ಬ್ರ। ಹ್ಮಪರಮ್॥
ಅತ್ಸಾ। ನಂ ಭಾ। ವಯತೋ। ಭವಮು। ಕ್ತಿಃಸ್ಯಾ।
ದಿತೀಯ। ಮಾರ್ಯಾ। ಗೀತಿಃ॥
(ಪಿಂಗಲ ಛಂದಶಾಸ್ತ್ರ)

2 ಸ್ಕಂಧಕಕ್ಕೆ : ಚಲಿಅಂ। ಚ ವಾಣ। ರವಲಂ
ಚಲಿಏ। ತಮ್ಮಿಚ। ಲಿಕೇಸ। ರಸಡು। ಜ್ಜೋಅಮ್॥
ಗಹಿಅದಿ। ಸಾವರಿ। ಣಾಹಂ।
ವಲೂಹ। ಜಾಲಂ। ವ.ದಿಣಲಿ। ರಸ್ಸ ವು। ರನ್ತವಮ್॥
(ಪ್ರವರಸೇನನ ಸೇತುಬಂಧ)

ಈ ಮೇಲಿನ ವಿವೇಚನೆಯ ಬೆಳಕಿನಲ್ಲಿ ಈಗ ಕಂದಪದ್ಯದ ಸ್ವರೂಪವನ್ನು ಪರಿಶೀಲಿಸುವುದು ಸುಲಭ. ಕನ್ನಡದಲ್ಲಿ ಕಂದದ ಲಕ್ಷಣವನ್ನು ಮೊದಲು ನಾಗವರ್ಮನ ಛಂದೋಂಬುಧಿಯಲ್ಲಿ ; (ಕ್ರಿ.ಶ. ಸು. 990) ಅದರ ಚತುರ್ಥಾಧಿಕಾರದಲ್ಲಿ ಕಾಣುತ್ತೇವೆ. ಆರ್ಯಾ ಮತ್ತು ಅದರ ಕೆಲವು ಪ್ರಭೇದಗಳ ಲಕ್ಷಣವನ್ನು ಅಲ್ಲಿಯೇ ಹೇಳಿದ್ದರೂ ಕಂದಕ್ಕೆ ಅವುಗಳೊಡನೆ ಇರುವ ಸಂಬಂಧವನ್ನು ಉಚಿತವಾದ ಕ್ರಮದಲ್ಲಿ ಸ್ಪಷ್ಟವಾಗಿ ತೋರಿಸಿಲ್ಲ. ಆತನು ಕೊಡುವ ಕಂದಪದ್ಯದ ಲಕ್ಷಣ : 4 ಪಾದಗಳು ; ಇವುಗಳಲ್ಲಿ ಕ್ರಮವಾಗಿ 3,5,3,5 ಗಣಗಳಿರುತ್ತವೆ. ಹಾಗೂ 12, 20, 12, 20 ಮಾತ್ರೆಗಳು ಬರುತ್ತವೆ (4–5). ಹಿಂದೆ ಆರ್ಯಾದಿಗಳಿಗೆ ಹೇಳಿದ ಸಾಮಾನ್ಯ ಲಕ್ಷಣಗಳನ್ನು ಇಲ್ಲಿಗೆ ಅನ್ವಯಿಸಿಕೊಳ್ಳಬೇಕು ಎಂಬುದು ಆತನ ನಿರೂಪಣೆಯ ಕ್ರಮವನ್ನು ನೋಡಿದರೆ ತಿಳಿಯುತ್ತದೆ. ಕಂದದ ಗಣಗಳು ಕೂಡ ಚತುರ್ಮಾತ್ರೆಗಳಿಂದಾದವು. ಆ ಗಣಗಳು ∪∪–, –∪∪, – –, ∪–∪, ∪∪∪∪ ಎಂಬ ಐದು ತೆರನಾದವು. ಈ ಐದು ಗಣಗಳಲ್ಲಿ ∪–∪ ಎಂಬುದು ವಿಷಮಸ್ಥಾನಗಳಲ್ಲಿ ಬರಕೂಡದು. ಇವು ಹಾಗೆ ಅನ್ವಯವಾಗತಕ್ಕ ಲಕ್ಷಣಗಳು. ಇನ್ನು 6ನೆಯ ಗಣಸ್ಥಾನದಲ್ಲಿ ಮಧ್ಯಗುರುವಿನ ಅಥವಾ ಸರ್ವಲಘುವಿನ ರೀತಿಯ ಚತುರ್ಮಾತ್ರಾಗಣ ತಪ್ಪದೆ ಬಂದಿರಬೇಕು ಎಂಬುದನ್ನೂ ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ 2ನೆಯ ಲಘುವಿಂದ ಹೊಸಪದ ಆರಂಭವಾಗಿರಬೇಕು ಎಂಬುದನ್ನೂ ವ್ಯಕ್ತವಾಗಿ ಹೇಳದಿದ್ದರೂ ಲಕ್ಷಣಗಳನ್ನು ನೋಡಿ ತಿಳಿದುಕೊಳ್ಳಬೇಕು.

ಕಂದದ ಈ ನಿಯಮಗಳು ಈ ಮೊದಲು ನೋಡಿದ ಆರ್ಯಾಗೀತಿ ಅಥವಾ ಸ್ಕಂಧಕದ ನಿಯಮಗಳಿಗೆ ಅನುಸಾರವಾಗಿಯೇ ಇವೆ. ಕಂದದ ಮೂಲ ಆರ್ಯಾಗೀತಿಯೋ ಸ್ಕಂಧಕವೋ ಆಗಿರಬೇಕೆಂದು ತಿಳಿಯುವುದಕ್ಕೆ ಇದರಿಂದ ಅವಕಾಶವಾಗುತ್ತದೆ. ಪಾದಸಂಖ್ಯೆಯನ್ನು ಕಂದದಲ್ಲಿ ನಾಲ್ಕು ಎಂದು ನಾಗವರ್ಮ ಹೇಳಿರುವುದು ಒಂದು ತೋರಿಕೆಯ ವ್ಯತ್ಯಾಸ. ಆರ್ಯಾಗೀತಿ, ಸ್ಕಂಧಕಗಳು ದ್ವಿಪದಿಗಳಾದ ಮಾತ್ರಾವೃತ್ತಗಳು. ಆದರೆ ಅವುಗಳಲ್ಲಿಯೂ ಆ ವರ್ಗದ ಇತರ ಪ್ರಭೇದಗಳಲ್ಲಿಯೂ ಪ್ರತಿಯರ್ಧದಲ್ಲಿಯೂ 12ನೆಯ ಮಾತ್ರೆಯಾದ ಯತಿ ಬರುವುದನ್ನು ನಿದರ್ಶನಗಳ ಪರಿಶೀಲನೆಯಿಂದ ಕಾಣುತ್ತೇವೆ ಎನ್ನುವುದರಿಂದಲೂ ಪಥ್ಯಾರ್ಯಾ ಮೊದಲಾದ ಕಡೆ ಅದನ್ನು ವ್ಯಕ್ತವಾಗಿಯೇ ಹೇಳಿರುವುದರಿಂದಲೂ ಪ್ರತಿಯರ್ಧವನ್ನೂ ಎರಡು ಭಾಗಗಳಾಗಿ ಗಣಿಸುವುದು ಸಹಜವೇ ಆಗಿದೆ. ಕನ್ನಡದಲ್ಲಿ ದ್ವಿತೀಯಾಕ್ಷರ ಪ್ರಾಸದ ಬಳಕೆಯಿಂದಾಗಿ ಕಂದ 4 ಸಾಲುಗಳಾಗಿಯೇ ರೂಪಗೊಂಡಿದೆ.

ಇದನ್ನು ಗಮನಿಸಿ ಕಂದದ ಲಕ್ಷಣವನ್ನು ಹೀಗೆ ಹೇಳಬಹುದು : 4 ಪಾದಗಳು, ಇವುಗಳಲ್ಲಿ 1,2ನೆಯ ಪಾದಗಳಂತೆಯೇ 3,4ನೆಯ ಪಾದಗಳಿರುತ್ತವೆ. 1,2ನೆಯ ಪಾದಗಳಲ್ಲಿ ಕ್ರಮವಾಗಿ 3,5ರ ಹಾಗೆ ಒಟ್ಟು 8 ಚತುರ್ಮಾತ್ರಾಗಣಗಳು (12+20=32) ; 3.4ನೆಯ ಪಾದಗಳಲ್ಲಿಯೂ ಹೀಗೆಯೇ (12+20=32). ಚತುರ್ಮಾತ್ರಾಗಣಗಳ ಕಟ್ಟು ಕೆಡಬಾರದು. ಪ್ರಥಮಾರ್ಧದ ಹಾಗೂ ದ್ವಿತೀಯಾರ್ಧದ 8ನೆಯ ಗಣಸ್ಥಾನದ ಅಂತ್ಯದಲ್ಲಿ ಗುರು ತಪ್ಪದೆ ಬಂದಿರಬೇಕು ; ಈ ಎರಡೂ ಅರ್ಧಗಳ ವಿಷಮ ಸ್ಥಾನಗಳಲ್ಲಿ ಮಧ್ಯ ಗುರುವಿನ ಗಣ (ಜಗಣ) ಬರಬಾರದು. ಆದರೆ ಅವುಗಳ 6ನೆಯ ಗಣಸ್ಥಾನದಲ್ಲಿ ಮಧ್ಯ ಗುರುವಿನ ಗಣ (ಜಗಣ)ವಾಗಲಿ ಸರ್ವಲಘುವಿನ ಗಣವಾಗಲಿ ತಪ್ಪದೆ ಬಂದಿರಬೇಕು. ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ, ಹಾಗೆಯೇ ಮಧ್ಯಗುರುವಿ ಗಣ ಎಂದರೆ ಜಗಣವಾಗಿದ್ದ ಪಕ್ಷದಲ್ಲಿಯೂ ಮೊದಲನೆಯ ಹ್ರಸ್ವದ ಮುಂದೆ ಯತಿಯಿರಬೇಕು. 7ನೆಯ ಗಣ ಸರ್ವಲಘುವಿನ ಗಣವಾಗಿದ್ದಲ್ಲಿ ಮೊದಲನೆಯ ಹ್ರಸ್ವದಿಂದಲೇ ಹೊಸಪದ ಮೊದಲಾಗಬೇಕು.

ಕನ್ನಡ ಸಾಹಿತ್ಯದಲ್ಲಿ ಪ್ರಾಚೀನ ಕವಿಗಳು ಬಲುಮಟ್ಟಿಗೆ ಈ ನಿಯಮಕ್ಕೆ ಅನುಗುಣವಾಗಿಯೇ ಕಂದಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ಯತಿ ನಿಯಮ ಐಚ್ಛಿಕವಾದುದು ಎಂದು ತಿಳಿದಿರುವುದರಿಂದ ಯತಿಯನ್ನು ನಿಯತವಾಗಿ ಪಾಲಿಸುವಿಷಯದಲ್ಲಿ ಅಲ್ಲಲ್ಲಿ ಅಪವಾದಗಳು ಕಾಣಿಸಿಕೊಂಡಿರುವುದುಂಟು. ಹಾಗೆಯೇ ಈಚಿನ ಕಾಲದ ಕವಿಗಳು ಚತುರ್ಮಾತ್ರಾಗಣ ನಿಯಮಕ್ಕೆ ಸರಿಯಾಗಿ ಲಕ್ಷ್ಯ ಕೊಡದೆ, 8ನೆಯ ಗಣದ ಕೊನೆಗೆ ಗುರುವನ್ನು ತರದೆ, ಸಾಮಾನ್ಯ ನಿಯಮವನ್ನು ಮೀರಿರುವುದೂ ಉಂಟು. ಆದರೆ ಒಟ್ಟಿನಲ್ಲಿ ಕಂದದಲ್ಲಿ ಗಣನಿಯಮ ಯತಿ

ನಿಯಮಗಳ ಪಾಲನೆ ಬಲುಮಟ್ಟಿಗೆ ಸರಿಯಾಗಿಯೇ ಆಗಿದೆಯೆಂಬುದನ್ನು ನಿದರ್ಶನಗಳ ಪರಿಶೀಲನೆಯಿಂದ ತಿಳಿಯಬಹುದು

ಲಕ್ಷಣಾನ್ವಿತವಾದ ಕಂದಕ್ಕೆ ಉದಾಹರಣೆ :

ಕಾವೇ। ರಿಯಿಂದ। ಮಾ ಗೋ।

ದಾವರಿ। ವರಮಿ। ರ್ಪ. ನಾಡ। ದಾ ಕ। ನ್ನಡದೊಳಗೆ

ಭಾವಿಸಿ। ದ ಜನಪ। ದಂ ವಸ್ತು।

ಧಾವಳ। ಯವೀಲೀ। ನ. ವಿಶದ। ವಿಷಯವಿಶೇಷಂ॥

(ಕವಿರಾಜಮಾರ್ಗ 1–36)

ಕಂದಪದ್ಯ ಸಂಸ್ಕೃತದ ಆರ್ಯಾಗೀತಿಯ ಅಥವಾ ಪ್ರಾಕೃತದ ಸ್ಕಂಧಕದ ಮೂಲಕವಾಗಿ ಬಂದಿದೆಯೆಂದು ಅವುಗಳ ತುಲನಾತ್ಮಕ ಪರಿಶೀಲನೆಯಿಂದ ಸಿದ್ಧಪಡುವುದು. ಆದರೆ ಅದು ಆರ್ಯಾಗೀತಿಯ ಮೂಲಕವಾಗಿ ಬಂತೇ ಸ್ಕಂಧಕದ ಮೂಲವಾಗಿ ಬಂತೇ ಎಂಬುದನ್ನು ಖಚಿತವಾಗಿ ನಿರ್ಣಯಿಸುವುದು ಕಷ್ಟ. ಆರ್ಯಾವರ್ಗವನ್ನು ಪ್ರಾಕೃತದಲ್ಲಿ **ಸ್ಕಂಧಕಜಾತಿಯೆಂದೇ** ತಿಳಿದಿರುವುದುಂಟು (ಸ್ವಯಂಭೂಚ್ಛಂದಃ). ಕನ್ನಡದಲ್ಲಿಯೂ ನಾಗವರ್ಮ ಹೀಗೆಯೇ ಮಾಡಿದಂತೆ ತೋರುತ್ತದೆ. ವಾಕಾಟಕ ಪ್ರವರಸೇನ IIನ (ಕ್ರಿ.ಶ.ಸು.410–40) ಸೇತುಬಂಧ ಪೂರ್ತಿಯಾಗಿ ಸ್ಕಂಧಕದಲ್ಲಿ ರಚಿತವಾಗಿರುವ ಪ್ರಾಕೃತಕಾವ್ಯ. ಇಲ್ಲಿಯ ಸ್ಕಂಧಕಗಳು ನಿಯಮಬದ್ಧವಾಗಿವೆ. ಕನ್ನಡ ಭಾಷೆಗೆ ಪ್ರಾಕೃತಭಾಷೆ ಸಾಹಿತ್ಯಗಳ ಸಂಪರ್ಕವಾದ ಆರಂಭಕಾಲದಲ್ಲಿ ಪ್ರಾಕೃತಕಾವ್ಯದ ಸ್ಕಂಧಕದ ಛಂದಸ್ಸು ಕಂದವಾಗಿ ಕನ್ನಡಕ್ಕೆ ಪ್ರವೇಶಿಸಿ, ಈ ಭಾಷೆಗೆ ಹೊಂದಿಕೊಂಡಿತೆಂದು ತೋರುತ್ತದೆ. ಕಂದ ಎಂಬ ಹೆಸರು ಕೂಡ ಸ್ಕಂಧಕದ ಪ್ರಾಕೃತ ರೂಪಗಳಲ್ಲಿ ಒಂದರಿಂದ ನಿಷ್ಪನ್ನವಾಗಿರುವಂತೆ ಕಾಣುವುದು (ಖಂಧಕಂ, ಖಂಧಅ, ಖಂಧಯ ಎಂಬವು ಸ್ಕಂಧಕದ ಪ್ರಾಕೃತರೂಪಗಳು ; ಖಂಧಅ–ಖಂದ–ಕಂದ ಎಂದು ಆಗಿರುವುದು ಸಾಧ್ಯ). ಈ ರೀತಿ ತಿಳಿಯುವುದಕ್ಕೆ ಅವಕಾಶಕೊಡುತ್ತವೆ.

ಕನ್ನಡದಲ್ಲಿ ಉತ್ತಮ ಕಂದಗಳಿಗೆ ಶಾಸನಗಳಲ್ಲಿಯೂ ಕವಿರಾಜಮಾರ್ಗದಲ್ಲಿಯೂ ಹೇರಳವಾದ ನಿದರ್ಶನಗಳು ಸಿಗುತ್ತವೆ. ಪಂಪ, ರನ್ನ, ಪೊನ್ನ, ಕಾದಂಬರಿಯ ನಾಗವರ್ಮ, ನಾಗಚಂದ್ರ, ನಯಸೇನ ಮೊದಲಾದ ಕವಿಗಳು ಇದನ್ನು ತಮ್ಮ ಕಾವ್ಯಗಳಲ್ಲಿ ವಿಪುಲವಾಗಿ ಬಳಸಿಕೊಂಡಿದ್ದಾರೆ. ವ್ಯಾಕರಣಕಾರರಾದ ನಾಗವರ್ಮ ಮತ್ತು ಕೇಶಿರಾಜರು ಸೂತ್ರಗಳನ್ನು ಶುದ್ಧ ಕಂದಛಂದಸ್ಸಿನಲ್ಲಿ ರಚಿಸಿದ್ದಾರೆ. ಜನ್ನನಂತೂ ತನ್ನ ಯಶೋಧರ ಚರಿತೆಯೆಂಬ ಕಾವ್ಯವನ್ನು ಕಂದದಲ್ಲೇ ನಿರ್ವಹಿಸಿರುವುದು ಗಮನಾರ್ಹವಾದ ಸಂಗತಿ. ಈಚೆಗೆ ಬಸವಪ್ಪ ಶಾಸ್ತ್ರಿಗಳು, ಡಿ.ವಿ.ಜಿ. ಮೊದಲಾದ ಆಧುನಿಕರಲ್ಲೂ ಉತ್ತಮ ಕಂದರಚನೆ ಕಂಡುಬರುತ್ತದೆ. ಈಚೆಗೆ ನವ್ಯ ಕಾವ್ಯ ಸೃಷ್ಟಿಯಾಗತೊಡಗಿದ ಮೇಲೆ ಕಂದ ಸ್ವಲ್ಪ ಹಿಂದೆ ಬಿದ್ದಿದೆಯೆನ್ನಬೇಕು.
(ಟಿ.ವಿ.ವಿ.)

**ಕಂದ ² :** ಕನ್ನಡದಲ್ಲಿ ಪ್ರಕಟವಾಗುತ್ತಿದ್ದ ಮಕ್ಕಳ ಮಾಸಿಕೆ. ಮೈಸೂರು ನಗರದ ಜಯನಗರದಲ್ಲಿರುವ ಚಿಲ್ಡ್ರೆನ್ಸ್ ಬುಕ್ ಕೌನ್ಸಿಲ್ ಎಂಬ ಸಂಸ್ಥೆಯ ಆಶ್ರಯದಲ್ಲಿ 1947ರ ನವೆಂಬರ್ 27ರಂದು ಇದರ ಪ್ರಕಟನೆ ಆರಂಭವಾಯಿತು. ಎನ್. ನಾಗೇಶರಾವ್ ಸಂಪಾದಕರು. ಮಕ್ಕಳ ಆಸಕ್ತಿಯನ್ನು ಪ್ರಚೋದಿಸುವ, ಸೃಜನಾತ್ಮಕ ಶಕ್ತಿಯನ್ನು ಬೆಳೆಸುವ ಮತ್ತು ಅವರ ಮನಸ್ಸುಗಳನ್ನು ರಂಜಿಸುವ ಲೇಖನ ಕವಿತೆ ಕಥೆ ಚುಟುಕಗಳೇ ಮುಂತಾದವನ್ನು ಅನುರೂಪ ಚಿತ್ರಗಳೊಂದಿಗೆ ಪ್ರಕಟಿಸುತ್ತ ಬಂದ ಈ ಪತ್ರಿಕೆ ಮೂರು ವರ್ಷಗಳ ಕಾಲ ನಡೆದು ನಿಂತಿತು. ಹೀಗೆ ಒಂದೊಂದು ಸಂಚಿಕೆಯಲ್ಲೂ ನಾನಾ ವಿಷಯಗಳನ್ನೊಳಗೊಂಡ ಪತ್ರಿಕಾರೂಪದ ಪ್ರಕಟನೆಯ ಬದಲು ಒಂದೊಂದು ಸಂಚಿಕೆಯನ್ನು ಒಂದೊಂದು ವಿಷಯಕ್ಕೆ ಮೀಸಲಾಗಿಟ್ಟು ಶಾಶ್ವತವಾದ ಮಕ್ಕಳ ಸಾಹಿತ್ಯಸೃಷ್ಟಿಯಲ್ಲಿ ಇದನ್ನು ತೊಡಗಿಸಬೇಕೆಂದು 1956ರ ನವೆಂಬರ್‌ನಲ್ಲಿ ನಡೆದ ಕೌನ್ಸಿಲಿನ ಸಭೆಯಲ್ಲಿ ಕೈಗೊಂಡ ತೀರ್ಮಾನಕ್ಕೆ ಅನುಗುಣವಾಗಿ ಇದನ್ನು 1957ರಲ್ಲಿ ಕಂದ ಕಾವ್ಯಮಾಲೆಯೆಂದು ಪರಿವರ್ತಿಸಲಾಯಿತು. ರಾಮಾಯಣ, ಮಹಾಭಾರತ ಮತ್ತು ಪೌರಸ್ತ್ಯ ಪಾಶ್ಚಾತ್ಯ ಕಥೆಗಳು, ಜೀವನ ಚರಿತ್ರೆಗಳು, ವಿಜ್ಞಾನ ವಿಚಾರ, ಚರಿತ್ರೆ, ಭೂವಿವರಣೆ, ಸಾಮಾನ್ಯಜ್ಞಾನ, ನಾಟಕಗಳು—ಇವೆಲ್ಲ ಈ ಮಾಲೆಯಲ್ಲಿ ಪ್ರಕಟವಾಗಿವೆ. ಇಂಥ ಸಂಚಿಕೆಗಳ ಒಟ್ಟು ಸಂಖ್ಯೆ 110. 1964ರಲ್ಲಿ ಈ ಪ್ರಕಟನೆಗಳೂ ನಿಂತು ಹೋದುವು.
(ಎಸ್.ಎಸ್.)

Reg. No. M. 6366

ವರ್ಷ 3 ಸಂಚಿಕೆ 2





ಶಿಶುಸಾಹಿತ್ಯಸಂಘ, ವನಿತಾಸದನ

೬ ಆಣೆ :: ಮೈಸೂರು

**ಕಂದಕ :** ಅಗಲ ಕಿರಿದಾಗಿ, ಕಡಿದಾದ ಬದಿಗಳಿರುವ, ಆಳವಾದ ಮತ್ತು ಉದ್ದವಾದ ಕಾಲುವೆ (ಟ್ರೆಂಚ್). ಅಗಲದಲ್ಲಿಯೂ ವಿಸ್ತಾರದಲ್ಲಿಯೂ ಕಣಿವೆಗಿಂತ ಚಿಕ್ಕದು. ಕಂದಕಗಳು ನೈಸರ್ಗಿಕವಾಗಿರಬಹುದು—ಸಮುದ್ರತಳಗಳಲ್ಲಿ, ಗುಡ್ಡಪ್ರದೇಶಗಳಲ್ಲಿ ಇರುವಂತೆ ; ಬೆಟ್ಟದ ನೆತ್ತಿಯಲ್ಲಿರುವ ಕೋಟೆ ಕೊತ್ತಳಗಳಿಗೆ ಸಹಜ ಕಂದಕಗಳೇ ಕಾಪು ನೀಡುತ್ತವೆ. ಯುದ್ಧ ಮತ್ತು ಗಣಿ ಉದ್ಯಮಗಳಲ್ಲಿ ಮನುಷ್ಯ ತನಗೆ ಬೇಕಾದೆಡೆ ಕಂದಕಗಳನ್ನು ನಿರ್ಮಾಣಮಾಡಿಕೊಂಡಿರುವುದೂ ಉಂಟು. ಭೂಮೇಲ್ಮೈ ಅಥವಾ ಅದರ ಹತ್ತಿರ ಸಿಗಬಹುದಾದ ಅದುರನ್ನು ಪತ್ತೆ ಮಾಡಿ ಅದರ ಮೌಲ್ಯ ಮೂಲ ಮತ್ತು ವಿಸ್ತಾರಗಳನ್ನು ಕಂಡುಹಿಡಿಯಲು ಸರಣಿಯಲ್ಲಿ ಕಂದಕ ತೋಡುತ್ತಾರೆ. ಆಧುನಿಕ ಅಗೆಯುವ ಯಂತ್ರಗಳಿಂದ ತೋಡುವ ಕೆಲಸ ಈಚೆಗೆ ಸುಲಭವಾಗಿದೆ (ನೋಡಿ—ಅಗೆಯುವ ಯಂತ್ರಗಳು). ಯುದ್ಧಕಾರ್ಯದಲ್ಲಿ ಕಂದಕದ ಪ್ರಯೋಜನವನ್ನು ತಿಳಿಯಲು **ನೋಡಿ**—ಕಂದಕಯುದ್ಧ.
(ಬಿ.ಬಿ.)

**ಕಂದಕ ಯುದ್ಧ :** ಕಂದಕಗಳ ನೆರವಿನಿಂದ ನಡೆಸುವ ಕಾದಾಟ (ಟ್ರೆಂಚ್ ವಾರ್‌ಫೇರ್). ಒಂದು ಸ್ಥಳವನ್ನು ಆಕ್ರಮಿಸಲು ಮುನ್ನಡೆಯುತ್ತಿರುವ ಆಕ್ರಮಣಬಲದ ವಿರುದ್ಧ ಆ ಸ್ಥಳದಲ್ಲಿ ಭದ್ರವಾಗಿ ನೆಲೆ ಊರಿರುವ ರಕ್ಷಣಬಲ ಗುಂಡಿನ ಮಳೆ ಸುರಿಸುತ್ತವೆ. ಇಂಥ ಕದನದಲ್ಲಿ ಸ್ಥಳದ ವಿನ್ಯಾಸವನ್ನು ಅನುಸರಿಸಿ ಆಕ್ರಮಣಬಲ ತನ್ನ ಎಡಪಾರ್ಶ್ವದಲ್ಲಿ ಶತ್ರುವನ್ನು ಕದನೋದ್ಯುಕ್ತಗೊಳಿಸಿ ಬಲಪಾರ್ಶ್ವದಿಂದ ಗುಟ್ಟಾಗಿ ಮುಂದುವರಿಸಿ ಆತನನ್ನು ಹಠಾತ್ತಾಗಿ ಸದೆ ಬಡಿಯಬಹುದು. ಇದು ಬಲಪಾರ್ಶ್ವದ ಆಕ್ರಮಣ. ಹೀಗೆಯೇ ಎಡಪಾರ್ಶ್ವದ ಆಕ್ರಮಣೆಯೂ ಇದೆ. ಆದರೆ ಕೆಲವು ನೆಲಗಳಲ್ಲಿ ಇಂಥ ಯಾವ ಮುನ್ನಡೆಯೂ ಸಾಧ್ಯವಾಗದು. ಆಗ ಎದುರಾಳಿಗೆ ನೇರಿದಿರಾಗಿ ಸಾಗುವುದೊಂದೇ ಆಕ್ರಮಣ ಪಕ್ಷಕ್ಕೆ ಉಳಿಯುವ ದಾರಿ. ಇಂಥಲ್ಲಿ ಈ ಪಕ್ಷ ಎದುರಿಸುವ ತೊಡೆತ ಅತಿ ತೀವ್ರ : ಅದರಿಂದ ಸಂಭವಿಸುವ ಸಾವು ನೋವು ಅಪಾರ. ಆಗ ಮುನ್ನಡೆಯನ್ನು

ನಿಲ್ಲಿಸಿ ಅಲ್ಲೇ ನೆಲ ಕೊರೆದು ಆತ್ಮರಕ್ಷಣೆಯನ್ನು ಸಾಧಿಸುವ ಯುದ್ಧತಂತ್ರವನ್ನು ಬಳಸಬೇಕಾಗುತ್ತದೆ. ಇದೇ ಕಂದಕ ಯುದ್ಧ.

ಕಂದಕ ರಚನೆಯ ತಂತ್ರವಿಷ್ಟು. ರಾತ್ರಿ ವೇಳೆ ಶತ್ರುವಿಗೆ ಅರಿಯದಂತೆ ಮುಂದುವರಿದು ಯುಕ್ತ ಪ್ರದೇಶದಲ್ಲಿ ಕಂದಕಗಳನ್ನು ತೋಡಬಹುದು. ಅಥವಾ



ಸೈನಿಕನೊಬ್ಬ ಕಂದಕ ತೋಡುತ್ತಿರುವುದು

ಮುಂಚೂಣಿ ಬಲಗಳು ಶತ್ರುವನ್ನು ಕದನದಲ್ಲಿ ತೊಡಗಿಸಿರುವಾಗ ಹಿಂಚೂಣಿಯವರು ಕಂದಕಗಳನ್ನು ರಚಿಸಿ ಒಂದು ಸುಭದ್ರ ನೆಲೆ ಒದಗಿಸಬಹುದು. ನೆಲದಲ್ಲಿ ಸಾಕಷ್ಟು ಆಳದ ನೇರವಾದ ಅಥವಾ ಅಂಕುಡೊಂಕಾದ (ಇದು ಯುದ್ಧತಂತ್ರವನ್ನು ಅವಲಂಬಿಸಿದೆ) ಕಾಲುವೆಗಳನ್ನು ಹೊಡೆಯುತ್ತಾರೆ. ಅವುಗಳಿಂದ ಹೊರತೆಗೆದ ಮಣ್ಣನ್ನು ಶತ್ರುವಿನ ಕಡೆಗಿನ ಬದಿಗಳಲ್ಲಿ ದಿಬ್ಬದಂತೆ ಪೇರಿಸಿದಾಗ ಕಂದಕ ಪೂರ್ಣವಾಗುತ್ತದೆ. ಇದರೊಳಗೆ ನಿಂತ ಅಥವಾ ಮಲಗಿದ ಸೈನಿಕನ ರೈಫಲ್ ಮುಂತಾದ ಅಗ್ನ್ಯಸ್ತ್ರಗಳು ದಿಬ್ಬದ ಮೇಲೆ ಶತ್ರುವಿನೆಡೆಗೆ ಗುರಿ ಮಾಡಿರುತ್ತವೆ. ಶತ್ರುವಿನ ಗುಂಡು ಕಂದಕದೊಳಗೆ ಹುದುಗಿರುವ ಸೈನಿಕನ ಮೇಲೆ ಬೀಳುವುದು ಕಷ್ಟ. ಆದರೆ ಈತ ಮಾತ್ರ ಶತ್ರುವಿನ ಮೇಲೆ ಅಗ್ನಿವರ್ಷ ಸುರಿಸಿ ಆತನ ಬಲವನ್ನು ಕುಂದಿಸಬಹುದು.

ಕಂದಕ ಯುದ್ಧ ಒಂದೆರಡು ದಿವಸಗಳಲ್ಲಿ ಮುಗಿಯುವ ಘಟನೆ ಅಲ್ಲ. ದಿವಸಗಟ್ಟಲೆ ವಾರಗಟ್ಟಲೆ—ಅನೇಕ ದಿವಸಗಳ ಕಾಲ ಯಾವ ಯುದ್ಧ ಕಾರ್ಯಾಚರಣೆಯೂ ಇಲ್ಲದೆ—ಇಲ್ಲಿ ಹೊಂಚುಹಾಕುತ್ತಿರಬೇಕಾಗುವುದು. ಅನೇಕ ವೇಳೆ ಈ ಯುದ್ಧ ರಕ್ಷಣ ಹಾಗೂ ಆಕ್ರಮಣ ಬಲಗಳ ನಡುವಿನ ಒಂದು ಧೃತಿ ಯುದ್ಧವೇ (ವಾರ್ ಆಫ್ ನರ್ವ್ಸ್) ಆಗುವುದುಂಟು. ಅಂಥ ದಿವಸಗಳಲ್ಲಿ ಕಂದಕಗಳೇ ಸೈನಿಕರ ತಂಗು ದಾಣಗಳು. ಹೀಗಾಗಿ ಇವು ಶಿಬಿರಗಳೇ ಆಗುತ್ತವೆ. ಅಲ್ಲಿ ಆಹಾರ, ವೈದ್ಯ, ವಿರಾಮ ಮುಂತಾದ ಸಕಲ ಕನಿಷ್ಠ ಸೌಕರ್ಯಗಳನ್ನೂ ಒದಗಿಸಬೇಕಾಗುತ್ತದೆ.

ಕಂದಕಗಳ ಉಪಯೋಗ ಆಕ್ರಮಣ ಬಲದ ಮುನ್ನಡೆಯಲ್ಲಿ ಮಾತ್ರವಲ್ಲ, ಪೌರರಕ್ಷಣೆಯಲ್ಲೂ (ಸಿವಿಲ್ ಡಿಫೆನ್ಸ್) ಉಂಟು. ಬಾಂಬ್ ದಾಳಿಯಿಂದ ಪೌರರಿಗೆ ರಕ್ಷಣೆ ನೀಡಲು ನಗರಗಳಲ್ಲಿ ಕಂದಕಗಳನ್ನು ತೋಡುತ್ತಾರೆ. ಅಮೆರಿಕ ದೇಶದ ಪರಮಾಣು ಶಕ್ತಿ ಆಯೋಗ ಪರಮಾಣು ಬಾಂಬಿನ ಸ್ಫೋಟನೆಯ ಪ್ರಯೋಗಗಳನ್ನು ನೆವಾಡದಲ್ಲಿ ನಡೆಸಿತು (1950). ಆಗ ಕಂದಕಗಳಲ್ಲಿ ಮಂಡಿಯೂರಿ ನಿಂತ ಸೈನಿಕರಿಗೆ ಯೋಗ್ಯರಕ್ಷಣೆ ದೊರೆತದ್ದು ಮಾತ್ರವಲ್ಲ, ನೆಲದ ಮೇಲಿನ ಶೂನ್ಯ ಬಿಂದುವಿಗೆ (ಬಾಂಬಿನ ಪ್ರಹಾರ ಬಿಂದು ಅಥವಾ ಅದರ ನೇರ ಕೆಳಗಿನ ಬಿಂದು) ಅದುವರೆಗೆ ಊಹಿಸಿದುದಕ್ಕಿಂತ ಅದೆಷ್ಟೋ ಸಮೀಪ ಬಂದಾಗಲೂ ಅವರಿಗೆ ಬಾಂಬ್ ಸ್ಫೋಟನೆಯ ಪರಿಣಾಮ ಆಗಲಿಲ್ಲ. ಆದ್ದರಿಂದ ಪರಮಾಣು ಬಾಂಬ್ ಯುದ್ಧದಲ್ಲಿ ಕಂದಕಗಳ ರಕ್ಷಣಾ ಸಾಮರ್ಥ್ಯ ಅಪಾರವಾಗಿದೆ. *

**ನೋಡಿ**—ರಕ್ಷಣಾವರಣ

**ಕಂದಾಯ :** ಸ್ಥೂಲವಾಗಿ ತೆರಿಗೆ ಎಂಬ ಅರ್ಥದಲ್ಲಿ ಕನ್ನಡದಲ್ಲಿ ಪ್ರಚಲಿತವಾಗಿರುವ ಶಬ್ದ. ಇದು ಸರ್ಕಾರ ತನ್ನ ವೆಚ್ಚದ ನಿರ್ವಹಣೆಗಾಗಿ ಸಾರ್ವಜನಿಕರಿಂದ ಕಡ್ಡಾಯವಾಗಿ ಪಡೆಯುವ ಹಣ. ಇದಕ್ಕೆ ನೇರವಾದ ಪ್ರತಿಫಲವನ್ನು (ಪ್ರತ್ಯರ್ಪಣೆಯನ್ನು) ತೆರಿಗೆದಾರ ನಿರೀಕ್ಷಿಸುವಂತಿಲ್ಲ. ಸರ್ಕಾರದ ಜವಾಬ್ದಾರಿಗಳೂ ಕಾರ್ಯಚಟುವಟಿಕೆಗಳೂ ಹೆಚ್ಚಿದಂತೆ ಅದರ ಖರ್ಚುಗಳೂ ಹೆಚ್ಚುವುದು ಅನಿವಾರ್ಯ. ಈ ವೆಚ್ಚಕ್ಕೆಲ್ಲ ಹಣವನ್ನೊದಗಿಸಲು ವಿವಿಧ ತೆರಿಗೆಗಳು ಜಾರಿಗೆ ಬಂದಿವೆ. ಪ್ರಸ್ತುತ ಲೇಖನದಲ್ಲಿ ಎಲ್ಲ ತೆರಿಗೆಗಳನ್ನೂ ವಿವರಿಸುವ ಉದ್ದೇಶವಿಲ್ಲ. ಯಾವ ತೆರಿಗೆಗಳಿಗೆ ಕಂದಾಯ ಎಂಬ ಪದವೇ ಹೆಚ್ಚು ಬಳಕೆಯಲ್ಲಿದೆಯೋ ಅವುಗಳಲ್ಲಿ ಮುಖ್ಯವಾದ ಭೂಕಂದಾಯ ಮತ್ತು ತಲೆಗಂದಾಯಗಳನ್ನು ಇಲ್ಲಿ ವಿವರಿಸಿದೆ. ಇವೆರಡೂ ಅಲ್ಲದೆ, ಬ್ರಿಟಿಷ್ ಭಾರತದಲ್ಲಿ ಸರ್ಕಾರದ ವಿರುದ್ಧ ಚಳವಳಿ ಹೂಡಿದ ಗ್ರಾಮುಗಳ ಜನರ ಮೇಲೆ ಶಿಕ್ಷಾರ್ಥವಾಗಿ ವಿಧಿಸುತ್ತಿದ್ದ ಪುಂಡುಗಂದಾಯವನ್ನೂ ಈ ಗುಂಪಿಗೆ ಸೇರಿಸಬಹುದು.

**ಭೂಕಂದಾಯ :** ಇದು ಅತ್ಯಂತ ಪ್ರಾಚೀನ ತೆರಿಗೆ ಎಂಬುದು ಕೆಲವರ ಅಭಿಮತ. ಆದರೆ ತಲೆಗಂದಾಯ ಮತ್ತು ಗುಡಿಸಲು ತೆರಿಗೆ ಭೂಕಂದಾಯಕ್ಕಿಂತ ಪ್ರಾಚೀನವಾದುದು ಎಂದು ಮತ್ತೆ ಕೆಲವರು ಅಭಿಪ್ರಾಯಪಡುತ್ತಾರೆ. ಇವುಗಳಲ್ಲಿ ಯಾವುದು ಮೊದಲು ರೂಢಿಗೆ ಬಂತೆಂದು ಹೇಳುವುದು ಕಷ್ಟವಾದರೂ ಇವೆರಡೂ ಪ್ರಾಚೀನ ತೆರಿಗೆಗಳೆಂಬುದರಲ್ಲಿ ಸಂಶಯವಿಲ್ಲ.

ಪ್ರಾಚೀನ ಕಾಲದಿಂದಲೂ ಎಲ್ಲ ರಾಷ್ಟ್ರಗಳಲ್ಲೂ ಭೂಕಂದಾಯ ರಾಜಸ್ವದ ಒಂದು ಮುಖ್ಯ ಮೂಲವಾಗಿದೆ. ಈಚಿನ ದಿನಗಳಲ್ಲಿ ಬೇರೆ ತೆರಿಗೆಗಳಿಂದ ದೊರಕುವ ಆದಾಯ ಹೆಚ್ಚಾಗಿರುವುದರಿಂದ ಭೂಕಂದಾಯದಿಂದ ದೊರಕುವ ಆದಾಯ ಇತರ ತೆರಿಗೆಗಳಿಂದ ದೊರಕುವ ಆದಾಯಕ್ಕೆ ಹೋಲಿಸಿದಾಗ ಕಡಿಮೆಯಾಗಿ ಕಾಣುತ್ತದೆ. ಆದರೂ ಇದರ ಮೂಲಕ ಸರ್ಕಾರ ಆದಾಯ ಪಡೆಯುವುದು ತಪ್ಪಿಲ್ಲ. ಭೂಕಂದಾಯವನ್ನು ಸರ್ಕಾರ ಯಾವ ಆಧಾರದ ಮೇಲೆ ವಿಧಿಸುತ್ತದೆಂಬುದನ್ನು ಅರಿಯುವುದು ಆವಶ್ಯಕ. ಈ ಬಗ್ಗೆ ಎಲ್ಲ ರಾಷ್ಟ್ರಗಳಲ್ಲೂ ಒಂದೇ ಪದ್ಧತಿ ಜಾರಿಯಲ್ಲಿಲ್ಲ : ಭಾರತದಲ್ಲೇ ಎಲ್ಲ ಭಾಗಗಳಲ್ಲೂ ಒಂದೇ ಪದ್ಧತಿ ರೂಢಿಯಲ್ಲಿಲ್ಲ. ಕಂದಾಯವನ್ನು ನಿರ್ಧರಿಸಲು ಅನುಸರಿಸುವ ಆಧಾರ ಕಾಲದಿಂದ ಕಾಲಕ್ಕೆ ಬದಲಾವಣೆಯಾಗಿದೆ. ವಸೂಲಿ ಮಾಡುವ ವಿಧಾನದಲ್ಲೂ ಕಾಲದಿಂದ ಕಾಲಕ್ಕೆ ವ್ಯತ್ಯಾಸವಾಗಿದೆ. ಪ್ರಾರಂಭದಲ್ಲಿ ಭೂವಿಸ್ತೀರ್ಣ ಭೂಕಂದಾಯದ ದರವನ್ನು ನಿರ್ಧರಿಸಲು ಆಧಾರವಾಗಿತ್ತು. ರೋಮಿನಲ್ಲಿ ಒಂದು ನೂರು ಎಕರೆಗೆ ಇಂತಿಷ್ಟು ಕಂದಾಯ ಎಂದು ನಿರ್ಧರಿಸಲಾಗುತ್ತಿತ್ತು. 1915ಕ್ಕೆ ಮೊದಲು ಫ್ರಾನ್ಸಿನಲ್ಲಿ ಭೂಮಿಯ ಮೌಲ್ಯಕ್ಕೆ ಅನುಗುಣವಾಗಿ ಭೂಕಂದಾಯವನ್ನು ನಿರ್ಧರಿಸಲಾಗುತ್ತಿತ್ತು. ಉತ್ಪನ್ನದ ಆಧಾರದ ಮೇಲೆ ಭೂಕಂದಾಯವನ್ನು ವಿಧಿಸುವುದೂ ಇತರ ಪದ್ಧತಿಗಳಂತೆಯೇ ಪ್ರಾಚೀನವಾದುದೆಂದು ಹೇಳಲಾಗಿದೆ. ಭೂಮಿಯ ಸಾರಗುಣ, ನೀರಾವರಿ ಸೌಲಭ್ಯ, ಮಾರುಕಟ್ಟೆಯ ಸಾಮೀಪ್ಯ ಮುಂತಾದ ಅಂಶಗಳನ್ನು ಆಧಾರವಾಗಿ ಪರಿಗಣಿಸುವುದು ಕಾಲಕ್ರಮದಲ್ಲಿ ಜಾರಿಗೆ ಬಂತು. ಭೂಕಂದಾಯವನ್ನು ಪಡೆಯುವ ರೀತಿಯಲ್ಲೂ ಪ್ರಮುಖ ಬದಲಾವಣೆಯುಂಟಾಗಿದೆ. ಪ್ರಾರಂಭದಲ್ಲಿ ಭೂಮಿಯಿಂದ ಪಡೆಯುವ ಧಾನ್ಯದ ರೂಪದಲ್ಲಿ ಕಂದಾಯ ಕೊಡಬೇಕಾಗಿತ್ತು. ಅನಂತರ ಹಣದ ರೂಪದಲ್ಲಿ ಕಂದಾಯ ಕೊಡುವುದು ರೂಢಿಗೆ ಬಂತು.

ಭಾರತದಲ್ಲೂ ಭೂ ಉತ್ಪಾದನೆಯ ಸ್ವಲ್ಪ ಭಾಗವನ್ನು ಕಂದಾಯ ರೂಪದಲ್ಲಿ ಪಡೆಯುವುದು ಪ್ರಾಚೀನ ಕಾಲದಿಂದಲೂ ರೂಢಿಯಲ್ಲಿದೆ. ಮನುವಿನ ಪ್ರಕಾರ ಒಟ್ಟು ಭೂ ಉತ್ಪನ್ನದ ಆರನೆಯ ಒಂದು ಭಾಗವನ್ನು ಸರ್ಕಾರಕ್ಕೆ ಒಪ್ಪಿಸಬೇಕಾಗಿತ್ತು. ಯುದ್ಧಕಾಲದಲ್ಲಿ ಇದನ್ನು ನಾಲ್ಕನೆಯ ಒಂದು ಭಾಗಕ್ಕೆ ಹೆಚ್ಚಿಸಲಾಗುತ್ತಿತ್ತು. ಒಂದೊಂದು ಹಳ್ಳಿಯೂ ಇಂತಿಷ್ಟು ಕಂದಾಯ ಕೊಡಬೇಕೆಂದು ನಿರ್ಧರಿಸಲಾಗುತ್ತಿತ್ತು. ಹಳ್ಳಿಯ ಪ್ರತಿ ಭೂಮಾಲೀಕನೂ ಎಷ್ಟು ಕಂದಾಯ ಕೊಡಬೇಕೆಂಬುದನ್ನು ನಿರ್ಧರಿಸಿ ಇಡೀ ಹಳ್ಳಿಯ ಕಂದಾಯವನ್ನು ವಸೂಲಿ ಮಾಡಿ ಸರ್ಕಾರಕ್ಕೆ ಒಪ್ಪಿಸುವುದು ಆಗ ಹಳ್ಳಿಯ ಮುಖ್ಯಸ್ಥನ ಕರ್ತವ್ಯ. ಉತ್ಪಾದನೆಯ ಒಂದು ನಿರ್ದಿಷ್ಟ ಭಾಗವನ್ನು ಕೊಡಬೇಕಾಗಿದ್ದುದರಿಂದ ಪ್ರತಿಯೊಬ್ಬನೂ ಕೊಡಬೇಕಾದ ಕಂದಾಯವನ್ನು ನಿರ್ಧರಿಸುವುದು ಸುಲಭ. ರಾಜನಿಂದ ನೇಮಿತನಾದ ಅಧಿಕಾರಿಯ ಸಮ್ಮುಖದಲ್ಲಿ ಕಟಾವಾದ ಬೆಳೆಯನ್ನು ಹರಡಿ ನಿರ್ದಿಷ್ಟವಾದ ಪಾಲನ್ನು ಸರ್ಕಾರಕ್ಕೆ ಒಪ್ಪಿಸಲಾಗುತ್ತಿತ್ತು. ಬೆಳೆ ಕೆಟ್ಟುಹೋದಾಗ ಕಂದಾಯ ಇಲ್ಲವಾಗುತ್ತಿದ್ದುದು ಸ್ವಯಂ ವೇದ್ಯ. ಆದರೆ ಕ್ರಮೇಣ ವ್ಯವಸಾಯ ಅಭಿವೃದ್ಧಿಯಾದಂತೆ ಮತ್ತು ಹೆಚ್ಚು ಹೆಚ್ಚು ಭೂಮಿಯನ್ನು ವ್ಯವಸಾಯಕ್ಕೆ ಉಪಯೋಗಿಸುವುದು ಆರಂಭವಾದಮೇಲೆ ಸರಳವಾದ ಹಿಂದಿನ ಪದ್ಧತಿಯನ್ನು ಅನುಸರಿಸುವುದು ಕಷ್ಟವಾಯಿತು. ಕಂದಾಯ ಕೊಡುವುದನ್ನು ತಪ್ಪಿಸಿಕೊಳ್ಳುವುದು ಪ್ರಾರಂಭವಾಯಿತು. ಅಧಿಕಾರಿಗಳೂ ಸರ್ಕಾರಕ್ಕೆ ವಂಚನೆ ಮಾಡಲಾರಂಭಿಸಿದರು. ಆದ್ದರಿಂದ ಬೆಳೆಯ ಆಧಾರದ ಮೇಲೆ ಇಂತಿಷ್ಟು ಕಂದಾಯ ಕೊಡಬೇಕೆಂದು ನಿರ್ಧರಿಸುವ ಮತ್ತು ಹಣದ

ರೂಪದಲ್ಲಿ ಕಂದಾಯ ಪಡೆಯುವ ಪದ್ಧತಿಗಳು ಆಚರಣೆಗೆ ಬಂದುವು. ಅಕ್ಬರನ ಕಾಲದಲ್ಲಿ ಎಲ್ಲ ನೆಲವನ್ನೂ ಅದರ ಸಾರಗುಣದ ಆಧಾರದ ಮೇಲೆ ನಾಲ್ಕು ಗುಂಪಾಗಿ ವಿಂಗಡಿಸಿ ಹಿಂದಿನ ಹತ್ತು ವರ್ಷಗಳ ಉತ್ಪನ್ನದ ಸರಾಸರಿಯನ್ನು ಲೆಕ್ಕ ಹಾಕಿ ಅದರ ಆಧಾರದ ಮೇಲೆ ಕಂದಾಯ ವಿಧಿಸುವುದಕ್ಕಾಗಿ ಉತ್ಪನ್ನವನ್ನು ನಿರ್ಧರಿಸಲಾಗುತ್ತಿದ್ದಿತು. ಈ ಉತ್ಪನ್ನದ ಬೆಲೆಯನ್ನು ನಿರ್ಧರಿಸಲು ಹಿಂದಿನ ಹತ್ತೊಂಬತ್ತು ವರ್ಷಗಳ ಬೆಲೆಯ ಸರಾಸರಿಯನ್ನು ಆಧಾರವಾಗಿಟ್ಟುಕೊಳ್ಳಲಾಗಿತ್ತು. ಮೊಗಲರ ಕಾಲದಲ್ಲಿ ಆದ ಈ ಬದಲಾವಣೆ ಬಹಳ ಕಾಲದ ವರೆಗೆ ಭೂ ಕಂದಾಯನೀತಿಗೆ ಆಧಾರವಾಗಿತ್ತು. ಈಸ್ಟ್ ಇಂಡಿಯ ಕಂಪನಿಯ ಆಳ್ವಿಕೆಯ ಕಾಲದಲ್ಲಿ ಪುನಃ ಭೂ ಕಂದಾಯದ ನೀತಿಯಲ್ಲಿ ಪ್ರಮುಖ ಬದಲಾವಣೆಯಾಯಿತು. ಬಂಗಾಳ, ಬಿಹಾರ ಮತ್ತು ಒರಿಸ್ಸ ಪ್ರದೇಶಗಳಲ್ಲಿ ಖಾಯಂ ತೆರ ಪದ್ಧತಿ ಜಾರಿಗೆ ಬಂತು. ಜಮೀನ್ದಾರರು ಸರ್ಕಾರಕ್ಕೆ ಒಪ್ಪಿಸಬೇಕಾದ ಕಂದಾಯವನ್ನು ಒಂದು ಬಾರಿ ನಿಗದಿ ಮಾಡಿದ ಮೇಲೆ ಎಂದೆಂದಿಗೂ ಅದನ್ನು ಬದಲಾಯಿಸದಿರುವುದು ಈ ಪದ್ಧತಿಯ ಉದ್ದೇಶ. ಮುಂದೆ ಭೂ ಅಭಿವೃದ್ಧಿಯಿಂದ ಲಭಿಸಿದ ಆದಾಯ ಮತ್ತು ಮೌಲ್ಯಗಳ ಹೆಚ್ಚಳದಲ್ಲಿ ಅವರು ಸರ್ಕಾರಕ್ಕೆ ಏನನ್ನೂ ಕೊಡಬೇಕಾಗುತ್ತಿರಲಿಲ್ಲ. ಅವರು ರೈತರಿಂದ ಪಡೆಯುವ ಗುತ್ತಿಗೆಯ ಹನ್ನೊಂದನೆಯ ಹತ್ತು ಭಾಗವನ್ನು ಕಂದಾಯವಾಗಿ ಸರ್ಕಾರಕ್ಕೆ ಒಪ್ಪಿಸಬೇಕಾಗಿದ್ದಿತು. ಈ ದರದ ಕಂದಾಯದ ಹೊರೆ ಅತಿಯೇ ಎನ್ನಬೇಕು. ನಿಗದಿಯಾದ ಅವಧಿಯಲ್ಲಿ ಪಾವತಿ ಮಾಡದಿದ್ದರೆ ಬಾಕಿಗಾಗಿ ಜಮೀನನ್ನು ಸರ್ಕಾರ ಮಾರಾಟ ಮಾಡಬಹುದಾಗಿತ್ತು. ಅತಿಯಾದ ಹೊರೆಯನ್ನು ತಾಳಲಾರದೆ ಅನೇಕರು ಭೂಮಿಯನ್ನು ಕಳೆದುಕೊಂಡರು. ಖಾಯಂ ತೆರ ಪದ್ಧತಿಯನ್ನು ಕ್ರಮೇಣ ಬನಾರಸ್ (ವಾರಾಣಸಿ), ಮದ್ರಾಸ್, ಅಸ್ಸಾಂ ಮುಂತಾದ ಪ್ರದೇಶಗಳಿಗೂ ವಿಸ್ತರಿಸಲಾಯಿತು. ಹಲವಾರು ವರ್ಷಗಳ ಅನಂತರ ಕಂಪನಿಯ ಆಡಳಿತ ಸುಭದ್ರಗೊಂಡ ಮೇಲೆ ಖಾಯಂ ಆಗಿ ಕಂದಾಯವನ್ನು ನಿರ್ಧರಿಸುವ ಬದಲಾಗಿ ಕಾಲಕಾಲಕ್ಕೆ ಬದಲಾವಣೆ ಮಾಡುವುದು ಅನುಕೂಲವೆಂದು ಮನಗಾಣಲಾಯಿತು ಮತ್ತು ಮಹಲ್ವಾರಿ ಮತ್ತು ರೈತವಾರಿ ಪದ್ಧತಿಗಳು ಜಾರಿಗೆ ಬಂದುವು. ಒಂದು ಇಡೀ ಹಳ್ಳಿ ಅಥವಾ ಮಹಲ್ ಎಷ್ಟು ಕಂದಾಯ ಕೊಡಬೇಕೆಂದು ನಿರ್ಧರಿಸಲಾಗುತ್ತಿತ್ತು. ಹಳ್ಳಿಯವರೆಲ್ಲರೂ ಒಟ್ಟಾಗಿ ಕಂದಾಯ ಕೊಡಲು ಬದ್ಧರು. ಇದೇ ಮಹಲ್ವಾರಿ ಪದ್ಧತಿ. ರೈತವಾರಿ ಪದ್ಧತಿಯಲ್ಲಿ ಪ್ರತಿ ರೈತನೂ ಎಷ್ಟು ಕಂದಾಯ ಕೊಡಬೇಕೆಂಬುದನ್ನು ಪ್ರತ್ಯೇಕವಾಗಿ ನಿರ್ಧರಿಸಲಾಗುತ್ತಿತ್ತು. ಈ ಎರಡು ಪದ್ಧತಿಗಳಲ್ಲೂ ನಿರ್ದಿಷ್ಟ ಅವಧಿಗೆ ಅನ್ವಯಿಸುವಂತೆ ಕಂದಾಯವನ್ನು ನಿರ್ಧರಿಸಿ, ಅವಧಿಯ ಅನಂತರ ಅದನ್ನು ಬದಲಾಯಿಸಲಾಗುತ್ತಿತ್ತು. ಸ್ವಾತಂತ್ರ್ಯಾನಂತರ ವ್ಯಾಪಕವಾದ ಭೂ ಸುಧಾರಣೆಯ ಕ್ರಮಗಳನ್ನು ಕೈಗೊಂಡ ಮೇಲೆ ರೈತರಿಗೂ ಸರ್ಕಾರಕ್ಕೂ ನಡುವೆ ಇದ್ದ ಮಧ್ಯವರ್ತಿಗಳೆಲ್ಲ ಹೋಗಿ ರೈತರೇ ನೇರವಾಗಿ ಸರ್ಕಾರಕ್ಕೆ ಕಂದಾಯ ಕೊಡುವ ಪದ್ಧತಿ ಜಾರಿಗೆ ಬಂದಿದೆ.

ಭೂ ಕಂದಾಯವನ್ನು ನಿರ್ಧರಿಸಲು ಭಾರತದ ಎಲ್ಲ ಭಾಗಗಳಲ್ಲೂ ಒಂದೇ ಅಂಶವನ್ನು ಆಧಾರವಾಗಿಟ್ಟುಕೊಂಡಿಲ್ಲ. ಭೂಮಿಯ ಒಟ್ಟು ಉತ್ಪನ್ನ, ನಿವ್ವಳ ಉತ್ಪನ್ನ, ಅದರ ಮೌಲ್ಯ, ಅದರಿಂದ ದೊರಕಬಹುದಾದ ಗೇಣಿ, ನೀರಾವರಿ ಸೌಲಭ್ಯ, ಹವಾಗುಣ, ಮಾರುಕಟ್ಟೆಯ ಸಾಮೀಪ್ಯ, ಸಾರಿಗೆ ಸಂಪರ್ಕ ವ್ಯವಸ್ಥೆ—ಇವೇ ಮುಂತಾದ ಅಂಶಗಳನ್ನು ಸಾಮಾನ್ಯವಾಗಿ ಗಣನೆಗೆ ತೆಗೆದುಕೊಂಡು ಒಂದು ಎಕರೆ ಭೂಮಿಗೆ ಕೊಡಬೇಕಾದ ಕಂದಾಯವನ್ನು ನಿರ್ಧರಿಸಲಾಗುತ್ತದೆ. ಒಂದು ಬಾರಿ ನಿರ್ಧರಿಸಿದ ದರವನ್ನು ಒಂದು ನಿಶ್ಚಿತ ಅವಧಿಯ ವರೆಗೆ ಜಾರಿಗೆ ಕೊಡಲಾಗಿರುತ್ತದೆ. ಮರುತೀರ್ಮಾನ ಮಾಡುವ ಅವಧಿ ಸಾಮಾನ್ಯವಾಗಿ ಮೂವತ್ತು ವರ್ಷ.

ಆರೋಹಿ ತೆರಿಗೆಯ ಲಕ್ಷಣವನ್ನು ಪಡೆದಿಲ್ಲದಿರುವುದು ಭೂ ಕಂದಾಯದ ಒಂದು ಮುಖ್ಯ ದೋಷ. ಅದರ ಹೊರೆ ಸಮಾನವಾಗಿ ಹಂಚಿಕೆಯಾಗುತ್ತಿಲ್ಲ. ಆದ್ದರಿಂದ ಭೂಕಂದಾಯವನ್ನು ಕಡಿಮೆ ದರದಲ್ಲಿ ನಿರ್ಣಯಿಸಿ ವ್ಯವಸಾಯೋತ್ಪನ್ನಗಳಿಂದ ಪಡೆಯುವ ಆದಾಯದ ಮೇಲೆ ತೆರಿಗೆ ವಿಧಿಸಬೇಕೆಂಬ ಅಭಿಪ್ರಾಯವಿದೆ. ಭೂ ಕಂದಾಯವನ್ನು ತೆಗೆದು ಹಾಕಿ ಆರೋಹಿಲಕ್ಷಣವುಳ್ಳ, ವ್ಯಾವಸಾಯಿಕ ವರಮಾನ ಮೇಲಿನ ತೆರಿಗೆಯೊಂದನ್ನೇ ವಿಧಿಸಬಹುದೆಂಬ ಅಭಿಪ್ರಾಯವೂ ಇದೆ.

**ತಲೆಗಂದಾಯ:** ಪ್ರಾಚೀನ ತೆರಿಗೆಗಳಲ್ಲಿ ಒಂದಾದ ತಲೆಗಂದಾಯ ಈಗ ಕೇವಲ ಚಾರಿತ್ರಿಕ ಅಂಶವಾಗಿದೆ. ರೋಮನರು ಬ್ರಿಟಿಷರ ಮೇಲೆ ಈ ತೆರಿಗೆಯನ್ನು ವಿಧಿಸುತ್ತಿದ್ದರೆಂದು ಇತಿಹಾಸದಿಂದ ತಿಳಿದುಬರುತ್ತದೆ. ಯುದ್ಧದಲ್ಲಿ ಸೋತ ರಾಷ್ಟ್ರದ ಮೇಲೆ ಗೆದ್ದ ರಾಷ್ಟ್ರದ ಸರ್ಕಾರ ಈ ಕಂದಾಯವನ್ನು ವಿಧಿಸುವುದು ರೂಢಿಯಲ್ಲಿತ್ತು. ಗ್ರೀಸಿನಲ್ಲಿ ಈ ಕಂದಾಯವನ್ನು ಕೊಡುವುದು ಗುಲಾಮಗಿರಿಯ ಚಿಹ್ನೆ ಎಂಬ ಭಾವನೆಯಿತ್ತು. ಫ್ರೆಂಚ್ ಮಾದರಿಯನ್ನನುಸರಿಸಿ ಇಂಗ್ಲೆಂಡಿನಲ್ಲಿ 1377 ರಲ್ಲಿ ವಿಧಿಸಲಾದ ತಲೆಗಂದಾಯದ ಬಗ್ಗೆ ಇಂಗ್ಲಿಷರ ಇತಿಹಾಸದಲ್ಲಿ ಮೊದಲ ವಿವರಣೆ ದೊರಕುತ್ತದೆ. ಹದಿನಾಲ್ಕು ವರ್ಷಕ್ಕೆ ಮೇಲ್ಪಟ್ಟ ವಯಸ್ಸಿನ ಹೆಂಗಸರು ಮತ್ತು ಗಂಡಸರೆಲ್ಲರೂ ತಲಾ ನಾಲ್ಕು ಪೆನ್ನಿಯಂತೆ ಈ ಕಂದಾಯವನ್ನು ಕೊಡಬೇಕಾಗಿತ್ತು. ನಿಜವಾದ ಭಿಕ್ಷುಕರಿಗೆ ವಿನಾಯಿತಿಯಿತ್ತು. ಅಮೆರಿಕದಲ್ಲೂ ತಲೆಗಂದಾಯ ಹಿಂದಿನಕಾಲದಲ್ಲಿದ್ದುದಷ್ಟೇ ಅಲ್ಲದೆ ಅಲ್ಲಿಯ ಹಲವು ರಾಜ್ಯಸರ್ಕಾರಗಳು ಈಗಲೂ ಇದನ್ನು ವಿಧಿಸುತ್ತವೆ. ಆ ದೇಶದ ಸಂವಿಧಾನದ ಪ್ರಕಾರ ಹದಿಮೂರು ರಾಜ್ಯಗಳು ತಲೆಗಂದಾಯ ವಿಧಿಸುವ ಅಧಿಕಾರ ಹೊಂದಿವೆ. ಇವುಗಳಲ್ಲಿ ಒಂಬತ್ತು ರಾಜ್ಯಗಳಲ್ಲಿ ಸ್ಥಳೀಯ ಸಂಸ್ಥೆಗಳು ಈ ಕಂದಾಯ ವಿಧಿಸುತ್ತವೆ. ಭಾರತದಲ್ಲಿ ಮೊಗಲರ ಕಾಲದಲ್ಲಿ ಈ ಕಂದಾಯ ವಿಧಿಸಲಾಗಿತ್ತು. ಹಿಂದೂಗಳು ಮಾತ್ರ ಕೊಡಬೇಕಾಗಿದ್ದ ಜಿಸಿಯಾ ತಲೆಗಂದಾಯ ಭಾರತದ ಇತಿಹಾಸದಲ್ಲಿ ಕುಖ್ಯಾತಿ ಗಳಿಸಿದೆ. ತಲೆಗಂದಾಯದಿಂದ ದೊರಕಿದ ಆದಾಯವನ್ನು ರಸ್ತೆಗಳ ನಿರ್ಮಾಣ ಮತ್ತು ಪಾಠಶಾಲೆಗಳ ವ್ಯವಸ್ಥೆಗಳಿಗೆ ಉಪಯೋಗಿಸುವುದು ಸಾಮಾನ್ಯವಾಗಿತ್ತು. ಕೆಲಸ ಮಾಡುವ ಶಕ್ತಿಯಿದ್ದ ವಯಸ್ಕರ ಮೇಲೆ ಮಾತ್ರ ಈ ಕಂದಾಯ ವಿಧಿಸುತ್ತಿದ್ದುದು ಈ ಕಾರಣದಿಂದಲೇ. ಒಂದು ವೇಳೆ ಕಂದಾಯ ಕೊಡಲಾಗದಿದ್ದರೆ ರಸ್ತೆಯ ಕೆಲಸದಲ್ಲಿ ಶ್ರಮದಾನ ಮಾಡುವುದರ ಮೂಲಕ ಕಂದಾಯ ತೀರಿಸಬಹುದಾಗಿತ್ತು.

ತಲೆಗಂದಾಯದ ಕೆಲವು ವಿಶೇಷ ಲಕ್ಷಣಗಳಿವು: ಮೊದಲನೆಯದಾಗಿ, ಪ್ರತಿಯೊಬ್ಬ ನಾಗರಿಕನೂ ಆತನ ಆದಾಯ ಮತ್ತು ಆಸ್ತಿಯ ಮಟ್ಟ ಏನೇ ಇದ್ದರೂ ಇದನ್ನು ಕಡ್ಡಾಯವಾಗಿ ಪಾವತಿ ಮಾಡಲೇಬೇಕು. ವಿನಾಯಿತಿ ದೊರಕುವುದೇನಿದ್ದರೂ ವಯಸ್ಸಿನ ಆಧಾರದ ಮೇಲೆ. ಯಾವ ಆಸ್ತಿಯಿಂದಲೂ ದುಡಿಮೆಯಿಂದಲೂ ಆದಾಯವಿಲ್ಲದೆ, ಭಿಕ್ಷದಿಂದ ಜೀವನ ನಡೆಸುವವರಿಗೂ ವಿನಾಯಿತಿ ಇರುತ್ತಿತ್ತು. ಎರಡನೆಯದಾಗಿ, ಈ ಕಂದಾಯವನ್ನು ಯಾರ ಮೇಲೆ ವಿಧಿಸಲಾಗುತ್ತದೊ ಸಾಮಾನ್ಯವಾಗಿ ಅವರ ಮೇಲೆಯೇ ಇದರ ಹೊರೆ ಅಂತಿಮವಾಗಿ ಬೀಳುತ್ತದೆ. ಇದು ಸಾಮಾನ್ಯವಾಗಿ ಅಲ್ಪದರದಲ್ಲಿ ವಿಧಿಸಲ್ಪಡುವುದರಿಂದ ಹೊರೆಯನ್ನು ವರ್ಗಾಯಿಸುವ ಪ್ರಯತ್ನವಿರುವುದಿಲ್ಲ. ಆದರೆ ಹೆಚ್ಚಿನ ದರದಲ್ಲಿ ವಿಧಿಸಿದಾಗ ಕೂಲಿಯನ್ನು ಹೆಚ್ಚಿಸುವಂತೆ ಮಾಡಿ ಉದ್ಯೋಗದಾತರಿಗೆ ಹೊರೆಯನ್ನು ಕೆಲಸಗಾರರು ವರ್ಗಾಯಿಸಬಹುದು ಮತ್ತು ಉದ್ಯೋಗದಾತರು ಬೆಲೆಯ ಮೂಲಕ ಗ್ರಾಹಕರಿಗೆ ವರ್ಗಾಯಿಸಬಹುದು. ಮೂರನೆಯದಾಗಿ, ಪ್ರಾರಂಭದಲ್ಲಿ ಸಮವಾದ ದರದಲ್ಲಿ ಎಲ್ಲರ ಮೇಲೆ ತಲೆಗಂದಾಯ ಬೀಳುತ್ತಿತ್ತು. ಕ್ರಮೇಣ ಕಂದಾಯದ ದರವನ್ನು ವರ್ಗಾನುಗುಣವಾಗಿ ವಿಂಗಡಿಸುವ ಪದ್ಧತಿ ಕೆಲವು ದೇಶಗಳಲ್ಲಿ ಜಾರಿಗೆ ಬಂತು. ಫ್ರಾನ್ಸಿನಲ್ಲಿ 1701ರಲ್ಲಿ ತಲೆಗಂದಾಯ ವಿಧಿಸುವುದಕ್ಕಾಗಿ ಜನರನ್ನು ಇಪ್ಪತ್ತೆರಡು ಗುಂಪುಗಳಾಗಿ ವಿಂಗಡಿಸಿ ಒಂದೊಂದು ಗುಂಪಿಗೆ ಒಂದೊಂದು ದರದ ಕಂದಾಯ ಹಾಕುವುದು ರೂಢಿಗೆ ಬಂತು. ರಷ್ಯದಲ್ಲಿ ಪೀಟರ್ ದೊರೆ 1718ರಲ್ಲಿ ತೆರಿಗೆದಾರರನ್ನು ಮೂರು ಗುಂಪುಗಳಾಗಿ ವಿಂಗಡಿಸಿದ. 1811ರಲ್ಲಿ ಪ್ರಷ್ಯದಲ್ಲಿ ತೆರಿಗೆದಾರರನ್ನು ನಾಲ್ಕು ಗುಂಪುಗಳಾಗಿ ವಿಂಗಡಿಸಲಾಯಿತು. ನಾಲ್ಕನೆಯದಾಗಿ, ಈ ಕಂದಾಯಕ್ಕೂ ರಾಜಕೀಯ ಹಕ್ಕುಬಾಧ್ಯತೆಗಳಿಗೂ ಒಂದುರೀತಿಯ ಸಂಬಂಧವಿದೆ. ಅಮೆರಿಕದಲ್ಲಿ ಈ ಕಂದಾಯವನ್ನು ಪಾವತಿ ಮಾಡದೆ ತಪ್ಪಿಸಿಕೊಂಡವರಿಗೆ ಚುನಾವಣೆಗಳಲ್ಲಿ ಮತ ನೀಡುವ ಹಕ್ಕು ಇಲ್ಲದಂತಾಗುತ್ತಿತ್ತು. ಮತ ನೀಡುವ ಹಕ್ಕನ್ನು ಈ ರೀತಿ ಮೊಟಕು ಮಾಡುವುದು ಸರಿಯಲ್ಲವೆಂಬುದು ವೇದ್ಯವಾಗಿ 1964ರ ಸಂವಿಧಾನದ ಇಪ್ಪತ್ನಾಲ್ಕನೆಯ ತಿದ್ದುಪಡಿಯಲ್ಲಿ ಈ ನಿರ್ಬಂಧವನ್ನು ತೆಗೆದುಹಾಕಲಾಯಿತು.

ತೆರಿಗೆಯ ತತ್ತ್ವಗಳ ದೃಷ್ಟಿಯಿಂದ ತಲೆಗಂದಾಯಕ್ಕೆ ಯಾವ ಸಮರ್ಥನೆಯೂ ಇಲ್ಲ. ಸಾಮಾನ್ಯವಾಗಿ ಈ ಕಂದಾಯ ಎಲ್ಲರ ಮೇಲೂ ಒಂದೇ ದರದಲ್ಲಿ ಬೀಳುವುದರಿಂದ ಅವರೋಹಿಲಕ್ಷಣ ಪಡೆದಿದೆ. ವ್ಯಕ್ತಿಯ ಆದಾಯವಾಗಲಿ ಆಸ್ತಿಯಾಗಲಿ ಯಾವುದೂ ಆಧಾರವಾಗಿರದೆ, ಕೇವಲ ವ್ಯಕ್ತಿಯೇ ಆಧಾರವಾಗಿರುವುದು ಈ ಕಂದಾಯದ ವಿಶೇಷ ನ್ಯೂನತೆ. ಅಷ್ಟೇ ಅಲ್ಲದೆ ರಾಜ್ಯಾದಾಯದ ದೃಷ್ಟಿಯಿಂದಲೂ ಇದರ ಪ್ರಯೋಜನ ಅಷ್ಟೇನೂ ಇಲ್ಲ. ಅಮೆರಿಕದ ಕೆಲವು ರಾಜ್ಯಗಳ ಹೊರತು ಬೇರೆಲ್ಲೂ ತಲೆಗಂದಾಯಕ್ಕೆ ಈಗ ಮಾನ್ಯತೆಯಿಲ್ಲ.

ನೋಡಿ—ತೆರಿಗೆಗಳು. (ಬಿ.ಎಸ್.ವಿಸ್.ಎ.)

**ಕಂದು ಆಲ್ಗೆ:** ಆಲ್ಗೆ ಸಸ್ಯಗಳ ಗುಂಪಿನ ಒಂದು ವರ್ಗ (ಫಿಯೋಫೈಸೀ–ಬ್ರೌನ್ ಆಲ್ಗೆ). ಇವು ಪ್ರಮುಖವಾಗಿ ಚಾಕೊಲೇಟ್ ಕೆಂಪು ಬಣ್ಣವಾದ್ದರಿಂದ ಈ ಹೆಸರು ಬಂದಿದೆ. ಇದರಲ್ಲಿ ಸುಮಾರು 240 ಜಾತಿ ಮತ್ತು ಸು. 1500 ಪ್ರಭೇದಗಳಿವೆ. ಮೂರು ಪ್ರಭೇದಗಳನ್ನು ಬಿಟ್ಟು ಉಳಿದವೆಲ್ಲ ಸಮುದ್ರವಾಸಿಗಳು. ಮುಖ್ಯವಾಗಿ ಉತ್ತರ ಸಮಶೀತೋಷ್ಣವಲಯದ ಸಾಗರ ಮತ್ತು ಶೀತವಲಯದ ಸಾಗರಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿವೆ. ಆದರೆ ಭಾರತ ಮತ್ತು ಇತರ ಉಷ್ಣವಲಯದ ಸಮುದ್ರಗಳಲ್ಲಿ ಡಿಕ್ಟಿಯೋಟೇಲಿಸ್ ಗಣದ ಮತ್ತು ಸಾರ್ಗಾಸಮ್ ಜಾತಿಯ ಆಲ್ಗೆಗಳು ಹೇರಳವಾಗಿ ಕಂಡುಬರುತ್ತವೆ.

ಕಂದು ಆಲ್ಗೆಗಳ ದೇಹರಚನೆಯಲ್ಲಿ ವೈವಿಧ್ಯವಿದೆ. ಕೆಲವು ಸೂಕ್ಷ್ಮರೂಪಿಗಳಾನರೂ ಪೆಚ್ಚಿನವು ದೈತ್ಯಾಕಾರದವು. ಉದಾಹರಣೆಗೆ 30 ಮೀ. ಗಿಂತ ಹೆಚ್ಚು ಉದ್ದಕ್ಕೆ ಬೆಳೆಯುವ ಮ್ಯಾಕ್ರೊಸಿಸ್ಟಿಸ್, ಲ್ಯಾಮಿನೇರಿಯ, ನೀರಿಯೊಸಿಸ್ಟಿಸ್ ಇತ್ಯಾದಿ. ಎಲ್ಲವೂ ಒಟ್ಟಿನಲ್ಲಿ ಬಹುಕಣಜೀವಿಗಳೇ. ಆದರೆ ಗಾತ್ರ, ಆಕಾರ, ರೂಪ ಬೆಳವಣಿಗೆಯ ರೀತಿ ಮುಂತಾದುವುಗಳಲ್ಲೆಲ್ಲ ವೈವಿಧ್ಯವಿದೆ. ಎಕ್ಟೋಕಾರ್ಪಸ್, ಸ್ಪೇಸಿಲೇರಿಯ ಪ್ರಭೇದಗಳಲ್ಲಿ ಎಳೆಯಂಥ ದೇಹವಿದೆ. ಡಿಕ್ಟಿಯೋಟೇಲಿಸ್ ಗಣದವುಗಳಲ್ಲಿ ದೇಹ ಪಟ್ಟೆಯಂತಿದೆ. ಹೆಟೆರೋಜೆನರೇಟಿ ಮತ್ತು ಸೈಕ್ಲೋಸ್ಪೋರಿ ವಿಭಾಗದ ಸಸ್ಯಗಳ ದೇಹದಲ್ಲಿ ಕಾಂಡ, ಬೇರು ಮತ್ತು ಎಲೆಗಳಂಥ ಭಾಗಗಳಿವೆ. ಕಂದು ಆಲ್ಗೆ ಸಸ್ಯಗಳ ಜೀವಕೋಶಗಳಲ್ಲಿ ಒಂದೊಂದೇ ಕಣಬೀಜ (ನ್ಯೂಕ್ಲಿಯಸ್) ಇರುವುದೂ ಕ್ಲೋರೋಫಿಲ್ ಎ ಮತ್ತು ಬಿ, $\beta$–ಕ್ಯಾರೋಟೀನ್ ಮತ್ತು ಫ್ಯೂಕೋಜ಼ಾಂತಿನ್ ಎಂಬ ಬಣ್ಣಗಳಿಂದ ಕೂಡಿದ ಪ್ಲಾಸ್ಟಿಡ್ಡುಗಳಿರುವುದೂ ಇವುಗಳ ಮುಖ್ಯ ಲಕ್ಷಣಗಳು. ದ್ಯುತಿಸಂಶ್ಲೇಷಣ ಕ್ರಿಯೆಯ ಉತ್ಪತ್ತಿ ಪಿಷ್ಟ ಪದಾರ್ಥವಲ್ಲ, ಲ್ಯಾಮಿನೇರಿನ್ ಮತ್ತು ಮ್ಯಾನಿಟಾಲ್ ಎಂಬ ವಿಶಿಷ್ಟ ಬಗೆಯ ಕಾರ್ಬೊಹೈಡ್ರೇಟುಗಳು. ಕೊಂಚ ಕೊಬ್ಬು ಹಾಗೂ ಪೈಸೋಡ್ ಅಥವಾ ಫ್ಯೂಕೋಸ್ ಎಂಬ ಸಾವಯವ ಪದಾರ್ಥಗಳೂ ಇರುತ್ತವೆ. ಜೀವಕೋಶವನ್ನು ಆವರಿಸಿರುವ ಗೋಡೆಯಲ್ಲಿ ಮೂರು ಪದರಗಳಿವೆ. ಒಳಪದರ ಸೆಲ್ಯುಲೋಸಿನಿಂದಾದದ್ದು. ಮಧ್ಯ ಪದರದಲ್ಲಿ ಪೆಕ್ಟಿಕ್ ಸಂಯುಕ್ತಗಳಿವೆ. ಹೊರಪದರದಲ್ಲಿ ಆಲ್ಜಿನ್ ಎಂಬ ವಿಶೇಷ ಬಗೆಯ ಲೋಳೆ ವಸ್ತುವಿದೆ.

ಈ ವರ್ಗದ ಸಸ್ಯಗಳ ವಂಶಾಭಿವೃದ್ಧಿ ಸ್ವಾರಸ್ಯಕರವಾಗಿದೆ. ಜೀವನಚಕ್ರದಲ್ಲಿ ಒಂದಾದಮೇಲೆ ಮತ್ತೊಂದು ಪರ್ಯಾಯವಾಗಿ ಬರುವ ಎರಡು ಪೀಳಿಗೆಗಳು (ಜನರೇಷನ್) ಇವೆ. ಲಿಂಗಕಣಗಳನ್ನು (ಗ್ಯಾಮೀಟ್ಸ್) ಉತ್ಪತ್ತಿ ಮಾಡುವ ಪೀಳಿಗೆಗೆ ಗ್ಯಾಮಿಟೋಫೈಟ್ ಎಂದೂ ಸ್ಪೋರುಗಳನ್ನು ಉತ್ಪತ್ತಿ ಮಾಡುವ ಪೀಳಿಗೆಗೆ ಸ್ಪೋರೋಫೈಟ್ ಎಂದೂ ಹೆಸರು. ಈ ಬಗೆಯ ಪರ್ಯಾಯವನ್ನು ಪೀಳಿಗೆಗಳ ಪರ್ಯಾಯಕ್ರಮ ಎನ್ನುತ್ತಾರೆ. ಐಸೊಜನರೇಟಿ ಗುಂಪಿನ ಎಕ್ಟೋಕಾರ್ಪಸ್ ಮುಂತಾದ ಜಾತಿಗಳಲ್ಲಿ ಎರಡೂ ಪೀಳಿಗೆಗಳಲ್ಲಿನ ದೇಹ (ಥಾಲಸ್ಸು) ಒಂದೇ ವಿಧವಾಗಿರುತ್ತದೆ. ಇಲ್ಲಿನ ಪರ್ಯಾಯಕ್ಕೆ ಸಮರೂಪ ಪೀಳಿಗೆಗಳ ಪರ್ಯಾಯಕ್ರಮ ಎಂದು ಹೆಸರು. ಹೆಟರೋಜನರೇಟಿ ಗುಂಪಿಗೆ ಸೇರಿದ ಲ್ಯಾಮಿನೇರಿಯ, ಡಿಕ್ಟಿಯೋಟ ಮುಂತಾದುವುಗಳಲ್ಲಿ ಸ್ಪೋರೋಫೈಟ್ ಪೀಳಿಗೆ ಚಿಕ್ಕದಾಗಿಯೂ ಗ್ಯಾಮಿಟೊಫೈಟ್ ಪೀಳಿಗೆ ದೊಡ್ಡದಾಗಿ ಪ್ರಧಾನವಾಗಿಯೂ ಇರುತ್ತದೆ. ಇದಕ್ಕೆ ಅಸಮರೂಪ ಪೀಳಿಗೆಗಳ ಪರ್ಯಾಯಕ್ರಮ ಎಂದು ಹೆಸರು. ಫ್ಯೂಕಸ್, ಸಾರ್ಗ್ಯಾಸಮ್ ಮೊದಲಾದುವುಗಳನ್ನೊಳಗೊಂಡಿರುವ ಸೈಕ್ಲೋಸ್ಪೋರಿ ಗುಂಪಿನಲ್ಲಿ ಪೀಳಿಗೆಗಳ ಪರ್ಯಾಯಕ್ರಮ ಇಲ್ಲವೆಂದೇ ಹೇಳಬಹುದು. ಇಲ್ಲಿ ಸ್ಪೋರೋಫೈಟ್ ಪೀಳಿಗೆ ಮಾತ್ರ ಪ್ರಧಾನವಾದುದು. ಸಂತಾನಾಭಿವೃದ್ಧಿಯ ಕಾಲದಲ್ಲಿ ಸ್ಪೋರೋಫೈಟ್ ಪೀಳಿಗೆಯ ಥಾಲಸ್ಸಿನಲ್ಲಿ ಒಂದೇ ಕೋಶವುಳ್ಳ ಯೂನಿಲಾಕ್ಯುಲರ್ ಸ್ಪೋರಾಂಜಿಯಗಳೆಂಬ ಅಂಗಗಳು ಹುಟ್ಟುತ್ತವೆ. ಇವುಗಳಲ್ಲಿ ಅಸಂಖ್ಯವಾಗಿ ಜ಼ುವೊಸ್ಪೋರುಗಳು ಉತ್ಪತ್ತಿಯಾಗುತ್ತವೆ. ಬಿಡುಗಡೆ ಹೊಂದಿದ ಇವು ಸೂಕ್ತ ಪರಿಸ್ಥಿತಿಯಲ್ಲಿ ಮೊಳೆತು ಗ್ಯಾಮಿಟೋಫೈಟ್ ಪೀಳಿಗೆಯ ಸಸ್ಯಗಳಾಗುತ್ತವೆ. ಈ ಗ್ಯಾಮಿಟೋಫೈಟ್ ಥಾಲಸ್ಸಿನಲ್ಲಿ ಹಲವಾರು ಕೋಶವುಳ್ಳ ಪ್ಲೂರಿಲಾಕ್ಯುಲರ್ ಸ್ಪೊರಾಂಜಿಯಗಳು ಮೂಡುತ್ತವೆ. ಇವು ವಿಪುಲ ಸಂಖ್ಯೆಯಲ್ಲಿ ಲಿಂಗಕಣಗಳನ್ನು (ಗ್ಯಾಮೀಟ್ಸ್) ಉತ್ಪಾದಿಸುತ್ತವೆ. ಲಿಂಗಕಣಗಳು ಸ್ಪೊರಾಂಜಿಯಗಳಿಂದ ಹೊರಬಂದು ಒಂದರೊಡನೊಂದು ಸಂಯೋಗ ಹೊಂದಿ ಜ಼ೈಗೋಟುಗಳಾಗುತ್ತವೆ. ಮುಂದೆ ಈ ಜ಼ೈಗೋಟ್ ಮೊಳೆತು ಸ್ಪೋರೋಫೈಟ್ ಸಸ್ಯವಾಗಿ ಬೆಳೆಯುತ್ತದೆ. ಲಿಂಗಕಣಗಳು ಸಮರೂಪ ಹೊಂದಿರಬಹುದು. ಉದಾಹರಣೆಗೆ ಎಕ್ಟೋಕಾರ್ಪಸ್. ಇಂಥ ಲಿಂಗಕಣಗಳ ಸಂಯೋಗಕ್ಕೆ ಸಮಲಿಂಗಕಣ ಸಂಯೋಗ (ಐಸೊಗ್ಯಾಮಿ) ಎಂದು ಹೆಸರು. ಕಟ್ಲೇರಿಯ ಜಾತಿಯಲ್ಲಿ ಲಿಂಗಕಣಗಳು ಅಸಮರೂಪವಾದುವು. ಇಂಥ ಸಂಯೋಗವನ್ನು ಅಸಮಲಿಂಗಕಣ ಸಂಯೋಗ (ಆನ್ ಐಸೊಗ್ಯಾಮಿ) ಎನ್ನುತ್ತಾರೆ. ಇನ್ನು ಕೆಲವು ಜಾತಿಗಳಲ್ಲಿ (ಲ್ಯಾಮಿನೇರಿಯ. ಫ್ಯೂಕಸ್ ಇತ್ಯಾದಿ) ಗಂಡುಲಿಂಗಕಣಗಳು ಚಿಕ್ಕವು. ಅವುಗಳಿಗೆ ಚಲನಶಕ್ತಿ ಇದೆ. ಹೆಣ್ಣು ಲಿಂಗಕಣಗಳು ದೊಡ್ಡವು. ಅವು ಚಲಿಸಲಾರವು. ಇಂಥ ಗ್ಯಾಮೀಟುಗಳ ಸಂಯೋಗಕ್ಕೆ ಊಗ್ಯಾಮಿ ಎಂದು ಹೆಸರು. ಸೈಕ್ಲೋಸ್ಪೋರಿ ಗುಂಪಿನ ಆಲ್ಗೆಯಾದ ಫ್ಯೂಕಸ್‌ನಲ್ಲಿ ಯೂನಿಲಾಕ್ಯುಲರ್ ಸ್ಪೊರಾಂಜಿಯಗಳಲ್ಲಿ ಉತ್ಪತ್ತಿಯಾಗುವ ಸ್ಪೋರುಗಳೇ ನೇರವಾಗಿ ಲಿಂಗಕಣಗಳಂತೆ ವರ್ತಿಸುತ್ತವೆ. ಅಲ್ಲದೆ ಸ್ಪೊರಾಂಜಿಯಗಳು ಕಾನ್ಸೆಪ್ಟಕಲ್ಲುಗಳೆಂಬ ವಿಶಿಷ್ಟ ಬಗೆಯ ಕುಹರಗಳಲ್ಲಿ ಉತ್ಪತ್ತಿಯಾಗುತ್ತವೆ.

ಸಮುದ್ರ ಕಳೆಗಳೆಂದು ಪರಿಗಣಿತವಾಗಿರುವ ಕಂದು ಆಲ್ಗೆಗಳು ಆರ್ಥಿಕ ಪ್ರಾಮುಖ್ಯ ಪಡೆದಿವೆ. ಇವುಗಳಿಂದ ಸುಲಭವಾಗಿ ಪಡೆಯಬಹುದಾದ ಆಲ್ಜಿನ್ನನ್ನು ಐಸ್‌ಕ್ರೀಮ್, ಟೂತ್‌ಪೇಸ್ಟ್, ಸುಗಂಧದ್ರವ್ಯ. ಸಾಬೂನು ಇತ್ಯಾದಿಗಳ ತಯಾರಿಕೆಯಲ್ಲಿ ಬಳಸುತ್ತಾರೆ. ರಬ್ಬರನ್ನು ಪರಿಷ್ಕಾರಗೊಳಿಸುವಾಗ ಇದನ್ನು ಬಳಸುವ ರೂಢಿಯಿದೆ. ಲ್ಯಾಮಿನೇರಿಯ ಮತ್ತು ಏಲೇರಿಯ ಪ್ರಭೇದಗಳಿಂದ ಕೊಂಬು ಎಂದು ಕರೆಯಲಾಗುವ ಆಹಾರ ವಸ್ತುವನ್ನು ತಯಾರಿಸುತ್ತಾರೆ. ಜಪಾನಿನಲ್ಲಿ ಇದನ್ನು ಮೀನು, ಮಾಂಸ ಮುಂತಾದುವುಗಳೊಡನೆ ಬೆರೆಸಿ ಆಹಾರವಾಗಿ ಉಪಯೋಗಿಸುತ್ತಾರೆ. ಒಂದು ಕಾಲದಲ್ಲಿ ಈ ಆಲ್ಗೆಗಳಿಂದ ಅಯೊಡೀನ್ ಮತ್ತು ಪೊಟ್ಯಾಸಿಯಂಗಳನ್ನು ಬೇರ್ಪಡಿಸುತ್ತಿದ್ದರು. (ಕೆ.ಎಸ್.ಜಿ.;ಪಿ.ಬಿ.)

**ಕಂಥ:** ವೇದತತ್ತ್ವವೇತ್ತನಾದ ಒಬ್ಬ ಋಷಿ. ಕಂಡು ಎಂದೂ ಹೆಸರು. ಗೋಮತೀ ನದಿಯ ತೀರದಲ್ಲಿ ತೀವ್ರವಾದ ತಪಸ್ಸನ್ನಾಚರಿಸುತ್ತಿರುವಾಗ ತಪೋಭಂಗ ಮಾಡಲೋಸುಗ ದೇವೇಂದ್ರ ಪ್ರಮ್ಲೋಚಾ ಎಂಬ ಅಪ್ಸರ ಸ್ತ್ರೀಯನ್ನು ಕಳುಹಿದ. ಆ ದಿವ್ಯಾಂಗನೆಯೊಡನೆ ಕಂಥ ಋಷಿ ಒಂಬೈನೂರು ವರ್ಷಗಳ ಕಾಲ ಸಂಸಾರಜೀವನ ನಡೆಸಿದ. ಒಂದು ದಿನ ಜ್ಞಾನೋದಯವಾಗಿ ಇಂದ್ರಿಯಾಧೀನ ಜೀವನಕ್ಕೂ ದೇವತೆಗಳ ತಪೋಭಂಗ ಪ್ರಯತ್ನಕ್ಕೂ ಧಿಕ್ಕಾರ ಹೇಳಿ ಬ್ರಹ್ಮಪಾರವೆಂಬ ಮಹಾತಪಸ್ಸು ಮಾಡಲು ಪುರುಷೋತ್ತಮಕ್ಷೇತ್ರಕ್ಕೆ ಹೋದ. ಇವರ ಮಗಳಾದ ಮಾರಿಷೆಯನ್ನು ಪ್ರಚೆತಸ್ ಮುನಿ ವರಿಸಿದ. ಪ್ರೇಮ ಬಂಧ ಎಷ್ಟು ಪ್ರಬಲವಾದುದೆಂಬುದಕ್ಕೆ ಕಂಥವೃತ್ತಾಂತ ಉತ್ತಮ ನಿದರ್ಶನವಾಗಿದೆ.

(ಎನ್.ಎಸ್.ಆರ್.ಬಿ.)

**ಕಂನಡ ಸಮಾಚಾರ:** ಒಂದು ದೃಷ್ಟಿಯಿಂದ ಕನ್ನಡದಲ್ಲಿ ಪ್ರಕಟವಾದ ಮೊದಲ ವಾರ್ತಾಪತ್ರಿಕೆಯಾಗಿರುವುದರಿಂದಲೂ ಇತರ ಹಲವಾರು ದೃಷ್ಟಿಗಳಿಂದ, ಕನ್ನಡ ಪತ್ರಿಕೋದ್ಯಮದ ಇತಿಹಾಸದಲ್ಲಿ ಗಣ್ಯಸ್ಥಾನವನ್ನು ಪಡೆಯಲು ಅರ್ಹವಾಗಿರುವುದರಿಂದಲೂ ಮುಖ್ಯವೆನಿಸಿರುವ ಒಂದು ಪತ್ರಿಕೆ. ಮೊದಲು ಇದು ಮಂಗಳೂರು ಸಮಾಚಾರ ಎಂಬ ಹೆಸರಿನಿಂದ ಆರಂಭವಾದದ್ದು 1843ನೆಯ ಜುಲೈ 1ನೆಯ ತಾರೀಖು. ಈ ಪತ್ರಿಕೆ ಹುಟ್ಟಿದ್ದು ಬಾಸೆಲ್ ಮಿಷನ್ನಿನ ಪಾದ್ರಿಗಳ ಪ್ರಯತ್ನದ ಫಲವಾಗಿ. ಈ ಸಂಸ್ಥೆಯ ಪಾದ್ರಿಗಳು ಭಾರತದ ನೆಲದ ಮೇಲೆ ಹೆಜ್ಜೆಯಿಟ್ಟದ್ದು 1834ರಲ್ಲಿ—ಮಲೆಯಾಳದ ಕರಾವಳಿಯ ಕಲ್ಲಿಕೋಟೆಯಲ್ಲಿ. ಅಲ್ಲಿಂದ ಅವರು ಮಂಗಳೂರಿಗೆ ಹೊರಟು, ಅದೇ ವರ್ಷ ಅಕ್ಟೋಬರ್ 30ನೆಯ ತಾರೀಖಿನಂದು ಮಂಗಳೂರನ್ನು ಮುಟ್ಟಿದ್ದರು. ಈ ಐತಿಹಾಸಿಕ ಘಟನಾನಂತರ, ಸುಮಾರು ನಾಲ್ಕು ವರ್ಷಗಳ ಮೇಲೆ, 1838ರಲ್ಲಿ ರೆವರೆಂಡ್ ಹ್ಯಾಮನ್ ಮ್ಯೂಕ್‌ಲಿಂಗಾ ಮಂಗಳೂರಿಗೆ ಬಂದ. ಕನ್ನಡ ಭಾಷೆಯನ್ನು ಕಲಿತ. ಎರಡು ವರ್ಷಗಳ ಅನಂತರ ಕೊಡಗಿಗೆ ಹೋಗಿ ಅಲ್ಲಿ ಉಪದೇಶಕನಾಗಿ ಕೆಲಸ ಮಾಡಿದ. 1843ರಲ್ಲಿ ಮಂಗಳೂರು ಸಮಾಚಾರವನ್ನು ತನ್ನ ಸಂಪಾದಕತ್ವದಲ್ಲಿ ಪಕ್ಷಪ್ರತಿಕೆಯಾಗಿ ಆರಂಭಿಸಿದವ ಇವನೇ. ಎಂಟು ತಿಂಗಳ ಕಾಲ ಈ ಪತ್ರಿಕೆಯನ್ನು ಮಂಗಳೂರಿನಿಂದ ನಡೆಸಿದ್ದ ಮೇಲೆ ಅದರ ಹೆಸರನ್ನು ಕಂನಡ ಸಮಾಚಾರ ಎಂದು ಬದಲಿಸಿ ಬಳ್ಳಾರಿಯಿಂದ ಅದನ್ನು ಪ್ರಕಟಿಸಲಾರಂಭಿಸಿದ. ಈ ಪರಿವರ್ತನೆಗೆ ಕಾರಣವೇನೆಂಬುದನ್ನು ಆತ ಮಂಗಳೂರು ಸಮಾಚಾರದ ಹದಿನಾರನೆಯ ಸಂಚಿಕೆಯಲ್ಲಿ ವಿವರಿಸಿದ್ದಾನೆ. ಈ ವಿವರಣೆಯಲ್ಲಿ ಕೆಲವು ಸ್ವಾರಸ್ಯವಾದ ಅಂಶಗಳಿವೆ : ಪತ್ರಿಕೆಗೆ ಸಂಪಾದಕ ನಿರೀಕ್ಷಿಸಿದ್ದಕ್ಕಿಂತ ಹೆಚ್ಚು ಪ್ರೋತ್ಸಾಹ ದೊರೆಯಿತು ; ಕನ್ನಡ ವಾರ್ತಾ ಪತ್ರವನ್ನು ಓದುವುದರಲ್ಲಿ ಕನ್ನಡಿಗರು ಆಸಕ್ತಿಯನ್ನು ತೋರುತ್ತಿದ್ದರಾಗಿ ಅವರ ಈ ಆಸಕ್ತಿಯನ್ನು ಬೆಳೆಸುವ ಉದ್ದೇಶದಿಂದ ಪತ್ರಿಕೆಯ ಮುದ್ರಣಾದಿಗಳನ್ನು ಉತ್ತಮಗೊಳಿಸಲು ಬಯಸಿ ಕಲ್ಲಚ್ಚಿನ ಮುದ್ರಣದ ಬದಲು ಅಚ್ಚುಮೊಳೆಗಳನ್ನುಪಯೋಗಿಸಿ ಪತ್ರಿಕೆಯನ್ನು ಮುದ್ರಿಸಲು ನಿರ್ಧರಿಸಲಾಯಿತು. ಬಳ್ಳಾರಿಯಲ್ಲಿ ಆ ಸೌಕರ್ಯವಿರುವುದರಿಂದ ಪತ್ರಿಕಾ ಮುದ್ರಣವನ್ನು ಅಲ್ಲಿಗೆ ಬದಲಾಯಿಸಲಾಯಿತು.

ಪತ್ರಿಕೆಯ ಹೆಸರಿನಲ್ಲಿ ಬದಲಾವಣೆ ಮಾಡಿದ್ದೇಕೆ ಎಂಬುದನ್ನು ವಿವರಿಸುತ್ತ ಸಂಪಾದಕ ಮ್ಯೂಕ್ಲಿಂಗ್, ಕನ್ನಡ ಮಾತನಾಡುವ ಎಲ್ಲ ಜನರಲ್ಲೂ ಇದು ಪ್ರಸಾರಕ್ಕೆ ಬರಲಿ ಎಂಬ ಆಶಯದಿಂದ ಹಾಗೆ ಮಾಡಲಾಯಿತೆಂದು ಹೇಳಿದ್ದಾನೆ.

ಕಂನಡ ಸಮಾಚಾರದ ಮೊದಲ ಸಂಚಿಕೆ, 1844ನೆಯ ಮಾರ್ಚ್ ಒಂದನೆಯ ತಾರೀಖು ಬಳ್ಳಾರಿಯಿಂದ ಪ್ರಕಟವಾಯಿತು. ಈ ಸಂಚಿಕೆಯಿಂದ ಪತ್ರಿಕೆಯ ಪುಟಸಂಖ್ಯೆ ನಾಲ್ಕರಿಂದ ಎಂಟಕ್ಕೆ ಹೆಚ್ಚಿತು. ಬೆಲೆಯೂ ಅಷ್ಟೇ—ಹಿಂದೆ ಒಂದು ದುಡ್ಡು (ಹಿಂದಿನ ಎರಡು ಕಾಸು) ಇದ್ದದ್ದು ಎರಡು ದುಡ್ಡಿಗೆಏರಿತು.

ಹತ್ತು ತಿಂಗಳ ಕಾಲ ನಡೆದು ಈ ಪತ್ರಿಕೆ ನಿಂತುಹೋಯಿತು.

ಕಂನಡ ಸಮಾಚಾರದ ಸಂಪಾದಕ ಮ್ಯೂಕ್ಲಿಂಗ್ ಹುಟ್ಟು ಸಾಹಸಿ : ಹುಟ್ಟು ಪತ್ರಿಕೋದ್ಯಮಿ. ತಾನು ಆರಂಭಿಸಿದ ಪತ್ರಿಕೆಗಳು ನಿಂತುಹೋದ ಮೇಲೂ ಅವನು ಪತ್ರಿಕೋದ್ಯಮದಲ್ಲಿ ಆಸಕ್ತನಾಗಿದ್ದನೆಂದೂ ಮೈಸೂರು ಸರ್ಕಾರದ ಆಶ್ರಯದಲ್ಲಿ ಪ್ರಕಟವಾದ ವಾಗ್ವಿಧಾಯಿನಿ, ಉಡುಪಿಯಲ್ಲಿ ಆರಂಭವಾದ ಕ್ರೈಸ್ತ ಸಭಾ ಪತ್ರಿಕೆಗಳ ಸ್ಥಾಪನೆಗೆ ಸಹಾಯ ಮಾಡಿದನೆಂದೂ ಉಲ್ಲೇಖಗಳಿವೆ.

CANARESE NEWSPAPER.

ಕಂನಡಸಮಾಚಾರವು.

On the Cultivation of Cotton.

ಹತ್ತಿಯನ್ನು ಹುಟ್ಟಿಸುವದರ ವಿಷಯವಾಗಿ.

ಆ ಕಾಲದಲ್ಲಿ ಅಂದರೆ–ಸುಮಾರು ನೂರ ಮೂವತ್ತು ವರ್ಷಗಳ ಹಿಂದೆ–ಸಂಪರ್ಕ ಸಾಧನಗಳು ಏನೇನೂ ಇಲ್ಲದಿದ್ದಾಗ ಮ್ಯೂಕ್ಲಿಂಗ್ ತನ್ನ ಪತ್ರಿಕೆಗಳಲ್ಲಿ ಸ್ಥಳೀಯ ವಾರ್ತೆಗಳ ಜೊತೆಗೆ ದೇಶವಿದೇಶಗಳ ವಾರ್ತೆಯನ್ನೂ ಪ್ರಕಟಿಸುತ್ತಿದ್ದನೆಂಬುದು ಅವನ ವಾರ್ತಾಪ್ರಜ್ಞೆಗೆ ಸಾಕ್ಷಿಯಾಗಿದೆ. ಕಂನಡ ಸಮಾಚಾರವನ್ನು ಅವನು ಕ್ಯಾನರೀಸ್ ನ್ಯೂಸ್‌ಪೇಪರ್ ಎಂದು ಭಾಷಾಂತರಿಸಿದ್ದನೆಂಬುದನ್ನೂ ಗಮನಿಸಬೇಕು.

ಆಧುನಿಕ ಕನ್ನಡದಲ್ಲಿ ಗದ್ಯರಚನೆ ಮಾಡುವ ಕೃಷಿ ಆಗತಾನೆ ಆರಂಭವಾಗಿತ್ತಾದರೂ ಮ್ಯೂಕ್ಲಿಂಗ್ ಅದನ್ನು ಪತ್ರಿಕೋದ್ಯಮಕ್ಕೆ ಪಳಗಿಸಿಕೊಳ್ಳಲು ಪ್ರಯತ್ನಿಸಿ, ಬಹುಮಟ್ಟಿಗೆ ಜಯಶಾಲಿಯಾದನೆಂಬುದು ಮೆಚ್ಚತಕ್ಕ ಅಂಶ.

ಕನ್ನಡ ನಾಡು ಹಲವಾರು ಆಡಳಿತಗಳಿಗೆ ಹಂಚಿ ಹೋಗಿದ್ದು, ಆಡುಮಾತಿನಲ್ಲಿ ಪ್ರಾದೇಶಿಕ ಪ್ರಭೇದಗಳು ಬಲವಾಗಿದ್ದ ಆ ಕಾಲದಲ್ಲಿ ಮ್ಯೂಕ್ಲಿಂಗ್ ಆ ಅಡಚಣೆಗಳನ್ನು ದಾಟಿ, ಕನ್ನಡ ಜನತೆಯ ಮತ್ತು ಭಾಷೆಯ ಐಕ್ಯವನ್ನು ಗುರುತಿಸಿದನೆಂಬುದು ಕೂಡ ಮನನೀಯವಾದದ್ದು. (ಎಂ.ಎಸ್.ಸಿಐ.)

**ಕಂಪಕಾರಿ :** ಕಾಂಕ್ರೀಟನ್ನು ಪೆಟ್ಟಿಸಲು ಉಪಯೋಗಿಸುವ ಸಾಧನ (ವೈಬ್ರೇಟರ್). ಕಾಂಕ್ರೀಟಿನ ಮೆಲ್ಭಾಗದಲ್ಲಿ, ಒಳಭಾಗದಲ್ಲಿ ಮತ್ತು ಸುತ್ತಲೂ ಉಪಯೋಗಿಸಲು ಮೂರು ಬಗೆಯ ಕಂಪಕಾರಿ ಯಂತ್ರಗಳಿವೆ. ಕಾಂಕ್ರೀಟಿನಲ್ಲಿ ತಲೆದೋರುವ ಶೂನ್ಯ ಪ್ರದೇಶಗಳನ್ನು ನಿವಾರಿಸಿ ನೀರು ಜಿನುಗುವುದನ್ನು ತಪ್ಪಿಸುತ್ತವಾಗಿ ಇವನ್ನು ಉಪಯೋಗಿಸುವುದರಿಂದ ಕಾಂಕ್ರೀಟಿನ ಬಲ ಮತ್ತು ಘನಸಾಂದ್ರತೆ ಹೆಚ್ಚುತ್ತವೆ. ಚಿಕ್ಕಪುಟ್ಟ ಕೆಲಸಗಳಿಗೆ ಹೇಗೊ ಹಾಗೆ ದೊಡ್ಡ ಕೆಲಸಗಳಾದ ನೀರಾವರಿ ಕಟ್ಟಡದ ಮತ್ತು ಸೇತುವೆ ಕಟ್ಟಡಗಳಲ್ಲೂ ಇವನ್ನು ಬಳಸುತ್ತಾರೆ. ಆದರೆ ಈ ಯಂತ್ರಗಳ ಬೆಲೆ ಹೆಚ್ಚು ಇರುವುದರಿಂದ ಕಾಂಕ್ರೀಟಿಗೆ ಬೀಳುವ ವೆಚ್ಚ ಹೆಚ್ಚು.

ಕಾಂಕ್ರೀಟನ್ನು ಕಟ್ಟಡದ ಕೆಲಸಗಳಲ್ಲಿ ಸುರಿದು ಕೂಡಲೆ ಕಂಪಕಾರಿಯನ್ನು ಮಧ್ಯದಲ್ಲಿ ಇಟ್ಟಾಗ ಯಂತ್ರ ವೇಗವಾಗಿ ಸುತ್ತುವುದರಿಂದ ಕಾಂಕ್ರೀಟು ಅದರ ಸ್ಥಳದಲ್ಲಿ ಭದ್ರವಾಗಿ ಕೂರುತ್ತದೆ. ಕಾಂಕ್ರೀಟನ್ನು ರಸ್ತೆ ಕೆಲಸಗಳಲ್ಲಿ ಉಪಯೋಗಿಸಿದಾಗ ಕಂಪಕಾರಿಗಳು ಮೇಲ್ಭಾಗದಿಂದ ಕಾಂಕ್ರೀಟನ್ನು ಪೆಟ್ಟಿಸುತ್ತವೆ. ಪೆಟ್ಟಣೆಯ ವೇಗ ಮಿನಿಟಿಗೆ 2500–3500. (ಜಿ.ಟಿ.ಜಿ.)

**ಕಂಪಣ್ಣ :** ವಿಜಯನಗರ ಸಾಮ್ರಾಜ್ಯವನ್ನು ಸ್ಥಾಪಿಸಿದ ಐವರು ಸೋದರರಲ್ಲಿ ಎರಡನೆಯವ. ಉಳಿದ ನಾಲ್ವರು ಕ್ರಮವಾಗಿ ಹರಿಹರ, ಬುಕ್ಕ ಮಾರಪ್ಪ ಮತ್ತು ಮುದ್ದಪ್ಪ. ತಂದೆ ಒಂದನೆಯ ಸಂಗಮ. ತಾಯಿ ಶಾರದೆ. ಈತ ಕೊಡವಾಲೂರಿನ 1346-47ರ ಶಾಸನವೊಂದರ ಪ್ರಕಾರ ಪೂರ್ವ ಪಶ್ಚಿಮ ಸಮುದ್ರಾಧೀಶ್ವರನೆಂಬ ಬಿರುದು ಹೊತ್ತು, ಕಡಪ ಮತ್ತು ನೆಲ್ಲೂರು ಜಿಲ್ಲೆಗಳನ್ನೊಳಗೊಂಡ ತೆಲುಗು ಸೀಮೆಯಲ್ಲಿ ತನ್ನ ಅಣ್ಣ ಹರಿಹರನ ಸಮಕಾಲೀನನೂ ಮಾಂಡಲಿಕನೂ ಆಗಿ ಅಧಿಕಾರ ನಡೆಸುತ್ತಿದ್ದ. ರಾಜ್ಯವಿಸ್ತರಣೆಯ ಕಾರ್ಯದಲ್ಲಿ ಹರಿಹರನಿಗೆ ಇವನಿಂದ ಬಹಳ ಒತ್ತಾಸೆ ಸಿಕ್ಕಿತೆಂದು ಅನೇಕ ಆಧಾರಗಳಿಂದ ತಿಳಿದು ಬರುತ್ತದೆ. ಬಹಳ ಮಟ್ಟಿಗೆ ಈತ ಸ್ವತಂತ್ರನಾಗಿಯೇ ಆಳುತ್ತಿದ್ದಿರಬೇಕು. ಕಂಪಣ್ಣನ ಅನಂತರ ಇವನ ಮಗ ಸಂಗಮ ಆಳುತ್ತಿದ್ದನೆಂಬುದಾಗಿ ತಿಳಿಸುವ ಬಿಟ್ರಗುಂಟೆಯ ಶಾಸನದಿಂದ ಈ ಅಂಶ ವ್ಯಕ್ತಪಡುತ್ತದೆ. ಇಂದಿನ ನೆಲ್ಲೂರು ಅಥವಾ ವಿಕ್ರಮಸಿಂಹಪುರ ಈತನ ರಾಜಧಾನಿಯಾಗಿತ್ತು. ಸುಭದ್ರ ಕೋಟೆಯಿದ್ದ ಉದಯಗಿರಿ ಈ ರಾಜ್ಯಕ್ಕೆ ಸೇರಿದ್ದುದರಿಂದ ಉದಯಗಿರಿ ರಾಜ್ಯವೆಂಬ ಹೆಸರು ರೂಢಿಯಲ್ಲಿತ್ತು. ಬಹುಶಃ ಕೋಲಾರ ಜಿಲ್ಲೆಯ ಹಲವು ಭಾಗಗಳು ಈತನ ಆಡಳಿತಕ್ಕೆ ಸೇರಿದ್ದುವು. ಸಂಗಮ ಸೋದರರು ಹೊಯ್ಸಳ ಮುಮ್ಮಡಿ ಬಲ್ಲಾಳನ ಸೇವೆಯಲ್ಲಿದ್ದರು. ವಾರಂಗಲ್ ವರೆಗೂ ಹಬ್ಬಿದ್ದ ಮುಸ್ಲಿಮ್ ದಾಳಿಗಳನ್ನು ತಡೆದು ದಕ್ಷಿಣ ದೇಶವನ್ನು ರಕ್ಷಿಸಬೇಕೆಂಬ ಉದ್ದೇಶದಿಂದ ಕಂಪಣ್ಣನನ್ನು ಪೂರ್ವತೀರದ ಮಾಂಡಲಿಕನನ್ನಾಗಿ ಹೊಯ್ಸಳ ಬಲ್ಲಾಳ ನೇಮಿಸಿದ್ದನೆಂದು ತಿಳಿದುಬರುತ್ತದೆ. ವೀರ ಕಂಪಣ್ಣನ ಮಂತ್ರಿ ಸೋಮಪ್ಪ ಅಲ್ಲಿಯ ದೇವಾಲಯಕ್ಕೆ ಭೂಮಿಯನ್ನು ದತ್ತಿ ಬಿಟ್ಟಿದ್ದನೆಂಬುದು ಟೇಕಲ್ ಶಾಸನದಿಂದ (1343) ಗೊತ್ತಾಗುತ್ತದೆ. ಮಹಾಮಂಡಲೇಶ್ವರ, ಅರಿರಾಯ ವಿಭಾಡ ಮತ್ತು ಭಾಷೆಗೆ ತಪ್ಪುವ ರಾಯರ ಗಂಡನೆಂದು ಕಂಪಣ್ಣನನ್ನು ಆ ಶಾಸನ ಹೊಗಳುತ್ತದೆ. ಹರಿಹರ ಬುಕ್ಕರಿಗೂ ಇವೇ ಬಿರುದುಗಳಿದ್ದು ಅವರ ಸಮಾನಸ್ಕಂಧತೆಯನ್ನು ತೋರಿಸುತ್ತದೆ. 1346 ರಲ್ಲಿ ಈ ಐವರು ಸೋದರರೂ ಶೃಂಗೇರಿಗೆ ಭೇಟಿ ಕೊಟ್ಟು ಜಗದ್ಗುರು ಶ್ರೀ ವಿದ್ಯಾ ತೀರ್ಥರ ಅನುಗ್ರಹ ಪಡೆದರೆಂಬುದು ಅಲ್ಲಿಯ ಶಾಸನವೊಂದರಿಂದ ವ್ಯಕ್ತವಾಗುವ ವಿಚಾರ. 1346ರಲ್ಲಿ ಕಂಪಣ್ಣನ ಮುಖ್ಯಮಂತ್ರಿ ಮುದ್ರಾಚಿಡ್ಡಿ ಸಾಯಣ್ಣ ಒಡೆಯನೇ ಮಾಧವಾಚಾರ್ಯರ (ವಿದ್ಯಾರಣ್ಯ) ತಮ್ಮ ಸಾಯಣಾಚಾರ್ಯ. ಈತ ಇಮ್ಮಡಿ ಸಂಗಮನ ಅನಂತರ 1364–65ರಲ್ಲಿ ಬುಕ್ಕರಾಯನ ಪರವಾಗಿ ನೆಲ್ಲೂರು ಪ್ರಾಂತ್ಯಾಧಿಕಾರಿಯಾಗಿದ್ದಂತೆ ತಿಳಿದುಬರುತ್ತದೆ. ಸಾಯಣ್ಣನ ತಮ್ಮ ಭೋಗನಾಥ ಕಂಪಣ್ಣನ ನರ್ಮ ಸಚಿವನಾಗಿದ್ದ. ಕಂಪಣ್ಣ 1355ರಲ್ಲಿ ಮೃತನಾದ. (ಬಿ.ಕೆ.ಜಿ.)

**ಕಂಪನಿ :** ಹಲವರು ಸೇರಿ ರಚಿಸಿಕೊಂಡ, ತನ್ನ ಸದಸ್ಯರಿಗೆ ಇರುವವಕ್ಕಿಂತ ಪ್ರತ್ಯೇಕವಾದ ಸ್ವತ್ತನ್ನೂ ಅಧಿಕಾರಗಳನ್ನೂ ಹೊಣೆಗಳನ್ನೂ ಪಡೆದಿರುವ ವಿಧಿಯುಕ್ತ ಸಂಸ್ಥೆ. ಸೈನ್ಯದಲ್ಲಿ ಒಬ್ಬ ಕ್ಯಾಪ್ಟನ್ನನ ಅಥವಾ ಮೇಜರನ ಆಡಳಿತದಲ್ಲಿರುವ ದಳವನ್ನು ಕಂಪನಿ ಎಂದು ಕರೆಯುವರಾದರೂ ಸಾಮಾನ್ಯ ಪರಿಭಾಷೆಯಲ್ಲಿ ಈ ಶಬ್ದವನ್ನು ಮೇಲೆ ತಿಳಿಸಿದ ಅರ್ಥದಲ್ಲಿ ಬಳಸಲಾಗುತ್ತಿದೆ. ಆಧುನಿಕ ಕೈಗಾರಿಕೆ ಮತ್ತು ವಾಣಿಜ್ಯ ಸಂಸ್ಥೆಗಳು ಕಂಪನಿಗಳು. ಅಮೆರಿಕದಲ್ಲಿ ಇವಕ್ಕೆ ಕಾರ್ಪೊರೇಷನುಗಳೆಂದು ಹೆಸರು. ವಾಣಿಜ್ಯೇತರ ಉದ್ದೇಶಗಳಿಗಾಗಿ ಸ್ಥಾಪಿತವಾದ ಸಂಸ್ಥೆಗಳನ್ನು ಭಾರತದಲ್ಲೂ ಬ್ರಿಟನ್ನಿನಲ್ಲೂ ಕಾರ್ಪೊರೇಷನ್ ಎಂದು ಕರೆಯಲಾಗುತ್ತದೆ (ನೋಡಿ—ಕಾರ್ಪೊರೇಷನ್). ಆದರೆ ಈ ಎರಡು ಪದಗಳೂ ಸಮಾನಾರ್ಥಕಗಳೆಂಬಂತೆ ರೂಢಿಯಲ್ಲಿವೆ.

**ಇಂಗ್ಲೆಂಡಿನಲ್ಲಿ :** ಆಧುನಿಕ ವ್ಯವಹಾರ ಪ್ರಪಂಚದಲ್ಲಿ ಕಂಪನಿಯ ವ್ಯವಸ್ಥೆ ಬಹಳ ಮುಖ್ಯವಾದದ್ದು. ಇದು ಪಾಶ್ಚಾತ್ಯರಿಂದ ಭಾರತಕ್ಕೆ ಬಂದದ್ದು. ಬ್ರಿಟನಿನಲ್ಲಿ ಈ ಬಗೆಯ ಸಂಸ್ಥೆಗಳು ಅನೇಕ ಶತಮಾನಗಳಿಂದ ಬೆಳೆದುಬಂದಿವೆ. ವ್ಯಾಪಾರದ ಉದ್ದೇಶದಿಂದ ಭಾರತಕ್ಕೆ ಬಂದು, ಇಲ್ಲಿ ತನ್ನ ಆಡಳಿತವನ್ನು ಸ್ಥಾಪಿಸಿದ

ಈಸ್ಟ್ ಇಂಡಿಯ ಕಂಪನಿ (ನೋಡಿ) ಇಂಥ ಒಂದು ಹಳೆಯ ಸಂಸ್ಥೆ (1600). ಇಂಥ ಸಂಸ್ಥೆಗಳು ವ್ಯವಹಾರ ನಡೆಸುವ ಉದ್ದೇಶದಿಂದ ಆ ಕಾಲದಲ್ಲಿ ಬ್ರಿಟಿಷ್ ರಾಜರಿಂದ ವಿಶೇಷ ಸನ್ನದುಗಳನ್ನು ಪಡೆದಿದ್ದುವು. ಇವು ಯಾವ ಬಗೆಯ ವ್ಯಾಪಾರ ಬೇಕಾದರೂ ಮಾಡಬಹುದಿತ್ತು. ಈ ವಿಚಾರದಲ್ಲಿ ಇವಕ್ಕೆ ಯಾವ ಕಟ್ಟುಪಾಡೂ ಇರಲಿಲ್ಲ. ಇವುಗಳ ವ್ಯವಹಾರದಿಂದ ನಷ್ಟವೇನಾದರೂ ಸಂಭವಿಸಿದರೆ, ಇವುಗಳಿಂದ ಇತರರಿಗೆ ಸಲ್ಲಬೇಕಾದ ಸಾಲಗಳಿಗೆ ಸದಸ್ಯರು ಬಾಧ್ಯರಾಗುತ್ತಿರಲಿಲ್ಲ. ಈ ಕಾರಣದಿಂದ ಇಂಥ ಸಂಸ್ಥೆಗಳ ಮೇಲೆ ಆ ಕಾಲದಲ್ಲಿ ನಾನಾ ಬಗೆಯ ದೂರುಗಳು ಬರುತ್ತಿದ್ದುವು. ಇವುಗಳ ಸ್ವೇಚ್ಛೆಯ ವರ್ತನೆಯಿಂದ ಈ ಸಂಸ್ಥೆಗಳ ಸದಸ್ಯರ ಹಾಗೂ ಸಾಲಗಾರರ ಹಿತಗಳಿಗೆ ಧಕ್ಕೆ ಒದಗುತ್ತಿದೆಯೆಂದು ಅನೇಕರು ಆಕ್ಷೇಪಿಸುತ್ತಿದ್ದರು.

ಹದಿನೇಳು–ಹದಿನೆಂಟನೆಯ ಶತಮಾನಗಳಲ್ಲಿ ಸರ್ಕಾರದ ನೋಂದಣಿಯನ್ನು ಪಡೆಯದೆಯೇ ಅನೇಕ ಕಂಪನಿಗಳು ಇಂಗ್ಲೆಂಡಿನಲ್ಲಿ ಹುಟ್ಟಿಕೊಂಡುವು. ಇವುಗಳ ಬಂಡವಾಳಭಾಗಗಳನ್ನು—ಷೇರುಗಳನ್ನು—ಹೊಂದಿದ್ದ ಸದಸ್ಯರು ಈ ಷೇರುಗಳನ್ನು ಇತರರಿಗೆ ವರ್ಗಾಯಿಸಬಹುದಾಗಿತ್ತು. ಇಂಥ ಸಂಸ್ಥೆಗಳು ಶಾಸನಬದ್ಧವಾಗಿಲ್ಲದಿದ್ದುದರಿಂದ ಇವು ಜನರಲ್ಲಿ ಬಹಳ ಅಪ್ರಿಯವಾದುವು. ಇವುಗಳ ಮೇಲೆ ಸರ್ಕಾರದ ಹತೋಟಿ ಇರಲಿಲ್ಲವಾದುದರಿಂದ ಇವುಗಳಿಂದ ಅನೇಕರು ಮೋಸಹೋದರು. ಆದ್ದರಿಂದ ಇವನ್ನು ಹತೋಟಿಗೆ ಒಳಪಡಿಸಲು ಅನೇಕ ಕಾಯಿದೆಗಳು ಕ್ರಮೇಣ ಜಾರಿಗೆ ಬಂದುವು. ಕಂಪನಿಗಳು ಅನುಸರಿಸಬಹುದಾದಂಥ ಮಾದರಿ ನಿಬಂಧನೆಗಳು ರಚಿತವಾದುವು. ಪರಿಮಿತ ಹೊಣೆಗಾರಿಕೆ ತತ್ತ್ವವನ್ನು (ಲಿಮಿಟೆಡ್ ಲೈಯಬಿಲಿಟಿ ಪ್ರಿನ್ಸಿಪಲ್) ಒಳಗೊಂಡ ಕಂಪನಿಗಳು ಅಧಿಕ ಸಂಖ್ಯೆಯಲ್ಲಿ ಜನ್ಮತಾಳಿದುವು. ಇಂದು ದೊಡ್ಡ ಉದ್ಯಮಗಳಲ್ಲಿ ನಿರತವಾದ ಸಂಸ್ಥೆಗಳೆಲ್ಲ ಸಾಮಾನ್ಯವಾಗಿ ಕಂಪನಿಗಳೇ ಆಗಿವೆ.

**ಭಾರತದಲ್ಲಿ :** ಬ್ರಿಟನಿನಿಂದ ಭಾರತಕ್ಕೆ ಬಂದ ಕಂಪನಿ ವ್ಯವಸ್ಥೆ ಕಳೆದ ಸುಮಾರು ನೂರು ವರ್ಷಗಳಲ್ಲಿ ಈ ದೇಶದಲ್ಲೂ ತಕ್ಕ ಮಟ್ಟಿಗೆ ಬೆಳೆದಿದೆ. ಭಾರತದಲ್ಲಿ ಕಂಪನಿಗಳ ಕಾಯಿದೆ ಮೊಟ್ಟಮೊದಲು ಜಾರಿಗೆ ಬಂದದ್ದು ಕ್ರಿ. ಶ. 1850ರಲ್ಲಿ. ಕಂಪನಿಗಳ ಪರಿಮಿತ ಹೊಣೆಗಾರಿಕೆಯ ತತ್ತ್ವ ಅನುಷ್ಠಾನಕ್ಕೆ ಬಂದದ್ದು 1857ರಲ್ಲಿ. ಈ ಕಾಯಿದೆಯಲ್ಲಿ ಕಂಡುಬಂದ ನ್ಯೂನತೆಗಳನ್ನು ನಿವಾರಿಸುವ ಸಲುವಾಗಿ ಇದಕ್ಕೆ ಆಗಿಂದಾಗ್ಗೆ ಅನೇಕ ತಿದ್ದುಪಡಿಗಳಾದುವು. ಇವನ್ನೆಲ್ಲ ಕ್ರೋಡೀಕರಿಸಿ 1913ರಲ್ಲಿ ಒಂದು ಹೊಸ ಕಾಯಿದೆಯನ್ನು ಜಾರಿಗೆ ತರಲಾಯಿತು. ಹಳೆಯ ಕಾಯಿದೆಯನ್ನು ಸಂಪೂರ್ಣವಾಗಿ ಬದಲಾಯಿಸಿ ಹೊಸದಾಗಿ ರೂಪಿಸಲಾದ ಕಾಯಿದೆ ಬಂದದ್ದು 1956ರಲ್ಲಿ. ಅನಂತರವೂ ಹಲವು ಸಾರಿ, ಅಗತ್ಯ ಕಂಡಂತೆಲ್ಲ ಈ ಹೊಸ ಕಾಯಿದೆಗೂ ಸೂಕ್ತ ತಿದ್ದುಪಡಿಗಳಾಗಿವೆ.

**ಕಂಪನಿಯ ಲಕ್ಷಣಗಳು :** ಏಕವ್ಯಕ್ತಿ ಸಂಸ್ಥೆ (ನೋಡಿ) ಮತ್ತು ಪಾಲುದಾರಿಕೆ ಸಂಸ್ಥೆಗಳಿಗೂ (ನೋಡಿ) ಕಂಪನಿಗೂ ಬಹಳ ವ್ಯತ್ಯಾಸಗಳುಂಟು. ಆ ಎರಡು ಸಂಸ್ಥೆಗಳ ಹಲವು ನ್ಯೂನತೆಗಳನ್ನು ಇದು ನಿವಾರಿಸುತ್ತದೆ. ಏಕವ್ಯಕ್ತಿ ಸಂಸ್ಥೆಯ ಗಾತ್ರವೂ ವ್ಯವಹಾರವೂ ಬಹಳ ಪರಿಮಿತ. ಒಬ್ಬ ವ್ಯಕ್ತಿ ತರಬಹುದಾದ ಬಂಡವಾಳ, ಬುದ್ಧಿಶಕ್ತಿ ಮತ್ತು ಅನುಭವಗಳ ಪ್ರಮಾಣವನ್ನು ಅದು ಅವಲಂಬಿಸಿರುತ್ತದೆ. ಆದರೆ ಆತನ ಹೊಣೆಯೋ, ಅಪರಿಮಿತ. ಸಂಸ್ಥೆಯ ಗಾತ್ರ ಅತಿಯಾಗಿ ಬೆಳೆದಾಗ ಅದನ್ನು ಅವನೊಬ್ಬನೇ ನಿರ್ವಹಿಸಲಾರ. ಸಹಾಯಕ್ಕಾಗಿ ಆತ ನೇಮಿಸಿಕೊಳ್ಳಬಹುದಾದ ಜನ ಅವನ ನೌಕರರೇ ಹೊರತು ಸಹಭಾಗಿಗಳಲ್ಲ. ಒಬ್ಬನಿಗಿಂತ ಹೆಚ್ಚು ಮಂದಿ ಕೂಡಿ ಸ್ಥಾಪಿಸುವ ಪಾಲುದಾರಿಕೆ ಸಂಸ್ಥೆಯ ಬಂಡವಾಳ ಏಕವ್ಯಕ್ತಿ ಸಂಸ್ಥೆಯದಕ್ಕಿಂತ ಹೆಚ್ಚಾಗಿರುವುದು ಸಾಧ್ಯ. ಹೆಚ್ಚು ಜನರ ಬುದ್ಧಿಶಕ್ತಿ, ಅನುಭವ ಒದಗುವುದೂ ಸಾಧ್ಯ. ಆದರೆ ಆಧುನಿಕ ಕೈಗಾರಿಕೆ ವ್ಯವಸ್ಥೆಯಲ್ಲಿ ಅನಿವಾರ್ಯವಾದ ಬೃಹತ್ ಸಂಸ್ಥೆಗಳ ಸ್ಥಾಪನೆ ನಿರ್ವಹಣೆಗಳು ಪಾಲುದಾರಿಕೆ ಸಂಸ್ಥೆಗಳಿಂದಲೂ ಸಾಧ್ಯವಾಗದೆ ಹೋಗಬಹುದು. ಕೇವಲ ಕೆಲವೇ ಮಂದಿಯ ಬಂಡವಾಳ, ಸಾಮರ್ಥ್ಯ ಮತ್ತು ಅನುಭವಗಳ ಮಿತಿಯನ್ನೂ ಮೀರಿ ಸಂಸ್ಥೆ ಬೆಳೆದಾಗ ಈ ಗಾತ್ರಕ್ಕೆ ತಕ್ಕಂತೆ ಹೊಸ ಬಗೆಯ ಸಂಸ್ಥೆಯನ್ನೇ ಸ್ಥಾಪಿಸುವುದು ಅಗತ್ಯವಾಗುತ್ತದೆ. ಇಂಥ ಸಂಸ್ಥೆಯೇ ಕಂಪನಿ.

ಕಂಪನಿಯ ಲಕ್ಷಣಗಳನ್ನು ಸ್ಥೂಲವಾಗಿ ಹೀಗೆ ಹೇಳಬಹುದು : ಅದು ಸ್ವಪ್ರೇರಣೆಯಿಂದ ಬಂದ, ಹಲವರು ಕಲೆತ ಸಂಸ್ಥೆ. ಈ ಸಂಸ್ಥೆಗೂ ಒಂದು ಹೆಸರು ಇರುತ್ತದೆ. ಇದಕ್ಕೆ ಒಂದು ಮುದ್ರೆಯೂ ಉಂಟು. ಲಾಭ ಗಳಿಸುವುದಕ್ಕಾಗಿ ಯಾವುದಾದರೊಂದು ವ್ಯಾಪಾರ ಮಾಡುವುದೇ ಸಾಮಾನ್ಯವಾಗಿ ಇದರ ಉದ್ದೇಶ. ಇದರ ಬಂಡವಾಳ ಹಲವು ಷೇರುಗಳಾಗಿ ವಿಭಾಗವಾಗಿರುತ್ತದೆ. ಷೇರುಗಳನ್ನು ಹೊಂದಿರುವವರೇ ಕಂಪನಿಯ ಸದಸ್ಯರು. ಅವರು ತಮ್ಮ ಷೇರುಗಳನ್ನು ಇತರರಿಗೆ ವರ್ಗಾಯಿಸಬಹುದು. ಇವರ ಸದಸ್ಯರ ಹೊಣೆಗಾರಿಕೆ ಸೀಮಿತವಾದದ್ದು ; ಎಂದರೆ ಕಂಪನಿಯ ಸಾಲಿಗರರಿಗೆ ಸದಸ್ಯರು ವೈಯುಕ್ತಿಕವಾಗಿ ಬದ್ಧರಲ್ಲ. ಕಂಪನಿಯಲ್ಲಿ ಆ ಸದಸ್ಯರು ಎಷ್ಟು ಷೇರುಗಳನ್ನು ಹೊಂದಿರುತ್ತಾರೋ, ಆ ಷೇರುಗಳ ಸೂಚಿತ ಮೌಲ್ಯ ಅಥವಾ ಅಂಕಿತಮೌಲ್ಯಕ್ಕಿಂತ (ನಾಮಿನಲ್ ವ್ಯಾಲ್ಯೂ) ಹೆಚ್ಚು ನಷ್ಟಕ್ಕೆ ಬದ್ಧರಲ್ಲ. ಕಂಪನಿಯೆಂಬುದು ಒಂದು ವ್ಯಕ್ತಿಪ್ರಾಯವಾದ ಸಂಸ್ಥೆ. ಅದು ಕಾನೂನಿನ ಸೃಷ್ಟಿ. ಭೌತಿಕ ದೇಹ ಅದಕ್ಕಿಲ್ಲ. ಅದರ ಸದಸ್ಯರಿಂದ ಅದು ಸ್ಥಾಪಿಸಲ್ಪಟ್ಟದ್ದಾದರೂ ಆ ಸದಸ್ಯರಿಂದ ಭಿನ್ನವಾದ ಪ್ರತ್ಯೇಕವಾದ ವ್ಯಕ್ತಿತ್ವ ಅದಕ್ಕೆ ಉಂಟು. ಸದಸ್ಯರ ಸಾವು, ನಿರ್ಗಮನ, ಮನೋವೈಕಲ್ಯ, ದಿವಾಳಿತನ ಮುಂತಾದ ಘಟನೆಗಳಿಂದ ಸಂಸ್ಥೆಯ ಅಸ್ತಿತ್ವಕ್ಕೆ ಕುಂದು ಉಂಟಾಗುವುದಿಲ್ಲ. ಇಂಥ ಘಟನೆಗಳಿಂದ ಅಬಾಧಿತವಾಗಿ ಅದು ಮುಂದುವರಿಯಬಹುದಾದ ಸಂಸ್ಥೆ. ಕಂಪನಿಯ ಸದಸ್ಯರಿಗೂ ಕಂಪನಿಗೂ ವ್ಯತ್ಯಾಸ ಇರುವುದರಿಂದ ಅದರ ಸದಸ್ಯರು ಅದರ ಸಾಲಗಾರರೂ ಆಗಬಹುದು ; ಅದರೊಂದಿಗೆ ವ್ಯವಹಾರ ನಡೆಸಬಹುದು. ಅವರು ಇತರರೊಂದಿಗೆ ಮಾಡುವ ವ್ಯವಹಾರದಿಂದ ಕಂಪನಿಗೆ ಯಾವ ಬಗೆಯ ಬಾಧ್ಯತೆಯೂ ಇರುವುದಿಲ್ಲ. ಏಕವ್ಯಕ್ತಿ ಸಂಸ್ಥೆ ಹಾಗೂ ಪಾಲುದಾರಿಕೆ ಸಂಸ್ಥೆಗಳಿಗೂ ಕಂಪನಿಗಳಿಗೂ ಇರುವ ಮುಖ್ಯ ವ್ಯತ್ಯಾಸಗಳಲ್ಲಿ ಇದೂ ಒಂದು.

ಕಂಪನಿಗಳನ್ನು ಮೂರು ರೀತಿಯಾಗಿ ಸ್ಥಾಪಿಸಬಹುದು :

1 ದೊರೆಯಿಂದ ಸನ್ನದು ಪಡೆದು ಸ್ಥಾಪಿಸಿದ ಸಂಸ್ಥೆ (ಉದಾಹರಣೆ : ಈಸ್ಟ್ ಇಂಡಿಯ ಕಂಪನಿ). ಸನ್ನದಿನಲ್ಲಿ ಸೂಚಿಸಿರುವ ನಿಬಂಧನೆಗಳಿಗೆ ಅನುಗುಣವಾಗಿ ಇದು ನಿರ್ವಹಿಸಲ್ಪಡುತ್ತದೆ. ಭಾರತ ಸ್ವಾತಂತ್ರ್ಯ ಪಡೆಯುವುದಕ್ಕೆ ಮುಂಚೆ ಇಂಥ ಸಂಸ್ಥೆಗಳು ಸ್ಥಾಪಿತವಾಗುವ ಸಾಧ್ಯತೆಯಿತ್ತು.

2 ಸರ್ಕಾರದ ವಿಶೇಷ ಕಾಯಿದೆಯ ಮೂಲಕ ಸ್ಥಾಪಿತವಾದ ಸಂಸ್ಥೆ (ಉದಾಹರಣೆ : ರಿಸರ್ವ್ ಬ್ಯಾಂಕ್ ಆಫ್ ಇಂಡಿಯ). ಈ ಸಂಸ್ಥೆಯ ನಿರ್ವಹಣೆಗೆ ಇದಕ್ಕೆ ಸಂಬಂಧಿಸಿದ ಕಾಯಿದೆಯಲ್ಲಿರುವ ವಿಧಿಗಳೇ ಆಧಾರ.

3 ಭಾರತದ ಕಂಪನಿಗಳ ಶಾಸನದ ಪ್ರಕಾರವಾಗಿ ಕೂಡುಬಂಡವಾಳ ಕಂಪನಿಗಳ ರಿಜಿಸ್ಟ್ರಾರರಿಂದ (ವಿಲೇಖನಾಧಿಕಾರಿ ಅಥವಾ ನೋಂದಣಿ ಅಧಿಕಾರಿ) ಸಮ್ಮತಿ ಪಡೆದು ಸ್ಥಾಪಿತವಾದ ಕಂಪನಿಯೇ ರಿಜಿಸ್ಟರ್ಡ್ ಕಂಪನಿ ಅಥವಾ ನಿಬದ್ಧ ಸಂಸ್ಥೆ ಅಥವಾ ನೋಂದಣಿಯಾದ ಸಂಸ್ಥೆ. ಇಪ್ಪತ್ತಕ್ಕಿಂತ ಹೆಚ್ಚು ಸದಸ್ಯರಿರುವ ಎಲ್ಲ ಸಂಸ್ಥೆಗಳೂ ಕಂಪನಿಗಳ ಶಾಸನದ ಪ್ರಕಾರವೋ ಇನ್ನಾವುದಾದರೂ ತತ್ಸಮವಾದ ಶಾಸನದ ಪ್ರಕಾರವೋ ನಿಬದ್ಧವಾಗತಕ್ಕದ್ದೆಂಬುದು ಭಾರತ ಕಂಪನಿಗಳ ಕಾಯಿದೆಯ ಹನ್ನೊಂದನೆಯ ಕಲಮಿನ ವಿಧಿ (ಬ್ಯಾಂಕು ವ್ಯವಹಾರ ಮಾಡುವ ಸಂಸ್ಥೆಯಾಗಿದ್ದರೆ ಅದರಲ್ಲಿ ಹತ್ತಕ್ಕಿಂತ ಹೆಚ್ಚು ಸದಸ್ಯರು ಇದ್ದರೂ ಅದು ನೋಂದಣಿ ಮಾಡಿಸಿಕೊಳ್ಳಬೇಕು).

ನಿಬದ್ಧ ಅಥವಾ ನೋಂದಣಿಯಾದ ಕಂಪನಿಗಳಲ್ಲಿ ಎರಡು ವಿಧ : 1 ಪರಿಮಿತ ಹೊಣೆಗಾರಿಕೆಯುಳ್ಳವು; 2 ಅಪರಿಮಿತ ಹೊಣೆಗಾರಿಕೆಯುಳ್ಳವು. ಅಪರಿಮಿತ ಹೊಣೆಗಾರಿಕೆಯುಳ್ಳ ಕಂಪನಿಗಳ ಸದಸ್ಯರು ಕಂಪನಿಯ ಸಾಲಕ್ಕೆ ವೈಯುಕ್ತಿಕವಾಗಿ ಹೊಣೆಯಾಗಿರುತ್ತಾರೆ. ಇಂಥ ಕಂಪನಿಗಳು ಬಲು ವಿರಳ.

ಪರಿಮಿತ ಹೊಣೆಗಾರಿಕೆ ಕಂಪನಿಗಳಲ್ಲಿ ಎರಡು ವಿಧ. ಒಂದನೆಯದು ಖಾತರಿಯ ಪರಿಮಿತಿಯ ಕಂಪನಿ. ಸಂಸ್ಥೆಯ ಸದಸ್ಯರಲ್ಲಿ ಒಬ್ಬೊಬ್ಬರೂ ಅವರವರು ಒಪ್ಪಿದ ಒಂದು ಪರಮಾವಧಿ ಮೊತ್ತದ ವರೆಗೆ ಕಂಪನಿಯ ಋಣದ ಹೊಣೆ ಹೊರುವುದಾಗಿ ಖಾತರಿ ಕೊಡುತ್ತಾರೆ. ಇಂಥ ಸಂಸ್ಥೆ ಸಾಮಾನ್ಯವಾಗಿ ವ್ಯಾಪಾರದ ಉದ್ದೇಶದಿಂದ ಸ್ಥಾಪಿತವಾಗಿರುವುದಿಲ್ಲ. ಯಾವುದಾದರೊಂದು ವಿಶಿಷ್ಟ ಹಿತದ ರಕ್ಷಣೆಯೋ ಸಮಾಜ ಸೇವೆಯೋ ಲಾಭವೇ ಉದ್ದೇಶವಲ್ಲದ ಬೇರೆ ಯಾವುದಾದರೂ ಉದ್ಯಮವೋ ಇದರ ಗುರಿ. ಈ ಸಂಸ್ಥೆಗಳು ತಮ್ಮ ಹೆಸರಿನ ಕೊನೆಯಲ್ಲಿ ಕಂಪನಿ ಎಂಬ ಪದವನ್ನಾಗಲಿ, ಲಿಮಿಟೆಡ್ (ಪರಿಮಿತ) ಎಂಬ ಪದವನ್ನಾಗಲಿ ಹೊಂದಿರುವುದಿಲ್ಲ. ಇಂಥ ಕಂಪನಿಗಳು ಈಚೆಗೆ ವಿರಳವಾಗಿ ಸ್ಥಾಪಿತವಾಗುತ್ತಿವೆ.

ಪರಿಮಿತ ಹೊಣೆಗಾರಿಕೆಯ (ಲಿಮಿಟೆಡ್) ಸಂಸ್ಥೆ ಇನ್ನೊಂದು ವಿಧ. ಇದು ಸಾಮಾನ್ಯವಾಗಿ ವ್ಯಾಪಾರದ ಉದ್ದೇಶದಿಂದ ಸ್ಥಾಪಿತವಾಗುತ್ತದೆ. ಇದರ ಸದಸ್ಯರು ಇದರಲ್ಲಿ ಷೇರುಗಳನ್ನು ಹೊಂದಿರುತ್ತಾರೆ. ಈ ಷೇರುಗಳ ಅಂಕಿತಮೌಲ್ಯದ (ನಾಮಿನಲ್ ವ್ಯಾಲ್ಯು) ಅಥವಾ ಸೂಚಿತಮೌಲ್ಯದ ಹಣದ ವರೆಗೆ ಮಾತ್ರ ಸದಸ್ಯರು ಹೊಣೆ ಹೊರಬೇಕಾಗತಕ್ಕದ್ದು ಈ ಸಂಸ್ಥೆಯ ಮುಖ್ಯ ಲಕ್ಷಣ. ವ್ಯವಹಾರ ಪ್ರಪಂಚದಲ್ಲಿ ಇಂಥ ಸಂಸ್ಥೆಗಳೇ ಅಧಿಕ ಸಂಖ್ಯೆಯಲ್ಲಿವೆ.

ಪರಿಮಿತ ಹೊಣೆಗಾರಿಕೆಯ ಕಂಪನಿಗಳನ್ನು ಮತ್ತೆ ಎರಡು ರೀತಿಯಾಗಿ ವಿಂಗಡಿಸಬಹುದು : 1 ಸಾರ್ವಜನಿಕ (ಪಬ್ಲಿಕ್) ಕಂಪನಿ ಮತ್ತು 2 ಖಾಸಗಿ (ಪ್ರೈವೇಟ್) ಕಂಪನಿ. ಸಾರ್ವಜನಿಕ ಕಂಪನಿಯ ಲಕ್ಷಣಗಳು ಇವು : 1 ಕಂಪನಿಯ ವಿಧಿಗಳಿಗೆ ಅನುಸಾರವಾಗಿ ಸಾರ್ವಜನಿಕರು ಅದರ ಸದಸ್ಯರಾಗಿರಬಹುದು. 2 ಅದರಲ್ಲಿ ಕನಿಷ್ಠ ಪಕ್ಷ ಏಳು ಮಂದಿ ಸದಸ್ಯರಿರಬೇಕು; ಏಳಕ್ಕಿಂತ ಹೆಚ್ಚಾಗಿ

ಎಷ್ಟು ಮಂದಿ ಸದಸ್ಯರು ಬೇಕಾದರೂ ಇರಬಹುದು. 3 ಸಾರ್ವಜನಿಕರು ಅದರ ಷೇರುಗಳನ್ನು ಪಡೆಯಬಹುದೆಂದು ವಿವರಣಪತ್ರದ (ಪ್ರಾಸ್ಪೆಕ್ಟಸ್) ಮೂಲಕ ಅದು ಆಹ್ವಾನಿಸುತ್ತದೆ. 4 ಅದಕ್ಕೆ ಕನಿಷ್ಠಪಕ್ಷ ಮೂವರಾದರೂ ನಿರ್ವಾಹಕರು (ಡೈರೆಕ್ಟರುಗಳು) ಇರತಕ್ಕದ್ದು. 5 ಅದರ ಷೇರುಗಳನ್ನು ಸದಸ್ಯರು ಇತರರಿಗೆ ವರ್ಗಾಯಿಸಬಹುದು.

ಖಾಸಗಿ ಕಂಪನಿಯ ಲಕ್ಷಣಗಳು ಈ ರೀತಿ ಇವೆ: 1 ಇದರ ಸದಸ್ಯರ ಸಂಖ್ಯೆ ಎರಡಕ್ಕಿಂತ ಕಡಿಮೆಯಾಗಿಯೂ ಐವತ್ತಕ್ಕಿಂತ ಹೆಚ್ಚಾಗಿಯೂ (ಈ ಸಂಖ್ಯೆಯಲ್ಲಿ ಆ ಕಂಪನಿಯ ನೌಕರರ ಸಂಖ್ಯೆಯನ್ನು ಗಣನೆಗೆ ತೆಗೆದುಕೊಳ್ಳಬೇಕಾದುದಿಲ್ಲ)ಇರಬಾರದು. 2 ಇದರ ಷೇರುಗಳನ್ನು ವರ್ಗಾಯಿಸಲು ನಿರ್ಬಂಧಗಳಿರುತ್ತವೆ. 3 ಈ ಕಂಪನಿಯ ಷೇರು ಹಾಗೂ ಸಾಲಪತ್ರಕ್ಕೆ ಚಂದಾ ನೀಡಬೇಕೆಂದು ಸಾರ್ವಜನಿಕರನ್ನು ವಿವರಣ ಪತ್ರದ ಮೂಲಕ ಆಹ್ವಾನಿಸುವಂತಿಲ್ಲ. 4 ಇದು ಒಂದು ದೃಷ್ಟಿಯಲ್ಲಿ ಪಾಲುದಾರಿಕೆ ಸಂಸ್ಥೆಯಂತೆಯೇ ಇರುತ್ತದೆ. ಕ್ಲುಪ್ತವಾದ ಸಂಖ್ಯೆಯನ್ನೊಳಗೊಂಡು, ಸಾಮಾನ್ಯ ವಾಗಿ ಪರಸ್ಪರ ಪರಿಚಿತರೂ ಸಂಬಂಧಿಗಳೂ ಕೂಡಿ ಸ್ಥಾಪಿಸಿದ ಸಂಸ್ಥೆಯೇ ಖಾಸಗಿ ಕಂಪನಿ.

**ಕಂಪನಿಯ ಪ್ರವರ್ತನೆ (ಕಂಪನಿ ಪ್ರೊಮೋಷನ್) ಮತ್ತು ಪ್ರವರ್ತಕ (ಪ್ರೊಮೋಟರ್):** ಒಂದು ಕಂಪನಿಯನ್ನು ಸ್ಥಾಪಿಸುವುದು ಕಷ್ಟಸಾಧ್ಯವಾದ ಕೆಲಸ. ಆರಂಭಿಸಲಿರುವ ಉದ್ಯಮದ ಯಶಸ್ಸಿನಲ್ಲಿ ನಂಬಿಕೆಯಿಟ್ಟು ಆ ಕಂಪ ನಿಯ ಬಂಡವಾಳಕ್ಕೆ ಹಣ ಕೊಡಲು ಮುಂದೆಬರುವಂತೆ ಜನರನ್ನು ಆಕರ್ಷಿಸ ಬೇಕಾಗುತ್ತದೆ. ಲಾಭದಾಯಕವಾಗಬಹುದಾದಂಥ ಉದ್ಯಮವೊಂದನ್ನು ಕಂಡು ಹಿಡಿದು ಅದರ ಸಾಧ್ಯಾಸಾಧ್ಯತೆಗಳನ್ನು ಪರಿಶೀಲಿಸಿ, ಆ ಉದ್ಯಮಕ್ಕೆ ಅಗತ್ಯವಾದ ನಾನಾ ಅಂಶಗಳನ್ನು ಸಂಘಟಿಸಿ ವಿವರಗಳನ್ನಿತ್ತು, ಕಂಪನಿಯನ್ನು ಸ್ಥಾಪಿಸುವ ಕಾರ್ಯಕ್ಕೆ ಕಂಪನಿಯ ಪ್ರವರ್ತನೆ ಎಂದು ಹೆಸರು. ಈ ಕಾರ್ಯನಿರ್ವಹಣೆ ಮಾಡುವವನೇ ಕಂಪನಿಯ ಪ್ರವರ್ತಕ.

ಹೊಸ ಹೊಸ ಕಂಪನಿಗಳನ್ನು ಸ್ಥಾಪಿಸುವುದನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿ ಕೊಂಡಿರುವವರು ಅನೇಕರುಂಟು. ಕಂಪನಿಯ ಪ್ರವರ್ತನೆಯೇ ತಮ್ಮ ವೃತ್ತಿಯಾಗಿ ರದಿದ್ದರೂ ತಮ್ಮ ವ್ಯವಹಾರದ ಅಂಗವಾಗಿ ಆಗೊಮ್ಮೆ ಈಗೊಮ್ಮೆ ಕಂಪನಿಗಳನ್ನು ಸ್ಥಾಪಿಸಿ ಅವರಲ್ಲೇ ಆಸಕ್ತಿವಹಿಸಿ ಅದರ ಆಡಳಿತವನ್ನು ಮುಂದುವರಿಸಿಕೊಂಡು ಹೋಗುವವರೂ ಉಂಟು. ಒಂದು ಹೊಸ ಉತ್ಪಾದನೆಯ ವಿಧಾನವನ್ನು ಕಂಡು ಹಿಡಿದವನು ಆ ವಿಧಾನವನ್ನು ಅಳವಡಿಸಿ ಉದ್ಯಮವೊಂದನ್ನು ಪ್ರಾರಂಭಿಸುವ ಸಲುವಾಗಿ ಒಂದು ಕಂಪನಿಯನ್ನು ಪ್ರವರ್ತಿಸಬಹುದು.

ಕಂಪನಿಯ ಪ್ರವರ್ತಕರು ಬಿಡಿ ವ್ಯಕ್ತಿಗಳೇ ಆಗಿರಬೇಕೆಂಬ ನಿಯಮವೇನೂ ಇಲ್ಲ. ಒಬ್ಬರಿಗಿಂತ ಹೆಚ್ಚು ಜನ ಸೇರಿ ಇದಕ್ಕಾಗಿಯೇ ಒಂದು ಮಂಡಳಿಯನ್ನೋ ಪಾಲು ದಾರಿಕೆ ಸಂಸ್ಥೆಯನ್ನೋ ಕಂಪನಿಯನ್ನೋ ಸ್ಥಾಪಿಸಿಕೊಳ್ಳಬಹುದು. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಂಪನಿಯ ಪ್ರವರ್ತನೆಯೇ ಉದ್ಯೋಗವಾಗಿ ಉಳ್ಳವರು ಅನೇಕರಿದ್ದಾರೆ. ಕಂಪನಿಗಳನ್ನು ಪ್ರಾರಂಭಿಸುವುದಷ್ಟೇ ಅವರ ಕೆಲಸ. ಮುಂದೆ ಅದನ್ನು ನಡೆಸುವುದು ಅವರ ಹೊಣೆಯಲ್ಲ. ಅದನ್ನು ಬೇರೆಯವರು ನಿರ್ವಹಿಸುತ್ತಾರೆ. ಆದರೆ ಭಾರತ ದಲ್ಲಿ ಈ ಬಗೆಯ ಪ್ರತ್ಯೇಕ ವರ್ಗವಿಲ್ಲ. ಕಂಪನಿಯನ್ನು ಪ್ರಾರಂಭಿಸಿದವರೇ ಸಾಮಾನ್ಯವಾಗಿ ಅದನ್ನು ನಡೆಸುವ ಕರ್ತವ್ಯ ನಿರ್ವಹಿಸುತ್ತಾರೆ.

ಪ್ರವರ್ತಕರ ಜವಾಬ್ದಾರಿ ಗುರುತರವಾದದ್ದು. ಜನ್ಮ ತಾಳಲಿರುವ ಕಂಪನಿಗೆ ಸರಿಯಾದ ರೂಪು ನೀಡುವವರು ಅವರು. ಅದು ಸರಿಯಾದವರ ಉಸ್ತುವಾರಿಯಲ್ಲಿ ಸಮರ್ಪಕವಾಗಿ ನಡೆಯುವಂತೆ ಮಾಡುವ ಭಾರ ಅವರದು. ಅವರು ಜನಿಸಲಿರುವ ಕಂಪನಿಗೆ ದ್ರೋಹ ಬಗೆಯದೆ ಅದರ ಆರ್ಥಿಕ ಹಿತರಕ್ಷಣೆ ಮಾಡುವ ನಂಬಿಕೆಗೆ ಅರ್ಹ ರಾದವರಾಗಿರಬೇಕು. ಭಾವೀ ಕಂಪನಿಯ ಪ್ರತಿನಿಧಿಗಳೂ ಅವರೇ. ಕಂಪನಿಯ ಪ್ರವರ್ತನೆಯ ಸಂದರ್ಭದಲ್ಲಿ ಅವರು ರಹಸ್ಯವಾಗಿ ಯಾವ ಲಾಭ ಗಳಿಸುವುದಕ್ಕೂ ಯತ್ನಿಸಬಾರದು. ಕಂಪನಿಯ ಭವಿಷ್ಯವೇ ಪ್ರವರ್ತಕರ ಕೈಯ್ಯಲ್ಲಿದೆಯೆಂದರೆ ಉತ್ಪ್ರೇಕ್ಷೆಯಲ್ಲ.

ಕಂಪನಿಯ ಪ್ರವರ್ತನೆಯ ಕಾರ್ಯದಲ್ಲಿ ಸಾಮಾನ್ಯವಾಗಿ ನಾಲ್ಕು ಘಟ್ಟಗಳಿರು ತ್ತವೆ. ಮೊದಲನೆಯದಾಗಿ ಸ್ಥಾಪಿಸಬಹುದಾದ ಉದ್ಯಮದ ಕಲ್ಪನೆ. ಎರಡನೆ ಯದು ಅದರ ದೀರ್ಘ ಪರಿಶೀಲನೆ. ಮೂರನೆಯದು ಸಂಘಟನೆ ಅಥವಾ ಜೋಡಣೆ. ನಾಲ್ಕನೆಯದು ಹಣಶೇಖರಣೆ.

ಯಾವುದಾದರೂ ಒಂದು ಉದ್ಯಮದಿಂದ ಲಾಭ ಗಳಿಸಬಹುದೆಂಬ ಭಾವನೆ ಯಾರಿಗಾದರೂ ಹೊಳೆಯಬಹುದು. ಆದರೆ ಈ ಕಲ್ಪನೆಯ ಕೂಸಿಗೆ ವಾಸ್ತವಿಕತೆಯ ರಕ್ತಮಾಂಸ ತುಂಬುವುದು ಬಹಳ ಅಗತ್ಯ. ಉದಾಹರಣೆಗೆ, ಒಂದು ಪದಾರ್ಥವನ್ನು ತಯಾರಿಸುವ ಹೊಸ ವಿಧಾನವೊಂದನ್ನು ಯಾರಾದರೂ ಕಂಡುಹಿಡಿಯಬಹುದು. ಆ ವಿಧಾನವನ್ನು ಕಂಡುಹಿಡಿದವನಿಗೆ ಅದರ ವಿಚಾರದಲ್ಲಿ ಬಹಳ ಮಮತೆಯೂ ಉತ್ಸಾಹವೂ ಇರುವುದು ಸಹಜ. ಆದರೆ ಅದು ಎಷ್ಟರಮಟ್ಟಿಗೆ ಲಾಭಪ್ರದವಾಗಿ ಅನುಷ್ಠಾನಯೋಗ್ಯವೆಂಬುದನ್ನು ಪರಿಶೀಲಿಸುವುದು ಅತ್ಯಾವಶ್ಯಕ. ಹೊಸ ವಿಧಾನದ ರಚನಕಾರನಿಗೆ ಈ ದೃಷ್ಟಿಯಲ್ಲಿ ಸಾಕಷ್ಟು ಅನುಭವ ಇರುವುದು ಬಹಳ ಅಪರೂಪ. ವ್ಯವಹಾರಚಾತುರ್ಯವೂ ಅವನಿಗೆ ಇಲ್ಲದೆ ಇರಬಹುದು. ಆದ್ದರಿಂದ ಆತ ಈ ವಿಚಾರದಲ್ಲಿ ನಿಪುಣನಾದ ಪ್ರವರ್ತಕನಿಗೆ ತನ್ನ ಅಭಿಪ್ರಾಯವನ್ನು ವಿವರಿಸಬೇಕಾ ಗುತ್ತದೆ. ಪ್ರವರ್ತಕ ಅದನ್ನು ಸ್ಥೂಲವಾಗಿ ಪರಿಶೀಲಿಸುತ್ತಾನೆ. ಅದನ್ನು ಕಾರ್ಯಗತ ಗೊಳಿಸಿದರೆ ಅದು ಲಾಭದಾಯಕವಾದೀತೆಂದು ಕಂಡುಬಂದರೆ ಆಗ ಅವನು ಅದನ್ನು ದೀರ್ಘವಾದ ಪರಿಶೀಲನೆಗೆ ಒಳಪಡಿಸುತ್ತಾನೆ. ಇದಕ್ಕೆ ಅಗತ್ಯವಾದ ಬಂಡವಾಳ ವೆಷ್ಟು, ಇದರಿಂದ ಬರಬಹುದಾದ ಲಾಭವೆಷ್ಟು ಎಂಬ ವಿಚಾರವಾಗಿ ಪರಿಣತರಿಂದ ದೀರ್ಘವರದಿಯನ್ನು ಪಡೆಯುತ್ತಾನೆ. ಉತ್ಪಾದನೆಗೆ ಸಂಬಂಧಿಸಿದ ಸಮಸ್ಯೆಗಳು ಯಾವುವು, ಮಾರಾಟದ ಸಾಧ್ಯಾಸಾಧ್ಯತೆಗಳೆಷ್ಟು, ಕಾರ್ಖಾನೆಯನ್ನು ಯಾವ ಸ್ಥಳ ದಲ್ಲಿ ಸ್ಥಾಪಿಸಿದರೆ ಅದರಿಂದ ಪರಮಾವಧಿಯ ಪ್ರಯೋಜನ ಪಡೆಯಬಹುದು, ಉತ್ಪಾದನೆಗೆ ಅಗತ್ಯವಾದ ಕಚ್ಚಾ ಸಾಮಗ್ರಿ, ಕಾರ್ಮಿಕರ ಪಡೆ, ವಾತಾವರಣ ಮುಂತಾದ ಸೌಕರ್ಯಗಳು ಎಷ್ಟರಮಟ್ಟಿಗೆ ಉಂಟು—ಎಂಬುದನ್ನೆಲ್ಲ ಆಯಾ ವಿಚಾ ರಗಳಿಗೆ ಸಂಬಂಧಪಟ್ಟ ತಜ್ಞರೊಂದಿಗೆ ಸಮಾಲೋಚಿಸಿ ಅವರ ಸಲಹೆ ಪಡೆಯು ತ್ತಾನೆ.

ಈ ದೀರ್ಘ ಪರಿಶೀಲನೆಯ ಅನಂತರ ಮೂರನೆಯ ಘಟ್ಟ ಪ್ರಾರಂಭವಾಗುತ್ತದೆ. ಕಂಪನಿಯನ್ನು ಸ್ಥಾಪಿಸಬಹುದೆಂದು ಅವನಿಗೆ ಮನವರಿಕೆಯಾದ ಮೇಲೆ ಆತ ಅದಕ್ಕೆ ಬೇಕಾದ ಬಂಡವಾಳ ಸಂಗ್ರಹಣೆಯ ಯತ್ನದಲ್ಲಿ ತೊಡಗುತ್ತಾನೆ. ಕಂಪನಿ ಯಲ್ಲಿ ಅನುಸರಿಸಲಿರುವ ಹೊಸ ಉತ್ಪಾದನೆಯ ವಿಧಾನವನ್ನು ಇತರರು ಯಾರೂ ಅನುಕರಿಸದಂತೆ ಅದಕ್ಕೆ ಕಾನೂನಿನ ರಕ್ಷಣೆ ದೊರಕಿಸಿಕೊಳ್ಳುತ್ತಾನೆ. ಆ ಉದ್ಯಮಕ್ಕೆ ಬೇಕಾದ ನಿವೇಶನವೇ ಮುಂತಾದ ಆಸ್ತಿಗಳನ್ನು ಪಡೆಯಲು ಕ್ರಮ ಕೈಗೊಳ್ಳ ಬೇಕಾಗುತ್ತದೆ. ಕಂಪನಿಯ ಮುಖ್ಯ ನಿರ್ವಾಹಕರ ಹುದ್ದೆಗಳಿಗೆ ಯಾರನ್ನು ನೇಮಕ ಮಾಡಿಕೊಳ್ಳಬೇಕೆಂಬ ವಿಚಾರವಾಗಿ ತೀರ್ಮಾನ ಮಾಡುವುದು ಅವಶ್ಯ.

ಹೀಗೆ ಕಂಪನಿಯ ಸ್ಥಾಪನೆಗೆ ಅಗತ್ಯವಾದ ಅಂಶಗಳನ್ನೆಲ್ಲ ಜೋಡಿಸಿಕೊಂಡ ಮೇಲೆ ಪ್ರವರ್ತನೆಯ ಮುಂದಿನ ಘಟ್ಟದಲ್ಲಿ ತೊಡಗಬೇಕಾಗುತ್ತದೆ. ಸ್ಥಾಪಿಸಲಿರುವ ಕಂಪನಿಗೆ ಸಂಬಂಧಿಸಿದ ಎಲ್ಲ ವಿವರಗಳನ್ನೊಳಗೊಂಡ ಒಂದು ವರದಿಯನ್ನು ಸಿದ್ಧ ಪಡಿಸಬೇಕು. ಸಾರ್ವಜನಿಕರಿಗೂ ಕಂಪನಿಯ ಷೇರುಗಳನ್ನು ಸಾರ್ವಜನಿಕರಿಗೆ ಮಾರುವ ಹೊಣೆ ಹೊರುವವರಿಗೂ ಇದನ್ನು ನೀಡಲಾಗುತ್ತದೆ.

ಕಂಪನಿಯನ್ನು ಸ್ಥಾಪಿಸುವ ಕಾರ್ಯದಲ್ಲಿ ಆತ ಇನ್ನು ಕೆಲವರೊಂದಿಗೆ ಸೇರ ಬೇಕಾಗುತ್ತದೆ. ಇವರೆಲ್ಲರೂ ಪ್ರವರ್ತಕರೇ. ಇವರೆಲ್ಲ ಸೇರಿ ತಮ್ಮ ರಾಜ್ಯದಲ್ಲಿರುವ ಕೂಡುಬಂಡವಾಳ ಕಂಪನಿಗಳ ರಿಜಿಸ್ಟ್ರಾರರಿಗೆ ಅರ್ಜಿ ಹಾಕಿಕೊಳ್ಳಬೇಕು. ಇವರು ತಮ್ಮ ಕಂಪನಿಯ ಸ್ವರೂಪ ಹಾಗೂ ಆಡಳಿತಗಳನ್ನು ವಿವರಿಸಿರುವ ಎರಡು ದಸ್ತೈವಜುಗಳನ್ನು ತಯಾರಿಸಿ ರಿಜಿಸ್ಟ್ರಾರರಿಗೆ ಸಲ್ಲಿಸಬೇಕಾಗುತ್ತದೆ. ಸಂಘದ ಷರತ್ತುಗಳ ಲಿಖಿತ (ಮೆಮೊರಾಂಡಂ ಆಫ್ ಅಸೋಸಿಯೇಷನ್) ಎಂಬುದು ಮೊದಲನೆಯದು. ಸಂಘದ ವಿಧಿಗಳು (ಆರ್ಟಿಕಲ್ಸ್ ಆಫ್ ಅಸೋಸಿಯೇಷನ್) ಎರಡನೆಯದು.

**ಸಂಘದ ಷರತ್ತುಗಳ ಲಿಖಿತ:** ಇದು ಬಹಳ ಮುಖ್ಯವಾದ ದಸ್ತೈವಜು. ಇದೇ ಕಂಪನಿಯ ಪ್ರಣಾಳಿಕೆ. ಕಂಪನಿಯ ಸ್ಥಾಪನೆಗೆ ಮುಖ್ಯವಾದ ಅಂಶಗಳನ್ನೆಲ್ಲ ಇದು ಒಳಗೊಂಡಿರುತ್ತದೆ. ಕಂಪನಿಯ ಹೆಸರು, ಅದರ ಅಧಿಕೃತ ಕಚೇರಿ ಇರುವ ರಾಜ್ಯದ ಹೆಸರು, ಅದರ ಉದ್ದೇಶ—ಇವನ್ನು ಮುಖ್ಯವಾಗಿ ಇಲ್ಲಿ ನಮೂದಿಸ ಬೇಕಾಗುತ್ತದೆ.

ಕಂಪನಿಗೆ ಯಾವ ಹೆಸರನ್ನು ಬೇಕಾದರೂ ಇಡಬಹುದು. ಆದರೆ ಆಗಲೇ ಇರತಕ್ಕ ಯಾವ ಕಂಪನಿಯ ಹೆಸರನ್ನೂ ಮತ್ತೆ ಇಡಲಾಗದು. ಅದನ್ನು ಹೋಲು ವಂಥ ಹೆಸರನ್ನಿಡಲೂ ಅವಕಾಶವಿಲ್ಲ. ಹೆಸರಿನ ಕೊನೆಯಲ್ಲಿ ಲಿಮಿಟೆಡ್ ಎಂಬ ಪದ ಇರತಕ್ಕದ್ದು. ಅದು ಖಾಸಗಿ ಕಂಪನಿಯಾದ ಪಕ್ಷದಲ್ಲಿ ಪ್ರೈವೇಟ್ ಲಿಮಿಟೆಡ್ ಎಂಬುದಾಗಿ ಸೇರಿಸತಕ್ಕದ್ದು.

ಕಂಪನಿಯ ಉದ್ದೇಶ ಬಹಳ ಮುಖ್ಯ. ಅದರ ಅಧಿಕಾರವ್ಯಾಪ್ತಿಗೆ ಉದ್ದೇಶವೇ ಆಧಾರ. ಇದನ್ನು ವಿವರಿಸುವಾಗ ಬಹಳ ಎಚ್ಚರಿಕೆ ಇರಬೇಕು. ಕಂಪನಿಯ ಉದ್ದೇಶ ಸ್ಪಷ್ಟವಾಗಿರಬೇಕು; ಖಚಿತವಾಗಿರಬೇಕು. ಮುಂದೆ ಕಂಪನಿಯ ಮೂಲಭೂತವಾದ ಚಟುವಟಿಕೆಗಳು ಬೆಳೆಯಲು ಸಾಕಷ್ಟು ಅವಕಾಶ ವಿರುವಂತೆ ಅದರ ಉದ್ದೇಶಗಳ ವಿವರಣೆ ಇರಬೇಕು. ಆದರೆ ಅದು ತೀರ ವ್ಯಾಪಕ ವಾಗಬಾರದು.

ಷೇರುದಾರರು ಷೇರುಗಳ ಮೇಲೆ ಇನ್ನೂ ಕೊಟ್ಟಿಲ್ಲದ ಹಣವಷ್ಟಕ್ಕೆ ಅವರ ಹೊಣೆಗಾರಿಕೆ ಸೀಮಿತವಾಗಿದೆಯೆಂಬ ಹೇಳಿಕೆಯನ್ನು ಸಂಘದ ಷರತ್ತುಗಳಲ್ಲಿ ಸೇರಿಸಬೇಕು.

ಇದರ ಇನ್ನೊಂದು ಮುಖ್ಯ ವಿಭಾಗವೆಂದರೆ ಬಂಡವಾಳವನ್ನು ಕುರಿತ ವಿಚಾರದ್ದು. ಕಂಪನಿ ಪಡೆಯಬಯಸುವ ಅಧಿಕೃತಬಂಡವಾಳದ ಮೊಬಲಗನ್ನೂ ಷೇರುಗಳಾಗಿ ಅದರ ವಿಂಗಡಣೆಯನ್ನೂ ಅದರಲ್ಲಿ ಸೂಚಿಸಬೇಕು.

ಸಂಘದ ಷರತ್ತುಗಳ ಲಿಖಿತದಲ್ಲಿ ಕಂಪನಿಯ ಪ್ರವರ್ತಕರ ಹೆಸರುಗಳೂ ಅವರ ವಿಳಾಸಗಳೂ ಅವರು ಕಂಪನಿಯಿಂದ ಪಡೆಯುವ ಷೇರುಗಳ ಸಂಖ್ಯೆಗಳೂ ಅವರ ಸಹಿಗಳೂ ಇರಬೇಕು. ಇವರೇ ಕಂಪನಿಯ ಪ್ರಥಮ ನಿರ್ವಾಹಕರಾಗುತ್ತಾರೆ.

**ಸಂಘದ ವಿಧಿಗಳು :** ಕಂಪನಿಯ ಆಂತರಿಕ ರಚನೆಯ ಸ್ವರೂಪವೂ ಕಂಪನಿಯ ನಿರ್ವಹಣೆಯಲ್ಲಿ ಅನುಸರಿಸಬೇಕಾದ ನಿಬಂಧನೆಗಳೂ ಇಲ್ಲಿ ಉಲ್ಲೇಖಿತವಾಗಿರುತ್ತವೆ. ಕಂಪನಿಯ ನಿರ್ವಾಹಕರ ಅಧಿಕಾರ, ಕಂಪನಿಯ ಸಭೆಗಳನ್ನು ನಡೆಸುವ ವಿಧಾನ, ಮತನೀಡಿಕೆ, ಸಭೆಯನ್ನು ನಡೆಸಲು ಹಾಜರಿರಬೇಕಾದ ಸದಸ್ಯರ ಕನಿಷ್ಠಸಂಖ್ಯೆ, ಷೇರುಗಳ ವರ್ಗಾವಣೆ ಹಾಗೂ ರದ್ದುಮಾಡುವ ವಿಧಾನಗಳು, ಕಂಪನಿಯ ಲೆಕ್ಕ ಇಡುವ ರೀತಿ—ಮುಂತಾದವುಗಳಿಗೆ ಸಂಬಂಧಿಸಿದ ನಿಬಂಧನೆಗಳು ಇಲ್ಲಿರುತ್ತವೆ.

ಸಂಘದ ವಿಧಿಗಳನ್ನು ಪ್ರತ್ಯೇಕವಾಗಿ ತಯಾರಿಸದೆ ಇದ್ದರೆ ಭಾರತೀಯ ಕಂಪನಿಗಳ ಶಾಸನದ ಎ ತಃಖ್ತೆಯಲ್ಲಿರುವ (ಟೇಬಲ್ ಎ) ಮಾದರಿ ವಿಧಿಗಳನ್ನೇ ಅನುಸರಿಸಬಹುದು.

ಸಂಘದ ಷರತ್ತುಗಳನ್ನೂ ವಿಧಿಗಳನ್ನೂ ಅಚ್ಚು ಮಾಡಿಸಬೇಕು. ಇವುಗಳಲ್ಲಿ ಸೂಚಿತವಾಗಿರುವ ನಿಯಮಗಳಿಗೆ ಕಂಪನಿ ಬದ್ಧವಾಗಿರುತ್ತದೆ; ಸದಸ್ಯರೂ ಬದ್ಧರಾಗಿರುತ್ತಾರೆ. ಇವು ಸಾರ್ವಜನಿಕ ದಾಖಲೆಗಳು. ಕಂಪನಿಯೊಂದಿಗೆ ವ್ಯವಹಾರ ಮಾಡಬಯಸುವ ಯಾರಾದರೂ ಇವನ್ನು ಪರಿಶೀಲಿಸಬಹುದು.

ಪ್ರವರ್ತಕರು ಇವುಗಳ ಜೊತೆಗೆ ಕಂಪನಿಯ ನಿರ್ವಾಹಕರ (ಡೈರಕ್ಟರುಗಳ) ಪಟ್ಟಿಯನ್ನೂ ಅವರು ನಿರ್ವಾಹಕರಾಗಿರಲು ನೀಡಿರುವ ಲಿಖಿತ ಒಪ್ಪಿಗೆಯನ್ನೂ ಕಂಪನಿಯ ಬಂಡವಾಳದ ಸೂಚಿತ ಮೌಲ್ಯದ ಪಟ್ಟಿಯನ್ನೂ ಕಂಪನಿಯನ್ನು ನಡೆಸಲು ಒಪ್ಪಿರುವ ಮ್ಯಾನೇಜಿಂಗ್ ಏಜೆಂಟರು ಅಥವಾ ಕಾರ್ಯದರ್ಶಿಗಳು ಅಥವಾ ಕೋಶಾಧಿಕಾರಿಗಳೊಂದಿಗೆ ಮಾಡಿಕೊಂಡಿರಬಹುದಾದ ಕರಾರನ್ನೂ ಜಾಯಿಂಟ್–ಸ್ಟಾಕ್ ಕಂಪನಿಗಳ ರಿಜಿಸ್ಟ್ರಾರರಿಗೆ ಸಲ್ಲಿಸಬೇಕು. ಕಂಪನಿಗಳ ಶಾಸನದ ವಿಧಿಗಳಿಗೂ ಅದಕ್ಕೊಳಪಟ್ಟ ನಿಬಂಧನೆಗಳಿಗೂ ಅನುಗುಣವಾಗಿ ಎಲ್ಲ ಕ್ರಮಗಳನ್ನೂ ಕೈಗೊಂಡಿದೆಯೆಂದು ಕಂಪನಿಯ ನಿರ್ವಾಹಕರ ಪೈಕಿ ಒಬ್ಬನೋ ತತ್ಸಮನಾದ ಬೇರಾವ ಅಧಿಕಾರಿಯೋ ಒಂದು ಹೇಳಿಕೆಯನ್ನು ಕೊಡಬೇಕು.

ಕಂಪನಿಯ ಪ್ರವರ್ತನೆಗೆ ಸಂಬಂಧಿಸಿದ ಎಲ್ಲ ಕ್ರಮಗಳನ್ನೂ ಅನುಸರಿಸಿದೆಯೆಂಬುದನ್ನು ಮನವರಿಕೆ ಮಾಡಿಕೊಂಡ ಮೇಲೆ ಕಂಪನಿಗಳ ರಿಜಿಸ್ಟ್ರಾರರು ಈ ಕಂಪನಿಯ ಹೆಸರನ್ನು ತಮ್ಮ ರಿಜಿಸ್ಟರಿನಲ್ಲಿ ದಾಖಲು ಮಾಡಿಕೊಳ್ಳುವರು. ಕಂಪನಿಯ ದಾಖಲುಪತ್ರವನ್ನು ಅಥವಾ ನೋಂದಣಿ ಪತ್ರವನ್ನು ಅಥವಾ ಜನ್ಮಪತ್ರವನ್ನು (ಸರ್ಟಿಫಿಕೇಟ್ ಆಫ್ ಇನ್‌ಕಾರ್ಪೊರೇಷನ್) ನೀಡುವರು. ಕಂಪನಿ ಜನ್ಮ ತಳೆಯುತ್ತದೆ. ಅದು ಖಾಸಗಿ ಕಂಪನಿಯಾಗಿದ್ದ ಪಕ್ಷದಲ್ಲಿ ಕೂಡಲೇ ನೇರವಾಗಿ ಉದ್ಯಮವನ್ನಾರಂಭಿಸಬಹುದು. ಅದು ಸಾರ್ವಜನಿಕ ಕಂಪನಿಯಾಗಿದ್ದರೆ ಅದಕ್ಕೆ ಆಗಲೇ ಉದ್ಯಮವನ್ನಾರಂಭಿಸುವ ಹಕ್ಕು ಬರುವುದಿಲ್ಲ. ಅದಕ್ಕೆ ಮುಂಚೆ ಪ್ರವರ್ತಕರು ಇನ್ನು ಕೆಲವು ಕ್ರಮಗಳನ್ನು ಕೈಗೊಳ್ಳಬೇಕಾಗುತ್ತದೆ.

**ವಿವರಣಪತ್ರ :** ಪ್ರತಿಯೊಂದು ಸಾರ್ವಜನಿಕ ಕಂಪನಿಯೂ ಸಾರ್ವಜನಿಕರನ್ನು ಆ ಕಂಪನಿಯ ಬಂಡವಾಳ ಭಾಗಗಳಿಗೆ—ಎಂದರೆ ಷೇರುಗಳಿಗೆ—ಚಂದಾ ಸಲ್ಲಿಸಲು ಆಹ್ವಾನಿಸಬೇಕಾಗುತ್ತದೆ ; ಕಂಪನಿಯ ಜನ್ಮವಾರ್ತೆಯನ್ನು ಪ್ರಚುರಪಡಿಸಬೇಕಾಗುತ್ತದೆ. ಇದಕ್ಕಾಗಿ ಅದು ಇನ್ನೊಂದು ದಾಖಲೆಯನ್ನು ರಚಿಸಿ ಅದನ್ನು ಸಾರ್ವಜನಿಕರಿಗೆ ನೀಡಬೇಕು. ಇದೇ ವಿವರಣಪತ್ರ. ಕಂಪನಿಯ ಭವಿಷ್ಯವನ್ನೂ ಅದರ ಷೇರುಗಳನ್ನು ಪಡೆಯುವುದರಿಂದ ಲಭಿಸುವ ಉಪಯೋಗಗಳನ್ನೂ ಅದರಲ್ಲಿ ವಿವರಿಸಲಾಗುತ್ತದೆ. ಸಂಘದ ಷರತ್ತುಗಳ ಲಿಖಿತದಲ್ಲಿರುವ ಅಂಶಗಳನ್ನೇ ಅಲ್ಲದೆ, ಸಾರ್ವಜನಿಕರು ಈ ಕಂಪನಿಯ ಷೇರುಗಳನ್ನು ಕೊಳ್ಳಬೇಕೆಂಬ ತೀರ್ಮಾನಕ್ಕೆ ಬರಲು ಅಗತ್ಯವಾದ ಎಲ್ಲ ವಿವರಗಳನ್ನೂ ಇದರಲ್ಲಿ ಕೊಟ್ಟಿರುತ್ತದೆ. ವಿವರಣಪತ್ರದಲ್ಲಿರುವ ಅಂಶಗಳು ಖಚಿತವಾಗಿರಬೇಕು. ಸತ್ಯವಾಗಿರಬೇಕು ; ಅದರಲ್ಲಿ ಉತ್ಪ್ರೇಕ್ಷೆಯಿರಬಾರದು. ಸಾರ್ವಜನಿಕರು ತೀರ್ಮಾನಕ್ಕೆ ಬರಲು ಅಗತ್ಯವಾದ ಯಾವ ವಿಷಯವನ್ನೂ ಮುಚ್ಚಿಡಬಾರದು. ಭಾವೀ ಷೇರುದಾರರ ಮನಸ್ಸಿನಲ್ಲಿ ತಪ್ಪು ಕಲ್ಪನೆಗೆ ಎಡೆ ಕೊಡಬಹುದಾದ ರೀತಿಯಲ್ಲಿ ಅದು ಇರಬಾರದು. ಹಾಗೇನಾದರೂ ಆದ ಪಕ್ಷದಲ್ಲಿ ಸಂಬಂಧಪಟ್ಟವರು ಮುಂದೆ ಕಂಪನಿಯ ಮೇಲೆ ಕಟ್ಟಳೆ ನಡೆಸಬಹುದು. ಷೇರುಧನಕ್ಕಾಗಿ ಅವರು ಕೊಟ್ಟ ಹಣವನ್ನು ವಾಪಸ್ಸು ಕೊಡಬೇಕೆಂದು ಕೇಳಬಹುದು. ಆದ್ದರಿಂದ ಕಂಪನಿಯ ವಿವರಣಪತ್ರವನ್ನು ಬಹಳ ಎಚ್ಚರಿಕೆಯಿಂದ ರಚಿಸಬೇಕು. ಕಂಪನಿಯ ನಿರ್ವಾಹಕರು, ವ್ಯವಸ್ಥಾಪಕ ನಿರ್ವಾಹಕರು, ಕಂಪನಿ ನೀಡಲಿರುವ ವಿವಿಧ ಬಗೆಯ ಷೇರುಗಳು, ಈ ಷೇರುಗಳನ್ನು ಕೊಳ್ಳುವ ಭರವಸೆ ಕೊಟ್ಟಿರುವವರ (ಅಂಡರ್‌ರೈಟರ್ಸ್) ಹೆಸರುಗಳೇ ಮುಂತಾದ ವಿವರಗಳು, ಷೇರು ಕೊಳ್ಳಲು ಬಯಸಿ ಅರ್ಜಿ ಸಲ್ಲಿಸಿದವರಿಗೆ ಷೇರು ಹಂಚುವುದಕ್ಕೆ (ಅಲಾಟ್) ಪೂರ್ವಭಾವಿಯಾಗಿ ಕಂಪನಿಗೆ ಬಂದಿರಲೇಬೇಕಾದ ಕನಿಷ್ಠಚಂದಾಹಣ (ಮಿನಿಮಮ್ ಸಬ್‌ಸ್ಕ್ರಿಪ್ಷನ್), ಕಂಪನಿ ಕೊಂಡ ಸ್ವತ್ತನ್ನು ಅದಕ್ಕೆ ಮಾರಿದವರ ಹೆಸರುಗಳು, ಆ ಸ್ವತ್ತಿನ ಬೆಲೆಯನ್ನು ಅವರಿಗೆ ಕೊಡುವ ವಿಧಾನ, ಕಂಪನಿಯ ಸ್ಥಾಪನೆಯ ಸಂದರ್ಭದಲ್ಲಿ ಅಗತ್ಯವಾದ ಪೂರ್ವಭಾವಿ ಖರ್ಚುಗಳು (ಪ್ರಿಲಿಮಿನರಿ ಎಕ್ಸ್‌ಪೆನ್ಸಸ್) ಕಂಪನಿಯ ನಿರ್ವಾಹಕರಿಗೆ ಕಂಪನಿಯಲ್ಲಿರಬಹುದಾದ ವಿಶೇಷ ಹಿತಾಸಕ್ತಿಗಳು ಮುಂತಾದ ವಿವರಗಳೂ ಇದರಲ್ಲಿ ಅಡಕವಾಗಿರುತ್ತವೆ. ಕಂಪನಿಯ ನಿರ್ವಾಹಕರು (ಅಥವಾ ನಿರ್ವಾಹಕರಾಗಲಿರುವವರು) ಸಹಿ ಹಾಕಿ, ದಿನಾಂಕವನ್ನೂ ಹಾಕಬೇಕು. ಇದನ್ನು ಕಂಪನಿಗಳ ರಿಜಿಸ್ಟ್ರಾರರಿಗೆ ಸಲ್ಲಿಸಬೇಕು. ವಿವರಣಪತ್ರವನ್ನು ಸಲ್ಲಿಸಬೇಕಾದುದಿಲ್ಲವೆಂದು ಕಂಪನಿ ತೀರ್ಮಾನಿಸಿದ ಪಕ್ಷದಲ್ಲಿ, ವಿವರಣಪತ್ರದ ಬದಲು ಒಂದು ತಃಖ್ತೆಯನ್ನು (ಸ್ಟೇಟ್‌ಮೆಂಟ್ ಇನ್ ಲ್ಯೂ ಆಫ್ ಪ್ರಾಸ್ಪೆಕ್ಟಸ್) ತಯಾರಿಸಿ ಎಲ್ಲ ನಿರ್ವಾಹಕರೂ ಇದಕ್ಕೆ ಸಹಿ ಹಾಕಿ, ಇದನ್ನೇ ರಿಜಿಸ್ಟ್ರಾರರಿಗೆ ಸಲ್ಲಿಸಬೇಕು.

**ಷೇರುಗಳ ಹಂಚಿಕೆ (ಅಲಾಟ್‌ಮೆಂಟ್) :** ವಿವರಣಪತ್ರವನ್ನು ಪ್ರಕಟಿಸಿದ ಮೇಲೆ ಸಾರ್ವಜನಿಕರಿಂದ ಅರ್ಜಿಗಳು ಬರುತ್ತವೆ. ಈ ಅರ್ಜಿಗಳೊಂದಿಗೆ, ಅವರು ಪಡೆಯಬಯಸುವ ಷೇರುಗಳ ಸಂಖ್ಯೆಗೆ ಅನುಗುಣವಾಗಿ ಆ ಷೇರುಗಳ ಒಂದು ಗೊತ್ತಾದ ಪ್ರಮಾಣದ ಹಣವನ್ನೂ ಅವರು ಸಲ್ಲಿಸಬೇಕಾಗುತ್ತದೆ. ವಿವರಣಪತ್ರದಲ್ಲಿ ನಮೂದಿಸಿರುವಂತೆ ಕಂಪನಿಗೆ ಕನಿಷ್ಠ ಚಂದಾಹಣ ಬಂದಿದ್ದರೆ ಆಗ ಅದರ ನಿರ್ವಾಹಕರು ಕಂಪನಿ ನೀಡಿರುವ ಷೇರುಗಳನ್ನು ಅಭ್ಯರ್ಥಿಗಳಿಗೆ ಹಂಚುವ ಕಾರ್ಯ ಕೈಗೊಳ್ಳುತ್ತಾರೆ. ಇದಕ್ಕಾಗಿ ನಿರ್ವಾಹಕರ ಒಂದು ಸಭೆ ಸೇರುತ್ತದೆ. ಷೇರುಗಳಿಗಾಗಿ ಬಂದಿರುವ ಎಲ್ಲ ಅರ್ಜಿಗಳನ್ನೂ ಕಂಪನಿಯ ಕಾರ್ಯದರ್ಶಿ ಈ ಸಭೆಯ ಮುಂದೆ ಇಡುತ್ತಾನೆ. ಕಂಪನಿ ನೀಡಿರುವ ಷೇರುಗಳ ಸಂಖ್ಯೆಗಿಂತ ಹೆಚ್ಚಿನ ಸಂಖ್ಯೆಯಲ್ಲಿ ಅರ್ಜಿಗಳು ಬಂದಿದ್ದರೆ ಕೆಲವು ಅಭ್ಯರ್ಥಿಗಳಿಗೆ ನಿರ್ವಾಹಕರು ಷೇರುಗಳನ್ನು ನಿರಾಕರಿಸಬೇಕಾಗುತ್ತದೆ. ಅಥವಾ ಅವರು ಕೇಳಿರುವುದಕ್ಕಿಂತ ಕಡಿಮೆ ಸಂಖ್ಯೆಯ ಷೇರುಗಳನ್ನು ಹಂಚಬೇಕಾಗುತ್ತದೆ. ಯಾರಿಗೆ ಷೇರುಗಳನ್ನು ಹಂಚಲಾಗುವುದಿಲ್ಲವೋ ಅವರಿಗೆ ಷೇರುಗಳನ್ನು ಕೊಡಲಾಗದುದಕ್ಕಾಗಿ ವಿಷಾದ ಸೂಚಿಸಿ ಪತ್ರವನ್ನೂ (ಲೆಟರ್ ಆಫ್ ರಿಗ್ರೆಟ್) ಯಾರಿಗೆ ಷೇರುಗಳನ್ನು ಹಂಚಲಾಗುವುದೋ ಅವರಿಗೆ ಷೇರುಹಂಚಿಕೆ ಪತ್ರವನ್ನೂ (ಲೆಟರ್ ಆಫ್ ಅಲಾಟ್‌ಮೆಂಟ್) ಕಳುಹಿಸಲಾಗುವುದು. ಯಾರಿಗೆ ಷೇರು ಹಂಚಿದೆಯೋ ಅವರು ಆ ಹಂಚಿಕೆ ಪತ್ರದಲ್ಲಿ ಸೂಚಿಸಿರುವಷ್ಟು ಹಣವನ್ನು ಒಂದು ಗೊತ್ತಾದ ಅವಧಿಯಲ್ಲಿ ಕಳುಹಿಸಕೊಡಬೇಕಾಗುವುದು. ಇದು ಷೇರುಧನಕ್ಕಾಗಿ ಕೊಡುವ ಎರಡನೆಯ ಕಂತು. ಷೇರಿನ ಮೇಲೆ ಉಳಿದ ಹಣವನ್ನು ಕಂತುಗಳಾಗಿಯೋ ಇಲ್ಲವೇ ಒಟ್ಟಾಗಿಯೋ, ವಿವರಣಪತ್ರದಲ್ಲಿ ಸೂಚಿಸಿರುವಂತೆ, ವಸೂಲು ಮಾಡುವ ಹಕ್ಕು ಕಂಪನಿಗೆ ಇರುತ್ತದೆ.

ಯಾರಿಗೆ ಷೇರುಗಳನ್ನು ಕೊಡಲಾಗುವುದಿಲ್ಲವೋ ಅವರಿಗೆ ಅವರು ಕಳುಹಿಸಿರುವ ಹಣವನ್ನು ವಾಪಸ್ಸು ಕೊಡಬೇಕಾಗುತ್ತದೆ. ಅಭ್ಯರ್ಥಿಗಳಲ್ಲಿ ಯಾರಿಗಾದರೂ ಷೇರು ಹಂಚುವ ಅಥವಾ ಹಂಚದಿರುವ ಅಧಿಕಾರವನ್ನು ಸಾಮಾನ್ಯವಾಗಿ ನಿರ್ವಾಹಕರು ಹೊಂದಿರುತ್ತಾರೆ.

ಕಂಪನಿಯ ವಿವರಣಪತ್ರವನ್ನು ಹೊರಡಿಸಿದ ನೂರಿಪ್ಪತ್ತು ದಿನಗಳೊಳಗಾಗಿ ಆ ಪತ್ರದಲ್ಲಿ ನಮೂದಿಸಿರುವ ಕನಿಷ್ಠ ಚಂದಾಹಣ ಬಾರದಿದ್ದರೆ, ಅರ್ಜಿದಾರರಿಂದ ಬಂದಿರುವ ಎಲ್ಲ ಹಣವನ್ನೂ ಕೂಡಲೇ ಅವರಿಗೆ ಹಿಂತಿರುಗಿಸಬೇಕೆಂಬುದಾಗಿ ಕಂಪನಿಗಳ ಕಾಯಿದೆ ವಿಧಿಸುತ್ತದೆ. ಅನಂತರವೂ ಹತ್ತು ದಿನಗಳ ಒಳಗಾಗಿ ಅದನ್ನು ಹಿಂತಿರುಗಿಸದಿದ್ದರೆ ವರ್ಷಕ್ಕೆ ಸೇಕಡಾ ಆರರ ಹಾಗೆ ಬಡ್ಡಿಯೊಂದಿಗೆ ಅದನ್ನು ಕೊಡಬೇಕಾಗುತ್ತದೆ.

ಮೇಲೆ ಸೂಚಿಸಿದ ರೀತಿಯಲ್ಲಿ ಸಾರ್ವಜನಿಕರಿಗೆ ಷೇರುಗಳನ್ನು ಹಂಚಿ ಆದ ಮೇಲೆ ಕಂಪನಿಯ ಕಾರ್ಯದರ್ಶಿಯೋ ನಿರ್ವಾಹಕನೋ ಈ ಬಗೆಗೆ ಕಂಪನಿಗಳ ರಿಜಿಸ್ಟ್ರಾರರಿಗೆ ಒಂದು ತಃಖ್ತೆಯನ್ನು ಒಪ್ಪಿಸುತ್ತಾನೆ. ಹಂಚಿದ ಷೇರುಗಳ ಸಂಖ್ಯೆ ಮುಂತಾದ ವಿವರಗಳನ್ನು ಇದರಲ್ಲಿ ಕೊಡಬೇಕು. ಈ ವಿಚಾರದಲ್ಲಿ ಕಂಪನಿಯ ಶಾಸನಗಳಲ್ಲಿ ನಿಯಮಿಸಿರುವ ಎಲ್ಲ ವಿಧಿಗಳನ್ನೂ ಅನುಸರಿಸಲಾಗಿದೆಯೆಂದು ಒಂದು ಹೇಳಿಕೆಯನ್ನು ನೀಡಬೇಕು. ಎಲ್ಲವೂ ವಿಧಿಬದ್ಧವಾಗಿ ಅನುಸರಿಸಲ್ಪಟ್ಟಿದೆಯೆಂದು ರಿಜಿಸ್ಟ್ರಾರರಿಗೆ ಮನವರಿಕೆಯಾದರೆ ಆಗ ಅವರು ವ್ಯವಹಾರವನ್ನಾರಂಭಿಸಲು ಅಪ್ಪಣೆ ಪತ್ರವನ್ನು ನೀಡುತ್ತಾರೆ. ಇದನ್ನು ನೀಡಿದ ದಿನದಿಂದ ಮಾತ್ರವೇ ಸಾರ್ವಜನಿಕ ಕಂಪನಿ ವ್ಯವಹಾರ ಆರಂಭಿಸಬಹುದಾಗಿದೆ.

ಖಾಸಗಿ ಕಂಪನಿಗೆ ಈ ಅಪ್ಪಣೆ ಪತ್ರದ ಅಗತ್ಯವಿಲ್ಲ. ನೋಂದಣಿ ಪತ್ರವನ್ನು ಪಡೆದಕೂಡಲೇ ಅದು ಷೇರುಗಳನ್ನು ಹಂಚಿ ನೇರವಾಗಿ ವ್ಯವಹಾರವನ್ನಾರಂಭಿಸಬಹುದಾಗಿದೆ.

**ಷೇರುಗಳ ಒಟ್ಟು ಕೊಳ್ಳಿಕೆ ಭರವಸೆ :** ಒಂದು ಕಂಪನಿಯ ಷೇರುಗಳನ್ನು ಕೊಳ್ಳಲು ಸಾರ್ವಜನಿಕರು ಸಾಕಷ್ಟು ಸಂಖ್ಯೆಯಲ್ಲಿ ಮುಂದೆ ಬಂದೇ ಬರುವರೆಂಬ ಭರವಸೆ ಯಾವಾಗಲೂ ಇರುವುದಿಲ್ಲ. ಸಾಕಷ್ಟು ಸಂಖ್ಯೆಯಲ್ಲಿ ಇವು ಮಾರಾಟವಾಗಲಿಲ್ಲವೆಂಬ ಕಾರಣದಿಂದ ಕಂಪನಿಯನ್ನು ಪ್ರಾರಂಭ ಮಾಡಲು ಸಾಧ್ಯವಾಗದೆ ಹೋಗಬಹುದು. ಇಂಥ ಅನಿಶ್ಚಯಕರ ಪರಿಸ್ಥಿತಿಯನ್ನು ಹೋಗಲಾಡಿಸಲು ಪ್ರವರ್ತಕರು ಷೇರುಗಳ ಒಟ್ಟು ಕೊಳ್ಳಿಕೆ ಭರವಸೆ ಒಪ್ಪಂದ (ಅಂಡರ್-ರೈಟಿಂಗ್ ಆಫ್ ಷೇರ್ಸ್) ಮಾಡಿಕೊಳ್ಳಬಹುದು. ಯಾರಾದರೂ ದಲ್ಲಾಳಿಯೋ ಯಾವುದಾದರೂ ಬ್ಯಾಂಕೋ ಷೇರುಗಳನ್ನು ಕೊಳ್ಳುವ ಭರವಸೆ ನೀಡಲು ಒಪ್ಪಬಹುದು. ಕಂಪನಿ ನೀಡುತ್ತಿರುವ ಷೇರುಗಳಲ್ಲಿ ಎಲ್ಲವನ್ನೋ ಅಥವಾ ಒಂದು ಗೊತ್ತಾದ ಸಂಖ್ಯೆಯನ್ನೋ ಸೂಚಿಸಿ, ಈ ಸಂಖ್ಯೆಯ ಷೇರುಗಳೆಲ್ಲವನ್ನೂ ಮಾರಾಟ ಮಾಡದಿದ್ದ ಪಕ್ಷದಲ್ಲಿ ಹಾಗೆ ಮಾರಾಟ ಮಾಡದೆ ಉಳಿದ ಷೇರುಗಳನ್ನು ಕೊಳ್ಳಲು ಭರವಸೆ ನೀಡಬಹುದು. ಎಲ್ಲ ಷೇರುಗಳೂ ಮಾರಾಟವಾದ ಪಕ್ಷದಲ್ಲಿ ಇವರು ಷೇರುಗಳನ್ನು ಕೊಳ್ಳಬೇಕಾದುದಿಲ್ಲ. ಅಂತೂ ಹೀಗೆ ಒಪ್ಪಂದ ಮಾಡಿಕೊಂಡ ಒಟ್ಟು ಷೇರುಗಳ ಮೇಲೆ ಇವರು ನೀಡಿದ ಭರವಸೆಗಾಗಿ ಇವರಿಗೆ ನಿಗದಿ ಮಾಡಿದ ಕಮಿಷನ್ ಕೊಡಬೇಕಾಗುತ್ತದೆ. ಈ ಕಮಿಷನಿಗೆ ಕೊಳ್ಳಿಕೆ ಭರವಸೆ ಕಮಿಷನ್ (ಅಂಡರ್-ರೈಟಿಂಗ್ ಕಮಿಷನ್) ಎಂದು ಹೆಸರು.

**ಕಂಪನಿಯ ಬಂಡವಾಳ :** ಒಂದು ಕಂಪನಿ ತನ್ನ ಉದ್ಯಮಕ್ಕೆ ಅಗತ್ಯವಾದ ಬಂಡವಾಳವನ್ನು ಷೇರುಧನದ ರೂಪದಲ್ಲಿ ಸದಸ್ಯರಿಂದ ಪಡೆಯುತ್ತದೆಯಷ್ಟೆ. ಅದು ಹೊಂದಿರಬಹುದಾದ ಪರಮಾವಧಿ ಬಂಡವಾಳದ ಹಣವನ್ನು ಸಂಘದ ಷರತ್ತುಗಳಲ್ಲಿ ನಮೂದಿಸಿರುತ್ತದೆ. ಇದಕ್ಕಿಂತ ಹೆಚ್ಚು ಬಂಡವಾಳವನ್ನು ಕಂಪನಿ ಹೊಂದಿರತಕ್ಕದ್ದಲ್ಲ. ಕಂಪನಿಯ ರಿಜಿಸ್ಟ್ರಾರರಿಂದ ಅಪ್ಪಣೆ ಪಡೆದ ಈ ಪರಮಾವಧಿ ಬಂಡವಾಳಕ್ಕೆ ಅಧಿಕೃತ ಬಂಡವಾಳ, ಸೂಚಿತ ಬಂಡವಾಳ ಅಥವಾ ನೋಂದಣಿಯಾದ ಬಂಡವಾಳ (ಆಥರೈಸ್ಡ್ ಕ್ಯಾಪಿಟಲ್; ರಿಜಿಸ್ಟರ್ಡ್ ಕ್ಯಾಪಿಟಲ್) ಎಂದು ಹೆಸರು.

ಇಷ್ಟು ಬಂಡವಾಳವೂ ಕಂಪನಿಗೆ ಆಗಲೇ ಬೇಡದೆ ಇರಬಹುದು. ಆದರ ಉದ್ಯಮಕ್ಕೆ ಸದ್ಯಕ್ಕೆ ಎಷ್ಟು ಬಂಡವಾಳ ಬೇಕೋ ಅಷ್ಟನ್ನು ಮಾತ್ರ ಸಾರ್ವಜನಿಕರಿಂದ ಚಂದಾ ಬಯಸಿ ಅವರಿಗೆ ನೀಡಬಹುದು. ವಿವರಣಪತ್ರದ ಪ್ರಕಟನೆಯ ಮೂಲಕ ಹೀಗೆ ಸಾರ್ವಜನಿಕರಿಗೆ ನೀಡಿರುವ ಬಂಡವಾಳಕ್ಕೆ ನೀಡಿದ ಬಂಡವಾಳ ಅಥವಾ ಪ್ರಕಟಿತ ಬಂಡವಾಳ ಎಂದು ಹೆಸರು (ಇಷ್ಯೂಡ್ ಕ್ಯಾಪಿಟಲ್).

ಕಂಪನಿ ನೀಡಿದ ಬಂಡವಾಳದಲ್ಲಿ ಅಷ್ಟಕ್ಕೂ ಸಾರ್ವಜನಿಕರಿಂದ ಅರ್ಜಿ ಬರಬಹುದು, ಬಾರದಿರಬಹುದು. ಸಾರ್ವಜನಿಕರು ಎಷ್ಟಕ್ಕೆ ಅರ್ಜಿಸಲ್ಲಿಸುತ್ತಾರೋ ಅಷ್ಟನ್ನು ಮಾತ್ರ ಕಂಪನಿ ಅವರಿಗೆ ಷೇರುಗಳ ರೂಪದಲ್ಲಿ ಹಂಚಬೇಕಾಗುತ್ತದೆ. ಹೀಗೆ ಸಾರ್ವಜನಿಕರು ಅರ್ಜಿ ಸಲ್ಲಿಸಿದ ಬಂಡವಾಳಕ್ಕೆ ಕೂಡಿಸಿದ ಬಂಡವಾಳ ಅಥವಾ ಚಂದಾ ಅದ ಬಂಡವಾಳ (ಸಬ್‌ಸ್ಕ್ರೈಬ್ಡ್ ಕ್ಯಾಪಿಟಲ್) ಎಂದು ಹೆಸರು.

ಹೀಗೆ ಕೂಡಿಸಿದ ಬಂಡವಾಳದಲ್ಲಿ ಸದಸ್ಯರು ಅಥವಾ ಷೇರುದಾರರು ಕೊಡಬೇಕೆಂದು ಕಂಪನಿಯ ನಿರ್ವಾಹಕರು ಕೇಳಿರುವ ಭಾಗಕ್ಕೆ ಆಹ್ವಾನಿತ ಬಂಡವಾಳ (ಕಾಲ್ಡ್-ಅಪ್ ಕ್ಯಾಪಿಟಲ್) ಎಂದು ಹೆಸರು. ಇದರಲ್ಲಿ ಷೇರುದಾರರು ಪಾವತಿ ಮಾಡಿರುವ ಬಂಡವಾಳಕ್ಕೆ ಸಂದಾಯವಾದ ಬಂಡವಾಳ (ಪೇಡ್-ಅಪ್ ಕ್ಯಾಪಿಟಲ್) ಎಂದು ಹೆಸರು.

**ಷೇರುಗಳು :** ಒಂದು ಕಂಪನಿಯ ಬಂಡವಾಳದ ಹಣವನ್ನು ಅನೇಕ ಮಂದಿ ಸದಸ್ಯರಿಂದ ಕೂಡಿಸಲಾಗುತ್ತದೆ. ಇದಕ್ಕಾಗಿ ಬಂಡವಾಳವನ್ನು ಸಮನಾದ ವಿಭಾಗಗಳಾಗಿ ವಿಂಗಡಿಸಲಾಗುತ್ತದೆ. ಒಂದೊಂದು ಭಾಗಕ್ಕೂ ಷೇರು ಎಂದು ಹೆಸರು. ಷೇರು ಕಂಪನಿಯ ಬಂಡವಾಳದ ಕನಿಷ್ಠ ಭಾಗ. ಇದನ್ನು ಮತ್ತೆ ತುಂಡರಿಸಲು ಬಾರದು. ಹಣ ಕೊಟ್ಟು ಈ ಷೇರುಗಳನ್ನು ಪಡೆದಿರುವವರೇ ಷೇರುದಾರರು ಅಥವಾ ಕಂಪನಿಯ ಸದಸ್ಯರು. ಒಬ್ಬ ಷೇರುದಾರ ಒಂದಕ್ಕಿಂತ ಹೆಚ್ಚು ಷೇರುಗಳನ್ನು ಹೊಂದಿರಲು ಯಾವ ಅಭ್ಯಂತರವೂ ಇಲ್ಲ.

ಷೇರುಗಳಲ್ಲಿ ನಾನಾ ವಿಧ. ಭಾರತದ ಕಂಪನಿಗಳ ಕಾಯಿದೆಯ (1956) ರೀತ್ಯಾ 1956ರಿಂದ ಈಚೆಗೆ ಭಾರತದಲ್ಲಿ ಕಂಪನಿಗಳು ನೀಡಬಹುದಾದ ಷೇರುಗಳಲ್ಲಿ ಎರಡೇ ಬಗೆ :

1 ಮೊದಲ ಹಕ್ಕಿನ ಷೇರುಗಳು (ಪ್ರಿಫರೆನ್ಸ್ ಷೇರ್ಸ್)

2 ಸಮಾನ ಹಕ್ಕುಗಳ ಷೇರುಗಳು (ಎಕ್ವಿಟಿ ಷೇರ್ಸ್)

ಮೊದಲ ಹಕ್ಕಿನ ಷೇರುಗಳ ಒಡೆಯರಿಗೆ ಕೆಲವು ವಿಶಿಷ್ಟವಾದ ಹಕ್ಕುಗಳಿರುತ್ತವೆ. ಕಂಪನಿ ಲಾಭ ಗಳಿಸಿದಾಗ ಆ ಹಣವನ್ನು ಮೊದಲು ಈ ಷೇರುದಾರರಿಗೆ ಕೊಡಲು ಒಪ್ಪಿರುವ ದರದಲ್ಲಿ ಲಾಭಾಂಶವನ್ನು (ಡಿವಿಡೆಂಡ್) ಹಂಚಿ, ಉಳಿದ ಲಾಭವನ್ನು (ಉಳಿದಿದ್ದರೆ) ಇತರ ಷೇರುದಾರರಿಗೆ ಹಂಚಬೇಕು. ಅಥವಾ ಕಂಪನಿಯನ್ನು ಮುಚ್ಚಬೇಕಾದ ಸಂದರ್ಭದಲ್ಲಿ, ಕಂಪನಿಯ ಆಸ್ತಿಯಿಂದ ಅದು ಕೊಡಬೇಕಾದ ಋಣಗಳನ್ನೆಲ್ಲ ತೀರಿಸಿ ಆದಮೇಲೆ ಉಳಿದ ಹಣದಲ್ಲಿ ಮೊದಲು ಈ ಷೇರುದಾರರ ಷೇರು ಹಣವನ್ನು ಹಿಂದಿರುಗಿಸಬೇಕು. ಇವೆರಡರಲ್ಲಿ ಯಾವುದಾದರೂ ಒಂದು ಹಕ್ಕನ್ನಾಗಲಿ ಎರಡು ಹಕ್ಕುಗಳನ್ನೂ ಆಗಲಿ ಹೊಂದಿರುವ ಷೇರುಗಳೇ ಮೊದಲ ಹಕ್ಕಿನ ಷೇರುಗಳು.

ಒಂದು ವರ್ಷದಲ್ಲಿ ಮೊದಲ ಹಕ್ಕಿನ ಷೇರುದಾರರಿಗೆ ಗೊತ್ತಾದ ದರದಲ್ಲಿ ಲಾಭಾಂಶ ಹಂಚುವಷ್ಟು ಲಾಭವನ್ನು ಕಂಪನಿ ಗಳಿಸದಿದ್ದರೆ, ಹಾಗೆ ಹಂಚಲು ಸಾಧ್ಯವಾಗದೆ ಹೋದ ಹಣವನ್ನು ಬಾಕಿಯಾಗಿ ಪರಿಗಣಿಸಿ, ಮುಂದೆ ಲಾಭಗಳಿಸಿದಾಗ ಈ ಬಾಕಿಯನ್ನು ಸೇರಿಸಿ ಕೊಡಬೇಕೆಂಬ ಷರತ್ತೂ ಈ ಮೊದಲ ಹಕ್ಕಿನ ಷೇರುಗಳಿಗೆ ಇರಬಹುದು. ಇಂಥ ಷರತ್ತು ಇಲ್ಲದಿದ್ದ ಪಕ್ಷದಲ್ಲಿ ಆಯಾ ವರ್ಷಗಳ ಲಾಭಾಂಶದ ಹಕ್ಕು ಆಯಾ ವರ್ಷಗಳಿಗೆ ಮುಕ್ತಾಯವಾಗುತ್ತದೆ. ಒಂದು ವರ್ಷ ಕೊಡಲಾಗದೆ ಹೋದ ಲಾಭಾಂಶವನ್ನು ಮುಂದಿನ ವರ್ಷಕ್ಕೆ ಬಾಕಿಯೆಂದು ಪರಿಗಣಿಸುವುದಿಲ್ಲ.

ಸಮಾನಹಕ್ಕುಗಳ ಷೇರುಗಳ ಒಡೆಯರಿಗೆ ಯಾವ ವಿಶಿಷ್ಟ ಹಕ್ಕುಗಳೂ ಇರುವುದಿಲ್ಲ. ಮೊದಲ ಹಕ್ಕಿನ ಷೇರುಗಳ ಮೇಲೆ ಲಾಭಾಂಶ ಹಂಚಿದ ಮೇಲೆ ಉಳಿದ ಲಾಭದ ಹಣವನ್ನು ಸಮಾನ ಹಕ್ಕುಗಳ ಷೇರುದಾರರಿಗೆ ಹಂಚಬಹುದು. ಕಂಪನಿ ಸಾಕಷ್ಟು ಲಾಭಗಳಿಸದೆ ಹೋದರೆ ಇವರಿಗೆ ಏನೂ ಲಾಭಾಂಶವೇ ದೊರಕದೆ ಹೋಗಬಹುದು. ಕಂಪನಿ ಅಧಿಕ ಲಾಭ ಗಳಿಸಿದಾಗ ಇವರಿಗೆ ಹೆಚ್ಚು ಲಾಭಾಂಶವೂ ದೊರಕಬಹುದು. ಕಂಪನಿಯನ್ನು ಮುಚ್ಚಿದ ಸಂದರ್ಭದಲ್ಲಿ ಬಂಡವಾಳಕ್ಕೆ ಸಂಬಂಧಿಸಿದಂತೆ ಮೊದಲ ಹಕ್ಕು ಪಡೆದಿರುವ ಷೇರುದಾರರ ಬಂಡವಾಳವನ್ನು ಹಿಂದಿರುಗಿಸಿದ ಮೇಲೆ ಮಾತ್ರವೇ ಸಮಾನ ಹಕ್ಕುಗಳ ಷೇರುದಾರರಿಗೆ ಅವರ ಬಂಡವಾಳದ ಹಣವನ್ನು ಹಿಂದಿರುಗಿಸಲಾಗುವುದು.

**ಕಂಪನಿಯ ಸಭೆಗಳು :** ಕಂಪನಿಯ ಆಡಳಿತದ ಜವಾಬ್ದಾರಿ ಇರತಕ್ಕದ್ದು ನಿರ್ವಾಹಕ ಮಂಡಳಿಯ ವಶದಲ್ಲಿ. ಕಂಪನಿಯ ಸದಸ್ಯರೇ ಈ ಮಂಡಳಿಯ ಸದಸ್ಯರನ್ನು ಆಯ್ಕೆ ಮಾಡುತ್ತಾರೆ. ಕಂಪನಿಯ ಸದಸ್ಯರು ನಿರ್ವಾಹಕ ಮಂಡಳಿಗೆ ಕಂಪನಿಯ ನಿರ್ವಹಣೆಯ ಜವಾಬ್ದಾರಿ ನೀಡುತ್ತಾರೆ. ಅಂತೂ ಕಂಪನಿಯ ಸದಸ್ಯರದೇ ಪರಮಾಧಿಕಾರ. ಆದ್ದರಿಂದ ಈ ಅಧಿಕಾರದ ಚಲಾವಣೆ ಸರಿಯಾದ ರೀತಿಯಲ್ಲಿ ಆಗಬೇಕಾದರೆ ಷೇರುದಾರರು ಆಗಿಂದಾಗ್ಗೆ ಒಟ್ಟಿಗೆ ಸೇರಿ, ಕಂಪನಿಗೆ ಸಂಬಂಧಪಟ್ಟ ಮುಖ್ಯ ವಿಚಾರಗಳನ್ನು ಪರಿಶೀಲಿಸಿ, ಚರ್ಚೆ ನಡೆಸಿ, ನಿರ್ಣಯಗಳ ರೂಪದಲ್ಲಿ ತೀರ್ಮಾನ ಕೈಕೊಳ್ಳಬೇಕಾಗುತ್ತದೆ. ಕಂಪನಿಯ ಸದಸ್ಯರಿಂದ ಆಯ್ಕೆಯಾದ ನಿರ್ವಾಹಕರೂ ಆಗಿಂದಾಗ್ಗೆ ಒಂದಾಗಿ ಸೇರಿ ಕಂಪನಿಯ ದಿನದಿನದ ವ್ಯವಹಾರಗಳನ್ನು ಕುರಿತು ಚರ್ಚೆ ನಡೆಸಿ, ನಿರ್ಣಯಿಸಿ, ಕಂಪನಿಯ ವ್ಯವಸ್ಥಾಪಕ ವರ್ಗಕ್ಕೆ ಸೂಕ್ತವಾದ ಸೂಚನೆಗಳನ್ನು ಕೊಡುತ್ತಿರಬೇಕಾಗುತ್ತದೆ. ಹೀಗೆ ಇವರು ಸಮಾಲೋಚನೆ ನಡೆಸಿ ನಿರ್ಣಯಗಳನ್ನು ಅಂಗೀಕರಿಸುವ ಸಲುವಾಗಿ ಒಂದಾಗಿ ಸೇರಿದರೆ ಅಂಥ ಕೂಟವನ್ನು ಸಭೆಯೆಂದು ಕರೆಯಬಹುದು.

ಕಂಪನಿಯ ಸಭೆಗಳು ಮುಖ್ಯವಾಗಿ ಎರಡು ವಿಧ : 1 ನಿರ್ವಾಹಕ ಮಂಡಳಿಯ ಸಭೆ, 2 ಷೇರುದಾರರ ಸಭೆ. ಕನಿಷ್ಠ ಪಕ್ಷ ಮೂರು ತಿಂಗಳಿಗೊಮ್ಮೆಯಾದರೂ ನಿರ್ವಾಹಕಮಂಡಳಿಯ ಸಭೆ ಸೇರಬೇಕು. ಮಂಡಳಿಯ ಎಲ್ಲ ಸದಸ್ಯರಿಗೂ ಸಭೆಯ ತಿಳಿವಳಿಕೆ ಪತ್ರ ಕಳಿಸಬೇಕು. ಇಲ್ಲದಿದ್ದರೆ ಅಂಥ ಸಭೆಗೆ ಕಾನೂನಿನ ಬಲ ಇರುವುದಿಲ್ಲ. ಆ ಸಭೆಯಲ್ಲಿ ನಡೆಸಿದ ಕಲಾಪಗಳು ನಿರರ್ಥಕವಾಗುತ್ತವೆ.

ಮಂಡಳಿಯ ಸಭೆಯಲ್ಲಿ ಕನಿಷ್ಠ ಪಕ್ಷ ಇಷ್ಟು ಮಂದಿ ಸದಸ್ಯರು ಇರಬೇಕೆಂಬುದು ಕಂಪನಿಯ ಸಂಘದ ಷರತ್ತುಗಳಲ್ಲಿ ಉಲ್ಲೇಖವಾಗಿರುತ್ತದೆ. ಈ ಸಂಖ್ಯೆಯೇ ಕೋರಂ (ಅವಶ್ಯ ಸಂಖ್ಯೆ). ಕೋರಂ ಇಲ್ಲದ ಸಭೆಯ ಕಲಾಪಗಳು ಊರ್ಜಿತವಾಗುವುದಿಲ್ಲ. ಮಂಡಳಿಯ ತೀರ್ಮಾನಗಳು ನಿರ್ಣಯಗಳ ರೂಪದಲ್ಲಿರುತ್ತವೆ. ಇವನ್ನು ಕಂಪನಿಯ ಕಲಾಪಗಳ ಪುಸ್ತಕದಲ್ಲಿ ಬರೆದು ಸಭೆಯ ಅಧ್ಯಕ್ಷರ ಸಹಿ ಪಡೆಯಬೇಕು. ಮುಂಚೆಯೇ ಗೊತ್ತಾದ ಕಾರ್ಯಸೂಚಿಯ ಪ್ರಕಾರ ಸಭೆಯ ಕಲಾಪಗಳು ನಡೆಯಬೇಕು. ಸಭೆಯಲ್ಲಿ ನಡೆದ ಕಲಾಪಗಳನ್ನು ನಡೆವಳಿಕೆಯ ಪುಸ್ತಕದಲ್ಲಿ ಬರೆದಿಡುವಂತೆ, ಅದರ ಕಾರ್ಯಸೂಚಿಯನ್ನು ಕಂಪನಿಯ ಕಾರ್ಯದರ್ಶಿ ಕಂಪನಿಯ ಅಧ್ಯಕ್ಷರೊಂದಿಗೆ ಸಮಾಲೋಚನೆ ನಡೆಸಿ ತಯಾರಿಸುತ್ತಾನೆ. ಇದರ ಪ್ರತಿಗಳನ್ನು ಮಂಡಳಿಯ ಸದಸ್ಯರಿಗೆ, ಅವರಿಗೆ ಕಳುಹಿಸುವ ಸಭೆಯ ತಿಳಿವಳಿಕೆ ಪತ್ರದೊಂದಿಗೆ, ಕಳುಹಿಸಿಕೊಡಬೇಕು. ಇದು ಕಾರ್ಯದರ್ಶಿಯ ಕರ್ತವ್ಯ. ಸಭೆಯಲ್ಲಿ ಹಾಜರಿದ್ದ ಸದಸ್ಯರ ಹೆಸರು, ಸಭೆಯಲ್ಲಿ ನಡೆಸಿದ ಚರ್ಚೆ, ಸ್ವೀಕರಿಸಿದ ಗೊತ್ತುವಳಿಗಳು ಇವುಗಳೆಲ್ಲ ನಡೆವಳಿಕೆಯ ಪುಸ್ತಕದಲ್ಲಿ ಇರಬೇಕು. ಪ್ರತಿಯೊಂದು ಸಭೆಯಲ್ಲೂ ಕಾರ್ಯದರ್ಶಿ ಹಾಜರಿರುತ್ತಾನೆ. ಅಲ್ಲಿ ನಡೆದ ಕಲಾಪಗಳ ಟಿಪ್ಪಣಿ ಮಾಡಿಕೊಂಡು ಅದರ ಆಧಾರದ ಮೇಲೆ ನಡೆವಳಿಕೆಯನ್ನು ಬರೆಯುತ್ತಾನೆ.

ಮುಂದಣ ಸಭೆಯಲ್ಲಿ ಹಿಂದಣ ಸಭೆಯ ನಡೆವಳಿಕೆಯನ್ನು ಓದಿ, ಅದು ಸರಿಯಾಗಿದೆಯೆಂದು ಸಭೆಯ ಒಪ್ಪಿಗೆ ಪಡೆಯಬೇಕು. 'ಹಿಂದಣ ನಡೆವಳಿಕೆಯ ಪಠಣ ಮತ್ತು ಒಪ್ಪಿಗೆ' ಎಂಬುದೇ ಸಭೆಯ ಕಾರ್ಯಸೂಚಿಯ ಮೊದಲನೆಯ ಕಲಾಪ.

ಕಂಪನಿಯ ಷೇರುದಾರರ ಸಭೆಗಳು ಮೂರು ವಿಧ : 1 ಶಾಸನಬದ್ಧ ಸಭೆ, 2 ಸಾಮಾನ್ಯಸಭೆ, ಅಥವಾ ವಾರ್ಷಿಕ ಸಾರ್ವತ್ರಿಕ ಸಭೆ, 3 ಅಸಾಧಾರಣ ಸಾರ್ವತ್ರಿಕ ಸಭೆ.

ಖಾಸಗಿ ಕಂಪನಿಯನ್ನು ಬಿಟ್ಟು ಉಳಿದ ಪ್ರತಿಯೊಂದು ಕಂಪನಿಯೂ ಶಾಸನಬದ್ಧ ಸಭೆಯನ್ನು (ಸ್ಟ್ಯಾಚ್ಯುಟರಿ ಮೀಟಿಂಗ್) ನಡೆಸಲೇಬೇಕು. ಕಂಪನಿ ವ್ಯವಹಾರ ಆರಂಭಿಸಲು ಅಧಿಕಾರಪತ್ರ ಪಡೆದ ದಿನದ ಒಂದು ತಿಂಗಳಿಗೆ ಮುಂಚೆಯಿಲ್ಲದಂತೆ, ಆರು ತಿಂಗಳಿಗೆ ಮೀರಿದಂತೆ, ಈ ನಡುವಿನ ಅವಧಿಯಲ್ಲಿ ಈ ಸಭೆಯನ್ನು ನಡೆಸಲೇಬೇಕೆಂಬುದು ಭಾರತದ ಕಂಪನಿಗಳ ಕಾಯಿದೆಯ 165ನೆಯ ವಿಧಿ. ಸಾಮಾನ್ಯವಾಗಿ ಇದೇ ಕಂಪನಿಯ ಸದಸ್ಯರ ಮೊದಲ ಸಭೆ. ಕಂಪನಿಯ ಸ್ಥಿತಿಗತಿಗಳನ್ನು ಸದಸ್ಯರಿಗೆ ತಿಳಿಸಿಕೊಡುವುದೇ ಈ ಸಭೆಯ ಮುಖ್ಯೋದ್ದೇಶ. ಈ ಸಭೆ ನಡೆಯಲು ಕನಿಷ್ಠಪಕ್ಷ ಇಪ್ಪತ್ತೊಂದು ದಿನಗಳ ಮುಂಚೆ, ಈ ಸಭೆಯ ತಿಳಿವಳಿಕೆ ಪತ್ರದೊಂದಿಗೆ ಕಂಪನಿಯ ಬಗೆಗೆ ಒಂದು ವರದಿಯನ್ನು ಎಲ್ಲ ಸದಸ್ಯರಿಗೂ ಕಳಿಸಿಕೊಡಬೇಕು. ಇದು ಶಾಸನಬದ್ಧ ವರದಿ (ಸ್ಟ್ಯಾಚ್ಯುಟರಿ ರಿಪೋರ್ಟ್). ಈ ವರದಿಯನ್ನು ತಯಾರಿಸುವುದು ಕಾಯದರ್ಶಿಯ ಕರ್ತವ್ಯ. ಇದು ಸರಿಯಾಗಿದೆಯೆಂದು ಕಡೆಯ ಪಕ್ಷ ಇಬ್ಬರು ನಿರ್ವಾಹಕರಾದರೂ ಸಹಿ ಹಾಕಬೇಕು. ಅಥವಾ ಕಂಪನಿಯ ಅಧ್ಯಕ್ಷರು ಸಹಿ ಹಾಕಬೇಕು. ಕಂಪನಿಯ ಲೆಕ್ಕಶೋಧಕರ ಸಹಿಯೂ ಇರಬೇಕು. ಕಂಪನಿಗಳ ರಿಜಿಸ್ಟ್ರಾರರಿಗೆ ಇದರ ಒಂದು ಪ್ರತಿಯನ್ನು ಸಲ್ಲಿಸಬೇಕು. ಸಾರ್ವಜನಿಕರಿಗೆ ಹಂಚಿಕೆಯಾದ ಷೇರುಗಳ ಸಂಪೂರ್ಣ ವಿವರ, ಇವುಗಳಿಗಾಗಿ ಕಂಪನಿಗೆ ಬಂದ ಹಣ, ವರದಿಯ ತಾರೀಖಿಗೆ ಹಿಂದಿನ ಏಳು ದಿನಗಳ ವರೆಗೆ ಕಂಪನಿಗೆ ಬಂದ ಹಾಗೂ ಕಂಪನಿ ಪಾವತಿ ಮಾಡಿದ ನಗದು ಗೋಪ್ವಾರೆ (ಅಬ್‌ಸ್ಟ್ಯಾಕ್ಟ್), ಕಂಪನಿಯ ನಿರ್ವಾಹಕರು, ಲೆಕ್ಕ ಶೋಧಕರು, ಮ್ಯಾನೇಜಿಂಗ್ ಏಜೆಂಟರು, ಕಾರ್ಯದರ್ಶಿಗಳು, ಕೋಶಾಧ್ಯಕ್ಷರು, ವ್ಯವಸ್ಥಾಪಕರು, ಕಾರ್ಯದರ್ಶಿ—ಇವರ ಹೆಸರು, ವಿಳಾಸ ಹಾಗೂ ಉದ್ಯೋಗ, ಕಂಪನಿ ಮಾಡಿಕೊಂಡಿದ್ದ ಕರಾರುಗಳಲ್ಲಿ ಮಾಡಬೇಕಾಗಿ ಬಂದಿರುವ ಬದಲಾವಣೆಗಳ ವಿವರ, ಷೇರುಗಳ ಒಟ್ಟು ಕೊಳ್ಳಿಕೆ ಭರವಸೆ ಒಪ್ಪಂದದ ನಿರ್ವಹಣ, ಷೇರುಗಳ ಮೇಲೆ ಹಣಕೊಡಬೇಕೆಂದು ಕಂಪನಿ ಕಳುಹಿಸಿದ ಕರೆಪತ್ರದ (ಕಾಲ್ ನೋಟೀಸ್) ಬಾಬತ್ತು, ಕಂಪನಿಯ ನಿರ್ವಾಹಕರು, ಮ್ಯಾನೇಜಿಂಗ್ ಏಜೆಂಟರು, ವ್ಯವಸ್ಥಾಪಕರು ಇವರಿಂದ ಬರಬೇಕಾಗಿರುವ ಮೊಬಲಗಿನ ವಿವರ, ಷೇರುಗಳ ನೀಡಿಕೆಯ ಸಂಬಂಧವಾಗಿ ಕಂಪನಿಯ ನಿರ್ವಾಹಕರು, ಮ್ಯಾನೇಜಿಂಗ್ ಏಜೆಂಟರು, ಕಾರ್ಯದರ್ಶಿಗಳು, ಕೋಶಾಧ್ಯಕ್ಷರು ಅಥವಾ ವ್ಯವಸ್ಥಾಪಕರಿಗೆ ಕೊಟ್ಟ ಅಥವಾ ಕೊಡಬೇಕಾದ ಕಮಿಷನ್ ಅಥವಾ ದಲ್ಲಾಳಿಯ ವಿವರ, ಇವನ್ನೆಲ್ಲಾ ಈ ವರದಿ ಒಳಗೊಂಡಿರುತ್ತದೆ. ಕಂಪನಿಯ ಶಾಸನಬದ್ಧ ಸಭೆಯನ್ನು ನಡೆಸದೆ ಇದ್ದರೆ ಅಥವಾ ಶಾಸನಬದ್ಧ ವರದಿಯನ್ನು ಸಲ್ಲಿಸದೆ ಇದ್ದರೆ, ಕಂಪನಿಯ ಯಾವ ಸದಸ್ಯನಾದರೂ ಕಂಪನಿಯನ್ನು ಮುಚ್ಚಬೇಕೆಂದು ಕೋರಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಬಹುದು. ನ್ಯಾಯಾಲಯ ಕಂಪನಿಯನ್ನು ಮುಚ್ಚಲು ಆಜ್ಞೆ ಹೊರಡಿಸಬಹುದು. ಅಥವಾ ಸಭೆಯನ್ನು ನಡೆಸಿ ವರದಿಯನ್ನು ಸಲ್ಲಿಸಬೇಕೆಂದು ನಿರೂಪ ಹೊರಡಿಸಬಹುದು. ಸಂಬಂಧಪಟ್ಟ ನಿರ್ವಾಹಕರಿಗೂ ಅಧಿಕಾರಿಗಳಿಗೂ ಜುಲ್ಮಾನೆ ವಿಧಿಸಬಹುದು.

**ವಾರ್ಷಿಕ ಸಾರ್ವತ್ರಿಕ ಸಭೆ ಅಥವಾ ಸಾಮಾನ್ಯ ಸಭೆ :** ಇದು ಪ್ರತಿವರ್ಷವೂ ನಡೆಯಬೇಕು. ಮೊದಲನೆಯ ಸಭೆಯನ್ನು ಕಂಪನಿ ನೋಂದಣಿಯಾದ ದಿನದಿಂದ ಹದಿನೆಂಟು ತಿಂಗಳೊಳಗೆ ನಡೆಸಬೇಕು. ಆಮೇಲೆ ಪ್ರತಿಯೊಂದು ಸಭೆಯೂ ಹಿಂದಿನ ಸಭೆಯ ದಿನದಿಂದ ಹದಿನೈದು ತಿಂಗಳೊಳಗೆ ನಡೆಯಬೇಕು. ವಾರ್ಷಿಕ ಸಭೆಯ ಕಲಾಪಗಳನ್ನು ಕುರಿತು ಕಂಪನಿಯ ಸಂಘದ ಷರತ್ತುಗಳಲ್ಲಿ ನಿಬಂಧನೆಗಳಿರುತ್ತವೆ. ನಿರ್ವಾಹಕರ ಹಾಗೂ ಲೆಕ್ಕಶೋಧಕರ ವರದಿ, ಕಂಪನಿಯ ಲೆಕ್ಕ, ಆಸ್ತಿ–ಜವಾಬ್ದಾರಿ ಪಟ್ಟಿ, ಕಂಪನಿಯ ಲಾಭ ಹಂಚಿಕೆಯ ತೀರ್ಮಾನ, ಕಂಪನಿಯ ನಿರ್ವಾಹಕರ ಹಾಗೂ ಲೆಕ್ಕಶೋಧಕರ ಆಯ್ಕೆ, ಲೆಕ್ಕಶೋಧಕರ ಸಂಭಾವನೆಯ ಇತ್ಯರ್ಥ—ಮುಂತಾದ ಸಾಮಾನ್ಯ ಕಲಾಪಗಳು ಈ ಸಭೆಯಲ್ಲಿ ನಡೆಯುತ್ತವೆ. ಈ ಸಭೆ ನಡೆಯಲು ಗೊತ್ತಾದ ದಿನಕ್ಕೆ ಇಪ್ಪತ್ತೊಂದು ದಿನಗಳ ಮುಂಚಿತವಾಗಿ ಇದರ ತಿಳಿವಳಿಕೆ ಪತ್ರವನ್ನು ಸದಸ್ಯರಿಗೆ ಕಳಿಸಿಕೊಡಬೇಕು. ಕಂಪನಿಯ ಸದಸ್ಯರು ಸಭೆಯಲ್ಲಿ ಹಾಜರಿರಲು ಸಾಧ್ಯವಾಗದಿದ್ದರೆ ಅಂಥವರು ಇನ್ನೊಬ್ಬ ಸದಸ್ಯರಿಗೆ ಸಭೆಯಲ್ಲಿ ತಮ್ಮ ಪರವಾಗಿ ಮಾತನಾಡುವ ಅಧಿಕಾರವನ್ನು ಕೊಡುವ ಪ್ರತಿನಿಧಿ ಪತ್ರದ (ಲೆಟರ್ ಆಫ್ ಪ್ರಾಕ್ಸಿ) ನಮೂನೆಯನ್ನು ತಿಳಿವಳಿಕೆ ಪತ್ರದೊಂದಿಗೆ ಕಳುಹಿಸಿಕೊಡಬೇಕು. ಸಂಘದ ವಿಧಿಗಳಲ್ಲಿ ಈ ಅವಕಾಶ ಇದ್ದಲ್ಲಿ ಮಾತ್ರ ಇದನ್ನು ಕಳುಹಿಸಿಕೊಡಬೇಕು.

ಕಂಪನಿಯ ನಿರ್ವಾಹಕರ ವರದಿಯನ್ನು ಅಧ್ಯಕ್ಷರೊಂದಿಗೆ ಸಮಾಲೋಚಿಸಿ ಕಾರ್ಯದರ್ಶಿ ತಯಾರಿಸುತ್ತಾನೆ. ಈ ವರದಿಯನ್ನು ನಿರ್ವಾಹಕ ಮಂಡಳಿ ಒಪ್ಪಬೇಕು. ಅನಂತರ ಇದಕ್ಕೆ ನಿರ್ವಾಹಕರೂ ಕಂಪನಿಯ ಅಧ್ಯಕ್ಷರೂ ಸಹಿ ಹಾಕುತ್ತಾರೆ. ಇದನ್ನೂ ಕಂಪನಿಯ ಲಾಭ ನಷ್ಟಗಳ ಲೆಕ್ಕ ಹಾಗೂ ಆಸ್ತಿ ಜವಾಬ್ದಾರಿ ತಃಖ್ತೆಯನ್ನೂ ಅಚ್ಚುಹಾಕಿಸಿ, ಇವುಗಳ ಪ್ರತಿಗಳನ್ನು ಎಲ್ಲ ಸದಸ್ಯರಿಗೂ ಕಳುಹಿಸಿಕೊಡಬೇಕು.

ಲಾಭಾಂಶ ಹಂಚಿಕೆ : ಮೊದಲೇ ತಯಾರಿಸಿದ ಕಾರ್ಯಸೂಚಿಗೆ ಅನುಸಾರವಾಗಿ ಈ ಸಭೆಯಲ್ಲಿ ಕಲಾಪಗಳು ನಡೆಯುತ್ತವೆ. ಕಂಪನಿಯ ಕಳೆದ ವರ್ಷದ ಲಾಭದ ವಿನಿಯೋಗ ಹೇಗಾಗಬೇಕೆಂಬುದರ ವಿಚಾರವಾಗಿ ನಿರ್ವಾಹಕರು ಸೂಚಿಸಿರುವ ಶಿಫಾರಸಿನ ದೃಷ್ಟಿಯಲ್ಲಿ ತೀರ್ಮಾನ ಕೈಕೊಳ್ಳುವುದೂ ಈ ಸಭೆಯ ಮುಖ್ಯ ಕರ್ತವ್ಯಗಳಲ್ಲೊಂದು. ಕಳೆದ ವರ್ಷದ ನಿವ್ವಳ ಆದಾಯವನ್ನು ಯಾವ ರೀತಿ ವಿನಿಯೋಗ ಮಾಡಬೇಕೆಂಬುದನ್ನು ನಿರ್ವಾಹಕರು ಪರಿಶೀಲಿಸಿ ಆ ಬಗ್ಗೆ ಸೂಕ್ತ ಶಿಫಾರಸುಗಳನ್ನು ವಾರ್ಷಿಕ ಸಾಮಾನ್ಯ ಸಭೆಯ ಮುಂದೆ ಇಡುತ್ತಾರೆ. ಸಭೆಯ ಸದಸ್ಯರು ಚರ್ಚಿಸಿ ಇದನ್ನು ಒಪ್ಪುವರು ; ಅಥವಾ ಬಿಡುವರು ; ಇಲ್ಲವೇ ಸೂಕ್ತ ಮಾರ್ಪಾಟುಗಳನ್ನು ಮಾಡುವರು. ಕಂಪನಿಯ ಪಾವತಿಯಾದ ಷೇರುಗಳ ಮೇಲೆ ನಿಗದಿಯಾದ ಸೇಕಡಾ ದರದ ಲಾಭವನ್ನು ಲಾಭದ ಹಂಚಿಕೆಯಲ್ಲಿ ಮೊದಲಹಕ್ಕು ಇರಬಹುದಾದ ಷೇರುಗಳ ಮೇಲೆ ಮೊದಲು ಹಂಚಬೇಕು. ಉಳಿದದ್ದು ಸಾಮಾನ್ಯ ಹಕ್ಕುಗಳ ಷೇರುದಾರರಿಗೆ ಹಂಚಿಕೆಯಾಗಬಹುದು. ಈ ವಿಚಾರದಲ್ಲಿ ಕಂಪನಿಯ ನಿರ್ವಾಹಕರು ಮಾಡಿರುವ ಶಿಫಾರಿಸಿನ ದರಕ್ಕಿಂತ ಹೆಚ್ಚಿನ ದರದಲ್ಲಿ ಹಂಚಬೇಕೆಂದು ಹೇಳಲು ಷೇರುದಾರರಿಗೆ ಅಧಿಕಾರ ಇರುವುದಿಲ್ಲ. ಹೀಗೆ ಒಂದೊಂದು ಷೇರಿನ ಮೇಲೂ ನೀಡಿದ ಲಾಭದ ಅಂಶವೇ ಲಾಭಾಂಶ (ಡಿವಿಡೆಂಡ್).

ಈ ವಿಚಾರದಲ್ಲಿ ಕಂಪನಿಯ ಸಭೆಯಲ್ಲಿ ನಿರ್ಣಯವಾದ ಮೇಲೆ ಕಂಪನಿಯ ಕಾರ್ಯದರ್ಶಿ ಪ್ರತಿಯೊಬ್ಬ ಷೇರುದಾರನಿಗೂ ಎಷ್ಟು ಲಾಭಾಂಶ ಸಲ್ಲಬೇಕೆಂಬ ಪಟ್ಟಿಯನ್ನು ತಯಾರಿಸಿ ಅವರಿಗೆ ಅದನ್ನು ಹಂಚಲು ಸೂಕ್ತ ಏರ್ಪಾಟು ಕೈಕೊಳ್ಳುತ್ತಾನೆ.

ಅಸಾಧಾರಣ ಸಾರ್ವತ್ರಿಕ ಸಭೆ : ಎರಡು ವಾರ್ಷಿಕ ಸಾಮಾನ್ಯಸಭೆಗಳ ನಡುವೆ ನಡೆಯುವ ಸಭೆಯೇ ಅಸಾಧಾರಣ ಸಾರ್ವತ್ರಿಕ ಸಭೆ. ಇದನ್ನು ನಿರ್ವಾಹಕರೇ ಕರೆಯಬಹುದು. ಕಂಪನಿಯ ಷೇರುಬಂಡವಾಳದ ಹತ್ತನೆಯ ಒಂದು ಭಾಗಕ್ಕಿಂತ ಕಡಿಮೆಯಿಲ್ಲದಷ್ಟು ಮೊತ್ತದ ಬಂಡವಾಳವನ್ನು ಹೊಂದಿರುವ ಅಥವಾ ಕಂಪನಿಯ ಸದಸ್ಯರ ಒಟ್ಟು ಮತಾಧಿಕಾರದ ಹತ್ತನೆಯ ಒಂದು ಭಾಗಕ್ಕಿಂತ ಕಡಿಮೆಯಿಲ್ಲದಷ್ಟು ಅಧಿಕಾರ ಹೊಂದಿರುವ ಸಂಖ್ಯೆಯ ಸದಸ್ಯರು ಇಂಥ ಸಭೆಯನ್ನು ಕರೆಯಬೇಕೆಂದು ಇಚ್ಛಿಸಿ, ಅದಕ್ಕೆ ಕಾರಣವನ್ನೂ ಸೂಚಿಸಿ, ಕಂಪನಿಗೆ ಪತ್ರ ಬರೆದಾಗ ಈ ಸಭೆಯನ್ನು ಆ ಪತ್ರದ ತಾರೀಖಿನಿಂದ ಇಪ್ಪತ್ತೊಂದು ದಿನಗಳೊಳಗಾಗಿ ಕರೆಯಬೇಕು; ನಲವತ್ತೈದು ದಿನಗಳೊಳಗೆ ಈ ಸಭೆಯನ್ನು ನಡೆಸದಿದ್ದರೆ, ಆಗ ಇಚ್ಛಾಪತ್ರ ಸಲ್ಲಿಸಿದ ಸದಸ್ಯರೇ ಸಭೆಯನ್ನು ಕರೆದು ಕಲಾಪ ನಡೆಸಬಹುದು.

ನಿರ್ಣಯಗಳು : ಕಂಪನಿಯ ಸಭೆಯ ತೀರ್ಮಾನಗಳು ನಿರ್ಣಯಗಳ ರೂಪದಲ್ಲಿ ಆಗುತ್ತವೆ. ಸೂಚನೆಯ ಪರವಾಗಿಯೂ ವಿರೋಧವಾಗಿಯೂ ತಲಾ ಎಷ್ಟು ಮಂದಿ ಮತ ನೀಡುವರೆಂಬುದನ್ನು ಲೆಕ್ಕ ಹಾಕಿ, ಆ ಸೂಚನೆ ಸ್ವೀಕೃತವೇ ಅಸ್ವೀಕೃತವೇ ಎಂಬುದನ್ನು ಗಮನಿಸಿ ತೀರ್ಮಾನಿಸಬೇಕು. ಸೂಚನೆಗೆ ಹೆಚ್ಚು ಮತ ಬಂದಿದ್ದರೆ ಆಗ ಅದು ಸಾಮಾನ್ಯವಾಗಿ ಸ್ವೀಕೃತ. ಸ್ವೀಕೃತವಾದ ಸೂಚನೆಯೇ ನಿರ್ಣಯ.

ನಿರ್ಣಯಗಳು ಎರಡು ವಿಧ : ಸಾಮಾನ್ಯ ನಿರ್ಣಯಕ್ಕೆ ಸಾಮಾನ್ಯ ಬಹುಮತ ಇದ್ದರೆ ಸಾಕು. ನಿರ್ವಾಹಕರ ವರದಿಯ ಸ್ವೀಕಾರ, ವಾರ್ಷಿಕ ಲೆಕ್ಕಗಳ ಒಪ್ಪಿಗೆ, ಲೆಕ್ಕ ಶೋಧಕರ ನೇಮಕ, ನಿರ್ವಾಹಕರ ಆಯ್ಕೆ ಮುಂತಾದವಕ್ಕೆ ಸಾಮಾನ್ಯ ಬಹುಮತ ಸಾಕು. ಕಂಪನಿಯ ನಿಬಂಧನೆಗಳ ತಿದ್ದುಪಡಿಯೇ ಮುಂತಾದ ಮುಖ್ಯ ವಿಚಾರಗಳ ತೀರ್ಮಾನಕ್ಕೆ ವಿಶೇಷ ನಿರ್ಣಯವೇ ಆಗಬೇಕು. ಇಂಥ ನಿರ್ಣಯದ ಸೂಚನೆಯನ್ನು ಸದಸ್ಯರಿಗೆ ಕನಿಷ್ಠ ಪಕ್ಷ ಇಪ್ಪತ್ತೊಂದು ದಿನಗಳ ಮುಂಚೆ ಕಳಿಸಬೇಕು. ಕೊಟ್ಟ ಮತದಲ್ಲಿ ಮುಕ್ಕಾಲು ಸಂಖ್ಯೆಯ ಮತ ಈ ನಿರ್ಣಯದ ಪರವಾಗಿ ಬರಬೇಕು.

**ಡಿಬೆಂಚರ್ ಅಥವಾ ಸಾಲಪತ್ರ :** ಕಂಪನಿಗೆ ಷೇರುಗಳ ಮೂಲಕ ಪಡೆದ ಬಂಡವಾಳಕ್ಕಿಂತ ಹೆಚ್ಚಿನ ಬಂಡವಾಳ ಬೇಕಿದ್ದರೆ ಅದನ್ನು ಡಿಬೆಂಚರ್ ಅಥವಾ ಸಾಲಪತ್ರಗಳ ಮೂಲಕ ಪಡೆಯಬಹುದು. ಡಿಬೆಂಚರುಗಳನ್ನೂ ಷೇರುಗಳ ಹಾಗೆಯೇ ಸಾರ್ವಜನಿಕರಿಗೆ ನೀಡಲಾಗುತ್ತದೆ. ಆದರೆ ಒಂದು ಮುಖ್ಯ ವ್ಯತ್ಯಾಸ

ಷೇರುದಾರರು ಕಂಪನಿಯ ಒಡೆಯರು. ಡಿಬೆಂಚರುದಾರರು ಸಾಲಗಾರರು. ಕಂಪನಿ ಲಾಭ ಸಂಪಾದನೆ ಮಾಡಿದಾಗ ಷೇರುಗಳ ಮೇಲೆ ಲಾಭದ ಹಂಚಿಕೆಯಾಗುತ್ತದೆ. ಕಂಪನಿ ಲಾಭ ಗಳಿಸಲಿ ಬಿಡಲಿ, ಗೊತ್ತಾದ ದರದಲ್ಲಿ ಡಿಬೆಂಚರುಗಳ ಮೇಲೆ ಬಡ್ಡಿ ಸಲ್ಲಿಸಲೇ ಬೇಕು. ಷೇರುಗಳ ಹಣವನ್ನು ಸಾಮಾನ್ಯವಾಗಿ ಹಿಂತಿರುಗಿಸುವುದಿಲ್ಲ. ಆದರೆ ಡಿಬೆಂಚರಿನ ಹಣವನ್ನು ಕ್ಲುಪ್ತವಾದ ಅವಧಿಯು ಪೂರೈಕೆಯಾದಾಗ ಹಿಂತಿರುಗಿಸಬೇಕು. ಈ ನಡುವೆ ಕಂಪನಿಯನ್ನು ಮುಚ್ಚಿದರೆ ಡಿಬೆಂಚರಿನ ಹಣವನ್ನು ಕೊಟ್ಟಮೇಲೆಯೇ ಷೇರುದಾರರಿಗೆ ಮಿಕ್ಕ ಹಣದ ವಿನಿಯೋಗ.

ಡಿಬೆಂಚರುಗಳಲ್ಲಿ ನಾನಾ ವಿಧ. ಕಂಪನಿಯ ಸ್ವತ್ತಿನ ಆಧಾರ ಪಡೆದ ಡಿಬೆಂಚರುಗಳು, ಆಧಾರವಿಲ್ಲದ ಡಿಬೆಂಚರುಗಳು, ಕಂಪನಿಯ ಪುಸ್ತಕದಲ್ಲಿ ದಾಖಲಾಗದ ಡಿಬೆಂಚರುಗಳು, ದಾಖಲಾದ ಡಿಬೆಂಚರುಗಳು ಇತ್ಯಾದಿ. ಕಂಪನಿಯ ಪುಸ್ತಕದಲ್ಲಿ ಡಿಬೆಂಚರುದಾರರ ಹೆಸರು ದಾಖಲಾಗದಿದ್ದ ಪಕ್ಷದಲ್ಲಿ ಅಂಥ ಡಿಬೆಂಚರುಗಳನ್ನು ಒಬ್ಬರು ಇನ್ನೊಬ್ಬರಿಗೆ ಬಲು ಸುಲಭವಾಗಿ ವರ್ಗಾಯಿಸಬಹುದು. ಕಂಪನಿಯ ಪುಸ್ತಕದಲ್ಲಿ ದಾಖಲಾಗಿದ್ದ ಪಕ್ಷದಲ್ಲಿ ಅಂಥವನ್ನು ವರ್ಗಾಯಿಸಬೇಕಾದರೆ ಡಿಬೆಂಚರುದಾರರು ಕಂಪನಿಗೆ ಬರೆದು ಹೆಸರು ಬದಲಾವಣೆ ಮಾಡಿಸಬೇಕು. ಆಧಾರ ಹೊಂದಿದ ಡಿಬೆಂಚರುಗಳ ಒಡೆಯರಿಗೆ ಕಂಪನಿ ಆಧಾರವಾಗಿ ನೀಡಿದ ಸ್ವತ್ತುಗಳ ಮೇಲೆ ಹಕ್ಕುಂಟು. ಕಂಪನಿಯನ್ನು ಮುಚ್ಚಿದ ಸಂದರ್ಭದಲ್ಲಿ ಆ ಸ್ವತ್ತುಗಳನ್ನು ಮಾರಿ ಬಂದ ಹಣದಲ್ಲಿ ಈ ಡಿಬೆಂಚರುದಾರರಿಗೆ ಮೊದಲು ಹಣ ಸಲ್ಲಬೇಕು. ಆಧಾರರಹಿತ ಡಿಬೆಂಚರುಗಳ ಒಡೆಯರು ಕಂಪನಿಯ ಸಾಮಾನ್ಯ ಸಾಲಿಗರು. ಅವರಿಗೆ ಯಾವ ಒಂದು ಸ್ವತ್ತಿನ ಮೇಲೂ ವಿಶಿಷ್ಟವಾದ ಅಧಿಕಾರ ಇರುವುದಿಲ್ಲ.

**ಕಂಪನಿಯ ಅವಸಾಯನ (ಲಿಕ್ವಿಡೇಷನ್) ಅಥವಾ ದಿವಾಳಿತನ (ಬ್ಯಾಂಕ್ರಪ್ಸಿ) :** ಕಂಪನಿಯ ಕಲಾಪಗಳನ್ನು ಮುಗಿಸಿ, ಅದರ ವ್ಯವಹಾರಗಳನ್ನು ಕೊನೆಗೊಳಿಸಿ, ಅದನ್ನು ಮುಚ್ಚುವುದೇ ಕಂಪನಿಯ ಅವಸಾಯನ ಅಥವಾ ಅಂತ್ಯ. ಕಂಪನಿಯ ಅಂತ್ಯವಾದಾಗ ಅದು ದಿವಾಳಿಯಾಯಿತೆಂದು ಯಾವಾಗಲೂ ಅರ್ಥವಲ್ಲ. ಕಂಪನಿ ತನ್ನ ಆಸ್ತಿಯಿಂದ ತನ್ನ ಸಾಲವೆಲ್ಲವನ್ನೂ ತೀರಿಸಲು ಅಸಮರ್ಥವಾದ ಸಂದರ್ಭದಲ್ಲಿ ಮಾತ್ರವೇ ದಿವಾಳಿ ಆಗುತ್ತದೆ. ಅದು ಕಡ್ಡಾಯ ಪೂರ್ವಕ ಅವಸಾಯನ. ಇದೇ ಅಲ್ಲದೆ ಇನ್ನೆರಡು ರೀತಿಯಲ್ಲಿ ಕಂಪನಿಯ ಅವಸಾಯನ ಆಗಬಹುದು: ಸ್ವ ಇಚ್ಛೆಯಿಂದ ಆದ ಅವಸಾಯನ ಮತ್ತು ನ್ಯಾಯಾಲಯದ ಮೇಲ್ವಿಚಾರಣೆಯಲ್ಲಿ ಆದ ಅವಸಾಯನ.

ಕಡ್ಡಾಯಪೂರ್ವಕ (ಕಂಪಲ್ಸರಿ) ಅವಸಾಯನವೆಂದರೆ ನ್ಯಾಯಾಲಯದಿಂದ ಜಾರಿಗೆ ತರಲಾದ ಅಂತ್ಯ. ಸದಸ್ಯರು ನ್ಯಾಯಾಲಯದಿಂದಲೇ ಕಂಪನಿಯ ಅಂತ್ಯವಾಗಬೇಕೆಂದು ವಿಶೇಷನಿರ್ಣಯ ಮಾಡಿದಾಗಲೋ, ಕಾನೂನುಬದ್ಧವಾದ ಸದಸ್ಯಸಭೆಯನ್ನು ಕಂಪನಿ ಏರ್ಪಡಿಸಿದಾಗಲೋ ಕಂಪನಿಯ ರಿಜಿಸ್ಟರಾದ ಒಂದು ವರ್ಷದೊಳಗೆ ಅದು ವ್ಯವಹಾರವನ್ನು ಆರಂಭಿಸದೆ ಹೋದಾಗಲೋ ಕಂಪನಿಯ ಸದಸ್ಯರ ಸಂಖ್ಯೆ ಕನಿಷ್ಠ ಮಿತಿಗಿಂತ ಕಡಿಮೆಯಾದಾಗಲೋ ಕಂಪನಿಯ ಸಾಲವನ್ನು ತೀರಿಸುವುದು ಅಸಾಧ್ಯವಾದಾಗಲೋ ನ್ಯಾಯಾಲಯವೇ ಕಂಪನಿಯನ್ನು ಅಂತ್ಯಗೊಳಿಸುವುದು ಸೂಕ್ತವೆಂದು ಅಭಿಪ್ರಾಯಪಟ್ಟಾಗಲೋ ಈ ಬಗೆಯ ಅಂತ್ಯವಾಗುತ್ತದೆ.

ಈ ಸಂದರ್ಭದಲ್ಲಿ ನ್ಯಾಯಾಲಯ ಒಬ್ಬ ಅಧಿಕೃತ ಅವಸಾಯಕನನ್ನು (ಅಫಿಷಿಯಲ್ ಲಿಕ್ವಿಡೇಟರ್) ನೇಮಿಸುತ್ತದೆ. ಈತ ಕಂಪನಿಯ ಆಸ್ತಿಯನ್ನು ಮಾರಿ ನಗದು ಹಣ ಪಡೆದು ಕಂಪನಿಗೆ ಬರಬೇಕಾದ ಹಣವನ್ನೆಲ್ಲ ವಸೂಲುಮಾಡಿ, ಆ ಹಣದಿಂದ ಸಾಲಗಳನ್ನೆಲ್ಲ ತೀರಿಸಿ, ಹಣವೇನಾದರೂ ಉಳಿದಿದ್ದರೆ ಅದನ್ನು ಷೇರುದಾರರಲ್ಲಿ ಅವರ ಹಕ್ಕಿಗೆ ಅನುಸಾರವಾಗಿ ಹಂಚುತ್ತಾನೆ.

ಕಂಪನಿಯ ಅವಧಿ ಮುಗಿದರೆ ಅಥವಾ ಕಂಪನಿಯ ಷೇರುದಾರರು ಕಂಪನಿಯನ್ನು ಮುಚ್ಚಲು ವಿಶೇಷ ಏರ್ಪಾಡು ಮಾಡಿದರೆ ಆಗ ಅದು ಕಂಪನಿಯ "ಸ್ವ ಇಚ್ಛೆಯ ಅಂತ್ಯವಾಗುತ್ತದೆ. ಕಂಪನಿಯೇ ಆಗ ಲೇಣೆದೇಣೆಗಳ ವ್ಯವಸ್ಥಾಪಕನೊಬ್ಬನನ್ನು ನೇಮಿಸುತ್ತದೆ.

ಕಂಪನಿಯನ್ನು ಮುಚ್ಚಬೇಕೆಂದು ಷೇರುದಾರರು ನಿರ್ಣಯ ಮಾಡಿದ ಮೇಲೆ ಕಂಪನಿಯ ಯಾವ ಷೇರುದಾರನಾಗಲಿ, ಡಿಬೆಂಚರುದಾರನಾಗಲಿ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿ, ನ್ಯಾಯಾಲಯದ ಮೇಲ್ವಿಚಾರಣೆಯಲ್ಲಿ ಕಂಪನಿಯ ಅವಸಾಯನ ಆಗಬೇಕೆಂದು ಕೇಳಿಕೊಂಡಲ್ಲಿ ಅಂಥ ಸಂದರ್ಭದಲ್ಲಿ ನ್ಯಾಯಾಲಯ ಮೇಲ್ವಿಚಾರಣೆ ನಡೆಸುತ್ತದೆ.

ಕಂಪನಿಯ ಅಂತ್ಯವಾದ ಮೇಲೆ ಆದರ ಹೆಸರಿನಲ್ಲಿ ಯಾವ ಬಗೆಯ ವ್ಯವಹಾರವೂ ನಡೆಯುವುದಿಲ್ಲ. ಕಂಪನಿಯನ್ನು ಅಂತ್ಯಗೊಳಿಸುವ ಕ್ರಮ ಕೈಕೊಂಡ ಕಾಲದಲ್ಲಿ ಆ ಕಂಪನಿಯ ಹೆಸರಿನಲ್ಲಿ ವ್ಯವಹಾರ ನಡೆಸುವ ಕರಾರು ಮಾಡಿಕೊಳ್ಳುವ ಎಲ್ಲ ಹಕ್ಕುಗಳೂ ಕಂಪನಿಯ ನಿರ್ವಾಹಕರಿಂದ ತಪ್ಪಿ ಅವಸಾಯಕನಲ್ಲಿ ನಿಹಿತವಾಗುತ್ತದೆ.

(ಎಚ್.ಎಸ್.ಕೆ.)

**ಕಂಪನಿ (ಸೈನ್ಯದಲ್ಲಿ) :** ಆಡಳಿತೆಯ ದೃಷ್ಟಿಯಿಂದ ಸ್ವಯಂಪೂರ್ಣವಾದ ಅತ್ಯಂತ ಕಿರಿಯ ಯೋಧಸಮೂಹ. ಮೂರು ಸೆಕ್ಷನ್ನುಗಳ ಸಮೂಹ ಒಂದು ಪ್ಲೆಟೂನು ; ಇಂಥ ಮೂರು ಪ್ಲೆಟೂನುಗಳ ಸಮೂಹ ಒಂದು ಕಂಪನಿ. ಇದರ ಮುಖ್ಯಸ್ಥನಿಗೆ ಕಂಪನಿ ಕಮಾಂಡರ್ ಎಂದು ಹೆಸರು. ಈತನ ದರ್ಜೆ ಸಾಮಾನ್ಯವಾಗಿ ಕ್ಯಾಪ್ಟನ್ ಅಥವಾ ಮೇಜರ್. ನೋಡಿ—ಸೈನ್ಯಬಲ. *

**ಕಂಪವಾತ :** ಅಕ್ರಮ ಸೆಡವು ನಡುಕಗಳಿಂದ ಪ್ರಕಟಗೊಳ್ಳುವ ಒಂದು ನರವ್ಯಾಧಿ (ಕೊರಿಯ ; ಸೆಂಟ್ ವಿಟಸ್ ಡ್ಯಾನ್ಸ್). ಕೀಲುಜ್ವರದ ವಿಷದ ಸೋಂಕಿನ ಫಲವಾಗಿ ಮಕ್ಕಳಲ್ಲಿ ಮತ್ತು ಯುವಕರಲ್ಲಿ ದೇಹದ ಭಾಗಗಳು ತಮ್ಮಷ್ಟಕ್ಕೇ ಅದುರುತ್ತ ಕಂಪವಾತದ ರೂಪದಲ್ಲಿ ತೋರುವುದಿದೆ. ಮಿದುಳಿನ ನರಮಂಡಲದಲ್ಲಿ ಊತ ಮತ್ತು ರಕ್ತ ಕಟ್ಟು ತೋರಿಬರುವುದಲ್ಲದೆ ನರ ಕಣಗಳ ಕೇಂದ್ರಗಳು ಅನುವಳಿಕೆ ಹೊಂದುತ್ತವೆ. 5—20 ವರ್ಷದ ವರೆಗಿನವರಲ್ಲಿ ಕೀಲುಜ್ವರದ ಫಲವಾಗಿ ಆದರ ಇತರ ಲಕ್ಷಣಗಳು ಕಾಣಿಸಬಹುದು. ಇನ್ನು ಕೆಲವು ಬಾರಿ ಇದು ಕೀಲುಜ್ವರದ ಏಕಮೇವ ಲಕ್ಷಣವೂ ಆಗುವುದುಂಟು. ಮಾನಸಿಕ ಒತ್ತಡ ಮತ್ತು ಶಾಲೆಯಲ್ಲಿ ಹೆಚ್ಚು ಶ್ರಮದ ಪರಿಣಾಮವಾಗಿ ಇದು ತಲೆದೋರುವುದಿದೆ. ಕೆಲವರು ಗರ್ಭಿಣಿಯರಲ್ಲೂ ಇದು ಮೊದಲ ಬಾರಿ ಕಾಣಿಸಿಕೊಳ್ಳಬಹುದು.

ಕಂಪವಾತದ ಲಕ್ಷಣಗಳು ನಿಧಾನವಾಗಿ ಬೆಳಕಿಗೆ ಬರುವುದರಿಂದ ಆದರ ಇರುವಿಕೆಯ ಅರಿವು ಆಗುವಷ್ಟರಲ್ಲೇ ಅನೇಕ ದಿನಗಳು ಕಳೆದು ಹೋಗಿರುತ್ತವೆ. ಮಗು ಚಟುವಟಿಕೆಯಿಂದಿರುವುದಿಲ್ಲ. ಎತ್ತಿದ ಪದಾರ್ಥಗಳನ್ನು ಬೀಳಿಸುತ್ತದೆ. ಸುಮ್ಮನೆ ಕುಳಿತುಕೊಳ್ಳದೆ, ಗಾಬರಿಯಿಂದ ಅತ್ತಿತ್ತ ಕೈಯಾಡಿಸುತ್ತಿರುತ್ತದೆ. ಹೀಗೆ ದೈಹಿಕ ಕಂಪನದ ಮೇಲೆ ಹಿಡಿತವಿಲ್ಲದಿರುವುದು ರೋಗದ ಪ್ರಮುಖ ಲಕ್ಷಣ. ಏನೋ ಕೆಲಸ ಮಾಡಲು ಹೊರಟು ಅದು ಗುರಿಯನ್ನು ಮುಟ್ಟದೆ ಅರ್ಧಂಬರ್ಧ ಆದಂತೆ ಯದ್ವಾತದ್ವವಾಗಿ ದೇಹದ ಭಾಗಗಳನ್ನು ಆಡಿಸುವುದು ತೋರಿಬರುತ್ತದೆ. ಹುಬ್ಬು ಮೇಲೇರಿಕೆ, ತುಟಿ ಕಚ್ಚುವುದು ಕಾರಣವಿಲ್ಲದೆ ನಗು, ಹೆದರಿಸುವ ಮುಖಭಾಗ, ಮುಖ ಕಿವಿಚುವುದು, ತಲೆ, ಕಣ್ಣುಗುಡ್ಡೆ ಮತ್ತು ನಾಲಿಗೆಯ ಚಲನೆ ಇವನೆಲ್ಲ ಗುರುತಿಸಬಹುದು. ಆಹಾರವನ್ನು ಜಗಿಯಲು ಮತ್ತು ನುಂಗಲು ತೊಂದರೆಯಾಗುವುದು. ಅಕಾರಣವಾಗಿ ಬೆರಳು ಮೊಣಕೈ ಮಡಿಸುವುದು, ಉದ್ದ ಮಾಡುವುದು ತೋಳು ಮುಂದೆ ಚಾಚುವುದು, ಕಾಲಾಡಿಸುವುದು ತೋರಿಬರುತ್ತದೆ. ಉಸಿರಾಟದ ಗತಿಯಲ್ಲಿ ವ್ಯತ್ಯಾಸ ಮತ್ತು ಮಾತನಾಡುವುದರಲ್ಲಿ ತೊಡರುವುದು ಕಾಣಿಸುತ್ತದೆ. ಏನಾದರೂ ಕೆಲಸ ಮಾಡುವಾಗ ಮತ್ತು ಗಾಬರಿಯಾದ ಕಂಪನ ಹೆಚ್ಚಾಗುತ್ತದೆ. ಮಗು ಮಲಗಿದಾಗ ಕಂಪನ ತೋರಿಬರುವುದಿಲ್ಲ.

ಈ ರೋಗ ಸಾಧಾರಣ ಸ್ಥಿತಿಯಲ್ಲಿರುವಾಗ ಯಾವ ಕೆಲಸಕ್ಕೂ ಇದರಿಂದ ತೊಂದರೆ ಉಂಟಾಗುವುದಿಲ್ಲ. ಅದು ಉಲ್ಬಣಗೊಂಡಂತೆ ಅಸಂಬದ್ಧ ಚಲನೆ ಮತ್ತು ಕಂಪನಗಳು ತೀವ್ರವಾಗುತ್ತವೆ. ಅವನ್ನು ಹಿಡಿತಲ್ಲಿಡುವುದು ಕಷ್ಟ. ಸ್ನಾಯುಗಳ ಶಕ್ತಿ ಕುಂದಿರುತ್ತದೆ. ಮಾನಸಿಕ ಅಸ್ಥಿರತೆಯಿದ್ದರೂ ಬುದ್ಧಿಮತ್ತೆಯಲ್ಲಿ ಯಾವ ವ್ಯತ್ಯಾಸವೂ ಇರುವುದಿಲ್ಲ. ಕೆಲವರಲ್ಲಿ ಹೃದಯದ ದೌರ್ಬಲ್ಯ ತೋರಿ ಅದರ ಗಾತ್ರ ದೊಡ್ಡದಾಗಬಹುದು ; ಆಲಿಸಿದಾಗ ಮರಮರ ಶಬ್ದ ಕೇಳಿಬರಬಹುದು. ಆಗ ನಾಡಿ ತೀವ್ರಗತಿಯಿಂದ ಮಿಡಿಯುತಿರುವುದು.

ಹೆಚ್ಚು ಜನ ರೋಗಿಗಳು ಎರಡು ಮೂರು ತಿಂಗಳುಗಳಲ್ಲಿ ಗುಣಮುಖರಾಗುತ್ತಾರೆ. ಕೆಲವರಲ್ಲಿ ಒಂದು ವರ್ಷದಲ್ಲಿಯೇ ರೋಗ ಮರುಕಳಿಸಬಹುದು. ಕೆಲವರಲ್ಲಿ ಕಂಪನ ರೂಢಿಯಾಗಿ ತೋರುತ್ತ ಉಳಿಯಬಹುದು. ಈ ಲಕ್ಷಣಗಳು ತೋರಿದಾಗ ನಾಲ್ಕುವಾರ ಹಾಸಿಗೆಯಲ್ಲಿದ್ದು ಸಂಪೂರ್ಣ ವಿಶ್ರಾಂತಿಯನ್ನು ಪಡೆಯಬೇಕು. ಆಸ್ಪಿರಿನ್ ಮತ್ತು ಫೀನೋಬಾರ್ಬಿಟೋನ್ ಔಷಧಗಳು ಕಂಪನವನ್ನು ಕಡಿಮೆ ಮಾಡಲು ಬಲು ಸಹಾಯಕಾರಿ. ರೋಗದಿಂದ ಚೇತರಿಸಿಕೊಳ್ಳುವಾಗ ಉತ್ತೇಜನ ಕೊಟ್ಟು ಮೊದಲಿನ ಚಟುವಟಿಕೆಯನ್ನು ಪಡೆಯುವಂತೆ ಮಾಡಬೇಕು.

(ಪಿ.ಎಸ್.ಎಸ್.)

**ಕಂಪಾಲ :** ಪೂರ್ವ ಆಫ್ರಿಕದಲ್ಲಿರುವ ಉಗಾಂಡ ದೇಶದ ರಾಜಧಾನಿ: ಅಲ್ಲಿಯ ಅತ್ಯಂತ ದೊಡ್ಡ ನಗರ. ಬುಗಾಂಡ ಪ್ರಾಂತ್ಯದಲ್ಲಿ ಎನ್‌ಟೆಬ್ಬೆಗೆ ಉತ್ತರಕ್ಕೂ ಈಶಾನ್ಯಕ್ಕೂ ನಡುವೆ 21 ಮೈ. ದೂರದಲ್ಲಿ ವಿಕ್ಟೋರಿಯ ಸರೋವರದ ದಡದ ಮೇಲಿದೆ. ಈ ನಗರದ ವಿಸ್ತೀರ್ಣ 8½ ಚ.ಮೈ. ಜನವಸತಿ, ವಾಣಿಜ್ಯ ಮತ್ತು ಕೈಗಾರಿಕಾ ಪ್ರದೇಶಗಳು ಪ್ರತ್ಯೇಕವಾಗಿವೆ. ಮುಖ್ಯರಸ್ತೆಯ ಉದ್ದ 5 ಮೈಲಿ. ಇದರ ಮಧ್ಯದಲ್ಲಿ ಇರುವ ಪುರಭವನವನ್ನು ಕಟ್ಟಿಸಿದಾತ (1950) ಒಬ್ಬ

ಭಾರತೀಯ ವ್ಯಾಪಾರಿ. ಸರ್ಕಾರಿ ಭವನವೂ ಕೆಲವು ಸಚಿವಾಲಯಗಳೂ ಎನ್‌ಟೆಬ್ಬೆಯಲ್ಲಿವೆ. ಇತರ ಖಾತೆಗಳೂ ಸರ್ಕಾರಿ ಕಚೇರಿಗಳೂ ಇರುವುದು ಕಂಪಾಲದಲ್ಲಿ. ವಿಧಾನ ಪರಿಷತ್ತಿನ ಅಧಿವೇಶನ ನಡೆಯುವುದೂ ಸಂಸದೀಯ ಭವನ ಇರುವುದೂ ಇಲ್ಲೇ. ಮುಖ್ಯರಸ್ತೆಯ ಎರಡು ಪಕ್ಕಗಳಲ್ಲೂ ಹಿಂದೆ ಇದ್ದ ಹಳೆಯ ಭಾರತೀಯ ಮಳಿಗೆಗಳಿಗೆ ಬದಲಾಗಿ ಈಗ ಹೊಸ ಭವನಗಳು ಎದ್ದಿವೆ. ಉಗಾಂಡದ ವಿದ್ಯುಚ್ಛಕ್ತಿ ಮಂಡಳಿಯ ಭವನ (ಅಂಬರ್ ಹೌಸ್), ಲಿಂಟ್ ಮಾರುಕಟ್ಟೆ ಮತ್ತು ಕಾಫಿ ಮಂಡಲಿಯ ಭವನಗಳು ಉದಾಹರಣೆಗಳು. ಉಗಾಂಡದ ವಸ್ತುಸಂಗ್ರಹಾಲಯ ಮತ್ತು ನ್ಯಾಯಾಲಯಗಳು ಹಳೆಯ ಮಾದರಿಯ ಕಟ್ಟಡಗಳಲ್ಲಿಯೇ ಇವೆ. 1952ರಲ್ಲಿ ವಸ್ತುಸಂಗ್ರಹಾಲಯವನ್ನು ಹೊಸದಾಗಿ ಕಟ್ಟಲಾಯಿತು. ಕಂಪಾಲದಲ್ಲಿ ಅನೇಕ ಮಸೀದಿಗಳು, ದೇವಾಲಯಗಳು, ಚರ್ಚುಗಳು, ಆಸ್ಪತ್ರೆಗಳು, ಶಾಲಾ ಕಾಲೇಜುಗಳು, ಜ್ಯೂಬಿಲಿ ಉದ್ಯಾನ, ಕ್ರೀಡಾಂಗಣ ಮುಂತಾದುವೂ ಇವೆ. ಕಂಪಾಲದ ಬಾನುಲಿ ಕೇಂದ್ರ ಇರುವುದು ಬುಗೋಲೋಬಿ ಬೆಟ್ಟದ ಮೇಲೆ.

ಕಂಪಾಲ ಉಗಾಂಡದ ಮುಖ್ಯರಸ್ತೆ, ರೈಲ್ವೆ, ಜಲಮಾರ್ಗ ಮತ್ತು ವಾಯುಮಾರ್ಗಗಳ ಕೇಂದ್ರ. ಇಲ್ಲಿಯ ಜನಸಂಖ್ಯೆ 46,735 (1959). ಇವರಲ್ಲಿ 24,056 ಮಂದಿ ಆಫ್ರಿಕನರು, 19,268 ಏಷ್ಯನರು, 3,179 ಐರೋಪ್ಯರು, 232 ಮಂದಿ ಇತರರು. (ಕೆ.ಎಸ್.ಸಿ).

**ಕಂಪಾಸಿಟಿ :** ಹೂ ಬಿಡುವ ಸಸ್ಯಕುಟುಂಬಗಳಲ್ಲೆಲ್ಲ ಅತ್ಯಂತ ದೊಡ್ಡದು. ದ್ವಿದಳ ಸಸ್ಯವರ್ಗ, ಸಂಯುಕ್ತ ದಳಗಳುಳ್ಳ ಸಸ್ಯ ವಿಭಾಗ, ಕಂಪ್ಯಾನುಲೇಟಿ ಅಥವಾ ಆಸ್ಟರೇಲಿಸ್ ಗಣಕ್ಕೆ ಸೇರಿದೆ. ಆಸ್ಟರೇಸೀ ಪರ್ಯಾಯನಾಮ. ಇದರಲ್ಲಿ ಒಂಬೈನೂರು ಜಾತಿಗಳು, ಸುಮಾರು ಹದಿಮೂರು ಸಾವಿರ ಪ್ರಭೇದಗಳು ಇವೆ. ಜಗತ್ತಿನಾದ್ಯಂತ ಪಸರಿಸಿರುವ ಈ ಕುಟುಂಬದ ಸಸ್ಯಗಳನ್ನು ಅವುಗಳ ವಿಶಿಷ್ಟವಾದ ಚೆಂಡುಮಂಜರಿ ಹೂಗೊಂಚಲಿನಿಂದ ಗುರುತಿಸಬಹುದು. ಕಂಪಾಸಿಟಿ ಕುಟುಂಬದ ಸಸ್ಯಗಳು ತಮ್ಮ ಬೆಳೆವಣಿಗೆಯ ರೀತಿಯ ವೈವಿಧ್ಯಕ್ಕೆ ಹೆಸರಾಗಿವೆ. ಹೆಚ್ಚಿನವು ಮೂಲಿಕೆಗಳು. ಪೊದೆಗಳೂ ಸಾಮಾನ್ಯ. ಆದರೆ ಮರ, ಬಳ್ಳಿ, ಅಪ್ಪುಗಿಡ ಮುಂತಾದುವು ಬಹು ವಿರಳ. ಅಲ್ಲದೆ ಇವು ಬೆಳೆಯುವ ಸ್ಥಳಗಳಲ್ಲೂ ವೈವಿಧ್ಯ ಇದೆ. ಬಹುಪಾಲು ಪ್ರಭೇದಗಳು ಸಾಧಾರಣ ನೆಲದಲ್ಲಿ ಬೆಳೆದರೂ ಕೆಲವು ಕೆಸರು ಭೂಮಿಯಲ್ಲಿರುವುದೂ ಉಂಟು. ಆದರೆ ನಿಜವಾದ ಜಲಸಸ್ಯಗಳಿಲ್ಲ. ಒಂದೇ ಜಾತಿಯ ವಿವಿಧ ಪ್ರಭೇದಗಳು ಬೇರೆ ಬೇರೆ ಆಕಾರ, ರಚನೆ, ಬೆಳೆವಣಿಗೆಯ ರೀತಿಯನ್ನು ಪ್ರದರ್ಶಿಸಬಹುದು. ಉದಾಹರಣೆಗೆ ಸಿನೀಶಿಯೋ. ಇದರ ಬೇರು ಸಮೂಹ ತಾಯಿಬೇರು ಪ್ರಕಾರಕ್ಕೆ ಸೇರಿದ್ದು. ಕೆಲವು ಜಾತಿಗಳಲ್ಲಿ ಬೇರುಗಳು ಆಹಾರ ಸಂಗ್ರಹಿಸುವುದರಿಂದ ಗೆಡ್ಡೆಯಂತಿವೆ. ಉದಾಹರಣೆಗೆ ಡೇಲಿಯ, ಟರ್ಯಾಕ್ಸಕಮ್ ಮತ್ತು ಸಿಕೋರಿಯಮ್. ಕಾಂಡದ ರಚನೆಯಲ್ಲೂ ವೈವಿಧ್ಯವಿದೆ. ಕಾಂಡ ಕೆಲವು ಜಾತಿಗಳಲ್ಲಿ ಮೃದುವಾಗಿದ್ದರೆ, ಇನ್ನು ಕೆಲವು ಬಗೆಗಳಲ್ಲಿ ಒರಟಾಗಿರುವುದು. ಸಾಮಾನ್ಯವಾಗಿ ಮೇಲಕ್ಕೆ ನೇರವಾಗಿ ಬೆಳೆಯುತ್ತದೆ. ಹಲವು ಪ್ರಭೇದಗಳಲ್ಲಿ ನೆಲದ ಮೇಲೆಯೂ ನೆಲದ ಒಳಗೂ ಭೂಮಿಗೆ ಸಮಾನಾಂತರವಾಗಿ ಬೆಳೆಯುವುದು ಉಂಟು. ಬೆಲ್ಲಿಸ್, ಅಕಿಲೀಯ, ಸೇವಂತಿಗೆ ಮುಂತಾದುವುಗಳಲ್ಲಿ ಕಾಂಡದ ಕವಲುಗಳು ನಿರ್ಲಿಂಗರೀತಿ ವಂಶಾಭಿವೃದ್ಧಿಯಲ್ಲಿ ಸಹಾಯಕವಾಗಿವೆ. ಕಾಂಡದ ಮೇಲೆಲ್ಲ ನಯವಾದ ತುಪ್ಪುಳವಿದೆ. ಸಿನರಿಯಿ ಗುಂಪಿನ ಪ್ರಭೇದಗಳ ಕಾಂಡದಲ್ಲಿ ಮುಳ್ಳುಗಳಿರುವುದುಂಟು. ಲೆಟಿಸ್, ಡ್ಯಾಂಡಿಲೈಯನ್ ಮುಂತಾದ ಜಾತಿಗಳಲ್ಲಿ ಕಾಂಡಗಳಲ್ಲಿ ಬಿಳಿಯ ಬಣ್ಣದ ಹಾಲ್ನೊರೆಯಿದೆ. ಈ ಕುಟುಂಬದಲ್ಲಿ ಸಾಧಾರಣವಾಗಿ ಎಲ್ಲ ರೀತಿಯ ಎಲೆಗಳೂ ಇವೆ. ಕಾಂಡದ ಮೇಲೆ ಎಲೆಗಳಿರುವುದು ಸಾಮಾನ್ಯವಾದರೂ ಕೆಲವು ಪ್ರಭೇದಗಳಲ್ಲಿ ಕಾಂಡ ಬಹು ಚಿಕ್ಕದಾಗಿದ್ದು, ಎಲೆಗಳು ಬೇರಿನಿಂದಲೇ ಹೊರಟಂತೆ (ರ್‍ಯಾಡಿಕಲ್ ಎಲೆಗಳು) ಕಾಣುತ್ತವೆ. ಉದಾಹರಣೆಗೆ ಟರ್ಯಾಕ್ಸಕಮ್. ಕಾಂಡದ ಮೇಲಿನ ಎಲೆಗಳ ಜೋಡಣೆ ವಿವಿಧ ಬಗೆಯದು—ಪರ್ಯಾಯ, ಅಭಿಮುಖ, ಸುತ್ತುಜೋಡಣೆ—ಹೀಗೆ. ಕೆಲವು ಬಗೆಗಳಲ್ಲಿ ಎಲೆಗಳು ಸರಳ, ಇನ್ನು ಕೆಲವುಗಳಲ್ಲಿ ಸಂಯುಕ್ತ. ಎಲೆಯ ಅಲಗು ಗರಿಯ ರೂಪದಲ್ಲೊ ಹಸ್ತಾಕಾರದಲ್ಲೊ ವಿಭಾಗವಾಗಿರುವುದೂ ಉಂಟು. ಸಾಮಾನ್ಯವಾಗಿ ವೃಂತಪರ್ಣಗಳಿಲ್ಲ.

ಪುಷ್ಪಮಂಜರಿ ಮೂಲತಃ ರೇಸಿಮೋಸ್ ತರದ್ದು. ಸಾಮಾನ್ಯವಾಗಿ ಹೂಗಳೆಲ್ಲ ಚಿಕ್ಕವಾಗಿದ್ದು ಗುಂಪಾಗಿ ಕೂಡಿ ಚೆಂಡುಮಂಜರಿಯಾಗಿದೆ. ಚಿಕ್ಕದಾದ ಈ ಹೂಗಳನ್ನು ಫ್ಲೊರೆಟುಗಳೆನ್ನುತ್ತಾರೆ. ಕೆಲವು ಚೆಂಡುಮಂಜರಿಗಳಲ್ಲಿ ಒಂದೇ ಒಂದು ಪುಷ್ಪವಿರುವುದನ್ನು ಕಾಣಬಹುದು. ಇನ್ನು ಕೆಲವು ಸಸ್ಯಗಳಲ್ಲಿ ಕೋರಿಂಬ್, ಮಧ್ಯಾರಂಭಿಮಂಜರಿ ಅಥವಾ ಸಂಯುಕ್ತ ಚೆಂಡುಮಂಜರಿಗಳು ಕೂಡ ಇವೆ. ಚೆಂಡುಮಂಜರಿಯನ್ನು ಆವರಿಸಿಕೊಂಡು ಹಸಿರಾದ ಉಪಪತ್ರಗಳಿವೆ (ಬ್ರಾಕ್ಟ್ಸ್). ಇವು ಪುಷ್ಪಪಾತ್ರೆಯಂತೆ ಕಾರ್ಯ ನಿರ್ವಹಿಸುತ್ತವೆ. ಹೂಗಳೆಲ್ಲ ಚಿಕ್ಕವಾಗಿದ್ದು ಒಂದೇ ಹೂಗೊಂಚಲಿನ ಅಕ್ಷಕಾಂಡದ ಮೇಲೆ ತಳವೂರಿವೆ. ಅಕ್ಷಕಾಂಡದ ತುದಿ ಭಾಗ ವಿಶಾಲವಾಗಿ, ಚಪ್ಪಟೆಯಾಗಿ ಹೊರಮೈ ಉಬ್ಬಿರುತ್ತದೆ ಅಥವಾ ಕದಿರಾಕಾರವಾಗಿದೆ. ಅಕ್ಷಕಾಂಡದ ಆಕಾರ, ಹೊರಮೈ, ಪದರಗಳು ಕುಟುಂಬದ ಸಸ್ಯಗಳ ವರ್ಗೀಕರಣದಲ್ಲಿ ಸಹಾಯಕವಾಗಿವೆ. ನಯವಾದ ಅಥವಾ ರೋಮಯುಕ್ತವಾದ ಪೊರೆಗಳು ಪ್ರತಿಯೊಂದು ಹೂವಿನ ಬುಡದಲ್ಲೂ ಕಾಣಿಸಿಕೊಳ್ಳುತ್ತವೆ. ಸಿನರಿಯಿಗಳಲ್ಲಿ ಬ್ರಾಕ್ಟ್‌ಗಳು ಬಿರುಗೂದಲಿನಂತಿವೆ.

ಹೂಗೊಂಚಲಿನ ಎಲ್ಲ ಹೂಗಳು ಒಂದೇ ತೆರನಾಗಿದ್ದು ದ್ವಿಲಿಂಗಿಗಳಾಗಿರಬಹುದು. ಆದರೆ ಕೆಲವು ಜಾತಿಗಳಲ್ಲಿ ಎರಡು ಬಗೆಯ ಹೂಗಳಿವೆ. ಕೆಲವು ಹೂಗಳು ಹೂಗೊಂಚಲಿನ ಮಧ್ಯಭಾಗದಲ್ಲಿ ಜೋಡಣೆಯಾಗಿ ಅರೀಯ ಸಮಾಂಗತೆಯನ್ನು ಪ್ರದರ್ಶಿಸುತ್ತವೆ. ಅವನ್ನು ಡಿಸ್ಕ್ ಹೂಗಳೆನ್ನುತ್ತಾರೆ. ಇನ್ನು ಕೆಲವು ಹೂಗಳು ಹೂಗೊಂಚಲಿನ ಅಂಚಿನಲ್ಲಿ ಜೋಡಣೆಯಾಗಿ ಉಭಯಪಾರ್ಶ್ವಸಮಾಂಗತೆಯನ್ನು ಹೊಂದಿವೆ. ಇವಕ್ಕೆ ರೇ ಹೂಗಳೆಂದು ಹೆಸರು. ಉದಾಹರಣೆಗೆ ಸೂರ್ಯಕಾಂತಿ. ಸಾಮಾನ್ಯವಾಗಿ ಡಿಸ್ಕ್ ಹೂಗಳು ದ್ವಿಲಿಂಗಿಗಳಾಗಿಯೂ ರೇ ಹೂಗಳು ಏಕಲಿಂಗಿಗಳಾಗಿಯೂ ಇರುತ್ತವೆ. ರೇ ಹೂಗಳ ಸಂಖ್ಯೆ ಜಾತಿಯಿಂದ ಜಾತಿಗೆ ವ್ಯತ್ಯಾಸಗೊಳ್ಳಬಹುದು. ಹೂಗಳಲ್ಲೆಲ್ಲ ನೀಚಸ್ಥಾನದ ಅಂಡಾಶಯವಿದೆ. ಆಂಬ್ರೊಸಿಯಾದಲ್ಲಿ ಪುಷ್ಪಪಾತ್ರೆಯಿಲ್ಲ. ಇನ್ನು ಕೆಲವು ಹೂಗಳಲ್ಲಿ ಪುಷ್ಪಪಾತ್ರೆ ಅನೇಕ ಕೂದಲುಗಳಾಗಿ ಮಾರ್ಪಟ್ಟಿದೆ. ಅವನ್ನು ಪ್ಯಾಪಸ್‌ಗಳೆಂದು ಕರೆಯುತ್ತಾರೆ. ಹಣ್ಣುಗಳಲ್ಲಿ ಸ್ಪಷ್ಟವಾಗಿ ಎದ್ದುತೋರುವ ಪ್ಯಾಪಸ್‌ಗಳು ಫಲಪ್ರಸಾರಕ್ರಿಯೆಯಲ್ಲಿ ಉಪಯುಕ್ತವಾಗಿವೆ. ದಳಗಳು ಐದು ; ಸಂಯುಕ್ತವಾಗಿವೆ. ಅವು ಡಿಸ್ಕ್ ಹೂಗಳಲ್ಲಿ ಸಮನಾಗಿವೆ. ಆದರೆ ರೇ ಹೂಗಳಲ್ಲಿ ಅಸಮ. ಕೇಸರಗಳು ಐದು. ಕೇಸರದಂಡಗಳು ಸ್ವತಂತ್ರವಾಗಿದ್ದು, ಪರಾಗಕೋಶಗಳು ಮಾತ್ರ ಕೂಡಿವೆ. ಈ ರೀತಿಯ ಕೂಡುವಿಕೆಯನ್ನು ಸಿಂಜೆನಿಶಿಯಸ್ ಸ್ಥಿತಿ ಎನ್ನುತ್ತಾರೆ. ಅಂಡಾಶಯದಲ್ಲಿ ಕೂಡಿರುವ ಎರಡು ಕಾರ್ಪೆಲುಗಳಿವೆ. ಶಲಾಕೆ ಸರಳವಾಗಿದ್ದು ಪರಾಗಕೋಶವಲಯದಿಂದ ಆವೃತವಾಗಿದೆ. ಶಲಾಕಾಗ್ರ ವಿಭಾಗವಾಗಿದೆ. ಅಂಡಾಶಯದಲ್ಲಿ ಒಂದೇ ಕೋಣೆ ಹಾಗೂ ಒಂದೇ ಅಂಡಕ ಇವೆ. ಇವು ಉತ್ಪಾದಿಸುವ ಒಡೆಯದ ಒಣಫಲಗಳಿಗೆ ಏಕೀನುಗಳೆನ್ನುತ್ತಾರೆ. ಹೂಗಳೆಲ್ಲ ಚೆಂಡುಮಂಜರಿಯಲ್ಲಿ ಕೂಡಿರುವುದರಿಂದ ಪರಾಗ ಪ್ರಸಾರ ಬಹಳ ಸುಲಭ. ಒಂದು ಕೀಟದ ಒಂದೇ ಸಂದರ್ಶನ ಬಹುಪಾಲು ಹೂಗಳಿಗೆ ಪರಾಗವನ್ನು ಒದಗಿಸುತ್ತದೆ.

ಕಂಪಾಸಿಟಿ ಕುಟುಂಬದ ಕೆಲವು ಪ್ರಭೇದಗಳು ಆಹಾರಸಸ್ಯಗಳಾಗಿ ಪ್ರಖ್ಯಾತವಾಗಿವೆ. ಉದಾಹರಣೆಗೆ ಲ್ಯಾಕ್ಟುಕ (ಲೆಟಿಸ್), ಸಿನರ (ಆರ್ಟಿಚೋಕ್), ಟ್ರಾಗೋಪೋಗಾನ್ (ಸಾಲ್ಸಿಫೈ) ಇತ್ಯಾದಿ. ಕಾರ್ಥಮಸ್ ಟಿಂಕ್ಟೋರಿಯಸ್ (ಕುಸುಬೆ) ಗಿಡದಿಂದ ಸ್ಯಾಫ್ಲವರ್ ಎಂಬ ಕೆಂಪು ಬಣ್ಣವನ್ನು ತಯಾರಿಸುತ್ತಾರೆ. ಅಲ್ಲದೆ ಇದರಿಂದ ಖಾದ್ಯ ಎಣ್ಣೆಯನ್ನೂ ತೆಗೆಯಬಹುದು. ಪ್ರಮುಖ ಕೀಟನಾಶಕವಾದ ಪೈರಿತ್ರಮ್ ಎಂಬುದು ಸೇವಂತಿಗೆಯಿಂದ (ಕ್ರೈಸಾಂತಿಮಮ್ ಕಾಕ್ಸಿನಿಯಮ್) ಬರುತ್ತದೆ. ಕಾಫಿಪುಡಿಯೊಂದಿಗೆ ಬೆರೆಸಲಾಗುವ ಚಿಕೋರಿಯನ್ನು ಈ ಕುಟುಂಬದ ಸಿಕೋರಿಯಮ್ ಪ್ರಭೇದದಿಂದ ಪಡೆಯಲಾಗುತ್ತದೆ. ಆರ್ಟಿಮಿಸಿಯ ಜಾತಿಯ ಪ್ರಭೇದಗಳಿಂದ ಸ್ಯಾಂಟೋನಿನ್ ಎಂಬ ಜಂತುನಾಶಕ ಔಷಧಿಯನ್ನು ತಯಾರಿಸುತ್ತಾರೆ. ಎಲ್ಲದಕ್ಕಿಂತ ಮುಖ್ಯವಾಗಿ ಈ ಕುಟುಂಬದ ಸುಮಾರು 215 ಜಾತಿಯ ಗಿಡಗಳನ್ನು ಅಲಂಕಾರ ಸಸ್ಯಗಳಾಗಿ ಉದ್ಯಾನಗಳಲ್ಲಿ ಬೆಳೆಸುತ್ತಾರೆ. ಇವುಗಳಲ್ಲಿ ಡೇಲಿಯ, ಸೂರ್ಯಕಾಂತಿ, ಸೇವಂತಿಗೆ, ಆಸ್ಟರ್, ಡೇಸಿ, ಜಿನಿಯ ; ಕ್ಯಾಲೆಂಡುಲ, ಕಾಸ್ಮಾಸ್, ಗೇಲಾರ್ಡಿಯ—ಮುಂತಾದುವು ಬಹುಮುಖ್ಯವಾದುವು. (ಎ.ಕೆ.ಕೆ.)

**ಕಂಪಿಲ ನಗರ :** ಉತ್ತರ ಪ್ರದೇಶದ ಫರೂಕಾಬಾದ್ ಜಿಲ್ಲೆಯಲ್ಲಿನ ಒಂದು ಪ್ರಸಿದ್ಧ ಜೈನ ಕ್ಷೇತ್ರ. ವಿಮಲತೀರ್ಥಂಕರನ ಆತ್ಮವಿಕಾಸಕಾರ್ಯಕ್ಕೆ ಕೇಂದ್ರವಾಗಿತ್ತು. ಚೈತ್ರಮಾಸದಲ್ಲಿ ದೊಡ್ಡ ಜಾತ್ರೆ ನಡೆಯುತ್ತದೆ. (ಬಿ.ಜಿ.)

**ಕಂಪು ಜಿನಸುಗಳು :** ಉಪ್ಪು, ಹುಳಿ, ಕಾರ, ಸಿಹಿಗಳಲ್ಲದೆ ಆಹಾರಗಳಿಗೆ ರುಚಿಕಟ್ಟುವುದಕ್ಕಾಗಿ ಬಳಸುವ ಕಂಪು ಅಥವಾ ಪರಿಮಳವನ್ನು ಕೊಡುವ ಕೆಲವು ಗ್ರಂದಿಗೆ ಅಥವಾ ಮಸಾಲೆ ಪದಾರ್ಥಗಳು, (ಫ್ಲೇವರಿಂಗ್ಸ್). ಇವುಗಳಲ್ಲಿ ಕೆಲವನ್ನು ಸಾರಿನ ಅಥವಾ ಹುಳಿಯ ಪುಡಿಗಳಲ್ಲಿ ಉಪಯೋಗಿಸುವುದರಿಂದ ಈ ಕಂಪುಜಿನಸುಗಳಿಗೆ ಸಂಬಾರ ಜಿನಸುಗಳೆಂದೂ ಹೆಸರುಂಟು. ಮತ್ತೆ ಕೆಲವನ್ನು ಒಗ್ಗರಣೆಗಳಾಗಿಯೂ ಇನ್ನು ಕೆಲವನ್ನು ಹಾಗೆಯೆ ಆಹಾರಗಳಲ್ಲಿಯೂ ಬೆರೆಸುತ್ತಾರೆ. ಕಂಪು ಜಿನಸುಗಳೆಲ್ಲ ಸಸ್ಯಜನಿತವಾದುವು. ಇವನ್ನು ಭಾರತ, ಸಿಲೋನ್, ಮಲೇಷ್ಯ, ಇಂಡೊನೇಷ್ಯ ಇತ್ಯಾದಿ ದೇಶಗಳಲ್ಲಿ ಮಾತ್ರ ಬೆಳೆಯಲಾಗುತ್ತದೆ. ಆದ್ದರಿಂದ ಬಹು ಪುರಾತನ ಕಾಲಗಳಿಂದಲೂ ಈ ದೇಶಗಳಿಂದ ಪಾಶ್ಚಾತ್ಯ ದೇಶಗಳಿಗೆ ಮಸಾಲೆ ಜಿನಸುಗಳ ವ್ಯಾಪಾರ ನಡೆದುಬಂದಿದೆ. ಈ ಜಿನಸುಗಳು ಸಸ್ಯಗಳ ನಾನಾ ಭಾಗಗಳಿಂದಲೂ

ತಯಾರಾಗುತ್ತವೆ. ಉಪಯೋಗದಲ್ಲಿರುವ ಅನೇಕ ಮಸಾಲೆ ಜಿನಸುಗಳಲ್ಲಿ ಮುಖ್ಯವಾದವುಗಳು ಇವು :

ಎಲೆಗಳು—ಕರಿಬೇವು, ಕೊತ್ತಂಬರಿ ಸೊಪ್ಪು, ಪುದಿನ, ಮಜ್ಜಿಗೆ ಸೊಪ್ಪು, ದೊಡ್ಡಪತ್ರೆ ಇತ್ಯಾದಿ.

ಹೂಗಳು—ಲವಂಗ (ಮೊಗ್ಗು), ಕೇಸರಿ (ಪುಷ್ಪಶಲಾಕೆ), ಮರಾಟ ಮೊಗ್ಗು ಇತ್ಯಾದಿ.

ಫಲಗಳು—ಮೆಣಸು, ಏಲಕ್ಕಿ, ಧನಿಯ, ಬಡಿಸೋಂಪು, ವನಿಲ, ಹಸಿ ಮತ್ತು ಒಣಮೆಣಸಿನಕಾಯಿ, ಮುರಗಳ ಹಿಪ್ಪಲಿ, ನಿಂಬೆ ಇತ್ಯಾದಿ.

ಬೀಜಗಳು—ಸಾಸುವೆ, ಮೆಂತ್ಯ, ಜೀರಿಗೆ, ಸಬ್ಬಸಿಗೆ, ಜಾಯಿಕಾಯಿ, ಜಾಪತ್ರಿ ಇತ್ಯಾದಿ.

ತೊಗಟೆಗಳು—ದಾಲಚಿನ್ನಿ ಇತ್ಯಾದಿ.

ಬೇರು, ಗೆಡ್ಡೆ, ಗೆಣಸುಗಳು—ಅರಿಸಿನ, ಬಜೆ, ಹಸಿ ಮತ್ತು ಒಣಶುಂಠಿ, ಬೆಳ್ಳುಳ್ಳಿ, ಈರುಳ್ಳಿ ಇತ್ಯಾದಿ.

ಇತರ ಭಾಗಗಳು—ಹಿಂಗು (ಇದು ಒಂದು ಗಿಡದ ಅಂಟು ಅಥವಾ ರಾಳ).

ಮೇಲೆ ಹೇಳಿದ ಜಿನಸುಗಳಲ್ಲಿ—ಕೇಸರಿ, ಏಲಕ್ಕಿ, ಲವಂಗ, ಬಡಿಸೋಂಪು, ವನಿಲ, ಜಾಯಿಕಾಯಿ, ಜಾಪತ್ರೆ, ಸಬ್ಬಸಿಗೆ—ಇವನ್ನು ಮುಖ್ಯವಾಗಿ ಲಾಡು, ಮಿಠಾಯಿ, ಐಸ್‌ಕ್ರಿಮ್, ಕೀರು, ಪಾಯಸ ಇತ್ಯಾದಿ ಸಿಹಿ ಪದಾರ್ಥಗಳಲ್ಲಿಯೂ ತಾಂಬೂಲದಲ್ಲಿಯೂ ಉಪಯೋಗಿಸುತ್ತಾರೆ. ಮಿಕ್ಕವುಗಳನ್ನು ಒಗ್ಗರಣೆ, ಸಾಂಬಾರ ಪುಡಿಗಳು, ಹುಳಿ, ಸಾರು, ವಡೆ ಇತ್ಯಾದಿ ಖಾರದ ಪದಾರ್ಥಗಳಲ್ಲಿ ಉಪಯೋಗಿಸುತ್ತಾರೆ. ಶಾಕಾಹಾರದಲ್ಲಿ ಹೇಗೋ ಹಾಗೆ ಮಾಂಸಾಹಾರದಲ್ಲೂ ಇವೆಲ್ಲದರ ಬಳಕೆ ಇದೆ.

ಭಾರತದಲ್ಲಿ ಬೆಳೆಯುವ ಮುಖ್ಯ ಮಸಾಲೆ ಜಿನಸುಗಳನ್ನೂ ಅವುಗಳನ್ನು ರಫ್ತು ಮಾಡುತ್ತಿರುವ ಪ್ರಮಾಣವನ್ನೂ ಕೆಳಗಿನ ಪಟ್ಟಿಯಲ್ಲಿ ಕಾಣಿಸಿದೆ.

| ಜಿನಸು | ಬೆಳೆಯ ವಿಸ್ತಾರ (ಹೆಕ್ಟೇರುಗಳು) | ರಫ್ತು (1962–63) (ಮೆಟ್ರಿಕ್ ಟನ್ನುಗಳು) |
|---|---|---|
| ಕಾಳುಮೆಣಸು | 1,02,000 | 28,000 |
| ಒಣಮೆಣಸಿನಕಾಯಿ | 6,27,000 | 3,89,000 |
| ಒಣಶುಂಠಿ | 18,000 | 17,000 |
| ಏಲಕ್ಕಿ | 56,000 | 3,000 |
| ಅರಿಸಿನ | 40,000 | 94,000 |

(ಎನ್. ಎನ್. ಎ.)

**ಕಂಪ್ಯಾನುಲ :** ಕಂಪ್ಯಾನುಲೇಸೀ ಕುಟುಂಬಕ್ಕೆ ಸೇರಿದ ಸಸ್ಯಜಾತಿ. ಪೊದೆಯಂತೆ ಬೆಳೆಯುವ ಇದು ಬೆಟ್ಟಗಾಡು ಪ್ರದೇಶಗಳಲ್ಲಿ ಹೇರಳವಾಗಿ ಕಾಣಬರುತ್ತದೆ. ಈ ಜಾತಿಯಲ್ಲಿ ಸುಮಾರು 250 ಏಕವಾರ್ಷಿಕ, ದ್ವೈವಾರ್ಷಿಕ ಹಾಗೂ ಬಹುವಾರ್ಷಿಕ ಪ್ರಭೇದಗಳಿವೆ. ಇವುಗಳಲ್ಲಿ ಕೆಲವು ಅತ್ಯಂತ ಸುಂದರವಾದ ಹೂ ಬಿಡುವ ಗಿಡಗಳಾಗಿದ್ದು ಅಂಚುಸಸ್ಯಗಳಾಗಿ ಉದ್ಯಾನಪ್ರಾಮುಖ್ಯವನ್ನು ಪಡೆದಿವೆ. ಗಿಡದ ಎತ್ತರ ಸುಮಾರು 18″–36″. ಬೇರಿನಿಂದ ಹೊರಟಂತಿರುವ ಎಲೆಗಳು (ಭೂಎಲೆ) ಮತ್ತು ಕಾಂಡದ ಮೇಲಿನ ಎಲೆಗಳು—ಹೀಗೆ ಎಲೆ ಎರಡು ಬಗೆ. ಬೇರಿನ ಎಲೆಗಳು ಕಾಂಡದವಕ್ಕಿಂತ ದೊಡ್ಡವು ಮತ್ತು ಅನಿರ್ದಿಷ್ಟ ಆಕಾರದವು. ಹೂಗಳು ಅಂತ್ಯಾರಂಭಿ (ರೇಸಿಮೋಸ್) ಮಾದರಿಯ ಹೂಗೊಂಚಲಿನಲ್ಲಿವೆ. ಪುಷ್ಪಪತ್ರಗಳು 5. ಇವು ಬಟ್ಟಲಿನಂತೆ ಅಗಲ. ಗಂಟೆಯಾಕಾರದ ಪುಷ್ಪದಳಗಳು 5 ; ಕೂಡಿಕೊಂಡಿವೆ. ಕೇಸರಗಳು 5. ಇವುಗಳ ದಂಡ ಬುಡದಲ್ಲಿ ಅಗಲ. ಅಂಡಾಶಯ ನೀಚಸ್ಥಾನದ್ದು. ಅದರಲ್ಲಿ 5 ಅಥವಾ 2 ಕೋಣೆಗಳಿವೆ. ಅಂಡಕಗಳು ಅನೇಕ. ಬಹುಬೀಜಗಳಿರುವ ಬೆರ‍್ರಿ ಮಾದರಿಯ ಫಲ. ಉದ್ಯಾನಪ್ರಾಮುಖ್ಯಗಳಿಸಿರುವ ಎರಡು ಪ್ರಭೇದಗಳನ್ನು ಕೆಳಗೆ ವಿವರಿಸಿದೆ.

ಕಂಪ್ಯಾನುಲ ಪಿರಮಿಡ್ಯಾಲಿಸ್ : ಈ ಪ್ರಭೇದ ಸುಮಾರು 5 ಅಡಿ ಎತ್ತರ ಬೆಳೆಯುತ್ತದೆ. ಕಾಂಡ ಕೊಳವೆಯಾಕಾರ, ದಪ್ಪ ; ಕೆಲವು ಸಸ್ಯಗಳಲ್ಲಿ ಟೊಳ್ಳಾಗಿರುತ್ತದೆ. ಉದ್ದವಾದ ತೊಟ್ಟಿರುವ ಭೂಎಲೆ ಹೃದಯಾಕಾರ ಅಥವಾ ಕರನೆಯಾಕಾರದಲ್ಲಿದ್ದು ಹಲ್ಲು ಅಂಚು ಮತ್ತು ಗ್ರಂಥಿಗಳಿಂದ ಕೂಡಿರುತ್ತದೆ. ಕಾಂಡ ಎಲೆ ಕರನೆಯಾಕಾರದಲ್ಲಿದ್ದು ತುದಿ ಮೊನಚಾಗಿರುತ್ತದೆ. ಹೂಗೊಂಚಲು ತುದಿಯಲ್ಲಿರುವ ಉದ್ದವಾದ ಅಂತ್ಯಾರಂಭಿ ಅಥವಾ ಸಂಕೀರ್ಣ ಪುಷ್ಪಗುಚ್ಛ (ಪ್ಯಾನಿಕಲ್) ಮಾದರಿಯದು. ಹೂಗೊಂಚಲು ಗೋಪುರಾಕಾರವಾಗಿರುವುದರಿಂದ ಈ ಪ್ರಭೇದಕ್ಕೆ ಪಿರಮಿಡ್ಯಾಲಿಸ್ ಎಂಬ ಹೆಸರು ಬಂದಿದೆ. ಪುಷ್ಪಪತ್ರ ಸಮೂಹದ ಭಾಗಗಳು ವಿಶಾಲವಾಗಿ ಹರಡಿಕೊಂಡಿದ್ದು, ಅದರ ಮೇಲೆ ಬಟ್ಟಲಿನಂಥ ದಳ ಸಮೂಹವಿರುವುದರಿಂದ ತಟ್ಟೆಯಲ್ಲಿ ಬಟ್ಟಲು ಇಟ್ಟಂತೆ ಕಾಣುತ್ತದೆ. ಈ ಸಸ್ಯ ದಕ್ಷಿಣ ಎಕ್ವಡಾರ್ ದೇಶದ ಮೂಲವಾಸಿ.

ಕಂಪ್ಯಾನುಲ ಮೀಡಿಯಮ್ : ಇದು ಸುಮಾರು 4′ ಎತ್ತರ ಬೆಳೆಯುವ ಮಧ್ಯಮ ಎತ್ತರದ ದ್ವೈವಾರ್ಷಿಕ ಸಸ್ಯ. ಭೂಎಲೆ ವಿರುದ್ಧ ಭರ್ಜಿಯಾಕಾರದ್ದಾಗಿದ್ದು ಬುಡ ಕಿರಿದಾಗಿ ತುದಿ ಅಗಲವಾಗಿರುತ್ತದೆ. ತೊಟ್ಟಿಲ್ಲದ ಕಾಂಡ ಎಲೆ ಭರ್ಜಿಯಾಕಾರ ಅಥವಾ ಆಯತಾಕಾರದ್ದಾಗಿದೆ. ತುದಿಯಲ್ಲಿ ಉದ್ದವಾಗಿ ಸಡಿಲವಾಗಿರುವ ಹೂಗಳಿಂದ ಕೂಡಿದ ಅಂತ್ಯಾರಂಭಿ ಹೂಗೊಂಚಲಿದೆ ; ಹಿಂದಕ್ಕೆ ಬಾಗಿದ ಕೂಡುಪುಷ್ಪಪತ್ರ ಸಮೂಹವಿದೆ. ಭರ್ಜಿಯಾಕಾರದ ಬಿಡಿ ತುದಿ ಭಾಗ ಹಿಂದಕ್ಕೆ ಬಾಗಿರುತ್ತದೆ. ಗಂಟೆಯಾಕಾರದ ಹೂದಳಗಳ ತುದಿಭಾಗ ಹಿಂದಕ್ಕೆ ಬಾಗಿರುತ್ತವೆ. ಕೇಸರಗಳು 5. ಈ ಪ್ರಭೇದದ ಸೈಕ್ಲಾಂತಿಯ ತಳಿ ಹೆಚ್ಚಿನ ಬೇಸಾಯದಲ್ಲಿದೆ.



ಕಂಪ್ಯಾನುಲ ಮೀಡಿಯಂ

ಈ ಸಸ್ಯಗಳನ್ನು ಬೀಜ, ಕಾಂಡದ ತುಂಡುಗಳು ಮತ್ತು ಬೇರು ತುಂಡುಗಳಿಂದ ವೃದ್ಧಿ ಮಾಡಬಹುದು. ಬಿತ್ತಿದ ಸುಮಾರು 10 ದಿವಸಗಳಲ್ಲಿ ಬೀಜಗಳು ಮೊಳೆಯುತ್ತವೆ. 3–4 ಅಂಗುಲ ಎತ್ತರದ ಸಸಿಗಳನ್ನು ಕಿತ್ತು 2 ಅಡಿ ಅಂತರದಲ್ಲಿ ನಾಟಿ ಮಾಡಬೇಕು. ಕೊಂಚ ನೆರಳಿದ್ದರೆ ಬೆಳೆವಣಿಗೆಗೆ ಅನುಕೂಲ. ಸಸಿ ನಾಟಿ ಮಾಡಿದ 6 ತಿಂಗಳ ಅನಂತರ ಹೂ ಬಿಡುತ್ತದೆ. (ಎಂ. ಎಚ್. ಎಂ.)

**ಕಂಬಗಳು, ಕನಾನುಗಳು ಮತ್ತು ಗುದ್ದುಕಂಬಗಳು :** ಸೇತುವೆಗಳ ಮತ್ತು ಕಟ್ಟಡಗಳ ರಚನೆಯಲ್ಲಿ ಬಳಸುವ ಪದಗಳು. ತೂಕವನ್ನು ಹೊರಲು ಭದ್ರ ಅಡಿಪಾಯದ ಮೇಲೆ ಲಂಬವಾಗಿ ಸಾಕಷ್ಟು ಎತ್ತರಕ್ಕೆ ಮತ್ತು ಕ್ಲುಪ್ತದೂರಗಳಲ್ಲಿ ರಚಿಸಿರುವ ಕಟ್ಟಡಗಳ ಹೆಸರು ಕಂಬಗಳು (ಪಿಯರ್ಸ್). ಇವು





ಕಂಬಗಳ ಎರಡು ಬಗೆಗಳು : ಎಡಗಡೆಯದು ಇಗ್ಗಂಡು ಮಾದರಿಯ ಆರ್. ಸಿ. ಸಿ. ಕಂಬ; ಬಲಗಡೆಯದು ಉರುಳೆಯಾಕಾರದ್ದು





ಕಮಾನುಗಳ ವಿವಿಧ ಬಗೆಗಳು











ವಿವಿಧ ಬಗೆ ಗುದ್ದುಗಂಬಗಳ ನಕಾಸೆ

ಊರ್ಧ್ವ ದಿಕ್ಕಿನಲ್ಲಿ ಮಾತ್ರ ತೂಕವನ್ನು ಒಯ್ಯಬಲ್ಲವು. ವಿಶಿಷ್ಟವಾದ ವಕ್ರ ರೇಖಾವಿನ್ಯಾಸಗಳೂ ಅವುಗಳ ನಡುವೆ ತೆರಪುಗಳೂ ಇದ್ದು ಮೇಲಿನಿಂದ ಸಂಮರ್ದಿತವಾಗುವ ಊರ್ಧ್ವದಿಕ್ಕಿನ ಹೊರೆಯನ್ನು ಮಟ್ಟಸ ಒತ್ತಡವಾಗಿ ಪರಿವರ್ತಿಸುವ ರಚನೆಗಳೇ ಕಮಾನುಗಳು (ಆರ್ಚಸ್). ಕಮಾನಿನ ತಳದಲ್ಲಿ ಸಂಮರ್ದಿತವಾಗುವ ತೂಕವನ್ನು ಸ್ವೀಕರಿಸಲು ಏರ್ಪಟ್ಟ ಸ್ವಲ್ಪ ಅಗಲವಾದ ಶಿರೋಭಾಗದಿಂದ ಕೂಡಿರುವ ಕಂಬದ ಹೆಸರು ಗುದ್ದುಕಂಬ (ಅಬಟ್‌ಮೆಂಟ್). ಒಂದು ಸೇತುವೆಯ ಅಥವಾ ಕಟ್ಟಡದ ಮಟ್ಟಸ ಮೇಲುಭಾಗದ ತೂಕ ಕಮಾನುಗಳಲ್ಲಿ ಯುಕ್ತರೀತಿಯಲ್ಲಿ ವಿಘಟಿತಗೊಂಡು ಗುದ್ದುಕಂಬಗಳ ಹಾಗೂ ಕಂಬಗಳ ಮೂಲಕ ಅಡಿಪಾಯಕ್ಕೆ ಸಾಗುತ್ತದೆ. ತೂಕದ ಈ ಸಮಪ್ರಮಾಣದ ವಿತರಣೆ ಕಟ್ಟಡಕ್ಕೆ ಭದ್ರತೆಯನ್ನು ಒದಗಿಸುವುದು.

30′ ಅಗಲದ ತೆರಪುಗಳುಳ್ಳ ಕಲ್ಲಿನ ಸೇತುವೆಗಳನ್ನು 3′ ಮಂದವಾದ ಕಮಾನಿನ ಕಲ್ಲುಗಳಿಂದ ಕಟ್ಟಬೇಕಾಗುತ್ತದೆ. ಕಮಾನಿಸ ಏರಿಕೆ (ರೈಸ್) ಕಂಬದ ತಲೆಯ ಮೇಲೆ ಕಮಾನಿನ ಕೆಳಭಾಗಕ್ಕೆ 6′ (ಅಗಲದ 1/5 ಭಾಗ) $7\frac{1}{2}$′ (ಅಗಲದ $\frac{1}{4}$ ಭಾಗ) ಎತ್ತರವಾಗಿರುತ್ತದೆ. ಅದರ ಮೇಲೆ 3′ ಮಂದವಾದ ಕಮಾನಿನ ಕಲ್ಲುಗಳುಳ್ಳ ಸೇತುವೆ ಬರುತ್ತದೆ. ಪ್ರತಿ ನಾಲ್ಕನೆಯ ಕಂಬವನ್ನು ಕೊಂಚ ಹೆಚ್ಚಿನ ಅಗಲದ ಗುದ್ದುಗಂಬವಾಗಿ ಸಂವಿಧಾನ ಮಾಡಿರುತ್ತಾರೆ. ಮೊದಲನೆಯ ಕಮಾನಿನ ತಲೆಗಲ್ಲುಗಳನ್ನು (ಕೀಸ್ಟೋನ್ಸ್) ಬಡಿದು ಕೂರಿಸುವಾಗ ಎರಡನೆಯ ಕಮಾನಿನ ಆಧಾರದ (ಸೆಂಟರಿಂಗ್) ಮೇಲೆ ಎರಡು ಕಡೆಗಳಿಂದಲೂ ಮೂರನೆಯ ಎರಡು ಭಾಗ ಕಮಾನಿನ ಕಲ್ಲುಗಳನ್ನೂ ಮೂರನೆಯ ಕಮಾನಿನ ಆಧಾರದ ಮೇಲೆ ಮೂರರಲ್ಲಿ ಒಂದನೆಯ ಭಾಗ ಕಮಾನಿನ ಕಲ್ಲುಗಳನ್ನೂ (ಸಿಮೆಂಟಿಗೆ ಮರಳನ್ನು ಬೆರೆಸಿ ತಯಾರಿಸಿದ ಗಾರೆಯಲ್ಲಿ) ಜೋಡಿಸಿರುತ್ತಾರೆ. ಮೊದಲನೆಯ ತೆರಪಿನ ಕಮಾನಿನ ತಲೆಗಲ್ಲುಗಳು ಭದ್ರವಾದ ಮೇಲೆ, ಹೀಗೆಯೇ ನಾಲ್ಕನೆಯ ತೆರಪಿನಲ್ಲಿ ಮೂರನೆಯ ಒಂದು ಭಾಗ ಕಲ್ಲುಗಳನ್ನು ಜೋಡಿಸಿ ಎರಡನೆಯ ಕಮಾನಿನ ಕಲ್ಲುಗಳನ್ನು ಮೊದಲನೆಯದರಂತೆಯೇ ಸಿಮೆಂಟ್ ಗಾರೆಯಲ್ಲಿ ಬಡಿದು ಕೂರಿಸುತ್ತಾರೆ.

ಕಾವೇರಿ ನದಿಗೆ ಅಡ್ಡಲಾಗಿ ಹಾಸನ ಜಿಲ್ಲೆಯ ರಾಮನಾಥಪುರ ಕ್ಷೇತ್ರದಲ್ಲಿ ಮೂರು ಶತಮಾನಗಳಿಗೂ ಹಿಂದೆ (1636) ಕಟ್ಟಿದ ಕಲ್ಲಿನ ಕಮಾನುಗಳ ಸೇತುವೆಯೇ ಭಾರತದಲ್ಲಿ ಕೊನೆಯದು. ಅಲ್ಲಿಂದ ಮುಂದೆ ಅದರ ಸ್ಥಾನವನ್ನು ಭದ್ರಕಾಂಕ್ರೀಟು (ರೀಇನ್‌ಫೋರ್ಸ್ಡ್) ಮತ್ತು ಉಕ್ಕು ತೆಗೆದುಕೊಂಡಿವೆ.

ನೋಡಿ—ಕಮಾನು. (ಎಚ್.ಸಿ.ಕೆ.)

**ಕಂಬದಕಡ ಯೋಜನೆ :** ಇದು ಕಾವೇರಿ ನದಿಯ ನೀರನ್ನು ಬಳಸಿ ಕೊಳ್ಳುವ ಒಂದು ಯೋಜನೆ. ಸುಮಾರು 2,500 ಎಕ್ರೆ ಜಮೀನಿಗೆ ನೀರನ್ನು ಪೂರೈಸಬಹುದೆಂದೂ ವೆಚ್ಚ ಸುಮಾರು 190 ಲಕ್ಷ ರೂಪಾಯಿ ಆಗಬಹುದೆಂದೂ ಅಂದಾಜು. ಇದರ ಬದಲಾಗಿ ಇನ್ನೆರಡು ಯೋಜನೆಗಳನ್ನು ಸೂಚಿಸಬೇಕೆಂದು ಸರ್ಕಾರ ಆದೇಶವಿತ್ತಿತು. ಹೊಸಪಟ್ಟಣದ ಕಾವೇರಿ ನೀರಾವರಿ ಯೋಜನೆ ಇವುಗಳಲ್ಲೊಂದು. ಇದನ್ನೇ ಕೆಲವೊಮ್ಮೆ ಕಂಬದಕಡ ಯೋಜನೆಯೆಂದು ಕರೆಯುವುದುಂಟು. ಸೋಮವಾರಪೇಟೆ ತಾಲ್ಲೂಕಿನ ಹೊಸಪಟ್ಟಣದ ಬಳಿ ಕಾವೇರಿ ನದಿಗೆ ಒಂದು ಕಟ್ಟೆ ಕಟ್ಟಿ ಸುಮಾರು 5,110 ಮಿಲಿಯ ಘನ ಅಡಿ ನೀರನ್ನು ಶೇಖರಿಸುವುದು ಇದರ ಉದ್ದೇಶ. ಈ ಕಟ್ಟೆಯ ಬಲದಂಡೆ ಕಾಲುವೆಯ ನೀರು ಸುಮಾರು 4,200 ಎಕ್ರೆ ಭೂಮಿಗೆ ನೀರಾವರಿ ಸೌಲಭ್ಯವನ್ನು ಒದಗಿಸಿ ಕೊನೆಗೆ ಹಾರಂಗಿ ನೀರಾವರಿ ಯೋಜನೆಯ ಬಲಭಾಗದ ಶಾಖೆಯ ಕಾಲುವೆಯನ್ನು ಸೇರಿ ಸುಮಾರು 15,800 ಎಕ್ರೆ ಭೂಮಿಗೆ ಅಧಿಕ ಪ್ರಮಾಣದಲ್ಲಿ ನೀರನ್ನೊದಗಿಸುವುದು. ಸುಮಾರು 4,200 ಎಕ್ರೆಗಳಲ್ಲಿ ಬೆಳೆಸಲ್ಪಡುವ, ವರ್ಷಕ್ಕೆ ಎರಡು ಬೆಳೆಯ ಬತ್ತದ ಬೆಳೆ ಮತ್ತು ಸುಮಾರು 15,800 ಎಕ್ರೆಗಳಲ್ಲಿ ಕಬ್ಬಿನ ಬೆಳೆ—ಇವು ಈ ಯೋಜನೆಯಿಂದ ನೀರಿನ ಸೌಲಭ್ಯವನ್ನು ಪಡೆಯುವುವು. ಈ ಯೋಜನೆಯ ಒಟ್ಟು ವೆಚ್ಚ 500 ಲಕ್ಷ ರೂಪಾಯಿಗಳಾಗಬಹುದು.

ಕಟ್ಟೆಯ ನಿವೇಶನ : ಗುಡ್ಡೆಹೊಸೂರಿನಿಂದ ಸುಮಾರು 8 ಕಿ.ಮೀ. ದೂರದಲ್ಲಿರುವ ಹೊಸಪಟ್ಟಣದ ಬಳಿ ಇದೆ. ಕುಶಾಲನಗರದಿಂದ ಇಲ್ಲಿಗೆ ಸುಮಾರು 12 ಕಿ.ಮೀ. ದೂರ. ಕಟ್ಟೆಯ ಉದ್ದ 4,975′ ನದಿಯ ತಳಭಾಗದಿಂದ ಕಟ್ಟೆಯ ಎತ್ತರ ಸುಮಾರು 84′ ಇದರ ಜಲಶೇಖರಣ ಸಾಮರ್ಥ್ಯ ಸುಮಾರು 6,100 ಮಿಲಿಯ ಘನ ಅಡಿಗಳು. ಜಲಾಶಯ ಸುಮಾರು 5,057 ಎಕ್ರೆಯಷ್ಟು ಭೂಮಿಯನ್ನು ಆವರಿಸುವುದು. ಇದರ ಪೈಕಿ 2304 ಎಕ್ರೆ ಖಾಸಗೀ ಆಸ್ತಿಯೂ ಸುಮಾರು 2,753 ಕಾಡುಪ್ರದೇಶವೂ ಸೇರಿವೆ. ಮೈಸೂರು ರಾಜ್ಯದ ಪಾಲಿಗೆ ಬರುವ ಕಾವೇರಿ ನದಿಯ ನೀರಿನಲ್ಲಿ ಸುಮಾರು 5,650 ಮಿಲಿಯ ಘನ ಅಡಿ ನೀರು ಇಲ್ಲಿ ಬಳಕೆ ಆಗುವುದು. (ಕೆ.ಸಿ.ಬಿ.)

**ಕಂಬದ ಮರ:** ಅನೋನೇಸೀ ಕುಟುಂಬಕ್ಕೆ ಸೇರಿದ್ದು ಉದ್ಯಾನಪ್ರಾಮುಖ್ಯ ವನ್ನು ಪಡೆದ ಒಂದು ಸುಂದರವಾದ ಮರ. ಈ ಜಾತಿಯ ವೈಜ್ಞಾನಿಕ ಹೆಸರು ಪಾಲಿಯಾಲ್ತಿಯ. ಇದರಲ್ಲಿ ಸುಮಾರು 70 ಪ್ರಭೇದಗಳಿವೆ. ಇವುಗಳಲ್ಲಿ ಬಹು ಪಾಲು ಉಷ್ಣವಲಯದ ಅದರಲ್ಲೂ ಏಷ್ಯದ ನಿವಾಸಿಗಳು. ಭಾರತದಲ್ಲಿ ಸುಮಾರು 12 ಪ್ರಭೇದಗಳಿವೆ. ಇವುಗಳಲ್ಲಿ ಪಾಲಿಯಾಲ್ತಿಯ ಲಾಂಜಿಫೋಲಿಯ, ಪಾ. ಸೆರಸಾಯ್ಡಿಸ್, ಪಾ.ಫ್ರೇಗ್ರನ್ಸ್ ಮತ್ತು ಪಾ.ಸ್ಯೂಬಿರೋಸಗಳು ಮುಖ್ಯವಾದ ಪ್ರಭೇದಗಳು.

ಕಂಬದ ಮರ (ಪಾ.ಲಾಂಜಿಫೋಲಿಯ) ಸಿಂಹಳದ ಒಳಪ್ರದೇಶಗಳ ಮೂಲ ವಾಸಿಯೆಂದು ಹೇಳುತ್ತಾರೆ. ಭಾರತದ ಎಲ್ಲ ಪ್ರದೇಶಗಳಲ್ಲೂ ಇದು ಸರ್ವೇ



ಕಂಬದ ಮರ : ಒಳಚಿತ್ರ-ಎಲೆಗಳನ್ನು ದೊಡ್ಡದುಮಾಡಿ ತೋರಿಸಿದೆ

ಸಾಮಾನ್ಯ. ಸುಂದರವಾಗಿ ತೇರಿನಂತೆ ಇದ್ದು ಸದಾ ಹಸಿರಾಗಿ ಕಂಗೊಳಿಸುವ ಇದನ್ನು ಅಲಂಕಾರಕ್ಕಾಗಿ ಉದ್ಯಾನವನಗಳಲ್ಲೂ ಬೀದಿಯ ಇಕ್ಕೆಲಗಳಲ್ಲಿ ಸಾಲುಮರ ವಾಗಿಯೂ ಬೆಳೆಸುವರು. ಇದಕ್ಕೆ ಹೆಸ್ಸರೆ, ವುಬ್ಬಿನ ಮುಂತಾದ ಇತರ ಹೆಸರುಗಳೂ ಉಂಟು. ಇದು ನೇರವಾಗಿ ಕೊಂಬೆಗಳಿಲ್ಲದೆ ತೇರಿನಂತೆ ಬೆಳೆಯುವ ಮರ. ಕೆಲವೊಮ್ಮೆ ಪಕ್ಕದಲ್ಲಿ ಇಳಿಬಿದ್ದಿರುವ ರೆಂಬೆಗಳಿರುವುದೂ ಉಂಟು. ತೊಗಟೆ ನಯ, ದಪ್ಪ ಹಾಗೂ ಕಂದು ಬಣ್ಣದ್ದು. ಕಾಂಡದ ಒಳಭಾಗ ಹಗುರವಾಗಿಯೂ ಮೆತ್ತಗೂ ಇರುತ್ತದೆ. ಎಲೆಗಳು ಪರ್ಯಾಯವಾಗಿ ಜೋಡಣೆಗೊಂಡಿವೆ, ಮಿರುಗುವ ಅವುಗಳ ಮೇಲ್ಮೈ, ನಯ, ಹಚ್ಚಹಸಿರು; ಆಕಾರ ಈಟಿಯಂತೆ; ಅಂಚು ಅಲೆಯಲೆಯಾಗಿದೆ. ಹೂಗಳು ಕೊಂಚ ಹಳದಿ ಮಿಶ್ರಿತ ಹಸಿರು ಬಣ್ಣದವು; ದ್ವಿಲಿಂಗಿಗಳು. ಹೂಗೊಂಚಲು ಎಲೆಗಳ ಕಂಕುಳಲ್ಲೊ ರೆಂಬೆಗಳ ತುದಿಯಲ್ಲೊ ಎಲೆಗಳಿಗೆ ಅಭಿಮುಖವಾಗೊ ಅಥವಾ ಎಲೆಗಳ ಕೆಳಗೆ ನೇರವಾಗಿ ಕಾಂಡಕ್ಕೆ ಅಂಟಿ ಕೊಂಡಂತೆಯೊ ಇರುತ್ತವೆ. ಪುಷ್ಪಪತ್ರಗಳು 3; ಬಿಡಿಬಿಡಿಯಾಗಿವೆ. ದಳಗಳು 6; ಬಿಡಿ ಹಾಗೂ ಮೂರು ಮೂರರಂತೆ ಎರಡು ಸುತ್ತುಗಳಲ್ಲಿ ಜೋಡಣೆಗೊಂಡಿವೆ. ಕೇಸರಗಳು ಹಲವಾರು; ಬೆಣೆಯಂತೆ ಆಕಾರವುಳ್ಳವು. ಅಂಡಾಶಯ ಉಚ್ಚಸ್ಥಾನದ್ದು; ಅನೇಕ ಕಾರ್ಪೆಲುಗಳನ್ನೊಳಗೊಂಡಿದೆ. ಕಾರ್ಪೆಲುಗಳು ಬಿಡಿಬಿಡಿಯಾಗಿವೆ. ಒಂದೊಂದರಲ್ಲೂ ಒಂದು ಅಂಡಕೋಶ, ಉದ್ದನೆಯ ಶಲಾಕೆ, ಇವೆ. ಅಂಡಕಗಳ ಸಂಖ್ಯೆ 1–2. ಫಲ ಹಲವಾರು ಅಂಡಾಶಯಗಳಿಂದ ಬೆಳೆದ ಸಾಮೂಹಿಕ ಮಾದರಿಯದು. ಒಂದೊಂದು ಅಂಡಾಶಯದಲ್ಲೂ ಒಂದೊಂದೇ ಬೀಜವಿದೆ. ಕಾಯಿಗಳ ಬಣ್ಣ ಊದಾ ; ಆಕಾರ ಗುಂಡಗೆ.

ಕಂಬದ ಮರ ತೇವಪೂರಿತ ಹಾಗೂ ಬೆಚ್ಚನೆಯ ಪ್ರದೇಶಗಳಲ್ಲಿ ಹುಲುಸಾಗಿ ಬೆಳೆಯುತ್ತದೆ. ಬೀಜಗಳ ಮುಖಾಂತರ ಇದನ್ನು ವೃದ್ಧಿ ಮಾಡಬಹುದು. ಮರ ಗಳನ್ನು ಬೆಳೆಸುವ ಸ್ಥಳಗಳಲ್ಲಿ ನೇರವಾಗಿ ಬೀಜ ಬಿತ್ತಿ ಸಸಿ ಮಾಡಬಹುದು. ಅಥವಾ ಕುಂಡಗಳಲ್ಲೊ ಬುಟ್ಟಿಗಳಲ್ಲೊ ಬೀಜ ಬಿತ್ತಿ ಸಸಿಗಳನ್ನು ಪಡೆದು ಸ್ಥಳಾಂತರಿಸಬಹುದು. ಬೀಜಗಳ ಮೊಳೆಯುವ ಸಾಮರ್ಥ್ಯ ಒಂದೇ ಋತುಮಾನ ಮಾತ್ರ ಇರುವುದರಿಂದ ಆಯಾ ವರ್ಷದ ಜುಲೈ ಅಥವಾ ಆಗಸ್ಟ್ ತಿಂಗಳಿನಲ್ಲಷ್ಟೆ ಬಿತ್ತಬೇಕು.

ಕಂಬದ ಮರದ ಚೌಬೀನೆ ಕೊಂಚ ಹಳದಿ ಅಥವಾ ಬಿಳುಪು. ಮೃದು, ಹಗುರ ಹಾಗೂ ಮೆತುವಾಗಿದೆ. ಇದನ್ನು ಪೆಟ್ಟಿಗೆ, ಪೀಪಾಯಿ, ಆಸರೆಗಂಬ, ಗಾಡಿಪಟ್ಟಿ ಮೊದಲಾದುವನ್ನು ಮಾಡಲು ಬಳಸುತ್ತಾರೆ. ಅಲ್ಲದೆ ಪೆನ್ಸಿಲ್ ಮತ್ತು ಬೆಂಕಿ ಕಡ್ಡಿಗಳನ್ನೂ ಇದರಿಂದ ತಯಾರಿಸಬಹುದು. ಹಿಂದಿನ ಕಾಲದಲ್ಲಿ ಹಡಗುಗಳ ಪಟಸ್ತಂಭಗಳನ್ನು ಮಾಡಲೂ ಈ ಮರವನ್ನು ಉಪಯೋಗಿಸುತ್ತಿದ್ದರು. ಹಣ್ಣು ಗಳನ್ನು ಅನಾವೃಷ್ಟಿ ಕಾಲದಲ್ಲಿ ತಿನ್ನುವ ರೂಢಿಯಿದೆ. ಎಲೆಗಳು ಸ್ವಲ್ಪಮಟ್ಟಿಗೆ ಸುವಾಸನಾಯುಕ್ತವಾಗಿರುವುದರಿಂದ ಅಲಂಕಾರಕ್ಕಾಗಿಯೂ ಉಪಯೋಗಿಸುವುದುಂಟು. ಭಾರತದ ಕೆಲವೆಡೆಗಳಲ್ಲಿ ಈ ಮರದ ತೊಗಟೆಯ ಕಷಾಯವನ್ನು ಜ್ವರಶಮನಕಾರಕ ವಾಗಿ ಬಳಸುವುದೂ ಇದೆ. ಕೆಲವು ಸಾರಿ ಅಶೋಕವೃಕ್ಷದ ತೊಗಟೆಯ ಬದಲಾಗಿ ಅಥವಾ ಅದರೊಂದಿಗೆ ಕಲಬೆರಕೆ ಮಾಡಿ ಇದನ್ನು ಉಪಯೋಗಿಸುತ್ತಾರೆ. ಇವೆರಡೂ ತೊಗಟೆಗಳಲ್ಲಿ ಬರಿಗಣ್ಣಿಗೇ ಕಾಣಿಸುವ ವ್ಯತ್ಯಾಸಗಳಿರುವುದರಿಂದಲೂ ಇವುಗಳ ಪುಡಿಗಳು ರಾಸಾಯನಿಕ ಗುಣ ಮತ್ತು ಕಿರಣಸ್ಫುರಣ (ಫ್ಲೂರಸೆನ್ಸ್) ಕ್ರಿಯೆಯಲ್ಲಿ ಬೇರೆಬೇರೆಯಾಗಿರುವುದರಿಂದಲೂ ಇವನ್ನು ಸುಲಭವಾಗಿ ಗುರುತಿಸಬಹುದು. ತೊಗಟೆಯ ಸಾರ ಹೃದಯದ ಬಡಿತವನ್ನು ಕುಗ್ಗಿಸುವ, ರಕ್ತದ ಒತ್ತಡವನ್ನು ಕಡಿಮೆ ಮಾಡುವ, ಉಸಿರಾಟವನ್ನು ಹೆಚ್ಚಿಸುವ ಗುಣವನ್ನು ಹೊಂದಿದೆ.

ಈ ಜಾತಿಯ ಇನ್ನೊಂದು ಪ್ರಭೇದವಾದ ಪಾ.ಸೆರಸಾಯ್ಡಿಸ್ ಎಂಬುದು ಸುಮಾರು 15 ಮೀ. ಎತ್ತರಕ್ಕೆ ಬೆಳೆಯುವ ಮರ. ಬಿಹಾರ, ಒರಿಸ್ಸ, ಅಸ್ಸಾಂ ಹಾಗೂ ಕೇರಳಗಳಲ್ಲಿ ಹೇರಳವಾಗಿ ಬೆಳೆಯುತ್ತದೆ. ಬಹಳಮಟ್ಟಿಗೆ ಪಾ.ಲಾಂಜಿ ಫೋಲಿಯ ಪ್ರಭೇದವನ್ನು ಹೋಲುವ ಇದಕ್ಕೆ ನೆಟ್ಟಲಿಂಗಮರ ಅಥವಾ ಸಣ್ಣ ಹೆಸ್ಸರೆ ಎಂಬ ಹೆಸರುಗಳೂ ಇವೆ. ಇದರ ಎಲೆ, ಹೂ ಮುಂತಾದುವು ಕಂಬದ ಮರದಂತೆಯೇ ಇವೆ. ತೊಗಟೆ ಮಾತ್ರ ಕಪ್ಪು ಅಥವಾ ಬೂದಿ ಬಣ್ಣದ್ದು, ತೆಳುವಾಗಿ ಒರಟಾಗಿದೆ. ಚೌಬೀನೆ, ಆಲಿವ್–ಬೂದಿ ಬಣ್ಣದ್ದು, ಕೊಂಚ ಗಡುಸು, ಹಾಗೂ ಭಾರ; ಸರಿಯಾಗಿ ಹದಗೊಳಿಸದಿದ್ದಲ್ಲಿ ಕೊಂಚಕಾಲದ ಮೇಲೆ ಉದ್ದವಾದ, ಆಳವಾದ ಬಿರುಕುಗಳುಂಟಾಗುತ್ತವೆ. ಆದರೆ ಗರಗಸದಿಂದ ಕೊಯ್ಯಲೂ ಮೆರುಗು ಕೊಡಲೂ ಸುಲಭ. ಅದನ್ನು ಮನೆ ಕಟ್ಟಲೂ ಪಟ್ಟಿ, ಪೆಟ್ಟಿಗೆ, ಮಂಚ, ದೋಣಿ ಗಳನ್ನು ಮಾಡಲೂ ಉಪಯೋಗಿಸುತ್ತಾರೆ. ಅಲ್ಲದೆ ಇದು ಒಳ್ಳೆಯ ಉರುವಲು ಕೂಡ ಹೌದು.

ಪಾಲಿಯಾಲ್ತಿಯದ ಮತ್ತೊಂದು ಪ್ರಭೇದ ಪಾ.ಫ್ರೇಗ್ರನ್ಸ್ ಎಂಬುದು ಪಶ್ಚಿಮ ಘಟ್ಟಗಳ ಸದಾ ಹಸುರಿನ ಕಾಡುಗಳಲ್ಲಿ ಕಾಣಬರುತ್ತದೆ. ಈ ಗಿಡ ಸುಮಾರು 25 ಮೀ. ಎತ್ತರಕ್ಕೆ ಬೆಳೆಯುತ್ತದೆ. ಇದಕ್ಕೆ ಕನ್ನಡದಲ್ಲಿ ಗೌರಿ ಅಥವಾ ಹಬ್ಬೆ ಮರ ಎಂಬ ಹೆಸರುಗಳಿವೆ. ಇದರ ಚೌಬೀನೆ ಬೂದಿಮಿಶ್ರಿತ ಬಿಳುಪು, ಮೃದು ಮತ್ತು ಹಗುರ. ಆದರೆ ಬಹುಕಾಲ ಬಾಳಿಕೆ ಬರುವಂಥದ್ದಲ್ಲ. ಇದನ್ನು ತಾತ್ಕಾಲಿಕ ಕಟ್ಟಣೆಗಳು, ಪೀಠೋಪಕರಣ, ಬೆಂಕಿಪೆಟ್ಟಿಗೆ, ಪೆಟ್ಟಿಗೆಗಳು ಮುಂತಾದುವನ್ನು ಮಾಡುವುದಕ್ಕೆ ಉಪಯೋಗಿಸುತ್ತಾರೆ. ಏರೋಪ್ಲೇನುಗಳ ರೆಕ್ಕೆ, ಟೆನ್ನಿಸ್ ಮತ್ತು ಬ್ಯಾಡ್‌ಮಿಂಟನ್ ಬ್ಯಾಟುಗಳು, ಫೋಟೊ ಕಟ್ಟುಗಳು, ಬಿಲಿಯರ್ಡ್ ಕೋಲುಗಳು, ಪ್ಲೈವುಡ್ ಮುಂತಾದುವುಗಳ ತಯಾರಿಕೆಯಲ್ಲಿ ಇದನ್ನು ಬಳಸಬಹುದಾಗಿದೆ.

ಪಾಲಿಯಾಲ್ತಿಯ ಸ್ಯೂಬಿರೋಸ ಎಂಬುದು ಭಾರತಾದ್ಯಂತ ಕಾಣಬರುವ ಇನ್ನೊಂದು ಪ್ರಭೇದ. ದೊಡ್ಡ ಪೊದೆಯಂತೆಯೋ ಸಣ್ಣ ಮರವಾಗಿಯೋ ಬೆಳೆಯುವ ಇದರ ಚೌಬೀನೆಯನ್ನು ಮರಗೆಲಸಗಳಲ್ಲಿ, ಪಟಸ್ತಂಭಗಳ ಹಾಗೂ ದೋಣಿಗಳ ದೂಲಗಳ ತಯಾರಿಕೆಯಲ್ಲಿ ಉಪಯೋಗಿಸುವುದುಂಟು. ಹಣ್ಣುಗಳನ್ನು ತಿನ್ನಬಹುದು. ಹೊಸದಾಗಿ ಅಗೆದು ತೆಗೆದ ಬೇರುಗಳಿಂದ ತಯಾರಿಸಿದ ಕಷಾಯ ವನ್ನು ಫಿಲಿಪೀನ್ಸ್ ದ್ವೀಪವಾಸಿಗಳು ಗರ್ಭಪಾತಕ್ಕಾಗಿ ಬಳಸುತ್ತಾರೆಂದು ಹೇಳಲಾಗಿದೆ. ಈ ಮರ ಒಂದು ಬಗೆಯ ಅರಗುಕೀಟಕ್ಕೆ ಆಶ್ರಯವಾಗಿದೆ. (ಎಸ್.ಡಿ.ಕೆ.)

**ಕಂಬದ ಹಳ್ಳಿ:** ಮಂಡ್ಯ ಜಿಲ್ಲೆಯ ನಾಗಮಂಗಲ ತಾಲ್ಲೂಕಿನಲ್ಲಿರುವ ಒಂದು ಪುಣ್ಯಕ್ಷೇತ್ರ. ಇಲ್ಲಿನ ಪಂಚಕೂಟಬಸ್ತಿಯ ಉತ್ತರದಲ್ಲಿರುವ 50 ಅಡಿ ಎತ್ತರದ ಕರಿಕಲ್ಲಿನ ಬ್ರಹ್ಮದೇವರ ಕಂಬವೇ ಊರಿನ ಹೆಸರಿಗೆ ಕಾರಣ. ಈ ಕಂಬದ ತಳಭಾಗದ ಎಂಟು ಮುಖಗಳ ಮೇಲೂ ಅಷ್ಟದಿಕ್ಪಾಲಕರ ಶಿಲ್ಪಗಳಿದ್ದು ಈ ಕಂಬದ ಮೇಲೆ ಪೂರ್ವಾಭಿಮುಖನಾದ ಬ್ರಹ್ಮದೇವರ ಶಿಲ್ಪವಿದೆ. ಸಮೀಪದಲ್ಲಿ ದ್ರಾವಿಡ ಶೈಲಿಯಲ್ಲಿ ಕಲ್ಲಿನಿಂದ ಕಟ್ಟಲಾದ ಏಳು ದೇವಾಲಯಗಳಿವೆ. ಕ್ರಿ.ಶ. ೯೦೦ರ

ಸುಮಾರಿನಲ್ಲಿ ಕಟ್ಟಲ್ಪಟ್ಟ ಪಂಚಕೂಟಬಸ್ತಿಯಲ್ಲಿ ನಡುವೆ ಇರುವುದೇ ತ್ರಿಕೂಟಾಚಲ ಆದಿನಾಥಬಸ್ತಿ. ಇದರಲ್ಲಿ ಪಲ್ಲವಶಿಲ್ಪದ ಪ್ರಭಾವ ಕಂಡುಬರುತ್ತದೆ. ದೇವಾಲಯದ ಕೆಳಭಾಗ ಅಷ್ಟಕೋಣಾಕಾರವಾಗಿದ್ದು ಗೋಡೆಯ ಮೇಲುಗಡೆ ಯಕ್ಷ, ಜಿನರ ಲತಾಪಟ್ಟಿಕೆಗಳಿವೆ. ಗೂಡುಗಳಿಗೆ ಪುಷ್ಪ ಅಥವಾ ಮಕರತೋರಣಗಳಿವೆ. ಇವುಗಳಲ್ಲಿ ಗಂಧರ್ವ, ಯಾಳಿ, ಮುಕ್ಕೊಡೆ, ಮಕರಗಳ ಅಲಂಕರಣಗಳಿವೆ. ಮೇಲ್ಚಾವಣಿಗಳು ಬಾಗಿದ್ದು ಲಾಳದ ಆಕಾರದ ಕಮಾನುಗಳಿಂದ ಅಲಂಕೃತವಾಗಿವೆ. ಕೈಪಿಡಿ ಗೋಡೆಯ ಮೇಲೆ ಸಿಂಹಮುಖದ ಮೀಸು, ನೀರ್ಗುದುರೆಗಳಿವೆ. ಬಲಭಾಗದ ಗರ್ಭಗುಡಿಯಲ್ಲಿ ನೇಮಿನಾಥ ಮತ್ತು ಎಡಭಾಗದ ಗುಡಿಯಲ್ಲಿ ಶಾಂತಿನಾಥ ವಿಗ್ರಹಗಳು ಕುಳಿತಿರುವಂತೆ ನಿರ್ಮಿತವಾಗಿವೆ. ಈ ದೇವಾಲಯದ ಮೂರು ಶಿಖರಗಳು ಕಣಶಿಲೆಯಿಂದ ನಿರ್ಮಿತವಾಗಿವೆ. ಈ ಮೂರು ಶಿಖರಗಳೂ ಮೂರು ವಿಧವಾಗಿವೆ. ಪೂರ್ವದ ಶಿಖರ ದುಂಡಾಗಿಯೂ ಉತ್ತರದ ಶಿಖರ ಚತುರಸ್ರವಾಗಿಯೂ ಪಶ್ಚಿಮದ ಶಿಖರ ಅಷ್ಟಾಸ್ರವಾಗಿಯೂ ಇವೆ. ಇವುಗಳ ಮೇಲೆ ಲತಾಪಟ್ಟಿಕೆಯೂ ಪೀಠದ ಮೇಲಿರುವ ಲಾಳದ ಆಕಾರದ ಕಮಾನುಗಳೂ ಇವೆ. ಇವು ತಾಜ್‌ಮಹಲಿನ ಬುದ್ಬುದಾಕಾರದ



ಆದಿನಾಥ ಬಸ್ತಿಯ ಪಶ್ಚಿಮ ದಿಕ್ಕಿನ ಗೋಪುರ



ನೇಮಿನಾಥ ತೀರ್ಥಂಕರ



ಆನೆ ಮತ್ತು ಸಿಂಹಗಳ ಹಾಗೂ ವೃಷಭಗಳ ಪಟ್ಟಿಕೆಗಳು

ಶಿಖರಗಳನ್ನು ನೆನಪಿಗೆ ತರುತ್ತವೆ. ಗ್ರೀವಾಕಾರದ ಅಂತಸ್ತುಗಳುಳ್ಳ ಇಲ್ಲಿನ ಗೋಪುರಗಳು ಸುಂದರವಾಗಿಯೂ ಎತ್ತರವಾಗಿಯೂ ಇದ್ದು ಸ್ತಂಭಿಕೆಗಳಿಂದ ಅಲಂಕೃತವಾಗಿವೆ. ಶಿಖರದ ಮೇಲೆ ಮಗುಚಿಹಾಕಿದ ಪದ್ಮ ಆಕರ್ಷಣೀಯವಾಗಿದೆ. ಆದರೆ ಈ ಶಿಖರಕ್ಕೆ ಕಳಶಗಳಿಲ್ಲ. ಪೂರ್ವದಿಕ್ಕಿನ ಗೋಪುರದಲ್ಲಿರುವ ಅಂಡಾಕಾರದ ಗುಮ್ಮಟ ಮಹಾಬಲಿಪುರದ ಧರ್ಮರಾಜ ರಥ ಅಥವಾ ಎಲ್ಲೋರದ ಕೈಲಾಸ ದೇವಾಲಯದ ಗುಮ್ಮಟಗಳ ನೆನಪನ್ನುಂಟುಮಾಡುತ್ತದೆ. ಬಸ್ತಿಯಲ್ಲಿರುವ ವಾಹನಸ್ಥ ದಿಕ್ಪಾಲಕರಾದಿಯಾದ ಹಲವು ಪ್ರತಿಮೆಗಳು ಗಮನಾರ್ಹವಾಗಿವೆ.

ಈ ತ್ರಿಕೂಟಾಚಲದ ನವರಂಗದಲ್ಲಿ ಹೆಚ್ಚು ಕೆತ್ತನೆ ಕೆಲಸವಿಲ್ಲ. ಸ್ತಂಭಗಳು ಸಾಮಾನ್ಯವಾಗಿವೆ. ಮೇಲ್ಚಾವಣಿಯ ಕಲ್ಲುಗಳು ಮಧ್ಯದಿಂದ ಹರಡಿಕೊಂಡಿವೆ. ಭುವನೇಶ್ವರಿಯಲ್ಲಿ ಅಷ್ಟದಿಕ್ಪಾಲಕರೂ ಬಲಗೈಯಲ್ಲಿ ಶಂಖವನ್ನೂ ಎಡಗೈಯಲ್ಲಿ ದಂಡವನ್ನೂ ಹಿಡಿದು ಐದು ಹೆಡೆಯ ಹಾವಿನ ಕೆಳಗಿರುವ ಧರಣೇಂದ್ರ, ಯಕ್ಷ, ಚಾಮರಧಾರಿಣಿಯರೂ ಇರುವುದು ಆಕರ್ಷಣೀಯ ದೃಶ್ಯವಾಗಿದೆ.

ಬಳಿಯಲ್ಲಿ ಎರಡು ಮಂದಿರಗಳಿದ್ದು ಒಂದರಲ್ಲಿ ನಿಂತಿರುವ ಶಾಂತಿನಾಥನ ಮೂರ್ತಿಯಿದೆ. ಇಲ್ಲಿನ ಒಂದು ಶಾಂತಿನಾಥ ಬಸ್ತಿ 20 ಚದರಡಿಯ ವಿಸ್ತೀರ್ಣದ್ದಾಗಿದ್ದು, ಇದರ ಗರ್ಭಗೃಹದ

ಮೇಲ್ಚಾವಣಿಯಲ್ಲಿ ಪದ್ಮಗಳೂ ನಾಲ್ಕು ಅಷ್ಟಕೋಣ ಸ್ತಂಭಗಳೂ ಇವೆ. ಅಷ್ಟಕೋಣದ ಪೀಠದಲ್ಲಿ ದಿಕ್ಪಾಲಕರಿರುವುದು ಕಾಣಿಸುತ್ತದೆ. ಪೀಠದ ಮೇಲೆ ಸುಮಾರು ಹತ್ತು ಅಡಿ ಎತ್ತರದ ಶಾಂತಿನಾಥನ ಮೂರ್ತಿ ಕಂಗೊಳಿಸುತ್ತದೆ. ಇದಕ್ಕೆ ಆಮೇಲೆ ಸೇರಿಸಿದ ಒಂಬತ್ತಂಕಣಗಳ ನವರಂಗದಲ್ಲಿ ನಾಲ್ಕು ಹೊಯ್ಸಳ ರೀತಿಯ ಬಳಪದ ಕಲ್ಲಿನ ಕಂಬಗಳಿವೆ. ನವರಂಗದ ಆಗ್ನೇಯ ಮೂಲೆಯಲ್ಲಿ ಪದ್ಮ ಪರಶು ಅಕ್ಷಮಾಲಾ ಫಲಗಳನ್ನು ಹಿಡಿದ ಯಕ್ಷವಿಗ್ರಹ ಮಗುಚಿ ಹಾಕಿದ ವೃಷಭಪೀಠದ ಹತ್ತಿರ ಇದೆ. ಮತ್ತೊಂದರಲ್ಲಿ ಯಾವ ಪ್ರತಿಮೆಯೂ ಇಲ್ಲ. ಶಾಂತಿನಾಥ ಮಂದಿರದಲ್ಲಿರುವ ಶಾಸನದಿಂದ ಈ ಮಂದಿರವನ್ನು ಕ್ರಿ.ಶ. 12ನೆಯ ಶತಮಾನದಲ್ಲಿ ಹೊಯ್ಸಳ ವಿಷ್ಣುವರ್ಧನನ ದಂಡನಾಯಕ ಗಂಗರಾಜನ ಬೊಪ್ಪನು ದ್ರೋಹಘರಟ್ಟಾಚಾರಿ ಎಂಬ ಶಿಲ್ಪಿಯ ಸಹಾಯದಿಂದ ಕಟ್ಟಿಸಿದನೆಂದು ತಿಳಿದುಬರುತ್ತದೆ. ಇದರ ಹೊರವಲಯದ ಗೋಡೆಗಳ ಮೇಲಿರುವ ಆನೆ, ಕುದುರೆ, ಸಿಂಹ ಮತ್ತು ಯಾಳಿಗಳ ಚಿತ್ರಪಟ್ಟಿಕೆಗಳು ಅಮೋಘ ಕೆತ್ತನೆಗಳಾಗಿದ್ದು ಇತರ ಹೊಯ್ಸಳ ದೇವಾಲಯಗಳಲ್ಲಿರುವ ಕೆತ್ತನೆಗಳನ್ನು ಹೋಲುತ್ತವೆ. ಹಸನ್ಮುಖ ಶಾಂತಿನಾಥ ವಿಗ್ರಹ 10 ಅಡಿಗಳೆತ್ತರವಿದ್ದು ಇಲ್ಲಿನ ಬಹು ಸುಂದರ ಶಿಲ್ಪಕೃತಿಗಳಲ್ಲೊಂದಾಗಿದೆ. ಧ್ಯಾನಮಗ್ನ ನೇಮಿನಾಥ ಮತ್ತು ಜಿನಮೂರ್ತಿಗಳೂ ನವರಂಗದಲ್ಲಿರುವ ಯಕ್ಷಿಣಿ ಗೊಂಬೆಯೂ ಉತ್ತಮ ಕೃತಿಗಳು. ಉಬ್ಬು ಎದೆ, ತೆಳುವಾದ ಉದರ, ನೀಳವಾಗಿ ಜೋತಾಡುತ್ತಿರುವ ಕೂದಲು ಮತ್ತು ಅನೇಕ ಆಭರಣಯುಕ್ತವಾದ ಯಕ್ಷಿಣಿಶಿಲ್ಪ ಚೋಳಶೈಲಿಯ ಅತ್ಯುತ್ತಮ ಶಿಲ್ಪಗಳನ್ನು ಹೋಲುತ್ತದೆ. ನವರಂಗದ ಚಾವಣಿಯಲ್ಲಿನ ಇತರ ಕೆತ್ತನೆಗಳೂ ಉತ್ತಮ ಕಲಾಕೃತಿಗಳಾಗಿವೆ.



ಯಕ್ಷಿ, ಶಾಂತಿನಾಥ ಬಸ್ತಿ

ಈ ಬಸ್ತಿಯ ಗರ್ಭಗುಡಿಯ ತೊಲೆಯ ಮೇಲೆ ವೀರರಾಜೇಂದ್ರನ ಶಾಸನವಿದೆ. ಆಗ್ನೇಯ ಸ್ತಂಭದ ಮೇಲೆ ಹದಿನಾಲ್ಕನೆಯ ಶತಮಾನದ ಶಾಸನವಿದೆ. ಮೊದಲಿನ ಸುಕನಾಸಿದ್ವಾರದ ಹತ್ತಿರ ಅಷ್ಟಕೋಣಪೀಠ, ಎರಡು ದ್ವಾರಪಾಲ ವಿಗ್ರಹಗಳೂ ಇವೆ.

ಶಾಂತಿನಾಥ ಬಸ್ತಿಯ ಪೂರ್ವದಲ್ಲಿ ಮತ್ತೊಂದು ಬಸ್ತಿಯಿದೆ. ಇದರ ನವರಂಗದಲ್ಲಿ ಹಳೆಯ ರೀತಿಯ ಸ್ತಂಭಗಳಿವೆ. ಇದರ ಹಿಂಭಾಗದ ಗೋಡೆಯನ್ನು ತೆಗೆದು ಪೂರ್ವದ್ವಾರವನ್ನು ನಿಲ್ಲಿಸಲಾಗಿದೆ. ನವರಂಗದ ಮಧ್ಯದಲ್ಲಿರುವ ಭುವನೇಶ್ವರಿ ಆಕರ್ಷಣೀಯವಾಗಿದೆ. ಅಷ್ಟದಿಕ್ಪಾಲಕರು ಮತ್ತು ತೊಲೆಗಳು ಸಂಧಿಸುವ ಜಾಗದಲ್ಲಿ ಪುಷ್ಪಮಾಲಿಕೆಗಳನ್ನು ಹಿಡಿದಿರುವ ನಾಲ್ವರು ಗಂಧರ್ವರ ವಿಗ್ರಹಗಳಿವೆ. ಮಧ್ಯಫಲಕದಲ್ಲಿ ಯಕ್ಷ-ಯಕ್ಷಿ ಗಂಧರ್ವರ ನಡುವೆ ಸಿಂಹಪೀಠವಿದ್ದು ಅದರ ಹಿಂದೆ ಆನೆಗಳಿವೆ. ಸಿಂಹಪೀಠದ ಮೇಲೆ ಪ್ರಭಾವಳಿ, ಮುಕ್ಕೊಡೆಗಳಿಂದಲಂಕೃತವಾದ ಜಿನ ವಿಗ್ರಹವಿದೆ. ಈ ವಿಗ್ರಹಕ್ಕೆ ಬುದ್ಧನಿಗಿರುವಂತೆ ಊರ್ಣಕೇಶವಿದೆ. (ಟಿ.ಕೆ.ಟಿ.)

**ಕಂಬನ್ :** ತಮಿಳು ನಾಡಿನ ಪ್ರಮುಖ ಕವಿಗಳ ಸಾಲಿನಲ್ಲಿ ಮೊದಲಿಗನೆನಿಸಿದವ. ರಾಮಾಯಣದ ಕರ್ತೃ. ಕಾಲ ಒಂಬತ್ತನೆಯ ಶತಮಾನವೆಂದೂ ಹನ್ನೆರಡನೆಯ ಶತಮಾನವೆಂದೂ ಅಭಿಪ್ರಾಯಭೇದವಿದೆ. ಈ ಹೆಸರು ಕವಿಗೆ ಹೇಗೆ ಬಂತೆಂಬುದನ್ನು ಹಲವು ರೀತಿಯಲ್ಲಿ ವಿವರಿಸುತ್ತಾರೆ. ಕಾಳಿಕಾಲಯದ ಧ್ವಜಸ್ತಂಭದಡಿಯಲ್ಲಿ ಅನಾಥಶಿಶುವಾಗಿ ಬಿದ್ದಿದ್ದ ಈತನನ್ನು ಉದಾರಿಯೊಬ್ಬ ಸ್ವೀಕರಿಸಿ ಬೆಳೆಸಿದುದರಿಂದ ಈ ಹೆಸರು ಬಂತೆಂದು ಕೆಲವರು ಹೇಳುತ್ತಾರೆ. ಕಾಂಚೀಪುರದ ದೇವರ ಹೆಸರಾದ ಏಕಂಬನ್ ಎಂಬುದೇ ಕಂಬನ್ ಎಂದಾಯಿತೆಂದು ಮತ್ತೆ ಕೆಲವರು ಹೇಳುತ್ತಾರೆ. ಕಂಬಂಗೊಲ್ಲೈ—ಎಂದರೆ ನವಣೆಯ ಹೊಲವನ್ನು ಕಾದುಕೊಂಡಿದ್ದುದರಿಂದ ಕಂಬನ್ ಎಂಬ ಹೆಸರು ಬಂತೆಂದು ಇನ್ನು ಕೆಲವರು ಹೇಳುತ್ತಾರೆ. ಕವಿ ಚೋಳನಾಡಿನ ತಿರುವಳಂದೂರಿನಲ್ಲಿ ಉವಚ್ಚರ್ (ಒಂದು ನೀಚಕುಲ) ಎಂಬ ಜಾತಿಗೆ ಸೇರಿದವನೆಂದು ಪ್ರತೀತಿ. ತಂದೆಯ ಹೆಸರು ಆದಿತ್ತರ್ ಎಂದು ಕೆಲವರ ಊಹೆ. ಇವನನ್ನು ಸಲಹಿದ ಉದಾರಿ ತಿರುವೆಣ್ಣೈನಲ್ಲೂರಿಗೆ ಸೇರಿದ ಜಡೆಯಪ್ಪ. ಸಲಹಿದವನಿಗೆ ತನ್ನ ಕೃತಜ್ಞತೆಯನ್ನು ತೋರಿಸುವುಕ್ಕಾಗಿ, ಕಾವ್ಯದಲ್ಲಿ ಕವಿ ಸಾವಿರ ಪದ್ಯಗಳಿಗೊಮ್ಮೆ ಆತನ ಹೆಸರನ್ನು ಸೂಚಿಸಿ ಹೊಗಳಿದ್ದಾನೆ. ಕಂಬನ್ ವೈಷ್ಣವ ಸಂಪ್ರದಾಯಕ್ಕೆ ಸೇರಿದವನಾದರೂ ಇತರ ಮತಗಳನ್ನು ಕಿಂಚಿತ್ತೂ ಹೀನೈಸಿಲ್ಲ. ಕಂಬನ ಮಗನೇ ಅಂಬಿಕಾಪತಿ. ಇವನೂ ಕವಿಯೇ. ಕೊನೆಯಲ್ಲಿ ಕಂಬನ್ ರಾಮನಾಥಪುರ ಜಿಲ್ಲೆಯ ನಾಟ್ಟರಸನ್‌ಕೋಟೆಯೆಂಬಲ್ಲಿ ಕಾಲವಾದನೆಂದು ತಿಳಿಯುತ್ತದೆ. ಆ ಊರಿನಲ್ಲಿ ಕವಿಯ ಸಮಾಧಿಯಿದೆ.

ಸಂಸ್ಕೃತದಲ್ಲಿ ವಾಲ್ಮೀಕಿಯಿಂದ ರಚಿತವಾದ ರಾಮಾಯಣವನ್ನು ಕಂಬನ್ ತಮಿಳಿನಲ್ಲಿ ಬರೆದಿದ್ದಾನೆ. ಇಡೀ ಕಾವ್ಯದಲ್ಲಿ ಹತ್ತು ಸಾವಿರಕ್ಕಿಂತ ಮೇಲ್ಪಟ್ಟು ಪದ್ಯಗಳಿವೆ. ಇದು ಶ್ರೀರಂಗಂನಲ್ಲಿ ಪ್ರಕಟವಾಯಿತು. ಈ ಕಾವ್ಯಕ್ಕೆ ವಾಲ್ಮೀಕಿ ರಾಮಾಯಣ ಆಧಾರವಾಗಿದ್ದರೂ ತಮಿಳು ಸಂಪ್ರದಾಯ, ರೀತಿನೀತಿಗಳಿಗನುಸಾರವಾದ ಅನೇಕ ಮಾರ್ಪಾಟುಗಳೂ ಸನ್ನಿವೇಶ ಮತ್ತು ವ್ಯಕ್ತಿಚಿತ್ರಣದಲ್ಲಿ ವ್ಯತ್ಯಾಸಗಳೂ ಆಗಿರುವುದನ್ನು ಗಮನಿಸಬೇಕಾಗುತ್ತದೆ. ಬಿಲ್ಲನ್ನು ಮುರಿಯುವ ಮೊದಲೇ ರಾಮ ಸೀತೆಯನ್ನು ನೋಡುತ್ತಾನಲ್ಲದೆ ಪರಸ್ಪರರಿಗೆ ಪ್ರೇಮವಂಕುರಿಸುತ್ತದೆ—ಎಂಬ ಅಂಶವನ್ನು ನೋಡಬಹುದು. ಇದು ವಾಲ್ಮೀಕಿ ರಾಮಾಯಣದಲ್ಲಿಲ್ಲ. ಹಾಗೆಯೇ ಸೀತೆಯನ್ನು ರಾವಣ ಕದ್ದುಕೊಂಡೊಯ್ಯುವಾಗ ಅವನು ಅವಳನ್ನು ಸ್ಪರ್ಶಿಸದೆ, ಪರ್ಣಶಾಲಾಸಮೇತ ಎತ್ತಿಕೊಂಡು ಹೋದನೆಂಬುದು ಸಹ ಮುಖ್ಯ ಮಾರ್ಪಾಡು. ಮಾಯಾಜನಕ ವೃತ್ತಾಂತ, ಹಿರಣ್ಯವಧೆಯ ಸಂದರ್ಭಗಳು ಕವಿ ಮಾಡಿಕೊಂಡ ಹೊಸ ಕಲ್ಪನೆಗಳು. ಗುಹ, ತಾರೆಯರಂಥ ಪಾತ್ರಗಳನ್ನು ಕವಿ ಉತ್ತಮಗೊಳಿಸಿದ್ದಾನೆ. ಒಟ್ಟಿನಲ್ಲಿ ಕಂಬರಾಮಾಯಣ ತಮಿಳಿನಲ್ಲಿ ಅತ್ಯಂತ ಉತ್ತಮ ಕಾವ್ಯ. ಗುಣದಲ್ಲೂ ಗಾತ್ರದಲ್ಲೂ ಹಿರಿದಾದುದೆಂಬ ಹೊಗಳಿಕೆಗೆ ಪಾತ್ರವಾಗಿದೆ. ಕಾವ್ಯಲಕ್ಷಣಗಳನ್ನೆಲ್ಲ ಚೆನ್ನಾಗಿ ಕಲಿತ ಕಂಬನ್ ತನ್ನ ಕಾವ್ಯದಲ್ಲಿ ಅವನ್ನು ಸರಿಯಾಗಿ ಹೊಂದಿಸುತ್ತಾನೆ. ಸಂಸ್ಕೃತಭಾಷಾಪರಿಚಯ, ಲೋಕಾನುಭವ, ಆಳವಾದ ಪಾಂಡಿತ್ಯ ಮತ್ತು ಉತ್ಸಾಹಗಳನ್ನುಳ್ಳವ ಕಂಬನ್. ಪಾತ್ರಗಳಿಗೆ ಸಂದರ್ಭಗಳಿಗೆ ತಕ್ಕಂತೆ, ಸಹಜತೆಯನ್ನು ಮಾತಿನಲ್ಲಿ, ದೃಶ್ಯದಲ್ಲಿ, ಛಂದಸ್ಸಿನ ಮಾಧುರ್ಯದಲ್ಲಿ, ತಂದಿರುವುದನ್ನು ಕಾವ್ಯದುದ್ದಕ್ಕೂ ಕಾಣಬಹುದು. ರಚನೆಯಲ್ಲಿ ಆಳವಾದ ಅರ್ಥ, ನಯ, ನಾಜೂಕು, ಇಂಪಾದ ಛಂದೋಲಯ, ಅರ್ಥಸ್ಪಷ್ಟತೆ, ಸಂಕ್ಷಿಪ್ತತೆ, ರಸಪೂರ್ಣತೆ, ಸುಂದರ ಉಪಮೆಗಳ ಮೇಳ—ಇವುಗಳಿಂದ ಹೊಮ್ಮುವ ಕಾವ್ಯಸೌಂದರ್ಯದ ಉತ್ಕರ್ಷವನ್ನು ಕಾಣುತ್ತೇವೆ. ಸನ್ನಿವೇಶ ಸಂದರ್ಭಗಳನ್ನು ವರ್ಣಿಸುವುದರಲ್ಲಿ ಕಂಬನ್ ಅಪ್ರತಿಮ. ಕಾವ್ಯದುದ್ದಕ್ಕೂ ನಾಟಕೀಯತೆ ಎದ್ದು ಕಾಣುತ್ತದೆ. ಸಹೋದರಪ್ರೇಮ, ಪತಿವ್ರತಾಮಹಿಮೆ, ಶಿಷ್ಟರ ಉನ್ನತಿ, ದುಷ್ಟರ ಅವನತಿ. ದೈವಭಕ್ತಿ—ಇವನ್ನೆಲ್ಲ ಕಾವ್ಯದಲ್ಲಿ ಕವಿ ಎತ್ತಿಹಿಡಿದಿದ್ದಾನೆ. ಇಂಥ ಗುಣಗಳಿರುವುದರಿಂದಲೇ ಕಂಬನನ್ನು ಕವಿಚಕ್ರವರ್ತಿ ಎಂದು ಜನಸಾಮಾನ್ಯರೂ ಪಂಡಿತರೂ ಕೊಂಡಾಡುತ್ತಾರೆ. ವಿದ್ಯೆಯಲ್ಲಿ ಕಂಬನ್ ಬಲ್ಲಿದನೆಂಬುದಕ್ಕೆ ಕಂಬರ್ ವೀಟ್ಟು ಕಟ್ಟುತರಿಯುಂ ಕವಿಪಾಡುಂ—ಎಂದರೆ ಕಂಬನ ಮನೆಯ ಕೈಮಗ್ಗವೂ ಕವಿತೆಯನ್ನು ಹಾಡುವುದು—ಎಂಬ ನಾಣ್ಣುಡಿ ಸಾಕ್ಷಿಯಾಗಿದೆ. ತಮಿಳಿಗೆ ಗತಿ ಇಬ್ಬರೇ—ಒಬ್ಬ ಕಂಬನ್, ಇನ್ನೊಬ್ಬ ತಿರುವಳ್ಳುವರ್—ಎಂಬ ಜನಪ್ರಶಂಸೆ ಸಾರ್ಥಕವಾದುದಾಗಿದೆ. ಎಲ್ಲರೂ ಇಲ್ಲವೆನ್ನದವರಾಗಬೇಕು, ಆತುಳೈಶ್ವರ್ಯವನ್ನು ಹೊಂದಿದವರಾಗಬೇಕು—ಇಂಥ ಸುಖದಿಂದ ಬಾಳುವ ಜನರಿರುವ ನಾಡಿನ ಕನಸು ಕಾಣುತ್ತಾನೆ—ಕಂಬನ್.

ಉಳುವವರ ಹಿರಿಮೆಯನ್ನು ಏರ್ ಎಳುವದು—ಎಂಬ ತನ್ನ ಎಪ್ಪತ್ತು ಹಾಡುಗಳಲ್ಲಿಯೂ ಬೇಸಾಯಗಾರರು ಎಂಥ ಉಪಕಾರಿಗಳು ಎಂಬುದನ್ನು ತಿರುಕ್ಕೈವಳಕ್ಕಂ

ಎಂಬ ಗ್ರಂಥದಲ್ಲಿಯೂ ಕಂಬನ್ ತೋರಿಸಿದ್ದಾನೆ. ಮತ್ತೆ ನಮ್ಮಾಳ್ವಾರರನ್ನು ಹೊಗಳುವ ಶಡಗೋಪರಂತಾದಿ, ಸರಸ್ವತಿಯನ್ನು ಸ್ತುತಿಸುವ ಸರಸ್ವತಿ ಅಂತಾದಿ ಎಂಬ ಗ್ರಂಥಗಳನ್ನೂ ಅಲ್ಲದೆ ಇತರ ಕವಿತೆಗಳನ್ನೂ ಈತ ರಚಿಸಿದ್ದಾನೆ.

ಪುಗಳ್ ಕಂಬನ್ ಪಿರಂದ ತಮಿಳ್‌ನಾಡ್ (ಶ್ರೇಷ್ಠ ಕವಿ ಕಂಬನುದಿಸಿದ ತಮಿಳುನಾಡು) ಎಂಬ ಕವಿತೆಯನ್ನೂ ನಾವು ತಿಳಿದ ಕವಿಗಳಲ್ಲಿ ಕಂಬನಂಥ ಕವಿಗಳು ಭೂಮಿಯಲ್ಲಿ ಎಲ್ಲಿಯೂ ಹುಟ್ಟಲಿಲ್ಲ—ಎಂದರ್ಥ ಬರುವ ಮತ್ತೊಂದು ಹಾಡನ್ನೂ ಕವಿ ಭಾರತಿಯವರು ರಚಿಸಿದ್ದಾರೆ.

ಕಂಬನ್ ಭಾರತದ ಇತರ ಶ್ರೇಷ್ಠ ಕವಿಗಳ ಅಗ್ರಸಾಲಿನಲ್ಲಿ ಸೇರತಕ್ಕವನಾಗಿದ್ದಾನೆ. (ಎಸ್.ಪಿ.ಟಿ.)

**ಕಂಬನ್, ಗುಯೋಮುನ್‌ಡೂರ್ :** 1888-1945. ಐಸ್ಲೆಂಡ್ ದೇಶದ ಕಾದಂಬರಿಕಾರ ಹಾಗೂ ನಾಟಕಕಾರ. ಐಸ್ಲೆಂಡಿನ ಲಿಟ್ಲ್‌ಬಯರ್‌ನಲ್ಲಿ ಜನಿಸಿದ. ಬಾಲ್ಯವಿದ್ಯಾಭ್ಯಾಸದ ಅನಂತರ ಡೆನ್‌ಮಾರ್ಕಿನಲ್ಲಿ ನೆಲೆಸಿ, ಡೇನಿಷ್ ಭಾಷೆಯಲ್ಲಿ ಕೃತಿಗಳನ್ನು ರಚಿಸಿದ. ನಾಟಕಗಳಲ್ಲಿ ಸಮಾಜದ ರೀತಿನೀತಿಗಳನ್ನು ಟೀಕಿಸಿದರೂ ವಿಶಾಲಹೃದಯಿಯೆನಿಸಿದ್ದ. ಪ್ರಾಚೀನ ಸಾಗಾಗಳಲ್ಲಿ ಆತನಿಗಿರುವ ಉತ್ಕಟ ಪ್ರೇಮವನ್ನು ಅವನ ಕಾದಂಬರಿಗಳಾದ ದಿ ವರ್ಜಿನ್ ಆಫ್ ಸ್ಮಾಲ್ ಹೋಲ್ಟ್ ಮತ್ತು ಐ ಸಿ ಎ ವಂಡರ್‌ಸ್ ಲ್ಯಾಂಡ್‌ಗಳಲ್ಲಿ ಕಾಣಬಹುದು. ಎರಡನೆಯ ಮಹಾಯುದ್ಧವಾದ ಮೇಲೆ ಡೇನಿಷ್ ಪ್ರೇಮಿಗಳು ಆತನನ್ನು ನಾಟ್ಜೀ ಪಕ್ಷದವನೆಂದು ತಪ್ಪು ತಿಳಿದು ಕೊಂದರು. (ಬಿ.ವಿ ಎಸ್.)

**ಕೆಂಬರ್ಲೆಂಡ್ :** ಅಮೆರಿಕ ಸಂಯುಕ್ತಸಂಸ್ಥಾನದ ಮೆರಿಲೆಂಡ್ ರಾಜ್ಯದ ದೊಡ್ಡ ನಗರಗಳಲ್ಲಿ ಮೂರನೆಯದು. ರಾಜ್ಯದ ವಾಯವ್ಯ ಭಾಗದಲ್ಲಿ, ಪೊಟೋಮೆಕ್ ನದಿಯ ದಡದ ಮೇಲಿದೆ. ಸಮುದ್ರಮಟ್ಟಕ್ಕಿಂತ 635′ ಎತ್ತರದಲ್ಲಿರುವ ಈ ನಗರದ ಮೂರು ಕಡೆಗಳಲ್ಲಿ ಪರ್ವತಗಳಿವೆ. ನ್ಯಾರೋಸ್ ಎಂದು ಪ್ರಸಿದ್ಧವಾದ ಸುಂದರ ಕಮರಿಯೊಂದು ಇದರ ನೈಸರ್ಗಿಕ ಹೆಬ್ಬಾಗಿಲು. ಕಂಬರ್ಲೆಂಡ್ ಅಥವಾ ರಾಷ್ಟ್ರೀಯ ರಸ್ತೆ ಈ ನಗರದಿಂದ ಆರಂಭವಾಗಿ ಪಶ್ಚಿಮಾಭಿಮುಖವಾಗಿ ಸಾಗುತ್ತದೆ. ಚೆಸಪೀಕ್ ಮತ್ತು ಒಹಾಯೊ ನಾಲೆಯ ಪಶ್ಚಿಮದ ಕೊನೆಯ ನಿಲುದಾಣ ಈ ನಗರ.

ಕಲ್ಲಿದ್ದಲು ವ್ಯಾಪಾರದಲ್ಲಿ ಇದು ಪ್ರಮುಖ ಸ್ಥಾನ ಪಡೆದಿದೆ. ವರ್ಷಕ್ಕೆ ಸುಮಾರು 15,00,000 ಟನ್ ಕಲ್ಲಿದ್ದಲನ್ನು ಈ ಸುತ್ತಿನ ಪ್ರದೇಶದಲ್ಲಿ ಉತ್ಪಾದಿಸಲಾಗುತ್ತದೆ. ಇದಲ್ಲದೆ ಪ್ಲಾಸ್ಟಿಕ್, ಟೈರು, ಗಾಜಿನ ಸಾಮಾನು, ಇಟ್ಟಿಗೆ ಮತ್ತು ಮರದ ಸಾಮಾನುಗಳ ಉತ್ಪಾದನೆಯಾಗುತ್ತದೆ. ಕಂಬರ್ಲೆಂಡ್ ನಗರ ಪಶ್ಚಿಮ ಮೆರಿಲೆಂಡ್, ಪಶ್ಚಿಮ ವರ್ಜಿನಿಯ ಮತ್ತು ಪೆನ್ಸಿಲ್‌ವೇನಿಯಗಳ ಪ್ರಮುಖ ಕೇಂದ್ರ. ಇಲ್ಲಿ ಪ್ರಥಮವಾಗಿ ವಸತಿ ಏರ್ಪಟ್ಟದ್ದು 1750ರಲ್ಲಿ ; 1763ರಲ್ಲಿ ಪಟ್ಟಣದ ಸ್ಥಾಪನೆಯಾಯಿತು ; ನಗರದ ಸನ್ನದು ದೊರೆತದ್ದು 1850ರಲ್ಲಿ. ಜನಸಂಖ್ಯೆ 33,415 (1960). (ಎಂಎಚ್.)

**ಕಂಬರ್ಲೆಂಡ್ ಕಣಿವೆ :** ವರ್ಜಿನಿಯ, ಟೆನೆಸೀ ಮತ್ತು ಕೆಂಟಕಿಗಳು ಸೇರುವ ಸ್ಥಳದಲ್ಲಿದೆ. ಕಂಬರ್ಲೆಂಡ್ ಪರ್ವತ ಇಳಿಜಾರಾಗಿದೆ. ಈ ಕಣಿವೆಯ ಎತ್ತರ 1650′. ಇದನ್ನು ಥಾಮಸ್ ವಾಕರ್ 1750ರಲ್ಲಿ ಕಂಡುಹಿಡಿದ. ಅಮೆರಿಕನ್ ಅಂತರ್ಯುದ್ಧದ ಕಾಲದಲ್ಲಿ ಇದು ಕ್ರಮವಾಗಿ ಎರಡೂ ಪಕ್ಷಗಳ ಸೇನಾ ನೆಲೆಯಾಗಿತ್ತು. (ಎಂಎಚ್.)

**ಕಂಬರ್ಲೆಂಡ್ ನದಿ :** ದಕ್ಷಿಣ ಕಂಬರ್ಲೆಂಡ್ ಪ್ರಸ್ಥಭೂಮಿಯ ಕಂಬರ್ಲೆಂಡ್ ಪರ್ವತಪ್ರದೇಶದಲ್ಲಿ ಹುಟ್ಟಿ ಕೆಂಟಕಿ ಮತ್ತು ಟೆನೆಸೀಗಳಲ್ಲಿ ಹರಿದು 687 ಮೈಲಿ ದೂರ ಕ್ರಮಿಸಿ ಒಹಾಯೊ ನದಿಯನ್ನು ಸೇರುತ್ತದೆ. ಬೇಸಗೆಯಲ್ಲಿ ಇದರ ಪ್ರವಾಹ ಕಡಿಮೆ. ಇದು ಮಳೆಗಾಲದಲ್ಲಿ ತುಂಬಿ, ಅನಾಹುತಕಾರಿಯಾಗಿ ಹರಿಯುತ್ತದೆ. ಈ ನದಿಯ ಮತ್ತು ಇದರ ಉಪನದಿಗಳ ಮೇಲೆ ಅನೇಕ ಕಟ್ಟೆಗಳನ್ನು ಕಟ್ಟಿ ನೌಕಾಯಾನಕ್ಕೂ ವಿದ್ಯುದುತ್ಪಾದನೆಗೂ ಸೌಲಭ್ಯ ಕಲ್ಪಿಸಲಾಗಿದೆ. (ಎಂಎಚ್.)

**ಕಂಬರ್ಲೆಂಡ್ ಪ್ರಸ್ಥಭೂಮಿ :** ಅಮೆರಿಕ ಸಂಯುಕ್ತಸಂಸ್ಥಾನದ ಪಶ್ಚಿಮ ಅಪಲೇಚಿಯನ್ ಪ್ರಸ್ಥಭೂಮಿಯ ಒಂದು ಮುಖ್ಯಭಾಗ. ಪಶ್ಚಿಮ ವರ್ಜಿನಿಯದಿಂದ ಉತ್ತರ ಆಲಬಾಮದ ವರೆವಿಗೂ ವಿಸ್ತರಿಸಿದೆ. ಸುಮಾರು 450 ಮೈಲಿ ಉದ್ದ ಮತ್ತು 40ರಿಂದ 50 ಮೈಲಿಗಳ ವರೆಗೂ ಅಗಲವಾಗಿದೆ. ಸುಮಾರು 140 ಮೈಲಿ ಉದ್ದವಾಗಿರುವ ಪರ್ವತಪಂಕ್ತಿಯೊಂದು ಇದರ ಪೂರ್ವದ ಅಂಚು. ಇದನ್ನು ಕಂಬರ್ಲೆಂಡ್ ಪರ್ವತವೆಂದು ಕರೆಯುವುದು ರೂಢಿ. ಕಲ್ಲಿದ್ದಲು ಮತ್ತು ಸುಣ್ಣಕಲ್ಲು ಈ ಪ್ರಸ್ಥಭೂಮಿಯ ಮುಖ್ಯ ಖನಿಜಗಳು. (ಎಂಎಚ್.)

**ಕಂಬರ್ಲ್ಯಾಂಡ್, ರಿಚರ್ಡ್ :** 1732–1811. ಗೋಲ್ಡ್‌ಸ್ಮಿತ್, ಷೆರಿಡನ್, ಗ್ಯಾರಿಕ್‌ರ ಸಮಕಾಲೀನ ಇಂಗ್ಲಿಷ್ ನಾಟಕಕಾರ. ಆ ಕಾಲಕ್ಕೆ ಬಹುಜನಪ್ರಿಯವಾದ ಭಾವನಾಶೀಲ ಕಾಮೆಡಿಗಳನ್ನು ಬರೆದ ಖ್ಯಾತಿ ಇವನದು. 18ನೆಯ ಶತಕದಲ್ಲಿ ಯಾವ ರಂಗಮಂದಿರದಲ್ಲಿ ನೋಡಿದರೂ ಯಶಸ್ವಿಯಾಗಿ ಪ್ರದರ್ಶಿತವಾದ ನಾಟಕ ಎಂದರೆ ಇವನ ದಿ ವೆಸ್ಟ್ ಇಂಡಿಯನ್ (1771) ಎಂಬುದು. ಇವನ ಇನ್ನೊಂದು ಪ್ರಸಿದ್ಧ ನಾಟಕ ದಿ ಬ್ರದರ್ಸ್.

ಕೇಂಬ್ರಿಜ್ ಟ್ರಿನಿಟಿ ಕಾಲೇಜಿನಲ್ಲಿ ಪದವೀಧರನಾದ ಈತ ಕೆಲವು ಕಾಲ ಹ್ಯಾಲಿಫಾಕ್ಸ್‌ನ ಅರ್ಲ್ ಅವರ ಕಾರ್ಯದರ್ಶಿಯಾಗಿದ್ದ. ಅನಂತರ ವಾಣಿಜ್ಯ ಇಲಾಖೆಯಲ್ಲಿ ಕೆಲಸಮಾಡುತ್ತಿದ್ದು ನಿವೃತ್ತನಾದ ಮೇಲೆ ಸಂಪೂರ್ಣವಾಗಿ ಸಾಹಿತ್ಯಕ್ಕೇ ಸಮಯವನ್ನು ವಿನಿಯೋಗಿಸುತ್ತ ಕೆಲವು ಕಾದಂಬರಿಗಳನ್ನೂ ಧರ್ಮಬೋಧಕ ಕವನಗಳನ್ನೂ ಬರೆದ. ಆದರೆ ಅವು ಯಾವುದರಲ್ಲೂ ಮಹತ್ತ್ವದ ಗುಣ ಇಲ್ಲ. ಮೆಮಾಯರ್ಸ್ ಎಂಬ ಈತನ ಆತ್ಮಕಥಾನಕ ಗ್ರಂಥ ಚೆನ್ನಾಗಿದೆ. ಕಂಬರ್‌ಲ್ಯಾಂಡನ ವಿಶೇಷತೆ ಇರುವುದೆಲ್ಲ ಆತನ ಕಾಮೆಡಿಗಳಲ್ಲಿ. ಈತ ಬರೆದ ಕೆಲವು ರುದ್ರನಾಟಕಗಳಲ್ಲಿ ದಿ ಜ್ಯೂ ಎಂಬುದು ಚೆನ್ನಾಗಿದೆ.

ದಿ ಅಬ್ಸರ್ವರ್ ಎಂಬ ಪ್ರಬಂಧ ಸಂಕಲನದಲ್ಲಿ ತಾನು ನೋಡಿದ ಜನರ, ಸಮಾಜ ಜೀವನದ ಚಿತ್ರಗಳನ್ನು ಈತ ಕೊಡುತ್ತಾನೆ. ಈತನ ಸೂಕ್ಷ್ಮ ಅವಲೋಕನಶಕ್ತಿ ಮೆಚ್ಚುವಂಥದಾದರೂ ಅತಿ ಆತ್ಮನಿಷ್ಠವಾದ ಇಲ್ಲಿನ ಬರೆವಣಿಗೆ ಓದುಗರಿಗೆ ಹಿಡಿಸುವುದಿಲ್ಲ. ಷೆರಿಡನ್ ತನ್ನ ನಾಟಕದಲ್ಲಿ ಸರ್ ಫ್ರೆಟ್‌ಫುಲ್ ಎಂಬ ಪಾತ್ರವನ್ನು ಸೃಷ್ಟಿಸಿ ಕಂಬರ್‌ಲ್ಯಾಂಡನನ್ನು ಲೇವಡಿಮಾಡಿದ್ದಾನೆ. (ಕೆ.ಬಿ.ಪಿ.)

**ಕಂಬಳ :** ಕೋಣಗಳ ಓಟದ ಸ್ಪರ್ಧೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈಗಲೂ ಜೀವಂತವಾಗಿರುವ ಜಾನಪದ ವಿನೋದಗಳಲ್ಲಿ ಪ್ರಮುಖವಾದುದು. ಹೊಲಗಳನ್ನು ಉತ್ತು, ಹರಗಿ ಆದ ಬಳಿಕ ವಿನೋದಕ್ಕಾಗಿ ಕೋಣಗಳನ್ನು ಗದ್ದೆಯಲ್ಲಿ ಓಡಿಸುತ್ತಿದ್ದ ಸಾಮಾನ್ಯ ವಿಷಯವೇ ಗ್ರಾಮೀಣ ಅಭಿರುಚಿಯ ಒಂದು ವಿನೋದವಾಗಿ ಪರಿಣಮಿಸಿ ದೊಡ್ಡ ಉತ್ಸವದ ರೂಪ ತಾಳಿತು. ಗ್ರಾಮದ ಹಿರಿಯ ಗುತ್ತು ಮನೆಯವರೂ ಇತರ ಮುಖ್ಯಸ್ಥರೂ ನಾಡಿನ ಬಲ್ಲಾಳರೂ ಕಂಬಳಗಳನ್ನು ಏರ್ಪಡಿಸತೊಡಗಿದರು. ಅರಸರು ಜರುಗಿಸುತ್ತಿದ್ದ ದೊಡ್ಡ ಕಂಬಳಕ್ಕೆ ಅರಸುಕಂಬಳ ಎಂಬ ಹೆಸರಿತ್ತು. ಮೂಲ್ಕಿ ಸಾವಂತ ಅರಸರ ಕಾಲದಲ್ಲಿ ಇಂಥ ಕಂಬಳದ ಪರಂಪರೆ ತುಂಬ ಪ್ರಸಿದ್ಧಿ ಪಡೆದಿತ್ತು. ವಂಡಾರು ಎಂಬಲ್ಲಿಯ ಕಂಬಳ ಬಹು ಹೆಸರುವಾಸಿಯಾದುದು.

ಪ್ರತ್ಯೇಕವಾಗಿ ಒಳ್ಳೆಯ ತಳಿಯ ಕೋಣಗಳನ್ನು ವಿಶೇಷ ಪೌಷ್ಟಿಕ ಆಹಾರ ಕೊಟ್ಟು ಕಂಬಳದ ಓಟಕ್ಕಾಗಿ ಸಾಕುವ ಹವ್ಯಾಸ ಇತ್ತೀಚಿಗಿನ ವರೆಗೂ ಇತ್ತು. ಇಂಥ ಕೋಣಗಳ ಎಷ್ಟು ಜೊತೆಗಳು ಹಟ್ಟಿಯಲ್ಲಿರುತ್ತಿದ್ದುವೋ ಅಷ್ಟಷ್ಟು ವ್ಯಕ್ತಿಯ ಪ್ರತಿಷ್ಠೆ ಹೆಚ್ಚಾಗುತ್ತಿತ್ತು. ಓಟಕ್ಕಾಗಿ ಮಾತ್ರ ಮೀಸಲಾಗಿದ್ದ ಇಂಥ ಕೊಬ್ಬಿದ ಕೋಣಗಳಿಂದ ಗದ್ದೆ ಉಳುವಂಥ ಇತರ ಕೆಲಸಗಳನ್ನು ಸಾಮಾನ್ಯವಾಗಿ ಮಾಡಿಸುತ್ತಿರಲಿಲ್ಲ. ನಾಗರಿಕ ಆಕರ್ಷಣೆಗಳು ಹೆಚ್ಚಾದಂತೆಲ್ಲ ಓಟದ ಕೋಣಗಳನ್ನು ಸಾಕುವ ಹವ್ಯಾಸ ಬಹಳ ಕಡಿಮೆಯಾಗುತ್ತಿದೆ. ಯಕ್ಷಗಾನ ಮೇಳಗಳಂತೆ ಕಂಬಳದ ನಿರ್ವಹಣೆ ತುಂಬ ದುಬಾರಿಯಾಗುತ್ತಿರುವುದೂ ಅದರ ಇಳಿಮುಖಕ್ಕೆ ಇರುವ ಮತ್ತೊಂದು ಕಾರಣ.

ವಿಶಾಲವಾದ ಹೊಲದ ಒಂದು ಮಗ್ಗುಲಿನ ಉದ್ದಕ್ಕೆ ಸುಮಾರು ಹದಿನೈದು ಅಡಿಗಳಷ್ಟು ಅಗಲಕ್ಕೆ ಕರೆಕಡಿದು ಓಟದ ಜಾಗವನ್ನು ಪ್ರತ್ಯೇಕಿಸಿ ಪ್ರಶಸ್ತಗೊಳಿಸುತ್ತಾರೆ. ಇದರ ಇಮ್ಮಡಿಯಷ್ಟು ಜಾಗವನ್ನು ಕಡಿದಿದ್ದರೆ ಅದಕ್ಕೆ ಜೋಡುಕರೆ ಎನ್ನುತ್ತಾರೆ. ಹೀಗಿದ್ದಲ್ಲಿ ಓಡಿದ ಕೋಣಗಳು ಹಿಂದೆ ತಿರುಗಿ ಬರುವುದಕ್ಕೂ ಸಾಧ್ಯವಾಗುತ್ತದೆ. ಓಟದ ಜಾಗಕ್ಕೆ ಒಂದು ಹದದಲ್ಲಿ ನೀರು ಬಿಟ್ಟಿರುತ್ತಾರೆ. ನೀರು ಹೆಚ್ಚು ಅಥವಾ ಕಡಿಮೆಯಾದರೆ ಓಟಕ್ಕೆ ಆತಂಕವಾಗುತ್ತದೆ. ಕೆಲವು ಕಡೆ ಹೊಳೆಯ ನೀರನ್ನು ಕಾಲುವೆಯಂತೆ ಉಪಯೋಗಿಸುತ್ತಾರೆ. ಅಲ್ಲಿ ಕಂಬಳದ ಕರೆ ಕಡಿಸುವುದೂ ಉಂಟು.

ಕಂಬಳಕ್ಕೆ ಕ್ರಮದಂತೆ ಆಮಂತ್ರಣ ಹೋದಮೇಲೆ ಓಟದ ಕೋಣಗಳನ್ನು ಸಿಂಗರಿಸಿ, ವಾದ್ಯಘೋಷ, ಕುಣಿತ, ಹಾಡು, ಸಿಡಿಮದ್ದುಗಳ ಸಂಭ್ರಮಗಳಿಂದ ಕಂಬಳದ ಗದ್ದೆಯ ಬಳಿಗೆ ತರುತ್ತಾರೆ. ಈಚೆಗೆ ಅವನ್ನು ಲಾರಿಯಲ್ಲಿ ಸಾಗಿಸುವುದೂ ಉಂಟು.

ಅನಂತರ ಒಂದೊಂದೇ ಜೊತೆ ಕೋಣಗಳನ್ನು ವಿಧಿವತ್ತಾಗಿ ಕಂಬಳದ ಕಳಕ್ಕೆ ಇಳಿಸುತ್ತಾರೆ. ಕೋಣಗಳಿಗೆ ಕಟ್ಟಿದ ಹರಗುವ ಹಲಗೆಯ (ಗೋರುಹಲಗೆ) ಮೇಲೆ ಕೋಣಗಳನ್ನು ಓಡಿಸುವ ವ್ಯಕ್ತಿ ನಿಂತು, ಕೋಣಗಳ ಬಾಲಗಳನ್ನು ಎಡಗೈಯಿಂದ ಬಿಗಿಹಿಡಿದು ಬಲಗೈಯ ಚಾವಟಿಯಿಂದ ಬಲವಾಗಿ ಅವುಗಳಿಗೆ ಬಾರಿಸುತ್ತ ಅವು ವೇಗವಾಗಿ ಓಡುವಂತೆ ಚೋದಿಸುತ್ತಾನೆ. ಸೊಕ್ಕಿದ ಕೋಣಗಳನ್ನು ನಿಯಂತ್ರಿಸುವುದು ಕಷ್ಟಸಾಧ್ಯವೂ ಅಪಾಯಕಾರಿಯೂ ಆದ ಕೆಲಸವಾದ್ದರಿಂದ ಅದನ್ನು ನಿರ್ವಹಿಸುವವ ಬಲಶಾಲಿಯೂ ನುರಿತವನೂ ಆಗಿರಬೇಕು.

ವ್ಯಕ್ತಿ ನಿಂತ ಅಡ್ಡಹಲಗೆ ನೀರನ್ನು ಮೇಲಕ್ಕೆ ಹಾಯಿಸುತ್ತ ಮುಂದಕ್ಕೆ ಧಾವಿಸುತ್ತದೆ.

ಸಾಮಾನ್ಯವಾದ ಗೋರು ಹಲಗೆಯನ್ನೇ ಓಟಕ್ಕೂ ಅಡ್ಡಹಲಗೆಯಾಗಿ ಹಿಂದೆ ಉಪಯೋಗಿಸುತ್ತಿದ್ದರು. ಆದರೆ ಅದರ ಮೂಲಕ ಸಾಕಷ್ಟು ಹೆಚ್ಚು ಎತ್ತರಕ್ಕೆ ನೀರು ಚಿಮ್ಮುವುದಿಲ್ಲವೆಂಬುದರಿಂದ, ಅದರ ರಚನೆಯಲ್ಲಿ ತುಸು ವ್ಯತ್ಯಾಸ ಮಾಡಿ ಕಣೆಹಲಗೆ ಎಂಬುದನ್ನು ಈಗ ಬಳಸತೊಡಗಿದ್ದಾರೆ.

ಕಂಬಳದ ತಳದ ಕೊನೆಯ ತುದಿಗೆ ಅಂದರೆ ಕೋಣಗಳು ಓಡಿ ಗುರಿಮುಟ್ಟು ವಲ್ಲಿಗೆ ಮಂಜೊಟ್ಟಿ ಎನ್ನುತ್ತಾರೆ. ಕಂಬಳದ ಕೋಣಗಳನ್ನು ಮಂಜೊಟ್ಟಿಕೋಣ ಎಂದೂ ಕರೆಯುವುದುಂಟು. ಹಿಂದೆ ನಡೆದುದೆನ್ನಲಾದ ಕಂಬಳದ ಒಂದು ದುರಂತ ಪ್ರಕರಣ ಮಂಜೊಟ್ಟಿಗೋಣ ಎಂಬ ತುಳುಪಾಡ್ದನವಾಗಿ ಈಗಲೂ ಪ್ರಚಲಿತವಾಗಿದೆ.

ಕಂಬಳದ ಕರೆಯ ಸುಮಾರು ಮಧ್ಯದಲ್ಲಿ, ಅಥವಾ ಮಂಜೊಟ್ಟಿಗೆ ಸಮೀಪ ವಾಗಿ ಒಂದೋ ಎರಡೋ ನಿಶಾನೆಗಳನ್ನು ನೆಟ್ಟಿರುತ್ತಾರೆ. ಸುಮಾರು ಇಪ್ಪತ್ತು ಅಡಿ ಗಳಷ್ಟು ಎತ್ತರಕ್ಕೆ ಅಡ್ಡವಾಗಿ ಕಟ್ಟಿರುವ ನಿಶಾನೆಗೆ ಬಟ್ಟೆಯನ್ನು ಅಥವಾ ಹಲಗೆ ಯನ್ನು ಉಪಯೋಗಿಸುತ್ತಾರೆ. ನಿಶಾನೆಗೆ ನೀರು ಮುಟ್ಟಿಸಿದ ಕೋಣಗಳು ಓಟದಲ್ಲಿ



ಓಟದ ಸ್ಪರ್ಧೆಗೆ ಸಿದ್ಧವಾಗುತ್ತಿರುವ ಒಂದು ಜೊತೆ ಕೋಣಗಳು. ಅವನ್ನು ಕಣಕ್ಕೆ ಸಿದ್ಧಮಾಡಿದ ಮಾಡಿದ ಜನ ಪಕ್ಕದಲ್ಲಿದ್ದು ಕುಮ್ಮಕ್ಕು ಕೊಡಲು ಕಾತರರಾಗಿದ್ದಾರೆ

ಉತ್ತಮ ಎಂಬ ಪ್ರಶಸ್ತಿಗೆ ಪಾತ್ರವಾಗುತ್ತವೆ. ನಿಶಾನೆ ಎಷ್ಟು ಎತ್ತರಕ್ಕೆ ಒದ್ದೆ ಯಾಯಿತು ಎಂಬುದರ ಮೇಲಿಂದ ಒಂದನೆಯ ಎರಡನೆಯ ಇತ್ಯಾದಿ ಭಹುಮಾನ ಗಳು ಅನುಕ್ರಮವಾಗಿ ಸಲ್ಲುತ್ತವೆ. ಚಿನ್ನದ, ಬೆಳ್ಳಿಯ ಪದಕಗಳು, ಬಾಳೆಯ ಗೊನೆ ಇತ್ಯಾದಿ ಬಹುಮಾನಗಳನ್ನು ಇರಿಸುವ ವಾಡಿಕೆಯುಂಟು.

ಒಟ್ಟೊಟ್ಟಿಗೆ ಎರಡೆರಡು ಜೊತೆ ಕೋಣಗಳನ್ನು ಓಡಿಸಿ, ಓಟದಲ್ಲಿ ಯಾವುದು ಮೊದಲು ಬರುತ್ತದೆ ಎಂದು ಸ್ಪರ್ಧೆಯನ್ನು ಏರ್ಪಡಿಸುವುದುಂಟು.

ಕಂಬಳದ ಅಂಗವಾಗಿ ಕೋಳಿಕಾಳಗ (ನೋಡಿ—ಕೋಳಿ ಅಂಕ) ಇತ್ಯಾದಿ ಇತರ ಮನರಂಜನೆಗಳನ್ನು ಏರ್ಪಡಿಸುವುದೂ ಉಂಟು. (ಎ.ಎಸ್‌ಓ.)

**ಕಂಬಳಿ :** ಹೊದೆಯಲು ಹಾಸಲು ಉಪಯೋಗಿಸುವ ಉಣ್ಣೆಯ ನೇಯ್ಗೆ. ಇದು ಉಷ್ಣ ಅವಾಹಕವಾದ್ದರಿಂದ ದೇಹೋಷ್ಣತೆಯನ್ನು ಒಳಗೇ ಕಾಪಿಡುವುದಲ್ಲದೇ ಪರಿಸರದ ಶೈತ್ಯ ಒಳಗೆ ಬರದಂತೆಯೂ ನಿವಾರಿಸುವುದು.

**ಪ್ರಾರಂಭ :** ಋಗ್ವೇದದ ಕಾಲದಿಂದಲೂ ಉಣ್ಣೆಯ ವಸ್ತ್ರ ಬಳಕೆಯಲ್ಲಿ ಇತ್ತೆಂಬುದಕ್ಕೆ ಆಧಾರವಿದೆ. ಊರ್ಣವತೀ ಯುವತಿಃ ಶೀಲ ಮಾವತಿ, ಊರ್ಣ ವಂತಂ ಊರ್ಣವಸತ ಶ್ಯಂದ್ರುವ ಮುಂತಾದ ಋಗ್ವೇದೋಕ್ತಿಗಳನ್ನು ಗಮನಿಸ ಬಹುದು. ಉಣ್ಣೆ, ನಾರು, ರೇಷ್ಮೆ ಮುಂತಾದವುಗಳಿಂದ ನೇದ ಬಟ್ಟೆಗಳು ದೇವತಾಕಾರ್ಯಗಳಲ್ಲಿ ತೊಟ್ಟುಕೊಳ್ಳಲು ಉಪಯೋಗಿಸಬಹುದಾದ ಮಡಿ ವಸ್ತ್ರಗಳೆಂದೂ ವೈದಿಕ ಕಾಲದಿಂದಲೂ ಬೆಳೆದು ಬಂದಿರುವ ಸಂಪ್ರದಾಯವೂ ಉಣ್ಣೆವಸ್ತ್ರದ ಪ್ರಾಚೀನತೆಗೆ ಸಾಕ್ಷಿ.

ಮಧ್ಯ ಏಷ್ಯಾದ ಅಲೆಮಾರಿ ಜನ ಮೊದಲು ಕುರಿಗಳನ್ನು ಸಾಕಿ ಉಣ್ಣೆಯಿಂದ ನೂಲನ್ನು ತೆಗೆದು ನೇಯುವುದನ್ನು ಕಲಿತಿದ್ದರೆಂದು ಅನೇಕ ಐತಿಹಾಸಿಕ ವಿವರಗಳು ತಿಳಿಸುತ್ತವೆ. ಇವರೇ ಅನಂತರ ಯೂರೋಪಿನ ಇತರ ಭಾಗಗಳಿಗೂ ಭಾರತಕ್ಕೂ ವಲಸೆ ಹೋಗಿ ಉಣ್ಣೆಯ ಕುಶಲ ಕೈಗಾರಿಕೆಯನ್ನು ಎಲ್ಲ ಕಡೆಗಳಲ್ಲಿಯೂ ಪ್ರಚಾರ ಮಾಡಿ ಬೆಳೆಸಿದರು ಎಂದು ಹೇಳಬಹುದು. ಹೀಗೆ ಉಣ್ಣೆಯ ವಸ್ತ್ರ ತಯಾರಿಕೆ—ಅದರಲ್ಲಿಯೂ ಪ್ರಮುಖವಾಗಿ ಕಂಬಳಿ ರತ್ನಗಂಬಳಿ—ಅತಿ ಪ್ರಾಚೀನವಾದುದು. ಇದು ಜನಜೀವನದೊಂದಿಗೆ ಹಾಸುಹೊಕ್ಕಾಗಿ ಬೆಳೆದು ಕಾಲಾನುಸಾರ ವಿವಿಧ ಮಾರ್ಪಾಡುಗಳನ್ನೂ ದರ್ಜೆಗಳನ್ನೂ ಪಡೆದಿದೆ.

ಕ್ರಿಸ್ತಪೂರ್ವ 3000 ವರ್ಷಗಳಷ್ಟು ಪ್ರಾಚೀನವಾದ ಒಂದು ಮಗ್ಗ ಮತ್ತು ಅದರಲ್ಲಿ ಕೆಲಸ ಮಾಡುತ್ತಿರುವ ಕೆಲಸಗಾರರನ್ನು ಈಜಿಪ್ಟಿನ ಭಿತ್ತಿಚಿತ್ರ ವೊಂದರಲ್ಲಿ ಚಿತ್ರಿಸಲಾಗಿದೆ. ಒರಟು ಸಾಧನಗಳಿಂದ ನೇಯುವ ಕಲೆ ಈಜಿಪ್ಟಿನ ಜನಾಂಗಕ್ಕೆ ಇನ್ನೂ ಹಿಂದಿನಿಂದಲೇ ತಿಳಿದಿತ್ತೆಂದು ಇದರಿಂದ ಸ್ಪಷ್ಟವಾಗುವುದು. ಬಹುಶಃ ಅದು ಇರಾನ್, ಮೆಸೊಪೊಟೇಮಿಯಗಳಲ್ಲಿ ಆರಂಭವಾಗಿರಬೇಕು. ಮೊದಲ ನೆಯ ಉಣ್ಣೆಯ ಜಮಖಾನೆ ಬ್ಯಾಬಿಲೋನ್ ಅಥವಾ ನಿನೆವೆಯಲ್ಲಿ ಕ್ರಿ.ಪೂ. 5000 ವರ್ಷಗಳಿಗಿಂತ ಮೊದಲೇ ತಯಾ ರಾಗಿರಬೇಕು ಎಂಬುದು ಪಾಶ್ಚಾತ್ಯ ವಿದ್ವಾಂಸರ ಮತ. ಬ್ಯಾಬಿಲೋನಿಯನ್ನರು ಚತುರ ನೇಯ್ಗೆಯ ಕಲೆಗೆ ಹೆಸರಾದವ ರೆಂದು ರೋಮಿನ ಚರಿತ್ರಕಾರ ಪ್ಲಿನಿ ಹೇಳಿ ದ್ದಾನೆ. ಜಮಖಾನೆಯ ಉಪಯೋಗ ವನ್ನು ತಿಳಿಸುವ ಅತ್ಯಂತ ಪುರಾತನ ಪುರಾವೆಗಳಲ್ಲಿ ಬೈಬಲ್ಲೂ ಸೇರಿದೆ. ನೆಲಕ್ಕೆ ಹಾಸುವ ನೇಯ್ಗೆಯ ಕಂಬಳಿಗಳು ಬಹಳ ಹಿಂದಿನ ಕಾಲದಲ್ಲಿಯೇ ಭಾರತ, ಚೈನ. ಅರೆಬಿಯ, ಪರ್ಷಿಯ ಮತ್ತು ಅಸ್ಸೀರಿಯ ದೇಶಗಳ ಜನರಲ್ಲಿ ಬಳಕೆಯಲ್ಲಿದ್ದುವು. ಕ್ರಿ.ಪೂ. ಸುಮಾರು 1500 ವರ್ಷಗಳಿಗಿಂತ ಮುಂಚೆಯೇ ರತ್ನಗಂಬಳಿಗಳನ್ನು ದೇವಾಲಯಗಳಲ್ಲಿ ಉಪ ಯೋಗಿಸಲು ನೇಯುವ ಕಲೆ ಈಜಿಪ್ಟಿನವರಿಗೆ ತಿಳಿದಿತ್ತು. ಅವು ಈಗಿನ ಕಂಬಳಿ ಜಮಖಾನೆ ಗಳಂತಿರದಿದ್ದರೂ ಮೃದುವಾದ ಉಣ್ಣೆಯಿಂದ ಜುಂಗು ಜುಂಗಿನ ಮೇಲ್ಮೈವುಳ್ಳ ನೆಲಗಂಬಳಿ ಗಳಾಗಿದ್ದುವೆಂದು ಹೇಳಬಹುದು. ಈಗ ಉಳಿ ದಿರುವ ಅತ್ಯಂತ ಪ್ರಾಚೀನವಾದ ಹಾಸು ಸಾಧನ ಕ್ರಿ.ಶ. ಎರಡನೆಯ ಶತಮಾನದ್ದು. ಇದಕ್ಕೆ ಜುಂಗಿನ ಮೇಲ್ಮೈ ಇದೆ. ಇದನ್ನು ಆಧುನಿಕ ಜಮಖಾನೆಯ ಅತ್ಯಂತ ಪ್ರಾಚೀನ ರೂಪ ಎಂದು ಹೇಳಬಹುದು.

ಕಂಬಳಿ ಮತ್ತು ಜಮಖಾನೆಯ ನೇಯ್ಗೆಯಲ್ಲಿ ಪರ್ಷಿಯ ಅತ್ಯಂತ ಪ್ರಾಚೀನ ದೇಶವೆಂದು ಇತಿಹಾಸಕಾರರ ಅಭಿಮತ. ಇಲ್ಲಿನ ರತ್ನಗಂಬಳಿಗಳಿಗೆ ವಿಶ್ವದಾದ್ಯಂತ ಅರಮನೆ ಮತ್ತು ಶ್ರೀಮಂತ ಗೃಹಗಳ ಬೇಡಿಕೆಯಿತ್ತೆಂದು ತಿಳಿದಿದೆ. ಕ್ರಿ.ಪೂ. 538 ರಲ್ಲಿ ಪರ್ಷಿಯನ್ನರು ಬ್ಯಾಬಿಲೋನನ್ನು ಗೆದ್ದಮೇಲೆ ಪರ್ಷಿಯಾದ ಕಂಬಳಿ ತಯಾರಿಕೆ ಏಳಿಗೆಗೊಂಡಿತು. ಪರ್ಷಿಯಾದ ಕಂಬಳಿ ನೇಯ್ಗೆಯ ಕಲೆಗಾರಿಕೆ ಉಪಮಾತೀತ ವಾದ ಕಲೆಗಾರಿಕೆ. ಈ ಕಂಬಳಿಗಳನ್ನು ಆ ಕಾಲದ ಅತ್ಯಂತ ಐಶ್ವರ್ಯಯುತ ಸಾಧನಗಳೆಂದು ಪರಿಗಣಿಸಲಾಗಿತ್ತು. ಗ್ರೀಕ್ ಮತ್ತು ರೋಮ್ ದೇಶಗಳೆ ರಡೂ ಅಂಥ ರತ್ನಗಂಬಳಿ ಮತ್ತು ಜಮಖಾನೆಗಳನ್ನು ಬಹಳವಾಗಿ ಹೊಗಳಿವೆ. ಅಲೆಕ್ಸಾಂಡರನ ಸೈನಿಕರು ತಮ್ಮ ಪೂರ್ವದೇಶದ ಯುದ್ಧಗಳಿಂದ ಹಿಂತಿರುಗುವಾಗ ಜೊತೆಯಲ್ಲಿ ಉತ್ತಮ ಜಮಖಾನೆಗಳನ್ನು ತಂದರೆಂದೂ ರೋಮನರು ಆ ಪ್ರದೇಶ ವನ್ನು ಆಕ್ರಮಿಸಿಕೊಂಡಾಗ ಅಲ್ಲಿದ್ದ ಪುರಾತನ ಮಗ್ಗಗಳು ಮತ್ತೂ ಪಶ್ಚಿಮಕ್ಕೆ ಎಂದರೆ ಇಟಲಿಯವರೆಗೆ ತಮ್ಮ ದಾರಿಯನ್ನು ಕಂಡುಕೊಂಡುವೆಂದೂ ತಿಳಿದು ಬರುತ್ತದೆ. ಶತಮಾನಗಳ ಅನಂತರ ತುರ್ಕರು ಕಾನ್‌ಸ್ಟಾಂಟಿನೋಪಲನ್ನು ಆಕ್ರಮಿಸಿಕೊಂಡಾಗ ಅದು ಅನೇಕ ನುರಿತ ಕಲಾವಿದರನ್ನು ಇಟಲಿಯತ್ತ ರವಾನಿಸಿತು. ಆದ್ದರಿಂದಲೇ ಫ್ರಾನ್ಸ್‌ನಲ್ಲಿ ಯೂರೋಪಿನ ಇತರ ಭಾಗಗಳಲ್ಲಿಲ್ಲದ ಜಮಖಾನೆಗಳ ಅತ್ಯಂತ ಪ್ರಾಚೀನ ಅವಶೇಷಗಳು ಉಳಿದಿವೆ.

ಹದಿಮೂರನೆಯ ಶತಮಾನದಲ್ಲಿ ವೆನಿಸ್ಸಿನಿಂದ ಏಷ್ಯಾಮೂಲಕ ತಾನು ಕೈಗೊಂಡ ಸುಪ್ರಸಿದ್ಧ ಯಾತ್ರೆಯ ಕಾಲದಲ್ಲಿ ನೋಡಿದ ಕಂಬಳಿಗಳ ಕಲಾಪೂರ್ಣತೆ ಮತ್ತು ಸೌಂದರ್ಯಗಳಿಗೆ ಆಶ್ಚರ್ಯಚಕಿತನಾದುದಾಗಿ ಮಾರ್ಕೊಪೋಲೊ ಹೇಳಿಕೊಂಡಿ

ತ್ತಾನೆ. ಈ ಕಂಬಳಿಗಳು ಬೆಲೆಕಟ್ಟಲಾಗದಂಥ ಕಲಾಕೆಲಸಗಳೆಂದೂ ಅವು ಅನನುಕರಣೀಯ ಬಣ್ಣಗಳಿಂದ ಕೂಡಿದವೆಂದೂ ಆತ ಬರೆದಿದ್ದಾನೆ. ರಿಚರ್ಡ್ ಹ್ಯಾಕ್ಲೂಟನ ಪ್ರಿನ್ಸಿಪಾಲ್ ನ್ಯಾವಿಗೇಷನ್ಸ್ ಎಂಡ್ ಡಿಸ್ಕವರಿ ಆಫ್ ಇಂಗ್ಲಿಷ್ ನೇಷನ್ ಎಂಬ ಕೃತಿಯಲ್ಲಿ (1589) ಪರ್ಷಿಯಕ್ಕೆ ಪ್ರಯಾಣ ಮಾಡಲಿದ್ದ ವ್ಯಾಪಾರಿಯೊಬ್ಬ ಆಡುವ ಮಾತು "ಪ್ರಪಂಚದಲ್ಲಿ ಅತ್ಯುತ್ತಮವಾದ ಉಣ್ಣೆಯ ಜುಂಗು, ಜುಂಗಿನ ಬಣ್ಣದ ಜಮಖಾನೆಗಳು ಅಲ್ಲಿ ದೊರೆಯುತ್ತವೆ. ಆ ಜುಂಗು ಕಂಬಳಿಗಳಿಗೆ ಬಣ್ಣಹಾಕುವ ಕಲೆಯನ್ನು ನೀವು ಕಲಿಯಬೇಕಾದರೆ ನಿಮ್ಮ ಎಲ್ಲ ಶಕ್ತಿಸಾಮರ್ಥ್ಯಗಳನ್ನೂ ಉಪಯೋಗಿಸಬೇಕಾಗುತ್ತದೆ. ಅವುಗಳಿಗೆ ಹೇಗೆ ಬಣ್ಣ ಹಾಕಲಾಗಿದೆಯೆಂದರೆ ಮಳೆ, ಮದ್ಯ ಅಥವಾ ಅನಿಲ ಅದನ್ನು ಅಳಿಸಲಾರವು."

ಮಧ್ಯಯುಗದ ಪೂರ್ವಭಾಗದಲ್ಲಿ ಧರ್ಮಯುದ್ಧಗಳಲ್ಲಿ (ಕ್ರೂಸೇಡ್ಸ್) ವಿಜಯಿಗಳಾದವರು ಪರಾಜಿತ ರಾಷ್ಟ್ರಗಳಿಂದ ಕಂಬಳಿ ಜಮಖಾನೆ ಮುಂತಾದ ಅಮೂಲ್ಯ ಕಲಾವಸ್ತುಗಳನ್ನು ಕೊಳ್ಳೆಹೊಡೆದುಕೊಂಡು ಹೋದುದಕ್ಕೆ ದಾಖಲೆಗಳಿವೆ. ಇಟಲಿ ಮತ್ತು ಸ್ಪೇನ್ ದೇಶಗಳಲ್ಲಿ ಕಂಬಳಿ ಮತ್ತು ಜಮಖಾನೆ ನೇಯ್ಗೆಯನ್ನು ಆರಂಭಿಸಿದ (14ನೆಯ ಶತಮಾನ) ಕೀರ್ತಿ ಸೊರ್‍ಯಾಸಿಯನ್ನರದು. ಸೊರ್‍ಯಾಸಿಯನ್ನರು ಅಥವಾ ಮೂರರು ಸ್ಪೇನ್ ದೇಶವನ್ನು ಆಕ್ರಮಿಸಿದಾಗ ವಾಸ್ತವವಾಗಿ ಪ್ರಥಮ ಜಮಖಾನೆಯ ಮಗ್ಗಗಳು ಸ್ಥಾಪನೆಯಾದ ಬಗ್ಗೆ ಮೊದಲ ಸ್ಪಷ್ಟ ಪುರಾವೆಗಳು ಇಂದಿಗೂ ಉಳಿದಿವೆ. ಫ್ರಾನ್ಸಿನ ನಾಲ್ಕನೆ ಹೆನ್ರಿ 1604ರಲ್ಲಿ ಲುವಿಯರ್‌ನಲ್ಲಿ ಜಮಖಾನೆ ನೇಯ್ಗೆಯ ಕೋಣೆಯೊಂದನ್ನು ನಿರ್ಮಿಸಿದ ಬಗ್ಗೆ ಆಧಾರಗಳು ಉಂಟು. ಅಬುಸನ್ ಮತ್ತು ಪ್ಯಾರಿಸ್‌ಗಳಲ್ಲಿ ಬೆಳೆದ ಕಂಬಳಿ ತಯಾರಿಕೆಯ ಉದ್ಯಮ ನಾರಿನ ಕಂಬಳಿ ನೇಯ್ಗೆಯಿಂದ ಆರಂಭವಾಗಿದೆ. ಅಬುಸನ್ ಕಂಬಳಿಗೆ ಅದೇ ಹೆಸರನ್ನು ಕೊಡಲಾಗಿದೆ. ತುಪ್ಪಟದಿಂದ ನೇಯ್ದವುಗಳಾದರೂ ನೆಲಕ್ಕೆ ಹಾಸಲು ಉಪಯೋಗವಾಗುವಂತೆ ದಪ್ಪನಾಗಿ ಮಾಡಲು ಒಂದರ ಮೇಲೊಂದು ದಾರದಿಂದ ನೇಯ್ದು ಅವನ್ನು ಸಿದ್ಧಪಡಿಸುತ್ತಾರೆ. ಪ್ಯಾರಿಸ್ಸಿನಲ್ಲಿ ಕೈಗಳಿಂದಲೇ ನೇಯ್ದ ಉದ್ದನೆಯ ಜುಂಗಿನ ಒಳ್ಳೆ ಕಂಬಳಿಗಳು ಅಬುಸನ್ನಿನವಕ್ಕಿಂತ ಉತ್ತಮವಾದುವು.

**ಬೆಳವಣಿಗೆ :** ಹಾಳುಬಿದ್ದ ಸಾಬೂನಿನ ಕಾರ್ಖಾನೆಯಲ್ಲಿ ಕಂಬಳಿಗಳು ಮೊದಲು ತಯಾರಾದುದರಿಂದ ಅವು ಸ್ಯಾವಾನ್ರೀ ಎಂದೇ ಪ್ರಸಿದ್ಧವಾದುವು. ಸವೊನ್ ಎಂಬುದು ಸಾಬೂನು ಎಂಬ ಪದದ ಫ್ರೆಂಚ್ ಮೂಲ. ಸವೊನ್ನರಿ ನೇಯ್ಗೆಯ ತಂತ್ರವೂ ಪ್ರಾಚೀನ ಕಾಲದ ಕೈಮಗ್ಗದ ನೇಯ್ಗೆಯ ತಂತ್ರವೂ ಒಂದೇ ರೀತಿಯಾಗಿತ್ತು. ಫ್ರಾನ್ಸಿನ ಅಬುಸನ್ ಮತ್ತು ಸ್ಯಾವಾನ್ರೀಗಳು ಜಮಖಾನೆಯ ಇತಿಹಾಸದಲ್ಲಿ ಅತ್ಯಂತ ಪ್ರಮುಖವಾದುವೆಂದು ಪ್ರಸಿದ್ಧವಾಗಿವೆ. ಆ ಕಾಲದ ಅತ್ಯಂತ ಚತುರ ಕಲಾವಿದರಿಂದ ವಿನ್ಯಾಸಗೊಂಡು ಬಹು ಎಚ್ಚರಿಕೆಯಿಂದ ನೇಯ್ದ ಜಮಖಾನೆಗಳು ಅರಮನೆ ಮತ್ತು ಶ್ರೀಮಂತರ ಗೃಹಗಳಲ್ಲಿ ಉಪಯೋಗಿಸಲಾಗುತ್ತಿದ್ದ ಕಲಾ ಕೃತಿಗಳಾಗಿದ್ದುವು. 14ನೆಯ ಲೂಯಿಯ ಕಾಲದಲ್ಲಿ ಕಂಬಳಿ ಮತ್ತು ಜಮಖಾನೆಯ ನೇಯ್ಗೆಯವರು ತಮ್ಮ ಸುವರ್ಣಯುಗವನ್ನು ಕಂಡರು. 1685ರಲ್ಲಿ ಈ ನಿರಂಕುಶ ಸರ್ವಾಧಿಕಾರಿ ಸಾನ್‌ಟ್ಸ್ ನಗರದ ಮೇಲಿನ ತನ್ನ ವಾಗ್ದಾನವನ್ನು ರದ್ದುಪಡಿಸಿ ಶಾಸನ ಹೊರಡಿಸಿದಾಗ, ನೇಕಾರರ ಸಂಘದ ಸದಸ್ಯರಲ್ಲಿ ಬಹುಮಂದಿ ಪ್ರಾಟಸ್ಟೆಂಟರಾದುದರಿಂದ ಅವರಿಗೆ ಧಾರ್ಮಿಕ ರಕ್ಷಣೆ ದೊರೆಯದೆ ಈ ಫ್ರೆಂಚ್ ಕುಶಲಿ ಕೆಲಸಗಾರರು ಜರ್ಮನಿ, ಬೆಲ್ಜಿಯಂ ಮತ್ತು ಇಂಗ್ಲೆಂಡುಗಳಿಗೆ ವಲಸೆ ಹೋದರು. ಈ ನಿರಾಶ್ರಿತರು ಬ್ರಸಲ್ಸ್‌ನಲ್ಲಿ ಕುಣಿಕೆಯ ಮಖಮಲ್ಲು ಜಮಖಾನೆ ತಯಾರಿಸಿ ಆ ನಗರದ ಹೆಸರಿನಿಂದಲೆ ಕರೆದರು. ಇಂಗ್ಲೆಂಡಿನಲ್ಲಿ ವಿಲ್ಟನ್ ಮತ್ತು ಆಕ್ಸ್‌ಮಿನ್‌ಸ್ಟರ್ ನಗರಗಳಲ್ಲಿ ಜಮಖಾನೆ ನೇಯ್ಗೆಯ ಉದ್ಯಮ ಅದೇ ನಗರದ ಹೆಸರಿನಿಂದ ಕಾರ್ಯಾರಂಭ ಮಾಡುವಂತೆ ಮೂರನೆಯ ವಿಲಿಯಮ್ ಒಂದು ಶಾಸನ ಹೊರಡಿಸಿದ. ಇಂಗ್ಲೆಂಡಿನ ಜಮಖಾನೆ ಉದ್ಯಮದಲ್ಲಿ ಒಂದು ಪ್ರಮುಖವಾದ ಹೆಸರಾದ ಕಿಡ್ಡರ್‌ಮಿನ್‌ಸ್ಟರ್‌ನಲ್ಲಿ ಸ್ಕಾಟ್ ನೇಯ್ಗೆಯವರು ಮಗ್ಗಗಳನ್ನು ಸ್ಥಾಪಿಸಿದರು. 1740ರಲ್ಲಿ ಫ್ರಾನ್ಸ್ ಮತ್ತು ಹಾಲೆಂಡುಗಳಿಂದ ಬಂದ ನೇಯ್ಗೆಯವರೊಂದಿಗೆ ಇಂಗ್ಲೆಂಡಿನ ಬ್ರುಸೆಲ್ಸಿನಲ್ಲಿ ನೇಯ್ಗೆಯನ್ನು ಆರಂಭಿಸಲಾಯಿತು.

**ಭಾರತದಲ್ಲಿ :** ಕಂಬಳಿ ಮತ್ತು ಜಮಖಾನೆಯ ಉದ್ಯಮದ ಬಗ್ಗೆ ಭಾರತದಲ್ಲಿ ಆಧಾರಗಳು ಬಹಳ ಕಡಿಮೆಯೆಂದು ಐರೋಪ್ಯರ ಅಭಿಮತ. ಭಾರತ ಉಷ್ಣದೇಶವಾದುದರಿಂದ ಸ್ವಾಭಾವಿಕವಾಗಿಯೇ ಇಲ್ಲಿ ಉಣ್ಣೆಯ ವಸ್ತ್ರಗಳಿಗೆ ಬೇಡಿಕೆ ಕಡಿಮೆ ಎಂಬುದು ಅವರ ವಾದಕ್ಕೆ ಇಂಬುಕೊಟ್ಟಿರುವ ಸಂಗತಿ. ಆದರೆ ಈ ವಾದವನ್ನು ಒಪ್ಪಲು ಸಾಧ್ಯವಾಗುವುದಿಲ್ಲ. ಭಾರತ ರತ್ನಗಂಬಳಿಯ ನೇಯ್ಗೆಯಲ್ಲಿ



ಕಂಬಳಿ ನೇಯುತ್ತಿರುವವರು

ತನ್ನದೇ ಆದ ಹೆಸರುಗಳಿಸಿದ ನಾಡು. ಕಂಬಳಿ ಉದ್ಯಮ ಈ ರಾಷ್ಟ್ರದಲ್ಲಿ ಎಷ್ಟು ಪ್ರಾಚೀನವಾದದ್ದೆನ್ನುವುದಕ್ಕೆ ಈ ಮೊದಲೇ ಆಧಾರವನ್ನು ತೋರಿಸಿದೆ. ಹದಿನಾರು, ಹದಿನೇಳನೆಯ ಶತಮಾನದಲ್ಲಿ ಮೊಗಲರು ಈ ಉದ್ಯಮವನ್ನು ಪರ್ಷಿಯದಿಂದ ತಂದರೆಂದು ಐರೋಪ್ಯ ವಿದ್ವಾಂಸರ ಅಭಿಪ್ರಾಯ. ಅರಮನೆಯ ಆವಶ್ಯಕತೆಗಳಿಗಾಗಿಯೇ ಅಕ್ಬರ್ ಒಂದು ಮಗ್ಗವನ್ನು ಸ್ಥಾಪಿಸಿದ್ದನೆಂದು ಹೇಳುತ್ತಾರೆ. ಆದರೆ ಕಂಬಳಿಗಳು ಆಗಲೂ ಪರ್ಷಿಯ ದೇಶದಿಂದ ಬರುತ್ತಿದ್ದುವೆಂದು ಅವನ ಜೀವನಚರಿತ್ರೆ ಬರೆದ ಅಬ್ದುಲ್ ಫಜಲ್ ಹೇಳಿದ್ದಾನೆ. ಮೊಗಲರ ಆಸ್ಥಾನದ ರತ್ನಗಂಬಳಿಗಳು ಅತಿ ಆಡಂಬರದಿಂದ ಕೂಡಿದ್ದುವು. ಮೂಲತಃ ಪರ್ಷಿಯನ್ನರಾದ ಮೊಗಲರು ಅಲ್ಲಿಂದ ಕಂಬಳಿಗಳನ್ನು ತರಿಸಿರಬಹುದಾದರೂ ಭಾರತದಲ್ಲಿ ಈ ಉದ್ಯಮವಿರಲಿಲ್ಲ ಎಂದು ಹೇಳುವಂತಿಲ್ಲ. ಉದಾಹರಣೆಗೆ ಷಾಜಹಾನ್ ತನ್ನ ಅರಮನೆಗಾಗಿ ದೂರದ ಹಿಮಾಲಯದ ಕಣಿವೆ ಮತ್ತು ಕಾಶ್ಮೀರದಿಂದ ಮೃದುವಾದ ಉಣ್ಣೆ ತರಿಸಿ ಕಂಬಳಿ ಮಾಡಿಸುತ್ತಿದ್ದನೆಂದು ತಿಳಿದುಬರುತ್ತದೆ. ಒಂದು ಜಮಖಾನೆಗೆ ಅದರ ಬೆಲೆಯನ್ನು ಲೆಕ್ಕಿಸದೆ ಒಂದು ಅಂಗುಲಕ್ಕೆ 800 ರಿಂದ 1200 ಹೆಣಿಗೆಗಳಿರುವಂತೆ ಅತ್ಯಂತ ಅಂದವಾಗಿ ತಯಾರಿಸುತ್ತಿದ್ದ ಕೀರ್ತಿ ಭಾರತದ್ದು. ವಿಶೇಷ ಜಮಖಾನೆಗಳು ಮತ್ತು ಪ್ರಾರ್ಥನಾ ರತ್ನಗಂಬಳಿಗಳು ಅಸಾಧಾರಣವಾಗಿರುತ್ತಿದ್ದುವು. ಕಂಬಳಿ ಉದ್ಯಮ ಭಾರತದ ಕಾಶ್ಮೀರ, ತಂಜಾವೂರು, ದಾವಣಗೆರೆ ಮುಂತಾದೆಡೆಗಳಲ್ಲಿ ಬಹಳ ಪ್ರಸಿದ್ಧಿಪಡೆದಿತ್ತು. ಭಾರತ ವ್ಯವಸಾಯಪ್ರಧಾನ ರಾಷ್ಟ್ರ. ಇಲ್ಲಿ ಕುರಿ ಸಾಕಣೆ ಮತ್ತು ಉಣ್ಣೆ ನೇಯ್ಗೆ ಅತ್ಯಂತ ಪ್ರಾಚೀನವಾದ ಉದ್ಯಮಗಳಲ್ಲೊಂದಾಗಿರುವುದರಲ್ಲಿ ಯಾವ ಭಿನ್ನಾಭಿಪ್ರಾಯವೂ ಸಲ್ಲದು.

ಕಂಬಳಿ ಉದ್ಯಮ ಹದಿನಾರು, ಹದಿನೇಳನೆಯ ಶತಮಾನದಲ್ಲಿ ಭಾರತಕ್ಕೆ ಪರ್ಷಿಯನ್ನರಿಂದ ಬಂದಿತು ಎಂದು ಹೇಳುವ ಆ ವಿದ್ವಾಂಸರು ಭಾರತೀಯ ಸಾಹಿತ್ಯದಲ್ಲಿನ ಹೇಳಿಕೆಗಳನ್ನು ಗಮನಿಸಲಿಲ್ಲ ಎಂದು ಕಾಣುತ್ತದೆ. ಜಂಗಮ ದಾಸೋಹದಲ್ಲಿ ಸಣ್ಣ ಕಂಬಳಿ ಮತ್ತು ಶಾಲುಗಳ ಅರ್ಪಣೆಯೂ ಒಂದು ಪ್ರಮುಖ ವಿಧಿಯಾಗಿ ಬರುತ್ತದೆ. ಹನ್ನೆರಡನೆಯ ಶತಮಾನದ ವಚನಗಳಲ್ಲಿ ಕಂಬಳಿ ನಾಗಿದೇವ ಎಂಬ ವಚನಕಾರನೊಬ್ಬ ಪ್ರಾಯಶಃ ಕಂಬಳಿ ಮಾಡುವ ವೃತ್ತಿಯವನಿರಬೇಕು. ಕಂಬಳಿ ಮತ್ತು ಕರಿಯ ಕಂಬಳಿಗಳಂತೂ ಜನಪದ ಸಾಹಿತ್ಯ ಮತ್ತು ಗಾದೆಗಳಲ್ಲಿ ವಿಲೀನವಾಗುವಷ್ಟು ಪ್ರಸಿದ್ಧಿಪಡೆದಿದ್ದುವು.

ಕನ್ನಡನಾಡು ಕಂಬಳಿ ತಯಾರಿಕೆಯಲ್ಲಿ ಬಹಳ ಪುರಾತನವಾದ ದೇಶ. ಹನ್ನೆರಡನೆಯ ಶತಮಾನದ ವಚನ ಸಾಹಿತ್ಯದಲ್ಲಿ ಕಂಬಳಿ ದಾನದ ಬಗ್ಗೆ ವಿಪುಲವಾದ ಹೇಳಿಕೆಗಳಿವೆ. ಕಂಬಳಿಯ ಗದ್ದುಗೆಯಂತೂ ಬಹಳ ಪ್ರಸಿದ್ಧವಾದುದು. ವಿಜಯನಗರದ ಅಕ್ಕಪಕ್ಕದ ಮೈದಾನಗಳಲ್ಲಿ ಹುಡುಗರು ಕುರಿಗಳ ಮೇಲೆ ಸವಾರಿ ಮಾಡುತ್ತಿದ್ದುದನ್ನು ಕಂಡುದಾಗಿ ಪೋರ್ಚುಗೀಸ್ ಯಾತ್ರಿಕ ಪೆಯಿಜ್ ಹೇಳಿದ್ದಾನೆ. ಈ ಹೇಳಿಕೆ ಆ ಕಾಲದ ಕುರಿಗಳ ಸುದೃಢತೆಗೆ ಸಾಕ್ಷಿ. ತರುವಾಯ ಮೈಸೂರು ಅರಸರು ಕುರಿಸಾಕಣೆ ಮತ್ತು ಉಣ್ಣೆಯ ಉದ್ಯಮಕ್ಕೆ ಉದಾರ ನೆರವು ನೀಡಿದರು.

**ಕಂಬಳಿ ತಯಾರಿಕೆ :** ಕಂಬಳಿ ತಯಾರಿಕೆಯ ಮೊದಲನೆಯ ಹಂತ ತುಪ್ಪಟ ಸಂಗ್ರಹ. ಇದನ್ನು ಬಂಡ ಎಂದು ಕರೆಯುತ್ತಾರೆ. ಗ್ರಾಮಾಂತರ ಪ್ರದೇಶದಲ್ಲಿ ಕುರುಬ, ಹಳ್ಳಿಕಾರ, ಹಟ್ಟಿಕಾರ, ಒಕ್ಕಲಿಗರು, ಗೊಲ್ಲರು, ಲಿಂಗಾಯಿತರು ಗೊಬ್ಬರ ಮತ್ತು ಮಾಂಸಕ್ಕಾಗಿ ಕುರಿ ಸಾಕುತ್ತಾರೆ. ಹೀಗೆ ಸಾಕಿದ ಕುರಿಗಳ ತುಪ್ಪಟದಿಂದ ಹೊದೆಯುವ ಕಂಬಳಿಗಳು ಅವರಿಗೆ ದೊರೆಯುವ ಉಪಆದಾಯ. ಮೇಲೆ ಹೇಳಿದ ಜನಾಂಗಗಳಲ್ಲಿ ಕುರಿಯ ತುಪ್ಪಟ ಕತ್ತರಿಸಿ ಕಂಬಳಿ ಮಾಡುವ ಕಲೆ ಕುರುಬ ಜನಾಂಗದವರಿಗೆ ಮಾತ್ರ ಸಿದ್ಧಿಸಿದೆ. ಯಂತ್ರಯುಗದ ಆರಂಭದ ವರೆಗೆ ಇದು ಬರಿಯ ಕುರುಬರ ಕಸುಬು. ಒಂದು ಕತ್ತರಿ, ಕೆಲವು ಕಂಬಳಿಗಳನ್ನು ಹೆಗಲ ಮೇಲೆ ಹಾಕಿಕೊಂಡು ಈ ಕಂಬಳಿ ನೇಯ್ಗೆಕಾರ ವರ್ಷಕ್ಕೆ ಎರಡುಬಾರಿ ಬಂಡ ಸಂಗ್ರಹಣೆಗೆ ಹಳ್ಳಿಗಳ ಮೇಲೆ ಹೋಗುತ್ತಾನೆ. ಕುರಿ ಸಾಕಿದ ರೈತರು ತುಪ್ಪಟ ಬೆಳೆದ ತಮ್ಮ ಕುರಿಗಳನ್ನು ಕತ್ತರಿಸಲು ಅವನಿಗೊಪ್ಪಿಸಿ ಅದಕ್ಕೆ ಬದಲಾಗಿ ಕಂಬಳಿಗಳನ್ನು ಪಡೆಯುತ್ತಾರೆ. ಐವತ್ತು ಕುರಿಗಳ ಒಂದು ಸೊಲಿಗೆ ತುಪ್ಪಟಕ್ಕೆ ಒಂದು ದಡೂತಿ ಕಂಬಳಿ ವಿನಿಮಯವಾಗುತ್ತದೆ. ಹೀಗೆ ಪಡೆದ ಒಂದು ಸೊಲಿಗೆ ತುಪ್ಪಟ ಹಳೇ ತೂಕದ ಒಂದು ಮಣವಿರುತ್ತದೆ. ಅದರಲ್ಲಿ ಮೂರು ದಡೂತಿಯ ಕಂಬಳಿಗಳಾಗುತ್ತವೆ. ಅದರಿಂದ ಕಸುಬುದಾರನಿಗೆ ಎರಡು ಕಂಬಳಿಗಳ ಲಾಭ ದೊರೆಯುತ್ತದೆ.

ಬಂಡದಲ್ಲಿ ಎರಡು ವಿಧ. ಮೊದಲೇ ಕುರಿಗಳನ್ನು ಚೆನ್ನಾಗಿ ತೊಳೆದು ಕತ್ತರಿಸುವುದು ಮೊದಲನೆಯ ರೀತಿ. ಇದು ಒಳ್ಳೆಯ ಬಂಡ. ಏಕೆಂದರೆ ಕುರಿಗಳ ಮೈಗೆ ಅಂಟಿದ್ದ ಕಸಕಡ್ಡಿ, ಮುಳ್ಳು, ಕೊಳೆಯೆಲ್ಲ ಹೋಗಿ ತುಪ್ಪಟ ಸ್ವಚ್ಛವಾಗಿರುತ್ತದೆ. ಕುರಿಗಳನ್ನು ತೊಳೆಯದೆ ಕತ್ತರಿಸುವುದು ಎರಡನೆಯ ವಿಧ. ಅದನ್ನು ಬೆವರು ತುಪ್ಪಟ ಎಂದು ಕರೆಯುತ್ತಾರೆ. ಈ ಬೆವರು ತುಪ್ಪಟವನ್ನು ಗೆರಸಿಗಳಲ್ಲಿ ಹಾಕಿಕೊಂಡು ಕೆರೆಗಳಲ್ಲಿ ಅಥವಾ ಹೊಳೆಯ ತಿಳಿನೀರಿನನಲ್ಲಿ ಕೀರೇಸೊಪ್ಪು ಜಾಲಿಸುವಂತೆ ಜಾಲಿಸಿ ತೊಳೆದು ಒಣಗಿಸುತ್ತಾರೆ ಇದನ್ನು ಹಿಂಜಿ ಹಂಜಿ ಮಾಡುವುದು ಎರಡನೆಯ ಕೆಲಸ. ಈಗ ತುಪ್ಪಟ ಹಿಂಜುವುದಕ್ಕೆ ಯಂತ್ರಗಳಿವೆ. ಆದರೆ ಮೊದಲಿಗೆ ಪಿಂಜಾರರು ಕೈಬೆಸಗಳಿಂದ ತುಪ್ಪಟ ಹೊಡಚುತ್ತಿದ್ದರು. ಕಂಬಳಿ ತಯಾರಿಕೆ ಗೃಹಕೈಗಾರಿಕೆಯಾಗಿರುವ ಕಡೆಗಳಲ್ಲೆಲ್ಲ ಇಂದಿಗೂ ಈ ಪದ್ಧತಿ ಜಾರಿಯಲ್ಲಿದೆ. ಚೆನ್ನಾಗಿ ಹೊಡಚಿದ ತುಪ್ಪಟ ಬಹಳ ಮೃದು ವಾಗುತ್ತದೆ. ಇದರಿಂದ ಹಂಜಿಗಳನ್ನು ತಯಾರುಮಾಡುತ್ತಾರೆ.

ಕಂಬಳಿ ನೇಯ್ಗೆಯಲ್ಲಿ ನೂಲುವುದು ಒಂದು ಪ್ರಮುಖವಾದ ಕಾರ್ಯ. ಆದ್ದರಿಂದಲೇ ಬಹುಶಃ ನೂಲಿನಂತೆ ಸೀರೆ ಎಂಬ ಗಾದೆಯ ಮಾತು ಹುಟ್ಟಿಕೊಂಡಿರಬೇಕು. ನೂಲು ಯಾವ ಮಟ್ಟವಿರುತ್ತದೆಯೋ ಕಂಬಳಿ ಆ ಮಟ್ಟದ್ದಾಗುತ್ತದೆ. ಹೊಡೆಚಿ ಹಿಂಜಿ ಹಂಜಿಮಾಡಿದ ತುಪ್ಪಟವನ್ನು ಕಂಬಳಿಗಳ ವಿನ್ಯಾಸದ ಯೋಜನೆಗನುಗುಣವಾಗಿ ನೂಲುತ್ತಾರೆ.

ಬಹಳ ಹಿಂದೆ ಇಂಥ ಹಂಜಿಗಳನ್ನೂ ತೊಡೆಗದಿರಿನಿಂದ ನೂಲುತ್ತಿದ್ದರು. ಇದು ಬಹಳ ನಿಧಾನ ಮತ್ತು ಕಷ್ಟದ ಕೆಲಸವಾಗಿತ್ತು. ರಾಟೆಯ ಪ್ರವೇಶ ಬಹುಶಃ ನೂಲುವುದರ ಇತಿಹಾಸದಲ್ಲಿ ಒಂದು ಕ್ರಾಂತಿಯನ್ನು ಎಬ್ಬಿಸಿತು. ಈ ಕುಶಲ ಕಲೆ ಬೆಳೆದುಬಂದ ರೀತಿಯೇ ಒಂದು ಕೌತುಕದ ಕಥೆ. ಸುಮಾರು 600 ವರ್ಷಗಳಷ್ಟು ಹಳೆಯದಾದ ಚರಕವನ್ನು ಭಾರತೀಯರೇ ಮೊದಲು ಕಂಡುಹಿಡಿದದ್ದು ಎಂದು ಅನೇಕರ ಅಭಿಪ್ರಾಯ. ಆದರೆ ಇದನ್ನು ಕಂಡುಹಿಡಿದವರ ಹೆಸರು ಅಜ್ಞಾತವಾಗಿಯೇ ಉಳಿದಿದೆ. ತಿರುಗಿಸಲು ದೊಡ್ಡ ಚಕ್ರದ ಬಳಕೆ ಮತ್ತು ಅದಕ್ಕೆ ತಕ್ಕ ಕದರನ್ನು ಉಪಯೋಗಿಸಿದುದರಿಂದ ಚರಕವನ್ನು ವೇಗವಾಗಿ ತಿರುಗಿಸಲು ಸಾಧ್ಯವಾಗಿ ಹೆಚ್ಚು ನೂಲು ತೆಗೆಯಲು ಅನುಕೂಲವಾಯಿತು. ಆದುದರಿಂದಲೇ ಕಂಬಳಿ ಮತ್ತು ಜಮುಖಾನೆಯ ಉದ್ಯಮದಲ್ಲಿ ಚರಕ ಬಹಳ ಪ್ರಮುಖವಾದ ಮಾಧ್ಯಮವಾಗಿದೆ.

ಚರಕದಿಂದ ನೂತ ನೂಲನ್ನು ಕಂಡಿಕೆಗಳಾಗಿ ಮಾಡಿಕೊಳ್ಳುತ್ತಾರೆ. ಕಂಬಳಿ ನೇಕಾರರೇ ನೂಲನ್ನು ನೂಲುವುದಿಲ್ಲ. ಬೇರೆಯವರಿಗೆ ಕೂಲಿ ಕೊಟ್ಟು ನೂಲಿಸುವುದೂ ಉಂಟು. ಇಪ್ಪತ್ತೆಂಟು ತೊಲ ಹಿಂಜಿದ ತುಪ್ಪಟಕ್ಕೆ ಒಂದು ಹಂಜಿ ಎಂದು ಹೆಸರು. ಇಂಥ ಮೂರು ಹಂಜಿಯನ್ನು ನೂತರೆ ಒಂದು ರೂಪಾಯಿ ಕೂಲಿ ಸಿಗುತ್ತದೆ. ನೂಲಿನಲ್ಲಿ ಅನೇಕ ವಿಧಗಳುಂಟು : 1 ಹುರಿಗಂಬಳಿ ನೂಲು, 2 ಉಜ್ಜುಗಂಬಳಿ ನೂಲು, 3 ಸಣ್ಣಕಂಬಳಿ ನೂಲು, ಇತ್ಯಾದಿ. ಒಟ್ಟಿನಲ್ಲಿ ನೂಲಿನ ಗುಣಮಟ್ಟದಂತೆ ಕಂಬಳಿ ತಯಾರಾಗುತ್ತದೆ.

ಆಧಾರವೆಂತೆಂಬ ಅಂಬಲಿಯನೆ ತೊಡೆದು—ಎಂಬ ಜನಪದ ನುಡಿಯೊಂದರಂತೆ ಅಂಬಲಿಯ ತಯಾರಿಕೆ ಮತ್ತು ಅದನ್ನು ನೂತ ದಾರಕ್ಕೆ ಸವರುವುದು ಒಂದು ವಿಶಿಷ್ಟ ಕಲೆ. ಕಂಬಳಿಯ ತಯಾರಿಕೆಯಲ್ಲಿ ಅಂಬಲಿಯ ಪಾತ್ರ ಹಿರಿದಾದುದು. ಇದರ ತಯಾರಿಕೆಯೇ ಒಂದು ವಿಶಿಷ್ಟ ರೀತಿಯದು. ಮೊದಲು ಒಳ್ಳೆಯ ಹುಣಿಸೆ ಬೀಜವನ್ನು ಹದವರಿತು ಹುರಿಯಬೇಕು. ಆಮೇಲೆ ಅವನ್ನು ನೆಗ್ಗಿ ಮೇಲಿನ ಕರಿಯ ಸಿಪ್ಪೆ ತೆಗೆದರೆ ದೊರೆಯುವ ಬಿಳಿ ಪೊಪ್ಪುಗಳನ್ನು ಸುಮಾರು ಹನ್ನೆರಡು ಗಂಟೆಗಳ ಕಾಲ ಅಥವಾ ಒಂದು ರಾತ್ರಿ ನೀರಿನಲ್ಲಿ ನೆನೆಹಾಕಬೇಕು. ಚೆನ್ನಾಗಿ ನೆನೆದ ಬೀಜವನ್ನು ಒರಳಲ್ಲಿ ಹಾಕಿ ಚೆನ್ನಾಗಿ ನುಣ್ಣಗೆ ತಿರುವಿ ಆ ಹಿಟ್ಟನ್ನು ನೀರಿನಲ್ಲಿ ಕದರಿ ಒಲೆಯ ಮೇಲಿಟ್ಟು ಹದವಾದ ಉರಿಯಲ್ಲಿ ಚೆನ್ನಾಗಿ ಬೇಯಿಸಬೇಕು. ಉದ್ದನೆಯ ಕೋಲಿನ ತುದಿಗೆ ಈಚಲುಗರಿಯನ್ನು ಸಿಕ್ಕಿಸಿದ ಉಜ್ಜುಗುಲ್ಲದಿಂದ ಅದನ್ನು ಗಂಟಾಗದಂತೆ ತಿರುವುತ್ತಿರಬೇಕು. ಸುಮಾರು ಎರಡು ಮೂರು ಗಂಟೆಗಳ ಕಾಲ ಹೀಗೆ ಬೇಯಿಸಿದ ಅನಂತರ ಅದು ಚೆನ್ನಾಗಿ ಬೆಂದು ಒಂದು ರೀತಿಯ ಮುದ್ದೆಯಂತಾಗುತ್ತದೆ. ಈ ಮುದ್ದೆಯನ್ನು ಮತ್ತೆ ನೀರಿನಲ್ಲಿ ಕದರಿದರೆ ಅದು ಅಂಟು ಅಂಟಾದ ಗಂಜಿಯಂಥ ಸರಿಯಾಗುತ್ತದೆ. ಇದನ್ನು ಹುಣಿಸೆ ಅಂಬಲಿ, ಗಂಜಿ ಸರಿ ಎಂದೆಲ್ಲ ಕರೆಯುತ್ತಾರೆ.

ಮುಂದಿನ ಕ್ರಮ ದಾರವನ್ನು ಹಾಸುಮಾಡುವುದು. ಸುಮಾರು ಒಂಬತ್ತು ಮೊಳ ಉದ್ದದ 220 ರಿಂದ 240 ಜೊತೆ ದಾರಗಳುಳ್ಳ ಹಾಸುಗಳನ್ನಾಗಿ ಮಾಡುತ್ತಾರೆ. ಹಾಸು ಎಂದರೆ ಎಳೆಗಳು ಬಿಡಿ ಬಿಡಿಯಾಗಿ ಒಂದರ ಪಕ್ಕದಲ್ಲೊಂದು ಬರುವಂತೆ ಜೋಡಿಸುವ ರೀತಿ. ಏಳು ಗೂಟಗಳ ಆರುಗಣೆ ಎಂಬ ಹಲಗೆಯಂಥ ಸಾಧನದಲ್ಲಿ ನೂಲನ್ನು ಹಾಸಿಕ್ಕುತ್ತಾರೆ. ಹೀಗೆ ಹಾಸಿದ ನೂಲನ್ನು ಒಂದು ಕ್ರಮದಲ್ಲಿ ಕಟ್ಟಿ ತಿಳಿಯಾದ ಹುಣಿಸೆ ಸರಿಯಲ್ಲಿ ಅದ್ದಿ ಬಿಸಿಲಿನಲ್ಲಿಟ್ಟುಕೊಂಡು ಕುಂಚಿಗೆ ಎಂಬ ಉಪಕರಣದ ಸಹಾಯದಿಂದ ಊಕೆ ಮಾಡುತ್ತಾರೆ—ಎಂದರೆ ನೂಲನ್ನು ನಯಗೊಳಿಸುವುದು ಎಂದರ್ಥ. ಆಗ ನೂಲಿನ ಕೂದಲು ಅಂಬಲಿಯೊಡನೆ ಸೇರಿ ಒಂದು ಹದಕ್ಕೆ ಬರುತ್ತದೆ. ಎಳೆಗಳು ಒಂದಕ್ಕೊಂದು ಅಂಟದೆ ಬಿಡಿಬಿಡಿಯಾಗಿರುತ್ತವೆ.

ಇಷ್ಟೆಲ್ಲ ಆದ ಮೇಲೆ ದಾರ ಅಥವಾ ಹುರಿಯನ್ನು ಮಗ್ಗಕ್ಕೆ ಏರಿಸುತ್ತಾರೆ. ಹೋಳು ಎನ್ನುವ ಸಾಧನದಲ್ಲಿ ನೂಲನ್ನು ಜೋಡಿಸಿ ಮಗ್ಗದಲ್ಲಿಟ್ಟು ನೇಯುತ್ತಾರೆ. ಈ ಹೋಳುಗಳು 9 ಮೊಳ ಉದ್ದ 3 ಮೊಳ ಅಗಲವಿರುತ್ತವೆ. (ನೇಯ್ದ ಮೇಲೆ ಅನುಕೂಲಕ್ಕೆ ತಕ್ಕಹಾಗೆ ಈ ಹೋಳುಗಳನ್ನು ಎರಡರಿಂದ ನಾಲ್ಕನ್ನು ಸೇರಿಸಿ ಒಂದು ಕಂಬಳಿ ಮಾಡುತ್ತಾರೆ). ಅಣೆಗಳನ್ನು ಬಿಡಿಸಿ ಗಂಜಿಯಲ್ಲಿ ಅದ್ದಿ ಸಿದ್ಧವಾದ ಹುರಿಯನ್ನು ಲಾಳಿಯ ಮೂಲಕ ಸೇರಿಸಿ ಮತ್ತೆ ಅಣೆಯನ್ನು ಕೂಡಿಸಿ ಬೇವು ಎಂಬ ಸಾಧನದಿಂದ ಒತ್ತಿ ಹುರಿಗಳನ್ನು ಹತ್ತಿರ ಸೇರಿಸುತ್ತ ಹೋಗುತ್ತಾರೆ. ಹೀಗೆ ನೇಯ್ದು ಸಿದ್ಧವಾದ ಕಂಬಳಿಯ ಹೋಳುಗಳಿಗೆ ಮತ್ತೆ ಹುಣಿಸೆ ಸರಿಯನ್ನು ಸವರಿ ಬಿಸಿಲಿನಲ್ಲಿ ನೇತು ಹಾಕಿ ಒಣಗಿಸುತ್ತಾರೆ. ಹೀಗೆ ಕ್ರಮಬದ್ಧವಾಗಿ ಒಣಗಿಸಿದ ನೇಯ್ದ ಹೋಳುಗಳನ್ನು ಅನುಕೂಲಕ್ಕೆ ಅನುಗುಣವಾಗಿ ಎರಡರಿಂದ ನಾಲ್ಕು ಹೋಳುಗಳನ್ನು ಉಣ್ಣೆಯ ದಾರದಿಂದ ಹೊಲೆದರೆ ಒಂದು ಪೂರ್ಣ ಕಂಬಳಿ ಸಿದ್ಧವಾದಂತಾಯಿತು.

ಕಂಬಳಿಗಳಲ್ಲಿ ಹಲವು ವಿಧಗಳುಂಟು. ತುಪ್ಪಟದ ಉತ್ಕೃಷ್ಟತೆ ಮತ್ತು ಮಾರುಕಟ್ಟೆಯ ಬೇಡಿಕೆಗೆ ಅನುಗುಣವಾಗಿ 1 ಹುರಿಗಂಬಳಿ, 2 ಉಜ್ಜುಗಂಬಳಿ, 3 ಸಣ್ಣ ಕಂಬಳಿ 4 ಶಾಲು 5 ಗದ್ದುಗೆ ದಾವಳಿ 6 ಕರಿಯ ಕಂತೆ, ಇತ್ಯಾದಿ.

ಹುರಿಗಂಬಳಿ : ಇದು ಸಾಮಾನ್ಯ ಬಳಕೆಗೆ ತಯಾರುಮಾಡುವ ಒರಟು ಕಂಬಳಿ. ಅಂಥ ಮೃದುವಲ್ಲದ ತುಪ್ಪಟದಿಂದ ನೂತ ಕೊಂಚ ದಪ್ಪನೆಯ ನೂಲುಗಳಿಂದ ಇದನ್ನು ನೇಯುತ್ತಾರೆ. ನೂಲು ಹುರಿಯ ಗಾತ್ರವಿರುವುದರಿಂದ ಹುರಿಗಂಬಳಿ ಎಂದು ಕರೆಯುತ್ತಾರೆ. ಹುರಿಗಂಬಳಿ ನಾಲ್ಕು ಹೋಳುಗಳಿಂದ ತಯಾರಾಗಿರುತ್ತದೆ. ಒಂದೇ ಕಂಬಳಿಯ ಅರ್ಧವನ್ನು ಹಾಸಿ ಮತ್ತರ್ಧವನ್ನು ಹೊದೆಯುತ್ತಾರೆ. ಇದನ್ನು ಹೆಗ್ಗಂಬಳಿ ಎಂದೂ ಕರೆಯುತ್ತಾರೆ. ಹಳ್ಳಿಗಾಡುಗಳಲ್ಲಿ ವಾಸಿಸುವ ರೈತರು ಇದನ್ನು ಕೊಳ್ಳುತ್ತಾರೆ ; ಕುರಿ ಸಾಕುವವರು ಬಂಡದ ವಿನಿಮಯಕ್ಕೆ ಪಡೆಯುತ್ತಾರೆ.

ಉಜ್ಜುಗಂಬಳಿ : ಕಂಬಳಿ ತಯಾರಿಕೆಯಲ್ಲಿ ಉಜ್ಜುಗಂಬಳಿ ಮಾಡುವುದು ಒಂದು ವಿಶೇಷ ಕಲೆ. ಕಂಬಳಿ ಮಾಡುವ ಎಲ್ಲ ಕಸುಬುದಾರರಿಗೂ ಇದು ಬರುವುದಿಲ್ಲ. ಆ ಕೆಲಸದಲ್ಲಿ ನಿಷ್ಣಾತರಾದ ಕೆಲವು ಜನ ಮಾತ್ರ ಇದನ್ನು ಮಾಡಬಲ್ಲರು. ಉಜ್ಜುಕಂಬಳಿಯನ್ನು ಸಾಮಾನ್ಯ ಬಂಡದಿಂದ ಮಾಡಲು ಬರುವುದಿಲ್ಲ. ನೇಕಾರರು ತರುವ ರಾಶಿಬಂಡದಲ್ಲಿ ಮೃದುವಾದುದನ್ನು ಆರಿಸಬೇಕು. ಒಂದು ಮಣದಷ್ಟಿರುವ ಬಂಡದ ರಾಶಿಯಲ್ಲಿ ಇಂಥ ಮೃದುವಾದ ತುಪ್ಪಟ ಮೂರು ಅಥವಾ ನಾಲ್ಕು ಪೌಂಡು ದೊರೆಯುತ್ತದೆ. ಸಾಮಾನ್ಯವಾಗಿ ಈ ತುಪ್ಪಟ ಕುರಿಯ ಮೊದಲನೆಯ ಕತ್ತರಿಯ

ದಾಗಿರಬೇಕು. ಕುರಿಯ ಕತ್ತಿನ ಭಾಗ ಮತ್ತು ಬೆನ್ನಿನ ಮೇಲಿನ ತುಪ್ಪಟ ಇದಕ್ಕೆ ಉತ್ತಮವಾದುದು. ಹೀಗೆ ಆರಿಸಿ ತೆಗೆದ ಅಪ್ಪಟವಾದ ಮೃದು ತುಪ್ಪಟವನ್ನು ಹಿಂಜಿ ಹಂಜಿ ಮಾಡಬೇಕು. ಈಗಿನಂತೆ ಹಿಂಜು ಯಂತ್ರಗಳು ಇಲ್ಲದಿದ್ದ ಹಿಂದಿನ ಕಾಲದಲ್ಲಿ ತುಪ್ಪಟವನ್ನೂ ಕೈಬೆಸಗಳಿಂದ ಹಿಂಜುತ್ತಿದ್ದರು. ಹಿಂಜಿದ ಹಂಜಿಯಿಂದ ಮೃದುವಾದ, ಹೆಚ್ಚು ಸಡಿಲವಲ್ಲದ, ಹೆಚ್ಚು ಹುರಿಯೂ ಅಲ್ಲದ ಹೆಚ್ಚು ದಪ್ಪನಲ್ಲದ, ಹೆಚ್ಚು ಸಣ್ಣವೂ ಅಲ್ಲದ ಮಧ್ಯಮ ರೀತಿಯ ದಾರ ತೆಗೆಯಬೇಕು. ಉಜ್ಜುಗಂಬಳಿಯ ನೂಲು ತೆಗೆಯುವುದೇ ಇಲ್ಲಿ ಬಹು ಮುಖ್ಯ ಕೆಲಸ. ಎಷ್ಟರ ಮಟ್ಟಿಗೆ ಒಳ್ಳೆಯ ನೂಲು ಬರುತ್ತದೆಯೋ ಅಷ್ಟರ ಮಟ್ಟಿಗೆ ಕಂಬಳಿ ಉತ್ತಮವಾಗುತ್ತದೆ. ಉಜ್ಜುಗಂಬಳಿ ನೇಯ್ಗೆಯೂ ಒಂದು ವಿಶೇಷ ಕ್ರಮ. ಹುರಿಗಂಬಳಿ ನೇಯ್ದುವಾಗ ಹೊಕ್ಕನ್ನು ಹುಣಿಸೆ ಸರಿಯಲ್ಲಿ ನೆನೆಸಿ ಉಪಯೋಗಿಸುತ್ತಾರೆ. ಉಜ್ಜುಗಂಬಳಿಗೆ ಉಪಯೋಗಿಸುವ ಹೊಕ್ಕನ್ನು ಹುಣಿಸೆ ಸರಿಯಲ್ಲಿ ಅದ್ದುವುದಿಲ್ಲ. ನೇಯ್ಗೆಗೆ ತಯಾರಾದ ಹಾಸನ್ನು ತಕ್ಕ ಉಪಕರಣಗಳಿಂದ ಮಗ್ಗದಲ್ಲಿ ಜೋಡಿಸಿ ಹೊಕ್ಕಿನ ಎಳೆಗಳನ್ನು ಒಂದು ಕ್ರಮದಲ್ಲಿ ನೇಯುತ್ತಾರೆ. ಉಜ್ಜುಗಂಬಳಿಯ ತಯಾರಿಕೆಯಲ್ಲಿ ನೇಯ್ಗೆ ಬಹಳ ಜಾಗರೂಕತೆಯಿಂದ ಮಾಡಬೇಕಾದ ಕೆಲಸ. ಹೀಗೆ ನೇಯ್ದ ಹೋಳುಗಳು 9 ಮೊಳ ಉದ್ದ $2\frac{1}{2}$ ಮೊಳ ಅಗಲವಿರುತ್ತವೆ. ಇಂಥ ಎರಡು ಹೋಳುಗಳನ್ನು ಸೇರಿಸಿ ಉಣ್ಣೆಯ ದಾರದಿಂದ ಹೊಲೆಯುತ್ತಾರೆ. ಆಗ ಅದು ಒಂದು ಕಂಬಳಿಯಾಗುತ್ತದೆ ಈ 9 ಮೊಳ ಉದ್ದ 5 ಮೊಳ ಅಗಲದ ಕಂಬಳಿಯನ್ನು 6 ಮೊಳ ಉದ್ದ 4 ಮೊಳ ಅಗಲಕ್ಕೆ ಇಳಿಸುವ ಕಾರ್ಯ ಉಜ್ಜುವುದರಿಂದ ಆಗುತ್ತದೆ.

ಈಚಲು ಗರಿಗಳ ಸುತ್ತ ಇರುವ ಸೀಬು ಎಂಬ ನಾರನ್ನು ತಂದು ಅದನ್ನು ಹಿಂಜಿ ಹದಮಾಡಿ ಹಗ್ಗದಂಥ ದಾರ ತೆಗೆಯುತ್ತಾರೆ. ಈ ಹಗ್ಗವನ್ನು ಸುಮಾರು ನಾಲ್ಕು ಅಡಿ ಉದ್ದದ ನಾಲ್ಕು ಮರದ ತುಂಡುಗಳನ್ನು ಚಚ್ಚೌಕವಾಗಿ ಜೋಡಿಸಿ ಮಧ್ಯೆ ಚಪ್ಪಟೆಯಂತೆ ಒತ್ತಾಗಿ ಹೆಣೆಯುತ್ತಾರೆ. ಇದು ಒಂದು ರೀತಿಯ ಚೌಕಟ್ಟಿನಂತೆ ಕಾಣುತ್ತದೆ. ಇದನ್ನು ಚೌಕಾಕಾರವಾಗಿ ಒಂದೇ ಎತ್ತರದಲ್ಲಿ ನೆಟ್ಟಿರುವ 3 ಅಡಿ ಎತ್ತರದ ನಾಲ್ಕು ಕಲ್ಲುಕಂಬಗಳ ಮೇಲಿಡುತ್ತಾರೆ.

ನೇಯ್ದ ಕಂಬಳಿಯನ್ನು ಕುದಿಯುವ ನೀರಿನಲ್ಲಿ ಚೆನ್ನಾಗಿ ನೆನೆಯುವಂತೆ ಅದ್ದಿ ವರ್ಚಿನ ಮೇಲೆ ಹಾಕಿ ನಾಲ್ಕು ಮಂದಿ ಬಲವಾದ ಆಳುಗಳು—ಆ ಕಡೆ ಇಬ್ಬರು ಈ ಕಡೆ ಇಬ್ಬರು—ಎದುರುಬದುರಾಗಿ ನಿಂತುಕೊಂಡು ಉಜ್ಜುತ್ತಾರೆ. ಮಧ್ಯೆ ಮಧ್ಯೆ ಕುದಿಯುವ ನೀರಿನಲ್ಲಿ ಅದ್ದಿಕೊಳ್ಳುತ್ತಿರುತ್ತಾರೆ. ಕಂಬಳಿಯ ಉದ್ದ 6 ಮೊಳ ಅಗಲ 4 ಮೊಳಕ್ಕೆ ಇಳಿಯುವ ವರೆಗೆ ಈ ಉಜ್ಜುವಿಕೆ ನಿರಂತರವಾಗಿ ನಡೆಯುತ್ತದೆ. ವಿರಳವಾಗಿ ಹೆಣೆಯಲಾಗಿದ್ದ ಕಂಬಳಿ ಒತ್ತಾಗಿ, ಮಂದವಾಗುತ್ತದೆ. ಎಳೆಗಳು ಒಡೆದು ಒಂದರೊಡನೊಂದು ಬಲವಾಗಿ ಹೊಂದಿಕೊಳ್ಳುತ್ತವೆ. ನೇಯ್ದ ಯಾವ ಗುರುತೂ ಈಗ ಉಳಿಯುವುದಿಲ್ಲ. ಹೀಗೆ ಉಜ್ಜಿದ ಕಂಬಳಿಯನ್ನು ಕೆರೆಗೋ, ಹೊಳೆಗೋ, ತೆಗೆದುಕೊಂಡು ಹೋಗಿ ಗಂಜಿಯೆಲ್ಲ ಹೋಗುವ ಹಾಗೆ ತಿಳಿನೀರಿನಲ್ಲಿ ಜಾಲಾಡಿ ತೊಳೆಯುತ್ತಾರೆ. ಅನಂತರ ಕಂಬಳಿಯನ್ನು ಬಿಸಿಲಿನಲ್ಲಿ ಒಣಗುಹಾಕಿ, ಸುಮಾರು ನಾಲ್ಕೈದು ಗಂಟೆ ಆದ ಮೇಲೆ, ಇನ್ನೂ ಹಸಿಯಿದ್ದ ಹಾಗೆಯೆ, ಕ್ರಮವಾಗಿ ಮಡಿಸಿ ಅಕ್ಕಿಗೆ ಹಾಕುತ್ತಾರೆ. ಇನ್ನೂ ಹಸಿಯಾಗಿರುವ ಕಂಬಳಿ ಹೇಗೆ ಎಳೆದರೆ ಹಾಗೆ ಬರುತ್ತದೆ. ಉದ್ದ ಅಗಲಗಳನ್ನು ಕ್ರಮವಾಗಿ ಎಳೆದು ಸರಿಪಡಿಸುತ್ತಾರೆ. ತರುವಾಯ ನೆಲದ ಮೇಲೆ ಹಾಕಿ ಅದರ ಮೇಲೆ ಒಣಗಿದ ಕಂಬಳಿಯನ್ನೋ ಚಾಪೆಯನ್ನೋ ಹಾಸಿ ಒಂದು ದಿನ ಬಿಡುತ್ತಾರೆ. ಮೂರನೆಯ ದಿನ ಮತ್ತೆ ಬಿಸಿಲಿನಲ್ಲಿ ಚೆನ್ನಾಗಿ ಒಣಗಿಸಿ ಮಡಿಸಿಡುತ್ತಾರೆ. ಇಲ್ಲಿಗೆ ತಯಾರಿಕೆ ಪೂರ್ಣವಾದಂತಾಗಿ ಅದು ಹೊದೆಯಲು ಸಿದ್ಧವಾಗುತ್ತದೆ.

ಉಜ್ಜುಗಂಬಳಿಗೆ ಕೃತಕವಾದ ಬಣ್ಣಹಾಕುವುದು ಅಸಾಧ್ಯವಾದ ಮಾತೆಂದೇ ಹೇಳಬೇಕು. ಏಕೆಂದರೆ ಕಂಬಳಿಯನ್ನು ನೇಯ್ದ ಮೇಲೆ ಕುದಿಯುವ ನೀರಿನಲ್ಲಿ ಅದ್ದಿ ಅದ್ದಿ ಉಜ್ಜಿ ಅನಂತರ ತೊಳೆಯುವುದರಿಂದ ಕಟ್ಟಿದ ಬಣ್ಣ ಉಳಿಯುವುದು ಕಷ್ಟ. ಸಾಮಾನ್ಯವಾಗಿ ಉಣ್ಣೆಯ ಬಣ್ಣವೇ ಉಜ್ಜುಗಂಬಳಿಯ ಬಣ್ಣವೂ ಆಗಿದೆ. ಉಣ್ಣೆಯ ಪ್ರಕೃತಿದತ್ತವಾದ ಕಪ್ಪು, ಬಿಳಿ, ಮಾಸಲು ಕಂದುಬಣ್ಣಗಳಲ್ಲಿ ಇವು ದೊರೆಯುತ್ತವೆ. ಈ ಬಣ್ಣಗಳು ಯಾವ ಪರಿವರ್ತನೆಯನ್ನೂ ಹೊಂದದೆ ಕಡೆಯ ತನಕ ಉಳಿಯುತ್ತವೆ. ಮೊನ್ನೆಮೊನ್ನೆಯ ವರೆಗೆ ಉಜ್ಜುಗಂಬಳಿಗಳು ಯಾವ ನಮೂನೆಯೂ ಇಲ್ಲದೆ ಪ್ರಕೃತಿದತ್ತ ಬಣ್ಣಗಳಲ್ಲಿ ದೊರೆಯುತ್ತಿದ್ದವು. ಈಗ ಕೊಳ್ಳುವವರ ಅಭಿರುಚಿಗೆ ತಕ್ಕಹಾಗೆ ಮೇಲೆ ಹೇಳಿದ ವಿವಿಧ ಬಣ್ಣದ ಉಣ್ಣೆಯನ್ನೂ ಉಪಯೋಗಿಸಿ, ಬಹು ಆಕರ್ಷಕವಾದ ಹೊಸ ಹೊಸ ನಮೂನೆಯ ಉಜ್ಜುಗಂಬಗಳಿಗಳನ್ನು ಮಾಡುತ್ತಾರೆ.

ಶಾಲು, ಸಕಲಾತಿ ಮತ್ತು ಸಣ್ಣ ಕಂಬಳಿ : ಉತ್ತಮವಾದ ಉಣ್ಣೆಯಿಂದ ಸಣ್ಣದಾಗಿ ನೂಲು ತೆಗೆದು ಈ ವಸ್ತ್ರಗಳನ್ನು ನೇಯುತ್ತಾರೆ. ಶಾಲು ಮತ್ತು ಸಕಲಾತಿಗಳು ಅತ್ಯುತ್ತಮವಾದ ಹೊದೆಯುವ ವಸ್ತ್ರಗಳು. ಇವು ಮೇಲು ದರ್ಜೆಯ ಜನರಿಗಾಗಿ ತಯಾರಾಗುತ್ತಿದ್ದುವು. ಈ ಯಂತ್ರಯುಗದಲ್ಲಂತೂ ಶಾಲು ಅತ್ಯಂತ ವ್ಯಾಪಕವಾದ ಜನಪ್ರಿಯತೆಯನ್ನು ಪಡೆದಿದೆ. ಸಕಲಾತಿ ಈಗ ಶಾಲಿನಲ್ಲಿ ಐಕ್ಯವಾಗಿದೆ. ಸಣ್ಣಕಂಬಳಿ ಶಾಲಿನ ರೀತಿಯ ಒರಟು ಹೊದೆಯುವ ವಸ್ತ್ರ. ಇದನ್ನು ತೊಳೆಗಂಬಳಿ ಎಂದೂ ಕರೆಯುತ್ತಾರೆ. ಏಕೆಂದರೆ ಕೊಳೆಯಾದಾಗಲೆಲ್ಲ ಇದನ್ನು ತೊಳೆದು ಶುಭ್ರಗೊಳಿಸಬಹುದು. ಕೋಲಾರ, ರಾಣಿಬೆನ್ನೂರು, ದಾವಣಗೆರೆ, ಚಿಕ್ಕನಾಯಕನಹಳ್ಳಿಗಳಲ್ಲಿ ವಿಶೇಷವಾಗಿ ಇವನ್ನು ತಯಾರಿಸುತ್ತಾರೆ. ಶಾಲಿನ ತಯಾರಿಕೆ ಇಂದು ಬಹುಮಟ್ಟಿಗೆ ಯಂತ್ರಗಳಿಂದ ಆಗುತ್ತಿದೆ. ಕಾಶ್ಮೀರ ಇವುಗಳಿಗೆ ಜಗದ್ವಿಖ್ಯಾತವಾದ ಸ್ಥಳವಾಗಿದೆ.

ಗದ್ದುಗೆಧಾವಳಿ : ಧಾವಳಿ ಎಂದರೆ ಧವಳ, ಬಿಳಿ ಎಂದು ಅರ್ಥ. ಗದ್ದುಗೆ ಕೂರುವ ಸ್ಥಳ. ಆದುದರಿಂದ ಗದ್ದುಗೆಧಾವಳಿ ಕೂರಲು ಉಪಯೋಗಿಸುವ ಅಚ್ಚ ಬಿಳಿಯ ಕಂಬಳಿ. ಧಾರ್ಮಿಕ ಗುರುಗಳ ಗದ್ದುಗೆಗೂ ಮಿಕ್ಕಂತೆ ಪವಿತ್ರ ಕಾರ್ಯಗಳಲ್ಲಿಯೂ ಅದನ್ನು ಉಪಯೋಗಿಸುತ್ತಿದ್ದರು. ಈ ಕಂಬಳಿ ವಿಶೇಷವಾಗಿ ವೈದಿಕರ ಉಪಯೋಗಕ್ಕಾಗಿ ತಯಾರಾಗುತ್ತಿತ್ತು. ಗದ್ದುಗೆಗಾಗಿಯೇ ಇದನ್ನು ಹೆಚ್ಚಾಗಿ ಬಳಸುತ್ತಾರಾದರೂ ಇದನ್ನು ಶಾಲಿನಂತೆ ಹೊದೆಯಲು ಉಪಯೋಗಿಸುವುದೂ ಉಂಟು. ಪೂಜಾವಸ್ತುಗಳನ್ನಿಡುವ ಚೀಲಗಳನ್ನು ಇದರಿಂದ ತಯಾರಿಸುತ್ತಾರೆ.

ಕರಿಯ ಕಂತೆ : ಕುರುಬರ ಗುರು ರೇವಣ ಸಿದ್ಧೇಶ್ವರ ತನ್ನ ಅವತಾರ ಕಾಲದಲ್ಲಿ ಕುರಿ ಕಾಯುತ್ತಿದ್ದನೆಂದೂ ಆದರಿಂದಲೇ ಕುರುಬರಿಗೆ ಕುರಿಸಾಕಣೆಯ ಪರಂಪರೆ ಉಂಟಾಯಿತೆಂದೂ ನಂಬಿಕೆ. ರೇವಣ ಸಿದ್ಧೇಶ್ವರನಿಗೆ ಉಣ್ಣೆಯ ವಸ್ತ್ರ ಬಹುಪ್ರಿಯ. ಕುರುಬ ಜನಾಂಗ ಎಲ್ಲೆಲ್ಲುಂಟೋ ಅಲ್ಲೆಲ್ಲ ರೇವಣಸಿದ್ಧೇಶ್ವರನ ಮಠಗಳಿದ್ದು ಅಲ್ಲೆಲ್ಲ ಉಣ್ಣೆಯ ಕರಿಯ ವಸ್ತ್ರವನ್ನು ಗುರುವಿಗೆ ಅರ್ಪಿಸುತ್ತಾರೆ. ಇದನ್ನು ಕರಿಯ ಕಂತೆ ಎಂದು ಕರೆಯುತ್ತಾರೆ. ಕಂತೆ ಎಂದರೆ ಪೂಜೆಯ ಸಮಯದಲ್ಲಿ ಉಡುವ ವಸ್ತ್ರ—ಎಂದು ಅರ್ಥ. ಈ ಕರಿಯ ಕಂತೆಯ ಪ್ರಸ್ತಾಪ ಕುರುಬರ ಜನಾಂಗದ ನಂಬಿಕೆ ಮತ್ತು ಸಂಪ್ರದಾಯಗಳನ್ನು ವಿವರಿಸುವ ತಗರ ಪವಾಡ ಎಂಬ ಪ್ರಾಚೀನ ಗ್ರಂಥದಲ್ಲಿ ಬರುತ್ತದೆ.

ಕರಿಯ ಕಂತೆಯನ್ನು ಮಾಡುವವರು ಗುರುಪರಂಪರೆಯಲ್ಲಿ ಬಂದ ಒಡೆಯರ ಮನೆತನದವರು. ನಾಲ್ಕೈದು ಜನ ಸ್ನಾನಮಡಿಗಳಿಂದ ಉಪವಾಸವಿದ್ದು ಅಚ್ಚಕರಿಯ ತುಪ್ಪಟವನ್ನು ಕೈಯಲ್ಲಿಯೇ ಹಿಂಜಿ ಕೈಯಲ್ಲಿಯೇ ಎಳೆ ಹೊಸೆದು ಅಣಿಮಾಡಿ ವಸ್ತ್ರವನ್ನು ನೇಯುತ್ತಾರೆ. ಇದು ರೇವಣ ಸಿದ್ಧೇಶ್ವರನ ಗರ್ಭಗುಡಿಯಲ್ಲಿ ನಡೆಯುವ ಕೆಲಸ. ಇದೊಂದು ಮೂರು ಮೂಲೆಯ ಉಣ್ಣೆಯ ವಸ್ತ್ರ. ಕಂತೆ ಸಿದ್ಧವಾದ ಮೇಲೆ ಅದನ್ನು ರೇವಣ ಸಿದ್ಧೇಶ್ವರನಿಗೆ ಓದಿಸುವ ಪವಿತ್ರ ಸಮಾರಂಭ ವೈಭವಯುತವಾಗಿ ನಡೆಯುತ್ತದೆ. ಇದಲ್ಲದೆ ಅಚ್ಚಕರಿಯ ತುಪ್ಪಟದಿಂದ ಮಾಡಿದ ಕಂಬಳಿಯನ್ನು ಮದುವೆ ಸಂದರ್ಭಗಳಲ್ಲಿ ಗುರುಗಳಿಗೆ ಪೀಠವಾಗಿಯೂ ಧಾರೆ ಹರವಿಯ ಕೆಳಗೆ ಹಾಸಲೂ ಕುರುಬ ಜನಾಂಗದವರು ಇಂದಿಗೂ ಉಪಯೋಗಿಸುತ್ತಾರೆ.

**ಯಂತ್ರಮಗ್ಗಗಳ ಆಗಮನ :** ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಫ್ರಾನ್ಸಿನ ಜೋಸೆಫ್ ಮೆರಿ ಜಾಕ್ವರ್ಡ್ ಎಂಬಾತ ಮೊದಲು ಯಂತ್ರಮಗ್ಗವನ್ನು ಕಂಡುಹಿಡಿದ. ಅವನ ಈ ಸಂಶೋಧನೆ ತಮ್ಮ ಕೆಲಸಗಳಿಗೆ ಸಂಚಕಾರ ತಂದೀತೆಂಬ ಭಯದಿಂದ ಅವನ ಅಕ್ಕಪಕ್ಕದ ನೇಯ್ಗೆಯವರು ಫ್ರೆಂಚ್‌ನಗರ ಲಿಯೊನ್ಸಿನಿಂದ ಅವನನ್ನು ಕಲ್ಲುಗಳಿಂದ ಹೊಡೆದು ಹೊರಗಟ್ಟಿದರು. ಜಾಕ್ವರ್ಡನ ಯಂತ್ರಮಗ್ಗ ವಿಲ್ಟನ್ ಮತ್ತು ಬ್ರುಸೆಲ್ಸಿನ ನೇಯ್ಗೆಯಲ್ಲಿ ಕ್ರಾಂತಿಯುಂಟುಮಾಡಿ ನೇಯ್ಗೆಯ ವೆಚ್ಚವನ್ನು ಕುಗ್ಗಿಸಿ ಕಂಬಳಿಯ ಬೆಲೆ ಸಾಮಾನ್ಯರಿಗೂ ಎಟಕುವಂತೆ ಮಾಡಿತು. ಇದರ ಪರಿಣಾಮವಾಗಿ ನೇಯ್ಗೆ ಕಂಪನಿಗಳಲ್ಲಿ ಹೆಚ್ಚು ಕೆಲಸಗಳು ಹುಟ್ಟಿಕೊಂಡುವು. ಜಾಕ್ವರ್ಡ್ ಸತ್ತ ಆರು ವರ್ಷಗಳ ಮೇಲೆ ಲಿಯಾನ್ಸಿನ ಜನರು ಅವನ ಹೆಸರಿನಲ್ಲಿ ಒಂದು ಭವ್ಯ ಸ್ಮಾರಕವನ್ನು ನಿರ್ಮಿಸಿದರು. ಈಗಿನ ವಿಲ್ಟನ್ನಿನ ಎಲ್ಲ ಕಂಬಳಿಗಳೂ ಜಾಕ್ವರ್ಡ್ ಯಂತ್ರಮಗ್ಗದಿಂದ ತಯಾರಾಗುತ್ತವೆ.

ಮತ್ತೆರಡು ಪ್ರಮುಖವಾದ ಐರೋಪ್ಯ ಸಂಶೋಧನೆಗಳು ಕಂಬಳಿ ಮತ್ತು ಜಮಖಾನೆಯ ಉದ್ಯಮದ ಭವಿಷ್ಯವನ್ನು ಉಜ್ಜ್ವಲಗೊಳಿಸಿ ಕಾರ್ಖಾನೆಗಳ ಸ್ಥಾಪನೆಗೆ ಪ್ರಚೋದನೆಯನ್ನು ನೀಡಿದವು. 1831ರಲ್ಲಿ ಸ್ಕಾಟ್‌ಲೆಂಡಿನ ಬರ್ಲಿನ್ ರಿಚರ್ಡ್ ವೈಟೋಕ್ ಎಂಬುವನು ಬಣ್ಣದ ದಾರದ ನೇಯ್ಗೆಯಿಂದ ತಯಾರಿಕಾ ವೆಚ್ಚವನ್ನು ಇಳಿಸುವ ವಿಧಾನವನ್ನು ಜಾರಿಗೆ ತಂದ. ಈ ಬೆಳೆವಣಿಗೆಯನ್ನು ಹಿಂಬಾಲಿಸಿ 1839ರಲ್ಲಿ ಜೇಮ್ಸ್ ಟೆಂಪಲ್‌ಸನ್ ಎಂಬುವನು ಪೇಟೆಂಟ್ ಅಕ್ಸಮಿನಿಸಲರ್ ಅಥವಾ ಡಬಲ್ ವೀವಿಂಗ್ ಚೌನಲ್ ಪ್ರೋಸೆಸ್ ಎಂಬ ಹೆಚ್ಚು ತುಪ್ಪಟ ಉಳಿಸುವ ವಿಧಾನವನ್ನು ಕಂಡುಹಿಡಿದ. ಈ ಹೆಜ್ಜೆ ತಯಾರಿಕೆಯ ವೆಚ್ಚವನ್ನು ಮತ್ತೂ ಕಡಿಮೆ ಮಾಡಿದ್ದೇ ಅಲ್ಲದೆ, ಕಂಬಳಿ ತಯಾರಿಸುವ ಯಂತ್ರಮಗ್ಗಗಳಿಗೆ ಉತ್ತಮ ಮಾರುಕಟ್ಟೆಯನ್ನೂ ಒದಗಿಸಿತು.

**ವಿದ್ಯುತ್ ಮಗ್ಗಗಳು :** ಮೊದಲನೆಯ ವಿದ್ಯುತ್ ಮಗ್ಗ : ಕಂಬಳಿ ಜಮಖಾನೆಯ ಆಧುನಿಕ ದೊಡ್ಡ ಪ್ರಮಾಣದ ಉತ್ಪಾದನೆಯಲ್ಲಿ 1839 ಯುಗ

ಪ್ರವರ್ತಕ ವರ್ಷ—ಎರಾಸ್ಟಸ ಬ್ರಿಗ್‌ಹ್ಯಾಮ್‌ಬಿಗೆಲೋನ ವಿದ್ಯುತ್ ಮಗ್ಗಗಳ ಸಂಶೋಧನೆ ಆದದ್ದು ಅಂದು. ಮೊದಲನೆಯ ಹಬೆಯ ಯಂತ್ರದಿಂದ ನಡೆಸಲಾಗುತ್ತಿದ್ದ ಮಗ್ಗ ಲೋವೆಲ್ ಮ್ಯಾನುಫ್ಯಾಕ್ಚರಿಂಗ್ ಕಂಪನಿಯಲ್ಲಿ ಮೊದಲು ಸ್ಥಾಪಿತವಾಯಿತು. ಇಲ್ಲಿಯವರೆಗೆ ದಿನಕ್ಕೆ 10 ರಿಂದ 12 ಗಂಟೆಗಳ ಕಾಲ ಒಬ್ಬ ದೊಡ್ಡಾಳು ಮತ್ತು ಒಬ್ಬ ಹುಡುಗ ಕಷ್ಟಪಟ್ಟು ದುಡಿದರೆ 7 ಗಜ ಬ್ರುಸೆಲ್ಸ್ ಮಾದರಿಯ ಜಮಖಾನೆಯನ್ನು ನೇಯಲು ಸಾಧ್ಯವಾಗುತ್ತಿತ್ತು.

ಬಿಗೆಲೋ ಮಗ್ಗ ಆ ಕಾಲದ ಅತ್ಯುತ್ತಮ ರೀತಿಯ ಜಮಖಾನೆಯ 25 ಗಜ ನೇಯಲು ಸಮರ್ಥವಾಯಿತು. ಈ ಸಂಶೋಧನೆ ಕೈಗಾರಿಕಾ ಪ್ರಪಂಚದಲ್ಲಿ ಕ್ರಾಂತಿಯನ್ನೆಬ್ಬಿಸಿತು ಮತ್ತು ಉಣ್ಣೆಯ ಜಮಖಾನೆ ಮತ್ತು ರತ್ನಗಂಬಳಿಗಳು ಜನಸಾಮಾನ್ಯರಿಗೆ ಎಟಕುವಂತಾಯಿತು. ಸಾವಿರಾರು ವರ್ಷಗಳಿಂದ ನೇಯ್ಗೆಯ ಕಲೆ ನೆಲಕ್ಕೆ ಹಾಸುವ ಸೌಂದರ್ಯಸಾಧನವಾಗಿ ಬರಿಯ ರಾಜರು ಮತ್ತು ಶ್ರೀಮಂತರ ಸ್ವತ್ತಾಗಿತ್ತು. 1800ರಲ್ಲಿ ಸಹ ಅಮೆರಿಕೆಯ ಕೆಲವೇ ಮುಂದುವರಿದ ಶ್ರೀಮಂತ ಗೃಹಗಳು ಮಾತ್ರ ರತ್ನಗಂಬಳಿ ಮತ್ತು ಜಮಖಾನೆಯನ್ನು ಹೊಂದಿದ್ದುವು. ಬಿಗೆಲೋ ಸಂಶೋಧನೆಯಿಂದಾಗಿ ಎರಡು ದಶಕಗಳಲ್ಲಿ ಹಿಂದಿನ ಕಾಲದವುಗಳಿಗಿಂತ ಉತ್ತಮವಾದ ನೆಲಗಂಬಳಿಗಳನ್ನು ಸಾಮಾನ್ಯ ಜನರಿಗೂ ನಿಲುಕುವ ಹಾಗೆ ಒದಗಿಸಲು ಅಮೆರಿಕೆಯ ಕಂಬಳಿ ಉದ್ಯಮಕ್ಕೆ ಸಾಧ್ಯವಾಯಿತು.

ಆಕ್ಸಮಿನ್ಸ್ಟರ್ ಮಗ್ಗ : 1876ರಲ್ಲಿ ಹಾಲ್ಸಿಯಾನ್ ಕಿನ್ನರನ ಆಕ್ಸಮಿನ್ಸ್ಟರ್ ಸುಧಾರಿತವಾದ ಯಂತ್ರ ಮಗ್ಗ ಈ ಉದ್ಯಮದ ಸುಧಾರಣೆಯಲ್ಲಿ ವಿದ್ಯುತ್ ಮಗ್ಗದಷ್ಟೇ ಪ್ರಮುಖವಾದುದು. ಕಿನ್ನರ್ ಮೂಲತಃ ಮೆಕ್ವೆಟ್ಟೀ ಮಗ್ಗವನ್ನು ಅಲೆಕ್ಸಾಂಡರ್ ಸ್ಮಿತ್ ಅಂಡ್ ಸನ್ಸ್ ಸಂಸ್ಥೆಯ ಧನಸಹಾಯದಿಂದ ಅವನ ಸಂಶೋಧನೆಯಲ್ಲಿ ಉತ್ತಮಗೊಳಿಸಿದ. ಆ ಶತಮಾನದ ಕಡೆಯ ಹೊತ್ತಿಗೆ ಇಂಥ ಆಕ್ಸಮಿನ್ಸ್ಟರ್ ಮಗ್ಗಗಳು ದಿನಕ್ಕೆ 40ರಿಂದ 60 ಗಜ ನೇಯುತ್ತಿದ್ದುವು. ಅದಕ್ಕಿಂತ ಹಿಂದೆ ಇವುಗಳಲ್ಲಿ ಇಬ್ಬರು ದೊಡ್ಡಾಳುಗಳು ಮತ್ತು ಒಬ್ಬ ಹುಡುಗ ದಿನದಲ್ಲಿ ನೇಯುತ್ತಿದ್ದ 1½ ಗಜಕ್ಕೆ ಹೋಲಿಸಿದರೆ ನಿಜಕ್ಕೂ ಅದೊಂದು ಕ್ರಾಂತಿಕಾರಕವಾದ ಬದಲಾವಣೆ.

ವಿಶಾಲ ಮಗ್ಗ : ಮೊದಲಿನ ವಿದ್ಯುತ್ ಮಗ್ಗಗಳು ಸಾಮಾನ್ಯವಾಗಿ 27 ಅಂಗುಲದ ಜಮಖಾನೆಗಳನ್ನು ತಯಾರಿಸುತ್ತಿದ್ದುವು. ನೆಲದ ತುಂಬ ಹಾಸಬೇಕಾದರೆ, ನೆಲದ ಉದ್ದ ಮತ್ತು ಅಗಲಕ್ಕೆ ಅನುಗುಣವಾಗಿ ಅವನ್ನು ಸೇರಿಸಿ ಹೊಲೆಯಬೇಕಾಗುತ್ತಿತ್ತು. ಅನಂತರ ವಿಶಾಲ ಜಮಖಾನೆಯ ಮಗ್ಗಗಳು ಜಾರಿಗೆ ಬಂದು ಎಲ್ಲ ರೀತಿಯ ಉಪಯೋಗಕ್ಕೂ ಬರುವ 9ರಿಂದ 18 ಅಡಿ ಅಗಲದ ಜಮಖಾನೆಗಳನ್ನು ತಯಾರಿಸಿ ಉತ್ಪಾದನೆಯ ವಿನ್ಯಾಸದಲ್ಲಿ ಕ್ರಾಂತಿಯನ್ನುಂಟುಮಾಡಿದುವು. ಈ ಮಗ್ಗಗಳು ಬಣ್ಣ, ನಮೂನೆ ಮತ್ತು ರೀತಿಗಳಲ್ಲಿ ಯಾವ ಬದಲಾವಣೆಗಳನ್ನೂ ಮಾಡದೆ ಸಾಮಾನ್ಯ ಮತ್ತು ಚಿತ್ರಗಳಿರುವ 4½ ಅಡಿ ಅಥವಾ ಅದಕ್ಕಿಂತ ಅಗಲವಾದ ಜಮಖಾನೆಗಳನ್ನು ನೇಯ್ದು ವಿಶಾಲ ಮಗ್ಗ ಎಂಬ ಹೆಸರನ್ನು ಪಡೆದುಕೊಂಡವು. ವಿಶಾಲ ಮಗ್ಗಗಳ ಆಗಮನ ಜಮಖಾನೆ ಮತ್ತು ಕುಬಳಿಗಳ ಅಲಂಕರಣವನ್ನು ಗಮನಾರ್ಹವಾಗಿ ಹೆಚ್ಚಿಸಿದುವು. ಮನೆಗಳ ನೆಲವನ್ನು ಮುಚ್ಚುವ ಉಪಯೋಗ ಸಾಧನ ಮಾತ್ರವಾಗಿ, ಮನೆಯ ಕಸ ತೆಗೆಯುವಾಗ ಮಾತ್ರ ಒದರಲು ಹೊರಗೆ ಬರುತ್ತಿದ್ದ ಜಮಖಾನೆಗಳು ಕ್ರಮೇಣವಾಗಿ ವಿವಿಧ ನಮೂನೆಯ ಮನೆ ಅಲಂಕರಣ ವಸ್ತುಗಳಾಗಿ ಪರಿವರ್ತನೆಗೊಂಡವು. ಅಮೆರಿಕೆಯ ಆಧುನಿಕ ಕಂಬಳಿ ಜಮಖಾನೆ ಉದ್ಯಮಗಳೆಲ್ಲ ಕಲೆಗಾರರು, ವಿನ್ಯಾಸಗಾರರು ಮತ್ತು ಬಣ್ಣಗಾರರಾದ ಕುಶಲ ಕರ್ಮಿಗಳನ್ನು ಹೊಂದಿದ್ದಾರೆ. 1930ರಿಂದೀಚೆಗೆ ಗೋಡೆಯಿಂದ ಗೋಡೆಯ ವರೆಗೆ ಹಾಸುವ ದೊಡ್ಡ ಜಮಖಾನೆಗಳ ಬೇಡಿಕೆ ಬೆಳೆಯಿತು. ಸಣ್ಣ ಮನೆಗಳಲ್ಲಿ ಆಸನಗಳನ್ನೂ ಕಡಿಮೆ ಮಾಡಿ, ಜಮಖಾನೆಗಳನ್ನು ಹಾಸಿ ಕೊಠಡಿಗಳು ವಿಶಾಲವಾಗಿ ಕಾಣುವಂತೆ ಏರ್ಪಾಡು ಮಾಡುತ್ತಾರೆ.

ಕಂಬಳಿ ಮತ್ತು ಜಮಖಾನೆಯ ಉದ್ಯಮಕ್ಕೆ ಉಣ್ಣೆ, ಹತ್ತಿ, ಸೆಣಬು ಮುಖ್ಯವಾದ ಕಚ್ಚಾವಸ್ತುಗಳು. ಇವು ಪ್ರಪಂಚದ ಎಲ್ಲ ದೇಶಗಳಲ್ಲಿಯೂ ಇಂದು ಉತ್ಪನ್ನವಾಗುತ್ತಿವೆ. ಅಮೆರಿಕ, ಆಸ್ಟ್ರೇಲಿಯ, ಇಂಗ್ಲೆಂಡ್, ರಷ್ಯ ಉಣ್ಣೆಗೆ ಪ್ರಸಿದ್ಧವಾದರೆ, ಈಜಿಪ್ಟ್ ಹತ್ತಿಗೆ ಪ್ರಸಿದ್ಧವಾದರೆ, ಭಾರತ ಮತ್ತು ಪಾಕಿಸ್ತಾನ ಸೆಣಬಿಗೆ ಪ್ರಸಿದ್ಧವಾಗಿವೆ. ಇಂದು ವಿಶ್ವದ ಬಹುತೇಕ ದೇಶಗಳಲ್ಲಿ ಕಂಬಳಿ ಮತ್ತು ಜಮಖಾನೆಗಳ ಯಾಂತ್ರಿಕ ತಯಾರಿಕೆ ದೊಡ್ಡ ಪ್ರಮಾಣದಲ್ಲಿ ನಡೆಯುತ್ತಿದೆ. ಪಶ್ಚಿಮ ರಾಷ್ಟ್ರಗಳಲ್ಲಿಯಂತೂ ಈ ಉದ್ಯಮ ಸಂಪೂರ್ಣವಾಗಿ ಯಂತ್ರೀಕೃತವಾಗಿದೆ. ಭಾರತದಲ್ಲಿಯೂ ಅನೇಕ ಕಂಬಳಿ ಮಿಲ್ಲುಗಳು ವಿಪುಲವಾಗಿ ಕಂಬಳಿ ತಯಾರಿಕೆಯಲ್ಲಿ ತೊಡಗಿದ್ದರೂ ಕೈಮಗ್ಗಗಳಲ್ಲಿ ನೇಯುವ ಕಲೆ ಗ್ರಾಮಾಂತರ ಪ್ರದೇಶಗಳಲ್ಲಿ ಇಂದಿಗೂ ಉಳಿದುಕೊಂಡು ಬಂದಿರುವುದೊಂದು ಆಶ್ಚರ್ಯದ ಸಂಗತಿಯೇ ಸರಿ. ಆದರೆ ದಿನದಿನಕ್ಕೂ ವೈಜ್ಞಾನಿಕ ಪ್ರಗತಿ ಮನುಷ್ಯನನ್ನು ಯಂತ್ರ ನಾಗರಿಕತೆಯತ್ತ ರಭಸದಿಂದ ಎಳೆದೊಯ್ಯುತ್ತಿರುವಾಗ ಈ ಕುಶಲ ಕೈಗಾರಿಕೆಯ ಭವಿಷ್ಯವೇನಾಗುತ್ತದೆಂದು ಕಾದುನೋಡಬೇಕಾಗಿದೆ. (ಎಚ್.ಕೆ.ಆರ್.ಜಿ.)

**ಕಂಬಳಿಹುಳು :** ಪತಂಗ, ಚಿಟ್ಟೆ ಮುಂತಾದ ಸಂಧಿಪದಿವಂಶದ ಲೆಪಿಡಾಪ್ಟೀರ ಗಣಕ್ಕೆ ಸೇರಿದ ಕೀಟಗಳ ಡಿಂಭಗಳ ಸಾಮಾನ್ಯ ಹೆಸರು (ಕ್ಯಾಟರ್‌ಪಿಲರ್). ಆದರೆ ಹೆಸರು ಸೂಚಿಸುವಂತೆ ಎಲ್ಲ ಹುಳುಗಳ ಮೈಮೇಲೂ ಕಂಬಳಿಯಂಥ ಕವಚ



ಕಂಬಳಿ ಹುಳುಗಳ ಮೂರು ಬಗೆಗಳು

ಇರಬೇಕಾದುದಿಲ್ಲ. ಈ ಹುಳುವಿನ ದೇಹವನ್ನು ತಲೆ, ಎದೆಯ ಭಾಗ ಮತ್ತು ಉದರ ಭಾಗ ಎಂದು ಮೂರು ಭಾಗಗಳಾಗಿ ವಿಂಗಡಿಸಬಹುದು ; ಎದೆಯ ಭಾಗದಲ್ಲಿ ಮೂರು ಜೊತೆ ಸಂಧಿಪಾದಗಳಿವೆ. ಅವುಗಳ ತುದಿಯಲ್ಲಿ ಕೊಂಡಿಗಳಿವೆ. ಉದರಭಾಗದಲ್ಲಿ ಸಾಮಾನ್ಯವಾಗಿ ಐದು ಜೊತೆ ಪಾದಗಳಿವೆ. ಕೆಲವೊಮ್ಮೆ ಅವುಗಳ ಸಂಖ್ಯೆ ಒಂದು ಪ್ರಭೇದದಿಂದ ಮತ್ತೊಂದಕ್ಕೆ ವ್ಯತ್ಯಾಸವಾಗುವುದುಂಟು. ಕಾಲುಗಳು ದಪ್ಪ ಮತ್ತು ದುಂಡು. ಇವುಗಳ ತುದಿಯಲ್ಲಿ ಬಾಗಿದ ಮುಳ್ಳುಗಳಂಥ ರಚನೆಗಳಿವೆ. ಚಲಿಸುವಾಗ ಈ ಮುಳ್ಳುಗಳು ಭದ್ರವಾಗಿ ಹಿಡಿದುಕೊಳ್ಳಲು ಸಹಾಯಕ.

ಕಂಬಳಿಹುಳುವಿನ ತಲೆಯನ್ನು ಗಟ್ಟಿಯಾದ ಕ್ಯೂಟಿಕಲ್ ಕವಚ ಆವರಿಸಿದೆ. ತಲೆಯ ಇಕ್ಕೆಲದಲ್ಲಿ ಆರು ಸರಳಾಕ್ಷಿಗಳು, ತುದಿಯಲ್ಲಿ ಒಂದು ಜೊತೆ ತುಂಡಾಗಿರುವ ಕುಡಿಮೀಸೆಗಳು ಇವೆ. ದವಡೆ ಗಟ್ಟಿಯಾಗಿ ಶಕ್ತಿಯುತವಾಗಿದೆ. ಮ್ಯಾಕ್ಸಿಲ ಅತಿ ಚಿಕ್ಕವಾಗಿರುವುದರಿಂದ ಕಾಣುವುದಿಲ್ಲ. ಕೆಳತುಟಿಯ ಭಾಗಕ್ಕೆ ರೇಷ್ಮೆಯ ದಾರವನ್ನು ಉತ್ಪತ್ತಿ ಮಾಡುವ ಗ್ರಂಥಿಗಳ ನಾಳಗಳು ಬಂದು ಕೊನೆಗೊಂಡಿವೆ. ಈ ಗ್ರಂಥಿಗಳು ಮಾರ್ಪಾಡಾಗಿರುವ ಲಾಲಾಗ್ರಂಥಿಗಳು. ರೇಷ್ಮೆಗ್ರಂಥಿಗಳಲ್ಲಿ ಉತ್ಪತ್ತಿ ಹೊಂದಿದ ರಸದಿಂದ ರೇಷ್ಮೆಯಂಥ ದಾರಗಳನ್ನು ಈ ಹುಳುಗಳು ನೂಲುತ್ತವೆ. ಈ ದಾರ ಕೋಶ ತಯಾರಿಕೆಗೆ ಅಗತ್ಯ. ಅನೇಕ ಕಂಬಳಿಹುಳುಗಳಲ್ಲಿ ಈ ಗ್ರಂಥಿಗಳು ಉದ್ದವಾಗಿರುತ್ತವೆ. ರೇಷ್ಮೆ ಚಿಟ್ಟೆಗಳ ಕಂಬಳಿಹುಳುಗಳಲ್ಲಿ ಈ ಗ್ರಂಥಿಗಳು ಮಿಕ್ಕ ಜಾತಿಯ ಕಂಬಳಿಹುಳುಗಳ ಗ್ರಂಥಿಗಳಿಗಿಂತ ಐದು ಪಟ್ಟು ಉದ್ದವಿರುತ್ತವೆ. ಕಂಬಳಿಹುಳುವಿನ ಪಕ್ಕೆಗಳಲ್ಲಿ ಒಂಬತ್ತು ಜೊತೆ ಉಸಿರಾಡುವ ರಂಧ್ರಗಳಿವೆ. ಇವುಗಳಿಗೆ ಸ್ಪೈರಕಲ್ಲುಗಳೆಂದು ಹೆಸರು. ಸ್ಪೈರಕಲ್ಲುಗಳು ಚಿಕ್ಕ ಚುಕ್ಕೆಗಳಂತಿರುತ್ತವೆ. ಕಂಬಳಿಹುಳುಗಳು ರಕ್ಷಣೆಗಾಗಿ ನಾನಾ ಹೊಂದಾಣಿಕೆಯ ವ್ಯವಸ್ಥೆಗಳನ್ನು ಮಾಡಿಕೊಂಡಿವೆ. ಶರೀರದ ರಚನೆ ಮತ್ತು ಅವುಗಳ ನಡತೆಯಲ್ಲಿ ಈ ಹೊಂದಿಕೆಗಳನ್ನು ಕಾಣಬಹುದು. ಹುಲಿ ಪತಂಗಗಳ ಕಂಬಳಿಹುಳುವಿನ ಶರೀರದ ಮೇಲೆ ಒತ್ತಾಗಿರುವ ರೋಮಗಳಿವೆ. ವೇಪೋರರ್ ಪತಂಗಗಳ ಕಂಬಳಿಹುಳುವಿನ ಶರೀರದ ಮೇಲಿರುವ ರೋಮಗಳು ಗುಂಪು ಗುಂಪಾಗಿದ್ದು ಕುಂಚಗಳಂತೆ ಕಾಣುತ್ತವೆ. ಕೆಲವು ಕಂಬಳಿಹುಳುಗಳಲ್ಲಿ ಈ ರೋಮಗಳು ಸೂಜಿಯಂತೆ ಚೂಪಾಗಿ ಗಟ್ಟಿಯಾಗಿರುತ್ತವೆ. ಇವು ಮುಟ್ಟಿದ ತತ್‌ಕ್ಷಣ ಚುಚ್ಚಿಕೊಂಡು ಮುಟ್ಟಿದವರ ಮೈಭಾಗದಲ್ಲಿ ಮುರಿದುಹೋಗುತ್ತವೆ. ಈ ರೀತಿ ಚುಚ್ಚಿಕೊಂಡ ರೋಮಗಳು ಆ ಭಾಗದಲ್ಲಿ ಉರಿ ಮತ್ತು ನೋವನ್ನುಂಟು ಮಾಡುತ್ತವೆ. ಇದಕ್ಕೆ ಕಂಬಳಿಹುಳು

ಸುರಿಸುವ ವಿಷಪದಾರ್ಥವೇ ಕಾರಣ. ದಕ್ಷಿಣ ಅಮೆರಿಕ ಮತ್ತು ಉಷ್ಣವಲಯಗಳಲ್ಲಿರುವ ಕೆಲವು ಕಂಬಳಿಹುಳುಗಳ ಮೈಮೇಲೆ ನಳಿಕೆಯ ರೂಪದ ಚೂಪಾದ ವಿಷದ ಮುಳ್ಳುಗಳೇ ಇವೆ. ಇವುಗಳ ಬುಡದಲ್ಲಿ ವಿಷೋತ್ಪಾದಕ ಗ್ರಂಥಿಗಳಿವೆ. ಇವುಗಳ ಮುಳ್ಳುಗಳೇನಾದರೂ ಚುಚ್ಚಿಕೊಂಡರೆ ನಂಜೇರುತ್ತದೆ. ಉರಿ ಮತ್ತು ನೋವು ಇದರ ಮುಖ್ಯ ಲಕ್ಷಣ. ನೋಟೊಡಾಂಟಿಡ್ ಜಾತಿಯ ಕಂಬಳಿಹುಳು ಮುಟ್ಟಿದ ತತ್‌ಕ್ಷಣ ಫಾರ್ಮಿಕ್ ಆಮ್ಲವನ್ನು ಉಗುಳುತ್ತದೆ. ಕೆಲವು ಕಂಬಳಿಹುಳುಗಳ ಶರೀರದ್ರವವೂ ವಿಷಪೂರಿತವಾಗಿರುತ್ತದೆ.

ಕೆಲವು ಚಿಟ್ಟೆಗಳ ಕಂಬಳಿಹುಳುಗಳ ಮೇಲೆ ವಿಷವಿಲ್ಲದ ಮುಳ್ಳಿನ ರಚನೆಗಳಿರುತ್ತವೆ. ವನೆಸ್ಸ ಪ್ರಭೇದ ಮತ್ತು ಸಮ್ರಾಟ ಪತಂಗಗಳ ಕಂಬಳಿಹುಳುಗಳಲ್ಲಿ ಈ ಈ ರೀತಿಯ ರೋಮಗಳನ್ನು ಕಾಣಬಹುದು. ಕೆಲವು ಪತಂಗಗಳ ಕಂಬಳಿಹುಳುವಿನ ತಲೆಯ ಮುಂದೆ ಒಂದು ಕೋಡಿನಂಥ ರಚನೆ ಇರುತ್ತದೆ. ಮತ್ತೆ ಕೆಲವು ಕಂಬಳಿಹುಳುಗಳ ಶರೀರದ ಮೇಲೆ ರೋಮಗಳೇ ಇರುವುದಿಲ್ಲ. ಇಂಥವುಗಳ ಶರೀರ ಅತಿ ಮೃದುವಾಗಿರುತ್ತದೆ.

ಬಹುಪಾಲು ಜಾತಿಯ ಕಂಬಳಿಹುಳುಗಳು ರಕ್ಷಣೆಗೋಸುಗ ರಾತ್ರಿ ವೇಳೆ ಮಾತ್ರ ಹೊರಬರುತ್ತವೆ. ಹಗಲಿನಲ್ಲಿ ಎಲೆ, ಕಲ್ಲು, ಮರದ ತೊಗಟೆಗಳಡಿಯಲ್ಲಿ ನಿದ್ರಿಸುತ್ತವೆ. ಕಂಬಳಿಹುಳುಗಳ ಬಣ್ಣದಲ್ಲೂ ವೈವಿಧ್ಯವುಂಟು. ಕೆಲವು ಕಣ್ಣಿಗೆ ರಂಜಿಸುವಂಥ ಬಣ್ಣಗಳಿಂದ ಕೂಡಿವೆ ; ಮತ್ತೆ ಕೆಲವು ಹುಳುಗಳ ಬಣ್ಣ ಭಯಂಕರ. ಎಲೆ, ತೊಗಟೆ ಮುಂತಾದ ಪದಾರ್ಥಗಳನ್ನು ಇವು ಅನುಕರಿಸುವುದೂ ಉಂಟು.

ಕಂಬಳಿಹುಳುಗಳು ಬಹುತೇಕ ಸಸ್ಯಾಹಾರಿಗಳು. ಇವುಗಳಿಂದ ಬಹಳವಾಗಿ ಸಸ್ಯಹಾನಿಯಾಗುತ್ತದೆ. ಕೇವಲ ಕೆಲವೇ ಜಾತಿಯ ಕಂಬಳಿಹುಳುಗಳು ಮಾತ್ರ ಮಾಂಸಾಹಾರಿಗಳು. ಲೈಸೀನ ಅರಿಯಾನ್ ಚಿಟ್ಟೆಗಳ ಕಂಬಳಿಹುಳುಗಳು ಇರುವೆ ಗೂಡುಗಳಿಗೆ ಮುತ್ತಿಗೆ ಹಾಕಿ ಅವುಗಳ ಮರಿಗಳನ್ನು ತಿನ್ನುತ್ತವೆ. ಉತ್ತರ ಅಮೆರಿಕದ ಫೆನಿಸೆಕ ಟ್ರಾಕ್ವೀನಿಯಸ್ ಎಂಬ ಪ್ರಭೇದದವು ಸಸ್ಯತಿಗಣೆಗಳನ್ನು ತಿನ್ನುತ್ತವೆ. ತಮ್ಮ ಜಾತಿಯ ಹುಳುಗಳನ್ನೇ ತಿನ್ನುವ ಜಾತಿಗಳೂ ಉಂಟು.

(ಎಲ್.ಎಸ್.ಜಿ.;ಡಿ.ಎಸ್.)

**ಕಂಬಿಯ ಪದಗಳು :** ಕಂಬಿಯ ಅಯ್ಯಗಳು ಮಾರ್ಗಾಯಾಸ ಪರಿಹಾರಾರ್ಥವಾಗಿ ಹಾಡುವ ದೇವರ ಪದಗಳು. ಅವರು ಹೊತ್ತುಕೊಂಡು ಹೋಗುತ್ತಿದ್ದ ಕಂಬಿ (ಕೋಲು), ಕಾವಡಿಗಳೇ (ನೆಲುವು) ಕಂಬಿಯ ಮಲ್ಲಯ್ಯನಾಗಿ ಪೂಜೆಗೊಳ್ಳುತ್ತ ಬಂದಿವೆ. ಪುರಾತನ ಕಾಲದಿಂದಲೂ ನಡೆದುಬಂದಿರುವ ಜಾನಪದ ಸಂಪ್ರದಾಯಗಳಲ್ಲಿ ಇದೂ ಒಂದು. ಶ್ರೀಶೈಲ ಮಲ್ಲಿಕಾರ್ಜುನನ ಭಕ್ತರು ಯಾತ್ರೆಯ ಸಂದರ್ಭದಲ್ಲಿ ಕಂಬಿಯ ಪದಗಳನ್ನು ಮೇಳದೊಡನೆ ಹಾಡುವರು.

ಐದಾರು ಮೊಳ ಬಿದಿರಿನ ಕಂಬಿಯ ಎರಡೂ ತುದಿಗಳಿಗೆ ಮೂರು ಮೊಳ ಎತ್ತರವಿರುವ ಎರಡು ಟಿಸಿಲುಗಾಲುಗಳನ್ನು ಜೋಡಿಸಿ ಅವುಗಳಿಗೆ ಕಾಯಕ ಗಂಟೆಗಳನ್ನು ಕಟ್ಟುವರು. ಈ ಟಿಸಿಲುಗಳು ಕೂಡುವ ಮುಂಭಾಗದಲ್ಲಿ ನಂದಿಯನ್ನು ಸ್ಥಾಪಿಸಿ ಅದಕ್ಕೆ ಕಳಸವನ್ನು ಕೂಡಿಸುವರು. ಇದಕ್ಕೆ ಗಲ್ಲೀಪಗಳನ್ನು ಹಾಕಿ ಕಂಬಿಗೆ ಪತಾಕೆಗಳನ್ನು ಸುತ್ತಿ ಅಲ್ಲಲ್ಲಿ ವಿಭೂತಿಯನ್ನು ಹಚ್ಚುವರು. ಎರಡೂ ತುದಿಗಳಿಗೆ ಕಾವಡಿಗಳನ್ನು ಕಟ್ಟಿ ಅವುಗಳಲ್ಲಿ ತಮಗೆ ಬೇಕಾಗುವ ಹಾದಿಯ ಬುತ್ತಿಯನ್ನೂ ಪ್ರವಾಸದ ಸಾಮಗ್ರಿಗಳನ್ನೂ ಇಟ್ಟುಕೊಳ್ಳುವರು.

ಈ ಜನ ಉದ್ದಕ್ಕೂ ಹಾಡುವ ಪದಗಳು ಮಲ್ಲಯ್ಯನ ಹಾಗೂ ಅವನ ಭಕ್ತರ ಮಹಿಮೆಯನ್ನು ಒಳಗೊಂಡಿರುತ್ತವೆ. ಇವು ಹೆಚ್ಚಾಗಿ ದ್ವಿಪದಿಗಳು.

ಪ್ರಧಾನವಾಗಿ ಯಾತ್ರೆಯ ಪದಗಳ ಉದ್ದೇಶ ತಮ್ಮ ಆರಾಧ್ಯ ದೈವವನ್ನು ಹೆಜ್ಜೆಹೆಜ್ಜೆಗೂ ಕೊಂಡಾಡುವುದೇ ಎನ್ನಬಹುದಾದರೂ ನೂರಾರೂ ಮೈಲಿಗಳ ಯಾತ್ರೆಯಲ್ಲಿ ಹಾಡಿನ ಆವಶ್ಯಕತೆ ಮತ್ತೊಂದು ರೀತಿಯಲ್ಲಿಯೂ ಕಂಡುಬರುತ್ತದೆ. ಕಾಡುಮೇಡುಗಳಲ್ಲಿ ಅನೇಕ ದಿನ ಯಾತ್ರೆ ಹೋಗುವಾಗ ಯಾವ ವಾಹನ ಸಂಚಾರವೂ ಇಲ್ಲದ ಕಾಲದಲ್ಲಿ ಇಂಥ ಹಾಡುಗಳು ಭಕ್ತಿಯ ಆವೇಶವನ್ನು ತುಂಬಿ ಯಾತ್ರೆಯಲ್ಲಿ ಶ್ರದ್ಧೆಯನ್ನೂ ನಿಷ್ಠೆಯನ್ನೂ ಮೂಡಿಸುತ್ತಿದ್ದುವು. ಮಾರ್ಗಾಯಾಸವನ್ನು ಕುಗ್ಗಿಸುತ್ತಿದ್ದುವು. ಮೂಡುಮಲೆ ಮಾದಯ್ಯನ ಗಿರಿಯ ಯಾತ್ರೆ, ತಿರುಪತಿಕ್ಷೇತ್ರದ ಯಾತ್ರೆ, ಚುಂಚನಗಿರಿಯ ಯಾತ್ರೆ, ಶ್ರೀಶೈಲದ ಯಾತ್ರೆಗಳು ಅತ್ಯುತ್ತಮ ಯಾತ್ರೆಯ ಪದಗಳನ್ನು ಒದಗಿಸುತ್ತವೆ.

ದಕ್ಷಿಣ ಭಾರತದ ಎಲ್ಲ ಕಡೆಗಳಲ್ಲೂ ಶ್ರೀಶೈಲಕ್ಕೆ ನಡೆದುಕೊಳ್ಳುವ ಭಕ್ತರ ಸಂಖ್ಯೆ ಅಪಾರವಾಗಿದೆ. ಶಿವರಾತ್ರಿ ಹಾಗೂ ಯುಗಾದಿಯಲ್ಲಿ ಪ್ರತಿವರ್ಷವೂ ಜರುಗುವ ರಥೋತ್ಸವಕ್ಕೆ ಸಹಸ್ರಾರು ಮಂದಿ ಭಕ್ತರು ಕಲೆಯುತ್ತಾರೆ.

ಪೂರ್ವಕಾಲದಲ್ಲಿ ದಟ್ಟವಾದ ಅರಣ್ಯಪ್ರದೇಶದಿಂದ ಸುತ್ತುವರಿದಿದ್ದ ಶ್ರೀಶೈಲ ಕ್ಷೇತ್ರಕ್ಕೆ ಎಲ್ಲ ಭಕ್ತರು ದೂರ ದೂರದಿಂದ ಹೋಗಲು ಸಾಧ್ಯವಾಗುತ್ತಿರಲಿಲ್ಲ. ಅಂಥ ಸಂದರ್ಭಗಳಲ್ಲಿ ಗಿರಿಗೆ ಹೋಗುವ ಅಯ್ಯಗಳ ಜೊತೆ ತಮ್ಮ ಹರಕೆಯನ್ನು ಶ್ರೀಮಲ್ಲಿಕಾರ್ಜುನನ ಪದತಲಕ್ಕೆ ಮುಟ್ಟಿಸಲು ಕಳಿಸುತ್ತಿದ್ದರು. ಈ ಅಯ್ಯಗಳು ಕಂಬಿಯನ್ನು ಹೊತ್ತು ಹೋಗುವಾಗ ಅನೇಕ ಊರುಗಳ ಮೂಲಕ ಹಾದು ಹೋಗುತ್ತಿದ್ದರು.

ಕಂಬಿಯ ಅಯ್ಯನವರಿಗೆ ಯಾತ್ರೆಯ ಉದ್ದಕ್ಕೂ ಜನರು ಆದರದ ಸತ್ಕಾರ ಏರ್ಪಡಿಸುತ್ತಿದ್ದರು ; ಯಾತ್ರೆಯಿಂದ ಹಿಂತಿರುಗುವಾಗ ಇವರ ದರ್ಶನಕ್ಕೆ ಅಷ್ಟೇ ಸಂಭ್ರಮದಿಂದ ಕಾದಿರುತ್ತಿದ್ದರು. ತಮ್ಮ ಕಂಬಿಯಲ್ಲೇ ಮಲ್ಲಯ್ಯ ನೆಲೆಸಿ ಗಿರಿಗೆ ಸುರಕ್ಷಿತವಾಗಿ ತಮ್ಮನ್ನು ಕರೆದೊಯ್ದನೆಂದು ಈ ಭಕ್ತರ ನಂಬಿಕೆ. ಕಂಬಿಯ ಮಲ್ಲಯ್ಯ ಎಂಬ ಹೆಸರು ಬಂದದ್ದು ಹೀಗೆ. ಕಂಬಿಯ ಅಯ್ಯಗಳ ಬಗ್ಗೆ ಸಂಶೋಧನೆಯನ್ನು ನಡೆಸಿ, ಅವರ ಸಾಹಿತ್ಯವನ್ನೆಲ್ಲ ಗದ್ದಗೀಮಠರು ಸಮಗ್ರವಾಗಿ ಸಂಗ್ರಹಿಸಿದ್ದಾರೆ.

ಇಂಥ ಕಂಬಿಗಳನ್ನು ಹೊತ್ತ ಅಯ್ಯಗಳು ಹರಕೆಯನ್ನು ಒಯ್ಯುವ ಮೂಲಕ ಮಾಡುವ-ಸೇವೆಯನ್ನು ಕಂಬಿಯ ಕಾಯಕ ಎನ್ನುತ್ತಾರೆ. ಆ ಅಯ್ಯಗಳಿಗೆ ಕಾವಡಿ ಅಯ್ಯಗಳು ಎಂಬ ಮತ್ತೊಂದು ಹೆಸರೂ ಇದೆ. ಈಗಲೂ ದೊಡ್ಡ ದೊಡ್ಡ ಶ್ರೀಮಂತರು ತಮ್ಮ ಮನೆಗಳಲ್ಲಿ ಕಂಬಿಗಳನ್ನಿಟ್ಟು ವರ್ಷಕ್ಕೊಂದು ಬಾರಿ ಹಣ ನೀಡಿ ಕಂಬಿಯ ಅಯ್ಯಗಳನ್ನು ಶ್ರೀಶೈಲಕ್ಕೆ ಕಳಿಸುತ್ತಾರೆ.

ಊರಿಗೆ ಮರಳಿದ ಕಂಬಿಯ ಅಯ್ಯಗಳು ಪೂಜೆಯನ್ನು ನಡೆಸಿ ಮಲ್ಲಿಕಾರ್ಜುನನ ಲೀಲೆಗಳನ್ನು ಕೊಂಡಾಡುವರು ; ಹಿಮ್ಮೇಳ ಮುಮ್ಮೇಳಗಳೊಡನೆ ರಾಗವೆತ್ತಿ ಹಾಡುವರು.

> ಮಲ್ಲಯ್ಯ ಮಲ್ಲಯ್ಯ ಸಿರಿಗಿರಿ ಮಲ್ಲಯ್ಯನ ನೋಡುವ ಬನ್ನಿ ।
> ಎಲ್ಲಾ ದೇವರಿಗೆ ಒಡೆಯಾ ಬಲ್ಲಿದನೋ ಚೆನ್ನಮಲ್ಲ ॥

ಹೀಗೆ ಪಲ್ಲವಿಯೊಡನೆ ಜೀವನದ ಸಂದೇಶವನ್ನು ಸಾರುವ ಹಾಡನ್ನು ಆರಂಭಿಸಿ ಗಂಡಹೆಂಡಿರ ಸಾಮರಸ್ಯ, ಬದುಕಿನ ಆದರ್ಶಗಳನ್ನು ಬಿತ್ತರಿಸುವರು.

ಕಂಬಿಯ ಸಂಪ್ರದಾಯ ತುಂಬ ಪ್ರಾಚೀನವಾದುದೆಂದು ಅನೇಕ ಆಧಾರಗಳಿಂದ ಸಾಧಿಸಲು ವಿದ್ವಾಂಸರು ಪ್ರಯತ್ನಿಸಿದ್ದಾರೆ. ಬಸವೇಶ್ವರರಿಗೂ ಪೂರ್ವದ, ಐತಿಹಾಸಿಕ ವ್ಯಕ್ತಿಯೆಂದು ನಂಬಲಾದ ಗೊಲ್ಲಾಳ, ಇಳಿಹಾಳ ಬೊಮ್ಮಯ್ಯ ಮುಂತಾದವರ ಕಥೆಗಳಲ್ಲಿ ಕಂಬಿಯ ಅಯ್ಯಗಳ ಯಾತ್ರೆಯ ಪ್ರಸ್ತಾಪ ಬರುತ್ತದೆ. ಆ ಸಂಬಂಧದ ಜನಪದ ಗೀತೆಗಳು ಲಭ್ಯವಾಗಿವೆ. ಗೊಲ್ಲಾಳನ ಕಥೆಯಲ್ಲಂತೂ ಕಾವಡಿ ಹೊತ್ತ ಜಂಗಮನ ವರ್ಣನೆಯೇ ಬರುತ್ತದೆ. ಕಂಬಿಯನ್ನು ಕುರಿತ ಜನಪದ ಗೀತೆಗಳೂ ಲಭ್ಯವಾಗುತ್ತವೆ :

> ಮೇಲು ಗುಡಿಯ ಶಿಖರದ ಒಡೆಯ
> ಕೋಲು ಕಡಿದು ಕೈಯಲ್ಲಿ ಕೊಟ್ಟ
> ಕಾಲು ಜಾರಿತು ಕೋಲು ಮುರಿಯಿತು
> ಬಿಂದಿಗಿ ಒಡಿಯಿತು ಮಲ್ಲಯ್ಯ
> ಕಂಬಿಯ ಹೊತ್ತು ಬಿಂದಿಗಿ ಒಡೆದು
> ಕುಂಬಾರನ ಮನೆ ಎಲ್ಲಿಂದ
> ಕುಂಬಾರ ಗುಂಡನ ಭಕ್ತಿಯ ಕೇಳಿ
> ಶಂಭುಶಂಕರ ಮಾದೇವ
> ಕಂಬಿ ಕಾವಡಿ ನಂದಿಕೋಲು
> ಮುಂಡಾಡುವ ಪಾತರ ಮ್ಯಾಳ
> ಸಾಲ ದೀವಟಿಗೆ ಮಲಬಾರಿ
> ಹೊಯ್ದಾಡು ಪರಿಗಳ ನೋಡ

(ಗದ್ದಗೀಮಠರ ಸಂಕಲನ)

ಕಂಬಿಯನ್ನು ಕರುಣಿಸಿದವ ಮೇಲುಗುಡಿಯ ಶಿಖರದ ಒಡೆಯ ಮಲ್ಲಿಕಾರ್ಜುನ. ಅಷ್ಟು ಪವಿತ್ರವಾದ ಸಾಧನವದು.

ಕಂಬಿಯ ಪದಗಳೆಲ್ಲವೂ ಮಲ್ಲಯ್ಯನನ್ನು ನೆನೆದು ಹಾಡಿದ ಸುಂದರ ಗೀತೆಗಳು.

> ಉದಿಯದಲೆದ್ದು ನೆನೆ ಮನವೆ ಮದನಾರಿ ಶಿವಶರಣರ
> ಕದಳಿಬನದ ಒಡೆಯನ ನೆನೆದೆ ಪದವಿಕಾರ ಚೆನ್ನಮಲ್ಲ
> ಹೊತ್ತಿಲೆದ್ದು ಗುರುವಿನ ಪಾದವ ಆರತಿಯಲಿ ನೀನೆನೆಮನವೆ
> ಮಹಾಮಲ್ಲೇಶನ ಪಾದವ ನೆನೆದರೆ ಚಿತ್ತದ ಪಾಪ ಪರಿಹಾರ

ಭಕ್ತಿತನ್ಮಯರಾಗಿ ಕಂಬಿಯ ಅಯ್ಯಗಳು ತಮ್ಮ ನೆಚ್ಚಿನ ದೈವ ಮಲ್ಲಯ್ಯನನ್ನು ಕುರಿತು ಹಾಡುತ್ತ ಸಾಗುತ್ತಾರೆ. ಅವರನ್ನು ಹಿಂಬಾಲಿಸಿ ಹೊರಟ ಭಕ್ತರೂ ಈ ಹಾಡಿನಿಂದ ಸ್ಫೂರ್ತಿಗೊಳ್ಳುತ್ತಾರೆ.

ಕಂಬಿಯ ಪದಗಳು ಎರಡೆರಡು ಸಾಲಿನ ವಿಶಿಷ್ಟ ಧಾಟಿಯ ಪದ್ಯಗಳಂತೆ ಕಂಡರೂ ಅವೆಲ್ಲವೂ ಜನಪದ ಸಾಹಿತ್ಯದಲ್ಲಿ ಹೇರಳವಾಗಿ ದೊರೆಯುವ ತ್ರಿಪದಿಗಳ ಮುರಿದ ರೂಪದಂತೆ ಕಾಣುತ್ತವೆ. ಕೆಲವನ್ನು ಸುಲಭವಾಗಿಯೇ ತ್ರಿಪದಿಗಳೆಂದು ಹೇಳಿ ಬಿಡಬಹುದು.

ಎತ್ತು ಕುಂಟಲಿ ಸಹಿತವಾಗಿ ಮುತ್ತೈದೇರು ಮೊದಲಾಗಿ
ಎತ್ತಿದ ಕೂಸು ಸಮನಾಗಿ ಬಂದರೆ ಒಪ್ಪಿಸಿಕೋ ನಿಮ್ಮ ಹರಕೆಗಳ ॥

ಎತ್ತು ಕುಂಟಲಿ ಸಹಿತವಾಗಿ ಮುತ್ತೈದೇರು ಮೊದಲಾಗಿ
ಎತ್ತಿದ ಕೂಸು ಸಮನಾಗಿ । ಬಂದರೆ
ಒಪ್ಪಿಸಿಕೊ ನಿಮ್ಮ ಹರಕೆಗಳ

ಕನ್ನಡ ಜನಪದ ಗೀತೆಯಲ್ಲಿ ಎಲ್ಲ ದೈವಗಳಿಗೂ ಕ್ಷೇತ್ರಗಳಿಗೂ ಸಂಬಂಧಪಟ್ಟ ತ್ರಿಪದಿಗಳಲ್ಲೂ ಮಿಡಿದ ಹೃದಯ ಒಂದೇ, ಹರಿದ ಭಕ್ತಿರಸ ಒಂದೇ. ಕಂಬಿಯ ಪದಗಳೂ ಭಕ್ತರ ನಾನಾ ರೀತಿಯ ಹರಕೆ, ಹಂಬಲಗಳನ್ನು ಇತರ ಭಕ್ತಿಗೀತೆ ಗಳಂತೆಯೇ ಚಿತ್ರಿಸುತ್ತವೆ.

ಜಡೆಯ ಮಕ್ಕಳನೆತ್ತಿಕೊಂಡು ತಡೆಯದೆ ಬಂದೆ ಶಿವನೆ
ಒಡೆಯ ಚೆನ್ನ ಬಹುಳ ಮಲ್ಲ ಬಿಡಲಾರೆ ನಿಮ್ಮ ಪಾದಗಳ
(ಕಂಬಿಯ ಪದಗಳು)

ಒಕ್ಕಲು ಬತ್ತೀವಿ ಒಡೆಯ ಬಾಗಿಲು ತೆಗಿಯೊ
ತೊಟ್ಟಿಲು ತತ್ತೀವಿ ತೊಳಗಾಕೆ–ಭೈರುವ
ಶಿಶುವ ತತ್ತೀವಿ ಹೆಸರ್ಪೇಳೊ
(ಶ್ರೀ ಆದಿಚುಂಚನಗಿರಿ ಜನಪದ ಗೀತೆಗಳು)

ಕಂಬಿಯ ಅಯ್ಯಗಳ ಈ ಪದಗಳು ಬಹುಮಟ್ಟಿಗೆ ಸ್ತ್ರೀಯರು ಹಾಡುವ ತ್ರಿಪದಿ ಗಳಿಂದಲೇ ಬಂದುವು ಎಂಬುದಕ್ಕೆ ಮೇಲಿನ ನಿದರ್ಶನಗಳನ್ನು ಗಮನಿಸಬಹುದು. ಮಲ್ಲಯ್ಯನಿಗೆ ಸಂಬಂಧಿಸಿದ ಹಾಡುಗಳನ್ನು ಎಲ್ಲ ಜನಪದ ಮೂಲಗಳಿಂದಲೂ ಇವರು ಸಂಗ್ರಹಿಸಿಕೊಂಡಂತೆ ತೋರುತ್ತದೆ. ಏಕೆಂದರೆ ನಡುನಡುವೆ ನೀತಿ ಪ್ರಧಾನ, ಹಾಸ್ಯಪ್ರಧಾನ ಗೀತೆಗಳೂ ಕಾಣಿಸಿಕೊಳ್ಳುತ್ತವೆ. ಪುರುಷರು ಬಹುಶಃ ಬೇರೆ ಬೇರೆ ಸಂದರ್ಭಗಳಲ್ಲಿ ಹಾಡುವ ಪದಗಳೂ ಕಂಬಿಯ ಪದಗಳಾಗಿ ಸ್ವೀಕೃತವಾಗಿರಬಹುದು.

ಗಂಡಹೆಂಡಿರ ಮನವೆರಡಾದರ ತಪ್ಪದು ತಲೆದಂಡ ಮಲ್ಲಯ್ಯ
ಗಂಡಹೆಂಡಿರ ಮನವೊಂದಾದರ ನಂದಾದೀಪೊ ಮಲ್ಲಯ್ಯ (ನೀತಿ)

ಇಬ್ಬರು ಹೆಂಡರ ಕಾಟಕ್ಕಾಗಿ ಎದ್ದು ಬಂದೆನೊ ಮಲ್ಲಯ್ಯ
ಇಬ್ಬರೊಳಗೆ ಒಬ್ಬಾಕಿ ಹೋದರ ಗುಗ್ಗಳ ಹೊರುವೆ ಮಲ್ಲಯ್ಯ (ಹಾಸ್ಯ)

ಧಾಟಿ ಮತ್ತು ವಸ್ತು ವಿನ್ಯಾಸದಲ್ಲಿ ಇಲ್ಲಿನ ಕೆಲವು ಹಾಡುಗಳು ಕೋಲಾಟದ ಗತ್ತಿಗೆ ಒಗ್ಗುತ್ತವೆ. ಗದ್ದಗೀಮಠರು ಸಂಗ್ರಹಿಸಿಕೊಟ್ಟಿರುವ ಕಂಬಿಯ ಹಾಡುಗಳಲ್ಲಿ ಹಲವು ಬಗೆಯ ವೈವಿಧ್ಯಮಯ ಹತ್ತು ಗೀತೆಗಳು ಕಾಣಬರುತ್ತವೆ. ಉರ್ದುಮಿಶ್ರಿತ ಕಂಬಿಯ ಹಾಡುಗಳು ಇಲ್ಲಿ ಗಮನಾರ್ಹ.

ಬೇಬಿಸ್ಮಿಲ್ಲ ಬೇಬಿಸ್ಮಿಲ್ಲಾ ಲಗು ಬಾರೊ ಪರುವುತಮಲ್ಲ
ಕ್ಯಾಹೂವ ಆಯಿತು ಅಕ್ಕೇಲ ನಿಮ್ಮ ಹೊರ್ತು ಯಾರ್ಕ್ಯಾರಿಲ್ಲ.

ಕಂಬಿಯ ಅಯ್ಯಗಳು ವಿಧರ್ಮೀಯರ ಕೈಯಿಂದ ಪಾರಾಗಿ ತಮ್ಮ ಯಾತ್ರೆಯನ್ನು ಸುಗಮಗೊಳಿಸಿಕೊಳ್ಳಲು ಇಂಥ ರಚನೆಗಳನ್ನು ಮಾಡಿಕೊಂಡಿರಬೇಕೆಂದು ಗದ್ದಗೀ ಮಠರು ಊಹಿಸುತ್ತಾರೆ. ತಮ್ಮನ್ನು ತಡೆದು ಪ್ರಶ್ನಿಸುವವರಿಗೆ ಉರ್ದುಮಿಶ್ರಿತ ಹಾಡುಗಳನ್ನು ಹೇಳಿ ಅವರ ಧರ್ಮದ ಬಗ್ಗೆ ತಮಗಿರುವ ಸಹಿಷ್ಣುತೆಯನ್ನು ಶ್ರುತಪಡಿಸಿ ಎಂಥ ಅಡಚಣೆಗಳಿಂದಲೂ ಪಾರಾಗಿಹೋಗುತ್ತಿದ್ದರು ಎಂಬ ಈ ಊಹೆ ಸಮರ್ಥನೀಯವಾಗಿದೆ.

ಬಿರುದಾವಳಿಗಳೂ ಇತರ ಬಗೆಯ ಹಾಡುಗಳೂ ಕಂಬಿಯ ಪದಗಳಲ್ಲಿ ಬರುತ್ತವೆ. ಇವುಗಳ ವ್ಯಾಪಕವಾದ ಸಂಗ್ರಹ, ಅಧ್ಯಯನ ಕನ್ನಡದಲ್ಲಿ ಇನ್ನೂ ಆಗಬೇಕಾಗಿದೆ.

(ಜಿ.ಎಸ್.ಪಿ. ; ಸಿ.ಕೆ.ಎ.)

**ಕಂಬುಜ :** ಈಗಿನ ಕಾಂಬೋಡಿಯದ ಪ್ರದೇಶದಲ್ಲಿ ಪ್ರಾಚೀನ ಭಾರತೀಯರು ಸ್ಥಾಪಿಸಿದ್ದ ಹಿಂದೂ ರಾಜ್ಯ. ಕಂಬುಜದ ಇತಿಹಾಸ, ಪೂರ್ವೇತಿಹಾಸ, ವಾಸ್ತುಶಿಲ್ಪ ಮತ್ತು ಶಾಸನಗಳನ್ನು ಕುರಿತ ಲೇಖನಗಳನ್ನು ಮುಂದೆ ಕೊಡಲಾಗಿದೆ. ಕಾಂಬೋಡಿಯದ ಭೂವಿವರಣೆ, ಅದರ ಈಚಿನ ಇತಿಹಾಸ ಮುಂತಾದವಕ್ಕೆ ಕಾಂಬೋಡಿಯವನ್ನು ಕುರಿತ ಲೇಖನಗಳನ್ನು ನೋಡಿ.

*

**ಕಂಬುಜದ ಇತಿಹಾಸ :** ಕಂಬು ಸ್ವಾಯಂಭುವನೆಂಬ ಭಾರತೀಯ ಶಿವ ಭಕ್ತನೊಬ್ಬ ಪತ್ನಿಯ ಮರಣದಿಂದ ದುಃಖಿತನಾಗಿ, ತನ್ನ ದೇಶವನ್ನು ಬಿಟ್ಟು ಕಂಬುಜ ದೇಶ ತಲಪಿದ. ತನ್ನ ಜೀವನವನ್ನು ಕೊನೆಗಾಣಿಸಿಕೊಳ್ಳಬೇಕೆಂದು ಯೋಚಿಸು ತ್ತಿರುವಾಗ ಒಂದು ಸರ್ಪ ಅವನಿಗೆ ಬುದ್ಧಿವಾದ ಹೇಳಿತು. ಅದರ ಮಾತಿನಂತೆ ಕಂಬು ಆತ್ಮಹತ್ಯೆ ಮಾಡಿಕೊಳ್ಳದೆ ಅಲ್ಲಿಯೇ ಇದ್ದು ಕೊನೆಗೆ ರಾಜನಾದ. ಆದ್ದ ರಿಂದ ಈ ದೇಶಕ್ಕೆ ಕಂಬುಜ ಎಂಬ ಹೆಸರು ಬಂತೆಂದು ಒಂದು ಐತಿಹ್ಯವಿದೆ. ಮತ್ತೊಂದು ಕಥೆಯ ಪ್ರಕಾರ ಕೌಂಡಿನ್ಯನೆಂಬ ಬ್ರಾಹ್ಮಣ ದೇವರ ಆಜ್ಞೆಯಂತೆ ಆ ರಾಜ್ಯಕ್ಕೆ ಹೋಗಿ ಅಲ್ಲಿಯ ರಾಣಿಯನ್ನು ಸೋಲಿಸಿ ತಾನೇ ರಾಜನಾದನೆಂದು ತಿಳಿ ಯುತ್ತದೆ. ಒಟ್ಟಿನಲ್ಲಿ ಕ್ರಿ.ಶ. 1ನೆಯ ಶತಮಾನದ ಹೊತ್ತಿಗೆ ಭಾರತೀಯರು ಕಂಬುಜಕ್ಕೆ ಹೋಗಿ ಅಲ್ಲಿ ರಾಜ್ಯ ಕಟ್ಟಿದರೆಂಬುದು ಖಚಿತ.

ಈ ದೇಶವನ್ನು ಚೀನೀಯರು ಮೊಟ್ಟಮೊದಲು ಫೂನಾನ್ ಎಂದು ಕರೆದರು. ಹ್ಯುಯೆನ್‌ತೀನ್ ಅಥವಾ ಹ್ಯುಯೆನ್‌ಚೆನ್ ಎಂಬ ಭಾರತೀಯನೇ ಫೂನಾನಿನ ಮೊದ ಲನೆಯ ದೊರೆ. ಫೂನಾನಿನ ಅನಾಗರಿಕ ಜನ ಉಡುಗೆ ತೊಡುಗೆಗಳನ್ನು ಹಾಕಿ ಕೊಳ್ಳುವಂತೆ ಮಾಡಿದ ಕೀರ್ತಿ ಇವನಿಗೆ ಸೇರುತ್ತದೆ. ಸುಮಾರು 200ರಲ್ಲಿ ಆಳಿದ ಫಾನ್ ಚೆಮಾನ್ ಫೂನಾನಿನ ಬೆಳೆವಣಿಗೆಗೆ ಕಾರಣನಾದ ದೊರೆ. ಸಯಾಂ, ಲಾವೋಸ್, ಮಲಯ ಪರ್ಯಾಯದ್ವೀಪ ಮುಂತಾದವನ್ನು ಈತ ಆಳುತ್ತಿದ್ದ. ಅನಂತರ ಆಳಿದ ಫಾನ್‌ಚೆನ್ ದೊರೆ ಚೀನದೊಡನೆ ರಾಜತಾಂತ್ರಿಕ ಸಂಬಂಧಗಳನ್ನು ಹೊಂದಿದ್ದ. ಸುಮಾರು 5ನೆಯ ಶತಮಾನದ ಆದಿಭಾಗದಲ್ಲಿ ಇಂದ್ರವರ್ಮನೆಂಬ ರಾಜ ಆಳಿದ. ಅನಂತರ ಆಳಿದ ಜಯವರ್ಮ ಚೀನದೊಡನೆ ಮೈತ್ರಿ ಬೆಳೆಸಿದ. ಈತ ಶೈವಮತಾವಲಂಬಿ. ಇವನ ಮಗನಾದ ರುದ್ರವರ್ಮ 514ರಲ್ಲಿ ರಾಜನಾದ. ಇವನ ಅನಂತರ ಫೂನಾನ್ ರಾಜ್ಯದ ಪ್ರಾಮುಖ್ಯ ಕಳೆದುಹೋಯಿತು.

7ನೆಯ ಶತಮಾನದಿಂದ ಈ ರಾಜ್ಯ ಕಂಬುಜವಂಶದ ಅರಸರ ಆಳ್ವಿಕೆಗೆ ಒಳ ಪಟ್ಟು, 14ನೆಯ ಶತಮಾನದ ವರೆಗೆ ಅವರ ಆಳ್ವಿಕೆಗೆ ಸೇರಿತ್ತು. ಶ್ರುತವರ್ಮನೇ ಈ ವಂಶದಲ್ಲಿ ನಮಗೆ ತಿಳಿದಿರುವ ಪ್ರಾಚೀನತಮ ದೊರೆ. ಇವನ ಮಗ ಶ್ರೇಷ್ಠ ವರ್ಮ ಶ್ರೇಷ್ಠಪುರವೆಂಬ ರಾಜಧಾನಿಯನ್ನು ಸ್ಥಾಪಿಸಿ ಅಲ್ಲಿ ಭದ್ರೇಶ್ವರ ಲಿಂಗವನ್ನು ಪ್ರತಿಷ್ಠಿಸಿದ. ಅನಂತರ ಈ ರಾಜ್ಯ ಭವವರ್ಮನ ವಂಶಸ್ಥರಿಗೆ ಸೇರಿತು. ಭವಪುರ ಇವನ ರಾಜಧಾನಿ. ಇವನ ಮಗನೇ ಮಹೇಂದ್ರವರ್ಮ. ಈತ 616ರಲ್ಲಿ ಮರಣ ಹೊಂದಲು ಇವನ ಮಗ ಈಶಾನವರ್ಮ ರಾಜನಾದ. ಇವನೇ ಈಶಾನಪುರದ (ಈಗಿನ ಸಂಬೊರ್ ಪ್ರೆಕುಕ್) ನಿರ್ಮಾತೃ. ಇವನ ಅನಂತರ ಎರಡನೆಯ ಭವವರ್ಮ, ಜಯವರ್ಮ ಮುಂತಾದ ರಾಜರು ಆಳಿದರೂ ಅವರ ಆಳ್ವಿಕೆಯಲ್ಲಿ ಗಮನಾರ್ಹವಾದ ಅಂಶಗಳೇನೂ ಇಲ್ಲ.

ಎರಡನೆಯ ಜಯವರ್ಮ 802ರಲ್ಲಿ ಸ್ವತಂತ್ರವಾಗಿ ಆಳಲು ಪ್ರಾರಂಭಿಸಿದ. ಈತ ಭಾರತದಿಂದ ಬಂದಿದ್ದ ಹಿರಣ್ಯದಾಮನೆಂಬ ಬ್ರಾಹ್ಮಣನನ್ನು ಆಹ್ವಾನಿಸಿ. ದೇವರಾಜಲಿಂಗ ಉಪಾಸನೆಯೆಂಬ ಧಾರ್ಮಿಕ ಕಾರ್ಯವನ್ನು ಪ್ರಾರಂಭಿಸಿದ. ಪರ್ವತಗಳಲ್ಲಿ ಈಶ್ವರಲಿಂಗಗಳನ್ನು ಸ್ಥಾಪಿಸುವುದೇ ಇದರ ಮೂಲತತ್ತ್ವ. ಇದೇ ಆಂಗ್ಕೋರ್‌ವಾಟ್‌ನಂಥ ಶಿಲ್ಪಕಲಾ ಕೃತಿಗಳಿಗೆ ತಳಹದಿಯಾಯಿತು. ಈತ ಇಂದ್ರ ಪುರ, ಹರಿಹರಾಲಯ, ಅಮರೇಂದ್ರಪುರ, ಮಹೇಂದ್ರಪರ್ವತ ಮುಂತಾದ ನಗರ ಗಳನ್ನು ಸ್ಥಾಪಿಸಿದ. ಕಂಬುಜದ ಚರಿತ್ರೆಯಲ್ಲಿ ಈತನೇ ಮೊದಲನೆಯ ಶ್ರೇಷ್ಠದೊರೆ. ಈತ 850ರಲ್ಲಿ ಮರಣಹೊಂದಲು ಇವನ ಮಗ ಮೂರನೆಯ ಜಯವರ್ಮ ರಾಜ ನಾದ. ಇವನ ಮರಣಾನಂತರ ಇಂದ್ರವರ್ಮನ ವಂಶಸ್ಥರು ಕಂಬುಜದ ರಾಜ ರಾದರು. 877ರಲ್ಲಿ ರಾಜನಾದ ಇಂದ್ರವರ್ಮ ಜಾವ ಚಂಪಗಳ ಮೇಲೆ ಆಧಿಪತ್ಯ ಹೊಂದಿದ್ದ. ಅನಂತರ 889ರಲ್ಲಿ ಯಶೋವರ್ಮ ರಾಜನಾದ. ಇವನ ಕಾಲದಲ್ಲಿ ಸಂಸ್ಕೃತ ಸಾಹಿತ್ಯ ಕಂಬುಜದಲ್ಲಿ ಉಚ್ಛ್ರಾಯಸ್ಥಿತಿಯಲ್ಲಿತ್ತು. ಈತ ಅನೇಕ ಆಶ್ರಮ ಗಳನ್ನು ನಿರ್ಮಿಸಿ, ಕಂಬುಜದಲ್ಲಿ ಹಿಂದೂಧರ್ಮ ಬೆಳೆಯಲು ಸಹಾಯಕನಾದ. ಈತ ಆಂಗ್ಕೋರಿನಿಂದ ಯಶೋಧರಪುರಕ್ಕೆ ರಾಜಧಾನಿಯನ್ನು ಬದಲಾಯಿಸಿದ. ಅನೇಕ ದೇವಾಲಯಗಳನ್ನು ಯಶೋಧರಪುರದಲ್ಲಿ ನಿರ್ಮಿಸಿದ ಯಶೋವರ್ಮ 900ರಲ್ಲಿ ಮರಣಹೊಂದಿದ. ಸ್ವಲ್ಪಕಾಲದ ಅನಂತರ ಆಳಿದ ನಾಲ್ಕನೆಯ ಜಯವರ್ಮ ಕೊಹ್‌ಕೆರ್ ಎಂಬಲ್ಲಿಗೆ ರಾಜಧಾನಿಯನ್ನು ಬದಲಾಯಿಸಿ ಅನೇಕ ದೇವಾಲಯಗಳನ್ನು ನಿರ್ಮಿಸಿ ಪ್ರಸಿದ್ಧನಾದ. 941ರಲ್ಲಿ ಈತ ಮರಣಹೊಂದಲು ರಾಜೇಂದ್ರವರ್ಮ (944–968) ದೊರೆಯಾದ. ಇವನೂ ಅನೇಕ ದೇವಾಲಯಗಳನ್ನು ಕಟ್ಟಿಸಿ ಪ್ರಸಿದ್ಧ ನಾಗಿದ್ದಾನೆ.

ಅನಂತರ ಆಳಿದ ರಾಜರುಗಳಲ್ಲಿ ಮುಖ್ಯರಾದವರು ಮೊದಲನೆಯ ಮತ್ತು ಎರಡ ನೆಯ ಸೂರ್ಯವರ್ಮ. ಮೊದಲನೆಯ ಸೂರ್ಯವರ್ಮ (1002–1050) ಬರ್ಮ ಮತ್ತು ಸಯಾಂಗಳನ್ನು ಗೆದ್ದು ತನ್ನ ರಾಜ್ಯಕ್ಕೆ ಸೇರಿಸಿಕೊಂಡ. ಈತ ಕಾವ್ಯ, ಭಾಷ್ಯ, ಧರ್ಮಶಾಸ್ತ್ರ ಮತ್ತು ಷಡ್ದರ್ಶನಗಳಲ್ಲಿ ಪಂಡಿತ. ಬೌದ್ಧ ಮತಾವಲಂಬಿಯಾಗಿದ್ದರೂ ಶೈವ ಮತ್ತು ವೈಷ್ಣವ ದೇವಾಲಯಗಳನ್ನು ನಿರ್ಮಿಸಿದ. ಇವನ ಅನಂತರ ಎರಡನೆಯ ಉದಯಾದಿತ್ಯವರ್ಮ, ಮೂರನೆಯ ಹರ್ಷವರ್ಮ

ಮತ್ತು ಆರನೆಯ ಜಯವರ್ಮ ಕ್ರಮವಾಗಿ ಆಳಿದರು. ಅನಂತರ, ಎಂದರೆ 1113ರಲ್ಲಿ ಎರಡನೆಯ ಸೂರ್ಯವರ್ಮ ರಾಜನಾದ. ಕೆಳ ಬರ್ಮ ಮತ್ತು ಮಲಯ ಪರ್ಯಾಯದ್ವೀಪಗಳು ಇವನ ಆಳ್ವಿಕೆಗೆ ಸೇರಿದ್ದುವು. ಚೀನೀರಾಜ ಈತನನ್ನು ಗೌರವಿಸಿ ರಾಯಭಾರಿಗಳನ್ನು ಕಳುಹಿಸಿದ್ದ. ತನ್ನ ರಾಜಗುರುವಾದ ದಿವಾಕರ ಪಂಡಿತನ ನೇತೃತ್ವದಲ್ಲಿ ಈತ ಕೋಟಿಹೋಮ, ಲಕ್ಷಹೋಮ, ಮಹಾಹೋಮ ಮುಂತಾದ ಯಾಗಗಳನ್ನು ಮಾಡಿದ. ಆಂಗ್ಕೋರ್‌ವಾಟ್ ವಾಸ್ತುಶಿಲ್ಪಕೃತಿಯನ್ನು ನಿರ್ಮಿಸಿ ಎರಡನೆಯ ಸೂರ್ಯವರ್ಮ ಇತಿಹಾಸದಲ್ಲಿ ಅಮರನಾಗಿದ್ದಾನೆ. 1145ರಲ್ಲಿ ಈತ ಕಾಲವಾದಾಗ ಧರಣೀಂದ್ರವರ್ಮ ರಾಜನಾದ.

ಅನಂತರ ಕಂಬುಜದಲ್ಲಿ ಒಳಜಗಳಗಳು ಪ್ರಾರಂಭವಾದುವು. ಇವುಗಳನ್ನೆಲ್ಲ ಅಡಗಿಸಿ ಕಂಬುಜವನ್ನು ಒಟ್ಟುಗೂಡಿಸಿದ ಕೀರ್ತಿ ಏಳನೆಯ ಜಯವರ್ಮನಿಗೆ (1181–1218) ಸೇರುತ್ತದೆ. ಇವನೇ ಕಂಬುಜದ ಕೊನೆಯ ಶ್ರೇಷ್ಠ ದೊರೆ. ಕಂಬುಜಕ್ಕೆ ತೊಂದರೆ ಕೊಡುತ್ತಿದ್ದ ಚಂಪರಾಜ್ಯವನ್ನು ಈತ ಹತ್ತಿಕ್ಕಿದ. ಅದು ಕಂಬುಜದ ಅಧೀನಕ್ಕೊಳಪಟ್ಟಿತು. ಈತ ಅನ್ನಾಂ ರಾಜ್ಯದ ಮೇಲೂ ಅನೇಕ ಯುದ್ಧಗಳನ್ನು ಮಾಡಿದ. ಇವನ ರಾಜ್ಯ ಬಹಳ ವಿಸ್ತಾರವಾಗಿದ್ದು, ಉತ್ತರ ಸಯಾಂ, ಕೆಳ ಬರ್ಮ, ಟಾಂಕಿಂಗ್, ಮಲಯ ಪರ್ಯಾಯದ್ವೀಪ ಇವನ್ನೆಲ್ಲ ಒಳಗೊಂಡಿತ್ತು. ಜಯವರ್ಮ ಶೂರನೂ ಧೀರನೂ ಮಾತ್ರವಲ್ಲದೆ ಕಲೆಗಳಿಗೆ ಆಶ್ರಯದಾತನೂ ಆಗಿದ್ದ. ಆಂಗ್ಕೋರ್ ಥೊಂ ಎಂಬ ನಗರವನ್ನು ನಿರ್ಮಿಸಿ ವಾಸ್ತುಶಿಲ್ಪ ಇತಿಹಾಸದಲ್ಲಿ ಚಿರಸ್ಥಾಯಿಯಾಗಿದ್ದಾನೆ. ಬಯಾನ್ ದೇವಾಲಯದ ಗೋಪುರಗಳಲ್ಲಿರುವ ಲೋಕೇಶ್ವರನ ಬೃಹದಾಕಾರದ ಶಿಲ್ಪಗಳು ಇಂದಿಗೂ ಅಳಿಯದೆ ಉಳಿದಿವೆ. ಈತ ಅನೇಕ ಔಷಧಾಲಯಗಳನ್ನೂ ಆಶ್ರಮಗಳನ್ನೂ ಗ್ರಂಥಾಲಯಗಳನ್ನೂ ನೀರಾವರಿ ವ್ಯವಸ್ಥೆಗಳನ್ನೂ ನಿರ್ಮಿಸಿದ. ಚುಟಾಕುವಾನನೆಂಬ ಚೀನೀ ಚರಿತ್ರಕಾರ ಏಳನೆಯ ಜಯವರ್ಮನ ಕಾಲದಲ್ಲಿ ಕಂಬುಜದಲ್ಲಿ ಸಂಚಾರ ಮಾಡಿ, ತಾನು ಕಂಡ ವಿಷಯಗಳನ್ನೆಲ್ಲ ಬರೆದಿದ್ದಾನೆ. ಇದರಿಂದ ಜಯವರ್ಮನ ಕಾಲದಲ್ಲಿ ಕಂಬುಜ ದೇಶ ರಾಜಕೀಯ ಮತ್ತು ಸಾಂಸ್ಕೃತಿಕ ರಂಗಗಳಲ್ಲಿ ವಿಶೇಷ ಮಹತ್ತ್ವಸ್ಥಾನ ಪಡೆದಿತ್ತೆಂದು ಗೊತ್ತಾಗುತ್ತದೆ.

ಏಳನೆಯ ಜಯವರ್ಮನ ಮರಣಾನಂತರ ಕಂಬುಜದಲ್ಲಿ ಸಮರ್ಥ ರಾಜರ ಅಭಾವದಿಂದ ಒಳಜಗಳಗಳು ಪ್ರಾರಂಭವಾದುವು. ಸಾಲದುದಕ್ಕೆ ಮಂಗೋಲ್ ಮುಖಂಡ ಕುಬ್ಲಾಖಾನನಿಗೆ 1285ರಲ್ಲಿ ಕಂಬುಜ ಶರಣಾಗತವಾಯಿತು. 1327ರಲ್ಲಿ ಆಳುತ್ತಿದ್ದ ಜಯವರ್ಮ ಪರಮೇಶ್ವರ ಕಂಬುಜದ ಹಿಂದೂ ರಾಜ್ಯದ ಕೊನೆಯ ದೊರೆ. ಅನಂತರ ಥೈ ರಾಜ್ಯ ರಾಮ ಕಮ್ಹೆಂಗನ ನೇತೃತ್ವದಲ್ಲಿ ಕಂಬುಜದ ಮೇಲೆ ದಾಳಿ ನಡೆಸಿತು. ಇತ್ತಕಡೆ ಅನ್ನಾಂ ರಾಜ್ಯ ಬಲಯುತವಾಗುತ್ತಿತ್ತು. ಥೈ ಮತ್ತು ಅನ್ನಾಂ ರಾಜ್ಯಗಳ ರಾಜ್ಯವಿಸ್ತರಣೆಯಿಂದಾಗಿ ಕಂಬುಜ ನಾಶವಾಯಿತು.

ಒಂದನೆಯ ಶತಮಾನದಿಂದ 14ನೆಯ ಶತಮಾನದ ವರೆಗಿನ ಕಂಬುಜದ ಚರಿತ್ರೆಯಲ್ಲಿ ಭಾರತೀಯ ಸಂಸ್ಕೃತಿಯ ಪ್ರಭಾವ ವಿಶೇಷವಾಗಿ ಕಾಣುತ್ತದೆ. ಇಲ್ಲಿಯ ರಾಜರು ಕೌಟಿಲ್ಯ, ಮನು ಮುಂತಾದವರ ಗ್ರಂಥಗಳನ್ನೇ ಮಾದರಿಯಾಗಿಟ್ಟುಕೊಂಡು ರಾಜ್ಯವಾಳುತ್ತಿದ್ದರು. ರಾಜ ದೈವಾಂಶಸಂಭೂತನೆಂಬ ಭಾವನೆ ಬೇರೂರಿತ್ತು. ರಾಮರಾಜ್ಯಕ್ಕೆ ಸಮನಾಗಿ ತಮ್ಮ ರಾಜ್ಯವಿರಬೇಕೆಂದು ಅವರ ಅಪೇಕ್ಷೆ. ಪ್ರಾಚೀನ ಕಂಬುಜದ ಸಾಮಾಜಿಕ ಜೀವನದಲ್ಲಿ ವರ್ಣಾಶ್ರಮಧರ್ಮಗಳು ಮಹತ್ತ್ವದ ಪಾತ್ರ ವಹಿಸಿದ್ದುವು. ಪುರಾಣೋಕ್ತ ಹಿಂದೂ ಧರ್ಮ ಚೆನ್ನಾಗಿ ಬೇರೂರಿತ್ತು. ಶೈವ ಮತ್ತು ವೈಷ್ಣವ ಧರ್ಮಗಳು ವಿಶೇಷವಾಗಿ ಬಳಕೆಯಲ್ಲಿದ್ದುವು. ವಿಷ್ಣು, ಶಿವ, ಲಕ್ಷ್ಮಿ, ದುರ್ಗಾ, ಸರಸ್ವತಿ, ಅಗ್ನಿ ಮುಂತಾದ ದೇವತೆಗಳ ಸ್ತೋತ್ರಗಳು ಶಾಸನಗಳಲ್ಲಿ ಕಾಣಸಿಗುತ್ತವೆ. ವೇದ, ವೇದಾಂಗ, ಉಪನಿಷತ್ತು, ಧರ್ಮಶಾಸ್ತ್ರ, ಮುಂತಾದವುಗಳಲ್ಲಿ ಪರಿಣತರಾದ ಅನೇಕ ಪಂಡಿತರ ಹೆಸರು ಶಾಸನಗಳಲ್ಲಿ ಕಾಣಬರುತ್ತವೆ. ರಾಮಾಯಣ, ಮಹಾಭಾರತ ಮತ್ತು ಇತರ ಪುರಾಣಗಳ ವಾಚನ ಮತ್ತು ಶ್ರವಣ ಕಂಬುಜದ ಆಶ್ರಮಗಳಲ್ಲಿ ದಿನದಿನವೂ ನಡೆಯುತ್ತಿದ್ದುವು. ಆಶ್ರಮಗಳನ್ನು ನಿರ್ಮಿಸುವುದು ಮತ್ತು ಅವಕ್ಕೆ ದತ್ತಿಗಳನ್ನು ಬಿಡುವುದು ಮುಖ್ಯ ಧಾರ್ಮಿಕ ಕಾರ್ಯಗಳಾಗಿದ್ದುವು. 9ನೆಯ ಶತಮಾನದಿಂದ ಕಂಬುಜದಲ್ಲಿ ಸಂಸ್ಕೃತ ಭಾಷೆ ಉನ್ನತ ಮಟ್ಟದಲ್ಲಿತ್ತು. ಈ ಕಾಲಕ್ಕೆ ಸೇರಿದ ನೂರಾರು ಸಂಸ್ಕೃತ ಶಾಸನಗಳು ಬೆಳಕಿಗೆ ಬಂದಿವೆ. ಕೆಲವಂತೂ ಉತ್ತಮ ಕಾವ್ಯಗಳಾಗಿವೆ. ಸಂಸ್ಕೃತದ ಎಲ್ಲ ಛಂದಸ್ಸುಗಳನ್ನೂ ಕಂಬುಜದ ಕವಿಗಳು ಸರಳವಾಗಿ ಬಳಸಿದ್ದಾರೆ. ಪಾಣಿನಿಯ ಅಷ್ಟಾಧ್ಯಾಯಿ, ಮನುಸ್ಮೃತಿ, ರಾಮಾಯಣ, ಪತಂಜಲಿಯ ಮಹಾಭಾಷ್ಯ, ವಾತ್ಸಾಯನನ ಕಾಮಸೂತ್ರ, ಹರಿವಂಶ ಮುಂತಾದ ಗ್ರಂಥಗಳು ಜನಾನುರಾಗ ಗಳಿಸಿದ್ದುವು. ಕಾಳಿದಾಸ ಶ್ರೇಷ್ಠ ಕವಿಯೆಂದು ಪರಿಗಣಿತನಾಗಿದ್ದ. ಕಂಬುಜದ ಅನೇಕ ಶಾಸನಗಳಲ್ಲಿ ರಘುವಂಶದ ನಾಲ್ಕು ಶ್ಲೋಕಗಳು ಉದಾಹೃತವಾಗಿವೆ. ಪ್ರವರಸೇನ, ಮಯೂರ, ಗುಣಾಢ್ಯ ಮುಂತಾದವರ ಹೆಸರುಗಳು ಶಾಸನದಲ್ಲಿ ಬರುತ್ತವೆ. ವಾಸ್ತುಶಿಲ್ಪ ಕಲೆಯಲ್ಲಂತೂ ಭಾರತೀಯ ಮಾರ್ಗದ ಪೂರ್ಣ ಛಾಯೆಯೇ ಎದ್ದು ಕಾಣುತ್ತದೆ. ಆಂಗ್ಕೋರ್‌ವಾಟ್ ಆಂಗ್ಕೋರ್ ಥೊಮ್‌ನಲ್ಲಿರುವಂಥ ಶಿಲ್ಪಗಳು ನಿರ್ಮಾಣವಾದುದು ಕಂಬುಜದಲ್ಲಿ. ಇವೆಲ್ಲವೂ ಅದು ಭಾರತದೊಡನೆ ಸಾಧಿಸಿದ ಸಖ್ಯದ ಫಲ. (ಎ.ವಿ.ಎನ್., ಕೆ.ಪಿ.ಎ.)

**ಕಂಬುಜದ ಪೂರ್ವೇತಿಹಾಸ:** ಕಂಬುಜದಲ್ಲಿ ಪೂರ್ವ ಶಿಲಾಯುಗ ಸಂಸ್ಕೃತಿಗಳಿದ್ದುದಕ್ಕೆ ಆಧಾರಗಳು ದೊರಕಿಲ್ಲ. ಅತ್ಯಂತ ಪುರಾತನ ಅವಶೇಷಗಳು ನವ ಶಿಲಾಯುಗದ ಟಾನ್ಲೆಸಾಪ್ ಪ್ರದೇಶದಿಂದ ಉತ್ತರದಲ್ಲಿ ವಿಯೆಟ್‌ನಾಂ ವರೆಗೂ ಹಬ್ಬಿರುವ ಸಾಮ್ರಾಂಗ್‌ಸನ್ ಸಂಸ್ಕೃತಿಗೆ ಸೇರಿವೆ. ಈವರೆಗೂ ಭೂಶೋಧನೆಗಳಲ್ಲಿ ವಿವಿಧ ಮಟ್ಟಗಳ ಪರಸ್ಪರ ಸಂಬಂಧ ತಿಳಿದಿಲ್ಲವಾದ್ದರಿಂದ ಖಚಿತವಾಗಿ ಕಾಲನಿರ್ಣಯ ಮಾಡಲಾಗಿಲ್ಲ. ಭುಜಗಳುಳ್ಳ ಗುದ್ದಲಿ (ಷೌಲ್ಡರ್ಡ್ ಹೋ), ಕೊಡಲಿ, ಬಾಚಿ, ಉಳಿ, ಸುತ್ತಿಗೆ, ಅರೆಯುವ ಕಲ್ಲು, ಚಕ್ರ, ಕೊಳವಿ ಮುಂತಾದವು ಆ ಕಾಲದ ಮುಖ್ಯ ಕಲ್ಲಿನ ಉಪಕರಣಗಳು. ಕೆಲವು ಚಾಕುಗಳು, ಹೆರೆಯುವ ಆಯುಧ. ಈಟಿನಾಳ, ಶಂಖದ ಅಲಂಕರಣ ವಸ್ತುಗಳು ಮತ್ತು ಕಲ್ಲಿನ ಗುಂಡು ಮಣಿಗಳು ವಿರಳವಾಗಿ ದೊರಕಿವೆ. ಮಡಕೆಗಳು ಕೈಯಿಂದ ಮಾಡಿದವಾಗಿದ್ದು ಹಗ್ಗದ ಅಥವಾ ಕೊರೆದ ಚಿತ್ರಗಳಿಂದ ಅಲಂಕರಿಸಲ್ಪಟ್ಟಿರುತ್ತಿತ್ತು. ಈ ರೀತಿಯ ಮಡಕೆಗಳು ಆಗ್ನೇಯ ಚೀನದಲ್ಲಿ ಬಳಕೆಯಲ್ಲಿದ್ದುವು. ಕಂಚನ್ನು ತಯಾರಿಸಲು ಉಪಯೋಗಿಸುತ್ತಿದ್ದ ಮೂಸೆಗಳು ದೊರಕಿರುವುದರಿಂದ ಸ್ವಲ್ಪ ಮಟ್ಟಿಗೆ ಕಂಚನ್ನು ಈ ಜನ ಉತ್ಪಾದಿಸುತ್ತಿದ್ದಿರಬಹುದು. ಒಟ್ಟಿನಲ್ಲಿ ಉತ್ತರ ಭಾಗಗಳಲ್ಲಿ ಕಂಡುಬಂದಿರುವ ಡಾಂಗ್ಸನ್ ಸಂಸ್ಕೃತಿಗಿಂತಲೂ ಇದು ಹಳತೆಂದು ಹೇಳಬಹುದು.

ಅನಂತರದ ಸಂಸ್ಕೃತಿಗಳ ವಿಷಯ ಹೆಚ್ಚಾಗಿ ತಿಳಿದುಬಂದಿಲ್ಲವಾದರೂ ಐತಿಹಾಸಿಕ ಯುಗದ ನಾಗರಿಕತೆ ಈ ಸಂಸ್ಕೃತಿಯಿಂದ ಉತ್ತೇಜಿತವಾಯಿತೆಂಬುದು ಖಚಿತ. ಈ ಕಾಲದಲ್ಲಿ ಪಶ್ಚಿಮದ ನವಶಿಲಾಯುಗ ಮತ್ತು ಅನಂತರದ ಸಂಸ್ಕೃತಿಗಳ ಪ್ರಭಾವ ಹಬ್ಬಿತು. ಅನೇಕ ನೀರಾವರಿ ಕಾಲುವೆಗಳೂ ಜಲಸಾರಿಗೆ ಮಾರ್ಗಗಳೂ ವಿಶಾಲವಾದ ವಸಾಹತುಗಳ ಸಮೀಪದಲ್ಲಿ ನಿರ್ಮಿತವಾಗಿದ್ದುವು. ಇಂಥ ವಸಾಹತುಗಳಲ್ಲಿ ಓಕ್–ಇಯೊ ಮುಖ್ಯವಾದುದು. ಸಮುದ್ರ ತೀರದಿಂದ 15 ಮೈಲಿ ದೂರವಿರುವ ಇಲ್ಲಿಗೆ ರೇವುಪಟ್ಟಣವಾದ ಟಾ–ಕಿಯೊವಿನಿಂದ ಜಲಸಾರಿಗೆ ಮಾರ್ಗವಿತ್ತು. ಬಹುಶಃ ಈ ನೆಲೆಗಳು ಪುರಾತನ ಫೂನಾನಿನ ನೆಲೆಗಳಿದ್ದಿರಬೇಕು. ದಕ್ಷಿಣ ಏಷ್ಯದೊಡನೆ ವ್ಯಾಪಾರ ಸಂಪರ್ಕವಿದ್ದುದಾಗಿ ಓಕ್–ಇಯೊವಿನ ಭೂಶೋಧನೆಗಳಿಂದ ತಿಳಿದುಬರುತ್ತದೆ. ಬೃಹತ್ ಶಿಲಾ ಸಮಾಧಿ ಸಂಸ್ಕೃತಿಯಲ್ಲಿಯ ಕಲ್ಲುಕೆಲಸದ ರೀತಿಗಳು ಭಾರತದಿಂದ ಬಂದಂತೆಯೂ ಕಂಡುಬರುತ್ತದೆ. ಈ ಕಾಲದಲ್ಲಿ ಕಬ್ಬಿಣದ ಉಪಯೋಗ ಬಳಕೆಗೆ ಬಂತು. 2 ನೆಯ ಶತಮಾನದಿಂದ 4ನೆಯ ಶತಮಾನದ ವರೆಗಿನ ಕಾಲದ ಮುದ್ರೆಗಳಿಂದ ಇಲ್ಲಿ ಅನೇಕ ಚೀನೀ ಮತ್ತು ಭಾರತೀಯ ಪ್ರಭಾವಗಳೂ ಭಾರತದ ಮಾರ್ಗವಾಗಿ ಬಂದ ಶಕ-ರೋಮನರ ಪ್ರಭಾವಗಳೂ ಕಂಡುಬರುತ್ತವೆ. (ಬಿ.ಕೆ.ಜಿ.)

**ಕಂಬುಜದ ವಾಸ್ತುಶಿಲ್ಪ:** ಬಹಳ ಪ್ರಾಚೀನ ಕಾಲದಿಂದಲೂ ಭಾರತದೊಡನೆ ಸಾಂಸ್ಕೃತಿಕ ಸಂಬಂಧಗಳನ್ನು ಹೊಂದಿದ್ದ ಕಂಬುಜ ದೇಶ, ಈ ಸಂಬಂಧಗಳ ಫಲವಾಗಿ ಹೊಸ ಶೈಲಿಯ ವಾಸ್ತುಶಿಲ್ಪ ಕೃತಿಗಳನ್ನು ನಿರ್ಮಾಣ ಮಾಡಿ, ವಿಶ್ವದ ಇತಿಹಾಸದಲ್ಲೇ ಮಹತ್ತ್ವಸ್ಥಾನ ಪಡೆದಿದೆ. ಕಂಬುಜದ ವಾಸ್ತುಶಿಲ್ಪ ಕಲಾಕೃತಿಗಳು ಹಾಳಾಗಿ ಅರಣ್ಯಗಳ ಮಧ್ಯದಲ್ಲಿ ಶತಮಾನಗಳ ಕಾಲ ಮುಚ್ಚಿಹೋಗಿದ್ದುವು. 1860ರಲ್ಲಿ ಹೆನ್ರಿ ಮೌ ಹೆತ್ ಎಂಬ ಪ್ರಕೃತಿವಿಜ್ಞಾನಿ ಆಂಗ್ಕೋರ್‌ವಾಟ್ ದೇವಾಲಯದ ಅವಶೇಷಗಳನ್ನು ಪತ್ತೆ ಹಚ್ಚಿ ಕಂಬುಜದ ವಾಸ್ತುಶಿಲ್ಪ ಅಧ್ಯಯನಕ್ಕೆ ತಳಹದಿ ಹಾಕಿದ. ಅನಂತರ ಐಮೊನೀರ್, ಸೀಡಸ್, ಬ್ರಿಗ್ಸ್ ಮುಂತಾದ ವಿದ್ವಾಂಸರು ಹೊಸ ಹೊಸ ದೇವಾಲಯಗಳನ್ನು ಪತ್ತೆ ಮಾಡಿದುದೇ ಅಲ್ಲದೆ ಆಳವಾದ ಸಂಶೋಧನೆ ನಡೆಯಿಸಿ, ಕಂಬುಜದ ವಾಸ್ತುಶಿಲ್ಪದ ವಿಷಯದಲ್ಲಿ ತಿಳಿವಳಿಕೆಯನ್ನುಂಟುಮಾಡಿದ್ದಾರೆ.

ಕಂಬುಜದ ವಾಸ್ತುಶಿಲ್ಪ ಶೈಲಿಯನ್ನು ಆಂಗ್ಕೋರ್ ಪೂರ್ವ ಮತ್ತು ಆಂಗ್ಕೋರ್ ಎಂದು ವಿಭಾಗಿಸಬಹುದು. ಮೊದಲನೆಯ ಶೈಲಿಯನ್ನು ಇಂಡೊಖ್ಮೆರ್ ಎಂದೂ ಎರಡನೆಯದನ್ನು ಖ್ಮೆರ್ ಎಂದೂ ಕರೆಯುವುದುಂಟು. ಕಂಬುಜದ ಪ್ರಾಚೀನತೆಯ ವಾಸ್ತುಶಿಲ್ಪ ಕೃತಿಗಳು ಫೂನಾನ್ ರಾಜ್ಯಕ್ಕೆ ಸೇರಿದವು. ಕ್ರಿ.ಶ. ಒಂದನೆಯ ಶತಮಾನದಿಂದ ಏಳನೆಯ ಶತಮಾನದ ವರೆಗಿನ ಈ ಕಲೆಯ ಉಗಮದ ವಿಷಯದಲ್ಲಿ ಖಚಿತವಾದ ಮಾಹಿತಿ ದೊರಕಿಲ್ಲ. ಭಾರತದಂತೆ ಕಂಬುಜದಲ್ಲಿಯೂ ಕಲ್ಲಿನ ಬಳಕೆಗೆ ಮುಂಚೆ ವಾಸ್ತುಶಿಲ್ಪ ಕೃತಿಗಳು ಮರದಲ್ಲಿ ನಿರ್ಮಿತವಾಗುತ್ತಿದ್ದುವು. ಸುಲಭವಾಗಿ ನಾಶವಾಗಿ ಹೋಗುವ ಮರದ ಕಟ್ಟಡಗಳು, ಶಿಲ್ಪಗಳು ನಮಗೆ ಉಪಲಬ್ಧವಾಗಿಲ್ಲವಾದುದರಿಂದ ಆ ಕಾಲದ ವಾಸ್ತುಶಿಲ್ಪಗಳ ಸ್ವರೂಪ ತಿಳಿಯದಾಗಿದೆ. ಅನಂತರ ಇಟ್ಟಿಗೆಗಳಿಂದ ನಿರ್ಮಿತವಾದ ದೇವಾಲಯಗಳಲ್ಲಿ ಚೌಕವಾದ ಹಜಾರ ಮತ್ತು ಶಿಖರಗಳಿದ್ದುವು. ಇವು ಗುಪ್ತರ ಕಾಲದ ದೇವಾಲಯಗಳನ್ನು ವಿಶೇಷವಾಗಿ ಹೋಲುತ್ತವೆ.

ಆದುದರಿಂದ ಫೂನಾನಿನ ವಾಸ್ತುಶಿಲ್ಪ ಕೃತಿಗಳು ಪೂರ್ಣ ಭಾರತೀಯ ಶೈಲಿಗೆ ಸೇರಿದವು ಎಂದು ಹೇಳಬಹುದಾಗಿದೆ. ಈ ಕಲೆಯ ಕೊನೆಯ ಹಂತವನ್ನು ಆಂಗ್ಕೋರ್ ಬೊರೈ ಎಂಬಲ್ಲಿ ನೋಡಬಹುದು. ಹಿಂದೂ ಮತ್ತು ಬೌದ್ಧ ದೇವಾಲಯಗಳಿಗೆ ಪ್ರಸಿದ್ಧವಾದ ಅಂಗ್ಕೋರ್ ಬೊರೈಯಲ್ಲಿ ಹಿಂದೂ ಮತ್ತು ಬೌದ್ಧ ದೇವತೆಗಳ ಶಿಲ್ಪಗಳೂ ವಿಶೇಷವಾಗಿವೆ. ಫ್ನಾಮ್‌ದಲ್ಲಿ ದೊರಕಿರುವ ಹರಿಹರ, ವಿಷ್ಣು, ಬಲರಾಮ— ಈ ಶಿಲ್ಪಗಳು ಫೂನಾನಿನ ಶಿಲ್ಪಗಳಲ್ಲಿ ಅತಿಮುಖ್ಯವಾದವು. ಹರಿಹರನ ವಿಗ್ರಹವಂತೂ ಬಹು ಸುಂದರವಾಗಿದೆ. ಒಂದು ಭಾಗದಲ್ಲಿ ವಿಷ್ಣುವಿನ, ಮತ್ತೊಂದು ಭಾಗದಲ್ಲಿ ಈಶ್ವರನ ಅಂಶಗಳನ್ನು ಹೊಂದಿರುವ ಈ ಮೂರ್ತಿ ಹೆಚ್ಚು ಅಲಂಕಾರಗಳಿಲ್ಲದೆ ಬಲು ಸರಳವಾಗಿದೆ. ಸುಮಾರು ಇದೇ ಕಾಲಕ್ಕೆ ಸೇರಬಹುದಾದ ಮತ್ತೊಂದು ಶಿಲ್ಪವೆಂದರೆ ವತ್ ಖೊ ಎಂಬಲ್ಲಿನ ಗೋವರ್ಧನಗಿರಿಧಾರಿ ಕೃಷ್ಣ. ವತ್ ರೊಮೊಲೊಕ್ ವಿಹಾರದಲ್ಲಿ ದೊರಕಿರುವ ಮರಳುಶಿಲೆಗಳಿಂದ ನಿರ್ಮಿತವಾದ ಬುದ್ಧನ ಶಿಲ್ಪ ಭಾರತದಲ್ಲೇ ನಿರ್ಮಾಣವಾಯಿತೋ ಎನ್ನುವಷ್ಟು ಭಾರತೀಯತೆಯನ್ನು ಪ್ರದರ್ಶಿಸುತ್ತದೆ.

ಏಳನೆಯ ಶತಮಾನದ ಮೊದಲ ಭಾಗದಲ್ಲಿ ನಿರ್ಮಾಣವಾದ ಈಶಾನಪುರವೇ ಈಗಿನ ಸಂಬೊರ್ ಪ್ರೆಕುಕ್. ಇದೊಂದು ವಾಸ್ತುಶಿಲ್ಪ ಕಲಾ ಕೇಂದ್ರ. ಇಟ್ಟಿಗೆಯಿಂದಲೇ ನಿರ್ಮಾಣವಾದ ಶಿಖರಗಳು ಇಲ್ಲಿಯ ವೈಶಿಷ್ಟ್ಯ. ಮೆದುಗಾರೆಯಿಂದ ಮಾಡಿದ ಶಿಲ್ಪಫಲಕಗಳಲ್ಲಿ ವಿಷ್ಣು, ಲೋಕೇಶ್ವರ, ಮತ್ತು ಇತರ ದೇವತೆಗಳ ಶಿಲ್ಪಗಳಿವೆ. ಇಲ್ಲಿಯ ಸ್ತ್ರೀವಿಗ್ರಹಗಳು ಸೌಂದರ್ಯದ ದೃಷ್ಟಿಯಿಂದ ಗಮನಾರ್ಹ. ಕಂಬುಜದ ವಾಸ್ತುಶಿಲ್ಪದ ಮುಂದಿನ ಹಂತವನ್ನು ಪ್ರಸತ್ ಆಂದೆತ್, ಪ್ರೆಖ್ಮೆಂಗ್ ಮತ್ತು ಕೊಂಪೊಂಗ್‌ಗಳಲ್ಲಿ ಕಾಣಬಹುದು. ಏಳನೆಯ ಶತಮಾನದ ಉತ್ತರಾರ್ಧ ಮತ್ತು ಎಂಟನೆಯ ಶತಮಾನದ ಆದಿಭಾಗದಲ್ಲಿ ನಿರ್ಮಿತವಾದ ಇಲ್ಲಿಯ ದೇವಾಲಯಗಳಲ್ಲಿ ಶಿಲ್ಪಗಳು ವಿಶೇಷವಾಗಿವೆ. ಪ್ರಸತ್ ಆಂದೆತ್ ದೇವಾಲಯದ ಹರಿಹರ ಶಿಲ್ಪ ಆಂಗ್ಕೋರ್ ಪೂರ್ವ ಕಂಬುಜದಲ್ಲಿ ಅತ್ಯುತ್ತಮ ಶಿಲ್ಪಕೃತಿಯೆಂದು ಪರಿಗಣಿತವಾಗಿದೆ. ಮುಖ ಲಕ್ಷಣಗಳಲ್ಲಿ ಇದು ಕಂಬುಜದ ಸ್ವಂತಿಕೆಯನ್ನು ಪ್ರದರ್ಶಿಸಿದರೂ ಇತರ ವಿಷಯಗಳಲ್ಲಿ ಭಾರತೀಯವೆನಿಸುತ್ತದೆ. ಇಲ್ಲಿಗೆ ಆಂಗ್ಕೋರ್ ಪೂರ್ವ (ಇಂಡೋಖ್ಮೆರ್) ಶೈಲಿ ಕೊನೆಗೊಂಡಿತು.

ಅನಂತರ ಬೆಳೆದು ಬಂದ ಆಂಗ್ಕೋರ್ ಕಲಾಶೈಲಿ ಒಂಬತ್ತನೆಯ ಶತಮಾನದಿಂದ ಪ್ರಾರಂಭವಾಗಿ ಐದು ಶತಮಾನಗಳ ಕಾಲ ಬೆಳಗಿತು. ಶೈಲಿಯ ದೃಷ್ಟಿಯಿಂದ ಇದನ್ನು ಪೂರ್ವಾರ್ಧ (ಒಂಬತ್ತನೆಯ ಶತಮಾನದಿಂದ ಹನ್ನೊಂದನೆಯ ಶತಮಾನದ ವರೆಗೆ) ಮತ್ತು ಉತ್ತರಾರ್ಧ (ಹನ್ನೊಂದನೆಯ ಶತಮಾನದಿಂದ ಹದಿಮೂರನೆಯ ಶತಮಾನದ ವರೆಗೆ) ಎಂದು ವಿಭಾಗಿಸಬಹುದು. ಪೂರ್ವಾರ್ಧದಲ್ಲಿ ಕುಲೆನ್, ಪ್ರಿಹ್‌ಕೊ, ಒಖೆಂಗ್, ಕೊಹ್‌ಕೆರ್, ಬಾಂಟೆಶ್ರೀ, ಮತ್ತು ಕ್ಲಿಯಾಂಗ್ ಎಂದು ಮುಖ್ಯವಾದ ಸ್ಥಳೀಯ ಪ್ರಭೇದಗಳನ್ನು ನೋಡಬಹುದು.

ಒಂಬತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಬೆಳೆದುಬಂದ ಕುಲೆನ್ ಶೈಲಿಯ ವಾಸ್ತುಶಿಲ್ಪಗಳನ್ನು ಫ್ನಾಮ್ ಕುಲೆನ್‌ನಲ್ಲಿ ನೋಡುತ್ತೇವೆ. ಇಲ್ಲಿ ಜಾವಾ ಮತ್ತು ಚಂಪ ರಾಜ್ಯದ ಶಿಲ್ಪಪ್ರಭಾವಗಳು ಕಂಡುಬರುತ್ತವೆ. ವಿವಿಧ ಕಟ್ಟಡಗಳನ್ನು ಒಂದು ಕ್ರಮವನ್ನನುಸರಿಸಿ ನಿರ್ಮಿಸುವ ವಿನ್ಯಾಸ ಪ್ರಾರಂಭವಾದುದು ಈ ಕಾಲದಲ್ಲಿ. ಶಿಲ್ಪಗಳಲ್ಲಿ ಮಕರತೋರಣಗಳು, ಲತೆಗಳು, ಕಾಲಮುಖಗಳು ವಿಶೇಷವಾಗಿವೆ. ಕ್ರಿ.ಶ. ಒಂಬತ್ತನೆಯ ಶತಮಾನದ ಕೊನೆಯ ಭಾಗದಲ್ಲಿ ನಿರ್ಮಾಣವಾದ ಪ್ರಿಹ್‌ಕೊ ಶೈಲಿಯ ದೇವಾಲಯಗಳು ಪ್ರಸತ್ ಕೊಕ್‌ಪೊ ಮತ್ತು ರೋಲೊಗಳಲ್ಲಿವೆ. ಪ್ರಿಹ್‌ಕೊನಲ್ಲಿರುವ ಇಟ್ಟಿಗೆಯ ಆರು ಶಿಖರಗಳು, ಲೊಲೈನಲ್ಲಿರುವ ನಾಲ್ಕು ಶಿಖರಗಳು ಮತ್ತು ಬಕಾಂಗಿನ ಎಂಟು ಶಿಖರಗಳು ಈ ಕಾಲದವು. ಇವು ಸುಂದರವಾಗಿವೆ. ಶಿಲ್ಪವಿನ್ಯಾಸದಲ್ಲಿ ಹೊಸ ಪ್ರಯೋಗಗಳು ಕಾಣುತ್ತವೆ. ಸ್ತ್ರೀ ಮತ್ತು ಪುರುಷರ ಶಿಲ್ಪಗಳಲ್ಲಿ ಆಭರಣಗಳು ವಿಶೇಷವಾಗಿವೆ.

ಹತ್ತನೆಯ ಶತಮಾನದ ಆದಿಭಾಗದಲ್ಲಿ ನಿರ್ಮಿತವಾದ ಒಖೆಂಗ್ ಶೈಲಿಯ ವಾಸ್ತುಶಿಲ್ಪಗಳು ಅನೇಕ ದೃಷ್ಟಿಗಳಿಂದ ಪ್ರಾಮುಖ್ಯ ಪಡೆದಿವೆ. ಆಗ ಇಟ್ಟಿಗೆ ಗೋಪುರಗಳ ಜೊತೆಗೆ ಕಲ್ಲಿನ ಗೋಪುರಗಳೂ ನಿರ್ಮಾಣವಾಗತೊಡಗಿದುವು. ಆಂಗ್ಕೋರಿನ ರೂಪುರೇಖೆಗಳನ್ನು ಫ್ನಾಮ್ ಒಖೆಂಗ್‌ನಲ್ಲಿ ಪ್ರಯೋಗ ಮಾಡಿ ನೋಡಿದರೋ ಎನ್ನುವಂತೆ ತೋರುತ್ತದೆ. ಹಂತಹಂತದ ಪಿರಮಿಡ್ಡಿನ ಆಕಾರದ ಶಿಖರಗಳು, ಆ ಶಿಖರಗಳ ಸಮಾನಾಂತರ ನಿರ್ಮಾಣ, ಅವುಗಳ ಸುತ್ತಲಿನ ಜಗುಲಿಗಳು ಮುಂತಾದವು ಇಲ್ಲಿ ರೂಪುಗೊಂಡು, ಮಾದರಿಯಾಗಿ ಮುಂದೆ ಸ್ಥಿರವಾದುವು. ಫ್ನಾಮ್ ಒಖೆಂಗ್‌ನಲ್ಲಿ ಐದು ಹಂತಗಳಿದ್ದು, ಪ್ರತಿ ಹಂತದಲ್ಲೂ ಹನ್ನೆರಡು ಗೋಪುರಗಳಿವೆ.

ನಾಲ್ಕನೆಯ ಜಯವರ್ಮ ಮಹಾರಾಜ (921–941) ತನ್ನ ರಾಜಧಾನಿಯನ್ನು ಯಶೋಧರಪುರದಿಂದ ಕೊಹ್‌ಕೆರ್ ಎಂಬಲ್ಲಿಗೆ ಬದಲಾಯಿಸಿ, ಹೊಸ ವಾಸ್ತುಶಿಲ್ಪಶೈಲಿಗೆ ಕಾರಣನಾದ. ಈ ಶೈಲಿ ಕಂಬುಜದ ಇತಿಹಾಸದಲ್ಲೇ ಗಣ್ಯ ಸ್ಥಾನ ಪಡೆದಿದೆ. ಕೊಹ್‌ಕೆರ್‌ನ ಶಿಲ್ಪಗಳು ಜೀವಂತವಾಗಿರುವಂತೆ ತೋರುತ್ತವೆ. ಅಂಗಾಂಗಗಳು ಚಲಿಸುತ್ತವೆಯೋ ಎನ್ನುವ ಭ್ರಾಂತಿ ಬರುವಂತೆ ಕೆತ್ತಿರುವ ಈ ಶಿಲ್ಪಗಳ ಅಂಗವಿನ್ಯಾಸ ಬಲು ಮೋಹಕ. ನರ್ತನ ಮಾಡುತ್ತಿರುವ ಶಿವ, ಹಾರುತ್ತಿರುವ ಗರುಡ, ವಾಲಿ–ಸುಗ್ರೀವ ಮೊದಲಾದವು ಉತ್ತಮ ಕೃತಿಗಳು. ಆಂಗ್ಕೋರ್ ಶೈಲಿಯ ಮುಖ್ಯಾಂಶಗಳಲ್ಲೊಂದಾದ ಹಸನ್ಮುಖ ಶಿಲ್ಪಗಳು ಪ್ರಾರಂಭವಾದುದು ಕೊಹ್‌ಕೆರ್‌ನಲ್ಲಿ.

ಮುಂದಿನ ಹಂತವನ್ನು ಬಾಂಟೆಶ್ರೀ ಎಂಬಲ್ಲಿ ನೋಡಬಹುದು. ವಾಸ್ತುಶಿಲ್ಪ ಇತಿಹಾಸದಲ್ಲೇ ಒಂದು ವಿಶಿಷ್ಟ ಸ್ಥಾನ ಗಳಿಸಿರುವ ಬಾಂಟೆಶ್ರೀ ದೇವಾಲಯಗಳು ಯಜ್ಞವರಾಹನೆಂಬ ಬ್ರಾಹ್ಮಣನ ನೇತೃತ್ವದಲ್ಲಿ ರಾಜೇಂದ್ರವರ್ಮ ಮಹಾರಾಜನ ಕಾಲದಲ್ಲಿ ನಿರ್ಮಾಣವಾದುವು. ಇಲ್ಲಿಯ ದೇವಾಲಯಗಳು ಒಂದೇ ಸಾಲಿನಲ್ಲಿರುವ ಮೂರು ಗೋಪುರಗಳನ್ನೊಳಗೊಂಡಿವೆ. ಇವುಗಳಿಗಿಂತ ಇಲ್ಲಿಯ ಶಿಲ್ಪಗಳು ಹೆಚ್ಚು ಸುಂದರವಾದವು. ಆಂಗ್ಕೋರ್‌ವಾಟ್‌ನ ಶಿಲ್ಪಗಳಿಗಿಂತ ಇದು ಹೆಚ್ಚು ಸುಂದರವಾಗಿದೆಯೆಂದು ಕೆಲವರು ಅಭಿಪ್ರಾಯಪಡುತ್ತಾರೆ. ಭಾರತೀಯ ಪುರಾಣಗಳು ಮತ್ತಿತರ ಗ್ರಂಥಗಳಿಂದ ಸ್ಫೂರ್ತಿಪಡೆದ ಶಿಲ್ಪಗಳು ದೇವತೆಗಳ ಅದ್ಭುತಕಾರ್ಯಗಳನ್ನು ವಿಸ್ತಾರವಾಗಿ ರೂಪಿಸಿದರು. ಮಹಿಷಾಸುರಮರ್ದಿನಿಯ ಶಿಲ್ಪವಂತೂ ಅದ್ಭುತವಾಗಿದೆ. ಕಂಸವಧೆ, ರಾವಣ ಕೈಲಾಸವನ್ನು ಅಲುಗಿಸುತ್ತಿರುವುದು, ವಿಷ್ಣುವಿನ ವಿವಿಧ ಅವತಾರಗಳು ಮೊದಲಾದವು ಉತ್ತಮ ಶಿಲ್ಪಗಳು. ಕೆಲವು ಶಿಲ್ಪಗಳಲ್ಲಿ ಚಿನ್ನದ ಕುಸುರಿಕೆಲಸದಷ್ಟು ಸೂಕ್ಷ್ಮವಾಗಿರವ ಕೌಶಲವೂ ಕಾಣಿಸುತ್ತದೆ.

ಕ್ರಿ.ಶ. ಹನ್ನೊಂದನೆಯ ಶತಮಾನದ ಮೊದಲ ಭಾಗದಲ್ಲಿ ಕ್ಲಿಯಾಂಗ್ ಶೈಲಿಯ ದೇವಾಲಯಗಳು ಬೆಳಕಿಗೆ ಬಂದುವು. ಫಿಮೆನಕಗಳಲ್ಲಿ ನಿರ್ಮಾಣವಾದ ಗೋಪುರಗಳು ಈ ಕಾಲಕ್ಕೆ ಸೇರಿದವು. ಇದಾದ ಅನಂತರ ಬಾಫುವಾನ್ ಶೈಲಿ ಬೆಳಕಿಗೆ ಬಂತು. ಇಲ್ಲಿಯ ದೇವಾಲಯ ಐದು ಹಂತಗಳಲ್ಲಿರುವ ಬೃಹತ್ ಗೋಪುರ. 1,440′ ಉದ್ದ, 560′ ಅಗಲ, 160′ ಎತ್ತರವಾಗಿರುವ ಇಲ್ಲಿಯ ಶಿಖರ ಗಮನಾರ್ಹ. ಬಾಫುವಾನ್ ಶಿಲ್ಪಶೈಲಿಯನ್ನು ಸುಧಾರಣೆಗಳಿಂದ ಅತ್ಯುತ್ತಮಗೊಳಿಸಿ ಹೊಸದಾದ ಶೈಲಿಯನ್ನು ಆರಂಭಿಸಿದ ಕೀರ್ತಿ ಎರಡನೆಯ ಸೂರ್ಯವರ್ಮನಿಗೆ ಸೇರುತ್ತದೆ. ಸೂರ್ಯವರ್ಮನ (1113–45) ಕಾಲ ಕಂಬುಜದ ಸಾಂಸ್ಕೃತಿಕ ಇತಿಹಾಸದಲ್ಲಿ ಪೂರ್ವಕಾಲ. ಸೂರ್ಯವರ್ಮ ಸ್ಥಾಪಿಸಿದ ಆಂಗ್ಕೋರ್ ವಾಟ್ ವಿಶ್ವವಿಖ್ಯಾತವಾಗಿದೆ. ಇಲ್ಲಿಯ ದೇವಾಲಯದ ಮಧ್ಯಾಂಗಣದ ಸುತ್ತಲೂ ಮೇಲ್ಚಾವಣಿಯಿರುವ ಹಾದಿಯೊಂದು 5,100′ ಉದ್ದ, 4,500′ ಅಗಲ ಇರುವ ಪ್ರದೇಶವನ್ನು ಹೊರವಲಯದಿಂದ ಬೇರ್ಪಡಿಸುತ್ತದೆ. ಪಶ್ಚಿಮಾಭಿಮುಖವಾಗಿರುವ ಈ ದೇವಾಲಯವನ್ನು ಪ್ರವೇಶಿಸಲು, 1,500′ ಉದ್ದದ ಭವ್ಯವಾದ ರಾಜಪಥವಿದೆ. ಇದರ ಎರಡು ಕಡೆಗಳಲ್ಲೂ ಕಲ್ಲಿನ ನಾಗ–ನಾಗಿನಿಯರ ಶಿಲ್ಪಗಳಿವೆ. ಪ್ರವೇಶದ್ವಾರದಲ್ಲಿರುವ ಸಿಂಹದ ಸಾಲುಶಿಲ್ಪಗಳು ಈ ಕಟ್ಟಡದ ಮಹತ್ತ್ವವನ್ನು ಪ್ರವೇಶದಲ್ಲೇ ತೋರಿಸಿಕೊಡುತ್ತವೆ. ಕೊನೆಯದಾದ ಹಂತದಲ್ಲಿ ಈಶ್ವರನ ದೇವಾಲಯವಿದೆ. ಇದರ ಶಿಖರ 210′ ಎತ್ತರವಾಗಿದ್ದು ದೂರದಿಂದಲೂ ಎದ್ದು ಕಾಣುತ್ತದೆ. ಒಟ್ಟಿನಲ್ಲಿ ವಾಸ್ತುಕಲೆಯಲ್ಲಿ ಇದೊಂದು ಮಹತ್ಸಾಧನೆ. ಆಂಗ್ಕೋರ್‌ವಾಟ್‌ನಲ್ಲಿ ವಾಸ್ತು ಮತ್ತು ಶಿಲ್ಪಕಲೆಗಳಲ್ಲಿ ಯಾವುದಕ್ಕೆ ಹೆಚ್ಚು ಪ್ರಾಮುಖ್ಯ ಎನ್ನುವುದು ನಿರ್ಧರಿಸಲಾಗದ ಪ್ರಶ್ನೆ. ಈ ಎರಡು ಕಲೆಗಳೂ ಒಂದಕ್ಕೊಂದು ಪೂರಕವಾಗಿ ಮಿತವಾಗಿರುವುದು ಇಲ್ಲಿಯ ವೈಶಿಷ್ಟ್ಯ. ಅರೆ ಉಬ್ಬು ಶಿಲ್ಪಗಳನ್ನು ಕೆತ್ತುವ ಕಲೆಯಲ್ಲಿ ಇಲ್ಲಿ ಪರಿಣತಿ ಸಾಧಿಸಿದೆ. ರಾಮಾಯಣ ಮಹಾಭಾರತಗಳ ಕಥೆಗಳಿಂದ ಸ್ಫೂರ್ತಿ ಬಂದಿದೆ. ರಾಮರಾವಣರ ಯುದ್ಧ, ರಾವಣ ಜಟಾಯುವನ್ನು ಶಿಕ್ಷಿಸುವುದು, ಹನುಮಂತ ಲಂಕೆಯನ್ನು ಸುಡುವುದು, ರಾವಣ ಸೀತೆಯನ್ನು ಅಪಹರಿಸುವುದು, ಕುರುಕ್ಷೇತ್ರಯುದ್ಧ ಮುಂತಾದವನ್ನು ಶಿಲ್ಪಿ ಅತ್ಯುತ್ತಮವಾಗಿ ಕೆತ್ತನೆ ಮಾಡಿ ಕಂಬುಜದ ಜನಗಳ ಮನಸ್ಸನ್ನು ಸೂರೆಗೊಂಡಿದ್ದಾನೆ. ಅಪ್ಸರ ಸ್ತ್ರೀಯರನ್ನು ವಿಶೇಷ ಆಸಕ್ತಿಯಿಂದ ಕಡೆದಿದ್ದಾನೆ. ಎಲ್ಲೆಲ್ಲಿ ನೋಡಿದರೂ ಸುಂದರವಾದ ತೆಳ್ಳಗೆ ಬಳುಕುವ, ಆಭರಣ ಭೂಷಿತೆಯರಾದ ಅಪ್ಸರೆಯರ ಮೂರ್ತಿಗಳು. ಇವುಗಳಲ್ಲಿ ಶಿಲ್ಪ ಕಲೆಯ ಪರಾಕಾಷ್ಠೆಯನ್ನು ಕಾಣಬಹುದೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಈ ರೀತಿಯ ಸೂಕ್ಷ್ಮವೂ ಸುಂದರವೂ ಆದ ವಾಸ್ತುಶಿಲ್ಪಗಳ ನಿರ್ಮಾಣವಾದ ಅನಂತರ, ಕಂಬುಜದಲ್ಲಿ ಬೃಹತ್ ಪ್ರಮಾಣದ ವಾಸ್ತುಶಿಲ್ಪ ಕೃತಿಗಳು ನಿರ್ಮಾಣವಾದುವು. ಕಂಬುಜದ ಚರಿತ್ರೆಯಲ್ಲಿ ಶ್ರೇಷ್ಠ ದೊರೆಯೆನಿಸಿಕೊಂಡಿರುವ ಏಳನೆಯ ಜಯವರ್ಮನೇ ಆಂಗ್ಕೋರ್ ಥೊಮ್ ನಗರದ ನಿರ್ಮಾಪಕ. 1200ರಲ್ಲಿ ಪ್ರಾರಂಭವಾದ ಆಂಗ್ಕೋರ್ ಥೊಮ್ ಕಟ್ಟಡಗಳು ಅವನ ಜೀವಿತ ಕಾಲದಲ್ಲೇ ಪೂರ್ಣಗೊಂಡದ್ದು ಆತ ನೀಡಿದ ಆಶ್ರಯದ ಫಲ. 100′ ಅಗಲ ಮತ್ತು 10 ಮೈಲಿ ಉದ್ದದ ಕಂದಕವನ್ನು ನಿರ್ಮಿಸಿ ಅದರ ಒಳಭಾಗದಲ್ಲಿ ಬೃಹದಾಕಾರದ ಗೋಡೆ

ಗಳನ್ನು ನಿರ್ಮಿಸಿದ. ಈ ಶಿಖರಗಳ ನಾಲ್ಕು ಮುಖಗಳಲ್ಲಿಯೂ ಬೋಧಿಸತ್ತ್ವ ಲೋಕೇಶ್ವರನ ಶಿಲ್ಪಗಳಿವೆ. ಶಿಖರಗಳೇ ಬುದ್ಧನ ರೂಪದಲ್ಲಿ ಮೂರ್ತಿವೆತ್ತಂತೆ ಇರುವುದು ಇಲ್ಲಿಯ ವೈಶಿಷ್ಟ್ಯ. ಇವು ಬೃಹತ್ ಪ್ರಮಾಣದಲ್ಲಿರುವುದು ಮಾತ್ರವಲ್ಲದೆ, ಕಲಾವೃಷ್ಟಿಯಿಂದಲೂ ಅದ್ಭುತಗಳಾಗಿದ್ದು, ಇವುಗಳ ಮುಗುಳ್ನಗೆ ಬಲು ದೂರ ದಿಂದಲೇ ನಮ್ಮ ಮನಸ್ಸನ್ನು ಸೆರೆಹಿಡಿಯುತ್ತದೆ. ಆಂಗ್ಕೋರ್ ಥೊಮ್‌ನ ಮಧ್ಯ ಭಾಗದಲ್ಲಿರುವ ಬಯಾನ್ ದೇವಾಲಯವಂತೂ ಶಿಖರಗಳ ಸಮೂಹ. ಇಲ್ಲಿಯ ಶಿಲ್ಪಗಳೂ ಬಾಂಟಿಕ್ಡೆ, ತಪ್ರೊಮ್, ನೀಕ್ ಪೀಯನ್, ಬಾಂಟೆಖ್ಮೆರ್, ವತ್‌ನೊಕೊರ್ ಮುಂತಾದ ಕಡೆಗಳ ಶಿಲ್ಪಗಳೂ ಮೋಹಕವಾಗಿವೆ. ಪ್ರಿಖಾನ್ ದೇವಾಲಯ ದಲ್ಲಿರುವ ಏಳನೆಯ ಜಯವರ್ಮನ ಶಿಲ್ಪವೂ ಉತ್ತಮ ಕೃತಿಗಳಲ್ಲೊಂದಾ ಗಿದೆ.

ಜಯವರ್ಮನ ಮರಣಾನಂತರ ಕಂಬುಜದಲ್ಲಿ ವಾಸ್ತುಶಿಲ್ಪ ಸಂಪ್ರದಾಯ ಕ್ಷೀಣಿಸಿತು. ಬೌದ್ಧ ತಾಂತ್ರಿಕ ಮತ ತಲೆಯೆತ್ತಿದಂತೆ ವಾಸ್ತುಕೃತಿಗಳ ನಿರ್ಮಾಣ ಕಡಿಮೆಯಾಗಿ, ಸಣ್ಣ ಸಣ್ಣ ಕಂಚಿನ ಮತ್ತು ತಾಮ್ರದ ವಿಗ್ರಹಗಳು ವಿಶೇಷವಾಗಿ ಬೆಳಕಿಗೆ ಬಂದುವು. ಆದರೆ ಇವು ಉತ್ತಮ ಕಲಾಕೃತಿಗಳಾಗಲಿಲ್ಲ. ಸೂರ್ಯವರ್ಮ ಜಯವರ್ಮರಂಥ ಕಲಾಭಿಮಾನಿ ದೊರೆಗಳು ಮತ್ತೆ ಕಂಬುಜದಲ್ಲಿ ಜನ್ಮ ತಾಳಲಿಲ್ಲ. ಹೀಗಾಗಿ ವಿಶ್ವವಿಖ್ಯಾತವಾಗಿದ್ದ ಕಂಬುಜದ ವಾಸ್ತುಶಿಲ್ಪ ಅವನತಿ ಹೊಂದಿತು. (ಎ.ವಿ.ಎನ್.)

ನೋಡಿ---ಆಂಗ್ಕೋರ್‌ವಾಟ್ ; ಆಗ್ನೇಯ ಏಷ್ಯ.

**ಕಂಬುಜದ ಶಾಸನಗಳು :** ಕಂಬುಜದ ಶಾಸನಗಳು ಸಂಸ್ಕೃತ ಹಾಗೂ ಖ್ಮೆರ್ (ಕಾಂಬೋಡಿಯದ ದೇಶಭಾಷೆ) ಭಾಷೆಗಳಲ್ಲಿ ರಚಿತವಾಗಿವೆ. ಇಲ್ಲಿಯ ವರೆವಿಗೂ ದೊರೆತಿರುವ ಶಾಸನಗಳು ಕ್ರಿ. ಶ. 5ನೆಯ ಶತಮಾನದಿಂದ 14ನೆಯ ಶತಮಾನದ ವರೆವಿಗೂ ಹರಡಿವೆ. ಖ್ಮೆರ್ ಭಾಷೆಯ ಶಾಸನಗಳನ್ನು ಗದ್ಯದಲ್ಲಿ ಬರೆಯಲಾಗಿದೆ. ಅವು ಸಂಸ್ಕೃತ ಶಾಸನಗಳಲ್ಲಿ ನಿರ್ದೇಶಿಸಿದ ದಾನಧರ್ಮಗಳ ವಿವರಗಳನ್ನೂ ಇತರ ಪಾರಿಭಾಷಿಕಾಂಶಗಳನ್ನೂ ತಿಳಿಸುತ್ತವೆ. ಸಂಸ್ಕೃತ ಶಾಸನ ಗಳನ್ನು ಅನುಷ್ಟುಪ್ ಮತ್ತು ಇತರ ಛಂದಸ್ಸುಗಳಲ್ಲಿ ರಚಿಸಲಾಗಿದೆ. ಅವುಗಳ ಭಾಷೆ ನಿರ್ದುಷ್ಟವಾದ ಕಾವ್ಯಶೈಲಿಯಲ್ಲಿದ್ದು ಉತ್ತಮ ಸಾಹಿತ್ಯಾಂಶಗಳಿಂದ ಕೂಡಿದೆ. ಸಾಮಾನ್ಯವಾಗಿ ಈ ಶಾಸನಗಳು ರಾಜರ ವಂಶಾವಳಿ, ಪ್ರಶಸ್ತಿ, ಭವ್ಯ ವಾದ ಸ್ಮಾರಕಗಳ ನಿರ್ಮಾಣ ಹಾಗೂ ಅನೇಕ ವಿಧವಾದ ದಾನಧರ್ಮಗಳನ್ನು ಕುರಿತು ತಿಳಿಸುತ್ತವೆ. ಅಲ್ಲದೆ ಭಾರತದ ಪುರಾಣ, ಇತಿಹಾಸ, ದರ್ಶನ, ರಾಜನೀತಿ ಮತ್ತು ಲಲಿತಕಲೆಗಳ ವಿಷಯವಾಗಿ ಬೆಳಕು ಚೆಲ್ಲುತ್ತವೆ. ಈ ಶಾಸನಗಳಲ್ಲಿ ಪ್ರತ್ಯೇಕವಾಗಿ ರಾಮಾಯಣ, ಭಾರತ, ಮನುಸ್ಮೃತಿ ಮುಂತಾದ ಗ್ರಂಥಗಳ ಉಲ್ಲೇಖವಿದೆ. ಶೈವ, ವೈಷ್ಣವ, ಬೌದ್ಧಮತ ತತ್ತ್ವಗಳ, ವರ್ಣಾಶ್ರಮ ಧರ್ಮ ಗಳ, ಯಜ್ಞಯಾಗಾದಿಗಳ, ವಿದ್ಯಾಶ್ರಮಗಳ ಹಾಗೂ ವೈದ್ಯಶಾಲೆಗಳ ಬಗೆಗೂ ಇವು ವಿಶದವಾದ ಮಾಹಿತಿ ನೀಡುತ್ತವೆ.

ಸಂಸ್ಕೃತದ ಈ ಶಾಸನಗಳನ್ನು ರಚಿಸಿದವರು ನಿಸ್ಸಂದೇಹವಾಗಿ ಭಾರತದಿಂದ ಬಂದ ಪ್ರಸಿದ್ಧ ಪಂಡಿತರು ಮತ್ತು ಕಂಬುಜದ ಸ್ಥಳೀಯ ಪ್ರಬುದ್ಧ ವಿದ್ವಾಂಸರು. ಇವನ್ನು ಕಲ್ಲುಗಳ ಮೇಲೆ ಕೆತ್ತಿದವರೂ ಸಂಸ್ಕೃತತಜ್ಞರೆಂದು ವಿಮರ್ಶಕರು ಅಭಿ ಪ್ರಾಯಪಟ್ಟಿರುತ್ತಾರೆ. ಇವುಗಳಲ್ಲಿ ಕೆಲವು ಶಾಸನಗಳನ್ನು ಉದಾಹರಿಸಬಹು ದಾಗಿದೆ: ಧರ್ಮಶಾಸ್ತ್ರ ಅರ್ಥಶಾಸ್ತ್ರಗಳಲ್ಲಿ ಪರಿಣತರಾದ ವಿದ್ವಾಂಸರನ್ನು ಭವವರ್ಮ ಸಲಹೆಗಾರರನ್ನಾಗಿ ಪಡೆದಿದ್ದನೆಂದು ಆಂಗ್ ಚುಮ್ನಿಕ್ ಶಾಸನ (6ನೆಯ ಶತಮಾನದ ಉತ್ತರಾರ್ಧ) ತಿಳಿಸುತ್ತದೆ. ವಿದ್ಯಾವಿಶೇಷನೆಂಬ ಬ್ರಾಹ್ಮಣನೊಬ್ಬ ವ್ಯಾಕರಣ, ನ್ಯಾಯ ಮತ್ತು ಬೌದ್ಧ ದರ್ಶನಗಳಲ್ಲಿ ಸುವಿಖ್ಯಾತನಾದ ಪಂಡಿತನೆಂದು ಸಾಂಬೊರ್ ಪ್ರಿಕುಕ್ ಶಾಸನ (627) ತಿಳಿಸುತ್ತದೆ. ದುರ್ಗಸ್ವಾಮಿ ಎಂಬ ಬ್ರಾಹ್ಮಣ, ರಾಜನಾದ ಈಶಾನವರ್ಮನ (616–635) ಮಗಳನ್ನು ವಿವಾಹವಾಗಿದ್ದನೆಂದೂ ತೈತ್ತಿರೀಯ ಶಾಖೆಯ ಮಂತ್ರ, ಬ್ರಾಹ್ಮಣ ಹಾಗೂ ಸೂತ್ರಗಳಲ್ಲಿ ನಿಷ್ಣಾತನಾಗಿದ್ದ ನೆಂದೂ ಸಾಂಬೊರ್ ಪ್ರಿಕುಕ್‌ನ ಮತ್ತೊಂದು ಶಾಸನ ವಿಶದೀಕರಿಸುತ್ತದೆ. ಸ್ಡಾಕ್ ಕಾಕ್ ಥೊಮ್ ಶಾಸನ (1052) ದೀರ್ಘವಾದ ಸಂಸ್ಕೃತ ಶಾಸನಗಳಲ್ಲಿ ಒಂದಾಗಿದ್ದು ಬಹಳ ಮುಖ್ಯವಾದುದಾಗಿದೆ. ಇದು ದೇವರಾಜ ಧರ್ಮಪದ್ಧತಿಯನ್ನು ತಿಳಿಸು ತ್ತದೆ ಮತ್ತು ಎರಡನೆಯ ಜಯವರ್ಮನಿಂದ (802–850) ಆಹ್ವಾನಿತನಾದ ಹಿರಣ್ಯ ದಾಮನೆಂಬ ಪುರೋಹಿತ ಬೋಧಿಸಿದ ತುಂಬುರು ತಂತ್ರದ ನಾಲ್ಕು ಮುಖಗಳಾದ ಶಿರಚ್ಛೇದ, ವಿನಾಶಿಕ, ಸಮ್ಮೋಹ ಮತ್ತು ನ್ಯಾಯೋತ್ತರಗಳೆಂಬ ನಾಲ್ಕು ಶಾಸ್ತ್ರ ಗಳನ್ನು ಪ್ರತಿಪಾದಿಸುತ್ತದೆ.

ಹೀಗೆ ಕಂಬುಜದ ಶಾಸನಗಳು ವೇದ, ಶಾಸ್ತ್ರ, ದರ್ಶನ, ತಂತ್ರ, ಕಾಮಸೂತ್ರ, ಅರ್ಥಶಾಸ್ತ್ರ, ಮನುಸ್ಮೃತಿ ಮಹಾಭಾಷ್ಯ ಮುಂತಾದವನ್ನು ವಿಪುಲವಾಗಿ ವಿವರಿಸುವು ದಲ್ಲದೆ ಕಂಬುಜದಲ್ಲಿ ಭಾರತದ ಸಂಪ್ರದಾಯ, ಆಚಾರ ಮತ್ತು ವ್ಯವಹಾರಗಳ ಅಸ್ತಿತ್ವವನ್ನು ನಿರೂಪಿಸುತ್ತ ಭಾರತೀಯ ಸಂಸ್ಕೃತಿಯ ಅಚ್ಚಳಿಯದ ಪ್ರಭಾವವನ್ನು ಪ್ರತಿಫಲಿಸುತ್ತವೆ.

6ನೆಯ ಮತ್ತು 8ನೆಯ ಶತಮಾನಗಳ ಮಧ್ಯಕಾಲದ ಕಂಬುಜದ ಶಾಸನಗಳ ಲಿಪಿ, ಶೈಲಿ ಮುಂತಾದವನ್ನು ಸಮಕಾಲೀನವಾದ ದಕ್ಷಿಣ ಭಾರತದ ಪಲ್ಲವ ಹಾಗೂ ಬಾದಾಮಿ ಚಾಲುಕ್ಯರ ಶಾಸನಗಳೊಡನೆ ಹೋಲಿಸಬಹುದಾಗಿದೆ. ಉದಾ : ಕಂಬುಜದ ಕೋಡಿ ಆಂಗ್ ಚುಮ್ನಿಕ್ ಶಾಸನಕ್ಕೂ (629) ಭಾರತದ ಬಾದಾಮಿಯ ಮಂಗಳೀಶನ ಶಾಸನಕ್ಕೂ (578) ಪಟ್ಟದಕಲ್ಲಿನ ಎರಡನೆಯ ವಿಕ್ರಮಾದಿತ್ಯನ ಶಾಸನಗಳಿಗೂ (8ನೆಯ ಶತಮಾನದ ಮಧ್ಯಭಾಗ) ಲಿಪಿ, ಭಾಷೆ ಹಾಗೂ ವ್ಯಾಕರಣ ಪ್ರಕ್ರಿಯೆಗಳಲ್ಲಿ ಹೋಲಿಕೆಯಿದೆ.

6ನೆಯ ಶತಮಾನದಿಂದ 9ನೆಯ ಶತಮಾನದ ಮಧ್ಯಕಾಲದ ಕಂಬುಜದ ಶಾಸನ ಗಳ ಲಿಪಿಗೂ ಅದೇ ಕಾಲದ ದಕ್ಷಿಣ ಭಾರತದ ಪಲ್ಲವ ಹಾಗೂ ವೇಂಗಿ (ಕೃಷ್ಣಾ ಗೋದಾವರಿಗಳ ಮಧ್ಯದೇಶ) ಲಿಪಿಗಳಿಗೂ ಹೆಚ್ಚಿನ ಅಂತರವಿಲ್ಲವೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಯಶೋವರ್ಮನ 9ನೆಯ ಶತಮಾನದ ಶಾಸನಗಳ ಲಿಪಿ ಉತ್ತರ ಭಾರತದ ಆ ಕಾಲದ ನಾಗರೀ ಲಿಪಿಯನ್ನು ಹೋಲುತ್ತದೆಂಬುದು ಪಂಡಿತರ ಅಭಿಪ್ರಾಯ.

ಕಂಬುಜದ ಶಾಸನಗಳು ಏಳನೆಯ ಶತಮಾನದಿಂದ ಸಂಸ್ಕೃತ ಹಾಗೂ ಖ್ಮೆರ್ ಭಾಷೆಗಳಲ್ಲಿ ಏಕಕಾಲದಲ್ಲಿ ರಚಿತವಾದುವು. ಇದೇ ಕಾಲದಲ್ಲಿ ದಕ್ಷಿಣ ಭಾರತದಲ್ಲೂ ಶಾಸನಗಳನ್ನು ಸಂಸ್ಕೃತ ಹಾಗೂ ದೇಶಭಾಷೆಗಳಲ್ಲಿ ಬರೆಯಲಾಯಿತು ಎಂಬುದನ್ನು ಈ ಸಂದರ್ಭದಲ್ಲಿ ಗುರುತಿಸಬಹುದಾಗಿದೆ. ಸಮಾಜದ ಎಲ್ಲ ವರ್ಗಗಳ ಜನರಿಗೂ ಇವು ತಿಳಿಯಲೆಂದು ಬಹುಶಃ ಈ ರೀತಿ ದ್ವಿಭಾಷಾಪದ್ಧತಿಯನ್ನು ಅನುಸರಿಸಲಾಯಿ ತೆಂದು ಅಭಿಪ್ರಾಯಪಡಲಾಗಿದೆ. ಹೀಗೆ ರಚಿತವಾದ ಖ್ಮೆರ್ ಶಾಸನಗಳಲ್ಲಿ ಸಂಸ್ಕೃತ ಪದಗಳ ಪ್ರಭಾವವನ್ನು ಕಾಣಬಹುದಾಗಿದೆ.

ಕಂಬುಜದ ಶಾಸನಗಳನ್ನು ಮೊದಲ ಬಾರಿಗೆ ಬೆಳಕಿಗೆ ತಂದ ಗೌರವ ಎಚ್. ಕೆರ್ನನಿಗೆ ಸಲ್ಲುತ್ತದೆ. ಈತ ಜೂಲ್ಸ್ ಹಾರ್ಮಂಡನಿಂದ ತಯಾರಿಸಲಾದ ಶಾಸನ ಗಳ ಪಡಿಯಚ್ಚುಗಳನ್ನು ಓದಿ ಪರಿಷ್ಕರಿಸಿದ. ಆದರೆ ಪ್ರಪ್ರಥಮವಾಗಿ ಕ್ರಮ ಬದ್ಧವಾಗಿ ಕಂಬುಜದ ಶಾಸನಗಳನ್ನು ಸಂಗ್ರಹಿಸಿದವ ಎಂ. ಐಮೋನಿಯರ್. ಎಂ. ಎ. ಬಾರ್ತ್ ಮತ್ತು ಎಂ. ಎ. ಬರ್ಗೇನ್ ಇವನ್ನು ಸಂಪಾದಿಸಿ ಎರಡು ಭಾಗಗಳಲ್ಲಿ ಪ್ರಕಟಿಸಿದರು.

ಕಂಬುಜದ ಖ್ಮೆರ್ ಭಾಷೆಯ ಶಾಸನಗಳನ್ನು ಎಂ. ಏಮೋನೀರ್ ಎಂಬ ವಿದ್ವಾಂಸ ಲೆ ಕಾಂಬೋಜ್ ಎಂಬ ಉದ್ಗ್ರಂಥದಲ್ಲಿ ಸಂಗ್ರಹಿಸಿ ಮೂರು ಸಂಪುಟಗಳಲ್ಲಿ ಕ್ರಮ ವಾಗಿ 1900, 1901 ಮತ್ತು 1904ರಲ್ಲಿ ಪ್ರಕಾಶಪಡಿಸಿದ. 20ನೆಯ ಶತಮಾನದ ಪ್ರಾರಂಭದಿಂದ ಹಾನಾಯಿಯ ಎಕೋಲ್ ಫ್ರಾನ್ಸೇಸ್ ಸಂಸ್ಥೆ ಎಂ. ಫಿನೋ ಮತ್ತು ಜಿ. ಸೀಡೆಸ್ ಎಂಬ ಫ್ರೆಂಚ್ ವಿದ್ವಾಂಸರ ನೇತೃತ್ವದಲ್ಲಿ ಕಾಲಾನುಕ್ರಮದಲ್ಲಿ ಬೆಳಕಿಗೆ ಬಂದ ಹೊಸ ಶಾಸನಗಳನ್ನು ಸಂಗ್ರಹಿಸಿ ಪ್ರಕಟಿಸುತ್ತಾ ಬಂದಿದೆ.

ಹೀಗೆ ಸಂಗ್ರಹಿಸಿದ ಸಂಸ್ಕೃತ ಹಾಗೂ ಖ್ಮೆರ್ ಶಾಸನಗಳನ್ನು ಅತ್ಯಂತ ಸಮರ್ಪಕವಾದ ರೀತಿಯಲ್ಲಿ ಸಂಪಾದಿಸಿದಾತ ಶ್ರೇಷ್ಠ ತಜ್ಞನಾದ ಜಿ. ಸೀಡೆಸ್. ಇವು ನಾಲ್ಕು ಸಂಪುಟಗಳಲ್ಲಿ ಕ್ರಮವಾಗಿ 1937, 1942, 1951 ಮತ್ತು 1952ರಲ್ಲಿ ಪ್ರಕಾಶಗೊಂಡಿವೆ.

ಭಾರತದ ಚರಿತ್ರಕಾರರಲ್ಲೊಬ್ಬನಾದ ಡಾ. ಆರ್. ಸಿ. ಮಜುಂದಾರ್ ಕಂಬುಜದ ಶಾಸನಗಳು ಎಂಬ ಹೊತ್ತಿಗೆಯನ್ನು ಸಂಪಾದಿಸಿ ಟಿಪ್ಪಣಿಯೊಡನೆ 1953ರಲ್ಲಿ ದಿ ಏಷಿಯನ್ ಸೊಸೈಟಿ, ಕಲ್ಕತ್ತ ಅವರ ವತಿಯಿಂದ ಪ್ರಕಟಿಸಿದ್ದಾನೆ.

(ಎಸ್.ವಿ.ಎಸ್.ಬಿ.)

**ಕಂಸ[1] :** ಯದುವಂಶದ ಉಗ್ರಸೇನನ ಮಗ. ಕೃಷ್ಣವೈರಿಗಳಲ್ಲಿ ಒಬ್ಬ. ಇವನ ಜನನವೇ ಕಾಲನೇಮಿಯೆಂಬ ರಾಕ್ಷಸನ ಅಂಶದಿಂದ. ಹಾಗಾಗಿ ದುಷ್ಟಗುಣ ಗಳು ಮೊದಲಿನಿಂದಲೂ ಇವನಲ್ಲಿ ಬೆಳೆದುಬಂದುವು. ಪ್ರಾಯಕ್ಕೆ ಬಂದಮೇಲೆ ತಂದೆ ಯನ್ನು ಸೆರೆಯಲ್ಲಿಟ್ಟು ತಾನೇ ಮಥುರೆಗೆ ರಾಜನಾದ. ಜರಾಸಂಧನ ಮಕ್ಕಳಾದ ಅಸ್ತಿ ಮತ್ತು ಪ್ರಾಸ್ತಿಯರು ಈತನ ಹೆಂಡಿರು. ತಂಗಿಯಾದ ದೇವಕಿಯನ್ನು ವಸು ದೇವನಿಗೆ ಕೊಟ್ಟು ವಿಜೃಂಭಣೆಯಿಂದ ಮದುವೆ ಮಾಡಿದ. ಅವಳ ಎಂಟನೆಯ ಗರ್ಭದ ಮಗು ತನ್ನನ್ನು ಕೊಲ್ಲುತ್ತದೆ ಎಂದ ಅಶರೀರವಾಣಿಯ ಮಾತು ಕೇಳಿ ವ್ಯಗ್ರನಾದ. ತಂಗಿಯನ್ನೂ ಭಾವ ವಾಸುದೇವನನ್ನೂ ಸೆರೆಯಲ್ಲಿಟ್ಟ. ಅವರ ಸಂತಾನವನ್ನು ಕುಡಿಯಲ್ಲೇ ಕತ್ತರಿಸ ಬಯಸಿ ದೇವಕಿಗೆ ಹುಟ್ಟಿದ ಆರು ಮಕ್ಕಳನ್ನೂ ಕೊಂದ.

ದೇವತೆಗಳ ಹಂಚಿಕೆಯಂತೆ ಏಳನೆಯ ಗರ್ಭ ನಂದಗೋಪನ ಮಡದಿ ರೋಹಿಣಿಯ ಬಳಿ ಬಲರಾಮನಾಗಿ ಬೆಳೆಯಿತು. ಎಂಟನೆಯ ಗರ್ಭದಲ್ಲಿ ಶ್ರೀಕೃಷ್ಣ ಹುಟ್ಟಿದ. ಒಡನೆಯೇ ದೇವದೇವನ ನಿರ್ದೇಶನಾನುಸಾರ ವಸುದೇವ ಮಗುವನ್ನು ಗೋಪನ ಮನೆಗೆ ಕೊಂಡೊಯ್ದು ಅಲ್ಲಿ ಆಗತಾನೇ ಜನಿಸಿದ್ದ ಹೆಣ್ಣುಮಗುವನ್ನು ತಂದ. ಎಂಟನೆಯ ಮಗು ಹುಟ್ಟಿತೆಂದು ತಿಳಿದ ಕಂಸ ಅದನ್ನು ಕೊಲ್ಲಲು ಪ್ರಯತ್ನಿಸಿದ. ಆದರೆ ಮಾಯೆಯ ಅಂಶವಾದ ಆ ಮಗು ಕೈಯಿಂದ ಹಾರಿ ಆಕಾಶಕ್ಕೆ ಚಿಮ್ಮಿ ಅವನ ಮೃತ್ಯು ನಂದಗೋಕುಲದಲ್ಲಿ ಬೆಳೆಯುತ್ತಿರುವ ಅಂಶವನ್ನು ಘೋಷಿಸಿ ಮಾಯವಾಯಿತು.

ಕಂಸ ಕೃಷ್ಣನನ್ನು ಕೊಲ್ಲಲು ಪರಿಪರಿಯ ಯತ್ನಗಳನ್ನು ಮಾಡಿದ. ಪೂತನಿ, ಶಕಟ, ಧೇನುಕ, ಯಮಳಾರ್ಜುನ, ಕೇಶಿ, ತೃಣಾವರ್ತ ಮುಂತಾದ ರಾಕ್ಷಸರನ್ನು ಆ ಕೆಲಸಕ್ಕಾಗಿ ಕಳುಹಿಸಿದ. ಆದರೆ ಅವನ ದುಷ್ಟಯೋಚನೆಗಳೆಲ್ಲ ವಿಫಲವಾದುವು. ಅವರೆಲ್ಲ ಕೃಷ್ಣನಿಂದ ಹತರಾದರು. ಆಮೇಲೆ ಅಕ್ರೂರನನ್ನು ಕಳಿಸಿ ಬಿಲ್ಲುಹಬ್ಬದ ನೆಪದಲ್ಲಿ ಕೃಷ್ಣಬಲರಾಮರನ್ನು ಮಧುರೆಗೆ ಕರೆಸಿದ. ಅವರು ಸಂತೋಷದಿಂದ ಬಂದವರೇ ಕಂಸನ ದುಷ್ಟತನಕ್ಕೆ ಮಂಗಳ ಹಾಡಿದರು. ಚಾಣೂರ ಮುಷ್ಟಿಕರೆಂಬ ಮಲ್ಲರನ್ನೂ ಕುವಲಯಾಪೀಡವೆಂಬ ಆನೆಯನ್ನೂ ಕೊಂದರು. ಕೊನೆಗೆ ಕೃಷ್ಣನ ಮುಷ್ಟಿಯಲ್ಲಿ ಕಂಸ ಹತನಾದ.

ಕಂಸನ ವಿಚಾರ ಭಾಗವತ, ಹರಿವಂಶ, ಮಹಾಭಾರತಗಳಲ್ಲಿ ಬರುತ್ತದೆ. ಕನ್ನಡದ ಪ್ರಸಿದ್ಧಕವಿ ಚಾಟುವಿಠಲನಾಥನ ಷಟ್ಪದೀರೂಪದ ಭಾಗವತ ಕಾವ್ಯದಲ್ಲಿಯೂ ರುದ್ರ ಭಟ್ಟನ ಜಗನ್ನಾಥವಿಜಯದಲ್ಲೂ ಅವನ ಪಾತ್ರ ಚಿತ್ರಿತವಾಗಿದೆ. ಪ್ರಚಲಿತವಾದ ಈ ಕೃತಿಗಳಲ್ಲಿ ಬರುವ ಕಥೆಗೂ ಮೂಲ ಭಾಗವತದಲ್ಲಿ ಬರುವ ಕಥೆಗೂ ಇರುವ ಎರಡು ಮುಖ್ಯ ವ್ಯತ್ಯಾಸಗಳನ್ನು ನೋಡಬೇಕು. ಭಾಗವತದಲ್ಲಿ ಕಂಸ ತಂಗಿಯ ಮೇಲೆ ತುಂಬ ಪ್ರೀತಿವಿಶ್ವಾಸಗಳುಳ್ಳವನು. ಅಶರೀರವಾಣಿಯ ಮಾತು ಕೇಳಿ ಕುಪಿತನಾಗಿ ತಂಗಿಯನ್ನು ಕೊಲ್ಲಲು ಹೋಗುತ್ತಾನೆ, ನಿಜ. ಆದರೆ ದೇವಕಿಯ ಹೊಟ್ಟೆಯಲ್ಲಿ ಹುಟ್ಟುವ ಮಕ್ಕಳನ್ನೆಲ್ಲ ಅವನಿಗೆ ಒಪ್ಪಿಸಿಬಿಡುವುದಾಗಿ ವಸುದೇವನೇ ತಿಳಿಸಿದಾಗ ಅದಕ್ಕೆ ಒಪ್ಪಿ ಅವರನ್ನು ಬಂಧನದಲ್ಲಿಡುತ್ತಾನೆ. ಮೊದಲ ಮಗು ಹುಟ್ಟಿದೊಡನೆ ವಸುದೇವ ಅದನ್ನು ತಂದು ಕಂಸನ ಕೈಗಿತ್ತಾಗ ಅವನಿಗೆ ಸಂತೋಷವಾಗುತ್ತದೆ. ಆಡಿದ ಮಾತನ್ನು ಉಳಿಸಿಕೊಂಡ ಸತ್ಯಸಂಧ ನೀನು ಎಂದು ವಸುದೇವನನ್ನು ಬಾಯಿತುಂಬ ಹೊಗಳಿ "ನಿಮ್ಮ ಎಂಟನೆಯ ಮಗು ನನ್ನ ಮೃತ್ಯುವಾದ್ದರಿಂದ ಅನ್ಯಾಯವಾಗಿ ಇವುಗಳನ್ನು ಏಕೆ ಕೊಲ್ಲಲಿ" ಎಂದು ಹಿಂದಕ್ಕೆ ಕೊಟ್ಟುಬಿಡುತ್ತಾನೆ. ಹಾಗೆಯೇ ಎಂಟನೆಯ ಶಿಶು ಆಕಾಶಕ್ಕೆ ಹಾರಿ ನಿನ್ನ ಶತ್ರು ಬೇರೆಕಡೆ ಬೆಳೆಯುತ್ತಿದ್ದಾನೆ ಎಂದು ತಿಳಿಸಿದಾಗಲೂ ಕಂಸ ಕ್ಷಣಕಾಲ ದಿಗ್ಭ್ರಮೆಗೊಳ್ಳುತ್ತಾನೆ. ವಿಧಿಯ ಕೈವಾಡ ಅವನಿಗೆ ಅಚ್ಚರಿಯುಂಟುಮಾಡುತ್ತದೆ. ಒಡನೆಯೇ ವಿವೇಕ ಮುಂದಾಗಿ ಅವನು ವಸುವೇವನನ್ನು ಕುರಿತು "ಇನ್ನು ನಿಮ್ಮನ್ನು ಹಿಂಸಿಸಿ ಉಪಯೋಗವೇನು? ಸ್ವಾರ್ಥದಿಂದ ಅವಿವೇಕಿಯಾಗಿ ಸ್ನೇಹಬಾಂಧವ್ಯಗಳನ್ನು ತ್ಯಜಿಸಿ ನಾನು ಪಾಪಿಯಾದೆ. ಸ್ವಂತ ತಂಗಿಯನ್ನೇ ಬಳಲಿಸಿದೆ. ನೀವು ನನ್ನನ್ನು ಕ್ಷಮಿಸಿರಿ" ಎಂದು ಪಶ್ಚಾತ್ತಾಪದಿಂದ ಕೇಳಿಕೊಳ್ಳುತ್ತಾನೆ. ಅವರನ್ನು ಸೆರೆಯಿಂದ ಬಿಡಿಸುತ್ತಾನೆ.

ಹೀಗೆ ಎರಡು ಬಗೆಯ ಕಂಸಚಿತ್ರ ನಮಗೆ ದೊರೆಯುತ್ತದೆ. ವಾಸ್ತವವಾಗಿ ಕಂಸ ಖಳನಲ್ಲ. ಆದರೆ ಮೃತ್ಯುಭೀತಿ, ಸ್ವಾರ್ಥ ಅವನನ್ನು ದುಷ್ಟತನಕ್ಕೆ ಚೋದಿಸುತ್ತದೆ. ವಿಧಿವಶನಾಗಿ, ದುರ್ಮಂತ್ರಿಗಳ ಪ್ರಚೋದನೆಗೆ ಸಿಕ್ಕಿ ಕಂಸ ದುಷ್ಟನಾಗುತ್ತಾನೆ. (ಆರ್.ಎಲ್.ಎ)

**ಕಂಸ²:** ಒಂದು ವೃತ್ತದ ಪರಿಧಿಯನ್ನು ಅದರ ಎರಡು ನಿರ್ದಿಷ್ಟ ತ್ರಿಜ್ಯಗಳಿಂದ ವಿಭಾಗಿಸಿದಾಗ ದೊರೆಯುವ ಪ್ರತಿಯೊಂದು ವಕ್ರರೇಖೆಗೂ (ಎಂದರೆ ಪರಿಧಿ ಖಂಡಕ್ಕೂ) ಈ ಹೆಸರಿದೆ (ಆರ್ಕ್).ವೃತ್ತ ಚಾಪ ಪರ್ಯಾಯನಾಮ. ಚಿತ್ರದಲ್ಲಿ OA, OB ತ್ರಿಜ್ಯಗಳು ($\angle AOB=\theta$) APB ಮತ್ತು AQB ಎನ್ನುವ ಎರಡು ಕಂಸಗಳನ್ನು ರಚಿಸುತ್ತವೆ. ಇವುಗಳಲ್ಲಿ ಕಿರಿಯದರ (APB) ಹೆಸರು ಹ್ರಸ್ವ ಕಂಸ (ಮೈನರ್ ಆರ್ಕ್) ಮತ್ತು ಹಿರಿಯದರ ಹೆಸರು(AQB) ದೀರ್ಘ ಕಂಸ (ಮೇಜರ್ ಆರ್ಕ್). $\theta$ಕೋನವನ್ನು ರೇಡಿಯನ್ ಮಾನದಲ್ಲಿ ಅಳೆದಾಗ ಕಂಸ APB ಯ ಉದ್ದ $a\theta$ ಆಗುವುದು. $a$ ಯು ವೃತ್ತದ ತ್ರಿಜ್ಯ.



ಚಿತ್ರ 1

ಕಾರ್ಟೀಸಿಯನ್ ನಿರ್ದೇಶಕ ವ್ಯವಸ್ಥೆಯಲ್ಲಿ ದತ್ತ ವಕ್ರರೇಖೆಯ ನಿರ್ದಿಷ್ಟ ಚಾಪದ ಉದ್ದವನ್ನು ಕಂಡುಹಿಡಿಯಲು ಎರಡು ಸೂತ್ರಗಳಿವೆ.



ಚಿತ್ರ 2 : ಚಾಪ AB $=\int_{x=a}^{b}\sqrt{1+\left(\frac{dy}{dx}\right)^2}\,dx$



ಚಿತ್ರ 3 : ಚಾಪ CD $=\int_{y=l}^{m}\sqrt{1+\left(\frac{dx}{dy}\right)^2}\,dy$



ಚಿತ್ರ 4 : ಧ್ರುವೀಯ ನಿರ್ದೇಶಕಗಳಲ್ಲಿ ಚಾಪ EF $=\int_{\theta=\alpha}^{\beta}\sqrt{r^2+\left(\frac{dr}{d\theta}\right)^2}\,d\theta$

**ಕಂಸಾಳೆ :** ದೇವರ ಗುಡ್ಡರು ಎಂಬ ಒಂದು ವರ್ಗದ ಜಾನಪದ ಗಾಯಕರು ಬಳಸುವ ಕಂಚಿನ ತಾಳಗಳಿವು. ಕಾಂಸ್ಯತಾಲ ಎಂಬುದರ ತದ್ಭವ ರೂಪವೆ ಕಂಸಾಳೆ. ಸಾಧಾರಣ ತಾಳಗಳಿಗಿಂತ ಕಂಸಾಳೆ ಗಾತ್ರದಲ್ಲಿ ದೊಡ್ಡದು ; ಆಕೃತಿಯಲ್ಲಿ ವಿಶಿಷ್ಟವಾದುದು. ಅಂಗೈ ಅಗಲದ ಚಕ್ರಾಕಾರವಾದ ಬಟ್ಟಲು, ಚಿಕ್ಕ ಜಾಗಟೆಯಂತಿರುವ ಮಟ್ಟಸವಾದ ಮೇಲುತಾಳ, ಮೇಲು ತಾಳಕ್ಕೆ ಸೇರಿದಂತೆ ಹಿಡಿದುಕೊಳ್ಳಲು ಮಾಡಿಕೊಂಡ ಗೊಂಡೇವದ ಕಲಾತ್ಮಕ ಹುರಿ——ಇವು ಕಂಸಾಳೆಯ ಮುಖ್ಯ ಭಾಗಗಳು. ಬಟ್ಟಲನ್ನು ಮೇಲು ಮುಖವಾಗಿ ಅಂಗೈ ಮೇಲೆ ಇರಿಸಿಕೊಂಡು ಬಲಗೈಯಲ್ಲಿ ಹಿಡಿದ ಮೇಲು ತಾಳವನ್ನು ಅದರ ಮೇಲೆ ಕುಟ್ಟುವುದರಿಂದ ಕಣಿಕಣಿ ನಾದ ಉಂಟಾಗುತ್ತದೆ. ಈ ನಾದದ ಹಿನ್ನೆಲೆಯಲ್ಲಿ ಗುಡ್ಡರು ಅನೇಕ ಗೀತೆಗಳನ್ನೂ



ಕಂಸಾಳೆ ತಾಳಗಳು

ಲಾವಣಿಗಳನ್ನೂ ಹಾಡುತ್ತಾರೆ. ಒಂದು ಆರಾಧ್ಯದೈವದ ಪರಂಪರೆಗೆ ಈ ವಾದ್ಯ ಸೇರುವುದರಿಂದ ವಿಶಿಷ್ಟವರ್ಗದ ಭಕ್ತರು ಇದನ್ನು ಬಳಸುವುದರಿಂದ ಇದೊಂದು ಧಾರ್ಮಿಕವಾದ್ಯವೆನಿಸಿದೆ. ಜನಪದ ಕಲಾವಿದರು ಮಾತ್ರ ಇದನ್ನು ಬಳಸುವುದರಿಂದ ಇದೊಂದು ಜಾನಪದ ವಾದ್ಯವೂ ಹೌದು. ವೃತ್ತಿಗಾಯಕರು ಬಳಸುವ ವಾದ್ಯಗಳಲ್ಲೆಲ್ಲ ಭಿಕ್ಷಾಪಾತ್ರೆಯಾಗಿಯೂ ಬಳಸಲ್ಪಡುವ ಏಕಮಾತ್ರ ಸಾಧನವಿದು. ಗುಡ್ಡರು ಭಿಕ್ಷೆಯನ್ನು ಸ್ವೀಕರಿಸುವಾಗ ಕಂಸಾಳೆಯ ಬಟ್ಟಲನ್ನು ಮಾತ್ರ ಮುಂದೆ ಒಡ್ಡಿ ಅನಂತರ ಜೋಳಿಗೆಗೆ ಸುರಿದುಕೊಳ್ಳುತ್ತಾರೆ. ಇದೊಂದು ಪವಿತ್ರ ಸಾಧನವಾದುದರಿಂದ, ಅರ್ಪಿಸುವ ಕಾಣಿಕೆ ಮಲೆಯ ಮಾದಯ್ಯನಿಗೆ ಸಮರ್ಪಿತವಾದಂತಯೇ ಎಂಬ ಭಾವನೆ ಗುಡ್ಡನಿಗೂ ದಾನಿಗೂ ಇರುತ್ತದೆ. ಕಂಸಾಳೆಯ ಮಹಿಮೆ ದೊಡ್ಡದು ಎಂದು ಭಾವಿಸುವ ಗುಡ್ಡ ಅದನ್ನು ಪೂಜಿಸುತ್ತಾನೆ, ಕೈಗೆತ್ತಿಕೊಳ್ಳುವ ಮುನ್ನ ಶರಣುಮಾಡಿ ಕೊಳ್ಳುತ್ತಾನೆ. ಮಾದಯ್ಯನ ಕೋಲನ್ನು ಕಂಕುಳಲ್ಲಿಟ್ಟು, ಕೈಯಲ್ಲಿ ಕಂಸಾಳೆ ಹಿಡಿದು, ಹಸುಬೆಯನ್ನು ಹೆಗಲಿಗೆ ಹಾಕಿ, ಬುತ್ತಿಯಗಂಟನ್ನು ತಲೆಯ ಮೇಲೆ ಹೊತ್ತು ಯಾತ್ರೆ ಹೊರಡುತ್ತಾನೆ, ಗುಡ್ಡ ಮಾದಯ್ಯನ ಗಿರಿಗೆ. ಜೊತೆಯಲ್ಲಿ ತನ್ನ ಮರಿಗುಡ್ಡರನ್ನೂ ಜೊತೆಗಾರರನ್ನೂ ಕರೆದುಕೊಳ್ಳುತ್ತಾನೆ. ಶಿವರಾತ್ರಿ ನವರಾತ್ರಿಗಳಲ್ಲಿ ಮಾದಯ್ಯನ ಗಿರಿಗೆ ಯಾತ್ರೆ ಹೊರಡುವ ಭಕ್ತರು ಅನೇಕ ತಂಡಗಳಾಗಿ ಒಂದೊಂದು ತಂಡದವರೂ ಇಂಥ ಗುಡ್ಡರ ಪುಟ್ಟ ಪರಿವಾರವನ್ನು ಮುಂದೆ ಬಿಟ್ಟುಕೊಂಡು ಹೊರಡುತ್ತಾರೆ. ದಟ್ಟವಾದ ಅರಣ್ಯ ಪ್ರದೇಶದಲ್ಲಿ ಏಳುಮಲೆಗಳಿಗೆ ಸಾಗಬೇಕಾಗಿದ್ದ ಈ ಭಕ್ತರಿಗೆ ಕಂಸಾಳೆಯ ಕಣಿಕಣಿನಾದ ಒಂದು ರೀತಿಯ ರಕ್ಷೆಯೂ ಆಗಿದ್ದಿರಬಹುದು. ನಾಲ್ಕಾರು ಕಂಸಾಳೆಗಳ ನಾದ ಕೂಡಿದಾಗ ಕಾಡಿನ ದುಷ್ಟಪ್ರಾಣಿಗಳು ಅಂಜಿ ದೂರ ಸರಿಯುವಷ್ಟು ದೊಡ್ಡನಾದ ಶಬ್ದ ಕೇಳಿಬರುತ್ತದೆ. ಕಂಸಾಳೆಯ ನಾದ, ಮಾದಯ್ಯನನ್ನು ಕುರಿತ ಜೈಕಾರ, ತಮ್ಮಟೆಗಳ ಸದ್ದು ಕಾಡನ್ನು ಭೇದಿಸಿಕೊಂಡು ಸಾಗುತ್ತಿದ್ದ ಯಾತ್ರಾರ್ಥಿಗಳ ಅಂತರಂಗದಲ್ಲಿ ಭಕ್ತಿಯನ್ನೂ ಧೈರ್ಯವನ್ನೂ ಸೋಲದೆ ಮುಂದೆ ಸಾಗುವ ಉತ್ಸಾಹವನ್ನೂ ತುಂಬುತ್ತವೆ. ಅಲ್ಲದೆ ಭಕ್ತರು ತಾವು ತಂಗುವ ಪ್ರದೇಶಗಳಲ್ಲಿ ರಾತ್ರಿಯೆಲ್ಲ ಮಾದಯ್ಯನ ಪುಣ್ಯ ಕಥೆಗಳನ್ನುಹಾಡುತ್ತ ಕಂಸಾಳೆಯನ್ನು ಬಾರಿಸುತ್ತ ಎಚ್ಚರವಾಗಿರುತ್ತಾರೆ. ಮಾದಯ್ಯನ ಜಾತ್ರೆಯಲ್ಲಂತೂ ಎಲ್ಲ ಕಡೆಯ ಕಂಸಾಳೆಯ ಗುಡ್ಡರೂ ಸೇರಿ ಅವರದೇ ಒಂದು ದೊಡ್ಡ ಕೂಟವಾಗುತ್ತದೆ. ಎಲ್ಲೆಂದರಲ್ಲಿ ಕಂಸಾಳೆಯ ಮೇಳಗಳು ನಡೆಯುತ್ತಿರುತ್ತವೆ.

ಭಿಕ್ಷಾಟನೆ ಹಾಗೂ ಯಾತ್ರೆಗಳ ಸಂದರ್ಭದಲ್ಲಿ ಬಿಡಿಹಾಡುಗಳನ್ನು ಹೇಳಿಕೊಳ್ಳಲು ಮಾತ್ರವಲ್ಲದೆ ವಿಶೇಷ ಸಂದರ್ಭಗಳಲ್ಲಿ, ಹಬ್ಬ, ಆಚರಣೆಗಳಲ್ಲಿ ಮೇಳವನ್ನು ನಡೆಸಲೂ ಬೀಸು ಕಂಸಾಳೆಯ ನೃತ್ಯದಲ್ಲಿ ಹಾಡಲೂ ಕುಣಿಯಲೂ ಕಂಸಾಳೆಯನ್ನು ಬಳಸುತ್ತಾರೆ. ಗುಡ್ಡರು ಹಾಡುವ ಗೀತೆಗಳು ತಾಳದ ಗತ್ತಿಗೆ ತಕ್ಕಂತೆ ವಿವಿಧ ಮಟ್ಟುಗಳಲ್ಲಿರುತ್ತವೆ. ಕಂಸಾಳೆಯ ನಾದವೈಖರಿಗೆ ತಕ್ಕಂತೆ, ಶಕ್ತಿವತ್ತಾದ, ಲಯಬದ್ಧವಾದ ರಚನೆಗಳವು.



ಕಂಸಾಳೆ ಪದ ಹಾಡುವವ

ಕೂಗೊ ಕೂಗೊ ಮಾದೇವನ
ಕೂಗಯ್ಯ ದುಂಡು ಮಾದೇವನ
ಕೂಗಿದರೆ ಕುಣಿಯುತ್ತ ಬರುವನು ಮಾದೇವ
ಕೂಗಯ್ಯ ಮುದ್ದು ಮಾದೇವನ

ಮಗ್ಗ ಮಗ್ಗಲ ಗಿರಿಗೆ
ಮೊಗ್ಗು ಬಂದವು ನೋಡಿರಿ
ಮಾದಯ್ನ ಗಿರಿಗೆ
ಹೂವು ಬಂದವು ನೋಡಿರಿ

ಕಂಸಾಳೆ ಮೇಳದಲ್ಲಿ ಏಕತಾರಿ, ದಮ್ಮಡಿಗಳನ್ನು ಹಿಮ್ಮೇಳದವರು ಬಳಸಿದರೂ ಮುಖ್ಯಗುಡ್ಡ, ಮುಮ್ಮೇಳಗಾರ ಕಂಸಾಳೆಯನ್ನೇ ಹಿಡಿಯಬೇಕು. ಇದು ಕುಳಿತು ಮಾಡುವ ಮೇಳ. ನಡುವೆ ಕಂಸಾಳೆ ಹಿಡಿದು ಮುಖ್ಯ ಹಾಡುಗಾರ ಕುಳಿತಿರುತ್ತಾನೆ. ಅವನ ಅಕ್ಕ ಪಕ್ಕದಲ್ಲಿ ಹಿಮ್ಮೇಳದ ಗುಡ್ಡರು ಕುಳಿತಿರುತ್ತಾರೆ. ಕಂಸಾಳೆಯ ಗತ್ತಿಗೆ ತಕ್ಕಂತೆಯೇ ತಾಳಕ್ಕೆ ಅನುಗುಣವಾಗಿಯೇ ಕಥೆಯನ್ನು ಪದ್ಯ ಗದ್ಯಗಳಲ್ಲಿ ನಿರೂಪಿಸಲಾಗುತ್ತದೆ.

ಮಲೆಯ ಮಾದೇವ ಬರುವ ಚೆಂದವ
ನೋಡಿ ನಮ್ಮ ಶಿವನ

ಪರಮಾಣುಗಳು ಮೂರು ಆಯಾಮಗಳಲ್ಲಿ (ಡೈಮೆನ್ಷನ್ಸ್) ವ್ಯವಸ್ಥಿತವಾಗುವ ಕ್ರಮ ಕಕ್ಷಕಗಳ ಆಕಾರಗಳನ್ನು ಅವಲಂಬಿಸಿರುವುದರಿಂದ ರಸಾಯನಶಾಸ್ತ್ರಜ್ಞನಿಗೆ ಕಕ್ಷಕಗಳ ಆಕಾರಗಳನ್ನು ನಿರ್ಧರಿಸುವುದರಲ್ಲಿ ಆಸಕ್ತಿ ಹೆಚ್ಚು.

ಪರಮಾಣುವಿನಲ್ಲಿರುವ ಎಲೆಕ್ಟ್ರಾನನ್ನು ಪ್ರತ್ಯಕ್ಷವಾದ ಕಣವೆಂದು ಭಾವಿಸುವ ಬದಲು ವಿಸರಿತವಾದ ಮೇಘವೆಂದು (ಡಿಫ್ಯೂಸ್ಡ್ ಕ್ಲೌಡ್) ಕಲ್ಪಿಸಿಕೊಳ್ಳುವುದು ಉತ್ತಮ. ಬಹಳ ವೇಗದಲ್ಲಿ ಚಲಿಸುತ್ತಿರುವ ಎಲೆಕ್ಟ್ರಾನಿನ ಛಾಯಾಚಿತ್ರವನ್ನು ತೆಗೆದು ಪಡೆದ ಅಸ್ಪಷ್ಟ ಚಿತ್ರವೆಂದೂ ಈ ಮೇಘವನ್ನು ಕಲ್ಪಿಸಿಕೊಳ್ಳಬಹುದು. ಇಂಥ ಮೇಘದ ಆಕಾರವೇ ಕಕ್ಷಕದ ಆಕಾರ. ಮೇಘದ ಸಾಂದ್ರತೆ ಎಲ್ಲೆಡೆಯಲ್ಲಿಯೂ ಒಂದೇ ಆಗಿರದೆ ಎಲೆಕ್ಟ್ರಾನನ್ನು ಕಾಣುವ ಸಂಭವ ಹೆಚ್ಚಾಗಿದ್ದೆಡೆಯಲ್ಲಿ ಅಧಿಕವಾಗಿರುತ್ತದೆ. ಅಂದರೆ ಈ ಪ್ರದೇಶಗಳಲ್ಲಿ ಸರಾಸರಿ ಋಣ ವಿದ್ಯುದಂಶ ಅಥವಾ ಎಲೆಕ್ಟ್ರಾನ್ ಸಾಂದ್ರತೆ ಅತ್ಯಧಿಕವಾಗಿರುವುದು. ನಿಕೃಷ್ಟ ಶಕ್ತಿಮಟ್ಟದಲ್ಲಿರುವ ಕಕ್ಷಕವನ್ನು ಚಾರಿತ್ರಿಕ ಕಾರಣಗಳಿಗೋಸ್ಕರ $1s$ ಕಕ್ಷಕವೆಂದು ಕರೆಯಲಾಗಿದೆ. ಒಂದೇ ಎಲೆಕ್ಟ್ರಾನ್ ಇರುವ ಜಲಜನಕದ ಸಂದರ್ಭದಲ್ಲಿ ಷ್ರೋಡಿಂಗರ್ ಸಮೀಕರಣವನ್ನು ಅನ್ವಯಿಸಿ ಎಲೆಕ್ಟ್ರಾನ್ ಸಂಭವ ಪ್ರಸರಣವನ್ನು ನಿರ್ಧರಿಸಿದರೆ 1ನೆಯ ಚಿತ್ರದಲ್ಲಿ ತೋರಿಸಿರುವ ಗೋಳಾಕಾರದ ಮೇಘಾಕೃತಿ ದೊರೆಯುವುದು. ಇದರ ಅಂಚುಗಳು ಸುಸ್ಪಷ್ಟವಾಗಿರದೆ ಮಸುಕಾಗಿವೆ. ಕೇಂದ್ರದಲ್ಲಿ ನ್ಯೂಕ್ಲಿಯಸ್ಸಿದೆ. ಕಕ್ಷಕಕ್ಕೆ ಸುಸ್ಪಷ್ಟವಾದ ಎಲ್ಲೆಕಟ್ಟು ಇಲ್ಲವಾಗಿ ಎಲೆಕ್ಟ್ರಾನನ್ನು ನ್ಯೂಕ್ಲಿಯಸ್ಸಿನಿಂದ ಎಷ್ಟು ದೂರದಲ್ಲಿಯಾದರೂ—ಆಕಾಶಗಂಗೆಯಲ್ಲಿ ಸಹ—ಕಾಣಬಹುದಾದ ಸಾಧ್ಯತೆಯನ್ನು, ಅದೆಷ್ಟೇ ಅಲ್ಪವಾದರೂ ಸಹ, ತಳ್ಳಿಹಾಕುವಂತಿಲ್ಲ. ವಾಸ್ತವವಾಗಿ ನ್ಯೂಕ್ಲಿಯಸ್ಸಿನಿಂದ ನಿರ್ದಿಷ್ಟ ಅಂತರದಿಂದಾಚೆ ಹೋದಂತೆ ಎಲೆಕ್ಟ್ರಾನನ್ನು ಕಾಣುವ ಸಂಭವ ಬಹು ಶೀಘ್ರವಾಗಿ ಕಡಿಮೆಯಾಗುತ್ತದೆ. ಆದ್ದರಿಂದ ವಿದ್ಯುದಂಶದ ಪ್ರಸರಣವನ್ನು 1ನೆಯ ಚಿತ್ರ ಹೆಚ್ಚುಕಡಿಮೆ ಸರಿಯಾಗಿಯೇ ನಿರೂಪಿಸುತ್ತದೆ ಎನ್ನಬಹುದು. ಸರಳತೆಯ ದೃಷ್ಟಿಯಿಂದ ಕಕ್ಷಕವನ್ನು 2ನೆಯ ಚಿತ್ರದಲ್ಲಿ ತೋರಿಸಿರುವಂತೆ ರೇಖೆಯಿಂದ ತೋರಿಸಬಹುದು. ಈ ರೇಖೆಯ ಒಳಭಾಗದಲ್ಲಿ ಎಲೆಕ್ಟ್ರಾನ್ 95%ರಷ್ಟು ಕಾಲ ಇರುವುದೆಂದು ಕಲ್ಪಿಸಿಕೊಳ್ಳಬಹುದು.



ಚಿತ್ರ 1



ಚಿತ್ರ 2

$2s$ ಕಕ್ಷಕವು $1s$ ಕಕ್ಷಕದ ಅನಂತರದ ಉನ್ನತ ಶಕ್ತಿಮಟ್ಟಕ್ಕೆ ಸರಿಹೊಂದುತ್ತದೆ. ಇದಕ್ಕೆ ಸಹ ಗೋಳಾಕಾರವಿದೆ. ಇದು $1s$ ಕಕ್ಷಕಕ್ಕಿಂತ ಗಾತ್ರದಲ್ಲಿ ದೊಡ್ಡದು. $2s$ ಕಕ್ಷಕದ ಅನಂತರ ಸಮಾನಶಕ್ತಿಯ ಮೂರು $2p$ ಕಕ್ಷಕಗಳಿವೆ. 3ನೆಯ ಚಿತ್ರದಲ್ಲಿ ತೋರಿಸಿರುವಂತೆ ಪ್ರತಿ $p$ ಕಕ್ಷಕದ ಆಕಾರ ಇಗ್ಗುಂಡಿನಂತಿದೆ (ಡಂಬೆಲ್). ಇದರಲ್ಲಿ ಎರಡು ಹೋಳುಗಳಿವೆ ; ಪರಮಾಣುವಿನ ನ್ಯೂಕ್ಲಿಯಸ್ಸು ಇವುಗಳ ನಡುವಿನಲ್ಲಿದೆ. ಪ್ರತಿಯೊಂದು $2p$ ಕಕ್ಷಕದ ಅಕ್ಷವು ಉಳಿದೆರಡು $2p$ ಕಕ್ಷಕಗಳ ಅಕ್ಷಗಳಿಗೆ ಲಂಬವಾಗಿದೆ. ಈ ಮೂರು ಕಕ್ಷಕಗಳನ್ನು ಪ್ರತ್ಯೇಕವಾಗಿ ಗುರುತಿಸಲು ಅನುಕೂಲವಾಗುವಂತೆ ಇವನ್ನು $2p_x$ $2p_y$ ಮತ್ತು $2p_z$ಗಳೆಂದು ಕರೆಯಲಾಗಿದೆ. $x$, $y$ ಮತ್ತು $z$ಗಳು ತತ್ಸಂಬಂಧಿತ ಅಕ್ಷಗಳನ್ನು ಸೂಚಿಸುತ್ತವೆ.

$d$ ಕಕ್ಷಕಗಳಲ್ಲಿ 4ನೆಯ ಚಿತ್ರದಲ್ಲಿ ತೋರಿಸಿರುವಂತೆ ನ್ಯೂಕ್ಲಿಯಸ್ಸಿನ ಸುತ್ತಲೂ ನಾಲ್ಕು ಬಾದಾಮಿಗಳು ಇವೆ. ಐದನೆಯದು ಒಂದು ಅಕ್ಷದ ಮೇಲೆ ಜೋಡಣೆಯಾಗಿದೆ.




ಚಿತ್ರ 3

ಬಹುಎಲೆಕ್ಟ್ರಾನಿಕ ಪರಮಾಣುಗಳಲ್ಲಿ ಎಲೆಕ್ಟ್ರಾನುಗಳ ಪ್ರಸರಣವನ್ನು ನಿರ್ಧರಿಸುವ ಅಂದರೆ ಪರಮಾಣುವಿನ ಎಲೆಕ್ಟ್ರಾನಿಕ ವಿನ್ಯಾಸವನ್ನು ನಿರ್ಧರಿಸುವ ಕೆಲವು ನಿಯಮಗಳಿವೆ. ಈ ನಿಯಮಗಳಲ್ಲಿ ಪೌಲಿಯ ಬಹಿಷ್ಕರಣ ತತ್ತ್ವ (ಪೌಲೀಸ್ ಎಕ್ಸ್‌ಕ್ಲೂಷನ್ ಪ್ರಿನ್ಸಿಪಲ್) ಬಹಳ ಮುಖ್ಯವಾದದ್ದು. ಇದರ ಪ್ರಕಾರ ಯಾವುದೊಂದು ಪರಮಾಣಿಕ ಕಕ್ಷಕದಲ್ಲಿ ಕೇವಲ ಎರಡು ಎಲೆಕ್ಟ್ರಾನುಗಳು ಮಾತ್ರ ಇರಬಲ್ಲವು ; ಮತ್ತು ಹೀಗಿರಬೇಕಾದರೆ ಅವುಗಳ ಭ್ರಮಣ (ಸ್ಪಿನ್) ವಿರುದ್ಧ ದಿಕ್ಕುಗಳಲ್ಲಿರಬೇಕು. ಇಂಥ ಎರಡು ಕಕ್ಷಕ ಎಲೆಕ್ಟ್ರಾನುಗಳನ್ನು ಮಿಥುನವಾದ ಅಥವಾ ಜೋಡಿಯಾದ ಎಲೆಕ್ಟ್ರಾನುಗಳೆನ್ನುತ್ತಾರೆ. ಒಂದೇ ದಿಕ್ಕಿನಲ್ಲಿ ಭ್ರಮಣೆಯಿರುವ ಎರಡು ಎಲೆಕ್ಟ್ರಾನುಗಳು ಪರಸ್ಪರವಾಗಿ ಆದಷ್ಟು ದೂರವಾಗಿರಲು ಯತ್ನಿಸುತ್ತವೆ. ಅಣುಗಳ ಆಕಾರ ಮತ್ತು ಗುಣಗಳನ್ನು ನಿರ್ಧರಿಸುವ ಹಲವು ಅಂಶಗಳಲ್ಲಿ ಇದು ಅತ್ಯಂತ ಪ್ರಮುಖವಾದದ್ದೆನ್ನಬಹುದು.



ಚಿತ್ರ 4

ಆವರ್ತಕೋಷ್ಟಕದ ಮೊದಲನೆಯ ಹತ್ತು ಧಾತುಗಳ ಎಲೆಕ್ಟ್ರಾನ್ ವಿನ್ಯಾಸವನ್ನು 1ನೆಯ ಪಟ್ಟಿಯಲ್ಲಿ ಕಾಣಬಹುದು.

ಎಲೆಕ್ಟ್ರಾನ್ ವಿನ್ಯಾಸ

| ಧಾತು | $1s$ | $2s$ | $2p$ | ಒಟ್ಟು ಎಲೆಕ್ಟ್ರಾನುಗಳು |
|---|---|---|---|---|
| ಜಲಜನಕ | 1 | – | – | 1 |
| ಹೀಲಿಯಂ | 2 | – | – | 2 |
| ಲಿಥಿಯಂ | 2 | 1 | – | 3 |
| ಬೆರಿಲಿಯಂ | 2 | 2 | – | 4 |
| ಬೋರಾನ್ | 2 | 2 | 1,–,– | 5 |
| ಇಂಗಾಲ | 2 | 2 | 1,1,– | 6 |
| ಸಾರಜನಕ | 2 | 2 | 1,1,1 | 7 |
| ಆಕ್ಸಿಜನ್ | 2 | 2 | 2,1,1 | 8 |
| ಫ್ಲೋರೀನ್ | 2 | 2 | 2, 2, 1 | 9 |
| ನಿಯಾನ್ | 2 | 2 | 2, 2, 2 | 10 |

ಈ ಪಟ್ಟಿಯಿಂದ ಕೆಲವು ವಿಷಯಗಳು ವೇದ್ಯವಾಗುತ್ತವೆ :

1 ಒಂದು ಕಕ್ಷಕ ತುಂಬುವ ಮುನ್ನ ಅದಕ್ಕಿಂತ ಅಲ್ಪತರ ಶಕ್ತಿಯ ಕಕ್ಷಕ ಪೂರ್ಣವಾಗಿ ಭರ್ತಿಯಾಗಬೇಕು. ಉದಾಹರಣೆಗೆ $2s$ ಕಕ್ಷಕ, $1s$ ಕಕ್ಷಕ ತುಂಬಿದ ಅನಂತರವೇ ಆಕ್ರಮಿತವಾಗುತ್ತದೆ ; $2s$ ಪೂರ್ಣವಾದ ಅನಂತರವೇ $2p$ ತುಂಬುತ್ತದೆ ; ಇತ್ಯಾದಿ.

2 ಸಮಾನ ಶಕ್ತಿಮಟ್ಟಗಳ ಕಕ್ಷಕಗಳ ಸಂದರ್ಭದಲ್ಲಿ—ಉದಾಹರಣೆಗೆ $2p$ ಕಕ್ಷಕಗಳ ಸಂದರ್ಭದಲ್ಲಿ—ಪ್ರತಿಯೊಂದು ಕಕ್ಷಕದಲ್ಲಿ 1 ಎಲೆಕ್ಟ್ರಾನ್ ಸೇರಿದ ಹೊರತು, ಒಂದು ಕಕ್ಷಕದಲ್ಲಿ ಎರಡನೆಯ ಎಲೆಕ್ಟ್ರಾನಿನ ಪ್ರವೇಶವಾಗುವುದಿಲ್ಲ.

3 $1s$ ಎಲೆಕ್ಟ್ರಾನುಗಳು ಎರಡು ಎಲೆಕ್ಟ್ರಾನುಗಳನ್ನು ಒಳಗೊಂಡಿರುವ $K$ ವಲಯಕ್ಕೂ $2s$ ಮತ್ತು $2p$ ಎಲೆಕ್ಟ್ರಾನುಗಳು 8 ಎಲೆಕ್ಟ್ರಾನುಗಳಿರುವ $L$ ವಲಯಕ್ಕೂ ಸರಿಹೊಂದುತ್ತವೆ. ಮೊದಲನೆಯ 10 ಧಾತುಗಳಾದ ಅನಂತರ ಇರುವ ಧಾತುಗಳ ಸಂದರ್ಭದಲ್ಲಿ $3s$, $3p$ ಕಕ್ಷಕಗಳು ಇತ್ಯಾದಿಗಳನ್ನೊಳಗೊಂಡ ಮೂರನೆಯ ವಲಯವೊಂದಿದೆ.

ಮೇಲೆ ಹೇಳಿದ ಕಕ್ಷಕಗಳೆಲ್ಲ ಪ್ರತ್ಯೇಕಿತವಾದ ಒಂದು ಪರಮಾಣುವಿನಲ್ಲಿರುವ ಎಲೆಕ್ಟ್ರಾನುಗಳಿಂದ ಆಕ್ರಮಿತವಾಗಿವೆ. ಪರಮಾಣುವೊಂದು ಇನ್ನೊಂದು ಪರಮಾಣುವಿನೊಂದಿಗೆ ಕೋವೆಲೆಂಟ್ ಬಂಧಗಳನ್ನು ರಚಿಸಿದಾಗ, ಕಕ್ಷಕಗಳ ಅತಿವ್ಯಾಪನೆಯಾಗುತ್ತದೆಂದು ಭಾವಿಸಲಾಗಿದೆ. ಇಂಥ ಸಂದರ್ಭಗಳಲ್ಲಿ ಕಕ್ಷಕಗಳ ಪೂರ್ಣತರಂಗ ಸಮೀಕರಣಗಳನ್ನು ಪಡೆಯುವುದು ಬಹುಎಲೆಕ್ಟ್ರಾನಿಕ ಪರಮಾಣುಗಳ ಸಂದರ್ಭಕ್ಕಿಂತ ಕಷ್ಟಕರ. ಕರಾರುವಾಕ್ಕಾದ ಅಣ್ವಿಕತರಂಗೋತ್ಪನ್ನ ಎಲ್ಲ ಎಲೆಕ್ಟ್ರಾನುಗಳ ಮತ್ತು ನ್ಯೂಕ್ಲಿಯಸ್ಸುಗಳ ನಿರ್ದೇಶಾಂಕವನ್ನು ಮತ್ತು ಪ್ರತಿಯೊಂದು ಕಣ ಇತರ ಕಣಗಳೊಂದಿಗೆ ಪರಸ್ಪರ ಕ್ರಿಯೆಗಳಿಗೆ ಒಳಗಾದಾಗ (ಆಕರ್ಷಣ ಮತ್ತು ವಿಕರ್ಷಣ) ದೊರೆಯುವ ಫಲಿತಾಂಶಗಳನ್ನು ವರ್ಣಿಸುವ ಪದಗಳನ್ನು (ಟರ್ಮ್ಸ್) ಒಳಗೊಂಡಿರಬೇಕು. ಇಂಥ ಒಂದು ಸಮೀಕರಣವನ್ನು ಇದುವರೆಗೆ ಯಾರೂ ನಿರೂಪಿಸಿಲ್ಲ. ನಿರೂಪಿಸಿದರೂ ಸಾಮಾನ್ಯವಾಗಿ ಇದನ್ನು ಅರ್ಥ ಮಾಡಿಕೊಳ್ಳುವುದು ಸಂದೇಹಾಸ್ಪದ. ಆದ್ದರಿಂದ ಅಣ್ವಿಕತರಂಗೋತ್ಪನ್ನ ಅಥವಾ ಅಣ್ವಿಕ–ಕಕ್ಷಕವನ್ನು ಸರಿಸುಮಾರಾಗಿ ವರ್ಣಿಸಲು ಅನೇಕ ವಿಧಾನಗಳನ್ನು ಬಳಸಲಾಗಿದೆ. ಇವುಗಳಲ್ಲಿ ಒಂದನ್ನು ಅಣ್ವಿಕ–ಕಕ್ಷಕ ವಿಧಾನವೆಂದು ಕರೆಯಲಾಗಿದೆ. ಇದನ್ನು ಕೆಳಗಿನ ಹಂತಗಳಲ್ಲಿ ನಡೆಸಬಹುದು: 1 ಪರಮಾಣಿಕ ಕಕ್ಷಕಗಳ ರೇಖೀಯ ಸಂಕಲನದಿಂದ (ಲೀನಿಯರ್ ಕಾಂಬಿನೇಷನ್) ಅಣ್ವಿಕ–ಕಕ್ಷಕಗಳ ಶ್ರೇಣಿಯೊಂದನ್ನು ರಚಿಸುವುದು. 2 ಇವನ್ನು ವೃದ್ಧಿಯಾಗುವ ಶಕ್ತಿಗನುಸಾರವಾಗಿ ಜೋಡಿಸುವುದು. 3 ಅಲ್ಪತರ ಶಕ್ತಿಮಟ್ಟದಿಂದ ಪ್ರಾರಂಭಿಸಿ ಉನ್ನತ ಶಕ್ತಿಮಟ್ಟದ ಕಡೆಗೆ ಹೋಗುವಂತೆ ಎಲೆಕ್ಟ್ರಾನುಗಳನ್ನು ಮಿಥುನವಾದ ಭ್ರಮಣಗಳ ಜೋಡಿಯಂತೆ ಅಣ್ವಿಕ ಕಕ್ಷಕಗಳನ್ನು ವ್ಯವಸ್ಥೆ ಮಾಡುವುದು.

ಅಣ್ವಿಕ ರಚನೆಯ ವರ್ಣನೆಗೆ ಜಲಜನಕ ಅಣುವನ್ನು ಉದಾಹರಣೆಯನ್ನಾಗಿ ತೆಗೆದುಕೊಂಡು ಈ ವಿಧಾನದ ತತ್ತ್ವಗಳನ್ನು ನಿರೂಪಿಸಬಹುದು. ಜಲಜನಕ ಅಣು ದ್ವಿಪರಮಾಣಿಕ ಅಣು. ಪ್ರತಿಯೊಂದು ಜಲಜನಕದ ಪರಮಾಣುವಿನಲ್ಲಿ ಒಂದು $1s$ ಎಲೆಕ್ಟ್ರಾನಿದೆ. ಇದು ಕಕ್ಷಕ-ಕೇಂದ್ರದಲ್ಲಿ ನ್ಯೂಕ್ಲಿಯಸ್ಸನ್ನು ಒಳಗೊಂಡು ಗೋಳಾಕೃತಿಯಲ್ಲಿದೆ. ಬಂಧರಚನೆಯಾಗಲು ಇವೆರಡು ನ್ಯೂಕ್ಲಿಯಸ್ಸುಗಳು ಪರಮಾಣಿಕ ಕಕ್ಷಕಗಳು ಅತಿವ್ಯಾಪಿಸುವಂತೆ (ಓವರ್‌ಲ್ಯಾಪ್) ಸಾಕಷ್ಟು ಹತ್ತಿರದಲ್ಲಿರಬೇಕು. ಜಲಜನಕದ ಸಂದರ್ಭದಲ್ಲಿ ನ್ಯೂಕ್ಲಿಯಸ್ಸುಗಳ ಅಂತರ 0.74 Å ಆದಾಗ ವ್ಯವಸ್ಥೆ ಸ್ಥಿರತಮವಾಗಿರುತ್ತದೆ. ಈ ದೂರವನ್ನು ಬಂಧದೂರವೆಂದು (ಬಾಂಡ್ ಲೆಂಗ್ತ್) ಕರೆಯಲಾಗಿದೆ. ಈ ಅಂತರದಲ್ಲಿ ಅತಿವ್ಯಾಪನೆಯಿಂದ ಒದಗಿ ಬರುವ ಸ್ಥಿರತೆ ಸದೃಶ ವಿದ್ಯುದಂಶವುಳ್ಳ ನ್ಯೂಕ್ಲಿಯಸ್ಸುಗಳ ಪರಸ್ಪರ ವಿಕರ್ಷಣೆಗೆ ಕರಾರುವಾಕ್ಕಾಗಿ ಸರಿದೂಗುತ್ತದೆ. ಬಂಧರಚನೆಯಲ್ಲಿ ಶಕ್ತಿ ಬಿಡುಗಡೆಯಾಗುವುದರ ಫಲವಾಗಿ ಅಣುವಿನ ಶಕ್ತಿ ಘಟಕ ಜಲಜನಕ ಪರಮಾಣುಗಳ ಶಕ್ತಿಗಿಂತ ಪ್ರತಿಮೋಲಿಗೆ 103 ಕಿಲೋಕ್ಯಾಲರಿಯಷ್ಟು ಕಡಿಮೆಯಾಗುತ್ತದೆ ಮತ್ತು ಇದರಿಂದ ಅಣುವು ಸ್ಥಿರತೆಯನ್ನು ಗಳಿಸುತ್ತದೆ.


ಚಿತ್ರ 5

ಪರಮಾಣಿಕ ಕಕ್ಷಕಗಳ ಅತಿವ್ಯಾಪನೆಯಿಂದ ರಚಿತವಾಗುವ ಬಂಧಕಕ್ಷಕದ ಆಕಾರ ಎರಡು $s$ ಕಕ್ಷಕಗಳ ಲೀನತೆಯಿಂದ ನಿರೀಕ್ಷಿಸಬಹುದಾದ ಆಕಾರವನ್ನು ಸರಿಸುಮಾರಾಗಿ ಹೋಲುತ್ತದೆ. 5ನೆಯ ಚಿತ್ರದಲ್ಲಿ ತೋರಿಸಿರುವಂತೆ ಇದಕ್ಕೆ ನೇರಿಳೆ ಹಣ್ಣಿನ ಆಕಾರವಿದೆ. ಅದರ ದೀರ್ಘಾಕ್ಷ ಎರಡು ನ್ಯೂಕ್ಲಿಯಸ್ಸುಗಳನ್ನು ಕೂಡಿಸುವ ರೇಖೆಯ ಉದ್ದಕ್ಕೂ ಇದೆ. ಇದರ ಆಕಾರ ಈ ಅಕ್ಷದ ಸುತ್ತ ಉರುಳು ಕೊಳವೆಯಂತೆ ಸಮಾಂಗವಾಗಿದೆ. ಇಂಥ ಬಂಧಕಕ್ಷಕಗಳನ್ನು ಸಿಗ್ಮ ($\sigma$) ಕಕ್ಷಕಗಳೆಂದು ಕರೆಯಲಾಗಿದೆ ಮತ್ತು ಬಂಧಗಳನ್ನು $\sigma$–ಬಂಧಗಳೆಂದು ಕರೆಯಲಾಗಿದೆ. ಈ ಚಿತ್ರಣದ ರೀತ್ಯಾ ಜಲಜನಕದ ಅಣುವನ್ನು ನೇರಿಳೆ ಹಣ್ಣಿನ ಆಕಾರದ ಒಂದೇ ಎಲೆಕ್ಟ್ರಾನ್ ಮೇಘದಲ್ಲಿ ಅಡಕವಾಗಿರುವ ಎರಡು ನ್ಯೂಕ್ಲಿಯಸ್ಸುಗಳೆಂದು ಕಲ್ಪಿಸಿಕೊಳ್ಳಬಹುದು.

**ಸಂಕರ ಕಕ್ಷಕಗಳು :** ಇಂಗಾಲದ ಪರಮಾಣು ಇತರ ಪರಮಾಣುಗಳೊಂದಿಗೆ—ಉದಾಹರಣೆಗೆ ಜಲಜನಕ— ಕೋವೆಲೆಂಟ್ ಬಂಧಗಳನ್ನು ರಚಿಸುತ್ತದೆ. ಇಂಗಾಲದ ಪರಮಾಣುವಿನಲ್ಲಿ ಎರಡು ಕಕ್ಷಕಗಳಲ್ಲಿ ಪ್ರತಿಯೊಂದರಲ್ಲೂ ಮಿಥುನವಾಗದ ಒಂದು ಎಲೆಕ್ಟ್ರಾನಿದೆ. ಆದ್ದರಿಂದ ಇಂಗಾಲವು ಜಲಜನಕದೊಂದಿಗೆ ಸಂಯೋಗವಾಗುವಾಗ ಅಣು ಉತ್ಪತ್ತಿಯಾಗುತ್ತದೆಂದು ನಿರೀಕ್ಷಿಸಬಹುದು. ಆದರೆ ವಾಸ್ತವವಾಗಿ ನಾಲ್ಕು ಜಲಜನಕದ ಪರಮಾಣುಗಳು ಒಂದು ಇಂಗಾಲದ ಪರಮಾಣುವಿನೊಂದಿಗೆ ಸೇರಿ ಮೀಥೇನ್, $CH_4$, ಅಣುವನ್ನು ರೂಪಿಸುತ್ತವೆ; ಎಂದರೆ ನಾಲ್ಕು ಕೋವೆಲೆಂಟ್ ಬಂಧಗಳು ರಚಿತವಾಗುತ್ತವೆ. ಆದ್ದರಿಂದ ಇಂಗಾಲದಲ್ಲಿ ನಾಲ್ಕು ಮಿಥುನವಾಗದ ಎಲೆಕ್ಟ್ರಾನುಗಳಿರಬೇಕಾದ ಪ್ರಸಂಗ ಒದಗುತ್ತದೆ. $2s$ ಎಲೆಕ್ಟ್ರಾನುಗಳಲ್ಲಿ ಒಂದನ್ನು $2p$ ಕಕ್ಷಕಕ್ಕೆ ಉತ್ತೀರ್ಣಗೊಳಿಸುವುದರ ಮೂಲಕ ಇವನ್ನು ಒದಗಿಸಬಹುದು. ಹೀಗಾಗುವುದರಿಂದ ಇಂಗಾಲ ಒಂದು $s$ ಕಕ್ಷಕವನ್ನು ಉಪಯೋಗಿಸಿ ಒಂದು ತರಹೆಯ ಬಂಧವನ್ನೂ ಮೂರು $p$ ಕಕ್ಷಕಗಳನ್ನು ಉಪಯೋಗಿಸಿ ಬೇರೊಂದು ತರಹೆಯ ಬಂಧವನ್ನೂ ರಚಿಸುತ್ತದೆಂದು ನಿರೀಕ್ಷಿಸಬಹುದು. ಆದರೆ ಲೆಕ್ಕಾಚಾರಗಳ ಪ್ರಕಾರ ಈ ನಾಲ್ಕು ಬಂಧಗಳೂ ಸಮತುಲ್ಯವಾಗಿದ್ದು (ಈಕ್ವಿವಲೆಂಟ್) ಚತುಷ್ಫಲಕದ (ಟೆಟ್ರಹೆಡ್ರನ್) ನಾಲ್ಕು ಮೂಲೆಗಳ ಕಡೆಗೆ ನಿರ್ದೇಶಿತವಾಗಿದ್ದರೆ ಬಂಧಗಳು ಅತಿಶಯವಾಗಿ ಬಲಯುತವಾಗಿರುತ್ತವೆಂದು ಗೊತ್ತಾಗಿದೆ.

6ನೆಯ ಚಿತ್ರ ಸೂಚಿಸುವಂತೆ ನಾಲ್ಕು ಜಲಜನಕ ಪರಮಾಣುಗಳೊಡನೆ ಸಂಯೋಗವಾಗಲಿರುವ ಕಾಲ್ಪನಿಕ ಇಂಗಾಲದ ಪರಮಾಣುವಿನಲ್ಲಿ ನಾಲ್ಕು ಸಮತುಲ್ಯ ಪರಮಾಣು ಕಕ್ಷಕಗಳಿವೆ. ಇವು ಒಂದು $s$ ಕಕ್ಷಕವನ್ನೂ ಮತ್ತು ಮೂರು $p$ ಕಕ್ಷಕಗಳನ್ನೂ ಮಿಶ್ರ ಮಾಡುವುದರಿಂದ ಉದ್ಭವವಾಗುತ್ತವೆಂದು ಪರಿಗಣಿಸಲಾಗಿದೆ. ಇವನ್ನು $sp^3$ ಕಕ್ಷಕಗಳೆಂದು ಕರೆಯಲಾಗಿದೆ. ಇವು ಒಂದು ತರಹೆಯ ಸಂಕರ ಕಕ್ಷಕಗಳು. ಈ ಪ್ರತಿಯೊಂದು $sp^3$ ಕಕ್ಷಕಗಳು ಒಂದು ಜಲಜನಕದ $s$ ಕಕ್ಷಕದೊಂದಿಗೆ ಅತಿವ್ಯಾಪನೆಯಾದಾಗ ಮೀಥೇನ್ ಅಣು ಉತ್ಪತ್ತಿಯಾಗುತ್ತದೆ.


ಚಿತ್ರ 6

(ಎಚ್.ಎಸ್.ಎಸ್.)

**ಕಕ್ಷಿಗಾರ :** ಪ್ರಾಚೀನ ರೋಮಿನಲ್ಲಿ ವಾಸಿಸುತ್ತಿದ್ದು, ಸ್ವತಂತ್ರನಾದರೂ ರೋಮಿನ ಪ್ರಜೆಯಲ್ಲವೆಂಬ ಕಾರಣದಿಂದ, ರೋಮನ್ ರಕ್ತವಿರುವ ಶ್ರೀಮಂತನ ರಕ್ಷಣೆಯಲ್ಲಿರಬೇಕಾದ ಪ್ರಜೆಯೆಂಬುದು ಇದರ ಸಮಾನ ಇಂಗ್ಲಿಷ್ ಪದವಾದ ಕ್ಲೈಯೆಂಟ್ ಎಂಬುದರ ಹಳೆಯ ಅರ್ಥ. ಇವನೊಬ್ಬ ಆಶ್ರಿತ, ಅವಲಂಬಿ. ತನ್ನ ಸಹಾಯಕ್ಕಾಗಿ ನ್ಯಾಯವಾದಿಯನ್ನು ನಿಯಮಿಸಿಕೊಳ್ಳುವವನು—ಎಂಬುದು ಕಕ್ಷಿಗಾರ (ಕ್ಲೈಯೆಂಟ್) ಶಬ್ದದ ಇನ್ನೊಂದು ಅರ್ಥ. ಯಾವ ಕಸಬಿನವನನ್ನಾದರೂ ತನ್ನ ಸಹಾಯಕ್ಕಾಗಿ ಇಟ್ಟುಕೊಳ್ಳುವವನು, ಗಿರಾಕಿ, ಗ್ರಾಹಕ—ಎಂಬ ಅರ್ಥದಲ್ಲೂ ಕ್ಲೈಯೆಂಟ್ ಪದವನ್ನು ಬಳಸಲಾಗುತ್ತದೆ.

ಪ್ರತಿಯೊಬ್ಬನೂ ತನ್ನ ದೇಶದ ಕಾನೂನನ್ನು ತಿಳಿದಿರುತ್ತಾನೆ ಎಂಬುದು ನ್ಯಾಯಶಾಸ್ತ್ರದ ಮೂಲತತ್ತ್ವಗಳಲ್ಲಿ ಒಂದು. ಆದರೆ ನ್ಯಾಯಶಾಸ್ತ್ರ ಅಗಾಧ ಸಮುದ್ರ. ಅದನ್ನು ಬಲ್ಲವರು ಬಹಳಿಲ್ಲ. ಬಹಳ ಬಲ್ಲವರಿಲ್ಲ. ಆದುದರಿಂದ ಸಾಮಾನ್ಯರು ಸಂದಿಗ್ಧ ಸಮಯದಲ್ಲಿ ನ್ಯಾಯಶಾಸ್ತ್ರ ಬಲ್ಲವರಲ್ಲಿ ಹೋಗುವುದು ಅನಿವಾರ್ಯ. ತನ್ನ ಸ್ಥಿರ ಚರ ಸ್ವತ್ತುಗಳ ಅಥವಾ ತನ್ನ ಹಕ್ಕುಬಾಧ್ಯತೆಗಳ ಸಂಬಂಧವಾಗಿ ಎದ್ದ ಸಮಸ್ಯೆಗಳನ್ನು ಅವನ ಮುಂದಿಟ್ಟು ಅವಕ್ಕೆ ಕಾನೂನು ರೀತ್ಯಾ ತಕ್ಕ ನಿವಾರಣೆಯನ್ನು ಅಪೇಕ್ಷಿಸುವವನು ಕಕ್ಷಿಗಾರ. ಈ ಅರ್ಥದಲ್ಲೇ ಈ ಲೇಖನವನ್ನು ಬರೆಯಲಾಗಿದೆ.

ರೋಮಿನಲ್ಲಿ ನ್ಯಾಯಪಂಡಿತರೂ ಕಕ್ಷಿಗಾರನಿಗಾಗಿ ಅಗತ್ಯವಾದ ಕೆಲಸ ಮಾಡುತ್ತಿದ್ದವರೂ ಮಹತ್ತ್ವದ ಸ್ಥಾನ ಗಳಿಸಿದ್ದರು. ಅವರನ್ನು ವೆಟರ್ಸ್ ಎಂದು ಕರೆಯಲಾಗುತ್ತಿತ್ತು. ಅವರು ತಮ್ಮ ಕಕ್ಷಿಗಾರನಿಗಾಗಿ ಕಾನೂನು ರೀತ್ಯಾ ಅಗತ್ಯವುಳ್ಳ ದಸ್ತೈವಜುಗಳನ್ನು ಬರೆಯುವುದರೊಂದಿಗೆ, ತನ್ನ ಕಕ್ಷಿಗಾರನ ಪರವಾಗಿ ನ್ಯಾಯಾಲ

ಯದ ಮುಂದೆ ವಾದಿಸಲು ವಾಕ್ಚತುರನಿಗೆ ಬೇಕಾದ ಆಧಾರ ಸಾಮಗ್ರಿಗಳನ್ನು ಸಂಗ್ರಹಿಸಿಕೊಡುತ್ತಿದ್ದರು. ಕ್ಲಿಷ್ಟ ಸಮಸ್ಯೆಗಳ ಬಗ್ಗೆ ತಮ್ಮನ್ನು ಕೇಳಲಾದ ಪ್ರಶ್ನೆಗಳನ್ನು ಉತ್ತರಿಸುತ್ತಿದ್ದರು. ಈ ನ್ಯಾಯಪಂಡಿತರು ಹಣದ ಮೋಹಕ್ಕೆ ಸಿಕ್ಕಿ ಕೆಲಸ ಮಾಡುವುದು ಅನೈತಿಕವೆಂದು ಭಾವಿಸಲಾಗಿತ್ತು. ಕಕ್ಷಿಗಾರ ಮತ್ತು ವಕೀಲ—ಇವರ ಸಂಬಂಧ ಇಂದಿಗೂ ಹೆಚ್ಚುಕಡಿಮೆ ಅದೇ ರೀತಿ ನಡೆದು ಬಂದಿದೆ.

ಕಕ್ಷಿಗಾರನ ಸಮಸ್ಯೆಗಳನ್ನು ವಿಮರ್ಶಿಸಿ, ಸಂಬಂಧಪಟ್ಟ ನ್ಯಾಯಸೂತ್ರಗಳನ್ನು ಸರಿಯಾಗಿ ತಿಳಿದುಕೊಂಡು ಅವನಿಗೆ ಸೂಕ್ತ ಸಲಹೆ ಕೊಡುವುದು ವಕೀಲನ ಧರ್ಮ. ಅಮೆರಿಕದಲ್ಲಿ ಕಕ್ಷಿಗಾರ ಮತ್ತು ವಕೀಲರ ಸಂಬಂಧ ಇತರ ವ್ಯವಹಾರಸಂಬಂಧಗಳಂತೆಯೇ ಬೆಳೆದಿದೆ. ಅಲ್ಲಿ ಒಬ್ಬ ಕಕ್ಷಿಗಾರ ತನ್ನ ಸಮಸ್ಯೆಯ ನಿವೃತ್ತಿಗಾಗಿ ವಕೀಲನ ಬಳಿಗೆ ಬಂದರೆ ಅದನ್ನು ವಕೀಲ ತನ್ನಿಂದಾಗದೆಂದು ಬಿಟ್ಟುಬಿಡಬಹುದು. ಆದರೆ ಇಂಗ್ಲೆಂಡಿನಲ್ಲಿ ತನ್ನ ಬಳಿಗೆ ಬಂದ ಕಕ್ಷಿಗಾರ ನ್ಯಾಯವಾದ ಶುಲ್ಕ ಕೊಟ್ಟಲ್ಲಿ ಅವನ ಮೊಕದ್ದಮೆಯನ್ನು ಬ್ಯಾರಿಸ್ಟರ್ (ಉನ್ನತ ವಕೀಲ) ತೆಗೆದುಕೊಳ್ಳಲೇಬೇಕೆಂದು ಅಲ್ಲಿಯ ನ್ಯಾಯವಾದಿಗಳ ಸಂಘ (ಬಾರ್ ಅಸೋಸಿಯೇಷನ್) ನಿರ್ಣಯಿಸಿದೆ. ಜಸ್ಟಿಸ್ ಸುಂದರಂ ಐಯರ್ ಬರೆದಿರುವ ಪ್ರೊಫೆಷನಲ್ ಎಥಿಕ್ಸ್ ಎಂಬ ಪುಸ್ತಕದಲ್ಲಿ ಈ ಅಭಿಪ್ರಾಯವನ್ನೇ ಸಮರ್ಥಿಸಲಾಗಿದೆ. ಯಾರೇ ಆಗಲಿ ಆತ ತಪ್ಪಿತಸ್ಥನೆಂದೇ ವಕೀಲನಿಗೆ ಎನಿಸಿದ್ದರೂ ಕಾನೂನು ರೀತ್ಯಾ ತಪ್ಪಿತಸ್ಥನೆಂದು ರುಜುವಾತಾಗದೆ ಆತ ತಪ್ಪಿತಸ್ಥನೆಂದು ಹೇಳಲಾಗುವುದಿಲ್ಲ. ಆದರ ರುಜುವಾತಿನ ಬಗ್ಗೆ ಕಕ್ಷಿಗಾರ ಕಷ್ಟದಲ್ಲಿರುವಾಗ ವಕೀಲ ನುಣುಚಿಕೊಳ್ಳುವುದು ಸರಿಯಾಗಲಾರದು. ಇದಕ್ಕೆ ವಿರೋಧ ಅಭಿಪ್ರಾಯಗಳೂ ಇವೆ. ಕಕ್ಷಿಗಾರನ ಮೊಕದ್ದಮೆಯನ್ನು ತೆಗೆದುಕೊಂಡ ಬಳಿಕ ಅವನಿಗೆ ತಿಳಿಸದೆ ಅದರಿಂದ ಬಿಟ್ಟು ಹೋಗುವುದು ಸರಿಯಲ್ಲವೆಂದು ಮೈಸೂರಿನ ಉಚ್ಚನ್ಯಾಯಾಲಯ ತೀರ್ಮಾನ ಕೊಟ್ಟಿದೆ.

(ಕೆ.ಜಿ.ಬಿ.)

**ಕಕ್ಷೆ:** ಎರಡು ವಸ್ತುಗಳು ಒಂದರ ಸುತ್ತ ಇನ್ನೊಂದು ಚಲಿಸುತ್ತಿರುವಾಗ ಒಂದನ್ನು ಕುರಿತು ಇನ್ನೊಂದರ ಪಥ (ಆರ್ಬಿಟ್). ಉದಾಹರಣೆಗೆ ಚಂದ್ರ–ಭೂಮಿ ವ್ಯವಸ್ಥೆಯನ್ನು ಪರಿಶೀಲಿಸಬಹುದು. ಗುರುತ್ವಾಕರ್ಷಣ ಬಲದ ನಿಯಮಾನುಸಾರ ಇವು ಪರಸ್ಪರ $G.\frac{E.M}{d^2}$ ಬಲದಿಂದ ಆಕರ್ಷಿಸುತ್ತಿವೆ. ಇಲ್ಲಿ $G$ (ನ್ಯೂಟನ್ನನ) ಗುರುತ್ವಾಕರ್ಷಣದ ಸಾರ್ವತ್ರಿಕ ನಿಯತಾಂಕ; $E$ ಮತ್ತು $M$ ಗಳು ಭೂಮಿಯ ಹಾಗೂ ಚಂದ್ರನ ದ್ರವ್ಯರಾಶಿಗಳು ; $d$ ಭೂಮಿ — ಚಂದ್ರರ ಕೇಂದ್ರಾಂತರ. ಇಲ್ಲಿ $E$ ಯ ಬೆಲೆ $M$ ಬೆಲೆಗಿಂತ ಬಹಳ ಹೆಚ್ಚಾಗಿರುವುದರಿಂದ (ಸರಿಸುಮಾರಾಗಿ 81 $M=E$ ) ಚಂದ್ರನ ಮೇಲೆ ಭೂಮಿಯಿಂದ ಪರಿಣಮಿಸುವ ವೇಗೋತ್ಕರ್ಷ $\left(=\frac{G.E}{d^2}\right)$ ಭೂಮಿಯ ಮೇಲೆ ಚಂದ್ರನಿಂದ ಪರಿಣಮಿಸುವ ವೇಗೋತ್ಕರ್ಷಕ್ಕಿಂತ $\left(=\frac{G.M}{d^2}\right)$, 81ರಷ್ಟು ಪಾಲು ಹೆಚ್ಚು. ನಿವ್ವಳ ಪರಿಣಾಮವಾಗಿ ಭೂಮಿ ಸ್ಥಿರವಾಗಿರುವಂತೆಯೂ ಚಂದ್ರ ಸಾಪೇಕ್ಷ ವೇಗದಿಂದ ಭೂಮಿಯನ್ನು ಪರಿಭ್ರಮಿಸುತ್ತಿರುವಂತೆಯೂ ಭಾಸವಾಗುತ್ತದೆ. ಭೂಮಿಯನ್ನುಕುರಿತು ಚಂದ್ರ ರೇಖಿಸುವ ಪಥದ ಹೆಸರು ಚಂದ್ರಕಕ್ಷೆ. ಸೂರ್ಯನನ್ನು ಕುರಿತು ಭೂಮಿ ರೇಖಿಸುವ ಪಥದ ಹೆಸರು ಭೂಮಿಕಕ್ಷೆ.




ಚಿತ್ರ 1

ನ್ಯೂಟನ್ನನ ಸಾರ್ವತ್ರಿಕ ಗುರುತ್ವಾಕರ್ಷಣಬಲದ ನಿಯಮಾನುಸಾರ, ಎರಡು ಆಕಾಶಕಾಯಗಳ ಪರಸ್ಪರಾಕರ್ಷಣೆಯಲ್ಲಿ ಪ್ರಬಲಿಯ ಸುತ್ತಲೂ ದುರ್ಬಲಿ ಒಂದು ದೀರ್ಘವೃತ್ತ ಕಕ್ಷೆಯಲ್ಲಿ ಚಲಿಸುವುದು.

$$u + \frac{d^2u}{d\theta^2} = \frac{P}{h^2u^2}$$

ಸಮೀಕರಣದಲ್ಲಿ $P = \frac{\mu}{r^2} = \mu\, u^2$

ಎಂದು ಆದೇಶಿಸಿದಾಗ $u + u_2 = \frac{\mu}{h^2}$ ಆಗುತ್ತದೆ.

$$\therefore\ u = \mathrm{L}\cos\theta + \mathrm{M}\sin\theta + \frac{\mu}{h^2}$$

ಇಲ್ಲಿ ಪ್ರಾರಂಭಿಕ ಸ್ಥಿತಿಯನ್ನು ಅನುಸರಿಸಿ L ಮತ್ತು M ಎಂಬ ಸ್ಥಿರಾಂಕಗಳನ್ನು ಗಣಿಸಬಹುದು. ಮೇಲಿನ ಸಮೀಕರಣ ಪ್ರಬಲಿಯನ್ನು ಕುರಿತು ದುರ್ಬಲಿಯ ಕಕ್ಷೆ ಒಂದು ಶಂಕುಜವೆಂದೂ ಪ್ರಬಲಿಯು ಇದರ ಒಂದು ನಾಭಿಯಲ್ಲಿದೆಯೆಂದೂ ತೋರಿಸುತ್ತದೆ. ಇದು ಗಣಿತದ ಆದರ್ಶೀಕೃತ ಪರಿಸ್ಥಿತಿ ಒದಗಿಸುವ ಚಿತ್ರ. ವಾಸ್ತವಿಕತೆ ಇಷ್ಟು ಸರಳವಲ್ಲ. ಭೂಮಿ–ಚಂದ್ರ ವ್ಯವಸ್ಥೆಯನ್ನೇ ಪರಿಶೀಲಿಸಬಹುದು. ಇದನ್ನು ಕೇವಲ ದ್ವಿಕಾಯ ಸಮಸ್ಯೆ ಎಂದು ಭಾವಿಸಿದರೆ ಚಂದ್ರಕಕ್ಷೆ ದೀರ್ಘವೃತ್ತ ನಿಜ. ಆದರೆ, ಮೊದಲನೆಯದಾಗಿ ಭೂಮಿಯ ಮೇಲೆ ದ್ರವ್ಯ ವಿತರಣೆ ಅಸಮವಾಗಿರುವುದರಿಂದ ಆಕರ್ಷಣಬಲ ಎಲ್ಲೆಡೆಗಳಲ್ಲಿಯೂ ಏಕಪ್ರಕಾರವಾಗಿರುವುದಿಲ್ಲ. ಇದರಿಂದ ಚಂದ್ರಕಕ್ಷೆಯಲ್ಲಿ ಲಘು ಆಂದೋಳನಗಳು ಉಂಟಾಗುತ್ತವೆ. ಎರಡನೆಯದಾಗಿ, ಸೂರ್ಯನ ಗುರುತ್ವಾಕರ್ಷಣಬಲವನ್ನು ಲೆಕ್ಕಕ್ಕೆ ತೆಗೆದುಕೊಳ್ಳಲೇಬೇಕು ; ಅಲ್ಲದೇ ಸೌರವ್ಯೂಹದ ಇತರ ಗ್ರಹಗಳ ಪ್ರಭಾವವನ್ನು ಕಡೆಗಣಿಸುವಂತಿಲ್ಲ. ಹೀಗಾಗಿ ಸೂಕ್ಷ್ಮ ಪರಿಶೀಲನೆಯಲ್ಲಿ ಚಂದ್ರನ ಚಲನೆ (ಆದ್ದರಿಂದ ಕಕ್ಷೆ) ಬಲು ಸಂಕೀರ್ಣವಾಗುತ್ತದೆ—ಇದೊಂದು ಬಹುಕಾಯ ಸಮಸ್ಯೆಯೇ ಆಗುವುದು. ಆಕಾಶಕಾಯಗಳ ಚಲನೆಯಲ್ಲಿ ಎದುರಾಗುವ ಇಂಥ ಪರಿಸ್ಥಿತಿಗಳಲ್ಲಿ ಗಣಿತದ ಆದರ್ಶೀಕೃತ ಪರಿಹಾರವನ್ನು ಮೊದಲು ತೀರ್ಮಾನಿಸಿ ತರುವಾಯ ವಾಸ್ತವಿಕ ಪರಿಸ್ಥಿತಿ ಇದರಿಂದ ಎಷ್ಟು ಭಿನ್ನವಾಗಿದೆ ಎಂದು ವೀಕ್ಷಣೆಗಳಿಂದ ತಿಳಿದು ಕಾರಣಗಳನ್ನು ಹುಡುಕುತ್ತಾರೆ.

ಸೌರವ್ಯೂಹದಲ್ಲಿ ಒದಗಿರುವ ಒಂದು ಸಹಜ ಪರಿಸ್ಥಿತಿ ಹೀಗಿದೆ—ಭೂಮಿ ಹಾಗೂ ಇತರ ಗ್ರಹಗಳು ಸೂರ್ಯನ ಸುತ್ತಲೂ ಭಿನ್ನ, ಸರಿಸುಮಾರು ದೀರ್ಘವೃತ್ತ. ಕಕ್ಷೆಗಳಲ್ಲಿ ಚಲಿಸುತ್ತಿವೆ; ಸೂರ್ಯನ ಸ್ಥಾನ (ಇವೆಲ್ಲ ಕಕ್ಷೆಗಳಿಗೂ) ಒಂದು ನಾಭಿಯಲ್ಲಿದೆ ; ಎಲ್ಲ ಕಕ್ಷೆಗಳೂ ಭೂಮಿಯ ಕಕ್ಷಾತಲಕ್ಕೆ ಅತ್ಯಲ್ಪವಾಗಿ ಬಾಗಿಕೊಂಡಿವೆ ; ಎಲ್ಲ ಗ್ರಹಗಳೂ ಒಂದೇ ದಿಕ್ಕಿನಲ್ಲಿ ಚಲಿಸುತ್ತವೆ. ಇವುಗಳ ಪರಿಣಾಮವಾಗಿ ಭೂಮಿಯಲ್ಲಿರುವ ನಮಗೆ ಕಾಣುವ ಚಿತ್ರವಿಷ್ಟು—ಭೂಮಿ ಸ್ಥಿರವಾಗಿದೆ ; ಸೂರ್ಯ ಹಾಗೂ ಸೌರವ್ಯೂಹದ ಇತರ ಗ್ರಹಗಳು ಭೂಮಿಯ ಸುತ್ತಲೂ ಪರಿಭ್ರಮಿಸುತ್ತಿವೆ; ಅವುಗಳ ಕಕ್ಷೆಗಳು ಖಗೋಳದ ಒಂದು ಇಕ್ಕಟ್ಟಾದ ಪಟ್ಟಿಗೆ ಮಾತ್ರ ಸೀಮಿತವಾಗಿವೆ. ವಿಶ್ಲೇಷಿಸಿ ನೋಡುವಾಗ ಭೂಮಿಯ ಕಕ್ಷಾತಲ ಖಗೋಳವನ್ನು ಛೇದಿಸುವ ಮಹಾವೃತ್ತವನ್ನು ಹೊಂದಿಕೊಂಡು ಈ ಪಟ್ಟಿ ಇದೆ ಎಂದು ತಿಳಿಯುವುದು. ಮಹಾ ವೃತ್ತದ ಹೆಸರು ಕ್ರಾಂತಿವೃತ್ತ (ನೋಡಿ). ಆದ್ದರಿಂದ ಒಂದು ವಿಷಯ ಸ್ಪಷ್ಟವಾಯಿತು—ಕ್ರಾಂತಿವೃತ್ತದ ಸಮತಲಕ್ಕೆ ಬಾಗಿಕೊಂಡಿರುವ ಬೇರೆ ಬೇರೆ ದೂರಗಳಲ್ಲಿರುವ ಬೇರೆ ಬೇರೆ ಕಕ್ಷೆಗಳೇ ಗ್ರಹಗಳು ಸೂರ್ಯನನ್ನು ಪರಿಭ್ರಮಿಸುವ ಪಥಗಳು.

ನಿರ್ದಿಷ್ಟ ಮುಹೂರ್ತದಲ್ಲಿ ಒಂದು ಗ್ರಹದ ಸ್ಥಾನವನ್ನು ನಿರ್ಧರಿಸಲು ಹಾಗೂ ಯಾವುದೇ ಭವಿಷ್ಯ ಕಾಲದಲ್ಲಿ ಅದರ ಸ್ಥಾನವನ್ನು ಮುನ್ನುಡಿಯಲು ತಿಳಿದಿರಬೇಕಾದ ಪರಿಮಾಣಗಳ ಕನಿಷ್ಠ ಸಂಖ್ಯೆ ಎಷ್ಟು ? ಈ ಪ್ರಶ್ನೆಯನ್ನು ಉತ್ತರಿಸುವಾಗ ಬಿಡಿಸಬೇಕಾದ ಸಮಸ್ಯೆಗಳು ಹೀಗಿವೆ—ಕ್ರಾಂತಿವೃತ್ತತಲ ತಿಳಿದಿರುವುದರಿಂದ ಇದೇ ನಮಗೆ ಆಧಾರತಲ ; ಇದನ್ನು ಕುರಿತಂತೆ ಗ್ರಹದ ಕಕ್ಷಾತಲದ ಬಾಗುವಿನ ಗಣನೆ ; ಇದು ಕಕ್ಷಾತಲದ ಸ್ಥಾನವನ್ನು ನಿಗದಿಸುತ್ತದೆ. ತರುವಾಯ ಈ ತಲದ ಮೇಲೆ ಕಕ್ಷೆಯ ಗಾತ್ರ, ಆಕಾರ ಹಾಗೂ ಸ್ಥಾನಗಳನ್ನು ನಿರ್ದಿಷ್ಟಗೊಳಿಸಬೇಕು. ಕೊನೆಯದಾಗಿ ಈ ಸ್ಥಿರ ಕಕ್ಷೆಯಲ್ಲಿರುವ ಒಂದು ಸ್ಥಿರ ಬಿಂದುವನ್ನು ಕುರಿತು ಗ್ರಹದ ಸ್ಥಾನವನ್ನು ಸೂಚಿಸಬೇಕು.

ಚಿತ್ರ 2ರಲ್ಲಿ $\pi$ ಸಮತಲವು ಕ್ರಾಂತಿವೃತ್ತತಲವನ್ನೂ $\sigma$ ಸಮತಲವು ಗ್ರಹದ ಕಕ್ಷಾತಲವನ್ನೂ ಸೂಚಿಸುತ್ತವೆ. ಭೂಮಿ ಮತ್ತು ಗ್ರಹಗಳೆರಡೂ ಸೂರ್ಯನನ್ನು

ಪರಿಭ್ರಮಿಸುತ್ತಿರುವುದರಿಂದ $\pi$ ಮತ್ತು $\sigma$ ಸಮತಲಗಳ ಛೇದನ ರೇಖೆ ಸೂರ್ಯನ (S) ಮೂಲಕ ಸಾಗುವುದು. ಇದು ASB ಆಗಿರಲಿ. $\pi$ ಯನ್ನು ಕುರಿತಂತೆ




ಚಿತ್ರ 2

$\sigma$ ವನ್ನು ನೆಲೆಗೊಳಿಸಲು ಇವೆರಡರ ನಡುವಿನ ಬಾಗುಕೋನ ತಿಳಿದಿರಬೇಕು. ಇದು $i$ ಆಗಿರಲಿ.

ಗ್ರಹದ ಕಕ್ಷೆ ಕ್ರಾಂತಿವೃತ್ತವನ್ನು ಸಂಧಿಸುವ ಎರಡು ಬಿಂದುಗಳು ASB ರೇಖೆಯಲ್ಲಿವೆ; ಇವು ಸಂಪಾತ ಬಿಂದುಗಳು. ಚಿತ್ರ 3 ಮತ್ತು 4ರಲ್ಲಿ ನಾವು ಉತ್ತರ ಧ್ರುವದಿಂದ ಕೆಳಮುಖವಾಗಿ ನೋಡುತ್ತಿದ್ದೇವೆಂದೂ ಗ್ರಹವು ಅದರ ಕಕ್ಷೆಯ ಮೇಲೆ ಅಪ್ರದಕ್ಷಿಣವಾಗಿ ಚಲಿಸುತ್ತಿದೆಯೆಂದೂ ಭಾವಿಸೋಣ. ಆಗ, ಗ್ರಹ ಕ್ರಾಂತಿವೃತ್ತವನ್ನು ದಕ್ಷಿಣದಿಂದ ಉತ್ತರಕ್ಕೆ (ಕೆಳಗಿನಿಂದ ಮೇಲಕ್ಕೆ) ಅಡ್ಡ ಹಾಯುವ ಬಿಂದುವಿಗೆ ಆರೋಹೀ ಸಂಪಾತ ಬಿಂದುವೆಂದೂ ಉತ್ತರದಿಂದ ದಕ್ಷಿಣಕ್ಕೆ (ಮೇಲಿನಿಂದ ಕೆಳಕ್ಕೆ) ಅಡ್ಡಹಾಯುವ ಬಿಂದುವಿಗೆ ಅವರೋಹೀ ಸಂಪಾತ




ಚಿತ್ರ 3

ಬಿಂದುವೆಂದೂ ಹೆಸರು. ಇವು ಕ್ರಮವಾಗಿ N ಮತ್ತು N′ ಆಗಿರಲಿ. N ಮತ್ತು N′ಗಳು ಗ್ರಹದ ಕಕ್ಷೆಯಲ್ಲಿರುವ ಎರಡು ಸ್ಥಿರಬಿಂದುಗಳೂ ಹೌದು.

ವಸಂತವಿಷುವದ್ಬಿಂದು ($\gamma$) ಕ್ರಾಂತಿವೃತ್ತದಲ್ಲಿರುವ ಒಂದು ಸ್ಥಿರಬಿಂದು (ವಿಷುವದ್ವೃತ್ತ, ಕ್ರಾಂತಿವೃತ್ತಗಳ ಎರಡು ಉಭಯ ಸಾಮಾನ್ಯ ಬಿಂದುಗಳಲ್ಲಿ $\gamma$ ಒಂದು). ಆದ್ದರಿಂದ S$\gamma$ವು $\pi$ ಸಮತಲದಲ್ಲಿರುವ ಒಂದು ಸ್ಥಿರರೇಖೆ. $\gamma$SN ಕೋನದ ಬೆಲೆ—ಇದು ಆರೋಹೀ ಸಂಪಾತಬಿಂದುವಾದ N ನ ಖಗೋಳೀಯ ರೇಖಾಂಶ ವಾಗುತ್ತದೆ—ತಿಳಿದಿದ್ದರೆ N ಬಿಂದುವನ್ನು ನೆಲೆಗೊಳಿಸಬಹುದು. ಈ ಕೋನದ ಬೆಲೆ $\omega$ ಆಗಿರಲಿ. ಇಲ್ಲಿವರೆಗೆ $\sigma$ ಸಮತಲವನ್ನೂ, ಅದರಲ್ಲಿ ASB ರೇಖೆಯಲ್ಲಿ N ಬಿಂದುವನ್ನೂ ಗುರುತಿಸಿದಂತಾಯಿತು.

ಗ್ರಹದ ಕಕ್ಷೆ ದೀರ್ಘವೃತ್ತವೆಂದು ತಿಳಿದಿದೆ. ಇದರ ಶಿಷ್ಟಸಮೀಕರಣ

$$\frac{x^2}{a^2} + \frac{y^2}{b^2} = 1, \quad b^2 = a^2 \ (1-e^2)$$

ಇಲ್ಲಿ $2a$ ದೀರ್ಘವೃತ್ತದ ಪ್ರಧಾನಾಕ್ಷದ ಉದ್ದ, $e$ ದೀರ್ಘವೃತ್ತದ ಉತ್ಕೇಂದ್ರತೆ. $a$ ಮತ್ತು $e$ಗಳ ಬೆಲೆ ತಿಳಿದರೆ ದೀರ್ಘವೃತ್ತವನ್ನು ಚಿತ್ರಿಸಬಹುದು—ಎಂದರೆ, ಅದರ ಆಕಾರ ಹಾಗೂ ಗಾತ್ರಗಳನ್ನು $a$, $e$ಗಳು ನಿರ್ಧರಿಸುತ್ತವೆ. ಗ್ರಹದ ಕಕ್ಷೆ $\sum$ ದೀರ್ಘವೃತ್ತವಾಗಿರಲಿ. ಇದು $\sigma$ ಸಮತಲದಲ್ಲಿದೆ; ಮತ್ತು S ಇದರ ಒಂದು ನಾಭಿ. ಇಷ್ಟರಿಂದ ಮಾತ್ರ $\sum$ ದ ಸ್ಥಾನ ಭದ್ರವಾಗುವುದಿಲ್ಲ. ಅದು ಆಗಲು $\sum$ ದಲ್ಲಿರುವ ಇನ್ನೊಂದು ಸ್ವತಂತ್ರ ಬಿಂದುವನ್ನು ನಿರ್ಧರಿಸುವುದು ಅಗತ್ಯ.




ಚಿತ್ರ 4

$\sum$ ದ ಮೇಲೆ ಗ್ರಹ ಚಲಿಸಿದಂತೆ ಅದರ ಸೂರ್ಯದೂರಗಳು ನಿರಂತರವಾಗಿ ವ್ಯತ್ಯಾಸವಾಗುತ್ತಿರುವುವು. ಸೂರ್ಯನಿಂದ ಗ್ರಹ ಗರಿಷ್ಠದೂರದಲ್ಲಿರುವಾಗಿನ ಸ್ಥಾನಕ್ಕೆ ಸೂರ್ಯದೂರ ಬಿಂದುವೆಂದೂ (A) ಕನಿಷ್ಠ ದೂರದಲ್ಲಿರುವಾಗಿನ ಸ್ಥಾನಕ್ಕೆ ಸೂರ್ಯನೀಚ ಬಿಂದುವೆಂದೂ (P) ಹೆಸರು. ಈಗ NSP ಕೋನದ ಬೆಲೆ—ಇದನ್ನು ಅಪ್ರದಕ್ಷಿಣವಾಗಿಯೇ, ಎಂದರೆ ಗ್ರಹದ ಚಲನೆಯ ದಿಕ್ಕಿನಲ್ಲಿಯೇ, ಅಳೆಯಬೇಕು—ತಿಳಿದಿದ್ದರೆ P ಬಿಂದುವನ್ನು ನೆಲೆಗೊಳಿಸಬಹುದು. ಈ ಬೆಲೆ $\omega'$ ಆಗಿರಲಿ.

ಇದುವರೆಗಿನ $i$, $\omega$, $a$, $e$, $\omega'$ ಈ ಐದು ಸ್ವತಂತ್ರ ಸ್ಥಿರಾಂಕಗಳ ನಿರ್ಧರಣದಿಂದ $\sum$ ವನ್ನು ಸಂಪೂರ್ಣವಾಗಿ ನೆಲೆಗೊಳಿಸಬಹುದು. ಈಗ ಗ್ರಹವು $\sum$ದ ಮೇಲೆ ಚಲಿಸುತ್ತಿದೆ. ಅದು P (A, N, N′ ಯಾವುದೂ ಆಗಬಹುದು) ಬಿಂದುವನ್ನು ಉತ್ತರಿಸುವ ಮುಹೂರ್ತವನ್ನು ಆಧರಿಸಿ, ಅದರ ಕಕ್ಷಾವೇಗವೂ ಕಕ್ಷೆಯೂ ತಿಳಿದಿರುವುದರಿಂದ ಯಾವುದೇ ಇತರ ಮುಹೂರ್ತದಲ್ಲಿ ಗ್ರಹದ ಸ್ಥಾನವನ್ನು ನಿರ್ಧರಿಸಬಹುದು. ಈ ಇತರ ಮುಹೂರ್ತ T ಆಗಿರಲಿ. ಇದು ಆರನೆಯ ಸ್ವತಂತ್ರ ಸ್ಥಿರಾಂಕ.

ಆದ್ದರಿಂದ ನಿರ್ದಿಷ್ಟ ಮುಹೂರ್ತದಲ್ಲಿ ಒಂದು ಗ್ರಹದ ಸ್ಥಾನವನ್ನು ನಿರ್ಧರಿಸಲು ಹಾಗೂ ಯಾವುದೇ ಭವಿಷ್ಯಕಾಲದಲ್ಲಿ ಅದರ ಸ್ಥಾನವನ್ನು ಮುನ್ನುಡಿಯಲು ತಿಳಿದಿರಬೇಕಾದ ಪರಿಮಾಣಗಳ ಕನಿಷ್ಠ ಸಂಖ್ಯೆ ಆರು. ಇವುಗಳಿಗೆ ಕಕ್ಷಾಧಾತುಗಳೆಂದು ಹೆಸರು.

ಒಂದು ಗ್ರಹ ಮತ್ತು ಅದರ ಉಪಗ್ರಹವನ್ನು (ಉದಾ—ಭೂಮಿ ಮತ್ತು ಚಂದ್ರ; ಗುರು ಮತ್ತು ಅದರ ಉಪಗ್ರಹಗಳು; ಇತ್ಯಾದಿ) ಕುರಿತು ಚರ್ಚಿಸುವಾಗ ಮೇಲಿನ ವಿವರಣೆಯಲ್ಲಿನ ಕಾಯಗಳು ಬದಲಾಗುತ್ತವೆ; ಆದರೆ ಸಮಸ್ಯೆ ತಾತ್ತ್ವಿಕವಾಗಿ ಬದಲಾಗುವುದಿಲ್ಲ. ಸೂರ್ಯನ (S) ಸ್ಥಾನದಲ್ಲಿ ಗ್ರಹ ಬರುತ್ತದೆ; $\pi$ ಸಮತಲದ ಬದಲು ಗ್ರಹದ ಕಕ್ಷಾತಲ ಆಧಾರತಲವಾಗುತ್ತದೆ; ಇದನ್ನು ಕುರಿತಂತೆ ಉಪಗ್ರಹದ ಕಕ್ಷಾತಲದ ಬಾಗು $i$ ಆಗುತ್ತದೆ; $\gamma$ ಬಿಂದುವಿನ ಬದಲು ಗ್ರಹದ ಆರೋಹೀ ಸಂಪಾತ ಬಿಂದುವನ್ನು (N) ಆರಿಸಿಕೊಳ್ಳಬಹುದು. ಇದರ ನೆರವಿನಿಂದ ಉಪಗ್ರಹದ ಕಕ್ಷೆಯು ಗ್ರಹದ ಕಕ್ಷೆಯನ್ನು ಸಂಧಿಸುವ ಬಿಂದುಗಳನ್ನು ನಿರ್ಧರಿಸಬಹುದು. P ಬಿಂದುವೀಗ ಉಪಗ್ರಹವು ಗ್ರಹಕ್ಕೆ ಅತಿ ಸಮೀಪದಲ್ಲಿರುವ ಸ್ಥಾನವನ್ನು ಸೂಚಿಸುತ್ತದೆ—ಈ ಬಿಂದುವಿನ ಹೆಸರು ಗ್ರಹನೀಚಬಿಂದು. ಗ್ರಹ ಹಾಗೂ ಉಪಗ್ರಹಗಳ ನಡುವೆ ಪ್ರಯುಕ್ತವಾಗುವ ಬಲ ಸಹ ನ್ಯೂಟನ್ನನ ಸಾರ್ವತ್ರಿಕ ಗುರುತ್ವಾಕರ್ಷಣಬಲದ ನಿಯಮಾನುಸಾರವೇ ಇರುವುದರಿಂದ ಉಪಗ್ರಹದ ಕಕ್ಷೆ (ಗ್ರಹವನ್ನು ಕುರಿತಂತೆ) ಒಂದು ದೀರ್ಘವೃತ್ತ, ಅದರ ಒಂದು ನಾಭಿಯಲ್ಲಿ ಗ್ರಹ ಇರುವುದು.

ಯಮಳನಕ್ಷತ್ರಗಳು ಆಕಾಶದ ಹಲವಾರು ವಿಶೇಷಗಳಲ್ಲಿ ಒಂದು. ಇಲ್ಲಿ (ನಮಗೆ ಕಾಣುವಂತೆ) ಎರಡು ಭಿನ್ನ ದ್ರವ್ಯರಾಶಿಗಳ ನಕ್ಷತ್ರಗಳು ಒಂದರ ಸುತ್ತ ಇನ್ನೊಂದು ಪರಿಭ್ರಮಿಸುತ್ತಿರುವುವು. ಇಂಥ ಚಲನೆಯಲ್ಲಿನ ಸೂತ್ರವೂ ಪುನಃ ಗುರುತ್ವಾಕರ್ಷಣ ನಿಯಮವೇ. ಆದ್ದರಿಂದ ನಿವ್ವಳ ಪರಿಣಾಮವಾಗಿ ಪ್ರಬಲಿಯ ಸುತ್ತಲೂ ದುರ್ಬಲಿ ಪರಿಭ್ರಮಿಸುತ್ತಿರುವುದು. ದ್ರವ್ಯರಾಶಿಗಳ ವ್ಯತ್ಯಾಸ ಅಲ್ಪವಾದಾಗ (ಸಮಾನ ಬಲಶಾಲಿಗಳ ಅಪ್ಪಾಲೆ ತಿಪ್ಪಾಲೆ ಆಟದಂತೆ) ಎರಡೂ ಒಂದರ ಸುತ್ತ ಇನ್ನೊಂದು ಪರಿಭ್ರಮಿಸುತ್ತಿರುವುವು. ಈ ಚಲನೆಯನ್ನು ಅಭ್ಯಸಿಸುವಾಗ ಖಗೋಳಶಾಸ್ತ್ರಿಗಳು ಒಂದು ಸಂಪ್ರದಾಯವನ್ನು ಅನುಸರಿಸುತ್ತಾರೆ. ಯಮಳನಕ್ಷತ್ರಗಳ ಕಕ್ಷಾತಲ ಹಾಗೂ ನಮ್ಮ ದೃಷ್ಟಿರೇಖೆಗೆ ಲಂಬವಾಗಿರುವ ಸಮತಲ ಇವುಗಳ ನಡುವಿನ ಬಾಗುಕೋನ $i$; ದುರ್ಬಲಿಯು ಪ್ರಬಲಿಗೆ ಅತಿ ಸಮೀಪವಾಗಿರುವ ಬಿಂದುವಿನ ಹೆಸರು ನಕ್ಷತ್ರನೀಚಬಿಂದು. ಇಲ್ಲಿ ನಕ್ಷತ್ರ ಪದ ಪ್ರಬಲಿಯನ್ನು ಕುರಿತು ಬಳಕೆಯಾಗಿದೆ. ಭೂಮಿಯಿಂದ ನಕ್ಷತ್ರ ದೂರಗಳು ಅಗಾಧವಾಗಿರುವುದರಿಂದ ನಕ್ಷತ್ರವೀಕ್ಷಣೆಯನ್ನು ಸಂಕೀರ್ಣ ಉಪಕರಣಗಳ ನೆರವಿನಿಂದ ನಡೆಸಿ ಜಟಿಲ ಗಣಿತ ಸಮೀಕರಣಗಳ ಸಹಾಯದಿಂದ ಕಕ್ಷೆಗಳನ್ನು ನಿರ್ಧರಿಸಬೇಕಾಗುತ್ತದೆ.

**ಭಿನ್ನ ಕಕ್ಷೆಗಳು :** ಆಕಾಶಕಾಯಗಳ ಚಲನೆಯನ್ನು ಕುರಿತು ವಿವೇಚಿಸುವಾಗ ಕಕ್ಷೆ ಎನ್ನುವ ಪರಿಕಲ್ಪನೆ ಆವಶ್ಯಕವಾಗುತ್ತದೆ. ಇಲ್ಲಿಯೂ ದೀರ್ಘವೃತ್ತ ಕಕ್ಷೆಗಳೇ ಪ್ರಧಾನ ಪಾತ್ರ ವಹಿಸುವುದರಿಂದ ಇದುವರೆಗೆ ಅದನ್ನೇ ಕುರಿತು ಪ್ರಸ್ತಾಪಿಸಲಾಯಿತು. ಆದರೆ ನ್ಯೂಟನ್ನನ ಸಾರ್ವತ್ರಿಕ ಗುರುತ್ವಾಕರ್ಷಣಬಲದ ನಿಯಮಾನುಸಾರ ಪ್ರಬಲಿಆಕಾಶಕಾಯವನ್ನು ಕುರಿತು ದುರ್ಬಲಿಆಕಾಶಕಾಯದ ಕಕ್ಷೆ ಒಂದು ಶಂಕುಜವೆಂದು ಗಣಿತಶಾಸ್ತ್ರ ತಿಳಿಸುವುದೇ ವಿನಾ ಅದು ದೀರ್ಘವೃತ್ತವೇ ಆಗಬೇಕೆಂದು ವಿಧಿಸುವುದಿಲ್ಲ. ಇದನ್ನು ಕುರಿತ ಸಮೀಕರಣಗಳನ್ನು ಮುಂದೆ ಬರೆದಿದೆ.

$$\frac{h^2}{p^3}\frac{dp}{dr} = P = \frac{\mu}{r^2}, \; h^2 = \mu l$$

ಇದನ್ನು ಅನುಕಲನಿಸಿದಾಗ ದೊರೆಯುವ ಸಮೀಕರಣ

$$\frac{h^2}{p^2} = \frac{2\mu}{r} + C,$$ C ಅನುಕಲನ ನಿಯತಾಂಕ

$vp = h$ ಆಗಿರುವುದರಿಂದ

$$v^2 = \frac{2\mu}{r} + C \qquad \dots \quad (1)$$

ಈಗ ಶಂಕುಜದ ಸಮೀಕರಣ

$$\frac{l}{r} = 1 + e\cos\theta$$

$$\frac{v^2}{h^2} = \frac{1}{r^2} + \frac{1}{r^4}\left(\frac{dr}{d\theta}\right)^2 = \frac{e^2-1}{l^2} + \frac{2}{rl}$$

$$\therefore v^2 = \mu\left(\frac{2}{r} + \frac{e^2-1}{l}\right) \qquad \dots \quad (2)$$

ಶಂಕುಜವು ದೀರ್ಘವೃತ್ತವಾದಾಗ $b^2 = a^2(1-e^2)$, $e < 1$

ಶಂಕುಜವು ಪ್ಯರಾಬೊಲವಾದಾಗ $e = 1$

ಶಂಕುಜವು ಹೈಪರ್ಬೋಲವಾದಾಗ $b^2 = a^2(e^2-1)$, $e > 1$

ಆದ್ದರಿಂದ (1) ಮತ್ತು (2) ಸಮೀಕರಣಗಳನ್ನು ಸಮನ್ವಯಿಸುವುದರಿಂದ ಕಕ್ಷೆಯು ದೀರ್ಘವೃತ್ತ ಅಥವಾ ಪ್ಯರಾಬೊಲ ಅಥವಾ ಹೈಪರ್ಬೋಲ ಆಗಿರಲು ನಿಯಮಗಳು $v^2 \lesseqgtr \frac{2\mu}{r}$ ಎಂದು ವೇದ್ಯವಾಗುವುದು. ಇದರ ಭಾಷ್ಯವಿಷ್ಟು—ಕಕ್ಷಾವೇಗ ಹಾಗೂ ಕಾಯಗಳ ಅಂತರ ಇವನ್ನು ಅವಲಂಬಿಸಿ ಕಕ್ಷೆಯು ಶಂಕುಜದ ಮೂರು ಭಿನ್ನರೂಪಗಳಲ್ಲಿ ಯಾವುದೇ ಒಂದನ್ನು ಪಡೆಯುತ್ತದೆ. ಎಂದರೆ, ವಿವೃತ ವಕ್ರರೇಖೆಗಳಾದ ಪ್ಯರಾಬೊಲ ಹಾಗೂ ಹೈಪರ್ಬೋಲ ಕಕ್ಷೆಗಳಿರುವ ಕಾಯಗಳು ಆಕಾಶದಲ್ಲಿರುವುದು ಅವಾಸ್ತವಿಕವಲ್ಲ. ಸೌರವ್ಯೂಹದ ವಿದ್ಯಮಾನಗಳಾದ ಧೂಮಕೇತುಗಳನ್ನು ಇಲ್ಲಿ ಉದಾಹರಿಸಬಹುದು. ಅವು ಸೂರ್ಯನ ಸಮೀಪ ಚಲಿಸುವಾಗ ಮಾತ್ರ ನಮ್ಮ ವೀಕ್ಷಣೆಗೆ ಲಭಿಸುತ್ತವೆ. ಅವುಗಳ ಕಕ್ಷಾಧಾತುಗಳನ್ನು ಗಣಿಸಿ ಕಕ್ಷೆಗಳನ್ನು ನಿಖರವಾಗಿ ನಿರ್ಧರಿಸುತ್ತಾರೆ. ಇಂಥವಲ್ಲಿ ಹಲವಾರು ಧೂಮಕೇತುಗಳ ಕಕ್ಷೆಗಳು ಪ್ಯರಾಬೊಲಗಳೂ ಹೈಪರ್ಬೋಲಗಳೂ ಆಗಿರುವುದು ತಿಳಿದುಬಂದಿದೆ.

ವೃತ್ತವನ್ನು ಶಂಕುಜದ ಒಂದು ವಿಶಿಷ್ಟ ರೂಪ ಎಂದು ಪರಿಗಣಿಸುವುದು ಸಾಧ್ಯವಿದೆ. ಇಲ್ಲಿ ಶಂಕುಜದ ನಾಭಿಗಳು ಕೇಂದ್ರ ಬಿಂದುವಿನಲ್ಲಿ ಐಕ್ಯವಾಗುವುವು; ಆದ್ದರಿಂದ ಉತ್ಕೇಂದ್ರತೆ ಶೂನ್ಯ ($e=0$). ಈ ಸನ್ನಿವೇಶದಲ್ಲಿ ಕೇಂದ್ರಾಕರ್ಷಣದ ಬೆಲೆ ಒಂದು ನಿಯತಾಂಕವಾಗುತ್ತದೆ. ವಾಸ್ತವಿಕ ಪರಿಸ್ಥಿತಿಗಳಲ್ಲಿ ಇದು ತಲೆದೋರುವುದು ವಿರಳ; ವರ್ತುಳೀಯ ಕಕ್ಷೆಯನ್ನು ಉಳಿಸಿಕೊಳ್ಳುವುದು ಬಲು ಪ್ರಯಾಸಕರ.

ಇದುವರೆಗೆ ಆಕಾಶಕಾಯಗಳಿಗೆ ಸಂಬಂಧಿಸಿದಂತೆ ಕಕ್ಷೆಗಳ ವಿಚಾರ ಪರಿಶೀಲಿಸಿದ್ದಾಯಿತು. ಬೇರೆ ವಿಧದ ಕಕ್ಷೆಗಳೂ ಇವೆ. ಬಲಕೇಂದ್ರವು ಆಕರ್ಷಕವಾಗಿರಬಹುದು, ಅಪಕರ್ಷಕವಾಗಿರಬಹುದು. ಉದಾಹರಣೆಗೆ ಕೇಂದ್ರಾಕರ್ಷಕಬಲ $\mu/r^3$ (ವಿಲೋಮಘನ ನಿಯಮ) ಸೂತ್ರಾನುಸಾರವಿದ್ದಾಗ ಕಕ್ಷೆ ಅನಂತವಾಗಿ ಸುರುಳಿ ಸುತ್ತಿಕೊಂಡಂಥ

$$\gamma = ae^{\theta \cot a}$$

ವಕ್ರರೇಖೆ ಆಗುತ್ತದೆ.

ಇದರ ಹೆಸರು ಸಮಾನಕೋನೀಯ ಸುರುಳಿ. ಇದಕ್ಕೆ ಆರಂಭ ಬಿಂದುವಿದೆ. ಕೊನೆ ಬಿಂದುವೇ ಇಲ್ಲ.

ಕಕ್ಷೆಗಳನ್ನು ಕುರಿತು ಚರ್ಚಿಸುವಾಗ ಪರಿಕಲ್ಪನೆ ಇಷ್ಟು–ಒಂದು ಬಲಕೇಂದ್ರವಿದೆ; ಅದರ ನಿಯಂತ್ರಣಾನುಸಾರ ಒಂದು ಕಾಯವು ಆ ಕೇಂದ್ರವನ್ನು ಕುರಿತು ರೇಖಿಸುವ ಪಥವೇ ಕಾಯದ ಕಕ್ಷೆ. ಈ ಕಾರಣದಿಂದಲೇ ಒಂದು ಪ್ರಬಲ ರಾಷ್ಟ್ರವನ್ನು ಅವಲಂಬಿಸಿರುವ ಇನ್ನೊಂದು ದುರ್ಬಲ ರಾಷ್ಟ್ರದ ವರ್ತನೆಯನ್ನು ಕುರಿತು ಹೇಳುವಾಗ ಮೊದಲಿನದರ ಉಪಗ್ರಹ ಎರಡನೆಯದು, ಅದನ್ನು ಕುರಿತು ಇದು ಕಕ್ಷೆಯಲ್ಲಿದೆ ಎಂದು ಮುಂತಾದ ನುಡಿಗಟ್ಟುಗಳು ಬಳಕೆಗೆ ಬಂದಿವೆ.

**ಕಕ್ಷಾವೇಗ :** ಕಕ್ಷೆಯ ಮೇಲೆ ಪರಿಭ್ರಮಿಸುತ್ತಿರುವ ಕಾಯದ ವೇಗಕ್ಕೆ ಈ ಹೆಸರಿದೆ. ಆಕಾಶಕಾಯಗಳ ಚಲನೆಯಲ್ಲಿ ಇದರ ಬೆಲೆ $v$ಯನ್ನು ಕೊಡುವ ಸಮೀಕರಣ

$$v^2 = \frac{2\mu}{r} + C$$

ಎಂದು ಹಿಂದೆ ನೋಡಿದೆ. $r$ನ ಬೆಲೆ (ಬಲಕೇಂದ್ರ ಹಾಗೂ ಕಾಯ ಇವುಗಳ ಅಂತರ) ನಿರಂತರವಾಗಿ ಬದಲಾಗುತ್ತಿರುವುದರಿಂದ ಕಕ್ಷಾವೇಗವೂ ನಿರಂತರವಾಗಿ ಬದಲಾಗುತ್ತಿರುವುದು. ಕಾಯವು ಕೇಂದ್ರದಿಂದ ಅತಿ ದೂರದಲ್ಲಿರುವಾಗ $r$ನ ಬೆಲೆ ಗರಿಷ್ಠ (ದೀರ್ಘವೃತ್ತಕ್ಕೆ ಮಾತ್ರ ಇದು ಅನ್ವಯವಾಗುವುದು; ಉಳಿದೆರಡು ವಿವೃತ ಕಕ್ಷೆಗಳಲ್ಲಿ ಈ ಬೆಲೆ ಅನಂತವೇ ಆಗುವುದಷ್ಟೆ). ಆಗ ಕಾಯದ ಕಕ್ಷಾವೇಗ ಕನಿಷ್ಠವಾಗಿದೆಯೆಂದು ಸಮೀಕರಣದಿಂದ ತಿಳಿಯುತ್ತದೆ. ಕಾಯವು ಕೇಂದ್ರಕ್ಕೆ ಅತಿ ಸಮೀಪದಲ್ಲಿರುವಾಗ $r$ನ ಬೆಲೆ ಕನಿಷ್ಠ (ಎಲ್ಲ ಕಕ್ಷೆಗಳಿಗೂ ಇದು ಅನ್ವಯಿಸುವುದು). ಆಗ ಕಾಯದ ಕಕ್ಷಾವೇಗ ಗರಿಷ್ಠವಾಗಿರುವುದು. ಈ ಕಾರಣದಿಂದ ಭೂಮಿಯ ಕಕ್ಷಾವೇಗ ಸೂರ್ಯನೀಚಬಿಂದುವಿನಲ್ಲಿ (ಜನವರಿ 3ರ ಸುಮಾರು) ಗರಿಷ್ಠವಾಗಿಯೂ ಸೂರ್ಯದೂರಬಿಂದುವಿನಲ್ಲಿ (ಜುಲೈ 3ರ ಸುಮಾರು) ಕನಿಷ್ಠವಾಗಿಯೂ ಇರುವುದು. ಜನವರಿ 3 ರಿಂದ ಜುಲೈ 3ರ ವರೆಗೆ ಸೂರ್ಯ–ಭೂಮಿ ಅಂತರ ಏರುತ್ತ ಹೋದಂತೆ ಭೂಮಿಯ ಕಕ್ಷಾವೇಗ ಕಡಿಮೆಯಾಗುತ್ತ ಹೋಗುವುದು. ಜುಲೈ 3 ರಿಂದ ಜನವರಿ 3ರ ವರೆಗೆ ಈ ಅಂತರ ಇಳಿಯುತ್ತ ಹೋದಂತೆ ಭೂಮಿಯ ಕಕ್ಷಾವೇಗ ಏರುತ್ತ ಹೋಗುವುದು. ಪ್ರತಿಯೊಂದು ಗ್ರಹವೂ [illegible]

ಕಕ್ಷೆಯಲ್ಲಿ ಸೂರ್ಯನನ್ನು ಕುರಿತು ಮತ್ತು ಪ್ರತಿಯೊಂದು ಉಪಗ್ರಹವೂ ಅದರದರ ಕಕ್ಷೆಯಲ್ಲಿ ಮಾತೃಗ್ರಹವನ್ನು ಕುರಿತು (ಉದಾಹರಣೆಗೆ, ಭೂಮಿಯನ್ನು ಕುರಿತು ಚಂದ್ರ) ಇದೇ ರೀತಿ ವರ್ತಿಸುತ್ತದೆ.

ಆದ್ದರಿಂದ ಬಲಕೇಂದ್ರದ ಸಮೀಪದಲ್ಲಿ ಕಕ್ಷಾವೇಗ ಏರುವುದೆಂದೂ ದೂರದಲ್ಲಿ ಇಳಿಯುವುದೆಂದೂ ಸಿದ್ಧವಾಯಿತು. ಈಗ ಸೌರವ್ಯೂಹದ ಎರಡು ಗ್ರಹಗಳನ್ನು —ಉದಾಹರಣೆಗೆ ಅತಿ ಸಮೀಪದ ಬುಧ ಹಾಗೂ ಈಗ ತಿಳಿದಿರುವಂತೆ ಅತಿದೂರದ ಪ್ಲೂಟೋ—ಪರಿಶೀಲಿಸಬಹುದು. ಬುಧಗ್ರಹದ ಕಕ್ಷಾವೇಗ ಪ್ಲೂಟೋ ಗ್ರಹದ ಕಕ್ಷಾವೇಗಕ್ಕಿಂತ ಅದೆಷ್ಟೊ ಹೆಚ್ಚು. ಸೂರ್ಯದೂರ ಗ್ರಹಗಳ ಸರಾಸರಿ ಕಕ್ಷಾವೇಗ ಸೂರ್ಯಸಮೀಪ ಗ್ರಹಗಳ ಸರಾಸರಿ ಕಕ್ಷಾವೇಗಕ್ಕಿಂತ ಕಡಿಮೆ ಎಂದು ಇದರಿಂದ ತಿಳಿಯುತ್ತದೆ. ಸೌರವ್ಯೂಹದ ಗ್ರಹಗಳ ದೂರ ಮತ್ತು ಕಕ್ಷಾವೇಗಗಳನ್ನು ಮುಂದಿನ ಯಾದಿ ತೋರಿಸುತ್ತದೆ.

| ಗ್ರಹದ ಹೆಸರು | ಸೂರ್ಯನಿಂದ ದೂರ (ದಶಲಕ್ಷ ಮೈಲಿಗಳಲ್ಲಿ) | ಸರಾಸರಿ ಕಕ್ಷಾವೇಗ (ಮೈಲಿ/ಸೆಕೆಂಡ್) |
|---|---|---|
| ಬುಧ ... | 36·0 ... | 27·2 |
| ಶುಕ್ರ ... | 67·2 ... | 21·7 |
| ಭೂಮಿ ... | 93·0 ... | 18·5 |
| ಮಂಗಳ ... | 141·5 ... | 15·0 |
| ಗುರು ... | 483·3 ... | 8·1 |
| ಶನಿ ... | 866·2 ... | 6·0 |
| ಯುರೇನಸ್ ... | 1,783·0 ... | 4·2 |
| ನೆಪ್ಚೂನ್ ... | 2,794·0 ... | 3·4 |
| ಪ್ಲೂಟೋ ... | 3,670·0 ... | 3·0 |

ಕೃತಕ ಉಪಗ್ರಹಗಳ ಕಕ್ಷೆಗಳನ್ನು ಕುರಿತ ವಿವರಗಳಿಗೆ ನೋಡಿ— ಅಂತರಿಕ್ಷ ಸಂಶೋಧನೆ ; ಉಪಗ್ರಹ ಕೃತಕ. *

**ಕಗಲ್ನಿಸಿಅನು, ಮೈಹೇಲ್ :** 1817–91. ರೂಮೇನಿಯದಲ್ಲಿ ಆಧುನಿಕ ಇತಿಹಾಸ ಲೇಖನವನ್ನು ಆರಂಭಿಸಿದಾತ. ಸಾಹಿತ್ಯ, ರಾಜಕಾರಣ, ಇತಿಹಾಸ ಕ್ಷೇತ್ರಗಳಲ್ಲಿ ಅಪ್ರತಿಮ ದೇಶಪ್ರೇಮವನ್ನು ಮೆರೆದ ಪ್ರತಿಭಾನ್ವಿತ ವ್ಯಕ್ತಿ. ಇಯಾಸಿ ಎಂಬಲ್ಲಿ ಹುಟ್ಟಿ, ಫ್ರಾನ್ಸಿನ ಲುನೆವಿಲ್ ಮತ್ತು ಬರ್ಲಿನ್ ವಿಶ್ವವಿದ್ಯಾನಿಲಯಗಳಲ್ಲಿದ್ದುಕೊಂಡು ಪ್ರಥಮವಾಗಿ ರೂಮೇನಿಯದ ಚರಿತ್ರೆಯನ್ನು ನಾನಾ ಮೂಲಗಳಿಂದ ಸಂಪಾದಿಸಿ ಬರೆದ ; ರೂಮೇನಿಯನ್ ಭಾಷೆ ಹಾಗೂ ಸಾಹಿತ್ಯದ ಸಮೀಕ್ಷೆಯನ್ನೂ ನಡೆಸಿದ.

ತನ್ನ ಇಪ್ಪತ್ತಾರನೆಯ ವಯಸ್ಸಿನಲ್ಲಿಯೇ ಮೈಹೇಲಿಯ ಅಕೆಡಮಿಯಲ್ಲಿ ರಾಷ್ಟ್ರ ಚರಿತ್ರೆಯ ಬಗ್ಗೆ ಉಪನ್ಯಾಸ ಮಾಡಿದ. ರೂಮೇನಿಯದ ಭಾಗವಾದ ಮಾಲ್ಡೇವಿಯದ ಪ್ರಾಚೀನ ಚರಿತ್ರೆಯನ್ನು ಸಂಪಾದಿಸಿ ಪ್ರಕಟಿಸಿದ. ಇದಲ್ಲದೆ ಅರ್ಹೈವ ರೊಮನೆಸ್ಕ ಎಂಬ ಚಾರಿತ್ರಿಕಪತ್ರಾಗಾರ ವಿಮರ್ಶಾಪತ್ರಿಕೆಯನ್ನೂ ಆರಂಭಿಸಿದ. ಸಾಹಿತ್ಯಕ್ಷೇತ್ರದಲ್ಲಿ ಡೇಸಿಯ ಲಿಟರೆರ ಎಂಬ ವಿಮರ್ಶಾಪತ್ರಿಕೆಯನ್ನೂ ಸ್ಥಾಪಿಸಿ, ಸಾಂಪ್ರದಾಯಿಕತೆಯನ್ನು ಬೆಳೆಸಿದ.

ಪ್ರಗತಿಪರ ಸುಧಾರಣೆಯೇ ಈತನ ರಾಜಕೀಯ ಚಟುವಟಿಕೆಯ ಗುರಿ, ಹೀಗಾಗಿ ಸರ್ಕಾರವನ್ನು ಎದುರಿಸಿದುದರಿಂದ 1846ರಲ್ಲಿ ಗಡೀಪಾರಾದ. ಫ್ರಾನ್ಸ್, ಸ್ಪೇನ್‌ಗಳಲ್ಲಿ ಸಂಚರಿಸಿ 1848ರಲ್ಲಿ ಹಿಂದಿರುಗಿ, ಮಾಲ್ಡೇವಿಯ–ವಾಲೇಷಿಯ ಪ್ರಾಂತ್ಯಗಳು ಒಂದುಗೂಡಬೇಕೆಂಬ ಪ್ರಚಾರವನ್ನು ಆರಂಭಿಸಿ ಅದಕ್ಕಾಗಿ ಒಂದು ದಿನಪತ್ರಿಕೆಯನ್ನು ಸ್ಥಾಪಿಸಿದ.

ಹನ್ನೊಂದು ವರ್ಷಗಳ ಅವ್ಯಾಹತ ಹೋರಾಟದ ಅನಂತರ 1859ರಲ್ಲಿ ಮಾಲ್ಡೇವಿಯ, ವಾಲೇಷಿಯ ಪ್ರಾಂತ್ಯಗಳು ಒಂದಾದಾಗ ಕಗಲ್ನಿಸಿಅನು ರಾಜಕುಮಾರನ ಆಪ್ತಸಲಹೆಗಾರನಾದ. 1863ರಲ್ಲಿ ಪ್ರಧಾನಿಯಾಗಿ ನೇಮಕವಾಗಿ ಭೂಮಾಲೀಕತ್ವ, ಧಾರ್ಮಿಕ ಆಸ್ತಿಗಳು, ಶಿಕ್ಷಣ, ಆಡಳಿತಗಳಲ್ಲಿ ಸುಧಾರಣೆಗಳನ್ನು ಮಾಡಿದ. ಇದರಿಂದ ಆತ ಪ್ರಬಲ ವಿರೋಧವನ್ನು ಎದುರಿಸಬೇಕಾಯಿತು. ಅದರ ಫಲವಾಗಿ 1865ರಲ್ಲಿ ತನ್ನ ಪದವಿಗೆ ರಾಜೀನಾಮೆಯಿತ್ತ. 1876 ರಿಂದ 1880ರ ವರೆಗೆ ವಿದೇಶಾಂಗ ಮಂತ್ರಿಯಾಗಿದ್ದ. 1878ರಲ್ಲಿ ದೇಶದ ಪ್ರತಿನಿಧಿಯಾಗಿ ಬರ್ಲಿನ್ ಕಾಂಗ್ರೆಸ್‌ನಲ್ಲಿ ಭಾಗವಹಿಸಿ ರೂಮೇನಿಯದ ಸ್ವಾತಂತ್ರ್ಯಕ್ಕೆ ಮನ್ನಣೆ ದೊರಕಿಸಿದ. 1891ರಲ್ಲಿ ಪ್ಯಾರಿಸಿನಲ್ಲಿ ನಿಧನನಾದ. (ಬಿ.ವಿ.ಎಸ್)

**ಕಗ್ಗಲಿ :** ಲೆಗ್ಯುಮಿನೋಸೀ ಕುಟುಂಬದ ಮಿಮೋಸೀ ಉಪಕುಟುಂಬಕ್ಕೆ ಸೇರಿದ ಅಕೇಸಿಯ ಕ್ಯಾಟಿಚೂ ಎಂಬ ಪ್ರಭೇದದ ಮರ. ಇದಕ್ಕೆ ಕಚ್‌ಮರ ಎಂಬ ವಾಣಿಜ್ಯನಾಮವೂ ಉಂಟು. ತಮಿಳಿನಲ್ಲಿ ಇದನ್ನು ಕರಂಗಲಿ ಎನ್ನುತ್ತಾರೆ. ಇದು ಅತಿಯಾಗಿ ತೇವವುಳ್ಳ ಪ್ರದೇಶಗಳನ್ನು ಬಿಟ್ಟು ನಾನಾ ತರಹೆಯ ನೆಲಗಳಲ್ಲಿ ಸಾಧಾರಣವಾಗಿ ತೋಪುಗಳಾಗಿ ಬೆಳೆಯುತ್ತದೆ. ಬಿಸಿಲಿದ್ದಷ್ಟೂ ಈ ಗಿಡ ಚೆನ್ನಾಗಿ ಬೆಳೆಯುತ್ತದೆ. ಮರ ಮಧ್ಯ ಪ್ರಮಾಣದ್ದು. ಕೊಂಬೆಗಳಲ್ಲಿ ಬಗ್ಗಿದ ಮೊನಚಾದ ಮುಳ್ಳುಗಳಿವೆ. ತೊಗಟೆ ಬೂದುಗಪ್ಪು, ಮಂದ. ಬಿಸಿಲುಕಾಲದಲ್ಲಿ ಕೆಲಕಾಲ ಎಲೆ ಉದುರಿ, ಮೇ ತಿಂಗಳ ಸುಮಾರಿಗೆ ಹೊಸ ಚಿಗುರು ಬಂದು ಅದರೊಂದಿಗೇ ಬಿಳಿಯ ಹೂಗೊಂಚಲು ಮೂಡುತ್ತವೆ. ಕಾಯಿಗಳು ಡಿಸೆಂಬರಿನಲ್ಲಿ ಮಾಗುತ್ತವೆ. ಕಡಿದಾಗ ಸಾಧಾರಣವಾಗಿ ಮತ್ತೆ ಚಿಗುರುವುದು. ಬೇರುಸಸಿಗಳು ಕಂಡುಬರುತ್ತವೆ. ಬುಡದ ತೊಗಟೆಯನ್ನು ಮುಳ್ಳುಹಂದಿಗಳು ಕಡಿದು ಅನೇಕ ಗಿಡಗಳನ್ನು ಹಾಳು ಮಾಡುತ್ತವೆ. ಸ್ವಾಭಾವಿಕ ಪುನರುತ್ಪತ್ತಿ ಮೆಕ್ಕಲು ಮಣ್ಣಿನ ನದೀಪಾತ್ರಗಳಲ್ಲಿ ವಿಶೇಷ. ಬೀಜಗಳನ್ನು ಬಿತ್ತಿಯೂ ಮರಗಳನ್ನು ಬೆಳೆಸಬಹುದು. ಇದರಿಂದ ದೊರಕುವ ಮುಖ್ಯ ಉತ್ಪನ್ನ ತಾಂಬೂಲದೊಂದಿಗೆ ಉಪಯೋಗಿಸುವ ಕಾಚು (ನೋಡಿ). ಇದರ ಚೌಬೀನೆ ಬಹುಗಟ್ಟಿಯಾಗಿದ್ದು ನೇಗಿಲು, ದೋಣಿಗಳ ಅಡಿಗಟ್ಟು, ಆಯುಧಗಳ ಹಿಡಿ—ಇವುಗಳಿಗೆ ಉಪಯುಕ್ತವಾಗಿದೆ. (ಎ.ಕೆ.ಎಸ್.)

**ಕಗ್ಗುಲ :** ಪಾರಿವಾಳ ಮತ್ತು ಕಪೋತಗಳನ್ನೊಳಗೊಂಡ ಕೊಲಂಬಿಡೀ ಕುಟುಂಬಕ್ಕೆ ಸೇರಿದ ಒಂದು ಜಾತಿಯ ಹಕ್ಕಿ. ಈ ಜಾತಿಯ ವೈಜ್ಞಾನಿಕ ನಾಮ



ಟ್ರೇರಾನ್. ಹಸಿರು ಪಾರಿವಾಳವೆಂದೂ ಹೆಸರುಂಟು. ಭಾರತದಿಂದ ಹಿಡಿದು ಮಲೇಷಿಯ, ಫಿಲಿಪೀನ್ಸ್ ದ್ವೀಪಗಳ ವರೆಗೂ ಹರಡಿದೆ. ದೇಹರಚನೆ, ಗಾತ್ರ, ಆಕಾರ, ಪಾರಿವಾಳಗಳಂತೆಯೇ. ದೇಹದ ಮೇಲೆ ಹಳದಿಮಿಶ್ರಣವಾದ ಹಸಿರು ತುಪ್ಪಳ ಇರುವುದು ಒಂದು ವಿಶೇಷ ಗುಣ. ಇವುಗಳ ಬಾಲ ಭಾಗಶಃ ದುಂಡಾಗಿರಬಹುದು, ಬೆಣೆಯ ಆಕಾರದಲ್ಲಿರಬಹುದು ಅಥವಾ ಚೂಪಾಗಿರಬಹುದು. ಟಾರ್ಸಸ್ ಎಲುಬಿರುವ ಕಾಲಿನ ಭಾಗ ಮಧ್ಯದ ಬೆರಳಿಗಿಂತ ಚಿಕ್ಕದು ಮತ್ತು ಬಲಯುತವಾದುದು. ಕೊಕ್ಕು ಚಿಕ್ಕದು ಮತ್ತು ತೆಳು. ಅದರ ಬುಡದ ಭಾಗದಲ್ಲಿ ಪಾರಿವಾಳಗಳಿಗಿರುವಂತೆ ಒಂದು ದಪ್ಪನಾದ ಮೃದು ಚರ್ಮದ ದಿಂಡಿದೆ. ಮೇತೆ (ಕ್ರಾಪ್) ದೊಡ್ಡದು; ಅದರಲ್ಲಿ ಎಳೆಯ ಮರಿಗಳಿಗೆ ಉಣಿಸಲು ಹಾಲು ಉತ್ಪತ್ತಿಯಾಗುತ್ತದೆ. ಅಂಗಾಲು ಮಾಂಸಮಯವಾಗಿಯೂ ಮೆತ್ತಗೂ ಇದ್ದು ಬೆರಳುಗಳಿಗಿಂತ ವಿಸ್ತಾರವಾಗಿದೆ. ಹೀಗಿರುವುದು ಮರಗಳ ಮೇಲಿನ ವಾಸಕ್ಕೆ ಸೂಕ್ತವಾಗಿ ಹೊಂದಿಕೊಂಡಿರುವ ವೈಶಿಷ್ಟ್ಯ. ಕಗ್ಗುಲ ಸಾಮಾನ್ಯವಾಗಿ ಮರಗಳ ಮೇಲೆ ವಾಸಿಸಿದರೂ ಕೆಲವು ವೇಳೆ ಮಣ್ಣಿನಲ್ಲಿರುವ ಉಪ್ಪನ್ನು ತಿನ್ನುವುದಕ್ಕೆ ಕೆಳಗಿಳಿಯುತ್ತದೆ. ಸಾಮಾನ್ಯವಾಗಿ ಗುಂಪಿನಲ್ಲಿ ವಾಸಿಸುತ್ತದೆ. ಅಪರೂಪಕ್ಕೆ ಒಂಟಿಯಾಗಿರುವುದೂ ಉಂಟು. ಒಂದೊಂದು ಗುಂಪಿನಲ್ಲಿ 10 ರಿಂದ 30 ಹಕ್ಕಿಗಳಿರಬಹುದು. ಮೈಬಣ್ಣ ಗಿಡದ ಹಸಿರುಬಣ್ಣದೊಡನೆ ಐಕ್ಯವಾಗುವುದರಿಂದ ಮರದ ಮೇಲೆ ಅವನ್ನು ಗುರುತಿಸುವುದು ಕಷ್ಟ. ಅಕಸ್ಮಾತ್ತಾಗಿ ಗುಂಡಿನ ಶಬ್ದವಾದಾಗ ಹಕ್ಕಿಗಳೆಲ್ಲ ಒಂದೇ ಗುಂಪಾಗಿ ಜೋರಾಗಿ ಹಾರಿ ಮತ್ತೆ ಅದೇ ಮರದ ಬಳಿ ಬಂದು ಕೂಡುತ್ತವೆ. ಇವುಗಳ ಆಹಾರ ವಿವಿಧ ಬಗೆಯ ಹಣ್ಣುಗಳು. ದಪ್ಪ ದಪ್ಪ ಹಣ್ಣುಗಳನ್ನು ಇಡಿಯಾಗಿ ನುಂಗುವುದು ವಾಡಿಕೆ. ಗಂಡುಹೆಣ್ಣುಗಳೆರಡೂ ಸೇರಿ ಮರಗಳ ತುದಿಯ ರೆಂಬೆಗಳ ಮೇಲೆ ಸಣ್ಣ ಸಣ್ಣ ಕಡ್ಡಿಗಳನ್ನು ಜೋಡಿಸಿ ಒರಟಾದ ಗೂಡುಗಳನ್ನು ಕಟ್ಟುತ್ತವೆ. ಒಂದೊಂದು ಗೂಡಿನಲ್ಲಿ ಎರಡು ಬಿಳಿಯ ಮೊಟ್ಟೆಗಳಿರುತ್ತವೆ. ಗಂಡು ಹೆಣ್ಣು ಎರಡೂ ಸರದಿಯ ಮೇರೆಗೆ ಕಾವು ಕೊಡುತ್ತವೆ. ಅಲ್ಲದೆ ಮರಿಗಳು ದೊಡ್ಡವಾಗುವ ವರೆಗೂ ಗುಟುಕು ಕೊಟ್ಟು ಸಲಹುತ್ತವೆ. ಕೆಲವು ಪ್ರಭೇದಗಳಲ್ಲಿ ಕಾವು ಕೊಡುವ ಕಾಲ 12–14 ದಿನಗಳಾದರೆ ಮತ್ತೆ ಕೆಲವಲ್ಲಿ 18–19 ದಿನಗಳು.

ಕಗ್ಗಲಿಗಳಲ್ಲಿ ಹಲವು ಪ್ರಭೇದಗಳಿವೆ; ಹಾಗೂ ಒಂದೊಂದರಲ್ಲೂ ಒಂದಕ್ಕಿಂತಲೂ ಹೆಚ್ಚಿನ ಉಪಪ್ರಭೇದಗಳಿವೆ. ಉತ್ತರಭಾರತದ ಈಶಾನ್ಯಭಾಗದಲ್ಲಿ ಜೂಜುಬಾಲದ ಕಗ್ಗಲಿ (ಟ್ರೀ.ಅಟಿಕ್ಯಾಡ), ಜೆಣೆಬಾಲದ ಕಗ್ಗಲಿ (ಟ್ರೀ.ಸ್ಪೀನ್ಯೂರ), ದಪ್ಪಕೊಕ್ಕಿನ ಕಗ್ಗಲಿ (ಟ್ರೀ.ಕರ್ವಿರಾಸ್ಟ್ರ), ಬೂದುತಲೆಯ ಕಗ್ಗಲಿ (ಟ್ರೀ.ಪಾಂಪಡೋರ), ಹೊಂಬಣ್ಣದ ಎದೆಯ ಕಗ್ಗಲಿ (ಟ್ರೀ. ಬೈಸಿಂಕ್ಟ), ತೆಂಕಣದ ಕಗ್ಗಲಿ (ಟ್ರೀ.ಫೀನಿಕಾಪ್ಟೆರ) ಮೊದಲಾದುವುಗಳಿವೆ. ಇವುಗಳ ಪೈಕಿ ದಕ್ಷಿಣ ಭಾರತದಲ್ಲಿ ಅದರಲ್ಲೂ ಮುಖ್ಯವಾಗಿ ಪಶ್ಚಿಮಘಟ್ಟದ ಕಾಡುಗಳಲ್ಲಿ ಒಂದು ಬಗೆಯ ಬೂದುತಲೆಯ ಕಗ್ಗಲಿ, ಹೊಂಬಣ್ಣದ ಎದೆಯ ಕಗ್ಗಲಿ ಕಂಡುಬರುತ್ತವೆ. (ಬಿ.ಎನ್.ಬಿ.)

**ಕಚ್ :** ಗುಜರಾತ್ ರಾಜ್ಯದ ಒಂದು ಜಿಲ್ಲೆ. ಇದನ್ನು ಕಛ್ ಎಂದೂ ಕರೆಯುವುದುಂಟು. ಸ್ಥೂಲವಾಗಿ ಉತ್ತರ ಅಕ್ಷಾಂಶ 22° 47′ ನಿಂದ 24°ಯ ವರೆಗೂ ಪೂರ್ವರೇಖಾಂಶ 68° 15′ ನಿಂದ 71° 11′ವರೆಗೂ ಹಬ್ಬಿರುವ ಪರ್ಯಾಯ ದ್ವೀಪ. ಇದರ ನಡುಭಾಗ ಉಬ್ಬು. ಇದನ್ನು ಸುತ್ತುವರಿದಿರುವ ಕಚ್ ರಣದ ತಗ್ಗುನೆಲ ಮಳೆಗಾಲದಲ್ಲಿ ನೀರಿನಿಂದಾವೃತವಾಗಿರುತ್ತದೆ. ಉತ್ತರದ್ದು ಮಹಾ ರಣ್ ; ದಕ್ಷಿಣದಲ್ಲಿರುವುದು ಸಣ್ಣ ರಣ್. ಪಶ್ಚಿಮದಲ್ಲಿ ಅಗಲವಾಗಿ ಪೂರ್ವಕ್ಕೆ ಕಿರಿದಾಗುವ ನಗ್ನೀಕೃತ ಬೆಟ್ಟಗಳ ಸಾಲೊಂದು ಈ ಜಿಲ್ಲೆಯ ನಡುವೆ ಹಾಯುತ್ತದೆ. ಜಿಲ್ಲೆಯ ಮುಖ್ಯಪಟ್ಟಣವಾದ ಭುಜ್‍ಗೆ 20 ಮೈ. ದೂರದಲ್ಲಿರುವ ದಿನೋಧರ್ ಅತ್ಯಂತ ಎತ್ತರದ ಬೆಟ್ಟ (388 ಮೀ.). ಪಚ್ಚಂ ದ್ವೀಪ ಇನ್ನೂ ಎತ್ತರ (465 ಮೀ.).

ಕೇಂದ್ರದ ದಿಣ್ಣೆಯ ಪ್ರದೇಶ ಬಂಜರುನೆಲ. ಉತ್ತರ ದಕ್ಷಿಣ ಭಾಗಗಳನ್ನು ಇದು ಪ್ರತ್ಯೇಕಿಸುತ್ತದೆ. ಮಳೆ ಬಲು ಕಡಿಮೆ. ಬೆಟ್ಟಗಳ ಬುಡದ ಬಳಿ ಕಟ್ಟಲಾಗಿರುವ ಸಣ್ಣ ಕೆರೆಗಳು ಸಾಗುವಳಿಗೆ ನೀರೊದಗಿಸುತ್ತವೆ. ಈ ಪ್ರದೇಶದ ಜನಸಂಖ್ಯೆ ಬಲು ವಿರಳ.

ಕರಾವಳಿಯ ತಗ್ಗುನೆಲ ವೈವಿಧ್ಯಮಯ. ಉತ್ತರಕ್ಕೂ ದಕ್ಷಿಣಕ್ಕೂ ಹರಿಯುವ ನದಿಗಳು ನೆಲವನ್ನು ಅಲ್ಲಲ್ಲಿ ಕೊರೆದಿವೆ. ಸಮುದ್ರದ ಬಳಿಯ ನೆಲ ಬೀಳು ಬಿದ್ದಿದೆ. ಉತ್ತರದ ನದಿಗಳು ಸಮುದ್ರ ತಲುಪಲಾರದೆ ನೆಲದಲ್ಲೆ ಇಂಗಿಹೋಗುತ್ತವೆ. ಕರಾವಳಿಯಲ್ಲಿ ಅಲ್ಲಲ್ಲಿ ಚೌಗುನೆಲವನ್ನೂ ಮರಳಗುಡ್ಡೆಗಳನ್ನೂ ಕಾಣಬಹುದು.

ಉತ್ತರದ ಕರಾವಳಿಯ ತಗ್ಗುನೆಲ ಈಚೆಗೆ ಸಮುದ್ರದಿಂದ ಮೇಲೆದ್ದಿರಬೇಕು. ಇದು ತ್ರಿಕೋಣಾಕಾರವಾಗಿದೆ. ವರ್ಷಕ್ಕೆ 30 ಸೆಂ. ಮಳೆಯೂ ಆಗದ ಈ ಪ್ರದೇಶ ಬಂಜರು. ಕೆಲಭಾಗಗಳಲ್ಲಿ ನೀರು ನಿಂತಿದೆ. ವ್ಯವಸಾಯ ಬಲು ಕಡಿಮೆ. ಪಶುಪಾಲನೆಯೇ ಜನರ ಮುಖ್ಯ ಉದ್ಯೋಗ. ಮೇವು ನೀರುಗಳ ಅಭಾವದಿಂದ ಹೈನು ಉದ್ಯೋಗವನ್ನು ಬೆಳೆಯಿಸುವುದಾಗಿಲ್ಲ. ಆದರೂ ಇವರು ಮಾರಾಟಕ್ಕಾಗಿ ಒಳ್ಳೆಯ ತಳಿಯ ದನಗಳನ್ನು ಸಾಕುತ್ತಾರೆ. ಚರ್ಮ ಹದಗಾರಿಕೆ, ಪಾದರಕ್ಷೆ ತಯಾರಿಕೆ ಮುಂತಾದ ಕಸಬುಗಳಲ್ಲಿ ನಿರತರಾದ ಕೆಲವರು ಇಲ್ಲಿದ್ದಾರೆ. ಇಲ್ಲಿಯ ಜನ ಸಿಂಧಿನಿಂದ ವಲಸೆ ಬಂದವರು. ಇವರ ಸಾಮಾಜಿಕ ಕಟ್ಟಳೆಗಳೂ ಸಂಪ್ರದಾಯಗಳೂ ಗುಜರಾತಿನ ಉಳಿದ ಭಾಗದವರವಕ್ಕಿಂತ ಭಿನ್ನ.

ಕಚ್ಚಿನ ನೈಋತ್ಯ ಕರಾವಳಿಯ ಉದ್ದ ಸುಮಾರು 230 ಕಿಮೀ. ಇದು ಕೋರಿ ಕಡಲಚಾಚಿನಿಂದ ಹಿಡಿದು ಪೂರ್ವದಲ್ಲಿರುವ ಕಾಂಡ್ಲದ ವರೆಗೆ ಹಬ್ಬಿದೆ. ಕೋರಿ ಕಡಲಚಾಚಿನ ದಕ್ಷಿಣದಲ್ಲಿರುವ ಕರಾವಳಿ ನೆಲವೂ ಪಶ್ಚಿಮಭಾಗವೂ ಸಮುದ್ರದಿಂದ ಈಚೆಗೆ ಮೇಲೆದ್ದ ಪ್ರದೇಶ. ಹಲವಾರು ಸಣ್ಣಪುಟ್ಟ ನದಿಗಳು ನೆಲವನ್ನೆಲ್ಲ ಕೊರೆದಿವೆ. ಕೊರೆಯದೆ ಉಳಿದಿರುವ ಪ್ರದೇಶದಲ್ಲಿ ಮಾತ್ರ ವ್ಯವಸಾಯ ಸಾಧ್ಯ, ಕಮರಿಗಳಿಗೆ ಅಲ್ಲಲ್ಲಿ ಕಟ್ಟೆ ಕಟ್ಟಿ ನೀರು ಶೇಖರಿಸಲಾಗಿದೆ. ನದೀ ಕಣಿವೆಗಳಲ್ಲಿ ಅಲ್ಲಲ್ಲಿ ವ್ಯವಸಾಯಕ್ಕಾಗಿ ಬಾವಿಗಳನ್ನೂ ತೋಡಲಾಗಿದೆ. ಇಲ್ಲೂ ಜನವಸತಿ ವಿರಳವೆಂದೇ ಹೇಳಬೇಕು.

ಕಚ್ಚಿನ ದಕ್ಷಿಣದ ಮೈದಾನಪ್ರದೇಶ ಆರ್ಥಿಕವಾಗಿ ಹೆಚ್ಚು ಮುಂದುವರಿದಿದೆ. ಇದನ್ನು ಕಾಥಿಯವಾಡ್ ಮತ್ತು ಗುಜರಾತ್ ಬಯಲುಗಳಿಗೆ ಹೋಲಿಸಬಹುದು. ಉತ್ತರ–ದಕ್ಷಿಣವಾಗಿ ಅನೇಕ ನದಿಗಳು ಈ ಪ್ರದೇಶದಲ್ಲಿ ಹರಿಯುತ್ತವೆ. ನೆಲ ಮಟ್ಟಸ ; 30 ಕಿಮೀ. ದೂರಕ್ಕೆ 80 ಮೀ.ನಷ್ಟು ಮಾತ್ರ ಏರುತ್ತದೆ. ಇದು ಅಷ್ಟೇನೂ ನಗ್ನೀಕೃತವಾಗಿಲ್ಲ. ಕಚ್ಚಿನ ಉಳಿದ ಭಾಗಗಳಿಗಿಂತ ಇಲ್ಲಿ ಹೆಚ್ಚು ಮಳೆಯಾಗುತ್ತದೆ. ಆದ್ದರಿಂದ ವ್ಯವಸಾಯೋತ್ಪನ್ನ ಇಲ್ಲಿ ಹೆಚ್ಚು. ಮಳೆಗಾಲದಲ್ಲಿ ಹುಲ್ಲು ಬೆಳೆಯುತ್ತದೆ. ಆದ್ದರಿಂದ ದನಕರುಗಳ ಮೇವಿಗೆ ತೊಂದರೆಯಿಲ್ಲ. ಉಳಿದ ಭಾಗಗಳಿಗಿಂತ ಇಲ್ಲಿ ಜನಸಾಂದ್ರತೆ ಹೆಚ್ಚು. ಇಡೀ ಜಿಲ್ಲೆಯ ಜನಸಾಂದ್ರತೆ ಕಿಮೀ.ಗೆ 16 ಮಂದಿಯಾದರೆ ಇಲ್ಲಿಯ ಜಿಲ್ಲೆಗಳಾದ ಮಾಂಡ್ವಿ, ಮುಂದ್ರ ಮತ್ತು ಅಂಜಾರ್‍ಗಳಲ್ಲಿ ಕ್ರಮವಾಗಿ 75, 63 ಮತ್ತು 78 ಮಂದಿ. ಕಚ್ಚಿನ ಆರು ಪಟ್ಟಣಗಳ ಪೈಕಿ ಐದು ಇಲ್ಲಿವೆ. ಮಾಂಡ್ವಿ (26,609), ಮುಂದ್ರ (8,817), ಅಂಜಾರ್ (23,301), ಕಾಂಡ್ಲ (9,617) ಮತ್ತು ಗಾಂಧೀಧಾಮ್ (26,514) ಈ ಪಟ್ಟಣಗಳು. ಕಾಂಡ್ಲ ಮತ್ತು ಗಾಂಧೀಧಾಮ್‍ಗಳು ಈಚಿನವು. ಕಾಂಡ್ಲ ಮುಖ್ಯ ಬಂದರು. ಭಾರತದ ವಿಭಜನೆಯಾದಾಗ (1947) ಸಿಂಧಿನಿಂದ ಭಾರತಕ್ಕೆ ಬಂದ ಜನ ಗಾಂಧೀಧಾಮದಲ್ಲಿ ವಸತಿ ಹೂಡಿದ್ದಾರೆ. ಮಾಂಡ್ವಿ ಮಧ್ಯಮ ಗಾತ್ರದ ಬಂದರು.

ಜೋಳ, ಬಾರ್ಲಿ, ಗೋದಿ, ದ್ವಿದಳಧಾನ್ಯಗಳು, ಹತ್ತಿ ಇಲ್ಲಿ ಬೆಳೆಯುತ್ತವೆ. ಜಿಪ್ಸಮ್, ಸುಣ್ಣಕಲ್ಲು ಮತ್ತು ಅಮೃತಶಿಲೆ ಮುಖ್ಯ ಖನಿಜಗಳು. ಭುಜ್ ಜಿಲ್ಲಾ ಮುಖ್ಯಪಟ್ಟಣ. ಜನಸಂಖ್ಯೆ 40,180 (1961). ಇದು ಅಹಮದಾಬಾದಿನಿಂದ ಪಶ್ಚಿಮಕ್ಕೆ 190 ಮೈಲಿ ದೂರದಲ್ಲಿದೆ, ಪಶ್ಚಿಮ ರೈಲ್ವೆಯ ದೆಹಲಿ–ಬೊಂಬಾಯಿ ಮಾರ್ಗದೊಂದಿಗೆ ಭುಜ್‍ಗೆ ಸಂಬಂಧ ಕಲ್ಪಿಸಲಾಗಿದೆ.

ಇಡೀ ಜಿಲ್ಲೆಯ ಜನಸಂಖ್ಯೆ 6.96,440 (1961). ಮಾಂಡ್ವಿಯಲ್ಲಿರುವ ಅರಮನೆ ವಾಸ್ತುಶಿಲ್ಪ ದೃಷ್ಟಿಯಿಂದ ಮುಖ್ಯ. ಚಿನ್ನದ ಕುಸುರಿ, ರೇಷ್ಮೆ ಹತ್ತಿ ಕಸೂತಿ ಮುಖ್ಯ ಕರಕೌಶಲಗಳು. ಕಡಲ ಕರೆಯ ಜನ ಒಳ್ಳೆಯ ನಾವಿಕರು.

ಕಚ್ ಜಿಲ್ಲೆಯ ಪ್ರಾಚೀನ ಇತಿಹಾಸವೇನೆಂಬುದು ಗೊತ್ತಾಗಿಲ್ಲ. ಇಲ್ಲಿ ಶಿಲಾಯುಗದ ಅವಶೇಷಗಳಿಲ್ಲದಿದ್ದರೂ ದೇಶಲ್ಪುರ ಮತ್ತು ತೋಡಿಯುಟಿಂಬೊಗಳಲ್ಲಿ ಹರಪ್ಪ ನಾಗರಿಕತೆಯ ಅವಶೇಷಗಳು ದೊರಕಿವೆ. ಆಮೇಲಿನ ಕಾಲಕ್ಕೆ ಸಂಬಂಧಿಸಿದಂತೆ ಇದ್ದಿರಬಹುದಾದ ಅವಶೇಷಗಳ ಬಗ್ಗೆ ಮಾಹಿತಿಗಳು ತಿಳಿದುಬಂದಿಲ್ಲ.

13ನೆಯ ಶತಮಾನದಲ್ಲಿ ಸಿಂಧಿನಿಂದ ಓಡಿಬಂದ ಸಮ್ಮ ರಜಪೂತರಿಗೆ ಕಚ್ಚಿನ ಚಾವಡ ರಜಪೂತರು ಆಶ್ರಯ ನೀಡಿದರು. ಆದರೆ ಸುಮಾರು 1320ರಲ್ಲಿ ಇವರು ತಮ್ಮ ಆಶ್ರಯದಾತರನ್ನೇ ಉರುಳಿಸಿ ಅಧಿಕಾರ ಗಳಿಸಿದರು. 1540 ರಿಂದ 1760ರ ವರೆಗೆ ಎಲ್ಲ ರಜಪೂತರೂ ಒಂದಾಗಿ ಆಳಿದರು. ಆಮೇಲೆ ಸ್ವಲ್ಪ ಕಾಲ ಇದು ಸಿಂಧಿನ ಮುಸ್ಲಿಮರ ಆಕ್ರಮಣಕ್ಕೆ ತುತ್ತಾಗಿತ್ತು. 1813ರಲ್ಲಿ ರಜಪೂತನೊಬ್ಬ ಮತ್ತೆ ಇದನ್ನು ವಶಪಡಿಸಿಕೊಂಡ. 1815ರಲ್ಲಿ ಬ್ರಿಟಿಷರು ರಣ್ ಪ್ರದೇಶವನ್ನು ಆಕ್ರಮಿಸಿ, ದೊರೆಯಾದ ಮಹಾರಾವ್ ಭಾರ್ಮಲ್ಜಿಯೊಂದಿಗೆ ಒಪ್ಪಂದ ಮಾಡಿಕೊಂಡರು. ಅಂಜಾರ್ ಬ್ರಿಟಿಷರಿಗೆ ಸೇರಿತು. 1819ರಲ್ಲಿ ಈ ರಾಜನ ಪದಚ್ಯುತಿಯಾಗಿ ಇವನ ಮಗನಾದ ಎರಡನೆಯ ರಾವ್ ದೇಸಾಲ್ಜಿಗೆ ಪಟ್ಟ ಕಟ್ಟಲಾಯಿತು.

ಬ್ರಿಟಿಷ್ ಆಳ್ವಿಕೆಯಲ್ಲಿ ಮೊದಲು ಇದು ಬೊಂಬಾಯಿ ಪ್ರಾಂತ್ಯದ ಗವರ್ನರ ಆಡಳಿತಕ್ಕೆ ಒಳಪಟ್ಟಿತ್ತು. ಆಮೇಲೆ ಇದನ್ನು ಏಜೆನ್ಸಿಯ ಆಡಳಿತಕ್ಕೆ ವಹಿಸಲಾಯಿತು. ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಇದು ಕೇಂದ್ರಾಡಳಿತ ಪ್ರದೇಶವಾಗಿದ್ದು, 1956ರಲ್ಲಿ ಬೊಂಬಾಯಿ ರಾಜ್ಯದ ಜಿಲ್ಲೆಯಾಗಿ, 1960ರಲ್ಲಿ ಗುಜರಾತ್ ರಾಜ್ಯಕ್ಕೆ ಸೇರಿತು. (ಎಂ.ಜಿ.ಬಿ.; ಬಿ.ಕೆ.ಜಿ.)

**ಕಚ :** ದೇವಗುರುವಾದ ಬೃಹಸ್ಪತ್ಯಾಚಾರ್ಯನ ಮಗ. ದೇವತೆಗಳ ಪ್ರಾರ್ಥನೆಯಂತೆ ಅಸುರಗುರುವಾದ ಶುಕ್ರಾಚಾರ್ಯನ ಶಿಷ್ಯನಾಗಿ ಮೃತಸಂಜೀವಿನೀ ವಿದ್ಯೆಯನ್ನು ಪಡೆಯುವ ಪ್ರಯತ್ನ ಮಾಡಿದ. ಅಲ್ಲಿ ಗುರುಪುತ್ರಿ ದೇವಯಾನಿ ಕಚನನ್ನು ಕಂಡು ಮೋಹಿತಳಾದಳು. ಇದನ್ನರಿತ ದಾನವರು ಎರಡು ಬಾರಿ ಕಚನನ್ನು ಕೊಲೆ ಮಾಡಿದರು. ಆದರೆ ಮಗಳಾದ ದೇವಯಾನಿಯ ಅಪೇಕ್ಷೆಯಂತೆ ಸಂಜೀವಿನೀ ಮಂತ್ರಬಲದಿಂದ ಶುಕ್ರಾಚಾರ್ಯ ಎರಡು ಬಾರಿಯೂ ಕಚನನ್ನು ಬದುಕಿಸಿದ. ಮತ್ತೆ ಮತ್ತೆ ಬದುಕಿಬಂದ ಕಚನನ್ನು ಮೂರನೆಯ ಬಾರಿ ಕೊಂದು ಅವನ ಮಾಂಸವನ್ನು ಮದ್ಯದೊಡನೆ ಕಲಸಿ ತಮ್ಮ ಗುರುವಾದ ಶುಕ್ರಾಚಾರ್ಯನಿಗೇ ಅವರು ಉಣಬಡಿಸಿದರು. ಶುಕ್ರನಾದರೋ ತನ್ನ ಮಗಳಾದ ದೇವಯಾನಿಯ ಬೇಡಿಕೆಯಂತೆ ತನ್ನ ಉದರದಲ್ಲಿ ಪ್ರವೇಶಿಸಿದ್ದ ಕಚನಿಗೆ ಸಂಜೀವಿನೀ ವಿದ್ಯೆಯನ್ನು ಪೂರ್ಣವಾಗಿ ಉಪದೇಶಿಸಿ ಅವನನ್ನು ಬದುಕಿಸಿದ. ಬದುಕಿಬಂದ ಕಚ ಗುರುಪುತ್ರಿಯೆಂಬ ಕಾರಣದಿಂದ ದೇವಯಾನಿಯನ್ನು ಮದುವೆಯಾಗಲು ಒಪ್ಪಲಿಲ್ಲ. ಕುಪಿತಳಾದ ದೇವಯಾನಿ ಕಚ ಕಲಿತ ದಿವ್ಯಮಂತ್ರ ಫಲಿಸದಿರಲೆಂದು ಶಪಿಸಿದಳು. ಈ ವಿಚಾರ ಮಹಾಭಾರತದ ತೋಯಸಂಭವ ಪರ್ವದಲ್ಲಿದೆ. (ಎ.ಎಸ್.ಆರ್.ಬಿ.)

**ಕಚರಾ ವಿಲೇವಾರಿ :** ಸೋಂಕಿನ ರೋಗಾಣುಗಳು ನೀರಿನಲ್ಲಿ ಬೆರೆತು ಮಾನವ ಮತ್ತಿತರ ಜೀವಿಗಳಿಗೆ ಹಾನಿಯಾಗದಂತೆ ತಡೆಯಲು, ಒಂದು ಊರಿನ ಜನ ಬಳಸಿದ ನೀರಿನಿಂದಾದ ಗಲೀಜಿನ ಕಚರವನ್ನು (ಸ್ಯೂಯೇಜ್) ಯಾರಿಗೂ ಅಪಾಯವಾಗದಂತೆ ಸಾಗಹಾಕುವ ಏರ್ಪಾಡು. ಮಲಮೂತ್ರಗಳೊಂದಿಗೆ ಮನೆ, ಕೊಟ್ಟಿಗೆ, ಲಾಯ, ರೊಪ್ಪ, ಕಸಾಯಿಖಾನೆಗಳಿಂದ ಬರುವ ಕೊಳಕು ನೀರು, ಕೈಗಾರಿಕೆ ಕಾರ್ಖಾನೆಗಳಿಂದ ಬರುವ ಕಸರೆ ವಸ್ತುಗಳಿಂದ ಬಂದುದು ಕೈಗಾರಿಕೆ ಕಸರೆ (ವೇಸ್ಟ್). ಕಚರಾದಲ್ಲಿ ಸಾಗಿ ರೋಗ ಹರಡಲು ಜನರಿಂದ ಬರುವ ಮಲ ಮೂತ್ರಾದಿಗಳೇ ಮುಖ್ಯವಾದವು. ಎಲ್ಲಿಂದ ನೀರನ್ನು ಪಡೆದರೋ ಅಲ್ಲಿಗೆ ಯಾವ ಕೊಳಕೂ ಸೋಂಕೂ ಇಲ್ಲದೆಯೇ ನೀರನ್ನು ಹಿಂತಿರುಗಿಸುವುದು ಎಲ್ಲ ಊರು, ರಾಜ್ಯ, ಕೈಗಾರಿಕೆಗಳ ಕರ್ತವ್ಯ. ಊರಿಂದ ಹೊರಬೀಳುವ ನೀರಲ್ಲಿ ಕಚರಾವಸ್ತುಗಳು ಮಿತಿಮೀರಿದಲ್ಲಿ ಇವನ್ನು ಪಡೆವ ಹೊಳೆ, ನದಿ ಕಡಲುಗಳಲ್ಲಿ ಮೀನು ಮತ್ತಿತರ ಪ್ರಾಣಿಗಳು ಬದುಕವಂತಾಗುತ್ತವೆ. ಅಲ್ಲದೆ ಹರಿವ ನೀರನ್ನು ಇನ್ನೂ ಕೆಳಗೆ ಬಳಸುವವರಿಗೂ ಅಪಾಯ ತಟ್ಟುವುದು. ಆರೋಗ್ಯವಾಗಿರಲೂ ಹೊಲಸನ್ನು

ತಡೆಗಟ್ಟಲೂ ಕಚರಾ ವಿಲೇವಾರಿ ಚೆನ್ನಾಗಿರಲೇಬೇಕು. ಇಷ್ಟಾದರೂ, ಕಚರಾ ಎಂದರೆ ಬರಿಯ ಕೆಲಸಕ್ಕೆ ಬಾರದ್ದಲ್ಲ. ಸರಿಯಾಗಿ ವಿಲೇವಾರಿಯಾದ ಕಚರಾದಿಂದ ಬೆಲೆಯುಳ್ಳ ನೈಟ್ರೇಟುಗಳು, ಫಾಸ್ಫೇಟುಗಳು, ಬಿ ಜೀವಾತು, ಮಿಥೇನ್, ಗ್ರೀಸು, ಜಿಡ್ಡು ಇತ್ಯಾದಿ ದೊರೆಯುತ್ತವೆ. ಇವನ್ನು ತೆಗೆಯುವುದರಿಂದ ಹರಿವ ನೀರು ಶುದ್ಧವಾಗಿ ಕೆಳನದಿಯವರಿಗೆ ಅಪಾಯ ತಪ್ಪುವುದು.

ಮನೆಗಳಿಂದ ಬರುವ ಕಚರಾ ನೀರಲ್ಲಿ ಜೈವಿಕ ವಸ್ತುಗಳೇ ಹೆಚ್ಚಿದ್ದು ಜೀವಾಣುಗಳ ವರ್ತನೆಯಿಂದ ಬೇಗನೆ ಕೊಳೆತು ನಾರುವುದರಿಂದ ದುರ್ನಾತವೇಳುತ್ತದೆ. ಜನರ ಮಲಮೂತ್ರಗಳೊಂದಿಗೆ ಗಲೀಜು ನೀರು ಹೆಚ್ಚಾಗಿರುತ್ತದೆ. ಆದರೆ ಇದರ ರಚನೆ ಬಹುಮಟ್ಟಿಗೆ ಜನರ ನೀರಿನ ಬಳಕೆ, ಮಳೆನೀರು, ಕೈಗಾರಿಕೆಗಳಿಂದ ಹೊರಬಿದ್ದ ನೀರು ಇವುಗಳ ಪ್ರಮಾಣಕ್ಕೆ ತಕ್ಕಂತಿರುವುದು. ಈ ವಸ್ತುಗಳು ಕರಗಿಯೋ ತೇಲುತ್ತಲೋ ಅಂಟಂಟಾಗೋ ಇರಬಹುದು. ರೋಗಿಗಳ ಮಲಮೂತ್ರಾದಿಗಳು ಸೇರಿದರಂತೂ ರೋಗ ಹರಡುವುದರಲ್ಲಿ ಕಚರಾ ಅಪಾಯಕಾರಕ. ಕಾರ್ಖಾನೆಗಳಿಂದ ಹೊರಬೀಳುವ ಕಸರೆಯಲ್ಲಿನ ಕೊಳಕು ಆಯಾ ಕೈಗಾರಿಕೆಗೆ ಅನುಗುಣವಾಗಿರುವುದು. ಕೆಲವೇಳೆ ಇದರಲ್ಲಿ ಬಲು ಕೆಡುಕಿನ, ವಿಷಕರವಾದ, ಹೊತ್ತಿ ಉರಿವ, ಸಿಡಿವ ಪದಾರ್ಥಗಳು ಇರಲೂಬಹುದು. ಮನೆಯ ಎಂದಿನ ಒಂದು ಟನ್ ಕಚರಾ ನೀರಲ್ಲಿ ಅರೆ ಕಿಲೋಗ್ರಾಂನಷ್ಟು ಗಟ್ಟಿವಸ್ತುಗಳಿರುತ್ತವೆ. ಇವುಗಳಲ್ಲಿ ಅರೆಪಾಲು ಕರಗಿರುತ್ತವೆ, ಉಳಿದುದರ ಅರೆಪಾಲು ತೇಲುತ್ತಿರುತ್ತವೆ.

**ಕಚರಾದ ಶುದ್ಧೀಕರಣ :** ಕಚರಾ ನೀರು ಅಪಾಯಕರವಾಗದಂತೆ ಮಾಡುವ ನಿಸರ್ಗದ ಕ್ರಮಗತಿಯಲ್ಲಿ ಹಲವು ಬಗೆಗಳ ಜೈವಿಕ ವಸ್ತುಗಳನ್ನು ಬೇರೆ ಬೇರೆ ಹಂತಗಳಲ್ಲಿ ಒಡೆಕೆಡವುವ ಏಕಾಣುಜೀವಿಗಳ ಪಾತ್ರ ದೊಡ್ಡದು. ಕಾಲಾನುಕಾಲಕ್ಕೆ ಎಂಥ ಕಚರಾವನ್ನಾದರೂ ಸರಿಯೇ ನಿಸರ್ಗ ನಿಭಾಯಿಸಬಲ್ಲುದಾದರೂ ಇದರಿಂದೇಳುವ ದುರ್ವಾಸನೆ, ಗಲೀಜು ತಡೆವಂತಿರದು. ಪ್ರೋಟೀನುಗಳನ್ನು ಒಡೆಯಲು ಆಮ್ಲಜನಕವನ್ನು ಬಳಸಿಬಿಟ್ಟರೆ ಮೀನುಗಳು ಸಾಯುತ್ತವೆ. ನೆಲದಲ್ಲಿ ನೀರು ಸೋಸಿ ಸೋರಿಹೋಗದ ಹಾಗೆ ಕಚರಾ ಅಡ್ಡಿಯಾಗಬಹುದು. ಆಗ ನೆಲಕ್ಕೆ ಕಚರಾಬೇನೆ (ಸ್ಯೂಯೇಜ್ ಸಿಕ್ನೆಸ್) ಹತ್ತಿ ಕೆಲಸಕ್ಕೆ ಬಾರದಂತಾಗುವುದು. ಆದ್ದರಿಂದ ಕಲಬೆರೆತ ಕಚರಾವನ್ನು ಸರಳ, ಅಚಲ, ಹಾನಿಕರವಾಗದ ಧಾತುಗಳಾಗಿ ನಿಸರ್ಗವೇ ಯಾವ ಗಲೀಜು ಕೆಟ್ಟ ನಾತ ಬಡಿಸದೆ ಮಾರ್ಪಡಿಸುವಂತೆ ನೆರವಾಗಲು ತಕ್ಕ ಕ್ರಮಗಳನ್ನು ಕೈಗೊಳ್ಳಬೇಕು.

ಕಚರಾ ವಿಲೇವಾರಿಯಲ್ಲಿ ಹಲವು ಶುದ್ಧೀಕರಣ ಹಂತಗಳಿವೆ. ಮುಖ್ಯವಾಗಿ ಎರಡನ್ನು ಗುರುತಿಸಬಹುದು. ಇಂದಿನ ವಿಧಾನದಲ್ಲಿ ಮೊದಲಾಗಿ, ಕಚರಾ ಶುದ್ಧೀಕರಣ ಯಂತ್ರಾಗಾರವನ್ನು (ಪ್ಲಾಂಟ್) ಹಾಳುಗೆಡಿಸಿ ಕಚರಾ ಸಾಗಿ ಹರಿವ ಕೊಳಾಯಿಗಳಲ್ಲಿ ಅಡ್ಡಗಟ್ಟಬಹುದಾದ ಸರಳ, ಜಡವಾದ, ಗಟ್ಟಿವಸ್ತುಗಳಲ್ಲಿ ಆಗುವಷ್ಟನ್ನೂ ತೆಗೆಯಬೇಕು. ಇದಾದ ಮೇಲೆ ಎರಡನೆಯದಾಗಿ, ಕೊಳೆವ ವಸ್ತು ಬಹುಮಟ್ಟಿಗೆ ಭಾರದಿಂದ ತಳದಲ್ಲಿ ಗಸಿಯಾಗಿ ಕೂರಲು ಬಿಡಬೇಕು. ಆದ್ದರಿಂದ, ಆಮ್ಲಜನಕವನ್ನು ಉಳಿಸುವ ಗಟ್ಟಿವಸ್ತುಗಳನ್ನು ತೆಗೆದುಹಾಕುವ ಕಚರಾ ಶುದ್ಧೀಕರಣದ ಏರ್ಪಾಡು, ಎಷ್ಟರಮಟ್ಟಿಗೆ ಹೇಗಿರಬೇಕು ಎನ್ನುವುದು ಬಗೆ ಬಗೆಯಾಗಿರುವುದು.

**ಮೊದಲ ಶುದ್ಧೀಕರಣ :** ತೇಲಿಬರುವ ದೊಡ್ಡ ದೊಡ್ಡ ಕಸ, ಕಡ್ಡಿ ಮುಂತಾದುವನ್ನು ದಪ್ಪ ಕಣ್ಣಿನ ಬಲೆಗಳು ಸುಲಭವಾಗಿ ತೆಗೆದುಹಾಕಿದರೆ.ಇನ್ನುಳಿದ ಬೆರೆತು ತೇಲುವ ಪದಾರ್ಥದಲ್ಲಿ ಬಹುಪಾಲನ್ನು ಇನ್ನೂ ಸಣ್ಣ ಕಣ್ಣಿನ ಬಲೆಗಳಿಂದ ಬಾಚಿ ಹಾಕಬಹುದು. ಹೀಗೆ ತೆಗೆದ ಗಲೀಜನ್ನು ದಿನವೂ ಸುಟ್ಟುಹಾಕಬೇಕು. ಇಲ್ಲವೇ ಎಲ್ಲಾದರೂ ಹೂಳಬೇಕು.

ಬಲೆಗಳ ಹಿಂದುಗಡೆ ಎರಡು ಚಿಕ್ಕ ತೊಟ್ಟಿಗಳಿದ್ದು ಮರಳು ಬೂದಿ, ಕಲ್ಲು ಮಣ್ಣುಗಳಂಥ ಭಾರವಾದ ವಸ್ತುಗಳು ತಳವೂರಿದ ಮೇಲೆ, ಜೈವಿಕ ಪದಾರ್ಥ ಕಚರಾದೊಂದಿಗೆ ಮುಂದೆ ನಿಧಾನವಾಗಿ ಹರಿಯುತ್ತದೆ. ಮುಂದೆ, ಕಚರಾ ಹರಿವುದನ್ನು ಇನ್ನೂ ನಿಧಾನಗೊಳಿಸಿ ಗಟ್ಟಿವಸ್ತುಗಳಲ್ಲಿ ಬಹುಪಾಲನ್ನು ಗಸಿಗಟ್ಟಿಸುವ ತೊಟ್ಟಿಗಳಲ್ಲಿ (ಸೆಡಿಮೆಂಟೇಷನ್ ಟ್ಯಾಂಕ್ಸ್) ಹರಿಸಬೇಕು. ತೊಟ್ಟಿಗಳು ಯಾವಾಗಲೂ ತುಂಬಿರುತ್ತವೆ. ತಳದಲ್ಲಿ ಕೂಡಿದ ರಾಡಿಯನ್ನು ಆಗಾಗ್ಗೆ ಕೆರೆದು ಎತ್ತಿ ಹಾಕುತ್ತಿರಬೇಕು. ಗಸಿಗಟ್ಟಿಸುವ ತೊಟ್ಟಿಗಳಲ್ಲಿ ಹಲವು ಬಗೆಗಳಿವೆ.

**ಕೊನೆಯ ಶುದ್ಧೀಕರಣ :** ಇದು ಆಯಾ ಸಂದರ್ಭಕ್ಕೆ ತಕ್ಕಹಾಗಿರುವುದು. ಈ ಮುಂದಿನವಲ್ಲಿ ಯಾವುದಾದರೂ ಒಂದೋ ಎರಡೋ ಹೆಚ್ಚೋ ವಿಧಾನಗಳ ಬಳಕೆಯಾಗಬಹುದು. ಅವು 1 ನೀರು ಬೆರೆಸಿಕೆ (ಡೈಲ್ಯೂಷನ್), 2 ರಾಸಾಯನಿಕ ಶುದ್ಧೀಕರಣ, (3) ಜೈವಿಕ ಶುದ್ಧೀಕರಣ.

**ನೀರು ಬೆರೆಸಿಕೆ :** ಕಚರಾವನ್ನು ಮೊದಲು ಶುದ್ಧೀಕರಣಕ್ಕೆ ಒಳಪಡಿಸಿ ಇಲ್ಲವೇ ಒಳಪಡಿಸದೆಯೇ, ಹೊಳೆ, ನದಿ, ಕಡಲುಗಳಿಗೆ ಹರಿಯಬಿಡಬಹುದು. ಹಲವು ಗೊತ್ತಾದ ಭೌತ, ರಾಸಾಯನಿಕ, ಜೈವಿಕ ಕ್ರಮಗತಿಗಳಿಂದ ಕಚರಾ ಚೊಕ್ಕವಾಗುತ್ತದೆ. ಅಲ್ಲದೆ ಸುಮ್ಮನೆ ನೀರೊಳಕ್ಕೆ ಹರಿಯಬಿಟ್ಟರೆ ಕಚರಾದ ಎಷ್ಟೋ ಹೊಲಸು ಕಳೆದಂತಾಗುವುದು. ಒಂದಷ್ಟು ಗಟ್ಟಿ ಕಚರಾ ತಳವೂರುತ್ತವೆ. ನೀರಲ್ಲಿ ಸೇರಿದಾಗ ಅದರ ಸಾಂದ್ರತೆ ಇಳಿವುದು. ಗಿಡ, ಸಸಿ, ಜೀವಾಣುಗಳೂ ಶುದ್ಧೀಕರಣದಲ್ಲಿ ಪಾಲ್ಗೊಳ್ಳುತ್ತವೆ. ಕಚರಾಸಾರದಲ್ಲಿ ಆಮ್ಲಜನಕವಿರಬೇಕು. ಅಂತೂ ಹರಿವ ನೀರಿನ 40ರಿಂದ 20ರಲ್ಲಿ ಒಂದು ಪಾಲಿಗಿಂತಲೂ ಹೆಚ್ಚಿರಬಾರದು. ತಳದಲ್ಲಿ ಕಚರಾ ಕೂರಲೀಸದಷ್ಟು ವೇಗವಾಗಿ ನೀರು ಹರಿಯುತ್ತಿರಬೇಕು. ತೇಲುವ ಕಸ ದಂಡೆಯಲ್ಲಿ ರಾಶಿ ಬೀಳಬಾರದು. ಇಂಥ ನೀರಲ್ಲಿ ರೋಗಕಾರಕ ಜೀವಾಣುಗಳು ಇದ್ದೇ ಇರುವುದರಿಂದ ಆ ನೀರು ಜನರ ಬಳಕೆಗೆ ತಕ್ಕದ್ದಲ್ಲ. ಬಹುಮಟ್ಟಿಗೆ ಎಲ್ಲ ತೀರದ ಪಟ್ಟಣಗಳಲ್ಲೂ ಕೊಲ್ಲಿ ನೀರು ಹಿನ್ನುಗ್ಗುವ ನದಿಗಳ ತೀರದ ಊರುಗಳಲ್ಲೂ ಈ ತೆರನ ವಿಲೇವಾರಿ ಇತ್ತೀಚಿನ ತನಕ ರೂಢಿಯಲ್ಲಿತ್ತು. ಹೀಗೆ ಮಾಡುವುದರಿಂದ ಅಮೆರಿಕದಲ್ಲಿ ಇತ್ತೀಚೆಗೆ ಸ್ನಾನಮಾಡುವ ಕಡಲ ಕರೆಗಳಲ್ಲಿ ಗಲೀಜಾಗುವುದು ಕಂಡುಬಂದಿತು. ಬಲೆಗಳು, ಗಸಿಗಟ್ಟಿಸುವ ತೊಟ್ಟಿಗಳಿಂದ ಅರೆಬರೆ ಶುದ್ಧೀಕರಣದ ಗಟ್ಟಿವಸ್ತುಗಳನ್ನು ತೆಗೆವುದರಿಂದಲೋ ಹೊರಬಿಡುವ ಮುಂಚೆ ಕ್ಲೋರೀನೀಕರಣದಿಂದಲೋ ಇದರ ಬಗೆಹರಿಸಬಹುದು. ಲಂಡನ್, ಗ್ಲಾಸ್ಗೊ ನಗರಗಳ ಕಚರಾವನ್ನು ಅಲ್ಲಿನ ನದಿ, ಕೊಲ್ಲಿಗಳೊಳಕ್ಕೆ ಬಿಡುವ ಮುಂಚೆ ಚುರುಕುಗೊಳಿಸಿದ ರಾಡಿ (ಆಕ್ಟಿವೇಟೆಡ್ ಸ್ಲಡ್ಜ್) ವಿಧಾನದಿಂದ ಮೊದಲು ಶುದ್ಧೀಕರಣ ಆಗುತ್ತದೆ.

ಮುಂದುವರಿದ ನಾಡುಗಳಲ್ಲಿ ಆಗುವುದಕ್ಕಿಂತಲೂ ಹೆಚ್ಚು ಅಪಾಯಕಾರಿ ಭಾರತದ ಪರಿಸ್ಥಿತಿಯಾದ್ದರಿಂದ ಇಲ್ಲಿ ಶುದ್ಧೀಕರಿಸಿದ ಕಚರಾವನ್ನು ಎಂದಿಗೂ ನದಿ, ಹೊಳೆಗಳೊಳಕ್ಕೆ ಬಿಡಲೇಬಾರದು. ಯಾವ ಕೆಡಕೂ ಏಳದ ಹಾಗೆ ಕಚರಾವನ್ನು ಕೆಲವೇಳೆ ಅಪಾರವಾಗಿ ನದಿಯೊಳಕ್ಕೆ ತಳ್ಳಿಬಿಡಬಹುದು ಎನ್ನುವುದನ್ನು, ವಿದ್ಯಾಧರಿ ನದಿಯೊಳಕ್ಕೆ ಕಲ್ಕತ್ತಾದ ತೀರ ಕಚ್ಚಾ ಕಚರಾವನ್ನು ಹಾಕುತ್ತಿದ್ದುದರಿಂದ ಕಾಣಬಹುದಾಗಿತ್ತು. ಆದರೆ ಹಲವಾರು ವರ್ಷಗಳ ಕಾಲ ಅಷ್ಟೊಂದು ಕಚರಾವನ್ನು ತಳ್ಳುತ್ತಿದ್ದುದರಿಂದ ವಿದ್ಯಾಧರಿ ನದಿ ನೀರು ಇಂಗಿದುದನ್ನೂ ನೋಡಬಹುದು. ಹೀಗೆ ಅಪಾರ ನೀರಿನ ರಾಶಿಗೆ ಕಚರಾವನ್ನು ಬೆರೆಸುವ ಕಡೆಗಳಲ್ಲೆಲ್ಲ ಮೊದಲಾಗಿ ಬಲೆಗಟ್ಟಿ, ಭಾರವಾಗಿರುವ ಕೆಸರನ್ನು ಗಸಿಗಟ್ಟಿಸಿ, ಎಣ್ಣೆಜಿಡ್ಡುಗಳನ್ನು ತೆಗೆದುಹಾಕಿದ ಮೇಲೇ ಬಿಡಬೇಕು. ಕಚರಾದಲ್ಲಿ ತೇಲುತ್ತಿರುವ ಗಟ್ಟಿಪದಾರ್ಥಗಳನ್ನೂ ಗಸಿಗಟ್ಟಿಸುವ ಅಲ್ಲದೆ ನಂಜಿನ ತೊಟ್ಟಿಗಳಿಂದ (ಸೆಪ್ಟಿಕ್ ಟ್ಯಾಂಕ್ಸ್) ತೆಗೆದುಹಾಕಬೇಕು. ಕುಲ್ತೆ ನದಿಗೆ ಕಲ್ಕತ್ತದ ಕಚರಾವನ್ನು ತಳ್ಳುವ ಮುಂಚೆ ಈ ವಿಧಾನವೇ ಈಗ ಜಾರಿಯಲ್ಲಿದೆ.

**ರಾಸಾಯನಿಕ ಶುದ್ಧೀಕರಣ :** ತೇಲುತ್ತಿರುವ, ಕರಗಿರುವ ಹಲವಾರು ವಸ್ತುಗಳನ್ನು ಗಟ್ಟಿಗೊಳಿಸಿ ತಳವೂರುವಂತೆ ಮಾಡುವ ರಾಸಾಯನಿಕಗಳನ್ನು ಕಚರಾಕ್ಕೆ ಬೆರೆಸುವುದುಂಟು. ತಿಳಿಯಾಗಿ ತೇಲಿಕೊಂಡ ದ್ರವವನ್ನು ಮತ್ತಷ್ಟು ಚೊಕ್ಕಗೊಳಿಸಿ ಇಲ್ಲವೇ ಯಾವುದಾದರೂ ಹರಿವ ನೀರಿಗೋ ನೆಲದೊಳಕ್ಕೋ ಬಿಡಬಹುದು. ರಾಡಿಯನ್ನು ಆಮೇಲೆ ಬೆರಣಿಗಳಂತೆ ತಟ್ಟಿ ಗೊಬ್ಬರವಾಗಿ ಬಳಸಬಹುದು. ಸುಣ್ಣ, ಅಲ್ಯೂಮಿನಿಯಂ ಸಲ್ಫೇಟು, ಅನ್ನಭೇದಿ (ಹಿರೇಕಸ) ಮುಂತಾದುವೇ ಹೀಗೆ ಬೆರೆಸುವ ರಾಸಾಯನಿಕಗಳು. ಕಚರಾವನ್ನು ರಾಸಾಯನಿಕಗಳಿಂದ ಶುದ್ಧೀಕರಿಸುವುದರಲ್ಲಿ ಅವೆಷ್ಟೋ ಅನನುಕೂಲತೆಗಳಿವೆ. ಈ ಕ್ರಮ ಭಾರತದಲ್ಲಿ ಅಷ್ಟಾಗಿ ಎಲ್ಲೂ ಜಾರಿಯಲಿಲ್ಲ. ಇದ್ದ ಕಡೆಗಳಲ್ಲೂ ಈಗ ಕೈಬಿಟ್ಟಂತಾಗಿದೆ. ದುಬಾರಿ ಖರ್ಚಿನದಲ್ಲದೆ, ರಾಡಿ ರಾಶಿ ಬೀಳುವುದರಿಂದ ವಿಲೇವಾರಿ ಕೂಡ ಕಷ್ಟ. ಕಚರಾ ತಿಳಿಯಾಗುವುದೇ ಹೊರತು, ಹೊರಬಿದ್ದ ನೀರಲ್ಲಿ ರೋಗಾಣುಗಳು ಇದ್ದೇ ಇರುವುವು.

**ಜೈವಿಕ ಶುದ್ಧೀಕರಣ :** ತೇಲುವ ವಸ್ತುಗಳನ್ನು ಹೆಪ್ಪುಗಟ್ಟಿಸಿ ತೆಗೆದುಹಾಕುವ ಬದಲಾಗಿ, ಈ ವಿಧಾನದಲ್ಲಿ ಜಟಿಲ ವಸ್ತುಗಳನ್ನು ಏಕಾಣುಜೀವಿಗಳು ಇನ್ನೂ ಸರಳವಸ್ತುಗಳಾಗಿ ಒಡಕೆಡವುತ್ತವೆ. ಮಲಮೂತ್ರಾದಿಗಳನ್ನು ಹಳ್ಳದಲ್ಲಿ ತಿಪ್ಪೆ, ಬೆರಗೊಬ್ಬರ (ಕಾಂಪೋಸ್ಟ್), ಕಚರಾ ತೋಟಗಾರಿಕೆ (ಫಾರ್ಮಿಂಗ್), ನೆಲದಲ್ಲಿ ಬಿಡುವು ಕೊಟ್ಟು ಸೋಸಿಬಿಡುವಿಕೆಗಳಲ್ಲೆಲ್ಲ ಜೀವಾಣುಗಳ ಕೈವಾಡವೇ ಇರುವುದರಿಂದ ಅವೂ ಜೈವಿಕ ಶುದ್ಧೀಕರಣಗಳೇ. ಜೀವಾಣುಗಳು ಗಾಳಿಜೀವಿಗಳೊ (ಈರೋಬ್ಸ್) ನಿರ್ಗಾಳಿಜೀವಿಗಳೊ (ಅನೀರೋಬ್ಸ್) ಆಗಿರಬಹುದು. ನಿರ್ಗಾಳಿಜೀವಿಗಳು ಕಚರಾದಲ್ಲಿರುವ ಹಲತೆರನ ಜೈವಿಕ ವಸ್ತುಗಳನ್ನು ಒಡೆಕೆಡವಿ, ಅರಗಿಸಿ, ನೀರಾಗಿಸಿ ಸರಳ ರಾಸಾಯನಿಕಗಳಿಗೆ ಇಳಿಸುತ್ತವೆ. ಅಮೋನಿಯ ಸಂಯುಕ್ತಗಳನ್ನು ನೈಟ್ರೇಟು, ನೈಟ್ರೈಟುಗಳಾಗಿ ಗಟ್ಟಿಗೊಳಿಸುವುವು ಗಾಳಿಜೀವಿಗಳು. ನೆಲದೊಳಕ್ಕೆ ಕಚರಾವನ್ನು ಬಿಟ್ಟರೂ ಹೀಗೇ ಆಗುವುದು.

ಚುರುಕುಗೊಳಿಸಿದ ರಾಡಿ ಶುದ್ಧೀಕರಣ ಇನ್ನೊಂದು ಜೈವಿಕ ವಿಧಾನ. ಮುಂಚೆ ಕೊಂಚ ಶುದ್ಧೀಕರಿಸಿದ ಕಚರಾದೊಂದಿಗೆ ಒಂದಿಷ್ಟು ಚುರುಕುಗೊಳಿಸಿದ ರಾಡಿಯನ್ನು

ಬೆರೆಸಿ ಚೆನ್ನಾಗಿ ಗಾಳಿಗೊಡ್ಡಿದ ಮೇಲೆ ನೈಟ್ರೀಕರಣವನ್ನು ಗಾಳಿಜೀವಿಗಳು ಪೂರ್ತಿಗೊಳಿಸುತ್ತವೆ.

**ನಂಜಿನ ತೊಟ್ಟಿ :** ನಿರ್ಗಾಳಿಜೀವಿಗಳ ಪ್ರಭಾವಕ್ಕೆ ಸಾಕಷ್ಟು ಹೊತ್ತು ಕಚರಾ ಸಿಕ್ಕಿಬಿದ್ದಿರುವ, ಇದೊಂದು ಬಗೆಯ ಮುಚ್ಚಿದ ಬಚ್ಚಲುಗುಂಡಿ ಇಲ್ಲವೇ



ಚಿತ್ರ 1 ಮನೆಯ ನಂಜಿನ ತೊಟ್ಟಿ ಕಕ್ಕಸಿನ ನಕ್ಷೆ

ಗಸಿಗಟ್ಟಿಸುವ ತೊಟ್ಟಿ ಎನ್ನಬಹುದು (ಸೆಪ್ಟಿಕ್ ಟ್ಯಾಂಕ್). ಸಾಕಷ್ಟು ನೀರಿನಿಂದ ಕೊಚ್ಚಿ ಹರಿಸಿದ ಕಚರಾ ನಂಜಿನ ತೊಟ್ಟಿಯೊಳಕ್ಕೆ ಹರಿದು ಬಂದು ಇನ್ನೊಂದು ಕೊನೆಯಲ್ಲಿನ ಕೊಳಾಯಿಯಿಂದ ಆಚೆಗೆ ಹರಿಯುವುದು. ನಿರ್ಗಾಳಿ ಜೀವಿಗಳಿಂದ ಜೀರ್ಣವಾಗುವಷ್ಟು ಹೊತ್ತೂ ಕಚರಾ ಅಲ್ಲೇ ಉಳಿದಿರುತ್ತದೆ. ಈ ತೊಟ್ಟಿಯ ಮೂಲಕ ಹೊರಕ್ಕೆ ಹಾಯುವ ವೇಗ, ತಳದಲ್ಲಿ ಗಸಿಗಟ್ಟುವ ಆಶೆಗಳಿಗೆ ತಕ್ಕಂತೆ ತೊಟ್ಟಿಯ ಆಕಾರ, ಗಾತ್ರಗಳಿರುವಂತೆ ಕಟ್ಟಿರಬೇಕು. ಮೂಲೆಗಳಲ್ಲಿ ರಾಡಿ ನಿಲ್ಲುವಂತಿರಬಾರದು. ತೊಟ್ಟಿಯ ಅಗಲ ಕಡಿಮೆ ಇದ್ದರೆ ಕಚರಾ ಬೇಗನೆ ಮುಂದೆ ಸಾಗಿ ಗಸಿಗಟ್ಟುವುದೂ ತಗ್ಗುತ್ತದೆ. ಮನೆಯಲ್ಲಿ ಇದರ ಬಳಕೆದಾರ ಒಬ್ಬೊಬ್ಬನಿಗೂ 3 ಘನ ಅಡಿಯಷ್ಟಾದರೂ ಇದರ ಘನಗಾತ್ರ ಇರಬೇಕು. ಒಬ್ಬನಿಗೆ ದಿನಕ್ಕೆ 10 ಲೀಟರುಗಳಿಗೆ ಕಡಿಮೆ ಇಲ್ಲದಷ್ಟು ನೀರಾದರೂ ಹಾಕಬೇಕು.

ಈ ತೊಟ್ಟಿಯಲ್ಲಿ ಬೀಳುವ ಮಡ್ಡಿ, ರಾಡಿಯನ್ನು ಆಗಾಗ್ಗೆ ತೆಗೆಯಲೀಸುವಂತೆ ಇದರ ಮುಚ್ಚಳ ಇರಬೇಕು ಇಲ್ಲಿ ಏಳುವ ಅನಿಲಗಳು ದೂರ ಸಾಗುವ ಹಾಗೆ ಉದ್ದ ಕೊಳವೆ ಒಂದನ್ನು ಇದಕ್ಕೆ ತಗುಲಿಸಿ ನೆಟ್ಟಗೆ ನಿಲ್ಲಿಸಬೇಕು. ಸೊಳ್ಳೆಗಳು ಒಳಸೇರದಂತೆ ಬಲೆ ಹಾಕಿರಬೇಕು. ಒಳಗೆ ಹರಿದು ಬರುವ ನೀರು ಕೂಡಲೇ ನೇರವಾಗಿ ಹೊರಸಾಗದ ಹಾಗೆ ತಡೆ ತೆರೆಗಳು ಒಂದೆರಡು ಇರಬೇಕು.

ಗಟ್ಟಿ ಉಂಡೆಗಳು, ಇಟ್ಟಿಗೆ, ಕಲ್ಲುಚೂರುಗಳು ತೊಟ್ಟಿ ಸೇರಿ ನಿಜವಾದ ನಂಜಿನ ಪ್ರಭಾವವನ್ನು ಅಣಗಿಸದ ಹಾಗೆ ಅವನ್ನು ತಡೆವ ತೆರೆಯನ್ನು ಅಡ್ಡ ಇರಿಸಬೇಕು. ಇದರಿಂದ ತೊಟ್ಟಿಯ ಎಂಟನೆಯ ಒಂದು ಭಾಗ ಈ ಚೂರುಗಳ ಅರೆಯಾಗುವುದು ; ಉಳಿದ ಭಾಗ ಜೀರ್ಣಕ ಅರೆ. ಇವೆರಡರ ನಡುವಣ ಸಂಬಂಧ ತಳದ ತೂಬಿನ ಮೂಲಕ. ಮಲದ ಉಂಡೆಗಳಲ್ಲಿ ನೂರಕ್ಕೆ 95ರಷ್ಟು ನೀರಲ್ಲಿ ತೇಲುವುದರಿಂದ ಜೀರ್ಣಕ ಅರೆಗೆ ಬಾರವು. ನಂಜಿನ ತೊಟ್ಟಿಯ ತಳದ ನಡುವಣ ಭಾಗ ತಗ್ಗಾಗಿದ್ದಲ್ಲಿ ಭಾರವಾದ ಪದಾರ್ಥಗಳು ಅಲ್ಲೇ ಉಳಿಯುತ್ತವೆ. ಕಚರಾ ಬಂದ ಮೇಲೆ 2″–6″ ದಪ್ಪದ ನೊರೆ ಕಟ್ಟಿ ತೇಲುವುದು. ಇದರ ತಳದಲ್ಲಿ ನಿರ್ಗಾಳಿ ಜೀವಿಗಳ ಚುರುಕು ಕೆಲಸದಿಂದ ಗಟ್ಟಿ ವಸ್ತುಗಳೆಲ್ಲ ಒಡೆಕೆಡವಿದಂತಾಗಿ ನುಣ್ಣಗೆ ಅರಗುವುವು. ಜೀರ್ಣವಾಗದ ಅರೆದ್ರವವಾದ ಕಪ್ಪು ರಾಡಿ ಕೊನೆಗೆ ಉಳಿಯುತ್ತದೆ.

ನಂಜಿನ ತೊಟ್ಟಿಯಿಂದ ಹೊರಬಿದ್ದ ಕೆಟ್ಟ ವಾಸನೆಗಳೆದ್ದ ರೊಚ್ಚನ್ನು ಬೇಸಾಯ, ತೋಟಗಾರಿಕೆಗಳಲ್ಲಿ ಬಳಸಬಹುದು. ಸರಿಯಾಗಿ ಕಟ್ಟಿದ ನಂಜಿನ ತೊಟ್ಟಿಯಿಂದ ಕೆಟ್ಟ ವಾಸನೆ ಏಳದ್ದರಿಂದ ಮನೆ ಕಟ್ಟಡಗಳ ಬಳಿಯಲ್ಲೇ ಇದು ಇರಬಹುದು. ಆದರೂ ರಾಡಿಯನ್ನು ತೆಗೆಯಬೇಕಾದ್ದರಿಂದ ತುಸು ದೂರವಿದ್ದರೆ ಅನುಕೂಲ. ಕೆಲವು ವರ್ಷಗಳಿಗೆ ಒಂದು ಬಾರಿ ರಾಡಿಯನ್ನು ತೆಗೆದು ಹಾಕುವುದನ್ನು ಬಿಟ್ಟರೆ ನಂಜಿನ ತೊಟ್ಟಿಗಳಿಗೆ ಹೆಚ್ಚು ಗಮನ ಕೊಡಬೇಕಿಲ್ಲ. ದೊಡ್ಡವಾಗಿದ್ದರೆ ವರ್ಷಕ್ಕೊಂದು ಸಾರಿ ತೆಗೆಯಬೇಕು.

ಇದರಲ್ಲಿ ಮುಖ್ಯ ಪಾತ್ರವಹಿಸುವ ಜೀವಾಣುಗಳು ಸಾಯುವುದರಿಂದ, ನಂಜಿನ ತೊಟ್ಟಿಗೆ ಯಾವ ರೋಗಾಣುನಾಶೀ (ಡಿಸಿನ್‌ಫೆಕ್ಟೆಂಟ್) ಮದ್ದನ್ನೂ ಹಾಕಬಾರದು. ಮನೆಯ ಬಚ್ಚಲಲ್ಲೂ ಸುರಿಯಬಾರದು. ತೊಟ್ಟಿಯಲ್ಲಿ ನೊರೆಗಟ್ಟಲೂ ಅನಿಲಗಳೇಳಲೂ ಮೇಲುಗಡೆ ಸಾಕಷ್ಟು ಜಾಗವಿರಬೇಕು. ಕೇವಲ ಮಲಮೂತ್ರ, ತೊಳೆದ ನೀರು ಸೇರುವ ಕಚರಾದ ಹರಿವು ಸಾಮಾನ್ಯವಾಗಿ ಒಬ್ಬನಿಗೆ ದಿನಕ್ಕೆ 3 ಲೀಟರುಗಳನ್ನು ಮೀರದು. ನಂಜಿನ ತೊಟ್ಟಿಯಿಂದ ಹೊರಬಿದ್ದ ನೀರಿನ ವಿಲೇವಾರಿಗೆ ನಮ್ಮಲ್ಲಿ ಕೊರೆಗುಂಡಿಗಳು (ಬೋರ್‌ಹೋಲ್ಸ್), ಇಮರುಗುಣಿಗಳು (ಸೋಕ್‌ಪಿಟ್ಸ್) ಒಳ್ಳೆಯವು.

**ನೀರು ಕಕ್ಕಸು :** ಮಲಮೂತ್ರ ಸಾಗಣೆಗೆ ಸಾಕಷ್ಟು ನೀರು ದೊರೆಯದಾಗ ಮುಖ್ಯವಾಗಿ ಕಾಡುತೋಟಗಳಲ್ಲಿ (ಪ್ಲಾಂಟೇಷನ್ಸ್) ಮತ್ತು ಚಿಕ್ಕ ರೈಲುನಿಲ್ದಾಣಗಳಲ್ಲಿ ಕಚರಾವನ್ನು ಜೈವಿಕ ವಿಧಾನದಲ್ಲಿ ವಿಲೇವಾರಿ ಮಾಡಲು ನೀರು ಕಕ್ಕಸನ್ನು (ಅಕ್ವ ಪ್ರೀವಿ) ಬಳಸುವುದುಂಟು. ಇದರಲ್ಲಿ ನಂಜಿನ ತೊಟ್ಟಿಯ ಮೇಲೆಯೇ ಕಕ್ಕಸಿನ ಪಾದಪೀಠಗಳಿರುವುವು. ಇದರಿಂದ ಅನನುಕೂಲತೆಗಳೇ ಹೆಚ್ಚು. ಕಚರಾ ನೊರೆಗಟ್ಟಿದ್ದು ಮಲ ಬಿದ್ದಾಗ ಒಂದೊಂದು ಬಾರಿಯೂ ಕಕ್ಕಸು ಕದಡುವಂತಾಗಿ ದುರ್ನಾತದ ಅನಿಲಗಳು ಕಕ್ಕಸೊಳಕ್ಕೇ ಬರುತ್ತವೆ. ಅಲ್ಲದೆ ಗಲೀಜಿನ ನೊರೆ



ಚಿತ್ರ 2 ನೀರು ಕಕ್ಕಸಿನ ನಕ್ಷೆ

ಮೇಲುಗಡೆಯೇ ಕಾಣುವುದು. ಕಚರಾ ಸಾಕಷ್ಟು ದಿನಗಳು ನೀರು ಕಕ್ಕಸಲ್ಲಿ ಉಳಿಯದೆ ಶುದ್ಧೀಕರಣ ಆಗದೆಯೇ ಹೊರಬೀಳುತ್ತದೆ.

**ಬೇಸಾಯದಲ್ಲಿ ಕಚರಾ ವಿಲೇವಾರಿ :** ನೆಲದಲ್ಲಿ ಹರಿಸಿ ಕಚರಾ ವಿಲೇವಾರಿ ಮಾಡಲು, ನೆಲದೊಳಗೆ ನೀರಾವರಿ (ಸಬ್ಸಾಯಿಲ್ ಇರಿಗೇಷನ್), ಬಿಟ್ಟು ಬಿಟ್ಟು ಸೋಸಿ ಇಳಿಸುವಿಕೆ (ಇಂಟರ್ಮಿಟೆಂಟ್ ಡೌನ್ವರ್ಡ್ ಫಿಲ್ಟ್ರೇಷನ್), ಕಚರಾ ತೋಟಗಾರಿಕೆ (ಸ್ಯೂಯೇಜ್ ಫಾರ್ಮಿಂಗ್) ಎಂಬ ಮೂರು ವಿಧಾನಗಳಿವೆ.

**ನೆಲದೊಳಗೆ ನೀರಾವರಿ :** ಮನೆಯಲ್ಲಿ ಕಟ್ಟಿದ ನಂಜಿನ ತೊಟ್ಟಿಯಿಂದ ಬರುವ ಕಚರಾ ವಿಲೇವಾರಿಗೆ ಇದು ಸಾಮಾನ್ಯವಾಗಿ ಬಳಕೆಯಲ್ಲಿದೆ. ಅಲ್ಲಲ್ಲಿ ಬಿಟ್ಟು ಬಿಟ್ಟು



ಚಿತ್ರ 3 ನೆಲದೊಳಗೆ ನೀರಾವರಿಗಾಗಿ ಚರಂಡಿ ಕೊಳಾಯಿಗಳ ಜೋಡಣೆ

ಜೋಡಿಸಿದ ಬೇಸಾಯದ ಚರಂಡಿ ಕೊಳಾಯಿಗಳ ಮೂಲಕ ಶುದ್ಧೀಕರಿಸಿದ ಕಚರಾ ಹರಿಯುತ್ತದೆ. ನೆಲದ ಮಣ್ಣು ಒಣಕಲಾಗಿ ಮರಳಂತಿರಬೇಕು. ಜೇಡಿಸುಣ್ಣ ಗೂಡಿದ ಮಣ್ಣುಗಳು ತಕ್ಕವಲ್ಲ. ಕಚರಾವನ್ನು ಬಿಡುವು ಕೊಟ್ಟು ಸರಿಸುವಾಗ ಈ ವಿಧಾನ ಒಳ್ಳೆಯದು.

**ಬಿಟ್ಟು ಬಿಟ್ಟು ಸೋಸಿ ಇಳಿಸುವಿಕೆ :** ಇಲ್ಲಿ ಕಚರಾ ನೀರನ್ನು ಶುದ್ಧೀಕರಿಸಲು ನೆಲವೇ ಸೋಸಬೇಕಾದ್ದರಿಂದ ಈ ವಿಧಾನಕ್ಕೆ ಉಸುಬಿನಂತಿರುವ ಮಣ್ಣಿದ್ದರೆ ಒಳ್ಳೆಯದು. ಇಲ್ಲಿ ಗೊತ್ತಾದ ಚಿಕ್ಕ ಜಾಗದಲ್ಲಿ ನೀರನ್ನು ಇಮರಿಸುವುದು ಮುಖ್ಯವೇ ಹೊರತು ಅದರಿಂದ ಬೆಳೆ ಎತ್ತುವುದು ಮುಖ್ಯ ಗುರಿಯಲ್ಲ. ಕಚರಾ ನೀರನ್ನು ತಡೆತಡೆದು ಬಿಡುವುದು ಮುಖ್ಯ. ಇಲ್ಲೂ ಶುದ್ಧೀಕರಣಕ್ಕೆ ಕಾರಣ ನೆಲದ ಮೇಲ್ಮೈ ಮಣ್ಣಲ್ಲಿರುವ ನೈಟ್ರೀಕರಿಸುವ

ಜೀವಾಣುಗಳು, ಏಕಾಣುಜೀವಿಗಳೇ. ಇದು ಕೈಗೂಡಬೇಕಾದರೆ ದೊಡ್ಡ ಸೋಸುಪಾತಿಗಳ (ಫಿಲ್ಟರ್ ಬೆಡ್ಸ್) ಮಾದರಿಯಲ್ಲಿರಬೇಕು.

ಪಾತಿಗಳ 6′ಗಳ ತಳದಲ್ಲಿ ಚರಂಡಿ ಕೊಳಾಯಿಗಳು 10′ಗಳಷ್ಟು ದೂರದಲ್ಲಿರ ಬೇಕು. ಇವುಗಳ ಮೇಲೆ ದಪ್ಪ ಕಲ್ಲುಚೂರುಗಳೂ ಮರಳಿನಂಥ ಮಣ್ಣನ್ನೂ ಹರವಬೇಕು. ನೆಲದ ಇಳಿಜಾರು ಕಚರಾ ನೀರನ್ನು ಎಲ್ಲ ಕಡೆಗಳಿಗೂ ಹರಿಸು ವಂತಿರಬೇಕು. ನೆಲದ ಮೇಲೆ ಕಚರಾ ನೀರನ್ನು ಕಾಲುವೆಗಳಲ್ಲಿ ಹರಿಸಬೇಕು. 6 ತಾಸುಗಳು ಒಂದೆಡೆ ಹರಿದರೆ ಮುಂದಿನ 18 ತಾಸುಗಳು ಬಿಡುವು ಕೊಟ್ಟು ಗಾಳಿಯಾಡಲು ಬಿಡಬೇಕು. ಹೀಗೆ ಮಾಡಿದರೆ ನೆಲಕ್ಕೆ ಕಟ್ಟರೆ ಆಗದು. ಏರು ತಗ್ಗುಗಳಲ್ಲಿ ಬೆಳೆ ಇಡಲೂಬಹುದು. ಏರಿನಲ್ಲಿ ಕಚರಾ ಹರಿವಾಗ ತಗ್ಗು ಬಿಡು ವಾಗಿರುತ್ತದೆ. ನೆಲದೊಳಗಿಂದ ಹೊರಬಿದ್ದ ಕಚರಾಸಾರ ಕೊಳೆಯದು. ಆದ್ದರಿಂದ ಯಾವ ಕೆಡುಕೂ ಇಲ್ಲದೆ ಸೀದಾ ಹೊಳೆ, ನದಿಗಳೊಳಕ್ಕೆ ಬಿಟ್ಟು ಬಿಡಬಹುದು. ಸಾಕಷ್ಟು ಜಮೀನು ಇರುವುದಾದರೆ ಇದು ಒಳ್ಳೆಯ ಸರಳ ವಿಧಾನ. 3,000 ಮಂದಿ ಇರುವೆಡೆಗೆ ಒಂದು ಎಕರೆ ಜಮೀನು ಸಾಕು.

**ಕಚರಾ ತೋಟಗಾರಿಕೆ :** ಪಟ್ಟಣ, ನಗರಗಳ ಬಳಿ ಜಮೀನು ದೊರೆತರೆ ಈ ವಿಧಾನ ಸಲ್ಲುತ್ತದೆ. ಇದು ಕಚರಾ ಶುದ್ಧೀಕರಣದ ಬಲು ಹಳೆಯ ವೈಜ್ಞಾನಿಕ ವಿಧಾನ. ವಿಶಾಲವಾಗಿರುವ ಸಾಮಾನ್ಯ ಬೇಸಾಯದ ಜಮೀನಿನ ಮೇಲೆ ಕಚರಾ ನೀರನ್ನು ಹರಿಯಿಸಿ, ಆಗುವಷ್ಟೂ ಹೆಚ್ಚಾಗಿ ತೋಟಗಾರಿಕೆಯಲ್ಲಿ ಬೆಳೆ ಎತ್ತಿ ಕಚರಾವನ್ನು ಶುದ್ಧೀಕರಿಸುವ ಏರ್ಪಾಡಿದು. ನಗರಕ್ಕೆ ತಗ್ಗಿನಲ್ಲಿದ್ದು ಒಳಚರಂಡಿಗಳ ಮೂಲಕ ಕಚರಾ ಹರಿದು ಬರುವಂತಿರಬೇಕು. ಮಣ್ಣು ಮರಳಿನಂತಿದ್ದರೆ ಒಳ್ಳೆಯದು. ಗಟ್ಟಿ ಕಸಕಡ್ಡಿಗಳನ್ನು ತಡೆ ಹಾಕಿಟ್ಟು ಕಚ್ಚಾ ಕಚರಾವನ್ನೇ ಹರಿಸಬೇಕು. ಜಮೀನಿನ ಮೇಲೆ ಒಂದೇ ಸಮನಾಗಿ ಕಚರಾ ಹರಿಸದೆ ಬಿಡುವು ಕೊಟ್ಟು ಹಾಯಿಸಿದರೆ ಗಾಳಿಗೆ ಒಡ್ಡಿದಂತಾಗುವುದು. ಎತ್ತರದ ಪಾತಿಗಳಲ್ಲಿ ಬೆಳೆಯಿಟ್ಟು ತಗ್ಗಿನ ಕಾಲುವೆಗಳಲ್ಲಿ ಕಚರಾವನ್ನು ಹರಿಸಬಹುದು. ಹೀಗೆ ಮಾಡಲು ಉಷ್ಣವಲಯದಲ್ಲಿ 100 ಮಂದಿಗೆ ಒಂದು ಎಕರೆ ಜಮೀನು ಬೇಕು. ಭಾರತದಲ್ಲಿ ಬಿಸಿಲಿನಿಂದ ಇಮರುವುದು ಹೆಚ್ಚಿರುವುದರಿಂದ ಅಷ್ಟೊಂದು ಜಾಗ ಬೇಕಿಲ್ಲ. ಆದರೆ ಮಳೆಗಾಲದಲ್ಲಿ ಕಚರಾ ವಿಲೇವಾರಿಗೆ ತೊಂದರೆಯಾಗುತ್ತದೆ.

ಭಾರತದಲ್ಲಿ ಮೈಸೂರು ನಗರದಲ್ಲೂ ಪಂಜಾಬು, ಉತ್ತರ ಪ್ರದೇಶಗಳಲ್ಲೂ ಇದು ಲಾಭಕರವಾಗಿ ಜಾರಿಯಲ್ಲಿದೆ. ಈ ವಿಧಾನದಲ್ಲಿ 90% ಗಲೀಜನ್ನೂ ಏಕಾಣು ಜೀವಿಗಳನ್ನೂ ತೆಗೆದಂತಾದರೂ ಹೊರಸಾಗುವ ಕಚರಾ ನೀರು ಕೊಳೆವುದು. ಇದರ ಸಹಾಯದಿಂದ ಹುಲ್ಲು, ಕಬ್ಬು, ಬಾಳೆ, ತರಕಾರಿಗಳನ್ನು ಚೆನ್ನಾಗಿ ಬೆಳೆಸಬಹುದು. ಆದರೆ ಜಮೀನು ತಡೆಯಲಾರದಷ್ಟು ಕಚರಾವನ್ನು ಬಿಡುವಿಲ್ಲದೆ ಹರಿಸುತ್ತಿದ್ದರೆ ಅದು ಬೇಗನೆ ಕೆಲಸಕ್ಕೆ ಬಾರದಾಗುತ್ತದೆ.

**ಮರಳಿನ, ಕಂಕರೆಯ ಪಾತಿಗಳ ಮೂಲಕ ಸೋಸಿಕೆ :** ಈ ವಿಧಾನದಲ್ಲಿ, ತಾಕು ಪಾತಿಗಳು (ಕಾಂಟ್ಯಾಕ್ಟ್ ಬೆಡ್ಸ್) ಇಲ್ಲವೇ ಒಡಿಕಟ್ಟುವ (ಪರ್ಕೊಲೇಟಿಂಗ್) ಪಾತಿಗಳ ಮೂಲಕ ಕಚರಾದ ಶುದ್ಧೀಕರಣ ಆಗುತ್ತದೆ.



ಚಿತ್ರ 1 ಒಡಿಕಟ್ಟುವ ಕಚರ ಸೋಸಿಕದ ಸೀಳುಕೊಯ್ತು

ತಾಕು ಪಾತಿಗಳು : ನಾಲ್ಕಾರು ಅಡಿಗಳ ಆಳದ, ಗಟ್ಟಿ ಇಟ್ಟಿಗೆ, ಕಲ್ಲು ಚೂರು ಗಳು ತುಂಬಿರುವ, ನೀಳ ಚೌಕಾಕಾರದ ಗಾರೆ ತೊಟ್ಟಿಗಳು. ನೀರನ್ನು ಹೊರಬಿಡಲು ತಳದಲ್ಲಿ ತೂಬುಗಳಿವೆ. ಇಟ್ಟಿಗೆ, ಕಲ್ಲುಗಳು ಕರಗದೆ ಉಳಿದು ಏಕಾಣುಜೀವಿಗಳ ಬೆಳವಣಿಗೆ, ಪ್ರಭಾವ ತೋರಲು ವಿಶಾಲ ತಳವನ್ನು ಒದಗಿಸುತ್ತವೆ. ಇವನ್ನು ಆಗಾಗ್ಗೆ ಹೊರತೆಗೆದು ತೊಳೆದು ಮತ್ತೆ ಹಿಂತಿರುಗಿಸಬೇಕು. ಗಸಿಗಟ್ಟಿಸುವ ತೊಟ್ಟಿ ಗಳಿಂದ ಬರುವ ಕಚರಾ ನೀರು ಇಲ್ಲವೇ ನಂಜಿನ ತೊಟ್ಟಿಯಿಂದ ಬಂದ ಗಲೀಜು ಸಾರವನ್ನು ಇವುಗಳಲ್ಲಿ 2–4 ತಾಸುಗಳಾದರೂ ಇರಿಸಿದ್ದರೆ ಅದು ಏಕಾಣುಜೀವಿಗಳ ಪ್ರಭಾವಕ್ಕೆ ಸಿಗುತ್ತದೆ. ಪಾತಿಗಳನ್ನು ಬರಿದು ಮಾಡಿದಾಗ ಗಾಳಿಗೊಡ್ಡಿದಂತಾಗು ತ್ತದೆ. ತಾಕು ಪಾತಿ ತುಂಬಲೂ ಬರಿದಾಗಲೂ ತಾಸಿಗಿಂತಲೂ ಹೆಚ್ಚು ಹೊತ್ತು ಹಿಡಿಯಬಾರದು. 4 ತಾಸು ಕೆಲಸ ಮಾಡಿದರೆ 8 ತಾಸು ಬಿಡುವಿರದಿದ್ದಲ್ಲಿ ಏಕಾಣು ಜೀವಿಗಳು ಗಾಳಿಯಿಲ್ಲದೆ ಸಾಯುತ್ತವೆ. ಇದರಿಂದ ಹೊರಬೀಳುವ ಸಾರದಲ್ಲಿ ಗಟ್ಟಿ ವಸ್ತುಗಳಿರುವುದರಿಂದ ಒಡಿಕಟ್ಟುವ ಸೋಸಿಕಗಳಿಂದ ಬಂದುದರಷ್ಟು ಒಳ್ಳೆಯದಲ್ಲ. ಈ ವಿಧಾನದಲ್ಲಿ ಉಸ್ತುವಾರಿ ಸಿಬ್ಬಂದಿ ಹೆಚ್ಚಾಗಿ ಬೇಕು. ಇದು ಅಷ್ಟಾಗಿ ಈಗ ಜಾರಿಯಲ್ಲಿಲ್ಲ.

**ಒಡಿಕಟ್ಟುವ ಸೋಸಿಕೆಗಳು :** ಇವನ್ನು ಚಿಮುಕಿಸುವ, ತೊಟ್ಟಿಕ್ಕಿಸುವ, ಚೆಲ್ಲುವ ಸೋಸಿಕಗಳೆಂದೂ ಕರೆವುದುಂಟು. ಇವುಗಳ ರೀತಿ, ಬಳಕೆ ತಾಕು ಪಾತಿಯದರ ಹಾಗೆ ಇದ್ದರೂ ತಿಳಿಗೊಳಿಸಿದ ಕಚರಾವನ್ನು ಇವುಗಳೊಳಕ್ಕೆ ಹಾಕುವ ವಿಧಾನ ಮಾತ್ರ ಬೇರೆ. ಇವು ಗುಂಡಗೋ ನೀಳಚೌಕಾಕಾರವಾಗೋ ಇದ್ದು, ಆರಡಿ ಆಳದಲ್ಲಿ ಕಲ್ಲು ಇಟ್ಟಿಗೆಗಳ ಗಟ್ಟಿಚೂರುಗಳಲ್ಲಿ ದಪ್ಪನವು ಕೆಳಗಿರುವಂತೆ ಕ್ರಮವಾಗಿ ಜೋಡಿ ಸಿರುವುದು. ಇದರಿಂದ ಗಾಳಿಯಾಡಲು ಸರಾಗ. ಗಸಿಗಟ್ಟಿಸುವ ತೊಟ್ಟಿಯಿಂದಲೋ ನಂಜಿನ ತೊಟ್ಟಿಯಿಂದಲೋ ಬಂದ ಸಾರವನ್ನು ಇದರ ಮೇಲೆ ಅಲುಗಾಡದಂತೆ ಜೋಡಿಸಿರುವ, ಅತ್ತಿಂದಿತ್ತಲೋ ಗುಂಡಗೋ ಸುತ್ತಿಡುವ, ಆಗಾಗ್ಗೆ ಚೆಲ್ಲುವ ಕೊಳಾಯಿಗಳಿಂದ, ಬಿಡುವು ಕೊಡುತ್ತ ಚೆಲ್ಲಬೇಕು. ಎಲ್ಲೆಲ್ಲೂ ಒಂದೇ ಸಮನಾಗಿ ಹರಡಿಕೊಳ್ಳುತ್ತದೆ. ಇಲ್ಲೂ ಚೆನ್ನಾಗಿ ಬೆಳೆದ ಏಕಾಣುಜೀವಿಗಳ ವರ್ತನೆಯಿಂದ ಕಚರಾ ಸಾರ ಚೊಕ್ಕವಾಗಿ ಹೊರಬೀಳುತ್ತದೆ. ಕೆಲವೇಳೆ ಪದರಗಟ್ಟಿದ ಏಕಾಣು ಜೀವಿಗಳೂ ಹೊರಬಿದ್ದ ಸಾರದಲ್ಲಿ ಇರಬಹುದಾದ್ದರಿಂದ ಮತ್ತೊಂದು ಗಸಿಗಟ್ಟಿಸುವ ತೊಟ್ಟಿಯಲ್ಲಿ ಹಾಯಿಸಬೇಕು. ಈ ಸೋಸಿಕಗಳನ್ನು ಸರಿಯಾಗಿ ಯೋಜಿಸಿ ಆರಂಭಿಸಿದರೆ ಆಮೇಲೆ ಉಸ್ತುವಾರಿ ಬೇಕೆನಿಸದು. ಇದಕ್ಕೆ ದುಬಾರಿ ಖರ್ಚಿಲ್ಲ, ಹಿಡಿವ ಜಾಗ ಕಡಿಮೆ, ಚೆನ್ನಾಗಿ ಚೊಕ್ಕಗೊಳಿಸುವುದು.

**ಚುರುಕುಗೊಳಿಸಿದ ರಾಡಿ :** ಕಚರಾದ ವಿಲೇವಾರಿಯಲ್ಲಿ ನಿಜವಾಗೂ ಗಾಳಿ ಜೀವಿ ವಿಧಾನವಿದು. ಇರುವ ವಿಧಾನಗಳಲ್ಲೆಲ್ಲ ಇದೇ ಬಲು ಒಳ್ಳೆಯದು. ಒಡಿಕಟ್ಟುವ ಸೋಸಿಕಗಳಲ್ಲಿ ಏಕಾಣುಜೀವಿ ಬೆಳೆವ ಪದರಗಳಲ್ಲಿ ಆಗುವ ಕೆಲಸವನ್ನು ಚುರುಕು ಗೊಳಿಸಿದ ರಾಡಿ ಮಾಡುತ್ತವೆ. ಇನ್ನೂ ಚೆನ್ನಾಗೇ ಮಾಡುವುದೆನ್ನಬಹುದು. ಒಡಿಕಟ್ಟುವ ಸೋಸಿಕಗಳಲ್ಲಿ ಕಚರಾ ಸಾರವನ್ನು ಎರಚಿದರೆ, ಇಲ್ಲಿ ಅದಕ್ಕಾಗಿ ಕಟ್ಟಿದ ತೊಟ್ಟಿಗಳಲ್ಲಿ ತುಂಬಿರುವ ಕಚರಾದ ಮೂಲಕ ಸಣ್ಣ ಚಿಮ್ಮುಗೋವಿಗಳಿಂದ ಗಾಳಿ ಬುಗ್ಗೆಯೇಳುತ್ತದೆ. ಕಚರಾದ ಸಾಂದ್ರತೆ, ಚೊಕ್ಕಗೊಳಿಸಬೇಕಾದ ಮಟ್ಟಗಳಿಗೆ ತಕ್ಕಂತೆ, ಸಾಮಾನ್ಯವಾಗಿ ಆರೆಂಟು ತಾಸುಗಳ ಹೊತ್ತು, ಕಚರಾದೊಂದಿಗೆ ಚುರುಕು ಗೊಳಿಸಿದ ರಾಡಿಯನ್ನು ಬೆರೆಸಿ ಗಾಳಿಬುಗ್ಗೆಯೇಳಿಸಬೇಕು. ಕೆಲವೇಳೆ 2 ರಿಂದ 24 ತಾಸುಗಳೇ ಹಿಡಿಯಬಹುದು. ಚೊಕ್ಕವಾದ ಸಾರದಿಂದ ರಾಡಿಯನ್ನು ತೆಗೆದು ಹಾಕಬಹುದು ಇಲ್ಲವೇ ಚುರುಕುಗೊಳಿಸಿ ಮತ್ತೆ ಬಳಸಬಹುದು.

ಒತ್ತಡದಲ್ಲಿರುವ ಗಾಳಿಯನ್ನು ಗುಳ್ಳೆಗಳೇಳುವಂತೆ ಒತ್ತಿ ಬಿಡುವ ಗಾಳಿತೂರಿಕ ಗಳ (ಡಿಫ್ಯೂಸರ್ಸ್) ತಳದಲ್ಲಿ ಅಳವಡಿಸಿರುವ ಗಾಳಿಗೊಡ್ಡುವ ತೊಟ್ಟಿಗಳಲ್ಲಿ ಕಚ್ಚಾ ಕಚರಾದಿಂದ ಚುರುಕುಗೊಳಿಸಿದ ರಾಡಿ ತಯಾರಾಗುತ್ತದೆ. 2 ಲೀಟರು ಕಚರಾಕ್ಕೆ 1.75 ಘನ ಅಡಿಗಳಷ್ಟು ಒತ್ತಡದ ಗಾಳಿ ಬೇಕಾಗುವುದು. ಕಚರಾದಲ್ಲಿರುವ ಅಮೋ ನಿಯ ಎಲ್ಲವೂ ನೈಟ್ರೇಟುಗಳಾಗುವ ತನಕ ಹೀಗೇ ಮಾಡುತ್ತಿರಬೇಕು. ಒತ್ತು ಗಾಳಿಯನ್ನು ನಿಲ್ಲಿಸಿಬಿಟ್ಟರೆ ರಾಡಿ ತಳದಲ್ಲಿ ಕೂರುತ್ತದೆ. ತೇಲುವ, ತಿಳಿಯಾದ ಕಚರಾ ಸಾರವನ್ನು ಹೊರಬಿಟ್ಟು ಕಚ್ಚಾ ಕಚರಾವನ್ನು ಬೆರೆಸಬಹುದು. ಹೀಗೆ ಹಲವು ಸಾರಿ ನಡೆಸಿದ ಮೇಲೆ ಉಳಿವ ಚುರುಕುಗೊಳಿಸಿದ ರಾಡಿ ವಾಸನೆಯಿಲ್ಲದೆ, ಗಾಳಿಜೀವಿ ಏಕಾಣುಜೀವಿಗಳು ಹೇರಳವಾಗಿ ತುಂಬಿರುವುದರಿಂದ ಶುದ್ಧೀಕರಣ ವಿಧಾನಗಳಲ್ಲಿ ಬಳಸಬಹುದು.

ಇಲ್ಲಿ ಶುದ್ಧೀಕರಣ ಎರಡು ಹಂತಗಳಲ್ಲಿ ಸಾಗುತ್ತದೆ. ಮೊದಲು ಜೈವಿಕ ವಸ್ತು ಗಳು ಒಡೆದು, ಇಂಗಾಲದಿಂದ ಇಂಗಾಲದ ಡೈಆಕ್ಸೈಡ್ ಹುಟ್ಟುತ್ತದೆ. ಆಮೇಲೆ ಕಚರಾಸಾರ ಇದ್ದಹಾಗೇ ಉಳಿದರೂ ಗಾಳಿಗೊಡ್ಡುವುದು ಮುಂದುವರಿದು ನೈಟ್ರೇಟುಗಳು ತಯಾರಾಗುತ್ತವೆ. ಚುರುಕುಗೊಳಿಸಿದ ರಾಡಿ ವಿಧಾನದ ಜೋಡಣೆ ಯನ್ನು ಚಿತ್ರದಿಂದ ತಿಳಿಯಬಹುದು.

ಚುರುಕುಗೊಳಿಸಿದ ರಾಡಿಯನ್ನೂ ಕಚರಾಸಾರವನ್ನೂ ಗಾಳಿಗೊಡ್ಡುವ ವಿಧಾನ ಗಳು ಹಲವಾರಿವೆ. ಗಾಳಿಗೊಡ್ಡುವ ತೊಟ್ಟಿಗಳ ತಳದಲ್ಲಿ ತೂತುತೂತಾಗಿರುವ ಕೊಳವೆಗಳು ಇಲ್ಲವೇ ಹಂಚುಗಳ ಮೂಲಕ ಗಾಳಿಯನ್ನು ರಾಡಿ ಇಲ್ಲವೇ ಕಚರಾ ಸಾರದ ಮೂಲಕ ಒತ್ತಿಬಿಡಬಹುದು. ಕಚರಾದೊಂದಿಗೆ ರಾಡಿ ಬೆರೆಸಿದ್ದನ್ನು ತೊಟ್ಟಿಯ ತಳದಲ್ಲಿರುವ ಕೊಳವೆಯ ಮೂಲಕ ಮೇಲೆಳೆದುಕೊಂಡು ಮೇಲ್ಮೈ ಮೇಲೆ ಸಿಂಪಡಿಸಿ ಗಾಳಿಗೊಡ್ಡಬಹುದು. ಎರಡನೆಯ ವಿಧಾನಕ್ಕೆ ಮೇಲ್ಮೈಗಾಳಿ ಗೊಡ್ಡುವ ಸಿಂಪ್ಲೆಕ್ಸ್ ವಿಧಾನ ಮಾದರಿ.




ಚಿತ್ರ 5 ಚುರುಕುಗೊಳಿಸಿದ ರಾಡಿ ವಿಧಾನದ ಜೋಡಣೆ : 1 ದಪ್ಪ ಕಣ್ಣಿನ ಬಲೆ, 2 ಗಾಳಿತೂರಿಕಗಳಿಂದ ಒತ್ತಡದ ಗಾಳಿ ತೂರಿ ಹರಿವ ಕಚರದಲ್ಲಿ ಉಂಡೆಗಟ್ಟಿದ ವಸ್ತುಗಳನ್ನು ಒಡೆಕೆಡವುವ ತೊಟ್ಟಿ, 3 ಸಣ್ಣ ಕಣ್ಣಿನ ಬಲೆ, 4 ಗಾಳಿಗೊಡ್ಡುವ ತೊಟ್ಟಿಯ ಭಾಗಗಳು, 5 ಕಚ್ಚಾಕಚರ ಚುರುಕುಗೊಳಿಸಿದ ರಾಡಿ, ಹೊರಬೀಳುವ ಕಚರಸಾರವಾಗಿ ಬೇರ್ಪಡುವ, ನಡುವೆ ಆಳವಾಗಿರುವ ಗಸಿಗಟ್ಟಿಸುವ ತೊಟ್ಟಿ, 6 ಬೆರೆತ ಕಚರ ಒಳಹೋಗುವ ಕಂಡಿ, 7 ಕಚರ ಸಾರ ಕೊನೆಗೆ ಹೊರಹೋಗುವ ಕೋಡಿ, 8 ಚುರುಕುಗೊಳಿಸಿದ ರಾಡಿಯನ್ನು ಮರುಚುರುಕುಗೊಳಿಸುವ ಕಾಲುವೆ, 9 ಮರುಚುರುಕಾದ ರಾಡಿಯನ್ನು ಮೇಲೆತ್ತುವ ಗಾಳಿಸಾಧನೆ, 10 ಮಿಗಿಲೆನಿಸಿದ ಒಣಗಿಸುವ ಪಾತಿಗಳಿಗೆ ಸಾಗಿಸುವ ಏರ್ಪಾಡು 11 ಗಾಳಿತೂರಿಕಗಳು

**ಸಿಂಪ್ಲೆಕ್ಸ್ ವಿಧಾನ :** ಇದರಲ್ಲಿ ತಲೆಕೆಳಗಾದ ಶಂಕ್ವಾಕಾರದ ತೊಟ್ಟಿಯ ನಡುವೆ ಮೇಲೆ ಸೇದಿಕೊಳ್ಳುವ ಕೊಳವೆ ಇರುವುದು. ಇದು ತಳದಿಂದ ಆರಂಗುಲ ಎತ್ತರ ಕ್ಕಿದೆ. ಮೇಲಿನ ಬಾಯಿ ಬೀಸುವ ಕಲ್ಲಿನ ಗುಳಿಯಂತಿದ್ದು, ಅದರಲ್ಲಿ ನೆಟ್ಟಗಿರಿಸಿದ ನಡುಗಂಬಕ್ಕೆ ಬೀಸುರೆಕ್ಕೆಗಳನ್ನು ಓಲಿಸಿ ಜೋಡಿಸಿರುತ್ತವೆ. ವಿದ್ಯುತ್ ಯಂತ್ರದಿಂದ ಇದು ಗಿರ್ರನೆ ತಿರುಗಿದಾಗ ಸೇದು ಕೊಳುವೆಯ ಮೂಲಕ ರಾಡಿ ಬೆರೆತ ಕಚರಾವನ್ನು ಮೇಲೆ ಸೇದಿಕೊಂಡು ತುಂತುರಾಗಿ ಮೇಲೆ ಚಿಮ್ಮಿ ಚೆನ್ನಾಗಿ ಗಾಳಿಗೊಡ್ಡುವುದು. ಹೀಗೆ ಸೇದುಕೊಳವೆಯಲ್ಲಿ ಮೇಲೇರಿ ತೊಟ್ಟಿಯಲ್ಲಿ ಚಿಮ್ಮಿ, ತಳ ಸೇರಿ, ಮತ್ತೆ ಮೇಲೇರಿ ಸುತ್ತಿ ಸುತ್ತಿರುವುದು. ಚೊಕ್ಕ ಕಚರಾ ಸಾರವನ್ನು ಚುರುಕುಗೊಳಿಸಿದ ರಾಡಿಯಿಂದ ಬೇರ್ಪಡಿಸಲು ಇದನ್ನು ಗಸಿಗಟ್ಟಿಸುವ ತೊಟ್ಟಿಗಳಿಗೆ ಬಿಡಬೇಕು.




ಚಿತ್ರ 6 ಸಿಂಪ್ಲೆಕ್ಸ್ ಮೇಲ್ಮೈ ಗಾಳಿಗೊಡ್ಡಿಕ ವಿಧಾನ : 1 ಒಳಬಿಡುವ ಕೊಳಾಯಿ, 2 ವಿದ್ಯುತ್ತು ಮೋಟಾರು, 3 ಗಾಳಿಗೊಡ್ಡಿಸುವ ಬೀಸುರೆಕ್ಕೆ, 4 ಗಾಳಿಗೊಡ್ಡಿಸುವ ಅಂಕಣ, 5 ಮೇಲೆ ಸೆಳೆದುಕೊಳ್ಳುವ ಕೊಳವೆ, 6 ಹೊರ ಬಿಡುವ ಕೊಳಾಯಿ, 7 ಗಸಿಗಟ್ಟಿಸುವ ಅಂಕಣ

**ರಾಡಿವಿಲೇವಾರಿ :** ಕಚರಾದಿಂದ ತೋಟಗಾರಿಕೆ ಒಂದರ ಹೊರತಾಗಿ, ಕಚರಾ ವಿಲೇವಾರಿಯ ಎಲ್ಲ ವಿಧಾನಗಳಲ್ಲೂ ಕಚರಾದ ರಾಡಿ ರಾಶಿ ಬೀಳುವುದೊಂದು ತೊಡಕು. ಇದರಲ್ಲಿ ನೀರು ವಿಪರೀತ (98–99.5%) ಇದೆ. ಅನುಕೂಲತೆಗಳಿಗೆ ತಕ್ಕಂತೆ, ಜಮೀನಿನ ಮೇಲೆ ಹರಿಸುವುದು, ಗೊಬ್ಬರವಾಗಿ ಉಳುಮೆಗೆ ಹಾಕುವುದು, ರಾಡಿ ಪಾತಿಗಳಲ್ಲಿ ಒಣಗಿಸುವುದು; ಹಳ್ಳ, ಗುಂಡಿಗಳಲ್ಲಿ ಸುರಿವುದು, ಜಿಡ್ಡನ್ನು ಮತ್ತೆ ಪಡೆವಂತೆ ಚೊಕ್ಕಗೊಳಿಸಿಕೆ, ಒಣಗಿಸಿ ಗೊಬ್ಬರ ಮಾಡುವುದು—ಮೊದಲಾದ ವಿಧಾನಗಳನ್ನು ಅನುಸರಿಸಬಹುದು. ಬೆರಗೊಬ್ಬರವನ್ನು (ಕಾಂಪೋಸ್ಟ್) ತಯಾರಿಸುವ ಯತ್ನಗಳೂ ಆಗಿವೆ. ರಾಡಿಯಲ್ಲಿ ಸಾರಜನಕ, ಫಾಸ್ಫೇಟುಗಳು ಹೇರಳವಾಗಿರುವುದರಿಂದ ನೀರನ್ನು ಕಳೆದುಬಿಟ್ಟರೆ ಬಲು ಒಳ್ಳೆಯ ಗೊಬ್ಬರವಾಗುತ್ತದೆ. ಅಮೆರಿಕದಲ್ಲಿ ಈ ವಿಧಾನ ರೂಢಿಯಲ್ಲಿದೆ. ಭಾರತದಲ್ಲಿ ಜಂಷೆದ್‌ಪುರದಲ್ಲಿ ಸುಮಾರು 50 ಎಕರೆ ಬಂಜರಿಗೆ ಹಾಕಿ ಹುಲುಸಾದ ಬೆಳೆ ಎತ್ತುತ್ತಿರುವರು.

**ರಾಡಿ ಅರಗಣೆ :** ನಂಜಿನ ತೊಟ್ಟಿಗಳ ವಿಚಾರವಾಗಿ ಕೇಮ್ರಾನ್ (1896) ನಡೆಸಿದ ಪ್ರಯೋಗದಿಂದ ಕಚರಾದ ರಾಡಿ ನಿರ್ಗಾಳಿಜೀವಿಗಳಿಂದ ಹುಳಿನೊರೆಯೆದ್ದು ಅನಿಲ ಹುಟ್ಟುವುದು ಗೊತ್ತಿದೆ. ಆದರೆ ಹೀಗಾಗಲು ಸರಿಯಾದ ಸಂದರ್ಭಗಳು ಇತ್ತೀಚೆಗೆ ಮಾತ್ರ ಗೊತ್ತಾಗಿವೆ. ಹುಳಿನೊರೆ ಸರಿಯಾಗಿ ಎದ್ದರೆ, ರಾಡಿ ರಾಶಿ ಕಡಿಮೆಯಾಗಿ ದುರ್ನಾತವಿಲ್ಲದಂತಾಗಿ, ಸುಲಭವಾಗಿ ಒಣಗಿ ಕೈಗೆತ್ತಿಕೊಳ್ಳುವಂತಾಗುತ್ತದೆ. ಇದರಿಂದ ಹುಟ್ಟಿದ ಅನಿಲದಿಂದ ಬರುವ ಕಾವು ಜೋರಾದುದು. ಬೆಳಕು, ಕಾವು. ಶಕ್ತಿಗಳಿಗಾಗಿ ಬಳಸಬಹುದು. ರಾಡಿ ಪೂರ್ತಿ ಅರಗಲು 20–30 ದಿವಸಗಳು ಹಿಡಿಯುತ್ತವೆ.

**ಮಲಮೂತ್ರ ಸಾಗಣೆ ವಿಧಾನಗಳು :** ವಾಸದ ಮನೆಗಳಿಂದ ಮಲಮೂತ್ರ ಎಲ್ಲವನ್ನೂ ಬೇಗನೆ ಹೊರಸಾಗಹಾಕುವುದು ಮುಖ್ಯ ಗುರಿ. ಕಕ್ಕಸಿನಲ್ಲಿ ಪುಟ್ಟಿಗೆಗಳನ್ನಿಟ್ಟು ಹೊತ್ತು ಸಾಗಿಸುವ ಒಣ ವಿಧಾನ ಎಂದಿಗೂ ಚೆನ್ನು ಕಾಣದು. ದಿನಕ್ಕೊಂದು ಬಾರಿ ಎತ್ತುವುದಲ್ಲದೆ ಅದರ ವಿಲೇವಾರಿ ಕೂಡ ಸರಿಯಿರದು. ಒಬ್ಬೊಬ್ಬನಿಗೂ ಸುಮಾರು 60–70 ಲೀಟರುಗಳಷ್ಟು ನೀರು ಒದಗುವಂತಿರುವ ನಗರಗಳಲ್ಲಿ ನೀರಿಂದ ಸಾಗಿಸುವ ಒಳಚರಂಡಿ ಏರ್ಪಾಡೇ ಆರೋಗ್ಯಕರವಾದ ವಿಲೇವಾರಿ ವಿಧಾನ.

ಒಳಚರಂಡಿ ಏರ್ಪಾಡಿಲ್ಲದ ನಗರ, ಪಟ್ಟಣ, ಊರುಗಳಲ್ಲಿ ಕೊಳಾಯಿ ನೀರು ದೊರೆಯುತ್ತಿದ್ದರೆ, ನಂಜಿನ ತೊಟ್ಟಿ ವಿಧಾನವೇ ಒಳ್ಳೆಯದು. ಆರೋಗ್ಯ ಕೆಡದು, ಗಲೀಜೂ ಇರದು. ಮನೆ ಬಚ್ಚಲು, ಕಕ್ಕಸು ವ್ಯವಸ್ಥೆಗೆ ಒಬ್ಬನಿಗೆ ದಿವಸಕ್ಕೆ 40 ಲೀಟರುಗಳಷ್ಟಾದರೂ ನೀರು ಬೇಕು. ಇದರಿಂದ ಬರುವ ಕಚರಾ ಸಾರವನ್ನು ಹೊಳೆ, ನದಿಗಳಿಗೆ ಬಿಟ್ಟುಬಿಡದೆ, ಜಮೀನು ಇರುವುದಾದರೆ ಬಿಡುವು ಕೊಟ್ಟು ಸೋಸುವ ಇಲ್ಲವೇ ತೋಟಗಾರಿಕೆ ವಿಧಾನದಲ್ಲಿ ಬಳಸಬೇಕು.

ನೆಲದ ಮಣ್ಣಲ್ಲಿ ಸೋಸಿ ಬಂದ ಕಚರಾ ಸಾರವನ್ನು ಕುಡಿಯಲು ಬಳಸದ ಹೊಳೆಯೊಳಕ್ಕೆ ಬಿಡಬಹುದು. ಬೇಸಾಯಕ್ಕೆ ಬಳಸಿದರೆ ಜಮೀನು ಫಲವತ್ತಾಗುತ್ತದೆ. ಅಕ್ಕಪಕ್ಕದಲ್ಲಿ ಜಮೀನಿಲ್ಲವಾದರೆ, ಚುರುಕುಗೊಳಿಸಿದ ರಾಡಿ ವಿಧಾನದಲ್ಲಿ ವಿಲೇವಾರಿ ಆಗುವುದರ ಸಮ ಇನ್ನಿಲ್ಲ. ಇದರಿಂದ ಹೊರಬೀಳುವ ಕಚರಾಸಾರದಿಂದ ಅಪಾಯ ಇಲ್ಲದಿಲ್ಲ. ಮತ್ತೆ ಮಣ್ಣಲ್ಲಿ ಸೋಸಿಯೋ ರಾಸಾಯನಿಕವಾಗಿ ಸೊಂಕು ಕಳೆದೋ ಕಚರಾ ಸಾರವನ್ನು ಆಚೆ ಹರಿಯಬಿಡಬಹುದು.

ಸಾಕಷ್ಟು ನೀರು ದೊರೆಯದಿದ್ದರೆ, ಕೊಳಾಯಿ ಸರಬರಾಜು ಇಲ್ಲವಾದರೆ, ಕೈಯಲ್ಲಿ ಹೊತ್ತು ಮಲ ಸಾಗಿಸುವ ಕಕ್ಕಸು, ತಿಪ್ಪೆಗಳಿಗಿಂತಲೂ ಕೈಯಿಂದ ಕೊಚ್ಚುವ ನೀರಿನ ತಡೆಯ (ವಾಟರ್ ಸೀಲ್) ಕಕ್ಕಸೇ ಒಳ್ಳೆಯದು, ಅಗ್ಗ, ಆರೋಗ್ಯಕರ; ಇದರ ಕಚರಾ ನೀರನ್ನು ಆಳವಾದ ಇಮರುಗುಂಡಿಗೆ ಬಿಡಬಹುದು. ಇದರಿಂದ ಕಕ್ಕಸನ್ನು ಮನೆ ಒಳಗಿರಿಸಿಕೊಳ್ಳುವ ಬೇಕೆಂದಾಗ, ತೊಳೆದು ಚೊಕ್ಕಟಪಡಿಸುವ ದೊಡ್ಡ ಅನುಕೂಲತೆಯಿದೆ. ನೀರು ಸುರಿದು ಬಳಸುವ ಕಕ್ಕಸಿಗಂತೂ ಅಷ್ಟೊಂದು ನೀರೂ ಬೇಕಿರದು. ಪಟ್ಟಣಗಳಲ್ಲಿ ಇಮರುಗುಂಡಿಯನ್ನು ಗಾರೆಯಿಂದ ಕಟ್ಟಬೇಕು. ಇವೆಲ್ಲ ವಿಧಾನಗಳಿಂದ ಕುಡಿಯುವ ನೀರಿನ ಬಾವಿಗಳಿಗೆ ಯಾವ ಕೆಡುಕೂ ತಾಕದು.

(ಡಿ.ಎಸ್.ಎಸ್.)

**ಕಚಾರಿ :** ಅಸ್ಸಾಂ ರಾಜ್ಯದ ಕಾಮರೂಪ ಮತ್ತು ದರಂಗ ಜಿಲ್ಲೆಯಲ್ಲಿ ಬ್ರಹ್ಮಪುತ್ರಾನದಿಗೂ ಭೂತಾನಿಗೂ ನಡುವಣ ಪ್ರದೇಶದಲ್ಲಿ ಇರುವ, ಬೋಡೋ ಗುಂಪಿಗೆ ಸೇರಿದ ಜನ ; ಮಂಗೋಲ್ ಬುಡಕಟ್ಟಿನವರು. 13ನೆಯ ಶತಮಾನದ ವರೆಗೆ ಇವರ ದೊರೆಗಳು ಉತ್ತರ ಅಸ್ಸಾಮಿನಲ್ಲಿ ಆಡಳಿತ ನಡೆಸುತ್ತಿದ್ದರು. ಆಗ ಅಲ್ಲಿಗೆ ಬಂದ ಅಹೋಂ ಜನರ ಆಕ್ರಮಣದಿಂದಾಗಿ ಇವರು ನಾಗ ಬೆಟ್ಟಗಳ ಬುಡದ ಬಳಿಯಲ್ಲಿ ನೆಲೆಸಿದರು. ಬ್ರಹ್ಮಪುತ್ರಾನದಿಯ ದಕ್ಷಿಣದಲ್ಲಿರುವ ಇಂದಿನ ನವಗಾಂಗ್ ಮತ್ತು ಕಚಾರ್ ಜಿಲ್ಲೆಯ ಕೆಲವು ಪ್ರದೇಶಗಳಿಗೆ ಇವರು ಸರಿದರು. ಧನಸಿರಿ ನದಿ ದಂಡೆಯ ಮೇಲಿರುವ ದೀಮಾಪುರ ಇವರ ರಾಜಧಾನಿಯಾಗಿತ್ತು. 1536ರ ವೇಳೆಗೆ ಅಹೋಮರಿಂದ ಇವರು ಸಂಪೂರ್ಣವಾಗಿ ಸೋತು ಹಿಂದಕ್ಕೆ ಸರಿದರು. ಆದರೂ ಅಹೋಮರ ಜೊತೆಗೆ ಅವಿರತ ಕದನ ನಡೆದೇ ಇತ್ತು. ಇವರ ಕೊನೆಯ ದೊರೆ ಗೋವಿಂದಚಂದ್ರನನ್ನು ಮಣಿಪುರದ ಸೇನಾನಿ ಪರಾಭವಗೊಳಿಸಿದ (1818). ಅನಂತರ ಬರ್ಮೀಯರು ಈ ರಾಜ್ಯವನ್ನು ಆಕ್ರಮಿಸಿದರು (1821). ಆ ಸಮಯದಲ್ಲಿ ಭಾರತದಲ್ಲಿ ಪ್ರಭಾವ ಗಳಿಸುತ್ತಿದ್ದ ಬ್ರಿಟಿಷರು ಬರ್ಮೀಯರನ್ನು ಓಡಿಸಿ (1826)

ಗೋವಿಂದ ಚಂದ್ರನಿಗೆ ಪುನಃ ಸಿಂಹಾಸನ ದೊರಕಿಸಿ ಕೊಟ್ಟರು. 1830ರಲ್ಲಿ ಈತ ಕೊಲೆಗೆ ಈಡಾದ (1830). ಈತನಿಗೆ ಸಂತಾನವಿಲ್ಲದ್ದರಿಂದ ಬ್ರಿಟಿಷರೇ ಈ ರಾಜ್ಯವನ್ನು ವಹಿಸಿಕೊಂಡರು (1832).

ಕಚಾರಿ ಜನರು ಮುಖ್ಯವಾಗಿ ಬೇಸಾಯಗಾರರು. ರೇಷ್ಮೆಹುಳುವನ್ನು ಸಾಕಿ ದಾರ ತೆಗೆಯುವುದು ಸ್ತ್ರೀಯರ ಕೆಲಸ. ಇವರ ಸಮಾಜದಲ್ಲಿ ಸ್ತ್ರೀಯರದು ಉನ್ನತ ಸ್ಥಾನ. ಸಾಮಾನ್ಯವಾಗಿ ಈ ಜನಾಂಗದಲ್ಲಿ ಏಕಪತ್ನೀತ್ವವಿದೆ. ವಿವಾಹವಾಗುವ ಮುನ್ನ ಹುಡುಗ ಹುಡುಗಿಯರು ಪರಸ್ಪರ ಒಪ್ಪಬೇಕಾಗುತ್ತದೆ. ಕನ್ಯಾಶುಲ್ಕ ಪದ್ಧತಿಯುಂಟು. ಅವಿವಾಹಿತರಿಗೆ ಪ್ರತ್ಯೇಕ ಶಿಬಿರ ಹೊಂದಿರುವ ಈ ಜನ ಅನೇಕ ಅಂಶಗಳಲ್ಲಿ ನಾಗಾ ಜನರನ್ನು ಹೋಲುತ್ತಾರೆ. ವಿವಾಹ, ಆಸ್ತಿ ಮುಂತಾದವಕ್ಕೆ ಸಂಬಂಧಿಸಿದ ಜಗಳಗಳನ್ನು ಗ್ರಾಮದ ಗಣ್ಯವ್ಯಕ್ತಿ ಪರಿಹರಿಸುತ್ತಾನೆ, ಆತ್ಮದಲ್ಲಿ ಇವರಿಗೆ ನಂಬಿಕೆಯುಂಟು. ಆದ್ದರಿಂದಲೇ ಇವರು ಭೂತಪ್ರೇತಗಳನ್ನು ಆರಾಧಿಸುವರು. ಪೃಥ್ವೀ, ಆಕಾಶ ಮತ್ತು ವಾಯುಗಳಲ್ಲಿ ದೈವೀಶಕ್ತಿಯಿದೆ ಎಂದು ಇವರ ನಂಬುಗೆ. ಪೂರ್ವಜರ ಮತ್ತು ಪ್ರಕೃತಿಯ ಪೂಜೆ ಮಾಡುತ್ತಾರಾದರೂ ಅದಕ್ಕೆ ವಿಶೇಷಮಹತ್ತ್ವವಿಲ್ಲ. ಮೃತನ ಆತ್ಮ ನಶಿಸದೆ ಬದಲಾದ ರೂಪದಲ್ಲಿರುವುದೆಂದು ಇವರ ನಂಬಿಕೆ. ಹಿಂದೂ ಮತಪದ್ಧತಿಗಳನ್ನು ಇವರು ಈಚೆಗೆ ಹೆಚ್ಚಾಗಿ ಅನುಸರಿಸುತ್ತಿದ್ದಾರೆ. *

ನೋಡಿ—ಅಹೋಂ

**ಕಚಿನ್ :** ಬರ್ಮ ಒಕ್ಕೂಟದ ಅತ್ಯಂತ ಉತ್ತರದಲ್ಲಿರುವ ರಾಜ್ಯ. 1947ರ ಸಂವಿಧಾನಕ್ಕನುಗುಣವಾಗಿ ಏರ್ಪಟ್ಟಿತು. ವಾಯವ್ಯಕ್ಕೆ ಭಾರತ, ಉತ್ತರಕ್ಕೆ ಟಿಬೆಟ್, ಪೂರ್ವಕ್ಕೆ ಚೀನ ಇದರ ಮೇರೆಗಳು. ಬ್ರಿಟಿಷ್ ಬರ್ಮದ ಜಿಲ್ಲೆಗಳಾಗಿದ್ದ ಭಾಮೊ ಮತ್ತು ಮ್ಯಿಚೀನಾಗಳೂ ಉತ್ತರದ ಪುಟಾ–ಒ ಜಿಲ್ಲೆಯೂ ಈ ರಾಜ್ಯಕ್ಕೆ ಸೇರಿವೆ. ಇರಾವಾಡಿ ನದಿಯ ಮೇಲ್ದಂಡೆಯ ಮೇಲಿರುವ ಮ್ಯಿಚೀನಾ ಇದರ ರಾಜಧಾನಿ. ಇದೊಂದು ರೈಲ್ವೆ ನಿಲ್ದಾಣ. ಭಾಮೊ ಮತ್ತು ಮೋಗೌಂಗ್ ಇತರ ಪಟ್ಟಣಗಳು. ಇಲ್ಲಿಯ ಪರ್ವತಸೀಮೆಯಲ್ಲಿ ವಾಸವಾಗಿರುವ ಜನ ಕಚಿನರು. ರೈಲುಮಾರ್ಗದ ಪ್ರದೇಶದಲ್ಲೂ ದಕ್ಷಿಣದ ಕಣಿವೆಗಳಲ್ಲೂ ಇರುವವರು ಷಾನ್ ಮತ್ತು ಬರ್ಮೀಯರು. ಈ ಜಿಲ್ಲೆಯ ಉತ್ತರ ಗಡಿಸೀಮೆಯ ವಿಚಾರವಾಗಿ ಬರ್ಮಕ್ಕೂ ಚೀನಕ್ಕೂ ನಡುವೆ 1960ರ ದಶಕದ ಆದಿಕಾಲದ ವರೆಗೂ ವ್ಯಾಜ್ಯವಿತ್ತು. ಈ ಜಿಲ್ಲೆಯ ಪ್ರತಿನಿಧಿಯಾಗಿ ಕೇಂದ್ರ ಸರ್ಕಾರದಲ್ಲಿ ಒಬ್ಬ ಮಂತ್ರಿಯಿದ್ದಾನೆ. *

**ಕಚೇರಿಯ ಯಂತ್ರೋಪಕರಣಗಳು :** ಆಧುನಿಕ ಕಚೇರಿಗಳಲ್ಲಿ ತೀವ್ರವಾಗಿ ಅಧಿಕವಾಗುತ್ತಿರುವ ವಿವಿಧ ಕಾರ್ಯಗಳನ್ನು ಶೀಘ್ರವಾಗಿಯೂ ಸಮರ್ಪಕವಾಗಿಯೂ ನಿರ್ವಹಿಸಲು ಬಳಸಲಾಗುತ್ತಿರುವ ಸಾಧನಗಳು (ಆಫೀಸ್ ಮಷೀನ್ಸ್ ಅಂಡ್ ಅಪ್ಲೈಯೆನ್ಸಸ್). ದೊಡ್ಡ ಕಚೇರಿಗಳಲ್ಲಿ ನಡೆಯುವ ಅನೇಕ ದಿನಚರಿಯ ಕೆಲಸಗಳು ಪುನರಾವರ್ತಿಸುವಂಥವು. ಇವನ್ನೆಲ್ಲ ಮಾನವನೇ ಮಾಡುವ ಬದಲು ಇವಕ್ಕೆ ತಕ್ಕುವಾದ ಯಂತ್ರೋಪಕರಣಗಳನ್ನು ಬಳಸುವುದರಿಂದ ದೊರಕುವ ಸೌಲಭ್ಯಗಳು ಮುಖ್ಯವಾಗಿ ಎರಡು.

ಇತರ ಎಲ್ಲ ಯಂತ್ರೋಪಕರಣಗಳಂತೆ ಇವುಗಳ ಉದ್ದೇಶವಾದರೂ ಶ್ರಮ ಮತ್ತು ಸಮಯದ ಉಳಿತಾಯವೇ ಆಗಿದೆ. ಶೀಘ್ರತೆ, ಆಯಾಸನಿವಾರಣೆ, ಸ್ಪಷ್ಟತೆ, ನಿಷ್ಕೃಷ್ಟತೆ—ಇವು ಇದರ ನಾಲ್ಕು ಮುಖ್ಯ ಸೌಲಭ್ಯಗಳು. ಇವುಗಳನ್ನು ಕಚೇರಿಯಲ್ಲಿ ಅಳವಡಿಸುವಾಗ ಕೆಲವು ಮುಖ್ಯ ವಿಚಾರಗಳನ್ನು ಪರಿಗಣಿಸುವುದು ಅವಶ್ಯ. ಒಂದು ಯಂತ್ರವನ್ನು ಸ್ಥಾಪಿಸುವುದರಿಂದ ಅದರ ಜೀವಿತಕಾಲದಲ್ಲಿ ಉಳಿತಾಯವಾಗುವ ವೇತನದ ಮೊತ್ತವನ್ನೂ ಯಂತ್ರಕ್ಕಾಗಿಯೇ ತಗಲುವ ವೆಚ್ಚವನ್ನೂ ತೂಗಿ ನೋಡಬೇಕಾಗುತ್ತದೆ. ಇದು ಮುಖ್ಯವಾದ ಅಂಶ. ಯಂತ್ರ ಸ್ಥಾಪನೆಯಿಂದ ಉಳಿತಾಯವಾದ ಶ್ರಮವನ್ನೂ ಸಮಯವನ್ನೂ ಉದ್ಯಮದ ಇತರ ವಿಚಾರಗಳಿಗೆ ವಿನಿಯೋಗಿಸುವುದು ಸಾಧ್ಯವಾಗಿ, ಅದರಿಂದ ಹೆಚ್ಚು ಲಾಭ ಅಥವಾ ಪ್ರಯೋಜನ ದೊರಕುವುದೇ ಎಂಬುದನ್ನು ಪರಿಶೀಲಿಸಬೇಕು. ಯಂತ್ರಗಳನ್ನು ಸ್ಥಾಪಿಸಿದಾಗ ಕಾರ್ಯವಿಧಾನದಲ್ಲೇ ಅನೇಕ ಬದಲಾವಣೆಗಳನ್ನು ಮಾಡಬೇಕಾಗಿ ಬರಬಹುದು. ನೌಕರರಿಗೆ ಇದಕ್ಕೆ ತಕ್ಕಂತೆ ತರಬೇತಿ ನೀಡುವುದೂ ಅಗತ್ಯವಾಗಬಹುದು. ಯಂತ್ರಾಗಮನದಿಂದ ತಮ್ಮ ದುಡಿಮೆಗೆ ಬೇಡಿಕೆ ತಪ್ಪಬಹುದೆಂಬ ಭಯ ನೌಕರರಲ್ಲಿ ಸಂಭವಿಸಬಹುದು. ಇದರಿಂದಲೂ ಇಂಥ ಹಲವು ಕಾರಣಗಳಿಂದಲೂ ಉದ್ಭವಿಸುವ ನೈತಿಕ ಸಮಸ್ಯೆಗಳನ್ನು ಪರಿಶೀಲಿಸಬೇಕು. ಹಲವರ ಕೆಲಸವನ್ನು ಶೀಘ್ರವಾಗಿ ಮಾಡಿ ಮುಗಿಸುವ ಯಂತ್ರ ಒಂದು ದೃಷ್ಟಿಯಲ್ಲಿ ನಿರ್ದಾಕ್ಷಿಣ್ಯಪರ. ಇದನ್ನು ನಡಸುವಾಗ ನಿಷ್ಕೃಷ್ಟತೆಗೆ ಹೆಚ್ಚಿನ ಗಮನಕೊಡುವುದು ಅವಶ್ಯ. ಅತ್ಯಂತ ಸಂಕೀರ್ಣವಾದ ಯಂತ್ರದ ಸಮ್ಮುಖದಲ್ಲಿ ಒಮ್ಮೆ ಒಂದು ತಪ್ಪು ಮಾಡಿದರೂ ಅದು ಹಲವು ಮುಖವಾಗಿ ಹಲವು ಮಡಿಯಾಗಿ ಮುಂದುವರಿಯಬಹುದು; ಆವರ್ತಿಸಬಹುದು. ಇದರಿಂದ ಸಂಸ್ಥೆಯ ಗ್ರಾಹಕರಿಗೆ ಅಸಮಾಧಾನವುಂಟಾಗಿ ವ್ಯವಹಾರಕ್ಕೆ ಧಕ್ಕೆ ಒದಗಬಹುದು. ಆದ್ದರಿಂದ ಯಂತ್ರೋಪಕರಣಗಳನ್ನು ಬಳಸುವುದರಿಂದ ಎಷ್ಟು ಸೌಲಭ್ಯಗಳುಂಟೋ ಅಷ್ಟೇ ಹೊಣೆಗಾರಿಕೆಯೂ ಇರುವುದೆಂಬುದು ಮುಖ್ಯವಾಗಿ ಗಮನಿಸಬೇಕಾದ ಅಂಶ. ನಾವೀನ್ಯದಿಂದಲೇ ಆಕರ್ಷಿತರಾಗಿ ಒಂದು ಯಂತ್ರ ಸ್ಥಾಪಿಸುವುದು ಸರಿಯಲ್ಲ. ಅದೂ ಒಂದು ಉಪಕರಣ. ಕೆಲಸಕ್ಕೆ ತಕ್ಕಂತೆ ಉಪಕರಣವಿರಬೇಕೇ ವಿನಾ, ಉಪಕರಣಕ್ಕೆ ತಕ್ಕಂತೆ ಕೆಲಸ ಹೊಂದಿಸುವುದು ಅವಾಸ್ತವಿಕ. ಒಂದು ಯಂತ್ರ ಲಭ್ಯವಿದೆಯೆಂದೇ ಕಾರ್ಯದ ಯಾಂತ್ರೀಕರಣ ಮಾಡುವುದು ಸೂಕ್ತವಲ್ಲ.

ಕಚೇರಿಯ ಕಾರ್ಯಗಳನ್ನು ನಿರ್ವಹಿಸಲು ಒದಗಿಬರುವ ಯಂತ್ರಗಳು ವೈವಿಧ್ಯಮಯ. ಗೊತ್ತಾದ ಒಂದೊಂದು ಕೆಲಸಗಳಿಗೂ ಅನುಗುಣವಾದ ಯಂತ್ರಗಳನ್ನು ಆರಿಸಿಕೊಳ್ಳುವುದ ಬಹಳ ಕಷ್ಟ. ಆದ್ದರಿಂದ ಹಂತಹಂತವಾಗಿ ಯಂತ್ರಗಳನ್ನು ಬಳಸುವುದು ಸರಿಯಾದ ವಿಧಾನ. ಈ ದೃಷ್ಟಿಯಿಂದ ಯಂತ್ರಗಳನ್ನು ಸರಳ ಮತ್ತು ಸಂಕೀರ್ಣವೆಂದು ಎರಡು ಬಗೆಯಾಗಿ ವಿಂಗಡಿಸಬಹುದು. ಒಮ್ಮೆಗೆ ಒಂದೇ ಕ್ರಿಯೆಯನ್ನು ನಡಸುವುದು ಸರಳಯಂತ್ರ. ಬೆರಳಚ್ಚು ಯಂತ್ರದ್ದು (ಟೈಪ್‌ರೈಟರ್) ಅಚ್ಚಿಸುವ ಕ್ರಿಯೆಯೊಂದೇ. ಕೂಡುವ ಯಂತ್ರದ್ದು ಕೂಡುವ ಕೆಲಸ ಮಾತ್ರ. ಛಾಯಾನಕಲು ಯಂತ್ರದ್ದು ಪ್ರತಿಮಾಡುವುದಷ್ಟೇ ಕೆಲಸ. ಇವನ್ನು ಗುಮಾಸ್ತರು ಬಳಸುತ್ತಾರೆ. ಗೊತ್ತಾದ ಅವಧಿಯಲ್ಲಿ ಹೆಚ್ಚು ಕೆಲಸವನ್ನು ಅಚ್ಚುಕಟ್ಟಾಗಿ ಮಾಡಲು ಇವು ಸಹಾಯಕ. ಇವನ್ನು ಬಳಸುವವರಿಗೆ ತಾವು ಮಾಡುವ



ಕನ್ನಡ ಬೆರಳಚ್ಚು ಯಂತ್ರ- ಅನಂತ ಕೀಬೋರ್ಡಿನೊಡನೆ



ರಂಧ್ರ ಕಟ್ಟು [illegible] ಯಂತ್ರ

ಕೆಲಸ ಗೊತ್ತಿರಬೇಕು. ಬೆರಳಚ್ಚುಯಂತ್ರ ಬಳಸುವವರಿಗೆ ಕಾಗುಣಿತವಾಗಲಿ ವಿರಾಮ ಚಿಹ್ನೆಗಳಾಗಲಿ ಗೊತ್ತಿಲ್ಲದಿದ್ದರೆ ಯಂತ್ರವನ್ನು ಪ್ರೈದು ಫಲವಿಲ್ಲ. ಅವರು ಮಾಡುವ ಲೋಪದೋಷಗಳನ್ನು ಯಂತ್ರವೂ ಯಥಾವತ್ತಾಗಿ ಪ್ರತಿಬಿಂಬಿಸುತ್ತದೆ. ಲೆಕ್ಕದ ನಾಲ್ಕು ನಿಯಮಗಳನ್ನು ಬಲ್ಲದವನು ಗಣಕವನ್ನು ಬಳಸಿದರೆ ಅದು ಸರಿಯಾದ ಫಲ ನೀಡಲಾರದು.

ಏಕಕಾಲದಲ್ಲಿ ಒಂದಕ್ಕಿಂತ ಹೆಚ್ಚು ಕ್ರಿಯೆಗಳನ್ನು ನಿರ್ವಹಿಸುವವು ಸಂಕೀರ್ಣ ಯಂತ್ರಗಳು. ಇವು ಭಾಗಶಃ ಸ್ವಯಂಚಾಲಿತವಾಗಿರಬಹುದು. ಎಂದರೆ ಪ್ರಜ್ಞಾಪೂರ್ವಕ ಮಾರ್ಗದರ್ಶನವಿಲ್ಲದಿದ್ದರೂ ಅದು ತನಗೆ ತಾನೇ ಕೆಲವು ಕ್ರಿಯೆಗಳನ್ನು ನಿರ್ವಹಿಸುತ್ತದೆ. ಲೇಖಾ (ಅಕೌಂಟಿಂಗ್) ಯಂತ್ರಗಳು, ವಿಶ್ಲೇಷಕ (ಅನಾಲಿಸಿಸ್) ಯಂತ್ರಗಳು, ರಂಧ್ರರಚ್ಚಿನ (ಪಂಚ್‍ಡ್ ಕಾರ್ಡ್) ಯಂತ್ರಗಳು, ಎಲೆಕ್ಟ್ರಾನಿಕ್ ಗಣಕಯಂತ್ರಗಳು ಈ ಜಾತಿಯವು.

**ಬೆರಳಚ್ಚು ಯಂತ್ರ :** ಸುಮಾರು ನೂರು ವರ್ಷಗಳಿಂದ ಸೇವಾನಿರತವಾಗಿರುವ ಬೆರಳಚ್ಚುಯಂತ್ರ ಇಂದು ಸಾರ್ವತ್ರಿಕವಾಗುತ್ತಿದೆ. ಇದರಿಂದ ಅಕ್ಷರಗಳನ್ನು ವೇಗವಾಗಿ, ಅಂದವಾಗಿ ಮತ್ತು ತಪ್ಪಿಲ್ಲದೆ ಮುದ್ರಿಸಬಹುದು. ಕಾರ್ಬನ್ ಕಾಗದದ ಸಹಾಯದಿಂದ ಕೆಲವು ಪ್ರತಿಗಳನ್ನು ಪಡೆಯಬಹುದು. ಇದು ಜನ್ಮತಳೆದಾಗಿನಿಂದ ಇದರಲ್ಲಿ ಅನೇಕ ಸುಧಾರಣೆಗಳಾಗಿವೆ. ವಿದ್ಯುತ್ ಬೆರಳಚ್ಚುಯಂತ್ರಗಳೂ ಬಂದಿವೆ. **ನೋಡಿ—ಬೆರಳಚ್ಚುಯಂತ್ರ.**

**ನಕಲುಯಂತ್ರ :** ಕಾರ್ಬನ್ ಹಾಳೆಗಳ ನಡುಜೋಡಣೆಯಿಂದ ಬೆರಳಚ್ಚು ಯಂತ್ರವೇ ನಕಲುಯಂತ್ರವಾಗಬಹುದು. ಆದರೆ ಈ ವಿಧಾನದಿಂದ ಪಡೆಯ ಬಹುದಾದ ಪ್ರತಿಗಳ ಸಂಖ್ಯೆ ಅಮಿತವಲ್ಲ. ಮಾನವಚಾಲಿತ ಸಾಧಾರಣ ಬೆರಳಚ್ಚು ಯಂತ್ರದಿಂದ ಸುಮಾರು 8 ಪ್ರತಿಗಳನ್ನು ಪಡೆಯಬಹುದು. ವಿದ್ಯುತ್‍ಚಾಲಿತ ವಾದರೆ 18 ಪ್ರತಿಗಳ ವರೆಗೂ ಪಡೆಯುವುದು ಸಾಧ್ಯ. ಇದಕ್ಕಿಂತ ಹೆಚ್ಚಿನ ಪ್ರತಿಗಳು ಬೇಕಾದರೆ ಪ್ರತ್ಯೇಕವಾದ ನಕಲುಯಂತ್ರವನ್ನೇ ಬಳಸಬೇಕು. ಇದರಲ್ಲಿ ನಾನಾ ವಿಧಗಳುಂಟು. ಆರಂಭಿಕ ಪ್ರತಿಯೊಂದನ್ನು (ಮಾಸ್ಟರ್ ಕಾಪಿ) ಸಿದ್ಧಪಡಿಸಿಕೊಂಡು ಇದರಿಂದ ನಕಲುಗಳನ್ನು ಪಡೆಯುವುದು ಎಲ್ಲ ಯಂತ್ರಗಳ ಸಾಮಾನ್ಯ ವಿಧಾನ.



ಕೊರೆಯಚ್ಚು ನಕಲುಯಂತ್ರ

ಕೊರೆಯಚ್ಚಿನಿಂದ (ಸ್ಟೆನ್ಸಿಲ್) ನಕಲು ತೆಗೆಯುವ ವಿಧಾನ ಸಾಮಾನ್ಯವಾಗಿ ಬಳಕೆಯಲ್ಲಿದೆ. ರಿಬನ್ ಸಹಾಯವಿಲ್ಲದೆ ಬೆರಳಚ್ಚುಯಂತ್ರದಿಂದ ಕೊರೆಯಚ್ಚು ಹಾಳೆಯ ಮೇಲೆ ಅಕ್ಷರಗಳ ಆಕಾರದಲ್ಲಿ ರಂಧ್ರಗಳು ಸಂಭವಿಸುತ್ತವೆ. ಈ ಹಾಳೆಯ ಮೇಲೆ ಕೊರೆಲೇಖನಿಯಿಂದ ಬರೆಯುವುದೂ ಸಾಧ್ಯ. ಟೊಳ್ಳಾದ ತಿರುಗುವ ಉರುಳೆಯ ಹೊರಮೈಗೆ ದ್ರವರೂಪೀಮಸಿ ಹಚ್ಚಿ, ಅದಕ್ಕೆ ಈ ಕೊರೆಯಚ್ಚು ಹಾಳೆಯನ್ನು ಸಿಕ್ಕಿಸಬೇಕು. ಉರುಳೆಯನ್ನು ತಿರುಗಿಸಿದಾಗ ಕೊರೆಯಚ್ಚು ಹಾಳೆ ಯಲ್ಲಿಯ ರಂಧ್ರದ ಮೂಲಕ ಶಾಯಿ ಹೊರಕ್ಕೆ ಹಾಯುತ್ತದೆ. ಅದೇ ಕಾಲಕ್ಕೆ ಖಾಲಿ ಹಾಳೆಗಳನ್ನು ಕೊರೆಯಚ್ಚಿನ ಹಾಳೆಗೆ ಒತ್ತಿದಂತೆ ಉರುಳೆಯ ಅಡಿಯಲ್ಲಿ ಹಾಯ್ದು ಸಾಗುವಂತೆ ಮಾಡುವುದರಿಂದ ರಂಧ್ರಗಳ ಆಕಾರದಲ್ಲಿ ಕಾಗದದ ಮೇಲೆ ಅಕ್ಷರ ಅಚ್ಚಾಗುತ್ತದೆ. ಈ ವಿಧಾನದಿಂದ ಸುಮಾರು 5,000 ಪ್ರತಿಗಳನ್ನು ತೆಗೆಯಬಹುದು. ಕೊರೆಯಚ್ಚು ಹಾಳೆಗಳನ್ನು ಇಟ್ಟಿದ್ದು ಅವಶ್ಯವಿದ್ದಾಗ ನಕಲು ಗಳನ್ನು ಪಡೆಯಬಹುದು.

ಇದಲ್ಲದೆ ನೂರಚ್ಚು ನಕಲುಯಂತ್ರವನ್ನೂ (ಹೆಕ್ಟೋಗ್ರಾಫ್) ಬಳಸುವುದುಂಟು. ಇದರಲ್ಲಿ ಎರಡು ವಿಧ : ವಿಶಿಷ್ಟವಾದ ಕಾಗದದ ಮೇಲೆ ವಿಶೇಷವಾದ ಮಸಿಯಿಂದ ಆರಂಭಿಕ ಪ್ರತಿಯನ್ನು ತಯಾರಿಸಲಾಗುವುದು. ಇದನ್ನು ಇನ್ನೊಂದು ವಿಶಿಷ್ಟ ಕಾಗದಕ್ಕೆ ಒತ್ತಿದಾಗ ಅದರಲ್ಲಿ ಇದರ ತಿರುಗಮುರುಗ ಪ್ರತಿ ದೊರಕುತ್ತದೆ. ಇದರ ಮೇಲೆ ಕಾಗದದ ಹಾಳೆಗಳನ್ನು ಒತ್ತಿ ತದ್ವತ್ ನಕಲುಗಳನ್ನು ಪಡೆಯಬಹುದು. ಇದಕ್ಕೆ ವಿವಿಧ ವರ್ಣಗಳ ಮಸಿ ಬಳಸುವುದೂ ಸಾಧ್ಯ. ಇದರಿಂದ 200ರ ವರೆಗೂ ಪ್ರತಿಗಳನ್ನು (ಸಾಮಾನ್ಯವಾಗಿ) ಪಡೆಯುವುದು ಸಾಧ್ಯ.

ರಾಸಾಯನಿಕ ಪ್ರಯೋಗದಿಂದ ಲೋಹದ ಅಥವಾ ವಿಶಿಷ್ಟ ಕಾಗದದ ಹಾಳೆಯ ಮೇಲೆ ಆರಂಭಿಕಪ್ರತಿ ರಚಿಸಿ ಅದನ್ನು ರಬ್ಬರಿನ ಸಮತಲ ಪ್ರದೇಶದ ಅಥವಾ ಉರುಳೆಯ ಮೇಲೆ ತಕ್ಕಂತೆ ಒತ್ತಿ, ಪ್ರತಿಗಳನ್ನು ಎತ್ತಿ ತೆಗೆಯುವ ಆಫ್‍ಸೆಟ್ ನಕಲು ವಿಧಾನ ದೊಡ್ಡ ಸಂಸ್ಥೆಗಳಲ್ಲಿ ಬಳಕೆಯಲ್ಲಿದೆ. ಇದಲ್ಲದೆ, ಮುದ್ರಣಾಲಯದ ಮೊಳೆ ಜೋಡಿಸುವ ಯಂತ್ರದ ಮಾದರಿಯ ಯಂತ್ರದಿಂದ ಉಬ್ಬುಚಿತ್ರಣ (ರೇಸ್ಡ್ ಇಮೇಜ್) ವಿಧಾನದಲ್ಲಿ ಆರಂಭಿಕಪ್ರತಿ ತಯಾರಿಸಿ ನಕಲು ಪಡೆಯುವುದೂ ಉಂಟು.

ಈಚೆಗೆ ನಾನಾ ಬಗೆಯ ಛಾಯಾನಕಲು ಯಂತ್ರಗಳನ್ನು ಮುಂದುವರಿದ ದೇಶ ಗಳಲ್ಲಿ ವಿಶೇಷವಾಗಿ ಬಳಸಲಾಗುತ್ತಿದೆ.

**ಉಕ್ತಲೇಖನ ಪ್ರತಿವಾಣಿ ಯಂತ್ರಗಳು :** ಬೆರಳಚ್ಚು ಮಾಡಬೇಕಾದ ವಿಷಯವನ್ನು ಅಥವಾ ಪತ್ರವನ್ನು ಉಕ್ತಲೇಖನಯಂತ್ರದ ಮೂಲಕ ಧ್ವನಿಮುದ್ರಿ ಸಿಟ್ಟು ಯಥಾಕ್ರಮದಲ್ಲಿ ಇದನ್ನು ಸಂಬಂಧಪಟ್ಟ ಗುಮಾಸ್ತರಿಗೆ ಕಳಿಸಿ ಪ್ರತಿ ರಚಿಸುವ ವಿಧಾನವನ್ನು ಅನೇಕ ಕಚೇರಿಗಳಲ್ಲಿ ಅನುಸರಿಸಲಾಗುತ್ತಿದೆ. ಮುದ್ರಿತ ಧ್ವನಿಯ ತಟ್ಟೆ, ಟೇಪು ಅಥವಾ ಉರುಳೆಯನ್ನು ಪ್ರತಿವಾಣಿಯಂತ್ರಕ್ಕೆ ಜೋಡಿಸಿ ಅದರಿಂದ ಧ್ವನಿಯನ್ನು ಕೇಳಿ ಅಂತೆಯೇ ಬೆರಳಚ್ಚು ಮಾಡುವುದು ಸಾಧ್ಯ.



ಉಕ್ತಲೇಖನ ಪ್ರತಿವಾಣಿ ಯಂತ್ರ

ಸಂಸ್ಥೆಯ ಅಧಿಕಾರಿ ತನಗೆ ಅನುಕೂಲವಾದಾಗ ಪತ್ರಗಳನ್ನು ಅಥವಾ ಸಂದೇಶ ಗಳನ್ನು ಈ ರೀತಿ ಮುದ್ರಿಸಿಡುವುದರಿಂದ ಆತನ ಮತ್ತು ಬೆರಳಚ್ಚುಗಾರನ ಸಮಯದಲ್ಲಿ ಎಷ್ಟೋ ಉಳಿತಾಯ ಮಾಡಬಹುದು. ಬೆರಳಚ್ಚುಗಾರ ಮುದ್ರಿತ ಸಾಮಗ್ರಿಯನ್ನು ಬಳಸಿಕೊಂಡಾದ ಮೇಲೆ ಮುದ್ರಣವನ್ನು ಅಳಿಸಿಹಾಕಿ ಮತ್ತೆ ಆ ಟೇಪು, ತಟ್ಟೆ ಅಥವಾ ಉರುಳೆಯನ್ನು ಉಪಯೋಗಿಸಬಹುದು. ಒಂದು ಸಂಸ್ಥೆ ಯಲ್ಲಿ ಉಕ್ತಲೇಖನ ಯಂತ್ರವನ್ನು ಬಳಸಬೇಕಾದ ಅಧಿಕಾರಿಗಳು ಅನೇಕರಿದ್ದರೆ ಅವರಲ್ಲೊಬ್ಬೊಬ್ಬರಿಗೂ ಪ್ರತ್ಯೇಕವಾದ ಯಂತ್ರ ಬೇಕಾದುದಿಲ್ಲ. ಉಕ್ತಲೇಖನ ಯಂತ್ರದ ಕೇಂದ್ರಕ್ಕೆ ನಾನಾ ಅಧಿಕಾರಿಗಳ ಕೊಠಡಿಗಳಿಂದ ವರ್ಧಕ ವ್ಯವಸ್ಥೆ ಏರ್ಪಡಿಸಬಹುದು. ಇದು ಈಚಿನ ಬೆಳೆವಣಿಗೆ.

**ವಿಳಾಸಮುದ್ರಣ ಯಂತ್ರಗಳು :** ವಿಮಾಸಂಸ್ಥೆ, ಪತ್ರಿಕಾಸಂಸ್ಥೆ ಮುಂತಾದವು ತಮ್ಮ ಗ್ರಾಹಕರಿಗೆ ಪದೇ ಪದೇ ಪತ್ರಗಳನ್ನು ಕಳುಹಿಸುತ್ತಿರಬೇಕಾಗುತ್ತದೆ. ಇವಕ್ಕೆ ವಿಳಾಸಮುದ್ರಣಯಂತ್ರ ಬಹಳ ಉಪಯುಕ್ತ. ಪದಾರ್ಥದಿಂದ ಅಚ್ಚಿಸಿಕೊಂಡ ಆರಂಭಿಕ ಕಾರ್ಡುಗಳನ್ನೊ ಕೊರೆಯಚ್ಚು ಕಾರ್ಡುಗಳನ್ನೊ ಉಬ್ಬಕ್ಷರದ ಲೋಹದ ತಗಡುಗಳನ್ನೊ ತಯಾರಿಸಿಕೊಂಡು ಇವನ್ನು ವಿಶಿಷ್ಟ ಯಂತ್ರವೊಂದಕ್ಕೆ ಜೋಡಿಸಿ ಕಾಗದದ ಮೇಲೋ ಲಕೋಟೆಯ ಮೇಲೋ ಇವನ್ನು ಅಚ್ಚಿಸಿಕೊಳ್ಳಬಹುದು. ಅಗತ್ಯಕ್ಕೆ ತಕ್ಕಂತೆ ಈ ವಿಧಾನದಲ್ಲಿ ನಾನಾ ವೈಶಿಷ್ಟ್ಯಗಳನ್ನು ಸಾಧಿಸಿಕೊಳ್ಳಬಹುದಾಗಿದೆ.

ಮೋಸದಿಂದ ಬದಲಾವಣೆ ಮಾಡುವುದು ಸಾಧ್ಯವಾಗದಂತೆ ಚೆಕ್ಕುಲೇಖನ ಯಂತ್ರಗಳೂ ಲಕೋಟೆಗಳನ್ನು ಅಂಟಿಸಿ ಅಂಚೆಹಾಸಲು ಹಚ್ಚುವ ಯಂತ್ರಗಳೂ ಆಧುನಿಕ ಕಚೇರಿಗಳಲ್ಲಿ ಬಳಕೆಯಲ್ಲಿರುವ ಇನ್ನೆರಡು ಮುಖ್ಯ ಉಪಕರಣಗಳು.

**ಗಣನ ಮತ್ತು ಲೇಖಾಯಂತ್ರಗಳು :** ಲೆಕ್ಕಮಾಡುವ ಕಷ್ಟವನ್ನು ಕಳೆದುಕೊಳ್ಳುವುದೂ ಮಾನವನ ಅತ್ಯಂತ ಪ್ರಾಚೀನ ಕನಸುಗಳಲ್ಲೊಂದು. ಮಣಿ



ಮಾನವ ಚಾಲಿತ ಗಣನಯಂತ್ರ

ಚೌಕಟ್ಟು ನಮ್ಮ ಅತ್ಯಂತ ಪ್ರಾಚೀನ ಗಣನೋಪಕರಣ. ಲೆಕ್ಕಮಾಡುವ ಯಂತ್ರಗಳನ್ನು ರಚಿಸುವ ಆಸಕ್ತಿ ವಿಶೇಷವಾಗಿ ಹಬ್ಬಿದ್ದು 17ನೆಯ ಶತಮಾನದಲ್ಲಿ. ವಿಜ್ಞಾನಕ್ಷೇತ್ರದಲ್ಲಿ ಕಂಡುಹಿಡಿಯಲಾದ ನಾನಾ ಸಿದ್ಧಾಂತಗಳನ್ನು ಪ್ರಯೋಗಿಸಲು ಗುಣಿಸುವ ವಿನೂತನ ವಿಧಾನಗಳನ್ನಳವಡಿಸಿಕೊಳ್ಳುವುದು ಅವಶ್ಯವಾಯಿತು. ಜಾನ್ ನೇಪಿಯರ್ ಲಾಗರಿದಮನ್ನು ಕಂಡುಹಿಡಿದ. ಇದನ್ನು ಯಂತ್ರೀಕರಿಸಲು ಯತ್ನ ನಡೆಸಿದಾಗ ಅನೇಕ ಗಣನಯಂತ್ರಗಳು ಉದ್ಭವವಾದುವು. 1642ರಲ್ಲಿ ಬ್ಲೇಸ್ ಪ್ಯಾಸ್ಕಲ್ ಕೂಡುವ ಯಂತ್ರವನ್ನು ಕಂಡುಹಿಡಿದ. ಕೂಡುವ, ಕಳೆಯುವ, ಗುಣಿಸುವ. ಭಾಗಿಸುವ ವ್ಯಾಪಾರಗಳನ್ನು ಮಾಡಬಲ್ಲ ತಃಖ್ಯಾತಗಣನಯಂತ್ರಗಳು ಸೃಷ್ಟಿಯಾದದ್ದು 19ನೆಯ ಶತಮಾನದ ಅಂತ್ಯದಲ್ಲಿ. ಅತ್ಯಂತ ಸಂಕೀರ್ಣವಾದ ಗಣಕ ಕಾರ್ಯವನ್ನೆಲ್ಲ ಮಾಡಬಲ್ಲ ಎಲೆಕ್ಟ್ರಾನಿಕ್–ಯಾಂತ್ರಿಕ ಗಣಕಗಳು ಇಪ್ಪತ್ತನೆಯ ಶತಮಾನದ ನಡುಗಾಲದ ಅದ್ಭುತ ಸಾಧನಗಳು (ನೋಡಿ—ಗಣಕಯಂತ್ರ).

ಆಧುನಿಕ ಕಚೇರಿಗಳಲ್ಲಿ ಸಾಮಾನ್ಯವಾಗಿ ಬಳಕೆಯಲ್ಲಿರುವವೆಂದರೆ ನಗದು ದಾಖಲೆ ಯಂತ್ರ (ಕ್ಯಾಷ್ ರಿಜಿಸ್ಟರ್), ಲೇಖಾಯಂತ್ರ (ಅಕೌಂಟಿಂಗ್ ಮಷೀನ್), ವರ್ಗಕಾರಕ ಮತ್ತು ಯಾದಿರಚಕ ಯಂತ್ರ (ಕ್ಲಾಸಿಫೈಯಿಂಗ್ ಅಂಡ್ ಟ್ಯಾಬ್ಯುಲೇಟಿಂಗ್ ಮಷೀನ್) ಮುಂತಾದವು. ನಗದು ದಾಖಲೆಯಂತ್ರ ವರ್ತಕನಿಗೆ ಬಹಳಮಟ್ಟಿಗೆ ಸಹಾಯಕವಾಗಿದೆ. ಪ್ರತಿಯೊಂದು ವ್ಯವಹಾರವನ್ನೂ ಅದು ದಾಖಲುಮಾಡುತ್ತದೆ.



ವಿದ್ಯುತ್ ಚಾಲಿತ ಗಣನ ಯಂತ್ರ

ಪ್ರಮಾದ, ದ್ರೋಹ ಇವುಗಳನ್ನು ತಪ್ಪಿಸುತ್ತದೆ. ವ್ಯವಹಾರದ ಮೊಬಲಗನ್ನು ನಮೂದಿಸುವುದಲ್ಲದೆ ವಿವಿಧ ವರ್ಗಗಳಲ್ಲಿ ಆದ ಮಾರಾಟದ ಮೊತ್ತಗಳನ್ನೂ ಉಲ್ಲೇಖಿ



ಲಕೋಟೆ ತೆರೆಯುವ ಯಂತ್ರ

ಸುತ್ತದೆ. ನಗದುವ್ಯವಹಾರದ ರಸೀದಿಯನ್ನೂ ಇದು ಮುದ್ರಿಸಬಲ್ಲುದು. ಅಲ್ಲದೆ ಪ್ರತಿಯೊಂದು ವ್ಯವಹಾರದ ಸಂಪೂರ್ಣ ದಾಖಲೆಯನ್ನಿಟ್ಟು ಲೆಕ್ಕಶೋಧಕನಿಗಾಗಿ ಪ್ರತ್ಯೇಕವೂ ಸಮಗ್ರವೂ ಆದ ಮಾಹಿತಿಯನ್ನು ಇಡುತ್ತದೆ.



ಎಲೆಕ್ಟ್ರಾನಿಕ್ ಗಣಕಯಂತ್ರ

ಲೇಖಾಯಂತ್ರದ್ದು ಬಲು ಸಂಕೀರ್ಣ ರಚನೆ. ಗಣಕಯಂತ್ರದ ಸೌಲಭ್ಯಗಳ ಜೊತೆಗೆ ಲೆಕ್ಕ ಬರೆಯುವ ಕೆಲಸವನ್ನೂ ಇದು ಮಾಡುತ್ತದೆ. ಬಿಕರಿಪಟ್ಟಿ ತಯಾರಿಕೆಯ ಜೊತೆಗೆ ಖಾತೆ ಕಾರ್ಡು ಮತ್ತು ರೋಜು ಲೇಖನಗಳೆರಡನ್ನೂ ಏಕಕಾಲದಲ್ಲಿ ಮಾಡುತ್ತದೆ. ಬ್ಯಾಂಕುಗಳಲ್ಲಿ ಬಳಸಲಾಗುವ ಯಂತ್ರಗಳು ಗ್ರಾಹಕರ ಪಾಸ್ ಪುಸ್ತಕಗಳನ್ನು ಅಥವಾ ತಃಖ್ತೆಗಳನ್ನು ಮತ್ತು ಲೆಕ್ಕಶೋಧನಪ್ರತಿಯನ್ನು ತಯಾರಿಸುವುದಲ್ಲದೆ ಶಿಲ್ಕುಗಳನ್ನೂ ಲೆಕ್ಕಹಾಕಿ ತೋರಿಸುತ್ತದೆ.

ಸಂಗ್ರಹಿಸಲಾದ ಅಂಕಿಗಳನ್ನೂ ವಿವರಗಳನ್ನೂ ಆವಶ್ಯಕತೆಗೆ ಅನುಗುಣವಾಗಿ ವರ್ಗೀಕರಿಸಿ ತಾಳೆನೋಡಿ ವರದಿ ತಯಾರಿಸುವುದೇ ಮುಂತಾದ ನಾನಾ ಯಂತ್ರಗಳು ಬೃಹತ್ ಆಧುನಿಕ ಕಚೇರಿಗಳಿಗೆ ಬಲು ಉಪಯುಕ್ತವಾಗಿವೆ. ಮೂಲಸಾಮಗ್ರಿಯನ್ನೊದಗಿಸಿ, ಮಾಡಬೇಕಾದ ಕೆಲಸವನ್ನು ಸೂಚಿಸಿಕೊಟ್ಟರೆ ಸಾಕು, ಉದ್ದೇಶಿತ ಪರಿಣಾಮ ನೀಡುವ ಸ್ವಯಂಚಲೀ ಯಂತ್ರಗಳಿವು.

ಚಿಲ್ಲರೆ ಎಣಿಸುವ, ಕಾಗದ ಸುತ್ತುವ, ಕಚೇರಿಯ ಸಿಬ್ಬಂದಿಯವರು ತಂತಮ್ಮ ಕೋಣೆಗಳಿಂದಲೇ ಪರಸ್ಪರವಾಗಿ ಸಂಭಾಷಿಸುವ, ಕಾಗದ ಕತ್ತರಿಸುವ, ರಂಧ್ರ ಕೊರೆಯುವ, ರಟ್ಟುಕಟ್ಟುವ, ಮಡಿಸುವ, ಲಕೋಟೆ ತೆರೆಯುವ ದಿನವಹಿ ಸಂಭವಿಸುವಂಥ ಘಟನಾವಳಿಗಳ ಸಮಯಗಳನ್ನು ಗುರುತಿಸಿಡುವ—ಹೀಗೆ ನಾನಾ ಬಗೆಯ ಯಂತ್ರಗಳನ್ನು ಆಧುನಿಕ ಕಚೇರಿಯ ಉಪಕರಣಗಳ ಪಟ್ಟಿಯಲ್ಲಿ ಸೇರಿಸಬಹುದಾಗಿದೆ.



ಸ್ವಯಂಚಾಲಿತ ಖಾಸಗಿ ಟೆಲಿಫೋನ್

(ಎಸ್.ಎಸ್.ಜಿ.)

**ಕಚೇರಿಯ ಸಂಘಟನೆ ಮತ್ತು ವ್ಯವಸ್ಥಾಪನೆ :** ಒಂದು ಸಂಸ್ಥೆಯ ಕಾರ್ಯನಿರ್ವಹಣೆಯಲ್ಲಿ ಅದರ ಕಚೇರಿ ಸಲ್ಲಿಸುವ ಸೇವೆ ಮುಖ್ಯವಾದದ್ದು. ಅದರ ಸಂಘಟನೆ ಮತ್ತು ವ್ಯವಸ್ಥಾಪನೆಗಳ ಸ್ವರೂಪವೇ ಈ ಸೇವೆ ಎಷ್ಟರಮಟ್ಟಿಗೆ ಸಾರ್ಥಕ ಅಥವಾ ಸಮರ್ಪಕ ಎಂಬುದನ್ನು ನಿರ್ಣಯಿಸುವ ಅಂಶ. ಕಚೇರಿಯ ಕಾರ್ಯಭಾರ ಪ್ರತ್ಯೇಕವಾದದ್ದೆಂದೂ ಲೆಕ್ಕಪತ್ರಗಳನ್ನಿಡುವುದಷ್ಟೇ ಅದರ ಹೊಣೆಯೆಂದೂ ಭಾವನೆಯಿದ್ದ ಕಾಲವೊಂದಿತ್ತು. ಸಂಸ್ಥೆಯ ಉನ್ನತ ಕಾರ್ಯನಿರ್ವಾಹಕರಿಗೆ ಮಾತ್ರ ಅದು ಸೇವೆ ಸಲ್ಲಿಸುತ್ತಿತ್ತು. ಆದರೆ ಈಚಿನ ವರ್ಷಗಳಲ್ಲಿ ಈ ನಿಲವಿನಲ್ಲಿ ಬದಲಾವಣೆಯಾಗಿದೆ. ಅದು ಸಂಸ್ಥೆಯ ವ್ಯವಹಾರದ ಚಲನಾತ್ಮಕ ಅಂಗ ; ಒಟ್ಟು ಉತ್ಪಾದಕತೆಯಲ್ಲಿ ಅದರದೂ ನೇರ ಪಾತ್ರವುಂಟು ಎಂಬ ಅರಿವು ಈಚೆಗೆ ಮೂಡುತ್ತಿದೆ. ಸಂಸ್ಥೆಯಲ್ಲಿ ನಿರ್ವಹಿಸಬೇಕಾಗಿರುವ ಕೆಲಸದ ಯೋಜನೆ, ಸಂಘಟನೆ, ಉಪಕ್ರಮಣ ಮತ್ತು ನಿಯಂತ್ರಣಗಳು ಕಚೇರಿಯಿಂದ ಮಾತ್ರ ಸಾಧ್ಯ. ಸಂಸ್ಥೆಯ ಹಣಕಾಸಿನ ವ್ಯವಹಾರದ ನಿರ್ವಹಣೆಯೇ ಅಲ್ಲದೆ ಉತ್ಪಾದನೆಯ ಮತ್ತು ಕೊಳ್ಳುವ-ಮಾರುವ ವಿಭಾಗಗಳಿಗೆ ಅಗತ್ಯವಾದ ಅಂಕಿ-ಅಂಶಗಳನ್ನು ಸಂಗ್ರಹಿಸಿ, ಸಂಕಲಿಸಿ, ವಿಂಗಡಿಸಿ, ಇವು ಬೇಕಾದಾಗ, ಅರ್ಥವಾಗುವ ರೀತಿಯಲ್ಲಿ, ಒದಗಿಸುವ ಕಾರ್ಯವೂ ಕಚೇರಿಯ ಮುಖ್ಯ ಕೆಲಸ. ಲೆಕ್ಕಪತ್ರಗಳ ವ್ಯವಸ್ಥೆ, ಪಡಿಯಚ್ಚುಗಳ ತಯಾರಿಕೆ—ಇವೂ ಕಚೇರಿ ನಿರ್ವಹಿಸಬೇಕಾದ ಕರ್ತವ್ಯಗಳೇ. ವಿಮೆ, ಬ್ಯಾಂಕಿಂಗ್ ಮುಂತಾದ ಸಂಸ್ಥೆಗಳಲ್ಲಿ ಕಚೇರಿಯ ಪಾತ್ರದ ಪ್ರಾಮುಖ್ಯದ ಅರಿವಾಗಿರುವುದರಿಂದ ಈ ಸಂಸ್ಥೆಗಳಲ್ಲಿ ಕಚೇರಿಯ ಆಡಳಿತ ಮತ್ತು ವ್ಯವಸ್ಥೆಗಳಿಗೆ ಹೆಚ್ಚು ಗಮನ ಕೊಡಲಾಗಿದೆ. ಆದರೆ ಎಲ್ಲ ಉದ್ಯಮಗಳೂ ಕಚೇರಿಯ ಪ್ರಾಮುಖ್ಯವನ್ನು ಇನ್ನೂ ಅರಿತುಕೊಂಡಿಲ್ಲ.

ಆಡಳಿತಯಂತ್ರ ಅಯಸ್ಕಾಂತವಿದ್ದಂತೆ. ಇದು ಸಂಸ್ಥೆಯ ಅನೇಕ ವಿಭಾಗಗಳನ್ನು ಆಕರ್ಷಿಸಿ ಒಂದು ಗೊತ್ತಾದ ರೀತಿಯಲ್ಲಿ ನಡೆಯುವಂತೆ ಮಾಡುತ್ತದೆ. ಈ ರೀತಿಯ ಸೌಹಾರ್ದ ಇಲ್ಲದಿದ್ದ ಪಕ್ಷದಲ್ಲಿ ಸಂಸ್ಥೆಯ ಕೆಲಸಕಾರ್ಯಗಳಲ್ಲಿ ಅನೇಕ ಅಡೆತಡೆಗಳಾಗುತ್ತವೆ. ಸಾಮಾನ್ಯ ಆಡಳಿತದ ನಿಯಮಗಳೇ ಕಚೇರಿಯ ಮುಖ್ಯವಾದ ಆಡಳಿತಕ್ಕೂ ಅನ್ವಯವಾಗುತ್ತವೆಯೆನ್ನಬಹುದು. ಕಚೇರಿಯ ಸಂಘಟನೆಯಲ್ಲಿ ಅಂಶಗಳು ಮೂರು : 1 ಕಚೇರಿಯ ಕಾರ್ಯವಿಧಾನ, 2 ಉಪಕರಣಗಳ ಅಳವಡಿಕೆ ಮತ್ತು 3 ಸಿಬ್ಬಂದಿ ಅಥವಾ ಸೌಕರ್ಯ ವ್ಯವಸ್ಥೆ. ಈ ಮೂರೂ ವಿಭಾಗಗಳನ್ನು ಸರಿಯಾಗಿ ಹೊಂದಿಸಿದಲ್ಲಿ ಮಾತ್ರ ಕಚೇರಿಯ ಆಡಳಿತ ಸುಸೂತ್ರವಾಗಿ ಮುಂದುವರಿಯುತ್ತದೆ. ಕಚೇರಿಯ ಆಡಳಿತಗಳಲ್ಲಿ ವ್ಯಕ್ತಿಗತ ಭಾವನೆಗಳಿಗಿಂತ ವಸ್ತುನಿಷ್ಠೆಗೆ ಹೆಚ್ಚಿನ ಮಹತ್ತ್ವ ನೀಡಬೇಕು. ಹೀಗಿದ್ದಲ್ಲಿ ಮಾತ್ರ ಕಚೇರಿಯ ಸುವ್ಯವಸ್ಥೆ ಸಾಧ್ಯ, ತಪ್ಪು ಸಂಭವಿಸಿದಾಗ ಅದನ್ನು ತಿದ್ದುವುದು ಸುಲಭ. ಹೀಗೆ ಕ್ರಮಬದ್ಧವಾದ ವ್ಯವಸ್ಥೆಯೇ ವೈಜ್ಞಾನಿಕ ವ್ಯವಸ್ಥಾಪನ.

**ಕಚೇರಿಯ ಕಾರ್ಯವಿಧಾನ :** ಯಾವುದಾದರೊಂದು ಹೊಸ ಸಂಸ್ಥೆಯನ್ನು ಸ್ಥಾಪಿಸಿದಲ್ಲಿ ಅದರ ಕಚೇರಿಯನ್ನು ವ್ಯವಸ್ಥಾಪಿಸುವ ಕೆಲಸ ಕಚೇರಿಯ ಮುಖ್ಯಾಧಿಕಾರಿಯದು. ಮೊದಲನೆಯದಾಗಿ ಅತ ತನ್ನ ಕಚೇರಿಯ ಆವಶ್ಯಕತೆಗಳೇನೆಂಬುದನ್ನು ಪಟ್ಟಿ ಮಾಡಬೇಕಾಗುತ್ತದೆ. ಅನಂತರ ಆ ಆವಶ್ಯಕತೆಗಳನ್ನು ಯಾರು, ಹೇಗೆ, ಎಷ್ಟರ ಮಟ್ಟಿಗೆ ಪೂರೈಸಬಲ್ಲರೆಂಬ ಬಗ್ಗೆ ಮನಸ್ಸನ್ನು ಹರಿಸಬೇಕಾಗುತ್ತದೆ. ಅದೂ ಅಲ್ಲದೆ, ಕಚೇರಿಯ ಸಲಕರಣೆಗಳ ಮತ್ತು ಸಿಬ್ಬಂದಿಯ ಆಯ್ಕೆಯ ಬಗ್ಗೆ ವಿಶದವಾಗಿ ಆಲೋಚಿಸಿ ವಿಧಾನಗಳನ್ನು ಗೊತ್ತುಪಡಿಸಬೇಕಾಗುತ್ತದೆ. ಸಾಮಾನ್ಯವಾಗಿ ವ್ಯವಸ್ಥಾಪಕರು ಕಚೇರಿಯ ಕಾರ್ಯವಿಧಾನದ ಬಗ್ಗೆ ಹೆಚ್ಚುಹೆಚ್ಚಾಗಿ ಗಮನ ಹರಿಸಲು ಪ್ರಯತ್ನಿಸುತ್ತಾರೆ. ಕಚೇರಿಯ ವಿನ್ಯಾಸ, ವೇಳಾಪಟ್ಟಿಗೆ ಅನುಗುಣವಾಗಿ ಕಾರ್ಯನಿರ್ವಹಣೆ, ಕಾರ್ಯಮಾಪನ, ಕಾರ್ಯದ ಸರಳೀಕರಣ, ಕಾರ್ಯದ ವೇಳೆಯ ಮತ್ತು ಚಲನೆಯ ಅಧ್ಯಯನ (ಟೈಂ ಅಂಡ್ ಮೋಷನ್ ಸ್ಟಡಿ)—ಶಿಷ್ಟಪದ್ಧತಿ (ಸ್ಟ್ಯಾಂಡರ್ಡ್ ಪ್ರಾಕ್ಟೀಸಸ್), ತನಿಖೆ ಮತ್ತು ವೆಚ್ಚನಿಯಂತ್ರಣ (ಕಾಸ್ಟ್ ಕಂಟ್ರೋಲ್)—ಇವು ಮುಖ್ಯವಾಗಿ ಗಮನಿಸಬೇಕಾದ ಅಂಶಗಳು.

1 ಕಚೇರಿಯ ವಿನ್ಯಾಸ : ಇದರಲ್ಲಿ ಪ್ರಮುಖವಾಗಿ ನಿರ್ಧರಿಸಬೇಕಾದ ಅಂಶವೆಂದರೆ, ಪ್ರತಿಯೊಂದು ವಿಭಾಗಕ್ಕೂ ಪ್ರತಿಯೊಬ್ಬ ಉದ್ಯೋಗಿಗೂ ಬೇಕಾಗಬಹುದಾದ ಸ್ಥಳ. ಹೀಗೆ ನಿರ್ಧರಿಸಿದ ಸ್ಥಳದಲ್ಲಿ ಇರಬೇಕಾದ ಕಿಟಕಿ ಬಾಗಿಲುಗಳ ಮತ್ತು ಇತರ ಸಾಧನಗಳ ಬಗ್ಗೆಯೂ ಯೋಚಿಸಬೇಕಾಗುತ್ತದೆ. ಸಾಮಾನ್ಯವಾಗಿ ನಿಕಟಸಂಬಂಧವಿರುವ ವಿಭಾಗಗಳನ್ನು ಅಕ್ಕಪಕ್ಕಗಳಲ್ಲೇ ಇರುವಂತೆ ಸ್ಥಾಪಿಸಬೇಕು (ಉದಾ : ಹಣಕಾಸು ವಿಭಾಗ ಮತ್ತು ಲೆಕ್ಕ ವಿಭಾಗ). ಅದೂ ಅಲ್ಲದೆ ಕೆಲವು ವಿಭಾಗಗಳನ್ನು ಸಾರ್ವಜನಿಕರು ಸುಲಭವಾಗಿ ಉಪಯೋಗಿಸುವ ರೀತಿಯಲ್ಲಿ ಸ್ಥಾಪಿಸಬೇಕು (ಉದಾ : ಹಣಕಾಸು ವಿಭಾಗ, ಮಾರಾಟ ವಿಭಾಗ). ಕೆಲವು ವಿಭಾಗಗಳನ್ನು ಸಾರ್ವಜನಿಕರಿಂದ ದೂರವಿಡಲೂಬೇಕು (ಉದಾ : ಕಾಗದಪತ್ರಗಳ ವಿಭಾಗ). ಹೀಗೆ ಕಚೇರಿಯ ವಿನ್ಯಾಸವನ್ನು ಮೊದಲು ತಯಾರಿಸಿ ಅನಂತರ ಕಚೇರಿಯನ್ನು ವ್ಯವಸ್ಥೆಗೊಳಿಸಲು ಪ್ರಾರಂಭಿಸಬೇಕು. ಕಚೇರಿಯ ಕಾರ್ಯದಕ್ಷತೆ ಬಹಳ ಮಟ್ಟಿಗೆ ಅದರ ವಿನ್ಯಾಸವನ್ನೇ ಅವಲಂಬಿಸಿದೆಯೆಂದರೆ ತಪ್ಪಾಗಲಾರದು. ವಿಭಾಗದಿಂದ ವಿಭಾಗಕ್ಕೆ ಹೆಚ್ಚು ಅಂತರವಿದ್ದಲ್ಲಿ ಉದ್ಯೋಗಿಗಳು ತಮ್ಮ ಹೆಚ್ಚು ಕಾಲವನ್ನು ವಿಭಾಗಗಳಿಗೆ ಹೋಗಿ ಬರುವುದರಲ್ಲೇ ಕಳೆಯುತ್ತಾರೆ. ಇದರಿಂದಾಗಿ ಕೆಲಸ ನಿಧಾನವಾಗಿ ಸಾಗುತ್ತದೆ. ಇದನ್ನು ತಪ್ಪಿಸುವಲ್ಲಿ ಮುಖ್ಯಾಧಿಕಾರಿಯ ಪಾತ್ರ ಹಿರಿದಾದುದು.

2 ವೇಳಾನಿರ್ಣಯ : ಕಚೇರಿಯ ಕೆಲಸ ಸುಸೂತ್ರವಾಗಿ ನಡೆಯಬೇಕಾದರೆ ಕೆಲಸದಲ್ಲಿ ಕಾಣುವ ವಿಳಂಬನೀತಿಯನ್ನು ತೊಡೆದುಹಾಕಬೇಕು. ಆಗ ಉದ್ಯೋಗಿಗಳಿಂದ ಹೆಚ್ಚುಹೆಚ್ಚಾಗಿ ಉತ್ತಮ ಕೆಲಸ ಪಡೆಯಬಹುದು. ಯಾವ ಕೆಲಸಕ್ಕೆ ಎಷ್ಟು ಕಾಲ ಬೇಕೆಂಬುದನ್ನು ಮೊದಲೇ ಅಂದಾಜು ಮಾಡಬೇಕು. ಮುಖ್ಯಾಧಿಕಾರಿ ಉದ್ಯೋಗಿಗಳಿಗೆ ಸರಿಯಾದ ಸಲಕರಣೆಗಳನ್ನು ಒದಗಿಸಿ, ಕಾಲ ವಿಳಂಬವಾಗದಂತೆ ಎಲ್ಲ ಸೌಲಭ್ಯಗಳನ್ನೂ ಒದಗಿಸುವುದೂ ಉಸ್ತುವಾರಿ ಮಾಡುವುದೂ ಅವಶ್ಯ.

3 ಕಾರ್ಯಮಾಪನ : ಯಾವುದೇ ಕೆಲಸವನ್ನು ಪ್ರಾರಂಭಿಸುವ ಮೊದಲು ಅದರ ಮಾಪನ ಮಾಡಬೇಕು. ಇದರ ಆಧಾರದ ಮೇಲೆ ಕೆಲಸ ಮಾಡಿಸುವ ರೀತಿಯನ್ನು ನಿರ್ಧರಿಸಬೇಕು. ಈ ಮಾಪನ ಸಾಮಾನ್ಯವಾಗಿ ಕೆಲಸದ ಗುಣದ ಬಗ್ಗೆಯಾಗಲಿ ಮೊತ್ತದ ಬಗ್ಗೆಯಾಗಲಿ ಇರಬಹುದು ; ಕೆಲವು ಸಮಯಗಳಲ್ಲಿ ಈ ಎರಡರ ಬಗ್ಗೆಯೂ ಇರಬಹುದು

4 ಕಾರ್ಯದ ಸರಳೀಕರಣ: ಕೆಲಸವನ್ನು ಸುಗಮಗೊಳಿಸಿ ಸರಿಯಾದ ಮತ್ತು ಸುಲಭವಾದ ರೀತಿಯಲ್ಲಿ ಮಾಡುವ ವಿಧಾನವೂ ಮುಖ್ಯ. ಕೆಲವು ಕಾರ್ಯಗಳನ್ನು ಸುಲಭಗೊಳಿಸಬಹುದು ಅಥವಾ ತೆಗೆದು ಹಾಕಬಹುದು. ಈ ರೀತಿ ಮಾಡುವಾಗ ಹಿಂದಿನ ಅನುಭವ ಹೆಚ್ಚು ಉಪಯೋಗಕ್ಕೆ ಬರುತ್ತದೆ. ಬಿಕರಿ ಪಟ್ಟಿಯ ರಚನೆ, ಟೆಲಿಫೋನ್ ಬಳಕೆ, ಪತ್ರವ್ಯವಹಾರನಿರ್ವಹಣೆ, ಪತ್ರಸಂಗ್ರಹಣೆ, ನಕಲು ರಚನೆ—ಮುಂತಾದ ನಾನಾ ಕಾರ್ಯಗಳನ್ನು ಅನಾವಶ್ಯಕವಾಗಿ ಬೆಳೆಸುವುದೂ ಮಾಡಿದ್ದನ್ನೇ ಮಾಡುವುದೂ ಉಂಟು. ಸೂಕ್ತ ಪರಿಶೀಲನದಿಂದ ಇವನ್ನೆಲ್ಲ ನಿವಾರಿಸುವುದು ಸಾಧ್ಯ.

5 ಚಲನೆಯ ಅಧ್ಯಯನ: ಉದ್ಯೋಗಿ ಕೆಲಸ ಮಾಡುವಾಗ ಕೆಲವು ನಿರ್ದಿಷ್ಟ ರೀತಿಗಳಲ್ಲಿ ಅಂಗಚಲನೆ ಮಾಡಬೇಕಾಗುತ್ತದೆ. ಅತಿಯಾದ ಅಥವಾ ಅನಾವಶ್ಯಕವಾದ ಅಂಗಚಲನೆಯಿಂದ ಬಳಲಿಕೆಯಾಗುವುದು ಸಹಜ. ಒಂದೇ ಬಗೆಯ ಕೆಲಸವನ್ನು ಹಲವು ಸಾರಿ ಮಾಡಿದಾಗ ಆ ಕೆಲಸದಲ್ಲಿ ಪರಿಣತೆ ಪ್ರಾಪ್ತವಾಗಿ ಅನಾವಶ್ಯಕವಾದ ಚಲನೆಯೂ ಕಡಿಮೆಯಾಗುತ್ತದೆ. ಅನಾವಶ್ಯಕವಾದ ಹಲವಾರು ಚಲನೆಗಳ ಬದಲು ಹವಣಾದ ಕೆಲವೇ ಚಲನೆಗಳನ್ನು ಆಲೋಚಿಸಿ ಅಳವಡಿಸುವುದೂ ಕಚೇರಿ ವ್ಯವಸ್ಥಾಪನೆಯ ಒಂದು ಮುಖ್ಯ ಅಂಶ.

6 ಕಾಲದ ಅಧ್ಯಯನ: ಕಾಲದ ಅಧ್ಯಯನವೂ ಚಲನೆಯ ಅಧ್ಯಯನದಷ್ಟೇ ಮುಖ್ಯವಾದದ್ದು. ಕೆಲಸವನ್ನು ಸರಳಗೊಳಿಸಿ ಉದ್ಯೋಗಿಯ ಚಲನೆಯ ನಿಷ್ಕರ್ಷೆ ಮಾಡಿದ ಮೇಲೆ ಒಂದು ಕೆಲಸಕ್ಕೆ ಅಗತ್ಯವಾದ ಕಾಲವೆಷ್ಟೆಂಬುದನ್ನು ನಿರ್ಧರಿಸಬೇಕು. ಹೀಗೆ ಮಾಡಬೇಕಾದರೆ ಆ ಕೆಲಸದ ನಾನಾ ಅಂಶಗಳನ್ನು ಪರಿಶೀಲಿಸಿ, ಒಂದೊಂದಕ್ಕೂ ಅಗತ್ಯವಾದ ಕಾಲವೆಷ್ಟೆಂಬುದನ್ನು ಗುರುತಿಸಿಕೊಳ್ಳಬೇಕು. ಆದರೆ ಎಲ್ಲ ಕಾಲದಲ್ಲೂ ಒಂದೇ ಬಗೆಯಲ್ಲಿ ಶ್ರಮವಿನಿಯೋಗ ಸಾಧ್ಯವಿಲ್ಲವೆಂಬುದನ್ನೂ ಅರಿಯಬೇಕು. ಆದ್ದರಿಂದ ಇವನ್ನೆಲ್ಲ ಗಮನದಲ್ಲಿಟ್ಟು ಪ್ರತಿಯೊಂದು ಕ್ರಿಯೆಗೂ ಕಾಲನಿರ್ಧಾರ ಮಾಡಬೇಕಾಗುತ್ತದೆ. ಇದು ದೀರ್ಘವಾದ ಅಧ್ಯಯನದಿಂದ ಸಾಧ್ಯ.

7 ಶಿಷ್ಟ ಕ್ರಮ: ಹೀಗೆ ಮೇಲೆ ಹೇಳಿದ ವಿಷಯಗಳ ಬಗ್ಗೆ ದೀರ್ಘವಾಗಿ ಆಲೋಚಿಸಿ, ಅಭ್ಯಸಿಸಿದ ಮೇಲೆ, ಸೂಕ್ತ ನಿಯಮಾವಳಿಯನ್ನು ತಯಾರಿಸಿ ಉದ್ಯೋಗಿಗಳಿಗೆ ಹಂಚಬೇಕು. ಇದರಲ್ಲಿ ಕೆಲಸ ಮಾಡುವ ರೀತಿಯನ್ನು ವಿಶದವಾಗಿ ವಿವರಿಸಲಾಗಿರುತ್ತದೆ. ಹೊಸ ಉದ್ಯೋಗಿಗಳಿಗೆ ಈ ಬಗೆಯ ನಿಯಮಾವಳಿ ಬಹಳ ಸಹಾಯಕ.

8 ಕೆಲಸದ ತನಿಖೆ ಅಥವಾ ಪರಿಶೀಲನೆ: ನಿಯಮಾವಳಿಯನ್ನು ತಯಾರಿಸಿ ಅಭ್ಯಾಸಕ್ಕೆ ಕೊಟ್ಟ ಮೇಲೆ, ನಿರ್ಧಾರಿತ ಕೆಲಸ ಈ ಪ್ರಕಾರದಲ್ಲೆ, ಇಲ್ಲಿ ವಿವರಿಸಿದ ರೀತಿಯಲ್ಲೆ, ಆಗುತ್ತಿದೆಯೇ ಇಲ್ಲವೇ ಎಂಬ ಬಗ್ಗೆ ತನಿಖೆ ಮಾಡಬೇಕು. ಹೀಗೆ ಆಗಾಗ್ಗೆ ಪರಿಶೀಲನೆ ನಡಸುವುದರಿಂದ ತಪ್ಪುಗಳನ್ನು ಕಂಡುಹಿಡಿಯಬಹುದು. ಮತ್ತೇನಾದರೂ ತೊಂದರೆಗಳಿದ್ದಲ್ಲಿ ಅವನ್ನು ಸರಿಪಡಿಸುವುದಕ್ಕೂ ಇದು ಸಹಾಯಕವಾಗುತ್ತದೆ.

9 ವೆಚ್ಚನಿಯಂತ್ರಣ: ಕೆಲಸವನ್ನು ಅತಿ ಯಶಸ್ವಿಯಾಗಿ ಮತ್ತು ಅತಿ ಕಡಿಮೆ ಖರ್ಚಿನಲ್ಲಿ ಮಾಡುವಂತೆ ನೋಡಿಕೊಳ್ಳಬೇಕಾದ ಕೆಲಸ ಕಚೇರಿಯ ಮುಖ್ಯಾಧಿಕಾರಿಯದು. ವೆಚ್ಚ ಏರದಂತೆ ಎಚ್ಚರ ವಹಿಸಬೇಕು.

ಮೇಲೆ ಹೇಳಿದ ಎಲ್ಲ ಕೆಲಸಗಳನ್ನೂ ಕಚೇರಿಯ ಮುಖ್ಯಾಧಿಕಾರಿಯಾಗಲಿ ಆತನ ಸಹಾಯಕರಾಗಲಿ ನೋಡಿಕೊಳ್ಳಬೇಕು. ಅಲ್ಲದೆ ದೊಡ್ಡ ಕಚೇರಿಗಳಲ್ಲಿ ಈ ಕೆಲಸಗಳನ್ನು ಬೇರೆ ಒಂದು ವಿಭಾಗಕ್ಕೆ ವಹಿಸಿರುತ್ತಾರೆ. ಆ ವಿಭಾಗ ಆಗಾಗ್ಗೆ ಸಂಶೋಧನೆ ನಡೆಯಿಸಿ, ಕಾರ್ಯವನ್ನು ಸುಗಮಗೊಳಿಸಲು ಪ್ರಯತ್ನಿಸುತ್ತದೆ.

**ಕಚೇರಿಯ ಉಪಕರಣ:** ಕಚೇರಿಯ ಆಡಳಿತವಿಚಾರದಲ್ಲಿ ಎರಡನೆಯ ಸ್ಥಾನ ಪಡೆಯಬೇಕಾದ ಅಂಶವೆಂದರೆ, ಕಚೇರಿಯ ಉಪಕರಣ. ಕಚೇರಿಯ ಮುಖ್ಯಾಧಿಕಾರಿ ತನ್ನ ಕಚೇರಿಗೆ ಬೇಕಾದ ಸಲಕರಣೆಗಳನ್ನು ಅತ್ಯಂತ ನಿಷ್ಠೆಯಿಂದ ಆರಿಸಿಕೊಳ್ಳಬೇಕು. ಅಲ್ಲದೆ ಅಣಿಕಟ್ಟಿನಲ್ಲಿ (ಫರ್ನಿಚರ್) ಪ್ರತಿಯೊಂದನ್ನೂ ಉದ್ಯೋಗಿಯ ಕೆಲಸಕ್ಕೆ ತಕ್ಕಂತೆ ವಿನ್ಯಾಸಗೊಳಿಸಲಾಗಿರುತ್ತದೆ.

ಆಧುನಿಕ ಕಚೇರಿಯಲ್ಲಿ ಅಣಿಕಟ್ಟು ಮಾತ್ರವೇ ಅಲ್ಲದೆ ಯಂತ್ರಗಳ ಬಳಕೆಯೂ ಹೆಚ್ಚುತ್ತಿದೆ. ಮುಖ್ಯಾಧಿಕಾರಿ ತನ್ನ ಕಚೇರಿಗೆ ಬೇಕಾಗಬಹುದಾದ ಯಂತ್ರಗಳ ಒಂದು ಪಟ್ಟಿ ಮಾಡಿ ಅವುಗಳ ಬೆಲೆಯನ್ನು ತಿಳಿದುಕೊಳ್ಳಬೇಕು. ಅದೂ ಅಲ್ಲದೆ ಯಾವ ಯಂತ್ರವನ್ನೇ ಆಗಲಿ, ಕೊಳ್ಳುವ ಮೊದಲು ಅದರ ಬಳಕೆ ಮತ್ತು ಉಪಯೋಗದ ಬಗ್ಗೆ ಯೋಚಿಸಿ ಅದಕ್ಕೆ ತಗಲುವ ವೆಚ್ಚದ ದೃಷ್ಟಿಯಿಂದ ಸರಿಯಾಗಿ ಬಳಸಿಕೊಳ್ಳಲು ಸಾಧ್ಯವೇ ಇಲ್ಲವೆ, ಅಥವಾ ಅದು ಕಚೇರಿಗೆ ಭೂಷಣಪ್ರಾಯವಾಗಿ ಮಾತ್ರ ಇರುತ್ತದೆಯೆ ಎಂಬುದನ್ನು ಸರಿಯಾಗಿ ಕಂಡುಕೊಳ್ಳಬೇಕು. ಯಥಾ ಕಾಲದಲ್ಲಿ ಅದನ್ನು ದುರಸ್ತಾಗಿಟ್ಟಿರುವಂತೆ ಸೂಕ್ತ ವ್ಯವಸ್ಥೆ ಮಾಡಬೇಕು (**ನೋಡಿ–ಕಚೇರಿಯ ಯಂತ್ರೋಪಕರಣಗಳು**).

ಕಚೇರಿಗೆ ಬಂದು ಹೋಗುವ ಪತ್ರಗಳ ದಾಖಲೆಯನ್ನು ಸರಿಯಾಗಿ ಇಡುವ ಕೆಲಸವೂ ಬಹಳ ಮುಖ್ಯವಾದದ್ದು. ಇದಕ್ಕಾಗಿ ಸರಿಯಾದ ಪತ್ರಕೋಶಗಳ ಆಯ್ಕೆಯಾಗಬೇಕು. ಆಧುನಿಕ ಕಚೇರಿಯಲ್ಲಿ ಅನೇಕ ಹೊಸ ಮಾದರಿಯ ಪತ್ರ ಕೋಶಗಳನ್ನು ಕಾಣಬಹುದು. ಅಲ್ಲದೆ ಕಚೇರಿಯಲ್ಲಿ ಬಳಕೆಯಲ್ಲಿರಬಹುದಾದ ಮೈಕ್ರೊಫಿಲಂಗಳಿಗಾಗಿ ಸರಿಯಾದ ಪತ್ರಕೋಶ ವ್ಯವಸ್ಥೆಯಾಗಬೇಕು.

ಕಚೇರಿಯ ವ್ಯವಸ್ಥಾಪನದಲ್ಲಿ ಇನ್ನೂ ಅನೇಕ ಸಲಕರಣೆಗಳ ಬಗ್ಗೆ ವ್ಯವಸ್ಥಾಪಕನ ಗಮನ ಹರಿಯಬೇಕು. ಲೇಖನಸಾಮಗ್ರಿ (ಸ್ಟೇಷನರಿ), ಶಬ್ದನಿರೋಧಕ ಸಾಧನಗಳು (ಉದಾ: ಮ್ಯಾಟಿಂಗ್ ಕಾರ್ಪೆಟ್), ವಿಭಾಗ ಗೋಡೆಗಳು, ಪುಸ್ತಕಗಳನ್ನು ಇಡಲು ಕಪಾಟುಗಳು, ಕಾಗದಗಳನ್ನು ಇಡುವ ತಟ್ಟೆಗಳು ಮುಂತಾದವು. ಇವುಗಳ ಆಯ್ಕೆಯಲ್ಲಿ ಸಹಾಯಕವಾಗಲೆಂದು ಅಮೆರಿಕವಲ್ಲಿ ಸಲಕರಣೆಗಳ ಬಗ್ಗೆ ಒಂದು ವಿಶದವಾದ ಪುಸ್ತಕವನ್ನೇ ಹೊರಡಿಸಲಾಗಿದೆ. ಈ ಪುಸ್ತಕದಿಂದ ಅವುಗಳ ಬಗ್ಗೆ ಅನೇಕ ವಿಷಯಗಳನ್ನು ತಿಳಿದುಕೊಳ್ಳಬಹುದು.

ಕಚೇರಿಯ ಬಳಕೆಗೆ ಬೇಕಾಗುವ ಲೇಖನಸಾಮಗ್ರಿ ಮತ್ತು ಅದರ ಸರಬರಾಜೂ ಬಹಳ ಮುಖ್ಯ. ಇವು ಗಾತ್ರದಲ್ಲಿ ಚಿಕ್ಕವಾದರೂ ಕಚೇರಿಯ ಕೆಲಸದಲ್ಲಿ ಪ್ರಮುಖ ಪಾತ್ರವಹಿಸುತ್ತವೆ. ಕಡಿಮೆ ವೆಚ್ಚದ ಸಾಮಗ್ರಿಯನ್ನು ಆಯ್ಕೆ ಮಾಡಿದಲ್ಲಿ ಕೆಲಸದಲ್ಲಿ ಕಡಿತ ಉಂಟಾಗಬಹುದು ಅಥವಾ ಗುಣಮಟ್ಟ ಕಡಿಮೆಯಾಗಬಹುದು. ಸೀಸದ ಕಡ್ಡಿ, ಮಸಿ, ಕ್ಲಿಪ್ಪುಗಳು ರಬ್ಬರಿನ ಹಿಡಿಕೆಗಳು, ಕಾಗದ, ಕಾರ್ಬನ್ ಪೇಪರ್, ಬೆರಳಚ್ಚುಯಂತ್ರದ ಟೇಪು, ಲಕೋಟೆ, ಕ್ಯಾಲೆಂಡರು (ಗೋಡೆ ಮತ್ತು ಟೇಬಲ್), ಮೆಮೊ ಪುಸ್ತಕ ಇವು ಮುಖ್ಯವಾದ ಕೆಲವು. ಮುಖ್ಯಾಧಿಕಾರಿ ಸರಿಯಾಗಿ ಎಚ್ಚರ ವಹಿಸಿದಲ್ಲಿ ಈ ಪದಾರ್ಥಗಳ ಬಳಕೆಯನ್ನು ನಿಯಂತ್ರಿಸಬಹುದು. ಇದರಿಂದ ಆಗುವ ಉಳಿತಾಯ ಅಲ್ಪವೇನಲ್ಲ. ಹವಣರಿತ ಧಾರಾಳವೇ ಇಲ್ಲಿ ಮುಖ್ಯ ಸೂತ್ರ.

**ಸಿಬ್ಬಂದಿ:** ಆಧುನಿಕ ಕಚೇರಿಯ ನಿರ್ವಹಣೆಯಲ್ಲಿ ಸಿಬ್ಬಂದಿಯ ಪಾತ್ರ ಅತ್ಯಂತ ಮುಖ್ಯವಾದದ್ದು. ಪ್ರತಿಯೊಬ್ಬ ಅಧಿಕಾರಿಯೂ ಸಿಬ್ಬಂದಿಯ ಜೊತೆಗೆ ಮತ್ತು ಅದರ ಮೂಲಕ ಕೆಲಸ ತೂಗಿಸುವ ಸಮಸ್ಯೆಯನ್ನು ಎದುರಿಸಬೇಕಾಗುತ್ತದೆ. ಈ ಸಮಸ್ಯೆಗಳಲ್ಲಿ ಕೆಲವು ಸಾಮಾನ್ಯ; ಮತ್ತೆ ಕೆಲವು ತಾಂತ್ರಿಕ. ಕಚೇರಿಯ ಸಿಬ್ಬಂದಿ ಒಂದು ನಿರ್ದಿಷ್ಟ ಮಟ್ಟದಲ್ಲಿ ಕೆಲಸ ಮಾಡುವಂತೆ ಮಾಡುವ ಹೊಣೆ ಗುರುತರವಾದದ್ದು.

ನುರಿತ ಮತ್ತು ದೂರಾಲೋಚನೆಯ ಅಧಿಕಾರಿ ಸಿಬ್ಬಂದಿಯ ಆಯ್ಕೆಯಲ್ಲಿ ಹೆಚ್ಚು ಜಾಗರೂಕನಾಗಿರುತ್ತಾನೆ. ಅಭ್ಯರ್ಥಿಗಳ ಆಯ್ಕೆ ಮೊಟ್ಟಮೊದಲನೆಯದಾಗಿ ಬರೆವಣಿಗೆಯ ಪರೀಕ್ಷೆಯ ಮೂಲಕ ಪ್ರಾರಂಭವಾಗುತ್ತದೆ. ಇದರಲ್ಲಿ ತೇರ್ಗಡೆಯಾದವರನ್ನು ಮುಂದೆ ಸಂದರ್ಶನಕ್ಕೆ ಕರೆಯಲಾಗುವುದು. ಅನಂತರ ಆಯ್ಕೆಯಾದ ಅಭ್ಯರ್ಥಿಗಳನ್ನು ದೇಹಾರೋಗ್ಯ ಪರೀಕ್ಷೆಗೆ ಒಳಪಡಿಸಲಾಗುವುದು. ಹೀಗೆ ಎಲ್ಲ ವಿಷಯಗಳಲ್ಲೂ ಸರಿಯೆಂದು ಕಂಡು ಬಂದ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು. ಆಯ್ಕೆಯಾದ ಮೇಲೆ ಅಭ್ಯರ್ಥಿಯ ಕೆಲಸದ ಬಗ್ಗೆ ಹಿರಿಯ ಅಧಿಕಾರಿಯಾಗಲಿ ಆತನ ಕೆಳಗಿನವರಾಗಲಿ ಹಿತವಚನ ನೀಡುವರು. ಅದೂ ಅಲ್ಲದೆ ಮುಂದೆ ಕೆಲವು ಕಾಲ ಅಭ್ಯರ್ಥಿಯ ನಡೆನುಡಿ, ಆತ ಕೆಲಸ ಮಾಡುವ ರೀತಿ—ಇವನ್ನು ಅವರು ನೋಡುತ್ತಿರುತ್ತಾರೆ. ಹೊಸ ಉದ್ಯೋಗಿಯಾದವನು ಉತ್ತಮ ಕೆಲಸದ ಮೂಲಕ ತನ್ನ ಮೇಲಧಿಕಾರಿಯ ಮೇಲೆ ಪ್ರಭಾವ ಬೀರಬೇಕು ಮತ್ತು ತನ್ನ ಕೆಲಸಕ್ಕೆ ಅಗತ್ಯವಾದ ಉತ್ತಮ ಅಂಶಗಳನ್ನು ಕಲಿತುಕೊಳ್ಳಲು ಪ್ರಯತ್ನಿಸಬೇಕು.

ಕೆಲವು ಕಚೇರಿಗಳಲ್ಲಿ ಹೊಸ ಉದ್ಯೋಗಿಗಳಿಗೆ ವಿಶೇಷ ಶಿಕ್ಷಣವನ್ನು ಸಹ ಕೊಡುತ್ತಾರೆ. ಈ ರೀತಿಯ ಶಿಕ್ಷಣ ಕೆಲವು ವಾರಗಳಿಂದ ಹಿಡಿದು ಹಲವು ತಿಂಗಳುಗಳವರೆಗೆ ನಡೆಯಬಹುದು. ಈ ಸಮಯದಲ್ಲಿ ಆತನಿಗೆ ಕೆಲಸದ ಬಗ್ಗೆಯಲ್ಲದೆ ಆತನಿರುವ ಸಂಸ್ಥೆಯ ಮತ್ತು ಅದರ ನಿರ್ದಿಷ್ಟ ಗುರಿಗಳ ಬಗ್ಗೆಯೂ ಶಿಕ್ಷಣ ಕೊಡಲಾಗುವುದು. ಈ ಎಲ್ಲ ತರಬೇತಿಗಳು ಸಾಮಾನ್ಯವಾಗಿ ಹಿರಿಯಧಿಕಾರಿಯ ನೇತೃತ್ವದಲ್ಲಿ ನಡೆಯುತ್ತದೆ.

ಒಬ್ಬ ಹೊಸ ಉದ್ಯೋಗಿ ಶಾಲೆಯಲ್ಲಿ ಅಥವಾ ವಿಶ್ವವಿದ್ಯಾನಿಲಯದಲ್ಲಿ ಶಿಕ್ಷಣ ಪಡೆದಿದ್ದರೂ ಅದರ ಹೆಚ್ಚು ಭಾಗ ತನ್ನ ಕೆಲಸಕ್ಕೆ ಪೂರ್ತಿ ಸಹಾಯಕವಾಗದೆ ಇರಬಹುದು. ಆದ್ದರಿಂದ ಕೆಲಸಕ್ಕೆ ಸೇರಿದ ಮೇಲೆ ಆ ಕೆಲಸದ ಬಗ್ಗೆ ಹೆಚ್ಚು ಹೆಚ್ಚಾಗಿ ವಿಷಯ ತಿಳಿದುಕೊಳ್ಳಲು ಆತ ಪ್ರಯತ್ನಪಡಬೇಕು. ಅದೂ ಅಲ್ಲದೆ ಇಂದು ಕಚೇರಿಯ ಕೆಲಸಕ್ಕೆ ಅಗತ್ಯವಾದ ಶಿಕ್ಷಣ ನೀಡುವ ವ್ಯವಸ್ಥಾಪಕ ಶಿಕ್ಷಣಸಂಸ್ಥೆಗಳು (ಮ್ಯಾನೇಜ್‌ಮೆಂಟ್ ಇನ್‌ಸ್ಟಿಟ್ಯೂಟ್) ಇವೆ. ಈ ಶಿಕ್ಷಣ ಪಡೆದ ಅಭ್ಯರ್ಥಿಗಳು ಕಚೇರಿಗೆ ದೊರಕಿದಲ್ಲಿ ಅವರಿಗೆ ಹೆಚ್ಚಿನ ಶಿಕ್ಷಣ ಕೊಡಿಸುವ ಕೆಲಸ ತಪ್ಪುತ್ತದೆ. ಮತ್ತು ಅವರು ಕೆಲಸಕ್ಕೆ ಬಹಳ ಬೇಗ ಹೊಂದಿಕೊಂಡು ಹೋಗುತ್ತಾರೆ. ವಾಣಿಜ್ಯ

ಮತ್ತು ವ್ಯವಸ್ಥಾಪನ ವಿಷಯಗಳಲ್ಲಿ ತರಬೇತಿ ಹೊಂದಿದವರನ್ನೆ ಆಯ್ಕೆಮಾಡು ವುದು ಈಗ ಸಾಮಾನ್ಯವಾಗುತ್ತಿದೆ.

ಕಚೇರಿಯ ಸಿಬ್ಬಂದಿಯ ಬಗ್ಗೆ ಇರುವ ಸಮಸ್ಯೆಗಳಲ್ಲಿ ಮುಖ್ಯವಾದವುಗಳೆಂದರೆ, ಅವರ ಕೆಲಸದ ಕಾಲ, ರಜಾದಿನಗಳು, ವಿರಾಮಕಾಲ, ಶಿಸ್ತು, ಉಡುಪು, ಬಡ್ತಿ ಮತ್ತು ಪ್ರತಿಫಲ. ಇವುಗಳಲ್ಲಿರುವ ತೊಂದರೆಗಳನ್ನು ನಿವಾರಿಸುವುದಕ್ಕಾಗಿ ಗ್ರಂಥಾಲಯ. ಉಪಾಹಾರ ಮತ್ತು ಭೋಜನಗೃಹ ಮತ್ತು ಕ್ರೀಡಾ ಕೇಂದ್ರ ಗಳನ್ನು ಸ್ಥಾಪಿಸಲು ಅನುಮತಿ ಕೊಡಬೇಕಾಗಬಹುದು ಅಥವಾ ಅವನ್ನು ಸ್ಥಾಪಿಸಲು ತಾನೇ ಪ್ರಯತ್ನ ಮಾಡಬಹುದು. ಅದೂ ಅಲ್ಲದೆ ಸಿಬ್ಬಂದಿಯ ಜನರ ಆರೋಗ್ಯದ ಬಗ್ಗೆಯೂ ಗಮನ ಹರಿಸಬೇಕಾಗುತ್ತದೆ. ಇವುಗಳಿಂದಾಗಿ ಮೇಲೆ ಹೇಳಿದ ಸಮಸ್ಯೆಗಳು ಹೆಚ್ಚುಕಡಿಮೆ ಪರಿಹಾರವಾಗುತ್ತವೆ. ಇವೇ ಅಲ್ಲದೆ ಇಂದಿನ ಪ್ರಪಂಚದಲ್ಲಿ ಕಾಣಬರುವ ಮತ್ತೊಂದು ಸಮಸ್ಯೆ ಎಂದರೆ ನೌಕರರ ಸಂಘ. ಅಧಿಕಾರಿ ಅದರೊಡನೆಯೂ ಸರಿಯಾಗಿ ವರ್ತಿಸಿ ಅವರ ಸಹಕಾರ ಗಳಿಸ ಬೇಕು.

ಸಿಬ್ಬಂದಿಯಿಂದ ಸಂಪೂರ್ಣ ಸಹಕಾರ ಪಡೆಯಲು ಮತ್ತು ಕಚೇರಿಯ ಕೆಲಸ ದಲ್ಲಿ ಹೆಚ್ಚು ಗಮನ ಕೊಡುವಂತೆ ಮಾಡಲು ಸಿಬ್ಬಂದಿವರ್ಗದ ಮನಸ್ಸನ್ನು ಅರಿಯಬೇಕು. ಅವರಲ್ಲಿ ಕೆಲಸದ ಬಗ್ಗೆ, ಸಂಸ್ಥೆಯ ಬಗ್ಗೆ ಅಭಿಮಾನ ಮೂಡುವಂತೆ ಮಾಡಬೇಕು ಇದಕ್ಕಾಗಿ ಸಂಸ್ಥೆ ತನ್ನದೇ ಆದ ನಿಯತಕಾಲಿಕ ಪ್ರಕಟಣೆಯ ಮೂಲಕ ಸಂಸ್ಥೆಯ ಸಾಧನೆ ಮತ್ತು ಮುಂದಿನ ಬೆಳೆವಣಿಗೆಗಳ ಬಗ್ಗೆ ಮಾಹಿತಿ ನೀಡಬಹುದು. ಇದನ್ನು ಓದುವುದರಿಂದ ಉದ್ಯೋಗಿ ಹೆಚ್ಚು ಆಕರ್ಷಿತನಾಗಿ ಸಂಸ್ಥೆಗಾಗಿ ನಿಷ್ಠೆಯಿಂದ ದುಡಿಯುತ್ತಾನೆ.

ಸಿಬ್ಬಂದಿಯ ಜನಕ್ಕೆ ಸಂಬಳವೇ ಅಲ್ಲದೆ ಅವರಿಗೆ ಅನೇಕ ಉತ್ತೇಜಕಗಳನ್ನೂ ಕೊಡಬಹುದು. ಸಂಸ್ಥೆಯ ಲಾಭದಲ್ಲಿ ಪಾಲು, ನಿವೃತ್ತಿವೇತನ, ಹೆಚ್ಚು ಶಿಕ್ಷಣಕ್ಕೆ ಸಹಾಯ, ಉಳಿತಾಯ ಯೋಜನೆಗಳಿಗೆ ನೆರವು, ವೈದ್ಯಕೀಯ ಸಹಾಯ ಮುಂತಾದವು ಕೆಲವು ಉತ್ತೇಜಕಗಳು.

ಇಷ್ಟೇ ಅಲ್ಲ. ಕಚೇರಿಯ ಮುಖ್ಯಸ್ಥ ತನ್ನ ಉದ್ಯೋಗಿಗಳಿಂದಲೂ ಸಲಹೆಗಳನ್ನು ಸ್ವೀಕರಿಸಲು ಮುಂದಾಗುತ್ತಾನೆ. ಹೀಗೆ ಉದ್ಯೋಗಿಗಳು ನೀಡಿದ ಸಲಹೆಗಳು ಉತ್ತಮವಾಗಿದ್ದು, ಕೆಲಸಕ್ಕೆ ಸಹಾಯಕವಾಗಿದ್ದ ಪಕ್ಷದಲ್ಲಿ ಮತ್ತು ಖರ್ಚನ್ನು ಕಡಿಮೆ ಮಾಡುವಲ್ಲಿ ಸಹಾಯ ಮಾಡಿದಲ್ಲಿ ಸಲಹೆ ನೀಡಿದ ವ್ಯಕ್ತಿಗೆ ಬಹುಮಾನ ನೀಡಬಹುದು. ಇದರಿಂದಾಗಿ ಸಿಬ್ಬಂದಿ ವರ್ಗದಲ್ಲಿ ಒಂದು ರೀತಿಯ ಕಾರ್ಯಪರತೆ ಯುಂಟಾಗುತ್ತದೆ.

ಕಚೇರಿಯ ವ್ಯವಸ್ಥೆಯ ಮುಖ್ಯಸ್ಥನ ಅತಿ ಕ್ಲಿಷ್ಟ ಸಮಸ್ಯೆಯೆಂದರೆ ಮಧ್ಯಮ ವರ್ಗದ ಅಧಿಕಾರಿಗಳ ಆಯ್ಕೆ, ಶಿಕ್ಷಣ ಮತ್ತು ಕಾರ್ಯದಲ್ಲಿ ಅವರ ಹೊಂದಾವಣೆ. ಅನೇಕ ಸಮಯಗಳಲ್ಲಿ ಸಾಮಾನ್ಯವಾಗಿ ಉತ್ತಮ ಕೆಲಸಗಾರ ಉತ್ತಮ ಆಡಳಿತಗಾರ ನಾಗಿರಲು ಸಾಧ್ಯವಿಲ್ಲ. ಅದಕ್ಕೆ ಆತನಲ್ಲಿ ಕೆಲವು ವಿಶೇಷ ಗುಣಗಳಿರಬೇಕು. ಇವು ಆತನಲ್ಲಿ ಹುಟ್ಟಿನಿಂದ ಬಂದಿರಬಹುದು ಅಥವಾ ಬೆಳೆಸಿಕೊಂಡಂಥವಾಗಿರಬಹುದು. ಅತಿ ಮುಖ್ಯವಾದದ್ದೆಂದರೆ ಉದ್ಯೋಗಿಗಳೊಂದಿಗೆ ಹೊಂದಿಕೊಂಡು ನಡೆದು ಅವರಿಂದ ಕೆಲಸ ತೆಗೆದುಕೊಳ್ಳುವುದು. ಈ ವಿಷಯದಲ್ಲಿ ಮಧ್ಯಸ್ಥ ಆಡಳಿತ ಗಾರನ ಕೆಲಸ ಬಹಳ ಮುಖ್ಯವಾದದ್ದು.

ಕಚೇರಿಯ ಕಾರ್ಯಾಚರಣೆಯಲ್ಲಿ ಮುಖ್ಯಸ್ಥನ ಸ್ಥಾನ ಅತ್ಯಂತ ಪ್ರಮುಖ ವಾದದ್ದು. ಕೆಲಸದ ಮುನ್ನಡೆ ಬಹುತೇಕ ಆತನ ಬುದ್ಧಿಶಕ್ತಿ, ನಡವಳಿಕೆ ಮತ್ತು ಕಾರ್ಯದಕ್ಷತೆಯನ್ನೇ ಅವಲಂಬಿಸಿರುತ್ತದೆ. ಆತನೇನಾದರೂ ಈ ವಿಷಯಗಳಲ್ಲಿ ಶಕ್ತಿಹೀನನಾಗಿದ್ದಲ್ಲಿ ಕೆಲಸ ಸುಗಮವಾಗಿ ನಡೆಯದೆ ಅನೇಕ ತೊಂದರೆಗಳನ್ನು ಅನುಭವಿಸಬೇಕಾಗಬಹುದು.

**ಆಡಳಿತದಲ್ಲಿ ಮಿತವ್ಯಯ :** ಕಚೇರಿಯ ವೆಚ್ಚವಿತರಣೆ ಬಹಳ ಮುಖ್ಯ ಅಂಶ. ಒಂದು ಸಂಸ್ಥೆಯ ಲಾಭ ಹೆಚ್ಚಿಸಲು ಹೆಚ್ಚು ಗಳಿಕೆಯಂತೆ ಮಿತವ್ಯಯವೂ ಮುಖ್ಯ. ಕಚೇರಿಯ ಮಿತವ್ಯಯದ ಬಗ್ಗೆ ನಡೆಯುತ್ತಿರುವ ಸಂಶೋಧನೆ ಇಂದು ನಿನ್ನೆಯದಲ್ಲ. ಇದನ್ನು ಸುಮಾರು 3–4 ಸಾವಿರ ವರ್ಷಗಳಿಂದಲೂ ನಡೆಸಲಾಗು ತ್ತಿದೆ. ಮಿತವ್ಯಯದ ಅಂಶಗಳು ಅನೇಕಾನೇಕ. ಅವುಗಳಲ್ಲಿ ಪ್ರಮುಖವಾದವನ್ನು ಇಲ್ಲಿ ಕೊಡಲಾಗಿದೆ.

ಭೌತಿಕ ಅಂಶಗಳು : ಮಿತವ್ಯಯದ ಪ್ರಶ್ನೆ ಬಂದಾಗ ದೂರಾಲೋಚನೆ ಇಲ್ಲದ ಅಧಿಕಾರಿಗಳು ಉದ್ಯೋಗಿಗಳನ್ನು ಕೆಲಸದಿಂದ ತೆಗೆದುಹಾಕಲು ಅಥವಾ ಅವರ ಸಂಬಳವನ್ನು ಕಡಿಮೆ ಮಾಡಲು ಸಾಮಾನ್ಯವಾಗಿ ಪ್ರಯತ್ನಿಸುತ್ತಿರುತ್ತಾರೆ. ಇದು ಒಂದು ರೀತಿಯ ತಪ್ಪು ಕಲ್ಪನೆ. ಬೇರೆಲ್ಲ ವಿಧಾನಗಳೂ ವಿಫಲವಾದಾಗ ಕೊನೆಯ ದಾಗಿ ಮಾತ್ರವೇ ಈ ಕ್ರಮ ಕೈಕೊಳ್ಳಬೇಕು. ಮೊಟ್ಟಮೊದಲನೆಯದಾಗಿ, ಕಚೇರಿಯ ಕೆಲಸವನ್ನು ವಿಮರ್ಶಿಸಿದಾಗ ಕಾಣುವ ಅಂಶಗಳೆಂದರೆ ಉದ್ಯೋಗಿಗಳ ವಿಳಂಬ ವರ್ತನೆ, ಕಾರ್ಯದಲ್ಲಿ ಆಲಸ್ಯ ಮತ್ತು ಪ್ರಯೋಜನಕ್ಕೆ ಬಾರದ ಕೆಲಸದ ನಿರ್ವಹಣೆ. ಇವನ್ನು ತಪ್ಪಿಸಿದಲ್ಲಿ ಕಚೇರಿಯ ಕೆಲಸ ಸುಗಮವಾಗಿ ಮತ್ತು ಕಾಲಕ್ಕೆ ತಕ್ಕಂತೆ ಮುಂದುವರಿಯುತ್ತದೆ. ಸುವ್ಯವಸ್ಥಿತ ಕಚೇರಿಗಳಲ್ಲಿ, ಅದರಲ್ಲೂ ಕೈಗಾರಿಕಾ ಕಚೇರಿಗಳಲ್ಲಿ, ಇವನ್ನು ಕಾಣಲು ಸಾಧ್ಯವೇ ಇಲ್ಲ. ಈ ರೀತಿಯ ಕಾಲನಷ್ಟವನ್ನು ತಪ್ಪಿಸುವ ಹೊಣೆ ಅಧಿಕಾರಿಯದಕ್ಷತೆಯನ್ನು ಅವಲಂಬಿಸಿರುತ್ತದೆ.

ಕಚೇರಿಯ ಕೆಲಸದಿಂದ ಆಗುವ ಬಳಲಿಕೆಯನ್ನು ಆದಷ್ಟು ಕಡಿಮೆ ಮಾಡಿದಲ್ಲಿ ಕೆಲಸಕ್ಕೆ ತಪ್ಪಿಸಿಕೊಳ್ಳುವುದು, ಕಡಿಮೆ ಕೆಲಸ ಮಾಡುವುದು, ಕೆಳದರ್ಜೆಯ ಕೆಲಸ ಮಾಡುವುದು ಮುಂತಾದವನ್ನು ತಪ್ಪಿಸಬಹುದು. ಕೆಲಸವನ್ನು ಸರಳ ಮತ್ತು ಸುಲಭಗೊಳಿಸುವುದರಿಂದ ಮಾನಸಿಕ ಮತ್ತು ದೈಹಿಕ ಬಳಲಿಕೆಯನ್ನು ಕಡಿಮೆ ಮಾಡ ಬಹುದು. ಕಚೇರಿಯಲ್ಲಿ ಹಿತಕರವಾದ ಬೆಳಕಿನ ವ್ಯವಸ್ಥೆ ಇರಬೇಕು. ಇದು ಉದ್ಯೋಗಿಯ ದೈಹಿಕ ಮತ್ತು ಮಾನಸಿಕ ಶ್ರಮವನ್ನು ಬಹಳ ಕಡಿಮೆ ಮಾಡು ತ್ತದೆ. ಸರಿಯಾದ ಬೆಳಕಿನ ವ್ಯವಸ್ಥೆಯಿಂದ ಉತ್ಪಾದನೆಯನ್ನು ಸೇ. 20ರಷ್ಟು ಹೆಚ್ಚಿಸಬಹುದು ಎಂಬುದನ್ನು ಸಂಶೋಧನೆಗಳಿಂದ ಸ್ಥಿರಪಡಿಸಲಾಗಿದೆ. ಬೆಳಕಿನ ವ್ಯವಸ್ಥೆಯೇ ಅಲ್ಲದೆ ಗೋಡೆಗಳಿಗೆ ಹಚ್ಚುವ ಬಣ್ಣವೂ ಕಣ್ಣುಗಳಿಗೆ ಒಂದು ರೀತಿಯ ತಂಪನ್ನು ನೀಡಬೇಕು. ಕಚೇರಿಯಲ್ಲಿ ಗಾಳಿಗೆ ಹೆಚ್ಚು ಅವಕಾಶವಿರಬೇಕು. ಹೀಗಿದ್ದಲ್ಲಿ ಉದ್ಯೋಗಿಗಳಿಂದ ಹೆಚ್ಚು ಕೆಲಸ ಪಡೆಯಬಹುದು.

ಗದ್ದಲಮಯ ಕಚೇರಿಯಲ್ಲಿ ಕೆಲಸ ಮಂದಗತಿಯಲ್ಲಿ ಅಥವಾ ವಕ್ರರೀತಿಯಲ್ಲಿ ಸಾಗಬಹುದು. ಶಬ್ದ ಆದಷ್ಟು ಕಡಿಮೆಯಿರುವಂತೆ ಪ್ರಯತ್ನಿಸಬೇಕು. ಸುಮಧುರ ಸಂಗೀತ ಕೆಲಸಗಾರನ ಕೆಲಸದ ಗತಿಯನ್ನು ಹೆಚ್ಚಿಸುತ್ತದೆ ಎಂಬ ವಿಷಯವನ್ನು ಕಂಡುಕೊಳ್ಳಲಾಗಿದೆ. ಆದ್ದರಿಂದ ಮಂದವಾದ, ಮಧುರವಾದ ಹಿನ್ನೆಲೆ ಸಂಗೀತ ವಿದ್ದಲ್ಲಿ ಒಳ್ಳೆಯದೆಂದು ಭಾವಿಸಲಾಗಿದೆ.

ಇದೇ ಅಲ್ಲದೆ ಉದ್ಯೋಗಿಗೆ ಕೊಡುವ ಪೀಠೋಪಕರಣಗಳು ಸುಖಪ್ರದವಾಗಿದ್ದು ಕೆಲಸ ಮಾಡಲು ಸಹಾಯಕವಾಗಿರಬೇಕು. ಕೆಲಸದ ಮಧ್ಯೆ ಸ್ವಲ್ಪ ವಿರಾಮ ನೀಡಿದಲ್ಲಿ ಬಳಲಿಕೆಯನ್ನು ನಿವಾರಿಸಿಕೊಂಡು ಮತ್ತೆ ಹೆಚ್ಚು ದಕ್ಷತೆಯಿಂದ ಕೆಲಸ ಮುಂದುವರಿಸಲು ಸಾಧ್ಯವಾಗುತ್ತದೆ.

ಕೇಂದ್ರೀಕರಣ : ಕಚೇರಿಯ ಕೆಲಸವನ್ನು ಕೇಂದ್ರೀಕರಿಸುವುದರಿಂದ ಅನೇಕ ರೀತಿ ಯಲ್ಲಿ ಮಿತವ್ಯಯ ಸಾಧಿಸಬಹುದು. ಇಂದಿನ ಕಚೇರಿಗಳಲ್ಲಿ ಹೆಚ್ಚುಹೆಚ್ಚಾಗಿ ಯಂತ್ರಗಳನ್ನು ಉಪಯೋಗಿಸುತ್ತಿರುವುದರಿಂದ ಕೆಲಸದ ಕೇಂದ್ರೀಕರಣ ಹೆಚ್ಚಾಗು ತ್ತಿದೆ. ಹೆಚ್ಚಾಗಿ ಕೇಂದ್ರೀಕರಣವಿರುವ ವಿಭಾಗಗಳೆಂದರೆ ಲೆಕ್ಕದ ವಿಭಾಗ, ಹಣಕಾಸು ವಿಭಾಗ, ಸಿಬ್ಬಂದಿ ವಿಭಾಗ, ಕೊಳ್ಳುವ ಮತ್ತು ಮಾರುವ ವಿಭಾಗ, ಮತ್ತು ಬೆರಳಚ್ಚು ವಿಭಾಗ. ಇದರಿಂದಾಗಿ ಆ ವಿಭಾಗಗಳಲ್ಲಿ ಕೆಲಸ ಮಾಡುವವರು ಹೆಚ್ಚು ನಿಷ್ಣಾತರಾಗಿ ಚೆನ್ನಾಗಿ ಮತ್ತು ಸುಗಮವಾಗಿ ಕೆಲಸ ಮಾಡಲು ಸಹಾಯವಾಗುತ್ತದೆ. ಅದೂ ಅಲ್ಲದೆ ಕಾಲವಿಳಂಬ ಕಡಿಮೆಯಾಗುತ್ತದೆ. ಕಡಿಮೆ ಜನಗಳನ್ನು ಕೆಲಸಕ್ಕೆ ತೆಗೆದುಕೊಳ್ಳುವುದರಿಂದ ಖರ್ಚಿನ ಉಳಿಕೆಯಾಗುತ್ತದೆ. ಮುಖ್ಯಸ್ಥನಿಗೆ ಅವಶ್ಯ ವಾದ ಮತ್ತು ರಹಸ್ಯ ಕಲಾಪಗಳ ವಿಭಾಗಗಳನ್ನು ಬಿಟ್ಟು ಉಳಿದೆಲ್ಲ ವಿಭಾಗ ಗಳನ್ನು ಕೇಂದ್ರೀಕೃತಗೊಳಿಸಿದಲ್ಲಿ ಮಿತವ್ಯಯ ಹೆಚ್ಚು ಸಾಧಿಸಬಹುದು.

ಕಚೇರಿಯ ಸಲಕರಣೆಗಳ ಸರಿಯಾದ ಉಪಯೋಗದಿಂದಲೂ ಮಿತವ್ಯಯ ಸಾಧ್ಯ. ಹೆಚ್ಚು ಬೆಲೆಯ ಯಂತ್ರಗಳು ಬೇಕೇ ಆಗಿದ್ದ ಪಕ್ಷದಲ್ಲಿ ಮಾತ್ರ ಅವನ್ನು ಕೊಳ್ಳ ಬೇಕು. ಇಲ್ಲದಿದ್ದಲ್ಲಿ ಅವನ್ನು ಬಾಡಿಗೆಯ ಮೇಲಾಗಲಿ ಬೇರೊಬ್ಬರೊಡನೆ ಸಹ ಭಾಗಿತ್ವದಲ್ಲಿಯಾಗಲಿ ಪಡೆದು ಉಪಯೋಗಿಸಬಹುದು. ಇದರಿಂದಾಗಿ ಆರಂಭಿಕ ಖರ್ಚಿನ ಉಳಿತಾಯವಾಗುತ್ತದೆ. ಮುಂದೆ ಸಂಸ್ಥೆ ಚೆನ್ನಾಗಿ ಬೆಳೆದಾಗ ಅಂಥ ಭಾರಿ ಬೆಲೆಯ ಯಂತ್ರಗಳನ್ನು ಕೊಳ್ಳಬಹುದು.

ಸಾಮಗ್ರಿ ಹಂಚಿಕೆಯ ಕಾರ್ಯದ ಕೇಂದ್ರೀಕರಣ, ಸಣ್ಣ ಸಣ್ಣ ಮೊತ್ತದಲ್ಲಿ ಅದರ ಹಂಚಿಕೆ ಮತ್ತು ಸೂಕ್ತವಾದ ನಮೂನೆಗಳ (ಫಾರಂ) ಬಳಕೆ–ಇವುಗಳಿಂದ ಶ್ರಮವೂ ಸಮಯವೂ ಹಣವೂ ಉಳಿತಾಯವಾಗುತ್ತವೆ. ಅನಾವಶ್ಯಕ ಕ್ರಿಯೆಯನ್ನು ತಪ್ಪಿಸುವ ನಮೂನೆಗಳು ಕಚೇರಿಯ ಕಚ್ಚಾಸಾಮಗ್ರಿ ಎಂಬುದು ಸುಳ್ಳಲ್ಲ. ಇವು ಸರಳವೂ ಪರಿಷ್ಕೃತವೂ ಆಗಿದ್ದು, ಉಪಯುಕ್ತದೃಷ್ಟಿಯಿಂದ ಇವನ್ನು ಅಳವಡಿಸಿದ್ದಾದರೆ ಸಾರ್ಥಕವೂ ಮಿತವ್ಯಯಕರವೂ ಆಗಿರುತ್ತವೆ.

(ಕೆ.ಜಿ.ಆರ್.)

**ಕಜ್ಜಿ :** ಮೇಲ್ಚರ್ಮ ಪದರದಲ್ಲಿ ಮಾನವನ ಮಾಂಸದಿನಿ (ಸಾರ್ಕಾಪ್ಟೀಸ್) ಕಜ್ಜಿಹುಳು ನೆಲೆಸಿದ್ದರಿಂದ ಏಳುವ ಒಂದು ಅಂಟುರೋಗ (ಸ್ಕೇಬೀಸ್). ಬೆರಳ ಸಂದು ಗಳು, ಕಂಕುಳು, ಗಜ್ಜಲುಗಳ ಚರ್ಮದೊಳಕ್ಕೆ ಬಿಲದಂತೆ ತೋಡಿಕೊಂಡು ಕ್ರಿಮಿ ಒಳಸೇರಿ ಮೇಲೆ ದದ್ದು ಗುಳ್ಳೆ ಎದ್ದಿರಬಹುದು. ರಾತ್ರಿಹೊತ್ತು ಇದರ ಚಟುವಟಿಕೆ ಬಹಳ. ಇದರಿಂದ ಕೆರೆತ, ತುರಿಕೆಯಾಗಿ ಇನ್ನಷ್ಟು ತೊಡಕಗಿ ಕೀವುಗೂಡುವುದೂ ಉಂಟು. ಬರಗಾಲ, ಯುದ್ಧಕಾಲಗಳಲ್ಲಿ ಇದು ಸಾಂಕ್ರಾಮಿಕವಾಗಬಹುದು. ಮನುಷ್ಯರಿಗೆ ಮಾತ್ರ ಹತ್ತುವ ಕಜ್ಜಿಯೇ ಬೇರೆ. ಬೆಕ್ಕು, ನಾಯಿ, ಕುರಿಗಳ ತೆರನ

ಸಸ್ತನಿಗಳಿಗೆ ಹತ್ತುವವೇ ಬೇರೆ. ಪ್ರಾಣಿಗಳವು ಜನರಿಗೆ ಹತ್ತಿದರೆ ಕಜ್ಜಿಯ ಲಕ್ಷಣಗಳು ಬೇರೆಯಾಗಿರುತ್ತವೆ. ಕಜ್ಜಿಯ ಬಗ್ಗೆ ಮತ್ತು ನಿವಾರಣೋಪಾಯಾದಿ ವಿವರಗಳಿಗೆ ನೋಡಿ : ಕಜ್ಜಿ ಉಣ್ಣಿ. ಚರ್ಮರೋಗಗಳು. (ಡಿ.ಎಸ್.ಎಸ್.)

**ಕಜ್ಜಿ ಉಣ್ಣಿ :** ಅರ್ಯಾಕ್ನಿಡ ವರ್ಗದ ಆಕರೈನ ಗಣಕ್ಕೆ ಸೇರಿದ ಸಂಧಿಪದಿಗಳು. ಇವನ್ನು ಸಾರ್ಕಾಪ್ಟಿಡೀ ಕುಟುಂಬಕ್ಕೆ ಸೇರಿಸಲಾಗಿದೆ. ಪಕ್ಷಿಗಳು, ಸಸ್ತನಿಗಳು ಮುಂತಾದ ಪ್ರಾಣಿಗಳ ಶರೀರದ ಮೇಲೆ ಇವು ಪರತಂತ್ರ ಜೀವಿಗಳಾಗಿ ವಾಸಿಸುತ್ತವೆ. ಸಾರ್ಕಾಪ್ಟೀಸ್ ಸ್ಕೇಬಿಯೈ ಎಂಬ ಪ್ರಭೇದ ಮನುಷ್ಯ, ಸಾಕುಪ್ರಾಣಿಗಳು ಮತ್ತು ಕಾಡುಮೃಗಗಳಲ್ಲಿ ಕಜ್ಜಿರೋಗವನ್ನು ತರುತ್ತದೆ. ಈ ಪ್ರಭೇದದಲ್ಲಿ ಅನೇಕ ಬುಡಕಟ್ಟುಗಳುಂಟು. ಇವು ನಿರ್ದಿಷ್ಟವಾದ ಪ್ರಾಣಿ ಪ್ರಭೇದಗಳಲ್ಲಿ ಪರತಂತ್ರ ಜೀವನವನ್ನು ನಡೆಸುತ್ತವೆ.

ಕಜ್ಜಿ ಉಣ್ಣಿಗಳು ಸಾಮಾನ್ಯವಾಗಿ ಚರ್ಮದ ಹೊರಪದರದಲ್ಲಿ ಹುದುಗಿಕೊಂಡು ವಾಸಿಸುತ್ತವೆ. ಇವುಗಳ ಬಣ್ಣ ಬಿಳುಪು.




ಕಜ್ಜಿ ಉಣ್ಣಿಗಳು : A ಹೆಣ್ಣು, B ಗಂಡು

ಸ್ಥೂಲವಾಗಿ ಉಣ್ಣಿಯ ದೇಹ ಆಮೆಯಾಕಾರದಲ್ಲಿದ್ದು ಉದರಭಾಗ ಚಪ್ಪಟೆಯಾಗಿಯೂ ಬೆನ್ನುಭಾಗ ಉಬ್ಬಿಕೊಂಡೂ ಇವೆ. ಬೆನ್ನುಭಾಗದ ಮೇಲೆಲ್ಲ ಸೂಕ್ಷ್ಮವಾದ ಸುಕ್ಕುಗಳಿವೆ. ಅಲ್ಲದೆ ಮೈಮೇಲೆ ಮುಳ್ಳುಗಳೂ ಬಿರುಗೂದಲುಗಳೂ ಇವೆ. ಇವುಗಳ ಸಂಖ್ಯೆ ಮತ್ತು ದೇಹದ ಮೇಲೆ ಇವು ಹರಡಿರುವ ರೀತಿಯ ಆಧಾರದ ಮೇಲೆ ಕಜ್ಜಿ ಉಣ್ಣಿಯನ್ನು ವಿವಿಧ ಬುಡಕಟ್ಟುಗಳಾಗಿ ವಿಂಗಡಿಸುತ್ತಾರೆ. ಚರ್ಮಕ್ಕೆ ಅಂಟಿಕೊಳ್ಳಲು ಉಣ್ಣಿಗೆ ಮುಳ್ಳುಗಳು ಸಹಾಯಕವಾಗಿವೆ. ಬಲು ಪುಟ್ಟದಾದ ಇದರ ದೇಹದ ಮುಂತುದಿಯಲ್ಲಿ ತುಂಬ ಚಿಕ್ಕ ತಲೆ ಇದೆ. ತಲೆಯ ತುದಿಯಲ್ಲಿ ಒಂದು ಜೊತೆ ಇಕ್ಕಳಕೊಂಡಿಗಳೂ (ಕಿಲಿಸರಿ) ಒಂದು ಜೊತೆ ಮೋಟಾದ ಸ್ಪರ್ಶಾಂಗಗಳೂ ಇವೆ. ಇವಕ್ಕೆ ಕಣ್ಣುಗಳೇ ಇಲ್ಲ. ದೇಹದ ಮುಂಭಾಗದಲ್ಲಿ ಎರಡು ಜೊತೆ ಮತ್ತು ಹಿಂಭಾಗದಲ್ಲಿ ಎರಡು ಜೊತೆ ಹೀಗೆ ಒಟ್ಟು ನಾಲ್ಕು ಜೊತೆ ಕಾಲುಗಳಿವೆ. ಹೆಣ್ಣು ಉಣ್ಣಿಯಲ್ಲಿ ಹಿಂಭಾಗದ ಎರಡು ಜೊತೆ ಕಾಲುಗಳಲ್ಲಿ ಬಿರುಗೂದಲುಗಳಿವೆ. ಗಂಡಿನಲ್ಲಿ ಹಿಂಭಾಗದ ಒಂದು ಜೊತೆ ಕಾಲುಗಳಲ್ಲಿ ಮಾತ್ರ ಬಿರುಗೂದಲುಗಳಿವೆ. ಉಳಿದೆಲ್ಲ ಕಾಲುಗಳಲ್ಲಿಯೂ ಹೀರುಬಟ್ಟಲುಗಳಿವೆ (ಸಕರ್ಸ್).

ಕಜ್ಜಿ ಉಣ್ಣಿಯಲ್ಲಿ ಲಿಂಗಭೇದವಿದೆ. ಹೆಣ್ಣು ಗಂಡಿಗಿಂತ ಗಾತ್ರದಲ್ಲಿ ದೊಡ್ಡದು. ಸಂಭೋಗಕ್ರಿಯೆಯ ಅನಂತರ ಹೆಣ್ಣು ಮನುಷ್ಯನ ಚರ್ಮದಲ್ಲಿ ಚಿಕ್ಕ ಗುಂಡಿ ತೋಡಿ, ಅದರಲ್ಲಿ 10–25 ಮೊಟ್ಟೆಗಳನ್ನಿಡುತ್ತದೆ. ಮೊಟ್ಟೆಗಳು 3–4 ದಿನಗಳಲ್ಲಿ ಒಡೆಯುತ್ತವೆ. ಇವುಗಳಿಂದ ಹೊರಬಂದ ಡಿಂಭಗಳು ವಯಸ್ಕ ಪ್ರಾಣಿಯನ್ನೇ ಹೋಲಿದರೂ ಮೂರು ಜೊತೆ ಕಾಲುಗಳನ್ನು ಮಾತ್ರ ಹೊಂದಿವೆ. ಮುಂದಿನ ಎರಡು ಜೊತೆ ಕಾಲುಗಳಲ್ಲಿ ಹೀರುಬಟ್ಟಲುಗಳಿವೆ. 2–3 ದಿನಗಳ ಅನಂತರ ಡಿಂಭ ಪೊರೆಬಿಟ್ಟು, ಹೊಸಚರ್ಮ ಬೆಳೆಸಿಕೊಂಡು, ಎಂಟು ಕಾಲುಗಳುಳ್ಳ ಅರ್ಭಕ (ನಿಂಫ್) ಆಗುತ್ತದೆ. ಇದು ಎರಡು —ಮೂರು ಸಾರಿ ಪೊರೆ ಕಳಚಿಕೊಂಡು ವಯಸ್ಕ ಪ್ರಾಣಿಯಾಗಿ ಮಾರ್ಪಾಟಾಗುತ್ತದೆ.

ಈ ಉಣ್ಣಿಗಳಿಂದ ಮನುಷ್ಯನಿಗೆ ಬರುವ ಕಜ್ಜಿ ಹಿಂದಿನ ಕಾಲದಿಂದಲೂ ಜನರಿಗೆ ಗೊತ್ತಿದೆ. ಇದರ ಕಷ್ಟ ಅನುಭವಿಸಿದವಗೇ ಗೊತ್ತು. ಕಜ್ಜಿಯಿಂದ ಪೀಡಿತನಾದ ರೋಗಿಯ ಸಂಪರ್ಕದಿಂದ ಅಥವಾ ಆತನ ಉಡಿಗೆಗಳನ್ನು ಮುಟ್ಟುವುದರಿಂದ ಈ ರೋಗ ಒಬ್ಬರಿಂದ ಇನ್ನೊಬ್ಬರಿಗೆ ಹರಡುತ್ತದೆ. ರೋಗದ ಮುಖ್ಯ ಲಕ್ಷಣ–ತುರಿಕೆ, ಕಡಿತ ಮತ್ತು ದೇಹದ ಮೇಲ್ಭಾಗದಲ್ಲಿ ತೋರುವ ಹುಣ್ಣು ಅಥವಾ ವ್ರಣ. ಅಲ್ಲದೆ ಕಜ್ಜಿಉಣ್ಣಿಗಳು ತೋಡಿದ ಗುಂಡಿಗಳಲ್ಲಿ ಸ್ಟೆಫೈಲೊಕಾಕೈಗಳೆಂಬ ಬ್ಯಾಕ್ಟೀರಿಯ ಸೇರಿಕೊಂಡು ಬೇರೆ ಬೇರೆ ಬಗೆಯ ರೋಗಗಳು ಬರುವ ಸಾಧ್ಯತೆಯೂ ಉಂಟು. ಕ್ರಮವಾಗಿ ಸ್ನಾನ ಮಾಡುವುದರಿಂದ ಕಜ್ಜಿಯ ರೋಗವನ್ನು ಬಹುಮಟ್ಟಿಗೆ ತಡೆಗಟ್ಟಬಹುದು. ಗಂಧಕದ ಮುಲಾಮು, ಮಾರ್ಕ್ಯುಸ್ಸೆನ್ ಮುಲಾಮು, ಬೆಂಜೈಲ್ ಬೆಂಜೊಯೇಟ್ ಡೈಮೀಥೈಲ್–ಡೈಫೆನಿಲಿನ್ ಡೈಸಲ್ಫೈಡ್ ಮುಂತಾದುವು ಕಜ್ಜಿಗೆ ಗೊತ್ತಾಗಿರುವ ಮದ್ದುಗಳಲ್ಲಿ ಕೆಲವು. (ಜಿ.ಎಸ್ಆರ್.)

**ಕಟಕ್ :** ಒರಿಸ್ಸ ರಾಜ್ಯದ ಒಂದು ನಗರ; ಜಿಲ್ಲೆ. ಮಹಾನದಿಯ ದಂಡೆಯ ಮೇಲೆ ಅದರ ಮುಖ್ಯ ಶಾಖೆಯಾದ ಕಟ್ಜೋರಿ ಕವಲೊಡೆಯುವಲ್ಲಿ, ಕಲ್ಕತ್ತದ ನೈಋತ್ಯಕ್ಕೆ 220 ಮೈ. ಮತ್ತು ಸಮುದ್ರದಿಂದ 45 ಮೈ. ದೂರದಲ್ಲಿ ಕಟಕ್ ನಗರವಿದೆ. ಇದು ಆಗ್ನೇಯ ರೈಲ್ವೆಯ ಒಂದು ನಿಲ್ದಾಣ. ಮದ್ರಾಸ್–ಹೌರಾ ರೈಲು ಮಾರ್ಗವೂ ಕಲ್ಕತ್ತ–ಮದ್ರಾಸ್ ರಾಷ್ಟ್ರೀಯ ಹೆದ್ದಾರಿಯೂ ಇದರ ಮೂಲಕ ಹಾದುಹೋಗುತ್ತವೆ. ಜನಸಂಖ್ಯೆ 1,46,590 (1961).

ಕಟಕ್ ನಗರವನ್ನು ಸ್ಥಾಪಿಸಿದವನು ಮೂರನೆಯ ಅನಂಗಭೀಮದೇವ (1211–38). ಬಾರಾಬತಿ ಕೋಟೆಯನ್ನು ಇವನೇ ಕಟ್ಟಿಸಿದ. ಮಹಾನದಿ ಮತ್ತು ಕಟ್ಜೋರಿಗಳ ಪ್ರವಾಹದಿಂದ ನಗರವನ್ನು ರಕ್ಷಿಸುವ ಉದ್ದೇಶದಿಂದ ಇವುಗಳ ದಂಡೆಯುದ್ದಕ್ಕೂ ಕಲ್ಕಟ್ಟಣೆ ನಿರ್ಮಿಸಿದವನೂ ಈತನೇ ಇರಬಹುದು. ಮುಕುಂದದೇವನ (1559–68) ಕಾಲಕ್ಕೆ ಬಾರಾಬತಿ ಕೋಟೆ ಒಂಬತ್ತು ಅಂತಸ್ತುಗಳ ರಚನೆಯಾಗಿ ಮಾರ್ಪಟ್ಟಿತು. 1568ರಲ್ಲಿ ಆಫ್ಘನರು ಕಟಕ್ ನಗರವನ್ನಾಕ್ರಮಿಸಿಕೊಂಡರು. ಈ ಆಕ್ರಮಣದೊಂದಿಗೆ ಒರಿಸ್ಸದಲ್ಲಿ ಹಿಂದೂ ರಾಜರ ಆಳ್ವಿಕೆಯೂ ಕೊನೆಗೊಂಡಿತು. 1590ರಲ್ಲಿ ಇದನ್ನು ಮೊಗಲರೂ 1751ರಲ್ಲಿ ಮರಾಟರೂ ವಶಪಡಿಸಿಕೊಂಡರು. ಮರಾಟರನ್ನು ಓಡಿಸಿ ಇದನ್ನು ಬ್ರಿಟಿಷರು ಆಕ್ರಮಿಸಿಕೊಂಡದ್ದು 1803ರಲ್ಲಿ. ಅವರ ಆಳ್ವಿಕೆಯ ಕಾಲದಲ್ಲಿ ಇದು ಒರಿಸ್ಸದ ರಾಜಧಾನಿಯಾಗಿತ್ತು.

ಕಟಕ್ ನಗರದಲ್ಲಿ ಅನೇಕ ಸ್ಮಾರಕಗಳಿವೆ. ಲಾಲ್‌ಬಾಗ್ ಅರಮನೆ (1633), ಜಮಾ ಮಸೀದಿ (1690), ಕದಾಂ ರಸೂಲ್ (1715) ಇವುಗಳೇ ಅಲ್ಲದೆ 18ನೆಯ ಶತಮಾನದಲ್ಲಿ ನಿರ್ಮಿತವಾದ ಅಮರೇಶ್ವರ ದೇವಸ್ಥಾನ ಮತ್ತು ಜೈನ ದೇವಾಲಯಗಳು ಮುಖ್ಯ. ಬ್ಯಾಪ್ಟಿಸ್ಟ್ ಚರ್ಚ್, ಕೆಥೊಲಿಕ್ ಚರ್ಚ್ ಇವು 19ನೆಯ ಶತಮಾನದಲ್ಲಿ ನಿರ್ಮಾಣವಾದುವು.

ಕಟಕ್ ಉತ್ಕಲ ವಿಶ್ವವಿದ್ಯಾಲಯದ ಕೇಂದ್ರ. ರ್‍ಯಾವೆನ್‌ಷಾ ಕಾಲೇಜ್, ಕ್ರೈಸ್ಟ್ ಕಾಲೇಜ್, ಸ್ಟೀವರ್ಟ್ ವಿಜ್ಞಾನ ಕಾಲೇಜ್, ಶೈಲಬಾಲಾ ಮಹಿಳಾ ಕಾಲೇಜ್, ಶ್ರೀರಾಮಚಂದ್ರಭಂಜ್ ವೈದ್ಯಕೀಯ ಕಾಲೇಜ್, ರಾಧಾನಾಥ್ ಟ್ರೇನಿಂಗ್ ಕಾಲೇಜ್ ಇವು ಉತ್ಕಲ ವಿಶ್ವವಿದ್ಯಾನಿಲಯದ ಕೆಲವು ಮುಖ್ಯ ಉಚ್ಚಶಿಕ್ಷಣ ಸಂಸ್ಥೆಗಳು. ಕೇಂದ್ರೀಯ ಅಕ್ಕಿ ಸಂಶೋಧನ ಸಂಸ್ಥೆಯೊಂದು ಇಲ್ಲಿ ಸ್ಥಾಪಿತವಾಗಿದೆ. ಒರಿಸ್ಸದ ಉಚ್ಚನ್ಯಾಯಾಲಯವಿರುವುದು ಕಟಕಿನಲ್ಲೇ.

ಕಟಕ್ ಅನೇಕ ಗುಡಿಸಲುಕೈಗಾರಿಕೆಗಳ ಕೇಂದ್ರ. ಚಿನ್ನ ಬೆಳ್ಳಿಯ ತೆರಪು ಚಿತ್ರಕಲೆಯೂ ಕೊಂಬಿನ ಕುಶಲ ಕಲೆಯೂ ಮುಖ್ಯ. ಜವಳಿ ಗಿರಣಿಯೂ ಕಾಗದ, ಉಕ್ಕಿನ ಕೊಳವೆ ಮತ್ತು ಗಾಜಿನ ಕಾರ್ಖಾನೆಗಳೂ ಆಧುನಿಕ ಉದ್ಯಮಗಳು. ಒರಿಸ್ಸದ ನಾನಾ ಭಾಗಗಳೊಂದಿಗೆ ರೈಲ್ವೆ ಮತ್ತು ರಸ್ತೆ ಸಂಪರ್ಕ ಪಡೆದಿರುವ ಕಟಕ್ ಒಂದು ಮುಖ್ಯ ವಾಣಿಜ್ಯ ಕೇಂದ್ರ. (ಆರ್.ಪಿ.ಎಸ್.)

ಬ್ರಾಹ್ಮಣಿ ಮತ್ತು ಮಹಾನದಿಗಳ ಮುಖಜಭೂಮಿಯನ್ನೂ ಹಿಂಬದಿಯ ಬೆಟ್ಟದ ನೆಲವನ್ನೂ ಒಳಗೊಂಡಿರುವ ಕಟಕ್ ಜಿಲ್ಲೆಯ ವಿಸ್ತೀರ್ಣ 4,237 ಚ.ಮೈ. ಜನಸಂಖ್ಯೆ 30,64,474 (1961). ಈ ಜಿಲ್ಲೆಯ ಜನಸಾಂದ್ರತೆ ಚ.ಮೈ.ಗೆ 723.

ಕಟಕ್ ಜಿಲ್ಲೆಯಲ್ಲಿ ಮೂರು ಸ್ವಾಭಾವಿಕ ವಿಭಾಗಗಳಿವೆ. ಪೂರ್ವದಲ್ಲಿ 3 ರಿಂದ 30 ಮೈಲಿಗಳ ವರೆಗೆ ಅಗಲವಾಗಿರುವ ಕಡಲಂಚು ಜೌಗು ನೆಲ ಲವಣಮಯ. ಇದರ ಪಶ್ಚಿಮಕ್ಕೆ ಸುಮಾರು 40 ಮೈ. ಅಗಲದ, ಮೆಕ್ಕಲುಮಣ್ಣಿನಿಂದ ಕೂಡಿದ ಫಲವತ್ತಾದ ಮೈದಾನವಿದೆ. ಇಲ್ಲಿ ಒಳ್ಳೆಯ ನೀರಾವರಿ ವ್ಯವಸ್ಥೆಯಿದೆ. ಎತ್ತರದ ಪ್ರದೇಶದಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಹಬ್ಬಿರುವ ಹಲವು ಬೆಟ್ಟಗಳಿವೆ. ಇವುಗಳ ಮೈ ವೃಕ್ಷಪೂರಿತ, ನಡುವೆ ಕಣಿವೆಗಳಿವೆ. ವೈತರಣೀನದಿ ಇದರ ಉತ್ತರದ ಗಡಿ. ಅಕ್ಕಿ ಮತ್ತು ದ್ವಿದಳ ಧಾನ್ಯಗಳೂ ಸಣಬೂ ಈ ಜಿಲ್ಲೆಯ ಮುಖ್ಯಬೆಳೆ.

ವೈತರಣಿಯ ದಡದ ಮೇಲಿರುವ ಜಾಜ್‌ಪುರ ಮುಖ್ಯ ಯಾತ್ರಾಸ್ಥಳ. ಮಹಾಭಾರತದಲ್ಲೂ ಇದರ ಉಲ್ಲೇಖವಿದೆ. ಇದು ಅನೇಕ ರಾಜಮನೆತನಗಳ ರಾಜಧಾನಿಯಾಗಿತ್ತು. ಬೋಧಿಸತ್ತ್ವ ಮತ್ತು ಮಾತೃಕೆಯರ ಪ್ರತಿಮೆಗಳೂ 33′ ಎತ್ತರದ ಷೋಡಶಮುಖಿ ಶಿಲಾಸ್ತಂಭವೂ ಪ್ರಾಚೀನಸ್ಮಾರಕಗಳಲ್ಲಿ ಮುಖ್ಯವಾದವು. 1686ರಲ್ಲಿ

ನವಾಬ್ ಅಬು ನಾಸಿರ್‌ಖಾನ್ ನಿರ್ಮಿಸಿದ ಮಸೀದಿಯೊಂದು ಇಲ್ಲಿದೆ. ಈ ಜಿಲ್ಲೆಯ ದಕ್ಷಿಣಭಾಗದಲ್ಲಿರುವ ಉದಯಗಿರಿ. ಲಲಿತಗಿರಿ ಮತ್ತು ರತ್ನಗಿರಿ ಬೆಟ್ಟಗಳಲ್ಲಿ ಪ್ರಾಚೀನ ಬೌದ್ಧ ಮಂದಿರಗಳಿವೆ. ನೋಡಿ—ಒರಿಸ್ಸ. *

**ಕಟಕಟೆ :** ಮೆಟ್ಟಿಲುಸಾಲಿನ ಒಂದು ಪಕ್ಕದಲ್ಲಿ ಅಥವಾ ಎರಡೂ ಪಕ್ಕಗಳಲ್ಲಿ, ಉಪ್ಪರಿಗೆ, ಮೊಗಸಾಲೆಯ (ಬಾಲ್ಕನಿ) ಹೊರಾಂಗಣ ಮುಂತಾದ ಕಡೆಗಳಲ್ಲಿ ರಕ್ಷಣೆ ಹಾಗೂ ಅಲಂಕಾರಕ್ಕೋಸ್ಕರ ನಿರ್ಮಿಸುವ ರಚನೆ (ಬ್ಯಾಲಸ್ಟ್ರೇಡ್). ಇದನ್ನೇ ಕಿಟಕಿಯಲ್ಲಿ ಕಂಬಿಗಳ ಬದಲು ಅಳವಡಿಸಿದಾಗ ಕಟಾಂಜನ ಎಂದು ಕರೆಯುತ್ತಾರೆ.



ಸುತ್ತುಮೆಟ್ಟಿಲಿನ ಕಟಕಟೆ

ಸಮಾನಾಂತರವಾಗಿ ಸರಳರೇಖೆಯಲ್ಲೋ ತುಂಡಾದ ರೇಖೆಯಲ್ಲೋ ವಕ್ರರೇಖೆಯಲ್ಲೋ ಸಾಗುವ ಒಂದು ಜೊತೆ ಚೌಕಟ್ಟು. ಇವನ್ನು ಪರಸ್ಪರ ಬಂಧಿಸುವ ಮತ್ತು ನಿಲ್ಲಿಸುವ ಅಡ್ಡಕಂಬಗಳು (ಬ್ಯಾಲುಸ್ಟರ್ಸ್)—ಇವಿಷ್ಟು ಕಟಕಟೆಯ ಪ್ರಧಾನ ಅಂಗಗಳು. ಚೌಕಟ್ಟಿನ ತಳಭಾಗದ ಹೆಸರು ಆಧಾರಪಟ್ಟಿ. ಮಿಕ್ಕಂತೆ ಕಟಕಟೆ ಕಟಾಂಜನಗಳ ವಿನ್ಯಾಸ ಶಿಲ್ಪಿಯ ಹಾಗೂ ಮಾಲೀಕನ ಅಭಿರುಚಿಗಳಿಗೆ ತಕ್ಕಂತೆ ವಿವಿಧ ಆಕಾರ. ಅಲಂಕರಣಗಳಲ್ಲಿರುತ್ತವೆ. ಕಟಕಟೆಯನ್ನು ಕಲ್ಲು ಚಪ್ಪಡಿ. ಮರ. ಕಬ್ಬಿಣ. ಇಟ್ಟಿಗೆ. ಕಾಂಕ್ರೀಟು. ಕಬ್ಬಿಣದ ಕಂಬಿ ಸೇರಿರುವ ಕಾಂಕ್ರೀಟು ಇವುಗಳಿಂದ ಕಟ್ಟಬಹುದು. ಕೆಲವು ಸಾರಿ ಕಬ್ಬಿಣದ ಕಂಬಿ ಮತ್ತು ಮರದ ಪಟ್ಟಿಗಳನ್ನು ಜೋಡಣೆಮಾಡಿ ಅಥವಾ ಕಬ್ಬಿಣದ ಪಟ್ಟಿ ಮತ್ತು ಚಚ್ಚೌಕ ಗಾತ್ರದ ಕಬ್ಬಿಣದ ಕಂಬಿಗಳಿಂದ ಕಟಕಟೆಯನ್ನು ತಯಾರಿಸಿ ಮೆಟ್ಟಿಲುಗಳ ಇಕ್ಕೆಲಗಳಲ್ಲೂ ಜೋಡಿಸಿರುತ್ತಾರೆ. ಕಟಕಟೆಯ ಮೇಲ್ಭಾಗ ನುಣುಪು ಮತ್ತು ಗುಂಡಗಿದ್ದು ಅದರ ಮೇಲೆ ಸರಾಗವಾಗಿ ಕೈಗಳನ್ನು ಚಲಿಸುವಂತೆ ಸೌಕರ್ಯವಿದೆ. ಕಟಕಟೆಯ ಎತ್ತರ $2\frac{1}{2}'-3'$. ಮೆಟ್ಟಲು ಹತ್ತುವವರಿಗೆ ಅಂತಸ್ತಿನ ಎರಡು ಕಡೆಗಳಲ್ಲೂ ಇದು



ನೇರಮೆಟ್ಟಿಲಿನ ಕಟಕಟೆ

ಊರುಗೋಲಿನಂತಿದ್ದು ಸಾಗುವವರು ಕೆಳಗೆ ಬೀಳದಂತೆ ರಕ್ಷಣೆ ಒದಗಿಸುತ್ತದೆ. ಕಟಕಟೆಗಳಲ್ಲಿ ವಿವಿಧ ರೀತಿಯ ಅಲಂಕರಣಗಳನ್ನು ಅಳವಡಿಸುವುದರಿಂದ ಕಟ್ಟಡಕ್ಕೆ ಸೌಂದರ್ಯದ ಒಪ್ಪ ದೊರೆಯುವುದು. (ಜಿ.ಟಿ.ಜಿ.)

**ಕಟವಪ್ರ :** ನೋಡಿ—ಶ್ರವಣಬೆಳಗೊಳ

**ಕಟಾಂಗ :** ಆಫ್ರಿಕದ ಕಾಂಗೋ ಗಣರಾಜ್ಯದ ಒಂದು ಪ್ರಾಂತ್ಯವಾಗಿದ್ದ ಪ್ರದೇಶ. ಪೂರ್ವ ರೇಖಾಂಶ 22°ಯಿಂದ 27°ಯ ವರೆಗೂ ದಕ್ಷಿಣ ಅಕ್ಷಾಂಶ 8°ಯಿಂದ 12°ಯ ವರೆಗೂ ವ್ಯಾಪಿಸಿರುವ ಈ ಪ್ರದೇಶದ ವಿಸ್ತೀರ್ಣ 1.91,878 ಚ.ಮೈ. ಜನಸಂಖ್ಯೆ ಸುಮಾರು 16.87,984 (1958). ಇವರ ಪೈಕಿ 33,507 ಐರೋಪ್ಯರು. ಈಶಾನ್ಯದಲ್ಲಿ ಟಾಂಗನ್ಯೀಕ ಸರೋವರ. ಪೂರ್ವದಕ್ಷಿಣಗಳಲ್ಲಿ ಜ಼ಾಂಬಿಯ, ಪಶ್ಚಿಮದಲ್ಲಿ ಆಂಗೋಲ—ಇವು ಇದರ ಮೇರೆಗಳು. ಬೆಟ್ಟಗುಡ್ಡಗಳಿಂದಲೂ ಪ್ರಸ್ಥಭೂಮಿಗಳಿಂದಲೂ ಕೂಡಿರುವುದರಿಂದ ಈ ಪ್ರದೇಶದಲ್ಲಿ ನಡುನಡುವೆ ತಗ್ಗು ನೆಲಗಳಿವೆ. ಇವುಗಳಲ್ಲಿ ಉಪೆಂಬ ಮುಖ್ಯವಾದುದು. ಸರೋವರಗಳಿಂದಲೂ ಜೌಗು ನೆಲಗಳಿಂದಲೂ ಕೂಡಿರುವ ಈ ಪ್ರದೇಶದಲ್ಲಿ ಕಾಂಗೋನದಿಯ ತಲೆದೊರೆಯಾದ (ಹೆಡ್‌ಸ್ಟ್ರೀಮ್) ಲೂವಲಾಬ ಹರಿಯುತ್ತದೆ. ಕಟಾಂಗ ಎತ್ತರದಲ್ಲಿರುವುದರಿಂದ ಇಲ್ಲಿಯ ವಾಯುಗುಣ ತಂಪು. ವಾರ್ಷಿಕ ಸರಾಸರಿ ಉಷ್ಣತೆ 20° ಸೆಂ. (68°ಫ್ಯಾ.). ಅಕ್ಟೋಬರ್ ಮಧ್ಯದಿಂದ ಏಪ್ರಿಲ್ ಮಧ್ಯದ ವರೆಗೆ ಬೇಸಗೆ ಮತ್ತು ಮಳೆಗಾಲ. ವಾರ್ಷಿಕ ಮಳೆ 55''. ಕಾಡು, ಸವನ್ನ, ಹುಲ್ಲುಗಾವಲು—ಇಲ್ಲಿಯ ಮುಖ್ಯ ಸಸ್ಯ. ಸಿಂಹಗಳೂ ಘೇಂಡಾಮೃಗಗಳೂ ಇವೆ. 4.529 ಚ.ಮೈ. ವಿಸ್ತಾರವಾಗಿರುವ ಉಪೆಂಬ ರಾಷ್ಟ್ರೀಯ ವನದಲ್ಲಿ ಆನೆ. ಹೇಸರಗತ್ತೆ. ಎಮ್ಮೆ. ಜಿಂಕೆ ಮುಂತಾದವು ಆಶ್ರಯ ಪಡೆದಿವೆ.

ಮುಸುಕಿನ ಜೋಳ, ನೆಲಗಡಲೆ. ಮರಗೆಣಸು ಮತ್ತು ಹತ್ತಿ ಮುಖ್ಯ ಬೆಳೆಗಳು. ದನಕರುಗಳು ಮತ್ತು ಕುರಿಗಳನ್ನು ಮಾಂಸ ಮತ್ತು ಉಣ್ಣೆಗಳಿಗಾಗಿ ಸಾಕುವರು. ತಾಮ್ರ. ಕೋಬಾಲ್ಟ್. ಯುರೇನಿಯಂ. ಸೀಸ. ತವರ. ಸತುವು ಮುಖ್ಯ ಖನಿಜಗಳು. ಕಮಿಮೆ ದರ್ಜೆಯ ಕಲ್ಲಿದ್ದಲೂ ಸಿಗುತ್ತದೆ.

ಕಟಾಂಗದ ಸರಾಸರಿ ಜನಸಂಖ್ಯೆ ಚ.ಮೈ.ಗೆ 15. ಎಲಿಸಬೆತ್‌ವಿಲ್ (48,700) ಮತ್ತು ಜ಼ಾಡೋವಿಲ್ (17.300). ಕಾಲ್‌ವೇಜ಼ಿ (47,772), ಆಲ್ಬರ್ಟ್‌ವಿಲ್ (29.488) ಮತ್ತು ಕಮೀನ (20.388) ಇಲ್ಲಿಯ ಕೆಲವು ಪಟ್ಟಣಗಳು [illegible]

ಕೊಟ್ಟಿರುವ ಜನಸಂಖ್ಯೆಗಳು 1958ರ ಅಂದಾಜು). ಕಾಲ್‍ವೇಜ಼ಿ ತಾಮ್ರದ ಗಣಿ ಪಟ್ಟಣ. ಕಬಾಲೋ ಲೂವಬಾಲದ ದಡದ ಮೇಲಿದೆ. ಮನೋನೊ ಮತ್ತು ಮಿಟ್ವಾಬ ತವರದ ಗಣಿ ಕೇಂದ್ರಗಳು. ಕಮೀನ ರೈಲ್ವೆ ಮತ್ತು ರಸ್ತೆಗಳ ಸಂಧಿ. ಮುಖ್ಯ ಸೇನಾ ಕೇಂದ್ರ.

ಕಟಾಂಗದ ಸಾರಿಗೆ ವ್ಯವಸ್ಥೆ ತಕ್ಕಮಟ್ಟಿಗೆ ಅಭಿವೃದ್ಧಿ ಹೊಂದಿದೆ. ಎಲಿಸ಼ಬೆತ್‍ವಿಲ್, ಜ಼ಾಡೋವಿಲ್ ಮತ್ತು ಆಲ್ಬೇರ್‍ವಿಲ್‍ಗಳಿಗೂ ಫ್ರಾಂಕೈ ಮತ್ತು ಎಂಪೇಸ್ ಬಂದರುಗಳಿಗೂ ರೈಲ್ವೆಸಂಬಂಧ ಕಲ್ಪಿಸಲಾಗಿದೆ. ಪಶ್ಚಿಮದಲ್ಲಿ ಅಟ್ಲಾಂಟಿಕ್ ಬಂದರಾದ ಲೊಬಿಟೊದೊಡನೆಯೂ ಸಂಪರ್ಕವುಂಟು. ಟಾಂಗನ್ಯೀಕ ಸರೋವರವೂ ಲೂವಬಾಲ ನದಿಯೂ ಜಲಮಾರ್ಗಗಳಿಗೆ ಅನುಕೂಲಕರ. ಎಲಿಸ಼ಬೆತ್‍ವಿಲ್ ಅಂತರರಾಷ್ಟ್ರೀಯ ವಿಮಾನ ನಿಲ್ದಾಣ.

1891-92ರಲ್ಲಿ ಕ್ಯಾಪ್ಟನ್ ಸ್ಟೇರ್ಸ್ ನಡೆಸಿದ ಪರಿಶೋಧನೆಯ ಫಲವಾಗಿ ಕಟಾಂಗ ಪ್ರದೇಶ ಕಾಂಗೋಸ್ವತಂತ್ರರಾಜ್ಯಕ್ಕೆ ಒಳಪಟ್ಟಿತು. ಕಾಂಗೋ ಸ್ವತಂತ್ರ ರಾಜ್ಯವೂ ಕಟಾಂಗ ಕಂಪನಿಯೂ ಕೂಡಿಕೊಂಡು ಈ ಪ್ರದೇಶದಲ್ಲಿ ಖನಿಜ ತೆಗೆಯುವ ಹಕ್ಕನ್ನು ಬೆಲ್ಜಿಯನ್ ವ್ಯಾಪಾರಸಂಸ್ಥೆಯೊಂದಕ್ಕೆ ನೀಡಿದುವು (1906). 1910ರಲ್ಲಿ ಎಲಿಸ಼ಬೆತ್‍ವಿಲ್ ಕಟಾಂಗದ ರಾಜಧಾನಿಯಾದ ಮೇಲೆ ಬೆಲ್ಜಿಯನರು ಹೆಚ್ಚಿನ ಸಂಖ್ಯೆಯಲ್ಲಿ ಇಲ್ಲಿ ನೆಲೆಸಿದರು. 1960ರ ಜೂನ್ 30ರಂದು ಕಾಂಗೋ ಸ್ವತಂತ್ರವಾದ ಮೇಲೆ ಕಟಾಂಗದಲ್ಲಿ ಮೋಯಿಸ್ ಷೋಂಬೆ ಪ್ರಬಲನಾಗಿ, ಕೇಂದ್ರದಲ್ಲಿ ಕಮ್ಯೂನಿಸ್ಟ್ ಸರ್ಕಾರವಿದೆಯೆಂಬ ನೆವವೊಡ್ಡಿ ಕಟಾಂಗದ ಸ್ವಾತಂತ್ರ್ಯವನ್ನು ಸಾರಿದನಲ್ಲದೆ (1960ರ ಜುಲೈ 11) ಮುಂದೆ ತಾನೇ ಅಧ್ಯಕ್ಷನಾದ. ಕಾಂಗೋ ರಾಜ್ಯಗಳ ಒಕ್ಕೂಟಕ್ಕೆ ಷೋಂಬೆ ಸಮ್ಮತಿಸಿದನಾದರೂ ಕಟಾಂಗದ ಸ್ವಾಯತ್ತೆಯನ್ನು ಪುರಸ್ಕರಿಸಬೇಕೆಂಬುದು ಅತನ ವಾದವಾಗಿತ್ತು. 1962ರಲ್ಲಿ ವಿಶ್ವಸಂಸ್ಥೆ ಕಟಾಂಗದ ಮೇಲೆ ಸೇನಾ ಕ್ರಮ ಕೈಕೊಂಡ ಮೇಲೆ ಇದರ ಪ್ರತ್ಯೇಕತೆ ಕೊನೆಗೊಂಡಿತು. ಕೇಂದ್ರಸರ್ಕಾರ ಇದನ್ನು ಉತ್ತರ ಕಟಾಂಗ ಮತ್ತು ಲೂವಲಾಬ ಎಂದೂ ಪೂರ್ವ ಕಟಾಂಗ ಎಂದೂ ಎರಡು ಪ್ರಾಂತ್ಯಗಳಾಗಿ ವಿಂಗಡಿಸಿದೆ. (ಎ.ಕೆ.)

**ಕಟಾರಿ, ಆರ್.ಡಿ. :** ಭಾರತೀಯ ನೌಕಾಬಲದ ವರಿಷ್ಠ ಹುದ್ದೆಗೆ ಏರಿದ ಪ್ರಥಮ ಭಾರತೀಯ. ರಾಮದಾಸ್ ಡಿ. ಕಟಾರಿಯವರ ಜನನ ತಮಿಳುನಾಡಿನ ಚೆಂಗಲ್‍ಪೇಟೆಯಲ್ಲಿ. ನೌಕಾಬಲದ ಡಫರಿನ್ ಎಂಬ ಶಿಕ್ಷಣ ನೌಕೆಯಲ್ಲಿ ಮೊದಲು ಶಿಕ್ಷಣ ದೊರೆಯಿತು. ಮುಂದೆ ಎರಡನೆಯ ಮಹಾಯುದ್ಧದಲ್ಲಿ ಅಟ್ಲಾಂಟಿಕ್ ಮತ್ತು ಹಿಂದೂ ಸಾಗರಗಳಲ್ಲಿ ಯುದ್ಧಾನುಭವ ಗಳಿಸಿದರು. ಸ್ವಲ್ಪಕಾಲ ನೌಕಾಬಲದಲ್ಲಿ ಶಿಕ್ಷಕರಾಗಿಯೂ ಇದ್ದರು.

ಐ.ಎನ್.ಎಸ್. ಕೃಷ್ಣ ಎಂಬ ಹಡಗಿನ ನಾಯಕರಾಗಿದ್ದಾಗ ಭಾರತದ ಮೊದಲನೆಯ ಐ.ಎನ್.ಎಸ್. ನ್ಯೂ ಡೆಲ್ಲಿ ಎಂಬ ಹೆಸರಿನ ಕ್ರೂಸರ್ ನೌಕೆಗೆ ಸೇರಿಕೊಳ್ಳಲು ಇಂಗ್ಲೆಂಡಿಗೆ ತೆರಳಿದರು. ಜುಲೈ 1948ರಲ್ಲಿ ಅದನ್ನು ವಹಿಸಿಕೊಂಡಂದಿನಿಂದ 1949ರ ಆದಿ ಭಾಗದ ವರೆಗೆ ಭಾರತದ ಪ್ರಥಮ ಪತಾಕಾ ನೌಕೆಯ (ಫ್ಲಾಗ್‍ಶಿಪ್) ಮುಖ್ಯಸ್ಥರು ಇವರೇ. ಆ ಬಳಿಕ ಭಾರತೀಯ ನೌಕಾದಳದ ಡಿಸ್ಟ್ರಾಯರ್ ಪಡೆಯ ಅಧಿನಾಯಕರಾಗಿ ಕೆಲಸಮಾಡಿ ಮುಂದೆ ಐ.ಎನ್.ಎಸ್. ರಾಜಪೂತ್ ಎಂಬ ನೌಕೆಯ ನಾಯಕತ್ವವನ್ನು ವಹಿಸಿಕೊಂಡರು. 1954ರಲ್ಲಿ ನೌಕಾಬಲದ ಉಪಮುಖ್ಯಸ್ಥರಾದರು. ಏಪ್ರಿಲ್ 1958ರಲ್ಲಿ ಇವರು ವೈಸ್ ಅಡ್ಮಿರಲ್ ದರ್ಜೆಗೆ (ಅಂದಿನ ವರಿಷ್ಠ ದರ್ಜೆ) ಬಡ್ತಿ ಪಡೆದು ನೌಕಾಬಲದ ಮುಖ್ಯಸ್ಥರಾದರು. ನಿವೃತ್ತರಾದುದು 1962ರಲ್ಲಿ. (ಎ.ಎನ್.ಎಸ್.ಎಂ.)

**ಕಟಾಸ್ :** ಉತ್ತರ ಪಂಜಾಬಿನಲ್ಲಿ ಒಂದು ಪ್ರಸಿದ್ಧ ಯಾತ್ರಾಸ್ಥಳ. ಶಿವನು ಸತಿಯನ್ನು ಕಳೆದುಕೊಂಡಾಗ ಅವನ ಕಣ್ಣೀರಿನಿಂದ ಕಟಾಕ್ಷವೆಂಬ ಹೆಸರಿನ ಇಲ್ಲಿನ ಸರೋವರಗಳಲ್ಲೊಂದು ಆಯಿತೆಂದು ಸ್ಥಳಪುರಾಣ ತಿಳಿಸುತ್ತದೆ.

ಇಲ್ಲಿ ಕ್ಷೀಣದಶೆಯಲ್ಲಿರುವ ಹನ್ನೆರಡು ದೇವಾಲಯಗಳಲ್ಲಿ ಏಳು, ಪಾಂಡವರು ತಮ್ಮ ವನವಾಸದ ಕಾಲದಲ್ಲಿ ಕಟ್ಟಿದವೆಂದು ಒಂದು ಐತಿಹ್ಯವಿದೆ. ಈ ದೇವಾಲಯಗಳ ವಾಸ್ತು ಶಿಲ್ಪ ಕಾಶ್ಮೀರಿ ಶೈಲಿಯನ್ನು ಹೋಲುತ್ತದೆ. (ಜಿ.ಎಚ್.)

**ಕಟಾಹ :** ಆಗ್ನೇಯ ಏಷ್ಯದ ಒಂದು ಪ್ರಾಚೀನ ಸ್ಥಳ. ಮೊಟ್ಟಮೊದಲನೆಯದಾಗಿ ಸಂಸ್ಕೃತ ಪುರಾಣಸಾಹಿತ್ಯದಲ್ಲಿ ಇದರ ಉಲ್ಲೇಖ ಬರುತ್ತದೆ. ಭೂಮಿ ಒಂಬತ್ತು ಭಾಗಗಳಿಂದ ಕೂಡಿದುದೆಂದೂ ಕಟಾಹ ಅವುಗಳಲ್ಲಿ ಒಂದೆಂದೂ ಕೆಲವು ಪುರಾಣಗಳು ತಿಳಿಸುತ್ತವೆ. ಮತ್ತೆ ಕೆಲವು ಪುರಾಣಗಳಲ್ಲಿ ಸುವರ್ಣದ್ವೀಪವೇ ಇದೆನ್ನಲಾಗಿದೆ. ಕಟಾಹ ದ್ವೀಪ ಮತ್ತು ಸುವರ್ಣದ್ವೀಪಗಳು ಭಿನ್ನವಾದವೆಂಬುದು ಕಥಾಸರಿತ್ಸಾಗರದಿಂದ ವೇದ್ಯವಾಗುವ ಅಂಶ. ಇತ್ತೀಚಿನ ಸಂಶೋಧನೆಗಳಿಂದ ಇದು ಮಲಯ ಪರ್ಯಾಯದ್ವೀಪದಲ್ಲಿ ಪೀನಾಂಗ್ ಬಳಿ ಇರುವ ಈಗಿನ ಕೆಡ್ಡಹ್ ಎಂಬ ಸ್ಥಳವೆಂದು ತಿಳಿದುಬಂದಿದೆ.

ಪ್ರಾಚೀನ ಕಾಲದಿಂದಲೂ ಭಾರತಕ್ಕೂ ಕಟಾಹಕ್ಕೂ ವಾಣಿಜ್ಯ ಮತ್ತು ಸಾಂಸ್ಕೃತಿಕ ಸಂಬಂಧಗಳಿದ್ದುವು. ಗಂಗೈಕೊಂಡ ಚೋಳನೆಂದು ಬಿರುದಾಂಕಿತನಾದ ಒಂದನೆಯ ರಾಜೇಂದ್ರಚೋಳ (1012–1044) 1025ರಲ್ಲಿ ಅಲ್ಲಿಗೆ ದಂಡೆತ್ತಿಹೋದನೆಂದು ತಿರುವಾಲಂಗಾಡು ತಾಮ್ರಶಾಸನ ತಿಳಿಸುತ್ತದೆ. ರಾಜೇಂದ್ರಚೋಳ ಪ್ರಕ್ಷುಬ್ಧ ಸಮುದ್ರದ ಮೇಲೆ ಅನೇಕ ಹಡಗುಗಳನ್ನು ಕಳಿಸಿ, ಕಡಾರಂ ದೊರೆಯಾದ ಸಂಗ್ರಾಮ ವಿಜಯೋತ್ತುಂಗವರ್ಮನನ್ನು ಅವನ ಅಶ್ವಸೇನೆಯೊಂದಿಗೆ ಹಿಡಿದು, ಆ ದೊರೆ ಸಂಗ್ರಹಿಸಿದ್ದ ಐಶ್ವರ್ಯರಾಶಿಯನ್ನು ವಶಪಡಿಸಿಕೊಂಡನಲ್ಲದೆ. ಶ್ರೀವಿಜಯ, ಪಣ್ಣೈ, ಮಲೈಯೂರ್ ಮುಂತಾದವನ್ನು ಆಕ್ರಮಿಸಿಕೊಂಡನೆಂದೂ ಆಳವಾದ ಸಮುದ್ರದಿಂದ ರಕ್ಷಿತವಾಗಿದ್ದ ಕಡಾರಂ ಕೂಡ ಇವನ ಸ್ವಾಧೀನವಾಯಿತೆಂದೂ ತಿಳಿದುಬಂದಿದೆ. ಬಹುಶಃ ಕಡಾರಂ ಎಂಬುದು ಕಟಾಹದ ಇನ್ನೊಂದು ಹೆಸರಾಗಿತ್ತಲ್ಲದೆ ಅದು ಶ್ರೀವಿಜಯಸಾಮ್ರಾಜ್ಯದ ರಾಜಧಾನಿಯಾಗಿತ್ತು.

ರಾಜೇಂದ್ರಚೋಳನ ಈ ದಂಡೆಯಾತ್ರೆಗೆ ಕಾರಣವೇನೆಂಬುದು ಸ್ಪಷ್ಟವಾಗಿಲ್ಲ. ರಾಜೇಂದ್ರಚೋಳನ ತಂದೆಯ ಕಾಲದಲ್ಲಿ ಈ ಎರಡು ಸಾಮ್ರಾಜ್ಯಗಳ ನಡುವೆ ಸ್ನೇಹಭಾವವೇ ಇತ್ತು. ರಾಜೇಂದ್ರಚೋಳ ಪಟ್ಟಕ್ಕೆ ಬಂದ ಮೇಲೂ ಈ ಬಾಂಧವ್ಯ ಬೆಳೆದುಬಂದಿತ್ತು. ಹೀಗಿದ್ದಾಗ 1014 ರಿಂದ 1025ರ ವರೆಗಿನ ಕಾಲದಲ್ಲಿ ಈ ಸ್ನೇಹ ವೈರವಾಗಿ ತಿರುಗಿದ್ದಾದರೂ ಏಕೆಂಬುದು ಗೊತ್ತಾಗುವುದಿಲ್ಲ. ಗಂಗಾನದಿಯ ಪ್ರದೇಶದಲ್ಲಿ ನಡೆಸಿದ ಜೈತ್ರಯಾತ್ರೆಯಿಂದ ಪ್ರತಿಷ್ಠೆ ಬೆಳೆಸಿಕೊಂಡ ರಾಜೇಂದ್ರಚೋಳ, ಶೈಲೇಂದ್ರ ಸಾಮ್ರಾಜ್ಯಕ್ಕೆ ತನ್ನ ನೌಕಾಶಕ್ತಿಯೆಷ್ಟೆಂಬುದನ್ನು ತೋರ್ಪಡಿಸಲು ಈ ವಿಜಯಯಾತ್ರೆ ಕೈಕೊಂಡಿದ್ದಿರಬಹುದು. ಭಾರತಕ್ಕೂ ದೂರ ಪ್ರಾಚ್ಯಕ್ಕೂ ನಡುವಣ ವ್ಯಾಪಾರದ ಮೇಲೆ ಸ್ವಾಮ್ಯ ಹೊಂದುವುದು ಇವನ ಉದ್ದೇಶವಾಗಿದ್ದರೂ ಇರಬಹುದು. ತಮಿಳು ವ್ಯಾಪಾರಿಗಳು ಈ ಪ್ರದೇಶದ ಮಣಿಮಂಗಳಂ ಎಂಬಲ್ಲಿ ವ್ಯಾಪಾರಸಂಸ್ಥೆಗಳನ್ನು ಸ್ಥಾಪಿಸಿದರೆಂದು ಹೇಳಲಾಗಿದೆ. ಕಟಾಹದ ಮೇಲೆ ರಾಜೇಂದ್ರಚೋಳನ ಅಧಿಕಾರ ಎಷ್ಟು ಕಾಲ ನಡೆಯಿತೆಂಬ ಬಗ್ಗೆಯೂ ನಿಖರವಾದ ಆಧಾರಗಳೇನೂ ದೊರಕುವುದಿಲ್ಲ.

ಅನಂತರ 1068ರಲ್ಲಿ ಒಂದನೆಯ ವೀರರಾಜೇಂದ್ರ ಕಟಾಹದ ಮೇಲೆ ಮತ್ತೆ ದಂಡೆತ್ತಿ ಹೋಗಿ ಅಲ್ಲಿಯ ರಾಜನನ್ನು ಸೋಲಿಸಿದನೆಂದೂ ಅನಂತರ ಇದನ್ನು ಅವನಿಗೇ ಹಿಂದಿರುಗಿಸಿದನೆಂದೂ ಶಾಸನಗಳಿಂದ ಗೊತ್ತಾಗುತ್ತದೆ. 13ನೆಯ ಶತಮಾನದ ಅನಂತರ ಆಗ್ನೇಯ ಏಷ್ಯದ ಇತರ ಭಾಗಗಳಲ್ಲಿ ಭಾರತೀಯ ಸಂಸ್ಕೃತಿಯ ಪ್ರಭಾವ ನಶಿಸಿಹೋದಂತೆ ಕಟಾಹದಲ್ಲಿಯೂ ಕ್ಷೀಣಿಸಿತು. (ಎ.ವಿ.ಎನ್.; ಜಿ.ಆರ್.ಆರ್.)

**ಕಟುಕಾರಕ :** ಕಹಿಯಾದ ಕ್ರಿಯಾಂಶವಿರುವ, ಹಸಿವನ್ನು ಹುಟ್ಟಿಸುವ ಮದ್ದು (ಬಿಟ್ಟರ್ಸ್). ಇದರಲ್ಲಿ ಎರಡು ಬಗೆಗಳಿವೆ. ಕ್ವಾಸಿಯ ಚಕ್ಕೆ, ಕೆಲಂಬ ಬೇರುಗಳು, ರೇವಲ್ಚಿನ್ನಿ (ರುಬಾರ್ಬ್), ಲೋಳೆಸರ (ಅಲೋಸ್)—ಇವು ಸರಳ ಕಟುಕಾರಕಗಳು. ಪರಿಮಳದ (ಆರೋಮ್ಯಾಟಿಕ್) ಕಟುಕಾರಕಗಳಲ್ಲಿ ಕಿರಾಯತ, ಅಂಗೊಸ್ಟ್ಯೂರ, ಕ್ಯಾಸ್ಕರಿಲ್ಲ, ಸೀಮೆಸೇವಂತಿಗೆ (ಕ್ಯಾಮೊಮೈಲ್), ಕಾಡುದಾಲ್ಚಿನ್ನಿ, ಚಿರಾಯತ (ಜಂಷಿಯನ್), ನಿಂಬೆ ಅಲ್ಲದೆ ಕಿತ್ತಳೆ ಸಿಪ್ಪೆಗಳಿವೆ. ಇವುಗಳಲ್ಲಿ ಆರಿಹೋಗುವ ಸುವಾಸನೆಯ ಎಣ್ಣೆಗಳಿದ್ದು ರುಚಿ ಕೊಡುವಂತಿವೆ. ಸರಳ ಕಟುಕಾರಕಕ್ಕಿಂತ ಪರಿಮಳದ ಕಟುಕಾರಕ ಹೆಚ್ಚು ಪರಿಣಾಮಕಾರಿ, ಬೇಗನೆ ವರ್ತಿಸುತ್ತದೆ. ಮದ್ಯಾರ್ಕವಾಗಿ (ಟಿಂಕ್ಚರ್) ತಯಾರಾದದ್ದು ಇನ್ನೂ ಸಾರಯುತ. ಕಟುಕಾರಕವನ್ನು ಬಾಯಿಗೆ ಹಾಕಿಕೊಂಡಾಗ ಜೊಲ್ಲುಸುರಿವಂತೆ ಮಾಡಿ, ರುಚಿಕುಡಿಗಳನ್ನು (ಟೇಸ್ಟ್ ಬಡ್ಸ್) ಹಿಮ್ಮೊರಿವ ವರ್ತನೆಯಿಂದ (ರಿಫ್ಲೆಕ್ಸ್ ಆಕ್ಷನ್) ಚೋದಿಸಿ ಜಠರ ರಸವನ್ನೂ ಸುರಿಸುವಂತೆ ಮಾಡುತ್ತವೆ. ಆದ್ದರಿಂದಲೇ ಇವನ್ನು ಸುಮ್ಮನೆ ಮಾತ್ರೆಯಂತೆ ನುಂಗಿಬಿಟ್ಟರೆ ಹಸಿವನ್ನು ಹೆಚ್ಚಿಸವು; ಜೊಲ್ಲು, ಜಠರ ರಸಗಳನ್ನೂ ಚೋದಿಸವು. ಬಹಳ ದಿನಗಳು ಹಾಸಿಗೆ ಹಿಡಿದಿರುವ ರೋಗಿಗಳಿಗೆ ಹಸಿವು ಹುಟ್ಟಿಸಲು ಇವು ಬಲು ಸಹಾಯಕ. ಈ ಮದ್ದುಗಳಿರುವ ಪಾನೀಯಗಳನ್ನು ಊಟಕ್ಕೆ ಸುಮಾರು ಅರೆತಾಸು ಮುನ್ನ ಕೊಡಬೇಕು. ಬಲು ಕಹಿಯಾದ ಕಾಜವಾರವಿಷ (ಸ್ಟ್ರಿಕ್ನೀನ್), ಕ್ವಿನೀನುಗಳಿರುವ ಬಲವರ್ಧಗಳು ಬಳಕೆಯಲ್ಲಿರುವುದು ಸರಿಯಲ್ಲ. ಮೇಲೆ ತಿಳಿಸಿದಪಕ್ಕಿಂತ ಇವೇನೂ ಮೇಲ್ತರದವಲ್ಲ.

ಕಟುಕಾರಕಗಳನ್ನು ಬಹುಮಟ್ಟಿಗೆ ಊರಿದಸಾರವಾಗಿ ತಯಾರಿಸುವರು. ಗಿಡಗಳ ಹೂ, ಎಲೆ, ತೊಗಟೆ ಇಲ್ಲವೇ ಬೇರನ್ನು ಪಾತ್ರೆಯಲ್ಲಿ ಹಾಕಿ ಅದರ ಮೇಲೆ ಕುದಿವ ನೀರನ್ನು ಸುರಿದು, ತುಸು ಹೊತ್ತಾದ ಮೇಲೆ ಬಗ್ಗಿಸಿ ನೀರನ್ನು ಬಸಿದುಕೊಂಡು ಕುಡಿಯಲು ಕೊಡುವುದುಂಟು. ಕೆಲ ವೇಳೆ ತಣ್ಣೀರಿನ ಸಾರವೇ ಸಾಕಾಗುತ್ತದೆ. ಮದ್ಯಸಾರದಿಂದಲೂ ಹೀಗೆ ಸಾರ ತೆಗೆವುದುಂಟು.

ಜಠರದ ಮೇಲೆ ಎಲ್ಲ ಕಟುಕಾರಕಗಳ ಪ್ರಭಾವ ಒಂದೇ ತೆರನಾದರೂ ಕರುಳುಗಳ ಮೇಲಿನ ಪ್ರಭಾವ ಬೇರೆ. ಪರಿಮಳದ ಕಟುಕಾರಕಗಳಲ್ಲಿ ಜೊಗರಿನ

(ಅಸ್ಟ್ರಿಂಜೆಂಟ್) ಗುಣವಿರುವ ಟ್ಯಾನಿನ್ ಇರುವುದರಿಂದ ಇವನ್ನು ಬಹಳ ದಿನಗಳು ಸೇವಿಸುತ್ತಿದ್ದರೆ ಮಲಕಟ್ಟುತ್ತದೆ. ಇನ್ನು ಕೆಲವು ಹೊಟ್ಟೆಯಲ್ಲಿನ ವಾಯು ಕಳೆವುವು. (ಡಿ.ಎಸ್.ಎಸ್.)

**ಕಟೇನಿಯ :** ಸಿಸಿಲಿಯ ಒಂದು ನಗರ. ಇದೇ ಹೆಸರಿನ ಪ್ರಾಂತ್ಯದ ರಾಜಧಾನಿ. ಐಯೋನಿಯನ್ ಸಮುದ್ರತೀರದ ವಿಸ್ತಾರವಾದ ಮೈದಾನದಲ್ಲಿ ಎಟ್ನ ಅಗ್ನಿಪರ್ವತಕ್ಕೆ 27 ಕಿಮೀ. (ಸು. 17 ಮೈ.) ದೂರದಲ್ಲಿದೆ. ಸಮುದ್ರಮಟ್ಟದಿಂದ 43 ಅಡಿಗಳ ಎತ್ತರದಲ್ಲಿದೆ. ಜನಸಂಖ್ಯೆ 3,44,786 (1957). ಅಗ್ನಿಪರ್ವತಗಳು ಚಿಮ್ಮಿದ ಶಿಲಾ ಪ್ರವಾಹ ಆರಿ ಸಂಭವಿಸಿದ ಚಿಪ್ಪಿನ ಮೇಲೆ ಕಟೇನಿಯ ನಿಂತಿದೆ. ನೆಲ ಉತ್ತರದಿಂದ ದಕ್ಷಿಣಕ್ಕೆ ಇಳಿಜಾರು. ಇಲ್ಲಿಯ ವಾಯುಗುಣ ಸುಖೋಷ್ಣ, ಹಿತಕರ.

11ನೆಯ ಜನವರಿ 1693ರಂದು ಸಂಭವಿಸಿದ ಭೂಕಂಪದಲ್ಲಿ ಈ ನಗರ ಸಂಪೂರ್ಣವಾಗಿ ನೆಲಸಮವಾಗಿತ್ತು. ಮತ್ತೆ ಇದನ್ನು ನಕ್ಷೆಗೆ ಅನುಗುಣವಾಗಿ ಕಟ್ಟಲಾಯಿತು. ಆದ್ದರಿಂದ ಈ ನಗರದ ನಡುಭಾಗದ ವಿಶಾಲ ಬೀದಿಗಳ ಆಚೀಚೆ ಚರ್ಚುಗಳೂ ಅರಮನೆಗಳೂ ಇದ್ದು 18ನೆಯ ಶತಮಾನವನ್ನೇ ನೆನಪಿಗೆ ತರುತ್ತವೆ. ಇದು ಕ್ರೈಸ್ತ ಮಠಾಧಿಪತಿಯ ಸ್ಥಾನ. ಆಧುನಿಕ ಕಟೇನಿಯ ಕೈಗಾರಿಕೆಯ ಮತ್ತು ಸರಕು ಸಾಗಾಣಿಕೆಯ ಕೇಂದ್ರ. ಪಲರ್ಮೋ, ಮೆಸೀನ ಮತ್ತು ಸಿರಕಸ್‌ಗಳಿಗೆ ಇಲ್ಲಿಂದ ರೈಲ್ವೆ ಸಂಪರ್ಕವಿದೆ. ಇದು ಇಟಲಿಯ ಪ್ರಮುಖ ಬಂದರುಗಳಲ್ಲೊಂದು. ಬಳಿಯಲ್ಲೆ ವಿಮಾನ ಕೇಂದ್ರವೂ ಉಂಟು. ಆಹಾರ ಸಂಸ್ಕರಣ, ಯಂತ್ರ ಮತ್ತು ರಾಸಾಯನಿಕ ಪದಾರ್ಥ ತಯಾರಿಕೆ ಇಲ್ಲಿಯ ಮುಖ್ಯ ಕೈಗಾರಿಕೆಗಳು. ಮೀನುಗಾರಿಕೆಯೂ ಒಂದು ಕಸಬು. ಸಿಸಿಲಿಯ ಶುದ್ಧ ಗಂಧಕದ ಒಟ್ಟು ಉತ್ಪಾದನೆಯಲ್ಲಿ ಅರ್ಧಭಾಗ ಕಟೇನಿಯ ಕಾರ್ಖಾನೆಗಳಿಂದಲೇ ಹೊರಬರುತ್ತದೆ. ಈ ನಗರದ ಸುತ್ತಲೂ ಕೃಷಿ ಕ್ಷೇತ್ರಗಳಿರುವುದರಿಂದ ಇದು ವ್ಯವಸಾಯೋತ್ಪನ್ನದ ಮಾರುಕಟ್ಟೆಯೂ ಆಗಿದೆ. ಬಾದಾಮಿ ಮತ್ತು ಕಿತ್ತಳೆಹಣ್ಣು ಇಲ್ಲಿಂದ ರಫ್ತಾಗುತ್ತವೆ.

6ನೆಯ ಶತಮಾನದಲ್ಲಿದ್ದ ಇಮರದ ಗ್ರೀಕ್ ಪದ್ಯಕಾರ ಕವಿ ಸ್ಟೆಸಿಕೊರಸನ ಸಮಾಧಿಯನ್ನು ಈ ನಗರದಲ್ಲಿ ಕಾಣಬಹುದು. ಕಟೇನಿಯದ ಸಾಂಸ್ಕೃತಿಕ ಚರಿತ್ರೆ ಆಗಲೇ ಆರಂಭವಾಯಿತೆನ್ನಬಹುದು. ಕಟೇನಿಯ ವಿಶ್ವವಿದ್ಯಾಲಯ ಸ್ಥಾಪಿತವಾದದ್ದು 1434ರಲ್ಲಿ—ಅರಗಾನಿನ ಆಲ್ಫಾನ್ಸೋವಿನಿಂದ. 1755ರಲ್ಲಿ ಸ್ಥಾಪಿತವಾದ ಇಲ್ಲಿಯ ಗ್ರಂಥಾಲಯದಲ್ಲಿ 14 ಮತ್ತು 15ನೆಯ ಶತಮಾನಗಳ ಅಮೂಲ್ಯ ಕೈಬರೆಹದ ಪ್ರತಿಗಳಿವೆ. ಇಲ್ಲಿಯ ಪೌರಸಭಾ ಗ್ರಂಥಾಲಯದಲ್ಲಿರುವ 14ನೆಯ ಶತಮಾನದ ಪೀಟ್ರೊ ಕವಲಿನಿ ಪಂಥದ ಅಲಂಕೃತಾಕ್ಷರದ ಬೈಬಲ್ ಗ್ರಂಥವೂ ಅನೇಕರ ಹಸ್ತಾಕ್ಷರಗಳೂ ಚರ್ಮ ಕಾಗದದ ಹಸ್ತಪ್ರತಿಗಳೂ ಇವೆ.

ನಾರ್ಮ ಸಂಗೀತನಾಟಕವನ್ನು ರಚಿಸಿದ ವಿಂಜೆಂಸ್ಲೊ ಬೆಲೀನಿ ಹುಟ್ಟಿದ್ದು ಕಟೇನಿಯದಲ್ಲಿ (1801). ಈತನ ಜನ್ಮಸ್ಥಳದಲ್ಲಿರುವ ವಸ್ತು ಸಂಗ್ರಹಾಲಯದಲ್ಲಿ ಇವನ ಶವದ ಹೊದಿಕೆಯನ್ನೂ ಈತನ ಹಾರ್ಪ್‌ಸಿಕಾರ್ಡ್ ತಂತಿ ವಾದ್ಯವನ್ನೂ ಇತರ ಸ್ಮಾರಕಗಳನ್ನೂ ಇಟ್ಟಿದ್ದಾರೆ. ಈತ ಸತ್ತ 40 ವರ್ಷಗಳ ಅನಂತರ 1835ರಲ್ಲಿ ಇವನ ಅವಶೇಷಗಳನ್ನು ಕಟೇನಿಯಕ್ಕೆ ತಂದು ಚರ್ಚಿನಲ್ಲಿ ಸಮಾಧಿ ಮಾಡಲಾಯಿತು. ಕವಿ ಮೇರಿಯೊ ರಾಪಿಸಾರ್ಡಿ, ಕಾದಂಬರಿಕಾರ ಗಯವನ್ನಿ ವೇರ್ಗ—ಇವರು ಕಟೇನಿಯದವರು.

2ನೆಯ ಶತಮಾನದ ರೋಮನ್ ವರ್ತುಲ ನಾಟಕಶಾಲೆ, ರೋಮನ್ ಸ್ನಾನಘಟ್ಟ ಮತ್ತು ಕಾಲುವೆಗಳ ಅವಶೇಷಗಳೂ 13ನೆಯ ಶತಮಾನದಲ್ಲಿ ಎರಡನೆಯ ಫ್ರೆಡರಿಕನಿಗಾಗಿ ನಿರ್ಮಿಸಲಾದ ದುರ್ಗವಾಗಿದ್ದು ಈಗ ವಸ್ತು ಸಂಗ್ರಹಾಲಯವಾಗಿರುವ ಕಟ್ಟಡವೂ ಇನ್ನೂ ಅನೇಕ ಕಟ್ಟಡಗಳೂ ಶಿಲ್ಪಗಳೂ ನಗರದಲ್ಲಿವೆ.

ಶಿಲಾ ಪ್ರವಾಹದಲ್ಲಿ ಮುಚ್ಚಿಹೋಗಿರುವ, ಮೊದಲನೆಯ ರೋಜರ್ ನಿರ್ಮಿಸಿದ, ಚರ್ಚಿನ ಅವಶೇಷಗಳಿವೆ. 1693ರ ಭೂಕಂಪದ ಅನಂತರ ನಾರ್ಮನ್ ವಾಸ್ತುಶಿಲ್ಪಿಗಳಾದ ಫ್ರಾಂಚೆಸ್ಕೊ ಫಲಜೊಟೊ ಮತ್ತು ಗಿಯಾವನಿ ಬಟಿಸ್ಟ ವಕಾರಿನಿ (1702–1768) ಇವರು ಇದನ್ನು ಪುನಃ ನಿರ್ಮಿಸಿದರು. ಸಂತ ಅಗಾಥ ಚರ್ಚಿನಲ್ಲಿ ಸಿಯ್ನಾದ ಗಯವನ್ನಿ ಬಾರ್‌ಟುಲೊ ನಿರ್ಮಿಸಿದ 14ನೆಯ ಶತಮಾನದ ಸಂತನ ಬೆಳ್ಳಿ ವಿಗ್ರಹ ಮತ್ತು ಅವಶೇಷಗಳನ್ನೊಳಗೊಂಡ ಕರಂಡ ಇವೆ. ಇವನ್ನು ಸಂತನ ಉತ್ಸವದ ದಿನ ಪ್ರದರ್ಶಿಸುತ್ತಾರೆ. ಬೆಲ್ಲೀನಿಯ ಸಮಾಧಿಯ ಹತ್ತಿರವೇ 17ನೆಯ ಶತಮಾನದ ಸಂತ ಅಗಾಥ ಚರ್ಚಿದೆ. 1736ರಲ್ಲಿ ನಿರ್ಮಿಸಲಾದ ಆನೆ ಕಾರಂಜಿಯನ್ನೂ ನಗರ ಸಭಾ ಮಂದಿರವನ್ನೂ ಕಾಣಬಹುದು.

ಸಿಸಿಲಿಯಲ್ಲೆ ದೊಡ್ಡದಾದ (17ನೆಯ ಶತಮಾನದ) ಸಂತ ನಿಕೊಲೊ ಚರ್ಚ್ 210 ಅಡಿ ಎತ್ತರದ ಗೋಪುರದಿಂದ ಕಂಗೊಳಿಸುತ್ತದೆ. ಇದಕ್ಕೆ ಸೇರಿದ ಕ್ರೈಸ್ತ ಸಂನ್ಯಾಸಿ ಮಠ 14ನೆಯ ಶತಮಾನದಲ್ಲಿ ಪ್ರಾರಂಭವಾಗಿ ಮೂರು ಶತಮಾನಗಳ ಅನಂತರ ಪೂರ್ಣಗೊಂಡಿತು. ಪ್ರಪಂಚದ ದೊಡ್ಡ ಮಠಗಳಲ್ಲಿ ಇದೂ ಒಂದು ಎಂದು ಇದನ್ನು ಹೊಗಳುತ್ತಾರೆ. 17ನೆಯ ಶತಮಾನದ ಮಾದರಿ ಇದು. 18ನೆಯ ಶತಮಾನದ ಸಂತ ಕಾರ್ಸಿರೆ ಚರ್ಚ್ 13ನೆಯ ಶತಮಾನದ ಬಿಷಪ್ ಆರಾಧನಾ ಮಂದಿರದ ಹೆಬ್ಬಾಗಿಲನ್ನೊಳಗೊಂಡಿದೆ. ಕಪ್ಪು ಲಾವಾ ಶಿಲೆಯಿಂದಲೂ ಬಿಳಿಯ ಸುಣ್ಣಕಲ್ಲಿನಿಂದಲೂ ಕಟ್ಟಿರುವ 18ನೆಯ ಶತಮಾನದ ಪ್ರೋಟರ್ ಗರಿಬಾಲ್ಡಿ ಕಟ್ಟಡ ಬಲು ಆಕರ್ಷಕ.

**ಚರಿತ್ರೆ :** ಕಟೇನಿಯನಗರ ಕ್ರಿ.ಪೂ. 729ರಲ್ಲಿ ನ್ಯಾಕ್ಸಾಸಿನ ಕ್ಯಾಲ್ಸಿಡಿಯನ್ ವಲಸೆಗಾರರಿಂದ ಸ್ಥಾಪಿತವಾಯಿತು. ಲ್ಯಾಟಿನಿನಲ್ಲಿ ಕಾಟಿನಮ್ ಎಂದರೆ ಜಲಾವಯುನ ಭೂಮಿ. ಇದು ಕಟೇನಿಯದ ಭೌಗೋಳಿಕ ಸನ್ನಿವೇಶವನ್ನು ತಿಳಿಸುತ್ತದೆ. ಸಿರಕಸಿನ ಕ್ರೂರ ದೊರೆ ಒಂದನೆಯ ಹೈಯರೋ (ಕ್ರಿ.ಪೂ. 478–466) ಕಟೇನಿಯವನ್ನಾಕ್ರಮಿಸಿ ಇಲ್ಲಿಯವರನ್ನೆಲ್ಲ ಲಿಯೊಂಟನಿಗೆ ಸಾಗಿಸಿ 5,000 ಮಂದಿ ಸಿರಕಸ್ ಪ್ರಜೆಗಳನ್ನೂ 5,000 ಮಂದಿ ಫಿಲೊಫಿಯನ್ ಜನರನ್ನೂ ತಂದು ಪಟ್ಟಣದ ಹೆಸರನ್ನು ಎಟ್ನ ಎಂದು ಬದಲಿಸಿದ. ಕ್ರಿ.ಪೂ. 461ರಲ್ಲಿ ಇಲ್ಲಿಯ ಪ್ರಾಚೀನ ನಿವಾಸಿಗಳು ಪಟ್ಟಣವನ್ನು ಮತ್ತೆ ವಶಮಾಡಿಕೊಂಡು ಅದಕ್ಕೆ ಪೂರ್ವದ ಹೆಸರನ್ನೇ ಇರಿಸಿದರು. ಕಟೇನಿಯ ಕ್ರಿ.ಪೂ. 415 ರಿಂದ 413ರ ವರೆಗೆ ಅಥೆನ್ಸಿನ ಯುದ್ಧನೆಲೆಯಾಗಿ ಸಿರಕಸ್ ಜನರ ಯುದ್ಧಕ್ಕೆ ಸಹಾಯ ಮಾಡಿತು. ಕ್ರಿ.ಪೂ. 403ರಲ್ಲಿ ಡೆಯನಾಸಿಯಸ್ ಕಟೇನಿಯವನ್ನು ಕೊಳ್ಳೆ ಹೊಡೆದು, ಸ್ಥಳೀಯರನ್ನು ಕೈಸೆರೆ ಹಿಡಿದು ಅವರನ್ನು ಗುಲಾಮರಾಗಿ ಮಾಡಿ, ತನ್ನ ಕೂಲಿ ಸೈನಿಕರಿಗೆ ಇದನ್ನು ನೆಲೆ ಮಾಡಿಕೊಟ್ಟ. ಕ್ರಿ.ಪೂ. 263ರ ಮೊದಲನೆಯ ಪ್ಯೂನಿಕ್ ಯುದ್ಧದಲ್ಲಿ ರೋಮನರು ಸಿಸಿಲಿಯ ಪಟ್ಟಣಗಳಲ್ಲಿ ಮೊದಲನೆಯದಾಗಿ ಇದನ್ನು ಆಕ್ರಮಿಸಿಕೊಂಡರು. ಕ್ರಿ.ಪೂ. 123ರಲ್ಲಿ ಎಟ್ನ ಪರ್ವತದ ಅಗ್ನಿವರ್ಷದಿಂದ ಆದ ನಷ್ಟವನ್ನು ರೋಮನರಿಗೆ ತುಂಬಿಕೊಡಲು ಕಟೇನಿಯದ ಜನ 10 ವರ್ಷ ತೆರ ಕೊಡಬೇಕಾಯ್ತು. ಕ್ರಿ.ಪೂ. ಒಂದನೆಯ ಶತಮಾನದಲ್ಲಿ ಇದು ಮತ್ತೆ ಅಭಿವೃದ್ಧಿಹೊಂದಿತು. ಆದರೂ ಆಗಾಗ್ಗೆ ದಾಳಿಗೆ ಗುರಿಯಾಗುತ್ತಿತ್ತು. ಅಗಸ್ಟಸ್ ದೊರೆಯ ಕಾಲದಲ್ಲಿ ಇದು ರೋಮನರ ವಸಾಹತಾಯಿತು. ಸ್ಟ್ರಾಬೊ ಬರೆವಣಿಗೆಯಿಂದ ಮತ್ತು ಅನೇಕ ಶಾಸನಗಳಿಂದ ಕಟೇನಿಯ ಆಗ ಒಂದು ಪ್ರಮುಖ ನಗರವಾಗಿತ್ತೆಂದು ತಿಳಿಯುತ್ತದೆ. ಆಗ ಕಟೇನಿಯದ ಕ್ರೈಸ್ತರು ನಾನಾ ಚಿತ್ರಹಿಂಸೆಗಳಿಗೆ ಗುರಿಯಾಗಿದ್ದರು. ರೋಮನರ ಬಯಲುರಂಗಮಂದಿರ ನಾಶವಾಯಿತು. ಕ್ರಿ.ಶ. 251ರಲ್ಲಿ ಎಟ್ನ ಅಗ್ನಿಪರ್ವತದಿಂದ ನಷ್ಟವಾಯಿತು. ಬಿಜಾಂಟಿನರೂ ಅರಬೀಯರೂ ನಾರ್ಮನರೂ ಕಟೇನಿಯವನ್ನು ವಶಪಡಿಸಿಕೊಂಡಿದ್ದರು. 1170ರ ಭೂಕಂಪದಲ್ಲಿ ಪಟ್ಟಣ ನಾಶವಾಯಿತು. 1197ರಲ್ಲಿ 6ನೆಯ ಹೆನ್ರಿ ಪಟ್ಟಣವನ್ನು ಹಾಳುಗೆಡವಿದ. 13ನೆಯ ಮತ್ತು 14ನೆಯ ಶತಮಾನಗಳಲ್ಲಿ ಇದು ರಾಜಪ್ರತಿನಿಧಿಗಳ ವಾಸಸ್ಥಳವಾಯಿತು. ಡಿ ವಿಗೊ ಎಂಬ ರಾಜಪ್ರತಿನಿಧಿ 1552ರಲ್ಲಿ ಕೋಟೆ ಕಟ್ಟಿಸಿದ. 1669ರಲ್ಲಿ ಎಟ್ನದಿಂದ ಇದರ ಬಂದರಿನ ಮುಕ್ಕಾಲು ಭಾಗ ಮುಚ್ಚಿಹೋಯಿತು. ಪಟ್ಟಣ ಉಳಿಯಿತು. ಆದರೆ 1693ರಲ್ಲಿ ಪಟ್ಟಣವೂ ಉಳಿಯಲಿಲ್ಲ. ಕಟೇನಿಯ ಕಡಲುಗಳ್ಳರಿಂದ ಆಕ್ರಮಣಕಾರರಿಂದ ಮತ್ತು ರೋಗೋಪದ್ರವಗಳಿಂದ ಕೆಲವು ಕಾಲ ನರಳಿತು. ಸಿಸಿಲಿಯಿಂದ ಬೇರ್ಪಟ್ಟು ಸ್ವತಂತ್ರವಾಗಲು ಕಟೇನಿಯ ಹೋರಾಟ ನಡೆಸಿದ್ದು 1848ರಲ್ಲಿ. ಆದರೆ ಈ ದಂಗೆಯನ್ನು ಅಡಗಿಸಲಾಯಿತು.

ಎರಡನೆಯ ಮಹಾಯುದ್ಧದಲ್ಲಿ–1943ರ ಜುಲೈ 9ರಂದು—ಮಿತ್ರ ಸೇನೆಗಳು ಸಿಸಿಲಿಯಲ್ಲಿ ಬಂದಿಳಿದಾಗ ಕಟೇನಿಯ ಬಾಂಬ್ ದಾಳಿಗೆ ಗುರಿಯಾಗಬೇಕಾಯಿತು. 1943ರ ಆಗಸ್ಟ್ 5ರ ವರೆಗೆ ಜರ್ಮನರು ಬ್ರಿಟಿಷರನ್ನು ಇಲ್ಲಿ ತಡೆದು ಹೋರಾಟ ನಡೆಸಿದ್ದರು. (ಬಿ.ಎಸ್‌ಎಚ್.)

**ಕಟ್ಟಡ :** ಮನುಷ್ಯ ಮತ್ತು ಆತನ ಆಸ್ತಿಗೆ ಆಸರೆಯಾಗಿ ಒದಗಿಸಿದ ರಚನೆ (ಬಿಲ್ಡಿಂಗ್). ವಸತಿಗೃಹಗಳು, ದಾಸ್ತಾನು ಮಳಿಗೆಗಳು, ವಿವಿಧ ಸಂಘ ಸಂಸ್ಥೆಗಳ ಕಚೇರಿಗಳು ಮುಂತಾದುವೆಲ್ಲವೂ ಕಟ್ಟಡಗಳೇ. ಒಂದು ಕಟ್ಟಡದ ಪ್ರಧಾನಾವಶ್ಯಕತೆಗಳು ಎರಡು–ರಚನಾತ್ಮಕವಾಗಿ ಅದು ಭದ್ರವಾಗಿರಬೇಕು ಮತ್ತು ಹವೆ ಬೆಂಕಿ ನೀರು ಕಳ್ಳಕಾಕರು ಮುಂತಾದ ಪ್ರತಿಬಲಗಳ ವಿರುದ್ಧ ರಕ್ಷಣೆ ಒದಗಿಸಬೇಕು. ಇಂಥ ಕಟ್ಟಡವನ್ನು ಆದಷ್ಟು ಮಿತವ್ಯಯದಿಂದ ರಚಿಸುವುದು ಕಟ್ಟಡ ಉದ್ಯಮದ ಕೆಲಸ. ಇದಕ್ಕೆ ಒಪ್ಪ ಓರಣ ನೀಡುವುದು ಕಲೆಗಾರಿಕೆ.

ಉದ್ಯಮದಲ್ಲಿ ಮಿತವ್ಯಯ : ಕಟ್ಟಡ ರಚನೆಯಲ್ಲಿ ಕನಿಷ್ಠ ಪ್ರಯತ್ನದಿಂದ ಗರಿಷ್ಠ ದಕ್ಷತೆಯನ್ನು ಸಾಧಿಸುವುದೇ ಮಿತವ್ಯಯ–ಬಳಸಿದ ವಸ್ತುಗಳು ಗರಿಷ್ಠ ಉಪಯುಕ್ತತೆಯನ್ನು ಕೊಡಬೇಕು ; ಪ್ರಯುಕ್ತಿಸಿದ ಜನಬಲ ಗರಿಷ್ಠ ಫಲಿತಾಂಶವನ್ನು ನೀಡಬೇಕು. ಎಂದರೆ ಕೆಲಸಗಾರರ ಮತ್ತು ವಸ್ತುಗಳ ಸಮರ್ಪಕ ಸಮನ್ವಯವೇ ಕಟ್ಟಡದ ಉದ್ಯಮದಲ್ಲಿ ಮಿತವ್ಯಯ.

ಒಂದು ಕಟ್ಟಡದ ಪ್ರಧಾನ ಅಂಗಗಳು ಹತ್ತು : 1 ತಳಪಾಯ, 2 ಗೋಡೆ, 3 ಅಡ್ಡಗೋಡೆಗಳು, 4 ತಡಿಕೆ, 5 ಮಾಡು, 6 ನೆಲ, 7 ಗಿಲಾವು, 8 ಮಹಡಿಯ ಮೆಟ್ಟಲು, 9 ಕಿಟಕಿ, 10 ಬಾಗಿಲು. ಕಟ್ಟಡದ ತಾಂತ್ರಿಕ ಕ್ರಮಗಳು ಸಂಪ್ರದಾಯದಿಂದ ಬಂದಿರಬಹುದು. ಇಲ್ಲವೆ ಈಚೆಗೆ ಬೆಳೆದಿರಬಹುದು. ಈ ಕ್ರಮಗಳ ಸ್ಥೂಲವಿವರಣೆಯನ್ನು ಇಲ್ಲಿ ಕೊಟ್ಟಿದೆ.

1 **ತಳಪಾಯ :** ಕಟ್ಟಡ ಮತ್ತು ಅದರ ತಳಪಾಯದ ಸಂವಿಧಾನ ತಳದ ಮಣ್ಣಿನ ಸ್ವಭಾವವನ್ನೂ ನೆಲದ ಇಳಿಜಾರನ್ನೂ ಅವಲಂಬಿಸಿವೆ. ಸಾಮಾನ್ಯವಾಗಿ ಕಟ್ಟಡದ ಗೋಡೆಗಳ ಕೆಳಗಡೆ ನೀರು ಇಳಿಯದಂಥ ಗಟ್ಟಿಯಾದ ನೆಲ ಸಿಕ್ಕುವವರೆಗೂ (ಕನಿಷ್ಠಪಕ್ಷ 3 ಅಡಿಯಾದರೂ) ಅಗೆಯಬೇಕು. ವಿಶೇಷ ಸಂದರ್ಭಗಳಲ್ಲಿ ತಳಪಾಯಗಳನ್ನು ನಾಲ್ಕು ನಮೂನೆಗಳಾಗಿ ವಿಂಗಡಿಸಬಹುದು. ತೊಲೆಯ ತಳಪಾಯ ಕಂಬದ ತಳಪಾಯ, ತೆಪ್ಪದ ತಳಪಾಯ, ದಸಿಯ ತಳಪಾಯ.

ತೊಲೆಯ ತಳಪಾಯ : ಇದೇ ಸಾಮಾನ್ಯವಾದ ಮಾದರಿ. ಕಟ್ಟಡದ ಭಾರವನ್ನು ಹೊರುವ ಗೋಡೆಗಳ ಸಾಲಿನಲ್ಲಿ ಅಗೆದು ಗುಂಡಿಗಳ ತಳದಲ್ಲಿ ಕಾಂಕ್ರೀಟನ್ನು ತುಂಬುತ್ತಾರೆ. ಕಾಂಕ್ರೀಟಿನ ಆಳ, ಅಗಲ ಮತ್ತು ದಪ್ಪ–ಇವು ಕೆಳಮಣ್ಣು ಮತ್ತು ಕಟ್ಟಡದ ತೂಕಗಳನ್ನವಲಂಬಿಸಿವೆ. ಮಣ್ಣು ಮೆತುವಾಗಿರುವ ಕಡೆ ಕಾಂಕ್ರೀಟನ್ನು ಉಕ್ಕಿನಿಂದ ಭದ್ರಮಾಡುವುದರಿಂದ ಆಳವಾಗಿ ತಳಪಾಯದಲ್ಲಿ ಅಗೆಯುವುದು ತಪ್ಪುತ್ತದೆ. ತುಂಬುವ ಕಾಂಕ್ರೀಟೂ ಕಡಿಮೆಯಾಗುತ್ತದೆ.



ಮೈಸೂರಿನಲ್ಲಿರುವ ಶ್ರೀ ಕೃಷ್ಣರಾಜೇಂದ್ರ ಆಸ್ಪತ್ರೆಗೆ ಸೇರಿದ ಒಂದು ನವೀನ ಮಾದರಿಯ ಕಲ್ಲುಕಟ್ಟಡ

ಕಂಬದ ತಳಪಾಯ : ಕಟ್ಟಡದ ತೂಕ ತಳಪಾಯದ ಮೇಲೆ ಒಂದೇ ಸಮವಾಗಿ ಹರಡಿರುವುದಕ್ಕೆ ಬದಲಾಗಿ ಕೆಲವು ಜಾಗಗಳಲ್ಲಿ ಮಾತ್ರವೇ ಕೇಂದ್ರೀಕರಿಸುವ ಕಡೆ ಈ ನಮೂನೆಯನ್ನು ಉಪಯೋಗಿಸುತ್ತಾರೆ. ತಳದಲ್ಲಿ ಸಿಕ್ಕುವ ಮಣ್ಣಿನ ಭಾರವನ್ನು ಹೊರುವ ಸಾಮರ್ಥ್ಯ ಸ್ಥಳದಿಂದ ಸ್ಥಳಕ್ಕೆ ಸೇತುವೆಯ ತಳಪಾಯದಲ್ಲಿರುವ ಹಾಗೆ ಬದಲಾಯಿಸಬಹುದಾದ್ದರಿಂದ ಇವುಗಳ ಸಂವಿಧಾನದಲ್ಲಿಯೂ ಕಟ್ಟಡದಲ್ಲಿಯೂ ಹೆಚ್ಚಿನ ಜಾಗರೂಕತೆ ಬೇಕಾಗುತ್ತದೆ.

ತೆಪ್ಪದ ತಳಪಾಯ : ಕಟ್ಟಡದ ಜಾಗದಲ್ಲಿ ಜೌಗಿದ್ದರೆ ಇಲ್ಲವೆ ತುಂಬಿದ ಮಣ್ಣಿದ್ದರೆ ಈ ಮಾದರಿಯನ್ನು ಉಪಯೋಗಿಸುತ್ತಾರೆ. ಮೇಲೆ ಬರುವ ತೂಕದಿಂದ ಕೆಳಗಿನ ಮಣ್ಣು ಹೆಚ್ಚು ಕಡಿಮೆಯಾಗಿ ಕೆಳಕ್ಕೆ ಇಳಿದರೂ ಅಥವಾ ಚಲಿಸಿದರೂ ಇಡೀ ಕಟ್ಟಡವನ್ನು ಹೊರುವ ಹಾಗೆ ಈ ತಳಪಾಯವನ್ನು ಸಂವಿಧಾನಮಾಡಿ ಭದ್ರ ಕಾಂಕ್ರೀಟಿನಿಂದ ಕಟ್ಟಿರುತ್ತಾರೆ. ಸಮುದ್ರವನ್ನು ಆಚೆಗೆ ನೂಕಿ ಬಿಡಿಸಿಕೊಂಡ ನೆಲದ ಮೇಲೆ ಇದನ್ನು ಉಪಯೋಗಿಸುವುದು ರೂಢಿ. ವಾಸದ ಮನೆಗೂ ಇತರ ಸಣ್ಣ ಕಟ್ಟಡಗಳಿಗೂ ಈ ನಮೂನೆ ದುಬಾರಿಯಾಗುತ್ತದೆ.

ದಸಿಯ ತಳಪಾಯ : ಮೇಲುಗಡೆ ಮೆತುವಾದ ಅಥವಾ ಜೌಗಿನ ನೆಲವಿದ್ದು ಸುಮಾರಾಗಿ ಕೆಳಗಡೆ ಭಾರವನ್ನು ಹೊರುವ ಮಣ್ಣಿದ್ದ ಕಡೆ ಇದನ್ನು ಉಪಯೋಗಿಸುತ್ತಾರೆ. ದೊಡ್ಡ ಕಟ್ಟಡಗಳ ತಳಪಾಯಗಳಲ್ಲಿ ಚಚ್ಚೌಕವಾಗಿ ದಸಿಗಳನ್ನು ಭದ್ರ ಕಾಂಕ್ರೀಟಿನಿಂದ ಮಾಡಿ ತುದಿಗೆ ಉಕ್ಕಿನ ಕವಚವನ್ನು ಹಾಕಿ ಯಂತ್ರಗಳಿಂದ ಹೊಡೆದು ಬೇಕಾದ ಆಳಕ್ಕೆ ಇಳಿಸುತ್ತಾರೆ. ಈ ಯಂತ್ರ ದಸಿಯ ಚೌಕಟ್ಟಿನ ಮೇಲೆ ಭಾರಿ ಸುತ್ತಿಗೆಯ ಹಾಗೆ ತನ್ನ ತೂಕದಿಂದಲೇ ಕೆಳಕ್ಕೆ ಬಿದ್ದು ಅದನ್ನು ಮಣ್ಣಿನಲ್ಲಿ ಇಳಿಸುತ್ತದೆ. ಕಾಂಕ್ರೀಟು ಬರುವುದಕ್ಕೆ ಮುಂಚೆ ಮರದ ದಸಿಗಳನ್ನು ಉಪಯೋಗಿಸುತ್ತಿದ್ದರು. ದಸಿಗಳ ತಲೆಗಳ ಮೇಲೆ ಉಕ್ಕಿನ ಇಲ್ಲವೆ ಭದ್ರ ಕಾಂಕ್ರೀಟಿನ ತೊಲೆಗಳನ್ನು ಎಳೆದು ಅವುಗಳ ಮೇಲೆ ಕಟ್ಟಡದ ಭಾರವನ್ನು ಹೊರುವ ಗೋಡೆಗಳನ್ನು ಕಟ್ಟುತ್ತಾರೆ. ಇಂಥ ತಳಪಾಯಕ್ಕೆ ಖರ್ಚು ದುಬಾರಿ. ಬಹಳ ಬೆಲೆಬಾಳುವ ನೆಲದ ಮೇಲೆ ಕಟ್ಟುವ ವಾಣಿಜ್ಯದ ಕಟ್ಟಡಗಳಲ್ಲಿ ಮಾತ್ರ ಇದನ್ನು ಉಪಯೋಗಿಸುವರು.

ಇನ್ನೊಂದು ರೀತಿಯ ದಸಿಯ ತಳಪಾಯವೂ ಈಚೆಗೆ ರೂಢಿಗೆ ಬರುತ್ತಿದೆ. ಅದರಲ್ಲಿ ಮಣ್ಣಿನಲ್ಲಿ ಯಂತ್ರಗಳಿಂದ ಬೇಕಾದ ಆಳದವರೆಗೂ ತೂತುಗಳನ್ನು ಕೊರೆದು ಅದರೊಳಗೆ ಭದ್ರಕಾಂಕ್ರೀಟನ್ನು ಸ್ಥಳದಲ್ಲಿಯೇ ತುಂಬುತ್ತಾರೆ.

2 **ಗೋಡೆಗಳು :** ಸಾಂಪ್ರದಾಯಿಕವಾಗಿ ಗೋಡೆಗಳನ್ನು ಇಟ್ಟಿಗೆ ಇಲ್ಲವೆ ಕಲ್ಲಿನಿಂದ ಕಟ್ಟುತ್ತಾರೆ. ಮರ ಹೇರಳವಾಗಿ ಸಿಕ್ಕುವಲ್ಲಿ ಮರದಿಂದಲೂ ಬಿದಿರು ಮೆಳೆಗಳು ವಿಪುಲವಾಗಿರುವ ಉಷ್ಣವಲಯಗಳಲ್ಲಿ ಬಿದಿರಿನ ತಡಿಕೆಗಳಿಂದಲೂ ಇನ್ನು ಕೆಲವುಕಡೆ ಮಣ್ಣಿನಿಂದಲೂ ಗೋಡೆಗಳನ್ನು ಕಟ್ಟುವುದುಂಟು. ಈ ಶತಮಾನದ ಪ್ರಾರಂಭದಿಂದಲೂ ನಡೆದ ಸಂಶೋಧನೆಗಳ ಫಲವಾಗಿ ಗೋಡೆಗಳ ಕಟ್ಟಡದಲ್ಲಿ ಅನೇಕ ಮಾರ್ಪಾಡುಗಳಾಗಿವೆ. ಈಗ ಉಕ್ಕು, ಕಾಂಕ್ರೀಟು, ಕಲ್ನಾರು, ಸಿಮೆಂಟ್ ಮುಂತಾದ ಸಾಮಗ್ರಿಗಳಿಂದ ಹೊರಗಿನ ಚಳಿಯಾಗಲಿ ಸೆಕೆಯಾಗಲಿ ಕಟ್ಟಡದೊಳಕ್ಕೆ ಬರದಹಾಗೂ ಮಳೆಯೂ ಗಾಳಿಯೂ ನುಗ್ಗದ ಹಾಗೂ ಹಗುರವಾದ ಕಟ್ಟಡಗಳನ್ನು ಕಟ್ಟಲಾಗುತ್ತಿದೆ. ಅನೇಕ ದೊಡ್ಡ ಕಟ್ಟಡಗಳು ಹೊರಗಡೆ ನೋಡುವುದಕ್ಕೆ ಇಟ್ಟಿಗೆ ಅಥವಾ ಕಲ್ಲಿನಿಂದ ಕಟ್ಟಿದಂತೆ ಕಾಣುತ್ತಿದ್ದರೂ ಕಟ್ಟಡದ ತೂಕವನ್ನು ಒಳಗಡೆ ಇರುವ ಉಕ್ಕಿನ ಚೌಕಟ್ಟು ಹೊತ್ತಿರುವುದು. ತೂಕವನ್ನು ಹೊರುವುದಕ್ಕೆ ಭದ್ರ ಕಾಂಕ್ರೀಟನ್ನು ಉಪಯೋಗಿಸಿದಾಗ ಹೊರಗಡೆ ಇಟ್ಟಿಗೆಯಾಗಲಿ ಕಲ್ಲಾಗಲಿ ಇರುವುದಿಲ್ಲ. ಆಧುನಿಕ ಕಟ್ಟಡಗಳ ಗೋಡೆಗಳಲ್ಲಿ ಒಳಗಡೆ ಒಂದು ಹೊರಗಡೆ ಒಂದು ಪೊರೆಯಿದ್ದು ನಡುವೆ ಗಾಳಿಯ ಪೊರೆಯಿರುವುದು. ಇದು ಹೊರಗಿನ ಗಾಳಿಯನ್ನು ಕುರಿತು ವಾಯುಬಂಧವಾಗಿದ್ದರೆ ಒಂದು ಉಷ್ಣಅವಾಹಕ ಗೋಡೆಯಂತೆ ವರ್ತಿಸುತ್ತದೆ. ಆದ್ದರಿಂದ ಹೊರಗಿನ ಉಷ್ಣತೆ ಹೇಗೆಯೇ ಇದ್ದರೂ ಕಟ್ಟಡದ ಒಳಗೆ ಒಂದೇ ವಿಧದ ಉಷ್ಣತೆ ಇರುವುದು.

ಒಳಗೋಡೆ ಉಷ್ಣವಾಹಕವಾಗಿದ್ದರೆ ಕಂಬಳಿಯನ್ನೋ ಗಾಜಿನ ಉಣ್ಣೆಯನ್ನೋ ಗೋಡೆಗೆ ತಾಗಿಸಬೇಕು. ಆದರೆ ಗೋಡೆಯನ್ನು ಇಟ್ಟಿಗೆಯಿಂದಲೋ ಕಲ್ಲಿನಿಂದಲೋ ಕಟ್ಟಿದ್ದರೆ ಈ ಎಚ್ಚರಿಕೆ ಬೇಕಾಗಿಲ್ಲ. ಹಾಗಿಲ್ಲದೆ ಹೋದರೆ ಮರಳೂ ದೂಳೂ ಇಲ್ಲದೆ ಇರುವ ಗೂಡುಗೂಡಾದ ಕಾಂಕ್ರೀಟಿನಿಂದ ಒಳಗೋಡೆಯನ್ನು ಕಟ್ಟಬಹುದು.

ಇಟ್ಟಿಗೆ ಗೋಡೆಗಳು : ಇವನ್ನು $4\frac{1}{2}''$–$1\frac{1}{2}'$ ವರೆಗೂ ದಪ್ಪ ಇರುವಂತೆ ಸುಣ್ಣದ ಇಲ್ಲವೆ ಸಿಮೆಂಟಿನ ಗಾರೆಯಿಂದ ಕಟ್ಟಬಹುದು. 9″ ದಪ್ಪದ ಹೊರಗೋಡೆಗಳು ಹೊರಗಿನಿಂದ ಚಳಿಯನ್ನೂ ಸೆಕೆಯನ್ನೂ ಒಳಕ್ಕೆ ಬಿಡುತ್ತವೆ. ಅಂಥ ಸನ್ನಿವೇಶಗಳಲ್ಲಿ ಹೊರಗಡೆಯೂ ಒಳಗಡೆಯೂ $4\frac{1}{2}''$ ದಪ್ಪದ ಗೋಡೆ ಕಟ್ಟಿ ಒಳಗಡೆ ಖಾಲಿ ಜಾಗವನ್ನು ಬಿಡಬೇಕು.

ಕಲ್ಲಿನ ಗೋಡೆಗಳು : ಕಲ್ಲು ಹೇರಳವಾಗಿ ಸಿಕ್ಕುವ ಕಡೆ ಗೋಡೆಗಳನ್ನು ಕಲ್ಲಿನಿಂದಲೇ ಕಟ್ಟುತ್ತಾರೆ. ದೊಡ್ಡ ಕಟ್ಟಡಗಳಲ್ಲಿ ಕಲ್ಲನ್ನು ನಯಮಾಡುವುದೂ ಉಂಟು. ಹೆಚ್ಚು ಭಾರವನ್ನು ಹೊರುವ ಅನೇಕ ಮಹಡಿಗಳ ಕಟ್ಟಡಗಳಲ್ಲಿ ಬಲಕ್ಕಾಗಿ ಹಿಂದುಗಡೆ ಉಕ್ಕಿನ ಇಲ್ಲವೆ ಭದ್ರ ಕಾಂಕ್ರೀಟಿನ ಚೌಕಟ್ಟನ್ನಿಟ್ಟು ಹೊರಗಡೆ ತೆಳುವಾದ ಕಲ್ಲಿನ ಗೋಡೆಯನ್ನು ಅಂದಕ್ಕಾಗಿ ಕಟ್ಟುತ್ತಾರೆ.

ಕಾಂಕ್ರೀಟಿನ ಗೋಡೆಗಳು : ಹೊರಗಡೆ ಇಟ್ಟಿಗೆಯ ಗೋಡೆಯನ್ನು ಕಟ್ಟಿ ನಡುವೆ ಟೊಳ್ಳಾದ ಜಾಗವನ್ನು ಬಿಟ್ಟು ಒಳಗಡೆ ಕಾಂಕ್ರೀಟಿನ ಗೋಡೆಯನ್ನು ಕಟ್ಟುವುದು ದೊಡ್ಡ ನಗರಗಳಲ್ಲಿ ರೂಢಿಯಲ್ಲಿದೆ. ಅಥವಾ ಕಾಂಕ್ರೀಟಿನ ಚೌಕಟ್ಟನ್ನು ಕಟ್ಟಿ ಮಧ್ಯೆ ಇಟ್ಟಿಗೆಯನ್ನೋ ಕಾಂಕ್ರೀಟಿನ ದಿಮ್ಮಿಗಳನ್ನೋ ತುಂಬಬಹುದು. ದಪ್ಪವಾದ ಕಾಂಕ್ರೀಟಿನ ಗೋಡೆಗಳ ಮೇಲೆ ಬರುವ ತೂಕವನ್ನು ತಡೆಯುವುದಕ್ಕಾಗಿ ಅವನ್ನು ಸೂಕ್ತ ರೀತಿಯಲ್ಲಿ ಉಕ್ಕಿನಿಂದ ಭದ್ರಮಾಡುತ್ತಾರೆ. ಮರಳನ್ನೇ ಹಾಕದೆ ಹಗುರವಾದ ಗೂಡಿನ ಕಾಂಕ್ರೀಟಿನ ವಿಷಯವಾಗಿ ಸಂಶೋಧನೆ ನಡೆಯುತ್ತಿದೆ. ಇದರಲ್ಲಿ ಉಕ್ಕನ್ನಿಡುವುದಿಲ್ಲ. ಆದ್ದರಿಂದ ಬಲ ಕಡಿಮೆ. ಸಾಮಾನ್ಯವಾಗಿ ಒಂದು ಮಹಡಿಯ ಸಣ್ಣ ವಾಸದ ಮನೆಗಳಲ್ಲಿ ಈ ಸಾಮಗ್ರಿಯನ್ನು ಉಪಯೋಗಿಸುತ್ತಾರೆ.

3 **ಅಡ್ಡ ಗೋಡೆಗಳು :** ಇವು ಕಟ್ಟಡವನ್ನು ಬೇರೆ ಬೇರೆ ವಿಭಾಗಗಳಾಗಿ ವಿಂಗಡಿಸುತ್ತವೆ. ಇವುಗಳಲ್ಲಿ ಎರಡು ವಿಧ. ಕೇವಲ ಜಾಗವನ್ನು ವಿಭಾಗಿಸ

ತಕ್ಕವು ಜೊತೆಗೆ ಕಟ್ಟಡದ ಒಂದು ಭಾಗವನ್ನು ಹೊರತಕ್ಕವು. ಮೊದಲನೆಯ ನಮೂನೆಯಲ್ಲಿ ಮರದ ಚೌಕಟ್ಟು ಹೆಚ್ಚಾಗಿ ಬಳಕೆಯಲ್ಲಿದೆ. ಇದರ ಅನುಕೂಲ ಏನೆಂದರೆ ಯಾವ ತಳಪಾಯವೂ ಇಲ್ಲದೆ ಇದನ್ನು ನೆಲದ ಮೇಲೆ ಇಡಬಹುದು. ಈಚೆಗೆ ಕಾಂಕ್ರೀಟಿನ ಚಪ್ಪಡಿಗಳು ರೂಢಿಗೆ ಬಂದಿವೆ. ಎರಡನೆಯ ನಮೂನೆಯ ಅಡ್ಡಗೋಡೆಯಲ್ಲಿ ಅದು ಮೇಲಿನ ಮಹಡಿಯ ಭಾರವನ್ನು ಹೊರಬಲ್ಲುದೇ ಎಂಬುದು ಮಾತ್ರ ಮುಖ್ಯ ಪ್ರಶ್ನೆ.

ಕಲ್ಲಿನ ಜಲ್ಲಿಗೆ ಬದಲಾಗಿ ಹಗುರವಾದ ಕುಲುಮೆಯ ಕಿಟ್ಟವನ್ನೂ ಪುಡಿಮಾಡಿದ ಇಟ್ಟಿಗೆಯನ್ನೂ ಉಪಯೋಗಿಸಿ ಕಾಂಕ್ರೀಟಿನ ದಿಮ್ಮಿಗಳನ್ನು 3″ ದಪ್ಪದವರೆಗೆ ಗಟ್ಟಿಯಾಗಿಯೂ ಹೆಚ್ಚಿನ ದಪ್ಪವಿದ್ದರೆ ಟೊಳ್ಳಾಗಿಯೂ 18″ ಉದ್ದ, 9″ ಅಗಲದಲ್ಲಿ ತಯಾರು ಮಾಡಿ ಇಟ್ಟಿಗೆಯ ಕಟ್ಟಡದ ಹಾಗೆ ಕಟ್ಟಿ ಎರಡು ಮುಖಗಳಲ್ಲಿಯೂ ಗಿಲಾವು ಮಾಡಿ ಅಡ್ಡಗೋಡೆಗಳನ್ನು ಕಟ್ಟಬಹುದು. ದಪ್ಪದ ಕಲ್ಲನ್ನು ಭಾರವನ್ನು ಹೊರಬೇಕಾದ ಅಡ್ಡಗೋಡೆಗಳಲ್ಲಿ ಮರದ ಉಣ್ಣೆಯ ಚಪ್ಪಡಿಗಳು 6′ ಉದ್ದ 2′ ಅಗಲ, 2″–3″ ದಪ್ಪವಾಗಿರುತ್ತವೆ. ಇವು ಧ್ವನಿ ಅವಾಹಕಗಳು.

**ಚೌಕಟ್ಟಿನ ಅಡ್ಡಗೋಡೆಗಳು :** ಕೆಳಗಡೆ ಒಂದು ಮರದ ಪಟ್ಟಿಯನ್ನು ಮೇಲುಗಡೆಯ ಪಟ್ಟಿಗೆ ಲಂಬವಾದ ಪಟ್ಟಿಗಳಿಂದ ಚೌಕಟ್ಟಿನ ಹಾಗೆ ಸೇರಿಸಿ ನಡುವೆ ಕಲ್ನಾರುಸಿಮೆಂಟಿನ ಹಾಳೆ, ನಾರಿನ ಹಲಗೆಗಳು ಮರದ ದಬ್ಬೆ ಇವುಗಳ ಹಲಗೆಗಳನ್ನು ಮೊಳೆಗಳಿಂದಲೋ ತಿರುಪುಗಳಿಂದಲೋ ಜೋಡಿಸಬಹುದು.

**4 ತಡಿಕೆ :** ಮೊದಲೇ ಎರಕ ಹೊಯ್ದ ಕಾಂಕ್ರೀಟಿನ ಚಪ್ಪಡಿಗಳನ್ನು ಒಂದು ಕ್ಲುಪ್ತವಾದ ಉದ್ದ ಮತ್ತು ಅಳತೆಗೆ 2″–6″ ದಪ್ಪದವರೆಗೆ ತಯಾರಿಸಿ ಜೋಡಿಸಿ ಗೋಡೆಗಳನ್ನು ಕಟ್ಟುತ್ತಾರೆ. ಈ ಚಪ್ಪಡಿಯನ್ನು ಮಾಡುವಾಗ ಕಲ್ಲಿನ ಜಲ್ಲಿಯನ್ನು ಉಪಯೋಗಿಸುವುದಿಲ್ಲ. ಹಗುರವಾಗುವುದಕ್ಕಾಗಿ ನೊರಜು ಕಲ್ಲು, ಮರಳು ಮತ್ತು ಕಿಟ್ಟಗಳನ್ನು ಬಳಸುತ್ತಾರೆ. ಕೈಗಾರಿಕೆಗಳ ಕಟ್ಟಡಗಳಲ್ಲಿ ಒಂದೇ ರೀತಿಯ ಹಗುರವಾದ ಗೋಡೆಗಳು ಬೇಕಾಗುವ ಕಡೆ ಇಂಥ ಚಪ್ಪಡಿಗಳನ್ನು ಉಪಯೋಗಿಸಬಹುದು. ಹೆಚ್ಚಿನ ಬಲ ಬೇಕಾದರೆ ಮಧ್ಯೆ ಭದ್ರ ಕಾಂಕ್ರೀಟಿನ ಕಂಬಗಳನ್ನು ಉಪಯೋಗಿಸಬೇಕಾಗುತ್ತದೆ.

**5 ಮಾಡು :** ಪ್ರಾದೇಶಿಕ ನೆಲದ ವಿಶೇಷ ಲಕ್ಷಣಗಳು ಮತ್ತು ವಾಯುಗುಣದ ಮೇಲೆ ಮಾಡಿನ ಸಂವಿಧಾನ ನಿಂತಿದೆ. ಸ್ಥೂಲವಾದ ಮಾಡುಗಳನ್ನು ಇಳಿಜಾರಾದುವು ಮತ್ತು ಚಪ್ಪಟೆಯಾದವು ಎಂದು ಎರಡು ದರ್ಜೆಗಳಾಗಿ ವಿಂಗಡಿಸಬಹುದು.

ಇಳಿಜಾರಾದ ಮಾಡುಗಳು : ಇವುಗಳಲ್ಲಿ ಒಪ್ಪಾರಗಳು ಎತ್ತರವಾದ ಗೋಡೆಗಳಿಗೆ ಒರಗಿಕೊಂಡಿರಬಹುದು. ಇಲ್ಲವೆ ಸ್ವತಂತ್ರವಾಗಿರಬಹುದು. ಒಪ್ಪಾರದ ಇಳಿಜಾರು ನಾಲ್ಕಕ್ಕೆ ಒಂದು (ಎತ್ತರ) ಇದ್ದರೆ ಸಾಕು. ಮರದಿಂದ ಮಾಡನ್ನು ಮಾಡಿ ಹುಚುಗಳು, ತಗಡುಗಳು, ಸ್ಲೇಟುಗಳು ಇವುಗಳಿಂದ ಮುಚ್ಚುತ್ತಾರೆ.

ಇಳಿಜಾರಾದ ಚಾವಣಿಗಳು : ಮಳೆ ಹೆಚ್ಚಾಗಿ ಬೀಳುವ ಕಡೆ ಮನೆಗಳ ಮಾಡನ್ನು ಮರದಿಂದ ಇಳಿಜಾರಾಗಿ ಕಟ್ಟಿ ಹುಂಚುಗಳು, ಸ್ಲೇಟುಗಳು, ಹುಲ್ಲು ಇವುಗಳಿಂದ ಮುಚ್ಚುತ್ತಾರೆ. ಕಾರ್ಖಾನೆಗಳಲ್ಲಿ ಉಕ್ಕಿನಿಂದ ಮಾಡನ್ನು ಮಾಡಿ ಕಲ್ನಾರು ಸಿಮೆಂಟಿನ ಹಾಳೆಗಳಿಂದ ಮುಚ್ಚುತ್ತಾರೆ. ಮರದ ಮಾಡುಗಳಲ್ಲಿ ಚೌಕಟ್ಟುಗಳು ಇಲ್ಲವೆ ತೀರುಗಳ ಮೇಲೆ ಉದ್ದ ಸರಗಳನ್ನು ಹಾಕಿ ಮೇಲುಗಡೆಯ ತೀರಿನಿಂದ ಕೆಳಗಿನ ವರೆಗೆ ಸಾಮಾನ್ಯ ತೀರುಗಳನ್ನು ಎಳೆದು ಅವಕ್ಕೆ ಮರದ ರೀಪರುಗಳನ್ನು ಹೊಡೆದು ಮೇಲೆ ಹಂಚನ್ನು ಹೊದೆಸುತ್ತಾರೆ. ಮೊದಲು ಸುಟ್ಟಮಣ್ಣಿನ ಹಂಚುಗಳನ್ನು ಹೊದೆಸುತ್ತಿದ್ದರೆ ಈಗ ಮಂಗಳೂರು ಹಂಚುಗಳು ರೂಢಿಯಾಗಿವೆ. ದೊಡ್ಡ ಅಳತೆಯ ಮಾಡುಗಳಲ್ಲಿ ಉಕ್ಕಿನ ಸರಕಟ್ಟುಗಳನ್ನು ದೂರದಲ್ಲಿಟ್ಟು ಮೇಲೆ ಉದ್ದ ಸರಗಳನ್ನು ಎಳೆದು ಅವುಗಳ ಮೇಲೆ ರೀಪರುಗಳನ್ನು ಹೊಡೆದು ಸತುವಿನ ತಗಡುಗಳನ್ನೋ ಸಿಮೆಂಟ್–ಕಲ್ನಾರಿನ ಹಾಳೆಗಳನ್ನೋ ಹೊದೆಸುತ್ತಾರೆ.

ಇಳಿಜಾರಾದ ಮಾಡಿನಲ್ಲಿ ಇಪ್ಪಾರು ಚಾವಣಿ (ನೋಡಿ) ಮತ್ತು ಬಾಗುಚಾವಣಿ (ಹಿಪ್ ರೂಫ್) ಎಂಬ ಎರಡು ಮಾದರಿಗಳಿವೆ. ಉಪಯೋಗಿಸಬಹುದಾದ ಜಾಗ ಇಪ್ಪಾರುಚಾವಣಿಯಲ್ಲಿ ಹೆಚ್ಚಾಗಿದೆ. ಅಲ್ಲಿ ಕಿಟಕಿಗಳನ್ನಿಡಬಹುದು. ಮಳೆ ಹೆಚ್ಚಾದ ಕಡೆ ಬಾಗುಚಾವಣಿಯನ್ನು ಉಪಯೋಗಿಸುವುದೇ ಹೆಚ್ಚು.

ಉತ್ತರದ ಬೆಳಕಿನ ಮಾಡು : ಇದನ್ನು ದೊಡ್ಡ ಕಾರ್ಖಾನೆಗಳಲ್ಲಿ ಉಪಯೋಗಿಸುತ್ತಾರೆ. ಈ ಮಾದರಿಯ ಒಂದು ಪಾರ್ಶ್ವದ ಇಳಿಕಲು ಕಡಿಮೆ. ಇದಕ್ಕೆ ಸಿಮೆಂಟ್–ಕಲ್ನಾರಿನ ತಗಡುಗಳನ್ನು ಹೊದೆಸಿರುತ್ತಾರೆ. ಮತ್ತೊಂದು ಪಾರ್ಶ್ವದ ಇಳಿಕಲು ಹೆಚ್ಚು. ಅದನ್ನು ಮರದ ಇಲ್ಲವೆ ಉಕ್ಕಿನ ಚೌಕಟ್ಟಿನಲ್ಲಿರುವ ಗಾಜಿನಿಂದ ಮುಚ್ಚಿರುತ್ತಾರೆ. ಇದು ಸುಮಾರಾಗಿ ಉತ್ತರದಿಕ್ಕಿನಲ್ಲಿರುವುದು. ಈ ಮಾದರಿಯಲ್ಲಿ ಬಿಸಿಲಿನ ಝಳವಿಲ್ಲದೆ ಗರಿಷ್ಠ ಬೆಳಕು ಒಳಕ್ಕೆ ಬರುತ್ತದೆ. ಮಾಡಿನ ಎರಡು ಇಳಿಕಲುಗಳಿಗೂ ಮಧ್ಯೆ ಮಳೆಯ ನೀರನ್ನು ದೋಣಿಗಳಿಂದ ಸಾಗಿಸುತ್ತಾರೆ.

ಚಪ್ಪಟೆ ಮಾಡುಗಳು : ಹಿಂದೆ ದೇವಸ್ಥಾನಗಳಲ್ಲಿ ಕಲ್ಲಿನ ಕಂಬಗಳ ಮೇಲೆ ಚಪ್ಪಡಿಗಳನ್ನು ಕೂರಿಸಿ ಚಪ್ಪಟೆಯಾದ ಮಾಡನ್ನು ಕಟ್ಟುತ್ತಿದ್ದರು. ಈಚೆಗೆ ಪಕ್ಕ ತಾರಸಿ ಎಂಬ ಮಾಡು, ಮಳೆ ಕಡಿಮೆಯಾಗಿರುವ ಪ್ರದೇಶಗಳಲ್ಲಿ ಬಳಕೆಯಲ್ಲಿತ್ತು. ಭದ್ರ ಕಾಂಕ್ರೀಟು ಬಂದ ಮೇಲೆ ಚಪ್ಪಟೆಯಾದ ಮಾಡುಗಳು ಸರ್ವತ್ರ ಬಳಕೆಗೆ ಬಂದಿವೆ. ಮಾಡಿನ ಅಗಲಕ್ಕೆ ಅನುಗುಣವಾಗಿ ಈ ನಮೂನೆಯನ್ನು ಶಾಸ್ತ್ರೀಯವಾಗಿ ಸಂವಿಧಾನ ಮಾಡಬೇಕು. ಅಗಲ ಕಡಿಮೆಯಾಗಿದ್ದರೆ ಗೋಡೆಗಳ ಮೇಲೆ ಚಪ್ಪಡಿಯನ್ನು ಎಳೆಯಬಹುದು. ಅಗಲ ಹೆಚ್ಚಾದರೆ 8′–10′ ಅಂತರದಲ್ಲಿ T–ತೊಲೆಗಳನ್ನು ಎಳೆದು ಮೇಲುಗಡೆ ಭದ್ರ ಕಾಂಕ್ರೀಟಿನ ಚಪ್ಪಡಿಯನ್ನು ಇಡಬೇಕಾಗುತ್ತದೆ.

ಕಾರ್ಖಾನೆಗಳಲ್ಲಿ ತೊಲೆ ಮತ್ತು ಚಪ್ಪಡಿಯ ಮಾದರಿಯಲ್ಲಿ ಅಚ್ಚು ಹೊಯ್ದ ಭದ್ರ ಕಾಂಕ್ರೀಟಿನ ಮಾಡುಗಳನ್ನು ಕಟ್ಟಡದ ಜಾಗಕ್ಕೆ ಸಾಗಿಸಿ ಸ್ಥಳದಲ್ಲಿ ಜೋಡಿಸಬಹುದು. ಆಗ ತೊಲೆಗಳನ್ನು ಒಂದು ಕಡೆಯಿಂದ ಇನ್ನೊಂದಕ್ಕೆ ಸಾಗಿಸುವಾಗ ಬೀಳುವ ಹೆಚ್ಚಿನ ತ್ರಾಸವನ್ನು ತಡೆಯುವುದಕ್ಕಾಗಿ ಹೆಚ್ಚು ಉಕ್ಕನ್ನು ಉಪಯೋಗಿಸಬೇಕಾಗುತ್ತದೆ.

ಮತ್ತೊಂದು ನಮೂನೆಯ ಚಪ್ಪಟೆಯಾದ ಭದ್ರ ಕಾಂಕ್ರೀಟಿನ ಮಾಡಿನಲ್ಲಿ ಮಾಡನ್ನು ಬೇರೆ ಬೇರೆ ಅಳತೆಗಳಲ್ಲಿಯೂ ದಪ್ಪಗಳಲ್ಲಿಯೂ ಕಾಂಕ್ರೀಟಿನಿಂದಲೋ ಸುಟ್ಟ ಮಣ್ಣಿನಿಂದಲೋ ಮಾಡಿದ ಒಂದೇ ಅಳತೆಯ ಚಪ್ಪಡಿಗಳ ರೂಪದಲ್ಲಿ



ನವದೆಹಲಿಯಲ್ಲಿನ ಅಮೆರಿಕ ರಾಯಭಾರಿ ಕಚೇರಿ. ಅಮೆರಿಕನ್ ಮತ್ತು ಭಾರತೀಯ ಸಂಪ್ರದಾಯಗಳ ಮಿಲನಕ್ಕೊಂದು ನಿದರ್ಶನ. ಶಿಲ್ಪಿ—ಎಡ್ವರ್ಡ್ ಡರೆಲ್ ಸ್ಟೋನ್

ಮಾಡುತ್ತಾರೆ. ಚಪ್ಪಡಿಗಳ ಮಧ್ಯೆ ಉಕ್ಕಿನ ಕಂಬಿಗಳನ್ನು ಜೋಡಿಸಿ ಸಂದುಗಳಲ್ಲಿ ಸಿಮೆಂಟ್ ಕಾಂಕ್ರೀಟನ್ನು ತುಂಬುತ್ತಾರೆ. ಮೇಲುಗಡೆ ಕೊಂಚ ನಯವಾದ ಕಾಂಕ್ರೀಟಿನಿಂದ ಮುಚ್ಚುತ್ತಾರೆ.

ಈಚೆಗೆ ಹಿಂದೆಯೇ ತ್ರಾಸವನ್ನು ಹಾಕಿದ ಕಾಂಕ್ರೀಟಿನಲ್ಲಿ (ಪ್ರೀಸ್ಟ್ರೆಸ್ಡ್ ಕಾಂಕ್ರೀಟ್) ಎರಕ ಹೊಯ್ಯುವುದಕ್ಕೆ ಮುಂಚೆಯೇ ಹೆಚ್ಚಾದ ಎಳೆತದ ಶಕ್ತಿಯುಳ್ಳ ತಂತಿಯನ್ನು ತ್ರಾಸದಲ್ಲಿರಿಸಿ ಆ ಮೂಲಕ ಕಾಂಕ್ರೀಟನ್ನು ಕಡಿಮೆ ಮಾಡುವುದರಿಂದ ಉಕ್ಕಿನ ತೂಕವೂ ವಿಶೇಷವಾಗಿ ಕಡಿಮೆಯಾಗುತ್ತದೆ. ಇದರಿಂದ ಮಾಡನ್ನು ಇಳಿಸುವ ಸಮಸ್ಯೆಗೆ ಸಹಾಯವಾಗುತ್ತದೆ.

ಬಾಗಿದ ಮಾಡುಗಳು : ಇವುಗಳನ್ನು ಉಕ್ಕಿನ ಸರಕಟ್ಟುಗಳಿಂದಲೂ ಉದ್ದದ ಸರಗಳಿಂದಲೂ ಕಟ್ಟಿ ಸತುವಿನ ತಗಡುಗಳಿಂದಲೋ ಸಿಮೆಂಟ್–ಕಲ್ನಾರಿನ ಹಾಳೆಗಳಿಂದಲೋ ಮುಚ್ಚುತ್ತಾರೆ. ಭದ್ರ ಕಾಂಕ್ರೀಟಿನಿಂದಲೂ ಬಾಗಿದ ಮಾಡುಗಳನ್ನು ತಯಾರಿಸುತ್ತಾರೆ.

**6 ನೆಲ :** ಈಗಿನ ಕಟ್ಟಡಗಳ ನೆಲದಲ್ಲಿ ಸೌಕರ್ಯದ ದೃಷ್ಟಿಯಿಂದ ಪರಿಷ್ಕರಣಗಳಾಗುತ್ತವೆ. ಕಲ್ಲಿನ ಇಲ್ಲವೆ ಮಣ್ಣಿನ ನೆಲವೇ ಮೊನ್ನೆ ಮೊನ್ನೆಯ ವರೆಗೆ ಸಾಕಾಗಿತ್ತು. ಆಮೇಲೆ ಇಟ್ಟಿಗೆಯ ನೆಲ ಬಂತು. ಭೂಮಿಯ ತೇವ ಮನೆಯ ನೆಲದ ಮೇಲೆ ಒಸರುವುದನ್ನು ತಡೆಯುವುದಕ್ಕಾಗಿ ಮರದ ತೊಲೆಗಳ ಮೇಲೆ ಹಾಸಿದರು. ಅನಂತರ ಕೆಳಗಡೆ ಗಟ್ಟಿಯಾದ ನೆಲದ ಮೇಲೆ ತಂಡಿಯನ್ನು ತಡೆಯುವ ಪದರವೂ ಅದರ ಮೇಲೆ ಕಾಂಕ್ರೀಟೂ ಬಂದಮೇಲೆ ಸುಮಾರಾಗಿ ಅನುಕೂಲವಾದ ನೆಲ ದೊರೆತ ಹಾಗಾಯಿತು.

ಸಾರ್ವಜನಿಕ ಕಟ್ಟಡಗಳು, ಅಂಗಡಿಗಳು, ಕಚೇರಿಗಳು ಮತ್ತು ವಾಸದ ಮನೆಗಳಲ್ಲಿ ಕಾಂಕ್ರೀಟ್ ನೆಲದ ಮೇಲ್ಮೈಯ ಪರಿಷ್ಕರಣ ಮುಖ್ಯವಾಗುತ್ತಿದೆ. ಅನೇಕ ವರ್ಷಗಳಿಂದಲೂ ಮರ, ಹಂಚುಗಳು, ಟೆರಾಸೊ ಮತ್ತು ಅಮೃತಶಿಲೆಯ ನೆಲಗಳು ಉಪಯೋಗದಲ್ಲಿವೆ. ಬೇಗ ಸವೆಯದೆ ಇರುವುದು, ಜಾರದೆ ಇರುವುದು, ಕಟ್ಟುವುದಕ್ಕೂ ರಿಪೇರಿಯಲ್ಲಿ ಇಡುವುದಕ್ಕೂ ತಗಲುವ ಖರ್ಚು-ಇವನ್ನು ಗುರಿಯಾಗಿಟ್ಟುಕೊಂಡು ಈ ಪರಿಷ್ಕರಣಗಳ ಮೇಲೆಯೇ ಅಪಾರವಾದ ಸಂಶೋಧನೆಗಳು ನಡೆದಿವೆ. ಅಸ್ಫಾಲ್ಟ್, ಕಾರ್ಕ್, ರಬ್ಬರ್, ಇವು ಹಂಚುಗಳ ಮತ್ತು ತಗಡುಗಳ ರೂಪದಲ್ಲಿ ಜನಪ್ರಿಯವಾಗುತ್ತಿವೆ. ಗಟ್ಟಿಮರವೂ ಪದರದ ಮರವೂ ಇನ್ನೊಂದು ಕಡೆ ಉಪಯೋಗವಾಗುತ್ತಿವೆ.

**7 ಗಿಲಾವು :** ಗೋಡೆಗಳಿಗೂ ಮಾಳಿಗೆಗಳಿಗೂ ಮರಳಿನ ಗಾರೆಯಿಂದ ಗಿಲಾವು ಮಾಡುತ್ತಾರೆ. ಸಾಮಾನ್ಯವಾಗಿ ಗಿಲಾವನ್ನು ಎರಡು ಅಥವಾ ಮೂರು ವರಸೆಗಳಲ್ಲಿ ಹಾಕುತ್ತಾರೆ. ಗೋಡೆಗಳ ಮೂಲೆಗಳ ಗಿಲಾವಿನ ಕಾರ್ನೀಸುಗಳನ್ನು ಮಾಲುಗಳನ್ನಿಟ್ಟು ಮುಗಿಸುತ್ತಾರೆ. ಇದು ಕುಶಲಕಲೆ. ಮನೆಗಳಿಗೆ ಹೊರಗಡೆ ಒರಟಾಗಿ ಸಿಮೆಂಟ್ ಗಾರೆಯಿಂದ ಗಿಲಾವು ಮಾಡಿದಾಗ ಮೊದಲು ಸಿಮೆಂಟನ್ನು ತೆಳುವಾಗಿ ಹೊಡೆದು ಗಟ್ಟಿಯಾಗುವುದಕ್ಕೆ ಬಿಡುತ್ತಾರೆ. ಆಮೇಲೆ ಅದನ್ನು ಕೊಂಚ ಕೆರೆದು ಮತ್ತೆ ಸಿಮೆಂಟ್ ಗಾರೆಯನ್ನು ಹಾಕಿ ಮುಗಿಸುತ್ತಾರೆ.



ಮೊದಲೇ ಕಟ್ಟಿದ ಮನೆ ಮತ್ತು ಮನೆಯ ಭಾಗಗಳನ್ನು ಜೋಡಿಸಿ ಅನೇಕ ಅಂತಸ್ತಿನ ದೊಡ್ಡ ಮನೆಯೊಂದನ್ನು ನಿರ್ಮಾಣ ಮಾಡುತ್ತಿರುವುದು

**8 ಮಹಡಿಯ ಮೆಟ್ಟಲುಗಳು :** ನೆಲಕ್ಕೂ ಮಹಡಿಗೂ ನಡುವೆ ಮರದ ಅಟ್ಟಗಳನ್ನು ಕಟ್ಟುವುದು ಮೊದಲಿನಿಂದಲೂ ರೂಢಿಯಲ್ಲಿದೆ. ಆಗ ಮಹಡಿಯನ್ನು ವಾಸಕ್ಕೆ ಉಪಯೋಗಿಸುವುದು ಸಾಧ್ಯವಾಯಿತು.

19ನೆಯ ಶತಮಾನದಲ್ಲಿ ಉಕ್ಕು ಬಂದ ಮೇಲೆ ಒಂದರ ಮೇಲೊಂದು ಮಹಡಿಯನ್ನು ಕಟ್ಟುವುದು ಪ್ರಾರಂಭವಾಯಿತು. ಅಮೆರಿಕದಲ್ಲಿ ಗಗನ ಚುಂಬಿಗಳನ್ನು ಕಟ್ಟಿದರು. ಅಲ್ಲಿನ ಎಂಪೈರ್ ಸ್ಟೇಟ್ ಕಟ್ಟಡದಲ್ಲಿ 102 ಮಹಡಿಗಳಿವೆ. ಟೆಲಿವಿಷನ್ ಗೋಪುರವೂ ಸೇರಿ ಅದರ ಎತ್ತರ 1472'. ಉಕ್ಕನ್ನು ಉಪಯೋಗಿಸುವುದರಿಂದ ಆದ ದೊಡ್ಡ ಅನುಕೂಲವೆಂದರೆ ಅದನ್ನು ಸರಿಯಾಗಿ ಮುಚ್ಚಿದರೆ ಕಟ್ಟಡಕ್ಕೆ ಬೆಂಕಿಯ ಭೀತಿ ತಪ್ಪುತ್ತದೆ. ಇಂಥ ಕಟ್ಟಡಗಳಲ್ಲಿ ಶಬ್ದ ಒಳಗಿನಿಂದ ಹೊರಕ್ಕೂ ಹೊರಗಿನಿಂದ ಒಳಕ್ಕೂ ಬರದ ಹಾಗೆ ಮಾಡಲಾಗುತ್ತದೆ. ಒಳಗಡೆ ಪ್ರತಿಧ್ವನಿಯನ್ನು ತಪ್ಪಿಸುವ ವಿಚಾರದಲ್ಲಿಯೇ ಎಷ್ಟೋ ಸಂಶೋಧನೆಗಳು ನಡೆದಿವೆ. ಅನೇಕ ಸಂಸಾರಗಳೂ ಕಚೇರಿಗಳೂ ಇರುವ ಹಲವು ಮಹಡಿಗಳ ಕಟ್ಟಡಗಳಲ್ಲಿ ಶಬ್ದವನ್ನು ತಡೆಯುವುದು ಅನಿವಾರ್ಯ. ಒಂದು ಕ್ರಮದಲ್ಲಿ ಕಾಂಕ್ರೀಟ್ ಚಪ್ಪಡಿಯ ಮೇಲೆ ಅದಕ್ಕೆ ತಗಲದಂತೆ ಮರದ ಪಟ್ಟಿಗಳ ಮೇಲೆ ಹಲಗೆಗಳನ್ನು ಜೋಡಿಸಿರುತ್ತಾರೆ. ಕಾಂಕ್ರೀಟಿಗೂ ಮರದ ಹಲಗೆಗಳಿಗೂ ನಡುವೆ ಫೆಲ್ಟಿನ ಪಟ್ಟಿಗಳನ್ನಿಟ್ಟಿರುತ್ತಾರೆ. ಈ ಎಲ್ಲ ಕಡೆ ಮೆಟ್ಟಲುಗಳ ಅಗತ್ಯ ಕಂಡುಬರುತ್ತದೆ. ಹಿಂದೆ ನೇರವಾಗಿ ಮೆಟ್ಟಲುಗಳನ್ನೇ ಕಟ್ಟುತ್ತಿದ್ದರು. ಈಚೆಗೆ ಎತ್ತುಗೆ ಯಂತ್ರಗಳು ಬಳಕೆಗೆ ಬಂದಿವೆ.

ಕೆಳಗಿನಿಂದ ಮೇಲಿನ ಮಹಡಿಗಳಿಗೆ ಸಾಂಪ್ರದಾಯಿಕವಾಗಿ ಇದ್ದ ಈ ಮೆಟ್ಟಲುಗಳನ್ನು ಹಳೆಯ ಕಾಲದಲ್ಲಿ ಮಣ್ಣು, ಮರ, ಕಲ್ಲು, ಇಟ್ಟಿಗೆ ಇವುಗಳಿಂದ ಕಟ್ಟುತ್ತಿದ್ದರು. ಈಗ ಭದ್ರ ಕಾಂಕ್ರೀಟಿನಿಂದಲೂ ಉಕ್ಕಿನಿಂದಲೂ ಕಟ್ಟುತ್ತಾರೆ. ಮೊದಲೇ ಎರಕ ಹೊಯ್ದ ಕಾಂಕ್ರೀಟಿನ ಮೆಟ್ಟಲುಗಳನ್ನು ಕಲ್ಲಿನ ಮೆಟ್ಟಲುಗಳಂತೆಯೇ ಮಾಡಿ ಜೋಡಿಸುತ್ತಾರೆ. ಉಕ್ಕಿನ ಇಲ್ಲವೆ ಕಬ್ಬಿಣದ ಮೆಟ್ಟಲುಗಳನ್ನು ಸಾಮಾನ್ಯವಾಗಿ ಕಟ್ಟಡದೊಳಗೆ ಇಡುವುದಿಲ್ಲ. ಬೆಂಕಿಯೇನಾದರೂ ಬಿದ್ದರೆ ಕಾರ್ಖಾನೆಗಳಲ್ಲಿಯೂ ಕಚೇರಿಗಳಲ್ಲಿಯೂ ತಪ್ಪಿಸಿಕೊಂಡು ಹೋಗುವುದಕ್ಕೆ ಹೊರಗಡೆ ಇವನ್ನು ಇಟ್ಟಿರುತ್ತಾರೆ.

ಮಹಡಿಯ ಮೆಟ್ಟಲುಗಳ ಸಂವಿಧಾನದಲ್ಲಿ ಏರುವಾಗಿನ ಶ್ರಮವನ್ನು ಗಣನೆಗೆ ತೆಗೆದುಕೊಳ್ಳಬೇಕು. ಈ ವಿಚಾರದಲ್ಲಿ ಕೆಲವು ಸಾಂಪ್ರದಾಯಿಕ ನಿಯಮಗಳಿವೆ. ಯಾವಾಗಲೂ ಮೆಟ್ಟಲಿನ ಅಗಲಕ್ಕೂ (ಟ್ರೆಡ್) ನಿಲುಪಟ್ಟಿಯ ಎತ್ತರಕ್ಕೂ (ರೈಸ್) ಒಂದು ಸಂಬಂಧವಿರಬೇಕು. ವಾಸದ ಮನೆಗಳಿಗೆ ಅನ್ವಯಿಸುವ ಒಂದು ಕ್ರಮದಲ್ಲಿ ಅಂಗುಲಗಳಲ್ಲಿ ಇವೆರಡನ್ನೂ ಗುಣಿಸಿದರೆ 66 ಬರಬೇಕು. ಎಂದರೆ ಮೆಟ್ಟಲುಗಳ ಎತ್ತರ 6" ಇದ್ದರೆ ಅಗಲ 11" ಇರಬೇಕು.

ಎತ್ತರವಾದ ಮಹಡಿಗಳನ್ನು ಹತ್ತುವಾಗ ಶ್ರಮ ಕಡಿಮೆಯಾಗಲು ಮಧ್ಯಮಧ್ಯ ನಿಲ್ಲುವುದಕ್ಕೆ ಅವಕಾಶ ಬೇಕು. ಮೆಟ್ಟಲುಗಳು ಪಕ್ಕಕ್ಕೆ ಕಿರಿದಾಗಲೂ ಸಂಪೂರ್ಣವಾಗಿ ದಿಕ್ಕನ್ನು ಬದಲಿಸಿದಾಗಲೂ ಅಗಲವಾದ ಜಾಗ ಬಿಡಬೇಕು. ಜಾಗ ಸಾಲದೆ ಹೋದಾಗ ಸುತ್ತು ಮೆಟ್ಟಲುಗಳನ್ನು ಉಪಯೋಗಿಸುತ್ತಾರೆ. ಆದರೆ ಇದು ಅನುಕೂಲವಲ್ಲ. ಒಂದು ಮೆಟ್ಟಲು ಸಾಲಿನಲ್ಲಿ ಎಲ್ಲ ಮೆಟ್ಟಲುಗಳೂ ತಿರುಗುತ್ತಲೇ ಹೋದರೆ ಅದನ್ನು ತಿರುಗುವ ಮೆಟ್ಟಲು ಅಥವಾ ತಿರುಪು ಮೆಟ್ಟಲು ಎನ್ನುತ್ತಾರೆ. ಇದನ್ನು ಕಬ್ಬಿಣದಿಂದ ತಯಾರು ಮಾಡುವುದು ರೂಢಿ.

ಈಗ ಕಚೇರಿಗಳಲ್ಲಿಯೂ ವಾಣಿಜ್ಯದ ಕಟ್ಟಡಗಳಲ್ಲಿಯೂ ಹತ್ತಾರು ಮಹಡಿಯ ಮನೆಗಳಲ್ಲಿಯೂ ಮೆಟ್ಟಲುಗಳೇನೋ ಇದ್ದರೂ ಅವಕ್ಕೆ ಎರಡನೆಯ ಸ್ಥಾನ ಬಂದಿದೆ. ವಿದ್ಯುತ್ತಿನಿಂದ ಚಲಿಸುವ ಎತ್ತುಗೆಗಳಿಗೆ (ಲಿಫ್ಟ್ಸ್) ಮೊದಲನೆಯ ಸ್ಥಾನ ಬಂದಿದೆ. ಇನ್ನೂ ಆಧುನಿಕವಾದ ಕ್ರಮ ಚಲಿಸುವ ಮಹಡಿಯ ಮೆಟ್ಟಲು (ಎಸ್ಕಲೇಟರ್).

**9 ಕಿಟಕಿಗಳು :** ತೆರೆದು ಹಾಕಿ ಮಾಡುವ ಹಾಗಿರುವ ಪ್ರತಿಯೊಂದು ಕಿಟಕಿಯಲ್ಲಿಯೂ ಒಂದು ಚೌಕಟ್ಟು, ತೆರೆಯುವ ಬಾಗಿಲುಗಳೂ ಇರಬೇಕು. ಚೌಕಟ್ಟಿನಲ್ಲಿ ಬಾಗಿಲುಗಳು ಪಕ್ಕಕ್ಕೆ ತೆರೆಯುವುದು ಸಾಂಪ್ರದಾಯಿಕ ಕ್ರಮ. ಈಚೆಗೆ ಕಿಟಕಿಗಳ ಬಾಗಿಲು ಚೌಕಟ್ಟಿನಲ್ಲಿ ಮೇಲಕ್ಕೂ ಕೆಳಕ್ಕೂ ಸರಿಯುವಂತೆ ಮಾಡುತ್ತಾರೆ. ರೈಲ್ವೆಗಾಡಿಗಳಲ್ಲಿ ಮೊದಲಿನಿಂದಲೂ ಈ ನಮೂನೆಯ ಕಿಟಕಿಗಳು ಉಪಯೋಗದಲ್ಲಿವೆ. ಕಿಟಕಿಗಳ ಜಾರುಕದದ ಚೌಕಟ್ಟುಗಳನ್ನು ಮೇಲುಗಡೆ ಹಗ್ಗಗಳಿಂದಲೋ ಸರಪಳಿಗಳಿಂದಲೋ ತೂಗುಹಾಕಿ ಅವುಗಳ ತೂಕವನ್ನು ಚೌಕಟ್ಟಿನಲ್ಲಿ ನೇತಾಡುವ ಸೀಸದ ಭಾರಗಳಿಂದ ಸಮತೂಕ ಮಾಡುವುದೂ ಒಂದು ಕ್ರಮ. ಇದಲ್ಲದೆ ಅಡ್ಡಗಲವಾಗಿ ಬಾಗಿಲುಗಳು ಸರಿದಾಡುವಂತೆಯೂ ಮಾಡುತ್ತಾರೆ.

ಕಿಟಕಿಯ ಬಾಗಿಲುಗಳನ್ನು ಮರ, ಗಾಜು, ಇವುಗಳಿಂದ ಸಾಮಾನ್ಯವಾಗಿ ಮುಚ್ಚುತ್ತಾರೆ. ಈಚೆಗೆ ಅನೇಕ ಹಗುರವಾದ ಹಲಗೆಗಳು ರೂಢಿಗೆ ಬಂದಿವೆ. ಈ ವಿಭಾಗದಲ್ಲಿ ಇನ್ನೂ ಸಂಶೋಧನೆಗಳು ನಡೆಯುತ್ತಲೇ ಇವೆ. ಇವನ್ನು ಬೇರೆ ಬೇರೆ ವ್ಯಾಪಾರದ ಹೆಸರುಗಳಿಂದ ಕರೆಯುತ್ತಾರೆ. ತಿರುಗುವ ಕಿಟಕಿಯನ್ನು ಮರದ ಚೌಕಟ್ಟಿನಲ್ಲಿ ಪಕ್ಕಗಳಲ್ಲಿ ತೂಗುಹಾಕಿ ಒಳಕ್ಕೂ ಹೊರಕ್ಕೂ ತೆರೆಯುವ ಹಾಗೆ ಮಾಡುತ್ತಾರೆ. ಹೊರಗೆ ತೆರೆದರೆ ಮಳೆಯ ನೀರು ಒಳಗೆ ಬರುವುದಿಲ್ಲ.

ಬಾಗಿಲುಗಳು ಮುಚ್ಚಿದ್ದಾಗ ಮೇಲಿನಿಂದ ಗಾಳಿ ಮನೆಯೊಳಕ್ಕೆ ಬರುವ ಹಾಗೆ ಅವುಗಳ ಮೇಲೆಯೂ ಅಡ್ಡ ಕಿಟಕಿಗಳನ್ನಿಟ್ಟಿರುತ್ತಾರೆ. ಈ ಕಿಟಕಿಗಳು ಮೇಲುಗಡೆ ಬಂಧಿತವಾಗಿದ್ದು ಹೊರಗಡೆಗೆ ತೆರೆಯುತ್ತವೆ.

ದೊಡ್ಡ ಕಿಟಕಿಗಳ ಬಾಗಿಲುಗಳು ಹೊರಗಡೆಯಾದರೂ ತೆರೆಯಬಹುದು, ಒಳಗಡೆಯಾದರೂ ತೆರೆಯಬಹುದು. ಉಷ್ಣದೇಶಗಳಲ್ಲಿ ಹೊರಗಡೆ ತೆರೆಯುವುದೇ ಅನುಕೂಲ. ಕಿಟಕಿಗಳ ಗಾಜುಗಳು ಪಾರದರ್ಶಕವಾಗಿರಬಹುದು ಇಲ್ಲವೆ ಅಪಾರದರ್ಶಕವಾಗಿರಬಹುದು.

ಉಕ್ಕಿನ ಕಿಟಕಿಗಳನ್ನು ಈಗ ರಾಶಿರಾಶಿಯಾಗಿ ಮಾಡಿ ಮೇಲುಗಡೆಯೂ ಕೆಳಗಡೆಯೂ ಚೌಕಟ್ಟಿನಲ್ಲಿ ಭದ್ರಮಾಡಿ ತಿರುಗಣೆ ಕಿಟಕಿಗಳ ಹಾಗೆ ಎಲ್ಲೆಲ್ಲಿಯೂ ಉಪಯೋಗಿಸುತ್ತಿದ್ದಾರೆ. ಈ ಕಿಟಕಿಗಳಲ್ಲಿ ಉಕ್ಕಿಗೆ ತುಕ್ಕು ಹಿಡಿಯದ ಹಾಗೆ ಆಗಾಗ ಬಣ್ಣವನ್ನು ಹಾಕುತ್ತಿರಬೇಕು. ಮರದ ಕಿಟಕಿಗಳಿಗೂ ಹೊರಗಡೆ ಬಣ್ಣವನ್ನು ಹಾಕಿ ಒಳಗಡೆ ವಾರ್ನಿಸು ಇಲ್ಲವೇ ಪಾಲಿಷ್ ಮಾಡುತ್ತಾರೆ. ಅಲ್ಯುಮಿನಿಯಮಿನಿಂದಲೂ ಈಚೆಗೆ ಕಿಟಕಿಗಳು ತಯಾರಾಗುತ್ತಿವೆ.

10 **ಬಾಗಿಲುಗಳು :** ಬಾಗಿಲುಗಳನ್ನು ಮೂರು ಬಗೆಯಾಗಿ ವಿಂಗಡಿಸಬಹುದು. (1) ಯಾವ ಸಾಮಗ್ರಿಯಿಂದ ಮಾಡಿದೆಯೋ ಅದನ್ನು ಹೇಳಬಹುದು—ಕಬ್ಬಿಣ, ಮರ, ಇತ್ಯಾದಿ. (2) ಮರದ ಬಾಗಿಲುಗಳನ್ನು ರಚನೆಯಲ್ಲಿ ಪುಟೀಪಿನಿಂದ ಇಲ್ಲವೆ ಚೌಕಟ್ಟಿನಿಂದ ಮಾಡಿರಬಹುದು. (3) ಬಾಗಿಲುಗಳು ಹೊರಗಡೆ ತೆರೆಯಬಹುದು ಇಲ್ಲವೆ ಒಳಗಡೆ ತೆರೆಯಬಹುದು.

ಬಾಗಿಲುಗಳನ್ನು ಬಡಗಿಗಳು ಬೇಕುಬೇಕಾದ ಅಳತೆಗೆ ತಯಾರಿಸುತ್ತಾರೆ. ನಗರಗಳಲ್ಲಿ ಯಂತ್ರಗಳನ್ನು ಉಪಯೋಗಿಸಿ ಶಿಷ್ಟ ಆಯಾಮಗಳ ಅನುಸಾರ ಅವನ್ನು ತಯಾರಿಸಲಾಗುತ್ತದೆ. ಇಂಗ್ಲೆಂಡ್ ಮುಂತಾದ ದೇಶಗಳಲ್ಲಿ ಒಲೆಗಳ ಶಾಖದಲ್ಲಿ ಹದವಾಗಿ ಒಣಗಿಸಿದ ಮರದಿಂದ ಕ್ಲುಪ್ತವಾದ ಎತ್ತರ, ಅಗಲ ಮತ್ತು ದಪ್ಪದಲ್ಲಿ ದೊಡ್ಡ ರೀತಿಯಲ್ಲಿ ಕಾರ್ಖಾನೆಗಳಲ್ಲಿ ಇವನ್ನು ಮಾಡುತ್ತಾರೆ. ಬಾಗಿಲುಗಳಿಗೆ ಎರಡು ಹಾಳೆಗಳಿರಬಹುದು ಇಲ್ಲವೆ ಒಂದೇ ಹಾಳೆಯಿರಬಹುದು. ಈಚೆಗೆ ಲೋಹದ ಬಾಗಿಲುಗಳು ಹೆಚ್ಚಾಗಿ ಬಳಕೆಗೆ ಬರುತ್ತಿವೆ. ಹೊರಗಿನ ಬಾಗಿಲುಗಳನ್ನು ಯಾವಾಗಲೂ ಅನೇಕ ಕಡೆ ಲೋಹದಿಂದಲೇ ತಯಾರಿಸುತ್ತಾರೆ.

ಮನೆಯನ್ನು ಕಟ್ಟುವ ಕಲೆ ಬೆಳೆಯುತ್ತಲೇ ಇದೆ. ಈ ವಿಚಾರದಲ್ಲಿ ಸಂಶೋಧನೆಗಳೂ ನಡೆಯುತ್ತಲೇ ಇವೆ.

ಕಟ್ಟಡನಿರ್ಮಾಣದ ಯೋಜನೆ : ಒಂದು ದೊಡ್ಡ ಕಟ್ಟಡವನ್ನು ಕಟ್ಟುವ ಯೋಜನೆಯೂ ಅದಕ್ಕೆ ಅವಶ್ಯವಾದ ವ್ಯವಸ್ಥೆಯೂ ಕೆಲಸಗಾರರು ನಿವೇಶನದ ಹತ್ತಿರಕ್ಕೆ ಬರುವುದಕ್ಕೆ ಬಹಳ ಮುಂಚೆ ಪ್ರಾರಂಭವಾಗುತ್ತದೆ. ಭೂಮಿಯನ್ನು ಮೊದಲು ಮೋಜಣಿ ಮಾಡಿ ಮಣ್ಣಿನ ಗುಣವನ್ನು ಪರೀಕ್ಷಿಸಿದ ಮೇಲೆ ಪೀಠಿಕಾ ರೂಪವಾಗಿ ವಿನ್ಯಾಸಗಳನ್ನೂ ಅಂದಾಜುಗಳನ್ನೂ ತಯಾರಿಸಬೇಕು. ಕಟ್ಟಡವನ್ನು ಕಟ್ಟಲು ನಗರಸಭೆಯ ಅನುಮತಿ ಬೇಕು. ನಗರದ ಚರಂಡಿಯ ವ್ಯವಸ್ಥೆ ಮತ್ತು ನೀರಿನ ಸರಬರಾಜನ್ನು ಹೊಂದಿಸಿಕೊಳ್ಳಬೇಕು. ಆ ಕಟ್ಟಡದ ಪ್ರತಿಯೊಂದು ಭಾಗವೂ ತನ್ನ ಮೇಲೆ ಬೀಳುವ ಸ್ಥಾವರ ಮತ್ತು ಜಂಗಮ ಭಾರವನ್ನು ತಡೆಯಬಹುದೆಂದು ಯಂತ್ರಶಿಲ್ಪಿಗೆ ಮನದಟ್ಟಾದ ಮೇಲೆ ಅಖೈರಾಗಿ ನಕ್ಷೆಯನ್ನೂ ಲೆಕ್ಕಾಚಾರಗಳನ್ನೂ ತಯಾರಿಸಬೇಕು. ಒಂದೊಂದು ಭಾಗದಲ್ಲಿಯೂ ಉಪಯೋಗಿಸಬೇಕಾದ ಸಾಮಗ್ರಿಗಳನ್ನು ನಿರ್ಧರಿಸಿದ ಮೇಲೆ ಪ್ರತಿಯೊಂದಕ್ಕೂ ಬೇಕಾಗುವ ಸಾಮಗ್ರಿಗಳ ಪ್ರಮಾಣವನ್ನೂ ಅವಶ್ಯವಾದ ಜನಸಹಾಯವನ್ನೂ ಲೆಕ್ಕ ಹಾಕಬೇಕು. ಕೊನೆಯಲ್ಲಿ ಗುತ್ತಿಗೆದಾರರಿಂದ ದರಖಾಸ್ತು ತರಿಸಿ ದರ ಮತ್ತು ಕೆಲಸನಿರ್ವಹಣೆ ಸಮರ್ಪಕವಾಗಿರುವವರಿಗೆ ಕೆಲಸ ಕೊಡಬೇಕಾಗುತ್ತದೆ.

ಕೆಲಸವನ್ನು ಮಾಡಲು ಒಪ್ಪಿಕೊಂಡ ಗುತ್ತಿಗೆದಾರರಿಗೂ ಪೂರ್ವಭಾವಿಯಾದ ಕೆಲಸ ಬೇಕಾದಷ್ಟು ಇರುವುದು. ಕಟ್ಟಡವನ್ನು ಸಂವಿಧಾನ ಮಾಡಿದ ಶಿಲ್ಪಿಯೊಂದಿಗೆ ಕುಳಿತು ಕಟ್ಟಡದ ಕಾರ್ಯಕ್ರಮವನ್ನು ನಿರ್ಧರಿಸಿಕೊಳ್ಳಬೇಕು. ಬೇಕಾದ ಸಾಮಾನುಗಳಿಗೆ ಏರ್ಪಾಡು ಮಾಡಬೇಕು. ಭೂಮಿಯನ್ನು ಅಗೆಯುವುದಕ್ಕೂ ಅಗೆದ ಮಣ್ಣನ್ನು ಸಾಗಿಸುವುದಕ್ಕೂ ಬೇಕಾಗುವ ಯಂತ್ರಗಳು, ಒಂದೊಂದು ಘಟ್ಟದಲ್ಲಿಯೂ ಬೇಕಾಗುವ ಕೆಲಸಗಾರರು—ಇವಕ್ಕೆಲ್ಲ ಏರ್ಪಾಡು ಮಾಡಬೇಕು.

ರಚನೆ : ಯಂತ್ರಶಿಲ್ಪಿಯಿಂದ ತಪಶೀಲಾದ ನಕ್ಷೆಗಳು ಬಂದ ಮೇಲೆ ಅವಕ್ಕನುಸಾರವಾಗಿ ನೆಲದ ಮೇಲೆ ಗುರುತು ಮಾಡಿ ತಳಪಾಯದಲ್ಲಿ ಗಟ್ಟಿಯಾದ ಮಣ್ಣು ಸಿಕ್ಕುವವರೆಗೂ ಅಗೆದು ಅವಶ್ಯವಾದ ಕಡೆ ಮರ, ಉಕ್ಕು ಇಲ್ಲವೆ ಭದ್ರ ಕಾಂಕ್ರೀಟಿನ ದಸಿಗಳನ್ನು ಭಾರವಾದ ಕೊಡಲಿಯಿಂದ ಹೊಡೆದು ಹೂಳಬೇಕು. ಮಳೆಯ ನೀರಿನ ಚರಂಡಿಗಳು, ಕುಡಿಯುವ ನೀರಿನ ಕೊಳಾಯಿಗಳು, ಗ್ರಾಮಸಾರದ ಕೊಳವಿಗಳು—ಇವುಗಳಿಗೆ ಅಗಳುಗಳನ್ನು ಸೂಕ್ತವಾದ ಕಡೆ ತೆಗೆದು ಅವುಗಳಿಗೆ ಇಟ್ಟಿಗೆಯಿಂದಲೋ ಕಾಂಕ್ರೀಟಿನಿಂದಲೋ ಅಚ್ಚುಕಟ್ಟನ್ನು ಕಟ್ಟಿ ಮೇಲುಗಡೆ ಕಟ್ಟಡದ ಭಾರವನ್ನು ತಡೆಯುವ ಕಾಂಕ್ರೀಟಿನ ಚಪ್ಪಡಿಗಳನ್ನು ಎಳೆಯಬೇಕು–ಕಾರ್ಖಾನೆಯನ್ನು ಕಟ್ಟುವಾಗ ಭಾರವಾದ ಯಂತ್ರಗಳಿಗೆ ವಿಶಿಷ್ಟವಾದ ತಳಪಾಯವನ್ನು ಹಾಕಬೇಕು.

ಕಟ್ಟಡದ ಭಾರವನ್ನು ಹೊರುವುದಕ್ಕೆ ಉಕ್ಕಿನ ಚೌಕಟ್ಟನ್ನು ಈ ಘಟ್ಟದಲ್ಲಿಯೇ ತಂದು ಲಂಬವಾಗಿ ನಿಲ್ಲಿಸಿ ಜಾಲಂದರದ (ಲ್ಯಾಟ್ಟೀಸ್) ಚೌಕಟ್ಟಿನ ಮೂಳೆಗಟ್ಟನ್ನು (ಸ್ಕೆಲಿಟನ್) ತಯಾರಿಸಬೇಕು. ಈ ಚೌಕಟ್ಟನ್ನು ಭದ್ರ ಕಾಂಕ್ರೀಟಿನಿಂದ ಮಾಡಿದರೆ ಒಳಗಡೆ ಉಕ್ಕಿನ ಕಂಬಗಳನ್ನು ಲೆಕ್ಕಾಚಾರವಾಗಿ ಕೂಡಿಸಿ ಅಚ್ಚಿನ ಹಲಗೆಗಳ



ಅನೇಕ ಅಂತಸ್ತುಗಳುಳ್ಳ ಬೃಹತ್ ಸೌಧ. ಮೇಲಿನ ಅಂತಸ್ತಿನಿಂದ ಪ್ರಾರಂಭಿಸಿ ಕಟ್ಟಡವನ್ನು ಪೂರ್ತಿ ಮಾಡಲಾಗುತ್ತದೆ. ಒಂದೊಂದು ಭಾಗವೂ ಮೊದಲೇ ಸಿದ್ಧವಾಗಿದ್ದು ಒಂದರೊಡನೊಂದನ್ನು ಸಂಯೋಜಿಸಿ ಇಡೀ ಕಟ್ಟಡವನ್ನು ನಿರ್ಮಿಸುತ್ತಾರೆ.

ಮಧ್ಯೆ ಕಂಬಿಗಳ ಸುತ್ತಲೂ ಸಿಮೆಂಟ್ ಕಾಂಕ್ರೀಟನ್ನು ಹೊಯ್ಯಬೇಕು ಆಮೇಲೆ ಗೋಡೆಗಳನ್ನು ಇಟ್ಟಿಗೆ ಗಾರೆಯಿಂದಲೋ ಕಲ್ಲುಗಾರೆಯಿಂದಲೋ ಕಟ್ಟಬಹುದು. ಈಚೆಗೆ ಮೊದಲೇ ಜೋಡಿಸಿದ ಮರದ ಇಲ್ಲವೆ ಕಾಂಕ್ರೀಟಿನ ತೆಳ್ಳನೆಯ ಪುಟೀಪುಗಳನ್ನು ಚೌಕಟ್ಟಿಗೆ ಅಂಟಿಸುವುದು ವಾಡಿಕೆ. ಬಾಗಿಲುಗಳಿಗೂ ಕಿಟಕಿಗಳಿಗೂ ಜಾಗವನ್ನು ಬಿಟ್ಟು ಆಮೇಲೆ ಅವನ್ನು ಜೋಡಿಸಬಹುದು. ಕಟ್ಟಡ ಮೇಲಕ್ಕೆ ಹೋದ ಹಾಗೆ ಕಾಲಾವಧಿ (ಸೆಂಟರಿಂಗ್) ಬೇಕಾಗುತ್ತದೆ. ಆಗ ಸಾಮಾನುಗಳನ್ನು ಕ್ರೇನುಗಳಿಂದಲೋ ಕಪ್ಪಿಗಳಿಂದಲೋ ಮೇಲಕ್ಕೆ ಎತ್ತಿ ಕೆಲಸಗಾರರಿಗೆ ಒದಗಿಸುತ್ತಾರೆ. ಗೋಡೆಗಳೇ ಭಾರವನ್ನು ಹೊರುವುದಾದರೆ, ಅವನ್ನು ಸಾಕಷ್ಟು ಭದ್ರವಾಗಿ ಕಲ್ಲುಗಾರೆ ಇಟ್ಟಿಗೆ ಇಲ್ಲವೆ ಕಾಂಕ್ರೀಟಿನಿಂದ ಕಟ್ಟಬೇಕು.

ಮೇಲಿನ ಮಹಡಿಗಳನ್ನು ಕಟ್ಟುತ್ತಿರುವಾಗ ಕೆಳಗಿನ ಅಂತಸ್ತುಗಳಲ್ಲಿ ಬಾಗಿಲು ಮತ್ತು ಕಿಟಕಿಗಳ ಚೌಕಟ್ಟುಗಳನ್ನು ಅದಕ್ಕಾಗಿ ಬಿಟ್ಟಿರುವ ಜಾಗದಲ್ಲಿ ಕೂರಿಸುತ್ತಾರೆ. ಕಟ್ಟಡದ ಒಳಗಡೆಯ ಅಡ್ಡಗೋಡೆಗಳನ್ನು ಈಗ ಹೊರಗಿನ ಗೋಡೆಗಳಂತೆಯೇ ಕಟ್ಟಲು ಪ್ರಾರಂಭಿಸುತ್ತಾರೆ. ಇವು ತೆಳುವಾಗಿದ್ದರೂ ಒಂದು ಕೊಠಡಿಯಿಂದ ಶಬ್ದ ಇನ್ನೊಂದಕ್ಕೆ ಕೇಳದಂತೆ ವಿಶಿಷ್ಟ ರೀತಿಯಲ್ಲಿರುತ್ತವೆ. ಮಹಡಿಯ ಮೆಟ್ಟಲುಗಳು, ಎತ್ತುಗಳು, ನೀರಿನ ಕೊಳವಿಗಳು, ವಿದ್ಯುತ್ತಿನ ತಂತಿಗಳು—ಇವಕ್ಕೆಲ್ಲ ಸೂಕ್ತವಾಗಿ ಜಾಗವನ್ನು ಬಿಟ್ಟಿರುತ್ತಾರೆ. ಮೇಲಿನ ಮಹಡಿಗಳನ್ನು ಮಟ್ಟವಾದ ತೊಲೆಗಳ ಮೇಲೆ ತೂರಿಸಿ ಮಾಡಿನ ಚಪ್ಪಡಿಗಳನ್ನು ಭದ್ರ ಕಾಂಕ್ರೀಟಿನಿಂದ ಮಾಡಿರುತ್ತಾರೆ. ಬೇರೆ ಬೇರೆ ಮಹಡಿಗಳಲ್ಲಿ ಸ್ವತಂತ್ರವಾಗಿ ಸಂಸಾರಗಳು ವಾಸ ಮಾಡುವಾಗ ಶಬ್ದ ಒಂದು ಅಂತಸ್ತಿನಿಂದ ಇನ್ನೊಂದಕ್ಕೆ ಸಂಚಾರಮಾಡದ ಹಾಗೆ ಚೌಕಟ್ಟಿಗೂ ಮಧ್ಯೆ ಒಂದು ಮೆತುವಾದ ಕ್ವಿಲ್ಟನ್ನು ಗಾಜಿನ ಉಣ್ಣೆಯಿಂದಲೋ ಇನ್ನು ಯಾವುದಾದರೂ ಪುಟ ಚಿಮ್ಮುವಂಥ ಸಾಮಗ್ರಿಯಿಂದಲೊ ಇಡುತ್ತಾರೆ. ಚಾವಣಿಗಳು ಬಲವಾಗಿಯೂ ಹಗುರವಾಗಿಯೂ ಇರಬೇಕು.

ಕೆಲಸದ ಪ್ರಗತಿ : ಕಟ್ಟಡದ ಗುತ್ತಿಗೆದಾರ ಎಲ್ಲ ಕೆಲಸಕ್ಕೂ ಜವಾಬುದಾರನಾದರೂ ಉಕ್ಕಿನ ಕೆಲಸ, ಒಳಗಡೆಯ ಗಾಳಿಯನ್ನು ಒಂದೇ ಕಾವಿನಲ್ಲಿಟ್ಟಿರುವುದು ಮೊದಲಾದ ಕೆಲಸಗಳನ್ನು ಬೇರೆ ಬೇರೆ ಪ್ರವೀಣರಿಗೆ ಕೊಟ್ಟಿರುತ್ತಾರೆ. ಜೊತೆಗೆ ಕೊಳಾಯಿ ಜೋಡಿಸುವವರು, ಬಡಗಿಗಳು, ಬಣ್ಣ ಬಳಿಯುವವರು—ಇವರ ಕೆಲಸವನ್ನು ಒಂದು ವ್ಯವಸ್ಥೆಗೆ ಅನುಗುಣವಾಗಿ ಮಾಡಬೇಕಾಗುತ್ತದೆ.

ಹಣವೂ ಕೆಲಸವೂ ಪೋಲಾಗದೆ ಇರಬೇಕಾದರೆ ಸಾಮಗ್ರಿಗಳು ಸಕಾಲಕ್ಕೆ ಒದಗಬೇಕು. ಅನೇಕ ಚಿಲ್ಲರೆ ಕೆಲಸಗಳಲ್ಲಿ ಒಂದೊಂದಕ್ಕೂ ಎಷ್ಟು ದಿನ ಹಿಡಿಯುತ್ತದೆ—ಎಂದು ಅಂದಾಜು ಮಾಡುವುದಕ್ಕೂ ಇವನ್ನೆಲ್ಲ ಒಂದು ಕಾರ್ಯಕ್ರಮಕ್ಕೆ ಹೊಂದಿಸುವುದಕ್ಕೂ ಅಪಾರವಾದ ಅನುಭವವೂ ವಿವೇಚನಾಶಕ್ತಿಯೂ ಬೇಕು.

ಕಟ್ಟಡದ ಕೆಲಸ ಮುಂದುವರಿದ ಹಾಗೆ ಸಂವಿಧಾನದ ಶಿಲ್ಪಿಯ ಪ್ರತಿನಿಧಿ ಮೊದಲು ಮಾಡಿಕೊಂಡ ಕಾರ್ಯಕ್ರಮಕ್ಕೆ ತಿಂಗಳು ತಿಂಗಳು ವಾಸ್ತವವಾಗಿ ನಡೆದ ಕೆಲಸವನ್ನು ಹೋಲಿಸುತ್ತಾನೆ. ಮೊದಲು ಮಾಡಿದ ಅಂದಾಜಿನಲ್ಲಿ ಏನಾದರೂವ್ಯತ್ಯಾಸವಾಗಬೇಕಿದ್ದರೆ ಇಲ್ಲವೆ ಮಳೆ ಮುಂತಾದ ಅಪೇಕ್ಷಿತ ತೊಂದರೆಗಳು ಒದಗಿದರೆ ಗುತ್ತಿಗೆದಾರರಿಗೆ ಕೊಡಬೇಕಾದ ಹಣವನ್ನು ಸರಿಹೊಂದಿಸಬೇಕಾಗುತ್ತದೆ.

ಕಟ್ಟಡದ ತತ್ತ್ವಗಳು : ಮಾಲಿಕನಿಗೆ ಯಾವ ನಮೂನೆಯ ಕಟ್ಟಡ ಬೇಕೋ ಅದನ್ನು ಸುಲಭ ಖರ್ಚಿನಿಂದಲೂ ಲಕ್ಷಣವಾಗಿಯೂ ಸಂವಿಧಾನ ಮಾಡಿ ಕಟ್ಟುವುದರಲ್ಲಿ ಶಿಲ್ಪಿಯ ಕೌಶಲ ಕಾಣುತ್ತದೆ. ಕಟ್ಟಡದ ಉದ್ದೇಶ, ಅದನ್ನು ಕಟ್ಟತಕ್ಕ ಜಾಗ—ಇವುಗಳಿಗೆ ಅವನು ಸಂವಿಧಾನವನ್ನು ಹೊಂದಿಸಬೇಕು. (ಎಚ್. ಸಿ. ಕೆ.)

**ಕಟ್ಟಡದ ಶಿಲೆಗಳು:** ಧಾರಣ ಸಾಮರ್ಥ್ಯ, ಬಾಳಿಕೆ, ಕಾರ್ಯೋಪಯೋಗ, ಬಣ್ಣ ಮತ್ತು ಅಂದ—ಈ ಗುಣಗಳು ಯುಕ್ತ ಪ್ರಮಾಣದಲ್ಲಿ ಮೇಳೈಸಿರುವ ಕಲ್ಲುಗಳಿಗೆ ಈ ಹೆಸರಿದೆ. ಇವನ್ನು ಅಡಿಪಾಯಕ್ಕೂ ಗೋಡೆಗಳಿಗೂ ಉಪಯೋಗಿಸುವುದಲ್ಲದೆ ಕಟ್ಟಡದಲ್ಲಿ ಹಾಸಲೂ ಇತರ ಅಲಂಕರಣಗಳಿಗೂ ಕಂಬಗಳಿಗೂ ಬಳಸುತ್ತಾರೆ.

ಧಾರಣಸಾಮರ್ಥ್ಯ : ಒಂದು ಕಲ್ಲು ಒತ್ತಡವನ್ನು ತಡೆದುಕೊಳ್ಳಬಲ್ಲ ಸಾಮರ್ಥ್ಯದಿಂದ ಇದನ್ನು ಅಳೆಯಲಾಗುವುದು. ಅದುಮು ಒತ್ತಡ, ಎಳೆತದ ಒತ್ತಡ, ಅಡ್ಡ ಒತ್ತಡ ಇವೇ ಮುಂತಾದ ಬಗೆ ಬಗೆಯ ಒತ್ತಡಗಳಿಗೆ ಕಲ್ಲನ್ನು ಗುರಿಪಡಿಸಿ ಇದನ್ನು ನಿರ್ಧರಿಸುತ್ತಾರೆ. ಧಾರಣ ಸಾಮರ್ಥ್ಯ ಕಲ್ಲಿನ ವಸ್ತುಸಂಯೋಗ (ಕಾಂಪೊಸಿಷನ್). ಹೆಣಿಗೆ (ಟೆಕ್ಸ್ಚರ್), ರಚನೆ, ಒಟ್ಟೈಸಿರುವ ಕ್ರಮ ಮುಂತಾದುವನ್ನು ಅವಲಂಬಿಸಿದೆ.

ವಸ್ತುಸಂಯೋಗ : ಕಟ್ಟಡದ ಕಲ್ಲುಗಳಲ್ಲಿರುವ ವಿವಿಧ ಖನಿಜಗಳು ಗಟ್ಟಿತನದಲ್ಲೂ ಒತ್ತಡರೋಧ ಸಾಮರ್ಥ್ಯದಲ್ಲೂ ತುಂಬ ಭಿನ್ನವಾಗಿವೆ. ಕ್ವಾರ್ಟ್ಸ್ ಅಥವಾ ಬೆಣಚುಕಲ್ಲು ಕಾಲ್‌ಸೈಟ್ ಅಥವಾ ಫೆಲ್ಡ್‌ಸ್ಪಾರಿಗಿಂತ ಹೆಚ್ಚು ಗಟ್ಟಿಯಾಗಿರುವುದಲ್ಲದೆ ಅದರ ಒತ್ತಡ ಸಾಮರ್ಥ್ಯವೂ ಹೆಚ್ಚಾಗಿದೆ. ಬೇರೆ ಬೇರೆಯ ಖನಿಜಗಳಿಗೆ ಬೇರೆ ಬೇರೆ ಉಷ್ಣತೆಗಳಲ್ಲಿ ಬೇರೆ ಬೇರೆ ರೇಖಾವಿಸ್ತರಣ ಗುಣಕಗಳಿವೆ. ಕಾಲ್‌ಸೈಟ್ ಮತ್ತು ಫೆಲ್ಡ್‌ಸ್ಪಾರ್ ಮುಂತಾದ ಕೆಲವು ಖನಿಜಗಳಿಗೆ ಎದ್ದುಕಾಣುವ ಸೀಳುರೇಖೆಗಳುಂಟು. ಆದರೆ ಕ್ವಾರ್ಟ್ಸ್ ಅಥವಾ ಬೆಣಚುಕಲ್ಲಿಗೆ ಈ ಬಗೆಯ ಸೀಳುಗಳಿರುವುದಿಲ್ಲ. ಒಂದು ಖನಿಜದ ದ್ರಾವಣತೆ (ಸಾಲ್ಯುಬಿಲಿಟಿ) ಅದರ ಸಾಮರ್ಥ್ಯದ ಒಂದು ಮುಖ್ಯ ನಿರ್ಧಾರಣಾಂಶ. ಮರಳುಶಿಲೆಗಳಲ್ಲಿ ಅಥವಾ ಸಂಚಿತ ಶಿಲೆಗಳಲ್ಲಿ ಬಂಧಕ ವಸ್ತು ಈ ತೆರನಾದ ಬದಲಾವಣೆಗೆ ಒಳಗಾದಲ್ಲಿ ಆಗ ಒಂದೊಂದು ಕಣಕ್ಕೂ ಇರುವ ಬಿಗಿ ತಪ್ಪಿ ಶಿಲೆ ಚೂರು ಚೂರಾಗಿ ಕುಸಿದು ಬೀಳುತ್ತದೆ.

ಹೆಣಿಗೆ : ಒರಟು ಹೆಣಿಗೆಯ ಕಲ್ಲುಗಳ ಅದೇ ವಸ್ತು ಸಂಯೋಗವುಳ್ಳ ಸೂಕ್ಷ್ಮ ಹೆಣಿಗೆಯ ಕಲ್ಲುಗಳಷ್ಟು ಸಮರ್ಥವಲ್ಲ. ಶಿಲೆಯ ಸರಂಧ್ರತೆಯೂ ಅದರ ಸಾಮರ್ಥ್ಯ ಗೊತ್ತುಪಡಿಸುವುದರಲ್ಲಿ ಪ್ರಧಾನಾಂಶವಾಗಿದೆ.

ರಚನೆ : ಕಟ್ಟಡದ ಕಲ್ಲುಗಳಲ್ಲಿ ಸ್ತರತೆ (ಲ್ಯಾಮಿನೇಷನ್) ಮುಖ್ಯವಾಗಿ ನೋಡಬೇಕಾದ ಅಂಶ. ಒಂದೇ ನೇರಕ್ಕಿರುವಂತೆ ಎಳೆಗಳಿದ್ದರೆ ಆ ಶಿಲೆ ಆ ನೇರದಲ್ಲಿ ಬೇರೆ ನೇರಕ್ಕೆ ಅಷ್ಟು ಸುಲಭವಾಗಿ ಸೀಳಿಕೊಳ್ಳುವುದಿಲ್ಲ.

ಒಟ್ಟೈಸಿರುವ ವಿಧಾನ : ಕಲ್ಲುಗಳ ಕಣಗಳು ಸಾಧಾರಣವಾಗಿ ಒಟ್ಟೈಸುವ ಮೂರು ವಿಧಾನಗಳು –ರಾಸಾಯನಿಕ, ಸ್ಫಾಟಿಕ ಮತ್ತು ಬಂಧಕ (ಸಿಮೆಂಟೇಷನ್). ರಾಸಾಯನಿಕ ಒಟ್ಟೈಸುವಿಕೆಗೆ ಸುಣ್ಣಕಲ್ಲುಗಳೂ ಸ್ಫಾಟಿಕ ಒಟ್ಟೈಸುವಿಕೆಗೆ ಗ್ರಾನೈಟುಗಳೂ ಬಂಧಕ ಒಟ್ಟೈಸುವಿಕೆಗೆ ಸಿಲಿಕವೂ ಉದಾಹರಣೆಗಳು.

ಬಾಳಿಕೆ : ಹೊರ ಆವರಣದ ಪರಿಸ್ಥಿತಿಗಳನ್ನು ತಡೆದುಕೊಳ್ಳಬಲ್ಲ ಕಲ್ಲಿನ ಸಾಮರ್ಥ್ಯವನ್ನು ಅವಲಂಬಿಸಿ ಅದರ ಬಾಳಿಕೆ ಇದೆ. ಉಷ್ಣತಾಮಾನಗಳ ಬದಲಾವಣೆಗಳು ಬಂಡೆಯ ಗಾತ್ರವನ್ನು ಮಾರ್ಪಡಿಸುತ್ತಿದ್ದು ಅವು ಒಡೆದು ಹೋಗುವಂತೆ ಮಾಡುತ್ತವೆ. ಸೂಕ್ಷ್ಮ ಕಣಗಳಿಂದ ಕೂಡಿರುವ ಅಸ್ಫಟಿಕ ಶಿಲೆಗಳಿಗಿಂತಲೂ ಹೆಚ್ಚಾಗಿ ಒರಟಾದ ಸ್ಫಾಟಿಕ ಕಣಗಳಿಂದ ಕೂಡಿರುವ ಕಲ್ಲುಗಳನ್ನು ಉಷ್ಣತೆ ಬಾಧಿಸುತ್ತದೆ. ಕಲ್ಲಿನ ಉಷ್ಣವಾಹಕ ಗುಣ ಅತ್ಯಲ್ಪ. ಮಧ್ಯಾಹ್ನದ ಸುಡುಬಿಸಿಲಿನ ಪ್ರಭಾವದಿಂದ ಅದರ ಹೊರಭಾಗ ಅಧಿಕ ಉಷ್ಣತೆಗೆ ಏರಬಹುದು. ಅದರ ತಳಕ್ಕೆ ಈ ಉಷ್ಣತೆ ಸ್ವಲ್ಪವೂ ಸೋಕದಿರಬಹುದು. ಇದರಿಂದ ಗಾತ್ರದ ಹಿಗ್ಗುವಿಕೆಯಲ್ಲಿ ಏರುಪೇರುಗಳಾಗಿ ಕಲ್ಲು ದುರ್ಬಲವಾಗುತ್ತದೆ. ಕಲ್ಲು ಗೋಡೆಗಳು ಹರಿಯುವ ನೀರಿನಿಂದ ಹೆಚ್ಚು ಸವೆಯುವುದಿಲ್ಲ. ಜಲಜಶಿಲೆಗಳನ್ನು ಉಪಯೋಗಿಸಿದಾಗ ಒಳಗಿನ ನೀರು ಅವನ್ನು ಸಡಿಲಗೊಳಿಸುವ ಸಾಧನವಾಗುತ್ತದೆ. ಇಂಥ ಕಲ್ಲುಗಳು ಇದ್ದಕ್ಕಿದ್ದಂತೆ ಒಡೆದು ಹೋಗುವುದುಂಟು. ಎಲ್ಲ ಶಿಲೆಗಳೂ ನೀರನ್ನು ಹೀರಿಕೊಳ್ಳುತ್ತವೆ, ಆದರೆ ಅದರ ಪ್ರಮಾಣ ಕಲ್ಲಿನ ವಸ್ತುಸಂಯೋಗವನ್ನೂ ಸರಂಧ್ರತೆಯನ್ನೂ ಅವಲಂಬಿಸಿದೆ. ಶಿಲಾಭಂಗ ನೀರು ಹೆಪ್ಪುಗಟ್ಟಿಕೊಳ್ಳುವುದನ್ನವಲಂಬಿಸಿದೆ. ಈ ಕಾರಣದಿಂದ ನೀರನ್ನು ತುಂಬ ಹೀರಿಕೊಳ್ಳುವ ಶಿಲೆಗಳನ್ನು, ಅದರಲ್ಲೂ ರಚನೆ ಸೂಕ್ಷ್ಮವಾಗಿರುವಂಥವನ್ನು ಪರಿತ್ಯಜಿಸುವುದು ಲೇಸು. ಗಾಳಿ ಬಿರುಸಾಗಿ ಬೀಸುವ ಜಾಗಗಳಲ್ಲಿ ಅದು ತರುವ ದೂಳು ಮತ್ತು ಮರಳು ಶಿಲಾವಿಧ್ವಂಸಕಾರಿಗಳು. ನೆಲಕ್ಕೆ ಹಾಸುವ ಮತ್ತು ಉಪಯೋಗಿಸುವ ಕಲ್ಲುಗಳ ಸವೆತದ ಪ್ರಮಾಣವೆಷ್ಟೆಂಬುದೂ ಗಮನಿಸಬೇಕಾದ ಅಂಶ. ಗ್ರಾನೈಟುಗಳೂ ಕ್ವಾರ್ಟ್ಸೈಟುಗಳೂ ಬೇಗ ಸವೆಯದೆ ಬಲು ಉಪಯುಕ್ತವಾಗಿವೆ; ಸುಣ್ಣಕಲ್ಲುಗಳು ಈ ದೃಷ್ಟಿಯಲ್ಲಿ ಉಪಯುಕ್ತವಾದುವಲ್ಲ. ರಾಸಾಯನಿಕವಾಗಿ ಶಿಲೆಯನ್ನು ಛಿದ್ರಗೊಳಿಸುವ ಕಾರಕಗಳು ವಾತಾವರಣದ ಸಾರಜನಕ, ಆಮ್ಲಜನಕ, ಇಂಗಾಲಾಮ್ಲ, ನೀರಿನ ಆವಿ, ಅಮೋನಿಯ, ನೈಟ್ರಿಕ್, ಸಲ್ಫ್ಯೂರಸ್ ಮತ್ತು ಸಲ್ಫ್ಯೂರಿಕ್ ಆಮ್ಲಗಳು ಮತ್ತು ಇತರ ಸಸ್ಯಜನ್ಯಸಾವಯವ ಸಂಯುಕ್ತಗಳು. ಆಮ್ಲಜನಕ ನೀರು ಮತ್ತು ಇಂಗಾಲಾಮ್ಲಗಳು ಕ್ರಮವಾಗಿ ಆಕ್ಸಿಡೇಷನ್. ಹೈಡ್ರೇಷನ್ ಮತ್ತು ಕಾರ್ಬೊನೇಷನ್ನುಗಳನ್ನು ಉಂಟುಮಾಡುತ್ತವೆ. ಒಂದು ಶಿಲೆಯ ರಾಸಾಯನಿಕ ವಿಭಗ್ನತೆ ಬಹುಸಂಕೀರ್ಣವಾದ ಕ್ರಿಯೆ. ಇದರಲ್ಲಿ ಅನೇಕ ಪ್ರತಿಕ್ರಿಯೆಗಳೂ ಅಂತರಕ್ರಿಯೆಗಳೂ ಇವೆ. ಸುಣ್ಣಕಲ್ಲುಗಳು. ಅಮೃತಶಿಲೆ, ಕಬ್ಬಿಣ ಮತ್ತು ಸುಣ್ಣ ಇರುವ ಮರಳು ಕಲ್ಲುಗಳು ಗ್ರಾನೈಟುಗಳು ಮತ್ತು ಇತರ ಅಗ್ನಿಶಿಲೆಗಳ ವರ್ಣಖನಿಜಗಳು ಸುಲಭವಾಗಿ ಈ ದಾಳಿಗೆ ಈಡಾಗುತ್ತವೆ.

ಕಾರ್ಯೋಪಯೋಗ : ಸುಲಭವಾಗಿ ಚಪ್ಪಡಿಗಳನ್ನು ಎಬ್ಬಿಸುವುದು ಮತ್ತು ಕೆತ್ತನೆಗೆಲಸಕ್ಕೆ ಒದಗಿಬರುವುದು ಕಟ್ಟಡ ಕಲ್ಲುಗಳಲ್ಲಿ ಇರಬೇಕಾದ ಪ್ರಧಾನ ಗುಣಗಳು. ಚಪ್ಪಡಿಗಳನ್ನು ಪಡೆಯಲು ಬಂಡೆಯ ಸ್ತರಣ, ಸ್ತರದ ಬಾಗು ಅಥವಾ ಓಟ ಮತ್ತು ಸೀಳುಗಳು ಈ ಮುಂತಾದ ರಚನಾಂಶಗಳನ್ನು ಪರಿಶೀಲಿಸಬೇಕು.

ಬಣ್ಣ ಮತ್ತು ಅಂದ : ಕಟ್ಟಡದ ಕಲ್ಲುಗಳಲ್ಲಿ (ಅದರಲ್ಲೂ ನಗರದ ಕಟ್ಟಡಗಳಲ್ಲಿ) ಗಮನಿಸಬೇಕಾದ ಪ್ರಮುಖಾಂಶ ಕಲ್ಲಿನಬಣ್ಣ. ಅಗ್ನಿಶಿಲೆಗಳ ಬಣ್ಣ ಹೆಚ್ಚಾಗಿ ಅವುಗಳ ಒಳಗಿರುವ ಮುಖ್ಯ ಖನಿಜಗಳನ್ನು ಅವಲಂಬಿಸಿದೆ. ಆದ್ದರಿಂದ

ಈ ಶಿಲೆಗಳ ಬಣ್ಣ ಸ್ಥಿರವಾದುದೆಂದು ಹೇಳಬಹುದು. ಆದರೆ ಜಲಜಶಿಲೆಗಳಲ್ಲಿ ವರ್ಣಕಾರಕವಸ್ತು ಮತ್ತು ಅದು ಹರಡಿರುವ ಬಗೆಯನ್ನು ಅವಲಂಬಿಸಿ ಕಲ್ಲಿನ ಬಣ್ಣ ಕಾಲಕ್ರಮೇಣ ಮಾಸಿಹೋಗುತ್ತದೆ. (ಎಸ್.ಬಿ.ಎಲ್.)

**ಕಟ್ಟಡದ ಸಾಮಗ್ರಿಗಳು :** ಮಣ್ಣು, ಮರ, ಕಲ್ಲು ಮರಳು ಇವು ಆದಿಕಾಲದಲ್ಲಿ ಬಳಸಿದ ವಸ್ತುಗಳು. ಸುಲಭ ಹಾಗೂ ಸಮೀಪಲಭ್ಯತೆಯೇ ಇದರ ಕಾರಣ. ಒಂದೊಂದು ಉದ್ದೇಶಕ್ಕಾಗಿ ಆರಿಸಿದ ಸಾಮಗ್ರಿಗಳೂ ಅವನ್ನು ಬಳಸುವ ಕ್ರಮವೂ ತಪ್ಪುಗಳನ್ನು ತಿದ್ದಿಕೊಂಡು ಕ್ರಮದಲ್ಲಿ ಸಾವಕಾಶವಾಗಿ ಬಳಕೆಗೆ ಬಂದಿವೆ. ಇದರಿಂದ ಕ್ರಮೇಣ ಸ್ಥಳದ ಕೆಲಸಗಾರರ ಅನುಭವದ ಮೇಲೆ ಕೆಲವು ಸಾಂಪ್ರದಾಯಿಕ ಪದ್ಧತಿಗಳು ರೂಢಿಗೆ ಬಂದಿವೆ.

ನಾಗರಿಕತೆ ಬೆಳೆದಂತೆ ವಿವಿಧ ನಮೂನೆಯ ಕಟ್ಟಡಗಳನ್ನು ತ್ವರೆಯಿಂದ ಕಟ್ಟಬೇಕಾಗಿ ಬಂದಾಗ ಅನೇಕ ಹೊಸ ಸಾಮಗ್ರಿಗಳು ಬಳಕೆಗೆ ಬಂದುವು. ಕೆಲವನ್ನು ಸ್ಥಳದಲ್ಲಿಯೇ ಸಿಕ್ಕುವ ಸಾಮಗ್ರಿಗಳಿಂದ ದೊಡ್ಡ ರೀತಿಯಲ್ಲಿ ಯಂತ್ರಗಳಲ್ಲಿ ತಯಾರಿಸಲಾಯಿತು. ಸಂಚಾರ ಸೌಕರ್ಯಗಳು ಹೆಚ್ಚಿದ ಹಾಗೆ ಒಂದು ಜಾಗದಲ್ಲಿ ಸಂಪ್ರದಾಯವಾಗಿ ಬಳಸದೆ ಇದ್ದ ಸಾಮಗ್ರಿಗಳನ್ನು ದೂರದೇಶಗಳಿಂದ ಸಾಗಿಸಿ ಬಳಸಿದ್ದಾಯಿತು. ಕಟ್ಟಡವನ್ನು ಸಾಂಪ್ರದಾಯಿಕ ರೀತಿಯಲ್ಲಿ ಕಟ್ಟುವಾಗ ಆಗುವ ಸಾವಕಾಶಕ್ಕೆ ಎಡೆಗೊಡಬಾರದೆಂದು ಎಲ್ಲಿಯೊ ಕಾರ್ಖಾನೆಗಳಲ್ಲಿ ತಯಾರಿಸಿದ ಕಟ್ಟಡದ ಭಾಗಗಳನ್ನು ಉಪಯೋಗಿಸಿದ್ದಾಯಿತು. ಸಂಶೋಧನಾಲಯಗಳಲ್ಲಿ ಶಾಸ್ತ್ರೀಯವಾಗಿ ಈ ಸಾಮಗ್ರಿಗಳನ್ನು ಪರೀಕ್ಷಿಸಿ ಇವುಗಳ ಉಪಯೋಗದ ವಿಚಾರದಲ್ಲಿ ಕೆಲವು ನಿರ್ದೇಶನಗಳನ್ನು ತಯಾರಿಸಲಾಯಿತು. ಸಂವಿಧಾನದ ನಿಯಮಗಳ ಸ್ಥಾಪನೆಯಾಯಿತು. ನಗರಗಳಲ್ಲಿ ಹಳೆಯ ಪದ್ಧತಿಗಳು ಮಾಯವಾದುವು. ಹೊಸ ಸಾಮಗ್ರಿಗಳನ್ನು ಪ್ರಯೋಗಶಾಲೆಯಲ್ಲಿ ಪರೀಕ್ಷಿಸುವುದು ಬಳಕೆಗೆ ಬಂತು. ಬೇಕಾಗುವ ಸಾಮಗ್ರಿಗಳನ್ನು ಧಾರಾಳವಾಗಿ ಎಲ್ಲೆಲ್ಲಿಯೂ ದೊರೆಯುವ ಸುಣ್ಣಕಲ್ಲು, ಮಣ್ಣು, ಮರಳು. ಲೋಹದ ಅದಿರುಗಳು ಮುಂತಾದ ಕಚ್ಚಾ ಮಾಲುಗಳಿಂದ ಈಗ ತಾಂತ್ರಿಕವಾಗಿ ತಯಾರಿಸುತ್ತಾರೆ.

ಮರ, ಇಟ್ಟಿಗೆ, ಕಲ್ಲು, ಸುಣ್ಣ, ಮರಳು, ಸಿಮೆಂಟ್ ಹಂಚು, ಕಬ್ಬಿಣ–ಇವು ಸಾಮಾನ್ಯವಾಗಿ ಕಟ್ಟಡಗಳಲ್ಲಿ ಉಪಯೋಗಿಸುವ ಸಾಮಗ್ರಿಗಳು. ಒಂದೊಂದಕ್ಕೂ ಕೆಲವು ವಿಶೇಷ ಗುಣಗಳಿವೆ. ಮೇಲೆಬರುವ ತೂಕವನ್ನು ಒಂದೊಂದು ತಡೆಯುವ ಶಕ್ತಿಯೂ ಬೇರೆಬೇರೆಯಾಗಿರುತ್ತದೆ. ಒಂದು ಸಾಮಗ್ರಿಯ ಮೇಲೆ ಹೊರಬಿದ್ದಾಗ ಅದು ಮೂರು ವಿಧಗಳಲ್ಲಿ ಪ್ರತಿಕ್ರಿಯೆ ತೋರ್ಪಡಿಸಬಹುದು : 1 ಅರಚಬಹುದು (ಕಂಪ್ರೆಶನ್), 2 ಎಳೆದು ಸೀಳಬಹುದು (ಟೆನ್ಶನ್), 3 ಬಾಗಬಹುದು (ಬೆಂಡಿಂಗ್). ಆದರೆ ಸುಲಭವಾಗಿ ಬಳುಕುವ ಇಲ್ಲವೆ ಎಳೆತದಲ್ಲಿ ಸೀಳುವ ಸಾಮಗ್ರಿ ಹೆಚ್ಚು ಒತ್ತಡವನ್ನು ತಡೆಯಬಹುದು. ಹಾಗೆಯೇ ಕೇವಲ ಎಳೆತದಲ್ಲಿ ಸೀಳುವ ಸಾಮಗ್ರಿ ಬಳಕುವ ತ್ರಾಸವನ್ನು ತಡೆಯಬಹುದು. ಆದ್ದರಿಂದ ಕಟ್ಟಡದ ಯಾವ ಭಾಗದಲ್ಲಿ ಯಾವ ಸಾಮಗ್ರಿಯನ್ನು ಹೆಚ್ಚು ಅನುಕೂಲವಾಗುವಂತೆ ಉಪಯೋಗಿಸಬಹುದು ಎನ್ನುವುದು ಅದರ ಆಕಾರ ಮತ್ತು ಮೇಲೆ ಬರುವ ತ್ರಾಸದ ನಮೂನೆಯ ಮೇಲೆ ಹೋಗುತ್ತದೆ. ಒತ್ತಡವನ್ನೂ ಎಳೆತವನ್ನೂ ತಡೆಯಬಲ್ಲ ಮರ, ಉಕ್ಕು, ಭದ್ರ ಕಾಂಕ್ರೀಟ್—ಇವನ್ನು ಕಂಬಗಳು, ತೊಲೆಗಳು ಮತ್ತು ಗರ್ಡರುಗಳಲ್ಲಿ ಉಪಯೋಗಿಸಬೇಕು. ಎಷ್ಟು ಒತ್ತಡವನ್ನಾದರೂ ತಡೆದು ಎಳೆತವನ್ನು ತಡೆಯಲೇ ಆರದ ಕಲ್ಲುಗಾರೆ, ಇಟ್ಟಿಗೆ, ಕಾಂಕ್ರೀಟ್ ಇವನ್ನು ಗೋಡೆಗಳನ್ನೂ ಕಮಾನುಗಳನ್ನೂ ಕಟ್ಟುವುದಕ್ಕೆ ಉಪಯೋಗಿಸಬೇಕು.

ಒಂದು ಕಟ್ಟಡದಲ್ಲಿ ಉಪಯೋಗಿಸುವ ಯಾವ ಸಾಮಗ್ರಿಯ ಮೇಲೂ ಅದು ಒಡೆದುಹೋಗುವಷ್ಟು ತೂಕವನ್ನು ಹೇರುವುದಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಎಲ್ಲ ಸಾಮಗ್ರಿಗಳ ಮೇಲೂ ತೂಕ ಮಿತಿಮೀರುತ್ತಿದ್ದಂತೆ ಅವು ಬಿರುಕುಬಿಡುತ್ತವೆ, ಅರೂಪವಾಗುತ್ತವೆ, ಬಳುಕುತ್ತವೆ. ಅವಕ್ಕಾಗಿ ಸಾಮಗ್ರಿಗಳಲ್ಲಿರುವ ಗುಣಗಳಲ್ಲಿರುವ ವ್ಯತ್ಯಾಸಗಳಿಗೆ ತಕ್ಕಹಾಗೆ ತೂಕವನ್ನು ಬದಲಾಯಿಸಬೇಕಾಗುತ್ತದೆ.

ಈಗ ಸಾಮಾನ್ಯವಾಗಿ ಕಟ್ಟಡಗಳಲ್ಲಿ ಉಪಯೋಗಿಸುತ್ತಿರುವ ಕೆಲವು ಸಾಮಗ್ರಿಗಳನ್ನೂ ಅವುಗಳ ಗುಣಗಳನ್ನೂ ನೋಡಬಹುದು.

**ಮರ :** ಇದು ಎಲ್ಲೆಲ್ಲಿಯೂ ದೊರೆಯುವುದರಿಂದಲೂ ಇದರ ವಿಶೇಷ ಗುಣಗಳಿಂದಲೂ ಪ್ರಪಂಚದ ಕಟ್ಟಡದ ಸಾಮಗ್ರಿಗಳಲ್ಲಿ ಅಗ್ರಸ್ಥಾನವನ್ನು ಪಡೆದಿದೆ. ಇದನ್ನು ಇತಿಹಾಸದ ಪ್ರಾರಂಭದಿಂದಲೂ ಮಾನವ ಉಪಯೋಗಿಸುತ್ತಿದ್ದಾನೆ. ಇದು ಹಗುರವಾಗಿದೆ. ತೇಗದ ಮರದ ತೂಕ ಒಂದು ಸಲೆ ಅಡಿಗೆ 45 ಪೌಂಡ್. ಎಳೆತದ ತ್ರಾಸವನ್ನು ಇದು ತಡೆಯಬಲ್ಲದು ; ಮರಗೆಲಸ ಸುಲಭ. ಇದನ್ನು ಕಂಬ. ತೊಲೆ, ದೂಲ, ಚೌಕಟ್ಟು, ಉದ್ದಸರ, ಹಲಗೆ—ಇವುಗಳಿಗೆ ಉಪಯೋಗಿಸಬಹುದು. ಕಟ್ಟಡಗಳಲ್ಲಿ ಮರದ ಬಾಳಿಕೆಯೂ ಉಪಯೋಗವೂ ಬೇಕಾದ ಗುಣಗಳುಳ್ಳ ಮರವನ್ನು ಚುನಾಯಿಸಿ ಹದಮಾಡುವುದರ ಮೇಲೂ ಕ್ರಿಮಿಗಳು ತಿನ್ನದ ಹಾಗೆ ಕಾಪಾಡುವುದರ ಮೇಲೂ ನಿಂತಿರುತ್ತವೆ. ತೇಗ, ಹಲಸು, ಮಾವು. ಬೀಟಿ, ಹೊನ್ನೆ, ನಂದಿ, ಮತ್ತಿ, ಹುಣಸೆ, ಜಾಂಬೆ ಮೊದಲಾದ ಮರಗಳನ್ನು ಕಟ್ಟಡಗಳಲ್ಲಿ ಉಪಯೋಗಿಸುತ್ತಾರೆ.

**ಇಟ್ಟಿಗೆ :** ನೀರಿನಲ್ಲಿ ಕಲಸಿದ ಒಳ್ಳೆಯ ಮಣ್ಣನ್ನು ಅಚ್ಚುಗಳಲ್ಲಿ ಹೊಯ್ದು, ಒಣಗಿಸಿ, ಬಟ್ಟಿಗಳಲ್ಲಿ ಸುಟ್ಟು ಇಟ್ಟಿಗೆಯನ್ನು ತಯಾರಿಸುತ್ತಾರೆ. ಬಲಿಷ್ಠವಾದ ಇಟ್ಟಿಗೆಗಳನ್ನು ಯಂತ್ರಗಳಲ್ಲಿ ಅಚ್ಚುಹೊಯ್ದು ಯಂತ್ರದ ಒಲೆಗಳಲ್ಲಿ ಸುಡುತ್ತಾರೆ. ಸಾಮಾನ್ಯವಾಗಿ ಇಟ್ಟಿಗೆ 9″ ಉದ್ದ $4\frac{3}{8}$″ ಅಗಲ. $2\frac{1}{4}$″ ಎತ್ತರವಾಗಿರುತ್ತದೆ. ಇಟ್ಟಿಗೆಗಳನ್ನು ಎಲ್ಲ ಬಗೆಯ ಕಟ್ಟಡಗಳಲ್ಲಿಯೂ ಉಪಯೋಗಿಸುತ್ತಾರೆ. ಸುಮಾರು $1\frac{1}{2}$″ ಅಳತೆಗೆ ಒಡೆದ ಇಟ್ಟಿಗೆಗೆ ಸೂರ್ಕಿ ಎನ್ನುತ್ತಾರೆ. ನಮ್ಮ ದೇಶದಲ್ಲಿ ಕೃಷ್ಣರಾಜಸಾಗರ ಮೊದಲಾದ ನೀರಾವರಿಯ ಕಟ್ಟೆಗಳನ್ನು ಸೂರ್ಕಿಯನ್ನು ಸುಟ್ಟ ಸುಣ್ಣದೊಂದಿಗೆ ನಯವಾಗಿ ಅರೆದು ತಯಾರಿಸಿದ ಸೂರ್ಕಿ ಗಾರೆಯಿಂದ ಕಟ್ಟಿದ್ದಾರೆ.

**ಕಲ್ಲು :** ಇದನ್ನು ಭೂಗರ್ಭದ ರಚನೆ ಮತ್ತು ರಾಸಾಯನಿಕ ಸಂಯೋಜನೆಯ ಪ್ರಕಾರ ವರ್ಗೀಕರಿಸುತ್ತಾರೆ. ಗ್ರ್ಯಾನೈಟ್ ಕಲ್ಲಿನಲ್ಲಿ ಸಿಲಿಕಾನ್ ಡೈ ಆಕ್ಸೈಡ್ ಹೆಚ್ಚಾಗಿದೆ. ಅಮೃತಶಿಲೆಯಲ್ಲಿ ಸುಣ್ಣ ಹೆಚ್ಚಾಗಿದೆ. ಲ್ಯಾಟರೈಟಿನಲ್ಲಿ ಮಣ್ಣು ಹೆಚ್ಚಾಗಿದೆ. ಒಳ್ಳೆಯ ಕಲ್ಲಿನ ಗುಣಗಳು ಮತ್ತು ಬಲವನ್ನು ಶಿಲ್ಪಿ ತಿಳಿದಿರಬೇಕು. ಕಟ್ಟಡಗಳನ್ನು ಕಟ್ಟಲು ಗ್ರ್ಯಾನೈಟ್ (ಕಣಶಿಲೆ), ನೀಸ್, ಟ್ರ್ಯಾಪ್, ಬಸಾಲ್ಟ್ ಸುಣ್ಣಕಲ್ಲುಗಳು ಮತ್ತು ಮರಳುಕಲ್ಲುಗಳನ್ನು ಉಪಯೋಗಿಸುತ್ತಾರೆ. ಉಜ್ಜಿದಾಗ ಮೇಲ್ಮೈಗೆ ಹೊಳಪು ಬರುವ ಅಮೃತಶಿಲೆ, ಗ್ರ್ಯಾನೈಟ್ ಮತ್ತು ಕಪ್ಪು ಕಲ್ಲುಗಳನ್ನು ದೇವಾಲಯ ಮತ್ತು ಅರಮನೆಗಳನ್ನು ಕಟ್ಟಲು ಬಳಸುತ್ತಾರೆ. ನಯವಾದ ಕಂಬಗಳ ಪೀಠಗಳು, ಕಂಬಗಳು. ತಲೆಗಲ್ಲುಗಳು, ಕಟ್ಟಡದ ಮೂಲೆ ಕಲ್ಲುಗಳು, ಕಮಾನಿನ ಕಲ್ಲುಗಳು, ಇವನ್ನು ಹೆಚ್ಚಿನ ಶ್ರಮದಿಂದ ನುರಿತ ಕೆಲಸಗಾರರು ತಯಾರಿಸುತ್ತಾರೆ. ಕಟ್ಟಡಗಳ ಹೊರಭಾಗದಲ್ಲಿ ಉಪಯೋಗಿಸುವ ಕಲ್ಲುಗಳು ಬಿಸಿಲು, ಮಳೆ, ಗಾಳಿಗಳ ಹೊಡೆತದಿಂದ ಕಾಲಾನುಕ್ರಮದಲ್ಲಿ ಕ್ಷೀಣವಾಗುತ್ತವೆ.

**ಸುಣ್ಣ :** ಕ್ಯಾಲ್ಸಿಯಂ ಕಾರ್ಬೊನೇಟಿನೊಡನೆ ಕೊಂಚ ಮಣ್ಣು ಬೆರೆತು ಸುಣ್ಣಗೋಲಿಗಳಂತೆ ಇರುವ (ನಾಡ್ಯುಲ್ಸ್) ಸುಣ್ಣಕಲ್ಲು ನೈಸರ್ಗಿಕವಾಗಿ ನಮ್ಮ ದೇಶದಲ್ಲಿ ಹೊಲಗಳಲ್ಲಿ ಮಣ್ಣಿನೊಡನೆ ಬೆರೆತಿರುತ್ತದೆ. ಅದನ್ನು ಪಿಕಾಸಿಗಳಿಂದ ಸುಲಭವಾಗಿ ಅಗೆದು ತೆಗೆಯಬಹುದು. ನೀರಾವರಿಯ ಕೆಲಸಗಳಲ್ಲಿ ಶಿಲ್ಪಿ ಉಪಯೋಗಿಸುವ ಸುಣ್ಣ ಇದರಿಂದ ಬರುತ್ತದೆ. ಕೆಲವು ಕಡೆಗಳಲ್ಲಿ ಸುಣ್ಣಕಲ್ಲು ದಿಮ್ಮಿಗಳ ರೂಪದಲ್ಲಿರುತ್ತದೆ. ಅದನ್ನೂ ಸುಲಭವಾಗಿ ಅಗೆದು ತೆಗೆಯಬಹುದು.

ಸುಣ್ಣದಲ್ಲಿ ಎರಡು ಬಗೆಗಳಿವೆ : ಒಂದು ಶುದ್ಧ ಸುಣ್ಣ, ಇನ್ನೊಂದು ಕೊಂಚ ಮಣ್ಣು ಬೆರೆತದ್ದು. ಶುದ್ಧ ಸುಣ್ಣವನ್ನು ಬಟ್ಟಿಯಿಂದ ತೆಗೆದು ನೀರಿನೊಂದಿಗೆ ಬೆರೆಸಿದರೆ ಅದು ಉಬ್ಬಿ ಗಾತ್ರದಲ್ಲಿ ಒಂದೂವರೆಯಷ್ಟಾಗುತ್ತದೆ. ಮಣ್ಣು ಬೆರೆತಿರುವ ಸುಣ್ಣಕ್ಕೆ ನೀರು ಬಿದ್ದಾಗ ರಾಸಾಯನಿಕವಾದ ಮಾರ್ಪಾಡಾಗುತ್ತದೆ. ಆಗ ಅದು ಗಟ್ಟಿಯಾಗುತ್ತದೆ. ಶುದ್ಧ ಸುಣ್ಣ ನೀರಿನಲ್ಲಿ ಹೀಗೆ ಗಟ್ಟಿಯಾಗುವುದಿಲ್ಲ. ಎರಡುಬಗೆಯ ಸುಣ್ಣಗಳಿಗೂ ಪ್ರತ್ಯೇಕವಾದ ಉಪಯೋಗಗಳಿವೆ.

ಸಮುದ್ರತೀರದಲ್ಲಿ ಹೇರಳವಾಗಿ ದೊರೆಯುವ ಕವಡೆ, ಶಂಖ, ಕಚ್ಚ ಹವಳ—ಇವನ್ನು ಸುಟ್ಟಾಗ ಅಚ್ಚಸುಣ್ಣ ದೊರೆಯುತ್ತದೆ. ಮೈಸೂರು ದೇಶದಲ್ಲಿ ಚೆನ್ನಪಟ್ಟಣ. ಬೀರೂರು ಮೊದಲಾದ ಅನೇಕ ಕಡೆಗಳಲ್ಲಿ ಕಟ್ಟಡಗಳಿಗೆ ಉಪಯೋಗಿಸುವ ಸುಣ್ಣ ವಿಶೇಷವಾಗಿ ಸಿಕ್ಕುತ್ತದೆ. ಕೆಲವು ಕಡೆಗಳಲ್ಲಿ ಸಿಕ್ಕುವ ಸುಣ್ಣದಲ್ಲಿ ಮರಳು, ಅಲ್ಯೂಮಿನಿಯಮ್ ಆಕ್ಸೈಡ್ ಮತ್ತು ಮ್ಯಾಗ್ನಿಸಿಯಂ ಕಾರ್ಬೊನೇಟ್ ಬೆರೆತಿರುತ್ತವೆ. ರಾಸಾಯನಿಕವಾಗಿ ಸೇರಿರದೆ ಇರುವ ಮರಳಿನ ಭಾಗ ಹೆಚ್ಚಾದರೆ ಅದನ್ನು ತೆಳುವಾದ ಸುಣ್ಣವೆನ್ನುತ್ತಾರೆ. ಮನೆಗಳಲ್ಲಿ ಗೋಡೆಗಳಿಗೆ ಬಳಿಯುವುದಕ್ಕೆ ಇದನ್ನು ಉಪಯೋಗಿಸಲಾಗುವುದಿಲ್ಲ.

ಸುಟ್ಟ ಅಚ್ಚಸುಣ್ಣಕ್ಕೆ ನೀರನ್ನು ಬೆರೆಸಿದಾಗ ಅದು ಪುಡಿಯಾಗಿ ಕ್ಯಾಲ್ಸಿಯಂ ಹೈಡ್ರಾಕ್ಸೈಡ್ ಆಗುತ್ತದೆ. ಅಚ್ಚಸುಣ್ಣಕ್ಕೆ ನೀರನ್ನು ಸೇರಿಸಿದಾಗ ವಿಶೇಷವಾದ ಶಾಖ ಉತ್ಪನ್ನವಾಗಿ ಬಿರುಕುಬಿಟ್ಟು ಸೀಳಿ ಶಬ್ದಮಾಡಿ ಗಾತ್ರದಲ್ಲಿ ಎರಡುಮೂರು ಪಟ್ಟು ಹೆಚ್ಚಿ ಪುಡಿಯಾಗಿ ನೀರಿನೊಂದಿಗೆ ಬೆರೆಯುತ್ತದೆ. ಇದು ಒಣಗಿದಾಗ ಕುಗ್ಗುತ್ತದೆ, ಬಿರಿಯುತ್ತದೆ, ಇದನ್ನು ತಪ್ಪಿಸಲು ಅದಕ್ಕೆ ಮೂರರಷ್ಟು ಮರಳನ್ನು ಬೆರೆಸಿ ಚರಕಿಗಳಲ್ಲಿ ಅರೆದು ಗಾರೆಯನ್ನು ತಯಾರಿಸುತ್ತಾರೆ. ಕಟ್ಟಡಗಳಲ್ಲಿ ಉಪಯೋಗಿಸುವ ಸುಣ್ಣಕ್ಕೆ ನೀರನ್ನು ಹೊಯ್ದು ಅದನ್ನು ಮೆತುವಾಗಿ ಮಾಡಿ ಗಾರೆಯ ಗೂಡಿಗೆ ಹಾಕಬೇಕು. ಮನೆಗಳಲ್ಲಿ ಇಟ್ಟಿಗೆ ಮತ್ತು ಕಲ್ಲಿನ ಗೋಡೆಗಳನ್ನು ಕಟ್ಟುವುದಕ್ಕೂ ಅವಕ್ಕೆ ಹೊರಗಡೆ ಗಿಲಾವು ಮಾಡುವುದಕ್ಕೂ ಈ ಗಾರೆಯನ್ನು ಬಳಸುತ್ತಾರೆ.

ಗಾರೆಯನ್ನು ಗಿಲಾವಿಗೆ ಬಳಸುವಾಗ ಅದನ್ನು ರಾಶಿಹಾಕಿ ಮೇಲುಗಡೆ ದೋಣಿ ಮಾಡಿ ನೀರನ್ನು ಕಟ್ಟಿ ಒಂದು ವಾರದವರೆಗೂ ಕೊಳೆಸಬೇಕು. ಇಲ್ಲವಾದರೆ

ಗಿಲಾವಾದ ಗೋಡೆಗಳಲ್ಲಿ ಬೊಬ್ಬೆಗಳು ಬರುತ್ತವೆ. ಸುಣ್ಣದ ಗಾರೆ ನಿಧಾನವಾಗಿ ಗಾಳಿಯಿಂದ ಇಂಗಾಲಾಮ್ಲವನ್ನು ಹೀರಿ ಕ್ಯಾಲ್ಸಿಯಮ್ ಕಾರ್ಬೋನೇಟ್ ಆಗಿ ಗಟ್ಟಿಯಾಗುತ್ತದೆ. ಇದು ಸಾವಕಾಶವಾಗುವುದರಿಂದ ಕೆಲವು ಸಂದರ್ಭಗಳಲ್ಲಿ ಜೊತೆಗೆ ಕೊಂಚ ಸಿಮೆಂಟನ್ನು ಬೆರೆಸುತ್ತಾರೆ.

ಜಿಪ್ಸಮ್ ಎಂಬ ಕ್ಯಾಲ್ಸಿಯಮ್ ಸಲ್ಫೇಟಿನಿಂದಲೂ ಅದು ಸಿಕ್ಕುವ ಕಡೆಗಳಲ್ಲಿ ಗಿಲಾವು ಮಾಡುತ್ತಾರೆ. ಇದನ್ನು ಕಾಯಿಸಿದಾಗ ಕೊಂಚ ನೀರನ್ನು ಕಳೆದುಕೊಂಡು ಪ್ಲ್ಯಾಸ್ಟರ್ ಆಫ್ ಪ್ಯಾರಿಸ್ ಆಗುತ್ತದೆ. ಇದಕ್ಕೆ ನೀರನ್ನು ಬೆರೆಸಿದರೆ ಬೇಗ ಗಟ್ಟಿಯಾಗಿ ಮತ್ತೆ ಜಿಪ್ಸಮ್ ಆಗುತ್ತದೆ. ಇಷ್ಟು ಬೇಗ ಗಟ್ಟಿಯಾಗುವ ಗಾರೆ ಕಟ್ಟಡದ ಕೆಲಸಕ್ಕೆ ಬೇಕಿಲ್ಲ. ಅದಕ್ಕಾಗಿ ಕೊಂಚ ಬೋರಾಕ್ಸನ್ನು ಬೆರೆಸಿ ನಿದಾನವಾಗಿ ಗಟ್ಟಿಯಾಗುವಂತೆ ಮಾಡುತ್ತಾರೆ.

ಕಲ್ಲುಗಾರೆಯ ಕಟ್ಟೆ ಮೊದಲಾದ ಕಡೆಗಳಲ್ಲಿ ಉಪಯೋಗಿಸುವ ಸುಣ್ಣದಲ್ಲಿ ಮರಳು, ದ್ರಾವಣವಾದ ಸಿಲಿಕ, 10%-30% ವರೆಗೆ ಅಲ್ಯೂಮಿನಿಯಂ ಆಕ್ಸೈಡ್, ಮ್ಯಾಗ್ನೀಸಿಯಂ ಕಾರ್ಬೋನೇಟ್ ಮತ್ತು ಜೇಡಿ ಮಣ್ಣು ಬೆರೆತಿರುತ್ತವೆ. ನೀರಿನಲ್ಲಿದ್ದಾಗ ಕಲ್ಲಾಗುವ ಗುಣವನ್ನು ಸುಣ್ಣಕ್ಕೆ ಬೆರಕೆ ಪದಾರ್ಥಗಳು ಕೊಡುತ್ತವೆ. ಈ ಸುಣ್ಣಕ್ಕೆ ನೀರನ್ನು ಬೆರೆಸಿದಾಗ ಹೆಚ್ಚು ಕಾವು ಉತ್ಪತ್ತಿಯಾಗುವುದಿಲ್ಲ. ಗಾತ್ರವೂ ಕೊಂಚವೇ ಹೆಚ್ಚಾಗುತ್ತದೆ. ಕುಗ್ಗುವುದಿಲ್ಲ, ಬಿರಿಯುವುದಿಲ್ಲ. ಇದು ಮಂಡ್ಯ, ಗಣಂಗೂರು, ಜೆಟ್ಟಿಹೊಂಡಿ ಮೊದಲಾದ ಕಡೆಗಳಲ್ಲಿ ಹೇರಳವಾಗಿ ದೊರೆಯುತ್ತದೆ. ಈ ಸುಣ್ಣಕಲ್ಲನ್ನು ಕೃಷ್ಣರಾಜಸಾಗರ ಮೊದಲಾದ ಕಟ್ಟೆಗಳ ಬಳಿ ವಿಶಿಷ್ಟವಾದ ಬಟ್ಟಿಗಳಲ್ಲಿ ಸುಡುತ್ತಾರೆ. ನೆಲದ ಮಟ್ಟದ ಮೇಲೆ 3′ ಎತ್ತರವಾದ ಕಲ್ಲಿನ ಗೋಡೆಗಳನ್ನು ಕಟ್ಟಿ ಅವುಗಳ ನಡುವೆ 3′ ಅಂತರದಲ್ಲಿ 24 ಪೌಂಡ್ ತೂಕದ ಕಂಬಿಗಳನ್ನು ಹರಡುತ್ತಾರೆ. ಬಟ್ಟಿ 20′ ಉದ್ದ 6′ ಅಗಲ, 3′ ಆಳವಾಗಿರುತ್ತದೆ. ಅದರ ಮೇಲಿನ ಮಟ್ಟದಲ್ಲಿ ಒಂದು ಬಟ್ಟಿಗೂ ಇನ್ನೊಂದಕ್ಕೂ ನಡುವೆ ಸುಣ್ಣಕಲ್ಲನ್ನು ತುಂಬಲು 5′ ಜಗಲಿಯನ್ನು ಬಿಟ್ಟಿರುತ್ತಾರೆ. ಸುಣ್ಣಕಲ್ಲನ್ನು ಸುಡುವುದಕ್ಕೆ ಕಟ್ಟಿಗೆ ಮರದ ಇದ್ದಲು ಮತ್ತು ಕೊಂಚ ಕಲ್ಲಿದ್ದಲನ್ನು ಉಪಯೋಗಿಸುತ್ತಾರೆ. ಚೆನ್ನಾಗಿ ಸುಟ್ಟಮೇಲೆ ಆರುವುದಕ್ಕೆ ಬಿಟ್ಟು ಕೊಂಚ ಸುಣ್ಣವನ್ನು ತೆಗೆದು ನೀರಿನೊಳಕ್ಕೆ ಹಾಕಿ 20%ಕ್ಕಿಂತ ಹೆಚ್ಚಾಗಿ ಸಣ್ಣಗಂಟುಗಳು ಉಳಿಯದೆ ಹೋದರೆ ಸುಣ್ಣವನ್ನು ಕೂಡಿರುವ ಷೆಡ್ಡುಗಳಿಗೆ ಟ್ರಾಲಿಗಳ ಮೇಲೆ ರವಾನಿಸುತ್ತಾರೆ. ಗಂಟುಗಳು ಹೆಚ್ಚಾಗಿದ್ದರೆ ಸುಡದೆ ಇರುವ ಸುಣ್ಣವನ್ನು ಮತ್ತೆ ಸುಡಬೇಕಾಗುತ್ತದೆ. ಇಂದು ಸುಟ್ಟ ಸುಣ್ಣವನ್ನು 10 ದಿನಗಳೊಳಗೆ ಸಂಪೂರ್ಣವಾಗಿ ಬಳಸಬೇಕು. ಸುಟ್ಟಸುಣ್ಣದ ಬಟ್ಟಿಗಳನ್ನು ಅವಶ್ಯವಾದಾಗ ಮಾತ್ರ ಇಳಿಸಿಕೊಳ್ಳಬೇಕು.

**ಮರಳು :** ಮರಳನ್ನು ವಿಶೇಷವಾಗಿ ಗಾರೆಯನ್ನೂ ಸಿಮೆಂಟ್ ಕಾಂಕ್ರೀಟನ್ನೂ ತಯಾರಿಸಲು ಉಪಯೋಗಿಸುತ್ತಾರೆ. ಮರಳಿನ ಕಣಗಳು ಚೂಪಾಗಿರಬಾರದು. ಅದರಲ್ಲಿ ಸುದ್ದೆಮಣ್ಣು ಬೆರೆತಿರಬಾರದು. ಸಮುದ್ರದ ಮರಳು ಹೇರಳವಾಗಿಯೂ ಗುಂಡಾಗಿಯೂ ಇದ್ದರೂ ಕ್ಷಾರದ ಉಪ್ಪುಗಳು ಇರುವುದರಿಂದ ಗಾಳಿಯಿಂದ ತೇವವನ್ನು ಹೀರುತ್ತದೆ. ಮರಳಿನಲ್ಲಿ ಸಸ್ಯ ಮತ್ತು ಪ್ರಾಣಿವರ್ಗದ ಕಸ ಸೇರಿರಬಾರದು. ಜೇಡಿಮಣ್ಣು ಮಿಶ್ರವಾಗಿದ್ದರೆ ಮರಳನ್ನು ನೀರಿನ ತೊಟ್ಟಿಯಲ್ಲಿ ತೊಳೆಯಬೇಕು.

**ಸಿಮೆಂಟ್ :** ಸಿಮೆಂಟಿನಲ್ಲಿ ಮೂರು ಪಾಲು ಕ್ಯಾಲ್ಸಿಯಂ ಕಾರ್ಬೋನೇಟ್ ಹೆಚ್ಚಾಗಿರುವ ಸುಣ್ಣಕಲ್ಲು ಮತ್ತು ಒಂದು ಪಾಲು ಜೇಡಿಮಣ್ಣು ಸೇರಿವೆ. ಸಿಮೆಂಟ್ ಗಟ್ಟಿಯಾಗುವುದನ್ನು ಸಾವಕಾಶಮಾಡಲು ಕೊಂಚ ಜಿಪ್ಸಮ್ಮನ್ನು ಸೇರಿಸುತ್ತಾರೆ. ಸುಣ್ಣಕಲ್ಲು ಮತ್ತು ಮಣ್ಣಿನ ಮಿಶ್ರಣವನ್ನು ಕರಗುವ ಮಟ್ಟಿಗೆ ಕಾಯಿಸಿ ಬಂದ ಕಿಟ್ಟವನ್ನು ನುಣ್ಣಗೆ ಪುಡಿಮಾಡಿದರೆ ಸಿಮೆಂಟ್ ಬರುತ್ತದೆ. ನೀರಿನೊಂದಿಗೆ ಬೆರೆಸಿದಾಗ ಇದು ಗಟ್ಟಿಯಾಗುತ್ತದೆ. ಬೀಡುಕಬ್ಬಿಣವನ್ನು ತಯಾರಿಸುವ ಕುಲುಮೆಗಳಿರುವ ಕಡೆ ಅದರಿಂದ ಬರುವ ಕಿಟ್ಟವನ್ನು ಸುಣ್ಣಕಲ್ಲಿಗೆ ಬದಲಾಗಿ ಉಪಯೋಗಿಸುತ್ತಾರೆ. ಸಿಮೆಂಟನ್ನು (1) ಒಣಗಿದ ಮತ್ತು (2) ನೀರನ್ನು ಬೆರೆಸಿದ ಕ್ರಮಗಳಲ್ಲಿ ತಯಾರಿಸುತ್ತಾರೆ. 94 ಪೌಂಡ್ ತೂಕವಿರುವ ಒಂದು ಸಲೆ ಅಡಿ ಸಿಮೆಂಟನ್ನು ಚೀಲಗಳಲ್ಲಿ ತುಂಬಿ ಮಾರುತ್ತಾರೆ. ಒಂದು ಬ್ಯಾರಲಿನಲ್ಲಿ 4 ಮೂಟೆ ಸಿಮೆಂಟು ಹಿಡಿಯುತ್ತದೆ. ಇದನ್ನು ನೇರವಾಗಿ ಕೆಲಸಗಳಲ್ಲಿ ಉಪಯೋಗಿಸುತ್ತಾರೆ. ಕೆಲವು ಕಡೆಗಳಲ್ಲಿ ಮಣ್ಣು ಬೆರೆತ ಸುಣ್ಣಕಲ್ಲಿನ ಗುಡ್ಡೆಗಳು ನೈಸರ್ಗಿಕವಾಗಿ ದೊರೆಯುತ್ತವೆ. ಇದನ್ನು ಕಾಯಿಸಿದರೆ ಇಂಗಾಲಾಮ್ಲ ಹೋಗಿ ಕಿಟ್ಟ ಉಳಿಯುತ್ತದೆ. ಇದನ್ನು ನುಣ್ಣಗೆ ಅರೆದಾಗ ನೈಸರ್ಗಿಕ ಸಿಮೆಂಟ್ ಬರುತ್ತದೆ. ಇದು ಗಾಳಿಯಲ್ಲಿ ಗಟ್ಟಿಯಾಗುವುದಿಲ್ಲ. ನೀರನ್ನು ಬೆರೆಸಿದಾಗ ಮಾತ್ರ ಗಟ್ಟಿ ಆಗುತ್ತದೆ. ಕೆಲವು ದೇಶಗಳಲ್ಲಿ ಜ್ವಾಲಾಮುಖಿಯ ಬೂದಿಯ ರಾಶಿಗಳಿರುತ್ತವೆ. ಇವುಗಳಲ್ಲಿ ಮಣ್ಣಿನ ಭಾಗದೊಂದಿಗೆ ನೀರನ್ನು ಸೇರಿಸಿದ ಸುಣ್ಣವನ್ನು ಬೆರೆಸಿ ಪಸೋಲಿನ ಸಿಮೆಂಟನ್ನು ತಯಾರಿಸುತ್ತಾರೆ. ಹಿಂದೆ ರೋಮನ್ ಸಾಮ್ರಾಜ್ಯದಲ್ಲಿ ಬಳಸುತ್ತಿದ್ದ ಸಿಮೆಂಟ್ ಈ ನಮೂನೆಯದು. ಕಬ್ಬಿಣದ ಆಕ್ಸೈಡನ್ನು ಬಹಳ ಕಡಿಮೆಮಾಡುವುದರಿಂದ ಸಿಮೆಂಟಿಗೆ ಬಿಳಿಯ ಬಣ್ಣ ಬರುತ್ತದೆ. ಕಬ್ಬಿಣದ ಆಕ್ಸೈಡಿನಿಂದ ಸಿಮೆಂಟಿಗೆ ಕೆಂಪು, ಹಳದಿ ಮತ್ತು ಕಂದು ಬಣ್ಣಗಳು ಬರುತ್ತವೆ. ಮ್ಯಾಂಗನೀಸ್ ಡೈಆಕ್ಸೈಡ್ ಕಪ್ಪು ಬಣ್ಣವನ್ನೂ ಕ್ರೋಮಿಯಂ ಆಕ್ಸೈಡ್ ಹಸಿರುಬಣ್ಣವನ್ನೂ ಕೋಬಾಲ್ಟ್ ನೀಲಿ ಬಣ್ಣವನ್ನೂ ಕೊಡುತ್ತವೆ.

**ಗಾರೆ :** ಸುಣ್ಣ ಇಲ್ಲವೆ ಸಿಮೆಂಟಿನೊಡನೆ ಸೂರ್ಕಿ ಅಥವಾ ಮರಳನ್ನು ಬೇರೆ ಬೇರೆ ಪ್ರಮಾಣಗಳಲ್ಲಿ ಬೆರೆಸಿ ಗಾರೆಯನ್ನು ತಯಾರಿಸುತ್ತಾರೆ. ಇದನ್ನು ಮೂರು ಉದ್ದೇಶಗಳಿಗಾಗಿ ಕಟ್ಟಡಗಳಲ್ಲಿ ಬಳಸುತ್ತಾರೆ: (1) ಗೋಡೆ ಮತ್ತು ನೆಲಕ್ಕೆ ನಯವಾದ ರಕ್ಷಣೆಯ ಕವಚವನ್ನು ಕೊಡಲು. (2) ಇಟ್ಟಿಗೆ ಅಥವಾ ಕಲ್ಲುಗಳನ್ನು ಗೋಡೆಯಲ್ಲಿ ಕೂರಿಸಲು, (3) ಕಲ್ಲುಗಾರೆಯ ಕಟ್ಟೆಯಲ್ಲಿ ಕಲ್ಲುಗಳನ್ನು ಒಂದಕ್ಕೊಂದು ಬಿಗಿಯಲು. ಮೂರು ಬಗೆಯಾದ ಗಾರೆಗಳು ಬಳಕೆಯಲ್ಲಿವೆ: (1) ಸಣ್ಣಗೆ ಮರಳನ್ನು ಬೆರೆಸಿದ್ದು, (2) ಸಣ್ಣಗೆ ಸೂರ್ಕಿಯನ್ನು ಬೆರೆಸಿದ್ದು. (3) ಸಿಮೆಂಟಿಗೆ ಮರಳನ್ನು ಬೆರೆಸಿದ್ದು.

ಗಾರೆಯ ಬಲ ಸುಣ್ಣ ಅಥವಾ ಸಿಮೆಂಟಿಗೆ ಬೆರೆತಿರುವ ಸೂರ್ಕಿ ಅಥವಾ ಮರಳಿನ ದಾಮಾಶೆಗೂ ಗಾರೆಯನ್ನು ಅರೆದಿರುವ ನಯಕ್ಕೂ ಅನುಗುಣವಾಗಿದೆ. ಸಾಮಾನ್ಯವಾಗಿ ಸುಣ್ಣಕ್ಕೂ ಸಿಮೆಂಟಿಗೂ ಮೂರುಪಾಲು ಮರಳನ್ನೂ ಸುಣ್ಣಕ್ಕೆ ನಾಲ್ಕು ಪಾಲು ಸೂರ್ಕಿಯನ್ನೂ ಬೆರೆಸಿ ಗಾರೆಯನ್ನು ತಯಾರಿಸುತ್ತಾರೆ.

ಕೃಷ್ಣರಾಜಸಾಗರದಂಥ ಕಟ್ಟೆಗಳಲ್ಲಿ ಬಳಸುವ ಗಾರೆಯನ್ನು 1 ಪಾಲು ಹೈಡ್ರಾಲಿಕ್ ಸುಣ್ಣದೊಂದಿಗೆ 4 ಪಾಲು ಸೂರ್ಕಿಯನ್ನು ವಿದ್ಯುತ್ತಿನಿಂದ ನಡೆಯುವ 8′ ವ್ಯಾಸದ ಚರಕೆಗಳಲ್ಲಿ 35 ಮಿನಿಟ್ ಕಾಲ ಅರೆದು ಉಪಯೋಗಿಸುತ್ತಾರೆ. ಸೂರ್ಕಿ ಗಾರೆಯನ್ನು ಅರೆದ 8 ಗಂಟೆಗಳೊಳಗೆ ಬಳಸಬೇಕು.

**ಕಾಂಕ್ರೀಟ್ :** ಕಾಂಕ್ರೀಟಿನಲ್ಲಿ ಮೂರು ಬಗೆಗಳಿವೆ: (1) ಸುಣ್ಣದ ಕಾಂಕ್ರೀಟ್. (2) ಸೂರ್ಕಿ ಕಾಂಕ್ರೀಟ್, (3) ಸಿಮೆಂಟ್ ಕಾಂಕ್ರೀಟ್.

ಮರಳು ಮತ್ತು ಸುಣ್ಣ ಇವನ್ನು ಗಾರೆಯ ಗುಂಡಿಯಲ್ಲಿ ಬೆರೆಸಿ ಗಾರೆಯನ್ನು ತಯಾರಿಸಿ ಕಲ್ಲಿನ ಜಲ್ಲಿಯೊಂದಿಗೆ ಒಂದೇ ಸಮನಾಗಿ ಬೆರೆಸಿದರೆ ಸುಣ್ಣದ ಕಾಂಕ್ರೀಟು ಬರುತ್ತದೆ. ಚರಕೆಗಳಲ್ಲಿ ಸೂರ್ಕಿ ಗಾರೆಯನ್ನು ಅರೆದು ಅದನ್ನು ಕಲ್ಲಿನ ಜಲ್ಲಿಯೊಂದಿಗೆ ಬೆರೆಸಿ ಸೂರ್ಕಿ ಕಾಂಕ್ರೀಟನ್ನು ತಯಾರಿಸುತ್ತಾರೆ. ಸಿಮೆಂಟ್ ಮತ್ತು ಮರಳನ್ನು ಬೆರೆಸಿ ಸಿಮೆಂಟ್ ಗಾರೆಯನ್ನು ಮಾಡಿ ಅದನ್ನು ಕಲ್ಲಿನ ಜಲ್ಲಿಯೊಂದಿಗೆ ಕೈಯಿಂದಲೇ ಸೇರಿಸಿ ಹಿಂದೆ ಸಿಮೆಂಟ್ ಕಾಂಕ್ರೀಟನ್ನು ಮಾಡುತ್ತಿದ್ದರು. ಈಗ ಎಲ್ಲಿಗೆ ಬೇಕಾದರೂ ಸಾಗಿಸಬಹುದಾದ ಕಾಂಕ್ರೀಟ್ ಮಿಕ್ಸರ್ ಎಂಬ ಯಂತ್ರದಲ್ಲಿ ಸಿಮೆಂಟ್ ಜಲ್ಲಿ ಮತ್ತು ನೀರನ್ನು ಅಳತೆಮಾಡಿ ಬೆರೆಸಿ ಒಳ್ಳೆಯ ಸಿಮೆಂಟ್ ಕಾಂಕ್ರೀಟನ್ನು ತಯಾರಿಸಬಹುದು. ಇದಕ್ಕೆ ಬೆರೆಸುವ ನೀರು ಕ್ಲುಪ್ತವಾಗಿಯೂ ಶುದ್ಧವಾಗಿಯೂ ಇರಬೇಕು. ಕಾಂಕ್ರೀಟನ್ನು ತಳಪಾಯದಲ್ಲಿ ಹಾಕಬೇಕಾದಾಗ ತಳವನ್ನು ನೀರಿನಿಂದ ತೊಳೆದು ಅದರ ಮೇಲೆ 6″ ಮೀರಿದ ದಪ್ಪದಲ್ಲಿ ಒಂದು ಕಡೆಯಿಂದ ಇನ್ನೊಂದರವರೆಗೂ ಸುರಿದು, ಹಿಡಿಯಿರುವ ಭಾರವಾದ ಮರದ ಹಲಗೆಯಿಂದ ಗಾರೆಯ ರಸ ಮೇಲೆಕ್ಕೆ ಉಕ್ಕುವಹಾಗೆ ದಮ್ಮಸ್ಸುಮಾಡಬೇಕು. ಹಾಕಿದ ಕಾಂಕ್ರೀಟು ಮಾಗಲು ನೀರು ಕಟ್ಟಬೇಕು. ಅಳತೆಯಿಂದ 1 ಪಾಲು ಸಿಮೆಂಟ್, 2 ಪಾಲು ಮರಳು ಮತ್ತು 4 ಪಾಲು ಕಲ್ಲಿನ ಜಲ್ಲಿಯನ್ನು ಮಿಕ್ಸರಿನಲ್ಲಿ ಬೆರೆಸಿ ಸಿಮೆಂಟ್ ಕಾಂಕ್ರೀಟನ್ನು ತಯಾರಿಸುತ್ತಾರೆ. ಈ ಕಾಂಕ್ರೀಟನ್ನು ಅದುಮುವ ತ್ರಾಸವನ್ನು ಪಡೆಯಬೇಕಾದ ತಳಪಾಯ, ಗೋಡೆ, ಜಲಾಶಯದ ಕಟ್ಟೆ, ಕಮಾನು, ಕಂಬ, ಮೊದಲಾದ ಕಡೆಗಳಲ್ಲಿ ಉಪಯೋಗಿಸುತ್ತಾರೆ.

ಭದ್ರಕಾಂಕ್ರೀಟ್ (ರೀಇನ್‌ಫೋರ್ಸ್ಡ್ ಕಾಂಕ್ರೀಟ್): ಸಾದಾ ಕಾಂಕ್ರೀಟಿನ ಒತ್ತಡದ ಬಲ ಎಳೆತದ ಬಲದ ಹತ್ತರಷ್ಟು ಹೆಚ್ಚಾಗಿರುತ್ತದೆ. ಭದ್ರ ಕಾಂಕ್ರೀಟಿನಲ್ಲಿ ಅದರ ಮೇಲೆ ಬರುವ ಎಳೆತದ (ಟೆನ್ಸೈಲ್) ಮತ್ತು ಜಾರುವ (ಶಿಯರಿಂಗ್) ತ್ರಾಸಗಳನು ತಡೆಯುವಂತೆ ಉಕ್ಕನ್ನು ಗರ್ಭೀಕರಿಸಿರುತ್ತಾರೆ. ಎಳೆತದ ಮತ್ತು ಜಾರಿನ ತ್ರಾಸಗಳನ್ನು ಮಾತ್ರ ತಡೆಯಲು ಉಕ್ಕನ್ನು ಗರ್ಭೀಕರಿಸಿದ್ದರೆ ಅದನ್ನು ಏಕಮುಖ ಭದ್ರವಾದ (ಸಿಂಗ್ಲಿ ರೀಇನ್‌ಫೋರ್ಸ್ಡ್) ತೊಲೆಯೆನ್ನುತ್ತಾರೆ. ಜೊತೆಗೆ ಅದುಮುವ ತ್ರಾಸದ ಭಾಗವನ್ನು ತಡೆಯಲು ಉಕ್ಕನ್ನು ಇಟ್ಟಿದ್ದರೆ ಅದು ದ್ವಿಮುಖವಾಗಿ ಭದ್ರವಾದ ತೊಲೆಯಾಗುತ್ತದೆ. ತೊಲೆಯ ಮೇಲುಭಾಗದಲ್ಲಿ ಒಂದು ತೊಲೆಯಿದ್ದರೆ ಅದನ್ನು ತೊಲೆ ಎನ್ನುತ್ತಾರೆ. ಕಂಬಿಗಳು ಕಾಂಕ್ರೀಟಿನಲ್ಲಿ ಜಾರದಹಾಗೆ ಕೊನೆಗಳನ್ನು ಕೊಕ್ಕೆಗಳಹಾಗೆ ಬಗ್ಗಿಸುತ್ತಾರೆ. ಜಾರುವ ಒತ್ತಡವನ್ನು ಎದುರಿಸಲು ಅಲ್ಲಲ್ಲಿ ರಿಕಾಪು ಕಂಬಿಗಳನ್ನು (ಸ್ಟಿರಪ್ಸ್) ಇಟ್ಟಿರುತ್ತಾರೆ. ಏಕಮುಖವಾಗಿ ಕಂಬಿಗಳಿರುವ ಕಡೆ ಅವಕ್ಕೆ ಸಮಕೋಣವಾಗಿ ದೂರವಾಗಿ ತೂಕವನ್ನು ಹರಡಿರುವ ಕಂಬಿಗಳಿರುತ್ತವೆ.

ಭದ್ರಕಾಂಕ್ರೀಟಿನಲ್ಲಿ ಉಪಯೋಗಿಸುವ ಸಿಮೆಂಟ್ ನಿಧಾನವಾಗಿ ಗಟ್ಟಿಯಾಗುವ ಪೋರ್ಟ್‌ಲೆಂಡ್ ಸಿಮೆಂಟಿನ ಮಟ್ಟಕ್ಕೆ ಬರಬೇಕು. ರಸ್ತೆಗಳಿಗೆ ಹಾಕುವ ಸಿಮೆಂಟ್ ಬಾಳಿಕೆ ಬರಬೇಕು. ಬಲಿಷ್ಠವಾಗಿರಬೇಕು. ಮೊದಲೇ ತ್ರಾಸವನ್ನು ಹೊರಿಸಿರುವ (ಪ್ರೀಸ್ಟ್ರೆಸ್ಡ್) ಕಾಂಕ್ರೀಟ್ ಈಚೆಗೆ ಬಳಕೆಗೆ ಬಂದಿದೆ. ಈ ಕ್ರಮದಲ್ಲಿ ಕಾಂಕ್ರೀಟಿನ ಒತ್ತಡದ ಬಲವನ್ನು ಸಂಪೂರ್ಣವಾಗಿ ಬಳಸುವುದು ಸಾಧ್ಯವಾಗಿದೆ. ಇದರಲ್ಲಿ ಕಟ್ಟಡದ ಒಂದು ಭಾಗ ಅದು ಹೊರಬೇಕಾದ ತೂಕದ ಪರಿಣಾಮವಾಗಿ ಯಾವ ತ್ರಾಸವನ್ನು ಪಡೆಯುವುದೋ ಅದಕ್ಕೆ ವಿರುದ್ಧ ವಾದ ದಿಕ್ಕಿನಲ್ಲಿ ತ್ರಾಸವನ್ನು ಅದರ ಮೇಲೆ ಪೂರ್ವಭಾವಿಯಾಗಿ ಹೊರಿಸಿರು ತ್ತಾರೆ. ಭದ್ರಕಾಂಕ್ರೀಟಿನಲ್ಲಿ ಇಲ್ಲದೆ ಇರುವ ಕೆಲವು ಗುಣಗಳು ಇದರಲ್ಲಿವೆ. (1) ತೂಕ ಬಿದ್ದಾಗ ಕಾಂಕ್ರೀಟ್ ಬಿರುಕು ಬಿಡುವುದಿಲ್ಲ, (2) ತೊಲೆಗಳು ಮಧ್ಯದಲ್ಲಿ ಬಾಗುವುದು ಕಡಿಮೆಯಾಗುತ್ತದೆ, (3) ಅದೇ ಬಲವುಳ್ಳ ಉಕ್ಕಿನ ಕಟ್ಟಡಕ್ಕಿಂತ ಇದು ಹಗುರ ವಾಗಿದೆ, (4) ಉಪಯೋಗಿಸುವ ಉಕ್ಕಿನಲ್ಲಿ 80%ರ ವರೆಗೂ ಕಾಂಕ್ರೀಟಿನಲ್ಲಿ ಉಳಿತಾಯ ಸಾಧ್ಯ, (5) ಇದನ್ನು ಮುಂಚೆಯೇ ಪರೀಕ್ಷಿಸಿದ್ದಾಗಿರುತ್ತದೆ.

ಸ್ಪಂದಿಸಿದ ಕಾಂಕ್ರೀಟ್ (ವೈಬ್ರೇಟೆಡ್ ಕಾಂಕ್ರೀಟ್) ; ಇದು ಒಂದು ಯಾಂತ್ರಿಕ ಕ್ರಮ. ಮೂರು ವಿಧವಾದ ಸ್ಪಂದಕಗಳು ಅಥವಾ ಕಂಪನಕಾರಿಗಳು ರೂಢಿಯಲ್ಲಿವೆ– (1) ಪೆಟ್ರೋಲಿನ ಯಂತ್ರ, (2) ಕುಗ್ಗಿಸಿದ ಗಾಳಿಯ ಯಂತ್ರ, (3) ವಿದ್ಯುತ್ತಿನ ಯಂತ್ರ. ಸ್ಪಂದನವನ್ನು ಮೂರು ಬಗೆಗಳಲ್ಲಿ ಮಾಡಬಹುದು—(1) ಸ್ಪಂದಕವನ್ನು ಕಾಂಕ್ರೀಟಿನೊಳಗೇ ಇಡಬಹುದು, (2) ಕಾಂಕ್ರೀಟಿನ ರಸ್ತೆಯ ಮೇಲ್ಮೈಯ ಮೇಲೆ ಸ್ಪಂದಿಸುವ ಭಾಗಗಳನ್ನು ಇಡಬಹುದು, (3) ಸೆಂಟ್ರಿಂಗುಗಳನ್ನೇ ಸ್ಪಂದನ ಮಾಡಬಹುದು. (ನೋಡಿ—ಕಂಪಕಾರಿ).

ಗನ್ನೈಟ್ : ಎತ್ತರವಾದ ಕಲ್ಲುಗಾರೆಯ ಕಟ್ಟೆಗಳಲ್ಲಿ ಕಲ್ಲಿನ ತಳಪಾಯದಲ್ಲಿ ಬಿರುಕುಗಳಿದ್ದರೆ ತೆಳುವಾದ ಸಿಮೆಂಟಿನಿಂದ ತುಂಬುವುದು ಉಪಯೋಗವಾಗದೆ ಇದ್ದಾಗ ಸಿಮೆಂಟ್ ಮತ್ತು ಮರಳಿನ ಮಿಶ್ರಣವನ್ನು ಒತ್ತಡದಿಂದ ತುಂಬುವುದಕ್ಕೆ ಗನ್ನೈಟಿಂಗ್ ಎನ್ನುತ್ತಾರೆ. ನೀರನ್ನು ತುಂಬುವ ಕೊಳಗಳಲ್ಲಿ ಸೋರುವುದನ್ನು ತಪ್ಪಿಸುವುದಕ್ಕೂ ಇದನ್ನು ಉಪಯೋಗಿಸುತ್ತಾರೆ.

**ಕಬ್ಬಿಣ, ಉಕ್ಕು :** ಕಬ್ಬಿಣದ ಉಪಯೋಗ ಯಂತ್ರ ಶಿಲ್ಪದಲ್ಲಿ ಸಾರ್ವತ್ರಿಕ ವಾಗಿದೆ. ಎರಕದ ಕಬ್ಬಿಣವಲ್ಲದೆ (ಕ್ಯಾಸ್ಟ್ ಐರನ್) ಇದರಲ್ಲಿ ಮೆದು ಕಬ್ಬಿಣ (ರಾಟ್ ಐರನ್) ಮತ್ತು ಉಕ್ಕು ಎಂಬ ನಮೂನೆಗಳಿವೆ. ಮೆದು ಕಬ್ಬಿಣದಲ್ಲಿ 15% ಕ್ಕಿಂತ ಹೆಚ್ಚು ಇಂಗಾಲವಿರುವುದಿಲ್ಲ. ಇದು ಮೆದುವಾಗಿಯೂ ಜಿಗಟಾಗಿಯೂ ಇದೆ. ಇದನ್ನು 815° ಸೆಂ. ಉಷ್ಣತೆಯಲ್ಲಿ ಲೋಹಬೆಸುಗೆ (ವೆಲ್ಡ್) ಮಾಡ ಬಹುದು. ಮಾಡುಗಳು ಗರ್ಡರುಗಳು ಮತ್ತು ಕಂಬಗಳನ್ನು ಮಾಡಲು ಇದನ್ನು ಬಳಸುತ್ತಿದ್ದರು. ಈಗ ಈ ಉದ್ದೇಶಗಳಿಗೆ ಉಕ್ಕನ್ನು ಬಳಸುತ್ತಾರೆ.

ಉಕ್ಕು ಎಳೆದರೆ ಹಿಗ್ಗುತ್ತದೆ. ಇದರಿಂದ ತಗಡುಗಳನ್ನು ಬಡಿಯಬಹುದು, ತಂತಿಗಳನ್ನು ಎಳೆಯಬಹುದು, ಲೋಹಬೆಸುಗೆ ಮಾಡಬಹುದು, ಹದಮಾಡಿ ಎಷ್ಟು ಗಟ್ಟಿಯಾಗಿ ಬೇಕಾದರೂ ಮಾಡಬಹುದು. ಉಕ್ಕನ್ನು ತೊಲೆಗಳು, ಗರ್ಡರುಗಳು, ಗುಂಡು ಮತ್ತು ಚೌಕದ ಕಂಬಿಗಳು, ತಗಡುಗಳನ್ನು ಮಾಡಲು ಬಳಸುತ್ತಾರೆ. ಕತ್ತರಿಸುವ ಹತಾರಗಳನ್ನು ಮಾಡಲು ಗಟ್ಟಿಯಾದ ಎರಕದ ಉಕ್ಕನ್ನು ಉಪಯೋಗಿಸುತ್ತಾರೆ. ಎರಕದ ಕಬ್ಬಿಣದಲ್ಲಿ ಇಂಗಾಲ, ಗಂಧಕ ಮತ್ತು ರಂಜಕ—ಇವು ಬೆರೆತಿರುತ್ತವೆ. ಇದರಿಂದ 6″ ವ್ಯಾಸದಿಂದ ಹಿಡಿದು 42″ ವ್ಯಾಸದವರೆಗೂ ನೀರನ್ನು ಸಾಗಿಸುವ ಕೊಳಾಯಿಗಳನ್ನು ತಯಾರಿಸುತ್ತಾರೆ. ಇದರಿಂದ ಉಕ್ಕನ್ನು ತಯಾರಿಸಲು ಕಬ್ಬಿಣದ ಅದುರನ್ನು ಬೆರೆಸಿ ಇಂಗಾಲದ ಪ್ರಮಾಣವನ್ನು ತಗ್ಗಿಸುತ್ತಾರೆ. ಇನ್ನೊಂದು ಕ್ರಮದಲ್ಲಿ ಕರಗಿ ನೀರಾದ ಕಬ್ಬಿಣದ ಮೂಲಕ ಗಾಳಿಯನ್ನು ಒತ್ತಡದಲ್ಲಿ ಊದಿ ಇಂಗಾಲವನ್ನು ಕಡಿಮೆ ಮಾಡುತ್ತಾರೆ. (ನೋಡಿ—ಉಕ್ಕು)

ತಾಮ್ರ : ತಾಮ್ರವನ್ನು ಪ್ರಾಚೀನ ನಾಗರಿಕತೆಗಳ ಕಾಲದಿಂದಲೂ ಮಾನವ ಬಳಸುತ್ತಿದ್ದಾನೆ. ಇದು ಶ್ರೇಷ್ಠವಾದ ವಿದ್ಯುದ್ವಾಹಕ ವಸ್ತು. ಇದಕ್ಕೆ ತುಕ್ಕು ಹಿಡಿಯುವುದಿಲ್ಲ. ಕಾಂತಗುಣವಿಲ್ಲ. ಇದರಿಂದ ತಗಡುಗಳನ್ನು ಬಡಿಯ ಬಹುದು. ಕ್ಯಾಡ್ಮಿಯಂ ಕೊಂಚವೇ ಬೆರೆತಿರುವ ಮಿಶ್ರ ಲೋಹವನ್ನು ವಿದ್ಯುತ್ತನ್ನು ಸಾಗಿಸುವ ತಂತಿ ಸಾಲುಗಳಲ್ಲಿ ಉಪಯೋಗಿಸುತ್ತಾರೆ.

ಹಿತ್ತಾಳೆಯಲ್ಲಿ ಸತು ತಾಮ್ರದೊಂದಿಗೆ ಸೇರಿದೆ. ಸತು ಹೆಚ್ಚಾದ ಹಾಗೆ ಬಲ, ಗಡಸು ಹೆಚ್ಚಾಗುತ್ತವೆ. ಆದರೆ ವಿದ್ಯುದ್ವಾಹಕತ್ವ ಇಳಿಯುತ್ತದೆ. ಹಿತ್ತಾಳೆಗೆ ನಿಕ್ಕಲ್ಲನ್ನು ಸೇರಿಸಿದರೆ ಬೆಳ್ಳಿಯ ಬಣ್ಣದ ನಿಕ್ಕಲ್–ಸಿಲ್ವರ್ ಬರುತ್ತದೆ.

ಕಂಚು, ತಾಮ್ರ ಮತ್ತು ತವರದ ಮಿಶ್ರಲೋಹ—ಇದರ ಎಳೆತದ ಬಲ ಹೆಚ್ಚು. ಆದರೆ ವಿದ್ಯುತ್ ಮತ್ತು ಉಷ್ಣವಾಹಕ ಶಕ್ತಿ ಕಡಿಮೆ 7·5%ಯ ವರೆಗೆ ಅಲ್ಯೂ ಮಿನಿಯಮ್ ಇರುವ ಕಂಚಿನಿಂದ ತಂತಿಗಳನ್ನು ಎಳೆಯಬಹುದು. ತಾಮ್ರ ಮತ್ತು ನಿಕ್ಕಲ್ಲಿನ ಮಿಶ್ರಲೋಹಗಳನ್ನು ಕೈಗಾರಿಕೆಗಳಲ್ಲಿ ಬಳಸುತ್ತಾರೆ.

ಚಿನ್ನ, ಬೆಳ್ಳಿ, ಪ್ಲ್ಯಾಟಿನಮ್—ಇವನ್ನು ಘನಲೋಹಗಳೆನ್ನುತ್ತಾರೆ. ಸಂಶ್ಲೇಷಿತ ದಾರಗಳನ್ನು ತೆಗೆಯುವ ತಂತುಕಗಳನ್ನು (ಸ್ಪಿನ್ನರೆಟ್ಸ್) ಮಾಡುವುದಕ್ಕೆ ಈ ಗುಂಪಿನ ಮಿಶ್ರಲೋಹಗಳನ್ನು ಬಳಸುತ್ತಾರೆ.

ಈಗ ಎಲ್ಲೆಲ್ಲಿಯೂ ಬಳಕೆಯಲ್ಲಿರುವ ಅಲ್ಯೂಮಿನಿಯಮ್ಮನ್ನು 1825ರ ವರೆಗೆ ಯಾರೂ ಕಂಡಿರಲಿಲ್ಲ. ಇದಕ್ಕೆ ಸಣ್ಣ ಪ್ರಮಾಣಗಳಲ್ಲಿ ಕೆಲವು ಲೋಹಗಳನ್ನು ಬೆರೆಸಿ ಕಟ್ಟಡಗಳಲ್ಲಿ ಉಪಯೋಗಿಸುತ್ತಾರೆ. ಅಲ್ಯೂಮಿನಿಯಂ ಹಗುರವಾದ ಲೋಹ. ಆದರೆ ಡ್ಯುರಾಲ್ಯುಮಿನ್, ಹಿಡ್ಯಮಿನಿಯಂ ಮೊದಲಾದ ಇದರ ಮಿಶ್ರ ಲೋಹಗಳು ಉಕ್ಕಿನಷ್ಟು ಬಲಿಷ್ಠವಾಗಿವೆ.

ಗಾಜು : ಇದು ಬಹುವಿಧಗಳಲ್ಲಿ ಯಂತ್ರ ಶಿಲ್ಪದಲ್ಲಿ ಉಪಯೋಗಕ್ಕೆ ಬರುತ್ತದೆ. ರಸಾಯನಶಾಸ್ತ್ರದ ಪ್ರಯೋಗಶಾಲೆಯಲ್ಲಂತೂ ಇದನ್ನು ಬಿಟ್ಟು ಯಾವ ಕೆಲಸವೂ ನಡೆಯುವುದಿಲ್ಲ. ಹೆಚ್ಚಿನ ವಿದ್ಯುದ್ಬಲದಲ್ಲಿಯೂ ಇದು ಅವಾಹಕವಾಗಿ ಉಳಿದಿರು ತ್ತದೆ. ಇದು ಉಷ್ಣಕ್ಕೂ ಉಣ್ಣೆಯ ರೂಪದಲ್ಲಿ ಅವಾಹಕ. ದೃಗ್ವಿಜ್ಞಾನದ (ಆಪ್ಟಿಕಲ್) ವಿಶೇಷ ಗುಣಗಳಿಂದ ಇದನ್ನು ವಿಜ್ಞಾನದ ಸಮಸ್ತಭಾಗಗಳಲ್ಲಿಯೂ ಬಳಸುತ್ತಾರೆ. ಇಂದು ಗಾಜಿನ ಕಾರ್ಖಾನೆಯಲ್ಲಿ ಪವಾಡಗಳೇ ನಡೆಯುತ್ತಿವೆ. ನೀರಿನ ತೂಕದ ಆರರಲ್ಲಿ ಒಂದು ಪಾಲು ವಿಶಿಷ್ಟ ತೂಕವುಳ್ಳ ಗಾಜಿನ ನೊರೆಯನ್ನು ಗಾಳಿ ಊದಿ ಮಾಡುತ್ತಾರೆ. ಉಕ್ಕಿಗಿಂತ ಗಡುಸಾದ ಮಾಪಕಗಳನ್ನು ಮಾಡು ತ್ತಾರೆ. ರೇಷ್ಮೆಯಷ್ಟು ನುಣುಪಾದ ದಾರಗಳನ್ನು ಎಳೆಯುತ್ತಾರೆ. ಬೇರೆ ಬೇರೆ ಆಕ್ಸೈಡುಗಳನ್ನು ಬೇರೆ ಬೇರೆ ಪ್ರಮಾಣಗಳಲ್ಲಿ ಬೆರೆಸಿ ಕಾಯಿಸಿ ಗಾಜನ್ನು ಮಾಡುತ್ತಾರೆ. ಮರಳಿನಲ್ಲಿ ಕಬ್ಬಿಣದ ಆಕ್ಸೈಡಿದ್ದರೆ ಹಸಿರು ಬಣ್ಣವೂ, ತಾಮ್ರದ ಆಕ್ಸೈಡಿದ್ದರೆ ಹಸಿರುನೀಲಿ ಮಿಶ್ರಬಣ್ಣವೂ, ಕೊಂಚವೇ ಕೋಬಾಲ್ಟ್ ಇದ್ದರೆ ಪರ್ಪ್ಲ್ ಬಣ್ಣವೂ ಕ್ರೋಮಿಯಮ್ ಇದ್ದರೆ ಹಸಿರಿನಿಂದ ಹಿಡಿದು ಕಿತ್ತಲೆ ಹಣ್ಣಿನ ಬಣ್ಣವೂ ನಿಕ್ಕಲಿನಿಂದ ಕೆಂಪು ಮಿಶ್ರವಾದ ನೇರಳೆ ಬಣ್ಣವೂ ಬರುತ್ತವೆ. ಉತ್ಕೃಷ್ಟವಾದ ಗಾಜನ್ನು ಮಾಡಲು ಉಪಯೋಗಿಸುವ ಮರಳಿನಲ್ಲಿ ಹತ್ತು ಸಾವಿರದಲ್ಲಿ ಒಂದು ಪಾಲಿನಷ್ಟೂ ಕಬ್ಬಿಣದ ಆಕ್ಸೈಡ್ ಇರಬಾರದು. ಶುದ್ಧವಾದ ಗಾಜನ್ನು ಈಜಿಪ್ಟಿನಲ್ಲಿ ಕ್ರಿ.ಪೂ. 5000ರಲ್ಲಿ ತಯಾರು ಮಾಡಿದ್ದರಂತೆ ! ಎರಡು ಗಾಜಿನ ಪದರಗಳ ಮಧ್ಯೆ ಸಂಶ್ಲೇಷಿತ ರಾಳವಿದ್ದರೆ ಒಡೆದಾಗ ಗಾಜು ಚೂರು ಚೂರಾಗುವುದಿಲ್ಲ. ಕೈಗಾರಿಕಾ ಕೇಂದ್ರಗಳಲ್ಲಿ ಯಂತ್ರಾಗಾರಗಳ ಕೆಳಗಿನ ಅಂತಸ್ತುಗಳಿಗೆ ಬೆಳಕು ಬರುವ ಹಾಗೆ ಮುಪ್ಪಟ್ಟೆಯ ಗಾಜುಗಳನ್ನು (ಪ್ರಿಸ್ಮ್) ಬಳಸುತ್ತಾರೆ. ಗಾಜಿನ ದಾರದಿಂದ ಹೆಣೆದ ನೇಯ್ಗೆಯನ್ನು ಹಾಳೆ ಹಾಳೆಯಾದ ಫಲಕ ಗಾಜುಗಳಲ್ಲಿ ವಿಮಾನಗಳ ಕೈಗಾರಿಕೆಗಳಲ್ಲಿಯೂ ಮೋಟಾರಿನ ಮೇಲು ಭಾಗದಲ್ಲಿಯೂ ಉಪಯೋಗಿಸುತ್ತಾರೆ.

ಮಣ್ಣು : ಕುಂಬಾರನ ಕಲೆ ನಾಗರಿಕತೆಯ ಮುಂಜಾವದಷ್ಟು ಪುರಾತನ ವಾದುದು. ಮಣ್ಣಿನ ಮಡಕೆಗಳೂ ಕುಡಿಕೆಗಳೂ ಈಗಲೂ ಬಳಕೆಯಲ್ಲಿವೆ. ಆದರೆ ಈಗಿನ ಯಂತ್ರಯುಗದಲ್ಲಿ ಹಳೆಯ ಸಾಮಗ್ರಿಗಳಿಗೆ ಹೊಸ ಉಪಯೋಗ ಬಂದಿದೆ. ಮಾಡನ್ನು ಮುಚ್ಚಲು ಸುಟ್ಟು ಮಣ್ಣಿನ ಹಂಚುಗಳನ್ನು ಮೊದಲೂ ಮಾಡುತ್ತಿದ್ದರು. ಈಗ ಮಂಗಳೂರು ಹಂಚುಗಳನ್ನು ಪ್ರತ್ಯೇಕವಾದ ಒಲೆಗಳಲ್ಲಿ ಸುಟ್ಟು ಮಾಡಿಗೆ ಹೊದೆಸುವುದಕ್ಕೂ ನೆಲಕ್ಕೆ ಹಾಸುವುದಕ್ಕೂ ಬಳಸುತ್ತಾರೆ.

ಯಂತ್ರಶಿಲ್ಪದಲ್ಲಿ ಬಳಸುವ ಮಣ್ಣುಗಳಲ್ಲಿ ಅನೇಕ ವಿಧಗಳಿವೆ : (1) ಮುದ್ದೆಯಾದ ಜೇಡಿಮಣ್ಣು, (2) ಕೆಂಪುಮಣ್ಣು, (3) ಚೀನಮಣ್ಣು ಅಥವಾ ಸುದ್ದೆಮಣ್ಣು (ಕೆಯೊಲಿನ್), (4) ಬೆಂಕಿಗೆ ಜಗ್ಗದ ಮಣ್ಣು. ಇವಕ್ಕೆ ಚಕಮುಕಿ ಕಲ್ಲು, ಎಲುಬು ಮೊದಲಾದ ಕಚ್ಚಾಮಾಲುಗಳನ್ನು ಬೆರೆಸುತ್ತಾರೆ.

ತಯಾರಾಗುತ್ತಿರುವ ಸಾಮಾನುಗಳಲ್ಲಿಯೂ ವೈವಿಧ್ಯ ಹೆಚ್ಚಾಗುತ್ತಿದೆ. ಮೊದಲು ಜೇಡಿಮಣ್ಣಿನ ಪಾತ್ರೆಗಳು, ಬಗೆಬಗೆಯ ಹಂಚುಗಳು, ಗ್ರಾಮಸಾರವನ್ನು ಸಾಗಿಸುವ ಕೊಳಗಳು, ಇಟ್ಟಿಗೆ, ಕಾವಿಟ್ಟಿಗೆ, ಟೆರಕಾಟ, ಬೆಂಕಿಯ ಶಾಖವನ್ನು ತಡೆಯುವ ಕುಲುಮೆಯ ಭಾಗಗಳು, ಪಿಂಗಾಣಿಯ ಬಟ್ಟಲು, ತಟ್ಟೆ–ಇವನ್ನು ಮಾಡುತ್ತಿದ್ದರು. ಅರವತ್ತು ವರ್ಷಗಳಿಂದ ಈಚೆಗೆ ವಿದ್ಯುತ್ತಿನ ಕೈಗಾರಿಕೆಯಲ್ಲಿ ವಿದ್ಯುದ್ರೋಧಿಗಳ (ಇನ್ಸುಲೇಟರ್ಸ್) ತಯಾರಿಯಲ್ಲಿ ಪಿಂಗಾಣಿಯ ಉಪಯೋಗ ವಿಶೇಷವಾಗಿದೆ. ಪಿಂಗಾಣಿಯನ್ನು ಸುಡುವುದಕ್ಕೆ ಸುದ್ದೆಮಣ್ಣು, ಬೆಣಚುಕಲ್ಲು, ಫೆಲ್ಡ್‌ಸ್ಪಾರ್, ಜಿಪ್ಸಂ, ಬಳಪದ ಕಲ್ಲು, ಬೆರಿಲ್, ಸಿರ್ಕನ್, ಅಲ್ಯೂಮಿನಿಯಮ್ ಮತ್ತು ಸಿಲಿ ಕನ್ನಿನ ಆಕ್ಸೈಡುಗಳನ್ನು ಉಪಯೋಗಿಸುತ್ತಾರೆ. ಅಚ್ಚ ಬಿಳುಪಾದ ಪಿಂಗಾಣಿಯ ಉಪಯೋಗ ಕಾಫಿಯ ಲೋಟದಿಂದ ಹಿಡಿದು ಸರಂಧ್ರವಾದ ವಿದ್ಯುತ್ತಿನ ಸ್ವಿಚ್ಚಿನ ವರೆಗೆ ಹರಡಿದೆ. ಇದರ ವಿಶಿಷ್ಟ ತೂಕ 2.4. ಇದು ನೀರನ್ನು ಹೀರುವುದಿಲ್ಲ.

ಬಿಳೀಪಿಂಗಾಣಿಯನ್ನು ಪ್ಲಾಸ್ಟರ್ ಆಫ್ ಪ್ಯಾರಿಸ್ಸಿನ ಅಚ್ಚುಗಳಲ್ಲಿ ಸಂಸ್ಕಾರಮಾಡಿದ ಮಣ್ಣನ್ನು ಎರಕ ಹೊಯ್ದು ಒಣಗಿಸಿ / 1200° ಸೆಂ. ಉಷ್ಣತೆಯ ಒಲೆಗಳಲ್ಲಿ ಸುಡುತ್ತಾರೆ.

ಭಾರತದ ಪಂಚವಾರ್ಷಿಕ ಯೋಜನೆಗಳಲ್ಲಿ ಜಲವಿದ್ಯುತ್ತನ್ನು ಉತ್ಪಾದನೆ ಮಾಡುವ ಯೋಜನೆಗಳಿಗೆ ಪ್ರಾಮುಖ್ಯ ಕೊಡಲಾಗಿದೆ. ವಿದ್ಯುಜ್ಜನಕಗಳಿಂದ ವಿದ್ಯುತ್ ಬಳಕೆಯಾಗುವ ಕ್ಷೇತ್ರಗಳಿಗೆ ಹೆಚ್ಚಿನ ವಿದ್ಯುದ್ಬಲದಲ್ಲಿ ನೂರಾರು ಮೈಲಿಗಳ ವರೆಗೆ ಸಾಗಿಸಬೇಕಾಗುತ್ತದೆ. ಆದಕ್ಕಾಗಿ 110 ವೋಲ್ಟಿನ ತಂತಿಸಾಲಿನಿಂದ ಹಿಡಿದು ಉಕ್ಕಿನ ಗೋಪುರಗಳ ಮೇಲಿನ ವೋಲ್ಟಿನ ತಂತಿಸಾಲಿನ ವರೆಗೂ ವಿದ್ಯುದ್ರೋಧಗಳಿಗಾಗಿ ಪಿಂಗಾಣಿಯನ್ನು ಉಪಯೋಗಿಸುತ್ತಾರೆ. ಹೀಗಾಗಿ ಪಿಂಗಾಣಿ ತಯಾರಿಕೆಗೆ ಹೆಚ್ಚಿನ ಪ್ರಾಶಸ್ತ್ಯ ಬರುತ್ತಿದೆ.

ಹೆಚ್ಚಿನ ಆವರ್ತಸಂಖ್ಯೆಯ (ಹೈ ಫ್ರೀಕ್ವೆನ್ಸಿ) ವಿದ್ಯುತ್ಪ್ರವಾಹಗಳನ್ನು ತಡೆಯಬಲ್ಲ ವಿಶಿಷ್ಟವಾದ ಪಿಂಗಾಣಿ ತಯಾರಾದ ಮೇಲೆ ಪುಟ್ಟ (ಮಿಡ್ಜೆಟ್) ರೇಡಿಯೊ ಸೆಟ್ಟುಗಳನ್ನು ಮಾಡುವುದು ಸಾಧ್ಯವಾಯಿತು. ಮೋಟಾರ್ ಕಾರುಗಳಲ್ಲಿ ಸ್ಪಾರ್ಕಿಂಗ್ ಪ್ಲಗ್ ಮುಂತಾದ ಸಲಕರಣೆಗಳನ್ನು ಪಿಂಗಾಣಿಯಿಂದ ಮಾಡುತ್ತಾರೆ.

ಹೆಚ್ಚಿನ ಕಾವನ್ನು ತಡೆಯುವ ಕಾವಿಟ್ಟಿಗೆಗಳನ್ನು (ಫೈರ್ ಬ್ರಿಕ್ಸ್) (1) ಆಮ್ಲ, (2) ಕ್ಷಾರ, (3) ಎರಡೂ ಅಲ್ಲದ್ದು —ಎಂದು ವಿಭಾಗಿಸಬಹುದು. ಆಮ್ಲದ ಉಕ್ಕಿನ ಕುಲುಮೆಗಳಿಗೆ ಅಂಚುಕಟ್ಟಾಗಿ ಉಪಯೋಗಿಸುವ ಮಣ್ಣಿಗೆ ಮರಳು ಮತ್ತು ಸುಣ್ಣವನ್ನು ಬೆರೆಸಿ ಹೆಚ್ಚಿನ ಉಷ್ಣತೆಯಲ್ಲಿ ಸುಡುತ್ತಾರೆ. ಆದರೆ ಕ್ಷಾರದ ಕುಲುಮೆಗಳಲ್ಲಿ ಬಳಸುವ ಮಣ್ಣಿಗೆ ಮ್ಯಾಗ್ನೀಸಿಯಂ ಇಲ್ಲವೆ ಅಲ್ಯೂಮಿನಿಯಂ ಆಕ್ಸೈಡನ್ನು ಬೆರೆಸಿ ಹೆಚ್ಚಿನ ಉಷ್ಣತೆಯಲ್ಲಿ ಸುಡುತ್ತಾರೆ. ಗಟ್ಟಿಯಾದ ಟೆರಕಾಟವನ್ನು ಬಹಳ ಹೆಚ್ಚಿನ ಉಷ್ಣತೆಯಲ್ಲಿ ಮಣ್ಣನ್ನು ಸುಟ್ಟು ತಯಾರಿಸುತ್ತಾರೆ.

ಭದ್ರಪಡಿಸಿದ ಇಟ್ಟಿಗೆಗಾರೆ (ರೀಇನ್‌ಫೋರ್ಸ್ಡ್ ಬ್ರಿಕ್‌ವರ್ಕ್) : ಈ ಸಾಮಗ್ರಿಯನ್ನು ಇಂಗ್ಲೆಂಡಿನ ವಿಖ್ಯಾತ ಶಿಲ್ಪಿ ಬ್ರುನೆಲ್ 1825ರಲ್ಲಿ ಥೇಮ್ಸ್ ನದಿಯ ಕೆಳಗೆ ಸುರಂಗವನ್ನು ತೋಡುವಾಗ ಮೊದಲು ಉಪಯೋಗಿಸಿದ. ಇಲ್ಲಿ ಬಳಸುವ ಇಟ್ಟಿಗೆಗಳ ಅದುಮುವ ಶಕ್ತಿ ಹೆಚ್ಚಾಗಿರಬೇಕು. ಅವು ಹೆಚ್ಚಾಗಿ ನೀರನ್ನು ಹೀರಬಾರದು. ಇಟ್ಟಿಗೆಗಳನ್ನು ನೀರಿನಲ್ಲಿ ಅದ್ದಿ ಉಪಯೋಗಿಸಬೇಕು. ಇಟ್ಟಿಗೆ ಗಾರೆಯ ಸಂದುಗಳಲ್ಲಿ ಒಂದೇ ದಿಕ್ಕಿನಲ್ಲಿ ಕಬ್ಬಿಣದ ಕಂಬಿಗಳನ್ನು ಸಿಮೆಂಟ್ ಗಾರೆಯಲ್ಲಿ ಕೂರಿಸುತ್ತಾರೆ. ಇದರ ಸಂವಿಧಾನವನ್ನು ಭದ್ರಕಾಂಕ್ರೀಟಿನ ಹಾಗೆಯೇ ಮಾಡಬಹುದು. ಉದ್ದವಾಗಿ ಹೋಗುವ ಕಂಬಿಗಳಲ್ಲಿಯೂ ಚಪ್ಪಟೆಯಾದ ಭಾಗದ (ವೆಬ್) ಕಂಬಿಗಳಲ್ಲಿಯೂ ಎಳೆತದ ತ್ರಾಸ ಚದರ ಅಂಗುಲಕ್ಕೆ 18,000 ಪೌಂಡುಗಳನ್ನು ಮೀರಬಾರದು. ಕಂಬಿಗಳಲ್ಲಿ ಒತ್ತಡದ ತ್ರಾಸ 16,000 ಪೌಂಡುಗಳಿರಬಹುದು.

ಬಣ್ಣಗಳು, ಮೆರುಗೆಣ್ಣೆಗಳು (ಪೇಂಟ್ಸ್ ಅಂಡ್ ವಾರ್ನಿಷಸ್) : ಕಟ್ಟಡದ ಸಾಮಗ್ರಿಗಳನ್ನು ಗಾಳಿ, ಬಿಸಿಲು ಮತ್ತು ಮಳೆಗಳಿಂದ ಕಾಪಾಡಲೂ ಅಲಂಕಾರಕ್ಕಾಗಿಯೂ ಅವಕ್ಕೆ ಬಣ್ಣಗಳನ್ನೂ ಮೆರುಗೆಣ್ಣೆಯನ್ನೂ ಬಳಿಯುತ್ತಾರೆ.

ತೈಲವರ್ಣಗಳಲ್ಲಿ ಈ ಭಾಗಗಳಿವೆ—(1) ವರ್ಣದ್ರವ್ಯ: ಬಿಳಿ ಸೀಸ, ಕೆಂಪು ಸೀಸ, ಬಿಳಿ ಸತು, ಲೋಹಗಳ ಆಕ್ಸೈಡುಗಳು. (2) ವರ್ಣದ್ರವ್ಯಗಳೊಂದಿಗೆ ಕೆಲವು ಜಡ ಪದಾರ್ಥಗಳನ್ನು ಬೆರೆಸಿ ಗಾತ್ರವನ್ನು ಹೆಚ್ಚಿಸುತ್ತಾರೆ. (3) ಬಣ್ಣದ ವಾಹಕ (ಕ್ಯಾರಿಯರ್) ವರ್ಣದ್ರವ್ಯಗಳನ್ನು ಕರಗಿಸುತ್ತದೆ. ಉದಾಹರಣೆಗೆ ಅಗಸೆ ಎಣ್ಣೆ. (4) ಟರ್ಪೆಂಟೈನ್ ಮುಖ್ಯವಾದ ದ್ರಾವಕ (ಸಾಲ್ವೆಂಟ್). (5) ತೇವವನ್ನು ಆರಿಸುವ ವಸ್ತುಗಳಲ್ಲಿ ಮುಖ್ಯವಾದದ್ದು ಅಗಸೆ ಎಣ್ಣೆ.

ರಾಳವನ್ನು ಅಗಸೆ ಎಣ್ಣೆಯಲ್ಲಿಯೋ ಸ್ಪಿರಿಟ್ಟಿನಲ್ಲಿಯೋ ದ್ರಾವಣಮಾಡಿ ಮೆರುಗೆಣ್ಣೆಯನ್ನು ತಯಾರಿಸುತ್ತಾರೆ. ಇದು ಪಾರದರ್ಶಕವಾಗಿದೆ. ತೇಗದ ಮರದ

A ನಾರಿನ ಕಟ್ಟಡದ ಹಲಗೆಗಳು




B ಇತರ ಕಟ್ಟಡದ ಹಲಗೆಗಳು



| ಕ್ರಮ ಸಂಖ್ಯೆ | ಕಟ್ಟಡದ ಭಾಗಗಳು | ಸಂಪ್ರದಾಯದ ಸಾಮಗ್ರಿಗಳು | ಪರ್ಯಾಯ ಆಧುನಿಕ ಸಾಮಗ್ರಿಗಳು |
|---|---|---|---|
| 1 | ತೂಕವನ್ನು ಹೊರುವ ಗೋಡೆ | ಇಟ್ಟಿಗೆ ಇಲ್ಲವೆ ಕಲ್ಲು | ಉಕ್ಕು, ಭದ್ರಕಾಂಕ್ರೀಟಿನ ಚೌಕಟ್ಟಿನ ಗೋಡೆಗಳು. ಎರಕಹೊಯ್ದ ಕಾಂಕ್ರೀಟಿನ ಅಂಕಣಗಳು, ಉಕ್ಕು ಸಿಮೆಂಟ್-ಕಲ್ನಾರು. ಅಲ್ಯೂಮಿನಿಯಂ ಮಿಶ್ರಲೋಹದ ತಗಡು. |
| 2 | ತೆಳುಗೋಡೆಗಳು | ಮರ, ನಯಗಾರೆ | ಟೊಳ್ಳಾದ ಸುದ್ದೆಮಣ್ಣಿನ ದಿಮ್ಮಿಗಳು, ಹಗುರವಾದ ಕಾಂಕ್ರೀಟ್, ನಾರಿನ ಹಲಗೆ, ಲೋಹದ ತೆಳುವಾದ ತಗಡು, ಕಲ್ನಾರು—ಸಿಮೆಂಟಿನ ತಗಡುಗಳನ್ನು ಲೋಹದ ಚೌಕಟ್ಟಿನಲ್ಲಿ ಇರಿಸಿರುತ್ತಾರೆ. |
| 3 | ಇಳಿಜಾರಾದ ಮಾಡು | ಸುಟ್ಟಮಣ್ಣಿನ ಹಂಚು, ಸ್ಲೇಟು, ಸತು, ಸೀಸ, ತಾಮ್ರ | ತೊಡರಿಕೊಳ್ಳುವ ಮಣ್ಣಿನ ಹಂಚು, ಗಾಜಿನ ಹಂಚು, ಸಿಮೆಂಟ್-ಕಲ್ನಾರಿನ ಹಂಚು, ಸ್ಲೇಟ್. ಹಲಗೆ, ಮೊದಲೇ ಎರಕಹೊಯ್ದ ಕಾಂಕ್ರೀಟ್, ಅಲ್ಯೂಮಿನಿಯಂ ಮಿಶ್ರಲೋಹ. |
| 4 | ಚಪ್ಪಟೆಯಾದ ಮಾಡು | ಮರದ ಚೌಕಟ್ಟು | ಉಕ್ಕಿನ ಗರ್ಡರಿನ ಮೇಲೆ ಭದ್ರಕಾಂಕ್ರೀಟಿನ ಚಪ್ಪಡಿ. ಎರಕಹೊಯ್ದ ಭದ್ರಕಾಂಕ್ರೀಟಿನ ಜಂತೆ, ಚಪ್ಪಡಿ. ಎರಕಹೊಯ್ದ ತೊಲೆ, ಸಿಮೆಂಟ್.-ಕಲ್ನಾರಿನ ಅಟ್ಟ. ಒತ್ತಿದ ಉಕ್ಕು ಮತ್ತು ಅಲ್ಯೂಮಿನಿಯಂ ಮಿಶ್ರಲೋಹದ ಅಡ್ಡ. |
| 5 | ಒಳಗಡೆ ಪೀಠ, ಸಲಕರಣೆಗಳು | ಮರ, ಅಮೃತಶಿಲೆ ನಯಮಾಡಿದ ಕಲ್ಲು | ಪ್ಲಾಸ್ಟಿಕ್ ಹಲಗೆಗಳು, ಹಾರ್ಡ್‌ಬೋರ್ಡ್, ಚಿಪ್‌ಬೋರ್ಡ್ ಪ್ಲೈವುಡ್, ಅಲ್ಯೂಮಿನಿಯಂ ಮಿಶ್ರಲೋಹ, ಉಕ್ಕು. |
| 6 | ಗೋಡೆ, ಒಳಮಾಳಿಗೆಯ ಅಂಚು | ನಯಗಾರೆ ಗಾಜಿನ ಹಂಚು, ಮರದ ಹಲಗೆ | ನಾರಿನ ಹಲಗೆ, ಹಾರ್ಡ್‌ಬೋರ್ಡ್, ಸಿಮೆಂಟ್-ಕಲ್ನಾರಿನ ಪ್ಲಾಸ್ಟಿಕ್ಕಿನ ಹಲಗೆ, ಚಿಪ್‌ಬೋರ್ಡ್. |
| 7 | ಜಂತೆಗಳ ಮೇಲಿನ ನೆಲ | ಮರದ ಹಲಗೆ | ಪ್ಲೈಮರ, ಪ್ಲಾಸ್ಟಿಕ್ಕಿನ ಹಲಗೆ, ಚಿಪ್‌ಬೋರ್ಡ್, ಆಸ್ಫಾಲ್ಟ್. |
| 8 | ಮನೆಯ ನೆಲ | ಕಲ್ಲಿನ ಚಪ್ಪಡಿ, ಸುಟ್ಟಮಣ್ಣಿನ ಹಂಚು | ಗ್ರ್ಯಾನೋಲಿಥಿಕ್ ಕಾಂಕ್ರೀಟ್, ಹಂಚು, ಆಸ್ಫಾಲ್ಟ್, ಸಿಮೆಂಟ್-ಬಿಟ್ಯುಮೆನ್. |
| 9 | ಬಾಗಿಲು, ಕಿಟಕಿ | ಮರದ ಚೌಕಟ್ಟು ಪುಟೀಪು | ಚಿಪ್‌ಬೋರ್ಡ್, ಹಾರ್ಡ್‌ಬೋರ್ಡ್, ಪ್ಲೈವುಡ್, ಟೊಳ್ಳಾದ ಪ್ಲಾಸ್ಟಿಕ್ ಪುಟೀಪು, ಲೋಹಮುಖದ ಪ್ಲೈವುಡ್ಡಿನ ಪುಟೀಪು. |
| 10 | ಬಾಗಿಲಿನ ಹಿಡಿ | ಕಬ್ಬಿಣ, ಹಿತ್ತಾಳೆ, ಕಂಚು | ಪ್ಲಾಸ್ಟಿಕ್ಕುಗಳು, ಅಲ್ಯೂಮಿನಿಯಂ ಮಿಶ್ರಲೋಹ. |
| 11 | ಅಂಚುಕಟ್ಟು | ಮರ | ಲೋಹ, ಉಕ್ಕು ಮತ್ತು ಅಲ್ಯೂಮಿನಿಯಂ ಮಿಶ್ರಲೋಹ. |
| 12 | ವಾಷ್‌ಬೇಸಿನ್ | ಪೋರ್ಸ್‌ಲೆನ್ | ಎನಾಮಲ್ ಮಾಡಿದ ಉಕ್ಕು, ತುಕ್ಕುಹಿಡಿಯದ ಉಕ್ಕು, ಪ್ಲಾಸ್ಟಿಕ್. |
| 13 | ಬೆಳಕಿಗಾಗಿ ಕಿಟಕಿ | ಗಾಜಿನ ತಗಡು | ಅಲ್ಯೂಮಿನಿಯಮ್ಮಿನ ಮಿಶ್ರಲೋಹ. ಚಪ್ಪಟೆ ಮತ್ತು ಉಬ್ಬುತಗ್ಗುಳ್ಳ ಪ್ಲಾಸ್ಟಿಕ್ ಹಲಗೆ. |
| 14 | ಬಣ್ಣ ಅಲಂಕಾರ | ಸುಣ್ಣ, ಎಣ್ಣೆಯ ಬಣ್ಣಗಳು | ಬಣ್ಣದ ಸಿಮೆಂಟ್, ಬಿಟ್ಯುಮೆನ್, ಎಣ್ಣೆಯಲ್ಲಿ ಹಿಡಿದ ಡಿಸ್‌ಟೆಂಪರ್, ಸೆಲ್ಯುಲೋಸ್ ಬಣ್ಣ, ಉಕ್ಕಿಗೆ ತುಕ್ಕುಹಿಡಿಯದ ಹಾಗೆ ಮಾಡುವ ಕ್ರಮಗಳು. |
| 15 | ಮಳೆ ನೀರಿನ ದೋಣಿ, ಸ್ಯಾನಿಟರಿ ಕೊಳವಿಗಳು | ಎರಕದ ಕಬ್ಬಿಣ, ಸತು, ಸೀಸ | ಸಿಮೆಂಟ್ ಕಲ್ನಾರಿನ ಕೊಳವಿಗಳು, ಚರಂಡಿಗಳು ಅಲ್ಯೂಮಿನಿಯಂ ಮಿಶ್ರಲೋಹದ ಚರಂಡಿಗಳು. |
| 16 | ವಿದ್ಯುತ್ತಿನ ಅವಾಹಕಗಳು | ಮರದ ಹಲಗೆಗಳು, ಸುಣ್ಣದ ನಯಗಾರೆ | ನಾರಿನ ಅವಾಹಕ ಹಲಗೆ, ಬೆಂಡಿನ ಹಲಗೆ, ಗೂಡುಗೂಡಾದ ಕಿಟ್ಟ, ಪ್ಯೂಮಿಸ್ ಕಾಂಕ್ರೀಟ್, ಹಗುರವಾದ ಕಾಂಕ್ರೀಟಿನ ಚಪ್ಪಡಿಗಳು. ದಿಮ್ಮಿಗಳು. ಗಾಜಿನ ರೇಷ್ಮೆ, ಚಿಪ್‌ಬೋರ್ಡ್. |

ಮೇಲೆ ಬಳಿದರೆ ಎಳೆಗಳ ರಚನೆ ಲಕ್ಷಣವಾಗಿ ಎದ್ದು ಕಾಣುತ್ತದೆ. ಜೇನುಮೇಣ ವನ್ನು ಮರದ ರಂಧ್ರಗಳಿಗೆ ತೂರಿ ಉಜ್ಜಿದರೆ ಹೆಚ್ಚು ಕಾಲ ಉಳಿಯುವ ಮೆರುಗು ಬರುತ್ತದೆ.

ಪದರದ ಹಲಗೆ (ಪ್ಲೈವುಡ್): ಈಚೆಗೆ ನೇರ ಮರದ ಉಪಯೋಗ ಮುಂದು ವರಿದ ದೇಶಗಳಲ್ಲಿ ಕಡಿಮೆಯಾಗುತ್ತಿದೆ. ಇದಕ್ಕೆ ಮರದ ಅಭಾವವೂ ಮುಖ್ಯವಾದ ಒಂದು ಕಾರಣ. ಮರದ ಬದಲು ಈಗ ಸಂಶ್ಲೇಷಣದ ಅಂಟುಗಳಿಂದ ಜೋಡಿಸಿದ ಪದರದ ಹಲಗೆಯ ಉಪಯೋಗ ಹೆಚ್ಚುತ್ತಿದೆ. ಈ ಹಲಗೆಯಲ್ಲಿ ಒಂದು ಪದರ ವನ್ನು ಎಳೆಗಳ (ಗ್ರೇನ್ಸ್) ದಿಕ್ಕಿನಲ್ಲಿಯೂ ಇನ್ನೊಂದನ್ನು ಅದಕ್ಕೆ ಸಮಕೋನ ವಾಗಿಯೂ ಇಟ್ಟು ಒಂದು ಹಲಗೆಯಲ್ಲಿ ಇಂಥ ಮೂರೋ ಐದೋ ಜೊತೆಗಳನ್ನು ಗೋಂದಿನಿಂದ ಅಂಟಿಸುತ್ತಾರೆ. ಇದರಿಂದ ಮರದ ಒಂದು ದಿಕ್ಕಿನ ಗುಣಗಳು ಸಮಕೋನವಾದ ದಿಕ್ಕಿನ ಗುಣಗಳೊಂದಿಗೆ ಬೆರೆತುಹೋಗುತ್ತವೆ. ನೀರನ್ನು ತಡೆಯು ತಕ್ಕ ಗೋಂದುಗಳು ಬರುವ ವರೆಗೂ ಮನೆಯ ಒಳಗೇ ಇವನ್ನು ಉಪಯೋಗಿಸ ಬೇಕಾಗಿತ್ತು. ಇಂದಿನ ಪದರದ ಹಲಗೆಗಳನ್ನು ಮರಕ್ಕೆ ಬದಲಾಗಿ ಒಳಗೂ ಹೊರಗೂ ಬಳಸಬಹುದು. ರಚನಾವೈಶಿಷ್ಟ್ಯದಿಂದ ಅಗಲದಲ್ಲಿ ಇದು ಕುಗ್ಗುವುದು ಬಹು ಕಡಿಮೆ. ಮರವಾದರೆ ಇದರ ಹತ್ತು ಪಟ್ಟು ಕುಗ್ಗುತ್ತದೆ. ಆದರೆ ಉದ್ದದಲ್ಲಿ ಮಾತ್ರ ಇದು ಮರಕ್ಕಿಂತ ಮೂರು ಪಟ್ಟು ಹಿಗ್ಗುತ್ತದೆ.

ಪದರದ ಹಲಗೆ ಈಜಿಪ್ಟಿನವರಿಗೆ 3,500 ವರ್ಷಗಳ ಹಿಂದೆಯೇ ತಿಳಿದಿತ್ತು. ಅದರ ಆವಶ್ಯಕತೆ ಅಂದು ಇಲ್ಲದಿದ್ದುದರಿಂದ ಬಳಕೆಗೆ ಬರಲಿಲ್ಲ. ಮೊದಲನೆಯ ಮಹಾ ಯುದ್ಧದ ಕಾಲದಲ್ಲಿ ಮರದ ಕೊರತೆಯ ಸಲುವಾಗಿ ಹಲಗೆಯ ಉಪಯೋಗ ಹೆಚ್ಚಿತು. ಸಂಶ್ಲೇಷಣದ ಅಂಟುಗಳು ತಯಾರಾದದ್ದು 1930ರಲ್ಲಿ. ಮರದ ತೆಳುವಾದ ಪದರಗಳ ಬಲವನ್ನು ಈ ಅಂಟು ಹೆಚ್ಚಿಸುತ್ತದೆ. ಪದರಗಳನ್ನು (ವಿನಿ ಯರ್ಸ್) ಗರಗಸದಿಂದ ಮರವನ್ನು ಕೊಯ್ದು ಮಾಡುತ್ತಾರೆ. ಅಂಟಿನಿಂದ ಮರದ ಗಡಸು (ಸ್ಟಿಫ್‌ನೆಸ್) ಹೆಚ್ಚಾಗುತ್ತದೆ. ಮರವನ್ನು ದುರ್ಬಲಗೊಳಿಸುವ ತೇವ, ಬೂಷ್ಟು, ಕ್ರಿಮಿಗಳು, ಬ್ಯಾಕ್ಟೀರಿಯ—ಇವುಗಳಿಂದ ಆಗುವ ತೊಂದರೆ ತಪ್ಪುತ್ತದೆ.

ಅಂಟುಗಳಲ್ಲಿ ಉಷ್ಣದಿಂದ ಗಟ್ಟಿಯಾಗತಕ್ಕವು (ಥರ್ಮೋಸೆಟ್ಟಿಂಗ್) ಮತ್ತು ಉಷ್ಣದಿಂದ ಜಿಗಟಾಗತಕ್ಕವು (ಥರ್ಮೋಪ್ಲಾಸ್ಟಿಕ್) ಎಂಬ ಎರಡು ಬಗೆಗಳಿವೆ. ಮೊದಲನೆಯ ನಮೂನೆಯ ಫಿನಾಲಿನ ರಾಳದಿಂದ ಮಾಡುವ ಅಂಟನ್ನು ತೆಳುವಾದ ಬಲಿಷ್ಠವಾದ ಪದರಗಳನ್ನು ಮಾಡಲು ಬಳಸುತ್ತಾರೆ. ಇದರ ಬೆಲೆ ಕಡಿಮೆ. ಎರಡನೆಯ ನಮೂನೆಯಲ್ಲಿ ಹೆಚ್ಚಿನ ಸ್ಥಿತಿಸ್ಥಾಪಕತ್ವವುಳ್ಳ ಬಂಧನ (ಬಾಂಡ್) ದೊರೆಯುತ್ತದೆ.

ವಿಮಾನಗಳಲ್ಲಿ ಬಳಸುವ ಮೂರು ಪದರದ ಹಲಗೆಗೆ ನೇರವಾಗಿ ಚದರ ಅಂಗು ಲಕ್ಕೆ 18,700 ಪೌಂಡುಗಳಷ್ಟೂ ಅಡ್ಡಲಾಗಿ 22,200 ಪೌಂಡುಗಳಷ್ಟೂ ಬಿಗುವಿನ ಸಾಮರ್ಥ್ಯವಿದೆ. ಪದರಗಳನ್ನು ಹೀಗೆ ಹಾಗೆ ಜೋಡಿಸಿ ಗೋಂದನ್ನು ಹೆಚ್ಚಾಗಿ ಉಪಯೋಗಿಸುವುದರಿಂದ ಹಲಗೆಯ ಶಕ್ತಿಯನ್ನು ಇಷ್ಟಬಂದ ಹಾಗೆ ಬದಲಾಯಿಸ ಬಹುದು. ಇದು ನೀರು ಬಿದ್ದರೂ ಕೆಡುವುದಿಲ್ಲ. ಒಂದು ಪೌಂಡ್ ತೂಕ ಉಕ್ಕಿ ಗಿಂತ ಒಂದು ಪೌಂಡ್ ಪದರದ ಹಲಗೆಯ ಬಲ ಹೆಚ್ಚು. ಹುಳುಗಳು ಇದನ್ನು ತಿನ್ನುವುದಿಲ್ಲ. ಇದು ಸೀಳುವುದಿಲ್ಲ, ಉಬ್ಬುವುದಿಲ್ಲ, ಬಿರುಕು ಬಿಡುವುದಿಲ್ಲ; ಉಷ್ಣವನ್ನು ನಿರೋಧಿಸುತ್ತದೆ, ಹಗುರವಾಗಿದೆ. ಅಗಲವಾದ ನಯವಾದ ಹಲಗೆ ಗಳಾಗಿ ದೊರೆಯುತ್ತದಾದ್ದರಿಂದ ಇಂಥ ಸಾಮಗ್ರಿಗೆ ಒಳ್ಳೆಯ ಭವಿಷ್ಯವಿದೆ.

ಪದರದ ಹಲಗೆಗಳಿಂದ ಪೂರ್ವಭಾವಿಯಾಗಿ ಜೋಡಿಸಿದ ಮನೆಗಳನ್ನು ಹೂಡು ವುದು ಸಾಧ್ಯ. ಇವನ್ನು ಸುಲಭವಾಗಿ ಬೇಗ ಕಟ್ಟಬಹುದು. ಬೆಲೆ ಮಾತ್ರ ಹೆಚ್ಚಾಗುತ್ತದೆ. ಯುದ್ಧಕಾಲದಲ್ಲಿ ತಾತ್ಕಾಲಿಕವಾದ ಕಚೇರಿಗಳಿಗೆ ಇಂಥ ಷೆಡ್ಡು ಗಳನ್ನು ಉಪಯೋಗಿಸುತ್ತಿದ್ದರು. ರೈಲ್ವೆ ಗಾಡಿಗಳಲ್ಲಿಯೂ ಮೋಟಾರ್ ಲಾರಿ ಗಳಲ್ಲಿಯೂ ಈ ಹಲಗೆಗಳನ್ನು ಧಾರಾಳವಾಗಿ ಉಪಯೋಗಿಸುತ್ತಾರೆ.

ಮೆದುವಾದ ಮರದ ಹಲಗೆಗಳಿಗೆ ಸಂಶ್ಲೇಷಣದ ಗೋಂದನ್ನು ಹಚ್ಚಿ ಮೇಲೆ ಪದರಗಳನ್ನು ಜೋಡಿಸಿ ಸಾಧಾರಣವಾದ ಪದರದ ಹಲಗೆಗಳನ್ನು 10%ಕ್ಕಿಂತ ಹೆಚ್ಚು ಸಂಕೋಚನ (ಕಂಪ್ರೆಶನ್) ಆಗದ ಹಾಗೆ ಮಾಡುತ್ತಾರೆ.

ತೆಳುವಾದ 1/36″ ಗಟ್ಟಿಮರದ ಪದರಗಳನ್ನು ರಾಸಾಯನಿಕ ಗೋಂದಿನಿಂದ ಜೋಡಿಸಿ ನೂರಾರು ಟನ್ನುಗಳ ಒತ್ತಡದಲ್ಲಿ ಗೋಂದು ಕರಗಿ ನೀರಾಗುವ ಕಾವಿನಲ್ಲಿ ತಯಾರಿಸಿದರೆ ಅದರ ತೂಕ ಸಲೆ ಅಡಿಗೆ 84 ಪೌಂಡಿನ ವರೆಗೂ ಏರುತ್ತದೆ. ಬೀಚ್ ಮರದ ತೂಕ ಸಲೆ ಅಡಿಗೆ 47 ಪೌಂಡ್. ಫಾರ್ಮ್‌ಮರ್ ಎಂಬ ಮೆದುವಾದ ಗೋಂದನ್ನು ಉಪಯೋಗಿಸಿದ ಹೈಡ್ಲಿಗ್ನಮ್ ಎಂಬ ಪದರದ ಹಲಗೆಯ ಬಿಗು ವಿನ ಸಾಮರ್ಥ್ಯ ಚದರ ಅಂಗುಲಕ್ಕೆ 20 ಟನ್. ಇವನ್ನು ವಿಮಾನದ ತಿರುಪಿನ ಚಾಲಕಗಳಲ್ಲಿ ಉಪಯೋಗಿಸುತ್ತಾರೆ.

ಕಾಯಿಸಿದ ಗಟ್ಟಿಯಾದ ಯೂರಿಯದ ದ್ರಾವಣದಲ್ಲಿ ತೋಯಿಸಿದ ಸಾಧಾರಣ ಮರವನ್ನು ಯೂರಲ್ಲಾಯ್ ಎನ್ನುತ್ತಾರೆ. ತೋಯಿಸಿದ ಕೂಡಲೆ ಈ ಮರ ವನ್ನು ಯಾವ ಆಕಾರಕ್ಕೆ ಬೇಕಾದರೂ ತಿರುಗಿಸಬಹುದು. ಗಟ್ಟಿಯಾದ ಮೇಲೆ ಇದು ಆಯಾ ಆಕಾರವನ್ನು ಉಳಿಸಿಕೊಳ್ಳುತ್ತದೆ. ಈ ಕ್ರಮದಲ್ಲಿ ಒಂದು ಹೊಸ ರೀತಿಯ ಸಾಮಗ್ರಿಯೇ ಉತ್ಪತ್ತಿಯಾಗುತ್ತದೆ.

ಕಟ್ಟಡದ ಹಲಗೆಗಳು : ಗೋಡೆಗಳು, ತಡಿಕೆಗಳು ಮತ್ತು ಒಳಮಾಳಿಗೆಗಳಿಗೆ ಹಗುರವಾಗಿರುವುದರಿಂದ ಎತ್ತಿ ಇಡುವುದು ಸುಲಭ. ಕೆಲವು ಹಲಗೆಗಳು ಉಷ್ಣ ವನ್ನೂ ಧ್ವನಿಯನ್ನೂ ತಡೆಯುತ್ತವೆ. ಮುಖ್ಯವಾದ ನಮೂನೆಗಳನ್ನು ಪುಟ 575ರಲ್ಲಿ ಕೊಟ್ಟಿದೆ.

A ಅವಾಹಕ ಹಲಗೆಗಳು ಧ್ವನಿಯನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ಬಿಡದ ಹಾಗೆ ತಡೆಯುತ್ತವೆ. ಇವನ್ನು ಗೋಡೆ ಮತ್ತು ಒಳಮಾಳಿಗೆಯಲ್ಲಿ ಉಪಯೋಗಿಸುತ್ತಾರೆ. ಬಿಟ್ಯುಮಿನ್‌ಪೂರಿತ ಹಲಗೆಗಳು ತೇವವನ್ನು ಒಳಗೆ ಬಿಡುವುದಿಲ್ಲ. ಪದರದ ಹಲಗೆಗಳನ್ನು ಪುಟೀಪುಗಳು, ತಡಿಕೆ ಮತ್ತು ಕೆಳಗೋಡೆ ಗಳಲ್ಲಿ ಬಳಸುತ್ತಾರೆ. ಗಟ್ಟಿಯಾದ ಹಲಗೆಗಳಿಂದ ಬೀರುಗಳು ಮತ್ತು ಅಂಗಡಿಯ ಬಾಗಿಲುಗಳನ್ನು ಮಾಡುತ್ತಾರೆ. ಬಹಳ ಗಟ್ಟಿಯಾದವನ್ನು ನೆಲಕ್ಕೆ ಹಾಸುತ್ತಾರೆ.

ಪರ್ಯಾಯ (ಆಲ್ಟರ್ನೇಟಿವ್) ಮತ್ತು ಬದಲಿ (ಸಬ್‌ಸ್ಟಿಟ್ಯೂಟ್) ಸಾಮಗ್ರಿ ಗಳು : ಭಾರತದಲ್ಲಿ ಎರಡನೆಯ ಮಹಾಯುದ್ಧದ ಕಾಲದಿಂದಲೂ ಕಟ್ಟಡದ ಸಾಮಗ್ರಿಗಳಿಗೆ ತೊಂದರೆಯಾಗಿದೆ. ಆಳುಗಳು ಸಿಕ್ಕುವುದಿಲ್ಲ. ಪದಾರ್ಥಗಳ ಬೆಲೆ ಮಿತಿಮೀರಿದೆ. ಅದಕ್ಕಾಗಿ ಸಾಕಷ್ಟು ಸಿಕ್ಕದೆ ಇರುವ ಅವಶ್ಯವಾದ ಸಾಮಗ್ರಿ ಗಳಿಗೆ ಬದಲಾಗಿ ಸಂಶೋಧನಾಲಯದಲ್ಲಿ ಬೇರೆ ಸಾಮಗ್ರಿಗಳ ನಿರ್ಮಾಣವಾಗಿ ಅವು ಮಾರುಕಟ್ಟೆಗೆ ಬಂದಿವೆ. ಇದರಿಂದ ಕಟ್ಟಡದ ಕೈಗಾರಿಕೆಗೆ ತುಂಬ ಸಹಾಯ ವಾಗಿದೆ. ಆದರೆ ಈ ಮಾನವನಿರ್ಮಿತ ಸಾಮಗ್ರಿಗಳ ಮಿತಿಯನ್ನು ಹುಷಾರಾಗಿ ತಿಳಿದು ಉಪಯೋಗಿಸಬೇಕು. ಮರ, ಕಲ್ಲು, ಇವುಗಳ ಹಾಗೆ ಈ ಸಾಮಗ್ರಿಗಳ ಉಪಯೋಗ ಸಾರ್ವತ್ರಿಕವಲ್ಲ. ಒಂದು ಉದ್ದೇಶಕ್ಕಾಗಿ ತಯಾರಾದ ಸಾಮಗ್ರಿಯನ್ನು ಇನ್ನೊಂದಕ್ಕೆ ಉಪಯೋಗಿಸಲಾಗುವುದಿಲ್ಲ. (ಎಚ್.ಸಿ.ಕೆ.)

**ಕಟ್ಟಡ ರಕ್ಷಣೆ :** ಕಟ್ಟಡಗಳಿಗೆ ಅಪಾಯಕಾರಿಗಳಾದ ನೈಸರ್ಗಿಕ ಕಾರಣಗಳು ಪ್ರಧಾನವಾಗಿ ನಾಲ್ಕು—ಬೆಂಕಿ, ನೀರು, ಸಿಡಿಲು, ಭೂಕಂಪ. ಆದ್ದರಿಂದ ಕಟ್ಟಡದ ನಿವೇಶನದ ಆಯ್ಕೆ, ಆಲೇಖ್ಯದ ತಯಾರಿ, ಕಟ್ಟಲು ಬಳಸುವ ವಸ್ತುಗಳ ಸಂಗ್ರಹ, ಕಟ್ಟಿದ ತರುವಾಯ ಕಟ್ಟಡದ ವಿದ್ಯುದೀಕರಣ, ಅಲಂಕರಣ ಮುಂತಾದ ಸಮಸ್ತ ಕ್ರಿಯೆಗಳಲ್ಲೂ ಈ ಅಪಾಯಕಾರಕಗಳನ್ನು ಲಕ್ಷ್ಯದಲ್ಲಿಟ್ಟುಕೊಂಡು ಯೋಗ್ಯ ನಿವಾರಣೋಪಾಯಗಳನ್ನು ಅಳವಡಿಸಿಕೊಳ್ಳುವುದು ಕಟ್ಟಡರಚನೆಯ ಒಂದು ಪ್ರಮುಖ ಆವಶ್ಯಕತೆ.

**ಬೆಂಕಿಯಿಂದ ರಕ್ಷಣೆ :** ಇದರಲ್ಲಿ ಎರಡು ಹಂತಗಳಿವೆ—ವಸ್ತುಗಳ ಆಯ್ಕೆ ಮತ್ತು ಜೋಡಣೆಗಳಲ್ಲಿ ಬೆಂಕಿಯಿಂದ ತಟ್ಟಬಹುದಾದ ಅಪಾಯವನ್ನು ಕನಿಷ್ಠ ಪ್ರಮಾಣಕ್ಕೆ ಇಳಿಸುವುದು; ಬೆಂಕಿ ಬಿದ್ದಾಗ ಅದರ ವ್ಯಾಪ್ತಿ ಏರದಂತೆ, ಅಪಾಯ ಹೆಚ್ಚಾಗದಂತೆ ಎಚ್ಚರ ವಹಿಸುವುದು.

ಮರಮುಟ್ಟುಗಳ ಬಳಕೆಯನ್ನು ಕನಿಷ್ಠ ಮಿತಿಯಲ್ಲಿಡಬೇಕು. ಇಲ್ಲಿಯೂ ಉರಿಯನ್ನು ತಡೆಯುವ ದ್ರಾವಕಗಳಿಂದ ಅವನ್ನು ಸಂಸ್ಕರಿಸುವುದು ಲೇಸು. ಸಿನಿಮಾ, ನಾಟಕಮಂದಿರಗಳು ಮುಂತಾದ ಸಾರ್ವಜನಿಕ ಕಟ್ಟಡಗಳಲ್ಲಿ ಪೀಠೋಪ ಕರಣಗಳು, ಪರದೆಗಳು, ಒಳಮಾಡಿಗೆ ಬಳಸುವ ಹಲಗೆಗಳು ಮುಂತಾದುವೆಲ್ಲವನ್ನೂ ಇದೇ ತರದ ಸಂಸ್ಕಾರಕ್ಕೆ ಒಳಪಡಿಸಬೇಕು. ಅನೇಕ ದೇಶಗಳಲ್ಲಿ ಕಾಯಿದೆಯ ಮೂಲಕ ಇದನ್ನು ನಿಗದಿಮಾಡಿರುವುದುಂಟು.

ಉದಾಹರಣೆಗಾಗಿ ಲಂಡನ್ ಕೌಂಟಿ ಸಭೆಯ ನಿಯಮಾವಳಿಗಳಲ್ಲಿ ಮರ, ಕ್ಯಾನ್ವಾಸ್, ಹತ್ತಿಯ ಬಟ್ಟೆಗಳು ಮುಂತಾದುವನ್ನು ಕೆಲವು ದ್ರಾವಕಗಳಲ್ಲಿ ಅದ್ದಿ, ಬೆಂಕಿಬಿದ್ದಾಗ ಉರಿಯದಂತೆ ಮಾಡಬೇಕೆಂಬ ನಿಯಮವಿದೆ. ಆದರೆ ಮರಕ್ಕೆ ಬೆಂಕಿ ತಗಲಿದರೆ ಸುಡದ ಹಾಗೆ ಮಾಡುವುದು ಕಷ್ಟವಾದ್ದರಿಂದ, ಅದಕ್ಕೆ ಬದಲಾಗಿ ಬೆಂಕಿಬಿದ್ದರೆ ಉರಿಯದ ಕಲ್ನಾರಿನಂಥ ಪದಾರ್ಥಗಳನ್ನೇ ಬಳಸಬೇಕೆಂಬ ಶಾಸನ ಮಾಡಿದ್ದಾರೆ (1928). ಈಗ ನೆಲಗಳು, ಮಾಡುಗಳು ಇವನ್ನು ಬೆಂಕಿಯನ್ನು ತಡೆಯುವ ಸಾಮಗ್ರಿಗಳಿಂದಲೇ ತಯಾರಿಸಬೇಕು. ಮೆತುವಾದ ಮರವನ್ನು ಉಪಯೋಗಿಸಕೂಡದು. ಬೆಂಕಿಯ ಒಲೆಯನ್ನು ಬಳಸಬಾರದು. ಉರಿಯ ಮೇಲೆ ಕಾಣುವ ಯಾವ ಕಾಯಿಸುವ ಏರ್ಪಾಡನ್ನೂ ನಾಟಕರಂಗದ ಮೇಲೆ ಇಡ

ಜಾರದು. ಎಣ್ಣೆ, ಹತ್ತಿ, ಕಾಗದ, ಸೆಣಬು, ಮರದ ಹಲಗೆಗಳು ಮುಂತಾದುವುಗಳ ಕಾರ್ಖಾನೆಗಳು, ದಾಸ್ತಾನುಮಳಿಗೆಗಳು ಇತ್ಯಾದಿಗಳಲ್ಲಿ ನಿರಂತರ ಜಾಗರೂಗತೆಯೊಂದೇ ಬೆಂಕಿಯಿಂದ ರಕ್ಷಣೆ ಒದಗಿಸುವ ಮಾರ್ಗ. ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ 3 ಪಾಲು ಅಮೋನಿಯಂ ಫಾಸ್ಫೇಟ್, 2 ಪಾಲು ಅಮೋನಿಯಂ ನೈಟ್ರೇಟ್ ಮತ್ತು 1 ಪಾಲು ಅಮೋನಿಯಂ ಸಲ್ಫೇಟ್ ಇವುಗಳ ಮಿಶ್ರಣವನ್ನು 40 ಪಾಲು ನೀರಿನಲ್ಲಿ ಕರಗಿಸಿ ಹತ್ತಿಯ ಬಟ್ಟೆಗಳನ್ನು ಅದರಲ್ಲಿ ಅದ್ದಿ ಅವಕ್ಕೆ ಬೆಂಕಿ ತಗಲದ ಹಾಗೆ ಮಾಡುತ್ತಾರೆ. ಮುಚ್ಚಿದ ಉರುಳೆಗಳಲ್ಲಿ ಮರವನ್ನು ಇಟ್ಟು ಕೃತಕವಾಗಿ ಒತ್ತಡವನ್ನು ಪ್ರಯೋಗಿಸಿ, ಬೆಂಕಿಯನ್ನು ತಡೆಯುವ ರಾಸಾಯನಿಕಗಳು ಅದರೊಳಕ್ಕೆ ತೂರುವಂತೆ ಮಾಡುತ್ತಾರೆ. ಇಂಥ ಮರವನ್ನು ಬೆಂಕಿ ತಗಲದ ಮರವೆನ್ನುತ್ತಾರೆ. ನ್ಯೂಯಾರ್ಕ್ ನಗರದ ಕಟ್ಟಡಗಳ ಕಾನೂನಿನಲ್ಲಿ ಒಂದು ಕಟ್ಟಡ 150′ ಗಿಂತ ಎತ್ತರವಾಗಿದ್ದರೆ ಹೀಗೆ ಸಂಸ್ಕರಿಸಿದ ಮರವನ್ನು ಮಾತ್ರ ಉಪಯೋಗಿಸಬೇಕೆಂಬ ನಿಯಮವಿದೆ.

ಪ್ರಪಂಚದಲ್ಲಿ ಸಂಭವಿಸುವ ವಾರ್ಷಿಕ ದುರ್ಮರಣಗಳು ಮತ್ತು ಸಂಪತ್ತಿನ ನಾಶ—ಇವುಗಳ ಕಾರಕಗಳಲ್ಲಿ ಮೊದಲ ಸ್ಥಾನ ಬೆಂಕಿಗೇ ಮೀಸಲು. ಆದ್ದರಿಂದ ಬೆಂಕಿಯ ಆಕಸ್ಮಿಕಗಳಿಂದ ಜನ ಹಾಗೂ ಸಂಪತ್ತಿನ ರಕ್ಷಣೆ ಎಲ್ಲ ನಾಗರಿಕ ಸರ್ಕಾರಗಳ ಮತ್ತು ಜನರ ಪ್ರಧಾನ ಹೊಣೆ. ದೊಡ್ಡ ನಗರಗಳಲ್ಲಿ ಒಂದೊಂದು ಸಾರಿ ಬೆಂಕಿ ಬಿದ್ದಾಗಲೂ ಬಂಡವಾಳ ಸಂಪೂರ್ಣವಾಗಿ ನಷ್ಟವಾಗುತ್ತದೆ. ಆಸ್ತಿಗಳನ್ನು ವಿಮೆ ಮಾಡುವ ಪದ್ಧತಿಯಿಂದ ಈ ನಷ್ಟ ಬಹು ಜನರಲ್ಲಿ ಹಂಚಿಹೋಗುತ್ತದೆ, ನಿಜ. ಆದರೆ ನಷ್ಟಗೊಂಡ ಸಂಪತ್ತನ್ನೂ ಮರಣಗೊಂಡ ಜನರನ್ನೂ ಹಿಂದೆ ಪಡೆಯಲಾಗುವುದಿಲ್ಲವಷ್ಟೆ. ಬೆಂಕಿಯನ್ನು ತಡೆಯಬಲ್ಲ ಸಾಮಗ್ರಿಗಳಿಂದ ಕಟ್ಟಡಗಳನ್ನು ಕಟ್ಟಿ ಒಂದು ವೇಳೆ ಬೆಂಕಿಬಿದ್ದರೂ ಅದು ಹರಡದ ಹಾಗೆ ಮಾಡಲು ಒಂದು ಕಟ್ಟಡವನ್ನು ಇನ್ನೊಂದರಿಂದ ಪ್ರತ್ಯೇಕಿಸಬೇಕು. ಬೆಂಕಿಬಿದ್ದರೆ ಸುಡಬಹುದಾದ ಸಾಮಾನುಗಳನ್ನು ತುಂಬಿರುವ ಅಥವಾ ಅಪಾಯವೊದಗಬಹುದಾದ ಕೈಗಾರಿಕೆಗಳಿರುವ ದೊಡ್ಡ ಕಟ್ಟಡಗಳಲ್ಲಿ ಗೋಡೆಗಳು, ಮಾಡುಗಳು, ನೆಲಗಳು ಮತ್ತು ತೊಲೆಗಳು ಬೆಂಕಿಯನ್ನು ಎದುರಿಸುವ ಹಾಗಿರಬೇಕು. ಒಂದು ವೇಳೆ ಬೆಂಕಿ ತಗಲಿದರೆ ಅದು ಹರಡಬಹುದಾದ ಮಹಡಿಯ ಮೆಟ್ಟಲುಗಳು ಮತ್ತು ಸಾಮಾನುಗಳನ್ನು ಎತ್ತುವ ಯಂತ್ರಗಳು ಅಪಾಯವನ್ನು ಹರಡುತ್ತವೆ. ಒಂದು ಕಟ್ಟಡವನ್ನು ನಾವು ಯಾವುದಕ್ಕಾಗಿ ಬಳಸುತ್ತೇವೆಯೋ ಅದರಲ್ಲಿಯೇ ಬೆಂಕಿಯನ್ನು ಉತ್ಪತ್ತಿಮಾಡಬಹುದಾದ ಕಾರಣಗಳಿರುತ್ತವೆ. ಉದಾಹರಣೆಗೆ ಯಂತ್ರಗಳ ತಿಕ್ಕಾಟ, ಬೆಂಕಿ ಹೊತ್ತಬಹುದಾದ ಧೂಮಗಳು, ದ್ರವೀಕರಿಸಿದ ಮತ್ತು ಪುಡಿಮಾಡಿದ ಇಂಧನಗಳು, ಸ್ಥಿತಿ ವಿದ್ಯುಚ್ಛಕ್ತಿ (ಸ್ಟ್ಯಾಟಿಕ್ ಎಲೆಕ್ಟ್ರಿಸಿಟಿ)—ಇವು ಇರುವಲ್ಲಿ ಬೆಂಕಿ ಹೊತ್ತುವ ಸಂಭವ ಇದ್ದೇ ಇರುತ್ತದೆ.

ಬೆಂಕಿಯಲ್ಲಿ ಉರಿಯಬಹುದಾದ ಸಾಮಗ್ರಿಯನ್ನು ಒಂದೇ ಕಡೆ ಕೂಡಿಟ್ಟರೆ ಒಂದು ಸಾರಿ ಬೆಂಕಿ ತಗಲಿದರೆ, ಎಲ್ಲವೂ ಸೂರೆ ಹೋಗಬಹುದು. ಅದಕ್ಕಾಗಿ ಬೆಲೆಬಾಳುವ ಸಾಮಗ್ರಿಗಳನ್ನು ಒಂದು ವೇಳೆ ಆಕಸ್ಮಾತ್ ಬೆಂಕಿ ತಗಲಿದರೂ, ಆಗುವ ನಷ್ಟ ಬಹಳ ಹೆಚ್ಚಾಗದಂತೆ ರಾಶಿಗಳಾಗಿ ಬೇರ್ಪಡಿಸಿ ಕೂಡಿಡುವುದು ಉತ್ತಮ. ಇದೇ ಕಾರಣಕ್ಕಾಗಿ ಸಾಮಾನುದಾಸ್ತಾನು ಮಳಿಗೆಗಳಲ್ಲಿ ಬೆಂಕಿಯನ್ನು ಆರಿಸುವ ಅನುಕೂಲತೆಗಳಿದ್ದರೂ ಅವನ್ನು ಬಹಳ ದೊಡ್ಡದಾಗಿ ಮಾಡಬಾರದು. ಎಲ್ಲಕ್ಕಿಂತಲೂ ಹೆಚ್ಚಾಗಿ, ಒಂದು ಉಗ್ರಾಣಕ್ಕೆ ಬೆಂಕಿ ತಗಲಿದರೆ ಅದರಲ್ಲಿ ಇರುವ ಜನ ಬೇಗ ಹೊರಗೆ ಹೋಗುವಂತೆ ಮಾರ್ಗಗಳಿರುವುದು ಆವಶ್ಯಕ. ಒಂದೊಂದು ಕಾರ್ಖಾನೆಯಲ್ಲಿಯೂ ಕೊನೆಯ ಪಕ್ಷ ಎರಡು ಪ್ರತ್ಯೇಕ ನಿರ್ಗಮದ್ವಾರಗಳಿಂದ ಜನರು ಹೊರಗೆ ಹೋಗುವ ವ್ಯವಸ್ಥೆ ಇರಬೇಕು. (ನೋಡಿ–ಅಗ್ನ್ಯಬಾಧಿತ ಕಟ್ಟಡ). ಪ್ರತ್ಯೇಕವಾದ ಜಾಗಗಳಿಂದ ಒಳಗಿದ್ದ ಜನ ಹೊರಗೆ ಹೋಗುವ ಹಾಗಿರಬೇಕು.

ಬೆಂಕಿಯನ್ನು ಆರಿಸುವ ವಿಧಾನಗಳಿಗೆ ನೋಡಿ—**ಅಗ್ನಿಶಾಮಕದಳ.** (ಎಚ್.ಸಿ.ಕೆ.)

**ನೀರಿನಿಂದ ರಕ್ಷಣೆ :** ಮಳೆಗಾಲದಲ್ಲಿ ಇರಿಸಲಿನ ಹೊಡೆತದಿಂದ, ತಳಪಾಯದ ಸುತ್ತಲೂ ನಿಂತ ನೀರಿನಿಂದ, ತೋಡು ಹೊಳೆ ನದಿಗಳ ಪ್ರವಾಹ ಉಕ್ಕಿಬರುವುದರಿಂದ ಕಟ್ಟಡಗಳಿಗೆ ಅಪಾಯ ಉಂಟು. ಇಂದಿನ ಸಿಮೆಂಟ್–ಕಾಂಕ್ರೀಟ್ ರಚನೆಗಳಲ್ಲಿ ಇರಿಸಲಿನಿಂದ ಕಟ್ಟಡದ ಗೋಡೆಗಳಿಗೆ ಆಗುವ ಹಾನಿ ಪ್ರಾಯಶಃ ಏನೂ ಇಲ್ಲ. ಆದರೆ ಇದರಿಂದ ಕಟ್ಟಡದ ಒಳಗೆ ಥಂಡಿ ವ್ಯಾಪಿಸಿ ಅಲ್ಲಿನ ಸಾಮಗ್ರಿಗಳಿಗೆ ನಷ್ಟ ಉಂಟಾಗದಂತೆ ಎಚ್ಚರಿಕೆ ವಹಿಸುವುದು ಅಗತ್ಯ. ಉದಾಹರಣೆಗೆ ಆಹಾರದ ಪದಾರ್ಥಗಳು, ಕಾಗದ, ಬಟ್ಟೆ ಮುಂತಾದವುಗಳ ಉಗ್ರಾಣಗಳಲ್ಲಿ ಇಂಥ ರಕ್ಷಣೆ ತೀರ ಅವಶ್ಯ. ಕಟ್ಟಡದ ಹೊರವಲಯದ ಭೂಮಿಯ ಮೇಲೆ ನೀರು ನಿಂತರೆ ತಳಪಾಯಕ್ಕೆ ಅಪಾಯವಾಗುವುದುಂಟು. ಆ ಭಾಗವನ್ನೆಲ್ಲ ಹೊರಕ್ಕೆ ಇಳಿಜಾರಾಗಿರುವಂತೆ ಕಾಂಕ್ರೀಟಿನಿಂದ ಮುಚ್ಚಿ ಅಥವಾ ಬೇಕಾದಂತೆ ಚರಂಡಿಗಳನ್ನು ಹೊಡೆದು ನೀರು ನಿಲ್ಲದಂತೆ ಮಾಡಬೇಕು.

ಜಲಪ್ರವಾಹದಿಂದ ಒದಗುವ ಅಪಾಯ ಗುರುತರವಾದದ್ದು. ಬ್ರಹ್ಮಪುತ್ರಾ, ಗೋದಾವರಿ, ಕೋಸಿ ಮುಂತಾದ ನದಿಗಳು ತುಂಬುನೆರೆಯಿಂದ ಪ್ರವಹಿಸುವಾಗ ಅವುಗಳ ದಂಡೆಗಳಲ್ಲಿರುವ ನಗರಗಳಿಗೆ ತೀವ್ರ ಹಾನಿ ಆಗುವುದು ನಮ್ಮ ದೇಶದಲ್ಲಿ ವಾರ್ಷಿಕ ಅನುಭವ. ನಗರದ ನಿವೇಶನಗಳನ್ನು ದೂರದ ಎತ್ತರ ಪ್ರದೇಶಗಳಿಗೆ ವರ್ಗಾಯಿಸುವುದು ಒಂದು ರಕ್ಷಣೋಪಾಯ. ಹಲವಾರು ಶತಕಗಳಿಂದ ವಿಕಸಿಸಿ ಬೆಳೆದುಬಂದಿರುವ ಈ ನಗರಗಳ ಬುಡ ಕೀಳುವುದು ಅಷ್ಟೇನು ಸುಲಭ ಪ್ರಾಯೋಗಿಕ ವಿಧಾನವಲ್ಲ. ನದಿಗಳಿಗೆ ಅಲ್ಲಲ್ಲಿ ಅಣೆಕಟ್ಟುಗಳನ್ನು ಕಟ್ಟಿ ನೀರಿನ ಸ್ವಚ್ಛಂದ ಹರಿವನ್ನು ಅಂಕೆಗೆ ತಂದು ನೆರೆಯ ಹಾವಳಿಯನ್ನು ನಿಯಂತ್ರಿಸುವುದು ಎರಡನೆಯ ರಕ್ಷಣೋಪಾಯ. ಸ್ವಾತಂತ್ರ್ಯಾನಂತರ ಭಾರತದಲ್ಲಿ ತ್ವರಿತಗತಿಯಿಂದ ಅಧಿಕ ಸಂಖ್ಯೆಯಲ್ಲಿ ಕಟ್ಟಿರುವ, ಕಟ್ಟಲಾಗುತ್ತಿರುವ ನೀರಾವರಿ ಯೋಜನೆಗಳ ಉದ್ದೇಶಗಳಲ್ಲಿ ನದೀ ದಂಡೆಗಳ ನಗರ ರಕ್ಷಣೆಯೂ ಒಂದು. ಮೂರನೆಯ ಒಂದು ರಕ್ಷಣೋಪಾಯವೂ ಇದೆ. ನದೀ ದಂಡೆಗಳ ಆಸುಪಾಸಿನಲ್ಲಿ ಕಟ್ಟುವ ಕಟ್ಟಡಗಳ ರಚನೆಯಲ್ಲಿಯೇ ಯೋಗ್ಯಮಾರ್ಪಾಡುಗಳನ್ನು ಮಾಡಬೇಕು. ತಳಪಾಯಗಳ ರಚನೆ, ಗೋಡೆಗಳ ವಿನ್ಯಾಸ, ನೆರೆನೀರು ಬಂದಾಗ ಹರಿದು ಹೋಗಲು ಕಟ್ಟಡ ಕಟ್ಟಡಗಳ ನಡುವೆ ನಾಲೆಗಳು ಮುಂತಾದ ವಿಶಿಷ್ಟ ವಿಧಾನಗಳಿಂದ ಸಮರ್ಪಕ ರಕ್ಷಣೆ ಒದಗಿಸಬಹುದು.

**ಸಿಡಿಲಿನಿಂದ ರಕ್ಷಣೆ :** ಗಗನಚುಂಬಿ ಸೌಧನಗಳಿಗೆ, ವಿಶಾಲ ಪ್ರದೇಶಗಳಲ್ಲಿ ಒಂಟಿಯಾಗಿ ನಿಂತಿರುವ ಮನೆಗಳಿಗೆ, ವಿಶೇಷವಾಗಿ ಲೋಹಗಳ ಬಳಕೆಯಿಂದ ನಿರ್ಮಿಸಿದ ಕಟ್ಟಡಗಳಿಗೆ ಸಿಡಿಲಿನ ಹೊಡೆತ ತಾಗಿ ಅದರಿಂದ ಬೆಂಕಿಯ ಉತ್ಪಾದನೆಯಾಗುವುದು ವಿರಳವಲ್ಲ. ಇಂಥವುಗಳಿಗೆ ಸಿಡಿಲುಕಂಬಿಗಳನ್ನು ಅಳವಡಿಸಿ ಮಿಂಚಿನಲ್ಲಿ ಪ್ರವಹಿಸುವ ವಿದ್ಯುಚ್ಛಕ್ತಿಯನ್ನು ಅವುಗಳ ಮೂಲಕ ಭೂಮಿಗೆ ಒಯ್ದು ಕಟ್ಟಡಗಳನ್ನು ರಕ್ಷಿಸುತ್ತಾರೆ.

**ಭೂಕಂಪದಿಂದ ರಕ್ಷಣೆ :** ಇಂದಿನ ಯಂತ್ರಯುಗದಲ್ಲಿ ನೈಸರ್ಗಿಕ ಭೂಕಂಪದ ಜೊತೆಗೆ ಕಾರ್ಖಾನೆಗಳಿಂದಲೂ ನೆಲದ ಅದಿರುವಿಕೆ ಆಗುತ್ತಿರುತ್ತದೆ. ಉದಾಹರಣೆಗೆ ಒಂದು ರೈಲ್ವೆ ಹಳಿಯ ಸಮೀಪದ ಕಟ್ಟಡಗಳ ತಳಪಾಯಗಳು ರೈಲುಬಂಡಿ ಸಾಗುವಾಗಲೆಲ್ಲ ಸಂಭವಿಸುವ ನೆಲದ ಅದಿರುವಿಕೆಯನ್ನು ಎದುರಿಸಿ ಕಟ್ಟಡಗಳಿಗೆ ರಕ್ಷಣೆ ಒದಗಿಸುವಂತಿರಬೇಕು. ಆಧುನಿಕ ಕಟ್ಟಡ ನಿರ್ಮಾಣತಂತ್ರ ಈ ಸಮಸ್ಯೆಯನ್ನು ಪರಿಶೀಲಿಸಿ ಧಕ್ಕಾನಿರೋಧಕ ರಚನೆಗಳನ್ನು ಅಳವಡಿಸುವುದರಲ್ಲಿ ಯಶಸ್ವಿಯಾಗಿದೆ. ಎಲ್ಲ ಮಹಾನಗರಗಳಲ್ಲಿಯೂ ಇಂಥ ಕಟ್ಟಡಗಳು ಈಗ ಸಾಮಾನ್ಯವಾಗಿವೆ.

ನೈಸರ್ಗಿಕ ಭೂಕಂಪಗಳು ಸರ್ವಪ್ರದೇಶವ್ಯಾಪಿಗಳಲ್ಲ, ಸಾರ್ವಕಾಲಿಕ ಘಟನೆಗಳಲ್ಲ. ಆದರೂ ಅವು ಸಾಮಾನ್ಯವಾಗಿ ತಲೆದೋರುವ ಭೂಕಂಪಪಟ್ಟಿಯ ಪ್ರದೇಶಗಳಲ್ಲಿ ವಿಶಿಷ್ಟ ಮಾದರಿಯ ನಿರ್ಮಾಣಗಳು ಅನಿವಾರ್ಯವಾಗಿವೆ. ಕಂಪನ ಎಷ್ಟೇ ತೀವ್ರವಾಗಿದ್ದರೂ ಕಟ್ಟಡ ಕುಸಿಯಬಾರದು. ಕುಸಿದಾಗಲೂ ಜನ, ಸಂಪತ್ತುಗಳಿಗೆ ಆಗುವ ನಷ್ಟ ಕನಿಷ್ಠವಾಗಿರಬೇಕು. ಕಟ್ಟಡಗಳ ಪುನಾರಚನೆ ಸುಲಭಸಾಧ್ಯವಾಗಿರಬೇಕು. ಇವೇ ಮುಂತಾದುವು ಇಂಥ ರಚನೆಗಳ ಹಿಂದೆ ಇರುವ ಮಾರ್ಗದರ್ಶೀ ಸೂತ್ರಗಳು. ಜಪಾನಿನಲ್ಲಿ ಮತ್ತು ಈಚೆಗೆ ಮಹಾರಾಷ್ಟ್ರದ ಕೊಯ್ನಾದಲ್ಲಿ ಇಂಥ ಭೂಕಂಪಧಕ್ಕಾನಿರೋಧಕ ಕಟ್ಟಡಗಳನ್ನು ಕಾಣಬಹುದು.

ನೋಡಿ—ಭೂಕಂಪಗಳು. *

**ಕಟ್ಟಡಶಾಸ್ತ್ರ :** ಸಂಸ್ಕೃತದಲ್ಲಿ ಕಟ್ಟಡಶಾಸ್ತ್ರವನ್ನು ವಾಸ್ತುಶಾಸ್ತ್ರವೆಂದು ಕರೆದಿದ್ದಾರೆ. ವಾಸ್ತು ಎಂದರೆ ವಾಸಿಸಲು ಮನೆಯನ್ನು ಕಟ್ಟಲು ಯೋಗ್ಯವಾದ ಭೂಮಿ, ಕಟ್ಟಬೇಕಾದ ಮನೆ ಎಂದು ಅರ್ಥ. ಇದಕ್ಕೆ ಸಂಬಂಧಪಟ್ಟ ವಿಷಯಗಳನ್ನು ತಿಳಿಸುವುದೇ ವಾಸ್ತು ಅಥವಾ ಕಟ್ಟಡಶಾಸ್ತ್ರ. ಇಲ್ಲಿ ನಿವೇಶನದ ಆಯ್ಕೆ, ಮನೆಯ ಉದ್ದಗಲ, ಎತ್ತರ ಮತ್ತು ವಿನ್ಯಾಸ, ನೋಡಬೇಕಾದ ತಿಥಿವಾರ ಇತ್ಯಾದಿಗಳು, ಉಪಯೋಗಿಸಬೇಕಾದ ಮರಮುಟ್ಟುಗಳು– ಈ ಎಲ್ಲ ವಿಷಯಗಳು ಬರುತ್ತವೆ.

ಭೃಗು, ಅತ್ರಿ, ವಸಿಷ್ಠ, ವಿಶ್ವಕರ್ಮ, ಯಮ, ನಾರದ, ನಗ್ನಜಿತ್, ವಿಶಾಲಾಕ್ಷ, ಪುರಂದರ, ಬ್ರಹ್ಮ, ಕುಮಾರ, ನಂದೀಶ, ಶೌನಕ, ಗರ್ಗ, ವಾಸುದೇವ, ಅನಿರುದ್ಧ, ಶುಕ್ರ, ಬೃಹಸ್ಪತಿ—ಈ ಹದಿನೇಟು ಮಂದಿ ವಾಸ್ತುಶಾಸ್ತ್ರದ ಉಪದೇಶಕರು. ಮತ್ಸ್ಯರೂಪಿಯಾದ ಭಗವಂತನಿಂದ ಮನುವಿಗೆ ಇದು ಉಪದಿಷ್ಟವಾಗಿದೆ. ವಿಶ್ವಕರ್ಮ ಪ್ರಕಾಶದಲ್ಲಿರುವಂತೆ ಮೊಟ್ಟಮೊದಲು ಲೋಕಹಿತಕ್ಕಾಗಿ ಇದನ್ನು ತಿಳಿಸಿದವ ಶಂಭು. ಪುರಾತನವಾದ ಈ ಶಾಸ್ತ್ರವನ್ನು ಪರಾಶರ ಬೃಹದ್ರಥನಿಗೂ ಬೃಹದ್ರಥ ವಿಶ್ವಕರ್ಮನಿಗೂ ತಿಳಿಸುತ್ತಾನೆ. ವಿಶ್ವಕರ್ಮ ಈ ಶಾಸ್ತ್ರವನ್ನೆ ಲೋಕದಲ್ಲಿ ಪ್ರಚಾರ ಮಾಡಿರುತ್ತಾನೆ.

ಬಹಳ ಹಿಂದೆ, ತ್ರೇತಾಯುಗದಲ್ಲಿ, ದೊಡ್ಡ ಆಕಾರದ ಒಂದು ಭೂತ ತನ್ನ ಶರೀರದಿಂದ ಪ್ರಪಂಚವನ್ನೆಲ್ಲ ಆವರಿಸಿಕೊಂಡು ನಿದ್ರಿಸುತ್ತಿತ್ತು. ಇಂದ್ರನೇ ಮೊದ

ಲಾದ ದೇವತೆಗಳು ಆ ಭಯಂಕರಾಕಾರದ ಭೂತವನ್ನು ನೋಡಿ ವಿಸ್ಮಿತರಾಗಿ ಭಯಪಟ್ಟು ಬ್ರಹ್ಮನ ಮರೆಹೊಕ್ಕು, ಭಯಂಕರ ರೂಪಿಯಾದ ಭೂತವೊಂದು ಮಲಗಿ ಪ್ರಪಂಚವನ್ನೆಲ್ಲ ಆವರಿಸಿಕೊಂಡಿದೆ, ನಾವು ಭೀತರಾಗಿದ್ದೇವೆ, ಈಗ ಎಲ್ಲಿಗೆ ಹೋಗುವುದು, ಏನು ಮಾಡುವುದು ಎಂಬ ಅರಿವಿಲ್ಲದೆ ನಿನ್ನಲ್ಲಿಗೆ ಬಂದಿದ್ದೇವೆ—ಎಂದು ವಿಷಯವನ್ನು ತಿಳಿಸಿ, ತಮ್ಮ ದುರಿತಗಳನ್ನು ನಿವಾರಿಸಿ ರಕ್ಷಿಸುವಂತೆ ಪ್ರಾರ್ಥಿಸಿದರು. ಆಗ ಬ್ರಹ್ಮ, ದೇವತೆಗಳಿಗೆ ಅಭಯ ಪ್ರದಾನಮಾಡಿ, "ನೀವು ಹೆದರಬೇಡಿ, ಆ ಭೂತವನ್ನು ಕೆಳಮುಖ ಮಾಡಿ ತಳ್ಳಿ, ನಿಮಗೆ ಯಾವ ಭಯವೂ ಇರುವುದಿಲ್ಲ" ಎಂದು ತಿಳಿಸುತ್ತಾನೆ. ಅದರಂತೆ, ದೇವತೆಗಳು ಆ ಭೂತವನ್ನು ಕೆಳಮೊಗನಾಗಿ ತಳ್ಳಿ ಹಿಂಸಿಸಿದರು. ಅವನೇ ಬ್ರಹ್ಮಕೃತ ವಾಸ್ತುಪುರುಷ. ಭಾದ್ರಪದ ಮಾಸದ ಕೃಷ್ಣಪಕ್ಷ ತೃತೀಯಾ ತಿಥಿ, ಕೃತ್ತಿಕಾ ನಕ್ಷತ್ರ, ವ್ಯತೀಪಾತ ಯೋಗ, ಭದ್ರಾಕರಣ ಶನಿವಾರ, ಗುಳಿಕ ಕಾಲದಲ್ಲಿ ವಾಸ್ತುಪುರುಷ ಸೃಷ್ಟನಾದ. ದೇವತೆಗಳಿಂದ ಪೀಡಿತನಾದ ವಾಸ್ತುಪುರುಷ ಬ್ರಹ್ಮನಲ್ಲಿಗೆ ಹೋಗಿ "ಜಗತ್ಪ್ರಭುವೇ ! ಚರಾಚರಾತ್ಮಕವಾದ ಸರ್ವವೂ ನಿನ್ನಿಂದ ಸೃಷ್ಟವಾಗಿದೆ. ಯಾವ ತಪ್ಪೂ ಇಲ್ಲದ ನನ್ನನ್ನು ವಿನಾಕಾರಣ ದೇವತೆಗಳು ಪೀಡಿಸುತ್ತಿದ್ದಾರೆ" ಎನ್ನಲು ಪ್ರೀತನಾದ ಬ್ರಹ್ಮ ಅವನಿಗೆ "ಗ್ರಾಮ, ನಗರ, ದುರ್ಗ, ಪ್ರಾಸಾದ, ಉದ್ಯಾನ, ಗೃಹ—ಈ ಸ್ಥಳಗಳಲ್ಲಿ ಯಾರು ನಿನ್ನನ್ನು ಪೂಜಿಸದೆ ಕಟ್ಟಡ ಮೊದಲಾದುವನ್ನು ನಿರ್ಮಿಸಲು ಪ್ರಾರಂಭಿಸುತ್ತಾರೊ ಅವರ ಸಂಪತ್ತು ನಾಶವಾಗುತ್ತದೆ, ವಿಘ್ನಪರಂಪರೆಗಳು ಬರುತ್ತವೆ, ಕಟ್ಟಡ ಕಟ್ಟುವವನಿಗೂ ಮೃತ್ಯು ಸಂಭವಿಸುತ್ತದೆ" ಎಂದು ವರವನ್ನು ಕೊಟ್ಟು ಅಂತರ್ಧಾನನಾದ. ಅಂದಿನಿಂದ ಯಾವ ಕಟ್ಟಡವನ್ನು ಕಟ್ಟಿಸಲು ಪ್ರಾರಂಭಿಸಬೇಕಾದರೂ ಮೊದಲು ವಾಸ್ತುಪೂಜೆಯನ್ನು ಮಾಡುತ್ತಾರೆ. ಇಂದಿಗೂ ಇದು ಆಚರಣೆಯಲ್ಲಿದೆ.

ಇದಲ್ಲದೆ ಆದ್ಯ ಶಿಲಾಸ್ತಂಭ ವಿನ್ಯಾಸ ಸ್ಥಳವನ್ನು ಗೊತ್ತುಮಾಡುವಾಗ ತತ್ಕಾಲದಲ್ಲಿ ವಾಸ್ತುಪುರುಷನ ಸ್ಥಿತಿಯನ್ನು ಅರಿಯಬೇಕು. ಈ ವಾಸ್ತುವೇ ಚರವಾಸ್ತು. ಇದರ ವಿವರ ವಿದ್ಯಾಮಾಧವೀಯದಲ್ಲಿ ಹೀಗಿದೆ :

> ಮಾರ್ತಾಂಡಾರೂಢ ರಾಶೌ ವಿನಿಹಿತಚರಣಸ್ತನ್ಮದನ್ಯಸ್ತ ಮೂರ್ಧಾ
> ವಾಮೇ ಪಾರ್ಶ್ವೇ ಶಯಾನೋ ಭ್ರಮತಿ ಸ ಪರಿತಃ ಪೂರುಷೋ ವಾಸ್ತುರೂಪಃ ।
>
> ಪಾದೇ ಯದ್ಯರ್ಥನಾಶಃ ಶಿರಸಿ ಚ ಮರಣಂ ತಸ್ಯ ಪೃಷ್ಠೇ ವಿಪತ್ತಿಃ
> ವಕ್ಷಸ್ಯೂರೌ ಚ ನಾಶಶ್ಶುಭಫಲಮುದರೇ ಸ್ತಂಭಮಾದ್ಯಂ ವಿದಧ್ಯತ್ ॥

ಕಟ್ಟಡವನ್ನು ಕಟ್ಟುವುದಕ್ಕೆ ಮೊದಲು ಸ್ಥಳವನ್ನು ಪರೀಕ್ಷಿಸುವುದು ಆಗ್ಯಕರ್ತವ್ಯ. ನಿವೇಶನವನ್ನು ಚಾತುರ್ವರ್ಣಾನುಗುಣವಾಗಿ ನಿಷ್ಕರ್ಷಿಸಿಕೊಳ್ಳಬೇಕು. ಪ್ರಥಮ ವರ್ಣದವರಿಗೆ ಪೂರ್ವೋತ್ತರಗಳಲ್ಲಿ ತಗ್ಗಾದ ಭೂಮಿಯಾಗಿದ್ದು, ಮಣ್ಣು ಬಿಳುಪು ಬಣ್ಣದ್ದಾಗಿ, ಸುವಾಸನೆ ಉಳ್ಳದ್ದೂ ಮಧುರವೂ ದರ್ಭೆ ಬೆಳದಿರುವುದೂ ಆಗಿದ್ದರೆ ಶ್ರೇಯಃಪ್ರದ. ಕ್ಷತ್ರಿಯರಿಗೆ ತಿಟ್ಟುಪ್ರದೇಶವೂ ರಕ್ತಗಂಧವೂ ಕಷಾಯರುಚಿಯೂ ಆಗಿ ಹುಲ್ಲು ಬೆಳೆದಿರುವ ಕೆಂಪು ಮಣ್ಣಿನ ಭೂಮಿ ಶ್ರೇಷ್ಠ. ವೈಶ್ಯರಿಗೆ ಹಳ್ಳತಿಟ್ಟುಗಳಿಲ್ಲದ ಹಳದಿ ಬಣ್ಣದ, ಜೇನಿನ ವಾಸನೆ ಮತ್ತು ಸ್ವಲ್ಪ ಹುಳಿಯಾದ ರುಚಿಯುಳ್ಳ ಮಣ್ಣಿನಿಂದ ಕೂಡಿ ಫಲಪುಷ್ಪಭರಿತವಾದ ಭೂಮಿ ಉತ್ತಮ. ನಾಲ್ಕನೆಯ ವರ್ಣದವರಿಗೆ ಹಳ್ಳತಿಟ್ಟುಗಳುಳ್ಳ, ಮದ್ಯದ ವಾಸನೆಯಿಂದ ಕೂಡಿ ಆದ ಹುಲ್ಲು ಬೆಳೆದಿರುವ ಕಪ್ಪು ಮಣ್ಣಿನ ನಿವೇಶನ ಶುಭಪ್ರದ. ಹಳ್ಳತಿಟ್ಟುಗಳಿಲ್ಲದ ಸಮವಾದ ಬಿಳುಪು ಮಣ್ಣಿನಿಂದ ಕೂಡಿದ ಭೂಮಿ ಎಲ್ಲರಿಗೂ ಗ್ರಾಹ್ಯ.

ನಿವೇಶನದ ಪೂರ್ವಭಾಗ ಎತ್ತರವಾಗಿದ್ದು ಉಳಿದ ಭಾಗ ತಗ್ಗಾಗಿದ್ದರೆ ಅದಕ್ಕೆ ಗೋವೀಥಿ ಎಂದು ಹೆಸರು. ಇಲ್ಲಿ ಗೋಗಳಿಗೆ ವೃದ್ಧಿ ಇರುತ್ತದೆ. ಆಗ್ನೇಯದಲ್ಲಿ ಎತ್ತರವಾಗಿದ್ದರೆ ಅಗ್ನಿವೀಥಿ. ಇಲ್ಲಿ ಅಗ್ನಿಭಯ. ದಕ್ಷಿಣದಲ್ಲಿ ಎತ್ತರವಾಗಿದ್ದರೆ ಪ್ರೇತವೀಥಿ. ಇಲ್ಲಿ ಮೃತ್ಯುಭಯ. ನೈಋತ್ಯದಲ್ಲಿ ಎತ್ತರವಾಗಿದ್ದರೆ ನಾಗವೀಥಿ. ಇಲ್ಲಿ ಸರ್ಪಭಯ. ಪಶ್ಚಿಮದಲ್ಲಿ ಎತ್ತರವಾಗಿದ್ದರೆ ಜಲವೀಥಿ. ಇಲ್ಲಿ ದಾರಿದ್ರ್ಯ. ವಾಯುವ್ಯದಲ್ಲಿ ಎತ್ತರವಾಗಿದ್ದರೆ ಧಾನ್ಯವೀಥಿ. ಇಲ್ಲಿ ಧನಪ್ರಾಪ್ತಿ. ಉತ್ತರದಲ್ಲಿ ಎತ್ತರವಾಗಿದ್ದರೆ ಗಜವೀಥಿ. ಇಲ್ಲಿ ಸಂಪದಭಿವೃದ್ಧಿ. ಈಶಾನ್ಯದಲ್ಲಿ ಎತ್ತರವಾಗಿದ್ದರೆ ಧನವೀಥಿ. ಇಲ್ಲಿ ಪುತ್ರಪೌತ್ರಧನವೃದ್ಧಿ. ನಿವೇಶನದ ಮಧ್ಯದಲ್ಲಿ ತಗ್ಗಾಗಿದ್ದರೆ ಸಿಂಹವೀಥಿ. ಇಲ್ಲಿ ಸರ್ವಸಮೃದ್ಧಿ. ಕಟ್ಟಡ ಕಟ್ಟಲು ನಿವೇಶನವನ್ನು ಗೊತ್ತುಮಾಡುವಾಗ ಈ ಫಲಗಳನ್ನು ಗಮನಿಸಿ ನಿವೇಶನವನ್ನು ಆರಿಸಬೇಕು.

ಕಟ್ಟಡ ಕಟ್ಟಬೇಕೆಂದಿರುವ ಭೂಮಿಯಲ್ಲಿ ಇಪ್ಪತ್ತುನಾಲ್ಕುಅಂಗುಲ ಪ್ರಮಾಣದ ಆಳವುಳ್ಳ ಒಂದು ಬಿಲವನ್ನು ತೋಡಿ ಮತ್ತೆ ಅದೇ ಮಣ್ಣನ್ನು ಆ ಬಿಲಕ್ಕೆ ತುಂಬುವುದು. ಬಿಲ ತುಂಬಿ ಮಣ್ಣು ಹೆಚ್ಚಾಗಿ ಉಳಿದರೆ ಆ ಪ್ರದೇಶದಲ್ಲಿ ಕಟ್ಟಡವನ್ನು ಕಟ್ಟುವುದರಿಂದ ವೃದ್ಧಿಯುಂಟಾಗುತ್ತದೆ. ಸಮನಾದರೆ ಹಾನಿವೃದ್ಧಿಗಳಿಲ್ಲದೆ ಸಮಫಲಪ್ರದವಾಗುತ್ತದೆ. ಮಣ್ಣು ಸಾಲದೆ ಬಂದರೆ ಆ ನಿವೇಶನ ಶ್ರೇಷ್ಠವಲ್ಲವೆಂದು ತಿಳಿಯಬೇಕು.

ಆ ಹಳ್ಳದಲ್ಲಿ ಮೊದಲ ದಿವಸ ನೀರು ತುಂಬಿ ಮಾರನೆಯ ದಿವಸ ಬೆಳಗ್ಗೆ ನೋಡುವಾಗ ನೀರು ಉಳಿದಿದ್ದರೆ ಆ ನಿವೇಶನ ಕಟ್ಟಡವನ್ನು ಕಟ್ಟಲು ಯೋಗ್ಯವಾಗಿದೆ ಎಂದು ನಿಷ್ಕರ್ಷಿಸಬೇಕು. ಬದಿ ಇದ್ದರೆ ಅಲ್ಲಿ ಗೃಹವನ್ನು ಕಟ್ಟುವುದರಿಂದ ಹಲವು ದಾರಿದ್ರ್ಯಗಳ ಪೀಡೆ ಉಂಟಾಗುತ್ತದೆ. ನೀರಿನ ಅಂಶ ಸ್ವಲ್ಪವೂ ಇಲ್ಲದೆ ಒಣಗಿದ್ದರೆ ಆ ಜಾಗದಲ್ಲಿ ಮನೆಯನ್ನು ಕಟ್ಟಿದರೆ ಮೃತ್ಯು ಉಂಟಾಗುತ್ತದೆ.

ನಿವೇಶನದಲ್ಲಿ ಬಾವಿಯನ್ನು ತೆಗೆದಾಗ ಅದಕ್ಕೆ ಅನ್ಯಗೃಹದ ನೀರು ಬರುವ ಹಾಗಿದ್ದರೆ ಹಾನಿ ಮತ್ತು ಕಲಹ ಉಂಟಾಗುತ್ತವೆ. ಆ ಜಾಗದ ನೀರು ಉತ್ತರ ಈಶಾನ್ಯ ಪೂರ್ವ ದಿಕ್ಕುಗಳಿಗೆ ಹರಿದರೆ ಶುಭಫಲಪ್ರದವಾಗುತ್ತದೆ.

ಈ ಕ್ರಮದಲ್ಲಿ ಭೂಮಿಯನ್ನು ಪರೀಕ್ಷಿಸಿ ದೋಷಾಲ್ಪವೂ ಗುಣಬಾಹುಳ್ಯವೂ ಇರುವ ಸ್ಥಳವನ್ನು ಆರಿಸಿ ಅಲ್ಲಿ ಮನೆ ಕಟ್ಟಬೇಕು.

ಮೊದಲು ನಿವೇಶನವನ್ನು ಚೌಕನಾಗಿಯೂ ಸಮನಾಗಿಯೂ ಇರುವೆಡೆ ಅಗೆದು ಅಲ್ಲಿರುವ ಹುಲ್ಲು ಮೊದಲಾದುವನ್ನು ತೆಗೆದು ಚೊಕ್ಕಟಮಾಡಬೇಕು. ಬಳಿಕ ದಿಕ್ಕುಗಳನ್ನು ಗುರುತಿಸಬೇಕು.

ಶುಭಮುಹೂರ್ತದ ದಿನದಲ್ಲಿ ನಿವೇಶನವನ್ನು ಪಂಚಗವ್ಯ ಮತ್ತು ಓಷಧಿ ಜಲದಿಂದ ಶುದ್ಧಿಮಾಡಿ ಎಂಟು ದಿಕ್ಕುಗಳಲ್ಲೂ ಪೂರ್ಣಕುಂಭಗಳನ್ನಿರಿಸಿ, ಗಣಪತಿ ಗ್ರಹಾದಿಗಳನ್ನು ಪೂಜಿಸಿ ಪುಣ್ಯಾಹಮಾಡಿ ಆ ಜಲದಿಂದ ಸ್ಥಳಶುದ್ಧಿಮಾಡಿ ವಾಸ್ತು ದೇವತೆಯನ್ನು ಬರೆದು ಪ್ರತಿಷ್ಠಿಸಿ ಪೂಜಿಸಬೇಕು. ವಾಸ್ತುಪುರುಷನ ಕುಕ್ಷಿಸ್ಥಾನದಲ್ಲಿ ಅಗೆದು ಶಿಲಾನ್ಯಾಸವನ್ನು ಮಾಡಬೇಕು. ಬಳಿಕ ಈಶಾನ್ಯಾದಿ ದಿಕ್ಕುಗಳಲ್ಲಿ ಪ್ರದಕ್ಷಿಣವಾಗಿ ಶಿಲೆಗಳನ್ನು ಇಡಬೇಕು.

ಮನೆಯ ವಿಸ್ತಾರವನ್ನು ಒಂಬತ್ತು ವಿಭಾಗಮಾಡಿ ಬಲಗಡೆಗೆ ಐದು ಭಾಗಗಳನ್ನು ಎಡಗಡೆಗೆ ಮೂರು ಭಾಗವನ್ನು ಬಿಟ್ಟು ಮಧ್ಯದ ಒಂದು ಭಾಗದಲ್ಲಿ ಬಾಗಿಲನ್ನು ಇಡಬೇಕು. ಬಾಗಿಲಿಗೆ ದಕ್ಷಿಣ ಅಥವಾ ಪಶ್ಚಿಮಕ್ಕೆ ಕಿಟಕಿ ಇರಬೇಕು.

ಗೃಹನಿರ್ಮಾಣ ಸ್ಥಳ ಆಯಾಕಾರದಲ್ಲಿರಬೇಕು. ಗೃಹನಿವೇಶನದ ಉದ್ದ ಅಗಲಗಳನ್ನು ಯಜಮಾನನ ಹಸ್ತದಿಂದ ಅಳತೆಮಾಡಿ ಮೊಳಗಳಲ್ಲಿ ಗೊತ್ತುಮಾಡಿಕೊಂಡು ಉದ್ದ ಅಗಲಗಳ ಪ್ರಮಾಣಗಳನ್ನು ಗುಣಿಸಿ ಬಂದ ಫಲವೇ ಕ್ಷೇತ್ರಫಲ. ಇದನ್ನು ಒಂಬತ್ತರಿಂದ ಗುಣಿಸಿ ಎಂಟರಿಂದ ಭಾಗಿಸಿ ನಿಂತ ಶೇಷಕ್ಕೆ ಆಯ ಎಂದು ಹೆಸರು. ಒಂದು ಶೇಷ ನಿಂತರೆ ಧ್ವಜಾಯ, ಎರಡು ನಿಂತರೆ ಧೂಮ್ರಾಯ, ಮೂರು ನಿಂತರೆ ಸಿಂಹಾಯ, ನಾಲ್ಕು ನಿಂತರೆ ಶುನಕಾಯ, ಐದು ನಿಂತರೆ ವೃಷಭಾಯ, ಆರು ನಿಂತರೆ ಖರಾಯ, ಏಳು ನಿಂತರೆ ಗಜಾಯ, ಎಂಟು ನಿಂತರೆ ಕಾಕಾಯ. ಇವೆಂಟೂ ಆಯಗಳು. ಇವುಗಳಲ್ಲಿ 1, 3, 5, 7 ಈ ನಾಲ್ಕು ವಿಷಮಾಯಗಳು ಗೃಹನಿರ್ಮಾಣಕ್ಕೆ ಶುಭಪ್ರದಗಳು. ಧ್ವಜಾಯ ಎಲ್ಲರಿಗೂ ಶ್ರೇಷ್ಠ. ಸಿಂಹಾಯ ಬ್ರಾಹ್ಮಣನಿಗೆ ಕೂಡದು. ಇದರಲ್ಲಿ ಪಶುವೃದ್ಧಿ ಇಲ್ಲ. ಪಶ್ಚಿಮ ದಿಕ್ಕಿನ ಧ್ವಜಾಯ ಬ್ರಾಹ್ಮಣನಿಗೂ ಉತ್ತರಮುಖದ ಸಿಂಹಾಯ ರಾಜರಿಗೂ ಪೂರ್ವಾಭಿಮುಖದ ವೃಷಭಾಯ ವೈಶ್ಯನಿಗೂ ದಕ್ಷಿಣಾಭಿಮುಖದ ಗಜಾಯ ಶೂದ್ರನಿಗೂ ಶ್ರೇಷ್ಠ. ಆನೆ, ಒಂಟೆಗಳ ಶಾಲೆಗೆ ಧ್ವಜ, ಗಜಾಯಗಳೂ ಕುದುರೆಲಾಯ, ದನದ ಕೊಟ್ಟಿಗೆಗಳಿಗೆ ಧ್ವಜ, ವೃಷಭಾಯಗಳೂ ಸ್ತ್ರೀಶಯ್ಯಾಗೃಹ, ಆಸ್ಥಾನ, ಯಂತ್ರಶಾಲೆಗಳಿಗೆ ಸಿಂಹ, ಧ್ವಜ, ವೃಷಭಾಯಗಳೂ ಉತ್ತಮ. ಕೊಳ, ಬಾವಿಗಳಿಗೆ ಗಜಾಯವೂ ಪೀಠಕ್ಕೆ ಸಿಂಹಾಯವೂ ಮ್ಲೇಚ್ಛರಿಗೆ ಶುನಕಾಯವೂ ವೈಶ್ಯರಿಗೆ ಖರಾಯವೂ ಶ್ರೇಷ್ಠ. ಕ್ಷೇತ್ರಫಲವನ್ನು ಒಂಬತ್ತರಿಂದ ಗುಣಿಸಿ ಏಳರಿಂದ ಭಾಗಿಸಿದರೆ ನಿಂತ ಶೇಷ ಕ್ರಮವಾಗಿ ಭಾನುವಾರಾದಿಯಾಗಿ ವಾರಗಳನ್ನು ಸೂಚಿಸುತ್ತದೆ. ಶುಭ ಗ್ರಹಗಳ ವಾರವಾದರೆ ಒಳ್ಳೆಯ ಫಲ. ಕ್ಷೇತ್ರಫಲವನ್ನು ಆರರಿಂದ ಗುಣಿಸಿ ಒಂಬತ್ತರಿಂದ ಭಾಗಿಸಿ ನಿಂತ ಶೇಷ ಅಂಶವಾಗುತ್ತದೆ. ಅಧಿಕಾಂಶ ಬಂದರೆ ಶುಭಪ್ರದ. ಎಂಟರಿಂದ ಗುಣಿಸಿ ಹನ್ನೆರಡರಿಂದ ಭಾಗಿಸಿ ನಿಂತ ಶೇಷ ಧನ ಎಂದರೆ ಲಾಭವನ್ನು ಸೂಚಿಸುತ್ತದೆ. ಮೂರರಿಂದ ಗುಣಿಸಿ ಎಂಟರಿಂದ ಭಾಗಿಸಿ ನಿಂತ ಶೇಷ ಋಣ ಎಂದರೆ ನಷ್ಟವನ್ನು ಸೂಚಿಸುತ್ತದೆ. ನಷ್ಟಕ್ಕಿಂತ ಲಾಭ ಅಧಿಕವಾಗಿದ್ದರೆ ಶುಭಪ್ರದ. ಎಂಟರಿಂದ ಗುಣಿಸಿ ಇಪ್ಪತ್ತೇಳರಿಂದ ಭಾಗಿಸಿ ನಿಂತ ಶೇಷ ಅಶ್ವಿನ್ಯಾದಿ ನಕ್ಷತ್ರಗಳನ್ನು ಸೂಚಿಸುತ್ತದೆ. ಶುಭನಕ್ಷತ್ರವಾಗಿದ್ದು ಗೃಹದ ಯಜಮಾನನಿಗೆ ಅನುಕೂಲ ತಾರೆ ಆದರೆ ಶುಭಪ್ರದ.

ಕ್ಷೇತ್ರಫಲವನ್ನು ಎಂಟರಿಂದ ಗುಣಿಸಿ ಹದಿನೈದರಿಂದ ಭಾಗಿಸಿದರೆ ನಿಂತ ಶೇಷ ತಿಥಿಯನ್ನು ಸೂಚಿಸುತ್ತದೆ. ಶುಭತಿಥಿ ಶುಭಪ್ರದ. ಕ್ಷೇತ್ರಫಲವನ್ನು ನಾಲ್ಕರಿಂದ ಗುಣಿಸಿ ಇಪ್ಪತ್ತೇಳರಿಂದ ಭಾಗಿಸಿ ನಿಂತ ಶೇಷ ಯೋಗವನ್ನು ಸೂಚಿಸುತ್ತದೆ. ಶುಭಯೋಗವಾದರೆ ಶುಭ.

ಕ್ಷೇತ್ರಫಲವನ್ನು ಎಂಟರಿಂದ ಗುಣಿಸಿ ನೂರಿಪ್ಪತ್ತರಿಂದ ಭಾಗಿಸಿದರೆ ನಿಂತ ಶೇಷ ಆಯುಸ್ಸನ್ನು ಸೂಚಿಸುತ್ತದೆ. ಇದರಲ್ಲಿ ತಾರುಣ್ಯಾವಸ್ಥೆ ಶುಭಪ್ರದ.

ಈ ಎಲ್ಲದರಲ್ಲೂ ಶುಭಫಲದ್ಯೋತಕವಾದ ಆಯ ಶುಭ. ಈ ಅಳತೆಯ ನಿವೇಶನದಲ್ಲಿ ಕಟ್ಟಡವನ್ನು ಕಟ್ಟಿದರೆ ಯಜಮಾನನಿಗೆ ಸುಖಪ್ರದವಾಗಿರುತ್ತದೆ.

ಅಗಲದಷ್ಟೇ ಎತ್ತರವಿರುವ ಗೃಹ ಒಳ್ಳೆಯದು. ವಿಸ್ತಾರಕ್ಕೆ ಎರಡರಷ್ಟು ಉದ್ದವಿದ್ದರೆ ಏಕಶಾಲಾ ಎಂದೂ ಎರಡರಷ್ಟಿದ್ದರೆ ದ್ವಿಶಾಲಾ ಎಂದೂ ಮೂರರಷ್ಟಿದ್ದರೆ ತ್ರಿಶಾಲಾ ಎಂದೂ ನಾಲ್ಕರಷ್ಟಾದರೆ ಚತುಃಶಾಲಾ ಎಂದೂ ಕರೆಯುತ್ತಾರೆ. ಉದ್ದ ಅಗಲದ ಐದರಷ್ಟಕ್ಕಿಂತ ಮೀರಬಾರದು.

ಸ್ನಾನಾಗಾರಂ ದಿಶಿಪ್ರಾಚ್ಯಾಮಾಗ್ನೇಯ್ಯಾಂ ಚ ಮಹಾನಸಂ
ಯಾಮ್ಯಾಯಾಂ ಶಯನಾಗಾರಂ ನೈಋತ್ಯಾಂ ವಸ್ತ್ರಮಂದಿರಂ ।
ವಾರುಣ್ಯಾಂ ಭೋಜನಗೃಹಂ ವಾಯವ್ಯಾಂ ಪಶುಮಂದಿರಂ
ಭಂಡಾರವೇಶ್ಮೋತ್ತರಸ್ಯಾಮೈಶಾನ್ಯಾಂ ದೇವತಾಲಯಂ ॥

ಎಂದು ನಾರದ ತಿಳಿಸಿರುವಂತೆ ಮನೆಯ ಪೂರ್ವ ವಿಭಾಗದಲ್ಲಿ ಸ್ನಾನಗೃಹವೂ ಆಗ್ನೇಯ ವಿಭಾಗದಲ್ಲಿ ಅಡಿಗೆಮನೆಯೂ ದಕ್ಷಿಣ ವಿಭಾಗದಲ್ಲಿ ಮಲಗುವ ಮನೆಯೂ ನೈಋತ್ಯ ವಿಭಾಗದಲ್ಲಿ ವಸ್ತ್ರಮಂದಿರವೂ ಪಶ್ಚಿಮ ವಿಭಾಗದಲ್ಲಿ ಊಟದ ಮನೆಯೂ ವಾಯವ್ಯ ವಿಭಾಗದಲ್ಲಿ ದನದ ಕೊಟ್ಟಿಗೆಯೂ ಉತ್ತರ ವಿಭಾಗದಲ್ಲಿ ಭಂಡಾರವೂ ಈಶಾನ್ಯ ವಿಭಾಗದಲ್ಲಿ ದೇವರ ಮನೆಯೂ ಇರುವಂತೆ ಮನೆಯನ್ನು ಅಳವಡಿಸಬೇಕು.

ಚೈತ್ರ ಮಾಸದಲ್ಲಿ ಮನೆಯನ್ನು ಕಟ್ಟಲು ಪ್ರಾರಂಭಿಸಿದರೆ ವ್ಯಾಧಿಯೂ ವೈಶಾಖದಲ್ಲಿ ಧನಪ್ರಾಪ್ತಿಯೂ ಜ್ಯೇಷ್ಠದಲ್ಲಿ ಮೃತ್ಯುವೂ ಆಷಾಢದಲ್ಲಿ ಪಶುಹಾನಿಯೂ ಶ್ರಾವಣದಲ್ಲಿ ಮಿತ್ರಲಾಭವೂ ಭಾದ್ರಪದದಲ್ಲಿ ಹಾನಿಯೂ ಆಶ್ವಯುಜದಲ್ಲಿ ಜಗಳವೂ ಕಾರ್ತಿಕದಲ್ಲಿ ಧನಧಾನ್ಯವೃದ್ಧಿಯೂ ಮಾರ್ಗಶೀರ್ಷದಲ್ಲಿ ಧನವೃದ್ಧಿಯೂ ಪುಷ್ಯದಲ್ಲಿ ಕಳ್ಳರ ಭಯವೂ ಮಾಘದಲ್ಲಿ ಹೆಚ್ಚು ಮಕ್ಕಳೂ ಫಾಲ್ಗುನದಲ್ಲಿ ದ್ರವ್ಯಲಾಭವೂ ವಂಶವೃದ್ಧಿಯೂ ಉಂಟಾಗುತ್ತದೆ.

ಮಾಘ ಫಾಲ್ಗುನ ವೈಶಾಖ ಮಾರ್ಗ ಶ್ರವಣ ಕಾರ್ತಿಕಾಃ ।
ಮಾಸಾಸ್ಸ್ಯುರ್ಗೃಹನಿರ್ಮಾಣೇ ಪುತ್ರಾರೋಗ್ಯಧನಪ್ರದಾಃ ॥

ಎಂದು ನಾರದನ ಉಕ್ತಿ.

ಮೇಷ—ವೃಷಭ ಮಾಸಗಳಲ್ಲಿ ಮನೆಯನ್ನು ಕಟ್ಟಿದರೆ ಶುಭಪ್ರದವೂ ಮಿಥುನ ಮಾಸದಲ್ಲಿ ಮರಣಭಯವೂ ಕರ್ಕಾಟಕ ಮಾಸದಲ್ಲಿ ಸೌಖ್ಯವೂ ಸಿಂಹ ಮಾಸದಲ್ಲಿ ಭೃತ್ಯವೃದ್ಧಿಯೂ ಕನ್ಯಾಮಾಸದಲ್ಲಿ ರೋಗವೂ ತುಲಾಮಾಸದಲ್ಲಿ ಸೌಖ್ಯವೂ ವೃಶ್ಚಿಕಮಾಸದಲ್ಲಿ ಧನಧಾನ್ಯವೃದ್ಧಿಯೂ ಧನುರ್ಮಾಸದಲ್ಲಿ ತೊಂದರೆಯೂ ಮಕರಮಾಸದಲ್ಲಿ ಧನಪ್ರಾಪ್ತಿಯೂ ಕುಂಭಮಾಸದಲ್ಲಿ ಲಾಭವೂ ಮೀನಮಾಸದಲ್ಲಿ ಭಯಂಕರ ಸ್ವಪ್ನವೂ ಉಂಟಾಗುತ್ತವೆ.

ಸೂರ್ಯ ಚರ ಮತ್ತು ಸ್ಥಿರ ರಾಶಿಗಳಲ್ಲಿ ಸಂಚರಿಸುವಾಗ ಮನೆಯನ್ನು ಕಟ್ಟಲು ಪ್ರಾರಂಭಿಸಬೇಕು. ದ್ವಿಸ್ವಭಾವ ರಾಶಿಯಲ್ಲಿ ಸಂಚರಿಸುವಾಗ ಮನೆಯ ಕೆಲಸಕ್ಕೆ ಪ್ರಾರಂಭಿಸಿದರೆ ಅಶುಭಫಲ ಉಂಟಾಗುತ್ತದೆ. ಆದರೆ ಈ ಕಾಲದಲ್ಲಿ ಅಡಿಗೆಮನೆ, ಧಾನ್ಯ ಕುಟ್ಟುವ ಮನೆ, ಕೊಟ್ಟಿಗೆಗಳನ್ನು ಕಟ್ಟಲು ಪ್ರಾರಂಭಿಸಬಹುದು. ಸೂರ್ಯ ಮಕರ–ಕುಂಭ ರಾಶಿಗಳಲ್ಲಿರುವಾಗ ಪಶ್ಚಿಮ ಮುಖದ ಮನೆಯನ್ನೂ ವೃಷಭ–ಮೇಷರಾಶಿಗಳಲ್ಲಿರುವಾಗ ದಕ್ಷಿಣ ಮುಖದ ಮನೆಯನ್ನೂ ಸಿಂಹ–ಕರ್ಕಾಟಕರಾಶಿಗಳಲ್ಲಿರುವಾಗ ಪೂರ್ವ ಮುಖದ ಮನೆಯನ್ನೂ ತುಲಾ-ವೃಶ್ಚಿಕ ರಾಶಿಗಳಲ್ಲಿರುವಾಗ ಉತ್ತರ ಮುಖದ ಮನೆಯನ್ನೂ ಕಟ್ಟಲು ಪ್ರಾರಂಭಿಸುವುದು ಒಳ್ಳೆಯದು. ಭರಣಿ-ಕೃತ್ತಿಕಾ ನಕ್ಷತ್ರಗಳಲ್ಲಿ ಸೂರ್ಯನಿರುವಾಗ ಗೃಹಾರಂಭವನ್ನು ಮಾಡಕೂಡದೆಂದು ಕೆಲವರ ಅಭಿಪ್ರಾಯ.

ಅನೂರಾಧ, ರೋಹಿಣಿ, ರೇವತಿ, ಪುಷ್ಯ, ಉತ್ತರಾ, ಉತ್ತರಾಷಾಢ, ಉತ್ತರಾಭಾದ್ರ, ಮೃಗಶಿರ, ಹಸ್ತ—ಈ ಒಂಬತ್ತು ನಕ್ಷತ್ರಗಳು ಗೃಹಾರಂಭಕ್ಕೆ ಪ್ರಶಸ್ತ. ಚಿತ್ತ, ಮೂಲ, ಸ್ವಾತಿ, ಪುನರ್ವಸು, ಧನಿಷ್ಠ, ಶತಭಿಷ–ಈ ಆರು ನಕ್ಷತ್ರಗಳು ಮಧ್ಯಮ. ಉಳಿದವು ಅಶುಭಗಳು. ಸ್ಥಿರ ಮತ್ತು ಊರ್ಧ್ವಮುಖ ನಕ್ಷತ್ರಗಳು ಗೃಹಾರಂಭಕ್ಕೆ ಉತ್ತಮ. ಗುರು, ಶನಿ, ಬುಧ, ಶುಕ್ರವಾರಗಳಲ್ಲಿ ಕಟ್ಟಡ ಕಟ್ಟಲು ಪ್ರಾರಂಭಿಸುವುದು ಉತ್ತಮ. ಸೋಮವಾರ ಮಧ್ಯಮ.

ರೋಹಿಣಿ, ಮೃಗಶಿರ, ಪುಷ್ಯ ನಕ್ಷತ್ರಗಳಲ್ಲಿ ಪೂರ್ವಾಭಿಮುಖ ಮನೆಯನ್ನೂ ಮಖ, ಸ್ವಾತಿ, ಭರಣಿ ನಕ್ಷತ್ರಗಳಲ್ಲಿ ದಕ್ಷಿಣಾಭಿಮುಖ ಮನೆಯನ್ನೂ ಉತ್ತರಾಷಾಢ, ಶ್ರವಣ, ಮಖ ಮೂಲ ನಕ್ಷತ್ರಗಳಲ್ಲಿ ಪಶ್ಚಿಮ ಮುಖದ ಮನೆಯನ್ನೂ ಶ್ರವಣ ಉತ್ತರಾಭಾದ್ರ, ಅಶ್ವಿನಿ, ಶತಭಿಷಾ ನಕ್ಷತ್ರಗಳಲ್ಲಿ ಉತ್ತರ ಮುಖದ ಮನೆಯನ್ನೂ ಕಟ್ಟುವುದು ಶುಭಫಲಪ್ರದ. ವೃಷಭ ರಾಶಿಯನ್ನು ಬಿಟ್ಟು ಉಳಿದ ಪೃಷ್ಠೋದಯ ರಾಶಿಗಳಲ್ಲಿ ಮನೆಕೆಲಸವನ್ನು ಪ್ರಾರಂಭಿಸಬಾರದು.

ಮನೆ ಕಟ್ಟುವ ಯಜಮಾನನಿಗೆ ಶುಭಗ್ರಹದಶಾಫಲಗಳು ನಡೆಯುವ ಕಾಲದಲ್ಲಿ ಗೃಹನಿರ್ಮಾಣಕಾರ್ಯವನ್ನು ಪ್ರಾರಂಭಿಸಬೇಕು. ಗೃಹಾರಂಭ ಲಗ್ನಕ್ಕೆ ಅಷ್ಟಮಶುದ್ಧಿ ಇರಬೇಕು. ಕೇಂದ್ರಗಳಲ್ಲಿ (1, 4, 7, 10ನೆಯ ಸ್ಥಾನಗಳಲ್ಲಿ) ಶುಭಗ್ರಹಗಳಿರಬೇಕು. ಪಾಪಗ್ರಹಗಳು 3, 6, 11ನೆಯ ಸ್ಥಾನಗಳಲ್ಲಿರಬೇಕು. ಶುಕ್ರ ಸಪ್ತಮಸ್ಥಾನದಲ್ಲಿ ಇರಕೂಡದು. ಎಂಟು ಮತ್ತು ಹನ್ನೆರಡನೆಯ ಸ್ಥಾನಗಳಲ್ಲಿ ಗ್ರಹ ಇರಕೂಡದು. ಲಗ್ನದಲ್ಲಿ ಚಂದ್ರನಿರಬಾರದು. ಈ ಅಂಶಗಳನ್ನೆಲ್ಲ ಗಮನಿಸಿ ಶುಭಕಾಲದಲ್ಲಿ ಗೃಹಾರಂಭ ಮಾಡಿದರೆ ಶುಭಪ್ರದವಾಗುತ್ತದೆ.

ರೇವತಿ, ಪುಷ್ಯ, ಮಖ, ಕೃತ್ತಿಕಾ, ಹಸ್ತ, ಮೂಲ—ಈ ನಕ್ಷತ್ರಗಳಲ್ಲಿ ಅಂಗಾರಕನಿದ್ದಾಗ ಮನೆಯನ್ನು ಕಟ್ಟಿದರೆ ಬೆಂಕಿ ಮನೆಯನ್ನು ಸುಡುತ್ತದೆ ಮತ್ತು ಪ್ರಾಣಕ್ಷಯವಾಗುತ್ತದೆ.

ಜ್ಯೇಷ್ಠ, ಪೂರ್ವಾಭಾದ್ರ, ಉತ್ತರಾಭಾದ್ರ, ಭರಣಿ, ಸ್ವಾತಿ, ಅನೂರಾಧಾ ನಕ್ಷತ್ರಗಳಲ್ಲಿ ಕಟ್ಟಿದ ಮನೆಯಲ್ಲಿ ಯಕ್ಷಾದಿ ಪೀಡೆ ಇರುತ್ತದೆ. ಇದರಲ್ಲಿ ಧಾನ್ಯ ಗೃಹವನ್ನು ಕಟ್ಟಿದರೆ ಶುಭಪ್ರದ.

ಪೂರ್ವಾಷಾಢ, ಶ್ರವಣ, ಉತ್ತರ, ಉತ್ತರಾಷಾಢ, ಉತ್ತರಭಾದ್ರ, ರೋಹಿಣಿ ನಕ್ಷತ್ರಗಳಲ್ಲಿ ಗುರುವಿರುವಾಗ ಕಟ್ಟಿದ ಮನೆ ಕ್ಷತ್ರಿಯರಿಗೆ ಶುಭಪ್ರದ.

ಚಿತ್ರ, ಅಶ್ವಿನಿ, ವಿಶಾಖ, ಧನಿಷ್ಠಾ ನಕ್ಷತ್ರಗಳಲ್ಲಿ ಶುಕ್ರನಿರುವಾಗ ಕಟ್ಟಿಸಿದ ನಾಟ್ಯಗೃಹ ಮತ್ತು ದೇವಗೃಹ ಶುಭಫಲಪ್ರದ.

ಪುನರ್ವಸು ನಕ್ಷತ್ರದಲ್ಲಿ ಚಂದ್ರನಿರುವಾಗ ಸೂತಿಕಾಗೃಹವನ್ನು ರಚಿಸಬಹುದು.

ಮನೆಯನ್ನು ಕಟ್ಟಲು ಪ್ಲಕ್ಷ (ಜುಲ್ಲಿ), ಉದುಂಬರ (ಅತ್ತಿ), ವಿಭೀತಕ (ತಾರೆ), ವಟ (ಆಲ), ಅಶ್ವತ್ಥ, ಕಪಿತ್ಥ (ಬೇಲ), ಶಿಗ್ರು (ನುಗ್ಗೆ), ತಿಂತ್ರಿಣಿ (ಹುಣಸೆ) ನೆರಳಿಗಾಗಿ ಹಾಕಿರುವ ಮರ, ಮುಳ್ಳಿರುವ ಗಿಡ, ಬಳ್ಳಿಹಬ್ಬಿರುವ ಗಿಡ, ಕೆರೆ, ದೇವಾಲಯ, ಶ್ಮಶಾನದಲ್ಲಿರುವ ಗಿಡ, ಪೊಟ್ಟರೆ ಇರುವ ಮರ, ಸುಟ್ಟ ಮರ, ಆನೆ ಕೆಡವಿದ ಮರ—ಇವನ್ನು ಉಪಯೋಗಿಸಕೂಡದು.

ಕಡಿಯುವುದಕ್ಕೆ ಹಿಂದಿನ ರಾತ್ರಿ ಮರಕ್ಕೆ ಬಲಿಪ್ರದಾನ ಮಾಡಿ ಪೂಜಿಸಿ ಮಾರನೆಯ ಹಗಲಿನಲ್ಲಿ ಕಡಿಯಬೇಕು. ಶುಭವಾರ, ನಕ್ಷತ್ರ, ತಿಥಿ, ಯೋಗ, ಕರಣಗಳಿಂದ ಕೂಡಿ ಯಜಮಾನನಿಗೆ ಚಂದ್ರತಾರಾಬಲವಿರುವ ಶುಭದಿನದಲ್ಲಿ ಹಗಲು ಒಳ್ಳೆಯ ಲಗ್ನದಲ್ಲಿ ಉತ್ತರ ಅಥವಾ ಪೂರ್ವಾಭಿಮುಖವಾಗಿ ನಿಂತುಕೊಂಡು ಉದ್ದಿಷ್ಟವಾದ ಮರವನ್ನು ಕಡಿಯಬೇಕು.

ಮನೆಗೆ ಚೌಕಟ್ಟು, ಕಿಟಕಿ ಇವುಗಳನ್ನು ಒಳ್ಳೆಯ ದಿನದಲ್ಲಿ ನಿಲ್ಲಿಸಬೇಕು. ಮನೆಯ ಆವರಣವನ್ನು ಮುಚ್ಚುವುದಕ್ಕೂ ಶುಭದಿನಗಳನ್ನು ಗಮನಿಸಬೇಕು.

ಮನೆ ಸಿದ್ಧವಾದ ಮೇಲೆ ಸ್ಥಿರ, ಮೃದು ನಕ್ಷತ್ರಗಳಲ್ಲಿ ಮತ್ತು ಸ್ಥಿರರಾಶಿಗಳಲ್ಲಿ ಗೃಹವನ್ನು ಪ್ರವೇಶಿಸಬೇಕು. ಚರರಾಶಿ ಕೂಡದು. ಚರರಾಶಿ ಆದರೂ ಅದರಲ್ಲಿ ವೃಷಭಾಂಶವಾದರೆ ಶುಭಪ್ರದ. ಗೃಹಪ್ರವೇಶ ಲಗ್ನಕ್ಕೆ 4, 7, 8, 10, 12ನೆಯ ಸ್ಥಾನಗಳು ಶುದ್ಧವಾಗಿರಬೇಕು. ಲಗ್ನಕೇಂದ್ರದಲ್ಲಿ ಗುರುವಿರುವುದು ಒಳ್ಳೆಯದು.

ಗೃಹಪ್ರವೇಶ ಕಾಲದಲ್ಲಿ ಶುಕ್ರ ಪೃಷ್ಠಭಾಗದಲ್ಲಾಗಲೀ ದಕ್ಷಿಣಕ್ಕಾಗಲೀ ಇರುವುದು ಅನುಕೂಲ. ಮುಂದೆ ಅಥವಾ ವಾಮಭಾಗದಲ್ಲಿರುವುದು ಅಶುಭಪ್ರದ.

ದೇವಾಲಯದ ನಿರ್ಮಾಣದಲ್ಲಿ ಸಾಮಾನ್ಯ ಗೃಹನಿರ್ಮಾಣಕ್ಕಿಂತ ವಿಶೇಷಾಂಶಗಳನ್ನು ಗಮನಿಸಬೇಕಾಗುತ್ತದೆ. ಈ ವಿಷಯಗಳು ಶೈವ, ಪಾಂಚರಾತ್ರ, ವೈಖಾನಸ ಮೊದಲಾದ ಆಗಮಗಳಲ್ಲಿ ವಿವರವಾಗಿ ವರ್ಣಿತವಾಗಿವೆ. (ಎಸ್.ಎನ್.ಕೆ.)

**ಕಟ್ಟಳೆಗಳು, ಶೈಕ್ಷಣಿಕ:** ಸಾರ್ವಜನಿಕ ಶಿಕ್ಷಣದ ಯಾವುದಾದರೂ ನಿರ್ದಿಷ್ಟ ಕ್ಷೇತ್ರಕ್ಕೆ ಸಂಬಂಧಿಸಿದಂತೆ ಅಂದಿಗಂದಿಗೆ ರೂಪುಗೊಂಡು ಸದ್ಯದಲ್ಲಿ ಆಚರಣೆಯಲ್ಲಿರುವ ಶಾಸನ, ಅಧಿಕೃತ ಆಜ್ಞೆ, ವ್ಯವಹಾರ ವಿಧಿ, ಕಾನೂನು ಬದ್ಧ ಸಾಂಪ್ರದಾಯಿಕ ನಿಬಂಧನೆ, ಲಿಖಿತಸೂತ್ರ ಇತ್ಯಾದಿಗಳನ್ನು ಸಂಗ್ರಹಿಸಿ ವ್ಯವಸ್ಥಿತ ರೀತಿಯಲ್ಲಿ ಜೋಡಿಸಿರುವ ನಿಯಮಾವಳಿ (ಕೋಡ್ಸ್, ಎಜುಕೇಷನಲ್). ಉದಾ : ಶಾಲೆಯ ಮಕ್ಕಳ ನಡವಳಿಕೆಗೆ ಸಂಬಂಧಿಸಿದ ಶಾಲೆಯ ಕಟ್ಟಳೆ, ಖಾಸಗಿ ಮತ್ತು ಸ್ಥಳೀಯ ಸರ್ಕಾರದ ಶಿಕ್ಷಣಸಂಸ್ಥೆಗಳಿಗೆ ಸಹಾಯಧನ ನೀಡಲು ಆಧಾರವೆನಿಸಿಸುವ ಸಹಾಯಕ ಅನುದಾನ ಕಟ್ಟಳೆ, ಇತ್ಯಾದಿ. ಕೆಲವು ವೇಳೆ ರಾಜ್ಯವೊಂದರ ಶಿಕ್ಷಣಕ್ಷೇತ್ರದಲ್ಲಿ ಆಚರಣೆಯಲ್ಲಿರುವ ಸಮಗ್ರ ವಿಧಿನಿಯಮಾದಿಗಳಿಗೆಲ್ಲ ಒಟ್ಟಿಗೆ ಈ ಹೆಸರನ್ನು ಬಳಸುವುದುಂಟು. ಆ ಕಾನೂನುಗಳು ಅಧಿಕೃತವಾಗಿ ಹೊರಟವಾಗಿರಬಹುದು. ಅನಧಿಕೃತವಾಗಿದ್ದು ಆಚರಣೆಯಲ್ಲಿರತಕ್ಕವೂ ಆಗಿರಬಹುದು. ಆದರೆ ಅವೆಲ್ಲ ಲಿಖಿತರೂಪದಲ್ಲಿರತಕ್ಕವೇ ಆಗಿರಬೇಕು. ಹಾಗೆ ಸಂಗ್ರಹಿಸತಕ್ಕ ಕಟ್ಟಳೆ ಸಾರ್ವಜನಿಕ ಶಿಕ್ಷಣದ ಒಂದು ವಿಶಾಲ ಕ್ಷೇತ್ರಕ್ಕೆ ಸಂಬಂಧಿಸಿರಬಹುದು (ಉದಾ : ಶೈಕ್ಷಣಿಕ ಹಣಕಾಸಿನ ಕಟ್ಟಳೆ) ಅಥವಾ ಅದರ ಒಂದು ಸಂಕುಚಿತ ಕ್ಷೇತ್ರಕ್ಕೆ ಸಂಬಂಧಿಸಿರಬಹುದು (ಉದಾ : ಪರೀಕ್ಷೆಗೆ

ಸಂಬಂಧಿಸಿದ ಕಟ್ಟಳೆ). ಯಾವ ಕ್ಷೇತ್ರಕ್ಕೆ ಸಂಬಂಧಿಸಿದವೇ ಆಗಲಿ ಅವೆಲ್ಲ ಲಿಖಿತ ರೂಪದಲ್ಲಿದ್ದು, ಆ ಕ್ಷೇತ್ರದ ಶೈಕ್ಷಣಿಕ ಕಾರ್ಯಾಚರಣೆಗೂ ಕಾರ್ಯಕ್ರಮಗಳಿಗೂ ಸಮಗ್ರತೆಯನ್ನೂ ಸಂಬದ್ಧತೆಯನನ್ನೂ ತರುವ ರೂಪದಲ್ಲಿರುತ್ತವೆ. ಶೈಕ್ಷಣಿಕ ಕಟ್ಟಳೆಗಳಲ್ಲಿ ಬಹುಮುಖ್ಯವೆನಿಸಿದ ಸಹಾಯಧನ ಕಟ್ಟಳೆಯನ್ನು ಮಾತ್ರ ಈ ಲೇಖನದಲ್ಲಿ ವಿಶದವಾಗಿ ಪರಿಶೀಲಿಸಲಾಗಿದೆ. ಬೇರೆಬೇರೆ ಕಾಲಗಳಲ್ಲಿ ರೂಪಿಸಲಾದ ಆ ನಿಯಮಗಳಲ್ಲಿ ಒಂದಕ್ಕೊಂದಕ್ಕೆ ಇರಬಹುದಾದ ಗೊಂದಲ, ಭಿನ್ನತೆ ಇತ್ಯಾದಿಗಳನ್ನು ನಿವಾರಿಸಿ ಸಾಮಂಜಸ್ಯವನ್ನು ತರುವಂತೆಯೂ ಉದ್ದೇಶಿಸಿದ ಅರ್ಥವನ್ನು ಮೂಡಿಸುವಂತೆಯೂ ಅವು ಕ್ರೋಡೀಕೃತವಾಗಿರುತ್ತವೆ.

**ಕಟ್ಟಳೆಯನ್ನು ಕ್ರೋಡೀಕರಿಸುವ ಕ್ರಮ :** ಸದ್ಯದಲ್ಲಿ ಆಚರಣೆಯಲ್ಲಿರುವ ಹಾಗೂ ಶಾಶ್ವತರೀತಿಯ ಕಾನೂನುಗಳನ್ನೆಲ್ಲ ಕ್ಷೇತ್ರಾನುಕ್ರಮವಾಗಿ ಒಂದೆಡೆ ಜೋಡಿಸುವುದು ಕಟ್ಟಳೆಯ ಕ್ರೋಡೀಕರಣದಲ್ಲಿ ಅನುಸರಿಸಲಾಗುತ್ತಿರುವ ಸಾಮಾನ್ಯ ವಿಧಾನ. ಅದರಲ್ಲಿ ತೊಡೆದು ಹಾಕಿರುವ, ಸ್ಥಳೀಯವಾಗಿರುವ ಅಥವಾ ವಿಶಿಷ್ಟವೂ ತಾತ್ಕಾಲಿಕವೂ ಆಗಿರುವ ವಿಧಿನಿಯಮಾದಿಗಳನ್ನು ಸೇರಿಸುವಂತಿಲ್ಲ. ತಿದ್ದುಪಡಿಯಾಗಿರತಕ್ಕ ವಿಧಿನಿಯಮಗಳನ್ನು ಅವುಗಳ ತಿದ್ದಿದ ಸ್ವರೂಪದಲ್ಲಿ ಸೇರಿಸಬೇಕು. ಒಮ್ಮೆ ಹೀಗೆ ಕ್ರೋಡೀಕರಿಸಿದ ಕಟ್ಟಳೆಯನ್ನು ಮತ್ತೆ ನೂತನ ಕಾನೂನುಗಳನ್ನಾಗಿ ಅಂಗೀಕರಿಸದಿರುವುದೂ ಮೂಲ ಕಾನೂನುಗಳ ಪಾಠದಲ್ಲಿ ಬದಲಾವಣೆ ಮಾಡದಿರುವುದೂ ಕ್ರೋಡೀಕರಣದ ಎರಡು ವಿಶಿಷ್ಟ ಲಕ್ಷಣಗಳು. ಹಾಗೆ ಕ್ರೋಡೀಕರಿಸಿದ ನಿಯಮಾವಳಿಯ ಒಂದೊಂದು ನಿಯಮಕ್ಕೂ ಅಧಿಕೃತ ಬೆಂಬಲವನ್ನು ದೊರಕಿಸಲಾಗದಿದ್ದರೂ ಅವೆಲ್ಲ ಸದ್ಯದಲ್ಲಿ ಆಚರಣೆಯಲ್ಲಿದೆಯೆಂಬ ಅಧಿಕೃತ ಬೆಂಬಲವನ್ನಾದರೂ ನೀಡಬೇಕಾಗುತ್ತದೆ. ಬೇರೆಬೇರೆ ಕ್ಷೇತ್ರಗಳಿಗೆ ಸಂಬಂಧಿಸಿದ ನಿಯಮಗಳಲ್ಲಿರಬಹುದಾದ ಸೌಲಭ್ಯಗಳನ್ನು ಆಯ್ದು ಪ್ರತ್ಯೇಕ ಕ್ಷೇತ್ರವೊಂದರ ಕಟ್ಟಳೆಯ ಅಂಗವಾಗಿ ಸೇರಿಸುವಂತಿಲ್ಲ. ಹಾಗೆಯೆ, ಭಿನ್ನರೀತಿಯ ಸೌಲಭ್ಯಗಳನ್ನು ಒಳಗೊಂಡಂತೆ ತೋರುವ ನಿಯಮಗಳನ್ನೂ ಕೈಬಿಡುವಂತಿಲ್ಲ.

**ಕ್ರೋಡೀಕರಣದ ಅಗತ್ಯ :** ಸಾರ್ವಜನಿಕ ಶಿಕ್ಷಣಕ್ಕೆ ಸಂಬಂಧಿಸಿದ ಮತ್ತು ಸದ್ಯದಲ್ಲಿ ಆಚರಣೆಯಲ್ಲಿರುವ ಕಾನೂನುಗಳು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಅಧಿಕಾರ ಮೂಲಗಳಿಂದ ಬೇರೆ ಬೇರೆ ಕ್ಷೇತ್ರಗಳಿಗೆ ಸಂಬಂಧಿಸಿದಂತೆ ಹೊರಟಿರುತ್ತವೆ. ಅವುಗಳಲ್ಲಿ ಕೆಲವು ವ್ಯವಹಾರದಲ್ಲಿರುವ ಲಿಖಿತ ನಿಯಮಗಳು. ಇನ್ನು ಕೆಲವು ರಾಜ್ಯದ ಶಾಸನ ಸಭೆ ಅಂಗೀಕರಿಸಿದವು. ಮತ್ತೆ ಕೆಲವು ನ್ಯಾಯಾಲಯ ನೀಡಿದ ತೀರ್ಮಾನ, ಅಭಿಪ್ರಾಯ ಮತ್ತು ಅವುಗಳಿಂದ ಉದ್ಭವಿಸಿದವು. ಇನ್ನು ಕೆಲವು ಕಾರ್ಯನಿರ್ವಾಹಕಾಂಗ ಕಾನೂನಿಗೆ ವಿರುದ್ಧವೆನಿಸದಂತೆ ರೂಪಿಸಿದವು ಅಥವಾ ಸಾಂಪ್ರದಾಯಿಕ ನಿಯಮಗಳಿಗೆ ಪೂರಕವಾಗುವಂತೆ ಅನುಗೊಳಿಸಿದವು. ಒಂದು ನಿರ್ದಿಷ್ಟ ಕ್ಷೇತ್ರಕ್ಕೆ ಸಂಬಂಧಿಸಿದ ಆ ನಿಯಮಗಳೆಲ್ಲ ಅವುಗಳ ಸದ್ಯದ ಸ್ವರೂಪದಲ್ಲಿ ಒಂದು ಕಡೆ ಕಾರ್ಯನಿರತರ ಮುಂದಿರುವುದು ಅಗತ್ಯ. ಆದ್ದರಿಂದ ಆಯಾ ಕ್ಷೇತ್ರಕ್ಕೆ ಸಂಬಂಧಿಸಿದ ನಿಯಮಗಳನ್ನೆಲ್ಲ ಆಯ್ದು ಅವುಗಳ ಸದ್ಯದ ಸ್ವರೂಪದಲ್ಲಿ ವ್ಯವಸ್ಥಿತ ರೀತಿಯಲ್ಲಿ ಕ್ರೋಡೀಕರಿಸಿ ಸಿದ್ಧಪಡಿಸುವುದು ಆಡಳಿತ ಸೌಲಭ್ಯಕ್ಕೆ ಅನಿವಾರ್ಯವಾಗುತ್ತದೆ.

**ಕಟ್ಟಳೆಯ ಪುನರ್ವಿಮರ್ಶೆ :** ಸದ್ಯದಲ್ಲಿ ಆಚರಣೆಯಲ್ಲಿರುವ ಶಾಶ್ವತ ರೀತಿಯ ಮತ್ತು ಸಾರ್ವತ್ರಿಕ ಸ್ವರೂಪದ ನಿಯಮಗಳನ್ನು ವ್ಯವಸ್ಥಿತ ರೀತಿಯಲ್ಲಿ ಕ್ರೋಡೀಕರಿಸುವುದರ ಜೊತೆಗೆ ಅಧಿಕೃತ ವ್ಯಕ್ತಿ ಅಥವಾ ಮಂಡಲಿ ಪುನರ್ವಿಮರ್ಶಿಸುವುದೂ ಅಗತ್ಯ. ಹಾಗೆ ಪುನರ್ವಿಮರ್ಶಿತ ನಿಯಮಾವಳಿ ಮತ್ತೆ ಶಾಸನ ಸಭೆಯ ಅಂಗೀಕಾರ ಪಡೆಯಬೇಕಾಗುವುದು. ಸಾಮಾನ್ಯವಾಗಿ ಶಾಸನ ಸಭೆ ಇಡೀ ನಿಯಮಾವಳಿಯನ್ನು ಒಟ್ಟಿಗೆ ಅಂಗೀಕರಿಸಲು ಅನೇಕ ವೇಳೆ ಇಚ್ಛಿಸುವುದಿಲ್ಲ. ಅದರ ಒಂದೊಂದು ನಿಯಮವನ್ನೂ ಪ್ರತ್ಯೇಕವಾಗಿ ಪರಿಶೀಲನೆಗೆ ತೆಗೆದುಕೊಳ್ಳಲು ಬಯಸುವುದುಂಟು. ಪುನರ್ವಿಮರ್ಶೆ ಲಖಿತ ನಿಯಮಾದಿಗಳಿಗೆ ಮಾತ್ರವೇ ಹೊರತು ಲಿಖಿತವಲ್ಲದವಕ್ಕೆ ಅನ್ವಯಿಸುವುದಿಲ್ಲ. ಕೆಲವು ವೇಳೆ ಪುನರ್ವಿಮರ್ಶೆಗಿಂತ ಹೆಚ್ಚು ವ್ಯಾಪಕವೆನ್ನಬಹುದಾದ ರೀತಿಯಲ್ಲಿ ಕ್ರೋಡೀಕರಿಸುವುದೂ ಉಂಟು. ಸರ್ವಮಾನ್ಯ ಲಿಖಿತ ಕಾನೂನುಗಳಲ್ಲಿ ಕಂಡುಬರುವ ಲೋಪದೋಷಗಳನ್ನು ನಿವಾರಿಸುವುದೇ ಇದರ ಉದ್ದೇಶ.

**ಸಹಾಯಧನದ ಕಟ್ಟಳೆ :** ಸಾರ್ವಜನಿಕ ಶಿಕ್ಷಣದಲ್ಲಿ ಸರ್ಕಾರದ ಸಂಸ್ಥೆಗಳಂತೆ ಖಾಸಗಿ ಮತ್ತು ಸ್ಥಳೀಯ ಸರ್ಕಾರದ ಸಂಸ್ಥೆಗಳೂ ಪಾತ್ರವಹಿಸುತ್ತಿವೆ. ಪ್ರಾಥಮಿಕ ಕ್ಷೇತ್ರದಲ್ಲಿ ಸರ್ಕಾರದ ಸಂಸ್ಥೆಗಳೇ ಪ್ರಧಾನವಾಗಿದ್ದರೂ ಪ್ರಾಥಮಿಕ ಪೂರ್ವ, ಪ್ರೌಢ ಮತ್ತು ಉನ್ನತ ಶಿಕ್ಷಣಕ್ಷೇತ್ರಗಳಲ್ಲಿ ಖಾಸಗಿ ಮತ್ತು ಸ್ಥಳೀಯ ಸರ್ಕಾರದ ಶಿಕ್ಷಣ ಸಂಸ್ಥೆಗಳು ಅಧಿಕ ಸಂಖ್ಯೆಯಲ್ಲಿವೆ. ಅವೂ ಸಾರ್ವಜನಿಕ ಶಿಕ್ಷಣದಲ್ಲಿ ಭಾಗವಹಿಸುವುದರಿಂದ ಸರ್ಕಾರದ ಧನಸಹಾಯಕ್ಕೆ ಅವು ಅರ್ಹತೆ ಹೊಂದಿರುತ್ತವೆ. ಈ ಸಹಾಯಧನದ (ಸಹಾಯಕ ಅನುದಾನ) ಪದ್ಧತಿ, ಸಹಾಯ ಪಡೆಯತಕ್ಕ ಖಾಸಗಿ ಸಂಸ್ಥೆಯ ಆಡಳಿತ ಮಂಡಲಿ ಇತರ ಮೂಲಗಳಿಂದ ತನ್ನ ಪಾಲಿನ ಒಂದಷ್ಟು ಹಣವನ್ನು ಒದಗಿಸಿಕೊಳ್ಳಬೇಕೆಂಬ ತತ್ತ್ವದ ಮೇಲೆ ಏರ್ಪಟ್ಟಿದೆ. ಸಾಮಾನ್ಯವಾಗಿ ಖಾಸಗಿ ಅಥವಾ ಸ್ಥಳೀಯ ಸರ್ಕಾರಗಳ ಶಿಕ್ಷಣಸಂಸ್ಥೆಗಳಿಗೆ ಅಷ್ಟಾಗಿ ಧನದ ಬೆಂಬಲ ಇಲ್ಲದ್ದರಿಂದ ಅವು ನಡೆಸುತ್ತಿರುವ ಶಿಕ್ಷಣ ಸಂಸ್ಥೆಗಳಲ್ಲಿ ಕಟ್ಟಡ, ಅಧ್ಯಾಪಕ ವರ್ಗ, ಉಪಕರಣಗಳು, ಗ್ರಂಥಾಲಯ, ಪ್ರಯೋಗಾಲಯ—ಇತ್ಯಾದಿ ಸೌಲಭ್ಯಗಳು ಅಷ್ಟು ಸಮರ್ಪಕವಾಗಿರಲಾರವು. ಆದರಿಂದ ಅವು ಸಮರ್ಪಕವಾಗಿ ಕೆಲಸ ಮಾಡಲಾರದೆ ಸಾರ್ವಜನಿಕ ಶಿಕ್ಷಣಸೇವೆಯ ಒಂದು ಪ್ರಧಾನ ಅಂಗ ಕರ್ತವ್ಯವಿಮುಖವಾದಂತಾಗುವುದು. ಹಾಗಾಗದಂತೆ ನೋಡಿಕೊಳ್ಳುವ ತನ್ನ ಹೊಣೆಗಾರಿಕೆಯನ್ನು ನಿರ್ವಹಿಸುವುದಕ್ಕಾಗಿ ಸರ್ಕಾರ ಅದಕ್ಕೆ ಸಹಾಯಧನ ನೀಡಬೇಕಾಗುತ್ತದೆ. ಹಾಗೆ ಸಾರ್ವಜನಿಕ ಬೊಕ್ಕಸದಿಂದ ಖಾಸಗಿ ಸಂಸ್ಥೆಗಳಿಗೆ ಹಣವನ್ನು ನೀಡುವಾಗ ಹಲವು ನೀತಿನಿಯಮಗಳನ್ನು ಅನುಸರಿಸಬೇಕಾಗುತ್ತದೆ. ಆ ನೀತಿನಿಯಮಗಳು ಬೇರೆ ಬೇರೆ ಕಾಲಗಳಲ್ಲಿ ಬೇರೆ ಬೇರೆ ಸಂದರ್ಭಗಳಲ್ಲಿ ಬೇರೆ ಬೇರೆ ಅಧಿಕಾರ ಮೂಲಗಳಿಂದ ರೂಪುಗೊಂಡಿರುತ್ತವೆ. ಸಹಾಯಧನ ನೀಡಿಕೆಗೆ ಸಂಬಂಧಿಸಿದ ಷರತ್ತುಗಳು, ಕಾರ್ಯಕ್ರಮ, ಧನಸಹಾಯದ ಪ್ರಮಾಣವನ್ನು ಸೂಚಿಸುವ ಸೂತ್ರ—ಇವನ್ನೆಲ್ಲ ಒಳಗೊಂಡಂತೆ ರೂಪಿಸಿರುವ ರಾಜ್ಯಸರ್ಕಾರದ ಅಧಿಕೃತ ನಿಯಮಾವಳಿಯೇ ಸಹಾಯಧನದ ಕಟ್ಟಳೆ ಅಥವಾ ಸಹಾಯಕ ಅನುದಾನ ಸಂಹಿತೆ (ಗ್ರಾಂಟ್-ಇನ್-ಏಡ್ ಕೋಡ್). ಈ ನಿಯಮಗಳು ರಾಜ್ಯ ಶಾಸನಗಳ ಮೂಲಕ ಇಲ್ಲವೆ ಸರ್ಕಾರದ ಕಾರ್ಯನಿರ್ವಾಹಕಾಂಗದಿಂದ ರೂಪುಗೊಂಡು, ಅಂದಿಗಂದಿಗೆ ಪುನರ್ವಿಮರ್ಶಿತವಾಗಿ, ತಿದ್ದುಪಡಿಯಾಗಿ ಅಥವಾ ಹೊಸದಾಗಿ ರಚನೆಯಾಗಿ ಲಿಖಿತ ರೂಪದಲ್ಲಿರುತ್ತವೆ. ಸದ್ಯದಲ್ಲಿ ಸಂಬಂಧಿಸಿದ ಹಿಂದಿನ ಎಲ್ಲ ನಿಯಾಮವಳಿಗಳ ಬದಲು ಇದು ಪೂರ್ಣವಾಗಿ ಆಚರಣೆಗೆ ಬಂದಿರುತ್ತದೆ.

ಸಹಾಯಧನಕ್ಕೆ ಅರ್ಹತೆ : ಬೇರೆ ಬೇರೆ ರಾಜ್ಯಗಳಲ್ಲಿ ರೂಪಿಸಿರುವ ಬೇರೆ ಬೇರೆ ಅನುದಾನ ನಿಯಮಾವಳಿಗಳು ರಾಜ್ಯಸರ್ಕಾರದ ಧನಸಹಾಯವನ್ನು ಪಡೆಯಲು ಬೇರೆ ಬೇರೆ ರೀತಿಯ ಷರತ್ತುಗಳನ್ನು ವಿಧಿಸುತ್ತವೆ. ಅವುಗಳಲ್ಲಿ ಮುಖ್ಯವಾದವನ್ನು ಇಲ್ಲಿ ಸೂಚಿಸಿದೆ : 1 ರಾಜ್ಯದ ಶಿಕ್ಷಣಶಾಖೆ ಅಥವಾ ಸರ್ಕಾರದಿಂದ ಅಂಗೀಕೃತವಾದ ವಿಶ್ವವಿದ್ಯಾನಿಲಯ, ಕೊಲಿಜಿಯೆಟ್ ಅಥವಾ ಪ್ರಿ ಯೂನಿವರ್ಸಿಟಿ ಮಂಡಲಿ ನಿರ್ಧರಿಸಿರುವ ಪಠ್ಯಕ್ರಮವನ್ನು ಅನುಸರಿಸಿ ಅದು ಕಟ್ಟಡ, ಉಪಕರಣ ಗ್ರಂಥಾಲಯ, ಪ್ರಯೋಗಾಲಯ, ಅಧ್ಯಾಪಕವರ್ಗ ಇತ್ಯಾದಿಗಳ ಬಗ್ಗೆ ರೂಪಿಸಿರುವ ನೀತಿನಿಯಮಗಳನ್ನು ಪಾಲಿಸಬೇಕು. 2 ಧನಸಹಾಯ ಪಡೆಯತಕ್ಕ ಸಂಸ್ಥೆಗೆ ಪ್ರತ್ಯೇಕ ಆಡಳಿತ ಮಂಡಲಿ ಇರಬೇಕು ; ಅದರಲ್ಲಿ ಖಾಸಗಿ ಸಂಸ್ಥೆಯ ಪ್ರತಿನಿಧಿ, ಸರ್ಕಾರದ ಪ್ರತಿನಿಧಿ, ಅಧ್ಯಾಪಕರ ಪ್ರತಿನಿಧಿ ಮತ್ತು ಆ ಪ್ರದೇಶದಲ್ಲಿ ಶಿಕ್ಷಣದಲ್ಲಿ ಆಸಕ್ತಿಯುಳ್ಳ ಜನತಾ ಪ್ರತಿನಿಧಿ—ಸದಸ್ಯರಾಗಿರಬೇಕು ; ಆ ಮಂಡಲಿಯ ರಚನೆ, ಹೊಣೆಗಾರಿಕೆ, ಅಧಿಕಾರವ್ಯಾಪ್ತಿ ಇತ್ಯಾದಿ ಅಂಶಗಳ ಬಗ್ಗೆ ಅನುದಾನ ನಿಯಮಾವಳಿಯಲ್ಲಿ ಉಲ್ಲೇಖವಿರುತ್ತದೆ. 3 ಅಧ್ಯಾಪಕರನ್ನು ನೇಮಿಸಿಕೊಳ್ಳುವಾಗ ಅವರ ವಿದ್ಯಾರ್ಹತೆ, ವಿಶೇಷ ತರಬೇತು ಸಂಬಳ ಭತ್ಯಗಳು ಮತ್ತು ಇತರ ಸೇವಾ ವಿವರಗಳ ಬಗ್ಗೆ ಸರ್ಕಾರ ಸೂಚಿಸಿರುವ ನಿಯಮಗಳನ್ನು ಪಾಲಿಸಬೇಕು. 4 ಅನುದಾನ ನಿಯಮಾವಳಿಯಲ್ಲಿ ಸೂಚಿಸಿರುವ ಪ್ರಮಾಣದಂತೆ ಆಡಳಿತ ಸಂಸ್ಥೆ ತನ್ನ ಪಾಲಿನ ಹಣವನ್ನು ಒದಗಿಸಬೇಕು.

ಖಾಸಗಿ ಶಾಲೆ ಮತ್ತು ಕಾಲೇಜುಗಳಿಗೆ ಸಂಬಂಧಿಸಿದ ಅನುದಾನ ನಿಯಮಾವಳಿಗಳು : ಸದ್ಯದಲ್ಲಿ ಪ್ರಚಾರದಲ್ಲಿರುವ ಅನುದಾನ ನಿಯಮಾವಳಿಗಳು ಎಲ್ಲ ಶಿಕ್ಷಣ ಸಂಸ್ಥೆಗಳೂ ಸಮಾನವೆಂಬ ದೃಷ್ಟಿಯಲ್ಲಿ ರೂಪುಗೊಂಡಿವೆ. ಇದರಿಂದ ಒಳ್ಳೆಯ ಸಂಸ್ಥೆಗೆ ತಕ್ಕಷ್ಟು ಸಹಾಯಧನದ ಪ್ರೋತ್ಸಾಹ ದೊರೆಯಲಾರದು. ಸರಿಯಾಗಿ ಕೆಲಸ ಮಾಡದ ಸಂಸ್ಥೆಗಳಿಗೂ ಅಧಿಕ ಧನಸಹಾಯ ದೊರಕಬಹುದು. ಅಂಥ ದುರ್ಬಲ ಸಂಸ್ಥೆಗಳಲ್ಲಿ ಅಧ್ಯಾಪಕರ ಸೇವಾವಧಿಯ ಹಕ್ಕು, ಸಂಬಳಗಳ ಬಟವಾಡೆ ಇತ್ಯಾದಿಯಾದ ರಕ್ಷಣೆ ಇರುವುದಿಲ್ಲ; ಕಾರ್ಯಕ್ರಮ, ಶಿಸ್ತು, ಪರೀಕ್ಷಾ ಫಲಿತಾಂಶ ಇತ್ಯಾದಿ ಅಂಶಗಳಲ್ಲೂ ಅವು ತೀರ ಕೆಳಮಟ್ಟದಲ್ಲಿರುತ್ತವೆ. ಅವುಗಳ ಕೆಲಸವನ್ನು ಉತ್ತಮಪಡಿಸಲು ಶಿಕ್ಷಣಶಾಖೆ ವ್ಯಾಪಕವಾದ ಕಟ್ಟುಕಟ್ಟಳೆಗಳನ್ನು ರೂಪಿಸಿ ಅವನ್ನು ಎಲ್ಲ ಖಾಸಗಿ ಶಾಲೆಗಳಿಗೂ ಅನ್ವಯಿಸುತ್ತದೆ. ಇದರಿಂದ ದಕ್ಷತೆಯಿಂದ ಕೆಲಸ ಮಾಡುತ್ತಿರುವ ಸಂಸ್ಥೆಗಳಿಗೆ ಕಿರುಕುಳವುಂಟಾಗಿ ಸ್ವತಂತ್ರ ಸನ್ನಿವೇಶದಲ್ಲಿ ಕೆಲಸ ಮಾಡುವ ಅವಕಾಶ ತಪ್ಪಿಹೋಗಿದೆ. ಈ ತೊಂದರೆಯನ್ನು ತಪ್ಪಿಸಲು ಅನುದಾನ ನಿಯಮಾವಳಿಯಲ್ಲಿ ಒಳ್ಳೆಯ ಮತ್ತು ಕೆಟ್ಟ ಸಂಸ್ಥೆಗಳಲ್ಲಿ ವ್ಯತ್ಯಾಸ ಕಲ್ಪಿಸಿ, ಅನುದಾನ ನೀಡಲು ನೆರವಾಗುವಂತೆ ವಿಭೇದ ಕಲ್ಪಿಸಬಹುದಾದ ಅವಕಾಶವಿರಬೇಕು. ಉತ್ತಮ ಅಧ್ಯಾಪಕ ವರ್ಗವನ್ನು ನೇಮಿಸಿಕೊಂಡು ನಿಷ್ಠೆಯಿಂದ ಕೆಲಸ ಮಾಡುತ್ತ ಹೆಚ್ಚು ದಕ್ಷತೆಯನ್ನು ವ್ಯಕ್ತಪಡಿಸುವ ಸಂಸ್ಥೆಗೆ ಅಧಿಕ ಸ್ವಾತಂತ್ರ್ಯವನ್ನೂ ಹೆಚ್ಚು ಧನಸಹಾಯವನ್ನೂ ನೀಡುವಂತಿರಬೇಕು. ಅಂಥ ದಕ್ಷ ಶಿಕ್ಷಣ ಸಂಸ್ಥೆಗಳಿಂದಲೇ ಶಿಕ್ಷಣರಂಗದಲ್ಲಿ ಪ್ರಗತಿ ಸಾಧ್ಯವಾಗುವುದು. ಕೊ ಠಾ ರಿ ಶಿಕ್ಷಣ

ಆಯೋಗ ಸೂಚಿಸುವಂತೆ ಅವು ಮುಂದಿನ ಶಿಕ್ಷಣ ಸುಧಾರಣೆಯ ಬೆಳೆಗೆ ಬೀಜ ವಿಪ್ಪಂತೆ. ಮಿಕ್ಕ ದುರ್ಬಲ ಶಿಕ್ಷಣ ಸಂಸ್ಥೆಗಳಿಗೆ ಪ್ರತ್ಯೇಕವಾಗಿ ಕಠಿಣ ನಿಯಮಗಳನ್ನು ಸೇರಿಸಬಹುದು. ಆ ಮೂಲಕ ಅವುಗಳ ಕಾರ್ಯಕ್ರಮಗಳ ಬಗ್ಗೆ ಕಟ್ಟುನಿಟ್ಟಾದ ಒತ್ತಾಯವನ್ನು ತರಬಹುದಾದರೂ ಅವಕ್ಕಿರಬಹುದಾದ ಎಡರುತೊಡರುಗಳ ಬಗ್ಗೆ ಸಹಾನುಭೂತಿ ಅಗತ್ಯ. ಆ ಮೂಲಕ ಅಂಥ ದುರ್ಬಲ ಸಂಸ್ಥೆಗಳು ತಮ್ಮ ದಕ್ಷತೆಯನ್ನು ಹೆಚ್ಚಿಸಿಕೊಳ್ಳುವಂತಾಗಬೇಕು. ಹಾಗೆ ಹೆಚ್ಚಿಸಿಕೊಳ್ಳಲಾರದವನ್ನು ಸರ್ಕಾರ ವಹಿಸಿಕೊಳ್ಳಬೇಕು ಅಥವಾ ಮುಚ್ಚಿಬಿಡಬೇಕು.

ಶಿಕ್ಷಣ ಶಾಖೆ ಖಾಸಗಿ ಶಿಕ್ಷಣಸಂಸ್ಥೆಗಳಿಗೆ ಧನಸಹಾಯ ನೀಡುವಂತೆ ರಾಜ್ಯ ಸರ್ಕಾರಗಳು ಕಾಲೇಜುಗಳಂಥ ಉನ್ನತ ಶಿಕ್ಷಣಸಂಸ್ಥೆಗಳಿಗೂ ಧನಸಹಾಯ ನೀಡುತ್ತದೆ. ಸದ್ಯದಲ್ಲಿ ಅದಕ್ಕಾಗಿ ಸರ್ಕಾರದ ಕಾಲೇಜುಗಳೊಡನೆ ಖಾಸಗಿ ಕಾಲೇಜುಗಳನ್ನು ಸಮಾನವಾಗಿ ಭಾವಿಸಿ ಅನುದಾನ ನಿಯಮಾವಳಿಯನ್ನು ರೂಪಿಸಿದೆ. ಅವುಗಳ ನಿಯಂತ್ರಣದ ಬಗ್ಗೆಯೂ ಅಂಥದೇ ಏಕರೀತಿಯ ದೃಷ್ಟಿಯನ್ನನುಸರಿಸಲಾಗುತ್ತಿದೆ. ಪ್ರೌಢಶಾಲೆಗಳಲ್ಲಿ ಕಂಡುಬರುವ ಈ ತೊಂದರೆ ಉನ್ನತ ಮಟ್ಟದ ಶಿಕ್ಷಣದಲ್ಲೂ ಆಗುತ್ತಿದೆ. ಆದ್ದರಿಂದ ಶಾಲೆಗಳ ಅನುದಾನದ ಬಗ್ಗೆ ಸೂಚಿಸಿರುವ ವಿಭೇದಕಾರಕ ನಿಯಮಾವಳಿ ಕಾಲೇಜುಗಳ ಅನುದಾನ ಮತ್ತು ನಿಯಂತ್ರಣದ ಬಗ್ಗೆಯೂ ರಚನೆಯಾಗಬೇಕು. ಆ ಮೂಲಕ ಒಳ್ಳೆಯ ಕಾಲೇಜುಗಳಿಗೆ ಹೆಚ್ಚು ಸ್ವಾತಂತ್ರ್ಯವನ್ನೂ ಹೆಚ್ಚು ಧನಸಹಾಯವನ್ನೂ ನೀಡುವ ಅವಕಾಶವಾಗಬೇಕು.

ಸಹಾಯಧನದ ನಿಯಮಾವಳಿಯನ್ನು ರೂಪಿಸುವಾಗ ಕೆಳಗಿನ ಅಂಶಗಳನ್ನು ಪರಿಗಣಿಸಬೇಕಾಗುತ್ತದೆ :

1 ಸಂಸ್ಥೆಯ ಆವರ್ತ (ರೆಕರಿಂಗ್) ವೆಚ್ಚದ ಬಗ್ಗೆ ಸಹಾಯಧನ ನೀಡುವಾಗ, ಸಂಸ್ಥೆ ಖಾಸಗಿ ಚಂದಾ ಹಣದಿಂದ ಕಟ್ಟಿಸಿರುವ ಕಟ್ಟಡವಾದರೆ ಶಾಲೆಯ ಅಥವಾ ಕಾಲೇಜಿನ ಕಟ್ಟಡಕ್ಕೆ ಸೂಕ್ತ ಬಾಡಿಗೆ ಹಣವನ್ನು ಅನುದಾನ ನೀಡಿಕೆಗೆ ಸೇರಿಸಿಕೊಳ್ಳಬೇಕು. ಅನಾವರ್ತ (ನಾನ್-ರೆಕರಿಂಗ್) ವೆಚ್ಚದ ಬಗ್ಗೆ ಇಂಥ ಸಮಸ್ಯೆ ಉದ್ಭವಿಸುವುದಿಲ್ಲ.

2 ಆವರ್ತ ವ್ಯಯವನ್ನು ಅಧ್ಯಾಪಕರ ವೆಚ್ಚ ಮತ್ತು ಅಧ್ಯಾಪಕೇತರರ ವೆಚ್ಚ ಎಂದು ಎರಡು ಭಾಗ ಮಾಡಿ, ಅಧ್ಯಾಪಕರ ವೆಚ್ಚದಲ್ಲಿ ಅವರಿಗೆ ನಿಷ್ಕರ್ಷಿತವಾಗಿರುವಂತೆ ಕೊಡುವ ಸಂಬಳ, ಭತ್ಯ, ಸಾರಿಗೆ ವೆಚ್ಚ ಇತ್ಯಾದಿಗಳಿಗೆ ವ್ಯಯ ಮಾಡಿದ ಹಣವನ್ನು ಲೆಕ್ಕಕ್ಕೆ ತೆಗೆದುಕೊಳ್ಳಬೇಕು. ಆದರೆ ಅಧ್ಯಾಪಕೇತರ ವೆಚ್ಚಗಳ ಬಗ್ಗೆ ತೊಡಕಾಗಬಹುದು. ಆದ್ದರಿಂದ ಆ ಬಗ್ಗೆ ಶಾಲಾಕಾಲೇಜುಗಳು ಮಾಡಬಹುದಾದ ಕನಿಷ್ಠ ಮತ್ತು ಗರಿಷ್ಠ ಮಿತಿಗಳನ್ನು ರೂಪಿಸಬಹುದು. ಅಥವಾ ಅಧ್ಯಾಪಕರ ವೆಚ್ಚದ ಒಂದು ಪ್ರಮಾಣವನ್ನಾದರೂ ಗೊತ್ತುಮಾಡಬಹುದು. ಹೀಗೆ ಸರ್ಕಾರ ಅಥವಾ ವಿಶ್ವವಿದ್ಯಾನಿಲಯ ನಿರ್ಧರಿಸಿದ ಮಿತಿಯೊಳಗೆ ಶಾಲೆ ಅಥವಾ ಕಾಲೇಜು ತನ್ನ ಕಾರ್ಯಕ್ರಮದ ಹಿತದೃಷ್ಟಿಯಲ್ಲಿ ಎಷ್ಟನ್ನಾದರೂ ವ್ಯಯಮಾಡಲು ಸ್ವಾತಂತ್ರ್ಯ ಹೊಂದಿರಬೇಕು.

3 ಸಹಾಯಧನವನ್ನು ನೀಡುವಾಗ, ಆಯಾ ಶಾಲೆ ಅಥವಾ ಕಾಲೇಜು ಬೋಧನೆಯ ಶುಲ್ಕ(ತೆರ)ದಿಂದ ಸಂಗ್ರಹಿಸಿದ ಹಣವನ್ನು ಕಳೆದು ಉಳಿದ ಹಣವನ್ನು ನೀಡಲಾಗುವುದು ; ಕೆಲವು ಖಾಸಗಿ ಸಂಸ್ಥೆಗಳು ವಿದ್ಯಾರ್ಥಿಗಳಿಂದ ಸ್ವೇಚ್ಛೆಯಾಗಿ ಅಧಿಕ ದರದ ತೆರವನ್ನು ಸಂಗ್ರಹಿಸಿ ಅದನ್ನು ಚಂದಾ ಎಂದು ರಶೀದಿ ಕೊಡುವುದುಂಟು. ಆದ್ದರಿಂದ ಖಾಸಗಿ ಸಂಸ್ಥೆಗಳಿಗೆ ಅಂಗೀಕಾರ ನೀಡುವಾಗ ಅದು ಸಂಗ್ರಹಿಸಬಹುದಾದ ತೆರದ ಪರಮಾವಧಿ ಮೊತ್ತವನ್ನು ನಿರ್ಧರಿಸಬೇಕು. ಜೊತೆಗೆ ಅದು ಕೊಡಬೇಕಾದ ತೆರದ ರಿಯಾಯಿತಿಯ (ಫ್ರೀಷಿಪ್ಸ್) ಸಂಖ್ಯೆಯನ್ನೂ ನಿರ್ಧರಿಸಬೇಕು. ವಿಶ್ವವಿದ್ಯಾನಿಲಯದ ಅಥವಾ ಸರ್ಕಾರದ ಸಂಸ್ಥೆಗಳಲ್ಲಿ ಸಂಗ್ರಹಿಸುವ ಶುಲ್ಕದ ದರಕ್ಕಿಂತ ಹೆಚ್ಚಾಗಿ ಸಂಗ್ರಹಿಸಲು ಅವಕಾಶವಿತ್ತರೂ ಆ ಬಗ್ಗೆ ಸರಿಯಾದ ಲೆಕ್ಕವಿಡುವಂತೆ ಕಡ್ಡಾಯ ಮಾಡಿ ಆ ಹಣವನ್ನು ಸಂಸ್ಥೆಯ ಅಭಿವೃದ್ಧಿಕಾರ್ಯಗಳಿಗೆ ಬಳಸಲು ಅವಕಾಶವೀಯಬಹುದು.

4 ಅನುದಾನವನ್ನು ನಿರ್ಧರಿಸುವಾಗ ಅನುಸರಿಸಬಹುದಾದ ಸೂತ್ರವೊಂದನ್ನು ಕೊಠಾರಿ ಶಿಕ್ಷಣ ಆಯೋಗ ಸೂಚಿಸಿದೆ. ಅದನ್ನಿಲ್ಲಿ ಉಲ್ಲೇಖಿಸಬಹುದು: ಅಧ್ಯಾಪಕರೆಲ್ಲರ ಸಂಬಳದ ಹಣ, ಅಧ್ಯಾಪಕೇತರ ಬಾಬುಗಳಿಗೆ ಖರ್ಚು ಮಾಡಿದ ಒಟ್ಟು ಹಣ ಅಥವಾ ಆ ಬಗ್ಗೆ ಹಾಕಿರುವ ಗರಿಷ್ಠ ಮಿತಿ (ಅವೆರಡರಲ್ಲಿ ಕಡಿಮೆಯಾದ್ದು), ಇವೆರಡರ ಮೊತ್ತದಲ್ಲಿ ಆಡಳಿತಸಂಸ್ಥೆ ಕೊಡಬೇಕೆಂದು ನಿರ್ಧರವಾಗಿರುವ ಪಾಲು ಹಣವನ್ನು (ಬೋಧನೆಯ ತೆರದಿಂದ ಸಂಗ್ರಹಿಸಿದ ಹಣದಿಂದ ಇದನ್ನು ಕೊಡಕೂಡದು. ಸಂಸ್ಥೆ ತನ್ನ ಸ್ವಂತ ಆದಾಯದಿಂದ ಅಥವಾ ನಿಧಿಯಿಂದ ಕೊಡಬೇಕು) ನಿಯಮಾನುಸಾರ ವಿದ್ಯಾರ್ಥಿಗಳಿಗೆ ಶುಲ್ಕದ ರಿಯಾಯಿತಿಯನ್ನು ಕೊಟ್ಟ ಮೇಲೆ ಸಂಗ್ರಹವಾದ ಶುಲ್ಕದ ಒಟ್ಟು ಹಣವನ್ನೂ ಕಟಾಯಿಸಿಕೊಂಡು ಮಿಕ್ಕುದನ್ನು ಸಹಾಯಧನವಾಗಿ ಕೊಡಬೇಕು.

ಖಾಸಗಿ ಸಂಸ್ಥೆಗಳು ನೀಡಬೇಕಾದ ತಮ್ಮ ಪಾಲಿನ ಹಣದ ಪ್ರಮಾಣ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆಬೇರೆಯಾಗಿದೆ. ಹೇಗೇ ಇರಲಿ, ನೂತನ ಸನ್ನಿವೇಶಗಳಿಗೆ ಹೊಂದಿಸಿಕೊಳ್ಳಲು ಅನುಕೂಲಿಸುವಂತೆ ಅದರ ಪಾಲು ಹಣದ ಪ್ರಮಾಣವನ್ನು ಆಂದಿಗಂದಿಗೆ ಪುನರ್ವಿಮರ್ಶಿಸುವುದು ಅಗತ್ಯ. ಯುದ್ಧಾನಂತರದ ದಿನಗಳಲ್ಲಿ ಶಿಕ್ಷಣಕ್ಷೇತ್ರ ಅಗಾಧವಾಗಿ ವಿಸ್ತರಿಸಿದ್ದು, ಖಾಸಗಿ ಸಂಸ್ಥೆಗಳು ತಮ್ಮ ಸಂಪನ್ಮೂಲಗಳನ್ನು ಹೆಚ್ಚಿಸಲಾರದ ಫಲವಾಗಿ ಅವುಗಳ ಪಾಲುಹಣವನ್ನು ಏಕಪ್ರಕಾರವಾಗಿ ಕಡಿಮೆ ಮಾಡಲಾಗುತ್ತಿದೆ. ಆದ್ದರಿಂದ ಸರ್ಕಾರದಿಂದ ಬರುವ ಅನುದಾನ ಸೇ.50 ರಿಂದ ಸೇ. 100ರ ವರೆಗೂ ಹೆಚ್ಚಿದೆ.

ಈಚೆಗೆ ಪ್ರೌಢಶಾಲೆಯ ಹಂತದಲ್ಲಿ ಶಿಕ್ಷಣವನ್ನು ಉಚಿತಗೊಳಿಸಲಾಗುತ್ತಿದೆ. ಇದರ ಫಲವಾಗಿ ಪ್ರೌಢಶಾಲೆಗಳ ಅನುದಾನ ನಿಯಮಾವಳಿ ಬದಲಾಗಹತ್ತಿದೆ. ಖಾಸಗಿ ಶಾಲೆಗಳು ಸರ್ಕಾರದ ಈ ನೀತಿಯನ್ನೊಪ್ಪಿ, ಶುಲ್ಕವನ್ನು ಸಂಗ್ರಹಿಸದಿದ್ದರೆ ಮಾತ್ರ ಅವಕ್ಕೆ ಅನುದಾನ ದೊರಕುವುದು. ಇಲ್ಲವಾದರೆ ಅವು ಸ್ವತಂತ್ರ ಶಿಕ್ಷಣ ಸಂಸ್ಥೆಗಳಾಗಿ ಉಳಿಯಬೇಕಾಗುತ್ತದೆ. ಆಗ ಅದಕ್ಕೆ ಸಾರ್ವಜನಿಕ ಬೊಕ್ಕಸದಿಂದ ಅನುದಾನ ದೊರಕಲಾರದು ; ಮಿಕ್ಕ ಖಾಸಗಿ ಶಾಲೆಗಳಿಗೆ ಉದಾರವಾಗಿ ಅನುದಾನ ದೊರಕುವುದು.

ಪ್ರೌಢಶಾಲೆಗಳಿಗೆ ಅನುದಾನವನ್ನು ನಿರ್ಧರಿಸುವಾಗ ಮೇಲಿನ ಸೂತ್ರದೊಡನೆ ಈ ಎರಡು ಟಿಪ್ಪಣಿಗಳನ್ನೂ ಪರಿಗಣಿಸಬೇಕಾಗುತ್ತದೆ :

1 ಅಧ್ಯಾಪಕೇತರ ವ್ಯಯದ ಗರಿಷ್ಠ ಮಿತಿಯನ್ನು ಬೇರೆಬೇರೆ ವಿಧದ ಶಾಲೆಗಳಿಗೆ ಬೇರೆಬೇರೆಯಾಗಿ ಗೊತ್ತುಮಾಡಬೇಕು ; ಹಿಂದುಳಿದ ಭಾಗಗಳ ಶಾಲೆಗಳಿಗೂ ಬಾಲಿಕಾ ಪಾಠಶಾಲೆಗಳಿಗೂ ಸೂಕ್ತರೀತಿಯ ವಿಭೇದಕ ಮಿತಿಗಳನ್ನು ನಿರ್ಧರಿಸಬೇಕು. ತಮ್ಮ ಪಾಲುಹಣವನ್ನು ಒದಗಿಸುವುದಕ್ಕಾಗಿ ಪ್ರೌಢಶಾಲೆ 50,000 ರೂಪಾಯಿಯನ್ನೂ ಉನ್ನತ ಪ್ರೌಢಶಾಲೆ 1,00,000 ರೂಪಾಯಿಯನ್ನೂ ದತ್ತಿಯಾಗಿ ಹೊಂದಿರಬೇಕು. ಅದು ಸಾಧ್ಯವಾಗುವ ವರೆಗೆ ಆಯಾ ಸಂಸ್ಥೆಯ ಆಡಳಿತ ಮಂಡಲಿ ಆ ದತ್ತಿಗೆ ಬರತಕ್ಕ ಬಡ್ಡಿ ಹಣದಷ್ಟನ್ನು ಒದಗಿಸಬೇಕು.

2 ಪ್ರೌಢಶಾಲೆಗಳಲ್ಲಿ ಶಿಕ್ಷಣವನ್ನು ಉಚಿತವಾಗಿ ಮಾಡಿರುವ ಕಡೆ (ಅನುದಾನ ಸೂತ್ರದಲ್ಲಿ ಸೂಚಿಸಿರುವ) ಸಂಗ್ರಹಿಸಿದ ಶುಲ್ಕದಷ್ಟು ಹಣವನ್ನು ಅನುದಾನ ಹಣದಿಂದ ಕಟಾಯಿಸಿಕೊಳ್ಳುವ ಅಂಶವನ್ನು ಕೈಬಿಡಬೇಕು.

ಅನಾವರ್ತ ವೆಚ್ಚದ ಬಗ್ಗೆ ಖಾಸಗಿ ಶಾಲೆಯ ಆಡಳಿತ ಸಂಸ್ಥೆ ಒಟ್ಟು ವೆಚ್ಚದ ಬಹುಭಾಗವನ್ನು ವಹಿಸಬೇಕು. ಆದ್ದರಿಂದ ಒಟ್ಟು ವೆಚ್ಚದ ಸೇ. 50ರಷ್ಟು ಮಾತ್ರ ಅನುದಾನವನ್ನು ನೀಡಬಹುದು. ಶಿಕ್ಷಣದಲ್ಲಿ ಹಿಂದುಳಿದ ಪ್ರದೇಶಗಳ ಪಾಠಶಾಲೆಗಳಿಗೂ ಬಾಲಕಿಯರ ಪಾಠಶಾಲೆಗಳಿಗೂ ಆ ಪ್ರಮಾಣವನ್ನು ಹೆಚ್ಚಿಸಬಹುದು. ಹಾಗೆಯೇ ಬೇರೆಬೇರೆ ವಿಧದ ಪಾಠಶಾಲೆಗಳಿಗೂ ಆ ಪ್ರಮಾಣವನ್ನು ಹೆಚ್ಚುಕಡಿಮೆಯಾಗಿ ನಿಗದಿ ಮಾಡಬಹುದು.

ಮೇಲಿನ ಅನುದಾನ ಸೂತ್ರ ಸಾಮಾನ್ಯ ಸಂದರ್ಭಗಳಿಗೆ ಅನ್ವಯಿಸುತ್ತದೆ. ವಿಶೇಷ ಸಂದರ್ಭಗಳಿಗಾಗಿ ಕೆಲವು ಷರತ್ತುಗಳನ್ನು ನಿಯಮಾವಳಿ ಒಳಗೊಂಡಿರಬೇಕು. ಅಧ್ಯಾಪಕರನ್ನು ಸಂತತವಾಗಿ ಉಳಿಸಿಕೊಳ್ಳದಿರುವಿಕೆ, ಅವರಿಗೆ ಸೂಕ್ತ ಸೌಲಭ್ಯ ನೀಡದಿರುವಿಕೆ, ಅಶಿಸ್ತು, ಕಡಿಮೆ ಫಲಿತಾಂಶ—ಇವುಗಳಿಗಾಗಿ ಅನುದಾನವನ್ನು ಕಡಿಮೆ ಮಾಡುವ ಅವಕಾಶವಿರಬೇಕು. ಹಾಗೂ ಒಳ್ಳೆಯ ಅಧ್ಯಾಪಕರನ್ನು ನೇಮಿಸಿಕೊಂಡು, ಉತ್ತಮ ಆದರ್ಶವನ್ನು ಪ್ರದರ್ಶಿಸಿ, ದಕ್ಷತೆ ನಿಷ್ಠೆಗಳಿಂದ ಕೆಲಸ ಮಾಡಿ, ಉತ್ತಮ ಫಲಿತಾಂಶವನ್ನು ಸಾಧಿಸುವ ಶಾಲೆಯ ಅಭಿವೃದ್ಧಿಗೂ ಅವು ನಡೆಸುವ ಪ್ರಯೋಗಗಳಿಗೂ ಹೆಚ್ಚಿನ ಅನುದಾನ ನೀಡುವ ಅವಕಾಶವೂ ಇರಬೇಕು.

ಸಾಮಾನ್ಯವಾಗಿ ಎಲ್ಲ ಅನುದಾನ ನಿಯಮಾವಳಿಗಳಲ್ಲೂ ಅನುದಾನ ಬಯಸುವ ಖಾಸಗಿ ಸಂಸ್ಥೆಗಳು ಲಾಭದ ದೃಷ್ಟಿಯಿಲ್ಲದೆ ಧರ್ಮಾರ್ಥವಾಗಿ ಕೆಲಸ ಮಾಡಬೇಕೆಂಬ ನಿಯಮವುಂಟು. ಜೊತೆಗೆ ರಾಜ್ಯದ ಧರ್ಮಸಂಸ್ಥೆಗಳ ಕಾಯಿದೆಯ ಪ್ರಕಾರ ನೋಂದಣಿ ಆಗಬೇಕೆಂಬ ಷರತ್ತೂ ಇರುವುದುಂಟು. ಆದ್ದರಿಂದ ಖಾಸಗಿ ಮಾಲೀಕತ್ವವನ್ನು ಹೊಂದಿ ಲಾಭದೃಷ್ಟಿಯಿಂದ ಹೊರಟ ಸಂಸ್ಥೆಗಳಿಗೆ ಅಂಗೀಕಾರ ನೀಡಬಹುದಾದರೂ ಅವಕ್ಕೆ ಅನುದಾನವನ್ನು ನಿರಾಕರಿಸಬೇಕು.

ಕೆಲವು ರಾಜ್ಯಗಳ ಅನುದಾನ ನಿಯಮಾವಳಿಯಲ್ಲಿ ಅಗತ್ಯವೆನಿಸಿದಾಗ ಅಂಗೀಕಾರವನ್ನು ಹಿಂತೆಗೆದುಕೊಳ್ಳುವ ಷರತ್ತೂ ಇರುತ್ತದೆ. ಆದರೆ ಈ ಅಸ್ತ್ರವನ್ನು ನಿಜವಾಗಿ ಪ್ರಯೋಗಿಸುತ್ತಿಲ್ಲ. ಹಾಗೆ ಮಾಡಿದರೆ ಅಲ್ಲಿರುವ ಅಧ್ಯಾಪಕರಿಗೆ ಕೆಲಸ ಹೋಗುವುದಲ್ಲದೆ ಅಲ್ಲಿಯ ಜನರಿಗೆ ವಿದ್ಯಾಸೌಲಭ್ಯ ದೊರಕದಂತಾಗಬಹುದು. ಅಂಥ ಶಾಲೆಗಳನ್ನು ಸರ್ಕಾರವೇ ವಹಿಸಿಕೊಂಡರೆ ಆ ತೊಂದರೆಗಳಿಗೆ ಅವಕಾಶವಾಗುವುದಿಲ್ಲ: ಜೊತೆಗೆ ಹೀನಸ್ಥಿತಿಯಲ್ಲಿರುವ ಇತರ ಶಾಲೆಗಳಿಗೂ ಅದು ಒಂದು ಎಚ್ಚರಿಕೆಯಾಗಬಹುದು.

ಸ್ಥಳೀಯ ಸರ್ಕಾರದ ಶಾಲಾಕಾಲೇಜುಗಳಿಗೆ ಅನುದಾನ ನಿಯಮಾವಳಿ : ಭಾರತದಲ್ಲಿ ಜಿಲ್ಲಾ ಪರಿಷತ್ತು, ತಾಲ್ಲೂಕು ಅಭಿವೃದ್ಧಿ ಮಂಡಲಿ ಇತ್ಯಾದಿ ಸ್ಥಳೀಯ ಸರ್ಕಾರದ ಸಂಸ್ಥೆಗಳು ನಡಸುತ್ತಿರುವ ಶಾಲೆಗಳಿಗೂ ಕಾಲೇಜುಗಳಿಗೂ ಸರ್ಕಾರದ ಅನುದಾನವನ್ನು ಕೊಡಲಾಗುತ್ತಿದೆ. ಅದಕ್ಕಾಗಿ ರಚಿಸಿರುವ ನಿಯಮಾವಳಿ ಅಷ್ಟಾಗಿ ಸಮರ್ಪಕವಾಗಿಲ್ಲ. ಕೆಲವು ರಾಜ್ಯಗಳಲ್ಲಿ ಸ್ಥಳೀಯ ಸರ್ಕಾರ ಅದಕ್ಕಾಗಿ ಎತ್ತುವ ತೆರಿಗೆ ವಿದ್ಯಾರ್ಥಿಗಳಿಂದ ಸಂಗ್ರಹಿಸುವ ಶುಲ್ಕ ಇತ್ಯಾದಿಗಳನ್ನು ಗಣನೆಗೆ ತೆಗೆದುಕೊಂಡಾಗ ಆಗಿರುವ ವ್ಯಯದಲ್ಲಿ ಕಂಡುಬರುವ ಖೋತಾ ಹಣವನ್ನು ತುಂಬಿಕೊಡುವುದು ಆಚರಣೆಯಲ್ಲಿದೆ. ಇನ್ನು ಕೆಲವು ರಾಜ್ಯಗಳಲ್ಲಿ ಒಟ್ಟು ವೆಚ್ಚದ ಒಂದು ನಿಗದಿ ಮಾಡಿರುವ ಸೇಕಡಾ ಪ್ರಮಾಣದಲ್ಲಿ ಅನುದಾನ ನೀಡಲಾಗುವುದು. ಮೊದಲ ಪದ್ಧತಿಯಲ್ಲಿ ಪ್ರಭಾವಶಾಲಿ ಸಂಸ್ಥೆಗಳಿಗೆ ಹೆಚ್ಚು ಹಣವನ್ನೂ ಮಿಕ್ಕವಕ್ಕೆ ಕಡಿಮೆ ಹಣವನ್ನೂ ಹಂಚುವ ಅವಕಾಶವಾಗುವುದು. ಎರಡನೆಯ ಪದ್ಧತಿಯಲ್ಲಿ ಬಲವಾದ ಜಿಲ್ಲೆಗಳು ಹೆಚ್ಚು ವ್ಯಯಮಾಡಿ ಹೆಚ್ಚು ಅನುದಾನದ ಹಣ ಪಡೆಯುವುದಕ್ಕೂ ಬಡಜಿಲ್ಲೆಗಳು ಕಡಿಮೆ ಪಡೆಯುವುದಕ್ಕೂ ದಾರಿಯಾಗುತ್ತದೆ; ಜೊತೆಗೆ, ಮಾಡಿರುವ ಖರ್ಚಿನಲ್ಲಿ ಯಾವುದು ಸರಿ, ಯಾವುದು ಅಲ್ಲ ಎಂಬುದನ್ನು ನಿರ್ಧರಿಸುವ ಕಷ್ಟವೂ ತಲೆದೋರುತ್ತದೆ. ಇನ್ನು ಕೆಲವು ರಾಜ್ಯಗಳಲ್ಲಿ ಒಟ್ಟಾರೆ ಸಹಾಯಧನವನ್ನು (ಬ್ಲಾಕ್ ಗ್ರ್ಯಾಂಟ್) ನಿಷ್ಕರ್ಷಿಸುವ ಪದ್ಧತಿಯೂ ಇದೆ. ಈ ಪದ್ಧತಿಯಲ್ಲಿ ಆಯವ್ಯಯವನ್ನು ಅಗತ್ಯಕ್ಕೆ ತಕ್ಕಂತೆ ಹೊಂದಿಸಿಕೊಳ್ಳುವುದು ಕಷ್ಟ; ಹಾಗೂ ಶಿಕ್ಷಣದ ವೆಚ್ಚ ದಿನದಿನಕ್ಕೂ ಹೆಚ್ಚುತ್ತಿರುವ ಈ ಕಾಲದಲ್ಲಿ ಇದು ಹಿತಕರವಾದ ಪದ್ಧತಿಯೇ ಅಲ್ಲ. ಆದ್ದರಿಂದ ಸದ್ಯದಲ್ಲಿ ಆಚರಣೆಯಲ್ಲಿರುವ ಸಹಾಯಧನದ ನಿಯಮಾವಳಿಯನ್ನು ಸುಧಾರಿಸಬೇಕು. ಮೊದಲನೆಯದಾಗಿ, ಸರ್ಕಾರ ಮಂಜೂರು ಮಾಡಿರುವಂತೆ ಅಧ್ಯಾಪಕರು, ಮೇಲ್ವಿಚಾರಕರು, ಕಾರ್ಯಾಲಯದ ಸಿಬ್ಬಂದಿ ಇವರೆಲ್ಲರ ಸಂಬಳ ಇತ್ಯಾದಿಗಳ ಒಟ್ಟು ಹಣದಲ್ಲಿ ಸೇ. 100ರಷ್ಟನ್ನು ಅನುದಾನವಾಗಿ ಕೊಡಬೇಕು. ಆಗ, ವಿದ್ಯಾರ್ಥಿಸಂಖ್ಯಾಬಲಕ್ಕನುಗುಣವಾಗಿ ಅಧ್ಯಾಪಕರನ್ನೂ ಅಧ್ಯಾಪಕರ ಸಂಖ್ಯೆಗನುಗುಣವಾಗಿ ಮೇಲ್ವಿಚಾರಕರನ್ನೂ ನೇಮಕ ಮಾಡಿಕೊಳ್ಳಬಹುದಾದ ಅವಕಾಶವಿರುತ್ತದೆ. ಹಾಗೆ ನೇಮಕ ಮಾಡಿಕೊಳ್ಳಬಹುದಾದ ಅಧ್ಯಾಪಕರ ಮತ್ತು ಮೇಲ್ವಿಚಾರಕರ ಸಂಖ್ಯೆಯನ್ನು ಪೂರ್ವಭಾವಿಯಾಗಿ ನಿರ್ಧರಿಸಬೇಕು. ಎರಡನೆಯದಾಗಿ, ಕಾರ್ಯಾಲಯದ ಸಿಬ್ಬಂದಿಯ ವೆಚ್ಚದ ಬಗ್ಗೆ ವಿದ್ಯಾರ್ಥಿಸಂಖ್ಯಾಬಲಕ್ಕನುಗುಣವಾಗಿ ಅನುದಾನದ ಮೊತ್ತವನ್ನು ನಿರ್ಧರಿಸಬೇಕು. ಇದನ್ನು ಪ್ರತಿವರ್ಷವೂ ಪುನರ್ವಿಮರ್ಶಿಸುತ್ತಿರಬೇಕು. ಮೂರನೆಯದಾಗಿ, ಸ್ಥಳೀಯ ಸರ್ಕಾರ ಎತ್ತುವ ಶಿಕ್ಷಣದ ತೆರಿಗೆ ಮತ್ತು ಸರ್ಕಾರ ನೀಡುವ ಅನುದಾನದ ಹಣ ಆ ಸಂಸ್ಥೆಗೇ ಸೇರಿದ್ದಾಗಿದ್ದು ಅದರ ಶಿಕ್ಷಣದ ಅಭಿವೃದ್ಧಿಕಾರ್ಯಕ್ಕೆ ಬಳಕೆಯಾಗಬೇಕು. ಕೊನೆಯದಾಗಿ, ಅನಾವರ್ತ ವ್ಯಯಗಳ ಬಗ್ಗೆ ಪ್ರತ್ಯೇಕವಾಗಿ ಒಟ್ಟು ವ್ಯಯದ ಅರ್ಧದಷ್ಟು ಸಹಾಯಧನ ನೀಡಬೇಕು. ಈ ರೀತಿ ಅನುದಾನ ನಿಯಮಗಳನ್ನು ಪುನರ್ವಿಮರ್ಶಿಸುವಾಗ ಶಿಕ್ಷಣಸೇವಾಸೌಲಭ್ಯ ಎಲ್ಲ ಕಡೆಗೂ ಸಮಾನವಾಗಿ ದೊರಕುವಂತೆ ಮಾಡುವುದೇ ಮುಖ್ಯ ಉದ್ದೇಶವಾಗಿರಬೇಕು. ವರ್ಷದ ಅಂತ್ಯದೊಳಗಾಗಿ ಸಹಾಯಧನವನ್ನು ಬಳಸಿಕೊಳ್ಳಲು ಸಾಧ್ಯವಾಗದಿದ್ದರೆ ಅದನ್ನು ಅನಂತರ ಪಡೆದುಕೊಳ್ಳುವ ಅವಕಾಶ ಇರಬೇಕು. ಆಗ ಆ ಹಣವನ್ನು ನಿಧಾನವಾಗಿ ಎಚ್ಚರಿಕೆಯಿಂದ ಬಳಸಿಕೊಳ್ಳಲು ಅನುಕೂಲವಾಗುವುದು.

ಪೌರಸಭೆಗಳ ಶಿಕ್ಷಣ ಸಂಸ್ಥೆಗಳಿಗೆ ಅನುದಾನ ನಿಯಮಾವಳಿ : ತಾವು ನಡಸುವ ಶಿಕ್ಷಣ ಸಂಸ್ಥೆಗಳಿಗಾಗಿ ಪೌರಸಭೆಗಳು ಮನೆಗಂದಾಯದ ಮೇಲೆ ಶಿಕ್ಷಣದ ತೆರಿಗೆಯನ್ನು ಎತ್ತುವರಷ್ಟೆ. ಚಿಕ್ಕ ಪೌರಸಭೆಗಳಿಗೆ ಅದರಿಂದ ತಕ್ಕಷ್ಟು ಆದಾಯ ಬರುವಂತಿಲ್ಲ. ಆದ್ದರಿಂದ ಸರ್ಕಾರ ಸಹಾಯಧನ ನೀಡುವ ಬಗ್ಗೆ ಈ ಅಂಶವನ್ನು ಗಣನೆಗೆ ತೆಗೆದುಕೊಂಡು ಎಲ್ಲ ಪೌರಸಭೆಗಳೂ ಸಮಾನ ಶಿಕ್ಷಣ ಸೌಲಭ್ಯಗಳನ್ನು ಒದಗಿಸಲು ಅವಕಾಶವಾಗುವಂತೆ ನಿಯಮಗಳನ್ನು ರಚಿಸಬೇಕು. ಪ್ರಾಥಮಿಕ ಶಿಕ್ಷಣಕ್ಕಾದರೆ ಪ್ರತಿ ಮಗುವಿನ ಶಿಕ್ಷಣಕ್ಕೂ ಪ್ರತಿವರ್ಷವೂ 50 ರೂ. ವ್ಯಯವಾಗುವುದೆಂದು ಭಾವಿಸಿ, ಆಯಾ ಪ್ರದೇಶದಲ್ಲಿ ಎತ್ತುವ ತೆರಿಗೆಯ ಜೊತೆಗೆ ಮಿಕ್ಕಿದ್ದನ್ನು ತುಂಬಿಕೊಡಬೇಕು. ಆಗ ಕಡಿಮೆ ತೆರಿಗೆ ಸಂಗ್ರಹವಾಗುವ ಕಡೆ ಹೆಚ್ಚಿಗೆ ಸೇ. ಪ್ರಮಾಣದ ಅನುದಾನವನ್ನೂ ಅಧಿಕ ತೆರಿಗೆ ಸಂಗ್ರಹವಾಗುವ ಕಡೆ ಕಡಿಮೆ ಸೇ. ಪ್ರಮಾಣದ ಅನುದಾನವನ್ನೂ ಗೊತ್ತುಮಾಡಬಹುದು. ಇಂಥ ಅನುದಾನ ಪದ್ಧತಿಗೆ ಶಿಕ್ಷಣಸೇವಾಸೌಲಭ್ಯದ ಸಮೀಕರಣ ತತ್ತ್ವ ಎನ್ನುವರು.

ಮೈಸೂರು ರಾಜ್ಯದಲ್ಲಿ ಪ್ರೌಢಶಾಲೆಗಳ ಅನುದಾನ ನಿಯಮಾವಳಿ : ಮೈಸೂರು ರಾಜ್ಯದಲ್ಲಿ ಪ್ರೌಢಶಾಲೆಗಳ ಅನುದಾನಕ್ಕೆ ಸಂಬಂಧಿಸಿದಂತೆ ತಿದ್ದುಪಡಿ ಮಾಡಿರುವ 1967ರ ನಿಯಮಾವಳಿ ಮೇಲಿನ ಆದರ್ಶ ತತ್ತ್ವಗಳಲ್ಲಿ ಕೆಲವನ್ನು ಗಮನದಲ್ಲಿಟ್ಟುಕೊಂಡು ರೂಪಿಸಿದಂತಿದೆ. ಸಹಾಯಧನಕ್ಕೆ ಅರ್ಹತೆ ಪಡೆಯಬಿಚ್ಛಿಸುವ ಶಾಲೆ ಮಾನ್ಯತೆ ಪಡೆದಿರಬೇಕು ; ಜೊತೆಗೆ ಆಡಳಿತ ಸಂಸ್ಥೆ ಆರಂಭದಲ್ಲಿ 5,000 ರೂಪಾಯಿಗಳನ್ನು ಭರವಸೆ ಠೇವಣಿಯನ್ನಾಗಿ ಇಡಬೇಕು. ಅನಂತರ ಆರಂಭವಾಗುವ ಪ್ರತಿ ತರಗತಿಗೂ 2,500 ರೂಪಾಯಿಗಳಂತೆ ಅಧಿಕ ಠೇವಣಿ ಕೂಡಿಸಿಡಬೇಕು. ಶಾಲೆ ಸಂಗ್ರಹಿಸುವ ಬೋಧನೆಯ ಶುಲ್ಕವನ್ನು ಸರ್ಕಾರದ ಬೊಕ್ಕಸಕ್ಕೆ ಕಟ್ಟಬೇಕು. ಸಂಸ್ಥೆ ಸಂಗ್ರಹಿಸುವ ಚಂದಾಹಣ, ಠೇವಣಿಯ ಮೇಲೆ ಗಳಿಸಿದ ಬಡ್ಡಿಯ ಹಣ, ಸಹಾಯಧನ ಇತ್ಯಾದಿ ಆದಾಯದಿಂದ ಬರುವ ಹಣವನ್ನು ತನ್ನಹೆಸರಿನಲ್ಲಿ ಲೆಕ್ಕವಿಡಬೇಕು. ವಾರ್ಷಿಕ ಆದಾಯ ವೆಚ್ಚದಲ್ಲಿ ಅದನ್ನೆಲ್ಲ ತೋರಿಸಬೇಕು. ಆ ಬಗ್ಗೆ ಇಟ್ಟಿರುವ ಲೆಕ್ಕವನ್ನು ಅಂಗೀಕೃತ ಲೆಕ್ಕಪರೀಕ್ಷಕರಿಂದ ತನಿಖೆ ಮಾಡಿಸಿ ಶಿಕ್ಷಣ ಶಾಖೆಯ ಪರೀಕ್ಷೆ–ನಿರೀಕ್ಷೆಗಳಿಗೆ ಒಳಪಡಿಸಬೇಕು. ಆಡಳಿತ ಮಂಡಲಿ ಅಧ್ಯಾಪಕರನ್ನೂ ಇತರ ಸಿಬ್ಬಂದಿಯವರನ್ನೂ ಅದಕ್ಕಾಗಿ ರೂಪಿಸಿರುವ ನಿಯಮಗಳಿಗನುಸಾರವಾಗಿ ನೇಮಿಸಿಕೊಂಡು ಅನಂತರ ಶಿಕ್ಷಣಾಧಿಕಾರಿಗಳ ಒಪ್ಪಿಗೆಯನ್ನೂ ಪಡೆಯಬೇಕು. ಆಡಳಿತ ಮಂಡಲಿ ತನ್ನ ಆದಾಯದ ಹಣವನ್ನು ಆ ಸಂಸ್ಥೆಯ ಕಾರ್ಯಕ್ರಮಗಳಿಗಲ್ಲದೆ ಮಿಕ್ಕಾವ ಬಾಬಿಗೂ ವ್ಯಯ ಮಾಡಕೂಡದು. ಪ್ರತಿ ತರಗತಿಯಲ್ಲೂ ಸರಾಸರಿ ದೈನಂದಿನ ಹಾಜರಾತಿ 20ಕ್ಕಿಂತ ಕಡಿಮೆ ಇರುವ ಪ್ರೌಢಶಾಲೆಗಳಿಗೆ ಸಹಾಯಧನ ದೊರಕುವಂತಿಲ್ಲ. ಎಲ್ಲ ಪ್ರೌಢಶಾಲೆಗಳಲ್ಲೂ ಹತ್ತನೆಯ ತರಗತಿ ಪೂರ್ತ ಬೋಧನೆಯ ಶುಲ್ಕದ ವಿನಾಯಿತಿ ಇರಬೇಕು (ತೇರ್ಗಡೆಯಾಗದ ವಿದ್ಯಾರ್ಥಿಗಳನ್ನುಳಿದು). ಹಾಗೇನಾದರೂ ಶುಲ್ಕವನ್ನು ಎತ್ತಿದರೆ ಅಥವಾ ತೇರ್ಗಡೆಯಾದವರಿಂದ ಅಧಿಕ ಶುಲ್ಕ ಸಂಗ್ರಹಿಸಿದರೆ ಅಂಥ ಶಾಲೆಗಳಿಗೆ ಧನಸಹಾಯ ನೀಡುವುದಿಲ್ಲ. ಶಿಕ್ಷಣ ಶಾಖೆಯ ನಿಯಮಗಳನ್ನು ಪಾಲಿಸದಿದ್ದರೆ ಅಥವಾ ಇತರ ಸೂಕ್ತ ಕಾರಣಗಳಿಗಾಗಿ ಧನಸಹಾಯವನ್ನು ನಿಲ್ಲಿಸಬಹುದು ಅಥವಾ ಕಡಿಮೆ ಮಾಡಬಹುದು. ಹಾಗೂ ಸರ್ಕಾರ ಅಂಗೀಕರಿಸದಿರುವ ಪರೀಕ್ಷೆಗಳಿಗೆ ವಿದ್ಯಾರ್ಥಿಗಳನ್ನು ಸಿದ್ಧಪಡಿಸಕೂಡದು. ಇಷ್ಟೊಂದು ಷರತ್ತುಗಳನ್ನೊಳಗೊಂಡಿರುವುದರಿಂದ ಖಾಸಗಿ ಶಾಲೆಗಳಿಗೆ ಕೊಠಾರಿ ನಿಯೋಗ ಸೂಚಿಸಿದಷ್ಟು ಸ್ವಾತಂತ್ರ್ಯ ಇರುವುದಿಲ್ಲ. ಜೊತೆಗೆ ದಕ್ಷತೆಯಿಂದ ಕೆಲಸ ಮಾಡುವ ಸಂಸ್ಥೆಗಳಿಗೆ ಹೆಚ್ಚಿನ ಉತ್ತೇಜನವನ್ನಾಗಲಿ ದುರ್ಬಲ ಸಂಸ್ಥೆಗಳಿಗೆ ಹಿಡಿತವನ್ನಾಗಲಿ ತೋರಿಸುವ ಭೇದಕ ನೀತಿಯೂ ಅದರಲ್ಲಿ ಕಂಡುಬರುವುದಿಲ್ಲ.

ಸಹಾಯಧನದ ಮೊತ್ತವನ್ನು ನಿಷ್ಕರ್ಷಿಸುವ ವಿಧಾನ : ಶಾಲೆ ಮಾನ್ಯತೆಪಡೆದ ಅನಂತರದ ಮೊದಲ ಮೂರು ವರ್ಷಕಾಲ ಮಕ್ಕಳ ಸರಾಸರಿ ಹಾಜರಾತಿಯನ್ನು ಆಧಾರ ಮಾಡಿಕೊಂಡು ವರ್ಷದಲ್ಲಿ ಹತ್ತು ತಿಂಗಳ ಕಾಲದ ಅಧ್ಯಾಪಕರ ಸಂಬಳವನ್ನು ಲೆಕ್ಕಹಾಕಿ ಸಾಂಕೇತಿಕ ಧನಸಹಾಯವನ್ನು ನೀಡಲಾಗುವುದು. ಮೂರನೆಯ ವರ್ಷದ ಅನಂತರ ಪೂರ್ಣ ಪ್ರಮಾಣದ ಅನುದಾನ ದೊರಕುವುದು. ಅಧ್ಯಾಪಕರ ಮತ್ತು ಇತರ ಸಿಬ್ಬಂದಿಯವರ ಸಂಬಳ ಭತ್ಯಾದಿಗಳನ್ನು ಪೂರ್ಣವಾಗಿ ನೀಡಲಾಗುವುದು. ಅಧಿಕೃತ ಸಾಮಾನ್ಯ ವ್ಯಯಗಳಿಗೂ ಇತರ ವ್ಯಯಗಳಿಗೂ ತಗಲುವ ಸಾದಿಲ್ವಾರು ಹಣವನ್ನು ಗೊತ್ತುಪಡಿಸಿರುವ ಗರಿಷ್ಠ ಮಿತಿಯೊಳಗೆ (ಪ್ರತಿ ತರಗತಿಗೂ 75 ರೂ.ಗಳಿಗೂ, ಮಿಕ್ಕ ಪ್ರತಿ ತರಗತಿಗೂ 25 ರೂ.ಗಳಿಗೂ ಮೀರದಂತೆ) ಧನಸಹಾಯ ನೀಡಲಾಗುವುದು. ಗೃಹವಿಜ್ಞಾನ ಬೋಧಿಸುವ ಶಾಲೆಗೆ ಪ್ರತಿವರ್ಷವೂ ಮೊದಲ ತರಗತಿಗೆ 100 ರೂ.ಗಳಿಗೂ ಮಿಕ್ಕ ಪ್ರತಿ ತರಗತಿಗೂ 50 ರೂ.ಗಳಿಗೂ ಮೀರದಂತೆ, ತಗಲುವ ವೆಚ್ಚವನ್ನು ಕೊಡಲಾಗುವುದು. ಸರ್ಕಾರದ ಅನುಮತಿಯೊಡನೆ ಮಾಡುವ ಇನ್ನಾವುದಾದರೂ ಅಗತ್ಯ ಖರ್ಚಿನ ಬಗ್ಗೆ ಅದಕ್ಕಾಗಿ ಗೊತ್ತುಮಾಡಿರುವ ಗರಿಷ್ಠ ಮಿತಿಯೊಳಗೆ ಧನಸಹಾಯ ನೀಡಲಾಗುವುದು. ಸಂಸ್ಥೆಗೆ ಸೇರಿದ ಕಟ್ಟಡ, ಆಟದ ಮೈದಾನ ಇತ್ಯಾದಿಗಳ ರಿಪೇರಿ, ಕಂದಾಯ ಇತ್ಯಾದಿಗಳ ಬಗ್ಗೆ ತಗಲುವ (ನಿಗದಿ ಮಾಡಿರುವ ಗರಿಷ್ಠ ಮಿತಿಯೊಳಗೆ) ವೆಚ್ಚವನ್ನು ಅನುದಾನವಾಗಿ ಕೊಡುವುದುಂಟು. ಬಾಡಿಗೆ ಕಟ್ಟಡವಾದರೆ ಶಿಕ್ಷಣಶಾಖೆ ನಿರ್ಧರಿಸಿರುವ ಕೆಲವು ನಿಯಮಗಳ ಪ್ರಕಾರ ಬಾಡಿಗೆ ಹಣವನ್ನೂ ಕೊಡಲಾಗುವುದು. ಹೊಸದಾಗಿ ಕಟ್ಟಡ ಕಟ್ಟುವುದಕ್ಕೂ ಉಪಕರಣ, ಆಟದ ಮೈದಾನ ಮುಂತಾದವನ್ನು ಕೊಳ್ಳುವುದಕ್ಕೂ ತಗಲುವ ವೆಚ್ಚದ ಸೇ. 50ರಷ್ಟನ್ನು ಅನುದಾನವಾಗಿ ಕೊಡಲಾಗುವುದು. ಶಾಲೆ ಕೈಗೊಳ್ಳುವ ಶೈಕ್ಷಣಿಕ ಪ್ರವಾಸಗಳಿಗೂ ನಡೆಸುತ್ತಿರುವ ನೂತನ ರೀತಿಯ ಶೈಕ್ಷಣಿಕ ಪ್ರಯೋಗಗಳಿಗೂ ಧನಸಹಾಯ ನೀಡುವುದಕ್ಕೂ ನಿಯಮಾವಳಿಯಲ್ಲಿ ಅವಕಾಶ ಕಲ್ಪಿಸಿದೆ.

(ಎನ್.ಎಸ್.ಎ.)

**ಕಟ್ಟಿನ ಕರೆ :** ಕೆಳಗಿನ ನ್ಯಾಯಪೀಠದಲ್ಲಿ ಅಥವಾ ಅರೆನ್ಯಾಯಾಲಯಗಳಂತೆ ಕಾರ್ಯನಿರ್ವಹಿಸುವ ತರಿಗೆ ಅಧಿಕಾರಿಗಳ ಸಮ್ಮುಖದಲ್ಲಿ ವಿಚಾರಣೆಗೆ ಬಂದ ಮೊಕದ್ದಮೆಯ ಕಟ್ಟನ್ನು—ಎಂದರೆ ಸಂಬಂಧಪಟ್ಟ ಕಾಗದಪತ್ರಗಳನ್ನು—ಕಳುಹಿಸಿಕೊಡಬೇಕೆಂದು ಪರಮೋಚ್ಚ ನ್ಯಾಯಾಲಯ ಅಥವಾ ಉಚ್ಚ ನ್ಯಾಯಾಲಯದವರು ಕೊಡುವ ಆಜ್ಞಾಪತ್ರ (ಸರ್ಷಿಯೊರೇರೈ). ಕಕ್ಷಿಗೆ ಹೆಚ್ಚು ಶೀಘ್ರವಾಗಿ ನಿಶ್ಚಿತವಾದ ನ್ಯಾಯ ದೊರಕುವಂತೆ ಅಥವಾ ತಪ್ಪು ಅಕ್ರಮಗಳನ್ನು ಸರಿಪಡಿಸುವ ಸಲುವಾಗಿ ಕೈಕೊಳ್ಳುವ ಕ್ರಮವಿದು. ಕೆಳನ್ಯಾಯಾಲಯದಲ್ಲಿ ತನಗೆ ನ್ಯಾಯ ದೊರಕಿಲ್ಲವೆಂದೋ ಅಲ್ಲಿ ನ್ಯಾಯವಾದ ವಿಚಾರಣೆಯಾಗುವುದಿಲ್ಲವೆಂದೋ ಕಕ್ಷಿಯಿಂದ ಆಕ್ಷೇಪಣೆ ಬಂದಾಗ ಹೀಗೆ ಮಾಡಬಹುದು. ಪ್ರಜೆಗಳ ಹಕ್ಕುಗಳಿಗೆ ಬಾಧೆಯಾದ ಪ್ರಶ್ನೆ

ಗಳನ್ನು ನಿರ್ಧರಿಸುವ ಬಗ್ಗೆ ವಿಚಾರಣೆ ನಡೆಸುವುದಕ್ಕಾಗಿ ಅದಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನು ಕಳುಹಿಸಿಕೊಡಬೇಕೆಂದು ಕೆಳಗಿನ ನ್ಯಾಯಪೀಠಕ್ಕೆ ಉಚ್ಚನ್ಯಾಯಾಲಯ ನೀಡಿದ ಆಜ್ಞೆಯಿದು—ಎಂಬುದು ಹ್ಯಾಲ್ಸ್‌ಬರಿಯ ಅಭಿಪ್ರಾಯ.

**ಚಾರಿತ್ರಿಕ ಹಿನ್ನೆಲೆ :** ದಿನದಿನಕ್ಕೆ ಸರ್ಕಾರದ ಕೆಲಸಕಾರ್ಯಗಳು ವಿಸ್ತಾರಗೊಳ್ಳುತ್ತಿವೆ. ಅದರೊಂದಿಗೆ ಕಾನೂನುಗಳೂ ನಿಯಮಗಳೂ ಹೆಚ್ಚುತ್ತಿವೆ. ಅವುಗಳ ಪಾಲನೆಗೆ ರೂಢವಾಗಿರುವ ನ್ಯಾಯಾಲಯಗಳು ಸಾಕಾಗುವುದಿಲ್ಲ. ಅದಕ್ಕಾಗಿ ಕಾನೂನುಗಳ ಮೂಲಕ ಅಧಿಕಾರಿಗಳಿಗೆ, ನ್ಯಾಯಪೀಠಗಳಿಗೆ (ಟ್ರೈಬ್ಯೂನಲ್) ನ್ಯಾಯವನ್ನು ಇತ್ಯರ್ಥಿಸುವ ಹಕ್ಕುಗಳನ್ನು ಕೊಡಲಾಗುತ್ತಿದೆ. ಅವರು ತಮ್ಮ ಅಧಿಕಾರವ್ಯಾಪ್ತಿಯೊಳಗೆ ಬರುವಂತೆ ಮಾಡಲು ಉಚ್ಚನ್ಯಾಯಾಲಯಗಳಿಗೆ ಅವರ ಕೆಲಸಕಾರ್ಯಗಳ ಮೇಲೆ ಪರಾಮರ್ಶೆಮಾಡುವ ಅಧಿಕಾರ ಅಗತ್ಯ. ಬ್ರಿಟನಿನಲ್ಲಿ ಈ ಅಧಿಕಾರವನ್ನು ಕಿಂಗ್ಸ್ ಬೆಂಚ್‌ಗಳು ವಿಶೇಷಾಧಿಕಾರದ ಆಜ್ಞಾಪತ್ರಗಳ ಮೂಲಕ ಸಾಧಿಸುತ್ತಿದ್ದುವು. ಇಂಗ್ಲೆಂಡಿನಲ್ಲಿ 1938ರಲ್ಲಿ ಆದ ಒಂದು ಕಾಯಿದೆಯಲ್ಲಿ ಕಟ್ಟಿನ ಕರೆ, ಪರಮಾಜ್ಞೆ (ಮ್ಯಾಂಡೇಮಸ್) ಮತ್ತು ಪ್ರತಿಬಂಧಕಾಜ್ಞೆಗಳನ್ನು ಉಚ್ಚನ್ಯಾಯಾಲಯಗಳು ಕೊಡಕೂಡದೆಂದೂ ಅವನ್ನು ಹಿಂದೆ ಕೊಡುತ್ತಿದ್ದ ಸಂದರ್ಭಗಳಲ್ಲಿ ಸೂಕ್ತ ಆದೇಶಗಳನ್ನು ಕೊಡಬೇಕೆಂದೂ ವಿಧಿಸಲಾಯಿತು. ಇದರಿಂದ ವಿಧಾನದಲ್ಲಿ ಹೆಚ್ಚು ಕಡಿಮೆ ಆಯಿತೇ ಹೊರತು ಅವುಗಳ ಸಂಬಂಧಪಾಗಿರುವ ಕಾನೂನಿನಲ್ಲಿ ವಿಶೇಷವಾಗಿ ಯಾವ ವ್ಯತ್ಯಾಸವೂ ಆಗಿಲ್ಲ.

ಭಾರತದ ಸಂವಿಧಾನ ಜಾರಿಗೆ ಬರುವ ಮೊದಲೆ ಕಲ್ಕತ್ತ, ಮದ್ರಾಸು ಮತ್ತು ಬೊಂಬಾಯಿಯಲ್ಲಿ ಸ್ಥಾಪಿಸಲಾದ ಸುಪ್ರೀಂ ಕೋರ್ಟುಗಳು ಈ ಆಜ್ಞಾಪತ್ರಗಳನ್ನು ನೀಡುವ ಅಧಿಕಾರವನ್ನು ವಿವಿಧ ರಾಜಸನ್ನದುಗಳಿಂದ ಪಡೆದಿದ್ದುವು. ಆ ಹಕ್ಕುಗಳನ್ನು ಹೊಂದಿದ ಅಲ್ಲಿಯ ಹೈ ಕೋರ್ಟುಗಳೂ ಇವನ್ನು ಜಾರಿಮಾಡಬಹುದಾಗಿತ್ತು. ಆದರೆ ಈ ಅಧಿಕಾರ ಆ ರಾಜ್ಯಗಳ ಮುಖ್ಯ ಅಧಿಪತ್ಯದ ಪಟ್ಟಣಗಳಿಗೂ (ಪ್ರೆಸಿಡೆನ್ಸಿ ಟೌನ್ಸ್) ಅವುಗಳಲ್ಲಿ ನೆಲೆಸಿದವರಿಗೂ ಸೀಮಿತವಾಗಿತ್ತು. 1877ರಲ್ಲಿ ನಿರ್ದಿಷ್ಟ ಪರಿಹಾರ ಕಾಯಿದೆಯ (ಸ್ಪೆಸಿಫಿಕ್ ರಿಲೀಫ್ ಆಕ್ಟ್) 50ನೆಯ ಕಲಮು ಪರಮಾಜ್ಞೆಯ ಹಕ್ಕನ್ನು ತೆಗೆದು ಅದಕ್ಕೆ ಪ್ರತಿಯಾಗಿ ಅದರ 45ನೆಯ ಕಲಂ ಪ್ರಕಾರ ಆದೇಶ ನೀಡುವ ಹಕ್ಕನ್ನಿತ್ತಿತ್ತು. 1898ರಲ್ಲಿ ಕ್ರಿಮಿನಲ್ ಪ್ರೊಸೀಜರ್ ಕೋಡಿನ 491ನೆಯ ವಿಧಿಯಲ್ಲಿ ಆಸಾಮಿ ಹಾಜರಿ ಹುಕುಂ ಹಕ್ಕನ್ನು ತೆಗೆದು ಬದಲಾಗಿ ಆದೇಶ ನೀಡುವ ಹಕ್ಕನ್ನು ಕೊಡಲಾಗಿತ್ತು. 1923ರಲ್ಲಿ ಈ ಹಕ್ಕನ್ನು ಎಲ್ಲ ಹೈ ಕೋರ್ಟುಗಳಿಗೂ ಕೊಡಲಾಯಿತು. ಇದು ರೀತಿಯಲ್ಲಿ ಭೇದವಾದುದೇ ಹೊರತು ಹಕ್ಕಿನಲ್ಲಿ ಆದ ಹೆಚ್ಚುಕಡಿಮೆಯಲ್ಲ. ಈಗ ಅವನ್ನೆಲ್ಲ ತೆಗೆದು ಹಾಕಲಾಗಿದೆ. ಭಾರತ ಸಂವಿಧಾನದ 32ನೆಯ ಮತ್ತು 226ನೆಯ ಅನುಚ್ಛೇದಗಳು ಕ್ರಮವಾಗಿ ಪರಮೋಚ್ಚ ಮತ್ತು ಉಚ್ಚನ್ಯಾಯಾಲಯಗಳಿಗೆ ಈ ರೀತಿಯ ಆಜ್ಞೆ ಅಥವಾ ನಿರ್ದೇಶನ ನೀಡುವ ಅಧಿಕಾರವನ್ನಿತ್ತಿದೆ. ಪರಮೋಚ್ಚನ್ಯಾಯಾಲಯಕ್ಕೆ ನೀಡಲಾದ ಅಧಿಕಾರದ ವ್ಯಾಪ್ತಿ ಮೂಲಭೂತ ಹಕ್ಕುಗಳಿಗೆ ಚ್ಯುತಿ ಬಂದಾಗ ಮಾತ್ರ. ಮೂಲಭೂತ ಹಕ್ಕುಗಳಿಗೆ ಚ್ಯುತಿ ಬಂದಾಗಲೂ ಇತರ ವಿಚಾರಗಳಲ್ಲೂ ವಿಚಾರಣೆ ನಡೆಸಲು ಉಚ್ಚ ನ್ಯಾಯಾಲಯಕ್ಕೆ ಅಧಿಕಾರವಿದೆ. ವಿವಿಧ ಬಗೆಯ ಆಜ್ಞೆ ಅಥವಾ ಹುಕುಮುಗಳಲ್ಲಿ (ರಿಟ್) ಕಟ್ಟಿನ ಕರೆಯಾಜ್ಞೆ ಒಂದು.

ಕಾನೂನುಬದ್ಧ ಅಧಿಕಾರವನ್ನು ಮೀರಿ ನಡೆಯಲಾಗಿದೆಯೆಂದು ಕಂಡಾಗ ಅದರ ಅಥವಾ ವಿಚಾರಣೆಯಾದ ಇಲ್ಲವೇ ಆಗಲಿರುವ ವಿವಾದಗಳ ಕಾಗದಪತ್ರಗಳನ್ನೂ ಅವುಗಳ ಕ್ರಮಬದ್ಧತೆಯನ್ನೂ ಪರಾಮರ್ಶಿಸುವ ಉದ್ದೇಶದಿಂದ ಅವನ್ನು ಕಳುಹಿಸಿಕೊಡಬೇಕೆಂದು ಹುಕುಂ ಮಾಡಲಾಗುತ್ತದೆ.

**ಕಟ್ಟಿನ ಕರೆಯ ಮುಖ್ಯಾಂಶಗಳು :** ನ್ಯಾಯಾಲಯಗಳೆನಿಸಲಾರದ ಮತ್ತು ಹಾಗೆ ಮಾನ್ಯತೆ ಪಡೆಯಲಾರದ ನ್ಯಾಯಮಂಡಳಿಯ ನಡೆವಳಿಗಳನ್ನು ಅಂಕೆಯಲ್ಲಿರಿಸಿಕೊಳ್ಳಲು ಆಜ್ಞಾಪತ್ರಗಳ ವ್ಯಾಪ್ತಿಯನ್ನು ವಿಸ್ತರಿಸಲಾಗಿದೆ. ಪ್ರಜೆಗಳ ಹಕ್ಕುಗಳಿಗೆ ಬಾಧೆ ತರುವಂಥ ಪ್ರಶ್ನೆಗಳನ್ನು ನಿರ್ಧರಿಸುವಲ್ಲಿ ಕಾನೂನು ಬದ್ಧ ಅಧಿಕಾರಿಯಾಗಲಿ, ನ್ಯಾಯಾಲಯದಂತೆ ಕಾರ್ಯಮಾಡಲು ಬದ್ಧವಾದ ಯಾವುದಾದರೂ ಮಂಡಳಿಯಾಗಲಿ ತನ್ನ ಕಾನೂನುಬದ್ಧ ಅಧಿಕಾರಕ್ಕೆ ಮೀರಿ ನಡೆದರೆ ಈ (ಕಟ್ಟಿನ ಕರೆ ಮತ್ತು ನಿಷೇಧಾತ್ಮಕ) ಆಜ್ಞೆಗಳ ಮೂಲಕ ಅವನ್ನು ತನ್ನ ಅಂಕೆಯಲ್ಲಿ ಇರಿಸಿಕೊಳ್ಳಲು ಉನ್ನತ ನ್ಯಾಯಾಲಯಕ್ಕೆ ಅಧಿಕಾರವಿದೆಯೆಂಬುದು ಆಟ್‌ಕಿನ್ ಎಲ್. ಜೆ. ನೀಡಿರುವ ಒಂದು ತೀರ್ಪಿನಲ್ಲಿ (1924) ನಿರ್ಣಯಮಾಡಲಾಗಿದೆ. ಆಟ್‌ಕಿನ್ ನಿರ್ಣಯದಲ್ಲಿ ಕಟ್ಟಿನ ಕರೆಯ ಈ ಕೆಲವು ಮುಖ್ಯ ಅಂಶಗಳು ಅಡಕವಾಗಿವೆ :

1 ಕಟ್ಟಿನ ಕರೆ ಪಡೆಯುವ ನ್ಯಾಯಮಂಡಲಿಯೆಂದರೆ ಕನಿಷ್ಠ ನ್ಯಾಯಪೀಠಗಳು ಮಾತ್ರವಲ್ಲ. ನ್ಯಾಯಾಧೀಶರಂತೆ ವರ್ತಿಸುವ ಹೊಣೆಯುಳ್ಳ ವ್ಯಕ್ತಿ, ಮಂಡಲಿ ಅಥವಾ ಅಧಿಕಾರಿಯನ್ನು ಇದರಲ್ಲಿ ಸೇರಿಸಬೇಕು. ಸ್ಥಳೀಯ ಮಂಡಲಿ, ಕಾನೂನಿನ ಪ್ರಕಾರ ಏರ್ಪಟ್ಟ ಮಂಡಲಿ, ಅಧಿಕಾರಿ, ಮಂತ್ರಿ, ಸರಕಾರದ ವಿವಿಧ ಭಾಗಗಳು—ಮುಂತಾದವುಗಳ ಮೇಲೆ ಇದನ್ನು ಪ್ರಯೋಗಿಸಲಾಗಿದೆ. ಆದರೆ ಹೀಗೆ ಕಟ್ಟಿನ ಕರೆ ಪಡೆಯುವ ವ್ಯಕ್ತಿ ಅಥವಾ ಮಂಡಲಿ ಅಥವಾ ಅಧಿಕಾರಿ, ಆಜ್ಞೆ ನೀಡುವ ಉಚ್ಚನ್ಯಾಯಾಲಯಕ್ಕೆ ಕೆಳಗಿರಬೇಕು ; ಅಲ್ಲದೆ ಉಚ್ಚನ್ಯಾಯಾಲಯದ ಆಡಳಿತದ ಅಥವಾ (ಭಾರತದಲ್ಲಿ) ಕ್ರಮದ ಕಾರಣದ (ಕಾಸ್ ಆಫ್ ಆಕ್ಷನ್) ವ್ಯಾಪ್ತಿಯೊಳಬರಬೇಕು. ಆದರೆ ಇದನ್ನು ಧರ್ಮಕ್ಕೆ ಸಂಬಂಧಿಸಿದ ನ್ಯಾಯಾಲಯಗಳಿಗೆ ಅನ್ವಯಿಸಲಾಗುವುದಿಲ್ಲ.

2 ಕಟ್ಟಿನ ಕರೆಯನ್ನು ಖಾಸಗಿ (ಪ್ರೈವೇಟ್) ನ್ಯಾಯಮಂಡಲಿಗೆ ಕೊಡಲು ಸಾಧ್ಯವಿಲ್ಲ.ಖಾಸಗಿ ಒಪ್ಪಂದದ ಪ್ರಕಾರ ಕಾನೂನುಬದ್ಧ ಪಂಚಾಯಿತಿದಾರನ ನಿಷ್ಕರ್ಷೆಗೆ ಒಂದು ವಿಚಾರವನ್ನು ಬಿಟ್ಟಲ್ಲಿ ಅಲ್ಲಿ ಕಟ್ಟಿನ ಕರೆ ನೀಡಬಹುದಾದರೂ ಕಾನೂನುಬದ್ಧ ಅಧಿಕಾರವಿಲ್ಲದ ಪಂಚಾಯಿತಿದಾರನಿಗೆ ಅಥವಾ ಮಂಡಲಿಗೆ ಕಟ್ಟಪ್ಪಣೆಯನ್ನು ವಿಧಿಸಲಾಗುವುದಿಲ್ಲ. ಒಂದು ಊರಿನವರು ಒಟ್ಟಾಗಿ ತಮ್ಮ ವಿವಾದಗಳನ್ನೆಲ್ಲ ತೀರಿಸಲು ಒಂದು ಸಮಿತಿ ಮಾಡಿ ವಿವಾದಗಳನ್ನು ಅದಕ್ಕೊಪ್ಪಿಸಬಹುದು, ಅಂಥ ಸಮಿತಿ ಕಾನೂನುಬದ್ಧವಲ್ಲವಾದ್ದರಿಂದ ಅದಕ್ಕೆ ಕಟ್ಟಿನ ಕರೆ ಆಜ್ಞೆ ನೀಡಲು ಸಾಧ್ಯವಿಲ್ಲ.

3 ಪ್ರಜೆಗಳ ಹಕ್ಕುಗಳಿಗೆ ಬಾಧೆ ತರುವಂಥ ಪ್ರಶ್ನೆಗಳನ್ನು ನಿರ್ಧರಿಸಲು ಕಟ್ಟಿನ ಕರೆ ನೀಡಬಹುದು. ಕಟ್ಟಿನ ಕರೆ ಪಡೆಯುವ ನ್ಯಾಯಮಂಡಲಿಯೇ ಮುಂತಾದವಕ್ಕೆ ಪ್ರಜೆಗಳ ಹಕ್ಕುಗಳ ವಿಚಾರವಾಗಿ ನಿರ್ಧಾರ ಕೈಕೊಳ್ಳುವ ಅಧಿಕಾರವಿರಬೇಕು. ಹಕ್ಕುಗಳು ಎಂಬ ಪದಕ್ಕೆ ಇಲ್ಲಿ ವಿಶಾಲವಾದ ಅರ್ಥವಿದೆ. ಹಕ್ಕುಗಳು ವೈಯುಕ್ತಿಕ ಸ್ವಾತಂತ್ರ್ಯ ಅಥವಾ ಸ್ಥಿತಿಗೆ ಸಂಬಂಧಿಸಿದ್ದಾಗಿ ಇರಬಹುದು; ಅಥವಾ ಅವು ಒಡೆತನಕ್ಕೆ ಅಥವಾ ಹಣಕಾಸಿಗೆ ಅಥವಾ ಕರಾರುಗಳಿಗೆ ಸಂಬಂಧಿಸಿದವುಗಳಾಗಿರಬಹುದು.

4 ನ್ಯಾಯಾಲಯದಂತೆ ನಿರ್ವಹಿಸಬೇಕಾದ ಕಾರ್ಯಗಳಿಗೆಲ್ಲ ಇದು ವ್ಯಾಪಿಸುತ್ತದೆ. ಯಾವುದು ನ್ಯಾಯಾಲಯದ ಅಥವಾ ನ್ಯಾಯಾಧೀಶರಂತೆ ಮಾಡಿದ ಕಾರ್ಯ, ಯಾವ ಅಂಶಗಳಿದ್ದಲ್ಲಿ ಆ ಕಾರ್ಯವಾಗುತ್ತದೆ—ಎಂಬುದಕ್ಕೆ ಖಚಿತವಾದ ಉತ್ತರ ಇನ್ನೂ ಸಿಕ್ಕಿಲ್ಲ. ಒಂದು ಕೃತಿ ನ್ಯಾಯಾಲಯದ (ಜುಡಿಷಿಯಲ್) ಅರೆನ್ಯಾಯಾಲಯದ (ಕ್ವಾಸೈಜುಡಿಷಿಯಲ್) ತೀರ್ಪು ಹೌದೋ ಅಲ್ಲವೋ ಎಂಬುದನ್ನು ನಿರ್ಣಯಿಸಲು ಜಸ್ಟಿಸ್ ಎಸ್. ಕೆ. ದಾಸ್ ನೀಡಿರುವ ಸೂತ್ರಗಳು (1959) ಉಲ್ಲೇಖಾರ್ಹ. ಇಬ್ಬರೊಳಗೆ ವಿವಾದವಿದೆಯೆ ? ಯಾವುದಾದರೊಂದು ಹಕ್ಕುಸಾಧನೆ ಕೇಳಿಕೆ (ಕ್ಲೇಮ್) ಇದೆಯೆ ಮತ್ತು ಅದಕ್ಕೆ ವಿರೋಧವಿದೆಯೇ ? ತೀರ್ಪು ನೀಡಲು ಪುರಾವೆಗಳನ್ನು ತೆಗೆದುಕೊಳ್ಳಬೇಕೆ ಅಥವಾ ಪ್ರಮಾಣಪತ್ರದಿಂದ (ಅಫಿಡೇವಿಟ್) ನಿರ್ಧರಿಸಬೇಕೆ ? ತೀರ್ಪು ಸಂಪೂರ್ಣವಾಗಿ ಅಥವಾ ಭಾಗಶಃ ಯಾವುದಾದರೂ ಕಾರ್ಯನೀತಿ (ಪಾಲಿಸಿ) ಅಥವಾ ಸಮಯೌಚಿತ್ಯದೃಷ್ಟಿಯಿಂದ (ಎಕ್ಸ್‌ಪೀಡಿಯೆನ್ಸಿ) ಪ್ರಚೋದಿತವೆ ? ಹಾಗಿದ್ದಲ್ಲಿ ತೀರ್ಪು ನೀಡುವಲ್ಲಿ ಪ್ರಸ್ತಾಪ (ಪ್ರಪೋಸಲ್), ವಿರೋಧ ಮತ್ತು ಪುರಾವೆಗಳನ್ನು ನೋಡಬೇಕೆ ? ತೀರ್ಪು ನೀಡುವಾಗ ಮಂಡಲಿ ಕಾರ್ಯನೀತಿ ಅಥವಾ ಸಮಯೌಚಿತ್ಯವನ್ನು ಮಾತ್ರ ನೋಡಬೇಕೆ, ಅದರ ಮುಂದೆ ಯಾವ ರೀತಿಯ ಮೊಕದ್ದಮೆಯೂ ಇಲ್ಲವೆ ? ಪರಿಶೀಲನೆಗೆ ಒಳಗಾದ ಮಂಡಲಿ, ಅಧಿಕಾರಿ ಅಥವಾ ವ್ಯಕ್ತಿಗೆ ನ್ಯಾಯಾಲಯ ಅಥವಾ ಅರೆನ್ಯಾಯಾಲಯದಂತೆ ವರ್ತಿಸಬೇಕಾದ ಬಾಧ್ಯತೆ ಇದೆಯೆ ಇಲ್ಲವೆ ?–ಈ ಮೊದಲಾದ ಸಮಸ್ಯೆಗಳನ್ನು ತೀರ್ಮಾನಿಸಲು ಈ ಅಂಶಗಳನ್ನು ಗಮನಿಸಬೇಕು. ಕೇವಲ ಆಡಳಿತ ಸಂಬಂಧವಾದ ತೀರ್ಪುಗಳ ಬಗ್ಗೆ ಕಟ್ಟಿನ ಕರೆ ಆಜ್ಞೆ ಸಾಧ್ಯವಿಲ್ಲ.

6 ಕಾನೂನುಬದ್ಧ ಅಧಿಕಾರಕ್ಕೆ ಮೀರಿ ನಡೆದರೆ : ನ್ಯಾಯಪೀಠ, ಮಂಡಲಿ ಅಥವಾ ಅಧಿಕಾರಿ ಯಾವ ಅಧಿಕಾರವೂ ಇಲ್ಲದೆ ನಡೆದಾಗ, ಸ್ವಾಭಾವಿಕ ನ್ಯಾಯಕ್ಕೆ (ನ್ಯಾಚುರಲ್ ಜಸ್ಟಿಸ್) ವಿರೋಧ ಮಾಡಿದಾಗ, ತನಗೆ ಕೊಟ್ಟ ಅಧಿಕಾರವನ್ನು ಉಪಯೋಗಿಸದಿದ್ದಾಗ, ಹೀಗಾಗಿದೆಯೆಂದು ಕಾಗದಪತ್ರಗಳಲ್ಲಿ ಮೇಲುನೋಟಕ್ಕೆ ಕಂಡುಬಂದರೆ ಉಚ್ಚನ್ಯಾಯಾಲಯ ಅವನ್ನು ತಿದ್ದಲು ಕಟ್ಟಿನ ಕರೆ ಆಜ್ಞೆ ನೀಡಬಹುದು.

7 ಭಾರತದಲ್ಲಿ ಕಟ್ಟಿನ ಕರೆ ಆಜ್ಞೆಯನ್ನು ರೂಢವಾಗಿರುವ ನ್ಯಾಯಾಲಯಗಳ ಮೇಲೆ ಕೊಡುವುದಿಲ್ಲವೆಂಬುದು ಗಮನಿಸಬೇಕಾದ ಮುಖ್ಯ ಅಂಶ. ನ್ಯಾಯಾಲಯವೆನಿಸಿಕೊಳ್ಳದ ಮತ್ತು ಹಾಗೆ ಮಾನ್ಯತೆ ಪಡೆಯದ ನ್ಯಾಯಮಂಡಲಿ, ಅಧಿಕಾರಿ ಅಥವಾ ವ್ಯಕ್ತಿಯ ಕಾರ್ಯದ ಮೇಲೆ ಅದನ್ನು ಪ್ರಯೋಗಿಸಲಾಗುತ್ತದೆ. ಇವು ಅಥವಾ ಇವರು ನ್ಯಾಯಾಲಯ ಅಥವಾ ಅರೆನ್ಯಾಯಾಲಯದಂತೆ ವರ್ತಿಸಿದ ವಿಚಾರಗಳಲ್ಲಿ ಕಟ್ಟಿನ ಕರೆ ವಿಧಿಸಬಹುದು.

**ಭಾರತದ ಸಂವಿಧಾನದಲ್ಲಿ :** ಭಾರತದ ಸಂವಿಧಾನದ 32ನೆಯ ಮತ್ತು 226ನೆಯ ಅನುಚ್ಛೇದಗಳು ಕ್ರಮವಾಗಿ ಪರಮೋಚ್ಚನ್ಯಾಯಾಲಯಕ್ಕೂ ಉಚ್ಚನ್ಯಾಯಾಲಯಕ್ಕೂ ಪ್ರಚಲಿತವಿರುವ ಇತರ ಆಜ್ಞೆಗಳೊಡನೆ ಕಟ್ಟಿನ ಕರೆಯಾಜ್ಞೆಯ

ಹಕ್ಕನ್ನೂ ಕೊಟ್ಟಿವೆ. ಪ್ರಜೆಯ ಹಕ್ಕುಗಳನ್ನು ಜಾರಿಗೆ ತರುವ ಉದ್ದೇಶದಿಂದ ಇವನ್ನು ವಿಧಿಸಿರುವುದರಿಂದ ಇವಕ್ಕೆ ಮೂಲತಃ ಹಕ್ಕು ಇರಬೇಕಾದ್ದು ಅವಶ್ಯ.

226ನೆಯ ಅನುಚ್ಛೇದದ ವ್ಯಾಪ್ತಿಯ ವಿಚಾರವಾಗಿ ಕೆಳಗಿನ ನ್ಯಾಯ ಪೀಠಗಳು ಅಥವಾ ಮಂಡಳಿಗಳು ಅಥವಾ ಅಧಿಕಾರಿಗಳು ತಮಗೇನೂ ಕ್ಷೇತ್ರಾಧಿಕಾರವಿಲ್ಲದೆ ಅಥವಾ ತಮ್ಮ ಕ್ಷೇತ್ರಾಧಿಕಾರವನ್ನು ಮೀರಿ ಅಥವಾ ಸ್ವಾಭಾವಿಕ ನ್ಯಾಯಕ್ಕೆ ವಿರೋಧವಾಗಿ ಅಧಿಕಾರವನ್ನು ಉಪಯೋಗಿಸಿದ್ದರೆ, ಇಲ್ಲವೇ ಕಾಗದಪತ್ರಗಳಲ್ಲಿ ಮೇಲ್ನೋಟಕ್ಕೆ ವ್ಯಕ್ತವಾಗುವ ತಪ್ಪುಗಳಿದ್ದರೆ ಮತ್ತು ಆ ಕೃತಿ ಅಥವಾ ನಿಷ್ಕೃತಿಯಿಂದಾಗಿ ಅಥವಾ ಮೀರಿದ ನಡೆವಳಿಯಿಂದಾಗಿ ಅನ್ಯಾಯವಾಗಿದೆಯೆಂಬುದು ಸ್ಪಷ್ಟವಾಗಿದ್ದರೆ ಅಂಥ ಗಂಭೀರ ಪರಿಸ್ಥಿತಿಯಲ್ಲಿ 226ನೆಯ ಅನುಚ್ಛೇದದಲ್ಲಿ ಹೇಳಿರುವಂತೆ ಆಜ್ಞಾಪತ್ರ ಜಾರಿ ಮಾಡಲು ಹಕ್ಕು ಕೊಡುವುದು ಉದ್ದೇಶವೆಂಬುದಾಗಿ ಭಾರತದ ಪರಮೋಚ್ಚ ನ್ಯಾಯಾಲಯದ ಒಂದು ತೀರ್ಪಿನಲ್ಲಿ (ಎ.ಐ.ಆರ್. 1952 ಎಸ್.ಸಿ. 192) ವಿವರಿಸಲಾಗಿದೆ.

32 ಮತ್ತು 226ನೆಯ ಅನುಚ್ಛೇದಗಳು ಇಂಗ್ಲಿಷ್ ನ್ಯಾಯದ ಆಜ್ಞೆಗಳ ಸ್ವರೂಪ ದಂತೆಯೇ ಇರುವುವಾದರೂ ನಾವು ಇವುಗಳ ವಿಚಾರದಲ್ಲಿ ಇಂಗ್ಲಿಷ್ ಪದ್ಧತಿಯಲ್ಲಿ ಕೈಗೊಳ್ಳುವ ವಿಶೇಷ ಕ್ರಮವೇ ಮುಂತಾದವನ್ನೇ ಅನುಸರಿಸಬೇಕೆಂದಿಲ್ಲ. ಇಂಗ್ಲಿಷ್ ನ್ಯಾಯದಲ್ಲಿ ಅಜ್ಞೆಗಳನ್ನು ಕೊಡುವ ವಿಚಾರಗಳಲ್ಲಿ ಇರುವ ಮೂಲತತ್ತ್ವಗಳನ್ನು ಇರಿಸಿಕೊಂಡಲ್ಲಿ ನಾವು ಸಮರ್ಪಕವಾದ ವಿಚಾರಗಳಲ್ಲಿ ಸಮರ್ಪಕವಾದ ಆದೇಶ ಅಥವಾ ಕಟ್ಟಿನ ಕರೆಯಾಜ್ಞೆ ಕೊಡಬಲ್ಲೆವು ಎಂಬುದು ಜಸ್ಟಿಸ್ ಮುಕರ್ಜಿ ನೀಡಿರುವ ಒಂದು ತೀರ್ಪು (1955 ಎಸ್.ಸಿ.ಜೆ. 695). ಆದ್ದರಿಂದ ಕಟ್ಟಿನ ಕರೆ ಆಜ್ಞೆ ನೀಡುವಾಗ ಭಾರತದ ನ್ಯಾಯಾಲಯಗಳು ಇಂಗ್ಲಿಷ್ ನ್ಯಾಯಾಲಯದಲ್ಲಿ ಈ ಬಗ್ಗೆ ಇರತಕ್ಕ ಮೂಲತತ್ತ್ವಗಳನ್ನು ಇರಿಸಿಕೊಳ್ಳಬೇಕಾಗುತ್ತದೆ.

32ನೆಯ ಅನುಚ್ಛೇದದ ಪ್ರಕಾರ ಪರಮೋಚ್ಚ ನ್ಯಾಯಾಲಯ ಭಾರತದ ಆದ್ಯಂತ ಈ ಆಜ್ಞೆಗಳನ್ನು ಜಾರಿಮಾಡಬಹುದು. ಆದರೆ ಅವು ಮೂಲಭೂತ ವಿಚಾರ ಗಳಲ್ಲಿ ಮಾತ್ರ. 15ನೆಯ ತಿದ್ದುಪಡಿಗೆ ಮುಂಚೆ ಸಂವಿಧಾನದ 226ನೆಯ ಅನುಚ್ಛೇದ ಎರಡು ತಡೆಗಳಿಂದ ಕೂಡಿತ್ತು. ಒಂದನೆಯದು, ಉಚ್ಚ ನ್ಯಾಯಾಲಯ ಗಳು ತಮ್ಮ ಕ್ಷೇತ್ರಾಧಿಕಾರಗಳೊಳಗೆ ಮಾತ್ರ, ಅವುಗಳ ಒಳಗಿನ ಅಧಿಕಾರಿಗಳಿಗೆ ಅಥವಾ ಮಂಡಲಿಗಳಿಗೆ ಮಾತ್ರ ಆಜ್ಞೆ ನೀಡಬಹುದಿತ್ತು. ಕ್ರಮದ ಕಾರಣ ಉಚ್ಚನ್ಯಾಯಾಲಯದ ಅಧಿಕಾರಕ್ಷೇತ್ರದಲ್ಲಿದ್ದರೆ 226ನೆಯ ಅನುಚ್ಛೇದದ ಪ್ರಕಾರ ಅದು ಪರಿಹಾರ ಕೊಡಬಹುದು. 226ನೆಯ ಅನುಚ್ಛೇದ ಕೊಟ್ಟಿರುವ ವಿಸ್ತಾರ ವಾದ ಹಕ್ಕುಗಳನ್ನು ಅನುಲಕ್ಷಿಸಿ ಅಲ್ಲಿ ಹೇಳಿದ ಆಜ್ಞೆ ಅಥವಾ ನಿರ್ದೇಶನಗಳನ್ನಲ್ಲದೆ (ಮೂಲಭೂತ ಹಕ್ಕುಗಳಿಗೆ ಸಂಬಂಧಿಸಿದುದು ಮಾತ್ರವಲ್ಲದೆ), ಯಾವ ಆದೇಶ ಅಥವಾ ಸೂಚನೆಗಳನ್ನು ಯಾರ ಮೇಲಾಗಲಿ ಯಾವ ವಿಚಾರದಲ್ಲಾಗಲಿ ಕೊಡ ಬಹುದೆಂದು ವಾದಿಸಲಾಯಿತು. ಆ ಅನುಚ್ಛೇದವನ್ನು ಅಕ್ಷರಶಃ ತೆಗೆದುಕೊಂಡು ಅದಕ್ಕೆ ಅಷ್ಟೊಂದು ವ್ಯಾಪಕ ಅರ್ಥವನ್ನು ಕೊಡಕೂಡದೆಂದು ತೀರ್ಪು ನೀಡ ಲಾಗಿದೆ. ಯಾವ ವಿಚಾರದಲ್ಲಾಗಲಿ ಎಂಬುದನ್ನು ಸ್ಥಾಪಿತವಾದ ತತ್ತ್ವಗಳ ಪ್ರಕಾರ ಯಾವ ವಿಚಾರದಲ್ಲಾಗಲಿ ಯಾರಿಗಾಗಲಿ ಎಂದು ಅರ್ಥ ಮಾಡ ಬೇಕು. ಇದು ಆಜ್ಞೆಗಳಿಗೂ ಆದೇಶಗಳಿಗೂ ಅನ್ವಯಿಸುತ್ತದೆ. 226ನೆಯ ಅನುಚ್ಛೇದ ಸಾಮಾನ್ಯವಾಗಿ ಪರಿಹಾರ (ರಿಲೀಫ್) ಹೊಂದಲು ಇರುವ ಅರ್ಜಿ ಅಥವಾ ವ್ಯಾಜ್ಯಗಳ ಬದಲಾಗಿ ಉಪಯೋಗಿಸಲು ಸಾಧನವಲ್ಲ. ನ್ಯಾಯಾಧೀಶರಂತೆ ಮಾಡಿದ ಕೆಲಸವನ್ನು ಮೇಲಿಂದ ವಿಚಾರಣೆ ಮಾಡಲು ಮಾತ್ರ ಕಟ್ಟಿನ ಕರೆಯನ್ನು ಉಪಯೋಗಿಸಲಾಗುವುದು.

32ನೆಯ ಅನುಚ್ಛೇದದ ಪ್ರಕಾರ ಮೂಲಭೂತ ಹಕ್ಕುಗಳಿಗೆ ಚ್ಯುತಿ ಬಂದಾಗ ಅಥವಾ ಚ್ಯುತಿಯ ಹೆದರಿಕೆ ಇದ್ದರೆ ಅರ್ಜಿದಾರ ತಕ್ಕ ಪರಿಹಾರ ಪಡೆಯಲು ಅರ್ಹನಾಗಿರುವುದೂ ಅವನ ಹಕ್ಕೆಂದು ಒಂದು ತೀರ್ಪಿನಲ್ಲಿ ಹೇಳಲಾಗಿದೆ. ಪರಿಹಾರ ಪಡೆಯುವ ಬೇರೆ ವಿಧಾನಗಳಿದ್ದರೂ ಮೇಲೆ ಹೇಳಿದ ಸಂದರ್ಭದಲ್ಲಿ ಅರ್ಜಿದಾರ ತಕ್ಕ ಪರಿಹಾರ ಪಡೆಯಲು ಅರ್ಹನಾಗಿರುತ್ತಾನೆ. ಕೆಲವು ಮೊಕ್ಕದ್ದಮೆಗಳಲ್ಲಿ ಇದಕ್ಕೆ ವಿರೋಧವಾದ ಅಭಿಪ್ರಾಯ ವ್ಯಕ್ತವಾಗಿದ್ದರೂ ಅದು ಸರಿಯಲ್ಲ. 226ನೆಯ ಅನುಚ್ಛೇದದಲ್ಲಿ ಮೂಲಭೂತ ಹಕ್ಕುಗಳನ್ನು ಸಾಧಿಸುವ ವಿಚಾರವನ್ನು ಹಕ್ಕಾಗಿ ಕೊಟ್ಟಿಲ್ಲ. ಆದರೆ ಅದರ ಪ್ರಕಾರ ಮೂಲಭೂತ ಹಕ್ಕಿನ ವಿಚಾರದಲ್ಲಿ ಮಾತ್ರ ವಲ್ಲದೆ ಬೇರ ವಿಚಾರದಲ್ಲೂ ಆಜ್ಞೆ ಜಾರಿ ಮಾಡುವ ಹಕ್ಕಿದೆ. ಪರಿಹಾರ ನೀಡು ವುದು ಉಚ್ಚನ್ಯಾಯಾಲಯದ ವಿವೇಚನೆಗೆ (ಡಿಸ್ಕ್ರಿಷನ್) ಒಳಪಟ್ಟ ಹಕ್ಕು. 32ನೆಯ ಮತ್ತು 226ನೆಯ ಅನುಚ್ಛೇದಗಳ ಪ್ರಕಾರ ನೀಡಲಾದ ಹಕ್ಕುಗಳನ್ನು ಕಾನೂನು ಪ್ರಕಾರ ತಿದ್ದುಪಡಿ ಮಾಡದೆ ಮೊಟಕು ಮಾಡುವುದು ಯಾವ ರೀತಿಯಿಂದಲೂ ಅಸಾಧ್ಯ. 32ನೆಯ ಮತ್ತು 226ನೆಯ ಅನುಚ್ಛೇದಗಳ ಪ್ರಕಾರ ಕಾಯಿದೆಗಳು ಅಸಿಂಧುವೆಂದು ಸಾರುವ ಹಕ್ಕುಗಳೂ ಇರುತ್ತವೆ. ಆದರೆ ಇಂಗ್ಲೆಂಡಿನಲ್ಲಿ ಇದು ಸಾಧ್ಯವಿಲ್ಲ. ಈ ಅನುಚ್ಛೇದಗಳಲ್ಲಿ ಕೊಟ್ಟ ಹಕ್ಕುಗಳನ್ನು ಸಾಮಾನ್ಯವಾಗಿ ಯಾವ ಕಾಯಿದೆಯೂ ಕಿತ್ತುಕೊಳ್ಳಲಾರವಾದರೂ ಅವನ್ನು ಕ್ರಮಬದ್ಧಪಡಿಸ (ರೆಗ್ಯುಲೇಟ್) ಬಹುದು. ಈ ವಿಧಾನದಿಂದ ಪೂರ್ವನ್ಯಾಯದ ತತ್ತ್ವವನ್ನು ಈ ಅನುಚ್ಛೇದಗಳ ನ್ಯಾಯವಿಮರ್ಶೆಯಲ್ಲಿ ತೆಗೆದುಕೊಳ್ಳಲಾಗಿದೆ.

ಆದರೆ 226ನೆಯ ಅನುಚ್ಛೇದವನ್ನು ಅತಿ ಅಗತ್ಯವಾದ ಸಂದರ್ಭಗಳಲ್ಲಿ ಮಾತ್ರ ಉಪಯೋಗಿಸಬೇಕಾದುದರಿಂದ ನ್ಯಾಯಾಲಯಗಳು ಆಜ್ಞೆ ಕೊಡುವಾಗ ಕೆಲವು ನಿರ್ಬಂಧಗಳನ್ನು ತಾವಾಗಿ ಇಟ್ಟುಕೊಂಡಿವೆ. ಇನ್ನೊಂದು ಪರಿಹಾರವಿದ್ದಲ್ಲಿ, ವಿನಾ ಕಾರಣ ಪರಿಹಾರ ಕೇಳಲು ವಿಳಂಬ ಮಾಡಿದ್ದರೆ, ಪರಿಹಾರ ಹೊಂದಲು ಅರ್ಹನಾಗ ದಷ್ಟು ಅವನ ನಡವಳಿಕೆ ಸರಿಯಿಲ್ಲದಿದ್ದರೆ, ವಾಸ್ತವಾಂಶದ ಬಗ್ಗೆ ವ್ಯಾಜ್ಯ (ಡಿಸ್ಪ್ಯೂಟ್ ಆಸ್ ಟು ಕ್ವೆಶ್ಚನ್ ಆಫ್ ಫ್ಯಾಕ್ಟ್) ಆಗಿದ್ದರೆ,—ಇಂಥ ಕಾರಣಗಳಿಗೆ ಉಚ್ಚ ನ್ಯಾಯಾಲಯ 226ನೆಯ ಅನುಚ್ಛೇದದ ಪ್ರಕಾರ ಪರಿಹಾರ ಕೊಡಲು ನಿರಾಕರಿಸಿದೆ.

ಕಟ್ಟಿನ ಕರೆಯಾಜ್ಞೆ ನೀಡುವ ವಿಚಾರವನ್ನು ವಿಮರ್ಶಿಸುವಾಗ ನ್ಯಾಯಾಲಯ ಗಳು ಅಪೀಲುಗಳಲ್ಲಿ ಅನುಸರಿಸುವ ವಿಧಾನವನ್ನು ಅನುಸರಿಸುವುದಿಲ್ಲ. ರುಜು ವಾತುಗಳಿಂದ ಕೆಳಗೆ ತೀರ್ಮಾನಿಸಲಾದ ವಿಚಾರಗಳನ್ನು ತನಿಖೆ ಮಾಡುವುದಿಲ್ಲ, ಹಕ್ಕನ್ನು ನಿರ್ಧರಿಸುವುದಿಲ್ಲ. ಇದ್ದ ಹಕ್ಕನ್ನು ಊರ್ಜಿತಗೊಳಿಸಿ ಅಪ್ಪಣೆ ಕೊಡು ತ್ತದೆ. ಸಿವಿಲ್ ಹಕ್ಕುಗಳನ್ನು ಪ್ರತಿಪಾದನೆ ಮಾಡಲು ಕ್ರಮವಿಹಿತವಾಗಿ ಏರ್ಪಡಿಸಿದ ನ್ಯಾಯಾಲಯಗಳೂ ಕಾನೂನುಗಳೂ ಇರುವುದರಿಂದ, ಭಾರತದ ಸಂವಿಧಾನದಲ್ಲಿ ಅದನ್ನು ಬಾಹಿರಪಡಿಸದಿದ್ದರೂ ಕಟ್ಟಿನ ಕರೆಯ ಕ್ರಮವನ್ನು ಅವಕ್ಕೆ ಉಪಯೋಗಿ ಸಿರುವುದಿಲ್ಲ. ಕ್ರಿಮಿನಲ್ ಮೊಕದ್ದಮೆಗಳಲ್ಲಿ ರಾಜ್ಯ ಸಂವಿಧಾನಕ್ಕೆ ವಿರೋಧ ವಾಗಿದ್ದರೆ ಅಥವಾ ಯಾವುದಾದರೂ ನಿಬಂಧನೆಯ (ರೆಗ್ಯುಲೇಷನ್) ಉಲ್ಲಂಘನೆ ಯಾಗಿದ್ದು, ಅದರ ಪ್ರಕಾರ ಆಪಾದನೆಯಾಗಿದ್ದು, ಆ ನಿಬಂಧನೆಯೇ ಕಾನೂನಿನ ಅಧಿಕಾರವ್ಯಾಪ್ತಿಗೆ ಮೀರಿದ್ದಾಗಿದ್ದರೆ (ಅಲ್ಟ್ರಾ ವೈರಿಸ್) ಅಂಥ ಸಂದರ್ಭದಲ್ಲಿ ಕಟ್ಟಿನ ಕರೆಯಾಜ್ಞೆ ಜಾರಿ ಮಾಡಬಹುದು. ಅಪೀಲು ಮುಂತಾದ ಕ್ರಮಗಳು ಇರುವುದ ರಿಂದ ಕಟ್ಟಿನ ಕರೆಯ ಕ್ರಮವನ್ನು ಕ್ರಿಮಿನಲ್ ಮೊಕದ್ದಮೆಗಳಲ್ಲೂ ಉಪಯೋಗಿಸುವುದು ಅಪರೂಪವಾಗಿದೆ. ಕಟ್ಟಿ ಕರೆಯಾಜ್ಞೆಯನ್ನು ಪಾಲಿಸದಿ ದ್ದಲ್ಲಿ ಅಂಥವರು ನ್ಯಾಯಾಲಯದ ಅವಜ್ಞೆಯ (ಕಂಟೆಮ್ಪ್ಟ್ ಆಫ್ ಕೋರ್ಟ್) ತಪ್ಪಿಗೆ ಗುರಿಯಾಗುತ್ತಾರೆ. (ಕೆ.ಜಿ.ಬಿ.)

**ಕಟ್ಟುಕಥೆ :** ಅಸಂಭಾವ್ಯ ಪಾತ್ರಗಳ ಭ್ರಾಮಕ ಜಗತ್ತಿನಲ್ಲಿ ದೈನ್ಯ ನಾಯಕರು ವಿಜಯಾದಿ ಕೀರ್ತಿ ಭಾಗ್ಯಗಳನ್ನು ಪಡೆವಂಥ ಅದ್ಭುತಗಳಿಂದ ಕೂಡಿರುವ ರಮ ಣೀಯ ಕಥನ (ಮೆರ್ಖೆನ್). ಲೋಕವಿಖ್ಯಾತ ಜಾನಪದ ವಿದ್ವಾಂಸ ಸ್ಟಿತ್ ಥಾಂಪ್ಸನ್ ಇದನ್ನು ಕುರಿತು ಹೇಳಿರುವ ಮಾತುಗಳಿವು ; ಮೆರ್ಖೆನ್ ಆಶಯಗಳ ಅಥವಾ ಘಟನೆಗಳ ಆನುಪೂರ್ವಿಯನ್ನೊಳಗೊಂಡು ಕೆಲವುಟ್ಟಿಗೆ ದೊಡ್ಡದಾಗಿರುವ ಕಥೆ. ಅದು ಗೊತ್ತಾದ ಸ್ಥಳ ಅಥವಾ ಪಾತ್ರಗಳಿಲ್ಲದ ಅವಾಸ್ತವ ಪ್ರಪಂಚದಲ್ಲಿ ಚಲಿಸುತ್ತದೆಯಲ್ಲದೆ ಅದ್ಭುತಗಳಿಂದ ತುಂಬಿರುತ್ತದೆ. ಈ ಅಸಂಭಾವ್ಯ ಜಗತ್ತಿನಲ್ಲಿ ದೈನ್ಯ ನಾಯಕರು ವಿರೋಧಿಗಳನ್ನು ಕೊಲ್ಲುತ್ತಾರೆ, ಸಾಮ್ರಾಜ್ಯವನ್ನು ಗೆಲ್ಲುತ್ತಾರೆ, ರಾಜಕುಮಾರಿಯರನ್ನು ಮದುವೆಯಾಗುತ್ತಾರೆ.

ಕಟ್ಟುಕಥೆ ಜಗತ್ತಿನ ಜನಪದ ಕಥೆಗಳಲ್ಲಿ ಕಂಡುಬರುವ ಒಂದು ಪ್ರಮುಖ ಪ್ರಕಾರ. ಮೆರ್ಖೆನ್ ಜರ್ಮನ್ ಭಾಷೆಯ ಪದ. ಮೊದಲ ಬಾರಿಗೆ ಇದು ಗ್ರಿಮ್ ಸೋದರರು 1813 ರಲ್ಲಿ ಹೊರತಂದ ಜನಪದ ಕಥಾಸಂಕಲನ ಕಿನ್ಡರ್–ಉನ್ಡ್ ಹಾಉಸ್ ಮೆರ್ಖೆನ್ ಮೂಲಕವಾಗಿ ಪ್ರಕಾಶನಗೊಂಡಿತು. ಮೊದಮೊದಲು ಇದರ ಕಡೆಗೆ ಹೆಚ್ಚಿನ ಗಮನ ಹರಿಯದಿದ್ದರೂ ಸಾರ್ವತ್ರಿಕ ಸ್ವೀಕಾರ ಇದಕ್ಕೆ ಸಿಗ ದಿದ್ದರೂ ಆಧುನಿಕ ವಿದ್ವಾಂಸರು ಈಚೆಗೆ ಇದರ ಪ್ರಾಮುಖ್ಯವನ್ನು ಒಪ್ಪಿಕೊಂಡಿರು ವಂತೆ ಕಾಣುತ್ತದೆ. ಇದಕ್ಕೆ ಸಂವಾದಿಯಾಗಿ ಇಂಗ್ಲಿಷಿನಲ್ಲಿ ಫೆಯ್‌ರಿ ಟೇಲ್, ಹೌಸ್ ಹೋಲ್ಡ್ ಟೇಲ್ ಎಂಬ ಪದಗಳನ್ನು ಬಳಸಿದ್ದರೂ ಅವು ಅಷ್ಟು ತೃಪ್ತಿಕರವಾಗಿಲ್ಲ. ಫೇಯ್‌ರಿ ಟೇಲ್ ಅಥವಾ ಅಜ್ಜಿಕಥೆ (ಕಿನ್ನರ ಕಥೆ) ಎನಿಸಿಕೊಂಡ ಬಹುಸಂಖ್ಯಾತ ಕಥೆಗಳಲ್ಲಿ ಫೆಯ್‌ರೀಸ್ ಅಥವಾ ಕಿನ್ನರರೇ ಇರುವುದಿಲ್ಲ. ಹೌಸ್‌ಹೋಲ್ಡ್ ಟೇಲ್ ಅಥವಾ ಕೌಟುಂಬಿಕ ಕಥೆ ಶಾಸ್ತ್ರೀಯವಾಗಿ ತುಂಬ ವ್ಯಾಪಕವಾದುದೆನಿಸುತ್ತದೆ. ಆದ್ದರಿಂದ ಇವೆರಡು ಮಾತುಗಳೂ ಮೂಲ ಜರ್ಮನ್ ಪದದ ಮೂಲಾರ್ಥವನ್ನು ಪೂರ್ಣವಾಗಿ ಸೂಚಿಸಲಾರವೆಂದು ಕೆಲವರ ಮತ. ಫ್ರೆಂಚಿನ ಕೊಂಟೆ ಪಾಪ್ಯು ಲಯಿರೆ, ನಾರ್ವೆಯ ಫವೆಟ್ಯೆರ್, ಸ್ವಿಟ್ಜರ್ಲೆಂಡಿನ ಸಾಗಾ, ರಷ್ಯದ ಸ್ಕಾಜ್ಕಾ ಮೊದಲಾದವು ಮೆರ್ಖೆನಿನ ಸಂವಾದಿ ಪದಗಳು. ಆದರೆ ಇವು [illegible]ಗಳೂ ನಿಖರವಾಗಿ ಒಂದೇ ಅರ್ಥವ್ಯಾಪ್ತಿಯನ್ನು ಹೊಂದಿರುತ್ತವೆ ಎಂಬುದರಲ್ಲಿ ಸಂಶಯ ವಿದ್ದೇ ಇದೆ. ಈ ಎಲ್ಲ ಪದಗಳೂ ವಿವರಿಸಲು ಯತ್ನಿಸಿರುವುದು ಸಿಂಡ್ರೆಲ, ಸ್ನೋವೈಟ್, ಹನ್ಸೆಲ್ ಮತ್ತು ಗ್ರೆಟಿಲ್‌ನಂಥ ಕಥೆಗಳನ್ನು. ಈ ಸಂದಿಗ್ಧತೆಯನ್ನು ನಿವಾರಿಸಲು ಕಿಮೀಯರಟ ಪದವನ್ನು ಬಳಕೆಗೆ ತರುವಂತೆ ಸ್ಟಿತ್ ಥಾಂಪ್ಸನ್ ಸಲಹೆ

ಮಾಡಿದ್ದಾನೆ. ಇದು ಕಿಮೀಯರ ಪದದಿಂದ ನಿಷ್ಪನ್ನವಾದುದು. ಸಿಂಹದ ತಲೆಯೂ ಆಡಿನ ಒಡಲೂ ಹಾವಿನ ಬಾಲವೂ ಉಳ್ಳ ರಾಕ್ಷಸಾಕಾರದ ಅದ್ಭುತ ಪ್ರಾಣಿಯೊಂದನ್ನು ದೃಷ್ಟಿಯಲ್ಲಿಟ್ಟುಕೊಂಡು ಥಾಂಪ್ಸನ್ ಈ ಪದವನ್ನು ರೂಪಿಸಿದಂತೆ ಕಾಣುತ್ತದೆ. ಅಸಂಭಾವ್ಯತೆ ಇಂಥ ಕಲೆಗಳಿಗೆ ತಿರುಳಾಗಿರುವುದೇ ಇದಕ್ಕೆ ಕಾರಣವಾಗಿರಬೇಕು. ಆದರೆ ಈ ಪದವೂ ಹೆಚ್ಚು ಬಳಕೆಗೆ ಬಂದಂತೆ ಕಾಣುವುದಿಲ್ಲ. ಕನ್ನಡದಲ್ಲಿ ಮೆರ್ಖನ್‌ಗೆ ಸಂವಾದಿಯಾಗಿ ಕಟ್ಟುಕಥೆ ಎಂಬ ಪದವನ್ನು ಡಾ. ಹಾ. ಮಾ. ನಾಯಕರು ಮೊಟ್ಟಮೊದಲು ರೂಪಿಸಿ ಚಲಾವಣೆಗೆ ತಂದರು. ಇದು ಹೆಚ್ಚು ಔಚಿತ್ಯಪೂರ್ಣವಾಗಿದೆ ಎಂದು ಹೇಳಬಹುದು.

ಜರ್ಮನರು ಮೆರ್ಖನ್ ಪದದ ಬಳಕೆಯಲ್ಲಿ ನಿಖರತೆಯನ್ನು ತರಲು ವಿಶೇಷ ಪ್ರಯತ್ನ ಮಾಡಿರುವರಾದರೂ ಖಾಸಗಿ ಸೂತ್ರ ವಿವರಣೆಯಲ್ಲಿ ಅದು ಪರ್ಯವಸಾನವಾದಂತೆ ಕಾಣಬರುತ್ತದೆ. ಸಾಮಾನ್ಯವಾಗಿ ಜರ್ಮನಿಯಲ್ಲಿ ಬಳಕೆಯಲ್ಲಿರುವ ಈ ಪದ ಬಹಳ ಸಡಿಲವಾದುದು. ನಿಜವಾಗಿಯೂ ಗ್ರಿಮ್ ಸೋದರರ ಹಾಉಸ್ ಮೆರ್ಖನ್‌ನಲ್ಲಿನ ಎಲ್ಲ ಕಥೆಗಳನ್ನೂ ಗಮನಿಸಿದಾಗ ಈ ಪದದ ಅರ್ಥವ್ಯಾಪ್ತಿ ವಿಶಾಲವಾಗುತ್ತದೆ. ಈ ಸಂಗ್ರಹದಲ್ಲಿ, ಕೆಲ ಜಾನಪದ ವಿದ್ವಾಂಸರು ನಿಜವಾದ ಮೆರ್ಖನ್‌ಗಳೆಂದು ಕರೆದಿರುವ ಸ್ನೋವೈಟ್, ಫೆಯ್‌ತ್‌ಫುಲ್ ಜಾನ್ ಮತ್ತು ದಿ ಫ್ರಾಗ್ ಪ್ರಿನ್ಸ್‌ನಂಥವು ಮಾತ್ರವಲ್ಲದೆ, ಅವಿವೇಕದ ಕಥೆಗಳು, ಸಂಚಿತ ಕಥೆಗಳು, ದಡ್ಡರ ಕಥೆಗಳು, ಸಾಧುಗಳ ಮತ್ತು ಸ್ಥಳಗಳ ಐತಿಹ್ಯಗಳು, ಮಧ್ಯಯುಗದ ಧಾರ್ಮಿಕ ಕಥೆಗಳು ಮತ್ತಿತರ ಅನೇಕ ವಿನೋದ ಹಾಗೂ ಗೂಢಚರಿತ್ರಾಂಶಗಳಿರುವ ಕಥೆಗಳನ್ನು ಕಾಣುತ್ತೇವೆ. ಆಲ್ಬರ್ಟ್ ವೆಸೆಲ್‌ಸ್ಕಿಯ ಪ್ರಕಾರ ಸಿಂಡ್ರೆಲ ಒಂದೇ ನಿಜವಾದ ಮೆರ್ಖನ್ ರೀತಿಯದು. ಇಂಥ ಸಂದರ್ಭದಲ್ಲಿ ಸಹಜವಾಗಿಯೇ ಅನಿರ್ದಿಷ್ಟತೆ ತಲೆದೋರುತ್ತದೆ.

ಈ ವಿಶಾಲ ದೃಷ್ಟಿಯಲ್ಲಿ ಮೆರ್ಖನ್ ಉಪಯೋಗಿಸುವಾಗ ಇದಕ್ಕೂ ಸಾಗಾಗಳಿಗೂ ಇರುವ ವ್ಯತ್ಯಾಸವನ್ನು ತಿಳಿಯಬೇಕು. ಮೆರ್ಖನ್ ಸಂಕೀರ್ಣ ಚಿತ್ರಣವೆಂದೂ ಸಾಗಾ ಸರಳ ಚಿತ್ರಣವೆಂದೂ ಹೇಳಲಾಗಿದೆ. ಸಾಗಾ ಕಥಾವಕ್ತೃ ವಾಸ್ತವವೆಂದು ನಂಬಿದ ವಸ್ತುಗಳಿಗೆ ಸಂಬಂಧಿಸಿದ್ದು ಅಥವಾ ಶ್ರೋತೃಗಳು ನಂಬುವಂತೆ ಹೇಳಿದ್ದು. ಇದರಲ್ಲಿ ಇತಿಹಾಸ ಅಥವಾ ಇತಿಹಾಸಾಭಾವದ ವಿಷಯಗಳೂ ಇರಬಹುದು. ಆದರೆ ಮೆರ್ಖನ್ ಸಂಪೂರ್ಣವಾಗಿ ಕಲ್ಪಿತವಸ್ತುವನ್ನುಳ್ಳದ್ದು. ಮೆರ್ಖನಿಗೂ ನಾವೆಲ್ಲಕ್ಕೂ ಇರುವ ವ್ಯತ್ಯಾಸವನ್ನೂ ಇಲ್ಲಿ ಗಮನಿಸಬಹುದು. ಇವೆರಡರ ಸಂಬಂಧವೂ ಹೆಚ್ಚುಕಡಿಮೆ ಮೇಲಿನದನ್ನೇ ಹೋಲುತ್ತದೆ. ಮೆರ್ಖನಿನದು ಭ್ರಾಮಕ ಜಗತ್ತಾದರೆ, ನಾವೆಲ್ಲದ್ದು ವಾಸ್ತವಾಭಾಸ ಜಗತ್ತೆಂದು ಹೇಳಬಹುದು. ಆದರೆ ಎಷ್ಟೋ ಸಾರಿ ಇವೆರಡಕ್ಕಿರುವ ವ್ಯತ್ಯಾಸವನ್ನು ತೋರಿಸಲು ಸಾಧ್ಯವಾಗುವುದಿಲ್ಲ.

ನಿರೂಪಕರು ಕೇವಲ ಆನಂದಕೋಸ್ಕರವಾಗಿಯೇ ಹೇಳಿದ ಕಥೆ ಮೆರ್ಖನ್. ಇದು ವಾಸ್ತವವಾಗಿ ನಂಬಿ ಬಂದ್ದದೂ ಅಲ್ಲ ಅಥವಾ ನಡೆದದ್ದೂ ನಡೆಯಬಹುದಾದದ್ದೂ ಅಲ್ಲ. ಪಶ್ಚಿಮ ಯೂರೋಪು ಮತ್ತು ಅದರಿಂದ ಪ್ರಭಾವಿತಗೊಂಡ ಪ್ರದೇಶಗಳನ್ನು ಬಿಟ್ಟು ಉಳಿದ ಪ್ರಪಂಚದ ಇತರ ಭಾಗಗಳಲ್ಲಿನ ಸಾಹಿತ್ಯವನ್ನು ನೋಡಿದರೆ ಈ ವ್ಯತ್ಯಾಸ ನಿಜವಾಗಿಯೂ ಕಥಾವಕ್ತೃಗಳ ಮನಸ್ಸಿನಲ್ಲಿದ್ದಂತೆ ಕಾಣುವುದಿಲ್ಲ. ಎಲ್ಲಿಯವರೆಗೆ ಕಥೆಗಳಲ್ಲಿ ನಂಬಿಕೆಯ ಅಂಶ ಇರುತ್ತದೆಯೊ ಅಲ್ಲಿಯವರೆಗೆ ಅವನ್ನು ಕೇವಲ ಕಾಲ್ಪನಿಕವೆಂದು ತಳ್ಳಿಹಾಕಲಾಗುವುದಿಲ್ಲ. ಈ ಕಾರಣಕ್ಕಾಗಿಯೆ ಕೆಲವು ಲೇಖಕರು ಮೆರ್ಖನ್‌ನ ಲಕ್ಷಣಗಳನ್ನು ಪಶ್ಚಿಮ ಐರೋಪ್ಯ ಸಂಸ್ಕೃತಿಗೆ ಮಿತಿಗೊಳಿಸಲು ಅಪೇಕ್ಷಿಸಿದಂತೆ ಕಾಣುತ್ತದೆ.

ಒಂದೇ ರೀತಿಯ ಕಥಾವಸ್ತುಗಳ ಜಗತ್ತಿನ ಬೇರೆ ಬೇರೆ ಭಾಗಗಳಲ್ಲಿಯೂ ವ್ಯಕ್ತವಾಗುವುದರಿಂದ ಕಥಾವಕ್ತೃವಿನ ನಂಬಿಕೆ ಅಥವಾ ಅಪನಂಬಿಕೆಯನ್ನು ಆಧರಿಸಿ ಅವನ್ನು ವರ್ಗೀಕರಿಸುವುದು ಉಪಯುಕ್ತವಲ್ಲವೆಂದು ತೋರುತ್ತದೆ. ನಿರ್ದಿಷ್ಟ ಕಥೆಯೊಂದು ಒಂದು ಭಾಗದವರಿಗೆ ಮೆರ್ಖನ್ ಆಗಿದ್ದು ಇನ್ನೊಂದು ಭಾಗದವರಿಗೆ ಆಗದಿರುವುದು ಸಾಧ್ಯವಿಲ್ಲ. ಈ ಸ್ಥಿತಿಯನ್ನೇ ಗಮನಿಸಿ ಆಲ್ಬರ್ಟ್ ವೆಸೆಲ್‌ಸ್ಕಿ ಮೆರ್ಖನ್ ಪದವನ್ನು ಗ್ರಿಮ್ ಸೋದರರ ಕಥೆಗಳಲ್ಲಿ ನಿರ್ದಿಷ್ಟ ಶೈಲಿ ಮತ್ತು ಕಥನ ಪ್ರವೃತ್ತಿಯುಳ್ಳ ಸಮೂಹಗಳಿಗೆ ಮಾತ್ರ ಪರಿಮಿತಿಗೊಳಿಸಲು ಬಯಸಿದ. ಇವನ ಅಭಿಪ್ರಾಯದಂತೆ ಸ್ನೋವೈಟ್, ಸಿಂಡ್ರೆಲ, ಹನ್ಸೆಲ್ ಮತ್ತು ಗ್ರೆಟಿಲ್, ಪುಸ್ ಇನ್ ಬೂಟ್ಸ್, ಫೆಯ್ತ್‌ಫುಲ್ ಜಾನ್—ಇವುಗಳೇ ಪ್ರಾತಿನಿಧಿಕ ಸ್ವರೂಪದ, ಆದರ್ಶ ಮೆರ್ಖನ್ ಮಾದರಿಗಳು. ಇವುಗಳ ನಿಶ್ಚಿತ ಶೈಲಿಯನ್ನು ವಿಶ್ಲೇಷಣೆಮಾಡಿ, ಈ ರೂಪ ಪ್ರಾಯಶಃ ಪುನರುಜ್ಜೀವನಕಾಲಕ್ಕಿಂತ ಮುನ್ನ ಮತ್ತು 16ನೆಯ ಶತಮಾನಕ್ಕಿಂತ ಹಿಂದೆ ರಚಿತವಾಗಿರಲಿಲ್ಲವೆಂದು ಆತ ತಿಳಿಸುತ್ತಾನೆ.

ಆದರೆ ಗ್ರೀಮ್ ಸೋದರರೇ ಮೊದಲಾದವರಲ್ಲಿ ಕಂಡುಬಂದ ಈ ವಿಶೇಷ ಶೈಲಿಯ ಕಥೆಗಳು ಸಾಕಷ್ಟು ಪ್ರತ್ಯೇಕವೂ ಸ್ವತಂತ್ರವೂ ಆದ ಅಸ್ತಿತ್ವವನ್ನು ಪಡೆದು ಬೇರೆ ಕಡೆಯೂ ರಚಿತವಾಗಿರಲಿಕ್ಕೆ ಸಾಕು. ಐರೋಪ್ಯ ಸಾಹಿತ್ಯವನ್ನು ಪರಿಶೀಲಿಸಿದರೆ ಜನಪ್ರೀತಿ ಪಡೆದಿರುವ ಯಾವುದೇ ಜನಪದ ಕಥೆ, ತನ್ನ ಜೀವನೇತಿಹಾಸದಲ್ಲಿ 16ನೆಯ ಶತಮಾನಕ್ಕಿಂತ ಹಿಂದಿನದಾಗಿರುತ್ತದೆ. ವೆಸೆಲ್‌ಸ್ಕಿ ಸಲಹೆ ಮಾಡಿದಂತೆ ಹಾಗೆ ಮೆರ್ಖನ್ ಪದವನ್ನು ವಿಶೇಷ ಶೈಲಿಯವಕ್ಕೆ ಮಾತ್ರ ಮಿತಿಗೊಳಿಸಿದರೆ ಬಹಳವಾಗಿ ಪ್ರಸಿದ್ಧಿ ಪಡೆದಿರುವ ಇತರ ಅಸಂಖ್ಯಾತ ಪಾಠಗಳು ಈ ವ್ಯಾಪ್ತಿಗೆ ಸೇರದೆ ಬಿಟ್ಟು ಹೋಗುವ ಅವಕಾಶವಿದೆ ಎಂದು ಸ್ಟಿತ್ ಥಾಂಪ್ಸನ್ ಎಚ್ಚರಿಸಿದ್ದಾನೆ. ಆದ್ದರಿಂದ ವೆಸಲ್‌ಸ್ಕಿಯ ವಿಭಾಗಕ್ರಮ ಖಂಡಿತವಾಗಿಯೂ ಮೌಲಿಕವಲ್ಲ. ಇಂಥ ವಿಸ್ತಾರವಾದ ಹಾಗೂ ಸಡಿಲವಾದ ಪದದ ಬಳಕೆಯನ್ನು ಹಾಗೆ ಸಂಕುಚಿತಗೊಳಿಸುವುದು ಸರಿಯಲ್ಲ—ಎಂದು ಥಾಂಪ್ಸನ್ ಮತ್ತೊಂದೆಡೆ ಅಭಿಪ್ರಾಯ ಪಡುತ್ತಾನೆ. ಒಟ್ಟಾರೆ ಹೇಳುವುದಾದರೆ, ಈ ಪದ ಇಂಗ್ಲಿಷಿನ ಫೋಕ್ ಟೇಲ್‌ಗೆ (ಜನಪದ ಕಥೆ) ಸಂವಾದಿಯಾದುದು. ಅಜ್ಜಿಕಥೆಯನ್ನು (ನೋಡಿ) ಇಲ್ಲಿ ನೆನೆಸಿಕೊಳ್ಳಬಹುದು. ಪ್ರಾಯಶಃ ಮೆರ್ಖನ್ ಗದ್ಯ ಕಥೆಗಳಲ್ಲಿನ ಪುರಾಣ (ಮಿತ್) ಮತ್ತು ಐತಿಹ್ಯಗಳನ್ನು (ಲೆಜೆಂಡ್) ಬಿಟ್ಟು ಉಳಿದೆಲ್ಲ ಪ್ರಕಾರಗಳನ್ನೂ ಒಳಗೊಳ್ಳುತ್ತವೆಂದು ಹೇಳಬಹುದು. ಅದ್ಭುತಕಥೆ, ವಿನೋದಕಥೆ, ಕಿನ್ನರಕಥೆ, ಪ್ರಾಣಿಕಥೆ, ಸೂತ್ರಕಥೆ, ಅಮಾನುಷಕಥೆ ಇತ್ಯಾದಿಗಳೆಲ್ಲ ಇದರ ಒಡಲಿನಲ್ಲಿ ಸೇರಿಕೊಳ್ಳುತ್ತವೆ. ಆದ್ದರಿಂದ ಇದು ವ್ಯಾಪಕಾರ್ಥದ ಒಂದು ಪದ. ಆದರೆ ಪಾಶ್ಚಾತ್ಯ ವಿದ್ವಾಂಸರು ಕಥೆಗಳ ಪ್ರಮುಖ ವರ್ಗವೊಂದಕ್ಕೆ ಮಾತ್ರ ಇದನ್ನು ಬಳಸಿರುವುದರಿಂದ, ಜನಪದ ಕಥೆಗಳಲ್ಲಿ ಇದಕ್ಕೆ ಪ್ರಮುಖ ಸ್ಥಾನವಿದೆ.

ಕಟ್ಟುಕಥೆ ನಿರ್ದಿಷ್ಟ ಕಾಲ ಅಥವಾ ಸ್ಥಾನಗಳಿಗೆ ಸಂಬಂಧಿಸಿರುವುದಿಲ್ಲವೆಂದು ಆಗಲೇ ಹೇಳಿದ್ದಾಗಿದೆ. ಸಾಮಾನ್ಯವಾಗಿ ಕಥೆಯಲ್ಲಿ ರಾಜರಾಣಿಯರು, ರಾಜಕುಮಾರ ರಾಜಕುಮಾರಿಯರು, ಸೇವಕರು ಕಾಣಿಸಿಕೊಳ್ಳುತ್ತಾರೆ. ಒಬ್ಬ ನಾಯಿಕೆ ಅಥವಾ ನಾಯಕ ಇರುವುದುಂಟು. ನಾಯಿಕೆ ಕಿರಿಯ ಮಗಳು. ಮಾಟಗಾತಿಯರು, ರಾಕ್ಷಸರು, ಬೃಹದ್ದೇಹಿಗಳು ಮೊದಲಾದ ಅತಿಮಾನುಷ ಪಾತ್ರಗಳೂ ಸೇರಿಕೊಂಡಿರುತ್ತವೆ. ಕಥೆ ಸಹಜವಾಗಿ ಮಂತ್ರಜಾಲ, ರೂಪ ಪರಿವರ್ತನೆಗಳನ್ನು ಒಳಗೊಂಡಿರುತ್ತದೆ. ಪ್ರಶ್ನೆಗಳು, ಒಗಟುಗಳು, ಅನ್ವೇಷಣೆಗಳು ಬಹುತೇಕ ಕಥೆಗಳ ಕಥನಸೂತ್ರವಾಗಿರುವಂತೆ ಕಾಣುತ್ತದೆ. ಕಥೆಯಲ್ಲಿ ಮೂರರ ಸಂಖ್ಯೆ ಪದೇ ಪದೇ ಬರುವುದು ಮತ್ತೊಂದು ವೈಶಿಷ್ಟ್ಯ. ಉದಾಹರಣೆಗೆ, ರಾಜಕುಮಾರಿ ಮೂರು ಜನ ಹೆಣ್ಣುಮಕ್ಕಳಲ್ಲಿ ಕಿರಿಯವಳಾಗಿರುವುದು. ಇದಲ್ಲದೆ ಶಾಬ್ದಿಕ ಸೂತ್ರಗಳಾದ ಪ್ರಾಸ, ಗೀತೆ ಮೊದಲಾದವು ಪುನರಾವರ್ತಿಸುತ್ತ ಕಥೆಯ ಕಟ್ಟಡದಲ್ಲಿ ಹಾಸುಹೊಕ್ಕಾಗಿ ಸೇರಿಕೊಂಡಿರುವುದೊಂದು ಇದರ ವಿಶೇಷ. ಸಾಮಾನ್ಯವಾಗಿ ಒಳ್ಳೆಯ ಮನುಷ್ಯರಿಗೇ ಗೆಲುವು ದೊರೆಯುವುದು ಇಂಥ ಕಥೆಗಳ ಮಗುದೊಂದು ಗಮನಾರ್ಹ ಅಂಶ. ಇವರು ಉತ್ತಮರು ಮಾತ್ರವಾಗಿರದೆ, ಶ್ರೀಮಂತರೂ ಆಗಿರುತ್ತಾರೆ. ಇವರು ರಾಜಋಷಿಗಳಾಗಿರಲೂ ಬಹುದು. ಹಳೆಯ ರಾಜ ಕೆಟ್ಟವನಾಗಿದ್ದರೆ ಆಗ ಸಾಮಾನ್ಯವಾಗಿ ಒಳ್ಳೆಯ ರಾಜಕುಮಾರನೊಬ್ಬ ಜಯಗಳಿಸುವುದುಂಟು. ಇಂಥ ಕಥೆಗಳ ಸಂವಿಧಾನದಲ್ಲಿ ಕೆಲಮಟ್ಟಿಗೆ ಸಂಕೀರ್ಣತೆ ಗೋಚರಿಸಬಹುದು.

ಕಟ್ಟುಕಥೆ ಕಾಲದಿಂದ ಕಾಲಕ್ಕೆ ಬಾಯಿಂದ ಬಾಯಿಗೆ ಹರಿದು ಬಂದಿರುವ ಕಂಠಸ್ಥ ಸಂಪ್ರದಾಯದ ಕಥೆ. ಅನೇಕ ಆಶಯಗಳು, ಘಟನಾ ಪರಂಪರೆಗಳು, ನಿರ್ದಿಷ್ಟ ದೀರ್ಘತೆ, ಸುಖಾಂತ ಮುಕ್ತಾಯ—ಇವು ರಚನೆಯಲ್ಲಿಯ ಕೆಲವು ಅಂಶಗಳು. ಧರ್ಮ, ತತ್ತ್ವ, ಇತಿಹಾಸ—ಇವುಗಳಲ್ಲಿ ಯಾವುದೊಂದೂ ಇದರಲ್ಲಿ ಇರುವುದಿಲ್ಲ. ಕಲ್ಪಿತ ಕಥೆಯಾಗಿರುವ ಇದು ಶುದ್ಧಾಂಗವಾಗಿ ಒಂದು ಕಲಾಕೃತಿ. ಇಂಥ ಕಥೆಗಳಿಗೆ ಮೇಲೆ ಹೇಳಿದಂತೆ ಸಿಂಡ್ರೆಲ, ಸ್ನೋವೈಟ್, ಹನ್ಸೆಲ್ ಮತ್ತು ಗ್ರೆಟಿಲ್ ದಿ ಫ್ರಾಗ್ ಪ್ರಿನ್ಸ್ ಮೊದಲಾದವು ನಿದರ್ಶನಗಳು. ಎಲ್ಲ ಭಾಷೆಗಳಲ್ಲಿಯೂ ಈ ರೀತಿಯ ಕಥಗಳು ಸಿಗುತ್ತವೆ. ಉದಾಹರಣೆಗೆ, ಕನ್ನಡದಲ್ಲಿಯ ಮಾಟಗಾತಿ (ಕರ್ಣಾಟಕ ಜಾನಪದ ಕಥೆಗಳು–ರಾಗೌ) ಸರ್ವವಿಧದಲ್ಲೂ ಗ್ರಿಮ್ ಸೋದರರ ಹನ್ಸೆಲ್ ಮತ್ತು ಗ್ರೆಟಿಲ್ ಕಥೆಯನ್ನು ಹೋಲುತ್ತದೆ. ಅಲ್ಲಿಯ ಹನ್ಸೆಲ್ ಮತ್ತು ಗ್ರೆಟಿಲ್ ಪಾತ್ರಗಳು ಇಲ್ಲಿಯ ಚೆನ್ನ ಮತ್ತು ಚೆನ್ನಿ. ಅಲ್ಲಿ ಇವರು ಹಿರಿಹೆಂಡತಿಯ ಮಕ್ಕಳಾಗಿದ್ದು ಮಲತಾಯಿಯ ಕ್ರೂರ ಅಸೂಯೆಗೆ ಪಾತ್ರವಾದರೆ, ಇಲ್ಲಿ ಸಿಕ್ಕಿದ ಮಕ್ಕಳಾಗಿದ್ದು ಅದೇ ಪರಿಣಾಮವನ್ನು ಅನುಭವಿಸುತ್ತಾರೆ. ಮುಂದೆ ಅವರನ್ನು ಕಾಡಿಗೆ ಬಿಡುವ ಪ್ರಯತ್ನ ಎರಡರಲ್ಲಿಯೂ ಒಂದೇ ರೀತಿಯಾಗಿದೆ. ಅವರನ್ನು ಕಾಡಿಗೆ ಬಿಟ್ಟು ಬರಲು ತಂದೆ ಕರೆದುಕೊಂಡು ಹೋಗುವಾಗ, ಹಿರಿಯವನಾದ ಹನ್ಸೆಲ್ ಅಥವಾ ಚೆನ್ನ ಹರಳು ಅಥವಾ ಕಲ್ಲುಗಳನ್ನು ದಾರಿಯುದ್ದಕ್ಕೂ ಬಿಟ್ಟುಕೊಂಡು ಹೋಗಿ, ತಂದೆ ಹೊರಟು ಹೋದ ತರುವಾಯ ಅವುಗಳ ದಾರಿ ಹಿಡಿದು ಮನೆಗೆ ಬಂದು ಬಿಡುವುದು, ಎರಡನೆಯ ಸಾರಿ ಅದೇ ರೀತಿ ಹೋದಾಗ ರೊಟ್ಟಿ ಚೂರನ್ನು ದಾರಿಯುದ್ದಕ್ಕೂ ಬಿಡುತ್ತ ಹೋಗಿದ್ದು ಅವುಗಳನ್ನು ಪಕ್ಷಿಗಳು ತಿಂದುಕೊಂಡು ದಾರಿ ತಪ್ಪಿ ಹೋಗುವುದು ಎರಡು ಕಥೆಗಳಲ್ಲೂ ಒಂದೇ ರೀತಿಯಲ್ಲಿ ನಡೆಯುತ್ತದೆ. ಇದಲ್ಲದೆ ದಾರಿ

ತಪ್ಪಿದ ಆ ಅಣ್ಣತಂಗಿಯರು ಕಾಣುವ ಮಾಟಗಾತಿ ಮತ್ತು ದೋಸೆ, ಮಿಠಾಯಿ, ಸಕ್ಕರೆ ಕಡ್ಡಿಯಿಂದ ಮಾಡಿದ ಅವಳ ಮನೆ ಎರಡರಲ್ಲೂ ಕಾಣಸಿಗುತ್ತವೆ. ಮುಕ್ತಾಯ ಮಾತ್ರ ಎರಡರಲ್ಲೂ ಸ್ವಲ್ಪ ಬೇರೆಬೇರೆಯಾಗಿದೆ. ಮಾಟಗಾತಿಯ ಕೈಗೆ ಸಿಕ್ಕಿದ ಹನ್ಸೆಲ್ ಮತ್ತು ಗ್ರೆಟಲ್ ಹೇಗೋ ತಪ್ಪಿಸಿಕೊಂಡು ಮತ್ತೆ ಮನೆ ಸೇರುವುದರಲ್ಲಿ ಅಲ್ಲಿಯ ಕಥೆ ಮುಕ್ತಾಯವಾಗುತ್ತದೆ. ಆದರೆ ಕನ್ನಡದ ಕಥೆಯಲ್ಲಿ ಹೆಚ್ಚಿನ ಬೆಳೆವಣಿಗೆಯನ್ನು ಕಾಣುತ್ತೇವೆ. ಇಲ್ಲಿಯ ಚಿನ್ನ ಮತ್ತು ಚಿನ್ನಿ ಮಾಟಗಾತಿಯ ಮಾಯದ ಬುರುಡೆ ಮತ್ತು ಕೊಳಲುಗಳನ್ನು ತೆಗೆದುಕೊಂಡು ಬಹಳ ಚಾಣಾಕ್ಷತನದಿಂದ ಅವಳ ಕ್ರೂರ ಹಿಡಿತದಿಂದ ಪಾರಾಗುತ್ತಾರೆ. ಮುಂದೆ ಹಿಂಬಾಲಿಸಿ ಬಂದ ಮಾಟಗಾತಿಯನ್ನು ಹಲವು ವಿಧದಲ್ಲಿ ಆಟವಾಡಿಸಿ, ಕಡೆಗೆ ಅವಳಿಗೆ ಸಿಕ್ಕಿಬಿಡುತ್ತಾರೆ. ಚಿನ್ನ ಜಿಂಕೆಯಾಗುವುದು, ಮುಂದೆ ರಾಜಕುಮಾರನೊಬ್ಬ ಬಂದು ಮಾಟಗಾತಿಯನ್ನು ಕೊಲ್ಲುವುದು, ಚಿನ್ನ ಮೂಲರೂಪಕ್ಕೆ ಬರುವುದು, ಅನಂತರ ಚಿನ್ನಿಯನ್ನು ರಾಜಕುಮಾರ ಮದುವೆಯಾಗುವುದು—ಹೀಗೆ ಕಥೆ ಮುಕ್ತಾಯಗೊಳ್ಳುತ್ತದೆ. ಹೀಗೆ ಹೆಚ್ಚಿನ ಸಾಮ್ಯವಿರುವ ಇಂಥ ಇನ್ನೂ ಅನೇಕ ಉದಾಹರಣೆಗಳಿವೆ. ದಿ ಫ್ರಾಗ್ ಪ್ರಿನ್ಸ್ ಕಥೆಗೆ ನಾಗೇಂದ್ರನ ಕಥೆಯನ್ನು ಹೋಲಿಸಬಹುದು. ಪ್ರಾಣಿಯೊಂದು ರಾಜಕುಮಾರನ ರೂಪ ತಾಳುವ ಆಶಯವೇ ಇವೆರಡರದೂ. ಸಿಂಡ್ರೆಲ ತಾಯಿ ಸತ್ತ ತಬ್ಬಲಿಯಾಗಿದ್ದು, ಮಲತಾಯಿಯ ಕ್ರೂರ ಹಿಂಸೆಗೆ ಗುರಿಯಾಗಿ, ದೇವಲೋಕದಲ್ಲಿಯ ಅವಳ ತಾಯಿಯ ನೆರವಿನಲ್ಲಿ ಬೆಳೆಯುವ ಕಥೆಯೇ ಆಗಿದೆ. ಇದಕ್ಕೆ ಬೇಕಾದರೆ ಚಿಕ್ಕ ಹೊನ್ನಿ ದೊಡ್ಡ ಹೊನ್ನಿ ಕಥೆಯನ್ನೇ ಉದಾರಿಸಬಹುದು. ಹೀಗೆ ಕಟ್ಟುಕಥೆ ಒಂದು ಸಾರ್ವತ್ರಿಕ ಮಾದರಿಯಾಗಿ ಕಾಣಿಸಿಕೊಳ್ಳುತ್ತದೆ. ನೋಡಿ—ಗ್ರಿಮ್ ಸಹೋದರರು. (ಆರ್.ಜಿ.)

**ಕಟ್ಟುಪಟ್ಟಿಗಳು, ಪಟ್ಟಿಕಟ್ಟುವಿಕೆ :** ಹುಣ್ಣು, ಗಾಯಗಳಿಗಾಗಿ ಇಲ್ಲವೇ ಊನವಾದ ಅಂಗಗಳನ್ನು ಬಿಗಿದು ಕಟ್ಟಲು ಬರುವ ಬಟ್ಟೆಯ ಪಟ್ಟಿ ಇಲ್ಲವೇ ಚೂರುಪಟ್ಟಿಗಳಿವು (ಬ್ಯಾಂಡೇಜಸ್). ಗಾಯ ಕಟ್ಟುಗಳನ್ನೋ (ಡ್ರೆಸಿಂಗ್ಸ್) ದಬ್ಬೆ ಕಟ್ಟುಗಳನ್ನೋ (ಸ್ಪ್ಲಿಂಟ್ಸ್) ಒಂದೆಡೆ ಇರಿಸಿದ್ದಂತೆ ಇರಿಸಲೋ, ಮೈಯ ಒಂದು ಭಾಗಕ್ಕೆ ಊರೆ ಕೊಡಲೋ ಅಲುಗಾಡದಂತೆ ಇರಿಸಲೋ ಕೋಶವನ್ನು ಮುಚ್ಚಿ ಹಾಕಲೋ ರಕ್ತ ಸುರಿವುದನ್ನು ನಿಲ್ಲಿಸಲೋ ಇಲ್ಲವೇ ತಡೆಗಟ್ಟಲು ಒತ್ತಿ ಹಿಡಿಯಲೋ ಕಟ್ಟುವುದುಂಟು. ಕಟ್ಟುಪಟ್ಟಿಗಳನ್ನು ಕಟ್ಟಿದ ಮೇಲೆ ತುದಿಗಳನ್ನು ಗಂಟು ಹಾಕುವಾಗ ಸಮಗಂಟನ್ನು (ರೀಫ್‌ನಾಟ್) ಹಾಕಿದರೆ ಭದ್ರವಾಗಿರುವುದು.

ಕಟ್ಟುಪಟ್ಟಿಗಳಲ್ಲಿ ಹಲವಾರು ಬಗೆಗಳಿವೆ: ತ್ರಿಕೋನದ್ದು ಸುರುಳಿ ಇಲ್ಲವೇ ನಿರಿಗಟ್ಟಿದ ಜಾಳರಿವೆ (ಗಾಜ), ನಾಲ್ಕು ಮೂಲೆಯದು, ನಾಲ್ಕು ಬಾಲದ್ದು, ಹಲವು ಬಾಲಗಳದ್ದು, ಹಿಗ್ಗಿ ಕುಗ್ಗುವಂತಹದು. ಅಂಟು ಕಟ್ಟುಪಟ್ಟಿ, ಗಚ್ಚುಗಿರಿ (ಪ್ಲಾಸ್ಟರ್) ಹಿಟ್ಟುಗಳನ್ನು ಹಾಕಿದ್ದು, ರಬ್ಬರಿನದು ಮುಂತಾದುವು. ವೈದ್ಯಚಿಕಿತ್ಸೆಯಲ್ಲಿ ಒಂದೊಂದು ತೆರನಾಗಿ ಕಟ್ಟಲೂ ಬೇರೆ ಬೇರೆ ಹೆಸರುಗಳಿವೆ. ಒಂದೊಂದು ಬೆರಳಿಗೂ ಕೈಗೂ ಸುರುಳಿ ಸುತ್ತಿದಂತೆ ಕಟ್ಟಲು ಕೈಸುತ್ತುಪಟ್ಟಿ ಎಂದಿದೆ.

ಕಟ್ಟುಪಟ್ಟಿಯನ್ನು ಕಟ್ಟಬೇಕಾದ ಎಲ್ಲ ತುರ್ತಿನ ಹೊತ್ತುಗಳಲ್ಲೂ ಚೆನ್ನಾಗಿ ನೆರವಾಗುವುದು ತ್ರಿಕೋನ ಕಟ್ಟುಪಟ್ಟಿ. ಇದನ್ನು ತಯಾರಿಸುವುದೂ ಕಟ್ಟುವುದೂ ಸುಲಭ. 90–100 ಸೆಂ.ಮೀ. ಉದ್ದದ ಅಂಚಿರುವ ಮಸ್ಲಿನ್, ತೆಳುಬಟ್ಟೆ, ಜಾಳರಿವೆಗಳ ಚೌಕವನ್ನು ಕೊಯ್ಮೂಲೆಯಾಗಿ ಕತ್ತರಿಸಿ ಎರಡು ತ್ರಿಕೋನ ಕಟ್ಟುಪಟ್ಟಿಗಳನ್ನು ಪಡೆಯಬಹುದು. ಕಟ್ಟಿದೆಡೆ ಇದು ಜಾರದಂತೆ ಉಳಿದಿರುತ್ತದೆ. ಮೈಯಲ್ಲಿ ಎಲ್ಲಿ ಬೇಕಾದರೂ ಕಟ್ಟಲು ಅನುಕೂಲಕರ. ಕಟ್ಟಿದ ಮೇಲೆ ರಕ್ತನಾಳಗಳನ್ನಾಗಲೀ ಮೆತ್ತನೆಯ ಭಾಗಗಳಿಂದಾಗಲೀ ಅಪಾಯವಿಲ್ಲ. ಮಡಿಸದ ತ್ರಿಕೋನ ಕಟ್ಟುಪಟ್ಟಿಯನ್ನು ತೋಳಿನ ತೂಗುಪಟ್ಟಿಯಾಗೂ (ಸ್ಲಿಂಗ್) ತಲೆ, ಕೈ, ಪಾದಗಳ ಮುಚ್ಚಿಗೆಯಾಗೂ ಕಟ್ಟಬಹುದು. ಮೈಯಲ್ಲಿ ಹಲವು ಭಾಗಗಳಲ್ಲಿ ಕಟ್ಟಲು ಬರುವಂತೆ ಇದನ್ನು ಬೇರೆ ಬೇರೆ ಅಗಲಕ್ಕೆ ಮಡಿಸಿಕೊಳ್ಳಬಹುದು. 3–4 ಬಾರಿ ಮಡಿಸಿದಾಗ ಆಗುವ ನೀಳಮಡಿಕೆ (ಕ್ರವಾಟ್) ಕಟ್ಟುಪಟ್ಟಿಯನ್ನು ತೂಗುಪಟ್ಟಿಯಾಗೂ ಕಣ್ಣು, ಕಿವಿ, ಅಂಗೈ ಅಂಗಾಲುಗಳ ಮುಚ್ಚಿಗೆಯಾಗೂ ಕಟ್ಟಬಹುದು. ಶಸ್ತ್ರವೈದ್ಯಕ್ಕೆ ತಕ್ಕನಾದ ಜಾಳರಿವೆಯಿಂದ ತಯಾರಾಗಿ ಜೀವಿಮಡಿಯಾಗಿದ್ದರೆ (ಸ್ಟರಿಲೈಸ್ಡ್) ಕಟ್ಟುಪಟ್ಟಿಯನ್ನು ಮದ್ದು, ದ್ರಾವಣ, ಮುಲಾಮುಗಳನ್ನು ಹಾಕಿಯೋ ಇಲ್ಲದೆಯೋ ನೇರವಾಗಿ ಗಾಯದ ಮೇಲೆ ಬಿಗಿಸಿ ಕಟ್ಟಬಹುದು. ಆಸ್ಪತ್ರೆಯಲ್ಲಿ ಸಾಮಾನ್ಯ ಬಳಕೆಯಲ್ಲಿ ಇರುವವು ಇವೇ. ಅರಳೆ ಇಲ್ಲವೇ ಮಸ್ಲಿನ್‌ನಿಂದಾದವು ಜಾಳರಿವೆಯಿಂದ ಮಾಡಿದವಕ್ಕಿಂತ ಬಲವಾಗಿರುವುದರಿಂದ ಒತ್ತಿ ಹಿಡಿಯಲೂ ಊರೆ ಕೊಡಲೂ ಒಳ್ಳೆಯವು.

ಆಸ್ಪತ್ರೆಗಳಲ್ಲಿ ಸಾಮಾನ್ಯವಾಗಿ ಬಳಸುವ ಸುರುಳಿ ಕಟ್ಟುಪಟ್ಟಿ ಸುಮಾರು 3–15 ಸೆಂ. ಮೀ. ಅಗಲವೂ ಹಲವಾರು ಮೀಟರುಗಳ ಉದ್ದವೂ ಸುರುಳಿಯಾಗಿರುವುದು. ಇದನ್ನು ಮಸ್ಲಿನ್, ಫ್ಲಾನಲ್, ಜಾಳರಿವೆಗಳಿಂದ ಮಾಡಿರಬಹುದು. ಜಾಳರಿವೆಯವೇ ಹೆಚ್ಚು ಬಳಕೆಯಲ್ಲಿವೆ. ಸಾಮಾನ್ಯವಾಗಿ ಇವನ್ನು ಸುತ್ತ ಸುತ್ತಿ ಕಟ್ಟಬೇಕು. ಆಸ್ಪತ್ರೆಗಳಲ್ಲಿ ದಿನವೂ ಬಹಳ ಕಟ್ಟುಪಟ್ಟಿಗಳನ್ನು ತಯಾರಿಸಿ ಸುರುಳಿ ಸುತ್ತಿಡಲು ಸುತ್ತುರುಳಿಯನ್ನು ಬಳಸುವುದುಂಟು. ಕಟ್ಟುಪಟ್ಟಿಯನ್ನು ಬಿಚ್ಚಿದ ಕೂಡಲೇ ಸುರುಳಿ ಸುತ್ತಿಟ್ಟರೆ ಮತ್ತೆ ಬಳಸಲು ಅನುಕೂಲ. ಯಾವ ಅವಯವವನ್ನೇ ಆಗಲಿ ವೈದ್ಯ ಹೇಳಿದ ಹೊರತು ಕೆಳಗೆ ಇಳಿಬಿಟ್ಟು ಕಟ್ಟುಪಟ್ಟಿ ಸುತ್ತಬಾರದು. ಕೆಳದವಡೆ. ತಲೆ. ಮೊಣಕೈ, ಮೊಣಕಾಲುಗಳ ಪೆಟ್ಟುಗಳಾದಾಗ 15–20 ಸೆಂ.ಮೀ. ಅಗಲ. 2–3 ಮೀ. ಉದ್ದದ ಚೌಕನೆಯ ನಾಲ್ಕೂ ಬಾಲದ ಕಟ್ಟುಪಟ್ಟಿಯು ಕಟ್ಟಲು ಅನುಕೂಲ. ಹೀಗೇ ಹಲವು ಬಾಲಗಳ ಕಟ್ಟುಪಟ್ಟಿಯನ್ನು ಮುಖ್ಯವಾಗಿ ಹೊಟ್ಟೆ, ಬೆನ್ನುಗಳಿಗೆ ಕಟ್ಟಿ ಬಿಗಿಸಬಹುದು. ಹೆರಿಗೆಯಾದ ಮೇಲೆ ಬಾಣಂತಿಗೆ ಇಂಥದನ್ನು ಕಟ್ಟುವುದುಂಟು. ಹಲವು ತೆರನ ಉದ್ದೇಶಗಳಿಗಾಗಿ ಮೈಯಲ್ಲಿ ಹಲವೆಡೆ ಬಿಗಿಸುವ ಕಟ್ಟುಪಟ್ಟಿಗಳಿಗೆ ಬೇರೆ ಬೇರೆ ಹೆಸರುಗಳಿವೆ. ಉದಾಹರಣೆಗಳಿವು : 8 ಗುರುತಿನ ಎಸ್ಮಾರ್ಕನ ಕಟ್ಟುಪಟ್ಟಿ ; ಒಂದು ಭಾಗದ ಸುತ್ತಲೂ ಸುತ್ತುವ ಸುತ್ತುಕಟ್ಟುಪಟ್ಟಿ ; ಕೈಸುತ್ತು ಪಟ್ಟಿ, ಅರೆಕೈ ಸುತ್ತುಪಟ್ಟಿ, ಕೈಕಟ್ಟುಪಟ್ಟಿಗಳು ; ಮುರಿದ ಕೀಲಿಕ (ಕ್ಲಾವಿಕಲ್) ಮೂಳೆಗೆ ಒತ್ತಿಕಟ್ಟುವ ಡಿಸಾಲ್ಟನ ಕಟ್ಟುಪಟ್ಟಿ ; ಕೋಸೆ, ಒತ್ತು, ತೂಗು, ಹಿಂದುಮುಂದು, ಸುರುಳಿ, ಹಿನ್‌ಸುರುಳಿ ಕಟ್ಟುಪಟ್ಟಿಗಳು ; T ಆಕಾರದ ಕಟ್ಟುಪಟ್ಟಿ ; ತೋಳೋ ತೊಡೆಯೋ ಮೈಗೆ ಕೂಡುವೆಡೆಯಲ್ಲಿ V ಆಕಾರದಲ್ಲಿ ಸುರುಳಿ ಮೇಲೆ ಸುರುಳಿ ಸುತ್ತುವ ತೆನೆಪಟ್ಟಿ (ಸ್ಪೈಕ). ಕೆಲವು ಗೊತ್ತಾದ ಕೆಲಸಗಳಿಗಾಗಿ ಕೆಲವು ಹೆಚ್ಚಿನ ವಸ್ತುಗಳನ್ನು ಒಳಸೇರಿಸಿದ ಕಟ್ಟುಪಟ್ಟಿ ತಯಾರಿಸುವುದುಂಟು. ಪ್ಯಾರಿಸ್ಸಿನ ಗಚ್ಚುಗಿರಿ ಹಾಕಿರುವ ಕ್ರಿನೋಲೀ ಸುರುಳಿ ಕಟ್ಟುಪಟ್ಟಿ ; ರಟ್ಟಿನಂತೆ ಗಟ್ಟಿಯಾಗಿರುವ ಸಿಲಿಕ, ಡೆಕ್ಸ್‌ಟ್ರಿನ್, ಗಂಜಿಯಲ್ಲಿ ಅದ್ದಿದ ಕಟ್ಟುಪಟ್ಟಿಗಳು ; ಉದ್ದುದ್ದಕ್ಕಾಗಿ ರಬ್ಬರು ಎಳೆಗಳನ್ನು ನೇಯ್ದಿರುವ ಕೊಂಕುಸಿರಗಳನ್ನು (ವೆರಿಕೋಸ್ ವೆಯ್ನ್ಸ್) ಅದುಮಿಡುವ ಕಟ್ಟುಪಟ್ಟಿಗಳೇ ಮುಂತಾದವು ಇಂಥವು.

(ಈ ಲೇಖನಕ್ಕೆ ಸಂಬಂಧಿಸಿದ ಚಿತ್ರಗನ್ನು ಪುಟ 588 ಮತ್ತು 589ರಲ್ಲಿ ಕೊಟ್ಟಿದೆ). (ಪಿ.ಕೆ.ಆರ್.)

**ಕಟ್ಟುಬಂಧ ಚಿಕಿತ್ಸೆ :** ಬೆನ್ನುಗಂಬ, ಎದೆಗೂಡು, ಹೊಟ್ಟೆಕುಳಿ ಮತ್ತಿತರ ಅಂಗಾಂಗಗಳ ತಂತುಗಟ್ಟುಗಳು (ಲಿಗಮೆಂಟ್ಸ್). ಮುದುರಿಕೊಂಡೋ ಕುಗ್ಗಿಯೋ ಬಹಳಷ್ಟು ರೋಗಗಳು ಏಳುವುವೆಂಬ ತತ್ತ್ವದ ಮೇಲೆ, ಮದ್ದುಗಳನ್ನು ಕೊಡದೆಯೇ ಚಿಕಿತ್ಸೆಗಾಗಿ ಮಾಡುವ ಕೈಸರಿಪಡಿಗೆ (ನಪ್ರಾಪತಿ) ಓಕ್ಲಿ ಸ್ಮಿತ್. (1907) ಈ ಚಿಕಿತ್ಸಾಕ್ರಮದ ಸ್ಥಾಪಕ. ಮುದುರಿ ಕುಗ್ಗಿ ಹಿಡಿದಿರುವ ಊತಕವನ್ನು ಹಿಗ್ಗಿಸಿ ಸಡಿಲಿಸುವುದರ ಮೂಲಕ ಸರಿಪಡಿಸುವುದೇ ಗುರಿ. ಮೈಯಲ್ಲಿ ಎಲ್ಲೆಲ್ಲಿ ಹೀಗೆ ಹಿಡಿದುಕೊಳ್ಳುತ್ತದೆ, ಅದನ್ನು ಹೇಗೆ ಬಿಡಿಸಬೇಕೆಂದು ತೋರುವ ಪಟಗಳು ಈ ಚಿಕಿತ್ಸೆಯಲ್ಲಿ ಮುಖ್ಯ. *

**ಕಟ್ಟುಮರ :** ಮರದ ಕೆಲವು ತುಂಡುಗಳನ್ನು ಒಟ್ಟಾಗಿ ಸೇರಿಸಿ ಕೊನೆಗಳನ್ನು ಚೂಪಾಗಿ ಮಾಡಿ ದೋಣಿಯ ಆಕಾರದಲ್ಲಿ ಕಟ್ಟಿದ ತೆಪ್ಪ. ಇದೇ ಶಬ್ದ ಇಂಗ್ಲಿಷಿನಲ್ಲಿ ಕ್ಯಾಟಮರಾನ್ (ಕಟ್ಟು + ಮರಂ) ಆಗಿದೆ. ಸಾಮಾನ್ಯವಾಗಿ ನಾಲ್ಕು ತುಂಡುಗಳನ್ನು ಬೋಲ್ಟ್ ಮತ್ತು ನಟ್ಟುಗಳಿಂದ ಜೋಡಿಸುವುದು ಈಚೆಗೆ ರೂಢಿಯಾಗಿದೆ. ನಡುವಿನ ಎರಡು ತುಂಡುಗಳು ಎರಡಕ್ಕಿಂತ ತಗ್ಗಾಗಿಯೂ ಉದ್ದವಾಗಿಯೂ ಇದ್ದು ಅದರ ಮೇಲೆ ನಡೆಸುವವರು ಕೂರುವುದಕ್ಕೆ ಅನುಕೂಲತೆ ಉಂಟು. ತೀರದ ಮೇಲೆ ಅಲೆಗಳು ಬಡಿದು ಏಳುವ ನೊರೆ ಹೆಚ್ಚಾಗಿರುವ ಸಮುದ್ರತೀರಗಳಲ್ಲಿ ಮೀನುಗಳನ್ನು ಹಿಡಿಯುವುದಕ್ಕೆ ಕಟ್ಟುಮರದಿಂದ ಬಹಳ ಅನುಕೂಲವಾಗುತ್ತದೆ. ಭದ್ರವಾಗಿರುವುದಕ್ಕಾಗಿ ಕೆಲವು ವೇಳೆ ಎರಡು ಕಟ್ಟುಮರಗಳನ್ನು ಜೋಡಿಸಿ ಹಗ್ಗಗಳಿಂದ ಬಿಗಿಯುತ್ತಾರೆ. ಸಾಮಾನ್ಯವಾಗಿ ಬೆಳಗಿನ ಜಾವ ಕಟ್ಟುಮರದ ಮೇಲೆ ಕುಳಿತು ಹೊರಟವರು ಸಾಯಂಕಾಲ ಮೀನುಗಳನ್ನು ಹೇರಿಕೊಂಡು ಬಂದು ಅವನ್ನು ಮಾರಿ ಅನ್ನಬಟ್ಟೆಗಳನ್ನು ಒದಗಿಸಿಕೊಳ್ಳುತ್ತಾರೆ. ಹಿಂತಿರುಗಿ ಬರುವಾಗ ಗಾಳಿಯ ಅನುಕೂಲವಿದ್ದರೆ ಒಂದು ಪಟವನ್ನು ಕಟ್ಟುತ್ತಾರೆ. ನಮ್ಮ ದೇಶದ ಸಮುದ್ರತೀರದ ಸಾವಿರಾರು ಸಂಸಾರಗಳಿಗೆ ಈ ಸಣ್ಣ ಉಪಕರಣದಿಂದ ಜೀವನೋಪಾಯ ನಡೆಯುತ್ತಿದೆ. (ಎಚ್.ಸಿ.ಕೆ.)

**ಕಟ್ಟುವಾರೆ :** ಮೈಯಲ್ಲಿ ಪ್ಯೂರೀನ್ ಜೀವವಸ್ತು ಕರಣದೋಷದಿಂದ ಜನ್ಮತಃ ಇರುವ ಮತ್ತು ಕಾಲಿನ ಹೆಬ್ಬೆರಳಿನ ಬುಡದಲ್ಲಿ ಮೊದಲು ಕೀಲುರಿತವಾಗಿ (ಆರ್ತ್ರೈಟಿಸ್) ಕಾಣಿಸಿಕೊಳ್ಳುವ ರೋಗ (ಗಾಟ್). ಇದು ಕೆಲವು ವಂಶಗಳಲ್ಲಿ ಆನುವಂಶಿಕವಾಗಿ ತೋರುವುದುಂಟು. ರಾತ್ರಿಹೊತ್ತು ನೋವು ವಿಪರೀತ. ಬೇರೂರಿದ ರಕ್ತಬೇನೆಯವರಲ್ಲಿ ಕಟ್ಟುವಾರೆ ಆಗುವುದುಂಟು. ಮೂತ್ರಪಿಂಡಗಲ್ಲು, ಮೂತ್ರದಲ್ಲಿ ಕೊಳೆ (ಅಲ್ಬುಮಿನ್), ಏರಿದ ರಕ್ತದೊತ್ತಡ ಇವು ಕಟ್ಟುವಾರೆಗೆ ಸಂಬಂಧಪಟ್ಟ ಬೇನೆಗಳೇ. ಕಟ್ಟುವಾರೆ ರೋಗಿಗಳ ರಕ್ತದಲ್ಲಿ ಮೂತ್ರಾಮ್ಲದ (ಯೂರಿಕ್ ಆಸಿಡ್) ಮಟ್ಟ ಏರಿರುತ್ತದೆ. ವೈದ್ಯಚರಿತ್ರೆಯಲ್ಲಿ ಈ ರೋಗವೂ ಇದರ ಮದ್ದು ಕಾಲ್ಚಿಸೀನೂ ಬಲು ಹಳೆಯವು. ರೋಗ ಕೆರಳಿದಾಗ ಜ್ವರ ಬಂದು ಬಿಳಿರಕ್ತಕಣಗಳು ಹೆಚ್ಚಿದರೂ ಉಳಿದ ದಿವಸಗಳಲ್ಲಿ ರೋಗದ ಲಕ್ಷಣಗಳೇ ತೋರವು.


1


2


3


4


5


6


7


8


9


10


11


12


13


14


15


16

1 ಹರವಿರುವ ಕಟ್ಟುಪಟ್ಟಿ, 2 ಒಂದು ಸಲ ಮಡಿಸಿರುವ ಪಟ್ಟಿ, 3 ಅಗಲ ಪಟ್ಟಿ, 4 ಕಿರಿದು ಪಟ್ಟಿ, 5 ಎದೆಗೆ ಕಟ್ಟುಪಟ್ಟಿ (ಮುಮ್ಮುಖ), 6 ಎದೆಗೆ ಕಟ್ಟುಪಟ್ಟಿ (ಹಿಮ್ಮುಖ), 7 ಸೇಂಟ್ ಜಾರ್ಜ್-ತೂಗುಪಟ್ಟಿ (ಮೊದಲ ಹಂತ-ಮುಮ್ಮುಖ), 8 ಸೇಂಟ್-ಜಾರ್ಜ್-ತೂಗುಪಟ್ಟಿ (ಕೊನೆಯ ಹಂತ-ಹಿಮ್ಮುಖ), 9 ತೊಂತಿಪಟ್ಟಿ, 10 ಕೈ ಪಟ್ಟಿ, 11 ಮೊಣಕೈ ಪಟ್ಟಿ, 12 ಹೆಗಲುಪಟ್ಟಿ, 13 ಪಾದಪಟ್ಟಿ, 14 ಕಾಲು ಕತ್ತರಿಸಿದ ಮೋಟಿಗೆ ಪಟ್ಟಿ, 15 ಮೊಣಕಾಲು ಪಟ್ಟಿ, 16 ತಲೆ-ನೆತ್ತಿ ಪಟ್ಟಿ

















































A ಕಟ್ಟುಪಟ್ಟಿ ಉರುಳಿ ಸುತ್ತುವ ಯಂತ್ರ, B 'T' ಕಟ್ಟುಪಟ್ಟಿ, C ಹಲಬಾಲ ಕಟ್ಟುಪಟ್ಟಿ, D ಹಲಬಾಲದ ಒಡಲು ಬಿಗಿಪಟ್ಟಿ, E ಹೆಗಲಿನ ತೆನೆಪಟ್ಟಿ, F ಎದೆ ಕಟ್ಟುಪಟ್ಟಿ, G ಎದೆ ಎರಡೂ ಪಕ್ಕಗಳ ಕಟ್ಟುಪಟ್ಟಿ, H ತಲೆ ಸುತ್ತು ಕಟ್ಟುಪಟ್ಟಿ, I ಪಾದ ಕಟ್ಟುಪಟ್ಟಿ, J ಗಜ್ಜಲಿನ ತೆನೆಪಟ್ಟಿ, K ಹಲಬಾಲದ ಕಟ್ಟುಪಟ್ಟಿ, L ಎರಡು ಬಾಲದ ಕಟ್ಟುಪಟ್ಟಿ, M ಬಿಗಿಸಿಡುವ ಕಟ್ಟುಪಟ್ಟಿಗಳು, N ಕೈಬೆರಳುಗಳ ಸುರುಳಿ ಕಟ್ಟುಪಟ್ಟಿ, O ಇಡೀ ಕೈಸುರುಳಿ ಕಟ್ಟುಪಟ್ಟಿ, P ಹೆಬ್ಬೆರಳಿನ ತೆನೆಪಟ್ಟಿ

ಆಗಲೇ ಬರುಬರುತ್ತ ಬೇರೂರಿ ಇನ್ನಷ್ಟು ಕೀಲುಗಳಿಗೂ ಹಬ್ಬುವುದು. ಯಾವುದಾದರೂ ಕೂರಾದ ಸೋಂಕು, ಮನೋದ್ವೇಗ, ಶಸ್ತ್ರಕ್ರಿಯೆ, ಗಾಯ ಪೆಟ್ಟುಗಳು, ಮಿತಿಮೀರಿದ ತಿನಿಸು, ಕುಡಿತ ಮತ್ತು ಕೆಲವು ಮದ್ದುಗಳಿಂದ ಕಟ್ಟುವಾರೆ ಲಕ್ಷಣಗಳು ಇದ್ದಕ್ಕಿದ್ದಹಾಗೆ ಕೆರಳುವುದು ಸಾಮಾನ್ಯ. ಚಿಕಿತ್ಸೆ ಇಲ್ಲವಾದರೆ ರೋಗ ದಿವಸಗಳೋ ವಾರಗಳೋ ಕಾಡುತ್ತದೆ. ರೋಗದ ಕೀಲು ಕೆಂಪಗೆ ಬೆಚ್ಚಗಾಗಿ ಉರಿ, ಚಳುಕಾಗಿ ನೋವಿಡುತ್ತಿರುವುದು. ಜ್ವರವೇರುತ್ತದೆ. ಕೆಲವರಲ್ಲಿ ಕೀಲುಗಳ ಒಳಗೂ ಸುತ್ತಲೂ ಸೋಡಿಯಂ ಬೈಯೂರೇಟು ತುಂಬಿರುವ ಒಂಡುಗಲ್ಲುಗಳು (ಟೋಫೈ) ಏಳುತ್ತವೆ. ಸಾಮಾನ್ಯವಾಗಿ ಒಂಡುಗಲ್ಲುಗಳು ಕಿವಿಯಾಲೆಯ ಚರ್ಮದ ಅಡಿಯಲ್ಲೊ ಯಾವುದಾದರೂ ಕೀಲುಗಳ ಮೇಲೋ ಮುಖ್ಯವಾಗಿ ಕೈಬೆರಳುಗಳ ಗೆಣ್ಣುಗಳ ಮೇಲೋ ಎಷ್ಟೋ ವರ್ಷಗಳ ಮೇಲೆ ಕೆಲವರಲ್ಲಿ ಏಳುತ್ತವೆ. ಅವು ಒಡೆದುಕೊಂಡು ಹುಣ್ಣಾಗಿ ಸುಣ್ಣದಪುಡಿ ತೆರನ ರೋಸು ಸುರಿಯಬಹುದು. ಕೊನೆಗೆ ಈ ಒಂಡುಗಲ್ಲುಗಳು ಯಾವ ಕೀಲನ್ನಾದರೂ ಪೂರಾ ಹಾಳುಗೆಡವಬಹುದು. ಕಟ್ಟುವಾರೆ ಮತ್ತೆ ಮತ್ತೆ ಕೆರಳುತ್ತಿದ್ದರೆ ಒಂಡುಗಲ್ಲುಗಳು ಇರಲಿ ಇಲ್ಲವಾಗಲಿ ಮೂಳೆಗಳು ಸೊಟ್ಟಗಾಗುತ್ತವೆ. ಬಹುಪಾಲು ಇದು ಗಂಡಸರ ರೋಗವಾದರೂ ಹೆಂಗಸರಲ್ಲಿ ಮುಟ್ಟುತೀರುವೆ (ಮಿನೋಪಾಸ್) ಆದಾಗ ತೋರಬಹುದು. 30 ಮಂದಿ ಗಂಡಸರಲ್ಲಿ ಕಟ್ಟುವಾರೆ ತೋರಿದರೆ ಒಬ್ಬ ಹೆಂಗಸಲ್ಲಿ ಕಾಣಬಹುದು.

ಕಟ್ಟುವಾರೆ ಕೀಲುರಿತ ಕೆರಳಿದ ಕೂಡಲೇ ಸಾಕಷ್ಟು ಕಾಲ್ಚಿಸೀನ್ ಕೊಟ್ಟರೆ ಶಮನವಾಗುತ್ತದೆ. ಮತ್ತೆ ಹೀಗೆ ಕೆರಳುವುದನ್ನು ತಡೆಗಟ್ಟಲು ರಕ್ತದ ಮೂತ್ರಾಮ್ಲವನ್ನು ಸಾಕಷ್ಟು ಹೊರಹಾಕಿ ತಗ್ಗಿಸುವ ಪ್ರೊಬೆನಿಸಿಡ್ ಮಾತ್ರೆಗಳಿವೆ. ಇವನ್ನು ವರ್ಷಾನುಗಟ್ಟಲೆ ಕೊಡುತ್ತಿರಬೇಕಾಗುತ್ತದೆ. ಮೂತ್ರಾಮ್ಲವನ್ನು ಮೈಯಿಂದ ಕಳೆಯಲು ನೀರು ಕುಡಿದಷ್ಟೂ ಒಳ್ಳೆಯದು. ಜೊತೆಗೆ ಮಾಂಸಾಹಾರ ಬಿಟ್ಟುಬಿಡುವುದೊಳ್ಳೆಯದು. ಕೆಲವರು ಕಟ್ಟುವಾರೆ ರೋಗಿಗಳು ಮೂತ್ರಪಿಂಡ ರೋಗದಿಂದ ಸಾಯುವರಾದರೂ ಬಹುಮಂದಿ ಹೆಚ್ಚು ಕಾಲ ಬದುಕಿರುವರು.

(ಬಿ.ಎಸ್‌ಯುಬಿ.)

**ಕಟ್ಟುಸಿರು :** ಎಂದರೆ ಉಸಿರಾಟದ ನಿಲುಗಡೆ (ಏಪ್ನಿಯ). ಅಂಗಕ್ರಿಯಾ ಶಾಸ್ತ್ರದಲ್ಲಿ ಕೊಂಚ ಹೊತ್ತು ಬೇಗಬೇಗನೆ ಉಸಿರೆಳೆದುಕೊಂಡು ಬಿಡುತ್ತಲೇ ಇದ್ದರೂ ಉಸಿರು ಕಟ್ಟಿದಂತಾಗುವುದು. ರಕ್ತದಲ್ಲಿ ಇಂಗಾಲಾಮ್ಲದ ಮಟ್ಟ ಎಂದಿಗಿಂತಲೂ ತೀರ ಕುಗ್ಗುವುದರಿಂದ ಮಿದುಳಿನಲ್ಲಿರುವ ಉಸಿರಾಟ ಕೇಂದ್ರಕ್ಕೆ ಇಂಗಾಲಾಮ್ಲದ ಚೋದನೆ ಇಲ್ಲವಾಗುವುದೇ ಮುಖ್ಯ ಕಾರಣ. ನೀರಲ್ಲಿ ಮುಳುಗುವಾಗ ಮಾಡುವಂತೆ, ಬೇಕೆಂದೇ ಉಸಿರು ಹಿಡಿದಾಗಲೂ ಚೆಯ್ನ್-ಸ್ಟೋಕ್ಸ್ ಉಸಿರಾಟದಲ್ಲೂ ಹೀಗಾಗುತ್ತದೆ. ಕೆಲವು ರೋಗಗಳಲ್ಲಿ ಇದು ಒಳ್ಳೆಯದಲ್ಲವಾದರೂ ಆರೋಗ್ಯವಾಗಿರುವ ಮಕ್ಕಳಲ್ಲೂ ಗಾಢನಿದ್ರೆಯಲ್ಲಿರುವ ವಯಸ್ಸಾದವರಲ್ಲಿ ಏನನ್ನಾದರೂ ನುಂಗುವಾಗ ತಿಂದಿದ್ದು ಉಸಿರ್ನಾಳದಲ್ಲಿ ಹೋಗದಂತೆ ತಡೆವಾಗ ಇದನ್ನು ಕಾಣಬಹುದು. ತಡೆಯಲಾಗದಷ್ಟು ವಿಪರೀತ ನೋವಾದಾಗಲೂ ಕಟ್ಟುಸಿರಾಗಬಹುದು. ಉಸಿರಾಟದ ಕೆಲವು ರೋಗಗಳಲ್ಲಿ ಬಿಟ್ಟು ಬಿಟ್ಟು ಉಸಿರುಕಟ್ಟಬಹುದು.

(ಎಂ.ಬಿ.)

**ಕಟ್ಟುಹಾವು :** ಭಾರತದ ವಿಷಸರ್ಪಗಳಲ್ಲಿ ಒಂದು ಜಾತಿ (ಕ್ರೇಟ್). ಇದಕ್ಕೆ ಬಂಗರಸ್ ಎಂಬ ವೈಜ್ಞಾನಿಕ ಹೆಸರಿದೆ. ಸರೀಸೃಪ ವರ್ಗದ ಒಫೀಡಿಯ ಗಣದ ಇಲಾಪಿಡೀ ಕುಟುಂಬಕ್ಕೆ ಸೇರಿದೆ. ಈ ಜಾತಿಯಲ್ಲಿ ಸುಮಾರು 12 ಪ್ರಭೇದಗಳಿವೆ. ಬಂಗರಸ್ ಸಿರೂಲಿಯಸ್ ಎಂಬ ಪ್ರಭೇದ ಭಾರತದಲ್ಲಿ ಎಲ್ಲೆಡೆಗೂ ಸಾಮಾನ್ಯವಾಗಿ ಕಂಡುಬರುತ್ತದೆ. ಸಾಧಾರಣವಾಗಿ ಮೈದಾನ ಪ್ರದೇಶಗಳಲ್ಲಿರುವುದೇ ಹೆಚ್ಚು. ಸುಮಾರು 3½′ ಉದ್ದವಿರುವ ಇದರ ಮೇಲುಮೈ ನೀಲಮಿಶ್ರಿತ ಕಪ್ಪು, ಹೊಟ್ಟೆಯ ಭಾಗ ಬಿಳುಪು. ಮೈಮೇಲೆ ಅಡ್ಡಡ್ಡಲಾಗಿ ಬಿಳಿಯ ಪಟ್ಟೆಗಳಿವೆ. ತಲೆಗೂ ಕತ್ತಿಗೂ ಗಾತ್ರದಲ್ಲಿ ವ್ಯತ್ಯಾಸವಿಲ್ಲ. ತಲೆಯ ಮೇಲೆ ಫಲಕಗಳಿವೆ (ಶೀಲ್ಡ್). ಬೆನ್ನುಹುರಿಯುದ್ದಕ್ಕೂ ಇರುವ ಹುರುಪೆಗಳು ಉಳಿದವಕ್ಕಿಂತ ದೊಡ್ಡವು. ಬಾಲದಲ್ಲಿರುವ ಉದರಭಾಗದ ಹುರುಪೆಗಳು ಒಂದೇ ಸಾಲಿನಲ್ಲಿ ಜೋಡಣೆಗೊಂಡಿವೆ. ಇದು ನಿಶಾಚರಿ. ಗೋಡೆಗಳ ಬಿರುಕುಗಳಲ್ಲಿ, ಕಲ್ಲುಗಳ ರಾಶಿಯ ನಡುವೆ ವಾಸಿಸುತ್ತಿದ್ದು ಇಲಿ ಮತ್ತು ಇತರ ಹಾವುಗಳನ್ನು ಕಬಳಿಸುತ್ತದೆ.

ಕಟ್ಟುಹಾವಿನ ವಿಷ ತೀಕ್ಷ್ಣವಾದುದು ; ನರಮಂಡಲವನ್ನೇ ನಿಶ್ಚೇತನಗೊಳಿಸಿ ಸಾವನ್ನು ತರುತ್ತದೆ. ಸಾವು ತರಲು ಕೇವಲ 2 ಮಿ. ಗ್ರಾಂ. ವಿಷವಿದ್ದರೂ ಸಾಕು.

ಇನ್ನೊಂದು ಬಗೆಯಾದ ಬ.ಫೇಸಿಯೇಟಸ್ ಅಸ್ಸಾಂ, ಮಧ್ಯಪ್ರದೇಶ, ಒರಿಸ್ಸ ಮತ್ತು ಉತ್ತರ ಪ್ರದೇಶದ ಕೆಲಭಾಗಗಳಲ್ಲಿ ವಾಸಿಸುತ್ತದೆ. ಇದು ಸಾಮಾನ್ಯ ಕಟ್ಟುಹಾವಿಗಿಂತ ದೊಡ್ಡದು. ಮೈಮೇಲೆ ಹಳದಿ ಮತ್ತು ಕಪ್ಪು ಬಣ್ಣದ ಅಡ್ಡಪಟ್ಟೆಗಳಿವೆ. ತಲೆ ಮತ್ತು ಕತ್ತಿನ ಮೇಲೆ ಕಪ್ಪು ಮಚ್ಚೆಗಳಿವೆ. ಬೇರೆ ಹಾವುಗಳನ್ನು ತಿಂದು ಜೀವಿಸುತ್ತದೆ. ಬಂಗರಸ್ ನೈಜರ್ ಎಂಬ ಮೂರನೆಯ ಬಗೆಯ ಕಟ್ಟುಹಾವು. ಅಸ್ಸಾಂ ಮತ್ತು ಡಾರ್ಜಿಲಿಂಗುಗಳಲ್ಲಿ ಕಾಣಬರುತ್ತದೆ. ಇದು ಉಳಿದೆರಡಕ್ಕಿಂತ ಚಿಕ್ಕದು. ದೇಹದ ಬಣ್ಣ ಕಪ್ಪು, ಬಿಳಿ ಪಟ್ಟೆಗಳಿಲ್ಲ; ಉದರಭಾಗ ಬಿಳುಪಾಗಿದ್ದು ಅಲ್ಲಲ್ಲಿ ಕಪ್ಪುಮಚ್ಚೆಗಳಿವೆ.

(ಎಂ.ಡಿ.ಪಿ.)

**ಕಟ್ಟೆ :** ನೀರಿನ ಹರಿವನ್ನು ನಿಯಂತ್ರಿಸುವ ಉದ್ದೇಶದಿಂದ ಒಂದು ನದಿಗೆ ಅಥವಾ ಹೊಳೆಗೆ ಅಥವಾ ತೋಡಿಗೆ ಅಡ್ಡವಾಗಿ ಕಟ್ಟಿದ ರಚನೆ (ಡ್ಯಾಮ್). ಜಲಾಶಯದ ನಿರ್ಮಾಣ, ಕುಡಿಯುವ ನೀರಿನ ಪೂರೈಕೆ, ವ್ಯವಸಾಯ ಉದ್ಯಮಕ್ಕೆ ನೀರಿನ ಸರಬರಾಜು, ಜಲವಿದ್ಯುದುತ್ಪಾದನೆ, ಭೂಸವೆತ ನಿರೋಧ, ಅಂತರ್ದೇಶೀಯ ನೌಕಾಯಾನ, ಜಲವಿಹಾರ ಸ್ಥಾನಗಳ ನಿರ್ಮಾಣ—ಕಟ್ಟೆಯ ಉಪಯೋಗಗಳು ಇವುಗಳಲ್ಲಿ ಒಂದು ಅಥವಾ ಹಲವಿರಬಹುದು. ಒಂದಕ್ಕಿಂತ ಹೆಚ್ಚು ಉಪಯೋಗಗಳಿರುವ ಕಟ್ಟೆಗಳಿಗೆ ವಿವಿಧೋದ್ದೇಶ ಕಟ್ಟೆಗಳೆಂದು ಹೆಸರು. ಪುರಾತನ ಈಜಿಪ್ಟಿನಲ್ಲಿ ನೈಲ್ ನದಿಗೂ ಮೆಸೊಪೊಟೇಮಿಯದಲ್ಲಿ ಟೈಗ್ರಿಸ್ ನದಿಗೂ ಅಡ್ಡಲಾಗಿ ನೀರಾವರಿಗಾಗಿ ಕಟ್ಟೆಗಳನ್ನು ಕಟ್ಟಿದ್ದರು. ಅಲ್ಲಿಂದೀಚೆಗೆ ರೋಮನ್ ಚಕ್ರಾಧಿಪತ್ಯದಲ್ಲಿ ಕಟ್ಟಿದ ಕಟ್ಟೆಗಳೂ ಕುಡಿಯುವ ನೀರಿನ ಮೇಲುಗಾಲುವೆಗಳೂ (ಆಕ್ವಿಡಕ್ಟ್ಸ್) ಪ್ರಸಿದ್ಧವಾಗಿವೆ.

**ಕಟ್ಟೆಯ ನಮೂನೆಗಳು :** ಕಟ್ಟೆಯನ್ನು ಕಟ್ಟುವ ಜಾಗದಲ್ಲಿ ತಳಪಾಯದ ಲಕ್ಷಣ, ಅಲ್ಲಿ ದೊರೆಯುವ ಕಟ್ಟಡದ ಸಾಮಗ್ರಿಗಳು ಮತ್ತು ಆವಶ್ಯಕತೆಗಳಿಗೆ ಅನುಗುಣವಾಗಿ ಕಟ್ಟೆಯ ನಮೂನೆಗಳು ವ್ಯತ್ಯಾಸವಾಗುತ್ತವೆ. ಮುಖ್ಯವಾಗಿ ಕಟ್ಟೆಯ ಮೇಲೆ ಪ್ರವಾಹ ಉರುಳುತ್ತದೆಯೋ ಅಥವಾ ಉರುಳದ ಹಾಗೆ ಕಟ್ಟೆ ಪ್ರವಾಹವನ್ನು ತಡೆದು ನಿಂತಿರುತ್ತದೆಯೋ ಎಂದು ಸ್ಥೂಲವಾಗಿ ಎರಡು ವಿಭಾಗಗಳನ್ನು ಮಾಡಬಹುದು. ನಮ್ಮ ದೇಶದಲ್ಲಿ ನೀರು ಮೇಲೆ ಉರುಳುವ ತಗ್ಗಾದ ಕಟ್ಟೆಗೆ ಅಣೆಕಟ್ಟು ಎಂದು ಹೆಸರು. ಗಂಗಾ, ಯಮುನಾ, ಗೋದಾವರಿ, ಕೃಷ್ಣಾ, ಕಾವೇರಿ—ಈ ಮಹಾನದಿಗಳ ಮೇಲೆ ಹಿಂದೆ ನೀರಾವರಿಗಾಗಿಯೂ ಜಲಯಾನಕ್ಕಾಗಿಯೂ ಕಟ್ಟಿದ ಅಣೆಕಟ್ಟುಗಳು ಈಗಲೂ ಉಪಯೋಗದಲ್ಲಿವೆ. ಮೇಲೆ ನೀರಿನ್ನು ಹರಿಯಲು ಬಿಡದೆ ಇರುವ ಕಟ್ಟೆಗಳನ್ನು ಕೆಳಗೆ ಕಂಡಂತೆ ವಿಂಗಡಿಸಬಹುದು : 1 ಕೆರೆಗಳ ಮಣ್ಣಿನ ಏರಿಗಳು ; 2 ಕಲ್ಲನ್ನು ತುಂಬಿದ ಏರಿಗಳು ; 3 ಕಲ್ಲುಗಾರೆ ಇಲ್ಲವೆ ಕಾಂಕ್ರೀಟಿನ ಗುರುತ್ವ ಕಟ್ಟೆಗಳು ; 4 ಊರೆಯ ಕಟ್ಟೆಗಳು ; 5 ಭದ್ರಾ ಕಾಂಕ್ರೀಟಿನ ಹಲಗೆಯ ಪೆಟ್ಟಿಗೆಯ ಕಟ್ಟೆಗಳು ; 6 ಕಮಾನಿನ ಕಟ್ಟೆಗಳು.

ಒಂದು ಯೋಜನೆಯ ಪೂರ್ವಭಾವಿ ಪರಿಶೀಲನೆಯಲ್ಲಿ ಆ ಜಾಗದಲ್ಲಿ ಒದಗುವ ನೀರು ಮತ್ತು ಸಾಗುವಳಿಯಾಗುವ ಭೂಮಿಯ ಮೋಜಣಿಯನ್ನು ಮಾಡಬೇಕು. ಇವು ಸುಮಾರಾಗಿ ಸಮರ್ಪಕವಾಗಿದ್ದರೆ ನದಿಯ ತಳದಲ್ಲಿ ಅಲ್ಲಲ್ಲಿ ಕೊರೆದು ತಳಪಾಯದ ಸ್ವಭಾವವನ್ನು ತಿಳಿಯಬೇಕು. ಈ ಕೆಲಸವನ್ನು ತೆಗೆದುಕೊಂಡರೆ ಅದರಿಂದ ಬಾಧಕವಾಗಬಹುದಾದ ರಸ್ತೆಗಳು, ರೈಲುದಾರಿಗಳು ಮತ್ತು ವಿದ್ಯುತ್ತಿನ ತಂತಿಸಾಲುಗಳನ್ನು ಗಮನಿಸಿ ತೀರ್ಮಾನಕ್ಕೆ ಬರಬಹುದು.

1 **ಮಣ್ಣಿನ ಏರಿಗಳು :** ಈ ನಮೂನೆ ಅನೇಕ ಶತಮಾನಗಳಿಂದಲೂ ನಮ್ಮ ದೇಶದಲ್ಲಿ ಬಳಕೆಯಲ್ಲಿದೆ. ಒಂದು ತೋಡಿಗೆ ಅಡ್ಡಲಾಗಿ ಇಳಿಜಾರಾದ ಪಕ್ಕಗಳುಳ್ಳ ಏರಿಯನ್ನು ಒಳ್ಳೆಯ ಮಣ್ಣಿನಿಂದ ತಯಾರಿಸುತ್ತಾರೆ. ಆಗ ಅದರ ನೀರು ಮೇಲುಗಡೆ ನಿಂತು ಕೆರೆಯಾಗುತ್ತದೆ. ಕೆರೆಯ ನೀರನ್ನು ಏರಿಯ ಮೂಲಕ ತೂಬಿನಿಂದ ಸಾಗಿಸಿ ನಾಲೆಗಳ ಮೂಲಕ ಎರಡು ದಡಗಳಲ್ಲಿಯೂ ತಗ್ಗಿನ ಜಮೀನುಗಳಿಗೆ ಬಿಟ್ಟು ಬೆಳೆಯನ್ನು ತೆಗೆಯುತ್ತಾರೆ. ಕೆರೆ ಹಿಡಿಯುವುದಕ್ಕಿಂತ ಹೆಚ್ಚು ನೀರು ಮಳೆಯಿಂದ ಬಂದರೆ ಅದನ್ನು ದಡದಲ್ಲಿರುವ ಕೋಡಿಯ ಮೂಲಕ ಮತ್ತೆ ಕೆಳಗಡೆ ತೋಡಿಗೆ ಬಿಡುತ್ತಾರೆ. ತಳಪಾಯದಲ್ಲಿ ಸಾಧಾರಣ ಮಣ್ಣಿರುವ ಜಾಗಗಳಲ್ಲಿ ಈ ನಮೂನೆಯನ್ನು ಉಪಯೋಗಿಸಬಹುದು. ಏರಿಯ ಪಾರ್ಶ್ವಚಿತ್ರದಲ್ಲಿ (ಪ್ರೊಫಾಯಿಲ್) ಮಣ್ಣನ್ನು ಮೂರು ವಿಧವಾಗಿ ತುಂಬಬಹುದು. (i) ಎಲ್ಲ ಕಡೆಗಳಲ್ಲಿಯೂ ಒಂದೇ ವಿಧವಾದ ಮಣ್ಣನ್ನು ತುಂಬುವುದು, (ii) ಒಳ್ಳೆಯ ಮಣ್ಣು ಸಾಕಷ್ಟು ದೊರೆಯದೆ ಇರುವ ಕಡೆ ಒಳಭಾಗದಲ್ಲಿ ಜಿಗಟಾದ ಮಣ್ಣನ್ನು ತುಂಬಿ ಎರಡು ಪಕ್ಕಗಳಲ್ಲಿಯೂ ನೀರು ಜಿನುಗಬಹುದಾದ ಹರಳುಮಣ್ಣನ್ನು ತುಂಬುವುದು. (iii) ಒಳಗಡೆ ಏರಿಯ ಮಧ್ಯದಲ್ಲಿ ಜೇಡಿಮಣ್ಣು, ಕಲ್ಲುಗಾರೆ, ಇಲ್ಲವೆ ಕಾಂಕ್ರೀಟಿನ ಗೋಡೆಯನ್ನು (ಕೋರ್‌ವಾಲ್) ಕಟ್ಟಿ ಸುತ್ತಲೂ ಒಂದೇ ವಿಧವಾದ ಮಣ್ಣನ್ನು ತುಂಬುವುದು. ಮೈಸೂರು ರಾಜ್ಯದಲ್ಲಿ ಮದಗನ ಕೆರೆ, ಅಯ್ಯನಕೆರೆ, ಸೂಳೆಕೆರೆ, ಹೆಸರಘಟ್ಟದ ಕೆರೆ ಮೊದಲಾದ ನೂರಾರು ದೊಡ್ಡ ಕೆರೆಗಳಿವೆ.

ಅ ಮೆ ರಿ ಕ ಸಂಯುಕ್ತಸಂಸ್ಥಾನದಲ್ಲಿ ಮಿಸೌರಿ ಮಹಾನದಿಗೆ ಅಡ್ಡಲಾಗಿ ಮಾಂಟಾನ ರಾಜ್ಯದಲ್ಲಿ 1942ರಲ್ಲಿ ಕಟ್ಟಿ ಮುಗಿಸಿದ ಫೋರ್ಟ್ ಪೆಕ್ ಏರಿಯ ಗರಿಷ್ಠ ಎತ್ತರ 250′, ಉದ್ದ 4 ಮೈಲಿ. ಜಲಾಶಯದಲ್ಲಿ 19.5 ಮಿಲಿ

ಯನ್ ಎಕರೆ ಅಡಿ ನೀರು ಹಿಡಿಯುತ್ತದೆ. ಇದರಲ್ಲಿ ಪ್ರಪಂಚದ ಮಣ್ಣಿನ ಏರಿಗಳಲ್ಲಿಯೇ ಅತ್ಯಂತ ಹೆಚ್ಚು ಮಣ್ಣು (128 ಮಿಲಿಯನ್ ಸಲೆ ಗಜ) ತುಂಬಿದೆ. ಈ ನದಿಯ ಮೇಲೆಯೇ 1954ರಲ್ಲಿ ದಕ್ಷಿಣ ಡಕೋಟದಲ್ಲಿ ಕಟ್ಟಿದ ಓಹೆ ಏರಿಯಲ್ಲಿ ತುಂಬಿರುವ ಮಣ್ಣು 91 ಮಿಲಿಯನ್ ಸಲೆ ಗಜ. ಇದೇ ನದಿಗೆ ಅಡ್ಡಲಾಗಿ ಉತ್ತರ ಡಕೋಟದಲ್ಲಿ ಕಟ್ಟಿದ ಮತ್ತೊಂದು ಏರಿಯಲ್ಲಿ 75 ಮಿಲಿಯನ್ ಸಲೆ ಗಜ ಮಣ್ಣು ತುಂಬಿದೆ. ಭಾರತದ ಪೊನೇರಿ ಕೆರೆಯ ನೀರು ಹರಡು (ವಾಟರ್ ಸ್ಪ್ರೆಡ್) 80 ಚದರ ಮೈಲಿ. ಕಟ್ಟೆಯ ಉದ್ದ 30 ಮೈಲಿ. ಸಿಲೋನಿನ ವಡವಿಲ್ ಸರೋವರದ ಏರಿಯ ಉದ್ದ 11 ಮೈಲಿ. ಎತ್ತರ 70′. ಮೇಲಿನ ಅಗಲ 30′. ತಳದ ಅಗಲ 200′. ಇದರಲ್ಲಿ 17 ಮಿಲಿಯನ್ ಸಲೆ ಅಡಿ ಮಣ್ಣು ಸೇರಿದೆ.



ತುಂಗಭದ್ರಾ ಕಟ್ಟೆಯ ವಿಹಂಗಮ ನೋಟ

ಪ್ರಪಂಚದಲ್ಲಿಯೇ ಅತ್ಯಂತ ಎತ್ತರವಾದ ಮಣ್ಣಿನ ಏರಿ ಇರುವುದು 538′ ಎತ್ತರದ ಕ್ಯಾಲಿಫೋರ್ನಿಯದ ಟ್ರಿನಿಟಿ ಕಟ್ಟೆಯಲ್ಲಿ. ಇದರ ಉದ್ದ 2,450′. ಎರಡನೆಯದು 1947ರಲ್ಲಿ ಅಮೆರಿಕದ ಇಡಾಹೊಸಂಸ್ಥಾನದಲ್ಲಿ ಕಟ್ಟಿದ ಆ್ಯಂಡರ್ಸನ್ ರ‍್ಯಾಂಚ್ ಏರಿ. ಇದರ ಎತ್ತರ 456′. ಉದ್ದ 1350′.

**2 ಕಲ್ಲನ್ನು ತುಂಬಿದ ಏರಿಗಳು** : ಏರಿಗೆ ಒಳ್ಳೆಯ ಮಣ್ಣು ಸಿಕ್ಕದೆ, ಸಿಮೆಂಟ್ ಕಾಂಕ್ರೀಟಿನ ಕಟ್ಟೆಗೆ ಖರ್ಚು ಹೆಚ್ಚಾಗಿ, ಹತ್ತಿರದಲ್ಲಿ ಕಲ್ಲಿನ ಕ್ವಾರಿಗಳಿದ್ದು ಏರಿಯ ತಳಪಾಯದಲ್ಲಿ ಗಟ್ಟಿ ಕಲ್ಲು ಸಿಕ್ಕದೆ ಹೋದ ಕಡೆಗಳಲ್ಲಿ ಈ ನಮೂನೆಯನ್ನು ಉಪಯೋಗಿಸಬಹುದು. ಇಳಿಕಲುಗಳು ಕಡಿದಾಗಿರುವುದರಿಂದ ಈ ಏರಿಗಳು ಅದೇ ಸನ್ನಿವೇಶದ ಮಣ್ಣಿನ ಏರಿಗಳಿಗಿಂತ ಗಾತ್ರದಲ್ಲಿ ಚಿಕ್ಕವಾಗಿರುತ್ತವೆ. ಏರಿಯನ್ನು ಆಳುಗಳು ಹೊರಬಹುದಾದ ಕಲ್ಲಿನ ಗೂಡುಗಳನ್ನು ಇಳಿಕಲುಗಳಲ್ಲಿ ಜೋಡಿಸಿ ಒಳಗಡೆಯೂ ತುಂಬುತ್ತಾರೆ. ಆಗಲೇ ಹೆಚ್ಚಾಗಿ ನೀರನ್ನು ಹೊಯ್ದು ಕುಗ್ಗುವಂತೆ ಮಾಡುತ್ತಾರೆ. ನೀರು ಒಳಕ್ಕೆ ಜಿನುಗದಂತೆ ಏರಿಯ ಮಧ್ಯದಲ್ಲಿ ಒಳ್ಳೆಯ ಮಣ್ಣಿನ ನಡುಗೋಡೆಯನ್ನು ಕಟ್ಟುತ್ತಾರೆ. ಕೆರೆಗೆ ಪ್ರತ್ಯೇಕವಾದ ಕೋಡಿಯನ್ನು ಕಟ್ಟಬೇಕಾಗುತ್ತದೆ. ಕಟ್ಟೆಯ ತಳಪಾಯ ಮೇಲಿನ ಕಲ್ಲಿನ ಕೆಳಕ್ಕೆ ಇಳಿಯದ ಹಾಗಿರಬೇಕು. ಕ್ಯಾಲಿಫೋರ್ನಿಯದಲ್ಲಿ 1913ರಲ್ಲಿ ಮುಗಿಸಿದ ಸಾಲ್ಟ್‌ಸ್ಪ್ರಿಂಗ್ಸ್ ಕಟ್ಟೆ ಈ ನಮೂನೆಯಲ್ಲಿದೆ. ಇದರ ಎತ್ತರ 345′. ಒಳಗಡೆ 3,170,000 ಸಲೆ ಗಜ ಕಲ್ಲು ತುಂಬಿದೆ. ಮುಂದುಗಡೆಯ ಮುಖದಲ್ಲಿ ಕಲ್ಲುಗಳನ್ನು ಕೈಯಿಂದ ಜೋಡಿಸಿ ಅದಕ್ಕೂ ಮುಂದುಗಡೆ ಭದ್ರಕಾಂಕ್ರೀಟಿನ ಚಪ್ಪಡಿಗಳ ಪದರವನ್ನು ಇಟ್ಟಿದ್ದಾರೆ. ಈ ಚಪ್ಪಡಿಗಳ ದಪ್ಪ ತಳದಲ್ಲಿ 3′ಗಳಿಂದ ಮೇಲುಗಡೆ 1′ಗೆ ಇಳಿಯುತ್ತದೆ.

**3 ಗುರುತ್ವದ ಕಟ್ಟೆಗಳು :** ಇವು ನೀರನ್ನು ಜಮಾಯಿಸುವುದಕ್ಕಾಗಿ ಹೊಳೆಗೆ ಅಡ್ಡಲಾಗಿ ಕಟ್ಟಿದ ತಡೆಗಳು. ಒಂದು ಜಾಗದಲ್ಲಿ ಯಾವ ನಮೂನೆಯನ್ನು ಕಟ್ಟಬೇಕು ಎನ್ನುವುದು ಮುಖ್ಯವಾಗಿ ಆಯಾ ನಮೂನೆಗೆ ತಗಲುವ ಖರ್ಚಿನ ಅಂದಾಜಿನ ಮೇಲೆ ಹೋಗುತ್ತದೆ. ಕಲ್ಲಿನ ಕಟ್ಟೆಗಳಿಗೆ ಗಟ್ಟಿಯಾದ ಕಲ್ಲಿನ ತಳಪಾಯ ಬೇಕು. ಕಟ್ಟೆಯಲ್ಲಿ ಉಪಯೋಗಿಸುವ ಸಾಮಗ್ರಿಗಳು ಧಾರಾಳವಾಗಿ ದೊರೆಯಬೇಕು. ಕಟ್ಟೆಗಳನ್ನು ಕಟ್ಟಿ ನಿರ್ಮಿಸಿದ ಜಲಾಶಯಗಳ ನೀರನ್ನು ಈಗ ವಿವಿಧೋದ್ದೇಶಗಳಿಗಾಗಿ ಉಪಯೋಗಿಸುತ್ತಾರೆ. ಇವುಗಳಲ್ಲಿ ಮುಖ್ಯವಾದವು : (i) ಪಟ್ಟಣಗಳಿಗೂ ನಗರಗಳಿಗೂ ಕುಡಿಯುವ ನೀರನ್ನು ಒದಗಿಸುವುದು; (ii) ಪ್ರವಾಹ ನಿಯಂತ್ರಣ; (iii) ವಿದ್ಯುಚ್ಛಕ್ತಿಯ ಉತ್ಪಾದನೆ; (iv) ನೀರಾವರಿ; (v) ಜಲಯಾನದ ಸೌಕರ್ಯ; (vi) ಕೈಗಾರಿಕೆಗಳು; (vii) ಪ್ರವಾಸಿಗಳ ವಿಹಾರಕ್ಷೇತ್ರಗಳು.

ಮೈಸೂರಿನಲ್ಲಿ 1912ರಲ್ಲಿ ಪ್ರಾರಂಭವಾದ ಕೃಷ್ಣರಾಜಸಾಗರ ಕಟ್ಟೆ ಪ್ರಪಂಚದಲ್ಲಿ ಮೊದಲನೆಯ ವಿವಿಧೋದ್ದೇಶ ಯೋಜನೆ. ಇದನ್ನು ಭಾರತರತ್ನ ಸರ್ ಎಂ. ವಿಶ್ವೇಶ್ವರಯ್ಯನವರು ಸಂವಿಧಾನ ಮಾಡಿದರು. ಆದರೆ ಅಮೆರಿಕದ ಸಂಯುಕ್ತ ಸಂಸ್ಥಾನದಲ್ಲಿ 1933ರಲ್ಲಿ ಪ್ರಾರಂಭಮಾಡಿ 1942ರಲ್ಲಿ ಮುಗಿಸಿದ ಟೆನೆಸ್ಸಿಯ ವಿವಿಧೋದ್ದೇಶ ಯೋಜನೆ ಏಕಮತ್ಯದಿಂದ ಮುಂದೆ ನಡೆದು ಆ ಕಣಿವೆಯ ಜನರಿಗೆ ಅಪಾರವಾದ ಅನುಕೂಲತೆಯನ್ನು ಒದಗಿಸಿದೆ. ಇಲ್ಲಿ ಟೆನೆಸ್ಸಿ ನದಿಗೆ ಅಡ್ಡಲಾಗಿ ಒಂದರ ಕೆಳಗೆ ಒಂದರಂತೆ ಒಂಬತ್ತು ಕಟ್ಟೆಗಳನ್ನು ಕಟ್ಟಿದ್ದೇ ಅಲ್ಲದೆ ಉಪನದಿಗಳ ಮೇಲೆ ಹದಿಮೂರು ಎತ್ತರವಾದ ಕಟ್ಟೆಗಳನ್ನು ಕಟ್ಟಿದ್ದಾರೆ. ಪ್ರಪಂಚದಲ್ಲಿಯೇ ಸಂಪೂರ್ಣವಾಗಿ ನಿಯಂತ್ರಿತವಾದ ನದಿ ಟೆನೆಸ್ಸಿ. ಉತ್ತರ ಭಾರತದಲ್ಲಿ ಪ್ರತಿವರ್ಷವೂ ಪ್ರವಾಹಗಳಿಂದ ವಿಶೇಷ ನಷ್ಟವನ್ನುಂಟುಮಾಡುತ್ತಿದ್ದ ದಾಮೋದರ ನದಿಯ ಮೇಲೂ ಒಂದರ ಕೆಳಗೆ ಒಂದು ಕಾಂಕ್ರೀಟಿನ ಕಟ್ಟೆಗಳನ್ನು ಕಟ್ಟಿ ನೀರಾವರಿ, ಜಲಯಾನ, ವಿದ್ಯುದುತ್ಪಾದನೆ, ಕೈಗಾರಿಕೆಗಳು—ಈ ವಿವಿಧೋದ್ದೇಶಗಳಿಗಾಗಿ ನೀರನ್ನು ಬಳಸಿಕೊಂಡಿದ್ದಾರೆ.

ಸ್ವಂತ ತೂಕದ ಮೇಲೆ ನಿಂತಿರುವ ಕಟ್ಟೆಗಳಿಗೆ ಗುರುತ್ವದ ಕಟ್ಟೆಗಳೆನ್ನುತ್ತಾರೆ (ಗ್ರಾವಿಟಿ ಡ್ಯಾಮ್ಸ್). ಇವುಗಳಲ್ಲಿ (i) ಕಲ್ಲುಗಾರೆಯ ಕಟ್ಟೆಗಳು (ಮ್ಯಾಸನ್ರಿ ಡ್ಯಾಮ್ಸ್) (ii) ಕಾಂಕ್ರೀಟಿನ ಕಟ್ಟೆಗಳು—ಎಂದು ಎರಡು ವಿಭಾಗಳಿವೆ. ಕಲ್ಲುಗಾರೆಯ ಕಟ್ಟೆಯ ರಚನೆಯನ್ನು ಬೇರೆ ಕಡೆ ಹೇಳಿದೆ.

ಸಿಮೆಂಟ್ ಕಾಂಕ್ರೀಟಿನ ಕಟ್ಟೆಗೆ ಉದಾಹರಣೆಯಾಗಿ ಪೂರ್ವ ಪಂಜಾಬಿನಲ್ಲಿ ಶತದ್ರು ನದಿಗೆ (ಸಟ್ಲೆಜ್) ಅಡ್ಡಲಾಗಿ ಕಟ್ಟಿರುವ ಭಾಕ್ರ ಕಟ್ಟೆಯನ್ನು ತೆಗೆದುಕೊಳ್ಳಬಹುದು. ಇದರ ಎತ್ತರ ತಳಪಾಯದ ಮೇಲೆ 740′. ಸರೋವರ 64 ಮೈಲಿಗಳಷ್ಟು ಹರಡಿ 74 ಲಕ್ಷ ಎಕರೆ ಅಡಿ ನೀರನ್ನು ತುಂಬಿಕೊಂಡಿದೆ. ಕಟ್ಟೆ ಶತದ್ರು ನದಿಯ ಮರಳುಕಲ್ಲಿನ ತಳಪಾಯದ ಮೇಲೆ ನಿಂತಿದೆ. ಕಟ್ಟೆಯ ಉದ್ದ 1617′. ತಳದ ಗರಿಷ್ಠ ಅಗಲ 716′. ಮೇಲಿನ ಅಗಲ 39′. ಕಟ್ಟೆಯಲ್ಲಿ 145 ಮಿಲಿಯನ್ ಸಲೆ ಅಡಿ ಕಾಂಕ್ರೀಟ್ ಇದೆ.

ನಮೂನೆಗಳು : ಗುರುತ್ವದ ಕಟ್ಟೆಗಳಲ್ಲಿ ಜಲಾಶಯದ ನೀರಿನ ಒತ್ತಡವೇ ಮೊದಲಾದ ಕಾರಣಗಳಿಂದ ಬರುವ ತ್ರಾಸವನ್ನು ಕಟ್ಟೆಯ ತೂಕವೊಂದೇ ತಡೆದು ನಿಲ್ಲಿಸುತ್ತದೆ. ಇದರ ಅಗಲವಾದ ತಳ ತಳಪಾಯದ ಗಟ್ಟಿ ಬಂಡೆಯೊಳಕ್ಕೆ ಸೇರಿಕೊಂಡು ಕಟ್ಟೆ ಕೆಳಗಡೆ ಜಾರದಂತೆ ತಡೆಯುತ್ತದೆ. ಬಂಡೆಯಲ್ಲಿ ಪದರಗಳೇನಾದರೂ ಇದ್ದರೆ ಮುಂಭಾಗದಲ್ಲಿ ತೂತುಗಳನ್ನು ಕೊರೆದು ಒಳಕ್ಕೆ ಒತ್ತಡದ ಸಿಮೆಂಟಿನ ತಿಳಿಯನ್ನು ಬಿಡುತ್ತಾರೆ. ಗುರುತ್ವದ ಕಟ್ಟೆಗಳಲ್ಲಿ ಎರಡು ನಮೂನೆಗಳಿವೆ. ಒಂದರಲ್ಲಿ ಜಲಾಶಯದಲ್ಲಿ ಬಂದ ಪ್ರವಾಹವನ್ನು ಪ್ರತ್ಯೇಕವಾದ ಕೋಡಿಗಳಲ್ಲಿ ಬಿಟ್ಟು ಕಟ್ಟೆಯ ತಲೆಮಟ್ಟ ಯಾವಾಗಲೂ ಜಲಾಶಯದ ಗರಿಷ್ಠ ಮಟ್ಟಕ್ಕಿಂತ ಮೇಲೆ ಇರುವಂತೆ ಮಾಡಿರುತ್ತಾರೆ. ಉದಾಹರಣೆಗೆ ಕೃಷ್ಣರಾಜಸಾಗರ. ಇನ್ನೊಂದರಲ್ಲಿ ಜಲಾಶಯ ತುಂಬಿದಾಗ ನೀರು ಕಟ್ಟೆಯ ಹಿಂಭಾಗದಲ್ಲಿ ನಯವಾಗಿ ಹರಿದು ಕೆಳಗಡೆ ಹೊಳೆಗೆ ಸೇರಿಕೊಳ್ಳುತ್ತದೆ. ಉದಾಹರಣೆಗೆ ಭಾಕ್ರ ಅಣೆಕಟ್ಟಿನ ಗೋವಿಂದಸಾಗರ.

ಒಂದು ಗುರುತ್ವದ ಕಟ್ಟೆಯ ಮೇಲೆ ಬೀಳುವ ಒತ್ತಡಗಳು ಈ ರೀತಿ ಇವೆ : (i) ಕಟ್ಟೆಯ ತೂಕ—ಇದು ಕೆಳಗಡೆ ಎಳೆಯುತ್ತದೆ ; (ii) ಜಲಾಶಯದ ನೀರಿನ ಒತ್ತಡ—ಇದು ಮಟ್ಟಸವಾಗಿರುತ್ತದೆ ; (iii) ತಳಪಾಯದೊಳಕ್ಕೆ ಜಿನುಗಬಹುದಾದ ನೀರಿನ ಒತ್ತಡ—ಇದು ಮೇಲು ಮುಖವಾಗಿದ್ದು ಕಟ್ಟೆಯನ್ನು ತೇಲಿಸುತ್ತದೆ ; (iv) ಸರೋವರದ ನೀರಿನ ಮೇಲೆ ಬರುವ ಅಲೆಗಳ ಒತ್ತಡ ;

(v) ಭೂಕಂಪವಾಗುವ ಕಡೆ ಅವುಗಳ ಆವೇಗ, (vi) ಸರೋವರದ ಮೆಕ್ಕಲು ಮಣ್ಣಿನ ಒತ್ತಡ. ಈ ಒತ್ತಡಗಳನ್ನು ಸಂಘಟಿಸಿದಾಗ ಬರುವ ಪರಿಣಾಮ ಬಲದ ದಿಕ್ಕು ಕಟ್ಟೆಯ ತಳಕ್ಕೆ ಓರೆಯಾಗಿರುತ್ತದೆ. ಅದರ ಪ್ರಮಾಣವನ್ನು ($R$) ತಳದ ಸಮತಳದ ಅಗಲದಿಂದ ($b$) ಭಾಗಿಸಿದರೆ ಬರುವುದಕ್ಕಿಂತ ಹೆಚ್ಚಿನ ಸರಾಸರಿ ಒತ್ತಡ ಫಲಿತಬಲಕ್ಕೆ ಸಮಕೋನವಾದ ಮತ್ತೊಂದು ದಿಕ್ಕಿನಲ್ಲಿ ಬೀಳುತ್ತದೆ. ಫಲಿತಬಲ ಲಂಬರೇಖೆಗೆ $\alpha^\circ$ ಗಳಷ್ಟು ಓರೆಯಾಗಿದ್ದರೆ ಗರಿಷ್ಠ ಒತ್ತಡ $\frac{R}{b}\sec\alpha$ ಆಗುತ್ತದೆ. ಇದನ್ನು ಪ್ರಾಯೋಗಿಕವಾಗಿ ಬಳಸಿಕೊಂಡು $R$ನ ಬೆಲೆಕಂಡುಹಿಡಿಯುವುದುಸಾಧ್ಯವಿದೆ.

ಎತ್ತರವಾದ ಕಟ್ಟೆಗಳ ಸಂವಿಧಾನವನ್ನು ಎರಡು ಮಾರ್ಗಗಳಲ್ಲಿ ಮಾಡುತ್ತಾರೆ. (i) ವಿಶ್ಲೇಷಣ ಮಾರ್ಗ—ಇದರಲ್ಲಿ ಕಟ್ಟೆಯ ಮುಂಭಾಗದಲ್ಲಿ ತಳಕ್ಕೆ ಸುಮಾರು 20′ ದೂರದಲ್ಲಿ ಒಂದು ಲಂಬರೇಖೆಯನ್ನು ಅಕ್ಷವಾಗಿ ಇಟ್ಟುಕೊಂಡು ಅದರ ಸುತ್ತ ಪ್ರದಕ್ಷಿಣವಾಗಿಯೂ ಅಪ್ರದಕ್ಷಿಣವಾಗಿಯೂ ಕಟ್ಟೆಯ ಮೇಲಿನ ಬಲಗಳ ಭ್ರಮಣಾಂಕಗಳನ್ನು ತೆಗೆದುಕೊಂಡು ಪರಿಣಾಮದಲ್ಲಿ ಬರುವ ಭ್ರಮಣಾಂಕ ಶೂನ್ಯವಾಗುವಂತೆ ಮಾಡುತ್ತಾರೆ. (ii) ರೇಖಾಕೃತಿಗಳಿಂದ (ಗ್ರ್ಯಾಫಿಕ್ ಸ್ಟ್ಯಾಟಿಕ್ಸ್) ಕಟ್ಟೆಯ ಸಮಸ್ಥಿತಿಯನ್ನು ತನಿಖೆ ಮಾಡುತ್ತಾರೆ. ಎರಡನೆಯ ಮಾರ್ಗ ಸುಲಭ—ಈಚೆಗೆ ಜಲಭಾರದ ಪ್ರಯೋಗಶಾಲೆಗಳಲ್ಲಿ ಮಾದರಿಗಳಿಂದ ಸಂವಿಧಾನವನ್ನು ಪರೀಕ್ಷೆ ಮಾಡುವ ಕ್ರಮ ಎಲ್ಲೆಲ್ಲಿಯೂ ಬಳಕೆಗೆ ಬರುತ್ತಿದೆ. ನಮ್ಮ ರಾಜ್ಯದ ಕೃಷ್ಣರಾಜಸಾಗರದಲ್ಲಿ ಇಂಥ ಒಂದು ಪ್ರಯೋಗಶಾಲೆಯಿದೆ.

4 **ಊರೆಯು ಕಟ್ಟೆಗಳು** (ಬಟ್ರೆಸ್ ಡ್ಯಾಮ್ಸ್) : ಗುರುತ್ವದ ಕಲ್ಲು ಗಾರೆಯ ಕಟ್ಟೆಯಲ್ಲಿ ಉಪಯೋಗಿಸುವ ಸಾಮಗ್ರಿ ಬಹಳ ಹೆಚ್ಚು. ಅದಕ್ಕಾಗಿ ಕಮಾನಿನ ಕಟ್ಟೆಗಳು ಸಾಧ್ಯವಾಗದ ಕಡೆ ಊರೆಯ ಕಟ್ಟೆಗಳನ್ನು ಕಟ್ಟುತ್ತಾರೆ. ಇಲ್ಲಿ ತೂಕದ ಮತ್ತು ಕಮಾನಿನ ಕಟ್ಟೆಗಳ ತತ್ತ್ವಗಳನ್ನು ಸೇರಿಸಿರುತ್ತಾರೆ. ಹೊಳೆಯ ಅಗಲವನ್ನು ಊರೆಗಳಿಂದ ಅಂಕಣಗಳಾಗಿ ಭಾಗಿಸಿ ಮಧ್ಯೆ ನೀರನ್ನು ನಿಲ್ಲಿಸುವುದಕ್ಕೆ ಮಟ್ಟಸ ಕಮಾನುಗಳನ್ನೋ ಭದ್ರಕಾಂಕ್ರೀಟಿನ ತೊಲೆಚಪ್ಪಡಿಗಳನ್ನೋ ಉಕ್ಕಿನ ತೊಲೆತಗಡುಗಳನ್ನೋ ಜೋಡಿಸಿರುತ್ತಾರೆ. ಈ ಕಟ್ಟೆಯೂ ಕಮಾನಿನ ಕಟ್ಟೆಯ ಹಾಗೆ ಬಂಡಿಯ ಕಮಾನಿನ ಸೇತುವೆಯನ್ನು ಸಮಕೋನದಷ್ಟು ತಿರುಗಿಸಿ ಮಲಗಿಸಿದಂತೆ ಕಾಣುತ್ತದೆ. ತಮ್ಮ ತೂಕದ ಮೇಲೆ ನಿಂತಿರುವ ಊರೆಗಳು ಕಮಾನುಗಳಿಗೆ ಗುದ್ದು ಕಂಬಗಳಂತೆ ಇರುತ್ತವೆ. ಅದಕೋಸ್ಕರ ಪ್ರತಿಯೊಂದು ಊರೆಗೂ ಒಳ್ಳೆಯ ಕಲ್ಲಿನ ತಳಪಾಯ ಬೇಕು.

ಚಪ್ಪಡಿಗಳನ್ನು ಜೋಡಿಸಿದಾಗ ನೀರಿನ ಕಡೆಯ ಮುಖ ಲಂಬಕ್ಕೆ 30°–45° ವರೆಗೆ ಓರೆಯಾಗಿರುತ್ತದೆ. ಈ ಚಪ್ಪಡಿಯ ತಳದಲ್ಲಿ ತಡೆಗೋಡೆಯೊಂದು (ಕಟ್ ಆಫ್ ವಾಲ್) ಬೇಕು. ತಳಪಾಯದಲ್ಲಿ ನೀರು ನುಗ್ಗದ ಹಾಗೆ ಇರಬೇಕು. ಇಳಿಕಲು ಊರೆಯ ಕಮಾನಿನ ವಲಯದ ತೂಕದ ಒಂದು ಭಾಗ ಕಮಾನಿನ ಮೇಲೆ ಹರಿದು ಗುದ್ದುಗಂಬವನ್ನು ಸೇರುತ್ತದೆ. ಉಳಿದ ಭಾಗ ಮೇಲಿನ ವಲಯಗಳಿಂದ ಕೆಳಗಿನ ವಲಯಗಳ ಮೂಲಕ ತಳಪಾಯವನ್ನು ಸೇರುತ್ತದೆ. ಅಮೆರಿಕದ ಸಂಯುಕ್ತ ಸಂಸ್ಥಾನಗಳ ಅರಿಸೋನದಲ್ಲಿರುವ ಬಾರ್ಟ್‌ಲೆಟ್ ಕಟ್ಟೆ ಅನೇಕ ಕಮಾನುಗಳುಳ್ಳ ಊರೆಯ ಕಟ್ಟೆ. ಅದರ ಗರಿಷ್ಠ ಎತ್ತರ 286′. ತಲೆಯ ಮೇಲಿನ ಉದ್ದ 74′. ಇದರ ನೀರಿನ ಕಡೆಯ ಮುಖಮಟ್ಟಕ್ಕೆ 48° ಕೋನದಲ್ಲಿದೆ. 6′ ಅಂತರದ ಊರೆಗಳ ನಡುವೆ ಭದ್ರ ಕಾಂಕ್ರೀಟಿನ ಕಮಾನುಗಳಿವೆ. ಕಮಾನಿನ ದಪ್ಪ ಮೇಲುಗಡೆ 2′ 4″. ಕೆಳಗಡೆ 7′. ಊರೆಗಳ ಗರಿಷ್ಠ ಅಗಲ 360′. T ಅಥವಾ ಹೋರಿಯ ತಲೆಯ (ಬುಲ್ ಹೆಡ್) ಆಕಾರದ ಕಟ್ಟೆಯಲ್ಲಿಯೂ ಊರೆಗಳನ್ನು ಉಪಯೋಗಿಸುತ್ತಾರೆ. ನಕ್ಷೆಯಲ್ಲಿ ನೋಡುವುದಕ್ಕೆ Tಯ ತಲೆಗೆರೆಗಳನ್ನು ಸೇರಿಸಿದ ಹಾಗೆ ಕಾಣುತ್ತದೆ. ಕೆಳಗಡೆಯೂ ರೇಖೆಗಳೇ ಊರೆಗಳು. ಈ ನಮೂನೆ ಸರ್ವತ್ರ ಬಳಕೆಗೆ ಬರುತ್ತಿದೆ. ಆ್ಯಂಬುರ್‌ಸನ್ ನಮೂನೆಯೂ ಹೋರಿಯ ತಲೆಯ ಹಾಗೆ ಅನೇಕ T ಗಳನ್ನು ಒಟ್ಟು ಸೇರಿಸಿದಂತೆ ಕಾಣುತ್ತದೆ. ಆದರೆ ನೀರಿನ ಕಡೆಯ ಮುಖ ಲಂಬವಾಗಿರದೆ ವಾಲಿರುತ್ತದೆ. ಆದರಿಂದ ನೀರಿನ ನೂಕು ಲಂಬವಾಗಿಯೂ ಇರುವುದಿಲ್ಲ. ಮಟ್ಟವಾಗಿಯೂ ಇರುವುದಿಲ್ಲ. ಮೆಕ್ಸಿಕೋದಲ್ಲಿರುವ ರಾಡ್ರೀಕ್ಸ್ ಕಟ್ಟೆಯ ನೀರಿನ ಕಡೆಯ ಮುಖ 45° ಗಳಲ್ಲಿ ವಾಲಿದೆ. ಅದರ ಎತ್ತರ 240′.

ಅನೇಕ ಊರೆಗಳ ಕಟ್ಟೆಗಳು : ಕಲ್ಲಿನ ತಳದ ಮೇಲೆ ಅಗಲವಾದ ನದಿಗಳಲ್ಲಿ ತಗ್ಗಾದ ಕಟ್ಟೆಗಳನ್ನು ಕಂಬಗಳ ಮೇಲೋ ಊರೆಗಳ (ಬಟ್ರೆಸ್) ಮೇಲೋ (ಕಮಾನಿನ ಕಟ್ಟೆಯಾಗಲಿ ಕಲ್ಲುಗಾರೆಯ ಕಟ್ಟೆಯಾಗಲಿ ಸಾಧ್ಯವಾಗದೆ ಇರುವ ಕಡೆಗಳಲ್ಲಿ) ಕಟ್ಟುತ್ತಾರೆ. ಈ ಸಂವಿಧಾನದಲ್ಲಿ ಕೆಲವು ಗೋಡೆಗಳನ್ನೋ ಊರೆಗಳನ್ನೋ ಕಟ್ಟಿ ನಡುವಿನ ಅಂಕಣಗಳಲ್ಲಿ ಭದ್ರಕಾಂಕ್ರೀಟಿನ ಚಪ್ಪಡಿಗಳನ್ನೋ ಕಮಾನುಗಳನ್ನೋ ಕಟ್ಟುತ್ತಾರೆ. ಕಟ್ಟೆಯ ನೀರಿನ ಕಡೆಯ ಮುಖಮಟ್ಟಕ್ಕೆ 45° ಇಳಿಕಲಿನಲ್ಲಿದ್ದು ಮೇಲೆ ನಿಂತಿರುವ ನೀರಿನ ತೂಕದಿಂದ ಭದ್ರತೆಯನ್ನು ಪಡೆಯುತ್ತದೆ. ಅನೇಕ ಕಮಾನುಗಳ ಕಟ್ಟೆಗಳಲ್ಲಿ 50′ ಅಂತರದಲ್ಲಿ ಊರೆಗಳಿಂದ ಬಲಪಡಿಸಿದ ತೆಳುವಾದ ಅರ್ಧಸಿಲಿಂಡರುಗಳಿರುತ್ತವೆ. ಈ ನಮೂನೆಯು ಕಲ್ಲಿನ ತಳಪಾಯದ ಮೇಲೆ ಅಗಲವಾದ ಹೊಳೆಗಳಿಗೆ ಅಡ್ಡಲಾಗಿ ತಗ್ಗಾದ ಕಟ್ಟೆಗಳನ್ನು ಕಟ್ಟಲು ಅನುಕೂಲವಾಗಿದೆ. ಅರ್ಧ ಉರುಳೆಗಳ ಕೆಳಗಿನ ಅಂಚನ್ನು ಕಲ್ಲಿನ ತಳಪಾಯದ ಮೇಲೆ ನಿಂತಿರುವ ಕಾಂಕ್ರೀಟಿನ ತಡೆಗೋಡೆಗೆ ಸೇರಿಸುತ್ತಾರೆ. ಅಮೆರಿಕದ ಅರಿಸೋನದಲ್ಲಿ ಕಟ್ಟಿರುವ 250′ ಎತ್ತರವಾದ ಕೂಲಿಜ್ ಕಟ್ಟೆಯ ಕಮಾನುಗಳಿಗೆ ಗುಮ್ಮಟದ ಆಕಾರವನ್ನು ಕೊಟ್ಟಿದ್ದಾರೆ. ಹೀಗೆಯೇ ಇಳಿಜಾರಾದ ಕಂಬಗಳ ಅಥವಾ ಊರೆಗಳ ಮೇಲೆ ಭದ್ರಕಾಂಕ್ರೀಟಿನ ಚಪ್ಪಡಿಯ ಕಟ್ಟೆಯನ್ನು ಕಟ್ಟಬಹುದು. ಆಗ ಚಪ್ಪಡಿಗಳನ್ನು ಕಂಬಗಳ ಮೇಲೆ ಅವಿಚ್ಛಿನ್ನವಾಗಿರುವಂತೆ ವಿನ್ಯಾಸಮಾಡಿ ಕೆಳಗಡೆ ಒಂದು ತಡೆಗೋಡೆಗೆ ಸೇರಿಸಬೇಕು. ನದಿಯಲ್ಲಿ ಬರುವ ಮಹಾಪ್ರವಾಹದ ನೀರು ಅಣೆಕಟ್ಟಿನ ನೆತ್ತಿ ಮತ್ತು ಬೆನ್ನಿನ ಮೇಲೆ ನೈಸರ್ಗಿಕವಾಗಿ ಉರುಳುವ ಹಾಗೆ ಎತ್ತರವಾದ ಅಣೆಕಟ್ಟುಗಳ ಮೇಲುಭಾಗದ ಆಕಾರವನ್ನು ಪ್ರಯೋಗಶಾಲೆಗಳಲ್ಲಿ ನಿರ್ಧರಿಸುತ್ತಾರೆ. ನೀರು ಬಹಳ ಎತ್ತರದಿಂದ ಉರುಳುವ ಕಡೆ ನದಿಯ ತಳಕ್ಕೆ ರಕ್ಷಣೆಯನ್ನು ನಿಂತ ಅಲೆ ಅಥವಾ ನಿಂತನೀರಿನ ಕೊಳಗಳ ಮೂಲಕ ಒದಗಿಸುತ್ತಾರೆ.



ಭದ್ರಾ ಕಟ್ಟೆ—ನಿರ್ಮಾಣಹಂತದಲ್ಲಿ

5 **ಭದ್ರ ಕಾಂಕ್ರೀಟಿನ ಹಲಗೆಯ ಪೆಟ್ಟಿಗೆಯ ಕಟ್ಟೆಗಳು :** ಈಚೆಗೆ ಇಂಥ ಕಟ್ಟೆಗಳನ್ನು ಅಮೆರಿಕದಲ್ಲಿ ಕಟ್ಟುತ್ತಿದ್ದಾರೆ. ಹಾಗೆಯೇ ಮರದಿಂದಲೂ ಉಕ್ಕಿನಿಂದಲೂ ಕಟ್ಟೆಗಳು ನಿರ್ಮಾಣವಾಗುತ್ತಿವೆ.

6 **ಕಮಾನಿನ ಕಟ್ಟೆಗಳು :** ಸೇತುವೆಯ ಮೇಲಿನ ಇಟ್ಟಿಗೆಯ ಇಲ್ಲವೆ ಕಲ್ಲಿನ ಕಮಾನು ಮೇಲೆ ಬರುವ ತೂಕವನ್ನು ಕಂಬಗಳ ಮೂಲಕ ತಳಪಾಯಕ್ಕೆ ಸಾಗಿಸುತ್ತದೆ. ಈ ಸೇತುವೆಯನ್ನು ಒಂದು ಸಮಕೋನದಷ್ಟು ತಿರುಗಿಸಿ ಕಮಾನಿನ ಹೊರಭಾಗವನ್ನು (ಎಕ್ಸ್‌ಟ್ರೇಡಾಸ್) ಜಲಾಶಯದ ಕಡೆಗೆ ಇಟ್ಟರೆ ಕಮಾನಿನ ಕಟ್ಟೆಯ ಚಿತ್ರ ಬರುತ್ತದೆ. ಕಲ್ಲುಗಾರೆಯ ತೂಕಕ್ಕೆ ಬದಲಾಗಿ ಕಮಾನಿನ ಮೇಲೆ ಬರುವ ನೀರಿನ ಮಟ್ಟವಾದ ನೂಕು ಇರುತ್ತದೆ. ಇದು ಎರಡು ಕೊನೆಗಳಲ್ಲಿಯೂ ನೆಲಕ್ಕೆ ಸಾಗುತ್ತದೆ. ಅಗಲ ಚಿಕ್ಕದಾಗಿರುವ ಕಡೆ ಕಂಬಗಳ ಕೊನೆಗಳಲ್ಲಿ ಗಟ್ಟಿಯಾದ ಬಂಡೆಯಿದ್ದರೆ ಮಾತ್ರ ಈ

ನಮೂನೆಯನ್ನು ಬಳಸಬಹುದು. ಕಮಾನಿನ ಕಟ್ಟೆ ತೂಕದ ಕಟ್ಟೆಯಷ್ಟು ತೂಕವಾಗಿರಬೇಕಾಗಿಲ್ಲ. ಇಟಲಿಯಲ್ಲಿರುವ ಒಂದು ಕಾಂಕ್ರೀಟಿನ ಕಮಾನಿನ ಕಟ್ಟೆಯ ಎತ್ತರ 449′ ಗಳಾದರೆ ಅದರ ತಳದ ಅಗಲ 51′.



ನಾಗಾರ್ಜುನಸಾಗರ ಕಟ್ಟೆ

ಹೊಳೆಯ ದಡಗಳಿಗೆ ನಡುವೆ ಒಂದೇ ಕಮಾನಿದ್ದರೆ ಅದು ಮೂರು ವಿಧಗಳಲ್ಲಿ ಕಟ್ಟೆಯ ನೀರಿನ ಒತ್ತಡವನ್ನು ತಡೆಯುತ್ತದೆ : (i) ಅದರ ತೂಕ, (ii) ಮಟ್ಟವಾದ ಕಮಾನಿನ ಬಲ, (iii) ಮಟ್ಟವಾದ ಭಾಗದ ಚಾಚುತೊಲೆಯ (ಕ್ಯಾಂಟಿಲಿವರ್) ನಿರೋಧ. ಕಮಾನಿನ ಸೇತುವೆ ಮೇಲೆ ಬಿದ್ದ ತೂಕವನ್ನು ತಡೆಯುವಂತೆಯೇ ಕಮಾನಿನ ಕಟ್ಟೆಯೂ ತಡೆಯುತ್ತದೆ. ಸೇತುವೆಯನ್ನು ಹೊಳೆಯ ಕಡೆಗೆ ಒಂದು ಸಮಕೋನದಷ್ಟು ತಿರುಗಿಸಿ ಇಟ್ಟರೆ ಕಟ್ಟೆಯ ಚಿತ್ರ ಬರುತ್ತದೆ. ಸೇತುವೆಯ ಸಂವಿಧಾನದಲ್ಲಿ ಕಮಾನಿನ ಮತ್ತು ಗುರುತ್ವದ ತತ್ತ್ವಗಳನ್ನು ಬಳಸಿದರೆ ಖರ್ಚು ಕಡಿಮೆಯಾಗುವುದು. ಆದರೆ ಈ ತತ್ತ್ವವನ್ನು ಎಲ್ಲ ಕಡೆಗಳಲ್ಲಿಯೂ ಉಪಯೋಗಿಸಲಾಗುವುದಿಲ್ಲ. ನದಿಯ ಪಾತ್ರ ಕಿರಿದಾಗಿದ್ದು ಪಕ್ಕಗಳಲ್ಲಿ ಗಟ್ಟಿಯಾದ ಬಂಡೆಯ ದಡಗಳಿದ್ದರೆ ಅನುಕೂಲ. ಸಾಮಾನ್ಯವಾಗಿ ನದಿಯ ಪಾತ್ರಕ್ಕೆ ಅಡ್ಡಲಾಗಿ ತೆಳುವಾದ ಬಾಗಿದ ಕಾಂಕ್ರೀಟಿನ ಗೋಡೆಯನ್ನು ಕಟ್ಟಿ ಅದರ ಮೇಲೆ ಬೀಳುವ ನೀರಿನ ಒತ್ತಡವನ್ನು ಕಮಾನಿನ ಮೂಲಕ ಇಲ್ಲಿನ ದಡಗಳಿಗೆ ವರ್ಗಾಯಿಸುತ್ತಾರೆ: ಈ ಗೋಡೆ ತಳದಲ್ಲಿ ಬಂಡೆಗೆ ಕಚ್ಚಿ ಕೊಂಡಂತಿರುವುದರಿಂದ ಚಾಚುತೊಲೆಯ ರೀತಿಯಲ್ಲಿ ತೂಕವನ್ನು ಹೊರುತ್ತದೆ. ಆದ್ದರಿಂದ ಸಂವಿಧಾನ ತೊಡಕಾಗುತ್ತದೆ. ಕಮಾನಿನ ಕಟ್ಟೆಗಳ ಮೇಲೆ ಗರಿಷ್ಠ ಒತ್ತಡ 16 ಟನ್ನುಗಳವರೆಗೂ ಹೋಗಬಹುದು. ನೇರವಾದ ಕಣಿವೆಗಳಲ್ಲಿ ಕಮಾನಿನ ಕಟ್ಟೆಯ ಉಪಯೋಗ ಹೆಚ್ಚು. ಕಮಾನಿನ ತ್ರಿಜ್ಯ ಹೆಚ್ಚಾದರೆ ಈ ನಮೂನೆಯಲ್ಲಿ ಅನುಕೂಲ ಕಡಿಮೆ. ಆಗ ನೇರವಾದ ಕಟ್ಟೆಗೂ ಕಮಾನಿನ ಕಟ್ಟೆಗೂ ತಗಲುವ ಖರ್ಚಿನಲ್ಲಿ ಹೆಚ್ಚು ವ್ಯತ್ಯಾಸವಿರುವುದಿಲ್ಲ. ಆದರೆ ಸನ್ನಿವೇಶ ಅನುಕೂಲವಾಗಿರುವ ಕಡೆ ಕಮಾನಿನ ಕಟ್ಟೆಗೆ ಖರ್ಚು ಇತರ ಎಲ್ಲ ಕಮಾನುಗಳಿಗಿಂತಲೂ ಕಡಿಮೆಯಾಗುತ್ತದೆ. ಕಮಾನಿನ ನಡುವಿನ ಕೋನವನ್ನು 133.5° ಗಳಲ್ಲಿಯೂ ಅದರ ತ್ರಿಜ್ಯವನ್ನು ಕಮರಿಯ ಆಳದ 0.6 ರಷ್ಟೂ ಇಟ್ಟರೆ ಬಲ ಮತ್ತು ಮಿತವ್ಯಯಗಳು ಒಟ್ಟಿಗೆ ಸಾಧಿತವಾಗುತ್ತವೆ. ಕಮರಿ V–ಆಕಾರವಾಗಿರುವುದರಿಂದ ಕಟ್ಟೆಯ ಮೇಲುಭಾಗ ತಳಕ್ಕಿಂತ ಬಹಳ ಅಗಲವಾಗಿರುತ್ತದೆ. ಎಲ್ಲ ಮಟ್ಟದ ವರಸೆಗಳಿಗೂ ಒಂದೇ ತ್ರಿಜ್ಯವನ್ನಿಟ್ಟರೆ ಕೆಳಗಡೆಯ ಕಮಾನು ಬಹಳ ಚಪ್ಪಟೆ ಆಗುತ್ತದೆ. ಅದಕ್ಕಾಗಿ ಎಲ್ಲ ವರಸೆಗಳಿಗೂ ಒಂದೇ ಕೋನವನ್ನಿಟ್ಟು ವಿನ್ಯಾಸ ಮಾಡುತ್ತಾರೆ. ಆದರೆ ಇದರಿಂದ ಕಟ್ಟಡ ಕೊಂಚ ವಕ್ರವಾಗುತ್ತದೆ. ಅದಕ್ಕಾಗಿ ಕೆಲವರು ಒಂದೇ ತ್ರಿಜ್ಯಕ್ಕೂ ಒಂದೇ ಕೋನಕ್ಕೂ ಮಧ್ಯವರ್ತಿಯಾದ ಆಕೃತಿಯನ್ನು ಕೊಡುತ್ತಾರೆ. ಕಮಾನಿನ ಕಟ್ಟೆಯಲ್ಲಿ ಅದೇ ಕೆಲಸವನ್ನು ನಿರ್ವಹಿಸುವ ಗುರುತ್ವದ ಕಟ್ಟೆಗಿಂತ ನೂರಕ್ಕೆ 30-35 ರಷ್ಟು ಕಡಿಮೆ ಕಲ್ಲುಗಾರೆ ಅಥವಾ ಕಾಂಕ್ರೀಟ್ ಇರುತ್ತದೆ. ಕಮಾನುಗಳನ್ನು ಕಟ್ಟುವುದಕ್ಕೇನೋ ಹೆಚ್ಚು ಖರ್ಚು ತಗಲಿದರೂ ಒಟ್ಟಿನಲ್ಲಿ ಉಳಿತಾಯವಾಗುತ್ತದೆ.



ವಾಣಿವಿಲಾಸಸಾಗರ ಜಲಾಶಯ

ಫ್ರಾನ್ಸಿನಲ್ಲಿ ವಿದ್ಯುದುತ್ಪಾದನೆಗಾಗಿ ಡಾರ್ಡನ್ ನದಿಯ ಮೇಲೆ ಎರಡು ಆಧುನಿಕವಾದ ಕಮಾನಿನ ಕಟ್ಟೆಗಳನ್ನು ಕಟ್ಟಿದ್ದಾರೆ. ಇವುಗಳಲ್ಲಿ 1946ರಲ್ಲಿ ಮುಗಿದ ಎಲೆ ಕಟ್ಟೆಯ ಎತ್ತರ 292′. ಮೇಲುಗಡೆ ಕಟ್ಟೆಯ ಉದ್ದ 245′. ಕಟ್ಟೆಯ ಅಂಗವಾಗಿ ಒಂದು ವಿದ್ಯುತ್ಕೇಂದ್ರವನ್ನು ಕಟ್ಟಿದ್ದಾರೆ. ಅದರಲ್ಲಿ ಒಂದು ವಿಶೇಷವಿದೆ. ಕಟ್ಟೆಯ ಮೇಲಿನಿಂದ ಉರುಳುವ ಹೊಳೆಯ ಪ್ರವಾಹದ ನೀರನ್ನು ವಿದ್ಯುತ್ಕೇಂದ್ರದ ಮಾಡಿನ ಮೇಲುಗಡೆ ಎರಡು ವಕ್ರವಾದ ಕೋಡಿಗಳ ಮೂಲಕ ಕೆಳಗಡೆ ಮತ್ತೆ ಹೊಳೆಗೆ ಹಾಯಿಸಿದ್ದಾರೆ. ಅಮೆರಿಕದ ಸಂಯುಕ್ತ ಸಂಸ್ಥಾನಗಳಲ್ಲಿ ಕೊಲೊರಾಡೊ ನದಿಗೆ ಅಡ್ಡಲಾಗಿ ಕಟ್ಟಿರುವ ಗುರುತ್ವದ ಕಮಾನಿನ ಹೂವರ್ ಕಟ್ಟೆ ಆ ಕಾಲದಲ್ಲಿ ಪ್ರಪಂಚದಲ್ಲಿಯೇ ಅತ್ಯಂತ ಎತ್ತರವಾದ ಕಟ್ಟೆಯಾಗಿತ್ತು. ಈಗ ಅದರ ಸ್ಥಾನ ಹತ್ತರಿಂದಲೂ ಆಚೆಗೆ. ಇದರ ಎತ್ತರ 726′. ಆಳವಾದ ಭಾಗದಲ್ಲಿ ಅಗಲ 660′. ಈ ಕಾಂಕ್ರೀಟಿನ ಕಟ್ಟೆಯಲ್ಲಿ ಬಹಳ ಕಡಿಮೆಯಾಗಿ ಶಾಖವನ್ನು ಉಂಟುಮಾಡುವ ಸಿಮೆಂಟನ್ನು ಉಪಯೋಗಿಸಿದ್ದಾರೆ. ಏಕೆಂದರೆ ಸಿಮೆಂಟ್ ಗಟ್ಟಿಯಾಗುವಾಗ ಉತ್ಪತ್ತಿಯಾಗುವ ಶಾಖ ವಿಶೇಷವಾಗಿರುತ್ತದೆ. ಕಟ್ಟೆಯನ್ನು ಕಟ್ಟುವಾಗ ಹೊಳೆಯ ನೀರನ್ನು 50′

ವ್ಯಾಸದ ನಾಲ್ಕು ಸುರಂಗಗಳಲ್ಲಿ ಹೊರಗೆ ಬಿಟ್ಟಿದ್ದರು. ಕೆಲಸ ಮುಗಿದ ಮೇಲೆ ಇವು ಕಟ್ಟೆ ತುಂಬಿದಾಗ ಕೋಡಿಯ ನೀರನ್ನು ಆಚೆಗೆ ಸಾಗಿಸುವಂತೆ ಮಾಡಿದ್ದಾರೆ. ಕಟ್ಟೆಯಲ್ಲಿ 3.28 ಮಿಲಿಯನ್ ಸಲೆ ಅಡಿ ಸಿಮೆಂಟ್ ಕಾಂಕ್ರೀಟನ್ನು ಉಪಯೋಗಿಸಿದ್ದಾರೆ. ಕಟ್ಟೆಯ ಹಿಂದುಗಡೆ ಇರುವ ಮೀಡ್ ಸರೋವರದಲ್ಲಿ ಒಂದೂಕಾಲು ಲಕ್ಷ ಕೋಟಿ ಸಲೆ ಅಡಿ ನೀರು ಹಿಡಿಯುತ್ತದೆ. ಇದಕ್ಕೆ ತಗಲಿದ ಖರ್ಚು 520 ಲಕ್ಷ ಡಾಲರ್. ಕಟ್ಟೆಯ ನೀರಿನಿಂದ 15 ಲಕ್ಷ ಅಶ್ವಸಾಮರ್ಥ್ಯದ ವಿದ್ಯುತ್ತು ಉತ್ಪತ್ತಿಯಾಗುತ್ತದೆ. 20 ಲಕ್ಷ ಎಕರೆ ಜಮೀನಿಗೆ ನೀರಾವರಿಯಾಗುತ್ತದೆ. ನದಿಯಲ್ಲಿ ಕೆಳಗಡೆ ಪ್ರವಾಹಗಳ ಹಾವಳಿ ನಿಂತಿದೆ. ಜಲಯಾನಕ್ಕೆ ಅನುಕೂಲತೆಗಳು ಹೆಚ್ಚಾಗಿವೆ. ಯಾತ್ರಿಗಳಿಗೆ ಈ ಜಲಾಶಯ ಶ್ರೇಷ್ಠವಾದ ವಿಹಾರ ಕ್ಷೇತ್ರವಾಗಿದೆ.

**ಕಟ್ಟೆಯ ವಿನ್ಯಾಸ, ನಿರ್ಮಾಣ :** ಮಣ್ಣಿನ ಏರಿಯಿಂದ ಹಿಡಿದು ಆಧುನಿಕ ಸಂವಿಧಾನಗಳ ವರೆಗೆ ಎಲ್ಲ ಕಟ್ಟೆಗಳಲ್ಲಿಯೂ (i) ಹೊಳೆಯಲ್ಲಿ ಬಂದ ಪ್ರವಾಹವನ್ನು ಆಚೆಗೆ ಸಾಗಿಸಲು ಕೋಡಿ, (ii) ನೀರಾವರಿಗಾಗಿ ತೂಬು–ಇವು ಇರಲೇಬೇಕು. ಆದರೆ ಅವುಗಳ ವಿನ್ಯಾಸ ಬದಲಾಗುತ್ತದೆ. ದೊಡ್ಡ ಕಲ್ಲುಗಾರೆಯ ಕಟ್ಟೆಗಳಲ್ಲಿ ಮಳೆಗಾಲದಲ್ಲಿ ಬರುವ ಗೋಡುಮಣ್ಣನ್ನು (ಸಿಲ್ಟ್) ಸಾಗಿಸಲು (iii) ಅಡಿ ಬಚ್ಚಲುಗಳು ಹೊಳೆಯ ತಳಮಟ್ಟದ ಮೇಲೆ ಸುಮಾರು 10′ಗಳ ಎತ್ತರದಲ್ಲಿ ಬೇಕಾಗುತ್ತವೆ. ಈಗಿನ ಕಟ್ಟೆಗಳಲ್ಲಿ (iv) ವಿದ್ಯುದುತ್ಪಾದನೆಗಾಗಿ ನೀರನ್ನು ಬಿಡಲು ಪೆನ್‌ಸ್ಟಾಕುಗಳು ಎಂಬ ಕೊಳವೆಗಳು ಬೇಕು. ವಿವಿಧೋದ್ದೇಶ ಯೋಜನೆಗಳಲ್ಲಿ ಇನ್ನೂ ಕೆಲವು ಅನುಕೂಲತೆಗಳು ಬೇಕಾಗುತ್ತವೆ. ಅವನ್ನೆಲ್ಲ ಕಟ್ಟೆಯಲ್ಲಿ ಅಳವಡಿಸಬೇಕು.

1 **ಕೋಡಿ :** ಇದರ ಸಂವಿಧಾನದಲ್ಲಿ ವಿಶೇಷ ವೈವಿಧ್ಯವಿದೆ. ಕೆರೆಗಳಲ್ಲಿ ದಡದಲ್ಲಿಯೋ ಎರಡು ದಡಗಳಲ್ಲಿಯೋ ತಳಪಾಯದಲ್ಲಿ ಕಲ್ಲು ಇರುವ ತುಂಬು ನೀರಿನ ಮಟ್ಟದಲ್ಲಿ ಕಲ್ಲುಗಾರೆಯ ಕೋಡಿಯ ಗೋಡೆಯನ್ನು ಕಟ್ಟಿ ಅದರ ಮೇಲೆ ಹೆಚ್ಚಿನ ನೀರನ್ನು ಬಿಡುತ್ತಾರೆ. ನೀರು ಕೆಳಗೆ ಬಿದ್ದಾಗ ಕೋಡಿಯ ಹಳ್ಳ ಕೊರೆಯದ ಹಾಗೆ ಇಳಿಜಾರಾದ ಕಲ್ಲಿನ ನೆಲಹಾಸು ಅಥವಾ ನಿಂತ ನೀರಿನ ಕೊಳವನ್ನು ಕಟ್ಟುತ್ತಾರೆ. ಪ್ರವಾಹದ ನೀರು ನದಿಗೆ ಅಡ್ಡಲಾಗಿ ಕಟ್ಟಿದ ಅಣೆಕಟ್ಟಿನ ಮೇಲೆ ಉರುಳುತ್ತದೆ. ಆದರೆ ಕಟ್ಟೆಗಳ ಕೋಡಿಗಳ ಸಂವಿಧಾನದಲ್ಲಿ ಹಲವು ಬಗೆಗಳಿವೆ. ಒಂದರಲ್ಲಿ ಕಟ್ಟೆಯ ಒಂದು ಭಾಗದ ಮೇಲೆ ಅಣೆಕಟ್ಟಿನ ಮೇಲೆ ಉರುಳಿದ ಹಾಗೆ ಪ್ರವಾಹ ಉರುಳಿ ಕೆಳಗೆ ಹೊಳೆಯನ್ನು ಸೇರಿಕೊಳ್ಳುತ್ತದೆ. ಇನ್ನೊಂದರಲ್ಲಿ ನಡುಹೊಳೆಯಲ್ಲಿ ಕಟ್ಟೆಯ ಒಡಲಿನಲ್ಲಿ ಹಲವು ಕಿರಿದಾದ ಎತ್ತರವಾದ ಕಂಡಿಗಳನ್ನಿಟ್ಟು ಅವುಗಳೊಳಕ್ಕೆ ಬರುವ ನೀರನ್ನು ಸ್ಟೋನಿ ನಮೂನೆ ಮೊದಲಾದ ಬಾಗಿಲುಗಳ ಮೂಲಕ ನಿಯಂತ್ರಿಸುತ್ತಾರೆ. ಜೊತೆಗೆ ಕೃಷ್ಣರಾಜಸಾಗರದಲ್ಲಿರುವಂತೆ ಕೆಲವು ಸ್ವಯಂಚಾಲಿತವಾದ ಬಾಗಿಲುಗಳನ್ನೂ ಇಡಬಹುದು. ಕೆಲವು ಕಡೆ ತೆರೆದ ಕೋಡಿಗಳೂ ಇರುತ್ತವೆ. ತುಮಕೂರು ಜಿಲ್ಲೆಯ ಮಾರ್ಕೋನಹಳ್ಳಿ ಜಲಾಶಯದಲ್ಲಿ ಎರಡು ಗುಮ್ಮಟದ ಆಕಾರದ ಇಳಿಗೊಳವೆಗಳಿವೆ. ಜೋಗದ ಯೋಜನೆಯ ಹಿರೇಭಾಸ್ಕರದ ಕಟ್ಟೆಯಲ್ಲಿ ಹನ್ನೊಂದು ಸುರುಳಿಯ ಇಳಿಗೊಳವೆಗಳಿವೆ. ಕಟ್ಟೆಯ ಮೇಲಿನಿಂದ ಕೆಳಕ್ಕೆ ನೀರು ಉರುಳುವಾಗ ಕೆಳಗಡೆ ನೆಲವನ್ನು ಕೊರೆಯದಂತೆ ಸೂಕ್ತವಾದ ರಕ್ಷಣೆಯನ್ನು ಒದಗಿಸಬೇಕು. ಕಟ್ಟೆಯ ಹಿಂದುಗಡೆ ಅದರ ಅಗಲದ ಪೂರ್ತ ವಿದ್ಯುದ್ಯೋಜನೆಯ ಯಂತ್ರಾಗಾರವಿದ್ದರೆ ಕಟ್ಟೆಯ ಬೆನ್ನಿನಲ್ಲಿ ವಿದ್ಯುದಾಗಾರದ ತಲೆಯ ಮೇಲುಗಡೆ ನೀರನ್ನು ಇಳಿಜಾರಿನಲ್ಲಿ ಬಿಡುತ್ತಾರೆ. ಆಗ ಕೋಡಿಯ ನೀರು ಕಟ್ಟಡಕ್ಕೆ ಸಾಕಷ್ಟು ಕೆಳಗೆ ನದಿಯನ್ನು ಸೇರುತ್ತದೆ ; ಕೋಡಿಯ ನೀರನ್ನು ಆಚೆಗೆ ಸಾಗಿರುವ ಇತರ ಕ್ರಮಗಳಲ್ಲಿ ಪಕ್ಕದಲ್ಲಿ ಬಳಸಿರುವ ಕೋಡಿ (ಸ್ಪಿಲ್ ವೇ ರೌಂಡ್ ದಿ ಡ್ಯಾಮ್) ಮತ್ತು ಪಕ್ಕದ ಬಂಡೆಯಲ್ಲಿ ಕೊರೆದ ಸುರಂಗ ಇವನ್ನು ಹೆಸರಿಸಬಹುದು. ಭಾರತದಲ್ಲಿ ಹೊಳೆಯ ತುಂಬು ಮಟ್ಟದಲ್ಲಿ ಕಟ್ಟೆಯ ತಲೆಗೆ ಓಗೀ ಆಕಾರವನ್ನು ಕೊಟ್ಟು ಹಿಂದುಗಡೆ ನೀರು ಹೊಳೆಗೆ ಉರುಳುವ ಹಾಗೆ ಮಾಡುವುದು ಈಚೆಗೆ ರೂಢಿಯಾಗುತ್ತಿದೆ. ಈ ಕ್ರಮದಲ್ಲಿ ಅಷ್ಟು ಎತ್ತರದಿಂದ ಬೀಳುವ ನೀರು ನದಿಯ ತಳವನ್ನು ಕೊರೆಯದ ಹಾಗೆ ವಿಶೇಷ ರಕ್ಷಣೆಯನ್ನು ಪ್ರತಿಯೊಂದು ಸಂದರ್ಭಕ್ಕೂ ಹೊಂದುವಂತೆ ಪ್ರಯೋಗಶಾಲೆಯಲ್ಲಿ ಸಂವಿಧಾನ ಮಾಡಬೇಕಾಗುತ್ತದೆ. ದಕ್ಷಿಣ ಭಾರತದಲ್ಲಿ ಪೂನಾ ಮತ್ತು ಕೃಷ್ಣರಾಜಸಾಗರದಲ್ಲಿ ಇಂಥ ಕೇಂದ್ರಗಳಿವೆ. ಕೋಡಿಯ ಮೇಲೆ ಪ್ರವಾಹವನ್ನು ನಿಯಂತ್ರಿಸಲು ಅಗಲವಾದ ಕಣ್ಣಿನ ಅನೇಕ ಬಗೆಯ ಕವಾಟಗಳು ಬಳಕೆಯಲ್ಲಿವೆ. (i) ಸಮತೂಕವಾದ ಆರೀಯ ಬಾಗಿಲುಗಳು (ರೇಡಿಯಲ್ ಗೇಟ್ಸ್) ವಿದ್ಯುಚ್ಛಕ್ತಿಯಿಂದ ಚಲಿಸುತ್ತವೆ. (ii) ಮದ್ದಲೆಯ ಆಕಾರದ ಬಾಗಿಲುಗಳನ್ನು ಮಂಜು, ಕಸ ಮುಂತಾದವನ್ನು ಮೇಲಿನಿಂದ ಆಚೆಗೆ ಸಾಗಿಸಲು ಬಳಸುತ್ತಾರೆ. ಇವಕ್ಕೆ ಬೆಲೆ ಹೆಚ್ಚು. ಆದರೆ ಇವು ಸರೋವರದ ನೀರಿನ ಒತ್ತಡದಿಂದ ಚಲಿಸುತ್ತವೆ. ವಿದ್ಯುತ್ತು ಬೇಕಾಗಿಲ್ಲ. (iii) ಭದ್ರವಾದ ಚಕ್ರವಿರುವ ಇಲ್ಲವೆ ಸಿಲಿಂಡರಿನ ನಮೂನೆಯ ಮೇಲಕ್ಕೆ ಎತ್ತುವ ಬಾಗಿಲುಗಳನ್ನು ಹೊರಕ್ಕೆ ಹೋಗುವ ನೀರಿನ ನಿಯಂತ್ರಣಕ್ಕಾಗಿ ಉಪಯೋಗಿಸುತ್ತಾರೆ. (iv) ಆರೀಯ ವೃತ್ತಖಂಡದ ಬಾಗಿಲುಗಳು (ಸೆಕ್ಟರ್ ಗೇಟ್ಸ್) ಅಮೆರಿಕದಲ್ಲಿ ಹೆಚ್ಚಾಗಿ ಬಳಕೆಯಲ್ಲಿವೆ. ಆಳವಾದ ಕಣ್ಣುಗಳಿಗೆ ಹಿಂದೆ ನೋಡಿದ ಸ್ಟೋನೀ ಬಾಗಿಲು ಮತ್ತು ಟೈಂಟರ್ ಬಾಗಿಲುಗಳನ್ನು ಬಳಸಬಹುದು. ಅಮೆರಿಕದಲ್ಲಿ ಪ್ರಭಾತ ವೈಭವ (ಮಾರ್ನಿಂಗ್ ಗ್ಲೋರಿ) ಎಂದು ಕರೆಯುವ ತೇಲುವ ಉಂಗುರದ ಆಕಾರದ ಬಾಗಿಲನ್ನು ಕೋಡಿಯಿಂದ ಬರುವ ನೀರನ್ನು ನಿಯಂತ್ರಿಸಲು ಉಪಯೋಗಿಸುತ್ತಾರೆ.

2 **ತೂಬುಗಳು** (ಸ್ಲೂಸಸ್) **:** ಜಲಾಶಯದಿಂದ ನೀರಾವರಿಗಾಗಿ ಬಿಡುವ ನೀರನ್ನು ಇವು ನಿಯಂತ್ರಿಸುತ್ತವೆ. ಹಿಂದಿನ ರಚನೆಗಳಲ್ಲಿ ಏರಿಯ ಒಂದು ಕಡೆಯಿಂದ ಇನ್ನೊಂದು ಕಡೆಗೆ ನಿರ್ದಿಷ್ಟವಾದ ಮಟ್ಟದಲ್ಲಿ ಕಲ್ಲುಗಾರೆಯ ಸುರಂಗವನ್ನು ಕಟ್ಟಿ ಮೇಲುಗಡೆ ಚಪ್ಪಡಿಗಳಿಂದಲೋ ಕಮಾನುಗಳಿಂದಲೋ ಮುಚ್ಚುತ್ತಿದ್ದರು. ಈಗ ಭದ್ರಾವತಿಯಲ್ಲಿ ತಯಾರಾದ ಎರಕದ ಕಬ್ಬಿಣದ ಕೊಳಾಯಿಗಳನ್ನು ಉಪಯೋಗಿಸುತ್ತಾರೆ. ಇವುಗಳಲ್ಲಿ ಹರಿಯುವ ನೀರನ್ನು ಮುಂದುಗಡೆ ಇರುವ ಕವಾಟದಿಂದ ನಿಯಂತ್ರಣಮಾಡಬೇಕು. ದೊಡ್ಡ ಕಟ್ಟೆಗಳಲ್ಲಿ ಉಕ್ತವಾದ ಮಟ್ಟದಲ್ಲಿ ದೀರ್ಘ ಚತುರಸ್ರಾಕಾರವಾದ ಸುರಂಗವನ್ನು ಮಾಡಿ ಮೇಲುಗಡೆ ಕಲ್ಲಿನ ಕಮಾನುಗಳಿಂದ ಮುಚ್ಚುತ್ತಾರೆ. ಜಲಾಶಯದಿಂದ ನೀರು ಬರಲು ನಿಯಂತ್ರಣ ಮಾಡಬಹುದಾದ ಬಾಗಿಲುಗಳಿರುತ್ತವೆ. ಹಿಂದುಗಡೆ ನೀರು ನಾಲೆಯೊಳಕ್ಕೆ ಬೀಳುತ್ತದೆ. ತೂಬುಗಳಲ್ಲಿ ಬರುವ ನೀರನ್ನು ನಿಯಂತ್ರಿಸಲು (i) ಒತ್ತಡದ ಜಾರುವ ಬಾಗಿಲುಗಳು, (ii) ಆರೀಯ ಟೆಂಟರ್ ಬಾಗಿಲುಗಳು, (iii) ಸೂಜಿಯ ಕವಾಟಗಳು, (iv) ಚಿಟ್ಟೆಯ ಆಕಾರದ ಬಾಗಿಲುಗಳು, (v) ಸಿಲಿಂಡರಿನ ಕವಾಟಗಳು—ಇವನ್ನು ಉಪಯೋಗಿಸುತ್ತಾರೆ.

3 **ಅಡಿಬಚ್ಚಲುಗಳು** (ಸ್ಕೋರಿಂಗ್ ಸ್ಲೂಸಸ್) **:** ಇವನ್ನು ಕೃಷ್ಣರಾಜಸಾಗರದಲ್ಲಿ ಹೊಳೆಯ ತಳದ ಮೇಲೆ 12′ ಎತ್ತರದಲ್ಲಿ ಇಟ್ಟು ಸ್ಟೋನೀ ನಮೂನೆಯ ಬಾಗಿಲುಗಳಿಂದ ನಿಯಂತ್ರಣ ಮಾಡಿ ಪ್ರವಾಹ ಕಾಲದಲ್ಲಿ ಗೋಡು ತುಂಬಿದ ನೀರನ್ನು ಕೆಳಗೆ ಕಾವೇರಿ ನದಿಗೆ ಸಾಗಿಸುತ್ತಾರೆ.

4 **ಪೆನ್‌ಸ್ಟಾಕ್ ಕೊಳವೆಗಳು :** ವಿದ್ಯುದುತ್ಪಾದನೆಗಾಗಿ ನೀರನ್ನು ಹೊಳೆಯಿಂದ ಸೂಕ್ತವಾದ ಅಳತೆಯ ಮತ್ತು ಸಂಖ್ಯೆಯ ಪೆನ್‌ಸ್ಟಾಕ್ ಕೊಳವೆಗಳಿಂದ ಕಟ್ಟೆಯ ಹಿಂದುಗಡೆ ಇರುವ ವಿದ್ಯುಜ್ಜನಕಗಳಿಗೆ ಒಯ್ಯುತ್ತಾರೆ. ಪಂಜಾಬಿನ ಭಾಕ್ರ ಕಟ್ಟೆಯಲ್ಲಿ ಈ ಪೆನ್‌ಸ್ಟಾಕುಗಳ ವ್ಯಾಸ 15′. ವಿದ್ಯುಜ್ಜನಕಗಳಿಂದ ಹೊರಕ್ಕೆ ಬರುವ ನೀರು ಮತ್ತೆ ಹೊಳೆಯನ್ನು ಸೇರಿ ನೀರಾವರಿಗೆ ಉಪಯೋಗವಾಗುತ್ತವೆ. ಕಟ್ಟೆಗಳನ್ನು ಕಟ್ಟುವ ಜಾಗದ ಸ್ವಭಾವದ ಮೇಲೂ, ಕಟ್ಟಡದ ಸಾಮಗ್ರಿಯ ಮೇಲೂ ತಳಪಾಯದ ಗುಣದ ಮೇಲೂ ಇಂದಿನ ಕಟ್ಟೆಗಳು ಬೇರೆ ಬೇರೆ ತತ್ತ್ವಗಳ ಮೇಲೆ ನಿರ್ಮಾಣವಾಗುತ್ತವೆ. ಹತ್ತಿರದಲ್ಲಿಯೇ ದೊರೆಯುವ ಮಣ್ಣು, ಕಲ್ಲು, ಕಾಂಕ್ರೀಟಿಗೆ ಮರಳು, ಸುಣ್ಣ ಇಲ್ಲವೆ ಸಿಮೆಂಟ್—ಇವನ್ನು ಸಾಗಣೆಯ ಖರ್ಚನ್ನು ಉಳಿಸಿ ಉಪಯೋಗಿಸಿಕೊಂಡು ಅವಕ್ಕೆ ಹೊಂದುವ ಸಂವಿಧಾನವನ್ನು ಮಾಡಬಹುದು. ಕಟ್ಟೆ ಒಳಗಿನಿಂದ ನೀರನ್ನು ಬಿಡದಂತೆ ಭದ್ರವಾಗಿರಬಹುದಾದರೂ ಕೆಳಗಿನಿಂದ ನೀರು ಜಿನುಗಿ ತಳಪಾಯವನ್ನೇ ಕರಗಿಸಬಹುದು. ಈ ನೀರನ್ನು ತಳಪಾಯದ ಮೇಲುಗಡೆ 10′ ಎತ್ತರದಲ್ಲಿ ಕಟ್ಟೆಯೊಳಗೆ ಉದ್ದಕ್ಕೂ 5′ ಅಗಲ, 7′ ಎತ್ತರದ ಓಣಿಯ ಅಂಚಿನಲ್ಲಿ ಬಿಟ್ಟು ಅಲ್ಲಲ್ಲಿ ಒಟ್ಟುಗೂಡಿಸಿ ಪಂಪುಗಳಿಂದ ಎತ್ತಿ ಆಚೆಗೆ ಹಾಕಬಹುದು ಅಥವಾ ಮೇಲಿನಿಂದ ಧುಮುಕಿ ಕೆಳಭಾಗದಲ್ಲಿ ಆಸರೆಯಾಗಿರುವ ಮಣ್ಣನ್ನು ಆಚೆ ಸಾಗಿಸಬಹುದು. ಇಲ್ಲವೆ ದಡಗಳಲ್ಲಿ ಬೇರೆ ಒಂದು ದಾರಿಯನ್ನೇ ಮಾಡಿಕೊಂಡು ಬಿಡಬಹುದು. ಸಂವಿಧಾನದಲ್ಲಿ ಈ ವಿಚಾರಗಳನ್ನೆಲ್ಲ ಪರಿಶೀಲಿಸಬೇಕಾಗುತ್ತದೆ.

## ಪ್ರಪಂಚದ ಕೆಲವು ಪ್ರಮುಖ ಕಟ್ಟೆಗಳು

ಅತಿ ಉದ್ದದ ಕಟ್ಟೆ : ಹೀರಾಕುಡ್ (ಭಾರತ) 15.8 ಮೈಲಿಗಳು.

ಅತಿ ಎತ್ತರದ ಮೊದಲ ಹತ್ತು ಕಟ್ಟೆಗಳು (ಎತ್ತರ ಅಡಿಗಳಲ್ಲಿವೆ)

| ಕಟ್ಟೆ | | ಎತ್ತರ |
|---|---|---|
| ನ್ಯೂರೆಕ್ (ರಷ್ಯ) | ... | 1,017 |
| ಇಂಗೌರಿ (ರಷ್ಯ) | ... | 988 |
| ಗ್ರ್ಯಾಂಡ್ ಡಿಕ್ಸೆನ್ಸ್ (ಸ್ವಿಟ್ಜರ್‌ಲೆಂಡ್) | ... | 932 |
| ವೈಯಂಟ್ (ಇಟಲಿ) | ... | 858 |
| ಮೈಕ (ಕೊಲಂಬಿಯ) | ... | 800 |
| ಮೌವೊಸಿನ್ (ಸ್ವಿಟ್ಜರ್‌ಲೆಂಡ್) | ... | 778 |
| ಸಯಾನ್ಸ್ಕ (ರಷ್ಯ) | ... | 774 |
| ಚಿರ್ಕಿ (ರಷ್ಯ) | ... | 764 |
| ಆರೋವಿಲ್ (ಅಮೆರಿಕ) | ... | 760 |
| ಕಾಂಟ್ರ (ಸ್ವಿಟ್ಜರ್‌ಲೆಂಡ್) | ... | 754 |

ಅತಿ ದೊಡ್ಡ (ಘನಗಾತ್ರ) ಮೊದಲ ಹತ್ತು ಕಟ್ಟೆಗಳು (ಘನಗಾತ್ರ ಘನಗಜಗಳಲ್ಲಿವೆ)

| | | |
|---|---|---|
| ತಾರಾಬೆಲ್ಲ (ಪಾಕಿಸ್ತಾನ್) | ... | 15,90,00,000 |
| ಫೋರ್ಟ್ ಪೆಕ್ (ಅಮೆರಿಕ) | ... | 12,56,28,000 |
| ಮಂಗ್ಲಾ (ಪಾಕಿಸ್ತಾನ) | ... | 10,83,00,000 |
| ಒವಾಹೆ (ಅಮೆರಿಕ) | ... | 9,20,00,000 |
| ದಕ್ಷಿಣ ಸಸ್ಕಾಚಿವಾನ್ (ಕೆನಡ) | ... | 8,63,00,000 |
| ಆರೋವಿಲ್ (ಅಮೆರಿಕ) | ... | 8,03,00,000 |
| ಸಾನ್ ಲೂಯಿಸ್ (ಅಮೆರಿಕ) | ... | 7,80,00,000 |
| ನ್ಯೂರೆಕ್ (ರಷ್ಯ) | ... | 7,59,00,000 |
| ನಾಗಾರ್ಜುನಸಾಗರ (ಭಾರತ) | ... | 7,36,00,000 |
| ಗ್ಯಾರಿಸನ್ (ಅಮೆರಿಕ) | ... | 6,65,00,000 |

ಭಾರತದ ಕೆಲವು ಪ್ರಮುಖ ಕಟ್ಟೆಗಳು (ಎತ್ತರ ಅಡಿಗಳಲ್ಲಿವೆ)

| | | |
|---|---|---|
| ಭಾಕ್ರ (ಪಂಜಾಬ್) | ... | 740 |
| ನಾಗಾರ್ಜುನಸಾಗರ (ಆಂಧ್ರ) | ... | 330 |
| ರೈಹ್ಯಾಂಡ್ (ಬಿಹಾರ) | ... | 271 |
| ಗಾಂಧಿ ಸಾಗರ (ಮಧ್ಯಪ್ರದೇಶ) | ... | 214 |
| ಮೆಟ್ಟೂರು (ತಮಿಳುನಾಡು) | ... | 214 |
| ಕೊಯ್ನ (ಮಹಾರಾಷ್ಟ್ರ) | ... | 207 |
| ಕೆಳಗಿನ ಭವಾನಿ (ತಮಿಳುನಾಡು) | ... | 204 |
| ಹೀರಾಕುಡ್ (ಒರಿಸ್ಸ) | ... | 200 |
| ಕೋನಾರ್ (ಬಿಹಾರ) | ... | 196 |
| ಭದ್ರಾ (ಮೈಸೂರು) | ... | 194 |
| ಕಪಿಲಾ (ಮೈಸೂರು) | ... | 190 |
| ಪೆರಿಯಾರ್ (ತಮಿಳುನಾಡು) | ... | 176 |
| ಘಟಪ್ರಭಾ (ಮೈಸೂರು) | ... | 168 |
| ತುಂಗಭದ್ರಾ (ಮೈಸೂರು) | ... | 162 |
| ಮೈಥಾನ್ (ಬಿಹಾರ್) | ... | 162 |
| ನಿಜಾಮಸಾಗರ (ಆಂಧ್ರ) | ... | 157 |
| ಮಯೂರಾಕ್ಷಿ (ಪಶ್ಚಿಮ ಬಂಗಾಳ) | ... | 155 |
| ವಾಣೀವಿಲಾಸಸಾಗರ (ಮೈಸೂರು) | ... | 142 |
| ಕೃಷ್ಣರಾಜಸಾಗರ (ಮೈಸೂರು) | ... | 134 |
| ಪಂಚೆಟ್ ಗುಡ್ಡ (ಬಿಹಾರ) | ... | 134 |
| ಮಲಪ್ರಭಾ (ಮೈಸೂರು) | ... | 127 |
| ರಾಣಾಪ್ರತಾಪಸಾಗರ (ರಾಜಾಸ್ಥಾನ) | ... | 123 |
| ನುಗು (ಮೈಸೂರು) | ... | 114 |
| ತಿಲೈಯ (ಬಿಹಾರ್) | ... | 112 |

(ಎಚ್‌.ಸಿ.ಕೆ.)

**ಕಠಿಣಚರ್ಮಿಗಳು :** ಅಕಶೇರುಕಗಳ ಗುಂಪಿನ ಸಂಧಿಪದಿಗಳ ವಂಶದ ಒಂದು ವರ್ಗ (ಕ್ರಸ್ಟೇಸಿಯ). ಏಡಿ, ನಳ್ಳಿ, ಸೀಗಡಿ, ಮುಂತಾದ ಪ್ರಾಣಿಗಳು ಈ ವರ್ಗಕ್ಕೆ ಸೇರುತ್ತವೆ. ಇವು ಹೆಚ್ಚಾಗಿ ಜಲವಾಸಿಗಳು. ಇವುಗಳ ದೇಹ ಇತರ ಸಂಧಿಪದಿಗಳಂತೆ ಶಿರ, ಎದೆ ಮತ್ತು ಉದರ ಎಂದು ಮೂರು ಭಾಗಗಳಾಗಿದ್ದರೂ, ಶಿರ ಮತ್ತು ಎದೆಯ ಭಾಗಗಳು ಬೆಳೆವಣಿಗೆಯಲ್ಲಿ ಕೂಡಿಕೊಂಡು ಒಂದೇ ಭಾಗವಾಗಿ ಕಾಣುತ್ತದೆ. ಇದನ್ನು ಸೆಫಲೊಥೊರ್ಯಾಕ್ಸ್ (ಶಿರೋವಕ್ಷ) ಎಂದು ಕರೆಯುತ್ತಾರೆ. ಪ್ರತಿ ಖಂಡಕ್ಕೂ ಊರ್ಧ್ವ ಭಾಗದಲ್ಲಿ ಇರಬೇಕಾದ ಟೆರ್ಗ ಎಂಬ ಬಾಹ್ಯ ಅಸ್ಥಿಪಂಜರದ ಭಾಗಗಳೆಲ್ಲವೂ ಕೂಡಿಕೊಂಡು ಕ್ಯಾರಪೇಸ್ ಎಂಬ ಒಂದು ಕವಚ ನಿರ್ಮಾಣವಾಗಿದೆ. ಇದು ಸೆಫಲೊಥೊರ್ಯಾಕ್ಸ್ ಭಾಗವನ್ನು ರಕ್ಷಿಸುತ್ತದೆ. ಖಂಡಭಾಗಗಳು ಕೂಡಿಕೊಂಡಿದ್ದರೂ ಪ್ರತಿ ಖಂಡದಿಂದ ಬೆಳೆಯುವ ಜೊತೆ ಉಪಾಂಗಗಳು ಬೇರೆಯಾಗಿಯೇ ಉಳಿದಿವೆ. ಈ ವರ್ಗದ ಪ್ರಾಣಿಗಳಲ್ಲಿ ಎರಡು ಜೊತೆ ಕುಡಿಮೀಸೆಗಳಿರುವುದು ವಿಶೇಷವಾದ ಲಕ್ಷಣ.

ಶಿರದ ಭಾಗದಲ್ಲಿ ಸಾಮಾನ್ಯವಾಗಿ ಚೆನ್ನಾಗಿ ರೂಪುಗೊಂಡ ಒಂದು ಜೊತೆ ಸಂಯುಕ್ತಾಕ್ಷಿಗಳಿವೆ. ಇವಕ್ಕೆ ಬೇಕಾದ ಹಾಗೆ ತಿರುಗಿಸಬಹುದಾದ ಒಂದೊಂದು ತೊಟ್ಟು ಇದೆ. ಶಿರದ ಭಾಗ ಐದು ಖಂಡ ಭಾಗಗಳಿಂದ ಕೂಡಿದೆ. ಇವನ್ನು ಪ್ರಬುದ್ಧಾವಸ್ಥೆಯಲ್ಲಿ ಪ್ರತ್ಯೇಕವಾಗಿ ಗುರುತಿಸುವುದು ಸಾಧ್ಯವಾಗದಿದ್ದರೂ ಅವುಗಳಲ್ಲಿರುವ ಐದು ಜೊತೆ ಉಪಾಂಗಗಳಿಂದ ಅವನ್ನು ಗುರುತಿಸಬಹುದು. ಎರಡು ಜೊತೆ ಕುಡಿ ಮೀಸೆಗಳು, ಒಂದು ಜೊತೆ ದವಡೆ, ಎರಡು ಜೊತೆ ದವಡೆ ಪಾದಗಳು ಇವೆ. ಇವಕ್ಕೆ ಕ್ರಮವಾಗಿ ಆಂಟೆನ್ಯೂಲ್, ಆಂಟೆನ, ಮ್ಯಾಂಡಿಬಲ್, ಮ್ಯಾಕ್ಸಿಲುಲೆ ಮತ್ತು ಮ್ಯಾಕ್ಸಿಲ ಎಂದು ಹೆಸರು. ಇವು ಮುಖ್ಯವಾಗಿ ಇಂದ್ರಿಯಾಂಗಗಳು ಮತ್ತು ಆಹಾರವನ್ನು ಅಗಿಯುವ ಅಂಗಗಳು ಆಗಿವೆ.

ಎದೆ ಮತ್ತು ಉದರಗಳನ್ನು ನಿರ್ದಿಷ್ಟವಾಗಿ ಪ್ರತ್ಯೇಕಿಸುವುದು ಸಾಧ್ಯವಿಲ್ಲ. ಈ ಹೆಸರುಗಳ ಉಪಯೋಗದಲ್ಲಿ ಅಸ್ಪಷ್ಟತೆ ಇದೆ. ಕಾಲುಗಳಿರುವ ಮತ್ತು ಕಾಲುಗಳಿಲ್ಲದ ಭಾಗಗಳನ್ನು ಅಥವಾ ಜನನರಂಧ್ರದ ಮುಂಭಾಗ ಮತ್ತು ಹಿಂಭಾಗಗಳನ್ನು ಸೂಚಿಸಲು ಈ ಹೆಸರುಗಳನ್ನು ಉಪಯೋಗಿಸಿದ್ದಾರೆ. ಆದರೆ ಅಭ್ಯಾಸದ ಅನುಕೂಲಕ್ಕಾಗಿ ಜನನರಂಧ್ರದ ಮುಂದಿರುವ ಭಾಗಗಳು ಎದೆಯ ಭಾಗವೆಂದೂ ಹಿಂದಿರುವುದು ಉದರಭಾಗವೆಂದೂ ಭಾವಿಸಿಕೊಳ್ಳಬಹುದು. ಅಂದರೆ ಜನನರಂಧ್ರವಿರುವ ಖಂಡವೇ ಎದೆಯ ಭಾಗದ ಕೊನೆಯ ಖಂಡವಾಗುತ್ತದೆ. ಪ್ರಭೇದಗಳಿಂದ ಪ್ರಭೇದಗಳಿಗೆ ಈ ಭಾಗದಲ್ಲಿನ ಖಂಡಗಳ ಸಂಖ್ಯೆಯಲ್ಲಿ ವ್ಯತ್ಯಾಸವಿದೆ.

ಸೆಫಲೊಥೊರ್ಯಾಕ್ಸಿನ ಊರ್ಧ್ವ ಭಾಗದಲ್ಲಿರುವ ಕ್ಯಾರಪೇಸ್ ಎಂಬ ದಪ್ಪ ಬಾಹ್ಯ ಅಸ್ಥಿಪಂಜರ ಈ ವರ್ಗದ ಪ್ರಾಣಿಗಳ ಪ್ರಮುಖ ಸಾಮಾನ್ಯ ಲಕ್ಷಣ. ಇದು ಊರ್ಧ್ವಭಾಗದಚರ್ಮದ ಮಡಿಕೆಯಿಂದ ಉದ್ಭವಿಸುತ್ತದೆ. ಮಾದರಿಯ (ಟಿಪಿಕಲ್) ಅವಸ್ಥೆಯಲ್ಲಿ ತಲೆ ಮತ್ತು ಎದೆಯ ಭಾಗಗಳನ್ನು ಪೂರ್ತಿ ಆವರಿಸಿರುತ್ತದೆ. ಕೆಲವದರಲ್ಲಿ ಇದು ಮೋಟಾಗಿದ್ದು ಎದೆಯ ಸ್ವಲ್ಪ ಭಾಗ ಬೆತ್ತಲೆಯಾಗಿರಬಹುದು. ಇನ್ನು ಕೆಲವದರಲ್ಲಿ ಇದು ಸಂಪೂರ್ಣ ನಶಿಸಿಹೋಗಿರುವುದೂ ಉಂಟು. ಅನೊಸ್ಟ್ರೇಕ ಮತ್ತು ಕೋಪಿಪೋಡಗಳಲ್ಲಿ ಬಹುಶಃ ಇಲ್ಲದೆಯೇ ಇರಬಹುದು. ರಚನೆಯಲ್ಲಿ ಚಪ್ಪಟೆ ಹಾಗೂ ಅಗಲವಾದ ಗುರಾಣಿಯಂತಿರಬಹುದು ಅಥವಾ ಆಸ್ಟ್ರಕೋಡದಲ್ಲಿರುವಂತೆ ದ್ವಿಭಾಗಿಯಾಗಿ ಊರ್ಧ್ವಭಾಗದಲ್ಲಿ ಚಿಲಕವೂ (ಹಿಂಜ್) ಇರಬಹುದು; ಸಿರ್ರಿಪೀಡಿಯದಲ್ಲಿ ಇದು ಪೂರ್ಣ ಪ್ರಾಣಿಯನ್ನೇ ಆವರಿಸುವ ಚಿಪ್ಪಾಗಿದೆ. ಇದು ಆವರಿಸಿರುವ ಕೋಣೆಯನ್ನು ಕಿವಿರುಕೋಣೆ, ಮ್ಯಾಂಟಲ್ ಕುಹರ ಮುಂತಾದ ಅನೇಕ ಹೆಸರುಗಳಿಂದ ಕರೆಯುತ್ತಾರೆ. ಈ ಭಾಗ ಬೆಳೆಯುತ್ತಿರುವ ಮರಿಗಳಿಗೆ ರಕ್ಷಣೆಯನ್ನು ಒದಗಿಸಬಹುದೆಂದು ಹೇಳುತ್ತಾರೆ. ತಲೆಯ ಭಾಗದ ಟೆರ್ಗಗಳೆಲ್ಲ ಕೂಡಿ ಊರ್ಧ್ವ ಫಲಕವಾಗಿದೆ. ಊರ್ಧ್ವಫಲಕ ಮುಂಭಾಗದಲ್ಲಿ ಮೊನಚಾದ ರಾಸ್ಟ್ರಂ ಆಗಿ ಚಾಚಿಕೊಂಡಿದೆ.

ತಲೆಯ ಹಿಂದಿನ ತುದಿಯ ಊರ್ಧ್ವ ಭಾಗದಲ್ಲಿ ಊರ್ಧ್ವಾಂಗ ಎಂಬ ಒಂದು ರಚನೆ ಇದೆ. ಇದನ್ನು ಕತ್ತಿನ ಗ್ರಂಥಿ ಎಂದೂ ಕರೆಯುತ್ತಾರೆ. ಇದನ್ನು ಕೆಲವು ಕಠಿಣಚರ್ಮಿಗಳು (ಕ್ಲ್ಯಾಡೊಸೀರ ಮತ್ತು ಕಾಂಕೋಸ್ಟ್ರೇಕ) ಆಧಾರಗಳಿಗೆ ಅಂಟಿಕೊಳ್ಳಲು ಉಪಯೋಗಿಸುತ್ತವೆ. ಮಿಕ್ಕ ಪ್ರಾಣಿಗಳಲ್ಲಿ ಇದರ ಕಾರ್ಯ ಏನು ಎಂಬುದು ಇನ್ನೂ ಸರಿಯಾಗಿ ಗೊತ್ತಿಲ್ಲ.

ಉಪಾಂಗಗಳು : ಪ್ರತಿಯೊಂದು ಖಂಡದಲ್ಲೂ ಒಂದು ಜೊತೆ ಉಪಾಂಗಗಳಿವೆ. ಇವು ತಾವಿರುವ ಖಂಡ ಭಾಗ ಮತ್ತು ನಿರ್ವಹಿಸುವ ಕಾರ್ಯಗಳನ್ನನುಸರಿಸಿ ಮಾರ್ಪಟ್ಟಿವೆ. ಮೂಲತಃ ಉಪಾಂಗಗಳಲ್ಲಿ ಎರಡು ಕವಲುಗಳಿವೆ. ಆದ್ದರಿಂದ ಇವಕ್ಕೆ ಇಕ್ಕವಲು (ಬೈರೇಮಸ್) ಉಪಾಂಗಗಳೆಂದು ಹೆಸರು. ಒಂದು ಮಾದರಿಯ ಇಕ್ಕವಲು ಉಪಾಂಗದಲ್ಲಿ ಕೆಳಕಂಡ ಭಾಗಗಳಿವೆ: ಬುಡದಲ್ಲಿ ಪ್ರೊಟೊಪೊಡೈಟ್ ಎಂಬ ತೊಟ್ಟಿನಂಥ ರಚನೆಯಿದೆ. ಇದರ ಕೆಳಗೆ ಕಾಕ್ಸ ಮತ್ತು ತುದಿಯಲ್ಲಿ ಬೇಸಿಸ್ ಎಂಬ ಎರಡು ಅಂಗಗಳಿವೆ. ಪೋಡೊಮಿಯರ್ ಎಂಬುದರ ಸಹಾಯದಿಂದ ಉಪಾಂಗ ತನ್ನ ನಿರ್ದಿಷ್ಟ ಖಂಡಕ್ಕೆ ಅಂಟಿಕೊಂಡಿದೆ. ಬೇಸಿಸ್ ತನ್ನ ಬಿಡಿಯಾದ ತುದಿಯಲ್ಲಿ ಎರಡು ಎಲೆಯಂತೆ ಅಗಲವಾದ ಕವಲುಗಳನ್ನು ಹೊಂದಿದೆ. ಈ ಕವಲುಗಳಿಗೆ ಅವು ದೇಹದ ಒಳಭಾಗದ ಕಡೆಗಿವೆಯೋ ಅಥವಾ ಹೊರಭಾಗದ ಕಡೆಗಿವೆಯೋ ಎಂಬುದನ್ನನುಸರಿಸಿ ಕ್ರಮವಾಗಿ ಎಂಡೊಪೊಡೈಟ್ ಮತ್ತು ಎಕ್ಸೊಪೊಡೈಟ್ ಎಂಬ ಹೆಸರಿವೆ. ಈ ಉಪಾಂಗಗಳು ಎಲೆಯಂತೆ ಅಗಲವಾಗಿದ್ದರೆ ಅವನ್ನು ಫಿಲ್ಲೊಪೋಡಿಯಂ ಎಂದೂ ಉದ್ದವಾಗಿ ಕಡ್ಡಿಕಡ್ಡಿಗಳಂತೆ ಇದ್ದರೆ ಸ್ಟೆನೊಪೋಡಿಯಂ ಎಂದೂ ಕರೆಯುವರು.

ಕಠಿಣಚರ್ಮಿಗಳಲ್ಲಿ ಉಪಾಂಗಗಳ ಆಕಾರ, ರಚನೆ ಮತ್ತು ನಿರ್ವಹಿಸುವ ಕೆಲಸ ಇವುಗಳಲ್ಲಿ ಹೆಚ್ಚಿನ ವೈವಿಧ್ಯತೆ ಇದೆ. ಇದನ್ನು ಅರ್ಥಮಾಡಿಕೊಳ್ಳಲು ಸೀಗಡಿಯ ಉಪಾಂಗಗಳನ್ನು ಉದಾಹರಣೆಯಾಗಿ ಅಭ್ಯಾಸಮಾಡಿದರೆ ಸುಲಭವಾಗಬಹುದು. ಸೀಗಡಿ ಕಡಲು ಮತ್ತು ಸಿಹಿನೀರಿನ ನದಿಗಳಲ್ಲಿ ದೊರಕುತ್ತದೆ. ಇದರ ದೇಹದಲ್ಲಿ ಸೆಫಲೊಥೊರ್ಯಾಕ್ಸ್ ಮತ್ತು ಉದರಭಾಗಗಳಿವೆ. ಸೆಫಲೊಥೊರ್ಯಾಕ್ಸ್, ಶಿರ ಮತ್ತು ಎದೆಯ ಭಾಗಗಳು ಕೂಡಿಕೊಂಡು ಉಂಟಾಗಿದೆ. ಈ ಭಾಗದ ಖಂಡವಿಂಗಡಣೆ ಸುಲಭವಾಗಿ ಕಾಣುವುದಿಲ್ಲ. ಆದರೆ ಉದರಭಾಗದಲ್ಲಿ

ಆರು ಖಂಡಗಳನ್ನು ಸುಲಭವಾಗಿ ಗುರುತಿಸಬಹುದು. ಇವು ಬಿಡಿ ಬಿಡಿಯಾಗಿವೆ. ಶಿರದ ಭಾಗದಲ್ಲಿ ಐದು ಜೊತೆ, ಎದೆಯ ಭಾಗದಲ್ಲಿ ಎಂಟು ಜೊತೆ ಮತ್ತು ಉದರ ಭಾಗದಲ್ಲಿ ಆರು ಜೊತೆ, ಒಟ್ಟು ಹತ್ತೊಂಬತ್ತು ಜೊತೆ ಉಪಾಂಗಗಳಿವೆ. ಉಪಾಂಗಗಳನ್ನು ಖಂಡಗಳಿಗನುಸಾರವಾಗಿ ಕೆಳಗೆ ಕ್ರಮವಾಗಿ ವಿವರಿಸಿದೆ :

1 ಆಂಟೆನ್ಯೂಲ್ : ಇದರ ತೊಟ್ಟಿನ ಭಾಗದಲ್ಲಿ ಪ್ರೀಕಾಕ್ಸ, ಕಾಕ್ಸ ಮತ್ತು ಬೇಸಿಸ್ ಎಂದು ಮೂರು ಭಾಗಗಳಿವೆ. ಬೇಸಿಸ್ ತನ್ನ ಮುಂದಿನ ತುದಿಯಲ್ಲಿ ಬಹುಖಂಡವುಳ್ಳ, ತೆಳ್ಳಗೆ ಉದ್ದವಾದ ಕುಡಿಮೀಸೆಗಳನ್ನು ಹೊಂದಿದೆ. ಇವು ಸ್ಪರ್ಶಾಂಗಗಳು.

2 ಆಂಟೆನ : ಪ್ರೊಟೊಪೊಡೈಟ್ ಭಾಗ ತುಂಬ ಚಿಕ್ಕದು. ಒಂದು ಕವಲು ಅಗಲವಾಗಿ ಕಿವಿಯ ಆಲೆಯಂತೆ ಹರಡಿದೆ. ಇನ್ನೊಂದು ತುಂಬ ಉದ್ದವಾದ ಬಹುಖಂಡವುಳ್ಳ ಕುಡಿಮೀಸೆಯಾಗಿದೆ. ಇದೂ ಕೂಡ ಸ್ಪರ್ಶಾಂಗವೇ. ಆಹಾರ ಮತ್ತು ತನ್ನ ಪರಿಸರವನ್ನು ಪರೀಕ್ಷಿಸುವ ಘ್ರಾಣೇಂದ್ರಿಯವೂ ಹೌದು.

3 ಮ್ಯಾಂಡಿಬಲ್ : ಕವಲುಗಳು ಕ್ಷೀಣವಾಗಿವೆ. ಬುಡದ ಪ್ರೊಟೊಪೊಡೈಟ್ ಬಲಯುತವಾಗಿ ಗದೆಯಾಕಾರದ ಮತ್ತು ಬಾಚಿಯಾಕಾರದ ರಚನೆಯಾಗಿದೆ. ಇದರ ಮೇಲೆ ದಂತಿಕಗಳಿದ್ದು (ಡೆಂಟಿಕಲ್) ಅವು ಆಹಾರವನ್ನು ಅಗಿಯಲು ಸಹಕರಿಸುತ್ತವೆ. ದವಡೆಗಳು ಬಲವಾಗಿವೆ.

4 ಮ್ಯಾಕ್ಸಿಲುಲೆ : ಇದು ಒಂದು ದವಡೆಪಾದ. ಇದರಲ್ಲಿ ಬಾಯಿಯ ಬಳಿಗೆ ನೀರು ಬರುವಂತೆ ಪ್ರವಾಹವನ್ನು ಉಂಟುಮಾಡುವ ಲೋಮಾಂಗಗಳಿವೆ. ಆದ್ದರಿಂದ ಇದು ಆಹಾರವನ್ನು ಬಾಯಿಯೆಡೆಗೆ ತರಲು ಸಹಕರಿಸುತ್ತದೆ.

5 ಮ್ಯಾಕ್ಸಿಲ : ಇದೂ ಕೂಡ ದವಡೆಪಾದ. ಆಹಾರವನ್ನು ಬಾಯ ಬಳಿಗೆ ತರುವಲ್ಲಿ ಸಹಕರಿಸುತ್ತದೆ.

6, 7, 8—ಮಾಕ್ಸಿಲ್ಲಿಪೀಡ್ : ಇವುಗಳಲ್ಲಿ ಎಕ್ಸೊಪೊಡೈಟ್‌ಗಳು ಕ್ರಮೇಣ ಕ್ಷೀಣವಾಗಿ ಹೋಗುತ್ತವೆ. ಇವುಗಳ ಮೇಲೆ ಶ್ವಾಸಾಂಗವಾದ ಎಪಿಪೊಡೈಟುಗಳಿವೆ. ಇವು ಭ್ರಣೇಂದ್ರಿಯಗಳಾಗಿಯೂ ಸ್ಪರ್ಶಾಂಗಗಳಾಗಿಯೂ ಕೆಲಸ ಮಾಡುತ್ತವೆಯಲ್ಲದೆ ಆಹಾರವನ್ನು ಹಿಡಿದು ಪ್ರಾಣಿಗೆ ಒದಗಿಸುವುದರಲ್ಲಿ ಸಹಾಯ ಮಾಡುತ್ತವೆ.

| | | |
|---|---|---|
| 9 | ಮೊದಲನೆಯ | ನಡೆಪಾದಗಳು : |
| 10 | ಎರಡನೆಯ | |
| 11 | ಮೂರನೆಯ | |
| 12 | ನಾಲ್ಕನೆಯ | |
| 13 | ಐದನೆಯ | |

ನಡಿಗೆಗೆ ಸಹಕಾರಿಯಾದ ಇವುಗಳಲ್ಲಿ ಎಕ್ಸೊಪೊಡೈಟ್ ಸಂಪೂರ್ಣವಾಗಿ ಮರೆಯಾಗಿದೆ. ಎಂಡೊಪೊಡೈಟಿನ ಖಂಡಗಳು ಉದ್ದವಾಗಿ ಬೆಳೆದು ಕಾಲುಗಳಾಗಿವೆ. ಮೊದಲನೆಯ ಎರಡು ಜೊತೆಯಲ್ಲಿ ತುದಿಯಲ್ಲಿ ಇಕ್ಕಳದ ರೀತಿಯ ರಚನೆಗಳಿವೆ. ಇವು ಆಹಾರವನ್ನು ಹಿಡಿಯಲು ಸಹಕರಿಸುತ್ತವೆ. ಒಂದೊಂದರ ಮೇಲೂ ಕಿವಿರುಗಳಿವೆ.

14 ಮೊದಲನೆಯ ಈಜುಪಾದ : ಗಂಡಿನಲ್ಲಿ ಇಕ್ಕವಲು ರಚನೆ. ಆದರೆ ಎಕ್ಸೊಪೊಡೈಟ್ ಮತ್ತು ಎಂಡೊಪೊಡೈಟ್‌ಗಳು ಕೂಡಿಕೊಂಡು ಸಂಭೋಗಕ್ರಿಯೆಗೆ ಸಹಕಾರಿಯಾಗಿವೆ. ಆದರೆ ಹೆಣ್ಣಿನಲ್ಲಿ ಇವು ನಶಿಸಿಹೋಗಿ ಹೆಸರಿಗೆ ಮಾತ್ರ ಇವೆ.

15 ಎರಡನೆಯ ಈಜುಪಾದ : ಇದೂ ಇಕ್ಕವಲು ರಚನೆ. ಗಂಡಿನಲ್ಲಿ ಸಂಭೋಗಕ್ಕೆ ಸಹಕಾರಿಯಾಗಿದೆ. ಹೆಣ್ಣಿನಲ್ಲಿ ಚಿಕ್ಕದು ಮತ್ತು ಉಪಯೋಗವಿಲ್ಲದ್ದು.

16 ಮೂರನೆಯ ಈಜುಪಾದ : ಕಿವಿರು ಕೋಣೆಯಲ್ಲಿ ಸದಾ ಹೊಸ ನೀರು ಇರುವಂತೆ ಪ್ರವಾಹವನ್ನು ಉಂಟುಮಾಡುತ್ತದೆ. ಹೆಣ್ಣಿನಲ್ಲಿ ಮೊಟ್ಟೆಗಳು ಅಂಟಿಕೊಳ್ಳಲು ಸಹಕಾರಿಯಾಗಿದೆ.

17–18 ಈಜುಪಾದಗಳು ಮೂರನೆಯದರಂತೆಯೇ ಇವೆ.

19 ಬಾಲಪಾದ : ಚಿಮ್ಮಿ ಹಿಂದಕ್ಕೆ ಈಜಲು ಸಹಕರಿಸುತ್ತದೆ.

ಪ್ರಬುದ್ಧಾವಸ್ಥೆಯಲ್ಲಿ ರಚನೆ ಮತ್ತು ಕಾರ್ಯಗಳಲ್ಲಿ ಭಿನ್ನತೆಗಳನ್ನು ಪ್ರದರ್ಶಿಸಿದರೂ ಇವು ಬೆಳೆವಣಿಗೆಯಿಂದ ಸಾದೃಶಾಂಗಗಳು. ಲಾಬ್‌ಸ್ಟರ್ ಮತ್ತು ಏಡಿಗಳಲ್ಲಿ ಮೊದಲನೆಯ ನಡೆಪಾದದ ತುದಿಯ ಇಕ್ಕಳಗಳು ದೊಡ್ಡವಾಗಿ ಬೆಳೆದು, ರಕ್ಷಣೆ ಮತ್ತು ಆಕ್ರಮಣದಲ್ಲಿ ಸಹಕಾರಿಯಾಗಿವೆ. ಒಂದು ಜಾತಿಯ ಏಡಿಯಲ್ಲಿ ಈ ನಡೆಪಾದಗಳು ಚಾಚಿಕೊಂಡಾಗ ಹನ್ನೆರಡು ಅಡಿ ಉದ್ದ ಇರುತ್ತವೆ. ಪಿಟೀಲು ಏಡಿಯಲ್ಲಿ ಈ ಕಾಲುಗಳು ಒಂದಕ್ಕೊಂದು ತಾಕಿದಾಗ ಒಂದು ರೀತಿಯ ನಾದ ಮೂಡುತ್ತದೆ. ಒಂದು ಜಾತಿಯ ಕಡಲುಏಡಿಯಲ್ಲಿ ಹೆಣ್ಣನ್ನು ಆಕರ್ಷಿಸುವ ಸಲುವಾಗಿ ಗಂಡಿನಲ್ಲಿ ಒಂದು ನಡೆಪಾದ ವಿಶೇಷವಾಗಿ ಬೆಳೆದಿದೆ. ಹೀಗೆ ಪ್ರಾಣಿಯ ಜೀವನಕ್ರಮ, ಅದು ವಾಸಿಸುವ ಸ್ಥಳ, ಆಹಾರ ಗಳಿಕೆಯ ಕ್ರಮಗಳನ್ನನುಸರಿಸಿ ಅಂಗಗಳು ವೈವಿಧ್ಯಮಯವಾಗಿ ಮಾರ್ಪಟ್ಟಿರುವುದನ್ನು ಈ ವರ್ಗದಲ್ಲಿ ಕಾಣಬಹುದು. ಕೆಲವು ಉಪಾಂಗಗಳು ಕೆಲವು ಪ್ರಾಣಿಗಳಲ್ಲಿ ಕಳೆದುಹೋಗಬಹುದು.

ಇವೇ ಅಲ್ಲದೆ ಕೆಲವು ಪ್ರಾಣಿಗಳಲ್ಲಿ ಆನುಷಂಗಿಕ ಉಪಾಂಗಗಳಿವೆ (ಅಕ್ಸೆಸರಿ, ಅಪೆಂಡೇಜೆಸ್). ಬಾಯಿಯ ಮುಂದಿನ ಮೇಲುತುಟಿ (ಲೇಬ್ರಂ) ಮತ್ತು ಮ್ಯಾಂಡಿಬಲ್‌ಗಳ ಹಿಂದಿನ ಕೆಳತುಟಿ (ಮೆಟಸ್ಟೋಮ್) ಮುಂತಾದುವು ಆನುಷಂಗಿಕ ಉಪಾಂಗಗಳಲ್ಲಿ ಮುಖ್ಯವಾದುವು. ಆಕಸ್ಮಿಕವಾಗಿ ಕಳೆದುಹೋದ ಅಥವಾ ಊನವಾದ ಉಪಾಂಗಗಳನ್ನು ಮುಂದಿನ ಪೊರೆ ಬಿಡುವಿಕೆಯ ಕಾಲದಲ್ಲಿ ಪುನರುತ್ಪಾದಿಸಿಕೊಳ್ಳುವ ಶಕ್ತಿಯೂ ಊನವಾಗಿ ಗಾಯವಾದ ಮತ್ತು ಶತ್ರುಗಳು ಹಿಡಿದ ಉಪಾಂಗಗಳನ್ನು ಕಳಚಿಕೊಂಡು ರಕ್ಷಿಸಿಕೊಳ್ಳುವ ಕ್ರಮವೂ ಕಠಿಣಚರ್ಮಿಗಳ ವಿಶಿಷ್ಟ ಲಕ್ಷಣ.

ಒಳ ಅಸ್ಥಿಪಂಜರ : ಹೊರ ಕ್ಯೂಟಿಕಲ್ ಒಳಕ್ಕೆ ಚಾಚಿಕೊಂಡು ಅಪೊಡಿಮ್‌ಗಳೆಂಬ ಒಳ ಅಸ್ಥಿಪಂಜರ ಆಗಿದೆ. ಇದು ಸ್ನಾಯುಗಳು ಅಂಟಿಕೊಳ್ಳಲು ಸಹಕಾರಿಯಾಗಿದೆ. ಇವು ಕೆಲವೊಮ್ಮೆ ಕೂಡಿಕೊಂಡು ಎಂಡೊಫ್ರಾಗ್ಮಲ್ ಅಸ್ಥಿಪಂಜರ ಮತ್ತು ಎಂಡೊಸ್ಟರ್ನೈಟ್ ಎಂಬ ಚೌಕಟ್ಟುಗಳಾಗಿ ರೂಪುಗೊಳ್ಳಬಹುದು.

ನರಮಂಡಲ : ಕಠಿಣಚರ್ಮಿಗಳ ನರಮಂಡಲ ಸಂಧಿಪದಿಗಳಲ್ಲಿನ ನರಮಂಡಲ ವಿಕಾಸದ ವಿವಿಧ ರೂಪಗಳನ್ನು ಪ್ರದರ್ಶಿಸುತ್ತದೆ. ಮಾದರಿಯ (ಆದರ್ಶ) ಸಂಧಿಪದಿ ಅವಸ್ಥೆಯಿಂದ ತೀವ್ರ ಸಂಕೀರ್ಣತೆಯ ರೂಪದ ವರೆಗೂ ಮಾರ್ಪಟ್ಟಿರಬಹುದು. ಬಹಳ ಪ್ರಾಚೀನವಾದ ಮತ್ತು ಹಿಂದುಳಿದ ರಚನೆಯನ್ನು ಬ್ರಾಂಕಿಯೊಪೋಡದಲ್ಲಿ ಕಾಣಬಹುದು. ಇದರಲ್ಲಿ ಬಾಯಿಯ ಹಿಂಭಾಗದಲ್ಲಿ ಕುಡಿಮೀಸೆಯ ನರಗ್ರಂಥಿಗಳು ಇವೆ. ಇದರ ಹಿಂದೆ ಪ್ರತಿ ಖಂಡಕ್ಕೂ ಒಂದೊಂದು ಜೊತೆ ನರಗ್ರಂಥಿಗಳುಂಟು. ವೆಂಟ್ರಲ್ ನರಹುರಿಗಳು ಬೇರೆ ಬೇರೆಯಾಗಿದ್ದು ಅಲ್ಲಲ್ಲಿ ಅವುಗಳ ನಡುವೆ ನರ ಸಂಬಂಧಗಳಿರುವುದರಿಂದ ಏಣಿಯಂತೆ ಕಾಣುತ್ತದೆ. ಮೆಲಕಾಸ್ಟ್ರೇಕ ಗಣದ ಕೆಳದರ್ಜೆಯ ಜೀವಿಗಳಲ್ಲಿ ಕುಡಿಮೀಸೆಯ ನರಗ್ರಂಥಿಗಳು ಮಿದುಳಿನೊಂದಿಗೆ ಸೇರಿಹೋಗಿವೆ. ಮತ್ತು ವೆಂಟ್ರಲ್ ನರಹುರಿಗಳು ಹತ್ತಿರ ಹತ್ತಿರವಾಗಿವೆ. ಇತರ ಕಠಿಣಚರ್ಮಿಗಳಲ್ಲಿ ವೆಂಟ್ರಲ್ ನರಹುರಿಗಳು ತುಂಬ ಮಾರ್ಪಟ್ಟಿವೆ. ಗಂಟಲು ಕೆಳಗಿನ ನರಗ್ರಂಥಿಗಳು ವದನಾಂಗಗಳ ಖಂಡಗಳಿಗಾಗಿ ರೂಪುಗೊಂಡು, ಏಡಿಗಳಲ್ಲಿ ಒಂದು ವೆಂಟ್ರಲ್ ನರಗ್ರಂಥಿಗಳ ಗುಂಫನ ಏರ್ಪಟ್ಟಿದೆ. ರೈಜೊಕಿಫಾಲದಲ್ಲಿ ಇರುವ ಒಂದೇ ಒಂದು ನರಗ್ರಂಥಿಯಿಂದ ಎಲ್ಲೆಡೆಗೂ ನರಗಳು ಹೊರಡುತ್ತವೆ. ಮುಂದುವರಿದ ಕಠಿಣ ಚರ್ಮಿಗಳಲ್ಲಿ ಗಂಟಲಿನ ಮೇಲೆ ಮಿದುಳು, ಕೆಳಗೆ ಸಬ್‌ಇಸಾಫಿಜಿಯಲ್ ನರಗ್ರಂಥಿಗಳು ಮತ್ತು ಗಂಟಲಿನ ಸುತ್ತಲು ಇವನ್ನು ಬಂಧಿಸುವ ನರಗಳೂ ಇದ್ದು ಇದರ ಹಿಂಭಾಗದಲ್ಲಿ ಕೊನೆಯ ಖಂಡದ ವರೆಗೂ ಹರಡಿರುವ ಜೋಡಿ ವೆಂಟ್ರಲ್ ನರಹುರಿಗಳು ಇವೆ. ಅಲ್ಲದೆ ಅನುವೇದನಾ (ಸಿಂಪತೆಟಿಕ್) ನರ ಮಂಡಲವೂ ಇದೆ.

ಜ್ಞಾನೇಂದ್ರಿಯಗಳು : ಸ್ವತಂತ್ರ ಜೀವನ ನಡೆಸುವ ಕಠಿಣಚರ್ಮಿಗಳಲ್ಲಿ ಜ್ಞಾನೇಂದ್ರಿಯಗಳು ಚೆನ್ನಾಗಿ ರೂಪುಗೊಂಡಿವೆ. ಮುಖ್ಯವಾದುವು ಎರಡು ರೀತಿಯ ಕಣ್ಣುಗಳು. ಸಂಯುಕ್ತಾಕ್ಷಿಗಳು ಮತ್ತು ಮಧ್ಯಾಕ್ಷಿಗಳು. ಕೋಪಿಪೋಡ ಮತ್ತು ಪ್ರಬುದ್ಧ ಸಿರ್ರಿಪೀಡಿಯಗಳನ್ನು ಬಿಟ್ಟರೆ ಮಿಕ್ಕೆಲ್ಲವುಗಳಲ್ಲಿಯೂ ಒಂದೊಂದು ಜೊತೆ ಸಂಯುಕ್ತಾಕ್ಷಿಗಳಿವೆ. ಈ ಕಣ್ಣುಗಳಿಗೆ ತೊಟ್ಟುಗಳಿರಬಹುದು ಅಥವಾ ಇಲ್ಲದಿರಬಹುದು. ತೊಟ್ಟುಗಳಿರುವುದರಿಂದ ಇವೂ ಕೂಡ ಮಾರ್ಪಟ್ಟ ಉಪಾಂಗಗಳು ಎಂಬ ಭಾವನೆಗೆ ಎಡೆಕೊಟ್ಟಿವೆ. ಆದರೆ ಇವಕ್ಕೆ ಅನುವಾದ ಖಂಡ ಇಲ್ಲದಿರುವುದರಿಂದಲೂ ಬೆಳೆವಣಿಗೆಯ ಮೊದಲ ಹಂತಗಳಲ್ಲಿ ತೊಟ್ಟುಗಳು ಇಲ್ಲದಿರುವುರಿಂದಲೂ ಈ ಭಾವನೆಗೆ ಅಂಗೀಕಾರ ದೊರಕಿಲ್ಲ. ಮಧ್ಯಾಕ್ಷಿ ಸಾಮಾನ್ಯವಾಗಿ ನಾಪ್ಲಿಯಸ್ ಡಿಂಭದಲ್ಲಿ ಮಾತ್ರ ಇದೆ. ಇದು ಬಹುಪಾಲು ಪ್ರಬುದ್ಧ ಪ್ರಾಣಿಗಳಲ್ಲಿಯೂ ಉಳಿಯಬಹುದು. ಇದರಲ್ಲಿ ವರ್ಣದ್ರವ್ಯದ ಮೂರು ಬಟ್ಟಲುಗಳಿವೆ; ಮಧ್ಯದಲ್ಲಿ ಒಂದು, ಅಕ್ಕಪಕ್ಕಗಳಲ್ಲಿ ಎರಡು. ಪ್ರತಿಯೊಂದು ಬಟ್ಟಲೂ ರೆಟಿನಲ್ (ಅಕ್ಷಿಪಟಲದ) ಜೀವಕೋಶಗಳಿಂದ ತುಂಬಿದೆ. ಈ ಜೀವಕೋಶಗಳ ಹೊರತುದಿಗಳು ನರತಂತುಗಳಾಗಿ ಮುಂದುವರಿದಿವೆ. ಆದ್ದರಿಂದ ಕಶೇರುಕಗಳಲ್ಲಿರುವಂತೆಯೇ ಇಲ್ಲಿಯೂ ಇಂದ್ರಿಯ ಜೀವಕೋಶಗಳು ತಲೆಕೆಳಗಾಗಿವೆ. ಕೆಲವೊಮ್ಮೆ ಒಂದೊಂದು ಬಟ್ಟಲಿಗೂ ಒಂದೊಂದು ಮಸೂರವಿರುತ್ತದೆ. ಕೆಲವು ಕೋಪಿಪೋಡಗಳಲ್ಲಿ ಪಕ್ಕದ ಬಟ್ಟಲುಗಳೆರಡೂ ನಡುವಿನದರಿಂದ ಪ್ರತ್ಯೇಕವಾಗಿ ಪಾರ್ಶ್ವದ ಅಕ್ಷಿಗಳಾಗುತ್ತವೆ. ದೇಹದ ಮೇಲೆಲ್ಲ ಹರಡಿರುವ ಮುಳ್ಳುಗಳು ಇತರ ಜ್ಞಾನಾನುಭವಗಳ ಗ್ರಹಣೆಗೆ ಸಹಕರಿಸುತ್ತವೆ. ಅವುಗಳ ಜೀವರಸದಲ್ಲಿ ನರತಂತುಗಳಿರುತ್ತವೆ. ಈ ಮುಳ್ಳುಗಳಲ್ಲಿ ಬಹುಪಾಲು ಅನೇಕ ರೀತಿಯಲ್ಲಿ ಕವಲೊಡೆದಿರುತ್ತವೆ. ಡೆಕಪೊಡ ಮತ್ತು ಸಿಂಕಾರಿಡಿಯ ಗುಂಪಿನ ಪ್ರಾಣಿಗಳಲ್ಲಿ ಆಂಟೆನ್ಯೂಲಿನ ಬುಡದಲ್ಲಿ ಮತ್ತು ಮೈಸಿಡೀ ಗುಂಪಿನವುಗಳಲ್ಲಿ

ಉದರಭಾಗದ ಆರನೆಯ ಉಪಾಂಗದ ಎಂಡೊಪೊಡೈಟ್ ಮೇಲೆ ಸ್ಟ್ಯಾಟೊಸಿಸ್ಟು ಗಳೆಂಬ ಕುಳಿಗಳಿವೆ. ಈ ಕುಳಿಯ ಭಿತ್ತಿಯಲ್ಲಿ ನವುರಾದ ರೋಮಗಳೂ ಅದರ ಒಳಗೆ ಮರಳಿನ ಕಣಗಳೂ ಇವೆ. ಸ್ಟ್ಯಾಟೊಸಿಸ್ಟುಗಳು ಸಮತೋಲನದ ಜ್ಞಾನೇಂದ್ರಿಯಗಳು. ಅನೇಕ ಆಂಟೆನ್ಯೂಲ್ ಮತ್ತು ಆಂಟೆನಗಳ ಮೇಲೆ ಈಸ್ತಟ್ಯಾಸ್ಕ್ಸ್ ಎಂಬ ಘ್ರಾಣೇಂದ್ರಿಯ ರೋಮಗಳಿವೆ. ಅಲ್ಲದೆ ಅನೇಕ ಕಠಿಣಚರ್ಮಿಗಳ ಶಿರದ ಮುಂತುದಿಯಲ್ಲಿ ಹಣೆಯಅಂಗ (ಫ್ರಾಂಟಲ್ ಆರ್ಗನ್) ಎಂಬೊಂದು ರಚನೆ ಇದೆ. ಇದೂ ಕೂಡ ಜ್ಞಾನೇಂದ್ರಿಯ.

ವರ್ಣ ವಿನ್ಯಾಸ : ಕಠಿಣಚರ್ಮಿಗಳಿಗೆ ಒಂದಿಲ್ಲೊಂದು ರೀತಿಯ ಬಣ್ಣ ಉಂಟು. ಕೆಂಪು, ಕಿತ್ತಳೆ, ನೇರಳೆ, ಹಸಿರು, ನೀಲಿ, ಕಂದು, ಕಪ್ಪು ಮುಂತಾದ ಬಣ್ಣಗಳಿರುತ್ತವೆ. ಒಂದೇ ಪ್ರಭೇದದಲ್ಲಿ ಎಲ್ಲ ಬಣ್ಣಗಳೂ ಇಲ್ಲದಿರಬಹುದು. ಇವುಗಳಲ್ಲಿ ಹೆಚ್ಚು ಬಣ್ಣಗಳು ಲಿಪೊಕ್ರೋಮ್ ಎಂಬ ವಸ್ತುವಿನಿಂದಾದವು. ಕಂದು ಮತ್ತು ಕಪ್ಪು ಬಣ್ಣಗಳು ಮೆಲಾನಿನನಿಂದಾದವು. ಇವುಗಳಲ್ಲಿ ಬಹುಪಾಲು ಕವಲೊಡೆದ ಜೀವಕೋಶಗಳಲ್ಲಿರುತ್ತವೆ (ಕ್ರೊಮ್ಯಾಟೊಫೋರ್). ಆದರೆ ನೀಲಿ ಮತ್ತು ಬಹುಶಃ ಕೆಲವು ಇತರ ಬಣ್ಣಗಳು ಅಂಗಾಂಶಗಳಲ್ಲಿ ಕರಗಿ ಹರಡಿರಬಹುದು. ಈ ಕ್ರೊಮ್ಯಾಟೊಫೋರುಗಳು ಎಪಿಡರ್ಮಲ್ ಪದರದಲ್ಲಿ, ಡರ್ಮಿಸ್‌ನಲ್ಲಿ ಅಥವಾ ಒಳಗಿನ ಅಂಗಗಳ ಸಂಯೋಜಕ ಅಂಗಾಂಶಗಳಲ್ಲಿ ಇರಬಹುದು. ಈ ಬಣ್ಣ ಕವಲುಗಳಿಗೆ ಹರಿಯುವುದರಿಂದ ಅಥವಾ ಅವುಗಳಿಂದ ವಾಪಸ್ಸು ಚಲಿಸುವುದರಿಂದ ವರ್ಣಕೋಶಗಳು ಸಂಕುಚಿಸುವ ಅಥವಾ ಹಿಗ್ಗುವ ಕ್ರಿಯೆಯನ್ನು ತೋರುತ್ತವೆ. ಈ ಕ್ರಿಯೆಗೆ ಬೆಳಕು ಮತ್ತು ಬೆಳಕಿನ ತೀವ್ರತೆ ಪ್ರಚೋದಕವಾಗಿ ವರ್ತಿಸುತ್ತವೆ. ಅಲ್ಲದೆ ಹಿನ್ನೆಲೆಯೂ ಪ್ರತಿಕ್ರಿಯೆಗೆ ಕಾರಣವಾಗಬಹುದು. ಅತಿ ತೀವ್ರವಾದ ಬೆಳಕಿನಲ್ಲಿ ಅಥವಾ ಬೆಳಕನ್ನು ಹೀರುವ ಹಿನ್ನೆಲೆಯಲ್ಲಿ ಈ ವರ್ಣಕೋಶಗಳು ವಿಸ್ತರಿಸುತ್ತವೆ. ಕಡಿಮೆ ತೀವ್ರತೆಯ ಬೆಳಕಿನಲ್ಲಿ ಅಥವಾ ಬೆಳಕನ್ನು ಹರಡುವ ಹಿನ್ನೆಲೆಯಲ್ಲಿ ಅವು ಸಂಕುಚಿತವಾಗುತ್ತವೆ. ಆದರೆ ಈ ಪ್ರಚೋದನ ಕ್ರಮದಲ್ಲಿ ಕಣ್ಣುಗಳು ನೇರವಾಗಿ ಭಾಗವಹಿಸುವುದಿಲ್ಲ. ಬೆಳಕಿನ ಪ್ರಚೋದನೆ ಕೆಲವು ಅಂತ ಸ್ರಾವಕ ಗ್ರಂಥಿಗಳ ಮೇಲೆ ಪರಿಣಾಮ ಬೀರಿ ಅವು ಹಾರ್ಮೋನುಗಳನ್ನು ಉತ್ಪತ್ತಿ ಮಾಡುವಂತೆ ಮಾಡಿ, ಇದರಿಂದ ಮುಂದಿನ ಪ್ರತಿಕ್ರಿಯೆ ನಡೆಯುತ್ತದೆ.

ಅನ್ನನಾಳ : ಸಾಮಾನ್ಯವಾಗಿ ಇದು ನೇರವಾದ ಒಂದು ನಾಳ. ಇದರಲ್ಲಿ ಮುನ್ನಾಳ, ನಡುನಾಳ ಮತ್ತು ಹಿನ್ನಾಳಗಳೆಂಬ ಮೂರು ಭಾಗಗಳಿವೆ. ಮುನ್ನಾಳ ಮತ್ತು ಹಿನ್ನಾಳಗಳು (ಸ್ಟೊಮೋಡಿಯಂ ಮತ್ತು ಪ್ರೊಕ್ಟೋಡಿಯಂ) ಎಪಿಡರ್ಮಿಸಿನಿಂದ ಉದ್ಭವಿಸಿದ ಭಾಗಗಳು. ಇವಕ್ಕೆ ಕ್ಯೂಟಿಕಲಿನ ಅನುಲೇಪನವಿದೆ. ಮುನ್ನಾಳದ ಸ್ನಾಯುಗಳು ಬಲಯುತವಾಗಿದ್ದು ಕೆಲವೊಮ್ಮೆ ಹಲ್ಲು ಅಥವಾ ಮುಳ್ಳುಗಳನ್ನು ಬೆಳೆಸಿಕೊಂಡಿವೆ. ಮೆಲಕಾಸ್ಟ್ರೇಕ ಗುಂಪಿನ ಪ್ರಾಣಿಗಳಲ್ಲಿ ಈ ಅಂಶಗಳು ಸೇರಿ ಬಹಳ ಜಟಿಲವಾದ ಪ್ರೊವೆಂಟ್ರಿಕ್ಯುಲಸ್ (ಜಠರ) ಆಗಿದೆ. ಇದರಲ್ಲಿ ಜಠರ "ಯಂತ್ರ"ವೂ (ಮಿಲ್) ಆಹಾರದ ರಸಗಳಿಂದ ಕಣಗಳನ್ನು ಶೋಧಿಸುವ, ಮುಳ್ಳುಗಳಿಂದಾದ ಒಂದು ಶೋಧಕಾಂಗವೂ ಇವೆ. ಈ "ಯಂತ್ರ" ಮತ್ತು ಶೋಧಕಾಂಗಗಳು ಪ್ರತ್ಯೇಕವಾದ ಕಾರ್ಡಿಯಾಕ್ ಮತ್ತು ಪೈಲಾರಿಕ್ ಕೋಣೆಗಳಲ್ಲಿವೆ. ನಡುನಾಳದ ಮುಂದಿನ ತುದಿಯಲ್ಲಿ ಒಂದು ಅಥವಾ ಹೆಚ್ಚು ಜೊತೆ ಅಪಸರಣಾಂಗಗಳು (ಹೆಪ್ಯಾಟಿಕ್ ಸೀಕೆ) ಇವೆ. ಇವು ಸ್ರಾವ ಮತ್ತು ಹೀರುವ ಕಾರ್ಯಗಳಲ್ಲಿ ಸಹಕರಿಸುತ್ತವೆ. ಕೆಲವೊಮ್ಮೆ ಇವು ಕವಲೊಡೆದು ಪಿತ್ತಜನಕಾಂಗವೂ ಆಗಬಹುದು. ಕಶೇರುಕುಗಳ ಪಿತ್ತಜನಕಾಂಗಕ್ಕೆ ವ್ಯತಿರಿಕ್ತವಾಗಿ ಇದು ಜೀರ್ಣಿಸಲು ಬೇಕಾದ ಎಲ್ಲ ಎಂಜೈಮುಗಳನ್ನು ಉತ್ಪತ್ತಿ ಮಾಡುತ್ತದೆಯಲ್ಲದೆ ಜೀರ್ಣವಾದ ಆಹಾರವನ್ನೂ ಹೀರಿಕೊಳ್ಳುತ್ತದೆ. ಹೆಚ್ಚಿನ ಪೋಷಕಾಂಶಗಳನ್ನು ಗ್ಲೈಕೊಜೆನ್ ಅಥವಾ ಕೊಬ್ಬಿನ ರೂಪದಲ್ಲಿ ಶೇಖರಿಸಿಡುವುದರಲ್ಲೂ ಇದು ಸಹಕಾರಿ. ಕೆಲವು ಜೀವಿಗಳಲ್ಲಿ ಹಿನ್ನಾಳ ಇಲ್ಲ. ನಡುನಾಳ ಬೇರಾವ ಸಂಬಂಧವನ್ನೂ ಕಲ್ಪಿಸದೆ ಪಶ್ಚಾತ್ತನೆ ಕೊನೆಯಾಗುತ್ತದೆ. ರೈಜೊಕೆಫಾಲ ಮತ್ತು ಕೆಲವು ಕೋಪಿಪೋಡಗಳಲ್ಲಿ ಅನ್ನನಾಳ ಇಡೀ ಜೀವಿತ ಕಾಲದಲ್ಲಿ ಇರುವುದಿಲ್ಲ. ಇವು ಪರತಂತ್ರ ಜೀವನ ಕಾಲದಲ್ಲಿ, ಪೂರ್ತಿ ಜೀವಮಾನಕ್ಕೆ ಸಾಕಾಗುವಷ್ಟು ಆಹಾರವನ್ನು ಚರ್ಮದ ಮೂಲಕ ಹೀರಿಕೊಳ್ಳುತ್ತವೆ.

ವಿಸರ್ಜನೆ : ಆಂಟೆನಲ್ ಮತ್ತು ಮ್ಯಾಕ್ಸಿಲರಿ ಗ್ರಂಥಿಗಳೆಂಬ ಎರಡು ಜೊತೆ ಮುಖ್ಯ ಶುದ್ಧೀಕರಣಾಂಗಗಳಿವೆ. ಇವು ಅವುಗಳ ಹೆಸರು ಸೂಚಿಸುವಂತೆ ಆಯಾ ಉಪಾಂಗದ ಬುಡದಲ್ಲಿ ಹೊರಕ್ಕೆ ತೆರೆಯುತ್ತವೆ. ಸಾಮಾನ್ಯವಾಗಿ ಬೆಳವಣಿಗೆಯಲ್ಲಿ ಇವು ಒಂದಾದ ಮೇಲೊಂದರಂತೆ ಕಾಣಿಸಿಕೊಳ್ಳುತ್ತವೆ. ಎರಡೂ ಗ್ರಂಥಿಗಳು ಏಕಕಾಲದಲ್ಲಿಯೆ ಕಾರ್ಯನಿರ್ವಹಿಸುವುದು ಬಹಳ ಅಪೂರ್ವ. ಬ್ರಾಂಕಿಯೊಪೊಡದಲ್ಲಿ ಆಂಟೆನಲ್ ಗ್ರಂಥಿ ಡಿಂಭದ ಶುದ್ಧೀಕರಣಾಂಗ, ಮ್ಯಾಕ್ಸಿಲರಿ ಗ್ರಂಥಿ ವಯಸ್ಕ ಪ್ರಾಣಿಯ ಶುದ್ಧೀಕರಣಾಂಗ. ಆದರೆ ಡೆಕಪೊಡದಲ್ಲಿ ಆಂಟೆನಲ್ ಗ್ರಂಥಿಯೇ ವಯಸ್ಕ ಪ್ರಾಣಿಯ ಶುದ್ಧೀಕರಣಾಂಗ. ಪ್ರತಿಯೊಂದು ಗ್ರಂಥಿಯಲ್ಲಿಯೂ ಒಂದು ತುದಿಯ ಕೋಶ ಮತ್ತು ಒಂದು ನಾಳವಿದೆ. ಈ ನಾಳ ತುದಿಯ ಕೋಶದಿಂದ ಹೊರಟು ಹೊರಕ್ಕೆ ತೆರೆಯುತ್ತದೆ. ತುದಿಯ ಕೋಶ ಮತ್ತು ನಾಳಗಳು ಸಂಧಿಸುವಲ್ಲಿ ಒಂದು ವಲಯ (ಸ್ಫಿಂಕ್ಟರ್) ಸ್ನಾಯುವಿದೆ. ಡೆಕಪೊಡಗಳ ಆಂಟೆನಲ್ ಗ್ರಂಥಿಗಳು ಬಲು ಜಟಿಲವಾಗಿವೆ.

ಉಸಿರಾಟ : ಪುಟ್ಟ ದೇಹವುಳ್ಳ ಕಠಿಣಚರ್ಮಿಗಳು, ಅದರಲ್ಲಿಯೂ ಕೋಪಿಪಾಡ್‌ಗಳು ದೇಹದ ಹೊರಮೈ ಮೂಲಕ ಉಸಿರಾಡುತ್ತವೆ. ಆದರೆ ದಪ್ಪ ಅಸ್ಥಿಪಂಜರವುಳ್ಳ ಪ್ರಾಣಿಗಳಲ್ಲಿ ಉಸಿರಾಟಕ್ಕೆ ಪ್ರತ್ಯೇಕವಾದ ಅಂಗಗಳಿವೆ. ಕ್ಯಾರಪೇಸಿನ ಒಳಚರ್ಮವೇ ಉಸಿರಾಟಕ್ಕೆ ಅನುವಾಗಬಹುದು. ಕೆಲವು ಮೆಲಕಾಸ್ಟ್ರೇಕಗಳಲ್ಲಿ ಉಪಾಂಗಗಳ ಪ್ರೊಟೊಪೊಡೈಟುಗಳ ಮೇಲೆ ಬೆಳೆಯುವ ಪ್ರವರ್ಧಗಳು ಮತ್ತು ಮಡಿಕೆ ಮಡಿಕೆಯಾಗಿರುವ ಅಥವಾ ಕವಲೊಡೆದ ಕಿವಿರುಗಳು ಇವೆ. ಅವು ಬೆಳೆಯುವ ಸ್ಥಳವನ್ನನುಸರಿಸಿ ಕಿವಿರುಗಳನ್ನು ವಿಂಗಡಿಸಿದ್ದಾರೆ: 1 ಆರ್ತೊಬ್ರ್ಯಾಂಕ್: ಇವು ಹೊರ ಅಸ್ಥಿಪಂಜರವನ್ನು ದೇಹಕ್ಕೆ ಅಂಟಿಸುವ ಆರ್ತ್ರಾಯಿಡಲ್ ಪಟಲಕ್ಕೆ ಅಂಟಿಕೊಂಡಿವೆ. 2 ಪೋಡೋಬ್ರ್ಯಾಂಕ್ : ಇವು ಉಪಾಂಗಗಳ ಬುಡಕ್ಕೆ ಅಂಟಿಕೊಂಡಿವೆ. 3 ಪ್ಲೂರೊಬ್ರ್ಯಾಂಕ್ : ಮೇಲಿನ ಹೊರ ಅಸ್ಥಿಪಂಜರದ ಫಲಕ ಕೆಳಗಿನ ಫಲಕವನ್ನು ದಾಟಿ ಪಕ್ಕದಲ್ಲಿ ಚಾಚಿ ಪ್ಲೂರಾನ್ ಎಂಬೊಂದು ಅವಕಾಶವನ್ನು ರಚಿಸುತ್ತದೆ. ಕಿವಿರುಗಳು ಆ ಜಾಗದಲ್ಲಿ ಬೆಳೆಯುತ್ತವೆ. ಕಿವಿರುಗಳಿರುವ ಭಾಗಕ್ಕೆ ಸದಾ ಹೊಸನೀರಿನ ಪೂರೈಕೆ ಆಗುವಂತೆ ನೀರಿನ ಪ್ರವಾಹವನ್ನುಂಟುಮಾಡಲು ಕೆಲವು ಉಪಾಂಗಗಳು ಸಹಕರಿಸುತ್ತವೆ. ನೆಲದ ಮೇಲೆ ವಾಸಿಸುವ ಕಠಿಣಚರ್ಮಿಗಳಲ್ಲಿ ಗಾಳಿಯಲ್ಲಿ ಉಸಿರಾಡಲು ವಿಶೇಷ ಅಂಗಗಳಿಲ್ಲ. ಕಿವಿರುಕೋಣೆಯ ಗೋಡೆ ರಕ್ತನಾಳಗಳಿಂದ ಆವೃತವಾಗಿ ಶ್ವಾಸಕೋಶದಂಥ ರಚನೆ ರೂಪುಗೊಂಡಿದೆ.

ರಕ್ತಪರಿಚಲನೆ : ರಕ್ತಪರಿಚಲನೆಯ ಕ್ರಮದಲ್ಲೂ ಒಂದು ರೀತಿಯ ವಿಕಾಸವನ್ನು ಕಾಣಬಹುದು. ಕೆಲವು ಕಠಿಣಚರ್ಮಿಗಳಲ್ಲಿ ನಳಿಕೆಯಾಕಾರದ ಕೊಳವೆಯೊಂದು ಅನ್ನನಾಳದ ಮೇಲೆ ಹರಡಿದೆ. ಇದರ ಮುಂದಿನ ತುದಿಯಲ್ಲಿ ಒಂದು ಅಯೋರ್ಟ ಇದೆ. ಆದರೆ ಸರಿಯಾಗಿ ರೂಪುಗೊಂಡ ರಕ್ತನಾಳಗಳಿಲ್ಲ. ದೇಹದ ಅಂಗಾಂಶಗಳ ನಡುವೆ ಇರುವ ಬಿರುಕುಗಳಲ್ಲಿ ರಕ್ತ ಹರಿಯುತ್ತದೆ. ಈ ಬಿರುಕುಗಳನ್ನು ಹಿಮೋಸೀಲ್ ಎಂದು ಕರೆಯುತ್ತಾರೆ. ಇವುಗಳ ರಕ್ತಕ್ಕೆ ಬಣ್ಣವಿಲ್ಲ. ಬಹುತೇಕ ಪ್ರಾಣಿಗಳ ರಕ್ತದಲ್ಲಿ ಬಿಳಿಯ ರಕ್ತಕಣಗಳಿವೆ. ಮೆಲಕಾಸ್ಟ್ರೇಕ ಗುಂಪಿನ ಪ್ರಾಣಿಗಳ ರಕ್ತದಲ್ಲಿ ಹಿಮೋಸಯಾನಿನ್ ಎಂಬ ದ್ರವ್ಯವಿದೆ. ಕೆಲವು ಪ್ರಾಣಿಗಳಲ್ಲಿ ಹಿಮೋಗ್ಲಾಬಿನ್ ಕೂಡ ಇದೆ.

ಜನನೇಂದ್ರಿಯಗಳು : ಕೆಲವು ಪ್ರಾಣಿಗಳ ವಿನಹ (ತೊಟ್ಟಿಲ್ಲದ ಸಿರ್ರಿಪೀಡಿಯ, ಕೆಲವು ಐಸೊಪಾಡ್‌ಗಳು ಇತ್ಯಾದಿ,) ಮಿಕ್ಕೆಲ್ಲವೂ ಭಿನ್ನ ಲಿಂಗಿಗಳು. ಬ್ರಾಂಕಿಯೊಪೊಡ ಮತ್ತು ಆಸ್ಟ್ರಕೋಡಗಳಲ್ಲಿ ಪಿತೃರಹಿತ ಸಂತಾನಕ್ರಿಯೆ (ಪಾರ್ಥನೋಜೆನಿಸಿಸ್) ನಡೆಯುತ್ತದೆ. ಸಾಮಾನ್ಯವಾಗಿ ಗಂಡು ಹೆಣ್ಣಿಗಿಂತ ಚಿಕ್ಕದು. ಸಂಭೋಗ ಕಾಲದಲ್ಲಿ ಹೆಣ್ಣನ್ನು ತಬ್ಬಿ ಹಿಡಿಯಲು ಮತ್ತು ರೇತ್ರಾಣುಗಳನ್ನು ವರ್ಗಾಯಿಸಲು ಮಾರ್ಪಟ್ಟ ಉಪಾಂಗಗಳಿವೆ. ಜನನೇಂದ್ರಿಯಗಳು ಸಾಮಾನ್ಯವಾಗಿ ಟೊಳ್ಳಾದ ಅಂಗಗಳು. ಇವುಗಳಿಂದ ಹೊರಟ ನಾಳಗಳು ನೇರವಾಗಿ ಹೊರಕ್ಕೆ ತೆರೆಯುತ್ತವೆ.

ಜೀವನ ಚರಿತ್ರೆ : ಜೀವನ ಚರಿತ್ರೆ ನೇರವಾದುದಲ್ಲ. ಬೆಳವಣಿಗೆಯಲ್ಲಿ ಸಾಮಾನ್ಯವಾಗಿ ಅನೇಕ ಡಿಂಭಾವಸ್ಥೆಗಳು ಕಾಣಿಸಿಕೊಳ್ಳುತ್ತವೆ. ಸಾಮಾನ್ಯವಾಗಿ ಮೊಟ್ಟೆಯಿಂದ ನಾಪ್ಲಿಯಸ್ ಎಂಬ ಮೊಟ್ಟೆಯಾಕಾರದ ಡಿಂಭ ಹೊರಬರುತ್ತದೆ. ಮುಂದಿನ ತುದಿ ತುಂಬ ಅಗಲ. ಖಂಡ ವಿಂಗಡಣೆ ಇಲ್ಲ. ಮೂರು ಜೊತೆ ಉಪಾಂಗಗಳಿವೆ ; ಒಕ್ಕವಲಿನ ಆಂಟೆನ್ಯೂಲ್‌ಗಳು, ಇಕ್ಕವಲಿನ ಆಂಟೆನಗಳು ಹಾಗೂ ಮ್ಯಾಂಡಿಬಲ್‌ಗಳು, ಮಧ್ಯದ ಅಕ್ಷಿ ಇರುತ್ತವೆ. ಒಂದು ದೊಡ್ಡ ಲೇಬ್ರಂ ಇದೆ. ಅನ್ನನಾಳದಲ್ಲಿ ಮೂರು ಭಾಗಗಳನ್ನು ಗುರುತಿಸಬಹುದು. ಆಂಟೆನಲ್ ಗ್ರಂಥಿಗಳು ಇರಬಹುದು. ಕಠಿಣಚರ್ಮಿಗಳ ಪ್ರತಿಯೊಂದು ಗುಂಪಿನಲ್ಲಿಯೂ ಈ ಡಿಂಭಾವಸ್ಥೆ ಉಂಟು. ಕೆಲವು ಪ್ರಾಣಿಗಳ ಜೀವನ ಚರಿತ್ರೆಯಲ್ಲಿ ಈ ಡಿಂಭಾವಸ್ಥೆಯೂ ಭ್ರೂಣಾವಸ್ಥೆಯಲ್ಲಿ ಕಳೆದು ಮೆಟನಾಪ್ಲಿಯಸ್ ಅಥವಾ ಜ಼ೋಯಿಯ ಅವಸ್ಥೆ ಅಥವಾ ಪ್ರಬುದ್ಧಾವಸ್ಥೆಯ ಪ್ರಾಣಿಗಳೇ ಮೊಟ್ಟೆಗಳಿಂದ ಹೊರಬರಬಹುದು. ನಾಪ್ಲಿಯಸ್ ಡಿಂಭ ಪೊರೆ ಬಿಟ್ಟು ಪ್ರೊಟೊಜ಼ೋಯಿಯ ಆಗಿ ಬೆಳೆಯುತ್ತದೆ ಇದರಲ್ಲಿ ನಾಪ್ಲಿಯಸಿಗಿಂತಲೂ ಮೂರು ಜೊತೆ ಉಪಾಂಗಗಳು ಹೆಚ್ಚಾಗಿರುತ್ತವೆ ಮತ್ತು ಮೂರರಿಂದ ಎಂಟರವರೆಗಿನ ಖಂಡಗಳ ಅಂಕುರ ಕಾಣಿಸಿಕೊಳ್ಳುತ್ತದೆ. ಇದು ಜ಼ೋಯಿಯ ಆಗಿ ಬೆಳೆಯುತ್ತದೆ. ಈ ಡಿಂಭಾವಸ್ಥೆಯಲ್ಲಿ ಸೆಫಲೊಥೊರ್ಯಾಕ್ಸ್ ಮತ್ತು ಉದರಗಳು ನಿರ್ದಿಷ್ಟವಾಗಿ ರೂಪುಗೊಂಡಿರುತ್ತವೆ. ಒಂದರಿಂದ ಎಂಟು ಜೊತೆಗಳವರೆಗೆ ಉಪಾಂಗಗಳಿರುತ್ತವೆ. ಹಾಗೂ ಇನ್ನೂ ಆರು ಜೊತೆ

ಬೆಳೆಯುತ್ತಿರುತ್ತವೆ, ಇದರ ಶಿರಸ್ಸಿನ ಭಾಗದಲ್ಲಿ ಮುಳ್ಳಿರುವುದು ಈ ಡಿಂಭದ ಮುಖ್ಯ ಲಕ್ಷಣ. ಜ಼ೊಯಿಯ ಡಿಂಭವು ಹೆಚ್ಚು ಕಡಿಮೆ ಪ್ರಬುದ್ಧ ಸೈಕ್ಲಾಪ್ಸನ್ನೇ ಹೋಲುತ್ತದೆ. ಜ಼ೊಯಿಯ ಪೊರೆ ಕಳಚಿ ಪ್ರಬುದ್ಧ ಮೈಸಿಸ್ ಪ್ರಾಣಿಯನ್ನು ಹೋಲುವ ಮೈಸಿಸ್ ಅವಸ್ಥೆಯನ್ನು ತಲುಪುತ್ತದೆ. ಇದರ ಸೆಫಲೊಥೊರ್‍ಯಾಕ್ಸಿನಲ್ಲಿ ಎಂಟು ಜೊತೆ ಉಪಾಂಗಗಳಿದ್ದು ಒಂದೊಂದು ಉಪಾಂಗವೂ ತನ್ನ ನಿರ್ದಿಷ್ಟ ಕ್ರಿಯೆಯನ್ನು ನಿರ್ವಹಿಸಲು ತಕ್ಕಂತೆ ಮಾರ್ಪಟ್ಟಿರುತ್ತದೆ. ಸೀಗಡಿಗಳಲ್ಲಿ ಮೈಸಿಸ್ ಡಿಂಭ ನೇರವಾಗಿ ಪ್ರಬುದ್ಧ ಪ್ರಾಣಿಯಾಗಿ ಬೆಳೆಯುತ್ತದೆ.

ಆದ್ದರಿಂದ ಸೀಗಡಿಯು ತನ್ನ ವಿಕಾಸಕ್ಕೆ ಕಾರಣವಾದ ಪ್ರಾಣಿಗಳನ್ನು ತನ್ನ ಡಿಂಭಾವಸ್ಥೆಯ ವಿವಿಧಹಂತಗಳಲ್ಲಿ ನೆನೆಸಿಕೊಳ್ಳುತ್ತದೆ ಎಂದು ಪ್ರಾಣಿಶಾಸ್ತ್ರಜ್ಞರು ಭಾವಿಸುತ್ತಾರೆ. ಲಾಬ್‌ಸ್ಟರ್ ಪ್ರಾಣಿಯ ಜೀವನಚರಿತ್ರೆಯಲ್ಲಿ ಮೈಸಿಸ್ ಅವಸ್ಥೆಯೊಂದರ ವಿನಹ ಮಿಕ್ಕ ಡಿಂಭಾವಸ್ಥೆಗಳಾವುವೂ ಇಲ್ಲ. ಆದರೆ ಏಡಿಗಳ ಬೆಳವಣಿಗೆಯಲ್ಲಿ ಮೈಸಿಸ್ ಬದಲು ಮೆಗಲೋಪ ಎಂಬೊಂದು ಡಿಂಭಾವಸ್ಥೆ ಇದೆ. ಇದರಲ್ಲಿ ಸೆಫಲೊಥೊರ್‍ಯಾಕ್ಸ್ ಭಾಗ ಪೂರ್ಣವಾಗಿ ರೂಪುಗೊಂಡಿದ್ದು ಕೇವಲ ಉದರ ಭಾಗ ಮಾತ್ರ ಅಪೂರ್ಣವಾಗಿರುತ್ತದೆ.

ಕೆಲವು ಸಾರಿ ನಾನಾ ರೀತಿಯ ಜೀವನಗಳಿಗೆ ಕಠಿಣಚರ್ಮಿಗಳು ಹೊಂದಿಕೊಂಡು ಅವುಗಳ ದೇಹ ಮಾರ್ಪಡುವುದರಿಂದ ಪ್ರಬುದ್ಧಾವಸ್ಥೆಯಲ್ಲಿ ಅವನ್ನು ಗುರುತಿಸುವುದು ಕಷ್ಟವಾಗುತ್ತದೆ. ಉದಾಹರಣೆಗೆ, ಲಿಪಾಸ್, ಬಾರ್ನ್‌ಕಲ್ ಮತ್ತು ಸ್ಯಾಕ್ಯುಲೈನಗಳು. ಲಿಪಾಸ್ ಮತ್ತು ಬಾರ್ನ್‌ಕಲ್‌ಗಳಲ್ಲಿ ದೇಹ ತುಂಬ ಕ್ಷೀಣವಾಗಿ ತಮ್ಮ ರಕ್ಷಣೆಗೆ ಹೊರಚಿಪ್ಪುಗಳನ್ನು ಬೆಳೆಸಿಕೊಂಡಿವೆ. ಮೊದಲು ನೋಡುವವರಿಗೆ ತಟ್ಟನೆ ಅವು ಮೃದ್ವಂಗಿಗಳ ವಂಶಕ್ಕೆ ಸೇರಿದ ಪ್ರಾಣಿಗಳಿರಬಹುದೆಂದು ತೋರುತ್ತದೆ. ಹಾಗೆಯೇ ಸ್ಯಾಕ್ಯುಲೈನದ ಪರತಂತ್ರ ಜೀವನದಿಂದಾಗಿ, ಅದರ ಅಂಗಾಂಗಗಳೆಲ್ಲವೂ ನಶಿಸಿ ಹೋಗಿ, ಅದು ಕೇವಲ ಮೊಟ್ಟೆಗಳನ್ನು ಉತ್ಪತ್ತಿ ಮಾಡುವ ಚೀಲದಂತೆ ಕಾಣುತ್ತದೆ. ಇವುಗಳ ಜೀವನ ಚರಿತ್ರೆಯನ್ನು ಅಭ್ಯಾಸ ಮಾಡಿದಾಗ ಮಾತ್ರ ವಿಶಿಷ್ಟವಾದ ಡಿಂಭಾವಸ್ಥೆಗಳನ್ನು ಕಂಡುಹಿಡಿದು ಇವು ಕಠಿಣಚರ್ಮಿಗಳ ವರ್ಗಕ್ಕೆ ಸೇರಿದ ಪ್ರಾಣಿಗಳು ಎಂದು ಗುರುತಿಸಬಹುದು. ಆದುದರಿಂದ ಡಿಂಭಗಳು ಈ ವರ್ಗದ ಪ್ರಾಣಿಗಳ ವಿಶೇಷ ಲಕ್ಷಣ ಅಂದರೆ ಅತಿಶಯೋಕ್ತಿಯಾಗಲಾರದು.

ವರ್ಗೀಕರಣ : ಈ ವರ್ಗವನ್ನು ಅನೇಕ ಗುಣಗಳ ಆಧಾರದ ಮೇಲೆ ವರ್ಗೀಕರಿಸಿದ್ದಾರೆ. ಹಿಂದೆ ಇವನ್ನು ಮೆಲಕಾಸ್ಟ್ರೇಕ ಮತ್ತು ಎಂಟಮಾಸ್ಟ್ರೇಕ ಎಂದು ಎರಡು ಮುಖ್ಯ ಉಪವರ್ಗಗಳಾಗಿ ವರ್ಗೀಕರಿಸುತ್ತಿದ್ದರು. ಆದರೆ ಈಗ ಇವುಗಳ ಬಗ್ಗೆ ಹೆಚ್ಚು ವಿಷಯಗಳು ತಿಳಿದುಬಂದಂತೆ ಹಿಂದೆ ಒಂದು ಗಣವೆಂದು ಗುರುತಿಸಿದ್ದ ಕೆಲವು ಗುಂಪುಗಳಿಗೆ ಉಪವರ್ಗದ ಸ್ಥಾನವನ್ನು ಕೊಟ್ಟು, ಎಂಟಮಾಸ್ಟ್ರೇಕ ಉಪವರ್ಗವನ್ನು ಕೈಬಿಟ್ಟಿದ್ದಾರೆ.

ಉಪವರ್ಗ 1 : ಬ್ರ್ಯಾಂಕಿಯೊಪೋಡ : ಸ್ವತಂತ್ರ ಜೀವಿಗಳು. ಸಂಯುಕ್ತಾಕ್ಷಿಗಳಿವೆ. ಸಾಮಾನ್ಯವಾಗಿ ಕ್ಯಾರಪೇಸ್ ಇದೆ. ಕನಿಷ್ಠ ನಾಲ್ಕು ಜೊತೆ ಮುಂಡ ಭಾಗದ ಪಾದಗಳಾದರೂ ಇವೆ. ಕಠಿಣಚರ್ಮಿಗಳಲ್ಲಿಯೇ ಇವು ಬಹಳ ಕೆಳಮಟ್ಟದ ಪ್ರಾಣಿಗಳು.

ಗಣ 1. ಅನೊಸ್ಟ್ರೇಕ : ಕ್ಯಾರಪೇಸ್ ಇಲ್ಲ. ಕಣ್ಣುಗಳಿಗೆ ತೊಟ್ಟುಗಳಿವೆ. ಒಕ್ಕವಲು ಆಂಟೆನಗಳಿವೆ. ಅನೇಕ ಜೊತೆ ಒಂದೇ ರೀತಿಯ ಮುಂಡಪಾದಗಳಿವೆ. ಉದಾ : ಕೈರೊಸಿಫ್ಯಾಲಸ್, ಆರ್ಟೀಮಿಯ.

ಗಣ 2. ಲಿಪೊಸ್ಟ್ರೇಕ : ಈ ಗುಂಪಿನ ಪ್ರಾಣಿಗಳೆಲ್ಲ ಪಳೆಯುಳಿಕೆಗಳಾಗಿವೆ. ಉದಾ : ಲೆಪಿಡೊಕ್ಯಾರಿಸ್.

ಗಣ 3. ನೋಟೊಸ್ಟ್ರೇಕ : ಮುಂಡದ ಮೇಲೆ ಬಹಳ ಅಗಲವಾದ ಕ್ಯಾರಪೇಸ್ ಇದೆ : ತೊಟ್ಟಿಲ್ಲದ ಕಣ್ಣುಗಳು ಒಂದಕ್ಕೊಂದು ಬಹಳ ಹತ್ತಿರದಲ್ಲಿವೆ. ಅನೇಕ ಮುಂಡಪಾದಗಳಿವೆ. ಇವುಗಳಲ್ಲಿ ಮೊದಲನೆಯ ಜೊತೆ ಮಿಕ್ಕೆಲ್ಲವುಗಳಿಂದ ತುಂಬ ಭಿನ್ನ. ಉದಾ : ಏಪಸ್ ಮತ್ತು ಲೆಪಿಡ್ಯೂರಸ್.

ಗಣ 4. ಡಿಪ್ಲೊಸ್ಟ್ರೇಕ : ಮುಂಡ ಮತ್ತು ಪಾದಗಳನ್ನು ಮುಚ್ಚುವ ಅಡಕವಾದ ಕ್ಯಾರಪೇಸ್ ಇದೆ. ತೊಟ್ಟಿಲ್ಲದ ಕಣ್ಣುಗಳೂ ದೊಡ್ಡ ಇಕ್ಕವಲಿನ ಆಂಟೆನಗಳೂ 4 ರಿಂದ 27 ಜೊತೆ ಮುಂಡಪಾದಗಳೂ ಇವೆ. ಉದಾ : ಎಸ್ತೀರಿಯ, ಡ್ಯಾಫ್ನಿಯ.

ಉಪವರ್ಗ 2. ಆಸ್ಟ್ರಕೋಡ : ಸ್ವತಂತ್ರ ಜೀವಿಗಳು. ಸಂಯುಕ್ತಾಕ್ಷಿಗಳು ಇರಬಹುದು ಅಥವಾ ಇಲ್ಲದಿರಬಹುದು. ದ್ವಿಭಾಗಿಯಾದ ಮತ್ತು ಅಡಕ್ಟರ್ ಸ್ನಾಯುವುಳ್ಳ ಕ್ಯಾರಪೇಸ್ ಇದೆ. ಎರಡಕ್ಕಿಂತ ಹೆಚ್ಚು ಮುಂಡಪಾದಗಳಿಲ್ಲ. ಇವುಗಳಲ್ಲಿ ಪಿತೃರಹಿತಸಂತಾನೋತ್ಪತ್ತಿ ಬಹಳ ಸಾಮಾನ್ಯ. ಕೆಲವು ಜಾತಿ ಪ್ರಾಣಿಗಳಲ್ಲಿ ಇದುವರೆಗೂ ಗಂಡುಗಳೇ ಸಿಕ್ಕಿಲ್ಲ. ಉದಾ : ಸೈಪ್ರಿಸ್ ಮತ್ತು ಸೈಪ್ರಿಡಿನ.

ಉಪವರ್ಗ 3. ಕೋಪಿಪೋಡ : ಸ್ವತಂತ್ರಜೀವಿಗಳು ಅಥವಾ ಪರತಂತ್ರ ಜೀವಿಗಳು. ಸಂಯುಕ್ತಾಕ್ಷಿಗಳಾಗಲೀ ಕ್ಯಾರಪೇಸ್ ಆಗಲೀ ಇಲ್ಲ. ಸಾಮಾನ್ಯವಾಗಿ ಆರು ಜೊತೆ ಎದೆಯ ಉಪಾಂಗಗಳಿವೆ. ಇದರಲ್ಲಿ ಮೊದಲನೆಯದು ಒಕ್ಕವಲು. ಉದರ ಭಾಗದಲ್ಲಿ ಉಪಾಂಗಗಳಿಲ್ಲ. ದೇಹ ಬುಗುರಿಯಾಕಾರ, ಅಥವಾ ಗದೆಯಾಕಾರ. ಖಂಡವಿಂಗಡಣೆಯಿಲ್ಲದಿರಬಹುದು. ಖಂಡವಿಂಗಡಣೆ ಇರುವ ಪ್ರಾಣಿಗಳಲ್ಲಿ ಇರಬೇಕಾದ ಖಂಡ ಸಂಖ್ಯೆ ನಿರ್ದಿಷ್ಟ—16. ಉದಾ : ಸೈಕ್ಲಾಪ್ಸ್ (ಚಿತ್ರ 1.)



ಚಿತ್ರ 1 ಸೈಕ್ಲಾಪ್ಸ್

ಉಪವರ್ಗ 4. ಬ್ರ್ಯಾಂಕಿಯುೂರ : ತಾತ್ಕಾಲಿಕವಾಗಿ ಮೀನುಗಳಲ್ಲಿ ಪರತಂತ್ರ ಜೀವಿಗಳಾಗಿರುತ್ತವೆ. ಸಂಯುಕ್ತಾಕ್ಷಿಗಳು, ಹೀರುಬಾಯಿ ಇವೆ. ಉದರ ಭಾಗದಲ್ಲಿ ಖಂಡ ವಿಂಗಡಣೆಯಾಗಲೀ ಪಾದಗಳಾಗಲೀ ಇಲ್ಲ. ಎದೆಯ ಭಾಗದಲ್ಲಿ ನಾಲ್ಕು ಜೊತೆ ಇಕ್ಕವಲು ಪಾದಗಳಿವೆ. ಇವುಗಳ ಎಕ್ಸೊಪೊಡೈಟ್‌ಗಳು ತುದಿಯಲ್ಲಿ ಹರಡಿವೆ. ಈ ಉಪವರ್ಗದ ಪ್ರಾಣಿಗಳು ಮೇಲೆ ನೋಡಲು ಕೋಪಿಪೋಡಗಳನ್ನೇ ಹೋಲುತ್ತವೆ. ಇವನ್ನು ಸಾಮಾನ್ಯವಾಗಿ ಕಾರ್ಪ್ ಮೀನಿನ ಹೇನು ಎಂದು ಕರೆಯುತ್ತಾರೆ. ಉದಾ : ಆರ್ಗ್ಯುಲಸ್. (ಚಿತ್ರ 2)

ಉಪವರ್ಗ 5. ಸಿರ್ರಿಪೀಡಿಯ : ಇವು ಒಂದು ಜಾಗಕ್ಕೆ ಅಂಟಿಕೊಂಡು ಜೀವಿಸುತ್ತವೆ. ಬಹುತೇಕ ಉಭಯಲಿಂಗಿಗಳು. ಪ್ರಬುದ್ಧ ಪ್ರಾಣಿಯಲ್ಲಿ ಸಂಯುಕ್ತಾಕ್ಷಿಗಳಿಲ್ಲ. ಕ್ಯಾರಪೇಸ್ ಚಿಪ್ಪಿನಂತೆ ಪ್ರಾಣಿಯನ್ನು ಆವರಿಸುತ್ತದೆ. ಸಾಮಾನ್ಯವಾಗಿ ಆರು ಜೊತೆ ಇಕ್ಕವಲು ಎದೆಯ ಪಾದಗಳಿವೆ. ಇವನ್ನು ಪ್ರಬುದ್ಧಾವಸ್ಥೆಯಲ್ಲಿ ಕಠಿಣಚರ್ಮಿಗಳೆಂದು ಗುರುತಿಸುವುದು ಕಷ್ಟ.



ಚಿತ್ರ 2 ಆರ್ಗ್ಯುಲಸ್

ಗಣ 1. ಥೊರ್‍ಯಾಸಿಕ : ಅನ್ನನಾಳಗಳಿವೆ. ಆರು ಜೊತೆ ಎದೆಯ ಪಾದಗಳಿವೆ. ಉದರ ಭಾಗದಲ್ಲಿ ಖಂಡಗಳಿಲ್ಲ. ಇವು ಬಾಯಿಯ ಭಾಗದಿಂದ ಯಾವುದಾದರೂ ಆಧಾರಕ್ಕೆ ಸ್ಥಿರವಾಗಿ ಅಂಟಿಕೊಂಡಿರುತ್ತವೆ. ಉದಾ : ಲಿಪಾಸ್.

ಗಣ 2. ಅಕ್ರೊಥೊರ್‍ಯಾಸಿಕ : ಭಿನ್ನ ಲಿಂಗಿಗಳು. ಅನ್ನನಾಳವಿದೆ. ಆರಕ್ಕಿಂತಲೂ ಕಡಿಮೆ ಜೊತೆ ಎದೆಯ ಪಾದಗಳಿವೆ. ಉದರ ಭಾಗದಲ್ಲಿ ಖಂಡಗಳಿಲ್ಲ. ಉದಾ : ಆಲ್ಸಿಪ್ಪಿ.

ಗಣ 3. ಏಪೋಡ : ಉಭಯಲಿಂಗಿಗಳು. ಚಿಪ್ಪು, ಎದೆಯ ಪಾದ, ಗುದದ್ವಾರ,



ಚಿತ್ರ 3 ಏಡಿಯ ಕೆಳಭಾಗಕ್ಕೆ ಸ್ಯಾಕ್ಯುಲೈನ ಪ್ರಾಣಿ ಅಂಟಿರುವುದು

ಯಾವುವೂ ಇಲ್ಲ. ಮಡಿಕೆಗಳಿಂದ ದೇಹವು ಉಂಗುರಗಳಾಗಿ ವಿಭಾಗವಾಗಿದೆ. ಉದಾ : ಪ್ರೋಟಿಯೊಲಿಪಾಸ್.

ಗಣ 4 : ರೈಜೊಕಿಫಾಲ : ಡೆಕಪಾಡ್ ಕಠಿಣಚರ್ಮಿಗಳಲ್ಲಿ ಪರತಂತ್ರ ಜೀವಿಗಳಾಗಿ ವಾಸಿಸುತ್ತವೆ. ಅನ್ನನಾಳವಿಲ್ಲ. ಪ್ರಬುದ್ಧ ಪ್ರಾಣಿಯಲ್ಲಿ ಉಪಾಂಗಗಳಿಲ್ಲ. ಎಳೆಗಳಂಥ ಹೀರು ಬೇರುಗಳನ್ನು ಬೆಳೆಸಿಕೊಂಡು ಆಶ್ರಯದಾತ ಪ್ರಾಣಿಯ ದೇಹವನ್ನು ಆವರಿಸುತ್ತವೆ. ಉದಾ : ಸ್ಯಾಕ್ಯುಲೈನ (ಚಿತ್ರ 3)

ಗಣ 5. ಆಸ್ಕೊಥೊರ್ಯಾಸಿಕ : ಪರತಂತ್ರ ಜೀವಿಗಳು. ಅನ್ನನಾಳವಿದೆ. ಆರು ಜೊತೆ ಎದೆಯ ಪಾದಗಳಿವೆ. ಉದಾ : ಲಾರಾ.

ಉಪವರ್ಗ 6. ಮೆಲಕಾಸ್ಟ್ರೇಕ : ಸಾಮಾನ್ಯವಾಗಿ ತೊಟ್ಟಿರುವ ಸಂಯುಕ್ತಾಕ್ಷಿಗಳಿವೆ. ಎದೆಯಲ್ಲಿ ಎಂಟು ಖಂಡಗಳಿವೆ. ಅದನ್ನು ಕ್ಯಾರಪೇಸ್ ಮುಚ್ಚಿದೆ. ಆರು ಖಂಡಗಳಿರುವ (ಅಪರೂಪವಾಗಿ ಏಳಿರುವ) ಉದರ ಭಾಗವಿದೆ. ಎಲ್ಲ ಖಂಡಗಳಿಗೂ ಉಪಾಂಗಗಳಿವೆ. ಈ ಉಪವರ್ಗದಲ್ಲಿ ವೈವಿಧ್ಯತೆಯನ್ನು ತೋರುವ ಹೇರಳ ಸಂಖ್ಯೆಯ ಪ್ರಭೇದಗಳಿವೆ.

ಗಣ 1. ಲೆಪ್ಟೊಸ್ಟ್ರೇಕ : ಏಳು ಉದರ ಖಂಡಗಳಿವೆ. ಪಾದಗಳು ಫಿಲ್ಲೊಪೋಡಿಯಂ ಮಾದರಿಯವು. ಎದೆಯ ಯಾವ ಖಂಡಕ್ಕೂ ಕೂಡಿಕೊಳ್ಳದ ಕ್ಯಾರಪೇಸ್ ಇದೆ. ಉದಾ : ನೆಬೇಲಿಯ.

ಗಣ 2. ಹಾಪ್ಲೊಕ್ಯಾರಿಡ : ಮೂರು ಎದೆಯ ಖಂಡಗಳೊಂದಿಗೆ ಕೂಡಿದ ಕ್ಯಾರಪೇಸ್ ಇದೆ. ಉದಾ : ಸ್ಕ್ವಿಲ್ಲ. (ಚಿತ್ರ 4)



ಚಿತ್ರ 4 ಸ್ಕ್ವಿಲ್ಲ

ಗಣ 3. ಸಿನ್‌ಕ್ಯಾರಿಡ : ಕ್ಯಾರಪೇಸ್ ಇಲ್ಲ. ಉದಾ : ಅನಾಸ್ಪಿಡಿಸ್.

ಗಣ 4. ಪೆರಕ್ಯಾರಿಡ : ಕ್ಯಾರಪೇಸ್ ನಾಲ್ಕಕ್ಕಿಂತ ಹೆಚ್ಚಾಗಿ ಎದೆಯ ಖಂಡಗಳೊಂದಿಗೆ ಕೂಡಿಕೊಂಡಿಲ್ಲ. ಇದರ ಭಿನ್ನತೆಯೇ ಮುಂದಿನ ವರ್ಗೀಕರಣಕ್ಕೆ ಮೂಲ.

ಉಪಗಣ 1. ಮೈಸಿಡೇಸಿಯ : ಉದಾ : ಮೈಸಿಸ್.

ಉಪಗಣ 2. ಕ್ಯುಮೇಸಿಯ : ಉದಾ : ಡೈಯಾಸ್ಟೈಲಿಸ್.

ಉಪಗಣ 3. ಟ್ಯಾನಾಯ್ಡೇಸಿಯ: ಉದಾ : ಟ್ಯಾನಿಸ್

ಉಪಗಣ 4. ಐಸೊಪೋಡ : ಕ್ಯಾರಪೇಸ್ ಇಲ್ಲ. ದೇಹ ಕೆಳಗಿನಿಂದ ಪಕ್ಕಕ್ಕೆ ಚಪ್ಪಟೆಯಾಗಿದೆ. ಉದಾ: ಲಿಗಿಯ. ಚಿತ್ರ 5

ಉಪಗಣ 5. ಆಂಫಿಪೋಡ : ಕ್ಯಾರಪೇಸ್ ಇಲ್ಲ. ಪಕ್ಕದಿಂದ ಪಕ್ಕಕ್ಕೆ ದೇಹ ಚಪ್ಪಟೆಯಾಗಿದೆ. ಉದಾ : ಕ್ಯಾಪ್ರಿಲ್ಲ.

ಗಣ 5. ಯೂಕ್ಯಾರಿಡ : ಕ್ಯಾರಪೇಸ್ ಎದೆಯ ಎಲ್ಲ ಖಂಡಗಳೊಂದಿಗೆ ಕೂಡಿಕೊಂಡಿದೆ. ಉದಾ : ನಳ್ಳಿ, ಏಡಿ, ಶೀಗಡಿ, ಇತ್ಯಾದಿ.

(ಎಚ್.ಬಿ.ಡಿ.)



ಚಿತ್ರ 5 ಲಿಗಿಯ

**ಕಠಿಣ ವ್ರತಗಳು :** ವೈದಿಕ ಧರ್ಮದ ಆಚರಣೆಯಲ್ಲಿ ಅಧ್ಯಯನ, ತಪಸ್ಸು, ಸಾಧನೆ ಮುಂತಾದುವನ್ನು ನಡೆಸುವಾಗ ತಿಳಿದೋ ತಿಳಿಯದೆಯೋ ನಡೆಯುವ ದೋಷಕ್ಕೆ ಪ್ರಾಯಶ್ಚಿತ್ತರೂಪದಲ್ಲಿ ಕೈಗೊಳ್ಳಬೇಕಾದ ವ್ರತಗಳು. ಹಿಂದೂ ಧರ್ಮಶಾಸ್ತ್ರ ಇವನ್ನು ಕೃಚ್ಛ್ರಗಳೆಂದು ಕರೆದಿದೆ. ಇವುಗಳ ವಿಚಾರ ಸ್ಮೃತಿ ಮತ್ತು ಪುರಾಣಗಳಲ್ಲಿ ಕಂಡು ಬರುತ್ತದೆ ; ಋಗ್ವೇದಾದಿ ಶ್ರುತಿಗಳಲ್ಲೂ ಹೇಳಲ್ಪಟ್ಟದೆಯೆಂದು ಹಲವರ ಅಭಿಪ್ರಾಯ. ಶ್ರದ್ಧಾಳುವಿನ ಆಧ್ಯಾತ್ಮಿಕ ಅನ್ವೇಷಣೆಯಲ್ಲಾಗಲಿ, ಸಾಮಾನ್ಯ ಲೌಕಿಕನ ನಿತ್ಯಜೀವನದ ನಡೆವಳಿಕೆಯಲ್ಲಾಗಲಿ ಧರ್ಮದ ರೀತಿನೀತಿಗಳು ಉಲ್ಲಂಘನೆಗೊಳ್ಳುವ ಅನೇಕ ಸನ್ನಿವೇಶಗಳು ಒದಗುತ್ತವೆ. ಅಂಥ ಧರ್ಮವಿರುದ್ಧವಾದ ಮಹಾಪಾತಕ ಮತ್ತು ಉಪಪಾತಕಗಳಿಗೆ ಪ್ರಾಯಶ್ಚಿತ್ತ ರೂಪದಲ್ಲಿ ಹಲವು ಸುಲಭ, ಹಲವು ಕಠಿಣ, ಹಲವು ಆಂತರಿಕ, ಹಲವು ಬಹಿರಂಗ ವ್ರತಗಳನ್ನು ಆಚರಿಸಿ, ಪಾಪ ಪರಿಹಾರವನ್ನು ಮಾಡಿಕೊಳ್ಳಬಹುದೆಂಬ ಆಶ್ವಾಸನ ನೀಡಬೇಕಾದುದು ಧರ್ಮದ ಸ್ಥಿರತೆಗೆ ಹೇಗೆ ಆವಶ್ಯಕವೋ ಧರ್ಮಾನುಯಾಯಿಗಳ ಮಾನಸಿಕ ಕ್ಷೋಭೆಯನ್ನು ನಿವಾರಿಸುವುದಕ್ಕೂ ಅಷ್ಟೇ ಆವಶ್ಯಕ. ನಿರಂತರ ಪಾಪಿಯೆನಿಸಿಕೊಂಡು ಆತ್ಮಹನನ ಮಾಡಿಕೊಳ್ಳುವುದಕ್ಕಿಂತ ಪಾಪನಿವಾರಣೆಯ ಮಾರ್ಗವನ್ನನುಸರಿಸಿ ಪಾಪವಿಮುಕ್ತರಾಗಬಹುದೆಂಬ ಅಭಯವನ್ನು ಧರ್ಮವೇ ನೀಡಬೇಕಲ್ಲದೆ ಬೇರಾವ ಶಕ್ತಿಯಿಂದಲೂ ಆಗದು.

ಅಷ್ಟಾದಶ ಪುರಾಣಗಳಲ್ಲಿ ಕಠಿಣವ್ರತಗಳ ಮೂಲಕ ಪ್ರಾಯಶ್ಚಿತ್ತವನ್ನು ಹೇಳಿದ್ದರೂ ವ್ರತಾಚರಣೆಯ ಲಕ್ಷಣ ಅಥವಾ ಕ್ರಮವನ್ನು ಧರ್ಮಶಾಸ್ತ್ರಗಳಿಂದ ತಿಳಿಯಬೇಕು. ವೈದಿಕ ಧರ್ಮ ಹಾಗೂ ಹಿಂದೂ ಸಮಾಜದ ಕಟ್ಟುನಿಟ್ಟುಗಳನ್ನು ಅನೇಕ ಧರ್ಮಸೂತ್ರ ಗ್ರಂಥಗಳು ವಿವರಿಸುತ್ತವೆ. ಅವುಗಳಲ್ಲಿ ಮುಖ್ಯವೆನಿಸಿದ ಹಲವು ಧರ್ಮಶಾಸ್ತ್ರ ಗ್ರಂಥಗಳು ಇವು : ಆಪಸ್ತಂಬಧರ್ಮ ಮತ್ತು ಗೃಹ್ಯ ಸೂತ್ರಗಳು ; ಆಶ್ವಲಾಯನ ಗೃಹ್ಯ ಮತ್ತು ಶ್ರೌತಸೂತ್ರಗಳು, ಕಾತ್ಯಾಯನ ಶ್ರೌತ ಸೂತ್ರ, ಗೌತಮ ಧರ್ಮಸೂತ್ರ, ಪರಾಶರ ಸ್ಮೃತಿ, ಬೌಧಾಯನ-ಗೃಹ್ಯ-ಧರ್ಮ ಮತ್ತು-ಶ್ರೌತ ಸೂತ್ರಗಳು, ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ಶಾಂಖಾಯನ ಶ್ರೌತ ಸೂತ್ರ, ಹಾರಿಟ ಸಂಹಿತ ಇತ್ಯಾದಿ.

ಇವೇ ಮೊದಲಾದ ಧರ್ಮಶಾಸ್ತ್ರಗ್ರಂಥಗಳಲ್ಲಿ ಸುಮಾರು ಐವತ್ತಕ್ಕೂ ಹೆಚ್ಚಿನ ಕೃಚ್ಛ್ರಗಳನ್ನು ವಿವರಿಸಿದ್ದಾರೆ. ಅಲ್ಲದೆ ಯಾವ ನಿರ್ದಿಷ್ಟವಾದ ಹೆಸರನ್ನೂ ನೀಡದೆಯೇ ಅನೇಕವಕ್ಕೆ ಆಚರಣಾ ವಿಧಿಗಳನ್ನು ಮಾತ್ರ ಹೇಳಿದ್ದಾರೆ. ಅಲ್ಲಿನ ಹಲವು ನಿರ್ದಿಷ್ಟ ಕೃಚ್ಛ್ರಗಳು ಇವು : ಅಘಮರ್ಷಣ, ಅತಿಕೃಚ್ಛ್ರ, ಅತಿ ಸಾಂತಪನ, ಅರ್ಧಕೃಚ್ಛ್ರ, ಅಶ್ವಮೇಧ, ಅವಭೃತ ಸ್ನಾನ, ಆಗ್ನೇಯ, ಋಷಿ ಚಾಂದ್ರಾಯಣ, ಏಕಭಕ್ತ, ಕೃಚ್ಛ್ರ, ಕೃಚ್ಛ್ರಾತಿಕೃಚ್ಛ್ರ, ಗೋಮೂತ್ರ, ಗೋವ್ರತ, ಚಾಂದ್ರಾಯಣ, ಜಲ, ತಪ್ತ, ತುಲಾಪುರುಷ, ದಧಿ, ದೇವ ದಂಡ, ನಿತ್ಯೋ ಪವಾಸ, ಪಂಚಗವ್ಯ, ಪತ್ರ, ಪರಾತ, ಪರ್ಣಕೂರ್ಚ, ಪರ್ಣಕೃಚ್ಛ್ರ, ಪಾದ, ಪಾದೋನ, ಪುಷ್ಪ, ಪ್ರಸೃತ-ಯಾವಕ, ಪ್ರಾಜಾಪತ್ಯ, ಫಲಕ, ಬಾಲಕೃಚ್ಛ್ರ, ಬೃಹತ್-ಯಾವಕ, ಬ್ರಹ್ಮಕೂರ್ಚ, ಬ್ರಹ್ಮ, ಮಹಾತಪ್ತ, ಮಹಾಸಾಂತಪನ, ಮಹೇಶ್ವರ, ಮೂಲ, ಮೈತ್ರ, ಯಜ್ಞ, ಯತಿಚಾಂದ್ರಾಯಣ, ಯತಿ ಸಾಂತಪನ, ಯಾಮ್ಯ, ಯಾವಕ, ವಜ್ರ, ವಾಯವ್ಯ, ವೃದ್ಧ ಅಥವಾ ವೃದ್ಧಿ, ವ್ಯಾಸ, ಶಿಶು, ಶಿಶು ಚಾಂದ್ರಾಯಣ, ಶೀತ, ಶ್ರೀ, ಸಾಂತಪನ, ಸುರ ಚಾಂದ್ರಾಯಣ, ಸುವರ್ಣ, ಸೋಮಾಯನ, ಸೌಮ್ಯ—ಇತ್ಯಾದಿ.

ಈ ಮೇಲಿನವು ಹಲವು ಪ್ರಾಯಶ್ಚಿತ್ತ ರೂಪವಾದ ಕಠಿಣ ಅಥವಾ ಸೌಮ್ಯ ವ್ರತಗಳಾಗಿದ್ದು ಅವನ್ನು ಅನೇಕ ಬಗೆಯ ಪಾತಕ ನಿವಾರಣೆಗೆ ವಿಧಿಸಲಾಗಿದೆ. ಪಾತಕಗಳಲ್ಲಿ ನಿತ್ಯ, ನೈಮಿತ್ತಿಕ ಕರ್ಮಲೋಪದ ದೋಷದಿಂದ ಹಿಡಿದು ಬ್ರಹ್ಮಹತ್ಯೆ, ಶಿಶುಹತ್ಯೆ, ಗೋಹತ್ಯೆ, ಗುರುಪತ್ನೀಸಂಭೋಗ, ಸುವರ್ಣಚೌರ್ಯ, ಪ್ರಾಣಿಹತ್ಯೆ, ಸುರಾಪಾನ ಮುಂತಾದ ಅನೇಕ ಬಗೆಗಳಿವೆ. ಅವಕ್ಕೆ ತಕ್ಕಂತೆ ಪ್ರಾಯಶ್ಚಿತ್ತಗಳನ್ನು ಹೇಳಲಾಗಿದೆ. ಧರ್ಮಶಾಸ್ತ್ರಕಾರರು ಮುಖ್ಯವಾಗಿ ಪಾತಕಗಳನ್ನು 8 ಬಗೆಯಾಗಿ ವಿಂಗಡಿಸಿದ್ದಾರೆ : ಅತಿಪಾತಕ, ಮಹಾಪಾತಕ, ಅನುಪಾತಕ, ಉಪಪಾತಕ, ಜಾತಿ ಭ್ರಂಶಕರ, ಸಂಕರೀಕರಣ, ಅಪ್ರತೀಕರಣ ಮತ್ತು ಮಲಿನೀಕರಣ.

ಮನುಧರ್ಮಶಾಸ್ತ್ರದ ರೀತ್ಯಾ ಬ್ರಹ್ಮಹತ್ಯೆ, ಸುರಾಪಾನ, ಸುವರ್ಣಸ್ತೇಯ, ಗುರುಪತ್ನೀಗಮನ ಮುಂತಾದುವು ಮಹಾಪಾತಕಗಳು. ಗೋಹತ್ಯೆ ಜಾತಿ, ಮತ್ತು ಕರ್ಮದಿಂದ ದುಷ್ಟರಾದವರಿಂದ ಹೋಮಮಾಡಿಸುವುದು, ಪರಸ್ತ್ರೀ ಸಂಭೋಗ, ತನ್ನನ್ನೇ ತಾನು ಮಾರಿಕೊಳ್ಳುವುದು, ತಾಯಿ ತಂದೆ ಗುರುಗಳ ಸೇವೆ ಮಾಡದಿರುವುದು, ನಿತ್ಯ ಯಜ್ಞಾಧಿಗಳಾದ ಬ್ರಹ್ಮಯಜ್ಞ ಮುಂತಾದವನ್ನು ಮಾಡದಿರುವುದು, ಸ್ಮೃತಿವಿಧಿತ ಔಪಾಸನಾದಿಗಳನ್ನು ಬಿಡುವುದು, ಪುತ್ರನನ್ನು ಬಿಡುವುದು, ಮೈನೆರೆದ ಕನ್ನೆಯನ್ನು ಸಂಭೋಗದಿಂದಲ್ಲದೆ ಇತರ ರೀತಿಯಿಂದ ಕೆಡಿಸುವುದು, ಬಡ್ಡಿಯಿಂದ ಜೀವಿಸುವುದು, ಬ್ರಹ್ಮಚಾರಿಯಾದವ ತನ್ನ ವ್ರತವನ್ನು ಮರೆತು ಸ್ತ್ರೀಸಂಭೋಗ ಮಾಡುವುದು, ಕೆರೆ, ಹೂದೋಟ, ಪತ್ನೀ-ಪುತ್ರರಾದಿ ಯಾದವರನ್ನು ಮಾರುವುದು. ಶಾಸ್ತ್ರೋಕ್ತ ಸಮಯದಲ್ಲಿ ಉಪನಯನವಿಲ್ಲದಿರುವುದು, ಹಿರಿಯ ಬಂಧುಗಳ ಮಾತನ್ನು ಕೇಳದಿರುವುದು, ದ್ರವ್ಯವನ್ನು ಪಡೆದು ವಿದ್ಯೆ ಹೇಳುವುದು, ವಿದ್ಯೆ ಕಲಿಯಲು ದ್ರವ್ಯವನ್ನು ನೀಡುವುದು, ಚಿನ್ನದ ಗಣಿಗಳಲ್ಲಿ ಅಧಿಕಾರ ವಹಿಸಿಕೊಳ್ಳುವುದು, ನೀರಿಗೆ ಅಣೆಕಟ್ಟನ್ನು ಹಾಕುವುದು, ಸಸ್ಯಗಳನ್ನು ವಿನಾಕಾರಣದಿಂದ ಕಡಿದುಹಾಕುವುದು, ಹೆಂಡತಿಯನ್ನು ವ್ಯಭಿಚಾರವೃತ್ತಿಗಿಳಿ

ಅನರಿಂದ ಸಂಪಾದನೆ ಮಾಡುವುದು, ತಪ್ಪಿಲ್ಲದವರನ್ನು ಕೊಲ್ಲುವುದು, ಮಂತ್ರ, ಔಷಧಿಗಳಿಂದ ಜನರನ್ನು ವಶೀಕರಣ ಮಾಡಿಕೊಳ್ಳುವುದು, ಅಧಿಕಾರವಿದ್ದರೂ ಅಗ್ನಿಹೋತ್ರ ಮಾಡದಿರುವುದು, ದೇವ ಋಷಿ ಪಿತೃ ಋಣವನ್ನು ಪರಿಹರಿಸದಿರುವುದು, ವೇದ ಸ್ಮೃತಿಗಳಿಗೆ ವಿರುದ್ಧವಾದ ಶಾಸ್ತ್ರವನ್ನು ಕಲಿಯುವುದು, ಧಾನ್ಯ, ತಾಮ್ರ, ಕಬ್ಬಿಣ, ಪಶು ಇತ್ಯಾದಿಗಳನ್ನು ಕದಿಯುವುದು, ಸುರಾಪಾನ ಮಾಡುವ ಸ್ತ್ರೀಯೊಡನೆ ಸಂಭೋಗ ಮಾಡುವುದು, ಸ್ತ್ರೀ, ಶೂದ್ರ, ವೈಶ್ಯ ಮತ್ತು ಕ್ಷತ್ರಿಯರನ್ನು ಕೊಲ್ಲುವುದು, ನಾಸ್ತಿಕ ಮತದಲ್ಲಿ ಪ್ರವರ್ತಿಸುವುದು—ಇವೇ ಮುಂತಾದವು ಉಪಪಾತಕಗಳು. ಕೋಲಿನಿಂದಾಗಲಿ, ಆಯುಧದಿಂದಾಗಲಿ ಹೊಡೆದು ಬ್ರಾಹ್ಮಣನಿಗೆ ಪೀಡೆ ಕೊಡುವುದು, ಅತ್ಯಂತ ದುರ್ವಾಸನೆಯುಳ್ಳ ಬೆಳ್ಳುಳ್ಳಿ, ಮಲ, ಮುಂತಾದವನ್ನು ಮೂಸುವುದು, ಕುಟಿಲತನ, ಗಂಡಸಿನೊಡನೆ ಗಂಡಸು ಸಂಭೋಗ ಮಾಡುವುದು—ಇವೇ ಮುಂತಾದುವು ಜಾತಿಭ್ರಂಶಕರ ಪಾತಕಗಳು. ಕತ್ತೆ, ಕುದುರೆ, ಒಂಟೆ, ಜಿಂಕೆ, ಆನೆ, ಆಡು, ಕುರಿ, ಮೀನು ಹಾವು, ಕೋಣ ಇವನ್ನು ಕೊಲ್ಲುವುದು ಸಂಕರೀಕರಣ ಪಾತಕಗಳು. ಯಾರಿಂದ ಪಡೆಯಬಾರದೋ ಅಂಥ ನೀಚ ಜನರಿಂದ ದ್ರವ್ಯವನ್ನು ಪಡೆಯುವುದು, ಕ್ರಯ ವಿಕ್ರಯ ವ್ಯಾಪಾರ, ಶೂದ್ರನನ್ನು ಸೇವಿಸುವುದು, ಸುಳ್ಳು ಹೇಳುವುದು ಇವೆಲ್ಲ ಅಪಾತ್ರೀಕರಣ ಪಾತಕಗಳು. ಹುಳು, ಕೀಟ, ಹಕ್ಕಿ, ಮುಂತಾದವನ್ನು ಕೊಲ್ಲುವುದು, ಮದ್ಯಪದಾರ್ಥದೊಂದಿಗೆ ತಂದ ಹಣ್ಣುಹಂಪಲನ್ನು ತಿನ್ನುವುದು, ಹಣ್ಣು, ಕಟ್ಟಿಗೆ, ಪುಷ್ಪಗಳನ್ನು ಕದಿಯುವುದು ಮುಂತಾದುವು ಮಲಿನೀಕರಣ ಪಾತಕಗಳು. ಹೀಗೆ ಅನೇಕ ಬಗೆಯ ಪಾತಕಗಳನ್ನು ಇತರ ಧರ್ಮಶಾಸ್ತ್ರಕಾರರೂ ಹೇಳುತ್ತಾರೆ.

ಇಂಥ ಧರ್ಮವಿರುದ್ಧವಾದ ಪಾತಕಗಳನ್ನು ಮಾಡಿದವರು ಜಾತಿ, ಆಯು ಮತ್ತು ಭೋಗ ಎಂಬ ಮೂರುಬಗೆಯ ಕರ್ಮವಿಪಾಕವನ್ನು ಅನುಭವಿಸುತ್ತಾರೆಂದು ಪಾತಂಜಲಯೋಗ ಸೂತ್ರ ಹೇಳುತ್ತದೆ. ಮಾಡಿದ ಕರ್ಮಕ್ಕೆ ಅನುಗುಣವಾಗಿ ಒಬ್ಬ ಕ್ರಿಮಿ, ಕೀಟ ಮುಂತಾದ ಜಾತಿಯಲ್ಲಿ ಹುಟ್ಟಬಹುದು; ಅಲ್ಪ ಆಯಸ್ಸನ್ನು ಪಡೆಯಬಹುದು ; ಅಥವಾ ನರಕದ ಯಾತನೆಯನ್ನು ಅನುಭವಿಸಬೇಕಾಗಬಹುದು. ಪಾತಕಿ ತನ್ನ ಕರ್ಮದ ಪಾಪವನ್ನು ಎರಡು ರೀತಿಯಲ್ಲಿ ನಿವಾರಿಸಕೊಳ್ಳಬಹುದೆಂದು ಮಹಾರ್ಣವ ಕರ್ಮವಿಪಾಕ ಎಂಬ ಗ್ರಂಥಕಾರನಾದ ಮಾಂಧಾತೃ ಹೇಳುತ್ತಾನೆ : ಒಂದು—ಪ್ರಾಯಶ್ಚಿತ್ತ ರೂಪವಾದ ಕೃಚ್ಛ್ರವನ್ನು ಆಚರಿಸುವುದು. ಮತ್ತೊಂದು—ವ್ಯಾಧಿ ವಿಪರ್ಯಯರೂಪನಾದ, ಆರೋಗ್ಯಕ್ಕೆ ಅಧಿದೇವತೆಯೆನಿಸಿದ ಸೂರ್ಯನ ಉಪಾಸನೆಯನ್ನು ಮಾಡುವುದು.

ಪ್ರಾಯಶ್ಚಿತ್ತ ರೂಪವಾದ ಕೃಚ್ಛ್ರಗಳು ಅನೇಕವಿದ್ದರೂ ಅವು ಯಾವ ಲಕ್ಷಣದಿಂದ ಇವೆ ಎಂಬುದನ್ನು ತಿಳಿಯುವ ಉದ್ದೇಶದಿಂದ ಹಲವು ಕೃಚ್ಛ್ರಗಳ ವಿಧಾನವನ್ನು ಮಾತ್ರ ಇಲ್ಲಿ ನಿರೂಪಿಸಿದೆ.

ಕೃಚ್ಛ್ರ : ಸಾಮಾನ್ಯವಾಗಿ ಎಲ್ಲ ಪ್ರಾಯಶ್ಚಿತ್ತ ಕರ್ಮಗಳಿಗೂ ಅನ್ವಯಿಸುವ ಹೆಸರಿದು. ಕೃಚ್ಛ್ರದ ಲಕ್ಷಣವನ್ನು ಸಾಮವಿಧಾನ ಬ್ರಾಹ್ಮಣ ಈ ರೀತಿ ಹೇಳುತ್ತದೆ. ಇದು ಒಂಬತ್ತು ದಿನಗಳು ನಡೆಯುವ ಕರ್ಮ. ಮೊದಲ ಮೂರು ದಿನಗಳು ಹಗಲಿನಲ್ಲೂ ಮುಂದಿನ ಮೂರು ದಿನಗಳಲ್ಲೂ ರಾತ್ರಿಯಲ್ಲೂ ಊಟ. ಅನಂತರದ ಮೂರು ದಿನಗಳಲ್ಲಿ ಸಂಪೂರ್ಣ ಉಪವಾಸ. ವ್ರತಕರ್ಮವನ್ನು ಬೇಗ ಪೂರ್ಣಗೊಳಿಸುವ ಆತುರ ಉಳ್ಳವ ಸದಾ ನಿಂತು ಕೊಂಡೇ ಹಗಲನ್ನೂ ಸದಾ ಕುಳಿತು ಕೊಂಡೇ ರಾತ್ರಿಯನ್ನೂ ಕಳೆಯಬೇಕು. ಆಪಸ್ತಂಬ ಧರ್ಮಸೂತ್ರ ಈ ವ್ರತವನ್ನು 12 ದಿನ ವಿಧಿಸಿದೆ. ಗೌತಮ ಧರ್ಮಸೂತ್ರ ಊಟ ಮಾಡುವ ವಿಧಿಗೆ ಪೂರಕವಾಗಿ ಇತರ ಹಲವು ವಿಧಿಗಳನ್ನು ಹೇಳಿದೆ. ವ್ರತದ ಕಾಲದಲ್ಲಿ ಸತ್ಯವನ್ನೇ ಹೇಳಬೇಕು. ಅನಾರ್ಯ ಸ್ತ್ರೀಪುರುಷರೊಂದಿಗೆ ಸಂಭಾಷಣೆ ಮಾಡಕೂಡದು. ರೌರವ ಮತ್ತು ಯೌಧಾಜಪ ಸಾಮಗಳನ್ನು ಯಾವಾಗಲೂ ಕೀರ್ತಿಸುತ್ತಿರಬೇಕು. ದಿನಕ್ಕೆ ಒಂಬತ್ತು ಸಲ, ಹೊತ್ತಿಗೆ ಮೂರು ಸಲದಂತೆ, ಬಾವಿಯ ಲ್ಲಿ ಮುಳುಗಬೇಕು. ಆಪೋಹಿಷ್ಠ ಮೊದಲಾದ, ಋಕ್ಕುಗಳಿಂದ ಪವಿತ್ರವತೀ ಮಂತ್ರಗಳಾದ ಪವಮಾನಃ ಸುವರ್ಜನಃ ಮುಂತಾದವನ್ನು ಹೇಳಬೇಕು. ತರ್ಪಣ ಬಿಡಬೇಕು. ಸೂರ್ಯೋಪಾಸನೆ ಮಾಡಬೇಕು. ತುಪ್ಪದಿಂದ ಹೋಮಮಾಡಬೇಕು. ಅಗ್ನಿ, ಸೋಮ, ಇಂದ್ರಾದಿಗಳಿಗೆ ಹವಿರ್ಭಾಗವನ್ನು ಅರ್ಪಿಸಬೇಕು. 13ನೆಯ ದಿನ ಬ್ರಾಹ್ಮಣ ಸಂತರ್ಪಣೆ ಮಾಡಬೇಕು.

ಕೃಚ್ಛ್ರವೆಂಬ ಈ ಪ್ರಾಯಶ್ಚಿತ್ತವನ್ನು ಮನುಸ್ಮೃತಿ ಈ ಕೆಳಗಿನ ಸಂದರ್ಭಗಳಲ್ಲಿ ವಿಧಿಸುತ್ತದೆ : ವ್ರಾತ್ಯರಾಗಿದ್ದವರಿಗೆ ಯಾಗಮಾಡಿಸುವುದು, ತಂದೆ ತಾಯಿ ಮೊದಲಾದವರಲ್ಲದವರಿಗೆ ಎಂದರೆ ಉತ್ತರಕ್ರಿಯೆ ಮಾಡಿಸಿಕೊಳ್ಳಲು ಅಯೋಗ್ಯರಾದವರಿಗೆ ಉತ್ತರಕ್ರಿಯೆ ಮಾಡುವುದು, ಮಾರಣ ಮಾಡಬಾರದವರಿಗೆ ಮಾರಣಮಾಡುವುದು, ಅಹೀನವೆಂಬ ಯಜ್ಞವನ್ನು ಆಚರಿಸುವುದು, ಮುಂತಾದ ಪಾತಕಗಳಿಗೆ ಮೂರು ಸಲ ಕೃಚ್ಛ್ರವನ್ನು ಆಚರಿಸಬೇಕು. ಅಲ್ಲದೆ ಬ್ರಾಹ್ಮಣನನ್ನು ಕೊಲ್ಲುವ ಉದ್ದೇಶದಿಂದ ಆಯುಧವನ್ನು ಎತ್ತಿದ ಮಾತ್ರಕ್ಕೇ ಕೃಚ್ಛ್ರವನ್ನು ಆಚರಿಸಬೇಕು.

ಅತಿಕೃಚ್ಛ್ರ : ಮನುವಿನ ಪ್ರಕಾರ ಈ ಪ್ರಾಯಶ್ಚಿತ್ತ 12 ದಿನಗಳ ವ್ರತ. ಮೊದಲ ಮೂರುದಿನ ಹಗಲಲ್ಲಿ ಮಾತ್ರ ಊಟ; ಮುಂದಿನ ಮೂರು ದಿನ ರಾತ್ರಿಯ ಕಾಲದಲ್ಲಿ ಮಾತ್ರ. ಅನಂತರದ ಮೂರು ದಿನಗಳಲ್ಲಿ ಬೇರೆಯವರು ಉಪಯೋಗಿಸದ, ಹೆಚ್ಚಿನ ಅನ್ನಭಾಗವನ್ನು ಮಾತ್ರ ಉಣ್ಣಬೇಕು. ಕೊನೆಯ ಮೂರು ದಿನಗಳಲ್ಲಿ ಸಂಪೂರ್ಣ ಉಪವಾಸವನ್ನು ಮಾಡಬೇಕು. ಊಟಮಾಡುವ ದಿನಗಳಲ್ಲೂ ನಿಯಮಿತ ಪ್ರಮಾಣವನ್ನೇ ವಿಧಿಸಲಾಗಿದೆ. ಹಗಲು ಭೋಜನದ ದಿನಗಳಲ್ಲಿ ಕೋಳಿಮೊಟ್ಟೆ ಗಾತ್ರದ 26 ಗ್ರಾಸ, ರಾತ್ರಿಯ ಕಾಲದ ಊಟದ ವೇಳೆಯಲ್ಲಿ 32 ಗ್ರಾಸ, ಅನಂತರದ ಮೂರುದಿನಗಳಲ್ಲಿ 24 ಗ್ರಾಸ. ಯಾಜ್ಞವಲ್ಕ ಸ್ಮೃತಿಯಂತೂ ಎಲ್ಲ ಕಾಲದಲ್ಲೂ ಒಂದೇ ಮುಷ್ಟಿ ಮಾತ್ರದ ಪ್ರಮಾಣವನ್ನು ಅನುಮೋದಿಸಿದೆ.

ಮನುಸ್ಮೃತಿ ಮತ್ತು ವಿಷ್ಣುಧರ್ಮಸೂತ್ರಗಳ ಅಭಿಪ್ರಾಯದಲ್ಲಿ ಅತಿಕೃಚ್ಛ್ರ ಬ್ರಾಹ್ಮಣನನ್ನು ಕೋಲಿನಿಂದ ಅಥವಾ ಖಡ್ಗದಿಂದ ಹೊಡೆದು ಘಾಸಿಮಾಡಿದ ಪಾತಕ್ಕೆ ಪ್ರಾಯಶ್ಚಿತ್ತ. ಗೌತಮ ಧರ್ಮಶಾಸ್ತ್ರದ ರೀತ್ಯಾ ಈ ಪ್ರಾಯಶ್ಚಿತ್ತವನ್ನು ಮಹಾಪಾತಕಗಳನ್ನು ಬಿಟ್ಟು ಎಲ್ಲ ಪಾತಕಗಳ ನಿವಾರಣೆಗೂ ವಿಧಿಸಲಾಗಿದೆ.

ಕೃಚ್ಛ್ರಾತಿ ಕೃಚ್ಛ್ರ : ಗೌತಮ ಧರ್ಮಸೂತ್ರ, ಸಾಮವಿಧಾನ ಬ್ರಾಹ್ಮಣ, ವಸಿಷ್ಠ ಧರ್ಮಸೂತ್ರ—ಇವುಗಳ ಆಧಾರದ ಮೇಲೆ ಕೃಚ್ಛ್ರಾತಿಕೃಚ್ಛ್ರ ವ್ರತ ಕೃಚ್ಛ್ರದಂತೆಯೇ ಆಚರಿಸತಕ್ಕಂಥದು. ಆದರೆ ನಿರಶನ ವ್ರತದ ದಿನಗಳಲ್ಲಿ ನೀರನ್ನೂ ನಿಷೇಧಿಸಿದೆ. ಯಾಜ್ಞವಲ್ಕ್ಯ ಸ್ಮೃತಿ, ದೇವಲ ಸ್ಮೃತಿ ಮತ್ತು ಬ್ರಹ್ಮಪುರಾಣಗಳ ಅಭಿಪ್ರಾಯದಲ್ಲಿ ಈ ಪ್ರಾಯಶ್ಚಿತ್ತಕರ್ಮದಲ್ಲಿ ಕೇವಲ ನೀರನ್ನೇ ಕುಡಿದು 21 ದಿನ ಕಳೆಯಬೇಕೆಂದೂ ಇತರರ ಪ್ರಕಾರ 24 ದಿನಗಳವರೆಗೂ ಕಳೆಯಬೇಕೆಂದೂ ವಿಧಿಸಿದೆ.

ಬ್ರಾಹ್ಮಣನನ್ನು ಆಯುಧದಿಂದ ಹೊಡೆದು ರಕ್ತಸ್ರಾವಗೊಳಿಸುವುದರ ಪ್ರಾಯಶ್ಚಿತ್ತವಾಗಿ ಈ ಕೃಚ್ಛ್ರವನ್ನು ಆಚರಿಸಬೇಕೆಂದು ಮನುಧರ್ಮಸೂತ್ರ ಹೇಳಿದೆ. ಆದರೆ ಗೌತಮ ಧರ್ಮಸೂತ್ರ ಸಾಮವಿಧಾನ ಬ್ರಾಹ್ಮಣಗಳ ಪ್ರಕಾರ ಸರ್ವಪಾಪಗಳ ಪರಿಹಾರ್ಥವಾಗಿ ಇದನ್ನು ಆಚರಿಸಬಹುದು.

ಚಾಂದ್ರಾಯಣ : ಚಂದ್ರನ ವೃದ್ಧಿ ಮತ್ತು ಕ್ಷಯದ ಕ್ರಮವನ್ನು ಅನುಸರಿಸುವ ಈ ಪ್ರಾಯಶ್ಚಿತ್ತಕರ್ಮಕ್ಕೆ ಚಾಂದ್ರಾಯಣವೆಂದು ಹೆಸರು. ಚಾಂದ್ರಾಯಣ ಎರಡು ವಿಧವೆಂದು ಮನುಸ್ಮೃತಿಯೂ ಬೌಧಾಯನ ಧರ್ಮಸೂತ್ರವೂ ತಿಳಿಸುತ್ತವೆ. ಮೊದಲನೆಯದು ಪಿಪೀಲಿಕಮಧ್ಯ ಚಾಂದ್ರಾಯಣ ; ಎರಡನೆಯದು ಯವಮಧ್ಯ ಚಾಂದ್ರಾಯಣ. ಮನುಸ್ಮೃತಿ ಪಿಪೀಲಿಕ ಮಧ್ಯ (ಇರುವೆಯ ಶರೀರದಂತೆ ಕೊನೆಗಳಲ್ಲಿ ಗಾತ್ರ ಹೆಚ್ಚಿದ್ದು ಮಧ್ಯದಲ್ಲಿ ಗಾತ್ರ ಸಣ್ಣ ಇರುವಂತೆ) ಚಾಂದ್ರಾಯಣವನ್ನು ಈ ರೀತಿ ವಿವರಿಸುತ್ತದೆ : ತ್ರಿಕಾಲಗಳಲ್ಲೂ ಸ್ನಾನಮಾಡುತ್ತ ಹುಣ್ಣಿಮೆ ದಿನ 15 ಗ್ರಾಸಗಳನ್ನುಂಡು ಮಾರನೆಯ ಪಾಡ್ಯದಿಂದ ದಿನ ದಿನಕ್ಕೂ ಒಂದೊಂದು ಗ್ರಾಸವನ್ನು ಕಡಿಮೆ ಮಾಡುತ್ತ ಚತುರ್ದಶಿಯ ದಿನ ಒಂದೇ ಗ್ರಾಸವನ್ನುಂಡು ಅಮಾವಸ್ಯೆಯ ದಿನ ಉಪವಾಸವಿದ್ದು, ಮಾರನೆಯ ಪಾಡ್ಯದಿಂದ ಒಂದೊಂದರಂತೆ ಗ್ರಾಸವನ್ನು ಹೆಚ್ಚು ಮಾಡುತ್ತ ಹುಣ್ಣಿಮೆ ದಿನಕ್ಕೆ 15 ಗ್ರಾಸಗಳನ್ನು ಭುಂಜಿಸತಕ್ಕದ್ದು. ಯವಮಧ್ಯ ಚಾಂದ್ರಾಯಣದಲ್ಲಿ (ಬೀಜ ಕೊನೆಗಳಲ್ಲಿ ಸಣ್ಣ ಮತ್ತು ಮಧ್ಯದಲ್ಲಿ ದಪ್ಪ ಇರುವಂತೆ) ವ್ರತಾರಂಭದಲ್ಲಿ ನಿರಶನವನ್ನು ಪಾಲಿಸಿ ದಿನಕ್ಕೆ ಒಂದೊಂದು ಗ್ರಾಸವನ್ನು ಹೆಚ್ಚಿಸುತ್ತ ಹುಣ್ಣಿಮೆ ಕಳೆದ ಮೇಲೆ ದಿನ ದಿನಕ್ಕೆ ಒಂದೊಂದು ಗ್ರಾಸವನ್ನು ಕಡಿಮೆ ಮಾಡುತ್ತ ಹೋಗುವ ವಿಧಿ.

ಚಾಂದ್ರಾಯಣ ವ್ರತದ ಆಚರಣೆಯಿಂದ ಚಂದ್ರಲೋಕ ಪ್ರಾಪ್ತಿಯಾಗುವುದೆಂದು ಮನುವಿನ ಮತ. ಹಾಗೆಯೇ ಈ ವ್ರತವನ್ನು ಯಾರೂ ಯಾವಾಗಲೂ ಆಚರಿಸಬಹುದೆಂದು, ಇದರಿಂದ ಸರ್ವಪಾತಕಗಳೂ ನಾಶವಾಗಿ ಪುಣ್ಯಸಂಚಯವೂ ಆಗುವುದೆಂದು ಯಾಜ್ಞವಲ್ಕ್ಯನ ಅಭಿಪ್ರಾಯ. ಮನು ಈ ವ್ರತವನ್ನು ಗುರುತಲ್ಪಗಮನ ಅಥವಾ ಸಮಾನವಾದ ಇತರ ಪಾತಕಗಳ ಪರಿಹಾರಕ್ಕೂ ವಿಧಿಸುತ್ತಾನೆ. ಗೌತಮ ಧರ್ಮಸೂತ್ರದ ಪ್ರಕಾರ ಚಾಂದ್ರಾಯಣ ಎಲ್ಲ ಪಾತಕ ನಿವಾರಣೆಗೂ ಸಾಧನ.

ಪ್ರಾಜಾಪತ್ಯ : ಈ ಕೃಚ್ಛ್ರವನ್ನು ಮನುಸ್ಮೃತಿ, ಯಾಜ್ಞವಲ್ಕ್ಯ ಸ್ಮೃತಿ, ವಿಷ್ಣುಧರ್ಮಸೂತ್ರ, ಅತ್ರಿಸ್ಮೃತಿ, ಶಂಖ ಸ್ಮೃತಿ, ಬೌಧಾಯನ ಧರ್ಮಸೂತ್ರವೇ ಮೊದಲಾದ ಅನೇಕ ಧರ್ಮಶಾಸ್ತ್ರ ಗ್ರಂಥಗಳು ವಿಧಿಸುತ್ತವೆ.

ಮನು ಮತ್ತು ವಸಿಷ್ಠರ ಪ್ರಕಾರ ಈ ಕೃಚ್ಛ್ರ 12 ದಿನಗಳ ಪರ್ಯಂತ ನಡೆಸತಕ್ಕುದು. ಮೊದಲ ಮೂರು ದಿನ ಹಗಲಿನ ಸಮಯದಲ್ಲೂ ಅನಂತರದ ಮೂರು ದಿನ ಸಾಯಂಕಾಲದ ಮೇಲೂ ಊಟಮಾಡತಕ್ಕದ್ದು. ಆಮೇಲೆ ಮೂರು ದಿನಗಳಲ್ಲಿ ಯಾರಿಗೂ ಬೇಡದೆ ಬಿಟ್ಟ ಪದಾರ್ಥಗಳನ್ನು ಊಟಮಾಡತಕ್ಕದ್ದು. ಕೊನೆಯ ಮೂರು ದಿನಗಳಲ್ಲಿ ಉಪವಾಸವಿರತಕ್ಕದ್ದು. ಈ ಪ್ರಾಜಾಪತ್ಯದಲ್ಲಿ

ಅನುಲೋಮ, ಪ್ರತಿಲೋಮ ಎಂದು ಎರಡು ವಿಧವುಂಟು. ಪ್ರಾಜಾಪತ್ಯವನ್ನು ಮಹಾಪಾತಕವಾದ ಗುರುತಲ್ಪಗಮನಕ್ಕೆ ವಿಧಿಸಿದೆ. ಗುರುಪತ್ನೀಸಂಸರ್ಗ ಮಾಡಿದವ ಖಟ್ವಾಂಗವೆಂಬ ಆಯುಧವನ್ನು ಹೊತ್ತುಕೊಂಡು, ನಾರು ಬಟ್ಟೆಯನ್ನುಟ್ಟು, ಕ್ಷೌರವಿಲ್ಲದೆ ತಲೆ ಗಡ್ಡಗಳನ್ನು ಬೆಳೆಸಿಕೊಂಡು, ಜಿತೇಂದ್ರಿಯನಾಗಿ ನಿರ್ಜನ ಕಾಡಿನಲ್ಲಿ ಒಂದು ವರ್ಷಕಾಲವಿದ್ದು ವ್ರತನಿಷ್ಠನಾಗಿರಬೇಕೆಂದು ಮನುವಿನ ವಿಧಿ. ಹಾಗೆಯೇ ಜಾತಿಭ್ರಂಶಕರ ಪಾತಕಕ್ಕೂ ಸರ್ಪಾದಿಗಳ ಸಂಹರಣ ಪಾತಕಕ್ಕೂ ಬ್ರಹ್ಮಚಾರಿ ತಿಳಿಯದೆಯೇ ಮದ್ಯವನ್ನಾಗಲಿ ಮಾಂಸವನ್ನಾಗಲಿ ಸೇವಿಸಿದುದಕ್ಕೂ ಈ ವ್ರತವನ್ನು ಮನು ವಿಧಿಸಿದ್ದಾನೆ. ಇದನ್ನು ಸ್ತ್ರೀಯರೂ ಆಚರಿಸಬಹುದೆಂದು ಮನುವಿನ ಮತ. ಸ್ತ್ರೀ ಪರಪುರುಷನೊಡನೆ ಸಂಸರ್ಗ ಮಾಡಿದುದರ ಪ್ರಾಯಶ್ಚಿತ್ತಕ್ಕೆ ಈ ವ್ರತವನ್ನು ಆಚರಿಸಬೇಕೆಂದು ಆತ ಹೇಳುತ್ತಾನೆ.

ಸಾಂತಪನ : ಈ ಕೃಚ್ಛ್ರದಲ್ಲಿ ಮಹಾಸಾಂತಪನ ಅತಿಸಾಂತಪನವೆಂದು ಎರಡು ವಿಧ. ಮನುಸ್ಮೃತಿಯ ಪ್ರಕಾರ ಪಂಚಗವ್ಯ (ಗೋಮೂತ್ರ, ಗೋಮಯ, ಹಾಲು, ಮೊಸರು, ತುಪ್ಪ) ಮತ್ತು ದರ್ಭೆಯ ನೀರುಗಳನ್ನು ಮಿಶ್ರ ಮಾಡಿ ಒಂದು ದಿನ ಕುಡಿದು, ಬೇರೆ ಯಾವುದನ್ನೂ ಸೇವಿಸದೆ, ಮರುದಿನ ಉಪವಾಸವನ್ನು ಆಚರಿಸುವ ವ್ರತವೇ ಸಾಂತಪನ. ಯಾಜ್ಞವಲ್ಕ್ಯ ಸ್ಮೃತಿ ಮತ್ತು ಲೌಗಾಕ್ಷಿ ಗೃಹ್ಯ ಸೂತ್ರಗಳ ಪ್ರಕಾರ ಮಹಾಸಾಂತಪನವೆಂದರೆ 7 ದಿನಗಳ ವ್ರತ. ಮೊದಲ ಆರು ದಿನಗಳಲ್ಲಿ ಪ್ರತ್ಯೇಕವಾಗಿ ಪಂಚಗವ್ಯ ಮತ್ತು ದರ್ಭೆಯ ನೀರನ್ನು ಕುಡಿದು, 7ನೆಯ ದಿನ ಉಪವಾಸ ಮಾಡುವುದು. ಈ 7 ದಿನಗಳ ಕೃಚ್ಛ್ರವನ್ನು ದೇವಲ ಸ್ಮೃತಿ ಮತ್ತು ಅತ್ರಿ ಸ್ಮೃತಿಗಳೂ ಅನುಮೋದಿಸುತ್ತವೆ. ಆದರೆ ಬೌಧಾಯನ ಧರ್ಮಸೂತ್ರ ಮತ್ತು ಶಂಖ ಸ್ಮೃತಿಗಳು 21 ದಿನಗಳ ಪರ್ಯಂತ ಈ ವ್ರತವನ್ನು ಆಚರಿಸಬೇಕೆಂದು ಹೇಳುತ್ತವೆ. ಮನು ಸ್ಮೃತಿ ಪಂಚಗವ್ಯವನ್ನು 3 ದಿನ ಆಹಾರವಾಗಿಯೇ ತೆಗೆದುಕೊಳ್ಳಬೇಕೆಂದು ನಿಯಮಿಸಿ, 15 ದಿನಗಳವರೆಗೂ ಮಹಾಸಾಂತಪನವನ್ನು ಆಚರಿಸಬೇಕೆಂದು ವಿಧಿಸುತ್ತದೆ.

ಈ ಕೃಚ್ಛ್ರವನ್ನು ಜಾತಿಭ್ರಂಶಕರ ಪಾತಕ ನಿವಾರಣೆಗೂ ಹೆಣ್ಣುಕುದುರೆ ಮುಂತಾದ ಪಶುಗಳನ್ನಾಗಲಿ, ಮುಟ್ಟಾದ ಸ್ತ್ರೀಯನ್ನಾಗಲಿ ಸಂಭೋಗ ಮಾಡಿದ ಪಾತಕಕ್ಕೂ ಸ್ತ್ರೀಯೋನಿಯಲ್ಲದೆ ಬೇರೆಲ್ಲಿಯಾದರೂ ರೇತಸ್ಸೇಚನ ಮಾಡಿದ ಪಾತಕಕ್ಕೂ ವಿಧಿಸಿದೆ.

ತಪ್ತ ಕೃಚ್ಛ್ರ : ಮನು ಧರ್ಮಶಾಸ್ತ್ರದಂತೆ ಈ ವ್ರತವನ್ನಾಚರಿಸುವ ಬ್ರಾಹ್ಮಣ ಮೂರು ದಿನ ಬಿಸಿ ನೀರನ್ನೂ ಮೂರು ದಿನ ಬಿಸಿ ಹಾಲನ್ನೂ ಮೂರು ದಿನ ತುಪ್ಪವನ್ನೂ ಮೂರು ದಿನ ಬಿಸಿ ಗಾಳಿಯನ್ನೂ ಸೇವಿಸುತ್ತ ದಿನಕ್ಕೆ ಒಂದು ಸ್ನಾನ ಮಾಡಬೇಕು. ಈ ವಸ್ತುಗಳ ಪ್ರಮಾಣವನ್ನು ಪರಾಶರ ಸ್ಮೃತಿ ವಿಧಿಸುತ್ತದೆ. ಇದನ್ನೇ ಅತ್ರಿ ಸ್ಮೃತಿಯೂ ಬ್ರಹ್ಮಪುರಾಣವೂ ಅನುಮೋದಿಸುತ್ತವೆ. ಈ ವ್ರತವನ್ನು 12 ದಿನಗಳವರೆಗೂ ದೀರ್ಘಗೊಳಿಸದೆ 4 ದಿನಗಳಲ್ಲೇ ಮುಗಿಸಬಹುದೆಂದು ಯಾಜ್ಞವಲ್ಕ್ಯ ಮತ್ತು ದೇವಲ ಸ್ಮೃತಿಗಳ ಅಭಿಪ್ರಾಯ.

ಹಸಿಮಾಂಸ ತಿನ್ನುವ ನಾಯಿ, ಕೋಳಿ, ಕಾಗೆ ಮತ್ತು ಕತ್ತೆಗಳ ಮಾಂಸವನ್ನು ತಿನ್ನುವ ಪಾತಕಕ್ಕೆ ತಪ್ತಕೃಚ್ಛ್ರವನ್ನು ಮನು ವಿಧಿಸಿದ್ದಾನೆ. ಪಂಚಗವ್ಯ ವಸ್ತುಗಳಲ್ಲೊಂದನ್ನು ಚೆನ್ನಾಗಿ ಕುದಿಸಿ ತನ್ನ ಪ್ರಾಣ ಹೋಗುವ ತನಕ ಕುಡಿಯಬೇಕೆಂದು ಮದ್ಯಪಾನಮಾಡಿದ ಬ್ರಾಹ್ಮಣನಿಗೆ ವಿಧಿಸಿದ್ದಾನೆ, ಮನು.

ಈ ರೀತಿಯಲ್ಲಿ ಅನೇಕ ಕೃಚ್ಛ್ರಗಳನನ್ನು ಭಾರತೀಯ ಪ್ರಾಚೀನ ಧರ್ಮಶಾಸ್ತ್ರಕಾರರು ವಿಧಿಸಿದ್ದರೂ ಎಲ್ಲವನ್ನೂ ಇಲ್ಲಿ ಪರಿಶೀಲಿಸುವ ಉದ್ದೇಶವಿಲ್ಲ. ಕೃಚ್ಛ್ರಗಳ ಲಕ್ಷಣದ ಸೂಕ್ಷ್ಮ ಪರಿಚಯ ಮಾತ್ರ ಸದ್ಯದ ಗುರಿ. ಅನೇಕ ಬಗೆಯಾದ ಕಠಿಣ ವ್ರತಗಳನ್ನು ಪ್ರತ್ಯೇಕ ಹೆಸರಿನಿಂದಲೇ ಅಲ್ಲದೆ ಹಲವು ಇತರ ಪಾತಕಗಳಿಗೆ ವಿಧಿಸಿರುವುದನ್ನೂ ಧರ್ಮಶಾಸ್ತ್ರಗಳಲ್ಲಿ ಕಾಣಬಹುದು. ಉದಾಹರಣೆಗೆ ಗುರುತಲ್ಪಗಮನದ ಪ್ರಾಯಶ್ಚಿತ್ತಕ್ಕಾಗಿ ವಿಧಿಸಿದ ಈ ವಿಧಿಯನ್ನು ಗಮನಿಸಬಹುದು. ಪಾತಕಿ ತನ್ನ ದುಷ್ಕೃತಿಯನ್ನು ಪ್ರಕಟಿಸಿಕೊಂಡು ಬೆಂಕಿಯಲ್ಲಿ ಕಾಯಿಸಿದ ಕಬ್ಬಿಣದ ಮಂಚದ ಮೇಲೆ ಮಲಗಿ ಅಥವಾ ಬೆಂಕಿಯಲ್ಲಿ ಕಾಯಿಸಿದ ಕಬ್ಬಿಣದ ಸ್ತ್ರೀಪ್ರತಿಮೆಯನ್ನು ತಬ್ಬಿಕೊಂಡು ಸಾಯಬೇಕೆಂದೂ ಅಥವಾ ತಾನೇ ತನ್ನ ಲಿಂಗ, ವೃಷಣಗಳನ್ನು ಕೊಯ್ದುಕೊಂಡು ತನ್ನ ಬೊಗಸೆಯಲ್ಲಿಟ್ಟುಕೊಂಡು ತನ್ನ ದೇಹ ಬೀಳುವ ತನಕ ನೆಟ್ಟಗೆ ನಡೆಯುತ್ತ ನೈಋತ್ಯ ದಿಕ್ಕಿಗೆ ಹೋಗಿ ಸಾಯಬೇಕು ಎಂದು ಮನುಸ್ಮೃತಿ ಹೇಳುತ್ತದೆ. ಮಹಾಪಾತಕವೆಂಬ ಬ್ರಹ್ಮಹತ್ಯೆಗೆ ಈ ಪ್ರಾಯಶ್ಚಿತ್ತ ವಿಧಿಸಿದೆ : ಕೊಂದವ ಕಾಡಿನಲ್ಲಿ ವಾಸಿಸುತ್ತ ಕಪಾಲಧಾರಿಯಾಗಿ ಕಾಡಿನ ವಸತಿಗಳಲ್ಲಿಯೇ ಭಿಕ್ಷೆಯನ್ನು ಯಾಚಿಸುತ್ತ ಹನ್ನೆರಡು ವರ್ಷ ವನವಾಸ ಮಾಡಬೇಕು. ಅಥವಾ ಪ್ರಜ್ವಲಿಸುವ ಅಗ್ನಿಯಲ್ಲಿ ತಲೆಯನ್ನು ಬಗ್ಗಿಸಿಕೊಂಡು ಮೂರು ಸಲ ತನ್ನ ದೇಹವನ್ನು ಸಮರ್ಪಿಸಬೇಕು. ಇತ್ಯಾದಿಗಳು ಮನುವಿನಲ್ಲಿವೆ.

ಧರ್ಮಶಾಸ್ತ್ರಕಾರರು ಈ ಕೃಚ್ಛ್ರಗಳನ್ನು ಯಾವ ಆಧಾರದ ಮೇಲೆ ವಿಧಿಸಿದರು? ಪ್ರಾಯಶ್ಚಿತ್ತರೂಪವೆಂದು ಕೃಚ್ಛ್ರವನ್ನು ಆಚರಿಸಿದ ಮಾತ್ರಕ್ಕೆ ಗಳಿಸಿದ ಪಾಪ ಪರಿಹಾರವಾಗಬಲ್ಲುದೆ ? ತಿಳಿಯದೆ ಮಾಡಿದ ಪಾಪಕ್ಕೆ ಪರಿಹಾರ ಸಿಗಬಹುದೆಂಬ ಭರವಸೆಯಿಟ್ಟುಕೊಂಡರೂ ತಿಳಿದು ತಿಳಿದೂ ಮಾಡುವ ಅನೇಕ ದುಷ್ಕರ್ಮಗಳಿಗೆ ಪರಿಹಾರ ಸಿಗುವುದೇ ? ಪ್ರಾಯಶ್ಚಿತ್ತ ಕರ್ಮದಲ್ಲಿ ಅಂಥ ಪಾಪನಿವಾರಣಾ ಶಕ್ತಿ ಇದೆಯೇ ? ಧರ್ಮಶಾಸ್ತ್ರಕಾರರ ವಚನಗಳಲ್ಲಿ ಶ್ರದ್ಧೆ ಕಡಿಮೆಯಾಗುತ್ತಿರುವ ಈ ಆಧುನಿಕ ಕಾಲದಲ್ಲಿ, ಇಂಥ ಸಂಶಯಗಳು ಉದ್ಭವಿಸುವುದು ಸಹಜ. ಈ ಪ್ರಶ್ನೆಗಳಿಗೆ ಧರ್ಮಶಾಸ್ತ್ರಕಾರರೇ ಏನಾದರೂ ಉತ್ತರ ನೀಡುವರೇ ?

ಕೃಚ್ಛ್ರಗಳೆಂದರೆ ಮಾಡಿದ ಹೀನ ಕಾರ್ಯಗಳಿಗೆ ಪ್ರಾಯಶ್ಚಿತ್ತರೂಪವಾದ ಕೆಲವು ಶಿಕ್ಷೆಗಳು. ಒಂದು ಕರ್ಮಕ್ಕೆ ತಕ್ಕ ಫಲ ಕಾರಣಕಾರ್ಯಸಂಬಂಧದಿಂದ ಸಿದ್ಧವೆನ್ನುವುದು ಒಪ್ಪತಕ್ಕ ಮಾತು. ಇದನ್ನು ಯಾವುದಾದರೊಂದು ಪ್ರಮಾಣ ಗ್ರಂಥದ ಆಧಾರದ ಮೇಲೆಯೇ ಸಿದ್ಧಮಾಡಬೇಕಾಗಿಲ್ಲ. ಆದರೂ ಧರ್ಮಶಾಸ್ತ್ರಕಾರರು ತಮ್ಮ ವಿಧಿಗಳನ್ನು ಶ್ರುತಿಯಾದ ವೇದದ ಆಧಾರದ ಮೇಲೆ ಹೇಳಿರುವಂತೆ ತೋರುತ್ತದೆ. ಗೌತಮ ಧರ್ಮಸೂತ್ರಗಳು ಅಂಥ ಆಧಾರವನ್ನು ತೋರಿಸಿಕೊಡುತ್ತವೆ. ಇದನ್ನು ವಸಿಷ್ಠ ಧರ್ಮಸೂತ್ರಗಳೂ ಅನುಮೋದಿಸುತ್ತವೆ. ಶ್ರುತಿ ನಿದರ್ಶನವನ್ನು ಮನುವೂ ಹೇಳುತ್ತಾನೆ. ಶ್ರುತ್ಯಾಧಾರ ಹೇಗಾದರೂ ಇರಲಿ, ನಮ್ಮ ಅನುಭವದಲ್ಲಿಯೇ ದುಷ್ಕರ್ಮಗಳಿಂದ ಅಹಿತವಾದುದನ್ನೂ ಸತ್ಕರ್ಮಗಳಿಂದ ಹಿತವಾದುದನ್ನೂ ನಾವೇ ಕಂಡಿರಬಹುದು. ಆದ್ದರಿಂದ ಪಾತಕ ಕರ್ಮಗಳಿಗೆ ಪ್ರಾಯಶ್ಚಿತ್ತಗಳನ್ನು ಒಪ್ಪಿಕೊಳ್ಳಬಹುದು. ಹೀಗೆ ಒಪ್ಪಿದಲ್ಲಿ ಬಾಳಿನಲ್ಲಿ ಸಂಕೀರ್ಣತೆ ಕಡಿಮೆಯಾಗಿ ಸರಳತೆ ಹೆಚ್ಚುವುದು. ಅಥವಾ ನಮ್ಮಲ್ಲಿ ವಿಮರ್ಶಾಬುದ್ಧಿಯ ಕೈಯೇ ಮೇಲಾದಲ್ಲಿ, ಪ್ರಾಯಶ್ಚಿತ್ತ ಕರ್ಮಗಳಿಗೆ ನಿಜವಾಗಿಯೂ ಪಾಪ ಪರಿಹಾರಕ ಶಕ್ತಿಯಿದೆಯೇ, ಎನ್ನುವ ಸಂಶಯ ನಮ್ಮನ್ನು ಎದುರಿಸಬಹುದು. ಅದಕ್ಕೆ ಧರ್ಮಶಾಸ್ತ್ರಕಾರರು ಇಬ್ಬಗೆಯ ಉತ್ತರವನ್ನು ಕೊಟ್ಟಿದ್ದಾರೆ. ಹಲವು ಧರ್ಮಶಾಸ್ತ್ರಕಾರರಂತೂ ನಿಷ್ಕಾಪಟ್ಯದಿಂದ ನೇರವಾದ ಉತ್ತರವನ್ನೇ ನೀಡಿದ್ದಾರೆ. ಗೌತಮ ಧರ್ಮಸೂತ್ರ, ವಸಿಷ್ಠ ಧರ್ಮಸೂತ್ರ, ಬೌಧಾಯನಸ್ಮೃತಿಗಳು ಹೇಳುವಂತೆ ಪ್ರಾಯಶ್ಚಿತ್ತಗಳು ಪಾತಕಗಳಿಗೆ ಪರಿಹಾರ ನೀಡಲಾರವು ; ಅವನ್ನು ಅನುಭವಿಸಿಯೇ ತೀರಬೇಕು. ಯಾಜ್ಞವಲ್ಕ್ಯ ಹೇಳುವಂತೆ ಕಾಮತಃ, ಎಂದರೆ ತಿಳಿದು, ತಿಳಿದೂ ಮಾಡುವ ಪಾತಕಕ್ಕೆ ಪರಿಹಾರ ಎಂದಿಗೂ ಸಿಗಲಾರದು.

ಹಾಗಾದರೆ, ಇಷ್ಟೆಲ್ಲವನ್ನೂ ಬಲ್ಲ ಧರ್ಮಶಾಸ್ತ್ರಕಾರರು ಯಾವ ಅರ್ಥದಲ್ಲಿ ಅಥವಾ ಯಾವ ಉದ್ದೇಶದಿಂದ ಪ್ರಾಯಶ್ಚಿತ್ತ ಕೃಚ್ಛ್ರಗಳನ್ನು ವಿಧಿಸಿದರೆನ್ನುವುದು ಸಹಜವಾದ ಪ್ರಶ್ನೆ. ಈ ಪ್ರಶ್ನೆಗೆ ಮೂರು ತೆರನಾದ ಉತ್ತರ ನೀಡಿರುವುದು ಧರ್ಮಶಾಸ್ತ್ರಗಳಲ್ಲಿಯೇ ಕಂಡುಬರುತ್ತದೆ : 1 ಸಮಾಜದ ಸುಸ್ಥಿರತೆಗೆ. ಸಮಾಜದ ಸಹಜೀವನದಲ್ಲಿ ಹಲವು ನಿಯಮಗಳು ಅಗತ್ಯ. ಅಂಥ ನಿಯಮಗಳಿಗೆ ಒಳಪಟ್ಟವನಿಗೆ ಮಾತ್ರ ಸಮಾಜಜೀವನದ ಸೌಲಭ್ಯ, ಸೌಭಾಗ್ಯ. ಇದನ್ನು ಅಲ್ಲಗಳೆದವನಿಗೆ ಇವು ಹೇಗೆ ಲಭಿಸಬೇಕು ? ಮಕ್ಕಳನ್ನು, ಮನುಷ್ಯರನ್ನು ಕೊಲ್ಲುವವನನ್ನು ಸಮಾಜದಿಂದ ಹೊರಗಿಡಿ—ಎಂದು ಮನು ಹೇಳುತ್ತಾನೆ. ಪ್ರಾಯಶ್ಚಿತ್ತದಿಂದ ಪಾಪವಿಮೋಚನೆ ಸಿಗದೆ ಹೋದರೂ ಸಮಾಜದಲ್ಲಿ ಪ್ರವೇಶ ಸಿಗುವ ಮಾರ್ಗವಿದೆ. ಎಂದು ಯಾಜ್ಞವಲ್ಕ್ಯಸ್ಮೃತಿಯ ಟೀಕೆಯಾದ ಮಿತಾಕ್ಷರ ಹೇಳುತ್ತದೆ. 2. ಪಾತಕ ಮಾಡಿದವ ಪರಿತಪಿಸುವ ಅಂತಃಕರಣವುಳ್ಳವನಾದಲ್ಲಿ ಆತನ ಅಂತಶ್ಶುದ್ಧಿಗಾದರೂ ಪ್ರಾಯಶ್ಚಿತ್ತವನ್ನು ವಿಧಿಸಿರಬಹುದು. ಯಾಜ್ಞವಲ್ಕ್ಯ ಹೇಳುವಂತೆ ಪ್ರಾಯಶ್ಚಿತ್ತ ಒಬ್ಬನನ್ನು ತೃಪ್ತಿಪಡಿಸೀತು ; ಅಥವಾ ಸಮಾಜವನ್ನು ತೃಪ್ತಿಪಡಿಸೀತು. ಅಥವಾ 3 ಎಲ್ಲಕ್ಕಿಂತ ಹೆಚ್ಚಾಗಿ ಪಾತಕಿಯ ಮಾನಸಿಕ ದುರ್ಭರತೆಯನ್ನು ಕಡಿಮೆ ಮಾಡುವ ಸಾಧನವಾಗಿ ಪ್ರಾಯಶ್ಚಿತ್ತವನ್ನು ವಿಧಿಸಿರಬಹುದು. ಈ ವಿಷಯದಲ್ಲಿ ಪರಾಶರ ಮಾಧವೀಯ ಎಂಬ ಗ್ರಂಥ ನೀಡುವ ಪ್ರಾಯಶ್ಚಿತ್ತದ ವಿವರಣೆ ಬಹಳ ಸೂಕ್ತವಾಗಿದೆ : ಪರಿತಪಿಸುವ ಪಾತಕಿಗಳ ಚಿತ್ತವನ್ನು ಪ್ರಾಯಶಃ ಹಗುರಗೊಳಿಸಿ ಮಾನಸಿಕ ಸ್ವಾಸ್ಥ್ಯವನ್ನು ನೀಡಬಹುದಾದ್ದರಿಂದ ಅಂಥ ಕರ್ಮಕ್ಕೆ ಪ್ರಾಯಶ್ಚಿತ್ತ ಎಂಬ ಹೆಸರಿರಬಹುದು—ಪ್ರಾಯಶಶ್ಚ ಸಮಂ ಚಿತ್ತಂ ಚಾರಯಿತ್ವಾ ಪ್ರದೀಯತೇ. ಈ ವಿವರಣೆಯನ್ನು ನಾವು ಒಪ್ಪಬಹುದೆಂದು ನಮಗೆ ಅನಿಸುತ್ತದೆ. (ಕೆ.ಬಿ.ಆರ್.)

**ಕಠೋಪನಿಷತ್ತು :** ಕೃಷ್ಣಯಜುರ್ವೇದದ ಕಾಠಕ ಶಾಖೆಗೆ ಸೇರಿದ ಇದು ಅತ್ಯಂತ ಪ್ರಸಿದ್ಧವೂ ಆದರಣೀಯವೂ ಆಗಿದೆ. ಪಾಶ್ಚಾತ್ಯ ಪಂಡಿತರು ಭಾರತೀಯ ಆಧ್ಯಾತ್ಮರಹಸ್ಯವನ್ನು ವಿವರಿಸುವಾಗ ಕಠೋಪನಿಷತ್ತನ್ನು ಪರಮಾದರ್ಶವಾಗಿ ಉಲ್ಲೇಖಿಸಿರುತ್ತಾರೆ. ಇದು ಸಾಮವೇದಕ್ಕೆ ಸೇರಿದುದೆಂದೂ ಅಥರ್ವಣ ಉಪನಿಷತ್ತೆಂದೂ ಬೇರೆ ಬೇರೆ ಮತಗಳಿದ್ದರೂ ಮುಕ್ತಿಕೋಪನಿಷತ್ತಿನಲ್ಲಿ ಕೊಟ್ಟಿರುವ ಕೃಷ್ಣಯಜುರ್ವೇದೀಯ ಉಪನಿಷತ್ತುಗಳ ಪಟ್ಟಿಯಲ್ಲಿ ಇದಕ್ಕೆ ಪ್ರಥಮ ಸ್ಥಾನವಿದೆ. ಇದನ್ನು ಒಳಗೊಂಡಿರುವ ಸಾಮ ವೇದದ ಅಥವಾ ಅಥರ್ವ ವೇದದ ಭಾಗಗಳು

ಸಿಕ್ಕಿಲ್ಲ. ತೈತ್ತಿರೀಯ ಬ್ರಾಹ್ಮಣದಲ್ಲಿ ಬರುವ ನಚಿಕೇತನ ಕಥೆಯನ್ನು ಈ ಉಪನಿಷತ್ತಿನಲ್ಲಿ ರೋಮಾಂಚಕಾರಿಯಾಗಿ ನಿರೂಪಿಸಲಾಗಿದೆ. ಈ ಕಥೆಯ ಕುರುಹನ್ನು ಋಗ್ವೇದದ ಹತ್ತನೆಯ ಮಂಡಲದ 135ನೆಯ ಸೂಕ್ತದಲ್ಲಿ ಕಾಣಬಹುದು. ಅಲ್ಲಿ ಉಲ್ಲೇಖಿತನಾಗಿರುವ ಕುಮಾರನೇ ನಚಿಕೇತನೆಂದು ಸಾಯಣಾಚಾರ್ಯರ ಅಭಿಪ್ರಾಯ.

ಈ ಉಪನಿಷತ್ತಿನಲ್ಲಿ ಮೂರು ಮೂರು ವಲ್ಲಿಗಳನ್ನೊಳಗೊಂಡ ಎರಡು ಅಧ್ಯಾಯಗಳಿವೆ. ಮೊದಲನೆಯ ಅಧ್ಯಾಯದಲ್ಲಿ ತಂದೆಯ ಆಜ್ಞೆಯಂತೆ ನಚಿಕೇತ ಯಮನಲ್ಲಿಗೆ ಹೋಗಿ ಅವನಿಗಾಗಿ ಮೂರು ದಿನಗಳು ಉಪವಾಸಮಾಡಿ ಅವನಿಂದ ಮೂರು ವರಗಳನ್ನು ಪಡೆದನೆಂದು ನಿರೂಪಿಸಲಾಗಿದೆ. ನಚಿಕೇತ ಮೊದಲನೆಯ ವರವಾಗಿ ತನ್ನ ವಿಷಯದಲ್ಲಿ ತಂದೆಯ ಪ್ರಸನ್ನತೆಯನ್ನು ಕೇಳಿದ. ಎರಡನೆಯ ವರ ಸ್ವರ್ಗಕ್ಕೆ ಸಾಧನವಾದ ಅಗ್ನಿವಿದ್ಯೆ, ಮೂರನೆಯದು ಆತ್ಮತತ್ತ್ವಕ್ಕೆ ಸಂಬಂಧಪಟ್ಟದ್ದು. ನಚಿಕೇತ ಆತ್ಮತತ್ತ್ವವನ್ನು ತಿಳಿದುಕೊಳ್ಳಲು ಯೋಗ್ಯನೋ ಅಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕಾಗಿ ಯಮ ನಾನಾ ವಿಧವಾದ ಭೋಗದ ಆಸೆಗಳಿಂದ ಪ್ರಲೋಭನಗಳನ್ನು ಒಡ್ಡಿದ. ಆದರೆ ನಚಿಕೇತ ಈ ಯಾವ ಸುಖಗಳನ್ನೂ ಬಯಸಲಿಲ್ಲ.

ಎರಡನೆಯ ವಲ್ಲಿಯಲ್ಲಿ ನಚಿಕೇತ ಬ್ರಹ್ಮವಿದ್ಯೆಗೆ ಅಧಿಕಾರಿಯೆಂದು ಅರಿತು ಯಮ ಆತನಿಗೆ ಉಪದೇಶಮಾಡುತ್ತಾನೆ. (ಇದನ್ನು ಉಪದೇಶ ಮಾಡಿದ ಗುರುವೂ ತಿಳಿದುಕೊಳ್ಳುವ ಶಿಷ್ಯನೂ ಅದ್ಭುತ ವ್ಯಕ್ತಿಗಳೇ ಆಗಿದ್ದಾರೆ.) ಬ್ರಹ್ಮದ ವಾಚಕವೂ ಪ್ರತೀಕವೂ ಆದ ಪ್ರಣವದ ಮೂಲಕ ಬ್ರಹ್ಮದ ಸ್ವರೂಪವನ್ನು ಯಮ ಉಪದೇಶಮಾಡುತ್ತಾನೆ. ಪ್ರೇಯಸ್ಸನ್ನು ಬಯಸಿ ಅವಿವೇಕಿ ಪುರುಷಾರ್ಥದಿಂದ ಚ್ಯುತನಾಗುತ್ತಾನೆ, ಧೀಮಂತ ಶ್ರೇಯಸ್ಸನ್ನೇ ಆರಿಸಿಕೊಳ್ಳುತ್ತಾನೆ. ಆಗ ಅವನಿಗೆ ಪರಮಾತ್ಮಪ್ರಾಪ್ತಿಯಾಗುತ್ತದೆ. ನಿಷ್ಕಾಮರಾಗಿ ಆತ್ಮನನ್ನೇ ಬಯಸುವವರಿಗೆ ಅವನು ಲಭಿಸುತ್ತಾನೆ. ಸದಾಚಾರ ಮತ್ತು ಇಂದ್ರಿಯನಿಗ್ರಹಗಳು ಆತ್ಮಪ್ರಾಪ್ತಿಗೆ ಅವಶ್ಯಕ—ಎಂಬ ಯಮನ ಉಪದೇಶದಿಂದ ವಲ್ಲಿ ಸಮಾಪ್ತವಾಗುತ್ತದೆ.

ಮೂರನೆಯ ವಲ್ಲಿಯಲ್ಲಿ ಶರೀರವೇ ರಥ, ಆತ್ಮನೇ ಒಡೆಯ ಅಂದರೆ ರಥಿ, ಬುದ್ಧಿ ಸಾರಥಿ, ಮನಸ್ಸು ಕಡಿವಾಣ, ಇಂದ್ರಿಯಗಳು ಕುದುರೆಗಳು, ಶಬ್ದಾದಿವಿಷಯಗಳು ಆ ಕುದುರೆಗಳು ಹೋಗುವ ರಸ್ತೆಗಳು ಎಂಬ ರೂಪಕ ಕಲ್ಪನೆಯಿಂದ ವಿವೇಕಿಗೆ ಮಾತ್ರ ಇಂದ್ರಿಯಗಳು ವಶವಾಗಿ ಆತ ಪರಮಪದವನ್ನು ಮುಟ್ಟುತ್ತಾನೆ—ಎಂದು ಹೇಳಲಾಗಿದೆ.

ಎರಡನೆಯ ಅಧ್ಯಾಯದ ಮೊದಲನೆಯ ವಲ್ಲಿಯಲ್ಲಿ ಅಂಗುಷ್ಠಮಾತ್ರ ಪ್ರಮಾಣದ ಪರಮಾತ್ಮನನ್ನು, ಅಮೃತತ್ತ್ವವನ್ನು ಬಯಸುವ ಯಾವನೋ ಒಬ್ಬ ಧೀರ ಸ್ವಭಾವತಃ ಹೊರಗೆ ಹೋಗುವ ಇಂದ್ರಿಯಗಳನ್ನು ಅಂತರ್ಯಕ್ಕೆ ಹಿಂತಿರುಗಿಸಿ ಶುದ್ಧವಾದ ನೀರಿನಲ್ಲಿ ಶುದ್ಧವಾದ ನೀರನ್ನು ಚೆಲ್ಲಿದರೆ ಹೇಗೋ ಹಾಗೆ ನೋಡುವನೆಂದು ಬೋಧಿಸಲಾಗಿದೆ.

ಎರಡನೆಯ ವಲ್ಲಿಯಲ್ಲಿ ಬ್ರಹ್ಮನ ಅಂತರ್ಯಾಮಿತ್ವವನ್ನು ವಿಸ್ತಾರವಾಗಿ ಉಪದೇಶಿಸಲಾಗಿದೆ. ಸರ್ವವ್ಯಾಪಕನಾದ ಆತ್ಮನನ್ನು ಯಾರೂ ಮೀರಲಾಗುವುದಿಲ್ಲವೆಂದೂ ಅವನನ್ನು ತಿಳಿದರೆ ಶೋಕದಿಂದ ಮುಕ್ತಿಯೆಂದೂ ಮರಣಾನಂತರ ಮಾನವರು ಕರ್ಮಕ್ಕೆ ಮತ್ತು ಜ್ಞಾನಕ್ಕೆ ಅನುಸಾರವಾಗಿ ಗತಿಯನ್ನು ಹೊಂದುತ್ತಾರೆಂದೂ ಉಪದೇಶಿಸಲಾಗಿದೆ.

ಮೂರನೆಯ ವಲ್ಲಿಯಲ್ಲಿ ಸಂಸಾರಸ್ವರೂಪವನ್ನು ನಿಶ್ಚಯಿಸುವುದರ ಮೂಲಕ ಬ್ರಹ್ಮಸ್ವರೂಪವನ್ನು ನಿರ್ಧರಿಸಲಾಗಿದೆ. ಈ ಸಂಸಾರ ಸನಾತನವಾದ ಒಂದು ಅಶ್ವತ್ಥವೃಕ್ಷ. ಇದರ ಬೇರುಗಳು ಮೇಲೆ, ಟೊಂಗೆಗಳು ಕೆಳಗೆ ಬೆಳೆದಿವೆ. ಇದೇ ಶುದ್ಧವಸ್ತು, ಇದೇ ಬ್ರಹ್ಮ. ಕಣ್ಣಿನಿಂದ ನೋಡಲಾಗದ ಬ್ರಹ್ಮನನ್ನು ಮನಸ್ಸನ್ನು ನಿಯಮಿಸುವ ಬುದ್ಧಿಯಿಂದ ಮನನರೂಪವಾದ ಸಮ್ಯಗ್ದರ್ಶನದಿಂದ ತಿಳಿದುಕೊಳ್ಳಬಹುದು. ಸ್ಥಿರವಾದ ಇಂದ್ರಿಯಧಾರಣೆಯೇ ಯೋಗ ಎಂಬ ಸಂದೇಶವಿದೆ. ಈ ಉಪನಿಷತ್ತಿನಲ್ಲಿ ಜನನ ಮರಣಗಳ ರಹಸ್ಯವನ್ನು ಬೋಧಿಸಿರುವುದರಿಂದ ಈ ಆಖ್ಯಾನವನ್ನು ಕೇಳಿದವರಿಗೆ ಹೇಳಿದವರಿಗೆ ನಚಿಕೇತ ಹೊಂದಿದ ಬ್ರಹ್ಮಲೋಕ ಪ್ರಾಪ್ತಿಯಾಗುವುದೆಂದು ಫಲಶ್ರುತಿ ಇದೆ. (ಎಸ್‌. ಎಸ್‌. ಆರ್‌.)

**ನೋಡಿ**—ಉಪನಿಷತ್ತುಗಳು.

**ಕಡಗೋಲ ಮುರುಗಲ :** ಗಟ್ಟಿಫೆರೀ ಕುಟುಂಬದ ಗಾರ್ಸೀನಿಯ ಇಂಡಿಕ ಎಂಬ ವೈಜ್ಞಾನಿಕ ಹೆಸರಿನ ನಿತ್ಯಹರಿದ್ವರ್ಣದ ಮಧ್ಯಮ ಮಟ್ಟದ ಮರ. ಕೊಂಕಣದಿಂದ ಕೊಡಗಿನ ವರೆಗೂ ಹರಡಿರುವ ಈ ಮರವನ್ನು ಮಹಾರಾಷ್ಟ್ರ ರಾಜ್ಯದ ದಕ್ಷಿಣ ಜಿಲ್ಲೆಗಳಲ್ಲೂ ಬೆಳೆಸಲಾಗುತ್ತಿದೆ. ನೀಲಗಿರಿ ಬೆಟ್ಟದ ಸಾಲುಗಳಲ್ಲಿ ಇದು ಸಮೃದ್ಧವಾಗಿ ಬೆಳೆಯುತ್ತದೆ. ಇದನ್ನು ಜ಼ಾಂಜ಼ಿಬಾರಿನಿಂದ ಭಾರತಕ್ಕೆ ತಂದು ಬೆಳೆಸಲಾಗಿದೆಯೆಂದು ಹೇಳುವರು. ಈ ಮರದ ಕೊಂಬೆಗಳು ಜೋಲಾಡುತ್ತಿರುತ್ತವೆ : ಎಲೆಗಳು ದೀರ್ಘವೃತ್ತ ಅಥವಾ ಆಯಾಕಾರವಾಗಿದ್ದು ತುದಿಯಲ್ಲಿ ಮೊನಚಾಗಿವೆ. 2.5″–3.5″ ಉದ್ದವಾಗಿಯೂ 1″–1.5″ ಅಗಲವಾಗಿಯೂ ಇರುವ ಈ ಎಲೆಗಳು ಮೇಲ್ಭಾಗದಲ್ಲಿ ಹಚ್ಚಹಸಿರಾಗಿಯೂ ತಳಭಾಗದಲ್ಲಿ ಮಾಸಲು ಬಣ್ಣದವಾಗಿಯೂ ಇರುತ್ತವೆ. ನವೆಂಬರಿನಿಂದ ಫೆಬ್ರುವರಿ ತಿಂಗಳುಗಳಲ್ಲಿ ಮರ ಹೂ ಬಿಡುತ್ತದೆ. ಏಪ್ರಿಲ್–ಮೇ ವೇಳೆಗೆ ಬಲಿತು ಮಾಗುವ ಇದರ ಹಣ್ಣು ಗುಂಡಾಗಿ 1″–1.5″ ವ್ಯಾಸವುಳ್ಳದ್ದಾಗಿದೆ. ಒಳಗಡೆ 5–8 ಬೀಜಗಳಿವೆ.

ಹಿತಕರವಾದ ರುಚಿಯಿಂದ ಕೂಡಿರುವ ಮುರುಗಲ ಹಣ್ಣಿನ ಸಿರುಳನ್ನು ಪ್ರತ್ಯೇಕಿಸಿ ಒಣಗಿಸಿ ಹುಣಿಸೆಯ ಹಣ್ಣಿನ ಹುಳಿಗೆ ಬದಲಾಗಿ ಬಳಸುವರು. ಇದರಲ್ಲಿ ಸೇ. 10ರಷ್ಟು ಮ್ಯಾಲಿಕ್ ಆಮ್ಲವೂ ಅಲ್ಪಸ್ವಲ್ಪ ಟಾರ್ಟಾರಿಕ್ ಮತ್ತು ಸಿಟ್ರಿಕ್ ಆಮ್ಲಗಳೂ ಇವೆ. ಬೇಸಗೆಯ ಪಾನೀಯಗಳನ್ನು ತಯಾರಿಸುವುದಕ್ಕೂ ಇದನ್ನು ಬಳಸುವರು.

ಮುರುಗಲ ಹಣ್ಣನ್ನು ಅನೇಕ ಔಷಧಿಗಳಲ್ಲಿ ಬಳಸುವರು. ಅದರಲ್ಲಿರುವ ಮೇಲೆ ಸೂಚಿಸಿದ ರಾಸಾಯನಿಕ ಅಂಶಗಳು ರೋಗಕಾರಕ ಹುಳುಗಳನ್ನು ನಾಶಮಾಡುವ ಶಕ್ತಿ ಹೊಂದಿವೆ. ಇದನ್ನು ಹೃತ್‌ಜೇತಕ (ಕಾರ್ಡಿಯೋಟೋನಿಕ್) ವಾಗಿಯೂ ಮೊಳೆರೋಗ, ಆಮಶಂಕೆ, ಕೆಲವು ರೀತಿಯ ಹೃದ್ರೋಗಗಳು—ಇವುಗಳಲ್ಲೂ ಬಳಸುವುದುಂಟು. ಬೀಜಗಳನ್ನು ಬೇಯಿಸಿದಾಗ ತೇಲುತ್ತ ಮೇಲಕ್ಕೆ ಬರುವ ತುಪ್ಪದಂಥ ವಸ್ತುವನ್ನು ಪ್ರತ್ಯೇಕಿಸಿ ಕೋಕಂ ಬೆಣ್ಣೆ ಎಂಬ ಜಿಡ್ಡನ್ನು ತಯಾರಿಸುವ ಉದ್ಯೋಗ ಒಂದು ಗೃಹಕೈಗಾರಿಕೆಯಾಗಿ ಪ್ರಚಾರದಲ್ಲಿದೆ. ಉಂಡೆ ಅಥವಾ ಬಿಲ್ಲೆಗಳಾಗಿ ಮಾರಾಟವಾಗುವ ಈ ಬೆಣ್ಣೆಯನ್ನು ಹಲವರು ಅಡಿಗೆಗೆ ಬಳಸುತ್ತಾರೆ. ಸಾಮಾನ್ಯವಾಗಿ ಇದು ಹಳದಿ ಬಣ್ಣದ್ದಾಗಿ ಜಿಡ್ಡುಜಿಡ್ಡಾಗಿದೆ. ಈಚೆಗೆ ಇದನ್ನು ಶುದ್ಧಗೊಳಿಸಿ ಬಿಳಿಯ ಬಣ್ಣದಲ್ಲಿ ಮಾರಾಟಕ್ಕೆ ಇಡಲಾಗುತ್ತಿದೆ. ಈ ನೂತನ ರೂಪದಲ್ಲಿ ಇದು ಇತರ ವನಸ್ಪತಿ ತೈಲಗಳಂತೆ ಬಳಕೆಗೆ ಬರುತ್ತಿದೆ.

ಕೋಕಂ ಬೆಣ್ಣೆಯಲ್ಲಿ ಸ್ಟಿಯರಿಕ್ ಮತ್ತು ಓಲಿಯಿಕ್ ಆಮ್ಲಗಳೂ ಕೆಲವು ರೀತಿಯ ಗ್ಲಿಸರೈಡುಗಳೂ ಇವೆ. ದ್ರವೀಕರಣ ಬಿಂದು ತೀರ ಕಡಿಮೆಯಿದ್ದು ತಕ್ಕಷ್ಟು ಸ್ನಿಗ್ಧವಾಗಿರುವುದರಿಂದ ಇದನ್ನು ಪೆಪ್ಪರ್‌ಮಿಂಟ್ ತಯಾರಿಕೆಯಲ್ಲೂ ಮೋಂಬತ್ತಿ ಮತ್ತು ಸಾಬೂನಿನ ಉದ್ಯೋಗದಲ್ಲೂ ಬಳಸುವುದುಂಟು. ಇದರಿಂದ ತಯಾರಿಸಿದ ಸರಿಯನ್ನು ಹತ್ತಿ ಮತ್ತು ಉಣ್ಣೆಯ ದಾರಗಳನ್ನು ಬಲಗೊಳಿಸಲು ಸವರುವುದುಂಟು. ಇದರಿಂದ ತಯಾರಿಸಿದ ತೈಲ ಒಳ್ಳೆಯ ಪೋಷಕಾಂಶಗಳನ್ನೂ ಕೆಲವು ಬೇನೆಗಳನ್ನು ಶಮನಗೊಳಿಸಬಲ್ಲ ಔಷಧಾಂಶಗಳನ್ನೂ ಒಳಗೊಂಡಿದೆ. ಇದನ್ನು ಚರ್ಮ ಹದಮಾಡುವ ಕೈಗಾರಿಕೆಯಲ್ಲೂ ಮುಲಾಮುಗಳ ತಯಾರಿಕೆಯಲ್ಲೂ ಬಳಸುವರು ; ಹುಣ್ಣುಗಳಿಗೂ ಚರ್ಮದ ಬಿರಿತಕ್ಕೂ ಹಚ್ಚುವರು. ಬೀಜದಿಂದ ತೈಲ ತೆಗೆದ ಮೇಲೆ ಉಳಿಯುವ ಹಿಂಡಿ ಗೊಬ್ಬರವಾಗುತ್ತದೆ. (ಎ. ಕೆ. ಎಸ್.)

**ಕಡಪ :** ಆಂಧ್ರ ಪ್ರದೇಶದ ದಕ್ಷಿಣ ಭಾಗದಲ್ಲಿರುವ ಜಿಲ್ಲೆಗಳಲ್ಲೊಂದು. ಈ ಜಿಲ್ಲೆಯ ಮುಖ್ಯಪಟ್ಟಣಕ್ಕೂ ಇದೇ ಹೆಸರಿದೆ. ಉ.ಅ. 13° 25′ ನಿಂದ ಉ.ಅ. 15° 14′ ವರೆಗೆ ಮತ್ತು ಪೂ.ರೇ. 77° 51′ ನಿಂದ 79° 29′ ವರೆಗೆ ಈ ಜಿಲ್ಲೆ ಹಬ್ಬಿದೆ. ಕಡಪ ಎಂದರೆ ತೆಲುಗು ಭಾಷೆಯಲ್ಲಿ ಹೆಬ್ಬಾಗಿಲು ಎಂದರ್ಥ. ಯಾತ್ರಾಸ್ಥಳವಾದ ತಿರುಪತಿಗೆ ಕಡಪ ನಗರವೇ ಉತ್ತರದ ಹೆಬ್ಬಾಗಿಲಿನಂತಿದೆ. ಈ ಜಿಲ್ಲೆಯ ಉತ್ತರಕ್ಕೆ ಕರ್ನೂಲು, ದಕ್ಷಿಣಕ್ಕೆ ಚಿತ್ತೂರು, ಪಶ್ಚಿಮಕ್ಕೆ ಅನಂತಪುರ ಮತ್ತು ಪೂರ್ವಕ್ಕೆ ನೆಲ್ಲೂರು ಜಿಲ್ಲೆಗಳಿವೆ. ದಖನ್ ಪ್ರಸ್ಥಭೂಮಿಯ ಮೇಲಿರುವ ಈ ಜಿಲ್ಲೆಯ ಸಾಮಾನ್ಯ ಎತ್ತರ ಸಮುದ್ರಮಟ್ಟಕ್ಕಿಂತ 1,500′ ರಿಂದ 2,250′. ಜಿಲ್ಲೆಯ ದಕ್ಷಿಣ ಭಾಗದ ಮೈದಾನಗಳೂ ತಗ್ಗು ಪ್ರದೇಶಗಳೂ ಶೇಷಾಚಲಂ ಮತ್ತು ಪಾಲ್ಕೊಂಡ ಬೆಟ್ಟ ಸಾಲುಗಳಿಂದ ಪ್ರತ್ಯೇಕಗೊಂಡಿವೆ. ಈ ಜಿಲ್ಲೆಯ ಉತ್ತರ ಭಾಗದಲ್ಲಿ ಕೆಂಪುಮಣ್ಣಿನ ಭೂಮಿಯೂ ದಕ್ಷಿಣದಲ್ಲಿ ಫಲವತ್ತಾದ ಕಪ್ಪು ಮಣ್ಣಿನ ನೆಲವೂ ಇವೆ. ಕಡಪ ಜಿಲ್ಲೆಯಲ್ಲಿ ಹರಿಯುವ ಅತ್ಯಂತ ಮುಖ್ಯ ನದಿ. ಪೆನ್ನಾರ್ ಪಾಪಾಗ್ನಿ, ಚೆಯ್ಯೆರು, ಚಿತ್ರಾವತಿ ಮೊದಲಾದವು ಇದರ ಉಪನದಿಗಳು. ಮಳೆಗಾಲದಲ್ಲಿ ಇವು ತುಂಬಿ ಹರಿಯುತ್ತವೆ. ಕಡಪ ಕಲ್ಲುಗಳೆಂದು ಪ್ರಸಿದ್ಧವಾದ ಶಿಲೆಗಳು ಈ ಜಿಲ್ಲೆಯ ಉತ್ತರ ಭಾಗದಲ್ಲಿ ದೊರಕುತ್ತವೆ. ಇವನ್ನು ನೆಲಕ್ಕೆ ಹೆಂಚಿನಂತೆ ಹಾಸುವುದಕ್ಕೂ ಮೇಜುಗಳ ಮೇಲ್ಭಾಗಕ್ಕೂ ಉಪಯೋಗಿಸುತ್ತಾರೆ. ಕಡಪಶಿಲೆಗಳ ಅನೇಕ ಸಮಕಾಲೀನ ಶಿಲೆಗಳಲ್ಲಿ ವಜ್ರ ದೊರಕುತ್ತದೆ. ಪ್ರಸಿದ್ಧವಾದ ಗೋಲ್ಕೊಂಡ ವಜ್ರ ದೊರಕಿರುವುದು ಇಂಥ ಶಿಲಾಸ್ತರಗಳಿಂದಲೇ. ಕಡಪಶಿಲೆಗಳ ಈಶಾನ್ಯ ಭಾಗಕ್ಕೆ 30 ಮೈಲಿಗಳಷ್ಟು ಉದ್ದಕ್ಕೂ ಇರುವವು ಕ್ವಾರ್ಟ್‌ಸೈಟ್ ಶಿಲೆಗಳು. ಈ ಜಿಲ್ಲೆಯ ಉನ್ನತ ಪ್ರದೇಶಗಳಲ್ಲಿ ದಟ್ಟವಾದ ಅರಣ್ಯಗಳುಂಟು. ಹುಲಿ ಚಿರತೆಗಳು ಇಲ್ಲಿಯ ವನ್ಯಮೃಗಗಳು. ಜಿಲ್ಲೆಯ ವಿಸ್ತೀರ್ಣ 15,346 ಚ. ಕಿಮೀ. ಜನಸಂಖ್ಯೆ 13,42,015.

ಕಡಪ ಈ ಜಿಲ್ಲೆಯ ಮುಖ್ಯಪಟ್ಟಣ. ರೈಲುಮಾರ್ಗದಲ್ಲಿ ಮದ್ರಾಸಿಗೆ ವಾಯುವ್ಯದಲ್ಲಿ 161 ಮೈಲಿ ದೂರದಲ್ಲಿದೆ. ಸಮುದ್ರಮಟ್ಟಕ್ಕಿಂತ 600 ಅಡಿ ಎತ್ತರದಲ್ಲಿದೆ. ಪೆನ್ನಾರ್ ನದಿ ಇದಕ್ಕೆ ಉತ್ತರದಲ್ಲಿ 5 ಮೈಲಿ ದೂರದಲ್ಲಿ ಹರಿಯುತ್ತದೆ. ಪೂರ್ವ, ಉತ್ತರ ಮತ್ತು ದಕ್ಷಿಣಗಳಲ್ಲಿ ಬಂಡೆಗಲ್ಲುಗಳಿಂದ ತುಂಬಿದ ನಲ್ಲಮಲೈ ಮತ್ತು ಪಾಲ್ಕೊಂಡ ಬೆಟ್ಟಗಳಿರುವುದರಿಂದ ಬೇಸಗೆಯಲ್ಲಿ ಸೆಕೆ ವಿಪರೀತ. ಆಗ ಇಲ್ಲಿಯ ಉಷ್ಣತೆ 100° ಫ್ಯಾ.ಗೂ ಹೆಚ್ಚಾಗಿರುತ್ತದೆ. (ಕೆ.ಎನ್.ಸಿ.)

**ಕಡಪ ಕಲ್ಲು :** ಕಡಪ ಜಿಲ್ಲೆಯ ಜಮ್ಮಲಮಡಗು ಮತ್ತು ಯರಗುಂಟಲ ತಾಲ್ಲೂಕುಗಳಲ್ಲಿಯೂ ಕರ್ನೂಲ್ ಜಿಲ್ಲೆಯ ಬೇಟಂಚರದಲ್ಲಿಯೂ ಹೇರಳವಾಗಿ ದೊರೆಯುವ ಕಪ್ಪು ಬೂದಿ ಬಣ್ಣದ ಮಟ್ಟಸ ಕಲ್ಲಿನ ಹಾಳೆ ಅಥವಾ ಚಪ್ಪಡಿ. ಇವನ್ನು ಸ್ಲೇಟ್ ಎಂದೂ ಕರೆಯುವುದುಂಟು. ಈ ಚಪ್ಪಡಿಗಳನ್ನು ಕಡಪ ರೈಲ್ವೆ ಸ್ಟೇಷನ್ನಿನಿಂದ ದೇಶದ ವಿವಿಧ ಭಾಗಗಳಿಗೆ ರವಾನಿಸುವುದರಿಂದ ಇವಕ್ಕೆ ಕಡಪ ಕಲ್ಲುಗಳೆಂದೇ ಹೆಸರಾಗಿದೆ. ನೆಲದ ಮತ್ತು ಮೇಜುಗಳ ಮೇಲೆ ಹಾಸಲು, ಕಟ್ಟಡದ ಮೇಲ್ಛಾವಣಿಗೆ ಮಾಡಾಗಿ ಹೊದಿಸಲು ಇವುಗಳ ಉಪಯೋಗ ಉಂಟು. ಇವು ಹೇರಳವಾಗಿ ದೊರೆಯುವುದರಿಂದಲೂ ಸುಲಭವಾಗಿ ಒಡೆದು ಎಳಕಿಸಬಹುದಾದ್ದರಿಂದಲೂ ಬಹಳ ಹೆಸರುವಾಸಿಯಾಗಿವೆ. 0.5″ ಮತ್ತು 0.25″ ತೆಳುವಾದ ಮತ್ತು 6′–8′ ಚದರದ ದೊಡ್ಡ ಚಪ್ಪಡಿಗಳಾಗಿ ಇವನ್ನು ಎಳಕಿಸುತ್ತಾರೆ. ಈ ಕಲ್ಲು ಸುಣ್ಣಾಂಶವಿರುವ ಅಶುದ್ಧ ಜಾತಿಯ ಜೇಡುಶಿಲೆ. ಚಪ್ಪಡಿಗಳ ಮೇಲೆ ಕೆಲವು ವೇಳೆ ಅಲ್ಲಲ್ಲಿ ಹೊಂಬಣ್ಣದ ಪೈರೈಟಿಸಿನ ಹರಳುಗಳಿರುವುದೂ ಕಂಡುಬಂದಿದೆ. ಭಾರತದ ಭೂವಿಜ್ಞಾನದಲ್ಲಿ ಇದನ್ನು ಕರ್ನೂಲ್ ಗುಂಪಿಗೆ ಸೇರಿದ ಜಲಜಶಿಲೆಯೆಂದು ವರ್ಗೀಕರಿಸಲಾಗಿದೆ. (ಎಂ.ಆರ್.ಎಸ್.)

**ಕಡಪ ಶ್ರೇಣಿಗಳು :** ಭಾರತದ ಭೂ ಇತಿಹಾಸದಲ್ಲಿ ಆರ್ಷೇಯ ಕಲ್ಪವಾದ ಮೇಲೆ (ಎಂದರೆ 1,850 ದಶಲಕ್ಷ ವರ್ಷ ಪ್ರಾಚೀನ ಕಾಲ) ಈಗಿನ ಕಡಪ ಕರ್ನೂಲ್ ಜಿಲ್ಲಾ ಭಾಗಗಳು, ವಿಂಧ್ಯಪರ್ವತ ಪ್ರದೇಶ, ಬೆಳಗಾಂ ಬಿಜಾಪುರ ಜಿಲ್ಲೆಗಳು ಮುಂತಾದ ಪ್ರದೇಶಗಳಲ್ಲಿ ಶಿಲಾನಿಕ್ಷೇಪಗಳು ಉಂಟಾದವು. ಈ ಕಾಲದ ಹೆಸರು ಪುರಾಣಕಲ್ಪ. ಇದರಲ್ಲಿ ಆದಿಪುರಾಣಕಲ್ಪ ಮತ್ತು ಅಂತ್ಯಪುರಾಣಕಲ್ಪವೆಂಬ ಎರಡು ವಿಭಾಗಗಳಿವೆ. ಆದಿಪುರಾಣಕಲ್ಪವೇ ಕಡಪಶ್ರೇಣಿಯೆಂದೂ ಹೆಸರುವಾಸಿಯಾಗಿದೆ. ಈ ಶಿಲಾಶ್ರೇಣಿಯನ್ನು ಮೊದಲು ಡಬ್ಲ್ಯು. ಕಿಂಗ್ ಎಂಬಾತ ಆಂಧ್ರ ಪ್ರದೇಶದಲ್ಲಿರುವ ಕಡಪ, ಕರ್ನೂಲು ಮತ್ತು ಅನಂತಪುರ ಜಿಲ್ಲೆಗಳಲ್ಲಿ ಪರಿಶೋಧಿಸಿದ. ಇದರ ವ್ಯಾಪ್ತಿ ಸುಮಾರು 12,350 ಚ. ಮೈಲಿಗಳು. ಇದು ಅರ್ಧಚಂದ್ರಾಕಾರವಾಗಿ ಹಬ್ಬಿದೆ. ಉಬ್ಬಿರುವ ಭಾಗ ಪಶ್ಚಿಮದಲ್ಲಿದೆ. ಈ ಪ್ರದೇಶದ ಬಹುಭಾಗದಲ್ಲಿನ ಶಿಲಾಸಮುದಾಯ ಕಡಪಶ್ರೇಣಿಗಳ ಗುಂಪಿಗೆ ಸೇರಿದೆ.

ಶಿಲಾಸಂಯೋಜನೆ : ಕಡಪ ಶಿಲಾಸಮುದಾಯ ಗಟ್ಟಿಯಾದ ಜೇಡುಶಿಲೆ, ಸ್ಲೇಟುಗಳು ಮತ್ತು ಸುಣ್ಣಕಲ್ಲುಗಳಿಂದ ಕೂಡಿದೆ. ಜೇಡುಶಿಲೆ ರೂಪಾಂತರಗೊಂಡು ಪದರಪದರಗಳಾಗಿ ಸೀಳುಗಳನ್ನೊಳಗೊಂಡು ಸ್ಲೇಟು ಶಿಲೆಯಾಗಿದೆ. ಆದರೆ ಫಿಲ್ಲೈಟ್ ಮತ್ತು ಶಿಸ್ಟ ಕಲ್ಲುಗಳಷ್ಟು ರೂಪಾಂತರ ಪಡೆದಿಲ್ಲ. ಮರಳುಶಿಲೆಗಳು ರೂಪಾಂತರಗೊಂಡು ಕ್ವಾರ್ಟ್ಜೈಟ್ ಶಿಲೆಗಳಾಗಿವೆ. ಇವುಗಳಲ್ಲದೆ ಜ್ವಾಲಾಮುಖಜ ಶಿಲೆಗಳೂ ಈ ಶಿಲಾಸಮುದಾಯಗಳ ಮಧ್ಯಭಾಗದಲ್ಲಿ ಅಲ್ಲಲ್ಲಿ ರೂಪುಗೊಂಡಿವೆ. ಕೆಳ ಕಡಪಶಿಲಾಸಮುದಾಯ ಧಾರವಾಡ ಶಿಲಾಸಮುದಾಯದ ಶಿಥಿಲೀಕರಣದಿಂದ ಬೇರ್ಪಟ್ಟು ಸಂಚಿತವಾದ ಜಾಸ್ಪರ್ ಮತ್ತು ಚರ್ಟಗಳ ಉರುಟು ಕಲ್ಲುಗಳಿಂದಾಗಿದೆ. ಇದು ಹೆಚ್ಚಾಗಿ ಧಾರವಾಡ ಶಿಲೆಗಳನ್ನೇ ಹೋಲುತ್ತದೆ. ಇವುಗಳ ಮೇಲ್ಭಾಗದಲ್ಲಿ ರೂಪುಗೊಂಡಿರುವ ಜೇಡುಶಿಲೆ ಮತ್ತು ಸುಣ್ಣಶಿಲೆಗಳು ರೂಪಾಂತರದಿಂದ ವಿಂಧ್ಯ ಶಿಲೆಗಳನ್ನು ಹೋಲುತ್ತವೆ. ಪುರಾಣಕಲ್ಪದ ಅನಂತರ ಪರ್ಯಾಯ ದ್ವೀಪಭಾಗದಲ್ಲಿ ಯಾವ ರೀತಿಯ ಗಣನೀಯವಾದ ಭೂಚಲನೆಯೂ ಆಗಿಲ್ಲವಾದ್ದರಿಂದ ಕಡಪಶಿಲೆಗಳ ಇಳಿವೋರೆ ಬಲು ಕಡಿಮೆ. ಆದರೆ ಪೂರ್ವ ಭಾಗದಲ್ಲಿ ಪೂರ್ವಘಟ್ಟಗಳ ಭಾಗಗಳಿರುವುದರಿಂದ ಅಲ್ಲಿ ಶಿಲೆಗಳು ಚಲನೆಗಳಿಗೊಳಗಾದ ರಚನೆಗಳನ್ನು ತೋರಿಸುತ್ತವೆ.

ಈ ಅಗಾಧ ಶಿಲಾಸಮುದಾಯದಲ್ಲಿ ಎಲ್ಲೂ ಜೀವಾವಶೇಷದ ಕುರುಹೇ ಇಲ್ಲ. ಕಡಪಶಿಲಾಸಮುದಾಯ ನಿಜವಾದ ಜಲಜಶಿಲೆಗಳಾಗಿರುವುದರಿಂದ ಅವುಗಳಲ್ಲಿ ಸಮಾಧಿಗೊಂಡ ಅಥವಾ ಹೂತುಹೋದ ಜೀವರಾಶಿಗಳನ್ನು ರಕ್ಷಿಸಲು ಅವು ಯೋಗ್ಯವಾಗಿವೆ. ಅಲ್ಲದೇ ಹೀಗೆ ಸಮಾಧಿಗೊಂಡಿರಬಹುದಾದ ಜೀವಾವಶೇಷಗಳನ್ನು ನಾಶ ಮಾಡಿರುವ ಭೂಚಲನೆ ಅಥವಾ ರಾಸಾಯನಿಕ ಬದಲಾವಣೆಗಳಾವುವೂ ಇವುಗಳಲ್ಲಿ ಕಂಡುಬರುವುದಿಲ್ಲ. ಹೀಗಿದ್ದರೂ ಈ ಶಿಲಾಸಮುದಾಯದಲ್ಲಿ ಜೀವಾವಶೇಷಗಳೇ ಇಲ್ಲದಿರುವುದಕ್ಕೆ ಕಾರಣವನ್ನು ವಿವರಿಸುವುದು ಬಲು ಕಷ್ಟದ ಕೆಲಸ. ಈ ಕಲ್ಪದಲ್ಲಿ ಜೀವಾವಶೇಷಗಳೇ ಇರಲಿಲ್ಲವೆಂದು ಹೇಳೋಣವೆಂದರೆ ಇವುಗಳಾದ ಮೇಲೆ ಸಂಚಯನಗೊಂಡ ಕ್ಯಾಂಬ್ರಿಯನ್ ಕಲ್ಪದ ಶಿಲೆಗಳಲ್ಲಿ ಜೀವಾವಶೇಷಗಳು ಹೇರಳವಾಗಿ ದೊರೆಯುತ್ತವೆ ; ಮತ್ತು ಇವು ಆದಿಜೀವರಾಶಿಯಂತೆ ಕಾಣುವುದಿಲ್ಲ.

ಕಡಪ ಸಮುದಾಯದ ಆರ್ಥಿಕ ಖನಿಜ ನಿಕ್ಷೇಪಗಳು : ಕಡಪ ಶಿಲಾಸಮುದಾಯದಲ್ಲಿ ಕೆಲವು ಉಪಯುಕ್ತ ಶಿಲೆಗಳೂ ಆರ್ಥಿಕ ಖನಿಜ ನಿಕ್ಷೇಪಗಳೂ ಇವೆ. ಕರ್ನೂಲ್ ಜಿಲ್ಲೆಯ ಮರ್ಕಾಪುರ ಎಂಬ ಸ್ಥಳದಲ್ಲಿ ಸ್ಲೇಟ್ ಕಲ್ಲುಗಳನ್ನು (ಕಡಪಕಲ್ಲು) ಒಡೆದು ತೆಗೆಯುತ್ತಾರೆ. ಮರಳುಶಿಲೆಗಳನ್ನು ಕಟ್ಟಡದ ಕಲ್ಲುಗಳಾಗಿ ಉಪಯೋಗಿಸುತ್ತಾರೆ. ಕೆಲವು ಕಡೆಗಳಲ್ಲಿ ಸುಣ್ಣದ ಶಿಲೆಯನ್ನು ಕಟ್ಟಡದ ಕಲ್ಲುಗಳಾಗಿ ಉಪಯೋಗಿಸುತ್ತಾರೆ. ವೇಮಪಲ್ಲಿ ಪ್ರದೇಶದಲ್ಲಿ ಸುಣ್ಣಶಿಲೆಯಲ್ಲಿ ಟ್ರ್ಯಾಪ್‌ಶಿಲೆ ಸರಣವಾಗಿರುವುದರಿಂದ ಕ್ರೈಸೋಟೈಪ್ ಜಾತಿಯ ಕಲ್ನಾರು ಉತ್ಪನ್ನವಾಗಿದೆ ; ಮತ್ತು ಈ ಪ್ರದೇಶದಲ್ಲಿ ಬೆರೈಟೀಸ್ ಖನಿಜ ರೂಪುಗೊಂಡಿದೆ. ಇವೆರಡನ್ನೂ ಈ ಪ್ರದೇಶದಲ್ಲಿ ಗಣಿ ಕೆಲಸ ಮಾಡಿ ಹೊರತೆಗೆಯುತ್ತಿದ್ದಾರೆ. ಫಲಿವೆಂದ್ಲ ಮತ್ತು ಅಗ್ನಿಕೊಂಡಲಗಳ ಹತ್ತಿರ ತಾಮ್ರದ ಅದುರು ಪತ್ತೆಯಾಗಿದೆ. ಅಲ್ಲಿ ಇದು ತಕ್ಕಷ್ಟು ಪ್ರಮಾಣದಲ್ಲಿ ಸಿಗುವುದೆಂದು ತಿಳಿದುಬಂದಿದೆ. ಅಲ್ಲಲ್ಲಿ ಸ್ವಲ್ಪ ಸೀಸದ ಅದುರೂ ದೊರೆಯುವುದು. (ಎಂ.ಆರ್.ಎಸ್.)

**ಕಡಲ ಆನೆ :** ಪಿನ್ನಿಪೀಡಿಯ ಗಣದ ಫೋಸಿಡೀ ಕುಟುಂಬದ ಒಂದು ಜಾತಿಯ ಸೀಲ್ ಪ್ರಾಣಿ (ಸೀ ಎಲಿಫೆಂಟ್). ವೈಜ್ಞಾನಿಕ ನಾಮ ಮಿರೂಂಗ. ಕಡಲ ಕರಡಿ, ಕಡಲ ಚಿರತೆ, ಕಡಲ ಸಿಂಹ ಮುಂತಾದುವುಗಳಿಗೆ ಇದು ಹತ್ತಿರ ಸಂಬಂಧಿ. ಅವುಗಳೆಲ್ಲಕ್ಕಿಂತ ಇದು ದೊಡ್ಡದೂ ಬಲಿಷ್ಠವಾದುದೂ ಆಗಿದೆ. ಮೂತಿ ಆನೆಯ ಸೊಂಡಿಲಿನಂತೆ ಕೊಂಚ ಮುಂದಕ್ಕೆ ಚಾಚಿರುವುದರಿಂದಲೂ ದೇಹ ದಪ್ಪನಾಗಿರುವುದರಿಂದಲೂ ಇದನ್ನು ಕಡಲ ಆನೆ ಎನ್ನಲಾಗಿದೆ. ಇದರಲ್ಲಿ ಮೆಕ್ಸಿಕೋ ಬಳಿಯ ಗಾಡಲೂಪೆ ದ್ವೀಪಗಳಲ್ಲಿ ಅಲ್ಲಲ್ಲಿ ಕಾಣಬರುವ ಮಿ. ಆಂಗಸ್ಟಿರಾಸ್ಟ್ರಿಸ್ ಎಂಬ ಪ್ರಭೇದವೂ ಫಾಕ್ಲೆಂಡ್, ಕೆರ್ಗುಯೆಲೆನ್ ಮತ್ತು ಮಕೇರಿ ದ್ವೀಪಗಳಲ್ಲಿ ಹಾಗೂ ನ್ಯೂ ಜಿಲೆಂಡಿಗೆ ಮುನ್ನೂರು ಮೈಲಿ ದಕ್ಷಿಣಕ್ಕಿರುವ ಕ್ಯಾಂಬೆಲ್ ದ್ವೀಪಗಳಲ್ಲಿ ವಾಸಿಸುವ ಮಿ. ಲಿಯೋನಿಯ ಎಂಬ ಪ್ರಭೇದವೂ ಇವೆ.

ಕಡಲ ಆನೆಗಳಲ್ಲಿ ಗಂಡು ಸುಮಾರು 20′ ಉದ್ದವಿದ್ದು ಸುಮಾರು 5,000 ಪೌಂ. ತೂಗುತ್ತದೆ. ಹೆಣ್ಣು ಸುಮಾರು 10′ ಉದ್ದವಿರುತ್ತದೆ. ಚರ್ಮ ಒರಟಾಗಿ ಸುಕ್ಕುಸುಕ್ಕಾಗಿದೆ. ಮೂತಿ ಒಂದು ಅಡಿ ಉದ್ದದ ಸೊಂಡಿಲಿನಂತೆ ಬಾಯ ಮೇಲೆ ಇಳಿಬಿದ್ದಿದೆ. ಉಸಿರೆಳೆದುಕೊಂಡಾಗ ಸೊಂಡಿಲು ಕುಣಿದೇಳುವುದೂ ದೊಡ್ಡ ಗೊರಕೆಯಂತೆ ಶಬ್ದವಾಗುವುದೂ ಕಡಲಾನೆಯ ವಿಚಿತ್ರ ಲಕ್ಷಣಗಳು. ಇದು ಸ್ವಭಾವತಃ ಮಂದ. ಕಡಲ ತೀರ ಅಥವಾ ಬಂಡೆಗಳ ಮೇಲೆ ಮಲಗಿಯೇ ಇರುತ್ತದೆ. ಬೇಟೆಯಾಡಲು ಮಾತ್ರ ನೀರಿಗಿಳಿಯುತ್ತದೆ. ನೀರಿನಲ್ಲಿ ವೇಗವಾಗಿ ಮತ್ತು ಗಂಭೀರ ಗತಿಯಲ್ಲಿ ಈಜಬಲ್ಲುದು. ಮೀನುಗಳು ಮತ್ತು ಸ್ಕ್ವಿಡ್ಡುಗಳು ಇದರ ಪ್ರಧಾನ ಆಹಾರ. ಹಕ್ಕಿಗಳಂತೆ ಕಲ್ಲುಗಳನ್ನು ನುಂಗಿ ಜಠರದಲ್ಲಿ ಶೇಖರಿಸಿಕೊಳ್ಳುತ್ತದೆ. ಆಹಾರವನ್ನು ಅರೆಯಲು ಇವನ್ನು ಉಪಯೋಗಿಸಿಕೊಳ್ಳುವುದೆಂದು ತೋರುತ್ತದೆ.



ಋತುಕಾಲ ಬಂದಾಗ ಇತರ ಸೀಲ್ ಪ್ರಾಣಿಗಳಂತೆ ಸಮುದ್ರದಂಡೆಯ ಮೇಲೆ ಬೀಡು ಬಿಡುತ್ತದೆ. ಆನೆಯ ಇನ್ನೊಂದು ಸ್ವಭಾವವೂ ಕಡಲ ಆನೆಗುಂಟು. ಒಂದು ಗಂಡು ತನ್ನ ಹತ್ತಿರ ಹಲವು ಹೆಣ್ಣುಗಳನ್ನು ಇರಿಸಿಕೊಂಡು ಇತರ ಗಂಡುಗಳಿಂದ ರಕ್ಷಿಸುತ್ತದೆ. ಹೆಣ್ಣುಗಳಿಗಾಗಿ ಕೆಲವೊಮ್ಮೆ ಭಯಂಕರ ಹೋರಾಟವೂ ನಡೆಯುವುದುಂಟು. ಹೆಣ್ಣು ಫೆಬ್ರುವರಿ ಮತ್ತು ಜೂನ್ ತಿಂಗಳುಗಳ ನಡುವಣ ಕಾಲದಲ್ಲಿ ಮರಿ ಹಾಕುತ್ತದೆ. ಸಾಮಾನ್ಯವಾಗಿ ಒಂದು ಸಲಕ್ಕೆ ಒಂದು ಮರಿಯನ್ನು ಈಯುತ್ತದೆ.

ಹಿಂದೆ ಕೊಬ್ಬು ಮತ್ತು ಎಣ್ಣೆಗಳಿಗಾಗಿ ಜನ ಇವನ್ನು ಬೇಟೆಯಾಡಿದರಾಗಿ ಹೇರಳವಾಗಿದ್ದ ಕಡಲಾನೆಗಳು ಕಡಿಮೆಯಾಗುತ್ತ ಬಂದುವು. ಈಚೆಗೆ ಇವುಗಳ ಬೇಟೆಯನ್ನು ಸರ್ಕಾರಗಳು ಪ್ರತಿಬಂಧಿಸಿ ಇವುಗಳ ಪೀಳಿಗೆ ನಾಶವಾಗುವುದನ್ನು ತಪ್ಪಿಸಿವೆ.

ನೋಡಿ—ಸೀಲ್. (ಬಿ.ಎನ್.ಬಿ.)

**ಕಡಲ ಇಲಿ :** ವಲಯವಂತ ವಂಶದ ಪಾಲಿಕೀಟ ಗಣಕ್ಕೆ ಸೇರಿದ ಅಫ್ರೊಡೈಟ್ ಜಾತಿಯ ಕಡಲುವಾಸಿ (ಸೀಮೌಸ್). ಉತ್ತರ ಅಮೆರಿಕ, ಆಸ್ಟ್ರೇಲಿಯ ಮತ್ತು ಐರೋಪ್ಯ ರಾಷ್ಟ್ರಗಳ ಕರಾವಳಿಯ ನಯವಾದ ಮಣ್ಣಿನ ಸಮುದ್ರ ತಳದಲ್ಲಿ ವಾಸಿಸುತ್ತದೆ. ಸಮುದ್ರತಳದಲ್ಲಿ ತೆವಳುವಾಗ ಇಲಿಯನ್ನು ಹೋಲುವುದರಿಂದ ಇದಕ್ಕೆ ಈ ಹೆಸರು. 40ಕ್ಕೂ ಮಿಗಿಲಾದ ಖಂಡಗಳುಳ್ಳ ಈ ಮಂದಗಾಮಿಯ ಅಂಡಾಕಾರದ ದೇಹ 6″–7″ ಉದ್ದ 3″–4″ ಅಗಲ. ಪ್ರತಿ ಖಂಡದ ಇಕ್ಕಡೆಯಲ್ಲೂ ದ್ವಿಶಾಖಾರಚನೆಯುಳ್ಳ (ಬೈರೇಮಸ್) ಎರಡು ಪಾರ್ಶ್ವಪಾದ (ಪ್ಯಾರಪೋಡಿಯ) ಗಳಿವೆ. ಈ ಪಾರ್ಶ್ವಪಾದಗಳ ಬೆನ್ನಿನ ಸಿರ್ರಸ್ಸುಗಳಿಂದಾದ 15 ಜೊತೆ ಫಲಕಗಳು ಹೊರಮೈಯನ್ನು ಮುಚ್ಚಿರುತ್ತವೆ. ಆದರೆ ಅವುಗಳ ಮೇಲೆ ನಿಬಿಡವಾಗಿ ಹರಡಿರುವ ವರ್ಣರಂಜಿತ ಬಿರುಗೂದಲುಗಳ ಹೊದಿಕೆಯಿರುವುದರಿಂದ ಫಲಕಗಳು ಕಾಣುವುದಿಲ್ಲ. ಈ ರಕ್ಷಾಕವಚದ ಚಲನೆಯಿಂದ ಕಡಲ ಇಲಿಯ ಬಿಲದಲ್ಲಿ ಜಲಾಭಿಸರಣೆಯಾಗುತ್ತದೆ. ಸ್ನಾಯುಪುಷ್ಟಿತ ಸ್ಥೂಲ ಗಂಟಲಲ್ಲದೆ 18 ಜೊತೆ ಕರುಳು ಚೀಲಗಳಿರುವ ಜೀರ್ಣನಾಳ ಎಲ್ಲ ಜಾತಿಯಕಡಲು ಇಲಿಗಳಲ್ಲೂ ಕಂಡುಬರುತ್ತವೆ. ಇದರ ಜೀರ್ಣನಾಳದ ಮುಂತುದಿಯನ್ನು ಹಿಂದಿನವರು ಆಹಾರವಾಗಿ ಉಪಯೋಗಿಸುತ್ತಿದ್ದರೆಂದು ಪ್ರತೀತಿ. ಭಾರತದ ಸಮುದ್ರ ದಡಗಳಲ್ಲಿ ಇದರ ಕೆಲವು ಪ್ರಭೇದಗಳು ಕಂಡುಬರುತ್ತವೆ. ಅವುಗಳಲ್ಲಿ ತಮಿಳುನಾಡು ಮತ್ತು ಸಾಂತಾಪಲ್ಲಿಯಲ್ಲಿ ದೊರಕುವ ಅಫ್ರೊಡೈಟ್ ಅಕ್ಯುಲಿಯೇಟ, ಲಕಡೀವ್ ಮತ್ತು ಕ್ಯಾಮೊರಿನ್ ದ್ವೀಪಗಳಲ್ಲಿ ವಾಸಿಸುವ ಅ.ಆಸ್ಟ್ರಾಲಿಸ್ ಮತ್ತು ಅಂಡಮಾನ್, ಒರಿಸ್ಸ, ಕೇರಳ ಮತ್ತು ಬಂಗಾಳ ಕೊಲ್ಲಿಗಳಲ್ಲಿರುವ ಅ.ಟಾಲ್ಪಾಗಳು ಮುಖ್ಯವಾದುವು. (ಎಸ್.ಎಚ್.ಬಿ.)



**ಕಡಲ ಕರಡಿ :** ಪಿನ್ನಿಪೀಡಿಯ ಗಣದ ಓಟರೈಯಿಡೀ ಕುಟುಂಬಕ್ಕೆ ಸೇರಿದ ಸಮುದ್ರವಾಸಿ ಸಸ್ತನಿ (ಸೀ ಬೇರ್). ಫರ್ ಸೀಲ್ (ತುಪ್ಪುಳ ಸೀಲ್) ಎಂದೂ ಕರೆಯುತ್ತಾರೆ. ಇದು ಕಡಲ ಸಿಂಹದ ಹತ್ತಿರದ ನಂಟ. ಇದರಲ್ಲಿ ಕ್ಯಾಲೊರೈನಸ್ ಮತ್ತು ಆರ್ಕ್ಟೋಸಿಫ್ಯಾಲಸ್ ಎಂಬ ಎರಡು ಜಾತಿಗಳು ಬಹು ಮುಖ್ಯವಾದುವು. ಇವುಗಳಲ್ಲಿ ಮೊದಲನೆಯದು ಬೆರಿಂಗ್ ಸಮುದ್ರದ ದ್ವೀಪಗಳು, ಜಪಾನ್ ಮತ್ತು ಅಮೆರಿಕದ ಕೆಲವು ಭಾಗಗಳ ನಿವಾಸಿ. ಎರಡನೆಯದು ನ್ಯೂ ಜ಼ಿಲೆಂಡ್, ಆಸ್ಟ್ರೇಲಿಯ, ಟಾಸ್ಮೇನಿಯ, ಅಮೆರಿಕಗಳ ಸಮುದ್ರತೀರಗಳಲ್ಲಿ ವಾಸಿಸುತ್ತದೆ.

ಚೆನ್ನಾಗಿ ಬೆಳೆದ ಕ್ಯಾಲೊರೈನಸ್ ಜಾತಿಯ ಗಂಡು ಕಡಲ ಕರಡಿ ಸುಮಾರು 6′ ಉದ್ದವಿದ್ದು 500–700 ಪೌಂ. ತೂಗುತ್ತದೆ. ಹೆಣ್ಣು ಗಂಡಿಗಿಂತ ಚಿಕ್ಕದು. ಇತರ ಸೀಲ್ ಪ್ರಾಣಿಗಳಲ್ಲಿರುವಂತೆಯೇ ಇದರ ದೇಹವೂ ಜಲವಾಸಕ್ಕೆ ಅನುಕೂಲವಾಗಿದೆ. ಮೈಮೇಲೆ ರೇಷ್ಮೆಯಂಥ ಮೃದುವಾದ ಹಾಗೂ ದಟ್ಟವಾದ ಕೂದಲಿವೆ. ಬಣ್ಣ ಕಪ್ಪು ಮಿಶ್ರಿತ ಬೂದು ಅಥವಾ ಕಂದು. ಸಾಮಾನ್ಯವಾಗಿ ನೀರಿನಲ್ಲಿಯೇ ತಮ್ಮ ಜೀವಿತವನ್ನೆಲ್ಲ ಕಳೆಯುತ್ತವೆ. ತುಂಬ ಚೆನ್ನಾಗಿ ಈಜಬಲ್ಲುವು. ನೆಲದ ಮೇಲೆ ಇತರ ಸೀಲ್ ಪ್ರಾಣಿಗಳಿಗಿಂತ ಉತ್ತಮವಾಗಿ ನಡೆಯಬಲ್ಲವು. ಸಾಮಾನ್ಯವಾಗಿ ಕೆಮ್ಮುವುದು, ಬೊಗಳುವುದು, ಗರ್ಜಿಸುವುದು ಇವುಗಳ ವಾಡಿಕೆ. ಮೀನು, ಸ್ಕ್ವಿಡ್ಡುಗಳು ಮತ್ತಿತರ ಸಾಗರದ ಪ್ರಾಣಿಗಳನ್ನು ಹಿಡಿದು ತಿನ್ನುತ್ತವೆ.

ಸಂತಾನೋತ್ಪತ್ತಿಯ ಕ್ರಮ, ಕಾಲ ಎಲ್ಲವೂ ಕಡಲ ಸಿಂಹಗಳಲ್ಲಿನಂತೆಯೇ. ಆದರೆ ತಮ್ಮ ಅಧೀನದ ಪ್ರದೇಶದ ಸ್ವಾಮ್ಯವನ್ನು ಮತ್ತು ಹೆಣ್ಣುಗಳ ಮೇಲಿನ ತಮ್ಮ ಅಧಿಕಾರವನ್ನು ಕಾಪಾಡಿಕೊಳ್ಳುವುದರಲ್ಲಿ ಕಡಲ ಸಿಂಹಗಳಿಗಿಂತ ಇವು ಹೆಚ್ಚಿನ ಆಸಕ್ತಿ ತೋರುವುವಲ್ಲದೆ ಹೋರಾಟವನ್ನೂ ನಡೆಸುತ್ತವೆ. ಕಡಲಸಿಂಹಗಳಲ್ಲಿರುವಂತೆ ಇವುಗಳಲ್ಲಿಯೂ ದಕ್ಷಿಣದ ಕಡೆಗೆ ವಲಸೆ ಹೋಗುವ ಕ್ರಮ ಇದೆ. ಹೀಗೆ ಹೋಗುವಾಗ ತಿಮಿಂಗಲಗಳಿಗೆ ತುತ್ತಾಗುವುದೂ ಉಂಟು.



ಉತ್ತರ ಪೆಸಿಫಿಕ್ ಸಾಗರದ ದ್ವೀಪಗಳಲ್ಲಿ ವಾಸಿಸುವ ಕಡಲ ಕರಡಿ

ಆರ್ಕ್ಟೋಸಿಫ್ಯಾಲಸ್ ಜಾತಿಯ ಕಡಲ ಕರಡಿಗಳು ನೋಡುವುದಕ್ಕೆ ಕ್ಯಾಲೊರೈನಸ್ ಜಾತಿಯವುಗಳಂತಿದ್ದರೂ ಗಾತ್ರದಲ್ಲಿ ಚಿಕ್ಕವು. ಇವುಗಳ ಜೀವನಕ್ರಮವೂ ಅವುಗಳಂತೆಯೇ.

ಈ ಎರಡೂ ಜಾತಿಯ ಕಡಲ ಕರಡಿಗಳು ತಮ್ಮ ಬೆಲೆಬಾಳುವ ಚರ್ಮದಿಂದ (ಫರ್) ಬಹಳ ಹೆಸರಾಗಿವೆ. ಬಹಳ ಬೇಡಿಕೆಯಿರುವ ಈ ಚರ್ಮಕ್ಕಾಗಿ ಈ ಪ್ರಾಣಿಗಳನ್ನು ಸುಮಾರು 300 ವರ್ಷಗಳಿಂದಲೂ ಬೇಟೆಯಾಡುತ್ತಿದ್ದಾರೆ. ಇದರಿಂದಾಗಿ ಪ್ರಪಂಚದ ಹಲವಾರು ಕಡೆಗಳಲ್ಲಿ ಇವುಗಳ ಸಂತತಿ ನಶಿಸಿಹೋಗಿದೆ. ಅಮೆರಿಕದ ಸಂಯುಕ್ತಸಂಸ್ಥಾನಗಳು, ರಷ್ಯ, ಕೆನಡ ಮತ್ತು ಜಪಾನ್ ದೇಶಗಳು ಕಡಲ ಕರಡಿಗಳ ಪ್ರಾಮುಖ್ಯವನ್ನು ಅರಿತು ಅವುಗಳ ಬೇಟೆಯನ್ನು ನಿಯಂತ್ರಿಸಲು ಒಪ್ಪಂದ ಮಾಡಿಕೊಂಡಿವೆ. ಹೀಗಾಗಿ ಅವುಗಳ ಸಂತತಿ ಕ್ರಮೇಣ ವರ್ಧಿಸುತ್ತ ಬಂದಿದೆ. ಹೆಚ್ಚಿನ ವಿವರಗಳಿಗೆ **ನೋಡಿ—ಸೀಲ್.** (ಬಿ.ಎಸ್.ಬಿ.)

**ಕಡಲ ಕುದುರೆ :** ಉಷ್ಣ ಮತ್ತು ಸಮಶೀತೋಷ್ಣವಲಯಗಳ ಸಮುದ್ರದ ತೀರಪ್ರದೇಶದಲ್ಲಿ ವಾಸಿಸುವ ಒಂದು ಅಸ್ಥಿಮೀನು. ಕೊಳವೆ ಮೀನುಗಳ (ಪೈಪ್‌ಫಿಷ್) ಸಂಬಂಧಿ. ಲೋಫೋಬ್ರಾಂಕಿಯ ಗಣದ ಸಿಂಗ್ನಾತಿಡೀ ಕುಟುಂಬಕ್ಕೆ ಸೇರಿದೆ ; ವೈಜ್ಞಾನಿಕ ನಾಮ ಹಿಪ್ಪೊಕ್ಯಾಂಪಸ್. ಕುದುರೆಯ ತಲೆಯಂಥದೇ ತಲೆ ಮತ್ತು ಅದೇ ರೀತಿ ಬಾಗಿರುವ ಕುತ್ತಿಗೆಯಿರುವುದರಿಂದ ಈ ಪ್ರಾಣಿಗೆ ಕಡಲ ಕುದುರೆ ಎಂಬ ಹೆಸರು ಬಂದಿದೆ. ಇದು ಸಾಮಾನ್ಯವಾಗಿ ತೀರಪ್ರದೇಶದ ಉತ್ತಳ ನೀರಿನಲ್ಲಿ ಸಮುದ್ರಜೊಂಡಿನ ಮಧ್ಯೆ ಹೇರಳವಾಗಿ ಕಂಡುಬಂದರೂ ಕೆಲವು ಸಾರಿ ನದೀಮುಖಜ ಪ್ರದೇಶದಲ್ಲೂ ಕಾಣಬರುವುದುಂಟು.

ದೇಹ ತೆಳು, ನೀಳ, ಹಾಗೂ ಸಣ್ಣದು. ಉದ್ದ ಸಾಮಾನ್ಯವಾಗಿ 7–12 ಸೆಂ.ಮೀ. ಅಮೆರಿಕದ ಪೆಸಿಫಿಕ್ ತೀರಪ್ರದೇಶದ ಹಿಪ್ಪೊಕ್ಯಾಂಪಸ್ ಇಂಜೆನ್ಸ್ ಎಂಬ ಪ್ರಭೇದ 30 ಸೆಂ.ಮೀ. ವರೆಗೆ ಬೆಳೆದರೆ, ಫ್ಲಾರಿಡದ ಬಳಿ ವಾಸಿಸುವ ಹಿ.ಜೊಸ್ಟೆರ್ನೆ ಎಂಬುದು ಕೇವಲ 5 ಸೆಂ.ಮೀ. ಉದ್ದವಿದೆ. ದೇಹದ ಮೇಲೆ ಎಲುಬಿನ ಮೈಗಾಪು ಅಥವಾ ತಟ್ಟೆಗಳು ದಟ್ಟವಾಗಿ ಸುವ್ಯವಸ್ಥಿತ ರೀತಿಯಲ್ಲಿ ಜೋಡಣೆಗೊಂಡಿವೆ. ತಲೆಗೂ ದೇಹಕ್ಕೂ ನಡುವಿನ ಕುತ್ತಿಗೆಯ ಭಾಗ ಸುಸ್ಪಷ್ಟ. ಕೊಳವೆಯಾಕಾರದ ಮೂತಿ ಎಲುಬುಗಳ ಕೂಡಣೆಯಿಂದಾಗಿದೆ. ಮೂತಿಯ ತುದಿಯಲ್ಲಿ ಹೀರುವಂಥ ದುಂಡಾದ ಪುಟ್ಟ ಬಾಯಿ ಇದೆ. ಕಿವಿರು ಮುಚ್ಚಳದ ಅಂಚು ದೇಹದೊಡನೆ ಅಂಟಿಕೊಂಡು ಅದರ ಬಿರುಕು ಚಿಕ್ಕ ರಂಧ್ರವಂತೆ ಮೇಲ್ಭಾಗದಲ್ಲಿದೆ. ಒಂದೊಂದು ಕಣ್ಣೂ ಗೋಸುಂಬೆಯ ಕಣ್ಣಿನಂತೆ ಪ್ರತ್ಯೇಕವಾಗಿ ಚಲಿಸಬಲ್ಲುದು. ಬಾಲ ನೀಳವಾಗಿದ್ದು ತುದಿಯವರೆಗೂ ಕ್ರಮಕ್ರಮವಾಗಿ ಚೂಪಾಗುತ್ತದೆ. ಕಡಲ ಕುದುರೆ ತನ್ನ ಬಾಲದ ತುದಿಯಿಂದ ಜೊಂಡು ಮುಂತಾದವಕ್ಕೆ ತಗುಲಿಕೊಂಡು ನೆಟ್ಟಗೆ ವಿಚಿತ್ರ ಭಂಗಿಯಲ್ಲಿ ನಿಲ್ಲಬಲ್ಲುದು. ಇವಕ್ಕೆ ಬಾಲದ

ಈಜುರೆಕ್ಕೆಗಳಾಗಲಿ ಶ್ರೋಣಿಯ ಈಜುರೆಕ್ಕೆಯಾಗಲೀ ಇಲ್ಲ. ಎದೆಯ ಭಾಗದಲ್ಲಿ ಒಂದು ಜೊತೆ ಬಲು ಚಿಕ್ಕವಾದ ಎದೆಯ (ಪೆಕ್ಟೊರಲ್) ಈಜುರೆಕ್ಕೆ ಮತ್ತು ಬೆನ್ನಿನ ಮೇಲೆ ಗುದ ಇರುವ ಮಟ್ಟದಲ್ಲಿ ಒಂದು ಬೆನ್ನಿನ ಈಜುರೆಕ್ಕೆ (ಡಾರ್ಸಲ್ ಫಿನ್) ಮಾತ್ರ ಇವೆ. ಬೆನ್ನಿನ ಈಜುರೆಕ್ಕೆಯೇ ಈಜಲು ನೆರವಾಗುವ ಪ್ರಧಾನಾಂಗ. ಇದು ಚಿಕ್ಕದಾಗಿರುವುದರಿಂದಲೂ ತೆಳುವಾಗಿ ಪಾರದರ್ಶಕವಾಗಿರುವುದರಿಂದಲೂ ಇದನ್ನು ಸುಲಭವಾಗಿ ನೋಡಲಾಗುವುದಿಲ್ಲ. ಕಡಲ ಕುದುರೆ ಮಂದಗತಿಯಲ್ಲಿ ಮುಂಚಲಿಸುವಾಗ ಬೆನ್ನಿನ ಈಜುರೆಕ್ಕೆಯ ಸುತ್ತ ನೀರಿನಲ್ಲಿ ಮೂಡುವ ತರಂಗಗಳು ತೀವ್ರಗತಿಯಲ್ಲಿರುವುದರಿಂದ ಈ ಈಜುರೆಕ್ಕೆ ಪ್ರೊಪೆಲರ್ ತರಹ ತಿರುಗುತ್ತಿರುವಂತೆ ಕಾಣುತ್ತದೆ.

ಹಿಪ್ಪೊಕ್ಯಾಂಪಸ್ ಜಾತಿಯ ಕಡಲ ಕುದುರೆಯಲ್ಲಿ ಹೆಣ್ಣುಗಂಡುಗಳ ದೇಹ ರಚನೆ ಸ್ವಲ್ಪ ಬೇರೆ ಬೇರೆ. ಗಂಡಿನಲ್ಲಿ ಉದರಭಾಗದ ತಳದಲ್ಲಿ ದೇಹಕ್ಕೆ ಅಂಟಿ




ಕಡಲ ಕುದುರೆ: A: ಗಂಡು; B: ಹೆಣ್ಣು

ಕೊಂಡಂತೆ ಕಾಂಗರೂ ಪ್ರಾಣಿಗಳಿಗಿರುವಂತೆ ಒಂದು ಕಾಪುಗೂಡು ಸಂಚಿಯಿದೆ (ಬ್ರೂಡ್ ಪೌಚ್). ಈ ಸಂಚಿಯ ಮುಂಭಾಗದಲ್ಲಿ ಒಂದು ಚಿಕ್ಕ ರಂಧ್ರವಿದೆ. ಋತುಗಾಲ ಬಂದಾಗ ಹೆಣ್ಣು ಗಂಡನ್ನು ಹುಡುಕಿ ಬಂದು ಶೃಂಗಾರವಿಲಾಸವನ್ನು ಪ್ರಾರಂಭಿಸುತ್ತದೆ. ತನ್ನ ಜನನೇಂದ್ರಿಯದಿಂದ ಒಂದು ಅಂಡ ನಿಕ್ಷೇಪವನ್ನು ಬೆಳೆಸಿಕೊಂಡು ಗಂಡಿನ ಸಂಚಿಯಲ್ಲಿ ತನ್ನ ಅಂಡಾಣುಗಳನ್ನು ತುಂಬುತ್ತದೆ. ಅಂಡಾಣುಗಳು ಸಂಚಿಯನ್ನು ಸೇರುವಾಗ ಗಂಡಿನ ಶುಕ್ರಾಣುಗಳಿಂದ ಸೇಚನಗೊಳ್ಳುತ್ತವೆ. ಈ ಕ್ರಿಯೆ ಆದ ಮೇಲೆ ರಂಧ್ರ ಮುಚ್ಚಿಹೋಗುತ್ತದೆ. ಸಂಚಿಯ ಒಳ ಗೋಡೆಯ ಪೊರೆಯಲ್ಲಿ ಉತ್ಪತ್ತಿಯಾಗುವ ಸ್ರಾವ ಬೆಳೆಯುವ ಭ್ರೂಣಗಳಿಗೆ ಪೋಷಕಾಂಶವನ್ನು ಒದಗಿಸುತ್ತದೆ. ಗಂಡು ಪ್ರಾಣಿಯೇ ಅಂಡಾಣುಗಳನ್ನು ಸಂಚಿಯಲ್ಲಿ ಧರಿಸಿ ಪೋಷಣೆ ಕೊಟ್ಟು ಮರಿಗಳು ಬೆಳೆವ ವರೆಗೂ ದಾದಿತನ ಮಾಡುತ್ತದೆ. ಸಂಚಿಯಲ್ಲಿ 40–45 ದಿನಗಳ ಕಾಲ ಬೆಳೆದ ಮೇಲೆ ಮರಿಗಳು ಒಂದೊಂದಾಗಿ ಹೊರಬರುತ್ತವೆ. ಮರಿಗಳು ಹೊರಬರುವಾಗ ಗಂಡು ತನ್ನ ಹೊಟ್ಟೆಯನ್ನು ಬಂಡೆಗೊ ಅಥವಾ ಚಿಪ್ಪಿಗೊ ಉಜ್ಜುವುದನ್ನು ನೋಡಿದರೆ ಅದು ಪ್ರಸವವೇದನೆಯನ್ನು ಅನುಭವಿಸುತ್ತಿರುವಂತೆ ಕಾಣುತ್ತದೆ.

ದಕ್ಷಿಣ ಆಸ್ಟ್ರೇಲಿಯದ ತೀರಪ್ರದೇಶಕ್ಕೆ ಸೀಮಿತವಾಗಿರುವ ಫಿಲ್ಲೋಟೆರಿಕ್ಸ್ ಈಕ್ವಸ್ ಎಂಬ ಜಾತಿಯನ್ನೂ ಕಡಲ ಕುದುರೆಯೆಂದು ಕರೆಯುವುದುಂಟು. ಇದರಲ್ಲಿ ದೇಹದ ಮೇಲಿನಿಂದ ಹೊರಚಾಚಿರುವ ಉಪಾಂಗಗಳು ಜೊಂಡಿನ ಬಣ್ಣ ರಚನೆಗಳಿಂದ ಕೂಡಿರುವುದರಿಂದ ಅವನ್ನು ಅವುಗಳ ಪರಿಸರದಲ್ಲಿ ಗುರುತಿಸುವುದು ಬಹಳ ಕಷ್ಟ. (ಬಿ.ಎಸ್.ಬಿ.)

**ಕಡಲ ಗಿಣಿ:** ಕೆರಾಡ್ರಿಫಾರ್ಮಿಸ್ ಗಣದ ಆಲ್ಸಿಡೀ ಕುಟುಂಬಕ್ಕೆ ಸೇರಿದ ಹಕ್ಕಿ (ಪಫಿನ್). ಇದರ ಆಕಾರ ಗಿಣಿಯಂತಿದ್ದು ಕಡಲ ಸಮೀಪದಲ್ಲಿ ವಾಸಮಾಡುವುದರಿಂದ ಇದಕ್ಕೆ ಈ ಹೆಸರು. ಇದು ಸದಾ ನೀರಿನಲ್ಲಿ ಬೆಂಡಿನಂತೆ ತೇಲುತ್ತ–ಮುಳುಗುತ್ತ ಕಾಲ ಕಳೆಯುತ್ತದೆ. ಉತ್ತರ ಮತ್ತು ದಕ್ಷಿಣ ಅಮೆರಿಕದ ಕೆಲವು ಪ್ರದೇಶದಲ್ಲಿ ಇದು ಸಾಮಾನ್ಯ. ಇದು ಆಕ್ ಹಕ್ಕಿಯ ಸಂಬಂಧಿ. ಇದರ ಕಾಲುಗಳು ಬಹಳ ಹಿಂದಕ್ಕಿರುವುದರಿಂದ ಭೂಮಿಯ ಮೇಲೆ ನಿಂತಾಗ ಕುಳಿತ ಮನುಷ್ಯನಂತೆ ಕಾಣುವುದು. ಹಕ್ಕಿ ದೊಡ್ಡ ಗಾತ್ರದ್ದು. ತಲೆಯೂ ಸಹ ಶರೀರಕ್ಕೆ ಹೋಲಿಸಿದರೆ ಮಿತಿಮೀರಿ ಬೆಳೆದಂತೆ ಕಾಣುತ್ತದೆ. ತಲೆಯ ಇಕ್ಕೆಡೆಗಳಲ್ಲಿ ಬಿಳಿಮಚ್ಚೆಯಿದೆ. ಕಣ್ಣಿನ ಹಿಂಭಾಗದಲ್ಲಿ ಬಂಗಾರದ ಬಣ್ಣದ ಪುಕ್ಕಗಳಿವೆ. ಕೊಕ್ಕು ತುಂಬ ದೊಡ್ಡದಾಗಿದ್ದು ಮುಖವಾಡದಂತೆ ಕಾಣುತ್ತದೆ. ಇದರಿಂದಾಗಿ ಹಕ್ಕಿ ಅಷ್ಟು ಆಕರ್ಷಕವಾಗಿಲ್ಲ. ಕೊಕ್ಕಿನ ವಿಚಿತ್ರವಾದ ರಚನೆಗೆ ಕಾರಣ ಗೊತ್ತಿಲ್ಲ. ಇದು ಸಮುದ್ರದಡದಲ್ಲಿ ಗೂಡನ್ನು ಕಟ್ಟಿ ಮೊಟ್ಟೆಯಿಡುತ್ತದೆ. ಸಮುದ್ರದಲ್ಲಿ ಸಿಗುವ ಮೀನು ಮುಂತಾದ ಪ್ರಾಣಿಗಳು ಇದರ ಆಹಾರ.

ಕಡಲ ಗಿಣಿಗಳು ಯಾವಾಗಲೂ ನೀರಲ್ಲಿ ವಾಸಮಾಡುವುದರಿಂದ ಈಜುವುದಕ್ಕೆ ಅನುಕೂಲಕರವಾದ ಅಂಗರಚನೆಗಳನ್ನು ಪಡೆದಿವೆ. ದೋಣಿಯಾಕಾರದ ದೇಹ, ಜಾಲಪಾದಗಳುಳ್ಳ ಕಾಲುಗಳು—ಇವು ಈಜಲು ಸಹಕಾರಿಯಾಗಿವೆ. ಮೈತುಂಬ ಪುಕ್ಕಗಳಿರುವುದಲ್ಲದೆ ಚರ್ಮದ ಅಡಿಯಲ್ಲಿ ಒಂದು ಪದರ ಕೊಬ್ಬು ಇರುವುದರಿಂದ ದೇಹದಲ್ಲಿ ಉಷ್ಣತೆಯನ್ನು ಕಾಪಾಡುವುದು ಸುಲಭ. ಅಲ್ಲದೆ ಇವು ಯಾವಾಗಲೂ ಈಜುತ್ತಲೇ ಇರುವುದರಿಂದ ರೆಕ್ಕೆಗಳು ಅನುಪಯುಕ್ತವಾಗಿ ಕ್ಷೀಣಗೊಂಡಿವೆ.

(ಜಿ.ಎಂ.ಬಿ.)

**ಕಡಲ ಚಿಟ್ಟೆ:** ತೇಲುಜೀವನಕ್ಕೆ ಹೊಂದಿಕೊಂಡು ಸಾಗರದಲ್ಲಿ ಸ್ವೇಚ್ಛೆಯಾಗಿ ಈಜಾಡುವ ಹಲವಾರು ಜಾತಿಯ ಜಠರಪಾದಿ ಮೃದ್ವಂಗಿಗಳು (ಸೀ ಬಟರ್‌ಫ್ಲೈ). ಗ್ಯಾಸ್ಟ್ರಪೊಡ ವರ್ಗದ ಒಪಿಸ್ತೊಬ್ರಾಂಕಿಯ ಗಣದಲ್ಲಿನ ಟಿರಾಪೊಡ ಉಪಗಣಕ್ಕೆ ಸೇರಿವೆ. ಈ ಉಪಗಣ ಮೃದ್ವಂಗಿಗಳ ಗುಂಪಿನಿಂದ ಬೇರೆಯಾದುದೆಂದು ಒಂದು ಕಾಲದಲ್ಲಿ ಭಾವಿಸಲಾಗಿತ್ತು. ಆದರೆ ಕಡಲ ಚಿಟ್ಟೆಗಳಲ್ಲಿ ಮೃದ್ವಂಗಿ ವಂಶದ ಕೆಲವು ಲಕ್ಷಣಗಳನ್ನು ಕಂಡುಹಿಡಿದ ಮೇಲೆ ಇವನ್ನು ಒಪಿಸ್ತೊಬ್ರಾಂಕಿಯ ಗಣಕ್ಕೆ ಸೇರಿಸಲಾಯಿತು. ಅಲ್ಲದೆ ಇವಕ್ಕೂ ಕಡಲ ಮೊಲಗಳಿಗೂ (ನೋಡಿ)ಹಲವಾರು ಸಮಾನ ಗುಣಲಕ್ಷಣಗಳಿವೆ.

ಕಡಲ ಚಿಟ್ಟೆಗಳ ವಿಶಿಷ್ಟ ಲಕ್ಷಣವೆಂದರೆ ಅವುಗಳ ಬಾಯಿ ಮತ್ತು ಕುತ್ತಿಗೆಯ ಇಕ್ಕಡೆಗಳಲ್ಲಿ ಈಜುರೆಕ್ಕೆಗಳಾಗಿ ಮಾರ್ಪಾಟಾಗಿರುವ ಅಗಲವಾದ ಎರಡು ಪಾರ್ಶ್ವ ಪಾದಗಳು (ಪ್ಯಾರಪೋಡಿಯ). ಚಿಟ್ಟೆಯ ರೆಕ್ಕೆಯಂತಿರುವ ಇವುಗಳ ನೆರವಿನಿಂದ




ಕಡಲ ಚಿಟ್ಟೆಯ ಎರಡು ಜಾತಿಗಳು : A: ಕ್ಯಾವೊಲಿನಿಯ, B: ಕ್ಲಿಯೋನ್

ಕಡಲ ಚಿಟ್ಟೆಗಳು ನೀರಿನಲ್ಲಿ ಸರಾಗವಾಗಿ ಈಜಬಲ್ಲವು. ಅಲ್ಲದೆ ಇವಕ್ಕೆ ಸುಂದರವಾದ ಬಣ್ಣವೂ ಇದೆ. ಈ ಕಾರಣಗಳಿಂದಾಗಿ ಇವಕ್ಕೆ ಕಡಲ ಚಿಟ್ಟೆಗಳೆಂಬ ಹೆಸರು ಬಂದಿದೆ. ಕಡಲ ಚಿಟ್ಟೆಗಳಿಗೆ ಸಾಗರದ ಸೂಕ್ಷ್ಮಜೀವಿಗಳೇ ಆಹಾರ.

ಈಜುರೆಕ್ಕೆಗಳ ಮೇಲಿರುವ ಸೂಕ್ಷ್ಮವಾದ ಕೂದಲುಗಳ (ಸಿಲಿಯ) ಚಲನೆಯಿಂದ ಆಹಾರವನ್ನು ತಮ್ಮ ಬಳಿಗೆ ಸೆಳೆದುಕೊಳ್ಳುತ್ತವೆ. ಕೆಲವು ಕಡಲ ಚಿಟ್ಟೆಗಳಲ್ಲಿ ತೆಳು ಹಾಗೂ ಪಾರದರ್ಶಕವಾದ ಚಿಪ್ಪಿದೆ. ಉಳಿದವುಗಳಲ್ಲಿ ಇಲ್ಲ. ಇದರ ಆಧಾರದ ಮೇಲೆ ಟಿರಾಪೊಡ ಉಪಗಣವನ್ನು ಎರಡು ವಿಭಾಗಗಳಾಗಿ ವಿಂಗಡಿಸಿದ್ದಾರೆ. 1 ಟಿರಾಪೊಡ ತೀಕೊಸೊಮ್ಯಾಟ ಮತ್ತು 2 ಟಿರಾಪೊಡ ಜಿಮ್ನೊಸೊಮ್ಯಾಟ.

ಟಿರಾಪೊಡ ತೀಕೊಸೊಮ್ಯಾಟದ ಪ್ರಾಣಿಗಳಲ್ಲಿ ಮ್ಯಾಂಟಲ್ ಕುಹರ, ಚಿಪ್ಪು ಮತ್ತು ಒಂದು ಜೊತೆ ಕ್ಷೀಣವಾದ ಕೋಡುಬಳ್ಳಿಗಳು (ಟೆಂಟಕಲ್ಸ್) ಇವೆ. ಆದರೆ ತಲೆಯಾಗಲಿ ಕಣ್ಣುಗಳಾಗಲಿ ಸ್ಪಷ್ಟವಾಗಿಲ್ಲ. ಈಜುರೆಕ್ಕೆಗಳ ಅಂಚು ದೇಹದ ಮುಂತುದಿಯಲ್ಲಿ ಪರಸ್ಪರ ಕೂಡಿಕೊಂಡಿವೆ. ಉಸಿರಾಟದ ಅಂಗವಾಗಿ ಒಂದೇ ಒಂದು ಟಿನಿಡಿಯಮ್ (ಅಥವಾ ಕಿವಿರು) ಇದೆ. ಗುದದ್ವಾರ ಮ್ಯಾಂಟಲ್ ಕುಹರದ ಬಲಭಾಗದಲ್ಲಿದೆ. ಈ ಗುಂಪಿನ ಪ್ರಾಣಿಗಳು ಮುಖ್ಯವಾಗಿ ಸಾಗರದ ಸೂಕ್ಷ್ಮ ಜೀವಿಗಳನ್ನು ತಿಂದು ಬದುಕುತ್ತವೆ. ಇವನ್ನು ಲಿಮಾನಿಸಿಡೀ, ಕ್ಯಾವೊಲಿನಿಡೀ ಮತ್ತು ಸಿಂಬುಲಿಡೀ ಎಂಬ ಮೂರು ಕುಟುಂಬಗಳಾಗಿ ವಿಂಗಡಿಸಿದ್ದಾರೆ. ಲಿಮಾನಿಸಿಡೀ ಕುಟುಂಬದ ಪ್ರಾಣಿಗಳಲ್ಲಿ ಚಿಪ್ಪು ಎಡಕ್ಕೆ ಸುರುಳಿ ಸುತ್ತಿಕೊಂಡಿರುವುದೂ ಅದಕ್ಕೆ ಮುಚ್ಚಳವಿರುವುದೂ ಮ್ಯಾಂಟಲ್ ಕುಹರ ದೇಹದ ಹಿಂಭಾಗದಲ್ಲಿರುವುದೂ ಮುಖ್ಯ ಲಕ್ಷಣಗಳು. ಉದಾಹರಣೆ : ಲಿಮಾಸಿನ. ಕ್ಯಾವೊಲಿನಿಡೀ ಕುಟುಂಬದ ಪ್ರಾಣಿಗಳ ಚಿಪ್ಪು ನೀಳವಾಗಿ ಎರಡು ತಟ್ಟೆಗಳಿಂದ ಕೂಡಿದೆ. ಉದಾಹರಣೆ: ಕ್ಯಾವೊಲಿನಿಯ. ಸಿಂಬುಲಿಡೀ ಕುಟುಂಬದಲ್ಲಿ ವಯಸ್ಕ ಪ್ರಾಣಿಗೆ ಚಿಪ್ಪು ಇಲ್ಲ. ಆದರೆ ಸಂಯೋಜಿ ಅಂಗಾಂಶ (ಕನೆಕ್ಟಿವ್ ಟಿಷ್ಯು :) ಚರ್ಮದ ತಳದಲ್ಲಿ ಗಟ್ಟಿಯಾಗಿ ಮಿಥ್ಯಶಂಖವಾಗಿ ಮಾರ್ಪಟ್ಟಿದೆ. ಉದಾಹರಣೆ : ಸಿಂಬುಲಿಯ.

ಟಿರಾಪೊಡದ ಎರಡನೆಯ ಗುಂಪಾದ ಟಿರಾಪೊಡ ಜಿಮ್ನೊಸೊಮ್ಯಾಟದಲ್ಲಿ ಮ್ಯಾಂಟಲ್ ಕುಹರ ಮತ್ತು ಚಿಪ್ಪು ಇಲ್ಲ. ತಲೆ ಸುಸ್ಪಷ್ಟವಾಗಿದೆ. ಅದರ ಮೇಲೆ ಎರಡು ಜೊತೆ ಕೋಡುಬಳ್ಳಿಗಳಿವೆ. ಈಜುರೆಕ್ಕೆಗಳಿಗೂ ತಲೆಗೂ ಸಂಬಂಧವಿಲ್ಲ. ಈ ಗುಂಪಿನ ಪ್ರಾಣಿಗಳು ಮುಖ್ಯವಾಗಿ ಮಾಂಸಾಹಾರಿಗಳು. ಈ ಗುಂಪಿನಲ್ಲಿ ನಾಲ್ಕು ಮುಖ್ಯ ಕುಟುಂಬಗಳಿವೆ : ನ್ಯೂಮೋಡರ್ಮಾಟಿಡೀ, ಕ್ಲಿಯೊಸೋಪ್ಸಿಡೀ, ನೋಟೊಬ್ರಾಂಕಿಡೀ ಮತ್ತು ಕ್ಲಿಯೋನಿಡೀ. ನ್ಯೂಮೋಡರ್ಮಾಟಿಡೀಯಲ್ಲಿಮೂಲಕಿವಿರು ಇಲ್ಲ. ಆದರೆ ದೇಹದ ಹಿಂಭಾಗದಲ್ಲಿ ಆನುಷಂಗಿಕ ಕಿವಿರು ಇವೆ. ಕ್ಲಿಯೋನಿಡೀ ಕುಟುಂಬದ ಪ್ರಾಣಿಗಳಲ್ಲಿ ಯಾವ ಬಗೆಯ ಕಿವಿರುಗಳೂ ಇಲ್ಲ. ಇವುಗಳ ಗಾತ್ರ ಸಾಮಾನ್ಯವಾಗಿ ಸಣ್ಣದು. ಕೆಲವನ್ನಂತೂ ಸೂಕ್ಷ್ಮದರ್ಶಕದಲ್ಲೇ ನೋಡಬೇಕು. ಉದಾಹರಣೆ : ನ್ಯೂಮೋಡರ್ಮ ಮತ್ತು ಕ್ಲಿಯೋನ್ ಇತ್ಯಾದಿ.

ಸಾಗರದ ಕೆಲವಡೆ ಕಡಲ ಚಿಟ್ಟೆಗಳು ಅತ್ಯಧಿಕ ಸಂಖ್ಯೆಯಲ್ಲಿ ಕಂಡುಬರುತ್ತವೆ. ಇಂಥಲ್ಲಿ ಇವು ರಾತ್ರಿಯ ವೇಳೆ ಮೇಲ್ಪದರದ ನೀರಿನಲ್ಲಿದ್ದು ಹಗಲು ಬಿಸಿಲಿದ್ದಾಗ ತಳಭಾಗಕ್ಕೆ ಸೇರುತ್ತವೆ. ಹೆರ್ರಿಂಗ್ ಮೀನುಗಳಿಗೆ ತಿಮಿಂಗಿಲಗಳಿಗೆ ಆಹಾರ ಇವು. ತೀಕೊಸೊಮ್ಯಾಟದ ಕಡಲ ಚಿಟ್ಟೆಗಳು ಅಸಂಖ್ಯಾತವಾಗಿರುವ ಕಡೆಗಳಲ್ಲಿ ಅವು ಸತ್ತು ಹೋದ ಮೇಲೆ ಅವುಗಳ ಚಿಪ್ಪುಗಳು ಸಾಗರದ ತಳಭಾಗದಲ್ಲಿ ಸಂಗ್ರಹವಾಗಿ ಟಿರಾಪೊಡ ಊಜ಼್ ಅಥವಾ ಕಡಲ ಚಿಟ್ಟೆಯ ದಿಣ್ಣೆಗಳಾಗಿ ಪರಿಣಮಿಸುತ್ತವೆ.

(ಜಿ.ಎ.ಎಸ್.)

**ಕಡಲ ಚಿರತೆ :** ಹೈಡ್ರುರ್ಗ ಲೆಪ್ಟೋನಿಕ್ಸ್ ಎಂಬ ವೈಜ್ಞಾನಿಕ ನಾಮವುಳ್ಳ ಸಮುದ್ರವಾಸಿ ಸಸ್ತನಿ (ಸೀ ಲೆಪರ್ಡ್). ಸೀಲ್ ಪ್ರಾಣಿಗಳ ಕುಟುಂಬವಾದ ಫೋಸಿಡೀಗೆ ಸೇರಿದೆ (ಗಣ ಪಿನ್ನಿಪಿಡಿಯ). ಕಡಲ ಕರಡಿ, ಕಡಲ ಆನೆ, ಕಡಲ ಸಿಂಹ ಮುಂತಾದುವು ಇದರ ಸಂಬಂಧಿಗಳು. ಇದರ ತೌರು ದಕ್ಷಿಣಮೇರು ಪ್ರದೇಶ. ದಕ್ಷಿಣ ಮೇರುವಿನ ಸೀಲ್ ಎಂದೂ ಇದನ್ನು ಕರೆಯುತ್ತಾರೆ. ಮಿರಮಿರನೆ ಮಿರುಗುವ ಹಳದಿ ಬಣ್ಣದ ಕೂದಲಿರುವ ಚರ್ಮ. ಚಿರತೆಗಳಿಗಿರುವಂತೆ, ಮೈಮೇಲೆ ಅಸಂಖ್ಯಾತ ಕಪ್ಪು ಮಚ್ಚೆಗಳು ಮತ್ತು ಇದರ ಕ್ರೂರಸ್ವಭಾವ ಇವುಗಳಿಂದಾಗಿ ಇದಕ್ಕೆ ಕಡಲ ಚಿರತೆಎಂಬಹೆಸರು ಬಂದಿದೆ. ಇತರ ಸೀಲ್ ಪ್ರಾಣಿಗಳಲ್ಲಿರುವಂತೆ ಇದರ ಹಿಂಗಾಲುಗಳು ಹಿಂದಕ್ಕೆ ಬಾಗಿವೆ. ಆದರಿಂದ ಇದಕ್ಕೆ ನೆಲದ ಮೇಲೆ ನಡೆಯಲಾಗುವುದಿಲ್ಲ. ಎರಡು ಜೊತೆ ಕಾಲುಗಳಲ್ಲೂ ಜಾಲಪಾದವಿದೆ. ಮೂಗಿನ ಹೊಳ್ಳೆಗಳು ಮೂತಿಯ ತುದಿಯಲ್ಲಿರುವುದರ ಬದಲು ಮೊಸಳೆಗಳಲ್ಲಿರುವಂತೆ ಮೂತಿಯ ಮೇಲ್ಭಾಗದಲ್ಲಿವೆ. ಹೀಗಿರುವುದು ಈಜುತ್ತಿರುವಾಗ ಉಸಿರಾಡಲು ಸಹಾಯಕ. ಕಿವಿಗಳಿಗೆ ಆಲಿಕೆಗಳಿಲ್ಲ. ಮೀನು ಇದರ ಪ್ರಧಾನ ಆಹಾರ. ಅಲ್ಲದೆ ಪೆಂಗ್ವಿನ್ ಹಕ್ಕಿಗಳನ್ನೂ ಇದು ಬೇಟೆಯಾಡುವುದು. ನೋಡಿ—ಸೀಲ್

(ಬಿ.ಎಸ್.ಬಿ.)

**ಕಡಲ ತೋಳ :** ಉತ್ತರವಲಯ ಸಮುದ್ರದಲ್ಲಿ ವಾಸಿಸುವ ಬಹು ದೊಡ್ಡ ಮೀನು (ಸೀ ವುಲ್ಫ್). ವೈಜ್ಞಾನಿಕ ನಾಮ ಅನಾರಿಕಸ್. ದೇಹ 6 ಅಡಿ ಉದ್ದವಿದೆ. ಚರ್ಮ ಜಾರುವಂತೆ ನಯವಾಗಿದ್ದು ಅದರ ಮೇಲೆ ಅಪೂರ್ಣ ಪೊರೆಗಳಿವೆ. ಬೆನ್ನಿನ ಈಜುರೆಕ್ಕೆ ದೇಹದ ಒಂದು ಕೊನೆಯಿಂದ ಇನ್ನೊಂದು ಕೊನೆಯವರೆಗೂ ಬೆಳೆದಿದೆ. ಹೊಟ್ಟೆಯ ಈಜುರೆಕ್ಕೆ ಬಾಲದ ವರೆಗೂ ವಿಸ್ತರಿಸಿದೆ. ಎದೆಯ ಮುಂಭಾಗದ ಈಜುರೆಕ್ಕೆ ದೊಡ್ಡದಾಗಿ ಗುಂಡಾಗಿದೆ. ಎದೆಯ ಹಿಂದಿನ ಈಜುರೆಕ್ಕೆ ಇಲ್ಲ. ಬಾಯಿಯಲ್ಲಿ ಬಲವಾಗಿರುವ ಮತ್ತು ಬಾಗಿರುವ ಹಲ್ಲುಗಳೂ ಎರಡು ಸಾಲು ದೊಡ್ಡ ರವೆಗಂತಿಗಳುಳ್ಳ ದವಡೆ ಹಲ್ಲುಗಳೂ ಇವೆ. ಬಾಯಂಗಳದ ಮಧ್ಯೆ ಅದೇ ತೆರನಾದ 2 ಸಾಲು ಹಲ್ಲುಗಳಿವೆ. ಅತ್ಯಂತ ಕ್ರೂರವಾದ ಪ್ರಾಣಿ ಎಂದು ಪ್ರಖ್ಯಾತವಾಗಿರುವ ಇದು ತನ್ನ ಹಲ್ಲುಗಳ ಸಹಾಯದಿಂದ ವಲ್ಕವಂತ ಪ್ರಾಣಿ ಮತ್ತು ಮೃದ್ವಂಗಿಗಳ ಗಟ್ಟಿಯಾದ ಚಿಪ್ಪುಗಳನ್ನು ಒಡೆದು ತಿಂದುಹಾಕುತ್ತದೆ. ಆದ್ದರಿಂದಲೇ ಇದಕ್ಕೆ ಕಡಲ ತೋಳ ಎಂದು ಹೆಸರು.

(ಎಸ್.ಎಪ್.ಕೆಹು.)

**ಕಡಲ ನಿಂಬೆ :** ಒಪಿಸ್ತೊಬ್ರಾಂಕಿಯ ಗಣದ ಡೋರಿಡೀ ಕುಟುಂಬಕ್ಕೆ ಸೇರಿದ ಜಠರಪಾದಿ ಮೃದ್ವಂಗಿಗಳ ಒಂದು ಜಾತಿ (ಸೀ ಲೆಮನ್). ವೈಜ್ಞಾನಿಕ ನಾಮ ಡೋರಿಸ್. ಕಡಲತೀರಗಳಲ್ಲಿ ಬಂಡೆಗಳ ಸಂದುಗಳಲ್ಲಿ ಮತ್ತು ಅವುಗಳ ಕೆಳಗೆ ವಾಸಿಸುತ್ತದೆ. ನಿಂಬೆಹಣ್ಣಿನ ಆಕಾರ ಹಾಗೂ ಬಣ್ಣದ ದೇಹವಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಇದರಲ್ಲಿ ಜಠರಪಾದಿಗಳ ವಿಶಿಷ್ಟ ಲಕ್ಷಣವಾದ ಚಿಪ್ಪು ಸಂಪೂರ್ಣವಾಗಿ ನಶಿಸಿಹೋಗಿರುವುದರಿಂದ ಇದು ನಗ್ನದೇಹಿಯಾಗಿದೆ. ದೇಹದ ತುದಿಯಲ್ಲಿ ಒಂದು ಜೊತೆ ಚಿಕ್ಕ ಸ್ಪರ್ಶಕಗಳಿವೆ. ತಲೆಯ ಮೇಲೆ ಒಂದು ಜೊತೆ ಎಲೆಯ ರೂಪದ ಘ್ರಾಣೇಂದ್ರಿಯಗಳಿವೆ (ರೈನೋಫೋರು). ಗುದದ್ವಾರ ದೇಹದ ಬೆನ್ನಿನ ಭಾಗದಲ್ಲಿದೆ. ಇದರ ಸುತ್ತ ಎಲೆಯಾಕಾರದ ತೆಳುವಾದ ಕಿವಿರುಗಳಿವೆ. ಶ್ವಸನಕಾರ್ಯದಲ್ಲಿ ಸಹಕಾರಿಯಾಗಿರುವ ಇವನ್ನು ಗುದದ ಕಿವಿರುಗಳೆನ್ನುತ್ತಾರೆ. ಕಡಲ ನಿಂಬೆ ಮಾಂಸಾಹಾರಿ. ಕಠಿಣಚರ್ಮಿಗಳೇ ಇದರ ಮುಖ್ಯ ಆಹಾರ. ತನ್ನ ಮೊಟ್ಟೆಗಳನ್ನು ಒಂದು ಬಗೆಯ ಜಿಲಿಟನ್ನಿನಂಥ ವಸ್ತುವಿನಿಂದಾದ ಚೀಲದಲ್ಲಿ ತುಂಬಿ ಸಮುದ್ರದ ಜೊಂಡುಗಳಿಗೆ ಇದು ಅಂಟಿಸಿಡುತ್ತದೆ. ಒಂದೊಂದು ಚೀಲದಲ್ಲಿ ಸುಮಾರು ಆರು ಲಕ್ಷ ಮೊಟ್ಟೆಗಳಿರಬಹುದೆಂದು ಚಾರ್ಲ್ಸ್ ಡಾರ್ವಿನ್ ಎಣಿಕೆ ಹಾಕಿದ್ದಾನೆ.

(ಬಿ.ಎಸ್.ಬಿ.)

**ಕಡಲ ಪಶು :** ಸೈರೇನಿಯ ಗಣಕ್ಕೆ ಸೇರಿದ ಸಸ್ಯಾಹಾರಿ ಸಸ್ತನಿ (ಸೀ ಕೌ). ಇದರಲ್ಲಿ 2 ಜಾತಿಗಳಿವೆ : ಡುಗಾಂಗ್ ಮತ್ತು ಮನಾಟಿ. ತಿಮಿಂಗಿಲದಂತೆಯೇ



ಚಿಕಾಗೊ ನ್ಯಾಚುರಲ್ ಹಿಸ್ಟರಿ ಮ್ಯೂಸಿಯಂನಲ್ಲಿ ಇಟ್ಟಿರುವ ಕಡಲ ಪಶು (ಮನಾಟಿ)

ಇದ್ದರೂ ಇವು ಆ ಜಾತಿಗೆ ಸೇರಿದವಲ್ಲ. ಇವಕ್ಕೂ ತಿಮಿಂಗಿಲದಂತೆ ಚಪ್ಪಟೆಯಾದ ಬಾಲವೂ ದೋಣಿ ಮೀಟುವ ಹುಟ್ಟಿನಂಥ ಮುಂಗಾಲೂ ಇವೆ. ತಿಮಿಂಗಿಲದಂತೆಯೇ ಹಿಂಗಾಲು ಇಲ್ಲ. ಇವು ಸಮುದ್ರದ ದಡದ ಸಮೀಪದಲ್ಲಿಯೇ ವಾಸಿಸುತ್ತವೆ. ಆಳ ನೀರಿಗೆ ಹೋಗುವುದೇ ಇಲ್ಲ. ಭಾರತ ಮತ್ತು ಆಸ್ಟ್ರೇಲಿಯ ಸಮುದ್ರತೀರದಲ್ಲಿ ಸಿಗುತ್ತವೆ. ಕಡಲ ಪಶುವಿಗೆ ಸಣ್ಣ ಕಣ್ಣು, ಚಿಕ್ಕ ಬಾಯಿ ಇದೆ. ಕಿವಿಗಳಿಗೆ ಆಲಿಕೆಗಳಿಲ್ಲ. ಸಣ್ಣ ತೂತು ಮಾತ್ರ ಇವೆ. ಸುಕ್ಕುಗಟ್ಟಿದ ಮರದ ತೊಗಟೆಯಂಥ ದಪ್ಪ ಚರ್ಮ, ಚರ್ಮದ ಕೆಳಗೆ ದಪ್ಪನಾದ ಕೊಬ್ಬಿನ ಬ್ಲಬರ್ ಇದೆ. ಕೆಲವು ವೇಳೆ ಚರ್ಮದ ಮೇಲೆ ವಿರಳವಾಗಿ ತೆಳುವಾದ ಕೂದಲು ಇರುತ್ತವೆ. ಜಡಸ್ವಭಾವದ ಸಾಧುಪ್ರಾಣಿ ಇದು. ಸಮುದ್ರಜೊಂಡೂ ಇತರ ಜಲಸಸ್ಯಗಳೂ ಇದರ ಆಹಾರ. ಒಂದು ಸಲಕ್ಕೆ ಒಂದು ಮರಿ ಹಾಕುತ್ತದೆ. ಮರಿಯನ್ನು ತಾಯಿ ತುಂಬ ಅಕ್ಕರೆಯಿಂದ ಸಾಕುತ್ತದೆ. ಹಾಲು ಕುಡಿಸುವಾಗ ಮರಿಯ ತಲೆಯನ್ನೂ ಎದೆಯನ್ನೂ ನೀರಿನಿಂದ ಮೇಲಕ್ಕೆತ್ತಿ ಮುಂಗಾಲುಗಳಿಂದ ಮನುಷ್ಯರಂತೆ ಹಿಡಿದುಕೊಳ್ಳುತ್ತದೆ. ಈ ಮಾನವಸದೃಶ ಗುಣವೇ ಹಿಂದೆ ಇವನ್ನು ಜಲಕನ್ಯೆ ಎಂದು ಕರೆಯಲು ಆಧಾರ

ವಾಗಿರಬಹುದು. ಮನಾಟಿ ಉಷ್ಣದೇಶದ ನದಿಗಳಲ್ಲಿ ವಾಸಿಸುತ್ತದೆ. ಡುಗಾಂಗ್ ಮನಾಟಿಗಿಂತ ಚಿಕ್ಕದು. 5'–7'ಗಳಷ್ಟು ಉದ್ದವಿದೆ. ಅರ್ಧಚಂದ್ರಾಕೃತಿಯ ಬಾಲವಿದೆ. ಕಾಲಿನಲ್ಲಿ ಬೆರಳುಗಳಿಲ್ಲ. ಹಿಂದಿನ ಕಾಲದಲ್ಲಿ ನೂರಾರು ಪ್ರಾಣಿಗಳುಳ್ಳ ದೊಡ್ಡ ಮಂದೆಗಳಾಗಿ ಸಮುದ್ರದಲ್ಲಿರುತ್ತಿದ್ದ ಇವು ಮನುಷ್ಯರನ್ನು ಕಂಡರೆ ಹೆದರುತ್ತಿರಲಿಲ್ಲ. ಆತ ಹತ್ತಿರ ಬಂದು ಮುಟ್ಟಿದರೂ ಸುಮ್ಮನಿರುತ್ತಿದ್ದುವು. ಆದರೆ ಈಗ ಅವುಗಳ ಸಂಖ್ಯೆ ತುಂಬ ಕಡಿಮೆಯಾಗಿದೆಯಲ್ಲದೆ ಅವಕ್ಕೆ ಮನುಷ್ಯನಲ್ಲಿದ್ದ ಸಲಿಗೆಯೂ ಹೋಗಿಬಿಟ್ಟಿದೆ. (ಎಸ್.ಎನ್.ಕೆಯು.)

**ಕಡಲ ಬಾಣ :** ಲಾಲಿಗೊ ಜಾತಿಯ ಹಲವಾರು ಶಿರಪಾದಿ ಮೃದ್ವಂಗಿಗಳ ಸಾಮಾನ್ಯ ಹೆಸರು (ಸೀ ಆರೊ).

ಇದರಲ್ಲಿ ಲಾಲಿಗೊ ಪೀಲಿ ಮತ್ತು ಲಾಲಿಗೊ ಒಪಾಲೆಸೆನ್ಸ್ ಎಂಬೆರಡು ಮುಖ್ಯ ಪ್ರಭೇದಗಳಿವೆ. ಇವುಗಳಲ್ಲಿ ಮೊದಲನೆಯದು ಅಟ್ಲಾಂಟಿಕ್ ಸಾಗರ ತೀರಪ್ರದೇಶದ ನೋವ ಸ್ಕೋಷಿಯದಿಂದ ಹಿಡಿದು ಫ್ಲಾರಿಡದ ವರೆಗೆ ಹರಡಿದೆ. ದೇಹದ ಉದ್ದ ಸುಮಾರು 8', ವ್ಯಾಸ ಸುಮಾರು 2". ಎರಡನೆಯದು ಚೀನದ ಸಾಗರದಲ್ಲಿ ಕಂಡುಬರುತ್ತದೆ. ಇವೆರಡರಲ್ಲೂ ದೇಹದ ಮುಂತುದಿಯಲ್ಲಿರುವ ತಲೆಯಲ್ಲಿ ಎಂಟು ಬಾಹುಗಳೂ ಎರಡು ಪರಿಗ್ರಾಹಿ ಬಾಹುಗಳೂ ಇವೆ. ನೀರಿನಲ್ಲಿ ಈಜುವಾಗ ಬಾಹುಗಳು ಮುಂಚಾಚಿಕೊಳ್ಳುವುದರಿಂದ ಈ ಪ್ರಾಣಿ ಬಾಣವನ್ನು ಹೋಲುತ್ತದೆ. ಆದ್ದರಿಂದಲೇ ಈ ಪ್ರಾಣಿಗೆ ಈ ಹೆಸರು. ಲಾ. ಒಪಾಲೆಸೆನ್ಸ್ ಚೀನೀಯರಲ್ಲಿ ರುಚಿಕರ ಆಹಾರವೆನಿಸಿದೆ. (ಬಿ.ಎನ್.ಬಿ.)

**ಕಡಲ ಬೀಸಣಿಗೆ :** ಗೋರ್ಗೋನಿಯ (ಗೋರ್ಗೋನಿಯ ಫ್ಲಾಬೆಲಮ್) ಜಾತಿಯ ಒಂದು ಸೀಲೆಂಟರೇಟ್ ಪ್ರಾಣಿ (ಸೀ ಫ್ಯಾನ್). ಆಲ್ಸಿಯೊನೇರಿಯ ಗಣದ ಗೋರ್ಗೋನಿಡೀ ಕುಟುಂಬಕ್ಕೆ ಸೇರಿದೆ. ಉಷ್ಣ ಮತ್ತು ಸಮಶೀತೋಷ್ಣ ವಲಯಗಳ ಸಾಗರದ ಉತ್ತಳ ಭಾಗಗಳಲ್ಲಿ ಇದರ ವಾಸ. ಶಾಖೋಪಶಾಖೆಗಳಿಂದ ಕೂಡಿ ದಿಂಡೊಂದಕ್ಕೆ ಅಂಟಿರುವ ಇದರ ದೇಹ ನೆಟ್ಟಗೆ ನಿಂತ ಮರದಂತೆ ಅಥವಾ ಬಿಚ್ಚಿದ ಬೀಸಣಿಗೆಯಂತೆ ಕಾಣುತ್ತದೆ. ದೇಹದ ಮೇಲೆ ಅಸಂಖ್ಯಾತ ಸಣ್ಣ ಸಣ್ಣ ಪಾಲಿಪ್ ಜೀವಿಗಳ ಸಮುದಾಯವಿರುತ್ತದೆ. ಈ ಕೊಂಬೆರೆಂಬೆಗಳು ಸಾಮಾನ್ಯವಾಗಿ ಒಂದೇ ಮಟ್ಟದಲ್ಲಿರುತ್ತವೆ. ಇದು ಸ್ರವಿಸುವ ಅಂಕರ್‌ಕಂಕಾಲ (ಎಂಡೊಸ್ಕೆಲಿಟನ್) ಕ್ರಮೇಣ ಗಟ್ಟಿಗೊಂಡು ಕೊಂಬಿನ ರೂಪ ಪಡೆಯುತ್ತದೆ. ದೇಹ ಹಳದಿ ಅಥವಾ ಕೆಂಬಣ್ಣವಾಗಿದ್ದು 80 ಸೆಂ. ಮೀ. ಎತ್ತರ ಬೆಳೆಯಬಲ್ಲುದು. ಗೋ.ಫ್ಲಾಬೆಲಮ್‌ನಲ್ಲಿ ರೆಂಬೆಕೊಂಬೆಗಳನ್ನು ಅಸಂಖ್ಯಾತ ಅಡ್ಡರೆಂಬೆಗಳು ಬಂಧಿಸುವುದರಿಂದ ಜೀವಿ ಸಮುದಾಯ ಒಂದು ಚಪ್ಪಟೆಯಾದ ರಂಧ್ರಗಳಿಂದ ಕೂಡಿದ ಜರಡಿಯಂತೆ ಅಥವಾ ಬಲೆಯಂತೆ ಕಾಣುತ್ತದೆ. ಆದರೆ ಗೋ.ವೆರ್ರುಕೋಸದಲ್ಲಿ ನೆಟ್ಟಗೆ ಬೆಳೆಯುವ ರೆಂಬೆಗಳನ್ನು ಬಂಧಿಸುವ ಅಡ್ಡರೆಂಬೆಗಳಿರುವುದಿಲ್ಲ. ಸತ್ತ ಕಡಲ ಬೀಸಣಿಗೆಗಳ ಕಂಕಾಲಗಳನ್ನು ಜನ ಆಯ್ದು ಅಲಂಕಾರದ ವಸ್ತುಗಳಾಗಿ ಬಳಸುತ್ತಾರೆ. (ಬಿ.ಎನ್.ಬಿ.)

**ಕಡಲ ಮೊಲ :** ಒಪಿಸ್ತೊಬ್ರಾಂಕಿಯ ಗಣ ಹಾಗೂ ಟೆಕ್ಟಿಬ್ರಾಂಕಿಯೇಟ ಉಪಗಣದ ಅಪ್ಲೀಸಿಡೀ ಕುಟುಂಬಕ್ಕೆ ಸೇರಿದ ಒಂದು ಜಠರಪಾದಿ ಮೃದ್ವಂಗಿ. ಅಪ್ಲೀಸಿಯ ಇದರ ವೈಜ್ಞಾನಿಕ ನಾಮ. ಸಾಮಾನ್ಯವಾಗಿ ಪ್ರಪಂಚದ ಎಲ್ಲ ಕಡಲುಗಳಲ್ಲೂ ಇದು ವಾಸಿಸುತ್ತದೆ. ಮುಖ್ಯವಾಗಿ ಮರಳು ಅಥವಾ ಮಣ್ಣಿನ ತೀರ ಪ್ರದೇಶ ಇದಕ್ಕೆ ಬಹು ಇಷ್ಟವಾದ ವಾಸಸ್ಥಳ. ಅಲ್ಲಿ ತನ್ನ ಆಹಾರವಸ್ತುವಾದ ಕಡಲ ಪಾಚಿಯ ಮೇಲೆ ಹರಿದಾಡುತ್ತಿರುತ್ತದೆ. ಇದು ಬಸವನ ಹುಳುವನ್ನು ಹೋಲುತ್ತದೆ. ತಲೆಯ ಮೇಲೆ ಎರಡು ಜೊತೆ ಕೋಡುಬಳ್ಳಿಗಳಿವೆ. ಮೊದಲ ಜೊತೆ ಅಗಲವಾಗಿದ್ದು ಮೊಲದ ಕಿವಿಗಳಂತೆ ಪ್ರಮುಖವಾಗಿ ಕಾಣುವುದರಿಂದ ಈ ಪ್ರಾಣಿಗೆ ಕಡಲ ಮೊಲ ಎಂದು ಹೆಸರು ಬಂದಿದೆ, ಹಿಂದಿನ ಎರಡನೆಯ ಜೊತೆ ಕೋಡುಬಳ್ಳಿಗಳು ಮೊನಚಾಗಿದ್ದು ಘ್ರಾಣೇಂದ್ರಿಯಗಳಾಗಿ ಕೆಲಸ ಮಾಡುತ್ತವೆ. ಇವುಗಳ ಬುಡದ ಹೊರಪಾರ್ಶ್ವದಲ್ಲಿ ಒಂದು ಜೊತೆ ಕಣ್ಣುಗಳಿವೆ. ದೇಹದ ಪಶ್ಚಭಾಗದಲ್ಲಿ ಸ್ನಾಯುಮಯವಾದ ಪಾದದ ಪಕ್ಕದಿಂದ ಮೇಲ್ಮುಖನಾಗಿರುವ ಪಾರ್ಶ್ವಪಾದ (ಪ್ಯಾರಪೋಡಿಯ) ಎಂಬ ಎರಡು ಮಡಿಕೆಗಳು ಮೇಲೆ ಚಾಚಿವೆ. ಇವನ್ನು ರೆಕ್ಕೆಯಂತೆ ಬಡಿಯುವುದರ ಮೂಲಕ ನೀರಿನಲ್ಲಿದ್ದು ಈಜುತ್ತದೆ. ದೇಹದ ಮೇಲಿರುವ ಮ್ಯಾಂಟಲ್ ಪದರ ಕೂಡ ದೇಹದ ಮೇಲೆ ಚಾಚಿಕೊಂಡು ಚಿಪ್ಪನ್ನು ಮುಚ್ಚಿಬಿಡುತ್ತದೆ. ಇದರ ಫಲವಾಗಿ ಚಿಪ್ಪು ಮಾರ್ಪಟ್ಟು ತೆಳುವಾಗಿ ಪಾರದರ್ಶಕವಾಗಿರುತ್ತದೆ. ಅಲ್ಲದೆ ಶ್ವಸನಕಾರ್ಯದಲ್ಲಿ ನೆರವಾಗುವ ಒಂದು ಕಿವಿರು ಅಥವಾ ಕ್ಲೋಮ ಮ್ಯಾಂಟಲ್ ಕುಹರದ ಬಲಭಾಗದಲ್ಲಿ ಹಿಂದಕ್ಕೆ ಚಾಚಿರುತ್ತದೆ. ಮ್ಯಾಂಟಲ್ ಕುಹರವನ್ನು ಆವರಿಸುವ ಗೋಡೆಯಲ್ಲಿ ಕೆನ್ನೀಲಿ ಬಣ್ಣವನ್ನು ಸ್ರವಿಸುವ ಏಕಕೋಶಿಕ ಗ್ರಂಥಿಗಳಿವೆ, ಕೆಣಕಿದಾಗ ಈ ಪ್ರಾಣಿ ಆತ್ಮರಕ್ಷಣೆಗಾಗಿ ಈ ವರ್ಣಕಗಳನ್ನು ಹೊರಗೆಡವುತ್ತದೆ. ಇದು ಕಡಲ ಪಾಚಿಯನ್ನಲ್ಲದೆ, ವಲಯವಂತದ ಹುಳುಗಳು, ಮೃದ್ವಂಗಿ ಮತ್ತು ಕಠಿಣ ಚರ್ಮಿಗಳನ್ನು ತಿನ್ನುತ್ತದೆ. ಬಾಯ ಬಳಿ ದಪ್ಪನಾದ ಸ್ನಾಯುಮಯವಾದ ಎರಡು ತುಟಿಗಳಿವೆ. ಜಠರ ಸಂಕೀರ್ಣವಾಗಿದ್ದು ಅದಕ್ಕೆ ಮೇತೆ (ಕ್ರಾಪ್), ಸ್ನಾಯುಮಯವಾದ ಗಿಜ಼ರ್ಡ್ ಮತ್ತು ಆನುಷಂಗಿಕ ಅಂಧನಾಳಗಳಿವೆ. ಕಡಲ ಮೊಲ ದ್ವಿಲಿಂಗ ಪ್ರಾಣಿ. ಗರ್ಭ ಕಟ್ಟಿದ ಮೊಟ್ಟೆಗಳನ್ನು ಸರದಂತೆ ಉದ್ದುದ್ದನಾಗಿ ಇಡುತ್ತದೆ. ಪೂರ್ವ ಕಾಲದಲ್ಲಿ ಜನ ಈ ಪ್ರಾಣಿಗಳು ವಿಷಪೂರಿತವಾದುವುವೆಂದು ಬಗೆದಿದ್ದರು. ಕ್ರಿ.ಶ. ಮೊದಲ ಶತಮಾನದ ಉತ್ತರಾರ್ಧದಲ್ಲಿ ಡೊಮಿಷೆನ್ ಎಂಬ ರೋಮ್ ದೇಶದ ಚಕ್ರವರ್ತಿ ತನ್ನ ಸೋದರ ಟೈಟಸ್ ಎಂಬ ಚಕ್ರವರ್ತಿಯನ್ನು ಅಪ್ಲೀಸಿಡೀ ಕುಟುಂಬದ ಪ್ರಾಣಿಗಳಿಂದ ಪಡೆದ ವಿಷವನ್ನು ಕೊಟ್ಟು ಸಾಯಿಸಿದನೆಂದು ಒಂದು ಉಲ್ಲೇಖವಿದೆ. ನೇಪಲ್ಸ್ ಕೊಲ್ಲಿಯಲ್ಲಿ ವಾಸಿಸುವ ಅಪ್ಲೀಸಿಯ ಲೆಪೋರಿನ ಎಂಬುದು ಮನುಷ್ಯನ ಚರ್ಮಕ್ಕೆ ತಾಕಿದರೆ ನೋವು ಮತ್ತು ಕಾಯಿಲೆ ಪ್ರಾಪ್ತವಾಗುವುದೆಂದು ಅಲ್ಲಿಯ ಬೆಸ್ತರು ನಂಬುತ್ತಾರೆ. ನಿಜವಾಗಿ ಹೇಳುವುದಾದರೆ ಇವು ಅಂಥ ಕ್ರೂರ ಪ್ರಾಣಿಗಳೂ ಅಲ್ಲ, ಇವುಗಳ ದೇಹದಲ್ಲಿ ವಿಷಸಂಬಂಧವಾದ ವಸ್ತುವೂ ಇಲ್ಲ. (ಜಿ.ಪಿ. ಎನ್.)



**ಕಡಲ ಸರ್ಪ :** ಇದು ಒಂದು ಸರ್ಪರೂಪಿ ಸಾಗರದ ದೈತ್ಯ. ಪೌರಾಣಿಕ ಸಂಬಂಧವಾದದ್ದು ; ಕಾಲ್ಪನಿಕವಾದದ್ದು. ವಿಶಾಲವಾದ ಸಾಗರಗಳಲ್ಲಿ ಯಾನ ಮಾಡಿದ ಹಿಂದಿನ ನಾವಿಕರು ತಾವು ನೋಡಿದುದಾಗಿ ಇದನ್ನು ವರ್ಣಿಸಿದ್ದಾರೆ. ಇದರ ಬಗ್ಗೆ ಅನೇಕ ದಂತಕಥೆಗಳನ್ನು ಕಟ್ಟಿರುವುದೂ ಉಂಟು. ಆದರೆ ವೈಜ್ಞಾನಿಕವಾಗಿ ಇದುವರೆವಿಗೂ ಈ ಬಗೆಯ ಕಡಲ ಸರ್ಪಗಳನ್ನು ಸರಿಯಾಗಿ ಕಂಡವರಿಲ್ಲ. ಅಂತು ಕಡಲ ಸರ್ಪದ ಭ್ರಮೆ ಹುಟ್ಟಿಸುವ ಹಲವು ಸಂದರ್ಭಗಳು ಕಂಡುಬರುವುದುಂಟು. ಅವುಗಳಲ್ಲಿ ಮುಖ್ಯವಾದವು ಇವು ; ಹಲವು ಕಡಲ ಹಂದಿ ಅಥವಾ ಪಾರ್ಪಾಯಿಸ್‌ಗಳು ಸಾಗರದಲ್ಲಿ ಈಜುವಾಗ ಯಾವಾಗಲೂ ಒಂದರ ಹಿಂದೆ ಮತ್ತೊಂದು ಒಂದೇ ಸಾಲಿನಲ್ಲಿ ಈಜುವುದುಂಟು. ಅವು ನೀರಿನ ಮೇಲಾಯದಲ್ಲಿ ಈಜುವಾಗ ಗಾಳಿಸೇವನೆಗಾಗಿ ಆಗಾಗ್ಗೆ ಮೇಲೇಳುವುದೂ ಉಂಟು. ಇವುಗಳ ಬೆನ್ನಿನ ಮೇಲಿನ ಈಜುರೆಕ್ಕೆ ಅವುಗಳ ಗತಿಯನ್ನು ಕೂಡ ತೋರಿಸುತ್ತದೆ. ಈ ಕಡಲ ಹಂದಿಗಳ ಸಾಲು ನೀಳ ಹಾಗೂ ಡೊಂಕುಡೊಂಕಾಗಿರುವುದರಿಂದ ಅದು ಕಡಲ ಸರ್ಪವಿರಬೇಕೆಂದು ದೂರದಿಂದ ನೋಡಿದವರು ಭ್ರಮಿಸಿರಲಿಕ್ಕೂ ಸಾಕು. ಸೀಟೋರೈನಸ್ ಮಾಕ್ಸಿಮಸ್ ಎಂಬ ಷಾರ್ಕ್‌ಮೀನು ಸಾಧಾರಣವಾಗಿ ಒಂದರ ಹಿಂದೆ ಒಂದು ಜೊತೆಗೂಡಿ ಈಜುವುದು ಮತ್ತೊಂದು ನಿದರ್ಶನ. ಇದರ ಉದ್ದ ಸುಮಾರು 60 ಅಡಿ ಇರುತ್ತದೆ. ರಿಗ್ಯಾಲಿಕಸ್ ಗ್ಲೆಸ್ನೆ ಎಂಬ ಮೀನು ಮತ್ತೊಂದು ಉದಾಹರಣೆಯಾಗಿದೆ. ಇದರ ದೇಹ ರಿಬ್ಬನ್ನಿನ ಆಕಾರ, 20 ಅಡಿ ಉದ್ದ, 60 ಪೌಂಡು ತೂಕ. ಈಜುವಾಗ ಸರ್ಪದಂತೆ ತನ್ನ ದೇಹವನ್ನು ಅಂಕುಡೊಂಕಾಗಿ ಮಾಡಿಕೊಳ್ಳುತ್ತದೆ. ಇದರ ಬೆನ್ನಿನ ಮೇಲಿನ ಈಜುರೆಕ್ಕೆ ದೇಹಾದ್ಯಂತ ಹರಡಿದೆ. ಇದರ ಮುಂದಿನ 10-15 ಈಜುರೆಕ್ಕೆಯ ದಿಂಡುಗಳು ಉದ್ದವಾಗಿದ್ದು ತಲೆಯ ಮೇಲೆ ಹರಡಿರುವುದುಂಟು. ಈ ಪ್ರಾಣಿಯನ್ನು ಕೆರಳಿಸಿದಾಗ ಈ ದಿಂಡುಗಳು ಎದ್ದು ನಿಂತು ಭಯಂಕರವಾಗಿ ಕಾಣುತ್ತವೆ. ದೇಹ ಬೆಳ್ಳಿಯಂತೆ ಬಿಳುಪು. ಈಜುರೆಕ್ಕೆ ಹವಳದಂತೆ ಕೆಂಪು. ಮೆಡಿಟರೇನಿಯನ್ ಸಮುದ್ರದಲ್ಲಿ ವಾಸಿಸುವ ನೆಮರ್ಟೀನಿಯ ಹುಳುಗಳು 30–45 ಅಡಿ ಉದ್ದ ಬೆಳೆಯುವುದರಿಂದ ಇವು ಕೂಡ ಕಡಲ ಸರ್ಪದ ಭ್ರಮೆ ಹುಟ್ಟಿಸಿವೆ. ಆರ್ಕಿತ್ಯೂತಿಸ್ ಜಾತಿಯ ದೈತ್ಯ ಸ್ಕ್ವಿಡ್ 50 ಅಡಿ ಬೆಳೆಯುವುದೇ ಅಲ್ಲದೆ ಅದರ

ಜಾಮು 30-35 ಅಡಿ ಉದ್ದವಿದ್ದು ಹಾವಿನಂತೆ ಕಾಣಬರುತ್ತದೆ. ಪೆಸಿಫಿಕ್ ಸಾಗರದ ದೈತ್ಯಾಕಾರದ ಹಾವುಮೀನಿನಂತಿರುವ ಕ್ಲಾಮಿಡೊಸೆಲಕಿ ಜಾತಿಯ ಷಾರ್ಕ್ ಮೀನು ಕೂಡ ಕಡಲ ಸರ್ಪದ ಭ್ರಮೆ ಹುಟ್ಟಿಸಿರಬಹುದು. ಹೆಬ್ಬಾವು ರೂಪದ, ಜೂವು ತಲೆ, ತೊಳೆಗಾಲು ರೂಪದ ಬಾಹುಗಳಿಂದ ಕೂಡಿ 60-70 ಅಡಿ ಉದ್ದ ಬೆಳೆಯುತ್ತಿದ್ದ ಗತಕಾಲದ (ಕ್ರಿಟೇಷಸ್ ಕಾಲದ) ಸರೀಸೃಪಗಳು ಸಾಗರದಲ್ಲಿ ಇಂದೂ ಬದುಕಿದ್ದು ಆಗಾಗ್ಗೆ ಕಾಣಿಸಿಕೊಳ್ಳುತ್ತವೆಂದೂ ಮತ್ತೆ ಕೆಲವರ ಭ್ರಮೆ. (ಬಿ.ಎಸ್.ಬಿ.)

**ಕಡಲ ಸಿಂಹ:** ಪಿನ್ನಿಪೀಡಿಯ ಗಣದ ಓಟರೈಯಿಡೀ ಕುಟುಂಬದ ಹಲವಾರು ಜಾತಿಯ ಪ್ರಾಣಿಗಳಿರುವ ಸಾಮಾನ್ಯ ಹೆಸರು (ಸೀ ಲಯನ್). ಇವೆಲ್ಲವುಗಳಲ್ಲೂ ಕಂಡುಬರುವ ನೀಳ ಹಾಗೂ ಸುಸ್ಪಷ್ಟವಾದ ಕತ್ತು, ಚಿಕ್ಕವಾದರೂ ಎದ್ದುಕಾಣುವ ಕಿವಿಗಳು, ಮೂತಿಯ ತುದಿಯಲ್ಲಿರುವ ಮೂಗಿನ ಹೊಳ್ಳೆಗಳು, ಎರಡು ಜೊತೆ ಕಾಲುಗಳಲ್ಲಿರುವ ಜಾಲಪಾದ, ಈಜುವಾಗ ಹಿಂದಕ್ಕೆ ಚಾಚುವ ಹಿಂಗಾಲುಗಳನ್ನು ನೆಲದ ಮೇಲೆ ಬಂದಾಗ ಮುಂದಕ್ಕೆ ತಿರುಗಿಸಿಕೊಳ್ಳುವ ಸಾಮರ್ಥ್ಯ ಮತ್ತು ನಶಿಸಿಹೋಗುವ ಹಂತದಲ್ಲಿರುವ ಚಿಕ್ಕ ಉಗುರುಗಳು—ಮುಂತಾದುವು ಇವುಗಳ



ಮುಖ್ಯ ಲಕ್ಷಣಗಳು. ಪೆಸಿಫಿಕ್ ಸಾಗರದ ಉತ್ತರ ತೀರಪ್ರದೇಶದಲ್ಲಿ ಮೊಟ್ಟಮೊದಲ ಬಾರಿ ಯೂಮೆಟೊಪಿಯಸ್ ಜುಬೇಟ ಎಂಬ ಹೆಸರಿನ ಕಡಲ ಸಿಂಹವನ್ನು ನೋಡಿದ ಜರ್ಮನ್ ವಿಜ್ಞಾನಿ ಸ್ಟೆಲ್ಲರ್ ಎಂಬಾತ ಇದರ ದಪ್ಪ ಕುತ್ತಿಗೆಯ ಮೇಲಿನ ಕೇಸರ ಅಥವಾ ಆಯಾಲು ಮತ್ತು ಸಿಂಹದ ಕಣ್ಣಿನಂಥ ಕಣ್ಣುಗಳನ್ನು ನೋಡಿ ಇದನ್ನು ಕಡಲ ಸಿಂಹವೆಂದು ಕರೆದ. ಉಳಿದ ಕಡಲ ಸಿಂಹಗಳಲ್ಲಿ ಉತ್ತರ ಅಮೆರಿಕ ಮತ್ತು ಜಪಾನ್ ಸಮುದ್ರದ ದಕ್ಷಿಣ ಭಾಗದಲ್ಲಿರುವ ಜಲೋಫಸ್ ಎಂಬ ಜಾತಿಯದೂ ಆಸ್ಟ್ರೇಲಿಯ ವಾಸಿಯಾದ ನಿಯೋಫೋಕ ಜಾತಿಯದೂ ದಕ್ಷಿಣ ಅಮೆರಿಕದ ತೀರ ಪ್ರದೇಶಗಳಲ್ಲಿ ಹೇರಳವಾಗಿ ಕಾಣಬರುವ ಓಟರಿಯ ಎಂಬುದೂ ಮುಖ್ಯವಾದುವು. ಇವೆಲ್ಲವೂ ಕಡಲ ಕರಡಿಯ (ಫರ್ ಸೀಲ್) ಹತ್ತಿರ ಸಂಬಂಧಿಗಳು.

ಸಾಮಾನ್ಯವಾಗಿ 5′–12′ ಉದ್ದದ ದೇಹವುಳ್ಳ ಇವು 100 ರಿಂದ 200 ಪೌಂ. ತೂಗುತ್ತವೆ. ಗಂಡು ಹೆಣ್ಣಿಗಿಂತ ಬಹಳ ದೊಡ್ಡದು. ಇವುಗಳಲ್ಲಿ ಚಿಕ್ಕದಾದರೂ ಸ್ಪಷ್ಟವಾದ ಬಾಲವಿದೆ. ಮೈಮೇಲೆ ನವುರಾದ ಕೂದಲಿನ ಹೊದಿಕೆಯಿದೆ. ಇವುಗಳ ಬಣ್ಣ ಕಂದು. ಸಾಧಾರಣವಾಗಿ ದೊಡ್ಡ ದೊಡ್ಡ ಮಂದೆಗಳಲ್ಲಿ ವಾಸಿಸುತ್ತವೆ. ಸಮುದ್ರದಲ್ಲಿ ಸುಲಭವಾಗಿ ದೊರಕುವ ಶಿರಪಾದಿಗಳು ಮತ್ತು ಕಠಿಣಚರ್ಮಿಗಳು ಇವುಗಳ ಆಹಾರ. ಕೆಲವು ಸಾರಿ ಪೆಂಗ್ವಿನ್ ಹಕ್ಕಿಗಳನ್ನು ತಿನ್ನುವುದೂ ಉಂಟು.

ಸಂತಾನೋತ್ಪತ್ತಿ ಕಾಲದಲ್ಲಿ ಇವು ನೀರಿನಿಂದ ಹೊರಬಂದು ದಡಗಳಲ್ಲಿ ಕಾಲ ಕಳೆಯತೊಡಗುತ್ತವೆ. ಮೊದಲು ದಡವನ್ನೇರುವ ಗಂಡು ಒಂದು ನಿರ್ದಿಷ್ಟ ಪ್ರದೇಶದ ಮೇಲೆ ತನ್ನ ಸ್ವಾಮ್ಯವನ್ನು ಸ್ಥಾಪಿಸಿಕೊಂಡು ಹಿಂಬಾಲಿಸಿ ಬರುವ ಹಲವಾರು ಹೆಣ್ಣುಗಳನ್ನು ತನ್ನ ಅಧೀನದಲ್ಲಿ ಇಟ್ಟುಕೊಳ್ಳುತ್ತದೆ. ಒಂದೊಂದು ಗಂಡಿನ ಬಳಿ 10–15 ಹೆಣ್ಣುಗಳಿರುವುದು ಸಾಮಾನ್ಯ. ಹೆಣ್ಣುಗಳು ದಡಕ್ಕೆ ಬಂದ ಸ್ವಲ್ಪ ದಿನಗಳಲ್ಲಿಯೇ ಒಂದೊಂದೇ ಮರಿಯನ್ನು ಈಯುತ್ತವೆ. ಮರಿ ಹಾಕಿದ ಕೆಲವು ಕಾಲಾನಂತರ ಗಂಡಿನೊಂದಿಗೆ ಕೂಡಿಕೊಂಡು ಮತ್ತೆ ಗರ್ಭ ಧರಿಸುವುದು ಇವುಗಳ ವೈಚಿತ್ರ್ಯ. ಮರಿಗಳ ರಕ್ಷಣೆಯನ್ನು ಸಾಮಾನ್ಯವಾಗಿ ತಾಯಿಯೇ ನೋಡಿಕೊಳ್ಳುತ್ತದೆ. ಮರಿಯ ಬಣ್ಣ ಅಚ್ಚನೀಲಿ. ನೆಲದ ಮೇಲೆ ತೆವಳಬಲ್ಲುದಾದರೂ ಈಜಲಾರದು. ಹುಟ್ಟಿದ ಎರಡು ವಾರಗಳಲ್ಲಿ ತಾಯಿಯಿಂದ ಈಜುವುದನ್ನು ಕಲಿತು ಸ್ವತಂತ್ರ ಜೀವನ ನಡೆಸಲಾರಂಭಿಸುತ್ತದೆ. ಮರಿ ದೊಡ್ಡದಾದ ಮೇಲೆ ಕಡಲ ಸಿಂಹಗಳೆಲ್ಲ ದಕ್ಷಿಣಾಭಿಮುಖವಾಗಿ ವಲಸೆ ಹೋಗುತ್ತವೆ.

ಕಡಲ ಸಿಂಹಗಳನ್ನು ಅವುಗಳ ಚರ್ಮಕ್ಕಾಗಿ ಚರ್ಮದ ತಳದಲ್ಲಿ ಸಂಗ್ರಹವಾಗಿರುವ ಬ್ಲಬರ್ ಎಂಬ ಕೊಬ್ಬಿಗಾಗಿ ಜನ ಬೇಟೆಯಾಡುತ್ತಿದ್ದರು. ಹೀಗಾಗಿ ಅವುಗಳ ವಂಶ ನಶಿಸಿಹೋಗುವ ಸಂಭವವೂ ಇತ್ತು. ಈಗೀಗ ಕಾನೂನಿನ ರಕ್ಷಣೆ ದೊರೆತು ಅದು ತಪ್ಪಿದೆ. ಕೆಲವು ಬಗೆಯ ಕಡಲ ಸಿಂಹಗಳನ್ನು ಪಳಗಿಸಿ ಪ್ರಾಣಿಸಂಗ್ರಹಾಲಯಗಳಲ್ಲಿ ಸರ್ಕಸ್ಸುಗಳಲ್ಲಿ ಇಡುವುದುಂಟು. ತಮ್ಮ ಚುರುಕುಬುದ್ಧಿ, ಕ್ರೀಡೆಗಳಲ್ಲಿನ ಅಭಿರುಚಿಯಿಂದಾಗಿ ಇವು ಬಹು ಜನಪ್ರಿಯವಾಗಿವೆ. ತುತೂರಿಗಳನ್ನು ಊದುವುದೂ ಸಂಗೀತಕ್ಕೆ ಅನುಗುಣವಾಗಿ ಕುಣಿಯುವುದೂ ಎಸೆದ ಚೆಂಡನ್ನು ಮೂಗಿನ ತುದಿಯಲ್ಲಿ ಹಿಡಿದು ನಿಲ್ಲಿಸುವುದೂ ಇವಕ್ಕೆ ಪ್ರಿಯವೆನಿಸಿರುವ ಆಟಗಳು. (ಬಿ.ಎಸ್.ಬಿ.)

ನೋಡಿ—ಸೀಲ್.

**ಕಡಲ ಸೌತೆ:** ಕಂಟಕ ಚರ್ಮಿವಂಶದ ಹೋಲೋತುರಾಯ್ಡಿಯ ವರ್ಗದ ಪ್ರಾಣಿಗಳಿಗಿರುವ ಜನಪ್ರಿಯ ಹೆಸರು (ಸೀ ಕುಕುಂಬರ್). ಇವುಗಳ ದೇಹ ಮೃದು, ನೀಳ ಹಾಗೂ ಸ್ನಾಯುಮಯವಾದದ್ದು. ಆಕಾರ ಸೌತೆಕಾಯಿಯಂತೆ. ಹೆಚ್ಚು ಚಟುವಟಿಕೆಗಳನ್ನು ತೋರಿಸದೆ ಸಾಗರದ ತಳದಲ್ಲಿ ಜಡವಸ್ತುವಿನಂತೆ ಇದು ಬಿದ್ದಿರುತ್ತದೆ. ಮಣ್ಣಿನಲ್ಲಿ ಬಿಲ ತೋಡಿ ಹುದುಗಿರುವುದೂ ಉಂಟು. ಬಣ್ಣ ಸಾಮಾನ್ಯವಾಗಿ ಆಕರ್ಷಕವಲ್ಲದ ಕಪ್ಪು, ಬೂದು, ಕಂದು. ಅಪರೂಪಕ್ಕೆ ಉಜ್ವಲ ವರ್ಣದಿಂದ ಕೂಡಿರುವುದೂ ಉಂಟು. ದೇಹದ ಒಂದು ಕೊನೆಯಲ್ಲಿ ಬಾಯಿ, ಅದಕ್ಕೆ ಅಭಿಮುಖವಾಗಿ ಮತ್ತೊಂದು ಕೊನೆಯಲ್ಲಿ ಗುದ. ಬಾಯ ಸುತ್ತ ಒಳಕ್ಕೆ ಎಳೆದುಕೊಳ್ಳಬಹುದಾದ ಕೋಡುಬಳ್ಳಿಗಳಿವೆ. ಈ ಬಳ್ಳಿಗಳು ಗಭೀರ ಸಾಗರದ ಅಡಿಯಲ್ಲಿ ವಾಸಿಸುವ ಎಲಾಸಿಪೋಡದ ಸರಳ ನಳಿಕೆ ಪಾದಗಳಂತಿವೆ. ಆದರೆ ಬೇರೆ ಕಡಲ ಸೌತೆಗಳಲ್ಲಿ ಅವು ಹೆಚ್ಚು ಕವಲುಗಳಿಂದ ಕೂಡಿರುತ್ತವೆ. ಕೋಡುಬಳ್ಳಿಗಳು ವಾಸ್ತವವಾಗಿ ಮಾರ್ಪಾಟಾದ ನಳಿಕೆ ಪಾದಗಳೇ. ದೇಹದ ಮೇಲೆ ಐದು ಜೊತೆ ನಳಿಕೆಪಾದಗಳು ಐದು ಸಾಲುಗಳಲ್ಲಿ ಒಂದು ಕೊನೆಯಿಂದ ಮತ್ತೊಂದು ಕೊನೆಯ ವರೆಗೆ ಹಬ್ಬಿರುತ್ತವೆ. ಇವುಗಳೇ ಚಲನೆಯಲ್ಲಿ ನೆರವಾಗುವ ಅಂಗಗಳು. ದೇಹದ ಗೋಡೆ ಮೃದು, ಸ್ನಾಯುಮಯ. ಸ್ನಾಯುಗಳಲ್ಲಿ ಸಣ್ಣ ಸಣ್ಣ ಸೂಕ್ಷ್ಮದರ್ಶೀಯ ಸ್ಪಿಕ್ಯೂಲುಗಳು ಹುದುಗಿರುತ್ತವೆ. ಈ ಗುಂಪಿನ ವರ್ಗೀಕರಣದಲ್ಲಿ ಸ್ಪಿಕ್ಯೂಲುಗಳು ಹೆಚ್ಚು ಸಹಾಯಕಾರಿಯಾಗಿವೆ. ಸೀಲೋಮ್ ಎಂಬ ದೇಹಾವಕಾಶ ವಿಸ್ತಾರವಾಗಿದೆ. ರೆಕ್ಟಮಿನ ಗೋಡೆಯಿಂದ ಎರಡು ದೊಡ್ಡ ಶ್ವಸನವೃಕ್ಷಗಳು ಬೆಳೆದಿರುತ್ತವೆ. ಕಡಲ ಸೌತೆಗಳು ಆಹಾರ ಸೇವಿಸುವಾಗ ಪರಿಸರದ ಮಣ್ಣನ್ನು ನುಂಗುವುದರಿಂದ ಪಚನನಾಳದಲ್ಲಿ ಮಣ್ಣು ತುಂಬಿರುತ್ತದೆ.

ಚೀನ, ಮಲಯ, ಫಿಲಿಪೀನ್ಸ್, ಆಸ್ಟ್ರೇಲಿಯಗಳಲ್ಲಿ ಇವುಗಳಿಂದ ಖಾದ್ಯವಸ್ತುವನ್ನು ಹೆಚ್ಚಾಗಿ ಸಾರನ್ನು ತಯಾರಿಸುತ್ತಾರೆ. ಸಾಮಾನ್ಯವಾಗಿ ಇವನ್ನು ಮೊದಲು ಹದಮಾಡಿ ಉಪ್ಪುನೀರಿನಲ್ಲಿ ಕುದಿಸಿ ಒಣಗಿಸಿಟ್ಟುಕೊಂಡಿದ್ದು ಊಟಕ್ಕೆ ಬಡಿಸುವ ಮುನ್ನ ಮತ್ತೆ ಬೇಯಿಸುತ್ತಾರೆ. (ಬಿ.ಎಸ್.ಬಿ.)

**ಕಡಲ ಹಂದಿ:** ಸಿಟೇಸಿಯ ಗಣದ ಫೋಸೀನ ಜಾತಿಯ ಜಲವಾಸಿ ಸಸ್ತನಿ (ಸೀ ಹಾಗ್). ಇಂಗ್ಲಿಷಿನಲ್ಲಿ ಪಾರ್ಪಾಯಿಸ್ ಎನ್ನುತ್ತಾರೆ. ತಿಮಿಂಗಿಲ ಮತ್ತು ಡಾಲ್ಫಿನ್ನುಗಳ ಹತ್ತಿರ ಸಂಬಂಧಿ. ದೇಹದ ಆಕಾರ ಡಾಲ್ಫಿನಿನಂತೆಯೇ. ಆದರೆ ಅದರಂತೆ ಮೂತಿ ಚೂಪಾಗಿಲ್ಲ. ದೇಹದ ಉದ್ದ 4′-6′. ಬಣ್ಣ ಸಾಮಾನ್ಯವಾಗಿ ಕಪ್ಪು. ಹೊಟ್ಟೆಯ ಭಾಗ ಬಿಳಿ. ತಲೆ ಗುಂಡಗಿದೆ. ಬಾಯಿ ಅಗಲ. ಒಂದೊಂದು ದವಡೆಯಲ್ಲಿ 32–56 ಹಲ್ಲುಗಳಿವೆ. ಕುತ್ತಿಗೆಯ ಕಶೇರುಗಳು ಒಂದರೊಡನೊಂದು ಕೂಡಿಕೊಂಡಿವೆ. ಮುಂಗಾಲುಗಳು ಜಾಲಪಾದಗಳಾಗಿ ಮಾರ್ಪಟ್ಟು ಈಜಲು ನೆರವಾಗಿವೆ. ಬೆನ್ನಿನ ಮೇಲೆ ತ್ರಿಕೋಣಾಕಾರದ ಬೆನ್ನಿನ ಈಜುರೆಕ್ಕೆಯೊಂದಿದೆ. ಅಟ್ಲಾಂಟಿಕ್ ಮತ್ತು ಪೆಸಿಫಿಕ್ ಸಾಗರಗಳ ತೀರಪ್ರದೇಶದಲ್ಲಿ ಕಾಣಬರುವ ಇದು ಸಾಮಾನ್ಯವಾಗಿ ದೊಡ್ಡ ದೊಡ್ಡ ಗುಂಪುಗಳಲ್ಲಿ ವಾಸಿಸುತ್ತದೆ. ಒಂದೊಂದು ಗುಂಪಿನಲ್ಲೂ 20-100 ಪ್ರಾಣಿಗಳಿರುತ್ತವೆ. ಸಾಧಾರಣವಾಗಿ ಸಮುದ್ರದಲ್ಲೇ ವಾಸಿಸಿದರೂ ಕೆಲವೊಮ್ಮೆ ದೊಡ್ಡ ನದಿಗಳಿಗೆ ವಲಸೆ ಬರುವುದೂ ಉಂಟು. ಹೆರ್ರಿಂಗ್ ಮೀನು, ಬಂಗಡೆ, ಸ್ಕ್ವಿಡ್ ಮುಂತಾದುವು ಇದರ ಆಹಾರ. ಋತುಕಾಲ ಬೇಸಗೆ. ಹೆಣ್ಣು ಒಂದು ಸಲಕ್ಕೆ ಒಂದೇ ಮರಿಯನ್ನು ಈಯುತ್ತದೆ. ಗರ್ಭಧಾರಣೆ ಕಾಲ ಸುಮಾರು ಒಂದು ವರ್ಷ. ತಾಯಿ ಒಂದು ಕಡೆ ವಾಲಿಕೊಂಡು ಈಜುತ್ತ ಮರಿಗೆ ಹಾಲುಣಿಸುವುದು ಇದರ ಸೋಜಿಗ. ಪ್ರಪಂಚದ

ಹಲವೆಡೆ ಇದರ ಮಾಂಸವನ್ನು ತಿನ್ನುತ್ತಾರೆ. ಇಂಗ್ಲೆಂಡಿನ ರಾಜ ಎಂಟನೆಯ ಹೆನ್ರಿ ಕಾಲದಲ್ಲಿ ಇದರ ಮಾಂಸವನ್ನು ರಾಜಭೋಜನಕೂಟಗಳಲ್ಲಿ ಮಾತ್ರ ಉಪಯೋಗಿಸುತ್ತಿದ್ದರಂತೆ.

ಇದೇ ಗಣಕ್ಕೆ ಸೇರಿದ ಫೋಸಿನಾಯ್ಡಿಸ್ ಮತ್ತು ನಿಯೋಫೋಸೀನ ಎಂಬ ಜಾತಿಯ ಪ್ರಾಣಿಗಳನ್ನೂ ಕಡಲ ಹಂದಿಗಳೆಂದೇ ಕರೆಯುವುದುಂಟು. ಇವುಗಳಲ್ಲಿ ಮೊದಲನೆಯದು ಉತ್ತರ ಪೆಸಿಫಿಕ್ ಸಾಗರದ ಅಲ್ಯೂಷಿಯನ್ ದ್ವೀಪಗಳಲ್ಲಿ ವಾಸಿಸುತ್ತದೆ. ಎರಡನೆಯದು ಭಾರತ, ಬೋರ್ನಿಯೊ ಮತ್ತು ಜಪಾನಿನ ತೀರ ಪ್ರದೇಶಗಳಲ್ಲಿ ಕಾಣಬರುತ್ತದೆ. ಇದರ ಬಣ್ಣ ಕಪ್ಪು. ಬೆನ್ನಿನ ಈಜುರೆಕ್ಕೆ ಇಲ್ಲ. ಸಾಮಾನ್ಯವಾಗಿ ಸಮುದ್ರತೀರಗಳಲ್ಲಿ ವಾಸಿಸಿದರೂ ಕೆಲವೊಮ್ಮೆ ಇರವಾಡಿ ಮುಂತಾದ ಪೂರ್ವ ಏಷ್ಯದ ನದಿಗಳಲ್ಲಿ ನೂರಾರು ಮೈಲಿ ದೂರ ಒಳಕ್ಕೆ ಸಾಗಿ ಬರುವುದುಂಟು. (ಬಿ.ಎಸ್.ಬಿ.)

**ಕಡಲ ಹಕ್ಕಿ :** ಪೆಲಿಕನಿಫಾರ್ಮಿಸ್ ಗಣದ ಸೂಲಿಡೀ ಕುಟುಂಬಕ್ಕೆ ಸೇರಿದ ಮೋರಸ್ ಎಂಬ ಒಂದು ಸಮುದ್ರವಾಸಿ ಪಕ್ಷಿಜಾತಿ. ರೂಢಿಯಲ್ಲಿವನ್ನು ಗ್ಯಾನೆಟ್



ಎನ್ನುತ್ತಾರೆ. ಈ ಜಾತಿಯಲ್ಲಿ ಮೂರು ಪ್ರಮುಖ ಪ್ರಭೇದಗಳಿವೆ. ಇವುಗಳಲ್ಲಿ ಮೋರ್ಯಸ್ ಬಸಾನಸ್ ಎಂಬ ಪ್ರಭೇದ ಮುಖ್ಯವಾದುದು. ಬ್ರಿಟನಿನ ಉತ್ತರ ಭಾಗ, ಐಸ್‌ಲೆಂಡ್, ಪೆರು ಮುಂತಾದಲ್ಲಿ ಇದು ತನ್ನ ಕಾರ್ಯಚಟುವಟಿಕೆಗಳನ್ನು ನಡೆಸುತ್ತದೆ. ಇದು ಗಾತ್ರದಲ್ಲಿ ಬಹು ದೊಡ್ಡದಾದ ಹಕ್ಕಿ. ಮೂರು ಅಡಿ ಉದ್ದ ಇದೆ. ಬಲಿಷ್ಠವೂ ಹೌದು. ಬಣ್ಣ ಕಣ್ಣಿಗೆ ತಿವಿಯುವಷ್ಟು ಬಿಳುಪು. ರೆಕ್ಕೆ ಅಗಲಿಸಿದಾಗ ತುದಿಯಿಂದ ತುದಿಗೆ 6 ಅಡಿ ಅಗಲ. ತಲೆಯ ಮೇಲ್ಭಾಗ ಹಳದಿ. ಕಂಠಪ್ರದೇಶ ಮತ್ತು ರೆಕ್ಕೆಗಳ ತುದಿಯಲ್ಲಿ ನೀಳಾಕೃತಿಯ ಮಚ್ಚೆಗಳಿವೆ. ಕೊಕ್ಕು ಉದ್ದವಾಗಿ, ಶಕ್ತಿಯುತವಾಗಿ ಈಟಿಯ ಮೊನೆಯಂತೆ ಪರಿತವಾಗಿದೆ. ಜಾಲಪಾದವಿರುವುದರಿಂದ ಹಕ್ಕಿ ಚೆನ್ನಾಗಿ ಈಜುತ್ತದೆ.

ಚಳಿಗಾಲದಲ್ಲಿ ದಕ್ಷಿಣದಿಂದ ಉತ್ತರ ಮತ್ತು ಪಶ್ಚಿಮ ಆಫ್ರಿಕಗಳ ಸಮುದ್ರ ಹಾಗೂ ಮೆಕ್ಸಿಕೋ ಕೊಲ್ಲಿಗಳತ್ತ ಇದು ಧಾವಿಸುವುದುಂಟು. ತನ್ನ ಹಾಗೂ ಮರಿಗಳ ವಾಸಕ್ಕಾಗಿ ಕಡಲಿನ ಜೊಂಡು, ಹುಲ್ಲು ಮುಂತಾದವುಗಳ ನೆರವಿನಿಂದ ಎತ್ತರವಾದ ಕಲ್ಲಿನ ಮೇಲೆ ಇದು ಗೂಡು ಕಟ್ಟುತ್ತದೆ. ಗೂಡಿನ ನಿರ್ಮಾಣ ಕಾರ್ಯದಲ್ಲಿ ಗಂಡು ಮತ್ತು ಹೆಣ್ಣುಗಳೆರಡೂ ಭಾಗವಹಿಸುತ್ತವೆ. ಕಡಲ ಹಕ್ಕಿ ಮಾಂಸಾಹಾರಿ. ಕಡಲಿನಲ್ಲಿ ದೊರೆಯುವ ಮೀನುಗಳೇ ಇದರ ಆಹಾರ. ಇದರ ದೃಷ್ಟಿ ಅತ್ಯಂತ ತೀಕ್ಷ್ಣವಾದುದು. ತೀರ ಎತ್ತರದಲ್ಲಿ ಹಾರುತ್ತಿರುವಾಗಲೇ ನೀರಿನಲ್ಲಿ ಸಂಚರಿಸುವ ಮೀನುಗಳನ್ನು ಗುರುತಿಸುತ್ತದೆ. ನೀರಿನಿಂದ ಸುಮಾರು ನೂರು ಅಡಿಗಳ ಎತ್ತರದಿಂದ, ರೆಕ್ಕೆಗಳನ್ನು ಅರೆಮುಚ್ಚಿ ಬಂದೂಕಿನ ಗುಂಡಿನಂತೆ ರಭಸದಿಂದ ನೇರವಾಗಿ ನುಗ್ಗಿ ಮೀನುಗಳನ್ನು ಹಿಡಿಯುವ ದೃಶ್ಯ ರಮಣೀಯವಾಗಿರುತ್ತದೆ. ಈ ಕ್ರಿಯೆಯಲ್ಲಿ ಇದು ಮೀಂಚುಳ್ಳಿಯನ್ನು (ಕಿಂಗ್ ಫಿಷರ್) ಹೋಲುತ್ತದೆ. ಆಹಾರಕ್ಕಾಗಿ ಇದು ತನ್ನ ನಿವಾಸಸ್ಥಾನದಿಂದ 80-100 ಮೈಲಿಗಳಷ್ಟು ದೂರ ಸಂಚರಿಸುತ್ತದೆ. ಇದರ ಹಾರಾಟದಲ್ಲಿ ರಾಜಗಾಂಭೀರ್ಯವಿದೆ. ಇದು ಸಾಮಾನ್ಯವಾಗಿ ಅಕ್ಟೋಬರ್ 10ನೆಯ ತಾರೀಖಿನ ಸುಮಾರಿಗೆ ವಲಸೆ ಹೋಗುತ್ತದೆ.

ಮೂರು ವರ್ಷ ತುಂಬಿದ ಹೆಣ್ಣುಹಕ್ಕಿ ಗರ್ಭ ಧರಿಸುತ್ತದೆ. ವಸಂತಮಾಸದ ಪ್ರಾರಂಭದಲ್ಲಿ ಒಂದು ಅಥವಾ ಎರಡು ತಿಳಿನೀಲಿ ಬಣ್ಣದ ಮೊಟ್ಟೆಗಳನ್ನಿಡುತ್ತದೆ. ಗಂಡು ಮತ್ತು ಹೆಣ್ಣು ಒಂದಾದ ಮೇಲೊಂದರಂತೆ 44 ದಿನಗಳ ಕಾಲ ಮೊಟ್ಟೆಗಳಿಗೆ ಕಾವು ಕೊಡುತ್ತವೆ. ತಂದೆತಾಯಿಗಳಿಗಿಂತ ಮರಿಹಕ್ಕಿಗೆ ವಲಸೆಹೋಗುವ ಗೀಳು ಹೆಚ್ಚು.

ಕಡಲ ಹಕ್ಕಿಯ ಇನ್ನೊಂದು ಬಗೆಯಾದ ಮೋರಸ್ ಕೆಪೆನ್ಸಿಸ್ ಎಂಬುದು ದಕ್ಷಿಣ ಅಮೆರಿಕದಲ್ಲಿ ವಾಸಿಸುತ್ತದೆ. ಇವಲ್ಲದೆ ಸೂಲಿಡೀ ಕುಟುಂಬದ ಸೂಲ ಜಾತಿಯ ಪ್ರಭೇದಗಳಿಗೂ ಕಡಲ ಹಕ್ಕಿ ಎನ್ನುವ ರೂಢಿಯಿದೆ. ಬೂಬಿಗಳೆಂದೂ ಕರೆಯಲಾಗುವ ಇವುಗಳಲ್ಲಿ ಸೂಲ ನೆಬುಕ್ಸಿಯೈ (ನೀಲಿ ಪಾದದ ಬೂಬಿ), ಸೂಲ ಲ್ಯೂಕೊಗ್ಯಾಸ್ಟರ್ (ಕಂದುಬೂಬಿ), ಸೂಲ ಸೂಲ (ಕೆಂಪು ಪಾದದ ಬೂಬಿ) ಮತ್ತು ಸೂಲ ಬೋಟಿ ಎಂಬುವು ಮುಖ್ಯವಾದುವು. ಇವುಗಳಲ್ಲಿ ಕೊನೆಯದು ಮೊಟ್ಟೆಯಿಡಲು ಹಿಂದೂ ಮಹಾಸಾಗರದ ಅಸಂಪ್ಷನ್ ಮತ್ತು ಕ್ರಿಸ್‌ಮಸ್ ದ್ವೀಪಗಳಿಗೆ ಹೋಗುತ್ತದೆ. (ಎಸ್.ಎಂ.)

**ಕಡಲ ಹದ್ದು :** ನೋಡಿ—ಆಸ್ಪ್ರೆ.

**ಕಡಲ ಹಾವುಗಳು :** ಉಷ್ಣ ಹಾಗೂ ಸಮಶೀತೋಷ್ಣವಲಯಗಳ ಸಮುದ್ರತೀರಪ್ರದೇಶದಲ್ಲಿ ವಾಸಿಸುವ ಅತ್ಯಂತ ವಿಷಪೂರಿತ ಬಗೆಯವು. ಇವು ನಾಗರಹಾವುಗಳ ಸಂಬಂಧಿ ಹೈಡ್ರೋಫಿಡೀ ಕುಟುಂಬಕ್ಕೆ ಸೇರಿದವು. ಏಷ್ಯ ಮತ್ತು ಆಸ್ಟ್ರೇಲಿಯಗಳ ತೀರಪ್ರದೇಶದಲ್ಲಿ ಇವುಗಳ ಸಂಖ್ಯೆ ಹೆಚ್ಚು. ಒಂದು ಜಾತಿಯ ಕಡಲ ಹಾವು ಆಫ್ರಿಕದ ಪೂರ್ವತೀರಪ್ರದೇಶದಲ್ಲೂ ಕಂಡುಬಂದಿದೆ. ಹಾಗೆಯೇ ಮತ್ತೊಂದು ಉತ್ತರ ಅಮೆರಿಕದ ಪಶ್ಚಿಮತೀರಪ್ರದೇಶದಲ್ಲಿ ಕಂಡುಬಂದಿದೆ. ಅಟ್ಲಾಂಟಿಕ್ ಸಾಗರದಲ್ಲಿ ಇವುಗಳ ಸುಳಿವಿಲ್ಲ.

ಇವು ಜಲಜೀವನಕ್ಕೆ ಅಚ್ಚುಕಟ್ಟಾಗಿ ಹೊಂದಿಕೊಂಡಿವೆ. ದೋಣಿಯ ಹುಟ್ಟಿನಂತೆ ಮಾರ್ಪಟ್ಟಿರುವ ಚಪ್ಪಟೆಯಾದ ಬಾಲ, ಕವಾಟಗಳಿಂದ ಕೂಡಿದ ಮೂಗಿನ ಹೊಳ್ಳೆಗಳು ಮತ್ತು ಮೋಟಾದ ನಾಲಗೆ—ಇವು ಜಲಜೀವನದ ಪರಿಹೊಂದಾಣಿಕೆಗಳು. ತಮ್ಮ ಉಪ್ಪು ನೀರಿನ ಪರಿಸರಕ್ಕೆ ಅನ್ವಯಿಸಿದಂತೆ ಇವುಗಳ ಮೂಗಿನಲ್ಲಿ ನಾಸಾಗ್ರಂಥಿ ಬೆಳೆದು ಹೆಚ್ಚಿನ ಉಪ್ಪನ್ನು ವಿಸರ್ಜಿಸುತ್ತದೆ. ಈಜುವುದರಲ್ಲಿ ಪ್ರಾವೀಣ್ಯ ಪಡೆದಿರುವ ಇವು ಭೂಮಿಯ ಮೇಲೆ ಹರಿದಾಡಲು ಅಸಮರ್ಥವಾಗಿವೆ. ನೀರಿನಲ್ಲಿದ್ದಾಗ ನೀರು ದೇಹವನ್ನು ಪ್ರವೇಶಿಸದಂತೆ ಮೂಗಿನ ಹೊಳ್ಳೆಗಳನ್ನು ಕವಾಟಗಳು ಮುಚ್ಚುತ್ತವೆ. ಸಾಮಾನ್ಯವಾಗಿ ತೀರಪ್ರದೇಶದಲ್ಲಿ ಹೆಚ್ಚಾಗಿ ಕಂಡುಬಂದರೂ ಇವು ದಡದಿಂದ ಬಹು ದೂರ ಈಜಿಹೋಗಬಲ್ಲುವು. ದಾಳಿಕಾರ ಪ್ರವೃತ್ತಿ ಇವುಗಳ ಹುಟ್ಟುಗುಣವಲ್ಲ. ಸಮುದ್ರತೀರದಲ್ಲಿ ಈಜಾಡುವವರಿಗೆ ಸಾಮಾನ್ಯವಾಗಿ ಇವು ಹಿಂಸೆ ಮಾಡುವುದಿಲ್ಲ. ಅಕಸ್ಮಾತ್ತಾಗಿ ಹಿಡಿದರೆ ಅಥವಾ ಥಿಕ್ಕಿ ಹೊಡೆದರೆ ಕಚ್ಚುವುದುಂಟು. ಇವಕ್ಕೆ ಪತಂಗಗಳಂತೆ ಬೆಳಕು ಬಲು ಇಷ್ಟ. ರಾತ್ರಿಯ ವೇಳೆ ಕಡಲ ತೀರದಲ್ಲಿ ಲಾಂದ್ರವನ್ನಿಟ್ಟರೆ ಅದರ ಬೆಳಕಿಗೆ ಆಕರ್ಷಿತವಾಗಿ ದಡಕ್ಕೆ ಬರುತ್ತವೆ. ಇವನ್ನು ಹಿಡಿಯುವವರು ಈ ವಿಧಾನವನ್ನು ಅನುಸರಿಸುತ್ತಾರೆ. ನ್ಯೂ ಗಿನಿಯಲ್ಲಿ ಅಲ್ಲಿನ ಕಡಲ ಹಾವುಗಳು ದೊಡ್ಡ ದೊಡ್ಡ ನದಿಗಳನ್ನು ಪ್ರವೇಶಿಸುವುದುಂಟು. ಬೆಸ್ತರು ನದಿಗಳಲ್ಲಿ ಮೀನು ಹಿಡಿಯುವಾಗ ಅವರ ಬಲೆಗಳಿಗೆ ಇವು ಬಿದ್ದರೆ ಅವರು ಹೆದರಿಕೆಯಿಲ್ಲದೆ ಇವನ್ನು ಹಿಡಿದು ನದಿಗೆ ಎಸೆದು ಬಿಡುತ್ತಾರೆ. ಚೀನಾ ದೇಶದಲ್ಲಿ ಚೀನೀಯರು ಇವನ್ನು ತಿನ್ನುವುದುಂಟು. ಕಡಲ ಹಾವಿನ ವಿಷದ ನಂಜು ನರಗಳ ಮೇಲೆ ಪರಿಣಾಮಕಾರಿಯಾಗಿದೆ. ಬೊಂಬಾಯಿಯ ಹಾಫ್ಕಿನ್ ಇನ್ಸ್ಟಿಟ್ಯೂಟಿನಲ್ಲಿ ಇದರ ನಂಜನ್ನು ಶಮನಗೊಳಿಸುವ ಆಂಟಿವೆನಿನ್ ಅಥವಾ ಪ್ರತಿವಿಷವನ್ನು ತಯಾರಿಸುತ್ತಿದ್ದಾರೆ.

ಈ ಕಡಲ ಹಾವುಗಳ ಕುಟುಂಬದಲ್ಲಿ ಎರಡು ಉಪಕುಟುಂಬಗಳಿವೆ. 1 ಹೈಡ್ರೋಫಿನೀ. 2 ಲಾಟಿಕಾನಿನೀ. ಮೊದಲನೆಯ ಗುಂಪಿನವು ಜಲಜೀವನಕ್ಕೆ ಸಂಪೂರ್ಣವಾಗಿ ಹೊಂದಿಕೊಂಡಿವೆ. ಅಲ್ಲದೆ ಅವು ತಮ್ಮ ಮೊಟ್ಟೆಗಳನ್ನು ಗರ್ಭಾಶಯದಲ್ಲಿಯೇ ಇಟ್ಟುಕೊಂಡು ಕಾವು ಕೊಟ್ಟು ಮರಿ ಮಾಡುತ್ತವೆ. ಆದರೆ ಎರಡನೆಯ ಗುಂಪಿನವು ಸಮುದ್ರದ ದಡಕ್ಕೆ ಬಂದು ಮೊಟ್ಟೆಗಳನ್ನಿಡುತ್ತವೆ. ಪೆಲಾಮಿಸ್ ಪ್ಲಾಟೂರಸ್ ಎಂಬ ಕಡಲ ಹಾವು ಹಿಂದೂ ಸಾಗರ ಮತ್ತು ಪೆಸಿಫಿಕ್ ಸಾಗರಗಳ ತೀರದಲ್ಲೆಲ್ಲ ಕಂಡುಬರುತ್ತದೆ. ಇದು ಸಾಮಾನ್ಯವಾಗಿ ಒಂದು ಮೀಟರು ಉದ್ದ ಬೆಳೆಯುತ್ತದೆ. ದೇಹ ಕಂದು ಅಥವಾ ಬೂದು ಬಣ್ಣವಾಗಿದ್ದು ಮೇಲೆ ಕಪ್ಪು ಪಟ್ಟೆಗಳಿರುತ್ತವೆ. ಭಾರತ ದೇಶದಲ್ಲಿ 8 ಜಾತಿ ಮತ್ತು 19 ಪ್ರಭೇದಗಳಿವೆ. ಕೆರಿಲಿಯ, ಲಾಟಿಕಾಡ, ಪ್ರೆಸ್ಕುಲೇಟ, ಎನ್‌ಹೈಡ್ರಿನ, ಹೈಡ್ರೋಫಿಸ್, ಲಪೆಮಿಸ್, ಮೈಕ್ರೋಸೆಫಾಲೋಫಿಸ್ ಮತ್ತು ಪೆಲಾಮಿಸ್ ಜಾತಿಯ ಕಡಲಹಾವುಗಳ ಪೈಕಿ ಕೊನೆಯ ಆರು ಜಾತಿಗಳು ಕನ್ನಡನಾಡಿನ ಕಡಲತೀರದಲ್ಲಿ ಕಾಣಬರುತ್ತವೆ. (ಬಿ.ಎಸ್.ಬಿ.)

**ಕಡಲ ಹೂ :** ಕುಟುಕು ಕಣವಂತ (ಸೀಲೆಂಟರೇಟ) ವಂಶಕ್ಕೆ ಸೇರಿದ ಒಂದು ಸಮುದ್ರವಾಸಿ (ಸೀ ಆನಿಮೊನಿ). ಆಂಥೊಜೋವ ವರ್ಗಕ್ಕೂ ಹೆಕ್ಸಕೊರಾಲಿಯ ಉಪವರ್ಗಕ್ಕೂ ಸೇರಿದೆ. ಮಧ್ಯೆ ಬಾಯಿಯುಳ್ಳ ಒಂದು ತಟ್ಟೆಯ

ಸುತ್ತ ಹೂಪಕಳಗಳಂತೆ ಜೋಡಿಸಿರುವ ಕೋಡುಬಳ್ಳಿಗಳಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಸುಮಾರು 1,000 ಪ್ರಭೇದಗಳುಳ್ಳ ಇದರ ಬಳಗ ಸಮುದ್ರ ದಂಡೆಯಿಂದ 22,000"ಗಳ ಆಳದ ವರೆಗೂ ವಿಸ್ತರಿಸಿದೆ. ವೈವಿಧ್ಯಮಯ ವರ್ಣ ವಿನ್ಯಾಸಗಳಿಂದ ಕೂಡಿದ ಈ ಸಮುದ್ರಜೀವಿಗಳು ನೋಡಲು ಬಲು ಆಕರ್ಷಕ. ಇವುಗಳಲ್ಲಿ ಏಕಾಂತ ಜೀವಿಗಳೇ ಹೇರಳವಾಗಿದ್ದರೂ ಕೂಡುಜೀವಿ, ಸಹಜೀವಿ, ಸಾಮೂಹಿಕಜೀವಿ ಮತ್ತು ಪರತಂತ್ರಜೀವಿಗಳೂ ಇಲ್ಲದೇ ಇಲ್ಲ. ಸ್ವಾಭಾವಿಕವಾಗಿ ಇವು ಸ್ಥಾವರ ಜೀವಿಗಳು. ಕಡಲತಳದಲ್ಲಿರುವ ಶಂಖ, ಕಪ್ಪೆಚಿಪ್ಪು, ಕಲ್ಲು ಮುಂತಾದುವುಗಳಿಗೆ ಅಂಟಿಕೊಂಡಿರುತ್ತವೆ. ಆದರೆ ಕೆಲವು ಪ್ರಾಣಿಗಳು ಮಂದಗಾಮಿ ಗಳಂತೆ ತೆವಳುವುದೂ ಮತ್ತೆ ಕೆಲವು ಕೋಡು ಬಳ್ಳಿಗಳ ಬಡಿತದಿಂದ ನಿಧಾನವಾಗಿ ಈಜುವುದೂ ಉಂಟು.

ಇವುಗಳ ದೇಹ ಕೊಳವೆಯಂತಿದೆ. ಆಧಾರಕ್ಕೆ ಅಂಟಿರುವ ಭಾಗವನ್ನು ಪಾದ ಅಥವಾ ಬುಡ (ಪೀಡಲ್ ಡಿಸ್ಕ್) ಎಂತಲೂ ಮೇಲ್ತುದಿಯ ಭಾಗವನ್ನು ಬಾಯ



ತಟ್ಟೆ (ಓರಲ್ ಡಿಸ್ಕ್) ಎಂತಲೂ, ಇವೆರಡರ ಮಧ್ಯೆ ಇರುವ ಭಾಗವನ್ನು ಕಂಬ (ಕಾಲಮ್) ಎಂತಲೂ, ಇದರ ದೇಹವನ್ನು ಮೂರು ಭಾಗಗಳಾಗಿ ವಿಂಗಡಿಸಬಹುದು. ಬಾಯ ತಟ್ಟೆಯ ಮಧ್ಯದಲ್ಲಿ ಸೀಳಿನಂಥ ಬಾಯೂ ಅಂಚಿನಲ್ಲಿ ಒಂದು ಅಥವಾ ಹಲವು ಸುತ್ತುಗಳಲ್ಲಿ ಜೋಡಿಸಿರುವ ಬೆರಳುಗಳಂಥ ಟೊಳ್ಳಾದ ಕೋಡುಬಳ್ಳಿಗಳೂ (ಟೆಂಟಿಕಲ್) ಇವೆ. ಎಲ್ಲ ಕಡಲಹೂಗಳಲ್ಲೂ ಕೋಡುಬಳ್ಳಿಗಳ ಸಂಖ್ಯೆ ಆರು ಅಥವಾ ಆರರ ಗುಣಕದಲ್ಲಿರುತ್ತದೆ. ಪ್ರತಿಯೊಂದು ಕೋಡುಬಳ್ಳಿಯಲ್ಲಿಯೂ ಅಸಂಖ್ಯಾತವಾದ ಕುಟುಕು ಕಣಗಳಿವೆ (ನಿಮ್ಯಾಟೊಸಿಸ್ಟ್ಸ್). ಬಾಯಿಯಿಂದ ಹೊರಟ ಚಿಕ್ಕ ಗಂಟಲು ನಾಳ (ಗಲೆಟ್ ಅಥವಾ ಸ್ಟೊಮೋಡಿಯಂ) ಶರೀರಸ್ತಂಭದ ಒಳಭಾಗದಲ್ಲಿ ಜೋತು ಬಿದ್ದಿದೆ. ಇದರ ಇಕ್ಕಡೆಗಳಲ್ಲೂ ಒಂದು ಅಥವಾ ಎರಡು ನೀರ್ನಳಿಕೆಗಳಿವೆ (ಸೈಫನೊಗ್ಲಿಫ್). ಈ ನಳಿಕೆಗಳಲ್ಲಿರುವ ಶಿಲಕೆಗಳ ಬಡಿತದಿಂದ ಆವಶ್ಯಕಾಂಶಗಳನ್ನು ಹೊತ್ತ ನೀರಿನ ಪ್ರವಾಹ ಒಂದು ನಳಿಕೆಯ (ಸಲ್ಕಸ್) ಮೂಲಕ ಒಳಹೊಕ್ಕು ಮತ್ತೊಂದರ ಮೂಲಕ (ಸಲ್ಕ್ಯುಲಸ್) ತ್ಯಾಜ್ಯ ವಸ್ತು ಗಳಿಂದ ಕೂಡಿ ಹೊರಬರುತ್ತದೆ. ಈ ಜಲಾಭಿಸರಣೆಯಿಂದ ಅನಿಲಗಳ ವಿನಿಮಯಕ್ಕೂ ಸಹಾಯವಾಗುವುದು.

ಕಡಲ ಹೂ ಇಪ್ಪದರಗಳ ಜೀವಿ, ಹೊರಚರ್ಮವೂ ಒಳಚರ್ಮವೂ ತನ್ಮಧ್ಯೆ ಮಂದವಾಗಿ ಬೆಳೆದಿರುವ ಮಿಸೋಗ್ಲಿಯವೂ ಶರೀರಸ್ತಂಭದ ಕೇಂದ್ರದಲ್ಲಿರುವ ಜಠರ ಸಂವಹನಿ ಡೊಗರನ್ನು (ಗಾಸ್ಟ್ರೊವ್ಯಾಸ್ಕುಲರ್ ಕ್ಯಾವಿಟಿ) ಸುತ್ತುವರಿದಿವೆ. ಈ ಡೊಗರಿನಲ್ಲಿ ಜೋಲಾಡುತ್ತಿರುವ ಗಂಟಲ ನಾಳ 6 ಜೊತೆ ನಡುತಡಿಕೆಗಳಿಂದ ಶರೀರದ ಗೋಡೆಗೆ ಅಂಟಿರುತ್ತದೆ. ನಡುತಡಿಕೆಗಳು, ಕೋಡುಗಳಂತೆ, 6ರ ಆವರ್ತಗಳಲ್ಲಿ ಜೊತೆಜೊತೆಯಾಗಿ ಬೆಳೆದು ಡೊಗರನ್ನು ಅನೇಕ ಕೋಣೆಗಳಾಗಿ ವಿಭಾಗ ಮಾಡಿವೆ. ಆದರೆ ಇವುಗಳಲ್ಲಿರುವ ದ್ವಾರಗಳಿಂದ ಕೋಣೆಗಳ ಅಂತಸ್ಸಂಪರ್ಕಕ್ಕೆ ಅವಕಾಶ ಏರ್ಪಡುತ್ತದೆ. ನಡುತಡಿಕೆಗಳು ಪ್ರಥಮ, ದ್ವಿತೀಯ ತೃತೀಯ ಮತ್ತು ಚತುರ್ಥ ತಂಡಗಳಲ್ಲಿ ಬೆಳೆಯಬಹುದು. ಆದರೆ ಪ್ರತಿ ತಂಡದಲ್ಲೂ ಕೇವಲ 6 ಜೊತೆಗಳಿದ್ದು ಅವುಗಳ ಗಾತ್ರ ಮತ್ತು ಉಗಮಕಾಲ ಒಂದೇ ಆಗಿರುತ್ತವೆ. ನೀಳ ಹಾಗೂ ವರ್ತುಳ ಸ್ನಾಯುಗಳಿಂದ ಕೂಡಿದ ನಡುತಡಿಕೆಗಳ ಗೋಡೆಗೆ ಅಂಟಿರುವ ಜನನೇಂದ್ರಿಯಗಳು ಸಂತಾನೋತ್ಪತ್ತಿಯಲ್ಲಿ ಪಾತ್ರವಹಿಸು ತ್ತವೆ. ನಡುತಡಿಕೆಗಳ ಅಂಚಿನಲ್ಲಿರುವ ಅಂತ್ಯತಂತುಗಳು (ಅಕಾಂಟಿಯ)ದೇಹರಕ್ಷಣೆಯ ಕಾರ್ಯದಲ್ಲಿ ನೆರವಾಗುತ್ತವೆ. ಈ ಪ್ರಾಣಿಗಳಲ್ಲಿ ಲಿಂಗ ಮತ್ತು ನಿರ್ಲಿಂಗ ರೀತಿಯ ವಂಶಾಭಿವೃದ್ಧಿಗಳೆರಡನ್ನೂ ಕಾಣಬಹುದು. ಅಂಡಾಣುಗಳ ಸಂಯೋಗದಿಂದ ಉತ್ಪತ್ತಿಯಾಗುವ ಮರಿ ಕಡಲ ಹೂ ತಾಯಿಯ ಬಾಯ ಮೂಲಕ ಹೊರಬಂದು, ಯಾವುದಾದರೂ ಆಧಾರಕ್ಕೆ ಅಂಟಿಕೊಂಡು ಸ್ವತಂತ್ರ ಜೀವಿಯಾಗಲು ತೊಡಗುತ್ತದೆ.

ಎಲ್ಲ ಕಡಲು ಹೂಗಳೂ ಮಾಂಸಾಹಾರಿಗಳು. ಕುಟುಕು ಕಣಗಳಿಂದ ಕೂಡಿದ ಕೋಡುಬಳ್ಳಿಗಳ ನೆರವಿನಿಂದ ತಾವಿದ್ದಲ್ಲಿಗೆ ಬಂದ ಇತರ ಪ್ರಾಣಿಗಳನ್ನು ಇವು ಕೊಂದು ತಿನ್ನುತ್ತವೆ. ಕೆಲವು ಕಡಲ ಹೂಗಳಲ್ಲಿ ದೇಹದಿಂದ ಸ್ರವಿಸಲ್ಪಟ್ಟ ಅಂಟುದ್ರವಕ್ಕೆ ಮರಳು, ಕಪ್ಪೆಚಿಪ್ಪು ಮುಂತಾದ ಅನ್ಯವಸ್ತುಗಳು ಅಂಟಿಕೊಂಡು ಬಹಿರ್ಕವಚವೊಂದು ನಿರ್ಮಾಣವಾಗುವುದುಂಟು. (ಎಸ್.ಎಚ್.ಜಿ.)

**ಕಡಲಾಮೆಗಳು :** ಸರೀಸೃಪವರ್ಗದ ಕಿಲೋನಿಯ ಗಣಕ್ಕೆ (ಆಮೆಗಳ ಗುಂಪು) ಸೇರಿದ ಸಮುದ್ರವಾಸಿ ಪ್ರಾಣಿ (ಟರ್ಟಲ್). ಸಾಮಾನ್ಯವಾಗಿ ಸ್ಫಾರ್ಗಿಡೀ ಮತ್ತು ಕೀಲೊನೈಯಿಡೀ ಕುಟುಂಬಗಳಿಗೆ ಸೇರಿದ ಪ್ರಾಣಿಗಳನ್ನು ಕಡಲಾಮೆಗಳೆನ್ನುತ್ತಾರೆ. ಇವುಗಳಲ್ಲಿ ಮೊದಲನೆಯ ಕುಟುಂಬಕ್ಕೆ ಸೇರಿದ ಡರ್ಮೋಕೆಲಿಸ್ ಕೋರಿಯೇಸಿಯ



ಮತ್ತು ಎರಡನೆಯದಕ್ಕೆ ಸೇರಿದ, ಕಿಲೋನೀ ಇಂಬ್ರಿಕೇಟ ಮತ್ತು ಕಿ. ಮೈಡಾಸ್ ಎಂಬುವು ಮುಖ್ಯವಾದ ಬಗೆಯ ಕಡಲಾಮೆಗಳು.

ತೊಗಲಾಮೆ (ಲೆಡರ ಟರ್ಟಲ್) ಎಂದೂ ಕರೆಯಲಾಗುವ ಡರ್ಮೋಕೆಲಿಸ್ ಕೋರಿಯೇಸಿಯ ಕಡಲಾಮೆ ಸಿಂಹಳದ ಕಡಲತೀರ ಪ್ರದೇಶಗಳಲ್ಲಿ ಹೇರಳವಾಗಿ ಕಾಣಬರುತ್ತದೆ. ಇದು ಗಾತ್ರದಲ್ಲಿ ಬಹುದೊಡ್ಡದು, ಸುಮಾರು 9′ ಉದ್ದ ಬೆಳೆಯುತ್ತದೆ. ಚೆನ್ನಾಗಿ ಬೆಳೆದ ಕಡಲಾಮೆ ಅರ್ಧ ಟನ್ ತೂಗುವುದುಂಟು. ಎಲ್ಲ ಆಮೆಗಳಲ್ಲಿರುವಂತೆ ಇದರಲ್ಲೂ ದೇಹವನ್ನು ಆವರಿಸಿದ ಒಂದು ಚಿಪ್ಪಿದೆ. ಚಿಪ್ಪಿನಲ್ಲಿ ಬೆನ್ನಿನ ಕಡೆ ಉಬ್ಬಿಕೊಂಡಿರುವ ಕ್ಯಾರಪೇಸ್ ಎಂಬ ಭಾಗವೂ ಹೊಟ್ಟೆಕಡೆ ಚಪ್ಪಟೆ ಯಾಗಿರುವ ಪ್ಲಾಸ್ಟ್ರಾನ್ ಎಂಬ ಭಾಗವೂ ಇವೆ. ಕ್ಯಾರಪೇಸಿನ ಮೇಲೆ ಮೃದು ವಾದ ಚರ್ಮದ ಹೊದಿಕೆಯಿದೆ. ಅಲ್ಲದೆ ಅದು ಚಿಕ್ಕ ಚಿಕ್ಕ ಬಹುಭುಜಾಕೃತಿಯ ಅಸ್ಥಿಫಲಕಗಳಿಂದ ಕೂಡಿದೆ. ಇಂಥ ಫಲಕಗಳು ಇತರ ಆಮೆಗಳಲ್ಲಿ ಒಳಗಿನ ಪಕ್ಕೆಲುಬುಗಳಿಗೂ ಕಶೇರುಗಳಿಗೂ ಅಂಟಿಕೊಂಡಿರುತ್ತವೆ. ಆದರೆ ಇಲ್ಲಿ ಹಾಗಿಲ್ಲ. ಚಿಪ್ಪಿನಿಂದ ಹೊರಗೆ ಚಾಚಿಕೊಂಡಿರುವ ಎರಡು ಜೊತೆ ಕಾಲುಗಳು ದೋಣಿಯ ಹುಟ್ಟಿನಂತೆ ಮಾರ್ಪಾಟಾಗಿವೆ. ಇದರಿಂದ ಈಜಲು ಅನುಕೂಲ. ಕಾಲುಗಳ ಮೇಲೆಲ್ಲ ಹುರುಪೆಗಳ ಹೊದಿಕೆಯಿದೆ, ನಖಗಳಿಲ್ಲ. ದೇಹದ ಹಿಂತುದಿಯಲ್ಲಿ ಪುಟ್ಟ ಬಾಲವೊಂದಿದೆ. ಕಡಲಾಮೆ ಮಾಂಸಾಹಾರಿ. ಸೀಗಡಿ, ನಳ್ಳಿ, ಮೀನು ಮುಂತಾದವು ಇದರ ಆಹಾರ. ಮೊಟ್ಟೆಯಿಡಲು ಸಮುದ್ರದಂಡೆಗೆ ಬರುತ್ತದೆ. ಮೊಟ್ಟೆಯಿಡುವ ಕಾಲ ವಸಂತಋತು. ಮರಳಿನ ತೀರಕ್ಕೆ ಬಂದು ದೊಡ್ಡ ದೊಡ್ಡ ಗುಂಡಿಗಳನ್ನು ತೋಡಿ ಅವುಗಳಲ್ಲಿ ಮೊಟ್ಟೆಯಿಟ್ಟು ಗುಂಡಿಗಳನ್ನು ಮುಚ್ಚಿ ನೀರಿಗೆ ಮರಳುತ್ತದೆ. ಬಿಸಿಲಿನ ಶಾಖದಿಂದಾಗಿ ಮೊಟ್ಟೆಗಳು ಒಡೆದು ಮರಿ ಆಮೆಗಳು ಹೊರಬರುತ್ತವೆ. ಇವು ನಿಧಾನವಾಗಿ ತೆವಳಿಕೊಂಡು ಹೋಗಿ ಸಮುದ್ರವನ್ನು ಸೇರಿ ತಮ್ಮ ಸ್ವತಂತ್ರ ಜೀವನವನ್ನು ಆರಂಭಿಸುತ್ತವೆ. ಕೀಲೊನೈಯಿಡೀ ಕುಟುಂಬದ ಕಿಲೋನೀ ಜಾತಿಯ ಕಡಲಾಮೆಗಳು ವೆಸ್ಟ್ ಇಂಡೀಸ್, ಮಲೇಸಿಯ, ಪಶ್ಚಿಮ ಆಫ್ರಿಕ ಹಾಗೂ ಸಿಂಹಳ ದೇಶಗಳ ಸಮುದ್ರತೀರಗಳಲ್ಲಿ ಸಾಮಾನ್ಯ. ನೋಡುವುದಕ್ಕೆ ತೊಗಲಾಮೆಯಂತೆ ಕಂಡರೂ ಕೆಲವು ಲಕ್ಷಣಗಳಲ್ಲಿ ಅದಕ್ಕಿಂತ ಭಿನ್ನವಾಗಿವೆ. ಕಾಲುಗಳಲ್ಲಿ ಒಂದು ಅಥವಾ ಎರಡು ಉಗುರುಗಳಿರುವುದೂ ಕ್ಯಾರಪೇಸಿನ ಫಲಕಗಳು ಗಡುಸಾಗಿರುವುದೂ ಇವುಗಳ

ಮುಖ್ಯ ಲಕ್ಷಣಗಳು. ಉಳಿದ ಜೀವನಕ್ರಮವೆಲ್ಲ ತೊಗಲಾಮೆಯಂತೆಯೇ. ಕಿಲೋನೀ ಇಂಬ್ರಿಕೇಟ ಎನ್ನುವ ಪ್ರಭೇದವನ್ನು ಸಾಮಾನ್ಯವಾಗಿ ಗರುಡಮೂಗಿನ ಆಮೆಯೆಂದು ಕರೆಯುತ್ತಾರೆ. ಇದು ಮಾಂಸಾಹಾರಿ. ಇದರ ಚಿಪ್ಪನ್ನು ಹಲವಾರು ಬಗೆಯ ವಸ್ತುಗಳನ್ನು ಮಾಡಲು ಉಪಯೋಗಿಸುತ್ತಾರೆ. ಕಿಲೋನೀ ಮೈಡಾಸ್ ಪ್ರಭೇದಕ್ಕೆ ಹಸಿರು ಆಮೆ ಎಂಬ ಸಾಮಾನ್ಯ ಹೆಸರಿದೆ. 3′ ಉದ್ದ ಬೆಳೆಯುವ ಇದು ಸಸ್ಯಾಹಾರಿ ಇದರ ಕೊಬ್ಬು ಹಸಿರು ಬಣ್ಣಕ್ಕಿರುವುದರಿಂದ ಇದಕ್ಕೆ ಹಸಿರು ಆಮೆ ಎಂಬ ಹೆಸರು.

ಕಡಲಾಮೆಗಳು ತಾವು ಸಿಕ್ಕುವ ಸ್ಥಳಗಳ ನಿವಾಸಿಗಳಿಗೆ ಆಹಾರವಸ್ತುಗಳಾಗಿವೆ. ಇವುಗಳ ಮೊಟ್ಟೆಯನ್ನೂ ತಿನ್ನುತ್ತಾರೆ. ಹಸಿರು ಆಮೆಯ ಮಾಂಸದಿಂದ ಮಾಡಲಾಗುವ ಸಾರು (ಟರ್ಟಲ್ ಸೂಪ್) ಬಹು ಪ್ರಸಿದ್ಧವಾದ ಪೇಯವಸ್ತು.

(ಬಿ.ಟಿಎಚ್.)

ನೋಡಿ :—ಆಮೆ, ಆಮೆಯ ಚಿಪ್ಪು, ನೀರಾಮೆ.

**ಕಡಲುದರೋಡೆ :** ಸಾಮಾನ್ಯವಾಗಿ ಯಾವ ದೇಶದ ಹದ್ದಿಗೂ ಒಳಪಡದ ಸಮುದ್ರ ಪ್ರದೇಶದಲ್ಲಿ ಅನಧಿಕೃತವಾಗಿ ಹಡಗುಗಳ ಮೇಲೆ ನಡೆಸಿದ ದರೋಡೆ, ಹಿಂಸಾಕೃತ್ಯ (ಪೈರೆಸಿ).

ಕಡಲುದರೋಡೆಯ ಇತಿಹಾಸ ಸಮುದ್ರಯಾನದಷ್ಟೇ ದೀರ್ಘವಾದದ್ದು. ಮಾನವನ ಚರಿತ್ರೆಯ ನಾನಾ ಘಟ್ಟಗಳಲ್ಲಿ, ಬೇರೆ ಬೇರೆ ಪ್ರದೇಶಗಳಲ್ಲಿ, ಹೆಚ್ಚು ಕಡಿಮೆ ಪರಿಣಾಮಗಳಲ್ಲಿ ಇದರ ಹಾವಳಿ ಇದ್ದೇ ಇತ್ತು. ಗಗನಪಥದಲ್ಲಿ ಸಂಚರಿಸುತ್ತಿರುವ ವಿಮಾನದ ಚಾಲಕರಿಗೂ ಪ್ರಯಾಣಿಕರಿಗೂ ಬೆದರಿಕೆಯನ್ನೊಡ್ಡಿ ಅದರ ಉದ್ದಿಷ್ಟ ನೆಲೆ ತಪ್ಪಿಸಿ ಅದು ಬೇರೆಲ್ಲಿಗೋ ಹೋಗುವಂತೆ ಮಾಡುವ ವಿಮಾನಾಪಹರಣವೂ (ಹೈಜ್ಯಾಕಿಂಗ್) (ನೋಡಿ) ಕಡಲು ದರೋಡೆಯ ಮಾದರಿಯೇ. ಆದರೆ ಅದರ ಉದ್ದೇಶ ಬೇರೆ ಇರಬಹುದು. ಕಡಲು ದರೋಡೆಗೆ ಇಂಗ್ಲಿಷ್ ಪರ್ಯಾಯ ಪದವಾದ ಪೈರೆಸಿಯೆಂಬುದರಲ್ಲಿ ವಿಮಾನಾಪಹರಣವೂ ಸೇರಿದೆ.

ಗ್ರೀಕ್ ಮತ್ತು ರೋಮನ್ ಆಧಿಪತ್ಯಗಳ ಕಾಲದಲ್ಲಿ ಮೆಡಿಟರೇಯನ್ ಸಮುದ್ರ ದರೋಡೆಯ ಕ್ಷೇತ್ರವಾಗಿತ್ತು. ಸಮುದ್ರವ್ಯಾಪಾರ ನಡೆಯುತ್ತಿದ್ದೆಡೆಯಲ್ಲೆಲ್ಲ ದರೋಡೆಯ ಅಂಜಿಕೆ ಆಗಿನ ಕಾಲದಲ್ಲಿ ಸಾಮಾನ್ಯವಾಗಿತ್ತು. ಹೋಮರನ ಒಡಿಸ್ಸಿಯಲ್ಲಿ ಕಡಲು ಸಂಚಾರಿಗಳ ಉಲ್ಲೇಖವಿದೆ. ಜ್ಯೂಲಿಯಸ್ ಸೀಸರ್ ಚಿಕ್ಕವನಿದ್ದಾಗ ದರೋಡೆಗಾರರಿಗೆ ಸೆರೆಸಿಕ್ಕಿದ್ದು, ಹಣ ಕೊಟ್ಟ ಮೇಲೆ ಅವನ ಬಿಡುಗಡೆಯಾಯಿತಂತೆ. ಅನಂತರ ಆತ ದಂಡೆತ್ತಿಹೋಗಿ ಆ ಹಡಗನ್ನಾಕ್ರಮಿಸಿಕೊಂಡು ಅದರ ಚಾಲಕರನ್ನೆಲ್ಲ ಸಿಲುಬೆಗೇರಿಸಿದನೆಂದು ಉಲ್ಲೇಖವಿದೆ. ಪ್ರಾಚೀನ ಭಾರತದ ಉತ್ಕರ್ಷೆಯ ಕಾಲದಲ್ಲಿ, ಅದು ನೆರೆಯ ಸಾಗರೋತ್ತರ ನಾಡುಗಳೊಡನೆ ವಾಣಿಜ್ಯಕ ಸಾಂಸ್ಕೃತಿಕ ಮತ್ತು ರಾಜಕೀಯ ಸಂಪರ್ಕ ಹೊಂದಿದ್ದಾಗಲೂ ಕಡಲ್ಗಳ್ಳರ ಹಾವಳಿ ಇದ್ದೇ ಇತ್ತು. ಮಧ್ಯಯುಗದಲ್ಲಿ ಯೂರೋಪಿನ ಉತ್ತರದ ವೈಕಿಂಗರೂ ದಕ್ಷಿಣದ ಮೂರರೂ ಕಡಲುದರೋಡೆಯಲ್ಲಿ ನಿರತರಾಗಿದ್ದರು. ಪೌರಸ್ತ್ಯ ದೇಶಗಳಿಂದ ಕೊಂಡ ಸರಕುಗಳನ್ನು ಹೊತ್ತ ಹಡಗುಗಳು ದರೋಡೆಗೆ ಒಳಗಾಗುತ್ತಿದ್ದುದಂತೂ ಸಾಮಾನ್ಯವಾಗಿತ್ತು. ಹದಿನಾರನೆಯ ಶತಮಾನದಲ್ಲಿ ವಾಣಿಜ್ಯವೂ ಕಡಲು ದರೋಡೆಯೂ ಒಟ್ಟೊಟ್ಟಿಗೇ ಬೆಳೆದುಬಂದುವೆನ್ನಬಹುದು. ಅರಬೀಯರ ಕೈಯಲ್ಲಿದ್ದ ಈ ವ್ಯಾಪಾರವನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳುವ ಸಲುವಾಗಿಯೇ ಯೂರೋಪಿನ ರಾಷ್ಟ್ರಗಳು ಧಾರ್ಮಿಕ ಯುದ್ಧದ ಹೆಸರಿನಲ್ಲಿ ದರೋಡೆ ನಡೆಸಿದುವೆಂಬುದಕ್ಕೆ ಅನೇಕ ಚಾರಿತ್ರಿಕ ಆಧಾರಗಳುಂಟು. ಐರೋಪ್ಯ ರಾಷ್ಟ್ರಗಳ ಕೈಗಾರಿಕಾ ಕ್ರಾಂತಿಯ ಯಶಸ್ಸಿಗೆ ಅನುವಾಗಿ ಬಂದ ಬಂಡವಾಳವಾದರೂ ಕೊಳ್ಳೆ, ಕಡಲುದರೋಡೆ ಮುಂತಾದುವುಗಳಿಂದಲೇ ಹೆಚ್ಚಾಗಿ ಬೆಳೆಯಿತೆಂಬುದು ಇತಿಹಾಸದಲ್ಲಿ ಗುರುತಿಸಬಹುದಾದ ಸತ್ಯ.

ಪುನರುಜ್ಜೀವನಕಾಲದಲ್ಲೂ ಅನಂತರದಲ್ಲೂ ಯೂರೋಪಿನಲ್ಲಿ ಪದೇ ಪದೇ ಸಂಭವಿಸುತ್ತಿದ್ದ ಯುದ್ಧಗಳಲ್ಲಿ ಹಲವು ಹಡಗುಗಳು ನಾಶವಾಗುತ್ತಿದ್ದವು. ಇದರಿಂದ ಕೆಲಸ ಕಳೆದುಕೊಂಡ ನಾವಿಕರನ್ನು ದರೋಡೆಗಾರರು ತಮ್ಮತ್ತ ಸೆಳೆದುಕೊಳ್ಳುತ್ತಿದ್ದುದುಂಟು. ಅವರಿಗೆ ಸಂಬಳವಿರುತ್ತಿರಲಿಲ್ಲ. ಕೊಳ್ಳೆಗೆ ಒಳಗಾದ ಹಡಗಿನ ಸಂಪತ್ತಿನಲ್ಲಿ ಅವರಿಗೊಂದು ಭಾಗವಿರುತ್ತಿತ್ತು. ಪರಿಸ್ಥಿತಿಯ ಒತ್ತಡದಿಂದಲೋ ದರೋಡೆಗಾರರ ಕೈಯಿಂದ ಪ್ರಾಣವನ್ನುಳಿಸಿಕೊಳ್ಳುವುದಕ್ಕಾಗಿಯೋ ತಾವೂ ಈ ವೃತ್ತಿ ಅವಲಂಬಿಸಬೇಕಾಯಿತೆಂಬುದಾಗಿಯೇ ಅವರು ಸಿಕ್ಕಿಬಿದ್ದ ಸಂದರ್ಭದಲ್ಲಿ ಕೈಫಿಯತ್ತು ಕೊಟ್ಟಿರುವುದುಂಟು.

ಹಡಗಿನ ಪ್ರಯಾಣಿಕರಲ್ಲೇ ಕೆಲವರು ದಂಗೆಯೆದ್ದು, ವಿರೋಧಿಸುವ ಅಧಿಕಾರಿಗಳನ್ನೂ ಚಾಲಕ ಸಿಬ್ಬಂದಿಯನ್ನೂ ಕೊಂದು, ಅವರ ದೇಹಗಳನ್ನು ಕಡಲಿನ ಪಾಲು ಮಾಡಿ, ಹಡಗನ್ನು ಕೊಂಡೊಯ್ದು, ಸರಕುಗಳನ್ನೆಲ್ಲ ಕೊಳ್ಳೆ ಹೊಡೆದು ದೋಣಿಗಳಲ್ಲಿ ಪರಾರಿಯಾಗುತ್ತಿದ್ದುದೂ ಉಂಟು. ಇನ್ನೊಂದು ದೇಶದಿಂದಾದ ತಪ್ಪಿಗೆ ಮುಯ್ಯಾಗಿಯೋ ಶತ್ರುದೇಶಕ್ಕೆ ಪೆಟ್ಟು ತಾಗಿಸಲೋ ಸರ್ಕಾರವೇ ಖಾಸಗಿ ಒಡೆತನದ ಶಸ್ತ್ರಸಜ್ಜಿತ ಹಡಗಿಗೆ ಕಡಲುದರೋಡೆ ಮಾಡಲು ಅನುಜ್ಞೆ ಕೊಡುತ್ತಿದ್ದುದೂ ಸಾಮಾನ್ಯವಾಗಿತ್ತು. ಇದು ಬಲು ಲಾಭಪ್ರದ ಉದ್ಯಮವಾಗಿದ್ದುದರಿಂದ ಶಾಂತಿ ಕಾಲದಲ್ಲೂ ಮುಂದುವರಿಯುತ್ತಿತ್ತು. ರಾಣಿ ಎಲಿಜ಼ಬೆತಳ ಕಾಲದಲ್ಲಿ, ಬ್ರಿಟನಿಗೂ ಸ್ಪೇನಿಗೂ ಯುದ್ಧ ನಡೆಯುತ್ತಿದ್ದಾಗ, ಮೆಕ್ಸಿಕೋದಿಂದ ಕ್ಯಾರಿಬಿಯನ್ ಪ್ರದೇಶಕ್ಕೆ ಸಾಗುತ್ತಿದ್ದ ಸಂಪದ್ಭರಿತ ಸ್ಪೇನಿಷ್ ಹಡಗುಗಳನ್ನು ಕೊಳ್ಳೆ ಹೊಡೆಯಲಾಗುತ್ತಿತ್ತು. ಈ ಬಗೆಯ ಖಾಸಗಿ ಸಾಹಸಕ್ಕೂ ದರೋಡೆಗೂ ನಡುವೆ ಗೆರೆ ಎಳೆಯುವುದೇ ಕಷ್ಟವೆಂಬ ಪರಿಸ್ಥಿತಿ ಒದಗಿತು. ಶತ್ರುಹಡಗುಗಳನ್ನು ಕೊಳ್ಳೆ ಹೊಡೆದಾಗ ಅದರಲ್ಲೊಂದು ಭಾಗವನ್ನು ಬಹುಮಾನವಾಗಿ ನೌಕಾಪಡೆಯವರಿಗೆ ಕೊಡುವ ಪದ್ಧತಿಯಿಂದ ಆಗುತ್ತಿದ್ದ ಕೆಡುಕಂತೂ ಅಪಾರ. ವ್ಯಾಪಾರದ ಆಸೆಯಿಂದ ಪೂರ್ವಪ್ರದೇಶಗಳಿಗೆ ಬಂದು ರಾಜ್ಯಕಟ್ಟುವ ಕಾರ್ಯದಲ್ಲಿ ನಿರತವಾಗಿ ಪರಸ್ಪರ ಹೋರಾಟಗಳಲ್ಲಿ ತೊಡಗಿದ ಐರೋಪ್ಯ ವ್ಯಾಪಾರ ಸಂಸ್ಥೆಗಳಲ್ಲಿನ ಕೆಲಸಗಾರರಿಗೆ ಕಡಲು ದರೋಡೆಯೂ ಒಂದು ಲಾಭಕರ ಹವ್ಯಾಸವೇ ಆಗಿ ಪರಿಣಮಿಸಿತ್ತು. ಶತ್ರುಗಳಿಗೆ ಸೇರಿದ ಹಡಗುಗಳನ್ನು ಹಿಡಿದು, ಆ ಕೆಲಸ ಮಾಡಿದ್ದಕ್ಕಾಗಿ ಬಹುಮಾನ ಕೊಡಬೇಕೆಂದು ಕೇಳಿಕೆ ಮುಂದಿಡುವ ನೌಕಾಧಿಕಾರಿಗಳ ಅಭ್ಯಾಸದಿಂದ ಸರ್ಕಾರಗಳು ಪೇಚಿಗೆ ಸಿಗುತ್ತಿದ್ದುದರಿಂದ ಈ ಪದ್ಧತಿಯನ್ನು ತೊಡೆದು ಹಾಕುವ ಕ್ರಮಗಳು ಕಳೆದ ಶತಮಾನದಲ್ಲೂ ಈ ಶತಮಾನದಲ್ಲೂ ಅನೇಕ ಪಾಶ್ಚಾತ್ಯದೇಶಗಳಲ್ಲಿ ಜಾರಿಗೆ ಬಂದುವು.

ಕಡಲು ದರೋಡೆ ಒಂದು ಅಪಕೃತ್ಯವೆಂದು ಇಂದು ಪರಿಗಣಿಸಲಾಗಿದೆ. ಯಾವ ದೇಶದ ಸಾರ್ವಜನಿಕ ಹಡಗೇ ಆಗಿರಲಿ ದರೋಡೆ ಹಡಗೊಂದನ್ನು ಕಂಡಾಗ ಅದನ್ನು ಹಿಡಿದು, ಬಂದರಿಗೆ ಕರೆದೊಯ್ದು, ಅದರ ಸಿಬ್ಬಂದಿಯವರು ಯಾವ ರಾಷ್ಟ್ರದವರೇ ಆಗಿದ್ದರೂ ಅವರನ್ನು ವಿಚಾರಣೆಗೆ ಗುರಿಪಡಿಸಿ, ಅವರು ತಪ್ಪಿತಸ್ಥರೆಂದು ಕಂಡುಬಂದರೆ ಶಿಕ್ಷಿಸಿ ಹಡಗನ್ನು ಮುಟ್ಟುಗೋಲು ಹಾಕಿಕೊಳ್ಳಬಹುದಾಗಿದೆ. ರಾಜಕೀಯೋದ್ದೇಶವಿಲ್ಲದೆ ಸ್ವಂತ ಲಾಭಕ್ಕಾಗಿ ದರೋಡೆ ಮಾಡುವವರು ಮಾನವ ಜನಾಂಗದ ಶತ್ರುಗಳೆಂದು ಭಾವಿಸಲಾಗಿದೆ. ಹಡಗು ದರೋಡೆಗೆ ಮರಣದಂಡನೆ ಅಥವಾ ಆಜೀವ ಕಾರಾಗೃಹ ಶಿಕ್ಷೆ ವಿಧಿಸುವ ಕಾನೂನುಗಳು ಅನೇಕ ರಾಷ್ಟ್ರಗಳಲ್ಲಿ ಜಾರಿಯಲ್ಲಿವೆ. ಕಾನೂನುಬಾಹಿರ ಯುದ್ಧ, ಬಂಡಾಯ, ಹಡಗು ದರೋಡೆ, ಗುಲಾಮ ವ್ಯಾಪಾರ—ಇವೆಲ್ಲವೂ ಏಕರೀತಿಯ ಅಪರಾಧಗಳೆಂದು ವಿಶೇಷ ಅಂತರರಾಷ್ಟ್ರೀಯ ಕೌಲುಗಳ ಮೂಲಕ ಪರಿಗಣಿಸಲಾಗಿದೆ. ಎಚ್ಚರಿಕೆ ನೀಡದೆ ವ್ಯಾಪಾರದ ಹಡಗುಗಳನ್ನು ಜಲಾಂತರ್ಗಾಮಿ ನೌಕೆಗಳಿಂದ ನಾಶಪಡಿಸುವುದು ಹಡಗುದರೋಡೆಯಂತೆಯೇ ಅಪರಾಧವೆಂದು ಪರಿಗಣಿಸಬೇಕೆಂದೂ ಅಂಥವನ್ನು ನಾಶಪಡಿಸಬೇಕೆಂದೂ ಒಡಂಬಡಿಕೆಯಿರುವುದಾದರೂ ಈ ಬಗ್ಗೆ ಸ್ಪಷ್ಟವಾಗಿ ಏನನ್ನೂ ಹೇಳುವುದು ಸಾಧ್ಯವಿಲ್ಲ. ಏಕೆಂದರೆ ಜಲಾಂತರ್ಗಾಮಿ ನೌಕೆಗಳು ಈ ಬಗೆಯ ಕಾರ್ಯದಲ್ಲಿ ತೊಡಗುವುದು ಸಾಮಾನ್ಯವಾಗಿ ಯುದ್ಧ ಸಂದರ್ಭಗಳಲ್ಲಿ; ಸರ್ಕಾರದ ಆದೇಶವಿದ್ದಾಗ ಮಾತ್ರ.

(ಐ.ಆರ್.)

**ಕಡಲುನಕ್ಷತ್ರಗಳು :** ನೋಡಿ—ಆಸ್ಟೆರಾಯ್ಡಿಯ.

**ಕಡಲೆ :** ಲೆಗ್ಯುಮಿನೋಸೀ ಕುಟುಂಬದ ಸೈಸರ್ ಆರಿಯಿಟಿನಮ್ ಎಂಬ ವೈಜ್ಞಾನಿಕ ಹೆಸರಿನ ವಾರ್ಷಿಕ ಸಸ್ಯ. ಬಹುಸಂಖ್ಯಾತ ಶಾಕಾಹಾರಿಗಳೇ ಇರುವ ಭಾರತದಲ್ಲಿ, ಜನರ ಸಸಾರಜನಕದ (ಪ್ರೋಟೀನ್) ಪೂರೈಕೆ ಮಾಡುವಲ್ಲಿ ದ್ವಿದಳ ಧಾನ್ಯಗಳಾದ ಕಡಲೆ ಮತ್ತು ತೊಗರಿಗಳ ಪಾತ್ರ ಬಹಳ ಹಿರಿದು. ಅತಿ ಪುರಾತನ ಕಾಲದಿಂದಲೂ ಬಳಕೆಯಲ್ಲಿರುವ ಕಡಲೆಯನ್ನು, ಏಷ್ಯ ಮತ್ತು ಯೂರೋಪ್ ಖಂಡಗಳ ಹಲವಾರು ಭಾಗಗಳಲ್ಲಿ ಬೆಳೆಯುತ್ತಾರೆ. ಇದರ ಮೂಲಸ್ಥಾನ ಬಹುಶಃ ಮೆಡಿಟರೇನಿಯನ್ ಪ್ರದೇಶ.

ಮುಖ್ಯವಾಗಿ ಉತ್ತರ ಭಾರತದ ಬೆಳೆಯಾದ ಕಡಲೆಯನ್ನು ಭಾರತದ ಸುಮಾರು 10 ದಶಲಕ್ಷ ಹೆಕ್ಟೇರುಗಳಷ್ಟು ಜಮೀನಿನಲ್ಲಿ ಬೆಳೆಯಲಾಗುತ್ತಿದೆ. 1967–68ನೆಯ ಸಾಲಿನಲ್ಲಿ 71,05,000 ಹೆಕ್ಟೇರುಗಳಷ್ಟು ಭೂಮಿಯಲ್ಲಿ ಬೆಳೆಯಲಾದ ಇದರ ಉತ್ಪನ್ನ ಸುಮಾರು 43,09,000 ಟನ್ನುಗಳಷ್ಟಿತ್ತು. ಮೈಸೂರು ರಾಜ್ಯದಲ್ಲಿ ಕೂಡ ಕಡಲೆಗೆ ಸಾಕಷ್ಟು ಮಹತ್ತ್ವವಿದೆ. 1967–68ನೆಯ ಸಾಲಿನಲ್ಲಿ ಮೈಸೂರು ರಾಜ್ಯದಲ್ಲಿ ಕಡಲೆಯನ್ನು ಬೆಳೆದ ಪ್ರದೇಶ ಸುಮಾರು 1,49,000 ಹೆಕ್ಟೇರುಗಳು ಮತ್ತು ಅದರ ಉತ್ಪನ್ನ 67,000 ಟನ್ನುಗಳು.

ದ್ವಿದಳ ಧಾನ್ಯಗಳ ಸಸ್ಯವರ್ಗಕ್ಕೆ ಸೇರಿದ ಕಡಲೆಯನ್ನು ಬೆಳೆಯಲು ಇಂಥದೇ ಮಣ್ಣು ಬೇಕೆಂಬ ಕಟ್ಟಳೆಯೇನೂ ಇಲ್ಲವಾದರೂ ನೀರನ್ನು ಹಿಡಿದಿಡುವ ಎರೆಭೂಮಿಯಲ್ಲಿ ಹೆಚ್ಚು ಉತ್ಪನ್ನ ತೆಗೆಯಬಹುದು ಎನ್ನುವುದು ಅನುಭವಸಿದ್ಧವಾದ ಮಾತು. ಉತ್ತರ ಭಾರತದಲ್ಲಿ ಮರಳುಮಿಶ್ರಿತ ಮೆಕ್ಕಲು ಮಣ್ಣಿನಲ್ಲಿ (ಅಲ್ಯೂವಿಯಲ್) ಬೆಳೆಯುತ್ತಾರೆ. ಬಿತ್ತುವಕಾಲ ಅಕ್ಟೋಬರ್–ನವೆಂಬರ್ ತಿಂಗಳು. ಚಳಿಗಾಲದ ಬೆಳೆಯಾದ್ದರಿಂದ ಮುಖ್ಯಬೆಳೆಯಾಗಿಯೊ ಇಲ್ಲವೆ ಭತ್ತ ರಾಗಿಗಳ ಅನಂತರ ಎರಡನೆಯ ಬೆಳೆಯಾಗಿಯೋ ಬಿತ್ತಬಹುದು. ಮೈಸೂರು ರಾಜ್ಯದಲ್ಲಿ ಇದನ್ನು ಸಾಮಾನ್ಯವಾಗಿ

ಉತ್ತರ ಕರ್ಣಾಟಕದ ಕಪ್ಪುಮಣ್ಣಿನ ಎರೆಭೂಮಿಯಲ್ಲಿ ಮಾತ್ರ ಬಿತ್ತುತ್ತಾರೆ. 12″ ಅಂತರದಲ್ಲಿ ತೂರಿಗೆ ಅಥವಾ ಸಡ್ಡೆಯ ಮೂಲಕ $1\frac{1}{2}$″—2″ ಆಳದಲ್ಲಿ ಬಿತ್ತಿದ



ಕಡಲೆ ಗಿಡ

ಈ ಬೆಳೆ, 3—$3\frac{1}{2}$ ತಿಂಗಳ ಅನಂತರ ಕಟಾವಿಗೆ ಬರುತ್ತದೆ. ಒಂದು ಎಕರೆ ಭೂಮಿಯಲ್ಲಿ ಸಂಪೂರ್ಣವಾದ ಕಡಲೆ ಬೆಳೆಯನ್ನು ಬೆಳೆಯಲು ಸುಮಾರು 20 ಕಿ. ಗ್ರಾಂಗಳಷ್ಟು ಬೀಜ ಬೇಕಾಗುತ್ತದೆ. ಒಣಬೇಸಾಯಕ್ಕೆ ಅನುಕೂಲವಾದ ಬೆಳೆಯಾದ್ದರಿಂದ ಇದನ್ನು ನೀರಾವರಿಯಲ್ಲಿ ಬೆಳೆಯುವುದು ಬಹಳ ಅಪರೂಪ. ಮೊಳೆಯುವ ಸಮಯದಲ್ಲಿ ಸಾಕಷ್ಟು ನೀರು ಇದ್ದರೆ, ಮೊಳೆತ ಅನಂತರ ಅದು ಹೇಗೋ ಬೆಳೆದುಕೊಳ್ಳುತ್ತದೆ. ಇದಕ್ಕೆ ನೆಲವನ್ನು ಉತ್ತಮವಾಗಿ ತಯಾರಿಸಬೇಕೆಂಬ ಅಗತ್ಯವೂ ಇಲ್ಲ. ಸುತ್ತಲೂ ಹರಡಿಕೊಂಡು ತೀವ್ರವಾಗಿ ಬೆಳೆಯುವ ಗುಣದಿಂದಾಗಿ, ಕಳೆಯನ್ನು ತೆಗೆಯದಿದ್ದರೂ ತಾನೇ ಅದನ್ನು ಹತೋಟಿಯಲ್ಲಿಟ್ಟುಕೊಳ್ಳುವ ಸಾಮರ್ಥ್ಯ ಹೊಂದಿದೆ. ಆದ್ದರಿಂದ ಕಡಲೆಯ ಹೊಲಗಳಲ್ಲಿ ಕಳೆಗಳ ತೊಂದರೆ ಅಷ್ಟಾಗಿ ಕಂಡುಬರಲಾರದು. ಆದರೂ ಒಂದೆರಡು ಸಲ ಎಡೆ ಹೊಡೆಯುವುದರಿಂದ ಮಳೆಯ ನೀರನ್ನು ಸಂಗ್ರಹಿಸಿ, ಗಿಡಗಳಿಗೆ ಉಪಯೋಗವಾಗುವಂತೆ ಮಾಡಬಹುದು. ಸಾಮಾನ್ಯವಾಗಿ ಇದಕ್ಕೆ ಗೊಬ್ಬರದ ಅವಶ್ಯಕತೆ ಇಲ್ಲ. ಆದರೆ ರಂಜಕಯುಕ್ತ ಗೊಬ್ಬರಗಳನ್ನು ಹಾಕುವುದರಿಂದ ಉತ್ತಮವಾದ ಬೆಳೆ ತೆಗೆಯಬಹುದು ಎಂದು ಪ್ರಯೋಗಗಳು ತೋರಿಸಿವೆ.

ಕಡಲೆಯ ಗಿಡಗಳು 1–$1\frac{1}{2}$ ಅಡಿಗಳಷ್ಟು ಎತ್ತರವಾಗಿ ಬೆಳೆಯುತ್ತಿದ್ದು, ಬಹಳ ಕವಲೊಡೆಯುವ ಸಾಮರ್ಥ್ಯ ಪಡೆದಿವೆ. ಎಲೆಗಳ ಬಣ್ಣ ನೀಲಿ ಹಸುರು. ಒಂದೇ ಪತ್ರಕಾಂಡದ ಮೇಲೆ, ಹಲವಾರು ಉಪಪತ್ರಗಳಿದ್ದು ಅವು ಅಂಡಾಕಾರವಾಗಿವೆ. ಎಲೆಗಳ ಅಂಚು ಗರಗಸದಂತೆ. ಪ್ರತಿಯೊಂದು ಉಪಪತ್ರದ ಅಳತೆ ಸುಮಾರು 6 ಮಿ. ಮೀ. ಉದ್ದ ಮತ್ತು 4 ಮಿ. ಮೀ. ಅಗಲ ಇದೆ. ಎಲೆಗಳ ಕಂಕುಳುಗಳಲ್ಲಿ ಕಂದು ಮತ್ತು ನೀಲಿ ಮಿಶ್ರಿತ ಬಣ್ಣದ ಒಂದೊಂದೇ ಹೂಗಳನ್ನು ಕಾಣಬಹುದು. ಕಾಯಿಗಳು ಸುಮಾರು 1″ ಉದ್ದವಿದ್ದು; ಒಂದು ಅಥವಾ ಎರಡು ಕಾಳುಗಳನ್ನು ಹೊಂದಿವೆ.

ತಾಯಿಬೇರಿನ ಪ್ರಕಾರಕ್ಕೆ ಸೇರಿದ ಈ ಗಿಡದ ಬೇರುಗಳ ಮೇಲೆ ಚಿಕ್ಕ ಚಿಕ್ಕ ಗಂಟುಗಳನ್ನು (ನಾಡ್ಯೂಲ್) ಕಾಣಬಹುದು. ಈ ಗಂಟುಗಳಲ್ಲಿ ಇರುವ ಏಕಾಣುಜೀವಿಗಳು (ಬ್ಯಾಕ್ಟೀರಿಯ) ಹವೆಯಲ್ಲಿರುವ ಸಾರಜನಕವನ್ನು ತೆಗೆದುಕೊಂಡು, ಅದನ್ನು ಸಸ್ಯಗಳು ಸುಲಭವಾಗಿ ಹೀರಿಕೊಳ್ಳುವಂತೆ ರೂಪಾಂತರಿಸುತ್ತವೆ. ಇದರಿಂದಾಗಿ, ಕಡಲೆ ಮತ್ತು ಇತರ ದ್ವಿದಳ ಧಾನ್ಯಗಳನ್ನು ಬೆಳೆದ ಮೇಲೆ ಭೂಮಿಯ ಫಲವತ್ತು ಹೆಚ್ಚುತ್ತದೆ. ಇದನ್ನು ಧಾನ್ಯಸಸ್ಯಗಳೊಡನೆ ಮಿಶ್ರ ಬೆಳೆಯಾಗಿ ಬೆಳೆದಾಗ, ಧಾನ್ಯಗಳ ಇಳುವರಿಯನ್ನೂ ಹೆಚ್ಚಿಸಬಹುದಾದ್ದರಿಂದ, ಉತ್ತರಭಾರತದಲ್ಲಿ ಕಡಲೆಯನ್ನು ಗೋದಿ ಮತ್ತು ಜವೆಗೋದಿಗಳೊಡನೆ ಪರ್ಯಾಯ ಬೆಳೆಯಾಗಿ ಬೆಳೆಯುವ ಪದ್ಧತಿಯಿದೆ.

ಕಡಲೆಯ ಗಿಡಗಳನ್ನು ಬೆಳಗಿನ ಹೊತ್ತಿನಲ್ಲಿ ಮುಟ್ಟಿದರೆ, ಕೈಗೆ ಒಂದು ರೀತಿಯ ಜಿಗುಟು ಹತ್ತುತ್ತದೆ. ಇದು ಈ ಗಿಡಗಳಿಂದ ಹೊರಬರುವ ಮ್ಯಾಲಿಕ್ ಮತ್ತು ಆಕ್ಸಾಲಿಕ್ ಆಮ್ಲಗಳಿಂದ ಉಂಟಾಗುವಂಥದು. ಗಿಡಗಳ ಮೇಲೆ ರಾತ್ರಿಯ ಹೊತ್ತು ಮಸ್ಲಿನ್‌ಬಟ್ಟೆಯನ್ನು ಹರವಿ ಇಟ್ಟರೆ, ಬೆಳಗ್ಗೆ ಆ ಬಟ್ಟೆಗೆ ಅಂಟಿಕೊಂಡ ಆಮ್ಲವನ್ನು ನೀರಿನಲ್ಲಿ ನೆನೆಸಿ ಬೇರ್ಪಡಿಸಬಹುದು. ಹೆಕ್ಟೇರಿಗೆ 4–$4\frac{1}{2}$ ಕಿಲೊಗ್ರಾಂಗಳಷ್ಟು ದೊರೆಯಬಹುದಾದ ಈ ಆಮ್ಲಗಳ ಮಿಶ್ರಣವನ್ನು ಅಜೀರ್ಣ ಮತ್ತಿತರ ಉದರರೋಗಗಳಿಗೆ ಉಪಯೋಗಿಸುತ್ತಾರೆ.

ಕಡಲೆಯ ಬೀಜಗಳ ಬಣ್ಣದ ಆಧಾರದ ಮೇಲೆ ನಾಲ್ಕು ಬೇರೆ ಬೇರೆ ಜಾತಿಗಳನ್ನು ಗುರುತಿಸಬಹುದು. ಕಂದು, ಹಳದಿ, ಕರಿ ಮತ್ತು ಬಿಳಿಯ ಬಣ್ಣದ ಕಡಲೆಗಳಲ್ಲಿ ಬಿಳಿಯ ಕಡಲೆಯ ಬೀಜಗಳು ದೊಡ್ಡವಾಗಿರುತ್ತವೆ. ಆದರೆ ಈ ಜಾತಿ ಎಲ್ಲ ಪ್ರದೇಶಗಳಲ್ಲಿಯೂ ಚೆನ್ನಾಗಿ ಬೆಳೆಯಲಾರದು. ನಮ್ಮ ದೇಶದ ಬೇರೆ ಬೇರೆ ಪ್ರದೇಶಗಳಿಗೆ ಅಲ್ಲಿಯ ಹವಾಗುಣ ಮತ್ತು ನೆಲದ ಗುಣಗಳನ್ನವಲಂಬಿಸಿ ಬೇರೆ ಬೇರೆ ಜಾತಿಯ ಕಡಲೆಗಳನ್ನು ಬಿತ್ತಲು ಶಿಫಾರಸು ಮಾಡಲಾಗುತ್ತದೆ. ಮಳೆಯನ್ನೇ ಸಂಪೂರ್ಣವಾಗಿ ಅವಲಂಬಿಸಿ ಬೆಳೆದ ಬೆಳೆಯಿಂದ ಪ್ರತಿ ಹೆಕ್ಟೇರಿಗೆ 500–600 ಕಿ. ಗ್ರಾಂ.ಗಳಷ್ಟು ಕಾಳು ಹಾಗೂ 800–1000 ಕಿ.ಗ್ರಾಂ.ಗಳಷ್ಟು ಹೊಟ್ಟು ಬರುತ್ತದೆ. ನೀರಾವರಿಯಲ್ಲಿ ತೆಗೆದುಕೊಂಡಾಗ 1,500–2,000 ಕಿ. ಗ್ರಾಂ. ಕಾಳುಗಳನ್ನು ಉತ್ಪಾದಿಸಲು ಸಾಧ್ಯ.

ಕಡಲೆಯ ಗಿಡಗಳು ಸಿಡಿರೋಗ (ವಿಲ್ಟ್) ಎಂಬ ಒಂದು ರೋಗಕ್ಕೆ ತುತ್ತಾಗುವುದು ಬಹಳ. ನಮ್ಮ ರಾಜ್ಯದಲ್ಲಿ ಪ್ರಮುಖವಾಗಿ ಬೆಳೆಯುವ ಚಾಫಾ ಎಂಬ ಜಾತಿಯ ಕಡಲೆಗೆ ಈ ರೋಗವನ್ನು ತಡೆಯುವ ಸಾಮರ್ಥ್ಯವಿಲ್ಲ. ರೋಗ ನಿರೋಧ ಶಕ್ತಿಯಿರುವ ಜಾತಿಗಳನ್ನು ಕಂಡುಹಿಡಿಯಲು ಸಸ್ಯಶಾಸ್ತ್ರಜ್ಞರು ಬಹುವಾಗಿ ಪ್ರಯತ್ನಿಸುತ್ತಿದ್ದು, ಈಗ ಮೈಸೂರು ರಾಜ್ಯದಲ್ಲಿ ಅಣ್ಣಿಗೇರಿ ಕಡಲೆ ಎಂಬ ಒಂದು ಜಾತಿಯನ್ನು ಬಿಡುಗಡೆ ಮಾಡಲಾಗಿದೆ. ಇದು ಪ್ರಚಲಿತವಾಗಿರುವ ಇತರ ಜಾತಿಗಳಿಗಿಂತ 25% ಹೆಚ್ಚು ಇಳುವರಿ ಕೊಡುವದಲ್ಲದೆ ಸಿಡಿರೋಗವನ್ನು ಸಾಕಷ್ಟು ಮಟ್ಟಿಗೆ ಪ್ರತಿರೋಧಿಸಬಲ್ಲದು.



ಕಡಲೆಕಾಳುಗಳು

ಕಡಲೆ ಬಹಳ ಪುಷ್ಟಿಕರವಾದ ಆಹಾರ. ಇದರಲ್ಲಿ 20%ರಷ್ಟು ಸಾರಜನಕ ಮತ್ತು 61%ರಷ್ಟು ಶರ್ಕರ ಪಿಷ್ಟಾದಿಗಳಿವೆ. ಖನಿಜ ಪದಾರ್ಥಗಳಾದ ಕ್ಯಾಲ್ಸಿಯಂ



ಎಡಗಡೆಯದು : ಒಂದು ಕಾಳಿರುವ ಬುಡ್ಡು. ಮಧ್ಯದ್ದು : ಎರಡು ಕಾಳುಗಳಿರುವ ಬುಡ್ಡು, ಬಲಗಡೆಯದು : ಬುಡ್ಡಿನ ಹೊರನೋಟ.

(149 ಮಿ. ಗ್ರಾಂ/100 ಗ್ರಾಂ) ಮತ್ತು ಕಬ್ಬಿಣ (7.2 ಮಿ. ಗ್ರಾಂ/100 ಗ್ರಾಂ) ಗಳಲ್ಲದೆ ಸಾಕಷ್ಟು ಪ್ರಮಾಣದಲ್ಲಿ ವಿಟಮಿನ್ ಎ ಕೂಡ ಇದೆ. ಈ ಕಾಳುಗಳಲ್ಲಿರುವ ಸಸಾರಜನಕದಲ್ಲಿ ಆವಶ್ಯಕವಾಗಿರುವ ಎಲ್ಲ ಅಮೈನೊ ಆಮ್ಲಗಳು ದೊರೆಯುತ್ತಿದ್ದರೂ ಟ್ರಿಪ್ಟೋಫೇನ್ ಮತ್ತು ಗಂಧಕಯುಕ್ತ ಅಮೈನೊ ಆಮ್ಲಗಳ ಪ್ರಮಾಣ ಮಾತ್ರ ಕಡಿಮೆಯಾಗಿದೆ.

ಕಡಲೆಯ ಉಪಯೋಗ ಬಹಳ. ಗಿಡಗಳು ಇನ್ನೂ ಚಿಕ್ಕವಾಗಿರುವಾಗಲೇ ಅವುಗಳ ಚಿಗುರನ್ನು ಮುರಿದು ತೊಪ್ಪಲು ಪಲ್ಲೆಯಾಗಿ ಇಲ್ಲವೆ ಹಾಗೆಯೇ ಒಣಗಿಸಿಬಿಟ್ಟು ಕೆಲವು ದಿನಗಳ ಅನಂತರ ಉಪಯೋಗಿಸುತ್ತಾರೆ. ಕಾಳುಗಳು ಇನ್ನೂ ಪೂರ್ತಿಯಾಗಿ ಬಲಿಯುವುದಕ್ಕೆ ಮೊದಲೇ ತಿಂದರೂ ರುಚಿಕರವಾಗಿರುವುದಲ್ಲದೇ ಪುಷ್ಟಿಕರವಾಗಿಯೂ ಇರುತ್ತವೆ. ಒಣಗಿದ ಬೀಜಗಳನ್ನು ನೆನೆಹಾಕಿ ತಿನ್ನುವುದು ಆರೋಗ್ಯಕರ ಎಂದು ಎಲ್ಲರಿಗೂ ತಿಳಿದ ಮಾತು. ಹುರಿದು, ಹುರಿಗಾಳನ್ನಾಗಿ ತಿನ್ನುವುದಲ್ಲದೆ ಬೇಳೆಮಾಡಿ ಅಡಿಗೆ ಮಾಡುವುದೂ ಸಾಮಾನ್ಯವಾಗಿದೆ. ಕಡಲೆಯ ಹಿಟ್ಟಿನಿಂದ ಹಲವಾರು ಬಗೆಯ ಸಿಹಿ ಹಾಗೂ ಖಾರದ ತಿಂಡಿಗಳನ್ನು ತಯಾರಿಸುತ್ತಾರೆ. ಕೇವಲ ಮನುಷ್ಯರಿಗಷ್ಟೇ ಅಲ್ಲದೆ, ಕಡಲೆಯನ್ನು ಕುದುರೆ ಮೊದಲಾದ ಪ್ರಾಣಿಗಳಿಗೆ ತಿನ್ನಿಸಲೂ ಉಪಯೋಗಿಸುತ್ತಾರೆ. ಇದರ ಹೊಟ್ಟಂತೂ ದನಗಳಿಗೆ ಒಳ್ಳೆಯ ಮೇವು. (ಬಿ.ಆರ್.ಎಚ್. ; ಎಂ.ಬಿ.ಟಿ.)

**ಕಡಲೆಕಾಯಿ :** ಲೆಗ್ಯುಮಿನೋಸೀ ಕುಟುಂಬದ ಆರಕಿಸ್ ಹೈಪೊಜಿಯ ಎಂಬ ವೈಜ್ಞಾನಿಕ ಹೆಸರಿನ ವಾರ್ಷಿಕ ಸಸ್ಯ. ಇದಕ್ಕೆ ನೆಲಗಡಲೆ ಎಂಬ ಹೆಸರೂ ಉಂಟು. ಇದರ ಕಾಯಿಗಳು ಮಣ್ಣಿನಲ್ಲಿ ಇಳಿದು ಬೆಳೆಯುವುದರಿಂದ ಈ ಹೆಸರು. ಕೆಲವು ಭಾಗಗಳಲ್ಲಿ ಇದನ್ನು ಸೇಂಗಾ ಎಂದೂ ಕರೆಯುತ್ತಾರೆ. ಇದರ ಮೂಲ ಪ್ರದೇಶ ಯಾವುದು ಎನ್ನುವುದರ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ, ಅದು ದಕ್ಷಿಣ ಅಮೆರಿಕದ ಬ್ರೆಜಿಲ್ ಇರಬಹುದು ಎನ್ನುವುದಕ್ಕೆ ಸಾಕಷ್ಟು ಆಧಾರಗಳಿವೆ. ಅಮೆರಿಕದ ಹಲವಾರು ಭಾಗಗಳಲ್ಲಿ ಮತ್ತು ಆಫ್ರಿಕದಲ್ಲಿ ಇದೊಂದು ಪ್ರಾಮುಖ್ಯವಾದ ಬೆಳೆ. ಉಷ್ಣವಲಯದ ಬೆಳೆಯಾಗಿದ್ದರೂ ಸಮಶೀತೋಷ್ಣವಲಯದಲ್ಲಿ ಕೂಡ ಇದನ್ನು ಬೆಳೆಯಬಹುದು. ಸಾಮಾನ್ಯವಾಗಿ ಉತ್ತರ ಅಕ್ಷಾಂಶ 45° ಯಿಂದ ದಕ್ಷಿಣ ಅಕ್ಷಾಂಶ 35°ವರೆಗಿನ ಎಲ್ಲ ದೇಶಗಳಲ್ಲಿಯೂ ಇದನ್ನು ಬೆಳೆಯುತ್ತಾರೆ. ಭಾರತಕ್ಕೆ ಇದರ ಪ್ರವೇಶವಾದದ್ದು ವಾಸ್ಕೋಡಗಾಮಾ ಇಲ್ಲಿಗೆ ಬಂದ ಅನಂತರವೇ. ಆಗ ಕಡಲೆಕಾಯಿಗೆ ಇಂದಿನ ಮಹತ್ತ್ವವಿರಲಿಲ್ಲವಾದ್ದರಿಂದ ಅದನ್ನು ಬೆಳೆಯುವ ಕ್ಷೇತ್ರವೂ ಕಡಿಮೆಯೇ ಇತ್ತು. ಕ್ರಮೇಣ ಅದರ ಪ್ರಾಮುಖ್ಯ ಹೆಚ್ಚಿದಂತೆ ಅದನ್ನು ಬೆಳೆಯುವ ಕ್ಷೇತ್ರವೂ ಹೆಚ್ಚುತ್ತ ಹೋಯಿತು. ಈಗ ಭಾರತ ಇದರ ಬೆಳೆಯಲ್ಲಿ ಜಗತ್ತಿನಲ್ಲಿ ಮೊದಲನೆಯ ಸ್ಥಾನಪಡೆದಿದೆ. ಪ್ರಪಂಚದ ಒಟ್ಟು ನೆಲಗಡಲೆಯಲ್ಲಿ ಸುಮಾರು 40%ರಷ್ಟು ಭಾರತದಲ್ಲಿಯೇ ಬೆಳೆಯುತ್ತದೆ ; ಮತ್ತು 40ರಿಂದ 60ರಷ್ಟು ಭಾಗ ಭಾರತದಿಂದಲೇ ಹೊರದೇಶಗಳಿಗೆ ರಫ್ತಾಗುತ್ತದೆ. 1955–56ನೆಯ ಸಾಲಿನಲ್ಲಿ 51,34,000 ಹೆಕ್ಟೇರುಗಳಿಗೆ ಸೀಮಿತವಾಗಿದ್ದ ನೆಲಗಡಲೆ ಬೆಳೆಯ ಕ್ಷೇತ್ರ 1967-68ರ ಸಮಯಕ್ಕೆ 75,53,000 ಹೆಕ್ಟೇರುಗಳಷ್ಟಾಯಿತು. ಇಳುವರಿಯೂ 38,61,000 ಟನ್ನುಗಳಿಂದ 58,31,000 ಟನ್ನುಗಳಿಗೇರಿತು.

1967–68ರ ಸಮಯಕ್ಕೆ ಮೈಸೂರು ರಾಜ್ಯದಲ್ಲಿಯ ಸೇಂಗಾ ಬೆಳೆಯ ಕ್ಷೇತ್ರ 7,78,000 ಹೆಕ್ಟೇರುಗಳಷ್ಟಿದ್ದು, ಉತ್ಪನ್ನ 5,03,000 ಟನ್ನುಗಳಷ್ಟಿತ್ತು. ಇದರ ಎಣ್ಣೆಗೆ ಔದ್ಯೋಗಿಕವಾಗಿ ಮಹತ್ತ್ವವಿರುವದರಿಂದ ಪ್ರತಿ ವರ್ಷವೂ ಕಡಲೆಕಾಯಿಯ ಬೆಳೆಯ ಕ್ಷೇತ್ರ ವಿಸ್ತರಿಸುತ್ತಲೇ ಇದೆ.

ಕಡಲೆಕಾಯಿಯನ್ನು ಬೆಳೆಸಲು, ಉಷ್ಣ ಹವಾಮಾನ ಉತ್ತಮವಾಗಿದ್ದರೂ ಸಮಶೀತೋಷ್ಣ ವಲಯದಲ್ಲಿ ಕೂಡ ಬೇಸಗೆಯ ಬೆಳೆಯಾಗಿ ಬೆಳೆಯಬಹುದು. ಕೇವಲ ಮಳೆಯನ್ನವಲಂಬಿಸಿಯೇ ಬೆಳೆಸುವುದಾದರೆ ಒಳ್ಳೆಯ ಬೆಳೆಗೆ 30–35 ಅಂಗುಲಗಳಷ್ಟು ಮಳೆ ಬೇಕು. ಆದರೆ 20–22 ಅಂಗುಲ ಮಳೆಯಾಗುವ ಪ್ರದೇಶಗಳಲ್ಲಿಯೂ ಇದನ್ನು ಬೆಳೆಸಬಹುದು. ಬೆಳೆಯ ಕಾಲಾವಧಿಯಲ್ಲಿ 55–60 ಅಂಗುಲಗಳಿಗಿಂತ ಹೆಚ್ಚಿಗೆ ಮಳೆಯಾದರೆ ಅಷ್ಟೇನೂ ಹಿತಕರವಲ್ಲ.

ನೀರು ಬಸಿದು ಹೋಗುವ ಮರಳು ಮಿಶ್ರಿತ ಇಲ್ಲವೆ ಮಸಾರಿ ಮಣ್ಣು ಇದಕ್ಕೆ ಉತ್ತಮ. ಉತ್ತರ ಭಾರತದಲ್ಲಿ ವಿಸ್ತಾರವಾಗಿ ಹರಡಿಕೊಂಡಿರುವ ನೆರೆಮಣ್ಣಿನಲ್ಲಿಯೂ ಉತ್ತಮವಾದ ಬೆಳೆಯನ್ನು ಪಡೆಯಲು ಸಾಧ್ಯ. ಆದರೆ ಈ ಬೆಳೆಗೆ ಇರುವ ಆರ್ಥಿಕ ಪ್ರಾಮುಖ್ಯದಿಂದಾಗಿ ಅಷ್ಟೊಂದು ಯೋಗ್ಯವಾಗಿಲ್ಲವಾದರೂ, ಎರೆಮಣ್ಣು ಮತ್ತು ಕೆಂಪುಮಣ್ಣಿನ ಪ್ರದೇಶಗಳಲ್ಲಿಯೂ ಇದನ್ನು ಬೆಳೆಸಲಾಗುತ್ತದೆ. ಅತಿ ಹುಳಿ, ಉಷ್ಣ ಇಲ್ಲವೇ ಸವಳು ಭೂಮಿಗಳನ್ನುಳಿದು ಇನ್ನೆಲ್ಲ ಮಣ್ಣುಗಳಲ್ಲಿಯೂ ಇದನ್ನು ಚೆನ್ನಾಗಿ ಬೆಳೆಸಬಹುದು.

ಇದು ದ್ವಿದಳಧಾನ್ಯಗಳ ಸಸ್ಯವರ್ಗಕ್ಕೆ ಸೇರಿದ ಬೆಳೆ. ಬಹಳ ಎತ್ತರವಾಗಿ ಬೆಳೆಯುವುದಿಲ್ಲ. ಆದರೆ ಹಲವಾರು ಟೊಂಗೆಗಳೊಡೆದು ನೆಲವನ್ನು 2–3 ಚದರಡಿಗಳಷ್ಟು ವಿಸ್ತಾರವಾಗಿ ಆಕ್ರಮಿಸಿಕೊಂಡಿರುತ್ತದೆ. ಎಲೆಗಳು ಸಂಯುಕ್ತ ಮಾದರಿಯವು. ಪ್ರತಿಯೊಂದು ಎಲೆಯಲ್ಲೂ ಅಂಡಾಕಾರದ 4 ಉಪಪತ್ರಗಳಿವೆ. ಪ್ರತಿಯೊಂದು ಉಪಪತ್ರದ ಉದ್ದ ಸುಮಾರು ಒಂದು ಅಂಗುಲ, ಅಗಲ ಅರ್ಧ ಅಂಗುಲ. ಎಲೆಗಳ ಕಂಕುಳುಗಳಲ್ಲಿ (ಆ್ಯಕ್ಸಿಲ್) ಹಳದಿಯ ಬಣ್ಣದ ಹೂಗಳು ಗುಂಪುಗುಂಪಾಗಿ ಇಲ್ಲವೆ ಪ್ರತ್ಯೇಕವಾಗಿ ಇವೆ. ಗರ್ಭಧಾರಣೆಯ ಅನಂತರ ಉದ್ದವಾದ ದೇಟುಗಳ (ಗೈನೊಫೋರ್) ಮೇಲಿರುವ ಅಂಡಾಶಯಗಳು ನೆಲದೊಳಗೆ ಇಳಿದು ಬೆಳೆಯುತ್ತವೆ. ಹೀಗೆ ನೆಲದಲ್ಲಿಯೇ ಬಲಿತ ಕಾಯಿಗಳಲ್ಲಿ ನಸುಗೆಂಪು ಇಲ್ಲವೆ ದಟ್ಟ ಕೆಂಪು ಬಣ್ಣದ 2–3 ಬೀಜಗಳಿವೆ. ಕಡಲೆಕಾಯಿಯ ಬೇರು ತಾಯಿ ಬೇರಿನ ವರ್ಗಕ್ಕೆ ಸೇರಿದ್ದು. ಬೇರುಗಳ ಮೇಲೆ ಚಿಕ್ಕ ಚಿಕ್ಕ ಗಂಟು (ನಾಡ್ಯೂಲ್)ಗಳನ್ನು ಕಾಣಬಹುದು. ಇವುಗಳಲ್ಲಿರುವ ಏಕಾಣುಜೀವಿ (ಬ್ಯಾಕ್ಟೀರಿಯ) ಗಳಿಂದ ವಾತಾವರಣದ ಸಾರಜನಕ ಸಸ್ಯಗಳಿಗೆ ದೊರೆಯುವ ರೂಪಕ್ಕೆ ರೂಪಾಂತರಗೊಳ್ಳುತ್ತದೆ.

ಕಡಲೆಕಾಯಿಯಲ್ಲಿ ಹಲವಾರು ಜಾತಿಗಳಿವೆ. ಇವನ್ನು ಮುಖ್ಯವಾಗಿ ಎರಡು ವರ್ಗಗಳಾಗಿ ವಿಂಗಡಿಸಬಹುದು—ಗೆಜ್ಜೆ ಸೇಂಗಾ ಮತ್ತು ಹಬ್ಬು ಸೇಂಗಾ. ಗೆಜ್ಜೆ ಸೇಂಗಾದಲ್ಲಿ ಕಾಯಿಗಳು ಗಿಡಕ್ಕೆ ಸಮೀಪವಾಗಿ ಗುಂಪುಗುಂಪಾಗಿ ಬೆಳೆದಿರುತ್ತವೆ. ಹಬ್ಬು ಸೇಂಗಾದಲ್ಲಿ, ಟೊಂಗೆಗಳು ಬಳ್ಳಿಯಂತೆ ನೆಲದ ಮೇಲೆ ಹರಡಿದ್ದು, ಅವುಗಳ ಗಿಣ್ಣುಗಳು (ನೋಡ್ಸ್) ನೆಲವನ್ನು ಮುಟ್ಟಿದಲ್ಲೆಲ್ಲ ಒಂದು ಅಥವಾ ಹೆಚ್ಚು ಕಾಯಿಗಳು ಬಿಡಬಹುದು. ಸಾಮಾನ್ಯವಾಗಿ ಗೆಜ್ಜೆ ಸೇಂಗಾ 100–110 ದಿನಗಳ ಬೆಳೆ. ಇದರ ಅನಂತರ ಜೋಳ, ಗೋದಿ, ಕಡಲೆ, ಕುಸುಬೆ ಮತ್ತು ಅಗಸೆಯಂಥ ಹಿಂಗಾರು ಬೆಳೆಗಳನ್ನು ಬೆಳೆಯಬಹುದು. ಕಡಲೆಕಾಯಿಗಳಲ್ಲಿ ಹಲವಾರು ಸುಧಾರಿಸಿದ ತಳಿಗಳಿವೆ. ಅವುಗಳಲ್ಲಿ ಸ್ಪ್ಯಾನಿಷ್ ಇಂಪ್ರೂವ್ಡ್, ಎಚ್. ಜಿ.—8, ಟಿ.ಎಂ.ವಿ.–2 ಮತ್ತು ಎಸ್ 206 ಎಂಬ ತಳಿಗಳು ಮುಖ್ಯವಾದುವು. ಹಬ್ಬು ಸೇಂಗಾದ ಕಾಲಾವಧಿ ಗೆಜ್ಜೆ ಸೇಂಗಾಕ್ಕಿಂತ ಹೆಚ್ಚಾಗಿರುತ್ತದೆ. ಅಂದರೆ ಸುಮಾರು 150–160 ದಿನಗಳು. ಇದರಲ್ಲಿ ಎಚ್. ಜಿ.–7 ಮತ್ತು ಪಾಂಡಿಚೆರಿ–8 ಎಂಬ ತಳಿಗಳು ಮುಖ್ಯವಾಗಿವೆ. ಅಧಿಕ ಕಾಲಾವಧಿಯನ್ನು ತೆಗೆದುಕೊಳ್ಳುವ ಈ ಬೆಳೆಗಳ ಇಳುವರಿಯೂ ಹೆಚ್ಚು. ಸಂಪೂರ್ಣವಾಗಿ ಮಳೆಯನ್ನವಲಂಬಿಸಿಯೇ ಬೆಳೆದ ಗೆಜ್ಜೆ ಸೇಂಗಾದಲ್ಲಿ ಪ್ರತಿ ಹೆಕ್ಟೇರಿಗೆ ಸುಮಾರು 800–1,000 ಕಿ. ಗ್ರಾಂಗಳಷ್ಟು ಕಾಯಿ ದೊರೆಯುತ್ತಿದ್ದರೆ ಹಬ್ಬು ಸೇಂಗಾದಿಂದ ಸುಮಾರು 1,000-1,200 ಕಿ. ಗ್ರಾಂ ಕಾಯಿ ದೊರೆಯುತ್ತವೆ. ಈ ಕಾಯಿಗಳನ್ನು ಒಡೆದಾಗ ದೊರೆಯುವ ಬೀಜದ ಪ್ರಮಾಣ ನೂರಕ್ಕೆ 70–75ರಷ್ಟು. ನೀರಾವರಿಯಿಂದ ಬೆಳೆದ ಬೆಳೆ, ಮಳೆಯನ್ನವಲಂಬಿಸಿದ ಬೆಳೆಗಿಂತ ಎರಡು ಮೂರು ಪಟ್ಟು ಅಧಿಕ ಉತ್ಪನ್ನವನ್ನು ಕೊಡುತ್ತದೆ.



ಕಡಲೆಕಾಯಿ ಗಿಡ

ನೆಲಗಡಲೆಯ ಕಾಯಿಗಳು ನೆಲದಲ್ಲಿಯೇ ಇಳಿದು ಬೆಳೆಯುವುದರಿಂದ ನೆಲವನ್ನು 5–6 ಅಂಗುಲ ಆಳದವರೆಗೂ ಚೆನ್ನಾಗಿ ಉಳುವುದು ಅಗತ್ಯ. ಹಿಂದಿನ ಬೆಳೆಯ ಕಟಾವು ಆದಕೂಡಲೆ ನೆಲವನ್ನು ಉತ್ತಿಟ್ಟು, ಮುಂಗಾರು ಮಳೆಯಾದೊಡನೆ ಎರಡು ಮೂರು ಸಲ ಕುಂಟೆಯನ್ನು ಹೊಡೆದು ನೆಲವನ್ನು ಹಸಿ ಮಾಡಬೇಕು. ಸುಮಾರು 2 ಟನ್ನುಗಳಷ್ಟು ಹಟ್ಟಿಯ ಗೊಬ್ಬರವನ್ನು ಮಣ್ಣಿನೊಡನೆ ಮಿಶ್ರ ಮಾಡುವುದು ಸಾಮಾನ್ಯವಾದ ಕ್ರಮ. ಇತ್ತೀಚಿನ ಸಂಶೋಧನೆಗಳ ಮೇಲಿಂದ, ಬಿತ್ತುವುದಕ್ಕೆ ಮೊದಲು ರಾಸಾಯನಿಕ ಗೊಬ್ಬರಗಳನ್ನು ಭೂಮಿಗೆ ಸೇರಿಸುವುದು ಕೂಡ ಲಾಭದಾಯಕ ಎಂದು ಕಂಡುಬಂದಿದೆ. ಪ್ರತಿ ಹೆಕ್ಟೇರಿಗೆ 25 ಕಿ. ಗ್ರಾಂ ಸಾರಜನಕ, 50 ಕಿ. ಗ್ರಾಂ ರಂಜಕ ಮತ್ತು 37 ಕಿ. ಗ್ರಾಂ ಪೊಟ್ಯಾಷ್ ಗೊಬ್ಬರಗಳನ್ನು ಮೈಸೂರು ರಾಜ್ಯದ ಎಲ್ಲ ಭಾಗಗಳಲ್ಲೂ ಬಳಸಬಹುದು. ಈ ಸೀಮೆ ಗೊಬ್ಬರಗಳನ್ನು ಭೂಮಿಯಲ್ಲಿ ಬೀಜಕ್ಕಿಂತ ಆಳವಾಗಿ ಹಾಕುವುದು ಉತ್ತಮ.

ಬಿತ್ತುವುದಕ್ಕೆ ಮೊದಲು ಬೀಜಗಳನ್ನು ಕಾಯಿಗಳಿಂದ ಹೊರತೆಗೆದು ಬೀಜೋಪಚಾರ ಮಾಡುವುದು ರೋಗಗಳ ಹತೋಟಿಯ ದೃಷ್ಟಿಯಿಂದ ಅತ್ಯಾವಶ್ಯಕ. ಅಗ್ರೊಸಾನ್ ಇಲ್ಲವೆ ಕ್ಯಾಪ್ಟಾನ್ ಎಂಬ ರಾಸಾಯನಿಕ ಪದಾರ್ಥಗಳನ್ನು ಪ್ರತಿ ಕಿ. ಗ್ರಾಂಗೆ ಎರಡು ಗ್ರಾಂಗಳಂತೆ ಲೇಪಿಸಿ ಬಿತ್ತುವುದರಿಂದ ಸೊಂಕುರೋಗ ತಗಲಲಾರವು. ಪ್ರತಿ ಹೆಕ್ಟೇರಿಗೆ, ಗೆಜ್ಜೆ ಸೇಂಗವಾಗಿದ್ದರೆ 100 ಕಿ. ಗ್ರಾಂ, ಹಬ್ಬು ಸೇಂಗವಾದರೆ 60 ಕಿ. ಗ್ರಾಂಗಳಷ್ಟು ಬೀಜ ಬೇಕು. ಬೀಜಗಳನ್ನು ಕೈಯಿಂದ, ನೇಗಿಲ ಸಾಲಿನ ಹಿಂದೆ ಇಲ್ಲವೆ ಕೂರಿಗೆಗಳ ಮೂಲಕ ಬಿತ್ತಬಹುದು ಗೆಜ್ಜೆ ಸೇಂಗಾವನ್ನು 12″ ಗಳ ಅಂತರದ ಸಾಲುಗಳಲ್ಲಿಯೂ ಹಬ್ಬು ಸೇಂಗಾವನ್ನು 24″ ಗಳ ಅಂತರದ ಸಾಲುಗಳಲ್ಲಿಯೂ ಸುಮಾರು 2″–3″ ಆಳವಾಗಿ ಬಿತ್ತಬೇಕು. ಬಿತ್ತುವ ಸಮಯದಲ್ಲಿ ನೆಲದಲ್ಲಿ ಸಾಕಷ್ಟು ತೇವವಿಲ್ಲದಿದ್ದರೆ ಬೀಜಗಳ ಮೊಳಕೆಯೊಡೆಯುವ ಪ್ರಮಾಣ ಬಹಳ ಕಡಿಮೆಯಾಗಿಬಿಡುತ್ತದೆ. ಬಿತ್ತಿದ 6–7 ದಿನಗಳಲ್ಲಿ ಸಸಿಗಳ ಸಾಲುಗಳನ್ನು ಕಾಣಬಹುದು.

ಸಾಮಾನ್ಯವಾಗಿ, ಮಳೆಯನ್ನವಲಂಬಿಸಿದ ಬೆಳೆಯನ್ನು ಜೂನ್ ತಿಂಗಳಲ್ಲಿ ಬಿತ್ತುತ್ತಾರೆ. ನೀರಾವರಿ ಇರುವಾಗ ಜನವರಿ–ಫೆಬ್ರುವರಿ ತಿಂಗಳಲ್ಲಿ ಕೂಡ ಬಿತ್ತಿ ಬೇಸಿಗೆಯ ಬೆಳೆಯನ್ನು ತೆಗೆದುಕೊಳ್ಳಬಹುದು. ಉತ್ತರ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಬತ್ತದ ಹೊಲಗಳಲ್ಲಿ, ಬತ್ತದ ಕೊಯಿಲಾದ ಅನಂತರ ಕಡಲೆಕಾಯಿಯನ್ನು ಬಿತ್ತುವ ಪದ್ಧತಿಯೂ ಉಂಟು. ಗೆಜ್ಜೆ ಸೇಂಗಾ ಬಿತ್ತಿದ 60 ದಿನಗಳ ಅನಂತರ ಹೂ ಬಿಡಲು ಪ್ರಾರಂಭಿಸಿದರೆ, ಹಬ್ಬು ಸೇಂಗಾ ಸುಮಾರು 90–100 ದಿನಗಳನ್ನು ತೆಗೆದುಕೊಳ್ಳುತ್ತದೆ.

ಈ ಬೆಳೆಗೆ 2–3 ಸಲವಾದರೂ ಎಡೆ ಹೊಡೆಯುವುದು ಅತ್ಯಾವಶ್ಯಕ. ಇದರಿಂದ ಕಳೆ ನಾಶವಾಗುವುದಲ್ಲದೆ, ಮಣ್ಣು ಸಹ ಸಡಿಲವಾಗುವುದು. ಕಳೆ ನಾಶಮಾಡಲು ಇತ್ತೀಚೆಗೆ ಹಲವಾರು ಕಳೆ ನಾಶಕಗಳನ್ನು ಉಪಯೋಗಿಸಲಾಗುತ್ತಿದೆ. ಉದಾಹರಣೆಗೆ ಟೋಕ್–ಇ– 25. ಕೊನೆಯ ಎಡೆಯನ್ನು ಅಂಡಾಶಯದ ಬೆಳೆವಣಿಗೆಯಾಗಿ ಅದು ಭೂಮಿಗಿಳಿಯುವುದಕ್ಕೆ ಮುಂಚಿತವಾಗಿಯೇ ಮುಗಿಸಿರಬೇಕು. ಇದರಿಂದ ಎಲ್ಲ ಕಾಯಿಗಳೂ ನೆಲದಲ್ಲಿ ಬೆಳೆಯುವುದಕ್ಕೆ ಸಹಾಯವಾಗುವುದು.

ಕಾಯಿಗಳು ಬಲಿತಾಗ ಗಿಡದ ಕೆಳಭಾಗದ ಎಲೆಗಳು ಹಳದಿ ಬಣ್ಣಕ್ಕೆ ತಿರುಗಿ ಉದುರಲು ತೊಡಗುತ್ತವೆ. ಆ ಸಮಯದಲ್ಲಿ ಕಾಯಿಗಳನ್ನು ಒಡೆದು ನೋಡಿದರೆ, ಬೀಜಗಳ ಮೇಲಿನ ಹೊದಿಕೆ ನಸುಗೆಂಪು ಇಲ್ಲವೆ ಕೆಂಪು ವರ್ಣಕ್ಕೆ ತಿರುಗಿರುವುದು ಕಂಡುಬರುತ್ತದೆ. ಕೀಳುವುದಕ್ಕೆ ಮೊದಲು ಒಂದು ಮಳೆಯಾದರೆ ಕೆಲಸ ಸುಲಭವೂ ಪರಿಪೂರ್ಣವೂ ಆಗುತ್ತದೆ. ಅದಿಲ್ಲವಾದರೆ ಕಾಯಿಗಳನ್ನು ನೆಲದಿಂದ ಅಗೆದು ತೆಗೆಯುವುದು ಬಹಳ ಕಷ್ಟ. ಗೆಜ್ಜೆ ಸೇಂಗಾವನ್ನು ಕೈಯಿಂದಲೇ ಗಿಡಗಳನ್ನೆಳೆದು ಕೀಳಬಹುದು ಮತ್ತು ಹಬ್ಬು ಸೇಂಗಾವನ್ನು ಕೀಳಲು ನೇಗಿಲು ಇಲ್ಲವೆ ಸಯಾನ ಕುಂಟೆಗಳನ್ನು ಉಪಯೋಗಿಸಬಹುದು. ಇದರಿಂದ ಬಳ್ಳಿ ಕೀಳುವ ಖರ್ಚು ಉಳಿತಾಯವಾಗುವುದು. ಕಡಲೆಕಾಯಿಯನ್ನು ಕೀಳುವ ಸಮಯದಲ್ಲಿ ಅತಿಯಾಗಿ ಮಳೆಯಾದರೆ ಬೀಜಗಳು ನೆಲದಲ್ಲಿಯೇ ಮೊಳಕೆಯೊಡೆಯುವ ಸಂಭವವೂ ಉಂಟು. ಅನಂತರ ಗಿಡಗಳಿಂದ ಕಾಯಿಗಳನ್ನು ಬೇರ್ಪಡಿಸಿ, ಕಾಯಿಗಳು ಸಂಪೂರ್ಣವಾಗಿ ಒಣಗುವವರೆಗೂ ಬಿಸಿಲಿನಲ್ಲಿ ಒಣಗಿಸಬೇಕು. ಇದನ್ನು ಬಹಳ ದಿನಗಳ ವರೆಗೆ ಸಂಗ್ರಹಿಸಿಡುವ ಪ್ರಸಂಗವಿದ್ದಲ್ಲಿ ಕಾಯಿಗಳನ್ನು ಒಡೆಯದೇ ಹಾಗೆಯೇ ಇಡುವುದು ಸೂಕ್ತ. ಒಮ್ಮೊಮ್ಮೆ ಕಡಲೆಕಾಯಿ ಇಲ್ಲವೆ ಅದರ ಹಿಂಡಿಯನ್ನು ಸಂಗ್ರಹಿಸಿಟ್ಟಾಗ ಅದಕ್ಕೆ ಒಂದು ಜಾತಿಯ ಬೂಷ್ಟು (ಆಸ್ಪರ್ಜಿಲಸ್ ಫ್ಲೇವಸ್) ಬರುವ ಸಂಭವವುಂಟು. ಇದರಿಂದ ಒಂದು ಜಾತಿಯ ವಿಷಕಾರಿ ಪದಾರ್ಥ (ಅಫ್ಲೊಟಾಕ್ಸಿನ್) ಉತ್ಪತ್ತಿಯಾಗುತ್ತದೆ. ಅದರ ಸೇವನೆಯಿಂದ ಹಲವಾರು ಪ್ರಾಣಿಗಳು ರೋಗಕ್ಕೆ ತುತ್ತಾಗಿ ಮರಣ ಹೊಂದಬಹುದು. ಆದ್ದರಿಂದ ಇಂಥ ಬೂಷ್ಟು



ಸಿಪ್ಪೆ ಸುಲಿಯದ ಕಡಲೆಕಾಯಿಗಳು : ಒಳಚಿತ್ರ-ಸುಲಿದ ಪೊಪ್ಪು, ಬೀಜ.

ಬರದಂತೆ ಕಡಲೆಕಾಯಿಯನ್ನು ಕಾಯ್ದಿಡುವುದು ಅವಶ್ಯ. ನೆಲಗಡಲೆಗೆ ಸಾರಜನಕವನ್ನು ರೂಪಾಂತರಿಸುವ ಗುಣ ಇದೆ. ಇದರಿಂದಾಗಿ, ಇದು ಬೆಳೆಗಳ ಸರದಿಯಲ್ಲಿ (ರೊಟೇಷನ್ ಆಫ್ ಕ್ರಾಪ್ಸ್) ಒಂದು ಅತಿ ಪ್ರಾಮುಖ್ಯವಾದ ಬೆಳೆಯಾಗಿರುತ್ತದೆ. ಗೋದಿ, ಜೋಳ, ಬತ್ತ, ಸಜ್ಜೆ, ಕಡಲೆ, ಔಡಲ, ಹತ್ತಿ ಮುಂತಾದ ಬೆಳೆಗಳ ಅನಂತರ ಸೇಂಗಾವನ್ನು ಸಾಮಾನ್ಯವಾಗಿ ಬೆಳೆಸುತ್ತಾರೆ. ಇದನ್ನು ಹತ್ತಿ, ತೊಗರಿ, ಜೌಡಲ ಜೋಳ, ಚೌಡಲ ಸಜ್ಜೆ ಮುಂತಾದ ಬೆಳೆಗಳೊಂದಿಗೆ ಮಿಶ್ರ ಬೆಳೆಯಾಗಿಯೂ ಬೆಳೆಸಬಹುದು.

ಕಡಲೆಕಾಯಿಗೆ ರೋಗ ಮತ್ತು ಹುಳುಗಳ ಬಾಧೆ ಕಡಿಮೆ. ಆದರೂ ಕೆಂಪುತಲೆ ಕಂಬಳಿಹುಳ, ಸುರುಳಿಹುಳು (ಲೀಫ್ ರೋಲರ್) ಮತ್ತು ಹೇನುಗಳ ಕಾಟ ಒಮ್ಮೊಮ್ಮೆ ಹೆಚ್ಚಾಗಬಹುದು. ಎಲೆಗಳ ಮೇಲಿನ ಚುಕ್ಕೆರೋಗ ಇದಕ್ಕೆ ಬರುವ ಅತಿ ಮುಖ್ಯ ರೋಗ. ಡೈಥೇನ್–Z–78 ಎಂಬ ರಾಸಾಯನಿಕ ಪದಾರ್ಥವನ್ನು ಸೂಕ್ತ ಪ್ರಮಾಣದಲ್ಲಿ ಸಿಂಪಡಿಸುವುದರಿಂದ ಈ ರೋಗವನ್ನು ತಡೆಗಟ್ಟಲು ಸಾಧ್ಯ. ಕಾಯಿ ಬಲಿತ ಸಮಯದಲ್ಲಿ ಪಲವಾರು ಕಡೆಗಳಲ್ಲಿ ಕಾಡು ಹಂದಿಗಳ ಕಾಟ ಕಂಡುಬರಬಹುದು. ಮಂಗ, ಕಾಗೆ, ಮುಂತಾದ ಪ್ರಾಣಿಗಳೂ ಇದಕ್ಕೆ ಶತ್ರುಗಳು.

ಕಡಲೆಕಾಯಿಯಲ್ಲಿ ತಳಿಯನ್ನವಲಂಬಿಸಿ ಸೇಕಡಾ 44–50ರಷ್ಟು ಎಣ್ಣೆಯಿರುತ್ತದೆ. ಈ ಎಣ್ಣೆಯನ್ನು ಅತಿ ಹೆಚ್ಚಿನ ಪ್ರಮಾಣದಲ್ಲಿ ದಿನನಿತ್ಯದ ಅಡುಗೆಗೆ ಉಪಯೋಗಿಸುತ್ತಾರೆ. ಹೈಡ್ರಾಜನೀಕರಣ ಮಾಡಿ, ದ್ರವರೂಪದಲ್ಲಿರುವ ಎಣ್ಣೆಯನ್ನು ಘನೀಕರಿಸಿದಾಗ ಅದು ವನಸ್ಪತಿಯಾಗುತ್ತದೆ. ಕಡಲೆಕಾಯಿ ಎಣ್ಣೆಯನ್ನು ಹಲವಾರು ಆಹಾರ ಪದಾರ್ಥಗಳನ್ನು ಕಾಯ್ದಿಡಲು ಉಪಯೋಗಿಸುವುದಲ್ಲದೆ, ಹಳ್ಳಿಗಳಲ್ಲಿ ಮನೆಗಳ ದೀಪವನ್ನು ಬೆಳಗಿಸಲು ಉಪಯೋಗಿಸುತ್ತಾರೆ. ಕಡಲೆಕಾಯಿಗಳನ್ನು ಹಸಿಯಾಗಿ ಹುರಿದು ಇಲ್ಲವೆ ಕರಿದು ತಿನ್ನುವುದು ಸಾಮಾನ್ಯವಾಗಿ ಬಳಕೆಯಲ್ಲಿದೆ. ಎಣ್ಣೆಯನ್ನು ತೆಗೆದಾದ ಮೇಲೆ ಉಳಿಯುವ ಹಿಂಡಿ ಅತ್ಯುತ್ತಮಗೊಬ್ಬರ. ಉತ್ತಮವಾದ ಪಶು ಆಹಾರವೂ ಅಹುದು. ಇದರ ಹೊಟ್ಟನ್ನು ಮಳೆಗೆ ತಾಗಿಸದೆ ಹಾಗೆಯೇ ಕಾಯ್ದಿಟ್ಟರೆ, ದನಗಳಿಗೆ ತಿನ್ನಿಸಲು ಉಪಯೋಗಿಸಬಹುದು. ಇದರಲ್ಲಿ ನೂರಕ್ಕೆ 15·5ರಷ್ಟು ಸಾರಜನಕವಿರುವದಲ್ಲದೆ, 50ರಷ್ಟು ಶರ್ಕರ ಪಿಷ್ಟಗಳೂ ಇವೆ.

ಸಾಮಾನ್ಯವಾಗಿ ಬಳಕೆಯಲ್ಲಿರುವ ದ್ವಿದಳಧಾನ್ಯಗಳಲ್ಲಿ ಸೋಯಾಬೀನನ್ನು ಬಿಟ್ಟರೆ ಕಡಲೆಕಾಯಿಯಲ್ಲಿಯೇ ಹೆಚ್ಚಿನ ಪ್ರಮಾಣದಲ್ಲಿ ಸಾರಜನಕವಿದೆ. ಇದರಲ್ಲಿರುವ ಸಾರಜನಕದಲ್ಲಿ ಎಲ್ಲ ಬಗೆಯ ಆವಶ್ಯಕವಾದ ಅಮೈನೋ ಆಮ್ಲಗಳಿದ್ದರೂ ಗಂಧಕಯುಕ್ತ ಅಮೈನೊ ಆಮ್ಲಗಳು ಮತ್ತು ಟ್ರಿಪ್ಟೋಫೇನ್‌ಗಳ ಪ್ರಮಾಣ ಮಾತ್ರ ಕಡಿಮೆಯಿದೆ. ಇದರಲ್ಲಿ ಸಾಕಷ್ಟು ಕ್ಯಾಲ್ಸಿಯಂ ಮತ್ತು ಕಬ್ಬಿಣದ ಅಂಶಗಳು ಇರುವುವಲ್ಲದೆ ಎ, ಬಿ ಮತ್ತು ಬಿ 2 ಜೀವಾತುಗಳೂ ಸಾಮಾನ್ಯವಾಗಿರುತ್ತವೆ.

ಕಡಲೆಕಾಯಿಯನ್ನು ಇತ್ತೀಚೆಗೆ ಹಾಲು ಮೊಸರು ಮತ್ತು ಬೆಣ್ಣೆಗಳನ್ನು ಸಹ ಮಾಡಲು ಉಪಯೋಗಿಸತೊಡಗಿದ್ದಾರೆ. ಇದರ ಹಾಲನ್ನು ಮುಂದೆ ಹೇಳುವ ರೀತಿಯಲ್ಲಿ ತಯಾರಿಸಬಹುದು : ಮೊದಲು ಬೀಜಗಳನ್ನು 1–1½ ತಾಸಿನ ವರೆಗೆ ನೆನೆಹಾಕಿ ಅದರ ಮೇಲಿರುವ ಸಿಪ್ಪೆಯನ್ನು ತೆಗೆಯಬೇಕು. ಅನಂತರ ಬೀಜಗಳನ್ನು ಸ್ವಲ್ಪವೇ ನೀರಿನೊಂದಿಗೆ ಬೆರೆಸಿ ನುಣ್ಣಗೆ ಅರೆದು ಮಸ್ಲಿನ್ ಬಟ್ಟೆಯ ಮೂಲಕ ಶೋಧಿಸಬೇಕು. ಬಟ್ಟೆಯ ಮೇಲೆ ಉಳಿದ ಭಾಗವನ್ನು, ಎರಡು–ಮೂರು ಸಾರಿ ಹೀಗೆಯೇ ಅರೆದು ಶೋಧಿಸಬಹುದು. ಬಿಳಿಯ ಬಣ್ಣದ ಈ ಹಾಲಿಗೆ ಎಮ್ಮೆಯ ಇಲ್ಲವೆ ಹಸುವಿನ ಹಾಲನ್ನು ಸ್ವಲ್ಪ ಪ್ರಮಾಣದಲ್ಲಿ ಬೆರೆಸುವದರಿಂದ ಕಡಲೆಕಾಯಿ ವಾಸನೆ ಅಷ್ಟಾಗಿ ಉಳಿಯುವುದಿಲ್ಲ. ಇದನ್ನು ಕಾಯಿಸಿ ಹೆಪ್ಪು ಹಾಕಿ ತಯಾರಿಸಿದ ಮೊಸರು, ಸಾಮಾನ್ಯವಾಗಿ ಹಸುವಿನ ಹಾಲಿನ ಮೊಸರಿನಂತೆಯೇ ಇರುತ್ತದೆ.

ಕಡಲೆಕಾಯಿಯ ಹಿಂಡಿಯನ್ನು ಇತ್ತೀಚೆಗೆ ಮಕ್ಕಳ ಆಹಾರವನ್ನು ತಯಾರಿಸಲು ಉಪಯೋಗಿಸುವುದಲ್ಲದೆ, ಬಿಸ್ಕತ್ತುಗಳನ್ನು ತಯಾರಿಸಲೂ ಉಪಯೋಗಿಸುತ್ತಾರೆ. ಸಾರಜನಕದ ಕೊರತೆ ಅತಿಯಾಗಿರುವ ಭಾರತದಂಥ ದೇಶಗಳಲ್ಲಿ ಅದನ್ನು ನಿವಾರಿಸಲು ಕಡಲೆಕಾಯಿ ಹಿಂಡಿಯಿಂದ ತಯಾರಿಸಿದ ಹಿಟ್ಟಿನಿಂದ ಸಾಧ್ಯ ಎಂಬು ತಜ್ಞರ ಅಭಿಪ್ರಾಯ. ಇದರ ಸಾರಜನಕವನ್ನುಪಯೋಗಿಸಿ ಆರ್ಡಿಲ್ ಎಂಬ ಕೃತಕ ರೇಷ್ಮೆ ಎಳೆಗಳನ್ನು ತಯಾರಿಸಬಹುದು ಎಂದು ಇತ್ತೀಚಿನ ಪ್ರಯೋಗಗಳು ತೋರಿಸಿವೆ. ಇದರಿಂದ ತಯಾರಾದ ಬಟ್ಟೆಗಳು ಅಷ್ಟೊಂದು ಉತ್ತಮದರ್ಜೆಯವಲ್ಲದಿದ್ದರೂ ಅವುಗಳಿಗೆ ಹುಳು ಹಿಡಿಯುವುದಿಲ್ಲ. (ಬಿ.ಆರ್.ಎಚ್.)

**ಕಡವಾಳ :** ರೂಬಿಯೇಸೀ ಕುಟುಂಬದ ಸ್ಟೆಫೆಗೈನ್ ಪಾರ್ವಿಫೋಲಿಯ ಎಂಬ ವೈಜ್ಞಾನಿಕ ಹೆಸರಿನ ದುಂಡು ಹಂದರದ ದೊಡ್ಡ ಪ್ರಮಾಣದ ಅಸ್ಥಿರ ಪರ್ಣ ವೃಕ್ಷ. ಕೊಂಬೆಗಳಿಂದೊಡಗೂಡಿದ ತುಂಡು ಕಾಂಡದ ಈ ಮರದ ತೊಗಟೆ ಬೂದು ಬಣ್ಣದ್ದಾಗಿರುತ್ತದೆ. ತೊಗಟೆ ಉದುರಿದಾಗ ಕಾಂಡದ ಮೇಲೆ ಸಣ್ಣ ಗುಣಿಗಳು ಕಾಣಿಸುವುವು.

ಹಿಮಾಲಯದ ತಪ್ಪಲಿನ ನಾಲ್ಕು ಸಾವಿರ ಅಡಿಗಳ ಎತ್ತರದ ವರೆಗಿನ ಪ್ರದೇಶ, ದಕ್ಷಿಣ ಭಾರತದ ಅಸ್ಥಿರಪರ್ಣದ ಕಾಡುಗಳಲ್ಲಿ ಅಲ್ಲಲ್ಲಿ ಈ ಮರ ಬೆಳೆಯುತ್ತದೆಯಾದರೂ ಎಲ್ಲಿಯೂ ಹೆಚ್ಚಿನ ಸಂಖ್ಯೆಯಲ್ಲಿ ಕಾಣಬರುವುದಿಲ್ಲ.

ಫೆಬ್ರುವರಿ–ಮಾರ್ಚಿ ತಿಂಗಳುಗಳಲ್ಲಿ ಎಲೆ ಉದುರಿ, ಹೊಸ ಚಿಗುರು ಮೇ ತಿಂಗಳ ಸುಮಾರಿಗೆ ಬರುತ್ತದೆ. ಹೂಗಳು ಮೇ–ಜುಲೈನಲ್ಲಿ ಮೂಡುತ್ತವೆ. ಮರು ಏಪ್ರಿಲ್‌ನ ಹೊತ್ತಿಗೆ ಕಾಯಿಗಳು ಮಾಗುತ್ತವೆ. ಬೀಜ ಬಲು ಸಣ್ಣ. ಮೆಕ್ಕಲು ಮಣ್ಣಿನ ಭೂಮಿಯಲ್ಲಿ ಸ್ವಾಭಾವಿಕವಾಗಿ ಬೀಜಗಳು ಮೊಳೆತು ಹೊಸ ಗಿಡಗಳು ಕಾಣಿಸಿಕೊಳ್ಳುತ್ತವೆ.

ಇವರ ಚೌಬೀನೆ ಎಳೆಗೆಂಪು ಬಣ್ಣದ್ದು. ಮನೆಕಟ್ಟುವುದಕ್ಕೂ ಪೀಠೋಪಕರಣಗಳಿಗೂ ವ್ಯವಸಾಯದ ಉಪಕರಣಗಳಿಗೂ ನೂಲಿನ ಗಿರಣಿಯ ಉರುಳೆ (ಬಾಬಿನ್) ತಯಾರಿಕೆಗೂ ಬಾಚಣಿಗೆ, ಮರದ ಚಮಚ, ಬಟ್ಟಲು ಹಾಗೂ ಕೆತ್ತನೆಯ ಮತ್ತು ಕಡೆತದ ಕೆಲಸಗಳಿಗೂ ಇದನ್ನು ಉಪಯೋಗಿಸುವರು. (ಎ.ಕೆ.ಎಸ್.)

**ಕಡವೆ :** ಸರ್ವಸ್ (ರೂಸ) ಯೂನಿಕಲರ್ ಎಂಬ ವೈಜ್ಞಾನಿಕ ಹೆಸರಿನ ದೊಡ್ಡ ಜಿಂಕೆ. ಸಸ್ತನಿಕವರ್ಗ, ಆರ್ಟಿಯೊಡ್ಯಾಕ್ಟೈಲ ಉಪವರ್ಗ ಹಾಗೂ ಸರ್ವಿಡೀ ಕುಟುಂಬಕ್ಕೆ ಸೇರಿದೆ. ಸಾಂಬರ್ ಎಂದೂ ಇದನ್ನು ಕರೆಯುತ್ತಾರೆ. ಭಾರತ ಮತ್ತು ಸಿಂಹಳಗಳ ದಟ್ಟ ಕಾಡುಗಳ ಬೆಟ್ಟ ಗುಡ್ಡಗಳೇ ಇದರ ಬೀಡು. ಭಾರತದಲ್ಲಿ



ನೀಲಗಿರಿ ಮತ್ತು ಪಳನಿಬೆಟ್ಟಗಳಲ್ಲಿ ಹೇರಳವಾಗಿ ಕಾಣಬರುತ್ತದೆ. ಇದು ಸುಮಾರು 5′ ಗಿಂತ ಹೆಚ್ಚು ಎತ್ತರ ಮತ್ತು 500 ಪೌಂಡಿಗೂ ಮಿಗಿಲಾಗಿ ಭಾರವಿರುತ್ತದೆ. ದೇಹದ ಬಣ್ಣ ಹಳದಿ ಮಿಶ್ರಿತ ಕಂದು. ಮೈಮೇಲೆಲ್ಲ ಒರಟಾದ ಕೂದಲುಗಳಿವೆ. ಕುತ್ತಿಗೆಯ ಭಾಗದಲ್ಲಿ ಉದ್ದ ಕೂದಲುಗಳ ಅಯಾಲು (ಮೇನ್) ಇದೆ. ಮುದಿ ಕಡವೆಗಳು ಕಪ್ಪು ಬಣ್ಣಕ್ಕಿರುತ್ತವೆ. ಗಂಡು ಕಡವೆಯಲ್ಲಿ ಒರಟಾದ ಚರ್ಮದಿಂದ ಆವರಿಸಿದ ಕವಲೊಡೆದ ಕೊಂಬುಗಳಿವೆ. ಇವೂ ಪ್ರತಿವರ್ಷದ ಮಾರ್ಚಿ ತಿಂಗಳ ವೇಳೆಗೆ ಉದುರಿ ಹೋಗುತ್ತವೆ ಮತ್ತೆ ಅವುಗಳ ಸ್ಥಳದಲ್ಲಿ ಕೊಂಬುಗಳು ಮೂಡುತ್ತವೆ. ಹೆಣ್ಣು ಕಡವೆಗಳಲ್ಲಿ ಕೊಂಬುಗಳಿಲ್ಲ. ಕಡವೆ ಸಾಮಾಜಿಕ ಜೀವಿ. ದೊಡ್ಡ ದೊಡ್ಡ ಗುಂಪುಗಳಲ್ಲಿ ವಾಸಿಸುತ್ತದೆ. ಹುಲ್ಲು, ಎಳೆಚಿಗುರು, ಹಣ್ಣು ಹಂಪಲು ಇತ್ಯಾದಿ ಇದರ ಆಹಾರ. ಸಾಮಾನ್ಯವಾಗಿ ರಾತ್ರಿಯ ವೇಳೆ ಮಾತ್ರ ಆಹಾರಕ್ಕಾಗಿ ಅಲೆದಾಡುತ್ತದೆ. ಹಗಲು ದಟ್ಟವಾದ ಪೊದೆಗಳಲ್ಲಿ ಅಡಗಿ ಕಾಲ ಕಳೆಯುತ್ತದೆ. ನೀರನ್ನು ಕಂಡರೆ ಇಷ್ಟ, ತುಂಬ ಚೆನ್ನಾಗಿ ಈಜಲೂ ಬಲ್ಲುದು.

ನವೆಂಬರಿನಿಂದ ಡಿಸೆಂಬರಿನ ವರೆಗಿನ ಕಾಲ ಇದರ ಬೆದೆಗಾಲ. ಈ ಕಾಲದಲ್ಲಿ ಒಂದು ಗಂಡು 5–12 ಹೆಣ್ಣು ಕಡವೆಗಳೊಂದಿಗೆ ಗುಂಪುಗೂಡಿರುತ್ತದೆ. ಬೆದೆಗಾಲ ಮುಗಿದ ಬಳಿಕ ಗುಂಪು ಒಡೆದು ಹೋಗುವುದು ಸಾಮಾನ್ಯ.

ಕಡವೆ ಬಹಳ ಧೈರ್ಯಶಾಲಿ. ವೈರಿಗಳೊಂದಿಗೆ ಭಯಂಕರವಾಗಿ ಹೋರಾಡುತ್ತದೆ.

(ಎಸ್.ಎಚ್.ಒ.;ಪಿ.ಎಸ್.ಆರ್.)

**ಕಡಾರಂ :** ನೋಡಿ— ಕಟಾಹ

**ಕಡಿದು :** ಸಾಮಾನ್ಯವಾಗಿ ಒಂದೇ ದಿಕ್ಕಿನಲ್ಲಿ ಓಲಿರುವ ಶಿಲಾ ಪ್ರಸ್ತರಗಳಿಂದಾದ ಬೆಟ್ಟಗಳು ಪ್ರಸ್ತರಗಳ ಇಳಿವೋರೆಯ ದಿಕ್ಕಿನಲ್ಲಿ ಅಷ್ಟು ಉಬ್ಬುತಗ್ಗುಗಳಿಲ್ಲದ ಸುಗಮವಾದ ಮೇಲ್ಮೈಯನ್ನೂ ಅದರ ವಿರುದ್ಧ ದಿಕ್ಕಿನಲ್ಲಿ ಬಹು ಕಡಿದಾದ ಮೇಲ್ಮೈಯನ್ನೂ ಪ್ರದರ್ಶಿಸುತ್ತವೆ. ಇವನ್ನು ಅನುಕ್ರಮವಾಗಿ ಬೆಟ್ಟದ ಇಳಿಜಾರು ಮತ್ತು ಬೆಟ್ಟದ ಕಡಿದು ಎನ್ನಬಹುದು. ಹೆಚ್ಚು ಶ್ರಮವಿಲ್ಲದೆ, ಇಳಿಜಾರಿನ ಕಡೆ, ಬೆಟ್ಟವನ್ನು ಹತ್ತಿ ಇಳಿಯಬಹುದು. ಅಲ್ಲದೆ ಈ ಇಳಿಜಾರಿನುದ್ದಕ್ಕೂ ಶಿಲಾಸಮೂಹದ ಕೇವಲ ಒಂದೇ ಒಂದು ಪ್ರಸ್ತರ ಗೋಚರವಾಗುತ್ತವೆ. ಆದರೆ ಕಡಿದಾಗಿರುವ ಕಡೆ ಬೆಟ್ಟವನ್ನು ಹತ್ತುವುದೂ ಇಳಿಯುವುದೂ ಬಹು ಶ್ರಮವಾದ ಕೆಲಸ. ಈ ಪಾರ್ಶ್ವದಲ್ಲಿ ಹೆಚ್ಚಿನ ಏರುಪೇರುಗಳಿರುವುದೂ ಸಾಮಾನ್ಯ. ಅಲ್ಲದೆ ಇಲ್ಲಿ ಶಿಲಾಸಮೂಹದ ನಾನಾಬಗೆಯ ಪ್ರಸ್ತರಗಳನ್ನೂ ಗುರುತಿಸಬಹುದು. ವಿವೇಚಿಸುವು




ಬೆಟ್ಟದ ಶಿಲಾಸಮೂಹದ ವಿವಿಧ ಪ್ರಸ್ತರಗಳು : 1 ಪೆಂಟೆಶಿಲೆ, 2 ದಪ್ಪಮರಳುಶಿಲೆ, 3 ಮರಳುಶಿಲೆ, 4 ಜೇಡುಶಿಲೆ, 5 ಜಲಜ ಶಿಲಾಪ್ರಸ್ತರಗಳ ನಡುವೆ ಪ್ರವಹಿಸಿರುವ ಬೇಸಿಕ್ ಶಿಲೆ (ಅಗ್ನಿಶಿಲೆ), 6 ಸುಣ್ಣ ಶಿಲೆ.

ದಾದರೆ ಕಡಿದು ದೈಹಿಕವಾಗಿ ಶ್ರಮಸಾಧ್ಯವಾದರೂ ವೈಜ್ಞಾನಿಕವಾಗಿ ಭೂವಿಜ್ಞಾನಿಗೆ ನಿಸರ್ಗದ ವರವಿದ್ದಂತೆ. ಕಾರಣ, ಬೆಟ್ಟದ ಕಡಿದಾದ ಪಾರ್ಶ್ವದಲ್ಲಿ ವಿವಿಧ ಶಿಲಾಪ್ರಸ್ತರಗಳನ್ನು ಅಧ್ಯಯನ ಮಾಡಬಹುದು. ಕೆಲವು ಬೆಟ್ಟಗಳ ಕಡಿದಿನಲ್ಲಿ ಕಂಡುಬರುವ ಶಿಲಾಪ್ರಸ್ತರಗಳು ತಮ್ಮ ಸಂಯೋಜನೆ ಮತ್ತು ರಚನೆಯಲ್ಲಿ ಏಕರೀತಿಯವಾಗಿರದ ಕಾರಣ ಜಾಳಾದ ರಚನೆಯುಳ್ಳ ಪ್ರಸ್ತರಗಳು ಗಾಳಿಮಳೆಗಳ ಹಾವಳಿಗೆ ಸಿಕ್ಕಿ ಸುಲಭವಾಗಿ ನಶಿಸಿ ಹೋಗುತ್ತವೆ. ಆದರೆ ಗಡಸು ರಚನೆ ಮತ್ತು ಕ್ಲಿಷ್ಟ ಸಂಯೋಜನೆಯುಳ್ಳ ಶಿಲಾಪ್ರಸ್ತರಗಳು ಸುಲಭವಾಗಿ ಸವೆಯದೆ ಸವೆದ ಪ್ರಸ್ತರಗಳ ನಡುವೆ ಎದ್ದು ಕಾಣುತ್ತವೆ. ಹೀಗಾಗುವುದರಿಂದ ಬೆಟ್ಟದ ಕಡಿದು ಇನ್ನೂ ಹೆಚ್ಚು ಕ್ಲಿಷ್ಟವಾಗಿ ಹತ್ತಿ ಇಳಿಯಲು ಎಂದಿಲ್ಲದ ಶ್ರಮ ವಹಿಸಬೇಕಾದೀತು. ಆಂಧ್ರ ಪ್ರದೇಶದ ಅನಂತಪುರ ಮತ್ತು ಕರ್ನೂಲು ಜಿಲ್ಲೆಗಳಲ್ಲಿನ ಕಡಪ ಶಿಲಾಸ್ತೋಮಕ್ಕೆ ಸೇರಿದ ಅನೇಕ ಬೆಟ್ಟಗಳಲ್ಲಿ ಕಡಿದು ಮತ್ತು ಇಳಿಜಾರುಗಳನ್ನು ಸುಲಭವಾಗಿ ಗುರುತಿಸಬಹುದು. (ಬಿ.ಎ.ಜಿ.)

**ಕಡಿರಿ ರಾಜ್ಯ :** 11ನೆಯ ಶತಮಾನದ ಆದಿಭಾಗದಲ್ಲಿ ಜಾವದಲ್ಲಾಳುತ್ತಿದ್ದ ಏರ್ಲಂಗದೊರೆ ತನ್ನ ಇಬ್ಬರು ಮಕ್ಕಳಿಗೆ ಹಂಚಿಕೊಟ್ಟ ರಾಜ್ಯದ ಎರಡು ಭಾಗಗಳಲ್ಲೊಂದು ; ಪಶ್ಚಿಮಾರ್ಧ. ಪಂಜುಲು ಇದರ ಮುಂಚಿನ ಹೆಸರು ; ರಾಜಧಾನಿ ಕಡಿರಿ. ಕಡಿರಿ ಎಂದೇ ಈ ರಾಜ್ಯ ಪ್ರಸಿದ್ಧವಾಯಿತಲ್ಲದೆ ಕ್ರಮೇಣ ಹೆಚ್ಚು ಪ್ರಬಲವಾಗಿ ಇನ್ನೊಂದು ಭಾಗವನ್ನೂ ವಶಪಡಿಸಿಕೊಂಡಿತು. ಪಶ್ಚಿಮ ಜಾವದಲ್ಲಿರುವ ಸುಣ್ಡ ಮತ್ತು ಸು-ಕಿ-ತಾನ್‌ಗಳನ್ನು ಬಿಟ್ಟು ಜಾವದ ಮಿಕ್ಕೆಲ್ಲ ನೆಲವೂ ಕಡಿರಿ ರಾಜ್ಯಕ್ಕೆ ಒಳಪಟ್ಟಿತ್ತೆಂದು ಚೌ ಜು-ಕ್ವ ಎಂಬ ಚೀನೀ ಅಧಿಕಾರಿಯೊಬ್ಬನ ಬರೆಹದಿಂದ ತಿಳಿದುಬರುತ್ತದೆ. ಆತ ಸ್ವತಃ ಕಡಿರಿಯನ್ನು ಕಂಡಿರಲಿಲ್ಲ. ಅಲ್ಲಿಗೆ ಹೋಗಿ ಬಂದವರಿಂದ ಕೇಳಿ ತಿಳಿದಿದ್ದನ್ನೆ ಬರೆದ. ಕಡಿರಿಯನ್ನಾತ ಪೊ-ಪೊ ಅಥವಾ ಯುವ ಎಂದು ಕರೆದಿದ್ದಾನೆ. ಜಾವದ ಒಳಗೂ ಹೊರಗೂ ಪೊ-ಪೊಗೆ ಅಧೀನವಾಗಿದ್ದ 15 ರಾಜ್ಯಗಳ ಪಟ್ಟಿಯೊಂದನ್ನೂ ಆತ ಕೊಟ್ಟಿದ್ದಾನೆ. ಇವುಗಳ ಪೈಕಿ ಬಲಿ ಮತ್ತು ನೈಋತ್ಯ ಬೋರ್ನಿಯೋಗಳು ಮುಖ್ಯವಾದವು.

ಹನ್ನೆರಡನೆಯ ಶತಮಾನದಲ್ಲಿ ಅನೇಕ ರಾಜರು ಕಡಿರಿಯನ್ನಾಳಿದರು. ಅವರ ಪೈಕಿ ಜಯವರ್ಷ, ಕಾಮೇಶ್ವರ ಮತ್ತು ಜಯಭಯರು ಮುಖ್ಯ. ಆಯಾ ಕಾಲಗಳಲ್ಲಿ ಬರೆದ ಕಾವ್ಯಗಳಲ್ಲಿ ಇವರ ಹೆಸರುಗಳು ಚಿರಸ್ಥಾಯಿಯಾಗಿವೆ. ಜಯವರ್ಷನ ಆಶ್ರಯದಲ್ಲಿ ಕಣ್ವ ಕವಿ ಜಾವ ಭಾಷೆಯಲ್ಲಿ ಕೃಷ್ಣಾಯನವೆಂಬ ಕಾವ್ಯ ರಚಿಸಿದ್ದಾನೆ. ಇವನ ಅನಂತರ ಕಡಿರಿಯ ದೊರೆಯಾದ ಕಾಮೇಶ್ವರನ ಹೆಸರು ಸ್ಮರದಹನ ಕಾವ್ಯದಲ್ಲಿ ಉಲ್ಲೇಖಿತವಾಗಿದೆ. ಕಾಮೇಶ್ವರನ ಮಗನಾದ ಜಯಭಯನದು ನರಸಿಂಹಲಾಂಛನ. ಪ್ರಜೆಗಳು ಇವನನ್ನು ವಿಷ್ಣುವಿನ ಅವತಾರವೆಂದು ಗೌರವಿಸುತ್ತಿದ್ದರು. ಇವನ ಆಶ್ರಯದಲ್ಲಿ ಪನುಲುಹ್ ಕವಿ ಭಾರತಯುದ್ಧ ಕಾವ್ಯವನ್ನು ಪೂರ್ಣಗೊಳಿಸಿದ. ಹರಿವಂಶ ಮತ್ತು ಘಟೋತ್ಕಚ—ಇವು ಈ ಕವಿಯ ಇತರ ಎರಡು ಕಾವ್ಯಗಳು. ಜಯಭಯನ ಅನಂತರ ಬಂದ ರಾಜರ ವಿಚಾರವಾಗಿ ಅಷ್ಟೇನೂ ತಿಳಿಯದು. ಕಡಿರಿ ರಾಜ್ಯದ ಕೊನೆಯ ರಾಜನಾದ ಕೃತಜಯನ ವಿಚಾರವಾಗಿ ಪರರತನ್ ಎಂಬ ಗ್ರಂಥದಿಂದ ಅನೇಕ ವಿಷಯಗಳು ತಿಳಿಯುತ್ತವೆ. ಆದರೆ ಇದರಲ್ಲಿ ಕೊಟ್ಟಿರುವುದೆಲ್ಲ ವಾಸ್ತವವೆನ್ನಲಾಗುವುದಿಲ್ಲ. ಈ ದೊರೆ ತಾನೇ ದೇವರೆಂದು ಸಾರಿಕೊಂಡು, ಪುರೋಹಿತರೂ ತನಗೆ ನಮಸ್ಕಾರ ಮಾಡಬೇಕೆಂದು ಆಜ್ಞೆ ಮಾಡಿದನಂತೆ. ಇದರಿಂದ ಕೋಪಗೊಂಡ ಪುರೋಹಿತರು ನೆರೆ ಪ್ರದೇಶದ ಒಡೆಯನಾದ ಅಂಗ್ರೋಕನ ಆಶ್ರಯ ಪಡೆದರು. ಅಂಗ್ರೋಕ ಮೊದಲು ದರೋಡೆಗಾರನಾಗಿದ್ದ. ತನ್ನ ಯಜಮಾನನಾಗಿದ್ದ ತುಮಾಪೆಲಿನ ಗವರ್ನರನ್ನು ಕೊಂದು ಅವನ ಹೆಂಡತಿಯನ್ನು ಮದುವೆಯಾಗಿ ಕವಿಪರ್ವತದ ಪೂರ್ವಭಾಗವನ್ನಾಳುತ್ತಿದ್ದ. ದೊರೆಗೂ ಪುರೋಹಿತರಿಗೂ ನಡುವೆ ಸಂಭವಿಸಿದ್ದ ವಿರಸದ ದುರುಪಯೋಗ ಪಡೆದುಕೊಂಡು ಆತ ರಾಜಸನೆಂಬ ಬಿರುದು ತಳೆದು ತಾನೇ ದೊರೆಯೆಂದು ಘೋಷಿಸಿಕೊಂಡ. 1222ರಲ್ಲಿ ಎರಡು ಬಾರಿ ಕೃತಜಯನ ಮೇಲೆ ಯುದ್ಧ ನಡೆಯಿತು. ಕಡಿರಿ ಅವನ ವಶವಾಯಿತು.

ಜಾವ ಸಾಮ್ರಾಜ್ಯಕ್ಕೆ ನಿಜವಾದ ಅಸ್ತಿಭಾರ ಹಾಕಿದ ಕಡಿರಿ ರಾಜ್ಯದ ಸಾಹಿತ್ಯ ಮತ್ತು ಕಲೆಗಳು ಬಹಳ ಮಟ್ಟಿಗೆ ಬೆಳೆದುವು. ಜಾವದ ಇತಿಹಾಸದಲ್ಲಿ ಇದೊಂದು ಮೈಲಿಗಲ್ಲು. ಜಾವ ಭಾಷೆಯಲ್ಲಿ ಅನೇಕ ಕಾವ್ಯಗಳು ರಚಿತವಾದುವು. ಇವುಗಳಿಂದ ಸ್ಫೂರ್ತಿಗೊಂಡ ಶಿಲ್ಪಿಗಳು, ಮಹಾಭಾರತ ಕಥೆಗಳನ್ನು ದೇವಾಲಯಗಳ ಗೋಡೆಗಳ ಮೇಲೆ ಕೆತ್ತಿದರು. ಕಡಿರಿ ರಾಜರು ಅನೇಕ ಕವಿಗಳಿಗೆ ಪ್ರೋತ್ಸಾಹ ನೀಡಿದರು. ತ್ರಿಗುಣ ಕವಿಯ ಕೃಷ್ಣಾಯನ ಕಾವ್ಯದಲ್ಲಿ ಕೃಷ್ಣ-ರುಕ್ಮಿಣಿಯರ ಕಥೆ ಹೃದಯಂಗಮವಾಗಿ ಚಿತ್ರಿತವಾಗಿದೆ. ಭಾರತಯುದ್ಧ ಈ ಕಾಲದ ಅತ್ಯಂತ ಮುಖ್ಯಗ್ರಂಥ. ಮ್ಪುಸೆಡ ಕವಿಯಿಂದ ಪ್ರಾರಂಭವಾದ ಈ ಕಾವ್ಯವನ್ನು ಪುನಲುಹ್ ಕವಿ ಪೂರ್ಣಗೊಳಿಸಿದ. ಧರ್ಮೀಯನ ಸ್ಮರದಹನವೂ ಒಂದು ಉತ್ತಮ ಕಾವ್ಯ. ಇದು ಕಾಳಿದಾಸನ ಕುಮಾರಸಂಭವದ ಆಧಾರದ ಮೇಲೆ ರಚಿತವಾದದ್ದು. ಜಾವದ ಚರಿತ್ರೆಯಲ್ಲಿ ಕಡಿರಿ ರಾಜ್ಯದ ಕಾಲದಲ್ಲಿ ಆದಷ್ಟು ಸಾಹಿತ್ಯನಿರ್ಮಾಣ ಮತ್ತೆ ಯಾವಾಗಲೂ ಆಗಲಿಲ್ಲವೆಂದು ಹೇಳಬಹುದು. ಅಷ್ಟೇ ಅಲ್ಲ. ಭಾರತೀಯ ಸಾಹಿತ್ಯದ ಪ್ರಭಾವ ಜಾವದಲ್ಲಿ ಎಷ್ಟೊಂದು ಗಾಢವಾಗಿದ್ದಿತೆಂಬುದೂ ಇದರಿಂದ ವ್ಯಕ್ತವಾಗುತ್ತದೆ. (ಎ.ವಿ.ಎನ್.)

**ಕಡೂರು :** ಮೈಸೂರು ರಾಜ್ಯದ ಚಿಕ್ಕಮಗಳೂರು ಜಿಲ್ಲೆಯ ಪೂರ್ವಭಾಗದಲ್ಲಿರುವ ಒಂದು ತಾಲ್ಲೂಕು ಕೇಂದ್ರ. ಪುರಸಭೆ ಇರುವ ಪಟ್ಟಣ. ಜನಸಂಖ್ಯೆ 10,811 (1961). ಉ.ಅ. 13°32′ ಮತ್ತು ಪೂ.ರೇ. 76°4′ನಲ್ಲಿರುವ ಈ ಪಟ್ಟಣದ ಮೂಲಕ ಬೆಂಗಳೂರು-ಪೂನ ರೈಲು ಮಾರ್ಗವೂ ಬೆಂಗಳೂರು-ಶಿವಮೊಗ್ಗ ರಸ್ತೆಯೂ ಹಾದುಹೋಗುತ್ತವೆ. ಜಿಲ್ಲೆಯ ಮುಖ್ಯ ಪಟ್ಟಣವಾದ ಚಿಕ್ಕಮಗಳೂರು ಇದಕ್ಕೆ ನೈಋತ್ಯದಲ್ಲಿ 25 ಮೈ. ದೂರದಲ್ಲಿದೆ.

1863ರಿಂದ 1865ರ ವರೆಗೆ ಇದು ಜಿಲ್ಲಾ ಮುಖ್ಯಪಟ್ಟಣವಾಗಿತ್ತು. ಆಗ ಕಡೂರೆಂದೇ ಈ ಜಿಲ್ಲೆಯ ಹೆಸರು. 1875ರ ವರೆಗೂ ಇದು ಕಡೂರು ತಾಲ್ಲೂಕಿನ ಕೇಂದ್ರವಾಗಿತ್ತು. ಆಗ ಇದು ಬಾಣಾವರ ತಾಲ್ಲೂಕಿನಲ್ಲಿ ಸೇರಿತು. ಮತ್ತೆ (1882) ಇದಕ್ಕೆ ತಾಲ್ಲೂಕು ಕೇಂದ್ರದ ಸ್ಥಾನ ಲಭ್ಯವಾಯಿತಲ್ಲದೆ, ಅನಂತರ (1886) ಇದರ ಹೆಸರೇ ಈ ತಾಲ್ಲೂಕಿಗೂ ಬಂತು.

ಪ್ರಾಚೀನಕಾಲದಲ್ಲಿ ಇದು ಜೈನರ ಕ್ಷೇತ್ರವಾಗಿದ್ದು ಗಂಗ ಸಾಮ್ರಾಜ್ಯಕ್ಕೆ ಅಧೀನವಾಗಿತ್ತೆಂದು ಶಾಸನಗಳಿಂದ ತಿಳಿದುಬರುತ್ತದೆ. ಅನಂತರ ಇದು ಹೊಯ್ಸಳರ ಆಳ್ವಿಕೆಗೆ ಒಳಪಟ್ಟಿತ್ತು. 14ನೆಯ ಶತಮಾನದಲ್ಲಿ ವಿಜಯನಗರದ ಅರಸರ ಕಾಲದಲ್ಲಿ ಎಮ್ಮೆದೊಡ್ಡಿಗುಡ್ಡದ ಸುತ್ತಣ ಪ್ರದೇಶವನ್ನು ಮಾದನಾಯಕನೆಂಬ ಸಾಮಂತನಿಗೆ ಕೊಡಲಾಯಿತು. ಈಗಿನ ಕಡೂರು ಪಟ್ಟಣ ಇರುವ ಸ್ಥಳದಲ್ಲಿ ಆಗ ಸಾರ್ಣಪುರ ಅಗ್ರಹಾರವಿತ್ತಂತೆ. ಮಾದನಾಯಕ ಒಮ್ಮೆ ಇತ್ತ ಮೃಗಾಯಾವಿಹಾರಕ್ಕಾಗಿ ಬಂದಿದ್ದಾಗ ಈ ಬಳಿಯಲ್ಲಿ ಕಡವೆಯೊಂದು ನಾಯಕನ ಬೇಟೆನಾಯಿಗಳನ್ನು ಅಟ್ಟಿಸಿಕೊಂಡು ಬಂತಂತೆ. ನಾಯಕ ಇಲ್ಲೊಂದು ಕೋಟೆ ಕಟ್ಟಿಸಿದ. ಈ ಊರಿಗೆ ಕಡವೆಯ ಊರು ಅಥವಾ ಕಡೂರು ಎಂಬ ಹೆಸರು ಬಂದದ್ದು ಹೀಗೆ.

ಕಡೂರಿನ ಕೋಟೆಯೊಳಗೆ ಕೊಳದ ಬಳಿ ಇರುವ ಆಂಜನೇಯ ದೇವಸ್ಥಾನ ಹಳೆಯದು. ಈ ದೇವಸ್ಥಾನದ ಮೊಗಸಾಲೆಯ ನಾಲ್ಕು ಕಂಬಗಳು ಬಲು ಸುಂದರವಾಗಿವೆ. ಇವು ಯಾವುದೋ ಹೊಯ್ಸಳ ದೇವಸ್ಥಾನದ ಭಾಗವಾಗಿದ್ದಿರಬೇಕು. ಪುರಾಣದ ದೃಶ್ಯಗಳನ್ನು ಕೆತ್ತಲಾಗಿರುವುದು ಈ ಕಂಬಗಳ ವೈಶಿಷ್ಟ್ಯ. ಇಂಥ

ಕೆತ್ತನೆಗಳು ಸಾಮಾನ್ಯವಾಗಿ ಹೊಯ್ಸಳ ಶೈಲಿಯ ದುಂಡು ಕಂಬಗಳ ಮೇಲೆ ಇರುವುದಿಲ್ಲ. ಇವು ಸಾಮಾನ್ಯವಾಗಿ ದ್ರಾವಿಡ ದೇವಸ್ಥಾನಗಳ ಚಚ್ಚೌಕ ಕಂಬಗಳ ಮೇಲಿರುವುದುಂಟು.

ಕಡೂರು ರೈಲ್ವೆನಿಲ್ದಾಣ ಪುಟ್ಟದಾದರೂ ಪ್ರಾಮುಖ್ಯ ಪಡೆದಿದೆ. ಬೀರೂರು ರೈಲ್ವೆಸಂಧಿ (ಜಂಕ್ಷನ್) ಇಲ್ಲಿಗೆ 4 ಮೈ. ದೂರದಲ್ಲಿದೆ. ಮಂಗಳೂರು ಕಡೆಯಿಂದ ಬೊಂಬಾಯಿಗೆ ಪ್ರಯಾಣ ಮಾಡುವವರು ಸಾಮಾನ್ಯವಾಗಿ ಈ ಮಾರ್ಗವಾಗಿ ಪ್ರಯಾಣ ಮಾಡುತ್ತಾರೆ. ಇಲ್ಲಿಂದ ರಾಜ್ಯದ ನಾನಾ ಭಾಗಗಳಿಗೆ ಬಸ್ಸು ಸೌಕರ್ಯವಿದೆ.

ಕಡೂರಿನ ಸುತ್ತಮುತ್ತ ಇರುವ ಬಂಡೆಗಳಿಂದ ಚಪ್ಪಡಿ ತೆಗೆಯಲಾಗುತ್ತಿದೆ. ಇಲ್ಲೊಂದು ಹೆಂಚು ಕಾರ್ಖಾನೆ ಇದೆ. ಕಡೂರು ಈ ಜಿಲ್ಲೆಯ ಮಲೆನಾಡಿನ ಹೆಬ್ಬಾಗಿಲಿನಂತಿರುವುದರಿಂದ ಜಿಲ್ಲೆಯ ವ್ಯಾಪಾರದ ಒಂದು ಭಾಗ ನಡೆಯುವುದು ಇದರ ಮೂಲಕ.

**ತಾಲ್ಲೂಕು:** ಕಡೂರು ತಾಲ್ಲೂಕಿನ ವಿಸ್ತೀರ್ಣ 545.86 ಚ.ಮೈ. ಬಿದರೆ, ಬೀರೂರು, ಹಿರೇನಲ್ಲೂರು, ಕಡೂರು, ಸಕ್ಕರೆಪಟ್ಟಣ, ಯಗಟಿ–ಇವು ಈ ತಾಲ್ಲೂಕಿನ ಹೋಬಳಿಗಳು. ಬೀರೂರು, ಕಡೂರು, ಸಕ್ಕರೆಪಟ್ಟಣ, ಹುಲಿಕೆರೆ, ನಿಡಗಟ್ಟ, ಬಿದರೆ, ಯರದಕೆರೆ, ಆಸಂದಿ ಮತ್ತು ಹಿರಿಯೂರು ದೊಡ್ಡ ಸ್ಥಳಗಳು. 64 ಪಂಚಾಯತಿಗಳೂ 104ಕ್ಕೂ ಹೆಚ್ಚು ಸಹಕಾರ ಸಂಘಗಳೂ ಇರುವ ತಾಲ್ಲೂಕಿನಲ್ಲಿ ಹರಿಜನ–ಗಿರಿಜನರಿಗಾಗಿ ಸ್ಥಾಪಿತವಾಗಿರುವ ಸಹಕಾರ ಸಂಘ ಉಲ್ಲೇಖಾರ್ಹವಾದದ್ದು.

ಕಡೂರು ತಾಲ್ಲೂಕು ಹಿಂದೆ ಆಗಿಂದಾಗ್ಗೆ ಬದಲಾವಣೆಗೆ ಒಳಪಟ್ಟಿತು. ಬಲು ಹಿಂದೆ ಕಡೂರು, ಯಗಟಿ, ಗರುಡನಗಿರಿ ಮತ್ತು ಬಾಣಾವರ ತಾಲ್ಲೂಕುಗಳಿದ್ದುವೆಂದೂ ಕಡೂರು ಯಗಟಿಗಳು ಇಕ್ಕೇರಿ ರಾಜ್ಯಕ್ಕೆ ಸೇರಿದ್ದುವೆಂದೂ ಹೇಳಲಾಗಿದೆ. ಇವನ್ನು ಮೈಸೂರು ದೊರೆಗಳು ವಶಪಡಿಸಿಕೊಂಡು ತರೀಕೆರೆಯ ಪಾಳೆಯಗಾರನಿಗೆ ಕೊಟ್ಟರು. ಹೈದರ್ ಇವನ್ನು ಮತ್ತೆ ಮೈಸೂರಿಗೆ ಸೇರಿಸಿಕೊಂಡ. 1835ರಲ್ಲಿ ಯಗಟಿಯನ್ನು ಕಡೂರಿಗೆ ಸೇರಿಸಲಾಯಿತು. 1876ರಲ್ಲಿ ಕಡೂರು ಬಾಣಾವರಗಳನ್ನು ಒಂದೇ ತಾಲ್ಲೂಕಾಗಿ ಮಾಡಿ ಅದನ್ನು ಬಾಣಾವರವೆಂದೇ ಕರೆಯಲಾಯಿತು; ಬಾಣಾವರವೇ ತಾಲ್ಲೂಕಿನ ಮುಖ್ಯಸ್ಥಳವೂ ಆಯಿತು. 1882ರಲ್ಲಿ ಮತ್ತೆ ಕಡೂರು ತಾಲ್ಲೂಕು ಕೇಂದ್ರವಾಯಿತು. 1886ರಲ್ಲಿ ಅರಸೀಕೆರೆ ತಾಲ್ಲೂಕು ಆದಾಗ ಕಡೂರು ತಾಲ್ಲೂಕನ್ನು ಪುನರ್ರಚಿಸಲಾಯಿತು. ಚಿಕ್ಕಮಗಳೂರು ತಾಲ್ಲೂಕಿನ ಸಕ್ಕರೆಪಟ್ಟಣವನ್ನು ಕಡೂರಿಗೆ ಸೇರಿಸಿ ಹಳೆಯ ಬಾಣಾವರ ತಾಲ್ಲೂಕಿನ ಭಾಗವನ್ನೂ ಬಾಣಾವರವನ್ನೂ ಹಾಸನ ಜಿಲ್ಲೆಯ ಅರಸೀಕೆರೆ ತಾಲ್ಲೂಕಿಗೆ ವರ್ಗಾಯಿಸಲಾಯಿತು.

ಕಡೂರು ತಾಲ್ಲೂಕಿನ ಪಶ್ಚಿಮಕ್ಕೆ ಬಾಬಾಬುಡನ್ ಪರ್ವತಶ್ರೇಣಿಯ ಪೂರ್ವದ ಕವಲುಗಳು ಹರಡಿವೆ. ದಕ್ಷಿಣದಲ್ಲಿ ಜಾವಗಲ್ಲಿನಿಂದ ಗರುಡನಗಿರಿಯವರೆಗೆ ಇನ್ನೊಂದು ಶ್ರೇಣಿಯುಂಟು. ತೊಟ್ಟಿಲಿನಂತಿರುವ ಈ ತಾಲ್ಲೂಕಿನ ನಡುಭಾಗದಲ್ಲಿ ಈಶಾನ್ಯಾಭಿಮುಖವಾಗಿ ಹರಿಯುವ ನದಿಯೇ ವೇದಾವತಿ. ವೇದಾ ಮತ್ತು ಅವತಿ ನದಿಗಳಿಂದ ಕೂಡಿ ವೇದಾವತಿಯಾಗುವ ಈ ನದಿಯನ್ನು ಯಗಟಿಯ ಬಳಿ ಕೂಡುವ ಇನ್ನೊಂದು ತೊರೆಯ ಹೆಸರು ಜಾವಗಲ್ ಹಳ್ಳ. ವೇದಾ, ಅವತಿಗಳೆರಡೂ ಬಾಬಾಬುಡನ್ ಪರ್ವತದಲ್ಲಿ ಹುಟ್ಟುತ್ತವೆ. ವೇದಾನದಿ ಅಯ್ಯನಕೆರೆಯನ್ನೂ ಅವತಿ ನದಿ ಮದಗಕೆರೆಯನ್ನೂ ಕೂಡಿ ಮುಂದೆ ಸಾಗುತ್ತವೆ. ಈ ಎರಡೂ ವಿಷ್ಣುಸಮುದ್ರವೂ ಈ ಸುತ್ತಿನ ಅತಿದೊಡ್ಡ ಕೆರೆಗಳು. ವೇದ ಮತ್ತು ಅವತಿ ನದಿಗಳಿಗೆ ಕಟ್ಟೆಗಳನ್ನು ಕಟ್ಟಿ, ತಾಲ್ಲೂಕಿನಲ್ಲಿ ನೀರಾವರಿಯ ಬಲೆಯನ್ನೆ ಹೆಣೆಯಲಾಗಿದೆ. ಮೈಸೂರು ರಾಜ್ಯದಲ್ಲಿ ಹೆಚ್ಚು ಮಳೆ ಬೀಳುವ ಜಿಲ್ಲೆಯಾದ ಚಿಕ್ಕಮಗಳೂರಿನಲ್ಲಿ ಅತಿಕಡಿಮೆ ಮಳೆ ಪಡೆಯುವ ತಾಲ್ಲೂಕು ಕಡೂರು. ಇದರ ವಾರ್ಷಿಕ ಸರಾಸರಿ ಮಳೆ 583.7 ಮಿಮೀ. (ಶೃಂಗೇರಿ ಅತಿ ಹೆಚ್ಚು : 3760.8 ಮಿಮೀ.)

ತಾಲ್ಲೂಕಿನಲ್ಲಿ ಫಲವತ್ತಾದ ಕಪ್ಪುಮಣ್ಣಿನಿಂದ ಮರಳು ಮಣ್ಣಿನವರೆಗೆ ಹಲವು ಬಗೆಯ ನೆಲಗಳಿವೆ. ದಕ್ಷಿಣ ಪಶ್ಚಿಮಗಳಲ್ಲಿ ಒಳ್ಳೆಯ ಹೊಗೆಸೊಪ್ಪು ಬೆಳೆಯುತ್ತದೆ. ತಗ್ಗಿನ ಮರಳು ನೆಲದಲ್ಲಿ ತೆಂಗಿನ ಮರಗಳು ವಿಶೇಷ. ವಾಯುವ್ಯ ಭಾಗದಲ್ಲಿರುವ ಹೊಗರಿ ಬೆಟ್ಟದಲ್ಲಿ ಕಬ್ಬಿಣದ ಅದುರು ಸಿಗುತ್ತದೆ.

ಕಡೂರು ತಾಲ್ಲೂಕಿನಲ್ಲಿ ತರಿ, ಖುಷ್ಕಿ ಮತ್ತು ಬಾಗಾಯತು—ಈ ಮೂರು ವಿಧದ ಬೆಳೆಗಳೂ ಇವೆ. ಹಲವೆಡೆ ತೆಂಗು, ಬಾಳೆ, ಅಡಕೆ ಬೆಳೆಯುತ್ತಾರೆ. ಸಕ್ಕರೆಪಟ್ಟಣದ ಹಲಸು, ಬೀರೂರಿನ ಅಡಕೆ, ಅಣೆಗೆರೆಯ ಎಳನೀರು, ಎಮ್ಮೆದೊಡ್ಡಿಯ ಕಿತ್ತಳೆಹಣ್ಣು ಪ್ರಸಿದ್ಧವಾಗಿವೆ. ಕಡೂರು ಪಟ್ಟಣದ ಸುತ್ತಮುತ್ತ ಎಳ್ಳು, ಜೋಳ, ರಾಗಿ, ಮತ್ತು ಮೆಣಸಿನಕಾಯಿ ವಿಶೇಷವಾಗಿ ಬೆಳೆಯುತ್ತಾರೆ. ಮಿಕ್ಕ ಕಡೆ ಬೆಳೆಯುವ ಎಳ್ಳಿಗಿಂತ ಕಡೂರು ತಾಲ್ಲೂಕಿನಲ್ಲಿ ಬೆಳೆಯುವ ಎಳ್ಳಿನಲ್ಲಿ ಕೊಬ್ಬಿನ ಅಂಶ ಹೆಚ್ಚು.

ಕಡೂರು ತಾಲ್ಲೂಕಿನಲ್ಲಿ ಒಟ್ಟು 8 ಗ್ರಾಮಾಂತರ ಪಶುವೈದ್ಯ ಶಾಲೆಗಳಿವೆ. ಇಲ್ಲಿಯ ಅಭಿವೃದ್ಧಿ ಮಂಡಲಿಯವರೇ 9 ಆಯುರ್ವೇದ ಮತ್ತು ಒಂದು ಅಲೋಪತಿ ಔಷಧಾಲಯಗಳನ್ನು ತೆರೆದಿರುವರು. ಇದಲ್ಲದೆ ಸಾಕಷ್ಟು ಸರ್ಕಾರಿ ಆಸ್ಪತ್ರೆಗಳನ್ನೂ ಈ ತಾಲ್ಲೂಕು ಪಡೆದಿದೆ. ಇಲ್ಲಿ 247 ಪ್ರಾಥಮಿಕ ಶಾಲೆಗಳೂ ಹತ್ತು ಪ್ರೌಢಶಾಲೆಗಳೂ ಇವೆ. ಈಚೆಗೆ ಕಡೂರು ಪಟ್ಟಣದಲ್ಲಿ ಒಂದು ಕಾಲೇಜೂ ಸ್ಥಾಪಿತವಾಗಿದೆ.

**ತಾಲ್ಲೂಕಿನ ಪ್ರೇಕ್ಷಣೀಯ ಸ್ಥಳಗಳು :** ಈ ತಾಲ್ಲೂಕಿನ ಪ್ರೇಕ್ಷಣೀಯ ಸ್ಥಳಗಳು ಅನೇಕ. ಕನ್ನಡ ಜೈಮಿನಿಭಾರತ ರಚಿಸಿದ ಮಹಾಕವಿ ಲಕ್ಷ್ಮೀಶನ ಜನ್ಮಸ್ಥಳವೆಂದು ಹೇಳಲಾಗಿರುವ ದೇವನೂರು ಕಡೂರು ಪಟ್ಟಣಕ್ಕೆ ಸುಮಾರು 17 ಕಿಮೀ. ದೂರದಲ್ಲಿದೆ. ಲಕ್ಷ್ಮೀಶನೇ ಕಟ್ಟಿದನೆನ್ನಲಾದ ಕಾವ್ಯಮಂಟಪ, ಆತನದೆಂದು ಭಾವಿಸಲಾಗಿರುವ ಮನೆ, ಜೈಮಿನಿಭಾರತ ರಚಿಸಿದ ತಾಣ, ಆರಾಧ್ಯದೈವನಾದ–ಅವನೇ ಅರ್ಚಿಸಿದನೆಂಬ–ಶ್ರೀ ಲಕ್ಷ್ಮೀಕಾಂತಸ್ವಾಮಿಯ ಗುಡಿ—ಇವೆಲ್ಲವನ್ನೂ ಕಾಣಬಹುದು. ಜಗನ್ನಾಥವಿಜಯ ಗ್ರಂಥವನ್ನು ರಚಿಸಿದ ರುದ್ರಭಟ್ಟ ಮಹಾಕವಿಯೂ ಇಲ್ಲಿಯವನೇ. ಆತ ಪೂಜಿಸಿದ ಶ್ರೀ ಸಿದ್ಧೇಶ್ವರಸ್ವಾಮಿಯ ಗುಡಿ ಇಲ್ಲಿದೆ.

ಕಡೂರು ಪಟ್ಟಣದ ನೈಋತ್ಯಕ್ಕೆ 11 ಮೈ. ದೂರದಲ್ಲಿರುವ ಸಕ್ಕರೆಪಟ್ಟಣ ಇತಿಹಾಸ ಪ್ರಸಿದ್ಧ ಸ್ಥಳ. ಪ್ರತಿ ಶುಕ್ರವಾರವೂ ಸಂತೆ ನಡೆಯುವ ಈ ಊರಿನಲ್ಲಿ ವರ್ಷಕೊಮ್ಮೆ ವೈಶಾಖಮಾಸದಲ್ಲಿ ನಡೆಯುವ ರಂಗನಾಥನ ರಥೋತ್ಸವ ಈ ಸುತ್ತಿನಲ್ಲೆಲ್ಲ ಪ್ರಸಿದ್ಧವಾಗಿದೆ. ಇದು ಮಹಾಭಾರತದ ಕಾಲದಲ್ಲಿ ರುಕ್ಮಾಂಗದನ ರಾಜಧಾನಿಯಾಗಿತ್ತಂತೆ. ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಇದು ಐಗೂರು ಪಾಳೆಯಗಾರರ ಅಧೀನದಲ್ಲಿತ್ತು. ಮುಂದೆ ಇದು ಇಕ್ಕೇರಿಯ ನಾಯಕರ ವಶವಾಯಿತು. ವಿಜಯನಗರದ ಪತನವಾದ ಮೇಲೆ ಇಕ್ಕೇರಿಯ ನಾಯಕನ ಆಶ್ರಯ ಪಡೆದ ಶ್ರೀರಂಗರಾಯ ಸಕ್ಕರೆಪಟ್ಟಣದಲ್ಲಿ ನೆಲೆಸಿದನೆಂದೂ ಗೊತ್ತಾಗುತ್ತದೆ. 1690ರಲ್ಲಿ ಈ ಊರು ಮೈಸೂರಿನ ವಶವಾಯಿತು. ಇಲ್ಲಿಯ ವೀರಬಲ್ಲಾಳ ಚೌಕಿ ಪ್ರಸಿದ್ಧವಾದದ್ದು. ಇದು ದೊರೆ ವೀರಬಲ್ಲಾಳನ ನ್ಯಾಯಪೀಠವಾಗಿತ್ತಂತೆ. 12 ಅಡಿ ಉದ್ದಗಲದ ಚಚ್ಚೌಕನಾದ ಈ ಚಪ್ಪಟೆಕಲ್ಲನ್ನು ನಾಲ್ಕು ಕಂಬಗಳ ಮೇಲೆ ನಿಲ್ಲಿಸಲಾಗಿದೆ. ಹಳೆಯ ಫಿರಂಗಿ ಇನ್ನೊಂದು ಪ್ರೇಕ್ಷಣೀಯ ವಸ್ತು.

ಸಕ್ಕರೆಪಟ್ಟಣಕ್ಕೆ 4 ಮೈ. ದೂರದಲ್ಲಿರುವ ಅಯ್ಯನಕೆರೆಯನ್ನು ರುಕ್ಮಾಂಗದ ರಾಜ ಕಟ್ಟಿಸಿದನೆಂದು ಪ್ರತೀತಿ. ಇದು ಜಿಲ್ಲೆಯ ಅತ್ಯಂತ ದೊಡ್ಡ ಕೆರೆ. ವೇದಾ ನದಿ ಹರಿಯುವುದು ಈ ಮೂಲಕ. ಈ ಕೆರೆಯ ಬಗ್ಗೆ ಒಂದು ದಂತಕಥೆಯುಂಟು. ಒಮ್ಮೆ ಕೆರೆಯ ದಂಡೆ ಒಡೆಯುವ ಅಪಾಯವಿದ್ದಾಗ ಇದರ ದೇವತೆಯಿಂದ ನೀರಗಂಟಿಗೆ ಮುನ್ಸೂಚನೆ ಬರಲಾಗಿ, ತಾನು ಊರಿಗೆ ಹೋಗಿ ಸುದ್ದಿ ಮುಟ್ಟಿಸಿ ಹಿಂದಿರುಗಿ ಬರುವ ವರೆಗೂ ಕೆರೆ ಒಡೆಯಕೂಡದೆಂದು ದೇವತೆಯಿಂದ ಮಾತು ಪಡೆದು ಆತ ಸಕ್ಕರೆಪಟ್ಟಣದ ದೊರೆಗೆ ಈ ವಿಷಯ ತಿಳಿಸಿದನೆಂದೂ ನೀರುಗಂಟಿ ಹಿಂದಿರುಗುವ ವರೆಗೂ ಕೆರೆ ಒಡೆಯುವುದಿಲ್ಲವೆಂಬ ಭರವಸೆ ಇದ್ದುದರಿಂದ ಆತ ಎಂದೆಂದೂ ಅಲ್ಲಿಗೆ ಹಿಂದಿರುಗದಂತೆ ದೊರೆ ಅವನನ್ನು ಕೊಲ್ಲಿಸಿದನೆಂದೂ ಕೊಟ್ಟ ಮಾತಿಗೆ ದೇವತೆ ತಪ್ಪಿ ನಡೆಯುವಂತಿಲ್ಲವಾದ್ದರಿಂದ ಆಕೆ ಇನ್ನೂ ಆ ನೀರಗಂಟಿಯ ಬರವಿಗಾಗಿ ಕಾದಿದ್ದಾಳೆಂದೂ ಪ್ರತೀತಿ.

ಜನಹಿತಕ್ಕಾಗಿ ಜೀವವನ್ನೆ ತೆತ್ತನೆನ್ನಲಾದ ನೀರಗಂಟಿ ಹೊನ್ನ–ಬಿಲ್ಲನ ಸ್ಮಾರಕ ಸಕ್ಕರೆಪಟ್ಟಣದಲ್ಲಿದೆ. ಈಗಲೂ ಜನ ಅದನ್ನು ಪೂಜಿಸುತ್ತಾರೆ. ಹೊಯ್ಸಳರ ಕಾಲದಲ್ಲಿ ಈ ಕೆರೆಗೆ ದುರಸ್ತಿಕಾರ್ಯ ನಡೆಯಿತು. ಇದರ ಬಳಿ ಇರುವ ಬಲ್ಲಾಳೇಶ್ವರನ ದೇವಾಲಯದ ಹತ್ತಿರದ ಶಾಸನ ವೀರನರಸಿಂಹನ ಕಾಲದ್ದು (13ನೆಯ ಶತಮಾನ). ಅಯ್ಯನಕೆರೆಗೆ ಮಲ್ಲಪ್ಪನ ಕಾಲುವೆ, ಬಸವನ ಕಾಲುವೆ, ಊರು ಕಾಲುವೆ ಮತ್ತು ಕೆರೆ ಕಾಲುವೆ ಎಂಬ ನಾಲ್ಕು ಕಾಲುವೆಗಳಿವೆ.

ಅಯ್ಯನಕೆರೆಗೆ ಹತ್ತಿರದಲ್ಲಿ ಬಿಲ್ವಪತ್ರೆ ವನದ ನಡುವೆ ಇರುವ ಶ್ರೀ ಕಲ್ಲುಮರಡಿ ಒಂದು ಪುಣ್ಯಕ್ಷೇತ್ರ.

ದಕ್ಷಿಣಕಾಶಿ ಎಂದು ಪ್ರಸಿದ್ಧವಾಗಿರುವ ಹೇಮಗಿರಿ ಮಲ್ಲಿಕಾರ್ಜುನಸ್ವಾಮಿ ಬೆಟ್ಟ ಕಡೂರು ಪಟ್ಟಣದ ಹತ್ತಿರ ಇದೆ. ಪ್ರಕೃತಿ ಸೌಂದರ್ಯದ ಬೀಡಾದ ಇಲ್ಲಿ ವರ್ಷಕ್ಕೊಮ್ಮೆ ದನದ ಜಾತ್ರೆ ನಡೆಯುತ್ತದೆ.

ಕಡೂರು ಪಟ್ಟಣಕ್ಕೆ 13 ಮೈ. ದೂರವಿರುವ ವೇದ ಮತ್ತು ಅವತಿ ನದಿಗಳ ಸಂಗಮ ಸ್ಥಳವೂ ಒಂದು ರಮಣೀಯ ದೃಶ್ಯ. ಇದು ಇರುವುದು ಯಗಟಿ ಗ್ರಾಮದ ಬಳಿಯಲ್ಲಿ.

ಬ್ರಹ್ಮ, ವಿಷ್ಣು, ಮಹೇಶ್ವರರನ್ನು ಒಳಗೊಂಡು ಚೋಳರ ಕಾಲದಲ್ಲಿ ನಿರ್ಮಿತವಾದ ಪುರಾತನ ದೇವಸ್ಥಾನವಿರುವುದು ಕಡೂರು ತಾಲ್ಲೂಕಿನ ಹಿರೇನಲ್ಲೂರಿನಲ್ಲಿ. ಇದರ ಸುತ್ತಮುತ್ತ ಚೋಳರ ಕಲಾಪ್ರೌಢಿಮೆಗೆ ನಿದರ್ಶನಗಳಾದ ಅನೇಕ ದೇವಸ್ಥಾನಗಳುಂಟು.

ಮಹಾಭಾರತದ ಕಾಲದಲ್ಲಿ ಮತ್ಸ್ಯನಗರವೆಂದು ಖ್ಯಾತಿಗೊಂಡಿದ್ದ ಊರೇ ಇಂದು ಮಚ್ಚೇರಿ. ಪಾಂಡವರು ಕುಂತಿಯೊಂದಿಗೆ ಇಲ್ಲಿ ಕೊಂಚ ಕಾಲ ತಂಗಿದ್ದರೆಂಬುದು ಐತಿಹ್ಯ. ಕುಂತಿ ಅಂದು ಮಿಂದಳೆನ್ನಲಾದ ಹೊಳೆಗೆ ಕುಂತಿ ಹೊಳೆಯೆಂಬ ಹೆಸರಿದೆ. ಪವಾಡಪುರುಷರೆಂದು ಖ್ಯಾತಿ ಪಡೆದ ಶ್ರೀ ಸೋಮೇಶ್ವರ ಪ್ರಭುವರ್ಯರು ನಂದೀಶ್ವರರನ್ನು ಸಾಕ್ಷಾತ್ಕಾರ ಮಾಡಿಕೊಂಡ ಸ್ಥಳವಾದ ನಿರ್ವಾಣಸ್ವಾಮಿ ಬೆಟ್ಟ ಇನ್ನೊಂದು ಯಾತ್ರಾಸ್ಥಳ. ಕಡೂರು ತಾಲ್ಲೂಕಿನ ಆಸಂದಿ ಗ್ರಾಮ ಇತಿಹಾಸ ಪ್ರಸಿದ್ಧವಾದದ್ದು. ಗಂಗರ ಮತ್ತು ಹೊಯ್ಸಳರ ಕಾಲದಲ್ಲಿ ಇದು ಒಂದು ಮುಖ್ಯನಗರವಾಗಿತ್ತು. 8ನೆಯ ಶತಮಾನದಲ್ಲಿ ಇದನ್ನು ಶ್ರೀಪುರುಷನ ಮಗ ವಿಜಯಾದಿತ್ಯನೂ 12–13ನೆಯ ಶತಮಾನಗಳಲ್ಲಿ ಗಂಗಸಂತತಿಯ ಅರಸರೂ ಆಳುತ್ತಿದ್ದ ಈ ಸ್ಥಳದಲ್ಲಿ ಇತಿಹಾಸದ ಮೇಲೆ ಬೆಳಕು ಚೆಲ್ಲುವ ನೂರಾರು ಶಾಸನಗಳಿವೆ.

ಈ ತಾಲ್ಲೂಕಿನ ಗ್ರಾಮಾಂತರ ಪ್ರದೇಶಗಳು ವೀರಗಾಸೆ ಕುಣಿತ, ಕರಡಿಮಜಲು, ಕರಪಾಲ, ಕೀಲುಕುದುರೆ ನರ್ತನ—ಮುಂತಾದವಕ್ಕೆ ಹೆಸರಾಗಿವೆ. ಗಿರಿಯಾಪುರ, ಕಾವೇನಹಳ್ಳಿ ಮುಂತಾದ ಊರುಗಳ ಕಲಾವಿದರು ನೆರೆ ರಾಜ್ಯಗಳಲ್ಲಿ ಕೂಡ ತಮ್ಮ ಕಲಾ ಕೌಶಲವನ್ನು ಪ್ರದರ್ಶಿಸಿ ಮನ್ನಣೆ ಗಳಿಸಿದ್ದಾರೆ. (ಎಸ್.ಎಸ್.ಎ.)

**ಕಡೆತದ ಯಂತ್ರ :** ಪದಾರ್ಥವನ್ನು ಕಡೆಯಲು ಉಪಯೋಗಿಸುವ ಯಂತ್ರ; ಸಂರೂಪಣ (ಶೇಪಿಂಗ್) ಬೈರಿಗೆ ಮುಂತಾದ ಇನ್ನೂ ಅನೇಕ ಕಾರ್ಯಗಳನ್ನು ಮಾಡಬಲ್ಲುದು (ಲೇದ್). ಚರಕಿಯಂತ್ರ ಪರ್ಯಾಯ ಪದ. ಸಾಮಾನ್ಯ ಯಂತ್ರವನ್ನು ಪುನರಾವೃತ್ತಿಯ (ರೆಪಿಟಿಷನ್) ಕಾರ್ಯಗಳಿಗೆ ಉಪಯೋಗಿಸುವುದಿಲ್ಲ. ವಸ್ತುವನ್ನು ಎರಡು ಕೇಂದ್ರಗಳ ನಡುವೆ ಹಿಡಿದು ಅನೇಕ ಸುತ್ತು ಬಿಗಿದ ಹುರಿಯ ಚಲನೆಯಿಂದ ತಿರುಗಿಸಿ ಆಯುಧವನ್ನು ವಸ್ತುವಿಗೆ ಹಿಡಿದು ಕಡೆಯುವ ಕ್ರಿಯೆಯನ್ನು ಮೊದಲ ಕಾಲದಲ್ಲಿ ಜರುಗಿಸುತ್ತಿದ್ದರು. ಕ್ರಮೇಣ ವಿದ್ಯುತ್ ಮೋಟಾರಿನ ಸಹಾಯದಿಂದ ಚಲನೆಯನ್ನು ಪಡೆಯುವುದು ವಾಡಿಕೆಯಾಯಿತು. ಆಯುಧಗಳನ್ನು ಕೈಯಲ್ಲಿ ಹಿಡಿದರೂ ಅವನ್ನು ಒರಗಿನ ಮೇಲೆ ಆನಿಸುವಂತೆ ಸೂಕ್ತ ಏರ್ಪಾಡಾಯಿತು; ಅನೇಕ ಜವಗಳನ್ನು (ಸ್ಪೀಡ್ಸ್) ಪಡೆಯಲು ಮೆಟ್ಟಲುರಾಟೆಗಳು ಬಂದುವು (ಸ್ಟೆಪ್ಡ್ ಪುಲ್ಲೀಸ್). ಹೀಗೆಯೇ ಮುಂದುವರಿದು ಸ್ಕ್ರೂ ಕಡೆಯಲು ಮತ್ತು ಇತರ ಕ್ರಿಯೆಗಳನ್ನು ನಡೆಸಲು ಸೂಕ್ತ ಏರ್ಪಾಡಾಯಿತು. ಒಂದೇ ರೀತಿಯ ವಸ್ತುವನ್ನು ಹೆಚ್ಚಿನ ಸಂಖ್ಯೆಯಲ್ಲಿ ಹೆಚ್ಚು ಶೀಘ್ರವಾಗಿ ಹಾಗೂ ಕರಾರುವಾಕ್ಕಾಗಿ ತಯಾರಿಸಲು ಕ್ಯಾಪ್‌ಸ್ಟನ್, ಟರೆಟ್ ಶೀರ್ಷಿಕಗಳ ಜೋಡಣೆಯಾಯಿತು. ಅಂದರೆ ಕಡೆತಯಂತ್ರದ ವ್ಯಾಪ್ತಿ, ಅನುಕೂಲತೆ ಮತ್ತು ನಿಖರತೆ ಹೆಚ್ಚಿದಂತೆ ಅದರ ಸಂಕೀರ್ಣತೆಯೂ ಹೆಚ್ಚಿತು.

ಕಡೆತಯಂತ್ರದ ವಿವರಗಳು : ಕಡೆತಯಂತ್ರದ ಪೀಠವನ್ನು ಎರಕದ ಕಬ್ಬಿಣದಲ್ಲಿ ಹೊಯ್ದು ಅದರ ಮೇಲ್ಭಾಗವನ್ನು ನುಣುಪು ಮಾಡುತ್ತಾರೆ. ಪೀಠದ ಎಡಭಾಗದ ಕೊನೆಯಲ್ಲಿ ಅಚಲ ಶೀರ್ಷಕ ಮತ್ತು ಬಲತುದಿಯಲ್ಲಿ ಚಲಶೀರ್ಷಕವೆಂಬ ಭಾಗಗಳಿವೆ. ಇವುಗಳ ನಡುವೆ ಮುಂದೊಯ್ಯುವ ಸ್ಕ್ರೂವಿನ ಸಹಾಯದಿಂದ ಪೀಠದ ಉದ್ದಕ್ಕೂ ಚಲಿಸಬಲ್ಲ ಹಲ್ಲಣವೆಂಬ (ಸ್ಯಾಡಲ್) ಭಾಗವಿದೆ.

ಅಚಲ ಶೀರ್ಷಕ : ಇದರಲ್ಲಿ ಮೆಟ್ಟಲು ರಾಟೆಗಳು, ದಂಡ (ಸ್ಪಿಂಡಲ್) ಮುಂತಾದ ಭಾಗಗಳು ಇವೆ. ವಿದ್ಯುತ್ ಮೋಟಾರಿನಿಂದ ಬೆಲ್ಟಿನ ಮೂಲಕ ಮೆಟ್ಟಲುರಾಟೆ ಚಲನೆಯನ್ನು ಪಡೆದು ಅದನ್ನು ದಂಡಕ್ಕೆ ವರ್ಗಾಯಿಸುತ್ತದೆ. ಇದನ್ನು ಗ್ರಾಹಕ ತಟ್ಟೆ ಪಡೆದು, ದಂಡದ ಕೊನೆಗಿರುವ ಚಲಕೇಂದ್ರಕಕ್ಕೆ ಜೋಡಿಸಿರುವ ಕಾಯಕವಸ್ತುವನ್ನು ತಿರುಗಿಸುತ್ತದೆ. ಗ್ರಾಹಕ ತಟ್ಟೆಯ ಬದಲು ಚಕ್ಕನ್ನು ಉಪಯೋಗಿಸಬಹುದು.

ಚಲ ಶೀರ್ಷಕ : ಇದು ಪೀಠದ ಉದ್ದಕ್ಕೂ ಚಲಿಸಬಲ್ಲುದು. ಈ ಶೀರ್ಷಕ ಕಾಯಕ ವಸ್ತುವಿನ ಇನ್ನೊಂದು ತುದಿಯನ್ನು ಹಿಡಿದುಕೊಂಡರೂ ತಿರುಗುವಿಕೆಗೆ ಅಡ್ಡಿಮಾಡುವುದಿಲ್ಲ. ಕಡೆತಯಂತ್ರದಲ್ಲಿ ಚಲಶೀರ್ಷಕ ಕೈಬಿಡಲಾರದ ಭಾಗವೇನೂ ಅಲ್ಲ. ಇದರ ಅಕ್ಷವನ್ನು ಯಂತ್ರದ ಅಕ್ಷದಿಂದ ಸರಿಯುವಂತೆ ಮಾಡಿ ಸಂವಾಟ ಕಡೆಯುವಿಕೆಯನ್ನು ಮಾಡಬಹುದು.

ಹಲ್ಲಣ : ಜಾರು ಪೀಠ (ಕ್ರಾಸ್‌ಸ್ಲೈಡ್) ಮತ್ತು ಆಯುಧ ಪೀಠವನ್ನು ಒಳಗೊಂಡಿರುವ ಭಾಗ. ಜಾರುಪೀಠ ಯಂತ್ರ ಪೀಠಕ್ಕೆ ಅಡ್ಡಲಾಗಿ ಚಲಿಸಬಲ್ಲುದು. ಆಯುಧವನ್ನು ಅಗತ್ಯಕ್ಕೆ ತಕ್ಕಂತೆ ಕಾಯಕದ ಪದಾರ್ಥದೊಳಕ್ಕೆ ದಬ್ಬಲು ಅನುಕೂಲತೆ ಇದೆ. ಆಯುಧವನ್ನು ಯಾವುದೇ ಕೋನಕ್ಕಾದರೂ ಬದಲಾಯಿಸುವ




ಮರವನ್ನು ಕಡೆಯಲು ಉಪಯೋಗಿಸುವ ಯಂತ್ರ :
1 ಮೆಟ್ಟಲು ರಾಟೆ, 2 ಹಲ್ಲುಗಳಿರುವ ಚಲ ಕೇಂದ್ರಕ 3 ಆಯುಧ ಹಿಡಿಯಲು ಆಧಾರ (ಒರಗು), 4 ಅಚಲ ಕೇಂದ್ರಕ

ಏರ್ಪಾಡು ಉಂಟು. ಸ್ಕ್ರೂಗಳನ್ನು ಕಡೆಯಲು ಹಲ್ಲಣದಲ್ಲಿರುವ ಕ್ಲಚ್ಚನ್ನು ಮುಂದೊಯ್ಯುವ ಸ್ಕ್ರೂಗೆ ಒತ್ತಿದಾಗ ಹಲ್ಲಣಕ್ಕೆ ಸ್ವಯಂಚಾಲಿತ ಚಲನೆ ದೊರೆಯುತ್ತದೆ. ಕಡೆಯಬೇಕಾಗಿರುವ ಸ್ಕ್ರೂನಲ್ಲಿರಬೇಕಾದ ಹುರಿಗಳ (ತ್ರೆಡ್) ಸಂಖ್ಯೆಗನುಗುಣವಾಗಿ ಸೂಕ್ತ ಗೇರುಗಳನ್ನು ಜೋಡಿಸಬೇಕು. ಇವುಗಳ ಜೋಡಣೆಯಿರುವ ಭಾಗಕ್ಕೆ ಗೇರುಗಳ ಪೆಟ್ಟಿಗೆ ಎಂದು ಹೆಸರು. ಸಾಮಾನ್ಯ ಕಡೆತಯಂತ್ರದ ಕೆಲವು ಮುಖ್ಯ ಅಳತೆಗಳು ಎರಡು—1 ಕಡೆತಯಂತ್ರದ ಕೇಂದ್ರಗಳ ನಡುವೆ ಪಡೆಯಬಹುದಾದ ಗರಿಷ್ಠ ಅಂತರ, 2 ಕಡೆತ ಯಂತ್ರದ ಕೇಂದ್ರದಿಂದ ಪೀಠದ ಮೇಲ್ಭಾಗಕ್ಕಿರುವ ಅಂತರ. ಅಚಲ ಶೀರ್ಷಕದ ಕೆಳಗೆ ಪೀಠವನ್ನು ಕತ್ತರಿಸಿ ಇದನ್ನು ಹೆಚ್ಚಿಸಬಹುದು.

ವಿವಿಧ ಕಡೆತ ಯಂತ್ರಗಳ ಹೆಸರುಗಳು ಹೀಗಿವೆ—ಮರ ಕಡಿಯುವ ಯಂತ್ರ : ಸಾಮಾನ್ಯ ಯಂತ್ರ; ಜಾರು, ಪೃಷ್ಠಕ ಮತ್ತು ಸ್ಕ್ರೂ ಕಡೆಯುವ ಯಂತ್ರ : ಸ್ವಯಂಚಾಲಿತ ಯಂತ್ರ: ಟರೆಟ್ ಯಂತ್ರ: ಕ್ಯಾಪ್‌ಸ್ಟನ್ ಯಂತ್ರ. (ಕೆ.ಆರ್.ಎಂಒ.)

**ಕಡೆಯುವುದು :** ಅಚಲವಾಗಿರುವ ಆಯುಧದ (ಟೂಲ್) ಕರ್ತನಧಾರ (ಕಟಿಂಗ್ ಎಡ್ಜ್) ತಿರುಗುತ್ತಿರುವ ಒಂದು ವಸ್ತುವಿನ ಮೇಲೆ ಒತ್ತಡ ಹೇರಿದಾಗ ನಡೆಯುವ ಕ್ರಿಯೆ (ಟರ್ನಿಂಗ್). ಆದರೆ ತಿರುಗುತ್ತಿರುವ ಅನೇಕ ಆಯುಧಗಳ ಮೂಲಕ ತಿರುಗದೆ ಇರುವ ವೃತ್ತಾಕಾರದ ದಂಡವನ್ನೊಯ್ದು ನಡೆಸುವ ಅಕೇಂದ್ರಕ ಕಡೆಯುವಿಕೆ ಇದಕ್ಕೆ ಅಪವಾದವಾಗಿದೆ. ಕಡೆಯುವುದನ್ನು ಕಡೆಯುವ ಯಂತ್ರದ ನೆರವಿನಿಂದ ಒಂದು ವಸ್ತುವಿನ ವ್ಯಾಸವನ್ನು ತಗ್ಗಿಸುವ ಕ್ರಿಯೆ ಎಂದು ಸಹ ಹೇಳಬಹುದು. ಸಂರೂಪಣ (ಶೇಪಿಂಗ್), ಭ್ರಮಿಕರ್ತನ (ಮಿಲ್ಲಿಂಗ್) ಬೈರಿಗೆ ಕ್ರಿಯೆ (ಡ್ರಿಲ್ಲಿಂಗ್) ಮುಂತಾದವುಗಳಲ್ಲಿ ಚಲನೆ ಆವಶ್ಯಕ. ಸಮತಲನದಲ್ಲಿ (ಪ್ಲೇನಿಂಗ್) ಪರಿಭ್ರಮಣ ಚಲನೆಯಿಲ್ಲ. ಕಾಯಕ ವಸ್ತುವಿನ ಪರಿಭ್ರಮಣೆ ಕಡೆಯುವುದರಲ್ಲಿ ಮಾತ್ರ ಸಾಧ್ಯ. ಕಡೆಯುವುದು ಸಾಮಾನ್ಯವಾಗಿ ದಂಡ, ಕುಟ್ಟುವಸ್ತು (ಫೋರ್ಜಿಂಗ್ಸ್) ಅಥವಾ ಎರಕಗಳ




ಜಾರು ಪೃಷ್ಠಕ ಮತ್ತು ಸ್ಕ್ರೂ ಕತ್ತರಿಸುವ ಕಡೆತದಯಂತ್ರ :
1 ಮೆಟ್ಟಲು ರಾಟೆಗಳು, 2 ಹಲ್ಲಿನ ಚಕ್ರಗಳಿರುವ ಪೆಟ್ಟಿಗೆ, 3 ಅಚಲ ಶೀರ್ಷಕ, 4 ಚಲ ಕೇಂದ್ರಕ, 5 ಆಯುಧಪೀಠ, 6 ಜಾರುಪೀಠ, 7 ಆಯುಧದ ಜಾಗ, 8 ಹಲ್ಲಣ. 9 ಅಚಲಕೇಂದ್ರಕ. 10 ಸಡಿಲ ಶೀರ್ಷಕ (ಚಲ ಶೀರ್ಷಕ), 11 ಅಗ್ರತಾಸ್ಕ್ರೂ

ಹೊರವ್ಯಾಸದಲ್ಲಿ ನಡೆಸುವ ಕ್ರಿಯೆಯನ್ನು ಸೂಚಿಸುತ್ತದೆ. ಕಡೆಯಲು ಮುಖ್ಯವಾಗಿ ಕಾಯಕ ವಸ್ತುವನ್ನು ತಿರುಗಿಸಬಲ್ಲ ಮತ್ತು ಇದರ ಉದ್ದ ಹಾಗೂ ಅಡ್ಡಕ್ಕೆ ಚಲಿಸಬಲ್ಲ ಆಯುಧವನ್ನುಳ್ಳ ಸಾಧನಗಳು ಬೇಕು. ಕಡೆಯುವ ಕ್ರಿಯೆಯನ್ನು ನಡೆಸಲು ಕಾಯಕವಸ್ತುವಿನ ಕೊನೆಗಳೆರಡನ್ನೂ ಕೊರೆದು ಅವನ್ನು ಚಲ ಮತ್ತು ಅಚಲ ಕೇಂದ್ರಗಳೆಂಬ ಕಡೆಯುವ ಯಂತ್ರದ ಶಂಕ್ವಾಕೃತಿಯ ಭಾಗಗಳಿಗೆ ಜೋಡಿಸಬೇಕು. ವಿದ್ಯುತ್ ಮೋಟಾರಿನಿಂದ ಚಲಕೇಂದ್ರವನ್ನು ತಿರುಗಿಸಿದಾಗ ಅದಕ್ಕಂಟಿರುವ ಗ್ರಾಹಕತಟ್ಟೆ (ಕ್ಯಾಚ್ ಪ್ಲೇಟ್) ಸಹ ತಿರುಗಿ ಅದರ ಸಂಪರ್ಕಕ್ಕೆ ಬರುವ ವಾಹನವನ್ನೂ ತಿರುಗಿಸುತ್ತದೆ. ಈ ಯಂತ್ರಕ್ಕೆ ಜೋಡಿಸಿರುವ ಮೆಟ್ಟಿಲ ರಾಟೆಗಳು ಮತ್ತು ಜವ ತಗ್ಗಿಸುವ ಹಲ್ಲಿನ ಚಕ್ರಗಳಿಂದ (ಬ್ಯಾಕ್ ಗೇರ್ಸ್) ಕಾಯಕವಸ್ತುವನ್ನು ಇಚ್ಛಿತ ಜವದಲ್ಲಿ ತಿರುಗಿಸಬಹುದು. ಕಾಯಕವಸ್ತು ಬಹಳ ಉದ್ದವಾಗಿದ್ದರೆ ಆಯುಧದ ಒತ್ತಡ ಬಿದ್ದಾಗ ಬಗ್ಗುತ್ತದೆ. ಇದನ್ನು ತಪ್ಪಿಸಲು ಅಪರಿವರ್ತಿ ಆಧಾರವನ್ನು (ಸ್ಟೆಡಿ ರೆಸ್ಟ್) ಉಪಯೋಗಿಸಬೇಕು. ಇವುಗಳ ಬದಲು ಚಕ್ ಎಂಬ ಸಾಧನವನ್ನು ಉಪಯೋಗಿಸಿದರೆ ವಾಹಕ, ಅಚಲಕೇಂದ್ರಕ ಮುಂತಾದುವನ್ನು ಕೈಬಿಡಬಹುದು. ಕಡೆಯುವ ಯಂತ್ರದಲ್ಲಿ ಕಾಯಕವಸ್ತುವಿನ ಉದ್ದ ಮತ್ತು ಅಡ್ಡಕ್ಕೆ ಚಲಿಸಬಲ್ಲ ಆಯುಧ ಸ್ತಂಭವೆಂಬ (ಟೂಲ್ ಪೋಸ್ಟ್) ವ್ಯವಸ್ಥೆ ಇದೆ. ಇದರಲ್ಲಿ ಜೋಡಿಸಿರುವ ಆಯುಧವನ್ನು ಇಚ್ಛಿಸಿದ ಯಾವುದೇ ಕೋನಕ್ಕಾದರೂ ತಿರುಗಿಸಬಹುದು. ಕಾಯಕವಸ್ತುವನ್ನು ಕಡೆಯಬೇಕಾದರೆ ಆಯುಧ ಅದಕ್ಕಿಂತ ಗಟ್ಟಿ ಹಾಗೂ ದೃಢವಾಗಿ ಇರಬೇಕು. ಆದ್ದರಿಂದ ಆಯುಧವನ್ನು ವಿಶೇಷ ಉಕ್ಕುಗಳಿಂದ ತಯಾರಿಸುತ್ತಾರೆ. ಕಂಪನಗಳು ಮತ್ತು ಆಯುಧಸ್ತಂಭದ ಜಾರುವಿಕೆ ಇಲ್ಲದೆ ಆಯುಧದ ಕರ್ತನ ಕೋನಗಳೂ ಸರಿಯಾಗಿದ್ದರೆ ಅಧಿಕೋಷ್ಣತೆಯ ಉತ್ಪತ್ತಿಯನ್ನು ತಡೆಯಲು ಹಾಗೂ ಕಡೆಯುವುದರ ದಕ್ಷತೆಯನ್ನು ಹೆಚ್ಚಿಸಲು ಕೀಲೆಣ್ಣೆಯನ್ನು ಉಪಯೋಗಿಸುತ್ತಾರೆ. ಕೆಲವೊಮ್ಮೆ ವಸ್ತುಗಳ ಸಂವಾಟವು ಬೇಕಾಗುತ್ತದೆ. ಇದನ್ನು ಬಹುಪದತಾಣವೆಂಬ (ಕಾಂಪೌಂಡ್ ರೆಸ್ಟ್) ಸಾಧನವನ್ನು ಬೇಕಾದ ಕೋನಕ್ಕೆ ತಿರುಗಿಸಿ ಕಡೆಯುವುದರಿಂದ ಅಥವಾ ಅಚಲಕೇಂದ್ರಕವನ್ನು ಸ್ವಲ್ಪ ಪಕ್ಕಕ್ಕೆ ಜರುಗಿಸಿ ಕಡೆಯುವುದರಿಂದ ಅಥವಾ ರೂಪಿಸುವ ಆಯುಧದ ಉಪಯೋಗದಿಂದ ಅಥವಾ ಸಂವಾಟಕ್ಕೆಂದೇ ಇರುವ ಪ್ರತ್ಯೇಕವಾದ ಜೋಡಣೆಯಿಂದ ಪಡೆಯಬಹುದು. (ಕೆ.ಆರ್.ಎಂಬಿ.)

**ಕಡ್ಡಲೂರು :** ತಮಿಳು ನಾಡಿನ ದಕ್ಷಿಣ ಆರ್ಕಾಟ್ ಜಿಲ್ಲೆಯ ಕೇಂದ್ರ ಮತ್ತು ಪ್ರಮುಖ ಪಟ್ಟಣ, ಸಣ್ಣ ಬಂದರು. ಪಾಂಡಿಚೆರಿಯಿಂದ 15 ಮೈಲಿ ದೂರದಲ್ಲಿದೆ. ಇದರ ಬಳಿ ಎರಡು ನದಿಗಳು ಕೂಡುವುದರಿಂದ ಈ ಪಟ್ಟಣಕ್ಕೆ ಕೂಡಲೂರು ಅಥವಾ ಕಡ್ಡಲೂರು ಎಂಬ ಹೆಸರು ಬಂದಿದೆ. ಈ ಪಟ್ಟಣವನ್ನು ಹೊಸ ಮತ್ತು ಹಳೆಯ ನಗರಗಳೆಂದು ಎರಡು ಭಾಗಗಳಾಗಿ ವಿಂಗಡಿಸಬಹುದು. ಸರ್ಕಾರಿ ಕಚೇರಿಗಳೂ ಅಧಿಕಾರಿಗಳ ಮನೆಗಳೂ ಸೇಂಟ್ ಡೇವಿಡ್‌ನ ಹಳೆಯ ಕೋಟೆ ಮತ್ತು ಪ್ರಾಚೀನ ಶಿವದೇವಾಲಯಗಳೂ ಹೊಸ ನಗರದಲ್ಲಿವೆ. ಪೇಟೆ ಮತ್ತು ಬಂದರುಗಳು ಹಳೆಯ ನಗರದಲ್ಲಿವೆ. ನೆಲಗಡಲೆ ಇಲ್ಲಿಂದ ರಫ್ತಾಗುವ ಮುಖ್ಯ ವಸ್ತು. ಬಣ್ಣದ ಬಟ್ಟೆಗಳ ನೇಯ್ಗೆ, ಕಡಲೆಕಾಯಿ ಎಣ್ಣೆಯ ಉತ್ಪಾದನೆ, ಹತ್ತಿ–ರೇಷ್ಮೆಬಟ್ಟೆಯ ತಯಾರಿಕೆ ಇವು ಮುಖ್ಯ ಕೈಗಾರಿಕೆಗಳು. ಮಲಯದೊಂದಿಗೆ ವ್ಯಾಪಾರಸಂಪರ್ಕ ಹೊಂದಿದೆ. ಇಲ್ಲಿಯ ಫ್ರೆಂಚ್ ರೋಮನ್ ಇದು ಕೆಥೊಲಿಕ್ ಸಂಸ್ಥೆಯೊಂದು ದೊಡ್ಡ ಶಾಲೆಯೊಂದನ್ನು ನಡೆಸುತ್ತಿದೆ. ಬ್ರಿಟಿಷ್ ಈಸ್ಟ್ ಇಂಡಿಯ ಕಂಪನಿಯ ಆಗಮನದೊಂದಿಗೆ (1683) ಈ ಪಟ್ಟಣದ ಪ್ರಾಮುಖ್ಯ ಹೆಚ್ಚಿತೆನ್ನಬಹುದು. ಕಾರ್ಖಾನೆಗಳೂ ಕೋಠಿಗಳೂ ಬೆಳೆದುವು. ಬ್ರಿಟಿಷರು ತಮ್ಮ ನೆಲೆಯನ್ನು ಭದ್ರಮಾಡಿಕೊಳ್ಳುವ ಉದ್ದೇಶದಿಂದ ಇಲ್ಲೊಂದು ಕೋಟೆ ಕಟ್ಟಿದರು. 1720ರಲ್ಲಿ ಇದು ವಿಸ್ತಾರಗೊಂಡಿತು. ರಾಬರ್ಟ್ ಕ್ಲೈವ್ (ನೋಡಿ) ಕಡ್ಡಲೂರಿನ ಗವರ್ನರನಾದದ್ದು 1756ರಲ್ಲಿ. ಸಾಮ್ರಾಜ್ಯದಾಹಿ ಇಂಗ್ಲಿಷ್ ಮತ್ತು ಫ್ರೆಂಚ್ ಕಂಪನಿಗಳ ಬಡಿದಾಟದಲ್ಲಿ ಕಡ್ಡಲೂರು ಅನುಭವಿಸಿದ ಬವಣೆ ಅಷ್ಟಿಷ್ಟಲ್ಲ. 1758ರಲ್ಲಿ ಫ್ರೆಂಚರು ಈ ಪಟ್ಟಣವನ್ನು ವಶಪಡಿಸಿಕೊಂಡರು. 1760ರಲ್ಲಿ ಇದು ಅವರ ಕೈಬಿಟ್ಟಿತು ; 1782ರಲ್ಲಿ ಫ್ರೆಂಚರು ಮತ್ತೆ ಆಕ್ರಮಿಸಿಕೊಂಡರು ; 1785ರಲ್ಲಿ ಇಂಗ್ಲಿಷರಿಗೂ ಫ್ರೆಂಚರಿಗೂ ಶಾಂತಿ ಒಪ್ಪಂದವಾದಾಗ ಮತ್ತೆ ಇಂಗ್ಲಿಷರ ಕೈಗೆ ಬಂತು. ಗವರ್ನರರ ನಿವಾಸವಾಗಿದ್ದ ಭವನವೀಗ ಕಲೆಕ್ಟರನ ಅಧಿಕೃತನಿವಾಸವಾಗಿದೆ.

(ಎಸ್.ಎ.)

**ಕಡ್ಡಲೂರು ಮರಳು ಶಿಲೆಗಳು :** ಭಾರತದ ಪೂರ್ವತೀರದ ಉದ್ದಕ್ಕೂ ಹೆಚ್ಚು ಕಡಿಮೆ ಒಂದೇ ಸಮನೆ, ದಕ್ಷಿಣದಲ್ಲಿ ರಾಮೇಶ್ವರದಿಂದ ಹಿಡಿದು, ಪುದುಕೋಟೆ ತಂಜಾವೂರು, ಕಡ್ಡಲೂರು, ಪಾಂಡಿಚೆರಿ, ಮದ್ರಾಸು ಮತ್ತು ನೆಲ್ಲೂರುಗಳ ಮೂಲಕ ರಾಜಮಹೇಂದ್ರಿಯವರೆಗೆ ವಿಸ್ತರಿಸಿರುವ ಮರಳು ಶಿಲಾಸ್ತರಗಳು (ಕಡ್ಡಲೂರ್ ಸ್ಯಾಂಡ್ ಸ್ಟೋನ್ಸ್). ಇವು ದಕ್ಷಿಣ ಆರ್ಕಾಟು ಜಿಲ್ಲೆಯ ಕಡ್ಡಲೂರಿನ ಬಳಿ ವಿಶೇಷವಾಗಿ ಕಂಡುಬರುವುದರಿಂದ ಈ ಹೆಸರು ಬಂದಿದೆ. ತೀರಪ್ರದೇಶದಲ್ಲಿ ಅಲ್ಲಲ್ಲಿ ಇವುಗಳ ಮೇಲೆ ನದೀಮುಖಜಭೂಮಿಯ ಮರಳು ಮತ್ತು ಮೆಕ್ಕಲು ಮಣ್ಣು ಹರಡಿವೆ. ಕಡ್ಡಲೂರು ಸ್ತರಗಳು ಆರ್ಕೇಯನ್ ಶಿಲೆಗಳ ಮೇಲೋ ಗೊಂಡ್ವಾನ ಸ್ತರಗಳ ಮೇಲೋ ಶೇಖರವಾಗಿವೆ. ಪಾಂಡಿಚೆರಿ, ತಂಜಾವೂರು ಮತ್ತು ಪುದುಕೋಟೆಯ ಬಳಿ ಕೆಳ ಟರ್ಷಿಯರಿ ಯುಗದ ಸ್ತರಗಳ ಮೇಲೆ ಇವು ಶೇಖರವಾಗಿವೆಯೆಂದು ನಂಬಲಾಗಿದೆ. ಈ ಸ್ತರಗಳು ಪೂರ್ವ ಮತ್ತು ಆಗ್ನೇಯ ದಿಕ್ಕಿನಲ್ಲಿ ಸಮುದ್ರದ ಕಡೆಗೆ 4°–5° ಗಳಷ್ಟು ಇಳಿವೋರೆಯಾಗಿವೆ.

ಕಡ್ಡಲೂರು ಮರಳು ಶಿಲೆಗಳ ಮುಖ್ಯ ಶಿಲಾ ವಿಭಾಗಗಳೆಂದರೆ ನಯವಾದ ಕೆಂಪು ಮತ್ತು ಹಳದಿ ಬಣ್ಣದ ಕಬ್ಬಿಣಾಂಶದಿಂದ ಕೂಡಿದ ಮರಳು ಶಿಲೆಗಳು, ಗ್ರಿಟ್ ಶಿಲೆ, ಮರಳಿನಿಂದ ಕೂಡಿದ ಜೇಡಿಮಣ್ಣು, ಮುಂತಾದುವು. ಶಿಲಾವಿಧಗಳ ಆಧಾರಗಳಿಂದ ಈ ಸ್ತರಗಳು ನದಿ–ಸಾಗರ ಸಂಗಮ ಪ್ರದೇಶದಲ್ಲಿ ಶೇಖರವಾಗಿರುವಂತೆ ಕಂಡುಬರುತ್ತದೆ. ಇದಕ್ಕೆ ಅನುಕೂಲವಾದ ಪರಿಸ್ಥಿತಿಗಳು ಮಯೊಸೀನ್ ಮತ್ತು ಪ್ಲಿಯೊಸೀನ್ ಕಲ್ಪದ ಹಿಂದೂ ಮಹಾಸಾಗರದ ಅತಿಕ್ರಮಣದಿಂದ ಉಂಟಾದುವೆಂದು ನಂಬಲಾಗಿದೆ.

ಕಡ್ಡಲೂರು ಮರಳು ಶಿಲೆಗಳಲ್ಲಿ ಜೀವಾವಶೇಷಗಳು ವಿಶೇಷವಾಗಿ ಕಂಡುಬಂದಿಲ್ಲವಾದರೂ ಎಂಜಿಯೋಸ್ಪರ್ಮ್ ವರ್ಗದ ಸಸ್ಯಾವಶೇಷಗಳು ಅಲ್ಲಲ್ಲಿ ಸಿಕ್ಕಿವೆ. ಪಾಂಡಿಚೆರಿ ಬಳಿಯಿರುವ ತಿರುವಕ್ಕಾರೈ ಎಂಬಲ್ಲಿ 20 ಮೀಟರುಗಳಿಗಿಂತಲೂ ಉದ್ದವಾದ ಅನೇಕ ಭಾರಿ ಶಿಲಾವೃಕ್ಷಗಳನ್ನು (ಫಾಸ್ಸಿಲ್ ವುಡ್) ಕಾಣಬಹುದು. ಮೊಲಸ್ಕ ಗುಂಪಿಗೆ ಸೇರಿದ ಪ್ರಾಣಿಗಳ ಅವಶೇಷಗಳೂ ಸಹ ಅಲ್ಲಲ್ಲಿ ಕಂಡು ಬಂದಿವೆ. ಸಸ್ಯಾವಶೇಷಗಳ ಆಧಾರದ ಮೇಲೆ ಈ ಸ್ತರಗಳು ಭೂಚರಿತ್ರೆಯ ಮಯೊಸೀನ್–ಪ್ಲಿಯೊಸೀನ್ ಕಲ್ಪಕ್ಕೆ ಸೇರಿದವೆಂದು ನಿರ್ಧರಿಸಲಾಗಿದೆ.

ಕಾರೈಕುಡಿ, ನೈವೇಲಿ, ಕಡ್ಡಲೂರು ಮತ್ತು ಪಾಂಡಿಚೆರಿಗಳಲ್ಲಿನ ಈ ಸ್ತರಗಳಲ್ಲಿ ಆರ್ಟೀಸಿಯನ್ ಚಿಲುಮೆಗಳು ಕಂಡುಬಂದಿವೆ. ಅಲ್ಲದೆ ದಕ್ಷಿಣ ಆರ್ಕಾಟು ಮತ್ತು ಪಾಂಡಿಚೆರಿ ಬಳಿ ದಪ್ಪವಾದ ಲಿಗ್ನೈಟ್ ಪದರಗಳೂ ಇವೆ. ನೈವೇಲಿಯಲ್ಲಿ 30 ಮೀಟರುಗಳಷ್ಟು ದಪ್ಪದ ಲಿಗ್ನೈಟ್ ಸ್ತರ ಸುಮಾರು 250 ಚದರ ಕಿಲೋಮೀಟರುಗಳ ಪ್ರದೇಶದಲ್ಲಿ ವಿಸ್ತರಿಸಿರುವುದಾಗಿ ಇತ್ತೀಚಿನ ಭೂವೈಜ್ಞಾನಿಕ ಸಂಶೋಧನೆಗಳಿಂದ ಕಂಡು ಬಂದಿದೆ. ಇದರಿಂದ ಸುಮಾರು 200 ಕೋಟಿ ಟನ್ನುಗಳಷ್ಟು ಲಿಗ್ನೈಟ್ ಉತ್ಪತ್ತಿಯಾಗುವುದೆಂದು ನಿರ್ಧರಿಸಲಾಗಿದೆ. ಕಡ್ಡಲೂರು ಸ್ತರಗಳ ಕೆಳ ಟರ್ಷಿಯರಿ ಕಾಲದ ಸ್ತರಗಳಲ್ಲಿ ಕಲ್ಲೆಣ್ಣೆ ಸಿಕ್ಕುವ ಸೂಚನೆಗಳು ಸಹ ಇವೆ.

(ಎಂ.ವಿ.ಎ.ಎಸ್.)

**ಕಡ್ಡಾಯದ ಕೋರಿಕೆ:** ದೇಶರಕ್ಷಣೆಯಂಥ ಜರೂರು ಪರಿಸ್ಥಿತಿಯಲ್ಲಿ ಕೇಂದ್ರ ಅಥವಾ ರಾಜ್ಯ ಸರ್ಕಾರಗಳು ತಮ್ಮ ಸಾರ್ವಜನಿಕ ಉಪಯೋಗಕ್ಕೆ ಅವಶ್ಯವೆನಿಸಿದ ಆಹಾರ ಪದಾರ್ಥ, ಕಚ್ಚಾ ಸಾಮಗ್ರಿ, ಶಸ್ತ್ರಾಸ್ತ್ರ, ಹಡಗು, ವಿಮಾನ ಮುಂತಾದ ಚರಸ್ಥಿರ ಸ್ವತ್ತುಗಳನ್ನು ವ್ಯಕ್ತಿ, ಸಂಘ ಅಥವಾ ಸಂಸ್ಥೆಗಳಿಂದ ಪಡೆದುಕೊಳ್ಳಲು ನೀಡಿದ ಬೇಡಿಕೆಯ ನಿರೂಪ, ಕಡ್ಡಾಯದ ಆದೇಶ (ರಿಕ್ವಿಸಿಷನ್). ಭಾರತ ಸಂವಿಧಾನದ ಪ್ರಕಾರ ವ್ಯಕ್ತಿಗೆ ನೀಡಲಾದ ಮೂಲಭೂತ ಹಕ್ಕುಗಳ ಪೈಕಿ ಸ್ವತ್ತನ್ನು ಸಂಪಾದಿಸುವ; ಇಟ್ಟುಕೊಳ್ಳುವ, ಮಾರುವ ಹಕ್ಕೂ ಒಂದು. ಕಡ್ಡಾಯ ಕೋರಿಕೆಯಿಂದ ಈ ಹಕ್ಕಿನ ಉಲ್ಲಂಘನೆಯಾಗುವುದಾದರೂ ಜರೂರು ಪರಿಸ್ಥಿತಿಯಲ್ಲಿ ಇದು ಕಾನೂನುಬದ್ಧವೆನಿಸುತ್ತದೆ. ಸ್ವತ್ತಿನ ಕಡ್ಡಾಯ ಕೋರಿಕೆಗೂ ವಶೀಕರಣಕ್ಕೂ (ಅಕ್ವಿಸಿಷನ್) ಒಂದು ವ್ಯತ್ಯಾಸವುಂಟು. ಕಡ್ಡಾಯದ ಕೋರಿಕೆಯಲ್ಲಿ ಸ್ವತ್ತಿನ ಒಡೆತನದ ಹಕ್ಕನ್ನು ಸರ್ಕಾರಕ್ಕೆ ಬಿಟ್ಟುಕೊಡದೆ ಆಸ್ತಿಯ ಸ್ವಾಧೀನ ಮತ್ತು ಅನುಭೋಗಗಳನ್ನು ಮಾತ್ರ ವರ್ಗಾಯಿಸಬಹುದು. ಆದರೆ ವಶೀಕರಣದಲ್ಲಿ ಪರಿಹಾರ ಧನವನ್ನು ಪಡೆದು ಸ್ವತ್ತಿನ ಸಕಲ ಹಕ್ಕುಗಳನ್ನೂ ಸರ್ಕಾರದ ಹೆಸರಿಗೆ ವರ್ಗಾಯಿಸಬೇಕಾಗುತ್ತದೆ. (ಬಿ.ಪಿಯು.)

**ಕಡ್ಡಾಯ ಶಿಕ್ಷಣ :** ಒಂದು ನಿರ್ದಿಷ್ಟ ವಯೋವರ್ಗದ ಮಕ್ಕಳು ಶಾಲೆಗೆ ಹಾಜರಾಗುವ ಅಗತ್ಯವನ್ನು ರಾಜ್ಯಶಾಸನದ ಮೂಲಕ ಕಡ್ಡಾಯ ಮಾಡುವ ಒಂದು ವ್ಯವಸ್ಥೆ; ಹಾಗೆ ಮಕ್ಕಳು ಹಾಜರಾಗುವಂತೆ ಮಾಡುವ ಹೊಣೆಗಾರಿಕೆ ಸಾಮಾನ್ಯವಾಗಿ ತಂದೆತಾಯಿಗಳಿಗೂ ಪೋಷಕರಿಗೂ ಸಲ್ಲುತ್ತದೆ. ಜೊತೆಗೆ ಆ ಪದ್ಧತಿಯನ್ನು ಕಟ್ಟುನಿಟ್ಟಾಗಿ ಆಚರಣೆಗೆ ತರಲು ಶಿಕ್ಷಣಶಾಖೆ ಹಾಜರಾತಿ ಅಧಿಕಾರಿ ಮೊದಲಾದ ಅಗತ್ಯ ಸಿಬ್ಬಂದಿಯನ್ನು ಒದಗಿಸುತ್ತದೆ. ಶಾಲೆಗೆ ಹಾಜರಾಗಲಿ, ಆಗದಿರಲಿ, 12ನೆಯ ವರ್ಷದೊಳಗಾಗಿ ಮಕ್ಕಳಿಗೆ ಓದು ಬರೆಹ ಕಲಿಸಿರಬೇಕೆಂದು ಹಿಂದೆ ಸಮಾಜದಲ್ಲಿ ಪ್ರಚಾರದಲ್ಲಿದ್ದ ಒಂದು ಸಂಪ್ರದಾಯ; ಶಿಕ್ಷಣ ತನ್ನ ಹೊಣೆಗಾರಿಕೆಯಾಗಿರುವ ರಾಜ್ಯಸರ್ಕಾರ ನಿರ್ದಿಷ್ಟಗೊಳಿಸಿದ ವಯೋವರ್ಗದ ಮಕ್ಕಳಿಗೆಲ್ಲ ಶಿಕ್ಷಣಸೌಲಭ್ಯವನ್ನೊದಗಿಸಬೇಕೆಂಬ ರಾಜ್ಯಾಂಗ ರಚನೆ ಅಥವಾ ಕೇಂದ್ರ ಸರ್ಕಾರ ವಿಧಿಸಿರುವ ಒಂದು ಕಡ್ಡಾಯ ಕರ್ತವ್ಯ. (ಎಂ.ಪಿ.ತಿ.)

**ಕಡ್ಡಾಯ ಶಿಕ್ಷಣದ ಅವಶ್ಯಕತೆ:** ಒಂದು ದೇಶದ ಸಂಪತ್ತು ಅಲ್ಲಿನ ಧನಧಾನ್ಯವಲ್ಲ—ಆ ದೇಶದ ಮಕ್ಕಳು—ಅವರ ದೇಹ ಮತ್ತು ಮನಸ್ಸು. ಆದ್ದರಿಂದ ಒಂದು ದೇಶದ ಅಭಿವೃದ್ಧಿಗೆ ಅಲ್ಲಿನ ಮಕ್ಕಳ ಶಿಕ್ಷಣವೇ ಪ್ರಥಮ ಹಂತ. ಎಲ್ಲ ಮಕ್ಕಳಿಗೂ ಅಗತ್ಯವಾಗಿ ಶಿಕ್ಷಣ ದೊರೆತರೆ ಅವರಲ್ಲಿ ಹುದುಗಿರುವ ಶಕ್ತಿ ಸಾಮರ್ಥ್ಯಗಳು ಪೂರ್ಣವಾಗಿ ವಿಕಾಸಗೊಳ್ಳುತ್ತವೆ. ಆಗ ಅವರು ರಾಷ್ಟ್ರದ ಇನ್ನಿತರ ಸಂಪನ್ಮೂಲಗಳನ್ನು ಬಳಸಿಕೊಂಡು, ಜನಾಂಗದ ಸಂಸ್ಕೃತಿ ಸಂಪ್ರದಾಯಗಳನ್ನು ಅರಿತುಕೊಂಡು ಜೀವನ ಪ್ರಗತಿಯನ್ನು ಸಾಧಿಸಬಲ್ಲರು; ಎಲ್ಲರೂ ತಮ್ಮ ಹಕ್ಕುಬಾಧ್ಯತೆಗಳನ್ನು ಅರಿತುಕೊಂಡು ಪ್ರಜಾಪ್ರಭುತ್ವದಲ್ಲಿ ಯಶಸ್ವಿ ಪೌರರಾಗಿಯೊ ನಾಯಕರಾಗಿಯೊ ತಮ್ಮ ಕರ್ತವ್ಯಗಳನ್ನು ನಿರ್ವಹಿಸಲು ಶಕ್ತರಾಗುವರು. ಅಷ್ಟೇ ಅಲ್ಲ. ಅಂಥ ಶಿಕ್ಷಿತ ಜನತೆ ರಾಷ್ಟ್ರದ ಆರ್ಥಿಕ ಜೀವನದಲ್ಲಿ ಬುದ್ಧಿವಂತಿಕೆಯಿಂದ ಪಾತ್ರವಹಿಸುತ್ತ ರಾಷ್ಟ್ರದ ಐಕ್ಯ ಮತ್ತು ರಕ್ಷಣೆಗಳಿಗೂ ನೆರವಾಗಬಲ್ಲುದು. ಆದರೆ ಆ ಕಾರ್ಯಸಾಧನೆಗೆ ಪ್ರಥಮತಃ ಪ್ರತಿಯೊಬ್ಬನೂ ಪ್ರಾಥಮಿಕ ದರ್ಜೆಯ ಶಿಕ್ಷಣವನ್ನಾದರೂ ಮುಗಿಸಿರಬೇಕು. ಆದರ ಆಧಾರದ ಮೇಲೆ ಮುಂದೆ ವ್ಯಕ್ತಿ ಹೆಚ್ಚಿನ ಶಿಕ್ಷಣ ಸಾಧಿಸಿದಲ್ಲಿ ನಾಡು ಅಭಿವೃದ್ಧಿ ಮುಖದಲ್ಲಿ ಸಾಗುವಂತಾಗುತ್ತದೆ. ಪ್ರಾಥಮಿಕ ಶಿಕ್ಷಣದಿಂದ ಪಡೆದ ಅಕ್ಷರಜ್ಞಾನ ಮಾಸದೆ ಉಳಿದು ಫಲಕಾರಿಯಾಗಬೇಕಾದರೆ 4–5 ವರ್ಷಗಳ ವರೆಗಾದರೂ ಆ ಶಿಕ್ಷಣ ಎಲ್ಲರಿಗೂ ಕಡ್ಡಾಯವಾಗಿ ದೊರಕಬೇಕು. ಅಲ್ಲದೆ, ಅವರು ಮಧ್ಯೆ ಶಾಲೆಯನ್ನು ಬಿಟ್ಟರೆ ಕಲಿತದ್ದು ಮರೆತುಹೋಗಿ ಅವರೆಲ್ಲ ಮತ್ತೆ ಅನಕ್ಷರಸ್ಥರಾಗುವರು. ಶಿಕ್ಷಣಕ್ಕಾಗಿ ದುಡಿದ ಜನ, ಧನ ಎಲ್ಲ ವ್ಯರ್ಥವಾಗುವುದು. ಅದನ್ನು ತಪ್ಪಿಸಿ, ಮುಂದಿನ ಜನತೆ ಅಕ್ಷರಸ್ಥರೂ ವಿದ್ಯಾವಂತರೂ ಆಗಿದ್ದು ರಾಷ್ಟ್ರದ ಹಿತ ಮತ್ತು ಭದ್ರತೆಗೆ ನೆರವಾಗುವಂತೆ ನೋಡಿಕೊಳ್ಳಲೆಂದೇ ಕಡ್ಡಾಯ ಶಿಕ್ಷಣ ಆಚರಣೆಗೆ ಬರುತ್ತಿರುವುದು.

**ಕಡ್ಡಾಯ ಶಿಕ್ಷಣವನ್ನು ಮೊದಲು ಆಚರಣೆಗೆ ತಂದ ಜನಾಂಗಗಳು :** ದೇಶದ ಪ್ರಗತಿ ಮತ್ತು ರಕ್ಷಣೆ ಕಡ್ಡಾಯ ಶಿಕ್ಷಣವನ್ನು ಅವಲಂಬಿಸಿರುವ ಅಂಶವನ್ನು ಮೊಟ್ಟಮೊದಲು ಅರಿತುಕೊಂಡ ಕೀರ್ತಿ ಜರ್ಮನಿಗೆ ಸಲ್ಲುತ್ತದೆ. 1763ರಲ್ಲೇ ಅಲ್ಲಿನ (ಪ್ರಷ್ಯದ) ಸರ್ಕಾರ ಆ ತತ್ತ್ವದೃಷ್ಟಿಯನ್ನು ಒಪ್ಪಿಕೊಂಡು ಕಾಲಕ್ರಮದಲ್ಲಿ 14ನೆಯ ವಯಸ್ಸಿನ ವರೆಗಿನ ಎಲ್ಲ ಮಕ್ಕಳಿಗೂ ಶಿಕ್ಷಣವನ್ನು ಕಡ್ಡಾಯ ಮಾಡಿತು. ಅನಂತರ ಅದನ್ನು 16ನೆಯ ವಯಸ್ಸಿನ ತನಕ ವಿಸ್ತರಿಸಿತಲ್ಲದೆ 18ನೆಯ ವಯಸ್ಸಿನ ವರೆಗೆ ಭಾಗಶಃ ಶಿಕ್ಷಣವನ್ನೂ ಕಡ್ಡಾಯ ಮಾಡಿತು. ಜರ್ಮನಿಯ ಮೇಲ್ಪಂಕ್ತಿಯನ್ನನುಸರಿಸಿ ಜಪಾನ್ 1872ರಲ್ಲಿ ರಾಜ್ಯದ ಎಲ್ಲ ಮಕ್ಕಳೂ 6 ವರ್ಷಗಳ ಕಡ್ಡಾಯ ಶಿಕ್ಷಣ ಪಡೆಯಬೇಕೆಂದು ಶಾಸನ ಮಾಡಿತು. 1945ರಲ್ಲಿ ಅದನ್ನು 9 ವರ್ಷಗಳ ಕಾಲಾವಧಿಗೆ ವಿಸ್ತರಿಸಿತು. ಈ ಶತಮಾನದ ಪ್ರಥಮಾರ್ಧದ ವೇಳೆಗೆ ಆ ವಯೋಮಾನದ ಮಕ್ಕಳಲ್ಲಿ ಸೇ.99.5ರಷ್ಟು ಆ ಯೋಜನೆಯ ವ್ಯಾಪ್ತಿಗೆ ಬರುವಂತಾಯಿತು. ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತಂದ ಜರ್ಮನಿ ಬಹುಬೇಗ ಅಭಿವೃದ್ಧಿ ಸಾಧಿಸಿದ್ದನ್ನು ಕಂಡು ಇತರ ಪಾಶ್ಚಾತ್ಯ ರಾಷ್ಟ್ರಗಳೂ ಆ ಮುಖವಾಗಿ ಹೆಜ್ಜೆಯಿಡಲಾರಂಭಿಸಿದುವು. ಇಂಗ್ಲೆಂಡು 1880ರಿಂದ 6 ವರ್ಷಗಳ ಪ್ರಾಥಮಿಕ ಶಿಕ್ಷಣವನ್ನು ಕಡ್ಡಾಯ ಮಾಡಿತು. ಅನಂತರ ಆ ಯೋಜನೆಯನ್ನು 14ನೆಯ ವಯಸ್ಸಿನ ವರೆಗೂ ವಿಸ್ತರಿಸಿತು. 1939ರಲ್ಲಿ ಅದನ್ನು 15ನೆಯ ವಯಸ್ಸಿಗೆ ಹೆಚ್ಚಿಸಲು ಯತ್ನಿಸಿತು. ಆ ವೇಳೆಗೆ ಯುದ್ಧ ಆರಂಭವಾಗಿ ಆ ಕಾರ್ಯವನ್ನು 1944ರ ವರೆಗೂ ಮುಂದೂಡಬೇಕಾಯಿತು. ಸದ್ಯದಲ್ಲಿ ಆ ವಯೋಮಿತಿಯನ್ನು 16ನೆಯ ವಯಸ್ಸಿಗೆ ವಿಸ್ತರಿಸುವ ಯತ್ನ ನಡೆದಿದೆ. ಫ್ರಾನ್ಸ್ 1882ರಲ್ಲಿ 6 ವರ್ಷ ಕಾಲದ ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತಂದಿತು. 1936ರಲ್ಲಿ ಅದರ ಅವಧಿಯನ್ನು 14ನೆಯ ವರ್ಷದವರೆಗೆ ವಿಸ್ತರಿಸಿತು. 1959ರಲ್ಲಿ ಮತ್ತೆ ಅದನ್ನು 16ನೆಯ ವಯಸ್ಸಿನವರೆಗೆ ವಿಸ್ತರಿಸಿತು. ಅಮೆರಿಕ ಸಂಯುಕ್ತ ಸಂಸ್ಥಾನದಲ್ಲಿ ಕಳೆದ ಶತಮಾನದ ಕೊನೆ ಕೊನೆಯ ಹೊತ್ತಿಗೆ ಎಲ್ಲ ರಾಜ್ಯಗಳೂ 6 ವರ್ಷಗಳ ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತಂದುವು. ಆ ಕಾಲಾವಧಿ ಈ ಶತಮಾನದಲ್ಲಿ ಬೇರೆ ಬೇರೆ ರಾಜ್ಯಗಳಲ್ಲಿ ಬೇರೆ ಬೇರೆ ವಯೋಮಿತಿಯವರೆಗೆ ಹೆಚ್ಚುತ್ತ ಬಂದಿದೆ.

ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತರುವುದರಲ್ಲಿ ಜರ್ಮನಿ ಪಾಶ್ಚಾತ್ಯ ರಾಷ್ಟ್ರಗಳಿಗೆ ಮೇಲ್ಪಂಕ್ತಿಯಾದಂತೆ ಪ್ರಾಚ್ಯದೇಶಗಳಿಗೆ ಜಪಾನ್ ಮೇಲ್ಪಂಕ್ತಿ ಯಾಯಿತು. ಕಮ್ಯೂನಿಸ್ಟ್ ಸರ್ಕಾರದ ನೇತೃತ್ವದಲ್ಲಿ ರಷ್ಯ ಒಂದು ಕಡೆ ಕಡ್ಡಾಯ ಶಿಕ್ಷಣವನ್ನೂ ಇನ್ನೊಂದು ಕಡೆ ವಯಸ್ಕರ ಶಿಕ್ಷಣವನ್ನೂ ಏಕಕಾಲದಲ್ಲಿ ಆರಂಭ ಮಾಡಿತು. 1954ರ ವೇಳೆಗೆ ರಾಷ್ಟ್ರಾದ್ಯಂತ 7ರಿಂದ 15 ವರ್ಷದವರೆಗಿನ ಎಂದರೆ 8 ವರ್ಷಗಳ ಕಾಲಾವಧಿಯ ಶಿಕ್ಷಣವನ್ನು ಕಡ್ಡಾಯ ಮಾಡಿತು. ಚೀನವೂ 1937ರಲ್ಲಿ ರಾಷ್ಟ್ರದ 6–11ರ ವಯೋಮಿತಿಯ ಮಕ್ಕಳಲ್ಲಿ ಸುಮಾರು ಸೇ. 45ರಷ್ಟನ್ನು ಶಾಲೆಗೆ ಸೇರುವಂತೆ ಮಾಡಿ ಕ್ರಮಕ್ರಮವಾಗಿ ಹೆಚ್ಚಿನ ಸಂಖ್ಯೆಯ ಮಕ್ಕಳನ್ನು ಕಡ್ಡಾಯ ಶಿಕ್ಷಣ ಯೋಜನೆಗೆ ಒಳಪಡಿಸಿದುದಲ್ಲದೆ ಅದರ ಅವಧಿಯನ್ನೂ ಹೆಚ್ಚಿಸುತ್ತ ಬಂದಿದೆ.

**ಭಾರತದಲ್ಲಿ ಕಡ್ಡಾಯ ಶಿಕ್ಷಣ :** 1947ರ ವರೆಗೂ ಇದ್ದ ಬ್ರಿಟಿಷ್ ಪ್ರಭುತ್ವ ಕಡ್ಡಾಯ ಶಿಕ್ಷಣದ ಕಡೆ ಗಮನ ಕೊಡಲಿಲ್ಲ. ಈ ಶತಮಾನದ ಆದಿಯಿಂದಲೂ ರಾಷ್ಟ್ರದ ನಾಯಕರು ಆ ಮುಖವಾಗಿ ಯತ್ನವನ್ನೇನೊ ನಡೆಸುತ್ತ ಬಂದಿದ್ದರು. ಗೋಖಲೆಯವರು 1911ರಲ್ಲಿ ಇಡೀ ಭಾರತದಲ್ಲಿ ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತರಬೇಕೆಂದು ಕೇಂದ್ರ ಶಾಸನಸಭೆಯಲ್ಲಿ ಮಸೂದೆಯೊಂದನ್ನು ಮಂಡಿಸಿದ್ದರು. ಆರ್ಥಿಕ ಕಾರಣಗಳಿಂದಾಗಿ ಸರ್ಕಾರ ಅದನ್ನು ಅಂಗೀಕರಿಸಲಿಲ್ಲ. ಅನಂತರ 1937ರಲ್ಲಿ ರೂಪುಗೊಂಡ ಗಾಂಧೀಜಿಯವರ ವರ್ಧಾ ಶಿಕ್ಷಣ ಯೋಜನೆಯೂ 7ರಿಂದ 14 ವರ್ಷದವರೆಗಿನ ಎಲ್ಲ ಮಕ್ಕಳಿಗೂ ಉಚಿತ ಕಡ್ಡಾಯ ಶಿಕ್ಷಣವನ್ನು ಪ್ರತಿಪಾದಿಸಿತು. ಅನಂತರ 1944ರಲ್ಲಿ ರಚಿಸಿದ ಸಾರ್ಜಂಟ್ ಸಮಿತಿಯೂ ರಾಷ್ಟ್ರಾದ್ಯಂತ 14ನೆಯ ವಯಸ್ಸಿನವರೆಗೂ ಸಾರ್ವತ್ರಿಕವಾಗಿ ಕಡ್ಡಾಯ ಶಿಕ್ಷಣವನ್ನು ಸಲಹೆ ಮಾಡಿ ಅದನ್ನು ಹಂತಹಂತಗಳಲ್ಲಿ ಆಚರಣೆಗೆ ತರಲು 40 ವರ್ಷಗಳ ಒಂದು ಯೋಜನೆಯನ್ನು ರೂಪಿಸಿತು. ರಾಷ್ಟ್ರದ ನಾಯಕರನೇಕರು ಅದು ಕೇವಲ ಕಣ್ಣೊರಸುವ ಯೋಜನೆಯೆಂದು ತಿರಸ್ಕರಿಸಿದರು. ಅನಂತರ ರಾಷ್ಟ್ರದ ಪ್ರಗತಿಗೆ ಕಡ್ಡಾಯ ಶಿಕ್ಷಣದ ಅಗತ್ಯವನ್ನು ಮನಗಂಡು ಸ್ವತಂತ್ರ ಭಾರತ ಅದನ್ನು ಆಚರಣೆಗೆ ತರಲು ಅಲ್ಲಲ್ಲಿ ಪ್ರಯತ್ನ ನಡೆಸಿತು. 1950ರಲ್ಲಿ ರೂಪುಗೊಂಡ ರಾಜ್ಯಾಂಗ ರಚನೆಯಲ್ಲಿ ಎಲ್ಲ ರಾಜ್ಯಗಳೂ ಹತ್ತು ವರ್ಷಗಳ ಅವಧಿಯಲ್ಲಿ 14ನೆಯ ವಯಸ್ಸಿನವರೆಗಿನ ಎಲ್ಲ ಮಕ್ಕಳಿಗೂ ಉಚಿತ ಕಡ್ಡಾಯ ಶಿಕ್ಷಣದ ಸೌಲಭ್ಯವೊದಗಿಸಬೇಕೆಂದು ನಿರ್ದಿಷ್ಟ ಆದೇಶವನ್ನು (ಆರ್ಟಿಕಲ್ 45) ಅಳವಡಿಸಲಾಯಿತು. ಆ ಸುಮಾರಿಗೆ ಭಾರತ ದೇಶದ ವಿಭಜನೆಯ ಫಲವಾಗಿ ಉದ್ಭವಿಸಿದ ನಿರ್ವಸತಿಕರು, ಆಹಾರಾಭಾವ ಇತ್ಯಾದಿ ಅನೇಕ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂತು. ಜೊತೆಗೆ ಆಗ ತಾನೆ ಆರಂಭಿಸಲಾಗಿದ್ದ ಪಂಚವಾರ್ಷಿಕ ಯೋಜನೆಗೆ ಹಣ ಒದಗಿಸಬೇಕಾಯಿತು. ರಾಷ್ಟ್ರದ ಔದ್ಯೋಗೀಕರಣಕ್ಕೆ ಅಗತ್ಯವಾದ ತಾಂತ್ರಿಕ ಜನಶಕ್ತಿಯನ್ನು ಹೆಚ್ಚಿಸಲು ತಾಂತ್ರಿಕ ಮತ್ತು ಔದ್ಯೋಗಿಕ ಶಿಕ್ಷಣದ ಕಡೆ ಗಮನ ಕೊಡಬೇಕಾಯಿತು. ಪರದೇಶಗಳಿಂದ ಯಂತ್ರೋಪಕರಣಗಳನ್ನು ಕೊಳ್ಳಲು ಅಗಾಧ ಪ್ರಮಾಣದಲ್ಲಿ ಹಣವನ್ನು ಹೂಡಬೇಕಾಗಿ ಬಂತು. ಇವೆಲ್ಲ ಕಾರಣಗಳಿಂದ ಕೇಂದ್ರ ಸರ್ಕಾರ ಕಡ್ಡಾಯ ಶಿಕ್ಷಣಕ್ಕಾಗಿ ತಕ್ಕಷ್ಟು ಹಣ ಒದಗಿಸಲಾರದಾಯಿತು. ರಾಜ್ಯಾಂಗ ರಚನೆ ತಮಗೆ ನಿರ್ದೇಶಿಸಿದ ಆ ಕಾರ್ಯವನ್ನು ನಿರ್ವಹಿಸಲು ತ್ರಿಕರಣಪೂರ್ವಕವಾಗಿ ರಾಜ್ಯಸರ್ಕಾರಗಳು ಯತ್ನಿಸಿದರೂ ಅದನ್ನು ಆಚರಣೆಗೆ ತರುವುದು ಅಸಾಧ್ಯವಾಯಿತು. ಸಾಲದ್ದಕ್ಕೆ ಜನಸಂಖ್ಯೆಯೂ ತೀವ್ರಗತಿಯಲ್ಲಿ ಹೆಚ್ಚಿ, ಕಡ್ಡಾಯ ಶಿಕ್ಷಣದ ವಯೋಮಿತಿಯ ಮಕ್ಕಳ ಸಂಖ್ಯೆ ಅಧಿಕವಾಗುತ್ತ ಬಂತು. ಅವರಿಗೆಲ್ಲ ಉಚಿತ ಪ್ರಾಥಮಿಕ ಶಿಕ್ಷಣ ದೊರಕಿಸಲು ಧನದ ಅಭಾವ, ಕಟ್ಟಡ ಮತ್ತು ಅಧ್ಯಾಪಕರ ಕೊರತೆ—ಇವೆಲ್ಲ ರಾಜ್ಯಗಳ ಯತ್ನಕ್ಕೆ ಅಡ್ಡಿಯಾಗಿ ನಿಂತುವು. ಅನಕ್ಷರಸ್ಥ ತಂದೆತಾಯಿಗಳಿಗೆ ತಮ್ಮ ಮಕ್ಕಳ ಶಿಕ್ಷಣದ ಬಗ್ಗೆ ಇದ್ದ ನಿರಾಸಕ್ತಿ, ಅವರ ಬಡತನ, ಹೆಣ್ಣುಮಕ್ಕಳನ್ನು ಶಾಲೆಗೆ ಕಳಿಸದ ಸಂಪ್ರದಾಯ—ಇವೆಲ್ಲ ಕಾರಣಗಳಿಂದ ಯೋಜನೆಯನ್ನು ಹಾಗೂ ಹೀಗೂ ಆಚರಣೆಗೆ ತಂದ ರಾಜ್ಯಗಳಲ್ಲೂ ತಕ್ಕಷ್ಟು ಯಶಸ್ಸು ಸಾಧಿಸಲಾಗಲಿಲ್ಲ. ರಾಜ್ಯಾಂಗದಲ್ಲಿ ಉಲ್ಲೇಖವಾಗಿದ್ದ ಆಶಯ ಈಡೇರಲಾರದಾಯಿತು. ಇದನ್ನು ಕಂಡ ರಾಷ್ಟ್ರ 1960ರಿಂದ ಮತ್ತೆ ಹೆಚ್ಚಿನ ದೃಢತೆಯಿಂದ ಆ ಕಾರ್ಯ ಸಾಧಿಸಲು ಯತ್ನಿಸಿತು. ಪ್ರತಿ ಜಿಲ್ಲೆಯಲ್ಲೂ ಬರುವ ವರ್ಷ ಶಾಲೆಗೆ ಸೇರಬೇಕಾದ ಮಕ್ಕಳ ಸಂಖ್ಯೆ, ಅದಕ್ಕಾಗಿ ಬೇಕಾಗುವ ಕಟ್ಟಡಗಳು, ಅಧ್ಯಾಪಕರು ಇತ್ಯಾದಿ ಅಂಶಗಳನ್ನೊಳಗೊಂಡಂತೆ ಎಲ್ಲ ರಾಜ್ಯಗಳಲ್ಲೂ ಸಮೀಕ್ಷೆ ನಡೆಸಲಾಯಿತು. ಅದಕ್ಕೆ ಅಗತ್ಯವಾದ ಧನಸಹಾಯವನ್ನು ಕೇಂದ್ರ ಸರ್ಕಾರ ಒದಗಿಸಿತು. 14ನೆಯ ವಯಸ್ಸಿನ ವರೆಗಿನ ಶಿಕ್ಷಣವನ್ನು ಅಂತಿಮವಾಗಿ ಕಡ್ಡಾಯ ಮಾಡುವ ಉದ್ದೇಶವನ್ನು ಮುಂದಿಟ್ಟುಕೊಂಡಿದ್ದರೂ ಸದ್ಯಕ್ಕೆ ಅನೇಕ ರಾಜ್ಯಗಳು 5 ಅಥವಾ 6 ರಿಂದ 11ನೆಯ ವರ್ಷದ ವರೆಗಿನ ಶಿಕ್ಷಣವನ್ನು ಮಾತ್ರ ಕಡ್ಡಾಯ ಮಾಡಲು ಉಪಕ್ರಮಿಸಿದುವು.

**ಕಡ್ಡಾಯ ಶಿಕ್ಷಣಕ್ಕೆ ಸಂಬಂಧಿಸಿದ ಸಮಸ್ಯೆಗಳು :** ರಾಷ್ಟ್ರಾದ್ಯಂತ ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತರುವಾಗ ಹಲವಾರು ಎಡರುತೊಡರುಗಳೂ ಸಮಸ್ಯೆಗಳೂ ಅಡ್ಡ ಬರುತ್ತವೆ. ಅವುಗಳಲ್ಲಿ ಮುಖ್ಯವಾದವನ್ನು ಇಲ್ಲಿ ಪರಿಶೀಲಿಸಬಹುದು.

1 ಕುಟುಂಬ ಜೀವನದ ಕಷ್ಟಕಾರ್ಪಣ್ಯಗಳು : ತಂದೆತಾಯಿಗಳ ಆರ್ಥಿಕ ದುಸ್ಥಿತಿ ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತರುವಾಗ ಬರುವ ಮೊದಲ ಅಡಚಣೆ. ಗ್ರಾಮಾಂತರ ಪ್ರದೇಶಗಳಲ್ಲಿ ತಂದೆತಾಯಿಗಳು ಮನೆಗೆಲಸಕ್ಕೂ ಜೀವನೋಪಾಯದ ಕಸಬುಗಳಿಗೂ ಮಕ್ಕಳ ಸೇವೆಯನ್ನು ಬಳಸಿಕೊಳ್ಳುವುದು ಸ್ವಾಭಾವಿಕ. ಮಕ್ಕಳ ಹಿತದೃಷ್ಟಿಯಿಂದ ಇದು ಉಚಿತವಲ್ಲ. ಆ ಬಗ್ಗೆ ರಾಜ್ಯ ಶಾಸನ ಮಾಡಿದರೂ ಅದು ತಪ್ಪುವುದಿಲ್ಲ. ತಮಗೆ ಎಷ್ಟೇ ಕಷ್ಟಗಳಿದ್ದರೂ ತಮ್ಮ ಮಕ್ಕಳನ್ನು ಶಾಲೆಗೆ ಕಳಿಸ

ಬೇಕೆಂಬ ಪ್ರಜ್ಞೆ ತಂದೆತಾಯಿಗಳಲ್ಲಿ ಮೂಡಬೇಕು. ಆ ಬಗ್ಗೆ ಪ್ರಚಾರ, ಪ್ರೋತ್ಸಾಹ ಅನಿವಾರ್ಯವಾದಾಗ ದಂಡ, ಇವೆಲ್ಲ ಅಗತ್ಯವಾಗುತ್ತವೆ. ಆದರೂ ಮಕ್ಕಳನ್ನು ಶಾಲೆಗೆ ಕಳಿಸಲಾರದಂಥ ಆರ್ಥಿಕ ಅಥವಾ ಇನ್ನಿತರ ಕೌಟುಂಬಿಕ ಸ್ಥಿತಿ ಇರಬಹುದಾದ ಕೆಲವು ಸಂದರ್ಭಗಳಲ್ಲಿ ಅವರಿಗೆ ಅಲ್ಪಸ್ವಲ್ಪ ಧನಸಹಾಯ ಮಾಡುವುದರ ಮೂಲಕ ಮಕ್ಕಳು ಶಾಲೆಗೆ ಹಾಜರಾಗುವಂತೆ ಮಾಡುವುದೂ ಅಗತ್ಯ. ಕೆಲವು ರಾಷ್ಟ್ರಗಳಲ್ಲಿ ಈ ಪದ್ಧತಿ ಪ್ರಚಾರದಲ್ಲಿದೆ. ಕಡ್ಡಾಯ ಶಿಕ್ಷಣದ ವಯೋಮಿತಿಯಲ್ಲಿರುವ ಮಕ್ಕಳನ್ನು ಅಂಗಡಿ, ಕಾರ್ಖಾನೆ, ಕಚೇರಿ, ಹೋಟೆಲು ಮುಂತಾದೆಡೆಗಳಲ್ಲಿ ಕೆಲಸಕ್ಕೆ ನೇಮಿಸಿಕೊಳ್ಳ ಕೂಡದೆಂಬ ರಾಜ್ಯಶಾಸನವೂ ಅಗತ್ಯವಾಗಿ ಆಗಬೇಕು. ಬಹುತೇಕ ದೇಶಗಳಲ್ಲಿ ಇಂಥ ಶಾಸನವೇನೊ ಆಚರಣೆಯಲ್ಲಿದೆ.

2. ಕಟ್ಟಡಗಳ ಅಭಾವ : ಕಡ್ಡಾಯ ಶಿಕ್ಷಣವೆಂದರೆ ಪ್ರಾಥಮಿಕ ಶಿಕ್ಷಣವನ್ನು ವಿಸ್ತರಿಸುವುದೇ ಆಗಿರುತ್ತದೆ. ಅದಕ್ಕೆ ಇರತಕ್ಕ ಸದ್ಯದ ಕಟ್ಟಡಗಳ ಸೌಲಭ್ಯ ಗಣನೀಯವಾಗಿ ಹೆಚ್ಚಬೇಕಾಗುತ್ತದೆ. ಅದಕ್ಕಾಗಿ ಹಣವನ್ನು ಒದಗಿಸಿದರೂ ಕಟ್ಟಡಗಳು ಶೀಘ್ರವಾಗಿ ನಿರ್ಮಾಣವಾಗುತ್ತಿಲ್ಲ. ಗ್ರಾಮಾಂತರ ಪ್ರದೇಶಗಳಲ್ಲಿ ಮುಖ್ಯವಾಗಿ ಅವನ್ನು ಕಟ್ಟಬೇಕಾಗಿರುವುದೂ ಆ ಕಾರ್ಯ ರಾಜ್ಯದ ಕಾಮಗಾರಿ ಇಲಾಖೆಯ ನೇತೃತ್ವದಲ್ಲಿ ನಡೆಯಬೇಕಾಗಿರುವುದೂ ಇದಕ್ಕೆ ಮುಖ್ಯ ಕಾರಣವೆನ್ನಬಹುದು. ಈ ತೊಂದರೆಯನ್ನು ನಿವಾರಿಸಲು ರಾಜ್ಯದ ಶಿಕ್ಷಣ ಶಾಖೆ ಅಥವಾ ಶಾಲಾಮಂಡಲಿ ತಾನೇ ಕಾಮಗಾರಿ ಇಲಾಖೆಯನ್ನು ಹೊಂದಿದ್ದು ಕಟ್ಟಡಗಳ ನಿರ್ಮಾಣ ಕಾರ್ಯವನ್ನು ತ್ವರಿತವಾಗಿ ಸಾಗಿಸುವುದು ಅಗತ್ಯ. ನಗರಗಳಲ್ಲಂತು ವರ್ಷ ವರ್ಷಕ್ಕೂ ಶಾಲೆಗೆ ಸೇರುವ ಮಕ್ಕಳ ಸಂಖ್ಯೆ ಒಂದೇ ಸಮನೆ ಹೆಚ್ಚುತ್ತಿದ್ದರೂ ಅಲ್ಲಿನ ಶಾಲಾ ಕಟ್ಟಡಗಳನ್ನು ವಿಸ್ತರಿಸುವುದು ಸ್ಥಳಾಭಾವದಿಂದ ಅಸಾಧ್ಯವಾಗುತ್ತಿದೆ. ವಸತಿ ಸಮಸ್ಯೆ ತೀವ್ರವಾಗಿರುವ ಮೊಹಲ್ಲಗಳಲ್ಲಿ ಬಾಡಿಗೆ ಮನೆಗಳನ್ನು ದೊರಕಿಸಿಕೊಳ್ಳುವುದೂ ಸಾಧ್ಯವಾಗುತ್ತಿಲ್ಲ. ಖಾಸಗಿ ಸಂಸ್ಥೆಗಳು ನಡೆಸುತ್ತಿರುವ ಶಾಲೆಗಳಲ್ಲೂ ಸ್ಥಳಾಭಾವ ಇದ್ದೇ ಇದೆ. ಈ ತೊಂದರೆಯನ್ನು ತಪ್ಪಿಸಲು ಹೊಸದಾಗಿ ನಗರಗಳಲ್ಲಿ ಬಡಾವಣೆಗಳನ್ನು ನಿರ್ಮಿಸುವಾಗ ಶಾಲೆಗೆ ತಕ್ಕಷ್ಟು ನಿವೇಶನವನ್ನು ಬಿಡುವಂತೆ ಶಿಕ್ಷಣ ಶಾಖೆ ನೋಡಿಕೊಳ್ಳಬೇಕು. ತೀವ್ರ ಸ್ಥಳಾಭಾವವಿದ್ದು ತಕ್ಷಣಕ್ಕೆ ಪಕ್ಕಾ ಕಟ್ಟಡಗಳನ್ನು ರೂಪಿಸುವುದು ಅಸಾಧ್ಯವಾದೆಡೆ ಕಚ್ಚಾ ಕಟ್ಟಡಗಳನ್ನಾದರೂ ಕಟ್ಟಿಕೊಳ್ಳಬೇಕು.

3 ಉಪಕರಣಗಳ ಕೊರತೆ : ತೀವ್ರಗತಿಯಲ್ಲಿ ಹೆಚ್ಚುತ್ತಿರುವ ವಿದ್ಯಾರ್ಥಿ ಸಂಖ್ಯೆಗನುಗುಣವಾಗಿ ಇರತಕ್ಕ ಶಾಲೆಗಳನ್ನು ವಿಸ್ತರಿಸುವಾಗ ಮತ್ತು ಹೊಸ ಶಾಲೆಗಳನ್ನು ತೆರೆಯುವಾಗ ಪೀಠೋಪಕರಣ, ಪಾಠೋಪಕರಣ, ಪುಸ್ತಕ ಇತ್ಯಾದಿಗಳನ್ನು ಒದಗಿಸುವುದು ಕಷ್ಟವಾಗುತ್ತದೆ. ಅದಕ್ಕಾಗಿ ಮೀಸಲಿಟ್ಟಿರುವ ಹಣವಿದ್ದರೂ ಕೊಳ್ಳಲು ಅವು ದೊರಕದಿರಬಹುದು. ಆದ್ದರಿಂದ ಶಾಲೆಗಳಿಗೆ ಅಗತ್ಯ ವಸ್ತುಗಳನ್ನು ಸಕಾಲದಲ್ಲಿ ಒದಗಿಸುವುದು ಸಾಧ್ಯವಾಗದೆ ಕಡ್ಡಾಯ ಶಿಕ್ಷಣದ ವಿಸ್ತರಣ ಕಾರ್ಯ ಮುಂದಗತಿ ತಾಳುತ್ತದೆ. ಅದನ್ನು ತಪ್ಪಿಸಲು ಶಿಕ್ಷಣಶಾಖೆ ಅದಕ್ಕಾಗಿ ತಕ್ಕಷ್ಟು ಹಣವನ್ನು ಮೀಸಲಿಡುವುದರ ಜೊತೆಗೆ ಅವನ್ನು ತಯಾರಿಸುವವರು ಸಕಾಲದಲ್ಲಿ ಸರಬರಾಜು ಮಾಡುವಂತೆಯೂ ನೋಡಿಕೊಳ್ಳಬೇಕು. ಅದು ಸಾಧ್ಯವಾಗದಾಗ ಸರ್ಕಾರವೆ ಅದಕ್ಕಾಗಿ ಕಾರ್ಖಾನೆಗಳನ್ನು ಆರಂಭಿಸಬೇಕು.

4 ಅಧ್ಯಾಪಕರ ಕೊರತೆ: ಕಡ್ಡಾಯ ಶಿಕ್ಷಣವನ್ನು ಆಚರಣೆಗೆ ತರುವಾಗ ಎಲ್ಲ ಕಡೆಯೂ ಅಧ್ಯಾಪಕರ ಕೊರತೆ ಕಂಡು ಬರುತ್ತದೆ- ಅದಕ್ಕಾಗಿ ಸದ್ಯದ ಅಧ್ಯಾಪಕ ಶಿಕ್ಷಣ ಸಂಸ್ಥೆಗಳನ್ನು ವಿಸ್ತರಿಸುವುದೂ ಹೊಸ ಸಂಸ್ಥೆಗಳನ್ನು ಆರಂಭಿಸುವುದೂ ನಡೆಯುತ್ತಿದೆ. ಆದರೂ ವೃತ್ತಿ ಶಿಕ್ಷಣ ಪಡೆದ ಅಧ್ಯಾಪಕರು ತಕ್ಕ ಸಂಖ್ಯೆಯಲ್ಲಿ ದೊರಕುತ್ತಿಲ್ಲ. ಈ ಸಮಸ್ಯೆಯನ್ನು ನಿವಾರಿಸಲು ಅಲ್ಪಾವಧಿಯ ವೃತ್ತಿ ಶಿಕ್ಷಣದ ಕಾರ್ಯಕ್ರಮವನ್ನು ಆಚರಣೆಗೆ ತರಬಹುದು. ವೃತ್ತಿಶಿಕ್ಷಣ ಪಡೆಯದವರನ್ನೆ ಕೆಲಸಕ್ಕೆ ಸೇರಿಸಿಕೊಂಡು ಆದಷ್ಟು ಬೇಗ ಅವರಿಗೆ ವೃತ್ತಿಶಿಕ್ಷಣ ದೊರಕಿಸುವ (ಅಂಥವರನ್ನು ಸರ್ಕಾರವೇ ವೃತ್ತಿ ಶಿಕ್ಷಣಕ್ಕೆ ಕಳಿಸಿ ಅಥವಾ ಸಂಜೆಯ ಅಥವಾ ಅಂಚೆ ಶಿಕ್ಷಣಕ್ಕೆ ಪ್ರೋತ್ಸಾಹಿಸಿ) ವ್ಯವಸ್ಥೆ ಮಾಡಬಹುದು. ಪ್ರಾಥಮಿಕ ಶಾಲೆಗಳಲ್ಲಿ ಕೆಲಸಕ್ಕೆ ಸೇರಲು ಅನೇಕರು ಇಷ್ಟಪಡುವುದಿಲ್ಲ. ಇದಕ್ಕೆ ಬಹುಕಾಲದಿಂದಲೂ ಆ ದರ್ಜೆಯ ಅಧ್ಯಾಪಕರಿಗೆ ನೀಡುತ್ತಿದ್ದ ಕಡಿಮೆ ಶ್ರೇಣಿಯ ಸಂಬಳವೇ ಮುಖ್ಯ ಕಾರಣ. ಈಚೆಗೆ ಅಭ್ಯರ್ಥಿಗಳನ್ನು ಈ ಸೇವಾಕ್ಷೇತ್ರಕ್ಕೆ ಆಕರ್ಷಿಸಲು ತಕ್ಕಮಟ್ಟಿಗೆ ಅವರ ಸಂಬಳಸಾರಿಗೆಗಳನ್ನು ಉತ್ತಮಪಡಿಸಲಾಗುತ್ತಿದೆ.

5 ಹಣದ ಅಭಾವ: ಎಲ್ಲ ದೇಶಗಳಲ್ಲೂ ಎಲ್ಲ ಕಾಲಗಳಲ್ಲೂ ಕಡ್ಡಾಯ ಶಿಕ್ಷಣಕ್ಕೆ ಅಡ್ಡಿ ಬರುತ್ತಿರುವ ಪ್ರಮುಖ ಅಂಶ ಆರ್ಥಿಕ ತೊಂದರೆ. ಅನೇಕ ದೇಶಗಳಲ್ಲಿ ಆದಾಯದ ಸುಮಾರು ¼ ಭಾಗ ಕಡ್ಡಾಯ ಶಿಕ್ಷಣಕ್ಕಾಗಿ ವಿನಿಯೋಗವಾಗುತ್ತಿದೆ. ರಾಷ್ಟ್ರದ ಇತರ ಕ್ಷೇತ್ರಗಳಲ್ಲಿ ಹೂಡಿದ ಹಣದಂತೆ ಈ ಕ್ಷೇತ್ರದಲ್ಲಿ ಹೂಡುವ ಹಣದಿಂದ ಪ್ರತಿಫಲ ತಕ್ಷಣ ದೊರಕುವಂತಿಲ್ಲ. ಆದರೆ ರಾಷ್ಟ್ರದ ವಿವಿಧ ಉದ್ಯಮಗಳಿಗೆ ತಜ್ಞರನ್ನು ಒದಗಿಸಿ ಆರ್ಥಿಕ ಶಕ್ತಿಯನ್ನು ಉತ್ತಮಪಡಿಸುವ ಕಾರ್ಯದಲ್ಲಿ ಅದು ಖಂಡಿತವಾಗಿ ಪಾತ್ರವಹಿಸುತ್ತದೆ. ಆದ್ದರಿಂದ ತನ್ನ ಪುರೋಭಿವೃದ್ಧಿಯ ದೃಷ್ಟಿಯಿಂದಲೇ ರಾಷ್ಟ್ರ ಎಲ್ಲ ಸಂಪನ್ಮೂಲಗಳಿಂದಲೂ ಅದಕ್ಕಾಗಿ ಹಣ ಒದಗಿಸಿಕೊಳ್ಳುವುದು ಅಗತ್ಯವಾಗುತ್ತದೆ.

6 ಕಡ್ಡಾಯ ಶಿಕ್ಷಣದಲ್ಲಿ ನಿಲುಗಡೆಯ ಸಮಸ್ಯೆ : ಒಂದೇ ತರಗತಿಯಲ್ಲಿ ವಿದ್ಯಾರ್ಥಿ ಒಂದು ವರ್ಷಕ್ಕಿಂತ ಹೆಚ್ಚು ಕಾಲ ಉಳಿಯುವುದನ್ನು ನಿಲುಗಡೆ ಅಥವಾ ಕುಂಟಿಕೆ ಎನ್ನುವರು. ಇದರ ಫಲವಾಗಿ ಶಿಕ್ಷಣ ಕ್ಷೇತ್ರಕ್ಕೆ ಅನಗತ್ಯವಾಗಿ ಅಧಿಕ ವ್ಯಯವಾಗುವುದಲ್ಲದೆ ನಿಯಮಿತಕಾಲಕ್ಕೆ ಶಾಲೆಯನ್ನು ಬಿಡತಕ್ಕವರು ಪ್ರಾಥಮಿಕ ಶಿಕ್ಷಣವನ್ನು ಪೂರ್ಣವಾಗಿ ಮುಗಿಸಲಾರದೆ ಮುಂದೆ ನಿರಕ್ಷರತೆಗೆ ಬೀಳುವರು. ಇದರಿಂದ ಕಡ್ಡಾಯ ಶಿಕ್ಷಣದ ಉದ್ದೇಶವೇ ವಿಫಲವಾಗುವುದು. ಭಾರತದ ಪ್ರಾಥಮಿಕ ಶಿಕ್ಷಣ ಕ್ಷೇತ್ರದಲ್ಲಿ ನಿಲುಗಡೆಯ ಸಮಸ್ಯೆ ತೀವ್ರವಾಗಿದೆ. ಕೆಳಗಿನ ಅಂಕಿ ಅಂಶಗಳು ಅದನ್ನು ಸ್ಪಷ್ಟಪಡಿಸುತ್ತವೆ.

1911–12 ರಿಂದ 1965–66ರ ವರೆಗೆ ಪ್ರಾಥಮಿಕ ಶಿಕ್ಷಣದಲ್ಲಾಗುತ್ತಿರುವ ನಿಲುಗಡೆಯನ್ನು ಸೂಚಿಸುವ ಪಟ್ಟಿ

| ವರ್ಷ | ತರಗತಿಯ ವಿದ್ಯಾರ್ಥಿಗಳ ಸಂಖ್ಯೆ—(ಸಾವಿರಗಳಲ್ಲಿ) | | | | | | |
|---|---|---|---|---|---|---|---|
| | 1 | 2 | 3 | 4 | 5 | 8 | 7 |
| 1911–12 | 2717 | 1062 | 757 | 545 | 324 | 167 | 119 |
| 1921–22 | 3343 | 1556 | 924 | 636 | 377 | 246 | 158 |
| 1931–32 | 5281 | 2111 | 1496 | 1016 | 628 | 377 | 301 |
| 1941–42 | 5525 | 2724 | 2027 | 1572 | 1085 | 591 | 437 |
| 1950–51 | 6948 | 4332 | 3353 | 2623 | 1898 | 1246 | 1023 |
| 1960–61 | 13391 | 7513 | 5886 | 4593 | 3611 | 12727 | 2220 |
| 1965–66 | 18843 | 10973 | 8875 | 6924 | 5522 | 4453 | 3680 |

ಮೇಲಿನ ಅಂಕಿಅಂಶಗಳು ಸೂಚಿಸುವಂತೆ 1911–12ರಲ್ಲಿ ಒಂದನೆಯ ತರಗತಿಯಲ್ಲಿ 2,717 ಮಂದಿಯಿದ್ದರೆ 2ನೆಯ ತರಗತಿಯಲ್ಲಿ ಕೇವಲ 1,060 ಮಂದಿ ಮಾತ್ರ ಇದ್ದರು. ಇದಕ್ಕೆ ಮುಖ್ಯ ಕಾರಣವಾದ ನಿಲುಗಡೆಯ ಪ್ರಮಾಣ ಸೇ. 60. ಇದು ಕ್ರಮ ಕ್ರಮವಾಗಿ ಕಡಿಮೆಯಾಗುತ್ತ ಬಂದು 1965–66ರ ವೇಳೆಗೆ ಸೇ. 42ಕ್ಕೆ ಇಳಿಯಿತು. ಆದರೂ ಇನ್ನೂ ಅಧಿಕವಾಗಿಯೇ ನಿಲುಗಡೆಯಾಗುತ್ತಿರುವುದು ಸ್ಪಷ್ಟವಾಗಿದೆ. ಈ ನಿಲುಗಡೆಯ ಪ್ರಮಾಣ ಒಂದನೆಯ ತರಗತಿಯಲ್ಲಿ ಅತ್ಯಧಿಕವಾಗುತ್ತಿರುವುದೂ ಕಂಡು ಬರುತ್ತದೆ. ಈಚೆಗೆ ನಡೆದಿರುವ ಸಂಶೋಧನೆಯ ಪ್ರಕಾರ 1ನೆಯ ತರಗತಿಗೆ ಸೇರಿದ 100 ಮಂದಿ ವಿದ್ಯಾರ್ಥಿಗಳಲ್ಲಿ 2, 3, 4, 5, 6 ಮತ್ತು 7ನೆಯ ತರಗತಿಗಳಿಗೆ ಕ್ರಮವಾಗಿ 39, 28, 20, 12, 6, 4 ಮಾತ್ರ ತೇರ್ಗಡೆಯಾಗಿ ಬಂದಿದ್ದರು. ಎಂದರೆ 1ನೆಯ ತರಗತಿಯ 100 ಮಂದಿ ವಿದ್ಯಾರ್ಥಿಗಳಲ್ಲಿ ಕೇವಲ 4 ಮಂದಿ ಮಾತ್ರ 7ನೆಯ ತರಗತಿಯನ್ನು ಮುಟ್ಟಿದ್ದರು. ಒಳ್ಳೆಯ ವ್ಯವಸ್ಥೆಯಿಂದ ಏರ್ಪಟ್ಟಿರುವ ವಿದ್ಯಾ ಪದ್ಧತಿಯಲ್ಲಿ ಮೊದಲ ತರಗತಿಗೆ ಸೇರಿದಷ್ಟು ಮಂದಿಯಲ್ಲಿ ಸುಮಾರು ಎಲ್ಲರೂ 7ನೆಯ ತರಗತಿಗೆ ಬರುವಂತಿರಬೇಕು. ಭಾರತದ ಶಿಕ್ಷಣ ಕ್ಷೇತ್ರದಲ್ಲಾಗುತ್ತಿರುವ ನಿಲುಗಡೆಯ ಈ ಸಮಸ್ಯೆಯನ್ನು ಪರಿಹರಿಸಿದ ಹೊರತು ಕಡ್ಡಾಯ ಶಿಕ್ಷಣದ ಉದ್ದೇಶ ಈಡೇರಲಾರದು.

7 ಕಡ್ಡಾಯ ಶಿಕ್ಷಣದಲ್ಲಿ ವ್ಯರ್ಥವ್ಯಯ : ಶಾಲೆಗೆ ಸೇರಿದ ಮಕ್ಕಳು ನಿಯತಕಾಲಾವಧಿಯವರೆಗೆ ಶಿಕ್ಷಣ ಪಡೆಯದೆ ಮಧ್ಯೆ ಶಾಲೆಯನ್ನು ಬಿಡುವುದರಿಂದ ಅವರು ಮರಳಿ ನಿರಕ್ಷರತೆಗೆ ಬೀಳುವರು. ಇದನ್ನು ಶಿಕ್ಷಣದಲ್ಲಾಗುವ ವ್ಯರ್ಥವ್ಯಯ (ಅಪವ್ಯಯ, ನಷ್ಟ, ವೇಸ್ಟೇಜ್) ಎನ್ನುವರು. ಕಡ್ಡಾಯ ಶಿಕ್ಷಣ ಆಚರಣೆಯಲ್ಲಿರುವೆಡೆ ಮಕ್ಕಳು ನಿಯಮಿತ ಕಾಲದ ಅನಂತರ ಶಾಲೆಯನ್ನು ಬಿಡುವ ಸಂದರ್ಭದಲ್ಲೂ ನಿಲುಗಡೆಯಿಂದ ಇಂಥ ವ್ಯರ್ಥ ವ್ಯಯ ಸಂಭವಿಸುವುದು. ಹೇಗೇ ಆಗಲಿ ಭಾರತದಲ್ಲಿ ನಿಲುಗಡೆಯಂತೆ ವ್ಯರ್ಥ ವ್ಯಯವೂ ಅಧಿಕವಾಗಿದೆ. ಈಚೆಗೆ ಮಹಾರಾಷ್ಟ್ರದಲ್ಲಿ ನಡೆದ ಒಂದು ಸಂಶೋಧನೆಯ ಪ್ರಕಾರ ಶಾಲೆಗೆ ಸೇರಿದ 1,000 ಮಂದಿಯಲ್ಲಿ ನಾಲ್ಕನೆಯ ತರಗತಿಯನ್ನೇ ಮುಗಿಸುವ ಮುನ್ನ 414 ಮಂದಿ ಶಾಲೆಯನ್ನು ಬಿಟ್ಟುಬಿಟ್ಟಿದ್ದರು. ಇಡೀ ರಾಷ್ಟ್ರದಲ್ಲೇ ಇಷ್ಟೊ, ಇನ್ನೂ ಹೆಚ್ಚಿನ ಪ್ರಮಾಣದಲ್ಲೊ ಅಪವ್ಯಯ ನಡೆಯುತ್ತಿದೆ. ಭಾರತದ ಶಿಕ್ಷಣ ಕ್ಷೇತ್ರದಲ್ಲಾಗುತ್ತಿರುವ ನಷ್ಟದ ತೀವ್ರ ಸ್ವರೂಪವನ್ನು ಮೊದಲು ಹರ್ಟಾಗ್ ಸಮಿತಿ (1928) ಎತ್ತಿ ತೋರಿಸಿತು. ಅಂದಿನಿಂದ ಅದನ್ನು ನಿವಾರಿಸುವ ಯತ್ನ ನಡೆಯುತ್ತಿದ್ದರೂ ಇನ್ನೂ ಅಗಾಧ ಪ್ರಮಾಣದಲ್ಲಿ ಅದು ಉಳಿದುಕೊಂಡೇ ಬರುತ್ತಿದೆ. ಕೆಳಗೆ ಸೂಚಿಸಿರುವ ಇತ್ತೀಚಿನ ಅಂಕಿ ಅಂಶಗಳಿಂದ ಅದು ಸ್ಪಷ್ಟಪಡುತ್ತದೆ.

1952-53 ರಿಂದ ಐದು ವರ್ಷಗಳ ಅವಧಿಯಲ್ಲಿ ಪ್ರಾಥಮಿಕ ತರಗತಿಗಳಲ್ಲಾಗುವ ವ್ಯರ್ಥ ವ್ಯಯವನ್ನು ಸೂಚಿಸುವ ಪಟ್ಟಿ.

| ವರ್ಷ | ಹುಡುಗರು | | | | ಹುಡುಗಿಯರು | | | |
|---|---|---|---|---|---|---|---|---|
| | 1 | 2 | 3 | 4 | 1 | 2 | 3 | 4 |
| 1952–53 | 100 | 65 | 53 | 45 | 100 | 58 | 44 | 34 |
| 1953–54 | 100 | 66 | 55 | 47 | 100 | 59 | 46 | 35 |
| 1954–55 | 100 | 63 | 54 | 47 | 100 | 58 | 45 | 37 |
| 1955–56 | 100 | 62 | 53 | 47 | 100 | 58 | 45 | 37 |
| 1956–57 | 100 | 61 | 51 | 46 | 100 | 55 | 45 | 37 |

ಮೇಲಿನ ಅಂಕಿ ಅಂಶಗಳ ಪರಿಶೀಲನೆಯಿಂದ ವ್ಯರ್ಥವ್ಯಯ ಪ್ರಾಥಮಿಕ ಒಂದನೆಯ ತರಗತಿಯಲ್ಲಿ ಅತ್ಯಂತ ಹೆಚ್ಚಾಗಿರುವುದೂ ಮೇಲಿನ ತರಗತಿಗಳಲ್ಲಿ ಕ್ರಮ ಕ್ರಮವಾಗಿ ಕಡಿಮೆಯಾಗಿರುವುದೂ ಕಂಡುಬರುತ್ತದೆ. ಹಾಗೆಯೇ ವ್ಯರ್ಥವ್ಯಯ ಗಂಡುಮಕ್ಕಳಿಗಿಂತ ಹೆಣ್ಣುಮಕ್ಕಳಲ್ಲಿ ಅಧಿಕ ಪ್ರಮಾಣದಲ್ಲಿರುವುದೂ ಕಂಡು ಬರುತ್ತದೆ. ಮೇಲಿನ ಐದು ವರ್ಷಗಳ ಅವಧಿಯಲ್ಲಿ ಗಂಡು ಮಕ್ಕಳಲ್ಲಿ ವ್ಯರ್ಥವ್ಯಯ ಕಡಿಮೆಯಾಗಿಲ್ಲ ; ಹೆಣ್ಣುಮಕ್ಕಳಲ್ಲಿ ಅದು ಸ್ವಲ್ಪಮಟ್ಟಿಗೆ ಕಡಿಮೆಯಾಗಿದೆ.

ನಿಲುಗಡೆ ಮತ್ತು ವ್ಯರ್ಥವ್ಯಯಗಳಿಗೆ ಮುಖ್ಯವಾಗಿ (1),ಮೊದಲನೆಯ ತರಗತಿಗೆ ಬೇರೆ ಬೇರೆ ವಯಸ್ಸಿನ ಮಕ್ಕಳನ್ನು ಸೇರಿಸುವುದು, (2),ವರ್ಷದ ಮಧ್ಯದಲ್ಲಿ ತರಗತಿಗೆ ಸೇರಿಸಿಕೊಳ್ಳುವುದು, (3), ತರಗತಿಗೆ ಮಕ್ಕಳು ಸರಿಯಾಗಿ ಹಾಜರಾಗದಿರುವುದು, (4), ಶಾಲೆಯಲ್ಲಿ ತಕ್ಕಷ್ಟು ಉಪಕರಣಾದಿಗಳು ಇಲ್ಲದಿರುವುದು, (5), ತರಗತಿಗೆ ಮಿತಿ ಮೀರಿ ವಿದ್ಯಾರ್ಥಿಗಳನ್ನು ಸೇರಿಸಿಕೊಳ್ಳುವುದು, (6), ಸಾಮಾನ್ಯ ಮಕ್ಕಳಿಗೆ ಆಕರ್ಷಣೀಯವಾಗಿರದ ಪಠ್ಯಕ್ರಮ, (7), ಅಧ್ಯಾಪಕರು ಅನುಸರಿಸುವ ಬೇಸರ ಹುಟ್ಟಿಸುವ ಬೋಧನ ಕ್ರಮ (8), ಅಧ್ಯಾಪಕರಿಗೆ ತಕ್ಕಷ್ಟು ಶಿಕ್ಷಣ ಸಂಸ್ಕಾರಗಳಿಲ್ಲದಿರುವಿಕೆ-ಇವು ಕಾರಣವೆನಿಸುತ್ತವೆ. ಕಡ್ಡಾಯ ಶಿಕ್ಷಣದ ಉದ್ದೇಶ ಈಡೇರಬೇಕಾದರೆ ಈ ನ್ಯೂನತೆಗಳನ್ನು ನಿವಾರಿಸುವುದರ ಜೊತೆಗೆ ಒಂದನೆಯ ತರಗತಿಯಲ್ಲಿ ಪರೀಕ್ಷೆ ನಡಸದೆ ಮುಂದಕ್ಕೆ ತೇರ್ಗಡೆ ಮಾಡಿಸುವುದೂ ಶಾಲೆಗೆ ಸೇರುವ ಮುನ್ನ ಒಂದು ವರ್ಷದ ಶಿಶುವಿಹಾರದಲ್ಲಿ ಶಿಕ್ಷಣವೀಯುವುದೂ ಅಗತ್ಯ.

ಪ್ರಾಥಮಿಕ ಮಟ್ಟದ ಶಿಕ್ಷಣದಲ್ಲಾಗುವ ನಿಲುಗಡೆಗೂ ಅದರ ಫಲವಾಗಿ ಉದ್ಭವಿಸುವ ಶಿಕ್ಷಣದ ಅಪವ್ಯಯಕ್ಕೂ ಜನತೆಯ ಬಡತನ ಪ್ರಮುಖ ಕಾರಣ. ಅದರ ಫಲವಾಗಿ ಸೇ 65ರಷ್ಟು ಅಪವ್ಯಯ ಸಂಭವಿಸುತ್ತಿದೆ. 9-10 ವರ್ಷದ ಮಕ್ಕಳು ಹೊಲಗದ್ದೆಗಳಲ್ಲೂ ಅಂಗಡಿಮರಗಟ್ಟುಗಳಲ್ಲೂ ತಂದೆತಾಯಿಗಳಿಗೆ ಜೀವನೋಪಾಯದ ಕಸಬಿನಲ್ಲಿ ನೆರವಾಗಲು ಶಾಲೆಗೆ ತಪ್ಪಿಸಿಕೊಳ್ಳುವರು. ತಂದೆತಾಯಿಗಳು ಅನಿವಾರ್ಯದ ಈ ಕಾರಣಕ್ಕಾಗಿ ಮಕ್ಕಳನ್ನು ಶಾಲೆಗೆ ಕಳಿಸದೆ ಉಳಿಸಿಕೊಳ್ಳುವರು. ಅಂಥ ಮಕ್ಕಳು ನಿರಕ್ಷರತೆಗೆ ಮರಳಿ, ಶಿಕ್ಷಣದಲ್ಲಿ ಅಧಿಕ ಪ್ರಮಾಣದಲ್ಲಿ ವ್ಯರ್ಥವ್ಯಯ ಸಂಭವಿಸುವುದು. ಅಂಥ ಮಕ್ಕಳಿಗೆ, ಅವರಿಗೆ ಅನುಕೂಲವಾಗುವ ವೇಳೆಯಲ್ಲಿ ಭಾಗಶಃ ಕಾಲದ ಶಿಕ್ಷಣ ಸೌಲಭ್ಯವನ್ನು ಒದಗಿಸುವುದರಿಂದ ಅದನ್ನು ಬಹುಮಟ್ಟಿಗೆ ನಿವಾರಿಸಬಹುದು. ಕಡ್ಡಾಯ ಶಿಕ್ಷಣದ ಅವಧಿಯ ಅನಂತರ ಅಧನ್ನು ಪೂರ್ಣಾವಧಿಯವರೆಗೆ ಮುಗಿಸಿದವರಿಗೂ ಒಂದು ವರ್ಷದ ಭಾಗಶಃ ಕಾಲದ ಶಿಕ್ಷಣವನ್ನು ಕಡ್ಡಾಯ ಮಾಡುವುದೂ ಅಗತ್ಯ. ಇಂಥ ತರಗತಿಗಳನ್ನು ನಡೆಸಲು ಅಷ್ಟಾಗಿ ಹಣ ಖರ್ಚಾಗದಿದ್ದರೂ ಅದರಿಂದಾಗುವ ಪ್ರತಿಫಲ ಗಣನೀಯವಾಗಿರುತ್ತದೆ. ಇತ್ತೀಚೆಗೆ ರಚನೆಯಾಗಿದ್ದ ಕೊಠಾರಿ ಶಿಕ್ಷಣ ಆಯೋಗವೂ ತನ್ನ ವರದಿಯಲ್ಲಿ ಇಂಥ ಸಲಹೆಯೊಂದನ್ನು ಸೇರಿಸಿದೆ. ಕೇವಲ ನಾಲ್ಕು ವರ್ಷಗಳ ಕಡ್ಡಾಯ ಶಿಕ್ಷಣವಿರುವ ದೇಶಗಳಲ್ಲಿ ಅದನ್ನು ಮುಗಿಸಿದ ಮೇಲೆ ಕೆಲಸಕ್ಕೆ ಸೇರಿಕೊಳ್ಳುವ ಮಕ್ಕಳು ಬಹುಬೇಗ ನಿರಕ್ಷರತೆಗೆ ತುತ್ತಾಗುವರು. ಅದು ತನಕ ಅವರು ಕಲಿತಿರುವುದನ್ನು ಮರೆಯದಿರಬೇಕಾದರೆ ಉದ್ಯೋಗ ನಿರತರಾದ ಮೇಲೂ ಅವರಿಗೆ ಕೆಲವು ವರ್ಷಗಳ ಭಾಗಶಃ ಶಿಕ್ಷಣವನ್ನು ಕಡ್ಡಾಯ ಮಾಡುವುದು ಅಗತ್ಯ. ಅಲ್ಲಿ ಅವರಿಗೆ ಅನುಕೂಲಿಸುವಂತೆ ಪಠ್ಯಕ್ರಮ, ಬೋಧನವಿಧಾನ, ಕಾರ್ಯಸೂಚಿ ಮುಂತಾದುವನ್ನು ರೂಪಿಸಿಕೊಳ್ಳಬಹುದು. ಅಪವ್ಯಯದ ಇನ್ನುಳಿದ ಸೇ. 35ರಷ್ಟು ಭಾಗ ಸಾಮಾಜಿಕ ಮತ್ತು ಶೈಕ್ಷಣಿಕ ಕಾರಣಗಳಿಂದ ಸಂಭವಿಸುವುದು. ಕೆಲವು ಹಳ್ಳಿಗಳ ಶಾಲೆಗಳಲ್ಲಿ ಮೊದಲು ಎರಡು ಮೂರು ತರಗತಿಗಳು ಮಾತ್ರವಿದ್ದು ಮೇಲಿನ ತರಗತಿಗಳು ಪಕ್ಕದ ಹಳ್ಳಿಯ ಶಾಲೆಯಲ್ಲಿರುವಾಗ ಮಕ್ಕಳು ಅಲ್ಲಿಗೆ ಹೋಗಲಾರದೆ ಶಿಕ್ಷಣವನ್ನು ಅಲ್ಲಿಗೇ ಮುಗಿಸುವರು; ಹೆಣ್ಣು ಮಕ್ಕಳನ್ನು ಅನೇಕ ಕಡೆ ಪ್ರಾಥಮಿಕ ಶಾಲೆಯ ಕೊನೆಯ ಹಂತದವರೆವಿಗೂ ಕಳಿಸಲು ತಂದೆತಾಯಿಗಳು ಆಶಿಸುವುದಿಲ್ಲ. ಈ ಎರಡು ಕಾರಣಗಳಿಂದಾಗುವ ಅಪವ್ಯಯವನ್ನು ನಿಲ್ಲಿಸಲು ಶಾಲೆಗಳ ಸ್ಥಿತಿಗತಿಗಳನ್ನು ಉತ್ತಮ ಪಡಿಸುವುದು ಗ್ರಾಮಾಂತರ ಪ್ರದೇಶಗಳ ಜನತೆಯಲ್ಲಿ ಹೆಣ್ಣುಮಕ್ಕಳ ಶಿಕ್ಷಣದ ಅವಶ್ಯಕತೆಯ ಬಗ್ಗೆ ಪ್ರಚಾರ ಮಾಡುವುದೂ ಅಗತ್ಯ.

ನಿಲುಗಡೆ ಮತ್ತು ಅಪವ್ಯಯ-ಇವೆರಡೂ ಅವಷ್ಪಕ್ಕೇ ತಲೆನೋವು ಜ್ವರಗಳಂತೆ ಬೇನೆಯಲ್ಲ-ಶಿಕ್ಷಣ ವ್ಯವಸ್ಥೆಯಲ್ಲಿರುವ ಲೋಪದೋಷಗಳನ್ನು ಸೂಚಿಸುವ ಪರಿಣಾಮಗಳು ಮಾತ್ರ. ಆದ್ದರಿಂದ ಮೇಲೆ ಸೂಚಿಸಿರುವಂತೆ ಅವನ್ನು ಮೂಡಿಸುವ ಕಾರಣಗಳನ್ನು ನಿವಾರಿಸುವುದು ಅಗತ್ಯ.

**ಪಂಚವಾರ್ಷಿಕ ಯೋಜನೆಗಳಲ್ಲಿ ಕಡ್ಡಾಯ ಶಿಕ್ಷಣದ ಪ್ರಗತಿ :** ಇಡೀ ಭಾರತದಲ್ಲಿ ಪ್ರಾಥಮಿಕ I–IV ತರಗತಿಗಳಲ್ಲಿ ಮೊದಲು ಮೂರು ಯೋಜನೆಗಳಲ್ಲಿ ಮಕ್ಕಳ ದಾಖಲಾತಿ ಶೀಘ್ರಗತಿಯಿಂದಲೇ ಸಾಗಿತು. 1950-51ರಲ್ಲಿ ಇದ್ದ 1.4 ಕೋಟಿ ಮಕ್ಕಳ ಸಂಖ್ಯೆ 1965–66ರಲ್ಲಿ 3.7 ಕೋಟಿಗೇರಿತು. ಎಂದರೆ ರಾಜ್ಯಾಂಗ ರಚನೆಯಾದ 15 ವರ್ಷಗಳಲ್ಲಿ ದಾಖಲಾತಿ 3 ಪಟ್ಟು ಹೆಚ್ಚಿತು. ಮೊದಲ ಯೋಜನೆಯಲ್ಲಿ ಪ್ರತಿವರ್ಷವೂ ಆ ವಯೋಮಿತಿಯ ಮಕ್ಕಳಲ್ಲಿ ಸರಾಸರಿ ಸೇ. 4.9ರಷ್ಟು ಮಕ್ಕಳೂ ಎರಡನೆಯ ಯೋಜನೆಯಲ್ಲಿ ಪ್ರತಿವರ್ಷವೂ ಸರಾಸರಿ ಸೇ. 7.5ರಷ್ಟು ಮಕ್ಕಳೂ ಮೂರನೆಯ ಯೋಜನೆಯಲ್ಲಿ ಪ್ರತಿವರ್ಷವೂ ಸರಾಸರಿ ಸೇ. 8.2ರಷ್ಟು ಮಕ್ಕಳೂ ಹೆಚ್ಚಿಗೆ ಸೇರುತ್ತ ಹೋದರು. ನಾಲ್ಕನೆಯ ಯೋಜನೆಯಲ್ಲೂ ದಾಖಲಾತಿ ಇದೇ ವೇಗದಲ್ಲಿ ಮುಂದುವರಿದು 1970–71ರ ವೇಳೆಗೆ ಒಟ್ಟು ಮಕ್ಕಳ ಸಂಖ್ಯೆ 6 ಕೋಟಿಗೇರಿರುವುದು. ಎಂದರೆ ಆ ವಯೋಮಿತಿಯ ಮಕ್ಕಳಲ್ಲಿ ಸೇ. 84ರಷ್ಟು ಕಡ್ಡಾಯ ಶಿಕ್ಷಣದ ವ್ಯಾಪ್ತಿಗೆ ಒಳಪಟ್ಟರುತ್ತಾರೆ.

ಪ್ರಾಥಮಿಕ V–VIIನೆಯ ತರಗತಿಗಳಲ್ಲಿ ದಾಖಲಾತಿ ಮೊದಲ ಯೋಜನೆಯಲ್ಲಿ ತೀವ್ರಗತಿಯಲ್ಲಿ ಸಾಗಿದರೂ ಅನಂತರದ ಯೋಜನೆಗಳಲ್ಲಿ ಮಂದಗತಿಯನ್ನು ತಾಳಿತು. 1950-51ರಲ್ಲಿದ್ದ 30 ಲಕ್ಷ ಮಕ್ಕಳ ಸಂಖ್ಯೆ 1965–66ರಲ್ಲಿ 130 ಲಕ್ಷಕ್ಕೇರಿತು. ಎಂದರೆ ಹದಿನೈದು ವರ್ಷಗಳಲ್ಲಿ ಮಕ್ಕಳ ಸೇರ್ಪಡೆ ನಾಲ್ಮಡಿ ಹೆಚ್ಚಿತು. ಮೊದಲ ಯೋಜನೆಯಲ್ಲಿ ಪ್ರತಿ ವರ್ಷವೂ ಆ ವಯೋಮಿತಿಯ ಮಕ್ಕಳಲ್ಲಿ ಸರಾಸರಿ ಸೇ 7.6ರಷ್ಟೂ ಎರಡನೆಯ ಯೋಜನೆಯಲ್ಲಿ ಪ್ರತಿವರ್ಷವೂ ಸೇ. 10.2ರಷ್ಟೂ ಮೂರನೆಯ ಯೋಜನೆಯಲ್ಲಿ ಸೇ. 11.0ರಷ್ಟೂ ಮಕ್ಕಳು ಕಡ್ಡಾಯ ಶಿಕ್ಷಣದ ವ್ಯಾಪ್ತಿಗೆ ಹೊಸದಾಗಿ ಒಳಪಡುತ್ತ ಬಂದರು. ಇದೇ ಪ್ರಗತಿಯ ವೇಗ ನಾಲ್ಕನೆಯ ಯೋಜನೆಯಲ್ಲೂ ಮುಂದುವರಿದು 1970–71ರಲ್ಲಿ 200 ಲಕ್ಷ ಮಕ್ಕಳು ಕಡ್ಡಾಯ ಶಿಕ್ಷಣದ ವ್ಯಾಪ್ತಿಗೆ ಒಳಪಟ್ಟರುತ್ತಾರೆ. ಆದರೂ ಈ ವಯೋಮಿತಿಯ ಮಕ್ಕಳಲ್ಲಿ ಈಗ ಕೇವಲ ಸುಮಾರು ಸೇ. 50ರಷ್ಟು ಮಾತ್ರ ಕಡ್ಡಾಯ ಶಿಕ್ಷಣದ ವ್ಯಾಪ್ತಿಗೆ ಒಳಪಟ್ಟಿರುತ್ತಾರೆ. ಕೆಲವು ರಾಜ್ಯಗಳಲ್ಲಿ ಕಡ್ಡಾಯ ಶಿಕ್ಷಣವನ್ನು V–VIIರ ವಯೋಮಿತಿಗೆ ಇನ್ನೂ ವಿಸ್ತರಿಸದಿರುವುದೇ ಇದಕ್ಕೆ ಕಾರಣ.

**ಮೈಸೂರಿನಲ್ಲಿ ಕಡ್ಡಾಯ ಶಿಕ್ಷಣದ ಪ್ರಗತಿ :** ಹಳೆಯ ಮೈಸೂರು ರಾಜ್ಯದಲ್ಲಿ ಕಡ್ಡಾಯ ಶಿಕ್ಷಣದಲ್ಲಿ ಆಸಕ್ತಿ 1914ರಿಂದಲೇ ಆರಂಭವಾಯಿತು. ಆದರೆ ದ್ರವ್ಯಾಭಾವದಿಂದ ಅದನ್ನು ಆಚರಣೆಗೆ ತರಲಾಗಲಿಲ್ಲ. 1944ರಲ್ಲಿ ರಾಜ್ಯ ಸರ್ಕಾರ ಅದನ್ನು ಆಚರಣೆಗೆ ತರುವ ಉದ್ದೇಶದಿಂದ ಶಾಸನವೊಂದನ್ನು ಮಾಡಿತು. ಅದರಂತೆ 6ರಿಂದ 10ರ ವಯೋಮಿತಿಯವರೆಗಿನ ಮಕ್ಕಳು ಶಾಲೆಗೆ ಹಾಜರಾಗುವುದು ಕಡ್ಡಾಯವಾಯಿತು. 1945–46ರಿಂದ ಜಿಲ್ಲೆಗೆ ಒಂದರಂತೆ 9 ತಾಲ್ಲೂಕುಗಳಲ್ಲಿ ಯೋಜನೆಯನ್ನು ಆಚರಣೆಗೆ ತರಲಾಯಿತು. ಅನಂತರ ಯೋಜನೆಯನ್ನು ಪ್ರತಿರ್ಷವೂ ಒಂದೊಂದು ತಾಲ್ಲೂಕಿಗೆ ವಿಸ್ತರಿಸುವ ಯತ್ನ ನಡೆಯಿತು. ಕಡೆಗೆ 30 ತಾಲ್ಲೂಕುಗಳಿಗೆ ವಿಸ್ತರಿಸುವ ವೇಳೆಗೆ ಯೋಜನೆ ಕಾರ್ಯರೂಪದಲ್ಲಿ ಫಲಕಾರಿಯಾಗದಿರುವುದು ಕಂಡುಬಂತು. 1949ರ ಅನಂತರ ಅದನ್ನು ವಿಸ್ತರಿಸುವುದು ನಿಂತಿತು. ಮುಂದೆ ಈ ಯೋಜನೆ 1961ರ ವರೆಗೆ ಕೇವಲ 9 ಜಿಲ್ಲೆಗಳಲ್ಲಿ ಮಾತ್ರ ಆಚರಣೆಯಲ್ಲಿತ್ತು.

ಬೊಂಬಾಯಿ ಕರ್ನಾಟಕದ ಜಿಲ್ಲೆಗಳಲ್ಲಿ 1947ರ ಬೊಂಬಾಯಿ ಕಡ್ಡಾಯ ಶಿಕ್ಷಣ ಕಾಯಿದೆಯನ್ವಯ ಯೋಜನೆ ಆಗಲೆ ಜಾರಿಗೆ ಬಂದಿತ್ತು. 1,000 ಮತ್ತು ಅದಕ್ಕೂ ಹೆಚ್ಚಿನ ಜನಸಂಖ್ಯೆಯ ಊರುಗಳಿಗೆ ಮಾತ್ರ ಅದನ್ನು ಅನ್ವಯಿಸಲಾಗಿತ್ತು. ಮೊದಲ ವರ್ಷ 7–8 ವಯೋಮಿತಿಯ ಮಕ್ಕಳಿಗೂ ಎರಡನೆಯ ವರ್ಷ 8–9 ವಯೋಮಿತಿಯ ವರೆಗೂ... ಹೀಗೆ ವಿಸ್ತರಿಸುತ್ತ ನಾಲ್ಕು ವರ್ಷಗಳಲ್ಲಿ 7–11ರ ವಯೋಮಿತಿಯ ಮಕ್ಕಳನ್ನೆಲ್ಲ ಅದರ ವ್ಯಾಪ್ತಿಯಲ್ಲಿ ತರಲಾಯಿತು.

ಮದ್ರಾಸು ಕರ್ನಾಟಕದ ಜಿಲ್ಲೆಗಳಲ್ಲಿ ಮದ್ರಾಸಿನ 1920ರ ಕಡ್ಡಾಯ ಶಿಕ್ಷಣ ಶಾಸನದನ್ವಯ ಯೋಜನೆಯನ್ನು ಆಯ್ದ ಕೆಲವು ಪ್ರದೇಶಗಳಲ್ಲಿ ಮಾತ್ರ ಆಚರಣೆಗೆ ತರಲಾಗಿತ್ತು. ಕಾರ್ಯರೂಪದಲ್ಲಿ ಅದೂ ಫಲಕಾರಿಯೆನಿಸಲಿಲ್ಲ.

ಹೈದರಾಬಾದ್ ಕರ್ನಾಟಕದ ಜಿಲ್ಲೆಗಳಲ್ಲಿ 1952ರ ಹೈದರಾಬಾದ್ ಕಡ್ಡಾಯ ಶಿಕ್ಷಣ ಯೋಜನೆ ಆಚರಣೆಗೆ ಬಂದಿತ್ತು. ಯೋಜನೆಯನ್ನು ಎಲ್ಲ ಜಿಲ್ಲೆಗಳಿಗೂ ಹಂತಹಂತವಾಗಿ ವಿಸ್ತರಿಸಲಾಗುತ್ತಿತ್ತು.

ಕೊಡಗು ಪ್ರಾಂತದಲ್ಲಿ 1961ಕ್ಕೆ ಹಿಂದೆ ಕಡ್ಡಾಯ ಶಿಕ್ಷಣ ಆಚರಣೆಯಲ್ಲಿರಲಿಲ್ಲ.

ವಿಶಾಲ ಮೈಸೂರಿನ ಎಲ್ಲ ಭಾಗಗಳಿಗೂ ಅನ್ವಯಿಸುವಂತೆ 1961ರಲ್ಲಿ ಕಡ್ಡಾಯ ಶಿಕ್ಷಣದ ರಾಜ್ಯ ಶಾಸನವಾಯಿತು. 1961–62ರಲ್ಲಿ 6–7 ವಯಸ್ಸಿನವರಿಗೂ 1962–63ರಲ್ಲಿ 6–8 ವಯಸ್ಸಿನವರಿಗೂ 1963–64ರಲ್ಲಿ 6–9 ವಯಸ್ಸಿನವರಿಗೂ 1964–65ರಲ್ಲಿ 6–10 ವಯಸ್ಸಿನವರಿಗೂ 1965–66ರಲ್ಲಿ 6–11 ವಯಸ್ಸಿನವರಿಗೂ ಈ ಯೋಜನೆಯ ವ್ಯಾಪ್ತಿಯನ್ನು ವಿಸ್ತರಿಸಲಾಯಿತು. ಮೂರನೆಯ ಪಂಚವಾರ್ಷಿಕ ಯೋಜನೆಯ ಕೊನೆಯ ಹೊತ್ತಿಗೆ 6–11ರ ವಯೋಮಿತಿಯ ಮಕ್ಕಳಿಗೆಲ್ಲ ಶಿಕ್ಷಣ ಕಡ್ಡಾಯವಾಯಿತು. ಈ ಶಾಸನದ ಪ್ರಕಾರ (1) ನಿಷ್ಕರ್ಷಿಸಿರುವ (6–11ರ) ವಯೋಮಿತಿಯ ಮಕ್ಕಳಿಗೆ ಶಿಕ್ಷಣ ಉಚಿತ ; (2) ಆ ವಯೋಮಿತಿಯಲ್ಲಿರುವ ಮಕ್ಕಳೆಲ್ಲ ಶಾಲೆಗೆ ಸೇರಬೇಕು; (3) ವಯೋಮಿತಿಯ ಕೊನೆಯನ್ನು ಮುಟ್ಟುವವರೆಗೆ ಮಕ್ಕಳನ್ನು ತಂದೆತಾಯಿಗಳು ಶಾಲೆಯಿಂದ ಬಿಡಿಸಬಾರದು ; (4) ಆ ವಯೋಮಿತಿಯ ಮಕ್ಕಳನ್ನು ಕೆಲಸಕ್ಕೆ ನೇಮಿಸಿಕೊಂಡು ಯಾರೂ ಅವರ ಶಿಕ್ಷಣಕ್ಕೆ ಅಡ್ಡಿಯಾಗಬಾರದು. ಮೇಲಿನ 2,3,4ನೆಯ ಅಂಶಗಳನ್ನು ಉಲ್ಲಂಘಿಸಿದವರು ಶಿಕ್ಷಾರ್ಹರಾಗುವರು. ಮಕ್ಕಳ ವಾಸದ ಮನೆಗೆ ಒಂದು ಮೈಲಿ ಹತ್ತಿರದಲ್ಲಿ ಶಾಲೆಯಿಲ್ಲದಿದ್ದರೆ, ಒಂದು ಮೈಲಿಯೊಳಗಿರುವ ಶಾಲೆಯಲ್ಲಿ ತಂದೆತಾಯಿಗಳ ಧಾರ್ಮಿಕ ನಂಬಿಕೆಗೆ ವಿರುದ್ಧವಾದ ಧಾರ್ಮಿಕ ಶಿಕ್ಷಣ ಕಡ್ಡಾಯ ಮಾಡಿದ್ದರೆ, ಅಂಗೀಕರಿಸಿದ ಶಿಕ್ಷಕರಿಂದ ಮನೆಯಲ್ಲಿ ಪಾಠ ಮಾಡಲು ಏರ್ಪಾಡು ಮಾಡಿಕೊಂಡಿದ್ದರೆ, ಕಾಯಿಲೆ, ಸಾಂಕ್ರಾಮಿಕ ರೋಗ, ಗಲಭೆ, ನೈಸರ್ಗಿಕ ಕ್ಷೋಭೆ ಇತ್ಯಾದಿಗಳು ತಲೆದೋರಿದ್ದರೆ, ಮಕ್ಕಳಲ್ಲಿ ಮಾನಸಿಕ ಅಥವಾ ದೈಹಿಕ ನ್ಯೂನತೆಗಳು ಇದ್ದರೆ, ಮಕ್ಕಳು ಶಾಲೆಗೆ ಸೇರದಿರಬಹುದಾದ ಅಥವಾ ಹಾಜರಾಗದಿರಬಹುದಾದ ಬಗ್ಗೆ ವಿನಾಯಿತಿ ನೀಡಲು ಶಾಸನದಲ್ಲಿ ಅವಕಾಶ ಕಲ್ಪಿಸಿದೆ.

ಮೈಸೂರು ರಾಜ್ಯ 1968–69ರಲ್ಲಿ 6–11ರ ವಯೋಮಿತಿಯ ಮಕ್ಕಳಲ್ಲಿ ಸೇ. 85ರಷ್ಟು ಮಕ್ಕಳನ್ನು ಯೋಜನೆಯ ವ್ಯಾಪ್ತಿಗೆ ಒಳಪಡಿಸುವ ಕಾರ್ಯದಲ್ಲಿ ಯಶಸ್ವಿಯಾಗಿದೆ. ಈ ಪ್ರಮಾಣ ನಗರಗಳಲ್ಲಿ ಸ್ವಲ್ಪ ಹೆಚ್ಚಾಗಿಯೂ ಗ್ರಾಮಾಂತರ ಪ್ರದೇಶಗಳಲ್ಲಿ ಸ್ವಲ್ಪ ಕಡಿಮೆಯಾಗಿಯೂ ಇದೆ. ಅಲ್ಲದೆ ಗಂಡುಮಕ್ಕಳ ಸೇರ್ಪಡೆಯ ಪ್ರಮಾಣ ಹೆಣ್ಣು ಮಕ್ಕಳ ಸೇರ್ಪಡೆಯ ಪ್ರಮಾಣಕ್ಕಿಂತ ಹೆಚ್ಚಾಗಿದೆ.

ಮೂರನೆಯ ಯೋಜನೆಯಲ್ಲಿ ಆರಂಭವಾದ ರಾಜ್ಯದ ಕಡ್ಡಾಯ ಶಿಕ್ಷಣದ ವ್ಯಾಪ್ತಿಗೆ ಒಳಪಟ್ಟ ಮಕ್ಕಳ ಸಂಖ್ಯೆಯನ್ನೂ ಅವರಲ್ಲಿ ಶಾಲೆಗೆ ಸೇರಿದ ಮಕ್ಕಳ ಸೇಕಡಾ ಪ್ರಮಾಣವನು ಸೂಚಿಸುವ ಪಟ್ಟಿ.

| ವರ್ಷ | ಹುಡುಗರು | ಹುಡುಗಿಯರು | ಸೇಕಡಾ ಪ್ರಮಾಣ | |
|---|---|---|---|---|
| | | | ಹುಡುಗರು | ಹುಡುಗಿಯರು |
| 1961–62 | 383763 | 316922 | 94.9 | 91.9 |
| 1962–63 | 749814 | 621831 | 91.7 | 86.8 |
| 1963–64 | 1077815 | 885613 | 99.6 | 84.85 |
| 1964–65 | 1269311 | 1021049 | 86.00 | 81.00 |

ಕಡ್ಡಾಯ ಶಿಕ್ಷಣದ ಯಶಸ್ಸು ಮೂರು ಅಂಶಗಳನ್ನು ಅವಲಂಬಿಸಿದೆ. ಮೊದಲನೆಯದಾಗಿ ಪ್ರತಿ ಮಗುವೂ ಹೋಗಿ ಬರಲು ಅನುಕೂಲವಾದಷ್ಟು ಹತ್ತಿರದಲ್ಲಿ ಶಾಲೆಯಿರಬೇಕು ; ಎರಡನೆಯದಾಗಿ, ನಿಯಮಿತ ವಯೋಮಿತಿಯ ಮಕ್ಕಳೆಲ್ಲ ಶಾಲೆಗೆ ಸೇರುವಂತೆ ಪ್ರಚಾರ, ಒತ್ತಾಯ ಅಗತ್ಯವೆನಿಸಿದರೆ ಸಂಬಂಧಿಸಿದವರಿಗೆ ದಂಡ—ಈ ಎಲ್ಲ ವಿಧಾನಗಳನ್ನೂ ಅನುಸರಿಸುವುದರ ಮೂಲಕ ಪ್ರಯತ್ನಿಸಬೇಕು. ಕೊನೆಯದಾಗಿ, ಒಮ್ಮೆ ಶಾಲೆಗೆ ಸೇರಿದ ಮಕ್ಕಳು ನಿಗದಿ ಮಾಡಿರುವ ವಯಸ್ಸು ತುಂಬುವವರೆಗೆ ಶಾಲೆಗೆ ಕ್ರಮವಾಗಿ ಹಾಜರಾಗುತ್ತಿರುವಂತೆ ನೋಡಿಕೊಳ್ಳಬೇಕು. (ಎನ್.ಎಸ್.ವಿ.)

**ಕಡ್‌ಫೀಸಿಸ್ I :** ಪ್ರಾಚೀನ ಭಾರತವನ್ನಾಳುತ್ತಿದ್ದ ಕುಶಾನ ವಂಶದ ಮೊದಲನೆಯ ಪ್ರಖ್ಯಾತ ದೊರೆ. ಚೀನೀ ತುರ್ಕಿಸ್ತಾನದ ಭಾಗವಾದ ಕಾನ್–ಸುವಿನಿಂದ ಯೂ–ಚಿ ಪಂಗಡದ ನಾಡಿನ ಐದು ಪ್ರಾಂತ್ಯಗಳಲ್ಲೊಂದಾದ ಕೀ–ಷ್ವಾಂಗ್ ಅಥವಾ ಕುಶಾನದ ಒಡೆಯನಾದ ಕೈಯೊಟ್ಸಿಯೊ–ಕಿಯೊವೇ ಉಳಿದ ನಾಲ್ಕು ಪ್ರಾಂತ್ಯಗಳನ್ನೂ ಹತ್ತಿಕ್ಕಿ ಐದಕ್ಕೂ ಒಡೆಯನಾದ. ಆತನ ಮಗನೇ ಯೆನ್–ಕಾವೊ–ಚೆನ್. ಈತ ಬಹುಶಃ ಈಗಿನ ಪಂಜಾಬ್ ಪ್ರದೇಶವಾದ ಟೀನ್–ಚೌವನ್ನು ಗೆದ್ದು ಅದನ್ನು ಆಳಲು ಅಧಿಕಾರಿಯೊಬ್ಬನನ್ನು ನೇಮಿಸಿದ. ಹೀಗೆಪ್ರಬಲವಾದ ಕುಶಾನವಂಶದ ಒಂದನೆಯ ಕಡ್‌ಫೀಸಿಸನಿಗೆ, ಕುಜುಲ ಕಡ್‌ಫೀಸಿಸ್, ಕುಜುಲಕರ ಕಡ್‌ಫೀಸಿಸ್ ಎಂಬ ಹೆಸರುಗಳೂ ಇದ್ದುವು. ಕುಜುಲ ಮತ್ತು ಕುಜುಲಕರ ಎಂಬವು ಈತನ ಬಿರುದುಗಳಿರಬೇಕೆಂಬುದು ಹಲವು ವಿದ್ವಾಂಸರ ಅಭಿಪ್ರಾಯ. ಕೈಯೊ–ಟ್ಸಿಯೊ–ಕಿಯೊವೇ ಒಂದನೆಯ ಕಡ್‌ಫೀಸಿಸ್ ಆಗಿದ್ದಿರಬೇಕೆಂಬ ಅಭಿಪ್ರಾಯವುಂಟು. ಈಚೆಗೆ ಈ ಅಭಿಪ್ರಾಯ ಮಾನ್ಯವಾಗಿಲ್ಲ. ಈತನ ಆಳ್ವಿಕೆಯ ಕಾಲದ ವಿಷಯವಾಗಿಯೂ ಭಿನ್ನಾಭಿಪ್ರಾಯಗಳಿವೆ. ಕ್ರಿ.ಶ. 50ರ ವೇಳೆಗೆ ಈತನ ಆಳ್ವಿಕೆ ಕೊನೆಗೊಂಡಿತೆಂದು ಕೆಲವುಂದಿ ವಿದ್ವಾಂಸರ ಅಭಿಪ್ರಾಯ. ಕ್ರಿ.ಶ. 15ರಿಂದ 65ರ ವರೆಗೆ ಆಳಿದನೆಂದೂ ಹೇಳಲಾಗಿದೆ. ಕುಜುಲ ಕಡ್‌ಫೀಸಿಸ್ ಪ್ರಾರಂಭದಲ್ಲಿ ಕಾಬೂಲಿನ ಕೊನೆಯ ಗ್ರೀಕ್ ದೊರೆಯಾದ ಹರ್ಮಿಯಸನ ಅಧೀನರಾಜನಾಗಿ ತನ್ನ ಆಳ್ವಿಕೆ ಪ್ರಾರಂಭಿಸಿದ್ದಿರಬೇಕು. ಹರ್ಮಿಯಸನ ಸಹೋದರಿಯನ್ನು ಕಡ್‌ಫೀಸಿಸನ ಹಿರಿಯ ಸಂಬಂಧಿಯೊಬ್ಬ ವಿವಾಹವಾಗಿದ್ದನೆಂದು ತಿಳಿದುಬರುತ್ತದೆ. ಹರ್ಮಿಯಸನ ರಾಜ್ಯದ ಮೇಲೆ ಗೊಂಡೋಫರ್ನೀಸ್ ಎಂಬ ಪಾರ್ಥಿಯನ್ ಆಕ್ರಮಣ ನಡೆಸಿದಾಗ ಹರ್ಮಿಯಸನಿಗೆ ಕಡ್‌ಫೀಸಿಸ್ ಸಹಾಯ ಮಾಡಿದ್ದಿರಬಹುದು. ಆದರೂ ಹರ್ಮಿಯಸ್ ಸೋತನೆಂದು ಕಾಣುತ್ತದೆ. ಸ್ವಲ್ಪ ಕಾಲದ ಮೇಲೆ, ಬಹುಶಃ ಗೊಂಡೋಫರ್ನೀಸನ ಅನಂತರ, ಕಾಬೂಲ್ ಕಾಂದಹಾರಗಳೆರಡರಿಂದಲೂ ಪಾರ್ಥಿಯನ್‌ರನ್ನು ಈತ ಹೊರದೂಡಿ ಅವುಗಳ ಮೇಲೆ ತನ್ನ ಪ್ರಭುತ್ವ ಸ್ಥಾಪಿಸಿದನೆನ್ನಬಹುದು. ಇವನ ರಾಜ್ಯ ಪರ್ಷಿಯ ಸಾಮ್ರಾಜ್ಯದ ಗಡಿಯಿಂದ ಭಾರತದ ವರೆಗೂ ವಿಸ್ತರಿಸಿತ್ತು. ಈತ ಅಚ್ಚು ಹಾಕಿಸಿದ ಬೆಳ್ಳಿ ಮತ್ತು ತಾಮ್ರಗಳ ನಾಣ್ಯಗಳ ಮೇಲೆ ಗ್ರೀಕ್ ಮತ್ತು ಖರೋಷ್ಠಿ ಲಿಪಿಗಳಲ್ಲಿ ಯವುಗ, ಕುಶಾನ, ಮಹಾರಾಜ, ರಾಜಾಧಿರಾಜ ಎಂಬ ಬಿರುದುಗಳನ್ನು ಕಾಣಬಹುದು. ಈತ ಹೊಸ ಧರ್ಮವೊಂದನ್ನು—ಬಹುಶಃ ಬೌದ್ಧಧರ್ಮವನ್ನು—ಅವಲಂಬಿಸಿದನೆಂಬುದಕ್ಕೆ ಕೆಲವು ನಾಣ್ಯಗಳಲ್ಲಿ ಸೂಚನೆ—ದೊರಕುತ್ತದೆ. ಈತ 80ನೆಯ ವಯಸ್ಸಿನಲ್ಲಿ ಕಾಲವಾದ. (ಜಿ.ಆರ್.ಆರ್.)

**ಕಡ್‌ಫೀಸಿಸ್ II :** ಕುಶಾನ ದೊರೆ. ಒಂದನೆಯ ಕಡ್‌ಫೀಸಿಸನ ಮಗ. ಈತನನ್ನು ಯೆನ್–ಕಾವ್–ಚೆನ್ ಎಂದೂ ಕರೆಯಲಾಗಿದೆ. ನಾಣ್ಯಗಳ ಮೇಲೆ ಕಂಡುಬರುವ ವೆಮ (ಯೆನ್) ಕಡ್‌ಫೀಸಿಸ್ (ಕಾವ್–ಜೆನ್) ಈತನೇ ಎಂದು ಹೇಳಲಾಗಿದೆ. ಟಿಯೆನ್–ಚೌ ಅಥವಾ ನಿಜವಾದ ಭಾರತದ ನೆಲದ ಮೇಲೆ ತನ್ನ ಆಧಿಪತ್ಯ ವಿಸ್ತರಿಸಿದ ಪ್ರಥಮ ಕುಶಾನ ದೊರೆ ಈತನೇ ಎಂಬುದಾಗಿ ಚೀನೀ ಮಾಹಿತಿಗಳು ಹೇಳುತ್ತವೆ. ಟಿಯೆನ್–ಚೌ ಈಗ ಪಂಜಾಬ್ ಎನಿಸಿಕೊಂಡಿರುವ ಪ್ರದೇಶ. ತನ್ನ ತಂದೆಯ ಆಳ್ವಿಕೆಯ ಕಾಲದಲ್ಲಿ ಗಾಂಧಾರ ಪ್ರದೇಶದ ವರೆಗೂ ಈತ ದಂಡೆತ್ತಿಬಂದಿದ್ದ. ಸಿಂಹಾಸನವನ್ನೇರಿದ ಕೂಡಲೇ ಭಾರತದ ಗಡಿ ದಾಟಿ ಪಂಜಾಬ್ ಮತ್ತು ಸಿಂಧೂ ಪ್ರದೇಶಗಳನ್ನು ಗೆದ್ದು ಅಲ್ಲಿ ಆಡಳಿತ ನಡೆಸಲು ಒಬ್ಬ ಪ್ರಾಂತ್ಯಾಧಿಕಾರಿಯನ್ನು ನೇಮಿಸಿದ. ಇವನ ಅಧಿಕಾರ ಮಧ್ಯಭಾರತ ಮತ್ತು ವಾರಾಣಸಿಯ ವರೆಗೂ ವ್ಯಾಪಿಸಿತ್ತೆಂದು ಹಲವು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ. ಇವನ ನಾಣ್ಯಗಳು ಈ ಹಲವು ಭಾಗಗಳಲ್ಲಿ ದೊರೆತಿದ್ದರೂ ಅಲ್ಲಿ ಇವನ ಆಡಳಿತ ಸ್ಥಾಪಿತವಾಗಿತ್ತೆಂದು ನಿರ್ಧರಿಸಲು ಸಾಕಷ್ಟು ಆಧಾರಗಳಿಲ್ಲ. ಕಡ್‌ಫೀಸಿಸನ ಅಧಿಕಾರ ಕಾಬೂಲ್, ಕಾಂದಹಾರ್, ಆಫ್ಘಾನಿಸ್ತಾನ, ಚೀನ, ತುರ್ಕಿಸ್ತಾನ, ಪಂಜಾಬ್ ಮತ್ತು ಸಿಂಧೂ ಪ್ರದೇಶಗಳ ಮೇಲೆ ಸ್ಥಾಪಿತವಾಗಿತ್ತು. ಈತನ ನಾಣ್ಯಗಳು ಮೇಲ್ಕಂಡ ಎಲ್ಲ ಪ್ರದೇಶಗಳಲ್ಲೂ ದೊರೆತಿವೆ.

ವೆಮ ಕಡ್‌ಫೀಸಿಸ್ ತನ್ನ ತಂದೆಯಂತೆ ನಾಣ್ಯಗಳ ಮೇಲೆ ಗ್ರೀಕ್ ಮತ್ತು ಖರೋಷ್ಠಿ ಭಾಷೆಯಲ್ಲಿ ತನ್ನ ಬಿರುದುಗಳನ್ನು ಕೆತ್ತಿಸಿದ್ದಾನೆ. ಇವನ ಅನಂತರದ ಕುಶಾನ ರಾಜರು ಬರೀ ಗ್ರೀಕ್ ಭಾಷೆಯನ್ನು ಮಾತ್ರ ನಾಣ್ಯಗಳಲ್ಲಿ ಬಳಸಿದ್ದಾರೆ. ಈತ ತಾಮ್ರ ಮತ್ತು ಕಂಚಿನ ನಾಣ್ಯಗಳ ಜೊತೆಗೆ ಚಿನ್ನದ ನಾಣ್ಯಗಳನ್ನೂ ಅಧಿಕ ಸಂಖ್ಯೆಯಲ್ಲಿ ಅಚ್ಚುಹಾಕಿಸಿದ. ಚಿನ್ನದ ನಾಣ್ಯಗಳನ್ನು ಅಚ್ಚುಹಾಕಿಸಿದ ಪ್ರಥಮ ಕುಶಾನರಾಜ ಈತ. ಈತನ ನಾಣ್ಯಗಳ ಮೇಲೆ ರಾಜಾಧಿರಾಜ, ಇಡೀ ಪ್ರಪಂಚದ ಸ್ವಾಮಿ ಮೊದಲಾದ ತನ್ನ ಬಿರುದುಗಳನ್ನು ಕೆತ್ತಿಸಿಕೊಂಡಿದ್ದಾನೆ. ಕೆಲವು ನಾಣ್ಯಗಳ ಮೇಲೆ ತ್ರಿಶೂಲಧಾರಿ ಮಹೇಶ್ವರನ ಚಿತ್ರವಿದೆ. ಈತ ಶಿವೋಪಾಸಕ. ಮಹೇಶ್ವರ ಎಂದು ಈತನಿಗೆ ಬಿರುದಿತ್ತು. ಆ ಕಾಲದಲ್ಲಿ ರೋಮ್, ಚೀನ, ಮತ್ತು ಕುಶಾನ ರಾಜ್ಯಗಳ ನಡುವೆ ವ್ಯಾಪಾರ ಚೆನ್ನಾಗಿ ಬೆಳೆದಿತ್ತು. ವೆಮನ ಆಳ್ವಿಕೆ ಕ್ರಿ.ಶ. 78ರಲ್ಲಿ ಆರಂಭವಾಯಿತೆಂದೂ ಆಗಿನಿಂದ ಆಚರಣೆಗೆ ಬಂದ ಶಕೆಯನ್ನು ಸ್ಥಾಪಿಸಿದವನೀತನೇ ಎಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಆದರೆ ಈತನ ನಾಣ್ಯಗಳ ಮೇಲಾಗಲಿ ಶಾಸನಗಳಲ್ಲಾಗಲಿ ಈ ಬಗ್ಗೆ ದೃಢವಾದ ಮಾಹಿತಿ ದೊರೆಯುವುದಿಲ್ಲ. ಅಲ್ಲದೆ ಈತನ ಆಳ್ವಿಕೆ ಆ ವೇಳೆಗಾಗಲೇ ಕೊನೆಗೊಂಡಿತ್ತೆಂದೂ ತಿಳಿದು ಬರುತ್ತದೆ. ಎರಡನೆಯ ಕಡ್‌ಫೀಸಿಸನ ಮರಣಾನಂತರ ಅಧಿಕಾರಕ್ಕೆ ಬಂದವನು ಕನಿಷ್ಕ.

(ಜಿ.ಆರ್.ಆರ್.)

**ಕಡ್ಡುಕಾರಿ :** ಪ್ಯಾಸರಿಫಾರ್ಮಿಸ್ ಗಣದ ಟರ್ಡಿಡೀ ಕುಟುಂಬಕ್ಕೆ ಸೇರಿದ ಹಕ್ಕಿ (ರಾಬಿನ್). ಪ್ರಪಂಚದ ಬಹುಭಾಗಗಳಲ್ಲಿ ಇವು ಇವೆ. ಸಾಮಾನ್ಯ ಬಳಕೆಯಲ್ಲಿ ರಾಬಿನ್ ಎಂಬ ಹೆಸರು ಈ ಕುಟುಂಬದ ಹಲವಾರು ಜಾತಿಯ ಹಕ್ಕಿಗಳಿಗೆ

ಅನ್ವಯವಾಗುತ್ತದೆ. ಉದಾಹರಣೆಗೆ ಅಮೆರಿಕದಲ್ಲಿ ಟರ್ಡಸ್ ಮೈಗ್ರಟೋರಿಯಸ್, ಯೂರೋಪಿನಲ್ಲಿ ಎರಿತೇಕಸ್ ರೂಬಿಕ್ಯುಲ, ಭಾರತದಲ್ಲಿ ಥ್ಯಾಮ್ನೊಬಿಯ ಮುಂತಾದುವು. ಸಾಧಾರಣವಾಗಿ ಇವೆಲ್ಲ ಬಹಳ ಸಣ್ಣ ಗಾತ್ರದ ಹಕ್ಕಿಗಳು. ಇವುಗಳ ಎದೆ ಕೆಂಪು ಬಣ್ಣದ್ದು.

ಭಾರತದ ಕಡ್ಲುಕಾರಿಯ ಬಣ್ಣ ಬೂದು, ಕಂದು ಅಥವಾ ಬಿಳಿ ಮತ್ತು ಕಪ್ಪು ಮಿಶ್ರಿತ. ತಲೆ ಮತ್ತು ಎದೆಯ ಭಾಗದಲ್ಲಿ ಬಿಳಿಯ ಮತ್ತು ಕಪ್ಪು ಮಚ್ಚೆಗಳಿವೆ. ಕೆಲವು ಬಾರಿ ರೆಕ್ಕೆಗಳ ಮೇಲೂ ಮಚ್ಚೆಗಳಿರಬಹುದು. ಹೆಣ್ಣು ಮತ್ತು ಗಂಡುಗಳು ನೋಡಲು ಒಂದೇ ತೆರನಾಗಿದ್ದರೂ ಗಂಡಿಗಿಂತ ಹೆಣ್ಣು ಮಾಸಲು ಬಣ್ಣದ್ದು. ಇದರ ಆಹಾರ ಕೀಟಗಳು. ಸಾಮಾನ್ಯವಾಗಿ ಗೋಡೆಗಳಲ್ಲಿನ ಬಿರುಕುಗಳಲ್ಲಿ ಮರಗಳಲ್ಲಿ ಗೂಡು ಕಟ್ಟುತ್ತದೆ. ಹೆಣ್ಣು ಒಂದು ಸಾರಿಗೆ 5–6 ಮೊಟ್ಟೆಯಿಡುತ್ತದೆ. ಸದಾಕಾಲ ಹಾಡಿಕೊಂಡು ಕಾಲಕಳೆಯುವ ಈ ಹಕ್ಕಿ ತನ್ನ ಸ್ನೇಹಪರತೆಯಿಂದಾಗಿ ಮಾನವನ ಮೆಚ್ಚುಗೆ ಗಳಿಸಿದೆ. (ಎಲ್.ಎಸ್.ಜಿ.)

**ಕಣ :** ಅಭಿಜಾತ ಬಲವಿಜ್ಞಾನದಲ್ಲಿ ಆಯಾಮರಹಿತ ಆದರೆ ದ್ರವ್ಯರಾಶಿಯುತ ವಸ್ತು (ಪಾರ್ಟಿಕಲ್). ಆದ್ದರಿಂದ ಇದೊಂದು ಮಿತದ್ರವ್ಯರಾಶಿಯಿರುವ ಬಿಂದು. ಗಣಿತಶಾಸ್ತ್ರದ ಅಮೂರ್ತ ಗಣನೆಗಳನ್ನು ಮಾಡುವಾಗ ಇಂಥ ಒಂದು ಪರಿಕಲ್ಪನೆ ಬಹಳ ಉಪಯುಕ್ತವಾಗುತ್ತದೆ. ಕಣದ ಮೇಲೆ ಗುರುತ್ವಾಕರ್ಷಣ ಬಲ ಮತ್ತು ಇತರ ಬಲಗಳು ಪ್ರಯುಕ್ತವಾಗುವುವು. $m$ ದ್ರವ್ಯರಾಶಿ ಇರುವ ಕಣದ ತೂಕ $mg$ ; ಇದು ಕಣದಿಂದ ಕೆಳಮುಖ ಭೂಲಂಬವಾಗಿ ವರ್ತಿಸುತ್ತದೆ. ಒಂದು ಕಲ್ಲನ್ನು ಎಸೆದಾಗ ಅದು ಸಾಗುವ ಪಥವೇನು–ಇಂಥ ವಾಸ್ತವಿಕ ಪ್ರಶ್ನೆ ಎದುರಾದಾಗ ಇದನ್ನು ಒಂದು ಅಮೂರ್ತ ಗಣಿತ ಸಮಸ್ಯೆ ಎಂದು ಭಾವಿಸಿ




ಈ ಆದರ್ಶೀಕೃತ ಚೌಕಟ್ಟಿನಲ್ಲಿ ಮೊದಲು ಬಗೆಹರಿಸುವುದು ವಾಡಿಕೆ. ಇದರ ಪ್ರಕಾರ ಕಲ್ಲಿನ ಆಕಾರ ಹೇಗೆಯೇ ಇದ್ದರೂ ಅದು ಒಂದು ಕಣ; ಅದರ ದ್ರವ್ಯರಾಶಿ $m$; ಅದನ್ನು ಎಸೆದ ವೇಗ (ಆರಂಭವೇಗ) $u$; ಎಸೆದ ದಿಕ್ಕು ಕ್ಷಿತಿಜರೇಖೆಯೊಡನೆ $\alpha$ ಕೋನ ಉಂಟುಮಾಡುತ್ತದೆ. ಇಲ್ಲಿ $m$, $u$, $\alpha$ ಗಳು ನಿಜಕಲ್ಲನ್ನು ಕುರಿತು ದತ್ತವಾಗಿರುವ ಬೆಲೆಗಳೇ ಆಗಿವೆ. ಎಸೆಬಿಂದುವನ್ನು ಮೂಲಬಿಂದುವಾಗಿಯೂ ಅದರಿಂದ ಕ್ಷಿತಿಜೀಯ ಹಾಗೂ ಊರ್ಧ್ವವಾಗಿ ಎಳೆದ ರೇಖೆಗಳನ್ನು ಕ್ರಮವಾಗಿ $x$– ಮತ್ತು $y$–ಅಕ್ಷಗಳಾಗಿಯೂ ಆರಿಸಿ ಯಾವುದೇ ಕಾಲ $t$ ಯಲ್ಲಿ ಕಣದ ಸ್ಥಾನ $P(x, y)$ ಎಂದು ಭಾವಿಸಿದರೆ.

$$x = u\cos\alpha t$$

$$y = u\sin\alpha t - \tfrac{1}{2}gt^2$$

$$\frac{dx}{dt} = u\cos\alpha, \qquad \frac{dy}{dt} = u\sin\alpha - gt$$

ಎಂಬ ಸಮೀಕರಣಗಳು ದೊರೆಯುತ್ತವೆ. ಇಲ್ಲಿ ಕಣ ನಿರ್ವಾತಪ್ರದೇಶದಲ್ಲಿ ಚಲಿಸುತ್ತಿದೆಯೆಂದೂ ಗುರುತ್ವಾಕರ್ಷಣ ಬಲದ ವಿನಾ ಬೇರಾವ ಬಾಹ್ಯಬಲವೂ ಅದರ ಮೇಲೆ ಪ್ರಯುಕ್ತವಾಗಿಲ್ಲವೆಂದೂ ಭಾವಿಸಿದ್ದೇವೆ. ಈ ಸಮೀಕರಣಗಳಿಂದ ಕಣದ ಪಥ

$$y = x\tan\alpha - \frac{gx^2}{2u^2\cos^2\alpha}$$

ಎಂಬ ಸಮೀಕರಣವೆಂದು ತಿಳಿಯುತ್ತದೆ. ಇದು ಒಂದು ವಿಶಿಷ್ಟವಾದ ಪ್ಯರಾಬೊಲ. ಈ ವಕ್ರ ರೇಖೆಯ ಸಮಸ್ತ ಗುಣಗಳನ್ನು ತಿಳಿಯುವುದು ಸಾಧ್ಯವಿದೆ. ಆದ್ದರಿಂದ ಇಂಥ ಒಂದು ಆದರ್ಶೀಕೃತ ಚೌಕಟ್ಟಿನಲ್ಲಿ ಕಣದ ವರ್ತನೆಯನ್ನು ಪೂರ್ಣವಾಗಿ ತಿಳಿದಂತಾಯಿತು. ಉದಾಹರಣೆಗೆ ಕಣದ ವೇಗದ ವರ್ಗ

$$\left(\frac{dx}{dt}\right)^2 + \left(\frac{dy}{dt}\right)^2 = u^2 + g^2t^2 - 2gut\sin\alpha$$

ಕ್ಷಿತಿಜೀಯವಾಗಿ ಕಣ ಸಾಗಿರುವ ದೂರ ಎಂದರೆ

ಅಡ್ಡದೂರ (ರೆಂಜ್), $OA = 2u^2\sin\alpha\cos\alpha/g$

ಕಣ ಏರಿದ ಗರಿಷ್ಠ ಎತ್ತರ, $BN = u^2\sin^2\alpha/2g$

ಇಂಥ ತೀರ್ಮಾನಗಳಿಂದ ವಾಸ್ತವಿಕ ಸನ್ನಿವೇಶಗಳಿಗೆ ಮರಳುವುದು ಮುಂದಿನ ಹೆಜ್ಜೆ.

ಒಂದು ಕಣದ ಮೇಲೆ ಪ್ರಯುಕ್ತವಾಗುವ ಬಲಗಳೆಲ್ಲವೂ ಒಟ್ಟಾಗಿ ಒಂದೇ ಫಲಿತ ಬಲವನ್ನು ನೀಡುವುವು. ಆದ್ದರಿಂದ ಕಣದ ಚಲನೆ ಸರಳರೇಖೆಯ ಮೇಲೆ ಮಾತ್ರವಿದೆ; ಎಂದರೆ ಅದಕ್ಕೆ ಆವರ್ತಚಲನೆ ಇಲ್ಲ. ಒಂದು ವಸ್ತುವನ್ನು ಅಸಂಖ್ಯಾತ ಕಣಗಳ ನಿಬಿಡಸಮೂಹ ಎಂದು ಪರಿಗಣಿಸುತ್ತೇವೆ. ಸರಳ ಚಲನೆ (ಟ್ರಾನ್ಸ್‌ಲೇಷನ್) ಮತ್ತು ಆವರ್ತಚಲನೆ (ರೊಟೇಷನ್) ಇವುಗಳಿಂದ ಒಂದು ವಸ್ತುವಿನ ಕಣಗಳ ಸಾಪೇಕ್ಷಸ್ಥಾನಗಳು ಬದಲಾಗದಿದ್ದರೆ ಅದನ್ನು ದೃಢವಸ್ತುವೆಂದು ಕರೆದು ಅದರ ಚಲನೆಯನ್ನು ಕುರಿತು ಗಣಿತದ ಪ್ರತ್ಯೇಕವಾದ ಅಮೂರ್ತ ಗಣನೆಗಳನ್ನು ಮಾಡುತ್ತಾರೆ. (ನೋಡಿ—ಆಲಂಬರ್ಟನ ತತ್ತ್ವ ; ದೃಢವಸ್ತುಗಳ ಬಲವಿಜ್ಞಾನ.) ಹೀಗೆ ಕಣ ಎಂಬ ಕಲ್ಪನೆ ಅಭಿಜಾತ ಬಲವಿಜ್ಞಾನದಲ್ಲಿ ವಾಸ್ತವಿಕತೆಗೂ ಗಣನೆಗೂ ನಡುವೆ ಇರುವ ಒಂದು ಕಾಲ್ಪನಿಕ ಸೇತು.

ಭೌತಶಾಸ್ತ್ರದಲ್ಲಿ ಮೂಲಕಣಗಳನ್ನು (ಎಲಿಮೆಂಟರಿ ಪಾರ್ಟಿಕಲ್ಸ್) ಕಣಗಳೆಂದೇ ಕರೆಯುವುದು ವಾಡಿಕೆ. ಇವುಗಳನ್ನು ಕುರಿತ ವಿವರಗಳಿಗೆ ನೋಡಿ—ಮೂಲಕಣಗಳು. *

**ಕಣಗಿಲೆ :** ಕಣಗಿಲೆ ಅಪೊಸೈನೇಸೀ ಕುಟುಂಬದ ನೀರಿಯಮ್ ಓಲಿಯಂಡರ್ ಎಂಬ ವೈಜ್ಞಾನಿಕ ಹೆಸರಿನ ಸುಂದರವಾದ ಹೂ ಬಿಡುವ ಬಹುವಾರ್ಷಿಕ ಪೊದೆಸಸ್ಯ.



ಒಂದೇ ಸುತ್ತಿನ ಹೂದಳಗಳುಳ್ಳ ಬಗೆ

ಇದನ್ನು ಉದ್ಯಾನವನ, ದೇವಸ್ಥಾನ ಮತ್ತು ಮನೆಗಳ ಪಕ್ಕದಲ್ಲಿ ಅಲಂಕಾರಸಸ್ಯವಾಗಿ ಬೆಳೆಸುತ್ತಾರೆ. ಕಣಗಿಲೆಹೂವನ್ನು ದೇವರ ಪೂಜೆಗೂ ಹಾರ ಮತ್ತು ಕಳಸದ ಅಲಂಕಾರಕ್ಕೂ ಉಪಯೋಗಿಸುತ್ತಾರೆ. ಅಲ್ಲದೆ ಈ ಸಸ್ಯದ ವಿವಿಧ ಭಾಗಗಳು ಅನೇಕ ಆಯುರ್ವೇದ ಔಷಧಗಳಲ್ಲಿ ಉಪಯೋಗದಲ್ಲಿವೆ. ಕರವೀರ, ಕಣಿಗಲು ಪರ್ಯಾಯ ನಾಮಗಳು,

ನೀರಿಯಮ್ ಜಾತಿಯಲ್ಲಿ ಮೂರು ಮುಖ್ಯ ಪ್ರಭೇದಗಳಿವೆ. ಇವು ಮೆಡಿಟರೇನಿಯನ್ ಪ್ರದೇಶದಿಂದ ಜಪಾನ್‌ದೇಶದವರೆಗೂ ಹರಡಿವೆ. ದುಂಡಗಿರುವ ಕಾಂಡದ ತುದಿಯಲ್ಲಿ ಚಿಕ್ಕ ತೊಟ್ಟಿರುವ ವೃತ್ತಜೋಡಣೆಯ ಎಲೆಗಳು ಇರುತ್ತವೆ. ತುದಿಯಲ್ಲಿ ಹೊಸ ಹೊಸ ಎಲೆಗಳು ಹೊರಬಂದಂತೆಲ್ಲ ಕೆಳಭಾಗದಲ್ಲಿರುವ ಹಳೆಯ ಎಲೆಗಳು ಉದುರಿ ಹೋಗುತ್ತವೆ. ಎಲೆಯ ತೊಟ್ಟುಗಳು ಕಾಂಡಕ್ಕೆ ಬಿಗಿಯಾಗಿ ಅಂಟಿಕೊಂಡಿದ್ದು, ಅನಂತರ, ಉದುರುವುದರಿಂದ ಕಾಂಡದ ಮೇಲೆ ಎಲೆಗಳು ಅಂಟಿಕೊಂಡಿದ್ದ ಕಲೆಗಳು ಉಳಿಯುತ್ತವೆ. ಭರ್ಜಿಯಾಕಾರ, ಚರ್ಮದಂತೆ ಒರಟು, ಅತಿ ಹಸಿರಾದ ಮೇಲುಭಾಗ, ನಸುಹಸಿರು ಬಣ್ಣದ ತಳಭಾಗ, ನಯ ಅಂಚು, ಮೊನಚು ತುದಿ ಇವು ಎಲೆಗಳ ಲಕ್ಷಣ. ಎಲೆಯ ನಡುದಿಂಡು ಮತ್ತು ನಾಳಗಳು ತಳಭಾಗದಲ್ಲಿ ಪ್ರಮುಖವಾಗಿ ಉಬ್ಬಿ ಕಾಣುತ್ತವೆ. ತುದಿಯ ಗೊಂಚಲಾಗಿ ಬಿಡುವ ಮಧ್ಯಾರಂಭಿ (ಸೈಮೋಸ್) ಹೂಗೊಂಚಲು ಆಕರ್ಷಕವಾಗಿ ಕಾಣುತ್ತದೆ. ಪುಷ್ಪಪತ್ರ ಸಾಮಾನ್ಯವಾಗಿ 5. ಇವುಗಳ ಬುಡದ ಒಳಭಾಗದಲ್ಲಿ ಗ್ರಂಥಿಗಳಿವೆ. ಹೂದಳ ಸಂಯುಕ್ತ ಮಾದರಿಯದು (ಗ್ಯಾಮೊಪೆಟಲಸ್). ಅದರಲ್ಲಿ 5 ಭಾಗಗಳಿವೆ. ಅದರ ಆಕಾರ ಆಲಿಕೆಯಂತೆ. ಹೂಗಂಟಲ ಮೇಲೆ ಅನುಬಂಧಿಕೆ (ಅಪೆಂಡೇಜ್) ಇರುತ್ತದೆ. ಚಿಕ್ಕ ತೊಟ್ಟಿರುವ 5 ಕೇಸರಗಳು ಹೂಗಂಟಲಿಗೆ ಅಂಟಿರುತ್ತವೆ. ಪರಾಗಕೋಶಗಳಲ್ಲಿ ಪ್ರಭೇದಕ್ಕೆ ಅನುಸಾರವಾಗಿ ವಿವಿಧ ಬಣ್ಣದ ಅನುಬಂಧಿಕೆಗಳಿವೆ. ಅಂಡಾಶಯ ಉಚ್ಚಸ್ಥಾನದ್ದು. ಎರಡು ಕಾರ್ಪೆಲುಗಳಿವೆ. ಫಲ ಫಾಲಿಕಲ್‌ಗಳ ಒಂದು ಜೋಡಿ. ಕಣಗಿಲೆಯ ಇನ್ನೊಂದು ಪ್ರಭೇದವಾದ ನೀ. ಓಡರೇಟಮಿನಲ್ಲಿ ಅನೇಕ ಆಕರ್ಷಕ ತಳಿಗಳಿವೆ. ಒಂದು ಸುತ್ತಿನ ಬಿಳುಪು ಬಣ್ಣದ ಹೂಬಿಡುವ ತಳಿ (ಅಲ್ಬೊಪ್ಲಿನಮ್), ಎರಡು ಸುತ್ತಿನ ಅತೀ ಕಡುಗೆಂಪು ಬಣ್ಣದ (ಬ್ಲ್ಯಾಕ್ ಪ್ರಿನ್ಸ್), ಎರಡು ಸುತ್ತಿನ ನಸುಗೆಂಪು ಬಣ್ಣದ ಹೂಬಿಡುವ ತಳಿ (ಫ್ಲೋರೊಪ್ಲಿನೊ), ಒಂದು ಸುತ್ತಿನ ಗುಲಾಬಿ ಬಣ್ಣದ ಹೂ ಬಿಡುವ ತಳಿ (ರೋಸಿಯ)—ಇವು ತೋಟಗಾರಿಕೆಯಲ್ಲಿ ಹೆಸರಾಗಿರುವ ತಳಿಗಳು.

ಬಹು ಸುತ್ತಿನ ಹೂದಳಗಳುಳ್ಳ ಬಗೆ

ಕಣಗಿಲೆ ಸಸ್ಯವನ್ನು ಕಾಂಡದ ತುಂಡುಗಳಿಂದ ಸುಲಭವಾಗಿ ವೃದ್ಧಿಮಾಡಬಹುದು. ಕಾಂಡದ ತುಂಡುಗಳನ್ನು ನಾಟಿಮಾಡಲು ಮಳೆಗಾಲ ಯೋಗ್ಯವಾದದ್ದು. ತುಂಡುಗಳನ್ನು ನಾಟಿಮಾಡಿದಮೇಲೆ ಅವು ಚಿಗುರಿ ಮೂರು ಅಡಿ ಎತ್ತರ ಬೆಳೆಯುವವರೆಗೆ ಕ್ರಮವಾಗಿ ನೀರು ಹಾಕಬೇಕು. ಸುತ್ತಲೂ ಬೇಲಿಹಾಕಿದರೆ ಉತ್ತಮ.

ಈ ಗಿಡದ ಬೇರು, ತೊಗಟೆ, ಬೀಜ ಮತ್ತು ಇತರ ಭಾಗಗಳೂ ವಿಷಕಾರಿಯಾದವು. ಅದರ ಹಾಲಿನಂಥ ದ್ರವದಲ್ಲಿರುವ ಗ್ಲೈಕೊಸೈಡ್ ಎಂಬ ವಸ್ತು ಹೃದಯ ಮತ್ತು ಬೆನ್ನುನರಗಳ ಮೇಲೆ ನಿಶ್ಚೇತನಗೊಳಿಸುವ ಪರಿಣಾಮವನ್ನು ಬೀರುವುದು. ಈ ಸಸ್ಯದ ಸುಟ್ಟಬೂದಿಯಲ್ಲಿ ಪೊಟ್ಯಾಸಿಯಂ ಲವಣಗಳು ಅಧಿಕವಾಗಿರುತ್ತವೆ. ಬೇರಿನ ತೊಗಟೆಯಿಂದ ಇಳಿಸುವ ಒಂದು ಜಾತಿಯ ತೈಲವನ್ನು ಚರ್ಮರೋಗಕ್ಕೆ ಔಷಧಿಯಾಗಿ ಬಳಸುವರು. ([illegible] ಎಸ್.ಎಸ್.ಆರ್.)

**ಕಣಗಿಲೆ ಗಿಡದ ಕುಟುಂಬ :** ಸಂಯುಕ್ತ ಹೂದಳಗಳನ್ನುಳ್ಳ ದ್ವಿದಳ ಸಸ್ಯವರ್ಗದ ಒಂದು ಕುಟುಂಬ (ಅಪೊಸೈನೇಸೀ). ಇದರಲ್ಲಿ ಸುಮಾರು 1,400 ಪ್ರಭೇದಗಳನ್ನೊಳಗೊಂಡ 180 ಜಾತಿಯ ಗಿಡಗಳಿವೆ. ಬಹುಪಾಲು ಸಸ್ಯಗಳು ಉಷ್ಣವಲಯಗಳಲ್ಲಿ ಕಾಣಬರುವಂಥವು. ಸಮಶೀತೋಷ್ಣವಲಯದಲ್ಲೂ ಕೆಲವು ಪ್ರಭೇದಗಳಿವೆ. ಈ ಗಿಡಗಳಲ್ಲಿ ಹೆಚ್ಚಿನವು ಶಾಕಗಳು (ಮೂಲಿಕೆ). ಪೊದೆಸಸ್ಯಗಳೂ ಬಳ್ಳಿಗಳೂ ಉಂಟು.

ಈ ಕುಟುಂಬದ ವಿಶಿಷ್ಟ ಲಕ್ಷಣಗಳು ಇವು : ಕಾಂಡವನ್ನು ಅಡ್ಡ ಕೊಯ್ದು ಪರೀಕ್ಷಿಸಿದಾಗ ಕಾಣಬರುವ ವಿಶೇಷಬಗೆಯ ನಾಳ ಸಮೂಹಗಳು (ಇವುಗಳಲ್ಲಿ ಮಧ್ಯೆ ನೀರ್ನಾಳಗಳ ಗುಂಪೂ ಮೇಲೆ ಮತ್ತು ಕೆಳಗೆ ಆಹಾರನಾಳಗಳ ಗುಂಪೂ ಇದ್ದು ಅವನ್ನು ಬೈಕೊಲ್ಯಾಟರಲ್ ವ್ಯಾಸ್ಕುಲರ್ ಬಂಡಲ್ಸ್ ಎನ್ನುತ್ತಾರೆ); ಕಾಂಡ ಹಾಗೂ ಎಲೆಗಳಲ್ಲಿ ಬಿಳಿಯ ಅಥವಾ ಬಣ್ಣವಿಲ್ಲದ ಹಾಲ್ನೊರೆ (ಲೇಟೆಕ್ಸ್) ಇರುವುದು; ಸರಳ ಎಲೆಗಳು ಪರ್ಯಾಯ, ಅಭಿಮುಖ ಅಥವಾ ಸುತ್ತುಮಾದರಿಯಲ್ಲಿ ಜೋಡಣೆಗೊಂಡಿರುವುದು; ಸಂಕೀರ್ಣ ಮಾದರಿಯ ಅಥವಾ ಮಧ್ಯಾರಂಭಿ ಮಾದರಿಯ ಹೂಗೊಂಚಲುಗಳು; ಅರೀಯ ಸಮಾಂಗತೆಯುಳ್ಳ ದ್ವಿಲಿಂಗಿ ಹೂಗಳು; ಸಂಯುಕ್ತ ಮಾದರಿಯ ಪುಷ್ಪಪತ್ರ ಹಾಗೂ ಪುಷ್ಪದಳಗಳು; ದಳಗಳ ಬುಡದಲ್ಲಿ ಮಧುಗ್ರಂಥಿಗಳಿರುವುದು; ಹೂದಳಗಳಿಗೆ ಪರ್ಯಾಯವಾಗಿ ಜೋಡಿಸಿರುವ ಐದು ಕೇಸರಗಳು ಮತ್ತು ಬಾಣದ ಮೊನೆಯಂತಿರುವ ಪರಾಗಕೋಶಗಳು; ಸಂಪೂರ್ಣ ಅಥವಾ ಅರ್ಧ ಉಚ್ಚಸ್ಥಾನದ ಎರಡು ಕಾರ್ಪೆಲುಗಳಿಂದಾದ ಅಂಡಾಶಯ; ಅಂಡಾಶಯದ ಶಲಾಕೆ ಮತ್ತು ಶಲಾಕಾಗ್ರದ ಭಾಗಗಳು ಮಾತ್ರ ಕೂಡಿದ್ದು ಬುಡದಭಾಗ ಬಿಡಿಯಾಗಿ ಎರಡು ಅಂಡಕೋಶಗಳನ್ನು ಹೊಂದಿರುವುದು ; ಅವುಗಳಲ್ಲಿ ಎರಡರಿಂದ ಹಲವಾರು ಅಂಡಕಗಳಿರುವುದು ; ಡಮರು ಆಕಾರದ ಶಲಾಕಾಗ್ರ ; ಫಲಜೋಡಿಯಾಗಿರುವ ಫಾಲಿಕಲ್‌ಗಳು; ಬೀಜಗಳಲ್ಲಿ ಅವುಗಳ ಪ್ರಸರಣ ಕ್ರಿಯೆಯಲ್ಲಿ ಸಹಕಾರಿಯಾಗುವ ಕೂದಲುಗಳಿರುವುದು.

ಕಣಗಿಲೆ ಕುಟುಂಬದ ಸಸ್ಯಗಳು ಹಿಂದಿನ ಕಾಲದಿಂದಲೂ ಹಲವಾರು ರೀತಿಯಿಂದ ಉಪಯುಕ್ತವೆನಿಸಿವೆ. ಕೆಲವನ್ನು ಅಲಂಕಾರಸಸ್ಯಗಳಾಗಿ ತೋಟಗಳಲ್ಲಿ, ಮನೆಗಳಲ್ಲಿ, ದೇವಸ್ಥಾನಗಳ ಬಳಿಯಲ್ಲಿ, ಬೆಳೆಸುತ್ತಾರೆ. ಉದಾಹರಣೆಗೆ ಕಣಗಿಲೆ (ನೀರಿಯಮ್) ದೇವಕಣಗಿಲೆ (ಪ್ಲೂಮೇರಿಯ), ಹಳದಿ ಹೂ ಗಿಡ (ಅಲಮಂಡ), ನಂದಿಬಟ್ಟಲು (ಎರ್ವಟಾಮಿಯ) ಮತ್ತು ಕಾಸಿಕಣಗಿಲೆ (ವಿಂಕ). ಲಾಂಡಾಲ್ಫಿಯ, ಫಂಟೂಮಿಯ, ಅರ್ನಿಯೋಲ ಮತ್ತು ವಿಲ್ಲೋಗ್‌ಬಿಯ ಎಂಬುವುಗಳ ಹಾಲ್ನೊರೆಯಿಂದ ರಬ್ಬರ್ ತಯಾರಿಸುತ್ತಾರೆ. ಸರ್ಪಗಂಧಿ (ರಾವುಲ್ಫಿಯ), ಆಸ್ಪಿಡೋಸ್ಪರ್ಮ, ಸ್ಟ್ರೊಫ್ಯಾಂತೆಸ್, ಸಪ್ತಪರ್ಣ (ಆಲ್‌ಸ್ಟೋನಿಯ), ಅಲಮಂಡ, ಬೆಪ್ಪಾಲೆ (ರೈಟಿಯ) ಕೊರಸಿಗನ ಗಿಡ (ಹೊಲೇರಿನ) ಮುಂತಾದುವು ಆಯುರ್ವೇದ ಔಷಧಿ ತಯಾರಿಕೆಯಲ್ಲಿ ಹೆಸರಾಗಿವೆ. ಕಬಳಿ (ಕ್ಯಾರಿಸ) ಗಿಡದಿಂದ ಮರದ ಗೊಂಬೆಗಳನ್ನು ತಯಾರುಮಾಡುತ್ತಾರೆ. ಅಲ್ಲದೆ ಇದರ ಕಾಯಿಯಿಂದ ಉಪ್ಪಿನಕಾಯಿ ಮಾಡುವುದೂ ಉಂಟು. ಉಷ್ಣವಲಯದಲ್ಲಿ ಬೆಳೆಯುವ ಸರ್ಬೆರ, ಮಡಗಾಸ್ಕರಿನ ನಿವಾಸಿಯಾದ ಟಾಂಜೆನಿಯ ಮತ್ತು ದಕ್ಷಿಣ ಆಫ್ರಿಕದಲ್ಲಿ ಬೆಳೆಯುವ ಅಕೊಕ್ಯಾಂತೆರ ಎನ್ನುವ ಗಿಡಗಳು ವಿಷಪೂರಿತವಾಗಿವೆ.

(ಎ.ಕೆ.ಕೆ.)

**ಕಣಜ :** ರೈತರಾಗಲಿ ಜಮೀನಿನ ಒಡೆಯರಾಗಲಿ ಇತರರಾಗಲಿ ಸ್ವಂತ ಉಪಯೋಗಕ್ಕೋ ಮಾರಾಟಕ್ಕಾಗಿಯೋ ದವಸಧಾನ್ಯವನ್ನು—ಮುಖ್ಯವಾಗಿ ಅವನ್ನು ಒಕ್ಕಿದ ಮೇಲೆ ಅಥವಾ ಅದರ ಸಿಪ್ಪೆ ತೆಗೆದ ಮೇಲೆ—ಸಂಗ್ರಹಿಸಿಡಲು (ಸಾಮಾನ್ಯವಾಗಿ ಖಾಸಗಿಯಾಗಿ) ನಿರ್ಮಿಸಿದ ಕಟ್ಟಡ (ಗ್ರ್ಯಾನರಿ). ಪಣತ ಎಂದೂ ಇದನ್ನು ಕರೆಯುವುದುಂಟು. ನೆಲದ ಅಡಿಯಲ್ಲಿ ಕಟ್ಟಲಾದ ಕಣಜವನ್ನು ಹಗೇವು ಎನ್ನುವುದು ವಾಡಿಕೆ. ಜೋಳವನ್ನು ಹಗೇವಿನಲ್ಲೂ ಬತ್ತವನ್ನು ಕಣಜದಲ್ಲೂ ಸಾಮಾನ್ಯವಾಗಿ ತುಂಬಿಡುತ್ತಾರೆ. ಹೀಗೆಯೇ ಕೆಲವು ಧಾನ್ಯಗಳನ್ನು ಕಣಜದಲ್ಲೂ ಇನ್ನು ಕೆಲವನ್ನು ಹಗೇವಿನಲ್ಲೂ ಸಂಗ್ರಹಿಸುವುದು ರೂಢಿಯಾಗಿ ಬಂದಿದೆ.

ಧಾನ್ಯಕ್ಕೆ ತೇವ ಹತ್ತದಂತೆಯೂ ಇಲಿ ಹೆಗ್ಗಣ ಪಕ್ಷಿಗಳೇ ಮುಂತಾದವು ತಿನ್ನದಂತೆಯೂ ಹುಳು ಬೀಳದಂತೆಯೂ ಅದನ್ನು ರಕ್ಷಿಸಿಡುವುದೇ ಕಣಜದ ಮುಖ್ಯ ಉದ್ದೇಶ. ಒಂದು ಕುಟುಂಬದ ಉಪಯೋಗಕ್ಕೆ ತಕ್ಕಷ್ಟು ಧಾನ್ಯ ಸಂಗ್ರಹಮಾಡಬಹುದಾದ ಸಣ್ಣ ಕಣಜದಿಂದ ಹಿಡಿದು ದೊಡ್ಡ ವ್ಯಾಪಾರಿಗಳ ಇಲ್ಲವೆ ಸಂಘ ಸಂಸ್ಥೆಗಳ ಒಡೆತನದಲ್ಲಿ ಇರುವ ಭಾರಿಯ ಕಣಜದ ವರೆಗೆ ಅಗತ್ಯಾನುಗುಣವಾಗಿ ಇದರ ಗಾತ್ರ ವ್ಯತ್ಯಾಸವಾಗುತ್ತದೆ. ಕಣಜಗಳು ಇಂದಿನ ಆರ್ಥಿಕ ಕ್ಷೇತ್ರದಲ್ಲಿ ಬಹಳ ಮಹತ್ತ್ವದ ಪಾತ್ರ ವಹಿಸಿರುತ್ತವೆ. ಆಧುನಿಕ ನಾಗರಿಕ ಜೀವನಕ್ಕೆ ಇವು ಬಹಳ ಅವಶ್ಯಕ. ಪ್ರಪಂಚದ ಬೇರೆ ಬೇರೆ ದೇಶಗಳು ಹೇರಳವಾಗಿ ಬೆಳೆಯುತ್ತಿರುವ ಕಾಳು

ಗಳನ್ನು ಸಂಗ್ರಹಿಸಿಟ್ಟುಕೊಂಡು ಕೊರತೆಯ ರಾಷ್ಟ್ರಗಳಿಗೆ ಆಹಾರ ಪೂರೈಸುವಂತೆ ಮಾಡುವುದರಲ್ಲಿ ಕಣಜಗಳು ಬಹಳ ಸಹಾಯಕ.

ಕಣಜದ ಗಾತ್ರ ಮತ್ತು ರಚನೆಗಳು ಅದರಲ್ಲಿ ಸಂಗ್ರಹಿಸಿಡಬೇಕಾದ ಧಾನ್ಯದ ಪ್ರಮಾಣವನ್ನು ಅವಲಂಬಿಸಿರುತ್ತವೆ. ಆಧುನಿಕ ಕಣಜಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು. (1) ತಾತ್ಕಾಲಿಕ ಕಣಜಗಳು, (2) ಒಂದು ಸ್ಥಳದಿಂದ ಬೇರೊಂದು ಸ್ಥಳಕ್ಕೆ ಒಯ್ಯಬಹುದಾದ ಕಣಜಗಳು ಮತ್ತು (3) ಶಾಶ್ವತವಾದ ಕಣಜಗಳು ಹಾಗೂ ಧಾನ್ಯವನ್ನು ಮೇಲೆ ಎತ್ತಿ ಸಂಗ್ರಹಿಸುವ ಕಟ್ಟಡಗಳು (ಎಲಿವೇಟರ್ ಬಿಲ್ಡಿಂಗ್ಸ್).

ತಾತ್ಕಾಲಿಕವಾಗಿ ಧಾನ್ಯ ಸಂಗ್ರಹಿಸಿಡಬೇಕಾದಾಗ ನೆಲದ ಮೇಲೆ ನೀರು ಅಂಟದಂಥ ಕಾಗದವನ್ನು ಹರವಿ ಅದರ ಮೇಲೆ ಧಾನ್ಯವನ್ನಿಡಬಹುದು. ಕಂಬಗಳನ್ನು ನೆಲದಲ್ಲಿ ಹುಗಿದು ಅದರ ಸುತ್ತಲೂ ಮರದ ಹಲಗೆಯನ್ನೋ ತಗಡುಗಳನ್ನೋ ಜೋಡಿಸಿ ಅಲ್ಲಿ ಧಾನ್ಯ ಸಂಗ್ರಹಿಸಬಹುದು. ಆದರೆ ಇಂಥ ವಿಧಾನದಿಂದ ಧಾನ್ಯಕ್ಕೆ ಸಾಕಷ್ಟು ಸಂರಕ್ಷಣೆ ದೊರೆಯಲಾರದು.

ಒಂದು ಸ್ಥಳದಿಂದ ಬೇರೊಂದು ಸ್ಥಳಕ್ಕೆ ಒಯ್ಯಬಹುದಾದ ಕಣಜವನ್ನು ಮರ ಅಥವಾ ತಗಡಿನಿಂದ ಮಾಡಿರುತ್ತಾರೆ. ಕಣಜದ ಕೆಳಭಾಗದಲ್ಲಿ ಮರದ ತುಂಡುಗಳಿದ್ದು ಅವುಗಳ ನೆರವಿನಿಂದ ಕಣಜವನ್ನು ಒಂದು ಕಡೆಯಿಂದ ಬೇರೊಂದು ಕಡೆಗೆ ಒಯ್ಯಬಹುದು. ಇಂಥ ಕಣಜದಲ್ಲಿ ಸುಮಾರು 24,000 ದಿಂದ 72,000 ಲೀಟರುಗಳ ವರೆಗೆ ಕಾಳು ತುಂಬಬಹುದು.

ಸತುವು ಲೇಪಿತ (ಗ್ಯಾಲ್ವನೈಸ್ಡ್) ತಗಡಿನ ಕಣಜಗಳು ಕಾಳನ್ನು ಸಂಗ್ರಹಿಸಿಡಲು ಉಪಯುಕ್ತವಾಗಿವೆ. ಇವು ಸುಮಾರು 3 ಮೀಟರುಗಳಿಗಿಂತ ಕಡಿಮೆವ್ಯಾಸವುಳ್ಳವು. ಹವೆಯಿಂದ ಇವಕ್ಕೆ ಧಕ್ಕೆ ತಗಲದಂತೆ ಇವು ಸಾಕಷ್ಟು ಗಟ್ಟಿಯಾಗಿರುವಂತೆ ಮಾಡುವದು ಒಳ್ಳೆಯದು. ತಗಡಿನ ಗುಣಕ್ಕೆ ತಕ್ಕಂತೆ ಕಣಜಗಳ ಬಾಳಿಕೆ. ಬಹಳ ದಿವಸಗಳ ವರೆಗೆ ಕಣಜ ಬಾಳಬೇಕಾದರೆ ತಗಡು ಅತಿ ಕಡಿಮೆಯೆಂದರೆ 20 ಗೇಜಿನದಾದರೂ ಇರಬೇಕು.

ಶಾಶ್ವತ ಕಣಜಗಳು ದೊಡ್ಡ ಕಟ್ಟಡಗಳು. ಬೃಹದ್ಗಾತ್ರದಲ್ಲಿ ಧಾನ್ಯೋತ್ಪಾದನೆ ಮಾಡುವ ಅಮೆರಿಕದಲ್ಲಿ ಇವು ವಿಶೇಷ. ಬೆಳೆದ ಧಾನ್ಯವನ್ನು ಅಲ್ಪವೆಚ್ಚದಲ್ಲಿ ಇಲ್ಲಿ ಸಂಗ್ರಹಿಸಿಡಬಹುದಲ್ಲದೆ ಧಾನ್ಯದ ಮೇಲೆ ಸಾಲವನ್ನು ಸಹ ಪಡೆಯಬಹುದು. ಅಮೆರಿಕದಲ್ಲಿ ಇವು ರೈತರ ಮನೆಗಳಲ್ಲೂ ಹಳ್ಳಿ ಪಟ್ಟಣಗಳಲ್ಲೂ ಧಾನ್ಯಪೇಟೆಗಳಲ್ಲೂ ಉಂಟು. ಧಾನ್ಯವನ್ನು ಮೇಲೆತ್ತಿ ಕಣಜಗಳಲ್ಲಿ ತುಂಬುವ ಸಾಧನಗಳನ್ನೂ ಜೋಡಿಸಲಾಗಿರುತ್ತದೆ. ಮೇಲೆತ್ತಿಗೆಗಳಲ್ಲಿ (ಎಲಿವೇಟರ್ಸ್) ಎರಡು ವಿಧ. ಮೊದಲನೆಯದು ಚಿಕ್ಕದು, ಒಂದು ಕಡೆಯಿಂದ ಮತ್ತೊಂದು ಕಡೆಗೆ ಒಯ್ದು ಉಪಯೋಗಿಸುವಂಥದು. ಉಗ್ರಾಣದ ಭಾಗವಾಗಿಯೇ ಒಂದೇ ಸ್ಥಳದಲ್ಲಿ ಇರತಕ್ಕದ್ದು ಎರಡನೆಯ ಬಗೆ. ಮೇಲೆತ್ತಿಗೆ ಒಂದು ಪಟ್ಟಿ. ಇದಕ್ಕೆ ತುದಿ ಅಥವಾ ಕೊನೆ ಇರುವುದಿಲ್ಲ. ಈ ಪಟ್ಟಿಗೆ ಚೌಕವಾದ ಇಲ್ಲವೆ V ಆಕಾರದ ಬಕೆಟ್ಟುಗಳನ್ನು ಕೂಡಿಸಿರುತ್ತಾರೆ. ಗಾಲಿಗಳ ಮೇಲೆ ಇರುವ ಈ ಪಟ್ಟಿ ಕೆಳಗಿನಿಂದ ಮೇಲೆ ಸುತ್ತುತ್ತಿರುತ್ತದೆ. ಅದರ ಕೆಳಬದಿಯಲ್ಲಿ ಒಂದು ತಗ್ಗುಂಟು. ಧಾನ್ಯವನ್ನು ಅದರಲ್ಲಿ ಸುರಿಯುತ್ತಾರೆ. ಪಟ್ಟಿ ತಿರುಗುವಾಗ ಅದರ ಬಕೆಟ್ಟುಗಳು ಧಾನ್ಯವನ್ನು ತುಂಬಿಕೊಂಡು ಮೇಲೆ ಏರುತ್ತ ಉಗ್ರಾಣದ ಮೇಲ್ಬದಿಯಲ್ಲಿ ಅದನ್ನು ಸುರಿದು ಬೇರೊಂದು ಬದಿಯಿಂದ ಕೆಳಗೆ ಬರುತ್ತವೆ. ಇದು ವಿದ್ಯುತ್ತಿನ ಮೋಟಾರಿನ ಅಥವಾ ಸಣ್ಣ ಎಂಜಿನಿನ ಸಹಾಯದಿಂದ ತಿರುಗುತ್ತದೆ. ಸಣ್ಣ ಸಾಧನಗಳು 5 ರಿಂದ 10 ಮೀಟರ್ ಉದ್ದವಾಗಿರುತ್ತವೆ. ಇನ್ನೊಂದು ಬಗೆಯ ಮೇಲೆತ್ತಿಗೆ ಒಂದು ತಿರುಪು ಸಾಧನ. ಇದರ ಉದ್ದ 10 ಮೀಟರು. ಕಣಜ 22 ಮೀಟರುಗಳಿಂದ 44 ಮೀಟರುಗಳ ವರೆಗೆ ಎತ್ತರವಾಗಿರುತ್ತದೆ.

ಕಣಜಗಳನ್ನು ಮರ, ಲೋಹ ಇಲ್ಲವೆ ಕಾಂಕ್ರೀಟಿನಿಂದ ಕಟ್ಟುತ್ತಾರೆ. ಮರದ ಕಣಜ ಹೆಚ್ಚು ಬಾಳಿಕೆ ಬರುವುದಿಲ್ಲ. ಆದ್ದರಿಂದ, ಕಾಂಕ್ರೀಟಿನ ಮತ್ತು ಲೋಹದ ಕಣಜಗಳೇ ಬಳಕೆಯಲ್ಲಿವೆ. ಗ್ರಾಮೀಣ ಪ್ರದೇಶದ ಕಣಜಗಳಲ್ಲಿ 50,000 ಲೀಟರಿನ ವರೆಗೂ ಧಾನ್ಯ ತುಂಬಬಹುದು. ರೈತ ಬೆಳೆಯುವ ಎಲ್ಲ ಧಾನ್ಯವೂ ಸಾಮಾನ್ಯವಾಗಿ ಮಾರಾಟಕ್ಕೆ ಮುಂಚೆ ಕಣಜಗಳಲ್ಲಿ ಸಂಗ್ರಹವಾಗಿರುತ್ತದೆ. ಧಾನ್ಯವನ್ನು ತೂಕ ಮಾಡಿ ಅದೇ ಮಾದರಿಯ ಧಾನ್ಯ ಇರುವಲ್ಲಿ ಅದನ್ನು ಸೇರಿಸುತ್ತಾರೆ. ಸಾಮಾನ್ಯವಾಗಿ ಕಣಜದ ಮಾಲೀಕರೆ ಅದನ್ನು ಕೊಳ್ಳುವುದುಂಟು. ಧಾನ್ಯಪೇಟೆಗಳಲ್ಲಿ ಇರುವ ಕಣಜಗಳು ಬಹಳ ದೊಡ್ಡವು, 480 ಲಕ್ಷ ಲೀಟರ್ ಕಾಳು ಹಿಡಿಯುತ್ತವೆ. ಅಮೆರಿಕದ ಮಿನಿಯಪೊಲಿಸ್‌ನ 69 ಕಣಜಗಳು 44,640 ಲಕ್ಷ ಲೀಟರ್ ಧಾನ್ಯವನ್ನು ತುಂಬುವಷ್ಟು ದೊಡ್ಡವಾಗಿವೆ.

ಒಳ್ಳೆಯ ಕಣಜದ ಗುಣಗಳು : ಕಣಜಗಳು ಗಟ್ಟಿಮುಟ್ಟಾಗಿ ಇರಬೇಕು. ಒಳಗಿರುವ ಧಾನ್ಯ ಕಣಜದ ಗೋಡೆಯನ್ನೂ ತಳವನ್ನೂ ತನ್ನ ಭಾರದಿಂದ ಒತ್ತುತ್ತದೆ. 4.2 ಮೀಟರ್ ವ್ಯಾಸ ಹಾಗೂ 2.4 ಮೀಟರ್ ಎತ್ತರವುಳ್ಳ ಕಣಜದಲ್ಲಿ ಮುಸುಕಿನ ಜೋಳವನ್ನು ಇಟ್ಟರೆ ಕಣಜದ ತಳದಲ್ಲಿ ಪ್ರತಿ ಚದರ ಮೀಟರಿನ ಮೇಲೆ ಸುಮಾರು 2,000 ಕಿಲೋಗ್ರಾಂ ಭಾರ ಬೀಳುತ್ತದೆ. ಗೋಡೆಯ ಕೆಳಭಾಗದಲ್ಲಿ ಪ್ರತಿ ಚದರ ಮೀಟರಿನ ಮೇಲೆ 750 ಕಿಲೋಗ್ರಾಂ ಒತ್ತಡ ಉಂಟಾಗುತ್ತದೆ. ಧಾನ್ಯದ ಎತ್ತರ ಹೆಚ್ಚಾದಂತೆ ಈ ಒತ್ತಡ ಇನ್ನೂ ಹೆಚ್ಚು. ಆದ್ದರಿಂದ ಕಣಜದ ಕಟ್ಟಡ ಇದನ್ನು ತಡೆದು ನಿಲ್ಲುವಷ್ಟು ಗಟ್ಟಿಯಾಗಿರಬೇಕು.

ಕಣಜಗಳು ಹವೆಯಿಂದ ಬಾಧಿತವಾಗದಂತೆ ಇರಬೇಕು. ನೀರು ಇಲ್ಲವೆ ಆರ್ದ್ರತೆ ಒಳಗೆ ಸೇರದ ಹಾಗೆ ಅದನ್ನು ಕಟ್ಟಿರಬೇಕು. ಮಾಳಿಗೆ ಸೋರುವುದು, ಗೋಡೆ ಬಿರುಕು ಬಿಟ್ಟಿರುವುದು, ಬಾಗಿಲುಗಳ ಸಂದಿಯಿಂದ ನೀರು ಒಳಗೆ ಸೇರುವುದು, ನೆಲ ಹಸಿಯನ್ನು ಹೀರಿಕೊಳ್ಳುವಂಥದು, ನೆಲದ ಮೇಲೆ ಇರುವ ಕಾಳು ಹಸಿ ಇಂಗಿಸಿಕೊಳ್ಳುವುದು—ಇವೇ ಧಾನ್ಯ ಕೆಡಲು ಮುಖ್ಯ ಕಾರಣಗಳು. ಕಣಜದ ಸುತ್ತಲೂ ಬಿದ್ದ ನೀರು ದೂರ ಹರಿದು ಹೋಗುವಂತೆ ವ್ಯವಸ್ಥೆ ಇರಬೇಕು.

ಕಣಜದ ಧಾನ್ಯಕ್ಕೆ ಹುಳುಗಳು ಹತ್ತದಂತಿರಬೇಕು. ಧಾನ್ಯ ಹಸಿಯಾಗಿ ಬೆಚ್ಚಗೆ ಇದ್ದರೆ ಹುಳು ತೀವ್ರ ಅಂಟಿಕೊಳ್ಳುತ್ತದೆ. ಗೋಡೆಗಳಲ್ಲಿ ಬಿರುಕು ಉಂಟಾಗಿದ್ದರೂ ಗೋಡೆಯ ಸ್ವಲ್ಪ ಭಾಗ ಒಳಗಡೆಗೆ ಹೆಚ್ಚು ಹಾಯ್ದಿದ್ದರೂ ಕಣಜದಿಂದ ಧಾನ್ಯ ತೆಗೆದಾಗ ಸ್ವಲ್ಪ ಭಾಗ ಇಂಥ ಸ್ಥಳಗಳಲ್ಲಿ ಉಳಿದುಕೊಳ್ಳುತ್ತದೆ. ಇದಕ್ಕೆ ಹುಳುಗಳು ಹತ್ತುತ್ತವೆ. ಇವು ಕಣಜದಲ್ಲಿಯೇ ಉಳಿದು ಬೆಳೆಯುತ್ತ ಹೋಗಿ ಕಣಜದಲ್ಲಿ ಹೊಸ ಧಾನ್ಯ ಹಾಕಿದಾಗ ಅದಕ್ಕೆ ಸುಲಭವಾಗಿ ಹತ್ತಿಬಿಡುತ್ತವೆ. ಕಣಜದ ಗೋಡೆಗಳು ಮತ್ತು ಕಣಜದಲ್ಲಿಯ ನೆಲ ಗಾಳಿ ಒಳಗೆ ಬರದಂತೆ ಭದ್ರವಾಗಿರುವುದು ಒಳ್ಳೆಯದು. ಇಲಿ, ಹೆಗ್ಗಣ, ಪಕ್ಷಿ ಮುಂತಾದವು ಒಳಗೆ ಪ್ರವೇಶಿಸದಂತೆ ಕಣಜಗಳನ್ನು ಕಟ್ಟಬೇಕು. ಇಂಥ ಪ್ರಾಣಿಗಳು ಬಾಗಿಲ ಮೂಲಕ ಪ್ರವೇಶಿಸುವುದು ಸಾಧ್ಯವಾಗದಂತಿರಬೇಕು.

ಸುತ್ತ ಇಳಿಜಾರು ಇದ್ದು ನೀರು ಅಲ್ಲಿಂದ ದೂರ ಹರಿದುಹೋಗುವಂಥ ಎತ್ತರದ ನೆಲವೇ ಕಣಜ ಕಟ್ಟಲು ಯೋಗ್ಯ ಸ್ಥಳ. ಕಣಜಗಳ ನಕ್ಷೆಗಳನ್ನು ತಯಾರಿಸುವಾಗ ಅದಕ್ಕೆ ಬೇಕಾಗುವ ಸ್ಥಳವನ್ನು ನಿರ್ದಿಷ್ಟಪಡಿಸಬೇಕಾಗುತ್ತದೆ. ಹೀಗೆ ನಿರ್ದಿಷ್ಟಪಡಿಸುವಾಗ ಧಾನ್ಯಸಂಗ್ರಹಕ್ಕೆ ಬೇಕಾಗುವ ಸ್ಥಳವನ್ನಷ್ಟೇ ಲಕ್ಷ್ಯದಲ್ಲಿಟ್ಟುಕೊಳ್ಳದೆ ಇತರ ಕೆಲಸಗಳಿಗೆ ಅಂದರೆ ಧಾನ್ಯವನ್ನು ಸ್ವಚ್ಛ ಮಾಡುವುದು, ವಿಂಗಡಿಸುವುದು, ಹುಳು ಹತ್ತದಂತೆ ಔಷಧಿ ಹೊಡೆಯುವುದು ಮೊದಲಾದ ಕಾರ್ಯಗಳಿಗೆ ಬೇಕಾಗುವ ಹೆಚ್ಚಿನ ಸ್ಥಳದ ವ್ಯವಸ್ಥೆಯನ್ನೂ ಯೋಚಿಸಬೇಕು. ಕಳ್ಳತನಕ್ಕೆ ಆಸ್ಪದವಿಲ್ಲದ ಹಾಗೆ ಕಣಜದ ವ್ಯವಸ್ಥೆ ಇರುವುದು ಒಳ್ಳೆಯದು.

ಕಣಜದಲ್ಲಿರುವ ಧಾನ್ಯಕ್ಕೆ ತೇವ ಹತ್ತದಂತೆ ಮಾಡಬೇಕಾದರೆ ಕೆಳಗಿನ ಕ್ರಮಗಳನ್ನು ಕೈಕೊಳ್ಳಬೇಕು : 1 ಗೋಡೆ, ಮಾಳಿಗೆ, ಬಾಗಿಲು ಹಾಗೂ ಕಿಟಕಿಗಳು ಬಿಗಿಯಾಗಿರಬೇಕು. 2 ನೆಲಕ್ಕೆ ತೇವ ಹತ್ತಬಾರದು. 3 ಗೋಡೆ ಮತ್ತು ಪಾಯಗಳ ನಡುವೆ ಗಟ್ಟಿಯಾದ ಟಾರು ಹಾಕಬೇಕು. ಇದರಿಂದ ನೆಲದ ತೇವ ಗೋಡೆಯೊಳಗಿಂದ ಮೇಲಕ್ಕೆ ಏರುವುದಿಲ್ಲ. 4 ಪಾಯದ ಗೋಡೆ ಕಟ್ಟಡದ ಹೊರಬದಿಗೆ ಹಾದಿರಬಾರದು. 5 ಕಟ್ಟಡದಿಂದ ನೀರು ದೂರ ಹರಿದು ಹೋಗಬೇಕು.

ಕಣಜದಲ್ಲಿ ಇಲಿಗಳು ಹಾಗೂ ಪಕ್ಷಿಗಳು ಪ್ರವೇಶಿಸದ ಹಾಗೆ ಇರಬೇಕಾದರೆ ಈ ಕ್ರಮಗಳನ್ನು ಕೈಗೊಳ್ಳಬೇಕು : 1 ಕಣಜದ ನೆಲ ಭೂಮಿಗಿಂತ ಸ್ವಲ್ಪ ಎತ್ತರದಲ್ಲಿ ಇರಬೇಕು, 2 ಕಣಜದೊಳಗಿನ ನೆಲ ಕಾಂಕ್ರೀಟಿನಿಂದಲೂ ಕಣಜದ ಪಾಯದ ಗೋಡೆಯನ್ನು ಗಟ್ಟಿಯಾಗಿಯೂ ಕಟ್ಟಿರಬೇಕು, 3 ಗೋಡೆಯಲ್ಲಿಯ ತೂತುಗಳನ್ನು ಸಣ್ಣ ಕಣ್ಣುಗಳುಳ್ಳ ಜಾಳಿಗೆಯಿಂದ ಮುಚ್ಚಬೇಕು, 4 ಕಣಜದ ಮೇಲ್ಭಾಗದಲ್ಲಿ ಜಾಳಿಗೆಯನ್ನು ಇಲ್ಲವೆ ಕಬ್ಬಿಣದ ತಗಡನ್ನು ಹಾಕಬೇಕು, 5 ನೆಲದಿಂದ 60 ಸೆಂಟಿಮೀಟರುಗಳ ಮೇಲೆ ಕಟ್ಟಡದ ಸುತ್ತಲೂ ಹೊರಬದಿಗೆ 20 ಸೆಂಟಿಮೀಟರ್ ಅಗಲದ ಸತುಲೇಪಿತ ತಗಡನ್ನು ಹಾಕಬೇಕು, 6 ಬಾಗಿಲುಗಳನ್ನು ಇಲಿಗಳು ಕಡಿಯದಂತೆ ಅವುಗಳ ಸುತ್ತಲೂ ಕಬ್ಬಿಣದ ತಗಡನ್ನು ಹಾಕಬೇಕು.

ಎರಡನೆಯ ಮಹಾಯುದ್ಧದ ಕಾಲದಿಂದೀಚೆಗೆ ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಕಣಜದೊಳಗೆ ವಾತನಿಯಂತ್ರಿಸುವ ವ್ಯವಸ್ಥೆಯೂ ಹೆಚ್ಚಾಗಿ ಬಳಕೆಗೆ ಬಂದಿದೆ.

(ಆರ್.ಎಫ್.ಪಿ.)

**ಕಣಜಕ್ಕೆ ಹತ್ತುವ ಹುಳುಗಳು :** ನೂರಾರು ಕೀಟ ಪ್ರಭೇದಗಳು ಧಾನ್ಯಗಳನ್ನೂ ಅವುಗಳಿಂದ ತಯಾರಿಸಿದ ಕಚ್ಚಾ ಆಹಾರ ವಸ್ತುಗಳನ್ನೂ ಅವಲಂಬಿಸಿಕೊಂಡಿವೆ. ಇವುಗಳಲ್ಲಿ ಸುಮಾರು ಐವತ್ತು ಜಾತಿ ಕೀಟಗಳು ಮುಖ್ಯವೆನಿಸಿವೆ. ಅದರಲ್ಲೂ, ಸುಮಾರು 10–12 ಕೀಟ ಜಾತಿಗಳ ವಿನಾಶಪ್ರವೃತ್ತಿ ಅತ್ಯಂತ ತೀವ್ರವಾಗಿದೆ. ಕುಯಿಲಾಗಿ, ಅಣಿಮಾಡಿದ ಆಹಾರ ಧಾನ್ಯಗಳ ಒಟ್ಟು ಪ್ರಮಾಣದಲ್ಲಿ ಕನಿಷ್ಠ ಪಕ್ಷ ಸೇ. 5–10 ರಷ್ಟು ಕೀಟವರ್ಗದಿಂದ ಪೋಲಾಗುತ್ತಿರುವುದಾಗಿ ಗೊತ್ತಾಗಿದೆ. ಭಾರತದಲ್ಲಿ ಈ ಕಾರಣದಿಂದ ವರ್ಷ ಒಂದಕ್ಕೆ ನಷ್ಟವಾಗಬಹುದಾದ ಆಹಾರ ವಸ್ತುಗಳ ಪ್ರಮಾಣ ಸುಮಾರು ಎರಡು ದಶಲಕ್ಷ ಟನ್ನುಗಳೆಂದು ಊಹಿಸಲಾಗಿದೆ.

ಈ ಕೀಟಗಳಲ್ಲಿ ಮುಖ್ಯವಾದ ಕೆಲವು ಪ್ರಭೇದಗಳನ್ನು ಸಂಕ್ಷೇಪವಾಗಿ ಇಲ್ಲಿ ಸೂಚಿಸಬಹುದು.

(ಅ) ಬತ್ತದ ಚಿಟ್ಟೆ (ಪ್ಯಾಡಿ ಮಾತ್) ; ಲೆಪಿಡಾಪ್ಟರ ಗಣದ ಗೆಲಿಪಿಡೀ ಕುಟುಂಬದ ಸೈಟೋಟ್ರೋಗ ಸೀರಿಯಲೆಲ್ಲ ಎಂಬ ಈ ಕೀಟಕ್ಕೆ ಕನ್ನಡದಲ್ಲಿ ಹೂಜಿ ಎನ್ನುವುದುಂಟು. ಇದು ಬಹು ಸೂಕ್ಷ್ಮವಾದ ಹೊಳಪಾದ ಒಣಹುಲ್ಲಿನ ಬಣ್ಣದ ಚಿಟ್ಟೆ. ಇದರ ಕಿರಿದಾದ ಉದ್ದನೆಯ ರೆಕ್ಕೆಗಳ ಅಂಚಿನಲ್ಲಿ ಕುಚ್ಚುಗಳಿವೆ. ರೆಕ್ಕೆ ಪಸರಿಸಿದಾಗ ದೇಹದ ಅಗಲ ½" ಇರುವುದು. ಇದು ಹೆಚ್ಚಾಗಿ ಬತ್ತಕ್ಕೆ ಬೀಳುತ್ತದೆ. ಹೆಣ್ಣುಚಿಟ್ಟೆ 400 ಮೊಟ್ಟೆಗಳನ್ನು ಒಂಟಿ ಒಂಟಿಯಾಗಿಡುತ್ತದೆ. ಮರಿಹುಳು ಬತ್ತದ ಹೊಟ್ಟಿನ ಸಂದಿಮೂಲದ ಕಾಳಿನೊಳಗೆ ಹೊಕ್ಕು ತಿಂದು ಜೊಳ್ಳುಮಾಡಿ, ಪ್ರಾಪ್ತ ವಯಸ್ಸಿಗೆ ಬಂದಮೇಲೆ ಹೊರಗೆ ಬರುತ್ತದೆ. ಒಂದು ತಲೆಮಾರಿನ ಅವಧಿ 3–4 ವಾರಗಳು ಮಾತ್ರ. ವರ್ಷಕ್ಕೆ 8–12 ತಲೆಮಾರು ಸಂತತಿಗಳು ಉತ್ಪತ್ತಿಯಾಗುತ್ತವೆ.

(ಆ) ಹಿಟ್ಟಿನ ಚಿಟ್ಟೆ (ಇಂಡಿಯನ್ ಮಿಲ್ ಮಾತ್) ; ಲೆಪಿಡಾಪ್ಟರ ಗಣದ ಪೈರಾಲಿಡೀ ಕುಟುಂಬದ ಪ್ಲೋಡಿಯ ಇಂಟರ್ ಪಂಕ್ಟೆಲ್ಲ ಎಂಬ ಈ ಚಿಟ್ಟೆ ಕಾಳುಗಳಿಗೂ ಬೀಸಿ ಅಣಿಮಾಡಿದ ವಸ್ತುಗಳಿಗೂ ಬಹಳ ನಷ್ಟ ಮಾಡುತ್ತದೆ. ಇದರ ಮುಂದಿನ ರೆಕ್ಕೆಯ ಹಿಂಭಾಗದಲ್ಲಿ ಕೆಂಪು ಮಿಶ್ರಿತ ಕಂದುಬಣ್ಣವೂ ಮುಂದುಗಡೆ ತೆಳು ಬೂದು ಬಣ್ಣವೂ ಇದ್ದು ಚಿಟ್ಟೆ ಕುಳಿತಾಗ ಕಂದು ಅಡ್ಡಪಟ್ಟಿ ಹೊಂದಿರುವಂತೆ ಕಾಣುತ್ತದೆ. ಹುಳುಗಳ ಬಣ್ಣ ಕಂದು ಮಿಶ್ರಿತ ಬಿಳಿ; ಉದ್ದ ½". ರೇಷ್ಮೆಯಂಥ ದಾರದ ಬಲೆಯನ್ನು ಧಾರಾಳವಾಗಿ ಪದಾರ್ಥದ ಮೇಲೆಲ್ಲಾ ನೆಯ್ದು ಗೂಡುಕಟ್ಟಿ ಒಳಗಡೆ ಇರುತ್ತವೆ. ದಟ್ಟವಾದ ವಸ್ತ್ರದಂತಿರುವ ಈ ಬಲೆಯನ್ನು ಚೂರುಚೂರುಗಳಾಗಿ ಬಿಡಿಸಬಹುದು. ಹೆಣ್ಣುಚಿಟ್ಟೆ ಸುಮಾರು 350 ಮೊಟ್ಟೆ ಇಡುತ್ತದೆ. ಒಂದು ತಲೆಮಾರಿಗೆ 7–8 ವಾರಗಳಂತೆ ವರ್ಷಕ್ಕೆ 6–7 ತಲೆಮಾರುಗಳು ಉತ್ಪತ್ತಿಯಾಗುತ್ತವೆ.

(ಇ) ಮೆಡಿಟರೇನಿಯನ್ ಹಿಟ್ಟಿನ ಚಿಟ್ಟೆ (ಮೆಡಿಟರೇನಿಯನ್ ಫ್ಲೋರ್ ಮಾತ್) ; ಲೆಪಿಡಾಪ್ಟರ ಗಣದ ಪೈರಾಲಿಡೀ ಕುಟುಂಬದ ಎಫಿಸ್ಟಿಯ ಕ್ಯೂನಿಯಲ್ಲ ಎಂಬ ಹೆಸರಿನ ಈ ಚಿಟ್ಟೆ ಹಿಟ್ಟಿನ ಗಿರಣಿಗಳಲ್ಲಿ ದೊಡ್ಡ ಸಮಸ್ಯೆಯಾಗಿ ಪರಿಣಮಿಸುವುದುಂಟು. ಇದರ ಮರಿ ನೆಯ್ಯುವ ರೇಷ್ಮೆ ಬಲೆಗಳಿಂದ ಹಿಟ್ಟು, ಗೋದಿ ಮುಂತಾದುವೆಲ್ಲ ಸೇರಿ ಚಲಿಸುವ ಕೊಳವೆಗಳು ಕಟ್ಟಿಕೊಂಡಂತಾಗಿ ಕೆಲಸಕ್ಕೆ ಅಡಚಣೆಯಾಗುತ್ತದೆ. ವಿಷ ವಾಯು ಪ್ರಯೋಗ (ಫ್ಯೂಮಿಗೇಷನ್) ದಿಂದ ಇಂಥ ಅಡಚಣೆಗಳನ್ನು ಪರಿಹರಿಸಬೇಕಾಗುತ್ತದೆ.

(ಈ) ಗರಗಸದ ಹಲ್ಲಿನ ಚಿಪ್ಪಿನ ಕೀಟ (ಸಾ ಟೂತ್ಡ್ ಗ್ರೈನ್‌ಬೀಟಲ್) ; ಕೋಲಿಯಾಪ್ಟರ ಗಣದ ಕುಕುಜಿಡೀ ಕುಟುಂಬದ ಒರೈಜೇಫೈಲಸ್ (ಸಿಲ್ವಾನಸ್) ಸುರಿನಾಮೆನ್ಸಿಸ್ ಎಂಬ ಚಪ್ಪಟೆಯಾದ ಬೂದು ಬಣ್ಣದ ಚಿಪ್ಪಿನ ಈ ಕೀಟ ಪ್ರಪಂಚದ ಅನೇಕ ಕಡೆ ಕಾಣಿಸಿಕೊಳ್ಳುವ ಒಂದು ಪಿಡುಗು. ಪೂರ್ವ ದೇಶಗಳಿಂದ ರಫ್ತಾಗುವ ಅಕ್ಕಿಯಲ್ಲಿ ಇದು ವಿಶೇಷವಾಗಿರುತ್ತದೆ. ಒಣಹಣ್ಣು, ಪೊಟ್ಟಣಕಟ್ಟಿ ಮಾರಾಟವಾಗುವ ಧಾನ್ಯ ಪದಾರ್ಥಗಳಿಗೂ ಬೀಳುವುದುಂಟು. ಹೆಣ್ಣು ಕೀಟ ಸುಮಾರು 100 ಮೊಟ್ಟೆಗಳನ್ನು ಇಡುತ್ತದೆ; ತಲೆಮಾರಿಗೆ 6–8 ವಾರದಂತೆ, ವರ್ಷಕ್ಕೆ 8 ತಲೆಮಾರುಗಳು ಉತ್ಪತ್ತಿಯಾಗುತ್ತವೆ.

(ಉ) ಕ್ಯಾಡೆಲ್ ಚಿಪ್ಪಿನ ಕೀಟ (ಕ್ಯಾಡೆಲ್ ಬೀಟಲ್) : ಕೋಲಿಯಾಪ್ಟರ ಗಣದ ಟೆನಿಬ್ರಿಯಾನಿಡೀ ಕುಟುಂಬದ ಟೆನಿಬ್ರಿಯಾಯ್ಡಿಸ್ ಮಾರಿಟ್ಯಾನಿಕಸ್ ಎಂಬ ಈ ಚಿಟ್ಟೆ ಧಾನ್ಯಕ್ಕೆ ಬೀಳುವ ಪ್ರಮುಖ ಕೀಟವೇನಲ್ಲ. ಇದು ಕಣಜದಲ್ಲಿ ದೂಳು ಹುಡಿ ಮುಂತಾದವನ್ನು ತಿಂದು ಜೀವಿಸುತ್ತದೆ. ಹೆಚ್ಚು ಸಂಖ್ಯೆಯಲ್ಲಿ ಕಂಡು ಬಂದಾಗ ಕಣಜ ಸಾಕಷ್ಟು ಶುಚಿಯಾಗಿಲ್ಲವೆಂದು ಸೂಚಿಸುತ್ತದೆ. ಪ್ರೌಢ ಚಿಟ್ಟೆ ಅಚ್ಚ ಕಪ್ಪಾಗಿ ಚಪ್ಪಟೆಯಾಗಿರುತ್ತವೆ. ½" ಉದ್ದದ ಈ ಚಿಟ್ಟೆ ಒಂದು ವರ್ಷ ಕಾಲ ಜೀವಿಸುತ್ತದೆ. ಮಾಸಲು ಬಿಳಿ ಬಣ್ಣದ ಇದರ ಮರಿಗಳ ದೇಹದ ತುದಿಯಲ್ಲಿ ಕಪ್ಪು ಮಚ್ಚೆಯುಂಟು. ಸುಮಾರು ¾" ಉದ್ದವಾಗಿರುವ ಈ ಮರಿಗಳು ಕಣಜ, ಗಿರಣಿಗಳಲ್ಲಿ, ಮರದ ದಿಮ್ಮಿ ರಿಪೀಸುಗಳಲ್ಲಿ ಸೇರಿ ಅವನ್ನು ಕೊರೆದು ಬೇರೆ ಕೀಟಗಳು ಸೇರಲು ಅವಕಾಶ ಮಾಡುತ್ತವೆ. ನೆಲದ ಮೇಲೆ ಹಾಸಿರುವ ಚಾಪೆ, ಹುಲ್ಲು ಮುಂತಾದುವುಗಳ ಕೆಳಗೆ ಹೆಚ್ಚಾಗಿ ಸೇರುವುದುಂಟು. ಹೆಣ್ಣು ಕೀಟ ಸುಮಾರು 1,000 ಮೊಟ್ಟೆ ಇಡಬಲ್ಲದು; 9–10 ವಾರಕ್ಕೆ ಒಂದು ತಲೆಮಾರಿನಂತೆ ವರ್ಷಕ್ಕೆ 4 ತಲೆಮಾರುಗಳು ಉತ್ಪತ್ತಿಯಾಗುತ್ತವೆ.

(ಊ) ಲೀಮಾಫ್ಲಿಯಸ್ ಚಿಪ್ಪಿನ ಕೀಟ ; ಕೋಲಿಯಾಪ್ಟರ ಗಣದ ಕುಕುಜಿಡೀ ಕುಟುಂಬದ ಲೀಮಾಫ್ಲಿಯಸ್ ಮೈನ್ಯೂಟಂ ಎಂಬ ಹೆಸರಿನ ಈ ಕೀಟ ಅತ್ಯಂತ ಸೂಕ್ಷ್ಮವಾದುದು. ದೇಹದಷ್ಟೇ ಉದ್ದವಾದ ಕುಡಿಮೀಸೆಯುಳ್ಳದ್ದು. ಇದು ಧಾನ್ಯ ಮತ್ತು ಅಣಿ ಮಾಡಿದ ವಸ್ತುವನ್ನೇ ನೇರವಾಗಿ ತಿನ್ನದೆ ದೂಳು, ಹುಡಿ ಇವುಗಳನ್ನು ತಿಂದು ಜೀವಿಸುವ ಪ್ರಾಣಿ. (ಬಿ.ಎಸ್.)

**ಕಣಜಗಳು :** ಅಕಶೇರುಕ ಗುಂಪಿನ, ಸಂಧಿಪದಿಗಳ ವಂಶದ ಕೀಟವರ್ಗದ ಹೈಮೆನಾಪ್ಟರ ಗಣಕ್ಕೆ ಸೇರಿದ ಪ್ರಾಣಿಗಳು. ಕಡಿಯಲು ಅಥವಾ ಹೀರಲು ಅನುವಾದ ವದನಾಂಗಗಳು, ನಾಲ್ಕು ನಯವಾದ ಪಾರದರ್ಶಕ ರೆಕ್ಕೆಗಳು, ಡಿಂಭಗಳಿಗೆ ಕಾಲುಗಳಿಲ್ಲದಿರುವುದು, 12–13 ಖಂಡಗಳುಳ್ಳ ಕುಡಿಮೀಸೆಗಳು, ಉದರಕ್ಕೂ ಎದೆಗೂ ನಡುವೆ ತೊಟ್ಟಿನಂತಿರುವ ನಡು—ಇವು ಈ ಗಣದ ಮುಖ್ಯ ಲಕ್ಷಣಗಳು. ಕಣಜಗಳು ಸಾಮಾನ್ಯವಾಗಿ ಮಾಂಸಾಹಾರಿಗಳು. ಕೆಲವು ಬಗೆಯವು ಪರಾವಲಂಬಿಗಳೂ ಹೌದು. ಸುಮಾರು 20,000ಕ್ಕೂ ಹೆಚ್ಚು ಪ್ರಭೇದಗಳಿವೆ. ಕಣಜಗಳಲ್ಲಿ ಮುಖ್ಯವಾಗಿ ಎರಡು ವಿಧ. ಒಂದು ಬಗೆಯವು ಗುಂಪುಜೀವನ ನಡೆಸುವಂಥವು (ಸೋಷಿಯಲ್ ವ್ಯಾಸ್ಪ್ಸ್). ಇವುಗಳಲ್ಲಿ ಜೇನುನೊಣಗಳಲ್ಲಿರುವಂತೆಯೇ ವ್ಯವಸ್ಥಿತ ಸಮಾಜವಿದೆ. ಅದರಲ್ಲಿ ರಾಣಿ, ಹಲವಾರು ಗಂಡುಗಳು ಮತ್ತು ಬಹುಸಂಖ್ಯೆಯಲ್ಲಿ ಕೆಲಸಗಾರ ಕಣಜಗಳು ಇರುತ್ತವೆ. ರಾಣಿಕಣಜ, ಗಂಡು ಮತ್ತು ಕೆಲಸಗಾರ ಕಣಜಗಳಿಗಿಂತ ಗಾತ್ರದಲ್ಲಿ ದೊಡ್ಡದು. ರಾಣಿ ಮತ್ತು ಕೆಲಸಗಾರ ಕಣಜಗಳ ಉದರದ ತುದಿಯಲ್ಲಿ ವಿಷದ ಕೋಶ ಮತ್ತು ಹಿಂದಕ್ಕೆಳೆದುಕೊಳ್ಳಬಹುದಾದ ಮುಳ್ಳು ಇವೆ. ಸಾಮಾನ್ಯವಾಗಿ ಈ ಬಗೆಯ ಕಣಜಗಳು ಕುಳಿತಾಗ ಅವುಗಳ ರೆಕ್ಕೆ ಉದ್ದುದ್ದನಾಗಿ ಮಡಿಸಿಕೊಳ್ಳುತ್ತವೆ. ಇನ್ನೊಂದು ಬಗೆಯ ಕಣಜಗಳು ಒಂಟಿಜೀವನ ನಡೆಸುವಂಥವು (ಸಾಲಿಟರಿ ವ್ಯಾಸ್ಪ್ಸ್).




ಕಣಜ; 1 ಗೂಡಿನ ಬಳಿಯಲ್ಲಿ ಕಣಜ : 2 ಗಂಡು; 3 ಕೆಲಸಗಾರ ಕಣಜ, 4 ರಾಣಿ

ಬಹುಪಾಲು ಕಣಜಗಳು ಈ ಬಗೆಯವು. ಕಣಜಗಳನ್ನು ಅವುಗಳ ಆಕಾರ, ಜೀವನ ಹಾಗೂ ಗೂಡುಕಟ್ಟುವ ರೀತಿಗಳ ಆಧಾರದ ಮೇರೆ ಹಲವಾರು ಕುಟುಂಬಗಳಾಗಿ ವಿಂಗಡಿಸಿದ್ದಾರೆ. ಗುಂಪುಜೀವನ ನಡೆಸುವ ಕಣಜಗಳು ವೆಸ್ಪಿಡೀ ಕುಟುಂಬಕ್ಕೆ ಸೇರಿವೆ. ಉಳಿದುವು ವೆಸ್ಪಿಡೀ ಕುಟುಂಬವೊಂದೇ ಅಲ್ಲದೆ ಪಾಂಪಿಲಿಡೀ, ಸ್ಫೆಸಿಡೀ, ಯೂಮೆನಿಡೀ, ಮ್ಯೂಟಿಲಿಡೀ, ಟ್ರೈಫೈಯಿಡೀ, ಸ್ಕೋಲೈಯಿಡೀ ಇತ್ಯಾದಿ ಕುಟುಂಬಗಳಿಗೆ ಸೇರಿವೆ. ಕಣಜಗಳಲ್ಲಿ ಹಲವಾರು ಜಾತಿಗಳೂ ಉಂಟು: ವೆಸ್ಪ, ವೆಸ್ಪುಲ, ಪಾಲಿಸ್ಟಿಸ್, ಡಾಲಿಕೋವೆಸ್ಪುಲ, ಟೈಫಿಯ, ಬ್ರ್ಯಾಕಿಗಾಸ್ಟ್ರ ಮುಂತಾದುವು ಮುಖ್ಯ ಜಾತಿಗಳು. ಭಾರತದಲ್ಲಿ ಬಹಳ ಸಾಮಾನ್ಯವಾಗಿ ಕಾಣಬರುವ ಕಣಜವೆಂದರೆ ವೆಸ್ಪುಲ ಇಂಡಿಕಸ್ ಎಂಬ ಪ್ರಭೇದ. ಗುಂಪುಜೀವನ ನಡೆಸುವ ಇದರಲ್ಲಿ ದೇಹದ ಬೆನ್ನು ಭಾಗದಲ್ಲಿ ಹಳದಿ ಮತ್ತು ಕಪ್ಪು ಪಟ್ಟಿಗಳಿವೆ. ಗುಂಪುಜೀವನ ನಡೆಸುವ ಕಣಜಗಳು ದೊಡ್ಡ ದೊಡ್ಡ ಗೂಡುಗಳನ್ನು ಕಟ್ಟಿ ವಾಸಿಸುತ್ತವೆ. ಮರ ಅಥವಾ ಎಲೆಗಳನ್ನು ಅಗಿದು ಜೊಲ್ಲಿನೊಡನೆ ಸೇರಿಸಿ ಅದರಿಂದ ಉಂಟಾಗುವ ಗಾರೆಯಂಥ ವಸ್ತುವನ್ನು ಗೂಡು ಕಟ್ಟಲು ಉಪಯೋಗಿಸುತ್ತವೆ. ಸಾಮಾನ್ಯವಾಗಿ ನೆಲದಲ್ಲೋ ಮರಗಳ ಪೊಟರೆಗಳಲ್ಲೋ, ಎಲೆ ಮತ್ತು ಕೊಂಬೆಗಳ ತುದಿಯಲ್ಲೋ ಗೂಡು ಕಟ್ಟುವುದು ವಾಡಿಕೆ. ಗೂಡುಗಳ ಆಕಾರವೂ ವಿವಿಧ ಬಗೆಯದು. ಗೂಡುಗಳಲ್ಲಿ ಜೇನುಗೂಡಿನಲ್ಲಿರುವಂತೆ ಹಲವಾರು ಷಡ್ಭುಜಾಕೃತಿಯ ಸಣ್ಣ ಸಣ್ಣ ಕೋಣೆಗಳಿವೆ. ಹಲವಾರು ಪದರಗಳಲ್ಲಿ ಜೋಡಿಸಲಾಗಿರುವ ಈ ಕೋಣೆಗಳ ಸುತ್ತ ಕಾಗದದಂಥ ತೆಳುವಾದ ಹೊದಿಕೆಯಿರುತ್ತದೆ. ಕೆಳಮೊಗನಾಗಿ ತೆರೆಯುವ ಬಾಗಿಲೂ ಇರುತ್ತದೆ. ರಾಣಿಕಣಜ ಒಂದೊಂದು ಕೋಣೆಗೊಂದರಂತೆ ಮೊಟ್ಟೆಯಿಡುತ್ತ ಹೋಗುತ್ತದೆ. ಮೊಟ್ಟೆಗಳನ್ನು ಅಂಟಿನಂಥ ದ್ರವದಿಂದ ಕೋಣೆಯ ಗೋಡೆಗೆ ಅಂಟಿಕೊಳ್ಳುವಂತೆ ಮಾಡುತ್ತದೆ. ಮೊಟ್ಟೆಯೊಡೆದು ಡಿಂಭಗಳು ಹೊರಬಂದಾಗ ಕೆಲಸಗಾರ ಕಣಜಗಳು ಅವಕ್ಕೆ ಹಲವಾರು ಬಗೆಯ ಆಹಾರವಸ್ತುಗಳನ್ನು (ಹೂಗಳು, ಹಣ್ಣುಗಳು, ಬೇರೆ ಕೀಟಗಳು) ಅಗಿದು ತಮ್ಮ ಜೊಲ್ಲಿನೊಂದಿಗೆ ಸೇರಿಸಿ ತಿನ್ನಿಸುತ್ತವೆ. ಬ್ರ್ಯಾಕಿಗ್ಯಾಸ್ಟ

ಪ್ರಭೇದದ ಕಣಜ ಹೂಗಳಿಂದ ಮಧುವನ್ನು ಶೇಖರಿಸಿ ಡಿಂಭಗಳಿಗೆ ಆಹಾರವಾಗಿ ಒದಗಿಸುವುದೂ ಉಂಟು. ಸಾಮಾನ್ಯವಾಗಿ ಗುಂಪುಜೀವನದ ಕಣಜಗಳು ಚಳಿಗಾಲಕ್ಕೆಂದು ಆಹಾರ ಶೇಖರಣೆ ಮಾಡುವುದಿಲ್ಲವಾದ್ದರಿಂದ ಆ ಕಾಲದಲ್ಲಿ ಚಳಿ ತಡೆಯಲಾರದ ಗಂಡು ಹಾಗೂ ಕೆಲಸಗಾರ ಕಣಜಗಳು ಸತ್ತುಹೋಗುತ್ತವೆ. ಆದರೆ ರಾಣಿ ಮಾತ್ರ ಬೆಚ್ಚಗಿರುವ ಪೊಟರೆಗಳಲ್ಲಿ ಅಥವಾ ಬಿಲಗಳಲ್ಲಿ ಚಳಿಗಾಲವನ್ನು ಕಳೆದು ಬೇಸಗೆಯಲ್ಲಿ ಹೊಸದಾಗಿ ಗೂಡುಕಟ್ಟಿ ಸಂಘಜೀವನವನ್ನು ಪುನಃ ಆರಂಭಿಸುತ್ತದೆ. ಹಲವಾರು ಬಗೆಯ ಗುಂಪು ಜೀವನದ ಕಣಜಗಳು ಪರಾವಲಂಬಿಗಳಾಗಿರುವುದೂ ಉಂಟು. ಇಂಥವುಗಳಲ್ಲಿ ಕೆಲಸಗಾರ ಕಣಜಗಳಿರುವುದಿಲ್ಲ.

ಒಂಟಿಜೀವನ ನಡೆಸುವ ಕಣಜಗಳಲ್ಲೂ ಗೂಡು ಕಟ್ಟುವ ಪದ್ಧತಿ ಇದೆ. ಅಲ್ಲದೆ ಗೂಡು ಕಟ್ಟುವ ವಿಧಾನವೂ ಹೆಚ್ಚು ವೈಶಿಷ್ಟ್ಯಪೂರ್ಣ. ಕೆಲವು ನೆಲದಲ್ಲಿ ಬಿಲ ತೋಡಿ ಗೂಡು ಮಾಡಿದರೆ (ಜೇಡ ಕಣಜ), ಇನ್ನು ಕೆಲವು ಮರಗಳಲ್ಲಿ, ಬೆಂಡುಗಿಡಗಳ ಕಾಂಡಗಳಲ್ಲಿ, ಗಿಡಮರಗಳ ರೆಂಬೆಗಳಲ್ಲಿ ತೂಗುತ್ತಿರುವಂತೆ ಗೂಡು ಕಟ್ಟುತ್ತವೆ. ಗೂಡುಕಟ್ಟಲು ಅವು ಉಪಯೋಗಿಸುವ ವಸ್ತುಗಳೂ ಅಷ್ಟೇ



ಗಾರೆ ಕಣಜ

ವೈಶಿಷ್ಟ್ಯಪೂರ್ಣ. ಗಾರೆಕಣಜಗಳು (ಪಾಟರ್ ವ್ಯಾಸ್ಪ್ಸ್) ಮಣ್ಣು ಮತ್ತು ಮರದ ಹೊಟ್ಟನ್ನು ತನ್ನ ಜೊಲ್ಲಿನೊಂದಿಗೆ ಮಿಶ್ರಮಾಡಿ ಗಾರೆಯಂಥ ವಸ್ತುವನ್ನು ತಯಾರಿಸಿ ಅದರಿಂದ ಹೂಜಿಯಾಕಾರದ ಗೂಡು ಕಟ್ಟುತ್ತವೆ. ಇನ್ನು ಕೆಲವು ಮರದ ಹೊಟ್ಟಿನಿಂದ ಒಂದು ರೀತಿಯ ಕಾಗದವನ್ನು ತಯಾರಿಸಿ ಉಪಯೋಗಿಸುತ್ತವೆ. ತಮ್ಮ ಗೂಡುಗಳಲ್ಲಿ ಕೂಡಿಡುವ ಆಹಾರವಾಗಿ ಅನೇಕ ಬಗೆಯ ಕೀಟಗಳನ್ನೂ ಕಂಬಳಿ ಹುಳುಗಳನ್ನೂ ಜೇಡಗಳನ್ನೂ ಉಪಯೋಗಿಸುತ್ತವೆ. ಸಾಧಾರಣವಾಗಿ ಗೂಡಿನಲ್ಲಿ ಮೊಟ್ಟೆಯಿಡುವ ಮುನ್ನ ಯಾವುದಾದರೊಂದು ಬಗೆಯ ಕೀಟವನ್ನೂ ಕಂಬಳಿ ಹುಳುವನ್ನೋ ಹಿಡಿದು ತಂದು, ತಮ್ಮ ಬಲವಾದ ಮುಳ್ಳಿನಿಂದ ಕುಟುಕಿ ಅವನ್ನು ನಿಶ್ಚೇತನಗೊಳಿಸಿ ಗೂಡಿನೊಳಕ್ಕೆ ತುರುಕುತ್ತವೆ. ಆಮೇಲೆ ಮೊಟ್ಟೆಯಿಡುತ್ತವೆ. ಮೊಟ್ಟೆಯೊಡೆದು ಹೊರಬಂದ ಡಿಂಭ ಇವನ್ನು ತಿಂದು ಬೆಳೆಯುತ್ತದೆ.

ಒಂಟಿಜೀವನ ನಡೆಸುವ ಕೆಲವು ಬಗೆಯ ಕಣಜಗಳು ಪರತಂತ್ರ ಜೀವಿಗಳಾಗಿವೆ. ಇವು ಗೂಡು ಕಟ್ಟಲಾರವು. ಇವುಗಳಲ್ಲಿ ಕೋಗಿಲೆ ಕಣಜ (ಕಕೂ ವ್ಯಾಸ್ಪ್ಸ್) ಮತ್ತು ಮಕಮಲ್ಲು ಇರುವೆ (ವೆಲ್ವೆಟ್ ಆಂಟ್) ಮುಖ್ಯವಾದುವು. ಮಿರುಗುವ ಹಸಿರು ಅಥವಾ ನೀಲಿ ಬಣ್ಣದ ಕೋಗಿಲೆ ಕಣಜ ಒಂಟಿಜೇನು ಅಥವಾ ಇತರ ಕಣಜಗಳ ಗೂಡಿನಲ್ಲಿ ತನ್ನ ಮೊಟ್ಟೆಗಳನ್ನಿಡುತ್ತದೆ. ಅದರಿಂದ ಬರುವ ಡಿಂಭಗಳು ಜೇನಿನ ಅಥವಾ ಇತರ ಕಣಜಗಳ ಮರಿಗಳನ್ನು ತಿಂದು ಇಲ್ಲವೆ ಆತಿಥೇಯ ಪ್ರಾಣಿ ತನ್ನ ಮರಿಗಳಿಗಾಗಿ ಸಂಗ್ರಹಿಸಿಟ್ಟ ಆಹಾರವನ್ನು ತಿಂದು ಬೆಳೆಯುತ್ತವೆ. ಮಕಮಲ್ಲು ಇರುವೆ ಎನ್ನುವ ಕಣಜದ ದೇಹದ ಮೇಲೆ ಉದ್ದವಾದ ಮತ್ತು ದಪ್ಪವಾದ ಕಪ್ಪು ಅಥವಾ ಕೆಂಪು ಕೂದಲುಗಳಿವೆ. (ಅದರಿಂದಲೇ ಈ ಹೆಸರು). ಹೆಣ್ಣುಗಳಲ್ಲಿ ರೆಕ್ಕೆಗಳಿಲ್ಲ. ಅವು ಇರುವೆಯಂತೆಯೇ ಕಾಣುತ್ತವೆ. ಗಂಡುಗಳಲ್ಲಿ ಮಾತ್ರ ರೆಕ್ಕೆಯಿದೆ. ಇವುಗಳಲ್ಲಿ ಹಲವಾರು ಪ್ರಭೇದಗಳಿದ್ದು, ಯೂರೋಪಿನ ಒಂದು ಪ್ರಭೇದ ದುಂಬಿಯ ಮೇಲೂ ಆಫ್ರಿಕದ ಒಂದು ಪ್ರಭೇದ ಸೆಸೆ ನೊಣದ ಮೇಲೂ ಪರತಂತ್ರ ಜೀವಿಗಳಾಗಿ ಜೀವಿಸುತ್ತವೆ. ಟೈಫೈಯಿಡೀ ಮತ್ತು ಸ್ಕೋಲೈಯಿಡೀ ಕುಟುಂಬದ ಕಣಜಗಳು ಕೆಲವು ಬಗೆಯ ಜೀರುಂಡೆಗಳ ಮೇಲೆ ಪರಾವಲಂಬಿಯಾಗಿರುತ್ತವೆ. ಮೊಟ್ಟೆಗಳನ್ನೂ ಅವುಗಳ ಮೇಲೆಯೇ ಇಡುತ್ತವೆ. ಡಿಂಭಗಳು ಜೀರುಂಡೆಗಳನ್ನು ಭಕ್ಷಿಸಿ ಬೆಳೆಯುತ್ತವೆ.

ಈ ರೀತಿ ಬಹಳ ಸೋಜಿಗದ ಜೀವನವನ್ನು ಸಾಗಿಸುತ್ತಿರುವ ಕಣಜಗಳು ಮಾನವನಿಗೆ ಉಪಕಾರಿಗಳೂ ಹೌದು. ಇತರ ಕೀಟಗಳನ್ನೂ ಡಿಂಭಗಳನ್ನೂ ತಿಂದು ಜೀವಿಸುವುದರಿಂದ ಹಿಂದೆ, ಅಮೆರಿಕದಲ್ಲಿ ಬೆಳೆಗಳನ್ನು ನಾಶಪಡಿಸುತ್ತಿದ್ದ ಜಪಾನೀ ಜೀರುಂಡೆಗಳನ್ನು ತಡೆಗಟ್ಟಲು ಟೈಫಿಯ ಎಂಬ ಕಣಜಗಳನ್ನು ಉಪಯೋಗಿಸುತ್ತಿದ್ದರು. (ಎಚ್.ಬಿ.ಡಿ.; ಎಸ್.ಎ.ಆರ್.ಎ.)

**ಕಣವೇಗೋತ್ಕರ್ಷಕಗಳು :** ವಿದ್ಯುತ್ಕಣಗಳ (ಪ್ರೋಟಾನುಗಳು, ಎಲೆಕ್ಟ್ರಾನುಗಳು ಮತ್ತು ಇತರ ಬೀಜಾಣುಗಳು) ಚಲನಶಕ್ತಿಯನ್ನು ವೇಗೋತ್ಕರ್ಷಿಸುವ ಯಂತ್ರಗಳು (ಪಾರ್ಟಿಕಲ್ ಆಕ್ಸಿಲರೇಟರ್ಸ್). ಹೆಚ್ಚಿನ ವಿವರಗಳಿಗೆ ನೋಡಿ : ವೇಗೋತ್ಕರ್ಷಕಗಳು.

**ಕಣಶ್ಶ ಕವಿಗಳು :** ಕಣಶ್ಶನ್ ಎಂಬ ಕುಟುಂಬ ಸಂಜ್ಞೆಯನ್ನುಳ್ಳ ಮೂವರು ಕವಿಗಳನ್ನು ಈ ಹೆಸರಿನಿಂದ ಕರೆಯುತ್ತಾರೆ. ಇವರ ಕೃತಿಗಳನ್ನು ಕಣಶ್ಶ ಕೃತಿಗಳೆನ್ನುತ್ತಾರೆ. ದ್ರಾವಿಡ ಸಂಘಾತಾಕ್ಷರ ನಿಬದ್ಧವಾಗಿರತಕ್ಕುದೆಂದು ನಿರ್ದೇಶಿತವಾದ ಜಾನಪದ ಗೀತೆಗಳು ಮಣಿಪ್ರವಾಳದ ಬೆಳೆವಣಿಗೆಯ ಪರಿಣಾಮವಾಗಿ ಆ ನಿಯಮವನ್ನು ಸಂಪೂರ್ಣವಾಗಿ ಉಲ್ಲಂಘಿಸಿದುದಕ್ಕೆ ಈ ಕೃತಿಗಳು ಪ್ರತ್ಯಕ್ಷ ದೃಷ್ಟಾಂತಗಳಾಗಿವೆ. ಕಣಶ್ಶ ಕವಿಗಳು ಪಾಡ್ದನಗಳಿಗೆ ಮಣಿಪ್ರವಾಳದ ಸೊಬಗನ್ನು ಕೊಟ್ಟರು. ಅಲ್ಲದೆ ತಮ್ಮ ಕೃತಿಗಳಿಗೆ ವಸ್ತುವನ್ನು ತರಲು ಪುರಾಣಗಳ ಮರೆ ಹೊಕ್ಕರು. ಹಿಂದಿನ ಕಾಲದ ಮಣಿಪ್ರವಾಳ ಕವಿಗಳಿಗಿಂತಲೂ ಇವರು ಪ್ರೌಢಚಿತ್ತರೂ ತತ್ತ್ವಚಿಂತಕರೂ ಆಗಿದ್ದು ಮಹಾಭಾರತ, ಭಾಗವತ, ವಾಲ್ಮೀಕಿ ರಾಮಾಯಣ ಮೊದಲಾದ ಮಹತ್ತಾದ ಪುರಾಣಗ್ರಂಥಗಳನ್ನು ಉಪಜೀವಿಸಿ ಹಲವಾರು ಪ್ರೌಢ ಕೃತಿಗಳನ್ನು ರಚಿಸಿದ್ದಾರೆ.

ಇದುವರೆಗೆ ಸಿಕ್ಕಿರುವ ಕಣಶ್ಶ ಕೃತಿಗಳು ಮೂವರು ಕವಿಗಳಿಗೆ ಸೇರಿದವಾಗಿವೆ. ಅವರು ಮೂವರೂ ಒಂದೇ ಕುಟುಂಬದ ಸದಸ್ಯರೂ ಒಬ್ಬನೇ ತಂದೆಯ ಸಂತಾನ ಪರಂಪರೆಗೆ ಸೇರಿದವರೂ ಆಗಿದ್ದಾರೆ. ಇವರು ಜೀವಿಸಿದ್ದ ಕಾಲ ಹದಿನಾಲ್ಕನೆಯ ಶತಮಾನದ ಕೊನೆ ಹಾಗೂ ಹದಿನೈದನೆಯ ಶತಮಾನದ ಆದಿ ಎನ್ನಲಾಗಿದೆ. ಇವರಲ್ಲಿ ಮಾಧವ ಪಣಿಕ್ಕರ್ ಮತ್ತು ಶಂಕರ ಪಣಿಕ್ಕರ್ ಎಂಬುವರು ಮೂರನೆಯವನಾದ ರಾಮ ಪಣಿಕ್ಕರ್‌ನ ಸೋದರ ಮಾವಂದಿರೆಂದು, ರಾಮ ಪಣಿಕ್ಕರನ ಕೃತಿಗಳಲ್ಲಿ ಬರುವ ಕೆಲವು ಸೂಚನೆಗಳಿಂದ ಗೊತ್ತಾಗುತ್ತದೆ. ರಾಮ ಪಣಿಕ್ಕರನ ಮಾತಾಮಹನಾಗಿದ್ದು ಮಹಾಗುರುವರನಾಗಿ ಉಭಯಕವೀಶ್ವರನಾದ ಮಹಾತ್ಮನೆಂದು ಅವನಿಂದ ಪ್ರಕೀರ್ತಿತನಾದ ಕರುಣೇಶನ್ ಎಂಬ ಹಿರಿಯವನಿಂದಲೇ ಕಣಶ್ಶನ್ ಎಂಬ ಕುಟುಂಬ ಸಂಜ್ಞೆ ಬಂತೆಂದು ತಿಳಿಯಬಹುದು.

ಮಾಧವ ಪಣಿಕ್ಕರನ ಭಗವದ್ಗೀತೆ, ಶಂಕರ ಪಣಿಕ್ಕರನ ಭಾರತಮಾಲ, ರಾಮ ಪಣಿಕ್ಕರನ ರಾಮಾಯಣ, ಭಾರತ, ಭಾಗವತ, ಶಿವರಾತ್ರಿ ಮಹಾತ್ಮ್ಯಂ—ಎಂಬಿವೇ ಕಣಶ್ಶ ಕೃತಿಗಳಲ್ಲಿ ಪ್ರಮುಖವಾದುವು. ಭಾರತೀಯ ಭಾಷೆಗಳಲ್ಲಿ ಬಂದ ಭಗವದ್ಗೀತೆಯ ಮೊತ್ತ ಮೊದಲ ತರ್ಜುಮೆಗಳಲ್ಲಿ ಮಾಧವ ಪಣಿಕ್ಕರನದೂ ಒಂದೆಂಬುದನ್ನು ಗಮನಿಸಬೇಕು. ಈ ಕವಿತ್ರಯರಲ್ಲಿ ರಾಮ ಪಣಿಕ್ಕರ್ ಅತ್ಯಂತ ಶ್ರೇಷ್ಠ. ಆತ ರಚಿಸಿದ ರಾಮಾಯಣ ಮಲೆಯಾಳದ ಅತ್ಯುತ್ತಮ ಕೃತಿಗಳಲ್ಲಿ ಒಂದೆಂದು ಪರಿಗಣಿತವಾಗಿದೆ.

ಮಲೆಯಾಳದ ಆತ್ಮವನ್ನು ಚೆಂದಮಿಳ್ ಮತ್ತು ಸಂಸ್ಕೃತಗಳ ವಿಪರೀತ ಪರಿಣಾಮದಿಂದ ಬಿಡುಗಡೆಗೊಳಿಸಲು ಪ್ರಥಮ ದರ್ಜೆಯ ಪಂಡಿತ ಕವಿಗಳು ನಡೆಸಿದ ಬೋಧಪೂರ್ವಕ ಪ್ರಯತ್ನದ ಮತ್ತೊಂದು ನಿರ್ಣಾಯಕ ಸಾಧನೆಯೇ ಈ ಕಣಶ್ಶ ಕೃತಿಗಳಾದುದರಿಂದ ಇವುಗಳ ಪ್ರಾಮುಖ್ಯ ಸ್ವಯಂವೇದ್ಯವಾಗಿದೆ. (ಕೆ.ಕೆ.ಎಸ್.)

**ಕಣಸಂಸೂಚಕ:** ಅತಿವೇಗದಿಂದ ಚಲಿಸುವ ವಿದ್ಯುದಂಶಯುತ ಪರಮಾಣ್ವಿಕ ಅಥವಾ ನ್ಯೂಕ್ಲಿಯರ್ ಕಣಗಳ ಇರವನ್ನು ಗುರುತಿಸುವ ಉಪಕರಣ (ಪಾರ್ಟಿಕಲ್ ಡಿಟೆಕ್ಟರ್). ಪರಮಾಣು ಮತ್ತು ನ್ಯೂಕ್ಲಿಯಗಳಲ್ಲಿರುವ ಮೂಲಕಣಗಳನ್ನೂ ರೇಡಿಯೋ ವಿಕಿರಣ ಮತ್ತು ಕಾಸ್ಮಿಕ್ ಕಿರಣಗಳಲ್ಲಿ ಇರುವ ಮೂಲಕಣಗಳನ್ನೂ ಪತ್ತೆಹಚ್ಚಿ ಅವು ಎಂಥ ಕ್ರಿಯೆಗಳಲ್ಲಿ ಭಾಗವಹಿಸುತ್ತವೆಂದು ಸಂಶೋಧಿಸುವುದು ಆಧುನಿಕ ಭೌತವಿಜ್ಞಾನದಲ್ಲಿ ಮಹತ್ತ್ವದ ಕೆಲಸ. ಈ ಮೂಲಕಣಗಳು

ವಿದ್ಯುದಂಶಯುತವಾಗಿರುವುದು ಅಥವಾ ವಿದ್ಯುದಂಶವಿರುವ ಕಣಗಳನ್ನು ತಮ್ಮ ಪಥದಲ್ಲಿ ನಿರ್ಮಿಸುತ್ತ ಹೋಗುವುದು ಅವುಗಳ ಶೋಧಕ್ಕೆ ಅನಿವಾರ್ಯ. ಶೋಧನೆಗೆ ಬಳಸಿದ ಉಪಕರಣಗಳನ್ನು ದಾಟಿಕೊಂಡು ಹೋಗುವಷ್ಟಾದರೂ ಶಕ್ತಿ ಅವುಗಳಿಗಿರಬೇಕು. ಆದ್ದರಿಂದ ಅವುಗಳ ವೇಗ ಅತ್ಯಧಿಕ. ಇಂಥ ಮೂಲಕಣಗಳ ಪಥಗಳನ್ನು ಗುರುತಿಸುವುದು. ಪ್ರತಿ ಸೆಕೆಂಡಿಗೆ ಅವು ಬರುತ್ತಿರುವ ಸಂಖ್ಯೆ ಎಣಿಸುವುದು. ಆ ಕಾಲಗಳನ್ನು ಗುರುತಿಸುವುದು, ಸಂವೇಗ (ಮೊಮೆಂಟಂ) ಕಳೆದುಕೊಂಡ ಶಕ್ತಿ ಇತ್ಯಾದಿಗಳನ್ನು ನಿಖರವಾಗಿ ಅಳೆಯುವುದು ಸಾಧ್ಯವಿದೆ. ಕಣಸಂಸೂಚಕವು ಮೂಲಕಣಗಳ ಪತ್ತೆ ಹಚ್ಚಿ ಮೇಲಿನ ಒಂದು ಅಥವಾ ಹೆಚ್ಚು ಕಾರ್ಯಮಾಡಬಲ್ಲದು.

ಒಂದು ವಿದ್ಯುತ್ಕಣ ಅತ್ಯಧಿಕ ವೇಗದಿಂದ ಯಾವುದೇ ವಸ್ತುವಿನಲ್ಲಿ ಹಾಯುವಾಗ ಅದು ಧನ ಮತ್ತು ಋಣ ಅಯಾನುಗಳನ್ನು ನಿರ್ಮಿಸುತ್ತ ಹೋಗುತ್ತದೆ. ಇವು ಪರಸ್ಪರ ವಿದ್ಯುದಾಕರ್ಷಣೆಗೊಳಪಟ್ಟು ಮೊದಲಿನಂತೆ ವಿದ್ಯುದ್ರಹಿತ ಕಣಗಳಾಗುತ್ತವೆ. ಕೆಲವನ್ನು ಬಿಟ್ಟರೆ ಎಲ್ಲ ಸಂಸೂಚಕಗಳೂ ಅಯಾನುಗಳನ್ನು ಬೇರ್ಪಡಿಸಲು ವಿದ್ಯುತ್‍ಕ್ಷೇತ್ರವನ್ನು ಉಪಯೋಗಿಸುತ್ತವೆ. ಹೀಗೆ ಅಯಾನುಗಳು ಬೇರ್ಪಟ್ಟಾಗ ಬಾಹ್ಯ ವಿದ್ಯುನ್ಮಂಡಲದಲ್ಲಿ ಒಂದು ವಿದ್ಯುತ್‍ಸಂಕೇತ ಕೊಡುವಂತೆ ಯೋಜಿಸಿರುತ್ತಾರೆ. ಅಯಾನುಗಳು ಹರಡಿದ ಪಥವೇ ಮೂಲಕಣ ಚಲಿಸಿಹೋದ ಪಥವೆಂದು ತಿಳಿಯಬಹುದು. ಇದನ್ನು ಬರಿಗಣ್ಣಿನಿಂದ ನೋಡಬಹುದು ಅಥವಾ ಇದರ ಫೋಟೋ ತೆಗೆಯಬಹುದು. ಬೇರೆ ಬೇರೆ ಮಾಹಿತಿ ಪಡೆಯಲು ವಿವಿಧ ಮಾದರಿಯ ಸಂಸೂಚಕಗಳೂ ಅವುಗಳಿಗೆ ಸಂಬಂಧಪಟ್ಟ ಸೂಕ್ತ ಎಲೆಕ್ಟ್ರಾನಿಕ್ ವಿದ್ಯುನ್ಮಂಡಲಗಳೂ ಇವೆ. ಕೆಲವೊಮ್ಮೆ ಒಂದಕ್ಕಿಂತ ಹೆಚ್ಚು ಬೇರೆ ಬೇರೆ ಕಣಸಂಸೂಚಕಗಳನ್ನು ಉಪಯೋಗಿಸಬೇಕಾಗುತ್ತದೆ. (**ನೋಡಿ**—ಕಿಡಿಮಂದಿರ)

ಪ್ರಮುಖ ಕಣಸಂಸೂಚಕಗಳು : ಮೇಘಮಂದಿರ ಅಂತರ್ದಹನ ಮೇಘಮಂದಿರ ಗುಳ್ಳೆಮಂದಿರ, ಗೀಗರ್‍ಮುಲ್ಲರ್ ಗುಣಕ, ಸಿಂಟಿಲೇಷನ್ ಅಥವಾ ಮಿಣುಕು ಗುಣಕ, ಕಿಡಿಮಂದಿರ, ಅನುಪಾತೀಯ ಗುಣಕ, ಸೆರೆಂಕಾಫ್ ಕಣಸಂಸೂಚಕ, ಫೋಟೊಗ್ರಾಫಿಕ್ ಎಮಲ್ಷನ್ ತಂತ್ರದ ಕಣಸಂಸೂಚಕ, ಘನಸ್ಥಿತಿ ಸಂಸೂಚಕಗಳು ಇತ್ಯಾದಿ. ಸಿ. ಟಿ. ಆರ್. ವಿಲ್ಸನ್ 1912ರಲ್ಲಿ ಸಂಶೋಧಿಸಿ ಉಪಯೋಗಿಸಿದ ಮೇಘ ಮಂದಿರ ಇತಿಹಾಸಪ್ರಸಿದ್ಧವಾಗಿದೆ. ಸಂತೃಪ್ತ ಜಲಬಾಷ್ಪವನ್ನು ತೀವ್ರ ಪ್ರಸರಣದಿಂದ ಶೀತಲಿಸಿ ಅಯಾನುಗಳ ಮೇಲೆ ನೀರಿನ ಹನಿಗಳಾಗಿ ದ್ರವೀಕರಿಸುವುದೇ ಇದರ ತತ್ತ್ವ. ಗೀಗರ್‍ಮುಲರ್, ಗೀಗರ್ ಅನುಪಾತೀಯ ಸಂಸೂಚಕಗಳಲ್ಲೆಲ್ಲ ಜಡಾನಿಲ ಮಿಶ್ರಣವೊಂದಿದ್ದು ಅಯಾನುಗಳನ್ನು ಬೇರ್ಪಡಿಸಲು ಸೂಕ್ತ ವೋಲ್ಟ್ ಮಾನದ ವಿಭವಾಂತರದ ವಿದ್ಯುದಗ್ರಗಳಿವೆ.

ಅಲ್ಪ ಕಣಗಳಂಥ ವಿದ್ಯುತ್‍ಕಣಗಳು ಫಾಸ್ಫರ್ ಎಂಬ ವಿಶಿಷ್ಟ ಪದಾರ್ಥಗಳಲ್ಲಿ ಮಿಣುಕನ್ನು (ಸಿಂಟಿಲ್ಲೇಷನ್) ಕೊಡುತ್ತವೆ. ಫೋಟೋ ಮಲ್ಟಿಪ್ಲಯರ್ ಟ್ಯೂಬ್ ಎಂಬ ಸಾಧನದಿಂದ ಈ ಮಿಣುಕುಗಳ ಸಂಕೇತವನ್ನೇ ವರ್ಧಿಸಿ ಕಣಸಂಸೂಚನಕ್ಕೆ ಉಪಯೋಗಿಸಬಹುದು. ಇಂಥ ಉಪಕರಣಕ್ಕೆ ಮಿಣುಕು ಗುಣಕ (ಸಿಂಟಿಲ್ಲೇಷನ್ ಕೌಂಟರ್) ಎಂದು ಹೆಸರು. ಬೆಳಕು ಫೋಟೋಗ್ರಾಫಿ ಪ್ಲೇಟುಗಳ ವಿಶಿಷ್ಟ ರಾಸಾಯನಿಕಗಳ ಮೇಲೆ ಬಿದ್ದಾಗ ಅಲ್ಲಿ ರಾಸಾಯನಿಕ ಕ್ರಿಯೆಗಳಾಗಿ ಚಿತ್ರ ಮೂಡುವಂತೆ, ಕೆಲವು ವಿಶಿಷ್ಟ ರಸಾಯನಗಳನ್ನು ಲೇಪಿಸಿದ ಫಲಕಗಳು ಅತ್ಯಧಿಕ ವೇಗದ ವಿದ್ಯುತ್ ಕಣಗಳ ಪಥಗಳ ಚಿತ್ರಗಳನ್ನು ಮೂಡಿಸುತ್ತವೆ. ಈ ತಂತ್ರದಿಂದ ಕಣಗಳ ಪಥಗಳ ಫೋಟೋಗಳನ್ನು ಪಡೆಯಬಹುದು. ರಷ್ಯದ ಸೆರೆಂಕಾಫ್ ಎಂಬಾತ 1934ರಲ್ಲಿ ಶೋಧಿಸಿದ ತತ್ತ್ವದ ಮೇಲೆ ಸೆರೆಂಕಾಫ್ ಸಂಸೂಚಕ ಕೆಲಸ ಮಾಡುತ್ತದೆ. ಯಾವುದೇ ಕಣ ಒಂದು ಪಾರದರ್ಶಕ ಮಾಧ್ಯಮದಲ್ಲಿ ಬೆಳಕಿನ ವೇಗಕ್ಕಿಂತ ಹೆಚ್ಚಿನ ವೇಗದಿಂದ ಚಲಿಸಿದರೆ ಅದು ಸೆರೆಂಕಾಫ್ ವಿಕಿರಣ ಮಾಡುವುದೆಂಬುದೇ ಆ ತತ್ತ್ವ. ಈ ವಿಕಿರಣವನ್ನೇ ಮಿಣುಕು ಗುಣಕದಲ್ಲಿಯಂತೆ ವರ್ಧಿಸಬಹುದು.

ಕಣಸಂಸೂಚಕಗಳು ಎಲೆಕ್ಟ್ರಾನ್, ಪ್ರೋಟಾನ್, ಆಲ್ಫ ಕಣಗಳು, ಮೆಸಾನುಗಳು ಇತ್ಯಾದಿ ವಿದ್ಯುತ್ ಕಣಗಳನ್ನಲ್ಲದೆ ನ್ಯೂಟ್ರಾನ್, ಫೋಟಾನ್ ಇತ್ಯಾದಿ ವಿದ್ಯುದ್ರಹಿತ ಕಣಗಳನ್ನು ಶೋಧಿಸಬಲ್ಲವು. ಕಣಸಂಸೂಚಕಗಳನ್ನು ಆರಿಸುವಾಗ ನಮಗೆ ಕಣಗಳ ಬಗೆಗೆ ಬೇಕಾದ ಮಾಹಿತಿ ಗಮನಿಸಬೇಕು. ಇದನ್ನು ಅವಲಂಬಿಸಿ ಕಣಸಂಸೂಚಕಗಳಲ್ಲಿ ಮೂರು ಮುಖ್ಯ ವೈಶಿಷ್ಟ್ಯಗಳನ್ನು ಗುರುತಿಸುತ್ತಾರೆ.

1 ವೇಗ : ಪ್ರತಿ ಸೆಕೆಂಡಿಗೆ ಸಂಸೂಚಕ ಪ್ರವೇಶಿಸುವ ಕಣಗಳ ಸಂಖ್ಯೆಯ ಎಣಿಕೆ ಗರಿಷ್ಠವಾಗಿರಬೇಕಿದ್ದರೆ ಸಂಸೂಚಕ ತೋರಿಸುವ ವಿದ್ಯುತ್ ಅಲ್ಪತಮ ಕಾಲಾವಧಿಯದಾಗಿರಬೇಕಲ್ಲದೆ ಒಂದು ವಿದ್ಯುತ್ ಸಂಕೇತದ ಪರಿಣಾಮವನ್ನು ನಿವಾರಿಸಿ ಮುಂದಿನ ಸಂಕೇತವನ್ನು ಕೊಡಲು ಅದು ಅಣಿಯಾಗಿರಬೇಕು. ಉದಾಹರಣೆಗೆ, ಮಿಣುಕು ಗುಣಕಗಳ ವೇಗ ಗರಿಷ್ಠವಾಗಿದೆ. ವಿದ್ಯುತ್ ಸಂಕೇತ $10^{-9}$ ಸೆಕೆಂಡಿನಷ್ಟು ಅಲ್ಪಕಾಲದ್ದಿರುವುದಲ್ಲದೆ, ಹೊಸ ಸಂಕೇತಕ್ಕೆ ಅಣಿಯಾಗಲು ಮಧ್ಯೆ ಕಾಲವೇ ಬೇಕಾಗಿಲ್ಲ. ಮೇಘಮಂದಿರಗಳ ವೇಗ ತೀರ ಮಂದ. ಎರಡು ಸಂಕೇತಗಳ ನಡುವೆ ಚೇತರಿಸುವ ಕಾಲ (ಡೆಡ್ ಟೈಂ) ಒಂದು ಮಿನಿಟಿನಷ್ಟು ದೀರ್ಘ. ಉಳಿದ ಸಂಸೂಚಕಗಳ ವೇಗ ಇವೆರಡು ಮಿತಿಗಳ ನಡುವೆಯೇ ಇದೆ.

2 ಅನುಪಾತೀಯತೆ (ಪ್ರಪೋರ್ಷನಾಲಿಟಿ) : ಸಂಸೂಚಕ ಕೊಡುವ ವಿದ್ಯುತ್ ಸಂಕೇತಗಳು ಕಣಗಳ ಶಕ್ತಿನಷ್ಟಕ್ಕೆ ಅನುಪಾತವಾಗಿದ್ದರೆ ಆ ಸಂಸೂಚಕ ಅನುಪಾತೀಯವಾಗಿದೆ ಎನ್ನುತ್ತಾರೆ. ಅನುಪಾತೀಯ ಗುಣಕ ಮತ್ತು ಮಿಣುಕು ಗುಣಕ ಇದಕ್ಕೆ ಉದಾಹರಣೆಗಳು. ಗೀಗರ್ ಮುಲರ್ ಗುಣಕಗಳು ಅನುಪಾತೀಯವಲ್ಲ.

3 ಅಳೆಯಬಲ್ಲ ಭೌತ ಪರಿಣಾಮಗಳು : ಸಂಸೂಚಕಗಳನ್ನು ವಿದ್ಯುತ್‍ಕ್ಷೇತ್ರ, ಕಾಂತಕ್ಷೇತ್ರ ಇತ್ಯಾದಿ ವಿವಿಧ ಪರಿಸರಗಳಲ್ಲಿಟ್ಟು ಕಣಗಳ ವ್ಯಾಪ್ತಿ (ರೇಂಜ್), ವೇಗ, ಶಕ್ತಿ, ವಿದ್ಯುದಂಶದ ವಿಚಾರ ಇತ್ಯಾದಿ ಭೌತ ಸಂಗತಿಗಳನ್ನು ಅಭ್ಯಸಿಸಬಹುದು. ನಾವು ಅಳೆಯಬೇಕೆಂದ ಭೌತ ಪರಿಣಾಮವನ್ನು ಗಮನಿಸಿ ಕಣಸಂಸೂಚಕವನ್ನು ಆಯ್ದುಕೊಳ್ಳಬೇಕಾಗುತ್ತದೆ. (ಆರ್. ಎಸ್. ಬಿ.)

**ಕಣಾದ :** ಷಡ್‍ದರ್ಶನಗಳಲ್ಲಿ ಒಂದಾದ ವೈಶೇಶಿಕ ದರ್ಶನವನ್ನು ಸಿದ್ಧಾಂತ ರೂಪದಲ್ಲಿ ರಚಿಸಿದ ಮಹರ್ಷಿ. ಕಶ್ಯಪ ಗೋತ್ರದ ಉಲೂಕ ಮಹರ್ಷಿಯ ಮಗ. ಆದ್ದರಿಂದ ಇವನ ಗ್ರಂಥಕ್ಕೆ ಔಲೂಕ್ಯ ದರ್ಶನವೆಂದೂ ಹೆಸರು. ಕಣ ಎಂದರೆ ಅಣು. ಅದ ಎಂದರೆ ಭಕ್ಷಿಸಿದವನು. ಆದ್ದರಿಂದ ಕಣಾದನೆಂದರೆ ಅಣುಭಕ್ಷಕ ಎಂದು ವಿಮರ್ಶಕರು ಅರ್ಥ ಕಲ್ಪಿಸುವುದುಂಟು. ಈತನಿಗೆ ಕಣಭುಕ್, ಕಣಭಕ್ಷ, ಅಕ್ಷಪಾದ, ಉಲೂಕ ಎಂದೂ ಹೆಸರುಗಳಿವೆ. ಇವೆಲ್ಲವೂ ಅನ್ವರ್ಥನಾಮಗಳು ; ಈತನ ಸಾಧನೆ ಸಿದ್ಧಿಗಳ ದ್ಯೋತಕ. ಮೊದಲ ಬಾರಿಗೆ ನಿತ್ಯದ್ರವ್ಯಗಳ ವಿಶ್ಲೇಷಣೆ ಮತ್ತು ಸಂಶ್ಲೇಷಣೆಗಳನ್ನು ವಿವರಿಸಿ ಮಹದ್ರೂಪದಿಂದ ಅಣುರೂಪಕ್ಕೆ, ಮತ್ತೆ ಅಣುರೂಪದಿಂದ ಮಹದ್ರೂಪಕ್ಕೆ ದ್ರವ್ಯಗಳ ಸ್ಥಿತ್ಯಂತರವನ್ನು ಸಾಧಿಸಿ ತೋರಿದವನಿವನಾದ್ದರಿಂದ ಈತ ಅಣುಭಕ್ಷಕ. ದಿನವೆಲ್ಲ ಧ್ಯಾನಮಗ್ನನಾಗಿ ರಾತ್ರಿ ಜಾಗ್ರತನಾಗಿರುತ್ತಿದ್ದುದರಿಂದ ಉಲೂಕ. ಕಾಪೋತವೃತ್ತಿಯನ್ನು ಆಚರಿಸುತ್ತ ಬೀದಿಯಲ್ಲಿ ಬಿದ್ದಿದ್ದ ಅಕ್ಕಿಯ ಕಾಳುಗಳನ್ನು ಆಯ್ದು ತಿನ್ನುತ್ತಿದ್ದುದರಿಂದ ಇವನಿಗೆ ಕಣಭುಕ್ ,ಕಣಭಕ್ಷ ಎಂಬ ಹೆಸರು ಬಂದಿರಬಹುದೆಂದು ಇನ್ನೊಂದು ಮತ. ಈತನ ನಿಜವಾದ ಹೆಸರು ಕಾಶ್ಯಪನೆಂದು ಕಂಡುಬರುತ್ತದೆ.

ಈತನ ಜೀವನ, ಕಾಲ, ದೇಶಗಳ ವಿಷಯವಾಗಿ ನಿಖರವಾಗಿ ಏನೂ ತಿಳಿದು ಬಂದಿಲ್ಲ. ಆದರೆ ವೈಶೇಷಿಕ ದರ್ಶನ ಸಂಸ್ಕೃತ ಸಾಹಿತ್ಯದ ಒಂದು ಪ್ರಸಿದ್ಧ ಪ್ರಕಾರವಾದ ಸೂತ್ರ ರೂಪದಲ್ಲಿರುವುದರಿಂದ ಈತ ಇಂಥ ಸೂತ್ರಸಾಹಿತ್ಯಕ್ಕೆ ಪ್ರಸಿದ್ಧವಾದ ಕ್ರಿ.ಪೂ. ಮೂರು ನಾಲ್ಕನೆಯ ಶತಮಾನದವನೆಂದು ಊಹಿಸಬಹುದು.

ಕಣಾದನ ತತ್ತ್ವಶಾಸ್ತ್ರಕ್ಕೆ ಅಧ್ಯಾತ್ಮಶಾಸ್ತ್ರವೆಂದೂ ಹೆಸರಿದೆ.

ಸಪ್ತ ಪದಾರ್ಥಗಳ ಮತ್ತು ಅವುಗಳ ಒಳಭೇದಗಳ ಪರಸ್ಪರ ಸಾಮರ್ಥ್ಯ ವೈಧರ್ಮ್ಯಗಳ (ವಿಶೇಷ) ಸೂಕ್ಷ್ಮತೆಯನ್ನರಿಯುವುದೇ ತತ್ತ್ವಜ್ಞಾನದ ಉಪಲಬ್ಧಿಗೆ ಕಾರಣವಾಗುತ್ತದೆ ಎಂಬುದು ಕಣಾದನ ಮತ. ನಿತ್ಯವಸ್ತುಗಳ ಸಮ್ಯಕ್‍ಜ್ಞಾನದಿಂದ ಒಂದನ್ನು ಮತ್ತೊಂದನ್ನಾಗಿ ತಪ್ಪಾಗಿ ಕಲ್ಪಿಸಿಕೊಳ್ಳುವ ಭ್ರಮೆ ಪರಿದಾಗ ಪ್ರಮೆ (ಸಮ್ಯಕ್‍ಜ್ಞಾನ) ಸಿದ್ಧಿಸುತ್ತದೆ; ಅಖ್ಯಾತಿ, ಅನ್ಯಥಾ ಖ್ಯಾತಿ ಹರಿದು ಆ ಸ್ಥಾನದಲ್ಲಿ ಸಮ್ಯಕ್ ಖ್ಯಾತಿ ದೊರೆಕೊಳ್ಳುತ್ತದೆ. ತತ್ಫಲವಾಗಿ ಭ್ರಾಂತಿ ತೊಲಗಿ ತತ್ತ್ವಜ್ಞಾನ ಲಭಿಸಿ ತನ್ಮೂಲಕ ಮೋಕ್ಷಪ್ರಾಪ್ತಿಯಾಗುತ್ತದೆ—ಎಂಬುದೇ ಕಣಾದ ಮಹರ್ಷಿಯ ದರ್ಶನ.

ದರ್ಶನವನ್ನೇ ಅಲ್ಲದೆ ಭೌತಿಕ ವಸ್ತು ವಿಜ್ಞಾನವನ್ನು ಸಹ ವೈಶೇಷಿಕ ಸೂತ್ರಗಳು ವ್ಯಕ್ತಪಡಿಸುತ್ತವೆ. ವಸ್ತುಗಳ ಸಂಯೋಜನೆ, ರೂಪಾಂತರ, ಚಲಿಸುತ್ತಿರುವ ವಸ್ತುಗಳ ಮೇಲೆ ಆಕರ್ಷಣೆ, ವಿಕರ್ಷಣೆ ಮುಂತಾದ ಭೌತಿಕಶಕ್ತಿಗಳಿಂದಾಗುವ ಪರಿಣಾಮ, ಉಷ್ಣ, ಪ್ರಕಾಶ, ಶಬ್ದ, ವಿದ್ಯುತ್ ಶಕ್ತಿ ಮತ್ತು ಅಯಸ್ಕಾಂತಶಕ್ತಿ ಇವುಗಳಿಗೆ ಸಂಬಂಧಿಸಿದ ವೈಜ್ಞಾನಿಕ ಸೂತ್ರಗಳು ಈ ದರ್ಶನದಲ್ಲಿವೆ.

ವೈಶೇಷಿಕಸೂತ್ರಗ್ರಂಥ ಈ ಮೊದಲು ಹೇಳಿದಂತೆ ಸೂತ್ರಾತ್ಮಕ ಗದ್ಯದಲ್ಲಿದೆ. ಹತ್ತು ಅಧ್ಯಾಯಗಳಿದ್ದು ಪ್ರತಿ ಅಧ್ಯಾಯದಲ್ಲೂ ಆಹ್ನಿಕಗಳೆಂಬ ಎರಡು ಭಾಗಗಳಿವೆ. ಅಥಾತೋ ಧರ್ಮಂ ವ್ಯಾಖ್ಯಾಸ್ಯಾಮಃ ಎಂಬುದು ಮೊದಲ ಸೂತ್ರ.

ಈ ಗ್ರಂಥದ ಮೇಲೆ ಕ್ರಿ. ಶ. ಸುಮಾರು ನಾಲ್ಕನೆಯ ಶತಮಾನದಲ್ಲಿ ಪ್ರಶಸ್ತಪಾದನೆಂಬಾತ ಭಾಷ್ಯ ಬರೆದಿದ್ದಾನೆ. ಇದರ ಆಧಾರದ ಮೇಲೆ ಚಂದ್ರನೆಂಬಾತ ಚೀನಿ ಭಾಷೆಯಲ್ಲಿ ದಶಪದಾರ್ಥಶಾಸ್ತ್ರವೆಂಬುದನ್ನು ರಚಿಸಿದ್ದಾನೆ (ಏಳನೆಯ ಶತಮಾನ). ಶ್ರೀಧರನ ನ್ಯಾಯಕಂದಲಿ ಉದಯನಾಚಾರ್ಯನ ಕಿರಣಾವಲಿ (ಎರಡೂ ಹತ್ತನೆಯ ಶತಮಾನದವು) ಇತರ ಭಾಷ್ಯಗಳಲ್ಲಿ ಪ್ರಸಿದ್ಧವಾದು.

ಕ್ರಿ. ಶ. ಹತ್ತನೆಯ ಶತಮಾನದಿಂದೀಚೆಗೆ ನ್ಯಾಯ ಮತ್ತು ವೈಶೇಷಿಕ ದರ್ಶನಗಳನ್ನು ಒಂದಾಗಿ ಅಭ್ಯಸಿಸಿದ್ದರ ಫಲವಾಗಿ ಅನೇಕ ಗ್ರಂಥಗಳು ಹುಟ್ಟಿಕೊಂಡುವು.

**ನೋಡಿ**—ಭಾರತೀಯ ತತ್ತ್ವಶಾಸ್ತ್ರ; ವೈಶೇಷಿಕ ದರ್ಶನ. (ಸಿ.ಜಿ.ಬಿ.)

**ಕಣಿವೆ :** ವಿಸ್ತಾರವೂ ಕಡಿದೂ ಮುಮ್ಮೈ ಉಳ್ಳದ್ದೂ ಆದ ದಿಣ್ಣೆಗಳ ನಡುವೆಯೋ ಬೆಟ್ಟಗಳ ಅಥವಾ ಪರ್ವತಗಳ ಶ್ರೇಣಿಗಳ ನಡುವೆಯೋ ಇರುವ. ಸಾಮಾನ್ಯವಾಗಿ ಹೊರಕ್ಕೆ ತೆರೆದುಕೊಂಡಿರುವ, ಉದ್ದನೆಯ ತಗ್ಗು (ವ್ಯಾಲಿ). ಭೂಮಿಯ ಮೇಲ್ಪದರ ತಳಾಭಿಮುಖವಾಗಿ ಮಡಿಸಿಕೊಂಡು ಸಮಾನರೇಖೆಯ ಕಡೆಗೆ ಇಳಿವೋರೆಯಾಗಿ ಆದದ್ದು ಕೇಂದ್ರಮುಖಾವನತ (ಸಿನ್‌ಕ್ಲಿನಲ್) ಕಣಿವೆ. ಸ್ತರಭಂಗದಿಂದ ಅಥವಾ ಖನಿಜರೇಖೆಯ ವಿಚ್ಛಿತ್ತಿಯಿಂದ ಸಂಭವಿಸಿದ್ದು ಸೀಳುಕಣಿವೆ. ಇವೆರಡೂ ಭೂರಚನೆಯ ವ್ಯತ್ಯಾಸದಿಂದ ಆದಂಥ ಕಣಿವೆಗಳು. ನದಿ ಅಥವಾ ಹಿಮಪ್ರವಾಹದಿಂದ, ಅದರ ಕ್ರಮಕ್ಕೆ ಪೂರ್ವಭಾವಿಯಾಗಿಯೋ ಅನುಗುಣವಾಗಿಯೋ ಸಂಭವಿಸುವ ನಾನಾ ಕ್ರಿಯೆಗಳಿಂದಾಗಿ, ಕಣಿವೆಗಳು ಸಂಭವಿಸುವುದೂ ಉಂಟು.



ಚಿತ್ರ 3 ಬೆಟ್ಟಗಳ ನಡುವಿನ ಕಣಿವೆಯಲ್ಲಿ ಹರಿಯುತ್ತಿರುವ ನರ್ಮದಾ ನದಿ

**ಕೇಂದ್ರಮುಖಾವನತ ಕಣಿವೆಗಳು :** ಭೂವರ್ತುಲಕ್ಕೆ ಸ್ಪರ್ಶಕವಾಗಿಯೋ ಅದರ ಸಮತಲದಲ್ಲೋ ಎರಡು ಬಲಗಳು ಹೊರಟು ಒಂದೇ ಬಿಂದುವಿನ ಕಡೆಗೆ



ಚಿತ್ರ 1 ಕೇಂದ್ರಮುಖಾವನತ ಕಣಿವೆ

ಚಲಿಸಿದಾಗ ಅಥವಾ ಎರಡು ವಿರುದ್ಧ ದಿಕ್ಕುಗಳಿಂದ ಒಂದೇ ಸಮತಲದ ಕಡೆಗೆ ಚಲಿಸಿದಾಗ ನಡುವಣ ಶಿಲೆಗಳು ಸಂಕುಚಿತಗೊಳ್ಳುತ್ತವೆ. ಇದರ ಫಲವಾಗಿ ಮೂಲ ಶಿಲೆಗಳು ಮೊದಲು ಆಕ್ರಮಿಸಿಕೊಂಡಿದ್ದಕ್ಕಿಂತ ಕಡಿಮೆ ಪ್ರದೇಶವನ್ನಾಕ್ರಮಿಸಿಕೊಳ್ಳುವುದರಿಂದ ಈ ಬಗೆಯ ಕಣಿವೆಗಳು ಸಂಭವಿಸುತ್ತವೆ. ಈ ಕ್ರಿಯೆಗಳ ಫಲವಾಗಿ ನೆಲದ ಒಂದು ಭಾಗ ಉಬ್ಬಾಗಿಯೂ (ವಿಮುಖಾವನತ) ಇನ್ನೊಂದು ಭಾಗ ತಗ್ಗಾಗಿಯೂ (ಕೇಂದ್ರಮುಖಾವನತ)—ಸಮುದ್ರದ ಅಲೆಗಳಂತೆ—ಪರಿಣಮಿಸುತ್ತದೆ. ಹಿಮಾಲಯ, ಆರಾವಳಿ, ಆಲ್ಪ್ಸ್, ರಾಕಿ ಮುಂತಾದ ಪರ್ವತಶ್ರೇಣಿಗಳ ನಡುವಣ ಕಣಿವೆಗಳು ಈ ರೀತಿಯಾಗಿ ಸಂಭವಿಸಿದಂಥವು.



ಚಿತ್ರ 2 ಸೀಳುಕಣಿವೆ

**ಸೀಳು ಕಣಿವೆ :** ಭೂಮಿಯ ಒಳಗಡೆ ಸಂಭವಿಸುವ ಬಲಗಳು ಬೇರೆ ಬೇರೆ ದಿಕ್ಕುಗಳ ಕಡೆಗೆ ಹರಿದಾಗ ಭೂಮಿಯ ಮೇಲಣ ಶಿಲೆಗಳು ಏರುಪೇರಾಗುತ್ತವೆ. ಒಂದು ಭಾಗ ಕುಸಿದು ಇನ್ನೊಂದು ಭಾಗ ಹಾಗೆಯೇ ಇರುತ್ತದೆ. ಒಂದು ರೇಖೆಯ ಉದ್ದಕ್ಕೂ ಸ್ತರಭಂಗದಿಂದಾಗಿ ಭೂಚಿಪ್ಪಿನ ಒಂದು ಭಾಗ ಜಾರಿಕೊಂಡಾಗ ಗೋಡೆಯಂತೆ ಕಡಿದಾದ ಅಂಚುಗಳುಳ್ಳ ಸೀಳುಕಣಿವೆಯ ರಚನೆಯಾಗುತ್ತದೆ. ಸ್ಕಾಟ್ಲೆಂಡಿನ ಮಿಡ್‌ಲೆಂಡ್ ಕಣಿವೆ, ರೈನ್ ಕಣಿವೆ, ಮೃತಸರೋವರದ ಭಾಗ, ಜಾರ್ಡನ್ ಕಣಿವೆ, ಇವು ಕೆಲವು ಉದಾಹರಣೆಗಳು. ನರ್ಮದಾ ಮತ್ತು ತಪತೀ ನದೀ ಕಣಿವೆಗಳೂ ಈ ಜಾತಿಗೆ ಸೇರಿದವೆಂದು ಕೆಲವು ಭೂಗೋಳ ಶಾಸ್ತ್ರಜ್ಞರ ಮತ. ಕಲ್ಲಿದ್ದಲಿನ ನಿಕ್ಷೇಪವಿರುವ ದಾಮೋದರ ಕಣಿವೆಯೂ ಈ ತೆರನಾದದ್ದು.

**ನದೀಕಣಿವೆ :** ಎತ್ತರದ ನೆಲದ ಮೇಲೆ ಬಿದ್ದ ನೀರು ಕೋಟ್ಯಂತರ ವರ್ಷಗಳಿಂದ ಹರಿಯುತ್ತಿರುವುದರ ಪರಿಣಾಮವಾಗಿ ನೆಲದ ಮೃದುವಾದ ಭಾಗ ಕೊಚ್ಚಿಹೋಗಿ ಕಣಿವೆಗಳು ನಿರ್ಮಾಣವಾಗುತ್ತವೆ. ಇವು ನದಿಗಳ ಉಗಮಸ್ಥಾನಗಳೂ ಆಗಿರುತ್ತವೆ. ಒಮ್ಮೊಮ್ಮೆ ಇಂಥ ಕಣಿವೆಗಳು ಕಮರಿಗಳನ್ನು ನಿರ್ಮಿಸಿ ಪ್ರಕೃತಿಯ ರಮ್ಯಭೀಕರದೃಶ್ಯಗಳನ್ನೊದಗಿಸುತ್ತವೆ. ನದೀ ಪ್ರವಾಹದ ಮತ್ತು ಭೂಸವೆತದ ಪರಿಣಾಮವಾಗಿ ನದೀಬಯಲಿನಲ್ಲೂ ಕಣಿವೆಗಳು ನಿರ್ಮಾಣವಾಗುವುದುಂಟು.

ನದೀಕಣಿವೆಯನ್ನು ಮೇಲ್‌ಕಣಿವೆ, ಮಧ್ಯದ ಕಣಿವೆ, ಕೆಳಕಣಿವೆ ಎಂಬುದಾಗಿ ವಿಭಾಗಿಸಬಹುದು. ನದಿಯ ಪ್ರಾರಂಭದೆಸೆಯದು ಮೇಲ್‌ಕಣಿವೆ. ಇದು ಸಾಮಾನ್ಯವಾಗಿ ಪರ್ವತ ಪ್ರದೇಶಗಳಲ್ಲಿರುವುದರಿಂದ ನಗ್ನೀಕರಣಕಾರ್ಯ ಹೆಚ್ಚಾಗಿ, ಇಳಿಮುಖ ಕೊರೆತ ಹೆಚ್ಚಾಗಿರುತ್ತದೆ. ಇದರ ಪರಿಣಾಮವಾಗಿ ಕಡಿದಾದ ಪಕ್ಕಗಳುಳ್ಳ V ಆಕಾರದ ಕಣಿವೆಗಳ ನಿರ್ಮಾಣವಾಗುತ್ತದೆ. ಕಡಿದಾದ ಪಕ್ಕಗಳು ಕಠಿಣಶಿಲಾಭಾಗಗಳಾಗಿದ್ದು, ಆಳವಾದ ಗೋಡೆಗಳಂತೆ ನಿಂತಿರುತ್ತವೆ. ಕಾಲೊರಾಡೋ ನದೀ ಕಣಿವೆಯಲ್ಲಿ ಶೃಂಗಲಂಬವಾದ ಪಕ್ಕಗಳುಳ್ಳ ಇಂಥ ಆಳವಾದ ಕಮರಿಗಳನ್ನು ಕಾಣಬಹುದು. ಇಂಥ ಪ್ರದೇಶಗಳಲ್ಲಿ ಇದ್ದಕ್ಕಿದ್ದಂತೆ ಭಿನ್ನಸ್ವರೂಪದ, ಕಠಿಣವಲ್ಲದ ಶಿಲಾಸ್ತರಗಳು ಕಂಡುಬಂದಾಗ ಭೂಸವೆತದ ಕಾರ್ಯ ತೀವ್ರವಾಗಿ ಜಲಪಾತಗಳು ನಿರ್ಮಾಣವಾಗುತ್ತವೆ. ನದಿಯ ಮಧ್ಯ ಪ್ರದೇಶಗಳಲ್ಲಿ ಸಾಮಾನ್ಯವಾಗಿ ಆಳವಾದ ಕಣಿವೆಗಳು ಇರುವುದಿಲ್ಲ. ಇಲ್ಲಿ ಸರೋವರಗಳು ಸಂಭವಿಸುವುದು ಸಾಮಾನ್ಯ. ಕೆಳ ಕಣಿವೆಯಲ್ಲಿ ಯಾವ ರೀತಿಯ ವಿಶೇಷವೂ ಇರುವುದಿಲ್ಲ.

ನದೀಕಣಿವೆಗಳಲ್ಲಿ ಕೆಲವು ಶುಷ್ಕಕಣಿವೆಗಳೂ ಇರುವುದುಂಟು. ನೀರು ಬೇರೆ ಕಡೆ ಹರಿಯುತೊಡಗುವುದರಿಂದ ಇಲ್ಲವೆ ಪಾತ್ರದ ನೆಲದಲ್ಲಿ ನೀರು ಇಂಗಿ ಹೋಗುವುದರಿಂದ ಈ ಬಗೆಯ ಕಣಿವೆಗಳು ನಿರ್ಮಾಣವಾಗುತ್ತವೆ. ಇವು ಮೃತಕಣಿವೆಗಳು.

ಕಣಿವೆಗಳು ಯುವಾವಸ್ಥೆಯಲ್ಲಿದ್ದಾಗ V ಆಕಾರದಲ್ಲಿದ್ದು ಕಡಿಮೆ ಉಪನದಿಗಳನ್ನು ಪಡೆದಿರುತ್ತವೆ. ವಿಕಾಸಗೊಂಡ ಕಣಿವೆಗಳು ವಿಶಾಲ. ಇಲ್ಲಿ ಉದ್ದುದ್ದನೆಯ ಉಪನದಿಗಳಿರುತ್ತವೆ. ಹಳೆಯ ಕಣಿವೆಗಳಿಗೆ ಇಳಿಜಾರು ಕಡಿಮೆ. ಪ್ರವಾಹಗಳು ವಿಶಾಲವಾಗಿರುತ್ತವೆ.

ಹಿಮರೇಖೆಗಿಂತ ಎತ್ತರವಾದ ಪರ್ವತಪ್ರದೇಶಗಳಲ್ಲಿರುವ ಹಿಮ ಪ್ರವಾಹಗಳು ಇಳಿಜಾರಾಗಿರುವ ಕಡೆ ಹರಿಯುತ್ತದೆ. ಇವು ಹರಿಯುವಾಗ ತಳಭಾಗವನ್ನು ಕೊರೆದು ಅಗಲ ಮಾಡಿ, ಅಡ್ಡಮುಖ ಸಮತಟ್ಟಾದ ತಳವನ್ನೂ ಕಡಿದಾದ ಪಕ್ಕಗಳನ್ನೂ ನಿರ್ಮಾಣಮಾಡುತ್ತವೆ. ಇಂಥವು ಬಾನೆ ಇಲ್ಲವೆ ಬೋಗೋಣಿಯಾಕಾರದ U ಕಣಿವೆಗಳು.

ಹಿಮಪ್ರವಾಹಗಳು ಮುಖ್ಯವಾಗಿ ಹರಿಯುವಂಥವು ಮೂಲ ಕಣಿವೆಗಳು. ಇವನ್ನು ಸೇರುವ ಕಣಿವೆಗಳು ಉಪಕಣಿವೆಗಳು. ಮೂಲಕಣಿವೆಗಳಲ್ಲಿ ಭೂಸವೆತ ಸಾಮಾನ್ಯವಾಗಿ ತೀವ್ರಗತಿಯಲ್ಲಿ ಆಗುವುದರಿಂದ ಅವು ಹೆಚ್ಚು ಆಳಕ್ಕೆ



ಚಿತ್ರ 4 ತೂಗುಕಣಿವೆ

ಇಳಿಯುತ್ತವೆ. ಉಪಕಣಿವೆಗಳಲ್ಲಿ ಭೂಸವೆತ ಕಡಿಮೆ. ಅವು ಮೂಲಕಣಿವೆಗಳ ಮೇಲ್ಭಾಗದಲ್ಲಿರುತ್ತವೆ. ಅವು ತೂಗುಕಣಿವೆಗಳು. ಹಿಮಪ್ರವಾಹಗಳು ಕಣ್ಮರೆಯಾಗಿ ನೀರು ಹರಿಯಲು ಪ್ರಾರಂಭವಾದಾಗ ಜಲಪಾತಗಳು ಸಂಭವಿಸುತ್ತವೆ.

U ಆಕಾರದ ಕಣಿವೆಗಳ ಮೂಲದಲ್ಲಿ ಅರ್ಧ ಚಂದ್ರಾಕಾರದ ಪಾತ್ರವಿರುತ್ತದೆ. ಇದಕ್ಕೆ ಲಂಬವಾಗಿರುವ ಹಿಂಬದಿ ಮತ್ತು ಪಕ್ಕಗಳುಂಟು. ನೋಡಲು ಇದು



ಚಿತ್ರ 5 ರಂಗಕಣಿವೆ

ಆರಾಮ ಕುರ್ಚಿಯಂತಿರುತ್ತದೆ. ಇದು ರಂಗಕಣಿವೆ. ಈ ಕಣಿವೆಯ ತಳದಲ್ಲಿರುವ ಕೆಲವು ತಗ್ಗುಗಳಲ್ಲಿ ನೀರು ತುಂಬಿ ಡೊಣೆಗಳಾಗುವುದುಂಟು.

ಸಮುದ್ರ ಮತ್ತು ಸಾಗರಗಳ ತಳಗಳಲ್ಲೂ ಅನೇಕ ಪರ್ವತಶ್ರೇಣಿಗಳಿವೆ. ಇವುಗಳ ನಡುವೆಯೂ ಅಲ್ಲಲ್ಲಿ ಕಣಿವೆಗಳುಂಟು. ಇವುಗಳಲ್ಲಿ ಕೆಲವು ಕಾಲೊರಾಡೋವಿನ ಕಮರಿಗಳಂತಿರುತ್ತವೆ. ಹಡ್ಸನ್ ನದಿ ಅಟ್ಲಾಂಟಿಕ್ ಸಾಗರದೊಳಗೆ ಮುಂದುವರಿಯುತ್ತದೆ. ಇದು ಹಡ್ಸನ್ ಕಮರಿ—ಸೀಳುಕಣಿವೆಯಿಂದ ಆದದ್ದು. (ಕೆ.ಆರ್.ಆರ್.)

**ಕಣೆ ರೋಗದ ನೊಣ :** ಬತ್ತದ ಪೈರಿಗೆ ಬರುವ ಕಣೆ, ಆನೆಕೊಂಬು ಅಥವಾ ಕೊಳವೆ ರೋಗಕ್ಕೆ ಕಾರಣವಾದ ಡಿಪ್ಟಿರಗಣದ ಸೆಸಿಡೋಮೈಡಿ ಕುಟುಂಬಕ್ಕೆ ಸೇರಿದ ಪ್ಯಾಕಿಡಿಪ್ಲಾಸಿಸ್ ಒರೈಜೆ಼ ಎಂಬ ನೊಣ. ಇದು ಸೊಳ್ಳೆಯಂತೆ ಉದ್ದನೆಯ ಕಾಲುಗಳುಳ್ಳ ಸೂಕ್ಷ್ಮವಾದ ಕೀಟ.

ಹೆಣ್ಣುನೊಣ ಬತ್ತದ ಪೈರಿನ ಚಿಗುರು ಭಾಗಗಳ ಮೇಲೆ ಮೊಟ್ಟೆಗಳನ್ನಿಡುತ್ತದೆ. ಮೊಟ್ಟೆಯೊಡೆದು ಬರುವ ಕಾಲಿಲ್ಲದ ಬಿಳಿಬಣ್ಣದ ಮರಿಹುಳುಗಳು (ಮ್ಯಾಗಟ್) ಎಳೆಯ ಕಾಂಡವನ್ನು ಕೊರೆದು ಒಳಗೆ ಪ್ರವೇಶಿಸುತ್ತವೆ. ಇದರಿಂದ ಪ್ರಚೋದನೆಗೊಂಡ ಕಾಂಡದಿಂದ ತಿಳಿ ಬಿಳುಪು ಅಥವಾ ನಸು ನೀಲಿಬಣ್ಣದ ಟೊಳ್ಳು ಕೊಳವೆಗಳು ಉತ್ಪತ್ತಿಯಾಗುತ್ತವೆ. ಇವುಗಳನ್ನೇ ಬೆಳ್ಳಿ ಕೊಳವೆ (ಸಿಲ್ವರ್ ಶೂಟ್) ಅಥವಾ ಆನೆಕೊಂಬು ಎಂದು ಕರೆಯುವುದು. ಹುಳು ಹತ್ತಿದ ಗಿಡಗಳಲ್ಲಿ ತೆನೆಯ ಉತ್ಪನ್ನವಿಲ್ಲ. ಕ್ರಮೇಣ ಕೊಳವೆಯೊಳಗೇ ಮರಿಹುಳುಗಳು ಕೋಶಾವಸ್ಥೆಗೆ ತಿರುಗಿ ಬಲಿತ ನೊಣವಾಗಿ ಹೊರಗೆ ಬರುತ್ತವೆ.

ಭಾರತದಲ್ಲಿ ಬತ್ತಕ್ಕೆ ಕಣೆಯ ಕಾಟ ಅತ್ಯಂತ ತೀವ್ರರೂಪದ್ದು ; ಆಂಧ್ರ ಪ್ರದೇಶ, ಬಿಹಾರ, ಮಧ್ಯಪ್ರದೇಶ, ತಮಿಳುನಾಡು, ಮಹಾರಾಷ್ಟ್ರ, ಮೈಸೂರು, ಒರಿಸ್ಸ ಮತ್ತು ಪಶ್ಚಿಮ ಬಂಗಾಳ ರಾಜ್ಯಗಳಲ್ಲಿ ಇದರ ಹಾವಳಿ ಹೆಚ್ಚಾಗಿರುವುದು ಕಂಡುಬಂದಿದೆ. ಚಕ್ರಗತಿಯನ್ನನುಸರಿಸಿ ಒದಗುವ ಈ ಮಾರಿ ಸಾಂಕ್ರಾಮಿಕದಂತೆ ಬಹಳ ಬೇಗ ಹರಡುವುದು. ಸ್ಥಳಿಕವಾಗಿ ಕಾಣಿಸಿಕೊಳ್ಳುವ ಪ್ರದೇಶಗಳಲ್ಲಿ ಇದರಿಂದ ತೀವ್ರರೂಪದ ನಷ್ಟವುಂಟಾಗಿ ಸೇಕಡ 50ಕ್ಕೂ ಮೀರಿದಷ್ಟು ಬೆಳೆ ಹಾಳಾಗಿ ಹೋಗಬಹುದು. ಮರಿಹುಳುವಿನ ಅವಧಿ 8–18 ದಿನಗಳು ಮತ್ತು ಕೋಶಾವಸ್ಥೆಯ ಕಾಲ 2–6 ದಿನಗಳು. ಜೀವಮಾನದ ಒಟ್ಟು ಅವಧಿ 2–3 ವಾರ. ವರ್ಷದಲ್ಲಿ 5 ರಿಂದ 8 ಸಂತತಿಗಳು. ಚಳಿಗಾಲವನ್ನು ಈ ಕೀಟ ಮರಿಹುಳುವಿನ ಅವಸ್ಥೆಯಲ್ಲಿ ಬತ್ತದಕೂಳು ಅಥವಾ ಅಕ್ಕಪಕ್ಕದ ಕಾಡುಹುಲ್ಲುಗಳಲ್ಲಿ ಕಳೆಯುವುದು. (ಡಿ.ಎಸ್.)

**ಕಣ್ಣಗಿ :** ಕ್ರಿ.ಶ. ಸುಮಾರು 5ನೆಯ ಶತಮಾನದಲ್ಲಿ ಇದ್ದಿರಬಹುದಾದ ಇಳಂಗೋ ಅಡಿಗಳ್ (ನೋಡಿ) ಬರೆದ ಶಿಲಪ್ಪದಿಗಾರಂ ಎಂಬ ತಮಿಳು ಕಾವ್ಯದ ನಾಯಕಿ. ಪತ್ತಿನಿದೇವಿ ಎಂಬ ಹೆಸರಿನಿಂದ ಶ್ರೇಷ್ಠ ಪತಿವ್ರತೆಯೆಂದು ದಕ್ಷಿಣ ಭಾರತದಲ್ಲೂ ಸಿಂಹಳದಲ್ಲೂ ಪೂಜಿತಳಾಗಿದ್ದ ಓರ್ವ ದೈವೀಕೃತ ಸ್ತ್ರೀ. ಕೋವಲನ್ ಪುಹಾರ್ (ಕಾವೇರಿ ಪಟ್ಟಣ) ನಗರದ ತರುಣ ಶ್ರೀಮಂತನ ಸತಿ. ಕೋವಲನ್ ಮಾಧವಿ ಎಂಬ ವೇಶ್ಯೆಯಿಂದ ಆಕರ್ಷಿತನಾಗಿ ಅವಳ ಸಹವಾಸದಲ್ಲಿ ತನ್ನ ಸಂಪತ್ತನ್ನೆಲ್ಲ ಕಳೆದುಕೊಂಡ. ಕೊನೆಗೆ ಆಕೆಯಿಂದ ತಿರಸ್ಕೃತನಾದ ಪತಿಯನ್ನು ಕಣ್ಣಗಿ ಮನ್ನಿಸಿ, ಹೊಸಬಾಳ್ವೆ ನಡೆಸುವ ವಿಚಾರದಿಂದ ಅವನೊಡನೆ ಪಾಂಡ್ಯರಾಜಧಾನಿ ಮಧುರೆಗೆ ಬಂದಳು. ಅಲ್ಲಿ ಆತ ಕಳ್ಳತನದ ಅಪವಾದಕ್ಕೆ ಗುರಿಯಾಗಿ ಮರಣದಂಡನೆಗೆ ಗುರಿಯಾಗಲು ಪತಿವಿಯೋಗದಿಂದ ಶೋಕತಪ್ತಳಾಗಿ ಪಾಂಡ್ಯರಾಜನನ್ನೂ ಮಧುರೆಯನ್ನೂ ಶಪಿಸಿದಳು. ಮಧುರೆ ಸುಟ್ಟುಹೋಯಿತು. ಮುಂದೆ ಕಣ್ಣಗಿ ಪಶ್ಚಿಮ ಘಟ್ಟಗಳಿಗೆ ತೆರಳಿದಳೆಂದೂ ಅಲ್ಲಿ ದಿವ್ಯ ವಿಮಾನವನ್ನೇರಿ ಸ್ವರ್ಗದಲ್ಲಿದ್ದ ತನ್ನ ಪತಿಯನ್ನು ಸೇರಿದಳೆಂದೂ ಕಥೆ ಇದೆ. ಕಣ್ಣಗಿಯ ವಿಚಾರ ಕೇಳಿದ ಚೇರದೊರೆ ಶೆಂಗುತ್ತುವನ್ ಅವಳ ಸ್ಮಾರಕವಾಗಿ ದೇವಾಲಯ ಒಂದನ್ನು ಕಟ್ಟಿಸಿದ. ಇತರ ರಾಜರು ಅವನ ಉದಾಹರಣೆ ಅನುಸರಿಸಿದರು. (ಎಸ್.ಎಸ್.ಕೆಎ.)

**ಕಣ್ಣಪ್ಪ :** ವೀರಶೈವರು ಆರಾಧಿಸುವ ಅರುವತ್ತುಮೂರು ಪುರಾತನರಲ್ಲಿ ಪ್ರಸಿದ್ಧನಾದವ. ತನ್ನ ಮುಗ್ಧ ಭಕ್ತಿಯಿಂದ ಶಿವನಿಗೆ ತನ್ನ ಕಣ್ಣುಗಳನ್ನೇ ಅರ್ಪಿಸಿ ಶಿವಸಾನ್ನಿಧ್ಯವನ್ನು ಪಡೆದ ಶರಣ. ತಮಿಳಿನ ಪೆರಿಯಪುರಾಣದಲ್ಲೂ ಕನ್ನಡದಲ್ಲಿ ಹರಿಹರನ ರಗಳೆಗಳಲ್ಲೂ ಷಡಕ್ಷರಿಯ ವೃಷಭೇಂದ್ರ ವಿಜಯದಲ್ಲೂ ಈತನ ಕಥೆ ಬರುತ್ತದೆ. ಈ ಕಥೆಯನ್ನು ಆಧರಿಸಿ ಚಲನಚಿತ್ರವೂ ಸಿದ್ಧವಾಗಿದೆ. ಕಣ್ಣಪ್ಪ ಬೇಡರ ಜಾತಿಯವನಾದುದರಿಂದ ಬೇಡರ ಕಣ್ಣಪ್ಪನೆಂದು ಪ್ರಸಿದ್ಧನಾಗಿದ್ದಾನೆ. ಜನಜನಿತವಾದ ಈತನ ಕಥೆ ಹೀಗಿದೆ:

ಚೋಳಮಂಡಲದ ತಿರುಕಾಲತ್ತಿ (ಶ್ರೀಕಾಳಹಸ್ತಿ) ಒಂದು ಶೈವಕ್ಷೇತ್ರ. ಆ ಬೆಟ್ಟದ ತಪ್ಪಲಲ್ಲಿ ಕಿರಾತರ ಗುಂಪೊಂದಿತ್ತು. ಅದರ ಒಡೆಯ ಕಣ್ಣಪ್ಪ. ಒಂದು ಸಂಜೆ ಮರದಡಿಯಲ್ಲಿ ಮಲಗಿದ್ದಾಗ ಕಣ್ಣಪ್ಪನ ಕನಸಿನಲ್ಲಿ ಶಿವ ಬಂದು ಆ ಕಾಡಿನಲ್ಲಿ ಶಿವಲಿಂಗವಿರುವುದನ್ನು ತಿಳಿಸಿ ಅದನ್ನು ಅನುನಯದಿಂದ ಪೂಜಿಸಬೇಕೆಂದು ಹೇಳು

ತ್ತಾನೆ. ಕನಸು ನಿಜವೆನ್ನುವಂತೆ ದೂರದಲ್ಲಿ ಶಿವಲಿಂಗ ಕಾಣುತ್ತದೆ. ಅದನ್ನು ನೋಡಿದ ಕಣ್ಣಪ್ಪ ಆನಂದಭರಿತನಾಗಿ ಮುಗ್ಧಮನಸ್ಸಿನಿಂದ ಶಿವಲಿಂಗವನ್ನು ಅಪ್ಪಿ ಎಳೆಯ ಮಕ್ಕಳನ್ನು ಲಾಲಿಸುವಂತೆ ಮಾತನಾಡಿಸಿ ಪೂಜಾಕೈಂಕರ್ಯವನ್ನರ್ಪಿಸುತ್ತಾನೆ. ಶಿವನಿಗೆ ಆಹಾರವಾಗಿ ಜಿಂಕೆಯ ಮಾಂಸವನ್ನು ಬೇಯಿಸಿ ತಂದು, ನೆಕ್ಕಿ ನೋಡಿ, ರುಚಿಯಾದ ಭಾಗವನ್ನು ಶಿವನ ಪಾದದಡಿಯಿಟ್ಟು ತಾನು ಮುಡಿದಿದ್ದ ಕಕ್ಕೆ ಮೊದಲಾದ ಹೂಗಳಿಂದಲೇ ಪೂಜಿಸಲು ಉದ್ಯುಕ್ತನಾಗುತ್ತಾನೆ. ಆ ಮೊದಲೇ ವಿಧ್ಯುಕ್ತವಾಗಿ ಪೂಜೆಗೊಂಡಿದ್ದ ಲಿಂಗದ ತಲೆಯ ಮೇಲಿದ್ದ ಹೂವುಗಳನ್ನು ತನ್ನ ಕೆರದ ಕಾಲಿನಿಂದ ಅತ್ತ ನೂಕಿ ತನ್ನ ಬಾಯಲ್ಲಿ ನೀರನ್ನು ತುಂಬಿ ತಂದು ಲಿಂಗಕ್ಕೆ ಅಭಿಷೇಕ ಮಾಡಿ ತಾನು ಮುಡಿದಿದ್ದ ಹೂಗಳನ್ನೇ ಸೂಡಿ ಮಾಂಸವನ್ನು ನೈವೇದ್ಯ ಮಾಡುತ್ತಾನೆ. ಅಕಳಂಕ ನಿಸ್ಸ್ವಾರ್ಥ ಭಕ್ತಿಯಿಂದ ಮಾಡಿದ ಈ ಪೂಜೆಯಿಂದ ಶಿವ ಸಂಪ್ರೀತನಾಗುತ್ತಾನೆ.

ಹೀಗೆ ಪೂಜಾವಿಧಾನ ನಿತ್ಯವೂ ನಡೆಯುತ್ತಿರುತ್ತದೆ. ಶಿವದೇವಾಲಯದಲ್ಲಿ ನಿತ್ಯವೂ ಮಾಂಸ ಮೂಳೆಗಳಿರುವುದನ್ನು ಕಂಡು ಪೂಜಾರಿ ಭಯಗೊಂಡು ಪಾತಕಿಯನ್ನು ಪತ್ತೆಹಚ್ಚಲು ಒಂದು ದಿನ ಲಿಂಗದ ಹಿಂದೆ ಅವಿತು ಕುಳಿತು ಕಣ್ಣಪ್ಪ ಮಾಡುವ ವಿಚಿತ್ರ ಲಿಂಗಪೂಜೆಯನ್ನು ಕಂಡು ಕೆಂಡವಾಗುತ್ತಾನೆ. ಕಣ್ಣಪ್ಪನ ಪೂಜಾನಿಷ್ಠೆಯನ್ನು ಪೂಜಾರಿಗೂ ಆ ಮೂಲಕ ಲೋಕಕ್ಕೂ ಪ್ರಕಟಗೊಳಿಸಬೇಕೆಂದು ಬಗೆದ ಶಿವ ತನ್ನ ಕಣ್ಣಿನಿಂದ ನೀರು (ಬೇರೆ ಕಥೆಯಂತೆ ರಕ್ತ) ಹರಿಸುತ್ತಾನೆ. ಶಿವನ ದುಃಖಕ್ಕೆ ಕಾರಣವನ್ನು ತಿಳಿಯದ ಕಣ್ಣಪ್ಪ ಬಹಳವಾಗಿ ಪೇಚಾಡಿ ಇದು ಏನೋ ಕಣ್ಣಿನ ರೋಗವಿರಬೇಕೆಂದು ಬಗೆದು ತನ್ನ ನಿರ್ಮಲವಾದ ಕಣ್ಣನ್ನು ಬಾಣದ ಕೊನೆಯಿಂದ ಕಿತ್ತು ನೀರೊಸರುತ್ತಿದ್ದ ಶಿವನ ಕಣ್ಣಿದ್ದ ಕಡೆ ಇಡುತ್ತಾನೆ. ಕ್ಷಣದಲ್ಲಿ ಕಣ್ಣು ಒಸರುವುದು ನಿಲ್ಲುತ್ತದೆ. ಆದರೆ ಶಿವನ ಇನ್ನೊಂದು ಕಣ್ಣು ಜಿನುಗಲು ಪ್ರಾರಂಭವಾಗುತ್ತದೆ. ಆಗ ಕಣ್ಣಪ್ಪ ತನ್ನ ಕಾಲಿನ ಉಂಗುಷ್ಠವನ್ನು ಗುರುತಿಗಾಗಿ ಶಿವನ ಕಣ್ಣಿನ ಬಳಿಯಿಟ್ಟುಕೊಂಡು ತನ್ನ ಇನ್ನೊಂದು ಕಣ್ಣನ್ನೂ ಕೀಳಲು ಉದ್ಯುಕ್ತನಾಗುತ್ತಾನೆ. ಮುಗ್ಧ ಭಕ್ತನ ಅದ್ವಿತೀಯ ತ್ಯಾಗಕ್ಕೆ ಶಿವ ಪ್ರಸನ್ನನಾಗುತ್ತಾನೆ. ಕಣ್ಣಪ್ಪ ಕಳೆದುಕೊಂಡಿದ್ದ ಕಣ್ಣುಗಳನ್ನು ಪಡೆಯುತ್ತಾನೆ. ಲಿಂಗದ ಹಿಂದೆ ಅವಿತು ನಿಂತಿದ್ದ ಪೂಜಾರಿ ಪಶ್ಚಾತ್ತಾಪ ಪಟ್ಟು ಮುಂದೆ ಬಂದು ಕಣ್ಣಪ್ಪನನ್ನು ಹೃದಯ ತುಂಬಿ ಪ್ರೀತಿಸುತ್ತಾನೆ. ಅಂದಿನಿಂದ ಕಣ್ಣಪ್ಪನ ಕಥೆ ಲೋಕಪ್ರಸಿದ್ಧವಾಗುತ್ತದೆ. (ಎನ್‌.ಎಸ್‌.ಆರ್‌.ಬಿ.)

**ಕಣ್ಣಾನೂರು :** ಕೇರಳ ರಾಜ್ಯದ ಒಂದು ಜಿಲ್ಲೆ (2,741 ಚ.ಮೈ.) ಹಾಗೂ ಮುಖ್ಯಪಟ್ಟಣ. ಪಟ್ಟಣ ದಕ್ಷಿಣ ರೈಲುಮಾರ್ಗದ ಪಶ್ಚಿಮ ತೀರಪ್ರದೇಶದಲ್ಲಿದ್ದು ಮಂಗಳೂರಿನ ದಕ್ಷಿಣಕ್ಕೆ 83 ಮೈಲಿ ದೂರದಲ್ಲಿದೆ. ಅರಬ್ಬೀ ಸಮುದ್ರ ದಂಡೆಯಲ್ಲಿರುವ ಈ ನಗರಕ್ಕೆ ಒಂದು ಸಣ್ಣ ಬಂದರಿದೆ. ಇಲ್ಲಿಂದ ಹೊರದೇಶಗಳಿಗೆ ಕೊಬ್ಬರಿ ಹಾಗೂ ತೆಂಗಿನ ನಾರು ರಫ್ತಾಗುತ್ತದೆ. ಇಲ್ಲಿ ನೇಯುವ, ನೂಲುವ ಹಾಗೂ ಉಡುಪುಗಳನ್ನು ತಯಾರಿಸುವ ದೊಡ್ಡ ದೊಡ್ಡ ಕಾರ್ಖಾನೆಗಳಿವೆ.

ಈ ನಗರ 12 ಮತ್ತು 13ನೆಯ ಶತಮಾನಗಳಲ್ಲಿ ಪರ್ಷಿಯ ಮತ್ತು ಅರೇಬಿಯ ದೇಶಗಳೊಡನೆ ವ್ಯಾಪಾರ ಸಂಪರ್ಕವಿಟ್ಟುಕೊಂಡಿದ್ದಂಥ ಪ್ರಮುಖ ವಾಣಿಜ್ಯ ಕೇಂದ್ರವೆನಿಸಿತ್ತು. ಅದುವರೆಗೂ ದಕ್ಷಿಣ ಭಾರತದ ಸ್ವತಂತ್ರ ನಾಡೆನಲ್ಲಿದ್ದ ಈ ಸ್ಥಳ 18ನೆಯ ಶತಮಾನದಲ್ಲಿ ಕಲ್ಲೀಕೋಟೆಯ ಕೊಲಾಟ್ಟರಿ ರಾಜನ ರಾಜಧಾನಿಯೆನಿಸಿತು. 1498ರಲ್ಲಿ ವ್ಯಾಸ್ಕೊ ಡ ಗ್ಯಾಮ ಇಲ್ಲಿಗೆ ಬಂದಿದ್ದ. 1505ರಲ್ಲಿ ಪೋರ್ಚುಗೀಸರು ಇಲ್ಲಿ ಒಂದು ಕೋಟೆಯನ್ನು ನಿರ್ಮಿಸಿದರು. ಈಗಿರುವ ಕೋಟೆ ಡಚ್ಚರಿಂದ ನಿರ್ಮಿತವಾಗಿದ್ದು 1771ರಲ್ಲಿ ಅದನ್ನು ಆಲಿ ರಾಜನಿಗೆ ಮಾರಲಾಯಿತು. 1783ರಲ್ಲಿ ಇದು ಬ್ರಿಟಿಷರ ವಶವಾಗಿ ಈಸ್ಟ್ ಇಂಡಿಯ ಕಂಪನಿಯ ಆಡಳಿತಕ್ಕೆ ಒಳಪಟ್ಟಿತು. ಅಲ್ಲಿಂದ 1887ರ ವರೆಗೂ ಬ್ರಿಟಿಷರ ಮಿಲಿಟರಿ ಠಾಣ್ಯವಾಗಿತ್ತು. *

**ಕಣ್ಣಾಯಾಸ :** ಕಣ್ಣಿನ ಓಸರಿಕೆಯ (ರಿಫ್ರ್ಯಾಕ್ಷನ್) ತೊಡಕುಗಳು, ಕಣ್ಣಿನ ಹೊಂದುವಳಿ (ಅಕಾಮಡೇಷನ್) ಇಲ್ಲವೇ ಕಣ್ಣುಗುಡ್ಡೆಯ ಸ್ನಾಯುಗಳು ಇನ್ನೋಟ ಆಗದಂತೆ ತಡೆವಾಗಿನ ಸಮತೋಲಗೆಡಿಕೆಗಳಿಂದ ಕಣ್ಣುಗುಡ್ಡೆ ಸ್ನಾಯುಗಳಲ್ಲಿ ತೋರುವ ದಣಿವಿನ ಲಕ್ಷಣ (ಆಸ್ತೆನೋಪಿಯ). ಇದರಿಂದ ಕಣ್ಣುಗಳು ಬಲಗುಂದಿ ಸುಲಭವಾಗಿ ದಣಿಯುತ್ತವೆ. ಕಣ್ಣುನೋಟದ ಕಷ್ಟದ ಕೆಲಸದಲ್ಲಿ ಸೇರುವ ಯಾವ ಅಂಗದಲ್ಲಿ ತೊಡಕಾದರೂ ಹೀಗಾಗಬಹುದು. ಸಂಜೆ ಹೊತ್ತಿಗೆ ಕಣ್ಣಾಯಾಸ ಹೆಚ್ಚುವುದು ಸಾಮಾನ್ಯ. ತಲೆನೋವು, ಕಣ್ಣುರಿ, ನೋವು, ಸುಸ್ತು, ರೆಪ್ಪೆ ತುಯಿತ, ಕಣ್ಣೀರು ಸುರಿತ, ಕಣ್ಣುಕೆಂಪೇರಿಕೆ, ಕಣ್ಣು ಮಂಜೂ ಆಗುತ್ತವೆ. ಕೋರೈಸುವ ಬೆಳಕು, ಸಾಕಷ್ಟು ಬೆಳಕಿಲ್ಲದೆಡೆ ಓದು, ಬಲುಸಣ್ಣ ಲಿಪಿಯನ್ನು ಒಂದೇ ಸಮನಾಗಿ ಓದುತ್ತಲೇ ಇರುವುದು. ಕಣ್ಣಿನ ನೋಟ ಕೆಟ್ಟಿರುವುದು ಮುಖ್ಯ ಕಾರಣಗಳು. ಬೆಳಕು ಹಾಯುವ ಕಣ್ಣಿನ ಮಸೂರ ಇಲ್ಲವೇ ನಡುವರ್ತಿಗಳ (ಮೀಡಿಯ) ಮಸಕಿಂದಲೂ ಕಣ್ಣಿನ ನೋಟದ ಅಚ್ಚೊತ್ತುಗಳನ್ನು ಪಡೆವ ಕಣ್ಜಾಲದ (ರೆಟೀನ) ರೋಗಗಳಿಂದಲೂ ಕಣ್ಣಾಯಾಸ ಆಗಬಹುದು.

ನೋಡಿ—ಕಣ್ಣು, ಮಾನವನ ; ಕಣ್ಣುಶಾಸ್ತ್ರ ; ಕನ್ನಡಕಗಳು. (ಎಸ್‌.ಟಿ.ಪಿ.)

**ಕಣ್ಣು, ಮಾನವನ :** ಬೆಳಕಿನಿಂದ ನೋಟವೆಂಬ ಇಂದ್ರಿಯದ ಅರಿವು ಹುಟ್ಟಿಸುವ ಹೊರಗಣ ಅಂಗವೇ ಕಣ್ಣು. ಪಂಚೇಂದ್ರಿಯಗಳಲ್ಲೊಂದು. ಸರ್ವಾಂಗಾಣಾಂ ನಯನಂ ಪ್ರಧಾನಂ. ಕಣ್ಣು ಜ್ಞಾನಜ್ಯೋತಿಯ ಬಾಗಿಲು. ನಾಯಕ, ನೇತಾರ ಎಂಬ ಪದಗಳು ನಯನ, ನೇತ್ರ ಎಂಬ ಪದಗಳಿಂದ ಹುಟ್ಟಿವೆ. ಈ ಲೇಖನದಲ್ಲಿ ಮಾನವನ ಕಣ್ಣನ್ನು ಕುರಿತ ವಿವೇಚನೆ ಇದೆ.

**ಕಣ್ಣಿನ ರಚನೆ, ಕೆಲಸ :** ಮಾನವನೂ ಸೇರಿ ಎಲ್ಲ ಬೆನ್ನುಮೂಳೆ ಪ್ರಾಣಿಗಳಲ್ಲಿ ಕಣ್ಣುಗುಡ್ಡೆ ಕತ್ತಲುಕೋಣೆ ಅಥವಾ ಕ್ಯಾಮರಾ ಮಾದರಿಯಲ್ಲಿದೆ. ಇದು ನಿಜವಾಗಿ 1″ ವ್ಯಾಸದ ಗೋಳಕೋಶ. ಕಣ್ಣುಗುಡ್ಡೆ ಮುಂದಿರುವ ಕೋಡುಪೊರೆ (ಕಾರ್ನಿಯ) ಪಾರದರ್ಶಕ ; ಬಿಳಿಗುಡ್ಡೆಯ ಗೋಡೆ ಬೆಳಕಿನ ಕಿರಣಗಳನ್ನು ತಡೆಯುತ್ತದೆ. ಪಾಪೆಯ ಹಿಂದೆ ಮಸೂರವಿದೆ. ಮಸೂರದ ಮುಂದಿರುವುದು ನೀರಿನ ದ್ರವರಸದ ಗೂಡು. ಇದು ಕೋಡುಪೊರೆಯ ಮೂಲಕ ಕಾಣಿಸುತ್ತದೆ. ಮಸೂರದ ಹಿಂದಿರುವುದು ಕಾಚೀದ್ರವ ಗೂಡು. ನೀರಿನ ದ್ರವರಸ ಗೂಡಿನಲ್ಲಿ ಕರಿಯಾಲಿಯ (ಐರಿಸ್) ಮುಂದಿರುವುದು ಮುಂದಣ ಗೂಡು. ಹಿಂದಿರುವುದು




ಚಿತ್ರ 1 1 ಕೂಡು ಪೊರೆ. 2 ಬಾಸೆಯ ದಿಂಡು, 3 ಕಣ್ಣುಗುಡ್ಡೆ ಸ್ನಾಯು, 4 ಕಣ್ಜಾಲ, 5 ಕಣ್ಜರಾಯು, 6 ಬಿಳ್ಪದರ, 7 ಕಣ್ಣಿನ ನರ, 8 ಕಣ್ಣಿನ ನತಿ, 9 ಹಿಂದಣ ಗೂಡು, 10 ಕೋಡು ಪೊರೆ, 11 ಕರಿಯಾಲಿ, 12 ಮುಂದಣ ಗೂಡು, 13 ಮಸೂರ 14 ಕಾಚೀದ್ರವರಸ

ಹಿಂದಣ ಗೂಡು. ಈ ಎರಡು ಗೂಡುಗಳಲ್ಲೂ ದ್ರವರಸವಿದೆ. ಕಾಚೀದ್ರವ ರಸ ಗೂಡಿನಲ್ಲಿ ಕಾಚೀದ್ರವ ಇದೆ. ಇವೆರಡು ಗೂಡುಗಳ ನಡುವೆ ಮಸೂರವಿದೆ. ಇದನ್ನು ಹಲವು ನವಿರಾದ ಕೋಮಲ ಸ್ನಾಯು ತಂತುಗಳು (ಜಿನ್ನನ ಸ್ನಾಯು) ಎತ್ತಿ ಹಿಡಿದಿವೆ. ಈ ಸ್ನಾಯು ಮಸೂರದ ಸುತ್ತ ಉಂಗುರದಂತಿದ್ದು ಕಣ್ಣುಗುಡ್ಡೆಯ ಗೋಡೆಗೆ ಅಂಟಿಕೊಂಡಿದೆ. ಮಸೂರ ಪಾರದರ್ಶಕವಾಗಿ ಇಪ್ಪಕ್ಕಗಳಲ್ಲೂ ಉಬ್ಬಿದೆ. ರಿಫ್ರೇಕ್ಷಣಾಂಕ 1·4. ಈರುಳ್ಳಿಯ ಪದರಗಳಂತೆ ಇದರಲ್ಲಿ ಕೋಟ್ಯಂತರ ಜೀವಕಣಗಳ ಜೋಡಣೆಯಾಗಿದೆ. ಮಸೂರಕ್ಕೆ ದಿಂಬುಚೀಲದಂಥ ಹೊದಿಕೆಯಿದೆ. ಮಸೂರದ ನಡುಭಾಗ ಗಟ್ಟಿಯಾಗಿದೆ. ಅದಕ್ಕೆ ಹೆಚ್ಚು ರಿಫ್ರೇಕ್ಷಣ ಶಕ್ತಿ ಇದೆ. ಹೊರಭಾಗ ಮೆತ್ತಗಿರುವುದರಿಂದ ತುಸು ಸ್ನಾಯುಬಲದಿಂದಲೇ ಆಕಾರವನ್ನು ಬದಲಾಗಬಲ್ಲುದು. ಮಸೂರ ನುಣ್ಣಗಿದೆ.

**ಕಣ್ಣಿನ ರಿಫ್ರೇಕ್ಷಣ ತಂತ್ರ :** ಕಣ್ಣನ್ನು ಚಿತ್ರ ತೆಗೆವ ಕ್ಯಾಮರಾದೊಡನೆ ಹೋಲಿಸಬಹುದು. ಕ್ಯಾಮರಾದ ಮಸೂರಕ್ಕೆ ಕೋಡು ಪೊರೆ, ಕಣ ಮಸೂರಗಳು ಸಮ. ಕಣ್ಣುಗುಡ್ಡೆ ಗೋಡೆಯ ತೀರ ಒಳಪದರವಾದ ಕಣ್ಜಾಲದ ಹಿಂಭಾಗಕ್ಕೆ ಕ್ಯಾಮರ ತಟ್ಟೆ ಸಮ. ಆಚೆಯಿಂದ ತೂರಿಬರುವ ಬೆಳಕಿನ ಕಿರಣಗಳು ಕಣ್ಣುಗುಡ್ಡೆಯಲ್ಲಿ ಕಿರಣಶಾಸ್ತ್ರನಿಯಮಗಳ ಪ್ರಕಾರ ಬಾಗುತ್ತವೆ. ಮೊದಲು ಕೋಡುಪೊರೆಯನ್ನು ತೂರುವಾಗ, ಅದು ಮುಂದಕ್ಕೆ ಉಬ್ಬಿರುವುದರಿಂದಲೂ ಅದರ ಸಾಂದ್ರತೆ ಗಾಳಿಯ ಸಾಂದ್ರತೆಗಿಂತ ಹೆಚ್ಚಿರುವುದರಿಂದಲೂ ಕಿರಣಗಳು ಸಂಗಮಿಸುವಂತೆ ಮಧ್ಯಕ್ಕೆ ಬಾಗುತ್ತವೆ. ಕೋಡುಪೊರೆಯ ರಿಫ್ರೇಕ್ಷಣಾಂಕ 1·3. ಜಲಚರಗಳಲ್ಲಿ ನೀರಿನ ಮತ್ತು ಕೋಡುಪೊರೆಯ ಸಾಂದ್ರತೆಗಳು ಹೆಚ್ಚುಕಡಿಮೆ ಸಮವಾಗಿರುವುದರಿಂದ ಕಿರಣಗಳು ಮಸೂರದಲ್ಲಿ ಮಾತ್ರ ಹೆಚ್ಚು ಬಾಗುತ್ತವೆ. ನೀರಿನ ದ್ರವರಸ ಮತ್ತು ಕಾಚೀದ್ರವ ರಸಗಳ ಸಾಂದ್ರತೆಗಳಲ್ಲಿ ವ್ಯತ್ಯಾಸ ಹೆಚ್ಚಿಲ್ಲದ್ದರಿಂದ ಕಿರಣಗಳು ಬಾಗುವುದಿಲ್ಲ. ಹೀಗೆ ಸಂಗಮಿಸುವ ಕಿರಣಗಳು ಕಣ್ಣುಗುಡ್ಡೆಯ ಹಿಂಭಾಗದಲ್ಲಿ ಕಣ್ಜಾಲದ ಮೇಲೆ ಬಿದ್ದು ಸಣ್ಣ, ನಿಜ ಬಿಂಬ ತಲೆಕೆಳಗಾಗಿ ಬೀಳುತ್ತದೆ. ಕ್ಯಾಮರಾದಲ್ಲಿ ಈ ಬಗೆಯ ಬಿಂಬವನ್ನು ಚೆನ್ನಾಗಿ ನೋಡಬಹುದು. ಮೆದುಳಿನ ಅಂಕೆಯಲ್ಲಿ ಉಂಗುರದಂತೆ ಮಸೂರದ ಸುತ್ತ ಇರುವ ಬಾಸೆಯ (ಸಿಲಿಯರಿ) ಸ್ನಾಯು ಕುಗ್ಗುವುದರಿಂದ ಮಸೂರವನ್ನು ಹಿಡಿದಿರುವ ತಂತುಗಳು ಸಡಿಲವಾಗಿ ಮಸೂರ ಉಬ್ಬಿ ಹತ್ತಿರದ ವಸ್ತುಗಳು ಚೆನ್ನಾಗಿ ಕಾಣುತ್ತವೆ. ಆ ಸ್ನಾಯು ಹಿಗ್ಗುವುದರಿಂದ ಮಸೂರ ತೆಳುವಾಗಿ ದೂರದ ವಸ್ತುಗಳು ಚೆನ್ನಾಗಿ ಕಾಣುತ್ತವೆ. ಹತ್ತಿರ, ದೂರದ ನೋಟಗಳನ್ನು ಸರಿಹೊಂದಿಸುವ ಏರ್ಪಾಟು ಇದೇ.

**ಕಣ್ಣುಗುಡ್ಡೆಯ ಗೋಡೆ :** ಇದರಲ್ಲಿ ಮೂರು ಪದರಗಳಿವೆ. ಹೊರಗಡೆ ನಾರಿನಂತೆ ಗಡುಸಾಗಿರುವುದು ಬಿಳಿಪದರ (ಸ್ಕ್ಲೀರ). ಇದರ ಹಿಂದಿನ $\frac{2}{3}$ ಭಾಗ ಪಾರದರ್ಶಕವಲ್ಲದ ಬಿಳೀಗುಡ್ಡೆ, ಮುಂದಿನ $\frac{1}{3}$ಭಾಗ ಪಾರದರ್ಶಕವಾದ ಕೋಡು ಪೊರೆ. ಕೋಡು ಪೊರೆ ಇನ್ನಷ್ಟು ಉಬ್ಬಿದೆ. ಇದರಮೂಲಕ ಒಳಗಿರುವ ಕರಿಯಾಲಿ ಮುಂತಾದ ಭಾಗಗಳು ಕಾಣುತ್ತವೆ. ಹೊರಪದರದ ದಪ್ಪ ಎಲ್ಲೆಡೆಗಳಲ್ಲೂ ಸಮವಾಗಿಲ್ಲ. ನಡುವಣ ಪದರ ಕರಿದ್ರಾಕ್ಷಿಯ ಸಿಪ್ಪೆಯಂತಿದೆ. ಕಾಚೀದ್ರವ ದ್ರಾಕ್ಷಿಯ ಒಳಭಾಗದಂತಿದೆ. ಇದರ ಹೆಚ್ಚಿನ ಹಿಂಭಾಗ ತೆಳುವಾಗಿ ಹಲವು ಸಣ್ಣ ರಕ್ತನಾಳಗಳ ಜಾಲದಿಂದಾಗಿರುವ ಕಣ್ಜರಾಯು (ಕೊರಾಯ್ಡ್) ಪದರ. ಇದರಲ್ಲಿ ಕಪ್ಪು ಬಣ್ಣದ ಜೀವ ಕಣಗಳಿವೆ. ಕರ್‍ರಗಿರುವುದರಿಂದ ಬೇಡದ ಬೆಳಕಿನ ಕಿರಣಗಳು ಹಿಂದಕ್ಕೆ ಪುಟಿಸುವುದರಿಂದ ಕಣ್ಣು ಮಂಜಾಗುವುದು ತಪ್ಪುತ್ತದೆ. ರಕ್ತನಾಳಗಳು ಕಣ್ಜಾಲದ ಕಿರಣಗ್ರಾಹಿ ಕಣಗಳಿಗೆ ಪುಷ್ಟಿಯನ್ನು ನೀಡುತ್ತವೆ. ಇದೇ ಪದರ ಮುಂದೆ ಮಂದವಾಗಿ ಬಾಸೆಯ ದಿಂಡು (ಸಿಲಿಯರಿ ಬಾಡಿ) ಆಗಿದೆ. ಸಸ್ತನಿಗಳಲ್ಲಿ ಇದರ ಮೇಲೆ ಚಿತ್ರದ ಸೂರ್ಯನ ಕಿರಣಗಳಂತಿರುವ ದಿಬ್ಬಗಳಿವೆ. ಇದರಲ್ಲಿ ರಕ್ತನಾಳಗಳೂ ಅನೈಚ್ಛಿಕ ಸ್ನಾಯುವೂ ಇವೆ. ಇದರ ಒಳಮೈಮೇಲೆ ಅಂಟಿರುವ ಒಳಪದರದ ತೆಳುಭಾಗದಿಂದ ನೀರಿನ ದ್ರವ ಒಸರುತ್ತದೆ. ಸ್ನಾಯುತಂತುಗಳಲ್ಲಿ ಅರ್ಧದಷ್ಟು ರೇಖಾಂಶಗಳಲ್ಲಿವೆ. ಮಿಕ್ಕವು ಅಕ್ಷಾಂಶಗಳಲ್ಲಿ ಗುಂಡಗೆ ಉಂಗುರದಂತಿವೆ. ಇವು ಕುಗ್ಗಿದಾಗ ಮಸೂರ ಸ್ನಾಯು ಸಡಿಲ ಬಿದ್ದು ಮಸೂರ ಉಬ್ಬುತ್ತದೆ.

ನಡುವಣ ಪದರದ ಮುಂಭಾಗವೇ ಕರಿಯಾಲಿ (ಐರಿಸ್). ಇದರ ನಡುವಣ ಕಂಡಿಯೇ ಪಾಪೆ (ಪ್ಯೂಪಿಲ್). ಇದರ ಬಣ್ಣ ಕೋಡು ಪೊರೆಯ ಮೂಲಕ ಹೊರ ಕಾಣುತ್ತದೆ. ಕಾಚೀದ್ರವರಸ ಗೂಡು ಕತ್ತಲಾಗಿರುವುದರಿಂದ ಪಾಪೆ ಎಲ್ಲರಲ್ಲೂ ಕರ್‍ರಗೆ ಕಾಣುತ್ತದೆ. ಭಾರತೀಯರಲ್ಲಿ ಸಾಮಾನ್ಯವಾಗಿ ಕರಿಯಾಲಿ ಕಂದೊ ಕಪ್ಪೊ ಬಣ್ಣಕ್ಕಿರುವುದು. ಬಿಳಿಯರಲ್ಲಿ ಕಂದು, ನೀಲಿ ಇಲ್ಲವೇ ಹಸುರಾಗಿರುವುದು. ಪಾಪೆಯ ಅಂಚಿನಲ್ಲಿರುವ ಗುಂಡು ಸ್ನಾಯು ಕುಗ್ಗಿದಾಗ ಪಾಪೆ ಹೆಚ್ಚು ಬೆಳಕಿನಲ್ಲಿ ಕಿರಿದಾಗುತ್ತದೆ. ಆರೆಕಡ್ಡಿಗಳಂತಿರುವ ಸ್ನಾಯುತಂತುಗಳು ಕುಗ್ಗುವುದರಿಂದ ಪಾಪೆ ಮಂದ ಬೆಳಕಿನಲ್ಲಿ ಹಿರಿದಾಗುತ್ತದೆ. ಕಣ್ಣುಚಾಲಕ (ಅಕ್ಯುಲೋಮೊಟಾರ್‌ನರ್‍ವ್) ಎಂಬ ತಲೆಯ ನರ 3ನೆಯ ಗುಂಡುಸ್ನಾಯುವನ್ನು ನಿಯಂತ್ರಿಸುತ್ತದೆ. ಹಿರಿದಾಗಿಸುವ ಸ್ನಾಯು ಕತ್ತಿನ (ಅನುವೇದನಾ) ನರಗಳ ಹತೋಟಿಯಲ್ಲಿದೆ. ಹೆಚ್ಚು ಬೆಳಕಿನಲ್ಲಿ ಪಾಪೆ ಕಿರಿದಾಗುವುದರಿಂದ ಕಣ್ಜಾಲಕ್ಕೆ ಹೆಚ್ಚು ಬೆಳಕಿನಿಂದಾಗಬಹುದಾದ ಹಾನಿ ತಪ್ಪುತ್ತದೆ. ಕರಿಯಾಲಿ ಕ್ಯಾಮರಾದಲ್ಲಿ ಮುಚ್ಚಿ ತೆಗೆವ ಕಂಡಿ ಇದ್ದಂತಿದೆ. ಬೇಕೆಂದಾಗ ನಾವು ಪಾಪೆಯನ್ನು ಚಿಕ್ಕದಾಗಿ ಅಥವಾ ದೊಡ್ಡದಾಗಿ ಮಾಡಲಾರೆವು. ಅನೈಚ್ಛಿಕ ಕೇಂದ್ರಗಳು ಮೆದುಳು, ಬೆನ್ನುಹುರಿಗಳಲ್ಲಿವೆ.

ಒಳಪದರವೇ ನರಪಟಲ ಅಥವ ಕಣ್ಜಾಲ (ರೆಟೀನ). ಜಾಲದಂತಿರುವುದರಿಂದ ಈ ಹೆಸರು ಬಂದಿದೆ. ಇದು ಕಾಚೀದ್ರವರಸದ ಗೂಡಿನ ಗೋಡೆಯ ಬಹುಭಾಗದಲ್ಲಿದೆ. ಇದರ ಮುಂದಿನ ಅಂಚು ಗರಗಸದಂತಿದೆ. ಈ ಅಂಚಿನ ಹಿಂದಿರುವುದೇ ನೋಟಕ್ಕೆ ಕಾರಣವಾಗುವ ಭಾಗ–ಕಣ್ಜಾಲ. ಇದಕ್ಕೆ ಮುಂದಿನದು ತೆಳುವಾಗಿ ಕರಿಬಣ್ಣದ ಜೀವಕಣಗಳಿಂದಾಗಿ ಬಾಸೆಯ ದಿಂಡನ್ನೂ ಕರಿಯಾಲಿಯ ಹಿಂಭಾಗವನ್ನೂ ಪಾಪೆಯ ವರೆಗೂ ಮುಚ್ಚಿದೆ. ಕಣ್ಜಾಲ ಬಹು ಕೋಮಲವಾದುದು. ಇದರಲ್ಲಿ ಕಣ್ಣುನರದ ತಂತುಗಳ ಜಾಲವೂ ಹೇರಳವಾಗಿ ಸಣ್ಣ ರಕ್ತನಾಳಗಳೂ ಇವೆ. ಇವು ಕೇಂದ್ರ ಕಣ್ಜಾಲ ರಕ್ತನಾಳದ ಕವಲುಗಳು. ಇವಕ್ಕೂ ಕಣ್ಣುಗುಡ್ಡೆಯ ಇತರ ರಕ್ತನಾಳಗಳಿಗೂ ಸಂಬಂಧವಿಲ್ಲ.

ಪಾಪೆಯ ಮೂಲಕ ಬೆಳಕು ಬಿಟ್ಟು, ಕಣ್ಣು ದರ್ಶಕದಿಂದ (ರೆಟಿನಾಸ್ಕೋಪ್) ಕಣ್ಣೊಳಗೆ ನೋಡಿದರೆ ಒಳ ಮತ್ತು ನಡುಪದರಗಳ ರಕ್ತನಾಳ ಜಾಲಗಳಿಂದ ಕಣ್ಜಾಲ ಕೆಂಪಗೆ ಕಾಣುತ್ತದೆ. ಹೊಸದಾಗಿ ಕೊಯ್ದು ಹೊರತೆಗೆದ ಕಣ್ಜಾಲ ಪಾರದರ್ಶಕವಾಗಿದ್ದು ಸ್ವಲ್ಪ ಕಾಲದಲ್ಲೆ ಮಂಜುಮಂಜಾಗುತ್ತದೆ.

ಕಣ್ಜಾಲದ ಪದರಗಳು : ಬೆಳಕಿನ ಕಿರಣಗಳ ಭೌತಿಕ ಚೋದನೆಯಿಂದ ನೋಟದ ಅರಿವಿನ ಆರಂಭ ಕಣ್ಜಾಲದಲ್ಲಾಗುವುದು. ಕಣ್ಣಿನಲ್ಲಿ ನೋಟದ ಪ್ರಧಾನಾಂಗ ಇದೇ. ಕಣ್ಣುಗುಡ್ಡೆಯ ಇತರ ಭಾಗಗಳು ಇರುವುದು ಕಣ್ಜಾಲದ ಆಧಾರ, ಪುಷ್ಟಿಗಳಿಗೆ, ಕಿರಣಗಳನ್ನು ಬಾಗಿಸುವುದಕ್ಕೆ ಮಾತ್ರ. ಕಣ್ಜಾಲ ಮಿದುಳಿನ ಭಾಗವೆಂದು ಪಿಂಡ ವಿಕಾಸದ ತಿಳಿವಳಿಕೆಯಿಂದ ಗೊತ್ತಾಗುತ್ತದೆ. ಸೂಕ್ಷ್ಮ ರಚನೆಯಲ್ಲಿ ಇದಕ್ಕೆ ಕೇಂದ್ರದ ಮತ್ತು ಸುತ್ತಂಚಿನ (ಪೆರಿಫೆರಲ್) ನರಮಂಡಲಗಳ ಲಕ್ಷಣಗಳಿವೆ. ವಿಜ್ಞಾನಿಗಳು ಒಪ್ಪಿದಂತೆ ಕಣ್ಜಾಲದ ಸೂಕ್ಷ್ಮರಚನೆಯಲ್ಲಿ ಹತ್ತು ಪದರಗಳನ್ನು ಗುರುತಿಸಬಹುದು. 1 ಕಣ್ಜಾಲದ ಹೊರಪದರ ಕಣ್ಜರಾಯುವಿಗೆ ಅಂಟಿಕೊಂಡು ಕಾಚೀದ್ರವ ರಸ ತಾಕದಿರುವ ಕಡೆಯ ಒಂದು ಬಣ್ಣಕವಿರುವ ಜೀವ




ಚಿತ್ರ 2 1 ಬಣ್ಣಕ ಜೀವಕಣ ಮೇಲ್ಪೊರೆ, 2 ಸಲಾಕಿ, ಸಂಕಗಳ ಪದರ, 3 ಹೊರ ಮಿತಿಕ ಪೊರೆ, 4 ಹೊರ ನಡುಬೀಜ ಪೊರೆ, 5 ಹೊರ ಹೆಣಿಲು ರೂಪಿ ಪದರ, 6 ಒಳ ನಡುಬೀಜ ಪದರ, 7 ಒಳ ಹೆಣಿಲು ರೂಪಿ ಪದರ, 8 ನರಗಂಟು ನರಕಣಗಳ ಪದರ 9 ಕಣ್ಣಿನ ನರತಂತುಗಳ ಪದರ, 10 ಒಳಮಿತಿಕ ಪೊರೆ.

ಕಣ ಪೊರೆ. ಇದು ಪಿಂಡದಲ್ಲಿ ಮೆದುಳಿನಿಂದ ಹೊರಟುಕೊಳ್ಳುವ ಕಣ್ಣಿನ ಬುಡ್ಡೆ. ಎರಡು ಪದರಗಳ ಬಟ್ಟಲಾದ ಮೇಲೆ ಹೊರಪದರದಿಂದಾದುದು. 2 ಸಲಾಕಿ (ರಾಡ್) ಶಂಕುಗಳ (ಕೋನ್ಸ್) ಪದರ, ಕೋಲುಗಳು ಕೋಲುಕಣಗಳ ಆಚೆಯ ಭಾಗಗಳು. ಶಂಕುಗಳು ಶಂಕುಕಣಗಳ ಆಚೆಯ ಭಾಗಗಳು. ಬೆಳಕಿನ ಕಿರಣ ಕ್ಕೀಡಾಗುವುವು ಇವೇ. ಇವುಗಳಲ್ಲೇ ನೋಟಗೆಲಸ ಮೊದಲಾಗುವುದು. 3 ಹೊರವಲ್ಲೆ ಪೊರೆ—ಇದು ಮುಲ್ಲರ್ ಆಧಾರ ತಂತುಗಳ ಮೇಲಿನ ಕೊನೆಗಳು ಒಂದುಗೂಡುವುದರಿಂದಾದುದು. 4. ಹೊರನಡುಬೀಜ (ನ್ಯೂಕ್ಲಿಯಾರ್)—ಇದರಲ್ಲಿ

ಸಲಾಕಿ ಶಂಕುಕಣಗಳ ನಡುಬೀಜಗಳಿವೆ. 5 ಹೊರಜಾಲಪದರ—ಇದು ಸಲಾಕಿ ಶಂಕುಕಣಗಳ ಮತ್ತು 6ನೆಯ ಪದರದ ಜೀವಕಣಗಳ ಹೊರಪಾದಗಳಿಂದಾದುದು. 6 ಒಳನಡುಬೀಜ ಪದರ—ಇದರಲ್ಲಿ ಇಗ್ಗಣೆ (ಬೈಪೋಲಾರ್) ಕಣಗಳ ನಡುಬೀಜಗಳು ಚುಕ್ಕಿಗಳಂತೆ ಕಾಣುತ್ತವೆ. 7 ಒಳಜಾಲ ಪದರ—ಇದರಲ್ಲಿ ಇಗ್ಗಣೆ ಕಣಗಳ ಒಳಪಾದಗಳೂ ನರಗಂಟು (ಗಾಂಗ್ಲಿಯಾನ್) ಕಣಗಳ ಹೊರಪಾದಗಳೂ ಕೂಡಿವೆ. 8 ನರಗಂಟು ನರಕಣಗಳ ಪದರ. 9 ಕಣ್ಣಿನ ನರತಂತುಗಳ ಪದರ–ಇದು ನರಗಂಟು ಕಣಗಳ ತಂತುಗಳಿಂದಾದುದು. 10 ಒಳಎಲ್ಲೆ ಪೊರೆ—ಇದು ಮುಲ್ಲರ್ ತಂತುಗಳ ಒಳಕೊನೆಗಳಿಂದಾದುದು.

ಕಣ್ಜಾಲದ ನರಕಣಗಳು : 1 ಕಿರಣಗ್ರಾಹಿಗಳು—ಸಲಾಕಿ—ಶಂಕುಕಣಗಳು. 2. ಬೆಳಕು ಪಡೆಕಗಳು (ಫೋಟೊರಿಸೆಪ್ಟಾರ್ಸ್)—ನಾಲ್ಕು ಐದು ಬಗೆಗಳ ಇಗ್ಗಣೆ ಕಣಗಳು ಮತ್ತು ಐದು ಆರು ಬಗೆಯ ನರಗಂಟು ಕಣಗಳು. ಇವು ಆವೇಗಗಳನ್ನು ಮೆದುಳಿಗೆ ತಲಪಿಸುತ್ತವೆ. 3 ಜೋಡಿಕಗಳು—ಅಡ್ಡನರಕಣಗಳು ಮತ್ತು ತಂತುರಹಿತ (ಅಮೆಕ್ರೈನ್) ಕಣಗಳು. ಇವು ಬೆಳಕನ್ನು ಹಿಡಿವಾಗ ಕಣ್ಜಾಲದಲ್ಲಿ ಸಾಮರಸ್ಯ ತರುವುವು.

ನರಕಸೆಗಳು, ಕಣ್ಜಾಲಗಳ ನರಕಣಗಳ ದಿಸೆಗೆಲಸ, ಕಣ್ಜಾಲದ ನಿಜಗೆಲಸಗಳಿಗೆ ಮುಖ್ಯವಾದ ಜಟಿಲವಾದ ವ್ಯೂಹದಲ್ಲಿ ಬಗೆಬಗೆಯ ನರಕಣಗಳು ಜೋಡಣೆಯಾಗಿವೆ. ಒಂದೊಂದು ನರಕಣವೂ ಇತರ ಕಣಗಳೊಡನೆ ತಾಕಿಕೊಂಡು ಕೆಲಸ ಮಾಡುತ್ತದೆ. ತಂತುಗಳ ಕೊನೆಯ ಶಾಖೆಗಳ ಕೊನೆಗಳು ಗಂಟು ಕಟ್ಟಿವೆ. ಈ ಗಂಟುಕೊನೆಗಳು ನರಕಣಗಳ ನಡುಭಾಗಗಳೊಡನೆ ಅಥವಾ ಅವುಗಳ ಚಾಚುಗಳೊಡನೆ ಅಂಟಿವೆ. ಈ ಸಂಧಿಗಳೇ ನರಕಸೆಗಳು (ಸೈನಾಪ್ಸಸ್). ಆವೇಗಗಳು ಒಂದೇ ಕಡೆಗೆ ಹೋಗುವವನ್ನು ಸರಾಗವಾಗಿ ಬಿಡುತ್ತ ಎದುರಾಗಿ ಬರುವವನ್ನು ತಡೆಯುತ್ತವೆ. ಇದೇ ದಿಸೆಗೆಲಸದ ವ್ಯವಸ್ಥೆ. ಇದರಿಂದ ಆವೇಗಗಳು ಎಲ್ಲ ದಿಕ್ಕುಗಳಲ್ಲಿ ಕಕ್ಕಾಬಿಕ್ಕಿಯಾಗುವುದು ತಪ್ಪುತ್ತದೆ. ನರಕಣದ ಶಾಖೆಗಳು ಇತರ ಕರಣಗಳಿಂದ ಬರುವ ಸಮಾಚಾರಗಳನ್ನು ಹಿಡಿಯುತ್ತವೆ. ನರಕಣದ ತಂತು ಉದ್ದವಿದ್ದು ಇದರ ಶಾಖೆಗಳ ಮೂಲಕ ಸಮಾಚಾರಗಳು ಇತರ ನರಕಣಗಳನ್ನು ಸೇರುತ್ತವೆ. ಹೇಗೂ ಅವು ಹಿಂದಕ್ಕೆ ಹೋಗುವಂತಿಲ್ಲ.

ಕಣ್ಜಾಲ ನರಕಣಗಳ ನರಕಸೆ ಬಂಧನಗಳು : (ಅ) ಶಂಕು ಕಣಗಳ ಒಳಕೊನೆಗಳಿಗೂ ಇಗ್ಗಣೆ ಕಣಗಳ ಹೊರಕೊನೆಗಳಿಗೂ ಬಂಧನಗಳಿವೆ. (ಆ) ಸಲಾಕಿ ಕಣಗಳ ಒಳಗಂಟು ಕೊನೆಗಳಿಗೂ ಇಗ್ಗಣೆಗಳ ಹೊರಕೊನೆಗಳಿಗೂ ಬಂಧನಗಳಿವೆ. ಶಂಕು ಕಣಗಳ ಇಗ್ಗಣೆಗಳೂ ಸಲಾಕಿ ಕಣಗಳ ಇಗ್ಗಣೆಗಳೂ ಬೇರೆ ಬೇರೆ (ಇ) ಅಡ್ಡಕಣಗಳ ಶಾಖೆಗಳು ಶಂಕು ಕಣಗಳಿಗೆ ಮಾತ್ರ ಗಂಟುಬಿದ್ದಿವೆ, ಸಲಾಕಿ ಕಣಗಳಿಗಲ್ಲ. ಆದರೆ ಅಡ್ಡಕಣಗಳ ನರತಂತುಗಳು ಸಲಾಕಿ ಮತ್ತು ಶಂಕು ಕಣಗಳ ಒಳಕೊನೆಗಳಿಗೆ ಕೂಡಿಕೊಂಡಿವೆ. (ಈ) ಇಗ್ಗಣೆಗಳ ಒಳಕೊನೆಗಳಿಗೂ ನರಗಂಟು ಕಣಗಳ ಕವಲುಗಳಿಗೂ ಬಂಧನಗಳಿವೆ. ಕಣ್ಜಾಲದ ನಡುವೆ ಈ ನರಕಸೆ ಬಂಧನಗಳು ನಿರ್ದಿಷ್ಟವಾಗಿವೆ. ಆದರೆ ಸುತ್ತಲಿನ ಪ್ರದೇಶದಲ್ಲಿ ನರಕಸೆ ಬಂಧನಗಳು ಅನಿರ್ದಿಷ್ಟವಾಗಿರುವುದರಿಂದ ಈ ಭಾಗಗಳಲ್ಲಿ ನೋಟದ ಚುರುಕು ಕಡಿಮೆ.

ಕಣ್ಜಾಲದ ರಚನೆಗೂ ಅದರ ಕೆಲಸಗಳಿಗೂ ಇರುವ ಹೊಂದಾಣಿಕೆ ಲೆಕ್ಕವಿಲ್ಲದಷ್ಟು ನರಕಸೆಗಳಿಂದ, ಬೆಳಕುಪಡೆಕಗಳಿಂದ ಹೊರಟ ಆವೇಗ ಹಲವು ದಾರಿಗಳಲ್ಲಿ ಹೋಗುವುದರಿಂದ ಹಲವು ರೀತಿಗಳಲ್ಲಿ ಆವೇಗ ಮಾರ್ಪಡುತ್ತದೆ. ಆಚೆಯಿಂದ ಬರುವ ಕಿರಣಗಳು ನಿರ್ಸಗನಿಯಮಗಳ ಪ್ರಕಾರ ಕೋಡು ಪೊರೆ ಮಸೂರಗಳಲ್ಲಿ ಬಾಗಿ ಕಾಚೀದ್ರವ ರಸ, ಕಣ್ಜಾಲಗಳನ್ನು ತೂರುತ್ತವೆ. ಇವುಗಳಿಂದ ಕಣ್ಜಾಲದ ಒಳಪದರಗಳ ಮೇಲೆ ಪರಿಣಾಮವಿಲ್ಲ. ಆಚೆಪದರದಲ್ಲಿ ಬೆಳಕುಪಡೆಕಗಳಾಗಿರುವ ಶಂಕು ಸಲಾಕಿ ಕಣಗಳನ್ನು ತಲಪಿದಾಗ ರಾಸಾಯನಿಕ ಕೆಲಸದಿಂದ ಆವೇಗಗಳು ಹುಟ್ಟುತ್ತವೆ. ಸಲಾಕಿಗಳಲ್ಲಿ ಕಿರಣಕ್ಕೀಡಾಗುವ ವಸ್ತುವಾದ ನೋಟಕೆನ್ನೀಲಿ (ರೊಡಾಪ್ಸಿನ್) ಇದೆ. ಬೆಳಕಿನಲ್ಲಿ ಈ ರಂಗು ಬಿಳಿಚಿಕೊಳ್ಳುತ್ತದೆ ; ಕತ್ತಲಲ್ಲಿ ಊದಾ ಆಗುತ್ತದೆ. ಇದೇ ರೀತಿಯಲ್ಲಿ ಶಂಕುಗಳಲ್ಲೂ ಇಂಥದೇ ಆದರೆ ಬಣ್ಣವಿಲ್ಲದ, ರಾಸಾಯನಿಕ ವಿದೆಯೆಂದು ತಿಳಿಯಲಾಗಿದೆ. ಆದರೆ ಏಳು ಬಣ್ಣಗಳಲ್ಲಿರುವ ಕೆಲವು ಅಲೆಗಳಿಗೆ ಹೆಚ್ಚು ಸೂಕ್ಷ್ಮವಾಗಿದೆ. ಸಲಾಕಿಗಳ ಕೆಲಸ ಮುಖ್ಯವಾಗಿರುವುದು ಮಸಕು ಬೆಳಕಿನಲ್ಲಿ ಎಂದು ನಂಬಲಾಗಿದೆ. ಆದರೆ ಇವು ಬಣ್ಣಗಳನ್ನು ಗುರ್ತಿಸಲಾರವು. ಶಂಕುಗಳು ಸಾಕಷ್ಟು ಬೆಳಗುವ ಬೆಳಕಿನಲ್ಲೇ ಕೆಲಸ ಮಾಡುವುದು ; ಅವು ಬಣ್ಣಗಳನ್ನೂ ವಸ್ತುಗಳ ಸಣ್ಣ ವಿವರಗಳನ್ನೂ ಗುರುತಿಸಬಲ್ಲುವು—ಇದು ಹಗಲುನೋಟ. ಗೂಗೆಗಳಲ್ಲಿ ಶಂಕುಗಳಿಲ್ಲದೆ ಬರೀ ಸಲಾಕಿಗಳಿರುವುದರಿಂದ ಅವಕ್ಕೆ ಹಗಲುನೋಟವಿಲ್ಲ ; ಹೀಗೆ ಇತರ ನಿಶಾಚರಿಗಳ ಕಣ್ಣುಗಳಲ್ಲೂ ಶಂಕುಗಳಿಲ್ಲ. ಈ ವಿಷಯವಾಗಿ ಮಾನವ ದೃಷ್ಟಿಯಲ್ಲಿ ಎರಡು ಅಂಗಗಳಿವೆ ಎಂದು ಹೇಳಬಹುದು—ಒಂದು ಹಗಲುನೋಟಕ್ಕೆ, ಇನ್ನೊಂದು ರಾತ್ರಿನೋಟಕ್ಕೆ. ನೋಟಕೆನ್ನೀಲಿಗೂ ಎ ಜೀವಾತಿಗೂ ಸಂಬಂಧವಿದೆ. ಎ ಜೀವಾತು ಕೊರತೆಯಿಂದ ರಾತ್ರಿಕುರುಡು ಆಗುತ್ತದೆ.

ಕಣ್ಜಾಲದ ರಚನೆ ಬಣ್ಣನೋಟ: ಬಣ್ಣನೋಟಕ್ಕೆ ಬೇಕಾದುವು ರಾಸಾಯನಿಕ ಅಂಶಗಳೋ ರಚನಾಂಶಗಳೋ ಎಂಬುದನ್ನು ಹಲವು ರೀತಿ ತರ್ಕಿಸಲಾಗಿದೆ. ಥಾಮಸ್ ಯಂಗ್, ಆಮೇಲೆ ಹರ್ಮನ್ ಫಾನ್ ಹೆಲ್ಮ್ ಹೋಲ್ಟ್ಜ್ ಮತ್ತಿತರರು ಮೂರು ರಚನಾಂಶಗಳು (ಮೂರು ಬಗೆಯ ಶಂಕುಗಳು, ನರತಂತುಗಳು) ಇತರ ಬಣ್ಣಗಳಿಗೆ ಈಡಾಗುವಂತಿದ್ದರೂ ಕಾಮನ ಬಿಲ್ಲಿನ ಕೆಂಪು, ಹಸುರು, ನೀಲಿಗಳಿಗೆ ಮಾತ್ರ ನೀಲಿ ಸುಲಭವಾಗಿ ಈಡಾಗುವುವು ಎಂದು ಊಹಿಸಿದರು. ಇದೇ ಬಣ್ಣನೋಟದ ಮೂರ್ಬಣ್ಣ ಸಿದ್ಧಾಂತ. ಕೆಂಪು ಮತ್ತು ಹಸುರು ಅಥವಾ ಹಸುರು ಮತ್ತು ಅಥವಾ ಸರಸ್ವತಿ ಬಣ್ಣದ ಎರಡು ನರತಂತುಗಳ ಚೋದನೆಯಾದರೆ ನಡು ಬಣ್ಣನೋಟ ಅಂದರೆ ಹಳದಿ ಅಥವಾ ನೀಲಿ ಹಸುರು ಕಾಣುತ್ತದೆ. ಮೂರುಬಗೆಯ ನರತಂತುಗಳ ಚೋದನೆಯಾದರೆ ಬಿಳಿಯ ಬಣ್ಣ ಕಾಣುತ್ತದೆ. ಎವಾಲ್ಡ್ ಹೆರಿಂಗ್ ಮೂರು ಎದುರೆದುರು ಜೋಡಿಗಳು—ಕೆಂಪು ಹಸುರು, ಹಳದಿ ನೀಲಿ, ಮತ್ತು ಸರಸ್ವತಿ ಕಪ್ಪು ಬಿಳುಪು—ಇವೆಯೆಂದು ನಂಬಿದ (ಎದುರೆದುರು ಬಣ್ಣಗಳ ಸಿದ್ಧಾಂತ).

ಇಂದಿನ ವಿದ್ಯುದಂಗಕ್ರಿಯಾಶಾಸ್ತ್ರದ ಪ್ರಕಾರ ಬದುಕಿರುವ ಕಣ್ಜಾಲದಲ್ಲಿ ರಚನೆಯೂ ನಿಜಗೆಲಸವೂ ಹೆಚ್ಚು ತೊಡಕಾಗಿರುವುದು ತೋರುತ್ತದೆ. ಗ್ರಾನಿಟನ ಮೇಲುಗೈಯಾದ ಶಾಮಕ ಸಿದ್ಧಾಂತದ ಪ್ರಕಾರ ಕಣ್ಜಾಲದ ವೇದನ ತಂತ್ರದಲ್ಲಿ ಎರಡು ಮೂಲವಿಧಗಳಿವೆ. ಮೊದಲ ವರ್ಗ—ಮೇಲುಗೈಯವು—ಒಂದು ಹಗಲು ನೋಟಕ್ಕೆ ಮತ್ತೊಂದು ರಾತ್ರಿನೋಟಕ್ಕೆ ಏಳು ಬಣ್ಣಗಳಿಗೂ ಅನ್ವಯಿಸುತ್ತವೆ. ಮಂದ ಬೆಳಕಿನ ಹೊಳಪುಗಳಿಗೂ ಅನ್ವಯಿಸುತ್ತವೆ. ಶಾಮಕವರ್ಗಕ್ಕೂ ಮೇಲುಗೈ ವರ್ಗಕ್ಕೂ ಸಂಬಂಧವಿಲ್ಲ. ಶಾಮಕವರ್ಗದ ತಂತ್ರಗಳು ತಿದ್ದುವಂಥವು–ಒಂದೊಂದೂ ಕಾಮನಬಿಲ್ಲಿನ ಕೆಲವು ಭಾಗಗಳಲ್ಲಿ ಕೆಲಸಮಾಡುತ್ತದೆ. ಅಲೆ ಉದ್ದಗಳು ಹಾಗೂ ನೆರಳುಗಳನ್ನನುಸರಿಸಿ ಹಿಡಿಯಲು ನಡುವರ್ತಿಯಾಗುತ್ತದೆ. ಮುಖ್ಯವಾಗಿ ತಿದ್ದುವ ವ್ಯಾಪ್ತಿಗಳು ಮೂರಿವೆ: 1. 0.580–0.610, 2. 0.520–0.540 ಮತ್ತು 3. 0.404–0.470 ಮೈಕ್ರಾನ್‌ಗಳ ಉದ್ದಗಳಿರುವ ಕಿರಣತರಂಗಗಳು. ಈ ಅರ್ಥದಲ್ಲಿ ಗ್ರಾನಿಟನ ಸಿದ್ಧಾಂತ ಬಹು ವಿಜ್ಞಾನಿಗಳು ಒಪ್ಪುವ ತ್ರಿವರ್ಣ ಸಿದ್ಧಾಂತಕ್ಕೆ ಸರಿಹೊಂದುತ್ತದೆ. ಇರುವ ವ್ಯತ್ಯಾಸವೇನೆಂದರೆ ಗ್ರಾನಿಟನ ಸಿದ್ಧಾಂತದಲ್ಲಿ ಕಾಮನಬಿಲ್ಲಿನ ಸಣ್ಣ ಸಣ್ಣ ಭಾಗಕ್ಕೂ ಬೇರೆ ಬೇರೆ ಪ್ರತಿಕ್ರಿಯೆಗಳಾಗಿಸುವ ಹಲವು ತಿದ್ದುವ ತಂತ್ರಗಳಿವೆ. ಬಿಳುಪು ಅದರ ಹೊಳಪಿನ ಪ್ರಮಾಣ ಗೊತ್ತಾಗಲು ತನಿಯಾಗಿರುವ ತಂತ್ರ ಬಲವಾಗಿದೆ. ಈ ವಿಷಯದಲ್ಲಿ ಹೆನ್ರಿ ಪಯೆರಾನ್ ಇದನ್ನು ಒಪ್ಪಿದ್ದಾನೆ.

ಹೆಚ್ಚಾಗಿ ಮನಶ್ಶಾಸ್ತ್ರ, ಅಂಗಕ್ರಿಯಾಶಾಸ್ತ್ರಗಳ ಆಧಾರದ ಮೇಲೆ ಮಾಡಿದ ಕಣ್ಜಾಲದ ರಚನಾಂಶಗಳ ಅಧ್ಯಯನದಿಂದ ದೊರಕಿದ ಅಂಕಿ ಅಂಶಗಳನ್ನು ಗಮನಿಸಿದಾಗ, ಈ ಹಿಂದಿನ ಯತ್ನಗಳನ್ನು ಇನ್ನೂ ಚೆನ್ನಾಗಿ ವಿವರಿಸಬಹುದು. ಮೊದಲ ವಿಚಾರವೆಂದರೆ ಕಣ್ಜಾಲದ ಕಣ್ಣಿನ ನತಿಯಲ್ಲಿ ಸಲಾಕಿಗಳಿಲ್ಲದೆ ಬರೀ ಶಂಕುಗಳಿರುವುದು. ಎಲ್ಲ ಬಣ್ಣಗಳು ಇಲ್ಲಿ ಅರಿವಿಗೆ ಬರುವುದರಿಂದ ಖಚಿತ ಪ್ರಮಾಣದಲ್ಲಿ ಬಣ್ಣನೋಟಕ್ಕೆ ಸಲಾಕಿಗಳಲ್ಲದೆ ಶಂಕುಗಳೇ ಕಾರಣ. ಇನ್ನೊಂದಂಶವೆಂದರೆ, ಶಂಕುಗಳಲ್ಲಿ ಹಲವು ಬಗೆಗಳಿವೆ ಎಂಬ ಊಹೆಗೆ ಒಪ್ಪುವಷ್ಟು ಪುರಾವೆಯಿಲ್ಲದಿರುವುದು. ಅದರಲ್ಲೂ ಕಣ್ಣಿನ ನತಿಯಲ್ಲಿ ಅದರ ಸುತ್ತಲೂ ಎಲ್ಲ ಶಂಕುಗಳ ನರಕಸೆಗಳು ಒಂದೇ ರೀತಿಯಿದೆ. ಬಹುಶಃ ಅಕ್ಷಭಾಗದಲ್ಲಿ ಎಲ್ಲ ಶಂಕುಗಳಿಗೆ ಕಾರ್ಯಸಮತೆ ಇರುವ ಮತ್ತು ಎಲ್ಲ ಅಲೆ ಉದ್ದಗಳು ಅಥವಾ ಬಣ್ಣಛಾಯೆಗಳಿಂದ ಪ್ರತಿ ಶಂಕು ಚೋದಿತವಾಗುವ ಸಂಭವವಿದೆ. ರಾಸಾಯನಿಕ ರಚನೆ ಇನ್ನೂ ತಿಳಿಯದಿದ್ದರೂ ಮನಸ್ಸಿನಲ್ಲಿ ಕೊನೆಗೆ ಬಣ್ಣದ ಆವೇಗ ಒಂದೇ ರೀತಿಯ ಚೋದನೆ ಸರಣಿಗಳನ್ನು ಆರಂಭಿಸಲಿರುವ ತಂತ್ರ ಬಹುಶಃ ಶಂಕುಗಳಲ್ಲಿದೆ. ಶಂಕುಗಳ ಚೋದನೆಗಳನ್ನು ಬಳಸಿಕೊಳ್ಳುವುದು ಇಗ್ಗಣೆ ನರಗಂಟುಗಳಂಥ ಕಣ್ಜಾಲದ ಇತರ ರಚನಾಂಶಗಳ ಕರ್ತವ್ಯವೆಂದು ಕಾಣುತ್ತದೆ. ನಮಗೆ ತಿಳಿದಿರುವಂತೆ ಮೂಲ ಶಂಕುಚೋದನೆಗಳ ತಿದ್ದುಪಡಿಗಳು ಹಲವು ರೀತಿಯಲ್ಲಿ ನಡೆಯುತ್ತವೆ. ವಿಭಜನೆ ಅಥವಾ ಆಯ್ಕೆ, ಪುಷ್ಟೀಕರಣ, ಸಂಕಲನ, ನಿಯಂತ್ರಣ ಅಥವಾ ಎದುರಿಸಿಕೆ. ಹೀಗೆ ನೋಡಿದರೆ, ಕಣ್ಜಾಲ ಬಲು ಸೋಜಿಗದ, ವ್ಯವಸ್ಥೆಗೊಂಡ, ಬೇರ್ಪಡಿಸುವ ತಂತ್ರ. ಇದರಿಂದ ಬೆಳಕುಪಡೆಕಗಳಲ್ಲಿ ಹುಟ್ಟಿದ ಚೋದನಾ ಆವೇಗಗಳು ಸಲಾಕಿಗಳಂತೆ ಹೆಚ್ಚಾಗಿ ಶಂಕುಗಳಲ್ಲಿ ಮಾರ್ಪಟ್ಟು ಕೊನೆಯ ಅರಿವಿಗೆ ಮೆದುಳಿನ ಕೇಂದ್ರಗಳಿಗೆ ರವಾನೆಯಾಗುತ್ತವೆ.

ಕಣ್ಜಾಲದ ಪ್ರಾದೇಶಿಕ ವೈವಿಧ್ಯ ಮತ್ತು ನೋಟದ ಚುರುಕು ಒಟ್ಟಿನಲ್ಲಿ ಕಣ್ಜಾಲದ ಎಲ್ಲ ಭಾಗಗಳ ರಚನೆ ಒಂದೇ ರೀತಿಯಿದ್ದರೂ ಬೇರೆ ಬೇರೆ ಎಡೆಗಳಲ್ಲಿ ವ್ಯತ್ಯಾಸಗಳಿವೆ. ಬಹುಮುಖ್ಯವಾದುದು ನೋಟದ ಜಾಗ. ಹೊಸದಾಗಿ ಕಣ್ಜಾಲಗಳಲ್ಲಿ ಅಕ್ಷದಲ್ಲಿ ಹಳದಿ ಚುಕ್ಕೆ ಇರುತ್ತದೆ. ಈ ಕೇಂದ್ರದಲ್ಲಿ ನರಕಣಗಳ [illegible] ಹೆಚ್ಚಿರುವುದರಿಂದ ಇಲ್ಲಿ ಕಣ್ಜಾಲದ ದಪ್ಪ ಹೆಚ್ಚು. ಹಳದಿ ಚುಕ್ಕೆಯ ನಡುವೆ ಕಣ್ಜಾಲದ

ಹೊರಪದರಗಳು ಪಕ್ಕಕ್ಕೆ ಸರಿದಿರುವುದರಿಂದ ಒಂದು ನತಿಯಿದೆ. ಈ ನತಿಯಲ್ಲಿ ಬೆಳಕುಪಡೆಕ ಕಣಗಳ ಪದರ ಮಾತ್ರ ಬಲು ದಪ್ಪಕ್ಕಿದೆ ; ಇಲ್ಲಿ ಸಲಾಕಿಗಳಿಲ್ಲ. ಶಂಕುಗಳು ಉದ್ದವಾಗಿವೆ. ಈ ನತಿಯ ವ್ಯಾಸ 1.5 ಮಿ.ಮೀ. ಇಲ್ಲಿ ಕೇಂದ್ರಶಂಕುಗಳನ್ನು ತಲುಪುವ ಕಿರಣಗಳನ್ನು ತಡೆಯುವಂತೆ ರಕ್ತನಾಳಗಳಿಲ್ಲ. ಆದರೆ ಕೇಂದ್ರ ಶಂಕುಗಳ ಅಡ್ಡವ್ಯಾಸ 1 (1 ಮೈಕ್ರಾನ್ =1/25000 ಅಂಗುಲ). ಇಷ್ಟು ಸಣಕಲ ಶಂಕುಗಳು ಸುತ್ತಮುತ್ತ ಇಲ್ಲ. ಈ ರಚನಾಂಶ ದೃಷ್ಟಿವ್ಯಾಪ್ತಿಯ ಕೇಂದ್ರದಲ್ಲಿರುವ ನೋಟದ ಚುರುಕಿಗೆ ಕಾರಣ. ಮೇಲೆ ನೋಡಿದರೆ ಒಂದೊಂದು ಶಂಕುವೂ ಆರು ಮೂಲೆ ಚೌಕವಾಗಿ ಕಾಣಿಸುತ್ತದೆ. ಈ ಆರು ಮೂಲೆಯವು ಒಂದನ್ನೊಂದು ದಾಟುವ ಸಾಲುಗಳಲ್ಲಿವೆ. ಈ ನತಿಯಿಂದ 3 ಮಿ.ಮೀ. ಒಳಗಡೆ ಕಣ್ಣುಬಟ್ಟು ಇದೆ. ಇದು ಸಲಾಕಿಶಂಕುಗಳಿಲ್ಲದ ಕುರುಡು ಚುಕ್ಕೆ. ಇದರ ಮೇಲೆ ಬಿದ್ದ ಕಿರಣಗಳು ಕಣ್ಣಿಗೆ ಕಾಣಬರುವುದಿಲ್ಲ. ಇಲ್ಲಿ ನರಗಂಟು ಕಣಗಳ ನರತಂತಗಳು ಕಣ್ಣುಗುಡ್ಡೆಯಿಂದ ಹೊರಟು ಕಣ್ಣು ನರವಾಗುತ್ತವೆ. ಕೇಂದ್ರಗುಳಿಯಲ್ಲಿ ಕಣ್ಜಾಲದ ರಚನೆ ಕ್ರಮವಾಗಿದ್ದು ಕೇಂದ್ರದಿಂದ ಆಚೆಗೆ ಹೋಗ ಹೋಗುತ್ತ, ಅದರಲ್ಲೂ ಹೆಚ್ಚಾಗಿ ಗರಗಸ ಅಂಚಿನಲ್ಲಿ, ಯದ್ವಾತದ್ವಾ ಆಗುತ್ತದೆ. ಇದಕ್ಕೆ ಸರಿಯಾಗಿ, ನೋಟದ ಚುರುಕೂ ಕಡಿಮೆಯಾಗುತ್ತ ಬರುತ್ತದೆ. ಕೇಂದ್ರದ ಸುತ್ತಲೂ ಒಂದೊಂದು ಇಗ್ಗಣೆಗೂ ನರಕಸೆ ಬಂಧನವಾದ ಸಲಾಕಿಶಂಕುಗಳ ಅಂಕಿಯೂ ಒಂದೊಂದು ನರಗಂಟು ಕಣಕ್ಕೆ ಬಂಧನವಾದ ಇಗ್ಗಣೆಗಳ ಅಂಕಿಯೂ ಹೆಚ್ಚೆ ಹೆಚ್ಚಿ ಅಂಚಿನಲ್ಲಿ ಅತ್ಯಲ್ಪಕಿರಣಗಳ ಚೋದನೆಗೂ ಹಾಗಾಗಿ ಚಲನಸಂಬಂಧವಾದ ಅರಿವಿಗೂ ಚುರುಕಾಗಿದೆ. ಈ ಮಟ್ಟದ ಚುರುಕು ಗರಗಸ ಅಂಚಿನಲ್ಲಿರುವಷ್ಟು ಅಕ್ಷಭಾಗದಲ್ಲಿಲ್ಲ.

ಕಣ್ಣಿನ ಉಪಾಂಗಗಳು : ಕಣ್ಣುಗುಡ್ಡೆಯೂ ಇದಕ್ಕೆ ಸಂಬಂಧಿಸಿದ 7 ಸ್ನಾಯುಗಳು, ರಕ್ತನಾಳಗಳು, ನರಗಳು, ಕಣ್ಣೀರುಗ್ರಂಥಿ, ಕಣ್ಣುಗುಳಿಯ ಕೊಬ್ಬೂ ಸೇರಿ ತಲೆಬುರುಡೆಯಲ್ಲಿರುವ ಕಣ್ಣುಗುಳಿಯಲ್ಲಿವೆ. ಲೋಳೆಪೊರೆ, ಚರ್ಮ, ರೆಪ್ಪೆಗಳು ರೆಪ್ಪೆಗೂದಲು, ಹುಬ್ಬು—ಇವೂ ಕಣ್ಣಿನ ಭಾಗಗಳು. ಗ್ರಂಥಿಯಿಂದ ಹೊರಟ ಕಣ್ಣೀರು ರೆಪ್ಪೆಗಳು ಹರಡಿ ತೆರೆದಿರುವ ಕಣ್ಣುಭಾಗಗಳ ಲೋಳೆಪೊರೆಯನ್ನು ತೊಳೆದು ಕೋಡುಪೊರೆ




ಚಿತ್ರ 3 1 ಕಣ್ಣೀರಿನ ಗ್ರಂಥಿ, 2 ಕಣ್ಣೀರಿನ ಸಾಗುನಾಳ, 3 ಮೇಲಿನ ರೆಪ್ಪೆಪದರ; 4 ಕೆಳಗಿನ ರೆಪ್ಪೆಪದರ, 5 ಕಂಡಿಚುಕ್ಕೆ, 6 ಕಣ್ಣೀರು ಚೀಲ, 7 ಕಿರುಸಾಗಾಲುವೆ; 8 ಮೂಗಿನ ಸಾಗಾಲುವೆ.

ಯನ್ನು ಚೊಕ್ಕವಾಗೂ ಪಾರದರ್ಶಕವಾಗೂ ಇಡುತ್ತದೆ. ಕಣ್ಣೀರು ಸದಾ ಸ್ವಲ್ಪಸ್ವಲ್ಪವಾಗಿ ಒಸರುತ್ತಿರುತ್ತದೆ. ರೆಪ್ಪೆಬಡಿತ ನಿಂತರೂ ಕೋಡು ಪೊರೆ ಒಣಗುವುದರಿಂದ ಕುರುಡಾಗುತ್ತದೆ. ಅಳುವಾಗ ಹೆಚ್ಚು ಸುರಿದ ನೀರು ಆಚೆ ಸುರಿದರೂ ಕೊಂಚಭಾಗ ಕುಣಿಕೆಯಲ್ಲಿರುವ ಸಣ್ಣ ನಾಳಗಳ ಮೂಲಕ ಕುಣಿಕೆ ಚೀಲವನ್ನು ಸೇರಿ ಅಲ್ಲಿಂದ ಕಣ್ಣು ಮೂಗುನಾಳದ ಮೂಲಕ ಮೂಗನ್ನು ಸೇರುತ್ತದೆ. ಅದಕ್ಕೇ ಅಳುವಾಗ ಮೂಗಿನಲ್ಲೂ ನೀರು ಬರುವುದು. ಸದಾ ನೀರಿನಲ್ಲಿರುವ ಪ್ರಾಣಿಗಳಿಗೆ ರೆಪ್ಪೆಗಳು ಮತ್ತು ಕಣ್ಣೀರು ಗ್ರಂಥಿ ಬೇಕಾಗಿಲ್ಲ.

ಪಿಂಡದಲ್ಲಿ ಕಣ್ಣಿನ ವಿಕಾಸ : ಪಿಂಡದ ಮಿದುಳಿನ ಭಾಗವಾದ ನಡುಮಿದುಳಿನಿಂದ ಎರಡು ಪಕ್ಕಚಾಚುಗಳು ಬೆಳೆಯುತ್ತವೆ. ಒಂದೊಂದು ಚಾಚೂ ಸಣ್ಣ ಟೊಳ್ಳುಗದೆಯಂತಿದ್ದು, ದುಂಡುಕೊನೆಯಲ್ಲಿ ಗುಳಿಬಿದ್ದು ಇಪ್ಪದರಗಳಿರುವ ಬಟ್ಟಲಿನಂತಾಗುತ್ತದೆ. ಈ ಬಟ್ಟಲಿನ ಹೊರಪದರದಿಂದ ಹೊರ ಕರೀಬಣ್ಣದ ಕಣಪದರದಿಂದ ಒಳಪದರವೂ ಸಲಾಕಿ ಶಂಕುಗಳು ಇಗ್ಗಣೆ ಕಣಗಳು, ನರಗಂಟುಗಳೂ ಹುಟ್ಟಿಕೊಳ್ಳುತ್ತವೆ. ಕಣ್ಣುಬಟ್ಟಲನ್ನು ಮುಚ್ಚಿರುವ ಹೊರಚರ್ಮ ದಪ್ಪಾಗಿ ಮಡಚಿಕೊಂಡು ಮುಚ್ಚಿನ ಚೀಲವಾಗಿ ಮೇಲ್ಚರ್ಮದಿಂದ ಬೇರ್ಪಟ್ಟು ಮಸೂರವಾಗುತ್ತದೆ. ಇದೇ ಜಾಗದಲ್ಲಿ ಅದೇ ಕಾಲದಲ್ಲಾದ ಗುಳಿಯ ತುಟಿಗಳಿಂದ ರೆಪ್ಪೆಗಳೂ ಲೋಡುಪೊರೆಯೂ ಆಗುತ್ತವೆ. ನಡುಚರ್ಮದಿಂದ ಕೋಡು ಪೊರೆಯ ಲೋಳೆಪೊರೆಯಲ್ಲಾದ ಭಾಗವೂ ಕರಿಯಾಲಿ ಹೊರಪದರ, ನಡುಪದರಗಳೂ (ಬಾಸೆಯದಿಂಡು ಕೂಡಿ) ಆಗುತ್ತವೆ. (ಎಂ.ಡಿ.)

**ಕಣ್ಣಿನ ರೋಗಗಳು :** ಕಣ್ಣುಗುಡ್ಡೆ ಮತ್ತದರ ಹಲವು ಭಾಗಗಳಿಗೆ ಹತ್ತುವ ರೋಗಗಳು, ಗಾಯ, ಪೆಟ್ಟುಗಳು, ವಿಷಮ ಗಂತಿಗಳನ್ನು (ಮೆಲಿಗ್ನೆಂಟ್ ಟ್ಯೂಮರ್ಸ್) ಇಲ್ಲಿ ವಿವರಿಸಿದೆ. ಕುರುಡುತನ, ನೋಟದ ಕುಂದುಗಳು, ಆಹಾರ ಪುಷ್ಟಿ ಸಾಲದೆ ಬರುವ ರೋಗಗಳನ್ನು ಬೇರೆಡೆ ಕೊಟ್ಟಿದೆ (ನೋಡಿ—ಕಣ್ಣಾಯಾಸ; ಕಾಕುಪಾಲನೆ; ಜೀವಾತುಗಳು)

ರೆಪ್ಪೆಗಳ ರೋಗಗಳು : ಕಣ್ಣಿಗೆ ಸಣ್ಣ ಪೆಟ್ಟು, ಅಪಾಯುಗಳು ತಾಕದಂತೆ ತಡೆವುದಲ್ಲದೆ ಕಣ್ಣುಗುಡ್ಡೆ ಮುಂಭಾಗ ತೇವವಿಲ್ಲದೆ ಒಣಗದಂತೆ ಇರಿಸುವವು ರೆಪ್ಪೆಗಳು. ರೆಪ್ಪೆ ಮುಚ್ಚಲು ಸುತ್ತುವರಿಕ (ಆರ್ಬಿಕ್ಯುಲಾರಿಸ್) ಸ್ನಾಯು ಕುಗ್ಗುವುದೇ ಕಾರಣ. ರೆಪ್ಪೆ ತೆರೆಯಲು ಬಾಣ ಮೊನೆಯಂಥ ಸ್ನಾಯುವಿದೆ. ಸಾಮಾನ್ಯವಾಗಿ ರೆಪ್ಪೆಗಳು ಕಣ್ಣುಗುಡ್ಡೆಗೆ ಚೆನ್ನಾಗಿ ತಾಕಿಕೊಂಡಿರುವುವು. ಇವು ನಿದ್ರೆಯಲ್ಲಿ ಮುಚ್ಚಿರುತ್ತವೆ. ಸುತ್ತುವರಿಕ ಸ್ನಾಯು ಸೆಡೆತುಕೊಂಡಾಗ ರೆಪ್ಪೆ ಅಂಚು ಒಳತಿರುಗಿರುವುದಕ್ಕೆ ಒಳತಿರುವೆ (ಎಂಟ್ರೋಪಿಯಾನ್) ಎಂದಿದೆ. ಆಗ ರೆಪ್ಪೆ ಗೂದಲು (ಎವೆ) ಕಣ್ಣುಗುಡ್ಡೆಯನ್ನು ಗೀಚಿದಂತಾಗಿ ಹುಣ್ಣಾಗಬಹುದು. ಇದಕ್ಕೆದುರಾಗಿ, ರೆಪ್ಪೆಗೆ ಗಾಯವೋ ಹುಣ್ಣೋ ಆಗಿ ವಾಸಿಯಾದ ಮೇಲೆ ಕಲೆಗಟ್ಟಿದಾಗ ರೆಪ್ಪೆ ಅಂಚು ಹೊರಮಡಿಸಿಕೊಂಡಿರುವುದಕ್ಕೆ ಹೊರತಿರುವೆ (ಎಕ್‌ಟ್ರೋಪಿಯಾನ್) ಎಂದಿದೆ. ಮುಪ್ಪಿನಲ್ಲಿ ಕೆಳರೆಪ್ಪೆಗಳಲ್ಲಿ ಬಲವಿಲ್ಲದೆ ಜೋಲು ಬೀಳಬಹುದು. ನಿತ್ರಾಣದಿಂದ ರೆಪ್ಪೆ ಜೋಲು (ಟೋಸಿಸ್) ಬಿದ್ದಿರಬಹುದು. ಇದರಿಂದ ನೋಟಕ್ಕೆ ಅಡ್ಡಿಯಾದರೆ ಶಸ್ತ್ರಕ್ರಿಯೆಯಿಂದ ಸರಿಪಡಿಸಬಹುದು.

ತಲೆಯ 7ನೆಯ ನರವಾದ, ಮೊಗದ ನರದ ಅಂಕೆಯಲ್ಲಿರುವ ಸುತ್ತರಿಕ ಸ್ನಾಯುವೇ ರೆಪ್ಪೆಗಳಿಂದ ಕಣ್ಣು ಮುಚ್ಚಲು ಕಾರಣವಾದ್ದರಿಂದ ಈ ನರದ ಅರನಾರಿಯಲ್ಲಿ (ಪೆರಾಲಿಸಿಸ್) ಕಣ್ಣುಮಿಟುಕಣೆ, ಮುಚ್ಚಿಗೆ ಆಗದು. ಹೀಗೆ ಬಹಳ ಹೊತ್ತು ಮುಚ್ಚದಂತಾದರೆ ಕಣ್ಣುಗುಡ್ಡೆ ಮುಂದಿರುವ ತಿಳಿಪೊರೆಯಾದ ಕೋಡು ಪೊರೆ (ಕಾರ್ನಿಯ) ಒಣಗಿ ಹುಣ್ಣೇಳುತ್ತದೆ. ಆಗ ನಿದ್ರೆಹೊತ್ತಿನಲ್ಲಿ ತೇವವಿರುವಂತೆ ಏನಾದರೂ ಉಪಾಯ ಮಾಡಬೇಕಾಗುವುದು.

ರೆಪ್ಪೆಗಳಲ್ಲಿನ ಗ್ರಂಥಿಗಳಿಂದ ಸುರಿವ ಮೈಜಿಡ್ಡು (ಸೀಬಂ) ರೆಪ್ಪೆ ಅಂಚುಗಳು ಒಂದಕ್ಕೊಂದು ಅಂಟದಂತೆ ಇರಿಸುವುದಲ್ಲದೆ, ಎಂದಿನ ಕಣ್ಣೀರು ಹೊರಕ್ಕೆ ಹರಿದು ಹೋಗದ ಹಾಗೆ ತಡೆವುದು. ಈ ಮೈಜಿಡ್ಡು ಗ್ರಂಥಿಗಳಿಗೆ ಸೋಂಕುಹತ್ತಿ ಕೀವು ಗೂಡುವುದೇ ಕಣ್ಣುಟಿಕೆ. ಇದಕ್ಕೆ ಸೋಂಕುರೋಧಕ ಮದ್ದುಗಳನ್ನು ಹಚ್ಚಿ ಕಾವು ಕೊಡುವುದರಿಂದ ಗುಣಪಡಿಸಬಹುದು. ಈ ರೆಪ್ಪೆ ಗ್ರಂಥಿಗಳಲ್ಲಿ ಅಡಚಣೆಯಾಗಿ ಒಳರೆಪ್ಪೆಯಾಳದಲ್ಲಿ ಗಟ್ಟಿ ಕುರು ಏಳುವುದೇ ಕಣ್ಣುಜಿಟ್ಟ (ಕೆಲೇಜ಼ಿಯಾನ್). ಕೆಲವೇಳೆ ಇದು ಸುಲಭವಾಗಿ ವಾಸಿಯಾಗದ್ದರಿಂದ ಕೊಯ್ದು ಕೀವುಗಟ್ಟಿರುವುದನ್ನು ಹೊರಡಿಸದಿದ್ದರೆ ಗಟ್ಟಿಕಾಳಿನಂತೆ ಗಂಟು ಉಳಿವುದು.

ರೆಪ್ಪೆಯ ಅಂಚುಗಳಲ್ಲಿ ಕೂದಲ ಕೋಶಿಕಗಳಲ್ಲಿ (ಫಾಲಿಕಲ್ಸ್) ಸೋಂಕು ಹತ್ತಿ ರೆಪ್ಪೆಯುರಿತವಾಗಲು (ಬ್ಲೆಫರೈಟಿಸ್) ಚರ್ಮದ ಮೇಲೆ ಯಾವಾಗಲೂ ಇರುವ ಸಾಮಾನ್ಯ ಏಕಾಣುಜೀವಿಗಳೇ ಕಾರಣ. ಆಗ ರೆಪ್ಪೆಗೂದಲುಗಳ ಬುಡದಲ್ಲಿ ಪಿಸರುಗಟ್ಟಿ ಹುರುಪೆ (ಸ್ಕೇಲ್) ಏಳುತ್ತದೆ. ಜೀವಿರೋಧಕ ಮದ್ದುಗಳಿಂದ ಇದನ್ನು ಗುಣಪಡಿಸಬಹುದು.

ಕಣ್ಣೀರಿನ ಸಾಧನದ ರೋಗಗಳು : ಕಣ್ಣುಗುಡ್ಡೆಯ ಮುಂಭಾಗದಮೇಲೆ ಯಾವಾಗಲೂ ಒಂದು ತೆಳುಪದರ ಉಳಿವಷ್ಟು ನೀರನ್ನು ಕಣ್ಣೀರು ಗ್ರಂಥಿಗಳು ಸುರಿಸುತ್ತಲೇ ಇರುತ್ತವೆ. ಕಣ್ಣೀರಿನ ತಯಾರಿಕೆ, ಕಣ್ಣೀರು ಆರಿಹೋಗುವಿಕೆ, ಕಣ್ಣೀರು ಕಾಲುವೆಗಳ ಮೂಲಕ ಹೊರಸಾಗಣೆಯ ವೇಗಗಳು ಯಾವಾಗಲೂ ಎಷ್ಟು ಚೆನ್ನಾಗಿ ಒಂದಕ್ಕೊಂದು ಹೊಂದಿಕೊಂಡಿರುವುವೆಂದರೆ ಸಾಧಾರಣವಾಗಿ ಕಣ್ಣೀರು ಹೊರಹರಿದು ಬೀಳದು. ಕಣ್ಣೀರಿನ ತೇವ ಕೂಡ ಯಾರ ಅರಿವಿಗೂ ಬರದಂತಿರುವುದು. ಕೆಲವು ಬೇನೆಗಳಲ್ಲಿ ಕಣ್ಣೀರು ಸುರಿತ ಏರುಪೇರಾಗುತ್ತದೆ. ಕಣ್ಣಿನಿಂದ ಮೂಗಿನೊಳಕ್ಕೆ ಸಾಗುವ ಕಾಲುವೆಗೆ ಅಡಚಣೆ ಆಗುವುದೇ ಕಣ್ಣೀರು ಹೆಚ್ಚಾಗಿ ಹೊರಬೀಳುವುದರ ಕಾರಣ. ಮೂಗಿನಲ್ಲಿ ಏನಾದರೂ ಬೆಳೆದಿದ್ದರೆ ಹೀಗಾಗುತ್ತದೆ. ಹಾಗೇ ಕೆಳರೆಪ್ಪೆಯ ವಿಕಾರ, ಕಣ್ಣೀರು ಕಾಲುವೆಯಲ್ಲಿ ಒತ್ತಳ್ಳುವ ಸ್ನಾಯುವಿನ ದುರ್ಬಲತೆಗಳೂ ಕಾರಣವಾಗಬಹುದು. ಮುಪ್ಪಿನಲ್ಲಿ ಕೆಳರೆಪ್ಪೆ ಜೋಲು ಬೀಳುವುದರಿಂದ ನೀರುಗಣ್ಣು (ಎಪಿಫೋರ) ಆಗಿ ಕೊಂಚ ಕಣ್ಣೀರು ಹೊರಸುರಿವುದು. ಇವಲ್ಲಿ ಬಹುಪಾಲನ್ನು ಶಸ್ತ್ರಕ್ರಿಯೆಯಿಂದ ಸರಿಪಡಿಸಬಹುದು. ಕಣ್ಣೀರು ಚೀಲಕ್ಕೂ ಮೂಗಿಗೂ ನಡುವಣ ಸಾಗಾಲುವೆ

(ಡಕ್ಟ್) ಮುಚ್ಚಿಹೋಗಿದ್ದರೆ ಕಣ್ಣೀರು ಚೀಲದಲ್ಲಿ ಸೊಂಕು ಸೇರಿಕೊಳ್ಳುತ್ತದೆ. ಆಗ ಮುಚ್ಚಿಹೋದ ದಾರಿಯನ್ನು ಶಸ್ತ್ರಕ್ರಿಯೆಯಿಂದ ಬಿಡಿಸಿ ತೆರೆಯದಿದ್ದಲ್ಲಿ ಕೋಡು ಪೊರೆಗೆ ಅಪಾಯವಿದೆ.

ಕಣ್ಣೀರು ಸುರಿಕೆ ಸಾಲದಾದರೆ ಬಲು ತೊಂದರೆ, ಅಪಾಯ ಹೆಚ್ಚು. ಕಣ್ಣು ಒಣಗಿದಂತಾಗಿ ಕಣ್ಣಲ್ಲಿ ಏನೋ ಬಿದ್ದು ಕೆರೆಯುತ್ತಿರುವ ಹಾಗೆ ತೋಚುವುದು. ವಯಸ್ಸಾದ ಹೆಂಗಸರಲ್ಲಿ ಒಳಸುರಿಕೆಬೇನೆಯೊಂದರಲ್ಲಿ ಹೀಗಾಗುತ್ತದೆ. ಒಳಸುರಿಕ ಗ್ರಂಥಿ ಚಿಕಿತ್ಸೆ ನಡೆಸುವುದರೊಂದಿಗೆ, ಆಗಾಗ್ಗೆ ನೀರು ತೊಟ್ಟುಗಳನ್ನು ಹಾಕಿ ಕಣ್ಣೊಳಭಾಗವನ್ನು ತೋಯಿಸುತ್ತಿರಬಹುದು. ಕಣ್ಣೀರು ಹರಿದು ಹೋಗದಂತೆ ಸಾಗುದಾರಿಗಳನ್ನು ಶಸ್ತ್ರಕ್ರಿಯೆಯಿಂದ ಮುಚ್ಚಿಹಾಕಬಹುದು. ಇನ್ನೇನೂ ಮಾಡಲಾಗದಿದ್ದರೆ, ಜೊಲ್ಲುಗ್ರಂಥಿ ನಾಳಗಳನ್ನು ಇಲ್ಲಿಗೆ ಜೋಡಿಸಿ ಹೊಲೆವುದುಂಟು.

**ಕೂಡು ಪೊರೆಯ ರೋಗಗಳು :** ಕಣ್ಣುರೆಪ್ಪೆಗಳ ಹಿಂಭಾಗದಲ್ಲೂ ಕಣ್ಣುಗುಡ್ಡೆಯ ಮೇಲೂ ಹೊದಿಸಿದಂತಿರುವ ಕೂಡುಪೊರೆ (ಕಂಜಂಕ್ಟೈವ) ಹೊರಗಾಳಿಗೆ ಒಡ್ಡಿರುವುದರಿಂದ ಸುಲಭವಾಗಿ ಸೊಂಕುಗಳು, ಒಗ್ಗದಿಕೆಗಳು, ಕೆರಳಿಕೆ ವಸ್ತುಗಳು, ರಾಸಾಯನಿಕಗಳಿಗೆ ಈಡಾಗಿ ಕೂಡುಪೊರೆಯುರಿತ (ಕಂಜಂಕ್ಟಿವೈಟಿಸ್) ಆಗುತ್ತದೆ. ಕಣ್ಣಲ್ಲಿ ರಕ್ತಗಟ್ಟಿ ಕೆಂಪೇರಿ, ಕಣ್ಣೀರು ಹರಿಸುತ್ತ, ರೋಸೋ ಗೀಜೋ ಕೀವೋ ಸುರಿಯಬಹುದು. ರಾತ್ರಿ ಮಲಗಿದ್ದು ಬೆಳಗ್ಗೆ ಎದ್ದಾಗ ಕಣ್ಣುರೆಪ್ಪೆಗಳು ಗೀಜುಕಟ್ಟಿ ಮೆತ್ತಿಹಾಕಿಕೊಂಡಿರುತ್ತವೆ. ಕಡಿತ, ಉರಿ ಆಗಿ, ಕಣ್ಣು ಚುಚ್ಚುತ್ತಿರುವುದು. ಸಾಮಾನ್ಯವಾಗಿ ನೋವು ಅಷ್ಟಾಗಿರದು. ನೋಟಕ್ಕೂ ಅಡ್ಡಿಯಿಲ್ಲ. ಅಡ್ಡಿಯಾಗಿದ್ದರೆ ಕೂಡುಪೊರೆಗೂ ಸೊಂಕು ಹತ್ತಿರಬೇಕು. ಸೂರ್ಯನ ಬೆಳಕಿನ ದೀಪ ಬೆಸಗೆ ದೀಪಚಾಪ, ಕಣ್ಣು ಕೊರೈಸುವ ಬಿಸಿಲುಗಳಿಂದಲೂ ಕೂಡುಪೊರೆಯುರಿತ ಏಳಬಹುದು. ಬೆಳಕಿಗೆ ಕಣ್ಣು ಬಿಡದಂತಾಗುತ್ತದೆ.

ಕರಡಜ್ವರದೊಂದಿಗೆ (ಹೇ ಫೀವರ್) ಕೊಂಚವಾಗಿ ಒಗ್ಗದಿಕ ಕೂಡುಪೊರೆಯುರಿತ ಕಾಣಿಸಿಕೊಳ್ಳಬಹುದು. ಊತ, ಕೆಂಪೇರಿಕೆ, ಕೆರೆತ, ದದ್ದುಗಳೂ ಏಳಬಹುದು. ಮದ್ದುಹಾಕುವುದನ್ನು ನಿಲ್ಲಿಸಿದರೆ ಇವೆಲ್ಲ ಶಮನವಾಗುತ್ತವೆ. ಕಾರಣಕಾರಕ ಗೊತ್ತಿಲ್ಲವಾದರೂ ವಸಂತದ (ವರ್ನಲ್) ಕೂಡುಪೊರೆಯುರಿತವೂ ಒಗ್ಗದಿಕೆಯದೆಂಬ ಅಭಿಪ್ರಾಯವಿದೆ. ಮಕ್ಕಳಲ್ಲಿ ವಸಂತದಲ್ಲಿ ಕೆರಳುವುದು ಸಾಮಾನ್ಯ. ಕೆರೆತ ವಿಪರೀತವಾಗಿ ಕೂಡುಪೊರೆ ಮಂದವಾಗುತ್ತದೆ. ಸ್ಟಿರಾಯ್ಡ್ ಮದ್ದುಗಳಿಂದ ಕೆರೆತ ಇಳಿಯುತ್ತದೆ.

ಹೊರಗಾಳಿ, ದೂಳು, ಕಾವು, ಚಳಿಗಳಿಗೆ ತೆರೆದೊಡ್ಡಿರುವುದರಿಂದ ಕೂಡುಪೊರೆಗೆ ರೋಗಾಣುಗಳು ಸುಲಭವಾಗಿ ತಾಕುತ್ತಿರುವುವು. ಆದರೆ ಸೊಂಕು ಹತ್ತಿದರೆ ಜೀವಿರೋಧಕಗಳ ತೆರನ ಬಲವಾದ ಮದ್ದುಗಳಿಂದ ಚೆನ್ನಾಗಿ ತಡೆಯಬಹುದು, ಗುಣಪಡಿಸಬಹುದು. ದೊಡ್ಡವರ ಪರಮಾ (ಗೊನೋರಿಯ) ರೋಗ ಆಗ ಹುಟ್ಟಿದ ಹಸುಗೂಸುಗಳ ಕೂಡುಪೊರೆಗೆ ಹತ್ತಿ ಕುರುಡಾಗುತ್ತಿದ್ದ ಕಾಲ ಜೀವಿರೋಧಕ ಮದ್ದುಗಳು ಬಂದಾಗಿಂದ ಕಾಣದಾಗಿದೆ. ಬೇಸಗೆಯಲ್ಲಿ ಸಾಮಾನ್ಯವಾಗಿ ಬರುವ ಕಣ್ಣುನೋವು (ಕೆಂಗಣ್ಣು) ಇಂದಿನ ಗುಣಕಾರಿ ಮದ್ದುಗಳಿಗೆ ಮಣಿದಿದೆ. ಯಾವ ಸೊಂಕು ರೋಧಕ ಮದ್ದಿಗೂ ಜಗ್ಗದ ವಿಷಕಣಗಳಿಂದಾದ (ವೈರಸಸ್) ಕೂಡುಪೊರೆಯುರಿತ ಪ್ರಪಂಚದ ಎರಡನೆಯ ಯುದ್ಧ ಕಾಲದಲ್ಲಿ ಸಾಂಕ್ರಾಮಿಕವಾಗಿ ತಲೆದೋರಿತು. ಮುಖ್ಯವಾಗಿ ಹಡಗು ಕಟ್ಟೆಗಳಲ್ಲಿ ಇದರ ಹಾವಳಿ ಹೆಚ್ಚಾಗಿ ಬಹಳ ನಷ್ಟವಾಯಿತು. ಬಲು ಅಂಟುರೋಗವಾದ್ದರಿಂದ ಈಗಲೂ ಸಾಂಕ್ರಾಮಿಕವಾಗುವುದುಂಟು. 2–3 ತಿಂಗಳು ಕಾಡಿಸಿದರೂ ಕೊನೆಗೆ ಗುಣವಾಗುತ್ತದೆ.

ಈಜಿಪ್ಟ್ ಭಾರತಗಳಲ್ಲಿ ಅಲ್ಲಲ್ಲಿ ಸಾಂಕ್ರಾಮಿಕದಂತೆ ಹಬ್ಬಿರುವ ಬೇರೂರಿದ ಅಂಟುರೋಗ ರವೆಗಣ್ಣೂ (ಟ್ರಾಕೋಮ) ಕೂಡುಪೊರೆಯುರಿತವೇ. ಹಿಂದುಳಿದ ನಾಡುಗಳಲ್ಲಿ ಇದು ಮುಖ್ಯವಾಗಿ ಶಾಲಾಮಕ್ಕಳಲ್ಲಿ ಹೆಚ್ಚಾಗಿ ಕಂಡುಬಂದು, ಚಿಕಿತ್ಸೆ ಇಲ್ಲವಾದರೆ ಕೂಡುಪೊರೆಯ ಮೇಲೆ ಕಲೆಗಟ್ಟಿ ಕುರುಡಾಗುತ್ತಿದ್ದರು. ವಿಶ್ವ ಆರೋಗ್ಯ ಸಂಸ್ಥೆ ಮತ್ತಿತರ ಸಂಘಗಳ ಸತತ ಯತ್ನ, ನೆರವಿನಿಂದ ಬಹಳ ಕಡೆ ಇದರ ಹಾವಳಿ ಇಳಿಯುತ್ತಿದೆ. ಈ ರೋಗಕ್ಕೆ ಕಾರಣವಾದ ವಿಷಕಣ ಕೆಲವು ಜೀವಿರೋಧಕಗಳಿಗೆ ಜಗ್ಗುತ್ತದೆ (ನೋಡಿ--- ರವೆಗಣ್ಣು). ಗಂಡು, ಹೆಣ್ಣು ಈಜುಗಾರರ ಜನನಾಂಗಗಳಲ್ಲಿ ರೋಗ ತೋರದಿದ್ದರೂ—ಅಲ್ಲಿರುವ ಒಂದು ವಿಷಕಣವೇ, ಕಣ್ಣಿಗೆ ತಾಕಿದರೆ ಈಜುಕೊಳದ ಕೂಡುಪೊರೆಯುರಿತ ಆಗುವುದರ ಕಾರಣ ಸೊಂಕಿರುವ ಈಜುಕೊಳದಲ್ಲಿ ಇಳಿಯುವವರೆಲ್ಲರಿಗೂ ಹತ್ತುವುದು. ಎರಡು ಕಣ್ಣುಗಳಲ್ಲೂ ರೋಸು ಸುರಿಸುವ ಈ ಬೇನೆ ಸಲ್ಫೋನೇಮೈಡುಗಳಿಂದ ಗುಣವಾಗುತ್ತದೆ.

ಚರ್ಮ ಮತ್ತು ಲೋಳೆಪೊರೆಗಳ ಎಷ್ಟೊ ರೋಗಗಳು, ಅದರಲ್ಲೂ ಗಂಟಲಮಾರಿ (ಡಿಫ್ತೀರಿಯ), ದಡಾರ, ನಾಯಿ ಕೆಮ್ಮುಗಳಂಥ ಎಳೆತನದ ಕೂರಾದ ಸೊಂಕಿನ ಜ್ವರದ ರೋಗಗಳಲ್ಲಿ ಅಷ್ಟಿಷ್ಟು ಕೂಡುಪೊರೆಯುರಿತ ಕಾಣಿಸಿಕೊಳ್ಳುವುದು ಸಾಮಾನ್ಯ.

ಒಣಕಲ ನಾಡುಗಳಲ್ಲಿ ಕಂಡುಬರುವ ಉರಿತವೇಳಿಸದ ಕೂಡುಪೊರೆ ರೋಗ ಒಂದಿದೆ. ಪುಕ್ಕಪೊರೆ (ಟೆರಿಜಿಯಂ) ರೋಗದಲ್ಲಿ ಗಾಳಿ, ದೂಳುಗಳಿಗೊಡ್ಡಿದ ಕೂಡುಪೊರೆಯ ಭಾಗ ಮುದುರಿಕೊಳ್ಳುವುದಲ್ಲದೆ ಕೋಡು ಪೊರೆಯ ಮೇಲೂ ತೆವಳುತ್ತದೆ. ಇದರಿಂದ ಕಣ್ಣುನೋಟಕ್ಕೆ ಆತಂಕವಾಗುವುದು. ಎಳೆಯದಾಗಿರುವಾಗ ಇದನ್ನು ನೋಡಲು ವಿಕಾರ. ಸಣ್ಣ ಶಸ್ತ್ರಕ್ರಿಯೆಯಿಂದ ಇದನ್ನು ಗುಣಪಡಿಸಿ ಮತ್ತೆ ಮರುಕಳಿಸದಂತೆ ತಡೆಗಟ್ಟಬಹುದು,

**ಕೋಡು ಪೊರೆಯ ರೋಗಗಳು :** ಕಣ್ಣೊಳಗೊಂದು ಮಸೂರವಿದ್ದರೂ ಕೋಡು ಪೊರೆಯೂ ಒಂದು ಕಣ್ಣುಗುಡ್ಡೆಯ ಮುಂಭಾಗದ ಗೋಡೆಯಾಗಿರುವ ಮಸೂರ ಎನ್ನಬಹುದು. ಇದು ತಿಳಿಯಾಗಿ ಆಚೆ ಕಾಣುವಂತಿದ್ದು ನುಣುಪಾಗಿರಲು ಮುಖ್ಯ ಕಾರಣ ಇದರ ಜೀವಕಣಗಳ ಪದರಗಳ ಕ್ರಮವಾದ ಜೋಡಣೆ. ಕೋಡು ಪೊರೆಗೆ ಗಾಯವೋ ಹುಣ್ಣೋ ಆದಮೇಲೆ ವಾಸಿಯಾಗಿ ಕಲೆಗಟ್ಟಿದರೆ ಆ ಜಾಗಗಳಲ್ಲೆಲ್ಲ ಮೊದಲಿನ ತಿಳಿಯಾಗಿ ಆಚೆಗಾಣಿಕ ಗುಣವನ್ನು ನೀಗುತ್ತದೆ. ಹೀಗೆ ಕಲೆಗಟ್ಟಿದಾಗ ಬೇರೆಯವರ ಕಣ್ಣಿನಿಂದ ತೆಗೆದು ತಂದುದನ್ನು ಕೆಟ್ಟಿರುವ ಭಾಗಕ್ಕೆ ನಾಟಿ ಹಾಕುವುದಕ್ಕೆ ನೇತ್ರದಾನ ಎನ್ನುವುದುಂಟು. ಕೆಲವೇಳೆ ಇದಕ್ಕಾಗಿ ಕನ್ನಡಕಗಳನ್ನು ಹಾಕಿಸಿ ಸರಿಪಡಿಸಬಹುದು.

ಗಾಳಿ, ದೂಳುಗಳಿಗೆ ತೆರೆದಿಟ್ಟಿರುವುದೂ ಇದರಲ್ಲಿ ರಕ್ತನಾಳಗಳೇ ಇಲ್ಲದ್ದೂ ಕೊಂಚ ಗಾಯವಾದರೂ ನೋಟಕ್ಕೆ ವಿಪರೀತ ಅಡ್ಡಿಯಾಗುವುದೂ ಕೋಡು ಪೊರೆ ಕೆಡುವ ಮುಖ್ಯ ಕಾರಣಗಳು. ಹೊರಗಿನ ಇಲ್ಲವೇ ಮೈಯೊಳಗೇ ಏಳುವ ಕಾರಣಗಳಿಂದ ಕೋಡು ಪೊರೆಯ ಸಾಮಾನ್ಯ ರೋಗಗಳು ಬರಬಹುದು. ಕೋಡು ಪೊರೆ ರೋಗಗಳಿಗೆ ಸೊಂಕು, ಜೀವವಸ್ತುಕರಣ (ಮೆಟಬಾಲಿಸಂ), ರಕ್ತಸುತ್ತಾಟ, ಒಗ್ಗದಿಕೆ, ಅನುವಳಿಕೆ (ಡೀಜನರೇಷನ್) ಕಾರಣಗಳಾಗಬಹುದು. ಮಾದರಿಯಾಗಿ ನಾಲ್ಕು ತೆರನ ರೋಗಗಳನ್ನು ವಿವರಿಸಿದೆ.

ಕೋಡು ಪೊರೆಯ ಹುಣ್ಣು : ಇದು ಹೊರಗಣ ಸೊಂಕು, ಗಾಯಪೆಟ್ಟುಗಳಿಂದ ಆಗುವುದು. ಬಹುಮಟ್ಟಿಗೆ ಕೇವಲ ಕೋಡು ಪೊರೆ ಮೇಲ್ಮೈ ಮೇಲಾಗುವ ಸಣ್ಣ ಗೀಚಲಿನ ಮೂಲಕ ರೋಗಾಣುಗಳು ಒಳಹೊಗುತ್ತವೆ. ಗೀಚಲೊಂದಿಗೇ ಏಕಾಣುಜೀವಿಗಳೂ ಒಳಸೇರಬಹುದು. ರೋಗಾಣುಗಳ ವಿಷಮತೆ ಸೊಂಕು ರೋಧಕ ಚಿಕಿತ್ಸೆಗೆ ತಕ್ಕಂತೆ ಅಕ್ಕಪಕ್ಕದ ಊತಕ ಹಾಳಾಗಿ ಹುಣ್ಣೇಳುತ್ತದೆ. ಬಹುಪಾಲು ಈ ಹುಣ್ಣುಗಳು ಚಿಕಿತ್ಸೆಗೆ ಮಣಿದು 2–3 ವಾರಗಳಲ್ಲಿ ವಾಸಿಯಾಗಿ, ಹಾಳಾದ ಭಾಗದಷ್ಟು ಆಕಾರದ ಆಳವಾದ ಕಲೆಗಟ್ಟೂ (ಸ್ಕಾರ್) ಉಳಿದುಬಿಡುತ್ತದೆ. ಚಿಕಿತ್ಸೆ ಕೈಗೂಡದಲ್ಲಿ ರೋಗಾಣು ಬಲು ಜೋರಾಗಿದ್ದರೆ ಹಾಳಾದ ಭಾಗಗಳಿಗೆ ತಕ್ಕಂತೆ ಹುಣ್ಣು ಆಳವಾಗೂ ಪಕ್ಕಗಳಲ್ಲಿ ಹರಡಿಕೊಂಡೂ ದೊಡ್ಡದಾಗುವುದು. ಆಳವಾಗಿ ಹರಡಿದರಂತೂ ಕೋಡು ಪೊರೆಯಲ್ಲಿ ತೂತು ಬಿದ್ದು ನೀರಿನ ದ್ರವರಸ (ಅಕ್ವಿಯಸ್ ಹ್ಯೂಮರ್) ಸುರಿದುಹೋಗಿ ಕೋಡು ಪೊರೆಗೆ ಕರಿಯಾಲಿ (ಐರಿಸ್) ತಾಕುವುದರಿಂದ ತೀರ ಅಪಾಯಕರ. ಕಣ್ಣುಗುಡ್ಡೆ ಗಾತ್ರ, ಆಕಾರಗಳು ಕುಸಿದುಬೀಳುತ್ತವೆ. ಸಾಮಾನ್ಯವಾಗಿ ಕರಿಯಾಲಿ ಆ ತೂತಿಗೆ ಅಡ್ಡಬಿದ್ದು ಮುಚ್ಚಿ ಕಣ್ಣುಗುಡ್ಡೆ ಮತ್ತೆ ಎಂದಿನ ಆಕಾರ ಗಾತ್ರಗಳಿಗೆ ಬರುತ್ತದೆ. ಆದರೆ ಕರಿಯಾಲಿ ಕೋಡು ಪೊರೆಗೆ ಅಂಟಿಕೊಂಡರೆ ಇನ್ನೂ ತೊಡಕೇ. ತೂತುಬಿದ್ದಮೇಲೆ ಕೋಡು ಪೊರೆ ಹುಣ್ಣು ಸಾಧಾರಣವಾಗಿ ವಾಸಿಯಾಗುವುದು.

ಸರಳ ತದ್ದಿನ ಸೊಂಕು : ಜ್ವರದ ಬೊಬ್ಬೆಯ ವಿಷಕಣದಿಂದೇಳುವ ಸರಳತದ್ದು (ಜರ್ಪೀಸ್ ಸಿಂಪ್ಲೆಕ್ಸ್) ಕೋಡು ಪೊರೆಗೆ ತಾಕುವ ಇನ್ನೊಂದು ಸೊಂಕು. ಎಷ್ಟೊ ಮಂದಿಯ ಕೋಡುಪೊರೆ ಚೀಲಗಳಲ್ಲಿ ಈ ವಿಷಕಣಗಳಿದ್ದರೂ ಕೆಲವರಲ್ಲಿ ಮಾತ್ರ ಇವು ಒಳಹೊಕ್ಕು ಸೊಂಕೆಬ್ಬಿಸುವುದರ ನಿಜವಾದ ಕಾರಣ ಗೊತ್ತಿಲ್ಲ. ಹೀಗಾದಾಗ ಮೊದಲು ಮರದ ಕೊಂಬೆಗಳ ಆಕಾರದ ಬೂದುಬಣ್ಣದ ಹುಣ್ಣಾಗಿ ಕಣ್ಣುರಿಯುತ್ತ ಕಣ್ಣೀರು ಸುರಿಯುತ್ತಿರುವುದು. ರೋಗ ತಡೆವ ಬಲ ಜೋರಾಗಿದ್ದರೆ ಕೆಲವೇ ದಿನಗಳಲ್ಲಿ ವಾಸಿಯಾಗುತ್ತದೆ. ಹಾಗಿಲ್ಲವಾದರೆ ಬಹಳ ಭಾಗ ಹಾಳಾಗುವುದು. ಇದನ್ನು ಎಳಸಿನಲ್ಲೇ ಗುರುತಿಸಿ ತುರ್ತಾಗಿ ಮದ್ದುಗಳ ಚಿಕಿತ್ಸೆ ಒದಗಿಸಬೇಕು.

ಊತಕಾಂತರದ ಕೋಡು ಪೊರೆಯುರಿತ : ಹುಟ್ಟನಿಂದ ಬರುವ ಉಪದಂಶ (ಸಿಫಿಲಿಸ್) ರೋಗದಲ್ಲಿ ಕೇವಲ ಮೇಲ್ಮೈಯಲ್ಲಿ ಹುಣ್ಣಾಗದೆ ಒಳಗೂ ಹಬ್ಬುವ ಕೋಡು ಪೊರೆಯುರಿತವಿದು. (ಇಂಟರ್‌ಸ್ಟಿಷಿಯಲ್ ಕೆರಟೈಟಿಸ್). ಮಗುವಿನ 5–8ನೆಯ ವಯಸ್ಸಿನಲ್ಲಿ ಇದು ತಲೆದೋರುತ್ತದೆ. ಉಪದಂಶ ರೋಗ ತಾಯಿಯಿಂದ ಮಗುವಿಗೆ ಹತ್ತಿರುವ ಮೊಟ್ಟಮೊದಲ ಲಕ್ಷಣವಾಗಿರಬಹುದು. ಇಡೀ ಕೋಡು ಪೊರೆ ಮಸಕಾಗಿ ನೀಲಿಗೆಂಪೇರಿರುತ್ತದೆ. ಬೆಳಕಿಗೆ ಕಣ್ಣುಬಿಡಲಾಗದೆ ಕಣ್ಣೀರು ಸುರಿಯುತ್ತಿರುವುದು. ಕೆಲವು ತಿಂಗಳು ಕಾಡುವುದು. ಇನ್ನೊಂದು ಕಣ್ಣಿನಲ್ಲೂ ರೋಗ ತಲೆಹಾಕುವುದು. ಉಪದಂಶ ರೋಗದ ಚಿಕಿತ್ಸೆಯಿಂದ ರೋಗ ನಿಧಾನವಾಗಿ

ಅಣಗುತ್ತದೆ. ಈ ರೋಗ ಬಾರದಂತೆ ತಡೆಯಲು ರೋಗಿತಾಯಿಗೆ ಹೆರಿಗೆಗೆ ಮುಂಚೆಯೇ ಪೆನಿಸಿಲಿನ್ ಚಿಕಿತ್ಸೆ ಕೊಡುವುದೇ ಚೆನ್ನಾದ ಉಪಾಯ.

ಅನುವಳಿಕ ಬೇನೆಗಳು : ತೀರ ಸಾಮಾನ್ಯವಾದ ಈ ಬೇನೆಗಳಿಂದ ಕೋಡು ಪೊರೆಗೆ ಆಗುವ ಅನಾಹುತಗಳು ತಿಳಿದಿವೆಯೇ ಹೊರತು ಕಾರಣವಾಗಲೀ ಚಿಕಿತ್ಸೆಯಾಗಲೀ ಏನೂ ಗೊತ್ತಿಲ್ಲ. ಯಾವ ನೋವೂ ಇರಸುಮುರಸೂ ಉರಿಯೂ ಇಲ್ಲದೆಯೇ ಕೋಡು ಪೊರೆ ಬರುಬರುತ್ತ ಮಸಕಾಗಿ, ನೋಟವೂ ಮಂದವಾಗುತ್ತದೆ. ಮಸಕುಗೊಳಿಸುವ ಚುಕ್ಕೆಗಳು, ಗಂಟುಗಳು, ಕಲೆಗಳು, ಗೆರೆಗಳಂತೆ ಬಗೆಬಗೆಯಾಗಿರಬಹುದು. ಹೀಗೆ ಕೋಡುಪೊರೆ ನಿಧಾನವಾಗಿ ಬೀಳಾಗಲು ಬಾಳುವೆ ರೀತಿ, ಕಸಬು, ಹವ, ಬೇರೆ ಕಾಯಿಲೆಗಳು ಏನೇನೂ ಕಾರಣಗಳಲ್ಲ. ಬಹುಮಂದಿಯಲ್ಲಿ ತಲೆಮಾರಿನ ಪ್ರಭಾವ ಇರುವಂತೆ ತೋರುವುದು.

ಬಿಳಿಪದರದ ರೋಗಗಳು : ಕೋಡು ಪೊರೆಯವಕ್ಕಿಂತಲೂ ಬಿಳಿಪದರವು (ಸ್ಕ್ಲೀರ) ವಿರಳ. ಕೀಲುಗಳು, ಸ್ನಾಯುಗಳು, ಕಂಡರಗಳ ಉರಿತದೊಂದಿಗೇ ಬಿಳಿಪದರುರಿತ (ಸ್ಕ್ಲೀರೈಟಿಸ್) ತಲೆದೋರುವುದರಿಂದ ಇಡೀ ಮೈಗೆ ಹತ್ತುವ ರೋಗವಿದು. ಆಡ್ರಿನಲ್ ಗ್ರಂಥಿ ರಗಟೆಯ ಸ್ಟಿರಾಯ್ಡ್ ಮದ್ದುಗಳು ಗುಣಕಾರಿ.

**ನೀಲಿ ಪೊರೆಯ ರೋಗಗಳು :** ಕಣ್ಣುಗುಡ್ಡೆ ಗೋಡೆಯ 3 ಪದರಗಳಲ್ಲಿ ನಡುವಣ ಪದರವಾದ ನೀಲಿ ಪೊರೆಯಲ್ಲಿ (ಯೂವಿಯ) ಕರಿಯಾಲಿ, ಬಾಸೆಯ ದಿಂಡು (ಸಿಲಿಯರಿ ಬಾಡಿ), ಕಣ್ಣರಾಯು (ಕೊರಾಯ್ಡ್) ಇವೆ. ಕಣ್ಣಿನ ನೋಟ ಸಾಧನದಲ್ಲಿ, ಎರಡು ತೆರನ ಸ್ನಾಯುಗಳಿರುವ, ಪಾಪೆಯನ್ನು (ಪ್ಯೂಪಿಲ್) ಹಿಗ್ಗಿಕುಗ್ಗಿಸುವ ಕರಿಯಾಲಿ ವಪೆಯಂತೆ ವರ್ತಿಸುವುದು. ನೀರಿನ ದ್ರವರಸವನ್ನು (ಅಕ್ವಿಯಸ್ ಹ್ಯೂಮರ್) ಸುರಿಸುತ್ತ ಮಸೂರದ ಗಾತ್ರವನ್ನು ಹೆಚ್ಚುಕಡಿಮೆ ಮಾಡಿ ದೂರ ನೋಟವನ್ನು ಹತ್ತಿರದ ನೋಟವಾಗಿಸುತ್ತದೆ. ಒಳಪದರದಲ್ಲಿರುವ ಕಣ್ಜಾಲಕ್ಕೆ (ರೆಟೀನ) ಅಪಾರವಾಗಿ ರಕ್ತ ಒದಗಿಸುವ ರಕ್ತನಾಳಗಳು ಕಣ್ಣರಾಯುವಿನಲ್ಲಿವೆ.

ಇವು ಮೂರು ರಚನಾಂಗಗಳಿಗೂ ಹತ್ತುವ ಉರಿತ ರೋಗಗಳ ಕಾರಣವಾದ ಜೀವಾಣುಗಳು ಸಾಮಾನ್ಯವಾಗಿ ರಕ್ತಹರಿವಿನ ಮೂಲಕ ಬರುತ್ತವೆ. ಮೈ ಬೇನೆಗಳಲ್ಲಿ ಹಲವು ಕೂರಾಗೋ (ಅಕ್ಯೂಟ್) ಬೇರೂರಿಯೋ (ಕ್ರಾನಿಕ್) ಇವಕ್ಕೂ ಹರಡಿಕೊಂಡು ಮೈಬೇನೆ ಇಳಿದುಹೋದಾಗ ಇಲ್ಲೂ ವಾಸಿಯಾಗುವುದು.

ವಿಪರೀತ ನೋವು, ಕಣ್ಣಿನ ರಕ್ತಗಟ್ಟು, ಚುಮುಗುಡಿಕೆ, ಮುಂದಣ ಗೂಡಿನಲ್ಲಿ (ಆ್ಯಂಟೀರಿಯರ್ ಚೇಂಬರ್) ರಸದ ಒಸರಿಕೆ, ಬಹುಪಾಲು ನೋಟಕ್ಕೆ ಪೂರಾ ಅಡಚಣೆ ಇವು ತೋರಿ ಇದ್ದಕ್ಕಿದ್ದ ಹಾಗೆ ಕೂರಾದ ಕರಿಯಾಲಿಯುರಿತವಾಗಿ (ಐರೈಟಿಸ್) ಕಾಣಿಸಿಕೊಳ್ಳುತ್ತವೆ. ಸರಿಯಾದ ಚಿಕಿತ್ಸೆಯಿಂದ ಅಷ್ಟೇಬೇಗನೆ ವಾಸಿಮಾಡಬಹುದು. ಕೆಲವೇಳೆ ಕೂರಾದ ಇಲ್ಲವೇ ಬೇರೂರಿದ ಕೀಲುರಿತದೊಂದಿಗೆ ಈ ಬೇನೆ ತಲೆದೋರುವುದು.

ಬೇರೂರಿದ ನೀಲಿ ಪೊರೆಯುರಿತದಲ್ಲಿ(ಯೂವಿಯೈಟಿಸ್)ರಕ್ತಗಟ್ಟು, ಚುಮುಗುಡಿಕೆ, ನೋವೂ ಅಷ್ಟಾಗಿರವು. ಮುಂದಣ ಮತ್ತು ಕಾಚೀ (ವಿಟ್ರಿಯಸ್) ಗೂಡುಗಳೊಳಕ್ಕೆ ಒಸರಿದ ರಸದ ಪ್ರಮಾಣಕ್ಕೆ ತಕ್ಕಂತೆ ಕಣ್ಣುನೋಟವೂ ಮಂದವಾಗುತ್ತದೆ. ಕಣ್ಣರಾಯುರಿತ (ಕೊರಾಯ್ಡೈಟಿಸ್) ಒಳಗಿನ ಕಣ್ಜಾಲಕ್ಕೆ ಹರಡಿ ಆ ಭಾಗದ ನೋಟದಲ್ಲಿ ಕುರುಡು ಚುಕ್ಕೆ ಏಳಿಸುತ್ತದೆ. ಮರುಕಳಿಕ ಜ್ವರ (ರೆಕರೆಂಟ್ ಫೀವರ್) ಹಂದಾಡ ಜ್ವರ (ಅಂಡ್ಯುಲೆಂಟ್ ಫೀವರ್), ಮಾಂಸಂದಬೇನೆ (ಸಾರ್ಕಾಯ್ಡೋಸಿಸ್) ಕ್ಷಯ, ಉಪದಂಶ ರೋಗಗಳಲ್ಲಿ ಬೇರೂರಿದ ನೀಲಿ ಪೊರೆಯುರಿತ ಏಳುತ್ತದೆ. ಎಷ್ಟೋ ವೇಳೆ ಮೈಯಲ್ಲಿ ಬೇರಾವ ಬೇನೆಗಳೂ ಹೊರಗಾಣದಿದ್ದರೂ ಹೀಗಾಗಬಹುದು. ಮೈಬೇನೆಗೆ ಚಿಕಿತ್ಸೆಯಾದರೆ ಇದೂ ಅಣಗುತ್ತದೆ. ಸ್ಟಿರಾಯ್ಡ್ ಮದ್ದುಗಳಿಂದ ರೋಗ ತಗ್ಗಿ ಚೆನ್ನಾಗಿ ವಾಸಿಯಾಗುತ್ತದೆ.

**ಕಣ್ಜಾಲದ ರೋಗಗಳು :** ಕಣ್ಣುಗುಡ್ಡೆಯ ಗೋಡೆಯಲ್ಲಿ ಎಲ್ಲಕ್ಕೂ ಒಳಗಿರುವ, ಬಲು ಕೋಮಲವಾಗಿರುವ ಪದರವೇ ಕಣ್ಜಾಲ. ಇದರ ಮೇಲೆ ಬಿದ್ದ ಬೆಳಕಿನ ಬಿಂಬವನ್ನು ನರದ ಆವೇಗಗಳಾಗಿ (ಇಂಪಲ್ಸಸ್) ಮಾರ್ಪಡಿಸಿ ಮಿದುಳಿನಲ್ಲಿ ನೋಟದ ಅರಿವುಂಟುಮಾಡುವ ಹಲವು ಕೂಡಿಸುವ ಕೊಂಡಿಗಳಂತಿರುವ ಜೀವಕಣಗಳ ಹಲವು ಪದರಗಳು ಇದರಲ್ಲಿವೆ.

ಕಣ್ಜಾಲದ ರೋಗಗಳಲ್ಲಿ ಮೈಗೆ ಹತ್ತುವ ಧಮನಿ ಪೆಡಸಣೆ (ಆರ್ಟೀರಿಯೊಸ್ಕ್ಲೀರೋಸಿಸ್), ರಕ್ತ ಒತ್ತಡವೇರಿಕ ಗುಂಡಿಗೆ ರಕ್ತನಾಳಗಳ ಇಲ್ಲವೇ ಮೂತ್ರಪಿಂಡದ ರೋಗಗಳು, ಸಿಹಿಮೂತ್ರ, ಬಸಿರಿನ ರಕ್ತನಂಜು, ಮತ್ತಿತರ ರಕ್ತನಾಳಗಳ ಉರಿತದ ಒಗ್ಗದಿಕೆಯ ಅನುವಳಿಕ ರೋಗಗಳ ಒಂದಡೆಯ ತೋರಿಕೆಯವೇ ಹೆಚ್ಚು. ಕಣ್ಣುದರ್ಶಕದಿಂದ (ಆಫ್ಥಾಲ್ಮೊಸ್ಕೋಪ್) ಕಣ್ಜಾಲವನ್ನೂ ಅದರ ರಕ್ತನಾಳಗಳನ್ನೂ ನೇರವಾಗಿ ನೋಡಬಹುದಾದ್ದರಿಂದ, ಮೈಯಲ್ಲಿನ ರಕ್ತನಾಳಗಳ ರೋಗವನ್ನು ವೈದ್ಯ ಇಲ್ಲಿ ಚೆನ್ನಾಗಿ ಪತ್ತೆಹಚ್ಚುತ್ತಾನೆ.

ಕಣ್ಜಾಲದ ರೋಗಗಳಲ್ಲಿ ಬಹುಪಾಲು ಅನುವಳಿಕೆಗೆ ಸಂಬಂಧಿಸಿವೆ. ಬಣ್ಣಕದ (ಪಿಗ್ಮೆಂಟರಿ) ಅನುವಳಿಕೆಯಾಗಿರುವ ಬಣ್ಣಕದ ಕಣ್ಜಾಲುರಿತದಲ್ಲಿ (ರೆಟಿನೈಟಿಸ್ ಪಿಗ್ಮೆಂಟೋಸ) ಇರುಳ್ನೋಟವೂ ಅಂಚುಗಳಲ್ಲಿನ ನೋಟವೂ ಬರುಬರುತ್ತ ಮಂದವಾಗುತ್ತವೆ. ಕೆಲವೇಳೆ ಹೀಗಾಗಲು ಎಷ್ಟೋ ವರ್ಷಗಳೇ ಹಿಡಿಯಬಹುದು. ಇನ್ನೂ ಬೇಗನೆ ಹೀಗಾದರೆ ಮಕ್ಕಳಲ್ಲಿ ನೋಟ ಮಂದವಾಗಿ ವಿಪರೀತ ತೊಂದರೆಗಳಾಗುತ್ತವೆ. ಬಹುಮಟ್ಟಿಗೆ ಇದು ವಂಶಪರಂಪರೆಯಿಂದ ಬರುವುದು. ಈ ಬಗೆಯ ಇನ್ನೂ ಕೆಲವು ರೋಗಗಳಲ್ಲಿ ಕಣ್ಜಾಲದ ನಡುಭಾಗ ಹಾಳಾಗುವುದರಿಂದ, ಆಕಾರಗಳನ್ನು ಗುರುತಿಸುವುದೂ ಓದಿ ಬರೆಯುವುದೂ ಅಸಾಧ್ಯವಾಗುತ್ತದೆ. ಈ ರೋಗಗಳಿಗೆ ಪರಿಹಾರವೇ ಇನ್ನೂ ಗೊತ್ತಿಲ್ಲ.

ಮುಂದುವರಿದ ನಾಡುಗಳಲ್ಲಿ, ನವಮಾಸ ತುಂಬುವ ಮೊದಲೇ ಹುಟ್ಟುವ ಎಳೆಗೂಸುಗಳನ್ನು ಏನಾದರೂ ಮಾಡಿ ಉಳಿಸಿಕೊಳ್ಳಲು ಮೊದಲು ಕೆಲವು ವಾರಗಳ ತನಕ ಬಹಳ ಆಮ್ಲಜನಕವನ್ನು ಕೊಟ್ಟುದರಿಂದ ಮಸೂರದ ಹಿಂಭಾಗ ನಾರಿನಂತೆ ಗಡುಸಾಗಿ (ರಿಟ್ರೊಲೆಂಟಲ್ ಫೈಬ್ರೊಪ್ಲೇಸಿಯ) ಕುರುಡಾಗುವುದು ಕಂಡುಬಂದಿದೆ. ಆಮ್ಲಜನಕ ನೀಡುವ ಪ್ರಮಾಣವನ್ನು ಎಷ್ಟುಬೇಕೋ ಅಷ್ಟಕ್ಕೆ ಇಳಿಸುವುದರಿಂದ ಇದನ್ನು ತಪ್ಪಿಸಬಹುದು.

ಕಣ್ಣರಾಯುವಿನ ಉರಿತ ಅದರ ತಳದಲ್ಲಿರುವ ಕಣ್ಜಾಲಕ್ಕೂ ಹರಡಿಳಿದು ಒಂದಿಷ್ಟು ಹಾಳಾಗಬಹುದು. ಕಲೆಗಟ್ಟದೆಯೇ ಹಾಳಾದರೆ ಕಣ್ಜಾಲದಲ್ಲಿ ತೂತಾಗಿ ಇಲ್ಲವೇ ಬೆಂದು ಇಡೀ ಕಣ್ಜಾಲವೋ ಒಂದು ಭಾಗವೋ ಕಿತ್ತು ಕಳಚಿಕೊಂಡು (ಡಿಟ್ಯಾಚ್‌ಮೆಂಟ್) ಸುಕ್ಕುಗಟ್ಟಬಹುದು. ಕಾಚೀ ದ್ರವರಸ ಕುಗ್ಗಿ ಎಳೆದಂತಾದರೂ ಕಣ್ಜಾಲ ಕಿತ್ತು ಕಳಚಿಕೊಳ್ಳಬಹುದು. ಇವೆರಡನ್ನೂ ಈಗ ಶಸ್ತ್ರಕ್ರಿಯೆಯಿಂದಲೂ ಲೇಸರ್‌ನಿಂದಲೂ ಸರಿಪಡಿಸಬಹುದು.

**ಮಸೂರದ ರೋಗಗಳು :** ಕಣ್ಣು ನೋಟವನ್ನು ದೂರಕ್ಕೋ ಹತ್ತಿರಕ್ಕೋ ಹೊಂದಿಸುವ ಕೆಲಸ ಹರಳಂತಿರುವ ಕಣ್ಣಿನ ಮಸೂರದ್ದು. ಬಾಸೆಯ ದಿಂಡಲ್ಲಿರುವ ಹೊಂದುವಳಿಯ (ಅಕಾಮಡೇಷನ್) ಸ್ನಾಯು ಕುಗ್ಗಿ ಹಿಗ್ಗುವುದರಿಂದ ಮಸೂರದ ದಪ್ಪವನ್ನು ಹೆಚ್ಚೂಕಡಿಮೆ ಮಾಡಿ ಅದರ ಮೇಲ್ಮೈ ಕೊಂಕುಗಳನ್ನು ಬದಲಿಸುತ್ತದೆ. ಮಸೂರ ಮುಳುಗಿರುವ ನೀರಿನ ದ್ರವರಸದಿಂದ ಅದರ ಪುಷ್ಟಿ ಆಗಬೇಕೇ ಹೊರತು, ಮಸೂರದಲ್ಲಿ ಯಾವ ನರವೂ ರಕ್ತನಾಳವೂ ಇಲ್ಲ. ನಡುವೆ ಇರುವ ದಟ್ಟವಾದ ಹಳೆಯ ಪದರಗಳ ಮೇಲೆ ಎಳೆಯವು ಕೂಡುತ್ತ ಬಾಳಿನುದ್ದಕ್ಕೂ ಇದು ಬೆಳೆಯುತ್ತಲೇ ಇರುವುದು. ವಯಸ್ಸಾದ ಹಾಗೆಲ್ಲ ಈ ನಡುವಣ ಪಪ್ಪು ಹಿಗ್ಗಿ ಕುಗ್ಗದಂತಾಗುವುದರಿಂದಲೇ ಚಾಳೀಸ ಬಂದು ಹತ್ತಿರ ನೋಡಲು ಕನ್ನಡಕ ಹಾಕಿಕೊಳ್ಳಬೇಕಾಗುತ್ತದೆ. ಇದು ವಯಸ್ಸಿನ ಪರಿಣಾಮವೇ ಹೊರತು ರೋಗ ಎನಿಸದು.

ರೋಗ ಹತ್ತಿತೆಂದರೆ ತಿಳಿಯಾಗಿ ಆಚೆಗಾಣುವಂತಿರುವ ಮಸೂರ ಮಸಕಾಗಿಬಿಡುತ್ತದೆ. ಮಸಕಿನ ಕಲೆ, ಚುಕ್ಕೆಗಳು ಮಸೂರದ ಅಂಚಿನಲ್ಲಿದ್ದರೆ ನೋಟಕ್ಕೆ ಅಡ್ಡಿ ಬರವು. ಮಸೂರದ ನಡುವೆ ಇದ್ದರಂತೂ ನೋಟಕ್ಕೆ ತೀರ ಆತಂಕವಾಗುತ್ತದೆ. ಮನೆಯೊಳಗಿನ ಬೆಳಕಿನಲ್ಲಿ ಅಷ್ಟಿಷ್ಟು ಚೆನ್ನಾಗಿ ಕಂಡರೂ ಹೊರಗಡೆ ಕಣ್ಣು ತೀರ ಮಂಜು ಮಂಜಾಗಬಹುದು.

ಮೋತಿಬಿಂದು (ಕ್ಯಾಟರಾಕ್ಟ್) ಎಂದರೆ ಮಸೂರದಲ್ಲಿ ಕಾಣಬರುವ ಕಲೆ ಇಲ್ಲವೇ ದಟ್ಟ ಚುಕ್ಕೆ ಎನ್ನುವುದೇ ಸರಿಯಾದರೂ ಸಾಮಾನ್ಯವಾಗಿ ವಯಸ್ಸಾದವರಲ್ಲಿ ಬರುಬರುತ್ತ ನೋಟಕ್ಕೆ ಅಡ್ಡಿಯಾಗುವಂತೆ ಪೊರೆ ಬೆಳೆದಂತೆ ಕಾಣುವುದಕ್ಕೇ ಹೇಳುವುದುಂಟು. ಹಲವು ಕಾರಣಗಳಿಂದ ಮಸೂರಕ್ಕೆ ಪುಷ್ಟಿವಸ್ತುಗಳ ಸರಬರಾಜಿನ ಕೊರೆಯಾಗಿ ಅದರಲ್ಲಿ ಅಸಹಜ ಊತಕವೇಳುವುದೇ ಮೋತಿಬಿಂದು ಆಗುವ ಕಾರಣ. ಆಹಾರ ವಸ್ತುಗಳಲ್ಲಿ ಬಗೆಬಗೆಯ ಜೀವಾಳದ ಅಂಶಗಳ ಕೊರೆಯಿಂದ ಪ್ರಯೋಗಾಲಯದ ಪ್ರಾಣಿಗಳಲ್ಲಿ ಮೋತಿಬಿಂದು ಆಗಿಸುವುದು ಸಾಧ್ಯವಾಗಿದೆ. ಉಪಗುರಾಣಿಕ (ಪ್ಯಾರತೈರಾಯ್ಡ್), ಮಾಂಸಲಿ (ಪ್ಯಾಂಕ್ರಿಯಾಸ್) ಗ್ರಂಥಿಗಳ ಬೇನೆಗಳಲ್ಲಿ ಮಾನವನ ಮೋತಿಬಿಂದು ಆಗುವುದು. ಆದರೆ ಮುಪ್ಪಿನಲ್ಲಿ ಆಗುವುದೇ ಸಾಮಾನ್ಯ.

ಎಳೆಮಕ್ಕಳಲ್ಲಿ ತಲೆಮಾರುಗಳಲ್ಲೂ ಮೋತಿಬಿಂದು ಆಗಬಹುದು. ಬಸುರಿನ ಮೊದಲ 3 ತಿಂಗಳಲ್ಲಿ ಸೀಮೆ ದಡಾರ (ಜರ್ಮನ್ ಮೀಸಲ್ಸ್) ಎದ್ದಿದ್ದರೂ ಹುಟ್ಟುವ ಕೂಸಿಗೆ ಹೀಗಾಗಬಹುದು.

ಮೋತಿಬಿಂದು ಬೆಳೆಯುತ್ತಿರುವಾಗ, ಪಾಪೆಯಲ್ಲಿ ಬೂದು ಚುಕ್ಕೆಗಳಾಗೋ ಇಡೀ ಪಾಪೆ ಮಸಕಾಗೋ ತೋರಬಹುದು. ಕಣ್ಣಿನ ಉಳಿದೆಲ್ಲ ಭಾಗಗಳೂ ಆರೋಗ್ಯವಾಗಿದ್ದಲ್ಲಿ ಇಡೀ ಮಸೂರ ಮಸಕಾದರೂ ಪೂರ್ತಿ ಕುರುಡಾಗದು. ಬೆಳಕು, ಬಣ್ಣಗಳನ್ನಾದರೂ ಗುರುತಿಸಬಹುದು. ಬೆಳಕು ಬರುವ ದಿಕ್ಕನ್ನೂ ಕಂಡುಕೊಳ್ಳಬಹುದು. ಬರಬರುತ್ತ ನೋಟ ಕುಂದಿ ಎದುರಿಗೆ ಹಿಡಿದ ಬೆರಳುಗಳನ್ನು ಕೂಡ ಎಣಿಸದಂತಾಗಿ, ಎಂದಿನ ಕೆಲಸಗಳಿಗೆ ತೊಡಕೆನಿಸಿದಾಗ, ಬೆಳೆಯುತ್ತಿರುವ ಮೋತಿ

ಬಿಂದುಗಳಿಗೆ ಇಡೀ ಮಸೂರವನ್ನು ಶಸ್ತ್ರಕ್ರಿಯೆಯಿಂದ ತೆಗೆದುಹಾಕುವುದೊಂದೇ ಪರಿಣಾಮಕರ ಉಪಾಯ.

**ಕಾಚೀ ದಿಂಡಿನ ರೋಗಗಳು :** ಬದುಕಿರುವ ಯಾವ ಜೀವಕಣಗಳೂ ಬಹುಮಟ್ಟಿಗೆ ಇಲ್ಲದ, ಗಿಜಿಯಂತಿರುವ (ಜೆಲ್ಲಿ), ಬಣ್ಣವಿರದ ಗಾಜುಗೋಳದಂತಿರುವ ವಸ್ತು (ವಿಟ್ರಿಯಸ್ ಬಾಡಿ) ಕಣ್ಣುಗುಡ್ಡೆಯೊಳಗೆ ಹಿಂದಣ ಕ್ಷಿರಷ್ಟು ಭಾಗವನ್ನು ತುಂಬಿರುವುದು. ಇದಕ್ಕೆ ರೋಗ ಹತ್ತಿದರೆ ಕೊಂಚ ಮಸಕಾಗುತ್ತದೆ. ತರತರದ ಆಕಾರ, ಗಾತ್ರಗಳ ದಾರ, ಚುಕ್ಕೆಗಳಾಗಿ ಕಣ್ಣುಮುಂದೆ ತೋರಿದಾಗ ರೋಗಿ ಗಾಬರಿಯಿಂದ ವೈದ್ಯನ ಸಲಹೆಗೆ ಓಡುವನು. ಹೀಗೆ ತೇಲುವಂತೆ ಕಾಣುವ ವಸ್ತುಗಳಿಂದ ಅಷ್ಟೇನೂ ಕೆಡುಕಾಗದು. ಕಾಚೀ ದಿಂಡಿನ ಸುತ್ತ ಇರುವ ಊತಕಗಳಲ್ಲಿ ಕೊಂಚ ಉರಿತವೆದ್ದರೆ ಹೀಗಾಗುವುದು. ಆದರೆ ಇವು ದೊಡ್ಡ ಆಕಾರಗಳಲ್ಲಿ ಕಣ್ಣು ಮುಂದೆ ತೇಲಿ ಹೋದಂತೆ, ತಲೆ ಆಡಿಸಿದರೆ ಓಡಾಡಿದಂತೆ ಕಾಣುವುದರಿಂದ ರೋಗಿ ಗಾಬರಿಯಾಗುತ್ತಾನೆ. ಕೊಂಚಕಾಲದಲ್ಲೇ ಇದು ವಾಸಿಯಾಗುತ್ತದೆ. ಕಾಚೀ ದಿಂಡಿನಲ್ಲಿ ಮಸಕಿನ ಚುಕ್ಕೆಗಳು ಕಾಣುವುದು ಹೆಚ್ಚುತ್ತಿದ್ದರೆ ಬಾಸೆಯ ದಿಂಡು, ಕಣ್ಪರಾಯು ಇಲ್ಲವೇ ಕಣ್ಪಾಲದ ರೋಗಸೂಚನೆ ಆಗಿರಬಹುದು.

ಹತ್ತುಗಣ್ಣು : ಕಾಚೀ ದಿಂಡಿನಿಂದ ತಯಾರಾಗುವ ನೀರಿನ ದ್ರವರಸವೇ ಕಣ್ಣಿನಲ್ಲಿನ ರಕ್ತನಾಳಗಳೇ ಇಲ್ಲದ ಮಸೂರಕ್ಕೂ ಕೋಡು ಪೊರೆಗೂ ಪುಷ್ಟಿ ಒದಗಿಸುತ್ತದೆ. ಇದು ಮುಂದಣ ಗೂಡಿನೊಳಕ್ಕೆ ಪಾಪೆಯ ಮೂಲಕ ಒಂದೇ ಸಮನೆ ಹರಿಯುತ್ತಲೇ ಇದ್ದು, ಬಿಳಿಪದರವೂ ಕೋಡು ಪೊರೆಯೂ ಕೂಡುವ ಮೂಲೆಯಲ್ಲಿ ಬಲುಕಿರಿದಾದ ಸಾಗಾಲುವೆಗಳ ಮೂಲಕ ಕಣ್ಣಿನಿಂದ ಹೊರಸಾಗುತ್ತದೆ. ಈ ದ್ರವರಸದ ತಯಾರಿಕೆ, ಹೊರಸಾಗಾಣಿಕೆಗಳ ವೇಗಗಳಿಂದ ಕಣ್ಣೊಳಗಿನ ಒತ್ತಡ ಹುಟ್ಟುವುದು. ಈ ಒತ್ತಡ ಇರುವುದರಿಂದಲೇ ಕಣ್ಣಿನ (ಉದ್ದ, ಅಗಲ, ದಪ್ಪ) ಆಕಾರ ಉಳಿಯುತ್ತದೆ. ಕಣ್ಣುಗುಡ್ಡೆ ಮೇಲೆ ಬಿಗುಪುಮಾಪಕವನ್ನು (ಟೋನೋಮೀಟರ್) ಒತ್ತಿರಿಸಿ ಕಣ್ಣೊಳಗಿನ ಒತ್ತಡವನ್ನು ಅಳೆಯಬಹುದು. ಸಾಮಾನ್ಯವಾಗಿ ಈ ಒತ್ತಡ 12–22 ಮಿ.ಮೀ. ಪಾದರಸದಷ್ಟಿರುವುದು. ಎಷ್ಟು ಬೇಕೋ ಅಷ್ಟಿದ್ದರೆ ಕಣ್ಣಿಗೆ ಆರೋಗ್ಯ. ಮಿತಿಮೀರಿದರೆ ಕಣ್ಣಿನ ಬಹುಪಾಲು ಎಲ್ಲ ಭಾಗಗಳಿಗೂ ಅಪಾಯಕರ.

ಕಣ್ಣೊಳಗಿನ ಒತ್ತಡ ಎಂದಿನ ಮಿತಿ ಮೀರಿ ಏರಿದ್ದರೆ, ಹತ್ತಗಣ್ಣು (ಗ್ಲಾಕೋಮ) ರೋಗವಾಗುತ್ತದೆ. ಈ ರೋಗದಲ್ಲಿ ದ್ರವರಸದ ತಯಾರಿಕೆಯ ವೇಗ ಎಂದಿನಂತೆ ಇದ್ದರೂ ಅದರ ಹೊರಸಾಗಣೆಗೆ ಎಲ್ಲಾದರೂ ಆತಂಕ ಆಗಿರುವುದು. ಕರಿಯಾಲಿ ದಿಂಡುರಿತದಲ್ಲಿ (ಐರಿಡೊಸೈಕ್ಲೈಟಿಸ್) ಪಾಪೆಯ ಅಂಚುಗಳು ಮಸೂರದ ಮುಂಭಾಗಕ್ಕೆ ರೋಸಿನಿಂದ ಅಂಟಿಕೊಳ್ಳುತ್ತವೆ. ಇದರಿಂದ ದೊಡ್ಡ ತಡೆ ಹಾಕಿದಂತಾಗಿ ಕರಿಯಾಲಿ ಹಿಂದುಗಡೆ ಕಣ್ಣೊಳಗಿನ ಒತ್ತಡ ಏರುತ್ತದೆ. ಹೀಗೇ ವೋತಿ ಬಿಂದು ಆಗುವಾಗ ಹರಳಿನಂತಿರುವ ಮಸೂರ ಊದಿಕೊಂಡು ಕರಿಯಾಲಿಯನ್ನು ಕೋಡು ಪೊರೆಗೆ ತಳ್ಳುವುದರಿಂದಲೂ ದ್ರವರಸ ಹೊರಸಾಗಣೆಗೆ ಅಡ್ಡಿಯಾಗುವುದು. ಕಣ್ಣೊಳಗಿನ ಒತ್ತಡವೇರಿಕೆಯೇ ಇದರ ಪರಿಣಾಮ. ಕಣ್ಣಲ್ಲಿ ಬೇರೆಲ್ಲಾದರೂ ರೋಗವಾಗಿ ಆಮೇಲೆ ಕಾಣಬರುವುದಕ್ಕೆ ಮರುಚಲದ (ಸೆಕೆಂಡರಿ) ಹತ್ತಗಣ್ಣು ಎಂದಿದೆ. ಬೇರೆ ಯಾವ ಕಾರಣವೂ ಕಾಣದೆ ಕಂಡುಬರುವ ಬಗೆಯದು ಪ್ರಾಥಮಿಕ (ಪ್ರೈಮರಿ). ಏರಿದೊತ್ತಡದೊಂದಿಗೆ ಕೆಲವು ಗೊತ್ತಾದ ರೋಗ ಲಕ್ಷಣಗಳೂ ತೋರಬಹುದು. ಆಗಾಗ್ಗೆ ಕಣ್ಣು ಮಂಜಾಗುತ್ತದೆ. ದೀಪಗಳ ಸುತ್ತಲೂ ಬಣ್ಣದ ನಿರಿಗೆಗಳು ಕಾಣುವುದೂ ಕಣ್ಣೊಳಗೂ ಅದರ ಹಿಂದುಗಡೆಯೂ ಕೊಂಚವೋ ಜೋರಾಗೋ ನೋಯುವುದೂ ಸಾಮಾನ್ಯ. ಮೂಲೆ ಮುಚ್ಚಿಕೆಯಿಂದಾಗುವ ಈ ಹತ್ತಗಣ್ಣು ರೋಗಿ ಕಣ್ಣು ವಾಸಿಯಾಗದಷ್ಟು ಹಾಳಾಗುವ ಮುಂಚೆಯೇ ವೈದ್ಯನ ನೆರವು ಕೋರುವನು.

ಆದರೆ ರೋಗಿಗೆ ಕಣ್ಣು ಕೆಟ್ಟಿರುವುದು ಅರಿವಿಗೆ ಬರುವ ಮೊದಲೇ ಇನಿತೂ ನೋವಿಲ್ಲದೆ ಹಾಳಾಗಿಬಿಡುವ ಬೇರೂರಿದ ಹತ್ತಗಣ್ಣು ಗಲಾಟೆಯಿಲ್ಲದೆ ಆಗುವುದೂ ಉಂಟು. ಕಣ್ಣೊಳಗಿನ ಏರಿದೊತ್ತಡದಿಂದ, ಕಣ್ಣು ಗುಡ್ಡೆಯಿಂದ ಹಿಂದುಗಡೆ ನರತಂತುಗಳು ಹೊರಬೀಳುವ ಕಡೆಯ ಕಣ್ಪಾಲದ ರಕ್ತಪೂರೈಕೆಗೆ ಅಡ್ಡಿಯಾಗುತ್ತದೆ. ಹೀಗೇ ಕೆಲವು ದಿನಗಳಿದ್ದರೆ ಆ ನರತಂತುಗಳು ಸತ್ತು ಆ ಭಾಗದ ಕಣ್ಪಾಲ ನೋಟದ ಕೆಲಸಕ್ಕೆ ಬಾರದಾಗುವುದು. ಮೊದಮೊದಲು ಕಣ್ಪಾಲದ (ಫೀಲ್ಡ್ ಆಫ್ ವಿಷನ್) ನಡುಭಾಗಗಳಲ್ಲಿ ಕಣ್ಣು ಕಾಣದಂತಾಗಿ, ಏರಿದೊತ್ತಡ ಹಾಗೇ ಇದ್ದಲ್ಲಿ ಏನೂ ಕಾಣದಂತಾಗುವುದು.

ಬೇರೂರಿದ ಹತ್ತಗಣ್ಣು ಸಾಮಾನ್ಯವಾಗಿ ಎರಡು ಕಣ್ಣುಗಳಲ್ಲೂ ಒಂದೇ ಬಾರಿ ಕಾಣಿಸಿಕೊಳ್ಳದ್ದೊಂದು ರೋಗಿಯ ದೊಡ್ಡ ಪುಣ್ಯ. ಎರಡು ಕಣ್ಣುಗಳ ನೋಟದ ನಡುವೆ ವ್ಯತ್ಯಾಸ ತೋರಿದಾಗ ರೋಗಿಯೇ ಕಣ್ಣು ವೈದ್ಯನ ಸಲಹೆ ಕೋರುವನು. ಅಂತೂ ರೋಗಿ ತನಗೆ ಏನಾಗಿದೆಯೆಂಬ ಅರಿವು ಬರುವುದರೊಳಗಾಗಿ ಬೇರೂರಿದ ಹತ್ತಗಣ್ಣು ವೈದ್ಯನ ಮಾಮೂಲು ಪರೀಕ್ಷೆಯಲ್ಲೇ ಗೊತ್ತಾಗುತ್ತದೆ. ಇದಕ್ಕೋಸ್ಕರವೇ ಬೊಂಬಾಯಿ ಮುಂತಾದೆಡೆಗಳಲ್ಲಿ, ವಯಸ್ಸಿನ ಇಡೀ ಜನರನ್ನು ಒಟ್ಟಾರೆ ಪರೀಕ್ಷಿಸುತ್ತ ಈ ಬೇರೂರಿದ ಹತ್ತಗಣ್ಣು ರೋಗವನ್ನು ಕಂಡುಕೊಂಡು ನಿವಾರಕ ಸೂಚನೆಗಳನ್ನು ನೀಡಿ ಕಣ್ಣು ಕಳೆದುಕೊಳ್ಳುವುದನ್ನು ತಪ್ಪಿಸುವುದುಂಟು.

ಹತ್ತಗಣ್ಣಿನ ಚಿಕಿತ್ಸೆಗೆ ಮದ್ದುಗಳೂ ಇವೆ, ಶಸ್ತ್ರಕ್ರಿಯೆಯೂ ಇದೆ. ಕಣ್ಣಿಗೆ ಹಾಕುವ ಹಲವು ಮದ್ದುಗಳ ಮೂಲಾಮು, ತೊಟ್ಟುಗಳು ಕಣ್ಣೊಳಗಿನ ಒತ್ತಡವನ್ನು ಇಳಿಸುತ್ತವೆ. ನುಂಗುವ ಮದ್ದುಗಳೂ ಕೆಲವಿವೆ. ಶಸ್ತ್ರಕ್ರಿಯೆಯಿಂದ ದ್ರವರಸದ ಹೊರಸಾಗಣೆಯ ಅಡಚಣೆಯನ್ನು ತೆಗೆಯಬಹುದು ಇಲ್ಲವೇ ಹೊಸ ದಾರಿಗಳನ್ನು ಮಾಡಬಹುದು. ಮುಖ್ಯವಾಗಿ, ಕಣ್ಣು ಇನ್ನಷ್ಟು ಹಾಳಾಗದಿರಬೇಕಾದರೆ ತೀರ ಎಳಸಿನ ಹಂತದಲ್ಲಿ ಕರಿಯಾಲಿಯಲ್ಲಿ ಗುಂಡಿಕಾಜದ ತೆರನ ತೂತು ಮಾಡಿದರೆ ವಾಸಿಯಾಗುತ್ತದೆ.

**ಇಡೀ ಕಣ್ಣುಗುಡ್ಡೆಯ ರೋಗಗಳು :** ಹತ್ತೆನೋಟ (ಮೈಯೋಪಿಯ). ದೂರನೋಟ (ಹೈಪರೋಪಿಯ), ಅಸಮೋಸರಿಕೆ (ಅಸ್ಟಿಗ್ಮಾಟಿಸಂ) ಇವು ಕೇವಲ ಕಣ್ಣಿನ ಗಾತ್ರ, ಆಕಾರಗಳ ವ್ಯತ್ಯಾಸಗಳ ಪರಿಣಾಮವೇ ಹೊರತು ರೋಗಗಳಲ್ಲ. ಆದರೆ ಕಣ್ಣುಗುಡ್ಡೆ ಅಸಹಜವಾಗಿ ಉದ್ದ ಸಾಗಿದ್ದರಿಂದಲೋ ಬೆಳೆದುದರಿಂದಲೋ ಕಣ್ಪರಾಯುವೂ ಕಣ್ಪಾಲವೂ ಹಾಳಾಗಿ ಏಳುವ ಅನುವಳಿಕ ಹತ್ತೆಗಣ್ಣೇ ಬೇರೆ. ಕಣ್ಣು ನೋಟ ಹಾಳಾಗುವುದನ್ನು ತಪ್ಪಿಸಲು ಕಣ್ಣುಗುಡ್ಡೆಯನ್ನು ಶಸ್ತ್ರವೈದ್ಯ ಮೋಟು ಮಾಡಬಹುದು (ನೋಡಿ—ನೋಟ).

ಕಣ್ಣುಗುಳಿಯ ರೋಗಗಳು : ಕಣ್ಣುಗುಳಿಯಲ್ಲಿ ಕಣ್ಣುಗುಡ್ಡೆಯೇ ಅಲ್ಲದೆ ಅದಕ್ಕೆ ಸಂಬಂಧಿಸಿದ ಸ್ನಾಯುಗಳು, ರಕ್ತನಾಳಗಳು, ನರಗಳು ಇವೆ. ಎರಡು ಕಣ್ಣುಗಳೂ ಮುಂಚಾಚಿಕೊಂಡು ಹೊರಗೆ ಎದ್ದುಕಾಣುವುದಕ್ಕೆ ಮೆಡ್ಡಗಣ್ಣು (ಎಕ್ಸಾಫ್ಥಾಲ್ಮೋಸ್) ಎಂದಿದೆ. ಗುರಾಣಿಕ (ಥೈರಾಯ್ಡ್) ಗ್ರಂಥಿಯ ಮಿತಿಮೀರಿದ ಚಟುವಟಿಕೆಯಿಂದಾಗುವ ಒಳಸುರಿಕ ಗ್ರಂಥಿ ರೋಗವಾದ ಮೆಡ್ಡಗಣ್ಣಿನ ಗಳಗಂಡದ (ಗಾಯ್ಟರ್) ಲಕ್ಷಣವಿದು. (ನೋಡಿ: ಗುರಾಣಿಕ ಗ್ರಂಥಿಯ ರೋಗಗಳು). ಆ ಗ್ರಂಥಿ ರೋಗದ ಚಿಕಿತ್ಸೆಯೊಂದಿಗೆ ತೀರ ಹೊರಗೊಡ್ಡಿರುವ ಕಣ್ಣುಗುಡ್ಡೆಗೆ ಕಾಪನ್ನು ಒದಗಿಸಬೇಕಾಗುವುದು. ಒಂದೇ ಕಣ್ಣು ಹೀಗಾಗಿದ್ದರೆ ಆ ಕಣ್ಣುಗುಳಿಯಲ್ಲಿ ಏನೋ ಗಂತಿ ಬೆಳೆದಿರುವ ಸೂಚನೆಯಾಗಿರಬಹುದು.

ಕಣ್ಣಿನ ನರ, ನೋಟದರಿವಿನ ನರಗಳ ರೋಗಗಳು : ಕಣ್ಪಾಲದ ನರತಂತುಗಳು ಒಂದುಗೂಡಿ ಕಣ್ಣಿನ ದಪ್ಪ ನರವಾಗಿ ಕಣ್ಣುಗುಡ್ಡೆ ಹಿಂದುಗಡೆ ಮೂಗಿನ ಕಡೆಯ ಪಕ್ಕದಲ್ಲಿ ಹೊರಬಿದ್ದು, ಕಣ್ಣುಗುಳಿ ಹಿಂತುದಿಯಲ್ಲಿ ಹಾದು ಕಪಾಲದೊಳಗಡೆ ಮಿದುಳಿನ ನೊಸಲ ಹಾಲೆಯ (ಫ್ರಾಂಟಲ್ ಲೋಬ್) ಕೆಳಗಿರುವುದು. ಇನ್ನೂ ಹಿಂದುಗಡೆ ಇನ್ನೊಂದು ಕಣ್ಣಿನದರೊಂದಿಗೆ ಈ ನರವೂ ಸೇರಿ ಅಡ್ಡ ಹಾದು ನರತಂತುಗಳನ್ನು ಹಂಚಿಕೊಳ್ಳುವುದು. ಇಲ್ಲಿಂದ ಹಿಂದಕ್ಕೆ, ಎರಡೂ ಕಣ್ಣುಗಳ ಕಣ್ಪಾಲಗಳ ಬಲಗಡೆ ಅರ್ಧಭಾಗದ ನರತಂತುಗಳು ಬಲ ನಿಮ್ಮಿದುಳ ಅರೆಗೋಳದೊಳಕ್ಕೂ (ಸೆಂಟ್ರಲ್ ಹೆಮಿಸ್ಫಿಯರ್), ಎಡಗಡೆ ಅರ್ಧಭಾಗವು ಎಡ ಅರೆಗೋಳದೊಳಕ್ಕೂ ತೂರುತ್ತವೆ. ಮಿದುಳಲ್ಲಿರುವವು ನೋಟದರಿವಿನ ನರಗಳು.

ಕಣ್ಣಿನ ನರ, ನೋಟದರಿವಿನ ನರಗಳಿಗೆ ಉರಿತ, ವಿಷಮುಗಂತಿ, ರಕ್ತನಾಳ ರೋಗಗಳು ಹತ್ತಬಹುದು. ನರಗಳಿಗೆ ಮಾತ್ರ ಹತ್ತುವ ಜೀವಾಣುಗಳು ವಿಷಕಣಗಳು ಕಣ್ಣಿನ ನರಕ್ಕೆ ತಾಗಿದಲ್ಲಿ ಒಂದು ಕಣ್ಣಲ್ಲಿ ಅಲ್ಲಲ್ಲಿ ಕುರುಡು ಚುಕ್ಕೆಗಳು ಕಾಣಿಸಿಕೊಳ್ಳುತ್ತವೆ. ಮಿದುಳಲ್ಲಿನ ನೋಟದರಿವಿನ ನರಗಳಿಗೆ ತಾಕಿದರೆ, ಆಯಾ ಪಕ್ಕಗಳ ಅರೆಭಾಗದ ಕುರುಡಾಗಿ ಅರೆಗಣ್ಣೋಟ (ಹೆಮಿಯನಾಪ್ಸಿಯ) ಆಗುವುದು. ಕಪಾಲದಲ್ಲಿನ ರೋಗಗಳಲ್ಲಿ ಕಣ್ಣಿನ ನೋಟ ಕುಂದಿದ್ದರೆ ಪರೀಕ್ಷಿಸಿದಾಗ, ತಲೆಬುರುಡೆಯಲ್ಲಿ ಎಲ್ಲಿ ಏನಾಗಿರಬಹುದೆಂದು ಊಹಿಸಬಹುದು.

ಮೆಳ್ಳೆಗಣ್ಣು : ಇಕ್ಕಣ್ಣಿನ (ಬೈನಾಕ್ಯುಲಾರ್) ನೋಟ ಚೆನ್ನಾಗಿರಬೇಕಾದರೆ ಎರಡು ಕಣ್ಣುಗಳ ಚಲನೆಯೂ ಒಂದಕ್ಕೊಂದು ಹೊಂದಿಕೊಂಡಿರಬೇಕು ಒಂದೊಂದು ಕಣ್ಣುಗುಡ್ಡೆ ಸುತ್ತ ಆರು ಸ್ನಾಯುಗಳೂ ಮಿದುಳಲ್ಲಿ ಅವಕ್ಕೆ ಸಂಬಂಧಿಸಿದ ಹೊಂದುಗೂಡಿಸುವ ನರಕೇಂದ್ರಗಳೂ ಇವೆ.

ವರ್ಷದ ಎಳೆಗೂಸು ತನ್ನ ಕಣ್ಣುಗಳ ಚಲನೆಯನ್ನು ಅಂಕೆಗೆ ತರುವುದನ್ನು ಕಲಿತುಕೊಳ್ಳುತ್ತದೆ. ಇದಕ್ಕೆ ಅಡ್ಡಿಬರುವ ಕಾರಣಗಳು ಕೆಲವಿವೆ. ಎರಡು ಕಣ್ಣುಗಳೂ ದೂರನೋಟದವೋ ಹತ್ತೆ ನೋಟದವೋ ಆಗಿರಬಹುದು. ಎರಡು ಕಣ್ಣುಗುಡ್ಡೆಗಳ ಬೆಳೆವಣಿಗೆಯಲ್ಲಿ ವ್ಯತ್ಯಾಸವಿರಬಹುದು. ಕಣ್ಣು ಹೊರಗಿನ ಸ್ನಾಯುಗಳ ಬಲ ಒಂದೊಂದರಲ್ಲಿ ಒಂದೊಂದು ಮಟ್ಟಕ್ಕೆ ಇರಬಹುದು. ಮಿದುಳಲ್ಲಿ ಹತೋಟಿ ಕೇಂದ್ರಗಳ ವಿಕಾಸ ಕುಂದಿರಬಹುದು. ಹೀಗೆ ಯಾವ ಮಟ್ಟದಲ್ಲಿ ಕೆಟ್ಟಿದ್ದರೂ ಒಟ್ಟಾರೆ ಪರಿಣಾಮ ಮಾತ್ರ ಒಂದೇ. ಗಮನ ಸೆಳೆವ ವಸ್ತುವಿನಲ್ಲಿ ಒಂದು ಕಣ್ಣು ನೇರವಾಗಿ ನೆಟ್ಟಿದ್ದರೆ, ಇನ್ನೊಂದು ಕಣ್ಣು ಒಳಕ್ಕೋ ಹೊರಕ್ಕೋ ಮೇಲಕ್ಕೋ ಕೆಳಕ್ಕೋ ತಿರುಗಿರುತ್ತದೆ. ಇವಕ್ಕೆ ಮೆಳ್ಳೆಗಣ್ಣು (ಸ್ಕ್ವಿಂಟ್, ಸ್ಟ್ರಬಿಸ್ಮಸ್)

ಎಂದಿದೆ. ಇದನ್ನು ವಿವರಿಸುವಾಗ ಯಾವ ದಿಕ್ಕಿನದೆಂದು ಸೂಚಿಸುವುದುಂಟು. ಒಂದೊಂದು ಬಾರಿ ಒಂದೊಂದು ಕಣ್ಣು ಹೀಗೆ ತಿರುಗುವುದೋ ಯಾವಾಗಲೂ ಇರುವುದೋ ಒಂದೊಂದು ಬಾರಿ ಬರುವುದೋ ಎಂಬುದನ್ನು ಗಮನಿಸಬೇಕು.

ಎಳೆಮಕ್ಕಳಲ್ಲಿ ಮೆಳ್ಳೆಗಣ್ಣು ಕೇವಲ ಮೊಗದ ಅಂದ ಕೆಡಿಸುವುದು ಮಾತ್ರವಲ್ಲ: ಮೆಳ್ಳೆಗಣ್ಣಾಗಿದ್ದರೆ ಎರಡೂ ಕಣ್ಣುಗಳ ನಡುವೆ ಎಂದಿನ ಹೊಂದಾಣಿಕೆ ಬೆಳೆಯದು. ಬೇರೆಡೆಗೆ ತಿರುಗುವ ಕಣ್ಣಿನ ನೋಟದ ಬಲ ಕುಗ್ಗುತ್ತ ಹೋಗುತ್ತದೆ. ಒಂದೇ ಕಣ್ಣಿನ ಮೆಳ್ಳೆಗಣ್ಣಾಗಿದ್ದರೆ ತುಂಬ ಕೆಡುಕಾದ್ದರಿಂದ ಕೂಡಲೇ ಕಣ್ಣುವೈದ್ಯರಿಗೆ ತೋರಿ ತಕ್ಕ ಚಿಕಿತ್ಸೆ ಮಾಡಿಸಬೇಕು.

ಕಣ್ಣುಗಳ ಚಲನೆಯ ಇನ್ನೊಂದು ಸಾಮಾನ್ಯ ಬೇನೆಯಿದೆ. ಇದರಲ್ಲಿ ಎರಡು ಕಣ್ಣುಗಳ ನೋಟವೂ ನೆಟ್ಟಗಿದ್ದು, ಬೇನೆ ಬಿದ್ದಾಗಲೂ ಬೇಸರದ ದಣಿವಾದಾಗಲೂ ಒಂದು ಕಣ್ಣು ಒಳಕ್ಕೋ ಹೊರಕ್ಕೋ ತಿರುಗುವುದು, ಉಳಿದ ಹೊತ್ತಿನಲ್ಲೆಲ್ಲ ಚೆನ್ನಾಗಿರುತ್ತದೆ. ಬಿಟ್ಟು ಬಿಟ್ಟು ತೋರುವ ಈ ಮೆಳ್ಳೆಗಣ್ಣಿನಲ್ಲಿ ಮೆದುಳಿನ ನರ ಕೇಂದ್ರದ ಹತೋಟಿ ಕೆಲವೇಳೆ ತಪ್ಪಿರುತ್ತದೆ.

ಬಿಟ್ಟು ಬಿಟ್ಟು ಬರುವ ಮೆಳ್ಳೆಗಣ್ಣಿಗೂ ಹೊರಗಾಣದ (ಲೇಟೆಂಟ್) ಬಗೆಯದಕ್ಕೂ ಸಂಬಂಧವಿದೆ. ಎರಡನೆಯದರಲ್ಲಿ ಒಂದು ಕಣ್ಣನ್ನು ಒಂದು ತೊಟ್ಟುಚೂರಿಂದ ಮುಚ್ಚಿದರೆ ಮೆಳ್ಳೆಗಣ್ಣು ಹೊರತೋರುವುದು. ಹೊರಗಾಣದ ಮೆಳ್ಳೆಗಣ್ಣಲ್ಲಿ ಕಣ್ಣು ತ್ರಾಸ ಇರುತ್ತದೆ.

ಅದಿರುಗಣ್ಣು : ಎರಡು ಕಣ್ಣುಗಳೂ ತಾಳೆಗತಿಯಲ್ಲಿ ತಾವಾಗಿಯೇ ಅದಿರುವುದಕ್ಕೆ ಅದಿರುಗಣ್ಣು (ನಿಸ್ಟಾಗ್ಮಸ್) ಎಂದಿದೆ. ಗಾಡಿಯಲ್ಲಿ ಹೋಗುತ್ತಿರುವಾಗ. ಯಾರಾದರೂ ಆಚೆ ತಲೆಹಾಕಿ ಇಣಿಕಿ ನೋಡುತ್ತಿದ್ದರೆ ಅಡ್ಡಡ್ಡನೆಯ ಅದಿರುಗಣ್ಣು ತೋರುವುದು. ಹೀಗೇ ಮೇಲಕ್ಕೂ ಕೆಳಕ್ಕೂ ಆಡುವ ಎತ್ತುಗದಲ್ಲಿ (ಎಲಿವೇಟರ್) ಹೋಗುವಾಗ ಕಂಡಿಯಲ್ಲಿ ಇಣಿಕು ಹಾಕಿದರೆ ನೆಟ್ಟನೆಯ ಅದಿರುಗಣ್ಣನ್ನು ಮಾತ್ರ ರೋಗ ಎನ್ನಬಹುದು. ಹುಟ್ಟಿದಾಗಲೋ ಹುಟ್ಟಿದ ಕೆಲವೇ ತಿಂಗಳಲ್ಲೋ ಅದಿರುಗಣ್ಣು ಕಾಣಿಸಿಕೊಂಡರೆ ಕಣ್ಜಾಲದ ನಡುವಣ ಭಾಗ ಸರಿಯಾಗಿ ವಿಕಾಸವಾಗಿಲ್ಲ ಎನ್ನಬಹುದು. ಆಗ ನೋಟ ಒಂದಿಷ್ಟು ಕುಂದಿರುವುದೇ ಹೊರತು ಕುರುಡಲ್ಲ. ವಯಸ್ಸಿಗೆ ಬಂದಮೇಲೆ ಅದಿರುಗಣ್ಣು ತೋರಿದರೆ ಕೇಂದ್ರದ ನರದ ಮಂಡಲದ ಬೇರೆ ಬೇರೆ ಭಾಗಗಳಿಗೆ ರೋಗ ಹತ್ತಿರುವ ಲಕ್ಷಣವದು. ಮೈಯ ಸಮತೋಲವನ್ನು ಉಳಿಸಿಕೊಳ್ಳುವುದಲ್ಲಿ ಬಲು ಮುಖ್ಯವಾಗಿ ನೆರವಾಗುವ ನಡುವೆಯ ಸಾಧನ (ವೆಸ್ಟಿಬೂಲಾರ್ ಆಪರೇಟಸ್) ಅದಿರುಗಣ್ಣಿನ ನರಬೇನೆಗಳಲ್ಲಿ ಕೆಟ್ಟಿರುವುದು ಸಾಮಾನ್ಯ.

ಕಣ್ಣಿನ ಚಲನೆಯ ಬೇನೆಗಳ ಚಿಕಿತ್ಸೆ ಮೂರು ಬಗೆಯದು. ಮುಖ್ಯವಾಗಿ ಚಿಕ್ಕ ಮಕ್ಕಳ ಮೆಳ್ಳೆಗಣ್ಣಿನ ಚಿಕಿತ್ಸೆಯಲ್ಲಿ ದುರ್ಬಲಕಣ್ಣಿನ ನೋಟವನ್ನು ಉತ್ತಮಗೊಳಿಸುವ ಎಲ್ಲ ಯತ್ನಗಳನ್ನೂ ಮಾಡಬೇಕು. ಕ್ರಮವಾಗಿ ಅಂಗಸಾಧನೆ, ಬಲವಾದ ಕಣ್ಣನ್ನು ಮುಚ್ಚಿರುವುದರಿಂದ ಅನುಕೂಲ. ಕಣ್ಣಿನ ಚಲನೆಗಳನ್ನು ನಿಧಾನವಾಗಿ ಮಾಡುತ್ತಿದ್ದರೆ ಮೆದುಳಿನ ಹತೋಟಿಯನ್ನು ಬರುಬರುತ್ತ ಪಡೆಯಬಹುದು. ಕಣ್ಣಿನ ಸ್ನಾಯುಗಳ ಸಮತೋಲ ವಿಪರೀತ ಏರುಪೇರಾಗಿದ್ದರೆ ಅವನ್ನು ಶಸ್ತ್ರಕ್ರಿಯೆಯಿಂದ ಸರಿಪಡಿಸಬೇಕು.

ಕಣ್ಣುಹೊರಗಿನ ಸ್ನಾಯುಗಳ ಇತರ ರೋಗಗಳು : ಒಂದು ಇಲ್ಲವೇ ಹಲವು ಸ್ನಾಯುಗಳ ಅರನಾರಿಯಾಗಿ ಕಣ್ಣುಗಳ ಚಲನೆ ಕೆಟ್ಟರೆ ಇರ್ನೋಟದಿಂದ (ಡಿಪ್ಲೋಪಿಯ) ಎಲ್ಲವೂ ಎರಡಾಗಿ ಕಾಣುವುದಲ್ಲದೆ ಅರನಾರಿಯಾದ ಸ್ನಾಯು ಇರುವ ಕಡೆ ಚಲನೆ ಇಲ್ಲವಾಗುತ್ತದೆ. ಇರ್ನೋಟದ ರೋಗಿಗೆ ನಿಜವಾದ ಬಿಂಬಕ್ಕೂ ಹುಸಿಬಿಂಬಕ್ಕೂ ವ್ಯತ್ಯಾಸಗಾಣದೆ ತಬ್ಬಿಬ್ಬಾಗಿ ತೊಡಕಾಗುತ್ತದೆ. ಕೇಂದ್ರ ನರದ ಮಂಡಲದಲ್ಲಿ ಕೆಟ್ಟಿರುವುದರಿಂದ ಸಾಮಾನ್ಯ ವೈದ್ಯನ ಕಣ್ಣು ವೈದ್ಯನಿಗೆ ಬೇಕಾಗುತ್ತದೆ.

ಕಣ್ಣಿನ ಗಾಯ, ಪೆಟ್ಟುಗಳು : ಸುಲಭವಾಗಿ ಕಟ್ಟುನಿಟ್ಟಿನ ಶಾಶ್ವತ ನೋಟಗುಂದಿಕ ಪೆಟ್ಟು, ಗಾಯಗಳಿಗೆ ಈಡಾಗುವಂತಿವೆ ಮಾನವಕಣ್ಣುಗಳು. ರೆಪ್ಪೆಗಳಂತೂ ಕಣ್ಣುಗಳಿಗೆ ಪೂರ್ತಿ ಕಾಪು ಒದಗಿಸಲಾರವು. ಕೆಲವರು ಕೆಲಸ ಮಾಡುವಾಗ ತಮ್ಮ ತಲೆ, ಕಣ್ಣುಗಳನ್ನೂ ತೀರ ಹತ್ತಿರ ತರುವುದರಿಂದ ಅಪಾಯ ಇನ್ನೂ ಹೆಚ್ಚುವುದು. ಕಣ್ಣು ಬಲು ಸುಲಭವಾಗಿ ಹಾಳಾಗುವುದು. ಕೇವಲ ಒಂದು ಉಕ್ಕಿನ ಚೂರು ಕಣ್ಣಲ್ಲಿ ಹೊಕ್ಕರೆ ಇಡೀ ಕಣ್ಣೇ ಹಾಳಾಗಬಹುದು. ಅದರಲ್ಲೂ ಹರಳಂತಿರುವ ಮಸೂರ, ಕಾಜೀ ದಿಂಡು, ಇಲ್ಲವೇ ಕಣ್ಜಾಲಕ್ಕೆ ಪೆಟ್ಟಾಯಿತೆಂದರೆ ಶಾಶ್ವತವಾಗಿ ನೋಟ ಕುಂದುತ್ತದೆ.

ಕಣ್ಣೊಳಗೆ ತೂರದ ಗಾಯಗಳು ತೂರುವವಷ್ಟು ಅಪಾಯಕರವಲ್ಲ. ಆದ್ದರಿಂದ ಕಣ್ಣುವೈದ್ಯ ಗಾಯಗಳಲ್ಲಿ ಮೊದಲು ಈ ವ್ಯತ್ಯಾಸವನ್ನು ಗುರುತಿಸಿ ಮುಂದುವರಿವನು. ತೂರುವುದೆಂದರೆ ಕಣ್ಣುಗುಡ್ಡೆಯ ಮೂರೂ ಪದರಗಳನ್ನು ತೂತಿಟ್ಟುಕೊಂಡು ಹಾಯ್ದು ಕಣ್ಣೊಳಗೇ ಉಳಿವುದು. ಇದರಿಂದ ಗಾಯವಾದ ಊತಕಕ್ಕಾದ ಅಪಾಯದೊಂದಿಗೆ ಸೋಂಕೂ ಒಳಸೇರಿ. ಹೊರ ವಸ್ತುವೊಂದು ಒಳಗೇ ಉಳಿದು ಬಿಡುತ್ತದೆ. ತೂರಿದ ಗಾಯದಿಂದ ಮೊದಮೊದಲು ಏನೂ ತೊಡಕು ಕಾಣದಿರಬಹುದು. ಏಕೆಂದರೆ ತೂತು ಮುಚ್ಚಿಹೋಗಿರಬಹುದು. ಆದ್ದರಿಂದ ಯಂತ್ರಗಳೊಂದಿಗೆ ಕೆಲಸ ಮಾಡುವವರು ಏನಾದರೂ ಚೂಪಾದ ಚೂರು ಹಾರಿ ತೂರಿತು ಎನಿಸಿದರೆ ಕೂಡಲೇ ಕಣ್ಣುವೈದ್ಯನನ್ನು ಕಾಣುವುದೊಳ್ಳೆಯದು. ತೂರಿದ ಗಾಯವಾದಾಗ, ಕೂಡಲೇ ಒಳಸೇರಿದ ಹೆರವಸ್ತುವನ್ನು ಕಂಡುಕೊಂಡು ತೆಗೆಯಬೇಕು. ತೂರಿ ತೂತಾಗಿರುವುದನ್ನು ಶಸ್ತ್ರಕ್ರಿಯೆಯಿಂದ ಮುಚ್ಚಬೇಕು. ಸೋಂಕುರೋಧಕ ಮದ್ದುಗಳನ್ನು ಬಳಸಬೇಕು.

ಒಂದು ಕಣ್ಣಿನ ತೂರುವ ಗಾಯದಿಂದೇಳುವ ಮಹಾಕೆಡುಕೆಂದರೆ ಚೆನ್ನಾಗಿರುವ ಕಣ್ಣಿಗೂ ಅಪಾಯ ತಾಕುವುದೇ. ವಿರಳವಾಗಿ, ವಿಪರೀತ ಗಾಯವಾಗಿ ಕರಿಯಾಲಿ, ಬಾಸೆಯ ದಿಂಡಿನ ಉರಿತ ಆಗಿಯೇ ಇದ್ದರೆ, ಗಾಯವಾದ ಕಣ್ಣಲ್ಲಿ ಹಾಳಾದ ಊತಕಗಳಿಗೆ ಎದುರಾಗಿ ಹುಟ್ಟಿದ ರೋಧವಸ್ತುಗಳಿಂದ (ಆಂಟಿಬಾಡೀಸ್) ಇನ್ನೊಂದು ಕಣ್ಣಿನ ಉರಿತವಾಗುವುದು. ಎಷ್ಟೋ ಬಾರಿ ಕೆಲವು ವರ್ಷಗಳು ಕಳೆದ ಮೇಲೆ ಹೀಗಾಗಬಹುದು. ಕೊನೆಗೆ ಅ ಕಣ್ಣೂ ಕುರುಡಾಗಿ ಕೆಲಸಕ್ಕೆ ಬಾರದಷ್ಟು ಹಾಳಾಗುತ್ತದೆ. ಈಗ ಸ್ಟಿರಾಯ್ಡ್ ಮದ್ದುಗಳಿಂದ ಇದನ್ನು ತಡೆಯಬಹುದು. ಪೆಟ್ಟುಬಿದ್ದು ಸರಿಪಡಿಸಲಾಗದ ಕಣ್ಣನ್ನು ತೆಗೆದುಹಾಕಿದರೂ ಇನ್ನೊಂದು ಕಣ್ಣು ಉಳಿಯಬಹುದು.

ಕಣ್ಣಿನ ಸಾವಿರಾರು ತೆರನ ಗಾಯ, ಪೆಟ್ಟುಗಳಲ್ಲಿ ತಾಕುವ ವಸ್ತುವಿಗೆ ವೇಗವಿಲ್ಲದ್ದರಿಂದ ಕಣ್ಣುಗುಡ್ಡೆಯ ಒಳಹೊಗಲಾರದು. ಸಣ್ಣಪುಟ್ಟ ವಸ್ತುಗಳು ಕೇವಲ ಕೂಡುಪೊರೆ, ಕೋಡು ಪೊರೆಗಳಲ್ಲಿ ಹುದುಕಿಕೊಳ್ಳುತ್ತವೆ. ಆದ್ದರಿಂದ ಸುಲಭವಾಗಿ ತೆಗೆಯಬಹುದು. ಆದರೆ ಕೋಡು ಪೊರೆಯನ್ನು ಗೀಚಿದರೆ ದಿನವೆಲ್ಲ ನೋವಿರುತ್ತದೆ. ತಕ್ಕ ಚಿಕಿತ್ಸೆಯಾದರೆ, ಪೂರ್ತಿ ವಾಸಿಯಾಗುವುದು. ಆದರೆ ಆಮ್ಲಗಳೋ ಕ್ಷಾರವೋ ಕಣ್ಣಿಗೆ ಹಾರಿದರೆ ಕೋಡುಪೊರೆ, ಕೂಡುಪೊರೆಗಳ ಮೇಲಿನ ಪದರಗಳೇ ಹಾಳಾಗುತ್ತವೆ. ಇದರಿಂದ ಕಣ್ಣುಗುಡ್ಡೆ ಚಲನೆ ಮಿತಿಗೊಳ್ಳುವುದು. ಕೂಡಲೇ ಧಾರಾಳವಾಗಿ ಸಾಮಾನ್ಯ ನಲ್ಲಿ ನೀರಿನಿಂದ ಕಣ್ಣನ್ನು ಚೆನ್ನಾಗಿ ತೊಳೆದರೆ, ಮುಂದೆ ನಿಧಾನವಾಗಿ ಶಸ್ತ್ರವೈದ್ಯ ಗಮನಿಸುವುದಕ್ಕಿಂತ ಸಾವಿರ ಪಾಲು ಮೇಲು.

ಕಣ್ಣುಗುಡ್ಡೆಗೆ ಮೂಗಪೆಟ್ಟು ಬಿದ್ದರೆ ಕೆಲವೆಡೆ ಬಿರಿದು ಒಡೆಯಬಹುದು. ಇದರಿಂದ ಬಹಳ ಅಪಾಯವಿದೆ. ಮೊದಲು ರೆಪ್ಪೆಯಲ್ಲಿ ರಕ್ತ ಸುರಿದು ಕೆಂಪೇರಿರುವುದರಿಂದ ಒಳಗಿನ ನಾಳದ ಅಪಾಯ ಹೊರಗಾಣದೆ ಹೋಗುತ್ತದೆ.

ಕಣ್ಣಿನಲ್ಲಿ ಏಳುವ ವಿಷಮುಗಂತಿಗಳು : ಕಣ್ಣಿನಲ್ಲಿ ಎರಡು ಬಗೆಗಳ ಏಡಿಗಂತಿಗಳು ಏಳುತ್ತವೆ. ಹಸುಗೂಸುಗಳ ಇಲ್ಲವೇ ಹಸುಳೆಗಳ ಕಣ್ಜಾಲದಲ್ಲಿ ಏಳುವ ಕಣ್ಜಾಲಮೊಳ್ಗಂತಿ (ರೆಟೀಸೊಬ್ಲಾಸ್ಟೋಮ) ಒಂದು; ನಡುವಯಸ್ಸಿಗರಲ್ಲಿ ನೀಲಿಪೊರೆಯಲ್ಲಿ ಏಳುವ ವಿಷಮ ಕರ್ವಣ್ಣಗಂತಿ (ಮೆಲಿಗ್ನೆಂಟ್ ಮೆಲನೋಮ) ಇನ್ನೊಂದು. ಅವುಗಳ ಕಾರಣ ಗೊತ್ತಿಲ್ಲ. ಆದರೆ ಕಣ್ಜಾಲಮೊಳ್ಗಂತಿ ಕೆಲವು ತಲೆಮಾರುಗಳಲ್ಲಿ ತಲೆಹಾಕುವಂತಿದೆ. ಎಳೆಯದರಲ್ಲೇ ಕಂಡುಹಿಡಿದು, ಗಂತಿಯನ್ನೋ ಕೆಲವೇಳೆ ಇಡೀ ಕಣ್ಣುಗುಡ್ಡೆಯನ್ನೊ ತೆಗೆದು ಹಾಕುವುದರಿಂದ ವಿಷಮ ಕರ್ವಣ್ಣಗಂತಿಯಿಂದ ರೋಗಿ ಸಾಯುವುದನ್ನು ತಪ್ಪಿಸಬಹುದು. ಕಣ್ಜಾಲಮೊಳ್ಗಂತಿ ಎರಡು ಕಣ್ಣುಗಳಲ್ಲೂ ಹಲವು ಗಂತಿಗಳು ಎದ್ದಹಾಗೆ ತೋರಬಹುದು. ವಿಕಿರಣ ಚಿಕಿತ್ಸೆ, ಏಡಿಗಂತಿಮಾರಕ ಮದ್ದುಗಳಿಂದಲೂ ಚಿಕಿತ್ಸೆ ನಡೆಸಬಹುದು.

(ಎಸ್.ಟಿ.ಪಿ ; ಕೆ.ಎಸ್‌ಯು.; ಡಿ.ಎಸ್.ಎಸ್.)

**ಕಣ್ಣಿನ ಶಸ್ತ್ರವೈದ್ಯ :** ಸಣ್ಣದಾಗಿದ್ದರೂ ಜಟಿಲ ಇಂದ್ರಿಯವಾದ ಕಣ್ಣಿನ ಮೇಲೆ ನಡೆಸುವ ಶಸ್ತ್ರವೈದ್ಯ. ಬಲು ಸಣ್ಣ ಕೋಮಲವಾದ ರಚನಾಂಶಗಳ ಮೇಲೆ ಶಸ್ತ್ರಕ್ರಿಯೆ ಆಗಬೇಕಿರುವುದರಿಂದ ಇದನ್ನು ಮಿಲಿಮೀಟರು ಶಸ್ತ್ರವೈದ್ಯ ಎನ್ನುವುದುಂಟು. ಇದರಲ್ಲಿ ಕೈಗೊಂಡದ್ದು ಕೈಗೂಡುವುದಕ್ಕೂ ಅನಾಹುತಕ್ಕೂ ಅಷ್ಟೇನೂ ಅಂತರವಿಲ್ಲ. ಸಾಮಾನ್ಯ ಶಸ್ತ್ರವೈದ್ಯನಿಗೆ ಇರಬೇಕಾದ ಮನಸ್ಸು, ಚುರುಕುತನ, ಕೈಚಳಕಗಳೊಂದಿಗೆ ಕಣ್ಣಿನ ಶಸ್ತ್ರವೈದ್ಯನ ಕಣ್ಣುಗಳ ನೋಟ ಚೆನ್ನಾಗಿರಬೇಕಲ್ಲದೆ ಇಕ್ಕಣ್ಣು (ಬೈನಾಕ್ಯುಲರ್) ನೋಟವೂ ಚೆನ್ನಾಗಿರಲೇಬೇಕು. ಕೈಗಳಲ್ಲಿ ಇನಿತೂ ನಡುಕವಿರಬಾರದು. ಶಸ್ತ್ರ ಕ್ರಿಯೆಯಲ್ಲಿ ಬಲಗೈಯಷ್ಟೇ ಸರಾಗವಾಗಿ ಎಡಗೈಯನ್ನೂ ಬಳಸುವಂತಿದ್ದರಂತೂ ಇನ್ನೂ ಅನುಕೂಲ. ಕಣ್ಣಿನ ಶಸ್ತ್ರಕ್ರಿಯೆ ಕಣ್ಣಿನೊಳಗೋ ಹೊರಗೋ ನಡೆಸಬಹುದು. ಕಣ್ಣುಗುಡ್ಡೆಯ ಮೇಲಿನವಲ್ಲದೆ ಕಣ್ಣಿಗೆ ಸಂಬಂಧಿಸಿದ ಗುಡ್ಡೆ. ಹೊರಗಿನ ಸ್ನಾಯುಗಳು, ಕಣ್ಣುಗುಳಿ, ರೆಪ್ಪೆಗಳು, ಕಣ್ಣೀರು ಗ್ರಂಥಿ ಚೀಲ ನಾಳಗಳ ಮೇಲೂ ಶಸ್ತ್ರಕ್ರಿಯೆ ಆಗುವುದು. ಕಣ್ಣುಗಳ ಮೇಲೆ ನಡೆವ ಶಸ್ತ್ರಕ್ರಿಯೆಯ ಉದ್ದೇಶಗಳು ಹಲವಾರಿವೆ.

ಮೊದಲಾಗಿ, ಕಣ್ಣಿಂದ ನೋಡುವಂತೆ ಮಾಡುವುದರಲ್ಲಿ ಕಣ್ಣಿನ ಪೊರೆ ತೆಗೆವುದು ಸಾಮಾನ್ಯ. ಕಣ್ಣೊಳಗೆ ಮಸುಕಾಗಿ ಗಟ್ಟಿಯಾಗಿರುವ ಮಸೂರವನ್ನು (ಪೊರೆ) ಶಸ್ತ್ರ

ಕ್ರಿಯೆಯಿಂದ ಪೊರತೆಗೆಯಬೇಕು. ಕಣ್ಣಿನ ನೋಟದ ಅರಿವಿಗೆ ಮೂಲಕಾರಣವಾದ, ಕಣ್ಣುಗುಡ್ಡೆಯ ಒಳಪದರವಾಗಿರುವ ಕಣ್ಜಾಲ ಕಳಚಿಕೊಂಡರೆ (ರೆಟೀನಲ್ ಡಿಟ್ಯಾಚ್‌ಮೆಂಟ್) ಕುರುಡಾಗುತ್ತದೆ. ಇದನ್ನು ಮತ್ತೆ ಸರಿಗೂಡಿಸಲು ಶಸ್ತ್ರಕ್ರಿಯೆಯಿಂದಲೂ ಸಾಧ್ಯ ; ಇತ್ತೀಚೆಗೆ, ಲೇಸರ್ ಕಿರಣಗಳಿಂದ ಸರಿಪಡಿಸುವ ಯತ್ನಗಳೂ ಕೈಗೂಡಿವೆ. ಕಣ್ಣುಗುಡ್ಡೆ ಮುಂಭಾಗದಲ್ಲಿ ತಿಳಿಗಾಜಂತಿರುವ ಕೋಡು ಪೊರೆಯಲ್ಲಿ ಕಣ್ಣು ಹೂವಾಗಿ ಬಿಳಿ ಚುಕ್ಕೆಗಳಿಂದ ಕುರುಡಾಗುವುದರಿಂದ, ಕೋಡು ಪೊರೆಯನ್ನು ಮಾತ್ರ ತೆಗೆದುಹಾಕಿ, ಆ ಜಾಗದಲ್ಲಿ ಬೇರೆಯವರ ಕಣ್ಣಿಂದ ದಾನವಾಗಿ ತಂದುದನ್ನು ಜೋಡಿಸಿ ನಾಟಿ ಹಾಕುವುದು (ಕಾರ್ನಿಯೊಪ್ಲಾಸ್ಟಿ) ಇತ್ತೀಚೆಗೆ ಜನಪ್ರಿಯವಾಗಿ ಬಹಳ ಮಂದಿಗೆ ಕಣ್ಣುಬಂದಿದೆ. ಇದನ್ನೇ ನೇತ್ರದಾನ ಎನ್ನುವುದುಂಟು ; ಇಲ್ಲಿ ಕೇವಲ ಅವರೆ ಕಾಳಗಲದ ತಿಳಿಪೊರೆಯನ್ನು ನಾಟಿಹಾಕಲಾಗುವುದೇ ಹೊರತು, ಇಡೀ ಕಣ್ಣುಗುಡ್ಡೆಯನ್ನು ಇನ್ನೊಬ್ಬರಿಗೆ ನಾಟಿಹಾಕಲು ಇಂದಿಗೂ ಕೈಗೂಡಿಲ್ಲ.

ಇರುವ ನೋಟವನ್ನು ಕಾಪಿಡುವುದು ಕಣ್ಣಿನ ಶಸ್ತ್ರವೈದ್ಯದ ಇನ್ನೊಂದು ಉದ್ದೇಶ. ಒಂದು ಕಣ್ಣು ಗುಡ್ಡೆಯಲ್ಲಿ ಏನೋ ಕಾರಣದಿಂದ ಇದ್ದಕ್ಕಿದ್ದ ಹಾಗೆ ಒಳಗಡೆ ಒತ್ತಡ ಏರಿ ಕಣ್ಣುಕಾಣದಂತೆ ಆಗುವುದಕ್ಕೆ ಹತ್ತಗಣ್ಣು (ಗ್ಲಾಕೋಮ) ಎಂದು ಹೆಸರು. ಮದ್ದುಗಳಿಗೆ ಜಗ್ಗದಂತಾದರೆ, ಕಣ್ಣುಗುಡ್ಡೆ ಶಾಶ್ವತವಾಗಿ ಹಾಳಾಗುವುದನ್ನು ತಪ್ಪಿಸಲು ಏರಿದ ಒತ್ತಡವನ್ನು ಶಸ್ತ್ರಕ್ರಿಯೆಯಿಂದ ಇಳಿಸುವುದೊಂದೇ ದಾರಿ.

ಕುರುಡಾಗುವುದನ್ನು ತಪ್ಪಿಸಲೂ ಕೆಲವು ಶಸ್ತ್ರಕ್ರಿಯೆಗಳನ್ನು ಕೈಗೊಳ್ಳುವುದುಂಟು. ಕೋಡು ಪೊರೆಗೆ ರೋಗಹತ್ತಿ ಹಾಳಾಗುವಂತಿದ್ದರೆ, ಕೆಲವೇಳೆ ಅದು ವಾಸಿಯಾಗುವ ತನಕ ಕಣ್ಣು ತೆರೆಯಲಾಗದಂತೆ ರೆಪ್ಪೆಗಳು ಮುಚ್ಚಿರುವಂತೆ ಹೊಲಿದಿರಬೇಕಾಗುತ್ತದೆ. ಹಾಗೇ ಕಣ್ಣುಗುಳಿಯಲ್ಲಿ ಬೆಳೆದ ಗಂತಿಯಿಂದಲೋ ಏರಿದ ಒತ್ತಡದಿಂದಲೋ ಕಣ್ಣಿನ ಹಿಂದಿರುವ ಮುಖ್ಯ ನರವೇ ಅಪಾಯಕ್ಕೊಳಗಾದಾಗ ಕೂಡಲೇ ಶಸ್ತ್ರಕ್ರಿಯೆಯಿಂದ ಹೋಗಲಾಡಿಸಬೇಕು.

ಕಣ್ಣಿನಲ್ಲಿ ಬೆಳೆವ ಏಡಿಗಂತಿ ತೆರನ ಮಾಂಸಗಂತಿ (ಸಾರ್ಕೋಮ) ಮುಂತಾದವು ಬೆಳೆದಾಗ ಶಸ್ತ್ರಕ್ರಿಯೆಯಿಂದ ಬುಡಮಟ್ಟ ತೆಗೆದು ಹಾಕಿ ರೋಗಿಯ ಸಾವನ್ನು ತಪ್ಪಿಸುವ ಸಂದರ್ಭಗಳೂ ಇವೆ. ಕೇವಲ ಮದ್ದುಗಳಿಂದ ಕಣ್ಣಲ್ಲಿನ ತಡೆಯಲಾಗದ ನೋವು, ಶೂಲೆಗಳನ್ನು ಕಳೆಯಲೂ ಶಸ್ತ್ರಕ್ರಿಯೆ ಆಗುವುದುಂಟು. ಕಣ್ಣೀರು ಒಂದೇ ಸಮನೆ ಸುರಿಯುತ್ತಿದ್ದಲ್ಲಿ, ಕಣ್ಣೀರು ಗ್ರಂಥಿ, ಚೀಲ, ನಾಳಗಳಲ್ಲಿನ ರೋಗದ ಪರಿಣಾಮವಾಗಿ ಅಡಚಣೆಯಾಗಿರುವುದನ್ನು ಕಳೆಯಲೂ ಸಾಮಾನ್ಯವಾಗಿ ಶಸ್ತ್ರಕ್ರಿಯೆ ಮಾಡಬೇಕಾಗುತ್ತದೆ.

ಕಣ್ಣಿನ ಅಂದ ಹೆಚ್ಚಿಸುವ ಶಸ್ತ್ರಕ್ರಿಯೆಗಳು ಕೆಲವಿವೆ. ಅಂಥವಲ್ಲಿ ಮೆಳ್ಳೆಗಣ್ಣಿನದೂ ಒಂದು. ಕಣ್ಣುಗುಡ್ಡೆ ಹೊರಮೈಮೇಲಿರುವ ಸ್ನಾಯುಗಳಲ್ಲಿ ಕೆಲವನ್ನು ಮೊಟಕುಗೊಳಿಸಿ ಇಲ್ಲವೇ ಉದ್ದ ನೀಟುವುದರಿಂದ ಇವನ್ನು ಸುಲಭವಾಗಿ ಚಿಕ್ಕಂದಿನಲ್ಲೇ ಸರಿಪಡಿಸಬಹುದು. ತೀರ ಏನೂ ಕಾಣದಂತಾಗಿ ವಿಕಾರವಾದ ಕಣ್ಣನ್ನು ಕಿತ್ತು ಹಾಕಿ ನಕಲಿ ಕಣ್ಣನ್ನು ತೋರಿಕೆಗಾಗಿ ಇಡಬಹುದು. ಕಣ್ಣು ರೆಪ್ಪೆಗಳು ಜೋಲು ಬೀಳುವುದು, ಒಳಕ್ಕೋ ಹೊರಕ್ಕೋ ಮಡಿಸಿ ಅಂಟಿರುವುದು ಮುಂತಾದುವನ್ನೂ ಶಸ್ತ್ರಕ್ರಿಯೆಯಿಂದ ಸರಿಪಡಿಸಬಹುದು. (ಡಿ.ಸಿ.)

**ಕಣ್ಣುಶಾಸ್ತ್ರ :** ಕಣ್ಣುಗಳ ರಚನೆ, ನಿಜಗೆಲಸ, ಊನ, ಕುಂದು, ರೋಗಗಳನ್ನು ವಿವರಿಸುವ ಶಾಸ್ತ್ರ (ಆಫ್‌ತ್ಯಾಲ್ಮೊಲಜಿ). ವೈದ್ಯ ವಿಜ್ಞಾನದಲ್ಲಿ ಒಂದು ಮುಖ್ಯ ಇಂದ್ರಿಯವಾದ ಕಣ್ಣನ್ನು ಇದು ವಿಶೇಷವಾಗಿ ಪರಿಶೀಲಿಸುತ್ತದೆ. ನರಶಾಸ್ತ್ರ, ಒಳಾಂಗ ವೈದ್ಯಶಾಸ್ತ್ರ, ರೋಗಶಾಸ್ತ್ರ, ಶಸ್ತ್ರವೈದ್ಯ, ಔಷಧಶಾಸ್ತ್ರ, ರೋಗನಿರೋಧಕಶಾಸ್ತ್ರ, ಪಿಂಡಶಾಸ್ತ್ರ ಮುಂತಾದವೆಲ್ಲ ಇದಕ್ಕೂ ಅನ್ವಯವಾಗುತ್ತವೆ.

ಕಣ್ಣಿನ ವಿಕಾಸದಲ್ಲಿ ಕುಂದು, ರೋಗ, ಗಾಯ, ಪೆಟ್ಟುಗಳು, ರಕ್ತನಂಜು, ಪುಷ್ಟಿಗೇಡು, ಅನುವಳಿಕೆ (ಡಿಜನರೇಷನ್), ಮುಪ್ಪು, ಓಸರಿಕೆ (ರಿಫ್ರಾಕ್ಷನ್) ಇವುಗಳಲ್ಲಿ ಯಾವುದರಿಂದ ನೋಟ ಕೆಟ್ಟರೂ ಅದನ್ನು ಸರಿಪಡಿಸುವ ಜವಾಬ್ದಾರಿ ಕಣ್ಣುವೈದ್ಯನದು. ಈತ ದೇಹವನ್ನು ಪರೀಕ್ಷಿಸಿ ಮೈಗೋ ನರಗಳಿಗೋ ಹತ್ತಿದ ರೋಗಗಳನ್ನು ಕಂಡುಹಿಡಿಯುವಾಗ ನೋಟ ಮತ್ತು ಕಣ್ಣೊಳಗಿನ ಪರೀಕ್ಷೆಗಳನ್ನು ವಿಶೇಷವಾಗಿ ಮಾಡಿ ಮದ್ದುಗಳನ್ನೋ ನೋಟ ಸರಿಪಡಿಸಲು ಕನ್ನಡಕಗಳನ್ನೋ ನಿಯಮಿಸಿ, ಬೇಕೆನಿಸಿದಾಗ ಶಸ್ತ್ರವೈದ್ಯವನ್ನೂ ಕೈಗೊಳ್ಳುವನು. ಕಣ್ಣು ವೈದ್ಯರ ತರಬೇತಿಗಾಗಿ ಬೇರೆ ಆಸ್ಪತ್ರೆಗಳೂ ಸಂಸ್ಥೆಗಳೂ ಸಂಶೋಧನಾಲಯಗಳೂ ಇವೆ. ಕಣ್ಣುವೈದ್ಯ ಪರಿಣತ ಮೊದಲು ಸಾಮಾನ್ಯ ವೈದ್ಯನಾಗಿರಬೇಕು. ವೈದ್ಯಕ ಕಾಲೇಜುಗಳಲ್ಲೂ ಪದವೀಧರರಾಗುವವರಿಗೆ ಇದಕ್ಕಾಗಿ ಬೇರೆ ತರಬೇತು ಕಡ್ಡಾಯವಾಗಿ ದೊರೆವುದು.

ಒಬ್ಬನ ಬಾಳುವೆಯಲ್ಲಿ ಕಣ್ಣಿನ ಮುಖ್ಯಪಾತ್ರ ನಮ್ಮ ಪೂರ್ವಿಕರಿಗೆ ಚೆನ್ನಾಗಿ ಮನದಟ್ಟಾಗಿತ್ತು. ಅವರಿಗೆ ಕೊಂಚಮಟ್ಟಿಗೆ ಕಣ್ಣಿನ ರಚನೆ ತಿಳಿದಿದ್ದರೂ 18ನೆಯ ಶತಮಾನಕ್ಕೂ ಹಿಂದೆ ಕಣ್ಣಿನ ನಿಜಗೆಲಸದ ಕಲ್ಪನೆ ಅಷ್ಟಾಗಿರಲಿಲ್ಲ. ಪುರಾತನ ಈಜಿಪ್ಷಿಯನರು ಕಣ್ಣುಶಾಸ್ತ್ರವನ್ನು ವಿಶೇಷ ಶಾಸ್ತ್ರವೆಂದು ಗಣಿಸಿದ್ದರು. 17ನೆಯ ಶತಮಾನದ ಕೆಪ್ಲರ್, ಡೆಕಾರ್ಟೆ ಅವರಿಗೆ ಕಣ್ಣುಶಾಸ್ತ್ರದ ಮೂಲ ಸೂತ್ರಗಳ ಅರಿವು ಇತ್ತೆಂದು ತೋರುತ್ತದೆ. ಕಣ್ಣಿನ ರೋಗಗಳನ್ನು ಕುರಿತು ಕೆಲವು ಪುಸ್ತಕಗಳಿದ್ದುವು : ಜಾರ್ಜ್ ಬಾರ್ಟಿಷನ ಜರ್ಮನ್ ಪುಸ್ತಕ (1583), ಕಣ್ಣಿನನೋಟದ ಕೆಡದಂತಿರಿಸಿಕೆ ಎಂಬ ರಿಚರ್ಡ್ ಬ್ಯಾನಿಸ್ಟರನ ಇಂಗ್ಲಿಷ್ ಪುಸ್ತಕ (1583). ಲೀಡನ್ನಿನಲ್ಲಿ ಹರ್ಮನ್ ಬೊಯೊರೇವ್ ಕಣ್ಣುಶಾಸ್ತ್ರದ ಮೇಲೆ ಉಪನ್ಯಾಸಗಳನ್ನಿತ್ತ (1708). ಕಣ್ಣಿನ ಪೋತಿಬಿಂದುವಿಗಾಗಿ (ಕ್ಯಾಟರಾಕ್ಟ್) ಕಣ್ಣಿನ ಮಸೂರವನ್ನು ತೆಗೆದುಹಾಕುವ ವಿಧಾನವನ್ನು ಮೊದಲು ಜಾರಿಗೆ ತಂದವ ಜಾಕ್ವಿಸ್ ಡೇವಿಯಲ್ (1752). ಕಣ್ಣು ನೋಟದ ಕುಂದುಗಳಲ್ಲಿ, ಹತ್ತ ಕಣ್ಣು (ಗ್ಲಾಕೋಮ) (1750), ರಾತ್ರಿ ಕುರುಡು (1767), ಬಣ್ಣ ಕುರುಡುತನ (1794), ಅಸಮೋಸರಿಕೆ (ಅಸ್ಟಿಗ್ಮ್ಯಾಟಿಸಂ) (1801) ಮೊದಲು ಗಮನಕ್ಕೆ ಬಂದುವು. ಕಣ್ಣೊಳಗಿನ ಹೊಂದುವಳಿ (ಅಕಾಮಡೇಷನ್) ಸ್ನಾಯುಗಳನ್ನು ಮಾರ್ಗಾಗ್ನಿ ವಿವರಿಸಿದ (1761). ಪಾಪೆಪೊರೆ (ಐರಿಸ್) ಚಲನೆಗಳನ್ನು ಮೊದಲು ಫಾಂಟಾನ ಬಣ್ಣಿಸಿದ (1775). ಕಣ್ಣೊಳಗಿರುವ ಬಿಳಿ ಚುಕ್ಕೆಯನ್ನು (ಮ್ಯಾಕ್ಯುವ ಲೂಟಿಯ) ಬುಜ್ಜಿ ಬಣ್ಣಿಸಿದರೂ ಅದಕ್ಕೆ ಹೆಸರಿಟ್ಟವ ಸೊಮ್ಮರಿಂಗ್ (1791). ತಾಮಸ್ ಯಂಗನ ಪ್ರಕಟಣೆಗಳಿಂದ (1800–1804) ದೃಕ್‌ಶಾಸ್ತ್ರದ (ಅಪ್ಟಿಕ್ಸ್) ಯಾಂತ್ರಿಕತೆ, ಬೆಳಕಿನ ಅಲೆ ಸಿದ್ಧಾಂತ ಇವುಗಳಿಂದ ಕಣ್ಣುಶಾಸ್ತ್ರ ಮುನ್ನಡೆಯಿತು. ಆದರೆ ಇಂದಿನ ಕಣ್ಣುಶಾಸ್ತ್ರ ನಿಜವಾದ ವಿಜ್ಞಾನದ ಮಟ್ಟಕ್ಕೇರಿದ್ದು ಹರ್ಮನ್ ವಾನ್ ಹೆಲ್ಮ್‌ಹೋಲ್ಟ್ಜ್ ಕಣ್ಣುದರ್ಶಕವನ್ನು (ಆಫ್ತಾಲ್ಮೊಸ್ಕೋಪ್) ಕಂಡುಹಿಡಿದ (1850) ಮೇಲೆ ಮಾತ್ರ. 19ನೆಯ ಶತಮಾನದ ಕೊನೆಯರ್ಧದಲ್ಲಿ ಆಲ್ಬೆಕ್ಟ್ ವಾನ್ ಗ್ರೀಫ್ (1828–70) ಮತ್ತು ಅವನ ಹಿಂಬಾಲಕರು ಕಣ್ಣಿನ ಓಸರಿಕೆ, ಹೊಂದುವಳಿಗಳನ್ನು ಅಭ್ಯಸಿಸಿ ಅವುಗಳ ರೋಗಗಳನ್ನು ಚೆನ್ನಾಗಿ ಚಿಕಿತ್ಸೆ ಮಾಡಿ ಶಸ್ತ್ರಕ್ರಿಯಾ ವಿಧಾನಗಳನ್ನೂ ಜಾರಿಗೆ ತಂದರು. ಕಣ್ಣಿನ ಶಸ್ತ್ರವೈದ್ಯದ ತಂದೆ ಗ್ರೀಫ್ ಎನ್ನಬಹುದು. ನೋಟದ ಕುಂದುಗಳನ್ನು ಕನ್ನಡಕಗಳಿಂದ ಸರಿಪಡಿಸುವ ಇಂದಿನ ವಿಧಾನಗಳನ್ನು ಜಾರಿಗೆ ತಂದವ ಫ್ರಾನ್ಸ್ ಕಾರ್ನೆಲಿಸ್ ಡಾಂಡರ್ಸ್ (1818–89). ಕಣ್ಣಲ್ಲಿ ಬೆಳಕಿನ ಗತಿಯನ್ನು ವಿವರಿಸಿ ನೊಬೆಲ್ ಬಹುಮಾನ (1911) ಪಡೆದವನು ಅಲ್ವಾರ್ ಗಲ್‌ಸ್ಟ್ರಾಂಡ್ (1862–1930). (ಡಿ.ಎಸ್.ಎಸ್.)

**ಕಣ್ಣೇಗಾಲ ಕದನ :** ಹೊಯ್ಸಳ ವಿಷ್ಣುವರ್ಧನನಿಗೂ ಕಲ್ಯಾಣಿ ಚಾಳುಕ್ಯರಿಗೂ ಮೈಸೂರು ರಾಜ್ಯದ ಹಾಸನದ ಬಳಿಯ ಕಣ್ಣೇಗಾಲ ಗ್ರಾಮದ ಹತ್ತಿರದಲ್ಲಿ ಸು. 1118 ರಲ್ಲಿ ನಡೆದ ಕದನ. ವಿಷ್ಣುವರ್ಧನ ಚೋಳರ ಮೇಲೆ ಯುದ್ಧ ಘೋಷಿಸಿ ಅವರನ್ನು ಸೋಲಿಸಿ ಗಂಗವಾಡಿಯನ್ನು ತನ್ನ ರಾಜ್ಯಕ್ಕೆ ಸೇರಿಸಿಕೊಂಡು ಪ್ರಬಲನಾಗಿ, ಚಾಳುಕ್ಯ ಮಾಂಡಲಿಕರಾದ ಕದಂಬರನ್ನೂ ಉಚ್ಚಂಗಿಯ ಪಾಂಡ್ಯರನ್ನೂ ಸೋಲಿಸಿ, ಹೊಯ್ಸಳ ರಾಜ್ಯದ ಸ್ವಾತಂತ್ರ್ಯವನ್ನು ಘೋಷಿಸಿಕೊಂಡ. ತನ್ನ ಮಾಂಡಲಿಕನಾಗಿದ್ದ ವಿಷ್ಣುವರ್ಧನನ ಈ ಕೃತ್ಯಗಳಿಂದ ಚಾಳುಕ್ಯ ಸಮ್ರಾಟ ಆರನೆಯ ವಿಕ್ರಮಾದಿತ್ಯನಿಗೆ ಕೋಪ ಬಂತು. ಇತರ ಹನ್ನೆರಡು ಮಂದಿ ಸಾಮಂತರ ಸೈನ್ಯಗಳನ್ನೂ ಸೇರಿಸಿ ಸಿಂಧ ಸಾಮಂತರ ಆಚರಸನ ನಾಯಕತ್ವದಲ್ಲಿ ಹೊಯ್ಸಳ ರಾಜಧಾನಿಯಾದ ದ್ವಾರಸಮುದ್ರದ ಕಡೆಗೆ ಕಳುಹಿಸಿಕೊಟ್ಟ.

ವಿಷ್ಣುವರ್ಧನನ ಪ್ರಧಾನಾಮಾತ್ಯನೂ ಪ್ರಮುಖ ದಂಡನಾಯಕನೂ ಆದ ಗಂಗರಾಜನ ನೇತೃತ್ವದಲ್ಲಿ ಹೊಯ್ಸಳ ಸೈನ್ಯ ಆಚರಸನ ಸೈನ್ಯವನ್ನು ಹಾದಿಯಲ್ಲೆ ಕಣ್ಣೇಗಾಲದ ಬಳಿ ಎದುರಿಸಿತು. ಅನಿರೀಕ್ಷಿತವಾಗಿ ಮೇಲೆರಗಿದ ಹೊಯ್ಸಳ ಸೈನ್ಯದ ಪೆಟ್ಟಿಗೆ ತತ್ತರಿಸಿದ ಚಾಳುಕ್ಯ ಸೈನ್ಯ ಸೋತುಹೋಯಿತು. ಅದರಿಂದ ವಶಪಡಿಸಿಕೊಂಡ ಯುದ್ಧಸಾಮಗ್ರಿಯನ್ನು ಗಂಗರಾಜ ವಿಷ್ಣುವರ್ಧನನಿಗೆ ಒಪ್ಪಿಸಿದ. ಸಂಪ್ರೀತನಾದ ವಿಷ್ಣುವರ್ಧನ ಗಂಗರಾಜನಿಗೆ ಅನೇಕ ಗ್ರಾಮಗಳನ್ನು ಕೊಡುಗೆಯಾಗಿತ್ತ. ಪ್ರವರ್ಧಮಾನಕ್ಕೆ ಬರುತ್ತಿದ್ದ ಹೊಯ್ಸಳ ಸಾಮ್ರಾಜ್ಯದ ಆರಂಭ ಕಾಲದ ಒಂದು ಮುಖ್ಯ ಕದನವಿದು. (ಜಿ.ಆರ್.ಆರ್.)

**ಕಣ್ವ :** ಸಪ್ತರ್ಷಿಗಳಲ್ಲಿ ಒಬ್ಬ. ಋಗ್ವೇದದಲ್ಲಿ ಈತನನ್ನು ಕುರಿತ ಅನೇಕ ಸೂಕ್ತಿಗಳಿವೆ. ಸಮುದ್ರಮಥನ ನಡೆದಾಗ ಸೂರ್ಯನ ಹುಬ್ಬಿನಿಂದ ತೊಟ್ಟಿಕ್ಕಿದ ಬೆವರಿನ ಒಂದು ಹನಿಯಿಂದ (ಕಣ) ಈತ ಉದ್ಭವಿಸಿದನೆಂದು ಕಥೆ. ಈತ ಬಹಳ ಶಾಂತಸ್ವಭಾವದವನೂ ಕರುಣೆಯೂ ಆಗಿದ್ದ. ಈತನ ವಂಶಜರಿಗೆ ಕಾಣ್ವರು ಎಂದು ಹೆಸರು. ಇವರ ಪೈಕಿ ನಾರದ ಮಹರ್ಷಿ ಬಹಳ ಪ್ರಖ್ಯಾತನಾದವ.

ಶಕುಂತಲೆಯನ್ನು ಸಾಕಿದ ಕಣ್ವಋಷಿಯೂ ಇದೇ ವಂಶದವ. ಮಾಲಿನೀ ನದೀತೀರದಲ್ಲಿ ಇವನ ಆಶ್ರಮವಿತ್ತು. ಈತ ಮಹಾತಪಸ್ವಿ. ತನ್ನ ಆಶ್ರಮದಲ್ಲಿ ಹತ್ತುಸಾವಿರಕ್ಕೂ ಮೇಲ್ಪಟ್ಟು ವಿದ್ಯಾರ್ಥಿಗಳಿಗೆ ವಿದ್ಯಾದಾನ ಮಾಡುತ್ತ ಕುಲಪತಿ

ಯೆಂಬ ಖ್ಯಾತಿಗೆ ಒಳಗಾದವನೆಂದು ಕಾಳಿದಾಸನ ಅಭಿಜ್ಞಾನ ಶಾಕುಂತಲದಿಂದ ತಿಳಿದು ಬರುತ್ತದೆ. ಮಹಾಭಾರತದ ದುಷ್ಯಂತೋಪಾಖ್ಯಾನದಲ್ಲೂ ಇವನ ಬಗ್ಗೆ ಉಲ್ಲೇಖವಿದೆ. (ಎಸ್.ಎಸ್.ಆರ್.ಬಿ.)

**ಕಣ್ವ ಜಲಾಶಯ :** ಬೆಂಗಳೂರು ಜಿಲ್ಲೆಯ ಚನ್ನಪಟ್ಣ ತಾಲ್ಲೂಕಿನಲ್ಲಿ ಸದರಿ ಗ್ರಾಮದ ಉತ್ತರಕ್ಕೆ ಸುಮಾರು ನಾಲ್ಕು ಮೈಲಿ ದೂರದಲ್ಲಿ ಕಣ್ವ ನದಿಗೆ ಅಡ್ಡವಾಗಿ ಮಣ್ಣಿನ ಕಟ್ಟೆ ಏರಿಸಿ ನಿರ್ಮಿಸಿರುವ ಜಲಾಶಯ. ಇದರ ಉತ್ತರ ಅಕ್ಷಾಂಶ 12° 47′ ಮತ್ತು ಪೂರ್ವ ರೇಖಾಂಶ 77° 12′. ಬೆಂಗಳೂರಿನಿಂದ ಈ ಜಲಾಶಯದ ದೂರ 36 ಮೈಲಿಗಳು.

ಕಣ್ವ ನದಿ ಮೈಸೂರು ಸೀಮೆಯ ಬೆಂಗಳೂರು ಜಿಲ್ಲೆಯ ಮಾಗಡಿ ಗ್ರಾಮಕ್ಕೆ ಸಮೀಪದಲ್ಲಿ ಹುಟ್ಟಿ ಮಾಗಡಿ, ರಾಮನಗರ, ಚನ್ನಪಟ್ಣ ಮತ್ತು ಮಳವಳ್ಳಿ ತಾಲ್ಲೂಕುಗಳಲ್ಲಿ ಪ್ರವಹಿಸಿ ಅಂತಿಮವಾಗಿ ಕಾವೇರಿ ನದಿಯ ಉಪನದಿಯಾದ ಶಿಂಷಾ ನದಿಯೊಡನೆ ಸಂಗಮವಾಗುತ್ತದೆ.

ಕಣ್ವ ಜಲಾಶಯದ ಯೋಜನೆಯ ಕಾಮಗಾರಿಗಳು 1940ನೆಯ ಇಸವಿಯಲ್ಲಿ ಪ್ರಾರಂಭವಾಗಿ 1946ರಲ್ಲಿ ಮುಕ್ತಾಯವಾದುವು. ನೀರಾವರಿ ಇದರ ಪ್ರಧಾನ ಉದ್ದೇಶ. ಕಟ್ಟೆಯ ಉದ್ದ 4,665′ (1 422 ಮೀ.); ಅತ್ಯಂತ ಆಳವಾದ ಜಾಗದಲ್ಲಿ ಅದರ ಎತ್ತರ 59′ (17.98 ಮೀ.) ಜಲಾಶಯದ ವಿಸ್ತೀರ್ಣ (ಕೋಡಿ ಮಟ್ಟದಲ್ಲಿ) 1,190 ಎಕರೆ (4,815.6 ಚ. ಕಿ. ಮೀ.). ಭೂಮಟ್ಟದಿಂದ ಕೋಡಿ ಮಟ್ಟದವರೆಗೆ ತುಂಬುವ ಜಲದ ಘನಗಾತ್ರ 3,902 ಯೂನಿಟ್ಟುಗಳು (ಯೂನಿಟ್ಟು ಎಂದರೆ ಸುಮಾರು 2½ ಲಕ್ಷ ಘನ ಅಡಿಗಳು). ಇದರಲ್ಲಿ ಸುಮಾರು 400 ಯೂನಿಟ್ಟುಗಳಷ್ಟು ಜಲಭಾಗ ತೂಬಿನ ಮಟ್ಟದಿಂದ ಕೆಳಗೆ ಉಳಿಯುವುದರಿಂದ ನೀರಾವರಿಗೆ ಅದರ ಉಪಯೋಗವಿಲ್ಲ. ಅಂದರೆ ಜಲಾಶಯದ ನಿವ್ವಳ ಉಪಯುಕ್ತ ಜಲಭಾಗ ಸುಮಾರು 3,502 ಯೂನಿಟ್ಟುಗಳಷ್ಟಾಯಿತು.

ಕಣ್ವ ಜಲಾಶಯದ ಜಲಾನಯನ ಪ್ರದೇಶದ ವಿಸ್ತೀರ್ಣ 133 ಚ. ಮೈಲಿಗಳು. ಅದು ಒಂದು ವರ್ಷದಲ್ಲಿ ಒದಗಿಸುವ ನೀರಿನ ಸರಾಸರಿ 3,585 ಯೂನಿಟ್ಟುಗಳೆಂದು ಅಂದಾಜು. ಜಲಾಶಯದ ಮತ್ತು ಅದರ ಮೇಲ್ಭಾಗದ ಕಣಿವೆಯಲ್ಲಿ ಒಂದು ವರ್ಷದ ಅವಧಿಯಲ್ಲಿ ಬೀಳುವ ಸರಾಸರಿ 32″ ಮಳೆ ನೀರನ್ನು ಈ ಅಂದಾಜಿಗೆ ಆಧಾರವನ್ನಾಗಿ ಇಟ್ಟುಕೊಳ್ಳಲಾಗಿದೆ. ಈ ಜಲಾಶಯದ ಕಟ್ಟೆಯ ಅಡ್ಡಕೊಯ್ತ ವಿಷಮ ಸಮಾನಾಂತರ ಚತುರ್ಭುಜ (ಟ್ರ್ಯಾಪೆಜಾಯ್ಡಲ್) ಆಕಾರದ ಮಣ್ಣಿನ ಏರಿ. ಏರಿಯ ಅಡ್ಡಕೊಯ್ತವನ್ನು ಪಕ್ಕದ ಚೌಕಟ್ಟಿನಲ್ಲಿ ಕಾಣಬಹುದು. ನೀರು ತಾಕುವ ಕಡೆ ಏರಿಯ ಮೇಲುನದಿ ಭಾಗದ ಇಳಿಜಾರನ್ನು ದವಡೆ ಕಲ್ಲುಗಳಿಂದ (ರಿವೆಟ್‌ಮೆಂಟ್) ಬಿಗಿದು ನೀರಲೆಗಳ ರಭಸದ ಹೊಡೆತ ಏರಿಯನ್ನು ಶಿಥಿಲಗೊಳಿಸದಂತೆ ರಕ್ಷಸಲಾಗಿದೆ. ಏರಿಯ ಮಧ್ಯಭಾಗದಲ್ಲಿ ಸುಮಾರು 800′ ಪರ್ಯಂತ ಕಲ್ಲುಗುಂಡುಗಳಿಂದ ತುಂಬಿದ ಗುಪ್ತ ಚರಂಡಿಗಳನ್ನು ಸಮಾನಾಂತರವಾಗಿ ರಚಿಸಿ ಏರಿಯ ಒಳಭಾಗದಲ್ಲಿ ಕಾಣಬಹುದಾದ ನೀರನ್ನು ಹೊರತೆಗೆಯಲು ಅನುಕೂಲತೆ ಮಾಡಿದ್ದಾರೆ. ಇದರಿಂದಾಗಿ ಏರಿಯಲ್ಲಿ ಕಾರು ನೀರಿನ ಪ್ರಭಾವದಿಂದ ಒಡ್ಡು ಬೀಳುವ ಪ್ರಮೇಯ ಬಲುಮಟ್ಟಿಗೆ ಕಡಿಮೆಯಾಗಿದೆ.

ಪ್ರವಾಹದ ಕಾಲದಲ್ಲಿ ನದಿಯಿಂದ ಬಂದು ಸೇರುವ ಹೆಚ್ಚು ನೀರನ್ನು ಜಲಾಶಯದಿಂದ ಕ್ಷಿಪ್ರವಾಗಿ ಹೊರತೆಗೆಯಲು ಎಡತುದಿಯಲ್ಲಿ ಇಳಿಗೊಳವೆಗಳನ್ನೊಳಗೊಂಡ ಕೋಡಿಯನ್ನು ರಚಿಸಲಾಗಿದೆ. ವಾಯುಮಂಡಲದ ಒತ್ತಡದ ಆಧಾರದ ಮೇಲೆ ನಡೆಯುವ ಈ ಇಳಿಗೊಳವೆಗಳು ಅಷ್ಟೇ ಬಾಯಗಲವಿರುವ ಸಾಧಾರಣ ಆಯಾಕಾರದ ಕೋಡಿಗಿಂತ ಹೆಚ್ಚು ರಭಸದಿಂದ ನೀರನ್ನು ಹೊರತೆಗೆಯುತ್ತವೆ. ಈ ಜಲಾಶಯದ ಕೋಡಿಯಲ್ಲಿ ಅಳವಡಿಸಿರುವ ಇಳಿಗೊಳವೆಗಳು ಎರಡು ಬಗೆಯವು. ಮೊದಲನೆಯವು ಹೆಡೆಯಾಕಾರದವು (ಹುಡ್ ಸೈಫನ್ಸ್). ಎರಡನೆಯವು ಶಂಖ ತಿರುಪಿನಾಕಾರದವು (ವಲ್ಯೂಟ್ ಸೈಫನ್ಸ್). ಜಲಾಶಯದಲ್ಲಿ ಮೊದಲನೆಯ ಮಾದರಿ ಇಳಿಗೊಳವೆಗಳು ಐದು ಇವೆ. 8′×17′ ಈ ಕೊಳವೆಗಳು ನೀರೆಳೆಯುವ ಪ್ರಮುಖ ಕೊಳವೆಗಳಾಗಿ ಕೆಲಸ ಮಾಡುತ್ತವೆ. ಎರಡನೆಯ ತರಹೆ ಎಂದರೆ ಶಂಖ ತಿರುಪಿನ ಕೊಳವೆಗಳು ಎರಡು ಮಾತ್ರ ಇವೆ. ಅವು ಕೇವಲ ಸಹಾಯಕ ಕೊಳವೆಗಳಾಗಿ (ಎಂದರೆ ಮೊದಲಿನವನ್ನು ಕೆಲಸ ತೊಡಗಿಸಲು ಅನುವಾಗಿ) ವರ್ತಿಸುತ್ತವೆ. ಈ ಜಲಾಶಯದ ಕಟ್ಟೆಯಲ್ಲಿ ಪ್ರತ್ಯೇಕವಾಗಿ 180′ ಅಗಲದ ಸಾಧಾರಣ ಕೋಡಿಯೂ ಇದೆ. ಇಳಿಗೊಳವೆಗಳೇನಾದರೂ ಕೆಲಸ ಮಾಡದೆ ನಿಂತಲ್ಲಿ ಇದು ನೆರವಿಗೆ ಬರುತ್ತದೆ.

ಜಲಾಶಯದಿಂದ ನೀರಾವರಿಗಾಗಿ ಜಲವನ್ನು ಹೊರದೂಡಿಸುವ ಸಲುವಾಗಿ ಕಟ್ಟೆಯ ಎಡ ತುದಿಯಲ್ಲಿ ದೊಡ್ಡದೊಂದು ತೂಬನ್ನೂ ಎಡಗಡೆ ಸಣ್ಣದೊಂದು ತೂಬನ್ನೂ ಅಳವಡಿಸಿ ಈ ಎರಡು ತೂಬುಗಳಿಂದಲೂ ಪ್ರತಿಕ್ಷಣದಲ್ಲಿಯೂ 99 ಘನ ಅಡಿಗಳಷ್ಟು ನೀರನ್ನು ರವಾನಿಸುವ ಏರ್ಪಾಡು ಮಾಡಲಾಗಿದೆ. ಪ್ರಮುಖ ನಾಲೆಗಳು ಮತ್ತು ಇತರ ಶಾಖಾ ನಾಲೆಗಳೂ ಸೇರಿ 25 ಮೈಲಿಗಳಷ್ಟು (40.23 ಕಿ. ಮೀ.) ದೂರ ನೀರನ್ನು ಸಾಗಿಸುತ್ತವೆ. ಈ ಎಲ್ಲ ನಾಲೆಗಳೂ ಒಟ್ಟುಗೂಡಿ 5,000 ಎಕರೆಗಳಷ್ಟು (2,709 ಹೆಕ್ಟೇರುಗಳು) ಜಮೀನಿಗೆ ನೀರು ಹಾಯಿಸಬಲ್ಲವು.

ಕಣ್ವ ಜಲಾಶಯದ ಯೋಜನೆಯ ಒಟ್ಟು ಖರ್ಚು 40 ಲಕ್ಷ ರೂ. ಗಳು. ಇದರ ನೀರಾವರಿ ಕ್ರಮದಿಂದ 30 ಗ್ರಾಮಗಳಿಗೆ ಪ್ರಯೋಜನವುಂಟಾಗಿದೆ. (ಕೆ.ಎಸ್.ಕೆ.)

**ಕತಾರ್ಸಿಸ್ :** ಭೇದಿ, ವಿರೇಚನೆ ಎಂಬ ಅರ್ಥವನ್ನುಳ್ಳ ಈ ಪ್ರಾಚೀನ ಗ್ರೀಕ್ ಪದ ವೈದ್ಯಕ್ಕೆ ಸೇರಿದುದು. ತತ್ತ್ವಜ್ಞರು ಕ್ರಮೇಣ ಇದನ್ನು ಕೆಲವು ಕಲೆಗಳು ಉಂಟುಮಾಡುವ ಪರಿಣಾಮಕ್ಕೆ ಅನ್ವಯಿಸಿದರು.

ರುದ್ರನಾಟಕದ (ಗಂಭೀರ ನಾಟಕ) ಮೇಲೆ ಪ್ಲೇಟೊ ಮಹಾಶಯನಿಗೆ ವಿಶೇಷ ಆಗ್ರಹ. ಅದರಿಂದ ಆಗುವ ಕೇಡನ್ನು ಆತ ಹೀಗೆ ಬಣ್ಣಿಸಿದ : ನಾಟಕಶಾಲೆಯಲ್ಲಿ ಅದನ್ನು ವೀಕ್ಷಿಸುತ್ತ ನೋಟಕರು ತಮ್ಮ ಮರುಕವನ್ನು ತಡೆದಿಡಲಾರದೆ ಎಲ್ಲರಿದಿರಿಗೂ ಗಟ್ಟಿಯಾಗಿ ರೋದಿಸುತ್ತಾರೆ. ಆ ವರ್ತನೆಯಿಂದ ಅವರ ದಾರ್ಢ್ಯಕ್ಕೂ ಸಂಯಮಕ್ಕೂ ಹಾನಿ, ಅವರ ಪೌರುಷಕ್ಕೇ ಅಪಾಯ. ಆದ್ದರಿಂದ ಆದರ್ಶ ಗಣರಾಜ್ಯದಿಂದ ನಾಟಕಕರ್ತರನ್ನು ಗಡೀಪಾರು ಮಾಡತಕ್ಕದ್ದು.



ಕಣ್ವ ಜಲಾಶಯದ ಒಂದು ನೋಟ

ಪ್ಲೇಟೊವಿನ ಆಕ್ಷೇಪಕ್ಕೆ ಸೂಕ್ತ ಸಮಾಧಾನವನ್ನಿತ್ತು ರುದ್ರನಾಟಕವನ್ನು ಅರಿಸ್ಟಾಟಲ್ ಸಮರ್ಥಿಸಿದ. ಅವನ ವಿವರಣೆಯಂತೆ ರುದ್ರನಾಟಕ ಮೂರು ತೆರದಲ್ಲಿ ಪ್ರಯೋಜಕ. ಆದರೆ ಅವನ ಅಭಿಪ್ರಾಯಗಳು ವಿಶದವಾಗಿ ಪೋಷಿತವಾಗಿಲ್ಲ. ತನ್ನ ಪಾಲಿಟಿಕ್ಸ್ ಗ್ರಂಥದಲ್ಲಿ ಆತ ಸಂಗೀತ ಒದಗಿಸಿಕೊಡುವ ವಿರೇಚನವನ್ನು ಪ್ರಾಸಂಗಿಕವಾಗಿ ನಮೂದಿಸಿ, ಮುಂದೆ ಅದನ್ನು ತನ್ನ ಪೊಯಟಿಕ್‌ನಲ್ಲಿ ಬಿಡಿಸಿ ಬಿಡಿಸಿ ತಿಳಿಯಪಡಿಸುವುದಾಗಿ ಭರವಸೆ ಕೊಟ್ಟ. ನಮಗೆ ಉಪಲಬ್ಧವಾಗಿರುವ ಪೊಯಟಿಕ್‌ನ ಒಂದನೆಯ ಭಾಗದಲ್ಲಾದರೂ ಗಂಭೀರ ನಾಟಕದ ಕಾರ್ಯವನ್ನು ಹೇಳುವ ಸಂದರ್ಭದಲ್ಲಿ ಭಯ ಮರುಕಗಳ ಮೂಲಕ ಆ ಭಾವಗಳ ವಿರೇಚನವನ್ನು ಅದು ಎಸಗುತ್ತದೆ ಎಂಬ ಒಂದೇ ಒಂದು ಸಂದಿಗ್ಧ ವಾಕ್ಯವಿದೆ. ಮತ್ತಾವ ಕಡೆಯಲ್ಲೂ ಕತಾರ್ಸಿಸ್ ಪದದ ಯಾವ ವಿವರಣೆಯೂ ಸಿಕ್ಕುವುದಿಲ್ಲ. ಅವನ ನಿಜವಾದ ಅಭಿಪ್ರಾಯ ಏನಾಗಿತ್ತೆಂಬುದನ್ನು ನಿರ್ದಿಷ್ಟ

ವಾಗಿ ತಿಳಿಯುವಂತಿಲ್ಲ. ಪಾಶ್ಚಾತ್ಯ ಪಂಡಿತರು ಅದಕ್ಕೆ ಅರುವತ್ತು ವಿಧದ ಅರ್ಥಗಳನ್ನು ಊಹಿಸಿದ್ದಾರಂತೆ; ಹೀಗಿದ್ದರೂ ಅರಿಸ್ಟಾಟಲನ ಇಂಗಿತ ಏನಾಗಿದ್ದಿರಬಹುದೆಂದು ಹೆಚ್ಚು ಕಡಿಮೆ ಮನವೊಪ್ಪುವಂತೆ ಗೊತ್ತುಹಿಡಿಯಲು ಅವಕಾಶ ಇಲ್ಲದಿಲ್ಲ.

ರುದ್ರನಾಟಕ ನೋಟಕನ ಭಾವನೆಗಳನ್ನು ಕೆರಳಿಸಿ ಹೊರಗೆಳೆಯುವುದನ್ನು ಅರಿಸ್ಟಾಟಲ್ ಒಪ್ಪಿಕೊಂಡ. ಹಾಗಾಗುವುದರಿಂದ ಕೆಡುಕಿಗೆ ಬದಲು ಒಳ್ಳಿಯದೇ ಆಗುವುದೆಂದು ಅವನ ಜವಾಬು. ಭಾವಗಳನ್ನು ಅಂತರ್ಯದೊಳಗೆ ಅದುಮಿಟ್ಟರೆ ಕಲ್ಮಷವನ್ನು ಒಳಗಿಟ್ಟುಕೊಂಡಂತೆ ಮಾನಸಿಕ ಆರೋಗ್ಯಕ್ಕೆ ಬಾಧೆ. ಯುಕ್ತ ರೀತಿಯಲ್ಲಿ ಅವನ್ನು ಆಗಾಗ ಹೊರಗೆಡವಿದರೆ ಚಿತ್ತ ತನ್ನ ಮೇಲಣ ಭಾರವನ್ನು ಕೊಡವಿಕೊಂಡು ಹಗುರವಾಗುತ್ತದೆ. ಜೀವನದ ಲವಲವಿಕೆ ದೃಢವಾಗುತ್ತದೆ. ಹೀಗೆ ರುದ್ರನಾಟಕ ಹೋಮಿಯೋಪತಿ ವೈದ್ಯದ ಔಷಧದಂತೆ ಚಿಕಿತ್ಸೆ ನಡೆಸುತ್ತದೆ.

ರುದ್ರನಾಟಕದ ಇನ್ನೆರಡು ಪ್ರಯೋಜನಗಳೂ ಅರಿಸ್ಟಾಟಲನ ಮನಸ್ಸಿಗೆ ಹೊಳೆದಿತ್ತೆಂದು ವಿದ್ವಾಂಸರ ಅಭಿಮತ. ಅದು ತಂದೀಯುವ ಸಂತೋಷ ಪ್ರಾಪ್ತಿಯೇ ಎರಡನೆಯ ಪ್ರಯೋಜನ. ಯಾವ ಬಗೆಯ ಸಂತೋಷ ಅದು ? ರುದ್ರನಾಟಕದ ನಾಯಕ ದುರುಳನಲ್ಲ. ಒಟ್ಟಿನಲ್ಲಿ ಅವನು ಸದ್ಗುಣಿ. ಯಾವುದೋ ಅಲ್ಪ ಅಜಾಗ್ರತೆಗೊ ಗುಣಾತಿಶಯಕ್ಕೋ ಪಕ್ಕಾಗಿ ಆತ ತಪ್ಪು ಮಾಡುತ್ತಾನೆ. ಅದರಿಂದ ಅವನಿಗೆ ಆಗುವ ತೊಂದರೆಯೂ ಸಂಕಟವೂ ವಿಪರೀತ. ಅದಷ್ಟಕ್ಕೂ ಅವನೆಂದಿಗೂ ಅರ್ಹನಲ್ಲ. ಕಾರಣ, ಅವನ ವಿಷಾದ ಚರಿತ್ರೆ ಪ್ರೇಕ್ಷಕರಲ್ಲಿ ಭೀತಿಯನ್ನೂ ಅನುಕಂಪವನ್ನೂ ಉತ್ಪಾದಿಸುತ್ತದೆ. ಪ್ರೇಕ್ಷಕರು ಸಾಮಾನ್ಯವಾಗಿ ತಮ್ಮ ತಮ್ಮ ಕ್ಷುಲ್ಲಕ ದಿನಚರಿ ಕಷ್ಟವ್ಯಸನಗಳಲ್ಲಿ ಲೀನರಾದ ಅತ್ಯಂತ ಸ್ವಾರ್ಥದ ಮಂದಿ. ನಾಟಕ ಮಂದಿರದಲ್ಲಿ ನಾಯಕನ ಭಾರಿ ಸಂತಾಪಗಳಿಗೆ ಮನಸೋತು ತಮ್ಮ ಸ್ವಂತ ಯೋಗಕ್ಷೇಮದ ಸಂಕೋಚದಿಂದ ವಿಮುಕ್ತರಾಗಿ ಕೊಂಚಕಾಲ ಮೇಲ್ಮಟ್ಟಕ್ಕೆ ಏರುತ್ತಾರೆ. ಹೀಗೆ ಮನಶ್ಶುದ್ಧಿಯನ್ನು ಆಗಗೊಳಿಸಿ ರುದ್ರನಾಟಕ ಆನಂದದಾಯಕವಾಗುತ್ತದೆ.

ಮೂರನೆಯದಾಗಿ, ಗಂಭೀರನಾಟಕದ ನಾಯಕ ಕೇವಲ ಒಬ್ಬ ಬಿಡಿ ವ್ಯಕ್ತಿಯಲ್ಲ. ಮಾನವಕೋಟಿಯ ಉದಾತ್ತ ಪ್ರತಿನಿಧಿ. ಅವನ ಆಗುಹೋಗುಗಳ ನಿಕಟ ಪರಿಚಯದಿಂದ ಮನುಷ್ಯ ಜೀವನದ ಆಳವೂ ವಿಶಾಲವೂ ಆದ ಸಾರ್ವತ್ರಿಕ ಅನುಭವ ನೋಟಕರಿಗೆ ದಕ್ಕುತ್ತದೆ. ತನ್ಮೂಲಕ ಅವರ ಬಾಳು ಎತ್ತರವಾಗಬಹುದು. ಲಲಿತಕಲೆಯ ಪಾಲಿಗೆ ನೇಮಕವಾಗಿರುವ ಕರ್ತವ್ಯವನ್ನು ರುದ್ರನಾಟಕ ಹೀಗೆ ಅತ್ಯುತ್ಕೃಷ್ಟವಾಗಿ, ಭಾಷೆಕೊಟ್ಟು ನೆರವೇರಿಸಬಲ್ಲುದು.

ಈ ಅಭಿಪ್ರಾಯಗಳು ಎಷ್ಟರಮಟ್ಟಿಗೆ ಅರಿಸ್ಟಾಟಲನದೊ ಹೇಳುವಂತಿಲ್ಲ. ಪಾಶ್ಚಾತ್ಯ ವಿಮರ್ಶೆಯಲ್ಲಿ ಕೆಥಾರ್ಸಿಸ್ ಪದದಷ್ಟು ಚರ್ಚಿತವಾಗಿರುವ ಉಕ್ತಿ ಬೇರೊಂದಿಲ್ಲ.

ಹರ್ಷನಾಟಕವೂ ನಗುವಿನ ಮೂಲಕ ಇದೇ ರೀತಿ ಭಾವಶುದ್ಧಿಯನ್ನು ದೊರಕಿಸುತ್ತದೆಯೆಂಬುದು ಪ್ರಾಯಶಃ ಅರಿಸ್ಟಾಟಲನ ಅಭಿಮತವಾಗಿತ್ತು. ಆದರೆ ಹರ್ಷನಾಟಕವನ್ನು ಕುರಿತ ಅವನ ಲೇಖನ ಕಣ್ಮರೆಯಾಗಿದೆಯಾಗಿ ಖಚಿತವಾಗಿ ಏನನ್ನೂ ಹೇಳುವಂತಿಲ್ಲ.

ಕೆಥಾರ್ಸಿಸ್ ತತ್ತ್ವ ಅರಿಸ್ಟಾಟಲನ ಬಗೆಗೇ ರುದ್ರನಾಟಕದ ಬಗೆಗೇ ಮಿತಿಗೊಂಡಿಲ್ಲ. ಪಾಶ್ಚಾತ್ಯ ಕಲಾಮೀಮಾಂಸೆಯಲ್ಲಿ ಅದಕ್ಕೆ ಹೆಚ್ಚಿನ ವ್ಯಾಪ್ತಿ ಲಭಿಸಿದೆ. ಲಲಿತಕಲೆಯ ಸ್ವರೂಪದ ಮೇಲೆ ಕೆಥಾರ್ಸಿಸ್ ಬೆಳಕು ಚೆಲ್ಲುತ್ತದೆಯೆ ? ಇದೊಂದು ಗಹನ ಪ್ರಶ್ನೆ. ಇಲ್ಲವೆಂದು ಅನೇಕರ ವಾದ. ಕಲೆಗೋಸ್ಕರ ಕಲೆ ಇರುವುದರಿಂದ ಅದಕ್ಕೆ ಪ್ರತ್ಯೇಕ ಉದ್ದೇಶವನ್ನು ಆರೋಪಿಸುವುದು ತಪ್ಪು. ನಾಟಕ ಒಂದು ವಿನೋದ ಅಷ್ಟೆ. ವಿನೋದ ಮುಖ್ಯವಲ್ಲ. ಅದರಿಂದ ಉಂಟಾಗಬಹುದಾದ ಭಾವಶುದ್ಧಿ ಇತ್ಯಾದಿಗಳು ಕೇವಲ ಗೌಣ—ಎಂದವರ ವಾದ. (ಎಸ್.ವಿ.ಆರ್.)

**ಕತೆಗಾರ :** ಕಥಾಸಾಹಿತ್ಯ ವಿತರಣೆಗೆ ಸೊಂಟ ಕಟ್ಟಿ ನಿಂತ ಕನ್ನಡ ಮಾಸಪತ್ರಿಕೆ. 1920ರ ತರುವಾಯದ ಕಾಲ ಹೊಸಗನ್ನಡಸಾಹಿತ್ಯ ಸೃಷ್ಟಿಯ ಉತ್ಸಾಹದ ಕಾಲ. ಆಗ ಪ್ರಾಸ ಛಂದೋಮುಕ್ತವಾದ ಹೊಸ ಕವಿತೆ ಹಳೆಯ ಕಟ್ಟುಪಾಡುಗಳನ್ನು ಕಳಚಿ ಮೈಗೊಡವಿಕೊಂಡು ಮೇಲೆದ್ದಂತೆ ಸಣ್ಣ ಕಥೆಗಳ ಒಂದು ಹೊಸ ಯುಗವೂ ಆರಂಭವಾಯಿತೆನ್ನಬೇಕು. ಆಗ ಬಂದ ಆ ಬೆಳೆ ತುಂಬ ಹುಲುಸು. ಸಣ್ಣಕಥೆಯ ವ್ಯಾಪ್ತಿ ವೈವಿಧ್ಯಗಳನ್ನು ಮನಗಂಡ ತರುಣ ಬರೆಹಗಾರರು ಅದಕ್ಕೆ ಕೈಹಾಕಿದರು. ಸಂಕೀರ್ಣ ವಿಷಯಗಳನ್ನು ಪ್ರಕಟಿಸುತ್ತಿದ್ದ ವಾರಪತ್ರಿಕೆ ಮಾಸಪತ್ರಿಕೆಗಳ ಜೊತೆಗೆ ಸಣ್ಣ ಕಥೆಗಳಿಗಾಗಿಯೇ ಮೀಸಲಾದ ಪತ್ರಿಕೆಗಳು ತಲೆಯೆತ್ತಿದುವು.

ಈ ಪತ್ರಿಯ ಸ್ಥಾಪಕ-ಸಂಪಾದಕರು ಎಂ. ಎನ್. ನಾರಾಯಣರಾವ್. ಪತ್ರಿಕೆ ಹುಟ್ಟಿದ್ದು ಬೆಂಗಳೂರಿನಲ್ಲಿ; 1933ನೆಯ ಇಸವಿಯ ಅಕ್ಟೋಬರ್ ತಿಂಗಳಲ್ಲಿ. ಕಿರೀಟ ಚತುರ್ಥಾಕಾರದ 48 ಪುಟಗಳ ಬಿಡಿ ಪತ್ರಿಕೆಗೆ ಆಗ ಎರಡೇ ಆಣೆ. ಸಣ್ಣ ಕಥೆಯ ಬರೆವಣಿಗೆಯಲ್ಲಿ ಈಗ ಪ್ರಸಿದ್ಧವಾಗಿರುವ ಹಲವು ಬರೆಹಗಾರರು ಕಥಾವಸ್ತು, ನಿರೂಪಣೆ, ತಂತ್ರ ಮುಂತಾದ್ದರಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದ ಕಾಲವದು. ಜನರೂ ಆ ಕಥೆಗಳನ್ನು ಅಷ್ಟೇ ಕುತೂಹಲಾಸಕ್ತಿಗಳಿಂದ ಓದುತ್ತಿದ್ದರು. ಹೀಗಾಗಿ ಈ ಸಾಹಿತ್ಯ ಪ್ರಕಾರ ಮನೋರಂಜನೆ ಮನೋನ್ನತಿಗಳ ಸಾಧನವಾಗಿ ಬೇರೂರಿ ನಿಂತಿತ್ತು. ಕತೆಗಾರದ ಸಂಪಾದಕರು 1934ನೆಯ ಅಕ್ಟೋಬರ್ ಸಂಚಿಕೆಯಲ್ಲಿ ಬರೆದ ಸಂಪಾದಕೀಯ ಟಿಪ್ಪಣಿಯಲ್ಲಿ ಕಥೆಗಳನ್ನು ಆರಿಸುವುದರಲ್ಲಿ ಇನ್ನೂ ಹೆಚ್ಚು ವೈವಿಧ್ಯಕ್ಕೆ ಗಮನ ಕೊಡಲಾಗುವುದು. ಮುಖ್ಯವಾಗಿ ಇಂದು ವಾಚಕರಿಗೆ ನಾವೀನ್ಯ ಬೇಕು—ಕಥಾವಸ್ತುವಿನಲ್ಲಿ ನಾವೀನ್ಯ, ಕಥಾ ರೀತಿಯಲ್ಲಿ ನಾವೀನ್ಯ—ಎಂದು ಹೇಳಿದ್ದಾರೆ. ಕಥಾಸಾಹಿತ್ಯದಲ್ಲಿ ಹೊಸತನ್ನು ಹುಡುಕುವ ದೃಷ್ಟಿ ಆಗಲೇ ಹೇಗೆ ಬೆಳೆದಿತ್ತೆನ್ನುವುದಕ್ಕೆ ಇದು ಸಾಕ್ಷಿ.

ಕತೆಗಾರ ಪತ್ರಿಕೆಯನ್ನು 1944ನೆಯ ಅಕ್ಟೋಬರಿನಲ್ಲಿ ಜಿ. ಎ. ನರಸಿಂಹ ಮೂರ್ತಿಯವರು ವಹಿಸಿಕೊಂಡು ನಡೆಸತೊಡಗಿದರು. ಆಗ ಬಿಡಿಸಂಚಿಕೆಯ ಬೆಲೆ ನಾಲ್ಕಾಣೆ. ಪತ್ರಿಕೆಯ ಅಂದ ಅಚ್ಚುಕಟ್ಟು ತಿರುಳುಗಳಲ್ಲಿ ಹಲವು ಮಾರ್ಪಾಡುಗಳನ್ನು ಅವರು ಮಾಡಿದರು. ಅವರಲ್ಲಿ ಮುಖ್ಯವಾದದ್ದು ಕನ್ನಡ ಕಥಾವಾಹಿನಿ ಎಂಬ ಶೀರ್ಷಿಕೆ. ಆಗಿನ ಹೆಸರಾದಂತ ಕನ್ನಡ ಮಾಸಪತ್ರಿಕೆಗಳಲ್ಲಿ ಬರುತ್ತಿದ್ದ ಸಣ್ಣ ಕಥೆಗಳನ್ನು ವಿಮರ್ಶೆ ಮಾಡಿ ಜಳ್ಳು ಯಾವುದು, ಕಾಳುಯಾವುದು, ಯಾವ ಕಥೆ ಯಾವ ಕಾರಣದಿಂದ ಮೇಲು, ಯಾವ ಕಾರಣದಿಂದ ಅಲ್ಲ ಎನ್ನುವ ಕೂಲಂಕಷ ವಿಮರ್ಶೆ ಈ ವಿಭಾಗದಲ್ಲಿ ಬರುತ್ತಿತ್ತು; ಇದು ಹೊಸದಾಗಿ ಕಥೆ ಬರೆಯುವವರಿಗೆ ಒಂದು ಮಾರ್ಗದರ್ಶನವಾಗಿತ್ತು; ಕಥೆಗಳ ನೆಲೆಬೆಲೆಗಳನ್ನು ತಿಳಿದುಕೊಳ್ಳುವುದರಲ್ಲಿ ಓದುಗರಿಗೆ ಸಹಾಯಕವಾಗಿತ್ತು.

ಹೀಗೆ ಸಣ್ಣಕಥೆಗಳ ಬರೆಹಗಾರರ ಬಳಗವನ್ನು ಕಟ್ಟಿ, ಓದುಗರಲ್ಲಿ ಒಳ್ಳೆಯ ಮಟ್ಟದ ರುಚಿ ಬೆಳೆಸಿ, ಕನ್ನಡ ಕಥಾಸಾಹಿತ್ಯದ ಬೆಳೆವಣಿಗೆಗೆ ದೊಡ್ಡ ಪಾಲಿನ ಸೇವೆ ಸಲ್ಲಿಸಿದ ಕತೆಗಾರ ಪತ್ರಿಕೆ 1968ನೆಯ ಅಕ್ಟೋಬರ್ ವರೆಗೂ ನಡೆಯಿತು. (ಎಚ್.ಎಸ್.)

**ಕತ್ತರಿಸುವುದು :** ಗಿಯರು ಕತ್ತರಿಸುವುದು ಮತ್ತು ಮಾತೃಕೆಯನ್ನು (ಡೈ) ಕತ್ತರಿಸುವುದು ಎಂದು ಎರಡು ವಿಧಗಳಿವೆ (ಕಟಿಂಗ್).

ಗಿಯರು ಕತ್ತರಿಸುವುದು: ತಿರುಗುತ್ತಿರುವ ನಾಳಸಹಿತ (ಫ್ಲೂಟೆಡ್) ರೇಖೆಯ ಭ್ರಮಿಕರ್ತಕ (ಹಾಬ್) ನೇರ (ಸ್ಪರ್), ಕುಂಡಲಿನಿ (ಹೆಲಿಕಲ್) ಮತ್ತು ವರ್ಮ್ ಗಿಯರುಗಳನ್ನು ಕತ್ತರಿಸುವ ಕ್ರಿಯೆ. ಈ ವಿಧಾನದಲ್ಲಿ ಕಾಯಕ ಪದಾರ್ಥ (ಬ್ಲ್ಯಾಂಕ್) ಮತ್ತು ಕರ್ತಕಗಳು ಮಾಡುವ ತಲಾ ಒಂದೊಂದು ಪರಿಭ್ರಮಣ ಚಲನೆ ಹಾಗೂ ಅದೇ ಕಾಲದಲ್ಲಿ ಕರ್ತಕ ಮಾಡುವ ರೇಖೀಯ ಚಲನೆ—ಹೀಗೆ ಒಮ್ಮೆಗೇ ಮೂರು ಚಲನೆಗಳನ್ನು ಕಾಣಬಹುದು.



ಸ್ಪರ್ ಗಿಯರನ್ನು ಕತ್ತರಿಸುವುದು

ಕ್ರಿಯೆ : ಮುಂದೆ ಗಿಯರು ಯಾವ ಜವದಲ್ಲಿ (ಸ್ಪೀಡ್) ಓಡಬೇಕೋ ಅದೇ ಜವದಲ್ಲಿ ಈಗ ಕಾಯಕಪದಾರ್ಥವನ್ನು ತಿರುಗಿಸಬೇಕು. ಸೂಕ್ತ ಜವದಲ್ಲಿ ತಿರುಗುತ್ತಿರುವ ಕರ್ತಕವು ಕಾಯಕಪದಾರ್ಥವನ್ನು ಒತ್ತಿ ಹಲ್ಲುಗಳನ್ನು ಕತ್ತರಿಸುತ್ತದೆ. ಈ

ವಿಧಾನದಲ್ಲಿ ಉಷ್ಣ ಯಾವ ಒಂದು ಭಾಗದಲ್ಲಿಯೂ ಕೇಂದ್ರೀಕೃತವಾಗದೆ ಸಮನಾಗಿ ಹಂಚಲ್ಪಡುತ್ತದೆ.

ಮಾತೃಕೆಯನ್ನು ಕತ್ತರಿಸುವುದು (ಡೈಹಾಬಿಂಗ್) : ಗಡಸುಗೊಳಿಸಿದ ಉಕ್ಕಿನಲ್ಲಿ (ಹಾರ್ಡನ್ಡ್ ಸ್ಟೀಲ್) ನಮಗೆ ಬೇಕಾದ ಮಾತೃಕೆಯ ಪ್ರತಿಕೃತಿಯನ್ನು ಕೊರೆಯಬೇಕು. ಅನಂತರ ಇದನ್ನು ಪ್ರತಿಕೃತಿಗಿಂತಲೂ ಮೆದುವಾದ ಲೋಹದೊಳಗೆ ಅಧಿಕ ಒತ್ತಡದಲ್ಲಿ ದಬ್ಬಿದಾಗ, ಪ್ರತಿಕೃತಿಯು ಲೋಹವನ್ನು ಕತ್ತರಿಸಿಕೊಂಡು ಹೋಗುವುದರಿಂದ ಇಚ್ಛಿತ ಮಾತೃಕೆ ದೊರೆಯುತ್ತದೆ. (ಕೆ.ಆರ್.ಎಂ.ಜಿ.)

**ಕತ್ತರಿಹುಳುಂಗಳು :** ಕೀಟವರ್ಗದ ಲೆಪಿಡಾಪ್ಟಿರ ಗಣದ ಪ್ಯಾಲಿನಿಡೀ ಮತ್ತು ನಾಕ್ಟುಯಿಡೀ ಕುಟುಂಬಕ್ಕೆ ಸೇರಿದ ಪತಂಗಗಳ ಡಿಂಭಗಳು (ಕಟ್‌ವರ್ಮ್ಸ್). ಕೆಲವು ಬೆಳೆಗಳ ಸಸಿಗಳನ್ನು ಕತ್ತರಿಸಿ ತುಂಡುಮಾಡಿ ನಾಶಪಡಿಸುವುದರಿಂದ ಇವಕ್ಕೆ ಈ ಹೆಸರು. ಇವು ಉರುಳೆಯಾಕಾರದವು, ನುಣುಪಾದ ಮೈಯುಳ್ಳವು. ಅವುಗಳ ಬಣ್ಣ ಮಣ್ಣಿನಂತೆಯೇ. ಸಾಮಾನ್ಯವಾಗಿ ಇವುಗಳಲ್ಲೆಲ್ಲ 5 ಜೊತೆ ಮುಂಗಾಲುಗಳಿವೆ (ಪ್ರೋ ಲೆಗ್ಸ್).

ಹಗಲಿನಲ್ಲಿ ಹೆಂಟೆ, ಕಲ್ಲು ಮತ್ತು ಹುಡಿಮಣ್ಣಿನ ಕೆಳಗೆ ಅಡಗಿಕೊಂಡಿದ್ದು ರಾತ್ರಿವೇಳೆ ತಮ್ಮ ವಿಧ್ವಂಸಕ ಚಟುವಟಿಕೆಗಳಲ್ಲಿ ತೊಡಗುತ್ತವೆ. ಒಟ್ಲುಪಾತಿಗಳಿಗೆ ಇವುಗಳಿಂದ ತೊಂದರೆ ಹೆಚ್ಚು. ಇವು ಹೆಚ್ಚಿನ ಸಂಖ್ಯೆಯಲ್ಲಿದ್ದಾಗ ಗುಂಪುಗುಂಪಾಗಿ ಹೊಲದಿಂದ ಹೊಲಕ್ಕೆ ಸಾಗಿ ಸಾಕಷ್ಟು ನಷ್ಟ ಉಂಟುಮಾಡುತ್ತವೆ. ಇವು ಗಿಡಗಳ ಎಲೆ, ಬೇರು, ಕಾಂಡ ಮುಂತಾದುವನ್ನು ಕತ್ತರಿಸುವುದು ಸಾಮಾನ್ಯವಾದರೂ ಕೆಲವು ಬಗೆಯವು ಹಣ್ಣು ಮತ್ತು ಮರಗಳನ್ನು ಕೊರೆಯುವುದೂ ಉಂಟು. ಕೆಲವಂತೂ ಕೃಷಿ ಬೆಳೆಗಳಿಗೆ ತೀವ್ರ ಹಾನಿಯುಂಟುಮಾಡುವ ಪಿಡುಗುಗಳಾಗಿವೆ. ಅವುಗಳಲ್ಲಿ ಮುಖ್ಯವಾದುವು ಇವು: ಹೊಗೆಸೊಪ್ಪಿನ ಹುಳು (ಪ್ರೋಡೀನಿಯ), ರಾಗಿಯ ಹುಳು (ಲ್ಯಾಫಿಗ್ಮ), ದಂಡುಹುಳು (ಸಿರ್‌ಫಿಸ್), ಆಲೂಗೆಡ್ಡೆಯ ಕತ್ತರಿಹುಳು (ಯುಕ್ಸೋವ) ಮತ್ತು ಬತ್ತದ ಮುತ್ತುವ ಹುಳು (ಸ್ಪೋಡಾಪ್ಟಿರ) ಇವಲ್ಲದೆ ಕೋಸು, ಮೆಣಸಿನಕಾಯಿ, ಈರುಳ್ಳಿ, ಬದನೆ ಮುಂತಾದ ಬೆಳೆಗಳಿಗೆ ಹತ್ತುವ ಕತ್ತರಿಹುಳುಗಳೂ ಉಂಟು.

ವಿಷಬೆರೆತ ಆಕರ್ಷಕ ಆಹಾರವನ್ನು (ಬೇಯ್ಟ್) ನೆಲದಲ್ಲಿ ಹರಡಿ ಅವು ಸಾಯುವಂತೆ ಮಾಡುವುದೊಂದೇ ಇವುಗಳ ನಿವಾರಣೆಯ ಪರಿಣಾಮಕಾರಿ ಮಾರ್ಗ. (ಡಿ.ಎಸ್.)

**ಕತ್ತಲೆ ಮುಸುಕು :** ಯುದ್ಧ ದಿವಸಗಳಂದು ರಾತ್ರಿ ವೇಳೆ ಸ್ವಂತನೆಲೆ ಶತ್ರುವಿಗೆ ಕಾಣದಂತೆ ಮಾಡಲು ವಿಧಿಸುವ ಆಜ್ಞೆ (ಬ್ಲ್ಯಾಕ್‌ಔಟ್). ಮುಖ್ಯ ಉದ್ದೇಶ ರಕ್ಷಣೆ. ಆಕಾಶದಲ್ಲಿ ಸುತ್ತುತ್ತಿರುವ, ನೆಲದ ಮೇಲೆ ಗಸ್ತುತಿರುಗುತ್ತಿರುವ, ಸಮುದ್ರದಲ್ಲಿ ಹೊಂಚುತ್ತಿರುವ ಶತ್ರುವಿನ ವಿರುದ್ಧ ಕತ್ತಲೆಯ ಮುಸುಕು ಅಪಾರ ಸ್ವರಕ್ಷಣೆ ಒದಗಿಸುತ್ತದೆ. ಎಲ್ಲೋ ಕಾಣಬರುವ ಒಂದೇ ಒಂದು ಬೆಳಕಿನ ಕಿರಣವೂ ಎದುರಾಳಿಯ ಇರವಿನ ಬಗ್ಗೆ ಅಪಾರಮಾಹಿತಿಕೊಡಬಲ್ಲುದು. ಆದ್ದರಿಂದ ಸ್ವಂತ ಬಲಗಳು ತಮ್ಮ ಯಾವುದೇ ನೆಲೆಯಾಗಲೀ ಚಲನೆಯಾಗಲೀ ಶತ್ರುವಿಗೆ ಇನಿತೂ ತಿಳಿಯದಂತೆ ಎಚ್ಚರವಹಿಸಬೇಕಾದದ್ದು ಬಲು ಆವಶ್ಯಕ. ಕತ್ತಲೆ ಮುಸುಕು ಆಜ್ಞೆ ಜಾರಿಯಲ್ಲಿರುವಾಗ ಪಾಲಿಸುವ ಕೆಲವು ನಿಯಮಗಳು ಹೀಗಿವೆ; ಸೈನ್ಯಬಲಗಳ ಚಲನೆಯ ಕಾಲದಲ್ಲಿ (ಅನಿವಾರ್ಯವೆನ್ನಿಸಿದಾಗ ಮಾತ್ರ) ಮರೆಮಾಡಿರುವ ಮಿಣುಕು ದೀಪಗಳನ್ನು ಉಪಯೋಗಿಸಬೇಕು; ನಾಗರಿಕ ವಲಯಗಳಲ್ಲಿ ಬೀದಿಗಳ ಸಾಲುದೀಪಗಳು, ಶೃಂಗಾರದೀಪಗಳು ಯಾವುವೂ ಇರುವುದಿಲ್ಲ; ಮನೆಗಳ ಪಾರದರ್ಶಕ ವಸ್ತುಗಳನ್ನೆಲ್ಲ ಕಪ್ಪುಗವಸಿನಿಂದ ಮುಚ್ಚಿರಬೇಕು; ವಾಹನಗಳ ಮಾರ್ಗದರ್ಶೀ ದೀಪಗಳ ಮೇಲುಭಾಗವನ್ನು ಕಪ್ಪುಬಣ್ಣದಿಂದ ಮೆತ್ತಿರುವುದಲ್ಲದೇ ಅವುಗಳ ಬೆಳಕು ಬಲು ಮಂದವಾಗಿರಬೇಕು; ತೀವ್ರ ಪರಿಸ್ಥಿತಿಗಳಲ್ಲಿ ಇಂಥ ಚಲನೆಯನ್ನು ನಿಷೇಧಿಸಬಹುದು.

ಶತ್ರುವಿಗೆ ಉಪಯುಕ್ತವಾಗುವ ಯಾವುದೇ ಸಮಾಚಾರದ ಪ್ರಕಟನೆಯನ್ನು ತಡೆಹಿಡಿಯುವುದು—ಎಂಬ ವ್ಯಾಪಕಾರ್ಥದಲ್ಲೂ ಬ್ಲ್ಯಾಕ್‌ಔಟ್ ಎಂಬ ಪದವನ್ನು ಬಳಸಲಾಗುತ್ತದೆ ಎಂದಿದೆ. (ಎ.ಎನ್.ಎಸ್.ಎಂ.)

**ಕತ್ತಾಳೆ :** ಏಕದಳ ಸಸ್ಯಗಳ ಗುಂಪಿನಲ್ಲಿನ ಅಮರಿಲ್ಲಿಡೇಸೀ ಕುಟುಂಬಕ್ಕೆ ಸೇರಿದ ಅಗೇವ್ ಎಂಬ ಶಾಸ್ತ್ರೀಯ ಹೆಸರಿನ ಒಂದು ಸಸ್ಯಜಾತಿ. ಭೂತಾಳೆ, ರಕ್ಕಸಪಟ್ಟೆ ಪರ್ಯಾಯನಾಮಗಳು. ಇದರಲ್ಲಿ ಸುಮಾರು 275 ಪ್ರಭೇದಗಳಿವೆ. ಇವುಗಳಲ್ಲಿ ಅ. ಅಮೆರಿಕಾನ, ಅ. ಕಂತಾಲ, ಅ. ಆಂಗಸ್ಟಿಫೋಲಿಯ, ಅ. ಸಿಸಾಲಾನ, ಅ. ಫೋರ್‌ಕ್ರೋಯ ಮತ್ತು ಅ. ವೀರ-ಕ್ರುಜ್ ಎಂಬುವು ಮುಖ್ಯವಾದವು. ಕತ್ತಾಳೆ ಮೂಲತಃ ಮೆಕ್ಸಿಕೋದ ನಿವಾಸಿ. ಅಲ್ಲಿಂದ ಉಳಿದ ಎಲ್ಲ ಉಷ್ಣದೇಶಗಳಿಗೆ ಹರಡಿತೆಂದೂ ಪೋರ್ಚುಗೀಸರು ಸುಮಾರು 15ನೆಯ ಶತಮಾನದಲ್ಲಿ ಇದನ್ನು ಭಾರತಕ್ಕೆ ತಂದರೆಂದೂ ಹೇಳಲಾಗಿದೆ.

ಎಲ್ಲಕಡೆಗಳಲ್ಲಿಯೂ ಕಾಣಬರುವ ಇದು ಸಾಮಾನ್ಯವಾಗಿ ಬಂಜರು ಪ್ರದೇಶಗಳಲ್ಲಿ ಬೆಳೆಯುತ್ತದೆ. ಇದನ್ನು ತೋಟಗಳಲ್ಲಿ, ಹೊಲಗಳಲ್ಲಿ, ಬೇಲಿಯ ಸಾಲಿನಲ್ಲಿ ಬೆಳೆಸುವುದೂ ಉಂಟು. ಅಲ್ಲದೆ ಅಲಂಕಾರಕ್ಕಾಗಿ ಕುಂಡಗಳಲ್ಲಿ ಬೆಳೆಸುತ್ತಾರೆ. ಇದಕ್ಕೆ ಬಲು ಚಿಕ್ಕದಾದರೂ ಗಟ್ಟಿಯಾದ ಕಾಂಡವಿದೆ. ಕಾಂಡದ ಸುತ್ತ ಕಮಲದಳ



ಗಳಂತೆ ಜೋಡಣೆಗೊಂಡಿರುವ ಸುಮಾರು 1–2 ಮೀ. ಉದ್ದ ಮತ್ತು 10–15 ಸೆಂ.ಮೀ. ಅಗಲವಿರುವ ಹಚ್ಚಹಸಿರುಬಣ್ಣದ ಅನೇಕ ಎಲೆಗಳಿವೆ. ಎಲೆಗಳು ಕತ್ತಿಯಂತಿವೆ, ಅವುಗಳ ತುದಿ ಮತ್ತು ಅಂಚುಗಳಲ್ಲಿ ಮುಳ್ಳುಗಳಿವೆ, ಅವು ಬುಡದಲ್ಲಿ ಸ್ವಲ್ಪದಪ್ಪನಾಗಿದ್ದು ಲೋಳೆಯಂಥ ರಸದಿಂದ ತುಂಬಿವೆ. ಗಿಡಕ್ಕೆ ಸುಮಾರು 8—10 ವರ್ಷ ವಯಸ್ಸಾದಾಗ ಅದರ ಕೇಂದ್ರಭಾಗದಿಂದ ಒಂದು ದಿಂಡು ಹೊರಟು ಸುಮಾರು 5–10 ಮೀ. ಉದ್ದಕ್ಕೆ ಕಂಬದಂತೆ ಬೆಳೆಯುವುದು. ಇದೇ ಕತ್ತಾಳೆಯ ವಿಶೇಷಬಗೆಯ ಹೂಗೊಂಚಲು. ಅದರ ತುದಿಯಲ್ಲಿ ಅನೇಕ ಕವಲುಗಳಿದ್ದು ಅವುಗಳಲ್ಲೆಲ್ಲ ಅಸಂಖ್ಯಾತವಾದ ಹೂಗಳಿವೆ. ಕೆಲವು ಮೊಗ್ಗುಗಳು ಹೂವಾಗಿ ಅರಳದೆ ಬಲ್ಬಿಲುಗಳೆಂಬ ವಿಶಿಷ್ಟ ಬಗೆಯ ರಚನೆಗಳಾಗಿ ಮಾರ್ಪಾಟಾಗುತ್ತವೆ. ಗೆಡ್ಡೆಗಳಂತಿರುವ ಇವು ಸಸ್ಯದ ಸಂತಾನಾಭಿವೃದ್ಧಿಯಲ್ಲಿ ಪ್ರಮುಖಪಾತ್ರವಹಿಸುತ್ತವೆ. ಪೂರ್ಣವಾಗಿ ಬಲಿತ ಬಲ್ಬಿಲುಗಳು ಹೂ ದಿಂಡಿನಿಂದ ಉದುರಿ ನೆಲದ ಮೇಲೆ ಬಿದ್ದು ಪರಿಸ್ಥಿತಿ ಅನುಕೂಲವಾಗಿದ್ದಲ್ಲಿ ಮೊಳೆತು ಸಸಿಗಳಾಗುತ್ತವೆ. ಇದೊಂದು ಬಗೆಯಲ್ಲದೆ ಇನ್ನೊಂದು ರೀತಿಯಿಂದ ಕತ್ತಾಳೆಯ ಸಂತಾನಾಭಿವೃದ್ಧಿಯಾಗುವುದೂ ಉಂಟು. ಬೇರಿನಿಂದ ಕೆಲವು ಗೆಡ್ಡೆಗಳು (ಸಕರ್ಸ್) ಉತ್ಪತ್ತಿಯಾಗುತ್ತವೆ. ಇವೂ ಕೂಡ ಅನುಕೂಲ ಪರಿಸ್ಥಿತಿಯಲ್ಲಿ ಸಣ್ಣ ಸಸಿಗಳಾಗಿ ಬೆಳೆಯುವುದುಂಟು. ಕತ್ತಾಳೆಯಲ್ಲಿ ಬೀಜದ ಮುಖಾಂತರ ಸಂತಾನಾಭಿವೃದ್ಧಿಯಾಗುವುದು ವಿರಳ. ಕಾಯಿಗಳು ಬಲಿತಮೇಲೆ ಗಿಡ ಸತ್ತು ಹೋಗುತ್ತದೆ.

ಕತ್ತಾಳೆ ಅದರ ಎಲೆಗಳಿಂದ ತೆಗೆಯಲಾಗುವ ನಾರಿನಿಂದ ಬಹಳ ಪ್ರಸಿದ್ಧವಾಗಿದೆ. ಇದರ ಎಲೆ ಮತ್ತು ಹೂಗೊಂಚಲಿನ ದಿಂಡಿನಿಂದ ಒಂದು ರೀತಿಯ ರಸವನ್ನು ತೆಗೆದು ಅದನ್ನು ಹುಳಿಯಾಗಲು ಬಿಡುತ್ತಾರೆ. ಮೆಕ್ಸಿಕೋದಲ್ಲಿ ಈ ಹುಳಿಯಾದ ರಸವನ್ನು ಪಲ್ಕ್ ಎನ್ನುತ್ತಾರೆ. ಮಾದಕ ಗುಣವುಳ್ಳ ಇದನ್ನು ಅಲ್ಲಿನ ರಾಷ್ಟ್ರೀಯ ಪಾನೀಯವಾಗಿ ಪರಿಗಣಿಸುತ್ತಾರೆ. (ಬಿ.ಬಿ.)

**ಕತ್ತಾಳೆನಾರು :** ಕತ್ತಾಳೆ ಎಲೆಗಳಿಂದ ನಾರನ್ನು ಪ್ರತ್ಯೇಕಿಸುವುದಕ್ಕೆ ತೆಂಗಿನಕಾಯಿನ ಮೇಲಿನ ಮಟ್ಟೆಯಿಂದ ಜುಂಗನ್ನು ಬೇರ್ಪಡಿಸುವಂತೆ ಕೆಲವು ವಿಧಾನಗಳನ್ನು ಅನುಸರಿಸುವರು. ಪಾಶ್ಚಾತ್ಯ ದೇಶದಲ್ಲಿ ಅನುಸರಿಸುವ ರೀತಿಗೂ ಭಾರತದಲ್ಲಿನ ರೀತಿಗೂ ವ್ಯತ್ಯಾಸಗಳಿವೆ. ಎಲೆಗಳು ಚೆನ್ನಾಗಿ ಬಲಿತಮೇಲೆ ಹರಿತವಾದ ಚಾಕು, ಮಚ್ಚು ಅಥವಾ ಕುಡುಗೋಲಿನಿಂದ ಬುಡದಲ್ಲಿ ಅದನ್ನು ಒಂದೊಂದಾಗಿ ಕತ್ತರಿಸುವರು. ಹೀಗೆ ಕತ್ತರಿಸಿದ ಎಲೆಗಳಿಂದ ನಾರನ್ನು ತೆಗೆಯುದಕ್ಕೆ ಎರಡು ಪದ್ಧತಿಗಳಿರುವುವು. ಒಂದು ಪದ್ಧತಿಯಲ್ಲಿ ಕುಯ್ದ ಎಲೆಗಳ ಮೇಲ್ಭಾಗವನ್ನು

ಹರಿತವಾದ ಚಾಕುವಿನಿಂದ ಹೆರೆದು ಹಾಕುವರು. ಇದರಿಂದ ನಾರಿನೊಂದಿಗೆ ಸೇರಿರುವ ಹಸಿರು ದಿಂಡು ಪದಾರ್ಥಗಳು ಪ್ರತ್ಯೇಕವಾಗಿ ನಾರು ಬಿಡಿಸಿದಂತಾಗುವುದು. ಅಲ್ಲದೆ ಎಲೆಗಳು ಸೀಳಿದಂತೆ ಆಗುವುದು. ಅನಂತರ ಇದನ್ನು 8–15 ದಿವಸ ನೀರಿನಲ್ಲಿ ಮುಳುಗಿಸಿಟ್ಟಿರುವರು. ಹೀಗೆ ನೀರಿನಲ್ಲಿ ಕೊಳೆಯುವುದರಿಂದ ನಾರು ಇತರ ಅಂಟು ಪದಾರ್ಥಗಳಿಂದ ಬೇರೆಯಾಗಲು ಸಹಾಯವಾಗುವುದು. ಅನಂತರ ನೀರಿನಿಂದ ತೆಗೆದು ಲಘುವಾಗಿ ಚಚ್ಚಿ ಪುನಃ ನೀರಿನಲ್ಲಿ ಜಾಲಾಡಿ ನಾರನ್ನು ಪ್ರತ್ಯೇಕಿಸುವರು. ಇದನ್ನು ಒಣಗಿಸಿದ ತರುವಾಯ ಹಳದಿ ಛಾಯೆ ಕೂಡಿದ ಬಿಳೀ ಬಣ್ಣದ ಶುಭ್ರವಾದ ನಾರು ಬರುವುದು. ಪಾಶ್ಚಾತ್ಯ ದೇಶಗಳಲ್ಲಿ ರಾಸ್ಪಡಾರ್ ತರಹ ಯಂತ್ರಗಳ ಮೂಲಕ ಹೆರೆದು ನಾರನ್ನು ಪ್ರತ್ಯೇಕಿಸಿ ತೊಳೆದು ಶುಭ್ರಮಾಡಿ ಒಣಗಿಸಿ ಬೇಲುಗಳಾಗಿ ಪ್ಯಾಕ್ ಮಾಡಿ ರವಾನಿಸುವರು. ಎರಡನೆಯ ಪದ್ಧತಿಯಲ್ಲಿ —ಇದೇ ಹೆಚ್ಚಾಗಿ ಭಾರತದಲ್ಲಿನ ಪದ್ಧತಿ—ಕುಯ್ದು ಎಲೆಗಳನ್ನು ಉದ್ದವಾಗಿ ಪಟ್ಟಿಯಂತೆ ಮೊದಲು ಸೀಳಿ ಒಣಗಿಸುವರು. ಅನಂತರ ಅವುಗಳನ್ನು ನೀರಿನಲ್ಲಿ 10–15 ದಿವಸ ಮುಳುಗಿಸುವರು. ಇದರಿಂದ ದಿಂಡು ಮತ್ತಿತರ ಅಂಟು ಪದಾರ್ಥಗಳು ಮೆತ್ತಗಾಗಿ ನಾರಿನಿಂದ ಸಡಿಲವಾಗುವುವು. ಆಮೇಲೆ ಮರದ ತುಂಡುಗಳಿಂದ ಅವುಗಳನ್ನು ಬಡಿದು ನಾರನ್ನೂ ಇತರ ಪದಾರ್ಥಗಳನ್ನೂ ಪ್ರತ್ಯೇಕಿಸಿ ನೀರಿನಲ್ಲಿ ಚೆನ್ನಾಗಿ ತೊಳೆದು ಒಣಗಿಸುವರು. ಹೀಗೆ ಪ್ರತ್ಯೇಕಿಸಿದ ಕತ್ತಾಳೆ ನಾರು ಸ್ವಲ್ಪ ಕಂದುಬಣ್ಣವಾಗಿರುವುದು ಮತ್ತು ಇತರ ದೇಶದ ನಾರಿನಷ್ಟು ಬಿಳುಪಾಗಿರುವುದಿಲ್ಲ. ಕೆಲವು ವೇಳೆ ಎಲೆಗಳನ್ನು ನೀರಿನಲ್ಲಿ ಕುದಿಸಿ ಅನಂತರ ಬಡಿದು ಈ ನಾರನ್ನು ಪ್ರತ್ಯೇಕಿಸುವರು. ಬೆಳೆಯು ಹೆಚ್ಚಾಗಿದ್ದರೆ ವಿದ್ಯುತ್ತಿನಿಂದ ಅಥವಾ ಕೈಯಿಂದ ಚಲಾಯಿಸಲಾಗುವ ಡಿಕಾರ್ಟಿಕೇಟರ್ ಯಂತ್ರದಿಂದ ನಾರನ್ನು ಬೇರ್ಪಡಿಸುವರು. ಅನಂತರ ಈ ನಾರನ್ನು ತೊಳೆದು ಒಣಗಿಸುವರು. ಕೆಲವು ವೇಳೆ ಒಣಗಿದ ನಾರನ್ನು ಮರಳಿನ ಮೇಲೆ ಹರಡಿ ನೀರು ಚುಮಕಿಸಿ ಒಣಗಿಸುವರು. ಇದರಿಂದ ನಾರು ಶುಭ್ರವಾಗಿ ಬೆಳ್ಳಗಾಗುವುದು.

ಪ್ರಪಂಚದಲ್ಲಿ ವರ್ಷಂಪ್ರತಿ ಸುಮಾರು 1,300 ಲಕ್ಷ ಪೌಂಡು ಕತ್ತಾಳೆ ನಾರು ಉತ್ಪನ್ನವಾಗುವುದು. ಇಂಡಿಯದಲ್ಲಿ ಒಂದು ಹೆಕ್ಟೇರಿಗೆ 600 ಕಿ.ಗ್ರಾಂ ನಾರು ಬರುವುದು. ಅನ್ಯದೇಶದಲ್ಲಿ ಹೆಕ್ಟೇರಿಗೆ 2,000 ಕಿ.ಗ್ರಾಂ ವರೆವಿಗೂ ಉತ್ಪತ್ತಿಯಾಗುವುದು. 600 ಕಿ.ಗ್ರಾಂ ಎಲೆಗಳಿಗೆ ಸು. 32 ಕಿ.ಗ್ರಾಂ ನಾರು ಬರುವುದು.

ಕತ್ತಾಳೆ ನಾರಿಗೆ ಬೆಂಕಿ ತಗಲಿದರೆ ಅದು ಹತ್ತಿಯಂತೆ ಭಗ್ಗನೆ ಹತ್ತಿ ಕೆಂಪು ಛಾಯೆಯ ಹಳದಿಬಣ್ಣದ ಬೆಳಕಿನಿಂದ ಉರಿಯುವುದು ಮತ್ತು ಕಾಗದ ಸುಟ್ಟ ವಾಸನೆ ಬರುವುದು. ಬೂದಿಯು ಕೆದರದಿರುವುದು. ಕ್ಯೂಪ್ರಮೋನಿಯಂ ಹೈಡ್ರಾಕ್ಸೈಡ್ ದ್ರಾವಕದಲ್ಲಿ ಹತ್ತಿಯು ಕರಗುವುದು, ಆದರೆ ಕತ್ತಾಳೆ ನಾರು ಕರಗುವುದಿಲ್ಲ. ಪ್ರಬಲ ಸಲ್ಫ್ಯೂರಿಕ್ ಆಮ್ಲದಲ್ಲಿ ನಾರು ಸ್ವಲ್ಪ ಹಳದಿಬಣ್ಣಕ್ಕೆ ತಿರುಗಿ ಅಡ್ಡಗೀಟುಗಳು ಕಾಣಬರುವುವು. ಕತ್ತಾಳೆನಾರಿನಲ್ಲಿ 77.2% ಭಾಗ ಸೆಲ್ಯುಲೋಸ್, 6.2% ಭಾಗ ನೀರು, 14.5% ಭಾಗ ಲಿಗ್ನಿನ್ ಮತ್ತು ಪೆಕ್ಟಿನ್ ಪದಾರ್ಥಗಳು ಮತ್ತು 2.1% ಭಾಗ ಇತರ ವಸ್ತುಗಳು ಇರುವುವು. ಸೆಣಬಿನಂತೆ ಒಂದೊಂದು ಕತ್ತಾಳೆ ನಾರು ಕೂಡಾ ಅನೇಕ ಸೂಕ್ಷ್ಮ ಎಳೆಗಳಿಂದ ಕೂಡಿದ್ದಾಗಿದೆ. ಒಂದೊಂದು ಸೂಕ್ಷ್ಮ ಎಳೆಯೂ 1ರಿಂದ 5 ಮಿ.ಮೀ. ಉದ್ದವಿದ್ದು ಸುಮಾರು 24 ಮೈಕ್ರಾನ್ ಅಗಲವಿರುತ್ತದೆ. ಸೂಕ್ಷ್ಮದರ್ಶಕದಲ್ಲಿ ನೋಡಿದಾಗ ಎಳೆಯ ಮಧ್ಯಭಾಗದಲ್ಲಿ ಖಾಲಿ ಪ್ರದೇಶವೂ (ಲೂಮೆನ್) ಅದರ ಸುತ್ತ ದಪ್ಪ ಗೋಡೆಯೂ (ಸೆಲ್‌ವಾಲ್) ಇರುವುದು ಕಾಣಿಸುತ್ತದೆ. ತುದಿ ಮೊಂಡಾಗಿಯೋ, ಚೂಪಾಗಿಯೊ, ಕವಲೊಡೆದಂತೆಯೊ ಇರುತ್ತದೆ. ಸಾಧಾರಣವಾಗಿ ಲೂಮೆನ್ನಿನ ಅಗಲ ಸುತ್ತು ಗೋಡೆಯ ದಪ್ಪಕ್ಕಿಂತ ಜಾಸ್ತಿಯಾಗಿರುವುದು. ಇಂಥ ಎಳೆಗಳು ಡಿನಿಯರ್ ಒಂದಕ್ಕೆ 5.30 ಗ್ರಾಂನಷ್ಟು ತೂಕ ಬಲ ಉಳ್ಳದ್ದಾಗಿಯೂ ಶೇಕಡ 2ರಷ್ಟು ಸ್ಥಿತಿಸ್ಥಾಪಕ ಶಕ್ತಿಯುಳ್ಳದ್ದಾಗಿರುವುದು.

ಕತ್ತಾಳೆ ನಾರು ಬಲವಾಗಿರುವುದಲ್ಲದೆ ಉಪ್ಪುನೀರಿನಲ್ಲಿ ಹೆಚ್ಚು ಕೊಳೆಯುವುದಿಲ್ಲ. ಅದರ ಸಲುವಾಗಿ ನಾರುಗಳನ್ನು ಸಾಕಷ್ಟು ಪ್ರಮಾಣದಲ್ಲಿ ಜೋಡಿಸಿ ಹೊಸೆದು ದಾರ, ಹಗ್ಗ ಮುಂತಾದುವನ್ನು ಮಾಡುವರು. ಅಲ್ಲದೆ ಚಾಪೆ, ಚೀಲ ಹಾಗೂ ಸೋಫಾ ಒಳಗೆ ತುಂಬುವುದಕ್ಕೂ ಬ್ರಷ್‌ಗಳನ್ನು ಮಾಡುವುದಕ್ಕೂ ಉಪಯೋಗಿಸುವರು. ಕತ್ತಾಳೆ ಎಲೆಯಿಂದ ನಾರನ್ನು ಪ್ರತ್ಯೇಕಿಸಿದ ಅನಂತರ ಉಳಿಯುವ ಪದಾರ್ಥಗಳಿಂದ ಅತ್ಯಂತ ಉಪಯುಕ್ತವಾದ ಕಾರ್ಟಿಸಾನ್ ಮತ್ತು ಸೆಕ್ಸ್ ಹಾರ್ಮೋನುಗಳನ್ನು ತಯಾರಿಸಲು ಬೇಕಾಗುವ ಹೆಕೋಜೆನಿನ್ ದ್ರಾವಕವನ್ನು ತಯಾರಿಸುವರು. (ಎಸ್.ಎನ್.ಬಿ.)

**ಕತ್ತಿಕಾಯಿಮರ :** ಡೆಲೊನಿಕ್ಸ್ ರೀಜಿಯ ಅಥವಾ ಪಾಯಿನ್‌ಸಿಯಾನಾ ರೀಜಿಯ ಎಂಬ ವೈಜ್ಞಾನಿಕ ಹೆಸರಿನ ಚೆಲುವಾದ ಹೂ ಬಿಡುವ ಮರ. ಲೆಗ್ಯುಮಿನೋಸೀ ಕುಟುಂಬದ ಸಿಸಾಲ್ಪಿನೀ ಉಪಕುಟುಂಬಕ್ಕೆ ಸೇರಿದೆ. ಮಡಗಾಸ್ಕರಿನ ಮೂಲವಾಸಿಯಾದ ಈ ಮರ ಭಾರತಕ್ಕೆ ಸುಮಾರು 100–125 ವರ್ಷಗಳ ಹಿಂದೆ ಬಂತೆಂದು ಹೇಳಲಾಗಿದೆ. ಹಿಂದಿ ಭಾಷೆಯಲ್ಲಿ ಗುಲ್‌ಮೊಹರ್ ಎನ್ನಲಾಗುವ ಇದಕ್ಕೆ ಸ್ಥಳೀಯವಾಗಿ ಸೀಮೆಸಂಕೇಶ್ವರ, ಕೆಂಪುತುರಾಯಿ, ದೊಡ್ಡ ರತ್ನಗಂಧಿ ಇತ್ಯಾದಿ ಹೆಸರುಗಳೂ ಇವೆ. ಇದು 50′–60′ ಎತ್ತರ ಬೆಳೆಯುತ್ತದೆ. ಫಲವತ್ತಾದ ನೆಲ ಮತ್ತು ನೀರಿನ ಸೌಲಭ್ಯವಿದ್ದರೆ ಇನ್ನೂ ಎತ್ತರ ಬೆಳೆಯುವುದುಂಟು. ಮರದ ಆಕಾರ ಛತ್ರಿಯಂತೆ, ತೊಗಟೆ ಒರಟಾಗಿ ಅಲ್ಲಲ್ಲಿ ಗಂಟುಗಳಿಂದ ಕೂಡಿದೆ. ಬಣ್ಣ ಮಾಸಲು ಕಂದು. ಎಲೆಗಳು ಪರ್ಯಾಯವಾಗಿ ಜೋಡಣೆಗೊಂಡಿವೆ. ಅವು ಸಂಯುಕ್ತ ಮಾದರಿಯವು. ಒಂದೊಂದರಲ್ಲೂ ಒಂದು ಮುಖ್ಯ ಮಧ್ಯಶಾಖೆಯೂ ಅದರಿಂದ ಹೊರಟ ಹಲವಾರು ಕಿರುಶಾಖೆಗಳೂ ಇವೆ. ಪ್ರತಿಯೊಂದು ಕಿರುಶಾಖೆಯಲ್ಲಿ 15–20 ಜೋಡಿ ಪರ್ಣಿಕೆಗಳಿವೆ. ಹೂಗಳು ರೇಸಿಮ್ ಮಾದರಿಯ ಹೂಗೊಂಚಲುಗಳಲ್ಲಿ ಜೋಡಣೆಗೊಂಡಿವೆ. ಹೂಬಿಡುವ ಕಾಲ ಏಪ್ರಿಲ್–ಮೇ ತಿಂಗಳುಗಳು. ಹೂಬಿಡುವ ಮುನ್ನ ಎಲೆಗಳೆಲ್ಲ ಉದುರಿಹೋಗುತ್ತವೆ. ಹೂಗಳು ಸಾಕಷ್ಟು ದೊಡ್ಡವೂ ಕಿತ್ತಳೆಮಿಶ್ರಿತ ಕೆಂಪುಬಣ್ಣದಿಂದ ಹಿಡಿದು ಕಗ್ಗೆಂಪು ಬಣ್ಣದವೂ ಆಗಿ ಬಹು ಸುಂದರವಾಗಿವೆ. ಪುಷ್ಪಪತ್ರಗಳು ಐದು. ಅವುಗಳ ಹೊರಭಾಗ ಹಸಿರು, ಒಳಭಾಗ ಕೆಂಪು. ದಳಗಳು ಐದು. ಅವುಗಳಲ್ಲಿ ನಾಲ್ಕು ಒಂದೇ ಬಗೆಯವಾಗಿದ್ದು ಕೆಂಪುಬಣ್ಣದವಾಗಿವೆ. ಉಳಿದುದು ಕೊಂಚ ದೊಡ್ಡದೂ ಬಿಳಿ ಅಥವಾ ಹಳದಿ ಬಣ್ಣದ್ದೂ ಆಗಿದ್ದು ಅದರ ಮೇಲೆಲ್ಲ ಕೆಂಪು ಮಚ್ಚೆಗಳಿವೆ. ಎಲ್ಲ ದಳಗಳ ಅಂಚೂ ಕೊಂಚ ಮಡಿಸಿದಂತಿದೆ. ಕೇಸರಗಳು 10, ಬಿಡಿ ಬಿಡಿಯಾಗಿವೆ. ಅವುಗಳ ಬಣ್ಣವೂ ಕೆಂಪು. ಅಂಡಾಶಯ ಉಚ್ಚಸ್ಥಾನದ್ದು. ಒಂದೇ ಕಾರ್ಪೆಲನ್ನು ಹೊಂದಿದೆ. ಅದರೊಳಗೆ ಹಲವಾರು ಅಂಡಕಗಳಿವೆ. ಫಲ ಪಾಡ್ ಮಾದರಿಯದು. ಸುಮಾರು 2′ ಉದ್ದವಾಗಿದ್ದು ಕತ್ತಿಯಂತಿರುತ್ತದೆ. ಬಹಳ ದಿನ ಮರದ ಮೇಲೆ ಕಾಯಿಗಳು ನೇತಾಡುತ್ತಿರುವುದನ್ನು ನೋಡಬಹುದು.



ಕತ್ತಿಕಾಯಿ ಮರ. ಒಳಚಿತ್ರ—ಹೂಗೊಂಚಲು

ಕತ್ತಿಕಾಯಿ ಮರವನ್ನು ಅಲಂಕಾರಕ್ಕಾಗಿ ಉದ್ಯಾನಗಳಲ್ಲಿಯೂ ನೆರಳಿನ ಮರವಾಗಿ ರಸ್ತೆಯ ಬದಿಗಳಲ್ಲೂ ಬೆಳೆಸುತ್ತಾರೆ. ಸಾಮಾನ್ಯವಾಗಿ ಇದನ್ನು ಬೀಜಗಳಿಂದ ವೃದ್ಧಿಮಾಡುತ್ತಾರೆ. ತುಂಡುಗಳಿಂದಲೂ ಬೆಳೆಸಬಹುದು. ಹೆಚ್ಚಾಗಿ ಅಲಂಕಾರ ಸಸ್ಯವೆಂದು ಹೆಸರಾಗಿರುವ ಇದರ ಕಾಯಿ ಮತ್ತು ಮರವನ್ನು ಸೌದೆಗಾಗಿ ಉಪಯೋಗಿಸುವುದೂ ಉಂಟು. (ಎಂ.ಎಸ್.ಎಸ್.ಆರ್.; ಎಂ.ಎಚ್.ಎಂ.)

**ಕತ್ತಿ ಮೀನು :** ಕ್ಸಿಫಿಡೀ ಕುಟುಂಬದ ಕ್ಸಿಫಿಯಾಸ್ ಗ್ಲೇಡಿಯಸ್ ಎಂಬ ವೈಜ್ಞಾನಿಕ ಹೆಸರಿನ ಉಷ್ಣ ಮತ್ತು ಸಮಶೀತೋಷ್ಣ ವಲಯಗಳ ಸಮುದ್ರಗಳಲ್ಲಿ ವಾಸಿಸುವ



ಮೀನು. ಉದ್ದವಾದ ಕತ್ತಿಯಾಕಾರದ ಮೂತಿಯೂ ಬೆನ್ನಿನ ಮೇಲಿರುವ ಎತ್ತರವಾದ ರೆಕ್ಕೆಯೂ ಹಲ್ಲುಗಳಿಲ್ಲದ ಬಾಯಿಯೂ ಮೈಮೇಲೆ ಪರೆಗಳಿಲ್ಲದಿರುವುದೂ ಈ ಮೀನಿನ ವಿಶಿಷ್ಟ ಲಕ್ಷಣಗಳು. ಇದು ಉದ್ದದಲ್ಲಿ ಸುಮಾರು 14′ ಇದೆ. ತೂಕ 1,000 ಪೌಂ. ಇರುವುದೂ ಉಂಟು. ಬಹು ವೇಗವಾಗಿ ಈಜಬಲ್ಲ ಕತ್ತಿಮೀನು ಇತರ ಸಣ್ಣ ಮೀನುಗಳ ತಂಡದ ಮೇಲೆ ಹಟಾತ್ತನೆ ದಾಳಿ ಮಾಡಿ ತನ್ನ ಕತ್ತಿಯಂಥ ಮೂತಿಯಿಂದ ಅವನ್ನು ಊನಮಾಡಿ ಅನಂತರ ಒಂದೊಂದನ್ನಾಗಿ ನುಂಗುತ್ತದೆ. ನೀರಿನ ಮೇಲ್ಮೈಯಿಂದ ಹಿಡಿದು 600′ ಗಳಷ್ಟು ಆಳದಲ್ಲೂ ಆಹಾರಕ್ಕಾಗಿ ಬೇಟೆಯಾಡುತ್ತ ಸರಾಗವಾಗಿ ಈಜುತ್ತಿರುತ್ತದೆ. ಕೆಲವೊಮ್ಮೆ ಸಣ್ಣಹಡಗುಗಳ ತಳಭಾಗವನ್ನು ಮೂತಿಯಿಂದ ಹೊಡೆದು ಕತ್ತರಿಸುವುದೆಂದು ಹೇಳುತ್ತಾರೆ.

ಕತ್ತಿಮೀನು ಒಳ್ಳೆಯ ಆಹಾರದ ಮೀನೆಂದು ಹೆಸರಾಗಿದೆ. ಇದರ ಮಾಂಸದಲ್ಲಿ ಪ್ರೋಟೀನಿನ ಅಂಶ ಅಧಿಕವಾಗಿರುವುದರಿಂದ ಬಹು ಪುಷ್ಟಿಕರವಾದ ಆಹಾರವೆನಿಸಿದೆ. ಬೆಸ್ತರು ಹಿಡಿಯುವ ಹಲವಾರು ಬಗೆಯ ಮೀನುಗಳಲ್ಲಿ ಇದು ವಾಣಿಜ್ಯ ದೃಷ್ಟಿಯಿಂದ ಮುಖ್ಯವಾದುದು. (ಆರ್.ಎಲ್.)

**ಕತ್ತಿವರಸೆ :** ಮೂಲತಃ ಆತ್ಮರಕ್ಷಣೆಗೂ ಶತ್ರುವಿನ ವಿರುದ್ಧ ಆಕ್ರಮಣೆಗೂ ಕತ್ತಿಯನ್ನು ಬಳಸುವ ಚಾಕಚಕ್ಯ (ಫೆನ್ಸಿಂಗ್). ಕ್ರಮೇಣ ಇದು ಬದಲಾವಣೆಗೊಂಡು ಇಂದು ಒಂದು ಕುಶಲ ಕಲೆಯಾಗಿ ಮಾತ್ರ ಉಳಿದಿದೆ. ಪ್ರಾಚೀನ ಭಾರತೀಯ ಸಾಹಿತ್ಯದಲ್ಲೂ ಗ್ರೀಕ್ ಸಾಹಿತಿ ಹೋಮರನ ಇಲಿಯಡ್ ಗ್ರಂಥದಲ್ಲೂ ಕತ್ತಿವರಸೆಯ ಉಲ್ಲೇಖವಿದೆ. ಪ್ರಾಚೀನ ರೋಮಿನ ಖಡ್ಗಮಲ್ಲರೂ ಮಧ್ಯ ಯುಗದ ಅಶ್ವವೀರರೂ ಕತ್ತಿಕಾಳಗವಾಡುತ್ತಿದ್ದರು. ಬಂದೂಕು ಮದ್ದನ್ನು ಉಪಜ್ಞಿಸುವ (ಇನ್‌ವೆಂಟ್) ವರೆಗೂ ಕತ್ತಿಯುದ್ಧಗಳು ನಡೆಯುತ್ತಿದ್ದವು. ಬಂದೂಕು ಬಂದ ಅನಂತರ ಎದುರಾಳಿಯ ಯುದ್ಧಕವಚವನ್ನು ಕತ್ತಿ ಹೊಡೆತದಿಂದ ಸೀಳುವುದು ಉಪಯೋಗವಾಗಲಿಲ್ಲ. ಬದಲು, ಬಲಗೈಯಲ್ಲಿ ಕತ್ತಿಯಿಂದ ಎದುರಾಳಿಯ ಮೇಲೆ ಹಾಯುವುದೂ ಆತ್ಮರಕ್ಷಣೆಗೋಸ್ಕರ ಎಡಗೈಯಲ್ಲಿ ಗುರಾಣಿ, ಕಠಾರಿ, ಖೇಲಕಗಳನ್ನು ಹಿಡಿಯುವುದೂ ಆಚರಣೆಗೆ ಬಂತು.




1 ಫಾಯಿಲ್ 2 ಎಪೇ 3 ಸೇಬರ್

ಮೊದಮೊದಲು ಖಡ್ಗಶಿಕ್ಷಕರು ರಹಸ್ಯವರಸೆಗಳನ್ನು ಇತರರಿಗೆ ಗೊತ್ತಾಗದಂತೆ ತಮ್ಮ ಶಿಷ್ಯರಿಗೆ ಮಾತ್ರ ಕಲಿಸುತ್ತಿದ್ದರು. ಕ್ರಮೇಣ ಅನೇಕ ಪ್ರವೀಣ ಶಿಕ್ಷಣ ಕೇಂದ್ರಗಳು ಸ್ಥಾಪಿತವಾದವು. ಖಡ್ಗನಿಪುಣರು ಗಣಿತಶಾಸ್ತ್ರದ ನಿಯಮಗಳನ್ನೊಳಗೊಂಡ ಶಾಸ್ತ್ರೋಕ್ತ ಗ್ರಂಥಗಳನ್ನು ರಚಿಸಿದರು. ಇಂಗ್ಲೆಂಡಿನ ರಾಜ ಎಂಟನೆಯ ಹೆನ್ರಿಯೂ ಕತ್ತಿಸಾಧನಕ್ಕೆ ಉತ್ತೇಜನ ಕೊಟ್ಟ. ಅನೇಕ ದೇಶಗಳಲ್ಲಿ ದರೋಡೆಯವರ ಕಾಟ ಹೆಚ್ಚಾಗಲು ಆತ್ಮರಕ್ಷಣೆಗೆ ಜನರಿಗೆ ಕತ್ತಿಸಾಧನೆ ಅಗತ್ಯವಾಯಿತು. ಖಡ್ಗಚತುರರು ರಾಜಾಸ್ಥಾನಗಳಲ್ಲಿ ಅಂಗರಕ್ಷಕರಾಗಿಯೂ ಮಹಾವ್ಯಕ್ತಿಗಳ ಸಂಗಾತಿಗಳಾಗಿಯೂ ನೇಮಿಸಲ್ಪಡುತ್ತಿದ್ದರು. ಜರ್ಮನಿಯ ನ್ಯಾಯ ಸಂಸ್ಥೆಗಳಲ್ಲಿ ನ್ಯಾಯವನ್ನು ಕತ್ತಿಕಾಳಗಗಳಿಂದ ತೀರ್ಮಾನಿಸುವ ವ್ಯವಸ್ಥೆಯಿತ್ತು.

ವ್ಯಕ್ತಿಗಳ ಪರಸ್ಪರ ವಿವಾಹ, ವ್ಯಾಜ್ಯ, ಮಾನಾಪಮಾನ ಸಮಸ್ಯೆಗಳನ್ನು ಕತ್ತಿಯ ದ್ವಂದ್ವಯುದ್ಧದಿಂದ ನಿರ್ಣಯಿಸುವ ಸಂಪ್ರದಾಯ ಯೂರೋಪು. ಅಮೆರಿಕಗಳಲ್ಲಿ ಅನೇಕ ಶತಮಾನ ಕಾಲ ಪ್ರಬಲಿಸಿದ್ದು, ಸಣ್ಣಪುಟ್ಟ ಕಲಹಗಳಿಗೂ ಕತ್ತಿಕಾಳಗದ ಹುಚ್ಚು ಜನರಿಗಿತ್ತು. ಇದಕ್ಕೂ ಕಟ್ಟುಕಟ್ಟಳೆ, ಶಿಷ್ಟಾಚಾರಗಳಿದ್ದವು. ಲಾರ್ಡ್ ಬೈರನ್, ಚಾರ್ಲ್ಸ್ ಫಾಕ್ಸ್, ಷೆರಿಡನ್, ಜ್ಯೇಷ್ಠ ಪಿಟ್, ಕ್ಯಾನಿಂಗ್‌ನಂಥ ಹಿರಿಯರೂ ಕತ್ತಿಯ ದ್ವಂದ್ವಯುದ್ಧ ಮಾಡಬೇಕಾಯಿತು. ಅನೇಕರು ಕೊಲೆಯಾದ್ದರಿಂದ ಇದನ್ನು ನಿಷೇಧಿಸಲು 19ನೆಯ ಶತಮಾನದಲ್ಲಿ ಕಾನೂನಾಯಿತು. ಅನಂತರ ಖಡ್ಗವಿದ್ಯೆಯಲ್ಲಿ ಕಲಹ, ದ್ವೇಷ, ಕಚ್ಚಾಟಗಳು ಮಾಯವಾಗಿ, ಸ್ನೇಹಭಾವದ ವಿನೋದಪರ ಕ್ರೀಡಾಕಲೆ ರೂಪಗೊಂಡಿತು. ಹಿಂದೆ ಆತ್ಮರಕ್ಷಣೆಗೂ ಕಾಳಗಕ್ಕೂ ನೆರವಾಗಿದ್ದದ್ದು ಮುಂದೆ ಜನಪ್ರಿಯ ವ್ಯಾಯಾಮ ಕ್ರೀಡೆ, ಖಡ್ಗಚಾತುರ್ಯ ಪರೀಕ್ಷೆಯ ಸ್ಪರ್ಧೆಯಾಗಿ ಪರಿಣಮಿಸಿತು. ಶ್ರೀಮಂತರ ಸಂಸ್ಕೃತಿಯ ಸಂಕೇತವಾಯಿತು. ಗೌರವಸ್ಥ ಸ್ತ್ರೀಯರೂ ಕತ್ತಿವರಸೆಯನ್ನು ಕಲಿಯತೊಡಗಿದರು. ಇದರ ವೈಯಕ್ತಿಕ ಶಿಸ್ತು, ಶಿಕ್ಷಣ, ಮಾನಸಿಕ ಶಾರೀರಿಕ ಹೊಂದಾಣಿಕೆಗಳು ಮೋಹಕವಾದವು.

ಖಡ್ಗತಂತ್ರದಲ್ಲಿ ಕ್ರಾಂತಿಯಾಗಿ ಆಧುನಿಕ ರಚನೆ ಸ್ಥಾಪಿತವಾಯಿತು. ಹರಿತ, ಭಾರ, ನಿರ್ವಹಿಸಲಾಗದಷ್ಟು ತೊಡಕಾಗಿದ್ದ ಹಿಂದಿನ ಕತ್ತಿಗಳು ಹೋಗಿ ಸಮತೋಲನದ, ಚಿಕ್ಕ, ಹಗುರ, ಮೊಂಡ ಕತ್ತಿಗಳು ಉದ್ಭವಿಸಿದವು. ಹಿಂದಿನಕತ್ತಿವರಸೆಗೆ ದೇಹಶಕ್ತಿ ಪ್ರಾಧಾನ್ಯವಾಗಿತ್ತು. ಈಗ ಬೇಕಾದದ್ದು ಪಶುಶಕ್ತಿಯಲ್ಲ, ಶಾಸ್ತ್ರೀಯ ಸುಧಾರಣೆ; ಒರಟುತನ ದಾಂಡಿಗತನವಲ್ಲ, ಯುಕ್ತಿ ಚಾತುರ್ಯ ಕೈಚಳಕ. ಸ್ನಾಯುಗಳಿಗಿಂತಲೂ ಹೆಚ್ಚಾಗಿ ನರಗಳು, ಮಿದುಳು ಮುಖ್ಯ. ಮೈ ಹವಣಿಕೆ, ಮಾನಸಿಕ ಚಟುವಟಿಕೆ, ಖಚಿತ ಮತ್ತು ಸೂಕ್ಷ್ಮ ಸಂಚಲನೆ, ಶೀಘ್ರಗತಿ, ಚುರುಕು ಪಾದಗಳು ಅವಶ್ಯ. ಇದು ವ್ಯಾಯಾಮ ಮಾತ್ರವಲ್ಲ, ಕಲೆಯೂ ಆಗಿದೆ. ಚದುರಂಗದಂತೆ ಬಗೆ ಬಗೆ ತೊಡಕಾದ ಚಾಲನ ಶಕ್ತಿ, ಹಿಡಿತ, ಏಕಾಗ್ರತೆ ಬೇಕು. ಅಗ್ರೇಸರ ಕತ್ತಿವರಸೆಗಾರನೂ ತನ್ನ ಜೀವನಗತಿಯಲ್ಲಿ ನಿರಂತರ ಅಭ್ಯಾಸ ಮಾಡಬೇಕು.

ದೀರ್ಘಾವಧಿ ನಿಂತುಹೋಗಿದ್ದ ಒಲಿಂಪಿಕ್ ಪಂದ್ಯಾಟ 1896ರಲ್ಲಿ ಪುನರುಜ್ಜೀವಿತವಾದಾಗ ಕತ್ತಿವರಸೆಯೂ ಏಳಿಗೆಯಾಗಿ ಪ್ರಮುಖ ಆಟವಾಯಿತು. ಯೂರೋಪು, ಅಮೆರಿಕಗಳಲ್ಲಿ ಅನೇಕ ಖಡ್ಗಕೂಟಗಳು ಬೆಳೆದವು. ಅರವತ್ತು ರಾಷ್ಟ್ರಗಳು ಸೇರಿರುವ ಅಂತರರಾಷ್ಟ್ರೀಯ ಕತ್ತಿವರಸೆ ಸಂಯುಕ್ತಸಂಘ ಅಂತರರಾಷ್ಟ್ರೀಯ ಸ್ಪರ್ಧೆಗಳನ್ನೂ ಪೃಥ್ವಿಯ ಖಡ್ಗಾಗ್ರಣಿಗಳ ಪ್ರದರ್ಶನವನ್ನೂ ನಡೆಸುತ್ತದೆ. ನಾನಾ ಜನಾಂಗಗಳು ರಾಷ್ಟ್ರೀಯ ಕ್ರೀಡಾ ಸ್ಪರ್ಧೆಗಳನ್ನೂ ಸೈನಿಕ ಮತ್ತು ಸರ್ವಶ್ರೇಷ್ಠರ ಪೋಟಾಪೋಟಿಗಳನ್ನೂ ನಿರ್ವಹಿಸುತ್ತವೆ. ಇಟಲಿಯ ವಿಶ್ವವಿಖ್ಯಾತ ಖಡ್ಗಪ್ರವೀಣ ಅಲ್ಡೋನಾಡಿ ಅಮೇರಿಕಕ್ಕೆ 1936ರಲ್ಲಿ ಹೋದ ಅನಂತರ ಅಲ್ಲಿ ಖಡ್ಗಕಲೆ ಅಗಾಧವಾಗಿ ಬೆಳೆಯಿತು. ಅಮೆರಿಕದ ಕಾಲೇಜುಗಳು ಪರಸ್ಪರ ನಡೆಸುವ ಅಗ್ರಣಿ ಕತ್ತಿಸ್ಪರ್ಧೆಗಳಿಗೆ ಹದಿನೈದು ವಿಶ್ವವಿದ್ಯಾನಿಲಯಗಳು ಸೇರಿವೆ.

ಆಧುನಿಕ ಕತ್ತಿವರಸೆಗಳಲ್ಲಿ ಮೂರು ವಿಧಗಳಿವೆ : 1 **ಫಾಯಿಲ್** (ಫ್ರಾನ್ಸ್ ಮತ್ತು ಇಟಲಿಗಳ ಫಾಯಿಲ್‌ಗಳಲ್ಲಿ ಭಿನ್ನತೆ ಇದೆ) ; 2 **ಎಪೇ** ; 3 **ಕೊಂಕುಕತ್ತಿ**. ಈ ವಿಧಗಳಲ್ಲಿ ಬಳಕೆಯಾಗುವ ಕತ್ತಿಗಳು ಬೇರೆ ಬೇರೆ ತರದವು. ಇವುಗಳಿಗೆ ಬೇರೆ ಬೇರೆ ನಿಯಮ, ಕಟ್ಟಳೆಗಳಿವೆ. ಪುರುಷರು ಮೂರು ವಿಧಗಳಲ್ಲೂ ಸಾಧನೆ ಮಾಡುತ್ತಾರೆ. ಸ್ತ್ರೀಯರ ಸಾಧನೆ ಫಾಯಿಲ್‌ನಲ್ಲಿ ಮಾತ್ರ. ಕತ್ತಿವರಸೆಗಾರ ತಲೆಯ ರಕ್ಷಣೆಗೆ ಬಲೆಯ ಕಣ್ಣುಗಳಿರುವ ಬಲವಾದ ಮುಖವಾಡವನ್ನು ಧರಿಸುತ್ತಾನೆ. ಅವನ ದೃಷ್ಟಿಗೆ ಇದರಿಂದ ಅಡಚಣೆಯಾಗುವುದಿಲ್ಲ. ಮೆತ್ತೆಯಿಂದ ತುಂಬಿದ ಬಿಳಿಯ ಕ್ಯಾನ್ವಾಸ್ ಅಥವಾ ಗ್ಯಾಬರ್ಡೀನ್‌ನ ಕವಚ; ಮೊಣಕಾಲುವರೆಗಿನ ಷರಾಯಿ; ಕತ್ತಿ ಹಿಡಿದ ಕೈಗೆ ತೊಗಲಿನ ಕೈಚೀಲ; ಕಾಲುಗಳಿಗೆ ದಪ್ಪ ಕಾಲುಚೀಲ ಮತ್ತು ಚಪ್ಪಟೆ ತಳದ ಜೋಡುಗಳು; ಇಟಲಿಯ ಫಾಯಿಲ್ ಆದಾಗ ಕೈಹರಡಿಗೆ ತೊಗಲಿನ ಬಾರು—ಇವು ಸ್ತ್ರೀಪುರುಷರಿಬ್ಬರಿಗೂ ಉಡುಪು. ಸ್ತ್ರೀಯರಿಗೆ ವಕ್ಷಸ್ಥಳದ ರಕ್ಷಣೆಯೂ ಬೇಕು. ಮನೆಯೊಳಗಾಗಲೀ ಅಥವಾ ಬೈಲಿನಲ್ಲಾಗಲೀ ಇರುವ ಸ್ಪರ್ಧಾರಂಗ ಕಡೇಪಕ್ಷ 40′ ಉದ್ದ 6′ ಅಗಲ ಇರುವುದು. ಅದನ್ನು ಲಿನೋಲಿಯಂ ತುಕಡಿ ಅಥವಾ ಕಾರ್ಕ್ ಮುಚ್ಚಿರುತ್ತದೆ. ಎಪೇಗೆ ತಾಮ್ರದ ಜಾಲ ಹಾಸಿರುತ್ತದೆ.

**ಫಾಯಿಲ್ :** ಇದು ನಾಲ್ಕು ಅಂಚುಗಳುಳ್ಳ ತೆಳುವಾದ ಹಗುರವಾದ ಮಣಿಯುವ ಉಕ್ಕಿನ ಅಲಗಿನ ಇರಿಯುವ ಕತ್ತಿ. ತುದಿಗೆ ರಬ್ಬರ್ ಗುಂಡಿ ಹಾಕಿ ಮೊಂಡು ಮಾಡಿದೆ. ಕೈರಕ್ಷಣೆಗೆ ಗುಂಡಾದ ಕಾಪು. ಇದರ ತೂಕ 17 ಔನ್ಸ್. ಉದ್ದ 43½″. ತರ್ಜನಿಯಿಂದ ಇದನ್ನು ಹಿಡಿದುಕೊಳ್ಳಲು ಅಡ್ಡಮರದ ಕಾಪು



ಲಂಡನಿನ ಒಲಂಪಿಯದಲ್ಲಿನ ರಾಯಲ್ ಟೋರ್ನಮೆಂಟಿನಲ್ಲಿ ಸ್ಪರ್ಧಿಸುತ್ತಿರುವ ಇಬ್ಬರು ಮಹಿಳೆಯರು. ಈ ಮೊಂಡು ಕತ್ತಿಸ್ಪರ್ಧೆ (ಫಾಯಿಲ್ಸ್ ಕಾಂಪಿಟಿಷನ್) ಬಹು ಮಂದಿ ಪ್ರೇಕ್ಷಕರನ್ನು ಆಕರ್ಷಿಸಿತೆಂದು ಹೇಳಲಾಗಿದೆ

ಇದೆ. ಇಟಲಿಯ ಫಾಯಿಲ್ ಇದಕ್ಕಿಂತ ಸ್ವಲ್ಪ ಹೆಚ್ಚು ಉದ್ದ; ಘಂಟೆ ಆಕಾರದ ಕಾಪು ಕೈಯನ್ನು ರಕ್ಷಿಸುತ್ತದೆ. ಈ ಕತ್ತಿವರಸೆ ಕೈಹರಡು ಕಣ್ಣುಗಳಿಗೆ ಮಾತ್ರವೇ ಅಲ್ಲ, ತಲೆಯಿಂದ ಹಿಮ್ಮಡಿಯವರೆಗೆ ಪ್ರತಿಯೊಂದು ಸ್ನಾಯು, ನರ, ಅಂಗಾಂಶಕ್ಕೂ ಕಸರತ್ತು ಕೊಡುತ್ತದೆ. ತಲೆಯನ್ನು ನೆಟ್ಟಗಿಡುತ್ತದೆ. ಭುಜಗಳನ್ನು ಬಿಗಿಸುತ್ತದೆ. ಕತ್ತಿವರಸೆಗೆ ಇದೇ ತಳಹದಿ. ಇದನ್ನು ಕಲಿತರೆ ಉಳಿದೆರಡೂ ಸುಲಭ. ಇದನ್ನು ಲಘುವಾಗಿ ಅಂಗೈ ಮತ್ತು ಬೆಟ್ಟುಗಳಿಂದ ಹಿಡಿದುಕೊಂಡು ಹೆಬ್ಬೆಟ್ಟನ್ನು ಹಿಡಿಕೆಯ ಮೇಲುಭಾಗದ ಮೇಲೆ ಆತಿರಬೇಕು.

ಕತ್ತಿವರಸೆಗಾರರಿಬ್ಬರೂ ಹಿಮ್ಮಡಿಗಳನ್ನು ತಗಲಿಸಿಕೊಂಡು, ಪಾದಗಳನ್ನು ಸಮಕೋನದಲ್ಲಿಟ್ಟು, ಕಾಲುಗಳನ್ನು ಬಾಗಿಸಿ, ದೇಹದ ಭಾರವನ್ನು ಸಮವಾಗಿ ಹಂಚಿ, ಹಿಂದಕ್ಕೂ ಮುಂದಕ್ಕೂ ಸುಸೂತ್ರವಾಗಿ ಸಮತೋಲನದಲ್ಲಿ ಸರಳರೇಖೆಯಲ್ಲಿ ಚಲಿಸಲು ಅವಕಾಶವಾಗುವಂತೆ ಒಬ್ಬರನ್ನೊಬ್ಬರು ಅರ್ಧ ಎದುರಿಸಿ ನಿಲ್ಲಬೇಕು. ಅನಂತರ ಆಕ್ರಮಣ ಮಾಡುವವನು ಕೈ, ಕತ್ತಿ ಕೊನೆ, ಭುಜಗಳನ್ನು ಎದೆಯ ಎತ್ತರದಲ್ಲಿ ಒಂದೇ ಸರಳರೇಖೆಯಲ್ಲಿರುವಂತೆ ಬಲ ತೋಳನ್ನು ಚಾಚಿ, ಬಲಪಾದವನ್ನು ಮುಂದೂಡಬೇಕು. ಮೊಣಕಾಲು ಮಂಡಿಯನ್ನು ಚೆನ್ನಾಗಿ ಬಾಗಿಸಿ, ಹಿಂಗಾಲನ್ನು ನೆಟ್ಟಗಿಟ್ಟು, ಮೈ ಹವಣಿಕೆಗೆ ಎಡ ತೋಳನ್ನು ತಲೆಯ ಎತ್ತರದ ಮೇಲಿಡಬೇಕು. (ಕೊಂಕು ಕತ್ತಿವರಸೆಯಲ್ಲಿ ಎಡಗೈ ಸೊಂಟದ ಮೇಲಿರಬೇಕು.) ಈ ಶರೀರಸ್ಥಿತಿಗೆ ಲಂಜ್ ಎಂದು ಹೆಸರು.

ಮೇಲೆ ಬೀಳುವವನ ಗುರಿ ಎದುರಾಳಿಯ ದೇಹದ ಮುಂಡ ಮಾತ್ರ; ತಲೆ, ತೋಳು, ಕಾಲುಗಳಲ್ಲ. ಅವನು ಗುರಿಯನ್ನು ಕತ್ತಿಯಿಂದ ಒಂದು ಸಾರಿ ಮುಟ್ಟಿದರೆ ಒಂದು ಅಂಶ ಗೆದ್ದಂತೆ. ಐದು ಸಾರಿ ಮುಟ್ಟಿದರೆ ಒಂದು ಸುತ್ತು ಗೆದ್ದಂತೆ. ಹೆಂಗಸು ಒಂದು ಸುತ್ತನ್ನು ಗೆಲ್ಲಲು ನಾಲ್ಕು ಸಾರಿ ಮುಟ್ಟಿದರೆ ಸಾಕು. ಗುರಿಯ ಆಚೆ ಮುಟ್ಟಿದರೆ ಅದು ಲೆಕ್ಕಕ್ಕಿಲ್ಲ; ದಂಡನೆಯುಂಟು.

ಆಕ್ರಮಣಕಾರನಿಗೆ ಎದುರಾಳಿಯ ಮೇಲೆ ನುಗ್ಗಲು ಹಕ್ಕಿದೆ (ರೈಟ್ ಆಫ್ ವೇ). ಆಗ ಎದುರಾಳಿ ಈ ಏಟನ್ನು ತಪ್ಪಿಸಿಕೊಂಡರೆ ಆಕ್ರಮಣದ ಹಕ್ಕು ಅವನಿಗೆ ಬರುತ್ತದೆ. ಹಕ್ಕು ಸರ್ತಿಯ ಪ್ರಕಾರ ಪರಸ್ಪರ ಬದಲಿಸುತ್ತದೆ. ಇಬ್ಬರೂ ಏಕಕಾಲದಲ್ಲಿ ಪರಸ್ಪರ ಮುಟ್ಟಿದರೆ ಹಕ್ಕುದಾರನ ಹೊಡೆತಕ್ಕೆ ಮಾತ್ರ ಲೆಕ್ಕ. ಆಕ್ರಮಣದಲ್ಲಿ ಗುರಿಯ ಬೇರೆ ಬೇರೆ ಭಾಗಗಳನ್ನು ಮುಟ್ಟಲು ನಾನಾ ವಿಧಗಳಿವೆ; ಎದುರಾಳಿಯ ಕತ್ತಿಯಿಲ್ಲದ ಗುರಿಯ ಕಡೆ ಕತ್ತಿ ಇರಿಯುವುದು; ತಿವಿತಕ್ಕೆ ದಾರಿ ಕೊಡದಂತೆ ಎದುರಾಳಿ ಕತ್ತಿ ಹಿಡಿದುಕೊಂಡಿದ್ದರೆ ಅದನ್ನು ಚುರುಕಾಗಿ ಬಡಿದು ಅಥವಾ ಅದುಮಿ ದಾರಿ ಮಾಡಿಕೊಂಡು ತಿವಿಯುವುದು; ಕತ್ತಿ ತುದಿಯನ್ನು ಎದುರಾಳಿನ ಕಾಪಿನ ಸುತ್ತಲೂ ತಿರುಗಿಸಿ, ತಿವಿತಕ್ಕೆ ದಾರಿ ಮಾಡಿಕೊಳ್ಳುವುದು; ಕತ್ತಿಯಿಂದ ತಿವಿಯುವಂತೆ ನಟಿಸಿ ಅದನ್ನು ಬೇರೆ ಕಡೆ ತಿರುಗಿಸಿ ತಿವಿಯುವುದು; ಓಡುತ್ತ ಅಥವಾ ನೆಗೆಯುತ್ತ ಹೋಗಿ ತಿವಿಯುವುದು; ಎದುರಾಳಿಯ ಕತ್ತಿ ಕೊನೆಯ ಮೇಲೆ ತನ್ನ ಕತ್ತಿಯನ್ನು ನುಗ್ಗಿಸಿ ಬೇರೆ ದಿಕ್ಕಿನಿಂದ ಮುಟ್ಟುವುದು; ಇತ್ಯಾದಿ. ಎದುರಾಳಿ ತನ್ನ ಮೇಲೆ ಬೀಳುವ ಆಕ್ರಮಣದ ಏಟುಗಳನ್ನು ನಿವಾರಿಸಲೂ ಎಂಟು ವಿಧಗಳಿವೆ: ಆಕ್ರಮಣಕಾರಿಯ ಕತ್ತಿಯನ್ನು ಚುರುಕಾಗಿ ಬಡಿದು ಪಕ್ಕಕ್ಕೆ ತಿರುಗಿಸಿ ಮಾರ್ಗ ತಪ್ಪಿಸುವುದು; ತನ್ನ ಕತ್ತಿ ಕೊನೆಯನ್ನು ಆಕ್ರಮಣಕಾರಿಯ ಕತ್ತಿಯ ಸುತ್ತಲೂ ಸುತ್ತಿಸಿ ಅಲಗನ್ನು ಪಕ್ಕಕ್ಕೆ ತಿರುಗಿಸುವುದು; ಇತ್ಯಾದಿ. ಇವುಗಳಿಗೆಲ್ಲ ಖಡ್ಗಭಾಷೆಯಲ್ಲಿ ಬೇರೆ ಬೇರೆ ಹೆಸರುಗಳಿವೆ.

ಸ್ಪರ್ಧೆಯ ತೀರ್ಮಾನಕ್ಕೆ ನಾಲ್ಕು ಪಂಚಾಯತರೂ ಒಬ್ಬ ಅಧ್ಯಕ್ಷನೂ ಇರುತ್ತಾರೆ. ಸ್ವಯಂಚಾಲಕ ವಿದ್ಯುತ್ ಸಲಕರಣೆಯು ಗಂಟೆಶಬ್ದ, ದೀಪಗಳನ್ನುಂಟುಮಾಡಿ ಪ್ರತಿಯೊಂದು ಇರಿತವನ್ನೂ ನಿಖರವಾಗಿ ತಿಳಿಸುತ್ತದೆ. ಇದಕ್ಕೆ ಒಬ್ಬನೇ ಸಾಕು.

**ಏಪೇ**: ಇದು ಹಿಂದಿನ ದ್ವಂದ್ವಯುದ್ಧ ಕತ್ತಿಯ ಪ್ರತಿರೂಪ. ಅಲಗಿನ ಕೊನೆಯಲ್ಲಿ ಚೂಪಾದ ಬಿಂದುವಿನ ಬದಲು ಚಪ್ಪಟೆ ಗುಂಡಿಯಂಥ ಮೊಳೆಯ ತಲೆ ಮೊಂಡು ಮಾಡಿದೆ. ಫಾಯಿಲ್‌ನಷ್ಟೇ ಉದ್ದ. ಅದಕ್ಕಿಂತ ಹೆಚ್ಚು ಭಾರ: 27 ಔನ್ಸ್. ತ್ರಿಕೋನಾಕಾರ. ಗಡುಸು. ಬಹು ದೊಡ್ಡ ಕಾಪು. ಫಾಯಿಲ್‌ನಂತೆ ತಿವಿಯುವ ಆಯುಧ; ಹಕ್ಕಿನ ಕ್ರಮವಿದೆ. ಕತ್ತಿ ತುದಿಗೆ ಸಿಕ್ಕಿಸಿದ ಮೂರು ಚಿಕ್ಕ ಮುಳ್ಳುಗೋಲುಗಳು ಬಟ್ಟೆಗೆ ಸಿಕ್ಕಿಕೊಂಡು ಕತ್ತಿ ತಗಲಿದ್ದನ್ನು ಸ್ಪಷ್ಟಪಡಿಸುತ್ತವೆ. ತಲೆಯಿಂದ ಕಾಲ್ಬೆರಳವರೆಗೆ ಇಡೀ ಶರೀರ ಗುರಿ. ಎಲ್ಲಿ ಮುಟ್ಟಿದರೂ ಎಣಿಕೆ. ಯಾರು ಮೊದಲು ಮುಟ್ಟುತ್ತಾರೋ ಅವರಿಗೆ ಎಣಿಕೆ. ಇಬ್ಬರೂ ಏಕಕಾಲದಲ್ಲಿ ಮುಟ್ಟಿದರೆ ಇಬ್ಬರಿಗೂ ಎಣಿಕೆ. ಫಲಿತಾಂಶನಿರ್ಣಯಕ್ಕೆ ಇದರಲ್ಲೂ ಐದು ಮಂದಿ. ವಿದ್ಯುತ್ ಸಲಕರಣೆಯಿಂದ ನಿರ್ಣಯಿಸುವ ಕ್ರಮವೂ ಬಂದಿದೆ.

**ಕೊಂಕು ಕತ್ತಿ**: ಇದು ಒಂದನೆಯ ಎಲಿಜಬೆತ್ ರಾಣಿಯ ಕಾಲದ ಕತ್ತಿಯಿಂದಲೂ ಅಶ್ವಪಡೆಯ ಭಾರದ ಕತ್ತಿಯಿಂದಲೂ ವಿಕಸಿತವಾಗಿದೆ. ಚಪ್ಪಟೆಯಾದ ಮಣಿಯುವ ಅಲಗಿದೆ. ಇದರಿಂದ ಕತ್ತರಿಸಲೂ, ತಿವಿಯಲೂ ಸಾಧ್ಯ. ಮುಂದಿನ ಅಂಚಿನಿಂದ ಪೂರ್ತಿಯಾಗಿಯೂ ಹಿಂದಿನ ಅಂಚಿನ ಕಿರಷ್ಟು ಭಾಗದಿಂದಲೂ ಅಥವಾ ತುದಿಯಿಂದಲೂ ಹೊಡೆಯಬಹುದು. ಅಲಗು ಮೊಂಡ: ಕೆಡಕು ಮಾಡುವುದಿಲ್ಲ. ತೆಳ್ಳಗಿದೆ. ಫಾಯಿಲ್‌ನಂತೆ V ಆಕಾರ. ಲೋಹದ ದೊಡ್ಡ ಕಾಪು ಕೈಯ ಹಿಂದಿನ ಸುತ್ತಲೂ ಬಾಗಿ ಕೈಗೆಣ್ಣುಗಳನ್ನೂ ತೋಳನ್ನೂ ರಕ್ಷಿಸುತ್ತದೆ. ಇದರಲ್ಲಿ ಹಕ್ಕಿನ ನಿಯಮವಿಲ್ಲ. ಸೊಂಟದ ಮೇಲಿನ ಎಲ್ಲ ಭಾಗವೂ ಗುರಿ; ಕಾಲುಗಳೂ ಪಾದಗಳೂ ಸೇರಿಲ್ಲ. ಇದು ರೋಮಾಂಚಕಾರಿ ಆಟ. ಹಂಗರಿಗೆ ಇದರಲ್ಲಿ ಪ್ರಧಾನತ್ವ ಬಂದಿದೆ. (ಎಂ.ಜಿ.ಕೆ.ಎಂ.)

ಭಾರತದಲ್ಲಿ ಕತ್ತಿವರಸೆ ಬಹುಶಃ ಕುಸ್ತಿಯ ಜೊತೆಗೆ ಕೂಡಿಯೇ ಇರುತ್ತಿತ್ತು. ಗರಡಿಮನೆಯ ಅಖಾಡದಲ್ಲಿ ವಸ್ತಾದಿಗಳು ತಮ್ಮ ಶಿಷ್ಯರಿಗೆ ಕುಸ್ತಿಯೊಂದಿಗೆ ಕತ್ತಿವರಸೆ ಮುಂತಾದವನ್ನು ಕಲಿಸುತ್ತಿದ್ದರು. ಈ ದೇಶದ ಕೆಲ ಭಾಗಗಳಲ್ಲಿ ಈಗಲೂ



ಟೋಕಿಯೋ ಒಲಿಂಪಿಕ್ ಪಂದ್ಯಗಳಲ್ಲಿ ಭಾಗವಹಿಸಿದ ಹಂಗರಿಯ ಕತ್ತಿವರಸೆ ಪಟುಗಳು

ಮೆರವಣಿಗೆಗಳ ಅಂಗವಾಗಿ ಗದೆ, ಕೋಲು, ಬರ್ಜಿ, ಈಟಿ ಇವುಗಳ ಜೊತೆಗೆ ಕತ್ತಿವರಸೆಗಳನ್ನೂ ಪ್ರದರ್ಶಿಸುತ್ತಾರೆ. ಇಂಗ್ಲೆಂಡ್ ಮತ್ತು ಇತರ ದೇಶಗಳಲ್ಲಿ ಕೆಲವು ಕಾಲ ಬಳಕೆಯಲ್ಲಿದ್ದಂತೆ, ಕತ್ತಿವರಸೆಗೆ ಉದ್ದವಾದ ಕತ್ತಿಯೇ ಆಯುಧ.

(ಎ.ಎನ್.ಎಸ್.ಎಂ.)

**ಕತ್ತೆ :** ಸಸ್ತನಿಗಳ ಗುಂಪಿನ ಪೆರಿಸ್ಸೊಡಾಕ್ಟೈಲ ಗಣದ ಕುದುರೆ ಮತ್ತು ಜೀಬ್ರ ಪ್ರಾಣಿಗಳನ್ನೊಳಗೊಂಡ ಎಕ್ವಿಡೀ ಕುಟುಂಬಕ್ಕೆ ಸೇರಿದ ಪ್ರಾಣಿ. ಕತ್ತೆ, ಕುದುರೆ ಮತ್ತು ಜೀಬ್ರಗಳಂತೆಯೇ ಈಕ್ವಸ್ ಎನ್ನುವ ಜಾತಿಗೆ ಸೇರಿದೆ. ಕತ್ತೆಯಲ್ಲಿ ಮುಖ್ಯವಾದ ಎರಡು ಪ್ರಭೇದಗಳಿವೆ: ಈಕ್ವಸ್ ಆಸಿನಸ್ ಮತ್ತು ಈಕ್ವಸ್ ಹೆಮಿಯೋನಸ್. ಮೊದಲನೆಯದು ಈಶಾನ್ಯ ಆಫ್ರಿಕದಲ್ಲಿ (ಇಥಿಯೋಪಿಯ, ಸೋಮಾಲಿಲ್ಯಾಂಡ್) ಕಂಡುಬರುವ ಕಾಡುಕತ್ತೆ. ಸಾಕಿದ ಕತ್ತೆ ಈ ಕತ್ತೆಯಿಂದಲೇ ಬಂದುದೆಂದು ನಂಬಲಾಗಿದೆ. ಎರಡನೆಯ ಪ್ರಭೇದ ಏಷ್ಯದ ನಿವಾಸಿಯಾದ ಕಾಡುಕತ್ತೆ. ಇದನ್ನು ಐದು ಉಪಪ್ರಭೇದಗಳಾಗಿ ವಿಂಗಡಿಸುತ್ತಾರೆ. ಇವು : ಸಿರಿಯದ ಕಾಡುಕತ್ತೆ (ಈ. ಹೆ. ಹೆಮಿಪ್ಪಸ್), ತುರ್ಕಿ ಮತ್ತು ವಾಯುವ್ಯ ಇರಾನಿನಲ್ಲಿರುವ ಆನಜರ್ ಎಂಬ ಕತ್ತೆ (ಈ. ಹೆ. ಆನಜರ್), ಭಾರತದ ಕಚ್ ಮತ್ತು ಲಡಖಿನಲ್ಲಿರುವ ಕಾಡುಕತ್ತೆ (ಈ.ಹೆ.ಖುರ್), ಟಿಬೆಟ್ಟಿನಲ್ಲಿ 15,000′ಗೂ ಎತ್ತರದ ಪ್ರದೇಶದಲ್ಲಿ ಕಾಣಬರುವ ಕಿಯಾಂಗ್ ಎಂಬ ಕತ್ತೆ (ಈ.ಹೆ.ಕಿಯಾಂಗ್) ಮತ್ತು ಮಧ್ಯ ಮಂಗೋಲಿಯದ ನಿವಾಸಿಯಾದ ಕುಲಾನ್ ಎನ್ನಲಾಗುವ ಕಾಡುಕತ್ತೆ (ಈ. ಹೆ. ಹೆಮಿಯೋನಸ್).

ಕತ್ತೆಗಳ ದೇಹರಚನೆ ಕುದುರೆಯಂತೆಯೇ ; ಆದರೆ ಗಾತ್ರ ಮತ್ತು ಎತ್ತರ ಕಡಿಮೆ, ಕಿವಿಗಳು ಉದ್ದ, ಗೊರಸು ಕುದುರೆಗಳವಕ್ಕಿಂತ ಚಿಕ್ಕವು, ಬಾಲದ ತುದಿ ಕುಚ್ಚಿನಂತಿದೆ. ಕತ್ತಿನ ಮೇಲೆ ಇಳಿಬಿದ್ದಿರುವ ಅಥವಾ ನೆಟ್ಟಗಿರುವ ಕೂದಲಿನ ಅಯಾಲಿದೆ. ಬೆನ್ನಿನ ಮಧ್ಯೆ ಬಾಲದವರೆಗೂ ಹಬ್ಬಿರುವ ಪಟ್ಟೆಯಿದೆ. ಒಂದು ಭುಜದಿಂದ ಮತ್ತೊಂದು ಭುಜಕ್ಕೆ ಅಡ್ಡವಾಗಿ ಹರಡುವ ಇನ್ನೊಂದು ಪಟ್ಟೆ ಇದೆ. ಕೆಲವೊಮ್ಮೆ ಕಾಲುಗಳ ಮೇಲೆ ಅಡ್ಡಡ್ಡನಾದ ಮಸಕಾದ ಪಟ್ಟೆಗಳಿರುವುದೂ ಉಂಟು. ದೀರ್ಘವಾಗಿ ಉಸಿರನ್ನು ಎಳೆದುಕೊಳ್ಳುವಾಗ ಮತ್ತು ಬಿಡುವಾಗ ಉಂಟಾಗುವ ಹೀ-ಹಾ ಎಂಬ ಇವರ ಕೂಗು ಕತ್ತೆಜಾತಿಗೇ ವಿಶಿಷ್ಟವಾದುದು ಮತ್ತು ಪ್ರಾಣಿ ಪ್ರಪಂಚದಲ್ಲೇ ಅತ್ಯಂತ ವಿಚಿತ್ರವಾದುದು. ಕಾಡುಕತ್ತೆಗಳು ಒಂಟಿಯಾಗಿಯೊ ಹಿಂಡುಗಳಲ್ಲಿಯೋ ಇರುತ್ತವೆ. ಮರಿ ಹಾಕುವ ಕಾಲದಲ್ಲಿ ಮಾತ್ರ ಮಂದೆಯಿಂದ ಬೇರೆಯಾಗುತ್ತವೆ. ಗಂಡು ಹೆಣ್ಣುಗಳ ಕೂಡುವಿಕೆ ಸಾಮಾನ್ಯವಾಗಿ ಆಗಸ್ಟ್-ಅಕ್ಟೋಬರ್ ತಿಂಗಳುಗಳಲ್ಲಿ. ಗರ್ಭಧಾರಣೆಯ ಅವಧಿ ಸುಮಾರು 11-12 ತಿಂಗಳು. ಹೆಣ್ಣು ಸಾಮಾನ್ಯವಾಗಿ ಒಂದು ಸಲಕ್ಕೆ ಒಂದು ಮರಿಯನ್ನು ಈಯುತ್ತದೆ.

ಕತ್ತೆಯ ಬಗ್ಗೆ ಒಂದು ಸ್ವಾರಸ್ಯವಾದ ಕಥೆ ಇದೆ. ಒಂದು ಕಥೆಯಲ್ಲಾದರೂ ತನ್ನ ಜಾಣತನವನ್ನು ಕುರಿತು ಎರಡು ಒಳ್ಳೆಯ ಮಾತನ್ನು ಬರೆಯಬೇಕೆಂದು ಕತ್ತೆ ಈಸೋಪನನ್ನು ಕೇಳಿತಂತೆ. ಹಾಗೆ ಮಾಡಿದರೆ ಜನ ತನ್ನನ್ನೇ ಕತ್ತೆಯೆಂದು ಹೀಗಳೆಯುತ್ತಾರೆಂದು ಈಸೋಪ ಕತ್ತೆಗೆ ಹೇಳಿದನಂತೆ. ಕತ್ತೆ ಸಾಮಾನ್ಯವಾಗಿ ಎಲ್ಲರೂ ಭಾವಿಸಿರುವಷ್ಟು ಮೊಂಡು ಮತ್ತು ದಡ್ಡ ಪ್ರಾಣಿಯಲ್ಲ. ತನಗೆ ಇಷ್ಟಬಂದಾಗ ಮಾತ್ರ ಕೆಲಸ ಮಾಡುವುದರಿಂದ ಮತ್ತು ಉದ್ದೇಶಪೂರ್ವಕವಾಗಿಯೊ ಎಂಬಂತೆ ಮೊಂಡಾಟ ಹೂಡುವುದರಿಂದ ಕತ್ತೆಗೆ ಬುದ್ಧಿಶಕ್ತಿ ಮತ್ತು ವಿವೇಚನಾಶಕ್ತಿ ಇದೆ ಎನಿಸುತ್ತದೆ. ಜಗಳವಾಡುವಾಗ ಅಥವಾ ಆತ್ಮರಕ್ಷಣೆಯ ಆವಶ್ಯಕತೆ ಉಂಟಾದಾಗ ಕತ್ತೆ ತನ್ನ ಹಿಂಗಾಲುಗಳನ್ನು ಮೇಲಕ್ಕೆತ್ತಿ ಜಾಡಿಸಿ ಒದೆಯುತ್ತದೆ : ತನ್ನ ಬಾಚಿಹಲ್ಲುಗಳಿಂದ ಕಚ್ಚುವುದೂ ಉಂಟು. ಕತ್ತೆ ವೇಗವಾಗಿ (ಕುದುರೆಯಷ್ಟಲ್ಲದಿದ್ದರೂ) ಓಡಬಲ್ಲುದು : ಗಂಟೆಗೆ 57 ಕಿಮೀ. ವೇಗವಾಗಿ ಓಡಿದ ದಾಖಲೆಗಳುಂಟು.

ತೋಳ, ಕತ್ತೆಕಿರುಬಗಳು ಕತ್ತೆಯ ಸ್ವಾಭಾವಿಕ ಶತ್ರುಗಳು.

ಸುಮಾರು 4,000 ವರ್ಷಗಳ ಹಿಂದೆ ಈಜಿಪ್ಟಿನವರು ಕಾಡುಕತ್ತೆಗಳನ್ನು ಹಿಡಿದು ಪಳಗಿಸಿದರೆಂದು ನಂಬಲಾಗಿದೆ. ಸಾಕಿದ ಕತ್ತೆಗಳೆಂಬ ಒಂದು ನಿರ್ದಿಷ್ಟ ಬಗೆಯ



ಮರಿಯೊಡನಿರುವ ಕತ್ತೆ. ಒಳ ಚಿತ್ರ— ತಲೆ ಮತ್ತು ಕತ್ತು

ತಳಿ ಅಂದಿನಿಂದ ಅಸ್ತಿತ್ವಕ್ಕೆ ಬಂದಿದೆ. ಸಾಕಿದ ಕತ್ತೆಗಳು ಕಾಡುಕತ್ತೆಗಳಿಗಿಂತ ಗಾತ್ರದಲ್ಲಿ ಚಿಕ್ಕವು ಮತ್ತು ಸ್ವಲ್ಪ ಮಾಸಲು ಬಣ್ಣದವು. ಕತ್ತೆಗಳನ್ನು ಸಾಕುವುದು ಬಹು ಸುಲಭ : ಏಕೆಂದರೆ ಅವುಗಳ ಆಹಾರ ಬಹಳ ಸರಳರೀತಿಯದು : ಎಂಥ ಆಹಾರವನ್ನಾದರೂ ತಿಂದು, ಹೆಚ್ಚುಕಾಲ ನೀರು ಕುಡಿಯದೇ ಇರಬಲ್ಲವು. ಆದರೆ ದುಡಿಮೆಯಲ್ಲಿ ಮಾತ್ರ ಬೇರಾವ ಪ್ರಾಣಿಗೂ ಕಡಿಮೆಯಿಲ್ಲ. ಬಿಸಿಲಿನ ತಾಪದಲ್ಲಿ, ಬಹಳ ಕಷ್ಟಕರವಾದ ಸ್ಥಿತಿಯಲ್ಲಿ, ಅತಿ ಕಡಿದಾದ ಪರ್ವತ ಪ್ರದೇಶದಲ್ಲಿ ಹೆಜ್ಜೆ ತಪ್ಪದೆ ಬಹಳ ಜಾಗರೂಕತೆಯಿಂದ ನಡೆಯುವ ಸಾಮರ್ಥ್ಯವನ್ನು ಹೊಂದಿರುವುದರಿಂದ ಇವನ್ನು ಬೆಟ್ಟಗುಡ್ಡಗಳಲ್ಲಿ ಭಾರವಾದ ಸಾಮಾನು ಸಾಗಿಸಲು ಬಳಸುತ್ತಾರೆ.

ಭಾರತದಲ್ಲಿ ಗುಜರಾತ್ ರಾಜ್ಯದ ಕಚ್ ಪ್ರದೇಶ ಮತ್ತು ಲಡಾಖಿನಲ್ಲಿರುವ ಕಾಡುಕತ್ತೆಗಳನ್ನು ಬಿಟ್ಟರೆ ಉಳಿದವೆಲ್ಲ ಕತ್ತೆಗಳೇ. ಕಾಡುಕತ್ತೆ ಕತ್ತೆಗಿಂತ ಗಾತ್ರದಲ್ಲಿ ದೊಡ್ಡದು (ಎತ್ತರ 0.93–1.21 ಮೀ.) ಹಾಗೂ ಹೆಚ್ಚು ಮಾಟವಾದುದು. ಮೈಬಣ್ಣ ಹಳದಿ ಮರಳಿನಂತೆ. ಕಿವಿಗಳೂ ಕೊಂಚ ಚಿಕ್ಕವು. ಕೂಗು ಹೆಚ್ಚು ತೀವ್ರವಾದುದು. ಕಾಡುಕತ್ತೆ ಇತರ ಕತ್ತೆಗಳೊಂದಿಗಾಗಲಿ ಬೇರಾವ ಸಾಕು



ಕಾಡುಕತ್ತೆ

ಪ್ರಾಣಿಗಳೊಂದಿಗಾಗಲಿ ಸೇರುವುದೇ ಇಲ್ಲ. ಭಾರತದ ಕತ್ತೆಗಳಲ್ಲೂ ಎರಡು ಬಗೆಗಳಿವೆ. ಒಂದು ಬಗೆಯದು ಕೊಂಚ ಕುಳ್ಳು (ಎತ್ತರ 0.81 ಮೀ.) ಮತ್ತು ಬೂದು ಬಣ್ಣದ್ದು. ಇದು ದೇಶದ ಎಲ್ಲ ಭಾಗಗಳಲ್ಲಿಯೂ ಸಾಮಾನ್ಯ. ಎರಡನೆಯ ಬಗೆಯದು ಎತ್ತರ (0.93 ಮೀ.) ಮತ್ತು ಅದರ ಬಣ್ಣ ಬಿಳಿ ಅಥವಾ ತಿಳಿಬೂದಿ. ಇದು ಕಚ್ ಪ್ರದೇಶದಲ್ಲಿ ಕಾಣಬರುತ್ತದೆ. ಭಾರತದಲ್ಲಿ (1961) ಸುಮಾರು 1,09,63,000 ಸಾಕಿದ ಕತ್ತೆಗಳಿದ್ದುವೆಂದು ಅಂದಾಜಿದೆ.

ಕಷ್ಟಸಹಿಷ್ಣುವೂ ಹೆಚ್ಚು ಭಾರವನ್ನು ಹೊರುವ ಸಾಮರ್ಥ್ಯವುಳ್ಳದ್ದೂ ಆದ ಕತ್ತೆಯ ಉಪಯುಕ್ತತೆಯನ್ನು ಕಂಡುಕೊಂಡು, ಇನ್ನೂ ಉತ್ತಮವಾದ ತಳಿಗಳನ್ನು ಪಡೆಯಲು ಭಾರತದಲ್ಲಿ ತಳೀಕರಣ ಪ್ರಯೋಗಗಳನ್ನು ನಡೆಸಿದ್ದಾರೆ. ಬೇರೆ ಬೇರೆ ದೇಶಗಳಿಂದ ಉತ್ತಮ ಬಗೆಯ ಗಂಡುಕತ್ತೆಗಳನ್ನು ತರಿಸಿ ಅಡ್ಡತಳಿಯೆಬ್ಬಿಕೆಯಲ್ಲಿ ಬಳಸುತ್ತಿದ್ದಾರೆ. ಅಲ್ಲದೆ ಗಂಡುಕತ್ತೆ ಮತ್ತು ಹೆಣ್ಣು ಕುದುರೆಗಳನ್ನು ಅಡ್ಡಹಾಯಿಸಿ ಪಡೆವ ಮಿಶ್ರತಳಿಯಾದ ಹೇಸರಗತ್ತೆ (ಮ್ಯೂಲ್) ಬಗ್ಗೆಯೂ ಸಾಕಷ್ಟು ಪ್ರಯೋಗಗಳು ನಡೆಯುತ್ತಿವೆ. ಹೇಸರಗತ್ತೆಗಳು ಗಾತ್ರ, ವೇಗ ಮತ್ತು ಶಕ್ತಿಸಾಮರ್ಥ್ಯಗಳಲ್ಲಿ ಕುದುರೆಯನ್ನೂ ನೋಟ, ಕಷ್ಟಸಹಿಷ್ಣುತೆ, ಸಹನೆ, ಒರಟುತನ ಮುಂತಾದವುಗಳಲ್ಲಿ ಕತ್ತೆಯನ್ನೂ ಹೋಲುತ್ತವೆ. ಹೀಗಾಗಿ ಇವನ್ನು ಹಲವಾರು ಬಗೆಯ ಕಷ್ಟತರವಾದ ಕೆಲಸಗಳಿಗೆ ಬಳಸಲಾಗುತ್ತಿದೆ. ಸೈನ್ಯದಲ್ಲೂ ಪರ್ವತ ಪ್ರದೇಶಗಳಲ್ಲೂ ಇವುಗಳ ಬಳಕೆ ಹೆಚ್ಚು.

(ಕೆ.ಎಂ.ಕೆ. ; ಸಿ.ಎಲ್.ಜಿ.)

**ಕತ್ತೆಕಾಲಂಬು :** ಆಸ್ಕ್ಲಿಪಿಯಡೇಸೀ (ಎಕ್ಕದ ಗಿಡದ ಕುಟುಂಬ) ಕುಟುಂಬಕ್ಕೆ ಸೇರಿದ ಟೈಲೋಫೋರ ಎಂಬ ಸಸ್ಯಜಾತಿ. ಇದು ತೆಳು ಹಾಗೂ ಸುತ್ತು ಬಳ್ಳಿಯಾಗಿ ದೀರ್ಘಕಾಲ ಬೆಳೆಯುವ ಒಂದು ಮೂಲಿಕೆ ಅಥವಾ ಚಿಕ್ಕಕಂಟಿ. ಇದರಲ್ಲಿ ಹಲವಾರು ಪ್ರಭೇದಗಳಿವೆ. ಅವುಗಳಲ್ಲಿ ಟೈ. ಫ್ಯಾಸಿಕ್ಯುಲೇಟ, ಟೈ ರೊಟಂಡಿಫೋಲಿಯ ಮತ್ತು ಟೈ. ಅಸ್ತಮ್ಯಾಟಿಕ ಪ್ರಭೇದಗಳು ಮುಖ್ಯವಾದವು. ಭಾರತದಲ್ಲಿ ಎಲ್ಲ ಕಡೆಗಳಲ್ಲಿಯೂ ಬಂಜರು ಪ್ರದೇಶಗಳಲ್ಲಿ ಕಲ್ಲುಬಂಡೆಗಳ ನಡುವೆ ಬೆಳೆಯುತ್ತದೆ. ಈ ಗಿಡಕ್ಕೆ ಅನೇಕ ಬೇರುಗಳಿವೆ. ಅವು ದಪ್ಪನಾಗಿ ರಸಭರಿತವಾಗಿವೆ. ಕಾಂಡ ನೀಳ, ನುಣುಪು ಅಥವಾ ರೋಮಮಯ. ಎಲೆಗಳು ಸ್ವಲ್ಪ ಹೆಚ್ಚು ಕಡಿಮೆ ಅಭಿಮುಖವಾಗಿ ಜೋಡಣೆಗೊಂಡಿವೆ. ಎಲೆಗಳು 4″ ಉದ್ದ 2″ ಅಗಲ ಇವೆ. ಅವುಗಳ ತಳಭಾಗ ರೋಮಮಯ. ಆಕಾರ ಕತ್ತಿಯಂತೆ ಅಥವಾ ಅಂಡಾಕಾರ. ತುದಿ ಚೂಪು. ಎಲೆಗಳ ಬುಡದಲ್ಲಿ ಸುಮಾರು 1″ ಉದ್ದದ ವೃಂತಪರ್ಣಗಳಿವೆ. ಹೂಗಳು ಸರಳ ರೇಸೀಮ್ ಮಾದರಿಯ ಅಥವಾ ಛತ್ರಿಯಾಕಾರದ ಕವಲೊಡೆದ ಸೈಮೋಸ್ ಹೂಗೊಂಚಲುಗಳಲ್ಲಿರುತ್ತವೆ. ಹೂಗಳು ಗಾತ್ರದಲ್ಲಿ ಚಿಕ್ಕವು ಮತ್ತು ಆರೀಯ ಸಮಾಂಗತೆಯುಳ್ಳವು. ಅವುಗಳ ಬಣ್ಣ ಹಳದಿಮಿಶ್ರಿತ ಕೆಂಪು. ಪುಷ್ಪಪಾತ್ರೆ ಅಂಡಾಕಾರದ ಐದು ವಿಭಾಗಗಳನ್ನೊಳಗೊಂಡಿದೆ. ಗಂಟೆಯಾಕಾರದ ಪುಷ್ಪದಳಸಮೂಹ 5 ಭಾಗಗಳಾಗಿ ವಿಭಾಗವಾಗಿದೆ. ಕೇಸರಗಳು ಐದು. ಒಂದರೊಡನೊಂದು ಕೂಡಿವೆ. ಕೇಸರಗಳಿಗೂ ದಳಗಳಿಗೂ ಮಧ್ಯೆ ದಳಗಳಿಂದ ಹೊರಟ ಮುಕುಟವಿದೆ. ಪರಾಗಕೋಶ ಚಿಕ್ಕವು ಮತ್ತು ಹೂವಿನ ಕೇಂದ್ರ ಭಾಗದೆಡೆ ಬಾಗಿವೆ. ಒಂದೊಂದು ಪರಾಗಕೋಶದಲ್ಲಿಯೂ ಒಂದೊಂದೇ ಪರಾಗರಾಶಿಯಿದೆ. ಅಂಡಾಶಯದಲ್ಲಿ ಎರಡು ಕಾರ್ಪೆಲುಗಳಿವೆ. ಕಾರ್ಪೆಲುಗಳು ಶಲಾಕೆ ಮತ್ತು ಶಲಾಕಾಗ್ರದ ಭಾಗದಲ್ಲಿ ಮಾತ್ರ ಕೂಡಿಕೊಂಡಿದ್ದು ಅವುಗಳ ಬುಡ ಬಿಡಿಯಾಗಿದೆ. ಶಲಾಕಾಗ್ರ 5 ಮೂಲೆಗಳ ಬಿಲ್ಲೆಯಂತಿದೆ. ಫಲ ಎರಡು ಫಾಲಿಕಲ್‌ಗಳ ಜೋಡಿ. ಕೆಲವೊಮ್ಮೆ ಒಂದರ ಬೆಳವಣಿಗೆ ಕುಂಠಿತಗೊಂಡು ಒಂದೇ ಫಲವಾಗುವುದೂ ಉಂಟು. ಫಲದ ತುದಿ ಚೂಪು, ಮೈ ನುಣುಪು. ಬೀಜಗಳು ಅನೇಕ, ಅವುಗಳಿಗೆ ಪ್ರಸರಣಕಾರ್ಯದಲ್ಲಿ ಸಹಕಾರಿಯಾಗುವ ಕೂದಲುಗಳಿವೆ.

ಔಷಧೀಯವಾಗಿ ಈ ಸಸ್ಯ ಪ್ರಾಮುಖ್ಯವಾಗಿದೆ. ಇದರ ಬೇರಿನ ರಸವನ್ನು ಹಾಲಿನೊಡನೆ ಕೂಡಿಸಿ ಶಕ್ತಿವರ್ಧಕವಾಗಿ ಬಳಸುವುದುಂಟು. ಎಲೆಗಳನ್ನು ಅರೆದು ವ್ರಣ, ಗಾಯಗಳಿಗೆ ಹಚ್ಚುತ್ತಾರೆ. ಗಿಡವನ್ನು ಇಲಿ, ಜಂತುಗಳಿಗೆ ವಿಷಕಾರಿಯಾಗಿ ಬಳಸಲಾಗುತ್ತದೆ. ಇದನ್ನು ದೇಶೀ ಇಪಿಕ್ಯಾಕುವಾನ ಎಂತಲೂ ಕರೆಯಲಾಗುವುದಲ್ಲದೆ ಅದರ ಔಷಧೀಯ ಉಪಯುಕ್ತತೆಗಳೆಲ್ಲ ಇದಕ್ಕೂ ಇವೆ. ಇದರಲ್ಲಿ ಟೈಲೊಫೋರಿನ್ ಮತ್ತು ಟೈಲೋರಿಫೋರಿನಿನ್ ಎಂಬ 2 ಬಗೆಯ ಕ್ಷಾರಗಳುಂಟು. ಈ ಬಳ್ಳಿಯ ಎಲೆ ಮತ್ತು ಬೇರು ಒಳ್ಳೆಯ ವಾಂತಿಕಾರಕ ಔಷಧವೆಂದು ಪರಿಗಣಿಸಲಾಗಿದೆ. ಒಳಗಿನ ಕಫವನ್ನು ಹೊರಗೆ ಹಾಕಬಲ್ಲುದು. ಹೆಚ್ಚು ಬೆವರು ಬರುವ ಹಾಗೆಯೂ ಮಾಡಬಲ್ಲದು. ಅಲ್ಪಪ್ರಮಾಣದಲ್ಲಿ ಉದರವಾಯುವಿಗೆ ಪರಿಣಾಮಕಾರಿ. ಅತಿಸಾರ ಮತ್ತು ರಕ್ತಾತಿಸಾರಕ್ಕೆ ಆರಂಭದಲ್ಲಿ (ಜ್ವರವಿದ್ದರೂ) ಎಲೆಯ ಚೂರ್ಣವನ್ನು ಗೋಂದು (ಅಂಟು) ಮತ್ತು ಅಫೀಮಿನೊಡನೆ ಕೊಡುವುದುಂಟು. ಬೇರನ್ನು ಅರೆದು ತೆಗೆದುಕೊಂಡರೆ ಮಲಶುದ್ಧತೆಯಾಗುತ್ತದೆ. ದಿನಬಿಟ್ಟು ದಿನ ಬರುವ ಜ್ವರ ಅಥವಾ ಮಲೇರಿಯ ಜ್ವರ ಸಂಬಂಧದ ರಕ್ತಾತಿಸಾರಕ್ಕೆ ಎಲೆಗಳ ಚೂರ್ಣವನ್ನು ಕ್ವಿನೀನ್ (ಸಿಂಕೋನ) ಗಿಡದ ತೊಗಟೆಯ ಪುಡಿಯೊಡನೆ ಕೊಡುತ್ತಾರೆ. ಇದನ್ನು ವಿರೇಚಕವಾಗಿಯೂ ಸಿಡುಬುರೋಗಕ್ಕೂ ಆರ್ಸೆನಿಕ್ ಮತ್ತು ಸರ್ಪಗಳ ವಿಷಹಾರಿಯಾಗಿಯೂ ಬಳಸುವುದುಂಟು. ಇದರ ಬೇರನ್ನು ಸರಸಪರಿಲ್ಲ ಎಂಬ ಸಸ್ಯದ ಬೇರುಗಳಿಗೆ ಬದಲಾಗಿಯೂ ಬಳಸುವುದುಂಟು. ಅವು ಆಸ್ತಮಾ ಮತ್ತು ಶ್ವಾಸಕೋಶ ಸಂಬಂಧದ ರೋಗಗಳಿಗೆಲ್ಲ ಪರಿಣಾಮಕಾರಿ.

(ಎಂ.ಎಸ್.ಎಸ್.ಆರ್.)

**ಕತ್ತೆಕಿರುಬ :** ಮಾಂಸಾಹಾರಿ ಸಸ್ತನಿಗಳ ಗುಂಪಿನ (ಕಾರ್ನಿವೊರ) ಹೈಯಿನಿಡೀ ಕುಟುಂಬಕ್ಕೆ ಸೇರಿದ ಕುರೂಪಿಯಾದ ವನ್ಯಪ್ರಾಣಿ. ಇದರ ವೈಜ್ಞಾನಿಕ ನಾಮ ಹೈಯೀನ. ಇದರಲ್ಲಿ ಎರಡು ಪ್ರಭೇದಗಳಿವೆ. ಒಂದು ಹೈ.ಸ್ಟೈಯೇಟ (ಪಟ್ಟೆಗಳಿರುವ ಕತ್ತೆಕಿರುಬ). ಇದು ಭಾರತ, ಪರ್ಷಿಯ, ಏಷ್ಯಮೈನರ್ ಮತ್ತು ಉತ್ತರ ಹಾಗೂ ಪೂರ್ವ ಆಫ್ರಿಕದ ಕಾಡುಗಳಲ್ಲಿ ಕಂಡುಬರುತ್ತದೆ. ಇನ್ನೊಂದು ಹೈ.ಬ್ರುನಿಯ (ಕಂದು ಕತ್ತೆಕಿರುಬ) ಎಂಬುದು. ಇದು ದಕ್ಷಿಣ ಆಫ್ರಿಕದ ನಿವಾಸಿ. ನಾಯಿಗಳಲ್ಲಿರುವಂಥ ಹೆಜ್ಜೆ ಮತ್ತು ಕಾಲುಗಳು, ಬಹಳ ಬಲಿಷ್ಠವಾದ ಮತ್ತು ಉದ್ದವಾದ ಮುಂಗಾಲುಗಳು, ಮೋಟಾದ ಮತ್ತು ಒಂದಕ್ಕೊಂದು ತಾಕುವಂತಿರುವ ಹಿಂಗಾಲುಗಳು, ಚಿಕ್ಕದಾದ ಪೊದೆಯಂತಿರುವ ಬಾಲ, ಬಹುಬಲಿಷ್ಠವಾದ ದವಡೆ

ಗಳು, ಹಿಂದಕ್ಕೆ ಸೆಳೆದುಕೊಳ್ಳಲಾಗದಂಥ ಉಗುರುಗಳು—ಇವು ಈ ಎರಡೂ ಬಗೆಯ ಕತ್ತೆಕಿರುಬಗಳ ಮುಖ್ಯಲಕ್ಷಣಗಳು.

ಭಾರತದಲ್ಲಿ ಕಾಣುವ ಕತ್ತೆಕಿರುಬ ಸುಮಾರು ತೋಳದ ಗಾತ್ರದ್ದು. ಬೂದು ಮಿಶ್ರಿತ ಕಂದುಬಣ್ಣದ ಇದರ ದೇಹದ ಮೇಲೆ ಅಸ್ಪಷ್ಟವಾದ ಉದ್ದುದ್ದ ಪಟ್ಟೆಗಳಿವೆ. ಕುತ್ತಿಗೆ ಮತ್ತು ಬೆನ್ನಿನ ಉದ್ದಕ್ಕೂ ಕೇಸರಗಳ ಸಾಲಿವೆ. ಇದರ ಕೂಗು ಬಲು ವಿಚಿತ್ರವಾದುದು. ಅಟ್ಟಹಾಸದಿಂದ ಕೇಕೆಹಾಕಿ ನಗುವಂತಿರುತ್ತದೆ, ನಿಶಾಚರಿಯಾದ ಇದು ಸಾಮಾನ್ಯವಾಗಿ ಒಂಟಿಯಾಗಿಯೇ ಜೀವಿಸುತ್ತದೆ. ತನ್ನ ಆಹಾರವನ್ನು ವಾಸನೆಯಿಂದ ಪತ್ತೆಹಚ್ಚುತ್ತದೆ. ಬೇಟೆಯಾಡುವ ಪ್ರಾಣಿಯಲ್ಲದ್ದರಿಂದ ಇದರ ಆಹಾರದಲ್ಲಿ ವೈವಿಧ್ಯವಿಲ್ಲ. ಸತ್ತ ಪ್ರಾಣಿಗಳು ಇದರ ಮುಖ್ಯ ಆಹಾರ.



ಆಫ್ರಿಕದ ಕತ್ತೆಕಿರುಬ

ಹುಲಿ, ಚಿರತೆ ಮುಂತಾದ ಹಿಂಸ್ರಪ್ರಾಣಿಗಳು ತಿಂದು ಮಿಗಿಸಿದುದು ಇದರ ಪಾಲಿಗೆ. ಕೆಲವೊಮ್ಮೆ ಕುರಿ, ಆಡು, ನಾಯಿ ಮುಂತಾದ ಸಾಕುಪ್ರಾಣಿಗಳನ್ನು ಕದ್ದೊಯ್ಯುವುದೂ ಉಂಟು. ಆದರೆ ಮನುಷ್ಯನನ್ನು ಕಂಡರೆ ಭಯಪಡುವ ಈ ಪ್ರಾಣಿ ಅವನು ವಾಸಿಸುವ ಸ್ಥಳಗಳಿಂದ ದೂರವೇ ಇರುತ್ತದೆ. ಇವುಗಳ ಸಾಂಸಾರಿಕ ಜೀವನದ ಬಗ್ಗೆ ಹೆಚ್ಚು ತಿಳಿಯದು. ಹೆಣ್ಣು ಕತ್ತೆಕಿರುಬ ಒಂದು ಬಾರಿಗೆ 2-4 ಮರಿಗಳನ್ನು ಈಯುತ್ತದೆ. ತಾಯಿಯೇ ಮರಿಗಳನ್ನು ಹಾಲೂಡಿಸಿ ಸಾಕುವುದು ಸಾಮಾನ್ಯವಾದರೂ ಕೆಲವೊಮ್ಮೆ ಗಂಡು ಹೆಣ್ಣುಗಳೆರಡೂ ಮರಿಗಳಿಗೆ ಮೊಲೆಯೂಡಿಸುತ್ತವೆ ಎಂದು ಹೇಳಲಾಗುತ್ತದೆ.

ಕತ್ತೆಕಿರುಬಗಳನ್ನು ಪಳಗಿಸುವುದೂ ಉಂಟು. ಸಾಕಿದ ಪ್ರಾಣಿಗಳು ಸಾಧುವಾಗಿಯೂ ನಂಬಿಕೆಗೆ ಅರ್ಹವಾಗಿಯೂ ಇರುತ್ತವೆ. (ಎ.)

**ಕತ್ಬರ್‌ಸ್ಟನ್, ಜೇಮ್ಸ್ ಲಿಸ್ಟರ್ :** 1851–1910. ಸ್ಕಾಟ್ಲೆಂಡಿನ ಗ್ಲಾಸ್ಗೊ ನಗರದಲ್ಲಿ ಹುಟ್ಟಿ, ಕಾಲಾನುಕ್ರಮದಲ್ಲಿ ಗ್ಲೆನ್ ಆಮಂಡ್ ಕಾಲೇಜಿನಲ್ಲಿ ಓದಿದ. ಇಂಡಿಯನ್ ಸಿವಿಲ್ ಸರ್ವಿಸಿಗೆ ಅಭ್ಯರ್ಥಿಯಾಗಿದ್ದನಾದರೂ ನಿಯಮಿತ ಪರೀಕ್ಷೆಯಲ್ಲಿ ಉತ್ತೀರ್ಣನಾಗದುದರಿಂದ ಭಾರತದಲ್ಲಿ ಕೆಲಸಮಾಡಲು ಆಗಲಿಲ್ಲ.

ಈತನ ತಂದೆ ಆಸ್ಟ್ರೇಲಿಯದ ಅಡಿಲೇಡ್ ನಗರದಲ್ಲಿ ದಕ್ಷಿಣ ಆಸ್ಟ್ರೇಲಿಯದ ಬ್ಯಾಂಕ್ ಮ್ಯಾನೇಜರ್ ಆಗಿದ್ದ. 1874ರಲ್ಲಿ ಕತ್ಬರ್‌ಸ್ಟನ್ ಆಸ್ಟ್ರೇಲಿಯದ ಗೀಲಾಂಗ್ ಪ್ರಾಥಮಿಕ ಶಾಲೆಯಲ್ಲಿ ಲ್ಯಾಟಿನ್ ಮತ್ತು ಗ್ರೀಕ್ ಭಾಷಾಬೋಧಕನಾಗಿ ಸೇರಿದ. 1879ರಲ್ಲಿ ಗ್ರಾಮರ್ ಸ್ಕೂಲ್ ಪದ್ಯಗಳು ಎಂಬ ಇವನ ಕವನಸಂಕಲನ ಪ್ರಕಟವಾಯಿತು. ಈತನಿಗೆ ಆಸ್ಟ್ರೇಲಿಯದ ಮೇಲೆ ಮೋಹವಿದ್ದರೂ ಇಂಗ್ಲೆಂಡಿನ ಮೇಲೆ ಹೆಚ್ಚು ಮಮತೆ ಇತ್ತಾಗಿ 1882ರಲ್ಲಿ ಇಂಗ್ಲೆಂಡಿಗೆ ಹಿಂದಿರುಗಿ ಆಕ್ಸ್‌ಫರ್ಡ್ ವಿಶ್ವವಿದ್ಯಾನಿಲಯದ ಬಿ.ಎ. ಪರೀಕ್ಷೆ ಮುಗಿಸಿದ (1885). ಪುನಃ ಆಸ್ಟ್ರೇಲಿಯಕ್ಕೆ ಬಂದು ಅದೇ ಹುದ್ದೆಗೆ ಸೇರಿದ. 1893ರಲ್ಲಿ ಪ್ರಕಟವಾದ ಬಾರವನ್ ಬ್ಯಾಲಡ್ಸ್ ಎಂಬ ಕವನಸಂಕಲನ ಈತನಿಗೆ ಕೀರ್ತಿ ತಂದಿತು.

ಈತನ ಪದ್ಯಗಳು ಹೆಚ್ಚಾಗಿ ಶಾಲಾಪದ್ಯಗಳು. ಈತನ ಶೈಲಿ ಪ್ರೌಢಪಾಂಡಿತ್ಯ ಪ್ರದರ್ಶಕವಾಗಿದ್ದು ಕವನಗಳಲ್ಲಿ ದೇಶಪ್ರೇಮ ಚೆನ್ನಾಗಿ ಅಭಿವ್ಯಕ್ತವಾಗಿದೆ. ಆಗೊಮ್ಮೆ ಈಗೊಮ್ಮೆ ಸತ್ತ್ವಯುತ ಕಾವ್ಯದ ಹೊಳಪು ಮೂಡಿರುವುದೂ ಉಂಟು. ಹಳೆಯ ಶಾಲೆಯ ಮೇಲಿನ ಮಮತೆ, ಪೊದೆಗಳು, ನದಿ, ಸಮುದ್ರತೀರ, ದೋಣಿಯಲ್ಲಿ ಕುಳಿತು ಹುಟ್ಟು ಹಾಕುವುದು ಮುಂತಾದವು ಆತನಿಗೆ ಭಾವೋದ್ರೇಕಕಾರಕ ವಸ್ತುಗಳು. ಉಳಿದ ಪದ್ಯಗಳಲ್ಲಿ ಸರಳ ವರ್ಣನೆ, ಲಯ ಇವೆ. ಆಸ್ಟ್ರೇಲಿಯನ್ ಸನ್‌ರೈಸ್, ದಿ ಬುಷ್, ದಿ ಉಡ್ ಮ್ಯೂಸಿಕ್—ಎಂಬ ಗ್ರಂಥಗಳು ಪ್ರಖ್ಯಾತವಿವೆ. ದಿ ರೇಸಿಂಗ್‌ಎಯ್ಟ್ ಎಂಬ ದೋಣಿಯ ಹಾಡು ಅಮರವೆನಿಸಿದೆ. (ಟಿ.ಎ.ಎಸ್.)

**ಕಥಕ್ :** ಬಹು ಪ್ರಾಚೀನ ಕಾಲದಿಂದ ಭಾರತದಲ್ಲಿನ ದೇವಾಲಯಗಳಲ್ಲಿ ದೇವತಾಪ್ರೀತ್ಯರ್ಥವಾಗಿ ದೇವದಾಸಿಯರಿಂದ ನೆರವೇರುತ್ತಿದ್ದ ನೃತ್ಯಕ್ಕೆ ಕಥಕ್ ಎಂದೂ ಅಂಥ ನೃತ್ಯವನ್ನು ಕಲಿಸಿಕೊಡುತ್ತಿದ್ದ ಒಂದು ವರ್ಗದ ಬ್ರಾಹ್ಮಣ ಉಪಾಧ್ಯಾಯರಿಗೆ ಕಥಕ ಅಥವ ಕಥಿಕ ಎಂದೂ ಹೆಸರಿದೆ. ಉತ್ತರ ಹಿಂದೂಸ್ತಾನದಲ್ಲಿನ ಲಖ್ನೋ ಮತ್ತು ಜಯಪುರಗಳಲ್ಲಿ ಈ ನೃತ್ಯ ಕ್ರಮೇಣ ಅಭಿವೃದ್ಧಿಗೆ ಬಂದು ಪೂಜ್ಯಸ್ಥಾನವನ್ನು ಪಡೆಯಿತಲ್ಲದೆ ಒಂದು ವಿಶಿಷ್ಟ ಸಂಪ್ರದಾಯವಾಗಿ ಬೆಳೆಯಿತು.

ಉತ್ತರ ಹಿಂದೂಸ್ಥಾನದಲ್ಲಿ ಮುಸ್ಲಿಮರ ಆಡಳಿತ ಬಂದ ಮೇಲೆ ದೇವಾಲಯಗಳಲ್ಲಿ ನರ್ತಿಸುವ ದೇವದಾಸಿಯರು ಕಥಕ್ ನೃತ್ಯವನ್ನು ಅನುಮೋದಿಸದಿರುವಂಥ ಪರಿಸ್ಥಿತಿ ಒದಗಿ ಈ ಕಲೆಗೆ ಕಳಂಕ ಬಂತು. ಅಲ್ಲದೆ ಅಗಿನ ಕಾಲದಲ್ಲಿ ಸತತ ಯುದ್ಧ, ಹೋರಾಟಗಳಿದ್ದ ಕಾರಣ ಈ ಕಲೆ ಕ್ಷೀಣವಾಗುತ್ತ ಬಂತು. ಆದರೂ ಅಂದಿನ ಕಥಕರು ತಮ್ಮ ಕಲೆಯನ್ನು ಕಾಪಾಡಿಕೊಂಡು ಬರಲು ಬಹುವಾಗಿ ಶ್ರಮಿಸಿದರು. ಕ್ರಮೇಣ ಸುಖ ಸೌಂದರ್ಯ ವಿಲಾಸಿಗಳಾದ ನವಾಬರು, ದೊರೆಗಳು ಮತ್ತು ಶ್ರೀಮಂತರು, ತಮ್ಮ ವಿನೋದಕ್ಕಾಗಿಯೂ ತಮ್ಮ ಮನೆತನಗಳ ಶುಭ ಸಂತೋಷ ಸಮಾರಂಭಗಳಲ್ಲಿಯೂ ಈ ಕಥಕರನ್ನು ಆಹ್ವಾನಿಸಿ ನೃತ್ಯ ಕಾರ್ಯಕ್ರಮಗಳನ್ನು ಜರುಗಿಸಲು ಆರಂಭಿಸಿದರು. ಕಾಲ ಸರಿದಂತೆ ಕೆಲವು ಕಥಕರು ದೊಡ್ಡ ದೊಡ್ಡ ಪಟ್ಟಣಗಳಲ್ಲಿರುವ ರಾಜರ, ನವಾಬರ ಆಸ್ಥಾನಗಳನ್ನು ಸೇರಿ, ಅಲ್ಲಿ ಅವರ ಆಸ್ಥಾನ ನರ್ತಕರಾಗಿ ನೇಮಕಗೊಂಡರು. ಈ ಕಾರಣದಿಂದ ಕಥಕ್ ಔಧ ದೇಶದ ನವಾಬರ ಮತ್ತು ರಾಜಸ್ಥಾನದ ರಾಜರ ಆಶ್ರಯ ಪಡೆಯಿತು. ಸುಪ್ರಸಿದ್ಧ ಕಥಕರಾದ ಪ್ರಕಾಶ್‌ಜೀ ಮತ್ತು ಕುಟುಂಬದವರು ನವಾಬ್ ಅಸಾಫ್-ಉದ್-ದೌಲನ ಆಡಳಿತದಲ್ಲಿ ಲಖ್ನೋವಿನಲ್ಲಿ ಬಂದು ನೆಲಸಿದರು. ಈ ಶ್ರೇಷ್ಠ ಕಲಾವಿದರ ಪೈಕಿ ಮಹಾರಾಜ ಬಿಂದಾದಿನ್ ಕಥಕ್ ನೃತ್ಯದಲ್ಲಿ ಅದ್ವಿತೀಯ ಪಾಂಡಿತ್ಯವನ್ನು ಗಳಿಸಿ ಇಡೀ ಭಾರತದಲ್ಲಿ ಪ್ರಖ್ಯಾತಿಪಡೆದು ಹೆಸರುವಾಸಿಯಾದ ಮಹಾರಾಜ್ ಬಿಂದಾದಿನ್ ನವಾಬ್ ವಜೀದ್ ಆಲಿಷಹನ ಸಮಕಾಲೀನ. ಈತ ತನ್ನ ನೃತ್ಯದಲ್ಲಿ ಕಲಾಕೌಶಲವನ್ನೂ ಲಾಲಿತ್ಯವನ್ನೂ ಆಧ್ಯಾತ್ಮಿಕತೆಯ ತುತ್ತತುದಿ ಮುಟ್ಟುವ ಅಭಿನಯವನ್ನೂ ಪ್ರದರ್ಶಿಸುತ್ತಿದ್ದ. ಈ ಮಹಾಪುರುಷ ಕ್ರಿ.ಶ. 1918ರಲ್ಲಿ ದೈವಾಧೀನನಾದ. ಅಂದಿನಿಂದ ಕಥಕ್ ನೃತ್ಯದ ಹೊಣೆಗಾರಿಕೆ ಬಿಂದಾದಿನನ ಸೋದರಳಿಯ ದಿವಂಗತ ಅಚ್ಚನ್ ಮಹಾರಾಜ್, ಲಚ್ಚು ಮಹಾರಾಜ್ ಮತ್ತು ಶಂಭು ಮಹಾರಾಜ್ ಹಾಗೂ ಬಿಂದಾದಿನನ ಪ್ರೀತಿಯ ಶಿಷ್ಯ ಜಯಪುರದ ದಿವಂಗತ ಪಂಡಿತ ಜಯಲಾಲ್‌ಜೀ ಮತ್ತು ಅವನ ಸೋದರ ಪಂಡಿತ್ ಸುಂದರ ಪ್ರಸಾದ್ ಇವರ ಪಾಲಿಗೆ ಸೇರಿತು. ಇಂಥ ಸಾಂಪ್ರದಾಯಿಕ ಕಲಾಕಾರರ ದುಡಿಮೆಯಿಂದಲೂ ಮತ್ತು ದಿವಂಗತೆ ಮೆಡಾಮ್ ಮೇನಕಾ, ದಿವಂಗತ ರಾಯಗಢದ ಮಹಾರಾಜ—ಇವರಿಂದಲೂ ಕಥಕ್ ನೃತ್ಯ ಭಾರತದಲ್ಲಿ ಒಂದು ಅತಿ ಶ್ರೇಷ್ಠ ಶಾಸ್ತ್ರೀಯ ನೃತ್ಯವಾಗಿ ಪ್ರಖ್ಯಾತಿಗೆ ಬಂತು.

ಆಧುನಿಕ ಭಾರತದಲ್ಲಿ ಕಾಣುವ ಕಥಕ್ ಕಾರ್ಯಕ್ರಮಗಳು ಅನೇಕ ಕಲಾವಂತರ ಮತ್ತು ನಾಟ್ಯಾಚಾರ್ಯರ ವ್ಯಕ್ತಿತ್ವದಿಂದಲೂ ಕಲ್ಪನಾಶಕ್ತಿಯಿಂದಲೂ ಅನೇಕ ರೂಪಗಳನ್ನು ತಾಳಿವೆ. ದೇವಸ್ಥಾನಗಳಿಂದ ಹೊರ ಬಂದಿರುವ ಈ ಸಂಪ್ರದಾಯ ಮೂಲಶಾಸ್ತ್ರದಲ್ಲಿ ಒಂದೇ ಆಗಿದ್ದರೂ ಇಂಥವರ ವೈಶಿಷ್ಟ್ಯದಿಂದ ಮಾರ್ಪಾಡುಗಳನ್ನು ಹೊಂದಿ ಅತಿ ಆಕರ್ಷಣೀಯವಾಗಿ ಪ್ರಸಿದ್ಧವಾಗಿದೆ. ಪರಕೀಯರಾದ ಮುಸ್ಲಿಮರ ಮತ್ತು ಬ್ರಿಟಿಷರ ಆಡಳಿತದಿಂದಾಗಿ ವೇಷಭೂಷಣಗಳಲ್ಲಿ, ಪಾರಿಭಾಷಿಕ ಶಬ್ದಗಳಲ್ಲಿ ಮತ್ತು ಪ್ರಾಯೋಗಿಕ ಪದ್ಧತಿಗಳಲ್ಲಿ ಅನೇಕ ಬದಲಾವಣೆಗಳು ಆಗಿವೆ. ದೇಶದಲ್ಲಿ ಅನೇಕ ಸಾಮಾಜಿಕ ಮತ್ತು ಧಾರ್ಮಿಕ ಘಟನೆಗಳಾಗಿದ್ದರೂ ಕಥಕ್ ನೃತ್ಯ ಅದರ ಸಂಪ್ರದಾಯವನ್ನು ಕಾಪಾಡಿಕೊಂಡು ಬಂದಿದೆ.

ಪ್ರಯೋಗ: ಭರತನಾಟ್ಯದಲ್ಲಿದ್ದಂತೆ ಕಥಕ್‌ನಲ್ಲಿಯೂ ನೃತ್ತ, ನೃತ್ಯ ಮತ್ತು ನಾಟ್ಯಗಳೆಂಬ ವಿಭಾಗಗಳಿವೆ.

**ನೃತ್ತ :** ಕಥಕ್‌ಕಾರ್ಯಕ್ರಮದಲ್ಲಿ ಮೊಟ್ಟಮೊದಲು ನೃತ್ತ ಬರುತ್ತದೆ. ನೃತ್ತವೆಂದರೆ ಭಾವರಹಿತವಾದ, ತಾಳಲಯ ವೈಚಿತ್ರ್ಯವನ್ನು ತೋರ್ಪಡಿಸುವ ಕ್ರಮ. ಭರತನಾಟ್ಯದ ಜತಿಗಳಂತೆ ಕಥಕ್‌ನಲ್ಲಿ ಬೋಲ್‌ಗಳೆಂಬ ನೃತ್ಯಕೃತಿಗಳಿವೆ. ಈ ಬೋಲುಗಳನ್ನು ಅವುಗಳ ರೂಪ ವೈಶಿಷ್ಟ್ಯಗಳ ಪ್ರಕಾರ ಹೀಗೆ ವಿಂಗಡಿಸಬಹುದು.

1 ಗಣೇಶವಂದನ: ಇದರಲ್ಲಿ ಬೋಲ್‌ಗಳೊಂದಿಗೆ ಶ್ರೀ ವಿಘ್ನೇಶ್ವರನ ಪ್ರಾರ್ಥನಾ ರೂಪದ ಶಬ್ದಗಳಿವೆ. ಈ ನೃತ್ತವನ್ನು ಹಳೆಯ ಕಾಲದ ಕಥಕರು ಪ್ರಥಮ ಕಾರ್ಯಕ್ರಮವಾಗಿ ಪ್ರದರ್ಶಿಸುತ್ತಿದ್ದರು. ಈಗ ಇದು ಅಷ್ಟು ರೂಢಿಯಲ್ಲಿಲ್ಲ.

2 ಆಮದ್; ಇದು ಪ್ರವೇಶ ಎಂಬ ಅರ್ಥವುಳ್ಳ ಉರ್ದು ಶಬ್ದ. ಇದರಲ್ಲಿ ನಟವರಿ ಬೋಲ್‌ಗಳನ್ನೂ ಕೆಲವು ಸಲ ಪಖಾವಜ್ ಅಥವಾ ಪರಿಮೇಲು ಬೋಲುಗಳನ್ನೂ ಸೇರಿಸಿ ನರ್ತಿಸುತ್ತಾರೆ. ಆಮದಿಗೆ ಒರಿ ತಬಲ ಇರಬೇಕೆಂದು ಕೆಲವರ ದೃಢ ಅಭಿಪ್ರಾಯ.

3 ಥಾಟ್: ಸಹಜವಾಗಿ ಥಾಟ್ ಎಂಬುದು ಒಂದು ಅಲಂಕಾರ ಅಥವಾ ಮನೋಹರವಾದ ವಿನ್ಯಾಸ. ಇದನ್ನು ಮಾಡುವಾಗ ನರ್ತಕ ಮೊದಲು ತನ್ನ ಅವಯವಗಳನ್ನು ವಿಳಂಬಕಾಲದಲ್ಲಿ ತಾಳಬದ್ಧವಾಗಿ ಚಲಿಸುತ್ತಾನೆ. ಕಣ್ಣು, ಹುಬ್ಬು, ಕತ್ತು, ಭುಜ, ಕೈ, ಎದೆ, ಮಣಿಕಟ್ಟು ಮುಂತಾದ ಅವಯವಗಳು ಇಂಪಾದ ಲಲಿತವಾದ ಸಾಂಗತ್ಯದಿಂದ ಚಲಿಸುತ್ತವೆ. ನೋಡಲು ಇದು ಸರಳವಾಗಿ ಕಂಡು ಬಂದರೂ ನಿರ್ವಹಿಸಲು ಕಠಿಣ ಸಾಧನೆಯ ಅಗತ್ಯವಿದೆ.

4 ನಟವರಿ: ನಟವರ್ ಎಂಬ ಶಬ್ದ ಶ್ರೀ ಕೃಷ್ಣ ಪರಮಾತ್ಮನ ಒಂದು ಸಾರ್ಥಕ ನಾಮಧೇಯ; ಇದಕ್ಕೆ ನರ್ತಕರಲ್ಲಿ ಅತಿ ಶ್ರೇಷ್ಠನೆಂಬ ಅರ್ಥವಿದೆ. ಬಾಲಕೃಷ್ಣ ಕಾಳೀಯಸರ್ಪದ ತಲೆಯ ಮೇಲೆ ನರ್ತಿಸುವಾಗ ತಾ–ತೈ–ತತ್ ಎಂಬ ಶಬ್ದಗಳು ಬಂದುವೆಂದು ಕೆಲವರು ಹೇಳುತ್ತಾರೆ. ಅದೇ ಕಾರಣದಿಂದಲೋ ಏನೋ ಅನೇಕ ಕಥಕ ನಾಟ್ಯಾಚಾರ್ಯರು ತಾ ಥೈ ತತ್, ಧಿಗಿ, ಧಿಗಿ, ತ್ರಾಂ ತಿಗ್ದ ಮುಂತಾದ ಶಬ್ದಗಳಿರುವ ಬೋಲುಗಳನ್ನು ನಟವರಿ ಬೋಲುಗಳಿಂದ ಪ್ರಕಟಿಸಿದ್ದಾರೆ.

5 ಪರಮೇಲು: ಪರ ಎಂದರೆ ಇತರ ಮತ್ತು ಮೇಲ ಎಂದರೆ ಮಿಲನ. ಇವುಗಳಿಂದ ಉಂಟಾಗುವ ಶಬ್ದವೇ ಪರಮೇಲು. ಅಂದರೆ ಅನೇಕ ತಾಡನ ವಾದ್ಯಗಳಿಂದ ಬರುವ ಶಬ್ದಗಳ ಸಂಯೋಜನದಿಂದ ಉದ್ಭವಿಸುವ ನೃತ್ತವೇ ಪರಮೇಲು. ಆದರೂ ಈ ಪರಮೇಲು ಬೋಲುಗಳಲ್ಲಿ ನಗ್ಗಿ, ತ್ರರಿ, ಕುಕುಝುನಕ್, ಧಿಲ್ಲಾಂಗ, ಝುಗ–ಝುಗ, ದಿವಾಂಗ, ಝುಂಗರ, ಥುಡುಂಗ ಮುಂತಾದ ಸಾಂಪ್ರದಾಯಿಕವಾದ ಹಲವು ಶಬ್ದಗಳೂ ಉಪಯೋಗಿಸಲ್ಪಟ್ಟವೆ.

6 ಪರನ್: ಪಖಾವಜ್ ಎಂಬ ತಾಡನ ವಾದ್ಯದಿಂದ ಉಂಟಾಗುವ ಬೋಲುಗಳಿಗೆ ಪರನ್ ಎಂದು ಹೆಸರು. ಪರನ್ ಶಬ್ದ ಪಥನ್ ಅಥವಾ ಪದಾಂತ (ಅಂದರೆ ಬಾಯಿಪಾಠದ ಕಥನವೆಂಬ ಅರ್ಥವುಳ್ಳ) ಶಬ್ದಗಳಿಂದ ಬಂದಿರಬಹುದು. ಅಸಂಖ್ಯಾತ ವಿಧದ ಪರನ್‌ಗಳು ಈಗಿನ ರೂಢಿಗೆ ಬಂದಿವೆ. ಇವುಗಳಲ್ಲಿ ಅತಿ ಸ್ವಾರಸ್ಯವಾದ ಪರನ್‌ಗಳೆಂದರೆ ಲಯ ವೈಚಿತ್ರ್ಯಗಳನ್ನು ಪ್ರಕಟಿಸುವ 5 ವಿಧವಾದ ಯತಿಗಳು: 1 ಸಮ ಅಂದರೆ ಸರಳ 2 ಗೋಪುಚ್ಛ ಅಂದರೆ ಗೋವಿನ ಬಾಲದ ಹಾಗೆ ಮೊದಲು ವಿಸ್ತಾರವಾಗಿ ವಿಳಂಬ ಕಾಲದಲ್ಲಿದ್ದು ಅನಂತರ ಬಾಲದ ಹಾಗೆ ನೀಳವಾಗಿ ತೀವ್ರ ಗತಿಯಿಂದ ಜಟಿಲ ಲಯದಲ್ಲಿ ಕೊನೆಗೊಳ್ಳುವುದು. 3 ಸ್ರೋತ್‌ಗತ—ಅಂದರೆ ಮೊದಲು ಅತಿ ರಭಸದಿಂದ ಭೋರ್ಗರೆಯುತ್ತ ನದಿಯ ಹಾಗೆ ಆರಂಭವಾಗಿ ವಿಳಂಬವಾಗಿ ಶಾಂತವಾಗಿ ಕೊನೆಗಾಣುವುದು. 4 ಮೃದಂಗ—ಅಂದರೆ ಮೃದಂಗದಂತೆ ಎರಡು ಕೊನೆಗಳೂ ಚೂಪಾಗಿದ್ದು ಮಧ್ಯೆ ವಿಶಾಲವಾಗಿರುವುದು. 5 ಪಿಪೀಲಕ ಅಥವಾ ಡಮರು—ಅಂದರೆ ಇರುವೆಯಂತೆ ಅಥವಾ ಡಮರಿನಂತೆ ಎರಡು ಕೊನೆಗಳಲ್ಲಿ ಅಗಲವಾಗಿದ್ದು ಮಧ್ಯೆ ಸೂಕ್ಷ್ಮ ಅಥವಾ ಅತಿ ಸಣ್ಣದಾಗಿರುವುದು.

7 ಕ್ರಮಾಲಯ: ಈ ನೃತ್ತದಲ್ಲಿ ನರ್ತಕರು ತಾಥೈ ಥೈ ತತ್ ಎಂಬ ಶಬ್ದಗಳಿಂದ ಕೂಡಿರುವ ತ್ರಿತಾಳಕ್ಕೆ ಸರಿಯಾಗಿ ಹೆಜ್ಜೆ ವಿನ್ಯಾಸದಿಂದ ತತ್‌ಕಾರಗಳನ್ನು ಮಾಡಿ, ಬೇರೆ ಬೇರೆ ತಾಳಲಯ ವೈಚಿತ್ರ್ಯಗಳನ್ನು ತೋರಿ ಕೊನೆಗೆ ಅತಿ ವೇಗದಿಂದ ಹೆಜ್ಜೆ ವಿನ್ಯಾಸಗಳನ್ನು ಪ್ರದರ್ಶಿಸುತ್ತಾರೆ. ಇದು ನಟವರಿಯ ಒಂದು ವಿಭಾಗವೆಂಬುದರಲ್ಲಿ ಸಂದೇಹವಿಲ್ಲ.

8 ಸಂಗೀತ: ಈ ಪಾರಿಭಾಷಿಕ ಶಬ್ದದ ವಿಚಾರವಾಗಿ ಅನೇಕ ಅಭಿಪ್ರಾಯಗಳಿವೆ. ಆದರೆ ಸಾಧಾರಣವಾಗಿ ನಟವರಿ, ಪರಮೇಲು ಮತ್ತು ಪರನ್ ಬೋಲುಗಳನ್ನು ರಾಗ ಸ್ವರಗಳಿಂದ ಸಂಗೀತ ರೂಪದಲ್ಲಿ ಹೇಳಿದರೆ ಅದು ಸಂಗೀತ ಎನಿಸಿಕೊಳ್ಳುವುದು. ಬೋಲುಗಳನ್ನು ರಾಗವಾಗಿ ತಾಳ ಲಯಬದ್ಧವಾಗಿ ಹೇಳುವುದೇ ಕಥಕಿನ ಸಂಗೀತವಾಗುತ್ತದೆ.

9 ಕವಿತ: ಇದು ತಾಳಕ್ಕೆ ಸರಿಯಾಗಿ ಹಾಡುವ ಕವಿತೆ. ಇದಕ್ಕೆ ಸಾಮಾನ್ಯವಾಗಿ ನಟವರಿ ಬೋಲುಗಳನ್ನು ಜೋಡಿಸುತ್ತಾರೆ. ಕವಿತೆಯ ಅರ್ಥವನ್ನು ಹಲವಾರು ಹಸ್ತಮುದ್ರೆಗಳಿಂದ ಪ್ರದರ್ಶಿಸಿ ಕಾಲುಗಳಿಂದ ತಾಳಲಯಬದ್ಧವಾದ ಹೆಜ್ಜೆಗಳಿಂದ ಪ್ರಕಟಿಸುತ್ತಾರೆ. ಕವಿತದಲ್ಲಿ ಅಭಿನಯವಿದ್ದರೂ ಇದನ್ನು ನೃತ್ತದಲ್ಲಿ ಸೇರಿಸುತ್ತಾರೆ. ಕಾರಣ ಇದರಲ್ಲಿ ತಾಳ ವೈಶಿಷ್ಟ್ಯವೇ ಪ್ರಾಮುಖ್ಯ ಪಡೆದಿದೆ. ಅಂದರೆ ಇದು ನೃತ್ತಕ್ಕೂ ನೃತ್ಯಕ್ಕೂ ಇರುವ ಒಂದು ಸಂಕಲನ ಅಥವಾ ಸಂಬಂಧ ಎನ್ನಬಹುದು.

ನೃತ್ಯ: ಕಥಕಿನ ಎರಡನೆಯ ಭಾಗವಾದ ನೃತ್ಯದಲ್ಲಿ ಎರಡು ವಿಭಾಗಗಳಿವೆ. ಮೊದಲನೆಯದಾಗಿ ಗತ್‌ಕರಿ ಮತ್ತು ಎರಡನೆಯದಾಗಿ ಅರ್ಥಭಾವ್ ಅಥವಾ ಭಾವ್‌ಬತಾನಾ. ಗತ್ ಎಂಬ ಶಬ್ದ ಗತಿ (ನಡೆ) ಎಂಬ ಅರ್ಥವುಳ್ಳ ಸಂಸ್ಕೃತ ಶಬ್ದದಿಂದ ಬಂದಿದೆ. ಗತ್‌ಕರಿಯಲ್ಲಿ ಭಾವವನ್ನು ಹಾಡಿಗೆ ಸರಿಯಾಗಿ ಅಥವಾ ಸಾಹಿತ್ಯಕ್ಕೆ ಸಂಬಂಧಿಸಿದಂತೆ ಪ್ರದರ್ಶಿಸುವುದಿಲ್ಲ. ಅಂದರೆ ಇದು ಒಂದು ಮೂಕಾಭಿನಯ. ಗತ್‌ಕರಿಯನ್ನು ನಾಲ್ಕು ವಿಧವಾಗಿ ವಿಂಗಡಿಸಿದ್ದಾರೆ:

1 ಗತ್‌ನಿಕಾಸ್—ಇದರಲ್ಲಿ ನೃತ್ತಕ್ಕೆ ಪ್ರಾಧಾನ್ಯವಿದ್ದುದರಿಂದ ತಾಳಲಯ ಅಧಿಕವಾದರೂ ಭಾವ ಸ್ವಲ್ಪಮಟ್ಟಿಗೆ ಪ್ರದರ್ಶಿತವಾಗುತ್ತದೆ. ಅಂತೆಯೇ ಇದನ್ನು ನೃತ್ಯ ರೂಪವೆನ್ನಬಹುದು. 2 ಗತ್ ಭಾವ್—ಈ ಗತ್‌ನಲ್ಲಿ ಯಾವುದಾದರೂ ಒಂದು ಭಾವ ಅಥವಾ ರಸ ಪ್ರದರ್ಶಿತವಾಗುತ್ತದೆ. 3 ಗತ್ ಪ್ರಸಂಗ ಅಥವಾ ಛೋಟಿ ಗತ್—ಇದರಲ್ಲಿ ಶ್ರೀ ಕೃಷ್ಣಪರಮಾತ್ಮನ ಲೀಲೆಗಳನ್ನು ಸಂಕ್ಷಿಪ್ತವಾಗಿ ಅಭಿನಯಿಸುತ್ತಾರೆ. 4 ಗತ್ ಲೀಲಾ ಅಥವಾ ಬಡೀ ಗತ್—ಇದರಲ್ಲಿ ಭಾರತೀಯ ಪುರಾಣಗಳಿಂದ ಆಯ್ದ ಪ್ರಸಂಗಗಳನ್ನು ವಿವರವಾಗಿ ಅಭಿನಯಿಸುತ್ತಾರೆ. ಎರಡನೆಯದಾದ ಅರ್ಥಭಾವ್ ಅಥವಾ ಭಾವಬತಾನಾವೇ ಕಥಕಿನ ಮುಖ್ಯ ಅಭಿನಯ. ದ್ರುಪದ್, ಠುಮ್ರಿ, ಭಜನ್, ದಾದರಾ, ಅಥವಾ ಘಜಲ್ ಮುಂತಾದ ಕೃತಿಗಳನ್ನು ಹಾಡುವಾಗ ಅದರಲ್ಲಿರುವ ಅರ್ಥವನ್ನು ಸೂಕ್ಷ್ಮವಾಗಿಯೂ ಕೂಲಂಕಷವಾಗಿಯೂ ಚಾತುರ್ಯದಿಂದಲೂ ಕಲಾಕಾರರು ಪ್ರಕಟಿಸುತ್ತಾರೆ. ಮಹಾರಾಜ್ ಬಿಂದಾದಿನ್ ಈ ಅಭಿನಯವಿದ್ಯೆಯಲ್ಲಿ ಅತಿ ನಿಪುಣನಾಗಿದ್ದ. ಪ್ರಸಿದ್ಧ ಕಲಾಕಾರರು ಈ ಭಾವಾಭಿನಯದಲ್ಲಿ ತಮ್ಮನ್ನು ತಾವೇ ಮರೆತು ಅಭಿನಯ ವಿಷಯದಲ್ಲಿ ಲೀನರಾಗುತ್ತಾರೆ.

ದ್ರುಪದ್ ಕೃತಿಗಳು ಶಾಸ್ತ್ರೀಯ ಹಿಂದೂಸ್ತಾನೀ ಸಂಗೀತದ ಒಂದು ಮುಖ್ಯ ಅಂಶ. ಇವನ್ನು ಹಿಂದೆ ಅಭಿನಯಕ್ಕೆ ಅಳವಡಿಸಿಕೊಳ್ಳುತ್ತಿದ್ದರು. ಠುಮ್ರಿಗಳಲ್ಲಿ ಶೃಂಗಾರರಸಕ್ಕೆ ಪ್ರಾಧಾನ್ಯವಿದೆ. ಅಲ್ಲದೆ ಇದರ ಹಾಡುವಿಕೆಯಲ್ಲಿ ಪ್ರತ್ಯೇಕ ವೈಶಿಷ್ಟ್ಯವಿದೆ. ಈ ಶೈಲಿಯನ್ನು ಲಖ್ನೋದಲ್ಲಿ ನವಾಬನಾಗಿದ್ದ ವಜೀದ್ ಅಲಿಖಾನ್ ಕಲ್ಪಿಸಿದ. ಭಜನ್‌ಗಳನ್ನು ಭಾರತದ ಅನೇಕ ಭಕ್ತರು, ದಾಸರು ಕಲ್ಪಿಸಿದ ಕಾರಣ ಇವುಗಳಲ್ಲಿ ಭಕ್ತಿಭಾವವೇ ಮುಖ್ಯವಾಗಿದೆ. ಕೊನೆಯದಾಗಿ ಘಜಲ್‌ಗಳು ಉರ್ದು ಭಾಷೆಯ ಬೇರೆ ಬೇರೆ ತಾಳಗಳಲ್ಲಿ ರಚಿಸಿದ ಕವನಗಳು.

ನಾಟ್ಯ (ನೃತ್ಯನಾಟಕ): ಹಿಂದಿನ ಕಥಕ್ ಸಂಪ್ರದಾಯದಲ್ಲಿ ನಾಟ್ಯ ಇದ್ದಿರಬಹುದು. ನವಾಬ್ ವಜೀದ್ ಆಲಿಖಾನ್ ರಚಿಸಿದ ಇಂದ್ರಸಭೆಯನ್ನು ನೃತ್ಯನಾಟಕಗಳಿಗೆ ಉಪಯೋಗಿಸುತ್ತಿದ್ದ ವಿಷಯ ತಿಳಿದಿದೆ. ಈಗಲೂ ಪ್ರಚಲಿತವಿರುವ ಬೃಂದಾವನದ ರಾಸಲೀಲೆ ಒಂದು ಕಥಕ್ ರೂಪಿನ ನೃತ್ಯನಾಟಕ.

ಆಧುನಿಕ ಭಾರತದಲ್ಲಿ, ಮುಖ್ಯವಾಗಿ ಉತ್ತರ ಹಿಂದೂಸ್ಥಾನದಲ್ಲಿ ಕಥಕ್ ಸಂಪ್ರದಾಯಕ್ಕೆ ಬಹಳ ಉತ್ತೇಜನವಿದೆ. ಅನೇಕ ಕಲಾವಿದರು ಈ ಶಾಸ್ತ್ರೀಯ ನೃತ್ಯದಲ್ಲಿ ಕಲಾಪ್ರೌಢಿಮೆಯನ್ನು ಗಳಿಸಿ ಪ್ರಶಂಸೆ ಪಡೆದು ತಮಗೂ ಕಲೆಗೂ ದೇಶಕ್ಕೂ ಕೀರ್ತಿತಂದಿದ್ದಾರೆ. (ಯು.ಎಸ್.ಕೆ.)

**ಕಥಕಳಿ:** ಈಗಿನ ಕೇರಳ ಪ್ರದೇಶದಲ್ಲಿ ಬಹು ಹಿಂದಿನಿಂದಲೂ ಪ್ರಚಾರದಲ್ಲಿರುವ ಒಂದು ಬಗೆಯ ನಾಟಕ ಪದ್ಧತಿ. ಇದರಲ್ಲಿ ನೃತ್ಯ, ಸಂಗೀತ, ಅಭಿನಯಾದಿಗಳು ವಿಶಿಷ್ಟರೀತಿಯಲ್ಲಿ ಹೆಣೆದುಕೊಂಡಿರುತ್ತವೆ.

ಇಂದು ನಾವು ನೋಡುತ್ತಿರುವ ಕಥಕಳಿ 300–400 ವರ್ಷಗಳಿಂದ ನಡೆದು ಬಂದಿದ್ದರೂ ಅದರ ನಿಜವಾದ ಮೂಲ ಸುಮಾರು 1,500 ವರ್ಷಗಳಷ್ಟು ಹಿಂದೆ ಹೋಗುತ್ತದೆ. ಕಥಕಳಿಯಲ್ಲಿ ಆರ್ಯ ದ್ರಾವಿಡ ಸಂಸ್ಕೃತಿಗಳೆರಡರ ಮಿಲನವನ್ನೂ ಕಾಣಬಹುದಷ್ಟೆ. ಈ ಎರಡು ಸಂಸ್ಕೃತಿಗಳ ನರ್ತನಗಳನ್ನೂ ನಾಟಕಗಳನ್ನೂ ಕರ್ಮನಿಷ್ಠ, ಸಾಮಾಜಿಕ ಪ್ರದರ್ಶನಗಳನ್ನೂ ಕೇರಳದ ಆಯಾ ಸ್ಥಳಗಳಿಂದ ಕಥಕಳಿ ಯಥೇಷ್ಟವಾಗಿ ಉಪಯೋಗಿಸಿಕೊಂಡಂತಿದೆ. ಕೇರಳದ ಈ ಸಂಸ್ಕೃತಿಯ ಸಮ್ಮಿಲನದಲ್ಲಿ ಉದ್ಭವಿಸಿದ ಚಾಕಿಯಾರ್ ಕೂತ್ತು, ಕುಡಿಯಾಟ್ಟಂ ಎಂಬ ವಿಶಿಷ್ಟ ನೃತ್ಯಗಳೂ ನಾಟಕಗಳೂ ಭಗವತಿಯ ಉಪಾಸನೆಗೆ ಸೇರಿದ ಧಾರ್ಮಿಕ ನೃತ್ಯಗಳಾದ ಮುಟಿಯೆಟ್ಟು, ತೀಯಾಟ್ಟಂ ಮತ್ತು ತೀಯಾಟ್ಟಂ, ಸಾಮಾಜಿಕ ಪದ್ಧತಿಗೆ ಸೇರಿದ ಶಸ್ತ್ರಕಳಿ ಮತ್ತು ಎಝುಮುಟ್ಟುಕಳಿ ಮುಂತಾದ ವೀರನೃತ್ಯಗಳೂ ಒರಟು ಜಾನಪದ ನಾಟಕಗಳಾದ ಕಂಸನಾಟಕಂ ಮತ್ತು ಮೀನಾಕ್ಷಿ ನಾಟಕಂಗಳಲ್ಲದೆ ಇತ್ತೀಚೆಗೆ ವಿಕಸಿತವಾಗಿ ಸಂಪ್ರದಾಯಕ್ಕೆ ಬಂದ ಕೃಷ್ಣಾಟ್ಟಂ ಮತ್ತು ರಾಮನಾಟ್ಟಂ ಎಂಬ ನೃತ್ಯನಾಟಕಗಳೂ ಕಥಕಳಿಯ ಮೇಲೆ ಒಂದಿಲ್ಲ ಒಂದು ರೀತಿಯಲ್ಲಿ ತಮ್ಮ ಪ್ರಭಾವವನ್ನು ಬೀರಿವೆ.

ಚೌಕಿಯಾರ್ ಕೂತ್ತು ಎಂಬುದು ಚೌಕಿಯಾರ್ ಕುಲದವರು ಮಾತ್ರ ಪ್ರದರ್ಶಿಸಬೇಕಾದ ನೃತ್ಯ. ಇದು ಬಹಳ ಧಾರ್ಮಿಕವೂ ಶಾಸ್ತ್ರಸಮ್ಮತವೂ ಆದ



ಕಥಕಳಿ ಪಾತ್ರಧಾರಿ

ಮನೋರಂಜನೆ. ದೇವಾಲಯಗಳಲ್ಲಿ ನೃತ್ಯಕ್ಕಾಗಿಯೇ ಮೀಸಲಾಗಿದ್ದ ಕೂತಂಬಳಂ ಎಂಬ ಚಿಕ್ಕ ರಂಗಸ್ಥಳದಲ್ಲಿ ಮಾತ್ರ ಈ ಪ್ರದರ್ಶನ ನಡೆಯುತ್ತಿತ್ತು. ಪ್ರದರ್ಶನಕಾರನಾದ ಚೌಕಿಯಾರ್ ಒಬ್ಬ ದೊಡ್ಡ ಕಥೆಗಾರ, ಚತುರ, ವಿವೇಕಿ, ರಸಿಕ. ಹಾಸ್ಯರಸದಿಂದ ಪ್ರೇಕ್ಷಕರನ್ನು ರಂಜಿಸಬಲ್ಲವ. ಆಖ್ಯಾನ ಮುಂದುವರಿದಂತೆ ಕಥೆಯಲ್ಲಿ ಬರುವ ಬೇರೆ ಬೇರೆ ಪಾತ್ರಗಳನ್ನು ಅನನ್ಯಭಾವದಿಂದ ಆತ ವಿಕಟವಾಗಿ ವಿನೋದವಾಗಿ ನಟಿಸುತ್ತಾನೆ. ನಂಬಿಯಾರ್ ಜಾತಿಗೆ ಸೇರಿದವನೊಬ್ಬ ಪ್ರದರ್ಶನದ ಮಧ್ಯೆ ಮಧ್ಯೆ, ಬೇಕಾದ ಸಮಯದಲ್ಲಿ ಮಿಝುವು ಎಂಬ ಒಂದು ದೊಡ್ಡ ತಾಮ್ರದ ನಗಾರಿಯನ್ನೂ ತಾಳಗಳನ್ನೂ ಬಾರಿಸುತ್ತಾನೆ.

ಕುಡಿಯಾಟ್ಟಂ ಎಂಬುದು ಅದರ ಹೆಸರೇ ತಿಳಿಸುವಂತೆ ಅನೇಕರು ಸೇರಿ ಪ್ರದರ್ಶಿಸುವ ನೃತ್ಯನಾಟಕ. ಇದರಲ್ಲಿ ಪುರುಷರಲ್ಲದೆ ನಂಗಿಯಾರ್ ಸ್ತ್ರೀಯರೂ ಪಾತ್ರವಹಿಸುತ್ತಾರೆ. ಇಲ್ಲಿ ಅಭಿನಯ ಮುಖ್ಯವಾಗಿದ್ದು ಉನ್ನತ ಮಟ್ಟದಲ್ಲಿರುತ್ತದೆ. ಅನೇಕ ವರ್ಷಗಳ ಅನಂತರ ಪ್ರಚಾರಕ್ಕೆ ಬಂದ ಕಥಕಳಿ ಈ ಸಂಪ್ರದಾಯದಿಂದ ಮುಖಾಭಿನಯವನ್ನೂ ಹಸ್ತಾಭಿನಯವನ್ನೂ ರಾತ್ರಿಯೆಲ್ಲ ಪ್ರದರ್ಶಿಸುವ ರೂಢಿಯನ್ನೂ ಕಲಿತಿತು.

ಭಗವತಿಯ ಉಪಾಸನೆಗಾಗಿ ಮಾಡುವ ಧಾರ್ಮಿಕ, ಸಾಮಾಜಿಕ ನೃತ್ಯಗಳು ಕೇರಳದಲ್ಲಿ ಹೇರಳವಾಗಿವೆ. ಅವುಗಳಲ್ಲಿ ಮುಟಿಯೆಟ್ಟು, ತೀಯಾರ್ಟ್ಟಂ ಮತ್ತು ತೀಯಾಟ್ಟಂ ಎಂಬ ಕೆಲವು ನೃತ್ಯಗಳು ಮುಖ್ಯ. ಇಲ್ಲಿ ಭಗವತಿಯ ದಿವ್ಯಗುಣಗಳು ವರ್ಣಿತವಾಗಿರುತ್ತವೆ. ಈ ಪ್ರದರ್ಶನಗಳಲ್ಲಿ ದೇವಾಧಿದೇವತೆಗಳ ಪಾತ್ರಗಳನ್ನೂ ರಕ್ಕಸರಕ್ಕಸಿಯರ ಪಾತ್ರಗಳನ್ನೂ ' ಮಾಡುವವರು ಪಾತ್ರಕ್ಕನುಸಾರವಾಗಿ ದೇದೀಪ್ಯಮಾನವಾದ, ಸಕಲಾಭರಣಯುಕ್ತ ವೇಷಭೂಷಣಗಳನ್ನೂ ಇಲ್ಲವೆ ಭಯಂಕರವಾದ ಅಸಹ್ಯವಾದ ವೇಷಭೂಷಣಗಳನ್ನೂ ಧರಿಸುತ್ತಾರೆ. ಮುಖವಾಡಗಳ ಉಪಯೋಗ, ಮುಖಕ್ಕೆ ವಿಚಿತ್ರವಾಗಿ ಬಣ್ಣ ಬಳಿದುಕೊಳ್ಳುವುದು, ರಂಗು ರಂಗುಗಳಿಂದ ಕೂಡಿರುವ ಉಡುಪುಗಳು, ಹೊಳೆಯುವ ಕಿರೀಟಗಳು—ಇವು ಈ ಕಲೆಯ ಗಮನಾರ್ಹ ವಿಷಯಗಳು. ಇವನ್ನೇ ಮುಂದಕ್ಕೆ ಕೃಷ್ಣಾಟ್ಟಂನಲ್ಲಿ ಅಳವಡಿಸಿಕೊಂಡರು.

ಮಧ್ಯಕಾಲದಲ್ಲಿ ಕಥಕಳಿ ಧಾರ್ಮಿಕ, ಸಾಮಾಜಿಕ ಮತ್ತು ವೀರನೃತ್ಯಗಳಿಂದ ಕೆಲವು ಅಂಶಗಳನ್ನು ಪಡೆಯಿತು. ಧಾರ್ಮಿಕ, ಸಾಮಾಜಿಕ ನೃತ್ಯಗಳಾದ ಯಾತ್ರಕಳಿ, ಶಸ್ತ್ರಕಳಿ. ಸಂಘಕಳಿ ಮತ್ತು ಎಝುಮತ್ತುಕಳಿ ಇವೆಲ್ಲವೂ ಒಂದಕ್ಕೆ ಇನ್ನೊಂದು ಸಂಬಂಧವಿರುವ ನೃತ್ಯಗಳು. ಇವನ್ನು ಸ್ವೇಚ್ಛೆಯಾಗಿ ಅರ್ಪಿಸುವುದೇ ರೂಢಿ. ಆದ್ದರಿಂದ ಅನೇಕ ಜನ ಒಟ್ಟುಗೂಡಿ ತಮ್ಮ ವಿನೋದಕ್ಕೋಸ್ಕರ ಖಡ್ಗ ಪ್ರಯೋಗ ಪ್ರದರ್ಶನದಲ್ಲೋ ಮೂಕನಾಟಕಗಳಲ್ಲೋ ಭಾಗವಹಿಸುತ್ತಾರೆ. ಇವು ಹಾಸ್ಯಯುಕ್ತವಾಗಿರುವಂತೆ ದುಃಖಮಯವಾಗಿಯೂ ಇರುತ್ತವೆ. ಜಾನಪದ ನೃತ್ಯಗಳಾದ ಕಂಸನಾಟಕಂ, ಮೀನಾಕ್ಷಿ ನಾಟಕಗಳಿಂದ ಕಥಕಳಿ ಕೆಲವು ಅಂಶಗಳನ್ನು ಪಡೆದಿದೆ. ಕೃಷ್ಣಾಟ್ಟಂ ಮತ್ತು ರಾಮನಾಟ್ಟಂ ಕಲೆಗಳ ಮುಂದೆ ಈ ವಿಧದ ನೃತ್ಯಗಳು ಪಾಲ್ಘಾಟಿನಲ್ಲೂ ಸುತ್ತುಮುತ್ತಲಿನ ತಾಲ್ಲೂಕುಗಳಲ್ಲೂ ಪ್ರಚಾರದಲ್ಲಿದ್ದುವು.

ಕೇರಳದಲ್ಲಿ ಜನಪ್ರಿಯವಾಗಿರುವ ಓಟಂ ತುಳ್ಳಲ್, ಪರಯನ್ ಮತ್ತು ಸೀತಂಕನ್‌ತುಳ್ಳಲ್‌ಗಳನ್ನು ಕುಂಜನ್ ನಂಬಿಯಾರಿ ಎಂಬ ಒಬ್ಬ ಮಹಾವ್ಯಕ್ತಿ ನಿರ್ಮಿಸಿದ. ಅಂಬಲಪುಝದ ರಾಜನ ಆಡಳಿತದಲ್ಲಿದ್ದ ಈ ಕುಂಜನ್ ನಂಬಿಯಾರಿ ಒಬ್ಬ ದೊಡ್ಡ ಕವಿಯಾಗಿದ್ದು ಮಲಯಾಳಂ ಕವಿತಾ ಸಾಹಿತ್ಯದ ಮೇಲೆ ವಿಶೇಷ ಪ್ರಭಾವ ಬೀರಿದ. ಸರಳ ಮಲಯಾಳಿಯಲ್ಲಿ ಈತ ನಟಿಸಲೆಂದು ಬರೆದ ಸಾಹಿತ್ಯ ಅಂದಿನ ಧಾರ್ಮಿಕ, ಸಾಮಾಜಿಕ ಸಮಸ್ಯೆಗಳನ್ನು ಚೆನ್ನಾಗಿ ವಿಶ್ಲೇಷಿಸುತ್ತದೆ.

ತುಳ್ಳಲ್ ಏಕವ್ಯಕ್ತಿನೃತ್ಯವಾಗಿದ್ದು ದೇವಾಲಯಗಳಲ್ಲಿ ಮದುವೆ ಸಂದರ್ಭಗಳಲ್ಲಿ ಇಲ್ಲವೇ ಖಾಸಗಿ ಸಂದರ್ಭಗಳಲ್ಲಿ ಪ್ರದರ್ಶಿತವಾಗುತ್ತದೆ. ನೃತ್ಯಗಾರ ಅಪೂರ್ವ ಕಲ್ಪನಾಶಕ್ತಿಯುಳ್ಳವನೂ ಮನಸೂರೆಗೊಳ್ಳುವವನೂ ಆಗಿರುತ್ತಾನೆ. ವೇಷಭೂಷಣಗಳೂ ಮುಖಬಣ್ಣಗಳೂ ಕಥಕಳಿಯಿಂದ ಬೇರೆಯಾಗಿರುತ್ತವೆ. ಪಕ್ಕವಾದ್ಯಕ್ಕೆ ಒಂದು ಚಿಕ್ಕ ಮದ್ದಳೆಯೂ ಒಂದು ಜೊತೆ ತಾಳಗಳೂ ಇರುತ್ತವೆ. ನೃತ್ಯಗಾರ ಸಾಮಾನ್ಯವಾಗಿ ತಾನೇ ಹಾಡಿ ಕುಣಿಯುತ್ತಾನೆ. ಪ್ರದರ್ಶನದ ಮಧ್ಯೆ ನೃತ್ಯಗಾರ ಕೆಲವು ತೀವ್ರಗತಿಯ ಕಾಲ್ಚಲನೆಯನ್ನೂ ನೃತ್ಯವಿಧಾನಗಳನ್ನೂ ಮಾಡಿ ವಿರಾಮ ಪಡೆಯುತ್ತಾನೆ. ಪಕ್ಕವಾದ್ಯದವರು ಮಾತ್ರ ಸತತವಾಗಿ ಹಿನ್ನೆಲೆ ಸಂಗೀತ ಒದಗಿಸುತ್ತಾರೆ.

ಕ್ರಿ.ಶ. 17ನೆಯ ಶತಮಾನದ ಮಧ್ಯದಲ್ಲಿ ಕಲ್ಲೀಕೋಟೆಯ ಸ್ಸಾಮೊರಿನ್ ಆದ ಮನವೇದ ನಿರ್ಮಿಸಿದ ಕೃಷ್ಣಾಟ್ಟಂ ಇಂದಿನತನಕ ತನ್ನ ಹಳೆಯ ರೂಪದಲ್ಲೇ ಉಳಿದುಬಂದಿದೆ. ಇದರ ಸಾಹಿತ್ಯ ಸಂಸ್ಕೃತ ಭಾಷೆಯಲ್ಲಿ ಕೃಷ್ಣಪದಿ ಅಥವಾ ಕೃಷ್ಣಗೀತೆಯೆಂಬ ಹೆಸರಿನಲ್ಲಿದೆ. ಇದು ಜಯದೇವನ ಗೀತಗೋವಿಂದದ ಚತುರ ಅನುಕರಣೆಯೆಂಬುದು ಸುಸ್ಪಷ್ಟವಾಗಿದೆ. ಕೃಷ್ಣಾಟ್ಟಂ ನಾಟಕ 8 ರಾತ್ರಿಗಳಲ್ಲಿ ಪ್ರದರ್ಶಿತವಾಗುತ್ತದೆ. ಈ ಪ್ರದರ್ಶನ ಶ್ರೀಕೃಷ್ಣಪರಮಾತ್ಮನ ಜನನದಿಂದ ಆರಂಭವಾಗಿ ಅವನ ಲೀಲಾಪ್ರಸಂಗಗಳನ್ನೆಲ್ಲ ಆವರಿಸಿಕೊಂಡು ಕೊನೆಗೆ ಸ್ವರ್ಗಾರೋಹಣದಲ್ಲಿ ಮುಕ್ತಾಯವಾಗುತ್ತದೆ. ಈ ನಾಟಕ ನೃತ್ಯನಾಟಕದ ರೂಪದಲ್ಲಿದ್ದು ಕಥಕಳಿಯ ವೇಷಭೂಷಣಗಳಿಗೂ ಬಣ್ಣ ವೈವಿಧ್ಯಕ್ಕೂ ಹೊಂದುತ್ತದೆ. ಕೆಲವು ಪಾತ್ರಗಳಿಗೆ ಬಣ್ಣ ಬಳಿದು ಮರದ ಮುಖವಾಡಗಳನ್ನು ಉಪಯೋಗಿಸುತ್ತಾರೆ. ಅಭಿನಯ ಮತ್ತು ಹಸ್ತವಿನ್ಯಾಸಗಳು ಕಥಕಳಿಯಲ್ಲಿನಷ್ಟು ವಿಕಾಸಗೊಂಡಿಲ್ಲ.

ರಾಮನಾಟ್ಟಂ ಎಂಬ ಇನ್ನೊಂದು ವಿಧದ ನೃತ್ಯನಾಟಕದ ನಿರ್ಮಾಣಕ್ಕೆ ಕೃಷ್ಣಾಟ್ಟಂ ಸ್ಫೂರ್ತಿಯಿತ್ತಿತು. ಕ್ರಿ.ಶ. 17ನೆಯ ಶತಮಾನದ ಕೊನೆಯಲ್ಲಿ ಕೊಟ್ಟರಕರ ಎಂಬ ಒಂದು ಚಿಕ್ಕ ಪ್ರದೇಶವನ್ನು ಆಳುತ್ತಿದ್ದ ತಂಪುರನ್ ಎಂಬಾತ ನೆರೆ ಪ್ರದೇಶವಾಗಿದ್ದ ಕಲ್ಲೀಕೋಟೆಯ ಸ್ಸಾಮೊರಿನ್ ಆದ ಮನವೇದನಲ್ಲಿ ಅವನ ಕೃಷ್ಣಾಟ್ಟಂ ನೃತ್ಯಗಾರರ ಪಂಗಡವನ್ನು ಅಪೇಕ್ಷಿಸಿ ಕರೆಕಳುಹಿಸಿದನಂತೆ. ಆದರೆ ಮನವೇದ ಇದಕ್ಕೆ ಒಪ್ಪಲಿಲ್ಲ. ಈ ಆಚರಣೆಯಿಂದ ಕುಪಿತನಾದ ತಂಪುರನ್ ಒಡನೆಯೇ ಆವೇಶ ಉತ್ಸಾಹಗಳಿಂದ ಹೊಸ ತರಹದ ನೃತ್ಯನಾಟಕವನ್ನು ನಿರ್ಮಿಸಲು ಅಣಿ ಮಾಡಿದ. ಕ್ರಮೇಣ ಆತ ಕಲ್ಪಿಸಿದ ಕಲೆ ರಾಮನಾಟ್ಟಂ ಎಂಬ ಹೆಸರಿನಿಂದ ಮೆರೆಯಿತು. ರಾಮಾಯಣವೇ ರಾಮನಾಟ್ಟಂ ನಾಟಕದ ಕಥಾವಸ್ತು. ದಶರಥ ಮಾಡಿದ ಯಾಗದಿಂದ ಆರಂಭವಾಗಿ, ಪುತ್ರೋತ್ಸವ ಮುಂತಾದ ಸನ್ನಿವೇಶಗಳಿಂದ ಸಾಗಿ ಕೊನೆಗೆ ಶ್ರೀರಾಮ ಲಂಕೆಯನ್ನು ಗೆಲ್ಲುವುದರಲ್ಲಿ ಕಥೆ ಮುಗಿಯುತ್ತದೆ. ರಾಮನಾಟ್ಟಂನಲ್ಲಿ ಮುಖಭಾವಗಳಿಗೂ ಹಸ್ತಮುದ್ರೆಗಳಿಗೂ ಹೆಚ್ಚಾದ ಪ್ರಾಧಾನ್ಯವಿದೆ.

ಮುಖವಾಡಗಳನ್ನು ಬಿಟ್ಟು ಮುಖಕ್ಕೆ ಪರಿಷ್ಕಾರವಾದ ಬಣ್ಣವೈವಿಧ್ಯದ ಲೇಪನ ಮಾಡುವುದನ್ನು ಇಲ್ಲಿ ಕಾಣಬಹುದು. ಉತ್ತಮ ಸಾಹಿತ್ಯವೇ ಈ ನೃತ್ಯನಾಟಕದ ವೈಶಿಷ್ಟ್ಯ. ಸಂಸ್ಕೃತ ಭಾಷೆಯ ಪ್ರಭಾವಕ್ಕೊಳಗಾಗಿದ್ದ ಮಲಯಾಳಂ ಭಾಷೆಯಲ್ಲಿಯೇ ಇದರ ಸಾಹಿತ್ಯ ನಿರ್ಮಾಣವಾಗಿದೆ.

ಕೃಷ್ಣಾಟ್ಟಂ ಕೃಷ್ಣಲೀಲೆಗಳನ್ನು ವಿವರಿಸುತ್ತಿತ್ತು. ರಾಮನಾಟ್ಯಂ ರಾಮಲೀಲೆಗಳನ್ನು ವಿವರಿಸುತ್ತಿತ್ತು. ಕಾಲ ಸರಿದಂತೆ ಅದೇ ವಿಧದ ಇನ್ನೂ ಇತರ ನಾಟಕಗಳು ಪ್ರಚಾರಕ್ಕೆ ಬಂದುವು. ನಿರೂಪಣೆಗೆ ಮಹಾಭಾರತದ ಕಥೆಗಳನ್ನೋ ಭಾಗವತದಲ್ಲಿನ ಪ್ರಸಂಗಗಳನ್ನೋ ಶಿವಪುರಾಣದ ಸಂದರ್ಭಗಳನ್ನೋ ಅಳವಡಿಸಿಕೊಂಡರು. ಈ ವ್ಯವಹಾರದ ಹಾದಿಯಲ್ಲಿ ರಾಮನಾಟ್ಯಂ ಕಲೆ ಬಹುಮುಖ್ಯವಾಗಿ ಅಭಿವೃದ್ಧಿಯಾಗಿ ಕಥಕಳಿಯ ಹುಟ್ಟನ್ನು ಕಂಡಿತು.

**ಕಥಕಳಿ ಸಾಹಿತ್ಯ :** ಕಥಕಳಿ ಶಾಸ್ತ್ರದ ವಿಚಾರವಾಗಿ ಮಲಯಾಳಿ ಭಾಷೆಯಲ್ಲಿ ಬರೆದ ಹಸ್ತಲಕ್ಷಣದೀಪಿಕಾ ಎಂಬ ಒಂದು ದೊಡ್ಡ ಗ್ರಂಥದಲ್ಲಿ ಮುದ್ರೆಗಳನ್ನೂ ಅವುಗಳ ಉಪಯೋಗಗಳನ್ನೂ ಕೂಲಂಕಷವಾಗಿ ವರ್ಣಿಸಲಾಗಿದೆ.

ಕಥಕಳಿ ನಾಟಕಗಳಲ್ಲಿ ಪ್ರಖ್ಯಾತವಾದ ಕೃತಿಗಳನ್ನು ಅರಸರು ಬರೆದರು. ಇವರಲ್ಲಿ ಕೆಲವು ಬರೆಹಗಾರರು ನೃತ್ಯಕಲಾಪ್ರವೀಣರಾಗಿದ್ದು ಕಥಕಳಿ ಪ್ರದರ್ಶನಗಳಲ್ಲಿ ಭಾಗ ವಹಿಸುತ್ತಿದ್ದರು. 1665 ರಿಂದ 1743ರ ಅವಧಿಯಲ್ಲಿ ಆಳಿದ ಕೊಟ್ಟಾಯಂ ರಾಜನಾದ ತಂಪುರನ್ ಈ ಸಾಹಿತ್ಯ ನಿರ್ಮಾಪಕರಲ್ಲಿ ಮೊದಲಿಗ. ಸ್ವಯಂ ನಟನೂ ನೃತ್ಯಗಾರನೂ ಆದ ಈತ ಬಕವಧ, ಕಾಲ್ಕೇಯವಧ, ತ್ರಿಮಿರವಧ ಮತ್ತು ಕಲ್ಯಾಣ ಸೌಗಂಧಿಕಂ ಎಂಬ ನಾಲ್ಕು ಅಟ್ಟಕಥೆಗಳನ್ನು ಬರೆದ. ಇವೆಲ್ಲವೂ ಮಹಾಭಾರತದ ಸನ್ನಿವೇಶಗಳಿಗೆ ಸಂಬಂಧಿಸಿದವು. 1724 ರಿಂದ 1728 ರಲ್ಲಿ ತಿರುವಾಂಕೂರಿನ ಮಹಾರಾಜನಾಗಿದ್ದ ಕಾರ್ತಿಕ ತಿರುನಾಳ್ ಇನ್ನೊಬ್ಬ ಕವಿ. ಹೆಸರಾಂತ ಯೋಧನೂ ಆಡಳಿತಗಾರನೂ ಆಗಿದ್ದಂತೆ ಈತ ಘನವಿದ್ವಾಂಸನೂ ಬರೆಹಗಾರನೂ ಆಗಿದ್ದ. ಈತನ ನಿಜವಾದ ಹೆಸರು ಬಲರಾಮ ವರ್ಮ. ಈ ಹೆಸರಿನಲ್ಲಿ ಈತ ಸಂಸ್ಕೃತ ಭಾಷೆಯಲ್ಲಿ ನಾಟ್ಯದ ಮೇಲೆ ಬಲರಾಮ ಭಾರತ ಎಂಬ ಒಂದು ದೊಡ್ಡ ಗ್ರಂಥವನ್ನು ಬರೆದ. ಅಲ್ಲದೆ ಸುಭದ್ರಾಹರಣ, ನರಕಾಸುರವಧ, ಗಂಧರ್ವವಿಜಯಂ, ರಾಜಸೂಯಂ, ಬಕವಧ, ಪಾಂಚಾಲಿ ಸ್ವಯಂವರಂ, ಮತ್ತು ಕಲ್ಯಾಣಸೌಗಂಧಿಕಂ ಎಂಬ ಬೇರೆ 7 ನಾಟಕಗಳನ್ನೂ ಈತ ಬರೆದಿದ್ದಾನೆ. ಇವನ ಸಂಬಂಧಿಕನಾದ ರಾಜಕುಮಾರ ಅಸ್ವತೀ ತಿರುನಾಳನೂ ಅದ್ವಿತೀಯ ಕವಿ. ಈತ ಪೂತನ ಮೋಕ್ಷಂ, ಅಂಬರೀಷ ಚರಿತಂ, ಪುಂಡರೀಕವಧ ಮತ್ತು ರುಕ್ಮಿಣೀ ಸ್ವಯಂವರ ಎಂಬ ನಾಲ್ಕು ಕಥಕಳಿ ನಾಟಕಗಳನ್ನು ಬರೆದಿದ್ದಾನೆ. 1813–1847ರ ಅವಧಿಯಲ್ಲಿ ಸ್ವಾತಿ ತಿರುನಾಳ್ ರಾಮವರ್ಮ ತಿರುವಾಂಕೂರಿನ ಮಹಾರಾಜನಾಗಿದ್ದ. ಈ ವ್ಯಕ್ತಿ ಸಂಗೀತಪ್ರಿಯನೂ ಕಲಾಪ್ರೇಮಿಯೂ ಆಗಿದ್ದು ತನ್ನ ಅರಮನೆಯ ಆಸ್ಥಾನಕ್ಕೆ ದೇಶದಾದ್ಯಂತದ ನೃತ್ಯಗಾರರನ್ನೂ ಸಂಗೀತವಿದ್ವಾಂಸರನ್ನೂ ಇತರ ಕಲಾವಿದರನ್ನೂ ಆಹ್ವಾನಿಸಿ, ಪ್ರೋತ್ಸಾಹಿಸಿ ಗೌರವಿಸುತ್ತಿದ್ದ. ಕಥಕಳಿ ಕಲೆಗೋಸ್ಕರ ಈತ ಸುಮಾರು 75 ಹಾಡುಗಳನ್ನು ರಚಿಸಿದ್ದಾನೆ. ಈತನ ಕಾಲದಲ್ಲಿದ್ದ (1783–1863) ಇರಯಿಮ್ಮನ್ ತಂಪಿ ಎಂಬ ಇನ್ನೊಬ್ಬ ಶ್ರೇಷ್ಠ ಕವಿ ಕೀಚಕವಧ, ದಕ್ಷಯಾಗಂ ಮತ್ತು ಉತ್ತರಾ ಸ್ವಯಂವರಂ ಎಂಬ ಮೂರು ಅಮೋಘ ಸಾಹಿತ್ಯ ಕೃತಿಗಳನ್ನು ರಚಿಸಿದ್ದಾನೆ.

ಇರಯಿಮ್ಮನ್ ತಂಪಿಯ ಮಗಳಾದ ತಂಕ್ಕಚೀಯಾ ತಂದೆಯ ಸಾಹಿತ್ಯಾಭಿರುಚಿಯನ್ನು ಪಡೆದು ಶ್ರೀಮತಿ ಸ್ವಯಂವರಂ, ಪಾರ್ವತೀ ಸ್ವಯಂವರಂ ಮತ್ತು ಮಿತ್ರಸಹ ಮೋಕ್ಷಂ ಎಂಬ ಮೂರು ನಾಟಕಗಳನ್ನು ರಚಿಸಿದ್ದಾಳೆ.

ಕೇರಳದ ಅರಸರ ಆಡಳಿತದಲ್ಲಿ ಮತ್ತು ಅವರ ಆಶ್ರಯದಲ್ಲಿ ಕಥಕಳಿ ಬೆಳೆದು ಅಭಿವೃದ್ಧಿ ಪಡೆಯಿತು. ಸುಮಾರು 19ನೆಯ ಶತಮಾನದ ನಡುಗಾಲದವರೆಗೆ ಈ ಸಂಪ್ರದಾಯ ಉತ್ತಮ ಸ್ಥಿತಿಯಲ್ಲಿತ್ತು. ಅನಂತರ ಸಾಮಾನ್ಯವಾಗಿ ದೇಶೀಯ ಕಲೆಗಳಿಗಿದ್ದ ಪ್ರೋತ್ಸಾಹ ಕಡಿಮೆಯಾಯಿತಾಗಿ ಈ ಕಲೆಯೂ ಅವನತಿ ಹೊಂದಿತು.

ಸುಮಾರು ಒಂದು ಶತಮಾನದ ವರೆಗೆ ಕಥಕಳಿ ಕಾತರತೆಯ ಸ್ಥಿತಿಯಲ್ಲಿ ಉಳಿದುಕೊಂಡು ಬಂದಿತೆನ್ನಬಹುದು. ಅಂದು ಯಾವ ಕಲಾವಿದನಿಗೂ ಯಾವ ಕಲಾಪೋಷಕನಿಗೂ ಭವಿಷ್ಯದಲ್ಲಿ ಭರವಸೆ ಇರಲಿಲ್ಲ. ಹೀಗೆ ಕಲೆ ಪೂರ್ಣ ಅಳಿಯುವ ಸ್ಥಿತಿಗೆ ಬಂದಾಗ ಮಹಾಕವಿ ವಲ್ಲತ್ತೋಳ್ ನಾರಾಯಣ ಮೇನನ್ ಎಂಬ ಧೀರ ಕಲೆಯ ರಕ್ಷಕನಾಗಿ ಮುಂದೆ ಬಂದ. ತನ್ನ ತಂದೆಗಿದ್ದ ಕಲಾಭಿರುಚಿಯ ದೆಸೆಯಿಂದಾಗಿ ವಲ್ಲತ್ತೋಳ್ ಕಥಕಳಿ ಕಲೆಯ ಅಂದವನ್ನು ಕಂಡ. ಯಾರನ್ನೂ ಸಹಾಯಕ್ಕಾಗಿ ಕೈಯೊಡ್ಡಿ ಬೇಡದೆ, ಲಾಟರಿ ಮೊದಲಾದು ನಡೆಸಿ ಸುಮಾರು 75,000 ರೂಪಾಯಿಗಳನ್ನು ಶೇಖರಿಸಿ ಆ ನಿಧಿಯಿಂದ ಆತ ಕಥಕಳಿ ಕಲೆಗೆ ಕೇರಳ ಕಲಾಮಂಡಲಂ ಎಂಬ ಒಂದು ನೆಲೆಯನ್ನು ಸ್ಥಾಪಿಸಿದ (1930) ಅಳಿಯುತ್ತಿದ್ದ ಕಲೆಗಳ ಶೋಧನೆ ಮಾಡಿ ಅವಕ್ಕೆ ಹೊಸ ಜೀವಕೊಟ್ಟು ಅಭಿವೃದ್ಧಿ ಮಾಡುವುದೇ ಈ ಮಂಡಲದ ಧ್ಯೇಯ. ಈ ಧ್ಯೇಯ ಫಲಿಸಿ ಕಥಕಳಿ, ಮೋಹಿನೀ ಆಟ್ಟಂ, ಓಟಂ ತುಳ್ಳಲ್ ಮೊದಲಾದ ಸಂಪ್ರದಾಯಗಳು ಪುನರುಜ್ಜೀವಿತವಾಗಿ ಹೊಸ ಕಳೆಯನ್ನು ಪಡೆದುವು. ಕಥಕಳಿ ಕಲೆಯ ಶ್ರೇಷ್ಠ ಗುರುಗಳೆಲ್ಲರನ್ನೂ ಆಹ್ವಾನಿಸಿ ಅಧ್ಯಾಪಕರನ್ನಾಗಿ ಆರಿಸಲಾಯಿತು. ಇವರಲ್ಲಿ ತಕಾರ್ಝಿ ಕುಂಜು ಕುರುಪ್, ಕವಲಪ್ಪನಾರಾಯಣ ನಾಯರ್ ಮತ್ತು ಪಟ್ಟಿಕಂತೋಟಿ ರಾವುಣ್ಣಿ ಮೇನನ್ ಇವರು ಪ್ರಖ್ಯಾತರು.

ಸ್ಥಾಪಿತವಾದ ದಿನದಿಂದ ಕೇರಳ ಕಲಾಮಂಡಲ ಕಥಕಳಿ ಕಲೆಗೆ ಹೇರಳವಾಗಿ ದುಡಿದು ಸೇವೆ ಸಲ್ಲಿಸುತ್ತಿದೆ. ಇವರ ಸತತ ಸೇವೆಯ ಫಲವಾಗಿ ಈ ಸಂಘಕ್ಕೆ ಕೇಂದ್ರ ಸಂಗೀತ ನಾಟಕ ಅಕೆಡಮಿಯಿಂದ ಧನಸಹಾಯ ಒದಗಿದೆ; ಅಲ್ಲದೆ ಪಂಡಿತ ಜವಹರಲಾಲ್ ನೆಹರು ಈ ಸಂಘದ ಯೋಗ್ಯತೆಯನ್ನು ಮನಗಂಡು 50,000 ರೂಪಾಯಿಗಳ ಧನಸಹಾಯವನ್ನು ನೀಡಿದ್ದಾರೆ.

**ಕಥಕಳಿ ಅಭ್ಯಾಸ :** ಕಥಕಳಿಯ ಸಾಧನೆ ಒಂದು ಯೋಗಾಭ್ಯಾಸವೇ. ಸುಂದರವಾದ ಹಾಗೂ ಜಟಿಲವಾದ ಈ ಕಲೆಯನ್ನು ಕರಗತ ಮಾಡಿಕೊಳ್ಳಬೇಕಾದರೆ ಒಬ್ಬ ವಿದ್ಯಾರ್ಥಿ ತನ್ನ ಸುಖ ದುಃಖಗಳನ್ನು ಮರೆತು, ಒಂದು ವಿಧದ ಹಠಯೋಗವನ್ನೇ ಮಾಡಬೇಕಾಗುತ್ತದೆ. ವಿದ್ಯಾರ್ಥಿಯೊಬ್ಬ ಸಾಮಾನ್ಯವಾಗಿ ತನ್ನ 7ನೆಯ ಅಥವಾ 8ನೆಯ ವಯಸ್ಸಿನಲ್ಲಿಯೇ ಗುರುಗಳೊಬ್ಬರಲ್ಲಿ ಪಾಠವನ್ನು ಆರಂಭಿಸುತ್ತಾನೆ. ಈ ಸಂಪ್ರದಾಯ ನಮಗೆ ಪ್ರಾಚೀನದ ಗುರುಕುಲವಾಸದ ನೆನಪನ್ನು ತರುತ್ತದೆ. ಇಲ್ಲಿ ಗುರುಗಳ ಅನುಗ್ರಹಕ್ಕೆ ಪಾತ್ರನಾಗಲು ವಿದ್ಯಾರ್ಥಿ ಎಲ್ಲ ವಿಧದಿಂದಲೂ ಅವರ ಸೇವೆಯನ್ನು ಮಾಡಬೇಕಾಗುತ್ತದೆ. ಗುರುಗಳ ಕಟಾಕ್ಷ ಬಿದ್ದು ಎಷ್ಟು ವಿದ್ಯೆಯನ್ನು ಅವರು ದಾನ ಮಾಡುವರೋ ಅಷ್ಟನ್ನು ಸ್ವೀಕರಿಸುವುದು ವಿದ್ಯಾರ್ಥಿಯ ಕರ್ತವ್ಯ.

ಮೈಸಾಧಕರಂ : ಕಥಕಳಿ ನೃತ್ಯಗಾರನಿಗೆ ಅವಯವಗಳೂ ಮೈಕಟ್ಟೂ ತುಂಬ ಮೆದುವಾಗಿರಬೇಕು. ಅದಕ್ಕಾಗಿ ಅವನು ಕಸರತ್ತು ಮಾಡಿ ಮೊದಲು ತನ್ನ ಮೈಯನ್ನು ಮೆದುಮಾಡಿಕೊಳ್ಳುತ್ತಾನೆ. ಆಮೇಲೆ ಕಲೆಯ ಮೊದಲ ಭಂಗಿಯನ್ನೂ ಕಥಕಳಿಗೆ ಸೇರಿದ ಕೆಲವು ಕಸರತ್ತುಗಳನ್ನೂ ಕಲಿಯುತ್ತಾನೆ. ಅನಂತರ ಮುಖ್ಯವಾದ 8 ನಮಸ್ಕಾರಗಳ ಅಭ್ಯಾಸವಾಗುತ್ತದೆ. ಇಷ್ಟು ಮಾಡಿದಲ್ಲಿ ವಿದ್ಯಾರ್ಥಿಯ ಅಂಗಾಂಗಗಳು ಬೇಕಾದ ರೀತಿಯಲ್ಲಿ ಬಳುಕಿ ಬಾಗುವಂತಾಗುತ್ತದೆ. ಈಗ ಅವನ ಸೊಂಟಕ್ಕೆ ಬಲವೂ ಶಕ್ತಿಯೂ ಬರುವಂತೆ ಮತ್ತು ಕಥಕಳಿಯ ಮುಖ್ಯ ಸ್ಥಾನಕಗಳಿಗೆ ಅನುಕೂಲವಾಗುವಂತೆ ಒಂದು ವಿಶೇಷ ರೀತಿಯ ಅಂಗಮರ್ದನವನ್ನು ಮಾಡುತ್ತಾರೆ. ಈ ಮರ್ದನ ತುಂಬ ನೋವನ್ನುಂಟುಮಾಡುತ್ತದಾದರೂ ಇದಿಲ್ಲದಿದ್ದರೆ ನೃತ್ಯಕ್ಕೆ ಬೇಕಾಗುವ ಬಳುಕು ಬಾಗುಗಳು ಬರುವುದು ಅಸಾಧ್ಯ. ಮೊದಲು ವಿದ್ಯಾರ್ಥಿಯನ್ನು ಕಪ್ಪೆಯಾಕಾರದಲ್ಲಿ ಮಲಗಿಸಿ ಅಂಗಮರ್ದಕ ಮೇಲೆ ಕಟ್ಟಿದ ಒಂದು ಅಡ್ಡ ಮರವನ್ನು ಕೈಗಳಿಂದ ಹಿಡಿದುಕೊಂಡು ತನ್ನ ಕಾಲಿನಿಂದ ವಿದ್ಯಾರ್ಥಿಯ ತೊಡೆಗಳನ್ನೂ ಕಾಲುಗಳನ್ನೂ ಮರ್ದಿಸುತ್ತಾನೆ. ಹೊತ್ತು ಹೋದಂತೆ ಮರ್ದನದ ಒತ್ತಡವನ್ನು ಹೆಚ್ಚಿಸುತ್ತಲೇ ಇರುತ್ತಾನೆ. ಈ ಮರ್ದನ ಬೆನ್ನಕಡೆಯಿಂದಲೂ ಎದೆಯ ಕಡೆಯಿಂದಲೂ ನಡೆಯುತ್ತದೆ. ಈ ಕ್ರಿಯೆ ಪೂರ್ಣವಾದಾಗ ವಿದ್ಯಾರ್ಥಿಯ ಅಂಗಾಂಗಗಳು ಸೊಂಟ ಮುಂತಾದವು ಹೇಳಿದಂತೆ ಬಾಗುತ್ತವೆ.

ಕಾಲಸಾಧಕಂ : ಈ ಮೈಸಾಧನೆ ಮುಗಿದ ಮೇಲೆ ಕಾಲ್ಚಲನೆಗಳ ಅಭ್ಯಾಸವನ್ನೂ ಜೊತೆಗೆ ಬೇರೆ ಬೇರೆ ವಿಧದ ಬಾಗುವಿಕೆಗಳನ್ನೂ ಹೇಳಿಕೊಡುತ್ತಾರೆ. ಈ ಕಾಲ್ಚಲನೆಗಳು ಮೊದಲಲ್ಲಿ ಒಂದನೆಯ ಕಾಲದಲ್ಲಿ ಆರಂಭವಾಗಿ ಕ್ರಮೇಣ 4ನೆಯ ಕಾಲದವರೆಗೆ ಸಾಗಿ ಪುನಃ ಒಂದನೆಯ ಕಾಲಕ್ಕೆ ಬರುತ್ತವೆ. ಈ ಅಭ್ಯಾಸದಿಂದ ವಿದ್ಯಾರ್ಥಿಗೆ ತಾಳ ಲಯಜ್ಞಾನ ಖಚಿತವಾಗುತ್ತದೆ. ಇದಾದ ಮೇಲೆ ಕಷ್ಟತರವಾದ ಕಾಲ್ಚಲನೆಗಳನ್ನೂ ಅವುಗಳ ಸಮ್ಮಿಲನವನ್ನೂ ಕಲಿಯಬೇಕು. ಇವಕ್ಕೆ ಕಲಾಶಂ ಎಂದು ಹೆಸರು. ಇದರಲ್ಲಿ ವಟ್ಟಮಿಟ್ಟ ಕಲಾಶಂ, ಅಷ್ಟಕಲಾಶಂ, ಎಡಕಲಾಶಂ, ಎರಟ್ಟಿಕಲಾಶಂ ಮತ್ತು ಎಡುತ್ತು ಕಲಾಶಂ ಎಂಬ ಕೆಲವು ವಿಧಗಳಿವೆ. ಇವು ಭರತನಾಟ್ಯದಲ್ಲಿನ ಜತಿಗಳಂತೆ. ಇಂಥ ಕಲಾಶಂಗಳನ್ನು ಕಾಳಗ ಸನ್ನಿವೇಶಗಳಲ್ಲಿ ಸಾಮಾನ್ಯವಾಗಿ ಉಪಯೋಗಿಸುತ್ತಾರೆ.

ಮುದ್ರಸಾಧಕಂ : ಆಮೇಲೆ ಹಸ್ತಗಳ ಅಥವಾ ಮುದ್ರೆಗಳ ಅಭ್ಯಾಸ ನಡೆಯುತ್ತದೆ. ಈ ಹಸ್ತಗಳು ಭರತನಾಟ್ಯದ ಹಸ್ತ ಮುದ್ರೆಗಳಿಂದ ಬೇರೆಯಾಗಿವೆ. ಭರತ ನಾಟ್ಯ ಮುದ್ರೆಗಳ ಹೆಸರುಗಳಲ್ಲೇ ಕಥಕಳಿಯಲ್ಲಿ 24 ಮುದ್ರೆಗಳಿವೆ. ಈ 24 ಮುದ್ರೆಗಳಿಂದ ಒಂದು ಸಾಹಿತ್ಯವನ್ನೇ ಸೃಷ್ಟಿಸಬಹುದು. ಇವನ್ನು ಮತ್ತೆ ಮೂರು ವಿಭಾಗಗಳನ್ನಾಗಿ ವಿಂಗಡಿಸಿದ್ದಾರೆ. 1. ಪ್ರಾಕೃತಿಕ ಮುದ್ರೆಗಳು : ಕಲಾವಿದ ನಟಿಸುವಾಗ ಭಾವಪರವಶನಾಗಿ ತೋರುವ ಸಹಜ ರೀತಿಯವು. 2. ಪ್ರತಿರೂಪಿ ಮುದ್ರೆಗಳು : ಯಾವುದಾದರೂ ಒಂದು ವಸ್ತುವನ್ನು ತೋರಿಸಲು ಅಥವಾ ವ್ಯಕ್ತಪಡಿಸಲು ಉಪಯೋಗಿಸುವಂಥವು. 3. ಪ್ರಸಾರಿತ ಮುದ್ರೆಗಳು : ಧರ್ಮಾನುಸಾರವಾಗಿ ತಾಂತ್ರಿಕ ಸಂಜ್ಞೆಗಳಿಗೆ ಉಪಯೋಗಿಸುವ ವಿಶಿಷ್ಟ ಬಗೆಯವು. ಉದಾಹರಣೆಗೆ ಪೂಜೆ, ದಾನ, ವರದ ಮುಂತಾದುವನ್ನು ಅಭಿನಯಿಸಲು ಅನುಕೂಲವಾಗುವಂಥವು. ಚಲನೆಗಳನ್ನು ಹಸ್ತಮುದ್ರಗಳಿಂದಲೂ ತಲೆ, ಕತ್ತು, ಕಣ್ಣು, ಹುಬ್ಬು, ಕಣ್ಣಾಲಿ, ತುಟಿ,

ಮೂಗು, ಕದಪು ಮುಂತಾದುವುಗಳಿಂದಲೂ ಅಂಗಾಂಗಗಳಿಂದಲೂ ಅಭಿನಯಿಸಿ ತೋರಬೇಕಾಗುತ್ತದೆ.

ಅಭಿನಯ ಸಾಧಕಂ : 2–3 ವರ್ಷಗಳ ಅಭ್ಯಾಸ ಮುಗಿದ ಮೇಲೆ ವಿದ್ಯಾರ್ಥಿಗೆ ಕಣ್ಣು, ಕಣ್ಣಾಲಿ, ಹುಬ್ಬು ಕೆನ್ನೆ. ಕದಪುಗಳ ಚಲನೆಯ ಪಾಠವಾಗುತ್ತದೆ. ಇವೆಲ್ಲವನ್ನೂ ನಾಟ್ಯಶಾಸ್ತ್ರದಲ್ಲಿ ವರ್ಣಿಸಿದ್ದಾರೆ. ಈ ಪರಿಷ್ಕಾರವಾದ ಹಾಗೂ ಕಠಿಣವಾದ ಸಾಧನೆಯ ಫಲವಾಗಿ ಒಬ್ಬ ಕಥಕಳಿ ಕಲಾವಿದನ ಮುಖ ಭರತನಾಟ್ಯ ಕಲಾವಿದನ ಮುಖಕ್ಕಿಂತ ಹೆಚ್ಚು ಸೂಚಕವಾಗಿಯೂ ಭಾವಭರಿತವಾಗಿಯೂ ಚಂಚಲವಾಗಿಯೂ ಇರಲು ಸಾಧ್ಯವಾಗುತ್ತದೆ. ಸಾಮಾನ್ಯವಾಗಿ ಕಣ್ಣಿನ ಸಾಧನೆ ಪ್ರಾತಃಕಾಲ 4 ಗಂಟೆಗೆ ಆರಂಭವಾಗುತ್ತದೆ. ಆ ಸಮಯದಲ್ಲಿ ಸುತ್ತುಮುತ್ತಲಿನ ವಾತಾವರಣ ರಾತ್ರಿಯ ಕತ್ತಲೆಯಲ್ಲಿ ಅಡಗಿರುತ್ತದೆ. ಆದ್ದರಿಂದ ಕಣ್ಣಿನ ದೃಷ್ಟಿಯನ್ನು ಏಕಾಗ್ರತೆಯಿಂದ ನೆಲೆ ನಿಲ್ಲಿಸಲು ಅನುಕೂಲವಾಗುತ್ತದೆ. 4 ರಿಂದ $6\frac{1}{2}$ ಗಂಟೆಗಳ ತನಕ ಗುರುವೂ ಶಿಷ್ಯನೂ ಪದ್ಮಾಸನದಲ್ಲಿರುತ್ತಾರೆ. ಇಬ್ಬರ ಮಧ್ಯ 7–8 ಅಡಿಗಳ ಅಂತರವಿರುತ್ತದೆ. ಗುರು ಕೋಲಿನ ಆಧಾರದಿಂದ ಕಣ್ಣು ಚಲನೆಗಳ ರೀತಿಯನ್ನು ಹೇಳಿಕೊಡುತ್ತಾನೆ. ತೆರೆದ ಕಣ್ಣಿನಿಂದ ಶಿಷ್ಯ ಕೋಲಿನ ತುದಿಯನ್ನೇ ನೋಡಬೇಕು. ಗುರುಶಿಷ್ಯರ ಮಧ್ಯೆ ಒಂದು ಎಣ್ಣೆ ದೀಪವಿದ್ದು ಮಿಕ್ಕ ಕಡೆಯೆಲ್ಲ ಕಗ್ಗತ್ತಲೆ ಕವಿದಿರುತ್ತದೆ. ಈ ಕಗ್ಗತ್ತಲೆಯಿಂದಾಗಿ ಶಿಷ್ಯ ದಿಗಂತದವರೆಗೂ ದೃಷ್ಟಿಯನ್ನು ಬೀರಬಲ್ಲ. ಕಣ್ಣಿಗೆ ಉರಿ ಬಾರದಂತೆ ಹಸುವಿನ ತುಪ್ಪವನ್ನು ಹಚ್ಚಿಕೊಂಡು, ಬೆರಳುಗಳಿಂದ ಎರಡೂ ರೆಪ್ಪೆಗಳನ್ನು ಬಿಡಿಸಿ ಹಿಡಿದು, ನೆಟ್ಟ ದೃಷ್ಟಿಯಿಂದ ಕಣ್ಣು ಚಲನೆಗಳನ್ನು ಮಾಡುವುದು ಅತಿ ಕಠಿಣ ಸಾಧನೆ.

ಈ ಸಾಧನೆಯ ಜೊತೆಗೆ ನವರಸಗಳನ್ನು ತೋರಿಸುವ ಅಭಿನಯದ ಅಭ್ಯಾಸ ನಡೆಯುತ್ತದೆ. ರಸನಿರೂಪಣೆಯಲ್ಲಿ ವಿದ್ಯಾರ್ಥಿ ಸಿದ್ಧಹಸ್ತನಾಗುವವರೆಗೂ ಪಾಠ ನಡೆಯುತ್ತದೆ.

ಹೀಗೆ 4 ವಿಧವಾದ ಸಾಧನೆಗಳನ್ನು ಹಲವು ವರ್ಷ ಅಭ್ಯಾಸ ಮಾಡಿದ ಮೇಲೆ ಕಲಾವಿದ ಕಥಕಳಿ ಕಲೆಯಲ್ಲಿ ಸ್ವಲ್ಪಮಟ್ಟಿಗೆ ಪಾಂಡಿತ್ಯ ಪಡೆದು ರಂಗಸ್ಥಳದ ಮೇಲೆ ಬರಲು ಯೋಗ್ಯನಾಗುತ್ತಾನೆ. ತನ್ನ ತನ್ನ ಯೋಗ್ಯತೆ ಮತ್ತು ಅಭಿರುಚಿಗೆ ತಕ್ಕ ಪಾತ್ರವನ್ನು (ಸ್ತ್ರೀ, ನಾಯಕ. ಖಳ, ಉಗ್ರ, ಸೌಮ್ಯ–ಹೀಗೆ) ಆರಿಸಿಕೊಂಡು ಅಭ್ಯಾಸ ಮಾಡುವುದು ರೂಢಿ. ಕಥಕಳಿ ನೃತ್ಯನಾಟಕಗಳಲ್ಲಿ ಸಾಮಾನ್ಯವಾಗಿ ಸಾತ್ತ್ವಿಕ, ರಾಜಸ, ತಾಮಸ ಎಂಬ ಮೂರು ವಿಧದ ಪಾತ್ರಗಳೂ ಇರುತ್ತವೆ.

ವೇಷಭೂಷಣಗಳು, ಬಣ್ಣಲೇಪನ : ವೇಷಭೂಷಣಗಳೂ ಬಣ್ಣಗಳೂ ವಿಶಿಷ್ಟವಾಗಿರುವುದರಿಂದ ಈ ಕಲೆ ವಿಶ್ವದ ಗಮನವನ್ನು ಸೆಳೆದಿದೆ. ಇಲ್ಲಿನ ಬಣ್ಣಲೇಪನ ಒಂದು ಅಸಾಧಾರಣವಾದ ಕಲೆ. ಈ ವಿಷಯದಲ್ಲಿ ಯಕ್ಷಗಾನ ಕಲೆಗಾರರಿಗೂ ಕಥಕಳಿ ಕಲಾವಿದರಿಗೂ ಹೋಲಿಕೆಯಿದೆ. ಈ ವಿಶಿಷ್ಟ ಬಣ್ಣಲೇಪನದಿಂದಲೂ ವೇಷಭೂಷಣಗಳಿಂದಲೂ ಕಲಾವಿದ ತನ್ನ ವ್ಯಕ್ತಿತ್ವವನ್ನು ತಾನು ಅಭಿನಯಿಸುವ ಪಾತ್ರದಲ್ಲಿ ವಿಲೀನಗೊಳಿಸಬಲ್ಲ. ಪಾತ್ರಧಾರಿಗಳು ಉಡುವ ಅಗಲವಾದ ಬಿಳಿ ಲಂಗ ಪಾಶ್ಚಾತ್ಯರ ಪ್ರಭಾವದ ಫಲವಿರಬಹುದು ಎನಿಸುತ್ತದೆ. ಅಗಲವಾದ ಈ ಲಂಗವಲ್ಲದೆ ಅನೇಕ ಮಣಿಗಳ ಸರಗಳನ್ನೂ ಭುಜಕೀರ್ತಿಗಳನ್ನೂ ತಲೆಗೆ ಧರಿಸುವ ವಿಧವಿಧದ ದೊಡ್ಡ ಕಿರೀಟಗಳನ್ನೂ ಎದೆಕವಚಗಳನ್ನೂ ಉದ್ದವಾದ ಕೇಶರಾಶಿಯನ್ನೂ ಉಪಯೋಗಿಸಿ ನಟರು ಅಮಾನುಷ ವ್ಯಕ್ತಿಗಳಂತೆ ಕಾಣುತ್ತಾರೆ. ಬಣ್ಣಗಳಲ್ಲಿ ಹೆಚ್ಚಾಗಿ ಕೆಂಪು, ಹಸಿರು, ಹಳದಿ, ಕಪ್ಪು ಮತ್ತು ಬಿಳಿ ಬಣ್ಣಗಳನ್ನು ಉಪಯೋಗಿಸುತ್ತಾರೆ. ಈ ಪ್ರಮುಖ ಬಣ್ಣಲೇಪನಗಳು ಶೋಭೆ, ಕಾಂತಿ, ದೀಪ್ತಿ ಮತ್ತು ಮಾಧುರ್ಯಗಳ ದ್ಯೋತಕಗಳಾಗಿವೆ. ಪ್ರೇಕ್ಷಕ ಪಾತ್ರದ ವೇಷಭೂಷಣಗಳನ್ನು ಒಮ್ಮೆ ನೋಡಿದ ಮಾತ್ರಕ್ಕೆ ಕಲಾವಿದ ಕಥೆಯ ಯಾವ ಪಾತ್ರವನ್ನು ಧರಿಸಿರುವನೆಂದು ತಿಳಿಯಬಲ್ಲ. ಬಣ್ಣಲೇಪನದಲ್ಲಿ 5 ವಿಧಗಳಿವೆ: 1 ಮಿಣುಕ್ಕು : ಮುಖಕ್ಕೆ ಕೆಂಪು ಮತ್ತು ಹಳದಿ ಬಣ್ಣಗಳನ್ನು ಉಪಯೋಗಿಸುವುದು. ಈ ಪಾತ್ರಗಳು ಋಷಿಗಳನ್ನೂ ಬ್ರಾಹ್ಮಣರನ್ನೂ ಸ್ತ್ರೀಪಾತ್ರಗಳನ್ನೂ ತಿಳಿಸುತ್ತವೆ. 2 ಪಚ್ಚ : ಮುಖಕ್ಕೆ ಹಸಿರು, ಕೆಳದವಡೆಯ ಸುತ್ತಲೂ ಬಿಳಿ ಚುಟ್ಟಿ (ಅಕ್ಕಿ ಹಿಟ್ಟಿನ ಬಣ್ಣ) ಇರುತ್ತದೆ. ಕಣ್ಣುಗಳಿಗೂ ಕಣ್ಣು ರೆಪ್ಪೆಗಳಿಗೂ ಕಪ್ಪು ಬಳಿದು ತುಟಿಗಳನ್ನು ಕೆಂಪು ಮಾಡಿಕೊಳ್ಳುತ್ತಾರೆ. ಈ ವಿಧದ ಬಣ್ಣ ಲೇಪನ ಸಾತ್ತ್ವಿಕ ಪಾತ್ರಗಳನ್ನೂ ಗಂಭೀರ ಪಾತ್ರಗಳನ್ನೂ ಸೂಚಿಸುತ್ತದೆ. ಉದಾಹರಣೆಗೆ, ರಾಮ, ಕೃಷ್ಣ, ಅರ್ಜುನ. ನಳ, ಇಂದ್ರ. 3 ಕತ್ತಿ : ಇದು ಪಚ್ಚ ಲೇಪನಕ್ಕಿಂತ ಸ್ವಲ್ಪ ಹೆಚ್ಚು ಪರಿಷ್ಕಾರವಾದುದು. ಇದರಲ್ಲಿ ಕೆಂಪು, ಹಸಿರು ಬಣ್ಣಗಳನ್ನು ಚಾತುರ್ಯದಿಂದ ಸೇರಿಸುತ್ತಾರೆ. ಚುಟ್ಟಿ ಮೂಗಿನ ಸುತ್ತಲಿಂದ ಹಣೆಯ ವರೆಗೂ ಇರುತ್ತದೆ. ಈ ಲೇಪನವನ್ನು ರಾವಣ, ಕೀಚಕ, ದುಶ್ಶಾಸನ ಮುಂತಾದ ಮುಖ್ಯರ ಪಾತ್ರಗಳಿಗೆ ಉಪಯೋಗಿಸುತ್ತಾರೆ. 4 ದಾಡಿ : ಈ ಲೇಪನದಲ್ಲಿ ಕೆಂಪು, ಬಿಳಿ ಮತ್ತು ಕಪ್ಪು ಬಣ್ಣಗಳಿದ್ದು ಒಳ್ಳೆಯ ಹಾಗೂ ಕೆಟ್ಟ ಗುಣಗಳುಳ್ಳ ವ್ಯಕ್ತಿಗಳನ್ನು ಸೂಚಿಸುತ್ತವೆ. ಅವುಗಳಲ್ಲೂ ಹಲವು ವಿಧಗಳಿವೆ. i ವೆಳುಪ್ಪು ದಾಡಿ : ಬಿಳೀ ಗಡ್ಡವಿದ್ದು ಕಣ್ಣು ಮೂಗುಗಳ ಸುತ್ತಲೂ ತೆಳ್ಳಗಿನ ಚುಟ್ಟಿ ಇರುತ್ತದೆ. ಮುಖಕ್ಕೆ ಕಪ್ಪು ಮೈಗೆ ಒಂದು ರೀತಿಯ ಅಂಗಿ. ಈ ಲೇಪನ ಹನುಮಂತನಂಥ ಪಾತ್ರಗಳಿಗೆ ತಕ್ಕುದು. ii ಚೊಕ್ಕಣ್ಣ ದಾಡಿ : ಈ ಪಾತ್ರಕ್ಕೆ ಕೆಂಪು ಗಡ್ಡವೂ ಕೆಂಪು ಅಂಗಿಯೂ ಇರುತ್ತದೆ. ಮುಖದ ಮೇಲ್ಭಾಗ ಕಪ್ಪಾಗಿದ್ದು ಕೆಳಭಾಗ ಕೆಂಪಾಗಿರುತ್ತದೆ. ಸಾಮಾನ್ಯವಾಗಿ ಈ ಲೇಪನಗಳು ಭಯಂಕರ ಹಾಗೂ ಆಕ್ರಮಣಕಾರಿ ಪಾತ್ರಗಳನ್ನು ಸೂಚಿಸುತ್ತವೆ. ಉದಾ–ಕಾಲಕೇಯ, ವೀರಭದ್ರ ಮುಂತಾದುವು. iii ಕರುಪ್ಪುದಾಡಿ : ಇದಕ್ಕೆ ಕಪ್ಪು ಗಡ್ಡವೂ ಕಪ್ಪು ಅಂಗಿಯೂ ಇರುತ್ತದೆ. ಕಿರಾತನ ಪಾತ್ರದಲ್ಲಿ ಶಿವ ಈ ಬಣ್ಣವನ್ನು ಧರಿಸಬೇಕು. iv ಕರಿ: ಈ ಲೇಪನದಲ್ಲಿ ಮುಖವೆಲ್ಲ ಕಪ್ಪಗಿದ್ದು ಉದ್ದವಾದ ದವಡೆಗಳೂ ಮುಂದಕ್ಕೆ ಚಾಚಿರುವ ಕಪ್ಪುಸ್ತನಗಳೂ ಇರುತ್ತವೆ. ಪೂತನಿ, ಶೂರ್ಪನಖಿ ಮುಂತಾದ ದುಷ್ಟ ಪಾತ್ರಗಳಿಗೆ ಇದು ತಕ್ಕ ವೇಷ.

ಒಟ್ಟಿನಲ್ಲಿ ಸಾತ್ತ್ವಿಕಕ್ಕೆ ಹಸಿರು, ರಾಜಸಕ್ಕೆ ಕೆಂಪು, ತಾಮಸಕ್ಕೆ ಕಪ್ಪುಬಣ್ಣಗಳು; ಸಾತ್ತ್ವಿಕ ಮತ್ತು ರಾಜಸ ಗುಣಗಳೆರಡೂ ಇರುವಲ್ಲಿ ಹಳದಿ ಬಣ್ಣವಿರುತ್ತದೆ.

ಬಣ್ಣ 'ಲೇಪನದಲ್ಲಿ ಮಾತ್ರವಲ್ಲದೆ ವೇಷಧಾರಿಗಳು ಕಟ್ಟಿಕೊಳ್ಳುವ ಕಿರೀಟಗಳಲ್ಲಿಯೂ ಕರ್ಣಕುಂಡಲಗಳಲ್ಲಿಯೂ ಸೊಂಟದ ಪಟ್ಟಿಗಳಲ್ಲಿಯೂ ಪಾತ್ರಕ್ಕೆ ತಕ್ಕ ವಿಶಿಷ್ಟತೆ ಇರುತ್ತದೆ. ದೊಡ್ಡ ದೊಡ್ಡ ಕಿರೀಟಗಳನ್ನು ಧರಿಸಿಕೊಂಡು ವಿವಿಧ ಬಣ್ಣಗಳಿಂದ ಅಲಂಕೃತರಾದ ಈ ಪಾತ್ರಧಾರಿಗಳು ಪುರಾಣಗಳ ಕಾಲದಿಂದ ನೇರವಾಗಿ ರಂಗಸ್ಥಳಕ್ಕೆ ಇಳಿದು ಬಂದ ಮಹಾವ್ಯಕ್ತಿಗಳಂತೆ ಕಾಣುತ್ತಾರೆ. ಅವರ ವೇಷ ಮತ್ತು ಮಾತುಕಥೆಗಳಿಂದ ನಾಟಕದ ಸನ್ನಿವೇಶ ಸಹಜವಾಗಿ ಏರ್ಪಡುತ್ತದೆ.

ಕಥಕಳಿಯ ಕಾರ್ಯಕ್ರಮ ; ರಾತ್ರಿಯೆಲ್ಲ ನಡೆಯುವ ಕಥಕಳಿ ಕಾರ್ಯಕ್ರಮವನ್ನು ನೋಡುವುದು ಒಂದು ಬಗೆಯ ಮರೆಯಲಾಗದಂಥ ಅನುಭವ. ಸಾಯಂಕಾಲವಾಗುತ್ತಿದ್ದಂತೆ ಭೂಮಂಡಲವನ್ನೆಲ್ಲ ಆವರಿಸಿ ಪ್ರತಿಧ್ವನಿಸುವ ಚಂಡೆ ಮತ್ತು ಶುದ್ಧಮದ್ದಲೆಗಳ ಬಡಿತ ಕಥಕಳಿ ಪ್ರದರ್ಶನಕ್ಕೆ ಕರೆಗೊಡುತ್ತದೆ. ಸಾಮಾನ್ಯವಾಗಿ ಚಂಡೆ ಬಾರಿಸುವವನಿಗೂ ಶುದ್ಧ ಮದ್ದಲೆ ಬಾರಿಸುವವನಿಗೂ ಒಂದು ವಿಧದ ಪೈಪೋಟಿ ಇರುತ್ತದೆ. ಕತ್ತಲಾದಮೇಲೆ ಪ್ರದರ್ಶನ ಆರಂಭವಾಗುತ್ತದೆ. ಮೊದಲು ನಡೆಯುವ ತೋಡಯಂ ನೃತ್ಯ ರಂಗಪೂಜೆಯಾಗಿದ್ದು ಪ್ರಳಯವನ್ನೂ ಅನಂತರದ ಸೃಷ್ಟಿಯ ಮೂಲವನ್ನೂ ಸೂಚಿಸುತ್ತದೆ. ಚಪ್ಪರದ ಮೇಲ್ಭಾಗ ಆಕಾಶವನ್ನೂ ರಂಗಸ್ಥಳದ ನೆಲ ಭೂಮಿದೇವಿಯನ್ನೂ ಪರದೆಯ ಹಿಂದಿನ ಭಾಗ ಪ್ರಥಮ ಯುಗದ ಕರಾಳ ರಾತ್ರಿಯನ್ನೂ ಸೂಚಿಸುತ್ತವೆ. ಪರದೆಯ ಹಿಂದೆ ಇಬ್ಬರು ಸ್ತ್ರೀವೇಷಧಾರಿಗಳು ಸಂಗೀತಗಾರರ ಹಿಮ್ಮೇಳದ ಸಂಗೀತಕ್ಕೆ ಮತ್ತು ಶುದ್ಧಮದ್ದಳೆಯ ಹೆಚ್ಚುತ್ತಿರುವ ತಾಳಗತಿಗೆ ಸಮನಾಗಿ ಕುಣಿಯುತ್ತಾರೆ. ಈ ಎರಡು ಸ್ತ್ರೀಪಾತ್ರಗಳು ಮಾಯಾದೇವಿಯನ್ನೂ ಶಕ್ತಿದೇವಿಯನ್ನೂ ಪ್ರತಿನಿಧಿಸುತ್ತವೆ. ಚಂಪಟ, ಚಂಪ, ಅಡತಾಳಂ ಅಥವಾ ಅಡಂದ ಮತ್ತು ಪಂಚರಿ ಎಂಬ 4 ಮುಖ್ಯ ತಾಳಗಳಲ್ಲಿ ತೋಡಯಂ ಮುಗಿಯುತ್ತದೆ. ತೋಡಯಂ ಪರದೆಯ ಹಿಂದೆ ಮಾಡತಕ್ಕ ನೃತ್ಯ. ಆದ್ದರಿಂದ ಇದು ಸಭಿಕರಿಗೆ ಕಾಣದು. ಕಾರ್ಯಕ್ರಮದ ಎರಡನೆಯ ನರ್ತನವಾದ ಪುರುಪ್ಪಾಡ್ (ಹೊರಡುವಿಕೆ)ಎಂಬುದು ವಿಶ್ವದಲ್ಲಿ ಸಾತ್ತ್ವಿಕ ಭಾವದ ಆಗಮನವನ್ನು ಸೂಚಿಸುತ್ತದೆ. ಈ ನೃತ್ಯದಿಂದ ಸಭಿಕರು ಪುರಾಣಗಳ ದೈವಿಕ ಮಹಾಪುರುಷರ ಸಾಹಸಕೃತ್ಯಗಳನ್ನೂ ಪರಾಕ್ರಮಗಳನ್ನೂ ನೋಡಲು ಉತ್ಸುಕರಾಗುತ್ತಾರೆ. ಕಥಾರಂಭಕ್ಕೆ ಸಿದ್ಧರಾಗುತ್ತಾರೆ. ಈ ನೃತ್ಯ ಪ್ರದರ್ಶನದ ಅನಂತರ ಸಂಗೀತಗಾರರಿಗೂ ಹಿಮ್ಮೇಳದವರಿಗೂ ತಮ್ಮ ವಿದ್ವತ್ತನ್ನು ಪ್ರಕಟಿಸಲು ಅವಕಾಶ ಏರ್ಪಡುತ್ತದೆ. ಇದಕ್ಕೆ ಮೇಲಪ್ಪಡಂ ಎಂಬ ಹೆಸರು ಇದೆ. ಪೊನ್ನಣಿ ಎಂದು ಕರೆಯಲ್ಪಡುವ ಮುಖ್ಯ ಹಾಡುಗಾರ ಪಾತ್ರಗಳ ಪರಿಚಯ ಮಾಡಿಕೊಡುತ್ತಿರುವಂತೆ ಕಥೆಯ ಪ್ರಮುಖ ವೇಷಧಾರಿಗಳು ಬಣ್ಣ ಬಣ್ಣದ ಪರದೆಯ ಹಿಂದಿನಿಂದ ಒಬ್ಬೊಬ್ಬರಾಗಿ ಬರುತ್ತಾರೆ. ಹಾಡುಗಾರ ಹಾಡಿನ ಸಾಹಿತ್ಯದಿಂದ ಕಥೆಯನ್ನು ನಿರೂಪಿಸುತ್ತಿರುವಂತೆ ಪಾತ್ರಗಳು ರಂಗಸ್ಥಳಕ್ಕೆ ಬಂದು ಕಥಕಳಿಯ ಹಸ್ತಾಭಿನಯದಿಂದಲೂ ಮುದ್ರೆಗಳ ಸಹಾಯದಿಂದಲೂ ಪುರಾಣಕಥೆಗಳನ್ನು ತಿಳಿಸಿ ಪ್ರಸಂಗವನ್ನು ಸಾಗಿಸುತ್ತಾರೆ. ಸತ್ಕಾರ್ಯಗಳಲ್ಲಿ ಪ್ರವೃತ್ತನಾಗಿ ದುಷ್ಟರನ್ನು ನಿಗ್ರಹಿಸಿದ ನಾಯಕ ತನಗೆ ಸಹಾಯವನ್ನೀಡಿದ ದೇವಾಧಿದೇವತೆಗಳನ್ನು ಕೃತಜ್ಞತೆಯಿಂದ ವಂದಿಸುವುದೇ ಪ್ರದರ್ಶನದ ಕೊನೆ. ಇಷ್ಟು ನಡೆಯುವಾಗ ರಾತ್ರಿಯೆಲ್ಲ ಕಳೆದು ಬೆಳಕು ಹರಿದು ಸೂರ್ಯೋದಯವಾಗಿರುತ್ತದೆ.

**ಕಥಕಳಿಯ ಸಂಗೀತ :** ಕಥಕಳಿಯದು ಸಾಮಾನ್ಯವಾಗಿ ಕೇರಳದ ದೇಶೀಯ ಅಥವಾ ಸ್ಥಳೀಯ ಸಂಗೀತ. ಆದರೂ ಅದು ಕರ್ಣಾಟಕ ಸಂಗೀತಕ್ಕೆ ಹತ್ತಿರದ್ದಾಗಿದೆ. ಕಥಕಳಿಯಲ್ಲಿರುವ ಮುಖ್ಯವಾದ 4 ತಾಳಗಳಿಗೆ ಸಂವಾದಿಯಾದವು ಕರ್ಣಾಟಕ ಸಂಗೀತದಲ್ಲೂ ಇವೆ. ಸ್ವಾರಸ್ಯವಾದ ವಿಷಯವೇನೆಂದರೆ ಕಥಕಳಿಯಲ್ಲಿ ಉಪಯೋಗಿಸುವ ಕೆಲವು ರಾಗಗಳು ಕರ್ನಾಟಕ ಸಂಗೀತದಲ್ಲಿ ಕಂಡುಬರುವುದಿಲ್ಲ.

ಕೇರಳದ ಸಂಗೀತ ಕೌಶಲ ಒಂದು ನಿಶ್ಚಿತವಾದ ಶೈಲಿಯಲ್ಲಿ ಬೆಳೆದುಕೊಂಡು ಬಂದಿದೆ. ಅದನ್ನು ಸೋಪಾನಶೈಲಿ ಎನ್ನುತ್ತಾರೆ. ಈ ಶೈಲಿ ಅಭಿನಯಕ್ಕೆ ಅನುಕೂಲವಾಗಿರುವ ನಿಧಾನ ಲಯ ಗತಿಗಳಲ್ಲೂ ತೀವ್ರಗತಿಗಳಲ್ಲೂ ಬಳಸಲು ಯೋಗ್ಯವಾಗಿದೆ. ಇದರಲ್ಲಿ ನೆರವಲ್ ಸ್ವರವಿಸ್ತಾರಗಳೂ ರಾಗಾಲಾಪನೆಗಳೂ ಇಲ್ಲ. ಮುಖ್ಯ ಹಾಡುಗಾರನಾದ ಪೊನ್ನಣಿ ಮತ್ತು ಅವನ ಪಕ್ಕದಲ್ಲಿ ಸಹಾಯಕನಾಗಿ ಹಾಡುವ ದ್ವಿತೀಯ ಹಾಡುಗಾರ ಸಿಂಕಿಡಿ ಒಬ್ಬರಿಗೊಬ್ಬರು ನೆರವು ನೀಡಿ ಸಂಗೀತವನ್ನು ಪೂರ್ಣಗೊಳಿಸುತ್ತಾರೆ.

ಸಂಗೀತಕ್ಕೆ ಒದಗುವ ಹಿಮ್ಮೇಳ ವಾದ್ಯಗಳು ವಿಚಿತ್ರವಾಗಿರುತ್ತವೆ. ಈ ವಾದ್ಯಗಳಲ್ಲಿ ತಂತಿ ವಾದ್ಯಗಳೂ ಊದುವ ವಾದ್ಯಗಳೂ ಇಲ್ಲದಿರುವುದನ್ನು ಗಮನಿಸಬಹುದು. ಅತಿ ಪ್ರಮುಖವಾಗಿರುವ ವಾದ್ಯಗಳು ಚಂಡೆ ಮತ್ತು ಶುದ್ಧಮದ್ದಲೆ. ಒಂದೇ ಪಕ್ಕಕ್ಕೆ ಚರ್ಮವಿರುವ ದೊಡ್ಡ ವಾದ್ಯ ಚಂಡೆ. ಇದರ ಮೇಲೆ ಬಗ್ಗಿರುವ ತೆಳ್ಳನೆಯ ಕೋಲುಗಳಿಂದ ಹೊಡೆದರೆ ಗಂಭೀರವಾದ ಹಾಗೂ ಬಹು ದೂರಕ್ಕೂ ಕೇಳುವಂಥ ದೊಡ್ಡ ಶಬ್ದ ಹೊರಡುತ್ತದೆ. ಶುದ್ಧಮದ್ದಳೆ ಕೂಡ ಕೇರಳದ ವಿಶಿಷ್ಟ ವಾದ್ಯ. ಈ ವಾದ್ಯಕ್ಕೆ ಎರಡೂ ಪಕ್ಕಗಳಿಗೆ ಚರ್ಮವಿದ್ದು ಇದನ್ನು ಕೈಗಳಿಂದ ಬಾರಿಸುತ್ತಾರೆ. ಪೊನ್ನಣಿ ಹಾಡುಗಾರ ಚೆಂಗಲ ಎಂಬ ಒಂದು ಲೋಹದ ಜಾಗಟೆಯ ಮೇಲೆ ಒಂದು ಚಿಕ್ಕ ಕೋಲಿನಿಂದ ತಾಳ ಹಿಡಿದು ಹಾಡುತ್ತಾನೆ. ಸಿಂಕಿಡಿ ಹಾಡುಗಾರ ಎಲತಾಳಂ ಎಂಬ ಒಂದು ಜೊತೆ ಲೋಹದ ತಾಳಗಳನ್ನು ಬಾರಿಸುತ್ತಾನೆ. ಎಡೈಕೆ, ತಮಿಲಾ ಮತ್ತು ಕುಡುಂತುಡಿ ಎಂಬ ವಾದ್ಯಗಳೂ ಪ್ರಚಾರದಲ್ಲಿವೆ.

ತಮಿಳು ನಾಡಿನಲ್ಲಿ ಏಕವ್ಯಕ್ತಿ ನರ್ತಿಸುವ ಭರತನಾಟ್ಯಕಲೆ ಹೇಗೆ ಪ್ರಚಾರದಲ್ಲಿದೆಯೋ ಹಾಗೆಯೇ ಕೇರಳದಲ್ಲಿ ಮೋಹಿನಿ ಆಟ್ಟಂ ಎಂಬ ನೃತ್ಯಕಲೆ ಏಕವ್ಯಕ್ತಿ ಮಾಡುವ ವಿಶಿಷ್ಟ ಸಂಪ್ರದಾಯವಾಗಿದೆ. ಪ್ರಾಚೀನ ಕಾಲದಲ್ಲಿ ಪುರುಷರು ಈ ವಿಧದ ನೃತ್ಯವನ್ನು ಮಾಡುತ್ತಿದ್ದರಾದರೂ ಈಗ ಸಾಮಾನ್ಯವಾಗಿ ಈ ಕಲೆ ಕೇವಲ ಸ್ತ್ರೀಯರಿಗೇ ಮೀಸಲಾಗಿದೆ ಎನ್ನಬಹುದು. ಈ ನೃತ್ಯದಲ್ಲಿ ಹೆಚ್ಚಾಗಿ ಲಾಸ್ಯಭಾವವಿದ್ದು ಇಂದ್ರಿಯಗಳಿಗೆ ಹಿತವನ್ನುಂಟುಮಾಡುವುದರಿಂದ ಬಹುಶಃ ಇದನ್ನು ಮೋಹಿನಿ ಆಟ್ಟಂ ಎಂದು ಹೆಸರಿಸಿರಬಹುದು. ಭಸ್ಮಾಸುರನನ್ನು ತನ್ನ ನಾಟ್ಯದಿಂದ ಸಂಹರಿಸಿದ ಮೋಹಿನಿಯ ನೆನಪೂ ಈ ಹೆಸರಿನಲ್ಲಿರಬಹುದು.

ಈ ನೃತ್ಯಸಂಪ್ರದಾಯ ಸಾಮಾನ್ಯವಾಗಿ ಭರತನಾಟ್ಯದಲ್ಲಿದ್ದಂತೆಯೇ ಇದೆ. ಅದರೆ ಕಾಲ್ಚಲನೆ ಅಷ್ಟು ತೀವ್ರವಾಗಿಯೂ ಇಲ್ಲ; ಖಚಿತವಾಗಿಯೂ ಇಲ್ಲ. ಭರತನಾಟ್ಯದ ಹಸ್ತ ಲಕ್ಷಣಗಳೊಡನೆ ಕಥಕಳಿ ಅಭಿನಯಮುದ್ರೆಗಳ ಉಪಯೋಗವೂ ಇದೆ.

ಕಥಕಳಿ ನೃತ್ಯವನ್ನು ಕಲಿತು ಉಪದೇಶಿಸುತ್ತಿದ್ದ ಗುರುಗಳ ಪರಂಪರೆ ವಿಪುಲವಾಗಿದೆ. ಹಿಂದಿನವರಲ್ಲಿ ಅಂಬು ಪಣಿಕ್ಕರ್, ಶೇಖರ ಮೆನನ್, ಕೇಶವ ಕುರುಪ್ ಮುಂತಾದವರೂ ಇಂದಿನವರಲ್ಲಿ ಕುಂಜು ಕುರುಪ್, ಕೃಷ್ಣನ್ ಕುಟ್ಟಿ, ರಾಮುನ್ ಪಿಳ್ಳೆ ಮೊದಲಾದವರೂ ಪ್ರಸಿದ್ಧರು. (ಯು.ಎಸ್.ಕೆ.)

**ಕಥಾಂಜಲಿ :** ಕನ್ನಡದಲ್ಲಿ ಸಣ್ಣಕಥೆಗಳಿಗೆ ಮೀಸಲಾದ ಈ ಪತ್ರಿಕೆ ಪ್ರಕಟವಾದದ್ದು 1929ನೆಯ ಜುಲೈ ತಿಂಗಳಿನಲ್ಲಿ. ಇದರ ಸಂಪಾದಕರು ಪ್ರಸಿದ್ಧ ಸಾಹಿತಿಗಳೂ ಸ್ವತಃ ಕಥೆಗಾರರೂ ಕಾದಂಬರಿಕಾರರೂ ಆದ ಅ.ನ.ಕೃಷ್ಣರಾಯರು. ಕೆಲವು ತಿಂಗಳುಗಳ ಅನಂತರ ಕೃಷ್ಣರಾಯರು ತಮ್ಮ ಈ ಪತ್ರಿಕೆಯ ಪ್ರಕಾಶನದ ಜವಾಬ್ದಾರಿಯನ್ನು ಬಿ. ಎನ್. ಗುಪ್ತರವರಿಗೆ ವಹಿಸಿಕೊಟ್ಟು, ಪತ್ರಿಕೆಗೆ ಹದಿನಾಲ್ಕು ತಿಂಗಳು ತುಂಬುವ ವರೆಗೆ ಸಂಪಾದಕರಾಗಿದ್ದರು. ಅನಂತರ ಸಂಪಾದನ ಕಾರ್ಯವನ್ನು ಮುಂದುವರಿಸಿಕೊಂಡು ಹೋದವರು—ಮಾ. ನಾ. ಚೌಡಪ್ಪ, ಶ್ರೀನಾಥ (ಎಸ್. ಶ್ರೀನಿವಾಸರಾವ್), ಎಸ್. ವೆಂಕಟಾಚಲಪತಿ ಮತ್ತು ನಾಡಿಗೇರ ಕೃಷ್ಣರಾಯ—ಇವರು.

ಮೊದಲನೆಯ ಮಜಲಿನಲ್ಲಿ ಕಥಾಂಜಲಿ 1931ರ ಕೊನೆಯವರೆಗೆ ನಡೆದು ನಿಂತು ಹೋಯಿತು. ಅನಂತರ ಎರಡನೆಯ ಘಟ್ಟದಲ್ಲಿ 1937ರ ಮಧ್ಯಭಾಗದಿಂದ 1941ರ ಅಂತ್ಯದ ವರೆಗೆ ನಡೆಯಿತೆಂದು ತೋರುತ್ತದೆ. ಹೀಗೆ ಕಥಾಂಜಲಿ ಸುಮಾರು ಏಳು ವರ್ಷಗಳ ಕಾಲ ಕನ್ನಡ ಸಾಹಿತ್ಯಕ್ಕೆ ತನ್ನ ಸೇವೆ ಸಲ್ಲಿಸಿತು.

ಕಥಾಂಜಲಿಯ ಸ್ಥಾಪನೆಯ ಉದ್ದೇಶವೇನು ಎಂಬುದನ್ನು ಸಂಸ್ಥಾಪಕ ಸಂಪಾದಕ ಅ. ನ. ಕೃಷ್ಣರಾಯರು ಪತ್ರಿಕೆಯ ಪ್ರಥಮ ಸಂಪಾದಕೀಯ ಲೇಖನದಲ್ಲಿ ಈ ರೀತಿ ಸ್ಪಷ್ಟಪಡಿಸಿದ್ದಾರೆ: ನಮ್ಮ ಕನ್ನಡನಾಡಿನಲ್ಲಿ...ಕೇವಲ ಸಣ್ಣಕಥೆಗಳಿಗಾಗಿಯೇ ಸಮರ್ಪಿಸಲ್ಪಟ್ಟು ಒಂದು ನಿಯುಕ್ತ ಆದರ್ಶವನ್ನಿಟ್ಟುಕೊಂಡು ಹೊರಟಿರುವ ಪತ್ರಿಕೆಯ ಕೊರತೆ ಬಹುಕಾಲದಿಂದಲೂ ಇದ್ದೇ ಇದ್ದಿತು...ನಮ್ಮಲ್ಲಿ ಸರ್ವತೋಮುಖವಾದ ಬೆಳೆ ಬೆಳೆದು ಕುಯಿಲಿಗೆ ಸಿದ್ಧವಾಗಿದ್ದರೂ ಅದನ್ನು ಕುಯ್ದು ನಾಡಿಗರಿಗೆ ಹಂಚುವವರಿಲ್ಲವಲ್ಲ ಎಂದು ಎನಿಸುತ್ತಲೇ ಇದ್ದಿತು. ಈ ಅಂತಸ್ತಾಪವನ್ನು ದೂರಮಾಡಿ, ಸನ್ಮಿತ್ರರ ಸಹಾಯ ಸ್ಫೂರ್ತಿಗಳಿಂದ ಹುರಿಗೊಂಡು ನಾವು ಈ ಕೆಲಸಕ್ಕೆ ಉದ್ಯುಕ್ತರಾಗಿರುವೆವು... ಸಣ್ಣಕಥೆಗಳಲ್ಲಿ ನಾನಾ ಬಗೆಗಳುಂಟು, ಸಂಪ್ರದಾಯಗಳುಂಟು, ಶೈಲಿಗಳುಂಟು, ನಾವು ಯಾವ ಒಂದು ಶೈಲಿ ಸಂಪ್ರದಾಯಕ್ಕೂ ತಾಳಿಕಟ್ಟುವುದಿಲ್ಲ. ಪತ್ರಿಕೆಗಳ ಪರಿಚಯಾನುಭವವನ್ನು ಕನ್ನಡಿಗರಿಗೆ ಮಾಡಿಸಿಕೊಡಬೇಕೆಂಬುದೇ ನಮ್ಮಿಚ್ಛೆ. ಸ್ವಕಪೋಲಕಲ್ಪಿತವಾದ ಕನ್ನಡಿಗರ ಕಥೆಗಳಿಗೆ ಪ್ರಾಧಾನ್ಯ ಕೊಟ್ಟು ಅನಂತರ ಇತರ ಭಾಷೆಗಳಲ್ಲಿನ ಕಥೆಗಳ ಪರಿಚಯವನ್ನು ಉಂಟುಮಾಡಿಕೊಡುತ್ತೇವೆ.

ಒಟ್ಟಿನಲ್ಲಿ ಕಥಾಂಜಲಿ ತನ್ನ ಜೀವಿತಾವಧಿಯಲ್ಲಿ ಈ ಧ್ಯೇಯವನ್ನು ಚೆನ್ನಾಗಿ ಪರಿಪಾಲಿಸಿಕೊಂಡು ಬಂದಿತೆನ್ನಬಹುದು. ತಂತ್ರವೈವಿಧ್ಯವುಳ್ಳ ಹಲವಾರು ಉತ್ತಮ ಕನ್ನಡ ಸಣ್ಣಕಥೆಗಳನ್ನೂ ಕನ್ನಡೇತರ ಭಾಷೆಗಳ ಕಥೆಗಳ ಅನುವಾದವನ್ನೂ ಅದು ಪ್ರಕಟಿಸಿತು. ವೈಯಕ್ತಿಕ ಅನುಬಂಧಗಳನ್ನು ಗಣನೆಗೆ ತಾರದೆ, ವಸ್ತುನಿಷ್ಠವಾದ ಸಾಹಿತ್ಯಸಮೀಕ್ಷೆಯನ್ನೂ ನಡೆಸಿತು.

ಇವೆಲ್ಲಕ್ಕಿಂತಲೂ ಮುಖ್ಯವಾದ ಅಂಶವೆಂದರೆ—'1929ರಲ್ಲಿ ಆರಂಭಿಸಿದ ಕಥಾಂಜಲಿ ಮಾಸಪತ್ರಿಕೆ...ಹೊಸ ಲೇಖಕರ ವಿಕಾಸಕ್ಕೆ ನೆರವಾಯಿತು...ಸುಮಾರು 50 ಜನ ಲೇಖಕರು ಕಥಾಂಜಲಿಯಿಂದ ಮುಂದಕ್ಕೆ ಬಂದರು. ಸಣ್ಣಕಥೆಗಳ ವಿಪುಲವಾದ ಸೃಷ್ಟಿಗೂ ಕಥನಕಲೆಯ ನವ ವಿಜ್ಞಾನದ ಉದಯಕ್ಕೂ ಕಥಾಂಜಲಿ ಬಹಳ ಹೆಣಗಿತು'—ಎಂದು ಅ. ನ. ಕೃಷ್ಣರಾಯರು, ಬೊಂಬಾಯಿನ ಆಲ್ ಇಂಡಿಯಾ ರೇಡಿಯೋ ಕೇಂದ್ರದಿಂದ ಕನ್ನಡ ಸಣ್ಣಕಥೆಗಳನ್ನು ಕುರಿತು ಮಾಡಿದ ಭಾಷಣದಲ್ಲಿ ಹೇಳಿದ ಮಾತುಗಳಲ್ಲಿ ಉತ್ಪ್ರೇಕ್ಷೆಯಿಲ್ಲ.

ಶ್ರೀನಾಥ, ಮಾ.ನಾ. ಚೌಡಪ್ಪ, ವಾಣಿ, ನಾಡಿಗೇರ ಕೃಷ್ಣರಾಯ—ಇವರು ಕನ್ನಡ ಸಾಹಿತ್ಯಲೋಕವನ್ನು ಪ್ರವೇಶಿಸಿದ್ದು ಕಥಾಂಜಲಿಯ ಮೂಲಕ; ಜಿ. ಪಿ. ರಾಜರತ್ನಂ, ಮ. ನ. ಮೂರ್ತಿ, ಕ್ಷೀರಸಾಗರ (ಸೀತಾರಾಮಶಾಸ್ತ್ರಿ), ರಾಘವ (ಎಂ. ವಿ. ಸೀತಾರಾಮಯ್ಯ), ಇ. ಎ. ಭಾಸ್ಕರರಾವ್, ರಾ.ಶಿ. (ಎಂ.ಶಿವರಾಮ್) ಮುಂತಾದವರ ಆರಂಭಕಾಲದ ಲೇಖನಗಳಲ್ಲಿ ಹಲವು ಬೆಳಕು ಕಂಡದ್ದು ಕಥಾಂಜಲಿಯಲ್ಲಿ. ಆನಂದ (ಎ. ಸೀತಾರಾಂ), ಕೆ. ಗೋಪಾಲಕೃಷ್ಣರಾಯ, ದೇವುಡು, ಕೃಷ್ಣಕುಮಾರ ಕಲ್ಲೂರ, ಶ್ರೀರಂಗ (ಆದ್ಯ ರಂಗಾಚಾರ್ಯರು), ಡಿ. ಕೆ. ಭಾರದ್ವಾಜ್, ಬೆಳ್ಳಾವೆ ನರಹರಿಶಾಸ್ತ್ರಿಗಳು ಮುಂತಾದ ಖ್ಯಾತ ಲೇಖಕರು ಕಥಾಂಜಲಿಯ ಲೇಖಕ ಬಳಗದಲ್ಲಿ ಸೇರಿದ್ದರು—ಎಂಬಿವು ಸ್ಮರಣೀಯ ಅಂಶಗಳು. (ಎಂ.ಎನ್.ಸಿ.ಐಚ್.)

**ಕಥಾನಕ :** 12ನೆಯ ಶತಮಾನದ ಉತ್ತರಾರ್ಧ, 13ನೆಯ ಶತಮಾನ, 14ನೆಯ ಶತಮಾನದ ಪೂರ್ವಾರ್ಧ—ಈ ಅವಧಿಯಲ್ಲಿ ಫ್ರಾನ್ಸಿನಲ್ಲಿ ಬಳಕೆಗೆ ಬಂದ ವಿಶಿಷ್ಟವಾದೊಂದು ಬಗೆಯ ಚಿಕ್ಕ ಕಥೆ (ಫಾಬ್ಲಿಯೊ). ಬರಬರುತ್ತ ಅನೇಕ ಕವಿಗಳು ಅಂಥ ರಚನೆಯಲ್ಲಿ ತೊಡಗಿದರಾಗಿ ಆ ಬಗೆಯ ಸಾಹಿತ್ಯ ಬೆಳೆಯಿತು. ಆದರೆ ಆ ಕವಿಗಳಾರ ಹೆಸರೂ ಉಳಿದು ಬಂದಿಲ್ಲದಿರುವುದು ಸೋಜಿಗ. ರೂಟ್‌ಬೂಫ್ ಎಂಬ 13ನೆಯ ಶತಮಾನದ ಕವಿಯೂ ಕೆಲವು ಕಥಾನಕಗಳನ್ನು ಕಟ್ಟಿದನೆಂದು ಪ್ರತೀತಿಯಿದೆ. ಕಥಾನಕಗಳು ಅಷ್ಟೊಂದು ವಿಪುಲವಾಗಿ ನಿರ್ಮಾಣವಾದರೂ ನೈಜ ಕಥಾನಕವೆನ್ನಿಸಿಕೊಳ್ಳಬಲ್ಲವು ಕೇವಲ 150 ಮಾತ್ರ.

ಕಥಾನಕ ಸಾಮಾನ್ಯವಾಗಿ ಪದ್ಯದಲ್ಲಿ ಬರೆದ ಸಣ್ಣ ಕಥೆ. 300 ರಿಂದ 400ರ ವರೆಗೂ ಪದ್ಯಸಾಲುಗಳುಂಟು ; 400ನ್ನು ಅದು ಮೀರಲಿಲ್ಲ. ಪ್ರತಿ ಸಾಲಿಗೂ ಎಂಟು ಉಚ್ಚಾರಾಂಶ. ಎರಡೆರಡು ಸಾಲು. ಅಂತ್ಯಪ್ರಾಸದಿಂದ ಕೂಡಿಕೊಂಡು ದ್ವಿಪದಿಯಾಗುತ್ತದೆ.

ಕಥಾನಕದ ಉದ್ದೇಶ ಲೇವಡಿ ಪ್ರಮುಖವಾದ ವಿಡಂಬನೆ, ಕಟುವಾದ ವಿಡಂಬನೆ. ನೀತಿಬೋಧೆಯಲ್ಲ, ಹೃದಯಾಹ್ಲಾದವಲ್ಲ. ಕೆಲವೊಮ್ಮೆ ಅದು ಬಿರುಸು ಅಪಹಾಸ್ಯವಾಗಿ ಅಸಭ್ಯತೆಯ ಗಡಿಯೊಳಕ್ಕೆ ನುಗ್ಗುತ್ತದೆ. ಆ ಕಾಲದಲ್ಲಿ ಉಚ್ಚವರ್ಗದವರು ಓದುತ್ತಿದ್ದ ಸಾಹಿತ್ಯ ರೊಮಾನ್ಸ್ ಎಂಬ ಅದ್ಭುತ ಕಥೆ; ಶೂರರ ಸಾಹಸಗಳೂ ಆದರ್ಶ ಸ್ತ್ರೀಯರನ್ನು ಕುರಿತ ಅವರ ಪ್ರಣಯವೂ ಅದರ ತಿರುಳು. ಅಂಥ ಕಥೆಗಳಿಂದ ರೋಸಿಹೋದ ಲೇಖಕ ಮಂದಿ ಮಧ್ಯಮವರ್ಗದ ಜನಜೀವನದ ಕಡೆಗೆ ತಿರುಗಿ, ಸಾಧಾರಣ ಘಟನಾವಳಿಯನ್ನು ಆರಿಸಿಕೊಂಡು, ಯಥಾವತ್ತಾಗಿ ಅವನ್ನು ನಿರೂಪಿಸುತ್ತ, ಕುಲೀನ ಪದ್ಧತಿಗಳನ್ನು, ಮುಖ್ಯವಾಗಿ ಶ್ರೀಮಂತ ಪ್ರಣಯವನ್ನು ಅವಹೇಳನಕ್ಕೆ ಈಡುಮಾಡಿ, ವಿನೋದ ತಂದು ಕೊಡಲಾರಂಭಿಸಿದರು. ಕ್ರೈಸ್ತ ಚರ್ಚಿನ ಮತ್ತು ಸಂನ್ಯಾಸಿಮಠಗಳ ಅಧಿಕಾರಿಗಳೂ ಅವರ ಗೇಲಿಗೆ ಗುರಿಯಾದರು. ಆ ಬೂಟಾಟಿಕೆಯವರಲ್ಲಿ ನುಡಿ ನಡೆಗಳಲ್ಲಿ ಭೇದ ಪ್ರತ್ಯಕ್ಷವಾಗಿ ಕಂಡುಬರುತ್ತಿತ್ತು. ಕಥಾನಕದ ನಾಯಕಿ ಒರಟಳೂ ಕೊಂಚ ಗಯ್ಯಾಳಿಯೂ ಆದ ದಿಟ್ಟ ಹೆಂಗಸು. ಗಂಡನನ್ನು ವಂಚಿಸುವುದಕ್ಕೂ ಅವಳು ಹೇಸದಂಥ ಚತುರೆ.

ಕಥಾನಕದ ಭಾಷೆ ಸರಳ ಸಾಮಾನ್ಯವಾದದ್ದು, ಅವಿನಯಕ್ಕೆ ಅಂಜದಂಥಾದ್ದು. ಚುಚ್ಚಿ ಕೆಣಕುವಂಥಾದ್ದು, ಹಾಗು ಬಲಿಷ್ಠವಾದದ್ದು. ಆದರ್ಶಕತೆ, ಸಭ್ಯ ಸಂಪ್ರದಾಯಗಳನ್ನು ಎದುರಿಸಿ ವಾಸ್ತವತೆಯನ್ನು ಪೋಷಿಸುವುದೇ ಕಥಾನಕದ ತೀವ್ರ ಬಯಕೆ. ಕಥಾನಕವನ್ನು ಓದಿಗೀದೀರಿ ಎಂಬ ಧಾರ್ಮಿಕ ಉಪದೇಶ ಕಥಾನಕದ ಜನಪ್ರಿಯತೆಗೆ ಸಾಕ್ಷ್ಯ.

ಇತರ ದೇಶಗಳಲ್ಲೂ ಇತರ ಶತಕಗಳಲ್ಲೂ ಕಥಾನಕದ ಪ್ರಭಾವವನ್ನು ಕಾಣುತ್ತೇವೆ. ಇಂಗ್ಲೆಂಡಿನ ಶ್ರೇಷ್ಠ ಕವಿ ಚಾಸರ್ ಒಂದೆರಡನ್ನು ಬರೆದ. 17ನೆಯ ಶತಮಾನದ ಶ್ರೇಷ್ಠ ಸಾಹಿತಿ ಲ ಫಾಂಟೇನ್ ತನ್ನ ನೀತಿಕಥೆ (ಫೇಬಲ್) ಯೊಂದಿಗೆ ಕಥಾನಕದ ಲಕ್ಷಣಗಳನ್ನು ಜೋಡಿಸಿ ಕೆಲವು ಕಲಾತ್ಮಕ ಕೃತಿಗಳನ್ನು ರಚಿಸಿದ. 18ನೆಯ ಶತಮಾನದ ಸಿ. ಎಫ್. ಜೆಲರ್ಟ್ 19ನೆಯ ಶತಮಾನದ ಐ. ಎ. ಕ್ರಿಲೋವ್ ಮುಂತಾದವರು ಕಥಾನಕ ಸಾಹಿತಿಗಳು. 19ನೆಯ ಶತಮಾನದ ಕೊನೆಯಲ್ಲಿ ಕಥಾನಕ ಸಂಕಲನಗಳು ಹೊರಬಂದು ಮೆಚ್ಚಿಕೆ ಪಡೆದುವು.

ಕಥಾನಕ ಪದ್ಧತಿ ಫ್ರಾನ್ಸಿನಲ್ಲಿ ಇಂದಿಗೂ ಅಳಿಸಿಹೋಗಿಲ್ಲವೆಂದೇ ವಿದ್ವಾಂಸರ ಅಭಿಪ್ರಾಯ.

(ಎಸ್.ವಿ,ಆರ್.)

**ಕಥಾವರ್ಗ :** ಜನಪದಕಥೆಗಳ ವರ್ಗೀಕರಣದಲ್ಲಿ ಆಶಯ (ಮೋಟೀಫ್) ಮತ್ತು ವರ್ಗಗಳು (ಟೇಲ್ ಟೈಪ್) ಮಹತ್ತ್ವದ ಪಾತ್ರ ವಹಿಸಿವೆ. ಜಾನಪದದಲ್ಲಿ ಇವೆರಡರ ಸಂಬಂಧ ಮತ್ತು ವ್ಯತ್ಯಾಸಗಳ ಅಧ್ಯಯನ ಹಲವು ರೀತಿಯಲ್ಲಿ ಸಹಾಯ ಮಾಡಿದೆ. ಅದರಲ್ಲಿಯೂ ಕಥನಸಮಸ್ಯೆಯನ್ನು ಅರ್ಥಮಾಡಿಕೊಳ್ಳುವುದರಲ್ಲಂತು ಇದರಿಂದ ತುಂಬ ಉಪಕಾರವಾಗಿದೆ. ಹಾ. ಮಾ. ನಾಯಕರು ಹೇಳುವ ಹಾಗೆ ಸ್ಥೂಲವಾಗಿ ಆಶಯ ಕಥೆಯ ವಸ್ತುವನ್ನು ಕುರಿತದ್ದು, ಟೈಪ್ ಅದರ ತಾಂತ್ರಿಕ ಸ್ವರೂಪವನ್ನು ಕುರಿತದ್ದು. ಜನಪದ ಕಥೆಗಳನ್ನು ವರ್ಗ ಮತ್ತು ಆಶಯಗಳ ಆಧಾರದಿಂದ ವರ್ಗೀಕರಿಸುವ ವಿಧಾನವನ್ನು ಮೊಟ್ಟಮೊದಲು ಬಳಕೆಗೆ ತಂದವರೆಂದರೆ ಆಂಟಿ ಆರ್ನೆ (ನೋಡಿ—ಆರ್ನೆ, ಆಂಟಿ) ಮತ್ತು ಸ್ಟಿತ್ ಥಾಂಸನ್ ಎಂಬ ವಿದ್ವಾಂಸರು.

ಸ್ವತಂತ್ರ ಅಸ್ತಿತ್ವವುಳ್ಳ ಯಾವುದೇ ಸಾಂಪ್ರದಾಯಿಕ ಕಥೆ ವರ್ಗ ಆಗಬಲ್ಲದು. ಅಂದರೆ ಒಂದು ಅಥವಾ ಹಲವು ಆಶಯಗಳನ್ನೊಳಗೊಂಡ ಸ್ವತಂತ್ರ ಕಥಾನಕವನ್ನು ವರ್ಗವೆಂದು ಗುರುತಿಸುತ್ತೇವೆ. ಇದನ್ನು ಕಥಾ ಸೂಚಕವೆಂದು ಕರೆಯುವುದುಂಟು. ಅಂತು ಯಾವುದೇ ಕಥೆ, ಅದು ಸಂಕೀರ್ಣವಾಗಿರಬಹುದು ಅಥವಾ ಸರಳವಾಗಿರಬಹುದು, ಸ್ವತಂತ್ರ ಕಥನವಾಗಿ ಹೇಳಲ್ಪಟ್ಟಿದರೆ ಸಾಕು. ಅದು ಅರ್ಥದಲ್ಲಿ ಬೇರೆ ಕಥೆಯನ್ನು ಅವಲಂಬಿಸಿದರೆ ತನಗೆ ತಾನೆ ಪೂರ್ಣವಾಗಿರಬೇಕು. ಕೆಲವು ವರ್ಗಗಳು ಹತ್ತಾರು ಆಶಯಗಳನ್ನೊಳಗೊಂಡಂತೆ ದೀರ್ಘವಾಗಿರಬಹುದು. ಇನ್ನು ಕೆಲವು ವರ್ಗಗಳು ಒಂದೇ ಆಶಯಗಳನ್ನೊಳಗೊಂಡ ಚಿಕ್ಕ ಕಥೆಯಾಗಿರಬಹುದು. ಆಶಯಕ್ಕೆ ತಕ್ಕಂಥ ಕಥೆ ಉದ್ದ ಅಥವಾ ಚಿಕ್ಕದಾಗಿರುವುದಂತೂ ಸತ್ಯವಾದ ಮಾತು. ಒಂದೇ ಆಶಯವಿದ್ದಾಗ ಕಥನ ಆಶಯಕ್ಕೂ ಕಥಾವರ್ಗಕ್ಕೂ ವ್ಯತ್ಯಾಸ ಕಂಡು ಬಂದಿರುವುದು ಇಲ್ಲಿನ ಒಂದು ಗಮನಾರ್ಹ ವಿಷಯ. ಪ್ರತಿ ವರ್ಗದಲ್ಲೂ ಆಶಯವಿದ್ದೇ ತೀರಬೇಕು; ಆದರೆ ಪ್ರತಿ ಆಶಯವೂ ವರ್ಗವಾಗಿರಬೇಕೆಂಬ ನಿಯಮವಿಲ್ಲ. ಕಥಾವರ್ಗವೊಂದರಲ್ಲಿ ಒಂದು ಆಶಯವಿದ್ದಾಗ ಮಾತ್ರ ಅದು ಸ್ವತಂತ್ರ ಕಥನವಾಗಿ, ಅಂದರೆ ಕಥಾವರ್ಗವಾಗಿ ನಿಂತುಕೊಳ್ಳುತ್ತದೆ. ಬಹುಸಂಖ್ಯಾತ ಸಾಂಪ್ರದಾಯಿಕ ವರ್ಗಗಳು ಈ ಏಕಾಶಯಗಳನ್ನು ಒಳಗೊಂಡಿರುವಂಥವೇ ಆಗಿವೆ.

ಗೊತ್ತಾದ ಕಥನವೊಂದು ನಿರ್ದಿಷ್ಟವರ್ಗಕ್ಕೆ ಸಂಬಂಧಪಟ್ಟದ್ದೇ ಅಲ್ಲವೇ ಎಂಬುದನ್ನು ಕೆಲವುಸಾರಿ ನಿರಾತಂಕವಾಗಿ ಹೇಳಬಹುದು. ಆದರೆ, ಕಥಾವರ್ಗಗಳ ನಡುವೆ ಗೊಂದಲವುಂಟಾದಾಗ ಅಥವಾ ಗೊತ್ತಾದ ವರ್ಗವೊಂದಕ್ಕೆ ಕಥನವೊಂದು ಸಾಕಷ್ಟು ಸಾದೃಶ್ಯಗಳನ್ನು ಒದಗಿಸದಿದ್ದಾಗ, ಸಹಜವಾಗಿಯೇ ಗಡಿಪ್ರಶ್ನೆಗಳು ಜನ್ಮತಾಳುತ್ತವೆ. ಕಥಾವರ್ಗದ ಈ ವ್ಯತ್ಯಯಗಳು ಕೆಲವು ವಿದ್ವಾಂಸರಲ್ಲಿ, ಅದರಲ್ಲಿಯೂ ಪೂರ್ವಯೂರೋಪಿನವರಲ್ಲಿ, ವರ್ಗಗಳಿಂದ ಕಥೆಗಳನ್ನು ವರ್ಗೀಕರಿಸುವುದರ ಸಪ್ರಮಾಣತೆಯ ಬಗ್ಗೆ ಸಂದೇಹವಾದವನ್ನು ಎಬ್ಬಿಸಿದುವೆಂದು ಸ್ಟಿತ್ ಥಾಂಸನ್ ಹೇಳುತ್ತಾನೆ. ಇದಕ್ಕೆ ಕಾರಣಗಳನ್ನು ಸೂಚಿಸುತ್ತ ಆತ, ಈ ಸಂದೇಹವಾದ ಪರಿಶೋಧಕನ ಆಸಕ್ತಿಯಲ್ಲಿನ ಭಿನ್ನತೆಗಳಿಂದ ಉದ್ಭವವಾದುದೆಂದು ಅಭಿಪ್ರಾಯ ಪಡುತ್ತಾನೆ. ಅಂಥ ವಿದ್ವಾಂಸರು ಕಥೆಗಳ ಸಾದೃಶ್ಯಗಳಿಗಿಂತ ಹೆಚ್ಚಾಗಿ ವ್ಯತ್ಯಯಗಳ ನಡುವಣ ಭಿನ್ನತೆಗಳಲ್ಲಿ ಮತ್ತು ನಿರ್ದಿಷ್ಟ ಕಥಾವಕ್ತೃಗಳ ವ್ಯಕ್ತಿತ್ವದಲ್ಲಿ ಆಸಕ್ತರಾಗಿದ್ದರೆಂದೂ ಆತ ಹೇಳುತ್ತಾನೆ. ಕಥಾವರ್ಗವೊಂದಕ್ಕೆ ದೊರೆಯುವ ಭಿನ್ನಪಾಠಗಳನ್ನೆಲ್ಲ ಒಟ್ಟುಗೂಡಿಸಿ, ಅವುಗಳ ಸಾದೃಶ್ಯ ವೈದೃಶ್ಯಗಳ ಮೂಲಕ ನಿರ್ದಿಷ್ಟ ಸ್ವತಂತ್ರ ಕಥಾನಕದ ಮೂಲ ಪ್ರತಿಯನ್ನು ಕಂಡುಹಿಡಿಯುವ ಕೆಲಸ ಇಲ್ಲಾಗುತ್ತದೆ.

ಇಂಥ ಸ್ವತಂತ್ರ ಕಥನಗಳುಳ್ಳ ವರ್ಗಗಳು ಯಾವುದೇ ನಿರ್ದಿಷ್ಟ ಸಂಸ್ಕೃತಿಯಲ್ಲಿ ಪರಿಮಿತ ಸಂಖ್ಯೆಯಲ್ಲಿ ಇರುತ್ತವೆ. ಕಥೆಯ ಅಧ್ಯಯನಾಸಕ್ತಿಯನ್ನು ಜಗತ್ತಿನ ಎಲ್ಲ ಭಾಗಗಳಲ್ಲಿನ ವಿವಿಧ ಸಂಸ್ಕೃತಿಗಳಿಗೆ ವಿಸ್ತರಿಸಿದಾಗ ಆಶಯ ಮತ್ತು ವರ್ಗಗಳಿಗೆ ಇರುವ ಕೆಲವು ಸಂಬಂಧ ಮತ್ತು ವ್ಯತ್ಯಾಸಗಳು ಕಾಣಸಿಗುತ್ತವೆ. ಹಾಗೆ ನೋಡಿದಾಗ, ಆಶಯ ಅಂತರರಾಷ್ಟ್ರೀಯ ಸಂಬಂಧವನ್ನು ಪಡೆದುಕೊಂಡಿರುವುದು ಕಂಡುಬಂದರೆ, ಕಥಾವರ್ಗಗಳು ಪರಿಮಿತ ಭೌಗೋಳಿಕ ಎಲ್ಲೆಯೊಂದಕ್ಕೆ ಮಿತಿ ಕಲ್ಪಿಸಿಕೊಂಡಿರುವ ಹಾಗೆ ಕಾಣಬರುತ್ತದೆ. ವರ್ಗ ಕಥನತಂತ್ರಕ್ಕೆ ಸಂಬಂಧಪಟ್ಟಿದ್ದರಿಂದ, ಕಥೆ ಹೇಳುವ ಪ್ರಾದೇಶಿಕ ಶೈಲಿ, ತಂತ್ರ, ರಚನಾದಿ ವಿಶಿಷ್ಟತೆಗಳಿಂದ ಕೂಡಿಕೊಂಡಿರಲಿಕ್ಕೂ ಸಾಕು. ಆದ್ದರಿಂದ ಕಥನ ಸಾದೃಶ್ಯಗಳು ವಸ್ತುವಿನ ದೃಷ್ಟಿಯಿಂದ ಜಗತ್ತಿನಾದ್ಯಂತ ಕಂಡುಬಂದರೂ ಅವುಗಳ ನಿರೂಪಣಾತಂತ್ರಗಳನ್ನು ಈ ಭೌಗೋಳಿಕ ಹಿನ್ನೆಲೆಯಲ್ಲಿ ಪರಿಭಾವಿಸಬೇಕಾಗುತ್ತದೆ. ಆಶಯಗಳ ತೌಲನಿಕ ಅಧ್ಯಯನದಿಂದ ಅವುಗಳಿಗೆ ಐತಿಹಾಸಿಕ ಸಂಬಂಧವಿಲ್ಲದಿರುವುದು ವ್ಯಕ್ತವಾಗುತ್ತದೆ. ಆದರೆ ಪೂರ್ಣಕಥಾವರ್ಗವೊಂದು ತನ್ನ ವ್ಯತ್ಯಯಗಳ ನಡುವೆ ಐತಿಹಾಸಿಕ ಸಂಬಂಧವೊಂದನ್ನು ಸ್ಥಾಪಿಸಿಕೊಂಡಿರುತ್ತದೆ. ಹೀಗಾಗಿ ಭೌಗೋಳಿಕ ಮತ್ತು ಐತಿಹಾಸಿಕ ದೃಷ್ಟಿಗಳೆಂದು ಕಥಾವರ್ಗದ ಲಕ್ಷಣಗಳೆರಡು ಎಂಬುದನ್ನೂ ಇವೇ ಆಶಯದಿಂದ ವರ್ಗವನ್ನು ಬೇರೆಯಾಗಿಸಿರುವುದೆಂಬುದನ್ನೂ ಮನಗಾಣಬಹುದು. ಈ ಹಿನ್ನೆಲೆಯಲ್ಲಿ ಕಥೆಗಳ ಭಿನ್ನಪಾಠಗಳಿಂದ ಮೂಲಪ್ರತಿಯನ್ನು ಕಂಡುಹಿಡಿಯಲು ಹೊರಟ ಭೌಗೋಳಿಕ–ಚಾರಿತ್ರಿಕ ವಿಧಾನ ನಿಂತಿದೆ.

ಹೀಗೆ ಕ್ರಮಬದ್ಧವಾಗಿ ಅಧ್ಯಯನ ಮಾಡಿದ ಮೇಲೆ ಪ್ರತಿ ಭಾಷೆಯಲ್ಲಿಯೂ ವರ್ಗ ಮತ್ತು ಆಶಯ ಸೂಚಿಗಳನ್ನು ಸಿದ್ಧಪಡಿಸಬೇಕಾಗುತ್ತದೆ. ಈ ಸೂಚಿಗಳನ್ನು ಮೊದಲಬಾರಿಗೆ ಸಿದ್ಧಪಡಿಸಿದವರು ಪ್ರಖ್ಯಾತ ಜಾನಪದ ವಿದ್ವಾಂಸರಾದ ಆಂಟಿ ಆರ್ನೆ ಮತ್ತು ಸ್ಟಿತ್ ಥಾಂಸನ್ ಅವರು. ಅವರ ಈ ಅಧ್ಯಯನ ಕಥೆಯ ವರ್ಗೀಕರಣದಲ್ಲಿ ಹೊಸ ಅಧ್ಯಾಯವೊಂದನ್ನೇ ತೆರೆಯಿತು. ಅಲ್ಲದೆ, ಈಗ ಅವರ ಸೂಚಿಗಳು ಎಲ್ಲ ಕಡೆಯೂ ಜನಪ್ರಿಯವಾಗಿ ಬಳಕೆಯಾಗುತ್ತಿವೆ. ಇಂಥ ವ್ಯಾಪಕ ವರ್ಗೀಕರಣದ ಆವಶ್ಯಕತೆಯನ್ನು ಮೊದಲ ಬಾರಿಗೆ ಕಂಡು ಕೊಂಡವರು ಕಾರ್ಲೆ ಕ್ರೊಹ್ನ. ಆತ ಇದರ ಪೂರ್ಣ ಜವಾಬ್ದಾರಿಯನ್ನು ಆಂಟಿ ಆರ್ನೆಗೆ ವಹಿಸಿದ. ಆರ್ನೆ ದೊರೆತಿರುವ ಎಲ್ಲ ಕಥೆಗಳ ಅಭ್ಯಾಸದಿಂದ ವರ್ಗಗಳನ್ನು ಪಟ್ಟಿಮಾಡಿದ. ಇದರಿಂದ ಕಥೆಗಳ ಮೂಲರೂಪವನ್ನು ನಿರ್ಧರಿಸಲು ಸಾಧ್ಯವಾಯಿತು. ಜನಪದ ಕಥೆಗಳು ಸಮಗ್ರವಾಗಿ ಸಿಕ್ಕುವ ವರೆಗೆ ವರ್ಗಸೂಚಿ (ಟೈಪ್ ಇಂಡೆಕ್ಸ್) ಬೆಳೆಯುತ್ತ ಹೋಗುತ್ತದೆ. ಹೊಸದು ಸಿಕ್ಕಿದಂತೆಲ್ಲ ಅದಕ್ಕೆ ಸೇರಿಸುತ್ತ ಹೋಗಬೇಕಾಗುತ್ತದೆ. ಆರ್ನೆ ಬಹಳವಾಗಿ ಶ್ರಮಿಸಿ ಇದನ್ನು ಒಂದು ನೆಲೆಗೆ ತಂದ. ಆದರೆ ಅದನ್ನು ಪ್ರಕಟಪಡಿಸುವ ಮೊದಲೆ, ಫಿನ್ಲೆಂಡಿನ ಈ ವಿದ್ವಾಂಸ 1923ರಲ್ಲಿ ತೀರಿಕೊಂಡ. ಆಮೇಲೆ ಈ ಕೆಲಸವನ್ನು ಸ್ಟಿತ್ ಥಾಂಸನ್‌ಗೆ ವಹಿಸಿಕೊಡಲಾಯಿತು. ಥಾಂಸನ್ ವರ್ಗಸೂಚಿಯನ್ನು ಇನ್ನಷ್ಟು ವಿಸ್ತರಿಸಿ 1928ರಲ್ಲಿ ದಿ ಟೈಪ್ಸ್ ಆಫ್ ದಿ ಫೋಕ್ ಟೇಲ್ ಎಂಬ ಹೆಸರಿನಲ್ಲಿ ಗ್ರಂಥವೊಂದು ಪ್ರಕಟವಾಗಲು ನೆರವಾದ.

ವರ್ಗಸೂಚಿಯಿಂದ ಹಲವು ರೀತಿಯ ಉಪಯೋಗಗಳಿವೆ. ಅಪಾರ ಜನಪದ ಕಥೆಗಳ ಉಗ್ರಾಣವಾಗಿರುವ ನಿಶ್ಚಿತ ಪ್ರದೇಶವೊಂದರ ಸಾಂಪ್ರದಾಯಿಕ ಕಥನ ಪರಿವೀಕ್ಷಣೆಗೆ ಅಡಿಪಾಯ ಹಾಕುವ ಉದ್ದೇಶದಲ್ಲಿ ವರ್ಗಸೂಚಿ ಅವಶ್ಯವಾಗುತ್ತದೆ. ವರ್ಗವೊಂದರ ಎಲ್ಲ ಪಾಠಾಂತರಗಳು ಆನುವಂಶೀಯ ಸಂಬಂಧವನ್ನು ಪಡೆದಿರುವುದನ್ನು ಇದು ಸೂಚಿಸುತ್ತದೆ. ಇದಲ್ಲದೆ ಮೂಲಭೂತವಾಗಿ ಕಥಾವರ್ಗಗಳು ಎಷ್ಟಿವೆ, ಯಾವ ರೀತಿಯಲ್ಲಿವೆ ಎಂಬೆಲ್ಲ ಅಂಶಗಳನ್ನು ಸಾಧಾರಪಡಿಸಲು ವರ್ಗಸೂಚಿಯಂಥ ಕೃತಿ ತೀರ ಉಪಯುಕ್ತವಾಗುತ್ತದೆ. ಮುಂದಿನ ಯಾವುದೇ ಅಧ್ಯಯನಕ್ಕೆ ಇದು ಮೂಲಸಾಮಗ್ರಿಗಳನ್ನು ಒದಗಿಸುವ ಆಕರ ಗ್ರಂಥವಾಗಿ ಉಳಿದುಕೊಳ್ಳುತ್ತದೆ.

(ಆರ್.ಜಿ.)

**ಕಥಾವಳಿ :** ಉತ್ತಮ ಕಥಾ ಸಾಹಿತ್ಯವನ್ನೊದಗಿಸಲು ಪ್ರಾರಂಭವಾದ ಮಾಸಪತ್ರಿಕೆ. ಓಲೇಟಿ ವಿ. ಗುಪ್ತರ ಒಡೆತನದಲ್ಲಿ ಡಿ. ಎಸ್. ರಾಮಕೃಷ್ಣರಾಯರ ಶ್ರದ್ಧೆ, ದುಡಿಮೆಗಳಿಂದ ಕಥಾವಳಿ ಸರ್ವಾಂಗ ಸುಂದರವಾಗಿ ಜುಲೈ 1938ರಲ್ಲಿ ಬೆಂಗಳೂರು ಅಕ್ಕಿಪೇಟೆಯ ಮೋಹನ್ ಪ್ರೆಸ್ ಎಂಬ ಸಣ್ಣ ಮುದ್ರಣಾಲಯದಲ್ಲಿ ಜನ್ಮತಾಳಿ, ಕೆಲವೇ ವರ್ಷಗಳಲ್ಲಿ ಕರ್ಣಾಟಕದ ಪ್ರಸಿದ್ಧ ಮಾಸಪತ್ರಿಕೆಯಾಯಿತು. ಅದು ಪ್ರಾರಂಭವಾದ ಕಾಲ ಅದರ ಪ್ರಗತಿಗೆ ಅನುಕೂಲವಾಗಿಯೇ ಇತ್ತು. ಸಿ. ಕೆ. ವೆಂಕಟರಾಮಯ್ಯ, ಮಾಸ್ತಿ ವೆಂಕಟೇಶ ಐಯ್ಯಂಗಾರ್, ಆನಂದ ಮೊದಲಾದ ಪ್ರಸಿದ್ಧರು ಆಧುನಿಕ ಸಣ್ಣ ಕಥೆಗಳ ವೈಶಿಷ್ಟ್ಯವನ್ನು ಪರಿಚಯ ಮಾಡಿಕೊಟ್ಟು, ಜನತೆಯ ಆಸಕ್ತಿಯನ್ನು ಹೆಚ್ಚಿಸಿದ್ದರು. ಕೆಲವು ಕಾಲ ಅ. ನ. ಕೃಷ್ಣರಾಯರ ಸಂಪಾದಕತ್ವದಲ್ಲಿದ್ದ ಕಥಾಂಜಲಿ ಮಾಸಪತ್ರಿಕೆ ಪ್ರಜಾಮತ ಪತ್ರಿಕೆಯ ಬಿ. ಎನ್. ಗುಪ್ತರ ಮಾಲೀಕತ್ವದಲ್ಲಿ ಆಗತಾನೆ ಮತ್ತೆ ಬೆಳಕಿಗೆ ಬಂದಿತ್ತು.

ಕಥಾವಳಿ ಪ್ರಾರಂಭದಲ್ಲಿ ಕ್ರೌನ್ 1/4 ಆಕಾರದಲ್ಲಿದ್ದು 1943ರಿಂದ ಕ್ರೌನ್ 1/8 ಆಕಾರದಲ್ಲಿ ಪ್ರಕಟವಾಯಿತು. ಅದರ ಬಿಡಿ ಪ್ರತಿ 4 ಆಣೆಯಿಂದ 6 ಆಣೆಯ ವರೆಗೂ ಹತ್ತಿ, ವಾರ್ಷಿಕ ಚಂದಾ 5 ರೂಪಾಯಿಗಳಾದುವು. ಪ್ರಾರಂಭದಲ್ಲಿ ಪ್ರಕಟವಾಗುತ್ತಿದ್ದ ಪ್ರತಿಗಳ ಸಂಖ್ಯೆ 1,000 ; ಪತ್ರಿಕೆ ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ (1951ರಲ್ಲಿ) ಪ್ರಕಟವಾಗುತ್ತಿದ್ದ ಪ್ರತಿಗಳು 7,000. ಮನೋರಂಜನೆಯೇ

ಕಥಾವಳಿಯ ಮುಖ್ಯ ಗುರಿ. ಸಣ್ಣಕಥೆ, ಕವಿತೆ, ಹರಟೆ, ಏಕಾಂಕ ನಾಟಕ, ಹಾಸ್ಯ, ವ್ಯಕ್ತಿಚಿತ್ರಗಳಿಗೆ ಕಥಾವಳಿ ಮೀಸಲು. ಜೀವಿತದಲ್ಲಿನ ವಿನೋದ, ಸ್ವಾರಸ್ಯ ವಿಚಾರ, ವಿಚಿತ್ರ ಅನುಭವ, ವಿಶೇಷ ಪ್ರಸಂಗ ಇವುಗಳೆಲ್ಲ ಹಿತಮಿತವಾಗಿ, ಸಾಹಿತ್ಯ ರೂಪದಲ್ಲಿ ಈ ಪತ್ರಿಕೆಯ ಕಾರ್ಡಿನಲ್ಲಿ ಕಥೆಗಳು ಎಂಬ ವಿಭಾಗದಲ್ಲಿ ಬರುತ್ತಿದ್ದುವು. ಈ ಅಂಕಣ ಬೇಗ ಓದುಗರ ಮನ ಸೆಳೆದಿತ್ತು.

ಕಥಾವಳಿಯ ಸಂಪಾದಕ ಮಂಡಲಿಯಲ್ಲಿ ಜಿ. ವರದರಾಜರಾವ್ ಹಾಗೂ ನಗುವನಂದ ಮಾಸಪತ್ರಿಕೆಯಲ್ಲಿ 1933ರಿಂದ ಹಾಸ್ಯಲೇಖನಗಳನ್ನು ಬರೆಯುತ್ತಿದ್ದ ವಿ. ಜಿ. ಕೃಷ್ಣಮೂರ್ತಿ ಅವರು ಬಹುಕಾಲವಿದ್ದು ಅದರ ಪ್ರಕಟಣೆಯ ಬಗ್ಗೆ ಉಪಯುಕ್ತ ಸಲಹೆಗಳನ್ನು ಕೊಡುತ್ತಿದ್ದರು. ಕಥಾವಳಿ ಉಚ್ಚಸ್ಥಾನದಲ್ಲಿದ್ದಾಗ ಅದರಲ್ಲಿ ಸಣ್ಣ ಕಥೆಗಳಲ್ಲದೆ ಮಕ್ಕಳ ಬಳಗ, ವನಿತಾವಿಭಾಗ, ಸಂಶೋಧನ ಸಮಸ್ಯೆ, ಸಾಹಸವಾಹಿನಿ, ನಗೆಮಿಂಚು, ಸಾಹಿತ್ಯ ಭಂಡಾರ, ಚಲನಚಿತ್ರ, ರಾಶಿ ಭವಿಷ್ಯ ಮೊದಲಾದ ವಿಭಾಗಗಳಿದ್ದುವು. ಉಡುಪಿಯ ಗಿರಿಬಾಲೆ ವನಿತಾವಿಭಾಗವನ್ನು ನೋಡಿಕೊಳ್ಳುತ್ತಿದ್ದರು. ಮಕ್ಕಳ ಬಳಗ, ಬಿ. ಆರ್. ಎಂ. ಸ್ವಾಮಿಯವರ ನೆರವಿನಿಂದ ಮಕ್ಕಳಿಗೆ ಪ್ರಿಯವಾಗಿತ್ತು. ಕಥೆಗಳನ್ನು ಸಮಸ್ಯೆಯ ರೂಪದಲ್ಲಿ ಕೊಟ್ಟು, ಸಾರಸ್ಯವಾದ ಘಟ್ಟದಲ್ಲಿ ನಿಲ್ಲಿಸಿ, ಮುಂದಿನ ಸಂಚಿಕೆಗಾಗಿ ಕಾಯುವಂತೆ ವಾಚಕರ ಉತ್ಸಾಹವನ್ನು ಕೆರಳಿಸುವ ವಿಧಾನವನ್ನು ಕಥಾವಳಿ ಪ್ರಾರಂಭಿಸಿತು. ಇದಲ್ಲದೆ ಸಾಹಸವಾಹಿನಿ ವಿಭಾಗದಲ್ಲಿ ಸಾಹಸದ ಕಥೆಗಳು ಅವಿಚ್ಛಿನ್ನವಾಗಿ ಪ್ರಕಟವಾಗುತ್ತಿದ್ದುವು.

ಕಥಾವಳಿಯ ವಿಶೇಷ ಆಕರ್ಷಣೆ ಪ್ರತಿವರ್ಷ ಜುಲೈ ತಿಂಗಳಲ್ಲಿ ಹೊರಡುತ್ತಿದ್ದ ಅದರ ವಾರ್ಷಿಕ ಸಂಚಿಕೆ. 250 ಪುಟಗಳಿಗೂ ಮಿಕ್ಕಿದ್ದು, ಕ್ರೌನ್ 1/8 ಆಕಾರದಲ್ಲಿದ್ದ ಈ ವಾರ್ಷಿಕ ಸಂಚಿಕೆಯಲ್ಲಿ ವಾಚಕರ ಪ್ರಶ್ನೆಗಳಿಗೆ ಸ್ವಾರಸ್ಯವಾದ ಉತ್ತರಗಳು ಬರುತ್ತಿದ್ದುವು. ಈ ವಿಶೇಷ ಸಂಚಿಕೆಗಾಗಿ ಏರ್ಪಡಿಸುತ್ತಿದ್ದ ವಾರ್ಷಿಕ ಕಥಾಸ್ಪರ್ಧೆಯಲ್ಲಿ ಉತ್ತಮ ಕಥೆಗಳಿಗೆ ಬಹುಮಾನ ನೀಡುವ ಪದ್ಧತಿ ಇತ್ತು. ಕಥಾವಳಿಯ 12ನೆಯ ವಾರ್ಷಿಕ ಕಥಾಸ್ಪರ್ಧೆಯಲ್ಲಿ (1950) ಪ್ರಥಮ ಬಹುಮಾನ ಗಳಿಸಿದ ಸಣ್ಣ ಕಥೆ ಸಮಸ್ಯೆಯ ಮಗು ಅದರ ಲೇಖಕಿ ತ್ರಿವೇಣಿಯವರ ಕಾದಂಬರಿ ಕ್ಷೇತ್ರದಲ್ಲಿನ ಉಜ್ವಲ ಭವಿಷ್ಯವನ್ನು ಸಾರಿತು. ಕಥಾವಳಿಯ ಲೇಖಕವರ್ಗಕ್ಕೆ ಸೇರಿದವರೆಂದರೆ ಎಸ್. ವಿ. ಪರಮೇಶ್ವರಭಟ್ಟ, ಬಸವರಾಜ ಕಟ್ಟೀಮನಿ, ಗೋಪಾಲಕೃಷ್ಣ ಅಡಿಗ, ಜಿ. ಪಿ. ರಾಜರತ್ನಂ, ಜಿ. ವರದರಾಜರಾವ್, ಬಿ. ಪುಟ್ಟಸ್ವಾಮಯ್ಯ, ಎಂ. ವಿ. ಸೀತಾರಾಮಯ್ಯ, ಗೊರೂರು ರಾಮಸ್ವಾಮಿ ಐಯಂಗಾರ್, ವಿ. ಜಿ. ಕೃಷ್ಣಮೂರ್ತಿ, ಕೈವಾರ ರಾಜರಾವ್, ಕೃಷ್ಣಮೂರ್ತಿ ಪುರಾಣಿಕ, ಮತಿಘಟ್ಟ ಕೃಷ್ಣಮೂರ್ತಿ, ಇನಾಂದಾರ್, ಕಾಂತರಾಜಯ್ಯ, ಗಿರಿಬಾಲೆ, ಅಮ್ಮೆಂಬಳ ಶಂಕರ ನಾರಾಯಣ ನಾವಡ, ನವಗಿರಿನಂದ, ಕೆ. ಗೋಪಾಲಕೃಷ್ಣರಾವ್, ಎನ್. ಸೂರಪ್ಪ, ನಾಡಿಗೇರ ಕೃಷ್ಣರಾಯ, ಆರ್. ಎಸ್. ರಾಮರಾವ್, ತ್ರಿವೇಣಿ ಮೊದಲಾದ ನಾಡಿನ ಸುಪ್ರಸಿದ್ಧ ಸಾಹಿತಿಗಳು.

ಸುಮಾರು 20 ವರ್ಷ ಸೇವೆ ಸಲ್ಲಿಸಿದ ಕಥಾವಳಿ 1958ರ ವರೆಗೂ ಅಸ್ತಿತ್ವದಲ್ಲಿದ್ದು ತರುವಾಯ ನಿಂತುಹೋಯಿತು. (ವಿ.ಜಿ.ಕೆ.)

**ಕಥಾಸರಿತ್ಸಾಗರ :** ಶಾತವಾಹನ ರಾಜನ ಆಸ್ಥಾನದಲ್ಲಿದ್ದ ಗುಣಾಢ್ಯ ಪೈಶಾಚೀ ಭಾಷೆಯಲ್ಲಿ ರಚಿಸಿದ ಬೃಹತ್ಕಥೆಯನ್ನು ಆದರಿಸಿ ಕಾಶ್ಮೀರ ದೇಶದ ಸೋಮದೇವನೆಂಬ ಪಂಡಿತ ಸುಮಾರು 11ನೆಯ ಶತಮಾನದಲ್ಲಿ ಸಂಸ್ಕೃತದಲ್ಲಿ ರಚಿಸಿದ ಒಂದು ಕಥಾಸಂಕಲನ. ಕಥೆಗಳೆಂಬ ನದಿಗಳು ಬಂದು ಸೇರುವ ಸಾಗರ ಎಂದು ಈ ಶೀರ್ಷಿಕೆಯ ಅರ್ಥ.

ಬೃಹತ್ಕಥೆಯ ಸಂಸ್ಕೃತ ರೂಪವನ್ನು ಮೂರು ಗ್ರಂಥಗಳಲ್ಲಿ ನೋಡಬಹುದು. ಅವುಗಳಲ್ಲಿ ಅತಿಪ್ರಾಚೀನವಾದುದು ಬುಧಸ್ವಾಮಿಯದು. ಇದರಲ್ಲಿ 4,539 ಶ್ಲೋಕಗಳಿವೆ. ಆದರೆ ಈತ ಯಾವಾಗ ಎಲ್ಲಿ ಇದ್ದನೆಂಬುದು ತಿಳಿದುಬಂದಿಲ್ಲ. ಮಿಕ್ಕೆರಡು ಗ್ರಂಥಗಳು ಕಾಶ್ಮೀರದಲ್ಲಿದ್ದ ಸಮಕಾಲೀನ ಪಂಡಿತರಿಬ್ಬರು ರಚಿಸಿದುವು. ಅವರಲ್ಲಿ ಕ್ಷೇಮೇಂದ್ರ (ಕ್ರಿ.ಶ. 1025–75) ಒಬ್ಬ. ಈತ ಕವಿ ವಿಮರ್ಶಕ ಇವನ ಗ್ರಂಥ ಬೃಹತ್ಕಥಾಮಂಜರಿ. ಮತ್ತೊಬ್ಬ ಪ್ರಸ್ತುತ ಗ್ರಂಥದ ಕರ್ತೃ ಸೋಮದೇವ. ಇದರಲ್ಲಿ 125 ಅಧ್ಯಾಯಗಳಿದ್ದು 21,000 ಶ್ಲೋಕಗಳಿವೆ.

ಸ್ಪೇಯರ್ ಎಂಬ ಪಾಶ್ಚಾತ್ಯ ಪಂಡಿತ ಕಥಾಸರಿತ್ಸಾಗರದಲ್ಲಿ ಇಪ್ಪತ್ತೊಂದು ಸಾವಿರದ ಮೂನ್ನೂರೆಂಬತ್ತೆಂಟು (21,388) ಶ್ಲೋಕಗಳು ಇವೆಯೆಂದು ಅಭಿಪ್ರಾಯಪಟ್ಟಿದ್ದಾನೆ. ಬೂಲರ್ ಎಂಬ ಮತ್ತೊಬ್ಬ ಪಂಡಿತ ಸೋಮದೇವ ಕಥಾಸರಿತ್ಸಾಗರವನ್ನು ಅನಂತರಾಜನ ರಾಣಿಯೂ ಕಲಶನೆಂಬ ರಾಜನ ಮಾತೆಯೂ ಜಲಂಧರ ರಾಜಕುಮಾರಿಯೂ ಆದ ಸೂರ್ಯಮತಿಯ ಪ್ರೋತ್ಸಾಹದಿಂದ ವಿನೋದಕ್ಕಾಗಿ ರಚಿಸಿದನೆಂದು ಹೇಳಲಾಗಿದೆ. ಈ ಗ್ರಂಥವನ್ನು 1930ರಲ್ಲಿ ಮುಂಬಯಿ ನಗರದ ನಿರ್ಣಯಸಾಗರ ಮುದ್ರಣಾಲಯದ ಮಾಲೀಕರು ಮುದ್ರಿಸಿದ್ದಾರೆ.

(ಪಿ.ಎಸ್.ಆರ್.ಎಸ್.)

ಇಲ್ಲಿಯ ಕಥೆಗಳು ಕ್ಷೇಮೇಂದ್ರನ ಗ್ರಂಥಕ್ಕಿಂತ ದೀರ್ಘವಾಗಿವೆ. ಕಥನಕಲೆ ಸೋಮದೇವನಿಗೆ ಚೆನ್ನಾಗಿ ಒಲಿದಿದೆ. ಅಲ್ಲಲ್ಲಿ ಕಾವ್ಯಪ್ರತಿಭೆ ಮಿಂಚಿದರೂ ಕಥನ ಕಲೆಗದು ಅಡ್ಡವಾಗಿಲ್ಲ. ಚಿತ್ತಗ್ರಾಹಿ ಉಪಮೆಗಳು, ವಿವೇಕದ್ಯೋತಕವಾದ ಅನುಭವಗಳು ಅಲ್ಲಲ್ಲಿ ನುಸುಳಿ ಕಥೆಗಳನ್ನು ಸ್ವಾರಸ್ಯಗೊಳಿಸಿವೆ. ಶೈಲಿ ಎಲ್ಲಿಯೂ ಆಲಂಕಾರಿಕವಾಗದೆ ಕಥೆಯ ಓಟ, ಓಘಗಳಲ್ಲಿ ಹಿಡಿತವಿದೆ.

ಈ ಗ್ರಂಥದಲ್ಲಿ ಉದಯನನ ಮಗನಾದ ನರವಾಹನದತ್ತನ ಪ್ರಣಯಸಾಹಸಗಳು, ಪರಿಣಯಗಳೇ ಹೇರಳವಾಗಿವೆ. ಮಾನಸವೇಗನೆಂಬ ವಿದ್ಯಾಧರ ನರವಾಹನದತ್ತನ ಕಾಂತೆ ಮದನಮಂಚುಕೆಯನ್ನು ಅಪಹರಿಸುವುದು ; ಅವಳನ್ನು ಹುಡುಕಿಕೊಂಡು ಹೋಗುತ್ತ ನಾಯಕ ರೋಮಾಂಚಕಾರಿ ಸಾಹಸಗಳನ್ನು ಎಸಗಿ, ಅನೇಕ ಪ್ರಣಯ, ಪರಿಣಯಗಳನ್ನು ಮಾಡಿಕೊಂಡು, ಪ್ರಬಲ ಪ್ರಯತ್ನದಿಂದ ಕಾಂತೆಯನ್ನು ಪಡೆಯುವುದೇ ಆಗಿದೆ. ಇಂಥ ಕೆಲವು ಸ್ವತಂತ್ರವಾದ ಪ್ರಣಯಕಥೆಗಳಲ್ಲಿ ಅನೇಕ ಉಪಕಥೆಗಳೂ ಅವುಗಳೊಳಗೆ ಮತ್ತೆ ಉಪಕಥೆಗಳೂ ಬರುತ್ತವೆ. ಅವುಗಳಲ್ಲಿ ಕೆಲವು ಪ್ರಣಯ ಕಥೆಗಳು ; ಕೆಲವು ಧೀರ ಗಂಭೀರ ಕಥೆಗಳು ; ಮತ್ತೆ ಕೆಲವು ಬುದ್ಧಿವಂತಿಕೆಯ ಹಾಗೂ ವಿನೋದ ಕಥೆಗಳು. ಪಂಚತಂತ್ರದ ಮೃಗ ಕಥೆಗಳೂ ವಿಕ್ರಮರಾಜನ ಬೇತಾಳ ಕಥೆಗಳೂ ಇಲ್ಲಿವೆ. ಜೀವನ, ಮತಧರ್ಮ, ಸಂಗೀತ, ನಾಟ್ಯಕಲೆಗಳು, ವೈದ್ಯ ಎಲ್ಲವೂ ಇದ್ದು ಧೀರೋದಾತ್ತರಿಂದ ಹಿಡಿದು ಧೂರ್ತ ವಂಚಕರ ವರೆಗೂ ಕಾಣಸಿಗುವ ಮನುಷ್ಯ ಪ್ರಪಂಚವೆಲ್ಲ ಚಲನಚಿತ್ರದಂತೆ ಇಲ್ಲಿ ಚಿತ್ರಿತವಾಗಿದೆ. ಜಗತ್ತಿನ ಕಥಾಸಾಹಿತ್ಯದಲ್ಲಿ ಕಂಡುಬರುವ ಕಥಾವೃತ್ತಿಬೀಜಗಳೆಲ್ಲ ಒಂದಲ್ಲ ಒಂದು ರೂಪದಲ್ಲಿ ಇಲ್ಲಿ ಕಾಣುತ್ತವೆ. ಪ್ರಾಚೀನ ನಾಗರಿಕತೆಯ ಸೀಳು ನೋಟವನ್ನು ಈ ಕಥೆಗಳಲ್ಲಿ ಕಾಣಬಹುದು. ಟಾನಿ, ಪೆಂಜರ್ ಇವರುಗಳು ಮಾಡಿರುವ ಇಂಗ್ಲಿಷ್ ಭಾಷಾಂತರದಿಂದ ಈ ಕಥೆಗಳು ಜಗತ್ತಿನ ಜನಾದರಣೆಯನ್ನು ಪಡೆದಿವೆ.

ಕನ್ನಡದಲ್ಲಿ ಕಥಾಸರಿತ್ಸಾಗರದ ನೇರ, ಸಂಗ್ರಹ, ಸುಲಭಗ್ರಾಹ್ಯ ಅನುವಾದವೆಂದರೆ ಎ. ಆರ್. ಕೃಷ್ಣಶಾಸ್ತ್ರಿಗಳ ಕಥಾಮೃತ. *

**ಕಥಾಸಾಹಿತ್ಯ :** ಕಥಾತ್ಮಕವಾದ ಎಲ್ಲ ಸಾಹಿತ್ಯಕ್ಕೂ ಈ ಹೆಸರು ಸಲ್ಲುತ್ತದೆ. ಅಂದರೆ ಬಹುತೇಕ ಸಾಹಿತ್ಯವೆಲ್ಲ ಒಂದಲ್ಲ ಒಂದು ರೀತಿಯಲ್ಲಿ ಕಥಾತ್ಮಕವಾಗಿಯೇ ಇರುತ್ತದೆ. ಕಥೆ ಇಲ್ಲದ್ದು ಶಾಸ್ತ್ರವೋ ಪ್ರಬಂಧವೋ ಆಗಿರುತ್ತದೆ. ಉದಾಹರಣೆಗೆ, ಪ್ರಪಂಚದ ಮಹಾಕಾವ್ಯಗಳೆಲ್ಲ ಕಥೆಗಳೇ. ರಾಮಾಯಣ, ಮಹಾಭಾರತ, ಇಲಿಯಡ್, ಒಡಿಸ್ಸಿ, ಈನಿಯಡ್ ಮೊದಲಾದುವು ದೊಡ್ಡ ಕಥೆಗಳು. ಅನೇಕಾನೇಕ ವೀರಾಧಿವೀರರು ನಡೆಸಿದ ಸಾಹಸ ಕಾರ್ಯಗಳು, ಅವರ ಏಳು ಬೀಳುಗಳು, ಉತ್ಕರ್ಷಗಳು—ಇವುಗಳಿಂದಾಗಿ ಬಹು ಕಾಲ ಬಹು ಭಾಗಗಳಲ್ಲಿ ನಡೆದ ಅವರ ಚರಿತ್ರೆಗಳ ಹರಹನ್ನು ಇಲ್ಲಿ ನಾವು ಕಾಣಬಹುದು. ಈ ಬೃಹತ್ ಕಥೆಗಳಲ್ಲಿ ಸಣ್ಣಪುಟ್ಟ ಕಥಾನಕಗಳು, ಉಪಾಖ್ಯಾನಗಳು ದೃಷ್ಟಾಂತ ಕಥೆಗಳು ಬರುತ್ತವೆ. ಇವು ಪದ್ಯಾತ್ಮಕವಾಗಿಯೇ ಇರುವುದು ಇನ್ನೊಂದು ಸ್ವಾರಸ್ಯ. ಕಥೆ ನಿಜವಾಗಿ ಗದ್ಯದಲ್ಲೂ ಇರಬಹುದು. ಮಹಾಕಾವ್ಯಗಳಂತೆ ಪುರಾಣಾದಿಗಳೂ ಕಥಾಸರಿತ್ಸಾಗರಗಳೇ ಆಗಿವೆ. ವ್ಯಕ್ತಿಚರಿತ್ರೆ, ಕ್ಷೇತ್ರಮಹಾತ್ಮ್ಯ—ಮೊದಲಾದ ಅನೇಕಾನೇಕ ವಿಷಯಗಳಿಂದ ಅವು ಪರಿಪುಷ್ಟವಾಗಿವೆ. ನೀತಿ, ತತ್ತ್ವ, ಮತಧರ್ಮಗಳ ಬೋಧನೆಗಾಗಿ ಅವು ಜನ್ಮ ತಾಳಿದುವು.

ಇವಲ್ಲದೆ ಕಥೆಗೆ ಇನ್ನೂ ಹಿಂದಿನ ಮೂಲವೆಂದರೆ ವೇದೋಪನಿಷತ್ತುಗಳು. ವೇದಗಳಲ್ಲಿಯೇ ಸಾಕಷ್ಟು ಕಥೆಗಳಿವೆ. ಉಪನಿಷತ್ತುಗಳಲ್ಲಿ ಕಥೆಗೆ ಅನಿವಾರ್ಯವಾದ ಪ್ರಾಶಸ್ತ್ಯ ಬಂದಿದೆ. ಉಜ್ಜ್ವಲವಾದ ಕಥಾನಕಗಳ ಪರಂಪರೆಯನ್ನು ನಾವು ಅಲ್ಲಿ ಕಾಣುತ್ತೇವೆ.

ಕಥೆಯ ಮೂಲ ಇನ್ನೂ ಹಿಂದಿನದೆಂದು ವಿದ್ವಾಂಸರ ಅಭಿಪ್ರಾಯ. ಮಾನವನ ಕಲಾಮೂಲವಾದ ಜಾನಪದದಲ್ಲಿ ವೈವಿಧ್ಯಮಯವಾದ ಕಥಾಸಾಹಿತ್ಯ ಅಡಗಿದೆ. ಪ್ರಕೃತಿಯ ವಿವಿಧ ವೈಚಿತ್ರ್ಯಗಳನ್ನು ವರ್ಣಿಸಲು, ಒಗಟುಗಳನ್ನು ಬಿಡಿಸಲು, ಅಂದಿನ ಸಾಮಾಜಿಕ, ಧಾರ್ಮಿಕ, ನೈತಿಕ ಶಿಷ್ಟಾಚಾರಗಳನ್ನು ಸ್ಪಷ್ಟಪಡಿಸಲು ವಿಧವಿಧವಾದ ಕಥೆಗಳು ಹುಟ್ಟಿವೆ. ನೀತಿಕಥೆ (ಫೇಬಲ್), ಅಜ್ಜಿಕಥೆ (ಫೋಕ್‌ಟೇಲ್), ಕಟ್ಟುಕಥೆ (ಮೆರ್ಖೆನ್), ಮೊದಲಾದ ಬಗೆಗಳು ಪದ್ಯಗದ್ಯಗಳೆರಡರಲ್ಲೂ ಸಿಗುತ್ತವೆ. ಈ ಬಗೆಯ ಸಾಹಿತ್ಯ ಎಲ್ಲ ಜನಾಂಗಗಳಲ್ಲೂ ಉಂಟು. ಎಷ್ಟೋ ವೇಳೆ ಎಲ್ಲ ಕಥೆಗಳೂ ಸ್ಥೂಲವಾಗಿ ಒಂದೇ ಮಾದರಿಯವಾಗಿ ಕಾಣಬಹುದಾದರೂ ವಿವರಗಳಲ್ಲಿ ಪ್ರಾದೇಶಿಕ ವೈವಿಧ್ಯವಿದ್ದೇ ಇರುತ್ತದೆ.

ಕಥೆ ಎಂಬ ಮಾತು ಒಂದು ಕಡೆ ಕಾದಂಬರಿಗೂ ಇನ್ನೊಂದು ಕಡೆ ಸಣ್ಣಕಥೆಗೂ ಈಚೆಗೆ ಬಳಕೆಗೆ ಬಂದಿದೆ. ಹಾಗೆ ನೋಡಿದರೆ ಮಹಾಕಾವ್ಯ ಕಥೆಯಾಗಬಹುದಾದರೆ ನಾಟಕವೂ ಕಥೆಯಾದೀತು. ಕಾದಂಬರಿಯ ಕ್ಷೇತ್ರ ವಿಶಾಲವಾದುದು. ಹತ್ತಾರು ಘಟನೆಗಳ, ಹತ್ತಾರು ವ್ಯಕ್ತಿಗಳ ಜೀವನ ಸಂಕೀರ್ಣತೆಯನ್ನಲ್ಲಿ ಕಾಣುತ್ತೇವೆ. ಕಾದಂಬರಿ ಕ್ಷೇತ್ರ ದಿನದಿನಕ್ಕೆ ವಿಶಾಲವಾಗುತ್ತಿದೆ. ಸಾಮಾಜಿಕ, ಚಾರಿತ್ರಿಕ, ವಿಡಂಬನಾತ್ಮಕ, ಪತ್ತೇದಾರಿ, ಅದ್ಭುತರಮ್ಯ, ತಾತ್ತ್ವಿಕ, ಸಾಕ್ಷ್ಯ—ಮಾದರಿಗಳಲ್ಲಿ ಬಹು ಉತ್ತಮ ಕೃತಿಗಳು ಅಲ್ಲಿ ಕಾಣಸಿಗುತ್ತವೆ. ಕಾದಂಬರಿ ಬಹು ಜನಪ್ರಿಯ ಪ್ರಕಾರವೂ ಹೌದು.

ಸಣ್ಣ ಕಥೆ ಅದರ ಹೆಸರೇ ತಿಳಿಸುವಂತೆ ಗಾತ್ರದಲ್ಲಿ ಚಿಕ್ಕದು. ಆದರೆ ಪ್ರಭಾವದಲ್ಲಿ ಭಾವಗೀತೆಯಷ್ಟು ತೀವ್ರವಾದುದು. ಬಿಸಿಬಿಸಿಯಾದ ಯಾವುದೋ ಒಂದು ಘಟನೆಯನ್ನದು ಎತ್ತಿಕೊಂಡು ನೇರವಾಗಿ ಸ್ವಲ್ಪದರಲ್ಲಿ ಹೇಳಿ ಮುಗಿಸುತ್ತದೆ. ಕಥೆ ಇಲ್ಲಿ ಪಂದ್ಯದ ಕುದುರೆಯಂತೆ. ನೇರ ಗುರಿ ಮುಟ್ಟುವುದೇ ಅದರ ಉದ್ದೇಶ.

ಇದು ಕಥಾಸಾಹಿತ್ಯದ ಸ್ಥೂಲ ವಿವರ. ಹೆಚ್ಚಿನ ವಿಷಯಗಳಿಗೆ ನೋಡಿ– **ಅಜ್ಜಿಕಥೆ; ಕಟ್ಟುಕಥೆ; ಕಾದಂಬರಿ; ಮಹಾಕಾವ್ಯ; ಸಣ್ಣಕಥೆ.** ಇನ್ನೂ ಹೆಚ್ಚಿನ ಸಂಗತಿಗಳಿಗೆ ಆಯಾ ದೇಶಗಳ ಸಾಹಿತ್ಯ ವಿಭಾಗಗಳನ್ನು ನೋಡಿ.

ಪ್ರಕೃತ ಲೇಖನದಲ್ಲಿ ಭಾರತೀಯ ಕಥಾಸಾಹಿತ್ಯವನ್ನು ವಿವೇಚಿಸಲಾಗಿದೆ.

ಕಥೆಗಳನ್ನು ಕೇಳುವುದೆಂದರೆ ಮಕ್ಕಳು ಮೊದಲುಗೊಂಡು ಎಲ್ಲ ವಯಸ್ಸಿನವರಿಗೂ ಪ್ರೀತಿ ಎಂಬ ಮಾತು ಭರತಖಂಡದ ಜನರಿಗೆ ವಿಶೇಷವಾಗಿ ಅನ್ವಯಿಸುತ್ತದೆ. ಸಣ್ಣ ಮಕ್ಕಳು ಹಾಸಿಗೆಯಲ್ಲಿ ಸುಖವಾಗಿ ಮಲಗಿಕೊಂಡು ನಿದ್ರಿಸುವುದಕ್ಕಿಂತ ಮುಂಚೆ ಅಜ್ಜಿ ಹೇಳುತ್ತಿದ್ದ ಕಥೆಗಳನ್ನು ಕೇಳುತ್ತಿದ್ದವೆಂದು ಬಾಣಭಟ್ಟ ತನ್ನ ಹರ್ಷಚರಿತದ 2ನೆಯ ಉಚ್ಛ್ವಾಸದ ಅಂತ್ಯದಲ್ಲಿಯೂ ಶೂದ್ರಕರಾಜ ಆಗಾಗ್ಗೆ ಆಖ್ಯಾಯಿಕಾ ಇತಿಹಾಸ ಪುರಾಣಗಳನ್ನು ಕೇಳುತ್ತ ಕಾಲವನ್ನು ಕಳೆಯುತ್ತಿದ್ದನಲ್ಲದೆ ಮಹಾರಾಣಿ ವಿಲಾಸವತಿಯ ಬಳಿಯಲ್ಲಿ ಅನೇಕ ಕಥೆಗಳನ್ನು ತಿಳಿದಿದ್ದ ಮುದಿ ಸಂನ್ಯಾಸಿಗಳಿದ್ದು ಪುಣ್ಯಕಥೆಗಳನ್ನು ಹೇಳುತ್ತಿದ್ದರೆಂದು ತನ್ನ ಕಾದಂಬರೀ ಕಾವ್ಯದಲ್ಲಿಯೂ ಹೇಳಿದ್ದಾನೆ. ಅನೇಕ ಪುರಾಣಗಳೂ ಕಥೆಗಳೂ ನೈಮಿಶಾರಣ್ಯದಲ್ಲಿ ಯಾಗ ಮಾಡುತ್ತಿದ್ದ ಶೌನಕಾದಿ ಮಹರ್ಷಿಗಳ ಕೋರಿಕೆಯಂತೆ ಸೂತಪುರಾಣಿಕನಿಂದ ಹೇಳಲ್ಪಟ್ಟವೆಂದು ಆಯಾ ಗ್ರಂಥಗಳಲ್ಲಿ ನಿರೂಪಿತವಾಗಿದೆ. ಮನುಷ್ಯರಿಗೆ ಮಾತ್ರವಲ್ಲ, ದೇವತೆಗಳಿಗೂ ಮೃಗಪಕ್ಷಿಗಳಿಗೂ ಕಥೆಯನ್ನು ಕೇಳುವುದರಲ್ಲಿ ಪ್ರೀತಿಯೆಂದು ಬೃಹತ್ಕಥೆಯ ವಿಷಯದಲ್ಲಿ ಕಥಾಸರಿತ್ಸಾಗರದಲ್ಲಿನ ಸಂಗತಿಯೊಂದು ತಿಳಿಸುತ್ತದೆ. ಅದರ ಪ್ರಕಾರ ಪಾರ್ವತೀದೇವಿ ಹೊಸದಾದ ಕಥೆಯನ್ನು ಹೇಳು ಎಂದು ಪರಮೇಶ್ವರನನ್ನು ಕೇಳಿಕೊಳ್ಳಲು ಆತ ಹೇಳಿದ ದೊಡ್ಡ ಕಥೆಯಲ್ಲಿನ (ಇದನ್ನೇ ಗುಣಾಢ್ಯ ಪೈಶಾಚಿ ಭಾಷೆಯಲ್ಲಿ ಬರೆದನೆಂದು ಪ್ರತೀತಿ) ಆರು ಲಕ್ಷ ಗ್ರಂಥ ಪರಿಮಾಣವುಳ್ಳ ಆರು ಕಥೆಗಳನ್ನು ಒಳಗೊಂಡ ಪತ್ರಗಳನ್ನು ಕಾಡಿನಲ್ಲಿ ಅಗ್ನಿಕುಂಡದಲ್ಲಿ ಹಾಕುವುದಕ್ಕೆ ಮೊದಲು ಓದುತ್ತಿದ್ದಾಗ ಅಲ್ಲಿದ್ದ ಮೃಗಪಕ್ಷಿಗಳೆಲ್ಲವೂ ಅಲ್ಲಿಗೆ ಬಂದು ಆಹಾರದ ಮೇಲೆಯೂ ಲಕ್ಷ್ಯವಿಲ್ಲದೆ ಅತ್ಯಂತ ಆದರದಿಂದ ಕೇಳುತ್ತಿದ್ದವಂತೆ.

ಸಂಸ್ಕೃತವಾಙ್ಮಯದಲ್ಲಿ ಅತ್ಯಂತ ಪ್ರಾಚೀನವಾದ ಋಕ್ಸಂಹಿತೆಯ ಸೂಕ್ತಗಳಲ್ಲಿಯೂ ಕಥೆಗಳ ಪ್ರಸ್ತಾಪವಿದೆ. 1.179ನೆಯ ಸೂಕ್ತದಲ್ಲಿ ಅಗಸ್ತ್ಯ ಲೋಪಾಮುದ್ರೆಯರ ಸಂವಾದವೂ 10.95ನೆಯ ಸೂಕ್ತದಲ್ಲಿ ಉರ್ವಶೀ ಪುರೂರವರುಗಳ ಸಂವಾದವೂ ಪ್ರಸ್ತುತವಾಗಿದೆ. 7.71.5ನೆಯ ಮಂತ್ರದಲ್ಲಿಯೂ ಇನ್ನೂ ಕೆಲವು ಮಂತ್ರಗಳಲ್ಲಿಯೂ ಅಶ್ವಿನೀದೇವತೆಗಳು ಚ್ಯವನಋಷಿಯ ಜರೆಯನ್ನು ಹೋಗಲಾಡಿಸಿ ಅವನನ್ನು ತರುಣನನ್ನಾಗಿ ಮಾಡಿದ ಕಥೆಯ ಪ್ರಸ್ತಾಪವಿದೆ. ಈ ಕಥೆಗಳೆಲ್ಲವೂ ಮಹಾಭಾರತದಲ್ಲಿಯೂ ಪುರಾಣಗಳಲ್ಲಿಯೂ ವಿಸ್ತಾರವಾಗಿ ವರ್ಣಿಸಲ್ಪಟ್ಟಿವೆ.

ಋಕ್ಸಂಹಿತೆಯ 4.19.9ನೆಯ ಮಂತ್ರದ ಉತ್ತರಾರ್ಧದಲ್ಲಿಯೂ 10.28.4ನೆಯ ಮಂತ್ರದ 3ನೆಯ ಪಾದದಲ್ಲಿಯೂ ಪ್ರಸ್ತುತವಾದುವು ಪೌರಾಣಿಕ ಕಥೆಗಳಲ್ಲ. ಈ ಮಂತ್ರಗಳಲ್ಲಿ (ಲಾಟೀಯ) ಪಂಚತಂತ್ರದಲ್ಲಿ ಹೇಳಲ್ಪಟ್ಟಿರುವ ಕುರುಡ, ಕುಬ್ಜ ಮತ್ತು ತ್ರಿಸ್ತನಿ ಮತ್ತು ನರಿಯೂ ಸಿಂಹವೂ ಮಾತನಾಡುವ ಬಿಲವೂ ಎಂಬ ಕಥೆಗಳ ಪ್ರಸ್ತಾಪವಿರುವುದೆಂದೂ ಊಹಿಸಲಾಗಿದೆ.

ಹೀಗೆಯೆ ಕೃಷ್ಣಯಜುಸ್ಸಂಹಿತೆಗಳಲ್ಲಿಯೂ ಬ್ರಾಹ್ಮಣಗಳಲ್ಲಿಯೂ ಅನೇಕ ಕಥೆಗಳಿವೆ. ಪುರಾಣಗಳೂ ಇತಿಹಾಸಗಳೂ ಕಥೆಗಳ ಸಮೂಹಗಳು. ಹೀಗೆಯೇ ಮಹಾತ್ಮ್ಯಗಳಲ್ಲಿಯೂ ಸ್ಥಳಪುರಾಣಗಳಲ್ಲಿಯೂ ಅನೇಕ ಕಥೆಗಳು ಇವೆ. ಕವಿಕಲ್ಪಿತವಾದ ಕಥೆಗಳು ಬಾಣನ ಕಾದಂಬರೀ, ಸುಬಂಧುವಿನ ವಾಸವದತ್ತಾ, ತಿಲಕಮಂಜರೀ ಮೊದಲಾದ ಗ್ರಂಥಗಳಲ್ಲಿವೆ. ಈ ಗ್ರಂಥಗಳಲ್ಲಿ ಆ ಹೆಸರಿನ ರಾಜಕುಮಾರಿಯರ ಕಥೆ ವರ್ಣಿತವಾಗಿದೆ. ಗ್ರಂಥಗಳು ಬಹಳ ಪ್ರೌಢ ಶೈಲಿಯಲ್ಲಿವೆ. ಪೌರಾಣಿಕ ಮತ್ತು ಕವಿಕಲ್ಪಿತವೆಂಬ ಎರಡು ಜಾತಿಯ ಕಥೆಗಳಲ್ಲದೆ ಜನಸಾಮಾನ್ಯರ ನಡತೆಯನ್ನು ನಿರೂಪಿಸುವ ಕಥೆಗಳೂ ಅನೇಕವುಂಟು. ಇವುಗಳನ್ನು ನಾಡಕಥೆಗಳು ಜಾನಪದ ಕಥೆಗಳು ಎನ್ನಬಹುದು. ಇಂಥ ಕಥೆಗಳ ಸಂಕಲನಗಳೆಂದರೆ—ಪಂಚತಂತ್ರ, ಬೃಹತ್ಕಥೆ (ಕಥಾಸರಿತ್ಸಾಗರ, ಬೃಹತ್ಕಥಾಮಂಜರೀ, ಬೃಹತ್ಕಥಾ ಶ್ಲೋಕ ಸಂಗ್ರಹ) ವೇತಾಲಪಂಚವಿಂಶತಿ, ಶುಕಸಪ್ತತಿ ಮೊದಲಾದುವು.

ಶುಕಸಪ್ತತಿಯ ಎರಡು ಪಾಠಗಳು (ಶುಕಸಪ್ತತಿ ; ಶುಕ ಸಪ್ತತಿಯ ಬೃಹತ್ಪಾಠ) ಷ್ಮಿಟ್ ಮಹಾಶಯನಿಂದ ಜರ್ಮನಿಯಲ್ಲಿ ಪ್ರಕಾಶಗೊಂಡಿವೆ. ಮೂಲ ಶುಕಸಪ್ತತಿ ಮೂಲ ಪಂಚತಂತ್ರದಂತೆ ನಷ್ಟವಾಗಿದೆ. ಈ ಗ್ರಂಥ ಯಾವಾಗ ಯಾರಿಂದ ಬರೆಯಲ್ಪಟ್ಟಿತೆಂಬುದು ತಿಳಿಯದು. ಇದರ ಕಾಲ ಕ್ರಿ.ಶ. 1165ಕ್ಕೂ ಹಿಂದಿನದೆಂದೂ ಕರ್ತೃ ಚಿಂತಾಮಣಿಭಟ್ಟನೆಂದೂ ಸದ್ಯಕ್ಕೆ ಹೇಳಬಹುದು.

ಹೆಸರಿಗೆ ಅನುಗುಣವಾಗಿ ಶುಕಸಪ್ತತಿಯಲ್ಲಿ 70 ಕಥೆಗಳಿವೆ. ಹರದತ್ತನೆಂಬ ವ್ಯಾಪಾರಿಗೆ ಪ್ರಭಾವತಿ ಎಂಬ ಹೆಂಡತಿಯಿರುವಳು. ಒಂದು ಬಾರಿ ಅವನು ವ್ಯಾಪಾರಕ್ಕಾಗಿ ಊರನ್ನು ಬಿಟ್ಟು ಹೋಗುವುದಕ್ಕಿಂತ ಮುಂಚೆ ತಾನು ಸಾಕಿದ ಒಂದು ಗಿಣಿಗೆ ಪ್ರಭಾವತಿ ದುರ್ನಡತೆಯವಳಾಗದಂತೆ ಜಾಗರೂಕತೆಯಿಂದ ನೋಡಿಕೊಳ್ಳಲು ಹೇಳಿ ಪ್ರಯಾಣ ಮಾಡುತ್ತಾನೆ. ಕೆಲವು ದಿನಗಳ ಮೇಲೆ ಪರಪುರುಷನ ಬಳಿಗೆ ಹೋಗಲು ಸಿದ್ಧವಾಗತೊಡಗುವ ಪ್ರಭಾವತಿಯನ್ನು ಕುರಿತು ಪಂಜರದ ಗಿಣಿ ರೂಪಿಣಿಯೆಂಬೊಬ್ಬಳಿಗೆ ಅಂಥದೇ ಸಂದರ್ಭದಲ್ಲಿ ಒದಗಿದ ವಿಪತ್ತಿನ ಕಥೆಯನ್ನು ಹೇಳಿ ಪ್ರಭಾವತಿ ತನಗೆ ಬರಬಹುದಾದ ವಿಪತ್ತನ್ನು ನಿವಾರಿಸುವ ಉಪಾಯವನ್ನು ಯೋಚಿಸಲು ಸಲಹೆ ಮಾಡುತ್ತದೆ. ಭ್ರಾಂತಳಾದ ಪ್ರಭಾವತಿಗೆ ಯಾವ ಉಪಾಯವೂ ಹೊಳೆಯುವುದಿಲ್ಲ. ಆಗ ಗಿಣಿ ಅವಳಿಗೆ ರೂಪಿಣಿ ಹೂಡಿದ ಉಪಾಯದ ಕಥೆಯನ್ನು ಹೇಳುತ್ತದೆ. ಅದು ಮುಗಿಯುವಲ್ಲಿ ಅಂದಿನ ರಾತ್ರಿ ಕಳೆದು ಹೋಗಿರುತ್ತದೆ. ಹೀಗೆಯೇ ಎಪ್ಪತ್ತು ಕಥೆಗಳನ್ನೂ ಹೇಳಿ ಮುಗಿಸುವಲ್ಲಿ 70 ದಿವಸಗಳು ಕಳೆದು ಪ್ರಭಾವತಿಯ ಪತಿ ಹಿಂತಿರುಗಿ ಬರುತ್ತಾನೆ.

ಶುಕಸಪ್ತತಿಯ ಬೃಹತ್ಪಾಠದಲ್ಲಿ ಶುಕಸಪ್ತತಿಯಲ್ಲಿ ಇಲ್ಲದ ಅನೇಕ ಕಥೆಗಳಿವೆ. ಕ್ರಿ. ಶ. 1329ರಲ್ಲಿ ನೆಕ್‌ಶಬಿ ಎಂಬವನು ಪಾರ್ಸಿ ಭಾಷೆಯಲ್ಲಿ ಮಾಡಿದ ಶುಕ ಸಪ್ತತಿಯ ಅನುವಾದದಲ್ಲಿಯೂ (ತೂತಿನಾಮೆ) ಮೇಲೆ ಹೇಳಿದ ಎರಡು ಶುಕ ಸಪ್ತತಿಗಳಲ್ಲಿಯೂ ಇಲ್ಲದ ಅನೇಕ ಕಥೆಗಳಿವೆ. ಇಂಥ ಕಥೆಗಳೆಲ್ಲವೂ ಈಗ ನಮಗೆ ದೊರೆತಿಲ್ಲದ ಶುಕಸಪ್ತತಿ ಪಾಠಾಂತರಗಳಲ್ಲಿ ಇದ್ದವೆಂದು ಊಹಿಸಲಾಗಿದೆ. ನೆಕ್‌ಶಬಿಯ ತೂತಿನಾಮೆ ಶಾ ಅಬ್ದುಲ್ಲಾ ಎಫೆಂಡಿ ಎಂಬುವನಿಂದ ತುರ್ಕಿ ಭಾಷೆಗೆ ಅನುವಾದಗೊಂಡಿದೆ. ಕ್ರಿ.ಶ. ಸುಮಾರು 18ನೆಯ ಶತಮಾನದ ಅಂತ್ಯದಲ್ಲಿದು ಪಾರ್ಸೀಭಾಷೆಗೆ ತರ್ಜುಮೆಗೊಂಡಿದೆ. ಅಲ್ಲದೆ ಈಚೆಗೆ ಭರತಖಂಡದ ಅನೇಕ ಭಾಷೆಗಳಿಗೂ ಮಲಯ ಮತ್ತು ಜಾವಾ ದ್ವೀಪಗಳ ಭಾಷೆಗಳಿಗೂ ಅನುವಾದಗೊಂಡಿದೆ.

ಪಂಚತಂತ್ರದ ಕಥೆಗಳಂತೆ ಶುಕಸಪ್ತತಿಯ ಕೆಲವು ಕಥೆಗಳೂ ವಿಶ್ವದ ನಾನಾ ದೇಶಗಳಿಗೆ ಹರಡಿರುವುದನ್ನು ನೋಡಿದರೆ ಅದರ ಪ್ರಾಮುಖ್ಯ ಸ್ವಯಂ ವಿದಿತವಾಗುತ್ತದೆ.

ಶ್ಲೋಕ ಛಂದಸ್ಸಿನಲ್ಲಿದ್ದು ಸದಾಚಾರವನ್ನು ಬೋಧಿಸುವ ದಿನಾಲಾಪನಿಕಾ ಶುಕಸಪ್ತತಿಯೆಂಬ ಗ್ರಂಥವೂ ಬಹಳ ಅರ್ವಾಚೀನವಾದುದು.

ಇನ್ನೊಂದು ಪ್ರಭಾವೀ ಕಥಾಗ್ರಂಥವೆಂದರೆ ವೇತಾಲಪಂಚವಿಂಶತಿ. ಅದರಲ್ಲಿ 25 ಕಥೆಗಳಿವೆ. (ತ್ರಿ) ವಿಕ್ರಮಸೇನನೆಂಬ ರಾಜ ತನ್ನನ್ನು ಬಹುಕಾಲ ಆಶ್ರಯಿಸಿದ ಒಬ್ಬ ಶ್ರಮಣನ ಕೋರಿಕೆಗನುಸಾರವಾಗಿ ಶ್ಮಶಾನದಲ್ಲಿ ಒಂದು ವೃಕ್ಷಕ್ಕೆ ನೇತುಕೊಂಡಿದ್ದ ಶವವನ್ನು ತಂದುಕೊಡಲು ಒಪ್ಪಿಕೊಳ್ಳುತ್ತಾನೆ. ಶವವನ್ನು ಮರದಿಂದ ಇಳಿಸಿ ಬೆನ್ನಿನ ಮೇಲೆ ಹೊತ್ತುಕೊಂಡು ಹಿಂದಿರುಗುತ್ತಿರುವಾಗ ಒಂದು ಬೇತಾಳ ಶವದೊಳಕ್ಕೆ ಪ್ರವೇಶಿಸಿ ದಾರಿಸಾಗುವುದಕ್ಕಾಗಿ ರಾಜನಿಗೆ ಒಂದು ಕಥೆ ಹೇಳುತ್ತದೆ. ಮುಗಿದ ಅನಂತರ ಅದಕ್ಕೆ ಸಂಬಂಧಿಸಿದಂತೆ ರಾಜನಿಗೆ ಒಂದು ಪ್ರಶ್ನೆ ಹಾಕುತ್ತದೆ. ಅದಕ್ಕೆ ರಾಜ ಸಮಂಜಸವಾದ ಉತ್ತರ ಕೊಡಬೇಕು. ತಿಳಿದೂ ತಿಳಿದೂ ಉತ್ತರ ಹೇಳದಿದ್ದರೆ ಅರಸನ ತಲೆ ನೂರು ಹೋಳಾಗುತ್ತದೆ. ರಾಜ ಸರಿಯಾದ ಉತ್ತರ ಕೊಡುತ್ತಾನೆ. ಬೇತಾಳ ಶವದೊಂದಿಗೆ ಮತ್ತೆ ಮರಹತ್ತಿ ಕೂಡುತ್ತದೆ. ಹೀಗೆ ಇಪ್ಪತ್ತು ನಾಲ್ಕು ಬಾರಿ ವಿಕ್ರಮಸೇನ ಶವವನ್ನು ಇಳಿಸಿ ತಂದು ಬೇತಾಳದ ಬಾಯಿಂದ ಇಪ್ಪತ್ತುನಾಲ್ಕು ಕಥೆ ಕೇಳಿ ಅದು ಕೇಳಿದ ಪ್ರಶ್ನೆಗಳಿಗೆ ಉತ್ತರ ಕೊಡುತ್ತಾನೆ. ಇಪ್ಪತ್ತೈದನೆಯ ಬಾರಿ ಮರುಕಗೊಂಡ ಬೇತಾಳ ವಿಕ್ರಮನಿಗೆ ಶ್ರಮಣಕ ಅವನನ್ನು ಕೊಲ್ಲಲು ಮಾಡಿದ ಒಳಸಂಚನ್ನು ತಿಳಿಸಿ, ತಾನು ಹೇಳಿದ ಹಾಗೆ ವರ್ತಿಸಿದಲ್ಲಿ ವಿಕ್ರಮನ ಸೇವಕನಾಗುವುದಾಗಿ ಭರವಸೆ ಕೊಡುತ್ತದೆ.

ವೇತಾಲಪಂಚವಿಂಶತಿ ಬೃಹತ್ಕಥಾಮಂಜರಿಯಲ್ಲಿಯೂ ಕಥಾಸರಿತ್ಸಾಗರದಲ್ಲಿಯೂ ಶ್ಲೋಕ ರೂಪದಲ್ಲಿ ಇದೆ. ಅಲ್ಲದೆ ಗದ್ಯ ರೂಪದಲ್ಲಿ ಜಂಭಲದತ್ತನಿಂದಲೂ ಶಿವದಾಸನಿಂದಲೂ ರಚಿತವಾಗಿದೆ. ಪಂಚತಂತ್ರದಲ್ಲಿರುವಂತೆ ಶಿವದಾಸನ

ಗ್ರಂಥದಲ್ಲಿ ಅನೇಕ ಶ್ಲೋಕಗಳಿವೆ. ವೇತಾಲಪಂಚವಿಂಶತಿಯ ಕಥೆಗಳಲ್ಲಿ ಕೆಲವು ವಿಶ್ವದ ನಾನಾದೇಶಗಳಿಗೆ ಹರಡಿವೆ. ಈ ಗ್ರಂಥವೂ ಇಂಗ್ಲಿಷ್ ಜರ್ಮನ್ ಮೊದಲಾದ ಭಾಷೆಗಳಿಗೂ ಭರತಖಂಡದ ನಾನಾ ಭಾಷೆಗಳಿಗೂ ಅನುವಾದಗೊಂಡಿದೆ. ಇಂಥ ಕೆಲವು ಅನುವಾದಗಳಲ್ಲಿ (ತ್ರಿ) ವಿಕ್ರಮಸೇನ ಎಂಬ ಹೆಸರಿಗೆ ಬದಲು ವಿಕ್ರಮಾದಿತ್ಯ ಎಂದಿದೆ.

ವಿಕ್ರಮಾದಿತ್ಯನ ಸಂಬಂಧವಾದ ಕಥೆಗಳು ಸಿಂಹಾಸನ ದ್ವಾತ್ರಿಂಶಿಕಾ ಎಂಬ ಪುಸ್ತಕದಲ್ಲಿಯೂ ಸಂಕಲಿತವಾಗಿವೆ. ಈ ಗ್ರಂಥಕ್ಕೆ ವಿಕ್ರಮಚರಿತ, ವಿಕ್ರಮಾರ್ಕ ಚರಿತ ಎಂದೂ ಹೆಸರುಗಳಿವೆ. ಇದರಲ್ಲಿ ಅನೇಕ ಪಾಠಪ್ರಭೇದಗಳಿದ್ದು ಕೆಲವು ಬರೀ ಪದ್ಯದಲ್ಲಿ ಕೆಲವು ಬರೀ ಗದ್ಯದಲ್ಲಿ, ಇವೆ. ಇನ್ನು ಕೆಲವಲ್ಲಿ ಪದ್ಯಗದ್ಯಗಳೆರಡೂ ಇವೆ. ಗ್ರಂಥದ ಮುಖಕಥೆ ಅಥವಾ ಕಥಾಮುಖ ಹೀಗಿದೆ : ವಿಕ್ರಮಾದಿತ್ಯ ಕಾಲವಾದ ಅನಂತರ ದೇವೇಂದ್ರು ಅವನಿಗೆ ಕೊಟ್ಟಿದ್ದ ಸಿಂಹಾಸನ ಭೂಮಿಯಲ್ಲಿ ಹೂತು ಹೋಗಿ ಕಾಲಕ್ರಮದಲ್ಲಿ ಭೋಜರಾಜನ ಕೈಸೇರಿತು. ಈ ರಾಜ ಒಳ್ಳೆಯ ಮುಹೂರ್ತ ವನ್ನು ನೋಡಿ ಅದರಲ್ಲಿ ಹತ್ತಿ ಕೂತುಕೊಳ್ಳಲು ಉದ್ಯುಕ್ತನಾದಾಗ ಆ ಸಿಂಹಾಸನದ ಮೆಟ್ಟಿಲುಗಳಲ್ಲಿದ್ದ 32 ಸಾಲಭಂಜಿಕೆಗಳಲ್ಲಿ ಮೊದಲನೆಯದು ಅವನನ್ನು ತಡೆದು ವಿಕ್ರಮಾದಿತ್ಯನಿಗೆ ಇದ್ದ ಶೌರ್ಯವೂ ಸಾಹಸವೂ ಔದಾರ್ಯವೂ ಇದ್ದವರೇ ಆ ಸಿಂಹಾಸನವನ್ನು ಹತ್ತುವದಕ್ಕೆ ಅರ್ಹರು ಎಂದು ಅಂದು ವಿಕ್ರಮಾದಿತ್ಯನ ಗುಣ ಕಥನರೂಪವಾದ ಒಂದು ಕಥೆಯನ್ನು ಹೇಳುತ್ತದೆ. ಹೀಗೆಯೇ ಉಳಿದ 31 ಸಾಲ ಭಂಜಿಕೆಗಳೂ ಒಂದೊಂದು ಕಥೆಯನ್ನು ಹೇಳುತ್ತವೆ. 32ನೆಯ ದಿನ ಸಾಲಭಂಜಿಕೆ ಗಳಾಗಿದ್ದ ಅಪ್ಸರಸ್ತ್ರೀಯರಿಗೆ ಶಾಪವಿಮೋಚನೆಯಾಗಿ ಸಿಂಹಾಸನವೂ ಅವರೂ ಸ್ವರ್ಗಕ್ಕೆ ಹೋಗುತ್ತಾರೆ.

ಈ ಗ್ರಂಥವೂ ಭರತಖಂಡದ ನಾನಾ ಭಾಷೆಗಳಿಗೂ ಇಂಗ್ಲಿಷ್, ಜರ್ಮನ್, ಫ್ರೆಂಚ್ ಭಾಷೆಗಳಿಗೂ ಸಯಾಂ ದೇಶದ ಥ್ಯಾಭಾಷೆಗೂ ಅನುವಾದಗೊಂಡಿದೆ. ಮಂಗೋಲಿಯ ಭಾಷೆಯಲ್ಲೂ ಇದರ ಒಂದು ಅನುವಾದ ದೊರೆತಿದೆ.

ವಿಕ್ರಮೋದಯ ಎಂಬ ಶ್ಲೋಕರೂಪವಾದ ಗ್ರಂಥದಲ್ಲಿ ವಿಕ್ರಮಾದಿತ್ಯ ಗಿಣಿಯ ರೂಪವನ್ನು ತಾಳಿ ಹೇಳಿದ ಕಥೆಗಳು ಬಂದಿವೆ. ವಿಕ್ರಮಾದಿತ್ಯನಿಗೂ ಶಾಲಿವಾಹನ ನಿಗೂ ನಡೆದ ಯುದ್ಧದ ಕಥೆ ಅನಂತನಿಂದ ವಿರಚಿತವಾದ ವೀರಚರಿತ್ರಾ ಎಂಬ ಪದ್ಯಗ್ರಂಥದಲ್ಲಿಯೂ, ಶಿವದಾಸ ವಿರಚಿತವಾದ ಗದ್ಯಪದ್ಯಗಳನ್ನೊಳಗೊಂಡ ಶಾಲಿವಾಹನಕಥಾ ಎಂಬ ಪುಸ್ತಕದಲ್ಲಿಯೂ ಬಂದಿದೆ.

ದಂಡಿಯಿಂದ (ಕ್ರಿ. ಪೂ. ಸುಮಾರು 700ಕ್ಕೂ ಹಿಂದೆ) ರಚಿತವಾದ ದಶಕುಮಾರ ಚರಿತದಲ್ಲಿ ಒಂದು ಪೂರ್ವ ಪೀಠಿಕೆಯೂ ಹತ್ತು ಕಥೆಗಳ ಒಂದು ಉತ್ತರ ಪೀಠಿಕೆಯೂ ಇದ್ದುವೆಂದು ತೋರುತ್ತದೆ. ಈಗ ಪ್ರಚಾರವಾಗಿರುವ ಪುಸ್ತಕದಲ್ಲಿ ರುವ ಕೊನೆಯ ಏಳು ಕಥೆಗಳು ಮಾತ್ರ ದಂಡಿಯ ಗ್ರಂಥದ್ದು. ಪೂರ್ವ ಪೀಠಿಕೆಯೂ ಮೊದಲ ಮೂರು ಕಥೆಗಳೂ ಬೇರೊಬ್ಬರಿಂದ ರಚಿತವಾದುವು. ವಿನಾಯಕನಿಂದ ಶ್ಲೋಕರೂಪದಲ್ಲಿ ರಚಿತವಾಗಿರುವ ದಶಕುಮಾರಚರಿತ ಪೂರ್ವ ಪೀಠಿಕೆ. ಅಪ್ಪಯ್ಯ ಮಂತ್ರಿಯಿಂದ ರಚಿತವಾದ ದಶಕುಮಾರಚರಿತ ಕಥಾಸಾರ, ದೀಕ್ಷಿತ ಚಕ್ರಪಾಣಿಯಿಂದ ರಚಿತವಾದ ಐದು ಉಚ್ಛ್ವಾಸಗಳುಳ್ಳ ದಶಕುಮಾರ ಕಥಾಶೇಷ—ಈ ಗ್ರಂಥಗಳಲ್ಲಿ ದಶಕುಮಾರಚರಿತದ ಕಥೆ ಪೂರೈಕೆಗೊಂಡಿದೆ.

ಭರಟಕದ್ವಾತ್ರಿಂಶಿಕಾ, ಪಂಚದಂಡ ಛತ್ರ ಪ್ರಬಂಧ, ಶಿವದಾಸ ವಿರಚಿತ ಕಥಾರ್ಣವ, ಹರಿಭದ್ರ ವಿರಚಿತ ಧೂರ್ತಕಲ್ಯಾಣ, ವಿದ್ಯಾಪತಿ ರಚಿತ ಪುರುಷ ಪರೀಕ್ಷಾ—ಇವೂ ಕಥಾಸಂಕಲನಗಳು.

ಬಲ್ಲಾಳನ ಭೋಜಪ್ರಬಂಧ, ಮೇರಾತುಂಗನ ಪ್ರಬಂಧ ಚಿಂತಾಮಣಿ ಮತ್ತು ರಾಜಶೇಖರನ ಪ್ರಬಂಧಕೋಶದಲ್ಲಿ ಕಾಳಿದಾಸನೇ ಮೊದಲಾದ ಕವಿಗಳ ಸಂಬಂಧದಲ್ಲಿ ಅನೇಕ ಕಥೆಗಳಿವೆ. ಇವುಗಳಲ್ಲಿ ಬಹುಪಾಲು ಕಲ್ಪಿತ ಕಥೆಗಳು.

ಜೈನವಾಙ್ಮಯದಲ್ಲಿಯೂ ಕಥೆಗಳೂ ಕಥಾ ಗ್ರಂಥಗಳೂ ವಿಪುಲವಾಗಿವೆ. ಅರ್ಧಮಾಗಧಿಯಲ್ಲಿರುವ ಶ್ವೇತಾಂಬರ ಜೈನರ ಆಗಮ ಅಥವಾ ಸಿದ್ಧಾಂತ ಗ್ರಂಥ ಗಳಲ್ಲಿ ಅನೇಕ ಕಥೆಗಳಿವೆ. ಈ ಎಲ್ಲ ಕಥೆಗಳಲ್ಲಿಯೂ ಪ್ರಾಯಿಕವಾಗಿ ಅಲ್ಲಿ ಕೀರ್ತಿತ ರಾದ ಜನರ ಪೂರ್ವಜನ್ಮದ ವಿಷಯವೂ ಅವರು ಜಿನಭಕ್ತರಾದ್ದರಿಂದ ಉಂಟಾದ ಶ್ರೇಯಸ್ಸೂ ವರ್ಣಿತವಾಗಿದೆ. ಅಲ್ಲಿನ ಒಂದು ಕಥೆ ಹೀಗಿದೆ : ಮಿಥಿಲೆಯ ರಾಜನ ಮಗಳಾದ ಮಲ್ಲಿಯನ್ನು ಮದುವೆಯಾಗಲು ಆರು ದೇಶದ ರಾಜಕುಮಾರರು ಪ್ರಯತ್ನಿಸುವರು. ಇವರಲ್ಲಿ ಯಾರೊಬ್ಬನಿಗೆ ಕೊಟ್ಟರೂ ಇತರರಿಗೆ ಅವಮಾನ ವಾಗುವುದರಿಂದ ತಂದೆ ಯಾರಿಗೂ ಮಗಳನ್ನು ಕೊಡುವುದಿಲ್ಲವೆಂದು ತಿಳಿಸುವನು. ಇದರಿಂದ ಕೋಪಗೊಂಡ ರಾಜಕುಮಾರರು ಒಂದಾಗಿ ಮಿಥಿಲೆಗೆ ಮುತ್ತಿಗೆಹಾಕುವರು. ಈ ವಿಷಯವೆಲ್ಲವನ್ನೂ ದಿವ್ಯಜ್ಞಾನದಿಂದ ಮುಂಚೆಯೇ ಅರಿತಿದ್ದ ರಾಜಕುಮಾರಿ ಊರಿನಲ್ಲಿ ಒಂದು ಮೋಹನ ಗೃಹವನ್ನು ಮಾಡಿಸಿ ಅದರಲ್ಲಿ ತನ್ನಂತೆಯೇ ಕಾಣುವ ಒಂದು ಬೊಂಬೆಯನ್ನು ಮಾಡಿಸಿ ಆ ಬೊಂಬೆಯ ತಲೆಯಲ್ಲಿರುವ ರಂಧ್ರದಿಂದ ನಿತ್ಯವೂ ತಾನು ತಿನ್ನುವ ಆಹಾರದಲ್ಲಿ ಒಂದು ತುತ್ತನ್ನು ಹಾಕುತ್ತ ಬರುತ್ತಿದ್ದಳು. ಮುತ್ತಿಗೆ ಹಾಕಿದ್ದ ರಾಜಕುಮಾರರನ್ನು ಉಪಾಯವಾಗಿ ಮಲ್ಲಿ ಮೋಹನ ಗೃಹದ ಬಳಿಗೆ ಬರಮಾಡಿದಳು. ಅಲ್ಲಿ ಮಲ್ಲಿಯಂತಿದ್ದ ಬೊಂಬೆಯನ್ನು ಅವರು ವಿಸ್ಮಯ ದಿಂದ ನೋಡುತ್ತಿರಲಾಗಿ ಮಲ್ಲಿ ಅಲ್ಲಿಗೆ ಬಂದು ಬೊಂಬೆಯ ತಲೆಯಲ್ಲಿನ ರಂಧ್ರ ವನ್ನು ಮುಚ್ಚಿದ್ದ ಕಮಲವನ್ನು ತೆಗೆದುಬಿಡಲಾಗಿ ಒಳಗೆ ಬಹು ಕಾಲದಿಂದ ಶೇಖರಣೆಗೊಂಡು ಕೊಳೆತುಹೋಗಿದ್ದ ಆಹಾರ ಪದಾರ್ಥಗಳಿಂದ ಅಸಹ್ಯವಾದ ದುರ್ಗಂಧ ಎದ್ದಿತು. ರಾಜಕುಮಾರರೆಲ್ಲರಿಗೂ ಜುಗುಪ್ಸೆಯಾಯಿತು. ಹೆಣ್ಣಿನ ಶರೀರ ನೋಡುವುದಕ್ಕೆ ಹೀಗಿದ್ದರೂ ಒಳಗೆ ಅಷ್ಟೇ ಅಸಹ್ಯಪೂರ್ಣವಾಗಿದೆ. ಆದ್ದ ರಿಂದ ಮೋಹ ಬೇಡ—ಎಂದು ಮಲ್ಲಿ ಅವರಿಗೆ ತಿಳಿಯಹೇಳಿ ಅವರ ಪೂರ್ವಜನ್ಮದ ಕಥೆಯೆಲ್ಲವನ್ನೂ ವಿವರಿಸಿ ತಾನು ಜೈನ ದೀಕ್ಷೆಯನ್ನು ಸ್ವೀಕರಿಸಿ ಸಿದ್ಧಿಯನ್ನು ಹೊಂದಿದಳು.

ದಿಗಂಬರ ಜೈನರ ಪುರಾಣಗಳಲ್ಲಿ ಸಂಸ್ಕೃತ ಭಾಷೆಯಲ್ಲಿ ಬರೆದ ಅನೇಕ ಕಥೆಗಳಿವೆ. ಮಹಾಪುರಾಣದಲ್ಲಿ (ಕ್ರಿ.ಶ. 8ನೆಯ ಶತಮಾನ) 24 ತೀರ್ಥಂಕರರು, 12 ಚಕ್ರವರ್ತಿಗಳು, 9 ವಾಸುದೇವರು, 9 ಪ್ರತಿವಾಸುದೇವರು, 9 ಬಲ ರಾಮರು—ಹೀಗೆ 63 ಮಹಾಪುರುಷರ ಕಥೆಗಳಿವೆ. ಮಹಾವೀರಚರಿತ, ಯಶೋಧರ ಚರಿತ, ಪಾರ್ಶ್ವನಾಥಚರಿತ, ನೇಮಿನಾಥಚರಿತ ಮೊದಲಾದ ಚರಿತಗಳಲ್ಲಿಯೂ ಆಯಾ ತೀರ್ಥಂಕರರ ಕಥಾನಕಗಳಿವೆ. ಹೇಮಚಂದ್ರು ರಚಿಸಿದ (ಕ್ರಿ.ಶ. 12ನೆಯ ಶತಮಾನ) ತ್ರಿಷಷ್ಟಿಶಲಾಕಾಪುರುಷಚರಿತದಲ್ಲಿ ಮೇಲೆ ಹೇಳಿದ 63 ಮಹಾಪುರುಷರ ಕಥೆಯೂ ಪರಿಶಿಷ್ಟ ಪರ್ವದಲ್ಲಿ ಇನ್ನೂ ಅನೇಕ ಕಥೆಗಳೂ ವರ್ಣಿತ ವಾಗಿವೆ.

ಜೈನರಿಂದ ಕಥಾಪುಸ್ತಕಗಳೂ ರಚಿತವಾಗಿವೆ. ಸೋಮಚಂದ್ರನ ಕಥಾಮಹೋದಧಿ (ಕ್ರಿ.ಶ. 1448), ಶುಭಶೀಲಗಣಿಯ ಪಂಚಶತೀಪ್ರಬೋಧ ಸಂಬಂಧ (ಕ್ರಿ. ಶ. 1464) ಗಳಲ್ಲಿನ ಕಥೆಗಳ ಸಂಖ್ಯೆ 400ನ್ನು ಮೀರಿದೆ. ಹೇಮವಿಜಯನ ಕಥಾರತ್ನಾಕರ (ಕ್ರಿ. ಶ. 1600) ಸಂಸ್ಕೃತ ಗದ್ಯದಲ್ಲಿದ್ದು 258 ಕಥೆಗಳನ್ನೊಳಗೊಂಡಿದೆ. ಉದಯ ಧರ್ಮಿಯ ಧರ್ಮಕಲ್ಪದ್ರುಮ (ಕ್ರಿ. ಶ. 1450), ಅಮಿತಗತಿಯ ಧರ್ಮಪರೀಕ್ಷಾ (ಕ್ರಿ. ಶ. 1014) ಇವು ಸಂಸ್ಕೃತ ಪದ್ಯಗಳಲ್ಲಿವೆ.

ಸಮ್ಯಕ್ತ್ವಕೌಮುದೀ, ಕಥಾಕೋಶ—ಇವು ಸಂಸ್ಕೃತದಲ್ಲಿವೆ. ಕಥಾಕೋಶ ವೊಂದು ಶ್ರೀಚಂದ್ರನಿಂದ (ಕ್ರಿ. ಶ. 1200ಕ್ಕಿಂತ ಹಿಂದೆ) ಅಪಭ್ರಂಶದಲ್ಲಿ ರಚಿತ ವಾಯಿತು.

ಹರಿಭದ್ರನ ಸಮರಾಇಚ್ಚ ಕಥಾ, ಮಲಯಸುಂದರೀ ಕಹಾ, ಪಾದಲಿಪ್ತ ಸೂರಿ ಬರೆದ ತರಂಗವತೀ ಗ್ರಂಥದ ಸಂಕ್ಷೇಪವಾದ ತರಂಗಲೋಲಾ—ಇವು ಪ್ರಾಕೃತ ದಲ್ಲಿಯೂ ಧನಪಾಲನ ಭವಿಸ್ಸಕ್ತ ಕಹಾ ಅಪಭ್ರಂಶದಲ್ಲಿಯೂ ಬರೆಯಲ್ಪಟ್ಟಿವೆ. ಸಿದ್ಧರ್ಷಿ ಕ್ರಿ. ಶ. 906ರಲ್ಲಿ ಸಂಸ್ಕೃತದಲ್ಲಿ ಬರೆದ ಉಪಮಿತಿಭವ ಪ್ರಪಂಚಾ ಕಥಾ ಎಂಬ ದೊಡ್ಡ ಗದ್ಯಗ್ರಂಥದಲ್ಲಿ ಅನೇಕ ಒಳಕಥೆಗಳಿವೆ.

ದೊಡ್ಡ ಕಥೆಗಳಲ್ಲದೆ ಜೈನರಿಂದ ಸಂಸ್ಕೃತ ಶ್ಲೋಕರೂಪದಲ್ಲಿ ಕಥಾನಕಗಳು 100ಕ್ಕಿಂತ ಅಧಿಕವಾಗಿವೆ. ಜಿನಕೀರ್ತಿಯ ಚಂಪಕಶ್ರೇಷ್ಠಿ ಕಥಾನಕ (ಕ್ರಿ. ಶ. 1450), ಪಾಲಗೋಪಾಲ-ಕಥಾನಕ, ಉತ್ತಮಚರಿತ್ರ ಕಥಾನಕ, ಪಾಪಬುದ್ಧಿ ಧರ್ಮಬುದ್ಧಿ ಕಥಾನಕ—ಇವು ಈ ಜಾತಿಗೆ ಸೇರಿದುವು. ಕಾಲಕಾಚಾರ್ಯಕಥಾನಕ ಪ್ರಾಕೃತ ದಲ್ಲಿದೆ.

ಬೌದ್ಧ ಸಾಹಿತ್ಯದಲ್ಲಿಯೂ ಕಥೆಗಳೂ ಕಥಾಪುಸ್ತಕಗಳೂ ಅಧಿಕ ಸಂಖ್ಯೆ ಯಲ್ಲಿ ದೊರೆಯುತ್ತವೆ. ಹೀನಯಾನ ಆಗಮ ಗ್ರಂಥಗಳು ಪಾಲಿ ಭಾಷೆಯಲ್ಲಿವೆ. ಸುತ್ತಪಿಟಕದ ಖುದ್ದಕನಿಕಾಯದಲ್ಲಿರುವ ಜಾತಕತ್ಥ ವಣ್ಣನಾ ಎಂಬ ಪುಸ್ತಕದಲ್ಲಿ ಗೌತಮ ಬುದ್ಧನ ಪೂರ್ವಜನ್ಮಗಳಿಗೆ ಸಂಬಂಧಿಸಿದ 547 ಕಥೆಗಳಿವೆ. ಇದೇ ಖುದ್ದ ಕನಿಕಾಯದಲ್ಲಿರುವ ವಿಮಾನವತ್ಥು, ಪೇತವತ್ಥು, ಚರಿಯಾಪಿಟಕ ಎಂಬ ಗ್ರಂಥ ಗಳಲ್ಲಿಯೂ ಥೇರಗಾಥಾ ಮತ್ತು ಥೇರಿಗಾಥಾ ಎಂಬ ಪುಸ್ತಕಗಳಲ್ಲಿಯೂ ಅನೇಕ ಕಥೆಗಳಿವೆ.

ಬುದ್ಧಘೋಷನಿಂದ ಪಾಲಿಭಾಷೆಯಲ್ಲಿ ಬರೆಯಲ್ಪಟ್ಟ ಧಮ್ಮಪದದ ವ್ಯಾಖ್ಯಾನ ದಲ್ಲಿಯೂ ಅನೇಕ ಕಥೆಗಳಿವೆ.

ಗೌತಮಬುದ್ಧನ ಪೂರ್ವಜನ್ಮದ ಕಥೆಗಳನ್ನು ವರ್ಣಿಸುವ ಹೀನಯಾನದ ಪಾಲಿ ಭಾಷೆಯ ಜಾತಕಕ್ಕೆ ಮಹಾಯಾನ ಬೌದ್ಧರಲ್ಲಿನ ಅವದಾನ ಸಂವಾದಿಯಾಗಿದೆ. ಮಹಾಯಾನ ಬೌದ್ಧರ ಇತರ ಗ್ರಂಥಗಳಂತೆ ಅವದಾನಗಳೂ ಅಶುದ್ಧ ಸಂಸ್ಕೃತದಲ್ಲಿ ಬರೆಯಲ್ಪಟ್ಟಿವೆ. ಮಹಾವಸ್ತು ಅವದಾನ ಇಂಥ ಗ್ರಂಥಗಳಲ್ಲಿ ಮುಖ್ಯವಾದು ದೊಂದು. ಇದರಲ್ಲಿ ಬುದ್ಧನ ಪೂರ್ವಜನ್ಮದ ಕಥೆಗಳಲ್ಲದೆ ನೂರಾರು ಇತರ ಕಥೆಗಳೂ ಇವೆ. ಅವದಾನಶತಕದಲ್ಲಿ (ಕ್ರಿ. ಶ. 250ಕ್ಕೆ ಹಿಂದಿನದು) 100 ಅವದಾನಗಳಿವೆ. ಕಲ್ಪದ್ರುಮಾವದಾನಮಾಲಾ, ಅಶೋಕಾವದಾನಮಾಲಾ, ರತ್ನಾವದಾನಮಾಲಾ,

ದ್ವಾವಿಂಶತ್ಯಾವದಾನ, ಭದ್ರಕಲ್ಪಾವದಾನ, ಕ್ಷೇಮೇಂದ್ರರಚಿತವಾದ ಅವದಾನ ಕಲ್ಪಲತಾ, ದಿವ್ಯಾವದಾನ, (ಕ್ರಿ. ಶ. 450ಕ್ಕೆ ಹಿಂದಿನದು),-ಆರ್ಯಶೂರನ ಜಾತಕ ಮಾಲ.—ಇವುಗಳಲ್ಲೆಲ್ಲ ಅನೇಕ ಕಥೆಗಳಿವೆ. ಇವುಗಳಲ್ಲಿ ಕೆಲವು ಪದ್ಯದಲ್ಲಿಯೂ ಕೆಲವು ಗದ್ಯದಲ್ಲಿಯೂ ಬರೆಯಲ್ಪಟ್ಟಿವೆ.

ಬುದ್ಧನ ಜನ್ಮಕಥೆ ಲಲಿತವಿಸ್ತಾರ ಎಂಬ ಗದ್ಯಗ್ರಂಥದಲ್ಲಿಯೂ (ಇದನ್ನು ಕಾವ್ಯವೆನ್ನಬಹುದು) ಅಶ್ವಘೋಷನ ಬುದ್ಧಚರಿತ ಕಾವ್ಯದಲ್ಲಿಯೂ (ಕ್ರಿ. ಶ. 2ನೆಯ ಶತಮಾನ) ವರ್ಣಿತವಾಗಿದೆ. ಅಶ್ವಘೋಷನ ಸೌಂದರನಂದ ಕಾವ್ಯದಲ್ಲಿ ದೇವದತ್ತನ ಮತ್ತು ಸುಂದರಿಯ ಕಥೆ ಬಂದಿದೆ.

ಪಾಲಿ ಭಾಷೆಯಲ್ಲಿರುವ ಗ್ರಂಥಗಳನ್ನು ಕುರಿತು ಒಂದು ವಿಷಯವನ್ನು ಮನಸ್ಸಿನಲ್ಲಿಡಬೇಕು. ಆ ಗ್ರಂಥಗಳು ಸಿಂಹಳದ್ವೀಪದ ವಿಹಾರಗಳಲ್ಲಿ ಭಿಕ್ಷುಗಳಿಂದ ಬರೆಯಲ್ಪಟ್ಟುವು. ಆದ್ದರಿಂದ ಆ ಪಾಲಿ ಪುಸ್ತಕಗಳಲ್ಲಿರುವ ನಿರೂಪಣೆ ಭರತಖಂಡದ ವಸ್ತುಸ್ಥಿತಿಯನ್ನು ಯಥಾವತ್ತಾಗಿ ಚಿತ್ರಿಸುತ್ತದೆ ಎಂದು ತಿಳಿಯಲಾಗದು.

1848ರಲ್ಲಿ ಬಾನ್ ನಗರದಲ್ಲಿ ಸಂಸ್ಕೃತ ಪಂಚತಂತ್ರ ಪ್ರಕಟವಾದಾಗ, ಬೆನ್‌ಫೆ ಎಂಬ ಪಂಡಿತ ಅದನ್ನು ಜರ್ಮನ್ ಭಾಷೆಗೆ ಪರಿವರ್ತಿಸಿ ಯೂರೋಪ್ ಖಂಡದ ನಾನಾ ದೇಶಗಳಲ್ಲಿ ಪ್ರಚಲಿತವಾಗಿದ್ದ ಕಥೆಗಳಿಗೂ ಪಂಚತಂತ್ರ ಕಥೆಗಳಿಗೂ ಇರುವ ಸಾದೃಶ್ಯವನ್ನು ಕುರಿತು ಅನೇಕ ಲೇಖನಗಳನ್ನು ಬರೆದ. ಇವನ್ನು ಓದಿದ ಅನಂತರ ಎಲ್ಲ ವಿಧವಾದ ಕಥೆಗಳಿಗೂ ಭರತಖಂಡವೇ ತೌರುಮನೆಯೆಂಬ ಅಭಿಪ್ರಾಯ ಕೆಲವು ವಿದ್ವಾಂಸರಲ್ಲಿ ಮೂಡಿಬಂತು. ಇನ್ನು ಕೆಲವರಿಗಾದರೆ ಈ ಅಭಿಪ್ರಾಯ ಸಮ್ಮತವಾಗದೇ ಹೋದರೂ ಪಂಚತಂತ್ರದಲ್ಲಿರುವಂಥ, ಪ್ರಾಣಿಗಳು ಪರಸ್ಪರ ಮಾತನಾಡುವ ಕಥೆಗಳ (ಬೀಸ್ಟ್ ಫೇಬಲ್ಸ್) ವಿಷಯದಲ್ಲಿ ಮಾತ್ರ ಈ ಅಭಿಪ್ರಾಯ ಸಾಧ್ಯವಾದುದೆಂದು ಅವರು ವಾದಿಸಿದರು. ಇನ್ನು ಕೆಲವರಾದರೆ ಈ ವಿಧವಾದ ಎಲ್ಲ ಕಥೆಗಳ ವಿಷಯವಾಗಿಯೂ ಯಾವ ನಿರ್ಣಯವನ್ನು ಮಾಡುವುದೂ ತಪ್ಪೆಂದೂ ಒಂದೊಂದು ಕಥೆಯ ವಿಷಯವನ್ನೂ ಪರಿಶೀಲಿಸಿ ನೋಡಿ ಅದರ ಉತ್ಪತ್ತಿಸ್ಥಾನ ಭರತಖಂಡವೋ ಅಥವಾ ಗ್ರೀಸ್ ದೇಶವೋ ಎಂಬುದನ್ನು ನಿರ್ಣಯಿಸಬೇಕೆಂದೂ ಅಭಿಪ್ರಾಯಪಟ್ಟರು. ಮೇಲೆ ಹೇಳಿದಂತೆ ಋಕ್ಸಂಹಿತೆಯ 10,28,4ನೆಯ ಮಂತ್ರದ 3ನೆಯ ಪಾದದಲ್ಲಿ ನರಿಯೂ ಸಿಂಹವೂ ಮಾತನಾಡುವ ಬಿಲವೂ ಎಂಬ ಪಂಚತಂತ್ರದ ಕಥೆಯ ಪ್ರಸ್ತಾಪವಿರುವುದೆಂಬ ಊಹೆ ನಿಜವಾಗಿದ್ದಲ್ಲಿ ಪ್ರಾಣಿಗಳು ಪರಸ್ಪರ ಮಾತನಾಡುವ ಕಥೆಗಳಿಗೆ ಭರತಖಂಡವೇ ತೌರುಮನೆಯೆಂಬ ಅಭಿಪ್ರಾಯ ಸಾಧುವಾದುದೆಂದು ಎಲ್ಲರೂ ಒಪ್ಪಬಹುದು.

ಅರೇಬಿಯನ್ ನೈಟ್ಸ್ ಎಂಬ ಪ್ರಸಿದ್ಧ ಗ್ರಂಥದ ಕಥಾಮುಖಕ್ಕೆ ಭರತಖಂಡವೇ ತೌರೂರೆಂದು ಕಾಸ್ಕಿನ್ ಎಂಬ ಪಂಡಿತ ನಿರ್ಣಯಿಸಿದ್ದಾನೆ. ಇನ್ನು ಕೆಲವರು ಈ ಕಥಾಮುಖ ನೇರವಾಗಿ ಭರತಖಂಡದಿಂದ ಬಂದಿಲ್ಲ, ಇದು ಪಾರ್ಸಿದೇಶದ ಪಾಲಿ ಭಾಷೆಯ ಅನುವಾದದ ಮೂಲಕ ಅರಬ್ಬೀ ಗ್ರಂಥಕ್ಕೆ ಬಂದಿದೆ ಎಂದು ಹೇಳುತ್ತಾರೆ. ಆ ಗ್ರಂಥದಲ್ಲಿರುವ ಅನೇಕ ಕಥೆಗಳ ಹುಟ್ಟೂರು ಭರತಖಂಡವೆಂಬುದನ್ನು ಎಲ್ಲ ಪಂಡಿತರೂ ಒಪ್ಪಿದ್ದಾರೆ.

ಸಿಂದ್ಬಾದ್ ನಾಮೆ ಎಂಬುದು ಶುಕಸಪ್ತತಿಯಂತೆ ಒಂದು ಕಥಾಪುಸ್ತಕ ; ಈ ಪಾರ್ಸೀ ಪುಸ್ತಕ ಸಿರಿಯಾಕ್, ಅರಬ್ಬೀ, ಹೀಬ್ರೂ, ಗ್ರೀಕ್ ಮೊದಲಾದ ಭಾಷೆಗಳಲ್ಲೂ ಇದೆ. ಇದು ಭರತಖಂಡದಿಂದ ಬಂದಿತೆಂದು ಮಸೂದಿ (ಕ್ರಿ. ಶ. 956) ಎಂಬ ಅರಬ್ಬೀ ಲೇಖಕ ಹೇಳಿದ್ದಾನೆ. ಇದರ ಮೂಲ ಭರತಖಂಡದಲ್ಲಿ ದೊರೆತಿಲ್ಲ.

ಹೀಗೆ ಸಂಸ್ಕೃತ ಕಥಾಸಾಹಿತ್ಯ ಪ್ರಾಚೀನವೂ ವಿಪುಲವೂ ಆದ ಪರಂಪರೆಯನ್ನು ಹೊಂದಿದೆ. (ಎ.ಎ.)

**ಕಥಾಸೂತ್ರ (ಜಾನಪದ) :** ಜನಪದ ಕಥೆಗಳ ಧಾಟಿಯಲ್ಲಿ ಅದರಲ್ಲೂ ಮುಖ್ಯವಾಗಿ ಕಥೆಗಳ ಪ್ರಾರಂಭ ಮತ್ತು ಮುಕ್ತಾಯಗಳಲ್ಲಿ ಕಂಡುಬರುವ ಕ್ರಮನಿಯಮಗಳನ್ನು ಇಲ್ಲಿ ಕಥಾಸೂತ್ರ (ಸ್ಟೋರಿ ಫಾರ್ಮುಲ) ಎನ್ನಲಾಗಿದೆ. ಜನಪದವಲ್ಲದ ಇತರ ಯಾವುದೇ ಕಥೆಯಲ್ಲಾದರೂ ಯುಕ್ತ ಪ್ರಾರಂಭ, ಬೆಳವಣಿಗೆ ಹಾಗೂ ಮುಕ್ತಾಯಗಳು ಇರಲೇಬೇಕು. ಆದರೆ ಅವುಗಳಲ್ಲಿ ಏಕರೂಪವಾದ ಕ್ರಮಬದ್ಧತೆಯೇನೂ ಇರಬೇಕಾದುದಿಲ್ಲ. ಏಕೆಂದರೆ ಕಥೆ ಅದನ್ನು ಹೇಳುವವನ ವೈಯಕ್ತಿಕ ಕೃತಿ. ಅದರ ನಿರೂಪಣೆ, ವೈಖರಿ, ವಿವರಣೆ, ಮುಕ್ತಾಯ ಎಲ್ಲ ಅವನ ಮನೋಧರ್ಮಕ್ಕೆ ಸೇರಿದ್ದು. ವೈವಿಧ್ಯ ಬೇಕೆನ್ನುವ ಪ್ರತಿಯೊಬ್ಬ ಕಥೆಗಾರನೂ ತಾನು ಹೇಳುವ ಕಥೆ ನೂತನವಾಗಿರಲೆಂಬ ಅಭಿಲಾಷೆಯಿಂದ ಹೊಸ ರೀತಿಯಲ್ಲದನ್ನು ಹೇಳಲು ಯತ್ನಿಸುತ್ತಾನೆ. ಜನಪದ ಕಥಾನಿರೂಪಣೆಯಲ್ಲೂ ಸ್ವಲ್ಪ ಮಟ್ಟಿಗೆ ಇಂಥ ಸ್ವಾತಂತ್ರ್ಯ ಉಂಟು : ಅಲ್ಲದೆ ಪ್ರಾದೇಶಿಕತೆಯಿಂದಾಗಿಯೂ ಸಹಜವಾಗಿ ವೈವಿಧ್ಯ ಏರ್ಪಡುತ್ತದೆ. ಆದರೂ ಬಹುತೇಕ ಕಥೆಗಳನ್ನು ಪರಿಶೀಲಿಸಿದಾಗ ಅವುಗಳ ಪ್ರಾರಂಭ ವಿವರಣೆ, ಮುಕ್ತಾಯಗಳಲ್ಲಿ ಸುಮಾರಾಗಿ ಏಕರೂಪತೆ ಇರುವಂತೆ ತೋರುತ್ತದೆ.

ಜಾನಪದ ಕಥೆಯಲ್ಲಿ ಮೊಟ್ಟಮೊದಲು ಗಮನಕ್ಕೆ ಬರುವ ಅಂಶವೆಂದರೆ ಅದರ ಆರಂಭ ಮತ್ತು ಮುಕ್ತಾಯಗಳೆರಡಕ್ಕೂ ಗೊತ್ತಾದ ಸೂತ್ರಗಳಿದ್ದು, ಈ ಸೂತ್ರಗಳು ವಿಶ್ವವ್ಯಾಪಕತೆಯನ್ನು ಪಡೆದಿರುತ್ತವೆ—ಎಂಬುದು. ಜಗತ್ತಿನ ಎಲ್ಲ ಕಥೆಗಾರರೂ ತಮ್ಮ ಕಥೆಗಳಲ್ಲಿ ಇಂಥ ಒಂದು ಕ್ರಮವನ್ನು ಅನುಸರಿಸಿದ್ದಾರೆ. ಆದರೆ ಇದಕ್ಕೆ ಅಲ್ಲೊಂದು ಇಲ್ಲೊಂದು ಅಪವಾದಗಳಿರುವುದನ್ನೂ ಅಲ್ಲಗಳೆಯಲಾಗದು.

ಸಾಮಾನ್ಯವಾಗಿ ಜನಪದ ಕಥೆಗಳು ಆರಂಭವಾಗುವುದು—ಒಂದಾನೊಂದು ಕಾಲದಲ್ಲಿ—ಎಂದು. ಅಪ್ಪಟ್ಟಕ್ಕೆ ಒಂದು ಪಟ್ಟಣ, ಆ ಪಟ್ಟಣದಲ್ಲಿ ಒಬ್ಬ ರಾಜ. ಆ ರಾಜನಿಗೊಬ್ಬ ರಾಣಿ ; ಒಂದಾನೊಂದು ಕಾಲದಲ್ಲಿ ಒಂದಾನೊಂದು ಊರಿನಲ್ಲಿ ಒಬ್ಬ ದೊರೆಯಿದ್ದ ; ಒಂದು ಊರು, ಆ ಊರಿನಲ್ಲಿ ಒಬ್ಬ ರಾಜ, ಅವನಿಗೆ ಮಕ್ಕಳಿರಲಿಲ್ಲ—ಇವು ಆರಂಭದ ಕೆಲವು ಸೂತ್ರಗಳು. ಕಥೆಯ ಆರಂಭದಲ್ಲಿ ರಾಜರಾಣಿಯರ ಪ್ರಸ್ತಾಪ ಬಂದು ಅವರಿಗೆ ಮಕ್ಕಳಿರಲಿಲ್ಲವೆಂದು ಹೇಳುವುದು ಜನಪದ ಕಥೆಗಳ ಒಂದು ಸಾಮಾನ್ಯಲಕ್ಷಣ. ಕೆಲವು ಸಾರಿ ವಿಸ್ತೃತ ಸೂತ್ರಗಳೂ ಕಾಣಬರುವುದುಂಟು. ಆರಂಭದ ಒಂದಾನೊಂದು ಕಾಲದಲ್ಲಿ ಎಂಬ ಭಾವನೆ ಇನ್ನೂ ಹೆಚ್ಚು ಬೆಳವಣಿಗೆಯನ್ನು ಪಡೆದಿರುವ ಸಾಧ್ಯತೆಯನ್ನು ಅಲ್ಲಗಳೆಯಲಾಗದು. ಇದಲ್ಲದೆ ವ್ಯಕ್ತಿಗಳ ಮತ್ತು ಅವರು ವಾಸಿಸುವ ಸ್ಥಳಗಳ ಹೆಸರುಗಳಿಂದಲೂ ಕಥೆಗಳು ಪ್ರಾರಂಭವಾಗುತ್ತವೆ. ಉದಾಹರಣೆಗಾಗಿ, ಚಂದ್ರಾವತಿ ಅನ್ನುವುದು ಒಂದು ಪಟ್ಟಣ. ಅಲ್ಲಿಗೆ ಚಂದ್ರಶೇಖರರಾಯ ಅನ್ನುವವನು ಒಬ್ಬ ದೊರೆ—ಎಂಬುದನ್ನು ನೋಡಬಹುದು. ಆರಂಭದ ಇಂಥ ನಮೂನೆ ದಕ್ಷಿಣ ಅಮೆರಿಕದ ಈಶಾನ್ಯ ತೀರಪ್ರದೇಶಗಳಲ್ಲಿ ಪ್ರಚಲಿತವಾಗಿರುವ ಪುರಾಣಕಥೆಗಳಲ್ಲಿಯೂ ಕಾಣಬರುವುದುಂಟು. ಆದರೆ ಒಂದು ಮಾತು ಮಾತ್ರ ಸತ್ಯ. ಉಲ್ಲೇಖಿತ ಹೆಸರುಗಳಿಂದ ಆರಂಭವಾಗುವುದು ಪುರಾಣಕಥೆಗಳಲ್ಲಿ ಸಹಜವಾದುದಾದರೂ ಶುದ್ಧ ಜನಪದಕಥೆಗಳಲ್ಲಿ ಅಲ್ಲವೆನಿಸುತ್ತದೆ. ಹೀಗೆ ಹೆಸರುಗಳು ಕಾಣಿಸಿಕೊಳ್ಳುವುದಕ್ಕೆ ಸಾಹಿತ್ಯಿಕ ಕಥೆಯ ಸಂಪರ್ಕ ಅಥವಾ ಪ್ರಭಾವವೇ ಕಾರಣವಾಗಿರಬೇಕು. ಆದ್ದರಿಂದ ಈ ಮಾದರಿಯ ಆರಂಭ ಶುದ್ಧಜನಪದಕಥೆಗಳ ಜಾಯಮಾನವಲ್ಲ ಎಂದು ಹೇಳಬಹುದು.

ಇನ್ನು ಕೆಲವು ಸಾರಿ ಕಥೆ ಹೇಳುವವರು ತಮ್ಮ ವೈಯಕ್ತಿಕ ಪರಿಸರಕ್ಕೆ ಕಥೆಯ ಆರಂಭವನ್ನು ಪಳಗಿಸಿಕೊಳ್ಳುವುದುಂಟು. ನಮ್ಮೂರಂತೋದು ಒಂದೂರು, ನನ್ನಂತೋಳು ಒಬ್ಬ ಬಡವೆ ; ಸಂಜೀವ್ನಾ ಸಂಜೀವ್ನ ಹೆಂಡ್ತಿ ಸಿದ್ಧಿಯೂ ಪೀಹಳ್ಳಿಯಲ್ಲಿ ಕೂಲಿ ಮಾಡ್ಕಂಡಿದ್ರು—ಇವು ಅಂಥ ಕೆಲವು ಉದಾಹರಣೆಗಳು. ಕಥಾವಕ್ತೃ ತನ್ನನ್ನೊ ತನ್ನ ಊರನ್ನೊ ಅಥವಾ ತನ್ನ ಸಮಕಾಲೀನರಾದ ಮತ್ತಾರನ್ನೊ ಬಳಸಿಕೊಂಡು ಹೇಳುವುದನ್ನು ಮೇಲಿನ ನಿದರ್ಶನಗಳಿಂದ ಗುರುತಿಸಬಹುದು. ಊರು, ರಾಜ, ರಾಣಿ ಮುಂತಾದ ಮಾತುಗಳು ಸಾರ್ವತ್ರಿಕ ಅರ್ಥದಲ್ಲಿ ಬಳಕೆಯಾಗುತ್ತಿದ್ದು ಅವುಗಳ ಬದಲು ಇನ್ನಾವ ಹೆಸರನ್ನೇ ಸೇರಿಸಿದರೂ ಒಟ್ಟು ಕಥಾರಚನೆಯಲ್ಲಿ ವ್ಯತ್ಯಾಸವೇನೂ ಕಾಣಬರದಿರುವುದು ಇದಕ್ಕೆ ಕಾರಣವಾಗಿದೆ. ಅಂತೂ ಕಥೆ ಹೇಳುವವರು ಕಥೆ ಹೇಳುವ ಧಾಟಿಯಲ್ಲಿ ಮಾಡಿಕೊಳ್ಳುವ ವ್ಯತ್ಯಾಸ ಇದು. ಇಂಥ ಸಂದರ್ಭಗಳು ತೀರ ಅಪರೂಪ. ಮೇಲಿನ ವಿವೇಚನೆಯಿಂದ, ಕಥೆಯ ಆರಂಭ ಕೆಲವು ಸೂತ್ರಗಳ ಮೂಲಕವೇ ಆಗುತ್ತದೆ ಎಂಬುದನ್ನು ಸ್ಥಿರಪಡಿಸಿದಂತಾಯಿತು.

ಕಥೆಗಳ ಸೂತ್ರಬದ್ಧ ಆರಂಭದಂತೆ ಸೂತ್ರಬದ್ಧ ಮುಕ್ತಾಯವೂ ಪದೇ ಪದೇ ಕಾಣಿಸಿಕೊಳ್ಳುತ್ತದೆ. ಅಲ್ಲದೆ, ಆರಂಭಕ್ಕಿಂತ ಮುಕ್ತಾಯ ಹೆಚ್ಚು ವೈವಿಧ್ಯವನ್ನು ತೋರಿಸುತ್ತಿದ್ದು, ವಿವರವಾದ ಅಧ್ಯಯನಕ್ಕೆ ವಸ್ತುವಾಗಿದೆ. ಆಮೇಲೆ ಅವರು ಸುಖವಾಗಿ ಬಾಳ್ತಾರೆ ; ಹೀಗೆ ಅವರು ಬಹಳ ಕಾಲ ಸುಖದಿಂದಿದ್ದರು ; ಅವರು ಅಲ್ಲಿ ಸುಖವಾಗಿದ್ದಾರೆ, ನಾವು ಇಲ್ಲಿದ್ದೇವೆ ; ಅವ್ರು ಬಾಳ್ ಬಾಳ್ತಾ ಅಲ್ಲವ್ರೆ, ನಾವು ಬಳ್ಳೆಸೊಪ್ಪಿಗೆ ಬೆಳ್ಳುಳ್ಳಿ ಇಲ್ದೆ ಇಲ್ಲಿವಿ—ಇವು ಮುಕ್ತಾಯದ ಸೂತ್ರಗಳು. ಇಲ್ಲಿಗೆ ಕಥೆ ಮುಗಿಯಿತು—ಎಂಬುದು ಸಾಮಾನ್ಯವಾಗಿ ಸಾರ್ವತ್ರಿಕವಾದ ಮುಕ್ತಾಯದ ಸೂತ್ರವೆನಿಸುತ್ತದೆ. ಆದರೆ ಕೆಲವು ಸಾರಿ ಒಂದು ಕಥೆ ಮುಗಿದ ಕೂಡಲೆ, ಬೇರೊಂದು ಕಥೆ ಹೇಳು ಎಂದು ಕೇಳುವುದರ ಮೂಲಕ ಕೇಳಿದವರ ಹೆಸರು, ಹೇಳಿದವರ ಹೆಸರು ಮುಂತಾದವುಗಳಿಂದ ಕಥೆ ಮುಂದೆ ಸಾಗುತ್ತದೆ. ಬೃಹತ್ ಕಥೆ, ಪಂಚತಂತ್ರ, ಬೇತಾಳಪಂಚವಿಂಶತಿ ಮೊದಲಾದ ಸಾಹಿತ್ಯಿಕ ಕಥೆಗಳಲ್ಲಿ ಇದನ್ನು ಕಾಣಬಹುದು. ಇವುಗಳ ಕಥಾತಂತ್ರವನ್ನೇ ಹಾಗೆ ನಿಯೋಜಿಸಲಾಗಿದೆ.

ಜನಪದ ಕಥೆಗಳ ಮುಕ್ತಾಯ ಸಾಮಾನ್ಯವಾಗಿ ಸುಖಾಂತ, ಅದರಲ್ಲೂ ಮದುವೆಯ ಉತ್ಸವದಲ್ಲಿ. ಆದ್ದರಿಂದ ವಿಶೇಷವಾಗಿ ನೆನೆಯಬಹುದಾದ ಕಥೆಯ ಮುಕ್ತಾಯದ ಸೂತ್ರವಿವರಣೆಯೆಂದರೆ ಮದುವೆಯ ಸಂಭ್ರಮದಲ್ಲಿ ಕಡೆಯಾಗುವುದೇ ಆಗಿದೆ. ಉದಾಹರಣೆಗೆ, ಕೊಟ್ಟಣ ಕುಟ್ಟಿಸಿ, ಪಟ್ಟಣ ಸಾರಿಸಿ, ಕಾಣದವರಿಗೆ

ವಾಲೆ ಬರೆದು, ಕಂಡವರಿಗೆ ಕರಪತ್ರ ಕೊಟ್ಟು ಕಳಿಸಿ, ಉಘೇ ಅಂತ ಮದುವೆ ಮಾಡ್ಕೊಂಡು ಸುಖವಾಗಿದ್ದ—ಎಂಬ ವಿವರಣಾತ್ಮಕ ಸೂತ್ರವನ್ನು ನೋಡಿ. ಕೆಲವು ಸಾರಿ ಈ ಸಂಭ್ರಮದಲ್ಲಿ ಕಥಾವಕ್ತೃ ಕೂಡ ಪ್ರತಿನಿಧಿಯಾಗಿದ್ದನೊ ಎನ್ನಿಸುವಂತೆ ಸಾಕ್ಷಾತ್ತಾದ ಚಿತ್ರಣ ಮೈದುಂಬಿ ನಿಲ್ಲಬಹುದು. ಮುಕ್ತಾಯದಲ್ಲೂ ವಿಸ್ತೃತ ಸೂತ್ರಗಳು ಕಾಣಬರುವುದನ್ನು ಮೇಲಿನ ನಿದರ್ಶನದಿಂದ ಶ್ರುತಪಡಿಸಬಹುದು. ಈ ಸಂದರ್ಭದಲ್ಲಿ ಕಥೆಗಳು ಈ ಯಾವುದೇ ಸೂತ್ರಗಳಿಲ್ಲದೆ ಇದ್ದಕ್ಕಿದ್ದಹಾಗೆ ಮುಕ್ತಾಯವಾಗುವ ಕೆಲವಮಟ್ಟಿನ ಸಾಧ್ಯತೆಯನ್ನೂ ನಿರಾಕರಿಸುವಂತಿಲ್ಲ. ಕೆಲವು ವೇಳೆ ಕಥಾವಕ್ತೃ ಕೇಳುಗನಲ್ಲಿ ಆಸಕ್ತಿಯನ್ನು ಕೆರಳಿಸುವುದಕ್ಕಾಗಿ ಕಥೆಯನ್ನು ಇದ್ದಕ್ಕಿದಂತೆ ನಿಲ್ಲಿಸುವುದುಂಟು. ಆಗ ಕೇಳುಗನ ಪ್ರಶ್ನೆ, ಅನಂತರ ವಕ್ತೃವಿನ ಉತ್ತರ—ಹೀಗೆ ಕಥೆ ನಡೆಯುತ್ತದೆ. ಇಲ್ಲಿ ಕಥೆ ಅವಶ್ಯವಾಗಿ ಕ್ರೀಡೆಯಾಗಿಬಿಡುತ್ತದೆ. ಕಥೆಗಳ ಕಡೆಯಲ್ಲಿ ಶುಭಕಾಮನೆ, ಮತ್ತೊಂದು ಕಥೆ ಹೇಳುವಂತೆ ಪ್ರಾರ್ಥನೆ, ಕಥೆಯನ್ನು ಕಲಿತದ್ದೆಲ್ಲಿ ಎಂಬುದರ ವಿಚಾರಣೆ—ಇವುಗಳಿಂದ ಮುಕ್ತಾಯವಾಗುವುದು ಅಪರೂಪ.

ಈ ಸಮಯದಲ್ಲಿ ನೆನೆಯಬಹುದಾದ ಮತ್ತೊಂದು ವಿಷಯವೆಂದರೆ, ಕಥೆಯ ಮಧ್ಯದಲ್ಲಿ ಕಥಾವಕ್ತೃ ಆಸಕ್ತಿಯಿಂದ ಶ್ರೋತೃಗಳನ್ನು ಕುರಿತು ಕೇಳುವ ಪ್ರಶ್ನೆ ; ಶ್ರೋತೃಗಳು ತಾವು ಕೇಳಿದ್ದನ್ನು ಖಾಯಂಗೊಳಿಸುವ ದೃಷ್ಟಿಯಿಂದ ಮಾಡುವ ಹೂಂಗುಟ್ಟುವಿಕೆ.

ಇನ್ನೊಂದು ವಿಚಾರ. ಸ್ಥಳಪುರಾಣದ ಕಥೆ ಆ ಸ್ಥಳದ, ಗ್ರಾಮದೇವತೆಯ ಹಾಗೂ ಇನ್ನಾರದೊ ಪ್ರಚಲಿತರ ಹೆಸರುಗಳಿಂದ ಆರಂಭವಾಗುತ್ತದೆ; ನಂಬಿ ಬಂದ ಆಚಾರವಿಚಾರಗಳ ಪದ್ಧತಿ ಸಂಪ್ರದಾಯಗಳ ವಿವರಣೆಯೊಡನೆ ಮುಕ್ತಾಯವಾಗುತ್ತದೆ. ಇದಲ್ಲದೆ, ನೀತಿಕಥೆಗಳು (ಕೆಲವು ಸಾರಿ ಪ್ರಾಣಿಕಥೆಗಳು) ಅಂತ್ಯದಲ್ಲಿ ಸೂತ್ರಬದ್ಧವಾದ ನೀತಿವಾಕ್ಯವೊಂದರಿಂದ ಮುಕ್ತಾಯವಾಗುವುದೂ ಸಹಜವಾಗಿದೆ. ಕಾಗೆಯನ್ನು ಮೋಸಮಾಡುವ ನರಿ, ಸಿಂಹವನ್ನು ಬಾವಿಗೆ ಕೆಡವಿದ ಮೊಲ—ಇಂಥ ಕಥೆಗಳನ್ನು ಉದಾಹರಿಸಬಹುದು.

ಹೀಗೆ ಜನಪದ ಕಥೆಯ ಆರಂಭ ಮತ್ತು ಮುಕ್ತಾಯ ಸೂತ್ರ ಬದ್ಧ ನೆಲಗಟ್ಟಿನ ಮೇಲೆ ರೂಪಿತವಾಗಿದೆ. ಕಥಾಸೂತ್ರವನ್ನು ಕುರಿತಾದ ಆಲೋಚನೆಯಲ್ಲಿ ಸೂತ್ರ ಕಥೆ ಮತ್ತು ಸಂಚಿತಕಥೆ ಎಂಬೆರಡು ಪ್ರಕಾರಗಳನ್ನು ಆಸಕ್ತಿಯಿಂದ ಅವಲೋಕಿಸಬಹುದು. ಒಂದೇ ಬಗೆಯ ಘಟನೆ, ಪದ್ಯ ಅಥವಾ ನುಡಿಗಟ್ಟುಗಳು ಪುನರಾವರ್ತನೆಗೊಳ್ಳುವ ಏಕರೀತಿಯ ಘಟನಾವಳಿಗಳನ್ನು ಚಿತ್ರಿಸುವ ಕಥೆ ಸೂತ್ರಕಥೆಯೆನಿಸುತ್ತದೆ. ಕಥೆಯಲ್ಲಿ ಏನು ನಡೆಯುತ್ತದೆ ಎಂಬುದು ಇಲ್ಲಿ ಮುಖ್ಯವಲ್ಲ. ಅದನ್ನು ಯಾವರೀತಿಯಲ್ಲಿ ಹೇಳಿದೆ ಎಂಬುದು ಇಲ್ಲಿ ಗಮನಾರ್ಹ. ಆದ್ದರಿಂದ ಚಮತ್ಕಾರವೇ ಇಲ್ಲಿ ಮುಖ್ಯವಾಗಿಬಿಡುತ್ತದೆ. ಇನ್ನೂ ಸ್ಪಷ್ಟವಾದ ಪ್ರಕಾರವೆಂದರೆ ಸಂಚಿತಕಥೆ. ಘಟನೆ ಅಥವಾ ನುಡಿಗಳ ಪುನರಾವರ್ತನೆಗಳ ಸಂಚಯವೇ ಇದು. ಈ ಘಟನಾಸರಣಿಗಳು ನಿಯತಸೂತ್ರದ ಮೇಲೆ ಬಂಧಿತವಾಗಿರುತ್ತವೆ. ಸಂಭಾಷಣೆಗಳ ಮೂಲಕ ವಿವರಗಳು ಬೆಳೆಯುತ್ತ ಹೋಗುತ್ತವೆ. ಪ್ರತಿಯೊಂದು ಘಟನೆಯೊಡನೆಯೂ ಈ ಸಂಚಯ ಕಾರ್ಯ ನಡೆಯುವುದಲ್ಲದೆ, ಪ್ರತಿ ಘಟನೆಯೂ ಹಿಂದಿನ ಘಟನೆಯನ್ನು ಅವಲಂಬಿಸಿರುತ್ತದೆ. ಕೆಲವು ಸಾರಿಯ ಇಂಥ ಅಸಂಬದ್ಧ ಸೇರಿಕೆ ಮನೋರಂಜನೆಯ ವಸ್ತುವಾಗುತ್ತದೆ.

ಸೂತ್ರಕಥೆ ಮತ್ತು ಸಂಚಿತ ಕಥೆಗಳೆರಡರಲ್ಲೂ ಕಾಣಬರುವ ಮೊದಲ ಗುಣವೆಂದರೆ ಪುನರಾವರ್ತನೆ ; ಸಾಮಾನ್ಯವಾಗಿ ಇದು ನಿರಂತರ ಸಂಕಲನಗಳ ಮೂಲಕ ಆದುದು. ಇವೆರಡರಲ್ಲಿಯೂ ಕಥಾರೂಪವೇ ಪ್ರಧಾನವಾದುದು. ಬಹುಸಾರಿ ಇವುಗಳ ಕಥೆ ಕ್ರೀಡೆಯಾಗಿಬಿಡುತ್ತದೆ. ಹೀಗೆ ಸೂತ್ರಾತ್ಮಕವಾಗಿ ಸಾಗುವುದರಿಂದ ಇವನ್ನಿಲ್ಲಿ ನೆನೆಯಬಹುದು. (ಆರ್.ಜಿ.)

**ಕಥೆಯೊಳಗಣ ಕಥೆ :** ದೊಡ್ಡ ಕಥೆಯನ್ನು ಹೇಳುತ್ತಿರುವಾಗ ಮಧ್ಯೆ ಮಧ್ಯೆ ಬರುವ ಚಿಕ್ಕ ಕಥೆಗಳು. ಅಂತರ್ಗತ ಕಥಾವಳಿ ಎಂದೂ ಕರೆಯಬಹುದು. ಬಲು ಹಿಂದಿನಿಂದಲೂ ಇವು ಬಳಕೆಯಲ್ಲಿವೆ. ನೀತಿಯನ್ನು ಸಾರುತ್ತಲೊ ಹೇಳಿಕೆಗೆ ದೃಷ್ಟಾಂತವಾಗಿಯೊ ವಾದವೊಂದರ ಸಮರ್ಥನೆಗಾಗಿಯೊ ಖಂಡನಕ್ಕಾಗಿಯೊ ಇವು ಬಂದಿರಬಹುದು. ನಯಸೇನನ ಧರ್ಮಾಮೃತದಲ್ಲಿ ಇಂಥವಿವೆ. ಇವು ಸಾಧಾರಣವಾಗಿ ಚಿಕ್ಕವು. ಆದೇ ಬಾಣನ ಕಾದಂಬರಿಯಲ್ಲಿ ಬರುವ ಒಳಕಥೆಗಳು ಸುದೀರ್ಘವಾದುವು. ಪಾಶ್ಚಾತ್ಯರ ರೋಮಾನ್ಸ್ ಮತ್ತು ನಾವೆಲ್‌ಗಳಲ್ಲಿ ಕಾಣಬರುವಂತೆ ಅಷ್ಟು ದೊಡ್ಡವೂ ಅಷ್ಟು ಚಿಕ್ಕವೂ ಅಲ್ಲದ ಕಥೆಗಳೂ ಉಂಟು. 17 ಮತ್ತು 18ನೆಯ ಶತಮಾನದ ಫ್ರಾನ್ಸಿನಲ್ಲಿ ಅದ್ಭುತವಾಗಿ ಮಾರಾಟವಾಗುತ್ತಿದ್ದ ರೋಮಾನ್ಸುಗಳಲ್ಲಿ ಒಳ ಕಥೆಯ ಉಪಯೋಗ ಪ್ರಾರಂಭವಾಯಿತು. ಸ್ಕೂಡೆರಿ, ಮೆರಿವೊ ಮೊದಲಾದವರಿಗೆ ಅದು ಇಲ್ಲದಿದ್ದರೆ ಆಗುತ್ತಿರಲಿಲ್ಲ. ಅಷ್ಟೇ ಅಲ್ಲದೆ ಅವರಲ್ಲಿ ಕಥೆಯೊಳಗೆ ಬಂದ ಕಥೆಯೊಳಕ್ಕೆ ಇನ್ನೊಂದು ಕಥೆ ಬಂದು ಸೇರುವುದೂ ಉಂಟು. 18, 19ನೆಯ ಶತಮಾನಗಳ ಅನೇಕ ಕಾದಂಬರಿಕಾರರು ಒಳಕಥೆಯ ನೆರವನ್ನು ಅತ್ಯುತ್ತಮವಾಗಿ ಉಪಯೋಗಿಸಿಕೊಂಡಿದ್ದಾರೆ.

ಕಥೆಯೊಳಗೆ ಕಥೆಯನ್ನು ಕೂಡಿಸುವುದಕ್ಕೆ ಕಥೆಗಾರ ಕುಶಲನಾಗಿರಬೇಕು. (1) ಮೂಲಕಥೆಯ ಸರಣಿಗೆ ಒಳಕಥೆ ಅಂಗಿಕವಾಗಿ ಹೊಂದಿಕೊಂಡಿರಬೇಕು; ಆದ್ದರಿಂದ ಇದು ಸಹಜವಾಗಿ ತರ್ಕಸಮ್ಮತವಾಗಿ ಒಪ್ಪಾಗಿ ಎದ್ದುಬಂದಂತಿರಬೇಕು. ಅಷ್ಟಾಗಿ ಇದು ಮುಖ್ಯವಲ್ಲ, ಗೌಣ ಎಂಬ ಸೂತ್ರವನ್ನು ಎಂದೂ ಉಲ್ಲಂಘಿಸಬಾರದು. (2) ಒಳಕಥೆಯನ್ನು ಓದುವಾಗ ಮೂಲಕಥೆಯ ನೆನಪು ಮಾಸಬಾರದು. (3) ಒಳಕಥೆ ತನ್ನ ಉದ್ದೇಶಸಾಧನೆಗೆ ಎಷ್ಟು ಬೇಕೋ ಅಷ್ಟೇ ಲಂಬವಾಗಿರಬೇಕು. ನಿಧಾನವಾದ ನಡೆಗಾಗಲಿ ವಿಳಂಬ ವರ್ಣನೆಗಾಗಲಿ ಇಳಿದು ಮೂಲಕಥೆಗೆ ಅಡಚಣೆಯಾಗಬಾರದು. (4) ಅದರಿಂದ ಸಾಕಷ್ಟು ವೈವಿಧ್ಯ ಉಂಟಾಗಿ ಚಿತ್ತಾಹ್ಲಾದ ಹೆಚ್ಚಬೇಕು. ಒಳಕಥೆಯನ್ನು ಹೇಳುವ ಪಾತ್ರಕ್ಕೂ ಸಮಯ ಸನ್ನಿವೇಶಕ್ಕೂ ಅದು ಸಮಂಜಸವಾಗಿ ಇದ್ದಲ್ಲಿ ಮೂಲಕಥೆಯ ಧಾಟಿಯಿಂದ ಸ್ವಲ್ಪ ಭಿನ್ನತೆ ಕಂಡುಬಂದು ಒಟ್ಟು ರಚನೆ ರಂಜಕವಾಗುತ್ತದೆ. (5) ಒಳಕಥೆಯ ವಿಚಾರದಲ್ಲಿ ಮಿತಿ ಮತ್ತು ಔಚಿತ್ಯಗಳು ಹೊನ್ನ ನೇಮ.

ಕಥೆಯೊಳಗಿನ ಕಥೆಗೂ ಚೌಕಟ್ಟಿನೊಳಗಣ ಕಥೆಗೂ (ಸ್ಟೋರಿ ವಿದಿನ್ ಎ ಫ್ರೇಮ್; ಫ್ರೇಮ್-ಸ್ಟೋರಿ) ಸ್ಪಷ್ಟ ವ್ಯತ್ಯಾಸವಿದೆ. 1001 ರಾತ್ರಿಗಳು, ಬೇತಾಳ ಪಂಚವಿಂಶತಿ, ಚಾಸರನ ಕ್ಯಾಂಟರ್ಬರಿ ಟೇಲ್ಸ್, ಬೊಕ್ಯಾಕ್ಕಿಯೊವಿನ ಡೆಕಮೆರಾನ್, ದಶಕುಮಾರಚರಿತೆ ಮುಂತಾದವು ಒಂದು ಚೌಕಟ್ಟಿನೊಳಗೆ ಹಿಡಿದಿಟ್ಟಿರುವ ನಾನಾ ಕಥೆಗಳ ಸಂಕಲನ. ಕಥೆಗಳನ್ನು ಕೂಡಿಸಿರುವ ವಿಧಾನ ಚಮತ್ಕಾರವಾಗಿರಬಹುದು. ಆದರೂ ಆ ಕಥೆಗಳು ಬೇರೆ ಬೇರೆ. ತಮ್ಮ ತಮ್ಮ ಸ್ವಂತಿಕೆಯಿಂದಲೇ ಅವು ರುಚಿಕರ.

ಕಾದಂಬರಿಯ (ನಾವೆಲ್) ಇನ್ನೊಂದು ಪ್ರಕಾರದಿಂದಲೂ ಕಥೆಯೊಳಗಿನ ಕಥೆ ವಿಭಿನ್ನ. ಕೆಲವು ಕಾದಂಬರಿಗಳಲ್ಲಿ ಎರಡೊ ಮೂರೊ ಕಥಾವಸ್ತು (ಡಬಲ್ ಪ್ಲಾಟ್, ಟ್ರಿಬಲ್ ಪ್ಲಾಟ್) ಸಂಯೋಜಿತವಾಗುತ್ತವೆ. ಒಂದಕ್ಕೊಂದು ಸಾದೃಶ್ಯವಾಗಿಯೊ ವ್ಯತಿರೇಕವಾಗಿಯೊ ಇವು ಜರುಗಿ ಸಮಷ್ಟಿಯನ್ನು ಸಂಕೀರ್ಣಗೊಳಿಸುತ್ತವೆ. ಇವನ್ನು ಕಥೆಯೊಳಗಿನ ಕಥೆಯನ್ನಾಗಿ ಭಾವಿಸಲಾಗದು. (ಎಸ್.ವಿ.ಆರ್.)

**ಕಥೈಯೆನ್ ಗಣರಾಜ್ಯ :** ಅಲೆಕ್ಸಾಂಡರನ ಭಾರತ ದಂಡಯಾತ್ರೆಯ ಕಾಲದಲ್ಲಿ, ರಾವಿ ನದಿಯ ಪೂರ್ವದಂಡೆಯ ಮೇಲೆ ಈಗಿನ ಲಾಹೋರ್ ಮತ್ತು ಅಮೃತಸರಗಳ ಹಲವು ಭಾಗಗಳಲ್ಲಿ ಇದ್ದ ಒಂದು ಗಣರಾಜ್ಯ. ಅತನೊಂದಿಗೆ ಬಂದಿದ್ದ ಗ್ರೀಕ್ ಲೇಖಕರು ಈ ರಾಜ್ಯದ ಬಗ್ಗೆ ಅನೇಕ ವಿವರಗಳನ್ನು ನೀಡಿದ್ದಾರೆ. ಸಂಕಲ ಇದರ ರಾಜಧಾನಿ. ಇದು ಕೆಲಕಾಲ ಅತ್ಯಂತ ಪ್ರಬಲವಾಗಿತ್ತೆಂದೂ ಅಲೆಕ್ಸಾಂಡರನಿಂದ ಪರಾಜಿತವಾಗುವ ಮೊದಲು ಸುತ್ತುಮುತ್ತಿನ ಇತರ ಗಣರಾಜ್ಯಗಳನ್ನೂ ಪುರೂರವ, ಅಭಿಸಾರ ಮೊದಲಾದ ರಾಜರನ್ನೂ ಯುದ್ಧಗಳಲ್ಲಿ ಸೋಲಿಸಿದ್ದಾಗಿಯೂ ಅರೆಯನ್ ವರ್ಣಿಸಿದ್ದಾನೆ. ಅಲೆಕ್ಸಾಂಡರನ ಆಕ್ರಮಣವನ್ನು ತಡೆಗಟ್ಟಲು ಈ ಗಣರಾಜ್ಯದ ಸೈನ್ಯ ಶಕಟವ್ಯೂಹವನ್ನು ರಚಿಸಿಕೊಂಡು ವೀರಾವೇಶದಿಂದ ಹೋರಾಡಿತು. ಅದರೆ ಅಲೆಕ್ಸಾಂಡರನ ಅಗಾಧ ಸೈನ್ಯವನ್ನು ಗೆಲ್ಲುವುದು ಇದರಿಂದಾಗಲಿಲ್ಲ.

ಈ ಜನರ ಅನೇಕ ರಾಜಕೀಯ ಮತ್ತು ಸಾಮಾಜಿಕ ಪದ್ಧತಿಗಳನ್ನು ಗ್ರೀಕ್ ಲೇಖಕರಿಂದ ಅರಿಯಬಹುದಾಗಿದೆ. ಪರಾಕ್ರಮಿಯೂ ಸುಂದರನೂ ಆದವನನ್ನು ಇವರು ತಮ್ಮ ಗಣತಂತ್ರದ ಮುಖ್ಯನನ್ನಾಗಿ ಆರಿಸುತ್ತಿದ್ದರು. ವಿವಾಹಕ್ಕೆ ಜಾತಿಯ ಕಟ್ಟಿರಲಿಲ್ಲ. ವಧೂವರರ ವಿವಾಹಕ್ಕೆ ಪರಸ್ಪರರ ಸಮ್ಮತಿಯೇ ಮುಖ್ಯ. ಬಳುವಳಿ ಪದ್ಧತಿ ಇರಲಿಲ್ಲ. ಗಣರಾಜ್ಯದಲ್ಲಿ ಜನಿಸಿದ ಮಕ್ಕಳು ಪ್ರಥಮತಃ ರಾಷ್ಟ್ರೀಯರು ; ಅನಂತರ ವ್ಯಕ್ತಿಗಳು. ಮಕ್ಕಳಿಗೆ ಎರಡು ತಿಂಗಳಾಗಿರುವಾಗ ಅವುಗಳ ಆರೋಗ್ಯವನ್ನು ಪರೀಕ್ಷಿಸಿ, ದುರ್ಬಲ ಮಕ್ಕಳನ್ನು ವಧಿಸಿ ಸುದೃಢವಾದವನ್ನು ಮಾತ್ರ ಉಳಿಸಿಕೊಂಡು ಪೋಷಿಸುವ ವ್ಯವಸ್ಥೆಯಿತ್ತು. ಗ್ರೀಸಿನ ಸ್ಪಾರ್ಟದಲ್ಲಿ ಕೂಡ ಇಂಥದೇ ಪದ್ಧತಿಯಿತ್ತೆಂಬುದನ್ನು ಇಲ್ಲಿ ನೆನೆಯಬಹುದು. ಕಥೈಯೆನ್ ಹೆಂಗಸರು ಸತೀ ಪದ್ಧತಿ ಅನುಸರಿಸುತ್ತಿದ್ದರು. ಗ್ರೀಕ್ ವಿದ್ವಾಂಸರು ಕಥೈಯೆನ್‌ಗಳ ಆಳವಾದ ತತ್ತ್ವಶಾಸ್ತ್ರಜ್ಞಾನವನ್ನೂ ಸೂಕ್ಷ್ಮಮತಿಯನ್ನೂ ಪ್ರಶಂಸಿದ್ದಾರೆ. ಕಠೋಪನಿಷತ್ತು ಮತ್ತು ಕಟಕ ಸಂಹಿತೆ ಕಥೈಯೆನ್ ವಿದ್ವಾಂಸರಿಂದ ರಚಿತವಾಗಿರಬೇಕೆಂದು ಕೆ. ಪಿ. ಜಯಸ್ವಾಲರ ಅಭಿಪ್ರಾಯ. (ಜಿ.ಆರ್.ಆರ್.)

**ಕದಂಬ :** ರೂಬಿಯೇಸೀ ಕುಟುಂಬಕ್ಕೆ ಸೇರಿದ ಸುಂದರವಾದ ಹೂ ಬಿಡುವ ಮರ. ಆಂಥೊಸೆಫಾಲಸ್ ಕದಂಬ ಇದರ ವೈಜ್ಞಾನಿಕ ನಾಮ. ಕಡವಳಮರ ಪರ್ಯಾಯನಾಮ. ಭಾರತದ ಕಾಡುಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುವ ಈ ಮರವನ್ನು ಇದರ ಸುಂದರವಾದ ಹೂಗಳಿಗಾಗಿ ಉದ್ಯಾನವನಗಳಲ್ಲಿ, ರಸ್ತೆಗಳ ಪಕ್ಕಗಳಲ್ಲಿ ಬೆಳೆಸುತ್ತಾರೆ.

ಇದು ಸುಮಾರು 30′ ಎತ್ತರ ಬೆಳೆಯುವ ಮಧ್ಯಮ ಗಾತ್ರದ ಮರ. ತೊಗಟೆ ಬೂದುಬಣ್ಣದ್ದಾಗಿದ್ದು ನಯವಾಗಿದೆ. ತೊಗಟೆಯ ಒಳಭಾಗದ ಬಣ್ಣ ಹಳದಿ ಮಿಶ್ರಿತ ಕಂದು. ವಯಸ್ಸಾದ ಮರದ ತೊಗಟೆ ಉದ್ದವಾಗಿ ಸೀಳಿ ಚಚ್ಚೌಕ ಬಿಲ್ಲೆಗಳಾಗಿ ಉದುರುತ್ತದೆ. ಎಲೆಗಳು ಅಭಿಮುಖವಾಗಿ ಜೋಡಣೆಗೊಂಡಿವೆ. ಅವುಗಳ ಆಕಾರ ಕರನೆಯಂತೆ, ಅಂಚು ನಯ ಮತ್ತು ತುದಿ ಮೊನಚು. ಹೂಗೊಂಚಲು ಮಧ್ಯಾರಂಭಿ (ಸೈಮೋಸ್) ಮಾದರಿಯದು. ಚೆಂಡಿನಂತೆ ಆಕಾರ. ಹೂಗಳು ಕಿತ್ತಳೆ ಬಣ್ಣದವು. ಸುಗಂಧಪೂರಿತವೂ ಹೌದು. ಕ್ರಮೇಣ ಹೂಗಳು ಚಿನ್ನದ ಬಣ್ಣ ತಾಳುತ್ತವೆ. ಫಲ ಸಣ್ಣ ಸಣ್ಣ ಬೀಜಗಳನ್ನೊಳಗೊಂಡ ಸಂಪುಟ ಮಾದರಿಯದು. ಕದಂಬ ಮರವನ್ನು ಬೀಜಗಳಿಂದ ಸುಲಭವಾಗಿ ವೃದ್ಧಿ ಮಾಡಬಹುದು. ಇದರ ಹಣ್ಣುಗಳು ರುಚಿಯಾಗಿರುವುದರಿಂದ ಮನುಷ್ಯರೂ ಪ್ರಾಣಿ ಪಕ್ಷಿಗಳೂ ತಿನ್ನುವುದುಂಟು. ಕೆನೆ ಅಥವಾ ಮಾಸಲು ಬಿಳಿ ಬಣ್ಣದ ಇದರ ಚೌಬೀನೆ ಅಷ್ಟಾಗಿ ಬಾಳಿಕೆ ಬರುವುದಿಲ್ಲ. ಆದರೆ ಅದನ್ನು ಸುಲಭವಾಗಿ ಕೊಯ್ಯಬಹುದು, ಹದಮಾಡಬಹುದು. ಮೆದುವಾಗಿರುವುದರಿಂದ ಬೆಂಕಿಪೆಟ್ಟಿಗೆ, ಸಾಗಾಣಿಕೆ ಪೆಟ್ಟಿಗೆ ಮಾಡಲು ಉಪಯೋಗಿಸುತ್ತಾರೆ. ಇದರ ತೊಗಟೆಯನ್ನು ಕಣ್ಣುನೋವಿನ ನಿವಾರಣೆಗೂ ಬಾಯಿಹುಣ್ಣಿಗೂ ಬಳಸುತ್ತಾರೆ. (ಎ.ಕೆ.ಎಸ್.;ಎಚ್.ಕೆ.ಎಂ.;ಎಂ.ಎಚ್.ಎಂ.)

**ಕದಂಬ ಮನೆತನ:** ಪಶ್ಚಿಮ ಕರ್ಣಾಟಕದಲ್ಲಿ ಕ್ರಿ.ಶ. 4ನೆಯ ಶತಮಾನದಿಂದ 7ನೆಯ ಶತಮಾನದ ವರೆಗೆ ಸ್ವತಂತ್ರರಾಗಿಯೂ 10ನೆಯ ಶತಮಾನದಿಂದ 13ನೆಯದರ ವರೆಗೆ ಹಾನುಗಲ್ಲು, ಗೋವೆ ಮುಂತಾದ ಕಡೆಗಳಲ್ಲಿ ಬಹುತೇಕ ಸಾಮಂತರು ಅಥವಾ ಮಾಂಡಲಿಕರಾಗಿಯೂ ಆಳಿದ ಒಂದು ರಾಜಮನೆತನ. ಈ ಮನೆತನದ ಅರಸರಿಗೆ ಸಂಬಂಧಿಸಿದ ಶಾಸನಗಳು ಮತ್ತು ದಿನಾಂಕಗಳನ್ನು ಆಯಾ ಅರಸರ ಆಳ್ವಿಕೆಯ ವರ್ಷ ಮಾಸ ಪಕ್ಷ ದಿನಗಳ ಎಣಿಕೆಯಲ್ಲಿ ನಿರೂಪಿಸಿರುವುದರಿಂದ ಇವಕ್ಕೆ ಸಮಾನವಾದ ತಾರೀಖುಗಳನ್ನು ನಿಷ್ಕರ್ಷಿಸುವುದು ಕಷ್ಟವೆಂದು ಹೇಳಲಾಗಿದೆ. ಆದರೂ ಸ್ಥೂಲವಾಗಿ ಇವರು ಮೇಲೆ ಸೂಚಿಸಿದ ಅವಧಿಗಳಲ್ಲಿ ಆಳ್ವಿಕೆ ನಡೆಸಿದರೆಂದು ಸ್ವೀಕರಿಸಬಹುದಾಗಿದೆ.

ಕದಂಬ ಮನೆತನದ ಉಗಮವಾದದ್ದು ಹೇಗೆಂಬ ಬಗ್ಗೆ ಅನೇಕ ಐತಿಹ್ಯಗಳಿವೆ. ತ್ರಿಲೋಚನ ಕದಂಬನೆಂಬವನು ಈ ಮನೆತನದ ಮೂಲಪುರುಷನೆಂಬುದು ಒಂದು ಕಥೆ. ಅವನಿಗೆ ನಾಲ್ಕು ಕೈ, ಮೂರು ಕಣ್ಣು. ಶಿವನ ಬೆವರು ಕದಂಬ ವೃಕ್ಷದ ಕೆಳಗೆ ಬಿದ್ದು ಆತ ಹುಟ್ಟಿದ. ಆದ್ದರಿಂದಲೇ ಅವನ ವಂಶಸ್ಥರಿಗೆ ಕದಂಬರೆಂದು ಹೆಸರಾಯಿತು. ಅವನ ಮಗ ಮಯೂರವರ್ಮ—ಕದಂಬ ರಾಜ್ಯಸ್ಥಾಪಕ. ಮಯೂರವರ್ಮನೇ ಕದಂಬ ವೃಕ್ಷದ ಕೆಳಗೆ ಹುಟ್ಟಿದನೆಂದು ಇನ್ನೊಂದು ಐತಿಹ್ಯ ಸಾರುತ್ತದೆ. ಅವನಿಗೂ ಹಣೆಯ ಮೇಲೆ ಕಣ್ಣಿದ್ದುದರಿಂದ ಕಿರೀಟವನ್ನು ಮುಡಿಯ ಮೇಲೆ ಕಟ್ಟಬೇಕಾಯಿತಂತೆ. ಪರಶುರಾಮಕ್ಷೇತ್ರ ಸೃಷ್ಟಿಯಾದ ಮೇಲೆ ಶಿವ ಪಾರ್ವತಿಯರು ಸಹ್ಯಾದ್ರಿಯ ಸುಂದರ ಪ್ರದೇಶಕ್ಕೆ ಬಂದಿದ್ದರೆಂದೂ ಅಲ್ಲಿ ಇವರಿಗೆ ಹುಟ್ಟಿದ ಮಗುವೇ ಕದಂಬ ವಂಶದ ಆದ್ಯಪುರುಷನೆಂದೂ ಇನ್ನೊಂದು ಕಥೆಯಿದೆ. ಆದರೆ ಇಂಥ ಕಥೆಗಳೆಲ್ಲ ಕದಂಬರ ಆಡಳಿತ ಆರಂಭವಾದ ಅನೇಕ ವರ್ಷಗಳ ಮೇಲೆ ಹುಟ್ಟಿಕೊಂಡವಾದ್ದರಿಂದ ಇವಕ್ಕೆ ಹೆಚ್ಚಿನ ಬೆಲೆ ಕೊಡಬೇಕಾದುದಿಲ್ಲ. ಕದಂಬ ಪುಷ್ಪ ಪಾರ್ವತಿಗೆ ಪ್ರಿಯವಾದುದರಿಂದ ಶಿವಸಂಬಂಧವಾದ ಇಂಥ ಕಥೆಗಳು ಹುಟ್ಟಿಕೊಂಡಿರಬಹುದು—ಎಂಬುದು ಇತಿಹಾಸಕಾರರ ಅಭಿಪ್ರಾಯ.

ಕಥೆಗಳು ಹೇಗಾದರೂ ಇರಲಿ. ಮಯೂರಶರ್ಮನೇ ಈ ರಾಜವಂಶದ ಸ್ಥಾಪಕನೆಂಬುದು ಶಾಂತಿವರ್ಮನ ತಾಳಗುಂದದ ಶಾಸನದಿಂದ ಗೊತ್ತಾಗುತ್ತದೆ. ಈತ ಮಾನವ್ಯಗೋತ್ರದ ಹಾರಿತೀವಂಶಸ್ಥ ಬ್ರಾಹ್ಮಣನೆಂದೂ ವೇದ ವಿದ್ಯಾಭ್ಯಾಸಕ್ಕಾಗಿ ಪಲ್ಲವರ ರಾಜಧಾನಿಯಾಗಿದ್ದ ಕಂಚಿಗೆ ಹೋಗಿದ್ದಾಗ ಅಲ್ಲಿಯ ರಾಜಭಟನೊಬ್ಬನಿಂದ ಅವಮಾನಕ್ಕೆ ಗುರಿಯಾದುದರ ಫಲವಾಗಿ ಅಸ್ತ್ರವಿದ್ಯೆ ಕಲಿತು ದಂಡುಕಟ್ಟಿ ದಾಳಿ ಮಾಡಿ ಗಡಿನೆಲವನ್ನಾಕ್ರಮಿಸಿಕೊಂಡನೆಂದೂ ಗೊತ್ತಾಗುತ್ತದೆ. ಮ ಗ್ಗು ಲ ಮುಳ್ಳಾಗಿದ್ದ ಮಯೂರಶರ್ಮನ ವಿರೋಧ ಕಟ್ಟಿಕೊಳ್ಳಬಾರದೆಂಬ ಉದ್ದೇಶದಿಂದ ಪಲ್ಲವರು ಅವನಿಗಷ್ಟು ಪ್ರದೇಶ ಬಿಟ್ಟುಕೊಟ್ಟರು. ಆದರೆ ಸಾಮಂತನಾಗಿರುವುದು ಅವನಿಗೆ ಹಿಡಿಸಲಿಲ್ಲ. ಸ್ವಲ್ಪ ಕಾಲದಲ್ಲೇ ಆತ ಸ್ವಾತಂತ್ರ್ಯ ಘೋಷಿಸಿಕೊಂಡ. ಸುಮಾರು 4ನೆಯ ಶತಮಾನದ ಚಂದ್ರವಳ್ಳಿಯ ಶಾಸನದ ಪ್ರಕಾರ ಆತ ತ್ರೈಕೂಟಕ, ಅಭೀರ, ಪಲ್ಲವ, ಪಾರಿಯಾತ್ರಕ, ಶಕಸ್ಥಾನ, ಮೋಕರಿ, ಪುನ್ನಾಟ, ಸಾಯಿಂದಕ (ಸೇಂದ್ರಕ), ಪಾರಿಯಾತ್ರಕ ಮುಂತಾದ ರಾಜ್ಯಗಳನ್ನು ಸೋಲಿಸಿದ. ಆರಾವಳಿಯಿಂದ ವಿಂಧ್ಯದ ವರೆಗೆ ಇದ್ದದ್ದು ಸಾಯಿಂದಕರ ರಾಜ್ಯ. ಕಾವೇರಿ–ಕಪಿನಿಗಳ ನಡುವಣ ರಾಜ್ಯ ಪುನ್ನಾಟ. ಮೋಕರಿಗಳು ಆಳುತ್ತಿದ್ದ ಉಜ್ಜಯಿನಿ ಮತ್ತು ರಾಜಸ್ಥಾನಗಳ ವರೆಗೆ ಈತ ತನ್ನ ರಾಜ್ಯ ವಿಸ್ತರಿಸಿದನೇ ಎಂಬುದು ಸಂದೇಹಾಸ್ಪದ. ಅಂತೂ ಈ ನಾನಾ ರಾಜ್ಯಗಳ ಅರಸರೊಂದಿಗೆ ಈತ ಘರ್ಷಣೆ ನಡೆಸಿರಬಹುದೆಂಬುದಾಗಿ ಹೇಳಬಹುದಾಗಿದೆ.

ಕದಂಬರ ಮೊದಲ ದೊರೆ ಮಯೂರಶರ್ಮನಾದರೂ (325–45) ಅವನ ಅನಂತರ ಬಂದವರು ತಮ್ಮ ಹೆಸರುಗಳ ಕೊನೆಯ ಶಬ್ದವನ್ನು ವರ್ಮನೆಂದು ಬದಲಾಯಿಸಿಕೊಂಡು ತಮ್ಮದು ರಾಜವಂಶವೆಂದು ಸ್ಥಿರಪಡಿಸಿಕೊಂಡರು. ಈ ವಂಶದಲ್ಲಿ ಬಂದ ಅರಸರ ಪೈಕಿ ಕಾಕುತ್ಸ್ಥವರ್ಮ (ಸು. 405) ಪ್ರಸಿದ್ಧ. ಈತ ಪಲ್ಲವರೊಂದಿಗೆ ಯುದ್ಧಮಾಡಿ, ನೆರೆಯ ಅರಸರೊಂದಿಗೆ ವಿವಾಹಸಂಬಂಧ ಬೆಳೆಸಿ—ಹೀಗೆ ನಾನಾ ಉಪಾಯಗಳಿಂದ ರಾಜ್ಯ ವಿಸ್ತರಿಸಿದ. ಇವನ ಮಗಳನ್ನು ಗುಪ್ತವಂಶದ ದೊರೆಯಾದ ಕುಮಾರಗುಪ್ತನ ಮಗನಿಗೆ ಕೊಟ್ಟು ಮದುವೆ ಮಾಡಿದನೆಂದು ಗೊತ್ತಾಗುತ್ತದೆ. ಇವನ ಮಗ ಶಾಂತಿವರ್ಮ (ಸು. 430) ಬನವಾಸಿಯಲ್ಲಿ ಆಳ್ವಿಕೆ ಮುಂದುವರಿಸಿದ. ಇನ್ನೊಬ್ಬ ಮಗ ಒಂದನೆಯ ಕೃಷ್ಣವರ್ಮ; ತ್ರಿಪರ್ವತದಲ್ಲಿ ರಾಜ್ಯವಾಳತೊಡಗಿದ. ಇವನ ವಂಶವೂ ಮುಂದುವರಿಯಿತು. ಶಾಂತಿವರ್ಮನ ಅನಂತರ ಬಂದ ಮೃಗೇಶ (ಸು. 455) ಪಲ್ಲವರೊಂದಿಗೂ ಗಂಗರೊಂದಿಗೂ ಯುದ್ಧಮಾಡಿದ. ಸಾಮಾನ್ಯವಾಗಿ ಪ್ರತಿಯೊಬ್ಬ ಅರಸನೂ ಪಲ್ಲವರೊಂದಿಗೆ ಯುದ್ಧ ಮಾಡುತ್ತಲೆ ಇದ್ದನೆನ್ನಬಹುದು. ಮೃಗೇಶನ ಕಾಲದಲ್ಲಿ ಕದಂಬ ರಾಜ್ಯ ಇನ್ನೂ ವಿಸ್ತರಿಸಿತು. ಬನವಾಸಿಯ ಜೊತೆಗೆ ಪಲಾಶಿಕಾ ಎಂಬುದು (ಈಗಿನ ಬೆಳಗಾಂ ಜಿಲ್ಲೆಯ ಖಾನಾಪುರ ತಾಲ್ಲೂಕಿನಲ್ಲಿರುವ ಹಳ್ಳಿ) ಎರಡನೆಯ ರಾಜಧಾನಿಯಾಯಿತು.




ರವಿವರ್ಮನ ಕಾಲದ ಕದಂಬ ಸಾಮ್ರಾಜ್ಯ

ಮೃಗೇಶನ ಮಗ ರವಿವರ್ಮ. ಅವನ ಮಗ ಹರಿವರ್ಮ. ಶಾಂತಿವರ್ಮನ ವಂಶದಲ್ಲಿ ಹರಿವರ್ಮನೇ ಕೊನೆಯ ದೊರೆ. ಕ್ರಮೇಣ ಪ್ರಬಲರಾಗುತ್ತಿದ್ದ ಚಾಳುಕ್ಯರ ಒಂದನೇ ಪುಲಕೇಶಿ ಇವನನ್ನು ಸೋಲಿಸಿ ಆ ಪ್ರದೇಶಕ್ಕೆ ತಾನೇ ದೊರೆಯಾದ. ಕೃಷ್ಣವರ್ಮನ ವಂಶದ ರಾಜ್ಯವೂ ಚಾಳುಕ್ಯರ ಆಘಾತವನ್ನೆದುರಿಸಲಾರದೆ ಹೋಯಿತು.

ಆದ್ಯ ಕದಂಬರನ್ನು ಬಾದಾಮಿಯ ಚಾಳುಕ್ಯರು ರಾಜ್ಯಭ್ರಷ್ಟರನ್ನಾಗಿ ಮಾಡಿದಾಗ ಅವರಿಗೆ ಸಾಮಂತಿಕೆಗಿಂತಲೂ ಕೆಳಗಿನ ಸ್ಥಾನ ಸಿಕ್ಕಿತು. ಆದರೆ ಕ್ರಮೇಣ

ಅವರ ಸಂತತಿಯವರು ಹಾನುಗಲ್ಲು ಮತ್ತು ಗೋವೆ ಪ್ರದೇಶಗಳಲ್ಲಿ ಸಾಮಂತ ಪದವಿಯನ್ನು ಗಳಿಸಿ ಮಹಾಮಂಡಲೇಶ್ವರರಾದರು. ಇಂದ್ರವರ್ಮ, ಆರ್ಯವರ್ಮ, ಅಜವರ್ಮ, ರವಿವರ್ಮ, ಬೊಪ್ಪವ್ವೆ ಎಂಬ ಕದಂಬ ಅಧಿಕಾರಿಗಳು ಕ್ರಿ.ಶ. 855 ರಿಂದ 963ರ ವರೆಗೆ ಅನುಕ್ರಮವಾಗಿ ಬನವಾಸಿ ಪ್ರದೇಶದಲ್ಲಿ ಅಧಿಕಾರಿಗಳಾಗಿದ್ದರು. ಇಂದ್ರವರ್ಮನ ಅಧಿಕಾರ ಆರಂಭವಾದದ್ದು ರಾಷ್ಟ್ರಕೂಟ ನೃಪತುಂಗನ ಸಾರ್ವಭೌಮತ್ವದಲ್ಲಿ. ಕ್ರಿ.ಶ. 966ರಲ್ಲಿ ರಾಷ್ಟ್ರಕೂಟರು ದುರ್ಬಲರಾದುದರಿಂದ ಪುನಃ ಕದಂಬರು ತಲೆ ಎತ್ತಿದರು. ಕಲ್ಯಾಣದ ಚಾಳುಕ್ಯರ ಎರಡನೆಯ ತೈಲಪನಿಗೆ ಅಲ್ಪಕಾಲದಲ್ಲಿಯೇ ಅವರು ಸಾಮಂತರಾಗಬೇಕಾಯಿತು. ಅವರ ಸಾರ್ವಭೌಮತ್ವ 1163ರ ವರೆಗೆ ನಡೆಯಿತು. ಆಮೇಲೆ ಕಳಚುರ್ಯ ಬಿಜ್ಜಳ ಮತ್ತು ಅವನ ವಂಶಜರೂ ಬಳಿಕ 1181 ರಿಂದ 1200ರ ವರೆಗೆ ಪುನಃ ಕಲ್ಯಾಣ ಚಾಳುಕ್ಯ ನಾಲ್ಕನೆಯ ಸೋಮೇಶ್ವರನೂ ಸಾರ್ವಭೌಮರಾದರು. 1213 ರಿಂದ ದೇವಗಿರಿಯ ಸೇವುಣಯಾದವರ ಚಕ್ರವರ್ತಿತ್ವ ಕರ್ಣಾಟಕದ ಈ ಭಾಗದ ಮೇಲೆ ನಡೆಯಿತು. ಅವರ ಕೊನೆಗಾಲ 1294. ಆಮೇಲೆ ಕದಂಬರು ಸ್ವತಂತ್ರರಾದರು. ಆದರೆ 1347ರ ಹೊತ್ತಿಗೆ ವಿಜಯನಗರದ ಹರಿಹರ ದೊರೆಯ ತಮ್ಮ ಮಾರಪ್ಪ ಕದಂಬರ ಆಳ್ವಿಕೆಗೆ ಕೊನೆಯದಾಗಿ ಇತಿಶ್ರೀ ಬರೆದ.




ಹನ್ನೊಂದನೆಯ ಶತಮಾನದಲ್ಲಿದ್ದ ಕದಂಬರ ರಾಜ್ಯಗಳು : 1,2 ಗೋವೆಯ ಕದಂಬರು. 3,4 ಹಾನುಗಲ್ಲಿನ ಕದಂಬರು, 5 ಬೇಲೂರ ಕದಂಬರು, 6 ಬಯಲುನಾಡು ಕದಂಬರು.

ಹಾನುಗಲ್ಲಿಂದ ಆಳುತ್ತಿದ್ದ ಬನವಾಸಿಯ ಕದಂಬರಿಗೆ ಬನವಾಸಿ ಮಂಡಲದ 12,000, ಹಾನುಗಲ್ಲಿನ 500 ಮತ್ತು ಹೈವದ 500 ಗ್ರಾಮಗಳು ಸೇರಿದ್ದುವು. ಗೋವೆಯ ಕದಂಬರಿಗೆ 13,050 ಗ್ರಾಮಗಳ ರಾಜ್ಯವಿತ್ತು. 1,400 ಗ್ರಾಮಗಳ ಉತ್ತರ ಕೊಂಕಣದ ಮೇಲೂ ಅವರ ಪ್ರಭಾವ ಬಹಳ ಕಾಲ ಅಪ್ರತಿಭಟನೀಯವಾಗಿತ್ತು. ಹೈವದ ಮೇಲಿನ ಹಾನುಗಲ್ ಕದಂಬರ ಪ್ರಭುತ್ವ ಕೆಲಸಂದರ್ಭಗಳಲ್ಲಿ ಶಿಥಿಲವಾದದ್ದುಂಟು. ಆದರೂ ಒಟ್ಟಿನಲ್ಲಿ ಕದಂಬ ಸಂತಾನದ ಎರಡು ಪೀಳಿಗೆಗಳು ಆದ್ಯಕದಂಬ ಮಹಾರಾಜ್ಯದ ಮಲೆನಾಡು ಕರಾವಳಿ ಭಾಗಗಳನ್ನು ಹಂಚಿಕೊಂಡ ಹಾಗೆ ಸಾಮಂತಿಕೆಯಿಂದಾದರೂ ಸುಮಾರು 400 ವರ್ಷಗಳ ಕಾಲ ಆಳಿದ್ದು ಸ್ಪಷ್ಟ. ಏಕಾವಧಿಯಲ್ಲಿ ಇಬ್ಬರು ಕದಂಬರಾಜರ ಹೆಸರುಗಳು ರಾಜ್ಯಭಾರದಲ್ಲಿ ಉಕ್ತವಾಗಿದ್ದರೆ ಅವರು ಸೋದರ ಸಮಾನಾಧಿಕಾರದಿಂದ ಪಿತ್ರಾರ್ಜಿತ ರಾಜ್ಯದ ಭಿನ್ನ ಭಾಗಗಳನ್ನು ಒಂದೇ ಅಥವಾ ಭಿನ್ನ ರಾಜಧಾನಿಗಳಿಂದ ಆಳುತ್ತಿದ್ದರೆಂದು ತಿಳಿಯಬೇಕು. ಈಗ ಬನವಾಸಿ ಊರು ಉತ್ತರ ಕನ್ನಡ ಜಿಲ್ಲೆಯಲ್ಲಿದೆ ; ಹಾನುಗಲ್ಲು ಧಾರವಾಡ ಜಿಲ್ಲೆಯಲ್ಲಿದೆ. ಹಲಸಿ 1200ವನ್ನು ಒಳಗೊಂಡಿದ್ದ ಗೋವೆಯ ಕದಂಬ ರಾಜ್ಯಕ್ಕೆ ಇಂದಿನ ಬೆಳಗಾವಿ ಜಿಲ್ಲೆಯ ಬಹುಭಾಗ ಸೇರಿತ್ತು.

ಆದ್ಯಕದಂಬರಿಗೆ ಬಾಣ, ಸೇಂದ್ರಕ, ಭೋಜ, ಮಹಾರಥಿ, ಶಕಪಲ್ಲವ, ಪಾರಿಯಾತ್ರಕ, ತ್ರೈಕೂಟಾಭೀರ, ಕೇಕೆಯ, ಆಳುಪ ಮತ್ತು ಮೋಕರಿಗಳು ಕಪ್ಪಕಾಣಿಕೆಗಳನ್ನು ಕೊಡುತ್ತಿದ್ದರು. ತಲಕಾಡಿನ ಗಂಗ ದೊರೆ ಅವಿನೀತ ಐದನೆಯ ಶತಮಾನದಲ್ಲಿ ಪುನ್ನಾಡಿನ ಕದಂಬರ ಅಳಿಯನಾದಾಗ ಪುನ್ನಾಟದ ಮೇಲಿನ ದೊರೆತನವನ್ನು ಕದಂಬರಿಂದ ಪಡೆದ. ಇಂದಿನ ಮೈಸೂರು ಜಿಲ್ಲೆಯ ಪ್ರದೇಶ ಅಂದು ಬಯಲುನಾಡು 5300 ಅಥವಾ ಪುನ್ನಾಡು (ಪುನ್ನಾಟ) ಆಗಿತ್ತು. ಹೆಗ್ಗಡದೇವನಕೋಟೆ ತಾಲ್ಲೂಕಿನ ಕೀರ್ತಿಪುರ (ಕಿತ್ತೂರು) ಪುನ್ನಾಡ ಕದಂಬ ಶಾಖೆಯ ರಾಜಧಾನಿಯಾಗಿತ್ತು. ರಾಷ್ಟ್ರವರ್ಮ, ನಾಗದತ್ತ, ಭುಜಗ ಮತ್ತು ರವಿದತ್ತ ಈ ಕದಂಬರು ಪುನ್ನಾಡಿನ ಕದಂಬ ಶಾಖೆಯ ಮೊದಲ ದೊರೆಗಳು. ಪುನ್ನಾಟ ಕದಂಬ ಶಾಖೆಯ ಸ್ಕಂದವರ್ಮನಿಂದ ಗಂಗರಿಗೆ ಅಲ್ಲಿಯ ದೊರೆತನ ಹೋದರೂ ಪುನಃ ಆತನ ಪೀಳಿಗೆಯ ರವಿಯಮ್ಮರಸ ಮುಂತಾದ ಕದಂಬರು ಸುಮಾರು 10–11ನೆಯ ಶತಮಾನಗಳ ನಡುವೆ ಪುನ್ನಾಡನ್ನು ಆಳತೊಡಗಿದ ಉಲ್ಲೇಖವಿದೆ. ಎರಡನೆಯ ಸ್ಕಂದವರ್ಮ ಕದಂಬ ಅಲ್ಲಿ 1079ರಲ್ಲಿ ಆಳುತ್ತಿದ್ದ. 1090ರಲ್ಲಿ ಅವನ ಮಗ ಕಾಂತಿವರ್ಮ ಕದಂಬ ಪಟ್ಟಕ್ಕೇರಿದ. ಮೈಸೂರು ಜಿಲ್ಲೆಯ ಕಿಕ್ಕಿನಾಡು ಅಥವಾ ಕಿಕಿರೆ ಮತ್ತು ಕೇರಳದ ತೆರುಮಂಗಳಗಳು ಅವನ ತಂದೆಯ ಕಾಲದಿಂದ ಉಪರಾಜಧಾನಿಗಳಾಗಿದ್ದುವು. ಇರಿವ ಚೆಲ್ಲಮ ಅವನ ಮಗ. 1138ರ ಶಾಸನ ಮುಕ್ಕಣ್ಣ ಕದಂಬನನ್ನು ಉಲ್ಲೇಖಿಸುತ್ತದೆ. 1393ರಲ್ಲಿ ಮಹಾರಾಜಾಧಿರಾಜ ಕದಂಬರಾಯ ಒಡೆಯ ಅಯ್ಯ ಅಲ್ಲಿ ವಿಜಯನಗರದ ಸಾಮಂತನಾಗಿ ದೊರೆತನ ಮಾಡುತ್ತಿದ್ದ. ಕೊಡಗಿನ ಆದ್ಯ ದೊರೆಗಳು ಕದಂಬರು. ಬೇಲೂರಿನಲ್ಲಿ ಹೊಯ್ಸಳರಿಗಿಂತ ಮೊದಲು ಕದಂಬ ಶಾಖೆ ಆಳುತ್ತಿತ್ತು. ಬಂಕಾಪುರ, ಉಚ್ಚಂಗಿ, ನಾಗರಖಂಡ, ರಾಯಚೂರು, ನೂರುಂಬಾಡ, ಚಂದಾವರಗಳಲ್ಲಲ್ಲದೆ ಕಳಿಂಗದ ಗಂಗರಸರ ಸಾಮಂತಿಕೆಯಲ್ಲಿ ಕೂಡ ಕದಂಬ ಉಪಮನೆತನವೊಂದು ರಾಜ್ಯಭಾರ ಮಾಡುತ್ತಿತ್ತು.

**ಆಡಳಿತ :** ಆದ್ಯ ಸಾರ್ವಭೌಮ ಕದಂಬರಲ್ಲಿ ಜಾತೀಯತೆ ಮತೀಯತೆಗಳ ಪೂರ್ವಗ್ರಹಗಳಿರಲಿಲ್ಲ. ಅವರ ಶಾಸನಗಳಲ್ಲಿ ತಮ್ಮ ವರ್ಣ, ಜಾತಿ, ಮತಗಳಿಗೆ ಸೇರದವರ ಮತಧಾರ್ಮಿಕ ಸಂಸ್ಥೆಗಳಿಗೆ ದತ್ತಿದಾನಗಳನ್ನು ಕೊಟ್ಟ ಉಲ್ಲೇಖವಿದೆ.

ಕದಂಬ ಕುಂತಳೇಶ್ವರರು ಧರ್ಮಶಾಸ್ತ್ರೋಕ್ತವಾದ ರಾಜಧರ್ಮ ಪರಂಪರೆಗೆ ಅಧೀನರಾಗಿ ರಾಜ್ಯಭಾರ ನಡೆಸುತ್ತಿದ್ದರಲ್ಲದೆ ನಿರಂಕುಶಪ್ರಭುಗಳಾಗಿರಲಿಲ್ಲ. ಜನಮತಕ್ಕೆ ಅವರು ಬಹಳ ಬೆಲೆ ಕೊಡುತ್ತಿದ್ದರೆಂಬುದು ಶಾಸನಸಿದ್ಧ. ಅವರು ಸ್ವತಃ ಸಾಮಾನ್ಯ ಪ್ರಜೆ ಪಾಲಿಸಬೇಕಾದ ಎಲ್ಲ ನೀತಿನಿಯಮಗಳಿಗೂ ಬದ್ಧರಾಗಿದ್ದರು. ವಿದ್ಯೆ, ವಿವೇಕ, ಶೌರ್ಯ, ಔದಾರ್ಯ, ದಾನ, ಧರ್ಮ, ಸತ್ಯ, ನ್ಯಾಯನಿಷ್ಠೆ ಮುಂತಾದ ಸದ್ಗುಣಗಳಿಂದ ಅವರು ಜನಪ್ರಿಯರಾಗಿದ್ದರು. ಭಗೀರಥ, ರಘು, ಕಾಕುತ್ಸ್ಥಾದಿ ಹೆಸರುಗಳು ಸೂಚಿಸುವಂತೆ ರಾಮರಾಜ್ಯದ ಆದರ್ಶವನ್ನು ಅವರು ತಮ್ಮೆದುರಿಟ್ಟುಕೊಂಡು ಪ್ರಜಾಪಾಲನೆ ಮಾಡುತ್ತಿದ್ದರು.

ಕದಂಬರ ಮಂತ್ರಿಗಳು ವಯೋವೃದ್ಧರೂ ಜ್ಞಾನವೃದ್ಧರೂ ಅನುಭವಸ್ಥರೂ ಪ್ರಜಾಹಿತೈಷಿಗಳೂ ಆಗಿದ್ದರು. ಹರಿವರ್ಮ ಮತ್ತು ಶಿವಚಿತ್ತದ ಶಾಸನಗಳು ಈ ಮಾತಿಗೆ ಪ್ರಮಾಣಗಳಾಗಿವೆ. ಕೆರೆ, ಕಾಲುವೆ, ರಸ್ತೆ, ಸಾಲುಮರ, ಅರವಟ್ಟಿಗೆ, ಧರ್ಮಛತ್ರ, ಮಠ, ದೇವಾಲಯಗಳ ರಚನೆಯಲ್ಲಿ ಕದಂಬರಾಜರಾಣಿಯರು ಉತ್ಸುಕರಾಗಿದ್ದರು. ಆದುದರಿಂದ ಪ್ರಜೆಗಳೂ ಅಧಿಕಾರಿಗಳೂ ಹೆಚ್ಚಿನ ರಾಜನಿಷ್ಠೆಯುಳ್ಳವರಾಗಿದ್ದರು.

ಆದ್ಯಕದಂಬ ಮಹಾರಾಜರ ಆಸ್ಥಾನದಲ್ಲಿ ಸಾಮಂತರು, ಮಂತ್ರಿಗಳು, ಸಾಮಾಜಿಕ ಮುಖಂಡರು, ಪ್ರಾಧಿಕಾರಿಗಳು, ಪುರೋಹಿತ (ರಾಜಗುರುಗಳು), ಪಂಡಿತರು ಮತ್ತು ಕಲಾವಿದರು ವಿರಾಜಿಸುತ್ತಿದ್ದರು. ಕರ್ಣಾಟಕಸಾರ್ವಭೌಮರ ದರ್ಬಾರಿನ ಮಾದರಿಗಳ ಮೂಲವಿರುವುದು ಆದ್ಯಕದಂಬರ ಸಾರ್ವಭೌಮ ಆಸ್ಥಾನದಲ್ಲಿ.

ರಾಜಸಭೆಯಲ್ಲಿ ಸಾರ್ವಭೌಮರೂ ಸಾಮಂತರೂ ರಾಜಕೀಯ, ಔದ್ಯಮಿಕ, ಕಾಯಿದೆ ಸುವ್ಯವಸ್ಥೆಗಳ ಬಗೆಗಿನ ಸಮಸ್ಯೆಗಳನ್ನು ಚರ್ಚಿಸಿ ನಿರ್ಣಯಕ್ಕೆ ಬಂದ

ಕೂಡಲೇ ಅದರಂತೆ ಆಚರಿಸಲು ಪ್ರಾಧಿಕಾರಿಗಳಿಗೆ ಆಜ್ಞೆಮಾಡಲಾಗುತ್ತಿತ್ತು ; ಅಂಥ ದೊಡ್ಡ ಸಮಸ್ಯೆಗಳಿಲ್ಲದಾಗ ತತ್ತ್ವ ಸಾಹಿತ್ಯ ವಿಮರ್ಶೆಗಳಿಗೆ ಸಂಬಂಧಿಸಿದ ಚರ್ಚೆಗಳು ನಡೆಯುತ್ತಿದ್ದುವು : ಶಾಸ್ತ್ರಜ್ಞರು ಅವುಗಳಲ್ಲಿ ಭಾಗವಹಿಸುತ್ತಿದ್ದರು. ವಿದ್ವಾಂಸರಿಗೆ ಭೂದಾನ, ಧನದಾನ, ಕರಮುಕ್ತತೆಗಳನ್ನು ನೀಡಲಾಗುತ್ತಿತ್ತು. ರಾಜ್ಯಕ್ಕೆ ಸಂಬಂಧಿಸಿದ ದೈನಂದಿನ ವಿಷಯಗಳ ವ್ಯವಹಾರದಲ್ಲಿ ಐವರು ಸದಸ್ಯರ ಮಂತ್ರಿಸಂಪುಟವೊಂದು ಮಹಾರಾಜನಿಗೆ ನೆರವೀಯುತ್ತಿತ್ತು. ಮನೆವೆರ್ಗಡೆ, ತಂತ್ರಪಾಲ, ಪ್ರಧಾನ, ಕ್ರಮುಕಪಾಲ, ಸಭಾಕಾರ್ಯಸಚಿವ ಎಂಬವು ಅವರ ಪದಾಭಿಧಾನಗಳು. ಅವರ ಸಲಹೆಗಳನ್ನು ಮಹಾರಾಜ ಹೆಚ್ಚಾಗಿ ಒಪ್ಪಿ ನಿರ್ಣಯಕ್ಕೆ ಬರುತ್ತಿದ್ದ. ಏಕೆಂದರೆ ಅವರ ಆಯ್ಕೆ ಹಿರಿಯರಿಂದ ಅತ್ಯಂತ ಸಪರೀಕ್ಷಿತವಾಗಿ ನಡೆದದ್ದಾಗಿರುತ್ತಿತ್ತು.

ಕದಂಬರ ಮಂತ್ರಿಗಳು ಶಾಸನಗಳು ಹೇಳುವಂತೆ ಪ್ರಶಾಸನಪಂಡಿತರೂ ನೀತಿಬದ್ಧರೂ ವ್ಯಕ್ತಿತ್ವಸಂಪನ್ನರೂ ಬಹುಮುಖ ಪ್ರತಿಭಾವಂತರೂ ಸುಸಂಸ್ಕೃತರೂ ಮಹಾಮನರೂ ಆಗಿರುತ್ತಿದ್ದರು. ನ್ಯಾಯದರ್ಶನ, ಅಲಂಕಾರಶಾಸ್ತ್ರ (ಸಾಹಿತ್ಯ ವಿಮರ್ಶೆ) ಮತ್ತು ರಾಜನೀತಿಶಾಸ್ತ್ರಗಳಲ್ಲಿ ಅವರು ವಿಶೇಷಜ್ಞರಾಗಿರುತ್ತಿದ್ದರು. ನಾಗರಿಕ ಸೈನಿಕ ಆಡಳಿತಗಳೆರಡರಲ್ಲೂ ಅವರು ತಜ್ಞರು. ಮಹಾರಾಜನೊಡನೆ ಎಷ್ಟೋ ಸಲ ಮಂತ್ರಿಗಳೂ ಯುದ್ಧಕಾಲದಲ್ಲಿ ರಣರಂಗಕ್ಕೆ ಹೋಗಿ ಸೈನ್ಯ ವಿಭಾಗಗಳ ನೇತೃತ್ವ ವಹಿಸುತ್ತಿದ್ದುದುಂಟು.

ಆದ್ಯಕದಂಬ ಸಚಿವಾಲಯದಲ್ಲಿ ರಹಸ್ಯಾಧಿಕೃತರೆಂಬ ಖಾಸಗಿ ಕಾರ್ಯದರ್ಶಿಗಳಿರುತ್ತಿದ್ದರು ಎಂಬುದನ್ನು ಮಾಂಧಾತೃವರ್ಮನ ಶಾಸನವೊಂದು ತಿಳಿಸುತ್ತದೆ. ಖಾಸಗಿ ಕಾರ್ಯದರ್ಶಿ ಮುಖ್ಯಕಾರ್ಯದರ್ಶಿಗೂ ಮುಖ್ಯಕಾರ್ಯದರ್ಶಿ ಕಂದಾಯ ಶಾಖೆಯ ಪ್ರಾಧಿಕಾರಿಗಳಿಗೂ ರಾಜಾಜ್ಞೆಯನ್ನು ಕೂಡಲೇ ಜಾರಿಗೆ ತರಲೆಂದು ಮುಟ್ಟಿಸುತ್ತಿದ್ದರು. ಆಮೇಲೆ ಪ್ರಾಧಿಕಾರಿಗಳು ಅದನ್ನು ಜಾರಿಗೆ ತರುವ ಮೊದಲು ಲೆಕ್ಕಿಗರ (ಗುಮಾಸ್ತರ) ವರ್ಗಕ್ಕೆ ತಿಳಿಸಿ ಅವರ ಮೂಲಕ ದಾಖಲೆಮಾಡಿಸುತ್ತಿದ್ದರು.

ರಾಜ್ಯಾಂಗ ಶಾಸಕಾಂಗಗಳು ಧರ್ಮಶಾಸ್ತ್ರಾಧೀನವಾಗಿದ್ದುದರಿಂದ ಅವುಗಳ ಪ್ರಕಾರ ರಾಜಾಜ್ಞೆ (ಸರಕಾರಿ ಆಜ್ಞೆ) ಹೊರಡಿಸುವುದು ಮತ್ತು ಕಾರ್ಯಾಂಗ ಅದನ್ನು ಜಾರಿಗೆ ತರುವುದು ಸಂಪ್ರದಾಯ. ನ್ಯಾಯಾಧಿಕರಣಗಳದು ಕೋರ್ಟುಗಳ ಸ್ಥಾನ. ರಾಜಸಭೆ ಅತ್ಯುಚ್ಚನ್ಯಾಯಾಧಿಕರಣ. ಕೆಳಗಿನ ನ್ಯಾಯ (ಧರ್ಮ) ಅಧಿಕರಣಗಳಿಂದ ಕಳಿಸಲಾದ ಮಹತ್ವದ ಪ್ರಕರಣಗಳನ್ನು ಮಾತ್ರ ಅದು ನಿರ್ಣಯಕ್ಕೆ ತೆಗೆದುಕೊಳ್ಳುತ್ತಿತ್ತು. ಪ್ರಕರಣ ಜಾತಿಗಳ ಪ್ರಕಾರ ನ್ಯಾಯಾಧಿಕರಣಗಳ ವಿಶಿಷ್ಟವರ್ಗಗಳಿದ್ದುವು. ಹೊಡೆದವನಿಗೆ ಮೂರು (ಬಂಗಾರದ) ಗದ್ಯಾಣಗಳ ದಂಡ. ಕೊಲೆಗಡಿಕನಾದಾತ ಸರ್ಕಾರಕ್ಕೆ 50 ಗದ್ಯಾಣಗಳನ್ನೂ ಹತನ ಕುಟುಂಬಕ್ಕೆ 100 ಗದ್ಯಾಣಗಳನ್ನೂ ತೆರಬೇಕಾಗಿತ್ತು. ಶಠಾಪರಾಧಿಗಳನ್ನು ಅಗ್ನಿಪರೀಕ್ಷೆಗೂ ಅಪೂರ್ವವಾಗಿ ಗುರಿಪಡಿಸಲಾಗುತ್ತಿತ್ತು.

ಸಾಮ್ರಾಜ್ಯ, ಪ್ರಾಂತ್ಯಗಳು, ರಾಜ್ಯಗಳು, ವಿಷಯಗಳು, ಗ್ರಾಮಗಳು ಮತ್ತು ಕುಲಗಳು ರಾಜಕೀಯ ವಿಭಾಗಗಳಾಗಿದ್ದುವು. ಸಾಮಂತ ಕದಂಬರು ತಮ್ಮ ವಿಷಯ (ಜಿಲ್ಲೆ)ಗಳನ್ನು ಕಂಪಣಗಳನ್ನಾಗಿಯೂ ಕಂಪಣಗಳನ್ನು ಗ್ರಾಮಗಳನ್ನಾಗಿಯೂ ವಿಂಗಡಿಸಿಕೊಂಡಿದ್ದರು ; ಮನ್ನೆಯನೇ ಕಂಪಣಾಧಿಪತಿ. ಸಾಮ್ರಾಜ್ಯಕ್ಕೆ ಪೂರ್ವ ಪಶ್ಚಿಮ ದಕ್ಷಿಣ ಉತ್ತರಗಳೆಂಬ ನಾಲ್ಕು ಪ್ರಾಂತ್ಯಗಳು. ಸಾರ್ವಭೌಮನ ನಿಕಟ ಸಂಬಂಧಿಕರು ಅವುಗಳ ರಾಜಪ್ರತಿನಿಧಿಗಳು. ವಿಷಯ ಮತ್ತು ಗ್ರಾಮಗಳ ಗಡಿಗಳಿಗೆ ಸ್ಥಿರತೆ ಹೆಚ್ಚಾಗಿತ್ತು. ರಾಜ್ಯವೊಂದು ನಾಡು ಅಥವಾ ಮಂಡಲ.

ಸಾಮಂತ ಕದಂಬರಿಗೂ ಚಕ್ರವರ್ತಿಗಳಿಗೂ ನಡುವೆ ಕೆಲವೊಮ್ಮೆ ರಾಜ ಪ್ರತಿನಿಧಿಗಳು ಮತ್ತು ಹೆಚ್ಚಾಗಿ ರಾಜ್ಯಪಾಲರು ಇರುತ್ತಿದ್ದರು. ಪೆರ್ಜುಂಕ, ವಡ್ಡರಾವುಳ, ಕಿರುಕುಳ, ಬಿಳ್ಕೊಡೆ ಮತ್ತು ಪನ್ನಯ ಎಂಬ ಪಂಚವಿಧ ತೆರಿಗೆಗಳನ್ನು ರಾಜ್ಯಪಾಲ ವಸೂಲು ಮಾಡಿ ಚಕ್ರವರ್ತಿಯ ಬೊಕ್ಕಸಕ್ಕೆ ಮುಟ್ಟಿಸುತ್ತಿದ್ದ. ಸಾಮಂತ ಕದಂಬರೂ ಬೇಕಾದಾಗ ರಾಜ್ಯಪಾಲರನ್ನು ಒಳ ಆಡಳಿತಕ್ಕಾಗಿ ನಿಯಮಿಸಿಕೊಳ್ಳುತ್ತಿದ್ದರು. ಅವರ ಮಹಾಮಂಡಲದ ಒಳ ಆಡಳಿತದಲ್ಲೂ ನೆರೆಹೊರೆಯ ಸಾಮಂತರೊಡನೆ ವ್ಯವಹರಿಸುವುದರಲ್ಲೂ ಅವರು ಸಂಪೂರ್ಣ ಸ್ವತಂತ್ರರಾಗಿದ್ದರು. ಗ್ರಾಮದ ಉತ್ಪನ್ನದಲ್ಲಿ ಆರನೆಯ ಒಂದಂಶ ರಾಜನಿಗೆ ಸಲ್ಲುತ್ತಿದ್ದ ಕಂದಾಯ. ವ್ಯಾಪಾರ ಮುಂತಾದ ವೃತ್ತಿಗಳಲ್ಲಿದ್ದವರು ಕರ ಕೊಡಬೇಕಾಗಿತ್ತು. ಅವರವರ ವೃತ್ತಿಸ್ವಾತಂತ್ರ್ಯವನ್ನು ಕಾಪಾಡುವುದು ರಾಜನ ಮುಖ್ಯ ಕರ್ತವ್ಯವಾಗಿತ್ತು.

ಸಂಸ್ಕೃತಿ ಮತ್ತು ಧರ್ಮ : ಮಯೂರಶರ್ಮನ ಕಾಲದಲ್ಲಿ ಪ್ರಾಕೃತವೇ ಅಧಿಕೃತ ಭಾಷೆಯಾಗಿತ್ತು. ಅನಂತರ ಕಾಕುತ್ಸ್ಥವರ್ಮನ ಕಾಲದ ವರೆಗೆ ಸಂಸ್ಕೃತ ಆ ಸ್ಥಾನವನ್ನು ಪಡೆದಿತ್ತು. ಮೊದಲ ಬಾರಿಗೆ ಕನ್ನಡ ಅಧಿಕೃತ ರಾಜ್ಯಭಾಷೆಯಾದದ್ದು ಕಾಕುತ್ಸ್ಥವರ್ಮನ ಕಾಲದಲ್ಲಿ. ಕಾಳಿದಾಸನೆಂಬ ಕವಿ ಕುಂತಳೇಶ್ವರ ದೌತ್ಯವೆಂಬ ಕಾವ್ಯವನ್ನು ರಚಿಸಿದ್ದು ರಘು ಚಕ್ರವರ್ತಿಯ ಸಾಂಸ್ಕೃತಿಕ ಔನ್ನತ್ಯವನ್ನು ನೋಡಿ ಹೋದ ಮೇಲೆ. ಆರಂಕುಶವಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ ಎಂದು ಕ್ರಿ.ಶ. 941ರ ಸುಮಾರಿಗೆ ಮಹಾಕವಿ ಪಂಪ ಹೇಳಿದ್ದು ಬನವಾಸಿ ಪನ್ನಿರ್ಛಾಸಿರದ ಬನವಾಸಿ ರಾಜಧಾನಿಯಲ್ಲಿ ಅಜವರ್ಮಕದಂಬನೆಂಬ ದುರ್ಬಲ ದೊರೆ ಅಧಿಕಾರ ನಡೆಸುತ್ತಿದ್ದ ಅವಧಿಯನ್ನು ಸೂಚಿಸುತ್ತದೆ. ಅಂದು ರಾಷ್ಟ್ರಕೂಟರು (753–971) ಈ ಪ್ರದೇಶದ ಸಮ್ರಾಟರಾಗಿದ್ದರು. ಆದರೂ ಬನವಾಸಿ ಮಂಡಲದ ಪುಲಿಗೆರೆಯ ತಿರುಳ್ಗನ್ನಡ ಪಂಪನಿಗೆ ಅನುಕರಣೀಯವಾಯಿತು. ಅವನ ಮಹಾಕಾವ್ಯಗಳು ಪ್ರದರ್ಶಿಸುವುದು ಕದಂಬಗನ್ನಡವನ್ನು.

ತನ್ನ ವಂಶದಲ್ಲಿ ಪ್ರಖ್ಯಾತನಾಗಿದ್ದ ರಘುವರ್ಮನಂತೆ ಹಾನುಗಲ್ ಪೀಳಿಗೆಯ ಕೀರ್ತಿವರ್ಮ ತನ್ನ ಅಪಾರ ಪಾಂಡಿತ್ಯದಿಂದ ಸರ್ವಜ್ಞನೆನಿಸಿಕೊಂಡಿದ್ದ. ಗೋವೆಯ ಕದಂಬ ವಿಜಯಾದಿತ್ಯನಿಗೆ ಸರಸ್ವತೀಭೂಷಣ ಎಂಬ ಬಿರುದಿತ್ತು. ಬನವಾಸಿ ರಾಜಧಾನಿಯಿಂದ ಆಳುತ್ತಿದ್ದ ಕೀರ್ತಿವರ್ಮನ ಕಾಲದಲ್ಲಿ ರಾಜ್ಯಪಾಲನಾಗಿದ್ದ ಲಕ್ಷ್ಮನೃಪನ ಬನವಾಸಿ ಕೋಶಾಧಿಕಾರಿ ಶಾಂತಿನಾಥ ಸುಕುಮಾರಚರಿತವನ್ನು ಬರೆದ. ಬನವಾಸಿಯ ರಾಜ್ಯಪಾಲನಾಗಿದ್ದ ಉದಯಾದಿತ್ಯಗಂಗನ (1070–1076) ಸಂಧಿವಿಗ್ರಹಕನಾಗಿ ಬನವಾಸಿಮಂಡಲದಲ್ಲಿದ್ದ ನಾಗವರ್ಮಾಚಾರ್ಯ ಚಂದ್ರಚೂಡಾಮಣಿ ಎಂಬ ಕೃತಿಯನ್ನು ರಚಿಸಿದ. ಹಾನುಗಲ್ಲಿನ ಕೀರ್ತಿದೇವಕದಂಬನ ದರ್ಬಾರಿನಲ್ಲಿ ಹರಿವರ್ಮ ಆಸ್ಥಾನಕವಿಯಾಗಿದ್ದ. ಹಾವೇರಿಯ ಒಂದು ಶಾಸನದ ಪ್ರಕಾರ ನಾರಾಯಣದೇವ ಒಬ್ಬ ಪ್ರಸಿದ್ಧ ಕವಿ. ಹಾನುಗಲ್ಲಿನ ಕಾಮದೇವನ ಆಸ್ಥಾನದಲ್ಲಿದ್ದ ಕವಿರಾಜನೆಂಬ ವಿದ್ವಾಂಸ ರಾಘವ ಪಾಂಡವೀಯಂ ಎಂಬ ದ್ವ್ಯಾಶ್ರಯ ಕಾವ್ಯ ರಚಿಸಿದ.

ಮಠ, ದೇವಾಲಯ, ಬ್ರಹ್ಮಪುರಿ, ಅಗ್ರಹಾರಗಳು, ವಿದ್ಯಾಪೀಠಗಳು ಮುಂತಾದವುಗಳಿಂದ ಕೂಡಿದ್ದ ಬನವಾಸಿ, ತಾಳಗುಂದ, ಕುಪ್ಪಟೂರು (ಕುಂತಳನಗರ), ಬಳ್ಳಿಗಾಮೆ ಮುಂತಾದ ನಗರಗಳು ಆದಿಯಿಂದಲೂ ಹೆಸರಾಗಿದ್ದುವು. ಬ್ರಹ್ಮಪುರಿಗಳು ಸ್ನಾತಕೋತ್ತರ ಶಿಕ್ಷಣಕೇಂದ್ರಗಳು. ಈ ವಿದ್ಯಾಪೀಠಗಳಲ್ಲಿ ವೇದ, ಶಾಸ್ತ್ರ, ಪುರಾಣ, ಶಿಲ್ಪ, ತತ್ತ್ವಜ್ಞಾನ, ಯೋಗ, ಧರ್ಮ ಮುಂತಾದ ವಿಷಯಗಳನ್ನು ಪಾತ್ರಾಪಾತ್ರವಿವೇಕದ ನಿಷ್ಪಕ್ಷಪಾತ ನಿಯಮದಂತೆ ಸ್ವದೇಶ ವಿದೇಶಗಳಿಂದ ಬಂದ ಜಿಜ್ಞಾಸುಗಳಿಗೆ ಕಲಿಸಲಾಗುತ್ತಿತ್ತು. ರಾಜಮಹಾರಾಜರೂ ಮಹಾವಣಿಗ್‌ಜನರೂ ಇವುಗಳ ಪೋಷಕರು ; ಅಷ್ಟಾಂಗಯೋಗದ ಆಚರಣೆಯನ್ನಿಟ್ಟುಕೊಂಡಿದ್ದ ಶರಶಕ್ತಿಸಂಪನ್ನರಾದ ಮಹಾಜನರು ಇವುಗಳ ಆಡಳಿತಗಾರರು. ಪ್ರಾಧ್ಯಾಪಕರೂ ಶಿಕ್ಷಕರೂ ಅವರಿಂದ ಪೋಷಿತರು. ಆದರೆ ಶಿಷ್ಯವರಣದಲ್ಲಿ ಮತ್ತು ಶಿಕ್ಷಣಕ್ರಮದಲ್ಲಿ ಸಂಪೂರ್ಣ ಸ್ವತಂತ್ರರು. ಅವರ ಸದಾಚಾರ ಸರ್ವವಂದ್ಯವಾಗಿತ್ತು. ವಿದ್ಯಾರ್ಥಿಗಳು ಗುರುಗಳ ಅಂತೇವಾಸಿಗಳು : ವಿದ್ಯೆ ಶುಲ್ಕರಹಿತ.

ಕದಂಬರು ವೈದಿಕ ಸ್ಮಾರ್ತರು. ಅವರು ಬನವಾಸಿಯಿಂದ ಆಳತೊಡಗುವ ಮೊದಲೇ ಬೌದ್ಧಮತ ಪ್ರಚಾರ ಅಲ್ಲಿ ಬೇಕಾದಷ್ಟು ನಡೆದಿತ್ತು. ಅನಂತರ ಜೈನ ಗುರುಗಳೂ ದಯಮಾಡಿದರು. ಕ್ರಿ.ಶ. 7ನೆಯ ಶತಮಾನದಲ್ಲಿ ಬೌದ್ಧಮತ ಅವನತಿಗೀಡಾಯಿತು. ಅನಂತರ ವೈದಿಕ, ಜೈನಮತಗಳೇ ಸತತವಾಗಿ ಮುಂಬರಿದವು. ಪಾಶುಪತ, ಶಾಕ್ತ, ಪಾಂಚರಾತ್ರ, ಕಾಳಾಮುಖ, ಕಾಪಾಲಿಕ ಪಂಥಗಳು ಆಮೇಲೆ ಇಲ್ಲಿ ತಲೆಹಾಕಿದರೂ ಬಹಳ ಕಾಲ ಪ್ರಭಾವಿಗಳಾಗಿ ಉಳಿಯಲಿಲ್ಲ. ಲಕುಲೀಶ ಪಾಶುಪತ ಮತ್ತು ಕಾಳಾಮುಖ ಪಂಥಗಳ ಗುರುಗಳಲ್ಲಿ ಅನೇಕರು ನಿಗಮ ವಿಮುಖರಾಗಿ, ಕೇವಲಾಗಮಿಗಳಾಗಿ, ಸುಮಾರು 13ನೆಯ ಶತಮಾನದಲ್ಲಿ ಕ್ರಮೇಣ ವೀರಶೈವ ಗುರುಗಳ ಪರಂಪರೆಯ ಜನಕರಾದರೆಂಬುದು ಕೆಲವಿದ್ವಾಂಸರ ಊಹೆ. ವೀರಶೈವೋದಯ ಕ್ರಮಶಃ ಜೈನಾಸ್ತವನ್ನು ಮುಂದೆ ತೀವ್ರಗೊಳಿಸಿತು.

ಹ್ಯೂಎನ್ ತ್ಸಾಂಗ್ ಬಣ್ಣಿಸಿದ ಕೊಂಕಣಪುರದ (ಬನವಾಸಿ) ಉತ್ಖನನವಾದರೆ ಬೌದ್ಧವಿಹಾರಗಳ ಅವಶೇಷಗಳನ್ನು ಬಹುಶಃ ತೋರಿಸೀತು. ಜೈನ ಬಸದಿಗಳನ್ನು ಬನವಾಸಿ ಪನ್ನಿರ್ಛಾಸಿರದಲ್ಲಿ ಈಗಲೂ ಕಾಣಬಹುದು. ಅಲ್ಲಿ ಇಲ್ಲಿ ವಿರಳವಾಗಿ ಭೈರವ ಪೂಜಾಸ್ಥಾನಗಳಿವೆ. ಇವು ಕಾಪಾಲಿಕ ಪಂಥದ ಅವಶೇಷ. ಹಾಗೇ ವೀರಭದ್ರ ದೇವಾಲಯಗಳು ವೀರಶೈವ ಪಂಥದ ಗುರುತುಗಳೆನ್ನಬಹುದು. ಸೋದೆಯಲ್ಲಿರುವ ಜೈನಮಠ ಸುಮಾರು ಏಳನೆಯ ಶತಮಾನದಲ್ಲಿ ಅಕಳಂಕ ಗುರು ಪರಂಪರೆಯನ್ನು ಸ್ಥಾಪಿಸಿದ ದೊಡ್ಡ ಜೈನ ವಿದ್ವದ್ವ್ಯಕ್ತಿಯಾದ ಆದ್ಯಅಕಳಂಕನ ಕುರುಹಾಗಿದೆ. ತತ್ಸಮಕಾಲೀನವಾದ ವೈದಿಕ ಸ್ಮಾರ್ತ ಮಠಗಳು ಈಗಲೂ ಜೀವಂತವಾಗಿವೆ. ತಾಳಗುಂದದ ಸಮೀಪದಲ್ಲಿರುವ ಬಳ್ಳಿಗಾಮೆಯ ಅವಶೇಷಗಳು ಉಕ್ತ ವಿವಿಧ ಮತಗಳ ಮತ್ತು ಪಂಥಗಳ ಕುರುಹುಗಳನ್ನು ತೋರಿಸುತ್ತವೆ. ಅವುಗಳಲ್ಲಿ ಹಲವು 12ನೆಯ ಶತಮಾನದ ಮತ್ತು ಅದಕ್ಕೂ ಹಿಂದಿನವು. ಅಲ್ಲದೆ ಅವು ಪರಮತಸಹಿಷ್ಣುತೆಯ ಪರಮಪ್ರಮಾಣಗಳಾಗಿವೆ. (ಬಿ.ಎಚ್.ಎಸ್.)

**ಕದಂಬ ವಂಶಾವಳಿ**




**ಕದಂಬರ ವಾಸ್ತು, ಶಿಲ್ಪ, ಶಾಸನಗಳು ಮತ್ತು ನಾಣ್ಯಗಳು:** ಆದ್ಯಕದಂಬರೂ ಅನಂತರ ಬಂದವರೂ ಕರ್ನಾಟಕದ ವಾಸ್ತುಶಿಲ್ಪಕ್ಕೆ ತಮ್ಮವೇ ಆದ ಕೊಡುಗೆಗಳನ್ನಿತ್ತಿದ್ದಾರೆಂಬ ವಿಷಯ ಅವರ ಅನೇಕ ಶಾಸನಗಳಿಂದ ವ್ಯಕ್ತವಾಗುತ್ತದೆ. ಕಾಕುತ್ಸ್ಥವರ್ಮನ ತಾಳಗುಂದ ಶಾಸನದಲ್ಲಿ (ಕ್ರಿ.ಶ. ಸು. 450) ಆ ಊರಿನ ಮಹಾದೇವ ದೇವಾಲಯದ ಉಲ್ಲೇಖವಿದೆ. ಕಾಕುತ್ಸ್ಥನ ಮೊಮ್ಮಗನಾದ ಮೃಗೇಶ ಪಲಾಸಿಕ ಎಂಬಲ್ಲಿ ಒಂದು ಜೈನಬಸದಿ ಕಟ್ಟಿಸಿದನೆಂದು ಅವನ ಒಂದು ತಾಮ್ರಶಾಸನ ತಿಳಿಸುತ್ತದೆ. ಅನಂತರದ ಕದಂಬ ಅರಸರ ಆಳ್ವಿಕೆಯ ಕಾಲದಲ್ಲಿ ದೇಗಾಂವೆ, ಕದರೋಳಿ, ಹಾನುಗಲ್ಲು ಮುಂತಾದ ಊರುಗಳಲ್ಲಿ ದೇವಾಲಯಗಳು ನಿರ್ಮಿತವಾದುವೆಂಬ ವಿಷಯ ಸಮಕಾಲೀನ ಶಾಸನಗಳಲ್ಲಿ ಉಕ್ತವಾಗಿವೆ.

ಆದರೆ ಮೊದಲ ಕದಂಬ ಅರಸರ ಕಾಲಕ್ಕೆ ಖಚಿತವಾಗಿ ಸೇರಿದ ಕಟ್ಟಡಗಳನ್ನು ಗುರುತಿಸಿಲ್ಲವಾದ್ದರಿಂದ, ಅಂದಿನ ದೇವಾಲಯಗಳ ಸ್ವರೂಪವೇನು, ಭಾರತೀಯ ವಾಸ್ತುಶಿಲ್ಪ ಪರಂಪರೆಯಲ್ಲಿ ಅವುಗಳ ಸ್ಥಾನವೇನು ಎಂಬ ಮುಖ್ಯ ವಿಷಯಗಳು ತಿಳಿಯುವಂತಿಲ್ಲ. ದಕ್ಷಿಣ ಭಾರತದಲ್ಲಿ ಶಿಲಾದೇವಾಲಯಗಳ ರಚನಾ ಸಂಪ್ರದಾಯ ಕ್ರಿ.ಶ. ಸುಮಾರು 5–6ನೆಯ ಶತಮಾನಗಳಲ್ಲಿ ಬಾದಾಮಿಯ ಚಾಳುಕ್ಯ ಮತ್ತು ಕಂಚಿಯ ಪಲ್ಲವ ಅರಸರ ಆಶ್ರಯದಲ್ಲಿ ವಿಶೇಷವಾಗಿ ಬೆಳೆಯಿತೆಂದು ಎಲ್ಲ ವಿದ್ವಾಂಸರೂ ಹೇಳುತ್ತಾರೆ. ಹಾಗಿದ್ದಲ್ಲಿ ಬನವಾಸಿಯ ಕದಂಬರ ಕಾಲದ ದೇವಾಲಯಗಳು ಮರ ಅಥವಾ ಇಟ್ಟಿಗೆಯಲ್ಲಿ ಕಟ್ಟಿದವುಗಳಾಗಿರಬೇಕು. ಶಿಲಾದೇವಾಲಯಗಳಿದ್ದುದೇ ಆದರೆ, ಚಾಳುಕ್ಯ ಮತ್ತು ಪ್ರಾಯಶಃ ಪಲ್ಲವ ಶೈಲಿಗೆ ಕೂಡ ಮೂಲ ಮಾದರಿಗಳನ್ನು ಇವು ಒದಗಿಸಿರಬಹುದು. ಈಗ ತಾಳಗುಂದದಲ್ಲಿ ಕದಂಬ ಶಾಸನಗಳಲ್ಲಿ ಹೆಸರಿಸಿರುವ ಪ್ರಣವೇಶ್ವರ ದೇವಾಲಯವೆಂಬುದೊಂದಿದ್ದರೂ ಅದು ಇತ್ತೀಚೆಗೆ ಬಹುವಾಗಿ ನವೀಕರಿಸಲ್ಪಟ್ಟಿದ್ದು, ಸ್ಪಷ್ಟ ಪ್ರಾಚೀನ ಅಂಶಗಳನ್ನೇನನ್ನೂ ಉಳಿಸಿಕೊಂಡಿಲ್ಲ. ಮೊದಲ ಕದಂಬರ ರಾಜಧಾನಿಯಾದ ಬನವಾಸಿಯಲ್ಲಿ ಅವರ ಕುಲದೈವ ಮಧುಕೇಶ್ವರನ ಗುಡಿ ಇದೆ. ಈಗ ಇರುವ ಕಟ್ಟಡದ ಮುಂಭಾಗವೆಲ್ಲಾ 12ನೆಯ ಶತಮಾನದ್ದು. ಮೂಲ ದೇವಾಲಯ, ಅಂದರೆ ಗರ್ಭಗುಡಿ, ಸುತ್ತಿರುವ ಪ್ರದಕ್ಷಿಣಪಥ ಮತ್ತು ಒಳಮಂಟಪ ಹಳೆಯವು. ಆದರೆ ಇವುಗಳ ವಾಸ್ತು ವಿನ್ಯಾಸ ಮತ್ತು ಕಂಭಗಳ ರಚನೆಗಳು ಪಟ್ಟದಕಲ್ಲಿನ ವಿರೂಪಾಕ್ಷದೇವಾಲಯವೇ ಮುಂತಾದ 8ನೆಯ ಶತಮಾನದ ಕಟ್ಟಡಗಳ ಮಾದರಿಯಲ್ಲಿರುವುದರಿಂದ, ಈ ಗುಡಿಯೂ ಅದೇ ಕಾಲಕ್ಕೆ ಸೇರಿದ್ದೆಂದು ಹೇಳಬಹುದು. ಮೊದಲ ಕದಂಬ ಅರಸರ ಆಳ್ವಿಕೆ ಪೂರ್ಣವಾಗಿ ಕೊನೆಗೊಂಡಿದ್ದು ಆ ಕಾಲದಲ್ಲಿ. ಬನವಾಸಿ ಪ್ರಾಂತ್ಯ ಚಾಳುಕ್ಯರ ಅಧೀನದಲ್ಲಿತ್ತಾದ್ದರಿಂದ ಈಗಿನ ಬನವಾಸಿಯ ಮೂಲಗುಡಿ ಸಹ ಕದಂಬರ ಕೊಡುಗೆಯೆಂದು ಹೇಳುವುದು ಕಷ್ಟ.

ಧಾರವಾಡ ಜಿಲ್ಲೆಯ ಹಲ್ಸಿಯಲ್ಲಿ ಕೆಲವು ಪ್ರಾಚೀನ ದೇವಾಲಯಗಳಿವೆ. ಶೈಲಿಯ ದೃಷ್ಟಿಯಿಂದ ನೋಡುವುದಾದರೆ ಇಲ್ಲಿಯ ಜೈನಬಸದಿ ಅತ್ಯಂತ ಹಳೆಯದು. ಇದರಲ್ಲಿ ಗರ್ಭಗೃಹ ಮತ್ತು ಸುಖನಾಸಿ ಮಾತ್ರ ಇವೆ. ಸುಖನಾಸಿ ಗರ್ಭಗೃಹಕ್ಕಿಂತ ದೊಡ್ಡದು. ದೊಡ್ಡ ದೊಡ್ಡ ಒರಳುಕಲ್ಲುಗಳನ್ನು ಪೇರಿ ಗೋಡೆಗಳನ್ನು ಎಬಿಸಲಾಗಿದೆ. ದೇವಾಲಯದಲ್ಲಿ ಯಾವ ರೀತಿಯ ಅಲಂಕರಣವೂ ಇಲ್ಲ. ನಯನಾಜೂಕಿಲ್ಲದೆ ಕಟ್ಟಿರುವ ಈ ಕಟ್ಟಡ ಪ್ರಾಯಶಃ ದಕ್ಷಿಣ ಭಾರತದ ಶಿಲಾಕಟ್ಟಡಗಳ ರಚನೆಯಲ್ಲಿ ಪ್ರಾರಂಭಿಕ ಘಟ್ಟದ್ದೆಂದು ಹೇಳಬಹುದು. ಇಲ್ಲಿ ಯಾವ ಶಾಸನಗಳೂ ದೊರಕಿಲ್ಲವಾದ್ದರಿಂದ ಇದರ ಕಾಲನಿರ್ದೇಶ ಕಷ್ಟ. ಆದರೆ ಮೃಗೇಶವರ್ಮನ ತಾಮ್ರಪಟದಲ್ಲಿ ಉಲ್ಲೇಖಿಸಿರುವ ಜೈನಬಸದಿ ಇದೇ ಆದರೆ ಇದು ಅವನ ಕಾಲದ್ದೆಂದು ಹೇಳಬಹುದು. ಹಾಗಿದ್ದಲ್ಲಿ ಈ ದೇವಾಲಯವೇ ಕರ್ನಾಟಕದಲ್ಲಿ ಉಳಿದು ಬಂದಿರುವ ಅತ್ಯಂತ ಪ್ರಾಚೀನ ಶಿಲಾಕಟ್ಟಡವಾಗುತ್ತದೆ.

ಕರ್ನಾಟಕದ ವಾಸ್ತುಶಿಲ್ಪ ಪರಂಪರೆಯಲ್ಲಿ ಕದಂಬಶೈಲಿಯೂ ಒಂದಿತ್ತೇ ಎಂಬುದು ಸಂದೇಹಾಸ್ಪದ. ಅನಂತರದ ಕದಂಬ ಅರಸರ ಆಳ್ವಿಕೆಯಲ್ಲಿ ಅನೇಕ ಕಟ್ಟಡಗಳು ನಿರ್ಮಿತವಾಗಿದ್ದರೂ ಅವುಗಳಲ್ಲಿ ಬಹುತೇಕ ಸಮಕಾಲೀನ ಹೊಯ್ಸಳ ಚಾಳುಕ್ಯ ಶೈಲಿಯ ಪ್ರಭಾವವೇ ಕಾಣುತ್ತದೆ. ಆದರೆ ಕದಂಬ ಕಟ್ಟಡಗಳಲ್ಲಿ ಅವುಗಳದೇ ಆದ ವೈಶಿಷ್ಟ್ಯಗಳಿವೆ. ಆದ್ದರಿಂದ ವಾಸ್ತುಶಿಲ್ಪಪರಂಪರೆಯಲ್ಲಿ ಕದಂಬ ಶೈಲಿ ಎಂಬ ಒಂದು ಪ್ರಕಾರವನ್ನು ಗುರುತಿಸಬೇಕು ಎಂಬುದು ಡಾ. ಮೊರೇಸ್ ಅಭಿಪ್ರಾಯ. ಸುಖನಾಸಿ ಗರ್ಭಗುಡಿಗಿಂತ ಅಗಲವಾಗಿರುವುದು, ವಿವಿಧರೀತಿಯ ಜಾಲಂದ್ರಗಳ ಅಳವಡಿಕೆ, ಚಾವಣಿಯ ಸುತ್ತ ಚಪ್ಪಡಿಗಳನ್ನು ಇಳಿಜಾರಾಗಿ ಜೋಡಿಸಿ ಮಾಡಿದ ಕಪೋತ ಮತ್ತು ಕದಂಬನಾಗರವೆಂಬ ಶಿಖರರೀತಿ—ಇವು ಡಾ. ಮೋರೇಸ್ ಪ್ರಕಾರ ಕದಂಬಶೈಲಿಯ ವೈಶಿಷ್ಟ್ಯಗಳು. ಚತುರಸ್ರಾಕಾರದ ಗೋಡೆಯ ಮೇಲೆ ಕದಂಬ ನಾಗರಶಿಖರ ಪಿರಮಿಡ್ಡಿನಾಕೃತಿಯಲ್ಲಿ ಮೆಟ್ಟಲು ಮೆಟ್ಟಲಾಗಿ ಮೇಲೆ ಹೋದಂತೆ ಚಿಕ್ಕದಾಗುವ ಚಪ್ಪಟೆ ಸ್ತರಗಳಿಂದ ಎತ್ತಲ್ಪಟ್ಟಿದ್ದು ಮೇಲೆ ಕಳಶ ಹೊಂದಿರುತ್ತದೆ. ಶಿಖರದ ಮೇಲೆ ಯಾವ ರೀತಿಯ ಶಿಲ್ಪಗಳೂ ಇರುವುದಿಲ್ಲ. ಎಲ್ಲೋ ಕೆಲವು ಸಲ ಅಂಚುಗಳನ್ನು ಹಲ್ಲಿನಾಕೃತಿಯಲ್ಲಿ ಬಿಡಿಸಿರುವುದಷ್ಟೇ ಈ ಶಿಖರರೀತಿಯ ಅಲಂಕರಣ. ಕದಂಬ ವಾಸ್ತುಶಿಲ್ಪ ಶೈಲಿಯ ಬೆಳವಣಿಗೆಯನ್ನು ಕ್ರಮವಾಗಿ ಹಲ್ಸಿಯ ಜೈನಬಸ್ತಿ, ಮಲಪ್ರಭಾ ದಂಡೆಯ ಕದರೋಲಿಯ ಗುಡಿ, ಹಲ್ಸಿಯ ಹತ್ತಿಕೇಶ್ವರ, ಕಲ್ಲೇಶ್ವರ, ಸುವರ್ಣೇಶ್ವರ ಮತ್ತು ರಾಮೇಶ್ವರ ದೇವಾಲಯಗಳು, ಅನಂತರ ಯಲವತ್ತಿಯ ಹಿಂದೂ ಮತ್ತು ಜೈನಗುಡಿಗಳಲ್ಲಿಯೂ ಈ ಶೈಲಿಯ ಪರಮೋಚ್ಚ ಕೃತಿಯನ್ನು ಬೆಳಗಾಂ ಜಿಲ್ಲೆಯ ದೇಗಾಂವೆಯ ಕಮಲಾನಾರಾಯಣ ದೇವಾಲಯದಲ್ಲಿ ಕಾಣಬಹುದೆಂದೂ ಡಾ. ಮೊರೇಸ್ ಬರವಣಿಗೆಯಿಂದ ತಿಳಿದುಬರುತ್ತದೆ.



ದೇಗಾಂವೆಯ ಕಮಲಾನಾರಾಯಣ ದೇವಸ್ಥಾನ

ಕದಂಬ ಶಿವಚಿತ್ತನ (1148–1181) ಪತ್ನಿ ಕಮಲಾದೇವಿಯ ಆಜ್ಞೆಯಿಂದ ತಿಪ್ಪೋಜನೆಂಬವನು ದೇಗಾಂವೆಯ ಕಮಲಾನಾರಾಯಣ ದೇವಾಲಯವನ್ನು ಕಟ್ಟಿದನೆಂದು ಅಲ್ಲಿಯ ಒಂದು ಶಾಸನ ತಿಳಿಸುತ್ತದೆ. ಈ ದೇವಾಲಯ ಒಂದು ತ್ರಿಕೂಟಾಚಲ.



ಕದಂಬ ಶೈಲಿಯದೆನ್ನಲಾದ ಒಂದು ದೇಗುಲ : ಕಲ್ಲಗುಡಿ



ಜಂಬೆಹಳ್ಳಿಯ ದುರ್ಗಾ ವಿಗ್ರಹ

ಮೂರು ದಿಕ್ಕುಗಳಲ್ಲಿ ದೇವಗೃಹಗಳು ಮತ್ತು ಇನ್ನೊಂದೆಡೆ ದ್ವಾರ ಇದ್ದು, ಇವೆಲ್ಲ ಮಧ್ಯದ ಮಂಟಪಕ್ಕೆ ತೆರೆದಂತಿವೆ. ದೇವಗೃಹಗಳಲ್ಲೊಂದೊಂದರಲ್ಲೂ ಒಂದು ಗರ್ಭಗೃಹ ಮತ್ತು ಸುಖನಾಸಿ ಇವೆ. ಸುಖನಾಸಿ ಮತ್ತು ಗರ್ಭಗೃಹದ ಬಾಗಿಲ ವಾಡಗಳು ಬಲು ನಾಜೂಕಾಗಿ ಶಿಲ್ಪಿತವಾಗಿವೆ. ಸುಖನಾಸಿಯ ಬಾಗಿಲುಗಳನ್ನು ಕಲಾತ್ಮಕವಾಗಿ ಕೆತ್ತಿದ ಜಾಲಂದ್ರಗಳ ಚೌಕಟ್ಟಿನ ಮಧ್ಯದಲ್ಲಿರಿಸಲಾಗಿದೆ. ದೇವಾಲಯದ ಹೊರಗೋಡೆಯ ಮೇಲೆ ಕದಂಬ ನಾಗರರೀತಿಯ ಶಿಖರವನ್ನು ಹೊತ್ತಿರುವ ಜೋಡಿ ಅರೆಗಂಬಗಳ ಅಲಂಕರಣವಿದೆ. ಮೇಲಿನ ಕೈಪಿಡಿಯಲ್ಲಿ ಶಿಖರಗಳನ್ನು ಹೊತ್ತು ಸೆಟೆದುನಿಂತ ಸಿಂಹಗಳೂ ಅವುಗಳ ಮಧ್ಯೆ ನೃತ್ಯಬಾಲಿಕೆಯರ ವಿಗ್ರಹಗಳೂ ಇವೆ. ಅಲಂಕರಣ, ಸ್ತಂಭರೀತಿ ಮುಂತಾದವುಗಳಲ್ಲಿ ಸಮಕಾಲೀನ ಚಾಳುಕ್ಯ–ಹೊಯ್ಸಳ ಶೈಲಿಯ ಪ್ರಭಾವ ಎದ್ದುಕಾಣುತ್ತದೆ. ಒಟ್ಟಿನಲ್ಲಿ ಶೈಲಿ ಯಾವುದಾದರೂ ಇರಲಿ ದೇಗಾಂವೆಯ ಕಮಲಾನಾರಾಯಣ ಗುಡಿ ಕರ್ನಾಟಕದ ಸುಂದರ ದೇವಾಲಯಗಳಲ್ಲೊಂದೆಂಬುದರಲ್ಲಿ ಸಂದೇಹವಿಲ್ಲ. ಅಲ್ಲದೆ, ಕದಂಬ ವಾಸ್ತುಶಿಲ್ಪಶೈಲಿಯ ಬೆಳವಣಿಗೆಯ ಕೊನೆಯ ಘಟ್ಟವನ್ನೂ ಈ ಗುಡಿ ಸೂಚಿಸುತ್ತದೆ. ಅನಂತರ ಅನತಿ ಕಾಲದಲ್ಲಿಯೇ ಕದಂಬರಾಜ್ಯವೂ ಹಾಗೆಯೇ ಕದಂಬ ಶೈಲಿಯೂ ಕೊನೆಗೊಂಡುವು.

ಆದರೆ ಹೊಯ್ಸಳ ಮತ್ತು ವಿಜಯನಗರದ ಅರಸರ ಕಾಲದ ಕಟ್ಟಡಗಳಲ್ಲೂ ಒಮ್ಮೊಮ್ಮೆ ಅಪರೂಪವಾಗಿ ಕದಂಬ ವಾಸ್ತುಶಿಲ್ಪದ ಕೆಲವು ಅಂಶಗಳು ಕಂಡುಬರುವುದುಂಟು.

**ಶಿಲ್ಪ :** ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕು ಜಂಬೆಹಳ್ಳಿಯಲ್ಲಿರುವ ದುರ್ಗಾವಿಗ್ರಹ ಇದುವರೆಗೆ ದೊರಕಿರುವ ಕದಂಬ ಶಿಲ್ಪಗಳಲ್ಲಿ ಅತ್ಯಂತ ಪ್ರಾಚೀನವಾದದ್ದು. ಜಂಬೆಹಳ್ಳಿಯ ದೇವಾಲಯದ ಮುಂದಿರುವ ಶಾಸನವೊಂದರಿಂದ ಆ ಗುಡಿ ಕದಂಬ ಶಾಂತಿವರ್ಮನ ಕಾಲದಲ್ಲಿ ಕನ್ನಮ್ಮ ಕಟ್ಟದ್ದೆಂದು ತಿಳಿಯುತ್ತದೆ. ಈಗ ದೇವಾಲಯ ಹಾಳಾಗಿದ್ದರೂ ಅಲ್ಲಿಯ ಮೂಲಶಿಲ್ಪ ಕದಂಬರ ಕಾಲದ್ದೆಂದೇ ಹೇಳಬಹುದು. ಈ ಶಿಲ್ಪದಲ್ಲಿರುವ ಚತುರ್ಭುಜ ಮಹಿಷಮರ್ದಿನಿ ಪ್ರಾಣಿಯಾಕೃತಿಯಲ್ಲಿರುವ ಅಸುರನನ್ನು ಮೆಟ್ಟಿ ಎಡಗೈಯಲ್ಲಿ ಎಮ್ಮೆಯ ಕಾಲೊಂದನ್ನು ಹಿಡಿದೆತ್ತಿದ್ದಾಳೆ. ಇತರ ಕೈಗಳಲ್ಲಿ ಶಂಖ, ಕತ್ತಿ, ತ್ರಿಶೂಲಗಳಿವೆ. ದೇವಿಯ ಸುಂದರ ಮುಖ, ಆಯುಧಗಳನ್ನು ಹಿಡಿದಿರುವ ರೀತಿ, ನಿರಾಯಾಸವಾಗಿ ಅಸುರನನ್ನು ಮೆಟ್ಟಿ ಕೊಲ್ಲುತ್ತಿರುವ ಭಾವ ಮುಂತಾದವು ಸ್ಫುಟವಾಗಿ ವ್ಯಕ್ತವಾಗಿವೆ. ಇದು ಒಂದು ಉತ್ತಮ ಕಲಾಕೃತಿ. ಅನಂತರದ ಕದಂಬರ ಕಾಲದ ಇತರ ಶಿಲ್ಪಗಳು ಹಲ್ಸಿ, ದೇಗಾಂವೆ ಮತ್ತು ಹಾನುಗಲ್ಲುಗಳಲ್ಲಿವೆ. ಇವುಗಳೆಲ್ಲದರಲ್ಲೂ ಚೂಪು ತಲೆಯ ಪ್ರಭಾವಳಿ ಸಾಮಾನ್ಯವಾಗಿರುತ್ತದೆ. ಹಲ್ಸಿಯ ಲಕ್ಷ್ಮೀನಾರಾಯಣನ ವಿಗ್ರಹದಲ್ಲಿ ಲಕ್ಷ್ಮಿ ವಿಷ್ಣುವಿನ ತೊಡೆಯ ಮೇಲೆ ಕುಳಿತಿದ್ದಾಳೆ. ಪ್ರಭಾವಳಿಯಲ್ಲಿ ದಶಾವತಾರಗಳನ್ನು ಕೆತ್ತಲಾಗಿದೆ. ಸು. 1147ರಲ್ಲಿ ರಚಿತವಾದ ಹಾನುಗಲ್ಲಿನ ಮಾಧವ ದೇವಾಲಯದಲ್ಲಿರುವ ಒಂದು ವಿಷ್ಣು ವಿಗ್ರಹ ಬಲುಮೋಹಕ ಶಿಲ್ಪ. ಬೆಳಗಾಮಿ ಗಂಡಭೇರುಂಡ (1047) ಮತ್ತು ಅದರ ಬಳಿಯೇ ಇರುವ ಶೂಲ ಬ್ರಹ್ಮ (1060) ಶಿಲ್ಪಗಳು ಮೇಲ್ಮಟ್ಟದ ಕೃತಿಗಳು.



ಬನವಾಸಿಯ ಮಧುಕೇಶ್ವರ ದೇವಾಲಯದ ಗರ್ಭಗುಡಿಯ ಮೇಲಿರುವ ವಿಮಾನ

**ಶಾಸನಗಳು:** ಮೊದಲ ಕದಂಬ ವಂಶಕ್ಕೆ ಸೇರಿದ ಶಾಸನಗಳಲ್ಲಿ ಹೆಚ್ಚಿನವು ತಾಮ್ರಪಟಗಳು. ಇವು ಮೈಸೂರು, ಹಾಸನ, ಕಡೂರು, ಶಿವಮೊಗ್ಗ, ಉತ್ತರ ಕನ್ನಡ ಮತ್ತು ಧಾರವಾಡ ಜಿಲ್ಲೆಗಳಲ್ಲಿ ದೊರಕಿವೆ. ಕದಂಬರ ತಾಮ್ರಪಟಗಳಲ್ಲಿ, ಓಲೆಗರಿಯ ರೀತಿಯ ತೆಳುವಾದ ಆಯಾಕಾರದ ತಾಮ್ರದ ಹಲಗೆಗಳ ಮೇಲೆ ಬರಹವಿದ್ದು, ಎರಡು ಅಥವಾ ಅದಕ್ಕೂ ಹೆಚ್ಚಿನ ಸಂಖ್ಯೆಯ ಹಲಗೆಗಳು ಅವುಗಳ ಒಂದು ಕೊನೆಯಲ್ಲಿರುವ ದುಂಡು ತೂತಿನ ಮೂಲಕ ತಾಮ್ರದ ಉಂಗುರದಿಂದ ಪೋಣಿಸಲ್ಪಟ್ಟಿರುತ್ತವೆ. ತಾಮ್ರದ ಉಂಗುರದ ಮೇಲೆ ಕದಂಬರ ರಾಜಚಿಹ್ನೆಯಾದ ಸಿಂಹಮುದ್ರೆ ಇರುತ್ತದೆ. ಇವುಗಳಲ್ಲಿರುವ ಲಿಪಿ ಬಹುತೇಕ ಪೆಟ್ಟಿಗೆಯ ತಲೆಯ ಬ್ರಾಹ್ಮಿ. ಭಾಷೆ ಸಂಸ್ಕೃತ ಗದ್ಯ. ಈ ತಾಮ್ರಪಟಗಳೆಲ್ಲ ದಾನಶಾಸನಗಳು. ಅದರಿಂ. ದಾನಕೊಡುವ ರಾಜನ ಮತ್ತು ಅವನ ವಂಶದ ವಿವರಣೆ ಇವುಗಳಲ್ಲಿರುವುದರಿಂದ ಇವು



ಕಲ್ಲ ಗುಡಿ: ಹಜಾರದ ಗೋಪುರದ ಚಿತ್ರಕಂಬ



ಕಲ್ಲ ಗುಡಿಯ ಉತ್ತರಬಾಗಿಲು

ಅಮೂಲ್ಯ ಚಾರಿತ್ರಿಕ ದಾಖಲೆಗಳು. ಇದುವರೆಗೆ ಮೊದಲ ಕದಂಬರಲ್ಲಿ ಮೃಗೇಶವರ್ಮ ಮತ್ತು ಅವನ ಅನಂತರದ ಅರಸರ ತಾಮ್ರಶಾಸನಗಳು ಮಾತ್ರ ದೊರಕಿವೆ.

ಈ ಕಾಲದ ಶಿಲಾಶಾಸನಗಳು ಚಿತ್ರದುರ್ಗ ಜಿಲ್ಲೆಯ ಚಂದ್ರವಳ್ಳಿ, ಶಿವಮೊಗ್ಗ ಜಿಲ್ಲೆಯ ಮಳವಳ್ಳಿ ಮತ್ತು ತಾಳಗುಂದ, ಉತ್ತರ ಕನ್ನಡ ಜಿಲ್ಲೆಯ ಹಲ್ಮಿಡಿ, ಬನವಾಸಿ ಮುಂತಾದೆಡೆಗಳಲ್ಲಿ ಬೆಳಕಿಗೆ ಬಂದಿವೆ. ಇವುಗಳ ಲಿಪಿಯೂ ಬ್ರಾಹ್ಮಿಯೇ. ಮಳವಳ್ಳಿ ಮತ್ತು ಚಂದ್ರವಳ್ಳಿ ಶಾಸನಗಳ ಭಾಷೆ ಪ್ರಾಕೃತ. ತಾಳಗುಂದ ಶಾಸನ ಸಂಸ್ಕೃತದಲ್ಲಿ ಪದ್ಯರೂಪದಲ್ಲಿದೆ. ಹಲ್ಮಿಡಿ ಶಾಸನ ಕನ್ನಡದಲ್ಲಿ ಗದ್ಯರೂಪದಲ್ಲಿದೆ. ಈ ಶಿಲಾಶಾಸನಗಳ ಉದ್ದೇಶ ಬೇರೆಬೇರೆಯಾದವು. ಚಂದ್ರವಳ್ಳಿ ಮತ್ತು ತಾಳಗುಂದ ಶಾಸನಗಳು ತಟಾಕನಿರ್ಮಾಣವನ್ನು ಹೇಳಿದರೆ, ಹಲ್ಮಿಡಿ ಶಾಸನ ದಾನವನ್ನು ನಿರೂಪಿಸುತ್ತದೆ. ತಾಮ್ರಶಾಸನಗಳಂತೆ ಈ ಶಿಲಾಶಾಸನಗಳೂ ಚರಿತ್ರೆಯ ಮೇಲೆ ಬೆಳಕು ಚೆಲ್ಲುತ್ತವೆ. ಅಲ್ಲದೆ ಹಲವು ಶಾಸನಗಳು ಭಾಷಾಸಾಹಿತ್ಯ ದೃಷ್ಟಿಯಿಂದಲೂ ಮುಖ್ಯವಾದವು. ಚಂದ್ರವಳ್ಳಿ ಮತ್ತು ಮಳವಳ್ಳಿ ಶಾಸನಗಳು ಕರ್ಣಾಟಕದಲ್ಲಿ ಪ್ರಚಲಿತವಿದ್ದ ಪ್ರಾಕೃತಭಾಷೆಯನ್ನು ಪರಿಚಯ ಮಾಡಿಕೊಟ್ಟರೆ, ಹಲ್ಮಿಡಿ ಶಾಸನ ಕ್ರಿ.ಶ. 5ನೆಯ ಶತಮಾನದಲ್ಲಿ ರೂಢವಾಗಿದ್ದ ಕನ್ನಡಭಾಷೆಯ ಸ್ವರೂಪವನ್ನು ತೋರಿಸಿಕೊಡುತ್ತದೆ. ಈಗ ಗೊತ್ತಿರುವವುಗಳಲ್ಲಿ ಇದೇ ಅತ್ಯಂತ ಪ್ರಾಚೀನ ಕನ್ನಡ ಶಾಸನ. ಹಾಗೆಯೇ ತಾಳಗುಂದ ಶಾಸನವೂ ಕರ್ಣಾಟಕದ ಅತ್ಯಂತ ಪ್ರಾಚೀನ ಸಂಸ್ಕೃತಶಾಸನವಾಗಿದೆ. ಅಲ್ಲದೆ ಆ ಶಾಸನದಲ್ಲಿ, ಅದನ್ನು ರಚಿಸಿದ ಕವಿ ಕುಬ್ಜನ ಹೆಸರೂ ಇದೆ. ಕುಬ್ಜನೇ ಈಗ ಗೊತ್ತಿರುವಂತೆ ಕರ್ಣಾಟಕದ ಕವಿಗಳಲ್ಲಿ ಅತ್ಯಂತ ಪ್ರಾಚೀನ. ಇತ್ತೀಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಪುರಾತತ್ತ್ವ ಇಲಾಖೆಯವರು ಬನವಾಸಿಯಲ್ಲಿ ಪತ್ತೆಹಚ್ಚಿದ ಮೃಗೇಶವರ್ಮನ ಶಾಸನವೇ ಕದಂಬರ ರಾಜಧಾನಿಯಲ್ಲಿ ದೊರಕಿರುವ ಮೊಟ್ಟಮೊದಲನೆಯ ಶಾಸನ. ಪೆಟ್ಟಿಗೆ ತಲೆಯ ದಾಕ್ಷಿಣಾತ್ಯ ಲಿಪಿಯಲ್ಲಿರುವ ಈ ಶಾಸನವನ್ನು ಬಲು ಸುಂದರವಾದ ಚತುರ್ಮುಖ ಶಿಲಾಸ್ತಂಭದ ಮೇಲೆ ಕೆತ್ತಲಾಗಿದೆ.

ಹಾನುಗಲ್ಲು, ಗೋವ ಮುಂತಾದೆಡೆಗಳಲ್ಲಿ ಆಳಿದ ಅನಂತರದ ಕದಂಬ ಶಾಖೆಗಳ ಅರಸರ ಶಿಲಾ ಮತ್ತು ತಾಮ್ರಶಾಸನಗಳು ಕರ್ಣಾಟಕದ ಶಿವಮೊಗ್ಗ—ಚಿತ್ರದುರ್ಗ, ಉತ್ತರ ಕನ್ನಡ, ಧಾರವಾಡ ಮತ್ತು ಬೆಳಗಾವಿ ಜಿಲ್ಲೆಗಳಲ್ಲೂ ಗೋವದಲ್ಲೂ ಮಹಾರಾಷ್ಟ್ರದ ಸತಾರ, ರತ್ನಗಿರಿ ಮತ್ತು ಠಾಣಾ ಜಿಲ್ಲೆಗಳಲ್ಲೂ ದೊರಕಿವೆ. ಇವೆಲ್ಲ ಬಹಳ ಮಟ್ಟಿಗೆ ಸಮಕಾಲೀನ ಕನ್ನಡಲಿಪಿಯಲ್ಲಿ ಕನ್ನಡ ಭಾಷೆಯಲ್ಲಿರುತ್ತವೆ. ಆದರೆ ಕದಂಬ ರಾಜ್ಯದಲ್ಲಿ ಉತ್ತರಕ್ಕೆ ಹೋದಂತೆ ನಾಗರೀಲಿಪಿಯ ಸಂಸ್ಕೃತ ಶಾಸನಗಳೂ ದೊರಕುವುದುಂಟು. ಈ ಶಾಸನಗಳೆಲ್ಲ ಹೆಚ್ಚಾಗಿ ದಾನಶಾಸನಗಳೋ ವೀರಗಲ್ಲುಗಳೋ ಆಗಿರುತ್ತವೆ. ಇವು ಸಮಕಾಲೀನ ರಾಜಕೀಯ ಸಾಮಾಜಿಕ ಧಾರ್ಮಿಕ ಆರ್ಥಿಕ ಆಗುಹೋಗುಗಳ ಬಗ್ಗೆ ಬಹಳ ಬೆಳಕು ಚೆಲ್ಲುತ್ತವೆ. ಕೆಲವು ಶಾಸನಗಳನ್ನು ಉತ್ತಮ ಕಾವ್ಯ ರಚನೆಗಳೆಂದೂ ಕರೆಯಬಹುದು.

**ನಾಣ್ಯಗಳು :** ಮೊದಲ ಕದಂಬ ಅರಸರ ಕಾಲಕ್ಕೆ ಖಚಿತವಾಗಿ ಸೇರುವ ನಾಣ್ಯಗಳು ಇದುವರೆಗೆ ದೊರಕಿಲ್ಲ. ಆದರೆ ಪುಟ್ಟ ಬಟ್ಟಲಾಕಾರದ ಕೆಲವು ಚಿನ್ನದ ನಾಣ್ಯಗಳು ಈ ಕಾಲದವೆಂದು ಕೆಲವರ ಅಭಿಪ್ರಾಯ. ಇವನ್ನು ಪದ್ಮಟಂಕ ಎಂದು ಕರೆಯುತ್ತಾರೆ. ದುಂಡಗಿರುವ ಈ ನಾಣ್ಯಗಳು 0.6"–0.8" ವ್ಯಾಸವಿದ್ದು, 52-70 ಗ್ರೇನ್ ತೂಗುತ್ತವೆ. ಸಾಮಾನ್ಯವಾಗಿ 52 ಮತ್ತು 66 ಗ್ರೇನ್‌ಗಳವೇ ಹೆಚ್ಚು. ಇವುಗಳ ತಗ್ಗಿನ ಕಡೆಯಲ್ಲಿ ಅಂಕನ ಮಾಡಿದ ಪದ್ಮದ ಚಿತ್ರವೂ ಸುತ್ತಲೂ ನಾಲ್ಕು ಸಣ್ಣ ಚಿಹ್ನೆಗಳೂ ಇರುತ್ತವೆ. ಮೊದಮೊದಲು ಎರಡು ಶ್ರೀಕಾರಗಳು, ಶಂಖ ಮತ್ತು ಬಿಲ್ಲು ಇವೇ ಆ ಸಣ್ಣ ಚಿಹ್ನೆಗಳಾಗಿರುತ್ತಿದ್ದುವು. ಅನಂತರದ ಪದ್ಮಟಂಕಗಳಲ್ಲಿ ಇವುಗಳ ಬದಲು ನಾಲ್ಕು ಸಣ್ಣ ಸಿಂಹಗಳು ಕಾಣುತ್ತವೆ. ಹಿಂಭಾಗದಲ್ಲಿ ಯಾವ ಚಿಹ್ನೆಗಳೂ ಇರುವುದಿಲ್ಲ. ಇವುಗಳ ಮೇಲೆ ಯಾವ ಬರಹಗಳೂ ಇಲ್ಲದಿರುವುದರಿಂದ, ಇವು ಕದಂಬರೇ ಹೊರಡಿಸಿದವೆಂದು ನಿರ್ದಿಷ್ಟವಾಗಿ ಹೇಳುವುದು ಕಷ್ಟ.



ಕದಂಬ ವಾಸ್ತುಪದ್ಧತಿಯದನ್ನಲಾದ ಬನವಾಸಿಯ ಶಿತಿಕಂಠೇಶ್ವರ ದೇವಾಲಯದ ವಿಮಾನ



ಕಲ್ಲ ಗುಡಿಯ ಒಳಾಂಗಣ

ಅನಂತರದ ಕದಂಬ ಕುಲಗಳ ಅನೇಕ ಚಿನ್ನದ ನಾಣ್ಯಗಳು ಉತ್ತರ ಕರ್ಣಾಟಕ ಮತ್ತು ಗೋವ ಪ್ರದೇಶಗಳಲ್ಲಿ ದೊರಕಿವೆ. ಇವೂ ದುಂಡಗೆ ಸುಮಾರು 0.8 ಅಥವಾ 0.9 ಅಂಗುಲ ಅಗಲವಿದ್ದು ತೂಕದಲ್ಲಿ ಸುಮಾರು 66 ಗ್ರೇನ್‌ಗಳಿರುತ್ತವೆ. ಪದ್ಮಟಂಕಗಳಂತೆ ಇವುಗಳಲ್ಲಿ ಅಂಕನ ಚಿಹ್ನೆಗಳಿರದೆ ನಾಣ್ಯಗಳು ಪೂರ್ತವಾಗಿ ಅಚ್ಚು ಹೊಯ್ದುವುಗಳಾಗಿರುತ್ತವೆ. ಬಹುನಾಜೂಕಾಗಿ ಮಾಡಿರುವ ಈ ನಾಣ್ಯಗಳಲ್ಲಿ ಮುಂಭಾಗದಲ್ಲಿ ಸಿಂಹದ ಚಿತ್ರವೂ ನಾಣ್ಯವನ್ನು ಹೊರಡಿಸಿದ ಸಂವತ್ಸರದ ಹೆಸರೂ ಹಿಂಬದಿಯಲ್ಲಿ ಬಿರುದಾವಳಿಸಹಿತವಾದ ರಾಜನ ಹೆಸರೂ (ನಾಗರೀ ಲಿಪಿಯಲ್ಲಿ) ಇರುತ್ತವೆ. ಉದಾಹರಣೆಗೆ ಕದಂಬ ಜಯಕೇಶಿಯ ಒಂದು ನಾಣ್ಯದಲ್ಲಿ ಮುಂಭಾಗದ ಸಿಂಹದ ಚಿತ್ರದ ಪಕ್ಕದಲ್ಲಿ ಪ್ರಮೋದ ಎಂದೂ ಹಿಂಭಾಗದಲ್ಲಿ ನಾಲ್ಕು ಸಾಲುಗಳಲ್ಲಿ ಶ್ರೀ ಸಪ್ತಕೋಟೀಶ್ವರ ಲಬ್ಧ ವರ ವೀರ ಜಯಕೇಶಿದೇವ ಮೇವರ ಮಾರಿ ಎಂದೂ ಇರುವುದನ್ನು ಚಿತ್ರದಲ್ಲಿ ನೋಡಬಹುದು. (ಎಸ್.ಎನ್.)

**ಕದಂಬ ಶಿಲೆ :** ನೀರಿನ ಸೆಳವಿನಲ್ಲಿ ಬಲುದೂರ ಕೊಚ್ಚಿಕೊಂಡು ಹೋಗಿ ತಿಕ್ಕಾಟದಿಂದ ಸರಿಸುಮಾರು ಗುಂಡಗಿನ ಆಕಾರ ಪಡೆದ, 2 ಮಿಮೀ.ಗಿಂತ ಹೆಚ್ಚಿನ ವ್ಯಾಸವಿರುವ, ಕಲ್ಲುಗಳು ಒಂದುಗೂಡಿ ಆಗಿರುವ ಸಮುದಾಯ (ಕಂಗ್ಲಾಮೆರೆಟ್). ಜಡಿಗಲ್ಲುಗಳು ಚೂಪಾಗಿಯೂ ಗಾತ್ರ 10–100 ಮಿ.ಮೀ.ವರೆಗೂ ಇರುವ ಸಮುದಾಯದ ಹೆಸರು ಬ್ರೆಚ್ಚ (ನೋಡಿ) (Breccia). ಮಳೆಗಾಲದಲ್ಲಿ ನೀರಿನ ಪ್ರವಾಹ ಹಲವಾರು ಭಿನ್ನ ಗಾತ್ರಗಳ ಕಲ್ಲಗಳನ್ನು ಕೊಚ್ಚಿಕೊಂಡು ಸಾಗುತ್ತದೆ. ನೀರಿನ ಆಳ, ಪ್ರವಾಹದ ಸೆಳೆತ, ಕಲ್ಲಿನ ಗಾತ್ರ ಇವನ್ನು ಅವಲಂಬಿಸಿ ಒಂದೊಂದು ಗಾತ್ರದ ಕಲ್ಲು ಒಂದೊಂದು ಕಡೆ ಶೇಖರಿತವಾಗುವುದು. ದಪ್ಪಕಲ್ಲುಗಳು ದಡದಲ್ಲಿಯೂ ಮರಳಿವ

ಕಣಗಳು ಕೊಂಚ ದೂರ ಸರಿದ ಮೇಲೆಯೂ ನಿಕ್ಷೇಪಿತವಾಗುತ್ತವೆ. ಕಿರಿಯ ಮಣ್ಣಿನ ಕಣಗಳು ಮತ್ತು ರಾಸಾಯನಿಕ ವಸ್ತುಗಳು ಆಳವಾದ ನೀರಿನಲ್ಲಿ ನಿಧಾನವಾಗಿ ಸಂಚಿತವಾಗುವುವು. ಕಾಲಕ್ರಮೇಣ ಇವುಗಳ ಸಂದುಗಳಲ್ಲಿ ಮಣ್ಣು, ಮರಳು, ಸುಣ್ಣಕಲ್ಲು, ಕಬ್ಬಿಣದ ಆಕ್ಸೈಡುಗಳೇ ಮೊದಲಾದ ಖನಿಜಗಳಿರುವ ಲೇಪ, ಗಾರೆ ಮುಂತಾದ ಬಂಧಕವಸ್ತುಗಳು ಸೇರಿ ಕದಂಬ ಶಿಲೆ ಉಂಟಾಗುತ್ತದೆ.

ಸಂಚಿತ ಬಿಡಿಕಲ್ಲುಗಳ ಗಾತ್ರಾನುಸಾರ ಕದಂಬ ಶಿಲೆಯನ್ನು ವರ್ಗೀಕರಿಸುವುದುಂಟು—ಮಣಿ (ಪೆಬಲ್) ಅಥವಾ ಸೂಕ್ಷ್ಮ ಕದಂಬಶಿಲೆ, ಗುಂಡು (ಕಾಬಲ್) ಅಥವಾ ಮಧ್ಯಮ ಕದಂಬಶಿಲೆ ಮತ್ತು ಬಂಡೆ (ಬೌಲ್ಡರ್) ಅಥವಾ ಒರಟು ಕದಂಬ ಶಿಲೆ. ಇವೆಲ್ಲ ವರ್ಗಗಳ ನಡುವೆಯೂ ಸಾಮಾನ್ಯವಾಗಿ ಬೆರೆತು ಎರಕಗೊಳ್ಳುವ ಸೂಕ್ಷ್ಮ ಮರಳುಕಣಗಳು ಇವುಗಳಲ್ಲಿ ಇನ್ನಷ್ಟು ಪ್ರಭೇದಗಳನ್ನು ಉಂಟುಮಾಡುವುವು.

ಸಂಸ್ತರ ಶಿಲೆಗಳನ್ನು (ಸ್ಟ್ರಾಟಿಫೈಡ್ ರಾಕ್ಸ್) ಭೂಚರಿತ್ರೆಯ ಪುಟಗಳೆಂದು ಕರೆಯುವುದು ವಾಡಿಕೆ. ಇವುಗಳ ಅಡಿಯಲ್ಲಿ ಸಾಮಾನ್ಯವಾಗಿ ಗೋಚರವಾಗುವ ಕದಂಬ ಶಿಲೆಗಳು ಕಡಲತಡಿಯನ್ನೂ ಭೂಸಾಮೀಪ್ಯವನ್ನೂ ಸೂಚಿಸುತ್ತವೆ. ಆಳವಾದ ನೀರಿನಲ್ಲಿ ಉತ್ಪನ್ನವಾದ ಶಿಲೆಗಳ ಸಮೀಪದಲ್ಲಿ ಇವು ಸಿಕ್ಕಿದರೆ ಭಾರೀ ಚಲನವಲನಗಳು ಆ ಪ್ರದೇಶದ ಮೇಲ್ಮೈಯಲ್ಲಿ ಆಗಿರುವುವೆಂದು ತಿಳಿಯಬಹುದು. ಕದಂಬಶಿಲೆಯಲ್ಲಿರುವ ಕಣಗಳ ಸೂಕ್ಷ್ಮಪರಿಶೀಲನೆಯಿಂದ ಅವು ಎಲ್ಲಿಂದ ಬಂದವೆಂಬುದನ್ನೂ ಪ್ರಾಚೀನ ಕಾಲದ ನದೀವೇಗವನ್ನೂ ವಾಯುಗುಣವನ್ನೂ ನಿರ್ಧರಿಸಬಹುದು. ಭೂಚರಿತ್ರೆಯ ದಾಖಲೆ ಪರಿಪೂರ್ಣವಾಗಿಲ್ಲ. ಸಂಸ್ತರ ಶಿಲಾನಿಕ್ಷೇಪ ಸತತವಾಗಿ ಮುಂದುವರಿದಿದ್ದರೂ ಒಂದೆಡೆ ಅವೆಲ್ಲವೂ ಗೋಚರವಾಗಿಲ್ಲ. ಕದಂಬ ಶಿಲೆಗಳು ಸೂಚಿಸುವ ಅನನುರೂಪತೆಗಳ ಆಧಾರದಿಂದ ಭೂಚರಿತ್ರೆಯ ವಿಭಾಗಗಳನ್ನು ಮಾಡಲಾಗಿದೆ. ಹೀಗೆ ಭೂಮಂಡಲದ ಇತಿಹಾಸ ನಿರೂಪಣೆಯಲ್ಲಿ ಕದಂಬಶಿಲೆಗಳಿಗೆ ಪ್ರಧಾನ ಸ್ಥಾನ ಉಂಟು. (ಎ.ಎನ್.ಎಸ್.ಐ.)

**ಕದಳಿ:** ಈ ಸಂಸ್ಕೃತ ಪದಕ್ಕೆ ಬಾಳೆಯಗಿಡ, ಜಿಂಕೆ ಮುಂತಾದ ಅರ್ಥಗಳಿವೆ. ಕನ್ನಡದಲ್ಲಿ, ವಿಶೇಷತಃ ವಚನ ವಾಙ್ಮಯದಲ್ಲಿ, ಕದಳಿ ಅನೇಕ ಅರ್ಥಗಳಲ್ಲಿ ಬಳಕೆಯಲ್ಲಿರುವುದು ಕಂಡುಬರುತ್ತದೆ. ಶಿವಶರಣರು ಜೀವನದ ಪರಮಾದರ್ಶವನ್ನು, ಬಾಳಿನ ಬೆಳಕನ್ನು ಕದಳಿ ಎಂಬ ಪದದಿಂದ ಸೂಚಿಸಿದ್ದಾರೆ. ಅಕ್ಕಮಹದೇವಿ, ಲಿಂಗಮ್ಮ, ಸಿದ್ಧರಾಮೇಶ್ವರ, ಅಲ್ಲಮಪ್ರಭು ಮುಂತಾದವರ ವಚನಗಳಲ್ಲಿ ಕದಳಿ ಎಂಬ ಪದ ತಕ್ಕಷ್ಟು ಪ್ರಯುಕ್ತವಾಗಿದೆ.

ಕದಳಿಯೆಂಬುದು ತನು, ಕದಳಿಯೆಂಬುದು ಮನ,<br>
ಕದಳಿಯೆಂಬುದು ವಿಷಯಂಗಳು;<br>
ಕದಳಿಯೆಂಬುದು ಘನ ಘೋರಾರಣ್ಯ;<br>
ಕದಳಿಯೆಂಬುದ ಗೆದ್ದು ಬದುಕಿ ಬಂದು<br>
ಕದಳಿಯ ಬನದಲ್ಲಿ ಭವಹರನ ಕಂಡೆನು,<br>
ಭವಗೆಟ್ಟು ಬಂದೆಯಾ ಮಗಳೆ—ಎಂದು<br>
ಕರುಣದಿಂದ ತೆಗೆದು ಬಿಗಿಯಪ್ಪಿದಡೆ,<br>
ಚೆನ್ನ ಮಲ್ಲಿಕಾರ್ಜುನನ ಹೃದಯಕಮಲದಲ್ಲಿ ಅಡಗಿದೆನು

—ಎಂಬ ಅಕ್ಕನ ವಚನದಲ್ಲಿ ಬಾಳೆ, ಬಾಳು, ಹೃದಯಕಮಲ, ಭವಾರಣ್ಯ, ಅರಣ್ಯಮಧ್ಯ ಮುಂತಾದ ಅರ್ಥಗಳಲ್ಲಿ ಕದಳಿ ಪದವನ್ನು ಬಳಸಿರುವುದು ಕಂಡುಬರುತ್ತದೆ.

ಕರ್ಮವೆಂಬ ಕದಳಿ ಎನಗೆ,<br>
ಕಾಯವೆಂಬ ಕದಳಿ ನಿನಗೆ,<br>
ಮಾಟವೆಂಬ ಕದಳಿ ಬಸವಣ್ಣಂಗೆ,<br>
ಭಾವವೆಂಬ ಕದಳಿ ಚನ್ನಬಸವಣ್ಣಂಗೆ—<br>
ಬಂದ ಭಾವ ಸಲೆ ಸಂದಿತ್ತು,<br>
ಎನ್ನಂಗದವಸಾನ (ವ) ಹೇಳಾ !<br>
ಚನ್ನಮಲ್ಲಿಕಾರ್ಜುನಯ್ಯ

—ಎಂಬ ಅಕ್ಕನ ಇನ್ನೊಂದು ವಚನದಲ್ಲಿ ಕಾಣುವ ಕದಳಿ ಪದದ ಅರ್ಥವ್ಯಾಪ್ತಿ ವಸ್ತುಪರ ಎಂಬುದಕ್ಕಿಂತ ಭಾವಪರ ಎಂದು ಭಾವಿಸುವುದು ಸೂಕ್ತ. (ಎಂ.ಜಿ.ಎನ್.)

**ಕದಳಿಯ ವನ:** ಶ್ರೀಶೈಲದ ಪರ್ವತಾವಳಿಯಲ್ಲಿರುವ ಒಂದು ಜಾಗ. ಪ್ರಕೃತಿ ಸೌಂದರ್ಯಗಳಿಂದ ಕಂಗೊಳಿಸುತ್ತಿದ್ದು ತಪಸ್ವಿಗಳಿಗೆ ಅನುಕೂಲವಾದ ಗುಪ್ತಸ್ಥಳ. ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದಿಂದ ಹರಳಯ್ಯನ ಮಿಟ್ಟೆಯನ್ನು ಹಾದು ಚುಕ್ಕಲ ಪರ್ವತವನ್ನು ದಾಟಿ, ಕೃಷ್ಣಾನದಿಯನ್ನು ಅಡ್ಡಹಾಯ್ದು ಮುಂದೆ ಹೋದರೆ ಅಲ್ಲಿ ಮಹದೇವಿಯಕ್ಕನ ಗವಿ ಮತ್ತು ಕದಳಿ ವನಗಳು ಸಿಕ್ಕುತ್ತವೆ. ಕದಳಿಯ ವನವನ್ನು ಗುಪ್ತ ಕದಳಿ ಎಂದು ವಚನಕಾರರು ಕರೆದಿದ್ದಾರೆ. ಕದಳಿಯ ವನವನ್ನು ಸೇರುವುದು ಎಂದರೆ ಮೋಕ್ಷವನ್ನು ಪಡೆಯುವುದು ಎಂಬ ಅರ್ಥ ಇರುವಂತೆ ತೋರುತ್ತದೆ. (ಬಿ.ಎಸ್.)

**ಕದಿರುಗಿಣಿ:** ನೆಕ್ಟರಿನೈಯಿಡೀ ಕುಟುಂಬಕ್ಕೆ ಸೇರಿದ ಹಕ್ಕಿ (ಸನ್‌ಬರ್ಡ್). ಈ ಕುಟುಂಬದಲ್ಲಿ ಸುಮಾರು 104 ಪ್ರಭೇದಗಳಿದ್ದು ಎಲ್ಲಕ್ಕೂ ಸನ್‌ಬರ್ಡ್ ಎಂಬ ಹೆಸರೇ ಅನ್ವಯಿಸುತ್ತದೆ. ಇವೆಲ್ಲ ಹೆಚ್ಚಾಗಿ ಉಷ್ಣವಲಯಗಳಲ್ಲಿ ವಾಸಿಸುತ್ತವೆ. ಆಫ್ರಿಕಾದಲ್ಲಿ ಹೆಚ್ಚು. ದಕ್ಷಿಣ ಏಷ್ಯ ಮತ್ತು ಹತ್ತಿರದ ದ್ವೀಪಗಳಲ್ಲಿಯೂ ಹಲವು ಪ್ರಭೇದಗಳು ದೊರೆಯುತ್ತವೆ. ಆಸ್ಟ್ರೇಲಿಯ ಖಂಡದಲ್ಲೂ ಒಂದು ಪ್ರಭೇದವಿದೆ. ಇವು ಕಾಡುಗಳಲ್ಲಿ ಅಥವಾ ತೋಟಗಳಲ್ಲಿ ಆಹಾರ ಹುಡುಕುತ್ತ ಕಾಲಕಳೆಯುತ್ತವೆ.



ಇವುಗಳಲ್ಲಿ ಗಂಡುಗಳಿಗೆ ಮಿರುಗುವ ವರ್ಣರಂಜಿತ ಗರಿಗಳಿವೆ. ಹಳದಿ, ಕೆಂಪು ಹಾಗೂ ಕಪ್ಪು ಚುಕ್ಕೆಗಳಿರುವ ಹೊಳೆಯುವ ನೀಲಿ, ಕೆನ್ನೀಲಿ, ಹಸಿರು ಬಣ್ಣಗಳು ಬಹಳ ಸಾಮಾನ್ಯ. ಹೆಣ್ಣುಗಳ ಬಣ್ಣ ಮಾಸಲು. ಹೂವುಗಳ ಬಳಿ ಕುಳಿತು, ಹೂವಿನೊಳಗಿನ ಮಧುವಿಗಾಗಿ ಮತ್ತು ಅಲ್ಲಿಗೆ ಬರುವ ಚಿಕ್ಕಪುಟ್ಟ ಕೀಟಗಳಿಗಾಗಿ ಇವು ಹುಡುಕುತ್ತಿರುವುದು ಬಹಳ ಸಾಮಾನ್ಯ ದೃಶ್ಯ. ಇದಕ್ಕಾಗಿ ಇವಕ್ಕೆ ಬಾಗಿದ ಕೊಕ್ಕು, ಉದ್ದಕ್ಕೆ ಚಾಚಬಹುದಾದ, ಹೆಚ್ಚು ಕಡಿಮೆ ಕೊಳವೆಯಾಕಾರದ ನಾಲಗೆಯಿದೆ. ಮರದ ರೆಂಬೆಗಳಲ್ಲಿ ಅಂಡಾಕಾರದ ಹುಲ್ಲಿನ ಗೂಡುಗಳನ್ನಿವು ಕಟ್ಟುತ್ತವೆ. ಗೂಡಿಗೆ ತುದಿಯ ಪಕ್ಕದಲ್ಲಿ ಬಾಗಿಲೊಂದಿದ್ದು ಅದರ ಮೇಲೆ ಮುಚ್ಚಳವಿರುತ್ತದೆ. ಹೆಣ್ಣು ಚುಕ್ಕಿಗಳಿರುವ ಎರಡು ಮೊಟ್ಟೆಗಳನ್ನಿಡುತ್ತದೆ. ಮೈಸೂರಿನಲ್ಲಿ ಕಾಣಬರುವ ಕದಿರುಗಿಣಿಗಳಲ್ಲಿ ಕೆನ್ನೀಲಿ ಕದಿರುಗಿಣಿ ಮತ್ತು ಕೆನ್ನೀಲಿ ಕೆದರು ಕದಿರುಗಿಣಿಗಳು ಮುಖ್ಯವಾದವು. (ಎಸ್.ಬಿ.ಕಿ.)

**ಕದ್ರು:** ದೇವಯುಗದಲ್ಲಿ ಬ್ರಹ್ಮಪುತ್ರಿಯರಾದ ಇಬ್ಬರಲ್ಲಿ ಒಬ್ಬಳು. ಇನ್ನೊಬ್ಬಳು ವಿನತೆ. ಸ್ಪುರದ್ರೂಪಿಗಳಾದ ಈ ಇಬ್ಬರೂ ಕಶ್ಯಪನ ಮಡದಿಯರು. ಇವರ ವೃತ್ತಾಂತ ಮಹಾಭಾರತದ ಆದಿಪರ್ವದಲ್ಲಿದೆ. ಕಶ್ಯಪ ಒಮ್ಮೆ ತನ್ನ ಪತ್ನಿಯರಿಗೆ ಉತ್ತಮ ವರಗಳನ್ನು ಕೊಡುವುದಾಗಿ ಪ್ರಕಟಿಸಿದಾಗ ಸಂತುಷ್ಟಾಂತಃಕರಣೆಯರಾದ ಇಬ್ಬರು ಹೆಂಡಿರೂ ತಮತಮಗೆ ಪ್ರಿಯವಾದ ವರಗಳನ್ನು ಬೇಡಿದರು. ಕದ್ರು ಸಮಾನ ತೇಜಸ್ವಿಗಳಾದ ಒಂದು ಸಾವಿರ ನಾಗಗಳನ್ನು (ಸರ್ಪ) ಪುತ್ರರಾಗಿ ಪಡೆಯಲಿಚ್ಛಿಸಿದಳು. ವಿನತೆಯಾದರೋ ಕದ್ರುವಿನ ಮಕ್ಕಳಿಗಿಂಲೂ ಅಧಿಕವಾದ ಬಲಸಂಪತ್ತಿನಿಂದ ಕೂಡಿದ ಇಬ್ಬರು ಮಕ್ಕಳನ್ನು ಮಾತ್ರ ಬೇಡಿದಳು. ಅವರವರ ಅಪೇಕ್ಷೆಯಂತೆ ಕಶ್ಯಪ ವರವಿತ್ತು ತಪಸ್ಸಿಗೆ ತೆರಳಿದ. ಬಹುಕಾಲ ಕಳೆದ ಮೇಲೆ ಕದ್ರು ಒಂದು ಸಾವಿರ ಅಂಡಗಳನ್ನೂ ವಿನತೆ ಎರಡು ಅಂಡಗಳನ್ನೂ ಪಡೆದರು. ಹೀಗೆ ಪಡೆದ ಅಂಡಗಳನ್ನು ಪರಿಚಾರಿಕೆಯರು ಸ್ನೇಹಪೂರ್ಣ ಕುಂಡಗಳಲ್ಲಿ ಇಟ್ಟು ಐದು ನೂರು ವರ್ಷಗಳ ವರೆಗೆ ರಕ್ಷಿಸಿದರು. ಅನಂತರ ಕದ್ರುಪುತ್ರರು ಹೊರಬಿದ್ದರು. ವಿನತಾಪುತ್ರರು ಮಾತ್ರ ಹೊರಬೀಳದ ಕಾರಣ ಲಜ್ಜಿತಳಾದ ವಿನತೆ ಒಂದು ಅಂಡವನ್ನು ಒಡೆದಳು. ಅಲ್ಲಿ ಶಿಶು ಪೂರ್ಣಾಂಗವಾಗಿ ಇರಲಿಲ್ಲವಾದಕಾರಣ ಅದು ತನ್ನ ತಾಯಿಗೆ ಶಾಪ ಕೊಟ್ಟಿತು—ನೀನು ಐದು ನೂರು ವರ್ಷಗಳ ಕಾಲ ನಿನ್ನ ಪ್ರತಿಸ್ಪರ್ಧಿಗೆ ದಾಸಿಯಾಗುವೆ—ಎಂದು. ಈ ಶಾಪ ಮುಂದುವರಿದು ಒಮ್ಮೆ ಕದ್ರುವಿನಲ್ಲಿ ಒಂದು ಬಗೆಯ ಬುದ್ಧಿವಿಕಾರವುಂಟಾಯಿತು. ಕದ್ರು ಒಮ್ಮೆ ವಿನತೆಯನ್ನು ಕುರಿತು ಉಚ್ಚೈಶ್ರವಸ್ಸಿನ ಬಣ್ಣ ಯಾವುದೆಂದು ಕೇಳಿದಳು. ಇಂದ್ರನ ಪಟ್ಟದ ಕುದುರೆಯಾದ ಉಚ್ಚೈಶ್ರವಸ್ಸಿನ ಬಣ್ಣ ಬಿಳುಪೆಂಬ ವಿಷಯ ಸರ್ವವಿದಿತವಾದ್ದರಿಂದ ವಿನತೆ ಹಾಗೆಂದು ಉತ್ತರವಿತ್ತಳು. ಅಲ್ಲದೆ ಅದರ ಬಣ್ಣ ಬೇರೆಯಾಗಿ

ದೆಯೆ ಎಂದು ಕದ್ರುವನ್ನು ಆಕೆ ಮರುಪ್ರಶ್ನಿಸಿದಳು. ಅದಕ್ಕೆ ಕದ್ರು ಅದರ ಬಾಲ ಮಾತ್ರ ಕಪ್ಪಾಗಿದೆಯೆಂದು ಹೇಳಿ ಇಬ್ಬರೂ ಹೋಗಿ ಕುದುರೆಯ ಬಣ್ಣವನ್ನು ಪರೀಕ್ಷಿಸಬೇಕೆಂದೂ ಯಾರ ಹೇಳಿಕೆ ನಿಜವಾಗುತ್ತದೋ ಅವರಿಗೆ ಸೋತವರು ದಾಸಿಯಾಗಬೇಕೆಂದೂ ಪಣವೊಡ್ಡಿದಳು. ತನ್ನ ಪುತ್ರರಾದ ನಾಗರು ಕುದುರೆಯ ಬಾಲಕ್ಕೆ ಅಂಟಿಕೊಂಡು ಅದನ್ನು ಕಪ್ಪಾಗಿಸತಕ್ಕದ್ದೆಂದು ಕದ್ರು ಗುಟ್ಟಾಗಿ ಸಂಚು ನಡೆಸಿದಳಾಗಿ ಇಬ್ಬರು ಸೋದರಿಯರೂ ಹೋಗಿ ನೋಡಿದಾಗ ಕುದುರೆ ಹಾಲುಗಲ್ಲಿನಂತೆ ಬೆಳ್ಳಗೆ ಕಂಡರೂ ಬಾಲ ಮಾತ್ರ ಹಾಲಾಹಲದಂತೆ ಕಪ್ಪಾಗಿಯೇ ತೋರಿತು. ಅಂತೂ ಕದ್ರುವೇ ಗೆದ್ದಳು. ಪಣದಂತೆ ವಿನತೆ ಕದ್ರುವಿನ ದಾಸಿಯಾದಳು. ಬಹುಕಾಲ ಸಂದಮೇಲೆ ವಿನತಾಪುತ್ರನಾದ ಗರುಡ ತಾಯ ಸೆರೆಯನ್ನು ಬಿಡಿಸಿದ. ನೋಡಿ—ಗರುಡ. (ಎನ್‍.ಎಸ್‍.ಆರ್‍.ಬಿ.)

**ಕನಕ ಚಂದ್ರ :** ಒಬ್ಬ ಜೈನಯತಿ. ಕಾಲ ಸು. 1300. ಕೊಂಡಕುಂದಾಚಾರ್ಯನ ಮೋಕ್ಷಪ್ರಾಭೃತ ಅಥವಾ ಸಹಜಾತಪ್ರಕಾಶ ಎಂಬ ಗ್ರಂಥಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಇವನೊಬ್ಬ ಕವಿಯೂ ಇರಬಹುದೆಂದು ತೋರುತ್ತದೆ. ಇವನ ಯಾವ ಸ್ವತಂತ್ರ ಕಾವ್ಯಗಳೂ ಇದುವರೆಗೆ ಸಿಕ್ಕಿಲ್ಲ. ಈತ ಬರೆದ ವ್ಯಾಖ್ಯಾನ ಗ್ರಂಥ ಮೂಡಬಿದಿರೆಯ ಜೈನಮಠದ ಪುಸ್ತಕಭಂಡಾರದಲ್ಲಿದೆ. (ಎಚ್‍.ಕೆ.ಆರ್‍.ಜಿ.)

**ಕನಕದಾಸ :** 1509–1607. ಕನ್ನಡ ಹರಿದಾಸರಲ್ಲಿ ಒಬ್ಬ. ಪುರಂದರದಾಸನಷ್ಟೇ ಪ್ರಸಿದ್ಧ. ಇವರಿಬ್ಬರೂ ಸಮಕಾಲೀನರಾಗಿದ್ದುದಲ್ಲದೆ ವ್ಯಾಸರಾಯನ ನೇತೃತ್ವದಲ್ಲಿ ಹರಿದಾಸ ಪಂಥದಲ್ಲಿ ಸಂತತವಾಗಿ ಶ್ರಮಿಸಿದವರಾಗಿರುತ್ತಾರೆ. ಪುರಂದರದಾಸ ತನ್ನ ಒಂದು ಕೀರ್ತನೆಯಲ್ಲಿ ಕನಕದಾಸನ ಮೇಲೆ ದಯೆ ಮಾಡಲು ವ್ಯಾಸ ಮುನಿಯ ಮಠದವರೆಲ್ಲ ದೂರಿಕೊಳ್ಳುವರು—ಎಂದು ಹೇಳಿರುವುದನ್ನು ನೋಡಿದರೆ ವ್ಯಾಸರಾಯ ಕನಕದಾಸನಿಗೆ ತನ್ನಲ್ಲಿ ಆಶ್ರಯವಿತ್ತುದನ್ನು ಅನೇಕರು ಸಹಿಸಲಿಲ್ಲವೆಂಬುದು ಸೂಚಿತವಾಗುತ್ತದೆ. ಕನಕದಾಸ ಜನ್ಮತಃ ಬ್ರಾಹ್ಮಣನಲ್ಲವೆಂಬುದೇ ಇದಕ್ಕೆ ಕಾರಣವಿರಬಹುದು. ಕನಕದಾಸ ಕಾಗಿನೆಲೆಯ ಸಮೀಪದಲ್ಲಿ ಇಂದಿಗೂ ವಾಸಿಸುತ್ತಿರುವ ದಾಸರೆಂಬ ಒಂದು ಬುಡಕಟ್ಟಿಗೆ ಸೇರಿದವನಿರಬಹುದೆಂದು ಕೆಲವರ ಅಭಿಪ್ರಾಯ. ಈ ಮತೀಯರು ರಾಮಾನುಜ ಪಂಥಕ್ಕೆ ಸೇರಿದ ಆನೆಗೊಂದಿಯ ಸಮಯಾಚಾರಿಗಳ ಅನುಯಾಯಿಗಳು. ಕನಕದಾಸ ತನ್ನ ಮೋಹನತರಂಗಿಣಿಯಲ್ಲಿ ರಾಮಾನುಜಾಚಾರ್ಯರನ್ನೂ ತಾತಾಚಾರ್ಯರನ್ನೂ ಸ್ತುತಿಸಿರುವುದನ್ನು ಗಮನಿಸಿದರೆ ಈತನ ಶ್ರೀವೈಷ್ಣವಭಕ್ತಿಗೆ ಕಾರಣವೇನೆಂಬುದು ಧ್ವನಿತವಾಗುತ್ತದೆ. ಆದರೆ ಕನಕದಾಸ ತನ್ನ ಕೀರ್ತನೆಯಲ್ಲಿ ಬೀರೇದೇವರನ್ನು ಕೊಂಡಾಡಿರುವುದನ್ನು ಲಕ್ಷಿಸಿ ಆತ ಕುರುಬನೆಂದೂ ಇಲ್ಲವೇ ಬೇಡರ ಬುಡಕಟ್ಟಿನ ನಾಯಕ ಪಂಥದವನೆಂದೂ ಹೇಳುವವರೂ ಇದ್ದಾರೆ. ಈ ವಿಚಾರಗಳು ಹೇಗೆಯೇ ಇರಲಿ, ಕನಕದಾಸ ಕನ್ನಡ ನಾಡಿನ ಹರಿಭಕ್ತವರೇಣ್ಯರಲ್ಲಿ ಒಬ್ಬನೆನ್ನಲು ಯಾವ ಸಂದೇಹವೂ ಇಲ್ಲ. ಈತ ಕಾಗಿನೆಲೆಯಲ್ಲಿ ಹುಟ್ಟಿ, ಬೆಳೆದು, ಬಾಡವೆಂಬ ಪ್ರದೇಶದಲ್ಲಿ ನಾಯಕನಾಗಿ ಆಡಳಿತ ನಡೆಸಿ, ಯಾವುದೋ ಒಂದು ಕಾಳೆಗದಲ್ಲಿ ಸೋಲಾಗಲು, ಪರಮಾತ್ಮನ ಅನುಗ್ರಹದಿಂದ ಚೇತರಿಸಿಕೊಂಡು, ಹರಿದಾಸನಾದಂತೆ ಆತನ ಮಾತುಗಳಿಂದಲೇ ತಿಳಿದು ಬರುತ್ತದೆ. ಈ ರೀತಿ ಕನಕನಾಯಕ ಕತ್ತಿಯನ್ನು ಬಿಸುಟು ತಾಳ ತಂಬೂರಿಗಳನ್ನು ಹಿಡಿದು ಹೊರಡುವ ಪರಿವರ್ತನೆ ತುಂಬ ವಿಸ್ಮಯಕಾರಿಯಾದುದೇ ಸರಿ. ಈತನ ಆರಾಧ್ಯದೇವತೆ ಆದಿಕೇಶವ.

ಕನಕದಾಸ ಭಾವಪೂರ್ಣವಾದ ಅನೇಕ ಕೀರ್ತನೆಗಳನ್ನು ರಚಿಸಿರುವನಲ್ಲದೆ, ಮೋಹನತರಂಗಿಣಿ, ನಳಚರಿತ್ರೆ, ಹರಿಭಕ್ತಿಸಾರ, ರಾಮಧಾನ್ಯಚರಿತೆ ಮತ್ತು ನೃಸಿಂಹಸ್ತವ ಎಂಬ ಕೃತಿಗಳನ್ನೂ ಬರೆದಿದ್ದಾನೆ. ಆದ್ದರಿಂದ ಕನ್ನಡ ಹರಿದಾಸರಲ್ಲಿ ಕನಕದಾಸನ ಸ್ಥಾನ ತುಂಬ ವಿಶಿಷ್ಟವಾದುದು.

ಕನಕದಾಸನ ಕೀರ್ತನೆಗಳು ಸಂಖ್ಯಾದೃಷ್ಟಿಯಿಂದ ಕಡಿಮೆಯೆನ್ನಿಸಿದರೂ ಗುಣದ ದೃಷ್ಟಿಯಿಂದ ಮಿಗಿಲಾಗಿವೆ. ಈತನ ಮುದ್ರಿಕೆ ಕಾಗಿನೆಲೆಯ ಆದಿಕೇಶವನ ಹೆಸರಿನದಾಗಿದೆ. ತಲ್ಲಣಿಸದಿರು ಕಂಡ್ಯ ತಾಳು ಮನವೆ ಎಲ್ಲರನು ಸಲಹುವನು ಇದಕೆ ಸಂಶಯವಿಲ್ಲ—ಎಂಬ ಸುಪ್ರಸಿದ್ಧವಾದ ಕೀರ್ತನೆಯನ್ನು ಗಮನಿಸಿದರೆ ಕನಕ ಎಂಥ ಆಶಾವಾದಿಯೆಂಬುದು ಸ್ಪಷ್ಟವಾಗುತ್ತದೆ. ಕುಲಕುಲವೆಂದು ಹೊಡೆದಾಡದಿರಿ ನಿಮ್ಮ ಕುಲದ ನೆಲೆಯನೇನಾದರು ಬಲ್ಲಿರ—ಎಂಬ ಮತ್ತೊಂದು ಕೀರ್ತನೆಯ ಧಾಟಿಯಲ್ಲಿ ಕನಕನ ಜನ್ಮವೃತ್ತಾಂತವೇ ಪ್ರತಿಬಿಂಬಿಸಿದ್ದು, ಸಂಪ್ರದಾಯವಾದಿಗಳನ್ನು ಕುರಿತ ಎಚ್ಚರಿಕೆಯ ಮಾತಿನ ಚುಚ್ಚು ಎದ್ದುಕಾಣುತ್ತದೆ. ಕೀರ್ತನೆಗಳಲ್ಲಿ ಅನೇಕ ಕಡೆ ಕಂಡುಬರುವ ಇಂಥ ಕೆಚ್ಚಿನ ನುಡಿಗಳು ಗಮನಾರ್ಹವಾದುವು. ದೈವಭಕ್ತಿ, ಜೀವನದರ್ಶನ, ಸಮಾಜವಿಮರ್ಶೆ, ಲೋಕಾನುಭವಗಳೆಲ್ಲವೂ ಈ ಕೀರ್ತನೆಗಳಲ್ಲಿ ತುಂಬಿ ತುಳುಕುತ್ತವೆ. ವಚನಸಾಹಿತ್ಯದಲ್ಲಿ ಕಂಡುಬರುವ ಬೆಡಗಿನ ವಚನಗಳಂತೆ ಕನಕದಾಸನ ಮುಂಡಿಗೆಗಳು ಇಂದಿಗೂ ಬಿಡಿಸಲಾರದ ಕಗ್ಗಂಟಿನಂತಿವೆ.



ಮೈಸೂರಿನ ಶಿಲ್ಪಿ ಡಿ. ಬಸವಣ್ಣನವರು ಕಂಡರಿಸಿದ ಕನಕದಾಸನ ಶಿಲಾಶಿಲ್ಪ

ಕನಕದಾಸ ಬರೆದಿರುವ ಕಾವ್ಯಗಳೂ ಕನ್ನಡ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಗಳಾಗಿವೆ. 42 ಸಂಧಿಗಳುಳ್ಳ ಸಾಂಗತ್ಯ ಕೃತಿಯಾದ ಮೋಹನತರಂಗಿಣಿಯಲ್ಲಿ ಶಂಬರಾಸುರ ಮತ್ತು ಬಾಣಾಸುರರ ವಧೆಗಳು ನಿರೂಪಿತವಾಗಿವೆ. ಈ ಎರಡು ಪ್ರಸಂಗಗಳನ್ನೂ ಒಂದೇ ಕಾವ್ಯದಲ್ಲಿ ಅಳವಡಿಸಿರುವ ಕನಕದಾಸನ ಕೌಶಲ ಮೆಚ್ಚುವಂಥದು. ಕಾವ್ಯದ ಪೂರ್ವಾರ್ಧದಲ್ಲಿ ಪ್ರದ್ಯುಮ್ನ ಪ್ರಧಾನ ಪಾತ್ರ ವಹಿಸಿದರೆ ಉತ್ತರಾರ್ಧದಲ್ಲಿ ಶ್ರೀಕೃಷ್ಣನ ಪ್ರಭಾವ ಮಿಗಿಲಾಗಿ ಕಾಣುತ್ತದೆ. ಉಷಾ—ಅನಿರುದ್ಧರ ಪ್ರಣಯವೃತ್ತಾಂತ ಇಲ್ಲಿನ ಬಿರುಸು ಕಾಳಗಗಳ ಮಧ್ಯೆ ಒಂದು ರಮಣೀಯ ಪ್ರಪಂಚವನ್ನೇ ಸೃಷ್ಟಿಸುತ್ತದೆ. ಕನಕದಾಸನ ಯುದ್ಧಾನುಭವ ಮತ್ತು ಸಾಹಿತ್ಯ ಪರಿಶ್ರಮಗಳು ಈ ಕೃತಿಯಲ್ಲಿ ಮೂರ್ತೀಭವಿಸಿವೆ. ಹರಿಭಕ್ತಿಯ ಹಿರಿಮೆಯನ್ನೂ ಹರಿಭಕ್ತಿಯ ನಿಲುವನ್ನೂ ಇಲ್ಲಿ ಸಂದರ್ಭೋಚಿತವಾಗಿ ಕಾಣಬಹುದು. ಇಲ್ಲಿನ ಅನೇಕ ವರ್ಣನೆಗಳಲ್ಲಿ ಸಮಕಾಲೀನ ಜೀವನದ ಪ್ರತಿಬಿಂಬಗಳಿವೆ. ಒಟ್ಟಿನಲ್ಲಿ ಈ ಸಾಂಗತ್ಯಕೃತಿ ಕನಕದಾಸನೇ ಹೇಳಿಕೊಂಡಿರುವಂತೆ 'ಹರಿಶರಣರಚ್ಚು, ಬುಧಜನರಿಗೆ ಪೆಚ್ಚು, ದುರಿತವನಕೆ ಕಾಳ್ಕಿಚ್ಚು, ವಿರಹಿಗಳಿಗೆ ಪುಚ್ಚು, ವೀರರ್ಗೆ ನುಚ್ಚು, ಕೇಳ್ವರಿಗಿದು ತನಿಬೆಲ್ಲದಚ್ಚು.'

ಹರಿಭಕ್ತಿಸಾರದಲ್ಲಿ ಕನಕನ ಹರಿಭಕ್ತಿಯ ತುಂಬುವೊನಲನ್ನು ಕಾಣಬಹುದು. ರಕ್ಷಿಸು ನಮ್ಮನನವರತ-ಎಂದು ಪ್ರತಿ ಪದ್ಯದಲ್ಲಿಯೂ ಬರುವ ಈ ಚರಣವಂತೂ ಕನ್ನಡಿಗರಿಗೆ ಚಿರಪರಿಚಿತವಾದ ನುಡಿಯಾಗಿದೆ. ಇದನ್ನು ಒಂದು ರೀತಿಯಲ್ಲಿ ಶತಕವೆನ್ನಬಹುದು (ಒಟ್ಟು 110 ಪದ್ಯಗಳಿವೆ). ಭಾಮಿನೀಷಟ್ಪದಿಯ ಧಾಟಿಯಲ್ಲಿ ಬರೆದಿರುವ ಇಲ್ಲಿನ ಅನೇಕ ಪದ್ಯಗಳು ಪಂಡಿತ, ಪಾಮರರ ಆದರಕ್ಕೆ ಪಾತ್ರವಾಗಿವೆ. ಭಕ್ತಿಸಾರದ ಚರಿತೆಯನು ಹರಿಭಕ್ತರಾಲಿಸುವಂತೆ ರಚಿಸುವೆ—ಎಂದು ಕನಕದಾಸ ಸ್ಪಷ್ಟಪಡಿಸಿ ಭಕ್ತಿಯ ಮಹಿಮಾತಿಶಯಗಳನ್ನು ನಾನಾ ತೆರನಾಗಿ ಇದರಲ್ಲಿ ಚಿತ್ರಿಸಿದ್ದಾನೆ. ಕನಕನ ತತ್ತ್ವಜ್ಞಾನ, ಜೀವನಾದರ್ಶ, ಲೋಕನೀತಿಗಳು ಇಲ್ಲಿ ತಿಳಿಯಾದ ಕನ್ನಡ ನುಡಿಗಳಲ್ಲಿ ಸರ್ವರಿಗೂ ಸುಲಭಗ್ರಾಹ್ಯವಾಗುವಂತೆ ಪ್ರತಿಪಾದಿತವಾಗಿವೆ.

ನಳಚರಿತ್ರೆಯಂತೂ ಆಬಾಲವೃದ್ಧರಿಗೆ ಆಪ್ಯಾಯಮಾನವೆನ್ನಿಸಿದೆ. ಮಹಾಭಾರತದಲ್ಲಿ ಉಕ್ತವಾಗಿರುವ ನಳೋಪಾಖ್ಯಾನವನ್ನು ಕವಿ ಭಾಮಿನೀಷಟ್ಪದಿಯಲ್ಲಿ ಬಹಳ ಮನಕರಗುವಂತೆ ನಿರೂಪಿಸಿದ್ದಾನೆ. ಕೇವಲ ಒಂಬತ್ತು ಸಂಧಿಗಳಲ್ಲಿ ನಳನ ಕಥೆಯನ್ನು ಲಲಿತವಾಗಿ ಹೇಳಿರುವ ಕನಕನ ಜಾಣ್ಮೆ ಮೆಚ್ಚತಕ್ಕದ್ದಾಗಿದೆ. ರಾಜನಾದರೂ ನಳನಷ್ಟು ನರಳಿದವರು ವಿರಳ. ಇದಕ್ಕೆ ವಿಧಿಯೇ ಕಾರಣ. ಕನಕ ತನ್ನ ಕೀರ್ತನೆಗಳಲ್ಲಿ ದೈವಬಲವನ್ನು ಕುರಿತು ಬಗೆಬಗೆಯಾಗಿ ಬಣ್ಣಿಸಿದ್ದಾನೆ. ಅದಕ್ಕೆ ತಕ್ಕ ನಿದರ್ಶನವೋ ಎಂಬಂತಿದೆ—ಈ ನಳನ ಕಥೆ. ನಳಮಹಾರಾಜನ ವೈಭವದ ಹಿನ್ನೆಲೆಯಲ್ಲಿ ಅವನಿಗೆ ಕಲಿಪುರುಷನಿಂದ ಪ್ರಾಪ್ತವಾದ ದುರ್ದೆಸೆಯನ್ನು ಕಂಡರೆ ಎಂಥವರಿ

ಗಾದರೂ ತಲ್ಲಣಿಸುವಂತಾಗುತ್ತದೆ. ಕಾಡಿನಲ್ಲಿ ಏಕಾಂಗಿಯಾಗಿ ಅಲೆದಾಡುವ ದಮಯಂತಿಯನ್ನು ವರ್ಣಿಸುವ ಸಂದರ್ಭವಾಗಲಿ, ಕಾರ್ಕೋಟಕನ ಕಡಿತದಿಂದ ಕುರೂಪಿಯಾಗುವ ನಳನನ್ನು ಚಿತ್ರಿಸುವ ಸನ್ನಿವೇಶವಾಗಲಿ ಹೃದಯವಿದ್ರಾವಕ ವಾದುದು. ಕಟ್ಟಕಡೆಯಲ್ಲಿ ನಳನ ನಿಷ್ಠೆ ಅವನನ್ನು ಕಾಪಾಡಿದಂತೆ, ದಮಯಂತಿಯ ಪತಿಭಕ್ತಿ ಆಕೆಯ ಜೀವನವನ್ನು ಸಂರಕ್ಷಿಸುತ್ತದೆ. ನಳ-ದಮಯಂತಿಯರ ಚಿರಂತನಪ್ರೇಮ ಕಾವ್ಯದ ಪ್ರಮುಖಶಕ್ತಿಗಳಲ್ಲಿ ಒಂದಾಗಿ ನಿಂತು ಇಡೀ ಪ್ರಸಂಗ ಪ್ರಶಂಸಾರ್ಹವೆನ್ನಿಸುತ್ತದೆ. ಸುಲಭ ಶೈಲಿ, ಘನವಾದ ವಸ್ತು, ಹೃದಯಸ್ಪರ್ಶಿಯಾದ ಚಿತ್ರಣಗಳಿಂದ ನಳಚರಿತ್ರೆ ಕನ್ನಡಕ್ಕೆ ಅಪೂರ್ವ ಕೊಡುಗೆಯಾಗಿದೆ.

ರಾಮಧಾನ್ಯಚರಿತ್ರೆ ಎಂಬ ಇನ್ನೊಂದು ಕೃತಿ, ಗಾತ್ರದಲ್ಲಿ ಕಿರಿದಾದರೂ ಗುಣದಲ್ಲಿ ಅದ್ವಿತೀಯವೆನ್ನಿಸಿದೆ. ರಾಗಿ ಮತ್ತು ಅಕ್ಕಿಗಳ ಕಲಹವೇ ಈ ಕೃತಿಯ ವಸ್ತುವಾದರೂ ಕವಿ ಇದಕ್ಕೆ ಒಂದು ಪೌರಾಣಿಕ ಹಿನ್ನೆಲೆಯನ್ನು ಕಲ್ಪಿಸಿರುವುದು ನವೀನವಾಗಿದೆ. ಶ್ರೀರಾಮನ ಸಾನ್ನಿಧ್ಯದಲ್ಲಿ ರಾಗಿ-ಅಕ್ಕಿಗಳಲ್ಲಿ (ನರೆದಲೆಗ ಮತ್ತು ವ್ರೀಹಿ) ಯಾರು ಮೇಲು ಎಂಬ ವಾಗ್ವಾದವುಂಟಾಗಲು ರಾಮ ಸತ್ತ್ವಪರೀಕ್ಷೆಗಾಗಿ ಕೆಲವು ಕಾಲ ಅವನ್ನು ಸೆರೆಯಲ್ಲಿಡಿಸುತ್ತಾನೆ. ರಾಮ ಅಯೋಧ್ಯೆಗೆ ಹಿಂತಿರುಗಿದ ಮೇಲೆ, ಕಾಲಾನಂತರದಲ್ಲಿ ಸೆರೆಯಲ್ಲಿದ್ದ ಈ ಧಾನ್ಯಗಳನ್ನು ಕರೆತರಿಸಲು, ಅಕ್ಕಿ ಮುಗ್ಗಿ ಹೋಗಿರುವುದನ್ನೂ ರಾಗಿ ದೃಢವಾಗಿರುವುದನ್ನೂ ಕಂಡು, ದೇವಾನು ದೇವತೆಗಳ ಸಮ್ಮುಖದಲ್ಲಿ ರಾಗಿಗೆ ರಾಘವಧಾನ್ಯ ಎಂಬ ಹೆಸರನ್ನಿತ್ತು ಗೌರವಿಸುತ್ತಾನೆ. ಇಷ್ಟೇ ಇಲ್ಲಿನ ತಿರುಳು. ಆದರೆ ಕುಶಲ ಕವಿಯಾದ ಕನಕದಾಸ ಈ ಪ್ರಸಂಗವನ್ನು ಬಹು ಸ್ವಾರಸ್ಯವಾಗಿ ಚಿತ್ರಿಸಿದ್ದಾನೆ. ಬಡವರ ಆಧಾರವಾದ ರಾಗಿಗೂ ಭಾಗ್ಯವಂತರ ಬಂಧುವಾದ ಅಕ್ಕಿಗೂ ಇರುವ ತಾರತಮ್ಯವನ್ನು ನಿರೂಪಿಸುವಲ್ಲಿ, ಇಂದಿನಂತೆಯೇ ಅಂದಿನ ಸಮಾಜದಲ್ಲಿಯೂ ನೆಲೆಸಿದ್ದ ದೀನ ಧನಿಕರ ಅಂತರವನ್ನು ಬಹಳ ಅರ್ಥವತ್ತಾಗಿ ಎತ್ತಿ ತೋರಿಸಿದ್ದಾನೆ. ಇದೊಂದು ವ್ಯಂಗ್ಯ ಕಾವ್ಯ. ಕನ್ನಡದಲ್ಲಿ ಅಂದಿಗೆ ಇಂಥ ಪ್ರಯತ್ನ ತುಂಬ ಅಪೂರ್ವವಾದುದು. ಈ ಕಥೆಗೆ ಆಧಾರವೇನೋ ತಿಳಿಯದು. ಬಹುಶಃ ಕನಕದಾಸ ತನ್ನ ಕಾಲದಲ್ಲಿ ಪ್ರಚಲಿತವಾಗಿದ್ದ ಜಾನಪದ ಕಥೆಯೊಂದನ್ನು ಅವಲಂಬಿಸಿ, ಈ ಕೃತಿಯನ್ನು ಬರೆದಿರಬೇಕೆನ್ನಿಸುತ್ತದೆ. ಎಂದಿನಂತೆಯೇ ಭಾಮಿನೀಷಟ್ಪದಿಯ ಲಯ, ರಾಗಿ ಮತ್ತು ಅಕ್ಕಿಗಳ ಮಧ್ಯೆ ನಡೆಯುವ ಸಂವಾದ ಶೈಲಿ, ನಿಷ್ಪಕ್ಷಪಾತಿಯಾದ ಶ್ರೀರಾಮನ ವರ್ತನೆಗಳು ಮನನೀಯವಾಗಿವೆ. ಕುಲದ ಬಗ್ಗೆ ಕನಕದಾಸ ಪರೋಕ್ಷವಾಗಿ ತನ್ನ ನಿಲುವನ್ನು ಈ ಕೃತಿಯಲ್ಲಿ ಹೇಗೆ ಸಾಂಕೇತಿಕವಾಗಿ ವ್ಯಕ್ತಪಡಿಸಿದ್ದಾನೆಂಬುದನ್ನು ಮನಗಂಡರೆ ಈ ರಚನೆಯ ಸ್ವಾರಸ್ಯ ಮತ್ತಷ್ಟು ಮಿಗಿಲಾಗುತ್ತದೆ.

ನೃಸಿಂಹಸ್ತವ ಎಂಬ ಮತ್ತೊಂದು ಕೃತಿಯನ್ನು ಕವಿಚರಿತೆಕಾರರು ಪ್ರಸ್ತಾಪಿಸಿದ್ದಾರೆ. ಅದು ಒಂದು ಸಾಂಗತ್ಯಕೃತಿಯೆಂದು ತಿಳಿದುಬರುತ್ತದೆ. ಗ್ರಂಥ ಉಪಲಬ್ಧವಿಲ್ಲ. ಕನ್ನಡಿಗರಿಗೆ ಚಿರಪರಿಚಿತವಾದ ತಿರುಕನ ಕನಸು ಎಂಬ ಸಣ್ಣ ಕೃತಿ ಕನಕದಾಸನದೆಂದು ಕೆಲವರೂ ಮುಪ್ಪಿನ ಷಡಕ್ಷರಿಯದೆಂದು ಇತರರೂ ಹೇಳುವುದುಂಟು. ಹಳೆಯ ಹಸ್ತಪ್ರತಿಗಳು ದೊರೆತಲ್ಲಿ ಈ ಅಂಕಿತಪಲ್ಲಟ ಹೇಗಾಯಿತೆಂಬುದನ್ನು ನಿರ್ಣಯಿಸಬಹುದು. ತಿರುಕನ ಕನಸಿನ ಕಥೆ ಸರ್ವರಿಗೂ ತಿಳಿದುದೇ ಆಗಿದೆ. ಅಲ್ಪನಿಗೆ ಐಶ್ವರ್ಯ ಬಂದರೆ ಅರ್ಧರಾತ್ರಿಯಲ್ಲಿ ಕೊಡೆ ಹಿಡಿಸಿಕೊಂಡ ಎಂಬ ಗಾದೆಯಂತೆ ಈ ಕೃತಿಯಲ್ಲಿ ಬಡವನ ವಿಡಂಬನೆಯಿದೆ. ಈ ರಚನೆಯ ಕರ್ತೃವಿನ ವಿಚಾರದಲ್ಲಿ ಸಂದೇಹ ತಲೆದೋರಿರುವುದರಿಂದ ಇದನ್ನು ಪ್ರತ್ಯೇಕವಾಗಿಯೇ ಪರಿಶೀಲಿಸುವುದು ಸೂಕ್ತವೆನ್ನಿಸುತ್ತದೆ.

ಒಟ್ಟಿನಲ್ಲಿ, ಕನಕದಾಸ ತನ್ನ ಕೃತಿಗಳಲ್ಲಿ ವ್ಯಕ್ತಪಡಿಸಿರುವ ರಾಮಾಯಣ, ಮಹಾಭಾರತ ಮತ್ತು ಭಾಗವತಗಳ ಜ್ಞಾನ, ಕೀರ್ತನೆಗಳಲ್ಲಿ ನಿರೂಪಿಸಿರುವ ಭಕ್ತಿ, ಜ್ಞಾನ, ವೈರಾಗ್ಯಗಳ ಪ್ರಜ್ಞೆ, ತಿಳಿಗನ್ನಡದ ಒಲವು—ಇವೇ ಮೊದಲಾದುವು ಹರಿದಾಸ ಪ್ರಪಂಚದಲ್ಲಿ ಮತ್ತು ಕನ್ನಡ ಕಾವ್ಯಕ್ಷೇತ್ರದಲ್ಲಿ ಆತನ ಸ್ಥಾನವೆಷ್ಟು ಹಿರಿದಾದುದು ಎಂಬುದನ್ನು ದೃಢಪಡಿಸುತ್ತವೆ. (ಎ.ಕ.)

**ಕನಕಪುರ:** ಮೈಸೂರು ರಾಜ್ಯದ ಬೆಂಗಳೂರು ಜಿಲ್ಲೆಯ ಒಂದು ಪಟ್ಟಣ; ಇದೇ ಹೆಸರಿನ ತಾಲ್ಲೂಕಿನ ಮುಖ್ಯಸ್ಥಳ. ಉ.ಅ. 12° 33′ ಮತ್ತು ಪೂ.ರೇ. 77° 29′ನಲ್ಲಿ ಅರ್ಕಾವತಿ ನದಿಯ ಬಲದಂಡೆಯ ಮೇಲೆ, ಉತ್ತರ ದಕ್ಷಿಣವಾಗಿ ಹಬ್ಬಿದೆ. ಬೆಂಗಳೂರು-ಮಳವಳ್ಳಿ ರಸ್ತೆಯಲ್ಲಿರುವ ಈ ಪಟ್ಟಣ ಬೆಂಗಳೂರಿನ ದಕ್ಷಿಣಕ್ಕೆ 36 ಮೈ. ದೂರದಲ್ಲಿದೆ. ರಾಮನಗರಂ ರೈಲ್ವೆ ನಿಲ್ದಾಣಕ್ಕೆ ಇಲ್ಲಿಂದ 17 ಮೈ.

1947ರ ವರೆಗೂ ಇದಕ್ಕೆ ಕಾನಕಾನಹಳ್ಳಿ ಎಂಬ ಹೆಸರಿತ್ತು. ಕಾನಕಾನನೆಂಬವ ಇಲ್ಲಿ ಒಂದು ಸಣ್ಣ ಕೋಟೆ ಕಟ್ಟಿಕೊಂಡಿದ್ದರಿಂದ ಇದಕ್ಕೆ ಈ ಹೆಸರು ಬಂತೆಂದು ಹೇಳಲಾಗಿದೆ. ಕಾನಿಕಾರ್ನ ಹಳ್ಳಿ ಎಂಬುದು ಮೂಲನಾಮವೆಂದೂ ಕಾಣಿಕಾರ್ (ನೆಲದೊಡೆಯ) ಎಂಬುದರಿಂದ ಈ ಹೆಸರು ಬಂತೆಂದೂ ಇಲ್ಲಿಯ ಜನ ತಿಳಿದುಕೊಂಡಿದ್ದಾರೆಂದೂ ಆದರೆ ವಾಸ್ತವವಾಗಿ ಇದು ಕನ್ಯಾ-ಕರ್ಣ (ಭವಾನಿಯ ಕಿವಿ) ಎಂದಿರಬೇಕೆಂದೂ ಬುಕಾನನ್ ಅಭಿಪ್ರಾಯಪಟ್ಟಿದ್ದಾನೆ. 13ನೆಯ ಶತಮಾನದ ಶಾಸನವೊಂದರಲ್ಲಿ ಇದರ ಹೆಸರು ಕಾಣಿಕಾರ ಹಳ್ಳಿ. ಈಗ ಇದರ ಹೆಸರು ಕನಕಪುರ ಎಂದಿರುವುದರಿಂದ ಹಳೆಯ ಹೆಸರನ್ನು ಕುರಿತ ವಾದ ಅಷ್ಟಾಗಿ ಮುಖ್ಯವಲ್ಲ.

ಕನಕಪುರದಲ್ಲಿರುವ ಕೋಟೆಯನ್ನು ಕಟ್ಟಿಸಿದಾತ ಚನ್ನಪಟ್ಟಣದ ಪಾಳೆಯಗಾರನಾಗಿದ್ದ ಜಗದೇವರಾಯ ಎಂದು ಹೇಳಲಾಗಿದೆ. ಆತ ಇಲ್ಲಿದ್ದ ಸಣ್ಣ ಕೋಟೆಯ ಸ್ಥಳದಲ್ಲಿ ಇದನ್ನು ಕಟ್ಟಿಸಿದ. 1630ರಲ್ಲಿ ಇದನ್ನು ಮೈಸೂರಿನ ಚಾಮರಾಜ ಗೆದ್ದುಕೊಂಡ. ಇಲ್ಲಿ ಜೀರ್ಣವಾದ ರಂಗನಾಥ ದೇವಾಲಯವಿದೆ. ಶ್ರೀರಂಗಪಟ್ಟಣದ ಕಡೆಗೆ ನುಗ್ಗಿಬರುತ್ತಿದ್ದ ಬ್ರಿಟಿಷ್ ಸೇನೆಗೆ ಠಾವು ದೊರೆಯದಿರಲೆಂಬ ಉದ್ದೇಶದಿಂದ ಟಿಪ್ಪುಸುಲ್ತಾನ ಎರಡು ಸಾರಿ ಈ ಪಟ್ಟಣವನ್ನು ಹಾಳುಗೆಡವಿದ. ಅನಂತರ ಬಹು ಕಾಲ ಕೋಟೆಯೊಳಗಡೆಯಲ್ಲಿ ಹುಲಿಯೇ ಮುಂತಾದ ದುಷ್ಟಮೃಗಗಳು ಸೇರಿಕೊಂಡು ಮನುಷ್ಯರನ್ನೂ ದನಕರುಗಳನ್ನೂ ಎತ್ತಿಕೊಂಡು ಹೋಗುತ್ತಿದ್ದುವು.

ಹಸಿರು ಹೊದೆದ ಬೆಟ್ಟಗಳ ನಡುವೆ ಮಲಗಿರುವ ಕನಕಪುರ ಒಂದು ರಮ್ಯಪ್ರದೇಶ. ಅರ್ಕಾವತಿಯ ದಂಡೆಯ ಮೇಲೆ ಹಬ್ಬಿದ ತೆಂಗಿನ ಮರಗಳ ಸಾಲು ಈ ಪಟ್ಟಣಕ್ಕೆ ಹಸುರು ಕುಚ್ಚಿನ ಅಂಚು ಕಟ್ಟಿದಂತಿದೆ. ಶಿವಸಮುದ್ರ ಮತ್ತು ಶಿಂಷಾಗಳಿಂದ ಬರುವ ವಿದ್ಯುತ್ತು ಕನಕಪುರದಿಂದ ಮುಂದೆ ರಾಮನಗರಂ, ಬೆಂಗಳೂರು, ಕೋಲಾರದ ಚಿನ್ನದ ಗಣಿ ಮುಂತಾದ ಎಡೆಗಳಿಗೆ ಸಾಗುತ್ತದೆ. ರೇಷ್ಮೆ ಬಿತ್ತನೆ ಕೋಠಿಗಳೂ ರೇಷ್ಮೆಗೂಡಿನಿಂದ ನೂಲು ಸುತ್ತುವ ಕಾರ್ಖಾನೆಯೂ (ಫಿಲೇಚರ್ಸ್) ಇಲ್ಲುಂಟು. ಪ್ರಾಥಮಿಕ ಮತ್ತು ದ್ವಿತೀಯಕ ಶಾಲೆಗಳೂ ಕಾಲೇಜೂ ಇವೆ. ಪ್ರತಿ ಗುರುವಾರವೂ ಇಲ್ಲಿ ನಡೆಯುವ ಸಂತೆ ಸುತ್ತೆಲ್ಲ ಪ್ರಸಿದ್ಧ.

ಕನಕಪುರ ತಾಲ್ಲೂಕು ಬೆಂಗಳೂರು ಜಿಲ್ಲೆಯ ಅತ್ಯಂತ ದಕ್ಷಿಣದಲ್ಲಿದೆ. ಎಲೆಯಾಕಾರದ, ಕಾವೇರಿ ಜಲಾನಯನ ಭೂಮಿಯ ಪೂರ್ವಭಾಗದಲ್ಲಿರುವ ಈ ತಾಲ್ಲೂಕಿನ ಪೂರ್ವದಲ್ಲಿ ತಮಿಳುನಾಡಿನ ಸೇಲಂ ಜಿಲ್ಲೆ, ಈಶಾನ್ಯದಲ್ಲಿ ಆನೆಕಲ್ ತಾಲ್ಲೂಕು, ಉತ್ತರದಲ್ಲಿ ದಕ್ಷಿಣ ಬೆಂಗಳೂರು ತಾಲ್ಲೂಕು, ವಾಯವ್ಯದಲ್ಲಿ ರಾಮನಗರ ತಾಲ್ಲೂಕು, ಪಶ್ಚಿಮದಲ್ಲಿ ಚನ್ನಪಟ್ಟಣ ಮತ್ತು ಮಳವಳ್ಳಿ ತಾಲ್ಲೂಕುಗಳು, ದಕ್ಷಿಣದಲ್ಲಿ ಕಾವೇರಿ ನದಿ, ಅದರ ಬೆನ್ನಿಗೇ ಕೊಳ್ಳೆಗಾಲ ತಾಲ್ಲೂಕು ಇವೆ. ವಿಸ್ತೀರ್ಣ 623.,40 ಚ.ಮೈ. ಇದು ಇಡೀ ಜಿಲ್ಲೆಯಲ್ಲೇ ಅತ್ಯಂತ ದೊಡ್ಡ ತಾಲ್ಲೂಕು.

ನೆಲಮಂಗಲದ ಪಶ್ಚಿಮದ ಕಡೆಯಿಂದ ಬರುವ ಶಿಲಾಬೆಟ್ಟಗಳು ಮಾಗಡಿ, ರಾಮನಗರ ತಾಲ್ಲೂಕುಗಳನ್ನು ಹಾಯ್ದು, ಈ ತಾಲ್ಲೂಕನ್ನು ಉತ್ತರಭಾಗದಿಂದ ಪ್ರವೇಶಿಸಿ, ಪೂರ್ವ, ಪಶ್ಚಿಮ ಮತ್ತು ದಕ್ಷಿಣ ಅಂಚಿನಲ್ಲಿ ಕವಚದಂತೆ ಒತ್ತಾಗಿ ಹಬ್ಬಿವೆ. ಉತ್ತರದಿಂದ ದಕ್ಷಿಣದ ಕಾವೇರಿ ಕಣಿವೆಯ ಕಡೆಗೆ ನೆಲ ಇಳಿಜಾರಾಗಿದೆ. ಪಶ್ಚಿಮದಲ್ಲಿ ಬಾಣಂತಿ ಮಾರಿಬೆಟ್ಟ (3422′), ಭೀಮಕಂಡಿ, ಕಡಕಲ್, ಮುದವಾಡಿ ಮತ್ತು ನರಸಿಂಹದೇವರ ಬೆಟ್ಟಗಳೂ ಆಗ್ನೇಯದಲ್ಲಿ ದೇವರಬೆಟ್ಟ, ಕೊಪ್ಪ ಬೆಟ್ಟ (2822′), ಬರೀಕಲ್ಲು ಬೆಟ್ಟಗಳೂ ಪೂರ್ವದಲ್ಲಿ ಬಿಳೀಕಲ್ಲು ಬೆಟ್ಟ, ಗುಲಕಲ್ ಬೆಟ್ಟಗಳೂ ನೈಋತ್ಯದಲ್ಲಿ ಪತ್ರಧಾರಿದೇವ ಇತ್ಯಾದಿ ಬೆಟ್ಟಗಳೂ ಉತ್ತರದಲ್ಲಿ ಗಂಗಾಧರನ ಬೆಟ್ಟವೂ ಇವೆ.

ತಾಲ್ಲೂಕಿನ ನೈಋತ್ಯ ಭಾಗದಲ್ಲಿ ಚಾರ್ನಕೈಟ್ ಶಿಲಾಪದರಗಳಿವೆ. ಉಳಿದ ಕಡೆಗಳಲ್ಲಿರುವುದು ಬೆಣಚುಕಲ್ಲಿನ ಶಿಲೆಗಳು. ರಾಮನಗರದ ಕಣಶಿಲಾ (ಗ್ರಾನೈಟ್) ಸಮುದಾಯ ಕನಕಪುರದಿಂದ ಪ್ರಾರಂಭವಾಗಿ ಉತ್ತರದಲ್ಲಿ ರಾಮನಗರದ ಕಡೆಗೆ ಹರಡಿದೆ. ಈ ಶಿಲೆಗಳದು ಗೋಳಾಕೃತಿ. ಚಾರ್ನಕೈಟ್‌ನಂತಿರುವ ಡೈಕ್ ಮತ್ತು ಹಾರ್ನ್‌ಬ್ಲೆಂಡ್ ಶಿಲೆಗಳು ಹಾರೋಹಳ್ಳಿಗೆ ವಾಯವ್ಯದಲ್ಲಿವೆ. ಸಾಲಹುಣಸೆ ಮತ್ತು ಮರಳವಾಡಿ ಬಳಿ ಪದ್ಮರಾಗ ಶಿಲೆ ಉಂಟು.

ತಾಲ್ಲೂಕಿನ ದಕ್ಷಿಣದಲ್ಲಿ ತ್ರಿಭುಜಾಕೃತಿಯ ಪ್ರದೇಶದಲ್ಲಿರುವುದು ಎರೆಮಣ್ಣು, ಉಳಿದ ಕಡೆಗಳಲ್ಲಿ ಅಗ್ನಿಶಿಲೆಯಿಂದಾದ, ಹಗುರ ರಚನೆಯುಳ್ಳ ಕೆಂಪು ಮಣ್ಣಿದೆ.

ಕಾವೇರಿಯ ಉಪನದಿಯಾದ ಅರ್ಕಾವತಿ ವಾಯವ್ಯದಿಂದ ಪ್ರವೇಶಿಸಿ, ತಾಲ್ಲೂಕಿನ ಮಧ್ಯದಲ್ಲಿ ಉತ್ತರ-ದಕ್ಷಿಣವಾಗಿ ಹರಿದು, ಸಂಗಮದ ಬಳಿ ಕಾವೇರಿಯನ್ನು ಸೇರುತ್ತದೆ. ಅರ್ಕಾವತಿಗೆ ಎರಡೂ ಕಡೆಗಳಿಂದ ಬಂದು ಸೇರುವ ನದಿಗಳೂ ಹೊಳೆಗಳೂ ಅನೇಕ. ವೃಷಭಾವತಿ ನದಿ ಈ ತಾಲ್ಲೂಕನ್ನು ಪ್ರವೇಶಿಸುವಾಗಲೆ ಮುದುವಾಡಿಯ ಬಳಿ ಅರ್ಕಾವತಿಯನ್ನು ಸೇರುತ್ತದೆ. ಈಶಾನ್ಯದ ಕಡೆಯಿಂದ ಹರಿದು ಬರುವ ಅಂತರಗಂಗೆ, ಬಸವನ ಹೊಳೆ, ಕೂಟ್ಲೆ ಹೊಳೆಗಳು ಒಂದುಗೂಡಿ ಅರ್ಕಾವತಿಯನ್ನು ಸೇರುವುದು ಕನಕಪುರದ ಬಳಿ. ಆಗ್ನೇಯ ಎಲ್ಲೆಯ ವರೆಗೂ ದೊಡ್ಡ ಹೊಳೆ ಹರಿದು ಬಂದು ಸಂಗಮದ ಎದುರು ದಂಡೆಯಲ್ಲಿ ಮಾಹಳ್ಳಿಯ ಬಳಿ ಅರ್ಕಾವತಿಯನ್ನು ಕೂಡಿಕೊಳ್ಳುತ್ತದೆ. ಪಶ್ಚಿಮದ ಕಡೆಯಿಂದ ಉಯ್ಯಂಬಳ್ಳಿ-ಕಬ್ಬಾಳ ರಸ್ತೆಗೆ ಸಮಾನಾಂತರವಾಗಿ ಹರಿದು ಅರ್ಕಾವತಿಯನ್ನು ಸೇರುವುದೇ ಬಂಡಿಹಳ್ಳ.

ಮೇಯಿಂದ ನವೆಂಬರ್ ವರೆಗೆ ನೈಋತ್ಯ ಮಾರುತಗಳಿಂದ ಇಲ್ಲಿ 28"-30" ಮಳೆಯಾಗುತ್ತದೆ. (ಕನಕಪುರ 29.41", ಕೋಡಿಹಳ್ಳಿ 27.80", ಸಾತನೂರು 29.40"). ಬೆಂಗಳೂರು ಜಿಲ್ಲೆಯಲ್ಲಿ ಒಂದೇ ದಿನದಲ್ಲಿ ಅತ್ಯಂತ ಹೆಚ್ಚಿನ ಮಳೆ ಆದದ್ದೆಂದರೆ ಕನಕಪುರದಲ್ಲಿ—1897ರ ಸೆಪ್ಟೆಂಬರ್ 22ರಂದು (8.84").

ಬೆಟ್ಟದ ಕಾಡುಗಳಿಂದ ಕೂಡಿದ ಈ ತಾಲ್ಲೂಕಿನಲ್ಲಿ ಸರ್ಕಾರಸಂರಕ್ಷಿತ ಅರಣ್ಯಗಳು ಅನೇಕ ಉಂಟು. ದಕ್ಷಿಣದಲ್ಲಿ ಚಿಲಂದವಾಡಿ, ಆಗ್ನೇಯದಲ್ಲಿ ಮೂಗೂರು, ಪಶ್ಚಿಮದಲ್ಲಿ ಕಬ್ಬಾಳ, ತಲ್ಲೂರು ಮತ್ತು ಬಾಣಂತಿಮಾರಿ, ಪೂರ್ವದಲ್ಲಿ ಬಿಳಿಕೆರೆ ಮತ್ತು ಈಶಾನ್ಯದಲ್ಲಿ ರಾಗಿಹಳ್ಳಿಗಳಲ್ಲಿ ಸಂರಕ್ಷಿತ ಕಾಡುಗಳಿವೆ. ಕನಕಪುರದ ಸುತ್ತಮುತ್ತ ತೇಗ, ಹೊನ್ನೆ, ಬೀಟೆ ಕಮ್ಮಾರ ಮುಂತಾದ ಮರಗಳುಂಟು. ಶ್ರೀಗಂಧದ ಮರಗಳೂ ತಕ್ಕಮಟ್ಟಿಗೆ ಬೆಳೆಯುತ್ತವೆ.

ಉತ್ತರ ಮತ್ತು ಮಧ್ಯಭಾಗಗಳಲ್ಲಿ ನದಿ-ಹೊಳೆಗಳ ದಡಗಳಲ್ಲಿ ವ್ಯವಸಾಯ ಸಾಧ್ಯ. ಅರ್ಕಾವತಿ ನದೀಬಯಲು ಮುಖ್ಯವಾದದ್ದು. ಒಟ್ಟು ಬೇಸಾಯದ ನೆಲ 1,34,331 ಎಕರೆ. ಜಿಲ್ಲೆಯಲ್ಲಿ ಬೇಸಾಯಕ್ಕೊಳಗಾಗಿರುವ ನೆಲದಲ್ಲಿ 1/6 ಭಾಗ ಇಲ್ಲಿದೆ. ಬತ್ತ, ರಾಗಿ ಮುಖ್ಯ ಬೆಳೆಗಳು. 7,498 ಎಕರೆಗಳಲ್ಲಿ ಬತ್ತ ಮತ್ತು 77,500 ಎಕರೆಗಳಲ್ಲಿ ರಾಗಿ ಬೆಳೆಯುತ್ತಾರೆ. ಹಿಪ್ಪನೇರಳೆ, ಅವರೆ, ತೆಂಗು, ಹರಳು, ಹುಣಿಸೆ, ಕುಂಬಳಕಾಯಿ ಇತರ ಮುಖ್ಯ ಬೆಳಸುಗಳು. ನೀರಾವರಿ ಅನುಕೂಲವಿದ್ದರೆ ಈ ತಾಲ್ಲೂಕಿನಲ್ಲಿ ಇನ್ನೂ ಹೆಚ್ಚು ಫಸಲು ತೆಗೆಯಬಹುದು. ಕನಕಪುರದ ದಕ್ಷಿಣಕ್ಕೆ 8 ಮೈಲಿ ದೂರದಲ್ಲಿರುವ 25 ಲಕ್ಷ ರೂ. ವೆಚ್ಚದ ಸಾತನೂರು ಯೋಜನೆ ಮಧ್ಯಮ ತರಗತಿಯ ನೀರಾವರಿ ಯೋಜನೆಗಳಲ್ಲೊಂದು. ಇದರ ಆಯಕಟ್ಟಿನಿಂದ 10,000 ಎಕರೆ ನೆಲ ನೀರಾವರಿಗೆ ಒಳಪಡುತ್ತದೆ. ಮೇಕೆದಾಟು ವಿದ್ಯುತ್ ಯೋಜನೆಯೂ ಪರಿಶೀಲನೆಯಲ್ಲಿದೆ. ಈ ತಾಲ್ಲೂಕಿನಲ್ಲಿ ನೂರಕ್ಕೂ ಹೆಚ್ಚು ಕೆರೆಗಳಿವೆ. ಇವು ಬಹುತೇಕ ಸಣ್ಣವು.

ತಾಲ್ಲೂಕಿನ ವಾಯವ್ಯ ಭಾಗದಲ್ಲಿ ಪದ್ಮರಾಗವೂ ಹಾರೋಶಿವರದ ಪಶ್ಚಿಮದಲ್ಲಿ ಕಬ್ಬಿಣದ ಅದುರೂ ದೊರೆಯುತ್ತವೆ.

ರೈಲುಮಾರ್ಗವಿಲ್ಲದ ಈ ತಾಲ್ಲೂಕಿನಲ್ಲಿ ರಸ್ತೆಗಳ ತಕ್ಕಮಟ್ಟಿಗೆ ಅಭಿವೃದ್ಧಿ ಹೊಂದಿವೆಯೆನ್ನಬಹುದು. ಕನಕಪುರ ಪಟ್ಟಣ ಇವುಗಳ ಕೇಂದ್ರ. ಬೆಂಗಳೂರು-ಮಳವಳ್ಳಿ-ಮೈಸೂರು ರಸ್ತೆ ಇದರ ಮುಖಾಂತರ ಹಾದುಹೋಗುತ್ತದೆ. ಹಲಗೂರು-ಕನಕಪುರ, ಚನ್ನಪಟ್ಟಣ-ಹನಸನಹಳ್ಳಿ, ರಾಮನಗರ-ಕನಕಪುರ, ಚನ್ನಪಟ್ಟಣ-ಕನಕಪುರ ಇವು ಇತರ ರಸ್ತೆಗಳು.

ಹಾರೋಹಳ್ಳಿ, ಕನಕಪುರ, ಮರಳವಾಡಿ, ಕೋಡಿಹಳ್ಳಿ, ಸಾತನೂರು, ಉಯ್ಯಂಬಳ್ಳಿ—ಇವು ಈ ತಾಲ್ಲೂಕಿನ ಹೋಬಳಿಗಳು. ಒಟ್ಟು ಹಳ್ಳಿಗಳ ಸಂಖ್ಯೆ 229. ಜನಸಂಖ್ಯೆ 1951ರಲ್ಲಿ 1,68,789 ಇದ್ದುದು 1961ರಲ್ಲಿ 1,98,053 ಆಯಿತು. ಜನಸಾಂದ್ರತೆ ಚ.ಮೈ.ಗೆ 287. (ಕೆ.ಆರ್.ಆರ್.)

**ಕನಕಮುನಿ :** ಶಾಕ್ಯಮುನಿಬುದ್ಧನೂ ಸೇರಿ ಏರ್ಪಡುವ ಇಪ್ಪತ್ತನಾಲ್ಕು ಮಂದಿ ಬುದ್ಧರಲ್ಲಿ ಇಪ್ಪತ್ತಮೂರನೆಯವ. ಪಾಳಿಯಲ್ಲಿ ಇವನಿಗೆ ಕೋಣಾಗಮನ ಎಂಬ ಹೆಸರಿದೆ. ಅಶೋಕ ಕನಕಮುನಿಯ ಸ್ತೂಪವನ್ನು ಸಂದರ್ಶಿಸಿ ಶಿಥಿಲವಾಗಿದ್ದ ಆ ಸ್ತೂಪವನ್ನು ಪುನರ್ನಿರ್ಮಾಣ ಮಾಡಿಸಿದನೆಂದು ಶಿಲಾಶಾಸನವೊಂದು ಹೇಳುತ್ತದೆ. ಎಂದಮೇಲೆ ಕನಕಮುನಿ ಐತಿಹಾಸಿಕ ವ್ಯಕ್ತಿಯಾಗಿದ್ದನೆಂದು ತಿಳಿಯಬಹುದು. ಬುದ್ಧವಂಶದಲ್ಲಿ ಉಲ್ಲೇಖಿತವಾಗಿರುವ ಇಪ್ಪತ್ತನಾಲ್ಕು ಬುದ್ಧರಲ್ಲಿ ಬಹುಶಃ ಬಹುಮಂದಿ ಚಾರಿತ್ರಿಕ ವ್ಯಕ್ತಿಗಳಲ್ಲ. (ಎಸ್.ಕೆ.ಆರ್.)

**ಕನಕಾಂಬರ :** ಅಕ್ಯಾಂತೇಸೀ ಕುಟುಂಬಕ್ಕೆ ಸೇರಿದ ಕ್ರಾಸ್ಯಾಂಡ್ರ ಎಂಬ ಸಸ್ಯಶಾಸ್ತ್ರೀಯ ಹೆಸರಿನ ಚಿಕ್ಕ ಪೊದೆಸಸ್ಯ. ಈ ಜಾತಿಯಲ್ಲಿ ಸುಮಾರು 40 ಪ್ರಭೇದಗಳಿವೆ. ಭಾರತದ ಮೂಲ ನಿವಾಸಿಗಳಾದ ಇವು ಏಷ್ಯದ ಇತರ ಭಾಗಗಳಲ್ಲೂ ಮಡಗಾಸ್ಕರ್ ದ್ವೀಪಗಳಲ್ಲೂ ಆಫ್ರಿಕದಲ್ಲೂ ಕಂಡುಬರುತ್ತವೆ. ಇವುಗಳಲ್ಲಿ ಕ್ರಾ.ಅನ್‌ಡುಲಿಫೋಲಿಯ, ಕ್ರಾ.ಆಕ್ಸಿಲ್ಯಾರಿಸ್, ಕ್ರಾ.ನಿಲೋಟಿಕ ಮತ್ತು ಕ್ರಾ. ಇನ್‌ಫಂಡಿಬ್ಯೂಲಿಫಾರ್‌ಮಿಸ್ ಎಂಬ ಪ್ರಭೇದಗಳು ಮುಖ್ಯವಾದುವು. ಕನಕಾಂಬರವನ್ನು ತೋಟಗಳಲ್ಲಿ ಮತ್ತು ದೇವಸ್ಥಾನದ ಆವರಣಗಳಲ್ಲಿ ಅಲಂಕಾರಕ್ಕೂ ಹೂವಿಗಾಗಿಯೂ ಬೆಳೆಸುತ್ತಾರೆ. ಈಚೆಗೆ ಇದನ್ನು ಮನೆಮನೆಗಳಲ್ಲೂ ಬೆಳೆಸುತ್ತಿದ್ದಾರೆ. ಸಾಮಾನ್ಯವಾಗಿ ಬೀಜದಿಂದ ಮತ್ತು ಕಾಂಡದ ತುಂಡುಗಳಿಂದ ವೃದ್ಧಿಮಾಡುತ್ತಾರೆ.

ಕನಕಾಂಬರದ ಕಾಂಡ ಎಳೆಯದಾಗಿದ್ದಾಗ ಹಸಿರು ಬಣ್ಣದ್ದೂ ಬಲಿತಾಗ ಕಂದು ಬಣ್ಣದ್ದೂ ಆಗಿದೆ. ಅದರ ಮೇಲ್ಮೈ ನುಣುಪು. ಗಿಣ್ಣುಗಳು ಉಬ್ಬಿಕೊಂಡಿವೆ. ಕಾಂಡದ ಮೇಲೆ ಅಭಿಮುಖವಾಗಿ ಜೋಡಿಸಿರುವ ಸರಳ ಎಲೆಗಳಿವೆ. ಅವುಗಳ ಉದ್ದ ಸು. 6", ಅಗಲ ಸು. 2", ಆಕಾರ ಈಟಿಯಂತೆ, ಅಂಚು ಅಲೆಯಂತೆ, ತುದಿ ಮೊನಚು. ಎಲೆಗಳಿಗೆ ವೃಂತಪರ್ಣಗಳಿಲ್ಲ. ಹೂಗಳು ಕದಿರು ಗೊಂಚಲಿನಲ್ಲಿ (ಸ್ಪೈಕ್) ಜೋಡಣೆಗೊಂಡಿವೆ. ಬಹಳ ಸುಂದರವಾದ ಅವುಗಳಲ್ಲಿ ಕೇಸರಿ, ಕಿತ್ತಳೆ



ಕನಕಾಂಬರ ಹೂವಿನ ಗಿಡ

ಮಿಶ್ರಿತ ಹಳದಿ, ನಸುನೀಲಿ ಹಾಗೂ ಅಚ್ಚಹಳದಿ ವರ್ಣವೈವಿಧ್ಯವಿದೆ. ಕೇಸರಿ ಬಣ್ಣದವಕ್ಕೆ ಒಳ್ಳೆಯ ಬೇಡಿಕೆ ಇದೆ. ಹೂಗಳಿಗೆ ಬ್ರ್ಯಾಕ್ಟ್ ಮತ್ತು ಬ್ರ್ಯಾಕ್ಟಿಯೋಲುಗಳಿವೆ. ದ್ವಿಲಿಂಗಿಗಳಾದ ಅವು ಉಭಯ ಪಾರ್ಶ್ವಸಮಾಂಗತೆಯುಳ್ಳವು. ಪುಷ್ಪಪಾತ್ರೆಯಲ್ಲಿ ಬುಡಭಾಗದಲ್ಲಿ ಕೂಡಿಕೊಂಡಿರುವ 5 ಪುಷ್ಪಪತ್ರಗಳಿವೆ. ದಳಗಳು 5. ಪರಸ್ಪರ ಕೂಡಿಕೊಂಡಿವೆ. ಕೇಸರಗಳು ನಾಲ್ಕು, ಹೂದಳಗಳಿಗೆ ಅಂಟಿಕೊಂಡಿವೆ. ಎರಡು ಕೇಸರಗಳು ಉಳಿದೆರಡಕ್ಕಿಂತ ಹೆಚ್ಚು ಉದ್ದವಾಗಿವೆ. ಪರಾಗಕೋಶಗಳಲ್ಲಿ ಒಂದೇ ಕೋಣೆಯಿದೆ. ಅಂಡಾಶಯ ಉಚ್ಚಸ್ಥಾನದ್ದು. ಎರಡು ಕಾರ್ಪೆಲುಗಳಿಂದ ಕೂಡಿದೆ. ಇವೆರಡೂ ಸಂಯುಕ್ತವಾಗಿದ್ದು ಎರಡಕ್ಕೂ ಸೇರಿಕೊಂಡಂತೆ ಎರಡು ಕೋಣೆಗಳಿವೆ. ಅಂಡಕಗಳ ಸಂಖ್ಯೆ 4. ಫಲ ಆಯತಾಕಾರದ ಚೂಪು ತುದಿಯ ಕ್ಯಾಪ್ಸ್ಯೂಲ್. ಬೀಜಗಳು ಚಪ್ಪಟೆಯಾಗಿವೆ. ಅವು ಕಾಯಿಯಿಂದ ಹೊರಸಿಡಿಯಲು ಅನುಕೂಲವಾಗುವಂತೆ ಅವುಗಳ ಬುಡದಲ್ಲಿ ಕೊಕ್ಕೆ ಆಕಾರದ ರಚನೆಗಳಿವೆ (ರೆಟಿನ್ಯಾಕ್ಯುಲ). (ಟಿ.ಸಿ.)

**ಕನತ್ ನೀರಾವರಿ ವ್ಯವಸ್ಥೆ :** ಮರುಭೂಮಿ ಪ್ರದೇಶಗಳಲ್ಲಿ ನೆಲದಡಿಯ ನೀರನಾಳಗಳನ್ನು ತಲಪಿ ಅವುಗಳ ಜಾಡನ್ನು ಅನುಸರಿಸಿ ಸುರಂಗಗಳನ್ನು ಕೊರೆದು ನೀರನ್ನು ಸಂಗ್ರಹಿಸಿ ಒಂದೆಡೆಯಿಂದ ಇನ್ನೊಂದೆಡೆಗೆ ಸಾಗಿಸುವ ವಿಧಾನ. ಮೊದಲು ಮೂಲ ಬಾವಿ ತೋಡಿ ನೀರನಾಳವನ್ನು ತಲಪುತ್ತಾರೆ. ಅಲ್ಲಿಂದ ನೀರು ಬೇಕಾಗಿರುವ ಸ್ಥಳಕ್ಕೆ (ವ್ಯವಸಾಯ ಪ್ರದೇಶ ಇಲ್ಲವೇ ಜನವಸತಿ) ಭೂಮಿಯ ಒಳಗಡೆಯಿಂದಲೇ ಸಮಾನಾಂತರ ಸುರಂಗಗಳನ್ನು ಇಳಿಜಾರಾಗಿರುವಂತೆ ನಿರ್ಮಿಸಿ ನೀರನ್ನು ಬೇಕಾದೆಡೆಗೆ ಹರಿಸುತ್ತಾರೆ. ಇಂಥ ಸುರಂಗಗಳ ಉದ್ದ 25-30 ಮೈಲಿಗಳ ವರೆಗೂ ಇರುವುದುಂಟು. ಇವೇ ನೀರುಸಾಗಾಣಿಕೆಯ ಕಾಲುವೆಗಳಾಗುತ್ತವೆ. ಜಿನುಗುವ ನೀರು ಸಹ ಇವುಗಳಲ್ಲಿ ಸಂಗ್ರಹವಾಗುವುದು. ಸುರಂಗಗಳಿಗೆ ಸಮಾನಾಂತರ ಬಾವಿಗಳಿಂದೂ ಹೆಸರಿದೆ. ಇವುಗಳಿಂದ ನೆಲಮಟ್ಟ ತಲಪಲು ಸಾಲಾಗಿ ಲಂಬವಾಗಿರುವ ಕೊಳವೆ

ತಿಳಿಯಲು ಬಯಸಿದಂತೆ ಹೆಣ್ಣುಮಕ್ಕಳು ಕಾಣುವ ವ್ಯಾಕುಲಪೂರ್ಣ ಸ್ವಪ್ನಗಳೂ ಲೈಂಗಿಕ ಇಚ್ಛೆಯ ಪ್ರತೀಕವೇ. ವಯಸ್ಸಾದ ಹೆಂಗಸನ್ನು ಸಮೀಪಿಸುತ್ತಿರುವಂತೆ ಕಂಡರೆ ಅದು ಸ್ವಪ್ನಿಯ ಈಡಿಪಸ್ ಕಾಂಪ್ಲೆಕ್ಸನ್ನು ಸೂಚಿಸುತ್ತದೆ.

ಹೀಗೆ ಅಸಂಖ್ಯ ಸಂಕೇತಗಳ ಮೂಲಕ ವ್ಯಕ್ತಿಯ ಅಸಭ್ಯ, ದುಷ್ಟ ಹಾಗೂ ಅನೈತಿಕ ಭಾವನೆಗಳು ಸ್ವಪ್ನದಲ್ಲಿ ಪರೋಕ್ಷವಾಗಿ ಪ್ರಕಟಗೊಳ್ಳುತ್ತವೆ.

6 ಪುನರ್ನಿರ್ಮಾಣ (ಸೆಕೆಂಡರಿ ಇಲ್ಯಾಬೊರೇಷನ್) ಸ್ವಪ್ನ ರಚನೆಯ ಇನ್ನೊಂದು ಕ್ರಿಯೆ. ಸುಪ್ತಚೇತನದಲ್ಲಿ ಅಡಕವಾಗಿರುವ ಅನಾರೋಗ್ಯಕಾರಿ ಇಚ್ಛೆಗಳು ಚೇತನಕ್ಕೂ ಬಂದು, ಚೇತನದ ಸಮತೋಲವನ್ನು ಕೆಡಿಸದಂತೆ ನೋಡಿಕೊಳ್ಳುವುದು ರೋಧಕದ ಮುಖ್ಯ ಕರ್ತವ್ಯ. ಕನಸುಗಳು ನಮ್ಮ ಭಾವನೆಗಳನ್ನು ವ್ಯಕ್ತಪಡಿಸುವ ಚಿತ್ರಗಳಾದರೂ ಈ ಚಿತ್ರಗಳು ತರ್ಕಬದ್ಧವಾಗಿಯಾಗಲಿ, ಕ್ರಮಬದ್ಧವಾಗಿಯಾಗಲಿ ಜೋಡಿಸಲ್ಪಟ್ಟಿರುವುದಿಲ್ಲ. ಈ ಜೋಡಣೆಯ ಮತ್ತು ಸಂಪಾದನೆಯ (ಎಡಿಟಿಂಗ್) ಕೆಲಸವನ್ನು ಸ್ವಪ್ನದ ಪುನರ್ನಿರ್ಮಾಣ ಕ್ರಿಯೆ ನಿರ್ವಹಿಸುತ್ತದೆ. ಇದು ನಿರ್ವಹಿಸುವ ಮತ್ತೊಂದು ಕರ್ತವ್ಯವೆಂದರೆ, ಅವ್ಯಕ್ತ ವಿಷಯಗಳೆಲ್ಲವನ್ನೂ ಸ್ವಪ್ನಕ್ಕೆ ಸಂಬಂಧಿಸಿದಂತೆ ಒಂದು ಕಥೆಯ ರೂಪಕ್ಕೆ ತರುತ್ತದೆ. ಅವ್ಯಕ್ತವಿಷಯಗಳನ್ನು ಈ ರೀತಿ ಕಥೆಯ ರೂಪಕ್ಕೆ ಒಳಪಡಿಸುವ ಕ್ರಿಯೆ ಅನುಚೇತನದ ಹಂತದಲ್ಲಿ ನಡೆಯುತ್ತದೆ. ಇದೇ ಪುನರ್ನಿರ್ಮಾಣಕ್ರಿಯೆ. ಕನಸನ್ನು ವಾಲ್ಟ್ ಡಿಸ್ನಿಯ ವ್ಯಂಗ್ಯಚಿತ್ರಗಳಿಗೆ ಹೋಲಿಸಬಹುದು. ಇಲ್ಲಿ ಚಿತ್ರಕ್ಕಿಂತ ಅದರ ಹಿಂದೆ ಅಡಗಿರುವ ಅರ್ಥ ಮುಖ್ಯ. ಆದ್ದರಿಂದಲೇ ವಿಶ್ಲೇಷಕನಿಗೆ ವ್ಯಕ್ತವಿಷಯ ಗೌಣ. ಅವನ ದೃಷ್ಟಿ ಯಾವಾಗಲೂ ಅವ್ಯಕ್ತವಿಷಯದ ಕಡೆಗೇ ಇರುತ್ತದೆ.

ಹೀಗೆ ಕನಸು ಅವ್ಯಕ್ತವಿಷಯದ ಅಸ್ಪಷ್ಟ ಹಾಗೂ ವಿಕೃತರೂಪ. ಈ ದೃಶ್ಯಗಳನ್ನು ವಿಭಜಿಸಿ ಅದರ ಹಿಂದೆ ಅಡಕವಾಗಿರುವ ಭಾವನೆಗಳನ್ನು ಅರ್ಥಮಾಡಿಕೊಳ್ಳುವುದೇ ವಿಶ್ಲೇಷಕನ ಕೆಲಸ.

ಕನಸುಗಳು ಭೌತಿಕ ಹಾಗೂ ಮಾನಸಿಕ ಪ್ರಚೋದನೆಗಳೆರಡರಿಂದಲೂ ಉಂಟಾಗುತ್ತವೆ. ಭೌತಿಕ ಪ್ರಚೋದನೆಗಳು ವ್ಯಕ್ತಿ ನಿದ್ರಿಸುತ್ತಿರುವಾಗ ಅವನ ಇಂದ್ರಿಯಗಳೊಂದಿಗೆ ಸಂಪರ್ಕವೇರ್ಪಡಿಸಿಕೊಂಡಾಗ ಆತನಲ್ಲಿ ಕನಸನ್ನುಂಟು ಮಾಡುತ್ತವೆ. ನಿದ್ರಿಸುತ್ತಿರುವ ವ್ಯಕ್ತಿಯ ಕಿವಿಯ ಬಳಿ ನೊಣ ಗುಯ್ ಗುಟ್ಟುತ್ತ ಹಾರಾಡುತ್ತಿದ್ದರೆ ಅದು ಅವನಲ್ಲಿ ಜಲಪಾತದ ಸ್ವಪ್ನವನ್ನೋ ಬಿರುಗಾಳಿಯ ಸ್ವಪ್ನವನ್ನೋ ಉಂಟುಮಾಡಬಹುದು. ಒಬ್ಬ ವಿದ್ಯಾರ್ಥಿ ಚಲನಚಿತ್ರದ ಎರಡನೆಯ ಪ್ರದರ್ಶನ ನೋಡಿ ಕೊಟಡಿಗೆ ಹಿಂತಿರುಗಿದ. ಆ ವೇಳೆಗೆ ಆತನ ಸ್ನೇಹಿತ ಕೊಟಡಿಯ ಬಾಗಿಲು ಮುಚ್ಚಿ ಮಲಗಿದ್ದ. ವಿದ್ಯಾರ್ಥಿ ಎರಡು ಮೂರು ಬಾರಿ ಬಾಗಿಲನ್ನು ಮೆತ್ತಗೆ ತಟ್ಟಿದರೂ ಸ್ನೇಹಿತನಿಗೆ ಎಚ್ಚರವಾಗಲಿಲ್ಲ. ಅನಂತರ ಕಿಟಕಿಯ ಬಳಿ ಬಂದು, ಮಲಗಿದ್ದ ಸ್ನೇಹಿತನ ಮುಖದ ಮೇಲೆ ಕೈಲಿದ್ದ ಟಾರ್ಚಿನಿಂದ ಬೆಳಕು ಬೀರಿ, ಕಿಟಕಿಯ ಬಾಗಿಲುಗಳನ್ನು ಜೋರಾಗಿ ಬಡಿದ. ಇದರಿಂದ ಮಲಗಿದ್ದ ಸ್ನೇಹಿತ ಗಾಬರಿಗೊಂಡವನಾಗಿಯೂ ದಿಗ್ಭ್ರಾಂತನಾಗಿಯೂ ಎದ್ದು ಕೂತ. ಒಂದು ಕ್ಷಣ ಆತನಿಗೆ ಏನೂ ತೋಚಲಿಲ್ಲ. ಅನಂತರ ಎದ್ದು ಬಾಗಿಲು ತೆರೆದ. ಭಯಂಕರವಾದ ಗುಡುಗು, ಮಿಂಚು, ಬಿರುಗಾಳಿಗಳಿಂದ ಕೂಡಿದ ಮಳೆಗೆ ಸಿಕ್ಕಿಕೊಂಡಿದ್ದಂತೆ ತನಗೊಂದು ಕನಸಾಯಿತೆಂದು ಆತ ಸ್ವಲ್ಪ ಹೊತ್ತಿನ ಅನಂತರ ವಿವರಿಸಿದ. ಬಾಗಿಲು ಬಡಿತದ ಸದ್ದು, ಟಾರ್ಚ್ ಬೆಳಕು—ಈ ಬಾಹ್ಯ ಪ್ರಚೋದನೆಯಿಂದಾಗಿ ಆತನಿಗೆ ಈ ಬಗೆಯ ಕನಸಾಯಿತು. ಇದೇ ರೀತಿಯಲ್ಲಿ ಅಜೀರ್ಣ, ಮಲಬದ್ಧತೆ, ದೇಹದ ಅಂಗಾಂಗಗಳಲ್ಲಿನ ಅಸೌಖ್ಯ, ಸುತ್ತಮುತ್ತ ನಡೆಯುತ್ತಿರುವ ಸದ್ದುಗದ್ದಲ ಮುಂತಾದ ಅನೇಕ ಬಾಹ್ಯ ಪ್ರಚೋದನೆಗಳು ನಿದ್ರಿಸುವ ವ್ಯಕ್ತಿಯಲ್ಲಿ ಕನಸುಗಳನ್ನುಂಟುಮಾಡುತ್ತವೆ.

ಆದರೂ, ಬಹು ಹೆಚ್ಚಿನ ಕನಸುಗಳು ಭೌತಿಕ ಪ್ರಚೋದನೆಗಳಿಗಿಂತ ಮಾನಸಿಕ ಪ್ರಚೋದನೆಗಳಿಂದಲೇ ಉತ್ಪನ್ನವಾಗುತ್ತವೆ. ಉದಾಹರಣೆಗೆ, ಈಡೇರದ ಬಯಕೆಗಳು, ಭಯ, ಉದ್ವಿಗ್ನತೆ, ವಿರೋಧ, ತುಮುಲತೆ ಮುಂತಾದವೆಲ್ಲ ಕನಸುಗಳಿಗೆ ಕಾರಣವಾದ ಮಾನಸಿಕ ಪ್ರಚೋದನೆಗಳು. ಇವುಗಳಿಂದ ಉತ್ಪನ್ನವಾಗುವ ಕನಸುಗಳಲ್ಲಿ ಹಲವು ವಿಧಗಳಿವೆ. ಮುಖ್ಯವಾದ ಕೆಲವನ್ನು ಮುಂದೆ ಸೂಚಿಸಿದೆ:

(i) ವ್ಯಕ್ತಿ ಎಚ್ಚರವಾಗಿದ್ದಾಗ ಏನನ್ನು ಕುರಿತು ಯೋಚಿಸುತ್ತಿದ್ದನೋ ಅದರ ಬಗ್ಗೆ ನಿರ್ಣಯಕ್ಕೆ ಬಂದಿರುವಂತೆ ಅಥವಾ ಸಮಸ್ಯೆಗೆ ಪರಿಹಾರ ದೊರಕಿದಂತೆ ಕೆಲವು ಬಾರಿ ಕನಸುಗಳಾಗುತ್ತವೆ. ಇವು ಸಮಸ್ಯಾಪರಿಹಾರ ಸ್ವಪ್ನಗಳು.

(ii) ಆತ್ಮವಿಮರ್ಶೆ ಅಥವಾ ಆತ್ಮಕಥೆಯಿಂದ ಕೂಡಿದ ಸ್ವಪ್ನಗಳು.

(iii) ವರ್ಣಸ್ವಪ್ನಗಳು : ಸಾಮಾನ್ಯವಾಗಿ ಹೆಚ್ಚಿನ ಸ್ವಪ್ನಗಳು ಕಪ್ಪು–ಬಿಳುಪು ಚಿತ್ರಗಳಿಂದ ಮಾತ್ರ ಕೂಡಿರುತ್ತವೆ. ಅಪುರೂಪಕ್ಕೆ ಸ್ವಪ್ನಗಳು ವರ್ಣರಂಜಿತವಾಗಿರುವುದೂ ಉಂಟು.

(iv) ವಿವರಣಾತ್ಮಕ ಸ್ವಪ್ನಗಳು : ಇಂಥ ಸ್ವಪ್ನಗಳು ದೊಡ್ಡದಾಗಿದ್ದು ವೈವಿಧ್ಯದಿಂದಲೂ ವಿಶೇಷವಾದ ವಿವರದಿಂದಲೂ ಕೂಡಿರುವುವಲ್ಲದೆ ಪರಿಚ್ಛೇದ ಮತ್ತು ಅಂಕಗಳಲ್ಲಿ ವಿಭಜಿತವಾಗಿರುತ್ತವೆ.

(v) ಶಬ್ದಚಮತ್ಕಾರದ ಮೇಲೆ ಆಧಾರಿತವಾಗಿರುವ ಕನಸುಗಳು.

(vi) ಉದ್ದಿಶ್ಯಪೂರ್ಣ ಸ್ವಪ್ನಗಳು.

(vii) ಭವಿಷ್ಯಸೂಚಕ ಸ್ವಪ್ನಗಳು : ತನ್ನ ಗಂಡ ಸೆನೇಟಿನಲ್ಲಿ ಕೊಲೆಯಾದಂತೆ ಸೀಸರನ ಪತ್ನಿ ಕಂಡಳೆಂದು ಹೇಳಲಾದ ಸ್ವಪ್ನವೊಂದು ಉದಾಹರಣೆ. ಆಕೆ ತಡೆದರೂ ಕೇಳದೆ ಸೀಸರ್ ಸೆನೇಟಿಗೆ ಹೋದ. ಕನಸು ನಿಜವಾಯಿತು.

(viii) ಸಮಕಾರಕ (ಕಾಂಪೆನ್ಸೇಟರಿ) ಸ್ವಪ್ನಗಳು :ವ್ಯಕ್ತಿಗಳು ವಾಸ್ತವ ಜೀವನದಲ್ಲಿ ದೋಷಗಳನ್ನೂ ನೈಚ್ಯಭಾವ ಸಂಕೀರ್ಣವನ್ನೂ (ಇನ್‌ಫೀರಿಯಾರಿಟಿ ಕಾಂಪ್ಲೆಕ್ಸ್) ಪಡೆದಿರುತ್ತಾರೆ. ಆದರೆ ಕನಸುಗಳಲ್ಲಿ ಇವೆಲ್ಲವನ್ನೂ ಜಯಿಸಿರುತ್ತಾರೆ. ಉದಾಹರಣೆಗೆ ತೊದಲುವ ದೋಷದಿಂದ ಕೂಡಿರುವಾತ ಕನಸಿನಲ್ಲಿ ಸರಾಗವಾಗಿ ಭಾಷಣ ಮಾಡುತ್ತಿರುವಂತೆ ಕಾಣಬಹುದು.

(ix) ಸೈನಿಕರ ಯುದ್ಧಸ್ವಪ್ನಗಳು : ಎಚ್ಚರವಾಗಿದ್ದಾಗ ಪಡೆದ ಅನುಭವ ಸನ್ನಿವೇಶಗಳೇ ಕನಸಿನಲ್ಲೂ ಕಾಣಿಸಿಕೊಳ್ಳುತ್ತವೆ.

(x) ಉದ್ವಿಗ್ನತಾಪೂರ್ಣ ಸ್ವಪ್ನಗಳು : ಸಾಂಸಾರಿಕ ಸಾಮಾಜಿಕ ಭಯಗಳು, ಲೈಂಗಿಕ ಜೀವನದ ಅತೃಪ್ತಿ ಮುಂತಾದ ಭಯಗಳು ಉದ್ವಿಗ್ನತಾಪೂರ್ಣ ಸ್ವಪ್ನಗಳನ್ನು ಉಂಟುಮಾಡುತ್ತವೆ. ತಾರುಣ್ಯಾವಸ್ಥೆಯಲ್ಲಿರುವ ಹೆಂಗಸರ ಮತ್ತು ಗಂಡಸರ ಹೆಚ್ಚಿನ ಸ್ವಪ್ನಗಳ ಹಿನ್ನೆಲೆಯಲ್ಲಿ ಇದನ್ನು ಕಾಣಬಹುದು. ಉದ್ವಿಗ್ನತೆ ಕಾಣಿಸಿಕೊಳ್ಳುವ ರೀತಿ ಅನೇಕ ವಿಧ. ಉದಾಹರಣೆಗೆ, ಪರೀಕ್ಷೆಗೆ ಕುಳಿತಿರುವಂತೆ, ಪ್ರಶ್ನೆಪತ್ರಿಕೆಗಳು ಬಹಳ ಕಠಿಣವಾಗಿರುವಂತೆ ಕಂಡುಬಂದು ಅದರಿಂದ ಮನಸ್ಸು ಉದ್ವಿಗ್ನವಾಗಬಹುದು ; ಅಥವಾ ಕೊಲೆಯಾದಂತೆ, ಇಲ್ಲವೆ ಕೊಲೆ ಮಾಡಿದಂತೆ ಕಂಡುಬಂದು ಭಯಕಾರಕವಾಗಬಹುದು. ವ್ಯಕ್ತಿಯಲ್ಲಿ ಗುಪ್ತವಾಗಿರುವ ಹೆದರಿಕೆಗಳೂ ಅಧಿಕ ಪ್ರಮಾಣದ ಭಯಗಳೂ ನಿದ್ರಿಸುವ ವ್ಯಕ್ತಿಯಲ್ಲಿ ಭಯಂಕರ ಸ್ವಪ್ನಗಳನ್ನು (ನೈಟ್ ಮೇರ್) ಉಂಟುಮಾಡುತ್ತವೆ. ಮಗು ಎಲ್ಲಿ ಸತ್ತುಹೋಗುತ್ತದೋ ಎಂಬ ತಾಯಿಯ ಅತಿ ಭಯದಿಂದಾಗಿ ಅವಳಿಗೆ ಮಗು ಸತ್ತುಹೋಗಿರುವಂತೆಯೇ ಸ್ವಪ್ನವಾಗಬಹುದು. ಇಲ್ಲಿ ಅದು ಅವಳ ಇಚ್ಛೆಯನ್ನು ತೋರಿಸುವುದಿಲ್ಲ. ಅದಕ್ಕೆ ಬದಲು ಅವಳಲ್ಲಿ ಅಡಗಿರುವ ಭಯವನ್ನು, ಉದ್ವಿಗ್ನತೆಯನ್ನು ಸೂಚಿಸುತ್ತದೆ.

(xi) ಈಡೇರದೆ ಉಳಿದುಕೊಂಡ ಬಯಕೆಗಳೂ ಕನಸಿನಲ್ಲಿ ಪೂರೈಸಬಹುದು.

(xii) ನಿದ್ರಾರಕ್ಷಕ ಸ್ವಪ್ನಗಳು : ಹಲವು ಕನಸುಗಳು ನಿದ್ರಾರಕ್ಷಕಗಳು. ಉದಾಹರಣೆಗೆ, ನಿದ್ರೆಯಲ್ಲಿರುವಾಗ ವ್ಯಕ್ತಿಗೆ ಬಾಯಾರಿಕೆಯಾಗಬಹುದು; ಅಥವಾ ಮೂತ್ರಕೋಶ ತುಂಬಿದ್ದು, ಮೂತ್ರವಿಸರ್ಜನೆ ಮಾಡಬೇಕೆನಿಸಬಹುದು. ಆದರೂ ನಿದ್ರೆಯಿಂದ ಎಚ್ಚರಗೊಂಡು ಅಡುಗೆಮನೆಗೋ ಬಚ್ಚಲುಮನೆಗೋ ಎದ್ದುಹೋಗಲು ಮನಸ್ಸು ಒಪ್ಪುವುದಿಲ್ಲ. ಅಂಥ ಸಂದರ್ಭಗಳಲ್ಲಿ ಆ ಇಚ್ಛೆ ಕನಸಿನ ರೂಪದಲ್ಲಿ ಕಾಣಿಸಿಕೊಂಡು ಅದರಲ್ಲಿ ಪೂರೈಕೆಯಾಗಿರುತ್ತದೆ. ಉದಾಹರಣೆಗೆ, ಹೇರಳವಾಗಿ ನೀರು ಕುಡಿಯುತ್ತಿರುವಂತೆ ಅಥವಾ ಮೂತ್ರವಿಸರ್ಜನೆ ಮಾಡುತ್ತಿರುವಂತೆ ಕನಸಿನಲ್ಲಿ ಕಂಡುಬರುತ್ತದೆ. ಇದರಿಂದಾಗಿ ನಿದ್ರಿತ ವ್ಯಕ್ತಿಯ ತತ್ಕ್ಷಣದ ಆಸೆ ಪೂರೈಸಿದಂತಾಗುವುದರಿಂದ ಆತ ನಿದ್ರೆಯಿಂದ ಎಚ್ಚರಗೊಳ್ಳಬೇಕಾದ ಅವಶ್ಯಕತೆಯಿರುವುದಿಲ್ಲ.

(xii) ಕೆಲವು ಸಮಯಗಳಲ್ಲಿ ಒಂದೇ ಕನಸು ಅಲ್ಪಸ್ವಲ್ಪ ಬದಲಾವಣೆಯೊಂದಿಗೆ ಆಗಾಗ್ಗೆ ಕಾಣಿಸಿಕೊಳ್ಳುತ್ತಿರುತ್ತದೆ. ಸ್ವಪ್ನಿ ಯಾವುದೋ ಸಮಸ್ಯೆಗೆ ಪರಿಹಾರ ದೊರಕದೆ ತೊಳಲಾಡುತ್ತಿರುವುದಕ್ಕೆ ಇದು ಸೂಚನೆ.

(xiv) ವ್ಯಕ್ತಿ ಒಮ್ಮೊಮ್ಮೆ ಕನಸಿನಲ್ಲಿ ಕೂಗಲು ಪ್ರಯತ್ನಿಸಬಹುದು. ಆದರೆ ಧ್ವನಿಯೇ ಹೊರಡುವುದಿಲ್ಲ. ಓಡಿಹೋಗಲು ಪ್ರಯತ್ನಿಸಿದಲ್ಲೂ ಕಾಲುಗಳು ನೆಲಕ್ಕೆ ಅಂಟಿಕೊಳ್ಳುತ್ತವೆ. ಉಸಿರು ಕಟ್ಟಿದಂತಾಗುತ್ತದೆ. ಹೀಗೆ ಅನೇಕ ರೀತಿಯಲ್ಲಿ ಸ್ವಪ್ನದಲ್ಲಿ ಚಟುವಟಿಕೆಗಳಿಗೆ ತಡೆಯೊದಗುತ್ತದೆ. ಇಂಥ ಸ್ವಪ್ನಗಳು ಸ್ವಪ್ನಿಯಲ್ಲಿರುವ ಇಡ್ ಮತ್ತು ಆದಿಅಹಂಗಳ ನಡುವಿನ ಘರ್ಷಣೆಯನ್ನು ಸೂಚಿಸುತ್ತವೆ.

(xv) ಕೊನೆಯದಾಗಿ ಕೆಲವು ಸಾಧಾರಣ ಸ್ವಪ್ನಗಳನ್ನು ಉದಾಹರಿಸಬಹುದು : ಹಾರಾಡುತ್ತಿರುವಂತೆ, ಈಜುತ್ತಿರುವಂತೆ, ಬೀಳುತ್ತಿರುವಂತೆ, ಸವಾರಿ ಮಾಡುತ್ತಿರುವಂತೆ, ಹತ್ತುತ್ತಿರುವಂತೆ, ಪ್ರಯಾಣ ಮಾಡುತ್ತಿರುವಂತೆ, ರೈಲು ಬಸ್ಸು ತಪ್ಪಿದಂತೆ, ಬೆತ್ತಲೆಯಾಗಿರುವಂತೆ, ಪ್ರಣಯಕ್ರೀಡೆಯಲ್ಲಿರುವಂತೆ, ಸಾಹಸಕೃತ್ಯಗಳನ್ನು ಮಾಡುತ್ತಿರುವಂತೆ. ಇವೆಲ್ಲ ಸಾಧಾರಣವಾಗಿ ಎಲ್ಲರಲ್ಲೂ ಹೆಚ್ಚು ಪ್ರಮಾಣದಲ್ಲಿ ಕಂಡುಬರುವ ಸ್ವಪ್ನಗಳಾಗಿವೆ.

ಕನಸಿನ ಕೆಲವು ಸಾಮಾನ್ಯ ಲಕ್ಷಣಗಳಿವು :

ಎಚ್ಚರವಾಗಿರುವಾಗ ವ್ಯಕ್ತಿ ಹೊರವಿಶ್ವವನ್ನು ಹೇಗೆ ಜ್ಞಾನೇಂದ್ರಿಯಗಳ ಮೂಲಕ ತಿಳಿಯುತ್ತಾನೆಯೋ ಹಾಗೆಯೇ ಕನಸನ್ನೂ ಆ ಮೂಲಕವೇ ತಿಳಿಯು

ತ್ತಾನೆ. ಸ್ವಪ್ನಗಳು ಹೆಚ್ಚಾಗಿ ತಿಳಿಯಬರುವುದು ದೃಶ್ಯೇಂದ್ರಿಯದ ಮೂಲಕವೇ. ಶ್ರವಣೇಂದ್ರಿಯದ ಮೂಲಕ (ಅಂದರೆ ಕನಸಿನಲ್ಲಿ ದೃಶ್ಯಭಾಗವಿರದೆ ಕೇವಲ ಶಬ್ದಗಳು ಮಾತ್ರ ಕೇಳಿಬರುತ್ತವೆ) ತಿಳಿದುಬರುವ ಸ್ವಪ್ನಗಳೂ ಸಾಕಷ್ಟು ಸಂಖ್ಯೆಯಲ್ಲಿರುತ್ತವೆ. ಇದೇ ರೀತಿಯಲ್ಲಿ ಕೇವಲ ಘ್ರಾಣೇಂದ್ರಿಯದ ಮೂಲಕವೂ ಕನಸುಗಳನ್ನು ಅನುಭವಿಸ ಬಹುದು. ಅಂದರೆ ಕೇವಲ ವಾಸನೆಗಳು ತಿಳಿದುಬರುತ್ತವೆಯೇ ವಿನಾ ಶಬ್ದಭಾಗ ವಾಗಲಿ, ದೃಶ್ಯಭಾಗವಾಗಲಿ ಇರುವುದಿಲ್ಲ. ಇಂಥ ಕನಸುಗಳು ಬಹಳ ವಿರಳ. ಮಕ್ಕಳು ತಮ್ಮ ಐದನೆಯ ವರ್ಷದ ಒಳಗೆ ಅಂಧರಾದರೆ ಮುಂದೆ ಅವರ ಕನಸುಗಳಲ್ಲಿ ದೃಶ್ಯ ಭಾಗ ಮಾಯವಾಗಿದ್ದು ಅವು ಶಬ್ದ ಮತ್ತು ವಾಸನೆಗಳಿಂದ ಮಾತ್ರ ಕೂಡಿರುತ್ತವೆ.

**ಹಗಲುಗನಸು :** ಹಗಲುಗನಸಿಗೂ ಕನಸಿಗೂ ಇರುವ ಮುಖ್ಯ ವ್ಯತ್ಯಾಸ ವೆಂದರೆ, ಹಗಲುಗನಸಿನಲ್ಲಿ ದೃಶ್ಯಭಾಗಗಳಿರುವುದಿಲ್ಲ. ಅಲ್ಲದೆ, ಆಸೆಗಳೂ ಆಕಾಂಕ್ಷೆ ಗಳೂ ಅವುಗಳ ನೇರ ರೂಪದಲ್ಲಿ ಹೆಚ್ಚು ಸ್ಪಷ್ಟತೆಯಿಂದ ಪ್ರಕಟಗೊಳ್ಳುತ್ತವೆ. ಚಾರ್ಲ್ಸ್ ಲ್ಯಾಂಬನ ಡ್ರೀಂ ಚಿಲ್ಡ್ರನ್ ಎಂಬ ಕೃತಿ ಹಗಲುಗನಸಿನ ಕೊಡುಗೆ. ಕನ್ನಡ ಪ್ರಬಂಧಕಾರ ಎ. ಎನ್. ಮೂರ್ತಿರಾಯರು ಹಗಲುಗನಸುಗಳು ಎಂಬ ಅಭಿಧಾನದಲ್ಲಿ ಒಂದು ಪ್ರಬಂಧವನ್ನೆ ನೇಯ್ದಿದ್ದಾರೆ. ಹಗಲುಗನಸಿನಲ್ಲಿ ಆಶಾವಾದವೂ ದೃಢಭಾವನೆ ಗಳೂ ಭಗ್ನಮನೋರಥಗಳೂ ನಿರಾಶೆಗಳೂ ಸ್ಪಷ್ಟವಾಗಿ ಪ್ರತಿಫಲಿಸುತ್ತವೆ. ನಿತ್ಯದ ಅನೇಕ ತೊಂದರೆಗಳೂ ಅಸಹಾಯಕತೆಗಳೂ ವ್ಯಕ್ತಿಯನ್ನು ದುಃಖಿತನನ್ನಾಗಿಯೂ ನಿರಾಶನನ್ನಾಗಿಯೂ ಮಾಡುತ್ತವೆ. ಇದೇ ಭಾವನೆಯೆ ಅವನಲ್ಲಿ ಬಹಳ ಕಾಲ ಉಳಿದರೆ, ಅದು ಅವನ ಮಾನಸಿಕ ಸಮತೋಲವನ್ನು ಕೆಡಿಸಬಹುದು. ಇದರಿಂದ ತಪ್ಪಿಸಿ ಕೊಳ್ಳಲು ಹಾಗೂ ವಾಸ್ತವಿಕತೆಯಲ್ಲಿರುವ ಅಸಮರ್ಪಕತೆಯಿಂದ ತಪ್ಪಿಸಿಕೊಂಡು ತನ್ನ ಈಡೇರದ ಬಯಕೆಗಳನ್ನು ಪೂರೈಸಿಕೊಳ್ಳಲು ಹಗಲುಗನಸಿನ ಮರೆಹೊಗು ತ್ತಾನೆ. ಹಗಲುಗನಸುಗಳೆಲ್ಲ ವ್ಯಕ್ತಿಯ ಸುತ್ತಲೇ ಹೆಣೆಯಲ್ಪಟ್ಟಿದ್ದು ವ್ಯಕ್ತಿಯೇ ಅದರ ಪ್ರಧಾನ ಪಾತ್ರಧಾರಿ.

ಪ್ರತಿಯೊಂದು ಮಗುವಿನಲ್ಲೂ ಉತ್ಸಾಹವೂ ಸಾಹಸಪ್ರಿಯತೆಯೂ ಎಲ್ಲರ ಮುಂದೆಯೂ ತನ್ನ ಪ್ರಭಾವವನ್ನು ತೋರಿಸಿಕೊಳ್ಳಬೇಕೆಂಬ ಆಸೆಯೂ ಇರುತ್ತವೆ. ಇಂಥ ಮನೋಭಾವಗಳಲ್ಲಿ ಕೆಲವಂಶಗಳು ಹಗಲುಗನಸುಗಳಲ್ಲಿ ಸಾರ್ಥಕ್ಯಹೊಂದು ತ್ತವೆ. ತಿರುಕನ ಕನಸು ಒಂದು ಉದಾಹರಣೆ. ಜನರನ್ನು ಆಕರ್ಷಿಸಲು ಅಶಕ್ತ ಳಾಗಿರುವ ಕುರೂಪಿ ಹೆಂಗಸು ತನ್ನ ಹಗಲುಗನಸಿನಲ್ಲಿ ತನ್ನನ್ನು ಸುರಸುಂದರಿಯಂತೆ ಚಿತ್ರಿಸಿಕೊಂಡು, ಸುತ್ತಮುತ್ತ ಹತ್ತಾರು ಆರಾಧಕರು ಅಂಗಲಾಚುತ್ತಿರುವಂತೆ ಕಲ್ಪಿಸಿಕೊಳ್ಳಬಹುದು.

ಹಗಲುಗನಸುಗಳು ಎಲ್ಲ ವಯಸ್ಸಿನವರಲ್ಲೂ ಕಂಡುಬರುತ್ತವೆ. ಆದರೆ ತಾರುಣ್ಯಾ ವಸ್ಥೆಯಲ್ಲಿ ವಿಶೇಷ. ಆಗಿನ ಹೆಚ್ಚಿನ ಹಗಲುಗನಸುಗಳೆಲ್ಲ ವ್ಯಕ್ತಿಯ ಭವಿಷ್ಯತ್ತು, ಸಾಹಸ, ಪ್ರಣಯ, ಸುಖದ ನಿರೀಕ್ಷೆ, ಗತವೈಭವ ಮುಂತಾದವನ್ನು ವಿಶೇಷವಾಗಿ ಒಳ ಗೊಂಡಿರುತ್ತವೆ. ಹಗಲುಗನಸು ವಾಸ್ತವಿಕತೆ ಹಾಗೂ ನೈಜತೆಯ ನಿರ್ಬಂಧದಿಂದ ಪೂರ್ಣವಾಗಿ ಮುಕ್ತವಾಗಿರುತ್ತದೆ. ಹಗಲುಗನಸಿನಲ್ಲಿ ವ್ಯಕ್ತಿಯ ಕಲ್ಪನೆಗಳು ಮೇರೆ ಯಿಲ್ಲದ ಮೈದಾನದಲ್ಲಿ ಅನಂತ ರೂಪಗಳಲ್ಲಿ ಪ್ರಕಟಗೊಳ್ಳುತ್ತವೆ.

ಕಾದಂಬರಿಗಳನ್ನು ಓದುವಾಗಲೂ ಇದನ್ನು ಗಮನಿಸಬಹುದು. ಅನೇಕ ವೇಳೆ ಓದುಗ ತನ್ನ ವ್ಯಕ್ತಿತ್ವವನ್ನು ಮರೆತು, ಕಾದಂಬರಿಯ ನಾಯಕ ನಾಯಕಿಯರಲ್ಲಿ ಒಂದಾಗಿರುತ್ತಾನೆ. ಆದ್ದರಿಂದಲೇ ಕಥೆ ಚಲನಚಿತ್ರಗಳು ವಿಶೇಷ ಪ್ರೀತಿಗೆ ಪಾತ್ರ ವಾಗಿವೆ.

ಹಗಲುಗನಸಿಗೂ ಒಂದು ಮಿತಿ ಇರಬೇಕು; ಆಗ ಮಾತ್ರ ಅದು ವ್ಯಕ್ತಿಯ ಜೀವನ ದಲ್ಲಿ ಉಪಯುಕ್ತ ಪಾತ್ರವಹಿಸುತ್ತದೆ. ಹಗಲುಗನಸು ಒಂದು ರೀತಿಯ ಮನೋ ವಿಹಾರ, ಒಂದು ರೀತಿಯ ಅವ್ಯಕ್ತ ಹಾಗೂ ಅವರ್ಣನೀಯವಾದ—ಆದರೆ ತೋರಿಕೆಯ—ಉತ್ಸಾಹ, ಶಕ್ತಿ, ಆಶಾಭಾವನೆ ಮತ್ತು ಭಾವೋದ್ರೇಕಗಳಿಂದ ಕೂಡಿರುತ್ತದೆ. ಈ ರೀತಿಯ ಶಕ್ತಿಸಂಚಯನದಿಂದ ವ್ಯಕ್ತಿಯ ನಿತ್ಯಜೀವನದಲ್ಲಿಯ ಚಟುವಟಿಕೆಗಳಿಗೆ ಒಂದು ರೀತಿಯ ಉತ್ತೇಜನ ದೊರಕುತ್ತದೆ. ಅವನ ಧ್ಯೇಯ ಸಾಧನೆಗೆ ಇದು ಸಹಕಾರಿಯಾಗುತ್ತದೆ.

ಇಷ್ಟಾದರೂ ಹಗಲುಗನಸು ಕಾಣುವುದು ಒಂದು ದೃಷ್ಟಿಯಿಂದ ದೋಷಪೂರಿತ. ವ್ಯಕ್ತಿ ವಾಸ್ತವಿಕತೆಯನ್ನು ಎದುರಿಸಲು ಅಶಕ್ತನಾದಾಗಲೆಲ್ಲ ಹಗಲುಗನಸಿನ ಮರೆ ಹೊಕ್ಕರೆ, ಹಗಲುಗನಸಿನಲ್ಲೇ ತನ್ನೆಲ್ಲ ಹೆಚ್ಚಿನ ಸಮಯವನ್ನೂ ವ್ಯಯ ಮಾಡುತ್ತ ಹೋದರೆ ಮುಂದೆ ಆತ ವಾಸ್ತವಿಕ ಪ್ರಪಂಚದಲ್ಲಿ ಸಮರ್ಪಕವಾಗಿ ಹೊಂದಿಕೊಂಡು ಬಾಳು ನಡೆಸಲಾರ. ಕಲ್ಪನಾಶಕ್ತಿ ವ್ಯಕ್ತಿಯ ಜೀವನವನ್ನು ರೂಪಿಸುವುದರಲ್ಲಿ ಸಹಾಯಕ ವಾಗಿರಬೇಕೇ ವಿನಾ ಅವನ ನಿತ್ಯಜೀವನಕ್ಕೆ ಅಡ್ಡಿಯಾಗಬಾರದು.

ಹಗಲುಗನಸು ಅತಿರೇಕಾವಸ್ಥೆಯನ್ನು ಮುಟ್ಟಿದಾಗ ವ್ಯಕ್ತಿಗೆ ಕಲ್ಪನಾಲೋಕವೇ ಹೆಚ್ಚು ವಾಸ್ತವಿಕವಾಗಿ ಕಂಡುಬರುತ್ತದೆ. ನೈಜತೆ ಮತ್ತು ಅನೈಜತೆಗಳ ನಡುವಿನ ವ್ಯತ್ಯಾಸವನ್ನು ಗುರ್ತಿಸುವುದರಲ್ಲಿ ಆತ ಅಶಕ್ತನಾಗಿರುತ್ತಾನೆ. ಈ ಅವಸ್ಥೆಯೇ ಮತ್ತಷ್ಟು ಮುಂದುವರಿದಾಗ ಆ ವ್ಯಕ್ತಿಗೆ ಸರಾಗವಾಗಿ ಮಾತಾಡಲೂ ಸಾಧ್ಯವಾಗುವುದಿಲ್ಲ. ಆತ ತನ್ನ ಸುತ್ತಮುತ್ತಲಿನವರೊಂದಿಗೆ ಹೊಂದಿಕೊಳ್ಳಲಾರ. ಕೊನೆಗೆ ಸ್ವಪ್ನಲೋಕದಲ್ಲೇ ಬಂದಿಯಾಗಿ ಮನೋವಿದಳನದಲ್ಲಿ (ಸ್ಕಿಜೊಫ್ರೇನಿಯ) ಪರ್ಯವಸಾನ ಹೊಂದಬಹುದು. ಇಂಥವ ಹೊರಜಗತ್ತಿನೊಂದಿಗೆ ಸಂಪೂರ್ಣ ವಾಗಿ ಸಂಪರ್ಕ ಕಳೆದುಕೊಂಡಿದ್ದರೂ ಇವನ ಕಲ್ಪನಾಶಕ್ತಿ ಮಾತ್ರ ಅಗಾಧವಾಗಿರು ತ್ತದೆ. ತಲೆದಿಂಬನ್ನೇ ತಬ್ಬಿಕೊಂಡು, ತನ್ನ ಗತಿಸಿದ ಪುತ್ರ ಮರಳಿ ಬಂದಂತೆ ಭಾವಿಸಿಕೊಂಡು, ಅದರೊಂದಿಗೆ ಮಾತಾಡುವ, ಮುದ್ದಿಸುವ ಅನೇಕ ರೋಗಿಗಳು ಕಂಡುಬಂದಿದ್ದಾರೆ.

ಈ ರೀತಿಯ ಅತಿರೇಕದ ಅಪಾಯದಿಂದ ಮಕ್ಕಳನ್ನು ತಪ್ಪಿಸಬೇಕಾದರೆ, ಅವರನ್ನು ಕ್ರೂರವಾಗಿ ಶಿಕ್ಷಿಸುವುದರಿಂದಾಗಲಿ ವಾಸ್ತವಿಕತೆಯ ಪರಿಚಯವನ್ನು ಒಮ್ಮೆಲೇ ಮಾಡಿಸುವುದರಿಂದಾಗಲಿ ಪ್ರಯೋಜನವಾಗುವುದಿಲ್ಲ. ಅದಕ್ಕೆ ಬದಲು ಸಾವಕಾಶವಾಗಿ, ತಾಳ್ಮೆಯಿಂದ ಅವರನ್ನು ಪರಿವರ್ತಿಸಬೇಕು. ಹಗಲುಗನಸಿನಲ್ಲಿ ಸಿಗುವ ಸುಖಕ್ಕಿಂತ ವಾಸ್ತವಿಕವಾಗಿ ನಡೆದುಕೊಳ್ಳುವುದರಲ್ಲಿ ಹೆಚ್ಚಿನ ಸುಖವಿರುವು ದನ್ನು ಮನವರಿಕೆ ಮಾಡಿಕೊಡಬೇಕು. ವಾಸ್ತವಿಕತೆಯನ್ನು ಸರಿಯಾಗಿ ಅರ್ಥ ಮಾಡಿಕೊಂಡು ಅದರೊಂದಿಗೆ ಹೋರಾಡಿ ಜಯ ಗಳಿಸುವ ಹುಮ್ಮಸ್ಸನ್ನು ಅವರಲ್ಲಿ ತುಂಬಬೇಕು. (ಎಲ್.ಎಸ್.ಪಿ.)

**ಕನಿಂಗ್‌ಹ್ಯಾಮ್, ಅಲನ್ :** 1784–1842. ಕವಿ, ಲೇಖಕ. ಡಮ್‌ಫ್ರೈಸಿನ ಡಾಲ್ಸ್‌ವಿಂಗ್ಟನಿನಲ್ಲಿ ಹುಟ್ಟಿದ. ಇವನ ತಂದೆಗೂ ರಾಬರ್ಟ್ ಬರ್ನ್ಸ್ ಕವಿಗೂ ಗೆಳೆತನವಿತ್ತಾದ ಕಾರಣ ಕನಿಂಗ್‌ಹ್ಯಾಮನಿಗೆ ಬಾಲ್ಯದಲ್ಲಿ ಆ ಕವಿಮಹಾಶಯನ ಪರಿಚಯಲಾಭವಾಯಿತು. ಕಲ್ಲುಕೆಲಸ ಮಾಡುತ್ತಿದ್ದ ತನ್ನ ಅಣ್ಣನೊಡನೆ ಈತ ಕೆಲಸ ಕಲಿಯಲು ಸೇರಿದನಾದರೂ ಬಿಡುವು ದೊರೆತಾಗಲೆಲ್ಲ ವ್ಯಾಸಂಗ, ಲಾವಣಿರಚನೆಗಳಲ್ಲಿ ಆಸಕ್ತನಾಗಿರುತ್ತಿದ್ದ. ಕ್ರೋಮೆಕ್ ಸಂಪಾದಿಸಿರುವ ರಿಮೇನ್ಸ್ ಆಫ್ ನಿತ್‌ಸ್‌ಡೇಲ್ ಅಂಡ್ ಗ್ಯಾಲೊವೆ ಸಾಂಗ್ (1810) ಎಂಬುದರಲ್ಲಿ ಕನಿಂಗ್‌ಹ್ಯಾಮನ ಕವನಗಳನ್ನು ಕಾಣಬಹುದು. ತನ್ನ ಕವನಗಳಿಂದಾಗಿ ಈತನಿಗೆ ಸ್ಕಾಟ್ ಮತ್ತು ಹಾಗ್‌ರ ಗೆಳೆತನದ ಲಾಭವಾಯಿತು. ಹೀಗಾಗಿ ಈತ ಲಂಡನಿಗೆ ಹೋಗಿ ಅಲ್ಲಿ ಸಂಸತ್ತಿನ ವರದಿಗಾರನಾಗಿಯೂ ಶಿಲ್ಪಿ ಚಾಂಟ್ರಿಯ ಸಹಾಯಕ ನಾಗಿಯೂ ಕೆಲಸಮಾಡುತ್ತ ತನ್ನ ಸಾಹಿತ್ಯಚಟುವಟಿಕೆಗಳನ್ನು ಮುಂದುವರಿಸಿದ. ಈತನ ಪ್ರಸಿದ್ಧ ಕೃತಿಗಳೆಂದರೆ ಟ್ರೆಡಿಷನಲ್ ಟೇಲ್ಸ್ ಆಫ್ ದಿ ಇಂಗ್ಲಿಷ್ ಅಂಡ್ ಸ್ಕಾಟಿಷ್ ಪೆಸೆಂಟ್ರಿ (1822), ದಿ ಸಾಂಗ್ಸ್ ಆಫ್ ಸ್ಕಾಟ್ಲೆಂಡ್, ಏನ್ಷಂಟ್ ಅಂಡ್ ಮಾಡರ್ನ್ (1825), ಲೈವ್ಸ್ ಆಫ್ ದಿ ಮೋಸ್ಟ್ ಎಮಿನೆಂಟ್ ಬ್ರಿಟಿಷ್ ಪೇಂಟರ್ಸ್, ಸ್ಕಲ್ಪ್ಟರ್ಸ್ ಅಂಡ್ ಆರ್ಕಿಟೆಕ್ಟ್ಸ್ (1829–33), ಲೈಫ್ ಆಫ್ ಸರ್ ಡೇವಿಡ್ ವಿಲ್ಕಿ (1843). ಈತನ ಪ್ರಸಿದ್ಧ ಕವನ ಎ ವೆಟ್ ಷೀಟ್ ಅಂಡ್ ಎ ಫ್ಲೋಯಿಂಗ್ ಸಿ ಎನ್ನುವುದು ಮೇಲೆ ಹೇಳಿದ ಎರಡನೆಯ ಗ್ರಂಥದಲ್ಲಿ ಸೇರಿದೆ. ಇಷ್ಟಲ್ಲದೆ ಈತ ರಾಬರ್ಟ್ ಬರ್ನ್ಸನ ಕೃತಿಗಳನ್ನು ಸಂಪಾದಿಸಿದ್ದಾನೆ ಹಾಗೂ ಮೂರು ಕಾದಂಬರಿಗಳನ್ನು ಬರೆದಿದ್ದಾನೆ. (ಎನ್.ಎಸ್.ಎಲ್.)

**ಕನಿಂಗ್‌ಹ್ಯಾಂ, ಸರ್ ಅಲೆಕ್ಸಾಂಡರ್ :** 1814–1893. ಭಾರತೀಯ ಪುರಾತತ್ತ್ವಶಾಸ್ತ್ರದ ಜನಕ. ಸ್ಕಾಟಿಷ್ ಕವಿ ಅಲನ್ ಕನಿಂಗ್‌ಹ್ಯಾಮನ ಎರಡ ನೆಯ ಮಗ. ಲಂಡನ್, ಅಡಿಸ್‌ಕೊಂಬ್ ಮತ್ತು ಥಾಥಾಮ್‌ಗಳಲ್ಲಿ ವಿದ್ಯಾ ಭ್ಯಾಸ ಮಾಡಿ ಆರ್.ಇ. ಪದವಿ ಗಳಿಸಿದ. 1831ರಲ್ಲಿ ಬೆಂಗಾಲ್ ಎಂಜಿನಿಯರ್ಸ್ ವಿಭಾಗದಲ್ಲಿ ಸೆಕೆಂಡ್ ಲೆಫ್ಟಿನೆಂಟ್ ಆಗಿ ನೇಮಕಗೊಂಡು ಲೋಕೋಪಯೋಗಿ ಇಲಾಖೆಯಲ್ಲಿ ಹಲವಾರು ಹುದ್ದೆಗಳನ್ನು ನಿರ್ವಹಿಸಿ, ಭಾರತದ ಗವರ್ನರ್–ಜನ ರಲ್ ಲಾರ್ಡ್ ಆಕ್‌ಲ್ಯಾಂಡನ ಎ.ಡಿ.ಸಿ. ಆದ. ಒಂದನೆಯ ಮತ್ತು ಎರಡನೆಯ ಸಿಖ್ ಯುದ್ಧಗಳಲ್ಲಿ ಕ್ಷೇತ್ರ ಎಂಜಿನಿಯರ್ ಆಗಿದ್ದನಲ್ಲದೆ ಅನಂತರ ಬರ್ಮ ಮತ್ತು ವಾಯವ್ಯ ಪ್ರಾಂತ್ಯಗಳಲ್ಲಿ ಮುಖ್ಯ ಎಂಜಿನಿಯರ್ ಆಗಿ ಸೇವೆ ಸಲ್ಲಿಸಿದ. ಜೇಮ್ಸ್ ಪ್ರಿನ್ಸೆಪನ ಸ್ನೇಹದಿಂದಾಗಿ ಈತನಿಗೆ ಭಾರತೀಯ ಪುರಾತತ್ತ್ವದಲ್ಲಿ ಆಸಕ್ತಿ ಬೆಳೆಯಿತು. ಆತನ ಪ್ರಾಚ್ಯಸಂಶೋಧನಕಾರ್ಯದಲ್ಲಿ ಕನಿಂಗ್‌ಹ್ಯಾಮ್ ನೆರವು ನೀಡಿದ. ಆಗಿ ನಿಂದ ಈತ ತನ್ನ ವಿರಾಮವೇಳೆಯನ್ನು ಇದರ ಅಭ್ಯಾಸಕ್ಕಾಗಿ ವಿನಿಯೋಗ ಮಾಡ ಲಾರಂಭಿಸಿದ. ಈತ ಸಾರನಾಥ ಸ್ತೂಪದ ವಿಷಯವಾದ ಸಂಶೋಧನೆಗಳನ್ನು ಆರಂಭಿಸಿದ್ದು 1834–35ರಲ್ಲಿ. ಇದೇ ಸಮಯದಲ್ಲಿ ಮಾರ್ಕ್ಹ್ಯಾಂ ಕಿಟೋ, ಎಡ್ವರ್ಡ್ ಥಾಮಸ್, ಸರ್ ವಾಲ್ಟರ್ ಎಲಿಯಟ್, ಜೆ. ಸ್ಟೀವನ್‌ಸನ್ ಮತ್ತು ಭೌದಾಜಿ ಇವರು ದೇಶದ ವಿವಿಧ ಭಾಗಗಳಲ್ಲಿ ಪ್ರಾಕ್ತನ ಅವಶೇಷಗಳ ಅಭ್ಯಾಸದಲ್ಲಿ ನಿರತ ರಾದರು. ಪ್ರಿನ್ಸೆಪನ ನಿಧನದ (1840) ಅನಂತರ ಕೆಲಕಾಲ ಸ್ಥಗಿತವಾಗಿದ್ದ ಈ ಕಾರ್ಯವನ್ನು ಕನಿಂಗ್‌ಹ್ಯಾಂ ಮುಂದುವರಿಸಬೇಕಾಯಿತು. 1847ರಲ್ಲಿ ಕನಿಂಗ್ ಹ್ಯಾಂ ಅಧ್ಯಕ್ಷತೆಯಲ್ಲಿದ್ದ ಸಮಿತಿಯೊಂದು ಲಡಾಕ್-ಟಿಬೆಟ್ ಗಡಿಯ ಸಮಸ್ಯೆಗಳನ್ನು ಪರಿಶೀಲಿಸುತ್ತಿದ್ದಾಗ ಈತ ಕಾಶ್ಮೀರದ ದೇವಾಲಯಗಳ ಮೇಲೊಂದು ಮತ್ತು

ಲಡಾಕ್‌ನ ಭೌಗೋಳಿಕ ಮತ್ತು ಐತಿಹಾಸಿಕ ಮಾಹಿತಿಗಳ ಮೇಲೊಂದು ಹೀಗೆ ಎರಡು ಗ್ರಂಥಗಳನ್ನು ಪ್ರಕಟಿಸಿದ. 1851ರಲ್ಲಿ ಮಧ್ಯ ಭಾರತದ ಬೌದ್ಧ ಅವಶೇಷಗಳನ್ನು ಅಭ್ಯಾಸ ಮಾಡಿದುದರ ಫಲವಾಗಿ (1854) ಭಿಲ್ಸಾ ತೊಪೆಗಳು ಎಂಬ ಗ್ರಂಥ ಪ್ರಕಟವಾಯಿತು.



ಪ್ರಾಕ್ತನ ಸರ್ವೇಕ್ಷಣ ವಿಭಾಗವನ್ನು ಸ್ಥಾಪಿಸಬೇಕೆಂದು 1848ರಲ್ಲೇ ಈತ ಭಾರತ ಸರ್ಕಾರಕ್ಕೆ ಸಲಹೆ ಮಾಡಿದ್ದ. ಆದರೆ ಇದಕ್ಕೆ ಪುರಸ್ಕಾರ ದೊರಕಿರಲಿಲ್ಲ. 1861ರಲ್ಲಿ ಈ ಸಲಹೆಯನ್ನು ಪುನಃ ಮಂಡಿಸಿದ. ಆ ವರ್ಷ ಸೈನ್ಯ ಇಲಾಖೆಯಿಂದ ನಿವೃತ್ತಿ ಹೊಂದಿದ್ದ. ಆಗ ಗವರ್ನರ್-ಜನರಲ್ ಲಾರ್ಡ್ ಕ್ಯಾನಿಂಗನಿಗೆ ಈ ಸಲಹೆಯಲ್ಲಿ ಆಸಕ್ತಿ ಹುಟ್ಟಿತು. ಪ್ರಾಕ್ತನ ಅವಶೇಷಗಳಲ್ಲಿ ಸಂರಕ್ಷಣೆಗೆ ಯೋಗ್ಯವಾದವುಗಳ ನಕಾಶೆ, ಛಾಯಾಚಿತ್ರ, ಪರಿಮಾಣಗಳ ಅಳತೆ ಮತ್ತು ಶಾಸನಗಳ ಪ್ರತಿಕೃತಿಗಳನ್ನು ತಯಾರಿಸಲು 1861ರಲ್ಲಿ ಕನಿಂಗ್‌ಹ್ಯಾಂ ಸರ್ವೇಯರ್ ಆಗಿ 450 ರೂ.ಗಳ ಮಾಸಿಕ ವೇತನದ ಮೇಲೆ ನೇಮಕವಾದ. ಅಲೆಕ್ಸಾಂಡರನ ದಂಡಯಾತ್ರೆಯ ಮತ್ತು ಚೀನಾಪ್ರವಾಸಿ ಹ್ಯೂಎನ್ ತ್ಸಾಂಗನ ಪ್ರವಾಸದ ಮಾರ್ಗಗಳ ವಿಷಯವಾಗಿ ಕನಿಂಗ್‌ಹ್ಯಾಂ ಸಂಶೋಧನೆ ನಡೆಸಿದ. ಆದರೆ 9-2-1866ರಲ್ಲಿ ಪ್ರಾಕ್ತನ ಸರ್ವೇಕ್ಷಣ ವಿಭಾಗವನ್ನು ರದ್ದುಮಾಡಲಾಗಿ ಈತ ಇಂಗ್ಲೆಂಡಿಗೆ ವಾಪಸಾಗಬೇಕಾಯಿತು. ಈತನ ಸಂಶೋಧನೆಗಳ ಫಲವಾದ ದಿ ಏನ್‌ಷಂಟ್ ಜಿಯೋಗ್ರಫಿ ಆಫ್ ಇಂಡಿಯ (ಭಾರತದ ಪುರಾತನ ಭೂವಿವರಣೆ) ಎಂಬ ಗ್ರಂಥ ಪ್ರಕಟವಾದದ್ದು 1871ರಲ್ಲಿ. ಈಗಲೂ ಅದು ಒಂದು ಮುಖ್ಯ ಆಧಾರ ಗ್ರಂಥವಾಗಿದೆ. ಭಾರತದಲ್ಲಿ ಸಂಶೋಧನಾಧಿಕಾರಿಯಾಗಿದ್ದ ಕಾಲದಲ್ಲಿ ಬಿಹಾರ ಮತ್ತು ವಾರಾಣಸಿ ಪ್ರದೇಶಗಳಲ್ಲಿ ಅಶೋಕ ನಿರ್ಮಿತವಾದ ಬರಾಬರ್ ಗುಹೆಗಳು, ಬುದ್ಧಗಯೆ ಮುಂತಾದ 24 ನಿವೇಶನಗಳ ಅವಶೇಷಗಳನ್ನೂ ಫತೇಪುರ್, ಕನೌಜ್, ರೂರ್ಕಿ, ಕಾಲ್ಸಿ, ಮಥುರಾ ಮತ್ತು ದೆಹಲಿಗಳ ಅವಶೇಷಗಳನ್ನೂ ಸಂಕಿಸ್ಸವೆಂಬ ಬೌದ್ಧನಿವೇಶನವನ್ನೂ ಪಂಜಾಬಿನಲ್ಲಿ ಅಲೆಕ್ಸಾಂಡರನ ದಾಳಿಯ ಮಾರ್ಗಗಳನ್ನೂ ಜಮಾಲ್‌ಘರೀ, ಯೂಸಫ್‌ಜಾಹಿ, ತಕ್ಷಶಿಲಾ, ಮಾಣಿಕ್ಯಾಲ, ಸರ್‌ಹಿಂದ್ ಮತ್ತು ಥಾನೇಶ್ವರ್ ನೆಲೆಗಳನ್ನೂ ಪರಿಶೋಧಿಸಿದ.

ಪ್ರಾಕ್ತನ ಸಂಶೋಧನೆಗಳನ್ನು ಅಲಕ್ಷಿಸುವುದು ತಪ್ಪೆಂಬುದು ನಾಲ್ಕು ವರ್ಷಗಳ ಅನಂತರ ಭಾರತ ಸರಕಾರಕ್ಕೆ ಮತ್ತೆ ಮನವರಿಕೆಯಾಯಿತು. ಸರ್ವೇಕ್ಷಣ ವಿಭಾಗವನ್ನು ಪುನರುಜ್ಜೀವನಗೊಳಿಸಿ 1871ರ ಫೆಬ್ರುವರಿಯಲ್ಲಿ ಕನಿಂಗ್‌ಹ್ಯಾಮನನ್ನು ಆ ವಿಭಾಗದ ಮುಖ್ಯನಿರ್ದೇಶಕನನ್ನಾಗಿ (ಡೈರೆಕ್ಟರ್-ಜನರಲ್) 2,000 ರೂ. ಮಾಸಿಕ ವೇತನದ ಮೇಲೆ ನೇಮಿಸಲಾಯಿತು. ಮುಂದೆ 14 ವರ್ಷಗಳ ಕಾಲ ದೆಹಲಿ, ಆಗ್ರ, ರಾಜಪುಟಾಣ, ಬುಂದೇಲಖಂಡ, ಮಥುರಾ, ಪಂಜಾಬ್, ಮಧ್ಯಪ್ರದೇಶ, ಮಾಳವ, ಬುದ್ಧಗಯೆ ಮುಂತಾದ ಕಡೆಗಳಲ್ಲಿ ಅನೇಕ ಸಂಶೋಧನೆಗಳನ್ನು ನಡೆಸಿ ಭಾರತದಲ್ಲಿ ಪ್ರಾಕ್ತನಶಾಸ್ತ್ರದ ತಳಹದಿಯನ್ನು ಸುಭದ್ರವಾಗಿ ಈತ ಸ್ಥಾಪಿಸಿದ. ಈ ಕಾಲದಲ್ಲಿ ಈತ ಬೆಳಕಿಗೆ ತಂದ ಐತಿಹಾಸಿಕ ಅವಶೇಷಗಳಲ್ಲಿ ಕ್ರಿ.ಪೂ. 2ನೆಯ ಶತಮಾನದ ಭಾರ್ಹುತ್‌ಸ್ತೂಪ, ಮಧ್ಯಪ್ರದೇಶದಲ್ಲಿ ಗುಪ್ತರ ಕಾಲಕ್ಕೆ ಸೇರಿದ ಹಲವಾರು ದೇವಾಲಯಗಳು, ಅನೇಕ ಗಾಂಧಾರ ಶೈಲಿಯ ಕಲಾಕೃತಿಗಳು, ಹಲವಾರು ಅಶೋಕಸ್ತಂಭಗಳು ಮತ್ತು ಮೌರ್ಯ, ಗುಪ್ತ ಮತ್ತು ಪಾಲವಂಶದ ಅನೇಕ ಶಾಸನಗಳು ಮುಖ್ಯವಾದವು. ಪುರಾಣ ಇತಿಹಾಸಗಳಲ್ಲಿ ಪ್ರಸಿದ್ಧವಾದ ತಕ್ಷಶಿಲಾ, ಸಂಕಿಸ್ಸ, ಅಹಿಚ್ಛತ್ರ, ಶ್ರಾವಸ್ತಿ, ಕೌಶಾಂಬಿ, ವೈಶಾಲಿ ಮತ್ತು ನಲಂದ ನಗರಗಳ ಅವಶೇಷಗಳನ್ನೂ ಗುರ್ತಿಸಲಾಯಿತು. ಈ ಸಂಶೋಧನೆಗಳನ್ನು ಪ್ರಾಕ್ತನ ಸರ್ವೇಕ್ಷಣ ಇಲಾಖೆಯ ವಾರ್ಷಿಕ ವರದಿಗಳ ರೂಪದಲ್ಲಿ ಪ್ರಕಟಿಸಲಾಗಿದೆ. ಸರ್ಕಾರಕ್ಕೆ ಈತ ಕಳುಹಿಸುತ್ತಿದ್ದ ವರದಿಗಳನ್ನು ರಾಷ್ಟ್ರೀಯ ಐತಿಹಾಸಿಕ ದಾಖಲೆಗಳ ಗ್ರಂಥಾಲಯದಲ್ಲಿ ಸಂರಕ್ಷಿಸಿಡಲಾಗಿದೆ.

ಕನಿಂಗ್‌ಹ್ಯಾಮನಿಗೆ ಶಾಸನಶಾಸ್ತ್ರ ವಿಭಾಗದಲ್ಲೂ ಹೆಚ್ಚಿನ ಆಸಕ್ತಿಯಿತ್ತು. ನೂರಾರು ಶಾಸನಗಳನ್ನು ಬೆಳಕಿಗೆ ತಂದು ಪ್ರಚುರಗೊಳಿಸಿದುದಲ್ಲದೆ ಆಯಾ ರಾಜಮನೆತನಗಳಿಗೆ ಸೇರಿದ ಶಾಸನಗಳನ್ನು ಒಂದೊಂದು ಪ್ರತ್ಯೇಕ ಸಂಪುಟಗಳಲ್ಲಿ ಪ್ರಕಟಿಸುವ ಯೋಜನೆ ಹಾಕಿ, ಆದರಂತೆ ಅಶೋಕಮೌರ್ಯ ಮತ್ತು ಅವನ ಮೊಮ್ಮಗ ದಶರಥನ ಶಾಸನಗಳನ್ನು 1877ರಲ್ಲಿ ಕಾರ್ಪಸ್ ಇನ್‌ಸ್ಕ್ರಿಪ್ಷನಂ ಇಂಡಿಕ್ಯಾರಂ ಎಂಬ ಗ್ರಂಥಮಾಲೆಯ ಮೊದಲ ಸಂಪುಟದಲ್ಲಿ ಪ್ರಕಟಿಸಿದ. ಶಾಸನಗಳ ಅಭ್ಯಾಸಕ್ಕೆ ಪ್ರತ್ಯೇಕ ಶಾಖೆಯೊಂದನ್ನು ಏರ್ಪಡಿಸಿ 1883ರಲ್ಲಿ ಜಿ. ಎಫ್. ಫ್ಲೀಟನನ್ನು ಆದರ ಮುಖ್ಯಾಧಿಕಾರಿಯನ್ನಾಗಿ ನೇಮಿಸಲು ಈತನೇ ಕಾರಣ. ಪುರಾತನ ಕಟ್ಟಡಗಳ ಜೀರ್ಣೋದ್ಧಾರ ಮತ್ತು ರಕ್ಷಣೆಯ ವಿಷಯದಲ್ಲೂ ಆಸಕ್ತಿ ವಹಿಸಿ ಅಂಥ ರಿಪೇರಿಗಳನ್ನು ಪ್ರಾಕ್ತನ ಶಾಸ್ತ್ರಜ್ಞರ ನೇತೃತ್ವದಲ್ಲೇ ನಡೆಸಬೇಕೆಂದು ಸರ್ಕಾರದೊಡನೆ ವಾದಿಸಿದ. ಸರ್ಕಾರ ಈ ವಿಷಯವಾಗಿ ನಿರ್ಧಾರ ಕೈಗೊಳ್ಳುವಷ್ಟರಲ್ಲಿ ಸ್ವಂತ ಇಚ್ಛೆಯಿಂದ 1885ರ ಅಕ್ಟೋಬರ್ 1ರಂದು ನಿವೃತ್ತಿಹೊಂದಿ ಇಂಗ್ಲೆಂಡಿಗೆ ವಾಪಸಾದ. ಈತನ ಸೂಚನೆಯಂತೆ ಡೈರೆಕ್ಟರ್-ಜನರಲನ ಹುದ್ದೆಯನ್ನು ರದ್ದುಗೊಳಿಸಲಾಯಿತು. ಅದರ ಬದಲು ಮೂವರು ಸರ್ವೇಯರುಗಳನ್ನು ಉತ್ತರ ಭಾರತದ ಮೂರು ಕೇಂದ್ರಗಳಲ್ಲಿ ನೇಮಿಸಲಾಯಿತು. ದಕ್ಷಿಣ ಮತ್ತು ಮತ್ತು ಪಶ್ಚಿಮ ಭಾರತದಲ್ಲಿ ಮೊದಲಿನಂತೆ ಜೇಮ್ಸ್ ಬರ್ಜೆಸ್ ಮುಂದುವರಿದ.

ನಿವೃತ್ತಿಗೊಂಡ ಅನಂತರವೂ ಕನಿಂಗ್ ಹ್ಯಾಮ್ ಈ ಕ್ಷೇತ್ರದಲ್ಲಿ ತನ್ನ ಆಸಕ್ತಿಯನ್ನು ಮುಂದುವರಿಸಿದ. ಪ್ರಾಚೀನ ಭಾರತದ ನಾಣ್ಯಗಳು, ಬುದ್ಧಗಯೆಯ ದೇವಾಲಯ, ಇಂಡೋಸಿಥಿಯನರ ಸಕರ ಮತ್ತು ಕುಶಾನರ ನಾಣ್ಯಗಳು, ಮಧ್ಯಕಾಲೀನ ಭಾರತದ ನಾಣ್ಯಗಳು ಮತ್ತು ಉತ್ತರಕಾಲೀನ ಇಂಡೋಸಿಥಿಯನ್ನರ ನಾಣ್ಯಗಳು ಎಂಬ ಐದು ಗ್ರಂಥಗಳನ್ನೂ ಹಲವಾರು ಬೃಹತ್ ಲೇಖನಗಳನ್ನೂ 1893ರಲ್ಲಿ ಪ್ರಕಟಿಸಿದ. ಅದೇ ವರ್ಷ ಈತ ನಿಧನ ಹೊಂದಿದ.

ಪುರಾತತ್ವ ಕ್ಷೇತ್ರದಲ್ಲಿ ಇಷ್ಟೊಂದು ಕೆಲಸ ಮಾಡಿದ ಕನಿಂಗ್‌ಹ್ಯಾಮನನ್ನು ಭಾರತದ ಪ್ರಾಕ್ತನಶಾಸ್ತ್ರ ಇಲಾಖೆಯ ಜನ್ಮದಾತನೆಂದು ಪರಿಗಣಿಸಿರುವುದು ಸಾಧುವಾಗಿದೆ. ಆದರೂ ಈತನ ವಿರುದ್ಧ ಹಲವಾರು ಟೀಕೆಗಳು ಕೇಳಿಬಂದುವು. ಈತ ಚಾರಿತ್ರಿಕ ಅವಶೇಷಗಳ ಮೇಲೆ ತನ್ನ ಗಮನವಿಟ್ಟಿದ್ದು, ಇತಿಹಾಸಪೂರ್ವ ಸಂಸ್ಕೃತಿಗಳತ್ತ ಗಮನ ಕೊಡಲಿಲ್ಲವೆಂಬುದೂ ಹರಪ್ಪ ಸಂಸ್ಕೃತಿಯ ಅವಶೇಷಗಳನ್ನು ಮೊತ್ತಮೊದಲಿಗೆ ಈತ ಬೆಳಕಿಗೆ ತಂದನಾದರೂ ಅವನ್ನು ಸರಿಯಾಗಿ ಅಭ್ಯಾಸ ಮಾಡದೆ ಅಲಕ್ಷಿಸಿದನೆಂಬುದೂ ಇತರ ದೇಶಗಳಲ್ಲಿ ಸಮಕಾಲೀನ ಪ್ರಾಕ್ತನ ಶಾಸ್ತ್ರಜ್ಞರು ಅನುಸರಿಸುತ್ತಿದ್ದ ಸುಧಾರಿತ ವಿಧಾನಗಳನ್ನು ಈತ ಬಳಸುತ್ತಿರಲಿಲ್ಲವೆಂಬುದೂ ಈ ಟೀಕೆಗಳಲ್ಲಿ ಪ್ರಮುಖವಾದವು.

(ಬಿ.ವಿ.ಆರ್.; ಎ.ಎಂ.ಎ.)

**ಕನಿಷ್ಕ** I : ಉತ್ತರ ಭಾರತದಲ್ಲಿ ರಾಜ್ಯವಾಳಿದ ಕುಶಾಣ ವಂಶದ ಚಕ್ರವರ್ತಿಗಳಲ್ಲಿ ಅತ್ಯಂತ ಶ್ರೇಷ್ಠ, ಪ್ರಸಿದ್ಧ. ಪ್ರಾಚೀನ ಭಾರತದ ಪ್ರದೇಶಗಳಾದ ಮಧ್ಯದೇಶ, ಉತ್ತರಾಪಥ ಮತ್ತು ಅಪರಾಂತಗಳು ಇವನ ಆಳ್ವಿಕೆಗೆ ಒಳಪಟ್ಟಿದ್ದುವು. ಪೂರ್ವ-ಪಶ್ಚಿಮವಾಗಿ ಬಿಹಾರದಿಂದ ಖೊರಾಸಾನದ ವರೆಗೂ ಉತ್ತರ-ದಕ್ಷಿಣವಾಗಿ ಖೋತಾನದಿಂದ ಕೊಂಕಣದ ವರೆಗೂ ಈತನ ಚಕ್ರಾಧಿಪತ್ಯ ಹಬ್ಬಿತ್ತೆಂದು ಹೇಳಲಾಗಿದೆ. ಈತನ ಕಾಲ ಯಾವುದೆಂದು ನಿಶ್ಚಿತವಾಗಿ ಹೇಳುವುದು ಸಾಧ್ಯವಿಲ್ಲ: ಎರಡನೆಯ ಕಡ್‌ಫೀಸಿಸನ ಅನಂತರ ಈತ ಇದ್ದಿರಬೇಕೆಂದು ಕಾಣುತ್ತದೆ. (ನೋಡಿ—ಕಡ್‌ಫೀಸಿಸ್). ಎರಡನೆಯ ಕಡ್‌ಫೀಸಿಸನ ಕಾಲ ಕ್ರಿ. ಶ. ಸುಮಾರು 65–75 ಎನ್ನುವುದಾದರೆ, ಕನಿಷ್ಕ ಕ್ರಿ.ಶ. 1ನೆಯ ಶತಮಾನದ ಕೊನೆಯ ಭಾಗದಲ್ಲಿ

ಆಳಿದನೆಂದು ಹೇಳಬಹುದಾಗಿದೆ. ಈತನೊಬ್ಬ ಶಕಸ್ಥಾಪಕ. ಇವನ ಆಳ್ವಿಕೆಯ ವರ್ಷಗಳ ಎಣಿಕೆಯೇ ಅನಂತರವೂ ಮುಂದುವರಿದಿದ್ದಿರಬಹುದು. ಕ್ರಿ.ಶ. 78ರಲ್ಲಿ ಆರಂಭವಾದ ಶಕೆಯೇ ಇವನದೆಂದು ಊಹಿಸಲಾಗಿದೆ. ಇದನ್ನೊಪ್ಪುವುದಾದರೆ ಈತ ಕ್ರಿ.ಶ. 101 ಅಥವಾ 102ರ ವರೆಗೆ ಆಳಿದನೆಂದು ಹೇಳಬಹುದು. ಕನಿಷ್ಕನ ಆಳ್ವಿಕೆ ಕ್ರಿ.ಶ. 130ರಿಂದ ಆರಂಭವಾಯಿತೆಂದು ಕೆಲವು ಭಾರತಶಾಸ್ತ್ರಜ್ಞರು ಅಭಿಪ್ರಾಯಪಡುತ್ತಾರೆ. ಇದಕ್ಕೆ ಟಿಬೆಟನ್ ಮತ್ತು ಚೀನೀ ದಾಖಲೆಗಳು ಆಧಾರ. ಈತ ಒಂದನೆಯ ಮತ್ತು ಎರಡನೆಯ ಕಡ್‌ಫೀಸಿಸರಿಗಿಂತಲೂ ಹಿಂದಿನವನೆಂದೂ ಕ್ರಿ.ಪೂ. ೫೮ರಲ್ಲಿ ಆರಂಭವಾದ ವಿಕ್ರಮಶಕಪುರುಷನೀತನೆಂದೂ ಇನ್ನು ಕೆಲವು ವಿದ್ವಾಂಸರ ವಾದ. ಈತ ಕ್ರಿ.ಶ. 248ರಲ್ಲಿ ಸಿಂಹಾಸನಾರೋಹಣ ಮಾಡಿದನೆಂದೂ ತ್ರೈಕೂಟಕ ಮತ್ತು ಇತರ ವಂಶಗಳ ಅರಸರು ಅನುಸರಿಸುವ ಶಕೆಯನ್ನು ಈತ ಆರಂಭಿಸಿದನೆಂದೂ ಒಂದು ಅಭಿಪ್ರಾಯವುಂಟು. ಆದರೆ ಇದು ಇತಿಹಾಸಕಾರರಿಂದ ಅಷ್ಟೇನೂ ಪುರಸ್ಕೃತವಾಗಿಲ್ಲ.

ಬೌದ್ಧ ಸಂಪ್ರದಾಯಗಳಲ್ಲಿ ಕನಿಷ್ಕನ ಹೆಸರು ಬಹಳ ಪ್ರಸಿದ್ಧವಾಗಿದೆ. ಕನಿಷ್ಠ ಎಂಬುದು ಇವನ ಹೆಸರಿನ ಸಂಸ್ಕೃತರೂಪ. ಈತ ಪಾರ್ಥಿಯನರ ವಿರುದ್ಧ ದಂಡಯಾತ್ರೆ ನಡೆಸಿದನೆಂದು ಹೇಳಲಾಗಿದೆ. ಸಾಕೇತ ಮತ್ತು ಪಾಟಲಿಪುತ್ರಗಳನ್ನು ಈತ ಗೆದ್ದ ವಿಚಾರವನ್ನು ಟಿಬೆಟಿನ ಲೇಖಕರು ಉಲ್ಲೇಖಿಸಿದ್ದಾರೆ. ಬಂಗಾಲ ಒರಿಸ್ಸಗಳಲ್ಲೂ ಇವನ ನಾಣ್ಯಗಳು ದೊರೆತಿವೆ. ನೇಪಾಳದ ಲಿಚ್ಛವಿಗಳು ಕನಿಷ್ಕನ ಶಕೆಯನ್ನೇ ಅನುಸರಿಸಿದ್ದಾರೆ. ಹೀಗೆಂದಮಾತ್ರಕ್ಕೆ ಈ ಪ್ರದೇಶಗಳೆಲ್ಲ ಕನಿಷ್ಕನಿಗೆ ಅಧೀನವಾಗಿದ್ದುವೆಂದು ಹೇಳಲಾಗುವುದಿಲ್ಲ. ಕಾಶ್ಮೀರದಲ್ಲಿ ಕನಿಷ್ಕನ ಆಳ್ವಿಕೆ ನಡೆಸಿದ ಬಗ್ಗೆ ಕಲ್ಹಣನ ರಾಜತರಂಗಿಣಿಯಲ್ಲಿ ಉಲ್ಲೇಖವಿದೆ. ಗಾಂಧಾರ ರಾಜ್ಯ ಇವನ ಅಧೀನದಲ್ಲಿತ್ತೆಂದು ಹ್ಯುಎನ್ ತ್ಸಾಂಗ್ ಹೇಳಿದ್ದಾನೆ. ಪುರುಷಪುರ (ಪೆಷಾವರ್) ಇದರ ರಾಜಧಾನಿಯಾಗಿತ್ತು. ಟ್ಸಂಗ್‌ಲಿಂಗ್ ಪರ್ವತಗಳಿಗೆ ಪೂರ್ವದ ಪ್ರದೇಶವನ್ನೂ ಈತ ಗೆದ್ದಿದ್ದನೆಂದು ಗೊತ್ತಾಗುತ್ತದೆ.

ಮುಪ್ಪು ಸಂಭವಿಸಿದಾಗಲೂ ಕನಿಷ್ಕನಿಗೆ ರಾಜ್ಯ ಗೆಲ್ಲುವ ಆಸೆ ಹೋಗಿರಲಿಲ್ಲವೆಂದು ಕಾಣುತ್ತದೆ. ಮಧ್ಯ ಏಷ್ಯದಲ್ಲಿದ್ದ ಚೀನೀಯರ ವಿರುದ್ಧ ಈತನೊಂದು ವಿಫಲ ದಂಡಯಾತ್ರೆ ನಡೆಸಿದ. ಮೂರು ರಾಜ್ಯಗಳನ್ನು ಗೆದ್ದರೂ ಉತ್ತರದ ನೆಲ ಮಾತ್ರ ತನಗೆ ದಕ್ಕಲಿಲ್ಲವೆಂದು ಈತ ಕೊರಗುತ್ತಲೇ ಪ್ರಾಣ ಬಿಟ್ಟನಂತೆ. ಚೀನೀ ದಂಡನಾಯಕ ಪಾನ್-ಚೋ ಆಗ ಅನೇಕ ಪ್ರದೇಶಗಳನ್ನು ಜಯಿಸಿ ಕ್ಯಾಸ್ಪಿಯನ್ ಸಮುದ್ರದ ವರೆಗೂ ಚೀನೀ ಪ್ರಭಾವ ವಿಸ್ತರಿಸಿದ್ದ. ಚೀನೀಯರ ವಿಜಯದಿಂದ ಕನಿಷ್ಕನಿಗೂ ಹುರುಪು ತುಂಬಿ, ತಾನೂ ಚೀನೀ ಚಕ್ರವರ್ತಿಗೆ ಸಮನೆಂಬುದನ್ನು ಸ್ಥಾಪಿಸುವ ಉದ್ದೇಶದಿಂದ ಆತ ಚೀನೀ ಚಕ್ರವರ್ತಿಕುಮಾರಿಯ ಕೈಬೇಡಿದ. ಪಾನ್-ಚೋ ಇದಕ್ಕೆ ಒಪ್ಪಲಿಲ್ಲ, ಇದು ತನ್ನ ಚಕ್ರವರ್ತಿಗೆ ಮಾಡಿದ ಅಪಮಾನವೆಂಬುದು ಅವನ ಭಾವನೆಯಾಗಿತ್ತು. ಕನಿಷ್ಕನಿಗೆ ಕೋಪ ಬಂತು. 70,000 ಮಂದಿ ಅಶ್ವಸವಾರರ ಸೈನ್ಯವನ್ನು ಯುದ್ಧಕ್ಕೆ ಕಳಿಸಿದ. ಈ ಸೈನ್ಯ ಹಿಮಾಲಯ ಪರ್ವತಗಳನ್ನು ದಾಟಿ ಚೀನೀ ನೆಲವನ್ನು ಮುತ್ತಿಗೆ ಹಾಕುವ ವೇಳೆಗೆ ಜರ್ಝರಿತವಾಗಿತ್ತು. ಕನಿಷ್ಕನ ಕಂಗೆಟ್ಟ ಸೇನೆಯನ್ನು ಪಾನ್-ಚೋ ನಿರ್ದಯೆಯಿಂದ ಒರೆಸಿ ಹಾಕಿದ. ಕನಿಷ್ಕನ ಮಹತ್ವಾಕಾಂಕ್ಷೆ ಹೀಗೆ ಮುರಿದು ಬಿತ್ತು—ಎಂದು ಹೇಳಲಾಗಿದೆ.

ಕನಿಷ್ಕ ಬೌದ್ಧನಾಗಿದ್ದನೆಂಬುದಕ್ಕೆ ಅನೇಕ ಶಾಸನಗಳ ಮತ್ತು ನಾಣ್ಯಗಳ ಆಧಾರಗಳುಂಟು. ಈತ ಪೆಷಾವರಿನಲ್ಲಿ ಕಟ್ಟಿಸಿದ ಪ್ರಸಿದ್ಧ ವಿಹಾರದ ಬಗ್ಗೆ ಹಬ್ಬಿದ್ದ ದಂತಕಥೆಗಳನ್ನು ಹ್ಯುಎನ್ ತ್ಸಾಂಗನೂ ಆಲ್ಬೆರೂನಿಯೂ ಉಲ್ಲೇಖಿಸಿದ್ದಾರೆ. ಇದು ಬೌದ್ಧ ಸಂಸ್ಕೃತಿಯ ಕೇಂದ್ರವಾಗಿತ್ತು. ಪಾರ್ಶ್ವ ಮತ್ತು ಪಾರ್ಶ್ವಿಕರೆಂಬವರ ಸಲಹೆಯ ಮೇರೆಗೆ ಈತ ಒಂದು ಬೌದ್ಧ ಧರ್ಮಸಭೆಯನ್ನು ಕೂಡಿಸಿದನಂತೆ. ಇದು ಕಾಶ್ಮೀರದಲ್ಲಿ ಸೇರಿತ್ತೆಂಬುದು ಒಂದು ಮತವಾದರೆ, ಗಾಂಧಾರ ಅಥವಾ ಜಲಂಧರದಲ್ಲಿ ನಡೆಯಿತೆಂಬುದು ಇನ್ನೊಂದು ಮತ. ಕುಂಡಲವನವಿಹಾರದಲ್ಲಿ ಸೇರಿದ್ದ ಈ ಸಭೆಯ ಅಧ್ಯಕ್ಷನಾಗಿದ್ದವನು ವಸುಮಿತ್ರ. ಪ್ರಸಿದ್ಧ ಸಂಸ್ಕೃತ ಕವಿ ಅಶ್ವಘೋಷ ಇದರ ಉಪಾಧ್ಯಕ್ಷ. ಈತನನ್ನು ಕನಿಷ್ಕನೇ ಪಾಟಲಿಪುತ್ರದಿಂದ ಹಾರಿಸಿಕೊಂಡು ಬಂದನಂತೆ. ಬೌದ್ಧ ಧರ್ಮ ಕುರಿತ ಅನೇಕ ಧರ್ಮಸೂತ್ರಗಳು ಅಲ್ಲಿ ರಚಿತವಾದುವು. ಆ ಸಭೆಯಲ್ಲಿ ಪ್ರಮುಖವಾಗಿ ಭಾಗವಹಿಸಿದ್ದವರು ಹೀನಯಾನ ಪಂಥದವರು. ಆದರೆ ಆ ವೇಳೆಗೆ ಮಹಾಯಾನ ಬಹಳ ಮಟ್ಟಿಗೆ ಅಭಿವೃದ್ಧಿ ಹೊಂದಿತ್ತು. ಅಶ್ವಘೋಷ, ವಸುಮಿತ್ರ ಮುಂತಾದವರೆಲ್ಲ ಮಹಾಯಾನ ಪಂಥದವರು. ಇವರೆಲ್ಲ ರಾಜಮನ್ನಣೆ ದೊರಕಿಸಿಕೊಂಡಿದ್ದವರು.

ಕನಿಷ್ಕನ ಆಳ್ವಿಕೆಯ ಕಾಲದಲ್ಲಿ ಅನೇಕ ಕವಿಗಳಿಗೂ ವಿದ್ವಾಂಸರಿಗೂ ಪ್ರೋತ್ಸಾಹ ದೊರಕಿತೆಂಬುದಂತೂ ನಿಜ. ಮೇಲೆ ಹೇಳಿದ ಬೌದ್ಧ ಕವಿಗಳೂ ವಿದ್ವಾಂಸರೂ ಅಲ್ಲದೆ ಸಂಘರ್ಷಕನೆಂಬ ಪಂಡಿತನೂ ಕನಿಷ್ಕನ ಆಸ್ಥಾನದಲ್ಲಿದ್ದ. ಮಹಾಯಾನ ಬೌದ್ಧಪಂಥದ ಶ್ರೇಷ್ಠ ಪ್ರತಿಪಾದಕನಾದ ನಾಗಾರ್ಜುನ, ಸುಪ್ರಸಿದ್ಧ ಆಯುರ್ವೇದಜ್ಞನಾದ ಚರಕ—ಇವರೂ ಬಹುಶಃ ಕನಿಷ್ಕನ ಆಸ್ಥಾನದಲ್ಲಿದ್ದರು. ಮಾಠರನೆಂಬವನು ಕನಿಷ್ಕನ ಮಂತ್ರಿ. ಇವನೊಬ್ಬ ಮಹಾ ರಾಜನೀತಿಜ್ಞ. ಗ್ರೀಕ್ ವಾಸ್ತುಶಿಲ್ಪಿ ಆಜೆಸಿಲೇಯಸ್ ಕೂಡ ಇಲ್ಲಿದ್ದನೆನ್ನಲಾಗಿದೆ. ಅಂತೂ ಇವರೆಲ್ಲ ಈ ಕನಿಷ್ಕನ ಕಾಲದಲ್ಲೇ ಇದ್ದರೇ ಅಥವಾ ಇದೇ ಹೆಸರಿನ ಇತರರ ಕಾಲದಲ್ಲಿ ಇದ್ದರೇ ಎಂಬುದು ಸದ್ಯಕ್ಕೆ ಬಿಡಿಸಲಾರದ ಒಗಟೆಯಾಗಿದೆ.

ಕನಿಷ್ಕ ಬೌದ್ಧಧರ್ಮೀಯನಾಗಿದ್ದರೂ ಇವನ ನಾಣ್ಯಗಳ ಹಿಂಬದಿಯಲ್ಲಿ ಗ್ರೀಕ್, ಸುಮೆರಿಯನ್, ಎಲಮೈಟ್, ಪರ್ಷಿಯನ್ ಮತ್ತು ಭಾರತೀಯ ದೇವರುಗಳ ಚಿತ್ರಗಳಿವೆ. ಶಿವ, ಶಾಕ್ಯಮುನಿ, ಬುದ್ಧ, ವಾಯು, ಅಗ್ನಿ, ಚಂದ್ರ, ಸೂರ್ಯ, ಮಿತ್ರ—ಮುಂತಾದವರ ಚಿತ್ರಗಳು ಕೆಲವು ಉದಾಹರಣೆಗಳು. ನಾನಾ ಧರ್ಮಗಳ ದೇವತೆಗಳ ಚಿತ್ರಗಳು ಕನಿಷ್ಕನ ಉದಾರದೃಷ್ಟಿಯನ್ನೂ ಈತನ ರಾಜ್ಯದಲ್ಲಿ ನಾನಾ ಧರ್ಮಗಳು ಸಹಬಾಳ್ವೆ ನಡೆಸುತ್ತಿದ್ದುವೆಂಬುದನ್ನೂ ತೋರಿಸುತ್ತವೆಯೆನ್ನಲಾಗಿದೆ. ಅದುವರೆಗೂ ಚಲಾವಣೆಗೆ ಕೊಡಲಾಗುತ್ತಿದ್ದ ನಾಣ್ಯಗಳಲ್ಲಿದ್ದಂತೆ ಇವುಗಳ ಹಿಂಬದಿಯಲ್ಲಿ ಖರೋಷ್ಠಿ ಲಿಪಿಯಿಲ್ಲ.

ಕನಿಷ್ಕನಿಗೆ ವಾಸ್ತುಶಿಲ್ಪ ಮತ್ತು ಇತರ ಕಲೆಗಳಲ್ಲೂ ಆಸಕ್ತಿಯಿತ್ತು. ಪೆಷಾವರಿನ ಬುದ್ಧನ ಸ್ಮಾರಕದ ಮೇಲೆ 400 ಅಡಿ ಎತ್ತರದ ಗೋಪುರವನ್ನು ಈತ ಕಟ್ಟಿಸಿದ. ತಕ್ಷಶಿಲೆಯನ್ನು ವಿಸ್ತರಿಸಿದ. ಕಾಶ್ಮೀರದಲ್ಲಿ ತನ್ನ ಹೆಸರಿನಲ್ಲೊಂದು ನಗರ ನಿರ್ಮಿಸಿದ. ಮಥುರಾದಲ್ಲಿ ಅನೇಕ ಸುಂದರ ಭವನಗಳನ್ನು ಇವನೇ ಕಟ್ಟಿಸಿದನೆಂದು ಹೇಳಲಾಗಿದೆ. ಗಾಂಧಾರ ಶೈಲಿಯ ಪ್ರವರ್ತಕನೀತನೇ ಆಗಿರಬಹುದು. ಸಾರನಾಥ ಮಥುರಾಗಳಲ್ಲಿಯ ಇತರ ಶೈಲಿಗಳೂ ಇವನ ಪ್ರೋತ್ಸಾಹದಿಂದ ವಿಕಾಸ ಹೊಂದಿದುವು. ಕನಿಷ್ಕನದು ಹೊರನಾಡಿನಿಂದ ಬಂದವರ ವಂಶವಾದರೂ ಭಾರತದ ನಾನಾ ಭಾಗಗಳ ಮೇಲೆ ಇವನ ಪ್ರಭಾವ ಅಗಾಧವಾದದ್ದು. ಆದ್ದರಿಂದಲೇ ಈತ ಪ್ರಾಚೀನ ಭಾರತದ ಶ್ರೇಷ್ಠ ದೊರೆಗಳಲ್ಲೊಬ್ಬನೆಂದು ಪ್ರಸಿದ್ಧನಾಗಿದ್ದಾನೆ.

(ಆರ್.ಆರ್.ಎ.)

**ಕನಿಷ್ಕ II :** 119. ಕುಷಾಣ ವಂಶದ ಪ್ರಸಿದ್ಧದೊರೆ. ಒಂದನೆಯ ಕನಿಷ್ಕನ ಅನಂತರ ತನ್ನ ತಮ್ಮನಾದ ಹುವಿಷ್ಕನೊಡನೆ ರಾಜ್ಯವಾಳಿದ ವಾಸಿಷ್ಕನ ಮಗ. ಇವನೂ ಇವನ ತಂದೆಯಂತೆ ಚಿಕ್ಕಪ್ಪನಾದ ಹುವಿಷ್ಕನೊಡನೆ ದೀರ್ಘಕಾಲ ಸಹರಾಜ್ಯಭಾರ ಮಾಡಿ ಅನಂತರ ಇವನೊಬ್ಬನೇ ರಾಜ್ಯವಾಳಿದ. ಅದನ್ನು ಹುವಿಷ್ಕನ ಆಡಳಿತದ ಕಾಲವೆಂದೇ ಜನರು ಪರಿಗಣಿಸುತ್ತಿದ್ದುದರಿಂದ ಇವನ ಆಳ್ವಿಕೆಯ ಕಾಲ ಬಹಳ ಕಡಿಮೆಯೆಂಬುದಾಗಿ ದಾಖಲೆಗಳಿಂದ ಗೊತ್ತಾಗುತ್ತದೆ. ಈತನ ಬಗ್ಗೆ ಹೆಚ್ಚಿನ ವಿವರಗಳು ಗೊತ್ತಾಗಿಲ್ಲ. ಕನಿಷ್ಕ ಶಕೆಯ 40ನೆಯ ವರ್ಷದ ಅರಾ ಶಾಸನದಲ್ಲಿ ಈತನನ್ನು ಹೆಸರಿಸಲಾಗಿದೆ. ತನ್ನ ಕಾಲದ ರೋಮನ್ ಚಕ್ರವರ್ತಿಗಳ ಮಾದರಿಯಲ್ಲಿ ಈತ ಕೈಸರ್ (ಸೀಸರ್) ಎಂಬ ಬಿರುದು ಧರಿಸಿದ್ದ. *

**ಕನಿಷ್ಠ ಎಣಿಕೆ:** ಮಾಪಕಯಂತ್ರಗಳಿಗೆ ಜೋಡಿಸಿರುವ ಅಳತೆಪಟ್ಟಿಗಳ ಮೇಲಿನ ಸಮಾಂತರ ಗೆರೆಗಳ ನಡುವಿನ ಅಂತರ (ಲೀಸ್ಟ್‌ಕೌಂಟ್). ಇದು ಕಡಿಮೆಯಾಗಿದ್ದಷ್ಟೂ ಅಳತೆಯ ನಿಖರತೆ ಹೆಚ್ಚು. ಮುಖ್ಯ ಅಳತೆಪಟ್ಟಿಯ (ಮೇನ್ ಸ್ಕೇಲ್) ಭಾಗಗಳನ್ನು ಹೆಚ್ಚುವರಿಸಿ ಅವರೊಂದಿಗೆ ಭಾಗಮಾಡಿರುವ ಮತ್ತೊಂದು ಚಲಮಾಪಕ ಪಟ್ಟಿಯನ್ನು (ವರ್ನಿಯರ್) ಜೋಡಿಸಿ ಓದುವುದರ ಮೂಲಕ ಕನಿಷ್ಠ ಎಣಿಕೆಯನ್ನು ಇನ್ನಷ್ಟು ಹೆಚ್ಚು ಸೂಕ್ಷ್ಮಗೊಳಿಸಬಹುದು. ಈ ಸೂಕ್ಷ್ಮತೆ ಚಲಮಾಪಕ ಪಟ್ಟಿಯ ಕನಿಷ್ಠ ಎಣಿಕೆಯನ್ನು ಅವಲಂಬಿಸಿದೆ.




(ಕೆ.ಎಸ್.ಕೆ.)

ಚಿತ್ರದಲ್ಲಿ AB ಮುಖ್ಯ ಅಳತೆಪಟ್ಟಿಯ ಒಂದು ಭಾಗ. CD ಚಲಮಾಪಕ ಪಟ್ಟಿ. OC ಒಂದು ವಸ್ತು. OCಯ ಉದ್ದವನ್ನು ದಶಕಸ್ಥಾನದಷ್ಟು ನಿಖರವಾಗಿ ಅಳೆಯಲು CDಯ ಉದ್ದವನ್ನು ಮುಖ್ಯ ಅಳತೆಪಟ್ಟಿಯ 9 ಅಂಶಗಳಿಗೆ ಸಮನಾಗಿರುವಂತೆ ಮಾಡಿ ಅದನ್ನು ಮತ್ತೆ 10 ಸಮ ಅಂಶಗಳನ್ನಾಗಿ ವಿಭಾಗಿಸಿದೆ. ಚಲಮಾಪಕದ ಒಂದು ಅಂಶ ಮುಖ್ಯ ಅಳತೆಪಟ್ಟಿಯ ಒಂದು ಅಂಶದ 9/10ಕ್ಕೆ ಸಮ. ಆದ್ದರಿಂದ ಚಲಮಾಪಕದ ಒಂದು ಅಂಶಕ್ಕೂ ಮುಖ್ಯ ಅಳತೆ ಪಟ್ಟಿಯ ಒಂದು ಅಂಶಕ್ಕೂ ಇರುವ ವ್ಯತ್ಯಾಸ ಮುಖ್ಯ ಅಳತೆಪಟ್ಟಿಯ ಅಂಶವೊಂದರ 1/10ಕ್ಕೆ ಸಮನಿರುತ್ತದೆ. ಈ ವ್ಯತ್ಯಾಸವೇ ಚಲಮಾಪಕದ ಕನಿಷ್ಠ ಎಣಿಕೆ.

ಚಲಮಾಪಕದ 3ನೆಯ ಗೆರೆ ಮುಖ್ಯ ಅಳತೆಪಟ್ಟಿಯ 8ನೆಯ ಗೆರೆಯ ಮೇಲಿ ಇದೆ. ಮುಖ್ಯ ಅಳತೆಪಟ್ಟಿಯ 5ನೆಯ ಗೆರೆ ಮತ್ತು ಚಲಮಾಪಕದ ಸೊನ್ನೆಗೂ ಇರುವ ಅಂತರ ಮುಖ್ಯ ಅಳತೆಪಟ್ಟಿಯ ಅಂಶವೊಂದರ 3/10ರಷ್ಟಿದೆ. ಆದ್ದರಿಂದ OC ಯ ಸರಿಯಾದ ಉದ್ದ 5 ಮುಖ್ಯ ಅಳತೆಪಟ್ಟಿಯ ಅಂಶಗಳು + ಮುಖ್ಯ ಅಳತೆಪಟ್ಟಿಯ ಅಂಶವೊಂದರ 3/10ರಷ್ಟು. ಅಂದರೆ 5.3 ಮುಖ್ಯ ಅಳತೆಪಟ್ಟಿಯ ಅಂಶದಷ್ಟು.

*

**ಕನಿಷ್ಠ-ಗರಿಷ್ಠ ತತ್ತ್ವ:** ಸಂಖ್ಯಾಶಾಸ್ತ್ರದಲ್ಲಿ ಬರುವ ಒಂದು ಪರಿಕಲ್ಪನೆ; ಒಂದು ಉದ್ದೇಶಸಿದ್ಧಿಗೋಸ್ಕರ ದಾರಿಗಳನ್ನು ಆಯುವಾಗ ಗರಿಷ್ಠನಷ್ಟವನ್ನು ಕನಿಷ್ಠಗೊಳಿಸಿ ತನ್ಮೂಲಕ ಕನಿಷ್ಠಲಾಭವನ್ನು ಗರಿಷ್ಠಗೊಳಿಸಲು ಅನುಸರಿಸುವ ತತ್ತ್ವ (ಮಿನಿಮ್ಯಾಕ್ಸ್ ಪ್ರಿನ್ಸಿಪಲ್). ದೈನಂದಿನ ಜೀವನದಲ್ಲಿ ನಾವು ಅನೇಕ ನಿರ್ಧಾರಗಳನ್ನು ಕೈಗೊಳ್ಳುತ್ತೇವೆ. ಭವಿಷ್ಯದ ಮೇಲೆ ನಮಗೆ ಹತೋಟಿಯಿರುವುದಿಲ್ಲವಾದ ಕಾರಣ ಇವುಗಳಲ್ಲಿ ಕೆಲವು ಯೋಗ್ಯವಾಗಿಯೂ ಕೆಲವು ತಪ್ಪಾಗಿಯೂ ಪರಿಣಮಿಸಬಹುದು. ಹೀಗೆ ಯಾವುದೇ ಒಂದು ನಿರ್ಧಾರವನ್ನು ನಾವು ಕೈಗೊಂಡರೂ ಭವಿಷ್ಯ ಅನುಕೂಲ ಅಥವಾ ಪ್ರತಿಕೂಲವಾದಂತೆ ಲಾಭ ಅಥವಾ ನಷ್ಟ ಉಂಟಾಗಬಹುದು.

ಒಂದು ಸಂಸ್ಥೆಯ ಆಡಳಿತಾಧಿಕಾರಿ ಅಥವಾ ಮಾಲೀಕ, ಎಷ್ಟು ದೊಡ್ಡ ಗಾತ್ರದ ಕಾರ್ಖಾನೆಯನ್ನು ಸ್ಥಾಪಿಸಬೇಕೆಂಬುದರ ಬಗ್ಗೆ ನಿರ್ಧಾರ ಕೈಗೊಳ್ಳಬೇಕಾಗಿದೆ ಎಂದು ಭಾವಿಸೋಣ. ಅತಿ ದೊಡ್ಡದನ್ನು ಸ್ಥಾಪಿಸಿ ಸಾಕಷ್ಟು ಬೇಡಿಕೆ ಬರದಿದ್ದಲ್ಲಿ ನಷ್ಟವುಂಟಾಗಬಹುದು; ಅತಿ ಸಣ್ಣದನ್ನು ಸ್ಥಾಪಿಸಿದಲ್ಲಿ ಲಾಭದ ಪ್ರಮಾಣ ಕಡಿಮೆಯಾಗಿ ನಷ್ಟ ಸಂಭವಿಸುವ ಸಾಧ್ಯತೆ ಉಂಟು. ಈ ಬೇಡಿಕೆಯ ಅಂದಾಜು ಒಂದು ಸಂಭವಚರ (ರ‍್ಯಾಂಡಂ ವೇರಿಯೆಬಲ್). ಇದರ ವಿತರಣೆ $\theta$ ಎಂಬ ಪ್ರಾಚಲವನ್ನು (ಪ್ಯಾರಾಮೀಟರ್) ಅವಲಂಬಿಸಿದೆ ಎಂದು ತಿಳಿಯೋಣ. $\theta$ದ ಬೆಲೆ ನಮಗೆ ತಿಳಿದಿದ್ದಲ್ಲಿ, ಅಂದಾಜಿನ ವಿತರಣೆ ತಿಳಿದಿದ್ದು, ಕಾರ್ಖಾನೆಯ ಗಾತ್ರದ ಬಗ್ಗೆ ತಳೆದ ನಿರ್ಧಾರದಿಂದಾಗುವ ಸರಾಸರಿ ನಷ್ಟವನ್ನು ನಾವು ಗಣಿಸಬಹುದು. ಈ ಸರಾಸರಿ ನಷ್ಟ ಕಡಿಮೆಯಾಗುವಂತೆ ಕಾರ್ಖಾನೆಯ ಗಾತ್ರವನ್ನು ನಿರ್ಧರಿಸಬಹುದು. ಆದರೆ $\theta$ದ ಬೆಲೆ ನಮಗೆ ತಿಳಿಯದಿದ್ದ ಕಾರಣ ನಷ್ಟದ ಬೆಲೆಯೂ ತಿಳಿದಿರುವುದಿಲ್ಲ. $\theta$ದ ಬೆಲೆ ವ್ಯತ್ಯಾಸವಾದಂತೆ ನಷ್ಟವೂ ವ್ಯತ್ಯಾಸವಾಗುವುದು.

$\delta$ ಎಂಬುದು $\theta$ದ ಅಂದಾಜಿಕವಾಗಿರಲಿ. $\delta(x)=d$ ಎಂಬುದು ಅದರ ಬೆಲೆಯಾಗಿರಲಿ. ಇದು ನಾವು ಸಂಗ್ರಹಿಸಿದ ಮಾಹಿತಿಯ $(x)$ ಮೇಲೆ ಅವಲಂಬಿಸಿದೆ. ನಿಜವಾದ ಬೆಲೆ $\theta$ ಇರುವಾಗ $d$ ಯನ್ನು ಅದರ ಬೆಲೆ ಎಂದು ಗ್ರಹಿಸುವುದರಿಂದಾಗುವ ನಷ್ಟವನ್ನು $L\ (\theta,d)$ ಎಂದು ಕರೆಯೋಣ. ಕೆಲವೊಂದು ಸಲ $L(\theta,d)=K\ (\theta-d)^2$ ಎಂಬುದಾಗಿ ಭಾವಿಸುತ್ತಾರೆ. ಇದರ ಹೆಸರು ವ್ಯತ್ಯಾಸವರ್ಗನಷ್ಟ ಉತ್ಪನ್ನ (ಸ್ಕ್ವೇರ್ಡ್ ಎರ‍್ರರ್ ಲಾಸ್ ಫಂಕ್ಷನ್). ನಾವು ಸಂಗ್ರಹಿಸಿದ ಮಾಹಿತಿ ಒಂದು ಸಂಭವಚರ. ಇದರ ವಿತರಣೆ $\theta$ವನ್ನು ಅವಲಂಬಿಸಿದೆ. ಈ ವಿತರಣೆಯ ಪ್ರಕಾರ ನಷ್ಟದ ಸರಾಸರಿಯನ್ನು ಎಣಿಸಿ ನಾವು ಅಪಾಯ ಉತ್ಪನ್ನವನ್ನು (ರಿಸ್ಕ್ ಫಂಕ್ಷನ್) ಪಡೆಯುತ್ತೇವೆ—

$$R(\theta,\delta) = E\ L\ (\theta,d)$$

ಇದು $\theta$ ಮತ್ತು $\delta$ ದ ಮೇಲೆ ಅವಲಂಬಿಸಿದೆ. ಈ $R\ (\theta,\delta)$ದ ಮೇಲಿಂದ ವಿವಿಧ ಅಂದಾಜಿಕ $(\delta)$ ಗಳ ತಾರತಮ್ಯವನ್ನು ನಿರ್ಧರಿಸುತ್ತೇವೆ.

ಎರಡು ನಿರ್ಧಾರಗಳಲ್ಲಿ $(\delta_1,\delta_2)$ ಒಂದರಿಂದಾಗುವ ನಷ್ಟ ಮತ್ತೊಂದರಿಂದ ಆಗುವ ನಷ್ಟಕ್ಕಿಂತ ಯಾವಾಗಲೂ ಕಡಿಮೆಯಾಗಿದ್ದರೆ ಮೊದಲನೆಯ ನಿರ್ಧಾರ ಎರಡನೆಯದಕ್ಕಿಂತ ಉತ್ತಮವೆಂದು ಹೇಳಬಹುದು. ಆದರೆ $\theta$ದ ಕೆಲವೊಂದು ಬೆಲೆಗಳಿಗೆ $\delta_1$ ಉತ್ತಮವಾಗಿಯೂ ಬೇರೆ ಕೆಲವು ಬೆಲೆಗಳಿಗೆ $\delta_2$ ಉತ್ತಮವಾಗಿಯೂ ಇದ್ದರೆ ನಮಗೆ ಒಂದು ಇನ್ನೊಂದರಿಂದ ಉತ್ತಮ ಎಂದು ಸಾರ್ವತ್ರಿಕವಾಗಿ ಹೇಳಲು ಸಾಧ್ಯವಿಲ್ಲ. ಹಾಗೆ ಹೇಳಬೇಕಾದರೆ ನಾವು ಯಾವುದಾದರೂ ಒಂದು ರೀತಿಯ ತತ್ತ್ವವನ್ನು ಅನುಸರಿಸಬೇಕಾಗುವುದು. ಉದಾಹರಣೆಗೆ, $R\ (\theta,\delta_1)$ರ ಅತ್ಯಂತ ಗರಿಷ್ಠ ಬೆಲೆಯನ್ನು $\delta_1$ ನಿರ್ಧಾರದ ನಷ್ಟದ ಮಾಪನವೆಂದು ತಿಳಿಯಬಹುದು. ಈ ಧೋರಣೆಯ ಪ್ರಕಾರ

$$\underset{\theta}{\text{ಗರಿಷ್ಠ}}\ R\ (\theta,\delta_1) \leqslant \underset{\theta}{\text{ಗರಿಷ್ಠ}}\ R\ (\theta,\delta_2)$$

ಆಗಿದ್ದರೆ $\delta_2$ಕ್ಕಿಂತ $\delta_1$ ಉತ್ತಮವೆನಿಸುವುದು. ಇದೇ ಕನಿಷ್ಠ-ಗರಿಷ್ಠ ತತ್ತ್ವ: ಗರಿಷ್ಠನಷ್ಟವನ್ನು ಕನಿಷ್ಠಗೊಳಿಸುವ ನಿರ್ಧಾರ. ಈ ಸಂದರ್ಭದಲ್ಲಿ ನಷ್ಟದ ಬದಲು ನಾವು ಲಾಭವನ್ನು ಗಣನೆಗೆ ತೆಗೆದುಕೊಳ್ಳಬಹುದು. ಋಣನಷ್ಟವೇ ಲಾಭವಾದುದರಿಂದ ನಷ್ಟ ಗರಿಷ್ಠವಾಗುವಾಗ ಲಾಭ ಕನಿಷ್ಠವಾಗುವುದು. ಹೀಗೆ ಗರಿಷ್ಠನಷ್ಟವನ್ನು ಕನಿಷ್ಠಗೊಳಿಸುವ ನಿರ್ಧಾರ ಕನಿಷ್ಠಲಾಭವನ್ನು ಗರಿಷ್ಠಗೊಳಿಸುವುದು.

$\theta$ದ ಬೆಲೆಯ ಬಗ್ಗೆ ನಮಗೆ ಏನೇನೂ ತಿಳಿಯದಿರುವಾಗ ಹೀಗೆ ಕನಿಷ್ಠ-ಗರಿಷ್ಠ ಧೋರಣೆಯನ್ನು ಅನುಸರಿಸುವುದರಲ್ಲಿ ತಪ್ಪೇನೂ ಆಗಲಾರದು. ಆದರೆ $\theta$ದ ಬೆಲೆಯ ಬಗ್ಗೆ ನಮಗೆ ಅಲ್ಪಸ್ವಲ್ಪ ಸಾಂಭವಿಕ ಪರಿಜ್ಞಾನವಿದ್ದಲ್ಲಿ ಬೇಯಸನ ತತ್ತ್ವವನ್ನು ಅನುಸರಿಸಬಹುದು. $\theta$ ಒಂದು ಸಂಭವಚರವೆಂದು ಎಣಿಸೋಣ—ಅದರ ವಿತರಣೆ $\xi(\theta)$ ಆಗಿರಲಿ. ಈ $\xi(\theta)$ ನಮಗೆ $\theta$ದ ವಿವಿಧ ಬೆಲೆಗಳ ಮೇಲಿರುವ ವಿಶ್ವಾಸದ ಪ್ರತೀಕವಾಗಿ, ಕರ್ತೃ ಸಂಬಂಧಿಕವಾಗಿರುವುದು (ಸಬ್ಜೆಕ್ಟಿವ್). $\xi(\theta)$ದ ಆಧಾರದ ಮೇಲಿಂದ $R(\theta,\delta)$ದ ಸರಾಸರಿಯನ್ನು ಎಣಿಸಿ $R(\xi,\delta)$ವನ್ನು ಪಡೆಯುತ್ತವೆ.

$$R\ (\xi,\delta_1) < R\ (\xi,\delta_2)$$

ಆಗಿದ್ದರೆ, $\delta_2$ ಕ್ಕಿಂತ $\delta_1$ ಉತ್ತಮವೆಂದು ಹೇಳುತ್ತೇವೆ. $R\ (\xi,\delta)$ವನ್ನು ಕನಿಷ್ಠಗೊಳಿಸುವಂತೆ ನಿರ್ಧಾರ ಕೈಗೊಳ್ಳುವ ತತ್ತ್ವಕ್ಕೆ ಬೇಯಸನ ತತ್ತ್ವ ಎಂದು ಹೆಸರು. ಅಂಥ ನಿರ್ಧಾರದ ಹೆಸರು ಬೇಯಸನ ನಿರ್ಧಾರ.

ಕನಿಷ್ಠ-ಗರಿಷ್ಠ ತತ್ತ್ವ, ಬೇಯಸನ ತತ್ತ್ವ—ಇವೇ ಅಲ್ಲದೆ ಬೇರೆ ತತ್ತ್ವವನ್ನು ಸಹ ರೂಪಿಸಲು ಸಾಧ್ಯವಿದೆ. $\theta$ದ ಎಲ್ಲ ಬೆಲೆಗಳಿಗೂ $R(\theta,\delta)$ವನ್ನು ಕನಿಷ್ಠಗೊಳಿಸುವ ನಿರ್ಧಾರ ಇಲ್ಲದಿದ್ದರೂ, $\theta$ದ ಬೆಲೆ $\theta_\circ$ ಎಂದು ತಿಳಿದಿದ್ದರೆ $R\ (\theta_\circ,\delta)$ವನ್ನು ಕನಿಷ್ಠ ಗೊಳಿಸುವ ನಿರ್ಧಾರ $\delta\ (\theta_\circ)$ ಇದ್ದೇ ಇರುವುದು.

$$R\ (\theta_\circ-\delta)-R\ [\theta_\circ,\ \delta\ (\theta_\circ)]$$

$\theta$ ವ್ಯತ್ಯಾಸವಾದಂತೆ ವ್ಯತ್ಯಾಸವಾಗುವುದು,

ಇದರ ಗರಿಷ್ಠಬೆಲೆ ಕನಿಷ್ಠವಾಗುವಂತೆ $\delta$ ವನ್ನು ಆರಿಸಿದರೆ ಆ $\delta$ವನ್ನು ತೀಕ್ಷ್ಣತಮ (ಮೋಸ್ಟ್ ಸ್ಟ್ರಿಂಜೆಂಟ್) ನಿರ್ಧಾರವೆಂದು ಕರೆಯುವರು. ಕೆಲವು ಸಂದರ್ಭಗಳಲ್ಲಿ ಕನಿಷ್ಠ-ಗರಿಷ್ಠ ನಿರ್ಧಾರ ಸಿಗದಿದ್ದರೂ ತೀಕ್ಷ್ಣತಮ ನಿರ್ಧಾರ ಸಿಗುವುದು.

ಕನಿಷ್ಠ-ಗರಿಷ್ಠ ತತ್ತ್ವವನ್ನು ಇಸ್ಪೀಟು ಮೊದಲಾದ ಆಟಗಳ ವೈಜ್ಞಾನಿಕ ವಿಶ್ಲೇಷಣೆಗಾಗಿ ಮೊತ್ತಮೊದಲು ಉಪಯೋಗಿಸಲಾಯಿತು. A ಮತ್ತು B ಇವರು ಈ ಕೆಳಗಿನ ಆಟವನ್ನು ಆಡುವರೆನ್ನೋಣ. A ಯು $x_1, x_2,\ldots,x_m$ ಗಳಲ್ಲಿ ಯಾವುದಾದರೂ ಒಂದು ಯುಕ್ತಿಯನ್ನು (ಸ್ಟ್ರೇಟಜಿ) ಆರಿಸುವನು. B ಯು $y_1, y_2,\ldots,y_n$ ಗಳಲ್ಲಿ ಯಾವುದಾದರೊಂದು ಯುಕ್ತಿಯನ್ನು ಅದೇ ಸಮಯದಲ್ಲಿ ಆರಿಸುವನು. Aಯು $x_i$ ಯನ್ನು ಮತ್ತು B ಯು $y_j$ ಯನ್ನು ಆರಿಸಿದ್ದರೆ $a_{ij}$ ಮೊಬಲಗನ್ನು Bಯು Aಗೆ ಕೊಡುವನು. $(a_{ij})$ ಮಾತೃಕೆಯನ್ನು (ಮ್ಯಾಟ್ರಿಕ್ಸ್) ಲಾಭಮಾತೃಕೆ ಎಂದು ಕರೆಯುವರು. ಈ ಮಾತೃಕೆಯ $j$ ಸ್ತಂಭ Bಯು $y_j$ ಯುಕ್ತಿಯನ್ನು ಬಳಸುವುದರಿಂದ ಆಗುವ ಪರಿಣಾಮವನ್ನೂ $i$ ಶ್ರೇಣಿ Aಯು $x_i$ ಯುಕ್ತಿಯನ್ನು ಬಳಸುವುದರಿಂದ ಆಗುವ ಪರಿಣಾಮವನ್ನೂ ವಿವರಿಸುತ್ತವೆ. $j$ ಸ್ತಂಭದ ಗರಿಷ್ಠ ಸಂಖ್ಯೆ Bಯು $y_j$ ಯನ್ನು ಉಪಯೋಗಿಸುವುದರಿಂದ ಆಗುವ ಗರಿಷ್ಠನಷ್ಟವನ್ನು ನಮೂದಿಸುವುದು. ಈ ಗರಿಷ್ಠ ನಷ್ಟವನ್ನು ಕನಿಷ್ಠಗೊಳಿಸುವಂತೆ ಅವನು ತನ್ನ ಯುಕ್ತಿಯನ್ನು ಆರಿಸಬಹುದು. ಇದೇ ಕನಿಷ್ಠ-ಗರಿಷ್ಠ ಧೋರಣೆ. ಈ ಧೋರಣೆಯನ್ನು Aಯೂ ಅನುಸರಿಸಬಹುದು. ಹೀಗೆ ಇಬ್ಬರೂ ಇದೇ ಧೋರಣೆಯನ್ನು ಅನುಸರಿಸಿದರೆ ಮಾತ್ರವಲ್ಲದೆ ಈ ಸಂಗತಿ ಅವರಿಬ್ಬರಿಗೂ ತಿಳಿದಿದ್ದರೆ, ಅದರಿಂದ ಆಟಗಾರರಿಗೆ ಹೆಚ್ಚು ನಷ್ಟ ತಗಲುವ ಸಂಭವವಿದೆಯೇ ಎಂಬಿತ್ಯಾದಿಗಳನ್ನು ಕ್ರೀಡಾ ಸಿದ್ಧಾಂತದಲ್ಲಿ (ಗೇಮ್ಸ್ ಥಿಯೊರಿ) ವಿವೇಚಿಸಿರುವರು. (ನೋಡಿ—ಕ್ರೀಡಾಸಿದ್ಧಾಂತ).

ಭವಿಷ್ಯದಲ್ಲಿ ತನಗೆ ಅತ್ಯಂತ ಪ್ರತಿಕೂಲವಾತಾವರಣ ಬಂದೊದಗಬಹುದೆಂದು ತಿಳಿದು ಅಥವಾ ಎದುರಾಳಿ ತನ್ನ ಮರ್ಮಸ್ಥಾನಕ್ಕೇನೇ ಪೆಟ್ಟುಕೊಡುವನೆಂದು ಕಲ್ಪಿಸಿ, ತನಗಾಗುವ ಅತ್ಯಂತ ಹೆಚ್ಚಿನ ನಷ್ಟವನ್ನು ಮಾತ್ರ ಮನಸ್ಸಿನಲ್ಲಿಟ್ಟುಕೊಂಡು ಕನಿಷ್ಠ-ಗರಿಷ್ಠ ತತ್ತ್ವವನ್ನು ರೂಪಿಸಿದುದಾಗಿದೆ. ಆದ್ದರಿಂದ ಈ ತತ್ತ್ವವನ್ನು ನಿತ್ಯ ಜೀವನದಲ್ಲಿ ಯಾವಾಗಲೂ ಉಪಯೋಗಿಸುವವರನ್ನು ನಿರಾಶಾವಾದಿಗಳೆಂದು ಕಡೆಗಣಿಸಲು ಸಾಧ್ಯವಿದೆ. ಆದರೂ ಕನಿಷ್ಠ-ಗರಿಷ್ಠ ನಿರ್ಧಾರಗಳ ಸಮೂಹಕ್ಕೆ ಅನೇಕ ವಿಶೇಷ ಗುಣಗಳಿವೆ. ಎಲ್ಲ ಒಳ್ಳೆಯ ನಿರ್ಧಾರಗಳೂ ಈ ಸಮೂಹದಲ್ಲಿ ಸೇರಿವೆ. ಆದ್ದರಿಂದ ಅತ್ಯುತ್ತಮ ನಿರ್ಧಾರವನ್ನು ಹುಡುಕುವಾಗ ಈ ಸಮೂಹವನ್ನು ಬಿಟ್ಟು ಹೊರಗೆ ಹುಡುಕಬೇಕಾಗಿಲ್ಲ.

ಸಂಖ್ಯಾಶಾಸ್ತ್ರದಲ್ಲಿ ಯೋಗ್ಯ ಅಂದಾಜಿಕವನ್ನು ಕಂಡುಹಿಡಿಯುವುದಕ್ಕೂ ಆಧಾರ ಕಲ್ಪನೆಯನ್ನು ಸಮರ್ಥಿಸುವುದಕ್ಕೂ ಈ ತತ್ತ್ವವನ್ನು ಅನೇಕರು ಅನುಸರಿಸುವರು. ಉದಾಹರಣೆಗೆ ಒಂದು ಯಂತ್ರದಿಂದ ತಯಾರಾಗುವ ವಸ್ತುಗಳಲ್ಲಿ ಶಿಷ್ಟವಲ್ಲದ ವಸ್ತುಗಳ ಪ್ರಮಾಣ $p$ ಆಗಿರಲಿ. $p$ ಯ ಅಂದಾಜಿಕ $p'$ ಆಗಿರಲಿ ಮತ್ತು ನಷ್ಟಫಲ

$k(p-p')^2$ ಆಗಿರಲಿ. $N$ ವಸ್ತುಗಳನ್ನು ಪರಿಶೀಲಿಸಿದಾಗ $x$ ವಸ್ತುಗಳು ಶಿಷ್ಟವಲ್ಲದವುಗಳಾದರೆ, $\theta$ದ ಕನಿಷ್ಠ–ಗರಿಷ್ಠ ಅಂದಾಜಿಕ

$$p^* = \frac{1}{1+\sqrt{N}} \left( \frac{1}{\sqrt{N}} x + \frac{1}{2} \right)$$

ಆಗಿರುವುದೆಂದೂ ಇದು ಏಕೈಕ ಅಂದಾಜಿಕವೆಂದೂ ಕಂಡುಹಿಡಿಯಬಹುದು.

**ಬೇಯುಸನ ತತ್ತ್ವ :** ಈ ಮೊದಲೇ ಹೇಳಿದಂತೆ ಭವಿಷ್ಯದ ಬಗ್ಗೆ ಅಥವಾ $\theta$ದ ಬಗ್ಗೆ ನಮಗೆ ಸ್ವಲ್ಪ ಪರಿಜ್ಞಾನವಿದ್ದಾಗ, ಈ ನಮ್ಮ ಜ್ಞಾನವನ್ನು $\xi(\theta)$ ಎಂಬ ಪೂರ್ವಭಾವಿ ವಿತರಣೆಯ ಮುಖಾಂತರ ವ್ಯಕ್ತಮಾಡಬಹುದು. ಇದನ್ನು ಉಪಯೋಗಿಸಿ $R(\xi,\delta)$ವನ್ನು ಎಣಿಸಿ $R(\xi,\delta)$ ಕನಿಷ್ಠವಾಗುವಂತೆ $\delta$ವನ್ನು ಉಪಯೋಗಿಸಿದರೆ ಆ $\delta$ವನ್ನು ಬೇಯುಸನ ನಿರ್ಧಾರವೆನ್ನುತ್ತಾರೆ. ಇಂಥ ಪೂರ್ವಭಾವೀ ವಿತರಣೆಯಿಲ್ಲದಿರುವಾಗಲೂ ಬೇಯುಸನ ತತ್ತ್ವವನ್ನು ಉಪಯೋಗಿಸುವರು. ಏಕೆಂದರೆ ಬೇಯುಸನ ನಿರ್ಧಾರಗಳ ಸಮೂಹಕ್ಕೂ ಅನೇಕ ವಿಶೇಷ ಗುಣಗಳಿವೆ.

ಬೇಯುಸನ ನಿರ್ಧಾರಗಳಿಗೂ ಕನಿಷ್ಠ–ಗರಿಷ್ಠ ನಿರ್ಧಾರಗಳಿಗೂ ನಿಕಟ ಸಂಬಂಧವಿವೆ. ಎಲ್ಲ $\xi(\theta)$ ಗಳಿಗೂ

$$\underset{\delta}{\text{ಕನಿಷ್ಠ}}\, R(\xi_0, \delta) \geqslant \underset{\delta}{\text{ಕನಿಷ್ಠ}}\, R(\xi, \delta)$$

ಆದರೆ, $\xi_0$ ಯನ್ನು ಅತ್ಯಂತ ಪ್ರತಿಕೂಲ ವಿತರಣೆ ಎಂದು ಕರೆಯುತ್ತಾರೆ. $\theta$ದ ಪೂರ್ವಭಾವಿ ವಿತರಣೆ ಅತ್ಯಂತ ಪ್ರತಿಕೂಲವಿದ್ದಾಗ, ಅದರ ಮೇಲೆ ಹೊಂದಿಕೊಂಡಿರುವ ಬೇಯುಸನ ನಿರ್ಧಾರವೇ ಕನಿಷ್ಠ–ಗರಿಷ್ಠ ನಿರ್ಧಾರ. ಮಾತ್ರವಲ್ಲದೆ ನಷ್ಟಫಲವೂ ನಿರ್ಧಾರಗಳ ಸಮೂಹಗಳೂ ಕೆಲವೊಂದು ನಿರ್ಬಂಧಕ್ಕೊಳಗಾಗಿರುವಾಗ ಎಲ್ಲ ಒಳ್ಳೆಯ ನಿರ್ಧಾರಗಳೂ ಕನಿಷ್ಠ–ಗರಿಷ್ಠ ನಿರ್ಧಾರ ಸಮೂಹಕ್ಕೆ ಸೇರಿರುವುವು. ಹೀಗಾಗಿ ಎಲ್ಲ ಒಳ್ಳೆಯ ನಿರ್ಧಾರಗಳೂ ಬೇಯುಸನ ನಿರ್ಧಾರ ಸಮೂಹಕ್ಕೂ ಸೇರಿರುವುವು. ಕೆಲವೊಂದು ಸಲ ಬೇಯುಸನ ನಿರ್ಧಾರದ ಮುಖಾಂತರ ಕನಿಷ್ಠ–ಗರಿಷ್ಠ ನಿರ್ಧಾರವನ್ನು ಕಂಡುಹಿಡಿಯಲು ಸಾಧ್ಯವಾಗುವುದು.

ಸಂಖ್ಯಾಶಾಸ್ತ್ರದಲ್ಲಿ ಆಧಾರಕಲ್ಪನೆಯ ಪರೀಕ್ಷೆಯ ವಿಧಾನಗಳಲ್ಲಿ ಅನೇಕವು, ಕೆಲವೊಂದು ವಿಶಿಷ್ಟ ನಷ್ಟಫಲಗಳನ್ನು ಉಪಯೋಗಿಸಿ ಬರುವ ಬೇಯುಸನ ನಿರ್ಧಾರಗಳೆಂದು ಸಾಧಿಸಿರುವರು. ಉದಾಹರಣೆಗೆ $H_0$ ಎಂಬ ಆಧಾರಕಲ್ಪನೆ ಸರಿಯೇ ಅಥವಾ $H_1$ ಸರಿಯೇ ಎಂಬುದನ್ನು ಶ್ರೇಣಿಕವಾಗಿ ಪರೀಕ್ಷಿಸಬೇಕೆಂದು ತಿಳಿಯೋಣ. $H_0$ ಸರಿಯಿರುವಾಗ $H_1$ ಸರಿಯೆಂದು ನಿರ್ಧರಿಸುವುದರಿಂದುಂಟಾಗುವ ನಷ್ಟ $\omega_1$ ಆಗಿರಲಿ ಮತ್ತು $H_1$ ಸರಿಯಿರುವಾಗ $H_0$ ಸರಿಯೆಂದು ನಿರ್ಧರಿಸುವ ನಷ್ಟ $\omega_2$ ಆಗಿರಲಿ. ಪ್ರತಿಯೊಂದು ವಸ್ತುವನ್ನೂ ಪರೀಕ್ಷಿಸಲು ತಗಲುವ ಖರ್ಚು $C$ ಆಗಿರಲಿ. ಹೀಗೆ ಇರುವಾಗ $H_0$ಯ ಪೂರ್ವಭಾವೀಸಂಭವ $\xi$ ಮತ್ತು $H_1$ರ ಪೂರ್ವಭಾವೀಸಂಭವ $1-\xi$ ಇದ್ದರೆ, ಅದಕ್ಕೆ ಅನುಗುಣವಾದ ಬೇಯುಸನ ನಿರ್ಧಾರವೆಂದರೆ ವಾಲ್ಡನ ಶ್ರೇಣಿಕಸಂಭವನಿಷ್ಪತ್ತಿಪರೀಕ್ಷಣ (ಸೀಕ್ವೆನ್ಷಿಯಲ್ ಪ್ರಾಬೆಬಿಲಿಟಿ ರೇಷಿಯೋ ಟೆಸ್ಟ್) ಎಂದು ಕಂಡುಹಿಡಿದಿರುವರು.

ಬೇಯುಸನ ನಿರ್ಧಾರ ಬೇಯುಸನ ಸಿದ್ಧಾಂತದ ಮೇಲೆ ಅವಲಂಬಿಸಿದ್ದು, ಅದನ್ನು ಉಪಯೋಗಿಸುವುದು ತಪ್ಪು. ಅದು ಕರ್ತೃಸಂಬಂಧಿತವಾಗಿದೆ ಎಂಬಿತ್ಯಾದಿ ಕಾರಣಗಳಿಂದ ಬೇಯುಸನ ತತ್ತ್ವಕ್ಕೆ ಕೆಲ ಸಮಯ ಮಂಜು ಕವಿದಿತ್ತು. ಆದರೆ ಇತ್ತೀಚೆಗೆ ಸಾವೇಜ್, ವಾಲ್ಡ್ ಮೊದಲಾದವರ ಪರಿಶ್ರಮದಿಂದ ಆ ಮಂಜು ಕರಗುತ್ತ, ಈ ತತ್ತ್ವ ಜನಪ್ರಿಯವಾಗತೊಡಗಿದೆ.

ತೀಕ್ಷ್ಣತಮ ನಿರ್ಧಾರ ಮೇಲೆ ವಿವರಿಸಿದ ತತ್ತ್ವಗಳಂತೆ ವಿಶೇಷ ಗುಣಗಳನ್ನು ಪಡೆದಿಲ್ಲ. ಈ ಧೋರಣೆಗಳಲ್ಲದೆ ಅಚರತ್ವ ತತ್ತ್ವ (ಇನ್‌ವೇರಿಯನ್ಸ್ ಪ್ರಿನ್ಸಿಪಲ್) ನಿಷ್ಪಕ್ಷಪಾತತತ್ತ್ವ (ಪ್ರಿನ್ಸಿಪಲ್ ಆಫ್ ಅನ್‌ಬಯಸ್ಡ್‌ನೆಸ್) ಮುಂತಾದುವುಗಳನ್ನೂ ಸಂಖ್ಯಾಶಾಸ್ತ್ರದಲ್ಲಿ ಬಳಸುವರು. ಒಂದು ಆಧಾರಕಲ್ಪನೆ ಅಥವಾ ನಿರ್ಧಾರದ ಸಮಸ್ಯೆ ಕೆಲವೊಂದು ಮಾರ್ಪಾಡುಗಳಿಂದ ಅಚರವಿದ್ದಾಗ ನಾವು ಬಳಸುವ ನಿರ್ಧಾರಗಳೂ ಇವೇ ಮಾರ್ಪಾಡುಗಳಿಂದ ಅಪಾಯ ಉತ್ಪನ್ನವನ್ನು ಅಚರಗೊಳಿಸುವಂಥವಿರಬೇಕು; ಇದೇ ಅಚರತತ್ತ್ವ. ಈ ವಿಶಿಷ್ಟಗುಣಗಳು ಇರುವ ನಿರ್ಧಾರಗಳಲ್ಲಿ ಅತ್ಯುತ್ತಮವಾದುದನ್ನು ನಮಗೆ ಪಡೆಯಲು ಸಾಧ್ಯವಿರುವುದು. $\theta$ದ ಬೆಲೆ ಯಾವುದೇ ಇರಲಿ, ನಾವು ಸರಿಯಾದ ನಿರ್ಧಾರವನ್ನು ಕೈಗೊಳ್ಳುವುದರಿಂದಾಗುವ ನಷ್ಟ ತಪ್ಪಾದ ನಿರ್ಧಾರದಿಂದ ಉಂಟಾಗುವ ನಷ್ಟಕ್ಕಿಂತ ಕಡಿಮೆ ಇದ್ದರೆ, ಆ ನಿರ್ಧಾರಕ್ಕೆ ನಿಷ್ಪಕ್ಷಪಾತ ನಿರ್ಧಾರ ಎನ್ನುವರು. ನಿಷ್ಪಕ್ಷಪಾತ ನಿರ್ಧಾರಗಳಲ್ಲಿಯೇ ಅತ್ಯುತ್ತಮ ನಿರ್ಧಾರವನ್ನು ಕೈಗೊಂಡರೆ ನಾವು ನಿಷ್ಪಕ್ಷಪಾತ ತತ್ತ್ವವನ್ನು ಅನುಸರಿಸಿದಂತಾಗುವುದು. ಈ ತತ್ತ್ವಗಳಲ್ಲಿ ಎರಡು ಅಥವಾ ಹೆಚ್ಚು ತತ್ತ್ವಗಳನ್ನು ಏಕಕಾಲದಲ್ಲಿ ಬಳಸುವವರೂ ಇರುವರು.

ಒಬ್ಬ ವಿವೇಕಿ ಅಥವಾ ಸುವಿಚಾರಿ ವ್ಯಕ್ತಿ ಯಾವ ತತ್ತ್ವದ ಮೇರೆಗೆ ತನ್ನ ನಿರ್ಧಾರವನ್ನು ಕೈಗೊಳ್ಳುತ್ತಾನೆ ಎಂಬುದರ ಬಗ್ಗೆ ಅರ್ಥಶಾಸ್ತ್ರಜ್ಞರೂ ವಿವೇಚಿಸಿರುವರು. ಅವರು ಅದನ್ನು ಉಪಯುಕ್ತತಾ ಸಿದ್ಧಾಂತ (ಥಿಯೊರಿ ಆಫ್ ಯುಟಿಲಿಟಿ) ಎಂದು ಕರೆದಿದ್ದಾರೆ.

(ಬಿ.ಆರ್.ಬಿ.)

**ಕನಿಷ್ಠತಮ ವರ್ಗತತ್ತ್ವ : ಅನಿಶ್ಚಿತ ಅಳತೆ :** ಅನೇಕ ಪ್ರಯೋಗಗಳಲ್ಲಿ ಉದ್ದ, ತೂಕ, ವೇಗ ಇತ್ಯಾದಿ ಪರಿಮಾಣಗಳನ್ನು ಅಳೆಯಬೇಕಾಗುವುದು. ಅಳತೆಯ ಉಪಕರಣದಿಂದಲೂ ಪ್ರಯೋಗಕಾರನ ಅಥವಾ ವೀಕ್ಷಕನ ದೋಷಗಳಿಂದಲೂ ಅಳತೆಯಲ್ಲಿ ಲೋಪ ಉಂಟಾಗುವುದು. ಒಂದೇ ಪರಿಮಾಣವನ್ನು ಪದೇ ಪದೇ ಅಳೆದಾಗ ದೊರೆವ ಬೆಲೆಗಳು ಇಂಥ ಲೋಪಕ್ಕೊಳಗಾಗಿ ವಾಸ್ತವಿಕ ಬೆಲೆಯಿಂದ ವ್ಯತ್ಯಾಸವಾಗಿರುವುವು. ಇಂಥ ಸಂದರ್ಭದಲ್ಲಿ ವಾಸ್ತವಿಕವಾದ ಬೆಲೆ ಏನೆಂದು ಪರಿಗಣಿಸೋಣ ? ಶತಮಾನಗಳ ಹಿಂದೆಯೇ ಆಕಾಶಕಾಯಗಳ ಸ್ಥಾನವನ್ನು ದೂರದರ್ಶಕ ಮುಂತಾದ ಉಪಕರಣಗಳಿಂದ ವೀಕ್ಷಿಸುವಲ್ಲಿ ಖಗೋಳಶಾಸ್ತ್ರಜ್ಞರ ಮುಂದೆ ಈ ಪ್ರಶ್ನೆ ತಲೆದೋರಿತು. ಇದನ್ನು ಬಿಡಿಸಲು ಕನಿಷ್ಠತಮ ವರ್ಗತತ್ತ್ವ (ಪ್ರಿನ್ಸಿಪಲ್ ಆಫ್ ಲೀಸ್ಟ್ ಸ್ಕ್ವೇರ್) ರೂಪುಗೊಂಡಿತು. $n$ ಅವೇಕ್ಷಣೆಗಳನ್ನು $x_1, x_2, \ldots\ldots, x_n$ ಎಂದು ಸೂಚಿಸೋಣ. ಈ ಅಳತೆಗಳ ಆಧಾರದ ಮೇಲೆ $x$ನ ವಾಸ್ತವಿಕ ಬೆಲೆಯನ್ನು ಅಂದಾಜುಮಾಡಬೇಕಾಗಿದೆ. ಅಂದಾಜು ಬೆಲೆಯನ್ನು $a$ ಎಂದಿಟ್ಟುಕೊಂಡರೆ $x_1-a, x_2-a, \ldots\ldots, x_n-a$ ಇವುಗಳಿಗೆ $a$ ಯಿಂದ $x_1, x_2, \ldots, x_n$ಗಳ ವಿಚಲನೆಗಳು ಎಂದು ಹೆಸರು. ಇವುಗಳ ವರ್ಗಸಂಕಲನ ಕನಿಷ್ಠತಮವಾಗುವಂತೆ ಆಯ್ದುಕೊಂಡ $a$ಯ ಬೆಲೆಯೇ ಉತ್ತಮವಾದ ಅಂದಾಜಾಗುವುದು ಎಂಬುದೇ ಕನಿಷ್ಠತಮ ವರ್ಗತತ್ತ್ವ.

ಮೇಲೆ ಹೇಳಿದ ವಿಚಲನೆಗಳ ವರ್ಗಸಂಕಲನ $S = \sum_{i=1}^{n} (x_i-a)^2$ ಆಗುವುದು.

ಇದರ ಕನಿಷ್ಠತಮ ಬೆಲೆಯನ್ನು ಪಡೆಯಲು $a$ಯನ್ನು ಕುರಿತ ಇದರ ನಿಷ್ಪನ್ನವನ್ನು (ಡಿರೈವೆಟಿವ್) ಶೂನ್ಯಕ್ಕೆ ಸಮೀಕರಿಸಿ ಬರುವ ಸಮೀಕರಣದಿಂದ $a$ಯನ್ನು ಬಿಡಿಸಬೇಕು ; ಅಂದರೆ

$$\frac{dS}{da} = 0$$

ನಿಷ್ಪನ್ನವನ್ನು ಗಣಿಸಿ ಸರಳೀಕರಿಸಲು, ಈ ಸಮೀಕರಣ $(x_1-a) + (x_2-a) + \ldots\ldots + (x_n-a) = 0$ ಎಂಬ ರೂಪವನ್ನು ತಳೆಯುವುದು. ಬಿಡಿಸಲು $a = \frac{1}{n}(x_1+x_2+\ldots\ldots+z_n) = \frac{1}{n}\sum_{i=1}^{n} x_i$. ಅಂದರೆ ಕನಿಷ್ಠತಮ ವರ್ಗತತ್ತ್ವಕ್ಕನುಸಾರವಾಗಿ $x_1, x_2, \ldots\ldots, x_n$ ಗಳ ಸರಾಸರಿ ಅಥವಾ ಸಮಾಂತರ ಮಧ್ಯಕ ಉತ್ತಮ ಅಂದಾಜುಬೆಲೆ ಆಗುವುದು.

**ಎರಡು ಚರಗಳ ಪರಸ್ಪರ ಸಂಬಂಧ :** ಅನೇಕ ಸಂದರ್ಭಗಳಲ್ಲಿ $x, y$ ಎಂಬ ಎರಡು ಚರಗಳ ಕೆಲವು ಅಳತೆಗಳಿಂದ ಅವೆರಡರ ನಡುವೆ ಇರುವ ಗಣಿತ ಸಂಬಂಧವನ್ನು ಗೊತ್ತು ಹಚ್ಚಬೇಕಾದೀತು.




ಈ ಚರಗಳ ಸಂವಾದೀ ಅವೇಕ್ಷಣೆಗಳು ದೊರೆತಿವೆ ಎಂದಿಟ್ಟುಕೊಳ್ಳೋಣ. ಇವು ಅಳತೆಯ ಲೋಪ ದೋಷಗಳಿಗೆ ಈಡಾಗಿರುವುದರಿಂದ ಚರಗಳಿಗಿರುವ ಸಂಬಂಧವನ್ನು ಇವುಗಳಿಂದ ನೇರವಾಗಿ ಗೊತ್ತು ಹಚ್ಚಲು ಸಾಧ್ಯವಿಲ್ಲ. ಇದಕ್ಕೆ ತಕ್ಕ ಪ್ರಯೋಗತಂತ್ರವನ್ನು ಕೈಗೊಳ್ಳಬೇಕಾಗುವುದು. ಚರಗಳ ಅವೇಕ್ಷಣೆಗಳು $(x_1, y_1), (x_2, y_2), \ldots\ldots\ldots\ldots (x_n, y_n)$ ಆಗಿರಲಿ. ಇವನ್ನು ಬಿಂದುಗಳ ಅವೇಕ್ಷಣೆಗಳೆಂದು ಭಾವಿಸಿ ಆ ಬಿಂದುಗಳನ್ನು ಒಂದು ನಕ್ಷೆಯಲ್ಲಿ ಗುರುತಿಸಿದರೆ ದೊರೆವ ಚಿತ್ರಕ್ಕೆ ಚದರಾವಣೆ ಚಿತ್ರ (ಸ್ಕ್ಯಾಟರ್

ಡಯಾಗ್ರಂ) ಎಂದು ಹೆಸರು. ಚಿತ್ರದ ಪರಿಶೀಲನೆಯಿಂದ $x,y$ ಗಳಿಗೆ ಯಾವ ವಿಧವಾದ ಸಂಬಂಧವಿದೆಯೆಂದು ಊಹಿಸಬಹುದು. ಉದಾಹರಣೆಗೆ $y=a+bx$ ಎಂಬ ಸಂಬಂಧವಿದೆಯೆಂದು ಭಾವಿಸೋಣ, ಇದನ್ನು ಪ್ರತಿನಿಧಿಸುವ ಸರಳರೇಖೆಯನ್ನು ಎಳೆಯುವುದೆಂತು, ಅಲ್ಲದೆ ಅಂಥ ಹಲವಾರು ಸರಳರೇಖೆಗಳನ್ನು ಎಳೆಯಬಹುದಲ್ಲವೆ, ಯಾವ ಸರಳರೇಖೆಯನ್ನು ಹೆಚ್ಚು ಸೂಕ್ತವಾಗಿರುವುದೆಂದು ತೆಗೆದುಕೊಳ್ಳುವುದು—ಇವನ್ನು ನಿರ್ಧರಿಸಲು ಕನಿಷ್ಠತಮವರ್ಗತತ್ತ್ವವನ್ನು ಬಳಸುತ್ತೇವೆ.

$y=a+bx$ ಎಂಬುದು ರೇಖೀಯ ಸಂಬಂಧವಾದರೆ, ಉಕ್ತರೇಖೆಯನ್ನು ದತ್ತ ಅವೇಕ್ಷಣೆಗಳಿಗೆ ಹಾಳಿತವಾಗಿ ಪೊರ್ದಿಸಬೇಕು (ಫಿಟ್). $x$ನ ಬೆಲೆ $x_i$ ಆದಾಗ $y$ಯ ಬೆಲೆ $a+bx_i$ ಆಗಬೇಕು. $y$ಯ ಅವೇಕ್ಷಿತ ಬೆಲೆ $y_i$ ಆಗಿದ್ದರೆ ವ್ಯತ್ಯಾಸ ಅಥವಾ ವಿಚಲನೆ $y_i-(a+bx_i)$ ಆಗುವುದು. ಕನಿಷ್ಠತಮ ವರ್ಗತತ್ತ್ವದ ಮೇರೆಗೆ $S=\sum_{i=1}^{n}(y_i-a-bx_i)^2$ ಕನಿಷ್ಠತಮವಾಗಬೇಕು. ಅಂದರೆ $a,b$ ಗಳನ್ನು ಕುರಿತು $S$ನ ಆಂಶಿಕ ನಿಷ್ಪನ್ನಗಳು (ಪಾರ್ಷಲ್ ಡಿರೈವೆಟಿವ್ಸ್) ಶೂನ್ಯವಾಗಬೇಕು : ಅಂದರೆ $\frac{\partial s}{\partial a}=0$, $\frac{\partial s}{\partial b}=0$. ಇವುಗಳಿಂದ

$$\sum y-\sum a-b\sum x=0 \quad \ldots \quad (1)$$
$$\sum xy-a\sum x-b\sum x^2=0 \quad \ldots \quad (2)$$

ಎಂಬ ಸಮೀಕರಣಗಳು ದೊರೆಯುವುವು, ಇವಕ್ಕೆ ಪ್ರಸಾಮಾನ್ಯ (ನಾರ್ಮಲ್) ಸಮೀಕರಣಗಳೆಂದು ಹೆಸರು. ಇವನ್ನು ಬಿಡಿಸಲಾಗಿ ದೊರೆವ $a$ ಮತ್ತು $b$ಗಳ ಬೆಲೆಗಳನ್ನು ಕನಿಷ್ಠತಮವರ್ಗ ಬೆಲೆಗಳು ಎನ್ನುತ್ತೇವೆ. (1)ನೆಯ ಸಮೀಕರಣವನ್ನು $n$ನಿಂದ ಭಾಗಿಸಿದಾಗ

$$y'=a+bx' \quad \ldots \quad (3)$$

ಎಂಬ ಸಮೀಕರಣ ದೊರೆಯುವುದು, ಇಲ್ಲಿ $x',y'$ ಗಳು $x,y$ ಗಳ ಸಮಾಂತರ ಮಧ್ಯಕಗಳು. ಅಂದರೆ $x,y$ ಗಳ ಸಂಬಂಧವನ್ನು ನೀಡುವ ಸರಳರೇಖೆ $(x',y')$ ಬಿಂದುವಿನ ಮೂಲಕ ಹಾದುಹೋಗುತ್ತದೆ : ಮತ್ತು $a=y'-bx'$ ಆಗುವುದು, ಆದ್ದರಿಂದ

$$y-y'=b\ (x-x') \qquad a$$

ಎಂದು ಬರೆಯಬಹುದು, ಹಾಗೂ $x$ನ ಬೆಲೆ ದತ್ತವಾದಾಗ ಈ ಸಮೀಕರಣದಿಂದ $y$ಯ ಬೆಲೆಯನ್ನು ಅಂದಾಜು ಮಾಡಬಹುದು. ಹಾಗೆ ಈ ಸಮೀಕರಣದಿಂದ ಗಣಿಸಿದ ಬೆಲೆಗೂ $y$ನ ಅವೇಕ್ಷಿತ ಬೆಲೆಗೂ ಇರುವ ವಿಚಲನೆಯನ್ನು $y-y'=-b(x-x')$ ಎಂದು ನಿರೂಪಿಸಬಹುದು. ಹೀಗಾಗಿ ವಿಚಲನೆಗಳ ವರ್ಗಸಂಕಲನ

$$S=\sum\left[(y-y')-b\ (x-x')\right]^2$$

ಆಗುವುದು. ಆದ್ದರಿಂದ ಕನಿಷ್ಠತಮ ವರ್ಗತತ್ತ್ವವನ್ನು ಪ್ರಯುಕ್ತಿಸಿದರೆ $x$ಗೆ ಪ್ರಸಾಮಾನ್ಯ ಸಮೀಕರಣ

$$\sum\left[(y-y')-b(x-x')\right]=0$$

ಎಂದಾಗುವುದು. ಇದನ್ನು ಬಿಡಿಸಲು

$$b=\frac{\sum(x-x')\ (y-y)}{\sum\ (x-x')^2}.$$

ಅಂಶವನ್ನೂ ಛೇದವನ್ನೂ ಪ್ರತ್ಯೇಕವಾಗಿ $n$ ನಿಂದ ಭಾಗಿಸಿದರೆ $x$, $y$ ಗಳ ಸಹಚರತ್ವ (ಕೋವೇರಿಯನ್ಸ್) $\sigma_{xy}$ ಮತ್ತು ಚರತ್ವ (ವೇರಿಯನ್ಸ್) $\sigma_x{}^2$ ದೊರೆಯುವುವು. ಆಗ ಮೇಲಿನ ಸಾಮ್ಯ $b=\frac{\sigma_{xy}}{\sigma_x{}^2}$ ಎಂಬ ರೂಪಕ್ಕಿಳಿಯುವುದು.

ಒಂದು ಉದಾಹರಣೆಯಿಂದ ಈ ಕ್ರಮವನ್ನು ಸ್ಪಷ್ಟಪಡಿಸಬಹುದು. ಗದ್ದೆಗಳಿಗೆ ಹಾಕಿದ ರಾಸಾಯನಿಕ ಗೊಬ್ಬರ $x$ ಚೀಲಗಳು ಮತ್ತು ಬೆಳೆಯುವ ಪ್ರಮಾಣ $y$ ಮಣಗಳು ಎಂದು ಸೂಚಿಸಿ ಇವುಗಳ ಸಂವಾದಿ ಬೆಲೆಗಳನ್ನು ಪಟ್ಟಿಮಾಡಿಸಲಾಗಿದೆ. ಹಾಳಿತವಾದ ಸರಳ ರೇಖೆಯನ್ನು ಪೊರ್ದಿಸಿ $y$ ಯನ್ನು $x$ ನ ಉತ್ಪನ್ನವಾಗಿ ನಿರೂಪಿಸಬೇಕು.

| | | | | | | | | |
|---|---|---|---|---|---|---|---|---|
| $x$ : | 10 | 12 | 10 | 11 | 15 | 14 | 15 | 13 |
| $y$ : | 85 | 93 | 90 | 94 | 95 | 92 | 100 | 95 |

ಲೆಕ್ಕಾಚಾರವನ್ನು ಸುಗಮವಾಗಿಸಲು $X=x-10$, ಮತ್ತು $Y=y-90$ ಎಂದಿಟ್ಟುಕೊಂಡರೆ $X$, $Y$ಗಳ ಸಂವಾದಿ ಬೆಲೆಗಳು ಹೀಗಿರುವುವು—

| | | | | | | | | |
|---|---|---|---|---|---|---|---|---|
| $X$ : | 0 | 2 | 0 | 1 | 5 | 4 | 5 | 3 |
| $Y$ : | −5 | 3 | 0 | 4 | 5 | 2 | 10 | 5 |

$Y=a+bX$ ಎಂಬ ಸಂಬಂಧವನ್ನು ಕಲ್ಪಿಸಿಕೊಂಡರೆ ಕನಿಷ್ಠತಮವರ್ಗ ತತ್ತ್ವದ ಮೇರೆಗೆ $a,b$ ಗಳ ಕೆಳಕಾಣಿಸಿದ ಪ್ರಸಾಮಾನ್ಯ ಸಮೀಕರಣಗಳು ದೊರೆಯುವುವು :

$$8a+20\ b=24,\ \ 28a+80b=112$$

ಈ ಸಮೀಕರಣಗಳನ್ನು ಬಿಡಿಸಲಾಗಿ $a=-\frac{4}{3}$, $b=\frac{26}{15}$.

ಕನಿಷ್ಠತಮವರ್ಗತತ್ತ್ವದ ಮೇರೆಗೆ ಪೊರ್ದಿಸಿದ ಸರಳರೇಖೆಯ ಸಮೀಕರಣ,

$$Y=-\ \frac{4}{3}+\frac{26}{15}X$$

ಆಗುವುದು. ಇದನ್ನೇ $x$, $y$ ಗಳ ಮೂಲಕ ನಿರೂಪಿಸಿದರೆ

$$y-90=-\frac{4}{3}+\frac{26}{15}\ (x-10)$$

ಆಗುವುದು. ಅಂದರೆ, $y=71\frac{1}{3}+1\frac{11}{15}x$

ಈ ಸಮೀಕರಣದ ಆಧಾರದ ಮೇಲೆ ನಿರ್ದಿಷ್ಟ ಪರಿಮಾಣದ ಗೊಬ್ಬರವನ್ನು ಹಾಕಿದಾಗ ಎಷ್ಟು ಬೆಳೆಯನ್ನು ನಿರೀಕ್ಷಿಸಬಹುದು ಎಂಬ ಅಂದಾಜು ಸಹ ಸಿಗುವುದು. ಈಗ $12\frac{1}{2}$ ಚೀಲದಷ್ಟು ಗೊಬ್ಬರವನ್ನು ಹಾಕಿದರೆ ನಿರೀಕ್ಷಿಸಬಹುದಾದ ಬೆಳೆ

$$y=71\tfrac{1}{3}+\tfrac{26}{15}\times 12\tfrac{1}{2}=93$$

ಅಂದರೆ 93 ಚೀಲಗಳಷ್ಟು ಬೆಳೆ ಸಿಗುವ ನಿರೀಕ್ಷೆ ಇದೆ.

**ಕಾಲಸರಣಿಯ ಪೊರ್ದಿಕೆ :** ಕಾಲಸರಣಿಯ ಅವೇಕ್ಷಣೆಗಳಿಗೆ ಬೀಜಗಣಿತ ರೀತಿಯಲ್ಲಿ ಬಹುಪದಿಗಳನ್ನು ಪೊರ್ದಿಸಲು ಕನಿಷ್ಠತಮ ವರ್ಗತತ್ತ್ವವನ್ನು ಬಳಸುತ್ತೇವೆ. ಆ ಸಂದರ್ಭದಲ್ಲಿ ಕೆಲವು ಸರಳೋಪಾಯಗಳನ್ನು ಕೈಗೊಳ್ಳಬಹುದು. ಒಂದು ಉದಾಹರಣೆಯಿಂದ ಇದನ್ನು ವಿಶದಪಡಿಸಬಹುದು. ಭಾರತದೇಶದಲ್ಲಿ ಚಹ ಎಲೆಯ ಉತ್ಪತ್ತಿಯ ಕೋಷ್ಟಕವನ್ನು ಇಲ್ಲಿ ಕೊಡಲಾಗಿದೆ.

ವರ್ಷಸಂಖ್ಯೆಯನ್ನು $x$ ಎಂದು ಸೂಚಿಸಿ ಉತ್ಪತ್ತಿಯನ್ನು (ಕೋಟಿ ಪೌಂಡುಗಳಲ್ಲಿ) $y$ ಎಂದು ಸೂಚಿಸಿದರೆ $y=a+bx$ ಎಂಬ ಸರಳರೇಖೆಯನ್ನು ದತ್ತ ಅವೇಕ್ಷಣೆಗಳಿಗೆ ಹಾಳಿತವಾಗಿ ಪೊರ್ದಿಸಬೇಕು. 1957ನೆಯ ಇಸವಿಯನ್ನು ಕಾಲಮಾನದ ಮೂಲಬಿಂದುವಾಗಿಟ್ಟುಕೊಂಡರೆ $\sum x$ ಸೊನ್ನೆಯಾಗುವುದು ಮತ್ತು $\sum x^2$ ಇದರ ಬೆಲೆಯನ್ನು $1^2+2^2+\ldots+r^2=\frac{r}{6}(r+1)\ (2r+1)$ ಎಂಬ ಬೀಜಸೂತ್ರದಿಂದ ಸುಲಭವಾಗಿ ಕಂಡುಹಿಡಿಯಬಯುದು. ಹೇಗೆಂದರೆ, $1^2+2^2+\ldots+5^2=55$. $x$ ನ ಋಣ ಬೆಲೆಗಳನ್ನು ತೆಗೆದುಕೊಂಡರೆ ಸಹ 55 ದೊರೆಯುವುದು. ಆದ್ದರಿಂದ $\sum x^2=110$ ಆಗುವುದು.

ಕೋಷ್ಟಕ 1. ಭಾರತದೇಶದಲ್ಲಿ ಚಹಾ ಎಲೆಯ ಉತ್ಪತ್ತಿ (ಕೋಟಿ ಪೌಂಡುಗಳಲ್ಲಿ)

| $x$ | $X$ | $y$ | $Xy$ | $X^2y$ | $y'$ | $y-y'$ |
|---|---|---|---|---|---|---|
| 1 | 2 | 3 | 4 | 5 | 6 | 7 |
| 1952 | −5 | 61.4 | −307.0 | 1535.0 | 61.610 | −0.210 |
| 1953 | −4 | 61.5 | −246.0 | 984.0 | 63.116 | −1.616 |
| 1954 | −3 | 65.2 | −195.6 | 586.8 | 64.622 | 0.578 |
| 1955 | −2 | 67.8 | −135.6 | 271.2 | 66.128 | 1.672 |
| 1956 | −1 | 68.1 | −68.1 | 68.1 | 67.634 | 0.466 |
| 1957 | 0 | 68.5 | ... | ... | 69.140 | −0.640 |
| 1958 | 1 | 71.7 | 71.7 | 71.7 | 70.646 | 1.054 |
| 1959 | 2 | 71.9 | 143.8 | 287.6 | 72.152 | −0.252 |
| 1960 | 3 | 70.8 | 212.4 | 637.2 | 73.658 | −2.858 |
| 1961 | 4 | 77.9 | 311.6 | 1246.4 | 75.164 | 2.736 |
| 1962 | 5 | 75.7 | 378.5 | 1892.5 | 76.670 | −0.970 |
| ಮೊತ್ತ | 0 | 760.5 | 165.7 | 7580.5 | 760.540 | 0.040 |

ಕನಿಷ್ಠತಮ ವರ್ಗತತ್ತ್ವದಂತೆ $a,b$ಗಳನ್ನು ಪಡೆಯುವ ಪ್ರಸಾಮಾನ್ಯ ಸಮೀಕರಣಗಳು ಹೀಗಿರುತ್ತವೆ.

$11a=760.5$ ಮತ್ತು $110b=165.71$

ಇವು ಬೇರೆ ಬೇರೆಯಾದ ಎರಡು ಸರಳ ಸಮೀಕರಣಗಳು ಎಂಬುದನ್ನು ಗಮನಿಸಿ ಅವನ್ನು ಬಿಡಿಸಲಾಗಿ, $a=69.136$, $b=1.506$ ಆಗುತ್ತವೆ. ಆದ್ದರಿಂದ ಹಾಳಿತವಾಗಿ ಪೊರ್ದಿದ ಸರಳರೇಖೆ $y=69.136+1.506X$. ಇದರಲ್ಲಿ $X$ ಎಂಬುದು 1957ರಿಂದ ಎಣಿಸಿ ಬಂದ ವರ್ಷಗಳನ್ನು ಸೂಚಿಸುತ್ತದೆ. ಈ ಸಮೀಕರಣದ ಆಧಾರದ ಮೇಲೆ ಪ್ರತಿವರ್ಷಕ್ಕೂ ಒಂದೊಂದು ಬೆಲೆ ದೊರೆಯುವುದು. $y$ಯ ಈ ಬೆಲೆಗಳಿಗೆ ಅಳವಡಿಸಿದ ಬೆಲೆಗಳು ಎಂದು ಹೆಸರು. ಇವನ್ನು $y'$ ಎಂದು ಸೂಚಿಸಿ ಕೋಷ್ಟಕದ 6ನೇ ಸ್ತಂಭದಲ್ಲಿ ಬರೆಯಲಾಗಿದೆ. ಈ ಸಮೀಕರಣದ ಆಧಾರದಮೇಲೆ 1963ನೆಯ ಇಸವಿಯಲ್ಲಿ ಉತ್ಪತ್ತಿಯ ಅಂದಾಜು ಬೆಲೆ 78.176 ಕೋಟಿ ಪೌಂಡುಗಳಾಗುವುವು.

**ಸಮಸಂಖ್ಯೆಯ ಅವೇಕ್ಷಣೆಗಳು :** ಕ್ರಮಾಗತವಾಗಿ ಎಲ್ಲ ವರ್ಷಗಳಿಗೂ ಅವೇಕ್ಷಣೆಗಳು ದತ್ತವಾದಾಗ ಈ ಕ್ರಮವನ್ನು ಅನುಸರಿಸಬಹುದು. ಮಧ್ಯೆ ಯಾವುದಾದರೂ ತೆರಪಿದ್ದರೆ ಪ್ರಸಾಮಾನ್ಯ ಸಮೀಕರಣಗಳು ಹೀಗೆ ಬೇರ್ಪಡುವುದಿಲ್ಲ.

ಅವೇಕ್ಷಣೆಗಳ ಸಂಖ್ಯೆ ಬೆಸವಲ್ಲದೆ ಸಮವಾಗಿದ್ದರೆ ಮೇಲಿನ ಕ್ರಮದಲ್ಲಿ ಸ್ವಲ್ಪ ಮಾರ್ಪಾಡು ಮಾಡಬೇಕಾದೀತು. 1953ರಿಂದ 1962ರ ವರೆಗಿನ 10 ಅವೇಕ್ಷಣೆಗಳು ಮಾತ್ರ ದತ್ತವಾದಾಗ ಮೂಲಬಿಂದುವನ್ನು 1957 ಮತ್ತು 1958ರ ಮಧ್ಯೆ ತೆಗೆದುಕೊಳ್ಳಬೇಕು ಮತ್ತು ಅರ್ಧ ವರ್ಷವನ್ನು ಏಕಮಾನವಾಗಿಟ್ಟುಕೊಂಡು ಗಣನೆ ಮಾಡಬಹುದು. ಮಾರ್ಪಡಿಸಿದ ಈ ಅಳತೆಯನ್ನು $X$ ಎಂದು ಸೂಚಿಸಿ ರೇಖೀಯ ಸಂಬಂಧವನ್ನು $y=c+dX$ ಎಂದಿಟ್ಟುಕೊಂಡರೆ $10a=699.1$ ಮತ್ತು $330\ b=246.3$ ಎಂಬ ಪ್ರಸಾಮಾನ್ಯ ಸಮೀಕರಣಗಳು ದೊರೆಯುತ್ತವೆ.

ಕೋಷ್ಟಕ 2. ಭಾರತದಲ್ಲಿ ಚಹಾ ಎಲೆಯ ಉತ್ಪತ್ತಿ (ಕೋಟಿ ಪೌಂಡುಗಳಲ್ಲಿ)

| ವರ್ಷ $x$ | $X$ | $y$ | $Xy$ |
|---|---|---|---|
| 1 | 2 | 3 | 4 |
| 1953 | —9 | 61.5 | —553.5 |
| 1954 | —7 | 65.2 | —456.4 |
| 1955 | —5 | 67.8 | —339.0 |
| 1956 | —3 | 68.1 | —204.3 |
| 1957 | —1 | 68.5 | —68.5 |
| 1958 | 1 | 71.7 | 71.7 |
| 1959 | 3 | 71.9 | 215.7 |
| 1960 | 5 | 70.8 | 354.0 |
| 1961 | 7 | 77.9 | 545.3 |
| 1962 | 9 | 75.7 | 681.3 |
| ಮೊತ್ತ | 0 | 699.1 | 246.3 |

ಈ ಸಮೀಕರಣಗಳನ್ನು ಬಿಡಿಸಲು $c=69.91$ ಮತ್ತು $d=0.747$. ಆದ್ದರಿಂದ ಪೊರ್ದಿಸಿದರೇಖೆಯ ಸಮೀಕರಣ $y=69.91+0.747X$ ($X$ಅರ್ಧ ವರ್ಷಗಳು). ಪೂರ್ಣ ವರ್ಷದ ಮಾನದಲ್ಲಿ ಇದನ್ನೇ $x$ ಎಂದು ಪರಿವರ್ತಿಸಿ ಬರೆದರೆ $y=69.91+1.494x$ ಎಂದಾಗುವುದು. ಈ ಸಮೀಕರಣದ ಆಧಾರದ ಮೇಲೆ 1963 ರಲ್ಲಿ ಚಹಾ ಎಲೆಯ ಉತ್ಪತ್ತಿ 78.127 ಕೋಟಿ ಪೌಂಡುಗಳೆಂದು ಅಂದಾಜು ಮಾಡಬಹುದು.

**ಪ್ಯರಾಬೊಲದ ಪೊರ್ದಿಕೆ:** ಕೆಲವು ಸಂದರ್ಭಗಳಲ್ಲಿ ಇನ್ನೂ ಸ್ವಲ್ಪ ಒತ್ತಾಗಿ ಪೊರ್ದಿಸಬೇಕಾಗುವುದು. $x,y$ ಗಳ ಸಂಬಂಧ $y=a+bx+cx^2$ ಎಂಬ ಪ್ಯರಾಬೊಲೀಯ ಉತ್ಪನ್ನದಿಂದ ಸೂಚಿಸಲಾಗುವುದೆಂದಿಟ್ಟುಕೊಳ್ಳೋಣ. ಮೇಲೆ ಹೇಳಿದ ಕ್ರಮವನ್ನೇ ಅನುಸರಿಸಿ ಕನಿಷ್ಠತಮ ವರ್ಗತತ್ತ್ವದ ಮೇರೆಗೆ

$$\sum a+b\sum x+c\sum x^2=\sum y$$
$$a\sum x+b\sum x^2+c\sum x^3=\sum xy$$
$$a\sum x^2+b\sum x^3+c\sum x^4=\sum x^2y$$

ಎಂಬ ಮೂರು ಪ್ರಸಾಮಾನ್ಯ ಸಮೀಕರಣಗಳು ದೊರೆಯುವುವು. ಈ ಸಮೀಕರಣಗಳನ್ನು ಬಿಡಿಸಿ $a$, $b$, $c$ ಗಳ ಬೆಲೆಗಳನ್ನು ಪಡೆಯಬಹುದು.

ಚಹಾ ಎಲೆಯ ಉತ್ಪತ್ತಿಯ ಅಂಕಿಅಂಶಗಳನ್ನೇ ತೆಗೆದುಕೊಳ್ಳಿ. $a, b, c$ ಗಳಿಗೆ ಈ ಪ್ರಸಾಮಾನ್ಯ ಸಮೀಕರಣಗಳು ದೊರೆಯುತ್ತವೆ. (ಕೋಷ್ಟಕ 1)

$$11a+110c=760{\cdot}5$$
$$110b\qquad=165{\cdot}7$$
$$110a+19.58c=7580{\cdot}5$$

ಆದ್ದರಿಂದ, $a=68.85$, $c=-0.2856$ ; ಮತ್ತು ಹಿಂದಿನಂತೆಯೇ $b=1.506$. ಕಾಲಮಾನದ ಮೂಲಬಿಂದುವಿನ ಆಯ್ಕೆಯ ಫಲವಾಗಿ $y=a+bx$ ಎಂಬ ಸರಳರೇಖೆಯನ್ನು ಪೊರ್ದಿಸುವಾಗ $b$ಯನ್ನು ಬಿಡಿಸಲು ದೊರೆತ $110b=165.7$ ಎಂಬ ಸರಳ ಸಮೀಕರಣವೇ ಈಗಲೂ ದೊರೆಯುವುದೆಂಬುದನ್ನು ಗಮನಿಸಿ. ಇದರಿಂದಾಗಿ $b$ಯ ಬೆಲೆಯಲ್ಲಿ ಯಾವ ವ್ಯತ್ಯಾಸವೂ ಆಗುವುದಿಲ್ಲ. ಕನಿಷ್ಠತಮ ವರ್ಗತತ್ತ್ವದಂತೆ ಪೊರ್ದಿಸಿದ ಪ್ಯರಾಬೊಲದ ಸಮೀಕರಣ $y=68.85+1.506x-0.0286x^2$ ಎಂದಾಗುವುದು. ಇದರ ಪ್ರಕಾರ 1963 ರಲ್ಲಿ ಚಹಾ ಎಲೆಯ ಉತ್ಪತ್ತಿಯ ಅಂದಾಜು 76.856 ಕೋಟಿ ಪೌಂಡುಗಳು.

**ಪೊರ್ದಿಕೆಯ ಹಾಳಿತ** (ಗುಡ್‌ನೆಸ್ ಆಫ್ ಫಿಟ್) : ಬೀಜಗಣಿತ ಕ್ರಮದಲ್ಲಿ ಈ ವಿಧವಾಗಿ ಗಣನೆ ಮಾಡಿ ಪೊರ್ದಿದ ರೇಖೆ ದತ್ತ ಅವೇಕ್ಷಣೆಗಳಿಗೆ ಹಾಳಿತವಾಗಿದೆಯೇ ಎಂಬ ಪ್ರಶ್ನೆ ಹೇಳಬಹುದು. $\chi^2$ ಬೆಲೆಯನ್ನು ಕಂಡು ಹಿಡಿಯುವುದರ ಮೂಲಕ ಇದಕ್ಕೆ ಉತ್ತರವನ್ನು ನೀಡಬಹುದು. ದತ್ತ ಬೆಲೆ $y$ ಇದ್ದು ಗುಣಿಸಿ ಬಂದ ಅಂದಾಜಿನ ಬೆಲೆ $y'$ ಇದ್ದರೆ, $\chi^2=\sum(y-y')y^2/'$ ಆಗುವುದು. ಇದಕ್ಕೆ ಕೈ ವರ್ಗ ($X^2$) ಎಂದು ಹೆಸರು. ಪೊರ್ದಿಕೆಯ ಹಾಳಿತದ ಕೋಷ್ಟಕದಿಂದ ಈ ಬೆಲೆಯ ಸಂಭವತೆಯನ್ನು ಕಂಡುಹಿಡಿಯಬಹುದು. ಒಟ್ಟು ಅವೇಕ್ಷಣೆಗಳು $n$ ಇದ್ದರೆ, ಸ್ವತಂತ್ರತೆಯ ದರ್ಜೆ (ಡಿಗ್ರೀಸ್ ಆಫ್ ಫ್ರೀಡಂ) $n$-1 ಆಗುವುದು. ಇದಕ್ಕೆ ತಕ್ಕಂತೆ ಕೋಷ್ಟಕದಲ್ಲಿ $X^2$ನ ಸಂಭವತೆ ಕೊಡಲಾಗಿದೆ. ಇದರ ಬೆಲೆ 1ಕ್ಕೆ ಸಮೀಪವಾಗಿದ್ದರೆ ಪೊರ್ದಿಕೆ ಹಾಳಿತವಾಗಿದೆ ಎಂದರ್ಥ. ಪ್ರಸಕ್ತ $\sum$ಉದಾಹರಣೆಯಲ್ಲಿ $\chi^2=0.3390$ ; ಮತ್ತು ಸ್ವತಂತ್ರತೆಯ ದರ್ಜೆ 9. ಇದಕ್ಕೆ ಸಂವಾದಿಯಾದ P (ಸಂಭವತೆ)$=0.9994$. ಇದರಿಂದ ಸರಳರೇಖೆಯನ್ನು ಪೊರ್ದಿಸಿರುವುದು ಸಮರ್ಪಕವಾಗಿದೆ.

**ಘಾತೀಯ ಉತ್ಪನ್ನದ ಪೊರ್ದಿಕೆ** (ಎಕ್ಸ್‌ಪೊನೆನ್ಶಿಯಲ್ ಫಿಟ್). ಕೆಲವು ಪರಿಸ್ಥಿತಿಗಳಲ್ಲಿ—ಮುಖ್ಯವಾಗಿ ಬೆಳವಣಿಗೆಯ ಸ್ಥಿತಿಯಲ್ಲಿ—$y$ ಚರ $x$ನ ಘಾತೀಯ ಉತ್ಪನ್ನವಾಗಿರಬಹುದು. ಕನಿಷ್ಠತಮವರ್ಗತತ್ತ್ವವನ್ನು ಇಂಥ ಉತ್ಪನ್ನಕ್ಕೆ ನೇರವಾಗಿ ಪ್ರಯೋಗಿಸಲಾಗುವುದಿಲ್ಲ. ಆದರೆ ಪ್ರತಿಘಾತಗಳನ್ನು (ಲಾಗರಿತಂಸ್) ತೆಗೆದುಕೊಂಡರೆ ರೇಖೀಯ ಅಥವಾ ಹೈಪರ್ಬೊಲೀಯ ಸಂಬಂಧ ಸಿದ್ಧಿಸುವುದು. ಹೇಗೆಂದರೆ $y=ab^x$ ಎಂಬ ಸಂಬಂಧವಿದ್ದಾಗ ಪ್ರತಿಘಾತಗಳನ್ನು ತೆಗೆದರೆ $\log y=\log a+x\log b$ ಎಂಬ ಸಂಬಂಧ ಒದಗುವುದು. ಆಗ $Y=\log y$, $B=\log b$, $A=\log a$ ಎಂದು ಆದೇಶಿಸಿದರೆ $Y=A+Bx$ ಎಂಬ ಸಂಬಂಧ ಪ್ರಾಪ್ತವಾಗುವುದು. ಕನಿಷ್ಠತಮ ವರ್ಗ ತತ್ತ್ವಕ್ಕೆ ಅನುಸಾರವಾಗಿ $A$, $B$ ಗಳ ಬೆಲೆಗಳನ್ನು ಕಂಡು ಹಿಡಿಯಬಹುದು. ತರುವಾಯ $a$, $b$ ಗಳನ್ನು ಲೆಕ್ಕ ಮಾಡಬಹುದು.

ಕೋಷ್ಟಕ 3. ದೇಶದ ಜನಸಂಖ್ಯೆಯ ಬೆಳವಣಿಗೆ

| ವರ್ಷ $x$ | 1931ರಿಂದ ದಶಕಗಳಲ್ಲಿ $X$ | ಜನಸಂಖ್ಯೆ (ಕೋಟಿ) $y$ | $\log y$ $=Y$ | $XY$ |
|---|---|---|---|---|
| 1 | 2 | 3 | 4 | 5 |
| 1901 | —3 | 3.8 | 0.5911 | —1.7733 |
| 1911 | —2 | 5.3 | 0.7243 | —1.4486 |
| 1921 | —1 | 7.3 | 0.8633 | —0.8633 |
| 1931 | 0 | 9.6 | 0.9823 | ...... |
| 1941 | 1 | 12.9 | 1.1106 | 1.1106 |
| 1951 | 2 | 17.1 | 1.2330 | 2.4660 |
| 1961 | 3 | 23.2 | 1.3655 | 4.0965 |
| ಮೊತ್ತ | 0 | | 6.8901 | 3.5879 |

ಉದಾಹರಣೆಗೆ. ಒಂದು ದೇಶದ ಜನಸಂಖ್ಯೆಯ ಅಂಕಿಸಂಖ್ಯೆಗಳು 3ನೆಯ ಕೋಷ್ಟಕದಲ್ಲಿ ಕೊಟ್ಟಿರುವಂತಿವೆ ಎನ್ನೋಣ. ಕಾಲಮಾನವನ್ನು $x$ ಎಂದು ಸೂಚಿಸಿ, ಜನಸಂಖ್ಯೆಯನ್ನು $y$ ಎಂದು ಸೂಚಿಸಿ ಅವುಗಳ ಸಂಬಂಧವನ್ನು $y=ab^x$ ಎಂದು ಕಲ್ಪಿಸಿಕೊಂಡಾಗ $a$, $b$ ಗಳನ್ನು ಕಂಡು ಹಿಡಿಯುವ ವಿಧಾನವನ್ನು ಕೋಷ್ಟಕದಲ್ಲಿ ಲೆಕ್ಕ ಮಾಡಿ ತೋರಿಸಲಾಗಿದೆ. 1931ನೆಯ ಇಸವಿಯನ್ನು ಮೂಲವಾಗಿಟ್ಟುಕೊಂಡು ದಶಕವನ್ನು ಏಕಮಾನವಾಗಿಟ್ಟುಕೊಂಡು ಅಳೆಯುವ ಕಾಲ ಪರಿಮಾಣವನ್ನು $X$ ಎನ್ನುವ ಸಂಕೇತದಿಂದ ಸೂಚಿಸಿದರೆ $X=\frac{x-1931}{10}$.

$A$, $B$ ಗಳ ಪ್ರಸಾಮಾನ್ಯ ಸಮೀಕರಣಗಳು ಇಂತಿವೆ : $7A=6.8701$ ; $28B=3.5879$. ಬಿಡಿಸಲು $A=0.9814$ ; $B=0.12814$ ಆದ್ದರಿಂದ $a=9.581$ ಮತ್ತು $b=1.343$.

ಪೊರ್ದಿದ ಘಾತಚಲನ $y=9.581\times(1.343)^x$. ಇಲ್ಲಿ $x$ನ್ನು 1931ರಿಂದ ದಶಕಗಳಲ್ಲಿ ಅಳೆಯ ತಕ್ಕದ್ದು. ಈ ಸಮೀಕರಣದ ಆಧಾರದ ಮೇಲೆ ಅಂದಾಜು ಮಾಡಿದ ಜನಸಂಖ್ಯೆ $9.581\times(1.343)^4$ ಅಥವಾ 31.18 ಕೋಟಿ.

ಇದೇ ಪ್ರಕಾರವಾಗಿ, $y=ax^b$ ಎಂಬ ಸಮೀಕರಣವನ್ನು ಬಳಸಿ ಅಂದಾಜು ಮಾಡಬಹುದು. ಈಚೆಗೆ ಕನಿಷ್ಠತಮವರ್ಗತತ್ತ್ವದಲ್ಲಿ ಕೆಲವು ವಿಸ್ತರಣಗಳನ್ನು ಮಾಡಲಾಗಿದೆ. (ಎಂ.ಏ.ಜೆ.)

**ಕನೆಕ್ಟಿಕಟ್ :** ಅಮೆರಿಕ ಸಂಯುಕ್ತಸಂಸ್ಥಾನದ ರಾಜ್ಯಗಳಲ್ಲೊಂದು. ಉತ್ತರದಲ್ಲಿ ಮ್ಯಾಸಚೂಸೆಟ್ಸ್, ಪೂರ್ವದಲ್ಲಿ ರೋಡ್ ಐಲೆಂಡ್, ದಕ್ಷಿಣದಲ್ಲಿ ಲಾಂಗ್




ಐಲೆಂಡ್ ಜಲಸಂಧಿ, ಪಶ್ಚಿಮದಲ್ಲಿ ನ್ಯೂ ಯಾರ್ಕ್—ಇವು ಇದರ ಮೇರೆಗಳು. ವಿಸ್ತೀರ್ಣದಲ್ಲಿ ಅಮೆರಿಕ ಸಂಯುಕ್ತ ಸಂಸ್ಥಾನದ 48ನೆಯ ರಾಜ್ಯ. ರೋಡ್ ಐಲೆಂಡ್ ಮತ್ತು ಡೆಲವೇರ್ ರಾಜ್ಯಗಳು ಮಾತ್ರ ಇದಕ್ಕಿಂತ ಚಿಕ್ಕವು. ವಿಸ್ತೀರ್ಣ 5,009 ಚ.ಮೈ. ಜನಸಂಖ್ಯೆ 25,35,234 (1960). ರಾಜಧಾನಿ ಹಾರ್ಟ್‌ಫರ್ಡ್.

ಈ ರಾಜ್ಯದ ಪಶ್ಚಿಮ ಭಾಗ ಪೂರ್ವಕ್ಕಿಂತ ಎತ್ತರವಾಗಿದ್ದು, ಮಧ್ಯದಲ್ಲಿರುವ ಕನೆಕ್ಟಿಕಟ್ ನದೀಕಣಿವೆಯ ಕಡೆಗೆ ಇಳಿಜಾರಾಗಿದೆ. ತೀರ ಡೊಂಕಾಗಿರುವುದರಿಂದ ಬಂದರುಗಳಿಗೆ ಅನುಕೂಲಕಾರಿ. ರಾಜ್ಯದ ಚಳಿಗಾಲದ ಸರಾಸರಿ ಉಷ್ಣತೆ 25° ಫ್ಯಾ. ಮತ್ತು 30° ಫ್ಯಾ. ನಡುವೆಯೂ ಬೇಸಗೆಕಾಲದ ಸರಾಸರಿ ಉಷ್ಣತೆ 65° ಫ್ಯಾ. ಮತ್ತು 70° ಫ್ಯಾ. ನಡುವೆಯೂ ಇರುತ್ತವೆ. ವಾರ್ಷಿಕ ಸರಾಸರಿ ಅವಪಾತದ್ರವ (ಪ್ರೆಸಿಪಿಟೇಷನ್) 45". ಇದು ವರ್ಷವಿಡೀ ಸಮನಾಗಿ ಹಂಚಿಕೆಯಾಗಿದೆ. ಇದರಲ್ಲಿ ಬಹುಭಾಗ ಹಿಮ. ಚೆಸ್‌ನಟ್, ಚೆಸ್‌ನಟ್ ಓಕ್ ಮತ್ತು ಶ್ವೇತ ಪಾಪ್ಲರ್‌ಗಳ ಕಾಡೇ ಕನೆಕ್ಟಿಕಟಿನ ಸ್ವಾಭಾವಿಕ ಸಸ್ಯ. ಈಶಾನ್ಯದಲ್ಲಿ ಈ ಮರಗಳ ಜೊತೆಗೆ ಮೇಪಲ್, ಹೆಮ್ಲಾಕ್, ಬೀಚ್ ಮತ್ತು ಬರ್ಚ್‌ಗಳೂ ಇದ್ದುವು. ಈಗ ಕಾಡುಗಳು ಬಲು ಕಡಿಮೆ.

ಕನೆಕ್ಟಿಕಟಿನಲ್ಲಿ ಕೈಗಾರಿಯೇ ಪ್ರಧಾನವಾದರೂ ವ್ಯವಸಾಯವೂ ತಕ್ಕಮಟ್ಟಿಗೆ ನಡೆಯುತ್ತದೆ. ಒಳ್ಳೆಯ ನೆಲಕ್ಕೆ ಮಾತ್ರ ಕೃಷಿಕಾರ್ಯ ಸೀಮಿತ. ಹಸಿಮೇವು, ಒಣಹುಲ್ಲು, ಓಟ್ಸ್, ಮುಸುಕಿನಜೋಳ. ಹಗೇವುಮೇವು, ಆಲೂಗೆಡ್ಡೆ, ಹೈನು ಮುಖ್ಯ ಉತ್ಪನ್ನ. ಕೆಲವು ಸುಂದರ ಹೊಲಗಳು ನಿಸರ್ಗಸೌಂದರ್ಯದ ಬೀಡುಗಳು ; ಇವನ್ನು ನೋಡಲು ಬೇಸಗೆಯ ದಿನಗಳಲ್ಲಿ ವಿಹಾರಾರ್ಥಿಗಳು ತಂಡತಂಡವಾಗಿ ಬರುತ್ತಾರೆ. ಕನೆಕ್ಟಿಕಟ್ ನದಿಯ ಮೇಲಣ ಸೋಪಾನನೆಲದ ಕೃಷಿಕ್ಷೇತ್ರಗಳು ಬಲು ಉತ್ಕೃಷ್ಟ. ಹೊಗೆಸೊಪ್ಪು, ಚುಟ್ಟಾ ಎಲೆ—ಇವು ಇಲ್ಲಿಯ ವಿಶಿಷ್ಟ ಉತ್ಪನ್ನಗಳು.

ಈ ರಾಜ್ಯದಲ್ಲಿ ಕೈಗಾರಿಕೆಗಳು ವಿಶೇಷವಾಗಿ ಬೆಳೆದಿವೆ. ಇವಕ್ಕಾಗಿ ಕಚ್ಚಾ ಸಾಮಾಗ್ರಿ ಹೆಚ್ಚಾಗಿ ಆಮದಾಗುತ್ತದೆ. ಪರಂಪರೆಯಾಗಿ ಬಂದ ತಂತ್ರಕೌಶಲ ಅಗತ್ಯವಾದ ಕೈಗಾರಿಕೆಗಳು ಇಲ್ಲಿ ಬೆಳೆದಿವೆ. ಜವಳಿ, ಕಬ್ಬಿಣದ ಸಾಮಾನು. ಗಡಿಯಾರ, ಒಡವೆ, ಅಗ್ನ್ಯಸ್ತ್ರ—ಇವು ಇಲ್ಲಿಯ ಕೆಲವು ಮುಖ್ಯ ಉತ್ಪನ್ನಗಳು. ಮುಖ್ಯವಾದ ನಗರಗಳಿವು (1960 ರಲ್ಲಿದ್ದಂತೆ ಜನಸಂಖ್ಯೆಗಳನ್ನು ಆವರಣಗಳೊಳಗೆ ಕೊಟ್ಟಿದೆ): ಹಾರ್ಟ್‌ಫರ್ಡ್ (1,62,178), ನ್ಯೂ ಹೇವನ್ (1,52,048), ಬ್ರಿಜ್‌ಪೋರ್ಟ್ (1,56,748), ವಾಟರ್‌ಬೆರಿ (1,07,130) ಮತ್ತು ಸ್ಟ್ಯಾಂಫರ್ಡ್ (92,713). (ಸಿ.ಎಂ.)

**ಕನೊಪನಿಕ್, ಮರ್ಯ:** 1842–1910. ಪೋಲೆಂಡಿನ ಕವಯಿತ್ರಿ ಮತ್ತು ಕತೆಗಾರ್ತಿ. ತಾರುಣ್ಯದಲ್ಲಿ ರೈತರ ಹಾಗೂ ನಗರವಾಸಿ ಕಾರ್ಮಿಕರ ಕಷ್ಟಕಾರ್ಪಣ್ಯಗಳನ್ನು ಚಿತ್ರಿಸಿ ಪದ್ಯಗಳನ್ನು ಬರೆದಳು. ನಾನಾ ರೀತಿಯ ಸನ್ನಿವೇಶಗಳಿಗೆ ತನ್ನ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸುವ ಕವನಗಳನ್ನು ವಿವಿಧ ಶೈಲಿಗಳಲ್ಲೂ ಛಂದಸ್ಸುಗಳಲ್ಲೂ ರಚಿಸಿದಳು. ಅವಳ ಕೃತಿಗಳಲ್ಲಿ ಇಟಾಲಿಯ ಕಾವ್ಯವೃತ್ತ ಎಂಬ ಹೆಸರಿನ ಪ್ರೇಮಗೀತಗಳು ಸುಂದರವಾಗಿವೆ. ವರ್ಣನೆಯ ಕಲೆ ಇವಳಿಗೆ ಸಿದ್ಧಿಸಿತ್ತು. ಇವಳ ಪದ್ಯಗಳಲ್ಲಿ ಚಿತ್ತೈಕಾಗ್ರತೆ, ಆತ್ಮಸಂಯಮ ಸಾಲದು. ಆದರೆ ಇವಳ ಸಣ್ಣಕಥೆಗಳು—ಜರ್ಮನರು, ನಮ್ಮ ನಾಗ್, ಪಟ್ಟಣಿಗರು ಮುಂತಾದುವು ಈ ಅಪವಾದಕ್ಕೆ ಹೊರತಾಗಿವೆ. ಬ್ರೆಜಿಲ್ ದೇಶಕ್ಕೆ ಪೋಲೆಂಡಿನಿಂದ ವಲಸೆ ಹೋದವರು ಅಲ್ಲಿನ ಕಾಡುಮೇಡುಗಳಲ್ಲಿ ಅನುಭವಿಸಿದ ಕಷ್ಟನಷ್ಟಗಳನ್ನೇ ಪ್ರಧಾನ ವಸ್ತುವಾಗಿಟ್ಟುಕೊಂಡು ಬ್ರೆಜಿಲ್‌ನಲ್ಲಿ ಪಾನ್ ಬಾಲ್ಜರ್ ಎಂಬ ಮಹಾಕಾವ್ಯವನ್ನು 1910ರಲ್ಲಿ ರಚಿಸಿದಳು. ಜನತೆಯ ಸಾಮಾಜಿಕ ಹಕ್ಕುಗಳಿಗಾಗಿ ಹೊಡೆದಾಡಿದ ಈಕೆಯ ಬರೆಹಗಳಲ್ಲಿ ಸಾಮಾಜಿಕ ನ್ಯಾಯವೇ ಪ್ರಧಾನ ಗುಣ. (ಎಲ್.ಎಸ್.ಎಸ್. ; ಟಿ.ಎ.ಎಸ್.)

**ಕನೌಜ್ :** ಉತ್ತರಪ್ರದೇಶದ ಫರೂಖಾಬಾದ್ ಜಿಲ್ಲೆಯಲ್ಲಿ ಗಂಗಾನದಿಯ ಬಲದಂಡೆಯ ಮೇಲಿರುವ ಒಂದು ಪ್ರಾಚೀನ ಪಟ್ಟಣ ; ತಹಸೀಲು ಕಾನ್‌ಪುರದ ವಾಯುವ್ಯಕ್ಕೆ, ಅದರಿಂದ 52 ಮೈಲಿ ದೂರದಲ್ಲಿ, ದೆಹಲಿಯ ಹೆದ್ದಾರಿಯಲ್ಲಿದೆ. 1961ರಲ್ಲಿದ್ದಂತೆ ಈ ಪಟ್ಟಣದ ಜನಸಂಖ್ಯೆ 24,646. ತಹಸೀಲಿನ ವಿಸ್ತೀರ್ಣ 393 ಚ.ಮೈ. ; ಜನಸಂಖ್ಯೆ 2,85,784 (1961).

ಕನೌಜ್ ಬಲು ಪುರಾತನ ಪಟ್ಟಣ. ಪ್ರಾಚೀನಕಾಲದಲ್ಲಿ ಇದಕ್ಕೆ ಕಾನ್ಯಕುಬ್ಜ, ಕನ್ಯಾಕುಬ್ಜ ಅಥವಾ ಕನ್ಯಕುಬ್ಜ ಎಂಬ ಹೆಸರಿತ್ತು. ಇತಿಹಾಸದ ಉದ್ಗ್ರಂಥಗಳಲ್ಲಿ ಈ ಹೆಸರನ್ನು ಬಳಸಿರುವುದು ಕಂಡುಬರುತ್ತದೆ. ಮಹೋದಯ (ಮಹೋದಯಾ) ಎಂಬ ಹೆಸರೂ ಇದಕ್ಕಿತ್ತು. ಕಾನ್ಯಕುಬ್ಜ ಮಹೋದಯಗಳೆರಡೂ ಒಂದೇ ಪಟ್ಟಣದ ಹೆಸರುಗಳೆನ್ನಲು ಹಲವು ಕೋಶಗಳಲ್ಲಿ ಉಲ್ಲೇಖಗಳಿವೆ. ಕುಶಸ್ಥಲವೆಂಬ ಹೆಸರೂ ಇದಕ್ಕಿತ್ತು. ಕುಶ ಅಥವಾ ದರ್ಭೆಯ ಹುಲ್ಲಿರುವ ಸ್ಥಳ ಎಂಬ ಕಾರಣದಿಂದ, ಇಲ್ಲವೇ ಕುಶನೆಂಬ ದೊರೆಯ ವಾಸಸ್ಥಳವಾದ್ದರಿಂದ, ಇದಕ್ಕೆ ಈ ಹೆಸರು ಬಂದಿರಬೇಕು. ಈ ನಗರವನ್ನು ಕುಸುಮಪುರವೆಂದು ಕರೆಯಲಾಗುತ್ತಿತ್ತೆಂದೂ ಕಾನ್ಯಕುಬ್ಜವೆಂಬ ಹೆಸರು ಆಮೇಲೆ ಬಂತೆಂದೂ ಯುವಾನ್ ಚ್ವಾಂಗ್ ಹೇಳುತ್ತಾನೆ.

ಕಾನ್ಯಕುಬ್ಜವೆಂಬ ಹೆಸರು ಬಂದುದೇಕೆಂಬ ಬಗ್ಗೆ ವಾಲ್ಮೀಕಿ ರಾಮಾಯಣದಲ್ಲಿ ಸ್ವಾರಸ್ಯವಾದ ಕಥೆಯೊಂದಿದೆ. ಕುಶನೆಂಬ ದೊರೆಯೊಬ್ಬ ವಿದರ್ಭದ ದೊರೆಯ ಮಗಳನ್ನು ಮದುವೆಯಾಗಿದ್ದ. ಅವನಿಗೆ ಕುಶನಾಭ, ಕುಶಾಂಭ, ಅಸೂರ್ತರಾಜ

ಮತ್ತು ವಸು ಎಂಬ ನಾಲ್ವರು ಮಕ್ಕಳಿದ್ದರು. ದೊರೆಯ ಇಚ್ಛೆಯಂತೆ ಈ ನಾಲ್ವರೂ ನಾಲ್ಕು ಪಟ್ಟಣಗಳನ್ನು ನಿರ್ಮಿಸಿದರು. ಕುಶನಾಭ ನಿರ್ಮಿಸಿದ ಪಟ್ಟಣದ ಹೆಸರು ಮಹೋದಯ. ಕುಶನಾಭನಿಗೆ ಪತ್ನಿ ಘೃತಾಚಿಯಲ್ಲಿ ನೂರು ಮಂದಿ ಹೆಣ್ಣುಮಕ್ಕಳಾದರು. ವಾಯು ಅವರ ಸೌಂದರ್ಯಕ್ಕೆ ಮಾರುಹೋಗಿ ಅವರನ್ನೆಲ್ಲ ವಿವಾಹವಾಗ ಬಯಸಿದ. ಇದಕ್ಕೆ ಸಮ್ಮತಿ ದೊರಕದ್ದರಿಂದ ವಾಯು ಕುಪಿತಗೊಂಡು ಅವರನ್ನೆಲ್ಲ ಕುಬ್ಜೆಯರನ್ನಾಗಿ ಮಾಡಿದ. ಆದ್ದರಿಂದಲೇ ಆ ಪಟ್ಟಣಕ್ಕೆ ಕಾನ್ಯಕುಬ್ಜವೆಂಬ ಹೆಸರು ಬಂತು. ಈ ಕಥೆ ನಿಜವಲ್ಲವಾದರೂ ಪಟ್ಟಣದ ಆರ್ಷೇಯತೆಯನ್ನು ಇದು ಸ್ಥಾಪಿಸುತ್ತದೆ. ಅನಂತರ ಕಾನ್ಯಕುಬ್ಜದಲ್ಲಿ ಆಳಿದ ಅನೇಕ ಅರಸರ ಹೆಸರುಗಳನ್ನು ನಾನಾ ಪುರಾಣಗಳಿಂದಲೂ ರಾಮಾಯಣ ಮಹಾಭಾರತಗಳಿಂದಲೂ ಸಂಗ್ರಹಿಸಬಹುದು. ಹೈಹಯರ ದೊರೆ ಅರ್ಜುನನ ಕಾಲದಲ್ಲಿ ಭೂಮಿಯ ಮೇಲೆ—ಕಾನ್ಯಕುಬ್ಜ ಸೀಮೆಯಲ್ಲಿ—ಒಬ್ಬ ಶೂರನಾದ ದೊರೆ ಆಳುತ್ತಿದ್ದನೆಂದೂ ಅವನ ಸೈನ್ಯಶಕ್ತಿ ಅಗಾಧವಾಗಿತ್ತೆಂದೂ ಅವನ ಹೆಸರು ಗಾಧಿಯೆಂದೂ ಹೇಳಲಾಗಿದೆ. ಅವನ ಮಗನೇ ವಿಶ್ವಾಮಿತ್ರ. ಈತನೂ ಕಾನ್ಯಕುಬ್ಜವನ್ನಾಳಿದ. ಪಾಂಡವರಿಗೆ ಅರ್ಧ ರಾಜ್ಯವಿಲ್ಲದಿದ್ದರೂ ಐದು ಊರುಗಳನ್ನಾದರೂ ಕೊಡಬೇಕೆಂದು ಧರ್ಮರಾಯ ದುರ್ಯೋಧನನನ್ನು ಕೇಳಿದಾಗ ಅವುಗಳಲ್ಲಿ ಕುಶಸ್ಥಲವನ್ನೂ ಹೆಸರಿಸಿದ್ದ. ಬುದ್ಧ ತ್ರಯಸ್ತ್ರಿಂಶ ಸ್ವರ್ಗವನ್ನಡರಿದ ಮೇಲೆ ಭೂಮಿಯಲ್ಲಿ ಮತ್ತೆ ಅವತಾರಮಾಡಿದ್ದು ಕಾನ್ಯಕುಬ್ಜದಲ್ಲಿ ಎನ್ನಲಾಗಿದೆ. ಜೀವನದ ದುಃಖ ನಶ್ವರತೆಗಳ ಬಗ್ಗೆ ಅಲ್ಲಿ ಅನಂತರ ಉಪದೇಶ ಮಾಡಿದನಂತೆ.

ಮೌರ್ಯರ ಕಾಲದಲ್ಲಿ ಕನೌಜ್ ಕೂಡ ಅವರ ಆಳ್ವಿಕೆಯ ಪರಿಧಿಯೊಳಕ್ಕೆ ಸೇರಿದ್ದಿರಬೇಕು. ಅಶೋಕನ ಅನಂತರ ಮೌರ್ಯಸಾಮ್ರಾಜ್ಯ ಅವನ ಮಕ್ಕಳಲ್ಲಿ ಹರಿದು ಹಂಚಿಹೋಯಿತು. ಅವರ ಪೈಕಿ ಒಬ್ಬನಾದ ಜಲೌಕ, ಪೂರ್ವದಲ್ಲಿ ಕಾನ್ಯಕುಬ್ಜದವರೆಗೂ ರಾಜ್ಯವಿಸ್ತರಿಸಿದನೆಂದು ಹೇಳಲಾಗಿದೆ.

ಮುಂದೆ ಪತಂಜಲಿಯ (ನೋಡಿ) ಮಹಾಭಾಷ್ಯದಲ್ಲಿ ಕಾನ್ಯಕುಬ್ಜದ ಹೆಸರು ಬರುತ್ತದೆ. ಅಹಿಚ್ಛತ್ರದಲ್ಲಿ ಹುಟ್ಟಿದವಳು ಅಹಿಚ್ಛತ್ರಿ, ಕಾನ್ಯಕುಬ್ಜದಲ್ಲಿ ಹುಟ್ಟಿದವಳು ಕಾನ್ಯಕುಬ್ಜಿ—ಎಂದು ಆತ ಹೇಳುತ್ತಾನೆ. ಎಂದರೆ ಕ್ರಿ.ಪೂ. 2ನೆಯ ಶತಮಾನದಲ್ಲಿ ಕಾನ್ಯಕುಬ್ಜ ಬಹಳ ಪ್ರಸಿದ್ಧವಾಗಿದ್ದಿರಬೇಕು. ಟಾಲೆಮಿಯ ಭೂವಿವರಣೆಯಲ್ಲಿ (ಕ್ರಿ.ಶ.ಸು. 140) ಹೇಳಿರುವ ಕನಗೋಕ, ಕನೋಗಿಜ ಎಂಬ ಸ್ಥಳ ಕಾನ್ಯಕುಬ್ಜವೇ ಆಗಿರಬೇಕೆಂಬುದು ಒಂದು ಊಹೆ.

ಕಾನ್ಯಕುಬ್ಜದ ಬಗ್ಗೆ ಇಷ್ಟಿಷ್ಟು ಖಚಿತ ಐತಿಹಾಸಿಕ ಮಾಹಿತಿ ದೊರಕುವುದು ಕ್ರಿ.ಶ. 5ನೆಯ ಶತಮಾನದಲ್ಲಿ—ಫಾ ಹಿಯಾನನ ಬರೆವಣಿಗೆಯಿಂದ. ಆತ ಇದನ್ನು ಕಿ–ಜೌ–ಯಿ (ಕನೌಜ್) ಎಂದು ಕರೆದಿದ್ದಾನೆ. ಗಂಗಾನದಿಯ ಮೇಲಿದ್ದ ಈ ಪಟ್ಟಣದಲ್ಲಿ ಎರಡು ಸಂಘಾರಾಮಗಳಿದ್ದುವು, ಇದಕ್ಕೆ ಪಶ್ಚಿಮದಲ್ಲೇ ಬುದ್ಧ ಬೋಧಿಸಿದ ಸ್ಥಳ. ಆಗ (ಗುಪ್ತರ ಕಾಲದಲ್ಲಿ) ಇದು ಅಂಥ ದೊಡ್ಡ ಸ್ಥಳವೇನೂ ಆಗಿರಲಿಲ್ಲ.

ಆದರೆ ಕ್ರಿ.ಶ. 636ರಲ್ಲಿ ಹ್ಯುಯೆನ್ ತ್ಸಾಂಗ್ ಇಲ್ಲಿಗೆ ಭೇಟಿ ಕೊಡುವ ವೇಳೆಗೆ ಇದು ಅಗಾಧವಾಗಿ ಬೆಳೆದಿತ್ತು. ಇಲ್ಲಿ ಜನಸಂದಣಿ ಅಧಿಕವಾಗಿತ್ತು. ನೂರಾರು ಹಿಂದೂ ಮತ್ತು ಬೌದ್ಧ ದೇವಾಲಯಗಳೂ ವಿಹಾರಗಳೂ ಇದ್ದುವು. ಗಂಗೆಯ ಬಲತಡಿಯ ಮೇಲೆ ನಾಲ್ಕು ಮೈಲಿ ಹಬ್ಬಿದ್ದ ಈ ನಗರ ರಮ್ಯ ಉದ್ಯಾನಗಳಿಂದಲೂ ಸುಂದರ ಸರೋವರಗಳಿಂದಲೂ ಶೋಭಿತವಾಗಿತ್ತಲ್ಲದೆ ಇದನ್ನು ರಕ್ಷಿಸಲು ಭದ್ರವಾದ ಕೋಟೆಯ ನಿರ್ಮಾಣವಾಗಿತ್ತು. ಈ ಮಹತ್ತರ ಬದಲಾವಣೆಗೆ ಕಾರಣನಾದವ ಚಕ್ರವರ್ತಿ ಹರ್ಷವರ್ಧನ (605–647). ಆತ ಇದನ್ನು ತನ್ನ ರಾಜಧಾನಿಯಾಗಿ ಮಾಡಿಕೊಂಡ. ಹ್ಯುಯೆನ್‌ತ್ಸಾಂಗ್ ಇಲ್ಲಿ ಏಳು ದಿನಗಳ ಕಾಲ ತಂಗಿದ್ದ. ಆ ಸಮಯದಲ್ಲಿ ಹರ್ಷ ಇಲ್ಲೊಂದು ಧರ್ಮಸಮ್ಮೇಳನ ನಡಸಿ ಹಲವರು ಸಾಮಂತರನ್ನೂ ಮಾಂಡಲಿಕರನ್ನೂ ಕರೆಸಿದ್ದ.

ಹೀಗೆ ಕಾನ್ಯಕುಬ್ಜ ಆಗ ವೈಭವದಿಂದ ಮೆರೆಯಿತು. ಮಹೋದಯ ಶ್ರೀ ಎಂಬುದಾಗಿ ಇದು ಹೆಸರು ಗಳಿಸಿತ್ತು. ಹರ್ಷವರ್ಧನನ (ನೋಡಿ) ಅನಂತರ ಹಲವು ಹಿಂದೂ ಅರಸರು ಇದನ್ನು ವಶಪಡಿಸಿಕೊಳ್ಳಲು ಹಾತೊರೆಯುತ್ತಿದ್ದರು. ಆ ಕಾಲದಲ್ಲಿ ಈ ನಗರ ಹಲವಾರು ಏರಿಳಿತಗಳಿಗೆ ಒಳಗಾಯಿತು. ಕ್ರಿ.ಶ. 816ರಿಂದ 1090ರವರೆಗೆ ಆಳಿದ ಪ್ರತೀಹಾರ ದೊರೆಗಳಿಗೂ ಇದು ರಾಜಧಾನಿಯಾಗಿತ್ತು. ಉತ್ತರ ಭಾರತದ ಮುಖ್ಯನಗರಗಳಲ್ಲೊಂದೆನಿಸಿತು. ಬಂಗಾಳದ ದೊರೆ ಧರ್ಮಪಾಲ (ನೋಡಿ) ಸ್ವಲ್ಪಕಾಲ ಇದನ್ನು ಗೆದ್ದುಕೊಂಡಿದ್ದ. ಇದು ತನ್ನ ವಶವಾಗಿತ್ತೆಂದು ಅವನಿಗೆ ಬಹಳ ಹೆಮ್ಮೆಯಾಗಿತ್ತು.

ಕನೌಜಿಗೆ ಅತ್ಯಂತ ದುರ್ದಶೆ ಬರಲಾರಂಭಿಸಿದ್ದು 1018ರಲ್ಲಿ—ಸುಲ್ತಾನ್ ಮಹಮದ್ ಘಸ್ನಿ ಇದರ ಮೇಲೆ ದಾಳಿ ಮಾಡಿ ನಗರವನ್ನು ಲೂಟಿ ಮಾಡಿದಾಗ. ಆ ಸಮಯದಲ್ಲಿ ಇಲ್ಲಿ ಆಳುತ್ತಿದ್ದ ಪ್ರತೀಹಾರ ದೊರೆ ರಾಜಧಾನಿಯನ್ನು ಕನೌಜಿನಿಂದ ಗಂಗಾನದಿಯ ಆಚೆ ದಂಡೆಗೆ ಬದಲಾಯಿಸಿದ. ಪ್ರತೀಹಾರರ ಕೊನೆಯ ದೊರೆ ರಾಜ್ಯಪಾಲ (ನೋಡಿ). ನೆರೆರಾಜ್ಯದ ದೊರೆ ಗಂಡ ಇವನನ್ನು ಪದಚ್ಯುತನನ್ನಾಗಿ ಮಾಡಿದ. ಕನೌಜ್ 12ನೆಯ ಶತಮಾನದಲ್ಲಿ ಗಹರವಾಡ್ ರಜಪೂತರಾದ ರಾಥೋಡರ ಆಳ್ವಿಕೆಗೆ ಒಳಪಟ್ಟಿತು. ಕನೌಜಿನ ಕೊನೆಯ ರಾಥೋಡ್ ದೊರೆ ಜಯಚಂದ (ನೋಡಿ). ಇವನನ್ನು ಷಿಹಾಬುದ್ದೀನ್ ಮಹಮ್ಮದ್ ಗೋರಿ 1194ರಲ್ಲಿ ಸೋಲಿಸಿ ಕೊಂದ. ಅಲ್ಲಿಂದೀಚೆಗೆ ಕನೌಜಿನ ಪ್ರಾಮುಖ್ಯ ನಶಿಸಿ ಹೋಯಿತು. ಮೊಗಲ್ ಚಕ್ರವರ್ತಿ ಹುಮಾಯೂನನಿಗೂ ಷೇರ್‌ಷಾಹನಿಗೂ ಯುದ್ಧ ನಡೆದದ್ದು (1540) ಕನೌಜಿನ ಬಳಿಯಲ್ಲೇ. ಆ ಯುದ್ಧದಲ್ಲಿ ಹುಮಾಯೂನ್ ಸೋತ. ಷೇರ್ ಷಾಹ ಈ ನಗರವನ್ನು ನಾಶಮಾಡಿದ. ಆ ಪುರಾತನ ನಗರವಿದ್ದ ಎಡೆಯಲ್ಲಿ ಈಗ ಹಳೆಯುಳಿಕೆಯ ರಾಶಿಗಳುಂಟು. ಇವು ಸುಮಾರು ನಾಲ್ಕು ಮೈಲಿಗಳ ವ್ಯಾಸದ ಅರ್ಧವೃತ್ತಾಕಾರ ಪ್ರದೇಶದಲ್ಲಿ ಹರಡಿವೆ.

ಅಜಯಪಾಲರಾಜ ಕಟ್ಟಿದ ಕಟ್ಟಡ ಭಗ್ನಾವಶೇಷಗಳಲ್ಲಿ ಮುಖ್ಯವಾದದ್ದು. ಜಯಪಾಲ ಇದನ್ನು ಕಟ್ಟಿದಂತೆ ತೋರುತ್ತದೆ. ಆದರೆ ಮಹಮ್ಮದ್ ಘಸ್ನಿ ಈ ಕಟ್ಟಡವನ್ನು ಕೈವಶ ಮಾಡಿಕೊಂಡ. ಜುಮ್ಮಾಮಸೀದಿಯ ಕಡೆಗೆ ದೃಷ್ಟಿ ಬೀರಿದಾಗ, ಅಲ್ಲಿಯ ಕಂಬಗಳ ಕೆತ್ತನೆಯ ಕೆಲಸ ಕಣ್ಣಿಗೆ ಬೀಳದಿರಲಾರದು. ಕ್ರಿ.ಶ. ಸು. 1400ರಲ್ಲಿ ಜಾನ್‌ಪುರದ ಇಬ್ರಾಹಿಮ್ ಷಾಹ ಈ ಕಟ್ಟಡವನ್ನು ಮಸೀದಿಯನ್ನಾಗಿ ಪರಿವರ್ತಿಸಿದನೆಂದು ಪ್ರತೀತಿ. ಈ ಊರಿನ ವಾಯುವ್ಯ ಭಾಗದಲ್ಲಿ ಬಾಲಾ ಪೀರ ಮತ್ತು ಅವನ ಮಗನಾದ ಷೇಕ್ ಮೆಹಂದಿಯ ಗೋರಿಗಳಿವೆ. ಉಳಿದ ಮಸೀದಿಗಳು ಸುತ್ತಲಿನ ಹೊಲಗಳಲ್ಲಿವೆ.

ಕನೌಜ್ ಈಗ ಹೊಗೆಸೊಪ್ಪಿನ ಮತ್ತು ಸುಗಂಧ ದ್ರವ್ಯಗಳ ತಯಾರಿಕಾ ಕೇಂದ್ರ. ಗುಡ್ಡಗಾಡಿನ ನಡುವೆ ಇರುವ ಈ ಪಟ್ಟಣದ ರಸ್ತೆಗಳು ಇಳಿಜಾರಾಗಿವೆ.

(ಆರ್. ಆರ್. ಎ.)

**ಕನ್ನಂಬಾಡಿ :** ಈಗ ಕೃಷ್ಣರಾಜಸಾಗರವೆಂಬ ಹೆಸರಿನಿಂದ ಪ್ರಸಿದ್ಧವಾಗಿರುವ ಸ್ಥಳ. ಪ್ರಾಚೀನ ಕಾಲದಿಂದಲೂ ಇದು ಸಾಕಷ್ಟು ಪ್ರಾಶಸ್ತ್ಯ ಪಡೆದಿತ್ತು. ಸ್ಥಳ ಪುರಾಣಗಳ ಪ್ರಕಾರ, ಕಣ್ವಮುನಿ ಇಲ್ಲಿ ವಾಸವಾಗಿದ್ದು ಕಣ್ವೇಶ್ವರ ಲಿಂಗವನ್ನು ಇಲ್ಲಿ ಸ್ಥಾಪಿಸಿದ್ದರಿಂದ ಇದಕ್ಕೆ ಕಣ್ವಪುರಿ ಎಂಬ ಹೆಸರೂ ಬಂದಿದೆ. ಹೆಚ್ಚು ಕಡಿಮೆ ರಾಷ್ಟ್ರಕೂಟ ಕಾಲದಿಂದ ಈ ಊರಿನ ಬಗೆಗೆ ಮಾಹಿತಿಗಳು ದೊರೆಯುತ್ತವೆ. ಇಲ್ಲಿ ಕಣ್ವೇಶ್ವರ, ಗೋಪಾಲಕೃಷ್ಣ ಮತ್ತು ಲಕ್ಷ್ಮೀದೇವಿ ದೇವಾಲಯಗಳಿವೆ. ಇವುಗಳಲ್ಲಿ ಕಣ್ವೇಶ್ವರ ದೇವಾಲಯ ಬಹು ಪ್ರಾಚೀನವಾದುದು. ಇದು ಕ್ರಿ.ಶ. ಸುಮಾರು 812ರಲ್ಲಿ ರಾಷ್ಟ್ರಕೂಟ ಮೊದಲನೆಯ ಕೃಷ್ಣನಿಂದ ನಿರ್ಮಿತವಾಗಿದ್ದಿರಬಹುದು, ಗರ್ಭಗೃಹ, ನವರಂಗ, ಸುಕನಾಸಿಗಳುಳ್ಳ ಈ ದೇವಾಲಯದಲ್ಲಿ ಗಣಪತಿ, ಉಮಾಮಹೇಶ್ವರ, ಮಹಿಷಾಸುರಮರ್ದಿನಿ, ಕುಮಾರ ಮೊದಲಾದ ದೇವತೆಗಳ ಶಿಲ್ಪಗಳಿವೆ. ವಿವಿಧ ಕಾಲಗಳಿಗೆ ಸೇರಿದ ನಾಲ್ಕು ಶಾಸನಗಳೂ ಇವೆ. ಗೋಪಾಲ ಕೃಷ್ಣ ದೇವಾಲಯ ದ್ರಾವಿಡ ಮತ್ತು ಚಾಳುಕ್ಯ ವಾಸ್ತುಶೈಲಿಗಳ ಮಿಶ್ರ ಕಟ್ಟಡ. ವಾಸ್ತುಶಿಲ್ಪ ದೃಷ್ಟಿಯಿಂದ ಇದೊಂದು ಸುಂದರ ದೇವಾಲಯ. ವಿಷ್ಣುವಿನ ದಶಾವತಾರಗಳು, ಬ್ರಹ್ಮ, ಸರಸ್ವತಿ, ಹರಿಹರ, ಹಯಗ್ರೀವ ಮುಂತಾದ ದೇವತೆಗಳ ಶಿಲ್ಪಗಳು ನಯನಮನೋಹರವಾಗಿವೆ. ಕೆಲವು ವಿಗ್ರಹಗಳ ಮೇಲ್ಭಾಗದಲ್ಲಿ, ಹೊಯ್ಸಳ ಕಾಲದ ಕನ್ನಡ ಲಿಪಿಯಲ್ಲಿ ಬರೆಯಲಾದ ದೇವತೆಗಳ ಹೆಸರುಗಳಿವೆ. ಗರ್ಭಗೃಹ, ಸುಕನಾಸಿ, ನವರಂಗ, ಮತ್ತು ಮುಖಮಂಡಪವನ್ನುಳ್ಳ ಈ ದೇವಾಲಯದ ಆರು ಅಡಿ ಎತ್ತರದ ಗೋಪಾಲಕೃಷ್ಣ ಮೂರ್ತಿ ಬಹು ಮುದ್ದಾಗಿದೆ. ಇಲ್ಲಿನ ಶಾಸನವೊಂದು ಹೊಯ್ಸಳ ಮೂರನೆಯ ಬಲ್ಲಾಳನ ಕಾಲಕ್ಕೆ ಸೇರಿದ್ದುದರಿಂದ, ಈ ದೇವಾಲಯ ಕ್ರಿ.ಶ. 1300ಕ್ಕಿಂತಲೂ ಮುಂಚೆಯೇ ನಿರ್ಮಾಣವಾಗಿರಬೇಕೆಂದು ಗೊತ್ತಾಗುತ್ತದೆ. ಕ್ರಿ.ಶ. 1606ರಲ್ಲಿ ಈ ಸ್ಥಳವನ್ನು ದೊಡ್ಡಯ್ಯ ಪ್ರಭು ಎಂಬುವನಿಂದ ರಾಜ ಒಡೆಯರು ಗೆದ್ದುಕೊಂಡರು. ಅವರ ಮಗನಾದ ನರಸರಾಜ ಒಡೆಯರು ಈ ದೇವಾಲಯದ ಜೀರ್ಣೋದ್ಧಾರ ಕಾರ್ಯ ಮಾಡಿದರು. ಇಲ್ಲಿರುವ ಮೂರನೆಯ ದೇವಾಲಯ ಲಕ್ಷ್ಮೀದೇವಿ ದೇಗುಲ. ಇದು ಇತ್ತೀಚಿನದಾಗಿದ್ದು ಕ್ರಿ.ಶ. 1818ರಲ್ಲಿ ನಿರ್ಮಿತವಾಯಿತು. ಉಜ್ಜಯಿನಿಯ ಮಹಾಕಾಳಿ ದೇವಾಲಯದ ಮಾದರಿಯಲ್ಲಿ ಈ ದೇವಾಲಯ ನಿರ್ಮಿತವಾಯಿತು ಎಂದು ಶಾಸನವೊಂದು ತಿಳಿಸುತ್ತದೆ. ಈ ಮೂರು ದೇವಾಲಯಗಳೂ ಈಗ ಕಾವೇರಿಯ ನೀರಿನಲ್ಲಿ ಮುಳುಗಿ ಹೋಗಿವೆ.

ಇಲ್ಲಿರುವ ಪಾರಸಿ ಭಾಷೆಯ ಶಾಸನವೊಂದರಿಂದ, ಕ್ರಿ.ಶ. 1794ರಲ್ಲಿ ಟಿಪ್ಪೂ ಸುಲ್ತಾನ ಕಾವೇರಿ ನದಿಗೆ ಎಪ್ಪತ್ತು ಅಡಿ ಎತ್ತರದ ಕಟ್ಟೆಯನ್ನು ಇಲ್ಲಿ ನಿರ್ಮಿಸಿದನೆಂದು ತಿಳಿಯುತ್ತದೆ. ಈಗಿನ ಕೃಷ್ಣರಾಜಸಾಗರ ಕಟ್ಟೆ. ಟಿಪ್ಪೂಸುಲ್ತಾನ ನಿರ್ಮಿಸಿದ್ದ ಕಟ್ಟೆಯ ಸ್ಥಳದಲ್ಲಿಯೇ ಇರುವುದು ಗಮನಿಸಬೇಕಾದ ಅಂಶ. (ಎ.ಎ.ಎನ್.)

ನೋಡಿ—ಕೃಷ್ಣರಾಜಸಾಗರ.

**ಕನ್ನಡ ಅಧ್ಯಯನ ಸಂಸ್ಥೆ :** ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಚಟುವಟಿಕೆಗಳನ್ನೆಲ್ಲ ಕೇಂದ್ರೀಕರಿಸುವ ದೃಷ್ಟಿಯಿಂದ ರೂಪುಗೊಂಡ (1966) ಸಂಸ್ಥೆ. ಇದು ಈ ವಿಶ್ವವಿದ್ಯಾನಿಲಯದಲ್ಲಿ ಆರಂಭವಾದ ಮೊದಲನೆಯ ಸಂಸ್ಥೆಯೂ ಹೌದು. ತನ್ನ ಸ್ವರೂಪ ವ್ಯಾಪ್ತಿಗಳಲ್ಲಿ ಭಾರತೀಯ ಭಾಷೆಯೊಂದರ ಅಧ್ಯಯನಕ್ಕೆ ಈ ಸಂಸ್ಥೆ ವಿಶಿಷ್ಟವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಚರಿತ್ರೆಯಲ್ಲಿ ಮತ್ತು ಕನ್ನಡ ಭಾಷಾಸಾಹಿತ್ಯಗಳ ಚಟುವಟಿಕೆಗಳ ಇತಿಹಾಸದಲ್ಲಿ ಅಧ್ಯಯನ ಸಂಸ್ಥೆ ಅಸ್ತಿತ್ವಕ್ಕೆ ಬಂದದ್ದು ಮಹತ್ತ್ವಪೂರ್ಣವಾದ ಪರಿಣಾಮಕಾರಿಯಾದ ಘಟನೆಯಾಗಿದೆ. ಶಿಕ್ಷಣದ ಸರ್ವಹಂತಗಳಲ್ಲಿಯೂ ಶಿಕ್ಷಣಮಾಧ್ಯಮವಾಗಿ, ಆಡಳಿತದ ಸರ್ವಸ್ತರಗಳಲ್ಲಿಯೂ ಆಡಳಿತ ಭಾಷೆಯಾಗಿ, ಕನ್ನಡ ನಾಡಿನ ಜನಜೀವನದಲ್ಲಿ ಪ್ರಥಮ ಭಾಷೆಯಾಗಿ ಕನ್ನಡಕ್ಕೆ ಗೌರವದ ಸ್ಥಾನಮಾನಗಳು ಲಭಿಸಬೇಕೆಂಬ ಸಂಕ್ರಮಣ ಕಾಲದಲ್ಲಿ ಕನ್ನಡ ಅಧ್ಯಯನ ಸಂಸ್ಥೆ ಪ್ರಾರಂಭವಾಯಿತು. ಬೋಧನೆ, ಸಂಶೋಧನೆ, ಸಂಪಾದನೆಗಳೊಂದಿಗೆ ಬೇರೆ ಭಾಷೆಗಳಿಂದ ಬಗೆಬಗೆಯಾದ ಗ್ರಂಥಗಳನ್ನು ಕನ್ನಡಕ್ಕೆ ತರಬೇಕು, ಕನ್ನಡದ ಶ್ರೇಷ್ಠ ಕೃತಿಗಳನ್ನು ಇತರ ಭಾಷೆಗಳವರಿಗೆ ಪರಿಚಯಿಸಬೇಕು, ಇನ್ನೂ ಬೆಳಕಿಗೆ ಬಾರದ ಪ್ರಾಚೀನ ಗ್ರಂಥಗಳನ್ನು ಶಾಸ್ತ್ರೀಯವಾಗಿ ಪ್ರಕಟಿಸಬೇಕು, ಜಾನಪದದಂಥ ಮೂಲೆಗುಂಪಾದ ವಿಷಯಗಳನ್ನು ಅಧ್ಯಯನದ ವ್ಯಾಪ್ತಿಗೆ ಒಳಪಡಿಸಬೇಕು, ಭಾರತೀಯ ಸಾಹಿತ್ಯದ ಹಿನ್ನೆಲೆಯಲ್ಲಿ ಕನ್ನಡದ ವಲಯವನ್ನು ವಿಸ್ತೃತಗೊಳಿಸಬೇಕು, ಕನ್ನಡವನ್ನು ಆಧುನಿಕ ಕಾಲಕ್ಕೆ ಅನುಗುಣವಾದ ಭಾಷೆಯನ್ನಾಗಿ ಬಲಪಡಿಸಬೇಕು—ಇವೇ ಮೊದಲಾದ ಉದ್ದೇಶಗಳಿಗನುಗುಣವಾಗಿ ಸುವ್ಯವಸ್ಥಿತವಾದ ಯೋಜನೆಗಳನ್ನು ಕೈಗೊಂಡು, ಅವನ್ನು ಶ್ರದ್ಧೆನಿಷ್ಠೆಗಳಿಂದ ಕಾರ್ಯ ರೂಪಕ್ಕೆ ತರುವ, ಕನ್ನಡದ ವಿವಿಧ ಮುಖ ಬೆಳೆವಣಿಗೆಗೆ ಉತ್ತೇಜನ ನೀಡುವ, ನಾನಾ ಕಡೆ ಹಂಚಿಕೊಂಡ ಶಕ್ತಿಗಳನ್ನೆಲ್ಲ ಒಂದೆಡೆ ಸೇರಿಸುವ ರಂಗವಾಗಿದೆ, ಕನ್ನಡ ಅಧ್ಯಯನ ಸಂಸ್ಥೆ.

ಮೈಸೂರು ವಿಶ್ವವಿದ್ಯಾನಿಲಯದ ಸುವರ್ಣಮಹೋತ್ಸವದ ಅಂಗವಾಗಿ ನಡೆದ ಕನ್ನಡ ಲೇಖಕರ ಸಮ್ಮೇಳನವನ್ನು ಉದ್ಘಾಟಿಸುವ ಸಮಯದಲ್ಲಿಯೇ (ಡಿಸೆಂಬರ್ 8, 1966), ಕುಲಪತಿ ಕೆ. ಎಲ್. ಶ್ರೀಮಾಲಿ ಅವರು ಕನ್ನಡ ಅಧ್ಯಯನ ಸಂಸ್ಥೆಯನ್ನೂ ಉದ್ಘಾಟಿಸಿದರು. ಸಮ್ಮೇಳನದಲ್ಲಿ ಭಾಗವಹಿಸಿದ್ದ ನಾಡಿನ ಉದ್ದಾಮ ಸಾಹಿತಿಗಳೆದುರಿಗೆ ಮಾತನಾಡುತ್ತ ಅವರು ಹೇಳಿದರು : ಕನ್ನಡ ಅಧ್ಯಯನ ಸಂಸ್ಥೆ ಈ ನಾಡಿನ ಭಾಷೆ, ಸಾಹಿತ್ಯ, ಸಂಸ್ಕೃತಿ ಸಂಶೋಧನೆ ಹಾಗೂ ಶಿಕ್ಷಣ ಕ್ಷೇತ್ರದಲ್ಲಿ ನಂದಾದೀಪವಾಗಲೆಂದೂ ಸಾಹಿತ್ಯ ಕ್ಷೇತ್ರದ ಅಧ್ವರ್ಯುಗಳಾದ ತಾವೂ ತಮ್ಮ ಮುಂದಿನ ಪೀಳಿಗೆಗಳೂ ಅದಕ್ಕೆ ಸದಾ ಸಹಕಾರದ ಎಣ್ಣೆಯನ್ನು ತುಂಬುವ ಅವಕಾಶವಿರಲೆಂದೂ ನಾನು ಹೃತ್ಪೂರ್ವಕವಾಗಿ ಹಾರೈಸುತ್ತೇನೆ. ಶ್ರೀಮಾಲಿಯವರ ಮಾತುಗಳು ಕನ್ನಡದ ಸರ್ವತೋಮುಖವಾದ ಅಭ್ಯುದಯಕ್ಕೆ ಇಂಥದೊಂದು ಸಂಸ್ಥೆಯ ಸ್ಥಾಪನೆಯ ಅಗತ್ಯವಾಗಿದ್ದುದನ್ನು ಸ್ಪಷ್ಟಪಡಿಸುತ್ತವೆ. ಇದೇ ಸಂದರ್ಭದಲ್ಲಿ ಸಂಸ್ಥೆಯ ನಿರ್ದೇಶಕರಾಗಿದ್ದ ದೇ. ಜವರೇಗೌಡರು ಮಾತನಾಡುತ್ತ ಹೀಗೆ ಹೇಳಿದರು : 'ಈ ಸಂಸ್ಥೆಯೊಂದು ಭೂಮ ಬಂಧುರ ವಿಸ್ಮಯವಾಗಿ ಕರ್ಣಾಟಕ ಸಾಹಿತ್ಯ ಸಂಸ್ಕೃತಿಗಳ ತಲಕಾವೇರಿಯಾಗಿ ಕನ್ನಡಿಗರ ಪವಿತ್ರ ಯಾತ್ರಾಸ್ಥಾನವಾಗಿ ನಾಡಿನ ಪುಣ್ಯವೇ ಸಾಕಾರಗೊಂಡಂತೆ ವಿಕಾಸಗೊಳ್ಳುವುದರಲ್ಲಿ ಸಂಶಯವಿಲ್ಲ.'

ವಿಶ್ವವಿದ್ಯಾನಿಲಯದ ಓರಿಯೆಂಟಲ್ ರಿಸರ್ಚ್ ಇನ್ಸ್‌ಟಿಟ್ಯೂಟಿನ ಕನ್ನಡ ಸಂಪಾದನ ವಿಭಾಗವನ್ನು ಬೇರ್ಪಡಿಸಿ, ಕನ್ನಡ ಸ್ನಾತಕೋತ್ತರ ಬೋಧನ ಮತ್ತು ಸಂಶೋಧನ ವಿಭಾಗಗಳೊಡನೆ ಕೂಡಿಸುವುದರೊಂದಿಗೆ ಕನ್ನಡ ಅಧ್ಯಯನ ಸಂಸ್ಥೆ ಆರಂಭವಾಯಿತು. ಆಮೇಲೆ ಅದಕ್ಕೆ ಅನೇಕ ವಿಭಾಗಗಳು ಹೊಸದಾಗಿ ಕೂಡಿಕೊಂಡುವು.

ಅಧ್ಯಯನ ಸಂಸ್ಥೆಯ ಬೋಧನ ವಿಭಾಗದಲ್ಲಿ ಕನ್ನಡ ಎಂ.ಎ. ತರಗತಿಗಳಲ್ಲದೆ ಸಂಶೋಧನೆಯಲ್ಲಿ ಆಸಕ್ತರಾದವರಿಗೆ ಅವರ ಎಂ.ಎ. ಪದವಿಯ ಅನಂತರ ವಿಶೇಷ ವಿದ್ಯಾರ್ಥಿ ವೇತನಗಳನ್ನು ನೀಡಿ ಸಂಶೋಧನೆ ನಡೆಸಲು ಅವಕಾಶಗಳನ್ನು ಕಲ್ಪಿಸಲಾಗಿದೆ. 'ಕನ್ನಡೇತರರಿಗಾಗಿ ಕನ್ನಡದಲ್ಲಿ ಸರ್ಟಿಫಿಕೇಟ್ ಹಾಗೂ ಡಿಪ್ಲೊಮಾ ತರಗತಿಗಳು, ಭಾಷಾಂತರದಲ್ಲಿ ಹಾಗೂ ಭಾರತೀಯ ಸಾಹಿತ್ಯದಲ್ಲಿ ಸ್ನಾತಕೋತ್ತರ ಡಿಪ್ಲೊಮಾ ತರಗತಿಗಳು ಸಂಸ್ಥೆಯ ಆಶ್ರಯದಲ್ಲಿ ನಡೆಯುತ್ತಿವೆ. ಗ್ರಂಥ ಸಂಪಾದನ ವಿಭಾಗದಲ್ಲಿ ಸುಮಾರು ಐದು ಸಾವಿರ ಹಸ್ತಪ್ರತಿಗಳ ಸಂಗ್ರಹವಿದ್ದು, ಅಪ್ರಕಟಿತ ಕೃತಿಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ, ವಿವರವಾದ ಪೀಠಿಕೆ ಪ್ರಸ್ತಾವನೆಗಳೊಡನೆ ಪ್ರಕಟಿಸಲಾಗುತ್ತಿದೆ. ಈ ವಿಭಾಗದ ಕಾರ್ಯಕರ್ತರು ನಾಡಿನ ಮೂಲೆಮೂಲೆಗಳಿಗೆ ಹೋಗಿ ಪ್ರತಿವರ್ಷವೂ ಹೊಸಹೊಸ ಹಸ್ತಪ್ರತಿಗಳನ್ನು ಸಂಪಾದಿಸುತ್ತಾರೆ. 1891ರಿಂದಲೂ ಸಂಗ್ರಹವಾಗುತ್ತಿರುವ ಹಸ್ತಪ್ರತಿಗಳನ್ನು ಜೋಪಾನವಾಗಿ ಕಾಪಾಡಿಕೊಂಡು ಬರುವ ಹೊಣೆ ಸಂಪಾದನ ವಿಭಾಗದ್ದು. ಸಂಸ್ಥೆಯಲ್ಲಿಲ್ಲದ, ಇದ್ದರೂ ಜೀರ್ಣವಾಗಿ ಹೋಗುತ್ತಿರುವ, ಹಸ್ತಪ್ರತಿಗಳನ್ನು ಮೈಕ್ರೊ ಫಿಲ್ಮ್‌ಗಳಲ್ಲಿ ಶಾಶ್ವತಗೊಳಿಸುವ ಕಾರ್ಯಕ್ರಮವನ್ನೂ ಕೈಗೊಳ್ಳಲಾಗಿದೆ.

ಕನ್ನಡ ವಿಶ್ವಕೋಶವನ್ನು ಸಿದ್ಧಪಡಿಸುವ ಜವಾಬ್ದಾರಿ ಅಧ್ಯಯನ ಸಂಸ್ಥೆಗೆ ಸೇರಿದ್ದು. ವಿಶ್ವಕೋಶ ವಿಭಾಗದಲ್ಲಿ ಎರಡು ಯೋಜನೆಗಳಿವೆ: ಒಂದು–ಹದಿನಾಲ್ಕು ಸಂಪುಟಗಳ ಸಾಮಾನ್ಯ ವಿಶ್ವಕೋಶ; ಇನ್ನೊಂದು ಮೂವತ್ತು ಸಂಪುಟಗಳ ವಿಷಯ ವಿಶ್ವಕೋಶ. ಇಪ್ಪತ್ತೈದು ಲಕ್ಷ ರೂಪಾಯಿಗಳ ಮೊದಲ ಯೋಜನೆ ಅನೇಕ ವರ್ಷಗಳ ಹಿಂದೆಯೇ ರೂಪಿತವಾಗಿದ್ದು ರಾಜ್ಯದ ಸಂಸ್ಕೃತಿ ಪ್ರಸಾರ ಇಲಾಖೆ ಅದರ ಮೇಲ್ವಿಚಾರಣೆಯನ್ನು ನೋಡಿಕೊಳ್ಳುತ್ತಿತ್ತು. 1968ರಲ್ಲಿ ಅದರ ಸಮಗ್ರ ಕಾರ್ಯವನ್ನು ಮೈಸೂರು ಸರ್ಕಾರ ವಿಶ್ವವಿದ್ಯಾನಿಲಯಕ್ಕೆ ವಹಿಸಿಕೊಟ್ಟಿತು. ಈ ಕಾರ್ಯವನ್ನು ಸಂಸ್ಥೆ ನಿರ್ವಹಿಸಿಕೊಂಡಮೇಲೆ ಪ್ರಗತಿ ತ್ವರಿತಗೊಂಡು ಈಗ ವಿಶ್ವಕೋಶದ ಮೂರು ಸಂಪುಟಗಳು ಪ್ರಕಟವಾಗಿವೆ. ಹದಿನೈದು ವರ್ಷಗಳ ಅವಧಿಯ ಎರಡನೆಯ ಯೋಜನೆ ಸುಮಾರು ತೊಂಬತ್ತು ಲಕ್ಷ ರೂಪಾಯಿಗಳದ್ದಿದ್ದು ಅದರ ನೀಲನಕಾಶೆಯನ್ನು ಸಂಪೂರ್ಣವಾಗಿ ಅಧ್ಯಯನ ಸಂಸ್ಥೆಯೇ ತಯಾರಿಸಿದೆ. ಅದನ್ನು ಮೈಸೂರು ಸರ್ಕಾರ ಸಂಪೂರ್ಣವಾಗಿ ಒಪ್ಪಿಕೊಂಡಿದೆ. (ನೋಡಿ—ಕನ್ನಡದಲ್ಲಿ ವಿಶ್ವಕೋಶಗಳು)

ಅಧ್ಯಯನ ಸಂಸ್ಥೆಯ ಮತ್ತೊಂದು ವಿಭಾಗ ಭಾಷಾಂತರ ಮತ್ತು ಪಠ್ಯಪುಸ್ತಕಗಳದ್ದು. ವಿಜ್ಞಾನ ಹಾಗೂ ಸಾಹಿತ್ಯೇತರ ಗ್ರಂಥಗಳ ಪ್ರಕಟಣೆಯ ಮೂಲಕ ಕನ್ನಡ ಪರಿಪುಷ್ಟವಾಗಬೇಕು, ಕನ್ನಡದಲ್ಲಿಯೆ ಸಕಲ ಜ್ಞಾನವಾಹಿನಿಯೂ ಹರಿಯಬೇಕು —ಎಂಬ ಹಿನ್ನೆಲೆಯಲ್ಲಿ ರಾಜ್ಯ ಹಾಗೂ ಕೇಂದ್ರ ಸರ್ಕಾರಗಳ ನೆರವಿನಿಂದ ಈ ವಿಭಾಗ ಆರಂಭವಾಯಿತು. ಕನ್ನಡ ಸಾಹಿತ್ಯದ ಅಭಿವೃದ್ಧಿಯ ಜೊತೆಗೆ ಕನ್ನಡ ಮಾಧ್ಯಮದ ಯಶಸ್ಸಿಗೂ ಪೂರಕವಾಗುವಂತೆ ಗ್ರಂಥರಚನೆ, ಭಾಷಾಂತರ ಮತ್ತು ಪ್ರಕಟಣೆಗಳ ಜವಾಬ್ದಾರಿಯನ್ನು ಈ ವಿಭಾಗ ನಿರ್ವಹಿಸುತ್ತಿದೆ. ಈ ದಿಕ್ಕಿನಲ್ಲಿ ಸಮರ್ಥ ಲೇಖಕರಿಂದ ಮೂಲಗ್ರಂಥಗಳನ್ನು ಬರೆಸುವುದು, ತಜ್ಞರಿಂದ ಉತ್ತಮ ಗ್ರಂಥಗಳನ್ನು ಅನುವಾದ ಮಾಡಿಸುವುದು ಅಲ್ಲದೆ ವಿಭಾಗದ ಕಾರ್ಯಕರ್ತರೇ ಇಂಥ ಕೆಲಸಗಳನ್ನೂ ಮಾಡುತ್ತಿದ್ದಾರೆ. ಮೈಸೂರು ವಿಶ್ವವಿದ್ಯಾನಿಲಯದ ಗೆಜೆಟ್ಟಿನ ಕನ್ನಡ ಆವೃತ್ತಿಯನ್ನು ಪ್ರಕಟಿಸುವುದೂ ಈ ವಿಭಾಗದ ಜವಾಬ್ದಾರಿಯಾಗಿದೆ.

ವಿಶ್ವವಿದ್ಯಾನಿಲಯದ ಧನಸಹಾಯ ಆಯೋಗದ ನೆರವಿನಿಂದ ಹರಿದಾಸ ಸಾಹಿತ್ಯವನ್ನು ಸಂಗ್ರಹಿಸಿ ಶಾಸ್ತ್ರೀಯವಾಗಿ ಸಂಪಾದಿಸಿ ಪ್ರಕಟಿಸುವ ಕೆಲಸವೂ ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ನಡೆದಿದೆ. ಮೈಸೂರು ರಾಜ್ಯದ ನಾನಾ ಪ್ರದೇಶಗಳಲ್ಲಿ ಪ್ರವಾಸ ಮಾಡಿ ಅನೇಕ ಅಮೂಲ್ಯ ಹಸ್ತಪ್ರತಿಗಳನ್ನು ಸಂಗ್ರಹಿಸಲಾಗಿದೆ ; ಜೊತೆಗೆ ಅಪೂರ್ವವಾದ ಕೀರ್ತನೆಗಳನ್ನು ಧ್ವನಿಮುದ್ರಿಸಿಕೊಂಡು ಬರಲಾಗಿದೆ. ಈ ಯೋಜನೆಯಲ್ಲಿ ಹರಿದಾಸರಲ್ಲಿ ಮೊದಲಿಗರಾದ ಶ್ರೀಪಾದರಾಯರ ರಚನೆಗಳನ್ನು ಅಚ್ಚಿಗೆ ಸಿದ್ಧಪಡಿಸಲಾಗಿದ್ದು ಅದು ಇನ್ನೇನು ಪ್ರಕಟವಾಗುವುದರಲ್ಲಿದೆ. ಹರಿದಾಸ ಸಾಹಿತ್ಯ ಕೋಶವನ್ನೂ ಪಾರಿಭಾಷಿಕ ಶಬ್ದಕೋಶವನ್ನೂ ಹರಿದಾಸ ಸಾಹಿತ್ಯ ವಿಮರ್ಶೆಯನ್ನೂ ಪ್ರಕಟಿಸುವ ಯೋಜನೆಯನ್ನು ರೂಪಿಸಲಾಗಿದೆ.

ಕನ್ನಡ ಎಂ. ಎ. ತರಗತಿಗಳ ಪಠ್ಯಕ್ರಮದಲ್ಲಿ ಐಚ್ಛಿಕ ಆಧಾರದ ಮೇಲೆ ಜಾನಪದ ಅಧ್ಯಯನಕ್ಕೆ ಅವಕಾಶ ಕಲ್ಪಿಸಿರುವುದಲ್ಲದೆ ಅದರ ಸಕ್ರಮ ಅಧ್ಯಯನ, ಸಂಶೋಧನಗಳಿಗೆ ನೆರವಾಗುವಂತೆ ಜಾನಪದ ವಸ್ತು ಸಂಗ್ರಹಾಲಯವೊಂದನ್ನು ವ್ಯವಸ್ಥೆಗೊಳಿಸಿರುವುದು ಸಂಸ್ಥೆಯ ಹೆಚ್ಚಳ. ರಾಷ್ಟ್ರದಲ್ಲಿಯೇ ಈ ಬಗೆಯ ಸಂಗ್ರಹಾಲಯಗಳು ವಿರಳವಾಗಿವೆ. ಈಗ ಇಲ್ಲಿ ಸುಮಾರು ನಾಲ್ಕು ಸಾವಿರ ಜಾನಪದ ವಸ್ತುಗಳನ್ನು ಸಂಗ್ರಹಿಸಿ, ವರ್ಗೀಕರಿಸಿ ಪ್ರದರ್ಶಿಸಲಾಗಿದೆ. ಜನಪದ ಸಾಹಿತ್ಯವನ್ನು ಸಂಗ್ರಹಿಸಿ ಸಂಪಾದಿಸಿ ಪ್ರಕಟಿಸುವುದೂ ಬಗೆಬಗೆಯ ವಾಕ್‌ಸಂಪ್ರದಾಯಗಳನ್ನು ಧ್ವನಿಮುದ್ರಿಸಿಕೊಳ್ಳುವುದೂ ಈ ವಿಭಾಗದ ಕಾರ್ಯವಾಗಿದೆ. ಕನ್ನಡ ಲೇಖಕರು ಮತ್ತು ಕಲಾವಿದರನ್ನು ಕುರಿತ ವಸ್ತು ಸಂಗ್ರಹ ವಿಭಾಗವೊಂದನ್ನು ಈಚೆಗೆ ಪ್ರಾರಂಭಿಸಲಾಗಿದೆ.

ಅಧ್ಯಯನ ಸಂಸ್ಥೆಯ ಸಾಹಿತ್ಯಿಕ ಚಟುವಟಿಕೆಗಳಲ್ಲಿ ಸಮ್ಮೇಳನಗಳೂ ವಿಚಾರ ಗೋಷ್ಠಿ, ಸಂಕಿರಣಗಳೂ ಮುಖ್ಯವಾಗಿವೆ. ವಿಶೇಷ ಸಂದರ್ಭಗಳಲ್ಲಿ ವಿವಿಧವಾದ ಸಮ್ಮೇಳನಗಳನ್ನು ಸಂಸ್ಥೆ ಕೂಡಿಸಿದೆ. ರಾಷ್ಟ್ರೀಯ ಮಟ್ಟದ ಗೋಷ್ಠಿಗಳನ್ನೂ ಸಂಸ್ಥೆಯ ಆಶ್ರಯದಲ್ಲಿ ನಡೆಸಲಾಗಿದೆ. ಇವರಿಂದ ಕನ್ನಡ ನಾಡಿನ ಮಾತ್ರವಲ್ಲ ಇಡೀ ದೇಶದ ಲೇಖಕರೊಡನೆ, ಸಂಶೋಧಕರೊಡನೆ, ವಿಮರ್ಶಕರೊಡನೆ ಪತ್ರಿಕೋದ್ಯೋಗಿಗಳೊಡನೆ ಸಂಸ್ಥೆಯ ಸಂಬಂಧ ಜೀವಂತವಾಗಿದೆ. ಹೆಸರಾಂತ ಹಿರಿಯ ಲೇಖಕರ ಸನ್ಮಾನ ಸಮಾರಂಭಗಳೂ ಕಣ್ಮರೆಯಾದ ಸಾಹಿತಿಗಳ ನೆನಪಿನ ಉತ್ಸವಗಳೂ ಅಧ್ಯಯನ ಸಂಸ್ಥೆಯ ವಿಶೇಷ ಕಾರ್ಯಕ್ರಮಗಳಾಗಿವೆ. ಲೇಖಕರ ಹೆಸರಿನಲ್ಲಿ ಸಮಾರಂಭಗಳು ನಡೆದಾಗ ಆ ಲೇಖಕರ ಕೃತಿಗಳನ್ನು ಕುರಿತು ಗೋಷ್ಠಿಗಳನ್ನು ನಡೆ

ಗೋಷ್ಠಿಯ ಕಾರ್ಯ ಕಲಾಪಗಳನ್ನು ಗ್ರಂಥರೂಪದಲ್ಲಿ ಪ್ರಕಟಿಸುವುದು ಸಂಸ್ಥೆ ಆರಂಭಿಸಿರುವ ಒಂದು ಸಂಪ್ರದಾಯವಾಗಿದೆ.

ಕನ್ನಡ ಅಧ್ಯಯನ ಸಂಸ್ಥೆಯ ಎದುರಿಗೆ ಇನ್ನೂ ಅನೇಕ ಯೋಜನೆಗಳಿವೆ. ದಿವಂಗತ ರೈಸ್ ಅವರು ಸಿದ್ಧಪಡಿಸಿದ ಎಪಿಗ್ರಾಫಿಯ ಕರ್ಣಾಟಿಕ ಸಂಪುಟಗಳನ್ನು ಪರಿಷ್ಕರಿಸಿ ಪುನರ್ಮುದ್ರಿಸುವ ಯೋಜನೆಯೊಂದನ್ನು ರಾಜ್ಯ ಸರ್ಕಾರ ಈಚೆಗೆ ಈ ಸಂಸ್ಥೆಗೆ ವಹಿಸಿದೆ. ದಕ್ಷಿಣ ಭಾರತ ಅಧ್ಯಯನ ಹಾಗೂ ಭಾಷಾ ವಿಜ್ಞಾನಗಳಲ್ಲಿ ಪ್ರತ್ಯೇಕವಾಗಿ ಎಂ. ಎ. ತರಗತಿಗಳನ್ನೂ ಜಾನಪದದಲ್ಲಿ ಡಿಪ್ಲೊಮಾ ತರಗತಿಗಳನ್ನೂ ತೆರೆಯಲು ಯೋಜಿಸಲಾಗಿದೆ. ಅನೇಕ ಸಂಶೋಧನ ಯೋಜನೆಗಳನ್ನು ಸಂಸ್ಥೆ ಹೊಂದಿದ್ದು, ಬೃಹತ್ಪ್ರಮಾಣದಲ್ಲಿ ಕನ್ನಡ ಸಾಹಿತ್ಯ ಚರಿತ್ರೆಯೊಂದನ್ನು ರಚಿಸುವುದು ಅವುಗಳಲ್ಲಿ ಮುಖ್ಯವಾದುದಾಗಿದೆ. ಕನ್ನಡದ ಉಪಭಾಷಾ ಸಮೀಕ್ಷೆಯ ಕಿರುಯೋಜನೆಯೊಂದರ ಅಂಗವಾಗಿ, ವೃತ್ತಿ ಪದಕೋಶಗಳನ್ನು ಈಗ ಸಿದ್ಧಪಡಿಸಲಾಗುತ್ತಿದೆ. ಭಾಷಾ ಪ್ರಯೋಗಶಾಲೆಯ ಸ್ಥಾಪನೆಗೆ ತೀವ್ರ ಗಮನ ಕೊಡಲಾಗುತ್ತಿದೆ.

ಕನ್ನಡ ಅಧ್ಯಯನ ಸಂಸ್ಥೆ ಮಾನಸ ಗಂಗೋತ್ರಿಯಲ್ಲಿ ಸ್ವಂತದ್ದೇ ಆದ ಕಟ್ಟಡವನ್ನು ಹೊಂದಿದ್ದು, ವಿದ್ಯಾರ್ಥಿ ಸಂಶೋಧಕರಿಗೆ ಉಪಯೋಗವಾಗುವ ತನ್ನದೇ ಅತ್ಯುತ್ತಮ ಪುಸ್ತಕ ಭಂಡಾರವೊಂದನ್ನು ಪಡೆದಿದೆ.

ದೇ. ಜವರೇಗೌಡರು ಈ ಸಂಸ್ಥೆಯ ಮೊದಲ ನಿರ್ದೇಶಕರಾಗಿದ್ದರು (ಅಕ್ಟೋಬರ್ 31. 1969ರ ವರೆಗೆ). ಈಗ ಹಾ. ಮಾ. ನಾಯಕರು ಅದರ ನಿರ್ದೇಶಕರಾಗಿದ್ದಾರೆ. ಈಚೆಗೆ ಈ ಸಂಸ್ಥೆಯ ಮಾದರಿಯಲ್ಲೇ ಬೇರೆ ವಿಶ್ವವಿದ್ಯಾನಿಲಯಗಳಲ್ಲೂ ಅಧ್ಯಯನ ಸಂಸ್ಥೆಗಳನ್ನು ಸ್ಥಾಪಿಸುವ ಮಾತು ಕೇಳಿ ಬರುತ್ತಿದೆ. *

**ಕನ್ನಡ ಅರಸುಮನೆತನಗಳು—ಹೊರನಾಡಿನಲ್ಲಿ:** ಭವ್ಯವೂ ಸ್ಫೂರ್ತಿಪ್ರದವೂ ಆದ ಚರಿತ್ರೆಯನ್ನೂ ಪರಂಪರೆಗಳನ್ನೂ ಸೃಷ್ಟಿಸಿರುವ ಕನ್ನಡ ನಾಡಿನ ಅರಸುಮನೆತನಗಳ ಕೆಲವರು ಕರ್ಣಾಟಕದ ಹೊರಗಣ ಪ್ರಾಂತ್ಯಗಳಲ್ಲೂ ನೆಲೆಸಿ ರಾಜ್ಯಗಳನ್ನು ಕಟ್ಟಿ ಸಾಹಸಗಳನ್ನು ಮೆರೆದದ್ದೂ ಉಂಟು. ಇಂಥ ಅನೇಕ ನಾಯಕರ, ರಾಜವಂಶಗಳ ವೃತ್ತಾಂತಗಳಲ್ಲಿ ಮುಖ್ಯವಾದ ಕೆಲವನ್ನು ಮುಂದೆ ಕೊಡಲಾಗಿದೆ :

**ಕಳಿಂಗ ನಾಡಿನ ಗಂಗರು :** ಗಂಗ ವಂಶದ ಅರಸರು ಮೈಸೂರು ಭಾಗದಲ್ಲಿ ಆಳಿದರು. ಇವರನ್ನು ಇತಿಹಾಸಕಾರರು ಪಶ್ಚಿಮ ಗಂಗರು ಎಂದು ಕರೆದಿದ್ದಾರೆ. ಈ ರಾಜವಂಶಕ್ಕೆ ಸಂಬಂಧಿಸಿದವರಾದ ಗಂಗ ಅರಸರು ಕಳಿಂಗ ನಾಡಿನಲ್ಲಿ ಎಂದರೆ ಒರಿಸ್ಸದಲ್ಲಿಯೂ ರಾಜ್ಯಭಾರ ಮಾಡಿದರು. ಇವರನ್ನು ಪೂರ್ವದ ಗಂಗರು ಎಂದು ಕರೆಯಲಾಗಿದೆ. ಇವರಲ್ಲಿ ಮೂರು ಮನೆತನಗಳನ್ನು ಗುರುತಿಸಲಾಗಿದೆ. ಒಂದನೆಯದು ಕಳಿಂಗದ ಗಂಗರದು, ಎರಡನೆಯದು ಶ್ವೇತಕ ಗಂಗರದು, ಮೂರನೆಯದು ಉತ್ತರಕಾಲೀನ ಸಮ್ರಾಟ ಗಂಗರ ಮನೆತನ.

ಒಂದನೆಯ ಗಂಗರು ಪ್ರಾಚೀನರು. ಕ್ರಿ.ಶ.ಸು. ಐದನೆಯ ಶತಮಾನದ ಅಂತ್ಯಭಾಗದಿಂದ ಆಳಿದರು. ಇವರ ಕುಲ ಇಕ್ಷ್ವಾಕು. ಇವರ ರಾಜಧಾನಿ ಕಳಿಂಗನಗರ—ಗಂಜಾಂ ಜಿಲ್ಲೆಯಲ್ಲಿರುವ ಇಂದಿನ ಮುಖಲಿಂಗಂ ಪಟ್ಟಣ. ಮಹೇಂದ್ರಗಿರಿಯ ಶಿಖರದ ಮೇಲೆ ಪ್ರತಿಷ್ಠಿತನಾದ ಗೋಕರ್ಣೇಶ್ವರ ಶಿವ ಇವರ ಕುಲದೈವ. ಈ ವಂಶದ ಸಂಸ್ಥಾಪಕ ಮಹಾರಾಜ ಇಂದ್ರವರ್ಮ. ಈತ ತ್ರಿಕಲಿಂಗಾಧಿಪತಿ ಎಂಬ ಪ್ರಶಸ್ತಿ ಪಡೆದಿದ್ದ. ಈ ಅರಸರ ಮೂಲಕ ಒಂದು ಕಾಲಗಣನೆ ಪ್ರಚುರವಾಯಿತು. ಅದೇ ಗಂಗಶಕ. ಇದರ ಆರಂಭಕಾಲ ಕ್ರಿ.ಶ. ಸು. 496. ಹೊರನಾಡುಗಳಲ್ಲಿ ಆಳಿದ ಕನ್ನಡ ಅರಸುಮನೆತನಗಳಲ್ಲಿ ಈ ಗಂಗ ರಾಜವಂಶ ಅತಿ ಪ್ರಾಚೀನವಾದುದು. ಈ ರಾಜರಿಗೆ ಸಾಮಂತರಾಗಿದ್ದ, ಅದೇ ಗಂಗಕುಲದಶಾಖಾ ವಂಶದ ಅರಸರು ಆ ಭಾಗದಲ್ಲಿ ಆಳಿದರು. ಅವರಲ್ಲಿ ಪೂರ್ವಿಕನಾದಾತ ಮಹಾರಾಜ ಜಯವರ್ಮ. ಈತನ ಕಾಲ 6ನೆಯ ಶತಮಾನ. ಇವನ ರಾಜಧಾನಿ ಶ್ವೇತಕಪುರ. ಈತನ ಮುಂದಿನ ಕೆಲವು ಅರಸರು ಪ್ರಾಮುಖ್ಯಗಳಿಸಿದ್ದಾರೆ.

ಸಮ್ರಾಟ ಗಂಗರು ಕಳಿಂಗ ಗಂಗರ ವಂಶಿಕರು. ಇವರು ತಮ್ಮ ಮೂಲಸ್ಥಳ ಕೋಲಾಹಲಪುರ (ಮೈಸೂರು ರಾಜ್ಯದಲ್ಲಿನ ಕೋಲಾರ) ಎಂದು ಹೇಳಿರುವುದರಿಂದ ಇವರು ಕರ್ಣಾಟಕ ಮೂಲದವರೆಂಬುದರಲ್ಲಿ ಸಂಶಯವಿಲ್ಲ. ಹನ್ನೊಂದನೆಯ ಶತಮಾನದಲ್ಲಿ ವಜ್ರಹಸ್ತ ಅನಂತವರ್ಮ ಈ ವಂಶವನ್ನು ಊರ್ಜಿತಗೊಳಿಸಿದ (1038). ತ್ರಿಕಲಿಂಗಾಧಿಪತಿ ಎಂಬ ಪ್ರಶಸ್ತಿಪಡೆದಿದ್ದ ಈತನ ರಾಜಧಾನಿ ಕಳಿಂಗನಗರ. ವಜ್ರಹಸ್ತನ ಮೊಮ್ಮಗ ಅನಂತವರ್ಮ ಚೋಡ ಗಂಗನೇ ಈ ಪರಾಕ್ರಮಶಾಲಿ ನರೇಂದ್ರ. ಈತನ ಆಳ್ವಿಕೆಯಲ್ಲಿ (1078–1150) ಗಂಗ ಸಾಮ್ರಾಜ್ಯ ಪೂರ್ವಭಾಗದಲ್ಲಿ ಗಂಗೆಯಿಂದ ಗೋದಾವರಿಯ ವರೆಗೆ ವಿಸ್ತಾರ ಹೊಂದಿತು. ಈ ಅರಸರ ಆಳ್ವಿಕೆ ಮುಂದೆ ಒಂದೂವರೆ ಶತಮಾನದ ವರೆಗೆ ಮುಂದುವರಿಯಿತು. ಹದಿಮೂರನೆಯ ಶತಮಾನದ ಉತ್ತರಾರ್ಧದಲ್ಲಿ ಮಧ್ವಾಚಾರ್ಯರ ವೈಷ್ಣವಮತ ಈ ರಾಜರ ಮೇಲೂ ಈ ನಾಡಿನಲ್ಲೂ ತನ್ನ ಪ್ರಭಾವ ಬೀರಿತು.

**ಪೂರ್ವದ ಕದಂಬರು :** ಕದಂಬ ಕುಲದ ಹಲವು ರಾಜವಂಶಗಳ ಅರಸರು ಕನ್ನಡ ನಾಡಿನ ಅನೇಕ ಪ್ರದೇಶಗಳಲ್ಲಿ ಆಳಿದರು. ಕದಂಬರ ಒಂದು ಶಾಖೆಯವರು ಒರಿಸ್ಸ ಪ್ರಾಂತ್ಯದಲ್ಲಿಯೂ ಆಳಿದ ವಿಷಯ ಶಾಸನಗಳಿಂದ ತಿಳಿದುಬಂದಿದೆ. ಇವರು ಆಳಿದ ನೆಲ ಗಂಜಾಂ ಜಿಲ್ಲೆಯ ಭಾಗ ; ಕಾಲ 10–11ನೆಯ ಶತಮಾನ. ಇವರ ರಾಜಧಾನಿ ಜಯಂತ್ಯಾಪುರ. ಕರ್ಣಾಟಕದಲ್ಲಿ ಆಳಿದ ಮೂಲ ಕದಂಬರ ರಾಜಧಾನಿ ಬನವಾಸಿಯಾಗಿದ್ದು, ಅದಕ್ಕೆ ಜಯಂತೀಪುರ ಎಂಬ ನಾಮಾಂತರವಿತ್ತೆಂಬುದು ಗಮನಾರ್ಹ.

**ಚಾಳುಕ್ಯ ವಂಶದ ಶಾಖೆಗಳು :** ಚಾಳುಕ್ಯ ವಂಶದ ಅರಸರು ಕರ್ಣಾಟಕದಲ್ಲಿ ಸಾಮ್ರಾಜ್ಯ ಸ್ಥಾಪಿಸಿ ಬಾದಾಮಿಯಿಂದ ಆಳಿದ ವಿಷಯ ಸುವಿದಿತವಾದುದು. ಚಾಳುಕ್ಯ ಕುಲದ ಹಲವು ಶಾಖೆಗಳ ಅರಸರು ಕರ್ಣಾಟಕದ ಹೊರಗೂ ಆಳಿದರು. ಅವರಲ್ಲಿ ಪೂರ್ವದ ಅಥವಾ ವೇಂಗಿಯ ಚಾಳುಕ್ಯರು ಪ್ರಖ್ಯಾತರು. ಇವರು ಗೋದಾವರಿ, ಕೃಷ್ಣಾ, ನದಿಗಳ ಆಂಧ್ರ ಪ್ರದೇಶಗಳಲ್ಲಿ ರಾಜ್ಯಭಾರ ಮಾಡಿದರು. ಈ ರಾಜವಂಶವನ್ನು ಇಮ್ಮಡಿ ಪುಲಕೇಶಿಯ ತಮ್ಮನಾದ ವಿಷ್ಣುವರ್ಧನ ಕ್ರಿ.ಶ.ಸು. 630ರಲ್ಲಿ ಸ್ಥಾಪಿಸಿದ. ಈತನನ್ನು ಬಿಟ್ಟರಸನೆಂದೂ ಕರೆಯಲಾಗಿದೆ. ಈ ವಂಶದ ಆಳ್ವಿಕೆ ನಾಲ್ಕು ಶತಮಾನಕ್ಕೂ ಮಿಕ್ಕಿ ಮುಂದುವರಿಯಿತು. ಅನಂತರ ಹನ್ನೊಂದನೆಯ ಶತಮಾನದಲ್ಲಿ ಈ ರಾಜ್ಯ ಚೋಳರ ಸಾಮ್ರಾಜ್ಯದಲ್ಲಿ ವಿಲೀನವಾಯಿತು.

ನಾಸಿಕದ ಪ್ರದೇಶದಲ್ಲಿ ಇಮ್ಮಡಿ ಪುಲಕೇಶಿಯ ಇನ್ನೊಬ್ಬ ತಮ್ಮ ಧರಾಶ್ರಯ ಜಯಸಿಂಹವರ್ಮ ಮತ್ತು ಆತನ ಮಗ ಪ್ರಾಂತ್ಯಾಧಿಕಾರಿಗಳಾಗಿ ರಾಜ್ಯವಾಳಿದರು. ಇಮ್ಮಡಿ ಪುಲಕೇಶಿಗೆ ಧರಾಶ್ರಯ ಜಯಸಿಂಹವರ್ಮನೆಂಬ ಮಗನೂ ಇದ್ದ. ಈತ ಗುಜರಾತಿನಲ್ಲಿ ಸುರತದ ನೆರೆಯ ನವಸಾರೀ ಪ್ರದೇಶದಲ್ಲಿ ರಾಜಪ್ರತಿನಿಧಿಯಾಗಿ ಪ್ರಾಂತ್ಯಾಧಿಕಾರ ನಡೆಯಿಸಿದ. ಪಲ್ಲವರೊಡನೆ ನಡೆದ ಸಮರಗಳಲ್ಲಿ ಈತ ಚಾಳುಕ್ಯರಿಗೆ ಸಹಾಯ ಸಲ್ಲಿಸಿದ. ವಲ್ಲಭಿಯ ಮೈತ್ರಕ ವಂಶದ ವಜ್ಜಡನನ್ನು (ಮುಮ್ಮಡಿ ಶೀಲಾದಿತ್ಯ) ಸೋಲಿಸಿದ. ಈತನ ವಂಶಿಕನಾದ ಅವನಿಜನಾಶ್ರಯ ಪುಲಕೇಶಿ ಗುಜರಾತಿನಲ್ಲಿ ನುಗ್ಗಿದ ಅರಬರ ದಾಳಿಯನ್ನು ಹಿಂದೂಡಿ (ಕ್ರಿ.ಶ. ಸು. 740) ಇಮ್ಮಡಿ ವಿಕ್ರಮಾದಿತ್ಯನ ಗೌರವಪ್ರಶಸ್ತಿಗೆ ಪಾತ್ರನಾದ. ಅನಂತರ ಈ ಚಾಳುಕ್ಯ ಮಂಡಲ ರಾಜ್ಯ ರಾಷ್ಟ್ರಕೂಟ ಸಾಮ್ರಾಜ್ಯದಲ್ಲಿ ಸಮಾವೇಶಗೊಂಡಿತು.

ಚಾಳುಕ್ಯ ಶಾಖೆಯ ಇನ್ನೊಂದು ಸಾಮಂತ ವಂಶದ ಅರಸರು ಆಂಧ್ರಪ್ರಾಂತ್ಯದ ಕರೀಮನಗರ ಜಿಲ್ಲೆಯ ವೇಮುಲವಾಡ ಪ್ರದೇಶದಲ್ಲಿ ಎಂಟರಿಂದ ಹತ್ತನೆಯ ಶತಮಾನ ಕಾಲದಲ್ಲಿ ಆಳಿದರು. ಇವರು ರಾಷ್ಟ್ರಕೂಟರಿಗೆ ಮಾಂಡಲಿಕರಾಗಿದ್ದರು. ವಿನಯಾದಿತ್ಯ ಯುದ್ಧಮಲ್ಲ ಈ ವಂಶದ ಸಂಸ್ಥಾಪಕ. ಮುಂದೆ ಈತನ ವಂಶಿಕನಾದ ಇಮ್ಮಡಿ ಅರಿಕೇಸರಿ ಖ್ಯಾತಿವೆತ್ತ ನರೇಂದ್ರ. ಕನ್ನಡಕವಿ ಆದಿಪಂಪ (ಕ್ರಿ.ಶ. 941) ಈತನ ಆಸ್ಥಾನದಲ್ಲಿದ್ದ. ಮೂರನೆಯ ಅಮೋಘವರ್ಷ ರಾಜ ರಾಷ್ಟ್ರಕೂಟ ಸಿಂಹಾಸನವನ್ನು ಪಡೆಯಲು ಅರಿಕೇಸರಿ ಸಹಾಯ ಮಾಡಿದ.

**ರಾಷ್ಟ್ರಕೂಟ ರಾಜವಂಶಗಳು :** ರಾಷ್ಟ್ರ ಎಂಬುದು ಪ್ರಾಂತ್ಯವಾಚಕ ಪದ. ಈ ಅರ್ಥದಲ್ಲಿ ಇದು ಅಶೋಕನ ಕಾಲದಿಂದ ರಾಜಕೀಯ ವ್ಯವಹಾರದಲ್ಲಿ ಬಳಕೆಯಾಯಿತು. ಅನಂತರ ಪ್ರಾಂತ್ಯಾಧಿಕಾರಿ ಎಂಬ ಅಭಿಪ್ರಾಯದಲ್ಲಿ ರಾಷ್ಟ್ರಕೂಟ ಎಂಬ ಪದವಿಸೂಚಕ ವಿಶಿಷ್ಟ ಪದ ಪ್ರಯೋಗವಾಗತೊಡಗಿತು. ಇಂಥ ಪ್ರಾಂತ್ಯಾಧಿಕಾರಿಗಳ ವಂಶದವರು ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಊರ್ಜಿತರಾದರು.

ಸಮಸ್ತ ಭಾರತದಲ್ಲಿ ಖ್ಯಾತಿವೆತ್ತ ಭವ್ಯ ಪರಂಪರೆಯಿಂದ ಆಳಿದವರು ಮಳಖೇಡದ ರಾಷ್ಟ್ರಕೂಟರು. ಇವರ ಮೂಲಸ್ಥಳ ಹಿಂದೆ ಪ್ರಾಚೀನ ಕರ್ಣಾಟಕದಲ್ಲಿ ಸಮಾವೇಶಗೊಂಡಿದ್ದು, ಅನಂತರ ಮಹಾರಾಷ್ಟ್ರದಲ್ಲಿ ಸೇರ್ಪಡೆಯಾದ ಲತ್ತನೂರು ಎಂದರೆ ಲಾತೂರು ಎಂಬ ಪಟ್ಟಣ. ರಾಷ್ಟ್ರಕೂಟ ಎಂಬ ಹೆಸರುವೆತ್ತ ಹಲವು ಅರಸುಮನೆತನಗಳು ಭಾರತದ ನಾನಾ ಪ್ರದೇಶಗಳಲ್ಲಿ ಆಳಿದುವು. ಅವೆಲ್ಲ ಕರ್ಣಾಟಕ ಮೂಲದವೇ ಆಗಿದ್ದುವು ಎಂಬುದು ಕೆಲವು ಇತಿಹಾಸ ಲೇಖಕರ ಅಭಿಪ್ರಾಯ.

ಮಳಖೇಡದ ರಾಷ್ಟ್ರಕೂಟ ರಾಜನಾದ ಧ್ರುವನ (ಕ್ರಿ.ಶ. ಸು. 380–93) ಮಗ ಇಂದ್ರ. ಈತ ಗುಜರಾತ್ ಮತ್ತು ಮಾಳವ ಪ್ರದೇಶಗಳ ಮೇಲೆ ಪ್ರಾಂತ್ಯಾಧಿಪತ್ಯ ವಹಿಸಿದ. ಈತನ ವಂಶಿಕರು ಗುಜರಾತ್ ಪ್ರಾಂತ್ಯದ ಅಧಿಕಾರ ಪಡೆದು ಸು. 790 ರಿಂದ 890ರ ವರೆಗೆ ಸುಮಾರು ಒಂದು ಶತಮಾನ ಕಾಲ ರಾಜ್ಯಭಾರ ಮಾಡಿದರು. ಧ್ರುವನ ಮಗ ಸುವರ್ಣವರ್ಷ ಕರ್ಕ ಒಂದನೆಯ ಅಮೋಘವರ್ಷ ನೃಪತುಂಗರಾಜ ಮಳಖೇಡದ ಸಿಂಹಾಸನವೇರಿದಾಗ (814) ಅಲ್ಪವಯಸ್ಸಿನವನಿದ್ದುದರಿಂದ ಆತ ಪ್ರಬುದ್ಧನಾಗುವ ವರೆಗೆ ರಾಜಪ್ರತಿನಿಧಿಯಾಗಿ ಸಾಮ್ರಾಜ್ಯದ ಕಾರ್ಯನಿರ್ವಹಣೆ ಮಾಡಿದ.

ಮಾನಪುರದ ರಾಷ್ಟ್ರಕೂಟರು ಪ್ರಾಂತೀಯ ಅರಸರಾಗಿ 5ನೆಯ ಶತಮಾನದಿಂದ 7ನೆಯ ಶತಮಾನದ ವರೆಗೆ ಬಾಳಿದರು. ಮಾನಾಂಕ ಈ ವಂಶದ ಸ್ಥಾಪಕ.

ಇವರ ಮೂಲಸ್ಥಳ ಪಾಸ. ಇದು ಸಾತಾರ ಜಿಲ್ಲೆಯಲ್ಲಿರುವ ಗ್ರಾಮ. ಇವರ ರಾಜ್ಯ ಇಂದಿನ ಕೊಲ್ಹಾಪುರ ಪರಿಸರದ ಪ್ರದೇಶಕ್ಕೆ ಸೀಮಿತವಾಗಿತ್ತು.

ರಾಷ್ಟ್ರಕೂಟರ ಒಂದು ಶಾಖೆಯು ಮಾಂಡಲಿಕ ಅರಸರು ಒರಿಸ್ಸ ರಾಜ್ಯದ ಸಂಬಲಪುರ ಪ್ರದೇಶದಲ್ಲಿ ಹನ್ನೆರಡನೆಯ ಶತಮಾನದಲ್ಲಿ ಬಾಳಿದ್ದರು. ತಮ್ಮ ಮೂಲಸ್ಥಳ ಲತಲೋರ (ಲಾತೂರು) ನಗರವೆಂದು ಇವರು ಹೇಳಿಕೊಂಡಿದ್ದಾರೆ. ಚಮರ ವಿಗ್ರಹ, ಆತನ ಮಗ ಧಂಸಕ, ಅವನ ಮಗ ಪರಚಕ್ರಶಲ್ಯ (ಕ್ರಿ.ಶ. 1132)—ಇವು ಈ ವಂಶದ ಮೂವರು ರಾಜರ ಹೆಸರುಗಳು.

ಮಧ್ಯಭಾರತದ ಭಿಲ್ಸದ ಪಕ್ಕದಲ್ಲಿ ರಾಷ್ಟ್ರಕೂಟರ ಒಂದು ವಂಶ ಬಾಳಿತು (ಸು. 8–9ನೆಯ ಶತಮಾನ). ರಾಷ್ಟ್ರಕೂಟ ವಂಶದ ಅರಸರು ಕನೌಜ್ ಪ್ರಾಂತ್ಯದಲ್ಲಿ 11,12ನೆಯ ಶತಮಾನಗಳಲ್ಲಿ ಊರ್ಜಿತರಾದರು. ರಾಜಸ್ಥಾನದ ಜೋಧಪುರ, ಉದೇಪುರ ಪ್ರದೇಶಗಳಲ್ಲಿ 11-13ನೆಯ ಶತಮಾನಗಳಲ್ಲಿ ರಾಷ್ಟ್ರಕೂಟರು ಉದಯ ಹೊಂದಿದರು.

8-9ನೆಯ ಶತಮಾನಗಳಲ್ಲಿ ರಾಷ್ಟ್ರಕೂಟ ಕುಲದ ಕೆಲವು ನಾಯಕರು ದಂಡ ಯಾತ್ರೆಯ ನಿಮಿತ್ತದಿಂದ ಭಾರತದ ಉತ್ತರ–ಪೂರ್ವ ಪ್ರಾಂತ್ಯಗಳಿಗೆ ಪ್ರಯಾಣ ಮಾಡಿ ಅಲ್ಲಿ ನೆಲಸಿ ರಾಜಕೀಯ ಪ್ರತಿಷ್ಠೆ ಗಳಿಸಿಕೊಂಡರು. ಇಂಥವರಲ್ಲಿ ಕೆಲವರ ವಿಷಯ ತಿಳಿದುಬಂದಿದೆ. ಬಂಗಾಳದ ಧರ್ಮಪಾಲ ರಾಜನ (ಸು. 220–810) ರಾಣಿ ರನ್ನದೇವಿ ರಾಷ್ಟ್ರಕೂಟ ಪರಬಲನೆಂಬ ನಾಯಕನ ಪುತ್ರಿ. ಅದೇ ವಂಶದ ರಾಜ್ಯಪಾಲ (ಸು. 911–35) ರಾಷ್ಟ್ರಕೂಟ ತುಂಗನ ಪುತ್ರಿ ಭಾಗ್ಯ ದೇವಿಯನ್ನು ವಿವಾಹವಾಗಿದ್ದ. ಬಳಿಕ 3ನೆಯ ವಿಗ್ರಹಪಾಲ (ಸು. 1055-81) ಪೂರ್ವ ಬಿಹಾರದ ರಾಷ್ಟ್ರಕೂಟ ಮಥನನ ಸೋದರಿಯನ್ನು ಮದುವೆ ಯಾಗಿದ್ದ. ಇಂಥ ಸಂಬಂಧಗಳ ಫಲವಾಗಿ ಕನ್ನಡ ನಾಡಿನ ಶೂರ ಸೈನಿಕರು ಬಂಗಾಳದ ಸೈನ್ಯದಲ್ಲಿ ಪ್ರವೇಶ ಹೊಂದಿದರು. ಈ ಸೈನಿಕರನ್ನು ಕುರಿತು ಬಂಗಾಳದ ಶಾಸನಗಳಲ್ಲಿ ವಿಪುಲ ನಿರ್ದೇಶಗಳು ದೊರಕುತ್ತವೆ.

**ಚಕ್ರಕೂಟದ ಸಿಂದರು :** ರಾಷ್ಟ್ರಕೂಟರ ಅನಂತರ ಕರ್ಣಾಟಕದಲ್ಲಿ ಕಲ್ಯಾಣದ ಚಾಳುಕ್ಯರು ಪ್ರಬಲರಾದರು. ಇವರಲ್ಲಿ ಒಂದನೆಯ ಸೋಮೇಶ್ವರ ಮತ್ತು ಆರನೆಯ ವಿಕ್ರಮಾದಿತ್ಯ ಇವರ ಮಹದಾಕಾಂಕ್ಷೆಯ ಆಳ್ವಿಕೆಯಲ್ಲಿ (11-12ನೆಯ ಶತಮಾನಗಳು) ಉತ್ತರ ಮತ್ತು ಪೂರ್ವ ಭಾರತದಲ್ಲಿ ಹಲವು ದಂಡಯಾತ್ರೆಗಳು ನಡೆದವು. ಅವುಗಳ ಸಂಚಾಲನೆಯಲ್ಲಿ ಭಾಗವಹಿಸಿದ ವೀರಯೋಧರೂ ಸಾಹಸಶೀಲ ಸೇನಾನಾಯಕರೂ ಮಧ್ಯ-ಉತ್ತರ-ಪೂರ್ವಭಾರತ ಪ್ರದೇಶಗಳಲ್ಲಿ ಕಾಲೂರಿ ತಮ್ಮ ಮನೆತನಗಳನ್ನು ಸ್ಥಾಪಿಸಿ ರಾಜ್ಯವಾಳಿದರು.

ಇಂಥವರಲ್ಲಿ ಒಂದು ಮನೆತನ ಚಕ್ರಕೂಟದ ಸಿಂದರದು. ಈ ವಂಶದಲ್ಲಿ 1060ರ ಆಚೆಯಿಂದ 1111ರ ಈಚೆಗೆ ಧಾರಾವರ್ಷ, ಸೋಮೇಶ್ವರ, ಕನ್ನರ—ಈ ಮೂವರು ರಾಜ್ಯಪಾಲರಾದರು. ಚಕ್ರಕೂಟದ ಎಂದರೆ ಬಸ್ತರದ ಪ್ರದೇಶದಲ್ಲಿ ಮೊದಲು ನೆಲೆಸಿದ್ದ ಇವರ ರಾಜ್ಯ ಕ್ರಮೇಣ ದಕ್ಷಿಣ ಕೋಸಲದ ವರೆಗೂ ವಿಸ್ತಾರ ಹೊಂದಿತು. ಛಿಂದಕ ನಾಗರೆಂದು ಖ್ಯಾತರಾದ ಈ ಮಹೀಶರು ಕನ್ನಡ ನಾಡಿನ ಸಿಂದರ ವಂಶಿಕರು. ತಮ್ಮ ಪೂರ್ವಿಕರಂತೆ ಇವರೂ ತಾವು ನಾಗವಂಶೀಯರೆಂದು, ಭೋಗಾವತೀಪುರದ ಒಡೆಯರೆಂದು ಹೇಳಿಕೊಂಡಿದ್ದಾರೆ.

**ತೈಲಪವಂಶಿ :** ಒರಿಸ್ಸದ ಗಂಜಾಂ ಭಾಗದಲ್ಲಿ ರಾಣಕರಾಮದೇವನೆಂಬ ಸಾಮಂತರಾಜ ಸು. 11-12ನೆಯ ಶತಮಾನದಲ್ಲಿ ಆಳುತ್ತಿದ್ದ. ಈತನನ್ನು ತೈಲಪವಂಶಿಯೆಂದು ವರ್ಣಿಸಿದೆ. ಕಲ್ಯಾಣದ ಆರನೆಯ ವಿಕ್ರಮಾದಿತ್ಯನಿಗೆ ತೈಲಪ ನೆಂಬ ಮಗನಿದ್ದು, ಆತ ಆಂಧ್ರ ರಾಜ್ಯದ ಕರೀಮನಗರ ಪ್ರದೇಶದಲ್ಲಿ ಕೊಳ್ಳಿಪಾಕೆಯ ಪ್ರಾಂತ್ಯಾಧಿಕಾರಿ ಆಗಿದ್ದ. ರಾಣಕರಾಮದೇವ ಈ ತೈಲಪನ ವಂಶಿಕನಾಗಿರಬಹುದು.

**ಬಂಗಾಳದ ಸೇನರು :** ಸೇನ ಎಂಬ ವಂಶನಾಮ ಹೊಂದಿದ್ದ ಅರಸರು ಬಂಗಾಳದಲ್ಲಿ ಪ್ರಬಲರಾಗಿ ರಾಜ್ಯವಾಳಿದರು. ಈ ವಂಶದ ಪೂರ್ವಿಕ ವೀರಸೇನ. ಈತನ ವಂಶಿಕನಾದ ಸಾಮಂತಸೇನ ಗಂಗಾತೀರ ಪ್ರದೇಶದಲ್ಲಿ ನೆಲಸಿ, ಬಂಗಾಳದ ರಾಢಾ ಎಂಬ ನೈಋತ್ಯ ಭಾಗದಲ್ಲಿ ತನ್ನ ರಾಜ್ಯ ಸ್ಥಾಪಿಸಿದ. ಈ ವಂಶದ ರಾಜರು ತಾವು ದಾಕ್ಷಿಣಾತ್ಯರೆಂದು, ಕರ್ಣಾಟ ಕ್ಷತ್ರಿಯ ಕುಲದವರೆಂದು ಹೇಳಿಕೊಂಡಿದ್ದಾರೆ. ಸಾಮಂತಸೇನನ ಮಗ ಹೇಮಂತಸೇನ. ಈತನ ಮಗ ವಿಜಯಸೇನ (ಸು. 1095–1158). ಪರಾಕ್ರಮಶಾಲಿಯಾದ ಈತ ಆ ಹಿಂದಿನಿಂದ ಆಳಿದ್ದ ಪಾಲರೆಂಬ ರಾಜರನ್ನು ನಿರ್ಮೂಲಮಾಡಿ ಬಂಗಾಲ ಪ್ರಾಂತ್ಯದಲ್ಲಿ ತನ್ನ ಪ್ರಭುತ್ವ ವನ್ನು ಸ್ಥಾಪಿಸಿದ. ಈತನ ಪ್ರಭಾವ ನೆರೆಯ ಪ್ರದೇಶಗಳಿಗೂ ವ್ಯಾಪಿಸಿತು. ಈತನ ಮಗ ಬಲ್ಲಾಳಸೇನ (1158-1178). ತಂದೆ ಕಟ್ಟಿದ ಸಾಮ್ರಾಜ್ಯ ವನ್ನು ಸಂರಕ್ಷಿಸಿ ಅದರ ಮೇರೆಯನ್ನು ಬಿಹಾರ ಪ್ರಾಂತ್ಯದಲ್ಲೂ ಬೆಳೆಸಿದ. ಅನಂತರ ಪಟ್ಟವೇರಿದ ಲಕ್ಷ್ಮಣಸೇನನ ಆಳ್ವಿಕೆಯಲ್ಲಿ (ಕ್ರಿ.ಶ. ಸು. 1178–1205) ಮುಸಲ್ಮಾನರ ಆಕ್ರಮಣದಿಂದಾಗಿ ಸೇನರ ರಾಜ್ಯಬಲ ಕುಗ್ಗಿತು.

ಸೇನರು ಪಾಲ ಅರಸರ ಪುರಸ್ಕಾರದಿಂದ ಅಭಿವೃದ್ಧಿ ಹೊಂದಿದ್ದ ಬೌದ್ಧಮತ ವನ್ನು ಹಿಂದೂಡಿ ಹಿಂದೂಧರ್ಮದ ಪುನರುಜ್ಜೀವನ ಮಾಡಿದರು. ಇವರ ಸಮರ್ಥ ಶಾಸನದ ಫಲವಾಗಿ ಬಂಗಾಳದಲ್ಲಿ ಶಾಂತಿ, ಸುವ್ಯವಸ್ಥೆ ನೆಲೆಗೊಂಡುವು. ಇವರು ಸಾಹಿತ್ಯಕ್ಕೆ ಪ್ರೋತ್ಸಾಹ ನೀಡಿದರು. ಬಲ್ಲಾಳಸೇನ ಮತ್ತು ಲಕ್ಷ್ಮಣಸೇನರು ವಿದ್ವಾಂಸರೂ ಗ್ರಂಥಕರ್ತರೂ ಆಗಿದ್ದರು. ಗೀತಗೋವಿಂದದ ಕವಿ ಜಯದೇವ ಮತ್ತು ಹಲಾಯುಧರು ಲಕ್ಷ್ಮಣಸೇನನ ಆಸ್ಥಾನವನ್ನು ಅಲಂಕರಿಸಿದ್ದರು. ಸೇನರಲ್ಲಿ ಬಲ್ಲಾಳ ಎಂಬ ಹೆಸರು ಕರ್ಣಾಟಕದ ಹೊಯ್ಸಳರ ಮೂಲದಿಂದ ಬಂದುದು. ಕರ್ಣಾಟಕದಲ್ಲಿ ಪ್ರಚುರವಾಗಿದ್ದ ಶಕಕಾಲ ಗಣನೆಯನ್ನು ಸೇನರು ಬಂಗಾಲದಲ್ಲಿ ರೂಢಿಗೆ ತಂದರು.

**ಮಿಥಿಲೆಯ ಕರ್ಣಾಟಕ ಅರಸರು :** ಪುರಾಣಪ್ರಸಿದ್ಧ ಮಿಥಿಲೆಯಲ್ಲೂ—ಎಂದರೆ ಉತ್ತರ ಬಿಹಾರದಲ್ಲಿ—ಕನ್ನಡ ಅರಸರು ರಾಜ್ಯವಾಳಿದ್ದಾರೆ. ಮಿಥಿಲೆ ಈಚೆಯ ಕಾಲದಲ್ಲಿ ತೀರಭುಕ್ತಿ, ತಿರಹತ್ ಎಂದು ನಾಮಕರಣ ಪಡೆದಿದೆ. ಬಂಗಾಳದ ಪಾಲರಾಜರ ದಂಡಿನಲ್ಲಿ ಪ್ರವೇಶ ಪಡೆದಿದ್ದ ಅನೇಕ ಕನ್ನಡ ಯೋಧರ, ನಾಯಕರ ಪೈಕಿ ನಾನ್ಯದೇವನೆಂಬ ಸಾಹಸಿ ವೀರನಾಯಕ ಮುಂದುವರಿದು ಸು. 1097ರಲ್ಲಿ ಮಿಥಿಲೆಯಲ್ಲಿ ರಾಜ್ಯ ಸ್ಥಾಪಿಸಿದ. ಈತನ ಮನೆತನ ಮಿಥಿಲೆಯ ಕರ್ಣಾಟ ರಾಜವಂಶವೆಂದು ಖ್ಯಾತಿಪಡೆದಿದೆ. ನನ್ನಿಯದೇವ, ನನ್ನಿಗದೇವ ಎಂಬ ರೀತಿಯಲ್ಲಿ ನಾನ್ಯದೇವ ಎಂಬ ಹೆಸರು ಕನ್ನಡ ಮೂಲದಿಂದ ಬಂದಿರ ಬಹುದು. ಈ ರಾಜ್ಯದ ರಾಜಧಾನಿ ಸೀಮರಾಮಪುರ, ಇಂದಿನ ಸಿಮರಾಂ. ಇದು ಚಂಪಾರನ್ ಜಿಲ್ಲೆಯ ಉತ್ತರಕ್ಕೆ ನೇಪಾಳ ರಾಜ್ಯದಲ್ಲಿದೆ.

ಗೌಡ ಮತ್ತು ವಂಗದೇಶಗಳ ರಾಜರೊಡನೆ ನಾನ್ಯದೇವ ಹೋರಾಡಿದ. ನೇಪಾಳದೇಶವನ್ನೂ ಗೆದ್ದನೆಂದು ಹೇಳಲಾಗಿದೆ. ಈತ ಸು. 50 ವರ್ಷ ರಾಜನಾಗಿದ್ದ. ಇವನ ತರುವಾಯ ಈ ವಂಶದಲ್ಲಿ ಗಂಗದೇವ ಮೊದಲಾದ ಐದು ಜನ ಅರಸರು ರಾಜ್ಯಭಾರ ಮಾಡಿದರು. ಈ ವಂಶದ ಕೊನೆಯ ರಾಜನಾದ ಹರಿಸಿಂಹ ಅಥವಾ ಹರಸಿಂಹ (ಸು. 1285–1324) ಮುಸಲ್ಮಾನರ ಆಕ್ರಮಣದಿಂದ ಮಿಥಿಲೆಯ ರಾಜ್ಯವನ್ನು ಕಳೆದುಕೊಂಡ. ಮುಂದೆ ನೇಪಾಳದಲ್ಲಿ ರಾಜ್ಯ ಸಂಪಾದಿಸಿ ಅಲ್ಲಿ ತನ್ನ ಆಳ್ವಿಕೆಯನ್ನು ಮುಂದುವರಿಸಿದ. ಖ್ಯಾತ ಸ್ಮೃತಿಕಾರನಾದ ಚಂಡೇಶ್ವರ ಹರಿಸಿಂಹನ ಮಂತ್ರಿಯೂ ಸೇನಾಪತಿಯೂ ಆಗಿದ್ದ. ಈತ ನೇಪಾಳದ ರಾಜ್ಯಸಂಪಾದನೆಯಲ್ಲಿ ತನ್ನ ದೊರೆಗೆ ಸಹಾಯ ನೀಡಿದ. ಹರಿಸಿಂಹ ನೇಪಾಳದಲ್ಲಿ ಸ್ವಲ್ಪ ಕಾಲ ಆಳಿದ ಅನಂತರ ಆತನ ವಂಶಿಕರು ಅಲ್ಲಿ ಕೆಲಕಾಲ ಅರಸರಾದರು. (ಪಿ.ಬಿ.ಡಿ.)

## ಕನ್ನಡಕಗಳು :

**ಕನ್ನಡಕಗಳು :** ಕಣ್ಣಿನ ನೋಟದ ಕುಂದುಗಳಿಗೂ ಚಾಳೀಸಕ್ಕೂ ರೋಗಿ ಬಳಸುವಂತೆ ಕಣ್ಣಿನ ವೈದ್ಯರು ನಿಯಮಿಸುವ ನೋಟದ ಸಾಧನಗಳು. ಮೂರು



ತಂಪು ಕನ್ನಡಕಗಳು

ಬಗೆಗಳ ನೋಟದ ಕುಂದುಗಳಲ್ಲಿ, ದೂರ ನೋಟವನ್ನು ಉಬ್ಬು (ಕಾನ್‌ವೆಕ್ಸ್) ಮಸೂರದಿಂದಲೂ ಹತ್ತಿರ ನೋಟವನ್ನು ತಗ್ಗು (ಕಾನ್‌ಕೇವ್) ಮಸೂರದಿಂದಲೂ ಅಸಮೋಸರಿಕೆಯನ್ನು (ಅಸ್ಟಿಗ್ಮಾಟಿಸಂ) ಉರುಳೆಯಾಕಾರದ ಮಸೂರದಿಂದಲೂ ಸರಿಯಾಗಿ ಕಾಣುವಂತೆ ಮಾಡಬಹುದು. 40 ವರ್ಷ ದಾಟಿದವರಲ್ಲಿ ಬರುವ ಚಾಳೀಸದಲ್ಲಿ ಹತ್ತಿರದಲ್ಲಿರುವವು ಕಾಣುವ ಹಾಗೆ ಉಬ್ಬು ಮಸೂರವನ್ನು ನಿಯಮಿಸುವುದುಂಟು.

ಕನ್ನಡಕಗಳ ಮಸೂರಗಳನ್ನು ತಯಾರಿಸುವ ಗಾಜು ವಿಶೇಷ ಬಗೆಯದು. ರಿಫ್ರೇಕ್ಷಣಾಂಕ (ರಿಫ್ರಾಕ್ಟಿವ್ ಇಂಡೆಕ್ಸ್) 1.523 ಇರುವ ಕ್ರೌನ್ ಗಾಜಿನದು. ಹಾಗೇ ಅವನ್ನು ಹಿಡಿದಿರುವ ಚೌಕಟ್ಟುಗಳು ಉಕ್ಕು, ಪ್ಲಾಸ್ಟಿಕ್, ಬೆಳ್ಳಿ ಅಥವಾ ಚಿನ್ನದ ವಾಗಿರಬಹುದು.



ಕಣ್ಣಿನ ದೃಷ್ಟಿಪರೀಕ್ಷೆ ಯಂತ್ರ

ಕನ್ನಡಕಗಳ ಮಸೂರಗಳ ಆಕಾರ ಗುಂಡು, ಅಂಡಾಕಾರ, ನೀಳ ಅಂಡಾಕಾರ, ಅಂಡಾಕಾರದ್ದರ ಮೇಲಿನರ್ಧ ಕತ್ತರಿಸಿದ್ದು, ಉಬ್ಬುಗೋಳ—ಹೀಗೆ ಬಗೆಬಗೆಯಾಗಿರಬಹುದು. ಅಲ್ಲದೆ ಕನ್ನಡಕದ ಮೇಲ್ಭಾಗವೂ ಕೆಳಗಿನದೂ ಬೇರೆ ಬೇರೆ ಮಸೂರಗಳಿಂದಾಗಿರಬಹುದು. ಅಡ್ಡಕೊಯ್ತದಲ್ಲಿ ಮಸೂರಗಳು ಒಂದೊಂದು ಕಡೆಯೂ ಉಬ್ಬೋ ತಗ್ಗೋ ಚಪ್ಪಟೆಯಾಗೋ ಇರಬಹುದು. ಕನ್ನಡಕಗಳ ಮಸೂರಗಳ ಬಾಗು ಕಣ್ಣುಗುಡ್ಡೆಯದಕ್ಕೆ ಸಮಾನಾಂತರವಾಗಿದ್ದರೇ ಚೆನ್ನು.



ಕಣ್ಣಿನ ಪರೀಕ್ಷೆಯ ವಿವಿಧ ಮಸೂರಗಳ ಪೆಟ್ಟಿಗೆ

ಹೊರಗಡೆ ಕಿವಿಗಳಿಗೋ ಮೂಗಿಗೋ ತಗಲಿಸಿಕೊಳ್ಳುವ ಕನ್ನಡಕಗಳ ಬದಲಾಗಿ, ಚೌಕಟ್ಟು ಇಲ್ಲದೆಯೇ ತೆಳುವಾದ ಮಸೂರ ಬಿಲ್ಲೆಗಳನ್ನು ಕಣ್ಣುರೆಪ್ಪೆಗಳೊಳಗೆ ನೇರವಾಗಿ ಕಣ್ಣುಗುಡ್ಡೆಯ ಮೇಲೆ ಇರಿಸುವ ತಾಕು ಮಸೂರಗಳು (ಕಾಂಟಾಕ್ಟ್ ಲೆನ್ಸಸ್) ಇತ್ತೀಚೆಗೆ ಬರುತ್ತಿವೆ. ಈ ಮಸೂರಗಳನ್ನು ಪ್ಲಾಸ್ಟಿಕ್ಕಿಂದಲೂ ಗಾಜಿಂದಲೂ ಅಚ್ಚು ಹೊಯ್ದು. ಉಜ್ಜಿ. ಇಲ್ಲವೇ ಊದಿ ತಯಾರಿಸಬಹುದು. ಕಣ್ಣೀರಿನಿಂದ ಕಣ್ಣು ಗುಡ್ಡೆಗೇ ಅಂಟಿರುವುದರಿಂದ ಕಣ್ಣುಗುಡ್ಡೆ ಎತ್ತ ತಿರುಗಿದರೆ ಅತ್ತ ಅದೂ ಇರುವುದು ವಿಶೇಷ ಅನುಕೂಲ. ನೋಟಕ್ಕೆ ಯಾವ ಅಡ್ಡಿಯೂ ಇರದು. ಕಣ್ಣುಗುಡ್ಡೆಯ ಮುಂದುಗಡೆ ಇರುವ ತಿಳಿಪರೆಯಾದ ಕೋಡ್ಪರೆ (ಕಾರ್ನಿಯ) ರಿಫ್ರೇಕ್ಷಣ ತಲವಾಗಲು ಬೇಕಿರದಂತೆ ಅದಕ್ಕಿಂತಲೂ ಚೆನ್ನಾದ ಗೋಳಾಕಾರದ ಉಬ್ಬು ಮಸೂರ ಇಟ್ಟಂತಾಗುವುದು. ಅಸಮೋಸರಿಕೆ ಬೇರೆ ಬೇರೆ ದಿಕ್ಕುಗಳಲ್ಲಿ ಬೇರೆ ಬೇರೆಯಾಗಿದ್ದರೆ ಸರಿಪಡಿಸಲು ಸಾಮಾನ್ಯ ಕನ್ನಡಕಗಳಿಂದ ಸರಿಪಡಿಸುವುದು ಕಷ್ಟ. ಆದರೆ ತಾಕುಮಸೂರದಿಂದ ಸುಲಭ. ಕಣ್ಣುನೋಟದ ಕುಂದುಗಳು, ಕಾಪು ರೋಗಚಿಕಿತ್ಸೆ, ಕೆಲವು ಕಸಬುಗಳು, ಮತ್ತಿತರ ಸಂದರ್ಭಗಳಲ್ಲಿ ಇವು ಬಳಕೆಯಾಗುತ್ತವೆ. ಬಳಸುವವರಲ್ಲಿ ಬಹಳ ಮಂದಿ ಕನ್ನಡಕವಿಲ್ಲದೆ ತಮ್ಮ ಮೊಗ ಚೆನ್ನಾಗಿ ಕಾಣುವಂತಿರಲೆಂದೇ ಇವನ್ನು ಹಾಕಿಕೊಳ್ಳುತ್ತಾರೆ.



ನವೀನ ಮಾದರಿಯ ಕನ್ನಡಕಗಳು



ಮಹಿಳೆಯರ ಕನ್ನಡಕಗಳು

ಕೋರೈಸುವ ಬೆಳಕು, ವಿಕಿರಣತೆ, ಕಿಡಿ, ಲೋಹ ಚೂರುಗಳು ಹಾರುವುದನ್ನು ತಡೆಯಲೂ ಕಾಪಿನ ಕನ್ನಡಕಗಳು ಬಳಕೆಯಲ್ಲಿವೆ. ಬೆಳಕಿನ ಹೊಳಪನ್ನು ಬಣ್ಣದ ಗಾಜುಗಳಿಂದ ತಗ್ಗಿಸಬಹುದು. ಬೇಡದ ವಿಕಿರಣಗಳನ್ನು ವಿಶೇಷ ಗಾಜುಗಳಿಂದ ತಡೆಯಬಹುದು. ಸಾಮಾನ್ಯವಾಗಿ ಇಂಥ ಕನ್ನಡಕಗಳಿಗೆ ಪಕ್ಕಗಳಲ್ಲೂ ತಡೆಗಳಿರುತ್ತವೆ. ಒಡೆದರೂ ಚೂರುಚೂರುಗಳಾಗಿ ಹಾರಿಬೀಳದ ಎರಡು ಮೂರು ಗಾಜು ಪದರಗಳ ಕನ್ನಡಕಗಳು ಏಟು ಬಿದ್ದರೂ ಕಣ್ಣಿಗೆ ಚೂರುಗಳು ಹಾರದಂತೆ ತಡೆಯುತ್ತವೆ.

ವಿಶೇಷ ಉದ್ದೇಶಗಳಿಗಾಗಿ ಕೆಲವು ಬಗೆಗಳ ಕನ್ನಡಕಗಳಿವೆ. ನೋಟ ತೀರ ಕುಂದಿದವರಿಗಾಗಿ ದೂರದರ್ಶಕ ಮಸೂರಗಳಿರುವವು. ಈಜುವಾಗ ನೀರಲ್ಲೂ ಕಾಣುವಂತೆ



ಪ್ರಾಚೀನ ಮಾದರಿಯ ಕನ್ನಡಕಗಳು

ಅನುಕೂಲಿಸುವವು, ಹಾಸಿಗೆ ಹಿಡಿದ ರೋಗಿ ಮಲಗಿಕೊಂಡೇ ಓದುವಂಥವು ; ಗಡಿಯಾರ ರಿಪೇರಿ ಮುಂತಾದ ಕೆಲಸಗಳಲ್ಲಿ ಬಲು ಹತ್ತಿರದಲ್ಲಿ ಸಣ್ಣ ಸಾಮಾನುಗಳನ್ನು ಜೋಡಿಸಲು ಕಣ್ಣುಗುಳಿಗೆ ಸಿಕ್ಕಿಸಿಕೊಳ್ಳುವವು, ಅರೆಗಣ್ಣೋಟದಲ್ಲಿ (ಹೆಮಿಯನೋಪಿಯ) ಚೆನ್ನಾಗಿ ಕಾಣುವ ಕಣ್ಣುಭಾಗಕ್ಕೆ ಮಾತ್ರ ಅಳವಡಿಸಿದ್ದು, ಜೋಲುಬಿದ್ದ ರೆಪ್ಪೆಗಳನ್ನು ಎತ್ತಿಹಿಡಿವ ಕನ್ನಡಕಗಳೂ ಉಂಟು. (ಡಿ.ಸಿ.)

**ಕನ್ನಡ ಕೇಸರಿ :** ಧಾರವಾಡದಲ್ಲಿ ಬಿಂದೂರಾವ್ ಮುತಾಲಿಕ ದೇಸಾಯಿ ಎಂಬವರು 1902ರಲ್ಲಿ ಪ್ರಾರಂಭಿಸಿದ ಒಂದು ಪತ್ರಿಕೆ. ಇದು ಲೋಕ ಮಾನ್ಯ ತಿಲಕರ ಪ್ರಸಿದ್ಧ ಮರಾಠಿ ಪತ್ರಿಕೆ ಕೇಸರಿಯ ಕನ್ನಡ ಅವತರಣ. ಬಂಗಾಳ ವಿಭಜನೆಯಂಥ ಘಟನೆಗಳು ಮತ್ತು ಮಹಾರಾಷ್ಟ್ರದಲ್ಲಿ ತಿಲಕರು ಪ್ರಾರಂಭಿಸಿದ ರಾಷ್ಟ್ರೀಯ ಆಂದೋಳನಗಳ ಪ್ರಭಾವ ಉತ್ತರ ಕರ್ನಾಟಕದಲ್ಲಿ ಎಷ್ಟು ತೀವ್ರವಾಗಿತ್ತೆನ್ನುವುದಕ್ಕೆ ಕನ್ನಡ ಕೇಸರಿಯಂಥ ಪತ್ರಿಕೆಗಳ ಉಗಮ ಪ್ರಬಲ ನಿದರ್ಶನವಾಗಿದೆ.

ಪ್ರತಿವಾರವೂ ಮರಾಠಿ ಕೇಸರಿಯ ಲೇಖನಗಳನ್ನು ಕನ್ನಡದಲ್ಲಿ ಅನುವಾದಿಸಿ ಕನ್ನಡ ಕೇಸರಿಯಲ್ಲಿ ಪ್ರಕಟಿಸಲಾಗುತ್ತಿತ್ತು. ಪತ್ರಿಕೆಯ ಮುದ್ರಣದ ಕಾರ್ಯ ನಡೆಯುತ್ತಿದ್ದುದು ಹುಬ್ಬಳ್ಳಿಯಲ್ಲಿ. ಸತ್ಯಾಗ್ರಹ ಯೋಧ ಹಾಗೂ ಸೇವಾದಳದ ಸಂಸ್ಥಾಪಕರಾದ ನಾ. ಸು. ಹರ್ಡೀಕರ್ ಅವರು ಈ ಕಾರ್ಯದಲ್ಲಿ ನೆರವಾಗಲು ಮುಂದಾದರು. ಮುದ್ರಣದ ಮೇಲ್ವಿಚಾರಣೆಯ ಜೊತೆಗೆ ಅವರು ಮರಾಠಿಯ ಮೂಲ ಲೇಖನಗಳ ಕನ್ನಡ ಅನುವಾದ ಕಾರ್ಯವನ್ನೂ ನೆರವೇರಿಸುತ್ತಿದ್ದರು. ಲೇಖನಗಳ ಜೊತೆಗೆ ಹಲವಾರು ಸಾಂದರ್ಭಿಕ ಚಿತ್ರಗಳನ್ನೂ ಪ್ರಕಟಿಸಲಾಗುತ್ತಿತ್ತು. ಒಂದು ಸಂದರ್ಭದಲ್ಲಿ ಹರ್ಡೀಕರರು ಬರೆದ ಟಿಪ್ಪಣಿಯ ಭಾಷೆ ಎಷ್ಟು ತೀಕ್ಷ್ಣವಾಗಿತ್ತೆಂದರೆ ಸಂಪಾದಕರಾದ ಬಿಂದೂರಾಯರು ಕೊನೆಯ ಗಳಿಗೆಯಲ್ಲಿ ಅದನ್ನು ಗಮನಿಸಿ ಅಂಚೆಗೆ ಹೋದ ಪತ್ರಿಕೆಯನ್ನು ಮರಳಿ ತರಿಸಿಕೊಂಡು ಹರ್ಡೀಕರರ ಮಾತಿನ ಬಿಸಿಯನ್ನು ತಗ್ಗಿಸಿ ಬೇರೆ ಬೇರೆ ಟಿಪ್ಪಣಿ ಬರೆದರು. ಇಲ್ಲವಾದರೆ ಪತ್ರಿಕೆಗೆ ದುರ್ಭರವಾದ ಪ್ರಸಂಗವೊದಗುತ್ತಿತ್ತು. ಲೋಕಮಾನ್ಯ ತಿಲಕರ ವಿಚಾರಗಳನ್ನೂ ರಾಷ್ಟ್ರೀಯ ಹೋರಾಟದ ಸ್ವರೂಪವನ್ನೂ ಜನತೆಗೆ ತಿಳಿಸುವಲ್ಲಿ ಯಶಸ್ವಿಯಾದ ಈ ಪತ್ರಿಕೆ ಆ ಕಾಲದಲ್ಲಿ ತುಂಬ ಜನಪ್ರಿಯವಾಗಿತ್ತು. (ಎಸ್.ಐ.ಪಿ.)

**ಕನ್ನಡ ಚಂಪೂಸಾಹಿತ್ಯ :** ಸಂಸ್ಕೃತ ಕನ್ನಡಗಳಲ್ಲಿಯೂ ಇತರ ಕೆಲವು ಭಾರತೀಯ ಭಾಷೆಗಳಲ್ಲಿಯೂ ಚಂಪೂ (ಚಂಪು) ಎಂಬುದು ಪ್ರಾಚೀನವೂ ಪ್ರಸಿದ್ಧವೂ ಆದ ಒಂದು ಸಾಹಿತ್ಯಪ್ರಕಾರ. ಸಾವಿರ ವರ್ಷಗಳಿಗೆ ಮೇಲ್ಪಟ್ಟ ಇತಿಹಾಸ ಇದಕ್ಕಿದೆ. ಆಯಾ ಭಾಷೆಯಲ್ಲಿ ಬಹುಕಾಲ ನಿಲ್ಲುವ ಉತ್ಕೃಷ್ಟವಾದ ಸಾಹಿತ್ಯ ಈ ಪ್ರಕಾರದಲ್ಲಿ ನಿರ್ಮಿತವಾಗಿದೆ. ಕನ್ನಡದ ಮಟ್ಟಿಗೆ ಹೇಳುವುದಾದರೆ, ಮೊದಮೊದಲಿನ ಶ್ರೇಷ್ಠ ಕವಿಗಳು ಈ ಪ್ರಕಾರವನ್ನು ಯಶಸ್ವಿಯಾಗಿ ಬಳಸಿಕೊಂಡು ಉತ್ತಮ ಸಾಹಿತ್ಯವನ್ನು ನಿರ್ಮಾಣ ಮಾಡಿದ್ದು, ಮುಂದೆ ಅದು ವಿಶೇಷವಾಗಿ ಪ್ರಬಲಿಸಿ ಕನ್ನಡ ಸಾಹಿತ್ಯದಲ್ಲಿ ಗಣ್ಯವೂ ಸುಸ್ಥಿರವೂ ಆದ ನೆಲೆಯನ್ನು ಗಳಿಸಿಕೊಳ್ಳುವಂತಾಯಿತು.

ಚಂಪೂವಿನ ಲಕ್ಷಣವನ್ನು ದಂಡಿಯ (ಸು. 650) ಕಾವ್ಯಾದರ್ಶವೆಂಬ ಸಂಸ್ಕೃತ ಭಾಷೆಯ ಲಕ್ಷಣಗ್ರಂಥದಲ್ಲಿ ಮೊದಲು ನಿರೂಪಿಸಿದೆ. ಅನಂತರದಲ್ಲಿ ಹೇಮಚಂದ್ರ (1088-1172), ವಿಶ್ವನಾಥ (14ನೆಯ ಶ.), ವಿದ್ಯಾನಾಥ (14ನೆಯ ಶ.) ಮುಂತಾದವರು ತಮ್ಮ ಅಲಂಕಾರ ಗ್ರಂಥಗಳಲ್ಲಿ ಹೇಳಿದ್ದಾರೆ. ಹಾಗೆಯೇ ಕನ್ನಡದಲ್ಲಿಯೂ ನಾಗವರ್ಮ II, ಉದಯಾದಿತ್ಯ ಇವರ ಅಲಂಕಾರಗ್ರಂಥಗಳಲ್ಲಿ ಆ ವಿಷಯದ ಉಲ್ಲೇಖವಿದೆ. ದಂಡಿ ಚಂಪೂವಿನ ಲಕ್ಷಣವನ್ನು ಗದ್ಯಪದ್ಯಮಯೀ ಕಾಚಿಚ್ಚಂಪೂರಿತ್ಯಭಿಧೀಯತೇ ಎಂದು ಹೇಳಿದ್ದಾನೆ. ಚಂಪೂ ಪ್ರಧಾನವಾಗಿ ಗದ್ಯಪದ್ಯಮಯಿಯಾದದ್ದು ಎಂಬುದು ಇಲ್ಲಿ ಸ್ಫುರಿಸಿರುವ ಅದರ ಲಕ್ಷಣ. ಹೆಚ್ಚಿನ ವಿವರಗಳಾಗಲಿ ವ್ಯತ್ಯಾಸವಾಗಲಿ ಇಲ್ಲದೆ ಇದೇ ಲಕ್ಷಣವನ್ನು ಈಚಿನವರು ಅನುವಾದ ಮಾಡಿದ್ದಾರೆ.

ಚಂಪೂ ಎಂಬ ಪದದ ಮೂಲ ಅನಿರ್ದಿಷ್ಟವಾದುದು. ಅದರ ನಿಷ್ಪತ್ತಿಯನ್ನು ಬೇರೆ ಬೇರೆ ರೀತಿಯಲ್ಲಿ ವಿದ್ವಾಂಸರು ವಿವರಿಸಿದ್ದಾರೆ. ಈ ಸಾಹಿತ್ಯಪ್ರಕಾರ ಸಂಸ್ಕೃತ ಮೂಲವಾದುದು ಎಂದು ಗ್ರಹಿಸುವವರು ಒಂದು ರೀತಿಯಾಗಿಯೂ ಕನ್ನಡ ಮೂಲವಾದುದು ಎಂದು ಗ್ರಹಿಸುವವರು ಇನ್ನೊಂದು ರೀತಿಯಾಗಿಯೂ ಹೇಳುವುದು ಕಾಣುತ್ತದೆ. ಈ ಬಗೆಗೆ ವಿಚಾರಮಾಡುವುದು ಪ್ರಕೃತ ಲೇಖನದ ಉದ್ದೇಶವಲ್ಲ. ಚಂಪೂ ಮಾತೂ ರೀತಿಯೂ ಕನ್ನಡದ್ದೇ ಎಂದು ಹೇಳುವವರ ವಾದವನ್ನು ಮಾತ್ರ ಸಂಗ್ರಹವಾಗಿ ತಿಳಿಸಿ ಕನ್ನಡ ಚಂಪೂಸಾಹಿತ್ಯದ ಪರಿಚಯವನ್ನು ಇಲ್ಲಿ ನಿವೇದಿಸಲಾಗುತ್ತದೆ. ಚಂಪೂವಿನ ಎಲ್ಲ ವಿವರಗಳಿಗೆ ನೋಡಿ—ಚಂಪೂ.

ಚಂಪೂವಿಗೆ ಕನ್ನಡ ಮೂಲವನ್ನು ಹೇಳುವವರ ಅಭಿಪ್ರಾಯ ಹೀಗೆ : ಪ್ರಾಚೀನವಾದ ಸಂಸ್ಕೃತ ವಾಙ್ಮಯದಲ್ಲಿ ಚಂಪೂ ಸಾಹಿತ್ಯಪ್ರಕಾರ ಅಷ್ಟೇನೂ ಪ್ರಾಚೀನವಾದುದಲ್ಲ. ಈಚಿಗೆ ಕಾಣಿಸಿಕೊಂಡದ್ದು. ಆ ಭಾಷೆಯಲ್ಲಿ ಆ ರೀತಿಯ ಸಾಹಿತ್ಯ ಕಣ್ಣಿಗೆ ಬೀಳುವುದು ಕ್ರಿ.ಶ. 10ನೆಯ ಶತಮಾನದಿಂದ. ತ್ರಿವಿಕ್ರಮಭಟ್ಟನ (ಕ್ರಿ.ಶ. ಸು. 915) ದಮಯಂತೀ ಕಥೆ ಅಥವಾ ನಳಚಂಪೂ ಮತು ಸೋಮದೇವನ ಯಶಸ್ತಿಲಕ ಚಂಪೂ (ಕ್ರಿ.ಶ. 959)—ಇವು ಈಗ ತಿಳಿದಮಟ್ಟಿಗೆ ಆ ಭಾಷೆಯಲ್ಲಿಯ ಆದ್ಯ ಚಂಪೂಕೃತಿಗಳು. ಇವು ರಚನೆಯಾದದ್ದು ಕರ್ನಾಟಕದಲ್ಲಿ ಹಾಗೂ ಕನ್ನಡ ರಾಜರ ಆಶ್ರಯ ಪಡೆದ ಕವಿಗಳಿಂದ. ಇವರು ಆ ವೇಳೆಗಾಗಲೇ ಕನ್ನಡ ನಾಡಿನ ಕನ್ನಡ ಜೈನಕವಿಗಳು ಕಲ್ಪಿಸಿ ರೂಢಿಸಿದ್ದ ಚಂಪೂ ಮಾರ್ಗವನ್ನು ಅನುಸರಿಸಿದರೆಂದು ತೋರುತ್ತದೆ. ಕನ್ನಡದಲ್ಲಿ ಚಂಪೂಗ್ರಂಥಗಳು 8-9ನೆಯ ಶತಮಾನಗಳಲ್ಲಿಯೇ ಕಾಣಿಸಿಕೊಂಡಿದ್ದವೆಂದು ತಿಳಿಯುವುದಕ್ಕೆ ಆಧಾರಗಳಿವೆ. ಆದರೆ ಕ್ರಿ.ಶ. ಸು. 7ನೆಯ ಶತಮಾನದ ದಂಡಿ ಚಂಪೂವಿನ ಲಕ್ಷಣವನ್ನು ಹೇಳಿದ್ದಾನಲ್ಲದೆ, ಆತನ ಕಾಲದಲ್ಲಿಯೂ ಅದಕ್ಕೆ ಮೊದಲಲ್ಲಿಯೂ ಸಂಸ್ಕೃತ ಚಂಪೂಗ್ರಂಥಗಳು ಇಲ್ಲದೆ ಹೀಗೆ ಹೇಳಿರುವುದು ಸಾಧ್ಯವೇ—ಎಂಬ ಪ್ರಶ್ನೆ ಸಹಜವಾಗಿ ಹುಟ್ಟುತ್ತದೆ. ದಂಡಿಗೆ ಪರಿಚಿತವಾಗಿದ್ದ ಚಂಪೂಸಾಹಿತ್ಯ ಪೂರ್ತಿಯಾಗಿ ನಷ್ಟವಾಗಿದೆ ಎಂಬುದು ತೃಪ್ತಿಕರವಾದ ಉತ್ತರವಲ್ಲ. ಆತ ದಾಕ್ಷಿಣಾತ್ಯನಾದುದರಿಂದ, ಆ ಕಾಲಕ್ಕೆ ದಕ್ಷಿಣದಲ್ಲಿ ಪ್ರಚಲಿತವಾಗಿದ್ದ ಕನ್ನಡ, ತಮಿಳು ಭಾಷೆಗಳಲ್ಲಿಯ ಚಂಪೂಕೃತಿಗಳನ್ನು ನೋಡಿದ್ದಿರಬಹುದು. ಒಂದು ಪಕ್ಷ ಚಂಪೂ ಮೂಲತಃ ಸಂಸ್ಕೃತದ್ದೆಂದು ತಿಳಿದರೂ ಅದು ಕನ್ನಡ ಸಾಹಿತ್ಯದಲ್ಲಿ ಪಡೆದ ರೂಪ ಸಂಸ್ಕೃತದ ಅನುಕರಣೆಯ ಫಲವಲ್ಲ, ಅದಕ್ಕೆ ಒಂದು ವೈಶಿಷ್ಟ್ಯವಿದೆ.—ಇದಿಷ್ಟೂ ಒಟ್ಟಿನಲ್ಲಿ ಒಬ್ಬ ವಿದ್ವಾಂಸರ ವಿಚಾರಸರಣಿ.

ಇನ್ನೊಬ್ಬ ವಿದ್ವಾಂಸರು ಹೀಗೆಯೇ, ಸಂಸ್ಕೃತ ಸಾಹಿತ್ಯದಲ್ಲಿ ಚಂಪೂಸಾಹಿತ್ಯದ ಅರ್ವಾಚೀನತೆ, ಸಂಸ್ಕೃತದ ಪ್ರಾಚೀನ ಲಾಕ್ಷಣಿಕರಲ್ಲಿ ದಾಕ್ಷಿಣಾತ್ಯನಾದ ದಂಡಿಯೊಬ್ಬನೇ ಅದನ್ನು ಹೆಸರಿಸಿರತಕ್ಕವನು ಎಂಬ ಸಾಕ್ಷ್ಯ, ಚಂಪೂ ಶಬ್ದಕ್ಕೆ ಸಂಸ್ಕೃತದಲ್ಲಿ ಸ್ವರಸವಾದ ರೂಪನಿಷ್ಪತ್ತಿಯನ್ನು ಹೇಳುವುದರ ಅಶಕ್ಯತೆ, ತಮಿಳು ಭಾಷೆಯ ಪ್ರಾಚೀನ ಕಾವ್ಯವಾದ ಶಿಲಪ್ಪದಿಕಾರದ ಅನೇಕ ಸರ್ಗಗಳು ಗದ್ಯಪದ್ಯಾತ್ಮಕಗಳಾಗಿರುವುದು—ಇವನ್ನು ಗಮನಿಸಿ ಚಂಪೂಕಾವ್ಯರೂಪ ಭಾರತೀಯ ಸಾಹಿತ್ಯಕ್ಕೆ ದಕ್ಷಿಣ ಭಾರತದ ಕೊಡಿಗೆಯಾಗಿರಬೇಕೆಂದು ಭಾವಿಸಬಹುದು—ಎಂದಿದ್ದಾರೆ. ಅಲ್ಲದೆ ಕನ್ನಡದ ಮಟ್ಟಿಗೆ ಹೇಳುವುದಾದರೆ, ಹಿಂದಿನಿಂದ ಪ್ರಚುರವಾಗಿದ್ದ ಚತ್ತಾಣದಲ್ಲಿ ಗದ್ಯಖಂಡಗಳು (ವಚನಗಳು) ನಡುನಡುವೆ ಸೇರಿ ಚಂಪೂ ತಲೆಯೆತ್ತಿರಬಹುದು—ಎಂಬುದಾಗಿ ಕನ್ನಡದಲ್ಲಿ ಚಂಪುವಿನ ಉಗಮವನ್ನು ಗುರುತಿಸಲು ಯತ್ನಿಸಿದ್ದಾರೆ. (ಚತ್ತಾಣ ಎಂಬುದರ ಸ್ವರೂಪವನ್ನು ಅವರು ಹೀಗೆ ಹೇಳಿದ್ದಾರೆ : ಕವಿರಾಜಮಾರ್ಗದಲ್ಲಿ ಉಕ್ತವಾದ, ಅದಕ್ಕೆ ಹಿಂದಿನ ಕಾಲದಿಂದಲೂ ಕನ್ನಡದಲ್ಲಿ ಪ್ರಚಲಿತವಾಗಿದ್ದ ಕಾವ್ಯರೂಪ. ಇದು ಬಾಜನೆ ಗಬ್ಬ, ವಾಚಿಸತಕ್ಕದ್ದು, ಇದರಲ್ಲಿ ಕಂದ, ಹಲವು ಬಗೆಯ ಸಂಸ್ಕೃತ ವೃತ್ತಗಳು, ದೇಶೀಯ ಪದ್ಯಜಾತಿಗಳು—ಇವೆಲ್ಲ ಬರುತ್ತವೆ ; ಪದ್ದಳಿಯೂ ಬರಬಹುದು. ಇದು ಅಖಿಲ ವರ್ಣನೆಗಳಿಂದ ಕೂಡಿದ ಕಾವ್ಯ; ಆದ ಕಾರಣವೇ ಬಹುಶಃ ದೀರ್ಘವಾಗಿರುತ್ತದೆ.)

ಅಂತೂ ಚಂಪೂವಿನ ಉಗಮದ ವಿಷಯದಲ್ಲಿ ಭಿನ್ನಮತವಿರುವುದೂ ಅನಿರ್ದಿಷ್ಟತೆಯಿರುವುದೂ ಇದರಿಂದ ಸ್ಪಷ್ಟವಾಗಿ ತೋರುತ್ತದೆ. ಸಂಶೋಧನೆಯಿಂದ ಹೊಸ ಸಂಗತಿಗಳು ಬೆಳಕಿಗೆ ಬಂದ ಹೊರತು ಈ ವಿಷಯದಲ್ಲಿ ಯಾವ ನಿರ್ಣಯಕ್ಕೂ ಬರುವುದು ಸಾಧ್ಯವಿಲ್ಲ.

ಕನ್ನಡದಲ್ಲಿ ಚಂಪೂಸಾಹಿತ್ಯವನ್ನು ಗಮನಿಸುವ ಮೊದಲು ಕನ್ನಡ ಚಂಪೂವಿನ ಸಾಮಾನ್ಯ ಚೌಕಟ್ಟನ್ನು ಸ್ವಲ್ಪ ಗಮನಿಸಬೇಕು. ಕನ್ನಡ ಚಂಪೂವನ್ನು ರೂಢಿಯಲ್ಲಿ ವಸ್ತುಕ, ಓದುಗಬ್ಬ, ಮಾರ್ಗ ಕವಿತ್ವ ಎಂದು ಹೇಳುವುದುಂಟು. ಅದರಲ್ಲಿ ಪ್ರತಿಪಾದಿತವಾಗುವ ವಸ್ತು ಲೌಕಿಕ, ಧಾರ್ಮಿಕ ಅಥವಾ ಐತಿಹಾಸಿಕವಾಗಿರುತ್ತದೆ. ರಾಮಾಯಣ ಭಾರತಗಳು, ವೈದಿಕ ಜೈನಪುರಾಣಗಳು, ಕಲ್ಪಿತ ಕಥಾವಸ್ತುವುಳ್ಳ ಕಾವ್ಯಗಳು, ಐತಿಹಾಸಿಕ ವೃತ್ತಾಂತಗಳು—ಇವು ವಸ್ತುವಿಗೆ ಪ್ರಮುಖವಾದ ಆಕರಗಳು. ಪ್ರಾಚೀನ ಸಂಸ್ಕೃತ ಕಾವ್ಯಪರಂಪರೆಯಲ್ಲಿ ಕಾಣುವಂತೆ, ಉದಾತ್ತ ನಾಯಕನ

ಮಹಿಮಾತಿಶಯ ನಿರೂಪಣೆ, ನಾಯಕ ಪ್ರತಿನಾಯಕ ಸಂಘರ್ಷ, ಇಷ್ಟದೈವ, ದೈವಭಕ್ತ, ಧಾರ್ಮಿಕ ಕ್ಷೇತ್ರಾದಿಗಳ ಉತ್ಕರ್ಷ ಸಾಧನೆ ಮತ್ತು ಮಹಿಮೆ ಮುಂತಾದವುಗಳ ಕಥನ, ಮತಪ್ರಸಾರ, ತತ್ತ್ವಪ್ರಸಾರ, ಮನೋರಂಜನೆ—ಇವು ಇಲ್ಲಿಯೂ ಕಾಣುತ್ತವೆ. ಸಂಸ್ಕೃತ ಸಾಹಿತ್ಯದ ಪ್ರೌಢಕವಿಗಳ ರೀತಿಯಲ್ಲಿ ಇರುವಂತೆಯೇ ವಿವಿಧ ಸಾಂಪ್ರದಾಯಿಕ ವರ್ಣನೆಗಳ ಪ್ರಾಚುರ್ಯ, ಅಲಂಕಾರಪ್ರಿಯತೆ, ವಿಭಿನ್ನ ರಸದೃಷ್ಟಿ—ಇವು ಎದ್ದುಕಾಣುವಂತಿರುತ್ತವೆ. ಸಾಮಾನ್ಯವಾಗಿ ಕಥೆಗಿಂತಲೂ ವರ್ಣನೆಗೆ, ರಸಭಾವಗಳಿಗಿಂತಲೂ ಶಬ್ದಾರ್ಥಾಲಂಕಾರಗಳಿಗೆ, ಸ್ವಾನುಭವಕ್ಕಿಂತಲೂ ಕವಿ ಸಮಯಕ್ಕೆ ಹೆಚ್ಚು ಅವಕಾಶ ದೊರೆತಿರುತ್ತದೆ. ದೇಸೀಯವಾದ ಮಾತುಗಾರಿಕೆ, ಮತ್ತು ಸಂಸ್ಕೃತಭೂಯಿಷ್ಠವಾದ ಆಲಂಕಾರಿಕ ಪದರಚನೆ—ಇವುಗಳಲ್ಲಿ ಒಮ್ಮೆ ಅದು ಒಮ್ಮೆ ಇದು ಮೇಲುಗೈಯಾಗಿರುತ್ತದೆ. ವಿಶೇಷವಾಗಿ ಎರಡನೆಯದರ ಪ್ರಾಬಲ್ಯವೇ ಹೆಚ್ಚು. ಒಮ್ಮೊಮ್ಮೆ ಆಯೆರಡರ ಹಿತಮಿತವಾದ ಮಿಶ್ರಣವಿರುತ್ತದೆ.

ಕನ್ನಡ ಚಂಪೂವಿನಲ್ಲಿ, ಲಕ್ಷಣಾನುಸಾರವಾಗಿ, ಗದ್ಯಪದ್ಯಗಳ ಸಮಪ್ರಾಚುರ್ಯ ಸಾಮಾನ್ಯವಾಗಿರುತ್ತದೆ. ಆದರೆ ಪದ್ಯ ಗದ್ಯಕ್ಕಿಂತ ಹೆಚ್ಚಾಗಿ ಬರುವುದೇ ಸಾಮಾನ್ಯ. ಗದ್ಯಪದ್ಯಗಳು ಇಷ್ಟೇ ಪ್ರಮಾಣದಲ್ಲಿ ಇಂಥದೇ ವಿಷಯಕ್ಕಾಗಿ, ಹೀಗೆಯೇ ಯೋಜನೆಗೊಂಡಿರಬೇಕೆಂಬ ನಿಶ್ಚಿತವಾದ ನಿಯಮವೇನಿಲ್ಲ. ಆದರೆ ವರ್ಣನೆಗಳು, ಇತಿವೃತ್ತಾತ್ಮಕ ವಿವರಣೆಗಳು, ಸಂಬಂಧಸೂಚನೆಗಳು ಗದ್ಯದಲ್ಲಿರುವುದುಂಟು. ಕೃತಿ ಸಾಮಾನ್ಯವಾಗಿ ಆಶ್ವಾಸಗಳಾಗಿ ವಿಭಾಗವಾಗಿರುತ್ತದೆ ; ಆಶ್ವಾಸ ಸಂಖ್ಯೆ 14 ಅಥವಾ 16 ಇರಬಹುದು ; ಮುಂದೆ ಮುಂದೆ ಈ ಸಂಖ್ಯೆಯಲ್ಲಿ ಹೆಚ್ಚುಕಡಿಮೆಗಳಾಗಿವೆ. ಅವುಗಳ ಆದ್ಯಂತಗಳಲ್ಲಿ ಒಂದು ಗೊತ್ತಾದ ರೀತಿಯ ಪದ್ಯಬಂಧ ಮತ್ತು ಗದ್ಯಬಂಧಗಳಿರುತ್ತವೆ. ಕೃತಿಯ ಉಪಕ್ರಮದಲ್ಲಿ ಇಷ್ಟದೇವತಾಸ್ತುತಿ, ಕೃತಿಕರ್ತೃವಿನ, ಪೋಷಕನ ವಿಚಾರ—ಇತ್ಯಾದಿ ಸಾಂಪ್ರದಾಯಿಕ ಸರಣಿಯ ವಿವರಗಳೂ ಉಪಸಂಹಾರದಲ್ಲಿ ಫಲಶ್ರುತಿಯೂ ಬರುತ್ತವೆ. ಛಂದಸ್ಸಿನ ದೃಷ್ಟಿಯಿಂದ, ಕಂದಪದ್ಯಗಳೂ ಅವಕ್ಕೆ ಸ್ವಲ್ಪ ಕಡಿಮೆಯಾಗಿ ಖ್ಯಾತ ಕರ್ಣಾಟಕಗಳೆಂದು ರೂಢಿಯಾಗಿರುವ ಆರು ವರ್ಣವೃತ್ತಗಳೂ ಹೆಚ್ಚು ಸಂಖ್ಯೆಯಲ್ಲಿರುತ್ತವೆ. ಇವಲ್ಲದೆ ವಿರಳವಾಗಿ ತರಳ, ಮಲ್ಲಿಕಾಮಾಲೆ ಮುಂತಾದ ಇನ್ನೂ ಕೆಲವು ವರ್ಣವೃತ್ತಗಳೂ ಪ್ರಾಕೃತ ಪ್ರಭಾವದ ರಗಳೆಯ ಪ್ರಭೇದಗಳೂ ದೇಶೀಯಗಳಾದ ಅಕ್ಕರ ತ್ರಿಪದಿ ಮುಂತಾದವೂ ಕೃತಿಯ ಮೈಯಲ್ಲಿ ಅಲ್ಲಲ್ಲಿ ಸೇರಿಕೊಂಡಿರುತ್ತವೆ. ಒಟ್ಟಿನಲ್ಲಿ ಕಂದವೃತ್ತಗಳೂ ವಿರಳವಾಗಿ ಇತರ ಪದ್ಯಜಾತಿಗಳೂ ನಡುನಡುವೆ ಗದ್ಯವೂ ಹಾಸುಹೊಕ್ಕಾಗಿ ಸೇರಿಕೊಂಡು ಕೃತಿಯ ರೂಪದಲ್ಲಿ ನಾದಗಳಲ್ಲಿ ವೈವಿಧ್ಯ ಸಾಧಿತವಾಗಿರುತ್ತದೆ. ಕೃತಿವಸ್ತು ಇವುಗಳಲ್ಲಿ ಅನುಸ್ಯೂತವಾಗಿ ಹರಿದುಕೊಂಡು ಹೋಗುತ್ತದೆ. ಒಮ್ಮೊಮ್ಮೆ, ಒಂದೇ ಪದ್ಯದಲ್ಲಿ ಅಥವಾ ಗದ್ಯಭಾಗದಲ್ಲಿ ಮುಗಿಯದ ಒಂದು ಸಂಗತಿಯೋ ಭಾವವೋ ಮುಂದಿನ ಪದ್ಯಕ್ಕೋ ಗದ್ಯಕ್ಕೋ ಮುಂದುವರಿಯುವುದುಂಟು. ಕೃತಿಯ ಛಂದಸ್ಸಿನ ವೈವಿಧ್ಯ ಒಂದೇ ಬಗೆಯ ಛಂದಸ್ಸಿನ ಬಳಕೆಯಿಂದುಂಟಾಗುವ ಗತಾನುಗತಿಕತೆಯನ್ನೂ ನಿಷ್ಠುರ ನಿಯಮಬದ್ಧತೆಯನ್ನೂ ನಿವಾರಿಸುವುದಲ್ಲದೆ, ಕವಿಗೆ ಹೆಚ್ಚಿನ ರಚನಸ್ವಾತಂತ್ರ್ಯವೂ ಸೌಲಭ್ಯವೂ ಇದರಿಂದ ದೊರೆಯುವಂತಾಗಿದೆ. ರಚನೆಯ ಸೌಕರ್ಯಕ್ಕೆ ಹಾಗೂ ರಸಭಾವಗಳ ವೈವಿಧ್ಯಕ್ಕೆ ತಕ್ಕಂತೆ ಹೀಗೆ ವಿವಿಧ ಪದ್ಯಜಾತಿಗಳನ್ನೂ ಗದ್ಯವನ್ನೂ ಬಳಸುವುದು ಕಾವ್ಯಪುಷ್ಟಿಗೆ ಅನುಕೂಲವೇ ಆಗಿದೆ.

ಕನ್ನಡದಲ್ಲಿ ಚಂಪೂಸಾಹಿತ್ಯಪದ್ಧತಿಗೆ ಮೊದಲು, ಚತ್ತಾಣ ಮತ್ತು ಬೆದಂಡೆ ಎಂಬ ಪ್ರಕಾರದ ಕಾವ್ಯಗಳು ಪ್ರಸಿದ್ಧವಾಗಿದ್ದವೆಂದು ಕವಿರಾಜಮಾರ್ಗದ ಉಲ್ಲೇಖದಿಂದ ತಿಳಿಯುತ್ತದೆ. ಆ ಗ್ರಂಥದಲ್ಲಿ ಉಕ್ತರಾದ ಪದ್ಯಕವಿಗಳು ಕೆಲವರಾದರೂ ಅಂಥ ಕಾವ್ಯಗಳನ್ನು ರಚಿಸಿರಬೇಕೆಂದು ತಿಳಿಯುವುದಕ್ಕೆ ಅಲ್ಲಿಯೇ ಅವಕಾಶವಿದೆ. ಆ ಕಾವ್ಯಪ್ರಕಾರಗಳ ಸ್ವರೂಪವನ್ನು ಅಲ್ಲಿ ವಿವರಿಸಿದೆ. ಆ ಲಕ್ಷಣಗ್ರಂಥ ಮುಖ್ಯವಾಗಿ ದಂಡಿಯ ಕಾವ್ಯಾದರ್ಶವನ್ನು ಅನುಸರಿಸಿಯೂ ಚಂಪೂವಿನ ಹೆಸರನ್ನೆತ್ತದಿರುವುದನ್ನು ಗಮನಿಸಿದರೆ, ಆತನಿಗೆ ಪೂರ್ವದಲ್ಲಿಯೂ ಆತನ ಕಾಲದಲ್ಲಿಯೂ ಈ ಚತ್ತಾಣ, ಬೆದಂಡೆಗಳ ರೂಪದಲ್ಲಿ ಕೃತಿರಚನೆ ನಡೆಯುತ್ತಿದ್ದಿರಬೇಕೆಂಬ ಭಾವನೆಯುಂಟಾಗುತ್ತದೆ. ಕವಿರಾಜಮಾರ್ಗದ ಕಾಲದಿಂದೀಚೆಗೆ ಚತ್ತಾಣದಲ್ಲಿ ನಡುನಡುವೆ ಗದ್ಯಭಾಗಗಳು ಕೂಡಿ ಚಂಪೂ ರೀತಿ ಕನ್ನಡ ಸಾಹಿತ್ಯದಲ್ಲಿ ಕಾಣಿಸಿಕೊಂಡಿರಬಹುದು.

ಕನ್ನಡ ಚಂಪೂಸಾಹಿತ್ಯಕ್ಕೆ ಉಜ್ಜ್ವಲವೂ ಸುದೀರ್ಘವೂ ಆದ ಇತಿಹಾಸವಿದೆ. ಉಳಿದ ಕಾವ್ಯಪದ್ಧತಿಗಳಿಗಿಂತ ಅದು ಕವಿಜನರಿಗೆ ಹೆಚ್ಚು ಆದರಣೀಯವೂ ವಿದ್ವನ್ಮಾನ್ಯವೂ ಆಗಿದ್ದುದು ಅದರಿಂದ ತಿಳಿಯುತ್ತದೆ. ಚಂಪೂಸಾಹಿತ್ಯ ಕನ್ನಡದಲ್ಲಿ ಎಂದಿನಿಂದ ರಚನೆಯಾಗುತ್ತ ಬಂದಿದೆ, ಆರಂಭಕಾಲದ ಚಂಪೂಕೃತಿಗಳು ಯಾವುವು ಎಂಬ ವಿಷಯಗಳು ನಮಗೆ ತಿಳಿದಿಲ್ಲ. ದೊರೆತವುಗಳಲ್ಲಿ ಪಂಪಕವಿಯ (ಕ್ರಿ.ಶ. 941) ಆದಿಪುರಾಣ ಮತ್ತು ವಿಕ್ರಮಾರ್ಜುನವಿಜಯಗಳೇ ಅತ್ಯಂತ ಪ್ರಾಚೀನವಾದವು. ಅವುಗಳ ಚೌಕಟ್ಟನ್ನು ಪರಿಶೀಲಿಸಿದರೆ ಅವು ಆ ಪದ್ಧತಿಯ ಪರಿಣತರಚನೆಗಳೇ ಆಗಿರುವಂತೆ ತೋರುತ್ತವೆ. ಶ್ರೇಷ್ಠ ಕವಿಯಾದ ಪಂಪ ಚಂಪೂ ರೀತಿಯನ್ನು ಕೌಶಲದಿಂದಲೂ ಸಾಮರ್ಥ್ಯದಿಂದಲೂ ನಿರ್ವಹಿಸಿದ್ದಾನೆ. ಆ ಪದ್ಧತಿ ಆತನಿಗೆ ಸ್ವಲ್ಪ ಹಿಂದಿನಿಂದಲೂ ಬೆಳೆದುಕೊಂಡು ಬಂದಿದ್ದು ಆ ಸಿದ್ಧರೂಪಕ್ಕೆ ಬಂದಿರುವುದು ಸಾಧ್ಯ. ಪಂಪ ಪೂರ್ವಕಾಲದ ಕವಿ ಒಂದನೆಯ ಗುಣವರ್ಮ (ಕ್ರಿ. ಶ. ಸು. 900) ಬರೆದಿದ್ದಂತೆ ತಿಳಿದಿರುವ ಎರಡು ಕೃತಿಗಳಲ್ಲಿ ಶೂದ್ರಕ ಎಂಬುದು ಒಂದು ಚಂಪೂ ಕಾವ್ಯವಾಗಿರಬೇಕು ; ಆ ಕಾವ್ಯದ ಕೆಲವು ಪದ್ಯಗಳ ಜೊತೆಗೆ ಒಂದು ಗದ್ಯಭಾಗವೂ ಅಭಿನವವಾದಿ ವಿದ್ಯಾನಂದನ ಕಾವ್ಯಸಾರದಲ್ಲಿ ದೊರೆಯುತ್ತಿರುವುದು ಅದಕ್ಕೆ ಸಾಕ್ಷಿ. ಪಂಪ, ರನ್ನ ಮೊದಲಾದ ಜೈನಕವಿಗಳ ಉತ್ತರಕಾಲೀನ ಕಾವ್ಯಸಂಪ್ರದಾಯವನ್ನು ಗಮನಿಸಿ, ಗುಣವರ್ಮನ ಲೌಕಿಕ ಕಾವ್ಯ ಚಂಪೂ ಆಗಿದ್ದಂತೆ, ಆತನ ಧಾರ್ಮಿಕ ಕಾವ್ಯ ಹರಿವಂಶ ಕೂಡ ಚಂಪೂ ಆಗಿದ್ದಿರಬೇಕು ಎಂದು ತಿಳಿದರೆ ತಪ್ಪಾಗಲಾರದು. ಈಚೆಗೆ 3ನೆಯ ಮಂಗರಸ (1508) ತನ್ನ ನೇಮಿಜಿನೇಶಸಂಗತಿಯಲ್ಲಿ ಶ್ರೀವಿಜಯನೆಂಬ ಕವಿ ಚಂದ್ರಪ್ರಭ ಪುರಾಣವನ್ನು ಚಂಪೂರೂಪವಾಗಿ ರಚಿಸಿದ್ದಂತೆ ಹೇಳಿದ್ದಾನೆ. ಈ ಸಂಗತಿಯನ್ನು ಗಮನಿಸಿ ಕವಿರಾಜಮಾರ್ಗದಲ್ಲಿ ಉಲ್ಲೇಖಿವಾಗಿರುವ ಪ್ರಾಚೀನ ಪದ್ಯಕವಿಗಳಲ್ಲಿ ಒಬ್ಬನಾದ ಶ್ರೀವಿಜಯನೇ (ಸು. 850) ಆ ಪುರಾಣಕರ್ತೃ ಎಂಬುದಾಗಿ ಕೆಲವರು ಭಾವಿಸಿದ್ದಾರೆ. ಇದು ನಿಜವಾದರೆ ಕನ್ನಡ ಚಂಪೂಸಾಹಿತ್ಯದ ಇತಿಹಾಸವನ್ನು 9ನೆಯ ಶತಮಾನದ ಪೂರ್ವ ಅಥವಾ ಮಧ್ಯಭಾಗದಿಂದಲೇ ಮೊದಲು ಮಾಡಲು ಸಾಧ್ಯವಾಗುತ್ತದೆ. ಆದರೆ ಕವಿರಾಜಮಾರ್ಗದಲ್ಲಿ ಉಕ್ತನಾಗಿರುವ ಶ್ರೀವಿಜಯನೇ ಚಂದ್ರಪ್ರಭಪುರಾಣಕರ್ತೃ ಎನ್ನುವುದಕ್ಕೆ ಪ್ರಬಲವಾದ ಆಧಾರಗಳಿಲ್ಲ. ಕವಿರಾಜಮಾರ್ಗದಲ್ಲಿ ಉಕ್ತರಾದ ಇತರ ಕವಿಗಳ ಕೃತಿವಿಚಾರ ನಮಗೆ ಸರಿಯಾಗಿ ಏನೂ ತಿಳಿಯದು. ಇನ್ನು ಅಸಗ ಕವಿ (853) ಕನ್ನಡದಲ್ಲಿ ಕರ್ಣಾಟ ಕುಮಾರಸಂಭವ ಕಾವ್ಯವನ್ನು ರಚಿಸಿದ್ದಂತೆ ನಿಶ್ಚಯವಾಗಿ ತಿಳಿದಿದೆಯಾದರೂ ಅದು ಯಾವ ರೂಪದಲ್ಲಿತ್ತು ಎಂಬುದನ್ನು ತಿಳಿಯಲು ನಮಗೆ ಆ ಗ್ರಂಥ ದೊರೆತಿಲ್ಲ. ಚಂಪೂ ಆಗಿದ್ದಿರುವುದು ಅಸಂಭವವೇನಲ್ಲ.

ಅಂತೂ ಕನ್ನಡದಲ್ಲಿ ಚಂಪೂವಿನ ಇತಿಹಾಸ, ಈಗ ತಿಳಿದಮಟ್ಟಿಗೆ, ಒಂದನೆಯ ಗುಣವರ್ಮನಿಂದ (ಕ್ರಿ.ಶ. ಸು. 900) ಆರಂಭವಾದಂತೆ ಇಟ್ಟುಕೊಳ್ಳುವುದು ಸೂಕ್ತ. ಸು. 10ನೆಯ ಶತಮಾನದಿಂದ 12ನೆಯ ಶತಮಾನದ ಮಧ್ಯಭಾಗದ ವರೆಗೆ ಕನ್ನಡದಲ್ಲಿ ಚಂಪೂಸಾಹಿತ್ಯ ವಿಶೇಷವಾಗಿ ರಚನೆಯಾಗಿದೆ. ಈ ಕಾಲವನ್ನು ಚಂಪೂಯುಗ ಎನ್ನುವುದುಂಟು. 10ನೆಯ ಶತಮಾನವಂತೂ ಆ ಕಾಲದ ಉತ್ಕೃಷ್ಟ ಚಂಪೂ ಕಾವ್ಯಗಳ ರಚನೆಯಿಂದಾಗಿ ಕನ್ನಡ ಸಾಹಿತ್ಯದ ಸ್ವರ್ಣಯುಗವೆಂದು ಖ್ಯಾತವಾಗಿದೆ. ಈ ಅವಧಿಯ (10–12 ಶ.) ಚಂಪೂ ಸಾಹಿತ್ಯದ ಒಂದು ಸಾಮಾನ್ಯ ಸಮೀಕ್ಷೆಯನ್ನು ಈಗ ನೋಡಬಹುದು.

ಚಂಪೂ ಸಾಹಿತ್ಯಕ್ಕೆ ಭದ್ರವಾದ ನೆಲೆಗಟ್ಟು ಹಾಕಿದವ ಪಂಪಕವಿ. ಆತನ ಎರಡು ಕೃತಿಗಳು ಆದಿಪುರಾಣ ಮತ್ತು ವಿಕ್ರಮಾರ್ಜುನವಿಜಯ. ಅವುಗಳಲ್ಲಿ ಚಂಪೂಮಾರ್ಗದ ಸಿದ್ಧರೂಪ ಕಣ್ಣಿಗೆ ಕಟ್ಟಿ ನಿಲ್ಲುತ್ತದೆ ; ಅದರ ಗಾಂಭೀರ್ಯ, ಸೊಗಸು ಸೌಲಭ್ಯಗಳು ಮನವರಿಕೆಯಾಗುತ್ತವೆ. ವಸ್ತು ಮತ್ತು ರೀತಿ ಎರಡು ದೃಷ್ಟಿಗಳಿಂದಲೂ ಆತನ ಚಂಪೂಕಾವ್ಯಗಳು ಉತ್ತರಕಾಲೀನ ಚಂಪೂ ಕವಿಗಳಿಗೆ ಅನುಕರಣೀಯವಾದ ಆದರ್ಶವಾಗಿಯೂ ಮಾದರಿಯಾಗಿಯೂ ಪರಿಣಮಿಸಿದುವು. ಪಂಪನನ್ನು ಗೌರವದಿಂದ ನೆನೆಯುವ, ಆತನ ವಸ್ತುವನ್ನೂ ಭಾವವನ್ನೂ ಉಕ್ತಿಯನ್ನೂ ನಿರೂಪಣ ವಿಧಾನವನ್ನೂ ಕೊಳ್ಳುವ, ಕವಿಗಳ ಚರ್ಯೆಯನ್ನು ಪರಿಶೀಲಿಸಿದರೆ ಈ ವಿಷಯ ಚೆನ್ನಾಗಿ ಮನದಟ್ಟಾಗುತ್ತದೆ. ಮುಂದಿನ ಕವಿಗಳು ಅನುಸರಿಸುವ ಚಂಪೂವಿನ ಚೌಕಟ್ಟು ಒಟ್ಟಿನಲ್ಲಿ ಪಂಪನ ಚಂಪೂವಿನ ಚೌಕಟ್ಟನ್ನೇ ಹೋಲುತ್ತದೆ. ಕವಿಯ ದೃಷ್ಟಿವಿಶೇಷಕ್ಕೆ ಅನುಸಾರವಾಗಿ, ಕಾಲಧರ್ಮಕ್ಕೆ ಅನುಸಾರವಾಗಿ ಆಗಾಗ ಕೆಲವು ವೈಲಕ್ಷಣ್ಯಗಳು ಹೊಸದಾಗಿ ತೋರಿರುವುದೂ ಉಂಟು.

ಪಂಪನ ಆದಿಪುರಾಣ ಆದಿತೀರ್ಥಂಕರನ ಚರಿತೆ ; ವಿಕ್ರಮಾರ್ಜುನವಿಜಯ (ಪಂಪಭಾರತ) ಮಹಾಭಾರತದ ಕಥೆಯನ್ನು ಒಳಗೊಂಡದ್ದು. ಪೊನ್ನನ (ಕ್ರಿ.ಶ. ಸು. 950) ಶಾಂತಿಪುರಾಣ 16ನೆಯ ತೀರ್ಥಂಕರನಾದ ಶಾಂತಿನಾಥನ ಚರಿತೆ. ಆತನ ಅನುಪಲಬ್ಧವಾದ ಭುವನೈಕರಾಮಾಭ್ಯುದಯ ಪ್ರಾಯಃ ರಾಮಾಯಣ ಕಥಾವಸ್ತುವನ್ನುಳ್ಳ ಚಂಪೂ. 1ನೆಯ ನಾಗವರ್ಮನ (ಸು. 990) ಕರ್ಣಾಟಕ ಕಾದಂಬರಿ ಕಲ್ಪಿತ ಕಥಾವಸ್ತುವನ್ನುಳ್ಳ ಬಾಣನ ಕಾದಂಬರಿಯ ಚಂಪೂ ರೂಪ. ರನ್ನನ (ಕ್ರಿ.ಶ. 993) ಅಜಿತಪುರಾಣ 2ನೆಯ ತೀರ್ಥಂಕರನಾದ ಅಜಿತನಾಥನ ಚರಿತೆ ; ಸಾಹಸಭೀಮವಿಜಯ (ಗದಾಯುದ್ಧ) ಗದಾಸೌಪ್ತಿಕ ಪರ್ವಗಳ ಭಾರತದ ಕಥೆ ; ಪಂಪಭಾರತದ 13–14ನೆಯ ಆಶ್ವಾಸಗಳಿಂದ ಪ್ರಭಾವಿತವಾದ್ದು. ದುರ್ಗಸಿಂಹನ (ಕ್ರಿ.ಶ. 1031) ಪಂಚತಂತ್ರ, ವಸುಭಾಗಭಟ್ಟನ ಪಂಚತಂತ್ರವನ್ನು ಅನುಸರಿಸಿದ ನೀತಿಕಾವ್ಯ. ಶ್ರೀಧರಾಚಾರ್ಯನ (ಕ್ರಿ.ಶ. 1049) ಅನುಪಲಬ್ಧವಾದ ಚಂದ್ರಪ್ರಭಚರಿತೆ 8ನೆಯ ತೀರ್ಥಂಕರ ಚಂದ್ರಪ್ರಭನ ಚರಿತೆಯನ್ನೊಳಗೊಂಡ ಚಂಪುವಾಗಿರಬೇಕು. ಶಾಂತಿನಾಥನ

(ಕ್ರಿ.ಶ. 1068) ಸುಕುಮಾರ ಚರಿತೆ ಜೈನ ಮಹಾಪುರುಷರಲ್ಲಿ ಉಪಸರ್ಗ ಕೇವಲಿಯೊಬ್ಬನ ಚರಿತೆ. ನಯಸೇನನ (ಕ್ರಿ.ಶ. 1112) ಧರ್ಮಾಮೃತ ಕಥಾರೂಪವಾಗಿ ಜೈನತತ್ತ್ವಗಳನ್ನು ಪ್ರತಿಪಾದಿಸಿರುವ ಕೃತಿ. ನಾಗಚಂದ್ರನ (ಕ್ರಿ.ಶ. ಸು. 1140) ಮಲ್ಲಿನಾಥಪುರಾಣ 19ನೆಯ ತೀರ್ಥಂಕರನಾದ ಮಲ್ಲಿನಾಥನ ಚರಿತೆ; ರಾಮಚಂದ್ರ ಚರಿತಪುರಾಣ (ಪಂಪರಾಮಾಯಣ) ವಿಮಲಸೂರಿ–ರವಿಷೇಣರ ಸಂಪ್ರದಾಯದ ಜೈನರಾಮಾಯಣ. ಕರ್ಣಪಾರ್ಯನ (ಕ್ರಿ.ಶ. ಸು. 1160–70) ನೇಮಿನಾಥಪುರಾಣ 22ನೆಯ ತೀರ್ಥಂಕರನಾದ ನೇಮಿನಾಥನ ಚರಿತೆ. ನೇಮಿಚಂದ್ರನ (ಕ್ರಿ.ಶ. ಸು. 1180) ನೇಮಿನಾಥಪುರಾಣ (ಅರ್ಧನೇಮಿಪುರಾಣ) ಅದೇ ವಸ್ತುವನ್ನುಳ್ಳದ್ದು. ಆತನ ಲೀಲಾವತಿ ಕಲ್ಪಿತಕಥಾಕಾವ್ಯ. ರುದ್ರಭಟ್ಟನ (ಕ್ರಿ.ಶ. ಸು. 1185) ಜಗನ್ನಾಥ ವಿಜಯ ಮುಖ್ಯವಾಗಿ ವಿಷ್ಣುಪುರಾಣದ ಆಧಾರದ ಮೇಲೆ ರಚಿತವಾಗಿರುವ ಕೃಷ್ಣಕಥೆ. ಅಗ್ಗಳನ (ಕ್ರಿ.ಶ. ಸು. 1189) ಚಂದ್ರಪ್ರಭಪುರಾಣ ಆ ತೀರ್ಥಂಕರನ ಕಥೆ. ಆಚಣ್ಣನ (ಕ್ರಿ.ಶ. 1189–1205) ವರ್ಧಮಾನಪುರಾಣ 24ನೆಯ ತೀರ್ಥಂಕರನಾದ ವರ್ಧಮಾನನ ಚರಿತೆ.

ಈಅವಧಿಯಲ್ಲಿ ಇನ್ನೂ ಕೆಲವು ಚಂಪೂಕೃತಿಗಳು ರಚಿತವಾಗಿರುವ ಹಾಗೆ ತೋರುತ್ತದೆ. ಆದರೆ ಇವು ಯಾವುವೂ ಈವರೆಗೆ ನಮಗೆ ದೊರೆತಿಲ್ಲ, ವಿವರಗಳೂ ಸರಿಯಾಗಿ ತಿಳಿದಿಲ್ಲ. ಹೀಗೆ 10 ರಿಂದ 12ನೆಯ ಶತಮಾನದ ವರೆಗೆ, ವೀರಶೈವ ವಚನಕಾರರೂ ಕವಿಗಳೂ ಕಾಣಿಸಿಕೊಂಡು ವಚನಗಳನ್ನೂ ರಗಳೆ ಷಟ್ಪದಿ ಮೊದಲಾದ ಛಂದಸ್ಸುಗಳಲ್ಲಿ ಕಾವ್ಯಗಳನ್ನೂ ರಚಿಸಲು ಆರಂಭಿಸುವ ವರೆಗೆ, ಚಂಪೂಸಾಹಿತ್ಯರಚನೆ ಉತ್ಕರ್ಷದಲ್ಲಿತ್ತು. ಈ ಕಾಲದ ಚಂಪೂವಿನ ಕೆಲವು ವೈಲಕ್ಷಣ್ಯಗಳನ್ನು ಈಗ ನೋಡಬಹುದು.

ಕನ್ನಡ ಸಾಹಿತ್ಯದಲ್ಲಿ ಚಂಪೂವಿನ ಪ್ರಥಮ ಪುರಸ್ಕರ್ತರು ಜೈನಕವಿಗಳು. ಅವರಲ್ಲಿ ಆದ್ಯರೂ ಅನಂತರದವರೂ ಸಂಸ್ಕೃತ (ಮತ್ತು ಪ್ರಾಕೃತ) ಭಾಷೆಯಲ್ಲಿ ರಚಿತವಾಗಿರುತ್ತಿದ್ದ ಪೂರ್ವಾಚಾರ್ಯರ ಪದ್ಯರೂಪದ ಜೈನ ಮಹಾಪುರಾಣ, ಹರಿವಂಶಪುರಾಣ ಮೊದಲಾದವನ್ನು ಅಥವಾ ಅವುಗಳ ಭಾಗಗಳನ್ನು ಯಥೋಚಿತವಾಗಿ ಸಂಗ್ರಹಿಸಿ ಅಥವಾ ವಿಸ್ತರಿಸಿ ಚಂಪೂರೂಪದಲ್ಲಿ ತಮ್ಮ ಜೈನ ಪುರಾಣಗಳನ್ನು ರಚಿಸಿದರು. ಹಾಗೆಯೇ ಅವರು ರಚಿಸಿದ ಲೌಕಿಕ ಕಾವ್ಯಗಳು ಕೂಡ ಪದ್ಯರೂಪದ ಸಂಸ್ಕೃತ (ಮತ್ತು ಪ್ರಾಕೃತ) ಭಾರತ ರಾಮಾಯಣಗಳ ಚಂಪೂ ರೂಪಗಳಾಗಿದ್ದು, ಅವುಗಳಲ್ಲಿಯೇ ಸಂಸ್ಕೃತ ನಾಟಕಗಳ ಹಾಗೂ ಕಾವ್ಯಸಾಹಿತ್ಯದ ವಸ್ತು ಶೈಲಿಗಳೂ ಅಳವಟ್ಟಿರುವುದು ಕಂಡುಬರುತ್ತದೆ. ಕಾಳಿದಾಸಾದ್ಯರ ಸಂಸ್ಕೃತ ಮಹಾಕಾವ್ಯಗಳ ಸಾಂಪ್ರದಾಯಿಕ ಲಕ್ಷಣಗಳು, ವರ್ಣನೆಗಳು, ಅಲಂಕಾರ, ನಿರೂಪಣ ವಿಧಾನ, ಕಥಾಂಶ, ನಾಯಕವ್ಯಕ್ತಿ—ಇತ್ಯಾದಿ ಆ ಕಾವ್ಯಗಳಲ್ಲಿ ಗರ್ಭೀಕೃತವಾಗಿವೆ. ತೀರ್ಥಂಕರ ಚರಿತೆಗಳಲ್ಲಿ ಆಯಾ ತೀರ್ಥಂಕರನ (ಮತ್ತು ಸಹಚರ ಜೀವರ) ಪೂರ್ವಭವಾವಳಿಗಳು ಮತ್ತು ಪಂಚಕಲ್ಯಾಣದ ವಿವರಗಳು ಬರುತ್ತವೆ; ಲೌಕಿಕ ಕಾವ್ಯಗಳಲ್ಲಿ ಪೌರಾಣಿಕ ಮತ್ತು ತತ್ಕಾಲೀನ ಚಾರಿತ್ರಿಕ ವ್ಯಕ್ತಿಗಳ ಸಮೀಕರಣ ಮೂಲಕವಾದ ವಸ್ತುಕಥನವಿರುತ್ತದೆ. ಇನ್ನು ಕಲ್ಪಿತಕಥಾವಸ್ತುವಿನ ಸಂಸ್ಕೃತ ಗದ್ಯಕಾವ್ಯಗಳನ್ನು ಕನ್ನಡಕ್ಕೆ ತಂದುಕೊಳ್ಳುವಾಗ, ಚಂಪೂ ಪದ್ಧತಿಗೆ ಅಳವಡಿಸಿಕೊಂಡು ನಿರೂಪಿಸುವ ಸಂಪ್ರದಾಯವನ್ನು ಮೊದಲು ಹೂಡಿದ ಕವಿ ನಾಗವರ್ಮ 1. ಆತ ತನ್ನ ಕೃತಿ ಕರ್ಣಾಟಕ ಕಾದಂಬರಿಯಲ್ಲಿ, ಕಲ್ಪಿತಕಥೆಯನ್ನು ಕಾವ್ಯವಸ್ತುವನ್ನಾಗಿ ಮಾಡಿಕೊಂಡದ್ದು ಹಾಗೂ ಗದ್ಯರೂಪದ ಕೃತಿಯನ್ನು ಚಂಪೂರೂಪಕ್ಕೆ ತಿರುಗಿಸಿದ್ದು ಒಂದು ವೈಶಿಷ್ಟ್ಯಪೂರ್ಣವಾದ ಸಾಹಸ. ಈ ಪರಂಪರೆ ಮುಂದೆ ನೇಮಿಚಂದ್ರ, ದೇವಕವಿ ಮತ್ತು ಚೌಂಡರಸರ ಕೈಯಲ್ಲಿ ಮುಂದುವರಿಯಿತು. ಮೂಲ ಶುದ್ಧವಾಗಿ ಪದ್ಯದಲ್ಲಿರಲಿ ಅಥವಾ ಗದ್ಯದಲ್ಲಿರಲಿ, ಅದನ್ನು ಚಂಪೂವಿಗೆ ತಿರುಗಿಸುವ ಈ ಪ್ರಯತ್ನ ಕನ್ನಡ ಸಾಹಿತ್ಯದಲ್ಲಿ ಚಂಪೂವಿನ ಪ್ರಾಬಲ್ಯವನ್ನೂ ಕನ್ನಡ ಕವಿಗಳ ಒಲವು, ಸಂಪ್ರದಾಯ ಶ್ರದ್ಧೆಗಳನ್ನೂ ಎತ್ತಿ ತೋರಿಸುತ್ತದೆ.

ಒಂದನೆಯ ನಾಗವರ್ಮನ ಕರ್ಣಾಟಕ ಕಾದಂಬರಿ ಅಖಂಡವಾದ ಕಥಾಸೂತ್ರವುಳ್ಳ ಚಂಪೂವಾದರೆ, ದುರ್ಗಸಿಂಹನ ಪಂಚತಂತ್ರ ಹಲವು ಕಥೆಗಳ ಚಂಪೂ. ದೇಸಿ ಮಾರ್ಗಗಳೆರಡರಲ್ಲಿಯೂ ನಡೆಯುವ ಗದ್ಯಪದ್ಯಗಳು, ದೀರ್ಘತರ ಸಮಾಸ ರಚನೆ, ಶಬ್ದಾಲಂಕಾರಪ್ರಿಯತೆ—ಈತನ ಪ್ರೌಢಶೈಲಿಯ ಚಂಪೂವಿನ ವೈಶಿಷ್ಟ್ಯಗಳು. ಕಥಾಸಂಬಂಧಿಯಾದ ಚಂಪೂಗದ್ಯದ ಸ್ವರೂಪ ಹೇಗಿರಬಹುದೆಂದು ತಿಳಿಯುವುದಕ್ಕೆ ಇಲ್ಲಿ ಅವಕಾಶವಿದೆ. ಹಲವು ಕಥೆಗಳ ಚಂಪೂವಿನ ಈ ಪದ್ಧತಿ ಮುಂದೆ ನಯಸೇನ ಮೊದಲಾದವರ ಕೈಯಲ್ಲಿ ಪ್ರಬಲಿಸಿತು. ಶಾಂತಿನಾಥನ ಸುಕುಮಾರಚರಿತೆ ಪದ್ಧತಿಯಂತೆ ತೀರ್ಥಂಕರ ಚರಿತೆಯಾಗಿರದೆ ಉಪಸರ್ಗ ಕೇವಲಿಯೊಬ್ಬನ ಕಥೆಯಾಗಿರುವುದು ವಸ್ತುವಿನ ದೃಷ್ಟಿಯಿಂದ ಒಂದು ವಿಶೇಷ. ಆತನ ಚಂಪೂವಿನ ಚೌಕಟ್ಟಿನಲ್ಲಿ ರಗಳೆ ಮತ್ತು ದೇಸಿ ಛಂದಸ್ಸಿನ ಪ್ರಭೇದಗಳನ್ನು ಮನಸೆಳೆಯುವಂತೆ ಬಳಸಿದೆ.

ಈವರೆಗೆ ಬೆಳೆದು ಬಂದ ಪ್ರೌಢ ಚಂಪೂ ಮಾರ್ಗ ನಯಸೇನನ ಕಾಲದಲ್ಲಿ, ಆತ ದೇಸಿಗೆ ಕೊಟ್ಟ ಮಹತ್ತ್ವದಿಂದ, ಸುಧಾರಣೆಗೊಂಡು ಸರಳವಾದ ರೂಪರೇಷೆಗಳನ್ನು ಪಡೆದುಕೊಂಡಿತು. ಸ್ವಲ್ಪಮಟ್ಟಿಗೆ ದುರ್ಗಸಿಂಹನ ಕೃತಿಯಲ್ಲಿಯೇ ಇದನ್ನು ಗುರುತಿಸಬಹುದು. ಚಂಪೂವಿನ ವಸ್ತು, ಭಾಷೆ ಮತ್ತು ಶೈಲಿ ಜನಸಾಮಾನ್ಯನ ಹೃದಯಕ್ಕೆ ಮೆಚ್ಚಾಗುವಂತೆ ಆಕರ್ಷಕವೂ ಅರ್ಥಯುಕ್ತವೂ ಆಯಿತು. ವ್ಯಾಪಕವಾದ ಜನಜೀವನದ ಸಂಸ್ಕೃತಿಯನ್ನೂ ಭಾಷೆಯನ್ನೂ ಹೃದಯಂಗಮವಾಗಿ ಪ್ರತಿಬಿಂಬಿಸಿರುವ ಈ ಚಂಪೂ ಕೃತಿಯ ಶೈಲಿ ವಿಶಿಷ್ಟವಾದುದು. ನಾಗಚಂದ್ರನ ಚಂಪೂಕೃತಿಗಳ ಮುಖ್ಯ ಲಕ್ಷಣಗಳು ಎಂದರೆ ಸಾಂಪ್ರದಾಯಿಕ ವರ್ಣನೆಗಳ ಪ್ರಾಚುರ್ಯ ಮತ್ತು ಶೈಲಿಯ ಸೌಕುಮಾರ್ಯ. ಇದಕ್ಕೆ ಪ್ರತಿಯಾಗಿ ಎನ್ನುವಂತೆ ಕರ್ಣಪಾರ್ಯನ ಕೃತಿ ಅದರ ವಿಶಾಲವಾದ ಕಥಾಭಿತ್ತಿಯಿಂದಾಗಿ ಸಾಂಪ್ರದಾಯಿಕ ವರ್ಣನೆಗಳ ಗೋಜು ಗೊಂದಲವಿಲ್ಲದೆ ರಚಿತವಾಗಿರುವ ಒಂದು ಸರಳಶೈಲಿಯ ಚಂಪೂಕಾವ್ಯ. ನೇಮಿಚಂದ್ರನ ಕೃತಿಗಳು ಕಥೆಗಿಂತ ವರ್ಣನೆಗಳಿಗೆ, ಚಮತ್ಕಾರಕವಾದ ಕಲ್ಪನೆಯ ಚಿತ್ರಗಳಿಗೆ, ಅಲಂಕಾರವೈಖರಿಗೆ ಗಮನ ಕೊಟ್ಟಿರತಕ್ಕವು. ರುದ್ರಭಟ್ಟನಲ್ಲಿಯೂ ಈ ಗುಣಗಳನ್ನು ಕಾಣಬಹುದು. ಆಚಣ್ಣ ತನ್ನ ಕೃತಿ ವರ್ಧಮಾನಪುರಾಣದಲ್ಲಿ ಚಂಪೂವಿನ ಸಾಂಪ್ರದಾಯಿಕ ಲಕ್ಷಣಗಳೊಡನೆ ಚಿತ್ರಕವಿತ್ವದ ವೈಲಕ್ಷಣ್ಯಗಳನ್ನೂ ಜೊತೆಗೂಡಿಸಿದ್ದಾನೆ.

12ನೆಯ ಶತಮಾನದ ಉತ್ತರಾರ್ಧದಲ್ಲಿ ಕನ್ನಡ ಸಾಹಿತ್ಯ ಹೊಸ ತಿರುವನ್ನು ಪಡೆದುಕೊಂಡಿತು. ಈಅವಧಿಯಲ್ಲಿ ಕನ್ನಡ ಸಾಹಿತ್ಯ ಹೆಚ್ಚು ಹೆಚ್ಚು ಜನಸಮ್ಮುಖವಾಗತೊಡಗಿತು. ವಚನ ಸಾಹಿತ್ಯದ ಕಾಲದಿಂದೀಚೆಗೆ ದೇಶ್ಯಛಂದಸ್ಸುಗಳು ಹುರುಪುಗೊಂಡು ಕಾವ್ಯವಾಹಕಗಳಾದುವು. ಅವುಗಳಿಗೆ ಜೊತೆಜೊತೆಯಾಗಿ ಚಂಪೂ ಪದ್ಧತಿ ಮುನ್ನಡೆಯಿತಲ್ಲದೆ ಕ್ಷೀಣಿಸಲಿಲ್ಲ. ವಸ್ತು ಮತ್ತು ಶೈಲಿಯಲ್ಲಿ ಕಾಲಧರ್ಮಕ್ಕೆ ಅನುಸಾರವಾಗಿ ಸರಳತೆ ತಲೆದೋರಿತು. ಆದರೆ ಸಂಪ್ರದಾಯ ಶ್ರದ್ಧೆಯಿಂದ ಹುಟ್ಟಿದ ಪ್ರೌಢ ಚಂಪೂವಿನ ರಚನೆಯೇನೂ ನಿಲ್ಲಲಿಲ್ಲ. ನಯಸೇನನ ಮಾರ್ಗಕ್ಕಿಂತ ನೇಮಿಚಂದ್ರ ರುದ್ರಭಟ್ಟರ ಮಾರ್ಗವೇ ಚಂಪೂ ಕವಿಗಳಿಗೆ ಹೆಚ್ಚು ಮೆಚ್ಚಾಯಿತು. 12ರಿಂದ 15ನೆಯ ಶತಮಾನದ ವರೆಗಿನ ಚಂಪೂ ಸಾಹಿತ್ಯ ಅದರ ಇತಿಹಾಸದಲ್ಲಿ ಎರಡನೆಯ ಘಟ್ಟ. ಈಅವಧಿಯ ಕೃತಿಗಳ ಒಂದು ಸಾಮಾನ್ಯ ಸಮೀಕ್ಷೆಯನ್ನು ಈಗ ನೋಡಬಹುದು.

ಬಂಧುವರ್ಮನ (ಕ್ರಿ.ಶ. ಸು. 1200) ಹರಿವಂಶಾಭ್ಯುದಯ ಮುಖ್ಯವಾಗಿ ನೇಮಿನಾಥ ಚರಿತ್ರೆ. ಆತನ ಜೀವಸಂಬೋಧನೆ ಜೈನಮತದ ದ್ವಾದಶಾನುಪ್ರೇಕ್ಷೆಗಳನ್ನು ಕಥಾರೂಪವಾಗಿ ಪ್ರತಿಪಾದಿಸುವ ಕೃತಿ. ದೇವಕವಿಯ (ಕ್ರಿ.ಶ. ಸು. 1200) ಕುಸುಮಾವಳಿ ಒಂದು ಕಲ್ಪಿತಕಥಾಕಾವ್ಯ. ಹರಿಹರನ ಗಿರಿಜಾಕಲ್ಯಾಣ (ಕ್ರಿ.ಶ. ಸು. 1200) ಶಿವಪಾರ್ವತಿಯರ ವಿವಾಹವನ್ನು ಕುರಿತದ್ದು. ಪಾರ್ಶ್ವಪಂಡಿತನ ಪಾರ್ಶ್ವನಾಥಪುರಾಣ (ಕ್ರಿ.ಶ.ಸು. 1222) 23ನೆಯ ತೀರ್ಥಂಕರನಾದ ಪಾರ್ಶ್ವನಾಥನ ಚರಿತೆಯನ್ನು ಒಳಗೊಂಡದ್ದು. ಸೋಮರಾಜನಉದ್ಭಟಕಾವ್ಯ (ಕ್ರಿ.ಶ. 1222 ?) ಉದ್ಭಟದೇವನೆಂಬ ಶಿವಭಕ್ತನ ಕಥೆ. ಜನ್ನನ ಅನಂತನಾಥಪುರಾಣ (ಕ್ರಿ.ಶ. 1230) 14ನೆಯ ತೀರ್ಥಂಕರನಾದ ಅನಂತನಾಥನ ಚರಿತೆ. ಕಮಲಭವನ ಶಾಂತೀಶ್ವರ ಪುರಾಣ (ಕ್ರಿ.ಶ. ಸು. 1235) 16ನೆಯ ತೀರ್ಥಂಕರನಾದ ಶಾಂತಿನಾಥನ ಚರಿತೆ. ಆಂಡಯ್ಯನ ಕಬ್ಬಿಗರ ಕಾವ (ಕ್ರಿ.ಶ. ಸು. 1235) ವೈದಿಕ ಕಥಾಮೂಲದ ಶಿವಮನ್ಮಥರ ವಿರಸವೃತ್ತಾಂತ. 2ನೆಯ ಗುಣವರ್ಮನ (ಕ್ರಿ.ಶ. 1255) ಪುಷ್ಪದಂತ ಪುರಾಣ 9ನೆಯ ತೀರ್ಥಂಕರನಾದ ಪುಷ್ಪದಂತನ ಚರಿತೆ. ಮಹಾಬಲನ ನೇಮಿನಾಥ ಪುರಾಣ (ಕ್ರಿ.ಶ. 1254) ನೇಮಿತೀರ್ಥಂಕರನ ಚರಿತೆ. ಚೌಂಡರಸನ (ಕ್ರಿ.ಶ. ಸು. 1300) ಅಭಿನವ ದಶಕುಮಾರ ಚರಿತೆ ಕಲ್ಪಿತ ಕಥಾಕಾವ್ಯ. ನಾಗರಾಜನ ಪುಣ್ಯಾಸ್ರವ ಚಂಪೂ (ಕ್ರಿ.ಶ. 1331) ಜೈನತತ್ತ್ವಗಳನ್ನು ಕಥಾರೂಪದಲ್ಲಿ ಪ್ರತಿಪಾದಿಸುವ ಕೃತಿ. ವೃತ್ತವಿಲಾಸನ (ಸು. 1350) ಧರ್ಮಪರೀಕ್ಷೆ ಜೈನಮತೋತ್ಕರ್ಷವನ್ನು ಕಥಾರೂಪದಲ್ಲಿ ನಿರೂಪಿಸುವ ಕೃತಿ. ಬಾಹುಬಲಿ ಪಂಡಿತನ ಧರ್ಮನಾಥ ಪುರಾಣ (ಕ್ರಿ.ಶ. 1352) ಮತ್ತು ಮಧುರನ (ಕ್ರಿ.ಶ. ಸು. 1400) ಧರ್ಮನಾಥ ಪುರಾಣ 15ನೆಯ ತೀರ್ಥಂಕರನಾದ ಧರ್ಮನಾಥನ ಚರಿತೆಗಳಾಗಿವೆ. ಆಯತವರ್ಮನ (ಕ್ರಿ.ಶ. ಸು. 1400) ಕನ್ನಡ ರತ್ನಕರಂಡಕ ಜೈನಮತದ ರತ್ನತ್ರಯಗಳನ್ನು ಕುರಿತ ಕೃತಿ. ಕವಿಮಲ್ಲನೆಂಬುವನ (ಕ್ರಿ. ಶ.ಸು. 1400) ಮನ್ಮಥವಿಜಯವೆಂಬ ಕೃತಿ ಪ್ರಾಯಃ ಶೃಂಗಾರಪ್ರತಿಪಾದಕವಾದುದು.

ಈ ಕಾಲದ ಚಂಪೂವಿನ ಕೆಲವು ವೈಲಕ್ಷಣ್ಯಗಳು ಹೀಗಿವೆ: ಬಂಧುವರ್ಮ, ಪಾರ್ಶ್ವಪಂಡಿತ, ಜನ್ನ, ಕಮಲಭವ, 2ನೆಯ ಗುಣವರ್ಮ, ಮಹಾಬಲ, ಬಾಹುಬಲಿ ಪಂಡಿತ ಮತ್ತು ಮಧುರ ಈ ಜೈನಕವಿಗಳು ತೀರ್ಥಂಕರ ಚರಿತೆಗಳನ್ನು ಚಂಪೂ ರೂಪದಲ್ಲಿ ರಚಿಸಿದ್ದಾರೆ. ಇವು ಈ ಮೊದಲೇ ಸಂಪ್ರದಾಯಸಿದ್ಧವಾಗಿ ರಚಿತವಾಗುತ್ತ ಬಂದಿದ್ದ ತೀರ್ಥಂಕರಚರಿತೆಗಳ ಮಾದರಿಯಲ್ಲೇ ಬಲುಮಟ್ಟಿಗೆ

ರಚಿತವಾಗಿರತಕ್ಕವು. ಕಥೆಗಿಂತ ವರ್ಣನೆಗಳು, ಸರಳತೆಗಿಂತ ಪ್ರೌಢಿಮೆ, ದೇಸಿಗಿಂತ ಮಾರ್ಗ—ಇವುಗಳ ಕಡೆಗೆ ಕವಿಗಳ ಒಲವು ಕಾಣುತ್ತದೆ. ಪ್ರಾಯಃ ಒಂದೆರಡನ್ನು ಬಿಟ್ಟರೆ, ಉಳಿದ ತೀರ್ಥಂಕರರ ಚರಿತೆಗಳಲ್ಲಿ ಕಥಾಭಿತ್ತಿಯೇ ಅಲ್ಪವಾಗಿದ್ದು ಸಾಂಪ್ರದಾಯಿಕವಾದ ಕಾವ್ಯಾಂಗಗಳ ವರ್ಣನೆಗಳಿಂದಲೂ ಪುರಾಣಲಕ್ಷಣಗಳಿಂದಲೂ ಅದನ್ನು ಹಿಗ್ಗಿಸಿರುವುದು ಕಾಣುತ್ತದೆ. ಪಾಂಡಿತ್ಯ ಪ್ರದರ್ಶನದ ಕಾಂಕ್ಷೆ ತಲೆದೋರಿದೆ. ಹರಿಹರ ಮತ್ತು ಸೋಮರಾಜರ ವೀರಶೈವ ಚಂಪೂ ಕೃತಿಗಳೂ ಬಲು ಮಟ್ಟಿಗೆ ಅವೇ ವೈಲಕ್ಷಣ್ಯಗಳನ್ನು ಒಳಗೊಂಡಿವೆ. ಆದರೆ ವೀರಶೈವ ಚಂಪೂಗಳಲ್ಲಿ ಹರಿಹರನ ಗಿರಿಜಾಕಲ್ಯಾಣ ಉತ್ಕೃಷ್ಟವಾದುದಾಗಿ, ಅನಂತರದ ಕವಿಗಳು ಆತನಿಂದ ಪ್ರಭಾವಿತವಾದುದು ಕಾಣುತ್ತದೆ. ಸೋಮರಾಜನ ಕೃತಿ ವಸ್ತುವಿನ ಆಯ್ಕೆಯ ದೃಷ್ಟಿಯಿಂದಲೂ ಅದರಲ್ಲಿಯ ಛಂದೋವೈವಿಧ್ಯದ ದೃಷ್ಟಿಯಿಂದಲೂ ಗಮನಿಸತಕ್ಕದ್ದಾಗಿದೆ.

ಗದ್ಯರೂಪವಾಗಿರುವ ಕಲ್ಪಿತಕಥಾಕಾವ್ಯವನ್ನು ಚಂಪೂವಿಗೆ ತಿರುಗಿಸುವ ನಾಗವರ್ಮನ ಕಾವ್ಯಪದ್ಧತಿ ದೇವಕವಿ, ಚೌಂಡರಸರ ಮೂಲಕ ಮುಂದುವರಿದಿದೆ. ದೇವಕವಿಯ ಕುಸುಮಾವಳಿ ಕಾವ್ಯ ಸುಬಂಧು, ಬಾಣರ ಗದ್ಯಕಾವ್ಯಗಳ ಪ್ರಭಾವದಿಂದಾದುದು ; ಚೌಂಡರಸನ ಅಭಿನವ ದಶಕುಮಾರಚರಿತೆ ದಂಡಿಯ ಗದ್ಯಕಾವ್ಯ ದಶಕುಮಾರಚರಿತೆಯ ಪರಿವರ್ತನೆ. ಇಲ್ಲಿಯೂ ಕಥೆಗಾರಿಕೆ, ರಸದೃಷ್ಟಿಗಳಿಗಿಂತ ವರ್ಣನೆಯ ದೃಷ್ಟಿ ಪ್ರಬಲವಾಗಿದೆ. ಇನ್ನು ಜೈನಮತ ತತ್ತ್ವಗಳನ್ನು ಕಥೆಗಳ ರೂಪದಲ್ಲಿ ಪ್ರತಿಪಾದಿಸುವ ನಯಸೇನನ ಕಾವ್ಯಪದ್ಧತಿ ಬಂಧುವರ್ಮ , ನಾಗರಾಜ. ವೃತ್ತವಿಲಾಸ ಇವರ ಕೈಯಲ್ಲಿ ಮುಂದುವರಿಯಿತು. ಬಂಧುವರ್ಮನ ಜೀವಸಂಬೋಧನೆಯ ಚಂಪೂವಿನ ಚೌಕಟ್ಟು ಸ್ವಾರಸ್ಯಕರವಾದುದು.

ಆಂಡಯ್ಯನ ಕಬ್ಬಿಗರ ಕಾವ ದೇಶ್ಯ ಮತ್ತು ತದ್ಭವ ಶಬ್ದಗಳನ್ನು ಮಾತ್ರ ಬಳಸಿದ ಹಾಗೂ ಪರಿಮಾಣದಲ್ಲಿ ಚಿಕ್ಕದಾಗಿರುವ ಚಂಪೂ. ಆಯತವರ್ಮನ ಕನ್ನಡ ರತ್ನಕರಂಡಕ ಕೇವಲ ತಾತ್ತ್ವಿಕ ವಿಷಯವನ್ನುಳ್ಳ ಚಂಪೂ. ಹೀಗೆ ಈಅವಧಿಯ ಚಂಪೂ ರೂಪದಲ್ಲಿ ಪೌರಾಣಿಕ ವ್ಯಕ್ತಿಚರಿತ್ರೆ, ಕಥೆ, ತತ್ತ್ವ—ಇವು ಅವಕಾಶ ಪಡೆದಿವೆ.

15 ರಿಂದ 17ನೆಯ ಶತಮಾನದ ವರೆಗಿನ ಕಾಲ ಚಂಪೂ ಸಾಹಿತ್ಯದ ಇತಿಹಾಸದಲ್ಲಿ ಇಳಿಗಾಲ. ಈಅವಧಿಯಲ್ಲಿ ಷಟ್ಪದಿ ಸಾಂಗತ್ಯ ಮೊದಲಾದ ಛಂದಸ್ಸುಗಳಲ್ಲಿ ರಚಿತವಾದ ಕಾವ್ಯಗಳು ಹೆಚ್ಚಾಗಿ ಬಂದವು. ಅವುಗಳ ಕರ್ತೃಗಳು ಆ ಕಾವ್ಯಗಳಲ್ಲಿಯೇ ಹಿಂದಿನ ಚಂಪೂಕಾವ್ಯಗಳ ವಸ್ತು ಮತ್ತು ಶೈಲಿಗಳ ಕೆಲವು ಲಕ್ಷಣಗಳನ್ನು ಅಳವಡಿಸಿದರು. ಚಂಪೂಕಾವ್ಯ ಪದ್ಧತಿಯ ಉತ್ತಮವಾದ ಮಾದರಿಗಳು ಸು. 10–12ನೆಯ ಶತಮಾನದಲ್ಲಿಯೇ ಬಂದು ಹೋಗಿದ್ದು, ಈಚಿನವು ಹೆಚ್ಚಿನ ಮಟ್ಟಿಗೆ ಅವುಗಳ ಶುಷ್ಕ ಅನುಕರಣಗಳಾಗಿ ತೋರುತ್ತವೆ. ಮಧುರ ಕವಿಯ (1377-1404) ಧರ್ಮನಾಥಪುರಾಣ ಚಂಪೂಶೈಲಿಯ ಅವಸಾನದ ಹಂಸಗೀತೆ.

ಚಂದ್ರಕವಿಯ (ಸು. 1430) ಪಂಪಾಸ್ಥಾನವರ್ಣನ ಹಂಪೆಯ ವಿರೂಪಾಕ್ಷದೇವರ ಆಸ್ಥಾನ ವರ್ಣನೆಯನ್ನು ಕುರಿತಿದೆ. ಸುರಂಗಕವಿಯ (ಸು. 1500) ತ್ರಿಷಷ್ಟಿ ಪುರಾತನಚರಿತ್ರ ತಮಿಳುನಾಡಿನ 63 ಶಿವಭಕ್ತರ ಕಥೆಗಳನ್ನೊಳಗೊಂಡಿದೆ. ಕಥೆಯ ಒಂದು ಎಳೆಗೂ ಎಡೆಯಿಲ್ಲದಂತೆ ಕೇವಲ ವರ್ಣನೆಗಳಿಂದಲೇ ಕಾವ್ಯವನ್ನು ಕಟ್ಟಿರುವ ಚಂದ್ರಕವಿಯ ಕೌಶಲ ಕುತೂಹಲಕರವಾದುದು ; ಈವರೆಗಿನ ಚಂಪೂ ಪದ್ಧತಿಯಲ್ಲಿ ನವೀನವಾದುದು. ಕನ್ನಡದ ಅತಿ ಪುಟ್ಟ ಚಂಪೂಕಾವ್ಯಗಳಲ್ಲಿ ಒಂದಾದ ಈ ಕೃತಿಯಲ್ಲಿ, ಇರುವ ಅಲ್ಪಾವಕಾಶದಲ್ಲಿಯೇ ಸಾಂಪ್ರದಾಯಿಕ ವರ್ಣನೆಗಳು ಯಥೋಚಿತವಾಗಿ ಎಡೆ ಪಡೆದಿವೆ. ಸುರಂಗಕವಿಯ ಕೃತಿ, ಅದಕ್ಕೆ ಪ್ರತಿಯಾಗಿ ಎನ್ನುವಂತೆ, ಕನ್ನಡದ ಅತಿ ದೊಡ್ಡ ಚಂಪೂ ಕಾವ್ಯಗಳಲ್ಲಿ ಒಂದಾಗಿದ್ದು, ಹರಿಹರನ ಕಥಾಮೂಲವನ್ನೂ ಚಂಪೂಮಾರ್ಗವನ್ನೂ ಬಲುಮಟ್ಟಿಗೆ ಅನುಸರಿಸಿದ್ದು ಹರಿಹರನ ಅನಂತರದ ವೀರಶೈವ ಚಂಪೂಗ್ರಂಥಗಳಲ್ಲಿ ಗಣ್ಯವಾದದ್ದಾಗಿದೆ.

ಕಳೆದೆರಡು ಶತಮಾನಗಳಲ್ಲಿ ಸ್ಥಗಿತಗೊಂಡಿದ್ದ ಚಂಪೂಸಾಹಿತ್ಯರಚನೆ 17 ರಿಂದ 19ನೆಯ ಶತಮಾನದ ಅವಧಿಯಲ್ಲಿ ಪುನರುಜ್ಜೀವನಗೊಂಡಿತು. ಈಅವಧಿಯಲ್ಲಿ ವೀರಶೈವ ಕವಿಗಳೇ ಅಧಿಕ ಸಂಖ್ಯೆಯಲ್ಲಿ ಚಂಪೂಕೃತಿಗಳನ್ನು ರಚಿಸಿದರು. ಜೈನ ಕವಿಗಳು ಕಾರಣಾಂತರಗಳಿಂದ ಚಂಪೂಪದ್ಧತಿಯನ್ನು ಬಿಟ್ಟು ದೇಸಿ ಕಾವ್ಯಗಳ ರಚನೆಗೆ ತೊಡಗಿದರು. ಈಅವಧಿಯ ಚಂಪೂಸಾಹಿತ್ಯದ ಒಂದು ಸಾಮಾನ್ಯವಾದ ಸಮೀಕ್ಷೆ ಹೀಗಿದೆ :

ಪ್ರಭುಗನ (ಕ್ರಿ.ಶ. ಸು. 1520) ಚೂಡನಾಸ್ಥಾನ ಮತ್ತು ವೈಭೋಗರಾಜಾಸ್ಥಾನಗಳು ಈಶ್ವರನ ಆಸ್ಥಾನದ ವರ್ಣನೆಯನ್ನು ಒಳಗೊಂಡಂಥವು. ವೀರಭದ್ರರಾಜನ (ಕ್ರಿ.ಶ. ಸು. 1530) ವೀರಭದ್ರವಿಜಯ ವೀರೇಶನ ಚರಿತೆ. ಸದಾಶಿವಯೋಗಿಯ ರಾಮನಾಥವಿಲಾಸ (ಕ್ರಿ.ಶ. 1554) ವೀರಶೈವ ಮತೋತ್ಕರ್ಷವನ್ನು ಮಾಡಿದ ರಾಮನಾಥಚಾರ್ಯನ ಚರಿತ್ರೆ. ಮುರಿಗೆ ದೇಶಿಕೇಂದ್ರನ (ಸು. 1560) ಹಮ್ಮೀರಕಾವ್ಯ ಶಿವಭಕ್ತನಾದ ಹಮ್ಮೀರರಾಜನ ಚರಿತೆ. ಸಿದ್ಧಲಿಂಗ ಶಿವಯೋಗಿಯ (ಸು. 1600) ಭೈರವೇಶ್ವರಪುರಾಣ ಶಿವಭಕ್ತನಾದ ಭೈರವರಾಜನ ಕಥೆ. ಶಾಂತವೀರ ದೇಶಿಕನ (ಸು. 1650) ಶಿವಲಿಂಗಚಾರಿತ್ರ ಶಿವಲಿಂಗಾರ್ಯನ ಕಥೆ. ಕವಿ ಮಾದಣ್ಣನ (ಸು. 1650) ನನ್ನಯ್ಯಗಳ ಚರಿತ್ರೆ ಶಿವಭಕ್ತನಾದ ನನ್ನಯ್ಯನ ಚರಿತೆ. ಷಡಕ್ಷರಿಯ ರಾಜಶೇಖರವಿಲಾಸ (ಕ್ರಿ.ಶ. 1655)ಸತ್ಯೇಂದ್ರ ಚೋಳನ ಮಗನಾದ ರಾಜಶೇಖರನ ಕಥೆ ; ಬಸವರಾಜ ವಿಜಯ ಅಥವಾ ವೃಷಭೇಂದ್ರ ವಿಜಯ (ಕ್ರಿ.ಶ. 1677) ಬಸವಣ್ಣನವರ ಚರಿತ್ರೆ, ಶಬರಶಂಕರವಿಲಾಸ ಮಹಾಭಾರತದ ಕಿರಾತಾರ್ಜುನೀಯ ಪ್ರಸಂಗವನ್ನು ಕುರಿತದ್ದು.

16-17ನೆಯ ಶತಮಾನದ ವೀರಶೈವ ಕವಿಗಳ ಈ ಚಂಪೂಸಾಹಿತ್ಯ ಮುಖ್ಯವಾಗಿ ಶಿವನನ್ನೂ ಶಿವಭಕ್ತರ ಪುಣ್ಯಕಥೆಗಳನ್ನೂ ಆಧಾರವಾಗಿಟ್ಟುಕೊಂಡು ರಚಿತವಾಗಿದೆ. ವಸ್ತು, ಶೈಲಿ ಮತ್ತು ಉದ್ದೇಶಗಳಲ್ಲಿ ಹರಿಹರನ ಕಾವ್ಯಮಾರ್ಗದ ಪ್ರಭಾವ ಇದರಲ್ಲಿ ಕಾಣುತ್ತದೆ. ಎಂದಿನಂತೆ ಇಲ್ಲಿಯೂ ವರ್ಣನೆ, ಅಲಂಕಾರ, ಕವಿಸಮಯಗಳಲ್ಲಿ ಕನ್ನಡ ಚಂಪೂಕಾವ್ಯಪರಂಪರೆ ಮುನ್ನಡೆದಿದೆ. ಪ್ರಭುಗನ ಶಿವಾಸ್ಥಾನ ವರ್ಣನೆಯ ಚಿಕ್ಕ ಚಂಪೂಗ್ರಂಥಗಳು ಒಂದೊಂದೂ 101 ಪದ್ಯಗಳನ್ನು ಒಳಗೊಂಡಿರುವುದರಿಂದ ಪ್ರಾಯಃ ಶತಕ ಚಂಪೂ ಆಕೃತಿಯನ್ನು ತಳೆದಂತೆ ಭಾವನೆಯುಂಟಾಗುತ್ತದೆ. ಅಲ್ಲದೆ ಇಲ್ಲಿ ಚಂದ್ರಕವಿಯ ಸಂಪ್ರದಾಯ ಮುನ್ನಡೆದಿದೆ. ವೀರಭದ್ರನ ಕೃತಿ ವರ್ಣನಾಭಾಗ ಹೆಚ್ಚಾಗಿರುವ ಚಂಪೂ. ಸದಾಶಿವಯೋಗಿಯ ಕೃತಿಯಲ್ಲಿ ಷಟ್ಪದಿಗಳು ಬಳಕೆಯಾಗಿವೆ. ಇನ್ನು ವೀರಶೈವ ಚಂಪೂ ಕಾವ್ಯಕರ್ತೃಗಳ ಪರಂಪರೆಯಲ್ಲಿ ಬಹು ಸಮರ್ಥನಾದವನೆಂದರೆ ಷಡಕ್ಷರಿ. ಒಳ್ಳೆಯ ಕವಿತ್ವಶಕ್ತಿಯೊಡನೆ ಪಾಂಡಿತ್ಯ ದೃಷ್ಟಿಯೂ ಸಂಪ್ರದಾಯ ನಿಷ್ಠೆಯೂ ಈತನಲ್ಲಿ ವಿಶೇಷವಾಗಿತ್ತು. ಈತನ ಚಂಪೂಕೃತಿಗಳಲ್ಲಿ ಪ್ರಾಚೀನ ಕಾಲದ ಪ್ರೌಢ ಚಂಪೂಕಾವ್ಯಗಳ ಗುಣಲಕ್ಷಣಗಳು ಪ್ರತಿಬಿಂಬಿತವಾಗಿವೆ. ಚಂಪೂಶೈಲಿಯ ಆಕರ್ಷಣೆ ಬಿಟ್ಟೂ ಬಿಡದಂತೆ ಕನ್ನಡ ಕವಿಗಳ ಮನಸ್ಸನ್ನು ಸೆರೆ ಹಿಡಿದಿದ್ದು, ಅವರ ಪ್ರತಿಭೆ ಪಾಂಡಿತ್ಯಗಳ ಪರೀಕ್ಷೆಗೆ ಒಳ್ಳೆಯ ನಿಕಷವಾಗಿತ್ತು. ಷಡಕ್ಷರಿಯಂಥ ಕವಿ ಆ ಪರೀಕ್ಷೆಯಲ್ಲಿ ಹೆಮ್ಮೆಯಿಂದ ಪಾಲುಗೊಂಡು, ಯಶಸ್ವಿಯಾಗಿರುವುದು ಕಾಣುತ್ತದೆ. ಕಥೆಯನ್ನು ನಿಮಿತ್ತವಾಗಿ ಮಾಡಿಕೊಂಡು, ಮುಖ್ಯವಾಗಿ ವರ್ಣನ ವೈಚಿತ್ರ್ಯಗಳನ್ನೂ ಕಲ್ಪನಾಚಾತುರ್ಯ ಮತ್ತು ಅಲಂಕಾರ ವೈಖರಿಗಳನ್ನೂ ತನ್ನ ಕೃತಿಗಳಲ್ಲಿ ಈತ ಮೆರೆದಿದ್ದಾನೆ.

17ನೆಯ ಶತಮಾನದ ಉತ್ತರಾರ್ಧದಲ್ಲಿ, ಮೈಸೂರರಸರಲ್ಲಿ ಪ್ರಖ್ಯಾತನಾದ ಚಿಕ್ಕದೇವರಾಯನ (ಕ್ರಿ.ಶ. 1672–1704) ಆಶ್ರಯದಲ್ಲಿ ಕೆಲವರು ಬ್ರಾಹ್ಮಣಕವಿಗಳು ಚಂಪೂಸಾಹಿತ್ಯದ ಬೆಳವಣಿಗೆಗೆ ತುಂಬ ನೆರವಾದರು. ಚಿಕ್ಕದೇವರಾಜನ ಕಾಲದ ಹಾಗೂ ಅವನ ಪೋಷಣೆ ಪಡೆದ ಕವಿಸಮೂಹದಲ್ಲಿ ತಿರುಮಲಾರ್ಯ, ಚಿಕುಪಾಧ್ಯಾಯ, ತಿಮ್ಮಕವಿ, ಮಲ್ಲಿಕಾರ್ಜುನ, ಮಲ್ಲರಸ—ಇವರು ಚಂಪೂಕೃತಿಗಳನ್ನು ರಚಿಸಿದರು. ಇವರಲ್ಲಿ ಕೆಲವರ ಕಾವ್ಯಮಾರ್ಗದ ಮೇಲೆ ಷಡಕ್ಷರಿಯ ಪ್ರಭಾವವಾಗಿರುವುದು ಸಾಧ್ಯ. ತಿರುಮಲಾರ್ಯ (1645–1706) ಚಿಕದೇವರಾಜವಿಜಯ ಆ ದೊರೆಯ ಪೂರ್ವಜರ ವಿಷಯವನ್ನೂ ಆತನ ಜನನ ಬಾಲ್ಯಾದಿಗಳನ್ನೂ ಕುರಿತಿದೆ. ಚಿಕುಪಾಧ್ಯಾಯನ (1672) ಹಸ್ತಿಗಿರಿಮಾಹಾತ್ಮ್ಯ (1679) ಬ್ರಹ್ಮಾಂಡಪುರಾಣದ ತೀರ್ಥಕಾಂಡಕಾಲ್ಲಿದ್ದ ಉಕ್ತವಾದ ಕಂಚಿಯ ಮಾಹಾತ್ಮ್ಯವನ್ನು ಕುರಿತದ್ದು. ಕಮಲಾಚಲ ಮಾಹಾತ್ಮ್ಯ (1680) ಭವಿಷ್ಯೋತ್ತರ ಪುರಾಣದ ತೀರ್ಥಕಾಂಡದಲ್ಲಿ ಉಕ್ತವಾದ ಹಿಮವದ್ಗೋಪಾಲಸ್ವಾಮಿ ಬೆಟ್ಟದ ಮಾಹಾತ್ಮ್ಯವನ್ನು ಕುರಿತದ್ದು. ರುಕ್ಮಾಂಗದ ಚರಿತೆ (1681) ಏಕಾದಶೀವ್ರತದ ಮಹಿಮೆಯನ್ನು ಹೇಳುತ್ತದೆ. ವಿಷ್ಣುಪುರಾಣ ಸಂಸ್ಕೃತ ವಿಷ್ಣುಪುರಾಣದ ಪರಿವರ್ತನೆ. ದಿವ್ಯಸೂರಿಚರಿತೆ 12 ಮಂದಿ ಆಳ್ವಾರರ ಚರಿತ್ರೆ. ಸಾತ್ತ್ವಿಕಬ್ರಹ್ಮವಿದ್ಯಾವಿಲಾಸ ಮತ್ತು ಅರ್ಥಪಂಚಕಗಳು ವಿಶಿಷ್ಟಾದ್ವೈತ ಮತಸಿದ್ಧಾಂತ ಗ್ರಂಥಗಳು. ತಿಮ್ಮಕವಿಯ (1677) ಯಾದವಗಿರಿ ಮಾಹಾತ್ಮ್ಯ (1677) ನಾರದೀಯ ಪುರಾಣೋಕ್ತವಾದ ಯಾದವಗಿರಿಯ (ಮೇಲುಕೋಟೆಯ) ಮಾಹಾತ್ಮ್ಯವನ್ನು ಕುರಿತದ್ದು. ಪಶ್ಚಿಮ ರಂಗಮಾಹಾತ್ಮ್ಯ ಶ್ರೀರಂಗಪಟ್ಟಣದ ಮಾಹಾತ್ಮ್ಯವನ್ನು ಕುರಿತದ್ದು. ವೆಂಕಟಗಿರಿಮಾಹಾತ್ಮ್ಯ (1679) ತಿರುಪತಿಯ ಮಾಹಾತ್ಮ್ಯವನ್ನು ಹೇಳುತ್ತದೆ. ಮಲ್ಲಿಕಾರ್ಜುನನ (ಕ್ರಿ.ಶ. 1678) ಶ್ರೀರಂಗ ಮಾಹಾತ್ಮ್ಯ ಬ್ರಹ್ಮಾಂಡಪುರಾಣದಲ್ಲಿನ ಶ್ರೀರಂಗಕ್ಷೇತ್ರದ ಮಾಹಾತ್ಮ್ಯವನ್ನು ಕುರಿತದ್ದು. ಮಲ್ಲರಸನ (ಕ್ರಿ.ಶ. ಸು. 1680) ದಶಾವತಾರ ಚರಿತೆಯಲ್ಲಿ ವಿಷ್ಣುವಿನ ಹತ್ತು ಅವತಾರಗಳ ಕಥನವಿದೆ. ಕೃಷ್ಣಶರ್ಮನ (ಸು. 1700) ಸರಜಾ ಹನುಮೇಂದ್ರಚರಿತೆ ತರೀಕೆರೆ ಪ್ರಭು ಸರಜಾ ಹನುಮೇಂದ್ರನ ಚರಿತ್ರೆಯಾಗಿದೆ.

ಚಿಕ್ಕದೇವರಾಯನ ಕಾಲದಿಂದೀಚೆಗೆ ಕೂಡ ಕೆಲವು ಚಂಪೂಕೃತಿಗಳು ರಚಿತವಾಗಿವೆ. ಅವುಗಳ ಒಂದು ಸಾಮಾನ್ಯ ಸಮೀಕ್ಷೆ ಹೀಗಿದೆ : ಇಮ್ಮಡಿ ಮುರಿಗೆಯ ಸ್ವಾಮಿಯ ಹಾಲಾಸ್ಯಪುರಾಣ (ಕ್ರಿ.ಶ. 1720) ಮಧುರೆಯ ಸುಂದರೇಶ್ವರ 64 ಲೀಲೆಗಳನ್ನು ನಟಿಸಿದ ಕಥಾವೃತ್ತಾಂತವನ್ನು ಕುರಿತಿದೆ. ವೆಂಕಟೇಶನ (ಸು. 1740) ಹಾಲಾಸ್ಯ

ಮಾಹಾತ್ಮ್ಯವೂ ಶಿವಲೀಲಾಪರವಾದುದು. ಲಿಂಗಣ್ಣನ (ಸು. 1750) ಕೆಳದಿ ನೃಪವಿಜಯ ಕೆಳದಿಯ ಅರಸರ ಚರಿತ್ರೆ. ವೆಂಕಾಮಾತ್ಯನ (ಸು.1770) ರಮಾಭ್ಯುದಯ ಕಾವ್ಯ ಲಕ್ಷ್ಮೀದೇವಿಯ ಅವತಾರವೇ ಮೊದಲಾದ ಪೌರಾಣಿಕ ಕಥೆಗಳನ್ನು ಒಳಗೊಂಡದ್ದು. ದೇವಚಂದ್ರನ ರಾಮಕಥಾವತಾರದಲ್ಲಿ (ಕ್ರಿ.ಶ. 1797) ಜೈನ ಸಂಪ್ರದಾಯದ ರಾಮಾಯಣ ಕಥೆ ಬಂದಿದೆ. ಚಾರುಕೀರ್ತಿ ಪಂಡಿತನ (ಚಂದ್ರಸಾಗರ ವರ್ಣಿಯ?) ಭವ್ಯಜನಚಿಂತಾಮಣಿ (1815) ಜಿನಪೂಜಾಮಹಿಮೆಯಿಂದ ಸದ್ಗತಿ ಪಡೆದವರ ಕಥೆಗಳನ್ನು ಒಳಗೊಂಡಿದೆ. ತಮ್ಮಯ ಕವಿಯ ರಾಜವಂಶರತ್ನಪ್ರಭೆ (ಕ್ರಿ.ಶ. 1834) ಮೈಸೂರು ಅರಸರ ಚರಿತ್ರೆ. ಅಳಿಯ ಲಿಂಗರಾಜನ ನಳಕೂಬರ ವಿಲಾಸ (ಕ್ರಿ.ಶ. 1851) ಪೌರಾಣಿಕ ವ್ಯಕ್ತಿಯಾದ ನಳಕೂಬರನ ಕಥೆ. ನರಪತಿಚರಿತ ಅಲಂಕಾರಗ್ರಂಥ. ವೆಂಕಟರಮಣಯ್ಯನ ಗಯೋಪಾಖ್ಯಾನ (1857) ಕೃಷ್ಣಾರ್ಜುನರ ಸಂಗ್ರಾಮದ ಪೌರಾಣಿಕ ಕಥೆ. ಹಿರಣ್ಯಗರ್ಭನ (ಸು. 1860) ಸರಸ್ವತೀ ಪ್ರಬಂಧ ಶ್ರೀ ಸರಸ್ವತೀದೇವೀ ಕಥೆಯೆಂಬ ಪೂರ್ವಕಥೆ. ಬಸವಪ್ಪಶಾಸ್ತ್ರಿಗಳ (19ನೆಯ ಶ.) ದಮಯಂತೀಸ್ವಯಂವರ ಮಹಾಭಾರತದ ನಳೋಪಾಖ್ಯಾನವನ್ನು ಕುರಿತದ್ದು.

17 ರಿಂದ 19ನೆಯ ಶತಮಾನದ ವರೆಗೆ ರಚಿತವಾಗಿರುವ ಈ ಚಂಪೂಸಾಹಿತ್ಯದ ವೈಲಕ್ಷಣ್ಯಗಳನ್ನು ಈಗ ಗಮನಿಸಬಹುದು : ಚಿಕ್ಕದೇವರಾಜ ಒಡೆಯರ ಕಾಲದಲ್ಲಿ ಆತನ ಪ್ರೇರಣೆಯಂತೆ ಆತನ ಪೋಷಣೆಯ ಹಲವರು ಕವಿಗಳೂ ಆ ಕವಿಗಳ ಪ್ರಚೋದನೆಯಿಂದ ಇತರ ಕೆಲವರೂ ಕೆಲವು ಚಂಪೂಕೃತಿಗಳನ್ನು ರಚಿಸಿದರು. ಹಲವು ಗ್ರಂಥಗಳ ಕರ್ತೃ ಚಿಕುಪಾಧ್ಯಾಯ ಸ್ವತಃ ಆರೇಳು ಚಂಪೂಕೃತಿಗಳನ್ನು ಬರೆದುದಲ್ಲದೆ ತಿಮ್ಮಕವಿ, ಮಲ್ಲಿಕಾರ್ಜುನ ಮೊದಲಾದವರ ಕೃತಿರಚನೆಗೆ ಪ್ರೇರಕನಾದ. ತಿರುಮಲಾರ್ಯ ಶುದ್ಧವಾದ ಐತಿಹಾಸಿಕ ವಸ್ತುವನ್ನು ಆಧರಿಸಿ ಮೊದಲ ಬಾರಿಗೆ ಚಂಪೂಗ್ರಂಥವನ್ನು ಬರೆದ ಮೇಲೆ, ಆ ಸಂಪ್ರದಾಯ ವೇಣುಗೋಪಾಲ ವರಪ್ರಸಾದಿ, ಕೃಷ್ಣಶರ್ಮ, ಲಿಂಗಣ್ಣ, ತಮ್ಮಯ ಕವಿ—ಇವರ ಮೂಲಕವಾಗಿ ಮುಂದುವರಿಯಿತು. ತಿರುಮಲಾರ್ಯನ ಕೃತಿಯಲ್ಲಿ ತ್ರಿಪದಿಗಳ ಜೊತೆಗೆ ಸಾಂಗತ್ಯಗಳೂ ಹಾಡುಗಳೂ ಸೇರಿವೆಯೆಂಬುದು ಒಂದು ವಿಶೇಷ. ಚಿಕುಪಾಧ್ಯಾಯ ಪುರಾಣೋಕ್ತವಾದ ಕ್ಷೇತ್ರಮಾಹಾತ್ಮ್ಯಗಳನ್ನು ಚಂಪೂ ರೂಪದಲ್ಲಿ ಅಳವಡಿಸಿ, ತಿಮ್ಮಕವಿ, ಮಲ್ಲಿಕಾರ್ಜುನ ಮೊದಲಾದವರಿಗೆ ಮಾರ್ಗದರ್ಶಕನಾದ. ಆತನ ಚಂಪೂಕೃತಿಗಳಲ್ಲಿ ಕ್ಷೇತ್ರಮಾಹಾತ್ಮ್ಯ, ಪೌರಾಣಿಕ ಕಥೆ, ಪುರಾಣಾನುವಾದ, ಆಚಾರ್ಯರ ಚರಿತ್ರೆ, ಹಾಗೂ ಮತಸಿದ್ಧಾಂತ—ಈ ವಸ್ತುವೈವಿಧ್ಯ ಅಳವಟ್ಟಿದೆ. ಈ ಚಂಪೂಕಾಲದ ಚಂಪೂಪದ್ಧತಿಯ ಪುನರುಜ್ಜೀವನಕರ್ತರಲ್ಲಿ ಈತ ಪ್ರಮುಖನಾಗಿದ್ದಾನೆ. ಈತನ ದಿವ್ಯಸೂರಿಚರಿತೆ ಮತ್ತು ಅರ್ಥಪಂಚಕಗಳು ತಮಿಳು ಮೂಲದ ಗ್ರಂಥಗಳನ್ನು ಅನುಸರಿಸಿರುವಂತೆ ತಿಳಿಯುತ್ತದೆ. ಕೃಷ್ಣಶರ್ಮನ ಕೃತಿಯಲ್ಲಿ ಅಲ್ಲಲ್ಲಿ ಸಾಂಗತ್ಯಗಳನ್ನೂ ಷಟ್ಪದಿಗಳನ್ನೂ ಬಳಸಿದೆಯಲ್ಲದೆ ವರ್ಣನೆಗೆ ಪ್ರಾಶಸ್ತ್ಯವಿದೆ. ಲಿಂಗಣ್ಣನ ಕೆಳದಿನೃಪವಿಜಯದಲ್ಲಿ ಗದ್ಯದ ಪ್ರಾಚುರ್ಯ ಕಾಣುತ್ತದೆ. ತಮ್ಮಯ ಕವಿಯ ಕೃತಿ ರುಚಿಪ್ರಚಾರ ಎಂಬ ಐದು ವಿಭಾಗಗಳನ್ನು ಒಳಗೊಂಡಿರುವುದಲ್ಲದೆ, ಅದರಲ್ಲಿ ಕೆಲವು ಸೀಸಪದ್ಯಗಳೂ ಇವೆ. ಅಳಿಯ ಲಿಂಗರಾಜನ ನರಪತಿಚರಿತ ಲಕ್ಷಣಗ್ರಂಥವಾಗಿದ್ದರೂ ಚಂಪೂವಿನಲ್ಲಿದೆ. ವೆಂಕಟರಮಣಯ್ಯನ ಗಯೋಪಾಖ್ಯಾನದಲ್ಲಿ ಕೆಲವು ಷಟ್ಪದಿಗಳನ್ನು ಬಳಸಿದೆ. ಹೀಗೆ ಈ ಅವಧಿಯ ಚಂಪೂಕೃತಿಗಳು ವಸ್ತುವಿನಲ್ಲಿಯೂ ರೂಪದಲ್ಲಿಯೂ ಕೆಲಮಟ್ಟಿಗೆ ಹೊಸತಾಗಿದ್ದರೂ ಒಟ್ಟಿನಲ್ಲಿ ತನ್ನ ಸಾಂಪ್ರದಾಯಿಕ ಸ್ವರೂಪದಲ್ಲಿಯೇ ಮುನ್ನಡೆದಿರುವುದೂ ಮಾರ್ಗಕವಿತ್ವವನ್ನೂ ಹಳಗನ್ನಡ ಭಾಷೆಯನ್ನೂ ಜೀವಂತವಾಗಿಡಲು ಪ್ರಯತ್ನಿಸಿರುವುದೂ ಸ್ಪಷ್ಟವಾಗಿ ಗೋಚರಿಸುತ್ತದೆ. 19ನೆಯ ಶತಮಾನವನ್ನು ದಾಟಿಬಂದಿರುವ ಈ ಕಾಲದಲ್ಲಿಯೂ ಚಂಪೂರೂಪದಲ್ಲಿ ಕೃತಿರಚನೆ ಮಾಡುವ ಪ್ರಯತ್ನ ಕ್ವಚಿತ್ತಾಗಿ ನಡೆಯುತ್ತಿದೆ. ಇದು ಆ ಸಾಹಿತ್ಯಪ್ರಕಾರದ ಪ್ರಭಾವವನ್ನೂ ಅದರಲ್ಲಿ ಕವಿಗಳಿಗಿರುವ ಅಭಿಮಾನವನ್ನೂ ಎತ್ತಿ ತೋರಿಸತಕ್ಕದ್ದಾಗಿದೆ.

ಇಪ್ಪತ್ತನೆಯ ಶತಮಾನದಲ್ಲಿ ಚಂಪೂ ರೀತಿಯ ಭವಿಷ್ಯವೇನು ಎಂಬ ಪ್ರಶ್ನೆ ಸಹಜವಾಗಿ ಏಳುತ್ತದೆ. ಸಾಂಪ್ರದಾಯಿಕ ರೀತಿಯಲ್ಲಿ ರಚಿತವಾದ ಚಂಪೂಕಾವ್ಯಗಳು ಕೇವಲ ಅಲ್ಲೊಂದು ಇಲ್ಲೊಂದು ಹೊರಬಂದಿರುವುದುಂಟು. ಸೋಸಲೆ ಅಯ್ಯಾಶಾಸ್ತ್ರಿಗಳು ಈ ಶತಮಾನದ ಆದಿಯಲ್ಲಿ ಮಹೀಶೂರ ಮಹಾರಾಜ ಚರಿತಂ ಎಂಬೊಂದು ಗ್ರಂಥವನ್ನು ರಚಿಸಿದ್ದಾರೆ. ಅನಂತರ 1950 ರಿಂದ ಈಚೆಗೆ ಟಿ. ಕೇಶವಭಟ್ಟರು ಸತ್ತ್ವಾವಲೋಕನಂ ಎಂಬ ಕೃತಿಯನ್ನು ಪ್ರಕಟಿಸಿದ್ದಾರೆ. ಇದು ಶ್ರೀಕೃಷ್ಣನನ್ನು ಕುರಿತ ಕಥೆ. ಇಲ್ಲಿ ಅಗತ್ಯವಾಗಿ ಸೂಚಿಸಬೇಕಾಗಿರುವ ಇನ್ನೆರಡು ಗ್ರಂಥಗಳೆಂದರೆ ವಿನಾಯಕರಚಿತ ತ್ರಿವಿಕ್ರಮರ ಆಕಾಶಗಂಗೆ ಮತ್ತು ಇಂದಲ್ಲ ನಾಳೆ. ಮೊದಲ ಕೃತಿ ಆತ್ಮಚರಿತ್ರರೂಪವಾದುದು. ಆದರೂ ಆತ್ಮವಿಕಾಸವನ್ನೇ ಪ್ರಧಾನವಾಗಿ ಚಿತ್ರಿಸುವಂಥದು. ಎರಡನೆಯದು ಪೂರ್ವ ಮತ್ತು ಪಶ್ಚಿಮ ಸಂಸ್ಕೃತಿ ಮತ್ತು ಜೀವನ ಕ್ರಮಗಳ ಸಮೀಕ್ಷಾರೂಪವಾದುದು. ಎರಡರಲ್ಲಿಯೂ ಹೊಸಗನ್ನಡ ಛಂದಸ್ಸಿನ ಪದ್ಯದೊಂದಿಗೆ ಹೊಸಗನ್ನಡ ಗದ್ಯ ಹಾಸುಹೊಕ್ಕಾಗಿ ಬರುತ್ತದೆ. ಇಲ್ಲಿನ ಚಂಪೂ ಶೈಲಿಯ ಪ್ರಯೋಗ ಗಮನಾರ್ಹವಾದದು. (ಟಿ.ವಿ.ವಿ.:ಎಚ್.ಪಿ.ಎನ್.)

**ಕನ್ನಡ ಚಲನಚಿತ್ರೋದ್ಯಮ :** ಕನ್ನಡ ಚಲನಚಿತ್ರೋದ್ಯಮ ಹೆಚ್ಚು ಕಡಿಮೆ ಭಾರತದ ಚಲನಚಿತ್ರೋದ್ಯಮದಷ್ಟೇ ಹಳೆಯದು. ಭಾರತದ ಪ್ರಥಮ ವಾಕ್ಚಲನಚಿತ್ರ ತೆರೆಗೆ ಬಂದ ಕೇವಲ ಮೂರು ವರ್ಷಗಳೊಳಗಾಗಿ ಕನ್ನಡದಲ್ಲೂ ಮಾತನಾಡುವ ಚಲನಚಿತ್ರದ ಬಿಡುಗಡೆಯಾಯಿತು. ಪ್ರಥಮ ಕನ್ನಡ ಚಿತ್ರ ಸತೀ ಸುಲೋಚನ. ಅದು ಬಿಡುಗಡೆಯಾದದ್ದು 1934ರ ಮಾರ್ಚ್ 3 ರಂದು. ಅದನ್ನು ತಯಾರಿಸಿದ ಸಂಸ್ಥೆ ಸೌತ್ ಇಂಡಿಯ ಮೂವಿಟೋನ್. ನಿರ್ಮಾಣವಾದ ಸ್ಥಳ ಕೊಲ್ಲಾಪುರದ ಮಹಾರಾಷ್ಟ್ರ ಸಿನಿಟೋನ್ ಸ್ಟುಡಿಯೊ.

ಬೆಳಕಿಗೆ ಬಂದ ಪ್ರಥಮ ಕನ್ನಡ ಭಾಷಾ ಚಿತ್ರ ಸತಿ ಸುಲೋಚನವಾದರೂ ಇದಕ್ಕಿಂತ ಒಂದೆರಡು ತಿಂಗಳುಗಳ ಮೊದಲು ತಯಾರಿಕೆ ಆರಂಭವಾದದ್ದು ಭಕ್ತ ಧ್ರುವ ಚಿತ್ರ. ಎರಡೂ ಪೌರಾಣಿಕ ಕಥಾಚಿತ್ರಗಳು. ಸತೀ ಸುಲೋಚನದ ಬಿಡುಗಡೆ ಮೊದಲು ಆಯಿತು.

ಮನೋರಂಜನೆ ಹಾಗೂ ವಿಚಾರ ವಿಕಾಸಕ್ಕೆ ಅತ್ಯುತ್ತಮ ಹಾಗೂ ಅತ್ಯಾಧುನಿಕ ಮಾಧ್ಯಮವಾಗಲಿದ್ದ ಚಲನಚಿತ್ರದ ಮಹತ್ತ್ವವನ್ನೂ ಭವಿಷ್ಯದ ದಿನಗಳಲ್ಲಿ ಅದು ವಹಿಸಲಿದ್ದ ಪ್ರಮುಖಪಾತ್ರವನ್ನೂ ಕರ್ಣಾಟಕದ ಜನರೂ ಉದ್ಯಮಿಗಳೂ ಪ್ರಥಮ ವಾಕ್ಚಿತ್ರದ ತಯಾರಿಕೆಗೂ ಮುಂಚಿನಿಂದಲೂ ಅರಿತುಕೊಂಡಿದ್ದರು. ಆದ್ದರಿಂದ ಮೂಕಚಿತ್ರಯುಗದಲ್ಲೂ ಕನ್ನಡಿಗರು ಸ್ಮರಣೀಯ ಕಾಣಿಕೆ ಸಲ್ಲಿಸಿ ಭಾರತೀಯ



ಪ್ರೀಮಿಯರ್ ಸ್ಟುಡಿಯೊ—ಮೈಸೂರು

ಚಿತ್ರೋದ್ಯಮವನ್ನು ಶ್ರೀಮಂತಗೊಳಿಸಿದರು. ಟಿ. ಪಿ. ಕೈಲಾಸಂ, ಎಣಾಕ್ಷಿ ಭವಾನಿ, ಜಿ. ಕೆ. ನಂದಾ ಮೊದಲಾದ ಹಲವಾರು ಬುದ್ಧಿ ಜೀವಿಗಳೂ ಸಾಹಿತಿಗಳೂ ಜೊತೆಗೂಡಿ ತಯಾರಿಸಿದ ಮೃಚ್ಛಕಟಿಕ ಅಂಥದೊಂದು ಕೃತಿ. 1930ರಲ್ಲಿ ಅಸ್ತಿತ್ವಕ್ಕೆ ಬಂದ ಸೂರ್ಯ ಫಿಲ್ಮ್ ಕಂಪನಿ (ತಯಾರಿಸಿದ ಚಿತ್ರಗಳ ಸಂಖ್ಯೆ 40) ಮತ್ತು ಚಿತ್ರ ಕ್ಷೇತ್ರದಲ್ಲಿ ಪ್ರಥಮವಾಗಿ ಕನ್ನಡಿಗರದೇ ಆದ ಕರ್ನಾಟಕ ಪಿಕ್ಚರ್ಸ್ ಕಾರ್ಪೊರೇಷನ್ ಸ್ಟೂಡಿಯೊ (ತಯಾರಿಕೆ 3) ಕೂಡ ಕ್ರಿಯಾತ್ಮಕ ಪಾತ್ರವಹಿಸಿವೆ.



ಕಂಠೀರವ ಸ್ಟೂಡಿಯೊ— ಬೆಂಗಳೂರು

ಚಿತ್ರರಂಗಕ್ಕೂ ಸಾಹಿತ್ಯ ಕ್ಷೇತ್ರದ ಪ್ರಮುಖರಿಗೂ ನಡುವಣ ನಿಕಟ ನಂಟು ಹೀಗೆ ಮೂಕಿ ಯುಗದಿಂದಲೇ ಆರಂಭವಾಗಿ ವಾಕ್‌ಚಲನಚಿತ್ರಗಳ ತಯಾರಿಕೆ ಆರಂಭವಾದ ಅನಂತರವೂ ಮುಂದುವರಿಯಿತು. ಕನ್ನಡ ಚಿತ್ರಗಳು ಈಗಲೂ ಇತರ ದಕ್ಷಿಣ ಭಾಷಾ ಚಿತ್ರಗಳಿಗಿಂತ ಹೆಚ್ಚು ಗುಣಮೌಲ್ಯ ಹೊಂದಿರಲು ಮುಖ್ಯ ಕಾರಣಗಳಲ್ಲಿ ಈ ಸಂಬಂಧವೂ ಒಂದೆಂಬುದು ಗಮನಾರ್ಹ.

ಕನ್ನಡ ಚಿತ್ರೋದ್ಯಮದ ಮೂವತ್ತೇಳು ವರ್ಷಗಳ ಅವಧಿಯಲ್ಲಿ ತಯಾರಾದ ಒಟ್ಟು ಚಿತ್ರಗಳ ಸಂಖ್ಯೆ 358. ಇದರಲ್ಲಿ ನೇರವಾಗಿ ತಯಾರಾದವು 335. ಇತರ ಭಾಷೆಗಳಿಂದ ಕಂಠದಾನ (ಡಬ್) ಪಡೆದ ಚಿತ್ರಗಳು 23. 1971ರ ಮೊದಲ 4 ತಿಂಗಳಲ್ಲಿ 14 ಚಿತ್ರಗಳು ಬಂದುವು.

ಆರಂಭದಲ್ಲಿ ಕನ್ನಡ ಚಿತ್ರಗಳ ಕಥೆಗೆ ಜನಪ್ರಿಯವಾದ ನಾಟಕಗಳೇ—ಅಂದರೆ (ಸದಾರಮೆ 1935), ರಾಜಸೂಯ ಯಾಗ (1937), ಸುಭದ್ರ (1941), ಕೃಷ್ಣಸುಧಾಮ (1943)—ಮುಂತಾದವು ಆಧಾರಗಳಾಗಿದ್ದುವು. ಕಳೆದ ಹದಿನೈದು ವರ್ಷಗಳಲ್ಲಿ ಪ್ರದೇಶ ಚಿತ್ರರಂಗ ಉತ್ತಮ ಸಾಹಿತ್ಯಕೃತಿಗಳನ್ನು ಆಯ್ದುಕೊಂಡು ಚಿತ್ರ ತಯಾರಿಸುವತ್ತ ಲಕ್ಷ್ಯಕೊಡಲಾರಂಭಿಸಿದೆ.

1969ರ ವರೆಗೆ ತಯಾರಾದ 335 ನೇರ ಚಿತ್ರಣಗಳಲ್ಲಿ ಸಾಮಾಜಿಕ ಕಥಾವಸ್ತು ಹೊಂದಿದ್ದ ಚಿತ್ರಗಳ ಸಂಖ್ಯೆ 101, ಪೌರಾಣಿಕ, ಜಾನಪದ ಮತ್ತಿತರ ಕಥೆಗಳನ್ನು ಹೊಂದಿದ್ದ ಚಿತ್ರಗಳು 218. ಕರ್ನಾಟಕದ ಸಂತರು, ಕವಿಗಳು ಮತ್ತು ಇತಿಹಾಸ ಪ್ರಸಿದ್ಧ ವ್ಯಕ್ತಿಗಳ ಜೀವನ, ಸಾಧನೆಗಳನ್ನು ಆಧರಿಸಿದ ತಯಾರಿಕೆಗಳು 16.

ಕನ್ನಡದಲ್ಲಿ ಕಾದಂಬರಿಯೊಂದನ್ನು ತೆರೆಗೆ ತರುವ ಪ್ರಥಮ ಸಾಹಸ ನಡೆದದ್ದು ಮೂಕಿಗಳ ಯುಗದಲ್ಲೇ. ದಿವಂಗತ ದೇವುಡು ನರಸಿಂಹ ಶಾಸ್ತ್ರೀ ಅವರ ಕಳ್ಳರ ಕೂಟದ ಆಧಾರದ ಮೇಲೆ ರಚಿತವಾದ ಈ ಚಿತ್ರದ ಹೆಸರು ಸಾಂಗ್ ಆಫ್ ಲೈಫ್. ವಾಕ್ಚಲನ ಚಿತ್ರ ಶಕೆ ಆರಂಭವಾದ ಮೇಲೆ ಚಿತ್ರೀಕರಣವಾದ ಪ್ರಥಮ ಕಾದಂಬರಿ ಕೃಷ್ಣಮೂರ್ತಿ ಪುರಾಣಿಕರ ಧರ್ಮದೇವತೆ. ಕರುಣೆಯೇ ಕುಟುಂಬದ ಕಣ್ಣು ಎಂಬುದು ಚಿತ್ರದ ಹೆಸರು. ಕನ್ನಡ ನಾಡಿನಲ್ಲಷ್ಟೇ ಅಲ್ಲದೆ ಇಡೀ ದಕ್ಷಿಣ ಭಾರತದ ಬೆಳ್ಳಿತೆರೆಯ ಮೇಲೆ ಅಪಾರ ಜನಪ್ರಿಯತೆ ಗಳಿಸಿದ ಪ್ರಥಮ ಸಾಮಾಜಿಕ ಚಿತ್ರ ಸಂಸಾರನೌಕ. ರಂಗಭೂಮಿಯ ಮೇಲೂ ಲೋಕಮನ್ನಣೆ ಪಡೆದಿದ್ದ ಈ ನಾಟಕದ ಚಿತ್ರ ರೂಪದಲ್ಲಿ 18 ಹಾಡುಗಳಿದ್ದುವು. ಕನ್ನಡ ಪ್ರಥಮ ಐತಿಹಾಸಿಕ ಚಿತ್ರ ರಣಧೀರ ಕಂಠೀರವ (1960). ಸಂತ ಕವಿಗಳ ಜೀವನಾಧಾರಿತ ತಯಾರಿಕೆಗಳಲ್ಲಿ ಹೆಸರಿಸಬಹುದಾದವು ಜಗಜ್ಯೋತಿ ಬಸವೇಶ್ವರ (1959) ಮತ್ತು ಸರ್ವಜ್ಞಮೂರ್ತಿ (1965). ಕನ್ನಡದ ಮೊದಲ ಬಣ್ಣದ ಚಿತ್ರ ಅಮರಶಿಲ್ಪಿ ಜಕಣಾಚಾರಿ (1964).



ಬೆಂಗಳೂರಿನ ಕಂಠೀರವ ಸ್ಟೂಡಿಯೊದಲ್ಲಿ ಚಿತ್ರೀಕರಣದ ಒಂದು ದೃಶ್ಯ

ಕರ್ನಾಟಕದಲ್ಲಿ ಸ್ಟೂಡಿಯೊ ನಿರ್ಮಾಣಕ್ಕಾಗಿ ನಡೆದ ಪ್ರಥಮ ಯತ್ನದ ಫಲವಾಗಿ 1936ರ ಕೊನೆಯ ಭಾಗದಲ್ಲಿ ಬೆಂಗಳೂರಿನಲ್ಲಿ ಮೈಸೂರು ಸೌಂಡ್ ಸ್ಟೂಡಿಯೋಸ್ ಸ್ಥಾಪಿತವಾಯಿತು. ಆಗ ಕೇವಲ ಒಂದು ತಿಂಗಳೊಳಗಾಗಿ ಸಿದ್ಧವಾದ ಈ ಸ್ಟೂಡಿಯೊವಿನ ಮೇಲೆ ಹೂಡಿದ ಬಂಡವಾಳ ಕೇವಲ ರೂ. 75,000. ಕನ್ನಡ ಚಿತ್ರರಂಗ ಹಲವಾರು ಎಡರುತೊಡರುಗಳನ್ನೆದುರಿಸಿ ಕಷ್ಟಸ್ಥಿತಿಯಲ್ಲಿದ್ದಾಗ ಜನ್ಮತಾಳಿದ್ದು ಮೈಸೂರಿನ ನವಜ್ಯೋತಿ ಸ್ಟೂಡಿಯೊ. ಪ್ರದೇಶ ಭಾಷಾ ಚಿತ್ರಗಳಲ್ಲಿ ಜನತೆಯ ಆಸಕ್ತಿಯನ್ನು ಮತ್ತೆ ಮೂಡಿಸುವುದರಲ್ಲೂ ತಯಾರಿಕೆ ಕ್ಷೇತ್ರಕ್ಕೆ ಹಲವರನ್ನು ಆಕರ್ಷಿಸುವುದರಲ್ಲೂ ಈ ಸ್ಟೂಡಿಯೊ ಯಶಸ್ವಿಯಾಯಿತು. ಒಟ್ಟು 20ಕ್ಕೂ ಹೆಚ್ಚು ಕನ್ನಡ ಚಿತ್ರಗಳು ಇಲ್ಲಿಂದ ಹೊರಬಿದ್ದುವಲ್ಲದೆ ಮುಂದೆ ಕನ್ನಡ ಚಿತ್ರೋದ್ಯಮದ ಪ್ರಧಾನ ಕೇಂದ್ರವಾಗಿ ಮೈಸೂರು ಬೆಳೆಯುವುದಕ್ಕೆ ಇದು ಭದ್ರ ಬುನಾದಿ ಹಾಕಿತು.

ಕನ್ನಡ ಚಿತ್ರ ತಯಾರಕನ ಸಂಭವನೀಯ ನಷ್ಟವನ್ನು ಸರಿತೂಗಿಸಿ ಒಳ್ಳೆಯ ಚಿತ್ರಗಳ ನಿರ್ಮಾಣಕ್ಕೆ ಪ್ರೋತ್ಸಾಹ ನೀಡುವ ದೃಷ್ಟಿಯಿಂದ ರಾಜ್ಯ ಸರ್ಕಾರ



1



3

1 ಕಣಗಾಲ್ ಪುಟ್ಟಣ್ಣ
2 ಎನ್. ಲಕ್ಷ್ಮೀನಾರಾಯಣ್
3 ಎಂ. ಆರ್. ವಿಠ್ಠಲ್
4 ಬಿ. ಆರ್. ಪಂತುಲು
5 ಟಿ. ಜಿ. ಲಿಂಗಪ್ಪ



4



2



5

ರಾಜ್ಯದಲ್ಲೇ ತಯಾರಾದ ಪ್ರತಿ ಚಿತ್ರಕ್ಕೂ ರೂ. 50,000 ಸಹಾಯಧನ ನೀಡುವ ಕಾರ್ಯಕ್ರಮವೊಂದನ್ನು 1967ರ ಆಗಸ್ಟ್ ತಿಂಗಳಿನಿಂದ ಜಾರಿಗೆ ತಂದಿತು. ಕನ್ನಡ ಚಿತ್ರಗಳ ಸಂಖ್ಯೆಯಲ್ಲಿ ಏರಿಕೆಯಾದುದೂ ಇದ್ದ ಸ್ಟೂಡಿಯೊವಿನ ಬಡಾವಣೆಯ ಜೊತೆಗೆ ಇನ್ನೂ ಮೂರು ಹೊಸ ಸ್ಟೂಡಿಯೊಗಳ ಸ್ಥಾಪನೆಗೆ ಪ್ರಯತ್ನ ನಡೆದದ್ದೂ ಕನ್ನಡ ಚಿತ್ರೋದ್ಯಮ ಕರ್ಣಾಟಕದಲ್ಲೇ ತಳವೂರಿ ನಿಲ್ಲಬೇಕೆಂಬ ಬಯಕೆಯು ಬಹು ಮಟ್ಟಿನ ಈಡೇರಿಕೆಯಾದದ್ದೂ ಈ ಕ್ರಮದ ನೇರ ಫಲಿತಾಂಶಗಳು.

ಸಹಾಯಧನ ನೀಡುವ ಯೋಜನೆ ಅನುಷ್ಠಾನಕ್ಕೆ ಬಂದ ನಾಲ್ಕು ವರ್ಷಗಳಲ್ಲಿ (1970ರ ಡಿಸೆಂಬರ್‌ವರೆಗೆ) ಒಟ್ಟು 62 ಚಿತ್ರಗಳಿಗೆ ಸಹಾಯಧನ ಮಂಜೂರಾಯಿತು. ಈ ನೆರವು ನೀಡಿಕೆಯಿಂದ ಕನ್ನಡ ಚಿತ್ರರಂಗದಲ್ಲಿ ಚಟುವಟಿಕೆ ಎಷ್ಟು ಮಟ್ಟಿಗೆ ಹೆಚ್ಚಿದೆ ಎಂಬುದನ್ನು ಕೆಳಗಿನ ಪಟ್ಟಿ ಸ್ಪಷ್ಟಪಡಿಸುತ್ತದೆ.

1961 ರಿಂದ 1970ರ ವರೆಗೆ ಮದ್ರಾಸು ಕೇಂದ್ರದಲ್ಲಿ ಸೆನ್ಸಾರ್ ಆದ ಚಿತ್ರಗಳ ಸಂಖ್ಯೆ

| ವರ್ಷ | ಕನ್ನಡ | ತಮಿಳು | ತೆಲುಗು | ಮಲೆಯಾಳಂ | ಹಿಂದಿ | ಇಂಗ್ಲಿಷ್ | ಒಟ್ಟು |
|---|---|---|---|---|---|---|---|
| 1961 | 12 | 48 | 56 | 11 | 9 | — | 136 |
| 1962 | 15 | 60 | 47 | 15 | 7 | — | 144 |
| 1963 | 22 | 55 | 46 | 13 | 6 | — | 142 |
| 1964 | 18 | 44 | 41 | 20 | 9 | — | 132 |
| 1965 | 22 | 56 | 50 | 31 | 5 | 1 | 165 |
| 1966 | 21 | 60 | 40 | 31 | 6 | — | 158 |
| 1967 | 24 | 63 | 61 | 39 | 8 | — | 195 |
| 1968 | 36 | 68 | 78 | 36 | 9 | — | 227 |
| 1969 | 44 | 72 | 60 | 31 | 6 | — | 213 |
| 1970 | 37 | 77 | 71 | 43 | 13 | — | 241 |

(ಆಧಾರ : ಜರ್ನಲ್ ಆಫ್ ದಿ ಫಿಲ್ಮ್ ಛೇಂಬರ್)

ಇದಲ್ಲದೆ ಪ್ರದೇಶಭಾಷಾ ಉದ್ಯಮಕ್ಕೆ ಪ್ರೋತ್ಸಾಹ ನೀಡುವ ಬಹುಮಾನ ಮತ್ತು ಪ್ರಶಸ್ತಿಪ್ರದಾನ ಕಾರ್ಯಕ್ರಮವೊಂದನ್ನು ಮೈಸೂರು ಸರ್ಕಾರ ಅನುಸರಿಸುತ್ತಿದೆ. ಈ ಯೋಜನೆಯ ಪ್ರಕಾರ ಕಳೆದ ನಾಲ್ಕು ವರ್ಷಗಳಲ್ಲಿ ರಾಜ್ಯ ಪ್ರಶಸ್ತಿ ಮತ್ತು ಪ್ರಥಮ, ದ್ವಿತೀಯ ಹಾಗೂ ತೃತೀಯ ಬಹುಮಾನಗಳನ್ನು ಕ್ರಮವಾಗಿ ಗಳಿಸಿರುವ ಚಿತ್ರಗಳಿವು :

| ವರ್ಷ | ಪ್ರಥಮ | ದ್ವಿತೀಯ | ತೃತೀಯ |
|---|---|---|---|
| 1966–67 | — | ನಕ್ಕರೆ ಅದೇ ಸ್ವರ್ಗ | ಸಂಧ್ಯಾರಾಗ |
| 1967–68 | — | ಬೆಳ್ಳಿಮೋಡ | ಸರ್ವಮಂಗಳಾ ಮತ್ತು ಬಂಗಾರದ ಹೂವು |
| 1968–69 | ಹಣ್ಣೆಲೆ ಚಿಗುರಿದಾಗ | ನಮ್ಮ ಮಕ್ಕಳು | ಮಣ್ಣಿನ ಮಗ |
| 1969–70 | ಗೆಜ್ಜೆಪೂಜೆ | ಉಯ್ಯಾಲೆ ಮತ್ತು ಮುಕ್ತಿ | ಎರಡು ಮುಖ |

ರಾಷ್ಟ್ರ ಮಟ್ಟದಲ್ಲಿ ಕೇಂದ್ರ ಸರ್ಕಾರ ನೀಡುವ ರಾಷ್ಟ್ರೀಯ ಚಲನಚಿತ್ರ ಪ್ರಶಸ್ತಿಗಳಲ್ಲೂ ಕನ್ನಡ ಚಿತ್ರಗಳು ಮತ್ತು ತಂತ್ರಜ್ಞರು ಭಾಗವಹಿಸಿದ್ದಾರೆ. ರಾಷ್ಟ್ರ ಪ್ರಶಸ್ತಿ ಪಡೆದ ಕನ್ನಡ ಚಿತ್ರಗಳಿವು : ಬೇಡರ ಕಣ್ಣಪ್ಪ (1954), ಮಹಾಕವಿ ಕಾಳಿದಾಸ (1955), ಭಕ್ತವಿಜಯ (1956); ಪ್ರೇಮದ ಪುತ್ರಿ (1957–ಪ್ರಥಮ ಬಾರಿಗೆ ಪ್ರದೇಶ ಮಟ್ಟದ ರಜತ ಪದಕ), ಸ್ಕೂಲ್ ಮಾಸ್ಟರ್ (1958–ಪ್ರಥಮ ಬಾರಿಗೆ ಅಖಿಲ ಭಾರತ ಮಟ್ಟದಲ್ಲಿ ಅರ್ಹತಾಪತ್ರ); ಜಗಜ್ಯೋತಿ ಬಸವೇಶ್ವರ (1959); ಭಕ್ತ ಕನಕದಾಸ (1960); ಕಿತ್ತೂರು ಚೆನ್ನಮ್ಮ (1961); ನಂದಾದೀಪ (1962); ಸಂತ ತುಕಾರಾಂ (1963), ಮಂಗಳ ಮುಹೂರ್ತ ಮತ್ತು ಚಂದವಳ್ಳಿಯ ತೋಟ (1964); ಮಿಸ್ ಲೀಲಾವತಿ, ಸತ್ಯ ಹರಿಶ್ಚಂದ್ರ ಮತ್ತು ಮದುವೆ ಮಾಡಿ ನೋಡು (1965); ಸಂಧ್ಯಾರಾಗ (1966); ಬಂಗಾರದ ಹೂವು (1967), ಮಣ್ಣಿನ ಮಗ (1968), ನಮ್ಮ ಮಕ್ಕಳು (1969) ಮತ್ತು ಗೆಜ್ಜೆಪೂಜೆ (1970).

ಅತ್ಯುತ್ತಮ ಚಿತ್ರಕಥೆಗಾಗಿ ರಾಷ್ಟ್ರಮಟ್ಟದ ಪ್ರಶಸ್ತಿ ಎಸ್. ಆರ್. ಪುಟ್ಟಣ್ಣ ಕಣಗಾಲ್ ಅವರಿಗೆ (ಚಿತ್ರ : ಗೆಜ್ಜೆಪೂಜೆ) ದೊರೆತಿದೆ.

ಹಲವು ಕನ್ನಡ ಚಿತ್ರಗಳು ವಿದೇಶಗಳಲ್ಲೂ ಪ್ರದರ್ಶಿತವಾಗಿವೆ. ಅವುಗಳಲ್ಲಿ ಮುಖ್ಯವಾದವು ಸಾಹಿತಿ ಚದುರಂಗರ ಕಾದಂಬರಿಯನ್ನು ಆಧರಿಸಿದ ಉಯ್ಯಾಲೆ ಮತ್ತು ವಿ. ಎಂ. ಇನಾಂದಾರ್ ಅವರ ಶಾಪ ಕೃತಿಯ ಆಧಾರದ ಮೇಲೆ ತಯಾರಾದ ಮುಕ್ತಿ. ಈ ಎರಡು ಚಿತ್ರಗಳ ನಿರ್ದೇಶಕರು ಎನ್. ಎಲ್. ಲಕ್ಷ್ಮೀನಾರಾಯಣ್. ಇವರ ಇನ್ನೊಂದು ಕಿರು ಚಿತ್ರ ಸ್ಯಾನ್ ಫ್ರಾನ್ಸಿಸ್ಕೋ ಉತ್ಸವದಲ್ಲಿ ಪ್ರಶಸ್ತಿ ಗಳಿಸಿತು.

ಕನ್ನಡಿಗರ ಭಾಷಾಸೌಹಾರ್ದ ಮನೋಭಾವವನ್ನು ಚಿತ್ರರಂಗದಲ್ಲಿ ವಿಶೇಷವಾಗಿ ಕಾಣಬಹುದಾಗಿದೆ. ದಕ್ಷಿಣದ ಇತರ ಸೋದರಭಾಷೆಗಳ ನಿರ್ಮಾಪಕರು ಕನ್ನಡ ಚಿತ್ರ ತಯಾರಿಸಿದ್ದಾರೆ ; ಅಲ್ಲಿಂದ ಕನ್ನಡಕ್ಕೆ ನಿರ್ದೇಶಕರೂ ಬಂದಿದ್ದಾರೆ; ಕಲಾವಿದರೂ ಕನ್ನಡ ತಾರಾಗಣವನ್ನು ಅಲಂಕರಿಸಿದ್ದಾರೆ. ಇದೇ ಕನ್ನಡ ನಿರ್ಮಾಪಕರು (ಕನಿಷ್ಠ ಮೂರು ಲಾಂಛನಗಳು—ಪದ್ಮಿನಿ ಪಿಕ್ಚರ್ಸ್, ವಿಕ್ರಂ ಪ್ರೊಡಕ್ಷನ್ಸ್, ಗುಬ್ಬಿಕರ್ನಾಟಕ) ಕನ್ನಡವನ್ನು ಪ್ರಧಾನವನ್ನಾಗಿ ಇಟ್ಟುಕೊಂಡು ಜೊತೆಗೆ ತಮಿಳು, ತೆಲುಗು ಮತ್ತು ಹಿಂದಿ ಕ್ಷೇತ್ರಗಳಲ್ಲೂ ಕನ್ನಡಿಗರ ಸಾಹಸೋದ್ಯಮವನ್ನು ಪ್ರದರ್ಶಿಸಿದ್ದಾರೆ.

ಕನ್ನಡದ ಕಲಾವಿದರು ಬೇರೆ ಭಾಷೆಗಳ ಚಿತ್ರಗಳಲ್ಲೂ ಕೀರ್ತಿಶಾಲಿಗಳಾಗಿದ್ದಾರೆ. ಅವರಲ್ಲಿ ಕೆಲವರು ಬಿ. ಜಯಮ್ಮ, ಎಂ. ವಿ. ರಾಜಮ್ಮ, ಬಿ. ಸರೋಜಾದೇವಿ, ಎಂ. ಪಂಡರಿಬಾಯಿ, ಭಾರತಿ, ಚಂದ್ರಕಲಾ, ಕಲ್ಪನಾ ಮತ್ತು ಶೈಲಶ್ರೀ, ಆರ್. ನಾಗೇಂದ್ರರಾವ್, ಹೊನ್ನಪ್ಪ ಭಾಗವತರ್, ಎಂ. ಕಲ್ಯಾಣ್ ಕುಮಾರ್, ಉದಯಕುಮಾರ್, ಬಿ. ಆರ್. ಪಂತಲು.

ವಾಕ್ಚಿತ್ರಗಳ ಪ್ರಭಾವಶಾಲಿ ಮಾಧ್ಯಮದ ಮಹತ್ತ್ವವನ್ನು ಮೊದಲೇ ಅರಿತು ಒಳ್ಳೆಯ ಚಿತ್ರ ತಯಾರಿಕೆಗೆ ವ್ಯವಸ್ಥಿತ ರೀತಿಯಲ್ಲಿ ತರಬೇತಾದ ತಂತ್ರಜ್ಞರು ಅಗತ್ಯವೆಂಬ ಅಂಶವನ್ನು ಮನವರಿಕೆ ಮಾಡಿಕೊಂಡು ಅದಕ್ಕಾಗಿ ಸೂಕ್ತ ಹೆಜ್ಜೆ ಇಟ್ಟ ರಾಜ್ಯಗಳಲ್ಲಿ ಮೈಸೂರು ಮೊದಲನೆಯದೆನ್ನಬಹುದು. ಪ್ರಖ್ಯಾತ ವಾಸ್ತುಶಿಲ್ಪಿ ದಿವಂಗತ ವಿಶ್ವೇಶ್ವರಯ್ಯನವರು ಸ್ಥಾಪಿಸಿದ ಬೆಂಗಳೂರಿನ ವೃತ್ತಿಶಿಕ್ಷಣ ಸಂಸ್ಥೆಯಲ್ಲಿ ಛಾಯಾಗ್ರಹಣ ಮತ್ತು ಶಬ್ದಗ್ರಹಣದಲ್ಲಿ ಡಿಪ್ಲೊಮಾ ಮಟ್ಟದಲ್ಲಿ ತರಬೇತಿ ನೀಡುವ ವ್ಯವಸ್ಥೆ ಇದೆ. ಇಂಥ ವ್ಯವಸ್ಥೆಯನ್ನು ಆ ಕಾಲಕ್ಕೆ ರಾಷ್ಟ್ರದಲ್ಲೇ ಮೊದಲು ಆರಂಭಿಸಿದ ಖ್ಯಾತಿ ಮೈಸೂರಿನದು.

1954–55ರಲ್ಲಿ ಸ್ಥಾಪಿತವಾದ ಮೈಸೂರಿನ ಪ್ರೀಮಿಯರ್ ಸ್ಟೂಡಿಯೊ (ಚಿತ್ರೀಕರಣ ಅಂಗಣಗಳ



ಅಭಿಮಾನ ಸ್ಟೂಡಿಯೊ—ಬೆಂಗಳೂರು

ಸಂಖ್ಯೆ ಆರು), 1969ರಲ್ಲಿ ಅಸ್ತಿತ್ವಕ್ಕೆ ಬಂದ ಬೆಂಗಳೂರಿನ ಶ್ರೀ ಕಂಠೀರವ (ಚಿತ್ರೀಕರಣ ಅಂಗಣ ಎರಡು) ಮತ್ತು ಚಾಮುಂಡೇಶ್ವರಿ ಸ್ಟೂಡಿಯೋಸ್ (ಚಿತ್ರೀಕರಣ ಅಂಗಣ ಒಂದು)—ಈ ಮೂರು ಸ್ಟೂಡಿಯೊಗಳಲ್ಲಿ ಈಗ ಪ್ರಮುಖವಾಗಿ ಕನ್ನಡ ಚಿತ್ರಗಳ ನಿರ್ಮಾಣವಾಗುತ್ತಿದೆ. ಈ ಮೂರು ಸ್ಟೂಡಿಯೊಗಳ ಮೇಲೆ ಪ್ರಸ್ತುತ ಹೂಡಿರುವ ಬಂಡವಾಳ ಸುಮಾರು 75 ಲಕ್ಷ ರೂ. 1970ರಲ್ಲಿ ಬಿಡುಗಡೆಯಾದ 35 ಚಿತ್ರಗಳಲ್ಲಿ 25 ಈ ಮೂರು ಸ್ಟೂಡಿಯೊಗಳಲ್ಲಿ ತಯಾರಾದವು. ಈವರೆಗೆ ತೆರೆ ಕಂಡಿರುವ 335 ಚಿತ್ರಗಳಲ್ಲಿ ಕಳೆದ ಐದು ವರ್ಷಗಳಲ್ಲೇ 150 ಚಿತ್ರಗಳು ಬಂದಿವೆಯೆಂಬುದು ಗಮನಾರ್ಹ. ಇದಲ್ಲದೆ ಒಂದು ಚಿತ್ರೀಕರಣ ಅಂಕಣ ಹೊಂದಿರುವ ಸುಜಾತ ಸ್ಟೂಡಿಯೊ ಮತ್ತು ಇನ್ನೂ ನಿರ್ಮಾಣ ಘಟ್ಟದಲ್ಲಿರುವ ಅಭಿಮಾನ್ ಸ್ಟೂಡಿಯೊಗಳೂ ಕನ್ನಡ ಚಿತ್ರಗಳ ತಯಾರಿಕೆಗೆ ಬೆಂಬಲವಾಗಿ ನಿಂತಿವೆ.

ಕಳೆದ ಐದು ವರ್ಷಗಳ ಸರಾಸರಿಯನ್ನನುಸರಿಸಿ ವರ್ಷಕ್ಕೆ 30 ಚಿತ್ರ ತಯಾರಿಕೆಯಾದರೂ ನಿರ್ಮಾಣ ರಂಗದಲ್ಲಿ ಕನ್ನಡ ಚಿತ್ರಗಳ ಮೇಲೆ ಹೂಡಲಾಗುವ ಬಂಡವಾಳ ಸುಮಾರು 1 ಕೋಟಿ ರೂ. ಚಿತ್ರವೊಂದಕ್ಕೆ ತಗಲುವ ವೆಚ್ಚ (ಪ್ರತಿಗಳ ಬೆಲೆಯನ್ನು ಬಿಟ್ಟು) 2½ಯಿಂದ 3½ ಲಕ್ಷ ರೂಪಾಯಿ. ವರ್ಣಚಿತ್ರವಾದರೆ ಪ್ರತಿಯೊಂದರ ವೆಚ್ಚ ಸುಮಾರು 8 ರಿಂದ 13 ಲಕ್ಷ ರೂ. ವರ್ಣಚಿತ್ರದ ಪ್ರತ್ಯೇಕ ಪ್ರತಿಯೊಂದಕ್ಕೆ ಈಗಿನ ಪರಿಸ್ಥಿತಿಯಲ್ಲಿ ತಗಲುವ ವೆಚ್ಚ ಸುಮಾರು 12,000 ರೂ. ಕಪ್ಪು–ಬಿಳುಪು ಚಿತ್ರದ ಪ್ರತಿಯೊಂದಕ್ಕೆ ತಗಲುವ ವೆಚ್ಚ 35,000 ರೂ. ಈಗ ಬರುತ್ತಿರುವ ಚಿತ್ರಗಳ ಸರಾಸರಿ ಉದ್ದ 14 ರಿಂದ 15 ಸಾವಿರ ಅಡಿ. ಸಂಗೀತದ ಬಲವನ್ನೇ ಅವಲಂಬಿಸಬೇಕಾಗಿದ್ದ ದೌರ್ಬಲ್ಯದಿಂದ ಈಗ ಕನ್ನಡ ಚಿತ್ರಗಳು ಪಾರಾಗಿವೆ. ಪ್ರಸ್ತುತ ಕನ್ನಡ ಚಿತ್ರಗಳಲ್ಲಿ ನಾಲ್ಕರಿಂದ ಆರು ಹಾಡುಗಳು ಮಾತ್ರ ಇರುತ್ತವೆ.

ವಿಶಾಲ ಕರ್ಣಾಟಕದ 19 ಜಿಲ್ಲೆಗಳಲ್ಲಿ ಹರಡಿಕೊಂಡಿರುವ ಸುಮಾರು 400 ಕೇಂದ್ರಗಳು ಕನ್ನಡ ನಿರ್ಮಾಪಕರಿಗೆ ಹಾಕಿದ ಹಣವನ್ನು, ಚೆನ್ನಾಗಿದ್ದರೆ ಸಾಕಷ್ಟು ಲಾಭವನ್ನು, ಗಳಿಸಿಕೊಡುವ ಮುಖ್ಯಾಧಾರಗಳು. ಕರ್ಣಾಟಕದಲ್ಲಿ 325 ಶಾಶ್ವತ ಚಿತ್ರಮಂದಿರಗಳೂ 200 ಸಂಚಾರಿ ಮತ್ತು ಭಾಗಶಃ ಖಾಯಂ ಚಿತ್ರಮಂದಿರಗಳೂ ಇವೆ. ಪ್ರದರ್ಶನ ಕ್ಷೇತ್ರದಲ್ಲಿ ಕೋಟ್ಯಂತರ ರೂಪಾಯಿಗಳ ಬಂಡವಾಳ ಹೂಡಲಾಗಿದೆ.

ಗಳಿಕೆಯ ದೃಷ್ಟಿಯಿಂದ ಕನ್ನಡ ಚಿತ್ರಗಳ ಸಂಪಾದನೆ ಕಳೆದ ಐದು ವರ್ಷಗಳಲ್ಲಿ ಶೇಕಡ 100ರಷ್ಟು ಹೆಚ್ಚಿದೆ. ಈಗಿನ ಅಂಕಿ ಅಂಶಗಳ ಪ್ರಕಾರ ಕನ್ನಡ ಚಿತ್ರವೊಂದರ ಕನಿಷ್ಠ ಗಳಿಕೆ ಎರಡೂವರೆ ಲಕ್ಷ ರೂ. ಗರಿಷ್ಠ ಗಳಿಕೆ ಏಳು ಲಕ್ಷ ರೂ.

(ಎಂ.ಬಿ.ಎಸ್.)

**ಕನ್ನಡ ಛಂದಸ್ಸು :** ಕನ್ನಡ ಭಾಷೆಯ ಪದ್ಯಸಾಹಿತ್ಯದಲ್ಲಿ ಬಹಳ ಹಿಂದಿನಿಂದಲೂ ವಾಡಿಕೆಯಾಗಿ ಬಳಕೆಯಾಗುತ್ತ ಬಂದಿರುವ ಸಂಸ್ಕೃತ ಮತ್ತು ಪ್ರಾಕೃತ ಪ್ರಭವದ ಪದ್ಯಜಾತಿಗಳನ್ನೂ ವಿಶೇಷವಾಗಿ ಅಚ್ಚಕನ್ನಡ ಮಟ್ಟುಗಳೆನಿಸಿದ ತ್ರಿಪದಿ ಷಟ್ಪದಿ ಮೊದಲಾದ ಪದ್ಯಜಾತಿಗಳು ಮತ್ತು ಹೊಸಗನ್ನಡ ಕವಿತೆಯ ಮಟ್ಟುಗಳನ್ನೂ ಕನ್ನಡ ಛಂದಸ್ಸು ಎಂಬ ಮಾತು ಒಳಕೊಳ್ಳುತ್ತದೆ.

**ಕನ್ನಡ ಛಂದಸ್ಸನ್ನು ಕುರಿತ ಗ್ರಂಥಗಳು :** ಕಾವ್ಯಲಕ್ಷಣ ಗ್ರಂಥವಾದ ಕವಿರಾಜಮಾರ್ಗದಲ್ಲಿಯೇ (ಕ್ರಿ.ಶ. ಸು. 850) ಕನ್ನಡ ಛಂದಸ್ಸಿಗೆ ಸಂಬಂಧಿಸಿದ ವಿಷಯಗಳಾದ ಯತಿ, ಛಂದೋಭಂಗ, ಗುರುಲಘುದೋಷಗಳು, ಪ್ರಾಸ— ಇವುಗಳ ಪ್ರಸ್ತಾಪವಿದೆ. ಕನ್ನಡ ಕವಿಗಳು ಮುಖ್ಯವಾಗಿ ಸಂಸ್ಕೃತ ಛಂದಸ್ಸಿನಲ್ಲಿ ಸ್ವಾತಂತ್ರ್ಯವಹಿಸಿ ಮಾಡಿಕೊಂಡ ಮಾರ್ಪಾಡುಗಳು, ಅವುಗಳಿಂದಾದ ಪರಿಣಾಮಗಳು—ಇವುಗಳ ಸ್ವರೂಪ ಸ್ವಲ್ಪಮಟ್ಟಿಗೆ ಆ ವಿಷಯಗಳಿಂದ ತಿಳಿಯುತ್ತದೆ. ತಮಿಳು ಭಾಷೆಯ ಯಾಪ್ಪರುಂಗಲಕ್ಕಾರಿಹೈ ಎಂಬ ಪ್ರಾಚೀನ ಛಂದೋಗ್ರಂಥದ ವ್ಯಾಖ್ಯಾನದಲ್ಲಿ ಗುಣಗಾಂಕಿಯಂ ಎಂಬ ಕನ್ನಡ ಛಂದೋಗ್ರಂಥದ ಉಲ್ಲೇಖವಿದೆ. ಇದು ಈವರೆಗೆ ದೊರೆತಿಲ್ಲ. ಅಲ್ಲದೆ ಈ ಗ್ರಂಥದ ಅಸ್ತಿತ್ವ, ಕರ್ತೃತ್ವ, ಕಾಲ ಎಲ್ಲವೂ ತೀರ ಅನಿಶ್ಚಿತವೂ ವಿವಾದಾಸ್ಪದವೂ ಆಗಿವೆ. ಮೂರನೆಯ ವಿಜಯಾದಿತ್ಯನೆಂಬ ಪೂರ್ವ ಚಾಳುಕ್ಯ ರಾಜನಿಗೆ ಅಂಕಿತ ಮಾಡಿರಬಹುದಾದ, ಸು. 9ನೆಯ ಶತಮಾನದ ಕೃತಿಯಿದು ಎಂಬುದಾಗಿ ಊಹಿಸಲಾಗಿದೆ. 1ನೆಯ ನಾಗವರ್ಮನ (ಕ್ರಿ.ಶ. ಸು. 990) ಛಂದೋಂಬುಧಿ ಉಪಲಬ್ಧವಾದ ಕನ್ನಡ ಛಂದೋಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದುದು; ಪ್ರಮಾಣಭೂತವೂ ಪ್ರಸಿದ್ಧವೂ ಆದುದು. ಇದರಲ್ಲಿ ಕನ್ನಡ ಛಂದಸ್ಸಿಗೆ ಸಂಬಂಧಿಸಿದ ನಾನಾ ವಿಷಯಗಳು ಸ್ವತಂತ್ರವಾಗಿಯೂ ತಕ್ಕಮಟ್ಟಿಗೆ ವಿಸ್ತಾರವಾಗಿಯೂ ಪ್ರತಿಪಾದಿತವಾಗಿವೆ. ಈ ಗ್ರಂಥದಲ್ಲಿ ಆರು ಅಧಿಕಾರಗಳಿದ್ದು, ಅವುಗಳಲ್ಲಿ ಸಂಸ್ಕೃತ, ಪ್ರಾಕೃತ ಮತ್ತು ಕನ್ನಡ ಛಂದಸ್ಸುಗಳಲ್ಲಿ ಕನ್ನಡ ಕಾವ್ಯಾಭ್ಯಾಸಿಗಳು ತಿಳಿಯಬೇಕಾಗಿರುವ ಅತ್ಯಗತ್ಯವಾದ ಎಲ್ಲ ಅಂಶಗಳೂ ಸಂಗ್ರಹಿತವಾಗಿವೆ. ಐದನೆಯ ಅಧಿಕಾರ ಅಚ್ಚ ಕನ್ನಡ ಛಂದಸ್ಸಿಗೆ ಮೀಸಲಾಗಿದ್ದು, ಅದು ಆ ವಿಷಯದ ವಿವೇಚನೆಗೆ ಬಹು ಉಪಯುಕ್ತವಾದ ಮೂಲಭೂತವಾದ ಸಾಮಗ್ರಿಯನ್ನೊದಗಿಸುತ್ತದೆ.

ಪ್ರಸಿದ್ಧ ಶಾಸ್ತ್ರಜ್ಞನಾದ ಇಮ್ಮಡಿ ನಾಗವರ್ಮ (ಸು. 1145) ಛಂದೋವಿಚಿತಿ ಎಂಬೊಂದು ಗ್ರಂಥವನ್ನು ಅಥವಾ ಛಂದಶ್ಶಾಸ್ತ್ರವನ್ನು ಕುರಿತ ಗ್ರಂಥವೊಂದನ್ನು ಬರೆದಿದ್ದಂತೆ ಕಾವ್ಯಾವಲೋಕನದಲ್ಲಿ ದೊರೆಯುವ ಒಂದು ಆಧಾರದಿಂದ ತಿಳಿಯುತ್ತದೆ. ಇದು ಈವರೆಗೆ ದೊರೆತಿಲ್ಲ. ಈಶ್ವರ ಕವಿಯ (ಕ್ರಿ.ಶ. ಸು. 1500) ಕವಿಜಿಹ್ವಾಬಂಧನಂ ಒಂದು ರೀತಿಯ ಸಮ್ಮಿಶ್ರ ಗ್ರಂಥವಾದರೂ ಮುಖ್ಯವಾಗಿ ಛಂದಶ್ಶಾಸ್ತ್ರವನ್ನು ಕುರಿತದ್ದು. ಈ ಗ್ರಂಥದ ಮೊದಲ ಮೂರು ಆಶ್ವಾಸಗಳಲ್ಲಿ ಪ್ರಧಾನವಾಗಿ ಛಂದಶ್ಶಾಸ್ತ್ರದ ಸಂಜ್ಞಾಪ್ರಕರಣಕ್ಕೆ ಸಂಬಂಧಿಸಿದ ಕೆಲವು ವಿಷಯಗಳು ಮಾತ್ರ ಬಂದಿವೆ. ಅಲ್ಲಲ್ಲಿ ತೆಲುಗು ಛಂದೋಗ್ರಂಥಗಳ ಪ್ರತಿಪಾದನ ರೀತಿಯನ್ನೂ ವಿಷಯಗಳನ್ನೂ ಒಳಕೊಂಡಿರುವುದು ಈ ಕೃತಿಯ ವೈಶಿಷ್ಟ್ಯ. ಛಂದೋಂಬುಧಿಯ ತರುವಾಯದಲ್ಲಿ ತಕ್ಕಮಟ್ಟಿಗೆ ಗಣ್ಯವಾದ ಛಂದೋಗ್ರಂಥವೆಂದರೆ ಗುಣಚಂದ್ರನೆಂಬ ಜೈನಕವಿಯ (ಕ್ರಿ.ಶ. ಸು. 1650) ಛಂದಸ್ಸಾರ. ಇದರಲ್ಲಿ ಐದು ಅಧಿಕಾರಗಳಿದ್ದು, ಸಂಸ್ಕೃತ ಛಂದಸ್ಸಿನ ವಿಷಯಕ್ಕೆ ಪ್ರಮುಖವೆನಿಸಿದೆ. ಮಾತ್ರಾಷಟ್ಪದಿಗಳು, ತಾಳಗಳು, ರಗಳೆಯ ಪ್ರಭೇದಗಳು ಈ ಮುಂತಾದವನ್ನು ಪ್ರಾಯಶಃ ಇಲ್ಲಿ ಮೊದಲ ಬಾರಿಗೆ ಪ್ರಸ್ತಾಪ ಮಾಡಿರುವುದು ಗಮನಾರ್ಹವಾಗಿದೆ. ಆದರೆ ಅಂಶವೃತ್ತಗಳ ವಿಚಾರವೇ ಇಲ್ಲದಿರುವುದು ಆಶ್ಚರ್ಯಕರವಾಗಿದೆ. ಶಾಲ್ಯದ ಕೃಷ್ಣರಾಜನ (ಕ್ರಿ.ಶ. 1748) ಷಟ್ಪ್ರತ್ಯಯವೆಂಬುದು ಪ್ರಸ್ತಾರ ಮೊದಲಾದ ಆರು ಪ್ರತ್ಯಯಗಳನ್ನು ವಿವರಿಸುವ ಛಂದೋಗ್ರಂಥ. ಕೇದಾರಭಟ್ಟನ ವೃತ್ತರತ್ನಾಕರದ ಅಜ್ಞಾತ ಕರ್ತೃಕವಾದ ಕನ್ನಡ ವೃತ್ತಿಯೊಂದು ಸುಮಾರು ಇದೇ ಕಾಲಕ್ಕೆ (ಸು. 1775) ರಚಿತವಾದಂತೆ ತೋರುತ್ತದೆ. ಇವಕ್ಕೆ ಈಚಿನದಾದ ನಂದಿ ಛಂದಸ್ಸು (ಸು. 19ನೆಯ ಶ.) ಕರ್ತೃ ನಿಶ್ಚಿತವಾಗಿ ತಿಳಿಯದ, ಈಗ ವರ್ಣವೃತ್ತಗಳ ಭಾಗವಷ್ಟೇ ಉಳಿದಿರುವ, ಒಂದು ಅಸಮಗ್ರ ಛಂದೋಗ್ರಂಥ.

ಕನ್ನಡ ಛಂದಸ್ಸಿನ ಗಣಸ್ವರೂಪವನ್ನೂ ಪ್ರಸಿದ್ಧವಾದ ಪದ್ಯಜಾತಿಗಳನ್ನೂ ಕೆಲವು ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ಕೂಡ ಪ್ರಾಸಂಗಿಕವಾಗಿ ವಿವೇಚಿಸಿರುವುದು ಕಂಡುಬರುತ್ತದೆ. ಜಯಕೀರ್ತಿಯ (ಸು. 1050) ಛಂದೋನುಶಾಸನಮ್ ಎಂಬ ಗ್ರಂಥದಲ್ಲಿ ಅಲ್ಲಲ್ಲಿ ಕನ್ನಡ ಛಂದಸ್ಸಿನ ಸಂಗತಿಗಳು ಕ್ವಚಿತ್ತಾಗಿ ಉಕ್ತವಾಗಿರುವುದಲ್ಲದೆ, ಕರ್ಣಾಟಕ ವಿಷಯಭಾಷಾಜಾತ್ಯಧಿಕಾರವೆಂಬ 7ನೆಯ ಅಧಿಕಾರದಲ್ಲಿ ಪೂರ್ತಿಯಾಗಿ ಕನ್ನಡ ಛಂದಸ್ಸಿನ ವಿವೇಚನೆ ಲಕ್ಷಣ–ಲಕ್ಷ್ಯ ಸಮನ್ವಿತವಾಗಿ ಬಂದಿದೆ. ಈ ಗ್ರಂಥದಲ್ಲಿ ನಾಗವರ್ಮನ ಛಂದೋಂಬುಧಿಯ ಪ್ರಭಾವವನ್ನು ಕಾಣಬಹುದಾಗಿದೆ. 3ನೆಯ ಸೋಮೇಶ್ವರನ ಮಾನಸೋಲ್ಲಾಸದಲ್ಲಿ (ಕ್ರಿ.ಶ. 1129), ಅದರ ಚತುರ್ವಿಂಶತಿಯ 16ನೆಯ ಅಧ್ಯಾಯದಲ್ಲಿ, ಕನ್ನಡ ಛಂದಸ್ಸಿಗೆ ಸಂಬಂಧಪಟ್ಟಂತೆ, ಅಂಶಗಣಗಳ ಸ್ವರೂಪವನ್ನೂ ತ್ರಿಪದಿ ಷಟ್ಪದಿ ಹಾಗೂ ಕಂದಪದ್ಯ ಇವುಗಳ ಸ್ವರೂಪವನ್ನೂ ಲಕ್ಷಣ–ಲಕ್ಷ್ಯಗಳೊಂದಿಗೆ ವಿವರಿಸಿದೆ. ಶಾರ್ಙ್ಗದೇವನ ಸಂಗೀತರತ್ನಾಕರವೆಂಬ ಗ್ರಂಥದಲ್ಲಿ, ಅದರ 4ನೆಯ ಪ್ರಬಂಧಾಧ್ಯಾಯದಲ್ಲಿ, ಕನ್ನಡ ಛಂದಸ್ಸಿನ ಏಳೆ, ತ್ರಿಪದಿ ಮತ್ತು ಷಟ್ಪದಿಗಳ ಲಕ್ಷಣವನ್ನು ನಿರೂಪಿಸಿದೆ. ಕನ್ನಡ ಭಾಷಾಸಾಹಿತ್ಯಗಳ ಪರಿಚಯವಿದ್ದಂತೆ ತೋರುವ ಈ ಲಾಕ್ಷಣಿಕರ ವಿವರಣೆಗಳಿಂದ ಕನ್ನಡ ಛಂದಸ್ಸಿನ ಸ್ವರೂಪ ಜ್ಞಾನಕ್ಕೆ ತುಂಬ ಉಪಕಾರವಾಗಿದೆ.

**ಕನ್ನಡ ಛಂದಸ್ಸಿನ ವಿವಿಧ ಗಣಸ್ವರೂಪ :** ಕನ್ನಡದಲ್ಲಿ ಪ್ರಚಲಿತವಾಗಿರುವ ಪದ್ಯಜಾತಿಗಳು ಮೂರು ವಿಧ : ವರ್ಣವೃತ್ತಗಳು, ಮಾತ್ರಾವೃತ್ತಗಳು ಮತ್ತು ಅಂಶವೃತ್ತಗಳು. ವರ್ಣವೃತ್ತಗಳಲ್ಲಿ, ಪ್ರತಿಪಾದದಲ್ಲಿಯೂ ನಿರ್ದಿಷ್ಟವಾದ ಅಕ್ಷರ ಸಂಖ್ಯೆಯಿದ್ದು ಲಘುವೋ ಗುರುವೋ ಆಗಿರುವ ಆಯಕ್ಷರಗಳ ವಿನ್ಯಾಸವೂ ನಿರ್ದಿಷ್ಟವಾಗಿರುತ್ತದೆ. ಮಯರಸತಜಭನ ಎಂಬುದಾಗಿ ಸಂಜ್ಞೆಗಳನ್ನು ಮಾಡಿಕೊಂಡು, ಪದ್ಯಪಾದವನ್ನು 3–3 ಅಕ್ಷರಗಳ ಗಣಗಳನ್ನಾಗಿ ವಿಭಜಿಸಿ ವೃತ್ತಗಳ ಲಕ್ಷಣವನ್ನು ತಿಳಿಯಲಾಗುತ್ತದೆ. ಮಾತ್ರಾವೃತ್ತಗಳಲ್ಲಿ, ಪ್ರತಿಪಾದದಲ್ಲಿಯೂ ಇಷ್ಟಿಷ್ಟು ಮಾತ್ರೆಗಳ ಇಷ್ಟಿಷ್ಟು ಗಣಗಳಿಂದಿದ್ದು, ಮಾತ್ರಾಸಂಖ್ಯೆಗೆ ಅನುಗುಣವಾಗಿ ಕೆಲವು ಸಂದರ್ಭಗಳಲ್ಲಿ ಕೆಲವು ವಿಶಿಷ್ಟ ಗಣನಿಯಮಗಳನ್ನನುಸರಿಸಿ, ಗಣಭಾಗವಿರುತ್ತದೆ. ಅಂಶವೃತ್ತಗಳಲ್ಲಿ, ಪ್ರತಿಪಾದದಲ್ಲಿಯೂ ವಾಚನದ ಅಥವಾ ಗಾಯನದ ಗತಿಯನ್ನನುಸರಿಸಿ, ತಾಳಲಯಗಳು ಸರಿಯಾಗಿ ಹೊಂದಿಕೊಳ್ಳಲು ಲಘುಗುರುಗಳ ಮಾತ್ರಾಪರಿಮಾಣವೂ ಹಿಗ್ಗಿ ಅಥವಾ ಕುಗ್ಗಿ ಹೊಂದಿಕೆಗೆ ಅನುವಾಗುವ ಅಕ್ಷರ (ಅಂಶ) ಗಳಿಂದ ಕಟ್ಟಿದ ಗಣಗಳು ಬಂದಿರುತ್ತವೆ ; ಎಂದರೆ ಹಾಗೆ ಅಕ್ಷರಗಳನ್ನು ಹೊಂದಿಸಿಕೊಳ್ಳಬೇಕಾಗುತ್ತದೆ. ಕ್ರಮವಾಗಿ 2, 3 ಮತ್ತು 4 ಅಂಶಗಳ ಗಣಗಳಿಗೆ ಬ್ರಹ್ಮ, ವಿಷ್ಣು ಮತ್ತು ರುದ್ರ ಎಂಬ ಸಂಕೇತಗಳನ್ನು ಕನ್ನಡದಲ್ಲಿ ಕೊಟ್ಟಿದೆ. ಅಚ್ಚಕನ್ನಡ ಮಟ್ಟುಗಳು ಅಂಶವೃತ್ತಗಳು.

**ಸಂಸ್ಕೃತ ಛಂದಸ್ಸಿನ ಮೂಲದ ವರ್ಣವೃತ್ತಗಳು :** ಪ್ರಾಚೀನ ಕನ್ನಡ ಸಾಹಿತ್ಯದ ಕಾವ್ಯಗಳೂ ಪುರಾಣಗಳೂ ವಿಶೇಷವಾಗಿ ಚಂಪೂ ಪದ್ಧತಿಯಲ್ಲಿ ರಚಿತವಾಗಿವೆ. ಚಂಪೂ ಪದ್ಧತಿಯ ಚೌಕಟ್ಟು ಮುಖ್ಯವಾಗಿ ಗದ್ಯ ಹಾಗೂ ಕಂದ, ವೃತ್ತಗಳಿಂದಾದುದು.

ವೃತ್ತಗಳು, ವರ್ಣವೃತ್ತಗಳು : ಸಮ, ಅರ್ಧಸಮ ಮತ್ತು ವಿಷಮ—ಎಂಬ ಅವುಗಳ ಮೂರು ಪ್ರಕಾರಗಳಲ್ಲಿ ಮೊದಲನೆಯದೇ ವಿಶೇಷವಾಗಿ ಬಳಕೆಯಾಗಿರತಕ್ಕದ್ದು, ಉಳಿದವು ತೀರ ಕ್ವಚಿತ್ತಾಗಿ ಬಂದಿರತಕ್ಕವು. ವರ್ಣವೃತ್ತಗಳಲ್ಲಿ ಕೆಲವನ್ನು ಸಂಸ್ಕೃತ ಛಂದಸ್ಸಿನಿಂದ ಕನ್ನಡಕ್ಕೆ ನೇರವಾಗಿ ತೆಗೆದುಕೊಂಡಿದೆ. ಉದಾಹರಣೆಗೆ ಶಾರ್ದೂಲವಿಕ್ರೀಡಿತ, ಸ್ರಗ್ಧರೆ ಇತ್ಯಾದಿ ; ಇನ್ನು ಕೆಲವನ್ನು ಆ ಮಾದರಿಗಳಲ್ಲಿ ಹೊಸದಾಗಿ ರಚಿಸಿಕೊಂಡಿದೆ. ಉದಾ. ಮತ್ತೇಭವಿಕ್ರೀಡಿತ, ಮಹಾಸ್ರಗ್ಧರೆ ಇತ್ಯಾದಿ. ಜೊತೆಗೆ ಕೆಲವು ವ್ಯತ್ಯಾಸಗಳನ್ನೂ ಕನ್ನಡ ಕವಿಗಳು ಮಾಡಿಕೊಂಡರು. ಸಂಸ್ಕೃತದಲ್ಲಿಯ ನಿಯತಯತಿಯನ್ನು ಐಚ್ಛಿಕವಾಗಿ ಭಾವಿಸಿದ್ದು, ಸಂಸ್ಕೃತದಲ್ಲಿಲ್ಲದ ದ್ವಿತೀಯಾಕ್ಷರ ಪ್ರಾಸವನ್ನು ಪಾಲಿಸಿದ್ದು, ಸಂಸ್ಕೃತದಲ್ಲಿರುವಂತೆ ಪಾದಾಂತದಲ್ಲಿ ನಿಲುಗಡೆಯನ್ನು ಕಡ್ಡಾಯವಾಗಿಟ್ಟುಕೊಳ್ಳದೆ ಪಾದ ಮುಂದಕ್ಕೆ ಓಡುವಂತೆ ಮಾಡಿಕೊಂಡದ್ದು—ಇವು ಗಮನಿಸತಕ್ಕ ವ್ಯತ್ಯಾಸಗಳು. ಸಂಸ್ಕೃತ ವರ್ಣವೃತ್ತಗಳ ಧಾಟಿ ಘೋಷಗಳನ್ನು ಪಾಲಿಸುವುದಕ್ಕಾಗಿ ಕನ್ನಡದಲ್ಲಿ ಬಳಸಿದ ಅಂಥ ವರ್ಣವೃತ್ತಗಳಲ್ಲಿಯೂ ಸಂಸ್ಕೃತ ಶಬ್ದಗಳೂ ಹೆಚ್ಚುಹೆಚ್ಚಾಗಿ ಬಳಕೆಗೆ ಬಂದು ಕನ್ನಡ ನುಡಿಗಳು ತಮ್ಮ ಸ್ವರಗಳೊಡನೆ ಎದ್ದುನಿಂತು ಕಾಣದಂತಾಯಿತು—ಎಂಬುದು ನಿಜ.

ಕನ್ನಡ ಪದ್ಯಸಾಹಿತ್ಯದಲ್ಲಿ ಬಹು ಪ್ರಚಲಿತವಾಗಿರತಕ್ಕ ವರ್ಣವೃತ್ತಗಳು ಎಂದರೆ ಖ್ಯಾತಕರ್ಣಾಟಕಗಳು ಎಂಬ ಹೆಸರಿನಲ್ಲಿ ರೂಢಿಯಾಗಿರುವ ಈ ಆರು ವೃತ್ತಗಳು : ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ, ಉತ್ಪಲಮಾಲೆ, ಚಂಪಕಮಾಲೆ, ಸ್ರಗ್ಧರೆ, ಮಹಾಸ್ರಗ್ಧರೆ. ಇವು ಸರಿಸುಮಾರು ಕ್ರಿ.ಶ. 700 ರಿಂದ ಕನ್ನಡ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಹೆಚ್ಚಾಗಿ ಬಳಕೆಯಲ್ಲಿವೆ. ಇವುಗಳ ಲಕ್ಷಣವನ್ನು ರೂಢಿಯ ಸಂಜ್ಞೆಗಳನ್ನು ಬಳಸಿದ ಪ್ರಸ್ತಾರ ನಿಯಮಕ್ಕೆ ಅನುಗುಣವಾಗಿ ಈ ಸೂತ್ರಗಳಿಂದ ನೆನಪಿಟ್ಟುಕೊಳ್ಳಬಹುದು: (1) ಶಾರ್ದೂಲವಿಕ್ರೀಡಿತ : ಕಣ್ಗೊಪ್ಪಲ್। ಮಸಜಂ । ಸತಂತ । ಗಮುಮಾ । ಶಾರ್ದೂಲ । ವಿಕ್ರೀಡಿತಂ. (2) ಮತ್ತೇಭವಿಕ್ರೀಡಿತ : ಸಭರಂ । ನಂಮಯ । ಲಂಗಮುಂ । ಬಗೆಗೊಳಲ್ । ಮತ್ತೇ। ಭವಿಕ್ರೀ । ಡಿತಂ । (3) ಉತ್ಪಲಮಾಲೆ : ಉತ್ಪಲ । ಮಾಲೆಯ । ಪ್ಪುದುಭ। ರಂನಭ । ಭಂರಲ । ಗಂ ನೆಗ। ಱ್ದರಲ್ । (4) ಚಂಪಕಮಾಲೆ : ನಜಭ । ಜಜಂಜ । ರಂ ಬಗೆ । ಗೊಳುತ್ತಿ । ರೆ ಚಂಪ । ಕಮಾಲೆ । ಯೆಂದಪರ್॥ (5) ಸ್ರಗ್ಧರೆ : ತೋರಲ್ ಮಂ । ರಂಭನಂ । ಮೂಯಗ । ಣಮುಮ । ದೆತಾಂ ಸ್ರ । ಗ್ಧರಾವೃ । ತ್ತ ಮಕ್ಕುಂ । (6) ಮಹಾಸ್ರಗ್ಧರೆ: ಸತತಂ । ನಂಸಂ ರ। ರಂಗಂ ನೆ । ರೆದೆಸೆ । ಯೆ ಮಹಾ । ಸ್ರಗ್ಧರಾ । ವೃತ್ತಮ । ಕ್ಕುಂ ॥ ಇಲ್ಲಿಯ ಪ್ರಸ್ತಾರ ಕ್ರಮವನ್ನು ಪರಿಶೀಲಿಸಿ ಧಾಟಿಯನ್ನರಿತುಕೊಂಡರೆ, ಶಾರ್ದೂಲವಿಕ್ರೀಡಿತ, ಉತ್ಪಲಮಾಲೆ ಮತ್ತು ಸ್ರಗ್ಧರೆಗಳ ಪಾದಾದಿಯ ಗುರುವಿಗೆ ಎರಡು ಲಘುಗಳನ್ನಿಟ್ಟು ಕ್ರಮವಾಗಿ ಮತ್ತೇಭವಿಕ್ರೀಡಿತ, ಚಂಪಕಮಾಲೆ ಮತ್ತು ಮಹಾಸ್ರಗ್ಧರೆಗಳನ್ನು ಕನ್ನಡ ಕವಿಗಳು ಮಾಡಿಕೊಂಡಂತೆ ತೋರುವುದು (ಉತ್ಪಲಮಾಲೆ—ಚಂಪಕಮಾಲೆ ಈ ಜೋಡಿಯ ವಿಷಯದಲ್ಲಿ ಮಾತ್ರ, ಚಂಪಕಮಾಲೆಯ ಆದಿ ದ್ವಿಲಘುವಿಗೆ ಒಂದು ಗುರುವನ್ನಿಟ್ಟುಕೊಂಡು ಉತ್ಪಲಮಾಲೆಯನ್ನು ಮಾಡಿಕೊಂಡಿರುವ ಸಾಧ್ಯತೆಯಿದೆ). ಸಂಸ್ಕೃತದಲ್ಲಿ ಪೂರ್ವೋಕ್ತವಾದ ಶಾರ್ದೂಲಾದಿಗಳು ಪ್ರಸಿದ್ಧವಾಗಿರುವುದೂ ಮತ್ತೇಭಾದಿಗಳು ಏನೂ ಪ್ರಸಿದ್ಧವಾಗಿಲ್ಲದಿರುವುದೂ ಹೀಗೆ ತಿಳಿಯುವುದಕ್ಕೆ ಎಡೆ ಕೊಟ್ಟಿದೆ.

ಹಳಗನ್ನಡ ಸಾಹಿತ್ಯದಲ್ಲಿ ಖ್ಯಾತ ಕರ್ಣಾಟಕಗಳ (ನೋಡಿ) ಜೊತೆಗೆ ಅಲ್ಲಲ್ಲಿ ವಿರಳವಾಗಿ ಬಳಸಿರುವ ಇನ್ನೂ ಕೆಲವು ವರ್ಣವೃತ್ತಗಳುಂಟು. ಮಾಲಿನಿ, ಹರಿಣಿ, ಪೃಥ್ವಿ, ಮಲ್ಲಿಕಾಮಾಲೆ, ತರಳ ಮೊದಲಾದವು ಹೀಗೆ ಬಳಕೆಯಾಗಿರತಕ್ಕವು. ಕವಿಯ ಕೌಶಲವನ್ನು ಎತ್ತಿ ತೋರುವುದಕ್ಕಾಗಿಯೋ ರಚನೆಯಲ್ಲಿ ವೈವಿಧ್ಯವನ್ನು ತರುವುದಕ್ಕಾಗಿಯೋ ಒಂದೊಂದು ಕೃತಿಯಲ್ಲಿ ಅಲ್ಲಲ್ಲಿ 1-2 ರಂತೆ ಅಥವಾ ಬೆರಳೆಣಿಕೆಗೆ ಸಿಗುವಷ್ಟು ಮಾತ್ರ ಇವು ಬಂದಿವೆ. ಇಲ್ಲಿಯೂ ಕೆಲವು ಸಂಸ್ಕೃತದಿಂದ ನೇರವಾಗಿ ಪಡೆದಂಥವು, ಕೆಲವು ಸ್ವತಃ ಮಾಡಿಕೊಂಡವು. ಈ ಎರಡು ಬಗೆಗಳೂ ಕಾವ್ಯ ಗ್ರಂಥಗಳಿಗಿಂತ ಶಾಸ್ತ್ರಗ್ರಂಥಗಳಲ್ಲಿ ಕಾಣುವುದೇ ಹೆಚ್ಚು. ಉದಾಹರಣೆಗೆ, ಚಂದ್ರ ರಾಜನ ಮದನ ತಿಲಕ, ಜನ್ನನ ಅನುಭವಮುಕುರ, ಇತ್ಯಾದಿಗಳನ್ನು ನೋಡಬಹುದು. ಇಂಥ ವೃತ್ತಗಳಲ್ಲಿ ಪ್ರಸಿದ್ಧವಾದವುಗಳ ಲಕ್ಷಣಗಳನ್ನು ಪಿಂಗಲ, ಜಯದೇವಾದ್ಯರ ಸಂಸ್ಕೃತ ಛಂದೋಗ್ರಂಥಗಳಲ್ಲಿಯೂ ನಾಗವರ್ಮ, ಗುಣಚಂದ್ರಾದ್ಯರ ಕನ್ನಡ ಛಂದೋಗ್ರಂಥಗಳಲ್ಲಿಯೂ ಹೇಳಿದೆ.

ಹಳಗನ್ನಡ ಪದ್ಯಗ್ರಂಥಗಳಲ್ಲಿ ಸಮವೃತ್ತಗಳ ಹಾಗೆ ಅಧಿಕ ಸಂಖ್ಯೆಯಲ್ಲಿ, ಅರ್ಧಸಮ ಮತ್ತು ವಿಷಮವೃತ್ತಗಳೂ ಹಾಗೆಯೇ ಉತ್ಕೃತಿಯಿಂದಾಚೆಯ ಮಾಲಾವೃತ್ತಗಳು ಮತ್ತು ದಂಡಕಗಳೂ ಕಂಡುಬರುವುದಿಲ್ಲ. ಕವಿರಾಜಮಾರ್ಗ (ಸು. 850), ಕಾವ್ಯಾವಲೋಕನ (ಸು. 1145), ಚಿಕದೇವರಾಜವಿಜಯ (ಸು. 1700) ಇವುಗಳಲ್ಲಿ ಕ್ರಮವಾಗಿ ಪುಷ್ಪಿತಾಗ್ರ, ನಾಗ, ವಿಯೋಗಿನಿ ಮತ್ತು ವಸಂತಮಾಲಿಕೆ ಈ ಅರ್ಧಸಮವೃತ್ತಗಳು ಬಳಕೆಯಾಗಿವೆ. ಮದನತಿಲಕದಲ್ಲಿ ತ್ರಿಪದೋನ್ನತಿಯೆಂಬ ವಿಷಮವೃತ್ತವಿದೆ. ಗದಾಯುದ್ಧ, ಪಂಪರಾಮಾಯಣ ಮುಂತಾದ ಕೆಲವು ಕಾವ್ಯಗಳಲ್ಲಿ ಲಲಿತವೃತ್ತವೆಂಬ ಪ್ರಸಿದ್ಧವಾದ ಮಾಲಾವೃತ್ತವನ್ನು ಬಳಸಿದೆ. ಲಲಿತವೃತ್ತವೇ ಲಯಗ್ರಾಹಿಯಾಗಿ ಮುಂದೆ ಚಿಕದೇವರಾಜಬಿನ್ನಪ ಮುಂತಾದ ಕೃತಿಗಳಲ್ಲಿ ಬಂದಿದೆ. ಲೀಲಾವತಿಯಲ್ಲಿ ಮಾತ್ರಾವರ್ಣ ಮಿಶ್ರ ಚತುಷ್ಪದಿಯಾದ (ಮಾತ್ರಾವೃತ್ತ) ಲಯೋತ್ತರವೆಂಬ ಒಂದು ವೃತ್ತವಿದೆ. ಹೀಗೆಯೇ ಇಂಥ ವೃತ್ತಗಳು ಇನ್ನೂ ಕೆಲವು ಬೇರೆ ಬೇರೆ ಕಾವ್ಯಗಳಲ್ಲಿರಬಹುದು.

ಸಂಸ್ಕೃತ ಕಾವ್ಯಗಳ ಶಾಸ್ತ್ರಗಳ ಸುಪ್ರಸಿದ್ಧವಾದ ಶ್ಲೋಕ ಛಂದಸ್ಸು ಕನ್ನಡದಲ್ಲಿ ಕ್ವಚಿತ್ತಾಗಿ ಮಾತ್ರ ಕಾಣುತ್ತದೆ. ಕವಿರಾಜಮಾರ್ಗದಲ್ಲಿ ನಿಯಮಬದ್ಧವಾದ ಕೆಲವು ಶ್ಲೋಕಗಳಿವೆ. ಕಾವ್ಯಾವಲೋಕನದಲ್ಲಿಯೂ ಒಂದು ಶ್ಲೋಕವಿದೆ. ಆದರೆ ಇದರ ಬಳಕೆ ಮುಂದೆ ಹೆಚ್ಚಾಗಿ ಆಗಲಿಲ್ಲ. ಕವಿರಾಜಮಾರ್ಗದಿಂದ ಒಂದು ಉದಾಹರಣೆಯನ್ನು ನೋಡಬಹುದು :

ತಾರಾ ಜಾನಕಿಯಂ ಪೋಗಿ।
ತಾರಾ ತರಳ ನೇತ್ರೇಯಂ।
ತಾರಾಧಿಪತಿ ತೇಜಸ್ವಿ।
ತಾರಾದಿ ವಿಜಯೋದಯಾ॥

ಇಲ್ಲಿಯ 4 ಪಾದಗಳಲ್ಲಿ, ಪ್ರತಿ ಪಾದದಲ್ಲಿಯೂ 5ನೆಯ ಅಕ್ಷರ ಲಘುವಾಗಿಯೂ 6ನೆಯದು ಗುರುವಾಗಿಯೂ ಇದ್ದು, 7ನೆಯ ಅಕ್ಷರ 1, 3ನೆಯ ಪಾದಗಳಲ್ಲಿ ಗುರುವಾಗಿಯೂ 2, 4ನೆಯ ಪಾದಗಳಲ್ಲಿ ಲಘುವಾಗಿಯೂ ಇರುವುದು ಕಾಣುತ್ತದೆ ; ಕನ್ನಡ ಪದ್ಯಗಳಿಗೆ ಸಹಜವಾದ ಆದಿಪ್ರಾಸವನ್ನಿಟ್ಟುಕೊಂಡಿದೆ.

**ಸಂಸ್ಕೃತ–ಪ್ರಾಕೃತ ಪ್ರಭಾವದಿಂದ ಹುಟ್ಟಿದ ಮಾತ್ರಾ ವೃತ್ತಗಳು :** ಕನ್ನಡ ಸಾಹಿತ್ಯದ ಕಾವ್ಯಶಾಸ್ತ್ರಾದಿಗ್ರಂಥಗಳಲ್ಲಿ ವಿಶೇಷವಾಗಿ ಬಳಕೆಯಾಗಿರುವ ಕಂದಪದ್ಯವೂ ಅಲ್ಲಿಯೇ ವಿರಳವಾಗಿ ಬಳಕೆಯಾಗಿರುವ ರಗಳೆಯೂ ಈ ಗುಂಪಿನ ಗಣ್ಯವೃತ್ತಗಳಾಗಿವೆ. ಈ ಪದ್ಯಜಾತಿಗಳನ್ನೆ ತನಿಯಾಗಿ ಬಳಸಿ ಕೃತಿರಚನೆ ಮಾಡಿರುವುದೂ ಉಂಟು. ಲಕ್ಷಣಗ್ರಂಥಗಳ ರಚನೆಗೆ ಕಂದಪದ್ಯವನ್ನು ಹೆಚ್ಚಾಗಿ ಬಳಸಿದೆ. ಜನ್ನನ ಯಶೋಧರ ಚರಿತೆ ಕಾವ್ಯವಾಗಿಯೂ ಸಮಗ್ರವಾಗಿ ಕಂದದಲ್ಲಿ ರಚಿತವಾಗಿದೆ. ಹರಿಹರ ಮತ್ತು ಅವನಿಗೆ ಈಚಿನ ಕೆಲವು ಕವಿಗಳು ಬರೆದಿರುವ ಶೈವಪರವಾದ ಕೃತಿಗಳು ರಗಳೆಯಲ್ಲಿ ಬರೆದವಾಗಿವೆ.

ಸಂಸ್ಕೃತದ ಆರ್ಯಾವೃತ್ತವರ್ಗದ ಆರ್ಯಾಗೀತೆಯೇ ಪ್ರಾಕೃತದಲ್ಲಿ ಸ್ಕಂಧಕ (ಖಂಧ ಅ) ಎನ್ನಿಸಿ ಆ ಮೂಲಕವಾಗಿ ಕನ್ನಡಕ್ಕೆ ಬಂದು ಕಂದ (ನೋಡಿ) ಎಂಬ ಹೆಸರಿನಲ್ಲಿ ರೂಢಿಯಾಗಿರಬೇಕೆಂದು ತೋರುತ್ತದೆ. ಇದರ ಸಾಮಾನ್ಯ ಲಕ್ಷಣ ಹೀಗೆ : 4 ಪಾದಗಳು; ಇವುಗಳಲ್ಲಿ 1, 2ನೆಯ ಪಾದಗಳಂತೆಯೇ 3, 4ನೆಯ ಪಾದಗಳಿರುತ್ತವೆ. 1, 2ನೆಯ ಪಾದಗಳಲ್ಲಿ ಕ್ರಮವಾಗಿ 3, 5ರ ಹಾಗೆ ಒಟ್ಟು 8 ಚತುರ್ಮಾತ್ರಾಗಣಗಳು ($12+20=32$); 3, 4ನೆಯ ಪಾದಗಳಲ್ಲಿಯೂ ಹೀಗೆಯೇ. ಚತುರ್ಮಾತ್ರಾಗಣಗಳ ಕಟ್ಟು ಕೆಡಬಾರದು. ಪ್ರಥಮಾರ್ಧದ ಹಾಗೂ ದ್ವಿತೀಯಾರ್ಧದ 8ನೆಯ ಗಣಸ್ಥಾನದ ಅಂತ್ಯದಲ್ಲಿ ಗುರು ತಪ್ಪದೆ ಬಂದಿರಬೇಕು. ಈ ಎರಡೂ ಅರ್ಧಗಳ ವಿಷಮ ಸ್ಥಾನಗಳಲ್ಲಿ ಮಧ್ಯಗುರುವಿನ (‿—‿) ಗಣ ಬರಬಾರದು. ಆದರೆ ಅವುಗಳ 6ನೆಯ ಗಣಸ್ಥಾನಗಳಲ್ಲಿ ಮಧ್ಯಗುರುವಿನ ಗಣವಾಗಲಿ ಸರ್ವಲಘು (‿‿‿‿)ವಿನ ಗಣವಾಗಲಿ ತಪ್ಪದೆ ಬಂದಿರಬೇಕು. ಸರ್ವಲಘುವಿನ ಗಣವಾಗಿದ್ದ ಪಕ್ಷದಲ್ಲಿ, ಹಾಗೆಯೇ ಮಧ್ಯಗುರುವಿನ ಗಣ ಎಂದರೆ ಜಗಣವಾಗಿದ್ದ ಪಕ್ಷದಲ್ಲಿಯೂ ಮೊದಲನೆಯ ಹ್ರಸ್ವದ ಮುಂದೆ ಯತಿಯಿರಬೇಕು. 7ನೆಯ ಗಣ ಸರ್ವಲಘುವಿನ ಗಣವಾಗಿದ್ದಲ್ಲಿ ಮೊದಲನೆಯ ಹ್ರಸ್ವದಿಂದಲೇ ಹೊಸ ಪದ ಮೊದಲಾಗಬೇಕು. ಲಕ್ಷಣಾನ್ವಿತವಾದ ಕಂದಕ್ಕೆ ಉದಾಹರಣೆ :

ಕಾವೇ।ರಿಯಿಂದ।ಮಾ ಗೋ।
ದಾವರಿ।ವರಮಿ।ರ್ಪ. ನಾಡ।ದಾ ಕ।ನ್ನಡದೊಳ್
ಭಾವಿಸಿ।ದ ಜನಪ।ದಂ ವಸು।
ಧಾವಳ।ಯ ವಿಲೀ।ನ. ವಿಶದ।ವಿಷಯವಿ।ಶೇಷಂ

(ಕವಿರಾಜಮಾರ್ಗ)

ಎರಡನೆಯದು ರಗಳೆ(ನೋಡಿ). ರಗಳೆ ಮತ್ತು ರಘಟಾ—ಇವು ಸಮಾನಾರ್ಥಕ ಶಬ್ದಗಳು. ಈ ಪದಗಳ ಮೂಲ ಯಾವುದು, ನಿಷ್ಪತ್ತಿಯೇನು ಸರಿಯಾಗಿ ತಿಳಿಯದು.

ನಾಗವರ್ಮನೂ ಜಯಕೀರ್ತಿಯೂ ರಗಳೆ ಛಂದಸ್ಸಿನ ಲಕ್ಷಣವನ್ನು ಹೇಳಿದವರಲ್ಲಿ ಮುಖ್ಯರು. ಮಂದಾನಿಲ, ಲಲಿತ ಮತ್ತು ಉತ್ಸಾಹ ಎಂಬ ಹೆಸರಿನಲ್ಲಿ ಪ್ರಸಿದ್ಧವಾಗಿರುವ ರಗಳೆಯ ಮೂರು ಪ್ರಭೇದಗಳು ಹರಿಹರನ ರಗಳೆಯ ಕಾವ್ಯಗಳಲ್ಲಿ ಮತ್ತು ಈಚಿಗೆ ಹೆಚ್ಚು ಸ್ಪಷ್ಟವಾದ ರೂಪದಲ್ಲಿ ಗೋಚರಿಸುತ್ತವೆ. ಆದರೆ ಇದಕ್ಕೆ ಮೊದಲೇ ಇವನ್ನು ಹೋಲುವ ಕೆಲವು ನಿದರ್ಶನಗಳು ಪಂಪ ರನ್ನ ಮೊದಲಾದ ಪ್ರಾಚೀನ ಕನ್ನಡ ಕವಿಗಳ ಚಂಪೂಕಾವ್ಯಗಳಲ್ಲಿ ಕ್ವಚಿತ್ತಾಗಿ ಕಂಡುಬರುತ್ತವೆ. ಇವುಗಳಲ್ಲಿ ಮಂದಾನಿಲ ರಗಳೆಯನ್ನು ಹೋಲುವ 16, 32 ಮುಂತಾಗಿ ಪಾದ ಪ್ರಮಾಣವನ್ನುಳ್ಳ ನಿದರ್ಶನಗಳೇ ಪ್ರಮುಖವಾದವು. ಇವುಗಳ ಲಕ್ಷಣವನ್ನು ಪರಿಶೀಲಿಸಿದಾಗ, ಇವು ಅಪಭ್ರಂಶ ಕಾವ್ಯ ಪ್ರಚಲಿತಗಳಾದ, ಪಜ್ಝಟಿಕಾ ಛಂದಸ್ಸನ್ನು ಬಳಸಿ ಕಟ್ಟಿರುವ ಷೋಡಶವಾದ ಪ್ರಮಾಣದ ಕಡವಕಗಳ, ಅನುಕರಣದಿಂದಾಗಿ ಹುಟ್ಟಿರಬೇಕೆಂಬ ಸಂಗತಿ ತಿಳಿದುಬಂದಿದೆ. ಜಯಕೀರ್ತಿಯ ರಘಟಾ ಲಕ್ಷಣದ ಪದ್ಯದಲ್ಲಿ ದೊರೆಯುವ ಒಂದು ಸೂಚನೆಯಿಂದಲೂ ಅಲ್ಲಲ್ಲಿ ಇಂಥ ಪದ್ಯಗಳಿಗೆ ಪದ್ಧತಿ (ಪಜ್ಝಟಿಕೆ) ಎಂಬುದರ ಪ್ರತಿಶಬ್ದವಾಗಿ ಪದ್ದಳಿ, ಪಡ್ಡಳಿ ಎಂಬ ರೂಪಗಳು ಮಾತೃಕೆಗಳಲ್ಲಿ ಕಂಡುಬರುವುದರಿಂದಲೂ ಈ ವಿಷಯ ದೃಢಪಟ್ಟಿದೆ. ಕನ್ನಡದ ಪದ್ದಳಿಯ ರಗಳೆ ಅಪಭ್ರಂಶದ ಪಜ್ಝಟಿಕೆಯ ಕಡವಕಗಳ ಹಾಗೆ. ಹೀಗೆ ಪ್ರಾಕೃತ ಮೂಲವನ್ನು ಅನುಸರಿಸಿದಾಗ ಸ್ವತಂತ್ರಿಸಿ ಕೆಲವು ವ್ಯತ್ಯಾಸಗಳನ್ನು ಕನ್ನಡದಲ್ಲಿ ಮಾಡಿಕೊಂಡಿದೆ.

I ಪಜ್ಝಟಿಕೆ ಛಂದಸ್ಸಿನ ಕಡವಕದ ಒಂದು ಪಾದಯುಗ್ಮ :

ಉತ್ತುಂ । ಗಸಿಹರು । ಸುರಗಿರಿ । ಸಮಾಣು
ಆಸ।ಣ್ಣ ಗಂಪಿ । ಮಣಹರು । ನಿಮಾಣು

(ಣಾಯಕುಮಾರಚರಿಉ)

ಅದೇ ಛಂದಸ್ಸಿನ (ಪದ್ದಳಿ, ಪಡ್ಡಳಿ) ರಗಳೆಯ ಒಂದು ಪಾದಯುಗ್ಮ;

ಸ್ಫುರಿತೇಂದ್ರನೀಲಮಣಿಖಚಿತಭೂಮಿ ।
ಚೆಲುವಿಂಗಿದು ನೆಟ್ಟನೆ ಜನ್ಮಭೂಮಿ ॥

(ಆದಿಪುರಾಣ)

II ಹೀಗೆಯೇ 4 ತ್ರಿಮಾತ್ರಾಗಣಗಳಿಂದಾದ ಕಡವಕದ ಒಂದು ಪಾದ ಯುಗ್ಮ :

ಕಾಣ।ಕುಂಟ।ಪಿಂಗ।ಲಾಹ ।
ಅಂಧ।ಮೂಯ।ಪಂಗು।ಲಾಹ ॥

(ಪುಪ್ಫದಂತನ ಮಹಾಪುರಾಣ)

ಅದನ್ನು ಹೋಲುವ ರಗಳೆಯ ಒಂದು ಪಾದಯುಗ್ಮ :

ಅದರ। ಬಳಸಿ।ದುಪವ।ನಂಗ ।
ಉದಿತ। ಕೋಕಿ।ಲಸ್ವ।ನಂಗ ।

(ಅಜಿತಪುರಾಣ)

III ಹೀಗೆಯೇ 4 ಪಂಚಮಾತ್ರಾಗಣಗಳಿಂದಾದ ಕಡವಕದ ಒಂದು ಪಾದಯುಗ್ಮ ;

ಪರದರಣೆ। ಪರತರುಣಿ। ಪರದವಿಣ। ಕಂಖಾಎ
ಮರಿಹೀಸಿ।ದುಚ್ಚಾರ।ಖಲಚೋರ।ಸಿಕ್ಖಾ ಎ ॥

ಅದನ್ನು ಹೋಲುವ ರಗಳೆಯ ಒಂದು ಪಾದಯುಗ್ಮ :

ಶ್ರೀಗೆ ಕುಲ।ಸದನಮೆನೆ ತೊಳಪ ಮಣಿ।ಭವನದೊಳ್
ರಾಗರಸ।ಮೊದವೆ ಸರ।ಸಿರುಹ ಸಮ।ವದನದೊಳ್॥

(ಆದಿಪುರಾಣ)

ಚಂಪೂ ಕಾವ್ಯ ಪ್ರಚಲಿತಗಳಾದ, ಕ್ವಚಿತ್ತಾಗಿ ಶಾಸನಗಳಲ್ಲಿಯೂ ಕಾಣುವ ಈ ಮೂರು ಬಗೆಯ ರಗಳೆಗಳಿಗೂ ಅಪಭ್ರಂಶ ಛಂದಸ್ಸಿನಲ್ಲಿ ಕ್ರಮವಾಗಿ ತ್ರಿಕಲ, ಚತುಷ್ಕಲ ಮತ್ತು ಪಂಚಕಲಗಳ ಮೂರು ಬಗೆಯ ಛಂದಸ್ಸುಗಳಿಂದ ಕಟ್ಟಿದ ಕಡವಕಗಳೇ ಪ್ರಾಯಃ ಮೂಲ ಮತ್ತು ಪ್ರೇರಕ ಎಂಬುದು ಇದರಿಂದ ವಿಶದಪಡುತ್ತದೆ. ಇವುಗಳಿಗೆ ರಗಳೆಯೆಂಬ ಸಾಮಾನ್ಯವಾಚಕವಿದ್ದುದು ಸ್ಪಷ್ಟ; ಆದರೆ ಪ್ರಭೇದಗಳಿಗೆ ಪ್ರತ್ಯೇಕವಾಗಿ ಗೊತ್ತಾದ ಹೆಸರುಗಳಿದ್ದಂತೆ ತೋರುವುದಿಲ್ಲ. 3, 4 ಮತ್ತು 5 ಮಾತ್ರೆಗಳ ಈ ರಗಳೆಗಳಲ್ಲಿ ಪಾದಸಂಖ್ಯೆ, ಪ್ರಾಸವಿನ್ಯಾಸ, ಅಂತ್ಯಗಣ ನಿಯಮ ಮೊದಲಾದವುಗಳಲ್ಲಿ ಪ್ರಾಚೀನ ಕನ್ನಡ ಕವಿಗಳು ಅಪಭ್ರಂಶ ಕವಿಗಳ ಹಾಗೆಯೇ ತಾವೂ ವ್ಯತ್ಯಾಸಗಳನ್ನೂ ವೈವಿಧ್ಯಗಳನ್ನೂ ಕಾಣಿಸಿದ್ದಾರೆ. ಇವು 12ನೆಯ ಶತಮಾನದಲ್ಲಿ ಹರಿಹರನ ಕೈಯಲ್ಲಿ ಬಲುಮಟ್ಟಿಗೆ ಒಂದು ಸ್ಥಾಯಿಯಾದ ರೂಪವನ್ನು ಪಡೆದುಕೊಂಡು ಉತ್ಸಾಹ, ಮಂದಾನಿಲ ಮತ್ತು ಲಲಿತವೆಂಬ ಹೆಸರಿಂದ ಮುನ್ನೆಲೆಗೆ ಬಂದುವು. ವರ್ಣನೆ ಕಥನಗಳಿಗೆ ಚೆನ್ನಾಗಿ ಒಗ್ಗುವ ಈ ಛಂದಸ್ಸುಗಳನ್ನು ಕಾವ್ಯರಚನೆಗೆ ಪ್ರಮುಖವಾದ ಛಂದಸ್ಸಾಗಿ ಆತ ಯೋಜಿಸಿ ಅವಕ್ಕೆ ಮಹತ್ತ್ವವನ್ನು ತಂದುಕೊಟ್ಟ. ಬಲುಮಟ್ಟಿಗೆ ನಿಯತ ಇಲ್ಲವೆ ಅಲ್ಪಸಂಖ್ಯೆಯ ಪಾದ ಪ್ರಮಾಣ, ಅಂತ್ಯಪ್ರಾಸನಿಬದ್ಧತೆ, ಹೊಂದಾಣಿಕೆಯ ಮಾತ್ರಾಲಯ, ಪಾದಾಂತದಲ್ಲಿ ಪದ ಮುಗಿಯದೆ ಮುಂದಿನ ಪದಕ್ಕೋಡುವುದು, ಅಂತ್ಯಗಣನಿಯಮಬದ್ಧತೆ, ಇವುಗಳ ಸ್ಥಾನದಲ್ಲಿ ಅನಿಯತ ಹಾಗೂ ಅಧಿಕಸಂಖ್ಯೆಯ ಪಾದಪ್ರಮಾಣ, ಆದ್ಯಂತ ಪ್ರಾಸಬದ್ಧತೆ, ಖಚಿತವಾದ ಮಾತ್ರಾಲಯ, ತಾಳಗತಿಗೆ ಅಡ್ಡಿಯಾಗದಂತೆ ಗಣೋಪಸಂಹಾರ—ಇವು ಹರಿಹರಾದ್ಯರು ಬಳಸಿದ ಉತ್ಸಾಹಾದಿ ರಗಳೆಗಳ ಸಾಮಾನ್ಯ ಲಕ್ಷಣಗಳಾದುವು.

ಉತ್ಸಾಹದ ಸಾಮಾನ್ಯ ಲಕ್ಷಣ : ಒಂದು ರೀತಿ 4 ತ್ರಿಮಾತ್ರಾಗಣಗಳಂತೆ ಪಾದಕ್ಕೆ 12 ಮಾತ್ರೆಗಳು :

ಕುಳಿರ್ವ।ಪೂಗೊ।ಳಂಗ।ಳಲ್ಲಿ
ತಳಿರ।ಕಾವ।ಣಂಗ।ಳಲ್ಲಿ (ಕಬ್ಬಿಗರ ಕಾವ)

ಇನ್ನೊಂದು ರೀತಿ 8 ತ್ರಿಮಾತ್ರಾಗಣಗಳಂತೆ ಪಾದಕ್ಕೆ 16 ಮಾತ್ರೆಗಳು :

ಮಗನ। ಕರೆಯ।ಲಂದು। ಶಂಕೆ।ಯಿಲ್ಲ।ದಿರ್ದ।ರೆಳ್ದು। ಪೋಗಿ
ಮಗನೆ। ಮಗನೆ। ಬಾರೆ।ನುತ್ತೆ। ತಂದೆ। ಕರೆದು। ನೋಡಿ ಬೀಗಿ ॥

(ಸಿರಿಯಾಳನ ರಗಳೆ)

ಮಂದಾನಿಲದ ಸಾಮಾನ್ಯಲಕ್ಷಣ : 4 ಚತುರ್ಮಾತ್ರಾಗಣಗಳಂತೆ ಪಾದಕ್ಕೆ 16 ಮಾತ್ರೆಗಳು :

ಪಂಕಜ।ದಂತಿರೆ। ಪುಟ್ಟಿದ।ಳೊಲವಿಂ।
ಪಂಕವ।ನೆಂದುಂ। ಪೊರ್ದದೆ। ನಲವಿಂ ॥

(ಆದಯ್ಯನ ರಗಳೆ)

ಲಲಿತದ ಸಾಮಾನ್ಯ ಲಕ್ಷಣ : 4 ಪಂಚಮಾತ್ರಾಗಣಗಳಂತೆ ಪಾದಕ್ಕೆ 20 ಮಾತ್ರೆಗಳು :

ಸೊಂಪಿನಿಂ। ಕಂಪಿಡುವ। ಸಂಪಗೆಗ।ಳಂ ಕೊಂಡು
ಹೊಂಪೆಸೆವ। ಹೊಂಗೇದ।ಗೆಯ ಹೂಗ।ಳಂ ಕೊಂಡು।

(ಬಸವರಾಜದೇವರ ರಗಳೆ)

**ಅಚ್ಚ ಕನ್ನಡ ಛಂದಸ್ಸಿನ ಮಟ್ಟುಗಳು :** ಇದನ್ನು ನಾಗವರ್ಮ ಕರ್ಣಾಟಕ ವಿಷಯಜಾತಿವೃತ್ತ ಎಂದೂ ಜಯಕೀರ್ತಿ ಕರ್ಣಾಟ ವಿಷಯಭಾಷಾಜಾತಿ ಎಂದೂ ಕರೆದಿದ್ದಾರೆ. ಕನ್ನಡನಾಡಿನ ಅಥವಾ ಕನ್ನಡನಾಡಿನ ಭಾಷೆಯಲ್ಲಿರುವ ಜಾತಿವೃತ್ತ (ಜಾತಿ)ಗಳು ಎಂದರೆ ಸಂಸ್ಕೃತೇತರವಾದ ವೃತ್ತಗಳು ಎಂದು ಇದರ ಅರ್ಥ. ಅಕ್ಕರ, ತ್ರಿಪದಿ, ಏಳೆ, ಚೌಪದಿ, ಛಂದೋವತಂಸ, ಅಕ್ಕರಿಕೆ, ಮದನವತಿ, ಗೀತಿಕೆ, ಉತ್ಸಾಹ, ಷಟ್ಪದಿ—ಈ ಹತ್ತು ಮುಖ್ಯವಾದ ಮಟ್ಟುಗಳನ್ನು ನಾಗವರ್ಮ ಹೇಳಿದ್ದಾನೆ. ಜಯಕೀರ್ತಿಯೂ ಇವನ್ನು ಹೇಳಿದ್ದಾನೆ. ಉತ್ಸಾಹವೆಂಬೊಂದು ಬಗೆಯನ್ನು ಮಾತ್ರ ಈತ ಮಿಶ್ರಾಧಿಕಾರದಲ್ಲಿ ಕೊಟ್ಟಿದ್ದಾನೆ. 3ನೆಯ ಸೋಮೇಶ್ವರನ ಮಾನಸೋಲ್ಲಾಸದಲ್ಲಿ ತ್ರಿಪದಿ ಷಟ್ಪದಿಗಳ ಉಲ್ಲೇಖವಿದೆ. ಶಾರ್ಙ್ಗದೇವನ ಸಂಗೀತರತ್ನಾಕರದಲ್ಲಿ ಆ ಎರಡನ್ನೂ ಒಳಕೊಂಡು ಏಳೆಯ ವಿಚಾರ ಬಂದಿದೆ. ಈ ಮಟ್ಟುಗಳಲ್ಲಿ ಕೆಲವು ಮಾತ್ರ ಪ್ರಾಚೀನ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಬಳಕೆಯಾಗಿವೆ. ಕೆಲವಕ್ಕೆ ನಿದರ್ಶನಗಳು ದೊರೆತಿಲ್ಲ. ಏಳೆ–ತ್ರಿಪದಿಗಳಿಗೂ ಪಿರಿಯಕ್ಕರ–ಅಕ್ಕರಭೇದಗಳಿಗೂ ಒಂದಕ್ಕೊಂದು ಸಂಬಂಧವಿರುವಂತೆ ತೋರುತ್ತದೆ. ಉಳಿದವುಗಳು ಅಂಶಗಣದ ಜಾಯಮಾನವನ್ನನುಸರಿಸಿ ಬೇರೆ ಬೇರೆಯಾಗಿಯೇ ಹುಟ್ಟಿರಬಹುದು.

ಅಕ್ಕರ : ಇದರಲ್ಲಿ ಪಿರಿಯಕ್ಕರ, ದೊರೆಯಕ್ಕರ, ನಡುವಣಕ್ಕರ, ಎಡೆಯಕ್ಕರ ಮತ್ತು ಕಿರಿಯಕ್ಕರ ಎಂದು ಐದು ಪ್ರಭೇದಗಳಿವೆ. ಸಂಸ್ಕೃತದಲ್ಲಿ ಇವಕ್ಕೆ ಕ್ರಮವಾಗಿ ಮಹಾಕ್ಷರ, ಸಮಾನಾಕ್ಷರ, ಮಧ್ಯಾಕ್ಷರ, ಅಂತರಾಕ್ಷರ ಮತ್ತು ಅಲ್ಪಾಕ್ಷರ—ಎಂಬವು ಪ್ರತಿನಾಮಗಳು. ಹಾಗೆಯೇ ತೆಲುಗಿನಲ್ಲಿ ಕ್ರಮವಾಗಿ ಮಹಾಕ್ಕರ, ಮಧ್ಯಾಕ್ಕರ, ಮಧುರಾಕ್ಕರ, ಅಂತರಾಕ್ಕರ, ಅಲ್ಪಾಕ್ಕರ ಎಂಬ ಹೆಸರುಗಳನ್ನು ಹೇಳಿದೆ.

(i) ಪಿರಿಯಕ್ಕರ : ಅಕ್ಕರ ಭೇದಗಳಲ್ಲಿ ಪ್ರಸಿದ್ಧವಾದುದು, ದೊಡ್ಡದು. ಪ್ರಾಚೀನ ಶಾಸನಗಳಲ್ಲೂ ಕಾವ್ಯಗಳಲ್ಲೂ ಕಂಡುಬಂದಿದೆ. ಸಾಮಾನ್ಯಲಕ್ಷಣ : 4 ಪಾದಗಳು, ಪ್ರತಿಪಾದದಲ್ಲಿ 1 ಬ್ರ, 5 ವಿ, 1 ರು—ಹೀಗೆ 7 ಗಣಗಳು. ಆದರೆ ಕರ್ತೃವಿನಿಷ್ಟವನ್ನನುಸರಿಸಿ ಯಾವುದೇ ಪಾದದಲ್ಲಿ 2ನೆಯ ಮತ್ತು 4ನೆಯ ಗಣ ವಿಷ್ಣುವಿಗೆ ಬದಲಾಗಿ ಬ್ರಹ್ಮವಾಗಿರುವುದು. ಇದು ಲಾಕ್ಷಣಿಕರು ಕೊಡುವ ಸಾಮಾನ್ಯ ನಿಯಮ. ಆದರೆ ಹಾಡಿಗೆ ಹೊಂದಿ ಪರ್ಯಾಯಗಣಗಳು ಯಾವುದೇ ಗಣಸ್ಥಾನದಲ್ಲಿ

ಬರುವುದು ಸಾಧ್ಯ (ನಿದರ್ಶನಗಳಿಗೆ ನೋಡಿ—ಆದಿಪು. 2–44 ; 6–27 ; ಪಂಪಭಾ. 5–26, 42 ; 7–28 ; ಶಾಂತಿಪು. 10–9) ಉದಾಹರಣೆಗೆ ಒಂದು ಸಾಲು :

ಬೀರ।ದಳವಿಯ। ನನ್ನಿಯ।ಚಾಗದ ।ಶಾಸನಂ। ಚಂದ್ರಾರ್ಕ। ತಾರಂಬರಂ

(ಪಂಪಭಾರತ)

(ii) ದೊರೆಯಕ್ಕರ : ಸಮಸಂಖ್ಯೆಯ (ಅಥವಾ ಸಮಾನ ಯೋಜನೆಯ ಗಣಗಳು ಬರುವುದು ಸಾಮಾನ್ಯಲಕ್ಷಣ: 4 ಪಾದಗಳು; ಪ್ರತಿಪಾದದಲ್ಲಿ 2 ವಿ, 1 ಬ್ರ, 2 ವಿ, 1 ಬ್ರ—ಹೀಗೆ 6 ಗಣಗಳು. ಇಲ್ಲಿಯೂ ಯಾವುದೇ ಗಣಸ್ಥಾನದಲ್ಲಿ ಪರ್ಯಾಯ ಗಣಗಳು ಬರುವುದು ಸಾಧ್ಯ. ಅಸಗ ಕವಿಯ ಕರ್ಣಾಟಕುಮಾರಸಂಭವ ಕಾವ್ಯದಲ್ಲಿ ಇದನ್ನು ಬಳಸಿದೆಯೆಂದು ಜಯಕೀರ್ತಿ ತಿಳಿಸಿದ್ದಾನೆ. ಆದರೆ ಆ ಕಾವ್ಯ ದೊರೆತಿಲ್ಲ. ಅನ್ಯತ್ರ ಇದರ ಉದಾಹರಣೆಯಿಲ್ಲ.

ನಿದರ್ಶನಕ್ಕೆ ಲಕ್ಷಣಪದ್ಯದ ಒಂದು ಸಾಲು :

ಸರಸಿಜೋ।ದರ ಗಣ।ಮೆರಡ।ಜನುಮಲ್ಲಿ। ನೆರೆದಿರ್ಕೆ। ಮತ್ತಂ

( ಛಂದೋಂಬುಧಿ )

(iii) ನಡುವಕ್ಕರ : ಗಣಸಂಖ್ಯೆಯ ದೃಷ್ಟಿಯಿಂದ ಅಕ್ಕರಭೇದಗಳಲ್ಲಿ ಮಧ್ಯೆ ಇದು ನಿಲ್ಲುವುದು. ಸಾಮಾನ್ಯಲಕ್ಷಣ : 4 ಪಾದಗಳು; ಪ್ರತಿಪಾದದಲ್ಲಿ 1ಬ್ರ, 3 ವಿ, 1ರು—ಹೀಗೆ 5 ಗಣಗಳು. ಇಲ್ಲಿಯೂ ಪರ್ಯಾಯಗಣಗಳು ಬರುವುದು ಸಾಧ್ಯ. ಕರ್ಣಾಟಮಾಲತೀಮಾಧವವೆಂಬ ಕಾವ್ಯದಲ್ಲಿ ಇದನ್ನು ಬಳಸಿದೆಯೆಂದು ಜಯಕೀರ್ತಿ ತಿಳಿಸಿದ್ದಾನೆ. ಆದರೆ ಆ ಕಾವ್ಯ ದೊರೆತಿಲ್ಲ. ಚಂದ್ರರಾಜನ ಮದನತಿಲಕದಲ್ಲಿ ಒಂದು ಪದ್ಯವಿದೆ.

ನಿದರ್ಶನಕ್ಕೆ ಒಂದು ಸಾಲು :

ನುಡಿಗು।ಮೋಪನ।ಪಡೆಮಾತ।ನಾತನಿ।ರ್ದಡೆಗೆ ವಕ್ಕುಂ।

(ಮದನತಿಲಕ)

(iv) ಎಡೆಯಕ್ಕರ : ಸಾಮಾನ್ಯಲಕ್ಷಣ : 4 ಪಾದಗಳು; ಪ್ರತಿಪಾದದಲ್ಲಿ 1 ಬ್ರ 2 ವಿ, 1 ರು—ಹೀಗೆ ನಾಲ್ಕು ಗಣಗಳು. ಇಲ್ಲಿಯೂ ಪರ್ಯಾಯಗಳು ಬರುವುದು ಸಾಧ್ಯ. ಕರ್ಣಾಟೇಶ್ವರಕಥಾ ಮತ್ತು ಇತರ ಜೈನಕೃತಿಗಳಲ್ಲಿ ಇದರ ಬಳಕೆಯಾಗಿದೆ ಯೆಂದು ಜಯಕೀರ್ತಿ ತಿಳಿಸಿದ್ದಾನೆ. ಆದರೆ ಅವು ಯಾವುವೂ ನಮಗೆ ದೊರೆತಿಲ್ಲ. ಚಂದ್ರರಾಜನ ಮದನತಿಲಕದಲ್ಲಿ ಒಂದು ಪದ್ಯವಿದೆ.

ನಿದರ್ಶನಕ್ಕೆ ಒಂದು ಸಾಲು :

ಕರಜ।ಮೆರಡರಿಂ।ಬೆಕ್ಕು ಪಾ।(ಯ್ವಾ)ಪಾಂಗಿನಿಂ।

(ಮದನತಿಲಕ)

(v) ಕಿರಿಯಕ್ಕರ : ಅಕ್ಕರಭೇದಗಳಲ್ಲಿ ಎಲ್ಲಕ್ಕಿಂತ ಚಿಕ್ಕದು. ಸಾಮಾನ್ಯಲಕ್ಷಣ : 4 ಪಾದಗಳು; ಪ್ರತಿಪಾದದಲ್ಲಿ 2ವಿ, 1ರು—ಹೀಗೆ 3 ಗಣಗಳು. ಪರ್ಯಾಯ ಗಣಗಳು ಬರಬಹುದು. ಉದಾಹರಣೆ ದೊರೆಯುವುದು ಎಂದು ಜಯಕೀರ್ತಿ ತಿಳಿಸುವ ಶೃಂಗಾರಪಿಂಡದಂಥ ಕನ್ನಡ ಕಾವ್ಯಗಳು ಈಗ ದೊರೆಯುವುದಿಲ್ಲ. ನಿದರ್ಶನಕ್ಕೆ ಲಕ್ಷಣಪದ್ಯದ ಒಂದು ಸಾಲು :

ಪೊಡೆಯುಲ।ರವರಿರ್ವರ್। ಪೊದಲೊಳಿರ್ಕೆ।

(ಛಂದೋಂಬುಧಿ)

ತ್ರಿಪದಿ : ಪ್ರಾಚೀನ ಶಾಸನಗಳಲ್ಲಿ ಮತ್ತು ಕಾವ್ಯಗಳಲ್ಲಿ ವಿರಳವಾಗಿಯೂ ಜಾನಪದ ಸಾಹಿತ್ಯದಲ್ಲಿ ಹೇರಳವಾಗಿಯೂ ಕಂಡುಬರುವ ಜನಪ್ರಿಯವಾದ ಅಚ್ಚಕನ್ನಡ ಮಟ್ಟು. ನಡುಗನ್ನಡ ಕಾಲದಲ್ಲಿಯೂ ಈಚೆಗೆ ಹೊಸಗನ್ನಡ ಕಾಲದಲ್ಲಿಯೂ ಈ ಮಟ್ಟಿನಲ್ಲಿಯೇ ಕೆಲವು ಸ್ವತಂತ್ರವಾದ ಕೃತಿಗಳು ಕೂಡ ಹುಟ್ಟಿವೆ. ಪ್ರಸಿದ್ಧವಾಗಿರುವ ಸರ್ವಜ್ಞನ ಪದಗಳು ತ್ರಿಪದಿಯ ಛಂದಸ್ಸಿನಲ್ಲಿಯೇ ಕಟ್ಟಿದವಾಗಿವೆ.

ತ್ರಿಪದಿಸಾಹಿತ್ಯದ ಇತಿಹಾಸವನ್ನು ಪರಿಶೀಲಿಸಿದಾಗ, ಅದರಲ್ಲಿ ಎರಡು ಘಟ್ಟಗಳು ತೋರುತ್ತವೆ. ಮೊದಲನೆಯದು ಅಂಶಗಣಾತ್ಮಕವಾದುದು. ಎರಡನೆಯದು ಮಾತ್ರಾಗಣಾತ್ಮಕವಾದುದು. ಪ್ರಾಚೀನ ಕನ್ನಡಶಾಸನಗಳ ಕಾವ್ಯಗಳ ಹಾಗೂ ಜನಪದಸಾಹಿತ್ಯದ ತ್ರಿಪದಿಗಳು ಬಲುಮಟ್ಟಿಗೆ ಅಂಶಗಣಾತ್ಮಕವಾಗಿವೆ. ಸು. 12ನೆಯ ಶತಮಾನದಿಂದೀಚೆಗೆ ಕೆಲವು ವೀರಶೈವ ವಚನಕಾರರ ರಚನೆಗಳಾಗಿ ತ್ರಿವಿಧಿ ಎಂಬ ಹೆಸರನ್ನೊಡಗೊಂಡು ಬಂದಿರುವ ಕೆಲವು ಕೃತಿಗಳೂ ಕ್ವಚಿತ್ತಾಗಿ ನಡುಗನ್ನಡಕಾಲದ ಇನ್ನೂ ಕೆಲವು ಕೃತಿಗಳೂ ಬಲುಮಟ್ಟಿಗೆ ಮಾತ್ರಾಗಣಾತ್ಮಕವಾದವಾಗಿವೆ. ಮೊದಲು ಅಂಶಗಣಾತ್ಮಕವಾಗಿದ್ದ ತ್ರಿಪದಿಯೇ ಕಾಲಕ್ರಮದಲ್ಲಿ ತನ್ನ ಮೂಲಸ್ವರೂಪದ ಜೊತೆಗೆ ಮಾತ್ರಾಗಣಾತ್ಮಕವಾಗಿಯೂ ಮಾರ್ಪಟ್ಟಿತೆಂದು ತಿಳಿಯುತ್ತದೆ. ಇದರಿಂದ ತ್ರಿಪದಿಗೆ ಎರಡು ರೀತಿಯ ಲಕ್ಷಣ ಏರ್ಪಟ್ಟಿತು.

ಅಂಶಗಣಾತ್ಮಕವಾದ ತ್ರಿಪದಿ : ನಾಗವರ್ಮಾದಿಗಳ ಕಾಲಕ್ಕೆ ತ್ರಿಪದಿ ಶುದ್ಧವಾಗಿ ಅಂಶಗಣಾತ್ಮಕವಾಗಿಯೇ ಇದ್ದಿತು. ನಾಗವರ್ಮ, ಜಯಕೀರ್ತಿ, ಸೋಮೇಶ್ವರ, ಶಾರ್ಙ್ಗದೇವ ಇವರು ಸಮಾನವಾಗಿ ಇದರ ಲಕ್ಷಣವನ್ನು ನಿರೂಪಿಸಿದ್ದಾರೆ. ಇವರ ನಿರೂಪಣೆಗಳಲ್ಲಿ ತ್ರಿಪದಿಯ ಎಲ್ಲ ಲಕ್ಷಣಾಂಶಗಳೂ ಪೂರ್ತಿಯಾಗಿ ಬಂದಿಲ್ಲ. ಲಾಕ್ಷಣಿಕರು ಕೊಡುವ ಅಂಶಗಣದ ಮಟ್ಟುಗಳಲ್ಲೆಲ್ಲ ಇದು ಸಹಜ. ನಾಗವರ್ಮನೂ ಜಯಕೀರ್ತಿ ಮತ್ತು ಇತರ ಸಂಸ್ಕೃತ ಲಾಕ್ಷಣಿಕರೂ ಕೊಡುವ ಲಕ್ಷಣಾಂಶಗಳನ್ನೆಲ್ಲ ಒಗ್ಗೂಡಿಸಿ ಶಾಸನಗಳಲ್ಲಿ ಕಾವ್ಯಗಳಲ್ಲಿ ಹಾಗೂ ಜಾನಪದ ಸಾಹಿತ್ಯದಲ್ಲಿ ದೊರೆಯುವ ನಿದರ್ಶನಗಳನ್ನು ನೇರವಾಗಿ ಪರಿಶೀಲಿಸಿ, ಸಮನ್ವಯ ಮಾಡಿದಾಗ ಅಂಶಗಣದ ತ್ರಿಪದಿಯ ಸಾಮಾನ್ಯಲಕ್ಷಣವನ್ನು ಹೀಗೆ ಹೇಳಬಹುದು : 3 ಪಾದಗಳು; ಅವುಗಳಲ್ಲಿ ಅನುಕ್ರಮವಾಗಿ 4, 4, 3 ಹೀಗೆ ಒಟ್ಟು 11 ಗಣಗಳು ; ಇವುಗಳಲ್ಲಿ 6, 10ನೆಯದು ಬ್ರಹ್ಮ, ಉಳಿದವು ವಿಷ್ಣು ; ಮೊದಲನೆಯ ಪಾದದಲ್ಲಿ 2ನೆಯ ಗಣವಾದ ಮೇಲೆ ಯತಿ, 3ನೆಯ ಗಣದಲ್ಲಿ ದ್ವಿತೀಯಾಕ್ಷರ ಪ್ರಾಸದ ಆವೃತ್ತಿ (ಒಳಪ್ರಾಸ); ಎರಡನೆಯ ಪಾದದಲ್ಲಿ ಮೊದಲ 3 ಗಣಗಳನ್ನು ಹೇಳಿ, ನಿಲ್ಲಿಸಿ, ಈಗ ಮತ್ತೆ ಹಿಂದಕ್ಕೆ ಬಂದು ಆ ಪಾದದ ಆ 3 ಗಣಗಳನ್ನೂ 4ನೆಯ ಗಣವನ್ನೂ ಒಟ್ಟಿಗೆ ಹೇಳಿ, ಬಳಿಕ 3ನೆಯ ಪಾದವನ್ನು ಮುಗಿಸಬೇಕು.

ಇಷ್ಟನ್ನು ಸಾಮಾನ್ಯವಾಗಿ ಹೇಳಿದರೂ ಅಂಶಗಣದ ಜಾಯಮಾನಕ್ಕೆ ತಕ್ಕಂತೆ ಎಲ್ಲ ತ್ರಿಪದಿಗಳೂ ಈ ನಿಯಮವನ್ನು ಅನುಸರಿಸಿರುವುದಿಲ್ಲ. ಹಾಡಿನ ಗತಿಗೆ ಹೊಂದಿ, ವಿಷ್ಣುಗಳ ಸ್ಥಾನದಲ್ಲಿ ಸಾಮಾನ್ಯವಾಗಿ ಬ್ರಹ್ಮವೋ ರುದ್ರವೋ ಬರಬಹುದು. 6, 10ನೆಯ ಬ್ರಹ್ಮಗಳ ಸ್ಥಾನ ಬಲುಮಟ್ಟಿಗೆ ನಿಯತವಾದದ್ದಾದರೂ ಅಲ್ಲಿಯೂ ವಿರಳವಾಗಿ ವಿಷ್ಣುವೂ ರುದ್ರವೂ ಬರುವುದು ಸಾಧ್ಯ. ದ್ವಿತೀಯಾಕ್ಷರಪ್ರಾಸ ಒಳಪ್ರಾಸ ತಪ್ಪದೆ ಪಾಲಿತವಾಗಿದ್ದೂ ವಿರಳವಾಗಿ ಪಾಲಿತವಾಗದೆ ಇರುವುದೂ ಉಂಟು. ಪುನರಾವರ್ತನೆಯ ಪದ್ಧತಿಯಲ್ಲಿಯೂ ಒಟ್ಟಿನಲ್ಲಿ ತ್ರಿಪದಿಯ ಹಾಡಿಕೆಯಲ್ಲಿಯೂ ಬೇರೆ ಬೇರೆ ಧಾಟಿಗಳುಂಟು. ಪೂರ್ವೋಕ್ತವಾದ ಗಣನಿಯಮ ಪ್ರಾಸನಿಯಮಗಳು ಗ್ರಾಂಥಿಕ ತ್ರಿಪದಿಗಳಲ್ಲಿ ಸಾಮಾನ್ಯವಾಗಿ ವಿರಳವಾದ ಅಪವಾದಗಳೊಡನೆ ನಿಶ್ಚಿತವಾಗಿ ಪಾಲಿತವಾಗಿರುತ್ತವೆ ; ಜಾನಪದ ತ್ರಿಪದಿಗಳಲ್ಲಿ ಹಾಗಿಲ್ಲ ; ಸ್ವಾತಂತ್ರ್ಯಮೂಲವಾದ ಶೈಥಿಲ್ಯ ಹೆಚ್ಚು.

ತ್ರಿಪದಿ ಹೇಗೆ ಹುಟ್ಟಿತು ? ಹಾಡಿಕೆಯಲ್ಲಿ ಏಳೆಯ 2ನೆಯ ಪಾದದ ಪುನರಾವರ್ತನೆ ಕಾರಣವಾಗಿ, ಒಂದು ಗಣ ಕೂಡಿ ಇಡಿಯ ಏಳೆಯೇ ಮತ್ತೆ ಮುಗುಚಿ ಬಂದಂತಾಗಿ ಪ್ರಾಯಃ ತ್ರಿಪದಿ ಕಾಣಿಸಿಕೊಂಡಿರುವುದು ಸಾಧ್ಯ. 2ನೆಯ ಪಾದದ 3 ಗಣಗಳ ಪುನರಾವೃತ್ತಿಯನ್ನು ಬಿಟ್ಟರೆ 2 ಪಾದಗಳ ಸಾಹಿತ್ಯ ಉಳಿಯುತ್ತದೆ. ಇಲ್ಲವೆ ಹಾಡಿಕೆಯಲ್ಲಿ ಏಳೆಯ 2ನೆಯ ಪಾದದ 3 ಗಣಗಳನ್ನು ಹೇಳಿ ಮುಗಿಸುತ್ತಿದ್ದಂತೆ ಮೀಟಿಗೆ ಇನ್ನೊಂದು ಗಣ ಕೂಡಿ, ಅದೇ ಪಾದದ ಮೊದಲ ಮೂರು ಗಣಗಳು ಇನ್ನೊಮ್ಮೆ ಆವೃತ್ತಿಗೊಂಡು ತ್ರಿಪದಿಯಾಗಿರುವುದು ಸಾಧ್ಯ.

ಸಾಮಾನ್ಯಲಕ್ಷಣಕ್ಕೆ ಒಪ್ಪುವ ಒಂದು ಉದಾಹರಣೆ :

ಎಂಟೆಲೆ। ಮಾವಿನ। ದಂಟಿನ।ಲ್ಲಿರುವೋಳೆ
ಘಂಟೆಯ। ಗತಿಗೆ। ನಲಿಯೋಳೆ। ಸರಸಾತಿ
ಗಂಟಲ। ತೊಡರ। ಬಿಡಿಸವ್ವ। (ಜನಪದ ಗೀತೆ)

ಮಾತ್ರಾಗಣಾತ್ಮಕವಾದ ತ್ರಿಪದಿ : ಇದರ ಲಕ್ಷಣವನ್ನು ಪ್ರಾಚೀನರಾರೂ ಹೇಳಿಲ್ಲ. 12ನೆಯ ಶತಮಾನದ ವಚನಕಾರರ ತ್ರಿವಿಧಿಗಳಿಂದ, ಕೆಲಮಟ್ಟಿಗೆ ಸರ್ವಜ್ಞನ ತ್ರಿಪದಿಗಳಿಂದ ಕ್ವಚಿತ್ತಾಗಿ ಜನಪದಸಾಹಿತ್ಯ ಮತ್ತು ಕಾವ್ಯದ ನಿದರ್ಶನಗಳಿಂದ ಇದರ ಸ್ವರೂಪವನ್ನು ತಿಳಿಯಬೇಕಾಗುತ್ತದೆ. ವಿಷ್ಣುಗಣಗಳು ಸಾರ್ವತ್ರಿಕವಾಗಿ (6, 10ನೆಯ ಸ್ಥಾನ ಬಿಟ್ಟು ಅಥವಾ ಸೇರಿ) ಪಂಚಮಾತ್ರಾಗಣಗಳಾಗಿದ್ದಾಗ, ವಿಷ್ಣುಗಳ ಸ್ಥಾನದಲ್ಲಿ ವಿಶೇಷವಾಗಿ 4 ಅಥವಾ 5 ಅಕ್ಷರಗಳ ಪಂಚಮಾತ್ರಾಗಣಗಳು ಬಂದಾಗ, ಹೇಳುವ ಧಾಟಿ ವಾಚ್ಯವಾಗಿ, ಮಾತ್ರಾತ್ರಿಪದಿಯ ಗುರುತು ಹತ್ತುತ್ತದೆ. ಸಾಮಾನ್ಯಲಕ್ಷಣ : 3 ಪಾದಗಳು ; ಅವುಗಳಲ್ಲಿ ಅನುಕ್ರಮವಾಗಿ 4, 4, 3—ಹೀಗೆ ಒಟ್ಟು 11 ಗಣಗಳು ; ಇವುಗಳಲ್ಲಿ 6 ಮತ್ತು 10ನೆಯವು 3 ಮಾತ್ರೆಯ ಗಣ (ಕೆಲವರು ಇದನ್ನು ಬ್ರಹ್ಮಗಣ ಎಂದು ಗ್ರಹಿಸುವುದೂ ಉಂಟು) ; ಉಳಿದವು 5 ಮಾತ್ರೆಯ ಗಣಗಳು. ಮೊದಲನೆಯ ಪಾದದಲ್ಲಿ 2ನೆಯ ಗಣವಾದ ಮೇಲೆ ಯತಿ. 3ನೆಯ ಗಣದಲ್ಲಿ ದ್ವಿತೀಯಾಕ್ಷರ ಪ್ರಾಸದ ಆವೃತ್ತಿ (ಒಳಪ್ರಾಸ). 6–10ನೆಯ ಗಣಸ್ಥಾನಗಳಲ್ಲಿ 4 ಅಥವಾ 5 ಮಾತ್ರೆಗಳ ಗಣಗಳು ಬರುವುದೂ ಉಂಟು. ಅಂಶತ್ರಿಪದಿಯ ಉಳಿದ ಲಕ್ಷಣಗಳು ಎಷ್ಟರಮಟ್ಟಿಗೆ ಅನ್ವಯಿಸುತ್ತವೆಯೆಂದು ಹೇಳುವುದು ಕಷ್ಟ. ಅಂಶತ್ರಿಪದಿಯ ಸೌಲಭ್ಯ ಸೊಗಸು ಇವುಗಳಲ್ಲಿ ಅಷ್ಟರಮಟ್ಟಿಗಿರುವುದಿಲ್ಲ.

ಸಾಮಾನ್ಯ ಲಕ್ಷಣಕ್ಕೆ ಒಪ್ಪುವ ಒಂದು ಉದಾಹರಣೆ :

ಆರುಮುಖ । ಮುತ್ತನ್ನು । ನೀರೊಳಗೆ। ಇರಿಸಲಿಕೆ।
ನೀರಳಿದು । ಮುತ್ತು । ಉಳಿಯಿತ್ತು । ಆಮುತ್ತ।
ಸೆರಿಸೀದೆ । ಎನ್ನ। ಉರದಲ್ಲಿ।

(ಅಕ್ಕಮಹದೇವಿಯ ಯೋಗಾಂಗತ್ರಿವಿಧಿ)

ಏಳೆ : ಇದರ ಲಕ್ಷಣವನ್ನು ನಾಗವರ್ಮನೂ ಜಯಕೀರ್ತಿ ಶಾರ್ಙ್ಗದೇವರೂ ಹೇಳಿದ್ದಾರೆ. ಸಾಮಾನ್ಯಲಕ್ಷಣ : 2 ಪಾದಗಳು ; ಅವುಗಳಲ್ಲಿ ಕ್ರಮವಾಗಿ 4,3 ಹೀಗೆ 7 ಗಣಗಳು. ಇವುಗಳಲ್ಲಿ 6ನೆಯದು ಬ್ರಹ್ಮ, ಉಳಿದವು ವಿಷ್ಣು ; ಮೊದಲನೆಯ ಪಾದದಲ್ಲಿ 2ನೆಯ ಗಣವಾದ ಮೇಲೆ ಯತಿ 3ನೆಯ ಗಣದಲ್ಲಿ ದ್ವಿತೀಯಾಕ್ಷರ ಪ್ರಾಸದ ಆವೃತ್ತಿ (ಒಳಪ್ರಾಸ). ತ್ರಿಪದಿಯ ವಿಷಯದಲ್ಲಿ ನೋಡಿದಂತೆಯೇ ಇಲ್ಲಿಯೂ ವಿಷ್ಣುಗಳ ಸ್ಥಾನದಲ್ಲಿ ಸಾಮಾನ್ಯವಾಗಿ ಬ್ರಹ್ಮವೋ ರುದ್ರವೋ 6ನೆಯ ಬ್ರಹ್ಮದ ಸ್ಥಾನದಲ್ಲಿ ವಿರಳವಾಗಿ ವಿಷ್ಣುವೋ ರುದ್ರವೋ ಬರುವುದು ಸಾಧ್ಯ. ಏಳೆಗೆ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ನಿದರ್ಶನಗಳಿಲ್ಲ. ಜನಪದ ಸಾಹಿತ್ಯದಲ್ಲಿಯೂ ಈಚೆಗೆ ವಿರಳವಾಗಿ ಹೊಸಗನ್ನಡ ಕಾವ್ಯದಲ್ಲಿಯೂ ನಿದರ್ಶನಗಳು ದೊರೆಯುತ್ತವೆ. ಸಾಮಾನ್ಯ ಲಕ್ಷಣಕ್ಕೆ ಒಪ್ಪುವ ಒಂದು ನಿದರ್ಶನ.

ಹಡೆದ ತಾ।ಯಿಗೆ ಬನ್ನಿ। ಹಡೆದ ತಂ।ದೆಗೆ ಬನ್ನಿ।
ಪಡೆದ ಗಂ।ಡನಿಗೆ। ನಮ ಬನ್ನಿ ।।

ಚೌಪದಿ : ಇದು ಅಂಶಗಣಾತ್ಮಕ ಮತ್ತು ಮಾತ್ರಾಗಣಾತ್ಮಕ ಎಂಬುದಾಗಿ ಎರಡು ಬಗೆ. ಅಂಶ ಚೌಪದಿಯ ಲಕ್ಷಣ : 4 ಪಾದಗಳು; ಪ್ರತಿಪಾದದಲ್ಲಿ 1ವಿ, 1ರು,—ಹೀಗೆ 2 ಗಣಗಳು. ಚೂಡಾಮಣೀ ಕಾವ್ಯದಲ್ಲಿ ಇದು ಬಳಕೆಯಾಗಿರುವುದಾಗಿ ಜಯಕೀರ್ತಿ ತಿಳಿಸಿದ್ದಾನೆ. ಆ ಕಾವ್ಯ ದೊರೆತಿಲ್ಲ. ಮದನ ತಿಲಕದಲ್ಲಿ ಒಂದು ಪದ್ಯವಿದೆ. ನಿದರ್ಶನಕ್ಕೆ ಒಂದು ಸಾಲು : ರತಿಹೀನಂ। ಪೆಳವಂ ಕುಬ್ಜಂ। (ಮದನತಿಲಕ 8–34). ಮಾತ್ರಾಚೌಪದಿ : 4 ಪಾದಗಳು ; 3 ಪಂಚಮಾತ್ರಾಗಣಗಳು, 1 ತ್ರಿಮಾತ್ರಾ ಗಣ—ಹೀಗೆ ಒಟ್ಟು 4 ಗಣಗಳು. ನಡುಗನ್ನಡ ಕಾಲದಲ್ಲಿ ಇದು ಪ್ರಚಲಿತವಾಯಿತು. ಉದಾಹರಣೆಗೆ ಮಾನೌಮಿಯ ಚೌಪದ ಮುಂತಾದವು.

ಛಂದೋವತಂಸ : ಇದರ ಸಾಮಾನ್ಯಲಕ್ಷಣ ನಾಗವರ್ಮನ ಪ್ರಕಾರ 4 ಪಾದಗಳು ; ಪ್ರತಿಪಾದದಲ್ಲಿ 3 ವಿ, 1 ಬ್ರ–ಹೀಗೆ 4 ಗಣಗಳು ; ಜಯಕೀರ್ತಿಯ ಪ್ರಕಾರ 4 ಪಾದಗಳು, ಪ್ರತಿಪಾದದಲ್ಲಿ 1 ವಿ,4 ಬ್ರ–ಹೀಗೆ 5 ಗಣಗಳು (ಪರ್ಯಾಯ ಗಣಗಳು ಬರುವುದಕ್ಕೆ ಅವಕಾಶವಿದ್ದೇ ಇದೆ). ಈ ವ್ಯತ್ಯಾಸಕ್ಕೆ ಕಾರಣ ಸ್ಪಷ್ಟವಾಗಿ ತಿಳಿಯದು. ಜಯಕೀರ್ತಿ ತಾನು ಲಕ್ಷಣಿಸಿರುವ ಛಂದೋವತಂಸವನ್ನು ಆದಿವರಾಹವೆಂಬುದಾಗಿ ಕರೆದಿರುವುದು ಗಮನಾರ್ಹವಾಗಿದೆ. ಈ ಪದ್ಯ ಜಾತಿಯನ್ನು ಕರ್ಣಾಟಕುಮಾರಸಂಭವ ಮೊದಲಾದ ಕಾವ್ಯಗಳಲ್ಲಿ ಬಳಸಿದೆಯೆಂಬುದಾಗಿ ಆತ ಹೇಳಿದ್ದಾನೆ. ಅವು ಯಾವುವೂ ನಮಗೆ ದೊರೆತಿಲ್ಲ. ಜನಪದ ಸಾಹಿತ್ಯದಲ್ಲಿಯೂ ಹರಿದಾಸರ ಪದಗಳಲ್ಲಿಯೂ ನಾಗವರ್ಮನ ಛಂದೋವತಂಸದ ಲಕ್ಷಣವನ್ನು ಹೋಲುವ ಮಟ್ಟುಗಳುಂಟು. ಆದರೆ ಇವನ್ನು ವಿಶದವಾಗಿ ಪರಿಶೀಲಿಸುವುದು ಅಗತ್ಯ. ನಿದರ್ಶನಕ್ಕೆ ನಾಗವರ್ಮನ ಲಕ್ಷಣ ಪದ್ಯದ ಒಂದು ಸಾಲು:

ಮಂದರ। ಧರಗಣ। ಮೆಸೆದಿರೆ। ಮೊದಲೊಳ್।

ಅಕ್ಕರಿಕೆ : ಇದರ ಸಾಮಾನ್ಯಲಕ್ಷಣ ನಾಗವರ್ಮನ ಪ್ರಕಾರ 4 ಪಾದಗಳು. ಪ್ರತಿಪಾದದಲ್ಲಿ ವಿ, ಬ್ರ, ವಿ, ಬ್ರ, ವಿ,ರು—ಹೀಗೆ 6 ಗಣಗಳು. 6ನೆಯ ಅಕ್ಷರಕ್ಕೆ 2 ಸಾರಿ ಯತಿ. ಜಯಕೀರ್ತಿಯ ಪ್ರಕಾರ: ವಿ, ಬ್ರ, ವಿ,ಬ್ರ,ವಿ,ವಿ,+ಗುರು ಹೀಗೆ ಗಣವಿನ್ಯಾಸ ; ಪ್ರತಿಪಾದದಲ್ಲಿಯೂ 26 ಮಾತ್ರೆಗಳಂತೂ ಇರಬೇಕು ; 4 ಪಾದಗಳಲ್ಲಿ ಒಟ್ಟುಮಾತ್ರಾಸಂಖ್ಯೆ 104 ; 8–8 ಮಾತ್ರೆಗಳಿಗೊಮ್ಮೆ 2 ಸಾರಿ ಯತಿ. ಅಥವಾ ಅಂಶಗಣದ ಬದಲು ಜಗಣವಲ್ಲದ 6 ಚತುರ್ಮಾತ್ರಾಗಣಗಳು+ಗುರು ಕೂಡ ಬರಬಹುದು. ಈ ನಿರೂಪಣೆ ಪರಸ್ಪರವಾಗಿ ಭಿನ್ನವೆಂದು ತೋರಿದರೂ ಲಕ್ಷಣ ಒಟ್ಟಿನಲ್ಲಿ ಒಂದೇ. ಇದು ಅಂಶವೃತ್ತವಾದರೂ ಮಾತ್ರವೃತ್ತವಾಗಿ ಪರಿಣಮಿಸಿದೆ. ಷಡಕ್ಷರಿಯ ರಾಜಶೇಖರವಿಳಾಸದಲ್ಲಿ ಒಂದು ಪದ್ಯವಿದೆ. ನಿದರ್ಶನಕ್ಕೆ ಒಂದು ಸಾಲು:

ಸುರನುತ । ಚರಣೇ। ವರಗುಣ। ಭರಣೇ। ಖರರುಚಿ। ಬಿಂಬಗತೇ।
(ರಾಜಶೇಖರವಿಳಾಸ)

ಮದನವತಿ : ಇದರ ಸಾಮಾನ್ಯಲಕ್ಷಣ ನಾಗವರ್ಮನ ಪ್ರಕಾರ 3 ರೀತಿಯಾಗಿ ಇರುವಂತೆ ತೋರುತ್ತದೆ : 4 ಪಾದಗಳು ; ಪ್ರತಿಪಾದದಲ್ಲಿ 5ವಿ+1 ಗುರು ಅಥವಾ 4ವಿ+1ರು ಅಥವಾ 3ರು+1ವಿ. ಇವುಗಳಲ್ಲಿ ಮೊದಲನೆಯ ಎರಡರ ನಡುವೆ ವಾಸ್ತವವಾಗಿ ಭೇದವೇನಿಲ್ಲ. ಅವೆರಡೂ ಪೂರ್ತಿಪದ್ಯಕ್ಕೆ ಹೊಂದುತ್ತದೆ ; ಕೊನೆಯದು ಹೊಂದುವುದಿಲ್ಲ. ಆತನ ಲಕ್ಷಣಪದ್ಯದಲ್ಲಿ ಚತುರ್ಮಾತ್ರಕವಾದ (ವಿಷ್ಣು)ಗಣಗಳ ವಿನ್ಯಾಸವೇ ಸ್ಪಷ್ಟವಾಗಿ ಕೇಳಿಸುವುದರಿಂದ ಆತನ ಪದ್ಯದ ಮಟ್ಟಗೆ 5ವಿ+1 ಗುರು ಎಂದಿಟ್ಟುಕೊಳ್ಳಬಹುದು. ಜಯಕೀರ್ತಿ ಮೊದಲ ಸಾಲಿಗೆ 20 ಲಘು+1 ಗುರು ; ಉಳಿದ ಸಾಲುಗಳಲ್ಲಿ 4ವಿ+1ಬ್ರ; ಒಟ್ಟಿನಲ್ಲಿ ಪ್ರತಿಪಾದದಲ್ಲಿಯೂ 22 ಮಾತ್ರೆಗಳು ಯತಿಯೊಡಗೂಡಿ ಬಂದಿರಬೇಕು—ಎಂದಿದ್ದಾನೆ. ಆತನ ವಿವರಣೆಯಲ್ಲಿ ಅಂಶ ಮತ್ತು ಮಾತ್ರಾಗಣಗಳ ಸಮ್ಮಿಶ್ರ ನಿರೂಪಣೆಯುಳ್ಳಿ ಬಂದಿರುವುದಕ್ಕೆ ಕಾರಣ ಇದು ಕೂಡ ಅಂಶವೃತ್ತವಾಗಿಯೂ ಧಾಟಿಯಲ್ಲಿ ಮಾತ್ರಾವೃತ್ತವಾಗಿ ಪರಿಣಮಿಸಿರುವುದೇ ಆಗಿದೆ. ಆದರೆ ಲಕ್ಷಣನಿರೂಪಣೆಯಲ್ಲಿ ಮಾತ್ರಾಸಾಮ್ಯವನ್ನೊಪ್ಪಿಯೂ ಗಣವಿನ್ಯಾಸವನ್ನು ಬೇರೆಯಾಗಿ ಹೇಳಿರುವುದಕ್ಕೆ ಕಾರಣವೇನೋ ತಿಳಿಯದು. ಪ್ರಾಚೀನ ಸಾಹಿತ್ಯದಲ್ಲಿ ಇದು ಎಲ್ಲಿ ಬಳಕೆಯಾಗಿದೆಯೆಂಬುದು ಗೊತ್ತಾಗಿಲ್ಲ. ನಿದರ್ಶನಕ್ಕೆ ನಾಗವರ್ಮನ ಲಕ್ಷಣ ಪದ್ಯದ ಒಂದು ಸಾಲು:

ಮದನನ। ತಂದೆಯ। ಗಣಮವು। ವಿಷಯದೊ।ಳಿರೆ ಗುರು।ಮುಂ

ಗೀತಿಕೆ : ನಾಗವರ್ಮ ಜಯಕೀರ್ತಿಗಳು ಹೇಳಿರುವ ಇದರ ಲಕ್ಷಣಾಂಶಗಳನ್ನು ಸಮನ್ವಯ ಮಾಡಿ ಸಾಮಾನ್ಯಲಕ್ಷಣವನ್ನು ಹೀಗೆ ಹೇಳಬಹುದು : ನಾಲ್ಕು ಪಾದಗಳು ; 2–2 ಪಾದಗಳಿಗೆ 2 ಅರ್ಧಗಳು ; ಪೂರ್ವಾರ್ಧ 1 ಮತ್ತು 2ನೆಯ ಪಾದಗಳಲ್ಲಿ ಕ್ರಮವಾಗಿ 3 ಮತ್ತು 4 ಗಣಗಳು ಬರುವಂತೆ ಒಟ್ಟು 7 ಗಣಗಳು. ಇವುಗಳಲ್ಲಿ 2, 6ನೆಯವು ಬ್ರಹ್ಮ, ಉಳಿದವು ವಿಷ್ಣು ಅಥವಾ ರುದ್ರ. ಉತ್ತರಾರ್ಧದ 3 ಮತ್ತು 4ನೆಯ ಪಾದಗಳಲ್ಲಿಯೂ ಹೀಗೆಯೇ. ಪ್ರಭುಸೇನನ ಅನುಯಾಯಿಗಳು (?) ಅಲಂಕಾರದಲ್ಲಿ ಗೀತಿಕೆಯನ್ನು ವರ್ಣಿಸಿರುವುದಾಗಿ ಜಯಕೀರ್ತಿ ಹೇಳಿದ್ದಾನೆ. ಆದರೆ ಆ ಗ್ರಂಥ ಯಾವುದೆಂಬುದು ನಮಗೆ ಸರಿಯಾಗಿ ತಿಳಿಯದು. ಕವಿರಾಜಮಾರ್ಗದಲ್ಲಿ ಈ ಗೀತಿಕೆಯನ್ನು ಹೋಲುವ ಹಲವು ಪದ್ಯಗಳಿವೆ. ಆದರೆ ಅವು ನಾಗವರ್ಮ, ಜಯಕೀರ್ತಿಗಳು ಹೇಳಿರುವ ಲಕ್ಷಣಕ್ಕೆ ಸಮರ್ಪಕವಾಗಿ ಹೊಂದಿಕೊಳ್ಳುವುದಿಲ್ಲ. ನಿದರ್ಶನಕ್ಕೆ ನಾಗವರ್ಮನ ಲಕ್ಷಣಪದ್ಯದ ಎರಡು ಸಾಲು :

ಎರಡಱೊಳಾ। ಱೆಂಬ। ಸಂಖ್ಯೆಯೊಳ್
ಬರೆ ಪದ್ಮ। ಭವನುಱೆದುವು ಮ। ಚ್ಚುವ ತೆಱದಿಂ।

ಉತ್ಸಾಹ : ನಾಗವರ್ಮನ ಪ್ರಕಾರ ಇದರ ಸಾಮಾನ್ಯ ಲಕ್ಷಣ : 4 ಪಾದಗಳು, ಪ್ರತಿ ಪಾದದಲ್ಲಿ 7 ಬ್ರ+1 ಗುರು. ಕೊನೆಯ ಗುರು ಲಯಗ್ರಾಹಿಯಾಗಿ ಮುನ್ನಡೆಯುತ್ತದೆ. ಪದ್ಯದಲ್ಲಿ ಎದ್ದುತೋರುವ ಮಾತ್ರಾಲಯದ ಧಾಟಿಯೇ ಕಂಡುಬರುತ್ತಿರುವುದರಿಂದ, ಅಕ್ಕರಿಕೆ ಮದನವತಿಗಳ ಹಾಗೆಯೇ ಇದೂ ಮಾತ್ರಾವೃತ್ತವಾಗಿ ಪರಿಣಮಿಸಿದೆಯೆಂದು ಹೇಳಬಹುದು. ಉತ್ಸಾಹಪೂರ್ಣವಾದ ಲಯಗತಿಗೆ ಅನುಸಾರವಾಗಿ ವೃತ್ತದ ಹೆಸರು ಉತ್ಸಾಹ ಎಂದಿರುವುದು ಉಚಿತವೇ ಆಗಿದೆ. ಜಯಕೀರ್ತಿ ಈ ಪದ್ಯಜಾತಿಯನ್ನು ಮಿಶ್ರಾಧಿಕಾರದಲ್ಲಿ ಸೇರಿಸಿ ಮಾತ್ರಾವೃತ್ತವೆನ್ನುವಂತೆ ಹೀಗೆ ಲಕ್ಷಣವನ್ನು ಹೇಳಿದ್ದಾನೆ : 7 ಗುರುಲಘುಗಳ ಜೋಡಿ+1 ಗುರು. ಯಾವುದೇ ಗುರು ಲಘುವಿನ ಜೋಡಿಯ ಸ್ಥಾನದಲ್ಲಿ ನಗಣ (ಎಂದರೆ 3 ಲಘುಗಳು) ಕೂಡ ಬರಬಹುದು. ನಾಗವರ್ಮನ ಲಕ್ಷಣಪದ್ಯದಲ್ಲಿಯ ಮಾತ್ರಾಗತಿಯನ್ನು ನೋಡಿಯೇ ಜಯಕೀರ್ತಿ ಹೀಗೇ ಮಾತ್ರಾತ್ಮವನ್ನಾಗಿ ಹೇಳಿದ್ದಾನೆಂದು ಊಹಿಸಬಹುದು. ಅಗ್ಗಳನ ಚಂದ್ರಪ್ರಭಪುರಾಣದಲ್ಲಿ (ಕ್ರಿ.ಶ. 1189) ಇದು ಬಂದಿದೆ. ಆದರೆ ಇದಕ್ಕೂ ಮೊದಲಲ್ಲಿ, ಜಯಸಿಂಹನ ತಲಂಗೆರೆ ಶಾಸನದಲ್ಲಿಯೂ (ಸು. 10ನೆಯ.ಶ.) ಒಂದು ನಿದರ್ಶನವಿದೆ. ಅದರ ಒಂದು ಸಾಲು :

ಊರ। ಕಡೆಯ। ತೊರೆಯ। ತಡಿಯ। ಕರೆಯ। ಕಲ್ಲ। ಮೋಱ। ದಿವ್
(ಎಂ.ಇಂ. 29–ಪು. 205–6)

(ಈ ಪದ್ಯದ 2ನೆಯ ಪಾದದ 1ನೆಯದು ವಿಷ್ಣುಗಣವಾಗಿದೆ).

ಷಟ್ಪದಿ : ಅಚ್ಚಕನ್ನಡ ಛಂದಸ್ಸಿನ ಮಟ್ಟುಗಳಲ್ಲಿ ಷಟ್ಪದಿ (ನೋಡಿ) ತ್ರಿಪದಿಯಂತೆಯೇ ಗಮನಾರ್ಹವಾದುದು. ಮೊದಲಲ್ಲಿ ಅಂಶಗಣಗಳಿಂದ ಕಟ್ಟಿದ ಒಂದು ಬಗೆಯ ಷಟ್ಪದಿ ಕಾಣಿಸಿಕೊಂಡಿತು. ಅನಂತರದಲ್ಲಿ ಸು. 12–13ನೆಯ ಶತಮಾನದಿಂದೀಚೆಗೆ ಮಾತ್ರಾ ಗಣಗಳಿಂದ ಕಟ್ಟಿದ ಆರು ಬಗೆಯ ಷಟ್ಪದಿಗಳು ಮುಖ್ಯವಾಗಿ ಕಾಣಿಸಿಕೊಂಡು ಪ್ರಬಲಿಸಿ ಪ್ರಸಿದ್ಧಿಗೆ ಬಂದುವು. ಆಗ ಮೊದಲನೆಯದು ಬಲುಮಟ್ಟಿಗೆ ಕಣ್ಮರೆಯಾಯಿತು. ಷಟ್ಪದಿ ಸಾಹಿತ್ಯದ ಇತಿಹಾಸವನ್ನು ಪರಿಶೀಲಿಸಿದರೆ ಇದು ತಿಳಿಯುತ್ತದೆ.

ಅಂಶಗಣಾತ್ಮಕ ಷಟ್ಪದಿ : ನಾಗವರ್ಮನೂ ಜಯಕೀರ್ತಿ, ಸೋಮೇಶ್ವರ ಮತ್ತು ಶಾರ್ಙ್ಗದೇವ ಈ ಮೂವರು ಇದರ ಲಕ್ಷಣವನ್ನು ಸಮಾನವಾಗಿ ಹೇಳಿದ್ದಾರೆ. ಲಕ್ಷಣ–ಲಕ್ಷ್ಯಗಳನ್ನು ಸಮನ್ವಯಿಸಿಕೊಂಡು ಸಾಮಾನ್ಯಲಕ್ಷಣವನ್ನು ಹೀಗೆ ಹೇಳಬಹುದು. 3–3 ಪಾದಗಳ 2 ಸಮಾರ್ಧಗಳನ್ನುಳ್ಳ 6 ಪಾದಗಳು ; ಪೂರ್ವಾರ್ಧದಲ್ಲಿ 1,2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ 2ವಿ, 2ವಿ ಮತ್ತು 2ವಿ+1ರು—ಹೀಗೆ ಬರುವಂತೆ 7 ಗಣಗಳು (ವಿ+ವಿ। ವಿ+ವಿ। ವಿ+ವಿ+ರು) ; ಉತ್ತರಾರ್ಧದಲ್ಲಿಯೂ ಹೀಗೆಯೇ. ವಿಷ್ಣು ಮತ್ತು ರುದ್ರಗಣಗಳ ಸ್ಥಾನಗಳಲ್ಲಿ ವಿರಳವಾಗಿ ಪರ್ಯಾಯ ಗಣಗಳು ಬರುವುದುಂಟು.

ಸೋಮೇಶ್ವರನ ಮಾನಸೋಲ್ಲಾಸದಲ್ಲಿ ಈ ಷಟ್ಪದಿ ಕನ್ನಡಭಾಷೆಗೆ ಸೇರಿದ್ದೆಂದೂ ಆ ಭಾಷೆಯಲ್ಲಿ ಅದು ಹಾಡತಕ್ಕದ್ದೆಂದೂ ಈ ಕಥೆಯನ್ನು ಅದು ಒಳಕೊಂಡಿರುತ್ತದೆಂದೂ ಮುಂತಾಗಿ ಕೆಲವು ಸಂಗತಿಗಳನ್ನು ಹೇಳಿದೆ. ಸು. 12ನೆಯ ಶತಮಾನದ

ಆದಿಭಾಗದಲ್ಲಿಯೇ (1126-39) ಷಟ್ಪದಿನಿಬದ್ಧವಾದ ಕಾವ್ಯಗಳು ಹುಟ್ಟಿದ್ದವೆಂದು ತಿಳಿಯುವುದಕ್ಕೆ ಈ ಗ್ರಂಥದಲ್ಲಿ ಕೆಲವು ಸೂಚನೆಗಳಿವೆ. ಆದರೆ ಅಂಥ ಕಾವ್ಯಗಳಾವುವೂ ದೊರೆತಿಲ್ಲ. ಇಂಥ ಷಟ್ಪದಿಗಳು ಈವರೆಗೆ ಕೆಲವೇ ದೊರೆತಿವೆ. ಚಂದ್ರರಾಜನ ಮದನ ತಿಲಕ (ಕ್ರಿ.ಶ.ಸು. 1030), ಶಾಂತಿನಾಥನ (ಕ್ರಿ.ಶ. 1068) ಸುಕುಮಾರಚರಿತೆ, ಇವುಗಳಲ್ಲಿ ಒಂದೊಂದು, ಮಾನಸೋಲ್ಲಾಸದಲ್ಲಿಯ ಲಕ್ಷ್ಯ ಪದ್ಯವೊಂದು—ಈ ಮೂರನ್ನು ಬಿಟ್ಟರೆ ಉಳಿದವೆಲ್ಲ ಶಾಸನಗಳಲ್ಲಿ ಕಾಣಿಸಿಕೊಂಡಿರ ತಕ್ಕವಾಗಿವೆ. ಅವು ಚಿತ್ರದುರ್ಗದ 47ನೆಯ ಶಾಸನ (1067), ಬಿಜಾಪುರಜಿಲ್ಲೆಯ ಇಂಡಿ ತಾಲ್ಲೂಕಿನ ಚಡಚಣದ ಶಾಸನ (1067), ಅಮ್ಮಿನ ಭಾವಿಯ ಶಾಸನ (1071), ಮತ್ತು ಮೆಹಬೂಬ್‌ನಗರ ಜಿಲ್ಲೆಯ ಗಂಗಾಪುರದ ಶಾಸನ (ಸು. 1,100–40).

ನಿದರ್ಶನಕ್ಕೆ ಕಾವ್ಯದಿಂದ ಒಂದು ಪೂರ್ವಾರ್ಧ :

ಅದು ಪರ । ಮಾಸ್ಪದ ।
ಮದು ಪುಣ್ಯ । ಸಂಪದ ।
ಮದು ಮಹಾ । ಭ್ಯುದಯ ಎ । ಲಾಸಾವಾಸಂ ॥

(ಸುಕುಮಾರಚರಿತ...)

ಮಾತ್ರಾಗಣಾತ್ಮಕ ಷಟ್ಪದಿಗಳು : ಇವು ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕ—ಎಂಬುದಾಗಿ 6 ಬಗೆಯವು. ಇವುಗಳ ಜೊತೆಗೆ ಉದ್ದಂಡ ಎಂಬೊಂದು ಬಗೆ ಕೂಡ ಉಂಟು. ಮೊದಲು ಅಂಶ–ಷಟ್ಪದಿಗೆ ಸಮೀಪವಾದ ಶರಕುಸುಮಷಟ್ಪದಿಗಳೂ ಆಮೇಲೆ ಷಟ್ಪದಿಯ ಮೂಲ ಚೌಕಟ್ಟಿಗೆ ಹೊಂದುವಂತೆ 2–2 ಮಾತ್ರೆಗಳ ಪ್ರಮಾಣವನ್ನು ವರ್ಧಿಸುವುದರ ಮೂಲಕವಾಗಿ ಭೋಗದಿಂದ ವಾರ್ಧಕದವರೆಗೆ ಉಳಿದ ಪ್ರಭೇದಗಳೂ ಹುಟ್ಟಿಕೊಂಡಿರಬೇಕೆಂದು ತೋರುತ್ತದೆ. ಇನ್ನು ಉದ್ದಂಡ ಎಂಬುದು ಒಟ್ಟಿನಲ್ಲಿ ವಾರ್ಧಕವನ್ನೇ ಹೋಲುವ ಒಂದು ಬಗೆ. ಈ ಎಲ್ಲ ಬಗೆಗಳಲ್ಲಿಯೂ ಸ್ವತಂತ್ರವಾಗಿ ಕೃತಿರಚನೆಯಾಗಿವೆ. ರಾಘವಾಂಕ, ಚಾಮರಸ, ಕುಮಾರವ್ಯಾಸ, ಲಕ್ಷ್ಮೀಶ—ಮುಂತಾದವರು ಷಟ್ಪದಿಗಳಲ್ಲಿ ರಚಿಸಿರುವ ಕಾವ್ಯಗಳು ಪ್ರಸಿದ್ಧವಾಗಿವೆ.

ಇವುಗಳ ಸಾಮಾನ್ಯ ಲಕ್ಷಣ : (1) ಶರ ಷಟ್ಪದಿ : ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಚತುರ್ಮಾತ್ರಾ ಗಣಗಳು 2, 2 ಮತ್ತು 3+1 ಗುರು ; ಉತ್ತರಾರ್ಧದಲ್ಲಿಯೂ ಹೀಗೆಯೇ.

ನಿದರ್ಶನಕ್ಕೆ ಪೂರ್ವಾರ್ಧ :

ಈಶನ । ಕರುಣೆಯ ।
ನಾಶಿಸು । ವಿನಯದಿ ।
ದಾಸನ । ಹಾಗೆಯೇ । ನೀ ಮನ । ವೇ ॥

(ಪದ್ಯಸಾರ)

(ii) ಕುಸುಮ ಷಟ್ಪದಿ : ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಪಂಚಮಾತ್ರಾ ಗಣಗಳು. 2, 2 ಮತ್ತು 3+1 ಗುರು ; ಉತ್ತರಾರ್ಧದಲ್ಲಿಯೂ ಹೀಗೆಯೇ.

ನಿದರ್ಶನಕ್ಕೆ ಪೂರ್ವಾರ್ಧ :

ನಾಡು ಮನ । ಸಿಜ ನೊಲವಿ ।
ನಾಡುವೆಡೆ । ಸಂತತಂ ।
ಬೀಡು ರತಿ । ಪತಿಗೆ ಸತ । ತನಿಧಾನ । ವು

(ಕುಮುದೇಂದು ರಾಮಾಯಣ)

(iii) ಭೋಗ ಷಟ್ಪದಿ : ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ತ್ರಿಮಾತ್ರಾಗಣಗಳು 4, 4 ಮತ್ತು 6+1 ಗುರು ; ಉತ್ತರಾರ್ಧದಲ್ಲಿಯೂ ಹೀಗೆಯೇ.

ನಿದರ್ಶನಕ್ಕೆ ಪೂರ್ವಾರ್ಧ :

ಮೆರೆಯು । ತಿದ್ದ । ಭಾಗ್ಯ । ವೆಲ್ಲ ।
ಹರಿದು । ಹೋಯಿ । ತೆನುತ । ತಿರುಕ ।
ಮರಳಿ । ನಾಚಿ । ಪೋಗು । ತಿದ್ದ । ಮರುಳ । ನಂತೆಯೇ ॥

(ಮುಪ್ಪಿನ ಷಡಕ್ಷರಿ)

(iv) ಭಾಮಿನಿ ಷಟ್ಪದಿ : ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ 3, 4ರ ಹಾಗೆ ಬರುವ ಗಣಗಳು 2, 2 ಮತ್ತು 3+1 ಗುರು ; ಉತ್ತರಾರ್ಧದಲ್ಲಿಯೂ ಹೀಗೆಯೇ.

ನಿದರ್ಶನಕ್ಕೆ ಪೂರ್ವಾರ್ಧ :

ವೀರ । ನಾರಾ । ಯಣನೆ । ಕವಿ ಲಿಪಿ ।
ಕಾರ । ಕುವರ । ವ್ಯಾಸ । ಕೇಳುವ ।
ಸೂರಿ । ಗಳು ಸನ । ಕಾದಿ । ಗಳು ಜಂ ।
ಗಮಜ । ನಾರ್ದನ । ರು ॥

(ಕುಮಾರವ್ಯಾಸ ಭಾರತ)

(v) ಪರಿವರ್ಧಿನಿ ಷಟ್ಪದಿ ; ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಚತುರ್ಮಾತ್ರಾಗಣಗಳು 4,4 ಮತ್ತು 6+1 ಗುರು ; ಉತ್ತರಾರ್ಧದಲ್ಲಿಯೂ ಹೀಗೆಯೇ.

ನಿದರ್ಶನಕ್ಕೆ ಪೂರ್ವಾರ್ಧ :

ದುರಿತವ । ನಂ ಬೆಳೆ । ವುದಕೆ ಪೊ । ಲಂ ಕೊಲೆ ।
ಪರಕಲಿ । ಸಿದ ನವ । ದೋಹಳ । ಮನ್ನತಂ
ಪರಿಕಾ। ಲುದುಕಮು। ದಕೆ ಕಳ। ವನ್ಯ। ಸ್ತ್ರೀ ಸಂ। ಗಮ ಗೆ।ಯ್ಮೆ॥

(ಜಯನೃಪಕಾವ್ಯ)

(vi) ವಾರ್ಧಕ ಷಟ್ಪದಿ : ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಪಂಚಮಾತ್ರಾ ಗಣಗಳು 4, 4 ಮತ್ತು 6+1 ಗುರು ; ಉತ್ತರಾರ್ಧದಲ್ಲಿಯೂ ಹೀಗೆಯೇ.

ನಿದರ್ಶನಕ್ಕೆ ಪೂರ್ವಾರ್ಧ :

ಶ್ರೀವಧುವಿ। ನಂಬಕ ಚ। ಕೋರಕಂ। ಪೊರೆಯೆ ಭ।
ಕ್ತಾವಳಿಯ। ಹೃತ್ಕುಮುದ। ಕೋರಕಂ। ಬಿರಿಯೆ ಜಗ।
ತೀವಳಿಯ। ದವಲ ಸೌ। ಭಾಗ್ಯ ರ। ತ್ನಾಕರಂ । ಪೆರ್ಚಿನಿಂ।
ಮೇರೆವರಿ । ಯೆ ॥

(ಜೈಮಿನಿ ಭಾರತ)

(vii) ಉದ್ದಂಡ ಷಟ್ಪದಿ : ಪೂರ್ವಾರ್ಧದಲ್ಲಿ 1, 2 ಮತ್ತು 3ನೆಯ ಪಾದಗಳಲ್ಲಿ ಕ್ರಮವಾಗಿ ಚತುರ್ಮಾತ್ರಾಗಣಗಳು 5, 5 ಮತ್ತು 8 ; ಉತ್ತರಾರ್ಧದಲ್ಲಿಯೂ ಹೀಗೆಯೇ.

ನಿದರ್ಶನಕ್ಕೆ ಪೂರ್ವಾರ್ಧ :

ಪರಿಕಿಪೋಡೀಕೃತಿ। ಗಾವುದು। ಮೊದಲೆನೆ। ಹಳಚುವ।
ತೆರೆಯೊಳು। ತಿರುಗುವ। ಕರಿಮಕ। ರಂಗಳ । ಪುಚ್ಛೋ ।
ತ್ಕರಹತಿ। ಯಿಂ ಚಿ। ಲ್ಲಿದ ಮಣಿ। ಗಳ ಬೆಳ। ಗಿಂ ಶ್ವೇ। ತ ದ್ವೀ ।
ಪವನಣ । ಕಿಸುತ ॥

ಈ ಮೇಲೆ ವಿವರಿಸಿದ ಷಟ್ಪದಿಭೇದಗಳಲ್ಲಿ ಗಮನಿಸತಕ್ಕ ಕೆಲವು ಸಾಮಾನ್ಯ ಸಂಗತಿಗಳೆಂದರೆ ಇವು. ಆದಿಪ್ರಾಸವಿರತಕ್ಕದ್ದು ; ‿–ಎಂಬ ರೀತಿಯ ಗಣ ಬರತಕ್ಕದ್ದಲ್ಲ; 3–6ನೆಯ ಪಾದಾಂತ್ಯದಲ್ಲಿ ಲಘುವಿದ್ದಾಗ ಎಣಿಕೆಗೆ ಗುರುವೆಂದಿಟ್ಟುಕೊಳ್ಳಬೇಕು.

ಸಾಂಗತ್ಯ : ಅಚ್ಚಕನ್ನಡ ಛಂದಸ್ಸಿನ ಚರಿತ್ರೆಯಲ್ಲಿ ಸು. 14–15ನೆಯ ಶತಮಾನಗಳಲ್ಲಿ ರೂಪಗೊಂಡ ಮಟ್ಟು ಇದು. (ನೋಡಿ—ಸಾಂಗತ್ಯ) ಅಲ್ಲಿಂದೀಚೆಗೆ ಕನ್ನಡಕವಿಗಳು ಈ ಛಂದಸ್ಸಿನಲ್ಲಿ ವಿಪುಲವಾಗಿ ಕೃತಿರಚನೆ ಮಾಡಿದ್ದಾರೆ. ರತ್ನಾಕರ ವರ್ಣಿ, ನಂಜುಂಡಕವಿ ಮೊದಲಾದವರು ರಚಿಸಿರುವ ಪ್ರಸಿದ್ಧ ಕಾವ್ಯಗಳು ಈ ಛಂದಸ್ಸಿನಲ್ಲಿಯೇ ಇವೆ. ಇದರ ಬೆಳೆವಣಿಗೆಯಲ್ಲಿ ಎರಡು ಮುಖ್ಯವಾದ ಘಟ್ಟಗಳಿವೆ. ಸು. 1410ರಲ್ಲಿದ್ದ ದೇಪರಾಜನ ಸೊಬಗಿನ ಸೋನೆ ಮತ್ತು ಈಚೆಗೆ ಸೊಬಗಿನ ಸೋನೆ ಎಂಬ ಮಾತಿನ ಜೊತೆಗೆ ಸೇರಿಕೊಂಡು ಬಂದಿರುವ ತತ್ತ್ವದ ಸೊಬಗಿನ ಸೋನೆ, ಮದನ ಮೋಹಿನೀ ಕಥೆ, ಸೊಬಗಿನ ಸೋನೆ ವರ್ಣ–ಇಂಥ ಕೆಲವು ಕೃತಿಗಳಲ್ಲಿ ತೋರುವ ಲಕ್ಷಣ ಒಂದು ರೀತಿಯಾಗಿಯೂ ರತ್ನಾಕರವರ್ಣಿಯ ಭರತೇಶ ವೈಭವ, ಹೊನ್ನಮ್ಮನ ಹದಿಬದೆಯಧರ್ಮ ಇಂಥ ಕೃತಿಗಳಲ್ಲಿ ತೋರುವ ಲಕ್ಷಣ ಇನ್ನೊಂದು ರೀತಿಯಾಗಿಯೂ ಇದೆ. ಸೊಬಗಿನ ಸೋನೆಯ ಧಾಟಿಯ ಛಂದಸ್ಸನ್ನು ಸಾಮಾನ್ಯವಾಗಿ ಸಾಂಗತ್ಯವೆಂದೇ ತಿಳಿಯಲಾಗಿದೆ. ಆದರೆ ಅದನ್ನು ಸೊಬಗಿನ ಸೋನೆಯ ಛಂದಸ್ಸು (ವರ್ಣ) ಎಂದು ಬೇರೆಯಾಗಿಟ್ಟುಕೊಳ್ಳುವುದೇ ಸೂಕ್ತ. ಹಿಂದೆಯೇ ಇದನ್ನು ಸೊಬಗಿನ ಸೋನೆಯ ವರ್ಣ ಎಂದು ಪ್ರತ್ಯೇಕವಾಗಿ ಕರೆದಿರುವುದುಂಟು. ಐತಿಹಾಸಿಕವಾಗಿ ನೋಡಿದರೆ, ಇದು ಸಾಂಗತ್ಯದ ಮೊದಲ ರೂಪವೆಂದೂ ಮುಂದೆ ಇದರಲ್ಲಿ ಮಾರ್ಪಾಟು ತಲೆದೋರಿ ನಿಷ್ಕೃಷ್ಟರೂಪಕ್ಕೆ ಬಂದು ಸಾಂಗತ್ಯವಾಗಿರಬಹುದೆಂದೂ ಊಹಿಸಬಹುದು.

ಸೊಬಗಿನ ಸೋನೆಯ ಛಂದಸ್ಸಿನ ಸಾಮಾನ್ಯಲಕ್ಷಣ : ಎರಡು ಸಮಾರ್ಧಗಳನ್ನುಳ್ಳ 4 ಪಾದಗಳು. ಪೂರ್ವಾರ್ಧದ 1, 2ನೆಯ ಪಾದಗಳಲ್ಲಿ ಕ್ರಮವಾಗಿ 4 ಮತ್ತು 3 ವಿಷ್ಣುಗಣಗಳು ; ಉತ್ತರಾರ್ಧದಲ್ಲಿಯೂ ಹೀಗೆಯೇ. ವಿಷ್ಣುಗಳಿಗೆ ಪರ್ಯಾಯವಾಗಿ ಬ್ರಹ್ಮವೋ ರುದ್ರವೋ ಬರಬಹುದು.

ನಿದರ್ಶನಕ್ಕೆ ಪೂರ್ವಾರ್ಧ :

ಎಲೆ ಪ್ರಿಯೆ। ಕೇಳು ತೊ।ಳದ ಮುತ್ತು। ಕರತಳಾ।
ಮಳಕವೀ। ಕಥೆ ಸೊಬ।ಗಿನ ಸೋನೆ ॥

(ಸೊಬಗಿನ ಸೋನೆ, 1–21).

ಸಾಂಗತ್ಯಛಂದಸ್ಸಿನ ಸಾಮಾನ್ಯ ಲಕ್ಷಣ : ಎರಡು ಸಮಾರ್ಧಗಳನ್ನುಳ್ಳ 4 ಪಾದಗಳು ; ಪೂರ್ವಾರ್ಧದ 1, 2ನೆಯ ಪಾದಗಳಲ್ಲಿ ಕ್ರಮವಾಗಿ 4 ವಿ. ಮತ್ತು 2ವಿ+1 ಬ್ರ ; ಉತ್ತರಾರ್ಧದಲ್ಲಿಯೂ ಹೀಗೆಯೇ. ಆದರೆ ವಿಷ್ಣು ಮತ್ತು ಬ್ರಹ್ಮಗಳ ಸ್ಥಾನದಲ್ಲಿ ಪರ್ಯಾಯಗಣಗಳು ಬರಬಹುದು. ನಿದರ್ಶನಕ್ಕೆ ಪೂರ್ವಾರ್ಧ :

ಪರಮ ಪ।ರಂಜ್ಯೋತಿ। ಕೋಟಿ ಚಂ।ದ್ರಾದಿತ್ಯ
ಕಿರಣ ಸು।ಜ್ಞಾನ ಪ್ರ।ಕಾಶ ॥

(ಭರತೇಶವೈಭವ),

ಪಿರಿಯಕ್ಕರ, ಗೀತಿಕೆ, ತ್ರಿಪದಿ, ಏಳೆ ಈ ಅಂಶವೃತ್ತಗಳಲ್ಲಿ ಯಾವುದಾದರೊಂದು ಮೂಲಕವಾಗಿ ಸಾಂಗತ್ಯ ಹುಟ್ಟಿರಬೇಕೆಂದು ವಿದ್ವಾಂಸರು ವಿಚಾರ ಮಾಡಿದ್ದಾರೆ. ಆದರೆ ವಾಸ್ತವವಾಗಿ ಯಾವುದೇ ಕನ್ನಡ ಛಂದಸ್ಸಿನ ಮೂಲದಿಂದ ಸಾಂಗತ್ಯದ ರೂಪಸಿದ್ಧಿಯನ್ನು ತೃಪ್ತಿಕರವಾಗಿ ಸಾಧಿಸುವುದು ಕಷ್ಟ. ಜನಪ್ರಿಯವಾದ ತ್ರಿಪದಿಯ ಧಾಟಿ ಅದರ ಆವಿರ್ಭಾವದಲ್ಲಿ ಕೆಲಮಟ್ಟಿಗೆ ಪ್ರೇರಣೆ ಕೊಟ್ಟಿರಬಹುದು. ಸೊಬಗಿನ ಸೋನೆಯ ಮಟ್ಟಿನಲ್ಲಿ ಪ್ರತಿಯರ್ಧದ ಕೊನೆಗೆ ಬರುವ ವಿಷ್ಣುಗಣ ಕಾಲಕ್ರಮದಲ್ಲಿ ಆಲಾಪದ ಆವಶ್ಯಕತೆಗಾಗಿ ಬ್ರಹ್ಮಗಣವಾಗಿ ಮಾರ್ಪಟ್ಟು ಸ್ಥಿರಗೊಂಡು ಸಾಂಗತ್ಯವಾಗಿರಬಹುದೇನೋ.

ಅಚ್ಚಕನ್ನಡ ಛಂದಸ್ಸಿನ ಮಟ್ಟುಗಳಲ್ಲಿ ಈ ಮೇಲೆ ವಿವರಿಸಿದ ಪ್ರಸಿದ್ಧವೂ ಲಾಕ್ಷಣಿಕೋಕ್ತವೂ ಆದ ಕೆಲವು ಮಟ್ಟುಗಳು ಮಾತ್ರವಲ್ಲದೆ, ಜನಪದ ಸಾಹಿತ್ಯ ಹಾಗೂ ಯಕ್ಷಗಾನಾದಿಗಳಲ್ಲಿ ಇನ್ನೂ ಕೆಲವು ಮಟ್ಟುಗಳು—ತ್ಯಾಗಮಾನ, ಯಾಲಪದ ಮೊದಲಾದ ಹೆಸರಿನಲ್ಲಿ—ಕಂಡುಬರುತ್ತವೆ. ಇವುಗಳಲ್ಲಿ ಕೆಲವು ಅಂಶಗಣಗಳ ಕಟ್ಟಿನಲ್ಲಿ ನಡೆದರೆ ಇನ್ನು ಕೆಲವು ಮಾತ್ರಾಗಣಗಳ ಕಟ್ಟಿನಲ್ಲಿವೆ. ಈ ಬಗೆಯ ಸಾಹಿತ್ಯ ಸಂಗ್ರಹ ಸಮಗ್ರವಾಗಿ ನಡೆದು, ಅವುಗಳ ಛಂದಸ್ಸಿನ ಶಾಸ್ತ್ರೀಯ ಸಮಾಲೋಚನೆ ಇನ್ನೂ ನಡೆಯಬೇಕಾಗಿದೆ.

**ಹೊಸಗನ್ನಡ ಛಂದಸ್ಸು :** ಕನ್ನಡದಲ್ಲಿ ಛಂದಸ್ಸು ನಡೆದು ಬಂದ ದಾರಿಯನ್ನು ಗುರುತಿಸಲು ಹೊರಟರೆ 19ನೆಯ ಶತಮಾನದ ವರೆಗೆ ಅದು ಸಂಪ್ರದಾಯದ ಜಾಡಿನಲ್ಲಿಯೇ ನಡೆಯುತ್ತ, ಆಗಾಗ ಹೊಸ ಹೊಸ ಪ್ರಯೋಗಗಳನ್ನು ನಡೆಸುತ್ತ, ಅವನ್ನು ಬೆಳೆಸುತ್ತ, ಬಲಿಸುತ್ತ, ಹಳೆಯದನ್ನು ಆವರ್ತಿಗೊಳಿಸುತ್ತ, ಬಿಡುತ್ತ ಬಂದುದು ಕಾಣುತ್ತದೆ. 20ನೆಯ ಶತಮಾನದಲ್ಲಿ ಕಾಲಿಡುತ್ತಿದ್ದಂತೆ ಕನ್ನಡ ಕವಿತ್ವದ ಮೇಲೆ ಇಂಗ್ಲಿಷ್ ಕವಿತ್ವದ ಪ್ರಭಾವ ಹೊಸದಾಗಿ ಬಿದ್ದು ಹಲವು ಹೊಸರೀತಿಯ ಪ್ರಯೋಗಗಳೂ ಹಳೆಯದರ ಹೊಸ ರೂಪಗಳೂ ಅನುವಾದಗಳ ಮತ್ತು ಸ್ವತಂತ್ರ ಕೃತಿಗಳ ಮೂಲಕ ನಡೆಯಲಾರಂಭಿಸಿದುವು. ಭಾವದ ನಾನಾಸ್ಥಿತಿಗಳನ್ನು ಅವುಗಳ ಏರಿಳಿತಗಳಿಗೆ ತಕ್ಕಂತೆ ಸಮರ್ಥವಾಗಿ ಪ್ರತಿಬಿಂಬಿಸುವ ಬಗೆಬಗೆಯ ಧಾಟಿಗಳು ಹುಟ್ಟಿಕೊಂಡುವು. ಹೊಸಗನ್ನಡದ ಲಲಿತವಾದ ಮಾತುಗಾರಿಕೆಯನ್ನು ಬಳಸಿ, ವಿಶೇಷವಾಗಿ 3, 4 ಮತ್ತು 5 ಮಾತ್ರೆಗಳ ಗಣಗಳನ್ನು ಹೂಡಿ ನವೀನರೀತಿಯ ಚತುಷ್ಪದಿಗಳನ್ನೂ ಇತರ ಮಟ್ಟುಗಳನ್ನೂ ಕಟ್ಟುವುದು ರೂಢಿಗೆ ಬಂದಿತು. ತ್ರಿಪದಿ, ಷಟ್ಪದಿ, ಅಕ್ಕರ, ರಗಳೆ, ಸಾಂಗತ್ಯ—ಮುಂತಾದ ಹಳೆಯ ಛಂದಸ್ಸುಗಳು ಹೊಸ ರೂಪದಲ್ಲಿ ಕಾಣಿಸಿಕೊಂಡುವು. ಇಂಗ್ಲಿಷಿನ ಸಾನೆಟ್, ಬ್ಲ್ಯಾಂಕ್ ವರ್ಸ್, ಓಡ್ ಮುಂತಾದವು ಅಷ್ಟಷಟ್ಪದಿ, ಸರಳರಗಳೆ, ಪ್ರಗಾಥಾ ಮುಂತಾದ ಆವಿಷ್ಕಾರಗಳನ್ನು ಪಡೆದುವು. ಬಿ. ಎಂ. ಶ್ರೀಕಂಠಯ್ಯನವರ ಇಂಗ್ಲಿಷ್ ಗೀತೆಗಳು, ಹಟ್ಟಿಯಂಗಡಿ ನಾರಾಯಣರಾಯರ ಆಂಗ್ಲಕವಿತಾಸಾರ, ಪಂಜೆ ಮಂಗೇಶರಾಯ ಮತ್ತು ಗೋವಿಂದ ಪೈ ಅವರ ಕವಿತೆಗಳು ಆರಂಭಕಾಲದ ಹೊಸ ಪ್ರಯೋಗಗಳನ್ನು ತೋರಿಸುತ್ತವೆ. ನುಡಿಗಳು, ಗಣಗಳು, ಪ್ರಾಸಯೋಜನೆ ಮೊದಲಾದವುಗಳಲ್ಲಿ ಸ್ವಯಂಚಾಲಿತವಾದ ಸ್ವಾತಂತ್ರ್ಯವಿದ್ದೂ ಕ್ರಮಬದ್ಧತೆಯೂ ಇವುಗಳಲ್ಲಿ ಕಾಣುತ್ತದೆ. ಮುಖ್ಯವಾಗಿ ಇವು ಮಾತ್ರಾವೃತ್ತಗಳು ; ಆದರೆ ಉಚಿತಕ್ಕೆ ತಕ್ಕಂತೆ ಮಾತ್ರಾಪ್ರಮಾಣವನ್ನು ಹಿಗ್ಗಿಸುವುದು ಕುಗ್ಗಿಸುವುದು ಪಾದಾಂತ್ಯದಲ್ಲಿ ಒಂದು ಅಕ್ಷರವನ್ನೋ (ಮುಡಿ) ಎರಡು ಅಥವಾ ಮೂರು ಅಕ್ಷರಗಳನ್ನೊ (ಪದ್ಮಗಣ) ನಿಲ್ಲಿಸುವುದು—ಈ ಕೆಲವು ವೈಲಕ್ಷಣ್ಯಗಳು ಇಲ್ಲಿ ಕಾಣುತ್ತವೆ. ಇವುಗಳ ಬೇರುಗಳನ್ನು ಕೆಲಮಟ್ಟಿಗೆ ಹಳೆಯ ಛಂದಸ್ಸಿನಲ್ಲಿಯೇ ಗುರುತಿಸುವುದು ಸಾಧ್ಯ. ಹೀಗೆ ಸಂಪ್ರದಾಯ ಮತ್ತು ಪ್ರಗತಿ ಎರಡನ್ನೂ ಮೈಗೂಡಿಸಿಕೊಂಡು ಹೊಸಗನ್ನಡ ಛಂದಸ್ಸು ಮುನ್ನಡೆದಿದೆ.

ಈಗ ಸುಮಾರು ಎರಡು ದಶಕಗಳಿಂದ ಹೊಸಗನ್ನಡ ಛಂದಸ್ಸು, ಎಲಿಯಟ್, ಡ್ರೈಡನ್ ಮೊದಲಾದ ಪಾಶ್ಚಾತ್ಯ ಕವಿಗಳ ಸ್ವಚ್ಛಂದ ಛಂದೋವಿಲಾಸದ ರೀತಿನೀತಿಗಳನ್ನು ರೂಢಿಸಿಕೊಂಡು ಇನ್ನೂ ಹೆಚ್ಚು ಹೆಚ್ಚಾಗಿ ಹೊಸ ರೂಪರೇಖೆಗಳನ್ನು ಪಡೆದುಕೊಳ್ಳುತ್ತಿದೆ. ಪಾದ ಸಂಖ್ಯೆ, ಲಯಗತಿ, ಗಣನಿಯಮ, ಪ್ರಾಸಯೋಜನೆ ಇವು ಮೊದಲಿಗಿಂತ ಹೆಚ್ಚು ಸಡಿಲುತ್ತ ಬದಲುತ್ತ ಬಂದಿವೆ. ರಸದೃಷ್ಟಿಯನ್ನುಳ್ಳ, ಲಯನಿಷ್ಠೆಯನ್ನು ಬಯಸುವ, ಶ್ರುತಿಮಧುರವೂ ಭಾವಗಮ್ಯವೂ ಆದ ತಾಳಮಾನತೆ, ಗೇಯತೆಗಳಿಗಿಂತ, ಚಿಂತನ ದೃಷ್ಟಿಯನ್ನುಳ್ಳ ವಚೋನಿಷ್ಠೆಯನ್ನು ಬಯಸುವ, ಬುದ್ಧಿಗಮ್ಯವಾದ ವಾಚ್ಯತೆ, ನವೋನವವಾದ ಪ್ರಯೋಗಾಕಾಂಕ್ಷೆ—ಇವು ಈಚಿನ ಕನ್ನಡ ಕವಿತೆಯ ಛಂದಸ್ಸಿನಲ್ಲಿ ಕಾಣುತ್ತವೆ. ಇದಕ್ಕೆ ಹಿಂದಿನ ಛಂದಸ್ಸು ಕೂಡ ಇದರ ಜೊತೆಯಲ್ಲಿ ಸಾಗುತ್ತಿದೆ. ಬಿ. ಎಂ. ಶ್ರೀ, ಕೆ. ಎಸ್.ನ, ಪುತಿನ, ಕುವೆಂಪು ಮೊದಲಾದವರು ಅನೇಕ ಬಗೆಯ ಗೇಯಗೀತೆಗಳಲ್ಲಿ ವೈವಿಧ್ಯವನ್ನು ಕೊಟ್ಟಿದ್ದಾರೆ. ಕುವೆಂಪು ಅವರಂತೂ ಸರಳರಗಳೆಯನ್ನು ಯುಕ್ತವಾಗಿ ಮಾರ್ಪಡಿಸಿಕೊಂಡು ತಮ್ಮ ರಾಮಾಯಣದರ್ಶನ ಮಹಾಕಾವ್ಯದಲ್ಲಿ ಮಹಾಛಂದಸ್ಸನ್ನಾಗಿಸಿದ್ದಾರೆ. ಗೋಪಾಲಕೃಷ್ಣ ಅಡಿಗರು, ಚೆನ್ನವೀರ ಕಣವಿ, ಎ. ಕೆ. ರಾಮಾನುಜನ್, ಚಂದ್ರಶೇಖರ ಕಂಬಾರ, ಲಂಕೇಶ ಮೊದಲಾದವರು ಛಂದಸ್ಸಿನ ಹೊಸ ಪ್ರಯೋಗಗಳನ್ನು ಮಾಡುತ್ತಲೇ ಇದ್ದಾರೆ. ಗೋಕಾಕರಿಂದ ಪ್ರಾರಂಭವಾದ ಮುಕ್ತಛಂದಸ್ಸಿನ ವೈವಿಧ್ಯಗಳನ್ನು ಒಂದು ಕಡೆ ಬೆಳೆಸಲಾಗುತ್ತಿದೆ.

ಹೊಸಗನ್ನಡ ಛಂದಸ್ಸಿನ ಒಂದು ನುಡಿ :

ಮೊದಲು ತಾಯ ಹಾಲ ಕುಡಿದು,
ಲಲ್ಲೆಯಿಂದ ತೊದಲಿ ನುಡಿದು,
ಕೆಳೆಯರೊಡನೆ ಬೆಳೆದು ಬಂದ ಮಾತದಾವುದು—
ನಲ್ಲೆಯೊಲವ ತೆರೆದು ತಂದ ಮಾತದಾವುದು—

(ಶ್ರೀ—ಕಾಣಿಕೆ)

ಸ್ವಚ್ಛಂದ ಛಂದಸ್ಸಿನಲ್ಲಿಯ ಕವನದ ಮೊದಲ ಎಂಟು ಸಾಲುಗಳು :

ಹೊಗೆ, ಬೆಂಕಿ,
—ಅಯ್ಯೊ ಹಾಳಾಗ—
ಉರಿ, ಶಖೆ, ತಾಪ ;
ಹೊರಗೆ ರಣರಣ ಬಿಸಿಲು, ಒಳಗೆ ಮಾರಣ ಬೆಂಕಿ.
ಮಲಗಿತ್ತು ಮನ ಚಿತೆಯ ಮೇಲೆ ಆಫೀಸಿನಲಿ.
ಭೂತಗನ್ನಡಿ ಬಿಸಿಲುಮಚ್ಚು ಚುಚ್ಚಿತು ತಲೆಯ ;
ಮಿದುಳು—ಬಚ್ಚಲ ಹಂಡೆಯಲ್ಲಿ ಬೇಯುವ ಆಮೆ—
ಎದ್ದೆದ್ದು ಬಿದ್ದು ಒದ್ದಾಡುತಿತ್ತು.

('ಹಿಮಗಿರಿಯ ಕಂದರ'—ಎಂ. ಗೋಪಾಲಕೃಷ್ಣ ಅಡಿಗ)

ಅಂತೂ ಕನ್ನಡ ಛಂದಸ್ಸು ನಿಂತ ನೀರಾಗಿರದೆ ಹೊಸ ಹೊಸ ಆವಿಷ್ಕಾರಗಳನ್ನು ಪಡೆಯುತ್ತ ನಡೆಯುತ್ತಿರುವ ಒಂದು ಜೀವಂತ ಭಾವವಾಹಕ ಶಕ್ತಿಯಾಗಿದೆಯೆಂದು ತಿಳಿಯಬಹುದು. (ಟಿ.ವಿ.ವಿ.; ಡಿ.ಎಸ್.ಕೆ.)

**ಕನ್ನಡ ಜಾನಪದ :** ಪಾಶ್ಚಾತ್ಯ ದೇಶಗಳಲ್ಲಿ ಜಾನಪದ ಸಂಗ್ರಹ ಹಾಗೂ ಅಧ್ಯಯನಗಳ ಬಗ್ಗೆ 19ನೆಯ ಶತಮಾನದಲ್ಲಿ ವಿಶೇಷವಾದ ಆಸಕ್ತಿ ಮೂಡಿ ಆ ನಿಟ್ಟಿನಲ್ಲಿ ಉತ್ತಮ ಸಾಧನೆಯನ್ನು ಅಲ್ಲಿಯ ವಿದ್ವಾಂಸರು ಮೆರೆದರು. ಜಾನಪದ ಸಂಬಂಧವಾದ ವಿಷಯಗಳಿಗೆ ಪ್ರಚಲಿತವಾಗಿದ್ದ ಪಾಪ್ಯುಲರ್ ಆಂಟಿಕ್ವಿಟೀಸ್ ಎಂಬ ಹೆಸರಿಗೆ ಬದಲಾಗಿ ಈಗ ಅತ್ಯಂತ ಜನಪ್ರಿಯತೆಯನ್ನು ಸಾಧಿಸಿಕೊಂಡಿರುವ ಫೋಕ್ ಲೋರ್ (ಜಾನಪದ) ಎಂಬ ಪದವನ್ನು 1846ರಲ್ಲಿ ಡಬ್ಲ್ಯೂ. ಜೆ. ಥಾಮ್ಸ್ ಬಳಕೆಗೆ ತಂದ ಎರಡು ದಶಕಗಳಲ್ಲೇ ಇಂಗ್ಲೆಂಡಿನಲ್ಲಿ ಇಂಗ್ಲಿಷ್ ಫೋಕ್‌ಲೋರ್ ಸೊಸೈಟಿ ಸ್ಥಾಪಿತವಾಗಿ ವಿಶ್ವದಾದ್ಯಂತ ಜಾನಪದ ಅಧ್ಯಯನಕ್ಕೆ ಒಂದು ಹೊಸ ತಿರುವನ್ನು ಕೊಟ್ಟಿತು. ಅನೇಕ ಪ್ರಸಿದ್ಧ ವಿದ್ವಾಂಸರು ಆ ಕ್ಷೇತ್ರವನ್ನು ಪ್ರವೇಶಿಸಿ ಶಾಸ್ತ್ರೀಯ ತಳಹದಿಯ ಮೇಲೆ ಜಾನಪದ ಸಂಶೋಧನೆಯನ್ನು ರೂಪಿಸಿದರು. ವಿಶ್ವದ ನಾನಾ ಕಡೆಗಳಲ್ಲಿ ಸಂಗ್ರಹಕಾರ್ಯ ವ್ಯವಸ್ಥಿತವಾಗಿ ನಡೆಯತೊಡಗಿ ಅಪಾರ ಸಾಹಿತ್ಯರಾಶಿ ಹತ್ತೊಂಬತ್ತನೆಯ ಶತಮಾನದ ಅಂತ್ಯದ ವೇಳೆಗೇ ವಿದ್ವಾಂಸರಿಗೆ ಲಭ್ಯವಾಯಿತು.

ಭಾರತದಲ್ಲಿಯೂ ಜಾನಪದ ಸಂಗ್ರಹಕಾರ್ಯ ಕಳೆದ ಶತಮಾನದಲ್ಲಿಯೇ ಆರಂಭವಾಯಿತು. ಪಾಶ್ಚಾತ್ಯ ವಿದ್ವಾಂಸರೂ ಅಧಿಕಾರಿಗಳೂ ಮಿಷನರಿಗಳೂ ಭಾರತೀಯ ವಿದ್ವಾಂಸರೂ ಭಾರತದ ನಾನಾಕಡೆಗಳಲ್ಲಿ ಜನಪದ ಕಥೆಗಳನ್ನೂ ಗಾದೆಗಳನ್ನೂ ಲಾವಣಿಗಳನ್ನೂ ಸಂಪ್ರದಾಯ, ನಂಬಿಕೆ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಸಾಹಿತ್ಯವನ್ನೂ ಅಲ್ಲಲ್ಲಿ ಸಂಗ್ರಹಿಸಿದರು. ಈ ಎಲ್ಲ ಸಾಹಿತ್ಯವೂ ಇಂಗ್ಲಿಷಿಗೆ ಅನುವಾದಿತವಾಗಿ ಪ್ರಕಟವಾದುದರಿಂದ ವಿಶ್ವಮಟ್ಟದಲ್ಲಿ ಭಾರತೀಯ ಜಾನಪದದ ಕಡೆ ಪ್ರಸಿದ್ಧ ವಿದ್ವಾಂಸರ ದೃಷ್ಟಿ ಹರಿಯಲು ಕಾರಣವಾಯಿತು.

ಕಳೆದ ಶತಮಾನದಲ್ಲಿ ನಡೆದ ಸಂಗ್ರಹಕಾರ್ಯ ಬಹುಮಟ್ಟಿಗೆ ಉತ್ತರ ಭಾರತಕ್ಕೆ ಸೀಮಿತವಾಯಿತು. ದಕ್ಷಿಣ ಭಾರತದಲ್ಲಿ ಕನ್ನಡ, ತಮಿಳು, ತೆಲುಗು ಹಾಗೂ

ಮಲೆಯಾಳ ಭಾಷೆಗಳಿಗೆ ಸಂಬಂಧಿಸಿದಂತೆ ವ್ಯಾಪಕವಾದ ಸಂಗ್ರಹಕಾರ್ಯ ನಡೆಯಲಿಲ್ಲ. ಗಾದೆಗಳು, ಕಥೆಗಳು ಮತ್ತು ಲಾವಣಿಗಳಿಗೆ ಸಂಬಂಧಿಸಿದಂತೆ ಅಷ್ಟಿಷ್ಟು ಸಂಗ್ರಹ ಕಾರ್ಯ ನಡೆದಿದ್ದರೂ ಅದು ಅಸಮಗ್ರವಾದುದು. ಕನ್ನಡದಲ್ಲಿಯೂ ಇದೇ ಸ್ಥಿತಿಯಾಯಿತು. ಇತರ ಕ್ಷೇತ್ರಗಳಲ್ಲಿ ಪ್ರಸಿದ್ಧರಾದ ಕೆಲವು ಪಾಶ್ಚಾತ್ಯ ವಿದ್ವಾಂಸರು ಜಾನಪದ ಸಂಗ್ರಹ ಕಾರ್ಯವನ್ನು ಸ್ವಲ್ಪಮಟ್ಟಿಗೆ ನಡೆಸಿದ್ದರೂ ಅಷ್ಟೇನೂ ಗಣನೀಯ ಪ್ರಮಾಣದಲ್ಲಿ ಆ ಕಾರ್ಯ ನಡೆಯಲಿಲ್ಲ ಎಂದೇ ಹೇಳಬೇಕು.

ಕನ್ನಡದಲ್ಲಿ ಜಾನಪದ ಸಂಗ್ರಹದ ಪ್ರಥಮ ಪ್ರಯತ್ನವನ್ನು 1816ರ ವೇಳೆಗೇ ಗುರುತಿಸಬಹುದು. ಈ ಅವಧಿಯಲ್ಲಿ ಪ್ರಕಟವಾದ ಅಬೈಡುಬ್ಯೊಸನ ಹಿಂದೂ ಮ್ಯಾನರ್ಸ್, ಕಸ್ಟಮ್ಸ್ ಅಂಡ್ ಸೆರೆಮೊನೀಸ್ ಎಂಬ ಗ್ರಂಥದಲ್ಲಿ ಕನ್ನಡ ಜನಪದ ಕಥೆಗಳ ಕೆಲವು ಭಿನ್ನರೂಪಗಳನ್ನು (ವೇರಿಯಂಟ್ಸ್) ಕಾಣಬಹುದು. ಮತಪ್ರಚಾರಕನಾಗಿ ಕನ್ನಡನಾಡಿನ ಕೆಲವು ಭಾಗಗಳಲ್ಲಿ ಸಂಚಾರಮಾಡಿದ ಈ ಫ್ರೆಂಚ್ ಮಹಾಶಯ ಅನೇಕ ಜಾನಪದ ಸಂಪ್ರದಾಯಗಳನ್ನು ತನ್ನ ಗ್ರಂಥದಲ್ಲಿ ಗುರುತಿಸಿದ್ದಾನೆ. ದೊಡ್ಡ ಸ್ವಾಮಿ ಎಂದು ಜನಪ್ರಿಯನಾಗಿದ್ದ ಈತ ಜನಜೀವನದೊಡನೆ ಅತ್ಯಂತ ಹತ್ತಿರದ ಸಂಬಂಧವನ್ನು ಇಟ್ಟುಕೊಂಡು ಸ್ವಾರಸ್ಯವಾದ ರೀತಿಯಲ್ಲಿ ಅನೇಕ ವಿಷಯಗಳನ್ನು ನಿರೂಪಿಸಿದ್ದಾನೆ.

ಕನ್ನಡ ಜಾನಪದ ಸಂಗ್ರಹದ ಇತಿಹಾಸದಲ್ಲಿ ಚಾರಲ್ಸ್ ಇ. ಗೋವರನ ಹೆಸರು ಅತ್ಯಂತ ಗಮನಾರ್ಹವಾದುದು. ಕಳೆದ ಶತಮಾನದ ಮಧ್ಯಭಾಗದಲ್ಲಿ ಪ್ರಕಟವಾದ ಫೋಕ್ ಸಾಂಗ್ಸ್ ಆಫ್ ಸದರನ್ ಇಂಡಿಯ ಎಂಬ ತನ್ನ ಗ್ರಂಥದಲ್ಲಿ ಈತ ಭಾರತದ ಪ್ರಮುಖ ಭಾಷೆಗಳ ಜನಪದಗೀತೆಗಳನ್ನು ಇಂಗ್ಲಿಷಿಗೆ ಅನುವಾದಿಸಿ ಪ್ರಕಟಿಸಿದ್ದಾನೆ. ಈತನ ಕೃತಿಯಲ್ಲಿ ಕನ್ನಡ ಜನಪದ ಗೀತೆಗಳಿಗೇ ಆದ್ಯತೆ ಇದ್ದು 28 ಹಾಡುಗಳು ಪ್ರಥಮಭಾಗದಲ್ಲಿ ಪ್ರಕಟವಾಗಿದ್ದರೂ ಅವುಗಳಲ್ಲಿ ಬಹುಪಾಲು ದಾಸರ ಕೀರ್ತನೆಗಳ ಅನುವಾದಗಳಾಗಿವೆ. ದಾಸಪರಂಪರೆಯ ಹಾಡುಗಾರರಿಂದ ಇವನ್ನು ಸಂಗ್ರಹಿಸಿದ ಇಬ್ಬರು ಮಿಷನರಿಗಳು (ಎ. ಜೆ. ಲೈಲೆ ಹಾಗೂ ಎಸ್. ಡಾಲ್‌ಜೆಲ್) ದಾಸರ ಪದಗಳು ಎಂಬ ಶೀರ್ಷಿಕೆಯಲ್ಲಿ ಅವನ್ನು ಗೋವರನಿಗೆ ನೀಡಿದ್ದಾರೆ. ಅವರೇ ಅನುವಾದಿಸಿ ಕೊಟ್ಟ ಈ ಕೀರ್ತನೆಗಳನ್ನು ಗೋವರ್ ಕನ್ನಡ ಹಾಡುಗಳು ಎಂದು ಕರೆದು ಅವುಗಳ ಬಗ್ಗೆ ವಿವರವಾದ ವ್ಯಾಖ್ಯೆ ಮಾಡಿದ್ದಾನೆ. ಆದರೆ ಶುದ್ಧ ಜನಪದ ಗೀತೆಗಳಾವುವೂ ಗೋವರನ ಗಮನಕ್ಕೆ ಬಂದಂತೆ ತೋರುವುದಿಲ್ಲ. ಗೋವರನಿಗೂ ಮೊದಲೇ 24 ಹಾಡುಗಳನ್ನು ಪ್ರಕಟಿಸಿದ್ದ ಮೊಗಲಿಂಗ್‌ನ ಕೃತಿಯನ್ನೂ ಈ ದೃಷ್ಟಿಯಿಂದಲೇ ಪರಿಶೀಲಿಸಬೇಕಾಗಿದೆ.

ಗೋವರನ ಸಂಕಲನದಲ್ಲಿ ಕೆಲವು ಬಡಗ ಜನಪದಗೀತೆಗಳು ಹಾಗೂ ಕೊಡಗಿನ ಜನಪದ ಗೀತೆಗಳು ಲಭ್ಯವಾಗುತ್ತವೆ. ಕೊಡಗಿನ ಉತ್ತರಿಹಾಡು, ಮದುವೆಯ ಹಾಡುಗಳು, ಸಂಸ್ಕಾರ ಗೀತೆಗಳು, ಶಿಶುಪ್ರಾಸಗಳು ಇಲ್ಲಿ ಗಮನಾರ್ಹವಾಗಿವೆ.

ಗೋವರನ ಅನಂತರ ಪ್ರಸಿದ್ಧ ಪ್ರಾಕ್ತನ ಸಂಶೋಧಕನಾದ ಜೆ. ಎಫ್. ಫ್ಲೀಟ್ ಜಾನಪದ ಸಂಬಂಧವಾದ ಅಧ್ಯಯನಗಳನ್ನೂ ನಡೆಸಿರುವುದು ಗಣನೀಯ ವಿಷಯವಾಗಿದೆ. ಇಂಡಿಯನ್ ಆಂಟಿಕ್ವೆರಿಯ ಸಂಪುಟಗಳಲ್ಲಿ 1885ರ ವೇಳೆಗೆ ಈತ ಪ್ರಕಟಿಸಿದ ಲಾವಣಿಗಳು ಈತನ ಸಂಗ್ರಹಾಸಕ್ತಿಗೂ ಸಂಶೋಧನ ನಿಷ್ಠೆಗೂ ಸಂಪಾದನ ವೈಶಿಷ್ಟ್ಯಕ್ಕೂ ಉತ್ತಮ ನಿದರ್ಶನವಾಗಿವೆ. ಕಿತ್ತೂರಿನ ಈರವ್ವ, ಸಂಗೊಳ್ಳಿ ರಾಯಣ್ಣ, ಬಾದಾಮಿಯ ರಾಣಮಂಡಲ ಕೋಟೆಯ ಮುತ್ತಿಗೆ, ನರಗುಂದದ ವಿಜಯ, ಆದಾಯ ತೆರಿಗೆಯ ಜಾರಿ, ಹಲಗಲಿಯ ಬೇಡರು, ಹಳ್ಳಿಯ ಜಮೀನ್ದಾರ, ಆಂಗ್ಲರಾಷ್ಟ್ರ ವೈಭವದ ಹಾಡು—ಮುಂತಾದವನ್ನು ಗಮನಿಸಿದಾಗ ಫ್ಲೀಟನ ದೃಷ್ಟಿ ವಿಶೇಷವಾಗಿ ಜಾನಪದದ ಒಂದು ಸೀಮಿತ ಹಿನ್ನೆಲೆಗೆ ಮಾತ್ರ ಮೀಸಲಾಗಿತ್ತು—ಎಂಬುದು ಸ್ಪಷ್ಟವಾಗುತ್ತದೆ. ಏಕೆಂದರೆ ಆತ ಸಂಗ್ರಹಿಸಿದ ಲಾವಣಿಗಳು ಆಂಗ್ಲ ಪ್ರಭುತ್ವ ಹಾಗೂ ಅದರ ಬಗ್ಗೆ ಜನಸಾಮಾನ್ಯರ ಪ್ರತಿಕ್ರಿಯೆಗಳನ್ನು ಮಾತ್ರ ಪ್ರತಿಬಿಂಬಿಸುತ್ತವೆ. ಕಿತ್ತೂರಿನ ಪತನವಾದ ಮೇಲೆ ಹುಟ್ಟಿಕೊಂಡ ಲಾವಣಿಗಳಾದುದರಿಂದ ಕನ್ನಡಿಗರು ಆಂಗ್ಲರ ದಾಳಿ ಹಾಗೂ ದಬ್ಬಾಳಿಕೆಗಳನ್ನು ಹೇಗೆ ಕಂಡಿದ್ದಾರೆ ಎಂಬುದಕ್ಕವು ಸಾಕ್ಷಿಗಳಾಗಿವೆ. ಸಾಹಿತ್ಯಕ ದೃಷ್ಟಿಯಿಂದಲೂ ಐತಿಹಾಸಿಕ ದೃಷ್ಟಿಯಿಂದಲೂ ಈ ಲಾವಣಿಗಳು ಅತ್ಯಂತ ಮಹತ್ತ್ವದ ಕಾಣಿಕೆಗಳಾಗಿವೆ. ಆದರೆ ಫ್ಲೀಟನಂಥ ವಿದ್ವಾಂಸನ ದೃಷ್ಟಿ ಜಾನಪದ ಕ್ಷೇತ್ರಕ್ಕೆ ಹೊರಳಿಯೂ ಮಿಕ್ಕ ಅದರ ಅನಂತಪ್ರಕಾರಗಳನ್ನು ಗುರುತಿಸದೆ ಹೋದುದು ಆಶ್ಚರ್ಯಕರವಾಗಿದೆ. ಉತ್ತರ ಕರ್ಣಾಟಕದ ಈ ಲಾವಣಿಗಳಿಗೆ ಕನ್ನಡ ಮೂಲ, ಇಂಗ್ಲಿಷ್ ಅನುವಾದ, ಅದಕ್ಕೆ ಸಂಬಂಧಿಸಿದ ಟಿಪ್ಪಣಿಗಳು ಮುಂತಾದವನ್ನು ಫ್ಲೀಟ್ ಅತ್ಯಂತ ಪಾಂಕ್ತವಾಗಿ ಒದಗಿಸಿ ಉಪಕರಿಸಿದ್ದಾನೆ. ಇಷ್ಟು ಸರ್ವಸಮರ್ಪಕ ಸಂಪಾದನಾದೃಷ್ಟಿಯಿಂದ ಕೂಡಿದ ಕನ್ನಡ ಜಾನಪದ ಸಂಕಲನಗಳು ವಿರಳವೆಂದೇ ಹೇಳಬೇಕು.

ಕನ್ನಡ ವಿದ್ವತ್ತಿನ ಬೆಳವಣಿಗೆಗೆ ರೆ. ಎಫ್. ಕಿಟ್ಟೆಲನ ಕೊಡುಗೆ ಶ್ರೇಷ್ಠ ಮಟ್ಟದ್ದಾಗಿದೆ. ಜರ್ಮನಿಯ ಈ ವಿದ್ವಾಂಸ ಕ್ರೈಸ್ತಮತಪ್ರಚಾರಕ್ಕಾಗಿ ಭಾರತಕ್ಕೆ ಬಂದು ಮಂಗಳೂರಿನಲ್ಲಿ ಒಂದು ಕೇಂದ್ರವನ್ನು ಸ್ಥಾಪಿಸಿಕೊಂಡ. ಮತಪ್ರಸಾರಕ್ಕಿಂತಲೂ ಕನ್ನಡದ ಉದ್ಧಾರಕ್ಕಾಗಿ ಕಿಟ್ಟೆಲ್ ಕೈಗೊಂಡ ಕಾರ್ಯಗಳು ದೊಡ್ಡ ಐತಿಹಾಸಿಕ ದಾಖಲೆಗಳಾಗಿ ಉಳಿದಿವೆ. ಆತನ ಕನ್ನಡ ಶಬ್ದಕೋಶ ಇಂದಿಗೂ ಒಂದು ಅಮೂಲ್ಯ ಅರ್ಥಕೋಶವಾಗಿಯೇ ಉಳಿದಿದೆ. ತನ್ನ ಶಬ್ದಕೋಶದಲ್ಲಿ ಆತ ನಾಡಿನ ನಾನಾಕಡೆಯ ಜನಪ್ರಿಯ ಗಾದೆಗಳನ್ನು ಸಂಗ್ರಹಿಸಿ ನೀಡಿರುವುದು ಜಾನಪದಕ್ಷೇತ್ರಕ್ಕೆ ಆತ ಸಲ್ಲಿಸಿದ ದೊಡ್ಡ ಸೇವೆಯಾಗಿದೆ. ನಾಲ್ಕು ಸಾವಿರಕ್ಕೂ ಹೆಚ್ಚು ಗಾದೆಗಳು 1894ರಲ್ಲಿ ಪ್ರಕಟವಾದ ಈ ಶಬ್ದಕೋಶದಲ್ಲಿ ಸೇರಿವೆ. ಇಷ್ಟು ಅಪಾರ ಸಂಖ್ಯೆಯಲ್ಲಿ ಕಳೆದ ಶತಮಾನದಲ್ಲಿಯೇ ಕನ್ನಡಗಾದೆಗಳು ಸಂಕಲಿತವಾಗಿ ಪ್ರಸಿದ್ಧ ಅರ್ಥಕೋಶವೊಂದರಲ್ಲಿ ಸಂರಕ್ಷಿತವಾಗಿರುವುದು ಕಿಟ್ಟೆಲನ ಸಾಹಸಕ್ಕೆ ದ್ಯೋತಕವಾಗಿದೆ. ಕಂಠಸ್ಥ ಸಂಪ್ರದಾಯದ ಈ ಗಾದೆಗಳ ಜೊತೆಗೆ ಆಡುಮಾತಿನ ಸೊಗಡನ್ನೂ ಸವಿಯನ್ನೂ ಕನ್ನಡಿಗರ ಪರವಾಗಿ ಜೀವನಾನುಭವದ ವೈಖರಿಯನ್ನೂ ಇವುಗಳಲ್ಲಿ ಕಾಣಬಹುದಾಗಿದೆ. ಜಾನಪದ ಸಂಗ್ರಹದ ಬಗ್ಗೆ ಕಳೆದ ಶತಮಾನದಲ್ಲಿ ನಡೆದ ಎರಡು ಮೂರು ಪ್ರಯತ್ನಗಳು ಕನ್ನಡ ಜಾನಪದದ ಶ್ರೀಮಂತಿಕೆಯನ್ನು ವೈವಿಧ್ಯವನ್ನು ಪರಿಚಯ ಮಾಡಿಕೊಡಲು ಸಮರ್ಥವಾಗಲಿಲ್ಲ. ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿಯೂ ಈ ಕೆಲಸ ಸಮರ್ಪಕವಾಗಿ ನಡೆಯಲಿಲ್ಲ. 1912ರ ಸುಮಾರಿಗೆ ಪ್ರಕಟವಾದ ಬಾಸೆಲ್ ಮಿಷನ್ ಪ್ರೆಸ್ಸಿನವರ ಗಾದೆಗಳ ಸಂಕಲನಗಳನ್ನು ಬಿಟ್ಟರೆ ಮತ್ತಾವ ಜಾನಪದ ಪ್ರಕಾರದಲ್ಲೂ ಸಂಕಲನಗಳು ಹೊರಬಿರಲಿಲ್ಲ. 1930ರ ವರೆಗೆ ಕನ್ನಡ ಜಾನಪದ ಕ್ಷೇತ್ರ ಅಜ್ಞಾತವಾಗಿಯೇ ಉಳಿದು ಹೋಯಿತು. ಕಳೆದ ನಾಲ್ಕು ದಶಕಗಳ ಸಂಗ್ರಹ ಹಾಗೂ ಅಧ್ಯಯನಗಳು ಕನ್ನಡ ಜಾನಪದ ಭಂಡಾರವನ್ನು ತಕ್ಕಮಟ್ಟಿಗಾದರೂ ತುಂಬಿವೆ. ಸುಮಾರು ಎಂಟುನೂರಕ್ಕೂ ಹೆಚ್ಚು ಜಾನಪದ ಕೃತಿಗಳು ಪ್ರಕಟವಾಗಿವೆ. ಉತ್ತಮ ಸಂಗ್ರಾಹಕರೂ ವಿದ್ವಾಂಸರೂ ಆ ಕ್ಷೇತ್ರದಲ್ಲಿ ದುಡಿದು ಜಾನಪದ ವಿದ್ವತ್ತನ್ನು ಬೆಳೆಸುತ್ತಿದ್ದಾರೆ. ಜಾನಪದ ಸಂಗ್ರಹ ಹಾಗೂ ಅಧ್ಯಯನದ ಕೆಲವು ಮೈಲಿಗಲ್ಲುಗಳನ್ನು ಇಲ್ಲಿ ಪರಿಶೀಲಿಸಬಹುದು.

ಕನ್ನಡ ಸಾಹಿತ್ಯಕ್ಷೇತ್ರದಲ್ಲಿ ನವೋದಯ ಕ್ರಾಂತಿಯ ಜೊತೆಯಲ್ಲಿಯೇ ಜಾನಪದ ನವೋದಯವೂ ಆಯಿತು ಎನ್ನಬಹುದು. 1925ಕ್ಕೂ ಮುಂಚೆಯೇ ಪ್ರಕಟವಾದ ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರ ಲೇಖನ ಕನ್ನಡ ಲಾವಣಿ ಸಾಂಗತ್ಯ—ಎಂಬುದು ಕನ್ನಡ ಜನಪದಸಾಹಿತ್ಯದ ನಾನಾ ಮುಖಗಳನ್ನು ಪರಿಚಯ ಮಾಡಿಕೊಟ್ಟು, ಆ ನಿಟ್ಟಿನಲ್ಲಿ ಕೈಗೊಳ್ಳಬೇಕಾದ ಸಂಗ್ರಹಕಾರ್ಯಕ್ಕೆ ಒಂದು ರೀತಿಯ ಪ್ರೇರಣೆಯನ್ನು ನೀಡಿತು. ಮಾಸ್ತಿ ಆ ಲೇಖನದಲ್ಲಿ ಕನ್ನಡ ಜನಪದಗೀತೆಗಳ ಅನೇಕ ಪ್ರಮುಖ ಸಂಪ್ರದಾಯಗಳನ್ನು ಪರಿಚಯ ಮಾಡಿಕೊಟ್ಟು, ತಮ್ಮ ಅಧಿಕಾರಾವಧಿಯ ಪ್ರವಾಸಕಾಲದಲ್ಲಿ ಟಿಪ್ಪಣಿಮಾಡಿಕೊಂಡ ವಿಷಯಗಳನ್ನೂ ಗೀತಭಾಗಗಳನ್ನೂ ಉಲ್ಲೇಖಿಸಿ ಅವುಗಳ ಸ್ವಾರಸ್ಯವನ್ನು ಕುರಿತು ಚರ್ಚೆ ಮಾಡಿದ್ದಾರೆ. ಸರ್ಜಪ್ಪ ನಾಯಕನ ಲಾವಣಿ, ಅರ್ಜುನ ಜೋಗಿ ಹಾಡು ಮುಂತಾದ ಪ್ರಸಿದ್ಧ ಜನಪದ ರಚನೆಗಳ ಕಡೆ ನಾಡಿನ ವಿದ್ವಾಂಸರ ದೃಷ್ಟಿಯನ್ನು ಸೆಳೆದಿದ್ದಾರೆ. ಮರೆತು ಹೋಗುತ್ತಿರುವ ಅನೇಕ ಹಾಡುಗಳ ಪ್ರಸ್ತಾಪ ಮಾಡಿ ಜಾನಪದ ಸಂಗ್ರಹಕಾರ್ಯದ ಬಗ್ಗೆ ಗಮನಾರ್ಹವಾದ ಅನೇಕ ಸೂಚನೆಗಳನ್ನು ಕೊಟ್ಟಿದ್ದಾರೆ.

ಮಾಸ್ತಿಯವರ ಈ ಪ್ರಮುಖ ಲೇಖನದ ಅನಂತರ ಜಯಕರ್ನಾಟಕ, ಪ್ರಬುದ್ಧ ಕರ್ಣಾಟಕ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾದ ಕೆಲವು ಸಂಗ್ರಹಗಳು ಮತ್ತು ಲೇಖನಗಳನ್ನು ಅನಂತರ ಕನ್ನಡದಲ್ಲಿ ಪ್ರಕಟಗೊಂಡ ಜಾನಪದ ಸಂಕಲನಗಳು ಮತ್ತು ವಿಮರ್ಶಾಗ್ರಂಥಗಳನ್ನು ಐದು ಪ್ರಮುಖ ಅಂಗಗಳಲ್ಲಿ ವಿಭಜಿಸಿಕೊಳ್ಳಬಹುದು.

1 ಜನಪದ ಗೀತೆ, ಲಾವಣಿಗಳು
2 ಜನಪದ ಗದ್ಯಕಥನಗಳು
3 ಜನಪದ ಗಾದೆ, ಒಗಟುಗಳು
4 ಜನಪದ ಕಲೆಗಳು
5 ಜಾನಪದ ವಿಚಾರ ವಿಮರ್ಶೆ

ಜಾನಪದದ ಸಮಗ್ರ ಕಲ್ಪನೆ ಕನ್ನಡದಲ್ಲಿ ಬಂದದ್ದು ತೀರ ಇತ್ತೀಚೆಗೆ. ಸಾಹಿತ್ಯಕ ಬಗೆ, ಭಾಷಿಕ ಬಗೆ, ಕ್ರಿಯಾತ್ಮಕ ಬಗೆ, ವೈಜ್ಞಾನಿಕ ಬಗೆಗಳಲ್ಲಿ ಅನೇಕ ವಿಷಯಗಳು ಒಳಪಡುತ್ತವೆ. ಪರಂಪರಾನುಗತವಾಗಿ ಕಂಠಸ್ಥಸಂಪ್ರದಾಯ ಹಾಗೂ ಅನುಕರಣೆಯ ಮೂಲಕ ಸಾಗಿಬರುವ ಎಲ್ಲ ಬಗೆಯ ಜ್ಞಾನವೂ ಜಾನಪದ. ಗ್ರಂಥಸ್ಥ ಮೂಲವನ್ನು ಅವಲಂಬಿಸದೆ ತಲೆಮಾರಿನಿಂದ ತಲೆಮಾರಿಗೆ ಹೀಗೆ ಒಯ್ಯಲ್ಪಡುವ ಜಾನಪದದಲ್ಲಿ ಕಥೆ, ಗೀತೆ, ಲಾವಣಿ, ಗಾದೆ, ಒಗಟು, ಮಾತು, ನೃತ್ಯ, ನಾಟಕ, ಚಿತ್ರ, ಶಿಲ್ಪ, ಆಚಾರ, ನಂಬಿಕೆ, ಸಂಪ್ರದಾಯ, ಅಡುಗೆ, ವೈದ್ಯ, ಕ್ರೀಡೆ, ಮಾಟ,

ಮಂತ್ರ, ಸಂಜ್ಞೆ. ಹೀಗೆ ಹತ್ತಾರು ಪ್ರಕಾರಗಳನ್ನು ಗುರುತಿಸಲಾಗುತ್ತದೆ. ಪಾಶ್ಚಾತ್ಯ ರಾಷ್ಟ್ರಗಳಲ್ಲಿ ಎಲ್ಲ ಶಾಖೆಗಳಿಗೂ ಸಂಬಂಧಪಟ್ಟಂತೆ ಅತ್ಯುತ್ತಮ ಸಂಗ್ರಹ ಕಾರ್ಯ ನಡೆದಿದೆ. ಕನ್ನಡದಲ್ಲಿ ಮೂರು ನಾಲ್ಕು ಪ್ರಕಾರಗಳನ್ನು ಗುರುತಿಸುವಷ್ಟು ಸಂಗ್ರಹಕಾರ್ಯ ನಡೆದಿದ್ದರೂ ಅವುಗಳಲ್ಲಿಯೂ ಸಮಗ್ರತೆ, ಶಾಸ್ತ್ರೀಯತೆ ಕಂಡು ಬರದೆ ಇನ್ನೂ ವೈಜ್ಞಾನಿಕ ಸಂಗ್ರಹಕಾರ್ಯ ನಡೆಯಬೇಕಾದ ಅಗತ್ಯ ಇದ್ದೇ ಇದೆ.

ಗೀತೆ, ಲಾವಣಿ : ಕನ್ನಡದಲ್ಲಿ ಜಾನಪದ ಆಸಕ್ತಿ ಮೂಡಿದುದು ಸಾಹಿತ್ಯಕ ದೃಷ್ಟಿಯಿಂದಲೇ ಎನ್ನಬೇಕು. ಈ ಕ್ಷೇತ್ರವನ್ನು ಪ್ರವೇಶಿಸಿದವರು ಬಹುಮಟ್ಟಿಗೆ ಸಾಹಿತಿಗಳು. ನವೋದಯ ಕಾವ್ಯದ ಪ್ರಭಾವದಿಂದ ಭಾವಗೀತೆಯ ಪ್ರಕಾರವನ್ನು ಜಾನಪದ ಮೂಲದಲ್ಲಿಯೂ ಕಾಣುವ ದೃಷ್ಟಿ ಪ್ರಖರವಾಗಿ, ಆ ನಿಟ್ಟಿನಲ್ಲಿ ಸಂಗ್ರಹ ಕಾರ್ಯ ಆರಂಭವಾಯಿತು. ಕನ್ನಡದ ಮೊಟ್ಟಮೊದಲ ಜನಪದ ಭಾವಗೀತೆಗಳ ಸಂಕಲನವನ್ನು ಹೊರತಂದವರು ಹಲಸಂಗಿ ಸೋದರರಾದ ಕಾಪಸೆ ರೇವಪ್ಪ,



ಸಿಂಪಿ ಲಿಂಗಣ್ಣ

ಮಧುರಚೆನ್ನ, ಸಿಂಪಿ ಲಿಂಗಣ್ಣ ಈ ಮೂವರು. ಬಿಜಾಪುರ ಜಿಲ್ಲೆಯ ತದ್ದೆವಾಡ ನಾಡಿನ ಎಂಟುನೂರು ತ್ರಿಪದಿಗಳು ಈ ಸಂಕಲನದಲ್ಲಿ ಸೇರಿವೆ. ಕನ್ನಡ ಗರತಿಹಾಡಿನ ಉನ್ನತ ಕಾವ್ಯಮೌಲ್ಯವನ್ನು ಈ ತ್ರಿಪದಿಗಳಲ್ಲಿ ಕಾಣಬಹುದು. ಸಂಪಾದಕರು ಶ್ರಮವಹಿಸಿ ಕಾವ್ಯದೃಷ್ಟಿಯಿಂದ ಅತ್ಯಮೂಲ್ಯವಾದ ಪದ್ಯಗಳನ್ನೇ ಇಲ್ಲಿ ಆಯ್ಕೆ ಮಾಡಿದ್ದಾರೆ.

ಜನಪದ ಗೀತೆಗಳ ಬಹುಸತ್ತ್ವಯುತವಾದ ಭಾಗ ಈ ಸಂಕಲನದ ಮೂಲಕ ಲಭ್ಯವಾಗುವಂತೆ ಸಂಪಾದಕರು ಶ್ರಮಿಸಿದ್ದಾರೆ. ಬೀಸುವ ಪದಗಳು, ದೈವಸ್ತುತಿ ಪ್ರಧಾನಗೀತೆಗಳು, ತೌರ ಪದಗಳು, ಲಾಲಿಯ ಪದಗಳು—ಹೀಗೆ ಪ್ರಮುಖವಾದ ವಿಭಾಗಗಳಲ್ಲಿ ಗರತಿಯ ಹಾಡಿನಲ್ಲಿ ದೊರೆಯುವ ತ್ರಿಪದಿಗಳು ಕನ್ನಡ ಜನಪದ ಕಾವ್ಯದ ಶ್ರೇಷ್ಠ ಮಾದರಿಗಳು. ಗರತಿಯ ಹಾಡು ಕನ್ನಡನಾಡಿನ ಸ್ತ್ರೀಜೀವನದ ಒಳಗನ್ನಡಿ ; ಅದು ಇಲ್ಲಿಯ ಹೆಣ್ಣುಮಕ್ಕಳ ಹೃದಯದ ಪಡಿಗನ್ನಡಿ. ಅದರಲ್ಲಿ ಮಮತೆಯ ಮಾಧುರ್ಯ ಮೈವೆತ್ತಿದೆ, ಪ್ರೇಮದ ಸತ್ಯ ಅಳವಟ್ಟಿದೆ—ಎಂದು ಸಂಪಾದಕರಲ್ಲೊಬ್ಬರಾದ ಸಿಂಪಿ ಲಿಂಗಣ್ಣನವರು ಹೇಳಿರುವ ಮಾತು ಎಲ್ಲ ದೃಷ್ಟಿಯಿಂದಲೂ ಗರತಿಯ ಹಾಡಿಗೆ ಒಪ್ಪುತ್ತದೆ. ಕಾಲದ ದೃಷ್ಟಿಯಿಂದಲೂ ಸಾಹಿತ್ಯಕ ಮೌಲ್ಯದೃಷ್ಟಿಯಿಂದಲೂ ಗರತಿಯ ಹಾಡಿಗೆ ಆದ್ಯಸ್ಥಾನ ಲಭ್ಯವಾಗುತ್ತದೆ. ಪ್ರಕೃತ ಸಂಕಲನಕ್ಕೆ ಬಿ.ಎಂ.ಶ್ರೀ. ಬೇಂದ್ರೆ, ಮಾಸ್ತಿ ಮೊದಲಾದ ಸಾಹಿತ್ಯಶಿಲ್ಪಿಗಳ ಮಾರ್ಗದರ್ಶನವೂ ದೊರೆತಿರುವುದು ಆ ಕೃತಿಯ ಶ್ರೇಷ್ಠತೆಗೆ ಕಳಶವಿಟ್ಟಿದೆ.

ಗೆಳೆಯರ ಗುಂಪಿನ ರೇವಪ್ಪನವರು ಸಂಗ್ರಹಿಸಿದ ಮಲ್ಲಿಗೆ ದಂಡೆ (1935) ಜಾನಪದ ಸಂಕಲನಗಳ ಸಾಲಿನಲ್ಲಿ ಉತ್ತಮ ಕೃತಿ. ವಿವಿಧ ಧಾಟಿಗಳ, ವಿವಿಧ ಛಂದಸ್ಸುಗಳ ವೈವಿಧ್ಯಮಯ ಗೀತೆಗಳನ್ನು ಈ ಸಂಕಲನದಲ್ಲಿ ಕಾಣಬಹುದು. ದೇವರ ಸ್ತುತಿ, ಪ್ರಣಯ, ಭಾವಗೀತೆ, ಕಥನಗೀತೆ, ಮದುವೆಯ ಹಾಡು, ಸೋಬಾನದ ಹಾಡುಗಳು, ಹಾಸ್ಯಗೀತೆಗಳು — ಹೀಗೆ ಜನಪದಗೀತೆಗಳ ಎಲ್ಲ ಮುಖಗಳನ್ನೂ ಪರಿಚಯ ಮಾಡಿಕೊಡುವ ಅದ್ವಿತೀಯ ಮಾದರಿಗಳು ಇಲ್ಲಿವೆ.

ಹಲಸಂಗಿ ಸೋದರರಲ್ಲೊಬ್ಬರಾದ ಸಿಂಪಿ ಲಿಂಗಣ್ಣನವರು ಧೂಲಾಸಾಹೇಬರೊಡನೆ ಕಲೆತು ಹೊರತಂದ ಜೀವನಸಂಗೀತ ಕನ್ನಡ ಜನಪದ ಸಾಹಿತ್ಯದ ಒಂದು ಶ್ರೇಷ್ಠ ಪರಂಪರೆಯನ್ನು ಪರಿಚಯ ಮಾಡಿಕೊಡುತ್ತದೆ. ಅಲ್ಲದೆ ಅತ್ಯುತ್ತಮ ಲಾವಣಿಗಳನ್ನೂ ಪ್ರಥಮ ಬಾರಿಗೆ ಇಲ್ಲಿ ಕಾಣಬಹುದಾಗಿದೆ. ಕಲ್ಕಿ–ತುರಾಯಿ ಅಥವಾ ಹರಿದೇಶಿ—ನಾಗೇಶಿ ಸಂಪ್ರದಾಯದ ಈ ಲಾವಣಿಗಳು ಉತ್ತರ ಕರ್ಣಾಟಕದಲ್ಲಿ ಪ್ರಚಲಿತವಾಗಿರುವ ಲಾವಣಿಗಳ ಶಕ್ತಿವತ್ತಾದ ಶೈಲಿ, ನಿರೂಪಣಾ ಕೌಶಲ ಮತ್ತು ಅದ್ಭುತ ಕಲ್ಪನೆಗಳಿಗೆ ಉತ್ತಮ ಮಾದರಿಯಾಗಿವೆ. ಹಳೆಯ ಪರಂಪರೆಯ ಲಾವಣಿಗಳು ಮರೆತುಹೋಗುತ್ತಿರುವುದರ ಜೊತೆಯಲ್ಲೇ, ಸತ್ತ್ವಹೀನವಾದ ಹೊಸ ಲಾವಣಿಗಳು ಕಾಣಿಸಿಕೊಳ್ಳುತ್ತಿರುವುದನ್ನು ಸಂಪಾದಕರು ಗುರುತಿಸಿದ್ದಾರೆ.

ಉತ್ತರ ಕರ್ಣಾಟಕದ ಪ್ರಾತಿನಿಧಿಕ ಸಂಕಲನಗಳಾಗಿ ಹೊರಬಂದ ಈ ಮೂರು ಗ್ರಂಥಗಳು ನಾಡಿನಾದ್ಯಂತ ಜನಪದ ಸಾಹಿತ್ಯದ ಬಗ್ಗೆ ವಿಶೇಷವಾದ ಗೌರವ, ಆದರಗಳು ಮೂಡಲು ಪ್ರೇರಕವಾದುವು. ಇಂಥ ಗೀತೆಗಳ ಸತ್ತ್ವವನ್ನು ಹೀರಿ ಬೆಳೆದ ಬೇಂದ್ರೆಯವರಂಥ ಕವಿಗಳೇ ಈ ಗೀತೆಗಳ ದೊಡ್ಡ ಪ್ರಸಾರಕರಾಗಿ ತಮ್ಮ ಕವಿತೆಗಳಿಗೂ ಜಾನಪದ ಚೈತನ್ಯವನ್ನೇ ತುಂಬಿ ಕನ್ನಡ ಕಾವ್ಯಕ್ಷೇತ್ರದಲ್ಲಿ ದೊಡ್ಡ ಕ್ರಾಂತಿಯನ್ನೇ ಎಸಗಿದರು.

1933ರ ಅವಧಿಯಲ್ಲೇ ಪ್ರಕಟವಾದ ವಿಠೋಬ ವೆಂಕಟನಾಯಕ ತೊರ್ಕೆಯವರ ಹಳ್ಳಿಯ ಹಾಡುಗಳು ಎಂಬ ಕಿರುಹೊತ್ತಗೆ ಕಾಲದೃಷ್ಟಿಯಿಂದ ಹಾಗೂ ಪ್ರಾದೇಶಿಕ ದೃಷ್ಟಿಯಿಂದ ಗಮನಾರ್ಹವಾಗಿದೆ. ಉತ್ತರ ಕನ್ನಡ ಜಿಲ್ಲೆಯ ನೂರೈವತ್ತು ತ್ರಿಪದಿಗಳನ್ನು ಈ ಸಂಕಲನ ದೊರಕಿಸಿ ಕೊಡುತ್ತದೆ.

ಉತ್ತರ ಕರ್ಣಾಟಕದಲ್ಲಿ ಹಲಸಂಗಿ ಸೋದರರು ಜನಪದಗೀತೆ, ಲಾವಣಿಗಳ ಶ್ರೇಷ್ಠ ಮಟ್ಟದ ಸಂಕಲನಗಳನ್ನು ಹೊರತರುತ್ತಿರುವಾಗ ಹಳೆಯ ಮೈಸೂರು ಭಾಗದಲ್ಲಿಯೂ ಈ ಯಾವ ಪ್ರಭಾವಕ್ಕೂ ಒಳಗಾಗದೆ ಜಾನಪದ ಸಂಗ್ರಹಕಾರ್ಯ ನಡೆಯುತ್ತಿತ್ತು. 1933ರಲ್ಲೇ ಪ್ರಕಟವಾದ ಅರ್ಚಕ ಬಿ. ರಂಗಸ್ವಾಮಿಯವರ ಹುಟ್ಟಿದ ಹಳ್ಳಿ–ಹಳ್ಳಿಯ ಹಾಡು ಅನೇಕ ದೃಷ್ಟಿಗಳಿಂದ ಕನ್ನಡದ ಇತರ ಸಂಕಲನಗಳಿಗಿಂತ ಮೇಲಾದ ಕೃತಿಯೆನಿಸುತ್ತದೆ. ಜಾನಪದದ ಯಾವ ಸ್ಪಷ್ಟ ಕಲ್ಪನೆಯೂ ಇಲ್ಲದೆ, ಆದರೂ ತಮ್ಮ ಹುಟ್ಟೂರಿನ ಜೀವಂತ ಸಂಸ್ಕೃತಿಗೆ ಮಾರುಹೋಗಿ, ವಿಶ್ವಕರ್ಣಾಟಕ ಪತ್ರಿಕೆಯಲ್ಲಿ ಪ್ರಕಟವಾಗಿದ್ದ ಲೇಖನವೊಂದರಿಂದ ಪ್ರಭಾವಿತರಾಗಿ ಅರ್ಚಕ ರಂಗಸ್ವಾಮಿಯವರು ಹುಟ್ಟಿದ ಹಳ್ಳಿಯ ಸಮಸ್ತ ವಿವರಗಳನ್ನೂ ತಮ್ಮ ಕೃತಿಯಲ್ಲಿ ಸಂಗ್ರಹಿಸಿ ನೀಡಿದ್ದಾರೆ. ಜಾನಪದದ ಎಲ್ಲ ಅಂಗಗಳೂ ಈ ಕೃತಿಯಲ್ಲಿ ಅಳವಟ್ಟಿವೆ. ಊರಿನ ವಿವರ, ಜನಜೀವನ, ಅಲ್ಲಿಯ ಐತಿಹ್ಯಗಳು, ಪುರಾಣಗಳು, ಕಥೆಗಳು, ಗೀತೆಗಳು, ಲಾವಣಿಗಳು, ಮಾತಿನ ರೀತಿ, ಗಾದೆಗಳ ವೈಖರಿ, ಸಂಪ್ರದಾಯ, ಆಚಾರ, ನಡೆ, ನುಡಿ, ನಾಟಕ, ನೃತ್ಯ ಹೀಗೆ ಯಾವ ವಿವರವನ್ನೂ ಬಿಡದೆ ಒಂದು ಊರಿನ ಆತ್ಮಕಥೆಯನ್ನೇ ಈ ಕೃತಿಯಲ್ಲಿ ನೀಡಿದ್ದಾರೆ. ಅತ್ಯುನ್ನತ ಸಾಂಸ್ಕೃತಿಕ ಆವರಣದಲ್ಲಿ ಆದರ್ಶಜೀವನವನ್ನು ನಡೆಸುತ್ತ ನ್ಯಾಯ, ನಿಷ್ಠೆ, ಸತ್ಯ, ಧರ್ಮಗಳ ತಳಹದಿಯ ಮೇಲೆ ಗ್ರಾಮಾಂತರ ಜೀವನ ಎಂಥ ನೆಮ್ಮದಿ, ಎಂಥ ಸಂತೃಪ್ತಿಯನ್ನು ಕಂಡಿತ್ತು ಎಂಬುದರ ಹೃದಯಂಗಮ ಚಿತ್ರಣವನ್ನು ರಂಗಸ್ವಾಮಿಯವರು ತಮ್ಮ ಕೃತಿಯಲ್ಲಿ ನೀಡಿದ್ದಾರೆ. ಅಪಾರ ಸಂಖ್ಯೆಯ ದೇವರ ಪದಗಳೂ ಕೋಲಾಟದ ಪದಗಳೂ ಲಾವಣಿಗಳೂ ಗಾದೆಗಳೂ ಈ ಕೃತಿಯಲ್ಲಿ ಸಂಕಲಿತವಾಗಿವೆ. ಇಷ್ಟಿದ್ದರೂ ಈ ಕೃತಿ ಹಲವು ಕಾರಣಗಳಿಂದ ಸಾಕಷ್ಟು ಪ್ರಚಾರವನ್ನು ಪಡೆಯದೆ ಅಜ್ಞಾತವಾಗಿ ಉಳಿದುಹೋಯಿತು. ಇದರ ಮಾದರಿಯನ್ನನುಸರಿಸಿ ಮುಂದಿನ ಸಂಗ್ರಾಹಕರು ತಮ್ಮ ಸಂಗ್ರಹಗಳ ವ್ಯಾಪಕತೆಯನ್ನು ಹೆಚ್ಚಿಸಿಕೊಂಡು ಇನ್ನೂ ಸಾರ್ಥಕ ಕೃತಿಗಳನ್ನು ಹೊರತರುವ ಸಾಧ್ಯತೆ ತಪ್ಪಿಹೋಯಿತು.

1930–40ರ ಅವಧಿಯಲ್ಲಿ ಜನಪದ ಸಾಹಿತ್ಯಕ್ಷೇತ್ರದಲ್ಲಿ ಸಾಕಷ್ಟು ಕೆಲಸಮಾಡಿದ ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರೂ ಬಿ. ಎನ್. ರಂಗಸ್ವಾಮಿಯವರೂ ಒಂದೊಂದು ಉತ್ತಮ ಸಂಕಲನಗಳನ್ನು ಹೊರತಂದಿದ್ದಾರೆ. ಗೊರೂರರ ಹಳ್ಳಿಯ ಹಾಡುಗಳು (1938), ರಂಗಸ್ವಾಮಿಯವರ ಹಳ್ಳಿಯ ಪದಗಳು (1940) ಗರತಿಯ ಹಾಡಿನ ಮಾದರಿಯಲ್ಲೆ ಹೊರಬಂದ ಕೃತಿಗಳು. ಹಳ್ಳಿಯ ಹಾಡುಗಳು ಹೆಚ್ಚು ವಿಸ್ತಾರವಾದ, ವೈವಿಧ್ಯಪೂರ್ಣವಾದ ಕೃತಿ. ಹಾಸನ, ಮೈಸೂರು, ಮಂಡ್ಯ ಹಾಗೂ ಕೋಲಾರ ಜಿಲ್ಲೆಗಳ ಸಾಹಿತ್ಯ ಈ ಕೃತಿಗಳಲ್ಲಿ ಲಭ್ಯವಾಗುತ್ತದೆ.

ಮಾನವಮಿ ಸಂಪ್ರದಾಯಕ್ಕೆ ಸೇರಿದ ಚೌಪದಗಳ ಸಂಕಲನವೊಂದನ್ನು ಇಲ್ಲಿ ಹೆಸರಿಸಬಹುದು. ಹರಕೆ ಪದಗಳನ್ನು ಹೇಳಿಕೊಂಡು ಶಾಲೆಯ ಮಕ್ಕಳು ತಮ್ಮ

ಅಯ್ಯಗಳ ಜೊತೆ ಮಾನವಮಿಯ ಕಾಲದಲ್ಲಿ ಊರಾಡಲು ಹೋಗುತ್ತಿದ್ದ ಸಂಪ್ರದಾಯ ಕನ್ನಡ ನಾಡಿನಲ್ಲೆಲ್ಲ ಪ್ರಚಾರದಲ್ಲಿತ್ತು. ಆ ಸಂಪ್ರದಾಯಕ್ಕೆ ಸೇರಿದ ಹಾಡುಗಳು ಹೆಚ್ಚಾಗಿ ಕಂಠಸ್ಥ ಸಂಪ್ರದಾಯದಲ್ಲೆ ಲಭ್ಯವಾಗುತ್ತವೆ. ಯಾರೋ ಪ್ರೌಢಕವಿಯೊಬ್ಬ ಈ ಹಾಡುಗಳನ್ನು ಕಲೆಹಾಕಿ, ಸಂಸ್ಕರಿಸಿ, ವಿಸ್ತರಿಸಿ ರಚಿಸಿದ ಗ್ರಂಥವೊಂದನ್ನು ಎನ್. ಅನಂತರಂಗಾಚಾರ್ಯರು ಮಾನವಮಿಯ ಚೌಪದ (1940) ಎಂಬ ಹೆಸರಿನಲ್ಲಿ ಸಂಪಾದಿಸಿ ಪ್ರಕಟಿಸಿದ್ದಾರೆ.

ಸ್ವಾತಂತ್ರ್ಯಪೂರ್ವ ಜಾನಪದ ಸಂಗ್ರಹಗಳಲ್ಲಿ ಮತಿಘಟ್ಟ ಸೋದರರ ನಾಡಪದಗಳು ಎಂಬ ಸಂಕಲನಕ್ಕೆ ಒಂದು ವಿಶಿಷ್ಟ ಸ್ಥಾನವಿದೆ. ಗಾತ್ರದ ದೃಷ್ಟಿಯಿಂದಲೂ ವೈವಿಧ್ಯದ ದೃಷ್ಟಿಯಿಂದಲೂ ಸಂಪಾದನೆಯ ದೃಷ್ಟಿಯಿಂದಲೂ ಈ ಸಂಕಲನ ಇತರ ಸಂಗ್ರಹಗಳಿಗಿಂತ ಮೇಲೆ ನಿಲ್ಲುತ್ತದೆ. ಬಯಲುನಾಡಿನ, ಮಲೆನಾಡು ಸೆರಗಿನ ಗೀತೆಗಳನ್ನೂ ಇಲ್ಲಿ ಕ್ರಮಬದ್ಧವಾಗಿ ಅಳವಡಿಸಲಾಗಿದೆ. ಜನಪದ ಗೀತೆ ಸಂಪ್ರದಾಯಗಳನ್ನೆಲ್ಲ ಗುರುತಿಸಿ, ಆ ಹಿನ್ನೆಲೆಯಲ್ಲಿ ಸಂಗ್ರಹಿಸಿದ ಹಾಡುಗಳನ್ನು ಸೂಕ್ತವಾಗಿ ವಿಭಜಿಸಿ, ಸಾಕಷ್ಟು ವಿವರವಾಗಿ ಟಿಪ್ಪಣಿಗಳನ್ನೂ ಒದಗಿಸಲಾಗಿದೆ. ಜನಪದ ಗೀತೆಗಳ ಮೂಲಮಟ್ಟುಗಳನ್ನು ಕಾಪಾಡಿಕೊಳ್ಳುವ ವೈಜ್ಞಾನಿಕ ದೃಷ್ಟಿಯನ್ನು ಈ ಸಂಕಲನದಲ್ಲಿ ಮಾತ್ರ ಕಾಣಬಹುದು. ಕೋಲಾಟದ ಪದಗಳು, ಉತ್ತರದೇವಿ ಹಾಗೂ ಇತರ ಕಥೆಗಳು, ತಿಂಗಳ ಮಾವನ ಪದಗಳು ಈ ಸಂಕಲನದ ಕೆಲವು ಉತ್ಕೃಷ್ಟ ಗೀತೆಗಳು. ಬ್ರಾಹ್ಮಣ ಸಮಾಜದ ಕಂಠಸ್ಥಸಂಪ್ರದಾಯದ ಹಾಡುಗಳನ್ನು ಈ ಕೃತಿಯಲ್ಲಿ ಸೇರಿಸಿರುವುದು ಗಮನಾರ್ಹವಾಗಿದೆ. ಇಲ್ಲಿ ಬರುವ ಹಾಡುಗಳಲ್ಲಿ ಶಿಷ್ಟ ಹಾಗೂ ಜನಪದ ಕಾವ್ಯಸಂಪ್ರದಾಯಗಳ ಸೊಗಸಾದ ಸಾಮರಸ್ಯವನ್ನು ವಿಶೇಷವಾಗಿ ಗುರುತಿಸಬಹುದು. ಈ ಎರಡು ಕಾವ್ಯಸಂಪ್ರದಾಯಗಳ ನಡುವೆ, ಎರಡೂ ಕಡೆಯ ಉತ್ತಮ ಅಂಶಗಳನ್ನು ಸ್ವೀಕರಿಸಿ ಸಂಪ್ರದಾಯದ ಹಾಡುಗಳು ರೂಪುಗೊಂಡಿವೆ. ಇಂಥ ಹಾಡುಗಳ ಸಂಗ್ರಹದ ಕಡೆಗೆ ಈ ಕೃತಿ ಬೆಳಕು ಚೆಲ್ಲುತ್ತದೆ.

ನಾಡಪದಗಳು ಪ್ರಕಟಣೆಯೊಡನೆ ಕನ್ನಡ ಜನಪದ ಗೀತೆಗಳ ಸಂಗ್ರಹ ಒಂದು ಘಟ್ಟವನ್ನು ಮುಟ್ಟಿ ಅತ್ಯುತ್ತಮ ಗೀತಸಾಹಿತ್ಯ ಸ್ವಾತಂತ್ರ್ಯಪೂರ್ವ ಸಂಕಲನಗಳಲ್ಲಿ ಲಭ್ಯವಾಗುವಂತಾದುದರ ಜೊತೆಗೆ, ಉತ್ತರ ಕರ್ಣಾಟಕ ಹಾಗೂ ದಕ್ಷಿಣ ಕರ್ಣಾಟಕಗಳ ಜನಪದಗೀತೆಗಳ ಸಾಮಾನ್ಯ ಸ್ವರೂಪದ ಪರಿಚಯವೂ ಅಭ್ಯಾಸಿಗಳ ಪಾಲಿಗೆ ಒದಗುವಂತಾಯಿತು. ಸ್ತ್ರೀಯರ ಹಾಡುಗಳೇ ಈ ಸಂಕಲನಗಳಲ್ಲಿ ಹೆಚ್ಚಾಗಿ ಕಂಡರೂ ಕೋಲಾಟ ಹಾಗೂ ಲಾವಣಿಸಂಪ್ರದಾಯ ಮುಂತಾದ ಕಡೆಗಳಲ್ಲಿ ಪುರುಷರ ಸಾಹಿತ್ಯವನ್ನೂ ಗುರುತಿಸಬಹುದು. ಉತ್ತಮ ವಿದ್ವಾಂಸರೂ ಪ್ರತಿಭಾವಂತ ಸಾಹಿತಿಗಳೂ ಸಂಪಾದನ ಕಾರ್ಯದಲ್ಲಿ ಆಸಕ್ತಿಯನ್ನು ತೋರಿದುದರಿಂದ ಬಹುಮಟ್ಟಿಗೆ ಎಲ್ಲ ಸಂಕಲನಗಳೂ ಉತ್ತಮವಾಗಿಯೇ ಪ್ರಕಟವಾಗಿವೆ.

ಸ್ವಾತಂತ್ರ್ಯಪೂರ್ವದಲ್ಲಿ ಮತಿಘಟ್ಟ ಕೃಷ್ಣಮೂರ್ತಿಗಳನ್ನು ಹೊರತು ಉಳಿದವರಾರೂ ಸಂಪೂರ್ಣವಾಗಿ ಜಾನಪದ ಕ್ಷೇತ್ರಕ್ಕೆ ತಮ್ಮ ಪೂರ್ಣ ಕಾಲವನ್ನು ವಿನಿಯೋಗಿಸಿದವರಲ್ಲ. ಹೀಗಾಗಿ ಒಬ್ಬೊಬ್ಬರು ಒಂದೊಂದೇ ಸಂಕಲನವನ್ನು ಪ್ರಕಟಿಸಿ ಹಿಂದೆ ಸರಿದರು. ಆದರೆ ಸ್ವಾತಂತ್ರ್ಯೋತ್ತರ ದಿನಗಳಲ್ಲಿ ಜನಪದ ಸಾಹಿತ್ಯ ಸಂಗ್ರಹ, ಅಧ್ಯಯನಗಳಿಗೆ ತಮ್ಮ ಸಮಗ್ರ ಬದುಕನ್ನೇ ಮೀಸಲಿಟ್ಟು ಶ್ರಮಿಸುವ ನಿಷ್ಠೆಯನ್ನು ಮೆರೆದ ಕೆಲವರನ್ನಾದರೂ ಗುರುತಿಸಬಹುದು. ಗದ್ಗೀಮಠ ಅವರು ಇಂಥವರಲ್ಲಿ ಅಗ್ರಗಣ್ಯರು.

1950ರ ಈಚೆಗೆ ಗದ್ಗೀಮಠರ ಸಾಹಸದ ಫಲವಾಗಿ ಉತ್ತರ ಕರ್ಣಾಟಕದ ಹೊಸ ಹೊಸ ಜನಪದ ಗೀತಸಂಪ್ರದಾಯಗಳು ಪರಿಚಯವಾಗತೊಡಗಿದವು. ಕ್ಷೇತ್ರ ಕಾರ್ಯದಲ್ಲಿ ಅಪಾರ ಉತ್ಸಾಹವನ್ನು ತೋರಿದ ಶ್ರೀಯುತರು ಹತ್ತಾರು ವರ್ಷಗಳ ತಮ್ಮ ಸಂಗ್ರಹಯಾತ್ರೆಯ ಫಲವಾಗಿ ಅಪಾರ ಸಾಹಿತ್ಯರಾಶಿಯನ್ನು ಕಲೆಹಾಕಿದರು. ಜನಪದ ಸಂಪ್ರದಾಯಗಳ ಹತ್ತಿರದ ಪರಿಚಯ ಪಡೆದುಕೊಂಡರು. ಜನಪದ ಗೀತೆಗಳನ್ನು ಹಾಡುವುದರಲ್ಲಿ ಹೆಸರಾದ ಮನೆತನದಲ್ಲೇ ಬಂದವರಾದ್ದರಿಂದ ಅವರು ಸಹಜವಾಗಿ ಜನಪದ ಸಾಹಿತ್ಯದ ಪ್ರಾದೇಶಿಕ ಹಿನ್ನೆಲೆಯನ್ನು ಸಮರ್ಥವಾಗಿ ಪರಿಚಯ ಮಾಡಿಕೊಡಲು ಶಕ್ತರಾದರು. ಅವರ ಪ್ರೌಢಪ್ರಬಂಧ ಕನ್ನಡ ಜಾನಪದ ಗೀತೆಗಳು ಉತ್ತರ ಕರ್ಣಾಟಕದ ಎಷ್ಟೋ ಅಜ್ಞಾತ ಗೀತಸಂಪ್ರದಾಯಗಳ ಮೇಲೆ ಬೆಳಕು ಚೆಲ್ಲುತ್ತದೆ. ತಮ್ಮ ಪ್ರಬಂಧದ ಉದ್ದಕ್ಕೂ ಅವರು ಉಲ್ಲೇಖಿಸಿರುವ ಅಪಾರ ಸಾಹಿತ್ಯದ ಪರಿಶೀಲನೆಯಿಂದ ಶ್ರೀಯುತರ ಸಂಗ್ರಹಕಾರ್ಯದ ವ್ಯಾಪಕತೆಯನ್ನು ಅರಿಯಬಹುದಾಗಿದೆ. ಅತ್ಯಂತ ವಿಸ್ತಾರವಾದ ಲಾವಣಿಗಳನ್ನು ಸಂಗ್ರಹಿಸಿದವರಲ್ಲಿ ಗದ್ಗೀಮಠ ಅವರು ಮೊದಲಿಗರು. ಶಿವಶರಣರಿಗೆ ಸಂಬಂಧಿಸಿದ ಕಥೆಗಳೂ ಅರ್ಜುನ ಜೋಗಿಯ ಹಾಡುಗಬ್ಬ ಮುಂತಾದವೂ ಕನ್ನಡ ಜನಪದ ಖಂಡಕಾವ್ಯಗಳ ಶ್ರೇಷ್ಠ ಪರಂಪರೆಯ ಕಡೆ ನಮ್ಮ ಆಸಕ್ತಿಯನ್ನು ಸೆಳೆಯುತ್ತವೆ.

1952ರಲ್ಲಿ ಪ್ರಕಟವಾದ ಗದ್ಗೀಮಠ ಅವರ ನಾಲ್ಕು ನಾಡಪದಗಳು ಉತ್ತರ ಕರ್ಣಾಟಕದ ಹಂತಿಯ ಪದಗಳ ಒಂದು ಶ್ರೇಷ್ಠ ಸಂಕಲನ. ಬಿಜ್ಜಮಹಾದೇವಿ, ಬೇಡರ ಕನ್ನಯ್ಯ, ಕೋಳೂರು ಕೊಡಗೂಸು, ಗೊಲ್ಲಾಳ ಮುಂತಾದವರ ಕಥೆಗಳನ್ನು ನಿರೂಪಿಸುವ ಈ ಜನಪದ ಖಂಡಕಾವ್ಯಗಳು ಜನಪದ ಸಂಪ್ರದಾಯದಲ್ಲಿ ಶಿವಶರಣರ ಕಥೆಗಳ ಒಂದು ಉನ್ನತ ಪರಂಪರೆಯ ಕಡೆ ಬೆರಳುಮಾಡಿ ತೋರುತ್ತವೆ. ಶಿಷ್ಟಸಂಪ್ರದಾಯದ ಹಾಗೂ ಜನಪದ ಸಂಪ್ರದಾಯದ ಇಂಥ ಕಥಾಸಾಹಿತ್ಯದ ತೌಲನಿಕ ಅಧ್ಯಯನಕ್ಕೆ ಗದ್ಗೀಮಠರ ಸಂಗ್ರಹಗಳು ಉತ್ತಮ ಸಾಮಗ್ರಿಯನ್ನು ದೊರಕಿಸಿ ಕೊಡುತ್ತವೆ.

ಕಂಬಿಯ ಪದಗಳು ಗದ್ಗೀಮಠ ಅವರ ಜನಪದ ಭಕ್ತಿಗೀತೆಗಳ ಸಾಲಿನಲ್ಲಿ ಗುರುತಿಸಿದ ಹೊಸ ಸಂಪ್ರದಾಯವನ್ನೂ ಆ ಸಂಬಂಧವಾದ ಗೀತೆಗಳನ್ನೂ ಒಳಗೊಂಡಿದೆ. ಜನತಾಗೀತೆಗಳು ಸ್ವಾತಂತ್ರ್ಯಪೂರ್ವ ಜನಪದ ಗೀತಸಂಕಲನಗಳ ನೆನಪನ್ನು ತರುವ ಒಂದು ಉತ್ತಮ ಬಿಡಿಹಾಡುಗಳ ಸಂಕಲನ. ಇದರಲ್ಲಿಯೂ ಗದ್ಗೀಮಠರು ಹಾಡುವ ಸಂಪ್ರದಾಯದ ಹಿನ್ನೆಲೆಯಲ್ಲಿಯೇ ಅವನ್ನು ನೀಡಿದ್ದಾರೆ.

ಲೋಕಗೀತೆಗಳು ಗದ್ಗೀಮಠರ ಸಂಕಲನಗಳಲ್ಲಿ ಅತ್ಯಂತ ಗಮನಾರ್ಹ ಸಂಕಲನ. ಕೋಲಾಟ ಹಾಗೂ ವಿವಾಹಸಂಬಂಧ ಗೀತೆಗಳನ್ನು ಈ ದೊಡ್ಡ ಸಂಕಲನದಲ್ಲಿ ನೀಡಿರುವ ಶ್ರೀಯುತರು ಆ ಸಂಪ್ರದಾಯಗಳ ಉತ್ತಮ ಪರಿಚಯವನ್ನು ಒದಗಿಸಿದ್ದಾರೆ.

ಕುಮಾರರಾಮನ ದುಂದುಮೆ ಐತಿಹಾಸಿಕ ವಸ್ತುವನ್ನೊಳಗೊಂಡ ಒಂದು ಉತ್ತಮ ಜನಪದ ಖಂಡಕಾವ್ಯ.

ಗದ್ಗೀಮಠರ ಅನಿರೀಕ್ಷಿತ ಮರಣದಿಂದಾಗಿ ಕನ್ನಡ ಜಾನಪದ ಕ್ಷೇತ್ರ ತುಂಬ ನಷ್ಟವನ್ನನುಭವಿಸಿತು. ಅವರಲ್ಲಿದ್ದ ಅಪಾರ ಅಪ್ರಕಟಿತ ಸಾಹಿತ್ಯ ಬೆಳಕು ಕಾಣದೆಯೇ ಉಳಿದುಹೋಯಿತು. ಆ ಸಾಹಿತ್ಯ ಪ್ರಕಟವಾಗುವ ಅವಕಾಶ ಬಂದರೂ ಅದನ್ನು ಉತ್ತಮ ರೀತಿಯಲ್ಲಿ ಸಂಪಾದಿಸುವ ಸಾಮರ್ಥ್ಯ ಅನೇಕ ವರ್ಷಗಳ ಕ್ಷೇತ್ರ ಕಾರ್ಯದ ಅನುಭವದಿಂದ ದಕ್ಕಬೇಕಾದುದು. ಅವರು ತಮ್ಮ ಮುನ್ನುಡಿಯೊಂದರಲ್ಲಿ ಸೂಚಿಸಿರುವಂತೆ ಅವರು ಸಂಗ್ರಹಿಸಿದ ಸಮಗ್ರ ಮಹಾಭಾರತ ಪ್ರಕಟವಾದರೆ ಕನ್ನಡ ಜನಪದ ಕಾವ್ಯಗಳ ಹಿರಿಮೆ ಮತ್ತಷ್ಟು ವರ್ಧಿಸುತ್ತದೆ.

1955ರಲ್ಲಿ ಉತ್ತರ ಕರ್ಣಾಟಕದ ಮತ್ತೊಂದು ಪ್ರಾತಿನಿಧಿಕ ಕೃತಿ ಗರತಿಯರ ಮನೆಯಿಂದ—ಎಂಬುದು ಪ್ರಕಟವಾಯಿತು. ಇದರ ಸಂಪಾದಕರಾದ ಈಶ್ವರಚಂದ್ರ ಚಿಂತಾಮಣಿ ಬಿಜಾಪುರ ಜಿಲ್ಲೆಯ ಗರತಿಯರ ಪದಗಳನ್ನೂ ಶಿಶುಪ್ರಾಸಗಳನ್ನೂ ಒಗಟುಗಳನ್ನೂ ಇಲ್ಲಿ ಸಂಗ್ರಹಿಸಿ ಕೊಟ್ಟಿದ್ದಾರೆ. ಪ್ರಥಮ ಬಾರಿಗೆ ಶಿಶುಪ್ರಾಸಗಳನ್ನು ಇಲ್ಲಿ ಕಾಣಬಹುದು. 1953ರಲ್ಲಿ ಪ್ರಕಟವಾದ ಕರ್ಣಾಟಕ ಜಾನಪದ ಗೀತೆಗಳು ಆರ್. ಎಸ್. ಪಂಚಮುಖಿಯವರ ಸಂಪಾದಕತ್ವದಲ್ಲಿ ಹೊರಬಂದ ಮತ್ತೊಂದು ಶ್ರೇಷ್ಠ ಸಂಕಲನ. ಉತ್ತರ ಕರ್ಣಾಟಕ ಹಾಗೂ ಕಾರವಾರ ಜಿಲ್ಲೆಯ ಕೆಲವು ಭಾಗಗಳಲ್ಲಿ ಸಂಗ್ರಹಿಸಿದ ಹಾಡುಗಳು ಇಲ್ಲಿ ಸಂಕಲಿತವಾಗಿವೆ. ಜನಪದ ಗೀತೆಗಳ ಪ್ರಕಟಣೆಯಲ್ಲಿ ಯಾವ ಆಯ್ಕೆಯನ್ನೂ ಮಾಡದೆ, ಬೇರೆ ಬೇರೆ ಅಭ್ಯಾಸ ದೃಷ್ಟಿಗೆ ಪೂರಕವಾಗುವಂತೆ ಈ ಸಂಕಲನದಲ್ಲಿ ಹಾಡುಗಳನ್ನು ನೀಡಿರುವ ಕ್ರಮ ಅಭಿನಂದನೀಯ. ಜಾನಪದ ಸಂಶೋಧಕರಿಗೆ ಇಂಥ ಸಂಕಲನಗಳಲ್ಲಿ ಲಭ್ಯವಾಗುವ ಸಾಹಿತ್ಯ ಹೆಚ್ಚು ಅಧಿಕೃತವಾದುದು ಎಂಬ ವಿಶ್ವಾಸ ಮೂಡುತ್ತದೆ. ಸ್ತುತಿಪದಗಳು, ಡೊಳ್ಳಿನ ಪದಗಳು, ಹಂತಿಯ ಪದಗಳು, ಬೀಸುವ ಪದಗಳು ಮುಂತಾದ ಶೀರ್ಷಿಕೆಯ ಕೆಳಗೆ ಲಭ್ಯವಾಗುವ ಹಾಡುಗಳ ಜೊತೆಗೆ ಅನೇಕ ಲಾವಣಿಗಳು ಕೂಡಿಕೊಂಡು ಬರುತ್ತವೆ. ಆಯಾ ಪ್ರದೇಶಿಕ ಹಿನ್ನೆಲೆಯಲ್ಲಿ ಹಾಡುಗಳನ್ನು ನೀಡಿರುವ ಕ್ರಮವೂ ಉಚಿತವಾಗಿ ತೋರುತ್ತದೆ. ಮೊದಲ ಬಾರಿಗೆ ಹಲವು ಮಂದಿ ಸಂಶೋಧಕರು ಕೈಗೊಂಡ ಸಂಗ್ರಹದ ಒಂದು ವಿಶಿಷ್ಟ ಸಂಕಲನವನ್ನು ಇಲ್ಲಿ ಕಾಣಬಹುದಾಗಿದೆ.

ಉತ್ತರ ಕರ್ಣಾಟಕದ ಸಂಕಲನಗಳಲ್ಲಿ ವಿಶೇಷ ಮನ್ನಣೆಗೆ ಪಾತ್ರವಾದ ಮತ್ತೊಂದು ಕೃತಿ ದೊಡ್ಡಭಾವೆಪ್ಪ ಮೂಗಿಯವರ ಕಿತ್ತೂರು ಕಾಳಗ. ಕಿತ್ತೂರಿಗೆ ಸಂಬಂಧಿಸಿದ ಸಂಶೋಧನೆಯಲ್ಲಿ ಉತ್ತಮ ಸಾಧನೆಯನ್ನು ತೋರಿರುವ ಮೂಗಿಯವರು ಆ ಸಂಬಂಧವಾದ ಲಾವಣಿಗಳನ್ನೂ ಒಂದೆಡೆ ಕಲೆಹಾಕಿರುವುದು ಅವರ ಜಾನಪದ ಪ್ರೇಮಕ್ಕೆ ದ್ಯೋತಕವಾಗಿದೆ. ಐತಿಹಾಸಿಕ ಸಂಶೋಧನೆಯ ಸಮಗ್ರತೆಗೆ ಇಂಥ ಲಾವಣಿಗಳೂ ಪೂರಕವಾಗಬಲ್ಲವು ಎಂಬ ಅವರ ವಿವೇಚನಾಪರತೆಯೂ ಗಮನಾರ್ಹವಾದುದೇ. ಕನ್ನಡ ಐತಿಹಾಸಿಕ ಲಾವಣಿಗಳ ಸಾಲಿನಲ್ಲಿ ಮೂಗಿಯವರ ಈ ಸಂಕಲನಕ್ಕೆ ಒಂದು ವಿಶೇಷವಾದ ಸ್ಥಾನವಿದೆ.

ಫ್ಲೀಟರ ಅನಂತರ ಇಂಥ ವಿಶಿಷ್ಟಲಾವಣಿಗಳನ್ನು ಕಲೆಹಾಕಿದವರು ಇವರೊಬ್ಬರೇ ಎನ್ನಬಹುದು.

ಹಳೆಯ ಮೈಸೂರು ಭಾಗವನ್ನು ದಕ್ಷಿಣ ಕರ್ಣಾಟಕವೆಂದು ಜಾನಪದ ದೃಷ್ಟಿಯಿಂದ ವಿಭಜನೆ ಮಾಡಿಕೊಂಡು ಈ ಪ್ರದೇಶದ ಸಂಕಲನಗಳನ್ನು ಪರಿಶೀಲಿಸಬಹುದು. 1950–60ರ ಅವಧಿಯಲ್ಲಿ ಮತಿಘಟ್ಟ ಕೃಷ್ಣಮೂರ್ತಿಯವರ ಅನಂತರ ಈ ಕ್ಷೇತ್ರದಲ್ಲಿ ಕರಾಕೃ, ಗೊ. ರು. ಚೆನ್ನಬಸಪ್ಪ, ಕರೀಂಖಾನ್, ಸ. ಚ. ಮಹಾದೇವ ನಾಯಕ, ಕೆ. ವಿ. ಲಿಂಗಪ್ಪ, ಚಂದ್ರಶೇಖರನಾಥ್, ಕೆ. ವಿ. ಸುಬ್ಬಣ್ಣ, ಶೇಷಭಟ್ಟ ಹಾಗೂ ಸುಂದರೇಶ್ವರ ಮುಂತಾದ ಹೆಸರುಗಳು ಮುಖ್ಯವಾದುವು. ಇವರಲ್ಲಿ ಹತ್ತಾರು ಸಂಕಲನಗಳನ್ನು ಹೊರತಂದವರೂ ಒಂದೊಂದೇ ಸಂಕಲನವನ್ನು ಪ್ರಕಟಿಸಿದವರೂ ಇದ್ದಾರೆ. ಪ್ರಾದೇಶಿಕ ಹಿನ್ನೆಲೆಯ ದೃಷ್ಟಿಯಿಂದ ಈ ಎಲ್ಲ ಸಂಕಲನಗಳೂ ಮುಖ್ಯವೆನಿಸುತ್ತವೆ.

ಕೆ.ವಿ. ಲಿಂಗಪ್ಪನವರು ಮಲೆನಾಡಿನ ಜನಪದಗೀತೆಗಳನ್ನು ಸಂಗ್ರಹಿಸಿ ಎರಡು ಸಣ್ಣ ಸಂಕಲಗಳನ್ನು ಪ್ರಕಟಿಸಿದ್ದಾರೆ. ಅವರ ಸಂಕಲನದ ಉತ್ತರದೇವಿ ಈವರೆಗೆ ದೊರೆತ ಪಾಠಗಳಲ್ಲೆಲ್ಲ ಶ್ರೇಷ್ಠವಾಗಿರುವುದಲ್ಲದೆ ವಸ್ತುದೃಷ್ಟಿಯಿಂದ ಮೂಲಕಥೆಯ ಕಡೆ ಬೆರಳು ತೋರುವಂತಿದೆ. ಗೊ. ರು. ಚೆನ್ನಬಸಪ್ಪನವರು ಚಿಕ್ಕಮಗಳೂರು ಜಿಲ್ಲೆಯ ಬಯಲುಪ್ರದೇಶದ ಹಾಡುಗಳನ್ನು ಸಂಕಲಿಸಿ ಮೂರು ಕೃತಿಗಳನ್ನು ಹೊರ ತಂದಿದ್ದಾರೆ. ಮೈದುನ ರಾಮಯ್ಯನ ಕಂಠಸ್ಥಸಂಪ್ರದಾಯದ ವಿಸ್ತಾರ ಖಂಡ ಕಾವ್ಯವನ್ನು ಮೊದಲ ಬಾರಿಗೆ ಪ್ರಕಟಿಸಿದ ಕೀರ್ತಿ ಇವರದು. ಕ. ಮ. ಶಿ. ಚಂದ್ರಶೇಖರಯ್ಯನವರು ಚೆನ್ನಗಿರಿಯ ಸುತ್ತಿನಲ್ಲಿ ಸಂಗ್ರಹಕಾರ್ಯವನ್ನು ನಡೆಸಿ ಹೊಸ ಪ್ರದೇಶವೊಂದರ ಹಾಡುಗಳನ್ನು ದೊರಕಿಸಿದ್ದಾರೆ. ಕರೀಂಖಾನರು ಹಾಸನ, ಕೊಡಗು, ತುಮಕೂರು ಜಿಲ್ಲೆಗಳ ಸಾಹಿತ್ಯವನ್ನು ಸಂಗ್ರಹಿಸಿ ಉತ್ತಮ ಸಂಕಲನಗಳನ್ನು ಹೊರತಂದಿದ್ದಾರೆ. ಜನಪದ ಗೀತೆಗಳ ಜನಪ್ರಿಯತೆಗೆ ದುಡಿದವರಲ್ಲಿ ಕರೀಂಖಾನರೂ ಗಣ್ಯರಾದವರು. ಅನೇಕರಲ್ಲಿ ಜನಪದ ಸಾಹಿತ್ಯದ ಆಸಕ್ತಿ ಮೂಡಲು, ಅವರು ಅಲ್ಲಲ್ಲಿ ಪ್ರಸಾರಕಾರ್ಯ ಕೈಗೊಂಡು ಗೀತೆಗಳನ್ನು ಮನಮುಟ್ಟುವಂತೆ ಹಾಡಿದ್ದಾರೆ; ವ್ಯಾಖ್ಯಾನಿಸಿದ್ದಾರೆ. ಕೆ. ಆರ್. ಲಿಂಗಪ್ಪನವರ ಹೆಸರೂ ಕನ್ನಡ ನಾಡಿನ ಜನಪದ ಸಾಹಿತ್ಯ ಪ್ರಸಾರಕರ ಸಾಲಿನಲ್ಲಿ ಉಲ್ಲೇಖಾರ್ಹವಾದುದು. ಉತ್ತಮ ವಾಗ್ಮಿಗಳಾದ ಅವರು ಆಕರ್ಷಕ ರೀತಿಯಲ್ಲಿ ಜನಪದ ತ್ರಿಪದಿಗಳ ಅರ್ಥ ವೈಶಾಲ್ಯವನ್ನು, ಭಾವೋನ್ನತಿಯನ್ನು ನಿರೂಪಿಸಿ ಅಷ್ಟೇ ಮಧುರವಾಗಿ ಹಾಡಿ ತೋರಿಸುವ ಚಮತ್ಕಾರವನ್ನೂ ಪಡೆದವರು. ಅವರ ಮಾನವಮಿ ಪದಗಳು, ಕಂಠಸ್ಥಸಂಪ್ರದಾಯದ ಕೃತಿಯಾದುದರಿಂದ ಗಮನಾರ್ಹವಾಗಿದೆ.

ಕೆ.ವಿ. ಸುಬ್ಬಣ್ಣನವರ ಅವರು ನೀಡಿದ ದೀಪ—ಎಂಬ ಪುಸ್ತಕ ಜನಪದ ಗೀತೆಗಳನ್ನು ಲಾವಣಿಗಳನ್ನು ಕಾವ್ಯಾತ್ಮಕ ಗದ್ಯಚಿತ್ರಗಳ ಮೂಲಕ ಎಷ್ಟು ಸಮರ್ಥವಾಗಿ ಜನಪ್ರಿಯಗೊಳಿಸಬಹುದು ಎಂಬುದಕ್ಕೆ ಉತ್ತಮ ನಿದರ್ಶನವಾಗಿದೆ. ಅಲ್ಲದೆ ಮಲೆನಾಡಿನ ಅಂಟಿಕೆ ಪಂಟಿಕೆ ಸಂಪ್ರದಾಯದ ವಿಶೇಷ ಪರಿಚಯವನ್ನು ಈ ಕೃತಿ ಒದಗಿಸುತ್ತದೆ. ಎಲ್ಲದಕ್ಕಿಂತ ಮಿಗಿಲಾಗಿ ಸುಂದರ ಕಥನಗೀತೆಗಳನ್ನೂ ಬಿಡಿಹಾಡುಗಳನ್ನೂ ಶ್ರೀಯುತರು ಈ ಕೃತಿಯಲ್ಲಿ ಅಳವಡಿಸಿ ಸಂಕಲನದೃಷ್ಟಿಯಿಂದಲೂ ವಿಶೇಷ ಮನ್ನಣೆಗೆ ಪಾತ್ರರಾಗಿದ್ದಾರೆ. ಚಂದ್ರಶೇಖರನಾಥ ಸ್ವಾಮೀಜೀಯವರ ಶ್ರೀ ಆದಿ ಚುಂಚನಗಿರಿ ಜನಪದ ಗೀತೆಗಳು ಕನ್ನಡದ ಕೆಲವೇ ಶ್ರೇಷ್ಠ ಸಂಕಲನಗಳಲ್ಲಿ ಒಂದಾಗಿದೆ. ಒಂದು ಪುಣ್ಯಕ್ಷೇತ್ರಕ್ಕೆ ಸಂಬಂಧಿಸಿದಂತೆ ಲಭ್ಯವಾಗಬಹುದಾದ ಸಾಹಿತ್ಯವನ್ನೆಲ್ಲ ಕಲೆಹಾಕಿ, ಉತ್ತಮ ರೀತಿಯಲ್ಲಿ ವಿಭಜಿಸಿ, ಇಲ್ಲಿ ಹೊರತರಲಾಗಿದೆ. ಕನ್ನಡ ಜನಪದ ಗೀತೆಗಳಲ್ಲಿ ಭಕ್ತಿಗೀತೆಗಳು ಅತ್ಯುತ್ಕೃಷ್ಟ ಭಾವಗೀತೆಗಳಾಗಿ ಹೇಗೆ ಸತ್ತ್ವಯುತವಾಗಿವೆ ಎಂಬುದನ್ನು ಈ ಗ್ರಂಥ ಸಮರ್ಥವಾಗಿ ಪರಿಚಯಿಸುತ್ತದೆ.

ಸ. ಚ. ಮಹಾದೇವ ನಾಯಕರು ಮೈಸೂರು ಜಿಲ್ಲೆಯ ದಕ್ಷಿಣ ಹಾಗೂ ಪಶ್ಚಿಮ ಭಾಗದಲ್ಲಿ ಸಂಗ್ರಹಕಾರ್ಯವನ್ನು ಕೈಗೊಂಡು ಹಳ್ಳಿಯ ಹಾಡುಗಳು, ಜಾನಪದ ರಸಗಂಗೆ, ಸಂಪಿಗೆ ಅರಳಾವೆ—ಎಂಬ ಮೂರು ಕೃತಿಗಳನ್ನು ಹೊರತಂದಿದ್ದಾರೆ. ಕನ್ನಡನಾಡಿನ ದಕ್ಷಿಣ ಗಡಿಯ ವಿಶಿಷ್ಟಸಾಹಿತ್ಯದ ಸೊಗಸಾದ ಮಾದರಿಗಳನ್ನು ಈ ಕೃತಿಗಳಲ್ಲಿ ಕಾಣಬಹುದು. ಕೆಲವು ಹಾಡುಗಳು ಅಪೂರ್ಣವಾಗಿದ್ದರೂ ಸಂಪಾದನೆಯ ದೃಷ್ಟಿಯಿಂದ ಕೆಲವು ನ್ಯೂನತೆಗಳು ಕಂಡುಬಂದರೂ ಜಿಲ್ಲೆಯ ಅನೇಕ ಗೀತ ಸಂಪ್ರದಾಯಗಳ ಪ್ರಥಮ ಪರಿಚಯವನ್ನು ಒದಗಿಸುವುದರ ಮೂಲಕ ಮುಂದಿನ ಸಂಗ್ರಾಹಕರಿಗೆ ಈ ಕೃತಿಗಳು ಒಳ್ಳೆಯ ಮಾರ್ಗದರ್ಶನ ನೀಡುತ್ತವೆ.

ದಕ್ಷಿಣ ಕರ್ಣಾಟಕದ ಜನಪದ ಗೀತೆಗಳ ಲಾವಣಿಗಳ ಪ್ರಮುಖ ಸಂಗ್ರಾಹಕರಲ್ಲಿ ಕರಾಕೃ ಅವರೂ ಒಬ್ಬರು. ಮಂಡ್ಯ, ಬೆಂಗಳೂರು, ಮೈಸೂರು, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳ ಕೆಲವು ಭಾಗಗಳಲ್ಲಿ ಇವರು ಸಂಗ್ರಹಕಾರ್ಯವನ್ನು ನಡೆಸಿದ್ದರೂ ಚಿತ್ರದುರ್ಗ ಜಿಲ್ಲೆಯ ಸಂಗ್ರಹ ಗಣನೀಯವಾಗಿದೆ. ಇವರೂ ಪಿ. ಆರ್. ತಿಪ್ಪೇಸ್ವಾಮಿಯವರೂ ಜಿಲ್ಲೆಯಲ್ಲಿ ಅನೇಕ ಬಾರಿ ಪ್ರವಾಸ ಮಾಡಿ ಉತ್ತಮ ಸಾಹಿತ್ಯವನ್ನು ಸಂಗ್ರಹಿಸಿದ್ದಾರೆ. ಸಂಗ್ರಹಕಾರ್ಯದಲ್ಲಿ, ಸಂಪಾದನಾ ಸಾಮರ್ಥ್ಯದಲ್ಲಿ ಅಶಾಸ್ತ್ರೀಯತೆ ಪ್ರಧಾನವಾಗಿ ಕಂಡುಬಂದರೂ ಜನಪದ ಸಾಹಿತ್ಯ ಅಕಾಡಮಿಯ ಸಂಕಲನಗಳು ಬಾಹುಳ್ಯ ಮತ್ತು ವೈವಿಧ್ಯದ ದೃಷ್ಟಿಯಿಂದ ಕನ್ನಡ ಜಾನಪದ ಕ್ಷೇತ್ರದಲ್ಲಿ ಒಂದು ದಾಖಲೆಯಾಗಿ ಉಳಿಯುತ್ತವೆ. ಈ ಅಕಾಡಮಿಯ ಇಪ್ಪತ್ತೈದು ಸಂಕಲನಗಳನ್ನು ಎಚ್ಚರಿಕೆಯಿಂದ ಪರಿಶೀಲಿಸಿದರೆ ಕೃತಿಯಿಂದ ಕೃತಿಗೆ ಆವೃತ್ತಿಯಿಂದ ಆವೃತ್ತಿಗೆ ಅನೇಕ ದೋಷಗಳು ತಲೆಹಾಕಿರುವುದು ಕಾಣಬರುತ್ತದೆ. ಬೇರೆಯವರ ಹಿಂದಿನ ಸಂಕಲನಗಳಲ್ಲಿ ಪ್ರಕಟವಾದ ಗೀತೆಗಳು ಯಥಾವತ್ತಾಗಿ ಇಲ್ಲಿ ಕಾಣಿಸಿಕೊಳ್ಳುವುದು, ಒಂದು ಸಂಕಲನದ ಹಾಡುಗಳು ಮತ್ತೊಂದು ಸಂಕಲನದಲ್ಲೂ ನುಸುಳಿಕೊಳ್ಳುವುದು, ಮೊದಲ ಆವೃತ್ತಿಗೂ ಎರಡನೆಯ ಆವೃತ್ತಿಗೂ ಶೀರ್ಷಿಕೆಯನ್ನುಳಿದು ಯಾವ ಸಂಬಂಧವೂ ಇಲ್ಲದಂತಾಗುವುದು. ಇಂಥ ಕೆಲವು ಪ್ರಮುಖ ದೋಷಗಳು ಆರಂಭದ ಸಂಕಲನಗಳಲ್ಲಿ ಕಾಣಿಸಿಕೊಂಡರೂ ಮುಂದಿನ ಸಂಕಲನಗಳು ಸಾಕಷ್ಟು ಉತ್ತಮಗೊಳ್ಳುತ್ತ ಹೋಗಿರುವುದನ್ನು ನೋಡಬಹುದು. ಜನಪದಸಾಹಿತ್ಯ ಅಕಾಡಮಿಯ ಸಂಕಲನಗಳನ್ನು ಐದು ಪ್ರಮುಖ ವಿಭಾಗಗಳಲ್ಲಿ ಹೆಸರಿಸಬಹುದು : 1 ಲಾವಣಿಗಳು, 2 ಸ್ಥಳಗೀತೆಗಳು, 3 ಕೋಲುಪದಗಳು, 4 ಮದುವೆಯ ಪದಗಳು, 5 ಇತರ ಹಾಡುಗಳು.

ಲಾವಣಿಗಳ ಸಂಕಲನಗಳಲ್ಲಿ ಜಾನಪದ ಕಥನಗೀತೆಗಳು ಎಂಬುದು ಗಣನೀಯ ಕೃತಿಯಾಗಿದೆ. ಮೂವತ್ತಕ್ಕೂ ಹೆಚ್ಚು ಲಾವಣಿಗಳನ್ನು ಒಳಗೊಂಡ ಈ ಕೃತಿ ಲಾವಣಿಗಳಿಗಾಗಿಯೇ ಮೀಸಲಾದ ಈ ಬಗೆಯ ಕೃತಿಗಳಲ್ಲಿ ವಿಸ್ತಾರವಾದದು. ಅನೇಕ ಕಡೆಯ ಹಾಡುಗಾರರಿಂದ ಸಂಗ್ರಹಿಸಿದ ಉತ್ತಮ ರಚನೆಗಳು ಇಲ್ಲಿ ಲಭ್ಯವಾಗುತ್ತವೆ. ಮಳೆರಾಯ ಮಾರ್ಧಣ್ಣ, ಹೊಂಗೇಲಿ ಈರಣ್ಣ ಮಡಿದ್ಹೋದ, ಬಾಲನಾಗಮ್ಮ, ಕೃಷ್ಣಕೊರವಂಜಿ—ಮುಂತಾದವು ಕೆಲವು ಶ್ರೇಷ್ಠ ಮಾದರಿಗಳು. ಕಾಳಿಂಗರಾಯ, ಹಾಡಿನಲ್ಲಿ ನಾಡಕಥೆಗಳು, ಮೈಲಾರಲಿಂಗ ಈರಬಡಪ್ಪ—ಮುಂತಾದ ಕೃತಿಗಳಲ್ಲಿಯೂ ಕೆಲವು ಉತ್ತಮ ಲಾವಣಿಗಳು ಕಾಣಸಿಗುತ್ತವೆ.

ಚೆನ್ನಿಗ ಚೆಲುವಯ್ಯ, ಶ್ರೀಆದಿಚುಂಚನಗಿರಿ ಎಂಬ ಎರಡು ಕೃತಿಗಳು ಸ್ಥಳಗೀತೆಗಳ ಸಂಕಲನಗಳಾಗಿವೆ. ಕೋಲುಮಲ್ಲಿಗೆ ಕೋಲೆ, ಹೆಣ್ಣುಕೊಟ್ಟೇವು—ಈ ಎರಡು ಸಂಕಲನಗಳು ಪ್ರತ್ಯೇಕವಾಗಿ ಒಂದೊಂದು ವರ್ಗದ ಸಾಹಿತ್ಯವನ್ನೊಳಗೊಂಡ ಸುಂದರ ಸಂಕಲನಗಳು. ಒಂದೊಂದು ಸಂಪ್ರದಾಯದ ಸಮಗ್ರ ಗೀತೆಗಳನ್ನು ಒಂದೆಡೆ ಸಂಕಲಿಸಿಕೊಡುವ ಉತ್ತಮ ಪ್ರಯತ್ನವನ್ನು ಇಲ್ಲಿ ಕಾಣಬಹುದು. ಮಲ್ಲಿಗೆ ನಗುತಾವೆ. ಸಂಪಿಗೆ ಅರಳ್ಯಾವೆ—ಮುಂತಾದ ಇನ್ನೂ ಕೆಲವು ಉತ್ತಮ ಸಂಕಲನಗಳು ಈ ಮಾಲೆಯಲ್ಲಿ ಹೊರಬಂದಿವೆ.

ಜನಪದ ಸಾಹಿತ್ಯ ಅಕಾಡಮಿಯ ಸಂಕಲನಗಳು ಕನ್ನಡ ಜನಪದಗೀತೆಗಳ ವಿಸ್ತಾರವಾದ ಪ್ರಪಂಚವನ್ನು ಪರಿಚಯ ಮಾಡಿಕೊಡುವಂತಿದ್ದರೂ ಹಿನ್ನೆಲೆಯ ಸಂಪ್ರದಾಯಗಳ ವಿವೇಚನೆ ಹಾಗೂ ಟಿಪ್ಪಣಿಗಳಲ್ಲಿ, ಪಾಠಾಂತರಗಳ ಆಯ್ಕೆಯಲ್ಲಿ ಶಾಸ್ತ್ರೀಯ ದೃಷ್ಟಿಯಿಲ್ಲದ್ದರಿಂದ ಅವುಗಳ ಪ್ರಯೋಜನ ಅಷ್ಟೂ ಅಷ್ಟು ಕಡಿಮೆಯಾಗಿದೆ. ಹಲಸಂಗಿ ಸೋದರರು, ಗೊರೂರರು, ಮತಿಘಟ್ಟ ಸೋದರರು, ಗದ್ಗೀಮಠ—ಮುಂತಾದವರ ಕೃತಿಗಳ ಸಾಲಿನಲ್ಲಿ ಈ ಕೃತಿಗಳನ್ನು ಪರಿಶೀಲಿಸಿದಾಗ ಜಾನಪದದ ಸ್ಪಷ್ಟ ಕಲ್ಪನೆಯಿಲ್ಲದೆ, ಜನಪದ ಜೀವನದ ನಿಖರವಾದ ಅನುಭವ ವಿಸ್ತಾರವಿಲ್ಲದೆ, ಸಾಕಷ್ಟು ಪಾಂಡಿತ್ಯವಿಲ್ಲದೆ ಸಂಪಾದಿಸಿ, ಹೊರತಂದ ಯಾವ ಕೃತಿಯೂ ಉತ್ತಮ ಕಾಣಿಕೆಯಾಗಲಾರದು ಎಂಬ ಅಂಶ ಸ್ಪಷ್ಟವಾಗುತ್ತದೆ. ಆದರೂ ಇಲ್ಲಿರುವ ಅಪಾರ ಸಾಮಗ್ರಿ ಕೃತಿರೂಪದಲ್ಲಿ ದೊರೆಯುವಂತಾದುದರಿಂದ ಮುಂದಿನ ಸಂಪಾದನೆ ಹಾಗೂ ಸಂಶೋಧನೆಗಳಿಗೆ ತಕ್ಕಮಟ್ಟಿಗಾದರೂ ನೆರವಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಅವರ ನೆನೆದೇವು (1960), ಜನಪದ ಖಂಡಕಾವ್ಯಗಳು (1967)—ಇವು ಜೀಶಂಪ ಅವರಗೀತ ಹಾಗೂ ಲಾವಣಿಗಳ ಎರಡು ಸಂಕಲನಗಳು. ಅವರ ನೆನೆದೇವು ಎಂಬುದು ಜನಪದ ಭಕ್ತಿಗೀತೆಗಳನ್ನೊಳಗೊಂಡ ಕೃತಿ. ತಿರುಪತಿ ತಿಮ್ಮಪ್ಪ, ಮೇಲುಕೋಟೆ ಚೆಲುವರಾಯ, ಚುಂಚನಗಿರಿ ಭೈರುವ ಮುಂತಾದ ಪ್ರಸಿದ್ಧ ದೈವಗಳ ಬಗೆಗೂ ಅನೇಕ ಗ್ರಾಮದೇವತೆಗಳ ಬಗೆಗೂ ಉತ್ತಮ ಗೀತೆಗಳು ಈ ಕೃತಿಯಲ್ಲಿ ಸಂಕಲಿತವಾಗಿವೆ. ಜನಪದ ಖಂಡಕಾವ್ಯಗಳು ಎಂಬುದು ಮಂಡ್ಯ, ತುಮಕೂರು ಜಿಲ್ಲೆಗಳಲ್ಲಿ ಸಂಗ್ರಹಿಸಿದ ಹಾಡ್ಗತೆಗಳ ಸಂಗ್ರಹ. ಹುಳಿಯಾರು ಕೆಂಚಮ್ಮ, ಈರೋಬಿ ಹಿರಿದಿಮ್ಮಿ—ಮುಂತಾದ ಉತ್ತಮ ಕಥನಗೀತೆಗಳು ಈ ಸಂಕಲನದಲ್ಲಿವೆ. ಇದರ ಜೊತೆಗೆ ಕರ್ಣಾಟಕದ ಲಾವಣಿಕಾರರ ಹಾಡುಗಾರಿಕೆಯ ಸಂಪ್ರದಾಯಗಳನ್ನೆಲ್ಲ ಗುರುತಿಸಿ ಆಯಾ ಸಂಪ್ರದಾಯದ ಸಾಹಿತ್ಯವನ್ನೆಲ್ಲ ಇವರು ಸಂಗ್ರಹಿಸಿದ್ದಾರೆ.

1960–70ರ ಅವಧಿಯಲ್ಲಿ ಅಪಾರ ಸಂಖ್ಯೆಯ ಜನಪದ ಗೀತ ಸಂಕಲನಗಳು ಪ್ರಕಟವಾಗಿವೆ. ಅನೇಕ ಉತ್ಸಾಹಿ ತರುಣ ಸಂಗ್ರಾಹಕರು ಈ ಕ್ಷೇತ್ರದಲ್ಲಿ ಕಾಣಿಸಿಕೊಂಡಿದ್ದಾರೆ.

ಜ್ಯೋತಿ ಹೊಸೂರ ಅವರ ಬೆರಸಿ ಇಟ್ಟೇನಬೆಲ್ಲ ನೆನಗಡಲಿ, ಕೆ. ನಾರಾಯಣ, ಲಕ್ಷ್ಮೀನಾರಾಯಣ ಅವರ ತುಂಬೆ ಹೂವಿಟ್ಟು ಶರಣೆನ್ನಿ, ಚಂದ್ರಶೇಖರ ಐತಾಳರ ಕೈಲಿಯ

ಕರೆದ ನೊರೆಹಾಲು, ಕೆ. ವಿರೂಪಾಕ್ಷಗೌಡ, ಕಲ್ಲೇಶ ಪಾಲೇಶ ಇಟಗಿ, ಪಿ. ಕರಿವೀರನಗೌಡರ ಹೊಲಮನಿ ಪದಗಳು, ಕೆ. ವಿರೂಪಾಕ್ಷಗೌಡ ಮತ್ತು ಮುದೇನೂರು ಸಂಗಣ್ಣನವರ ಹಳ್ಳಿಯ ಪದಗಳು, ಜಿ. ಎಸ್. ಭಟ್ಟ ಉಬರಡ್ಕ ಅವರ ಸಿರಿಗಂಧ ಸೂಸ್ಯಾವೆ, ಮುದೇನೂರು ಸಂಗಣ್ಣನವರ ನವಿಲು ಕುಣಿದಾವ, ಎಂ. ಸಿ. ವಸಂತ ಕುಮಾರ ಅವರ ಮಳಲಿ ಗಿಡ್ಡಮ್ಮ, ಕೋಲುಪದಗಳು, ಎಲ್. ಆರ್. ಹೆಗಡೆ ಅವರ ತಿಮ್ಮಕ್ಕನ ಪದಗಳು, ಡಿ. ಲಿಂಗಯ್ಯನವರ ಕೊಂತಿಪೂಜೆ, ಚಂದ್ರಶೇಖರ ಕಂಬಾರರ ಬಣ್ಣೇಸಿ ಹಾಡವ್ವ ನನ ಬಳಗ, ಕ್ಯಾತನಹಳ್ಳಿ ರಾಮಣ್ಣ ಅವರ ಐದು ಜನಪದ ಕಥನಗೀತೆಗಳು—ಇವು ಕಳೆದ ಮೂರು ವರ್ಷಗಳ ಅವಧಿಯಲ್ಲಿ ಪ್ರಕಟವಾಗಿರುವ ಕೆಲವು ಗಮನಾರ್ಹ ಸಂಕಲನಗಳಾಗಿವೆ.

ಬೆಳಗಾವಿ ಜಿಲ್ಲೆಯ ರಾಯಭಾಗ ಪ್ರದೇಶದ ಸಾಹಿತ್ಯವನ್ನು ಜ್ಯೋತಿ ಹೊಸೂರರೂ ಬೆಳಗಾವಿ ಜಿಲ್ಲೆಯ ಅಕ್ಕತಂಗಿಯರಹಾಳ, ಘೋಡಗೇರಿ, ಗೋಕಾಕ ಮೊದಲಾದ ಕಡೆಗಳಲ್ಲಿ ಪ್ರಚಲಿತವಿರುವ ಕೆಲವು ಸುಂದರ ತ್ರಿಪದಿಗಳನ್ನು ಕಂಬಾರರೂ ಸಂಕಲಿಸಿ ಪ್ರಕಟಿಸಿದ್ದಾರೆ.

ಎಂ. ಸಿ. ವಸಂತಕುಮಾರ್ ಅವರು ಹಾಸನ ಸುತ್ತಿನಲ್ಲಿ ಸಂಗ್ರಹಕಾರ್ಯವನ್ನು ನಡೆಸುತ್ತಿದ್ದಾರೆ. ಅವರ ಮಳಲಿ ಗಿಡ್ಡಮ್ಮ ಎಂಬುದು ಗ್ರಾಮದೇವತೆಯೊಂದಕ್ಕೆ ಸಂಬಂಧಿಸಿದ ಗೀತೆಗಳನ್ನೊಳಗೊಂಡ ಒಂದು ಉತ್ತಮ ಸಂಕಲನ. ಅವರ ಕೋಲುಪದಗಳು ಎಂಬುದರಲ್ಲಿ ಅಪೂರ್ವವಾದ ಕೋಲಾಟದ ಪದಗಳಿವೆ. ಜಿ.ಎಸ್. ಭಟ್ಟರ ಸಿರಿಗಂಧಸೂಸ್ಯಾವೆ ಎಂಬುದು ಕಿಕ್ಕೇರಿ ಕಡೆಯ ಗೀತೆಗಳ ಒಂದು ಒಳ್ಳೆಯ ಸಂಕಲನ. ಸಕಲೇಶಪುರದ ಕಾಫಿಯ ತೋಟದ ಕೂಲಿಯಾಳುಗಳಿಂದ ಈ ಹಾಡುಗಳನ್ನು ಸಂಗ್ರಹಿಸಲಾಗಿದೆ. ಬಳ್ಳಾರಿ ಕಡೆಯ ಹಾಡುಗಳು ವಿರೂಪಾಕ್ಷಗೌಡ ಹಾಗೂ ಮುದೇನೂರು ಸಂಗಣ್ಣನವರ ಸಂಕಲನಗಳಲ್ಲಿ ಬೆಳಕು ಕಂಡಿವೆ. ಎಲ್. ಆರ್. ಹೆಗಡೆಯವರು ಉತ್ತರ ಕನ್ನಡ ಜಿಲ್ಲೆಯಲ್ಲಿ ಅಪಾರ ಸಂಗ್ರಹಕಾರ್ಯ ನಡೆಸುತ್ತಿದ್ದಾರೆ. ಅವರ ತಿಮ್ಮಕ್ಕನ ಪದಗಳು ಕನ್ನಡ ಲಾವಣಿಸಾಹಿತ್ಯಕೃತಿಗಳ ಸಾಲಿನಲ್ಲಿ ಒಂದು ಮೈಲಿಗಲ್ಲು. ಹಾಲಕ್ಕಿ ಗೌಡತಿ ತಿಮ್ಮಕ್ಕ ಮೂವತ್ತಕ್ಕೂ ಹೆಚ್ಚು ಕಥನಗೀತೆಗಳನ್ನು ತಾನೊಬ್ಬಳೇ ಇಲ್ಲಿ ಹಾಡಿದ್ದಾಳೆ.

ಕ್ಯಾತನಹಳ್ಳಿ ರಾಮಣ್ಣ ಅವರ ಐದು ಜನಪದ ಕಥನಗೀತೆಗಳು ಪಾಂಡವಪುರದ ಸಮೀಪದ ಕ್ಯಾತನಹಳ್ಳಿಯ ಒಬ್ಬ ಹಾಡುಗಾರ್ತಿಯಿಂದ ಸಂಗ್ರಹಿಸಿದುವು. ರಾಮಣ್ಣನವರು ಇನ್ನೂ ಅನೇಕ ಕಥನಗೀತೆಗಳನ್ನೂ ಇತರ ಹಾಡುಗಳನ್ನೂ ಸಂಗ್ರಹಿಸಿದ್ದಾರೆ.

ಕೇವಲ ಗೀತಪ್ರಕಾರದಿಂದ ಆರಂಭವಾದ ಕನ್ನಡ ಜಾನಪದ ಸಂಗ್ರಹಕಾರ್ಯ ಈಗ ಸಮಗ್ರ ಜಾನಪದದತ್ತ ವ್ಯಾಪಿಸುತ್ತಿರುವುದು ಗಮನಾರ್ಹ ಅಂಶವಾಗಿದೆ. ತಡವಾಗಿಯಾದರೂ ಜಾನಪದದ ಎಲ್ಲ ಶಾಖೆಗಳ ಮೇಲೂ ಸಂಗ್ರಾಹಕರ ದೃಷ್ಟಿ ಹರಿಯುತ್ತಿರುವುದು ಅಭಿನಂದನೀಯವಾಗಿದೆ. ನಾಡಿನ ಎಲ್ಲ ಕಡೆಗಳಲ್ಲೂ ತುಂಬಿ ತುಳುಕುತ್ತಿರುವ ಜಾನಪದ ಸಂಬಂಧವಾದ ಉತ್ಸಾಹ, ಹುಮ್ಮಸ್ಸುಗಳೇ ಮುಂದಿನ ಉತ್ತಮ ಸಾಧನೆಯ ಹೆಜ್ಜೆಗುರುತುಗಳಾಗಿವೆ.

ಜನಪದ ಗದ್ಯಕಥನಗಳಲ್ಲಿ ಪುರಾಣ (ಮಿತ್), ಐತಿಹ್ಯ (ಲೆಜೆಂಡ್) ಹಾಗೂ ಕಟ್ಟುಕಥೆ (ಮೆರ್ಖನ್)—ಇವು ಮುಖ್ಯವಾದುವು. ಈ ಮೂರರಲ್ಲಿ ಕಟ್ಟುಕಥೆಗಳ ಅತ್ಯುತ್ತಮ ಸಂಗ್ರಹಗಳು ಇತ್ತೀಚೆಗೆ ಪ್ರಕಟವಾಗಿವೆ.

ಕನ್ನಡದಲ್ಲಿ ಜನಪದ ಕಥೆಗಳನ್ನು ಶಾಸ್ತ್ರೀಯವಾಗಿ ಸಂಪಾದಿಸಿ ವರ್ಗೀಕರಿಸಿ ಕೃತಿಗಳನ್ನು ಹೊರತಂದಿರುವ ಪ್ರಯತ್ನಗಳನ್ನು ಕಾಣಬಹುದು. ಜೀಶಂಪ ಅವರ ಕನ್ನಡ ಜನಪದ ಕಥೆಗಳು, ಅವರೇ ಸಂಪಾದಿಸಿರುವ ಬೇರೆ ಬೇರೆ ಸಂಗ್ರಾಹಕರ ಆಯ್ದ ಜನಪದ ಕಥೆಗಳು, ರಾಗೌ ಅವರ ಕರ್ನಾಟಕ ಜನಪದ ಕಥೆಗಳು—ಮುಂತಾದುವು ಗಾತ್ರದ ದೃಷ್ಟಿಯಿಂದಲೂ ವೈವಿಧ್ಯದ ದೃಷ್ಟಿಯಿಂದಲೂ ಪ್ರಾದೇಶಿಕತೆಯ ದೃಷ್ಟಿಯಿಂದಲೂ ಉತ್ತಮ ಸಂಪಾದನೆಯ ದೃಷ್ಟಿಯಿಂದಲೂ ಪ್ರಮುಖವೆನಿಸಿವೆ. ಆಧುನಿಕ ವೈಜ್ಞಾನಿಕ ಸೂತ್ರಗಳನ್ನನುಸರಿಸಿ ಆಶಯಗಳನ್ನೂ (ಮೋಟಿವ್ಸ್), ವರ್ಗಗಳನ್ನೂ (ಟೈಪ್ಸ್) ಭಿನ್ನರೂಪಗಳನ್ನೂ (ವೇರಿಯಂಟ್ಸ್) ಗುರುತಿಸುವ ಪ್ರಯತ್ನಗಳು ಇತ್ತೀಚಿನ ಸಂಕಲನಗಳಲ್ಲಿ ಕಂಡುಬಂದಿದೆ. ಈ ಕೃತಿಗಳ ಪ್ರಕಟನೆಯ ಮೂಲಕ ಕನ್ನಡ ಜಾನಪದ ಸಂಗ್ರಹ ಒಂದು ಹೊಸ ತಿರುವನ್ನು ಪಡೆದಿದೆ. ಇವುಗಳಲ್ಲಿನ ವಿಸ್ತಾರವಾದ ಪ್ರಸ್ತಾವನೆಗಳು ಜನಪದ ಕಥಾಭ್ಯಾಸಿಗಳಿಗೆ ಉಪಯುಕ್ತವಾಗಿವೆ.

ಈ ದಶಕದಲ್ಲಿ ಪ್ರಕಟವಾದ ಕಥಾಸಂಕಲನಗಳಲ್ಲಿ ಮತಿಘಟ್ಟ ಕೃಷ್ಣಮೂರ್ತಿಗಳ ಶಕುನದ ಹಕ್ಕಿ ಮತ್ತು ಇತರ ಜನಪದ ಕಥೆಗಳು, ಡಿ. ಲಿಂಗಯ್ಯನವರ ಮಣ್ಣಿನ ಮಿಡಿತ, ಧವಳಶ್ರೀಯವರ ಜಾನಪದ ಕಥಾಮೃತ, ಜಿ. ವಿ. ದಾಸೇಗೌಡರ ಹಾವಾಗಿ ಹರಿದ ಅಣ್ಣಯ್ಯ—ಮುಂತಾದುವು ಮುಖ್ಯವಾದುವು. ಮತಿಘಟ್ಟ ಕೃಷ್ಣಮೂರ್ತಿಗಳ ಸಂಕಲನದಲ್ಲಿ ಶುದ್ಧ ಜನಪದ ಕಥೆಗಳ ಆಯ್ಕೆಗೆ ಅವಕಾಶವಿತ್ತಾದರೂ ಕಥನಗೀತೆಗಳನ್ನೂ ಕ್ಷೇತ್ರಮಾಹಾತ್ಮ್ಯಗಳನ್ನೂ ಐತಿಹ್ಯಗಳನ್ನೂ ಕಥೆಗಳ ಸಾಲಿನಲ್ಲಿಯೇ ಸೇರಿಸುವುದು ಅಷ್ಟು ಉಚಿತವಲ್ಲ. ಜಾನಪದ ಜಾಯಮಾನಕ್ಕೆ ಒಗ್ಗದ ಶಿಷ್ಟ ಸಂಪ್ರದಾಯದ ಕೆಲವು ಕಥೆಗಳೂ ಇಲ್ಲಿವೆ. ಭಲ್ಲೂಕಪುರದ ಅಪ್ಪಾಜಿಭಟ್ಟ ಜನಪದ ಕಥೆಯೆನಿಸುವುದಿಲ್ಲ. ಅದೊಂದು ಐತಿಹಾಸಿಕ ಕಥೆಯಾಗಬಹುದು. ಇಲ್ಲಿ ನಾಲ್ಕಾರು ಒಳ್ಳೆಯ ಜನಪದ ಕಥೆಗಳೂ ಇವೆ.

ಡಿ. ಲಿಂಗಯ್ಯನವರ ಮಣ್ಣಿನ ಮಿಡಿತ ಇಪ್ಪತ್ತೆರಡು ಕಥೆಗಳನ್ನೊಳಗೊಂಡಿದೆ. ಇಲ್ಲಿನ ಧಾಟಿಯನ್ನು ಗಮನಿಸಿದರೆ ಮೂಲ ಕಥೆಗಾರನ ಶೈಲಿ ಯಥಾವತ್ತಾಗಿ ಮೂಡಿಬಂದಿಲ್ಲವೆನಿಸುತ್ತದೆ.

ಜನಪದ ಕಥೆಗಳ ಎರಡು ಒಳ್ಳೆಯ ಸಂಕಲನಗಳನ್ನು ಧವಳಶ್ರೀಯವರು ಪ್ರಕಟಿಸಿದ್ದಾರೆ. ಮೂಲನಿರೂಪಣೆಯನ್ನು ಕಾಯ್ದುಕೊಳ್ಳುವಲ್ಲಿ ಇವರಲ್ಲಿಯೂ ಕೆಲವು ಅತಿರೇಕಗಳು ಕಾಣಬರುತ್ತವೆ. ಆದರೆ ಕೆಲವು ವಿಶಿಷ್ಟ ಜನಪದ ನುಡಿಗಟ್ಟುಗಳನ್ನು ಉಳಿಸಿಕೊಳ್ಳುವುದರಲ್ಲಿ ಸಂಗ್ರಾಹಕರು ಯಶಸ್ವಿಯಾಗಿದ್ದಾರೆ. ಜಿ. ವಿ. ದಾಸೇಗೌಡರ ಹಾವಾಗಿ ಹರಿದ ಅಣ್ಣಯ್ಯ ಎಂಬುದು ಮಂಡ್ಯದ ಸುತ್ತಿನ ಕಥೆಗಳನ್ನು ಒಳಗೊಂಡಿದೆ. ಜನಪದ ಕಥೆಗಾರನ ಮೂಲಶೈಲಿಯನ್ನು ದಾಸೇಗೌಡರು ಬಳಸಿಕೊಳ್ಳಲು ಮಾಡಿರುವ ಪ್ರಯತ್ನ ಅನುಕರಣೀಯವಾದುದು.

ಗಾದೆಗಳ ಸಂಗ್ರಹದಲ್ಲಿ ಅಚ್ಚಪ್ಪ, ವೆಂಕಟರಮಣಯ್ಯ, ಜೀಶಂಪ, ರಾಗೌ, ಸುಧಾಕರ—ಇವರ ಹೆಸರುಗಳನ್ನು ಇಲ್ಲಿ ಉಲ್ಲೇಖಿಸಬಹುದು.

ರಾಗೌ ಅವರ ನಮ್ಮ ಗಾದೆಗಳು ಕನ್ನಡ ಗಾದೆಗಳ ಕ್ಷೇತ್ರದಲ್ಲಿ ಒಂದು ಪ್ರಮುಖ ಕೃತಿಯಾಗಿದೆ. ಎರಡು ಸಾವಿರಕ್ಕೂ ಹೆಚ್ಚು ಸಂಖ್ಯೆಯ ಗಾದೆಗಳನ್ನು ಅವರು ಈ ಸಂಕಲನದಲ್ಲಿ ಒದಗಿಸಿರುವುದು ಗಣನೀಯ ಅಂಶವಾಗಿದೆ. ಅತ್ಯಂತ ವಿಸ್ತಾರವಾದ ಇಲ್ಲಿನ ಪ್ರಸ್ತಾವನೆ ಗಾದೆಗಳ ವಿವರವಾದ ಅಭ್ಯಾಸಕ್ಕೆ ಸಹಾಯಕವಾಗಿದೆ. ತೀರ ಅಶ್ಲೀಲ ಎಂದು ತೋರುವ ಯಾವ ಗಾದೆಯನ್ನೂ ಕೈಬಿಡದೆ ಅವರು ಈ ಸಂಕಲನದಲ್ಲಿ ಹೊರತಂದಿದ್ದಾರೆ. ಜಾನಪದವನ್ನು ವೈಜ್ಞಾನಿಕವಾಗಿ ಅಧ್ಯಯನ ಮಾಡುವವರಿಗೆ ಇಂಥ ಕೃತಿಗಳು ಹೆಚ್ಚು ಉಪಯುಕ್ತವಾಗುತ್ತವೆ. ರಾಗೌ ಅವರ ಕಿಟ್ಟೆಲ್ ಕೋಶದ ಗಾದೆಗಳು ಎಂಬುದು ಕಿಟ್ಟೆಲರ ಅರ್ಥಕೋಶದಲ್ಲಿ ಅಳವಡಿಸಿದ ನಾಲ್ಕು ಸಾವಿರಕ್ಕೂ ಹೆಚ್ಚು ಗಾದೆಗಳನ್ನು ಒಂದೆಡೆ ಸಂಕಲಿಸಿಕೊಡುವ ಒಳ್ಳೆಯ ಪ್ರಯತ್ನವಾಗಿದೆ.

ಜಾನಪದ ಭಾಷಿಕ ಬಗೆಗಳಲ್ಲಿ ಗಾದೆಗಳಷ್ಟೇ ಪ್ರಮುಖವಾದುವು ಒಗಟುಗಳು. ಕನ್ನಡದಲ್ಲಿ ಒಗಟುಗಳ ಸಂಗ್ರಹ 1946ರ ಸುಮಾರಿಗೆ ಆರಂಭವಾಯಿತು. ಶಂ. ಬಾ. ಜೋಶಿಯವರ ಮಕ್ಕಳ ಒಡಪುಗಳು ಕನ್ನಡದ ಒಗಟುಗಳ ಸಂಗ್ರಹದಲ್ಲಿ ಮೊದಲನೆಯದು. ಅನೇಕ ಅತ್ಯುತ್ತಮ ಒಗಟುಗಳನ್ನು ಈ ಸಂಕಲನದಲ್ಲಿ ಕಾಣಬಹುದು. ಈಶ್ವರಚಂದ್ರ ಚಿಂತಾಮಣಿಯವರ ಗರತಿಯರ ಮನೆಯಿಂದ ಎಂಬ ಸಂಕಲನದಲ್ಲಿಯೂ ಕೆಲವು ಒಳ್ಳೆಯ ಒಗಟುಗಳಿವೆ. ಕಳೆದ ಮೂರು ವರ್ಷಗಳಲ್ಲಿ ಒಗಟುಗಳಿಗೆ ಸಂಬಂಧಿಸಿದಂತೆಯೇ ಉತ್ತಮ ಸಂಗ್ರಹಕಾರ್ಯ ನಡೆದು ಶ್ರೇಷ್ಠ ಸಂಕಲನಗಳು ಹೊರಬಂದಿವೆ. ಜೀಶಂಪ ಅವರ ಕನ್ನಡ ಒಗಟುಗಳು ಈ ಅಭ್ಯಾಸದ ಕಡೆ ಜಾನಪದ ವಿದ್ವಾಂಸರ ದೃಷ್ಟಿಯನ್ನು ಸೆಳೆದ ಕೃತಿ. ಇದಾದ ಮೇಲೆ ಸಂಕಲನಗಳನ್ನು ಪ್ರಕಟಿಸಿದ ಕೀರ್ತಿ ಚಕ್ಕಲೂರು ಚನ್ನಪ್ಪ, ಸುಧಾಕರ ಹಾಗೂ ರಾಗೌ ಅವರಿಗೆ ಸಲ್ಲಬೇಕು.

ಸುಧಾಕರ ಅವರ ಜನಪದ ಬೆಡಗಿನ ವಚನಗಳು ಒಂದು ಪ್ರಶಂಸನೀಯ ಕೃತಿ. ಐನೂರಕ್ಕೂ ಹೆಚ್ಚು ಒಗಟುಗಳನ್ನು ಬೆಂಗಳೂರು ಮೈಸೂರು ಜಿಲ್ಲೆಗಳಿಂದ ಆಯ್ದು ಈ ಸಂಕಲನದಲ್ಲಿ ಸೇರಿಸಲಾಗಿದೆ. ವಿದ್ವತ್ಪೂರ್ಣವಾದ ಅವರ ಪ್ರಸ್ತಾವನೆ ಒಗಟುಗಳ ವಿವೇಚನೆಯ ಹೊಸ ದೃಷ್ಟಿಯನ್ನು ಮೂಡಿಸುತ್ತದೆ. ಪ್ರಕೃತ ಸಂಕಲನದಲ್ಲಿ ಜನಪದ ಒಗಟುಗಳನ್ನೂ ಪರಸ್ಪರ ಪರಿಣಾಮವನ್ನೂ ಚರ್ಚಿಸಿರುವುದು ವಿದ್ವಾಂಸರ ಆಸಕ್ತಿಯನ್ನು ಕೆರಳಿಸುತ್ತದೆ.

ರಾಗೌ ಅವರ ನಮ್ಮ ಒಗಟುಗಳು ಮತ್ತೊಂದು ಉತ್ತಮ ಸಂಕಲನ. ಐನೂರಕ್ಕೂ ಹೆಚ್ಚು ಸಂಖ್ಯೆಯ ಒಗಟುಗಳು ಈ ಸಂಕಲನದಲ್ಲಿವೆ. ಇಲ್ಲಿನ ವಿಸ್ತಾರವಾದ ಪ್ರಸ್ತಾವನೆ ಅತ್ಯಂತ ಉಪಯುಕ್ತವಾದುದಾಗಿದೆ.

ವೆಂಕಟರಮಣಯ್ಯನವರ ಕನ್ನಡ ಗಾದೆಗಳ ಕೋಶ, ಪಡೆನುಡಿಗಳ ಕೋಶ, ಅಚ್ಚಪ್ಪನವರ ಗ್ರಂಥಸ್ಥ ಗಾದೆಗಳು—ಇವೂ ಗಮನಾರ್ಹ ಸಂಕಲನಗಳು. ಪಡೆನುಡಿಗಳ ಕೋಶ ಜಾನಪದದ ಒಂದು ಹೊಸ ಪ್ರಕಾರದ ಮೇಲೆ ಬೆಳಕು ಚೆಲ್ಲುವ ಕೃತಿಯಾಗಿದೆ. ಜನಪದ ಭಾಷೆಯ ಸತ್ತ್ವಸೌಂದರ್ಯಗಳನ್ನು ಅರಿಯಲು ಕನ್ನಡ ನುಡಿಗಟ್ಟುಗಳ ಈ ಸಂಗ್ರಹ ಸಹಾಯಕವಾಗುತ್ತದೆ. ಪ್ರಚಲಿತ ಗಾದೆಗಳ ಐತಿಹಾಸಿಕ ರೂಪಗಳನ್ನು ಪ್ರಾಚೀನ ಕಾವ್ಯಗಳಲ್ಲಿ ಗುರುತಿಸಿ ಅವನ್ನೆಲ್ಲ ಒಂದೆಡೆ ಕಲೆಹಾಕಿ ಗ್ರಂಥಸ್ಥಗಾದೆಗಳು ಎಂಬ ಬೃಹತ್ಸಂಕಲನವನ್ನು ಅಚ್ಚಪ್ಪನವರು ಹೊರತಂದಿದ್ದಾರೆ. ಕೆಲವು ನ್ಯೂನತೆಗಳಿದ್ದರೂ ಈ ದಶಕದ ಜಾನಪದ ಕ್ಷೇತ್ರದ ದೊಡ್ಡ ಸಾಧನೆಗಳಲ್ಲಿ ಒಂದಾಗಿ ಅಚ್ಚಪ್ಪನವರ ಕೃತಿ ನಿಲ್ಲುತ್ತದೆ.

ಕನ್ನಡದಲ್ಲಿ ಪ್ರಕಟವಾಗಿರುವ ಜಾನಪದ ಸಂಗ್ರಹಗಳ ಜೊತೆಯಲ್ಲಿಯೇ ಅಂಥ ಸಾಹಿತ್ಯವನ್ನು ಕುರಿತ ವಿಶ್ಲೇಷಣೆ, ವಿವೇಚನೆಯೂ ತಕ್ಕಮಟ್ಟಿಗೆ ನಡೆಯುತ್ತ ಬಂದಿದೆ. ನಾಲ್ಕು ಭಾಗವಾಗಿ ಇಂಥ ಬರೆಹವನ್ನು ವಿಂಗಡಿಸಿಕೊಳ್ಳಬಹುದು : 1 ಜಾನಪದದ ನಾನಾ ಮುಖಗಳನ್ನು ಕುರಿತ ಕೃತಿಗಳು, 2 ಜಾನಪದದ ಹಲವು ವಿಷಯಗಳನ್ನು ಆಧರಿಸಿದ ಬಿಡಿಲೇಖನಗಳು, 3 ಗ್ರಂಥಗಳ ಪ್ರಸ್ತಾವನೆ ಹಾಗೂ ಮುನ್ನುಡಿಗಳು, 4 ಜಾನಪದ ಕೃತಿಗಳ ಉತ್ತಮ ವಿಮರ್ಶೆಗಳು.

ಜಾನಪದವನ್ನು ಕುರಿತ ವಿಮರ್ಶಾಗ್ರಂಥಗಳ ಸಾಲಿನಲ್ಲಿ ದೇವುಡು ನರಸಿಂಹ ಶಾಸ್ತ್ರಿಗಳ ಕರ್ಣಾಟಕ ಸಂಸ್ಕೃತಿ 1946ರ ವೇಳೆಗೇ ಪ್ರಕಟವಾದ ಒಂದು ಅತ್ಯುತ್ತಮ ಕೃತಿಯಾಗಿದೆ. ಕನ್ನಡದಲ್ಲಿ ಸಮಗ್ರ ಜಾನಪದದ ಪ್ರಸ್ತಾಪ ಮೊಟ್ಟಮೊದಲ ಬಾರಿಗೆ ದೇವುಡು ಅವರ ಕೃತಿಯಲ್ಲಿ ಕಾಣಿಸಿಕೊಂಡಿದೆ. ಜಾನಪದವನ್ನು ಜನತೆಯ ಸಂಸ್ಕೃತಿ ಎಂದು ಕರೆದು ಆ ಕುರಿತಾದ ಪ್ರಸಿದ್ಧ ವಿವರಣೆಗಳನ್ನೆಲ್ಲ ದೇವುಡು ಅವರು ವಿವೇಚಿಸಿ, ನಾಡಿನ ಸಂಸ್ಕೃತಿಯನ್ನು ಅರಿಯಲು ಜಾನಪದದ ನಾನಾ ಶಾಖೆಗಳನ್ನು ಅವಲಂಬಿಸಿ ಅವರು ಮಾಡಿರುವ ಪ್ರಯತ್ನ ಸ್ತುತ್ಯವಾದುದು. ಜಾನಪದದ ಒಂದು ಶಾಸ್ತ್ರೀಯವಾದ ಅಧ್ಯಯನದ ಮೊದಲ ಹೆಜ್ಜೆಯನ್ನು ನಾವು ಇಲ್ಲಿ ಕಾಣಬಹುದು. ಗಂಡಸರ ಹಾಡು, ಹೆಂಗಸರ ಹಾಡು, ಗಾದೆ, ಒಗಟು, ಕಥೆ, ಲಾವಣಿ, ನಡೆನುಡಿ ಮುಂತಾದ ಅನೇಕ ಶಾಖೆಗಳ ಆಧಾರದ ಮೇಲೆ ಜನತೆಯ ಸಂಸ್ಕೃತಿಯ ನಿರ್ಧಾರಕ್ಕೆ ತೊಡಗಿ ಜಾನಪದವನ್ನು ಎಷ್ಟು ಸಾರ್ಥಕ ರೀತಿಯಲ್ಲಿ ಸಂಶೋಧನೆಗೆ ಬಳಸಿಕೊಳ್ಳಬಹುದು ಎಂಬುದನ್ನು ದೇವುಡು ತಮ್ಮ ಕೃತಿಯ ಮೂಲಕ ತೋರಿದ್ದಾರೆ.

ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರ ಹಳ್ಳಿಯ ಚಿತ್ರಗಳು ಜನಪದ ಸಾಹಿತ್ಯದ ಮೂಲಕ ಗ್ರಾಮಾಂತರ ಜೀವನವನ್ನು ವ್ಯಾಖ್ಯಾನಿಸಲು ಮಾಡಿದ ಒಂದು ಉತ್ತಮ ಪ್ರಯತ್ನ. ಜನಪದಸಾಹಿತ್ಯ, ರೈತನೊಡನೆ ಅದರ ನಿಕಟಸಂಬಂಧ, ಆ ಸಾಹಿತ್ಯದ ಹಿರಿಮೆ ಮುಂತಾದುವನ್ನು ಕುರಿತು ಗೋರೂರರು ತಮ್ಮ ಕೃತಿಯಲ್ಲಿ ಹೃದಯಂಗಮವಾಗಿ ಚರ್ಚಿಸಿದ್ದಾರೆ. ತಮ್ಮ ಈ ಚರ್ಚೆಗೆ ಅವರು ಅಪಾರ ಜನಪದಸಾಹಿತ್ಯವನ್ನು ಬಳಸಿಕೊಂಡು ಕೃತಿಯ ಮೌಲ್ಯವನ್ನು ಹೆಚ್ಚಿಸಿದ್ದಾರೆ.

1954ರಲ್ಲಿ ಸಿಂಪಿ ಲಿಂಗಣ್ಣನವರ ಗರತಿಯ ಬಾಳು—ಪ್ರಕಟವಾಯಿತು. ಗರತಿಯ ಸಾಹಿತ್ಯದ ಸೊಗಸು, ಜೀವನ ಸಂದೇಶ, ಸ್ತ್ರೀಜೀವನದ ದಿವ್ಯ ಸಂಸ್ಕೃತಿ ಮುಂತಾದವನ್ನು ಕುರಿತ ಸುಂದರ ವಿವೇಚನೆಯನ್ನು ಈ ಕೃತಿಯಲ್ಲಿ ಕಾಣಬಹುದು. 1960ರಲ್ಲಿ ಪ್ರಕಟವಾದ ಇದೇ ಲೇಖಕರ ಜನಾಂಗದ ಜೀವಾಳವೆಂಬುದು ಜಾನಪದದ ವಿವಿಧ ಮುಖಗಳ ಮೇಲೆ ಬೆಳಕು ಚೆಲ್ಲುವ ಪ್ರಬಂಧಗಳನ್ನೊಳಗೊಂಡಿದೆ. ಜನಪದ ಗೀತೆಗಳ ಅನೇಕ ಹೊಸ ಪ್ರಕಾರಗಳನ್ನು ಕುರಿತು ಸಿಂಪಿಯವರು ವಿವರವಾಗಿ ಚರ್ಚೆ ನಡೆಸಿದ್ದಾರೆ. ಬಯಲಾಟದ ಪದಗಳು, ಲಾವಣಿ ಹಾಡುಗಳು, ಜನಪದ ಸಾಹಿತ್ಯದಲ್ಲಿ ಅದ್ಭುತ ಕಥೆಗಳ ಪ್ರಾಶಸ್ತ್ಯ, ಮಕ್ಕಳನ್ನು ಆಡಿಸುವ ಹಾಡು, ಮದುವೆಯ ಹಾಡು—ಹೀಗೆ ಅನೇಕ ಆಸಕ್ತಿದಾಯಕ ವಿಷಯಗಳ ಮೇಲೆ ಅವರು ಸಂಶೋಧಕರ ದೃಷ್ಟಿಯನ್ನು ಸೆಳೆದಿದ್ದಾರೆ.

ಮಾಸ್ತಿಯವರ ಕರ್ಣಾಟಕದ ಜನಪದ ಸಾಹಿತ್ಯ ಕನ್ನಡ ಜನಪದ ಸಾಹಿತ್ಯದ ಸೌಂದರ್ಯ, ಸಾಂಸ್ಕೃತಿಕ ಮೌಲ್ಯಗಳನ್ನು ಕುರಿತ ಮತ್ತೊಂದು ಗಮನಾರ್ಹ ಕೃತಿ. ಇದು ಪ್ರಕಟವಾದುದು 1950ರಲ್ಲಿ.

ಗದ್ದಿಗೆಮಠರ ಮಹಾಪ್ರಬಂಧ ಕನ್ನಡ ಜಾನಪದ ಗೀತೆಗಳು, 1963ರಲ್ಲಿ ಪ್ರಕಟವಾಯಿತು. ಉತ್ತರ ಕರ್ಣಾಟಕದ ಎಲ್ಲ ಬಗೆಯ ಜನಪದ ಗೀತಸಂಪ್ರದಾಯಗಳನ್ನು ವಿಸ್ತಾರವಾಗಿ ಪರಿಚಯ ಮಾಡಿಕೊಡುವ ಈ ಕೃತಿ ಕನ್ನಡ ಜನಪದ ಗೀತೆಗಳ ವಿಶ್ಲೇಷಣೆಯನ್ನು ಕುರಿತ ಒಂದು ಶ್ರೇಷ್ಠ ಗ್ರಂಥ. ಸ್ತುತಿಪದಗಳು, ಹಳ್ಳಿಯ ಪದಗಳು, ಹಳ್ಳಿಯ ಕುಣಿತಗಳು, ಮಕ್ಕಳ ಆಟದ ಹಾಡುಗಳು, ಹಾಸ್ಯದ ಹಾಡುಗಳು, ಸುಗ್ಗಿಯ ಸಂಪ್ರದಾಯ, ಹಳ್ಳಿಯ ಹಬ್ಬಗಳು, ಹಂತಿಯ ಹಾಡುಗಳು—ಹೀಗೆ ಅತ್ಯಂತ ವ್ಯಾಪಕವಾಗಿ ಈ ಕೃತಿಯಲ್ಲಿ ಜನಪದ ಗೀತೆಗಳ ಒಂದು ದೊಡ್ಡ ವಿಶ್ವವನ್ನೇ ಗದ್ದಿಗೆಮಠರು ತೆರೆದು ತೋರಿಸಿದ್ದಾರೆ.

ಈ ಕೃತಿಗಳ ಸಾಲಿನಲ್ಲಿ ಮತ್ತೊಂದು ಗಮನಾರ್ಹ ವಿಮರ್ಶಾಗ್ರಂಥ ಶಿವರಾಮ ಕಾರಂತರ ಜಾನಪದ ಗೀತೆಗಳು. 1966ರಲ್ಲಿ ಪ್ರಕಟವಾದ ಈ ಕೃತಿಯಲ್ಲಿ ಕಾರಂತರು ಜನಪದ ಗೀತೆಗಳ ವಸ್ತುಪ್ರಕಾರಗಳನ್ನು ಕುರಿತು ಸೊಗಸಾದ ವಿವೇಚನೆಯನ್ನು ನಡೆಸಿದ್ದಾರಲ್ಲದೆ ಪಾಡ್ದನಗಳು, ಕೊಡಗಿನ ಜನಪದ ಗೀತೆಗಳು, ಅನೇಕ ಕನ್ನಡ ತ್ರಿಪದಿ ಹಾಗೂ ಲಾವಣಿಗಳನ್ನು ಉಲ್ಲೇಖಿಸಿ ಅವುಗಳ ವಿಶ್ಲೇಷಣೆ ಮಾಡಿದ್ದಾರೆ.

ಜೀಶಂಪ ಅವರ ಜನಪದ ಸಾಹಿತ್ಯ ಸಮೀಕ್ಷೆ ಅನೇಕ ಸಂಶೋಧನಾತ್ಮಕ ಹಾಗೂ ಪರಿಚಯಾತ್ಮಕ ಪ್ರಬಂಧಗಳನ್ನೊಳಗೊಂಡ ಕೃತಿ. ಕರಪಾಲ ಮೇಳ, ಕಂಸಾಳೆ ಸಾಹಿತ್ಯ, ಐತಿಹ್ಯಗಳು, ಗಾದೆಗಳು, ಹಬ್ಬಹರಿದಿನಗಳು—ಈ ಮುಂತಾದ ಅನೇಕ ವಿಷಯಗಳ ಮೇಲೆ ಇಲ್ಲಿನ ಪ್ರಬಂಧಗಳು ವೈವಿಧ್ಯವನ್ನು ಸಾಧಿಸಿಕೊಂಡಿರುವುದರ ಜೊತೆಗೆ ಕನ್ನಡ ಜಾನಪದ ಕ್ಷೇತ್ರದಲ್ಲಿ ನಿರ್ಲಕ್ಷಿತವಾಗಿರುವ ಇತರ ಕ್ಷೇತ್ರಗಳ ಕಡೆಗೂ ವಿದ್ವಾಂಸರ ದೃಷ್ಟಿಯನ್ನು ಸೆಳೆಯಲು ಸಹಾಯಕವಾಗಿವೆ.

ಸಿ. ಪಿ. ಕೃಷ್ಣಕುಮಾರರು ಜನಪದಸಾಹಿತ್ಯದ ರಸವಿಮರ್ಶೆಗೆ ಹೆಸರಾದವರು. ಪ್ರೌಢಸಾಹಿತ್ಯದಂತೆಯೇ ಜನಪದ ಸಾಹಿತ್ಯದಲ್ಲಿಯೂ ಉತ್ತಮ ಜೀವನದರ್ಶನ, ಅನುಭವದ ಎತ್ತರಗಳನ್ನು ಗುರುತಿಸಲು ಸಾಧ್ಯ ಎಂಬುದನ್ನು ತಮ್ಮ ಅನೇಕ ಪ್ರಬಂಧಗಳಲ್ಲಿ ಅವರು ತೋರಿದ್ದಾರೆ. ಜನಪದ ಗೀತೆಗಳ ಕಾವ್ಯವಿಮರ್ಶೆಯ ಸೂತ್ರಗಳಲ್ಲಿ ಶಾಸ್ತ್ರೀಯ ವಿವೇಚನೆಗೆ ಒಳಪಡಿಸಿ ವಿಶ್ಲೇಷಿಸಿ ಪ್ರತಿಭಾಪೂರ್ಣ ಪ್ರಯತ್ನಗಳನ್ನು ಸಿ.ಪಿ.ಕೆ. ಅವರ ಪ್ರಬಂಧಗಳಲ್ಲಿ ಕಾಣಬಹುದು. ಅವರ ಜಾನಪದ ಪ್ರತಿಭೆ ಈ ದೃಷ್ಟಿಯಿಂದ ಅತ್ಯಂತ ಉತ್ಕೃಷ್ಟ ಕೃತಿಯಾಗಿದೆ.

ಇತ್ತೀಚೆಗೆ ಪ್ರಕಟವಾದ ನಂ. ತಪಸ್ವೀಕುಮಾರರ ಜನಪದಸಂಸ್ಕೃತಿ, ಡಿ. ಕೆ. ರಾಜೇಂದ್ರರ ಜಾನಪದ ಸಮೀಕ್ಷೆಗಳು ಜಾನಪದ ವಿಶ್ಲೇಷಣೆಯಲ್ಲಿ ಹೊಸ ದೃಷ್ಟಿಯನ್ನು ಬೀರಿರುವ ಕೃತಿಗಳು. ರಾಜೇಂದ್ರರು ಕನ್ನಡದಲ್ಲಿ ನಡೆದ ಜಾನಪದ ಸಂಶೋಧನೆ, ಕನ್ನಡದಲ್ಲಿ ಜಾನಪದ ಕಲ್ಪನೆ, ಯಕ್ಷಗಾನ, ಮೂಡಲಪಾಯ ಸಂಪ್ರದಾಯ ಮುಂತಾದುವನ್ನು ಕುರಿತು ವಿವೇಚಿಸುವಲ್ಲಿ ಉತ್ತಮ ಸಂಶೋಧನ ದೃಷ್ಟಿಯನ್ನು ಮೆರೆದಿದ್ದಾರೆ. ತಪಸ್ವೀಕುಮಾರರ ಕೃತಿ ಜಾನಪದದ ಕೆಲವು ಹೊಸ ಪ್ರಕಾರಗಳಲ್ಲಿನ ಅಧ್ಯಯನವನ್ನು ಒಳಗೊಂಡು ವಿಚಾರಾತ್ಮಕವಾಗಿದೆ. ತೊಗಲುಗೊಂಬೆಯವರ ಸಂಪ್ರದಾಯ, ಗಾದೆಗಳ ವಿಶ್ಲೇಷಣೆ, ಬೈಗುಳಗಳ ಬನಿ ಹಾಗೂ ಸಾಂಸ್ಕೃತಿಕ ಹಿನ್ನೆಲೆ ಮುಂತಾದವಲ್ಲಿ ಶ್ರೀಯುತರು ತೋರಿರುವ ಹೊಸ ಮೌಲ್ಯ ಕುತೂಹಲಕಾರಿಯಾಗಿದೆ.

ಜನಪದಸಾಹಿತ್ಯ ಸಂಬಂಧವಾದ ಅನೇಕ ವಿಚಾರಗೋಷ್ಠಿಗಳೂ ಸಮ್ಮೇಳನಗಳೂ ಆಗಾಗ ನಡೆದು ನಾಡಿನ ವಿದ್ವಾಂಸರು ಅನೇಕ ಉತ್ತಮ ಪತ್ರಿಕೆಗಳನ್ನು ಮಂಡಿಸಿರುವುದು ವಿಚಾರಾರ್ಹ ವಿಷಯವಾಗಿದೆ. ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ 1966ರಲ್ಲಿ ನಡೆದ ಲೇಖಕರ ಗೋಷ್ಠಿಯಲ್ಲಿ ನಡೆದ ಜನಪದ ಸಾಹಿತ್ಯಗೋಷ್ಠಿ, ಕನ್ನಡ ಜಾನಪದ ಅಧ್ಯಯನದ ಇತಿಹಾಸದಲ್ಲಿ ಅತ್ಯಂತ ಮಹತ್ತ್ವದ ಅಂಶವಾಗಿದೆ. ಇದಕ್ಕೆ ಮುಖ್ಯ ಕಾರಣ, ಜಾನಪದವನ್ನೇ ಕುರಿತ ಒಂದು ಪೂರ್ಣಸ್ವರೂಪದ ಗೋಷ್ಠಿ ಏರ್ಪಟ್ಟುದು ಹಾಗೂ ಹಾ. ಮಾ. ನಾಯಕರು ಮಂಡಿಸಿದ ಜನಪದಸಾಹಿತ್ಯ ಮತ್ತು ಅದರ ಸ್ವರೂಪ ಎಂಬ ಹೊಸ ಬೆಳಕನ್ನು ಚೆಲ್ಲಿದ ಅತ್ಯುತ್ತಮ ಪ್ರಬಂಧ. ಕನ್ನಡದಲ್ಲಿ ಜಾನಪದದ ಪೂರ್ಣ ಕಲ್ಪನೆಯೇ ಇಲ್ಲದೆ ಸಂಗ್ರಹ, ಅಧ್ಯಯನಗಳು ಕೇವಲ ಗೀತಸಾಹಿತ್ಯಕ್ಕೆ ಮಾತ್ರ ಸೀಮಿತವಾಗಿ ಉಳಿದ ಶಾಖೆಗಳು ಉಪೇಕ್ಷೆಗೆ ಒಳಗಾಗಿದ್ದು, ಅಲ್ಲಿ ಕ್ರಾಂತಿಕಾರಕವಾದ ಬದಲಾವಣೆಯೊಂದು ಆಗಬೇಕಾಗಿದ್ದುದು ಅಗತ್ಯವಾಗಿತ್ತು. ಪಾಶ್ಚಾತ್ಯ ರಾಷ್ಟ್ರಗಳ ವ್ಯಾಪಕವಾದ ಜಾನಪದ ಕಲ್ಪನೆ ಕಳೆದ ಶತಮಾನದಿಂದಲೂ ಉನ್ನತ ಸಾಧನೆಯನ್ನು ಈ ಕ್ಷೇತ್ರದಲ್ಲಿ ತೋರಿದ್ದರೂ ಕರ್ಣಾಟಕದಲ್ಲಿ ಆ ಬಗ್ಗೆ ಯಾರ ಲಕ್ಷ್ಯವೂ ಹರಿಯದೆ ಜಾನಪದ ಕ್ಷೇತ್ರ ತುಂಬ ನಷ್ಟವನ್ನು ಅನುಭವಿಸಿದ್ದ ಸಂದರ್ಭದಲ್ಲಿ, ಜಾನಪದ ಎಂದರೇನು, ಕಲಾದೃಷ್ಟಿ ಹಾಗೂ ವೈಜ್ಞಾನಿಕ ದೃಷ್ಟಿಗಳ ಹಿನ್ನೆಲೆಯಲ್ಲಿ ಅದರ ವ್ಯಾಪಕತೆಯೆಷ್ಟು, ನಮ್ಮ ಜಾನಪದ ಕಲ್ಪನೆಯ ದಿಗಂತ ಹೇಗೆ ವಿಸ್ತಾರಗೊಳ್ಳಬೇಕು, ಯಾವ ವೈಜ್ಞಾನಿಕ ತಳಹದಿಯ ಮೇಲೆ ಮುಂದಿನ ಅಧ್ಯಯನ ರೂಪುಗೊಳ್ಳಬೇಕು ಎಂಬ ಅನೇಕ ಪ್ರಮುಖ ವಿಷಯಗಳನ್ನು ತಮ್ಮ ಪ್ರಬಂಧದಲ್ಲಿ ಹಾ. ಮಾ. ನಾಯಕರು ವಿಚಾರಪೂರ್ಣವಾಗಿ ಚರ್ಚಿಸಿ, ಮುಂದಿನ ಸಂಶೋಧನೆಗೆ ಒಂದು ಹೊಸ ತಿರುವನ್ನು ಕೊಟ್ಟರು. ಫೋಕ್‌ಲೋರ್ ಪದಕ್ಕೆ ಕನ್ನಡದಲ್ಲಿ ಜಾನಪದ ಎಂಬ ಹೆಸರನ್ನು ಸೂಚಿಸಿದವರೂ ಅವರೇ. ಜಾನಪದದ ಇತರ ಪ್ರಕಾರಗಳಿಗೂ ಉತ್ತಮ ಹೆಸರುಗಳನ್ನು ನೀಡಿ ಆಯಾ ವಿಷಯಗಳ ವ್ಯಾಪ್ತಿಯನ್ನು ಪ್ರಕೃತ ಲೇಖನದಲ್ಲಿ ಸವಿವರವಾಗಿ ಅವರು ಪರಿಚಯಮಾಡಿಕೊಟ್ಟಿದ್ದಾರೆ.

ಈ ಗೋಷ್ಠಿಯ ಅಂಗವಾಗಿ ಪ್ರಕಟವಾದ ಸುವರ್ಣಸಂಚಯ, ಜಾನಪದದ ಮೇಲೆ ಇನ್ನೂ ಕೆಲವು ವಿದ್ವಾಂಸರ ಉತ್ತಮ ಪ್ರಬಂಧಗಳನ್ನೊಳಗೊಂಡಿದೆ.

1967ರಲ್ಲಿ ತರೀಕೆರೆಯಲ್ಲಿ ನಡೆದ ಪ್ರಥಮ ಜಾನಪದ ಸಮ್ಮೇಳನ ನಾಡಿನಾದ್ಯಂತ ಜಾನಪದದ ಬಗ್ಗೆ ವಿಶೇಷ ಸ್ಫೂರ್ತಿಯನ್ನು ತುಂಬಿತು. ಸಮ್ಮೇಳನದ ಅಂಗವಾಗಿ ಪ್ರಕಟವಾದ ಹೊನ್ನಬಿತ್ತೇವು ಹೊಲಕೆಲ್ಲ ಎಂಬುದು ಕನ್ನಡ ಜಾನಪದ ಪ್ರಪಂಚದ ಒಂದು ಆಚಾರ್ಯಕೃತಿ ; ಕನ್ನಡ ಜಾನಪದದ ಒಂದು ವಿಶ್ವಕೋಶವೆಂದರೂ ಆಗುತ್ತದೆ. ಸಮಗ್ರ ಕನ್ನಡನಾಡಿನ ಜಾನಪದದ ಕ್ರಮಬದ್ಧವಾದ ಪರಿವೀಕ್ಷಣೆ, ಜಾನಪದ ಪ್ರಕಾರಗಳನ್ನು ಕುರಿತ ಲೇಖನಗಳು ವಿಮರ್ಶೆಗಳು ಸಂಶೋಧನೆಗಳು ಈ ಮಹಾಗ್ರಂಥದಲ್ಲಿ ಬೆಳಕು ಕಂಡು ಕನ್ನಡದಲ್ಲಿ ಆ ವರೆಗೆ ನಡೆದ ಜಾನಪದ ಕಾರ್ಯಚಟುವಟಿಕೆಗಳ ಒಂದು ಒಳ್ಳೆಯ ಸಮೀಕ್ಷೆ ಒಂದೆಡೆ ಲಭ್ಯವಾಗುವಂಥ ಒಂದು ವ್ಯವಸ್ಥಿತ ಯೋಜನೆಯ ಹಿನ್ನೆಲೆಯಲ್ಲಿ ಇದು ಸಂಪಾದನೆಗೊಂಡಿದೆ. ಜಾನಪದದ ಬಗೆಗೆ ನಾಡಿನ ಗಣ್ಯ ವಿದ್ವಾಂಸರೆಲ್ಲರೂ ಬರೆದ ಪ್ರಬಂಧಗಳಲ್ಲಿವೆ.

ಜಾನಪದ ಸಂಶೋಧನೆ, ವಿಮರ್ಶೆ, ವಿವೇಚನೆಗಳಿಗೆ ಸಂಬಂಧಿಸಿದಂತೆ ಪ್ರಕಟವಾಗಿರುವ ಕೃತಿಗಳಷ್ಟೇ ಮಹತ್ತ್ವವನ್ನು ಕೆಲವು ಜಾನಪದ ಗ್ರಂಥಗಳಲ್ಲಿ ಪ್ರಕಟವಾಗಿರುವ ಪ್ರಸ್ತಾವನೆಗಳಿಗೂ ಮುನ್ನುಡಿಗಳಿಗೂ ನೀಡಬೇಕಾಗುತ್ತದೆ. ದೇಜಗೌ ಅವರ ಜನಪದಸಾಹಿತ್ಯದ ಸಮೀಕ್ಷೆಯ ಮುನ್ನುಡಿ, ಸಿ.ಪಿ.ಕೆ. ಅವರ ನಮ್ಮ ಒಗಟುಗಳು, ಸಂಕಲನದ ಹಿನ್ನುಡಿ, ಎಚ್. ಎಲ್. ನಾಗೇಗೌಡರ ನಮ್ಮ ಜನಪದಸಾಹಿತ್ಯದ ಹಿನ್ನುಡಿ, ರಾಗೌ ಅವರ ನಮ್ಮ ಗಾದೆಗಳು, ಕರ್ಣಾಟಕ ಜನಪದ ಕತೆಗಳು, ನಮ್ಮ ಒಗಟುಗಳು ಮುಂತಾದ ಕೃತಿಗಳ ಪ್ರಸ್ತಾವನೆ, ಜೀಶಂಪ ಅವರ ಕನ್ನಡ ಜನಪದ ಕಥೆಗಳು, ಆಯ್ದ ಕಥೆಗಳು ಸಂಕಲನಗಳ ಪ್ರಸ್ತಾವನೆಗಳು, ಸುಧಾಕರ ಅವರ ಬೆಡಗಿನ ವಚನಗಳು ಸಂಕಲನದ ಪ್ರಸ್ತಾವನೆ—ಮುಂತಾದುವು ವಿಚಾರಪರಿಪುಷ್ಟಿಯಿಂದಲೂ ಉತ್ತಮ ಸಂಶೋಧನದೃಷ್ಟಿಯಿಂದಲೂ ಜಾನಪದದ ವೈಜ್ಞಾನಿಕ ಹಿನ್ನೆಲೆಯಿಂದಲೂ ಜಾನಪದದ ವಿವಿಧ ಪ್ರಕಾರಗಳ ಮೇಲೆ ಹೆಚ್ಚಾಗಿ ಬೆಳಕು ಚೆಲ್ಲುವಂಥ ಅತ್ಯಂತ ಉಪಯುಕ್ತ ಲೇಖನಗಳಾಗಿವೆ. ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಜಾನಪದ ಅಧ್ಯಯನಕ್ಕೆ ಅವಕಾಶವನ್ನು ಕಲ್ಪಿಸಿದವರು ಪ್ರಾಧ್ಯಾಪಕ ದೇಜಗೌ ಅವರು. ಜಾನಪದ ತನ್ನ ಎಲ್ಲ ಅಂಗಗಳಲ್ಲೂ ಉನ್ನತಸ್ಥಾನವನ್ನು ಪಡೆದುಕೊಳ್ಳುವಂತೆ ಜನಪದ ವಸ್ತುಸಂಗ್ರಹಾಲಯದ ಕನಸನ್ನು ನನಸುಮಾಡಿದವರೂ ಅವರೇ. ಬಹು ಚಿಕ್ಕದಾಗಿ ಪ್ರಾರಂಭವಾದ ಈ ವಸ್ತುಸಂಗ್ರಹಾಲಯ ಈಗ ಬೃಹತ್ಪ್ರಮಾಣದಲ್ಲಿ ಬೆಳೆದಿದ್ದು ಕಣ್ಣಿಗೊಂದು ಹಬ್ಬವೆನಿಸಿದೆ. ಸಂಶೋಧನೆಗೊಂದು ಮೂಲವಸ್ತುವಾಗಿ ಪರಿಣಮಿಸಿದೆ. ಜಾನಪದದ ಬಗ್ಗೆ ಅವರಿಗಿರುವ ಆಳವಾದ ನಿಷ್ಠೆ, ಅಪಾರ ಅನುಭವ, ವಿದ್ವತ್ತುಗಳು ಅವರು ಜನಪದಸಾಹಿತ್ಯ ಸಮೀಕ್ಷೆಗೆ ಬರೆದ ಮುನ್ನುಡಿಯಲ್ಲಿ ವ್ಯಕ್ತವಾಗಿವೆ.

ಕನ್ನಡದ ಜನಪ್ರಿಯ ಜನಪದ ಕಲೆ ಯಕ್ಷಗಾನ ಬಯಲಾಟವನ್ನು ಕುರಿತು ಅನೇಕ ಸಂಶೋಧನಾತ್ಮಕ ಗ್ರಂಥಗಳು ಪ್ರಕಟವಾಗಿ ವಿಶೇಷವಾಗಿ ಎಲ್ಲವೂ ದಕ್ಷಿಣ ಕನ್ನಡ ಜಿಲ್ಲೆಯ ಎರಡು ಪ್ರಸಿದ್ಧ ಸಂಪ್ರದಾಯಗಳಿಗೆ ಸಂಬಂಧಪಡುತ್ತವೆ. ಶಿವರಾಮ ಕಾರಂತರ ಯಕ್ಷಗಾನ ಬಯಲಾಟ ನಮ್ಮ ಯಕ್ಷಗಾನ ಕಲೆಯ ಬಗ್ಗೆ ಒಂದು ಉತ್ತಮ ಸಂಶೋಧನ ಗ್ರಂಥ. ಸಮಗ್ರ ಕನ್ನಡ ನಾಡಿನ ಯಕ್ಷಗಾನ ಬಗೆಗಳನ್ನು ಏಕೆ, ದಕ್ಷಿಣ ಕನ್ನಡ ಜಿಲ್ಲೆಯ ತೆಂಕತಿಟ್ಟಿನ ಕೆಲವು ವೈಶಿಷ್ಟ್ಯಗಳನ್ನು ಕುರಿತು ಕಾರಂತರು ಹೆಚ್ಚಾಗಿ ವಿಚಾರಮಾಡದಿದ್ದರೂ ಯಕ್ಷಗಾನದ ಸಾಮಾನ್ಯ ಸ್ವರೂಪದ ಬಗ್ಗೆ ಅಪಾರ ಸಾಮಗ್ರಿಯನ್ನು ಕಲೆಹಾಕಿ ಪ್ರೌಢರೀತಿಯ ವಿವೇಚನೆ ನಡೆಸಿದ್ದಾರೆ. ಕರ್ಣಾಟಕದ ಸೂತ್ರದ ಬೊಂಬೆಯಾಟ, ತೊಗಲುಬೊಂಬೆಯಾಟಗಳ ಬಗೆಗೂ, ಮೂಡಲ ಪಾಯ, ದೊಡ್ಡಾಟಗಳ ಬಗೆಗೂ ಇನ್ನೂ ಸಾಕಷ್ಟು ವಿವೇಚನೆ ನಡೆಯಬೇಕಾಗಿದೆ.

ಕನ್ನಡ ಜಾನಪದದ ಬಗ್ಗೆ ಶಾಸ್ತ್ರೀಯವಾದ ಸಂಶೋಧನೆ, ಸಮರ್ಪಕವಾದ ಕೃತಿಸಂಗ್ರಹ—ಇವು ಈಚೆಗೆ ವಿಶೇಷ ಆಸಕ್ತಿಯಿಂದ ಜರುಗುತ್ತಿವೆ. ಎಚ್. ಎಲ್. ನಾಗೇಗೌಡರು, ರಾಮಾರಾಧ್ಯರು ಮುಂತಾದವರು ಸಂಗ್ರಹಕಾರ್ಯದಲ್ಲಿ ನಿರತರಾಗಿದ್ದಾರೆ. ಕರ್ಣಾಟಕ ಜಾನಪದ ಪರಿಷತ್ತಿನ ಅಂಗಪತ್ರಿಕೆಯಾದ ಜಾನಪದ ಉತ್ತಮ ವಿಷಯಗಳನ್ನು ಹೊರತರುತ್ತಿದೆ. ಕಾಲಿಕವಾಗಿ ನಡೆಯುವ ಜಾನಪದ ಉತ್ಸವಗಳು, ಮೇಳಗಳು, ಗೋಷ್ಠಿಗಳು, ಸಮ್ಮೇಳನಗಳು, ಪ್ರದರ್ಶನಗಳು ಜನತೆಯಲ್ಲಿ ಆ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಕುದುರಿಸುತ್ತಿವೆ. (ಜಿ.ಎಸ್.ಪಿ.)

**ಕನ್ನಡದಲ್ಲಿ ಅಷ್ಟಕಗಳು :** ಅಷ್ಟಕವೆಂದರೆ ಸಾಮಾನ್ಯವಾಗಿ ಎಂಟು ಪದ್ಯಗಳ ಒಂದು ಗುಚ್ಛ. ಈ ಪದ್ಯಗಳು ವೃತ್ತಗಳಾಗಿರಬಹುದು, ಕಂದಗಳಾಗಿರಬಹುದು, ಷಟ್ಪದಿಗಳಾಗಿರಬಹುದು ಅಥವಾ ಮತ್ತೆ ಯಾವುದೇ ಛಂದೋರೂಪದಲ್ಲಿರಬಹುದು. ಎಲ್ಲ ಅಷ್ಟಕಗಳಲ್ಲಿಯೂ ಎಂಟು ಪದ್ಯಗಳೇ ಇರಬೇಕೆಂಬ ನಿಯಮ ನಿಯತವೇನೂ ಅಲ್ಲ. ಅನೇಕ ಅಷ್ಟಕಗಳಲ್ಲಿ ಈ ಸಂಖ್ಯೆ ಒಂಬತ್ತಾಗಬಹುದು, ಹತ್ತಾಗಬಹುದು, ಹನ್ನೊಂದಾಗಬಹುದು. ಅದು ಅನಿರ್ದಿಷ್ಟವಾಗಿ ಬೆಳೆದುಕೊಂಡು ಹೋಗಿರುವುದೂ ಉಂಟು. ಉದಾಹರಣೆಗೆ ಲಿಂಗಾಷ್ಟಕದಲ್ಲಿ ಎರಡೆರಡು ಪಂಕ್ತಿಯ ಪದ್ಯಗಳು ಐವತ್ತು ಇರುವುದು ಕಂಡುಬರುತ್ತದೆ. ಒಟ್ಟಾರೆ ನೋಡಿದಾಗ ಒಂಬತ್ತು ಪದ್ಯಗಳನ್ನೊಳಗೊಂಡಿರುವ ಅಷ್ಟಕಗಳೇ ಸಂಖ್ಯೆಯಲ್ಲಿ ಹೆಚ್ಚು ಕಂಡುಬರುತ್ತವೆ. ಬಹುಶಃ ಪೀಠಿಕೆ ಮತ್ತು ಉಪಸಂಹಾರ ರೂಪದಲ್ಲಿ ಹೆಚ್ಚಿನ ಪದ್ಯಗಳು ಸೇರುತ್ತವೆಯೆಂದು ತೋರುತ್ತದೆ.

ಅಷ್ಟಕಗಳು ಇತರ ಪಂಚಕ, ಷಟ್ಕ, ದಶಕ, ಶತಕಗಳಂತೆ ಸ್ತೋತ್ರಸಾಹಿತ್ಯದ ಸಾಲಿನಲ್ಲಿ ಬರುತ್ತವೆ. ಇವುಗಳ ಪ್ರಧಾನ ವಿಷಯ ಭಕ್ತಿ ಮತ್ತು ವೈರಾಗ್ಯ. ಪ್ರತಿಯೊಂದು ಅಷ್ಟಕವೂ ಸಾಮಾನ್ಯವಾಗಿ ಇಷ್ಟದೈವವನ್ನು ಕುರಿತ ಸ್ತುತಿರೂಪವಾದ ಭಕ್ತಿಗೀತೆಯಾಗಿರುತ್ತದೆ. ಆ ಇಷ್ಟದೈವ ಜಿನನಾಗಬಹುದು, ಶಿವನಾಗಬಹುದು, ಹರಿಯಾಗಬಹುದು ಅಥವಾ ಮತ್ತೆ ಯಾರಾದರೂ ಆಗಿರಬಹುದು : ಚಂದ್ರನಾಥಾಷ್ಟಕ, ಪಾರ್ಶ್ವನಾಥಾಷ್ಟಕ, ಹರ್ಯಷ್ಟಕ, ಲಿಂಗಾಷ್ಟಕ, ಶಂಕರಾಷ್ಟಕ, ವಿನಾಯಕಾಷ್ಟಕ—ಹೀಗೆ. ವಿರಳವಾಗಿ ಅಷ್ಟಕಗಳಲ್ಲಿ ರಾಜನನ್ನು ಸ್ತುತಿಸಿರುವುದೂ ಉಂಟು. ದೇವರಾಜವಲ್ಲಭಾಷ್ಟಕ ಇದಕ್ಕೆ ನಿದರ್ಶನವಾಗಿದೆ. ವೈರಾಗ್ಯ, ತತ್ತ್ವಪ್ರತಿಪಾದನೆ ಮತ್ತು ಆತ್ಮನಿವೇದನೆಗಳೂ ಅಷ್ಟಕಗಳಲ್ಲಿ ವಿರಳವಾಗಿ ಕಂಡುಬರುತ್ತವೆ. ಪಂಚಪದಾಷ್ಟಕ ಮತ್ತು ತತ್ತ್ವಭೇದಾಷ್ಟಕಗಳು ವೈರಾಗ್ಯ ಮತ್ತು ತತ್ತ್ವಪ್ರತಿಪಾದನೆಯನ್ನು ಕುರಿತವಾಗಿವೆ. ಅಷ್ಟಕದ ಒಂದು ಸಾಮಾನ್ಯ ಲಕ್ಷಣವೆಂದರೆ ಅದರ ಪ್ರತಿಯೊಂದು ಪದ್ಯದ ಕೊನೆಯಲ್ಲೂ ಇಷ್ಟದೈವದ ಸಂಬೋಧನೆಯಿರುತ್ತದೆ. ಚಂದ್ರನಾಥಾಷ್ಟಕದಲ್ಲಿ ಚಂದ್ರನಾಥಾ ಎಂಬ ಸಂಬೋಧನೆ ಪ್ರತಿಪದ್ಯದ ಕೊನೆಯಲ್ಲೂ ಬರುತ್ತದೆ. ಕೆಲವು ವೇಳೆ ಮೊದಲ ಪದ್ಯದ ಕೊನೆಯ ಸಾಲು ಪ್ರತಿಪದ್ಯದಲ್ಲಿಯೂ ಪುನರುಕ್ತವಾಗುತ್ತದೆ. ಷಡಕ್ಷರದೇವ ಸಂಸ್ಕೃತದಲ್ಲಿ ರಚಿಸಿರುವ ಸಿದ್ಧಲಿಂಗಾಷ್ಟಕದಲ್ಲಿ ಪ್ರತಿಪದ್ಯವೂ ಮಹಾಲಿಂಗಸಂಗಂ ಭಜೇ ಸಿದ್ಧಲಿಂಗಂ ಎಂಬುದರಿಂದ ಕೊನೆಯಾಗುತ್ತದೆ.

ಸಂಸ್ಕೃತದಲ್ಲಿ ಅಷ್ಟಕ ತುಂಬ ಪ್ರಚುರವಾಗಿದೆ. ಸ್ತೋತ್ರಸಾಹಿತ್ಯದಲ್ಲಿ ಅದಕ್ಕೆ ಗಣನೀಯ ಸ್ಥಾನವಿದೆ. ಬೃಹತ್ ಸ್ತೋತ್ರರತ್ನಾಕರವೆಂಬ ಒಂದು ಸ್ತೋತ್ರಸಂಗ್ರಹದಲ್ಲಿ ಸುಮಾರು ಐವತ್ತು ಅಷ್ಟಕಗಳು ಕಂಡುಬರುತ್ತವೆ. ಶಂಕರಾಚಾರ್ಯರು ರಚಿಸಿರುವ ಗಂಗಾಷ್ಟಕ, ಯಮುನಾಷ್ಟಕ, ಅಂಬಾಷ್ಟಕ, ಗುರ್ವಷ್ಟಕ, ಧನ್ಯಾಷ್ಟಕ ಮುಂತಾದ ಅನೇಕ ಅಷ್ಟಕಗಳು ಪ್ರಸಿದ್ಧವಾಗಿವೆ. ಇಷ್ಟದೈವವನ್ನು ಕುರಿತ ಈ ಎಲ್ಲ ಅಷ್ಟಕಗಳಲ್ಲಿ ಭಕ್ತಿಯೇ ಪ್ರಧಾನಸ್ಥಾಯಿ.

ಕನ್ನಡದಲ್ಲಿ ಮೊತ್ತಮೊದಲಿಗೆ ಅಷ್ಟಕದ ಹೆಸರು ಕಂಡುಬರುವುದು ಕ್ರಿ.ಶ. ಸು. 800 ರಲ್ಲಿ. ಸೈಗೊಟ್ಟ ಶಿವಮಾರನೆಂಬ ಗಂಗರಾಜ ಎಂಟು ಪದ್ಯಗಳಲ್ಲಿ ಗಜಶಾಸ್ತ್ರದ ಮೇಲೆ ಗಜಾಷ್ಟಕವೆಂಬುದನ್ನು ಬರೆದಿರಬೇಕೆಂದು ಶಾಸನದಿಂದ ತಿಳಿದುಬರುತ್ತದೆ. ಅದು ಇಂದಿಗೂ ಅನುಪಲಬ್ಧವಾಗಿದೆ. ಕರೇಣುಭೂಯತಿಗಳ ವ್ಯಾಖ್ಯಾನದಂತೆ ಆತ ಬರೆದ ಗಜಾಷ್ಟಕ ಪ್ರೌಢಕೃತಿಯೆಂದು ತಿಳಿದುಬರುತ್ತದೆ. ಸದ್ಯಕ್ಕೆ ಶಿವಮಾರನ ಈ ಅಷ್ಟಕ ಕನ್ನಡದಲ್ಲಿ ಮೊದಲ ಅಷ್ಟಕವಾಗಿದೆ. ಗಮನಾರ್ಹವಾದ ಸಂಗತಿಯೆಂದರೆ ಈ ಅಷ್ಟಕದಲ್ಲಿ ಪ್ರತಿಪಾದಿತವಾಗಿರುವ ವಿಷಯ • ಭಕ್ತಿಗಾಗಲಿ ವೈರಾಗ್ಯಕ್ಕಾಗಲಿ ಸಂಬಂಧಿಸದೆ ಗಜಶಾಸ್ತ್ರವನ್ನು ಕುರಿತದ್ದಾಗಿದೆ. ಅಷ್ಟಕವನ್ನು ವಿನೂತನ ವಿಷಯಕ್ಕೆ ಬಳಸಿಕೊಂಡಿರುವುದು ಕನ್ನಡದ ವಿಶೇಷವಾಗಿದೆ. ಆದರೆ ಈ ನಿಟ್ಟಿನಲ್ಲಿ ಮುಂದೆ ಯಾರೂ ಅಷ್ಟಕಗಳನ್ನು ರಚಿಸಿದಂತೆ ಕಂಡುಬರುವುದಿಲ್ಲ.

ಗಜಾಷ್ಟಕವನ್ನು ಬಿಟ್ಟರೆ, ಕ್ರಿ.ಶ. 1125ರಲ್ಲಿದ್ದ ಮೌಕ್ತಿಕ ಕವಿಯ ಚಂದ್ರ, ನಾಥಾಷ್ಟಕ ಕನ್ನಡದಲ್ಲಿ ಉಪಲಬ್ಧವಾಗಿರುವ ಮೊದಲ ಅಷ್ಟಕವಾಗುತ್ತದೆ. ಇದರಲ್ಲಿ 9 ವೃತ್ತಗಳಿವೆ. ಪ್ರತಿವೃತ್ತವೂ ಚಂದ್ರನಾಥಾ ಎಂದು ಮುಗಿಯುತ್ತದೆ. ಈ ಅಷ್ಟಕ ಚಂದ್ರನಾಥನನ್ನು ಕುರಿತು ಮಾಡಿದ ಭಕ್ತಿಪರವಾದ ಪ್ರಾರ್ಥನೆಯಾದರೂ ಆ ಕಾಲದಲ್ಲಿ ಮತೀಯ ಘರ್ಷಣೆ ಎಷ್ಟಿತ್ತೆಂಬುದರ ಸುಳುಹು ಇದರಲ್ಲಿ ಕಂಡುಬರುತ್ತದೆ. ಕೆಳಗಿನ ಪದ್ಯವನ್ನು ನೋಡಬಹುದು :

ಕುಮತೋಗ್ರ ಗ್ರೀಷ್ಮತಪ್ತಂಗಿದು ಹಿಮಕರಬಿಂಬಂ ಪರಸ್ತೋತ್ರಪಿತ್ತ<br>
ಭ್ರಮಹೃಜ್ಜಿಹ್ವಂಗೆ ಸೌಧಂ ಕಬಳಮನ್ರತ ದುರ್ವಾಸನಾವಾಸಿತಾತ್ಮಂ<br>
ಗಮಳಾಂಭೋಜಂ ಕುದೃಷ್ಟ್ಯಾಮಯಿಗಿದು ಘನಸಾರಾಂಜನಂ ಕುಶ್ರುತಾನ್ಯಾ<br>
ಗಮದುರ್ಮಂತ್ರಂಗೆ ನಿನ್ನಾಕೃತಿಯಿಂದಮೃತ ಬೀಜಾಕ್ಷರಂ ಚಂದ್ರನಾಥಾ

ಹರಿಹರಕವಿ ಬರೆದಿರುವ ಮುಡಿಗೆಯ ಅಷ್ಟಕ ಎರಡನೆಯದು. ಇದರಲ್ಲಿ ಕ್ಷಕಾರ ಪ್ರಾಸದ ಎಂಟು ವೃತ್ತಗಳಿವೆ. ವಿರೂಪಾಕ್ಷದೇವನ ಸರ್ವಶ್ರೇಷ್ಠತೆಯನ್ನು ಸಾರುವ ಈ ಅಷ್ಟಕ ಹರಿಹರನ ಪವಾಡವೊಂದನ್ನೊಳಗೊಂಡಿದೆ. ಪ್ರತಿಪದ್ಯವೂ ಮುಡಿಗಿಕ್ಕಿದೆ ನಿಕ್ಕಿದೆನಾವನೆತ್ತುವಂ—ಎಂದು ಮುಗಿಯುತ್ತದೆ. ಒಂದು ಪದ್ಯವನ್ನು ನೋಡಬಹುದು :

ಕುಕ್ಷಿಯೊಳಿಟ್ಟು ಭಕ್ತಕುಲಮಂ ಪರಿರಕ್ಷಿಪ ದೇವದೇವನ<br>
ಬ್ಜಾಕ್ಷವಿರಿಂಚಿಗಳ್ ತುದಿಮೊದಲ್ವರೆಗಾಣದ ದೇವದೇವನಾ<br>
ವಕ್ಷದೊಳಾಲ್ದು ಬೊಬ್ಬಿಱುವ ದೇವಕರೋಟಿಯ ದೇವನೀವಿರೂ<br>
ಪಾಕ್ಷನೆ ದೇವನೆಂದು ಮುಡಿಗಿಕ್ಕಿದೆ ನಿಕ್ಕಿದೆನಾವನೆತ್ತುವಂ

2ನೆಯ ಗುಣವರ್ಮನ (ಸು. 1215) ಚಂದ್ರನಾಥಾಷ್ಟಕದಲ್ಲಿ ಒಂಬತ್ತು ಮಹಾಸ್ರಗ್ಧರಾ ವೃತ್ತಗಳಿವೆ. ತನ್ನ ಇಷ್ಟದೇವ ಚಂದ್ರನಾಥನನ್ನು ಕುರಿತ ಈ ಪದ್ಯಗುಚ್ಛದಲ್ಲಿ ಕವಿ ಹೃದ್ಯವಾದ ಭಕ್ತಿಭಾವವನ್ನು ಗಂಭೀರಶೈಲಿಯಲ್ಲಿ ವ್ಯಕ್ತಪಡಿಸಿದ್ದಾನೆ.

ನೆನೆವಂದಾನಂದದಿದಂ ತಣ್ಣನೆ ತಣಿದು ಜಗಿಲ್ಕುಂ ಮನಂ ಬಂದು ಕಂಡಂ<br>
ದೆನಸುಂ ತಣ್ಪಿಂ ಕುಳಿರ್ಕೊಳ್ಗುಡುಗುಮಮರ್ದಿನೊಳಟಬಂತೆ ಕಣ್ ಬಣ್ಣಪಂದಿಂ<br>
ಪಿನಲಂಪಂ ಸೇವಿಪಂತಗ್ಗಲಿಸಿ ನಲಿಗುಮೀಜಿಹ್ವೆಯೆಂದಂದು ನಿನ್ನಂ<br>
ನೆನೆದುಂ ಕಂಡುಂ ಪೊಗಟ್ದುಂ ಸುಖಿಯೆನಿಸಿದವಂ ಧನ್ಯನೈ ಚಂದ್ರನಾಥಾ

ಸು. 1300ರಲ್ಲಿ ರಚಿತವಾಗಿರಬಹುದಾದ ಜಿನೇಶ್ವರಾಷ್ಟಕ ಮತ್ತು ಪಂಚಪದಾಷ್ಟಕಗಳ ಕರ್ತೃಗಳು ಯಾರೆಂಬುದು ತಿಳಿದುಬಂದಿಲ್ಲ. ಜಿನೇಶ್ವರಾಷ್ಟಕದಲ್ಲಿ ಪ್ರತಿ

ಪದ್ಯವೂ ಜಿನೇಶ್ವರ ಎಂದು ಕೊನೆಗೊಳ್ಳುತ್ತದೆ. ಪಂಚಪದಾಷ್ಟಕದಲ್ಲಿ ಹತ್ತು ಕಂದ ಪದ್ಯಗಳಿವೆ. ಇದು ಜೈನರಿಗೆ ಪೂಜ್ಯವಾದ ಪಂಚಪದಗಳನ್ನು ಕುರಿತುದು.

ಶ್ರೀಕರಮಭೀಷ್ಟ ಸಕಲಸು
ಖಾಕರಮಪವರ್ಗಕಾರಣಂ ಭವಹರಣಂ ।
ಲೋಕಹಿತಂ ಮನ್ಮನದೊಳ
ಗೇಕಾಗ್ರದೆ ನಿಲ್ಕೆ ನಿರುಪಮಂ ಪಂಚಪದಂ ॥
ಸಾರಂಗಳ್ ಪಂಚನಮ
ಸ್ಕಾರಂಗಳ್ ಸಕಲಭವ್ಯಜನಹೃದಯಾಲಂ ।
ಕಾರಂಗಳ್ ಶ್ರುತಲಕ್ಷ್ಮೀ
ಹಾರಂಗಳ್ ನೆನೆವವರ್ಗೆ ಸುಖ ಸಾರಂಗಳ್ ॥

ಇಲ್ಲಿ ಯಾವ ಇಷ್ಟದೈವದ ಪ್ರಾರ್ಥನೆಯೂ ಇಲ್ಲವಾದರೂ ಮತದ ಪವಿತ್ರ ತತ್ತ್ವವೊಂದರ ಮಹಿಮೆಯನ್ನು ಹೇಳಲಾಗಿದೆ.

18ನೆಯ ಶತಮಾನದಲ್ಲಿದ್ದ ವಿರಕ್ತ ಷಡಕ್ಷರಿ ಶಿವಯೋಗಾಷ್ಟಕ ಮತ್ತು ಶಿವ ಪೂಜಾಷ್ಟಕಗಳನ್ನು ರಚಿಸಿದ್ದಾನೆ. ಎರಡು ಅಷ್ಟಕಗಳೂ ಕಂದಪದ್ಯಗಳಲ್ಲಿವೆ.

ಭೃಂಗಂ ಬಳಸದ ತಂಪಿನ
ಶೃಂಗಾರದ ವನಗಳಲ್ಲಿ ವರಕುಸುಮಗಳಿಂ ।
ಸಾಂಗಮುಮಾಗಿ ಷಡಕ್ಷರ
ಲಿಂಗವನನವರತ ಪೂಜಿಪೆನೊಲವಿಂ ॥

(ಶಿವಪೂಜಾಷ್ಟಕ)

ತಿಂಗಳ ಗಂಗೆಯ ಸೂಡಿದ
ಮಂಗಳಮಯ ಭಸಿತಲದೊಪ್ಪುತೆ ಮೆಱೆವಾ ।
ಅಂಗದ ಚೆಲುವ ಷಡಕ್ಷರಿ
ಲಿಂಗವ ನೇಱೆಯಪ್ಪಿಯಗಲದಾನೆಂದಿಹೆನೋ ॥

(ಶಿವಯೋಗಾಷ್ಟಕ)

ಸರಳವಾದ ಮಾತುಗಳಲ್ಲಿ ಶಿವಭಕ್ತಿ ಪಸರಿಸಿರುವುದು ಇಲ್ಲಿ ಕಂಡುಬರುತ್ತದೆ.

19ನೆಯ ಶತಮಾನದಲ್ಲಿ ರಚಿತವಾದ ಶಂಕರಾಷ್ಟಕದ ಕರ್ತೃ ದೇವಲಾಪುರದ ನಂಜುಂಡ. ಇದರಲ್ಲಿ ಎಂಟು ತೂಣಕ ವೃತ್ತಗಳಿವೆ.

ನಿನ್ನ ನಾಮವನ್ನು ಪೇಟ ಧನ್ಯನಾಗಲೊಲ್ಲದೆ ।
ಹೊನ್ನು ಹೆಣ್ಣು ಮಣ್ಣಿನಾಸೆಯನ್ನು ತಾಳಿ ನಿಲ್ಲದೆ ॥
ಕುನ್ನಿಯಂತೆ ಸುತ್ತಿ ಸೌಖ್ಯವನ್ನು ಪೊಂದಲಿಲ್ಲವೆ ।
ಬನ್ನವಾಂತು ಮೂಢನಾದೆಯೆನ್ನ ಕಾಯೊ ಶಂಕರಾ ॥

ಇದರಲ್ಲಿ ಭಕ್ತಿಯೊಡನೆ ಆತ್ಮಪರಿಶೋಧನೆಯೂ ಕೂಡಿಬಂದಿದೆ.

ಮೇಲೆ ಹೇಳಿದ ಅಷ್ಟಕಗಳಲ್ಲದೆ ಕಾಲಕಾಲಕ್ಕೆ ಕವಿಗಳು ಅನೇಕ ಅಷ್ಟಕಗಳನ್ನು ರಚಿಸುತ್ತ ಬಂದಿದ್ದಾರೆ. ಅನಂತಜಿನೇಶ್ವರಾಷ್ಟಕ, ಅನಂತನಾಥಾಷ್ಟಕ, ಚಂದ್ರನಾಥಾಷ್ಟಕ, ಜೀವಸಂಬೋಧನಾಷ್ಟಕ, ಪಾರ್ಶ್ವನಾಥಾಷ್ಟಕ, ವರ್ಧಮಾನಾಷ್ಟಕ, ವೀರಜಿನೇಶ್ವರಾಷ್ಟಕ, ವೃಷಭಜಿನಾಷ್ಟಕ, ಶಾಂತಜಿನಾಷ್ಟಕ, ಅಲ್ಲಮಪ್ರಭುವಿನ ಅಷ್ಟಕ, ದೇವರಾಜವಲ್ಲಭಾಷ್ಟಕ, ವಿನಾಯಕಾಷ್ಟಕ, ಶಿವಶರಣಾಷ್ಟಕ, ಸಂಗಹುಲಿಂಗಾಷ್ಟಕ, ಸಿದ್ಧಾಷ್ಟಕ, ಹರ್ಯಷ್ಟಕ, ದಕ್ಷಿಣಾಮೂರ್ತ್ಯಷ್ಟಕ—ಹೀಗೆ ಅನೇಕ ಅಷ್ಟಕಗಳು ಕನ್ನಡ ಸಾಹಿತ್ಯ ಚರಿತ್ರೆಯುದ್ದಕ್ಕೂ ಕಣ್ಣಿಗೆ ಬೀಳುತ್ತವೆ. ಅಷ್ಟಕಗಳೆಂದು ನೇರವಾಗಿ ಹೇಳದಿದ್ದ, 8–9 ಪದ್ಯಗಳಿರುವ ಕೆಲವು ಸ್ತುತಿಗಳನ್ನು ಕೂಡ ಅವುಗಳ ರೀತಿಯಿಂದ ಅಷ್ಟಕಗಳಂತೇ ಗಣಿಸಬಹುದಾಗಿದೆ. (ಉದಾ : ಮಧುರನ ಗುಮ್ಮಟಸ್ತುತಿ ಮೊದಲಾದುವು).

ಈ ಅಷ್ಟಕಗಳ ಪರಂಪರೆ ಅಲ್ಲಿಗೆ ನಿಲ್ಲದೆ ಈ 20ನೆಯ ಶತಮಾನದಲ್ಲೂ ಮುಂದುವರಿದಿದೆ. ಗೋವಿಂದ ಪೈ, ದ. ರಾ. ಬೇಂದ್ರೆ, ದೇಸಾಯಿ ದತ್ತಮೂರ್ತಿ ಮುಂತಾದವರು ಹೊಸಗನ್ನಡದಲ್ಲಿಯೂ ಅಷ್ಟಕಗಳನ್ನು ರಚಿಸಿದ್ದಾರೆ.

ಅರಿವು ಉಳಿವು ಏರು ಇಳಿವು ಕಂಡ ಉಂಡ ಜೀವ
ತಿಳಿದು ತಿಳಿದು ಗೈದ ತಪ್ಪ ಒಪ್ಪಿಸಿಕೊ ದೇವ
ತಿಳಿಯಿತಯ್ಯ ನಿನ್ನ ಹೊರತು ಅನ್ಯನಿಲ್ಲ ಕಾವ
ಲೋಕರೂಢಿ ಬೆಡಗಿಗಾಗಿ ಎಂಥದೆನ್ನ ವೇಷ
ಮನದ ಹೇಯ ಕಳ್ಳಬಯಕೆ ಪೂರ್ತಿಗೆಂಥ ತೋಷ
ಎರಡು ಬಗೆಯ ಬಾಳು ನನಗೆ ಮಾಡಿತಯ್ಯ ಮೋಸ
ಹಿಂದೆ ಗೈದುದೆಲ್ಲವನ್ನು ನೆನೆದು ನೆನೆದು ಗೋಳು
ಕೊಂದುಕೊಂಬೆ ನನ್ನ ನಾನೆ ನನ್ನೊಳಗೇ ಹೋಳು
ಮುಂದುಗಾಣದಾಗಿ ಬಂದೆ ನಿನ್ನ ಬಳಿಗೆ ಕೇಳು

(ದತ್ತಮೂರ್ತಿ : ನಿವೇದನಾಷ್ಟಕ)

ಕನ್ನಡದ ಭಕ್ತಿಸಾಹಿತ್ಯದಲ್ಲಿ ಅಷ್ಟಕಗಳಿಗೆ ಒಂದು ವಿಶಿಷ್ಟ ಸ್ಥಾನವಿದೆ. ವಚನ, ಕೀರ್ತನೆ, ಸುಳಾದಿ, ಉಗಾಭೋಗ, ಶತಕಗಳಲ್ಲಿ ಕಂಡುಬರುವ ವೈವಿಧ್ಯ ಭಾವ ಸಂಪತ್ತಿ ಕಲ್ಪನಾಸಂಪತ್ತಿಗಳು ಇಲ್ಲಿ ಕಂಡುಬರದಿದ್ದರೂ ಅಷ್ಟಕಗಳು ತಮ್ಮ ಚಿಕ್ಕ ಚೌಕಟ್ಟಿನಲ್ಲಿ ಹೃದ್ಯವಾದ ಭಕ್ತಿಭಾವವನ್ನು ಸೂಸುತ್ತವೆ. (ಪಿ.ಎಸ್.ಸಿ.)

**ಕನ್ನಡದಲ್ಲಿ ಆತ್ಮಕಥೆಗಳು :** ವ್ಯಕ್ತಿ ತನ್ನ ಜೀವನ ವಿಚಾರಗಳನ್ನು ತಾನೇ ಬರೆದಲ್ಲಿ ಆತ್ಮಕಥೆ (ನೋಡಿ) ಎನಿಸಿಕೊಳ್ಳುತ್ತದೆ; ಅದನ್ನೇ ಇತರರು ಬರೆದಾಗ ಜೀವನಚರಿತ್ರೆ ಎನಿಸಿಕೊಳ್ಳುತ್ತದೆ. ನಿಜವಾಗಿ ಆತ್ಮಕಥೆ ಜೀವನಚರಿತ್ರೆಯೆಂಬ ಸಾಹಿತ್ಯಪ್ರಕಾರದ ಒಂದು ಭಾಗ. ಆತ್ಮಕಥೆ ವ್ಯಕ್ತಿಯೊಬ್ಬನ ಚರಿತ್ರೆಯಾಗಿರುವಂತೆ ಆತನ ಪರಿಸರದ ಚರಿತ್ರೆಯೂ ಆಗಿರುತ್ತದೆ. ಕಥಾನಾಯಕ ತನ್ನ ಮತ್ತು ತನ್ನ ಸುತ್ತುಮುತ್ತಿನ ಜೀವನವನ್ನು ತಾನು ಕಂಡಂತೆ ಇಲ್ಲಿ ವರ್ಣಿಸಿರುತ್ತಾನೆ. ಬರೆಯುವಷ್ಟು ಶಕ್ತಿ ಮತ್ತು ತಾಳ್ಮೆ ಇದ್ದಲ್ಲಿ ಪ್ರತಿಯೊಬ್ಬನೂ ತನ್ನ ಆತ್ಮಕಥೆಯನ್ನು ಬರೆಯಬಹುದು. ಅದೊಂದೊಂದಕ್ಕೂ ಪ್ರಾಮುಖ್ಯ ಇದ್ದೇ ಇದೆ. ಬರೆದಾತ ಸಮಾಜದಲ್ಲಿ ಗಣ್ಯವ್ಯಕ್ತಿಯಾದಾಗಲಂತೂ ಆತ ಬರೆದ ಆತ್ಮಕಥೆಗೆ ಹೆಚ್ಚಿನ ಪ್ರಾಧಾನ್ಯ ಒದಗುತ್ತದೆ. ಪಾಶ್ಚಾತ್ಯ ದೇಶಗಳಲ್ಲಿ ಬಹು ಹಿಂದಿನಿಂದ, ಭಾರತದಲ್ಲಿ ಈಚಿಗೆ ಗಮನಾರ್ಹವಾದ ಅನೇಕಾನೇಕ ಆತ್ಮಕಥೆಗಳು ಬಂದಿವೆ. ಫ್ರಾಂಕ್ಲಿನ್, ರೂಸೊ, ಎಡ್ಮಂಡ್ ಗಾಸ್, ಮಿಲ್, ಟ್ರೊಲೋಪ್, ಟಾಲ್‌ಸ್ಟಾಯ್, ಡಬ್ಲ್ಯೂ. ಎಚ್. ಡೇವಿಸ್, ಆಸ್ಬರ್ಟ್ ಸಿಟ್‌ವೆಲ್, ಬರ್ಟ್‌ರೆಂಡ್ ರಸೆಲ್, ವಿನ್‌ಸ್ಟನ್ ಚರ್ಚಿಲ್, ಚಾರ್ಲಿಚಾಪ್‌ಲಿನ್, ಮೋಕ್ಷಗುಂಡಂ ವಿಶ್ವೇಶ್ವರಯ್ಯ, ಜವಾಹರಲಾಲ್ ನೆಹರು, ಮಹಾತ್ಮ ಗಾಂಧಿ—ಮೊದಲಾದ ಪ್ರಭೃತಿಗಳ ಆತ್ಮಕಥೆಗಳು ಖ್ಯಾತವಾಗಿವೆ.

ಕನ್ನಡದಲ್ಲಿ ಆತ್ಮಕಥಾಸಾಹಿತ್ಯ ಹೆಚ್ಚು ಬೆಳೆದಿಲ್ಲವೆನ್ನಬೇಕು. ಈಗ ಬಂದಿರುವ ಜೀವನಚರಿತ್ರೆಗಳಲ್ಲಿ ಅರ್ಧದಷ್ಟೂ ಆತ್ಮಕಥೆಗಳಿಲ್ಲ. ಬಂದಿರುವವುಗಳಲ್ಲಿ ಅರ್ಧ ಸ್ವತಂತ್ರ ಆತ್ಮಕಥೆಗಳಾದರೆ ಉಳಿದವು ಅನುವಾದಗಳು. ಅವು ರಾಷ್ಟ್ರನಾಯಕರು, ಅನ್ಯರಾಷ್ಟ್ರನಾಯಕರು, ಸಾಹಿತಿಗಳು ಮತ್ತು ವಿಜ್ಞಾನಿಗಳನ್ನು ಕುರಿತವಾಗಿವೆ. ಸ್ವತಂತ್ರ ಆತ್ಮಕಥೆಯಲ್ಲಿ ಎಣಿಸಿಟ್ಟ ಹಾಗೆ ನಾಲ್ಕೈದು ಜನ ಸಾಹಿತಿಗಳ ಮತ್ತು ಕಲಾವಿದರ ಆತ್ಮವೃತ್ತಾಂತಗಳನ್ನು ಕಾಣಬಹುದು. 1968–69ರಲ್ಲಿ 1,350 ಪುಟಗಳ ಮೂರು ಸಂಪುಟಗಳಲ್ಲಿ ಪ್ರಕಟವಾಗಿರುವ ಮಾಸ್ತಿ ವೆಂಕಟೇಶ ಐಯ್ಯಂಗಾರ್ಯರ ಭಾವ—ಎಂಬ ಕೃತಿ ಕನ್ನಡದ ಆತ್ಮಚರಿತೆಗಳಲ್ಲಿ ಒಂದು ದೊಡ್ಡ ಹೆಜ್ಜೆ. ಗಾತ್ರದಲ್ಲಿಯೂ ಪಾತ್ರದಲ್ಲಿಯೂ ಹಿರಿದಾದ ಸ್ಥಾನವನ್ನು ಪಡೆದಿರುವ ಈ ಗ್ರಂಥ ಅವರ ಸಾರ್ಥಕ ಬಾಳಿನ ಅರ್ಧಶತಮಾನವನ್ನು ಬಿಂಬಿಸಿದೆ. ಗ್ರಂಥದ ಮೊದಲ ಭಾಗದಲ್ಲಿ ತಮ್ಮ ಊರಿಗೆ ಮಾಸ್ತಿ ಎಂದು ಹೆಸರು ಬರಲು ಕಾರಣ, ತಮ್ಮ ಬಾಲ್ಯ, ವಿದ್ಯಾಭ್ಯಾಸ, ಆಗಿನ ಕಾಲದ ಸಂಪ್ರದಾಯ—ಮೊದಲಾದವುಗಳನ್ನು ಮಾಸ್ತಿ ವಿವರವಾಗಿ ಚಿತ್ರಿಸಿದ್ದಾರೆ. ಎರಡನೆಯ ಭಾಗದಲ್ಲಿ ಅವರ ಅಧಿಕಾರಾವಧಿಯ ಏಕಮುಖ ಚಿತ್ರವಿದೆ. ಮೂರನೆಯ ಭಾಗದಲ್ಲಿ ವಿಶ್ರಾಂತಿ ಕಾಲದ ಬದುಕಿದೆ.

ತನ್ನ ಪ್ರತಿಭೆ ಮತ್ತು ಬುದ್ಧಿಶಕ್ತಿಗಳಿಂದ ಅಧಿಕಾರದ ಉನ್ನತ ಹುದ್ದೆಗಳ ಮೆಟ್ಟಿಲುಗಳನ್ನು ಏರುತ್ತ ಹೋಗುವುದರ ಜೊತೆಗೆ ಕನ್ನಡ ಸಾಹಿತ್ಯ ಶ್ರೇಣಿಯಲ್ಲಿಯೂ ಮೇಲೇರಿ ನಿಂತ ವ್ಯಕ್ತಿಯೊಬ್ಬನ ಜೀವನದ ವಿಶಿಷ್ಟತೆಯೊಡನೆ ಆತನ ಸಮಕಾಲೀನರಾಗಿ, ಕನ್ನಡಕ್ಕಾಗಿ ಬಹುವಿಧವಾಗಿ ದುಡಿದ ಕೆಲವು ಹಿರಿಯ ಚೇತನಗಳ ವಿಷಯಗಳೂ ಹಾಸುಹೊಕ್ಕಾಗಿ ಈ ಗ್ರಂಥದಲ್ಲಿ ಬಂದಿವೆ. ಒಂದು ದೃಷ್ಟಿಯಿಂದ ಇದು ಈ ಐವತ್ತು ಅರುವತ್ತು ವರ್ಷಗಳ ಕನ್ನಡನಾಡಿನ ಚಿತ್ರವನ್ನೂ ಕನ್ನಡ ನಿಧಾನವಾಗಿಯಾದರೂ ಸುಪುಷ್ಟವಾಗಿ ತಲೆಯೆತ್ತಿದ ಬಗೆಯನ್ನೂ ಪ್ರತಿಬಿಂಬಿಸುತ್ತದೆ. ಮಾಸ್ತಿಯವರ ಪಕ್ವ ಶೈಲಿಯ ಸೌಲಭ್ಯವನ್ನು ಇಲ್ಲಿನ ಪ್ರತಿಪುಟದಲ್ಲೂ ಕಾಣಬಹುದು.

ಹುಚ್ಚು ಮನಸ್ಸಿನ ಹತ್ತು ಮುಖಗಳು ಕೆ. ಶಿವರಾಮ ಕಾರಂತರ ಕಾಲುಶತಮಾನದ ಬಾಳಿನ ಕಥೆ. ಕಾರಂತರ ಸಮೃದ್ಧಾನುಭವಕ್ಕೂ ಬಹುಮುಖ ಪ್ರತಿಭೆಗೂ ಜ್ವಲಂತ ಸಾಕ್ಷಿಯಾಗಿದೆ, ಈ ಕೃತಿ. ಗುರುವಿಲ್ಲದೆ, ಗುರಿಯಿಲ್ಲದೆ ಹುಚ್ಚು ಮನಸ್ಸು ತೋರಿದ ದಿಕ್ಕಿನಲ್ಲಿ ನಡೆದ ಈ ಸಾಹಸಿ ಮಾಡಿದ ಸಾಧನೆ ಅದ್ಭುತ. ವಿಷ್ಣುವಿಗೆ ಬರಿಯ ಹತ್ತು ಅವತಾರಗಳಾದರೆ, ತನ್ನ ಧ್ಯೇಯಗಳು ಹದಿನಾರು ಅವತಾರಗಳನ್ನು ತಳೆಯುವಂತಾಯಿತೆಂದು ಲೇಖಕರೇ ಹೇಳಿಕೊಂಡಿದ್ದಾರೆ. ರಾಷ್ಟ್ರಭಕ್ತಿ, ಸ್ವದೇಶಿ ಚಳವಳಿ, ವ್ಯಾಪಾರ, ಪತ್ರಿಕೋದ್ಯಮ, ಅಧ್ಯಾತ್ಮಸಾಧನೆ, ಕಲೆಯ ಭಿನ್ನ ಭಿನ್ನ ಮುಖಗಳು, ಫೋಟೊಗ್ರಫಿ, ನಾಟಕ, ನೃತ್ಯ, ಚಿತ್ರ, ವಾಸ್ತು, ಸಂಗೀತ, ಚಲನಚಿತ್ರ, ಇಷ್ಟೂ ಸಾಲದೆ ಸಮಾಜಸುಧಾರಣೆ, ಗ್ರಾಮೋದ್ಧಾರ, ಶಿಕ್ಷಣ ವಲಯದಲ್ಲಿ ಪ್ರಯೋಗಗಳು, ಉದ್ಯೋಗ—ಇವೆಲ್ಲ ಅವತಾರಗಳೂ ಅವಾಂತರಗಳೂ ಕಾರಂತರ ಜೀವನದಲ್ಲಿ ಆಗಿಹೋಗಿವೆ ; ಇನ್ನೂ ಆಗುತ್ತಿವೆ. ಸ್ವಾತಂತ್ರ್ಯ ಜೀವನದಿಂದ ಸಂನ್ಯಾಸಿ ಜೀವನದ ಮೂಲಕ ಹಾದು ಸಂಸಾರಿಯಾಗಿಯೂ ಸಾಗಿದ್ದೇನೆ—ಎಂದು ಅವರೇ ಹೇಳಿಕೊಂಡಿದ್ದಾರೆ. ಪ್ರಚಲಿತ ವಿಷಯಗಳ ಬಗ್ಗೆ ಆಳವಾಗಿ

ಆಲೋಚನೆ ಮಾಡಿ, ಅಸಾಧ್ಯ ಸಾಹಸಗಳಿಗೆ ಕೈಹಾಕಿ ಜಯಿಸಿದ ಕೀರ್ತಿ ಕಾರಂತರದು. ಇಷ್ಟೊಂದು ವ್ಯಾಪಕ ಹವ್ಯಾಸಗಳನ್ನುಳ್ಳ ಬೇರೊಬ್ಬ ಕನ್ನಡ ಸಾಹಿತಿಯನ್ನು ಹೆಸರಿಸುವುದು ಕಷ್ಟ. ಹುಚ್ಚು ಮನಸ್ಸಿನ ಹತ್ತು ಮುಖಗಳು ಈ ಸಾಹಸಿಯ ಜೀವನದ ಒಂದು ಹನಿಯನ್ನು ಮಾತ್ರ ಪ್ರತಿಬಿಂಬಿಸುತ್ತದೆ.

ಹೋರಾಟದ ಬದುಕು (1968) ದೇ. ಜ. ಗೌ. ಅವರ ಅರ್ಧಶತಮಾನದ ಆತ್ಮಕಥೆ. ಇದು ಈ ಅಚ್ಚಕನ್ನಡ ಧೀಮಂತ ಯೋಧನ ಹೋರಾಟದ ಬದುಕನ್ನು ಒಳಗೊಂಡು 281 ಪುಟಗಳಷ್ಟು ವಿಸ್ತಾರವಾಗಿದೆ. ಕಡುಬಡತನದ ಗುಡಿಸಲಿನಲ್ಲಿ ಜನಿಸಿ, ಅಡಿಗಡಿಗೆ ನಾನಾ ಎಡರುತೊಡರುಗಳನ್ನು ಎದುರಿಸಿ, ಗೊತ್ತುಗುರಿಯಿಲ್ಲದೆ ಬೆಳೆದು, ಗುರು ಕುವೆಂಪು ಅವರ ಕೃಪಾಕಟಾಕ್ಷಕ್ಕೆ ಪಾತ್ರವಾಗಿ, ಅವರ ಆಶೀರ್ವಾದದ ಮಹಾರಕ್ಷೆಯಲ್ಲಿ ಕನ್ನಡದ ದೀಕ್ಷೆಯನ್ನು ಪಡೆದು, ಕನ್ನಡಕ್ಕಾಗಿ ದುಡಿದು, ಕನ್ನಡದಿಂದ ಕೀರ್ತಿ, ಯಶಸ್ಸುಗಳನ್ನು ಪಡೆದು, ಕನ್ನಡಕ್ಕಾಗಿಯೇ ತನು, ಮನ, ಧನಗಳನ್ನು ಸಮರ್ಪಿಸಿಕೊಂಡ ಮಹಾಚೇತನವೊಂದರ ಆತ್ಮವೃತ್ತಾಂತ— ಈ ಕೃತಿ. ಗುಡಿಸಲಿನಿಂದ ಗಂಗೋತ್ರಿಯ ವರೆಗೆ ನಡೆದ ಜೀವನಾವಧಿಯಲ್ಲಿ ನಾನಾ ಕಾರಣಗಳಿಂದ, ನಾನಾ ರೀತಿಯಲ್ಲಿ ಲೇಖಕರು ನಡೆಸಿದ ಹೋರಾಟಗಳ ವೃತ್ತಾಂತವನ್ನೊಳಗೊಂಡಿರುವ ಈ ಕೃತಿಗೆ ಹೋರಾಟದ ಬದುಕು ಎಂಬ ಹೆಸರು ಉಚಿತವಾಗಿದೆ. ಆರಂಭದಲ್ಲಿ ಬಡತನದೊಂದಿಗೆ, ಜಾತೀಯತೆಯೊಂದಿಗೆ ಹೋರಾಟ ನಡೆದಿರುವುದು ಕಂಡು ಬಂದರೂ ಪ್ರಮುಖವಾದ ಹೋರಾಟ ಕನ್ನಡಕ್ಕೆ ಸಂಬಂಧಿಸಿದುದಾಗಿದೆ. ಒಟ್ಟಿನಲ್ಲಿ ಧ್ಯೇಯವಂತ, ಧೀಮಂತ ತಾಯ್ನುಡಿಯ ಸೇವಕನೊಬ್ಬನ ಈ ಆತ್ಮವೃತ್ತಾಂತ ಆತ್ಮಕಥಾಸಾಹಿತ್ಯಕ್ಕೆ ಒಂದು ಮಹತ್ತರ ಕೊಡುಗೆಯಾಗಿದೆ. ಇಲ್ಲಿನ ಗದ್ಯದ ಗತ್ತು ಮತ್ತು ಗ್ರಾಮೀಣ ಪದಗಳ ಸೊಗಸು ಹೆಚ್ಚು ಆಕರ್ಷಣೀಯವೂ ಮನೋಜ್ಞವೂ ಆಗಿದ್ದು ಶೈಲಿಯ ಹೊಸದೊಂದು ಮಾದರಿಗೆ ಬುನಾದಿಯಾಗಿದೆ. ಕನ್ನಡದ ಮುನ್ನಡೆಗೆ ಇರಬಹುದಾದ ತೊಡಕುಗಳು, ಅಡ್ಡಬಂದ ವ್ಯಕ್ತಿಗಳು, ಸನ್ನಿವೇಶಗಳು, ಕನ್ನಡ ಪ್ರಗತಿಯ ಹಲವಾರು ಮಾರ್ಗಗಳು—ಈ ಬಗೆಗೆ ಕಳೆದ ನಲವತ್ತು ವರ್ಷಗಳಲ್ಲಿ ನಾಡಿನಲ್ಲಿ ನಡೆದಿರಬಹುದಾದ ಹೋರಾಟದ ವಿವರ ಇಲ್ಲಿ ಚಿತ್ರಿತವಾಗಿದೆಯಾಗಿ ಕನ್ನಡ ನುಡಿ ಮತ್ತು ಸಾಹಿತ್ಯದ ಬಗೆಗಿನ ಮೂಲ ವಸ್ತುವನ್ನೊದಗಿಸುವುದರಲ್ಲಿ ಈ ಕೃತಿಗೆ ಸಾರ್ಥಕತೆ ಲಭಿಸಿದೆ.

1939ರಲ್ಲಿ ಪ್ರಕಟವಾದ 152 ಪುಟಗಳ ಹತ್ತು ವರುಷ ಜಿ. ಪಿ. ರಾಜರತ್ನಂ ಅವರ ಹತ್ತು ವರುಷಗಳ ಜೀವನಕಥೆಯಾಗಿದೆ. ಹತ್ತು ವರುಷಗಳು ಬಾಳಿನ ದೀರ್ಘಾವಧಿಯೇನೂ ಅಲ್ಲ. ಆದರೆ ಅವು ಬಾಳಿನ ಮಹತ್ತ್ವದ ದಿನಗಳಲ್ಲ ಎಂದು ಹೇಳುವಂತಿಲ್ಲ. ಅದಕ್ಕೆ ಪ್ರಕೃತ ಕೃತಿಯೇ ಸಾಕ್ಷಿ. ಇದರಲ್ಲಿ ರಾಜರತ್ನಂ ಐಯ್ಯಂಗಾರ್ ರಾಜರತ್ನಂ ಆದುದು, ನಮ್ಮ ನಮ್ಮವರು ಕೃತಿ ಅಚ್ಚಾದುದು—ಈ ಎರಡು ಭಾಗಗಳು ತುಂಬ ಸ್ವಾರಸ್ಯವಾಗಿವೆ. ರತ್ನನ ತಂದೆ ತೀರಿಕೊಂಡಾಗ ನಂಟರಾರೂ ಸಹಕರಿಸದೆ ಶವವನ್ನು ಜಟಕಾ ಗಾಡಿಯಲ್ಲಿ ತೆಗೆದುಕೊಂಡು ಹೋಗಿ ಸಂಸ್ಕರಿಸಿದ್ದನ್ನು ಓದಿದಾಗ ಎಂಥವರ ಎದೆಯೂ ಕರಗಿ ನೀರಾಗದಿರದು. ಸತಿಯನ್ನು ಕ್ಷಯದ ಆಸ್ಪತ್ರೆಗೆ ಸೇರಿಸಿ ಹಿಂತಿರುಗಿ ಬರುವಾಗ ದಾರಿಯಲ್ಲಿ ಕಂಡ ಹೆಂಡದಂಗಡಿಯ ಅನುಭವವೇ ಅವರ ರತ್ನನ ಪದಗಳು ಸೃಷ್ಟಿಯಾಗಲು ಕಾರಣವಾಯಿತೆಂದು ಓದಿದಾಗ ಕುತೂಹಲವೂ ಆಶ್ಚರ್ಯವೂ ಉಂಟಾಗುತ್ತದೆ. ಕವಿಗಳ ಆತ್ಮಕಥೆಯಿಂದ ಅವರ ಕಾವ್ಯಸೃಷ್ಟಿಯ ಎಷ್ಟೋ ಹಿನ್ನೆಲೆಗಳ ಪರಿಚಯವಾಗಿ ಸಮಾಜಕ್ಕೆ ಮಹದುಪಕಾರವಾಗುವುದರಲ್ಲಿ ಅನುಮಾನವಿಲ್ಲ.

ಮಿಂಚಿನ ಬಳ್ಳಿ ಕಾರ್ಯಾಲಯದಿಂದ 1946ರಲ್ಲಿ ಪ್ರಕಟವಾದ ಸಾಹಿತ್ಯಜ್ಞರ ಆತ್ಮಕಥನ ಇನ್ನೊಂದು ವಿಶಿಷ್ಟ ಕೃತಿ. 150 ಪುಟಗಳ ಈ ಕೃತಿಯಲ್ಲಿ ಹನ್ನೊಂದು ಪ್ರಸಿದ್ಧ ಸಾಹಿತಿಗಳ ಪರಿಚಯವನ್ನು ಅವರವರ ಮಾತಿನಲ್ಲಿಯೇ ಕಾಣಬಹುದು. ಗೋವಿಂದ ಪೈ, ಆರ್. ವಿ. ಜಾಗೀರದಾರ್, ದೇವುಡು ನರಸಿಂಹಶಾಸ್ತ್ರಿ, ರಂ. ಶ್ರೀ. ಮುಗಳಿ, ಸಿ. ಕೆ. ವೆಂಕಟರಾಮಯ್ಯ, ವಿ. ಕೃ. ಗೋಕಾಕ, ಶಂ. ಬಾ. ಜೋಶಿ, ಚನ್ನಪ್ಪ ಉತ್ತಂಗಿ, ಬೆಟಗೇರಿ ಕೃಷ್ಣಶರ್ಮ, ಎ. ಆರ್. ಕೃಷ್ಣಶಾಸ್ತ್ರೀ, ದ. ರಾ. ಬೇಂದ್ರೆ—ಇವರುಗಳೇ ಅಲ್ಲಿನ ಸಾಹಿತಿಗಳು. ಇವರಲ್ಲಿ ಬೇಂದ್ರೆ ಅವರನ್ನುಳಿದು ಬೇರಾರೂ ತಮ್ಮ ಆತ್ಮಕಥೆಗಳನ್ನು ಬೇರೆಲ್ಲೂ ಪ್ರಕಟಿಸಿಲ್ಲ. ಭಿನ್ನಾನುಭವಗಳಿಂದ ವೈವಿಧ್ಯಮಯವೂ ಸ್ವಾರಸ್ಯಪೂರ್ಣವೂ ಆದ, ವಿವಿಧ ಸಾಹಿತಿಗಳ ಪರಿಚಯುವನ್ನೊಳಗೊಂಡಿರುವ ಈ ಕೃತಿಯನ್ನು ಸಂಪಾದಿಸಿ ಹೊರತಂದ ಬುರ್ಲಿ ಬಿಂದುಮಾಧವರಾಯರು ಕನ್ನಡಿಗರ ಕೃತಜ್ಞತೆಗೆ ಪಾತ್ರರು.

ನಾಟ್ಯನೆನಪುಗಳು ಎಂಬ ಕೃತಿಯಲ್ಲಿ ಶ್ರೀರಂಗರು ರಂಗಭೂಮಿಗೂ ತಮಗೂ ಇರುವ ನಂಟನ್ನು ಹೇಳಿಕೊಂಡಿದ್ದಾರೆ. ನಡೆದು ಬಂದ ದಾರಿಯ ಮೂರನೆಯ ಸಂಪುಟದಲ್ಲಿ (1961) ಬೇಂದ್ರೆ ಅವರು ಚತುರ್ಮುಖ ಎಂಬ ಶೀರ್ಷಿಕೆಯಲ್ಲಿ ತಮ್ಮ ಆತ್ಮವೃತ್ತಾಂತವನ್ನು ಬರೆದಿದ್ದಾರೆ. ಮನ್ವಂತರದ ಒಂದನೆಯ ಸಂಪುಟದಲ್ಲಿಯೂ ಅವರು ತಮ್ಮ ಕಾವ್ಯಜೀವನದ ಹಿನ್ನೆಲೆಯನ್ನು ವಿವರಿಸಿದ್ದಾರೆ. ಸಿಂಪಿ ಲಿಂಗಣ್ಣನವರು ಮೂವತ್ತೈದು ವರ್ಷಗಳು—ಎಂಬ ಕೃತಿಯಲ್ಲಿ ಆ ಅವಧಿಯಲ್ಲಿ ತಾವು ಕಂಡುಂಡ ಸಿಹಿಕಹಿಗಳ ಅನುಭವಗಳನ್ನು ಹೇಳಿಕೊಂಡಿದ್ದಾರೆ. ಆಲೂರು ವೆಂಕಟರಾಯರ ಜೀವನ ಸ್ಮರಣೆ—ಎಂಬ ಗ್ರಂಥದಲ್ಲಿ ಕರ್ಣಾಟಕದ ಹೊಸ ಪ್ರಜ್ಞೆಯ ಬೆಳವಣಿಗೆಯನ್ನು ಕಾಣಬಹುದು.

ನವರತ್ನ ರಾಮರಾಯರ ಕೆಲವು ನೆನಪುಗಳು, ವಾಸುದೇವಾಚಾರ್ಯರ ನೆನಪುಗಳು, ಡೂನು ಅವರ ಕಾಡಿನಲ್ಲಿ ಕಳೆದ ದಿನಗಳು ಅತ್ಯುತ್ತಮ ನೆನಪುಗಳಾಗಿವೆ. ದಿವಾಕರರ ಸೆರೆಮನೆ ಎಂಬುದು ಅವರಿಗಿದ್ದ ದೇಶಭಕ್ತಿಯ ದ್ಯೋತಕವಾಗಿದೆ. ಇವು ಹೆಸರುಗಳೇ ತಿಳಿಸುವಂತೆ ನೆನಪುಗಳು—ಅಷ್ಟೆ. ಆದ್ದರಿಂದ ಇವು ಪಾಂಕ್ತವಾದ ಜೀವನಚರಿತ್ರೆಗಳೆನಿಸಲಾರವು. ಆದರೂ ವ್ಯಕ್ತಿಯ ಪೂರ್ಣ ಜೀವನವನ್ನಲ್ಲದಿದ್ದರೂ ಭಾಗಶಃ ಜೀವನವನ್ನಾದರೂ (ಅದರಲ್ಲೂ ಮುಖ್ಯವಾದ ಭಾಗಗಳನ್ನು) ಇವು ತಿಳಿಸುತ್ತವಾದ ಕಾರಣ ಇವನ್ನು ಹೆಸರಿಸಬಹುದು.

1967ರಲ್ಲಿ ಪ್ರಕಟವಾದ ಗುಬ್ಬಿ ವೀರಣ್ಣನವರ ಕಲೆಯೇ ಕಾಯಕ ಎಂಬ ಆತ್ಮವೃತ್ತಾಂತ ಉತ್ತಮ ಕೃತಿಯಾಗಿದೆ. ಇದು ಕಲಾವಿದನೊಬ್ಬನ ಹಲವು ಹನ್ನೆರಡು ಬವಣೆಗಳ, ನೂರಾರು ಸಮಸ್ಯೆಗಳ ಪ್ರಾತಿನಿಧಿಕ ಗ್ರಂಥದಂತಿದೆ. ಕನ್ನಡ ರಂಗಭೂಮಿಗೆ ಗುಬ್ಬಿ ವೀರಣ್ಣನವರು ಸಲ್ಲಿಸಿರುವ ಬಹುಮುಖ ಸೇವೆಯನ್ನೂ ಅವರ ಸಾಧನೆ ಸಿದ್ಧಿಗಳನ್ನೂ ಇಲ್ಲಿ ಕಾಣಬಹುದು.

ಈ ನಾಲ್ಕೈದು ವರ್ಷಗಳ ಅವಧಿಯಲ್ಲಿ ಕೆಲವು ಜನ ಕಲಾವಿದರ ಆತ್ಮಕಥೆಗಳು ಸುಧಾ, ಕರ್ಮವೀರ ಮೊದಲಾದ ವಾರಪತ್ರಿಕೆಗಳಲ್ಲಿಯೂ ಪ್ರಜಾವಾಣಿ ದಿನಪತ್ರಿಕೆಯಲ್ಲಿಯೂ ಪ್ರಕಟವಾದುವು. ಕರ್ಣಾಟಕದಲ್ಲಿ ಕರ್ಣನ ಪಾತ್ರಕ್ಕೆ ಅತ್ಯಂತ ಹೆಸರುವಾಸಿಯಾದ ಕೊಟ್ಟೂರಪ್ಪ ಮತ್ತು ಭೀಮನ ಪಾತ್ರದ ಮೂಲಕ ಹೆಸರು ಪಡೆದ ಸ್ತ್ರೀ ನಾಟಕ ಮಂಡಳಿಯ ನಾ ಗ ರ ತ್ನ ಮ್ಮ ಇವರುಗಳ ಆತ್ಮಚರಿತೆಗಳು ಸುಧಾ ವಾರಪತ್ರಿಕೆಯಲ್ಲಿ ಪ್ರಕಟವಾದವು.

ಕನ್ನಡದ ಇಂದಿನ ಅತ್ಯಂತ ಜನಪ್ರಿಯ ನಾಯಕ ನಟ, ನಟಸಾರ್ವಭೌಮ ರಾಜಕುಮಾರ್ ಅವರ ಹೃದ್ಯವಾದ ಆತ್ಮಕಥೆ 1970ರಲ್ಲಿ ಕೆಲವು ತಿಂಗಳು ಪ್ರಜಾವಾಣಿಯಲ್ಲಿ ಪ್ರಕಟವಾಯಿತು. ಮಣ್ಣಿನ ಮಗನೊಬ್ಬ ತನಗೆ ರಕ್ತಗತವಾಗಿ ಬಂದ ಕಲೆಯನ್ನು ಭಯ ಭಕ್ತಿ ಶ್ರದ್ಧೆ ಗೌರವಗಳಿಂದ ಆರಾಧಿಸಿ, ಸಾಧಿಸಿ, ಅತ್ಯುನ್ನತ ಮಟ್ಟಕ್ಕೇರಿದ ಚಿತ್ರವನ್ನಿಲ್ಲಿ ಕಾಣಬಹುದು. ಸಾಧನೆಯ ಸಮಯದಲ್ಲಿ ಆತ ಪಟ್ಟ ಪಾಡು ತೊಟ್ಟ ನಿಷ್ಠೆ, ಕನ್ನಡ ಪ್ರೇಮ ಎಂಥವರಿಗೂ ಮೆಚ್ಚಿಗೆ ತರುವಂಥವು.

ಕನ್ನಡಕ್ಕೆ ಅನುವಾದಗೊಂಡ ಕೃತಿಗಳು ಭಾರತೀಯ ಮತ್ತು ವಿದೇಶೀಯ ರಾಷ್ಟ್ರನಾಯಕರ, ವಿಜ್ಞಾನಿಗಳ ಮತ್ತು ಸಾಹಿತಿಗಳ ಆತ್ಮಕಥೆಗಳಾಗಿವೆ.

ಸತ್ಯಶೋಧನ ಪ್ರಕಟಣ ಮಂದಿರದವರ ಸತ್ಯಶೋಧನೆ ಅಥವಾ ಗಾಂಧೀಜಿ ಅವರ ಆತ್ಮಕಥೆ ಮತ್ತು ಸಿದ್ದವನಹಳ್ಳಿ ಕೃಷ್ಣಶರ್ಮರ ಗಾಂಧೀಜಿ ಆತ್ಮಕಥೆಗಳು (ಸಂಕ್ಷಿಪ್ತ) ಪ್ರಕಟವಾಗಿವೆ. ಜವಾಹರಲಾಲ್ ನೆಹರು ಅವರ ಆತ್ಮಕಥೆಯನ್ನು ಗುರುನಾಥ ಜೋಶಿ ಅವರು ನನ್ನ ಕಥೆ ಎಂಬ ಶೀರ್ಷಿಕೆಯಲ್ಲಿ 1958ರಲ್ಲಿ ಕನ್ನಡಕ್ಕೆ ತಂದಿದ್ದಾರೆ. ಗಾಂಧಿ ಮತ್ತು ನೆಹರು ಅವರ ವ್ಯಕ್ತಿತ್ವ ಉನ್ನತವಾಗಿದ್ದು ಅಂತರರಾಷ್ಟ್ರೀಯ ಕೀರ್ತಿಯನ್ನು ಪಡೆದಿರುವುದರಿಂದ ಅವರ ಆತ್ಮಕಥೆಗಳು ಅಂತರರಾಷ್ಟ್ರೀಯ ಮನ್ನಣೆಯನ್ನು ಪಡೆದಿರುವುದು ಮಾತ್ರವಲ್ಲದೆ ಅನೇಕ ಭಾರತೀಯ ವ್ಯಕ್ತಿಗಳು ತಮ್ಮ ಆತ್ಮಕಥೆಯನ್ನು ಬರೆಯಲು ಪ್ರೇರಣೆಯನ್ನುಂಟುಮಾಡಿವೆ. ಕೃಷ್ಣ ಹತೀಸಿಂಗ್ ಅವರ ವಿತ್ ನೋ ರಿಗ್ರೆಟ್ಸ್ ಎಂಬ ಆ ತ್ಮ ಕ ಥೆ ಯ ನ್ನು ದೇ. ಜ. ಗೌ. ಅವರು ನೆನಪು ಕಹಿಯಲ್ಲ ಎಂಬ ಹೆಸರಿನಿಂದ 1949ರಲ್ಲಿ ಕನ್ನಡಕ್ಕೆ ಅನುವಾದ ಮಾಡಿದ್ದಾರೆ. ಕೃತಿ ಸ್ವತಂತ್ರವೋ ಎನ್ನುವಷ್ಟರ ಮಟ್ಟಿಗೆ ಇಲ್ಲಿನ ಗದ್ಯ ಉತ್ತಮವಾಗಿದೆ. ಇದು ನೆಹರು ತಂಗಿಯ ಆತ್ಮಕಥೆಯಾದರೂ ಇಲ್ಲಿ ಸಮಸ್ತ-ನೆಹರು ಮನೆತನದ ಅರ್ಧ ಶತಮಾನದ ತ್ಯಾಗಭೋಗಗಳ ಜೀವನದ ಅರಿವಾಗುತ್ತದೆ. ರಾಷ್ಟ್ರಹಿತಕ್ಕಾಗಿ ಆ ಮನೆತನದವರು ನೀಡಿದ ಕೊಡುಗೆ ಅತ್ಯದ್ಭುತವಾದುದಾಗಿದೆ. 1959ರಲ್ಲಿ ಸಿದ್ದವನಹಳ್ಳಿ ಕೃಷ್ಣಶರ್ಮರು ಬಾಬು ರಾಜೇಂದ್ರ ಪ್ರಸಾದರ ಸ್ವವೃತ್ತಾಂತವನ್ನು ರಾಜೇಂದ್ರ ಪ್ರಸಾದ್ ಆತ್ಮಕಥೆ ಎಂಬ ನಾಮಾಂಕಿತದಲ್ಲಿ ಕನ್ನಡಕ್ಕೆ ತಂದಿದ್ದಾರೆ. ಸ್ವಾತಂತ್ರ್ಯಯೋಧ ದೇಶಭಕ್ತನ ರೋಮಾಂಚಕಾರಿಯಾದ ಈ ಕಥೆ 866 ಪುಟಗಳಲ್ಲಿ ಹೊ ರ ಬಂ ದಿ ರು ವ ಬೃಹತ್ ಗ್ರಂಥವಾಗಿದೆ. ಗೌರೀಶಂಕರದ ತುತ್ತತುದಿಗೇರಿ ಹೊಸ ದಾಖಲೆಯೊಂದನ್ನು ಸ್ಥಾಪಿಸಿದ ತೇನ್‌ಸಿಂಗನ ಆತ್ಮಕಥೆಯನ್ನು ಎವರೆಸ್ಟ್ ವೀರ ಎಂಬ ಹೆಸರಿನಲ್ಲಿ 1957ರಲ್ಲಿ ಕೂಡಲಿ ಚಿದಂಬರಂ ಮತ್ತು ಜನಾರ್ದನ ಗುರ್ಕಾರ್ ಅವರು ಸುಂದರವಾಗಿ ಅನುವಾದಿಸಿದ್ದಾರೆ. ಟಾಲ್‌ಸ್ಟಾಯ್ ಅವರ ಸುಪ್ರಸಿದ್ಧ ಆತ್ಮಚರಿತೆಯನ್ನು ಲಿಯೊ ಟಾಲ್‌ಸ್ಟಾಯ್ ಎಂಬ ಶೀರ್ಷಿಕೆಯಲ್ಲಿ 1958ರಲ್ಲಿ ಆನಂದರು ಕನ್ನಡಕ್ಕೆ ತಂದಿದ್ದಾರೆ. 388 ಪುಟಗಳ ಈ ಕೃತಿಯಲ್ಲಿ ಟಾಲ್‌ಸ್ಟಾಯ್ ಅವರ ಬಾಲ್ಯ ಮತ್ತು ಯೌವನಗಳ ಜೀವನಪರಿಚಯವಿದೆ.

ಲೋಕವಿಖ್ಯಾತ ವಿಜ್ಞಾನಿ, ಚಾರಲ್ಸ್ ಡಾರ್ವಿನ್ನರ ಆತ್ಮಕಥೆಯನ್ನು ಶ್ರೀಮತಿ ಜೀವೂಬಾಯಿ ಲಕ್ಷ್ಮಣರಾವ್ ಅವರು 1969ರಲ್ಲಿ ಚಾರಲ್ಸ್ ಡಾರ್ವಿನ್ನನ ಆತ್ಮಕಥೆ ಎಂಬ ಹೆಸರಿನಲ್ಲಿ ಅನುವಾದಿಸಿದರು. ಸುಪ್ರಸಿದ್ಧ ರಾಜಕಾರಣಿ ಬೆಂಜಮಿನ್ ಫ್ರಾಂಕ್ಲಿನ್ ಆತ್ಮಕಥೆ ಅದೇ ಹೆಸರಿನಿಂದ 1958ರಲ್ಲಿ ಜನಾರ್ದನ ಗುರ್ಕಾರ್ ಅವರಿಂದ ಕನ್ನಡಕ್ಕೆ ಬಂತು. ಪ್ರಖ್ಯಾತ ಮಹಿಳೆ ಹೆಲನ್ ಕೆಲರಳ ಆತ್ಮಕಥೆ ಚಿ. ನ. ಮಂಗಳ ಅವರಿಂದ ಅನುವಾದಗೊಂಡಿತು. ಅಮೆರಿಕದ ಅಧ್ಯಕ್ಷರಾಗಿದ್ದ ರೂಸ್‌ವೆಲ್ಟ್ ಅವರ ಪತ್ನಿ ಎಲೀನರ್ ರೂಸ್‌ವೆಲ್ಟ್ ಅವರ ಆತ್ಮಕಥೆ ಸವಿನೆನಪು ಎಂಬ ಹೆಸರಿನಲ್ಲಿ ಕನ್ನಡಕ್ಕೆ ಬಂದಿದೆ. ತಂದವರು ಮನ್ವಂತರ. ವೆರಿಯರ್ ಎಲ್ವಿನ್ನರ ಗಿರಿಜನ ಪ್ರಪಂಚ ಎಚ್. ಎಲ್. ನಾಗೇಗೌಡರಿಂದ ಅನುವಾದಿತವಾಗಿರುವ ಇನ್ನೊಂದು ಆತ್ಮಕಥಾಗ್ರಂಥ. ಈ ಎಲ್ಲ ಅನುವಾದಗಳಿಂದ ಕನ್ನಡ ಆತ್ಮಕಥಾ ಸಾಹಿತ್ಯ ಶ್ರೀಮಂತವಾಗಿದೆ.

ಮೇಲೆ ಕಂಡುಬರುವ ಎಷ್ಟೋ ಮಂದಿ ಆತ್ಮಕಥೆಗಾರರು ತಮ್ಮ ಜೀವನ ಆತ್ಮ ಕಥೆಗೆ ಅರ್ಹವಾದುದಲ್ಲವೆಂದೂ ಸಾಮಾನ್ಯವೆಂದೂ ಕೇವಲ ತಮ್ಮ ಆತ್ಮಸಂತೋಷ ಕ್ಕಾಗಿ ಮಾತ್ರ ಬರೆದುಕೊಂಡದ್ದೆಂದೂ ಹೇಳಿಕೊಂಡಿದ್ದಾರಾದರೂ ಅದು ಔಪಚಾರಿಕ ವಷ್ಟೆ. ಅವರ ಸಾಧನೆ ಸಿದ್ಧಿ ದುಡಿಮೆಗಳು ಅವರನ್ನು ಎತ್ತರದ ವ್ಯಕ್ತಿಗಳನ್ನಾಗಿ ಮಾಡಿವೆ. ಆತ್ಮಕಥೆ ಕೇವಲ ಕಳೆದುಹೋದ ಜೀವನ ವೃತ್ತಾಂತವಾದರೂ ಅದು ಉಳಿದವರ ಜೀವನದ ಮೇಲೆ ಬೀರುವ ಪ್ರಭಾವ ಮಹತ್ತರವಾದುದು, ಮಾರ್ಗ ದರ್ಶಕವಾದುದು. (ಎಂ.ಸಿ.ಪಿ.)

**ಕನ್ನಡದಲ್ಲಿ ಕಾದಂಬರಿ ಸಾಹಿತ್ಯ:** ಇಂದಿನ ಸಾಹಿತ್ಯ ಪ್ರಕಾರಗಳಲ್ಲಿ ಕಾದಂಬರಿ ಅತ್ಯಂತ ಪ್ರಭಾವಶಾಲಿಯೂ ಜನಪ್ರಿಯವೂ ಆಗಿದೆ. ಹತ್ತೊಂಬತ್ತನೆಯ ಶತಮಾನದಲ್ಲಿ ಇಂಗ್ಲಿಷ್ ಸಾಹಿತ್ಯದ ಪ್ರೇರಣೆಯಿಂದ ಹೊಸಗನ್ನಡದಲ್ಲಿ ಸಣ್ಣ ಕಥೆ, ಪ್ರಬಂಧ, ಭಾವಗೀತ, ಜೀವನಚರಿತ್ರೆ—ಮೊದಲಾದ ಹೊಸ ಪ್ರಕಾರಗಳು ಹುಟ್ಟಿದಂತೆ ನಾವೆಲ್ ಎಂಬ ಪ್ರಕಾರ ಕಾದಂಬರಿ ಎಂಬ ಹೆಸರಿನಿಂದ ಪ್ರಚುರವಾಯಿತು. ಇದಕ್ಕೆ ತೆಲುಗು ಭಾಷೆಯಲ್ಲಿ ನವಲಾ ಎಂಬ ಹೆಸರು ವಾಡಿಕೆಯಲ್ಲಿದೆ. ತಮಿಳಿನಲ್ಲಿ ನಾವೆಲ್ ಎಂಬ ಪದವೇ ಹೆಚ್ಚು ಬಳಕೆಯಲ್ಲಿದೆ. ಹಿಂದಿ ಭಾಷೆಯಲ್ಲಿ ಇದನ್ನು ಉಪನ್ಯಾಸ್ ಎಂದು ಕರೆಯುತ್ತಾರೆ. ಕನ್ನಡದಲ್ಲಿ ಮಾತ್ರ ಕಾದಂಬರಿ ಎಂಬ ಹೆಸರು ನಿಂತಿದೆ. ಈ ಹೆಸರು ಹೇಗೆ ಬಂದಿತೆಂಬ ವಿಷಯ ಕುತೂಹಲ ಹುಟ್ಟಿಸುವು ದಾಗಿದೆ. ಸಂಸ್ಕೃತದಲ್ಲಿ ಬಾಣಭಟ್ಟ ರಚಿಸಿದ ಕಾದಂಬರೀ ಎಂಬ ಗದ್ಯಕಾವ್ಯ ಪ್ರಸಿದ್ಧವಾಗಿದೆ. ನಾವೆಲ್‌ಗಳನ್ನು ಓದುವಾಗ ಸಂಸ್ಕೃತದ ಕಾದಂಬರೀ ಕಾವ್ಯದ ನೆನಪು ಬಂದಿತು, ಅಂದಿನ ಜನರಿಗೆ. ಉತ್ತರ ಕರ್ಣಾಟಕದಲ್ಲಿ ತುರಮುರಿಯವರ ಕಾದಂಬರೀ ಕಾವ್ಯದ ಹೊಸಗನ್ನಡ ಗದ್ಯರೂಪ (ಕ್ರಿ.ಶ. 1875) ಪ್ರಕಟವಾಗಿ ಜನರ ಮನಸ್ಸನ್ನು ಸೂರೆಗೊಂಡಿತ್ತು. ಜಿ. ವೈ. ಕೃಷ್ಣಾಚಾರ್ಯರ ಕಾದಂಬರಿ ಕನ್ನಡ ಗದ್ಯಕಥೆಯ ಸವಿ ದಕ್ಷಿಣಕರ್ಣಾಟಕದ, ಮೈಸೂರು ಸಂಸ್ಥಾನದ ಜನರಿಗೆ ಉಂಟಾಗಿತ್ತು. ಕಾದಂಬರಿ ಕಾವ್ಯದ ಸೊಗಸು ನಾಗವರ್ಮನ ಕೃತಿಯ ಮೂಲಕ ವಿದ್ವಾಂಸರಿಗಂತೂ ಹಿಂದಿನಿಂದಲೂ ಗೊತ್ತಿತ್ತು. ಕಥೆ, ಶೈಲಿ, ನಿರೂಪಣೆ, ವರ್ಣನೆಯ ಚಮತ್ಕೃತಿ, ರಸ ಮೊದಲಾದ ದೃಷ್ಟಿಗಳಿಂದ ಕಾದಂಬರೀ ಕಾವ್ಯ ಜನಮನವನ್ನು ಸೂರೆಗೊಂಡಿತ್ತು. ಆದುದರಿಂದ ಸಂಸ್ಕೃತ ಕಾದಂಬರೀ ಗ್ರಂಥದಂತೆ ರಮ್ಯವಾದ ಎಲ್ಲ ಕೃತಿಗಳನ್ನೂ ಕಾದಂಬರಿ ಎಂಬ ಹೆಸರಿನಿಂದಲೇ ಕರೆಯುವ ವಾಡಿಕೆ ಏರ್ಪಟ್ಟಿತು. ಹೀಗಾಗಿ ನಾವೆಲು ಜಾತಿಗೆ ಕಾದಂಬರಿ ಎಂದು ಕನ್ನಡಿಗರು ಕೊಟ್ಟ ಹೆಸರು ಸಾರ್ಥಕವಾಗಿ, ಸ್ಥಿರವಾಗಿ ಉಳಿಯಿತು.

ಕಥೆಯನ್ನು ಹೇಳುವ ಮತ್ತು ಕೇಳುವ ಹವ್ಯಾಸ ಎಲ್ಲ ಕಾಲದಲ್ಲೂ ಎಲ್ಲರಿಗೂ ಇರುವುದೇ ಆಗಿದೆ. ಕನ್ನಡ ಸಾಹಿತ್ಯದಲ್ಲಿ ನಾಗವರ್ಮನ ಕಾದಂಬರಿ, ದುರ್ಗಸಿಂಹನ ಪಂಚತಂತ್ರ, ನೇಮಿಚಂದ್ರನ ಲೀಲಾವತಿ ಪ್ರಬಂಧ, ಚೌಂಡರಸನ ಅಭಿನವದಶ ಕುಮಾರಚರಿತೆ, ದೇವಕವಿಯ ಕುಸುಮಾವಳಿ— ಮೊದಲಾದುವು ಕುತೂಹಲಕರವಾದ ಕಥೆಗಳನ್ನುಳ್ಳ ಪದ್ಯಕಾವ್ಯಗಳು. ಕಾದಂಬರಿ ಪ್ರಧಾನವಾಗಿ ಕಥೆಯಾದರೂ ಅದು ಗದ್ಯಕಥೆ. ಗದ್ಯಕಥೆಗಳೂ ಕನ್ನಡ ಸಾಹಿತ್ಯದಲ್ಲಿ ಇಲ್ಲದಿಲ್ಲ. ಪ್ರಾಚೀನ ಗದ್ಯಗ್ರಂಥ ವಾದ ವಡ್ಡಾರಾಧನೆ ಹಲವು ಕಥೆಗಳ ಸಂಗ್ರಹ. ಮುದ್ದಣನ ರಾಮಾಶ್ವಮೇಧ ಈಚಿನ ಗದ್ಯಕಥೆ. ಆದರೆ ಇವು ಯಾವುವೂ ಕಾದಂಬರಿ ಎಂಬ ಸಾಹಿತ್ಯ ಪ್ರಕಾರಕ್ಕೆ ಸೇರುವುದಿಲ್ಲ. ಏಕೆಂದರೆ ಇವುಗಳಲ್ಲಿ ಮೊದಲನೆಯದು ಕೇವಲ ಕಥೆಗಳ ಗುಂಪು. ಎರಡನೆಯದು ಕಾವ್ಯ. ಕಾದಂಬರಿ ಕೇವಲ ಸಣ್ಣ ಕಥೆಯೂ ಅಲ್ಲ, ಕಾವ್ಯವೂ ಅಲ್ಲ, ಸ್ಥೂಲವಾಗಿ ಹೇಳಬಹುದಾದರೆ ಅದೊಂದು ದೊಡ್ಡ ಕಥೆ. ಮುಮ್ಮಡಿ ಕೃಷ್ಣರಾಜ ಒಡೆಯರ ಆಶ್ರಿತನಾಗಿದ್ದ ಕೆಂಪುನಾರಾಯಣನ (1823) ಮುದ್ರಾಮಂಜೂಷವೆಂಬ ಗದ್ಯ ಕೃತಿಯನ್ನು ನಿಜವಾದ ಕನ್ನಡದ ಮೊದಲ ಕಾದಂಬರಿ ಎನ್ನಬಹುದು.

ಕನ್ನಡಿಗರಿಗೆ ಕಾದಂಬರಿಗಳ ಮೊದಲ ಪರಿಚಯ ಕನ್ನಡದ ಮೂಲಕ ಆದುದು ಬಿ. ವೆಂಕಟಾಚಾರ್ಯರು ಭಾಷಾಂತರ ಮಾಡಿದ ಬಂಗಾಳಿ ಕಾದಂಬರಿಗಳಿಂದ. ಬಂಕಿಂಚಂದ್ರರ ಕಾದಂಬರಿ ದುರ್ಗೇಶನಂದಿನಿ ಬಂಗಾಳಿ ಭಾಷೆಯಿಂದ ಕನ್ನಡಕ್ಕೆ ಭಾಷಾಂತರಿಸಲ್ಪಟ್ಟು ಪ್ರಕಟವಾದುದು ಕ್ರಿ.ಶ. 1885ರಲ್ಲಿ. ಆಚಾರ್ಯರು ಮೊದಲು ಭಾಷಾಂತರ ಮಾಡಿದ ಕೃತಿ ಭ್ರಾಂತಿವಿಲಾಸ. ಇದೇ ಕನ್ನಡದಲ್ಲಿ ಕಾದಂಬರಿಗಳ ಆರಂಭಕ್ಕೆ ನಾಂದಿ ಎಂದು ಹೇಳಬಹುದು. ಅಂದಿನಿಂದ ಇಂದಿನ ವರೆಗಿನ ಕಾದಂಬರಿಗಳ ಬೆಳವಣಿಗೆ ಮತ್ತು ವಿಲಾಸಗಳನ್ನು ಕಾಲಮಾನ ರೀತಿಯಿಂದ ಮೂರು ಭಾಗಗಳಾಗಿ ವಿಂಗಡಿಸಬಹುದು. ಮೊದಲನೆಯದು ಆರಂಭಕಾಲ: ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಿಂದ ಇಪ್ಪತ್ತನೆಯ ಶತಮಾನದ ಕಾಲುಶತಕದ ವರೆಗೆ. ಎರಡನೆಯದು ನಿರ್ಮಾಣಶೀಲ ಯುಗ : 1925 ಅಥವಾ 30 ರಿಂದ ಸ್ವಾತಂತ್ರ್ಯೋದಯದ ವರೆಗೆ. ಮೂರನೆಯದು ಸ್ವಾತಂತ್ರ್ಯೋತ್ತರ ಯುಗ : ಸ್ವಾತಂತ್ರ್ಯೋದಯದ ಕಾಲದಿಂದ ಇಂದಿನ ವರೆಗಿನ ಕಾಲ.

ಕಾದಂಬರಿಯ ವಿಶಿಷ್ಟ ಲಕ್ಷಣವನ್ನುಳ್ಳ ಕನ್ನಡದ ಪ್ರಥಮ ಸ್ವತಂತ್ರ ಕಾದಂಬರಿ ರೆಂಟ್ಲ ವೆಂಕಟಸುಬ್ಬರಾವ್ ಅವರಿಂದ ರಚಿತವಾದ ಕೇಸರಿ ವಿಲಾಸ (1895) ಎಂಬುದಾಗಿ ಗೋವಿಂದ ಪೈಗಳವರು ಹೇಳುತ್ತಾರೆ. ಇದರ ಲೇಖಕರು ಮೈಲಾಪುರ ದಲ್ಲಿ ಹೈಕೋರ್ಟಿನ ವಕೀಲರಾಗಿದ್ದರು. ಕೇಸರಿ ವಿಲಾಸ ಮದರಾಸಿನಲ್ಲಿ ಪ್ರಕಟ ವಾಯಿತು. ಎರಡನೆಯದು ಸ್ವತಂತ್ರ ಸಾಮಾಜಿಕ ಕಾದಂಬರಿ ದಕ್ಷಿಣ ಕನ್ನಡ ಜಿಲ್ಲೆಯವರಾದ ಗುಲ್ವಾಡಿ ವೆಂಕಟರಾಯರು ಬರೆದ ಇಂದಿರಾಬಾಯಿ ಅಥವಾ ಸದ್ಧರ್ಮ ವಿಜಯ (1899). 250 ಪುಟಗಳ ಈ ಕಾದಂಬರಿಯಲ್ಲಿ ಅಂದಿನ ಸಾರಸ್ವತ ಸಮಾಜದ ವಾಸ್ತವಿಕ ಚಿತ್ರವಿದೆ. ಭಾಗೀರಥಿ, ಸೀಮಂತಿನಿ —ಇವು ಇವರ ಇನ್ನೆರಡು ಕಾದಂಬರಿಗಳು. ಗಳಗನಾಥರು ಕ್ರಿ.ಶ. 1898ರಲ್ಲಿ ತಮ್ಮ ಪ್ರಥಮ ಕಾಲ್ಪನಿಕ ಕಾದಂಬರಿ ಪದ್ಮನಯನೆಯನ್ನು ರಚಿಸಿದರು. ಮುಂದಿನ ಪ್ರಮುಖ ಸ್ವತಂತ್ರ ಕಾದಂಬರಿ ಬೋಳಾರ ಬಾಬೂರಾಯರ ವಾಗ್ದೇವಿ (1905). ಬೋಳಾರ ಬಾಬೂರಾಯರು ಮಂಗಳೂರಿನವರು. ಸುಮಾರು 308 ಪುಟಗಳ ಈ ಕಾದಂಬರಿಯ ವಸ್ತುವಿಗೆ ಆಗಿನ ಕಾಲದಲ್ಲಿ ನಡೆದ ಕೆಲವೊಂದು ಘಟನೆಗಳೇ ಆಧಾರ ಎಂಬುದಾಗಿ ತಿಳಿದವರು ಹೇಳುತ್ತಾರೆ. ಅಂದಿನ ಸಾಮಾಜಿಕ ಜೀವನದಲ್ಲಿ ಮಠಗಳ ಪಾತ್ರವೇನಿತ್ತು, ನ್ಯಾಯವಿತರಣೆ ಹೇಗೆ ನಡೆಯುತ್ತಿತ್ತು, ಅಧಿಕಾರಿಗಳು ಯಾವ ರೀತಿ ಸಾಮಾಜಿಕ ಜೀವನದಲ್ಲಿ ತಮ್ಮ ಕೈವಾಡ ನಡೆಸುತ್ತಿದ್ದರು—ಇವೇ ಮೊದಲಾದ ವಾಸ್ತವ ಚಿತ್ರಗಳು ವಾಗ್ದೇವಿ ಕಾದಂಬರಿಯಲ್ಲಿ ಮೂಡಿ ಬಂದಿವೆ. ವಾಸ್ತವಿಕ ಘಟನೆಗಳ ಆಧಾರದ ಮೇಲೆ ಅಂದಿನ ಸಮಾಜದ ಕೆಲವೊಂದು ಲೋಪದೋಷಗಳನ್ನು ಎತ್ತಿ ತೋರಿಸುವ ಇಂಥ ಒಂದು ಕಾದಂಬರಿಯನ್ನು ರಚಿಸಿದುದು ಅಂದಿನ ಕಾಲಕ್ಕೆ ಒಂದು ದಿಟ್ಟತನವೆಂದೇ ಹೇಳಬಹುದು. 1906ರಲ್ಲಿ ಅಣ್ಣಾಜಿರಾವ್ ಗುಲ್ವಾಡಿ ಎಂಬುವರು ರೋಹಿಣಿ ಇಲ್ಲವೆ ಸಾರಸ್ವತ ಮಂಡಳ ಎಂಬ ಕಾದಂಬರಿಯನ್ನು ರಚಿಸಿದರು. ಇದು 232 ಪುಟಗಳ ಸಾಮಾಜಿಕ ಕಾದಂಬರಿ. ಉತ್ತರ ಕರ್ಣಾಟಕದ ಕೆರೂರು ವಾಸುದೇ ವಾಚಾರ್ಯರು ರಚಿಸಿದ (1908) ಇಂದಿರೆ ಎಂಬ ಕಾದಂಬರಿ ಸ್ವತಂತ್ರ ಕಾದಂಬರಿಗಳ ಮಾಲೆಯಲ್ಲಿ ಒಂದು ಗಮನಾರ್ಹ ಕೃತಿ. ಉತ್ತರ ಕರ್ಣಾಟಕದ ಭಾಷೆಯನ್ನು ಕಾದಂಬರಿಯ ಗದ್ಯಕ್ಕೆ ಅಳವಡಿಸಿಕೊಳ್ಳಲು ವಾಸುದೇವಾಚಾರ್ಯರು ಮಾಡಿದ ಪ್ರಯತ್ನ ಇಲ್ಲಿ ಸ್ಮರಿಸಿಕೊಳ್ಳಬೇಕಾದ ವಿಷಯ. ಇಂದಿರೆಯ ಕಥೆ ಬೆಂಗಳೂರು ಮತ್ತು ಶ್ರೀರಂಗಪಟ್ಟಣಗಳಲ್ಲಿ ನಡೆಯುತ್ತದೆ. ಅಂದು ವಿಶೇಷವಾಗಿ ಚರ್ಚೆಗೆ ಒಳಗಾಗಿದ್ದ ವಿಧವಾವಿವಾಹ, ಸ್ತ್ರೀಶಿಕ್ಷಣ ಮತ್ತು ಸ್ತ್ರೀಸ್ವಾತಂತ್ರ್ಯದಂಥ ವಿಷಯಗಳು ಈ ಕಾದಂಬರಿಯಲ್ಲಿ ಬರುತ್ತವೆ. ಇಂದಿರೆಯನ್ನು ಆದರ್ಶ ಮಹಿಳೆಯನ್ನಾಗಿ ಚಿತ್ರಿಸಿ ಉತ್ತಮ ಸ್ತ್ರೀಶಿಕ್ಷಣದ ಬಗೆಗೆ ಒಳ್ಳೆಯ ನಿದರ್ಶನವನ್ನು ಒದಗಿಸಲಾಗಿದೆ. ಇಲ್ಲಿ ಗಮನಿಸಬೇಕಾದ ಮತ್ತೊಂದು ಸಂಗತಿಯೆಂದರೆ ಕಾದಂಬರಿಯ ಸೌಂದರ್ಯವನ್ನು ಹೆಚ್ಚಿಸಲು ಉಪಯೋಗಿಸಿರುವ ಮೋಹಕ ವರ್ಣನೆಗಳು. ವಾಸುದೇವಾಚಾರ್ಯರು ಔರಂಗ್‌ಜೇಬ ಎಂಬ ಮತ್ತೊಂದು ಕೃತಿಯನ್ನು ರಚಿಸಿದ್ದಾರೆ. ಅಲ್ಲದೆ ಇಂಗ್ಲಿಷಿನಲ್ಲಿ ಕಾನನ್‌ಡಾಯಲ್ ಸೃಷ್ಟಿಸಿರುವ ಷರ್ಲಾಕ್ ಹೋಮ್ಸ್‌ನ ಪತ್ತೇದಾರಿ ಕಥೆಗಳನ್ನು ಇವರು ಕನ್ನಡದಲ್ಲಿ ಸರಲಾಕ್ಷ ಹುಲಿಮೀಶೆಯ ಸಾಹಸಗಳನ್ನಾಗಿ ಪರಿವರ್ತಿ ಸಿದ್ದಾರೆ.

ಕಾದಂಬರಿಗಳ ಆರಂಭಕಾಲದ ಮೊದಲಿನಲ್ಲಿ ಕೃತಿಗಳನ್ನು ರಚಿಸಿದ ಕೆಲವರನ್ನು ಇಲ್ಲಿ ಜ್ಞಾಪಿಸಿಕೊಳ್ಳಬಹುದಾಗಿದೆ. ಕನ್ನಡದ ಪ್ರಥಮ ಪತ್ತೇದಾರಿ ಕಾದಂಬರಿ ಚೋರಗ್ರಹಣ ತಂತ್ರ. ಇದನ್ನು ರಚಿಸಿದವರು ವೃದ್ಧಪಿತಾಮಹ ವೆಂಕಟಕೃಷ್ಣಯ್ಯ ನವರು. ಎಂ. ಎಲ್. ಶ್ರೀಕಂಠೇಶಗೌಡ ಅವರ ಕನ್ಯಾವಿತಂತು 1895ರಲ್ಲಿ ಪ್ರಕಟ ವಾಯಿತು. ತೆಲುಗಿನಲ್ಲಿ ವೀರೇಶಲಿಂಗಂ ಪಂತುಲು ಅವರು ರಚಿಸಿದ ನೂತನ ರೀತಿಯ ಕಲ್ಪನಾಕಥೆಗಳಾದ ರಾಜಶೇಖರ ಚರಿತ್ರೆ, ಸತ್ಯವತೀ ಚರಿತ್ರೆ ಮತ್ತು ಸತ್ಯ ರಾಜಾ ಪೂರ್ವದೇಶದ ಯಾತ್ರೆಗಳು ಎಂಬ ಮೂರು ಕೃತಿಗಳನ್ನು ಬೆನಗಲ್ ರಾಮ ರಾಯರು 1899ರ ಹೊತ್ತಿಗೆ ಕನ್ನಡಕ್ಕೆ ಭಾಷಾಂತರಿಸಿದ್ದರು. ಗೋಡೆ ಜೀವಣ ರಾಯರು ಜಾನ್‌ಸನ್ನನ ಕಾದಂಬರಿ ರಾಸೆಲಾಸನ್ನು ಕನ್ನಡಿಸಿದರು.

ಅಂದಿಗೆ ಕಾದಂಬರಿಗಳನ್ನು ಓದಬೇಕೆಂದು ಹಾತೊರೆಯುವ ಪ್ರವೃತ್ತಿಯನ್ನುಂಟು ಮಾಡಿ ಕನ್ನಡ ಜನತೆಯ ಹಂಬಲವನ್ನು ತುಂಬಿಕೊಟ್ಟವರು ವೆಂಕಟಾಚಾರ್ಯರು. ಅಂದು ಬಂಗಾಳಿ ಭಾಷೆಯಲ್ಲಿ ಕೃತಿರಚನೆ ಮಾಡಿ ನವಚೇತನವನ್ನು ನಾಡಿನ ಜೀವನದಲ್ಲಿ ತುಂಬಿದ್ದ ಈಶ್ವರಚಂದ್ರ ವಿದ್ಯಾಸಾಗರ, ಬಂಕಿಮಚಂದ್ರ, ರಮೇಶಚಂದ್ರ ದತ್ತ—ಇವರ ಕೃತಿಗಳನ್ನು ಆಚಾರ್ಯರು ಕನ್ನಡಕ್ಕೆ ಭಾಷಾಂತರಿಸಿದರು. ದೇಶಾಭಿಮಾನ, ಸಾಹಸ, ಭಕ್ತಿ ಮೊದಲಾದ ಗುಣಗಳಿಂದ ಮೆರೆಯುವ ಸ್ವತಂತ್ರ, ಐತಿಹಾಸಿಕ, ಹಾಗೂ ಸಾಮಾಜಿಕ ಕಾದಂಬರಿಗಳನ್ನು ಬಂಗಾಳಿಯಲ್ಲಿ ರಚಿಸಿದ ಕೀರ್ತಿ ಬಂಕಿಮಚಂದ್ರರದು. ಆನಂದಮಠ, ದೇವೀ ಚೌಧುರಾಣಿ, ವಿಷವೃಕ್ಷ ಮೊದಲಾದ ಕಾದಂಬರಿಗಳನ್ನು ಇಂದಿಗೂ ಜನ ಓದಿ ಆನಂದಿಸಬಲ್ಲವರಾಗಿದ್ದಾರೆ. ಆ ಕಾಲಕ್ಕೆ ಇಂಗ್ಲಿಷಿನಲ್ಲಿ ಸರ್ ವಾಲ್ಟರ್ ಸ್ಕಾಟ್ ರಚಿಸಿದ ಐತಿಹಾಸಿಕ ಕಾದಂಬರಿಗಳು ಅತ್ಯಂತ ಜನಪ್ರಿಯವಾಗಿದ್ದುವು. ಬಂಕಿಮಚಂದ್ರರು ಸರ್ ವಾಲ್ಟರ್ ಸ್ಕಾಟ್ ಮತ್ತು ಸರ್ ವಿಲ್ಕಿ ಕಾಲಿನ್ಸರ ಕಾದಂಬರಿಗಳಿಂದ ಸ್ಫೂರ್ತಿಪಡೆದು ಭಾರತ ದೇಶದ ಚಾರಿತ್ರಿಕ ಘಟನೆಗಳ ಆಧಾರದ ಮೇಲೆ ಕಾದಂಬರಿಗಳನ್ನು ಬರೆದರು. ಅವರ ಸಾಮಾಜಿಕ ಕಾದಂಬರಿಗಳಲ್ಲಿ ವಿಧವಾವಿವಾಹ, ಸ್ತ್ರೀಶಿಕ್ಷಣ ಮೊದಲಾದ ಅಂದಿನ ಪ್ರಮುಖ ಸಾಮಾಜಿಕ ಸಮಸ್ಯೆಗಳ ವಿಶ್ಲೇಷಣವಿದೆ. ಅದರ ಸಜೀವ ಕಲ್ಪನೆ, ನಾಟಕೀಯ ಶಕ್ತಿ, ಪರಿಶುದ್ಧ ಧ್ಯೇಯ—ಇವು ಬಂಕಿಮಚಂದ್ರರ ಕಾದಂಬರಿಗಳ ವೈಶಿಷ್ಟ್ಯ. ಇಂಥ ಕೃತಿಗಳನ್ನು ಕನ್ನಡಕ್ಕೆ ಕೊಟ್ಟ ಕೀರ್ತಿ ವೆಂಕಟಾಚಾರ್ಯರದು. ಇವರ ಕೃತಿರಚನೆ ಸುಮಾರು ಎರಡು ದಶಕಗಳಿಗಿಂತಲೂ ಹೆಚ್ಚು ಕಾಲ ಅವ್ಯಾಹತವಾಗಿ ನಡೆಯಿತು. ವೆಂಕಟಾಚಾರ್ಯರದು ಸಂಸ್ಕೃತಭೂಯಿಷ್ಠವಾದ ಶುದ್ಧ ಗ್ರಾಂಥಿಕ ಶೈಲಿ. ಮೂಲ ಬಂಗಾಳಿಯ ಕೃತಿಗಳಲ್ಲೂ ಇದೇ ಶೈಲಿಯನ್ನು ಕಾಣಬಹುದಾಗಿದೆ.

ವೆಂಕಟಾಚಾರ್ಯರ ತರುವಾಯ ನಾವು ನೋಡುವ ಪ್ರಮುಖ ಕಾದಂಬರಿಕಾರರೆಂದರೆ ಗಳಗನಾಥರು. ಇವರು ಅನುವಾದ ಮಾಡಿರುವಂತೆ ಸ್ವಂತ ಕೃತಿಗಳನ್ನೂ ರಚಿಸಿದ್ದಾರೆ. 1898ರಲ್ಲಿ ರಚಿತವಾದ ಪದ್ಮನಯನೆ ಒಂದೇ ಇವರು ರಚಿಸಿದ ಕಾಲ್ಪನಿಕ ಕಾದಂಬರಿ. ಅಲ್ಲಿಂದ ಮುಂದೆ ಇವರು ಒಂದೇ ಸಮನೆ 1928ರ ವರೆಗೂ ಐತಿಹಾಸಿಕ ಕಾದಂಬರಿಗಳನ್ನು ರಚಿಸಿದರು. ವೆಂಕಟಾಚಾರ್ಯರು ಬಂಗಾಳಿಯಿಂದ ಕಾದಂಬರಿಗಳನ್ನು ಭಾಷಾಂತರಿಸಿದರೆ ಗಳಗನಾಥರು ಮರಾಠಿಯಿಂದ ಭಾಷಾಂತರಿಸಿದರು. ಅಂದಿಗೆ ಮರಾಠಿ ಕಾದಂಬರಿಕಾರರಲ್ಲಿ ಒಳ್ಳೆಯ ಸತ್ತ್ವಶಾಲಿ ಕೃತಿಕಾರರಾಗಿದ್ದವರೆಂದರೆ ಹರಿ ನಾರಾಯಣ ಆಪ್ಟೆ. ಅವರ ಗಢ ಆಲಾಪಣ ಸಿಂಹಗೇಲಾ ಎಂಬ ಕಾದಂಬರಿಯನ್ನು ಗಳಗನಾಥರು ಕಮಲಕುಮಾರಿ ಎಂಬ ಹೆಸರಿನಿಂದ ಕನ್ನಡಿಸಿದರು. ಉಳಿದ ಹಲವು ಕಾದಂಬರಿಗಳಿಗೆ ಮರಾಠಿಯಿಂದ ವಸ್ತುವನ್ನು ಒದಗಿಸಿಕೊಂಡು ತಮಗೆ ಸರಿ ಕಂಡ ಹಾಗೆ ತಿದ್ದಿ, ವಿಸ್ತರಿಸಿ, ಮೊಟಕುಮಾಡಿ ತಮ್ಮದೇ ಆದ ಒಂದು ರೀತಿಯಲ್ಲಿ ಕನ್ನಡಿಗರೆದುರು ಇಟ್ಟರು. ಸದ್ಬೋಧಚಂದ್ರಿಕೆ ಮತ್ತು ಸದ್ಗುರು ಎಂಬ ಪತ್ರಿಕೆಗಳಲ್ಲಿ ಭಾಗಭಾಗವಾಗಿ ಪ್ರಕಟಿಸುತ್ತ ತಮ್ಮ ಕಾದಂಬರಿಗಳನ್ನು ರಸಿಕರೆದುರು ಇಟ್ಟರು. ಮಾಧವಕರುಣಾವಿಲಾಸ (1923) ಇವರ ಮೇರುಕೃತಿ. ವಿಜಯನಗರದ ಇತಿಹಾಸವನ್ನುಳ್ಳ ಈ ಕಾದಂಬರಿ ಗಳಗನಾಥರ ಸ್ವತಂತ್ರ ಕೃತಿ. ವಿದ್ಯಾರಣ್ಯರಿಂದ ಸಂಗಮವಂಶ ಸ್ಥಾಪನೆಯಾದ ಕಥೆ ಇದರಲ್ಲಿ ಬರುತ್ತದೆ. ತಾಳಿಕೋಟೆ ಕಾಳಗದ ವಿಷಯ ಕನ್ನಡಿಗರ ಕರ್ಮಕಥೆಯಲ್ಲಿಯೂ ವಿಜಯನಗರದ ಇತಿಹಾಸಕ್ಕೆ ಸಂಬಂಧಿಸಿದ ವಿಷಯ ಕುಮುದಿನಿಯಲ್ಲಿಯೂ ಬರುತ್ತದೆ. ಉಳಿದ ಬಹುತೇಕ ಕಾದಂಬರಿಗಳು ಮರಾಠರ ಮತ್ತು ರಜಪೂತರ ಚರಿತ್ರೆಗಳಿಗೆ ಸಂಬಂಧಪಟ್ಟುವು. ಈಶ್ವರಿಸೂತ್ರ, ಧಾರ್ಮಿಕ ತೇಜ, ಕ್ಷಾತ್ರತೇಜ, ಶಿವಪ್ರಭುವಿನ ಪುಣ್ಯ—ಇವೇ ಮೊದಲಾದ 22 ಕೃತಿಗಳನ್ನು ಗಳಗನಾಥರು ರಚಿಸಿದರು. ಗಳಗನಾಥರ ಕಾದಂಬರಿಗಳು ಕ್ಷಾತ್ರತೇಜಸ್ಸು, ಧಾರ್ಮಿಕ ಪ್ರಭಾವ ಮತ್ತು ದೇಶಪ್ರೇಮದಿಂದ ತುಂಬಿ ತುಳುಕುತ್ತಿವೆ. ಉತ್ತರ ಕರ್ಣಾಟಕದ ಆಡುಭಾಷೆಯನ್ನು ಯಶಸ್ವಿಯಾಗಿ ಬಳಸಿರುವುದನ್ನು ಗಳಗನಾಥರ ಕೃತಿಗಳಲ್ಲಿ ಕಾಣಬಹುದು. ಏನೇ ಆದರೂ ಗಳಗನಾಥರಲ್ಲಿ ಭಾಷೆಯ ಬಳಕೆ ಒಮ್ಮುಖವಾದುದು, ವೈವಿಧ್ಯಮಯವಲ್ಲ.

ವೆಂಕಟಾಚಾರ್ಯರ ಮತ್ತು ಗಳಗನಾಥರ ಕಾದಂಬರಿಗಳು ಕೇವಲ ಓದುಗರ ಮೇಲೆಯೇ ಅಲ್ಲದೆ ಬರೆಯುವವರ ಮೇಲೆಯೂ ಸಾಕಷ್ಟು ಪ್ರಭಾವವನ್ನು ಬೀರಿದುವು. ವೀರಶೌರ್ಯೌದಾರ್ಯಾದಿ ಗುಣಗಳುಳ್ಳ ನಾಯಕ ನಾಯಕಿಯರಿಂದ ಕೂಡಿದ ಅದ್ಭುತರಮ್ಯ, ಐತಿಹಾಸಿಕ, ಸಾಮಾಜಿಕ ಕಾದಂಬರಿಗಳ ಪ್ರವಾಹ ಇಪ್ಪತ್ತನೆಯ ಶತಮಾನದ ಮೊದಲ ಮೂರು ದಶಶಕಗಳ ವರೆಗೆ ವ್ಯಾಪಕವಾಗಿಯೂ ಅನಂತರ ಕಿಂಚಿತ್ತಾಗಿಯೂ ಹರಿಯಿತು. ಹಲವಾರು ಕಾದಂಬರಿಗಳನ್ನು ರಚಿಸಿದ ಭೀ. ಪ. ಕಾಳೆ ಮತ್ತು ನಾಗೇಶ ಇವರನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ನಾಗೇಶರ ಈಶಸಂಕಲ್ಪ ಮತ್ತು ಎಚ್ಚಮನಾಯಕ ಕಾದಂಬರಿಗಳು ಕನ್ನಡನಾಡಿನ ಚರಿತ್ರೆಯ ಮೇಲೆ ಆಧಾರಿತವಾದುವು. ಕನ್ನಡ ಗರಡಿಯಾಳು ಕೃತ ಕರ್ಮಫಲ ಅಥವಾ ಪ್ರೇಮಫಲ, ಬಿ. ಕೃಷ್ಣಪ್ಪನವರ ರಾಯಚೂರು ವಿಜಯ, ಡಿ. ಶ್ರೀನಿವಾಸಶರ್ಮರ ನೀಲವಸನಾಸುಂದರಿ ಇವು ಇನ್ನೂ ಕೆಲವು ಉದಾಹರಣೆಗಳು.

ಈ ಕಾಲದಲ್ಲಿ ಪತ್ತೇದಾರಿ ಕಾದಂಬರಿಗಳೂ ಹುಟ್ಟಿದುವು. ಬಾಲಸರಸ್ವತಿ, ಭೀ. ಪ. ಕಾಳೆ, ನಾಗೇಶ ಮೊದಲಾದವರು ಪತ್ತೇದಾರಿ ಕಾದಂಬರಿಗಳನ್ನು ಕೊಟ್ಟವರಲ್ಲಿ ಮುಖ್ಯರು. ಬಾಲಸರಸ್ವತಿಯವರು ಕೆಲವು ಬಂಗಾಳಿ ಕಾದಂಬರಿಗಳನ್ನು ಕನ್ನಡಿಸಿದರು. ಪಾಂಚಕೊಡಿ ದೇ ಅವರ ಹತ್ಯಾಕಾರಿ ಎಂಬ ಬಂಗಾಳಿ ಕಾದಂಬರಿಯ ಕಥೆಯನ್ನು ಅವಲಂಬಿಸಿ ಬರೆದ ಕುಮುದಿನಿ 1911ರಲ್ಲಿ ರಚಿತವಾಯಿತು. ಚಿತ್ರಗುಪ್ತನ ದಫ್ತರಗಳು, ಗುರುತು ಕಂಡ ಕಳ್ಳ, ನರಬಲಿ—ಇವು ಬಾಲಸರಸ್ವತಿಯವರ ಪತ್ತೇದಾರಿ ಕಾದಂಬರಿಗಳು. ಕಂಠಾಭರಣ, ರಾಣೀ ಚೌಧುರಾಣಿ, ಕುಮಾರಕಂಠೀರವ–ಮೊದಲಾದ ಸಾಮಾಜಿಕ ಹಾಗೂ ಸಾಂಸಾರಿಕ ಕಾದಂಬರಿಗಳನ್ನೂ ಇವರು ಬರೆದಿದ್ದಾರೆ.

ಕನ್ನಡ ಕಾದಂಬರಿಗಳ ಆರಂಭಕಾಲದಲ್ಲಿ ಸ್ತ್ರೀಯರೂ ಕೃತಿರಚನೆ ಮಾಡಿದ್ದಾರೆ. ಎಂಬುದಕ್ಕೆ ಸತೀಹಿತೈಷಿಣೀ ಗ್ರಂಥಮಾಲೆಯ ತಿರುಮಲಮ್ಮ ನಿದರ್ಶನವಾಗಿದ್ದಾರೆ. ವಿರಾಗಿಣಿ, ವಿದ್ಯುಲ್ಲತಾ, ನಭ, ಪೂರ್ಣಕಲಾ—ಇವೇ ಮೊದಲಾದುವು ತಿರುಮಲಮ್ಮನವರ ಕೃತಿಗಳು. ಇವರ ಕೃತಿಗಳು ವಿಶೇಷವಾಗಿ ಸ್ತ್ರೀಯರಿಗೂ ಅವರ ಸಾಮಾಜಿಕ ಸ್ಥಾನಮಾನಗಳಿಗೂ ಸಂಬಂಧಿಸಿದುವು. ಶ್ರೀನಿವಾಸರು ಇವರ ಕೃತಿಗಳನ್ನು ನಾಟಕ ರೂಪದ ನಾವೆಲುಗಳೆಂದು ಕರೆದಿದ್ದಾರೆ.

ಈ ಕಾಲದಲ್ಲಿ ಇಂಗ್ಲಿಷಿನಿಂದ ಭಾಷಾಂತರವಾದ ಕೃತಿಗಳು ಇಲ್ಲದೆ ಇರಲಿಲ್ಲ. ಪ್ರಸಿದ್ಧ ಫ್ರೆಂಚ್ ಕಾದಂಬರಿಕಾರ ಅಲೆಗ್ಸಾಂಡರ್ ಡ್ಯೂಮಾನ ಕೌಂಟ್ ಆಫ್ ಮಾಂಟೆಕ್ರಿಸ್ಟೋದ ಅನುವಾದವಾದ ರಾಜಾ ಮಲಯಸಿಂಹವನ್ನು ಎ. ಎ. ಶ್ರೀನಿವಾಸಾಚಾರ್ಯರು ಎರಡು ಭಾಗಗಳಲ್ಲಿ ಪ್ರಕಟಿಸಿದರು. ಡ್ಯೂಮಾನ ಇದೇ ಕಥೆಯನ್ನು ಭಾರತದಲ್ಲೇ ನಡೆದಂತೆ ವಿಧಿಯ ವೈಚಿತ್ರ್ಯ ಎಂಬ ಹೆಸರಿನಿಂದ ಉಳ್ಳಾಲ ಮಂಗೇಶರಾಯರು ಬರೆದರು. ಅಲ್ಲದೆ ಇವರು ಮೇರಿ ಕೊರೆಲಿಯ ದಿ ಟ್ರಷರ್ ಆಫ್ ಹೆವನ್ ಎಂಬ ಕಾದಂಬರಿಯ ಆಧಾರದಿಂದ ನಿಷ್ಕಾಮ ಪ್ರೇಮ ಎಂಬ ಕೃತಿಯನ್ನು ರಚಿಸಿದರು.

ಕಾದಂಬರಿಗಳ ಬೆಳೆವಣಿಗೆಯಲ್ಲಿ ಕ್ರಮೇಣ ನವೀನತೆ ಮತ್ತು ಆಧುನಿಕತೆಗಳು ತಲೆಹಾಕಲಾರಂಭಿಸಿದುವು. ಅಲ್ಲಲ್ಲಿ ಒಂದೊಂದು ಕೃತಿ ವಾಸ್ತವಿಕತೆಯ ಕಡೆಗೆ ತಿರುಗುತ್ತಿದ್ದುದು ಕಂಡುಬರುತ್ತಿತ್ತು. ವಾಸ್ತವಿಕತೆಯನ್ನು ಕಾದಂಬರಿಗೆ ಆಧಾರವಾಗಿಟ್ಟುಕೊಳ್ಳುವ ಸಂಪ್ರದಾಯದಲ್ಲಿ ಮೊದಲಿಗರು ಎಂದು ನಾವು ಜ್ಞಾಪಿಸಿಕೊಳ್ಳಬೇಕಾದುದು ಎಂ. ಎಸ್. ಪುಟ್ಟಣ್ಣನವರನ್ನು. ಇವರ ಮಾಡಿದ್ದುಣ್ಣೋ



ಗಳಗನಾಥ

ಮಹಾರಾಯ (1914) ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ನಡೆದುವೆಂದು ಹೇಳಲಾದ ಹಲಕೆಲವು ಸಂಗತಿಗಳ ಆಧಾರದಿಂದ ರಚಿತವಾಗಿದೆ. ಇವರ ಇನ್ನೊಂದು ಕೃತಿ ಮುಸುಕು ತೆಗೆಯೆ ಮಾಯಾಂಗನೆ. ಜನಜೀವನಕ್ಕೆ ಪುಟ್ಟಣ್ಣನವರ ಕಾದಂಬರಿ ನಿಕಟವಾಯಿತು. ಕಾದಂಬರಿಯ ಕ್ಷೇತ್ರದಲ್ಲಿ ಪುಟ್ಟಣ್ಣನವರದು ಮರೆಯಲಾಗದ ಹೆಸರು. ಅವರು ಕಥೆ ಕಟ್ಟುವ ವೈಖರಿ, ಸನ್ನಿವೇಶಗಳನ್ನು ಸೃಷ್ಟಿಸುವ ಚಮತ್ಕಾರ, ಸ್ಥಳೀಯ ವಾತಾವರಣವನ್ನು ತರುವಲ್ಲಿ ಅವರು ಬಳಸಿರುವ ಭಾಷೆಯ ಪ್ರಾದೇಶಿಕತೆ, ಅಂದಿನ ಸಾಮಾಜಿಕ ಹಾಗೂ ರಾಜಕೀಯ ವಾಸನೆಯನ್ನು ಸಹಜವಾಗಿಸುವಂತೆ ಅವರು ಬಳಸುವ ಶಬ್ದಭಂಡಾರ—ಇವು ಎಂಥವರನ್ನೂ ಬೆರಗುಗೊಳಿಸುತ್ತವೆ. ಇಂದಿಗೂ ಅವರ ಕಥನಕಲೆ, ಭಾಷಾಪ್ರಯೋಗ ವ್ಯಾಸಂಗಯೋಗ್ಯವಾಗಿವೆ.



ಎಂ. ಎಸ್. ಪುಟ್ಟಣ್ಣ

ಇಪ್ಪತ್ತನೆಯ ಶತಮಾನದ ಮೂರನೆಯ ದಶಕದಿಂದ ಮುಂದಕ್ಕೆ ಆಧುನಿಕ ಪ್ರವೃತ್ತಿಯ ಕಾದಂಬರಿಗಳ ನಿರ್ಮಾಣವನ್ನು ನಾವು ಸ್ಪಷ್ಟವಾಗಿ ಕಾಣುತ್ತೇವೆ. ವಸ್ತು, ನಿರೂಪಣೆ, ಶೈಲಿ, ತಂತ್ರಗಳಲ್ಲಿ ಆಧುನಿಕತೆ ಈ ಕಾದಂಬರಿಗಳ ನಿರ್ಮಾಣದ ಮುಖ್ಯ ತತ್ತ್ವಗಳು. ಆದುದರಿಂದ ಈ ಕಾಲಕ್ಕೆ ನಿರ್ಮಾಣಶೀಲಯುಗವೆಂದು ಹೆಸರಿಡಲಾಗಿದೆ. 1933ನೆಯ ವರ್ಷದಲ್ಲಿ ಆನಂದಕಂದರ (ಬೆಟಗೇರಿ ಕೃಷ್ಣಶರ್ಮ) ಸುದರ್ಶನವೂ ಶಿವರಾಮ ಕಾರಂತರ ಚೋಮನ ದುಡಿಯೂ ಪ್ರಕಟವಾದುವು. ಮರುವರ್ಷ ರಂ. ಶ್ರೀ. ಮುಗಳಿಯವರ ಬಾಳುರಿ, ಅ. ನ. ಕೃಷ್ಣರಾಯರ ಉದಯರಾಗ ಮತ್ತು ಜೀವನಯಾತ್ರೆ ಮತ್ತು ಶ್ರೀರಂಗರ ವಿಶ್ವಾಮಿತ್ರಸೃಷ್ಟಿ ಕಾದಂಬರಿಗಳು ಬೆಳಕು ಕಂಡುವು. 1935ನೆಯ ಸಂವತ್ಸರದಲ್ಲಿ ಆನಂದಕಂದರ ರಾಜಯೋಗಿ ಮತ್ತು ಅಶಾಂತಿಪರ್ವಗಳೆಂಬ ಎರಡು ಐತಿಹಾಸಿಕ ಕಾದಂಬರಿಗಳೂ ವಿನಾಯಕರ (ವಿ. ಕೃ. ಗೋಕಾಕ) ಇಜ್ಜೋಡು, ಅ. ನ. ಕೃ. ರವರ ಸಂಧ್ಯಾರಾಗ ಮತ್ತು ಜಡಭರತರ (ಜಿ. ಬಿ. ಜೋಶಿ) ಧರ್ಮಸೆರೆ ಕನ್ನಡಿಗರ ಕೈಸೇರಿದುವು. 1936ರಲ್ಲಿ ಕುವೆಂಪುರವರ ಬೃಹತ್ ಕಾದಂಬರಿ ಕಾನೂರು ಸುಬ್ಬಮ್ಮ ಹೆಗ್ಗಡಿತಿ ಹೊರಬಂದಿತು. ಈ ರೀತಿಯಲ್ಲಿ ನಿರ್ಮಾಣಶೀಲಯುಗದ ಕಾದಂಬರಿಗಳ ದಿಬ್ಬಣ ಹೊರಟಿತು.

ನಿರ್ಮಾಣಶೀಲಯುಗದ ಪ್ರಮುಖ ಕಾದಂಬರಿಕಾರರೆಂದರೆ ಕುವೆಂಪು, ಶಿವರಾಮ ಕಾರಂತ, ಅ. ನ. ಕೃ., ಆನಂದಕಂದ, ರಂ. ಶ್ರೀ. ಮುಗಳಿ, ಕಡೆಂಗೋಡ್ಲು ಶಂಕರಭಟ್ಟ, ಶ್ರೀರಂಗ, ವಿರ್ಜಿ ಅಣ್ಣಾರಾಯ, ದೇವುಡು—ಮೊದಲಾದವರು. ಇವರೆಲ್ಲ ಆಧುನಿಕ ವಿದ್ಯಾಭ್ಯಾಸವನ್ನು ಪಡೆದವರೂ ವಿಚಾರಶೀಲರೂ ಆಗಿದ್ದಾರೆ. ಶ್ರೀನಿವಾಸರ (ಮಾಸ್ತಿ ವೆಂಕಟೇಶ ಅಯ್ಯಂಗಾರ್) ಸುಬ್ಬಣ್ಣನನ್ನು ಕಾದಂಬರಿಯೆಂದು ಹೇಳಲಾಗದು. ಆದರೆ ಅದು ಕಾದಂಬರಿಯ ಘನತೆಯುಳ್ಳ ನೀಳ್ಗತೆ; ವಸ್ತು, ಶೈಲಿಗಳ ಮೇಲೆ ಅಚ್ಚಳಿಯದ ಪ್ರಭಾವ ಬೀರಿದ ಕೃತಿಯೆಂಬುದರಲ್ಲಿ ಸಂಶಯವಿಲ್ಲ. ಶಿವರಾಮ ಕಾರಂತರು ಮೂವತ್ತನಾಲ್ಕು ಕಾದಂಬರಿಗಳನ್ನು (1971) ರಚಿಸಿದ್ದಾರೆ. ಇವುಗಳಲ್ಲಿ ಸ್ವಾತಂತ್ರ್ಯಾನಂತರ ಬರೆದ ಕಾದಂಬರಿಗಳೂ ಸೇರಿವೆ. ಕಾರಂತರ ಮೊದಲ ಕಾದಂಬರಿ ಚೋಮನ ದುಡಿ ವಸ್ತು, ಶೈಲಿ, ಒಟ್ಟನ ಪರಿಣಾಮಗಳ ದೃಷ್ಟಿಯಿಂದ ನಿಜವಾಗಿಯೂ ಮೊದಲ ಬಾರಿಗೆ ವೈಶಿಷ್ಟ್ಯವನ್ನು ಸ್ಥಾಪಿಸಿತು. ಅಂತ್ಯಜ ಚೋಮನ ದುಡಿಯ ನಾದ ಕಾದಂಬರಿಯನ್ನೂ ಮೀರಿ ಓದುಗರ ಹೃದಯವನ್ನು ಮಿಡಿಯುತ್ತದೆ. ಇವರ ಮರಳಿ ಮಣ್ಣಿಗೆ ಮಹಾಕಾದಂಬರಿ ಎನ್ನುವ ಹೆಸರಿಗೆ ತಕ್ಕ ಯೋಗ್ಯತೆಯನ್ನು ಪಡೆದುಕೊಂಡಿದೆ ಎನ್ನಬಹುದು. ಈ ಕೃತಿಯಲ್ಲಿ ಕಡಲ ಕರಾವಳಿಯ ಮೂರು ತಲೆಮಾರುಗಳ ಜೀವನದರ್ಶನ ಅರಳಿದೆ. ಬೆಟ್ಟದ ಜೀವ, ಔದಾರ್ಯದ ಉರುಳಲ್ಲಿ, ಮುಗಿದ ಯುದ್ಧ, ಕುಡಿಯರ ಕೂಸು ಕಾರಂತರ ಕಾದಂಬರಿಗಳಲ್ಲಿ ವೈಶಿಷ್ಟ್ಯಪೂರ್ಣವಾದುವು. ಅವರ ಇತ್ತೀಚಿನ ಕಾದಂಬರಿ ಅಳಿದಮೇಲೆ ಒಂದು ಮಹತ್ತ್ವಪೂರ್ಣ ಕೃತಿಯಾಗಿದೆ. ಕಾರಂತರ ವಿಚಾರಶೀಲ ವ್ಯಕ್ತಿತ್ವ ಇದರಲ್ಲಿ ವಿಕಾಸಗೊಂಡಿದೆ. ಕುವೆಂಪುರವರ ಕಾನೂರು ಸುಬ್ಬಮ್ಮ ಅಂದಿಗೂ ಇಂದಿಗೂ ಅದ್ವಿತೀಯವಾಗಿ ಮೆರೆಯುತ್ತಿದೆ. ಮಲೆನಾಡಿನ ಜೀವನಚಿತ್ರವನ್ನು ಅದರ ಹಿನ್ನೆಲೆ, ವಿಸ್ತಾರ, ಆಳ, ವರ್ಣವಿನ್ಯಾಸಗಳೊಂದಿಗೆ ಚಿತ್ರಿಸಿರುವ ರೀತಿ ಅನ್ಯಾದೃಶವಾದುದು. ಕುವೆಂಪುರವರ ತಂತ್ರ ರೀತಿ, ಶೈಲಿಗಳ ಮಾರ್ಗದಲ್ಲಿ ನಡೆದು ಚಿತ್ರವತ್ತಾಗಿ ಸನ್ನಿವೇಶಗಳನ್ನು ಜೋಡಿಸಿ ಬೃಹತ್ತಾಗಿ ಪಾತ್ರಗಳನ್ನು ಸೃಷ್ಟಿಸುವ ಇನ್ನೊಂದು ಉದಾಹರಣೆ ಕಾಣಬರುತ್ತಿಲ್ಲ. ಕಾದಂಬರಿ ಕರತಲ ರಂಗಭೂಮಿ ಎಂಬ ಕುವೆಂಪು ಅವರ ವಿಮರ್ಶಕ ನುಡಿಗೆ ಅವರ ಕಾದಂಬರಿಗಳೇ ಉದಾಹರಣೆಗಳಾಗಿವೆ. ಅವರ ಈಚಿನ ಮಲೆಗಳಲ್ಲಿ ಮದುಮಗಳು ಯಥಾವತ್ತಾಗಿ ಮಲೆನಾಡಿನ ಹಳ್ಳಿಯ ಜೀವನವನ್ನು ಚಿತ್ರಿಸುವಲ್ಲಿ ಯಶಸ್ವಿಯಾಗಿದೆ. ಗೋಕಾಕರ ಇಜ್ಜೋಡು ಮೊದಲು ಎರಡು ಭಾಗಗಳಿಂದ ಕೂಡಿದ್ದು ಕ್ರಮೇಣ ಐದು ಭಾಗಗಳಿಂದ ಪೂರ್ಣಗೊಂಡು ಸಮರಸವೇ ಜೀವನ ಎಂಬ ಬೃಹತ್ ಕಾದಂಬರಿಯಾಗಿ ಹೊರಬಂದಿದೆ. ಇಪ್ಪತ್ತೈದು ವರ್ಷಗಳಲ್ಲಿನ ಜೀವನದ ಸಾಮಾಜಿಕ ಸಮಸ್ಯೆಗಳು, ಸೋಲುಗೆಲುವು, ಹೊಯ್ದಾಟಹೋರಾಟಗಳ ಚಿತ್ರ ಈ ಕಾದಂಬರಿಯಲ್ಲಿ ಮೂಡಿಬಂದಿದೆ. ಅ. ನ. ಕೃ. ಕನ್ನಡದಲ್ಲೇ ಹೆಚ್ಚು ಕಾದಂಬರಿಗಳನ್ನು ರಚಿಸಿದವರೆಂದು ಖ್ಯಾತರಾಗಿದ್ದಾರೆ. ಸಂಧ್ಯಾರಾಗ ಇವರಿಗೆ ಹೆಸರನ್ನು ತಂದುಕೊಟ್ಟಿತು. ನಟಸಾರ್ವಭೌಮ ಎಂಬ ದೊಡ್ಡ ಕಾದಂಬರಿಯಲ್ಲಿ ಕಲಾವಿದನ ಬಾಳಿನ ಏಳುಬೀಳುಗಳ ಹೊಯ್ದಾಟತುಯ್ದಾಟಗಳ ಚಿತ್ರವಿದೆ. ಅ. ನ. ಕೃ. ಐವತ್ತಕ್ಕೂ ಹೆಚ್ಚು ಕಾದಂಬರಿಗಳನ್ನು ರಚಿಸಿ ಸಮಾಜದ ಹಲವು ಸಮಸ್ಯೆಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಇವರ ಸರಳವಾದ ಚಿತ್ತಾಕರ್ಷಕ ಶೈಲಿ ಮತ್ತು ನಿರೂಪಣಾರೀತಿ ಕನ್ನಡನಾಡಿನ ಭಾರಿ ವಾಚಕಸಮೂಹವನ್ನು ತನ್ನೊಡನೆ ಸೆಳೆದೊಯ್ದಿದೆ. ಕನ್ನಡದ ಬಗ್ಗೆ ಇರುವ ಅಭಿಮಾನ, ಸಮಾಜದ ಲೋಪದೋಷಗಳನ್ನು ಎತ್ತಿ ಆಡುವಲ್ಲಿ ಕಾಣುವ ಉತ್ಸಾಹ ಕಲಾವಿದರ ಬಗ್ಗೆ ಇರುವ ಸಹಾನುಭೂತಿ, ಸಹಜ ಸಂಭಾಷಣೆಗಳನ್ನು ಹೆಣೆವಲ್ಲಿನ ಜಾಣ್ಮೆ—ಇವುಗಳಿಂದಾಗಿ ಅನಕೃ ಈಚಿನ ಕಾದಂಬರಿಕಾರರಲ್ಲಿ ವಿಶೇಷ ಜನಮನ್ನಣೆಗೆ ಪಾತ್ರರಾಗಿದ್ದಾರೆ.

ಶ್ರೀರಂಗರು ವಿಶ್ವಾಮಿತ್ರಸೃಷ್ಟಿ ಎಂಬ ವಿಡಂಬನಾತ್ಮಕ ಕಾದಂಬರಿಯನ್ನೂ ಭರಮಪ್ಪನ ಭೂತ ಎಂಬ ಉತ್ತಮ ಪತ್ತೇದಾರಿ ಕಾದಂಬರಿಯನ್ನೂ ರಚಿಸಿದ್ದಾರೆ. ಸ್ವಾತಂತ್ರ್ಯಾನಂತರವೂ ಇವರು ಕೆಲವು ಕಾದಂಬರಿಗಳನ್ನು ಕೊಟ್ಟಿದ್ದಾರೆ. ದೇವುಡುರವರ ಮಯೂರ ಮೊದಲಿನ ಐತಿಹಾಸಿಕ ಕಾದಂಬರಿ. ಇವರ ಅಂತರಂಗ ಒಂದು ವಿಶಿಷ್ಟ ಕೃತಿ. ಮನಸ್ಸಿನ ಹೊಯ್ದಾಟ ತುಯ್ದಾಟಗಳನ್ನು ಮಾರ್ಮಿಕವಾಗಿ ಬಣ್ಣಿಸಲೆಳಸಿದ ಪ್ರಥಮ ಕಾದಂಬರಿಯಿದು. ಇವರು ರಚಿಸಿರುವ ಹಲವು ಕಾದಂಬರಿಗಳಲ್ಲಿ ಮಹಾಬ್ರಾಹ್ಮಣ ಒಂದು ಶ್ರೇಷ್ಠ ಕೃತಿ. ವೇದಕಾಲದ ವಿಶ್ವಾಮಿತ್ರನ ಕಥೆ ಇದರಲ್ಲಿ ಸತ್ತ್ವಯುಕ್ತವಾಗಿ ಅರಳಿದೆ. ವಿರ್ಜಿ ಅಣ್ಣಾರಾಯರ ನಿಸರ್ಗ ಕಾದಂಬರಿ ಕನ್ನಡ ಕಾದಂಬರಿಗಳ ಸಾಲಿನಲ್ಲಿ ಉತ್ತಮ ಸ್ಥಾನವನ್ನು ಗಳಿಸಿಕೊಂಡಿದೆ. ಬೆಳಗಾವಿ ಜಿಲ್ಲೆಯ ಉತ್ತರ ತುದಿಯ ಹಳ್ಳಿಗಳಲ್ಲಿಯ ಜೈನಸಮಾಜದ ಅಚ್ಚಳಿಯದ ಚಿತ್ರ ನಿಸರ್ಗ ಕಾದಂಬರಿಯಲ್ಲಿದೆ. ಇವರು ಈಚೆಗೆ ರಚಿಸಿದ ಕಾದಂಬರಿಗಳಲ್ಲಿ ರಾಷ್ಟ್ರಪುರುಷ, ಪ್ರತಿಸರಕಾರ, ಭಸ್ಮಾಸುರ, ಅಶೋಕಚಕ್ರ ಮೊದಲಾದುವನ್ನು ಸ್ಮರಿಸಿಕೊಳ್ಳಬಹುದು. ಕಡೆಂಗೋಡ್ಲು ಶಂಕರಭಟ್ಟರ ಧೂಮಕೇತು, ದೇವತಾಮನುಷ್ಯ ಮತ್ತು ಲೋಕದ ಕಣ್ಣು ಸಾಮಾಜಿಕ ಕಾದಂಬರಿಗಳು. ಬಾ. ಕೃ. ಲಕ್ಷ್ಮೇಶ್ವರರ ಗ್ರಾಮಪಂಚಾಯಿತಿ ಕಾದಂಬರಿಯಲ್ಲಿ ಮೊದಲ ಬಾರಿಗೆ ಹಳ್ಳಿಯ ಜನರ ಜೀವನಚಿತ್ರ ಬಂದಿರುವುದನ್ನು ಕಾಣಬಹುದು. ನಾ. ಕಸ್ತೂರಿಯವರ ಗಾಳಿಗೋಪುರ, ಚಕ್ರದೃಷ್ಟಿ, ಶಂಖವಾದ್ಯ, ಚಂಗೂಲಿ ಚಲುವ—ಇವುಗಳನ್ನು ಕಾದಂಬರಿ ಎಂದು ಕರೆಯಲು ಆಕ್ಷೇಪಿಸಬಹುದಾದರೂ

ಈ ಕಾದಂಬರಿಗಳಲ್ಲಿನ ತಂತ್ರ ಮತ್ತು ವಿಡಂಬನೆಗಳು ಗಮನಾರ್ಹ. ಹೇಮಂತರ ಭಗ್ನಮಂದಿರ ಈ ಕಾಲದ ಒಂದು ಮುಖ್ಯ ಸಾಮಾಜಿಕ ಕಾದಂಬರಿ.



ಅ. ನ. ಕೃಷ್ಣರಾಯ

ಸ್ವಾತಂತ್ರ್ಯ ಬಂದ ಅನಂತರದ ಹದಿನಾರು-ಹದಿನೇಳು ವರ್ಷಗಳಲ್ಲಿ ಕಾದಂಬರಿಗಳ ರಚನೆ ನಾಗಾಲೋಟದಿಂದ ಮುಂದೆ ಸಾಗಿದೆ. ಸ್ವಾತಂತ್ರ್ಯಪೂರ್ವಕಾಲದ ಹಲವು ಜನ ಪ್ರಮುಖ ಕಾದಂಬರಿಕಾರರು ಸ್ವಾತಂತ್ರ್ಯಾನಂತರವೂ ಸತ್ತ್ವಶಾಲಿ ಕೃತಿಗಳನ್ನು ರಚಿಸಿದ್ದಾರೆ. ಅಲ್ಲದೆ ಹಲವು ಜನ ಹೊಸ ಕಾದಂಬರಿಕಾರರೂ ಮುಂದೆ ಬಂದಿದ್ದಾರೆ. ಅವರಲ್ಲಿ ಕೆಲವರು ಬಹುಸಂಖ್ಯೆಯಲ್ಲಿ ಕಾದಂಬರಿಗಳನ್ನು ರಚಿಸಿದವರಿದ್ದಾರೆ. ಕಾದಂಬರಿಗಳ ಹರಹು ಕೂಡ ವಿಸ್ತಾರವಾಗಿದೆ. 1953ನೆಯ ಇಸವಿಯಲ್ಲಿ ಕೈಹೊತ್ತಗೆಗಳು ಆರಂಭವಾದ ಮೇಲೆ ಹಿರಿಯ ಹಾಗೂ ತರುಣ ಕಾದಂಬರಿಕಾರರಿಗೆ ಉತ್ತೇಜನ ದೊರಕಿತು ಮತ್ತು ಕಾದಂಬರಿಗಳನ್ನು ಕೊಳ್ಳುವ ಓದುವ ಕನ್ನಡಿಗರ ಸಂಖ್ಯೆ ಬೆಳೆಯಿತು. ವಸ್ತು, ಶೈಲಿ, ನಿರೂಪಣೆ, ತಂತ್ರ ಮೊದಲಾದುವುಗಳಲ್ಲಿ ವೈವಿಧ್ಯ ಮೂಡಿದೆ. ಈ ಕಾಲದ ಒಂದು ಗಮನಾರ್ಹ ಅಂಶವೆಂದರೆ ಹಲವು ಜನ ಕಾದಂಬರಿಕಾರ್ತಿಯರು ಕೃತಿರಚನೆಯಲ್ಲಿ ತೊಡಗಿರುವುದು. ಸಾಮಾಜಿಕ ಕಾದಂಬರಿಗಳೇ ವಿಪುಲವಾಗಿದ್ದರೂ ಕೆಲವು ಐತಿಹಾಸಿಕ ಮತ್ತು ಪತ್ತೇದಾರಿ ಕಾದಂಬರಿಗಳೂ ಬಂದಿವೆ.

ಭಾರತ ದೇಶದಲ್ಲಿ ನಡೆದ ರಾಜಕೀಯ ಹೋರಾಟ ಮತ್ತು ಸ್ವಾತಂತ್ರ್ಯ ಚಳವಳಿಗಳನ್ನು ವಸ್ತುವಾಗಿ ಉಳ್ಳ ಕೆಲವು ಕಾದಂಬರಿಗಳು ಕನ್ನಡದಲ್ಲಿ ಬಂದಿವೆ. ಶಿವರಾಮ ಕಾರಂತರ ಔದಾರ್ಯದ ಉರುಳಲ್ಲಿ ಕಾದಂಬರಿಯಲ್ಲಿ ಭಾರತದ ರಾಜಕೀಯ ಹಾಗೂ ಶೈಕ್ಷಣಿಕ ರಂಗದಲ್ಲಿ ನಡೆದ ಪ್ರಯೋಗಗಳ ಸೋಲುಗೆಲುವುಗಳ ಮಾರ್ಮಿಕ ಚಿತ್ರವಿದೆ. ಮಿರ್ಜಿ ಅಣ್ಣಾರಾಯರ ಪ್ರತಿ ಸರಕಾರ, ರಾಷ್ಟ್ರಪುರುಷ, ಬಸವರಾಜ ಕಟ್ಟೀಮನಿಯವರ ಸ್ವಾತಂತ್ರ್ಯದೆಡೆಗೆ ಮತ್ತು ಮಾಡಿ ಮಡಿದವರು, ತ. ರಾ. ಸು.ರವರ ರಕ್ತತರ್ಪಣ, ನಿರಂಜನರ ಚಿರಸ್ಮರಣೆ—ಇವೆಲ್ಲವೂ ಸ್ವಾತಂತ್ರ್ಯಕ್ಕಾಗಿ ನಡೆದ ಚಳವಳಿಯನ್ನು ನೇರವಾಗಿ ನಿರೂಪಿಸುತ್ತವೆ. 1942ರ ಆಗಸ್ಟ್ ತಿಂಗಳು ಬೊಂಬಾಯಿಯಲ್ಲಿ ನಡೆದ ಚಳವಳಿಯ ಹಿನ್ನೆಲೆಯಲ್ಲಿ ರಚಿತವಾದ ವಸ್ತು ವಿ. ಎಂ. ಇನಾಮದಾರರ ಮೂರಾಬಟ್ಟೆಯಲ್ಲಿ ಬರುತ್ತದೆ. ಅ. ನ. ಕೃ.ರವರ ಅಮರ ಆಗಸ್ಟ್, ಶ್ರೀರಂಗರ ಪುರುಷಾರ್ಥ ಮತ್ತು ಕುಮಾರಸಂಭವ—ಇವೇ ಮೊದಲಾದ ಕಾದಂಬರಿಗಳಲ್ಲಿ ವಿಶಿಷ್ಟ ತಂತ್ರಗಳನ್ನು ಅಳವಡಿಸಿಕೊಂಡು ರಾಜಕೀಯ ಹೋರಾಟದ ಮತ್ತು ಜೀವನದ ಚಿತ್ರಗಳನ್ನು ಕೊಡಲಾಗಿದೆ.

ಐತಿಹಾಸಿಕ ಕಾದಂಬರಿಗಳಲ್ಲಿ ಶ್ರೀನಿವಾಸರ ಚನ್ನಬಸವನಾಯಕ ಒಂದು ಮೈಲಿಗಲ್ಲು. ಕೆಳದಿಯ ರಾಜ್ಯದ ಕೊನೆಯ ನಾಯಕರ ಸ್ಥಿತಿಯನ್ನು ಚಿತ್ರಿಸಿ ಹೈದರನ ಕುತಂತ್ರದ ಫಲವಾಗಿ ಆ ರಾಜ್ಯ ಮತ್ತು ರಾಜಧಾನಿ ಹೇಗೆ ಅವನ ವಶವಾಯಿತು ಎಂಬುದನ್ನು ನಿರೂಪಿಸಲಾಗಿದೆ. ಇವರ ಇನ್ನೊಂದು ಐತಿಹಾಸಿಕ ಕಾದಂಬರಿ ಚಿಕ್ಕವೀರರಾಜೇಂದ್ರ. ನಮ್ಮ ನೆನಪಿನಲ್ಲಿ ನಿಲ್ಲುವ ಒಂದು ಮನೋಹರ ಕಾದಂಬರಿ—ತ. ರಾ. ಸು. ಅವರ ಹಂಸಗೀತೆ. ಇದು ಚಿತ್ರದುರ್ಗದ ಇತಿಹಾಸದ ಹಿನ್ನೆಲೆಯಲ್ಲಿ ರಚಿತವಾಗಿದೆ. ಚಿತ್ರದುರ್ಗದ ಇತಿಹಾಸದ ಮೇಲೆ ತ. ರಾ. ಸು. ಹಲವು ಕಾದಂಬರಿಗಳನ್ನು ರಚಿಸಿದ್ದರೆ, ಅ. ನ. ಕೃ. ವಿಜಯನಗರದ ಇತಿಹಾಸದ ಮೇಲೆ ಕಾದಂಬರಿಗಳನ್ನು ರಚಿಸಿದ್ದಾರೆ. ಐತಿಹಾಸಿಕ ಕಾದಂಬರಿಗಳಲ್ಲಿ ನಮ್ಮ ಮನಸ್ಸನ್ನು ರಮಿಸುವ ಇನ್ನೊಂದು ಕಾದಂಬರಿ ಕೆ. ವಿ. ಅಯ್ಯರ್‌ರವರ ಶಾಂತಲಾ. ಹೊಯ್ಸಳ ವಿಷ್ಣುವರ್ಧನನ ರಾಣಿ ಶಾಂತಲಾದೇವಿಯ ಜೀವನವನ್ನು ಕುರಿತ ಸುರಸ ಕಾದಂಬರಿಯಿದು. ವೀರಕೇಸರಿ ಸೀತಾರಾಮಶಾಸ್ತ್ರಿಗಳು ಟೀಪೂಸುಲ್ತಾನನ ಕಾಲದ ಚರಿತ್ರೆಯನ್ನು ವಸ್ತುವಾಗಿ ಉಳ್ಳ ದೌಲತ್ ಎಂಬ ವೀರಶೃಂಗಾರಗಳಿಂದ ಕೂಡಿದ ಮೂರು ಭಾಗಗಳ ಬೃಹತ್ ಕಾದಂಬರಿಯನ್ನು ಬರೆದಿದ್ದಾರೆ. ಇದಲ್ಲದೆ ನಗರದ ರಾಣಿ, ರಾಣಿ ರೂಪಮತಿ ಮೊದಲಾದ ಹಲವು ಕಾದಂಬರಿಗಳನ್ನು ಶಾಸ್ತ್ರಿಗಳು ನೀಡಿದ್ದಾರೆ. ಕನ್ನಡದಲ್ಲಿ ಬಹುಸಂಖ್ಯೆಯಲ್ಲಿ ಕಾದಂಬರಿಗಳನ್ನು ರಚಿಸಿರುವ ಇನ್ನೊಬ್ಬರು ಶ್ರೀನಿವಾಸರಾವ್ ಕೊರಟಿ. ಹನ್ನೆರಡನೆಯ ಶತಮಾನದ ಬಸವಯುಗದ ಕಲ್ಯಾಣ ಕ್ರಾಂತಿಯನ್ನು ವಸ್ತುವನ್ನಾಗಿ ಮಾಡಿಕೊಂಡು ಬಿ. ಪುಟ್ಟಸ್ವಾಮಯ್ಯನವರು ರಚಿಸಿರುವ ಹಲವು ಕಾದಂಬರಿಗಳು ಗಮನಾರ್ಹವಾಗಿವೆ.

ಕಾದಂಬರಿಕಾರರ ದೃಷ್ಟಿ ಹಳ್ಳಿಗಳ ಕಡೆ ಹರಿದು, ಹಳ್ಳಿಗಳ ಜೀವನದ ಬಗ್ಗೆ ಕೆಲವು ಒಳ್ಳೆಯ ಕಾದಂಬರಿಗಳು ಬಂದಿರುವುದು ಗಮನಾರ್ಹ. ಎಚ್. ದೇವೀರಪ್ಪನವರ ಬೆಳವಲದ ಮಡಿಲಲ್ಲಿ, ತ. ರಾ. ಸು.ರವರ ಚಂದವಳ್ಳಿಯ ತೋಟ ಶೇಷಗಿರಿರಾಯರ ಬೆಳವಲದ ಭಾಗ್ಯಲಕ್ಷ್ಮಿ, ಕೃಷ್ಣಮೂರ್ತಿ ಪುರಾಣಿಕರ ಹಬ್ಬಿದ ಬಳ್ಳಿ, ಬಸವರಾಜ ಕಟ್ಟೀಮನಿಯವರ ಮಣ್ಣು ಮತ್ತು ಹೆಣ್ಣು, ಚದುರಂಗರ ಸರ್ವಮಂಗಳಾ—ಇವೇ ಮೊದಲಾದ ಕಾದಂಬರಿಗಳಲ್ಲಿ ಹಳ್ಳಿಗಳ ಸರಳ ಸುಂದರ ಜೀವನದ ಹಾಗೂ ಬದಲಾಗುತ್ತಿರುವ ಹಳ್ಳಿಗಳ ಜೀವನದ ವಾಸ್ತವಿಕ ಚಿತ್ರಣಗಳನ್ನು ಕಾಣಬಹುದು. ರಾವ್‌ಬಹದ್ದೂರ್‌ರವರ ಹಳ್ಳಿಯ ಜೀವನವನ್ನು ಕುರಿತ ಗ್ರಾಮಾಯಣ ಈ ಕಾಲದ ವೈಶಿಷ್ಟ್ಯಪೂರ್ಣವಾದ ಉತ್ಕೃಷ್ಟ ಕಾದಂಬರಿ. ಹಳ್ಳಿಯ ಸರಳವಾದ ಚೊಕ್ಕ ಜೀವನವನ್ನು ಚಿತ್ರಿಸುತ್ತಿರುವಂತೆಯೇ ಬದಲಾಗುತ್ತಿರುವ ಹಳ್ಳಿಯ ಜೀವನದ ಲೋಪದೋಷಗಳನ್ನು ಇಷ್ಟೊಂದು ಮಾರ್ಮಿಕವಾಗಿ ಚಿತ್ರಿಸಿದವರು ವಿರಳ.



ರಾವ್ ಬಹದ್ದೂರ್

ಹರಿಜನರ ಸಮಸ್ಯೆಯ ಬಗ್ಗೆ ಬಂದ ಕಾದಂಬರಿಗಳು ಕಡಿಮೆ. ಕೆ. ಎ. ಎನ್. ರಾವ್‌ರವರ ಮುನಿಯನ ಮಾದರಿ, ಎಂ. ವಿ. ಸೀತಾರಾಮಯ್ಯನವರ ಮಾದನ ಮಗಳು, ಕಟ್ಟೀಮನಿಯವರ ನೀ ನನ್ನ ಮುಟ್ಟಬೇಡ—ಇವುಗಳನ್ನು ಉದಾಹರಣೆಗಾಗಿ ಉಲ್ಲೇಖಿಸಬಹುದಾಗಿದೆ.

ಸ್ವಾತಂತ್ರ್ಯೋತ್ತರ ಕಾಲದ ಕಾದಂಬರಿಗಳಲ್ಲಿ ಬಹುಪಾಲು ಕಾದಂಬರಿಗಳು ಸಾಮಾಜಿಕ ಕಾದಂಬರಿಗಳೇ ಆಗಿವೆ. ಶಾಂತಿನಾಥ ದೇಸಾಯಿಯವರ ಮುಕ್ತಿ,

ಯಶವಂತ ಚಿತ್ತಾಲರ ಮೂರು ದಾರಿಗಳು—ಕಾದಂಬರಿಯ ಅಭಿವ್ಯಕ್ತಿ ಹಾಗೂ ತಂತ್ರದಲ್ಲಿ ಹೊಸ ಹೆಜ್ಜೆಗಳಾಗಿವೆ. ಕಾರಂತ, ಶ್ರೀನಿವಾಸ, ಅ. ನ. ಕೃ., ಶ್ರೀರಂಗ, ದೇವುಡು, ತ. ರಾ. ಸು., ಬಸವರಾಜ ಕಟ್ಟೀಮನಿ, ವಿ. ಎಂ. ಇನಾಂದಾರ್ ಇವರೇ ಮೊದಲಾದವರನ್ನು ಈ ಕಾಲದ ಪ್ರಮುಖ ಕಾದಂಬರಿಕಾರರೆನ್ನಬಹುದು. ಎಂ. ಆರ್. ಶ್ರೀನಿವಾಸಮೂರ್ತಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್, ಎಂ. ವಿ. ಸೀತಾರಾಮಯ್ಯ, ನಿರಂಜನ, ಚದುರಂಗ, ಎಚ್ಚೆಸ್ಕೆ, ರಾ. ವೆಂ. ಶ್ರೀನಿವಾಸ, ನರೇಂದ್ರಬಾಬು, ವ್ಯಾಸರಾಯ ಬಲ್ಲಾಳ, ಅಶ್ವತ್ಥ, ದಾಶರಥಿ ದೀಕ್ಷಿತ್, ನಾಡಿಗೇರ ಕೃಷ್ಣರಾಯ, ಇಂದಿರಾತನಯ, ತ್ರಿವಿಕ್ರಮ, ಬೆಳ್ಳೆ ರಾಮಚಂದ್ರರಾವ್, ಹರಿದಾಸ ರಾವ್, ಭಾರತೀಸುತ, ಬಿ. ಪುಟ್ಟಸ್ವಾಮಯ್ಯ. ಸೇವ ನಮಿರಾಜ ಮಲ್ಲ, ಕ. ಶಂಕರ,

ಕೃಷ್ಣಮೂರ್ತಿ ಪುರಾಣಿಕ

ಎನ್. ಸೂರಪ್ಪ, ಮತ್ತೂರು ಕೃಷ್ಣಮೂರ್ತಿ, ಕೃಷ್ಣಮೂರ್ತಿ ಪುರಾಣಿಕ, ಮಾ. ನ. ಚೌಡಪ್ಪ, ಬೀಚಿ, ಪ. ಸು. ಭಟ್ಟ—ಹೀಗೆ ಕಾದಂಬರಿಕಾರರ ಪಟ್ಟಿಯನ್ನು ಬೆಳೆಸುತ್ತ ಹೋಗಬಹುದು. ಯು. ಆರ್. ಅನಂತಮೂರ್ತಿಯವರ ಸಾಮಾಜಿಕ ಕಾದಂಬರಿ ಸಂಸ್ಕಾರ ಹೆಚ್ಚಿನ ಚರ್ಚೆಗೆ ಒಳಗಾಗಿರುವ ಈಚಿನ ಮುಖ್ಯ ಕಾದಂಬರಿಯಾಗಿದ್ದು ಇದನ್ನು ಚಲನಚಿತ್ರವನ್ನಾಗಿ ಪರಿವರ್ತಿಸಲಾಗಿದೆ. ಎಸ್.ಎಲ್. ಭೈರಪ್ಪನವರದು ಈಚೆಗೆ ನಾಡಿನ ಗಮನವನ್ನು ಸೆಳೆದಿರುವ ಹೆಸರು. ವಂಶವೃಕ್ಷ, ನಾಯಿನೆರಳು, ಧರ್ಮಶ್ರೀ, ಮತದಾನ, ಗೃಹಭಂಗ ಮುಂತಾದ ಅವರ ಕಾದಂಬರಿಗಳು ಬಹಳ ಕುತೂಹಲ ಕರವಾಗಿವೆ. ಇದನ್ನು ನೋಡಿದರೆ ಕಾದಂಬರಿ ಬೆಳೆ ಎಷ್ಟು ಹುಲುಸಾಗಿದೆ ಎಂಬುದರ ಅರಿವಾಗದೆ ಇರದು. ಅಂತೆಯೇ ಸಂಖ್ಯೆಯಲ್ಲಿ ಅಧಿಕವಾಗಿದ್ದರೂ ಪ್ರಗತಿ ಮಾರ್ಗದಲ್ಲಿ ಮುನ್ನಡೆದ ಉದಯೋನ್ಮುಖ ಕಾದಂಬರಿಗಳನ್ನು ನಿರೀಕ್ಷಿಸುವವರಿಗೆ ಸ್ವಲ್ಪ ನಿರಾಶೆಯೂ ಆಗಬಹುದು.

ಸ್ತ್ರೀಯರು ಮುಂದೆ ಬಂದು ಕಾದಂಬರಿಗಳನ್ನು ರಚಿಸಿರುವುದು ಸ್ವಾತಂತ್ರ್ಯೋತ್ತರ ಕಾಲದ ಒಂದು ವೈಶಿಷ್ಟ್ಯ. ಅಪಸ್ವರ, ದೂರದ ಬೆಟ್ಟ, ಬೆಕ್ಕಿನ ಕಣ್ಣು—ಮೊದಲಾದ ಕಾದಂಬರಿಗಳನ್ನು ಬರೆದಿರುವ ತ್ರಿವೇಣಿ ಅವರು ಓದುಗರಿಗೆ ಹೆಚ್ಚು ಪರಿಚಿತರಾಗಿದ್ದಾರೆ. ಮಾನವ ಜೀವನದ ಹಲವು ಜಟಿಲ ಹಾಗೂ ಮನೋವೈಜ್ಞಾನಿಕ ಸಮಸ್ಯೆಗಳ ಮೇಲೆ ಇವರು ಕಾದಂಬರಿಗಳನ್ನು ರಚಿಸಿದ್ದಾರೆ. ಅನುಪಮಾ, ವೈ. ವಿ. ಇಂದಿರಾಬಾಯಿ, ಲಲಿತಾಂಬ, ಜಯಲಕ್ಷ್ಮಿ ಎನ್. ರಾವ್, ಎಂ. ಕೆ. ಜಯಲಕ್ಷ್ಮಿ, ಎಂ. ಕೆ. ಇಂದಿರಾ, ಆರ್ಯಾಂಬ ಪಟ್ಟಾಭಿ, ಮಲ್ಲಿಕಾ, ಪ್ರಭಾ, ಕೆ. ಶಕುಂತಲಾ, ಸರೋಜಮ್ಮ ಅನಂತರಾಮಯ್ಯ, ಎ. ಪಿ. ಮಾಲತಿ —ಇವರೇ ಮೊದಲಾದವರು ಇತರ ಕಾದಂಬರಿ ಕಾರ್ತಿಯರು.

ಇತರ ಭಾಷೆಗಳ ಕಾದಂಬರಿಗಳ ಭಾಷಾಂತರಕಾರ್ಯವೂ ಕೂಡ ತಕ್ಕಮಟ್ಟಿಗೆ ನಡೆದಿದೆ. ಗುರುನಾಥ ಜೋಶಿ, ಕುಪ್ಪಮ್ಮ, ಆರ್. ವ್ಯಾಸರಾವ್, ಗೋವಿಂದ ಚುಳಕಿ,ಚಿ.ನ. ಮಂಗಳ, ಗು. ಭೀ. ಜೋಶಿ, ನಾಗರಾಜ, ನಾರಾಯಣ ಶರ್ಮ, ಮಲ್ಲಾರಿ. ರಾಮಲಿಂಗಯ್ಯ, ಕು.ಶಿ. ಹರಿದಾಸ ಭಟ್ಟ—ಮೊದಲಾದವರು ಶರಚ್ಚಂದ್ರ, ಪ್ರೇಮಚಂದ್ ಮೊದಲಾದವರ ಹಿಂದಿ ಕಾದಂಬರಿಗಳನ್ನೂ ಎಚ್. ವಿ. ಸಾವಿತ್ರಮ್ಮನವರು ರವೀಂದ್ರನಾಥ ಠಾಕೂರರ ಕಾದಂಬರಿಗಳನ್ನೂ ಅನುವಾದ ಮಾಡಿದ್ದಾರೆ. ಡಿ. ಎಸ್. ಕುಲಕರ್ಣಿ, ವಿ. ಎಂ. ಇನಾಂದಾರ್, ಸರೋಜಿನಿ—ಮೊದಲಾದವರು ಮರಾಠಿಯಿಂದ ಭಾಷಾಂತರ ಮಾಡಿದ್ದಾರೆ. ಪಾಶ್ಚಾತ್ಯ ಕಾದಂಬರಿಗಳಲ್ಲಿ, ಎಂದರೆ ಹೆಚ್ಚಾಗಿ ಇಂಗ್ಲಿಷಿನಿಂದ ಕೆಲವು ಒಳ್ಳೆ ಕೃತಿಗಳನ್ನು ಅನುವಾದ ಮಾಡಲಾಗಿದೆ. ಮುಳ್ಳುಬೇಲಿ (ಚಾಲುಕ್ಯ), ಆಲಿವರ್ ಟ್ವಿಸ್ಟ್, ರಾಬಿನ್ ಹುಡ್ (ಜಿ. ಪಿ. ರಾಜರತ್ನಂ) ಪಾಂಪೆಯ ಕೊನೆಯ ದಿನಗಳು (ಎ. ಕೃಷ್ಣಮೂರ್ತಿ), ಹವಳದ್ವೀಪ (ಎ. ಎನ್. ಮೂರ್ತಿರಾವ್), ಸಿರಿದ್ವೀಪ, ಗ್ಯಾಸ್ಕೊಯಿನ್, ರಾಬಿನ್ಸನ್ ಕ್ರೂಸೊ (ಆನಂದ) ಸೈಲಾಸ್ ಮಾರ್ನರ್ (ಕೆ.ಸುಬ್ಬರಾವ್), ಕೆನಿಲ್ ವರ್ತ್ (ಹೆಚ್. ಎಲ್. ನಾಗೇಗೌಡ), ಹಮ್ಮ ಬಿಮ್ಮು. ಪುನರುತ್ಥಾನ (ದೇಜಗೌ), ಮದಾಂ ಬಾವರಿ (ತ.ರಾ.ಸು.). ರಾಜಮಹಾರಾಜರು (ಶಂಕರ ಪಾಟೀಲ)—ಇವೇ ಮೊದಲಾದ ಕೃತಿಗಳನ್ನು ಇಲ್ಲಿ ಉದಾಹರಿಸಬಹುದು. ಎಸ್. ಜಿ. ಶಾಸ್ತ್ರಿಗಳ ಮಹಾಪುರುಷ ಫ್ರೆಂಚ್ ಭಾಷೆಯ ಲೇ ಮಿಸರಬಲೇಯ ಸಂಗ್ರಹರೂಪ. ಈಚೆಗೆ ಕೆಲವು ರಷ್ಯನ್ ಕಾದಂಬರಿಗಳೂ ಅನುವಾದಿತವಾಗಿವೆ. ಮ್ಯಾಕ್ಸಿಂ ಗಾರ್ಕಿಯ ತಾಯಿ (ನಿರಂಜನರಿಂದ ಅನುವಾದ), ಆಲೆಕ್ಸಿ ಟಾಲ್‌ಸ್ಟಾಯ್ ಉಗ್ರಪರೀಕ್ಷೆ (ಆರ್ಡಿಯಲ್-ಅನುವಾದ : ಆನಂದ)—ಇವನ್ನು ಇಲ್ಲಿ ಸ್ಮರಿಸಿಕೊಳ್ಳಬಹುದು. ಹೀಗೆ ಅಲ್ಲಲ್ಲಿ ಒಂದೊಂದು ಒಳ್ಳೆಯ ಕೃತಿ ಕನ್ನಡಕ್ಕೆ ಬಂದಿದ್ದರೂ ಈ ದಿಕ್ಕಿನಲ್ಲಿ ನಡೆಯಬೇಕಾದ ಕೆಲಸ ಇನ್ನೂ ಹೇರಳವಾಗಿದೆ.

ವೈವಿಧ್ಯಪೂರ್ಣವಾದ ಕಾದಂಬರೀರಂಗದ ಆಳವಿಸ್ತಾರಗಳು ಇಂದಿಗಿಂತ ಮುಂದೆ ಇನ್ನೂ ಹೆಚ್ಚಾಗಿ ಇಂದಿನ ಜನಜೀವನದ ಜಟಿಲ ಸಮಸ್ಯೆಗಳನ್ನು ಹೊಸ ಹೊಸ ತಂತ್ರಗಳ ಅಳವಡಿಕೆಯ ಮೂಲಕ ಹೆಚ್ಚು ಸುಂದರವಾಗಿ ಪರಿಣಾಮಕಾರಿಯಾಗಿ ನಿರೂಪಿಸುವಂತಾಗಬೇಕಾಗಿದೆ.

ಅಗ್ಗದ ಕಿರುಹೊತ್ತಗೆಗಳಿಂದ ಒಂದು ಕಾಲದಲ್ಲಿ ಕಾದಂಬರಿ ಜನಪ್ರಿಯವಾಯಿತಷ್ಟೆ. ಈಗ ಆ ಕೆಲಸವನ್ನು ಪತ್ರಿಕೆಗಳು ಮಾಸಿಕಗಳು ನೆರವೇರಿಸುತ್ತಿವೆ. ದೈನಿಕ ಧಾರಾವಾಹಿಯಾಗಿ ಕಾದಂಬರಿಯನ್ನು ಪ್ರಕಟಿಸುವ ಉದ್ಯಮವನ್ನು ಕನ್ನಡಪ್ರಭ ಮೊದಲಿಗೆ ಪ್ರಾರಂಭಿಸಿತು. ಈಗ ಇನ್ನೂ ಕೆಲವು ದೈನಿಕಗಳು ಆ ಕೆಲಸ ಮಾಡುತ್ತಿವೆ. ಮಾಸಿಕಗಳಾದ ಮಯೂರ ಮತ್ತು ಮಲ್ಲಿಗೆಗಳಲ್ಲಿ, ವಾರಪತ್ರಿಕೆಗಳಾದ ಚಿತ್ರಗುಪ್ತ ಮತ್ತು ಪ್ರಜಾಮತಗಳಲ್ಲಿ ಕಾದಂಬರಿಗಳು ಪ್ರಕಟವಾಗುತ್ತಿವೆ. ಎಂ. ಕೆ. ಇಂದಿರ, ರಾವ್‌ಬಹದ್ದೂರ್, ವಿಶುಕುಮಾರ್ ಮೊದಲಾದವರ ಕಾದಂಬರಿಗಳು ಆ ಭಾಗಗಳಲ್ಲಿ ಪ್ರಕಟವಾಗುತ್ತಿವೆ. ಖರ್ಚಾಗುವ ಪುಸ್ತಕಗಳಲ್ಲೂ ಕಾದಂಬರಿಗೇ ಪ್ರಥಮ ಸ್ಥಾನ ಸಲ್ಲಬೇಕು. ಇವೆಲ್ಲ ಕಾದಂಬರಿಗೆ ಇರುವ ಉಜ್ಜ್ವಲ ಭವಿಷ್ಯವನ್ನು ಎತ್ತಿತೋರಿಸುವಂತಿವೆ. ಸುಧಾ ವಾರಪತ್ರಿಕೆ ಪ್ರತಿವರ್ಷ ನಡೆಸುವ ಸ್ಪರ್ಧೆಯಲ್ಲಿ ಆಯ್ಕೆಯಾದ ಅಪ್ರಕಟಿತ ಸ್ವತಂತ್ರ ಕಾದಂಬರಿಗೆ ಎರಡುಸಾವಿರದ ಐನೂರು ರೂಪಾಯಿಗಳ ಬಹುಮಾನ ಕೊಡುತ್ತಬಂದಿದೆ. ಅಂದರೆ ಹೊಸಹೊಸತಾಗಿ ಬರೆಯಬೇಕೆನ್ನುವವರಿಗೆ ಈ ಕ್ಷೇತ್ರ ಫಲವತ್ತಾಗಿದೆ. ಪ್ರೋತ್ಸಾಹದಾಯಕವಾಗಿದೆ. ಬರುತ್ತಿರುವ ಬೆಳೆಯೂ ಆಶಾದಾಯಕವಾಗಿದೆ. (ಕೆ.ಎಸ್.ಕೆ.ಎಂ.)

**ಕನ್ನಡದಲ್ಲಿ ಕಾವ್ಯಮೀಮಾಂಸೆ :** ಕನ್ನಡದ ಮುನ್ನಡೆಗೆ ಸಹಾಯವಾಗುವಂತೆ ಸಂಸ್ಕೃತದ ಕಾವ್ಯತತ್ತ್ವಗಳನ್ನು ಕನ್ನಡದ ಮೂಲಕ ಪ್ರತಿಪಾದಿಸುವ ಮಹತ್ತ್ವದ ಆದಿಗ್ರಂಥವೆಂದರೆ ಕವಿರಾಜಮಾರ್ಗ. ಮಹಾಕವಿಗಳನ್ನು ಕವಿರಾಜರೆಂದು ಗ್ರಹಿಸಿ. ಅವರ ಕಾವ್ಯ ಸಂಪ್ರದಾಯವನ್ನೇ ಮಾರ್ಗವೆಂದು ದಂಡಿಯಂತೆ ಇಲ್ಲಿ ಹೆಸರಿಸಿದೆಯೆನಿಸುತ್ತದೆ. ಇದು ದಂಡಿಯ ಕಾವ್ಯಾದರ್ಶದಲ್ಲಿರುವ ಗುಣ, ಮಾರ್ಗ, ದೋಷ, ಅಲಂಕಾರ ಪ್ರಕ್ರಿಯೆಗಳನ್ನೆಲ್ಲ ಕನ್ನಡಕ್ಕೆ ಅನ್ವಯಿಸಿ ಹೇಳಲು ಮುಖ್ಯವಾಗಿ ಹೊರಟಿದ್ದರೂ ಪೀಠಿಕೆಯಾಗಿ ಕನ್ನಡದ ವೈಶಿಷ್ಟ್ಯಗಳನ್ನು ಕೂಡ ಪ್ರತಿಪಾದಿಸಿದೆ. ಬಾಣ, ಕಾಳಿದಾಸ ಮುಂತಾದ ಸಂಸ್ಕೃತ ಮಹಾಕವಿಗಳಂತೆ, ವಿಮಲೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತಾದಿ ಕನ್ನಡ ಗದ್ಯಕಾರರನ್ನೂ ಶ್ರೀವಿಜಯ ಕವೀಶ್ವರ ಪಂಡಿತ ಚಂದ್ರ ಲೋಕಪಾಲಾದಿ ಕನ್ನಡ ಪದ್ಯಕಾರರನ್ನೂ ಲೇಖಕ ಸ್ಮರಿಸಿದ್ದಾನೆ. ಚತ್ತಾಣ, ಬೆದಂಡೆಗಳೆಂಬ ಕನ್ನಡದ ವಿಶಿಷ್ಟ ಕಾವ್ಯಪ್ರಕಾರಗಳನ್ನೂ ಉಲ್ಲೇಖಿಸಿದ್ದಾನೆ. ಕಂದವೃತ್ತಗಳು ಕಡಿಮೆಯಾಗಿ ದೇಶೀಯ ಛಂದೋಜಾತಿಗಳು ಹೆಚ್ಚಾಗಿರುವ ಕಾವ್ಯವೇ ಬೆದಂಡೆ ; ಕಂದವೃತ್ತಗಳು ಹೆಚ್ಚಾಗಿ ಚೌಪದಿ, ಗೀತಿಕೆ ತ್ರಿಪದಿಗಳು ಕಡಿಮೆಯಿರುವುದು ಚತ್ತಾಣವೆಂದು ತೋರುತ್ತದೆ.

ಕವಿರಾಜಮಾರ್ಗಕಾರ ಶಬ್ದಪ್ರಯೋಗದಲ್ಲಿ ಸಂಸ್ಕೃತ ಕನ್ನಡಗಳನ್ನು ಸಿಕ್ಕಾಬಟ್ಟೆ ಬೆರೆಸುವುದು ತಪ್ಪೆಂದಿದ್ದಾನೆ. ಉಚ್ಚೈಃ ಮುಹುರ್ಮುಹುಃ ಎಂಬ ಕರ್ಣ

ಕರ್ಕಶ ಅವ್ಯಯಗಳ ಬದಲು ಬಹಿರುದ್ಯಾನ ಮುಂತಾಗಿ ಕಿವಿಗಿಂಪಾದ ಅವ್ಯಯ ಪೂರ್ವಪದಗಳನ್ನು ಬಳಸಬೇಕೆಂದಿದ್ದಾನೆ. ಅರಸುಕುಮಾರ ಮುಂತಾದ ಅರಿಸಮಾಸಗಳು ತ್ಯಾಜ್ಯವೆಂದಿದ್ದಾನೆ.

ಕನ್ನಡಿಗರ ಮೇಲ್ಮೆಯನ್ನೂ ಕನ್ನಡದ ವಿಶಿಷ್ಟ ದೋಷಗಳನ್ನೂ ನಿರೂಪಿಸಿದ ಮೇಲೆ ದಂಡಿ ಹೇಳುವ ಶ್ರುತಿದುಷ್ಟ, ಯತಿಭಂಗ ಮುಂತಾದ ದೋಷಗಳ ಲಕ್ಷ್ಯ–ಲಕ್ಷಣಪೂರ್ವಕ ವಿವೇಚನೆ ಗ್ರಂಥದಲ್ಲಿ ವಿಸ್ತಾರವಾಗಿ ಬಂದಿದೆ. ಇಲ್ಲಿಯೇ ಕಾರಕ, ವಚನ, ಗುರುಲಘು–ವಿಪರ್ಯಯ, ಸಮುಚ್ಚಯ, ವಿಕಲ್ಪ, ಅವಧಾರಣೆ, ವಿಶಂಕೆ ಮುಂತಾದ ವ್ಯಾಕರಣದೋಷಗಳ ಪ್ರತಿಪಾದನೆಯೂ ಸ್ಪಷ್ಟವಾಗಿ ಬರುತ್ತದೆ. ನುಡಿಗಳು ಬಗೆದುದನ್ನು ಬಗೆದಂತೆ ಒಡಮೂಡಿಸುತ್ತಿರಬೇಕು ; ಕನ್ನಡ ನಾಣ್ಣುಡಿಯ ಬೆಡಗು ಬೆಳಗುವಂತಿರಬೇಕು ; ಕಿವಿಗೆ ಹಿತವಲ್ಲದ ವಿಕಟಾಕ್ಷರಗಳು ಬರಲಾಗದು; ಸಂಸ್ಕೃತ ಪದಾವಲಿ ಹವಣಾಗಿ ಬರಬೇಕು ; ಮನೋಹರವಾದ ಹೂಗಳ ಮಾಲೆಯಂತೆ ಕವಿಯ ಶೈಲಿ ಕಂಗೊಳಿಸಬೇಕು—ಎಂದು ಮೊದಲ ಪರಿಚ್ಛೇದದ ಕಡೆಗೆ ತನ್ನ ಸಿದ್ಧಾಂತವನ್ನು ಸಂಗ್ರಹಿಸುತ್ತಾನೆ.

ಎರಡನೆಯ ಪರಿಚ್ಛೇದದಲ್ಲಿ ಶಬ್ದಾಲಂಕಾರಗಳ ವಿವೇಚನೆ ಬಂದಿದೆ. ಇಲ್ಲಿಯೂ ಕನ್ನಡದ ಶಬ್ದಸೌಂದರ್ಯದ ಬಗೆಗೆ ಕವಿಯ ಸ್ವತಂತ್ರ ವಿಚಾರಗಳಿವೆ. ಇಲ್ಲಿಗಿದು ತಕ್ಕುದು ಎಂಬ ವಿವೇಚನೆಯಿಂದ ಮೃದುಪದವಿಡಬೇಕು. ಅರ್ಥಾನುಗುಣ್ಯ ತಪ್ಪಿದರೆ ಮುತ್ತನ್ನೂ ಮೆಣಸನ್ನೂ ಕೋದಂತೆ (II–5 ), ಲಘುವಿನ ಮುಂದೆ ಸಂಯುಕ್ತಾಕ್ಷರ ಬಂದರೆ ಹಿತವಲ್ಲ ; ಕೂಸಿನ ತಲೆಯ ಮೇಲೆ ಭಾರ ಹೇರಿದಂತಾಗುತ್ತದೆ. (ಉದಾಹರಣೆ : ಬರಿಸಿ ಕ್ಷಿತಿಪತಿಯಂ), ಅನೇಕ ವಿಶೇಷಣಗಳು ಸರಮಾಲೆಯಂತೆ ಬಂದರೆ ಸಲ್ಲದು, ಗಡ, ಮೇಣ್ ಮುಂತಾದ ಪಾದ ಪೂರಣಗಳು ಅತಿಯಾಗಬಾರದು, ಕನ್ನಡದಲ್ಲಿ ಬಗೆಬಗೆಯ ಪ್ರಾಸಗಳೇ ಮೋಹಕ ಮುಂತಾದ ವೈಶಿಷ್ಟ್ಯಗಳನ್ನೇ ಕವಿರಾಜಮಾರ್ಗಕಾರ ಮೊದಲು ಪ್ರತಿಪಾದಿಸಿದ್ದಾನೆ.

ಅನಂತರ ಮಾರ್ಗಗಳ ನಿರೂಪಣೆ ಬರುತ್ತದೆ. ವೈದರ್ಭಿಯನ್ನು ದಕ್ಷಿಣ ಮಾರ್ಗವೆಂದೂ ಗೌಡಿಯನ್ನು ಉತ್ತರಮಾರ್ಗವೆಂದೂ ಹೆಸರಿಸಲಾಗಿದೆ. ಸ್ವಭಾವೋಕ್ತಿ ಮೊದಲನೆಯದರ ವೈಶಿಷ್ಟ್ಯ. ವಕ್ರೋಕ್ತಿ ಎರಡನೆಯದರಲ್ಲಿ ಹೆಚ್ಚು. ಸಮ, ಮಧುರ ನಿಬಿಡ, ಕಾಂತ. ಸುಕುಮಾರ, ಸಮಾಹಿತ, ಪ್ರಸನ್ನ, ಉದಾರ, ಅಗ್ರಾಮ್ಯ, ಓಜಸ್ವಿ–ಈ ಹತ್ತು ಗುಣಗಳೂ ಮೊದಲನೆಯದರಲ್ಲಿ ಸಹಜಸುಂದರವಾಗಿ ಮಾರ್ಪೊಳೆಯುತ್ತವೆ ; ಎರಡನೆಯದರಲ್ಲಿ ಇವುಗಳ ವಿಪರ್ಯಯ ಅಥವಾ ಅತಿಶಯ ಕಲ್ಪನೆಯೇ ಚಮತ್ಕಾರಕ. ದೆಸೆಗಳ್ ವಿಳಾಸಮಾದು, ಕೆಸರಿಂ ಪಿಂಗಿತ್ತು ಧರಣಿ, ತಿಳಿದುವು ಕೊಳಗಳ್—ಎನ್ನುವುದು ದಕ್ಷಿಣಮಾರ್ಗಕ್ಕೆ ಉದಾಹರಣೆ. ಅದನ್ನೇ ಧವಳ ಜಳಧರ ಕುಳಾಕುಳಮವಿಕಳಮಂಬರತಳಂ ವಿನೀಳಚ್ಛಾಯಂ—ಎಂದರೆ ಉತ್ತರಮಾರ್ಗವಾಗುತ್ತದೆ. ಈ ಗುಣಗಳು ರಸವಿಶೇಷದಲ್ಲಿ ಅನ್ವಯಿಸುವುದು ಹೇಗೆಂಬುದನ್ನೂ ತೋರಿಸಿದ್ದಾನೆ ; ಸ್ಫುಟೋಕ್ತಿಯಿಂದ ವೀರರಸ, ಮೃದೂಕ್ತಿಯಿಂದ ಕರುಣರಸ, ನಿಬಿಡೋಕ್ತಿಯಿಂದ ಅದ್ಭುತರಸ, ಸುಕುಮಾರೋಕ್ತಿಯಿಂದ ಶೃಂಗಾರ ರಸ—ಇತ್ಯಾದಿ (II–90). ಕಡೆಗೆ ದಂಡಿ ಹೇಳಿರುವ ಯಮಕ, ಚಿತ್ರಕಾವ್ಯ ಭೇದಗಳ ನಿರೂಪಣೆಯಿಂದ ಪರಿಚ್ಛೇದ ಮುಗಿಯುತ್ತದೆ.

ಮೂರನೆಯ ಪರಿಚ್ಛೇದದಲ್ಲಿ ಜಾತಿಯಿಂದ (ಸ್ವಭಾವೋಕ್ತಿ) ಹಿಡಿದು ಭಾವಿಕದವರೆಗೆ 35 ಅರ್ಥಾಲಂಕಾರಗಳನ್ನು ದಂಡಿ ಭಾಮಹರ ಮೇಲ್ಪಂಕ್ತಿಯನ್ನನುಸರಿಸಿ ಲಕ್ಷ್ಯಲಕ್ಷಣಪೂರ್ವಕವಾಗಿ ವಿವರಿಸಲಾಗಿದೆ. ಧ್ವನಿಯನ್ನು 36ನೆಯ ಅಲಂಕಾರವೆನ್ನಲಾಗಿದೆ.

ಕಡೆಗೆ ಗ್ರಂಥಾಂತ್ಯದಲ್ಲಿ ಕಾವ್ಯದ ಅಷ್ಟಾದಶವರ್ಣನೆಗಳ ವಿವರಗಳನ್ನು ಕೊಡಲಾಗಿದೆ.

ಹೀಗೆ ಕನ್ನಡ ಭಾಷೆಯ ಅಂತಸ್ಸತ್ತ್ವವನ್ನು ಮರೆಯದೆ, ಸಂಸ್ಕೃತದ ಆದರ್ಶಗಳ ಅಗತ್ಯವನ್ನು ತೃಣೀಕರಿಸದೆ, ಮುಂದಿನ ಕವಿಗಳಿಗೂ ಲಾಕ್ಷಣಿಕರಿಗೂ ಮಾರ್ಗದರ್ಶನ ಮಾಡಿದ ಮಹತ್ತ್ವ ಕವಿರಾಜಮಾರ್ಗಕ್ಕೆ ಸಲ್ಲುತ್ತದೆ. ಗ್ರಂಥದಲ್ಲಿ ಕಂದಪದ್ಯಗಳು ಹೆಚ್ಚು; ಅಲ್ಲಲ್ಲಿ ವೃತ್ತಗಳೂ ಇವೆ. ಎಲ್ಲಿಯೂ ಸಾಹಿತ್ಯಗುಣಕ್ಕೆ ಲೋಪವಿಲ್ಲ.

ಮೊದಲನೆಯ ನಾಗವರ್ಮನ ಛಂದೋಂಬುಧಿ (ಕ್ರಿ. ಶ. 10–11ನೆಯ ಶತಮಾನಗಳ ಮಧ್ಯ) ಮುಖ್ಯವಾಗಿ ಛಂದಶ್ಶಾಸ್ತ್ರ ಗ್ರಂಥ. ಆದರಲ್ಲಿ ಸಮವೃತ್ತಗಳು, ಮಾತ್ರಾಗಣ ವೃತ್ತಗಳು, ಕಂದಾದಿಗಳು, ಕರ್ನಾಟವಿಷಯಕ ಜಾತಿ, ಷಟ್ಪದಿ, ತ್ರಿಪದಿಗಳ ವಿವರಣೆ ವಿಸ್ತಾರವಾಗಿ ಬರುವಂತೆ ಕಾವ್ಯದೋಷಗಳ ಉಲ್ಲೇಖವೂ ಬರುತ್ತದೆ ; ಪ್ರಾಸಗಳ ನೂತನ ನಿರೂಪಣೆಯೂ ಇದೆ.

ಎರಡನೆಯ ನಾಗವರ್ಮನ ಕಾವ್ಯಾವಲೋಕನ (ಕ್ರಿ. ಶ. 12ನೆಯ ಶತಮಾನ) ನಿಜವಾಗಿಯೂ ಮುಂದಿನ ಮಹತ್ತ್ವದ ಗ್ರಂಥವೆನ್ನಬೇಕು. ವಾಮನ, ಉದ್ಭಟ, ರುದ್ರಟ, ರಾಜಶೇಖರರು ಸಂಸ್ಕೃತ ಅಲಂಕಾರಶಾಸ್ತ್ರದಲ್ಲಿ ಮತ್ತಷ್ಟು ಪರಿಷ್ಕರಿಸಿದ್ದ ನೂತನಾಂಶಗಳನ್ನೆಲ್ಲ ಕ್ರೋಡೀಕರಿಸಿಕೊಂಡು ಪಂಪನೇ ಮೊದಲಾದ ಪ್ರಸಿದ್ಧ ಕನ್ನಡ ಕವಿಗಳಿಂದಲೇ ತನ್ನ ಲಕ್ಷ್ಯಗಳನ್ನೆಲ್ಲ ಆಯ್ದುಕೊಂಡು, ಕನ್ನಡ ಕಾವ್ಯಮೀಮಾಂಸೆಯ ಸರ್ವೋತ್ತಮ ಗ್ರಂಥವೆನಿಸುವಂತೆ ತನ್ನ ಗ್ರಂಥವನ್ನು ನಾಗವರ್ಮ ರಚಿಸಿದ್ದಾನೆ. ಮಾರ್ಗದ್ವಯದ ಬದಲು ರೀತಿತ್ರಯವನ್ನು ವಾಮನನಂತೆ ಹೇಳಿದ್ದಾನೆ. ಉದ್ಭಟ ಹೇಳುವ ಕಾವ್ಯವೃತ್ತಿಗಳನ್ನು ಪ್ರಸ್ತಾಪಿಸಿದ್ದಾನೆ. ರುದ್ರಟನಂತೆ ರಸಗಳನ್ನು ವಿವರಿಸಿದ್ದಾನೆ. ರಾಜಶೇಖರನ ರೀತಿಯಲ್ಲಿ ಕವಿಸಮಯಗಳನ್ನು ಮೊತ್ತಮೊದಲಿಗೆ ನಿರೂಪಿಸಿದ್ದಾನೆ. ಕಾವ್ಯರಹಸ್ಯದ ಬಗೆಗೂ ನಾಗವರ್ಮನಿಗೆ ರಸವೇ ಜೀವವೆಂಬ ಸ್ಪಷ್ಟ ಕಲ್ಪನೆಯಿದ್ದಿತು. ರುದ್ರಟ ಮಾತ್ರ ಹೇಳಿರುವ ಹತ್ತಾರು ಹೊಸ ಅಲಂಕಾರಗಳನ್ನು ಪ್ರತಿಪಾದಿಸಿದ್ದಾನೆ. ಹೀಗೆ ಕವಿರಾಜಮಾರ್ಗದಲ್ಲಿ ಆರಂಭವಾದ ಕನ್ನಡ ಕಾವ್ಯಮೀಮಾಂಸೆ ಕಾವ್ಯಾವಲೋಕನದಲ್ಲಿ ಶಿಖರವನ್ನು ಮುಟ್ಟಿತೆನ್ನಬಹುದು.

ಅದಕ್ಕೂ ಮುಂದಿನ ಗ್ರಂಥಗಳೆಂದರೆ ಉದಯಾದಿತ್ಯನೃಪನ ಉದಯಾದಿತ್ಯಾಲಂಕಾರ (ಕಿ. ಶ. 12ನೆಯ ಶತಮಾನ), ಕವಿಕಾಮನ ಶೃಂಗಾರರತ್ನಾಕರ (ಕ್ರಿ.ಶ. ಸುಮಾರು 1200), ಮಾಧವನ ಮಾಧವಾಲಂಕಾರ (ಕ್ರಿ.ಶ. 1500), ಇವಲ್ಲಿ ದಂಡಿಯಿಂದ ಸಂಗೃಹೀತವಾದ ವಿಚಾರವೇ ಹೊರತು ಸಿದ್ಧಾಂತದ ಹೊಸ ವಿವೇಚನೆ ಕಾಣುವುದಿಲ್ಲ. ಬೇರೆ ಉದಾಹರಣೆಗಳಿರುವುದಷ್ಟೇ ವಿಶೇಷ.

ಸಾಳ್ವನ ರಸರತ್ನಾಕರ ಮತ್ತು ಶಾರದಾವಿಲಾಸಗಳಲ್ಲಿ (ಕ್ರಿ.ಶ. 1500) ಮಾತ್ರ ಮಮ್ಮಟಾದಿಗಳ ವಿಸ್ತೃತ ರಸವಿವೇಚನೆ ಕನ್ನಡದಲ್ಲಿ ಮೊದಲಿಗೆ ಬರುತ್ತದೆ; ಧ್ವನಿಯ ವಿವೇಚನೆಗೂ ಎಡೆ ದೊರೆಯುತ್ತದೆ. ಮಿಕ್ಕ ಗ್ರಂಥಗಳು–ತಿಮ್ಮನ ಅಲಂಕಾರ ರಸಸಂಗ್ರಹ (ಕ್ರಿ.ಶ. 1600), ತಿರುಮಲಾರ್ಯನ ಅಪ್ರತಿಮ ವೀರಚರಿತ (ಕ್ರಿ. ಶ. 1650), ಚಾಮೇಂದ್ರನ ಕರ್ನಾಟಕ ಕುವಲಯಾನಂದ (ಕ್ರಿ.ಶ. 18ನೆಯ ಶತಮಾನ), ಅಳಿಯ ಲಿಂಗರಾಜನ ನರಪತಿಚರಿತ (ಕ್ರಿ. ಶ. 19ನೆಯ ಶತಮಾನ) ಇವೆಲ್ಲ ವಿದ್ಯಾನಾಥ, ಅಪ್ಪಯ್ಯದೀಕ್ಷಿತ ಮುಂತಾದ ಸಂಸ್ಕೃತ ಲಾಕ್ಷಣಿಕರ ಅನುಕರಣಗಳಾದ ಸಂಕಲನ ಗ್ರಂಥಗಳಷ್ಟೇ ಎನ್ನಬೇಕು.

ಇಪ್ಪತ್ತನೆಯ ಶತಮಾನದಲ್ಲಿ ಎ. ಆರ್. ಕೃಷ್ಣ ಶಾಸ್ತ್ರಿಗಳ ಕನ್ನಡ ಕೈಪಿಡಿಯ ಅಲಂಕಾರ ಶಾಸ್ತ್ರ ವಿಭಾಗ, ತೀ. ನಂ. ಶ್ರೀಕಂಠಯ್ಯನವರ ಭಾರತೀಯಕಾವ್ಯ ಮೀಮಾಂಸೆ, ಕೆ. ಕೃಷ್ಣಮೂರ್ತಿಗಳ ಕನ್ನಡ ಧ್ವನ್ಯಾಲೋಕ ಮುಂತಾದ ಗ್ರಂಥಗಳು, ಪ್ರಭುಶಂಕರರ ಕನ್ನಡದಲ್ಲಿ ಭಾವಗೀತೆ, ಶಿವರುದ್ರಪ್ಪನವರ ಸೌಂದರ್ಯ ಸಮೀಕ್ಷೆ ಈ ಮೊದಲಾದವು ಈ ಕ್ಷೇತ್ರದಲ್ಲಿ ಬಂದಿರುವ ಸಮರ್ಥ ಹಾಗೂ ಶಾಸ್ತ್ರೀಯ ನಿರೂಪಣೆಗಳಾಗಿವೆ.

ನೋಡಿ–ಕನ್ನಡದಲ್ಲಿ ವಿಮರ್ಶನ ಸಾಹಿತ್ಯ (ಕೆ.ಕೆ.)

**ಕನ್ನಡದಲ್ಲಿ ಗದ್ಯಸಾಹಿತ್ಯ :** ಪ್ರಾಚೀನ ಕಾವ್ಯಮೀಮಾಂಸಕರು ಶ್ರವ್ಯ ಕಾವ್ಯಗಳನ್ನು ಗದ್ಯಕಾವ್ಯ, ಪದ್ಯಕಾವ್ಯ ಎಂದು ಎರಡು ಭಾಗಗಳಲ್ಲಿ ವಿಂಗಡಿಸಿದ್ದಾರೆ. ಛಂದಸ್ಸು ಇಲ್ಲದ್ದು ಗದ್ಯವೆಂದೂ ಛಂದಸ್ಸು ಉಳ್ಳದ್ದು ಪದ್ಯವೆಂದೂ ಹೇಳುವುದು ವಾಡಿಕೆ. ಆದರೆ ಲಯ, ರಸ, ಧ್ವನಿ, ಅಲಂಕಾರಗಳು ಗದ್ಯಪದ್ಯಗಳೆರಡರಲ್ಲಿಯೂ ಆವಶ್ಯಕ. ಗದ್ಯ, ಆಲೋಚನಾಪ್ರಧಾನವಾದರೆ ಪದ್ಯ ಭಾವನಾಪ್ರಧಾನವಾದುದು. ಗದ್ಯ ಮಾಡಿದ್ದು ಪದ್ಯ ಮೂಡಿದ್ದು ಎಂದು ಹೇಳುವುದೂ ಉಂಟು. ಬೈಲು ಪ್ರದೇಶದಲ್ಲಿ ಮಂದಗತಿಯಾಗಿ ಹರಿಯುವ ನದಿ ಗದ್ಯವಾದರೆ ಭೋರ್ಗರೆವ ಜೋಗದ ಜಲಪಾತದಂತೆ ತೀವ್ರಗತಿಯದು ಪದ್ಯ. ಇವೆರಡೂ ಭಾಷೆಯ ಎರಡು ಮುಖಗಳು. ಎರಡರಲ್ಲೂ ಲಿಪಿ, ಪದ, ಪದಜೋಡಣೆ, ವ್ಯಾಕರಣ ಒಂದೇ ಆದರೂ ಲಕ್ಷಣಗಳಲ್ಲಿ ಭಿನ್ನತೆಯಿದೆ. ಗದ್ಯದಲ್ಲಿ ಸ್ಪಷ್ಟತೆ, ಸರಳತೆ, ಸುಲಭತೆಗೆ ಪ್ರಾಮುಖ್ಯವಿದ್ದರೆ, ಛಂದಸ್ಸಿನ ಹಿಡಿತ ಭಾವನೆಗಳನ್ನು ಉದ್ದೀಪನಗೊಳಿಸುವಿಕೆ, ಕಲ್ಪನಾಚಿತ್ರಗಳನ್ನು ಕೆತ್ತುವಿಕೆ ಪದ್ಯದ ಪ್ರಧಾನ ಲಕ್ಷಣವಾಗಿರುತ್ತದೆ. ಎರಡೂ ಆನಂದದಾಯಕವೇನೋ ಹೌದು.

ಗದ್ಯಪದ್ಯಗಳಲ್ಲಿ ಯಾವುದು ಮೊದಲು ಹುಟ್ಟಿತೆಂದು ಹೇಳುವುದು ಕಷ್ಟ. ಜಗತ್ತಿನ ಎಲ್ಲ ಸಾಹಿತ್ಯದ ಉಗಮವೂ ಸಾಮಾನ್ಯವಾಗಿ ಪದ್ಯರೂಪದಲ್ಲಿ ಆಗಿದೆ. ಗ್ರೀಕ್, ಸಂಸ್ಕೃತಗಳಲ್ಲಿ ಮೊದಲ ಗ್ರಂಥಗಳು ಪದ್ಯಕಾವ್ಯಗಳು ; ಅನಂತರ ಗದ್ಯದ ಬೆಳವಣಿಗೆ. ಕನ್ನಡ ಸಾಹಿತ್ಯ ಇದಕ್ಕೆ ವ್ಯತಿರಿಕ್ತವಾಗಿದೆ. ಕನ್ನಡದಲ್ಲಿ ಮೊದಲು ದೊರೆಯುವುದು ಗದ್ಯಶಾಸನ ; ಅನಂತರ ಪದ್ಯಶಾಸನಗಳು. ಹಲ್ಮಿಡಿಯ ಗದ್ಯ ಶಾಸನಕ್ಕೆ ಮೊದಲು ಕನ್ನಡದಲ್ಲಿ ಪದ್ಯಗಳಿರಲಿಲ್ಲವೆ? ಕುಟ್ಟುವ ಬೀಸುವ ಹಾಡುಗಳು; ಕೋಲಾಟದ ಪದಗಳು ; ಜೋಗುಳದ ಹಾಡುಗಳು ಇದಕ್ಕೂ ಹಿಂದೆ ಇರಲಿಲ್ಲವೆ ? ಇದನ್ನು ಗಮನಿಸಿದಾಗ ಕನ್ನಡ ಭಾಷೆಯ ಉಗಮವೂ ಪದ್ಯದಿಂದ ಪ್ರಾರಂಭವಾಗಿತ್ತೆಂದು ಊಹಿಸಬಹುದು. ಹೀಗೆ ಸಾಮಾನ್ಯವಾಗಿ, ಪ್ರತಿಯೊಂದು ಭಾಷೆಯ ಆರಂಭದಲ್ಲಿ ಪದ್ಯದ ಪ್ರಾಬಲ್ಯ ಹೆಚ್ಚೆನ್ನಬಹುದು. ಆಗ ಗದ್ಯ ಬೆಳೆಯಲು ಅಷ್ಟು ಅವಕಾಶ ದೊರೆಯಲಿಲ್ಲವೆಂದು ತೋರುತ್ತದೆ. ಇಲ್ಲವೆ ಒಳ್ಳೆಯ ಗದ್ಯ ಬರೆಯುವುದು

ಕಷ್ಟಸಾಧ್ಯವೆಂದು ಕಾಣುತ್ತದೆ. ಗದ್ಯಂ ಕವೀನಾಂನಿ ಕಷಂ ವದಂತಿ—ಎಂಬ ಹೇಳಿಕೆಯನ್ನಿಲ್ಲಿ ನೆನೆಯಬಹುದು.

ಸದ್ಯದಲ್ಲಿ ಕನ್ನಡ ಗದ್ಯಸಾಹಿತ್ಯದ ಇತಿಹಾಸವನ್ನು ಹಲ್ಮಿಡಿ ಶಾಸನದಿಂದ (ಸು. 450) ಗುರುತಿಸಬೇಕಾಗುತ್ತದೆ. ಸು. 5ನೆಯ ಶತಮಾನದಿಂದ ಸು. 18ನೆಯ ಶತಮಾನದ ವರೆಗೆ ಅಸಂಖ್ಯ ಗದ್ಯ ಶಾಸನಗಳು ದೊರೆಯುತ್ತವೆ. ಅವುಗಳಲ್ಲಿ ವೀರಗಲ್ಲು, ಮಾಸ್ತಿಕಲ್ಲು, ದತ್ತಿಶಾಸನಗಳಲ್ಲಿಯ ಗದ್ಯ ಆಯಾ ಕಾಲದ ಐತಿಹಾಸಿಕ, ಸಾಮಾಜಿಕ ಮತ್ತು ಇತರ ಸಂಗತಿಗಳೊಂದಿಗೆ ಭಾಷಾ ಸ್ವರೂಪವನ್ನು ತಿಳಿಸುತ್ತದೆ.

ಕದಂಬ ಕಾಕುತ್ಸ್ಥವರ್ಮನ ಕಾಲಕ್ಕೆ ಸೇರಿದ ಹಲ್ಮಿಡಿ ಶಾಸನ ಪೂರ್ವದ ಹಳಗನ್ನಡ ಭಾಷೆಯಲ್ಲಿದೆ. ಆದರಿಂದ ಕೆಲವು ಪಂಕ್ತಿಗಳನ್ನು ನೋಡಬಹುದು:

ನಮಃ ಶ್ರೀಮತ್ಕದಂಬಪನ್ತ್ಯಾಗ ಸಂಪನ್ನಕಲಭೋರ (ನಾ) ಅರಿಕ
ಕುಸ್ಥ ಭಟ್ಟೋರನಾಳೆ ನಂದಾವಿ (ಳೆ) ನಾಡುಳ್ ಮೃಗೇಶನಾ
ಗೇನ್ದ್ರಾಬೀಳಭ್ಭರ್ಟಹರಪ್ಪೋರ್ ಶ್ರೀ ಮೃಗೇಶನಾಗಾಹ್ವಯ
ರಿರ್ವ್ವರಾ ಬಟರಿ ಕುಲಾಮಲವ್ಯೋಮ ತಾರಾಧಿನಾಥನ್ನಳಪ
ಗಣ ಪಶುಪತಿ... ...
ಭಟ್ಟರ್ಗ್ಗೀಗೆಟ್ಟಿದ್ದ ಒಡ್ಡಲಿ ಆಪತ್ತೊನ್ದಿವಿಟ್ಟಾರಕರ

ಆರಂಭದಲ್ಲಿನ ಶ್ಲೋಕವನ್ನು ಬಿಟ್ಟರೆ ಹಲ್ಮಿಡಿ ಶಾಸನದಲ್ಲಿ ಉಳಿದಿದ್ದೆಲ್ಲವೂ ಗದ್ಯದಲ್ಲಿವೆ. ಇದರಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚು. ಕನ್ನಡ ಪದಗಳು ಬೆರಳಲ್ಲಿ ಎಣಿಸುವಷ್ಟು ಮಾತ್ರ ಇವೆ. ಆಗ ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಎಷ್ಟಿತ್ತೆಂಬುದು ಇದರಿಂದ ತಿಳಿದುಬರುತ್ತದೆ. ಪೂರ್ವಹಳಗನ್ನಡದ ವಿಭಕ್ತಿ ಪ್ರತ್ಯಯಗಳು ಅಲ್ಲಲ್ಲಿ ಕಾಣುತ್ತವೆ. ಕರ್ಮಣೀಪ್ರಯೋಗದ ಒಂದು ರೂಪವೂ ಇದೆ. ಹೀಗೆ ಕನ್ನಡದ ಮೇಲೆ ಸಂಸ್ಕೃತದ ಪ್ರಭಾವ ಅನೇಕ ರಂಗಗಳಲ್ಲಿ ಬೆಳೆದುಕೊಂಡು ಬಂದಿತ್ತೆಂದು ಇದರಿಂದ ಸ್ಪಷ್ಟವಾಗುತ್ತದೆ. ಈ ಶಾಸನದಿಂದ 1–2 ಶತಮಾನಗಳ ಹಿಂದಿನಿಂದಲೂ ಕನ್ನಡ ಗ್ರಾಂಥಿಕ ಭಾಷೆಯಾಗಿ ಬೆಳೆಯತೊಡಗಿತ್ತು ಎಂದು ಹೇಳಬಹುದು. ಇದು ಸಂಸ್ಕೃತದ ಒತ್ತಡಕ್ಕೆ ಒಳಗಾದ ಕನ್ನಡದ ಪ್ರಯೋಗಕಾಲವೆಂದು ಹೇಳಬಹುದು.

ಹಲ್ಮಿಡಿ ಶಾಸನದ ಅನಂತರ ಬಾದಾಮಿ ಚಾಳುಕ್ಯರಾಜ ಮಂಗಳೇಶನ ಕ್ರಿ.ಶ. 578ರ ಗದ್ಯಶಾಸನವನ್ನು ಇಲ್ಲಿ ಹೆಸರಿಸಬೇಕು. ಹಲ್ಮಿಡಿಶಾಸನ ದೊರೆಯುವುದಕ್ಕಿಂತ ಮುಂಚೆ ಇದೇ ಕನ್ನಡ ಸಾಹಿತ್ಯದ ಮೊತ್ತಮೊದಲನೆಯ ಶಾಸನವಾಗಿತ್ತು. ಈ ಶಾಸನದಲ್ಲಿ ಸಾಹಿತ್ಯಗುಣಗಳಿಲ್ಲದಿದ್ದರೂ ಪೂರ್ವ ಹಳಗನ್ನಡ ಭಾಷೆಯ ವಿಶಿಷ್ಟ ರೂಪಗಳಿವೆ.

ಮುಂದೆ 7, 8, 9ನೆಯ ಶತಮಾನದ ಗದ್ಯಶಾಸನಗಳಲ್ಲಿ ಹಳಗನ್ನಡ ಶಬ್ದಗಳ ಬಳಕೆಯನ್ನು ವಿಶೇಷವಾಗಿ ಕಾಣುತ್ತೇವೆ. ಅಲ್ಲಲ್ಲಿ ಪೂರ್ವ ಹಳಗನ್ನಡದ ಪ್ರಯೋಗಗಳೂ ಇವೆ. ಅಲ್ಲಲ್ಲಿ ಸಂಸ್ಕೃತ, ಪ್ರಾಕೃತ, ತದ್ಭವಗಳ ಮಿಶ್ರಣ, ಈ ಕಾಲದ ಗದ್ಯಶಾಸನಗಳಲ್ಲಿ ಇದೆ. ಆದರೂ ಕನ್ನಡಭಾಷೆ, ಅದರ ವ್ಯಾಕರಣ ಪ್ರಯೋಗಗಳು ಬಹುಮಟ್ಟಿಗೆ ತಮಿಳು ಭಾಷೆಯನ್ನು ಹೋಲುತ್ತವೆ.

10ನೆಯ ಶತಮಾನದ ಹೊತ್ತಿಗೆ ಗದ್ಯಕ್ಕಿಂತ ಪದ್ಯದ ಕಡೆಗೆ ಒಲವು ಹೆಚ್ಚುತ್ತಿರುವುದು ಕಾಣುತ್ತದೆ. ಅದು ಚಂಪೂಯುಗದ ಸುವರ್ಣಕಾಲ. ಪಂಪ ರನ್ನರ ಪ್ರಭಾವ ಶಾಸನ ಕವಿಗಳ ಮೇಲೆಯೂ ಬಿದ್ದಿರಬೇಕು. ಆ ಕಾಲದಲ್ಲಿ ಗದ್ಯ ಶಾಸನಗಳಿಗಿಂತ ಪದ್ಯಶಾಸನಗಳೇ ಹೇರಳವಾಗಿವೆ. 11–12 ಶತಮಾನ ಶಾಸನ ಸಾಹಿತ್ಯದ ಸುಗ್ಗಿಯ ಕಾಲ. ಈ ಕಾಲದ ಶಾಸನಗಳು ಸಾಹಿತ್ಯ ಗುಣದಿಂದಲೂ ವೈವಿಧ್ಯದಿಂದಲೂ ವಿಪುಲತೆಯಿಂದಲೂ ಮಿಗಿಲೆನಿಸಿವೆ. ಅನಂತರ 13–14ನೆಯ ಶತಮಾನಗಳಲ್ಲಿಯ ಶಾಸನಗಳು ಸಂಪ್ರದಾಯ ಹಾಗೂ ಅನುಕರಣಕ್ಕೆ ಮಾರು ಹೋಗಿವೆ. ಅವುಗಳಲ್ಲಿ ಹೊಸತನವಿಲ್ಲ. ಈ ಕಾಲದಲ್ಲಿ ಅರಾಜಕತೆ ಎಲ್ಲೆಲ್ಲಿಯೂ ವ್ಯಾಪಿಸಿತ್ತು. ಪರಕೀಯ ಆಕ್ರಮಣ ದೇಶದಲ್ಲಿ ಹರಡಿತ್ತು. ಇವುಗಳ ಪರಿಣಾಮ ಶಾಸನ ಸಾಹಿತ್ಯದ ಮೇಲೆ ಆಗಿರಬೇಕು. ಆದುದರಿಂದ ಈ ಕಾಲದ ಶಾಸನ ಸಾಹಿತ್ಯ ಇಳಿತಕ್ಕೆ ಈಡಾಗಿದೆ. ಅನಂತರ 15, 16, 17ನೆಯ ಶತಮಾನಗಳು ಶಾಸನ ಸಾಹಿತ್ಯದ ಹೀನದೆಸೆಯ ಕಾಲವೆಂದೇ ಹೇಳಬಹುದು. ಈ ಕಾಲದ ಶಾಸನ ಸಾಹಿತ್ಯದಲ್ಲಿ ಭಾಷಾಪ್ರೌಢಿಮೆಯಿಲ್ಲ. ದೇಶದಲ್ಲಿ ಮಹಮ್ಮದೀಯರು ಹಾಗೂ ಇಂಗ್ಲಿಷರ ಆಕ್ರಮಣದಿಂದ ಆಯಾ ಭಾಷೆಯ ಬಳಕೆಯ ಮಾತುಗಳು ಶಾಸನ ಸಾಹಿತ್ಯದಲ್ಲಿಯೂ ಸೇರಿಕೊಂಡಿವೆ.

ಸು.11ನೆಯ ಶತಮಾನದಿಂದ 18ನೆಯ ಶತಮಾನದ ಮಧ್ಯದಲ್ಲಿ ಪದ್ಯಶಾಸನಗಳೇ ಹೇರಳವಾಗಿ ದೊರೆಯುತ್ತವೆ. ಗದ. ಶಾಸನಗಳು ಮರಳುಭೂಮಿಯಲ್ಲಿ ದೊರೆಯುವ ಜಲಾಶ್ರಯದಂತೆ ಅಲ್ಲಲ್ಲಿ ಮಿನುಗುತ್ತವೆ. ವೀರಗಲ್ಲು.ದತ್ತಿಶಾಸನಗಳು ವಿಶೇಷವಾಗಿ ಗದ್ಯದಲ್ಲಿಯೇ ಸಿಗುತ್ತವೆ. ಅವು ಚಿಕ್ಕ ಚಿಕ್ಕವಾಗಿದ್ದರೂ ಮೇಲ್ತರದ ಗದ್ಯಶೈಲಿಯನ್ನು ಅಲ್ಲಿ ಕಾಣಬಹುದು. ಈ ಕಾಲದ ಶಾಸನಗಳಲ್ಲಿ ಬಳಸಿದ ಗದ್ಯ ದಲ್ಲಿಯೂ ಒಂದು ಹೊಸನೋಟವಿದೆ. ಇಲ್ಲಿಯ ಗದ್ಯ ನೀರಸವಾಗಿರದೆ ಹೃದ್ಯವಾಗಿದೆ. ಚಾಳುಕ್ಯ ನಾಲ್ಕನೆಯ ಸೋಮೇಶ್ವರನ ಕಾಲದ ಸಜ್ಜನತಿಲಕನೆಂಬ ಕವಿ ಬರೆದ ಸಿರಸಂಗಿ ಶಾಸನವನ್ನು ನೋಡಬಹುದು. ಇದೊಂದು ಸೊಗಸಾದ ಚಿಕ್ಕ ಚಂಪೂಕಾವ್ಯ. ಋಷ್ಯಶೃಂಗನ ಜನ್ಮ ಕಥೆ ಇದರಲ್ಲಿ ಹೃದಯಂಗಮವಾದ ಗದ್ಯ ಶೈಲಿಯಲ್ಲಿದೆ. ಒಂದು ಸುದೀರ್ಘವಾದ ವಾಕ್ಯದಲ್ಲಿ ಚಿಕ್ಕಚಿಕ್ಕ ವಾಕ್ಯಗಳ ಮಾಲೆಯನ್ನು ಹೆಣೆದು ಅದರಲ್ಲಿ ಚಿಕ್ಕ ಕಥೆಯನ್ನು ಜೋಡಿಸಿದುದು ಕಾವ್ಯದ ಮೇಲ್ಮಟ್ಟವನ್ನು ಸೂಚಿಸುತ್ತದೆ. ಅದೇ ಶಾಸನದಲ್ಲಿ ಮತ್ತೊಂದು ಗದ್ಯಭಾಗ ಹೀಗಿದೆ: ಇಂತೆನಿಸಿ... ಮಟ್ಟಮೀರದೆ ಸಿಟ್ಟುನುಡಿವಪುಟ್ಟ ನಾಯಕರ ನಿಟ್ಟೆಲ್ವಂ ಮುಱಿದೊಟ್ಟಜೆಯಿಂದಟ್ಟಿಯಾಡಿಸುವ ಬಿರುದನಾಯಕರ ಶಿರದ ಶಿರ್ಪಂಬಿದಿರ್ಚುವ ಚಪಳನಾಯಕ ಹೃದಯಸೆಲ್ಲ, ಭೀತನಾಯಕರ ಕೊಲ್ಲ, ಸತ್ಯರಾಧೇಯ, ಸಾಹಸವೈನತೇಯ... ಈ ಮಾತುಗಳು ಹಬ್ಬೆಯ ನಾಯಕನ ಸಾಹಸವನ್ನು ಅವನ ಸತ್ಯತೆಯನ್ನು ಸಾರುತ್ತವೆ. ಇಲ್ಲಿಯ ಅಚ್ಚಗನ್ನಡದ ಪದಗಳ ಜೋಡಣೆ, ಟಕಾರದ ಠೇಂಕಾರ ಮನೋಜ್ಞವಾಗಿದೆ. ಹೀಗೆ ಕೆಲವು ಶಾಸನಗಳು ಸಂಪ್ರದಾಯ ಹಾಗೂ ಅನುಕರಣಕ್ಕೆ ಮಾರುಹೋದರೆ, ಹಲವು ಶಾಸನಗಳು ಚಿಕ್ಕ ಚಿಕ್ಕ ವಾಕ್ಯಗಳಿಂದಲೂ ಅಚ್ಚಗನ್ನಡದ ಬಿಗುವಿನಿಂದಲೂ ಶ್ರೇಷ್ಠ ಗದ್ಯಶೈಲಿಯಿಂದಲೂ ಶೋಭಿಸುತ್ತವೆ. ಶಾಸನದ ಗದ್ಯಕನ್ನಡದ ಗದ್ಯ ಸಾಹಿತ್ಯಕ್ಕೆ ಹಿರಿದಾದ ಕೊಡಿಗೆಯನ್ನು ಕೊಟ್ಟಿದೆ. ಮುಖ್ಯವಾಗಿ ಶಾಸನಗಳಲ್ಲಿ ಅಂದಿನ ಆಡು ಮಾತಿನ, ಗ್ರಂಥಸ್ಥ ಭಾಷೆಯ, ವ್ಯಾವಹಾರಿಕ ಹಾಗೂ ಸರ್ಕಾರಿ ಭಾಷೆಯ, ಕಾವ್ಯ ಭಾಷೆಯ, ಪ್ರಾದೇಶಿಕ ಸೊಗಡಿನ ಎಲ್ಲ ಸ್ತರಗಳನ್ನೂ ಕಾಣಬಹುದಾಗಿದೆ.

ಕವಿರಾಜ ಮಾರ್ಗದಲ್ಲಿ (850) ಪದಪಾದವಿಯುತ ನಿಯಮಾಸ್ಪದಮಲ್ಲದಳಂಕೃತಂ ಕ್ರಿಯಾಕಾರಕದೊಳ್ ಪುದಿದರ್ಥವ್ಯಕ್ತಿಯನೀವುದುಗದ್ಯಮನೇಕ ರೂಪಭೇದವಿಕ್ತಂ—ಎಂದು ಗದ್ಯಕಾವ್ಯದ ಲಕ್ಷಣವನ್ನು ತಿಳಿಸಿದೆ. ವಿಮಳ, ಉದಯ, ನಾಗಾರ್ಜುನ, ಜಯಬಂಧು, ದುರ್ವಿನೀತಾದಿಗಳು ಗದ್ಯಕ್ಷೇತ್ರದಲ್ಲಿ ಖ್ಯಾತಿಯನ್ನು ಪಡೆದಿದ್ದಾರೆನ್ನುವುದು ಕವಿಯ ಅಭಿಪ್ರಾಯವಾಗಿದೆ. ಇಲ್ಲಿಯವರೆಗೆ ಇವರ ಯಾವ ಗ್ರಂಥಗಳೂ ದೊರೆತಿಲ್ಲ. ಇದಲ್ಲದೆ ಇನ್ನೂ ಸಾಮಾನ್ಯ ಗದ್ಯ ಲೇಖಕರು ಎಷ್ಟು ಜನರಿದ್ದರೋ ತಿಳಿಯದು. ಅಂತು ನೃಪತುಂಗನ ಕಾಲಕ್ಕೆ ಸ್ವತಂತ್ರವಾದ ಗದ್ಯಲೇಖನ ಚೆನ್ನಾಗಿ ಬೆಳೆದು ಬಂದಿತ್ತೆಂದು ಹೇಳಬಹುದು.

ಉಪಲಬ್ಧವಾದವಲ್ಲಿ ಶಿವಕೋಟ್ಯಾಚಾರ್ಯನ ವಡ್ಡಾರಾಧನೆ (ಕ್ರಿ.ಶ. ಸು. 920) ಕನ್ನಡಗದ್ಯ ಸಾಹಿತ್ಯದ ಮೊಟ್ಟಮೊದಲನೆಯ ಗ್ರಂಥ. ಇದರಲ್ಲಿ ಜೈನಧರ್ಮದ 19 ಕಥೆಗಳಿವೆ. ಪ್ರತಿಯೊಂದು ಕಥೆಯ ಆರಂಭದಲ್ಲಿ ಒಂದು ಪ್ರಾಕೃತಗಾಹೆ ಬರುತ್ತದೆ. ಆ ಪ್ರಾಕೃತ ಗಾಹೆಗೆ ಕನ್ನಡದ ಅರ್ಥವಿವರಣೆಯಿದೆ. ಕಥೆಯ ಆರಂಭದಲ್ಲಿರುವ ಗಾಹೆ ಆ ಕಥೆಯ ಸಾರಾಂಶವನ್ನು ಸೂಚಿಸುತ್ತದೆ.

ಈ ಗ್ರಂಥದಲ್ಲಿ ಕವಿ ಜೈನ ತತ್ತ್ವಗಳನ್ನು ಕಥೆಗಳ ಮೂಲಕ ಸಾಮಾನ್ಯರಿಗೂ ಮನಮೆಚ್ಚುವಂತೆ ಬೋಧಿಸಿದ್ದಾನೆ. ಶೈಲಿಯಲ್ಲಿ ಕನ್ನಡತನವಿದೆ. ಚಿಕ್ಕ ಚಿಕ್ಕ ವಾಕ್ಯಗಳಲ್ಲಿ ಕಥೆಯ ಓಟ ಸುಗಮವಾಗಿ ಸಾಗುತ್ತದೆ. ಎಲ್ಲಿಯೂ ವರ್ಣನೆಗಳ ಆಡಂಬರವಿಲ್ಲ. ನಾಣ್ಣುಡಿಗಳು, ಅನುಭವ ವೇದ್ಯವಾದ ದೃಷ್ಟಾಂತಗಳು ಅಡಿಗಡಿಗೆ ಬಂದು ಕಥೆಗಳಿಗೆ ಕಳೆಕಟ್ಟಿವೆ. ಹೀಗೆ ದೇಶೀಯ ಪ್ರಚುರತೆ, ವಿಶಿಷ್ಟವಾದ ವ್ಯಾಕರಣ ಪ್ರಕ್ರಿಯೆಗಳು ಅಪೂರ್ವ ಪದಗಳು, ಜೀವಂತ ಮಾತುಗಾರಿಕೆ, ಅನುಭವ ಸಂಪನ್ನವಾದ ಅಭಿವ್ಯಕ್ತಿ, ಕನ್ನಡ ಸಂಸ್ಕೃತ ಪದಗಳ ಸಮತೂಕ—ಇವುಗಳಿಂದ ವಡ್ಡಾರಾಧನೆಯ ಗದ್ಯ ವಿಶಿಷ್ಟವಾದ ರೂಪ ತಾಳಿದೆ. ಹಳಗನ್ನಡದ ಗದ್ಯದ ಒಳ್ಳೆಯ ಮಾದರಿಗೆ ಈ ಗ್ರಂಥ ಮೇಲುಪಂಕ್ತಿಯಾಗಿದೆ.

ಚಾವುಂಡರಾಯ ತ್ರಿಷಷ್ಟಿ ಲಕ್ಷಣ ಮಹಾಪುರಾಣ (978) ಎಂಬ ಗದ್ಯಗ್ರಂಥವನ್ನು ಬರೆದಿದ್ದಾನೆ. ಈವರೆಗೆ ದೊರೆತವುಗಳಲ್ಲಿ ಇದು ಕನ್ನಡ ಗದ್ಯಸಾಹಿತ್ಯದ ಎರಡನೆಯ ಗ್ರಂಥ. ಇದಕ್ಕೆ ಚಾವುಂಡರಾಯ ಪುರಾಣವೆಂದೂ ಹೆಸರು. ಇದರಲ್ಲಿ ಜೈನಧರ್ಮದ ನಂಬಿಕೆಗಳೂ ತತ್ತ್ವಗಳೂ ಅರುವತ್ತುಮೂರು ಪುರಾತನರ ಚರಿತ್ರೆಗಳೂ ಅಡಕವಾಗಿವೆ. ಇದಕ್ಕೆ ಆಕರ ಜಿನಸೇನ ಗುಣಭದ್ರರ ಸಂಸ್ಕೃತ ಮಹಾಪುರಾಣ. ಕವಿ ಮೂಲಕ್ಕೆ ಸಮೀಪವಾಗಿಯೂ ಸಂಕ್ಷಿಪ್ತವಾಗಿಯೂ ವಿಷಯವನ್ನು ಗದ್ಯರೂಪದಲ್ಲಿ ನಿರೂಪಿಸಿದ್ದಾನೆ. ಅಲ್ಲಲ್ಲಿ ಪದ್ಯಗಳೂ ಪ್ರಾಕೃತ ಗಾಹೆಗಳೂ ಬಂದಿವೆ.

ಈ ಕೃತಿಯ ಗದ್ಯಶೈಲಿ ವಡ್ಡಾರಾಧನೆಯದಕ್ಕಿಂತ ಸ್ವಲ್ಪಮಟ್ಟಿಗೆ ಪ್ರೌಢವೂ ಗಂಭೀರವೂ ಆಗಿದೆ. ಇದರಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚು. ಮತಸಂಬಂಧವಾದ ವಿಷಯಗಳು ಹೆಚ್ಚು. ವಾಕ್ಯಗಳು ಉದ್ದುದ್ದವಾಗಿವೆ. ಕನ್ನಡ, ಸಂಸ್ಕೃತ, ಪ್ರಾಕೃತ ಗಳಲ್ಲಿ ತನಗಿರುವ ಪಾಂಡಿತ್ಯವನ್ನು ಕವಿ ಗ್ರಂಥದ ಉದ್ದಕ್ಕೂ ತೋರಿಸಿದ್ದಾನೆ.

ಕನ್ನಡ ಗದ್ಯಸಾಹಿತ್ಯ ಚರಿತ್ರೆಯಲ್ಲಿ ಶಾಸನಗದ್ಯ, ವಡ್ಡಾರಾಧನೆಯ ಗದ್ಯ ಒಂದೊಂದು ಘಟ್ಟವಾದರೆ ಚಾವುಂಡರಾಯನದು ಇನ್ನೊಂದು ಘಟ್ಟ. ಇಲ್ಲಿಯ ಸಾಹಿತ್ಯ ಸ್ವರೂಪ, ಭಾಷೆ ಪೂರ್ತಿಯಾಗಿ ಹಳಗನ್ನಡದಲ್ಲಿದೆ. ವಡ್ಡಾರಾಧನೆಯ ಅನಂತರ ಸು. 60 ವರ್ಷಗಳಾದ ಮೇಲೆ ಬೆಳೆದು ಬಂದ ಈ ಗದ್ಯ ವೈಶಿಷ್ಟ್ಯಪೂರ್ಣ

ವಾಗಿದೆ. ವಡ್ಡಾರಾಧನೆಯಲ್ಲಿ ಕಥಾ ಗದ್ಯಕ್ಕೆ ಪ್ರಾಧಾನ್ಯವಿದ್ದರೆ ಇಲ್ಲಿ ಕಥಾಗದ್ಯ ಮತ್ತು ಶಾಸ್ತ್ರೀಯ ಗದ್ಯ ಮಿಲನವಾಗಿವೆ. ಇವೆರಡನ್ನೂ ಹೀಗೆ ಮಿಲನ ಮಾಡಿದ ಈ ಕವಿ ಮೇಲ್ಪರಗತಿಯ ಗದ್ಯಕಾರನೆಂದು ಹೇಳಬೇಕು.

ಚಂಪೂ ಗ್ರಂಥಗಳಲ್ಲಿ ಬಳಕೆಯಾದ ಗದ್ಯ, ಗದ್ಯಸಾಹಿತ್ಯದ ಬೆಳವಣಿಗೆಗೆ ತುಂಬ ಸಹಾಯವಾಗಿದೆ. ಪಂಪ ತನ್ನ ಎರಡೂ ಚಂಪೂಕೃತಿಗಳಲ್ಲಿ ಔಚಿತ್ಯ ಪೂರ್ಣವಾದ ಗದ್ಯವನ್ನು ಬಳಸಿದ್ದಾನೆ. ತನ್ನ ಕಥಾನಾಯಕನಾದ ಅರಿಕೇಸರಿಯ ಯೌವನೋದಯ ಪ್ರಾಪ್ತವಾದ ಸಂದರ್ಭವನ್ನು ಸುಮಾರು 55 ಪಂಕ್ತಿಗಳ ಗದ್ಯದಲ್ಲಿ ಆಪಾದಮಸ್ತಕ ಬಣ್ಣಿಸಲಾಗಿದೆ. ಇಲ್ಲಿ ಅತಿಶಯೋಕ್ತಿಯಿದ್ದರೂ ಮನೋಹರತೆಯಿದೆ. ಕಥಾ ನಾಯಕನ ಸೊಬಗನ್ನು ಮಧುರವಾಗಿ ಇಲ್ಲಿ ಚಿತ್ರಿಸಲಾಗಿದೆ. ಹೇರಳವಾದ ಹೋಲಿಕೆಗಳಿದ್ದರೂ ಎಲ್ಲವೂ ಹದವರಿತು ಬಂದಿವೆ. ಇದರಿಂದಾಗಿ ಸುದೀರ್ಘವಾದರೂ ಈ ಗದ್ಯಭಾಗ ಚಿತ್ತಾಕರ್ಷಕವಾಗಿದೆ. ಪಂಪ ಹಿತ ಮಿತ ಮೃದು ವಚನಕ್ಕೆ ಹೆಸರಾದವನು. ಕಿರಿದರಲ್ಲಿ ಹಿರಿದಾದ ಅರ್ಥವನ್ನು ಅಡಗಿಸುವ ಸಾಮರ್ಥ್ಯ ಅವನಿಗಿತ್ತು. ದೇಸೀ ನುಡಿಗಟ್ಟುಗಳು, ನಾದ ಸೂಕ್ಷ್ಮಗಳು ಅವನ ಕಾವ್ಯ ಶೈಲಿಯ ಗುಣಗಳು. ಈ ಎಲ್ಲವನ್ನೂ ನಾವು ಅವನ ಗದ್ಯದಲ್ಲೂ ಕಾಣಬಹುದು.

ಪಂಪನ ಅನಂತರ ಬಂದ ಚಂಪೂ ಕಾವ್ಯಗಳಲ್ಲಿನ ಗದ್ಯ ಸಾಮಾನ್ಯವಾಗಿ ಪಾಂಡಿತ್ಯ ಪ್ರದರ್ಶನದಿಂದ ತುಂಬಿದೆ. ಕಥೆಯ ಬೆಳವಣಿಗೆಯ ದೃಷ್ಟಿ, ವಿವರಗಳ ಸಂಕ್ಷಿಪ್ತತೆ ಪಂಪನಂತೆ ಕೆಲವು ಕವಿಗಳಲ್ಲಿ ಕಾಣುವುದಿಲ್ಲ. ರುದ್ರಭಟ್ಟ, ಹರಿಹರ, ಜನ್ನ, ಷಡಕ್ಷರಿ —ಮೊದಲಾದವರು ಇದಕ್ಕೆ ಹೊರತಾಗಿಲ್ಲ.

ದುರ್ಗಸಿಂಹ, ನಯಸೇನರ ಚಂಪೂ ಕೃತಿಗಳಲ್ಲಿನ ಗದ್ಯದಲ್ಲಿ ಸ್ಪಷ್ಟತೆ ಸರಳತೆ, ಹೃದ್ಯತೆ ವಿಶೇಷವಾಗಿದೆ. ದುರ್ಗಸಿಂಹನ ಪಂಚತಂತ್ರದಲ್ಲಿ ಪದ್ಯಕ್ಕಿಂತ ಗದ್ಯವೇ ಹೆಚ್ಚು. ಕಥಾನಿರೂಪಣೆಗೆ ಗದ್ಯ ಅವಶ್ಯಕವೆಂಬುದನ್ನು ಕವಿ ಇಲ್ಲಿ ತೋರಿಸಿಕೊಟ್ಟಿದ್ದಾನೆ. ಇವನ ಗದ್ಯದಲ್ಲಿ ನಾಣ್ನುಡಿಗಳೂ ಜಾಣ್ನುಡಿಗಳೂ ಇವೆ. ನಯಸೇನನ ಧರ್ಮಾಮೃತದಲ್ಲಿ ಈ ಸಂಪ್ರದಾಯ ಬೆಳೆದಿದೆ.

ಧರ್ಮಾಮೃತದಲ್ಲಿ ದೀರ್ಘವಾದ ಗದ್ಯ ಹೆಚ್ಚಾಗಿಲ್ಲ. ಚಿಕ್ಕ ಚಿಕ್ಕದಾಗಿ ಹೆಣೆದ ಇಲ್ಲಿನ ಗದ್ಯ ಚೊಕ್ಕವಾಗಿದೆ. ಹೋಲಿಕೆಗಳಂತೂ ಹೊಳೆಯಾಗಿ ಹರಿದಿವೆ. ಕಥೆಯನ್ನು ಹೇಳ ಹೇಳುತ್ತಲೇ ರಾಶಿ ರಾಶಿಯಾಗಿ ಸಾದೃಶ್ಯಮಾಲಿಕೆಗಳನ್ನು ತರುವುದು ಇವನ ಶೈಲಿಯ ಗುಣವಿಶೇಷ. ಸಂಸ್ಕೃತವನ್ನು ಅಲ್ಲಲ್ಲಿ ಬಳಸಿದ್ದರೂ ತಿರುಳ್ಗನ್ನಡದ ಹೊಗರು ಹೆಚ್ಚಾಗಿ ಹೊರಹೊಮ್ಮಿದೆ. ಇವನ ಅನಂತರ ಬಂದ ಎಲ್ಲ ಚಂಪೂಕಾರರಲ್ಲಿನ ಗದ್ಯ ಸುಮಾರಾಗಿ ಒಂದೇ ಮಾದರಿಯದು. ಇವರ ಗದ್ಯ ಭಾಗದಲ್ಲಿನ ಅಲಂಕಾರಗಳ ಬಾಹುಳ್ಯ ಮತ್ತು ಉದ್ದುದ್ದ ಸಮಾಸಗಳು ಕಥಾವಸ್ತುವಿಗೆ ಪೋಷಕವಾಗಿಲ್ಲದಿರುವುದು ಗಮನಾರ್ಹವಾದ ಸಂಗತಿ.

ಚಂಪೂ ಕಾವ್ಯಗಳಲ್ಲಿನ ಪದ್ಯ ರಸಪ್ರವಾಹವಾದರೆ ಅದರಲ್ಲಿ ಬರುವ ಗದ್ಯ ಬಂಡೆಗಳಂತೆ, ದ್ವೀಪಗಳಂತೆ, ನೊರೆ ತೆರೆಗಳಂತೆ. ಆದರೂ ಚಂಪೂಗದ್ಯ, ಗದ್ಯ ಸಾಹಿತ್ಯದ ಬೆಳವಣಿಗೆಗೆ ಪ್ರೇರಕ, ಪೋಷಕ, ಸಹಾಯಕ ಆಗಿದೆಯೆಂಬ ಮಾತು ಸ್ಪಷ್ಟ.

ಕನ್ನಡ ಗದ್ಯಕ್ಕೆ ವಚನಗಳದು ಒಂದು ಅಪೂರ್ವವಾದ ಕಾಣಿಕೆ. ಅನುಭಾವಿಗಳ ಈ ಅಮರ ವಾಕ್ಯಗಳಲ್ಲಿ ಉತ್ಕಟವಾದ ಭಾವಾವೇಶವಿದೆ, ಲಯವಿದೆ, ನಾದವಿದೆ, ಮಾಧುರ್ಯವಿದೆ. ಅಲಂಕಾರಗಳ ಸುರಿಮಳೆಯಿದೆ. ಪ್ರಾಸ, ಒಳ ಪ್ರಾಸ, ಯತಿವಿಡಿಗಳಿವೆ. ಇವುಗಳನ್ನು ಗಮನಿಸಿದಾಗ ಈ ವಚನಗಳು ಪದ್ಯಜಾತಿಗೆ ಸೇರಿದುವೇ ಅಥವಾ ಗದ್ಯಜಾತಿಗೆ ಸೇರಿದುವೇ ಎಂಬ ಭ್ರಮೆಯುಂಟಾಗುವುದು ಸಹಜ. ಮೂಲದಲ್ಲಿ ಇವು ಛಂದೋಬದ್ಧ ರಚನೆಗಳೆಂದೇ ಕೆಲವು ವಿದ್ವಾಂಸರ ಊಹೆ. ಇವು ಗದ್ಯವೆಂದೂ ಗದ್ಯಪದ್ಯಗಳ ನಡುವಿನ ಒಂದು ಮಾದರಿಯೆಂದು ಇನ್ನು ಕೆಲವು ವಿದ್ವಾಂಸರ ಅಭಿಪ್ರಾಯ.

ಹನ್ನೆರಡನೆಯ ಶತಮಾನದ ಉತ್ತರಾರ್ಧದಲ್ಲಿ ಈ ಸಾಹಿತ್ಯ ಉಕ್ಕಂದವಾಗಿ ಹರಿಯಿತು. ಇದರ ಸುಳಿವು ಹನ್ನೊಂದನೆಯ ಶತಮಾನದಲ್ಲಿಯೇ ಸಿಗುತ್ತದೆ. ಅಲ್ಲಮ, ಬಸವಣ್ಣ, ಅಕ್ಕಮಹದೇವಿ, ಸಿದ್ಧರಾಮ, ಚನ್ನಬಸವ—ಈ ಮೊದಲಾದವರ ವಚನ ಸಾಹಿತ್ಯ ಅಂದಿನ ಸಾಹಿತ್ಯ ಧೋರಣೆ, ಜೀವನ, ಮತಧರ್ಮ ಮೊದಲಾದವಕ್ಕೆ ಸಾಕ್ಷಿಗಳಾಗಿವೆ. ಹೊಸಗನ್ನಡ ಗದ್ಯದ ಪ್ರಾರಂಭವನ್ನು ಇಲ್ಲಿ ಗುರುತಿಸಬಹುದು. ಅಚ್ಚುಕಟ್ಟಾದ ಗಾದೆ ಮಾತಿನಂಥ ಸೂತ್ರರೂಪದ ವಾಕ್ಯಗಳು ಮಾಲೆ ಮಾಲೆಯಾಗಿ ಬರುವ ದೃಷ್ಟಾಂತಗಳು, ರೂಪಕಗಳು, ಉಪಮೆಗಳು, ಮಾತಿನ ಅಭಿಪ್ರಾಯದ ಹಿತಮಿತವಾದ ಪುನರಾವರ್ತನೆ, ಕಠೋರವೆನಿಸದ ಪ್ರಾಸನಿರ್ವಹಣೆ, ಕೊನೆಯಲ್ಲಿ ಹೊಳೆದು ನಿಲ್ಲುವ ತತ್ತ್ವ—ಇವುಗಳಿಂದಾಗಿ ವಚನಗಳು ಇಂದಿಗೂ ತಮ್ಮ ಚೆಲುವನ್ನು ಕಳೆದುಕೊಂಡಿಲ್ಲ. ಈ ಪ್ರಕಾರ ಇಪ್ಪತ್ತನೆಯ ಶತಮಾನದ ಕೆಲವು ಕವಿಗಳಿಗೂ ಸ್ಫೂರ್ತಿಯನ್ನು ಕೊಟ್ಟಿದೆ ಎಂಬ ವಿಷಯವನ್ನು ಇಲ್ಲಿ ಸ್ಮರಿಸಬಹುದು. ಸೋಜಿಗವೆಂದರೆ ಠಾಕೂರರ ಇಂಗ್ಲಿಷ್ ಗೀತಾಂಜಲಿಯಲ್ಲಿ ವಚನಮಾದರಿಯ ಈ ಧೋರಣೆಯನ್ನು ಗುರುತಿಸಬಹುದಾಗಿದೆ. 15ನೆಯ ಶತಮಾನದಲ್ಲಿ ಕೆಲವು ವಚನಕಾರರು ಹಿಂದಿನ ವಚನ ಸಾಹಿತ್ಯವನ್ನು ಅಚ್ಚುಕಟ್ಟಾಗಿ ಜೋಡಿಸಿದರು. ಇದರ ಪರಿಣಾಮವಾಗಿ ಶೂನ್ಯಸಂಪಾದನೆ ಮೊದಲಾದ ವಿಶಿಷ್ಟ ಮಾದರಿಯ ವಚನ ಗ್ರಂಥಗಳು ಹೊರಬಂದುವು.

ಹರಿಹರನ ರಗಳೆಯಲ್ಲಿಯ ಗದ್ಯ ಕನ್ನಡ ಗದ್ಯಕ್ಕೆ ಒಂದು ಹಿರಿದಾದ ಕೊಡುಗೆ. ಕಥೆ ದೊಡ್ಡದಾದಾಗ ಹರಿಹರ ಒಂದು ಭಾಗ ರಗಳೆ, ಇನ್ನೊಂದು ಭಾಗ ಗದ್ಯ, ಮತ್ತೆ ರಗಳೆ, ಅನಂತರ ಗದ್ಯ–ಹೀಗೆ ಸಂದರ್ಭಗಳನ್ನು ಬೆಳೆಸಿದ್ದಾನೆ. ಇದೊಂದು ಅಪೂರ್ವ ಪ್ರಯೋಗ. ಹಳೆಯ ಚಂಪೂ ಕ್ರಮ ಇಲ್ಲಿ ಇನ್ನೂ ಹಿಗ್ಗಿದೆ. ಗದ್ಯವೂ ಅಷ್ಟೆ. ಪುಟಗಟ್ಟಲೆ ಬೆಳೆಯುತ್ತದೆ. ಪದ್ಯಭಾಗದಲ್ಲಿ ಹೇಗೋ ಹಾಗೆ ಗದ್ಯ ಭಾಗದಲ್ಲೂ ಕಥೆ, ವರ್ಣನೆ—ಎಲ್ಲ ಬರುತ್ತವೆ. ಚಂಪೂವಿನಲ್ಲಿ ಕೇವಲ ಕೊಂಡಿಯಾಗಿದ್ದ ಗದ್ಯಕ್ಕೆ ಇಲ್ಲಿ ಸ್ವತಂತ್ರ ಅಸ್ತಿತ್ವ ದೊರೆತಿದೆ. ಒಂದು ಕಡೆ ವಚನಗಳ ಧೋರಣೆ, ಇನ್ನೊಂದು ಕಡೆ ತಾನೇ ಬಳಸಿ ರೂಢಿಸಿದ ರಗಳೆಯ ಧೋರಣೆ ಇವೆರಡರ ಸಂಗಮದಿಂದ ಇಲ್ಲಿನ ಗದ್ಯವನ್ನು ಹರಿಹರ ಹೃದ್ಯವಾಗಿಸಿದ್ದಾನೆ. ವರ್ಣನಾಭಾಗ ಹಿತಮಿತವಾಗಿ ಬರುತ್ತದೆ. ಕಥೆ ತನಗೆ ಸಹಜವಾದ ರೀತಿಯಲ್ಲಿ ಓಡುತ್ತದೆ. ಭಾಷೆ ಆಡುಮಾತಿಗೆ ಬಹು ಹತ್ತಿರವಾಗಿರುವಂತೆ ತೋರುತ್ತದೆ. ಅಂದರೆ ಇಲ್ಲಿ ಗದ್ಯದ ನಿಜವಾದ ಉದ್ದೇಶ ಸಫಲವಾಗಿರುವಂತೆ ಕಾಣುತ್ತದೆ. ಮುಂದಿನ ಅನೇಕ ಕಾವ್ಯಗಳಿಗೆ ಹೇಗೋ ಹಾಗೆ ಗದ್ಯರಚನೆಗೂ ಹರಿಹರ ಮೇಲ್ಪಂಕ್ತಿಯಾಗಿದ್ದಾನೆ.

ಕನ್ನಡ ಗದ್ಯಸಾಹಿತ್ಯದ ಇತಿಹಾಸದಲ್ಲಿ ವ್ಯಾಖ್ಯಾನಕಾರರಿಗೆ ಒಂದು ಸ್ಥಾನವಿದೆ. ವೈದ್ಯ, ಜ್ಯೋತಿಷ, ಪಾಕ, ಸಂಗೀತ, ಗಣಿತ, ಸಾಮುದ್ರಿಕ, ಧರ್ಮ, ವ್ಯಾಕರಣ ಮೊದಲಾದ ವಿಷಯಗಳ ಮೇಲೆ ಕನ್ನಡದಲ್ಲಿ ಶಾಸ್ತ್ರೀಯ ಗ್ರಂಥಗಳಿವೆ. ಅವುಗಳಲ್ಲಿ ಕೆಲವಕ್ಕೆ ವಿಸ್ತಾರವಾದ ವ್ಯಾಖ್ಯಾನಗಳು, ಟೀಕೆ, ಟಿಪ್ಪಣಿಗಳು ಬಂದಿವೆ. ಸೂಚ್ಯವಾದುದನ್ನು ವಾಚ್ಯವಾಗಿ ವಿವರಿಸಿ ಹೇಳುವುದೇ ಇವುಗಳ ಮುಖ್ಯ ಗುರಿ. ಹೇಳುವ ಮಾತಿನಲ್ಲಿ, ಬಳಸುವ ಶಬ್ದಗಳಲ್ಲಿ, ಕ್ಲಿಷ್ಟತೆ ಇದ್ದರೂ ಇದೊಂದು ಮಾದರಿಯ ಗದ್ಯವಾಗಿ ಬೆಳೆದುಕೊಂಡುಬಂದಿವೆ. ಅಷ್ಟು ಉತ್ತಮ ಗದ್ಯವಲ್ಲದಿದ್ದರೂ ಇದಕ್ಕೆ ಗದ್ಯ ಸಾಹಿತ್ಯ ವಿವೇಚನೆಯಲ್ಲಿ ಒಂದು ಸ್ಥಾನವಿದೆ.

ಹಸ್ತಿಮಲ್ಲನ ಪೂರ್ವಪುರಾಣಕ್ಕೂ ಕನ್ನಡ ಗದ್ಯ ಸಾಹಿತ್ಯ ಚರಿತ್ರೆಯಲ್ಲಿ ಒಂದು ಸ್ಥಾನವಿದೆ. ಸು. 14ನೆಯ ಶತಮಾನದ ಗದ್ಯದ ಒಂದು ಮಾದರಿಯನ್ನು ಇಲ್ಲಿ ಕಾಣಬಹುದಾಗಿದೆ. ಈ ಕವಿ ಜಿನಸೇನಾಚಾರ್ಯರ ಪೂರ್ವಪುರಾಣವನ್ನೂ ಪಂಪನ ಆದಿಪುರಾಣವನ್ನೂ ನೋಡಿರಬೇಕು. ಪ್ರತಿಯೊಂದು ಪರ್ವದ ಆರಂಭದಲ್ಲಿ ಪೂರ್ವಪುರಾಣದ ಪದ್ಯವನ್ನು ಈತ ಉದ್ಧರಿಸಿದ್ದಾನೆ ; ಪಂಪನ ಕಥಾವಸ್ತುವನ್ನಂತೂ ಹಾಸುಹೊಕ್ಕಾಗಿ ಬಳಸಿಕೊಂಡಿದ್ದಾನೆ. ಇವನ ಕಾವ್ಯ ಪಂಪನ ಆದಿಪುರಾಣದ ಸಂಕ್ಷಿಪ್ತಗದ್ಯರೂಪ ಎಂದು ಹೇಳಬಹುದು. ಈ ಪುಟ್ಟ ಕೃತಿಯ ಗದ್ಯ ಸುಲಭವೂ ಸರಳವೂ ಆಗಿದೆ. ಚಿಕ್ಕ ಚಿಕ್ಕ ವಾಕ್ಯಗಳೂ ಆಡುಮಾತುಗಳೂ ಇಲ್ಲಿ ದೊರೆಯುತ್ತವೆ. ಸಾಮಾನ್ಯವಾಗಿ ಜೈನ ಪುರಾಣಗಳಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚು. ಆದರೆ ಇಲ್ಲಿ ಅವು ಕಡಿಮೆ. ಬಂದ ಕಡೆ ಚೆನ್ನಾಗಿ ಹೊಂದಿಕೊಂಡು ಬಂದಿರುವುದನ್ನು ಗಮನಿಸಬಹುದು.

14ನೆಯ ಶತಮಾನದಿಂದ 17ನೆಯ ಶತಮಾನದ ವರೆಗೆ ಕನ್ನಡ ಗದ್ಯಸಾಹಿತ್ಯದ ಸ್ರೋತ ಬತ್ತಿದಂತೆ ಕಾಣುತ್ತದೆ. ನಿಜಗುಣಶಿವಯೋಗಿ, ಗುಬ್ಬಿಯ ಮಲ್ಲಣ್ಣ, ಮಗ್ಗೆಯ ಮಾಯಿದೇವ ಮೊದಲಾದ ವೀರಶೈವ ಕವಿಗಳ ಶಾಸ್ತ್ರೀಯ ಗದ್ಯ ಗ್ರಂಥಗಳನ್ನು ಬಿಟ್ಟರೆ ಮತ್ತಾವ ಗದ್ಯಸಾಹಿತ್ಯವೂ ಈ ಕಾಲದಲ್ಲಿ ಕಾಣುವುದಿಲ್ಲ.

17ನೆಯ ಶತಮಾನದಲ್ಲಿ ಮೈಸೂರು ಅರಸರೂ ಅವರ ಆಶ್ರಯದಲ್ಲಿದ್ದ ಕವಿಗಳೂ ಗದ್ಯಸಾಹಿತ್ಯವನ್ನು ಸಾಕಷ್ಟು ಬೆಳೆಸಿದರು. ಚಿಕ್ಕದೇವರಾಜ ಚಿಕದೇವರಾಜ ಬಿನ್ನಪವನ್ನೂ ಭಾಗವತ ಶೇಷಧರ್ಮಗಳ ಟೀಕೆಗಳನ್ನೂ ಗದ್ಯದಲ್ಲಿ ಬರೆದಿದ್ದಾನೆ. ಶಾಂತಲಿಂಗದೇಶಿಕ (1672), ತಿರುಮಲಾರ್ಯ (1672), ಚಿಕುಪಾಧ್ಯಾಯ (1672) ಈ ಕಾಲದ ಶ್ರೇಷ್ಠ ಗದ್ಯಕಾರರು. ಶಾಂತಲಿಂಗದೇಶಿಕನ ಕಾವ್ಯಕ್ಕಿಂತಲೂ ತಿರುಮಲಾರ್ಯನ ಚಿಕದೇವರಾಜವಂಶಾವಳಿಯ ಭಾಷೆ ಪ್ರೌಢವಾಗಿಯೂ ಹಳಗನ್ನಡ ಬಿಗುವಿನಿಂದಲೂ ಕೂಡಿದೆ. ಚಿಕುಪಾಧ್ಯಾಯನೇ ಸುಮಾರು ಏಳು ಗದ್ಯಗ್ರಂಥಗಳನ್ನು ಬರೆದಂತೆ ತಿಳಿಯುತ್ತದೆ.

17–18ನೆಯ ಶತಮಾನದಲ್ಲಿ ಬಖೈರು, ಕೈಫಿಯತ್ತು ಎಂಬ ಹೆಸರಿನ ಐತಿಹಾಸಿಕ ಗದ್ಯಕೃತಿಗಳು ಸಿಗುತ್ತವೆ. ಇವುಗಳಲ್ಲಿ ಉರ್ದು, ಫಾರಸಿ ಶಬ್ದಗಳು ಹೇರಳವಾಗಿ ಬಳಕೆಯಾಗಿವೆ. ಬಖೈರುಗಳ ಗದ್ಯಶೈಲಿ ಇತಿಹಾಸವನ್ನು ಚಿತ್ರಿಸುವ ಅಂದವಾದ ಶೈಲಿಯಾಗಿದೆ. ಕನ್ನಡ ಗದ್ಯದ ಬೆಳವಣಿಗೆಯ ದೃಷ್ಟಿಯಿಂದ ಈ ಬಖೈರುಗಳು ಉಲ್ಲೇಖನಾರ್ಹವಾಗಿವೆ.

18–19ನೆಯ ಶತಮಾನದಲ್ಲಿ ಕನ್ನಡ ಗದ್ಯಸಾಹಿತ್ಯ ವಿಪುಲವಾಗಿ, ಸಮರ್ಥವಾಗಿ ಬೆಳೆದಿದೆ. ಈ ಕಾಲದಲ್ಲಿ ಕಾಣಬರುವಷ್ಟು ಗದ್ಯಕೃತಿಗಳು ಹಿಂದೆ ಮತ್ತಾವ ಕಾಲದಲ್ಲಿಯೂ ಕಂಡುಬಂದಿಲ್ಲ. ಇದನ್ನು ಗದ್ಯಸಾಹಿತ್ಯದ ಸುವರ್ಣಯುಗವೆಂದೇ ಕರೆಯಬಹುದು. ಕಳಲೆ ನಂಜರಾಜ (1740), ದೇವಚಂದ್ರ (1770–1841), ಮುಮ್ಮಡಿ ಕೃಷ್ಣರಾಜ (1794–1868), ಕೆಂಪು ನಾರಾಯಣ (1823), ಅಳಿಯ ಲಿಂಗರಾಜ (1823–74), ಮುದ್ದಣ (1900) ಮೊದಲಾದ ಗದ್ಯಲೇಖಕರು ಈ ಕಾಲದಲ್ಲಿ ಪ್ರಸಿದ್ಧರಾಗಿದ್ದಾರೆ.

ಕೆಂಪುನಾರಾಯಣನ ಮುದ್ರಾಮಂಜೂಷ (1823) ಹಳಗನ್ನಡ, ನಡುಗನ್ನಡ, ಹೊಸಗನ್ನಡ ಭಾಷೆಗಳಿಂದ ಮುಪ್ಪುರಿಗೊಂಡಿದೆ. ಕಥಾ ನಿರೂಪಣೆಗೆ ಉಚಿತವಾದ ಗದ್ಯವನ್ನಿಲ್ಲಿ ಕಾಣಬಹುದು. 20ನೆಯ ಶತಮಾನದ ಗದ್ಯಕ್ಕೆ ಈ ಗ್ರಂಥ ಮುಂಬೆಳಕಾಗಿದೆ. ಮುಂದೆ ಕ್ರೈಸ್ತಮಿಷನರಿಗಳು ಗದ್ಯಕ್ಕೆ ನ್ಯಾಯವಾದ ಸ್ಥಾನವನ್ನು ದೊರಕಿಸಿಕೊಟ್ಟರು. ಬೈಬಲ್ ಗ್ರಂಥ ಸು. 1823ರಲ್ಲಿ ಕನ್ನಡ ಗದ್ಯದಲ್ಲಿ ಪ್ರಕಟವಾಯಿತು. 19ನೆಯ ಶತಮಾನದ ಮಧ್ಯದಲ್ಲಿ ಹೊರಟ ಸಭಾಪತ್ರ, ಸತ್ಯ ದೀಪಿಕೆಗಳೆಂಬ ಪತ್ರಿಕೆಗಳು ಪತ್ರಿಕಾವ್ಯವಸಾಯಕ್ಕೆ ನೆಲಗಟ್ಟಾದುವು. 1865ರಲ್ಲಿ ಮೈಸೂರಿನಿಂದ ಕರ್ನಾಟಕ ಪ್ರಕಾಶಿಕೆ ಎಂಬ ಪತ್ರಿಕೆ ಉದಯವಾಯಿತು.

ಮುದ್ದಣ ಎರಡು ಗದ್ಯಗ್ರಂಥಗಳನ್ನು ಬರೆದ. ಮೊದಲನೆಯದು ಅದ್ಭುತ ರಾಮಾಯಣ. ಎರಡನೆಯದು ಶ್ರೀರಾಮಾಶ್ವಮೇಧ. ಅದ್ಭುತ ರಾಮಾಯಣ ಸರಳಶೈಲಿಯಲ್ಲಿ ಚೊಕ್ಕವಾಗಿರುವ ಹಳಗನ್ನಡ ಗ್ರಂಥ. ಹಳಗನ್ನಡ ಅಭ್ಯಾಸಿಗಳಿಗೆ ಇದು ಹಿತಮಿತವಾದ ಕೃತಿ. ರಾಮಾಶ್ವಮೇಧದಲ್ಲಿ ಇವನ ಪ್ರತಿಭೆ ಇನ್ನೂ ಮಿಗಿಲಾಗಿದೆ. ಇಲ್ಲಿಯೇ ಕವಿ ಪದ್ಯಂ ವಧ್ಯಂ ಗದ್ಯಂ ಹೃದ್ಯಂ ಎಂದು ಗದ್ಯದ ಮೇಲ್ಮೆಯನ್ನು ಹೇಳಿದ್ದಾನೆ. ಇದರಲ್ಲಿ ಆರಂಭದ ಮಳೆಗಾಲದ ವರ್ಣನೆ, ಮುದ್ದಣ ಮನೋರಮೆಯರ ಸಂಭಾಷಣಾ ಕುಶಲತೆ, ಕಥಾ ನಿರೂಪಣೆಯಲ್ಲಿನ ನವೀನತೆ ಇವೆಲ್ಲವೂ ಇವನ ಗದ್ಯಶೈಲಿಯ ಬೆಡಗನ್ನು ಬೀರುತ್ತವೆ. ಹಳಗನ್ನಡ ಭಾಷೆಯನ್ನು ಹೊಸಗನ್ನಡ ಧೋರಣೆಯಲ್ಲಿ ಬಳಸಿರುವುದೇ ಮುದ್ದಣನ ವೈಶಿಷ್ಟ್ಯ. ಇವನ ಶೈಲಿಯಲ್ಲಿ ಆಧುನಿಕ ಕಥೆ ಕಾದಂಬರಿಗಳ ಸೊಗಸು, ವೈವಿಧ್ಯಗಳನ್ನು ಕಾಣಬಹುದಾಗಿದೆ.

ಮುಂದೆ ಹೊಸಗನ್ನಡ ಗದ್ಯಸಾಹಿತ್ಯ ಹೊಸಮಾದರಿಯಲ್ಲಿ ರೂಪುಗೊಂಡಿತು. ನಡುಗನ್ನಡ ಶಬ್ದಗಳು ಮಾಯವಾಗಿ ಹೊಸ ಹೊಸ ಶಬ್ದಗಳು ತಲೆದೋರಿದುವು. ಮುಸಲ್ಮಾನರು, ಫ್ರೆಂಚರು, ಪೋರ್ಚುಗೀಸರು, ಇಂಗ್ಲಿಷರು ಮುಂತಾದವರ ಭಾಷೆಗಳ ಸಾಹಿತ್ಯಗಳ ಪ್ರಭಾವ ನೇರವಾಗಿ ಕನ್ನಡದ ಮೇಲೆ ಆದುದರಿಂದ ಕನ್ನಡದಲ್ಲಿ ಅನ್ಯದೇಶ್ಯ ಶಬ್ದಗಳು ಸೇರಿಕೊಂಡುವು. ದೇಶೀಯ ಸಾಹಿತ್ಯದೊಂದಿಗೆ ಇಂಗ್ಲಿಷ್ ಹಾಗೂ ಇತರ ವಿದೇಶೀ ಸಾಹಿತ್ಯಗಳ ವ್ಯಾಸಂಗದ ಪರಿಣಾಮವಾಗಿ ಕನ್ನಡದಲ್ಲಿಯೂ ನವಜಾಗೃತಿಯುಂಟಾಯಿತು. ಗದ್ಯಸಾಹಿತ್ಯದ ವಿವಿಧ ಪ್ರಕಾರಗಳು ಬೆಳೆದುವು. ಕಾದಂಬರಿ, ಸಣ್ಣಕಥೆ, ಜೀವನಚರಿತ್ರೆ, ನಾಟಕ, ವ್ಯಕ್ತಿಚಿತ್ರ, ಪ್ರಬಂಧ, ಹರಟೆಗಳು, ಪ್ರವಾಸ ಸಾಹಿತ್ಯ, ಪತ್ರಸಾಹಿತ್ಯ, ವೈಜ್ಞಾನಿಕ ಸಾಹಿತ್ಯ, ಮಾನವಿಕ ಸಾಹಿತ್ಯ, ಮಕ್ಕಳ ಸಾಹಿತ್ಯ, ವಿಮರ್ಶೆ, ಹಾಸ್ಯ ಪ್ರಬಂಧ—ಹೀಗೆ ನಾನಾ ರೂಪದಲ್ಲಿ ಗದ್ಯ ಸಾಹಿತ್ಯ ಹೊರವಾಗಿ ಈಗ ಬೆಳೆಯುತ್ತಿದೆ. ಇವುಗಳಲ್ಲಿ ಕೆಲವು ಮುಖ್ಯ ಪ್ರಕಾರಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ವಿವರಿಸಲಾಗಿದೆ.

ಕಾದಂಬರಿ ಸಾಹಿತ್ಯ ಪ್ರಕಾರ ಕನ್ನಡಕ್ಕೆ ಹೊಸತು. ಇದು ಬಂಗಾಳಿ, ಮರಾಠಿ, ಇಂಗ್ಲಿಷ್ ಇತ್ಯಾದಿ ಭಾಷೆಗಳ ಪ್ರಭಾವದಿಂದ ಕನ್ನಡಕ್ಕೆ ಬಂದುದು. ಚ. ವಾಸುದೇವಯ್ಯನವರ ಆರ್ಯಕೀರ್ತಿ, ಭೀಷ್ಮಚರಿತೆಗಳು ಹೊಸಗನ್ನಡ ಗದ್ಯಶೈಲಿಗೆ ಭದ್ರವಾದ ತಳಹದಿಯನ್ನು ಹಾಕಿದುವು. ಬಿ. ವೆಂಕಟಾಚಾರ್ಯರು, ಗಳಗನಾಥರು ಬಂಗಾಳಿ, ಮರಾಠಿ ಭಾಷೆಗಳ ಕಾದಂಬರಿಗಳನ್ನು ಕನ್ನಡಕ್ಕೆ ಅನುವಾದಿಸಿದರು. ಮೊದಮೊದಲಿಗೆ ಕನ್ನಡಿಗರಲ್ಲಿ ವಾಚನಾಭಿರುಚಿಯನ್ನು ಹೆಚ್ಚಿಸಿದವರೆಂದರೆ ಈ ಇಬ್ಬರು ಮಹನೀಯರೇ. ಇವರ ಹೆಸರು ಕನ್ನಡ ಕಾದಂಬರೀ ಪ್ರಪಂಚದಲ್ಲಿ ಶಾಶ್ವತವಾಗಿ ಉಳಿಯಬಲ್ಲುದು.

ಎಂ. ಎಸ್. ಪುಟ್ಟಣ್ಣನವರ ಮಾಡಿದ್ದುಣ್ಣೋ ಮಾರಾಯ ಮೊದಲಾದ ಸ್ವತಂತ್ರ ಕಾದಂಬರಿಗಳಲ್ಲಿ ಮೈಸೂರು ಚಾಮರಾಜನಗರಗಳ ಕಡೆಯ ಅಂದಿನ ಕನ್ನಡದ ಪ್ರಾದೇಶಿಕ ಕಸುವನ್ನು ಕಾಣಬಹುದು. ಮುಂದೆ ಕಾದಂಬರಿ ಕ್ಷೇತ್ರ ವೈವಿಧ್ಯಪೂರ್ಣವಾಗಿ ಬೆಳೆಯಿತು. ಐತಿಹಾಸಿಕ, ಸಾಮಾಜಿಕ, ರಾಜಕೀಯ, ಪತ್ತೇದಾರಿ ಹೀಗೆ ನಾಲ್ಕು ಬಗೆಯಲ್ಲಿ ಅದು ವಿಕಸಿಸಿತು. ಕಾದಂಬರಿ ಲೋಕದಲ್ಲಿ ಶಿವರಾಮ ಕಾರಂತ, ಅ ನ ಕೃ, ಕೃಷ್ಣಮೂರ್ತಿ ಪುರಾಣಿಕ, ತರಾಸು, ಶ್ರೀನಿವಾಸರಾವ್ ಕೊರಟಿ, ತ್ರಿವೇಣಿ, ಬಸವರಾಜ ಕಟ್ಟೀಮನಿ, ಇನಾಂದಾರ್ ಮೊದಲಾದವರು ಬಹು ಸಂಖ್ಯೆಯಲ್ಲಿ ಕಾದಂಬರಿಗಳನ್ನು ಸೃಷ್ಟಿಸಿದ್ದಾರೆ. ಭಾಷೆಯ ಪ್ರಾದೇಶಿಕ ವೈಭವಕ್ಕೆ ಕುವೆಂಪು, ಮಿರ್ಜಿ ಅಣ್ಣಾರಾಯ, ರಾವ್‌ಬಹದ್ದೂರ್, ಕಾರಂತ, ಹರಿದಾಸರಾವ್, ಶ್ರೀರಂಗ—ಇವರ ಕೃತಿಗಳನ್ನು ವೀಕ್ಷಿಸಬಹುದು. ಇವರ ಗದ್ಯದಿಂದ ಅನೇಕಾನೇಕ ಪ್ರಾದೇಶಿಕ ಶಬ್ದಗಳು, ನುಡಿಗಟ್ಟುಗಳು, ಭಾಷಾ ಮರ್ಯಾದೆಗಳು ಕನ್ನಡಕ್ಕೆ ಬಂದು ಸೇರಿವೆ. ಕಾದಂಬರಿ ಜೀವನಕ್ಕೆ ಹಿಡಿದ ಕನ್ನಡಿ–ಎಂಬ ವ್ಯಾಖ್ಯೆಯನ್ನು ಒಪ್ಪಬಹುದಾದರೆ ಕನ್ನಡ ಕಾದಂಬರಿಗಳು ಆ ಕೆಲಸವನ್ನು ಸಾಕಷ್ಟು ಸಮರ್ಪಕವಾಗಿ ಮಾಡಿವೆಯೆಂದು ಹೇಳಬಹುದು. ಜೀವನವನ್ನು ವರ್ಣಿಸುವಲ್ಲಿ, ಸಂಭಾಷಣೆಗಳನ್ನು ಹೆಣೆಯುವುದರಲ್ಲಿ ಗದ್ಯಕ್ಕಿರುವ ಎಲ್ಲ ಸಾಮರ್ಥ್ಯವನ್ನೂ ಉಪಯೋಗಿಸಿರುವುದನ್ನು ಇಲ್ಲಿ ಕಾಣಬಹುದಾಗಿದೆ. ಮೇಲೆ ಹೆಸರಿಸಿರುವವರಲ್ಲದೆ ಮಾಸ್ತಿ, ನಿರಂಜನ, ಅನುಪಮಾ ನಿರಂಜನ, ಕೆ. ವಿ. ಅಯ್ಯರ್, ಯು.ಆರ್. ಅನಂತಮೂರ್ತಿ, ದೇವುಡು ನರಸಿಂಹಶಾಸ್ತ್ರೀ, ಎಂ. ಕೆ. ಇಂದಿರಾ—ಮೊದಲಾದವರಿಂದ ಗದ್ಯದ ಕ್ಷೇತ್ರ ಇನ್ನಷ್ಟು ವಿಶಾಲವಾಗಿದೆ.

ಹೊಸಗನ್ನಡ ಗದ್ಯಸಾಹಿತ್ಯದಲ್ಲಿ ಕಾದಂಬರಿಯ ಅನಂತರ ಸಣ್ಣ ಕಥೆಗಳದೇ ಅಗ್ರಸ್ಥಾನ. ಸಣ್ಣ ಕಥೆಗಳ ತಂತ್ರ ಸೂಕ್ಷ್ಮರೀತಿಯ ಕುಸುರಿಯ ಕೆಲಸ. ಭಾವಗೀತೆಯ ಎಲ್ಲ ಲಕ್ಷಣಗಳೂ ಸಣ್ಣ ಕಥೆಗಿವೆ. ಅಲ್ಲಿನ ಕಾವು, ಚುರುಕು, ಓಟ, ಕಲಾವಂತಿಕೆ—ಎಲ್ಲವೂ ಇಲ್ಲೂ ಇವೆ.

ಒಂದು ದೃಷ್ಟಿಯಲ್ಲಿ ಕಾದಂಬರಿಗಿಂತ ಕಥೆಯ ರಚನೆ ಹೆಚ್ಚು ಕ್ಲಿಷ್ಟವಾದುದು. ಹೀಗಿರುವಲ್ಲಿ ಕನ್ನಡ ಸಣ್ಣ ಕಥೆಗಳು ತಮ್ಮ ಕ್ಷೇತ್ರದಲ್ಲಿ ಪಡೆದಿರುವ ಸಿದ್ಧಿಯನ್ನು ನೋಡಿದರೆ, ಕನ್ನಡ ಗದ್ಯ ಎಷ್ಟರಮಟ್ಟಿಗೆ ವಿಕಸನಗೊಂಡಿದೆಯೆಂಬ ಅಂಶ ಸ್ವಯಂವೇದ್ಯವಾಗುತ್ತದೆ. ಕೆರೂರು ವಾಸುದೇವಾಚಾರ್ಯ, ಪಂಜೆ ಮಂಗೇಶರಾವ್ ಎಂ.ಎನ್. ಕಾಮತ್, ಶ್ರೀನಿವಾಸ––ಇವರು ಕನ್ನಡ ಸಣ್ಣಕಥೆಗಳ ಮೊದಲಿಗರು ಕುವೆಂಪು, ಪುತಿನ, ಹೊಯ್ಸಳ, ಆನಂದ, ಆನಂದಕಂದ, ಗೊರೂರು, ಕೆ. ಗೋಪಾಲ ಕೃಷ್ಣರಾಯ, ಕೃಷ್ಣಕುಮಾರ ಕಲ್ಲೂರ, ಬೇಂದ್ರೆ, ಸಿ.ಕೆ. ವೆಂಕಟರಾಮಯ್ಯ, ರಾಜರತ್ನಂ, ಅ.ನ.ಕೃ, ಚದುರಂಗ, ತರಾಸು, ನಿರಂಜನ, ಕಟ್ಟೀಮನಿ ಕ್ಷೀರಸಾಗರ, ಎಂ. ಕೆ. ಇಂದಿರಾ, ಅನುಪಮಾ, ನಿರಂಜನ, ಕೆ.ವಿ. ಅಯ್ಯರ್, ಅಶ್ವತ್ಥ, ಎ.ಆರ್.ಕೃ, ದೇವುಡು, ಎಸ್. ಜಿ. ಶಾಸ್ತ್ರಿ, ಕಾರಂತ, ಎಂ. ವಿ. ಸೀತಾರಾಮಯ್ಯ, ಹಿರೇಮಲ್ಲೂರ್ ಈಶ್ವರನ್, ಎಕ್ಕುಂಡಿ, ಭಾರತೀಸುತ, ಸದಾಶಿವ, ಗೌರಮ್ಮ, ಯು.ಆರ್. ಅನಂತಮೂರ್ತಿ, ಪೂರ್ಣಚಂದ್ರ ತೇಜಸ್ವಿ—ಮೊದಲಾದವರು ಶ್ರೇಷ್ಠ ತರಗತಿಯ ಕಥೆಗಾರರು.

ಜೀವನಚರಿತ್ರೆಯೂ ಗದ್ಯಪ್ರಕಾರಗಳಲ್ಲಿ ಒಂದು. ಚ. ವಾಸುದೇವಯ್ಯನವರ ಛತ್ರಪತಿ ಶಿವಾಜಿ; ಡಿ.ವಿ.ಜಿ. ಅವರ ಗೋಪಾಲಕೃಷ್ಣ ಗೋಖಲೆ, ರಂಗಾಚಾರ್ಲು; ಕುವೆಂಪು ಅವರ ರಾಮಕೃಷ್ಣ ಪರಮಹಂಸ, ವಿವೇಕಾನಂದ; ಆಲೂರು ವೆಂಕಟರಾಯರ ಕರ್ನಾಟಕ ವೀರರತ್ನಗಳು, ಸಿ.ಕೆ. ವೆಂಕಟರಾಮಯ್ಯನವರ ಅಳಿದ ಮಹಾಸ್ವಾಮಿಯವರ ಚರಿತೆ, ಮಿಂಚಿನಬಳ್ಳಿಯವರು ಪ್ರಕಟಿಸಿದ ಸಾಹಿತ್ಯಜ್ಞರ ಆತ್ಮಕಥೆಗಳು, ಕಾರಂತರ ಹುಚ್ಚುಮನಸ್ಸಿನ ಹತ್ತು ಮುಖಗಳು, ದೇಜಗೌ ಅವರ ಹೋರಾಟದ ಬದುಕು—ಮುಂತಾದುವು ಉತ್ತಮ ದರ್ಜೆಯ ಜೀವನ ಚರಿತ್ರೆಗಳಾಗಿವೆ. ಬೆಳೆಯುತ್ತಿರುವ ಆಧುನಿಕ ಜೀವನವನ್ನು ಯುಕ್ತವಾಗಿ ನಿರೂಪಿಸಬಲ್ಲ ಶಕ್ತಿ ಕನ್ನಡ ಗದ್ಯಕ್ಕೆ ಇದೆ ಎನ್ನುವ ವಿಷಯ ಈ ಜೀವನಚರಿತ್ರೆಗಳಿಂದ ಸ್ಪಷ್ಟವಾಗುತ್ತದೆ.

ನಾಟಕ ಇನ್ನೊಂದು ಬಗೆಯ ಗದ್ಯಕ್ಕೆ ದಾರಿ ಮಾಡಿಕೊಟ್ಟಿದೆ. ಸಂಭಾಷಣೆ ನಾಟಕದ ಹೃದಯ. ಸಂಭಾಷಣೆಯಿಂದಲೇ ಅಲ್ಲಿ ಸನ್ನಿವೇಶ ಪಾತ್ರಪೋಷಣೆ ರಸಾಭಿವ್ಯಕ್ತಿ ಎಲ್ಲ ಆಗಬೇಕಾಗುತ್ತದೆ. ಈ ದೃಷ್ಟಿಯಿಂದ ಆಧುನಿಕ ಕನ್ನಡ ನಾಟಕಗಳನ್ನು ವಿವೇಚಿಸಬೇಕಾಗುತ್ತದೆ. ಅಳಸಿಂಗಾಚಾರ್ಯರು, ಬಸವಪ್ಪ ಶಾಸ್ತ್ರಿಗಳು, ಟಿ.ಪಿ. ಕೈಲಾಸಂ, ಶ್ರೀರಂಗ, ಕೆ.ವಿ. ರಾಘವಾಚಾರ್ಯ, ಕುವೆಂಪು, ಪರ್ವತವಾಣಿ, ಎಚ್.ಕೆ. ರಂಗನಾಥ್, ಎನ್‌ಕೆ, ದಾಶರಥಿ ದೀಕ್ಷಿತ್, ಗಿರೀಶ್ ಕಾರ್ನಾಡ್, ಸಮೇತನಹಳ್ಳಿ ರಾಮರಾಯ, ಅನಕೃ, ಮಾಸ್ತಿ, ಕಾರಂತ, ಕ್ಷೀರಸಾಗರ, ಕೈವಾರ ರಾಜಾರಾವ್, ಬೇಂದ್ರೆ, ವಿ. ಸೀತಾರಾಮಯ್ಯ, ಪುತಿನ, ಮುಗಳಿ—ಈ ಮೊದಲಾದವರು ನಾಟಕ ರಚನೆ ಮಾಡಿ ಖ್ಯಾತರಾಗಿದ್ದಾರೆ. ಪೌರಾಣಿಕ, ರುದ್ರ, ಪ್ರಹಸನ, ಏಕಾಂಕ ನಾಟಕ ಪ್ರಕಾರಗಳಲ್ಲಿ ಈ ನಾಟಕಕಾರರು ಬಳಸಿರುವ ಭಾಷೆ, ಗದ್ಯ ತನ್ನ ವೈವಿಧ್ಯದಿಂದ ಔಚಿತ್ಯದಿಂದ ಸಂಕೀರ್ಣತೆಯಿಂದ ವ್ಯಾಸಂಗ ಯೋಗ್ಯವೆನಿಸಿದೆ.

ವಿಮರ್ಶಾತ್ಮಕ ಲೇಖನಗಳು, ಕೃತಿಗಳು ಹೊಸಗನ್ನಡ ಗದ್ಯವನ್ನು ಬೆಳೆಸುವುದರಲ್ಲಿ ಹೆಚ್ಚಿನ ಕೆಲಸ ನಡೆಸಿವೆ. ಮೊದಮೊದಲು ಈ ಲೇಖನಗಳು ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ಪ್ರಬುದ್ಧ ಕರ್ಣಾಟಕ, ಜಯಂತಿ, ಜಯಕರ್ನಾಟಕ, ಜೀವನ, ಶರಣಸಾಹಿತ್ಯ ಮುಂತಾದ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿದ್ದುವು. ಈಗ ಅವುಗಳ ಜೊತೆಗೆ ಕರ್ನಾಟಕ ಭಾರತಿ, ವಿಜ್ಞಾನಕರ್ನಾಟಕ, ಮಾನವಿಕ ಕರ್ನಾಟಕ, ಸಂಕ್ರ

ಮಣಿ, ಸಾಕ್ಷಿ, ಮನ್ವಂತರ, ಸಮನ್ವಯ, ಜಾನಪದ—ಮೊದಲಾದುವೂ ಸೇರಿವೆ. ಇವಲ್ಲದೆ ದೈನಂದಿನ ಮತ್ತು ವಾರಪತ್ರಿಕೆಗಳಾದ ಪ್ರಜಾವಾಣಿ,ಸುಧಾ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ಜನಪ್ರಗತಿ, ಕರ್ಮವೀರ, ಪ್ರಜಾಮತ, ಉದಯವಾಣಿ ಮೊದಲಾದುವು ವರ್ಷಕ್ಕೆ ಒಂದು ಬಾರಿಯೋ ಎರಡು ಬಾರಿಯೋ ಹೊರತರುವ ವಿಶೇಷಾಂಕಗಳಲ್ಲೂ ಪ್ರೌಢ ಲೇಖನಗಳೂ ಅಚ್ಚಾಗುತ್ತಿವೆ. ವಿಮರ್ಶಾರಂಗ ವಿಶಾಲವಾಗಿ ಬೆಳೆಯುವುದಕ್ಕೆ ಈ ಪತ್ರಿಕೆಗಳಿಂದ ಆಗಿರುವ ಸಹಾಯ ಅಪಾರ. ಇವಲ್ಲದೆ ವಿಮರ್ಶನ ಗದ್ಯ ಕಾಲಕಾಲಕ್ಕೆ ಪುಸ್ತಕಗಳಾಗಿಯೂ ಹೊರಬಂದಿದೆ. ಮುದ್ದಣ, ರನ್ನ, ಕುಮಾರವ್ಯಾಸಾದಿಗಳನ್ನು ಕುರಿತ ಪ್ರಶಸ್ತಿಗಳು ಆಯಾ ಕವಿಯ ಮತ್ತು ಕಾವ್ಯದ ಪರಿಚಯವನ್ನು ಮಾಡಿಕೊಡುವ ವಿಮರ್ಶಾತ್ಮಕ ಕೃತಿಗಳು. ಇಲ್ಲಿಯ ಲೇಖನಗಳೆಲ್ಲ ಶಾಸ್ತ್ರೀಯ ಗದ್ಯಶೈಲಿಯಲ್ಲಿವೆ. ಇವೇ ಮುಂದಿನ ವಿಮರ್ಶಕರಿಗೆ ಮಾರ್ಗದರ್ಶನ ನೀಡಿದುವೆನ್ನಬಹುದು. ಅಭಿನಂದನೆ, ಸಂಭಾವನೆ, ಉಡುಗೊರೆ, ಉಪಾಯನ, ನಡೆದುಬಂದದಾರಿ, ಬಾಗಿನ, ಗಂಗೋತ್ರಿ, ದೇಜಗೌಐವತ್ತು, ರಸಿಕರಂಗ, ದೇವಗಂಗೋತ್ರಿ, ಕಾರಂತ ಪ್ರಪಂಚ, ಕಟ್ಟೀಮನಿ–ಬಾಳು, ಬದುಕು, ಸವಿನೆನಪು—ಈ ಮೊದಲಾದ ಗ್ರಂಥಗಳು ಕನ್ನಡ ವಿಮರ್ಶನಗದ್ಯದ ಉಜ್ಜ್ವಲ ಮಾದರಿಗಳನ್ನು ಒದಗಿಸುತ್ತವೆ. ವಿಮರ್ಶಾರಂಗದಲ್ಲಿ ಎಸ್.ವಿ. ರಂಗಣ್ಣ, ಡಿ.ವಿ.ಜಿ, ಮಾಸ್ತಿ, ಎ.ಆರ್.ಕೃ, ಟಿ.ಎಸ್. ವೆಂಕಣ್ಣಯ್ಯ, ಗೋವಿಂದ ಪೈ. ತೀ.ನಂ.ಶ್ರೀ.,ಡಿ.ಎಲ್.ಎನ್.,ಎಂ.ಆರ್. ಶ್ರೀ.,ಡಿ.ಕೆ.ಭೀ., ಕುರ್ತಕೋಟಿ, ದೇಜಗೌ, ವರದರಾಜರಾವ್, ಎಲ್. ಬಸವರಾಜು, ಎಂ. ಚಿದಾನಂದಮೂರ್ತಿ, ಮುಗಳಿ, ಮಾಳವಾಡ, ಹಳಕಟ್ಟಿ, ಎಸ್. ವಿ. ಪರಮೇಶ್ವರಭಟ್ಟ, ಆರ್.ಸಿ ಹಿರೇಮಠ, ಎಚ್. ತಿಪ್ಪೇರುದ್ರಸ್ವಾಮಿ, ಜಿ. ಎಸ್. ಶಿವರುದ್ರಪ್ಪ, ಪ್ರಭುಶಂಕರ, ಟಿ.ವಿ. ವೆಂಕಟಾಚಲ ಶಾಸ್ತ್ರೀ, ಸಿ.ಪಿ. ಕೃಷ್ಣಕುಮಾರ್—ಮೊದಲಾದವರು ಸ್ಮರಣೀಯ ಕೆಲಸ ಮಾಡಿದ್ದಾರೆ. ಈ ಮಹನೀಯರಲ್ಲಿ ಕೆಲವರು ಹಳಗನ್ನಡ ಕಾವ್ಯಗಳನ್ನು ಪರಿಷ್ಕರಿಸಿ ಸಂಪಾದಿಸಿ ಅವುಗಳಿಗೆ ಮುನ್ನುಡಿ, ಪ್ರಸ್ತಾವನೆಗಳನ್ನು ಗದ್ಯದಲ್ಲಿ ಬರೆದು ಗದ್ಯ ಸಾಹಿತ್ಯವನ್ನು ಪುಷ್ಟಿಗೊಳಿಸಿದ್ದಾರೆ.

ಗದ್ಯದ ಬೆಳೆವಣಿಗೆಗೆ ವೃತ್ತಪತ್ರಿಕೆಗಳು, ಸಾಪ್ತಾಹಿಕ ಪತ್ರಿಕೆಗಳು, ಮಾಸಪತ್ರಿಕೆಗಳು, ತ್ರೈಮಾಸಿಕ ಪತ್ರಿಕೆಗಳು, ಅಯನ ಪತ್ರಿಕೆಗಳು ನಾನಾಮುಖವಾಗಿ ನಾನಾ ಆಯಾಮಗಳಲ್ಲಿ ಸೇವೆ ಸಲ್ಲಿಸುತ್ತಿವೆ. ಗದ್ಯವಿಕಸನಕ್ಕೆ ಆಡುಮಾತನ್ನು ಬಿಟ್ಟರೆ ಪತ್ರಿಕೆಗಳೇ ಪ್ರಮುಖರಂಗವನ್ನು ಒದಗಿಸಿವೆಯೆಂಬ ಮಾತು ನಿಜ. ಮಾತು ಅಭಿಪ್ರಾಯ, ವರದಿ, ವರ್ಣನೆ, ವಾದ, ವಿವಾದ, ತರ್ಕ, ರಂಜನೆ—ಎಲ್ಲ ಅನುಭವಗಳಿಗೂ ಪತ್ರಿಕೆ ಎಡೆಗೊಡುತ್ತದೆ. ತನ್ಮೂಲಕ ಗದ್ಯ ಮಾದರಿಗಳನ್ನು ಬೆಳೆಸುತ್ತದೆ. ಸದ್ಯಕ್ಕೆ ಒದಗಬಲ್ಲ ಹೊಸಹೊಸ ಪದಗಳ ಸೃಷ್ಟಿಯಾಗುವುದೂ ಪತ್ರಿಕೆಗಳಲ್ಲಿಯೇ. ಈ ದೃಷ್ಟಿಯಿಂದ ಪ್ರಜಾವಾಣಿ, ಕನ್ನಡ ಪ್ರಭ, ಸಂಯುಕ್ತ ಕರ್ನಾಟಕ, ಸುಧಾ, ಕರ್ಮವೀರ, ಕಸ್ತೂರಿ, ಮಯೂರ ಮೊದಲಾದುವು ಮಾಡುತ್ತಿರುವ ಕೆಲಸ ಮುಖ್ಯವಾದುದು. ಈ ದೃಷ್ಟಿಯಿಂದ ಪತ್ರಿಕೆ ಜೀವದ್ಭಾಷೆಯ ಪ್ರಯೋಗಶಾಲೆಯಾಗಿದೆ.

ಬೇರೆ ಬೇರೆ ಭಾಷೆಗಳಿಂದ ಅನುವಾದವಾಗುತ್ತಿರುವ ಗ್ರಂಥಗಳ ಸಂಖ್ಯೆ ಈಗ ಬೆಳೆಯುತ್ತಿದೆ. ಸಂಸ್ಕೃತ, ಇಂಗ್ಲಿಷ್, ರಷ್ಯನ್, ಹಿಂದಿ, ತೆಲುಗು, ತಮಿಳು, ಮಲಯಾಳಂ, ಮರಾಠಿ, ಬಂಗಾಳಿ—ಇತ್ಯಾದಿ ಭಾಷೆಗಳ ಅನುವಾದದಿಂದ ಕನ್ನಡದ ಗದ್ಯಸಂಪತ್ತು ಬೆಳೆಯುತ್ತಿದೆ. ವಿವಿಧ ಭಾಷೆಗಳ ವಿಶಿಷ್ಟ ಶಬ್ದಗಳು ನುಡಿಗಟ್ಟು ವಾಕ್ಯರಚನೆ ಮುಂತಾದುವನ್ನು ಕನ್ನಡಕ್ಕೆ ಅನುವಾದಿಸುವಲ್ಲಿ ಕನ್ನಡ ಹೇಗೆ ಅದನ್ನು ನಿರ್ವಹಿಸಿದೆ ಅದರಲ್ಲಿ ಎರವಲು ಎಷ್ಟು, ಎಷ್ಟರ ಮಟ್ಟಿಗೆ ಅನುವಾದ ಸಫಲವಾಗಿದೆ—ಎಂಬ ವಿಷಯಗಳನ್ನು ಪರಿಶೀಲಿಸಿದಲ್ಲಿ ಅನುವಾದದಿಂದ ಭಾಷೆ ಹೇಗೆ ಬೆಳೆಯಬಲ್ಲದೆಂಬ ಅಂಶ ಸ್ಪಷ್ಟವಾಗುತ್ತದೆ. ಸಂಸ್ಕೃತ ಗ್ರಂಥಗಳನ್ನು ಅನುವಾದಿಸುವುದರಲ್ಲಿ ಕೆ. ಕೃಷ್ಣಮೂರ್ತಿಯವರ ಹೆಸರು ಹೊಸಗನ್ನಡದ ಸಾಹಿತ್ಯದಲ್ಲಿ ಚಿರಸ್ಥಾಯಿಯಾಗಿ ಉಳಿಯುತ್ತದೆ. ದೇಜಗೌ ಅವರು ಇಂಗ್ಲಿಷ್ ಹಾಗೂ ರಷ್ಯನ್ ಸಾಹಿತ್ಯಾನುವಾದದಿಂದ ಕನ್ನಡದ ಗದ್ಯಸಂಪತ್ತನ್ನು ಬೆಳಗಿಸಿದ್ದಾರೆ. ಇವರ ಗದ್ಯದಲ್ಲಿ ಬಿಗು, ಬಿನ್ನಾಣವಿದೆ; ಬನಿ, ತನಿ ಇದೆ; ಆಡು ಮಾತುಗಳ ಜಾಲವಿದೆ. ಅಸಂಖ್ಯ ಹೊಸ ಶಬ್ದಗಳ ಸೃಷ್ಟಿಯಿದೆ. ಶಾಸ್ತ್ರೀಯ ಅನುವಾದಕ್ಕೆ ಬಾಲಸುಬ್ರಹ್ಮಣ್ಯಂ ಹೆಸರಾಗಿದ್ದಾರೆ. ಸಿ.ಪಿ.ಕೆ. ಅವರು ಸಂಸ್ಕೃತ, ಇಂಗ್ಲಿಷ್ ಗ್ರಂಥಗಳನ್ನು ಕನ್ನಡಕ್ಕೆ ಅನುವಾದಿಸಿ ಗದ್ಯಸಾಹಿತ್ಯವನ್ನು ಬಲಪಡಿಸಿದ್ದಾರೆ.

ಇನ್ನು ವಿದ್ವಾಂಸರು ನಡೆಸಿದ ಹಿರಿಯ ಸಂಶೋಧನೆಗಳ ಪ್ರಕಟಣೆಗಳನ್ನು ಗಮನಿಸಬಹುದು. ಎ.ಆರ್.ಕೃ—ಅವರ ಕನ್ನಡ ನಾಟಕ, ಬಂಕಿಂಚಂದ್ರ, ಜಿ. ವರದರಾಜರಾಯರ ಕುಮಾರ ರಾಮನ ಸಾಂಗತ್ಯಗಳು, ಚಿದಾನಂದಮೂರ್ತಿಯವರ ಕನ್ನಡ ಶಾಸನಗಳಲ್ಲಿ ಸಾಂಸ್ಕೃತಿಕ ಅಧ್ಯಯನ, ಶಿವರುದ್ರಪ್ಪನವರ ಸೌಂದರ್ಯಸಮೀಕ್ಷೆ, ಪ್ರಭುಶಂಕರರ ಭಾವಗೀತೆ, ಟಿ. ವಿ.ವೆಂಕಟಾಚಲಶಾಸ್ತ್ರಿಗಳ ಕನ್ನಡ ಛಂದಸ್ಸು—ಮೊದಲಾದವು ಈ ಬಗೆಯ ಗದ್ಯಕ್ಕೆ ಉತ್ತಮ ಉದಾಹರಣೆಗಳು.



ಎ. ಆರ್. ಕೃಷ್ಣಶಾಸ್ತ್ರೀ

ಈಚೆಗೆ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆಯಿಂದ ಪ್ರಕಟವಾಗುತ್ತಿರುವ ಕನ್ನಡ ವಿಶ್ವಕೋಶದ ಸಂಪುಟಗಳು ಗದ್ಯಕ್ಷೇತ್ರದಲ್ಲಿ ಹೊಸತೊಂದು ವಿಕ್ರಮ ಸ್ಥಾಪಿಸುತ್ತಿವೆ. ಭಾಷೆಯನ್ನು ವೈಜ್ಞಾನಿಕವಾಗಿ ಬಳಸುವುದು, ಪದಪ್ರಯೋಗಗಳಲ್ಲಿ ಸಾಧ್ಯವಾದಷ್ಟು ಏಕತೆಯನ್ನು ಸಾಧಿಸುವುದು, ಅನುಚಿತವೆನಿಸಬಹುದಾದ ಕೆಲವು ಪ್ರತ್ಯಯಗಳನ್ನು ನಿವಾರಿಸುವುದು, ಭಿನ್ನ ಭಿನ್ನ ಲೇಖಕರ ಬರೆಹಗಳನ್ನು ಉಚಿತ ಸಂಯೋಜನೆಯಿಂದ ಒಂದು ಸಮಾನ ರೂಪಕ್ಕೆ ತರುವುದು—ಈ ಮೊದಲಾದ ಅಂಶಗಳಿಂದಾಗಿ ಇಲ್ಲಿನ ಗದ್ಯ ಪರಿಶೀಲನಯೋಗ್ಯವಾಗಿದೆ. ವಿವಿಧ ಜ್ಞಾನಕ್ಷೇತ್ರಗಳಲ್ಲಿನ ಅದರಲ್ಲೂ ವಿಜ್ಞಾನ ವಿಭಾಗಗಳಲ್ಲಿನ ಸೂಕ್ಷ್ಮವೂ ಸಂಕೀರ್ಣವೂ ಆದ ಅಂಶಗಳನ್ನು ಶಾಸ್ತ್ರೀಯ ಸ್ಪಷ್ಟತೆಯಿಂದ ಕನ್ನಡ ಗದ್ಯ ರೂಪಿಸಬಲ್ಲುದೆಂಬುದಕ್ಕೆ ಈ ಕೋಶಗಳಲ್ಲಿ ನಿದರ್ಶನಗಳಿವೆ. ಇದರ ಜೊತೆಗೆ ವಿಜ್ಞಾನ ವಿಷಯಗಳನ್ನು ಕುರಿತು ಆರ್. ಎಲ್. ನರಸಿಂಹಯ್ಯ, ಶಿವರಾಮ ಕಾರಂತ, ಜೆ. ಆರ್. ಲಕ್ಷ್ಮಣ ರಾವ್, ಜಿ. ಟಿ. ನಾರಾಯಣರಾವ್ ಮೊದಲಾದವರು ರಚಿಸಿರುವ ಗ್ರಂಥಗಳನ್ನೂ ಕನ್ನಡ ವಿಜ್ಞಾನ ಸಾಹಿತ್ಯನಿರ್ಮಾಣ ಗ್ರಂಥವನ್ನೂ ಪರಿಶೀಲಿಸಬಹುದು.

ಪದ್ಯಕ್ಕಿಂತ ಗದ್ಯಕ್ಕೆ ಹೆಚ್ಚಿನ ವ್ಯಾವಹಾರಿಕ ಪ್ರಾಮುಖ್ಯವಿದೆ. ಆಧುನಿಕ ಯುಗದಲ್ಲಂತೂ ಅವರದೇ ಸ್ಥಾನ. ಈಚೆಗೆ ವಾಣಿಜ್ಯ ವ್ಯವಹಾರಗಳಲ್ಲಿ ಕನ್ನಡದ ಬಳಕೆ ಹೆಚ್ಚಿದೆ. ಕನ್ನಡ ಒಂದು ಹಂತದಲ್ಲಿ ಆಡಳಿತ ಭಾಷೆಯಾಗಿರುವುದರಿಂದ ಅದಕ್ಕೆ ಆಡಳಿತ ವ್ಯವಹಾರದ ಪುಷ್ಟಿ ದೊರೆತಂತಾಗಿದೆ. ವಿಶ್ವವಿದ್ಯಾನಿಲಯಗಳಲ್ಲಿ ಪದವಿ ಮಟ್ಟದ ಶಿಕ್ಷಣ ಕನ್ನಡ ಮಾಧ್ಯಮದಿಂದ ಯಶಸ್ವಿಯಾಗಿ ನೆರವೇರುತ್ತಿದೆ. ಅದಕ್ಕನುಕೂಲವಾಗಿ ಪಠ್ಯಪುಸ್ತಕಗಳು ಸೃಷ್ಟಿಯಾಗುತ್ತಿದೆ. ಕನ್ನಡ ಗದ್ಯ ಸುಪುಷ್ಟವಾಗಿ ಬೆಳೆದು ಶಾಸ್ತ್ರಾಭಿವ್ಯಕ್ತಿಗೂ ಭಾವಾಭಿವ್ಯಕ್ತಿಗೂ ಸಮರ್ಥವಾದುದಾಗಿದೆ. ಕನ್ನಡ ಮಾಧ್ಯಮದಿಂದ ಯಾವ ವಿಷಯವನ್ನಾದರೂ ಹೇಳಲು ಕಲಿಯಲು ಬರುತ್ತದೆ—ಎಂಬ ಅಂಶ ಮೇಲಿನ ಪರಿಶೀಲನೆಯಿಂದ ಸಹಜವಾಗಿ ಸ್ಪಷ್ಟಗೊಳ್ಳುತ್ತದೆ.

(ಎಸ್.ವಿ.; ಆರ್.ಆರ್.ಕೆ.)

**ಕನ್ನಡದಲ್ಲಿ ಗಾಂಧೀ ಸಾಹಿತ್ಯ :** ಗಾಂಧಿಯವರ ಜೀವನ, ವಿಚಾರಧಾರೆಗಳ ಅಧ್ಯಯನ ನಿಜವಾಗಿ ನೋಡಿದರೆ ಭಾರತ ಸ್ವಾತಂತ್ರ್ಯ ಸಂಗ್ರಾಮದ ಅಧ್ಯಯನ ಮಾತ್ರವಲ್ಲ ಭಾರತದ ಇತಿಹಾಸ, ಸಂಸ್ಕೃತಿ, ಲೋಪದೋಷಗಳು, ಅಭ್ಯುದಯ— ಇವುಗಳ ಅಧ್ಯಯನವೇ ಆಗಿದೆ. ಇಂಥ ಮುಖಂಡರ ಜೀವನ, ಅಭಿಪ್ರಾಯಗಳು, ಚಟುವಟಿಕೆ, ತತ್ತ್ವಗಳು, ಕಾರ್ಯನೀತಿಗಳನ್ನು ಕುರಿತು ಅಸಂಖ್ಯಾತ ಗ್ರಂಥಗಳು, ಲೇಖನಗಳು ಇವೆ.

ಗಾಂಧೀಜಿಯವರು ಬರೆಯಬೇಕಾದುದನ್ನು ಬರೆದರು. ಹೇಳಬೇಕಾದುದನ್ನು ಹೇಳಿದರು. ಅಷ್ಟೇ ಹೊರತು ಬರೆಯುವುದೇ ಅವರ ವೃತ್ತಿಯಾಗಿರಲಿಲ್ಲ ; ಹವ್ಯಾಸವೂ ಆಗಿರಲಿಲ್ಲ. ಅವರ ಜೀವನೋದ್ದೇಶ ಸಾಧನೆಯಲ್ಲಿ ಅದೊಂದು

ಮಾರ್ಗವೇ ಹೊರತು ಗುರಿಯಾಗಿರಲಿಲ್ಲ. ಎಲ್ಲ ವಿಷಯಗಳಲ್ಲೂ ತಲೆದೋರುತ್ತಿದ್ದ ಕಷ್ಟತರ ಸಮಸ್ಯೆಗಳನ್ನು ಕುರಿತು ತಮಗಾಗಿಯೋ ತಮ್ಮ ಸಹೋದ್ಯೋಗಿಗಳಿಗಾಗಿಯೋ ಟೀಕೆ ಮಾಡುವವರಿಗಾಗಿಯೋ ಅವರು ಅವನ್ನು ವಿಶ್ಲೇಷಿಸಿ ಬರೆಯುತ್ತಿದ್ದರು. ಈ ವಿಚಾರಧಾರೆ ಅವರ ಲೇಖನ, ಭಾಷಣ, ಪತ್ರಗಳು, ಸಂದರ್ಶನ ವರದಿ ಮುಂತಾದ ಪ್ರಕಾರಗಳ ಮೂಲಕ ಅವರೇ ಸ್ಥಾಪಿಸಿದ ಇಂಡಿಯನ್ ಒಪಿನಿಯನ್, ಯಂಗ್ ಇಂಡಿಯ, ಹರಿಜನ ಪತ್ರಿಕೆಗಳ ಮೂಲಕ ಪ್ರವಹಿಸುತ್ತಿತ್ತು. ರಾಜಕೀಯ, ಸಾಮಾಜಿಕ, ಆರ್ಥಿಕ ದಾಸ್ಯವನ್ನು, ಅನ್ಯಾಯಗಳನ್ನು ಕಿತ್ತೊಗೆಯಲು ಸತ್ಯ ಅಹಿಂಸೆಗಳ ಮೂಲಕ ಯತ್ನಿಸಿದ ಗಾಂಧೀಜಿಯವರ ಪ್ರಭಾವ ಅವರ ಸಮಕಾಲೀನರ ಮೇಲೆ ಆಚ್ಛೊತ್ತಿದುದರಿಂದ ಅವರ ಬರೆಹಗಳನ್ನು ಭಾಷಣಗಳನ್ನು ಅವರು ಜೀವಿಸಿದ್ದಾಗಲೂ ಅವರ ಮರಣದ ಅನಂತರವೂ ಅನೇಕರು ಸಂಪಾದಿಸಿ ಪ್ರಕಟಿಸಿದ್ದಾರೆ.

ಅವರ ಬರೆಹಗಳ ವಿಷಯ ವ್ಯಾಪ್ತಿ ಅಪಾರ. ಅಲ್ಪಸಂಖ್ಯಾತರು, ಅಸ್ಪೃಶ್ಯತೆ, ಅಹಿಂಸೆ, ಆರೋಗ್ಯ, ಆಹಾರ, ಇಸ್ಲಾಂ, ಉಪವಾಸ, ಕಸ್ತೂರಿ ಬಾ, ಕೈಗಾರಿಕಾ ಸಂಬಂಧಗಳು, ಕ್ರಿಶ್ಚಿಯನ್ನರು, ಖಿಲಾಫತ್ ಚಳವಳಿ, ಜಪಾನ್, ಜನನ ನಿಯಂತ್ರಣ, ಜಲಿಯನ್‌ವಾಲಾಬಾಗ್, ಜಾತೀಯತೆ, ದೇವರು, ನೀತಿ, ಬೌದ್ಧಮತ, ಬ್ರಹ್ಮಚರ್ಯ ಭಗವದ್ಗೀತಾ, ಭಾರತದ ರಾಜ ಮಹಾರಾಜರುಗಳು, ಮತ, ಮುಷ್ಕರಗಳು, ಮೂಲ ಶಿಕ್ಷಣ, ರಾಷ್ಟ್ರಭಾಷೆ, ವೈದ್ಯ, ಶಿಕ್ಷಣ, ಸರ್ವೋದಯ, ಸತ್ಯಾಗ್ರಹ, ಸಿಖ್‌ಮತ, ಸ್ವದೇಶೀ, ಸ್ತ್ರೀಯರು, ಸೋಷಿಯಲಿಸಂ—ಮುಂತಾಗಿ ನಾನಾ ವಿಷಯಗಳ ಮೇಲೆ ಗಾಂಧೀಜಿ ಬರೆದಿದ್ದಾರೆ. ನಾನಾ ಸಮಸ್ಯೆಗಳನ್ನು ಸತ್ಯ ಅಹಿಂಸೆಯ ಆಧಾರದ ಸಾಮಾಜಿಕ ನ್ಯಾಯದೃಷ್ಟಿಯಿಂದ ವಿವೇಚಿಸಿ ತಮ್ಮ ಅಭಿಪ್ರಾಯಗಳನ್ನು ತಿಳಿಸಿದ್ದಾರೆ. ಅವರ ಬರೆಹಗಳನ್ನು ಸುಮಾರು 600 ಶೀರ್ಷಿಕೆಗಳಲ್ಲಿ ವಿಂಗಡಿಸಲಾಗಿದೆ.

ಪಂಜಾಬ್ ವಿಶ್ವವಿದ್ಯಾನಿಲಯದ ಗ್ರಂಥಪಾಲಕರಾದ ಜಗದೀಶ ಶರಣಶರ್ಮ ಇಂಗ್ಲಿಷ್ ಮತ್ತಿತರ ಐರೋಪ್ಯ ಭಾಷೆಗಳಲ್ಲಿ ಗಾಂಧೀಜಿಯವರನ್ನು ಕುರಿತು ಪ್ರಕಟವಾಗಿರುವ ಪುಸ್ತಕಗಳ, ಲೇಖನಗಳ ವಾಙ್ಮಯಸೂಚಿಯನ್ನು ರಚಿಸಿದ್ದಾರೆ. ಇದರಲ್ಲಿ ಗಾಂಧೀಜಿಯವರ ಬರೆಹಗಳು, ಅವರನ್ನು ಕುರಿತ ಬರೆಹಗಳು 3,761 ಇವೆ. ಇವುಗಳಲ್ಲಿ ಜರ್ಮನ್, ಫ್ರೆಂಚ್, ಇಟಾಲಿಯನ್, ಸ್ವೀಡಿಷ್, ಡಚ್, ಸ್ಪ್ಯಾನಿಷ್, ನಾರ್ವೀಜಿಯನ್, ಪೋರ್ಚುಗೀಸ್, ರಷ್ಯನ್ ಭಾಷೆಗಳಲ್ಲಿರುವ ಬರೆಹಗಳೂ ಸೇರಿವೆ.

ಗಾಂಧೀಜಿಯವರನ್ನು ಬುದ್ಧ, ಕ್ರಿಸ್ತ, ಹೆನ್ರಿ ಫೋರ್ಡ್, ಲೆನಿನ್, ಸ್ಟ್ಯಾಲಿನ್, ಟಾಗೋರ್, ಟಾಲ್‌ಸ್ಟಾಯರಿಗೆ ಹೋಲಿಸಿ ಬರೆದವರಿದ್ದಾರೆ. ಅವರನ್ನು ಸಂತರೆಂದೂ ಪ್ರವಾದಿಯೆಂದೂ ಕ್ರಾಂತಿಕಾರರೆಂದೂ ಸಮಾಜಸುಧಾರಕರೆಂದೂ ನಾನಾ ರೀತಿಯಲ್ಲಿ ಕರೆದವರಿದ್ದಾರೆ.

ಗಾಂಧೀಜಿಯವರ ಮೇಲೆ ಪ್ರಭಾವ ಬೀರಿದ ಪುಸ್ತಕಗಳಲ್ಲಿ ಗೀತೆ ಬೈಬಲ್‌ಗಳಲ್ಲದೆ ಬ್ಲಾವಟ್ಸ್ಕಿಯ ಕೀ ಟು ಥಿಯಾಸಫಿ, ವಾಷಿಂಗ್ಟನ್ ಅರ್ವಿಂಗ್‌ನ ಲೈವ್ಸ್ ಆಫ್ ದಿ ಸಕ್ಸಸರ್ಸ್ ಟು ಮಹಮದ್, ಅಡಾಲ್ಫ್ ಜಸ್ಟ್‌ನ ರಿಟರ್ನ್ ಟು ನೇಚರ್, ರಸ್ಕಿನ್ನನ ಅನ್ ಟು ದಿ ಲಾಸ್ಟ್, ಥೋರೋವಿನ ಆನ್ ದಿ ಡ್ಯೂಟಿ ಆಫ್ ಸಿವಿಲ್ ಡಿಸೊಬೀಡಿಯನ್ಸ್, ಟಾಲ್‌ಸ್ಟಾಯರ ದಿ ಗಾಸ್ಪೆಲ್ ಇನ್ ಬ್ರೀಫ್ ಮತ್ತು ದಿ ಕಿಂಗ್‌ಡಂ ಆಫ್ ಗಾಡ್ ಈಸ್ ವಿದಿನ್ ಯೂ—ಮುಂತಾದುವೂ ಭಾರತೀಯ ಕಾವ್ಯಗಳಾದ ರಾಮಾಯಣ, ಮನುಸ್ಮೃತಿ, ಶಾಸ್ತ್ರಗಳು, ಮಣಿರತ್ನಮಾಲಾ, ಯೋಗವಾಸಿಷ್ಠದ ಮುಮುಕ್ಷುಪ್ರಕಾಶ, ಉಪನಿಷತ್ತು—ಇವುಗಳೂ ಮುಖ್ಯವಾದವು.

ಗಾಂಧೀಜಿಯವರನ್ನು ಕುರಿತು ಬರೆದಿರುವ ಬರೆಹಗಳಲ್ಲಿ ಅವರ ಪೂರ್ಣಜೀವನ ಚರಿತ್ರೆಗಳು, ಜೀವನದ ನಾನಾ ಘಟನೆಗಳು, ಅಹಿಂಸಾದರ್ಶನ, ಸತ್ಯಾಗ್ರಹ, ವಿಚಾರಧಾರೆಯನ್ನು ಕುರಿತು ಪ್ರಬಂಧಗಳು, ಲೇಖನಗಳು, ಪತ್ರಗಳು, ಪದ್ಯಗಳು, ಸಂದರ್ಶನ ವರದಿಗಳು, ಶ್ರದ್ಧಾಂಜಲಿಗಳು ಅನೇಕವಿವೆ. ಕಳೆದ ಮೂವತ್ತು ವರ್ಷಗಳಲ್ಲಿ ಭಾರತದ ಸಾಮಾಜಿಕ, ಆರ್ಥಿಕ, ರಾಜಕೀಯ ಪರಿಸ್ಥಿತಿಯನ್ನು ಕುರಿತು ಬರೆದಿರುವ ಪ್ರತಿಯೊಂದು ಪುಸ್ತಕದಲ್ಲೂ ಗಾಂಧಿಯವರ ಪಾತ್ರವನ್ನು ಕುರಿತು ಬರೆಯುವುದು ಅನಿವಾರ್ಯವೆನಿಸಿದೆ. ಈ ಲೇಖನಗಳು ಅವರ ಪ್ರಶಂಸಾಕಾರರಿಂದಲೂ ಸಹಾನುಭೂತಿಯುಳ್ಳ ಟೀಕಾಕಾರರಿಂದಲೂ ತೀವ್ರ ಎದುರಾಳಿಗಳಿಂದಲೂ ಬಂದಿವೆ.

ಗಾಂಧೀಜಿಯವರು ಬರೆದಿರುವ ಪುಸ್ತಕಗಳಲ್ಲಿ 72 ಕನ್ನಡಕ್ಕೆ ಅನುವಾದವಾಗಿವೆ. ಈಗ ತಿಳಿದಿರುವಂತೆ ಪ್ರಥಮ ಅನುವಾದ ಅವರ ಇಂಡಿಯನ್ ಹೋಂರೂಲ್ ಎಂಬ ಪುಸ್ತಕ. ದ.ಕೃ. ಭಾರದ್ವಾಜರು ಆ ಕೆಲಸ ಮಾಡಿದ್ದಾರೆ (1919). ಇದೇ ರೀತಿ ಇನ್ನೂ ಮೂರು ಪುಸ್ತಕಗಳನ್ನು ಭಾರದ್ವಾಜರು ಅನುವಾದಿಸಿದ್ದಾರೆ. ಗಾಂಧೀ ಸಾಹಿತ್ಯ ಅನುವಾದಕರಲ್ಲಿ ಅಗ್ರಗಣ್ಯರೆಂದರೆ ಸಿದ್ಧವನಹಳ್ಳಿ ಕೃಷ್ಣಶರ್ಮರು. ಇವರು ತಮ್ಮ ಸರಳ ಹಾಗೂ ಶಕ್ತಿಯುತ ಶೈಲಿಯಲ್ಲಿ 20 ಪುಸ್ತಕಗಳನ್ನು ಸ್ವಂತವಾಗಿಯೂ ಮತ್ತೆ ನಾಲ್ಕನ್ನು ಇತರರೊಡಗೂಡಿಯೂ ಅನುವಾದಿಸಿದ್ದಾರೆ. ಅನುವಾದಗಳ ಪೈಕಿ ಆರ್ಥಿಕ ವಿಚಾರಗಳಲ್ಲಿ 3, ಆರೋಗ್ಯ 1, ಖಾದಿಗ್ರಾಮೋದ್ಯೋಗ 1, ಜೀವನಚರಿತ್ರೆ (ಆತ್ಮಕಥೆ) 20, ಧರ್ಮ 8, ನೀತಿ, ಸತ್ಯ, ಅಹಿಂಸೆ 8, ಭಗವದ್ಗೀತೆ 3, ಮಹಿಳೆಯರು 4, ರಾಜಕೀಯ ವಿಚಾರಗಳು 14, ಶಿಕ್ಷಣ 3, ಸರ್ವೋದಯ 1, ಸಾಮಾಜಿಕ ದರ್ಶನ 6—ಈ ರೀತಿ 72 ಪುಸ್ತಕಗಳಿವೆ. ಗಾಂಧೀಜಿಯವರ ಪ್ರಮುಖ ಕೃತಿಗಳಾದ ಸತ್ಯಶೋಧನೆ, ಹಿಂದ್ ಸ್ವರಾಜ್ಯ, ದಕ್ಷಿಣ ಆಫ್ರಿಕದಲ್ಲಿ ಸತ್ಯಾಗ್ರಹ, ನನ್ನ ಕನಸಿನ ಭಾರತ. ಅನಾಸಕ್ತಿಯೋಗ, ಸರ್ವೋದಯ, ಮೂಲಶಿಕ್ಷಣ ಮುಂತಾದ ಮುಖ್ಯ ಕೃತಿಗಳೆಲ್ಲವೂ ಕನ್ನಡಕ್ಕೆ ಅನುವಾದವಾಗಿವೆ. ಅಲ್ಲದೆ ಅವರ ಪೂರ್ಣ ಆತ್ಮಕಥೆ ಸತ್ಯಶೋಧನೆ ಎಂಬ ಹೆಸರಿಂದ ಬಹು ಹಿಂದೆಯೆ ಕನ್ನಡದಲ್ಲಿ ಅಚ್ಚಾಗಿದೆ.

ಗಾಂಧಿಯವರನ್ನು ಕುರಿತು ಬರೆದಿರುವ ವಿದೇಶೀ ಪ್ರಮುಖರಲ್ಲಿ ವಿಲ್ಲಿಗ್ರಹಾಂ ಪೋಲಕ್, ಲೂಯಿ ಫಿಶರ್, ವಿನ್ಸೆಂಟ್ ಷೀನ್ ಮುಖ್ಯರು. ಇಂಗ್ಲಿಷಿನಲ್ಲಿ ಬರೆದಿರುವ ಭಾರತೀಯರಲ್ಲಿ ಜುಗತ್‌ರಾಮ್ ದವೆ, ರವೀಂದ್ರನಾಥ ಠಾಕೂರ್, ಬಿ.ಆರ್. ನಂದಾ. ಕೃಷ್ಣ ಹಥೀಸಿಂಗ್ ಪ್ರಮುಖರು. ಅನುವಾದಕರಲ್ಲಿ ಈಗಾಗಲೇ ಹೆಸರಿಸಿದ ದ. ಕೃ, ಭಾರದ್ವಾಜ, ಸಿದ್ಧವನಹಳ್ಳಿ ಕೃಷ್ಣಶರ್ಮರ ಜೊತೆಗೆ ಗೊರೂರು ರಾಮಸ್ವಾಮಿ, ಅಯ್ಯಂಗಾರ್, ವಿ. ಎಸ್. ನಾರಾಯಣರಾವ್, ಜಿ. ವಿ. ನಾರಾಯಣಮೂರ್ತಿ ಕೆ. ಎಸ್. ನರಸಿಂಹಸ್ವಾಮಿ, ಎಸ್.ವಿ. ಕೃಷ್ಣಮೂರ್ತಿರಾವ್ ಮುಖ್ಯರು. ಇವರೆಲ್ಲರೂ ನುರಿತ ಲೇಖಕರಾದುದರಿಂದ ಅನುವಾದಗಳು ಮೂಲ ಲೇಖನಗಳೋ ಎನ್ನುವಷ್ಟು ಮನೋಜ್ಞವಾಗಿವೆ.

ಗಾಂಧಿನಿಧಿಯವರು ಅಚ್ಚುಕಟ್ಟಾಗಿ ಪ್ರಕಟಿಸಿರುವ, ಸುಲಭ ಬೆಲೆಯ ಇಪ್ಪತ್ತು ಕನ್ನಡ ಪುಸ್ತಕಗಳು ನಮಗೆ ಬಾಪುವಿನ ಜೀವನವನ್ನು, ಸಾಧನೆಯನ್ನು ಸರಳ ಶೈಲಿಯಲ್ಲಿ ಸುಲಭವಾಗಿ ಅರ್ಥವಾಗುವಂತೆ ತಿಳಿಸುತ್ತವೆ.

ಟಿ.ಎಂ.ಆರ್. ಸ್ವಾಮಿ, ಹೊಯಿಸಳ, ಪರಿಮಳ, ರಾಜರತ್ನಂ ಮೊದಲಾದವರು ಗಾಂಧೀಜಿಯವರನ್ನು ಕುರಿತು ಮಕ್ಕಳಿಗಾಗಿಯೇ ಪುಸ್ತಕಗಳನ್ನು ಬರೆದಿದ್ದಾರೆ.

ಮಹಾಪುರುಷರ ಜೀವನಚರಿತ್ರೆಗಳನ್ನು ಸಂಕ್ಷಿಪ್ತವಾಗಿ ಬರೆದ ಅನೇಕ ಪುಸ್ತಕಗಳಲ್ಲಿ ಗಾಂಧೀಜಿಯವರ ಬದುಕು, ಸಾಧನೆಯನ್ನು ಕುರಿತು ಬರೆದ ಅಧ್ಯಾಯಗಳಿವೆ. ಇವುಗಳಲ್ಲಿ ಮುಖ್ಯವಾದುವು ಕುವೆಂಪುರವರ ವಿಭೂತಿ ಪೂಜೆ, ಎಚ್. ಕೃಷ್ಣರಾಯರ ಚರಿತ್ರೆಯ ಮಹಾಪುರುಷರು, ಮಿರ್ಜಿ ಅಣ್ಣಾರಾಯರ ಭಾರತದ ಬೆಳಕು, ಕೆ. ಎಸ್. ನಾರಾಯಣಸ್ವಾಮಿಯವರ ವಿಶ್ವಜ್ಯೋತಿಗಳು, ತೀ. ನಂ. ಶ್ರೀ. ಅವರ ನಂಟರು ಸಾ. ಶಿ. ಮರುಳಯ್ಯನವರ ವಿಭೂತಿ ಪುರುಷರು ಮುಂತಾದ 24 ಪುಸ್ತಕಗಳು ಗಮನಾರ್ಹವಾದುವು.

ರಾಜಕೀಯ, ಸಾಮಾಜಿಕ ವಿಚಾರಗಳಲ್ಲಿ ಕ್ರಾಂತಿಯೆಬ್ಬಿಸಿದ ಗಾಂಧೀಜಿಯವರ ವಿಚಾರಧಾರೆಗಳಿಗಿಂತ, ವೈಚಾರಿಕ ವಿಷಯಗಳ ಸಿದ್ಧಿಯಾದ ಭಾರತಸ್ವಾತಂತ್ರ್ಯ ಸಂಗ್ರಾಮ ಅವರೆಲ್ಲರ ಸಾಹಿತ್ಯದ ಮೇಲೆ ಅಗಾಧ ಪರಿಣಾಮ ಬೀರಿತು. ಈ ಹೋರಾಟ ಜನಗಳಿಗೊಂದು ಅಪೂರ್ವ ಅನುಭವನ್ನೊದಗಿಸಿತು. ಈ ಸಂಗ್ರಾಮದ ಕಾವು ಹೆಚ್ಚು ಚುರುಕಾಗಿ ತಟ್ಟಿದುದು ಉತ್ತರ ಕರ್ಣಾಟಕದಲ್ಲೇ. ತ. ರಾ. ಸು. ಅವರ ಕಾದಂಬರಿ ರಕ್ತತರ್ಪಣದಿಂದ ಆರಂಭವಾಗಿ ಮಿರ್ಜಿ ಅಣ್ಣಾರಾಯ, ಬಸವರಾಜ ಕಟ್ಟೀಮನಿ, ಅನಂತನಾರಾಯಣ, ಅ.ನ.ಕೃ, ನಿರಂಜನ, ಇನಾಂದಾರ್‌ರವರ ಕಾದಂಬರಿಗಳಲ್ಲಿ ಸ್ವಾತಂತ್ರ್ಯ ಹೋರಾಟದ ವರ್ಣನೆ, ಕಷ್ಟನಷ್ಟಗಳು ಪರಿಣಾಮಕಾರಿಯಾಗಿ ಚಿತ್ರಿತವಾಗಿವೆ. ಗೊರೂರು ರಾಮಸ್ವಾಮಿ ಅಯ್ಯಂಗಾರ್, ನಿರಂಜನ, ಅಶ್ವತ್ಥ, ಬಸವರಾಜ ಕಟ್ಟೀಮನಿ ಮುಂತಾದ ಲೇಖಕರ ಕಥೆಗಳಲ್ಲಿ ಗಾಂಧೀಜಿಯವರ ತತ್ತ್ವಗಳ ಪ್ರತಿಪಾದನೆ ಇದೆ, ಸ್ವಾತಂತ್ರ್ಯಸಂಗ್ರಾಮದ ಹಿನ್ನೆಲೆ ಇದೆ. ಆದರೆ ಈ ಎಲ್ಲ ಲೇಖಕರು ತಮ್ಮ ಕಲಾಕೃತಿಗಳಲ್ಲಿ ಗಾಂಧಿ ತತ್ತ್ವಗಳನ್ನು ಒರೆಗೆ ಹಚ್ಚಿಲ್ಲ ಎಂಬ ಟೀಕೆ ಇದ್ದೇ ಇದೆ.

ಗಾಂಧೀಜಿಯವರ ಆದರ್ಶ, ನಡೆನುಡಿಗಳು, ಬರೆಹಗಳು ಭಾವಜೀವಿಗಳಾದ ಕವಿಗಳನ್ನು ಉತ್ತೇಜಿಸಿದುದರಲ್ಲಿ ಆಶ್ಚರ್ಯವಿಲ್ಲ. ಕುವೆಂಪು, ಮಾಸ್ತಿ, ರಂ. ಶ್ರೀ. ಮುಗಳಿ, ವಿ. ಸೀ., ಬೇಂದ್ರೆ, ಪು. ತಿ. ನ., ಕೆ.ಎಸ್. ನರಸಿಂಹಸ್ವಾಮಿ, ರಾಜರತ್ನಂ, ಪರಮೇಶ್ವರಭಟ್ಟ, ಚನ್ನವೀರ ಕಣವಿ, ಜಿ. ಎಸ್. ಶಿವರುದ್ರಪ್ಪ, ಗೋಪಾಲಕೃಷ್ಣ ಅಡಿಗ, ಡಿ.ಎಸ್.ಕರ್ಕಿ—ಮೊದಲಾದವರ ಕವನಗಳಲ್ಲಿ ಗಾಂಧೀಜಿಯವರ ದರ್ಶನ. ಸಾಧನೆಗಳ ಪ್ರಶಂಸೆಯಿದೆ.

ಶ್ರೀರಂಗರ ಹರಿಜನ್ವಾರ, ಶೋಕಚಕ್ರ, ಕುವೆಂಪುರವರ ಬಲಿದಾನ, ಕಾರಂತರ ಗರ್ಭಗುಡಿ. ಬೇಂದ್ರೆಯವರ ಉದ್ಧಾರ ಎಂಬೀ ನಾಟಕಗಳಲ್ಲಿ ಅಸ್ಪೃಶ್ಯತೆ, ಮದ್ಯಪಾನ ನಿರೋಧ ಮುಂತಾದ ಗಾಂಧೀತತ್ತ್ವಗಳ ಪ್ರತಿಪಾದನೆ ಇದೆ.

ಸ್ವಾತಂತ್ರ್ಯ ಹೋರಾಟದ ಕಾಲದಲ್ಲಿ ಬ್ರಿಟಿಷ್ ಸರಕಾರದ ವಿರುದ್ಧ ಬರೆದು ಅದರ ಕೋಪಕ್ಕೆ ಪಾತ್ರರಾದ ಪತ್ರಿಕೆಗಳಲ್ಲಿ—ಮುಖ್ಯವಾಗಿ ವಿಶ್ವಕರ್ನಾಟಕ,

ತಾಯಿನಾಡು, ಸಂಯುಕ್ತಕರ್ನಾಟಕ, ಪ್ರಜಾಮತ ಇವುಗಳಲ್ಲಿ—ದಿಟ್ಟತನದಿಂದ ಸಂಪಾದಕೀಯ ಬರೆಯುತ್ತಿದ್ದ ತಿರುಮಲೆ ತಾತಾಚಾರ್ಯಶರ್ಮ, ಪಿ. ಆರ್. ರಾಮಯ್ಯ, ರಂ. ರಾ. ದಿವಾಕರ, ಬಿ. ಎಸ್. ಗುಪ್ತ, ಇವರ ಪ್ರಭಾವಶಾಲೀ ಬರೆಹಗಳನ್ನು ಯಾರೂ ಮರೆಯುವಂತಿಲ್ಲ.

ಪತ್ರಿಕೆಗಳಂತೆ ಪ್ರಕಾಶಕರಲ್ಲೂ ಸುಮಾರಾಗಿ ಎಲ್ಲರೂ ಗಾಂಧೀ ಸಾಹಿತ್ಯವನ್ನು ಒಂದಲ್ಲ ಒಂದು ರೀತಿಯಿಂದ ಪ್ರಕಟಿಸಿದ್ದಾರೆ. ಕಾವ್ಯಾಲಯ, ಉಷಾ ಸಾಹಿತ್ಯಮಾಲೆ, ಗೀತಾ ಬುಕ್ ಹೌಸ್, ಮೋಹನ ಪ್ರಕಾಶನ, ವಯಸ್ಕರ ಶಿಕ್ಷಣ ಸಮಿತಿ, ತಳುಕಿನ ವೆಂಕಣ್ಣಯ್ಯ ಸ್ಮಾರಕಗ್ರಂಥಮಾಲೆ, ಸತ್ಯಶೋಧನ ಪ್ರಕಟನಾಲಯ, ಸ್ಟ್ಯಾಂಡರ್ಡ್ ಬುಕ್ ಡಿಪೋ, ಗಾಂಧೀ ಸಾಹಿತ್ಯ ಮಂಡಳಿ, ಕರ್ಣಾಟಕ ಸಂಘ–ಸೆಂಟ್ರಲ್ ಕಾಲೇಜು, ಸರ್ವೋದಯ ಸಂಘ, ಮಿಂಚಿನ ಬಳ್ಳಿ, ಸಾಧನ ಬುಕ್ ಡಿಪೋ, ಮನೋಹರ ಗ್ರಂಥಮಾಲೆ—ಮೊದಲಾದವರೆಲ್ಲ ಈ ಭಾಗದಲ್ಲಿ ಶ್ರದ್ಧಾಭಕ್ತಿಯಿಂದ ತಮ್ಮ ಸೇವೆ ಸಲ್ಲಿಸಿದ್ದಾರೆ. (ಟಿ. ವಿ. ಎಸ್.)

**ಕನ್ನಡದಲ್ಲಿ ಗಾದೆಗಳು :** ಕನ್ನಡದಲ್ಲಿ ಬಳಕೆಯಲ್ಲಿರುವ ಗಾದೆ ಎಂಬ ಶಬ್ದ ಸಂಸ್ಕೃತದ ಗಾಥಾ ಎಂಬ ಶಬ್ದದಿಂದಲೊ ಪ್ರಾಕೃತದ ಗಾಹೆ ಎಂಬ ಶಬ್ದದಿಂದಲೊ ಬಂದಿದೆ.

ರೂಢಿಯ ಮಾತೇ ಗಾದೆ, ನಾಡಿನ ನಡತೆಯೇ ನಿಯಮ—ಎಂಬ ಗಾದೆಯಿಂದ ರೂಢಿಯ ಮಾತುಗಳು, ದಿನಬಳಕೆಯ ಮಾತುಗಳು, ಜನ ಆಡಿ ರೂಢಿಸಿದ ಮಾತುಗಳು, ಗಾದೆಗಳಾಗುತ್ತವೆ ಎಂದು ಅರ್ಥವಾಗುತ್ತದೆ. 'ಊರ ಚಿಂತೆ ಕಟ್ಟಿಕೊಂಡು ಈರ ಶೆಟ್ಟಿ ಬಡವಾದ' ಎನ್ನುತ್ತಾರೆ. ಇದು ಗಾದೆಯ ಮಾತು. ಊರ ಚಿಂತೆ ಕಟ್ಟಿಕೊಂಡರೆ ಈರಶೆಟ್ಟಿ ಒಬ್ಬನೇ ಅಲ್ಲ, ಎಲ್ಲರೂ ಬಡವಾಗುತ್ತಾರೆ. ಎಲ್ಲರ ಪಾಡೂ ಅಷ್ಟೆ. ತೆನಾಲಿ ರಾಮಕೃಷ್ಣ ಸಾಕಿದ ಕುದುರೆಯ ಹಾಗಾಗುತ್ತಾರೆ. ಇದು ಎಲ್ಲರ ಅನುಭವಕ್ಕೆ ಬಂದಿರುವ ವಿಷಯ. ಇದರಲ್ಲಿ ನಿತ್ಯಸತ್ಯವಿದೆ. ಜನರ ಒಪ್ಪಿಗೆಯನ್ನು ಪಡೆದು ಅವರ ಮುದ್ರೆ ಪಡೆದು ನಾಣ್ಯದಂತೆ ಅದು ಪ್ರಚಾರಕ್ಕೆ ಬಂದಿದೆ. ಹೀಗೆಯೇ ಇನ್ನೂ ಎಷ್ಟೋ ವಿಷಯಗಳು ಗಾದೆಗಳಾಗಿವೆ. ಅನುದಿನದ ಮಾತಿನಲ್ಲಿ ನುಸುಳಿ ಬರುವ ಕಡ ಹುಟ್ಟಿ ಬಡನ ಕೆಟ್ಟ, ತುತ್ತು ತೂಕ ಕೆಡಿಸಿತು, ತುಂಬಿದ ಕೊಡ ತುಳುಕುವುದಿಲ್ಲ–ಎಂಬ ಗಾದೆಗಳಲ್ಲಿಯೂ ಸಾರ್ವಕಾಲಿಕ ಸತ್ಯ ಹುದುಗಿದೆ. ಹಾಲು ತುಪ್ಪ ಬೆರೆತ ಹಾಗೆ ಇಲ್ಲಿ ಉಚಿತವಾದ ಅಭಿಪ್ರಾಯ ಉಚಿತ ಮಾತುಗಳೊಡನೆ ಬೆರೆತಿದೆ.

ಗಾದೆಗಳಲ್ಲಿ ಕಂಡುಬರುವ ಸಾಮಾನ್ಯಲಕ್ಷಣಗಳು ಎರಡು ತೆರ. ಒಂದು–ಆಳವಾದ ಲೋಕಾನುಭವ, ಕಿರಿದರೊಳ್ ಪಿರಿದರ್ಥಮಂ ಪೇಳ್ವ ರೀತಿ, ನೀತಿಬೋಧೆ, ನಿರೀಕ್ಷಣ ಶಕ್ತಿ, ಶಿಕ್ಷಣದ ಬಗೆ, ಎಲ್ಲಕ್ಕೂ ಮಿಗಿಲಾಗಿ ಮಾತಿನ ಚತುರತೆ, ಮಾನವ ಸ್ವಭಾವ ಪರಿಚಯ. ಇನ್ನೊಂದು—ಗಾದೆಗಳಲ್ಲಿ ಎದ್ದು ಕಾಣುವ ಧ್ವನಿ, ನಾದ, ಪ್ರಾಸ, ಬಿಗಿ, ಮೈಕಟ್ಟು, ತೂಕ, ಶೈಲಿ, ಅಲಂಕಾರ (ಮುಖ್ಯವಾಗಿ ಶಬ್ದಾಲಂಕಾರ), ರೀತಿ–ಇವೇ ಮುಂತಾದುವು. ಈ ವಿಶಿಷ್ಟ ಗುಣಗಳನ್ನು ಸಾಮಾನ್ಯವಾಗಿ ಎಲ್ಲ ಭಾಷೆಯ ಗಾದೆಗಳಲ್ಲಿಯೂ ಕಾಣಬಹುದು. ವಿನೋದ, ಹಾಸ್ಯ ಇವು ಕೂಡ ಗಾದೆಗಳಲ್ಲಿ ಮನೆ ಮಾಡಿವೆ. ಹನಿಗೂಡಿದರೆ ಹಳ್ಳ, ತೆನೆಗೂಡಿದರೆ ಬಳ್ಳ ; ಕುಂಟನಿಗೊಬ್ಬ ಶಿವ, ಕುರುಡನಿಗೊಬ್ಬ ಶಿವ ; ಕಡುಬಿನ ಹೊತ್ತಿಗೆ ಪಿಡುಗಾಗಿ ಬಂದ, ಆಕಾಶಕ್ಕೆ ಏಣಿ ಹಾಕಿದ ಹಾಗೆ; ಕುರುಡರು ಆನೆ ನೋಡಿದ ಹಾಗೆ ; ಭರಣಿ ಮಳೆ, ಧರಣಿ ಬೆಳೆ; ಕಳ್ಳಿ ಕರು ಚಂದ, ಕೊಲ್ಲಿ ಮೈ ಚಂದ ; ಭಲಾ ಚೆಟ್ಟಿ ಎಂದರೆ ಕೆಮ್ಮಣ್ಣು ಮುಕ್ಕಿದ ; ತೇರು ನುಂಗೋನಿಗೆ ಪರಿಸೆ ಹಪ್ಪಳ ಸಂಡಿಗೆ ; ರಾಜಯೋಗ, ದರಿದ್ರಜಾತಕ ; ಅಜ್ಜಾ ಮದುವೆ ಅಂದರೆ ಯಾರಿಗೆ, ನನಗೇ ! ಅಂದ್ನಂತೆ––ಮುಂತಾದ ಗಾದೆಗಳನ್ನು ಸಮೀಕ್ಷಿಸಬಹುದು.

ಎಲ್ಲೊ ಒಂದೆಡೆ ನಡೆದ ಸಂಗತಿಗಳು ಕಾಲದೇಶಗಳಿಗೆ ಕಟ್ಟುಬೀಳದೆ ಮಾನವ ಜೀವನದ ಸಾಂಕೇತಿಕ ಅನುಭವಕ್ಕೆ ಹೊಂದಿಕೊಳ್ಳುವ ಹಾಗೆ ಒಬ್ಬ ಚತುರನ ಕಲ್ಪನೆಗೆ ಸಿಕ್ಕು ಗಾದೆಗಳಾಗಿ ರೂಪಗೊಳ್ಳಬಹುದು. ಮಾತು ಮಾತಾಡ್ತ ಗೌಡ ಅವರೆಕಾಯಿ ಕುಯ್ದ, ಮಾಬಾಬೋಯಿ ಮದ್ದೂರಿಗೆ ಹೋದಹಾಗೆ, ಇಣುಕಿ ಇಣುಕಿ ನೋಡಿದ ಒಣಕಲು ಗೌರೀನ—ಎಂಬ ಗಾದೆಗಳು ಈ ತೆರನಾದುವು. ಮನೆಬಳಕೆಯ ಅನುಭವ ಎಷ್ಟೊ ಗಾದೆಗಳಿಗೆ ಕಾರಣವಾಗಿದೆ. ಗಾಣಿಗರು ಎಣ್ಣೆ ಅಳೆಯುವಾಗ ಹೆಚ್ಚಿಗೆ ಬೀಳದಂತೆ ಕೈ ಸೊಟ್ಟಗೆ ಮಾಡಿ ಮೇಲಿಷ್ಟು ಸಟ್ಟುಗದಿಂದ ಬಗ್ಗಿಸುವುದನ್ನು ಕಂಡ ಜನ ಗಾಣಗಿತ್ತಿ ಕೈ ಹುಟ್ಟುವಾಗಲೆ ಚೊಟ್ಟು ಎಂಬ ಗಾದೆ ಕಟ್ಟಿದ್ದಾರೆ. ಮನೆ ಮಾತುಗಳಂತೆಯೇ ಮೊನೆ ಮಾತುಗಳೂ ಅನೇಕ ವೇಳೆ ಗಾದೆಗಳಾಗಿವೆ. ಕುರುಡ ಭಟ್ಟರೇ ನಮಸ್ಕಾರ ಎಂದರೆ ಕುಚೇಷ್ಟೆಗೆ ಮೂಲವೋ ! ಅಂದ್ರಂತೆ—ಎಂಬುದು ಅಂಥವುಗಳಲ್ಲಿ ಒಂದು. ಹೀಗೆಯೇ ಇನ್ನೂ ಎಷ್ಟೊ ಮನೆಮಾತುಗಳು, ಮೊನೆಮಾತುಗಳು, ಸಾಣ್ಣುಡಿಗಳಾಗಿವೆ, ಜಾಣ್ಣುಡಿಗಳಾಗಿವೆ ; ಅವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಗಾದೆಗಳ ಹುಟ್ಟು ಉಪಮಾನದಲ್ಲಿರಬೇಕೆಂದು ತಿಳಿಯುತ್ತದೆ. ಗಾದೆಗಳ ಬೆಳೆವಣಿಗೆಯ ಜಾಡು ಎತ್ತ ಹರಿಯುತ್ತದೆ ಎಂದು ಮಂದಟ್ಟಾಗುತ್ತದೆ.

ಗಾದೆಗಳನ್ನು ಎಲ್ಲ ಭಾಷೆಗಳಲ್ಲಿಯೂ ಕಾಣಬಹುದು. ದೇಶಭೇದ, ಕಾಲಭೇದಗಳಿಗೆ ಅನುಗುಣವಾಗಿ ಭಾಷೆ ಬಹುಮುಖವಾಗಿ ಮಾರ್ಪಡುವಂತೆ ಜನಪದದಲ್ಲಿ ಬಳಕೆಯಲ್ಲಿರುವ ನಾಣ್ಣುಡಿಗಳು ಬಗೆಬಗೆಯಾಗಿ ರೂಪಾಂತರ ಹೊಂದಬಹುದು. ವಿವಿಧ ಭಾಷೆಯ ಜನರ ಸಂಪರ್ಕದ ಪರಿಣಾಮವಾಗಿ ಭಾಷೆಗಳು ಬೆಳೆದಂತೆ ಗಾದೆಗಳು ಬೆಳೆಯುತ್ತವೆ. ಅವುಗಳ ಶಾಸ್ತ್ರೀಯವಾದ ಅಭ್ಯಾಸವನ್ನು ಕೈಗೊಂಡಾಗ ಕಂಡು ಬರುವ ಅಂಶವೆಂದರೆ ಮಾನವ ಸ್ವಭಾವ ಎಲ್ಲ ಭಾಗಗಳಲ್ಲಿಯೂ ಒಂದೇ ಎಂಬುದು. ವಿವಿಧ ದೇಶ, ಪ್ರಾಂತ್ಯಗಳ ಸ್ಥಿತಿಗತಿ, ಜನರ ವಿಶಿಷ್ಟ ಶೀಲ ಸ್ವಭಾವಗಳು ಕೂಡ ಅವುಗಳಿಂದ ಸ್ಫುರಿಸುತ್ತವೆ. ತುಂಬಿದ ಕೊಡ ತುಳುಕುವುದಿಲ್ಲ ಎಂಬ ಕನ್ನಡ ಗಾದೆಗೆ ಸಮಾನವಾಗಿ ತೆಲುಗಿನಲ್ಲಿರುವ ನಿಂಡು ಕುಂಡ ತೊನಕದು ಎಂಬ ಗಾದೆಯನ್ನು ಗಮನಿಸಬಹುದು. ಇದು ಅನುಭವಸಾದೃಶ್ಯಕ್ಕೊಂದು ನಿದರ್ಶನ. ಎರೆ ನಂಬಿದೋ ? ದೊರೆ ನಂಬಿದೋ ; ನೆಲಕ್ಕೆ ಹಾಕಿದವ ಬದುಕಿದ ; ನಾಡು ಬೆಳೆದರೆ ಹಾಡಿಕೊಂಡು ಉಣಬಹುದು; ಆಚಾರ ಅರಸುತನ, ಕೊಟ್ಟಿತು, ಅನಾಚಾರ ಮೂದೇವಿ ಕೊಟ್ಟಿತು ; ನಿಯಮವುಳ್ಳವನನ್ನು ಕಂಡರೆ ಯಮನಿಗೂ ಭಯ ; ಸ್ವತಂತ್ರವೋ ? ಸ್ವರ್ಗಲೋಕವೋ ಎಂಬ ಗಾದೆಗಳನ್ನು ನೋಡಿದರೆ ಜೀವನದ ವೈವಿಧ್ಯದ ಅರಿವಾಗುತ್ತದೆ. ಕನ್ನಡನಾಡು ವ್ಯವಸಾಯ ಪ್ರಧಾನವಾದ ದೇಶ. ಇಲ್ಲಿಯ ಜನರು ಶೀಲವಂತರು, ನಿಯಮವುಳ್ಳವರು, ಸ್ವಾತಂತ್ರ್ಯಪ್ರಿಯರು ಎಂಬ ಅಂಶ ಮೇಲಿನ ಗಾದೆಗಳಿಂದ ತಿಳಿಯುತ್ತದೆ.

ಗಾದೆಗಳ ವಸ್ತು ವಿಶ್ವವ್ಯಾಪಿ. ಮಾನವನ ಮನಸ್ಸಿನಲ್ಲಿ ಸ್ಫುರಿಸುವ ಸೂಕ್ಷ್ಮವಾದ ಭಾವಗಳೂ ಪರಂಪರಾನುಗತವಾಗಿ ಬಂದಿರುವ ತತ್ತ್ವಾನ್ವೇಷಣದ ಸಾರವೂ ಜನತೆಯ ಏಳಿಗೆಗೆ ಸಹಕಾರಿಯಾದ ನೀತಿಯ ಅತ್ಯುತ್ತಮ ಅಂಶಗಳೂ ಗಾದೆಗಳಲ್ಲಿ ರೂಪುಗೊಂಡಿರುವುದು ಕಂಡುಬರುತ್ತದೆ. ಮನಸ್ಸಿನಂತೆ ಮಹಾದೇವ, ಮನವೇ ಗಂಗೆ ತನುವೇ ಕಾಶಿ, ತನ್ನ ತಾನರಿದರೆ ಸುಜ್ಞಾನಿ, ರೀತಿ ತಪ್ಪಿದರೂ ನೀತಿಯಿರಬೇಕು ಎಂಬ ನುಡಿಮುತ್ತುಗಳು ಮೇಲಿನ ಅಭಿಪ್ರಾಯವನ್ನು ಪುಷ್ಟೀಕರಿಸುತ್ತವೆ. ಅಂಗೈ ಅಗಲದ ಕನ್ನಡಿ ಆನೆಯನ್ನು ಪ್ರತಿಬಿಂಬಿಸುವಂತೆ ಒಂದೊಂದು ಗಾದೆಯೂ ನಾವು ಕಂಡು ಕೇಳಿದ, ಎಂದೂ ಕಾಣದ, ಅರಿಯದ ಎಷ್ಟೋ ವಿಷಯಗಳನ್ನು ನಮ್ಮ ಗಮನಕ್ಕೆ ತರುತ್ತವೆ. ಮನಸ್ಸಿನಲ್ಲಿ ವಿಚಾರ ತರಂಗಗಳನ್ನು ಎಬ್ಬಿಸುವುದರಲ್ಲಿ ಅವುಗಳಿಗೆ ರಾಮಬಾಣದ ಶಕ್ತಿಯಿದೆ. ಚಾರಿತ್ರಿಕ ವಿಷಯಗಳು ಎಷ್ಟೋ ಗಾದೆಗಳಿಗೆ ವಸ್ತುವಾಗಿವೆ. ಉದಾಹರಣೆ : ಹಳ್ಳಿ ದೇವರ ತಲೆ ಹೊಡೆದು ಡಿಳ್ಳಿದೇವರ ಡೊಳ್ಳು ಬೆಳೆಸಿದರು, ಔರಂಗಜೇಬನಿಗೆ ಮಲ್ಲಾಸಾಲಿ ವಿದ್ಯೆ ಕಲ್ಪಿಸಿದ ಹಾಗೆ—ಇತ್ಯಾದಿ. ಮಹಾಭಾರತ, ರಾಮಾಯಣ, ಭಾಗವತಾದಿಗಳಿಂದಲೂ ಅನೇಕ ಗಾದೆಗಳು ಬಂದಿವೆ. ಅಂತೂ ಇಂತೂ ಕುಂತೀ ಮಕ್ಕಳಿಗೆ ರಾಜ್ಯವಿಲ್ಲ ; ಪಕ್ಷ ಪಾಂಡವರಲ್ಲಿ, ಊಟ ಕೌರವರಲ್ಲಿ ; ಸಂಜೀವನ ಪರ್ವತಕ್ಕೆ ಆಂಜನೇಯ ಕಾಲನೇಮೀನ ದಾರಿ ಕೇಳಿದ ಹಾಗೆ, ಅಳಿಲ ಭಕ್ತಿ ಮಳಲ ಸೇವೆ, ಜನಕರಾಯನ ಮನೇಲಿ ಚಂದ್ರ ನೀರಾಯ್ತು (ಜನವನ್ನು ಮೆಚ್ಚಿಸಲು ಜನಾರ್ದನನಿಂದಲೂ ಸಾಧ್ಯವಿಲ್ಲ. ಜನಕರಾಯನ ಮನೆಯಲ್ಲಿ, ಸೀತಾಸ್ವಯಂವರ ಕಾಲದಲ್ಲಿ ಅರಿಶಿನ–ಕುಂಕುಮಕ್ಕೆ ಬಂದಿದ್ದ ಮುತ್ತೈದೆಯರ ಹಣೆಗೆ ಇಡುವ ಸಲುವಾಗಿ ಕದರಿದ್ದ ಚಂದ್ರಕ್ಕೆ ನೀರು ಹೆಚ್ಚಾಗಿತ್ತಂತೆ). ಪುಷ್ಪ ರುಕ್ಮಿಣಿಗೆ, ವೃಕ್ಷ ಸತ್ಯಭಾಮೆಗೆ ; ರಾಘವೇಂದ್ರ ರಾಜ್ಯವಾಳಿದ, ಯಾದವೇಂದ್ರ ದನ ಕಾದ (ದೇವಾದಿ ದೇವರ್ಕಳುಗಳೆಲ್ಲ ವಿಧಿಯ ಅಧೀನ)—ಇತ್ಯಾದಿ. ಬುದ್ಧನ ಕಥೆಗಳು, ಅಕ್ಬರ್ ಬೀರಬಲ್ ಕಥೆಗಳು, ತೆನಾಲಿ ರಾಮಕೃಷ್ಣನ ಕಥೆಗಳು, ಈಸೋಪನ ನೀತಿಕಥೆಗಳು, ಪಂಚತಂತ್ರ, ಕಥಾಸರಿತ್ಸಾಗರ ಇವುಗಳ ವಿಷಯಗಳೂ ಗಾದೆಗಳ ಬೊಕ್ಕಸದಲ್ಲಿ ಸೇರಿವೆ. ಅನುತೀರ ಚಾರಿಗೆ ಬಾಲ, ಗಂಭೀರ ಚಾರಿಗೆ ತಲೆ, ಮಧ್ಯದ ಖಂಡ ಧರ್ಮಸ್ಥನಿಗೆ ; ಸಾಯದ ಮನೇಲಿ ಸಾಸುವೆ ಕಾಳು ತರಹೇಳಿದ ಹಾಗೆ ; ವಾಸನೆ ಕಳ್ಳನ ಕಥೆ ಹಾಗೆ–ಇವೆಲ್ಲ ಬುದ್ಧನ ಕಥೆಗಳಿಗೆ ಸಂಬಂಧಪಟ್ಟವು. ನಾವೆ ಮುಳುಗುವಾಗ್ಗೆ ನಾವಕೀರಕ್ಷ ಓದ ಹೇಳಿದ ಹಾಗೆ ; ಕಾಗೆಗಳ ಲೆಕ್ಕಮಾಡಿದ ಹಾಗೆ—ಇವು ಬೀರಬಲ್ ಕಥೆಗಳಿಗೆ ಸಂಬಂಧಸಿದುವು. ತೆನಾಲಿ ರಾಮಕೃಷ್ಣ ಕುದುರೆ ಸಾಕಿದ ಹಾಗೆ, ಹಿತ್ತಾಳೆ ಕೊಡ ಮಣ್ಣಿನ ಹರವಿ ಕಥೆ ಹಾಗೆ, ಚಿನ್ನದ ಘಟ್ಟಿ ಇಲಿ ಕಚ್ಚಿಕೊಂಡು ಹೋಗಬಹುದು, ಚಿಕ್ಕ ಮಗು ಹದ್ದು ಹಾರಿಸಿಕೊಂಡು ಹೋಗಬಾರದೇ—ಇವು ತೆನಾಲಿ ರಾಮಕೃಷ್ಣನ ಕಥೆಗಳು, ಈಸೋಪನ ನೀತಿ ಕಥೆಗಳು, ಪಂಚತಂತ್ರ ಇವುಗಳಿಂದ ಬಂದವು. ಇವುಗಳನ್ನೆಲ್ಲ ಪರಿಶೀಲಿಸಿದರೆ ಗಾದೆಗಳೇ ಒಂದು ಕಥಾಸರಿತ್ಸಾಗರವೆನಿಸುತ್ತದೆ. ಸಮುದ್ರದ ಅಂತರಾಳದಲ್ಲಿ ದೊರೆಯಬಹುದಾದ ಹವಳದ ಕುಡಿಗಳು, ಮುತ್ತುಗಳು ಇಲ್ಲಿಯೂ ದೊರೆಯುತ್ತವೆ—ಇವು ನುಡಿಮುತ್ತುಗಳು.

ಪ್ರಾಚೀನ ಕವಿಗಳೂ ತಮ್ಮ ಕಾಲದಲ್ಲಿ ಬಳಕೆಯಲ್ಲಿದ್ದ ಎಷ್ಟೋ ಗಾದೆಗಳನ್ನು ತಮ್ಮ ಕಾವ್ಯಗಳಲ್ಲಿ ಬಳಸಿಕೊಂಡಿದ್ದಾರೆ. ಕವಿಪ್ರಯೋಗಗಳು ಎಷ್ಟೋ ಗಾದೆಮಾತುಗಳಾಗಿವೆ. ಕಾವ್ಯದ ಉದ್ದಕ್ಕೂ ಓತಪ್ರೋತವಾಗಿ ಗಾದೆಗಳನ್ನು ಬಳಸಿರುವವನೆಂದರೆ ನಯಸೇನ. ಒಂದೊಂದು ವಿಷಯವನ್ನು ವರ್ಣಿಸಬೇಕಾದರೂ ಅವನು ಅನೇಕ ಉಪ

ಮಾನಗಳನ್ನು ಬಳಸುತ್ತಾನೆ. ಮೂರು ದಿನದ ಪಗರಣಕ್ಕೆ ಗಡ್ಡಮೀಸೆ ಮಂಡೆಯಂ ಬೋಣಿಸಿಕೊಳ್ವಂತೆ ; ಬೆಕ್ಕು ಪಾಲಂಕಾಣ್ಬುದಲ್ಲದೆ ಮೇಗೆ ಬಂದಡಸುವ ಬಡಿಗೆಯಂ ಕಾಣದು ಎಂಬ ಅವನ ನುಡಿಮುತ್ತುಗಳಲ್ಲಿ ಹಾಸ್ಯದ ಹೊನಲು ಹರಿಯುತ್ತಿದೆ. ಇತರ ಕವಿಗಳೂ ಹೀಗೆಯೇ ಗಾದೆಗಳನ್ನು ತಮ್ಮ ಕಾವ್ಯಗಳಲ್ಲಿ ಅಳವಡಿಸಿಕೊಂಡು ತಮ್ಮ ಕಾವ್ಯಕ್ಕೆ ಸೊಬಗನ್ನು ತಂದಿದ್ದಾರೆ. ಒಬ್ಬೊಬ್ಬರಲ್ಲಿ ಒಂದೊಂದು ವೈಶಿಷ್ಟ್ಯವಿದೆ.

ವೇದಗಳು ಮಹರ್ಷಿಗಳ ಜ್ಞಾನ ಭಂಡಾರ ಹೇಗೋ ಹಾಗೆ ಗಾದೆಗಳು ಜನ ಸಾಮಾನ್ಯರ ಅನುಭವಾಮೃತ. ಸಮಾಜದ ಸಂಸ್ಕೃತಿ ಪರಂಪರೆಗೆ ಅವು ಕೈಗನ್ನಡಿಗಳು. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಗಾದೆಯೊಂದರಿಂದಲೇ ಗಾದೆಗಳ ಮಹತ್ತ್ವವೇನು ಎಂಬ ಅರಿವು ನಮಗಾಗುತ್ತದೆ. ಅವುಗಳನ್ನು ಮನನ ಮಾಡಿದರೆ ನಮ್ಮ ಜನರ ಧರ್ಮ ದೃಷ್ಟಿ ಎತ್ತ ಕಡೆ ಬಾಗಿದೆ, ಅವರ ನ್ಯಾಯಾನ್ಯಾಯ ವಿಮರ್ಶೆ ಯಾವ ಆಧಾರಗಳ ಮೇಲೆ ನೆಲೆಸಿದೆ, ಅವರನ್ನು ತಿವಿದೆಚ್ಚರಿಸುತ್ತಿರುವ ಗೊತ್ತುಗುರಿಗಳು ಯಾವುವು ಎಂಬುದೆಲ್ಲದರ ಪರಿಚಯವಾಗುತ್ತದೆ. ದೊಡ್ಡ ಪಟ್ಟಣಗಳ ಸಂಪರ್ಕವಿಲ್ಲದವರು, ಮುಖ್ಯವಾಗಿ ಹಳ್ಳಿಯ ಹೆಂಗಸರು ತಮ್ಮ ಮಾತು ಕಥೆಗಳಲ್ಲಿ, ಕಥೆ ಹೇಳುವಾಗ ಅನೇಕ ಗಾದೆಗಳನ್ನು ಬಳಸುತ್ತಾರೆ. ಗಾದೆಯ ಉಚಿತ ಬಳಕೆಯಿಂದ ಭಾಷೆಯ ಬಣ್ಣ ಏರುತ್ತದೆ. ಜಾನಪದ ಗದ್ಯದಲ್ಲಿ ಈ ವೈಖರಿಯನ್ನು ಕಾಣಬಹುದು. ಈ ಎಲ್ಲ ಕಾರಣಗಳಿಂದ ಗಾದೆಗಳ ಪರಿಚಯ ಜ್ಞಾನ ಎಲ್ಲರಿಗೂ ಅತ್ಯಗತ್ಯ. ಅವು ಬಾಳ ಕೈದೀವಿಗೆಗಳು.

ಗಾದೆಗಳು ಕಂಠಸ್ಥ ಸಂಪ್ರದಾಯಕ್ಕೆ ಸೇರಿದುವು. ಆದ್ದರಿಂದ ಅವನ್ನು ಬೇರೆ ಬೇರೆ ಸ್ಥಳಗಳಿಂದ ಆಯ್ದು ಅಚ್ಚು ಮಾಡುವ ಕೆಲಸ ಅಗತ್ಯ ಆಗಬೇಕಾಗಿದೆ. ರಾಮೇಗೌಡರು ಸಂಗ್ರಹಿಸಿ ಪ್ರಕಟಿಸಿರುವ ನಮ್ಮ ಗಾದೆಗಳು ಎಂಬ ಗ್ರಂಥ ಈ ನಿಟ್ಟಿನಲ್ಲಿ ಮೆಚ್ಚತಕ್ಕ ಹೆಜ್ಜೆಯಾಗಿದೆ. ಇಲ್ಲಿ ಎರಡು ಸಾವಿರಕ್ಕೂ ಹೆಚ್ಚಿನ ಗಾದೆಗಳು ಇವೆ. ಗಾದೆಗಳನ್ನು ಕುರಿತು ಸಂಪಾದಕರು ಬರೆದಿರುವ ದೀರ್ಘ ಪ್ರಸ್ತಾವನೆಯಂತೂ ಈ ಸಾಹಿತ್ಯದ ಬಗ್ಗೆ ಅನೇಕ ವಿಷಯಗಳನ್ನು ತಿಳಿಸುತ್ತದೆ. ಅದೇ ಸಂಪಾದಕರ ಕಿಟ್ಟೆಲ್ ಕೋಶದ ಗಾದೆಗಳು ಎಂಬ ಸಂಕಲನದಲ್ಲಿ ಕಿಟ್ಟೆಲ್ ನಿಘಂಟಿನಲ್ಲಿರುವ ನಾಲ್ಕು ಸಾವಿರಕ್ಕೂ ಹೆಚ್ಚಿನ ಗಾದೆಗಳು ಬಂದಿವೆ. ಎಚ್. ಎಸ್. ಅಚ್ಚಪ್ಪನವರ ಕನ್ನಡ ಗಾದೆಗಳು, ವೆಂಕಟರಮಣಯ್ಯನವರ ಕನ್ನಡ ಗಾದೆಗಳ ಕೋಶ, ಪಡೆನುಡಿಗಳ ಕೋಶ—ಇವು ಇನ್ನು ಕೆಲವು ಸಂಗ್ರಹಗಳು. ಅಚ್ಚಪ್ಪನವರು ಈಚೆಗೆ ಪ್ರಕಟಿಸಿರುವ ಗ್ರಂಥಸ್ಥ ಗಾದೆಗಳು ಎಂಬ ಬೃಹದ್‌ಗ್ರಂಥದಲ್ಲಿ ಹಿಂದಿನಿಂದ ಇಂದಿನವರೆಗಿನ ಕನ್ನಡ ಸಾಹಿತ್ಯದಲ್ಲಿ ಹುದುಗಿರುವ ಗಾದೆ ಮಾತುಗಳನ್ನು ಹೆಕ್ಕಿ ಕೊಟ್ಟಿದ್ದಾರೆ. ಎ. ಕೆ. ರಾಮಾನುಜನ್ ಅವರು ಗಾದೆಗಳು ಎಂಬ ಕಿರುಹೊತ್ತಗೆಯಲ್ಲಿ ಆ ವಿಷಯದ ಪರಿಚಯಾತ್ಮಕ ವಿವೇಚನೆ ಇದೆ.

ಗಾದೆಗಳನ್ನು ಶಾಸ್ತ್ರೀಯವಾಗಿ ಅಭ್ಯಾಸ ಮಾಡಬೇಕಾಗಿದೆ. ಅವನ್ನು ಪ್ರಚಾರದಲ್ಲಿರುವಂತೆ ಸಂಗ್ರಹಿಸುವುದು ಒಂದು ಕೆಲಸ. ಅವುಗಳಲ್ಲಿ ಆಗಿರುವ ಪಾಠಾಂತರಗಳನ್ನೂ ಹಾಗಾಗಲು ಕಾರಣಗಳನ್ನೂ ಗಮನಿಸುವುದು ಮತ್ತೊಂದು ಕೆಲಸ. ದೇಶವಿದೇಶದ ಗಾದೆಗಳೊಡನೆ ನಮ್ಮವನ್ನು ತೋಲನಮಾಡುವುದು ಇನ್ನೊಂದು ಕೆಲಸ. ಗಾದೆಗಳ ಅಕಾರಾದಿ, ವಿಷಯಕ್ಕೆ ತಕ್ಕಂತೆ ಅವುಗಳ ವಿಂಗಡಣೆ, ಅವುಗಳಲ್ಲಿನ ಭಾಷಾಸ್ವರೂಪ, ಪದಬಳಕೆ, ಅವುಗಳಲ್ಲಿ ಕಾಣುವ ಜನಜೀವನದ ಅಧ್ಯಯನ ಮತ್ತೊಂದು.

(ಎಚ್. ಎಸ್. ಎಸಿ.)

**ಕನ್ನಡದಲ್ಲಿ ಜೀವನಚರಿತ್ರೆಗಳು :** ವ್ಯಕ್ತಿಯೊಬ್ಬನ ಜೀವನ ಮತ್ತು ಸಾಧನೆಗಳನ್ನು ವಿವರಿಸುವ ಗ್ರಂಥವನ್ನು ಜೀವನ ಚರಿತ್ರೆ ಎನ್ನುತ್ತೇವೆ. ಇಂಥ ಚರಿತ್ರೆ ಆ ವ್ಯಕ್ತಿಯ ಜೀವನದಲ್ಲಿ ನಡೆದ ಘಟನೆಗಳ, ಸಾಹಸಗಳ ವಾಸ್ತವ ಪ್ರತಿಪಾದನೆಯಾಗಿರಬೇಕು. ಇದರ ಮೇಲೆ ಇಂಥ ಪ್ರತಿಪಾದನೆಯಲ್ಲಿ ಕಾವ್ಯಶೈಲಿಯ ಸೊಗಸಿದ್ದು ರಸವತ್ತಾಗಿದ್ದರೆ ಇನ್ನೂ ಒಳ್ಳೆಯದು. ಜೀವನಚರಿತ್ರೆಕಾರ ತನ್ನ ನಾಯಕ ವ್ಯಕ್ತಿಯ ಮನೋಧರ್ಮವನ್ನು ಶೀಲಚಾರಿತ್ರ್ಯಗಳನ್ನೂ ಪ್ರತಿಭಾ ಚಕ್ಷುವಿನಿಂದ ಒಳಹೊಕ್ಕು ನೋಡಿ ಆ ವ್ಯಕ್ತಿಯ ಮೂರ್ತಿಸ್ವರೂಪವನ್ನು ಸುಸ್ಪಷ್ಟವಾಗಿ ನಿರೂಪಿಸಿರಬೇಕು.

ದಿನಚರಿ, ಕಾಗದಪತ್ರ, ಸ್ಮೃತಿಲೇಖ, ಉಪಾಖ್ಯಾನ, ಸಮಕಾಲೀನರ ಹೇಳಿಕೆ, ಆತನವೇ ಆದ ಕೃತಿಗಳು—ಇತ್ಯಾದಿ ಮೂಲಸಾಮಗ್ರಿಗಳನ್ನು ಬಳಸಿಕೊಂಡು ಜೀವನ ಚರಿತ್ರಕಾರ ತನ್ನ ಕಥಾನಾಯಕನ ಜೀವನವನ್ನು ಬರೆಯಬೇಕು. ವ್ಯಕ್ತಿಯ ಜೀವನ ವೃತ್ತಾಂತಗಳಲ್ಲಿ ಕೆಲವನ್ನು ಬಿಡುವುದು, ಸೇರಿಸುವುದು, ಅದಲು ಬದಲು ಮಾಡುವುದು, ವಿರೂಪಗೊಳಿಸುವುದು, ಮರೆಮಾಚುವುದು ಇವು ಯಾವುದನ್ನೂ ಚರಿತ್ರಕಾರ ಮಾಡಬಾರದು. ಜೀವನ ಚರಿತ್ರಕಾರ ತನ್ನ ನಾಯಕನನ್ನು ನೆರಳಿನಂತೆ ಅನುಸರಿಸಬೇಕು. ಆ ನಾಯಕನ ಜೀವನದಲ್ಲಿನ ಘಟನಾವಳಿಗಳನ್ನು ಅವು ನಡೆದ ಕಾಲಕ್ರಮದಲ್ಲಿಯೇ ಚಿತ್ರಿಸಬೇಕು. ಹೀಗೆ ಜೀವನಚರಿತ್ರೆಯಲ್ಲಿ ಪ್ರಾಮಾಣಿಕವಾದ ಸತ್ಯ ನಿರೂಪಣೆ ಮುಖ್ಯ.

ಪ್ರತಿಯೊಬ್ಬರೂ ತಮ್ಮ ತಮ್ಮ ಜೀವನವನ್ನು ತಾವೇ ಬರೆದಿಡುವುದು ಸರ್ವೋತ್ತಮ ಎಂಬುದು ಡಾ. ಜಾನ್ಸನ್ನನ ಮತ. ಪ್ರತಿಯೊಬ್ಬನಿಗೂ ತನ್ನ ವಿಷಯ ಇತರರಿಗಿಂತ ತನಗೇ ಹೆಚ್ಚಾಗಿ ತಿಳಿದಿರುತ್ತದೆ. ವಿಸ್ಮೃತಿ, ಸಂಕೋಚ, ಪ್ರತಿಷ್ಠೆ ಈ ಮುಂತಾದ ದೋಷಗಳಿಂದ ದೂರವಾದ ಆತ್ಮಚರಿತ್ರೆಯಿದ್ದರೆ ಜೀವನಚರಿತ್ರಕಾರನಿಗೆ ಅದು ಬಹುಮುಖ್ಯವಾದ ಮೂಲಸಾಮಗ್ರಿಯಾಗುತ್ತದೆ. ಹೀಗೆ ಗಯಟೆ, ಟಾಲ್‌ಸ್ಟಾಯ್, ಗಾಂಧೀಜಿ— ಇವರ ಆತ್ಮಕಥನಗಳು ಅವರನ್ನೇ ಕುರಿತು ಬರೆಯಬೇಕೆಂಬ ಜೀವನಚರಿತ್ರಕಾರರಿಗೆ ಬಹು ಮುಖ್ಯ ಮೂಲ ಸಾಮಗ್ರಿಗಳಾಗಿವೆ. ಪ್ರಕೃತ ಲೇಖನದಲ್ಲಿ ಆತ್ಮಚರಿತ್ರೆಗಳನ್ನುಳಿದಂತೆ ಮಿಕ್ಕ ಜೀವನ ಚರಿತ್ರೆಗಳನ್ನು ಮಾತ್ರ ಗಮನಿಸಲಾಗಿದೆ.

ಜೀವನಚರಿತ್ರೆ ಸಾಹಿತ್ಯ ಪ್ರಕಾರಗಳಲ್ಲಿ ಒಂದು ಎಂದ ಮೇಲೆ ಅದರಲ್ಲಿ ಸಾಹಿತ್ಯ ಲಕ್ಷಣಗಳೆಲ್ಲ ಇರಬೇಕಾದುದು ಸರಿಯಷ್ಟೆ. ಒಂದೇ ಮಾತಿನಲ್ಲಿ ಹೇಳುವುದಾದರೆ ಕಾದಂಬರಿಕಾರನ ಕಲ್ಪನಾವಿಲಾಸ, ಆತ್ಮಚರಿತ್ರಕಾರನ ಸತ್ಯಶೋಧನಬುದ್ಧಿ, ಕವಿಯ ಭಾವಪ್ರಕಾಶದ ರೀತಿ, ವಿಜ್ಞಾನಿಯ ನಿಶಿತ ನಿಶ್ಚಿತಮತಿ ಇವುಗಳೆಲ್ಲದರ ಮೇಳ ಜೀವನಚರಿತ್ರಕಾರನಲ್ಲಿರಬೇಕು. ಅಂಥವ ಬರೆದ ಜೀವನಚರಿತ್ರೆ ಆದರ್ಶಜೀವನ ಚರಿತ್ರೆಯೆನಿಸುತ್ತದೆ.

ಕನ್ನಡದಲ್ಲಿ ಜೀವನಚರಿತ್ರೆಯ ಚರಿತ್ರೆ ಹೀಗಿದೆ : ದೇಶಾದ್ಯಂತ ವಿಪುಲವಾಗಿ ಹರಡಿರುವ ಮಾಸ್ತಿಕಲ್ಲು, ವೀರಗಲ್ಲುಗಳಲ್ಲಿ, ಇನ್ನಿತರ ಶಿಲಾಶಾಸನಗಳಲ್ಲಿ ವ್ಯಕ್ತಿಗಳ ಜೀವನಕಥೆ ಮಿಂಚಿ ಮರೆಯಾಗುತ್ತದೆ. ಉದಾ : ಕಪ್ಪೆ ಅರಭಟ್ಟ, ನಂದಿಸೇನ ಇವರನ್ನು ಕುರಿತ ಮಾತುಗಳು ಶಾಸನಗಳಲ್ಲಿವೆ. ಪಂಪ ಪೊನ್ನ ರನ್ನಾದಿಗಳಲ್ಲಿ ಅಷ್ಟೊ ಇಷ್ಟೊ ಸ್ವ-ಪರವಿಷಯಗಳ ಸಂಗತಿಗಳು ಬರುತ್ತವೆ. ಹರಿಹರ ರಾಘವಾಂಕಾದಿಗಳೂ ಮೈಸೂರು ಒಡೆಯರ ಆಸ್ಥಾನಕವಿಗಳೂ ತಮ್ಮ ತಮ್ಮ ಆದರ್ಶ ವ್ಯಕ್ತಿಗಳ ವಿಭೂತಿಗಳನ್ನೂ ಪೋಷಕರ ಶೀಲಚಾರಿತ್ರ್ಯಾದಿಗಳನ್ನೂ ಬಣ್ಣಿಸಿದ್ದುಂಟು. ಜಾನಪದ ಗೀತಗಳಲ್ಲಿಯೂ ಐತಿಹಾಸಿಕ, ಧಾರ್ಮಿಕ ವೀರವರೇಣ್ಯರ ಚಿತ್ರಗಳುಂಟು. ಪ್ರಕೃತ ಲೇಖನದಲ್ಲಿ ಜೀವನ ಚರಿತ್ರೆಯ ನಿಜವಾದ ಗುಣ ಲಕ್ಷಣಗಳನ್ನುಳ್ಳ ಕೃತಿಗಳು ಹಾಗೂ ಲೇಖಕರ ಬಗ್ಗೆ ಕೆಲ ಅಂಶಗಳನ್ನು ಪ್ರತಿಪಾದಿಸಲಾಗಿದೆ.

ಕನ್ನಡದಲ್ಲಿ ಸುಮಾರು ಸಾವಿರದಷ್ಟು ಜೀವನಚರಿತ್ರೆಗಳನ್ನು ಕಾಣಬಹುದು. ಕನ್ನಡ ನಾಡಿನ, ಭಾರತದ ಹಾಗೂ ಇಡೀ ವಿಶ್ವದ ನಾಯಕ ಶಿಖಾಮಣಿಗಳ ಜೀವನ ವಿಚಾರಗಳನ್ನು ಕುರಿತ ಗ್ರಂಥಗಳು ಪ್ರಕಟವಾಗಿರುವುದನ್ನು ಗಮನಿಸಿದರೆ ಕನ್ನಡ ಸಾಹಿತ್ಯದ ಶ್ರೀಮಂತಿಕೆ ಸ್ವಯಂ ವೇದ್ಯವಾಗುತ್ತದೆ. ರಾಜಕಾರಣಿಗಳು, ಚರಿತ್ರೆಯ ಮಹಾಪುರುಷರು, ದೇಶಭಕ್ತರು, ಸಮಾಜ ಸುಧಾರಕರು, ಸಾಧು ಸಂತರು, ನಟರು, ವಿಜ್ಞಾನಿಗಳು, ಕವಿಗಳು—ಹೀಗೆ ಜೀವನ ಚರಿತ್ರೆಯ ಬೆಳಸಿನಲ್ಲಿ ಬಹಳ ವೈವಿಧ್ಯವಿದೆ.

ಪುಟ್ಟಣ್ಣನವರ ಕುಣಿಗಲ್ ರಾಮಾಶಾಸ್ತ್ರಿಗಳ ಚರಿತ್ರೆ, ಸಿ.ಕೆ. ವೆಂಕಟರಾಮಯ್ಯನವರ ಆಳಿದ ಮಹಾಸ್ವಾಮಿಯವರು, ಡಿ. ವಿ. ಜಿ. ಅವರ ಗೋಪಾಲಕೃಷ್ಣ ಗೋಖಲೆ ಮತ್ತು ದಿವಾನ್ ರಂಗಾಚಾರ್ಲು, ಮಾಸ್ತಿ ಅವರ ರಾಮಕೃಷ್ಣ ಪರಮಹಂಸ ಮತ್ತು ರವೀಂದ್ರನಾಥ ಠಾಕೂರ್, ದಿವಾಕರರ ರಾಮಕೃಷ್ಣ ಚರಿತಾಮೃತ ಮತ್ತು ಮಹಾಯೋಗಿ ಅರವಿಂದ, ಡಿ. ಕೆ. ಕೃಷ್ಣ ಅಯ್ಯಂಗಾರ್ ಅವರ ಜವಹರಲಾಲ್ ನೆಹರು, ಕುವೆಂಪು ಅವರ ರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದ. ಹುರುಳಿ ಅವರ ಉತ್ತಂಗಿಯವರ ಜೀವನ ಚರಿತ್ರೆ, ದೇಜಗೌ ಅವರ ರಾಷ್ಟ್ರಕವಿ ಕುವೆಂಪು ಮತ್ತು ತೀನಂಶ್ರೀ : ಕೋ. ಚನ್ನಬಸಪ್ಪನವರ ಅರವಿಂದ, ಎನ್. ಎಸ್. ವೀರಪ್ಪನವರ ಚಾರಲ್ಸ್ ಡಾರ್ವಿನ್, ಐಸಾಕ್ ನ್ಯೂಟನ್ ಮತ್ತು ಲೆನಿನ್, ಎಚ್ಚೆಸ್ಕೆ ಅವರ ಶ್ರೀರಾಮಾನುಜ, ಮತ್ತು ವಿ. ಕೆ. ಆರ್. ವಿ. ರಾವ್—ಜೀವನ ಮತ್ತು ಸಾಧನೆ : ಎಚ್. ಕೃಷ್ಣರಾಯರ ಜಾನ್ ಸ್ಟುವರ್ಟ್ ಮಿಲ್, ಎಸ್. ಕೆ. ರಾಮಚಂದ್ರರಾಯರ ಪೂರ್ಣಪ್ರಜ್ಞ ಪ್ರಶಸ್ತಿ, ಎಂ. ಚಿದಾನಂದ ಮೂರ್ತಿಯವರ ಬಸವಣ್ಣನವರು—ಇವು ಕೆಲವು ಕನ್ನಡ ಜೀವನಚರಿತ್ರೆಯ ದಾರಿಯಲ್ಲಿ ಎದ್ದುಕಾಣುವ ಮೈಲಿಗಲ್ಲುಗಳು.

ವಿಷಯ ನಿರೂಪಣೆಯ ಸ್ವಾರಸ್ಯಕ್ಕಾಗಿ, ವಿಷಯ ಸಂಗ್ರಹದ ಸಾಹಸಕ್ಕಾಗಿ, ಸ್ವಾರಸ್ಯಕರವಾದ ಉಪಾಖ್ಯಾನಗಳಿಂದ ರಸಮಯ ಸನ್ನಿವೇಶಗಳನ್ನು ಸೃಷ್ಟಿಸಿ ನಾಯಕನ ಗುಣಶೀಲಗಳನ್ನು ಬೆಳಕಿಗೆ ತರುವ ಚಾತುರ್ಯಕ್ಕಾಗಿ, ಕಥಾನಾಯಕನ ಸ್ವತ್ವ ಸತ್ತ್ವಗಳನ್ನು ಸ್ಫುಟವಾಗಿ ಪ್ರಕಾಶಗೊಳಿಸಿರುವ ಕೌಶಲಕ್ಕಾಗಿ, ನಾಯಕ ವ್ಯಕ್ತಿಯ ಧ್ಯೇಯ ಧೋರಣೆಗಳ ಸ್ಪಷ್ಟ ಪರಿಚಯಕ್ಕಾಗಿ ವಿಷಯದ [illegible] ದೃಷ್ಟಿಗಾಗಿ, ಗಂಭೀರ ಶೈಲಿಗಾಗಿ ಮೇಲೆ ಕಾಣಿಸಿದ ಪುಸ್ತಕಗಳನ್ನು ನೋಡಬಹುದು.

ಕನ್ನಡದಲ್ಲಿ ಮತಧರ್ಮ ಸಂಸ್ಥಾಪಕರ ಹಾಗೂ ಸಾಧು ಸಂತರ ಜೀವನ ಚರಿತ್ರೆಗಳೇ ಹೆಚ್ಚು. ಧರ್ಮಾನಂದ ಕೋಸಾಂಬಿಯವರ ಖ್ಯಾತ ಕೃತಿ ಭಗವಾನ್ ಬುದ್ಧ ಕನ್ನಡಕ್ಕೆ ಬಂದಿದೆ (1956). ಜಿ. ಪಿ. ರಾಜರತ್ನಂ ಅವರು ಬುದ್ಧನನ್ನೂ ಚೀನಾದ ಬೌದ್ಧ ಯಾತ್ರಿಕರನ್ನೂ ಕುರಿತು ಉತ್ತಮವಾದ ಎರಡು ಗ್ರಂಥಗಳನ್ನು ನೀಡಿದ್ದಾರೆ. ಅಲ್ಲದೆ ಎಸ್. ಬಿ. ವಸಂತರಾಜು ಮಹಾವೀರನನ್ನೂ ಸಿ. ಕೆ. ವೆಂಕಟರಾಮಯ್ಯನವರು ಪೈಗಂಬರ್ ಮಹಮದ್ದನನ್ನೂ ಉ. ಕ. ಸುಬ್ಬರಾಯಾಚಾರ್ಯರು ಯೇಸೂಕ್ರಿಸ್ತನನ್ನೂ ಕುರಿತು ಉತ್ತಮ ಪುಸ್ತಕಗಳನ್ನು ನೀಡಿದ್ದಾರೆ. ಪ್ರವಾದಿ ಗಿಬ್ರಾನನ ಜೀವನ ಮತ್ತು ಕೃತಿಗಳ ಸಮಾಲೋಚನೆಯನ್ನು ಈಚೆಗೆ ಪ್ರಭುಶಂಕರರು ಮಾಡಿದ್ದಾರೆ. ಎಚ್ಚೆಸ್ಕೆ ಅವರ ಶ್ರೀರಾಮಾನುಜ ಎಂಬ ಗ್ರಂಥ ಆಚಾರ್ಯರ ಜೀವನ, ಉಪದೇಶ ಮೊದಲಾದ ಅಂಶಗಳನ್ನು ಖಚಿತವಾಗಿ ಸ್ವಾರಸ್ಯವಾಗಿ ಚಿತ್ರಿಸುತ್ತದೆ. ಕುವೆಂಪು ಅವರ ಶ್ರೀರಾಮಕೃಷ್ಣ ಪರಮಹಂಸ ಮತ್ತು ಸ್ವಾಮಿ ವಿವೇಕಾನಂದ ಎಂಬುವು ಓದುಗರಲ್ಲಿ ನವಚೈತನ್ಯವನ್ನೂ ಪೂಜ್ಯಭಾವವನ್ನೂ ಉದ್ದೀಪಿಸುವಷ್ಟು ಶಕ್ತಿಯುತವಾಗಿವೆ. ಮಾಸ್ತಿಯವರ ಅನುದ್ರಿಕ್ತ ಶೈಲಿಯ ಪ್ರಸಾದ ಗುಣವನ್ನು ಅವರ ಶ್ರೀರಾಮಕೃಷ್ಣದಲ್ಲೂ ಕಾಣಬಹುದು. ಕೊ. ಚೆನ್ನಬಸಪ್ಪನವರ ಸ್ವಾತಂತ್ರ್ಯಯೋಧ ಶ್ರೀ ಅರವಿಂದರ ಜೊತೆಗೆ ಥಾಮಸ್ ಜೆಫರ್‌ಸನ್ (ಬಿ. ಎನ್. ನಂಜುಂಡಯ್ಯ), ನಿವೇದಿತ (ಪ್ರಭುಶಂಕರ) ಶ್ರೀ ಶಾರದಾದೇವಿ (ರಾ. ನರಸಿಂಹಮೂರ್ತಿ), ಬಸವಣ್ಣನವರು (ಎಂ. ಚಿದಾನಂದಮೂರ್ತಿ), ಮಹದೇವಿಯಕ್ಕ (ಕೆ. ಜಿ. ಕುಂದಣಗಾರ), ಸಿದ್ಧರಾಮ (ಓ. ಎನ್. ಲಿಂಗಣ್ಣಯ್ಯ ; ಜಿ. ಎಸ್. ಶಿವರುದ್ರಪ್ಪ)—ಮೊದಲಾದವರ ಜೀವನ ವಿಷಯಗಳು ನಮಗೆ ದೊರೆಯುತ್ತವೆ.

ಜನತೆಯಲ್ಲಿ ಜೀವನಚರಿತ್ರೆಗಳ ಹುಚ್ಚು ಹಿಡಿಸಿದವರೆಂದರೆ ಸುಬೋಧ ರಾಮರಾಯರು. ಅವರು ತಮ್ಮ ಸುಬೋಧ ಕುಸುಮಾಂಜಲಿ ಗ್ರಂಥಮಾಲೆಯಲ್ಲಿ ನೂರಾರು ಮಹಾಪುರುಷರ ಜೀವನವನ್ನು ಬಿಡಿ ಬಿಡಿ ಪುಸ್ತಕಗಳಾಗಿ ಬರೆದು, ಪ್ರಕಟಿಸಿ, ಬಹು ಸುಲಭ ಬೆಲೆಗೆ ಹಂಚಿದ್ದಾರೆ. ಪ್ರತಿಯೊಬ್ಬ ಮಹಾಪುರುಷನೂ ಜೀವನದಲ್ಲಿ ಎದುರಿಸಬೇಕಾಗಿ ಬಂದ ಮುಖ್ಯ ಸಮಸ್ಯೆ, ಮಾಡಿದ ಸಾಧನೆ ಇವುಗಳನ್ನೇ ದೃಷ್ಟಿಯಲ್ಲಿಟ್ಟುಕೊಂಡು ಈ ಕಿರುಹೊತ್ತಗೆಗಳನ್ನು ರಚಿಸಲಾಗಿದೆ. ಜನತೆಯ ಧಾರ್ಮಿಕ ದೃಷ್ಟಿ, ರಾಜಕೀಯ ಪ್ರಜ್ಞೆ, ರಾಷ್ಟ್ರಾಭಿಮಾನ, ಭಾರತೀಯ ಸಂಸ್ಕೃತಿಯ ಬಗೆಗಿನ ಧೋರಣೆ—ಇವನ್ನು ತಿದ್ದುವಲ್ಲಿ ಈ ಪುಸ್ತಕಗಳು ವಹಿಸಿದ ಪಾತ್ರ ಅಪಾರ. ಇಂದು, ಶ್ರೀಯುತರ ಮರಣಾನಂತರ, ಮತ್ತೆ ಈ ಹೊತ್ತಗೆಗಳು ಅಂದವಾಗಿ ಪುನರ್‌ಮುದ್ರಣಗೊಂಡು ಜನರ ಕೈಸೇರುತ್ತಿವೆ.

ರಾಷ್ಟ್ರನಾಯಕರ ಬಗ್ಗೆ ಕನ್ನಡದಲ್ಲಿ ಬಂದಿರುವ ಬೆಳಸು ಸಾಕಷ್ಟು ಸಮರ್ಪಕವಾಗಿದೆ. ಡಿ. ವಿ. ಜಿ. ಅವರು ಬರೆದಿರುವ ಜೀವನ ಚರಿತ್ರೆಗಳು ಅವರ ಆಳವಾದ ಅನುಭವ, ಜ್ಞಾನಗಳಿಂದ ತುಳುಕುತ್ತಿವೆ. ಜವಹರಲಾಲ ನೆಹರೂ, ಬಾಬು ರಾಜೇಂದ್ರ ಪ್ರಸಾದ್, ಸರ್ದಾರ್ ವಲ್ಲಭಭಾಯಿ ಪಟೇಲ್, ಲೋಕಮಾನ್ಯ ಬಾಲಗಂಗಾಧರ ತಿಲಕ, ಮಹದೇವ ಗೋವಿಂದ ರಾನಡೆ, ಮೌಲಾನ ಅಬುಲ್ ಕಲಮ್ ಆಜಾದ್, ಜಯಪ್ರಕಾಶ ನಾರಾಯಣ—ಮೊದಲಾದವರ ಜೀವನ ಚರಿತ್ರೆ ಸಾಕಷ್ಟು ವಿವರವಾಗಿ ಕನ್ನಡದಲ್ಲಿ ದೊರೆಯುತ್ತದೆ.

ದೇಶ ವಿದೇಶದ ಪ್ರಭೃತಿಗಳಾದ ಮ್ಯಾಕ್ಸಿಂ ಗಾರ್ಕಿ, ಸಾಕ್ರಟೀಸ್, ಸ್ಟ್ಯಾಲಿನ್, ಲೆನಿನ್, ನಿಕ್ಸನ್, ಕಾರ್ಲ್ ಮಾರ್ಕ್ಸ್, ಕೆಮಾಲ್ ಪಾಷಾ, ಜಾನ್ ಸ್ಟುವರ್ಟ್ ಮಿಲ್, ಫ್ರ್ಯಾಂಕ್ಲಿನ್, ಮಾರ್ಟಿನ್ ಲೂಥರ್ ಕಿಂಗ್, ಸ್ಯಾಮ್ಯುಯಲ್ ಜಾನ್‌ಸನ್, ಏಬ್ರಹಾಂ ಲಿಂಕನ್, ಕೆನಡಿ—ಮೊದಲಾದವರ ಜೀವನ ಚರಿತ್ರೆಗಳು ಸ್ವಂತ ಕೃತಿಗಳಾಗೊ ಅನುವಾದಗಳಾಗೊ ಕನ್ನಡಿಗರಿಗೆ ದೊರೆತಿವೆ.

ವಿಜ್ಞಾನಿಗಳನ್ನು ಕುರಿತ ಹೊತ್ತಗೆಗಳು ಕನ್ನಡದಲ್ಲಿ ಇನ್ನೂ ಹೆಚ್ಚಾಗಿ ಬರಬೇಕಾಗಿದೆ. ಡಾರ್ವಿನ್, ಫ್ಯಾರಡೆ, ಐನ್‌ಸ್ಟೈನ್, ಜೆಫರ್‌ಸನ್, ಫ್ಲೆಮಿಂಗ್, ಎಡಿಸನ್, ಮೇರಿ ಕ್ಯೂರಿ—ಮೊದಲಾದವರ ಬಗ್ಗೆ ಒಳ್ಳೆಯ ಗ್ರಂಥಗಳು ಬಂದಿವೆ.

ಇನ್ನು ಕನ್ನಡ ಮಹನೀಯರ ಬಗ್ಗೆ ಬಂದಿರುವ ಕೃತಿಗಳನ್ನು ಸೂಕ್ಷ್ಮವಾಗಿ ನೋಡಬಹುದು.. ದೇಜಗೌ ಅವರು ಕುವೆಂಪು ಮತ್ತು ತೀ.ನಂ.ಶ್ರೀ ಅವರ ಬಗ್ಗೆ ಬರೆದಿರುವ ಗ್ರಂಥಗಳು ಈ ಪ್ರಕಾರದ ಸಾಹಿತ್ಯಕ್ಕೆ ಮಾದರಿಯಾಗಿವೆ. ನಂಜುಂಡಾರಾಧ್ಯರು ಕವಿ ಬಸವಪ್ಪ ಶಾಸ್ತ್ರಿಗಳನ್ನು ಕುರಿತು ಬರೆದಿದ್ದಾರೆ. ಸಂಸ, ಕೈಲಾಸಂ, ಅನಕೃ—ಮೊದಲಾದವರ ಬಗ್ಗೆ ಕೃತಿಗಳು ಬಂದಿವೆ. ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟ ಸ್ಥಾನ ಪಡೆದಿರುವ ಅಭಿನಂದನ ಗ್ರಂಥಗಳಲ್ಲಿ ಆಯಾ ಮಹನೀಯರ ಜೀವನ ಮತ್ತು ಕೃತಿಗಳ ಬಗ್ಗೆ ಸಾಕಷ್ಟು ವಿವರಗಳು ದೊರೆಯುತ್ತವೆ. ಪಂಪ, ರನ್ನ, ನಾಗಚಂದ್ರ, ಲಕ್ಷ್ಮೀಶ, ಮುದ್ದಣ ಮೊದಲಾದವರ ಪ್ರಶಸ್ತಿ ಗ್ರಂಥಗಳನ್ನೂ ಸಂಭಾವನೆ (ಶ್ರೀ), ಸಮರ್ಪಣೆ (ಮಂಜಯ್ಯ ಹೆಗ್ಗಡೆ), ಪಂಜೆಯವರ ನೆನಪಿಗಾಗಿ, ಶ್ರದ್ಧಾಂಜಲಿ (ಮುಳಿಯ ತಿಮ್ಮಪ್ಪಯ್ಯ), ಕರ್ಣಾಟಕ ದರ್ಶನ (ದಿವಾಕರ್), ಅಭಿವಂದನೆ (ಎ. ಆರ್. ಕೃ.) ಒಸಗೆ (ಸೇಡಿಯಾಪು ಕೃಷ್ಣಭಟ್ಟ), ಬಾಗಿನ (ಎಸ್. ವಿ. ರಂಗಣ್ಣ), ಮಿರ್ಜಿ ಅಣ್ಣಾರಾಯ, ಮಧುರ ಸ್ಮೃತಿ (ಪುಟ್ಟಸ್ವಾಮಿ), ಆಶೀರ್ವಾದ (ಸುತ್ತೂರು ಸ್ವಾಮಿಗಳು), ಉಡುಗೊರೆ, ಗಂಗೋತ್ರಿ (ಕುವೆಂಪು), ದೀವಿಗೆ (ಗೋವಿಂದ ಪೈ), ಉಪಾಯನ (ಡಿ. ಎಲ್. ಎನ್.) ಕುಂದಣ (ಕುಂದಣಗಾರರು), ವಚನಶಾಸ್ತ್ರ ಪಿತಾಮಹ (ಫ. ಗು. ಹಳಕಟ್ಟಿ)–ಮೊದಲಾದ ಗ್ರಂಥಗಳಲ್ಲಿ ಆಯಾ ಮಹನೀಯರ ಜೀವನದ ಬಗ್ಗೆ ಹಲ ಅಂಶಗಳೂ ಸಾಧನೆಯ ಬಗ್ಗೆ ಪೂರ್ಣ ಮಾಹಿತಿಯೂ ದೊರೆಯುತ್ತವೆ. ದೇಜಗೌ–ಐವತ್ತು, ಕಟ್ಟಿಮನಿ–ಬದುಕು, ಬರಹ, ವಿನಾಯಕ ವಾಙ್ಮಯ, ಕಾರಂತ ಪ್ರಪಂಚ---ಇವು ಈ ಬಗೆಯ ಈಚಿನ ಕೃತಿಗಳು.

ನೋಡಿ—ಕನ್ನಡದಲ್ಲಿ ಆತ್ಮಕಥೆಗಳು.

(ಎಸ್.ವಿ.ಪಿ.)

**ಕನ್ನಡದಲ್ಲಿ ದಾಸ ಸಾಹಿತ್ಯ :** ಕನ್ನಡಕ್ಕೆ ಹರಿದಾಸರ ಕೊಡುಗೆ ಅಪಾರ. ಅನೇಕಾನೇಕ ಹಾಡುಗಳಾಗಿ, ಭಗವದ್ಭಕ್ತರ ಜೀವನಕಥನಗಳಾಗಿ, ವಚನರೂಪದ ಸುಳಾದಿ, ಉಗಾಭೋಗಗಳಾಗಿ ಅದು ಬೆಳೆದಿದೆ. ತತ್ತ್ವಬೋಧೆಯನ್ನು ರಮ್ಯವಾಗಿ ಸುಲಭಗ್ರಾಹ್ಯವಾಗಿ ಹೇಳುವಲ್ಲಿ, ಆಡುಮಾತನ್ನೂ ಕನ್ನಡ ಛಂದಸ್ಸುಗಳನ್ನೂ ಬಳಸುವಲ್ಲಿ ಅದರ ವೈಶಿಷ್ಟ್ಯವನ್ನು ಕಾಣಬಹುದು. ಕ್ರಿ.ಶ. ಸುಮಾರು 13ನೆಯ ಶತಮಾನದ ವೇಳೆಗೆ ದ್ವೈತಸಿದ್ಧಾಂತವನ್ನು ಸಾರಿದ ಶ್ರೀ ಮಧ್ವಾಚಾರ್ಯರು ಹರಿದಾಸ ಪಂಥಕ್ಕೆ ಮೂಲಪ್ರೇರಕರು. ಅವರ ದ್ವಾದಶಸ್ತೋತ್ರ ಹರಿದಾಸರಿಗೆ ಸ್ಫೂರ್ತಿಯ ಸೆಲೆ. ಅವರ ದ್ವೈತಸಿದ್ಧಾಂತ ಹರಿದಾಸರ ಸಿದ್ಧಾಂತವೂ ಹೌದು. ಮಧ್ವಮತದ ತತ್ತ್ವಗಳನ್ನೊಪ್ಪಿ, ಅವುಗಳ ಪ್ರತಿಪಾದನೆಯೊಂದಿಗೆ ತಮ್ಮ ಭಕ್ತಿ ಸಾಧನೆಯನ್ನೂ ಮೇಳವಿಸಿದ್ದಾರೆ, ಹರಿದಾಸರು. ಅವರ ಶಿಷ್ಯನಾದ ನರಹರಿತೀರ್ಥ (13ನೆಯ ಶತಮಾನದ ಕೊನೆ) ಹರಿದಾಸಪಂಥದ ಆದಿಪ್ರವರ್ತಕನೆಂಬುದು ದೊರೆತಿರುವ ಆಧಾರಗಳಿಂದ ಸ್ಪಷ್ಟವಿದೆ.

1 ಎಂತು ಮರುಳಾದೆ ನಾನೆಂತು ಮರುಳಾದೆ
ಎಂತು ಮರುಳಾದೆ । ಭವದೊಳು ಬಳಲಿದೆ ।
ಸಂತತಪೊರೆ ರಘುತಿಲಕ ॥ ಅ.ಪ. ॥
ಭಜಿಸು ಬ್ರಹ್ಮಾದಿವಂದಿತ ಹರಿಯ । ತ್ಯಜಿಸು
ಕಾಮಾದಿ ದುರ್ವಿಷಯ
ಸುಜನವಂದಿತನಾದ ನರಹರಿಯ । ಭಜಿಸು
ಶ್ರೀಶ ಶ್ರೀ ರಘುಪತಿಯ ॥

2 ಹರಿಯೇ । ಇದು ಸರಿಯೆ ॥ ಪ ॥
ಚರಣಸೇವಕನಲ್ಲಿ ಕರುಣ ಬಾರದ್ಯಾಕೆ ॥ ಅ ॥
ದೊರೆ ನಿನ್ನ ಮನಸಿಗೆ ಸರಿಬಂದಂತೆ ಮಾಡು
ಮೊರೆ ಹೊಕ್ಕೆನು ನಾ ನರಹರಿಪೂರ್ಣನೆ ।

—ಇವೇ ಹರಿದಾಸ ಸಾಹಿತ್ಯದ ಆದ್ಯ ಕೃತಿಗಳು. ಆದರೆ ಬೇಲೂರು ಕೇಶವದಾಸರು ಮತ್ತು ಎ. ಟಿ. ಪಾಟೀಲರು ಹರಿದಾಸಪಂಥಕ್ಕೆ ಸು. ಒಂಬತ್ತನೆಯ ಶತಮಾನದಲ್ಲಿದ್ದನೆನ್ನಲಾದ ಅಚಲಾನಂದದಾಸನೇ ಮೊದಲಿಗನೆಂದು ಅಭಿಪ್ರಾಯಪಟ್ಟಿದ್ದಾರೆ. ಅಚಲಾನಂದವಿಠಲನ ಅಂಕಿತದಲ್ಲಿರುವ ಉಗಾಭೋಗಗಳ ಭಾಷೆ 15ನೆಯ ಶತಮಾನದ್ದಾಗಿ ಕಾಣುವುದರಿಂದಲೂ ಅಚಲಾನಂದ ಮಧ್ವಮತದ ವಿಷಯವನ್ನೆತ್ತಿರುವುದರಿಂದಲೂ ಆತನ ಕಾಲ 13ನೆಯ ಶತಮಾನದಿಂದ ಈಚಿನದಾಗುತ್ತದೆ ಎಂದು ಆರ್. ಎಸ್. ಪಂಚಮುಖಿ, ಕೆ. ಎಂ. ಕೃಷ್ಣರಾವ್, ಎಚ್. ಕೆ. ವೇದವ್ಯಾಸಾಚಾರ್ಯ, ಜಿ. ವರದರಾಜರಾವ್, ರಂ. ಶ್ರೀ. ಮುಗಳಿಯವರೇ ಮೊದಲಾದ ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಹೀಗಾಗಿ ನರಹರಿತೀರ್ಥನೇ ಹರಿದಾಸಪರಂಪರೆಯಲ್ಲಿ ಮೊದಲಿಗನಾಗುತ್ತಾನೆ. ಮೇಲಿನ ಎರಡು ಕೀರ್ತನೆಗಳೇ ಅಲ್ಲದೆ, ಇತ್ತೀಚೆಗೆ ಈತನ ತಿಳಕೊ ನಿನ್ನೊಳಗೆ ನೀನೇ ಎಂಬ ಇನ್ನೊಂದು ಕೀರ್ತನೆಯೂ ಸಿಕ್ಕಿದೆ. ಈತನವೆಂದು ಹೇಳಲಾದ ಉಗಾಭೋಗಗಳಾಗಲೀ ಸುಳಾದಿಯಾಗಲೀ ಸಿಕ್ಕಿಲ್ಲ.

ನರಹರಿತೀರ್ಥನ ಬಳಿಕ ಸುಮಾರು ಒಂದು ಶತಮಾನದ ಅನಂತರ ನಮಗೆ ಶ್ರೀಪಾದರಾಯನ ಹೆಸರು ಸಿಕ್ಕುತ್ತದೆ ; ಈತ 15ನೆಯ ಶತಮಾನದಲ್ಲಿದ್ದ ಖ್ಯಾತ ಮಠಾಧಿಪತಿ. ಹರಿದಾಸಸಾಹಿತ್ಯದ ಪ್ರಮುಖರಲ್ಲೊಬ್ಬ. ಚನ್ನಪಟ್ಟಣದ ಬಳಿಯಿರುವ ಅಬ್ಬೂರು ಈತನ ಜನ್ಮಸ್ಥಳ. ರಂಗವಿಠಲ ಎಂಬ ಅಂಕಿತದಿಂದ ಕೃತಿರಚನೆ ಮಾಡಿದ್ದಾನೆ. ಸಂಸ್ಕೃತದ ಬಲವಿದ್ದರೂ ಕನ್ನಡದ ಒಲವನ್ನು ಕೃತಿಗಳಲ್ಲಿ ತೋರಿದ್ದಾನೆ. ಅನೇಕ ವರ್ಷಗಳ ಕಾಲ ಶ್ರೀರಂಗದಲ್ಲಿದ್ದು, ತಮಿಳಿನ ಆಳ್ವಾರರ ಕೃತಿಗಳು ಸಾಮಾನ್ಯ ಜನರ ಮೇಲೆ ಬೀರಿದ್ದ ಪ್ರಭಾವವನ್ನು ಕಣ್ಣಾರೆ ಕಂಡಿದ್ದವನೀತ. ನರಹರಿತೀರ್ಥನ ಮೇಲ್ಪಂಕ್ತಿಯೊಂದಿಗೆ [illegible] ಪ್ರಭಾವವೂ ಸೇರಿ ಈತನ ಕೃತಿರಚನೆಗೆ ಪುಷ್ಟಿ ದೊರೆತಂತೆ ಕಾಣುತ್ತದೆ. ಈತನಲ್ಲಿ ಇನ್ನೂ ವೈವಿಧ್ಯಪೂರ್ಣವಾಗಿ ಬಹುಮುಖವಾಗಿ ವಿಕಸಿಸಿದೆ, ಹರಿದಾಸ ಸಾಹಿತ್ಯವಾಹಿನಿ. ದಾಸ್ಯ, ಸಖ್ಯ, ಮಧುರ, ವಾತ್ಸಲ್ಯ ಹಾಗೂ ಶಾಂತ ಭಾವಗಳ ಮೂಲಕ ಭಕ್ತಿ ಇಲ್ಲಿ ಹೊನಲಿಟ್ಟಿದೆ.

ಕೃಷ್ಣನಿಗೆ ಜೋಗುಳ ಹಾಡುವ ಮೂಲಕ ಹರಿಯ ದಶಾವತಾರಗಳನ್ನು ಇಲ್ಲಿ ಚಿತ್ರಿಸಲಾಗಿದೆ. ಒಂದು ಪ್ರಸಂಗ ಅಥವಾ ಸಂದರ್ಭವನ್ನು ಆರಿಸಿಕೊಂಡು ನೀಳವಾದ ಕೀರ್ತನೆ ರಚಿಸಿರುವುದು ಈತನ ಇನ್ನೊಂದು ವೈಶಿಷ್ಟ್ಯ. ಶ್ರೀರುಕ್ಮಿಣಿಸತ್ಯಭಾಮ ವಿಲಾಸವನ್ನು ನಿದರ್ಶನವಾಗಿ ಹೆಸರಿಸಬಹುದು. ಇವನಲ್ಲಿ ಭಾಗವತಕ್ಕೆ ಹೆಚ್ಚು ಪ್ರಾಶಸ್ತ್ಯ ದೊರೆತಿದೆ. ಈ ಎಲ್ಲ ಕಾರಣಗಳಿಂದಾಗಿ ಹರಿದಾಸ ಸಾಹಿತ್ಯದ ಮುನ್ನಡೆಗೆ ಶ್ರೀಪಾದರಾಯನೇ ಮೊದಲಿಗನೆನ್ನಬಹುದು. ಕೀರ್ತನೆ, ಸುಳಾದಿ, ಉಗಾಭೋಗ ಗಳೊಂದಿಗೆ ದಂಡಕ, ವೃತ್ತನಾಮಗಳನ್ನೂ ಈತ ಬಳಸಿಕೊಂಡಿದ್ದಾನೆ. ಇವನ ಅನಂತರದ ಹರಿದಾಸರಿಗೆ ಈತನ ಕೃತಿಗಳು ಒಂದು ಸಂಪ್ರದಾಯವಾಗಿ ಪರಿಣಮಿಸಿದುವು ; ಈತನ ಆತ್ಮಸಾಧನೆ ಉಳಿದವರಿಗೆ ಮಾರ್ಗದರ್ಶಕವಾಯಿತು.

ಶ್ರೀಪಾದರಾಯನ ಅನಂತರ ಆತನ ಶಿಷ್ಯೋತ್ತಮನಾದ ವ್ಯಾಸರಾಯನನ್ನು ಹೆಸರಿಸಬೇಕು. ಕ್ರಿ. ಶ. ಸು. 1447ರಲ್ಲಿ ವಹ್ನಿಪುರದಲ್ಲಿ (ಈಗಿನ ಬನ್ನೂರು) ಈತ ಜನಿಸಿದ. ವಿಜಯನಗರದ ಕೃಷ್ಣದೇವರಾಯನ ಸಮಕಾಲೀನನೂ ರಾಜ ಮರ್ಯಾದೆಗೆ ಪಾತ್ರನೂ ಆಗಿದ್ದ ಗಣ್ಯ ಮಠಾಧಿಪತಿ ಈತ. ಶ್ರೀ ಕೃಷ್ಣ ಎಂಬ ಅಂಕಿತದಿಂದ ಕೃತಿರಚನೆ ಮಾಡಿದ್ದಾನೆ. ಈತ ಮತ್ತು ಈತನ ಶಿಷ್ಯರಿಂದ ಹರಿದಾಸರ ಒಂದು ಒಕ್ಕೂಟ ಪ್ರಾರಂಭವಾಯಿತು. ಪುರಂದರದಾಸ. ಕನಕದಾಸ, ವಾದಿರಾಜ ಇವರು ದಾಸಕೂಟದ ಪ್ರಮುಖ ಸ್ತಂಭಗಳು, ಪ್ರತಿನಿಧಿಗಳು. ಶ್ರೀಪಾದರಾಯನಲ್ಲಿ ಕಂಡುಬರುವ ದೃಷ್ಟಿ, ಭಾವಾದಿಗಳು ಇವರಲ್ಲಿ ಇನ್ನೂ ಬೆಳೆವಣಿಗೆ ಹೊಂದಿವೆ. ಅಪೂರ್ವವಾದ ಕೆಲವು ಭಾವನೆಗಳನ್ನು ಇವರಲ್ಲಿ ಕಾಣಬಹುದು. ಆದಿಕವಿ ಪಂಪ ಬನವಾಸಿಯಲ್ಲಿ ಮರುಹುಟ್ಟು ಬಯಸಿದಂತೆ ವ್ಯಾಸರಾಯ ಬೃಂದಾವನದಲ್ಲಿ—ಏನಾಗಿಯಾದರೂ ಸರಿ ಮತ್ತೊಮ್ಮೆ ಹುಟ್ಟಬೇಕೆಂದು ಹಂಬಲಿಸುತ್ತಾನೆ. ಕೃಷ್ಣನನ್ನು ಕುರಿತು, ಏನಬೇಡಲೊ ನಿನ್ನ ದೇವಾಧಿದೇವ—ಎಂದು ಪ್ರಶ್ನಿಸುತ್ತ ವನಿತೆಯರ ಬೇಡಲೆ ಬ್ರಹ್ಮಚಾರಿ—ಎಂದು ಉದ್ಗರಿಸುತ್ತಾನೆ. ವಾಮನಾವತಾರದಲ್ಲಿ ವಟುವಾಗಿ ಬಂದ ಆ ಜಾರಚೋರನನ್ನು ವ್ಯಾಸರಾಯ ಪ್ರಶ್ನಿಸಿರುವ ರೀತಿ ಇದು. ದಾಸಕೂಟದ ಮೇಲ್ವಿಚಾರಕನ ಸ್ಥಾನದಲ್ಲಿರುವ ಈತನನ್ನು ಕುರಿತು ಗುರುವೆಂದೂ ಜ್ಞಾನಿಗಳ ಅರಸನೆಂದೂ ಪುರಂದರದಾಸ ಹೊಗಳಿದ್ದಾನೆ.

ವ್ಯಾಸರಾಯನ ಶಿಷ್ಯಪರಂಪರೆಯಲ್ಲಿ ಕರ್ಣಾಟಕದ ಮನೆಮನೆಯಲ್ಲಿಯೂ ಕೇಳಿಬರುವ ಹೆಸರೆಂದರೆ ಪುರಂದರದಾಸನದು. ತನ್ನ ಅಪಾರ ಕೃತಿರಾಶಿಯಿಂದ ಈತ ಕನ್ನಡಿಗರಿಗೆ ಚಿರಪರಿತನಾಗಿದ್ದಾನೆ. ಕ್ರಿ. ಶ. ಸು. 1484ರಲ್ಲಿ, ಪುರಂದರಗಡ ಎಂಬಲ್ಲಿ ಈತ ಜನಿಸಿದ. ಪೂರ್ವಾಶ್ರಮದ ಹೆಸರು ಶ್ರೀನಿವಾಸನಾಯಕನೆಂದು. ಹೆಂಡತಿ ಸರಸ್ವತಿ. ದಾಸದೀಕ್ಷೆಯನ್ನು ಕೈಗೊಳ್ಳುವ ಮೊದಲು ಅತ್ಯಂತ ಶ್ರೀಮಂತನಾಗಿ ವೈಭವದಿಂದ ಮೆರೆದವನೀತ. ಮನಃ ಪರಿವರ್ತನೆಯಾದ ಮೇಲೆ, ಐಶ್ವರ್ಯವನ್ನೆಲ್ಲ ದಾನಮಾಡಿ ವ್ಯಾಸರಾಯನ ಬಳಿ ಬಂದು ದಾಸದೀಕ್ಷೆಯನ್ನು ಕೈಗೊಂಡ. ಪುರಂದರ ವಿಠಲ ಎಂಬ ಅಂಕಿತದಿಂದ ಕೃತಿರಚನೆ ಮಾಡಿದ. ಹೆಂಡತಿಯ ಮೂಲಕ ಭಕ್ತಿಯೆಡೆಗೆ ತಿರುಗಿದ ಮನಸ್ಸು ಗುರುಮುಖೇನ ದೀಕ್ಷೆಯನ್ನು ಪಡೆಯಿತು. ಪಂಚಭಾವಗಳ ಮೂಲಕ ಭಗವಂತನನ್ನು ಈತ ಬಗೆಬಗೆಯಾಗಿ ಸ್ತುತಿಸಿದ್ದಾನೆ. ವಾತ್ಸಲ್ಯಭಾವಕ್ಕೆ ಈತನಲ್ಲಿ ಹೆಚ್ಚಿನ ಪ್ರಾಮುಖ್ಯ ದೊರೆತಿದೆ. ಯಶೋದೆ ಮಗ ಕೃಷ್ಣನನ್ನು ಎಬ್ಬಿಸುವ ರೀತಿ ಇದು.

> ಕಾಗೆ ಕಾಕಾ ಎನಲು ಹಕ್ಕಿ ಚಿಲಿಪಿಲಿ ಎನಲು
> ಕೋಗಿಲೆಯು ಸ್ವರಗೈಯಲು ಕೃಷ್ಣ
> ನಾಗಸಂಪಿಗೆ ಅರಳಲು
> ಎದ್ದು ಮುಖ ತೊಳೆಯೇಳು ತಿದ್ದು ಕತ್ತುರಿ ತಿಲಕ
> ಮುದ್ದೆ ಬೆಣ್ಣೆಯ ನಿನಗೆ ನಾನು ಕೊಡುವೆ ।
> ಹೊದ್ದಿರುವ ಕತ್ತಲದು ಹರಿದು ಬೆಳಗಾಯಿತೊ
> ನಿದ್ದೆ ತಿಳಿದೇಳಯ್ಯ ಕೃಷ್ಣ॥
> ಬಿಸಿಯ ದೋಸೆಯ ಹೊಯ್ದು ಮೊಸರುಗಡ್ಡೆಯ ತೆಗೆದು
> ಹೊಸದಾದ ಹಸುವಿನೀ ತುಪ್ಪವನ್ನು ।
> ಹಸನಾದ ಕಲಸನ್ನ ಹೆಸರುಬೇಳೆಯ ಹುಗ್ಗಿ
> ಹಸುಳೆ ನಿನಗಾರೋಗಣೆ ಮಾಡುವೆ ॥

ಹೀಗೆ ಇಲ್ಲಿನ ವಾತ್ಸಲ್ಯಭಾವದ ಪ್ರತಿಪಾದನೆ ಒಂದು ಪ್ರತ್ಯೇಕ ಪ್ರಪಂಚವಾಗಿದೆ. ಮಧುರ ಭಾವದ ಕಲ್ಪನೆ ಮುತ್ತೈದೆಯ ಕಲ್ಪನೆಯಾಗಿ ಮೂಡಿದೆ. ಮಧ್ವಮತ ತತ್ತ್ವಗಳಿಗೂ ಮುತ್ತೈದೆಯ ಲಕ್ಷಣಗಳಿಗೂ ಸಾಮ್ಯವನ್ನು ಸಾಧಿಸಿರುವುದು ಈತನ ವೈಶಿಷ್ಟ್ಯ. ಭಕ್ತಿಸಾಧನೆಯೊಂದಿಗೆ ಸಮಾಜದ ರೀತಿನೀತಿಗಳನ್ನು ಸರಿಪಡಿಸುವ ಹೊಣೆಯನ್ನು ಈತ ಹೊತ್ತು ನಿರ್ವಹಿಸಿದ್ದಾನೆ. ನಡೆದಂತೆ ನುಡಿಯುತ್ತ, ಸಮಾಜವನ್ನು ಚಿಕಿತ್ಸಕ ದೃಷ್ಟಿಯಿಂದ ವೈದ್ಯನಂತೆ ನೋಡುತ್ತ ಅದರ ಸರಿತಪ್ಪುಗಳನ್ನು ಈತ ಎತ್ತಿ ಹಿಡಿದ್ದಾನೆ. ಇವನು ಶುಷ್ಕನೀತಿಬೋಧಕನಲ್ಲ. ಜನರೊಡನೆ ಬೆರೆತು, ಅವರ ಕಷ್ಟ ಸುಖಗಳನ್ನು ಹಂಚಿಕೊಂಡು ಅವರಿಗೆ ಮುಕ್ತಿಪಥವನ್ನು ತೋರಿಸಿಕೊಟ್ಟ ದಿಟ್ಟನೀತ. ಮಧ್ವಮತ ತತ್ತ್ವ, ವೇದಾಂತಸಾರಗಳನ್ನು ಕನ್ನಡದಲ್ಲಿ ಸಾರಿದ ಹರಿಕಾರ. ಈತನ ಕೃತಿಗಳನ್ನು ಒಟ್ಟಾಗಿ ಪುರಂದರೋಪನಿಷತ್ತು ಎಂದು ಕರೆದು ಶ್ಲಾಘಿಸಿದ್ದಾನೆ, ಗುರುವಾದ ವ್ಯಾಸರಾಯ. ಅದರಲ್ಲಿ ಕೀರ್ತನೆಗಳು ಮಾತ್ರವಲ್ಲ, ಅನುಭವದ ರಸಗಟ್ಟಿಗಳಾದ ಉಗಾಭೋಗಗಳೂ ತತ್ತ್ವಭೂಯಿಷ್ಟವಾದ ಸುಳಾದಿಗಳೂ ಅಡಕವಾಗಿವೆ. ಆತ್ಮಚರಿತ್ರೆ, ಆಧ್ಯಾತ್ಮಿಕದೃಷ್ಟಿ ಹಾಗೂ ಲೋಕಚರಿತ್ರೆ—ಈ ದೃಷ್ಟಿಗಳಿಂದಲೂ ಈತನ ಕೃತಿಗಳನ್ನು ಅವಲೋಕಿಸಬಹುದು. ಜನಸಾಮಾನ್ಯರ ಬದುಕನ್ನು ಅನಂತರೀತಿಯಲ್ಲಿ ನೋಡುವ ಒಂದು ದೃಷ್ಟಿ ಈತನಲ್ಲಿ ಕಂಡುಬರುವಷ್ಟು ವಿಸ್ತಾರವಾಗಿ ಮತ್ತಾರಲ್ಲೂ ಕಂಡುಬರುವುದಿಲ್ಲ. ಸಾರ್ವಜನಿಕ ಹಾಗೂ ಸಾರ್ವಕಾಲಿಕ ಧರ್ಮ ಸತ್ಯಗಳನ್ನು ಎತ್ತಿಹಿಡಿಯುವುದರಲ್ಲಿ ಹರಿದಾಸ ಸಾಹಿತ್ಯದ ಉಳಿದವರಾರೂ ಈತನ ಸಮಕ್ಕೆ ಬರಲಾರರು. ಕ್ಷಣಕ್ಷಣಕ್ಕೂ ನಡೆಯುವ, ದಿನನಿತ್ಯದ ಲೌಕಿಕ ಘಟನೆಗಳಿಗೆ ಪಾರಮಾರ್ಥಿಕ ಮೆರಗನ್ನು ಈತ ಶಕ್ತಿಯುತವಾಗಿ ಕೊಟ್ಟಿದ್ದಾನೆ. ಅದನ್ನು ತನ್ನದೇ ಆದ ಆಧ್ಯಾತ್ಮಿಕ ದೃಷ್ಟಿಯಿಂದ ಕಂಡಿರುವುದಂತೂ ಇನ್ನೊಂದು ವಿಶೇಷ. ಓಲೆ ಹಂಚುವುದನ್ನು ಕಂಡಾಗ, ತಾಸು ಬಾರಿಸಿದಾಗ, ಕಡೆಗೆ ಒಂದು ಮೆಣಸಿನಕಾಯಿಯನ್ನು ಕಂಡಾಗಲೂ ಈತನ ಭಕ್ತಮನ ಜಾಗೃತವಾಗುವುದನ್ನು ಕಾಣಬಹುದು. ಸಾಹಿತ್ಯ, ಸಂಗೀತ ಮತ್ತು ಪಾರಮಾರ್ಥಿಕಗಳ ಸಮ್ಮಿಲನ ಇವನ ಕೃತಿಗಳಲ್ಲಿದೆ. ಭಾವಗೀತಾತ್ಮಕ ಕೃತಿಗಳ ರಚನೆಯಿಂದ ಕವಿಯ ಮಟ್ಟಕ್ಕೂ ಈತ ಏರಿದ್ದಾನೆ. ಕೃಷ್ಣನ ವಿವಿಧ ಲೀಲೆಗಳನ್ನು ದಶಾವತಾರಗಳನ್ನು ಬಗೆಬಗೆಯಾಗಿ ವರ್ಣಿಸುವ ಅಸಂಖ್ಯಾತ ಕೃತಿಗಳು ಶ್ರೇಷ್ಠ ಭಾವಗೀತೆಗಳಾಗಿವೆ. ಈ ಭಕ್ತ ಶ್ರೇಷ್ಠ ಅಹಿಂಸೆ, ಔದಾರ್ಯಗಳನ್ನು ಪ್ರತಿಪಾದಿಸಿದ್ದಾನೆ. ಧರ್ಮವೇ ಜಯವೆಂಬ ದಿವ್ಯಮಂತ್ರ ಎಂಬ ಹಾಡಿನಲ್ಲಿ ಧರ್ಮಜೀವನದ ತುತ್ತತುದಿಯ ಆದರ್ಶವನ್ನು ಬಹು ಸೊಗಸಾಗಿ ವರ್ಣಿಸಿದ್ದಾನೆ. ಶಾಸ್ತ್ರೀಯ ಸಂಗೀತದ ಆರಂಭದ ಅಭ್ಯಾಸಿಗಳಿಗೆ ಪಿಳ್ಳಾರಿಗೀತೆಗಳನ್ನು ಈತ ರಚಿಸಿ ಕೊಟ್ಟಿದ್ದಾನೆ. ಈತ ನಾರದಾಂಶಸಂಭೂತನೆಂದು ಪ್ರತೀತಿ. ಕರ್ಣಾಟಕ ಸಂಗೀತಕ್ಕೆ ಈತ ಭದ್ರವಾದ ತಳಪಾಯವನ್ನು ಹಾಕಿದನೆಂಬುದಂತೂ ನಿರ್ವಿವಾದವಾದ ವಿಷಯ. ಶಾಸ್ತ್ರೀಯ ಸಂಗೀತಕ್ಕೆ ಸೊಗಸಾದ ಕನ್ನಡ ಹಾಡುಗಳನ್ನು ಜೋಡಿಸಿರುವುದು ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ. ದಾಸರೆಂದರೆ ಪುರಂದರದಾಸರಯ್ಯ—ಎಂದು ಗುರುವಾದ ವ್ಯಾಸರಾಯನೇ ಈತನನ್ನು ಮುಕ್ತಕಂಠದಿಂದ ಹೊಗಳಿದ್ದಾನೆ.

ಪುರಂದರದಾಸನ ಸಮಕಾಲೀನನೂ ವ್ಯಾಸರಾಯನ ಶಿಷ್ಯನೂ ಆದ ಮತ್ತೊಬ್ಬ ದಾಸಶ್ರೇಷ್ಠನೇ ಕನಕದಾಸ. ಧಾರವಾಡಜಿಲ್ಲೆಯ ಬಂಕಾಪುರದ ಬಳಿ ಇರುವ ಬಾಡ ಎಂಬಲ್ಲಿ ಈತ ಜನಿಸಿದ (ಕ್ರಿ. ಶ. ಸು. 1500). ಜಾತಿಯಲ್ಲಿ ಕುರುಬ. ಹೆಸರು ತಿಮ್ಮ. ಚಿಕ್ಕಂದಿನಲ್ಲೇ ತಂದೆತಾಯಿಗಳು ತೀರಿಕೊಂಡರು. ಬಾಲಕ ತಿಮ್ಮನಿಗೆ ಬೇಟೆ, ಕತ್ತಿವರಸೆ, ಕಾಳಗಗಳಲ್ಲಿ ವಿಶೇಷ ಆಸಕ್ತಿ ಮೂಡಿತು. ಅನೇಕ ಗ್ರಾಮಗಳ ಢಣಾಯಕನಾದ. ನಿಧಿಯೊಂದು ಸಿಕ್ಕಿದ್ದರಿಂದ ಕನಕನಾಯಕನೆಂದು ಪ್ರಸಿದ್ಧನಾದ. ಪುರಂದರನಂತೆ ವೈರಾಗ್ಯದ ಕಡೆ ತಿರುಗಿ ವ್ಯಾಸರಾಯನ ಗುರುತ್ವದಲ್ಲಿ, ಆದಿಕೇಶವ ಎಂಬ ಅಂಕಿತದಲ್ಲಿ ಕೃತಿರಚನೆ ಮಾಡಿ ಕನಕದಾಸನಾದ. ಈತನದು ಶ್ರೀ ವೈಷ್ಣವ ಸಂಪ್ರದಾಯವೋ ಮಾಧ್ವ ಸಂಪ್ರದಾಯವೋ ಎಂಬ ಬಗ್ಗೆ ಏಕಾಭಿಪ್ರಾಯವಿಲ್ಲ. ಈತನ ಕಾವ್ಯಗಳಲ್ಲೊಂದಾದ ಮೋಹನ ತರಂಗಿಣಿಯಿಂದ ಈತ ಶ್ರೀವೈಷ್ಣವ ಸಂಪ್ರದಾಯಸ್ಥನೆನ್ನಲು ಅವಕಾಶವಿದೆ. ವ್ಯಾಸರಾಯನ ಶಿಷ್ಯನಾಗಿ ಮಧ್ವಮತತತ್ತ್ವಗಳನ್ನೂ ಈತ ಬೋಧಿಸಿದ್ದಾನೆ. ಒಟ್ಟಿನಲ್ಲಿ ಶ್ರೀ ವೈಷ್ಣವ ಹಾಗೂ ಮಾಧ್ವ ತತ್ತ್ವಗಳೆರಡನ್ನೂ ಹೀರಿಕೊಂಡ ಭಾಗವತ ಸಂಪ್ರದಾಯಕ್ಕೆ ಸೇರಿದ ಭಗದ್ಭಕ್ತನಿವನು ಎಂದು ತಿಳಿದಲ್ಲಿ ಸಮಂಜಸವಾಗುತ್ತದೆ. ಹರಿ–ಹರ ಸಾಮರಸ್ಯದೃಷ್ಟಿ ಮೋಹನ ತರಂಗಿಣಿಯಲ್ಲಿ ಸ್ಪಷ್ಟವಾಗಿ ಗೋಚರವಾಗುತ್ತದೆ. ಈತನ ಸಾಮರಸ್ಯದೃಷ್ಟಿ ಭಿನ್ನ ಧರ್ಮದ ನಾಯಕ ನಾಯಿಕೆಯರನ್ನು ವಿವಾಹಬಂಧನದ ಮೂಲಕ ಒಟ್ಟುಗೂಡಿಸುವವರೆಗೂ ಚಾಚಿದೆ. ಈತನ ಕ್ರಾಂತಿಕಾರಕ ಮನೋಭಾವಕ್ಕೆ ಇದೊಂದು ನಿದರ್ಶನ. ಸಮಾಜದ ರೀತಿನೀತಿಗಳನ್ನು ಕಟುವಾಗಿ ಟೀಕಿಸಬಲ್ಲ ಎದೆಗಾರಿಕೆ ಈತನದು. ಡೊಂಕುಬಾಲದ ನಾಯಕರೆ ನೀವೇನೇನೂಟವ ಮಾಡಿದಿರಿ—ಎಂಬ ಹಾಡಿನಲ್ಲಿ ಆತ್ಮಕಥೆ ಇರುವುದರ ಜೊತೆ ಸಮಾಜ ವಿಡಂಬನೆಯೂ ಕಾಣುತ್ತದೆ.

ಕನಕನ ಕಿಂಡಿಯ ಕಥೆ ಮಾರ್ಮಿಕವಾಗಿ ಅಂದಿನ ಸಾಮಾಜಿಕ ನಡೆವಳಿಕೆಯನ್ನೂ ಕನಕನ ಭಕ್ತಿ ಪಾರಮ್ಯವನ್ನೂ ಸೂಚಿಸುತ್ತದೆ. ಲೋಕ ಹೇಗೇ ತಿಳಿಯಲಿ ವ್ಯಾಸರಾಯ ಕನಕನನ್ನು ಶಿಷ್ಯನನ್ನಾಗಿ ಸ್ವೀಕರಿಸಿದ; ಪುರಂದರದಾಸ ಸ್ನೇಹಿತನಾಗಿ ಕಂಡ.

> ಕನಕದಾಸನು ಕಬ್ಬಲಿಗನು ಎಂದು
> ಅಣಕಿಸಿ ನುಡಿಬೇಡಿರಣ್ಣ
> ಜನರಂತೆ ನರನಲ್ಲ ತುಂಬುರನೀತನು
> ಜನಕಜೆ ರಮಣನ ಪಾದಸೇವಕನು॥

ಎಂದು ಪುರಂದರರನೇ ಒಂದೆಡೆ ಕನಕನನ್ನು ಹೊಗಳಿದ್ದಾನೆ. ಮೋಹನತರಂಗಿಣಿ, ನಳಚರಿತ್ರೆ, ರಾಮಧಾನ್ಯಚರಿತ್ರೆ, ಹರಿಭಕ್ತಿಸಾರ ಈ ಕಾವ್ಯಗಳನ್ನು ರಚಿಸಿ, ಹರಿದಾಸ ಪಂಥದಲ್ಲಿ ಕನಕ ಕವಿಯೆನ್ನಿಸಿಕೊಂಡಿದ್ದಾನೆ. ಪದ, ಸುಳಾದಿ, ಉಗಾಭೋಗಗಳೊಂದಿಗೆ ಮುಂಡಿಗೆಗಳನ್ನೂ ರಚಿಸಿದ ವೈಶಿಷ್ಟ್ಯ ಈತನದು.

ಕನಕದಾಸನ ಬಳಿಕ, ವ್ಯಾಸರಾಯನ ಪ್ರಮುಖ ಶಿಷ್ಯರಲ್ಲೊಬ್ಬನಾದ ವಾದಿರಾಜನನ್ನು ಮರೆಯಲಾಗುವುದಿಲ್ಲ. ಸೋದೆಮಠದ ಅಧಿಪತಿಯಾಗಿದ್ದ (1480–1600) ಈತನ ಹುಟ್ಟು ಹೆಸರು ವರಾಹ. ವಾದದಲ್ಲಿ ಈತ ನಿಸ್ಸೀಮ. ಸಂಸ್ಕೃತ, ಕನ್ನಡಗಳಲ್ಲಿ ಪಾಂಡಿತ್ಯ ಪಡೆದಿದ್ದ ಸವ್ಯಸಾಚಿ. ಉಡುಪಿಯ ಅಷ್ಟಮಠಗಳನ್ನು ಒಂದು ವ್ಯವಸ್ಥೆಗೆ ತಂದು, ಪರ್ಯಾಯದ ಏರ್ಪಾಡು ಮಾಡಿದವ. ಇಷ್ಟದೈವ ಇವನಿಗೆ ಕುದುರೆಯ ರೂಪದಲ್ಲಿ ದರ್ಶನಕೊಟ್ಟನಂತೆ. ಹಯವದನ ಎಂಬ ಅಂಕಿತದಿಂದ ಈತ ಕೃತಿರಚನೆ ಮಾಡಿದ್ದಾನೆ. ಶಾಸ್ತ್ರೀಯ ವಿಚಾರಗಳತ್ತ ಈತನಿಗೆ ಗಮನ ಹೆಚ್ಚು. ಸಂಭಾಷಣಾರೂಪದಲ್ಲಿ ಕೃತಿರಚನೆ ಮಾಡಿರುವುದು ಈತನ ವೈಶಿಷ್ಟ್ಯ. ಪರಮಾತ್ಮ–ಭಾಮೆಯರಿಗೆ ನಡೆದ ಸಂವಾದ, ಯಶೋದೆ–ಬಾಲಗೋಪಾಲರಿಗೆ ನಡೆದ ಸಂಭಾಷಣೆ — ಇವು ಅದ್ಭುತವಾಗಿ ಮೂಡಿ ನಿಂತಿವೆ. ಮಹಾಭಾರತದ ಕೀಚಕ ವಧೆಯ ಪ್ರಸಂಗವನ್ನು ಮನೋಹರವಾಗಿ ಈತ ಚಿತ್ರಿಸಿದ್ದಾನೆ. ಕೀರ್ತನೆಯನ್ನು ಕಟ್ಟುತ್ತಿದ್ದ ದಾಸರದೃಷ್ಟಿ ಇಲ್ಲಿ ಕಥನಕವನದ ಘಟ್ಟವನ್ನು ಮುಟ್ಟಿದೆ. ಸ್ವಪ್ನಪದ, ಲಕ್ಷ್ಮೀಶೋಭಾನೆ, ವೈಕುಂಠವರ್ಣನೆಗಳಂಥ ಖಂಡಕಾವ್ಯಗಳೆನ್ನಬಹುದಾದ ಕೃತಿಗಳನ್ನೂ ಈತ ರಚಿಸಿದ್ದಾನೆ. ವೈಕುಂಠವರ್ಣನೆ ನಾಲ್ಕು ಸಂಧಿಗಳಲ್ಲಿ ಅಡಕವಾಗಿರುವ ಸಾಂಗತ್ಯ ಕೃತಿ.

ಕನ್ನಡಿಯಂತಿರುವ ಪೂರ್ಣ ಪ್ರಜ್ಞರ ಮತದ ಸಾರವನ್ನು ಕನ್ನಡಿಸುವುದೇ ತನ್ನ ಕರ್ತವ್ಯವೆಂದು ಈತ ಒಂದು ಕಡೆ ಹೇಳಿಕೊಂಡಿದ್ದಾನೆ. ಉಭಯ ಭಾಷಾವಿಶಾರದನಾದ ಈತನ ಈ ಸಂಕಲ್ಪ ಕನ್ನಡಿಗರಿಗೆ ನಿಜಕ್ಕೂ ಒಂದು ವರವಾಗಿ ಪರಿಣಮಿಸಿದೆ. ತತ್ತ್ವಪ್ರಕಾಶಿಕಾ, ಭಗವದ್ಗೀತಾಟಿಪ್ಪಣಿ, ಮಹಾಭಾರತಟೀಕಾ ಮೊದಲಾದ ಸಂಸ್ಕೃತಗ್ರಂಥಗಳನ್ನು ಈತ ರಚಿಸಿದ್ದಾನೆ. ನೂರಿಪ್ಪತ್ತು ವರ್ಷಗಳ ತುಂಬು ಬಾಳನ್ನು ಬಾಳಿದ ಈತ ಅನೇಕ ಕೀರ್ತನೆಗಳು, ಉಗಾಭೋಗಗಳು, ಸುಳಾದಿಗಳನ್ನೂ ರಚಿಸಿದ್ದಾನೆ. ತಾಳುವಿಕೆಗಿಂತ ತಪವು ಇಲ್ಲ—ಎಂಬುದು ಈತ ನೀಡಿರುವ ಸಾರ್ವಕಾಲಿಕ ಸಾರ್ವತ್ರಿಕ ಸಂದೇಶ.

ಮೇಲಿನ ದಾಸರುಗಳನ್ನು ಬಿಟ್ಟರೆ ವಿಜಯದಾಸ, ಗೋಪಾಲ ದಾಸ ಮತ್ತು ಜಗನ್ನಾಥದಾಸರುಗಳನ್ನು ಹೆಸರಿಸಲೇಬೇಕು. ಕಾವ್ಯಮಯವಾದ ದೃಷ್ಟಿಕೋನದಿಂದ ಶಾಸ್ತ್ರಭೂಯಿಷ್ಠವಾಗಿ ಪರಿಣಮಿಸಿದ ಹರಿದಾಸ ಸಾಹಿತ್ಯದ ಒಂದು ತಿರುವನ್ನು ವಿಜಯದಾಸನ ಕೃತಿಗಳಲ್ಲಿ ಗುರುತಿಸಬಹುದು. ಕ್ರಿ.ಶ. 18ನೆಯ ಶತಮಾನದಲ್ಲಿ ಚೀಕಲಪರಿವೆ ಎಂಬಲ್ಲಿ ಈತ ಜನಿಸಿದ. ಸ್ವಪ್ನದಲ್ಲಿ ಪುರಂದರದಾಸನ ಅನುಗ್ರಹವಾಯಿತು. ವಿಜಯವಿಠಲ ಎಂಬ ಅಂಕಿತ ದೊರಕಿತು. ತನ್ನ ಪರೋಕ್ಷ ಗುರುವನ್ನು ಈತ ನಾನಾವಿಧವಾಗಿ ಸ್ತುತಿಸಿದ್ದಾನೆ. ಈತನಲ್ಲಿ ಭಾವ ವೈವಿಧ್ಯ, ಲಾಲಿತ್ಯ ಕಡಿಮೆ. ತತ್ತ್ವಗಳ ನಿರೂಪಣೆಗೆ ಅನುಗುಣವಾಗಿ ಸುಳಾದಿಯಂಥ ಬಿಗುಬಂಧ ರೂಪುಗೊಂಡಿದೆ. ಗಹನ ತತ್ತ್ವಗಳನ್ನು ಸರಳವಾಗಿ ನಿರೂಪಿಸಿರುವ ಕೌಶಲ ಮೆಚ್ಚುವಂಥದು. ನಾಹಂಕರ್ತಾ ಸರ್ವಂ ಹರಿ ಕರ್ತಾ ಎಂಬ ಸುಪ್ರಸಿದ್ಧ ತತ್ತ್ವವನ್ನು

> ಕುಣಿಸಿದರೆ ಕುಣಿವೆ ನಗಿಸಿದರೆ ನಗುವೆ
> ಮಣಿಸಿದರೆ ಮಣಿವೆ ಅಳಿಸಿದರೆ ಅಳುವೆ
> ಉಣಿಸಿದರೆ ಉಣುವೆ ಉಡಿಸಿದರೆ ಉಡುವೆ
> ಮನುಜವೇಷನೆ ಸಿರಿ ವಿಜಯವಿಠಲ ನೀನೆ
> ದಣಿಸಿದರೆ ದಣಿವೆ ನೆನವಿತ್ತರೆ ನೆನವೆ

—ಎಂಬುದಾಗಿ ಸರಳವಾದ ಕನ್ನಡ ಮಾತುಗಳಲ್ಲಿ ನಿರೂಪಿಸಲಾಗಿದೆ. ಹರಿ ಸರ್ವೋತ್ತಮತ್ವ, ಬಿಂಬರೂಪಿ ಪರಮಾತ್ಮನನ್ನು ಒಲಿಸಿಕೊಳ್ಳುವ ಬಗೆ, ಜ್ಞಾನ–ಭಕ್ತಿ ವೈರಾಗ್ಯಗಳ ಸಂಪಾದನೆ, ಪ್ರಾಣದೇವರಸ್ತುತಿ, ಮಾನವ ಜನ್ಮದಲ್ಲಿ ಕರ್ಮದ ಪಾತ್ರ ಇತ್ಯಾದಿ ಅನೇಕ ಗಹನ ತತ್ತ್ವಗಳನ್ನು ತೆಗೆದುಕೊಂಡು, ಅವನ್ನು ಈತ ವಿವರಿಸಲೆತ್ನಿಸಿದ್ದಾನೆ ; ಶ್ರೀಪಾದರಾಯ, ವ್ಯಾಸರಾಯ, ರಾಘವೇಂದ್ರ ಯತಿ, ಪುರಂದರದಾಸ ಇವರೆಲ್ಲರ ವಿಚಾರಗಳನ್ನೂ ತನ್ನ ಕೃತಿಗಳಲ್ಲಿ ಸಂಗ್ರಹಿಸಿಕೊಟ್ಟಿದ್ದಾನೆ.

ಇವನ ಶಿಷ್ಯ ಗೋಪಾಲದಾಸ. ಪೂರ್ವಾಶ್ರಮದ ಹೆಸರು ಭಾಗಣ್ಣ. ಭಕ್ತಿಯಲ್ಲಿ ಭಾಗಣ್ಣ ಎಂಬ ಜನಪ್ರಿಯೋಕ್ತಿಯೊಂದಿದೆ. ದಾಸಚತುಷ್ಟಯ ಎಂದು ಪ್ರಸಿದ್ಧರಾಗಿರುವವರಲ್ಲಿ ಪುರಂದರ, ವಿಜಯ ಹಾಗೂ ಜಗನ್ನಾಥದಾಸರೊಂದಿಗೆ ಈತನೂ ಒಬ್ಬ. ವಿಜಯದಾಸನಿಂದ ದೀಕ್ಷೆಪಡೆದು ಗೋಪಾಲವಿಠಲ ಎಂಬ ಅಂಕಿತದಲ್ಲಿ ಕೃತಿರಚನೆ ಮಾಡಿದ್ದಾನೆ. ಈತನ ಕೃತಿಗಳು ಇತರ ದಾಸರ ಕೃತಿಗಳ ಸರಣಿಯಲ್ಲಿಯೇ ಇವೆ.

ಅನಂತರ ಹರಿದಾಸ ಪೀಳಿಗೆಯಲ್ಲಿ ಜಗನ್ನಾಥದಾಸ ಮುಖ್ಯ. ವಿಜಯದಾಸನಲ್ಲಿ ಕಾಣುವ ಶಾಸ್ತ್ರಪ್ರಾವೀಣ್ಯ ಇವನಲ್ಲಿ ಇನ್ನೂ ಹೆಚ್ಚಿನ ಪಕ್ವತೆ ಪಡೆದಿದೆ. ಕ್ರಿ.ಶ.ಸು. 1727ರಲ್ಲಿ ಮಾನ್ವಿ ತಾಲ್ಲೂಕಿನ ಬ್ಯಾಗವಟ್ಟದಲ್ಲಿ ಈತ ಜನಿಸಿದ. ಮೊದಲ ಹೆಸರು ಶ್ರೀನಿವಾಸ. ಅಂಕಿತ ಜಗನ್ನಾಥವಿಠಲ. ಹರಿಕಥಾಮೃತಸಾರ ಇವನ ತಾತ್ತ್ವಿಕ ಉದ್ಗ್ರಂಥ. ಶುಷ್ಕವೈದಿಕ ತತ್ತ್ವಬೋಧನೆಯಾಗಿರದೆ ಸರಳವಾಗಿ, ಅರ್ಥವಾಗುವಂತಿರುವುದು ಇದರ ವೈಶಿಷ್ಟ್ಯ. ಪರಮಾತ್ಮ ಸರ್ವವ್ಯಾಪಿ ಎಂಬ ತತ್ತ್ವಪ್ರತಿಪಾದನೆ ಹೀಗಿದೆ :

> ಎಲ್ಲಿ ಕೇಳಿದರೆಲ್ಲಿ ನೋಡಿದ
> ರೆಲ್ಲಿ ಬೇಡಿದರಲ್ಲಿ ನೀಡಿದ
> ರೆಲ್ಲಿ ಓಡಿದರೆಲ್ಲಿಯಾಡಿದರಲ್ಲಿ ಇರುತಿಹನು.

ಆದರೆ, ಮಧ್ವಮತ ತತ್ತ್ವಗಳ ಪ್ರತಿಪಾದನೆ ವಿಶೇಷವಾಗಿರುವುದರಿಂದ ಅದರ ವಸ್ತು, ವಿಷಯಗಳನ್ನರಿಯಲು ಆ ಮತದ ಪರಿಚಯದ ಹಿನ್ನೆಲೆ ಅತ್ಯಗತ್ಯ. ಇದರಲ್ಲಿ ಒಟ್ಟು 32 ಸಂಧಿಗಳಿವೆ, ಇಡೀ ಕಾವ್ಯ ಭಾಮಿನೀಷಟ್ಪದಿಯಲ್ಲಿ ರಚಿತವಾಗಿದೆ. ಶುದ್ಧಕಾವ್ಯವಿದಲ್ಲ ಎಂದು ಕವಿಯೇ ಹೇಳಿಬಿಟ್ಟಿದ್ದಾನೆ. ಶಾಸ್ತ್ರದಲ್ಲಿ ಅಭಿರುಚಿ, ಧರ್ಮದಲ್ಲಿ ಶ್ರದ್ಧೆ, ಪರಮಾತ್ಮನಲ್ಲಿ ಪ್ರೀತಿಯಿರುವ ಎಲ್ಲರಿಗೂ ಈ ಗ್ರಂಥ ಒಂದು ಸವಿಯುಣಿಸಾಗಬಲ್ಲುದು. ಇದರೊಂದಿಗೆ ಅನೇಕ ಕೀರ್ತನೆಗಳನ್ನೂ ಸುಳಾದಿಗಳನ್ನೂ ಈತ ರಚಿಸಿದ್ದಾನೆ. ಸುವ್ವಾಲಿಗಳ ರಚನೆ ಈತನ ಮತ್ತೊಂದು ವೈಶಿಷ್ಟ್ಯ. ತ್ರಿಪದಿಯ ಜಾಡಿನಲ್ಲಿರುವ,ತತ್ತ್ವ ನಿರೂಪಣಾ ಮಾಧ್ಯಮಗಳೇ ಈ ಸುವ್ವಾಲಿಗಳು. ಉದಾಹರಣೆಗೆ

> ಎನ್ನ ಪೋಲುವ ಭಕ್ತರನ್ನಂತ ನಿನಗಿಹರು
> ನಿನ್ನಂಥ ಸ್ವಾಮಿ ಎನಗಿಲ್ಲ । ಎನಗಿಲ್ಲವದರಿಂದ
> ಬಿನ್ನೈಪೆ ನಿನ್ನ ಸಲಹೆಂದು—

ಅನುಭವ ಹಾಗೂ ತತ್ತ್ವ ಗಾಂಭೀರ್ಯ ಈ ಕೃತಿಗಳಲ್ಲಿನ ವೈಶಿಷ್ಟ್ಯ.

ವಾತ್ಸಲ್ಯಭಾವದ ಪ್ರತಿಪಾದನೆಯ ದೃಷ್ಟಿಯಿಂದ ಜಗನ್ನಾಥದಾಸನ ಸಮಕಾಲೀನನಾದ ಪ್ರಸನ್ನ ವೆಂಕಟದಾಸನನ್ನು ಗಮನಿಸಬೇಕಾಗುತ್ತದೆ. ವಾತ್ಸಲ್ಯಭಾವದ ಪ್ರತಿಪಾದನೆ ಎಲ್ಲ ದಾಸರಲ್ಲೂ ಸಾಮಾನ್ಯವಾಗಿ ಕಂಡು ಬಂದರು ಈತನಲ್ಲಿ ಅದು ವಿಶೇಷವಾಗಿದೆ. ಕೃಷ್ಣಾದಿಗಳ ಬಾಲಭಾಷೆಯನ್ನು ಬಳಸಿಕೊಂಡಿರುವುದು ಇವನ ವೈಶಿಷ್ಟ್ಯ. ಉದಾಹರಣೆಗೆ

> ಎತೋದೆಯಮ್ಮ । ನಂಗನ್ನೆತ್ತಿಕೋ ಅಮ್ಮಾ, ಬಾಲು ।
> ವತ್ತು ಅತ್ತು ಬಂದೀನೆ । ಇತ್ತೆ ಅಮ್ಮಿ ತಿಂದೇನೆ ॥ ಪಲ್ಲ ॥

ಎಂಬ ಕೃತಿಯನ್ನು ನೋಡಬಹುದು.

ಇದುವರೆಗೆ ಸು. 14ನೆಯ ಶತಮಾನದಲ್ಲಿದ್ದ ನರಹರಿತೀರ್ಥರಿಂದ ಹಿಡಿದು ಸುಮಾರು 17ನೆಯ ಶತಮಾನದಲ್ಲಿ ಬಂದ ಪ್ರಸನ್ನ ವೆಂಕಟದಾಸನ ವರೆಗೂ ಆಗಿ ಹೋದ ಪ್ರಮುಖ ಹರಿದಾಸರ, ವ್ಯಕ್ತಿ—ಸಾಹಿತ್ಯಗಳನ್ನು ಸ್ಥೂಲವಾಗಿ ಪರಿಶೀಲಿಸಲಾಯಿತು. ನಡುವಿನ 16ನೆಯ ಶತಮಾನವನ್ನು ದಾಸಸಾಹಿತ್ಯದ ಅತ್ಯುನ್ನತಿಯ ಕಾಲವೆಂದು ನಿಸ್ಸಂದೇಹವಾಗಿ ಹೇಳಬಹುದು. ಆ ಬಳಿಕ ಇದುವರೆಗೂ ಸುಮಾರು 300—350 ಜನ ಹರಿದಾಸರು ಆಗಿಹೋದರೂ ಅವರ ಸಾಹಿತ್ಯವೆಲ್ಲ ಹೆಚ್ಚು ಕಡಿಮೆ ಹಿಂದಿನ ಸಾಹಿತ್ಯದ ಚರ್ವಿತಚರ್ವಣವೇ ಆಗಿ ಉಳಿದಿದೆ.

ಇಡೀ ಹರಿದಾಸಸಾಹಿತ್ಯವನ್ನು ಒಟ್ಟಾಗಿ ಪರಿಶೀಲಿಸಿದಾಗ ಕೆಲವು ವಿಶಿಷ್ಟ ಗುಣಗಳನ್ನು ಗುರುತಿಸಬಹುದು. ಮಧ್ವಾಚಾರ್ಯರ ಹನುಮ, ಭೀಮ ಮಧ್ವ—ಈ ಅವತಾರ ತ್ರಯದಲ್ಲಿ ಹರಿದಾಸರೆಲ್ಲರಿಗೂ ನಂಬಿಕೆಯಿದೆ. ಹರಿಯ ದಶಾವತಾರಗಳನ್ನೊಪ್ಪಿಕೊಂಡ ವಿಷ್ಣು ಪಂಥೀಯರವರು. ಹನುಮನಿಗೆ ಗುರುಪದವಿಯನ್ನು ಕೊಟ್ಟಿರುವ ದ್ವೈತಿಗಳು. ಈ ಹಿನ್ನೆಲೆಯಲ್ಲಿ, ವಿಷ್ಣು ಭಕ್ತಿಯ ಆಗರಗಳಾದ ರಾಮಾಯಣ, ಮಹಾಭಾರತ, ಭಾಗವತಗಳನ್ನು ತಮ್ಮ ತತ್ತ್ವಪ್ರತಿಪಾದನೆಗಳಲ್ಲಿ ಧಾರಾಳವಾಗಿ ಇವರು ಬಳಸಿಕೊಂಡಿದ್ದಾರೆ. ಹನುಮನ ಸ್ವಾಮಿಭಕ್ತಿದ್ಯೋತಕವಾಗಿರುವ ರಾಮಾಯಣ, ಭೀಮನ ಪರಾಕ್ರಮದ ಪ್ರತೀಕವಾಗಿರುವ ಮಹಾಭಾರತ, ವಿಷ್ಣುವಿನ ಲೀಲಾಕಥನವೇ ಆದ ಭಾಗವತ—ಇವು ಅನುಸರಣೀಯವಾದುದರಲ್ಲಿ ಆಶ್ಚರ್ಯವಿಲ್ಲ. ತಮ್ಮ ನಂಬಿಕೆಗಳನ್ನು ಧ್ರುವ, ಅಜಾಮಿಳ, ಪ್ರಹ್ಲಾದ, ಗಜೇಂದ್ರ, ಬಲಿ, ಅಂಬರೀಷ ಮೊದಲಾದವರ ಉದಾಹರಣೆಗಳ ಮೂಲಕ ನಮಗೆ ಮತ್ತೆ ಮತ್ತೆ ದಾಸರು ಸ್ಪಷ್ಟಪಡಿಸುತ್ತಾರೆ. ಅಂತೆಯೇ ಪೂತನಿ, ಕಂಸ, ಶಕಟಾಸುರ, ಕಾಳಿಂಗನೇ ಮೊದಲಾದ ದುಷ್ಟರ ನಿಗ್ರಹ ದಾಸರಿಗೆ ಮಾದರಿಯಾಗಿದೆ. ಭಾಗವತದ ದಶಮಸ್ಕಂದವನ್ನಂತೂ ದಾಸರ ಪದಗಳಿಂದಲೇ ಪುನರ್ರಚಿಸಬಹುದು. ಪ್ರತಿಯೊಬ್ಬ ದಾಸನೂ ಗುರುಮುಖೇನ ಅಂಕಿತವನ್ನು ಪಡೆದಿರುವುದು ಸ್ಪಷ್ಟವಿದೆ.

ಸಾಮಾನ್ಯ ಜನರ ಉದ್ಧಾರಕ್ಕೆ ಕಂಕಣಬದ್ಧರಾಗಿ ನಿಂತಂಥ ಹರಿದಾಸರು ಆ ಜನರ ಪ್ರತಿನಿತ್ಯದ ಜೀವನದ ಕಡೆಗೂ ತಮ್ಮ ದೃಷ್ಟಿಯನ್ನು ಹರಿಸಿರುವುದು ಸ್ತುತ್ಯರ್ಹ. ಲೌಕಿಕ ಘಟನೆಗಳನ್ನು ಬಣ್ಣಿಸಿ, ಅದಕ್ಕೆ ಒಂದು ಪಾರಮಾರ್ಥಿಕ ಅರ್ಥವನ್ನಳವಡಿಸಿರುವುದು ಹರಿದಾಸರ ವೈಶಿಷ್ಟ್ಯಗಳಲ್ಲೊಂದು. ಉದಾಹರಣೆಗೆ, ರಸ್ತೆಯಲ್ಲಿ ಡಂಗುರ ಸಾರುವುದನ್ನು ಕಂಡಾಗ ಪುರಂದರದಾಸನ ಪ್ರತಿಕ್ರಿಯೆ ಹೀಗಿದೆ :

ಡಂಗುರವ ಸಾರಿರಯ್ಯ ಡಿಂಗರಿಗರೆಲ್ಲರು
ಧರೆಗೆ ಶ್ರೀ ಪಾಂಡುರಂಗವಿಠ್ಠಲ ಪರದೈವವೆಂದು.

ಜೀವನದಲ್ಲಿ ಅಂಟಿಯೂ ಅಂಟದಂತೆ ಬಾಳಬೇಕೆಂಬುದೇ ಹರಿದಾಸರ ಉಪದೇಶದ ಸಾರ. ಮಾನವನ ಧರ್ಮವನ್ನು ಕಟ್ಟುವ ಪ್ರಯತ್ನ ಅವರದು. ಸಮಾಜದಲ್ಲಿದ್ದ ಸಣ್ಣತನ, ಮತ್ಸರ, ಮೋಹ, ಭ್ರಮೆ, ಅಂಧಶ್ರದ್ಧೆ, ಕುರುಡು ನಿಷ್ಠೆ—ಇತ್ಯಾದಿ ರೋಗಾಣುಗಳನ್ನೆಲ್ಲ ತಮ್ಮ ಸಾಹಿತ್ಯವೆಂಬ ಸಿದ್ಧೌಷಧದಿಂದ ನಾಶಪಡಿಸಲೆತ್ನಿಸಿದರವರು. ತಮ್ಮದು ನ್ಯಾಯಮಾರ್ಗವೆಂಬ ಪ್ರಜ್ಞೆಯನ್ನು ಎಲ್ಲಿಯೂ ಅವರು ಮರೆತಂತಿಲ್ಲ. ಆ ಧೈರ್ಯದಿಂದಲೇ ಅವರು ಭಗವಂತನೊಡನೆ ವಾದಹೂಡಲು ಶಕ್ತರಾದದ್ದು. ಪರಮಾತ್ಮನ ಸ್ವರೂಪ, ಗುಣಾದಿ ವಿಷಯಗಳಿಗೆ ಬಂದಾಗಲಂತೂ ಅವರ ಸರಳ ಸುಂದರ ನಿರೂಪಣೆಗಳು ಅಚ್ಚರಿಯನ್ನುಂಟುಮಾಡುತ್ತವೆ. ವೇದೋಪನಿಷತ್ತುಗಳ ಸಾರವನ್ನೇ ಕನ್ನಡಕ್ಕವರು ಬಟ್ಟಿಯಿಳಿಸಿಕೊಟ್ಟಿದ್ದಾರೆ.

ಇಡೀ ಭಾರತದಲ್ಲೇ ಧರ್ಮಜಾಗ್ರುತಿಯ ಕಾಲವಾಗಿದ್ದ ಆ ಪರ್ವಕಾಲದಲ್ಲಿ, ಕರ್ಣಾಟಕದಲ್ಲಿ ಧರ್ಮ, ವಿಷ್ಣುಭಕ್ತಿಗಳನ್ನು ಪುನರುಜ್ಜೀವನಗೊಳಿಸಿದ ಕೀರ್ತಿ ಹರಿದಾಸರದು. ತಮ್ಮ ನಾದಮಯ ಪದಗುಚ್ಛಗಳನ್ನು ತಂಬೂರಿಯ ಶ್ರುತಿಯೊಂದಿಗೆ ಮೇಳವಿಸಿ, ಕಾಲಿಗೆ ಗೆಜ್ಜೆಕಟ್ಟಿಕೊಂಡು ನರ್ತಿಸುತ್ತ ಹಾಡಿ, ಮನೆ ಮನೆಗೂ ಸಂಗೀತ, ಸಾಹಿತ್ಯ, ನೃತ್ಯಗಳ ರಸಾನುಭವವನ್ನು ಮುಟ್ಟಿಸಿದ್ದಾರೆ, ಅವರು.

ಇಷ್ಟೆಲ್ಲ ಇದ್ದರೂ ಇಡೀ ಹರಿದಾಸ ಪರಂಪರೆಯನ್ನು ಮಾಧ್ವಮತದ ಚೌಕಟ್ಟಿನೊಳಗೇ ನಿಲ್ಲಿಸುವುದು ಅನಿವಾರ್ಯ. ಪುರಂದರ ಕನಕದಾಸರುಗಳನ್ನು ಮಾತ್ರ ಈ ಅಪವಾದದಿಂದ ಕೊಂಚ ಮಟ್ಟಿಗೆ ಬಿಡುಗಡೆ ಮಾಡಬಹುದು. ಉಳಿದವರಲ್ಲಿ ಶಾಸ್ತ್ರ, ಪಾಂಡಿತ್ಯ, ತತ್ತ್ವನಿರೂಪಣೆಗಳ ಕಡೆಯೇ ಗಮನ ಹೆಚ್ಚು. ಈ ದೃಷ್ಟಿಯಿಂದ ದಾಸಸಾಹಿತ್ಯದಲ್ಲಿ ವಿಷಯ ವೈವಿಧ್ಯ ಸಾಕಷ್ಟಿಲ್ಲದಿದ್ದರೂ ಅವುಗಳ ನಿರೂಪಣಮಾಧ್ಯಮಗಳು ವೈವಿಧ್ಯ ಪೂರ್ಣವಾಗಿವೆ. ಪದ, ಉಗಾಭೋಗ, ಸುಳಾದಿ, ದಂಡಕ, ಸುವ್ವಾಲಿ, ವೃತ್ತನಾಮ ಮೊದಲಾದ ಪ್ರಕಾರಗಳಲ್ಲಿ ಅವು ಹೊರಹೊಮ್ಮಿವೆ :

ಪದ :
ಈಸಬೇಕು । ಇದ್ದು । ಜಯಿಸಬೇಕು ॥ ಪ ॥
ಹೇಸಿಕೆ ಸಂಸಾರದಲ್ಲಿ । ಆಸೆ ಲೇಶ ಇಡದ್ಹಾಂಗೆ ॥ ಅ ॥
ತಾಮರಸಜಲದಂತೆ । ಪ್ರೇಮವಿಟ್ಟು ಭವದೊಳು ।
ಸ್ವಾಮಿ ರಾಮ ಎನುತ ಪಾಡಿ । ಕಾಮಿತ ಕಯ್ಗೊಂಬರೆಲ್ಲ ॥ 1 ।
ಗೇರುಹಣ್ಣಿನಲ್ಲಿ ಬೀಜ । ಸೇರಿದಂತೆ ಸಂಸಾರದಿ ।
ಮೀರಿಯಾಸೆ ಮಾಡದಲೆ । ಧೀರ ಕೃಷ್ಣನ ಭಕುತರೆಲ್ಲ ॥ 2 ॥
ಮಾಂಸದಾಸೆಗೆ ಮತ್ಸ್ಯಸಿಲುಕಿ । ಹಿಂಸೆ ಪಟ್ಟಪರಿಯಂತೆ
ಮೋಸ ಹೋಗದ್ಹಾಂಗೆ ಜಗ । ದೀಶ ಪುರಂದರ
ವಿಠಲನ ನೆನೆದು ॥ 3 ॥

ಉಗಾಭೋಗ :
ನಿನ್ನಂಥ ಸ್ವಾಮಿ ಎನಗುಂಟು ನಿನಗಿಲ್ಲ
ನಿನ್ನಂಥ ತಂದೆ ಎನಗುಂಟು ನಿನಗಿಲ್ಲ
ನೀನೆ ಪರದೇಶಿ ನಾನೆ ಸ್ವದೇಶಿ
ನಿನ್ನರಸಿ ಲಕುಮಿ ಎನ್ನ ತಾಯಿ
ನಿನ್ನ ತಾಯ ತೋರೋ ಶ್ರೀ ಪುರಂದರವಿಠಲ

ಸುಳಾದಿ :
ಒಡೆಯ ಹಾವಿಗೆ ಮೆಟ್ಟೆ ಹಾವಿಗೆಯವ ನಾನು ।
ಒಡೆಯ ಮೆಲ್ಲಡಿಯಿಡಲು ಕಟ್ಟಿಗೆಯವ ನಾನು
ಕಡೆಯ ತಾಂಬೂಲವನುಗುಳುವ ವೇಳ್ಯಗಳಲ್ಲಿ
ಕಾಳಾಂಚಿಯುವ ನಾನು ।

ಒಡೆಯನೊಡ್ಡೋಲಗದಲ್ಲಿ ಚಿತ್ತೈಸಿರೆ ।
ಛತ್ರ ಚಾಮರ ಕನ್ನಡಿ ಪಿಡಿವವ ನಾನೊಡೆಯಗೆ
ಒಡೆಯ ಪುರಂದರ ವಿಠಲರಾಯನ । ಉಗುರು ಬಿದ್ದಲ್ಲಿ
ಯೆನ್ನ ಶಿರವ ಕೊಡುವೆ ನಾನೊಡೆಯಗೆ ॥ 1 ॥

ಮಟ್ಟಿತಾಳ :
ಹರಿಯನೋಲೈಸುವೆಂಬಣ್ಣಗಳಿರ ಕೇಳಿರೊ ।
ಶರಧಿಯ ಕಟ್ಟಿಟ್ಟು ಕುಲಂಕೆಯ ಮುಟ್ಟಿ ।
ಕುರಾವಣಾದಿಗಳ ಕೂಡೆ ಇರಿದಾಡುತಿರಬೇಕು ।
ಪುರಂದರ ವಿಠಲನೋಲಗದೂಳಿಗ ಘನಾ ॥ 2 ॥

ಅಟತಾಳ :
ಚಂದ್ರಮ ನೀನಿನ್ನು ನಿಂದಿರೆ ತೆರವಿಲ್ಲ ।
ಸೂರೆಯ ಗೈಯಿನ್ನು ತಿರುಗದೆಲೆ ಹೊತ್ತು ।
ಇಂದ್ರಾದಿಗಳಿಗೆಲ್ಲ ಹರಿಹರಿ । ನಿಂದುತಲೆ
ಯನು ತುರಿಸಲು ಹೊತ್ತಿಲ್ಲ ।
ಬೊಮ್ಮಾದಿಗಳಿಗೂ ಒಮ್ಮೆಯು ತೆರಪಿಲ್ಲ
ಈ ದೇವರೆಲ್ಲರೊಳೊಬ್ಬನೆ । ಮೆಟ್ಟಿ
ಆಡುವ ನಮ್ಮ ಪುರಂದರವಿಠಲ ಕಟ್ಟಾಳು ಕಾಣಿರೊ ॥ 3 ॥

ಆದಿತಾಳ :
ಧರೆಯಂಜುತಲಿದೆ ಗಿರಿಗಳಂಜುತಲಿವೆ ।
ಮರಬಳ್ಳಿಗಳಂಜಿ ಫಲವನೀವುತಲಿವೆ ।
ಸರಿತು ಸಮುದ್ರಗಳಂಜಿ ಬೆಚ್ಚುತಲಿವೆ ।
ಪುರಂದರವಿಠಲ ನೀನೆಂಥ ಅರಸೂ ॥ 4 ॥

ಜತೆ :
ನಾಘನ ನೀಘನ ತಾಘನಯೆನಬೇಡಾ ।
ಪುರಂದರವಿಠಲನೊಬ್ಬನೆ ಘನ ॥ 5 ॥

ಸಂಖ್ಯಾಬಾಹುಳ್ಯದಿಂದ ನೋಡುವುದಾದರೆ ಪದ ಅಥವಾ ಕೀರ್ತನೆಗಳು ಹೆಚ್ಚಿನ ಸಂಖ್ಯೆಯಲ್ಲಿ ಸಿಕ್ಕುತ್ತವೆ. ಅನಂತರ ಸುಳಾದಿಗಳು. ಬಳಿಕ ಉಗಾಭೋಗಗಳು. ಉಳಿದ ದಂಡಕ, ವೃತ್ತನಾಮ ಸುವ್ವಾಲಿಗಳು ಅಲ್ಲಲ್ಲಿ ಕಾಣಸಿಗುತ್ತವೆ ಅಷ್ಟೆ.

ಈ ಹರಿದಾಸಸಾಹಿತ್ಯವನ್ನು ಸಂಗ್ರಹಿಸಿ, ಪರಿಷ್ಕರಿಸಿ, ಪ್ರಕಟಿಸುವ ಕಾರ್ಯ ಹಲವಾರು ವ್ಯಕ್ತಿ, ಸಂಸ್ಥೆಗಳಿಂದ ನಡೆದಿದೆ. ಇವರಲ್ಲಿ ಸುಬೋಧ ರಾಮರಾಯರು, ಗೋರಬಾಳ ಹನುಮಂತರಾಯರು, ಪಾವಂಜೆ ಗುರುರಾಯರುಗಳನ್ನು ಹೆಸರಿಸಬಹುದು. ಅಂತೆಯೇ ಕನಕದಾಸರ ನಾಲ್ಕನೆಯ ಶತಮಾನೋತ್ಸವ ಸಮಿತಿಯವರು ಕನಕದಾಸರ ಕೃತಿಗಳನ್ನೂ ಅಖಿಲ ಕರ್ನಾಟಕ ಪುರಂದರದಾಸರ 400ನೆಯ ವರ್ಷದ ಉತ್ಸವಮಂಡಳದವರು (ಧಾರವಾಡ) ಪುರಂದರದಾಸರ ಕೃತಿಗಳನ್ನೂ ಪ್ರಕಟಿಸಿದ್ದಾರೆ. ಈಗ ಸದ್ಯದಲ್ಲಿ, ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ, ಕನ್ನಡ ಅಧ್ಯಯನ ಸಂಸ್ಥೆಯ ಹರಿದಾಸಸಾಹಿತ್ಯ ವಿಭಾಗದವರೂ ದಾಸಸಾಹಿತ್ಯದ ಸಂಪಾದನ ಕಾರ್ಯವನ್ನು ಕೈಗೊಂಡಿದ್ದಾರೆ. ಹಸ್ತಪ್ರತಿಗಳನ್ನು ಸಂಗ್ರಹಿಸಿ, ಪರಿಷ್ಕರಿಸಿ, ಈಗಾಗಲೇ ಶ್ರೀಪಾದರಾಯರ ಕೃತಿಗಳನ್ನು ಅಚ್ಚಿಗೆ ಸಿದ್ಧಪಡಿಸಿಕೊಟ್ಟಿದ್ದಾರೆ. ಉಳಿದವು ಕ್ರಮೇಣ ಬರಲಿವೆ.

ಇವುಗಳೇ ಅಲ್ಲದೆ, ಪ್ರಸನ್ನವೆಂಕಟದಾಸ ಮತ್ತು ಅವನ ಕೃತಿಗಳು—ಎಂಬ ವಿಷಯವಾಗಿ ಎ.ಟಿ. ಪಾಟೀಲರೂ ಕರ್ನಾಟಕದ ಹರಿದಾಸರು—ಎಂಬುದಾಗಿ ವೇದವ್ಯಾಸಾಚಾರ್ಯರೂ ಜಗನ್ನಾಥದಾಸರು—ಎಂಬುದಾಗಿ ಕೆ. ಎಂ. ಕೃಷ್ಣರಾಯರೂ ಪ್ರಸಾದಯೋಗ—ಎಂದು ಶ್ರೀ ದಿವಾನ್‌ಜೀಯವರೂ ನಿಬಂಧಗಳನ್ನು ರಚಿಸಿದ್ದಾರೆ. ಇವುಗಳೊಂದಿಗೆ ಹೆಸರಿಸಲೇಬೇಕಾದ ಮತ್ತೆ ಕೆಲವು ಹೊತ್ತಗೆಗಳೆಂದರೆ ಆರ್.ಎಸ್. ಪಂಚಮುಖಿಯವರ ಕರ್ನಾಟಕದ ಹರಿದಾಸಸಾಹಿತ್ಯ, ಬೇಲೂರು ಕೇಶವದಾಸರ ಕರ್ನಾಟಕ ಭಕ್ತವಿಜಯ (ಭಾಗ 1, 2,) ರಂಗರಾವ್ ದಿವಾಕರರ ಹರಿಭಕ್ತಿಸುಧೆ, ಜಿ. ವರದರಾಜರಾಯರ ಹರಿದಾಸ ಹೃದಯ—ಇವು ಈಗಲೂ ಈ ದಾಸಪರಂಪರೆಯನ್ನುಳಿಸಿಕೊಂಡು, ಕೃತಿರಚನೆಯಲ್ಲಿ ತೊಡಗಿರುವವರಲ್ಲಿ ಚಿತ್ರದುರ್ಗದ ರಾಮಚಂದ್ರರಾವ್ (ತಂದೆ ವೆಂಕಟೇಶವಿಠಲ) ಮೈಸೂರಿನ ಎಂ. ಆರ್. ಗೋವಿಂದರಾವ್ (ಗುರುಗೋವಿಂದವಿಠಲ) ಮತ್ತು ಜೀವೂಭಾಯಿ (ಕಮಲನಾಭ ವಿಠಲ)—ಇವರನ್ನು ಹೆಸರಿಬಹುದು. (ಟಿ.ಎಚ್.ಎಸ್.)

**ಕನ್ನಡದಲ್ಲಿ ನವ್ಯಕಾವ್ಯ:** ಸುಮಾರು 1950ಕ್ಕೆ ಈಚಿನ ಒಂದು ಕಾವ್ಯ ಮಾರ್ಗವನ್ನು ನವ್ಯಕಾವ್ಯವೆಂದು ಕರೆಯಲಾಗಿದೆ. ಯುಗಧರ್ಮಕ್ಕೆ ತಕ್ಕಂತೆ ಕವಿಗಳ ಮನೋಧರ್ಮವೂ ಕೃತಿಗಳ ಜಾಡೂ ಬದಲಾಗುತ್ತ ಹೋಗುತ್ತದೆ ಎಂಬ ಮಾತು ಸರ್ವವಿದಿತವಾದುದು. ಯಾವ ಸಾಹಿತ್ಯದ ಚರಿತ್ರೆಯನ್ನು ನೋಡಿದರೂ ಈ ಸತ್ಯದ ಅರಿವಾಗುತ್ತದೆ. ಕನ್ನಡ ಸಾಹಿತ್ಯ ಚರಿತ್ರೆಯನ್ನು ನೋಡಿದರೆ ಮೊದಲು ಅಂದರೆ ಒಂಬತ್ತು, ಹತ್ತು, ಹನ್ನೊಂದನೆಯ ಶತಮಾನಗಳಲ್ಲಿ ಚಂಪೂ ಶೈಲಿಯ ಪ್ರಾಮುಖ್ಯವನ್ನು ಕಾಣುತ್ತೇವೆ. ಅನಂತರ ಹನ್ನೆರಡನೆಯ ಶತಮಾನದಿಂದ ಹದಿನಾರನೆಯ ಶತಮಾನದ ವರೆಗೆ ವಚನ, ರಗಳೆ. ಷಟ್ಪದಿ. ಸಾಂಗತ್ಯಗಳ ಪ್ರಾಶಸ್ತ್ಯವನ್ನು ಕಾಣುತ್ತೇವೆ. ಅನಂತರ ಹತ್ತೊಂಬತ್ತನೆಯ ಶತಮಾನದ ಕೊನೆಯ ಭಾಗದಿಂದ ಈಚೆಗೆ ಕನ್ನಡದ ಆಧುನಿಕ ಯುಗ ಪ್ರಾರಂಭ

ವಾಗುತ್ತದೆ. ಇಂಗ್ಲಿಷ್ ಭಾಷಾ ಸಾಹಿತ್ಯದ ಪ್ರಭಾವಗಳಿಂದ ಹುಟ್ಟಿದ ಹೊಸ ಕವನಗಳ ದಾರಿ, ಗದ್ಯಕ್ಕೆ ಬಂದ ಪ್ರಾಶಸ್ತ್ಯ—ಇವುಗಳಿಂದ ಆ ಸಾಹಿತ್ಯ ಆಧುನಿಕ ವೆನಿಸಿಕೊಳ್ಳುತ್ತದೆ. ಈ ದೃಷ್ಟಿಯಿಂದ ನವ್ಯ ಎಂದರೆ ಹೊಸ ಎನಿಸಿಕೊಳ್ಳುವ ಸಾಹಿತ್ಯ ಯಾವುದು ಎಂಬುದನ್ನು ಗಮನಿಸಬೇಕಾಗುತ್ತದೆ. ಶೈಲಿಯ ದೃಷ್ಟಿಯಿಂದಲ್ಲದೆ ವಸ್ತುವಿನ ಆಯ್ಕೆ, ಜೀವನದ ಮೌಲ್ಯಗಳು, ವ್ಯಕ್ತಿಯ ಹಾಗೂ ಸಮಷ್ಟಿಯ ಧೋರಣೆಗಳು, ಆದರ್ಶಗಳು, ಸಾಹಿತ್ಯದ ಮೇಲೆ ಮನಶ್ಶಾಸ್ತ್ರ ಮತ್ತು ಲೈಂಗಿಕ ಶಾಸ್ತ್ರಗಳು ಬೀರಿದ ಪ್ರಭಾವಗಳು—ಈ ದೃಷ್ಟಿಯಿಂದಲೂ ಕಾಲ ಕಾಲಕ್ಕೆ ಕಾವ್ಯಮಾರ್ಗ ನವ್ಯವಾಗಿರುವುದನ್ನು ಕಾಣಬಹುದು. ಧಾರ್ಮಿಕ ಧೋರಣೆ ಲೌಕಿಕ ಧೋರಣೆಗೆ ಎಡೆಕೊಟ್ಟಿದೆ. ಪಂಡಿತ ಭಾಷೆ ಮತ್ತು ಶೈಲಿ ಜನಪದ ಭಾಷಾ ಶೈಲಿಗಳಿಗೆ ಎಡೆಕೊಟ್ಟಿದೆ. ಅಂದಂದಿನ ರಾಜಕೀಯ ಹಾಗೂ ಸಾಮಾಜಿಕ ಬದಲಾವಣೆಗಳು ಸಾಹಿತ್ಯಮಾರ್ಗವನ್ನು ಬದಲಿಸುವಲ್ಲಿ ತಮ್ಮ ಪ್ರಭಾವವನ್ನು ಬೀರಿವೆ.

ಇಲ್ಲಿ ನವ್ಯಕಾವ್ಯ, ನವ್ಯತೆ ಎಂಬ ಮಾತುಗಳನ್ನು ಈ ವಿಶಾಲಾರ್ಥದಲ್ಲಲ್ಲದೆ ಒಂದು ವಿಶಿಷ್ಟಾರ್ಥದಲ್ಲಿ ಬಳಸಲಾಗಿದೆ. ಸುಮಾರು 1950ರಿಂದೀಚೆಗೆ ಬಹುತೇಕ ಕವನಗಳಲ್ಲಿ, ಕಥೆ ಕಾದಂಬರಿ ಪ್ರಬಂಧಗಳಲ್ಲಿ, ಕಾವ್ಯಮೀಮಾಂಸೆಯಲ್ಲಿ, ವಿಮರ್ಶೆಯಲ್ಲಿ, ಕವಿ ಬಳಸುವ ವಸ್ತು, ಶೈಲಿ ಮತ್ತು ಧೋರಣೆಗಳಿಗೆ ಸಂಬಂಧಿಸಿದಂತೆ ಕಾಣುವ ಹೊಸತನವನ್ನು ನವ್ಯತೆ ಎಂದೂ ಅಂಥ ಕಾವ್ಯವನ್ನು ನವ್ಯಕಾವ್ಯ ಎಂದೂ ಕರೆಯುವುದಿದೆ. ಸೌಲಭ್ಯದ ದೃಷ್ಟಿಯಿಂದ ಆಧುನಿಕ ಕನ್ನಡ ಸಾಹಿತ್ಯದ ಕಾಲವನ್ನು ನವೋದಯದ ಕಾಲ, ರಮ್ಯ ಸಾಹಿತ್ಯದ ಕಾಲ, ಪ್ರಗತಿಶೀಲಸಾಹಿತ್ಯ ಮತ್ತು ನವ್ಯತೆಯ ಕಾಲ ಎಂದು ವಿಭಾಗಿಸುವುದು ವಾಡಿಕೆಯಾಗಿದೆ. ಈ ಒಂದೊಂದು ಕಾಲದ ಸಾಹಿತ್ಯವೂ ತನ್ನ ಹಿಂದಿನ ಸಾಹಿತ್ಯಕ್ಕಿಂತ ಹೊಸ ಹಾದಿಯನ್ನು ಹಿಡಿಯಿತಾಗಿ ಅದೊಂದೊಂದೂ ನವ್ಯವೇ ಎನ್ನಬಹುದಾದರೂ ಮೇಲಣ ವಿಂಗಡಣೆಯ ದೃಷ್ಟಿಯಿಂದ 1950ರ ಈಚಿನ ಕೆಲವರ ಕಾವ್ಯಮಾರ್ಗವನ್ನು ಮಾತ್ರ ನವ್ಯವೆನ್ನಲಾಗುವುದು. ಏಕೆಂದರೆ ಇದಕ್ಕಿಂತ ನವೋನವವಾದ ಮಾರ್ಗವೊಂದು ಹೊಮ್ಮಲು ಸಾಕಷ್ಟು ಅವಕಾಶವಿದೆ. ಇದು ಒಂದು ದೃಷ್ಟಿ.

ಇನ್ನೊಂದು ದೃಷ್ಟಿಯಿಂದ ನೋಡಿದಲ್ಲಿ ಈಚಿನ ಕಾವ್ಯವನ್ನು ನವ್ಯ ಎಂದು ಕರೆದುದಾಗಿದೆ. ಅಲ್ಲದೆ ಈ ಕಾವ್ಯ ಹಲವಾರು ದೃಷ್ಟಿಯಿಂದ ನವ್ಯವೂ ಆಗಿದೆ. ಆದ್ದರಿಂದ ಈ ಭಾಗದ ಸಾಹಿತ್ಯದ ಧೋರಣೆಗಳನ್ನು ಪರಿಶೀಲಿಸುವುದು ಅಗತ್ಯವಾಗುತ್ತದೆ. ಪ್ರಕೃತ ಲೇಖನದಲ್ಲಿ ನವ್ಯಸಾಹಿತ್ಯದ ಸ್ಥೂಲ ರೂಪರೇಷೆಗಳನ್ನೂ ಆಗಿರುವ ಕೃಷಿಯನ್ನೂ ಪರಿಚಯ ಮಾಡಿಕೊಡಲಾಗುತ್ತದೆ.

ನವ್ಯತೆಯ ಧೋರಣೆ ಅರ್ಧ ದೇಶೀಯ, ಅರ್ಧ ವಿದೇಶೀಯ ಪ್ರಚೋದನೆಗಳಿಂದ ರೂಪುಗೊಂಡ ಮಾರ್ಗವಾಗಿದೆ. ನವೋದಯ, ರಮ್ಯಯುಗಗಳ ಸಾಹಿತ್ಯದ ವಸ್ತು, ಶೈಲಿ, ಉದ್ದೇಶಗಳು, ಉಪಮೆ ರೂಪಕಾದಿಗಳು ಸಾಕಷ್ಟು ಸವಕಲಾಗಿ ಕಾವ್ಯಕ್ಷೇತ್ರದಲ್ಲಿ ಹೊಸ ಬೀಜದ, ಹೊಸ ಕೃಷಿಯ ಅಗತ್ಯ ಕಂಡುದೇನೋ ನಿಜ. ಇದು ನಮ್ಮಲ್ಲಿಗಿಂತ ಐರೋಪ್ಯ ದೇಶಗಳಲ್ಲಿ ಹೆಚ್ಚು ನಿಜವಾದ ಮಾತಾಗಿತ್ತು. ಒಂದು ಮತ್ತು ಎರಡನೆಯ ಮಹಾಯುದ್ಧಗಳು, ಮತ್ತು ಜನಜೀವನದ ಸಂಕೀರ್ಣತೆಗಳಿಂದಾಗಿ ಜೀವನದ ಮೌಲ್ಯಗಳಲ್ಲೇ ಮೂಲಭೂತವಾದ ಏರುಪೇರುಗಳಾಗಿದ್ದುವು. ಅಂಥ ಕಾಲದಲ್ಲಿ ಸಮಕಾಲೀನ ಪ್ರಜ್ಞೆಯಿಂದ ಕಾವ್ಯ ರಚಿಸ ಹೊರಟ ಕವಿಗಳಿಗೆ ಅಂದಿನ ಜೀವನಸಂಕೀರ್ಣತೆಯನ್ನೆಲ್ಲ ಪ್ರತಿಬಿಂಬಿಸಲು ಸಮರ್ಥವಾದ ಹೊಸಭಾಷೆ, ಹೊಸ ಶೈಲಿಗಳ ಅಗತ್ಯ ಅನಿವಾರ್ಯವಾಯಿತು.

ಭಾರತದಲ್ಲೂ ಆ ಪ್ರಮಾಣದಲ್ಲಿಲ್ಲದಿದ್ದರೂ ಸ್ವಲ್ಪ ಮಟ್ಟಿಗಾದರೂ ಜೀವನ ಬದಲಿಸಿತ್ತು. ಪರಕೀಯ ಆಡಳಿತದ ಪ್ರಜ್ಞೆ, ಸ್ವಾತಂತ್ರ್ಯಕ್ಕಾಗಿ ನಡೆಸಿದ ಹೋರಾಟ, ಹೊಸ ಹೊಸ ನಗರಗಳ ನಿರ್ಮಾಣ, ಬೆಳವಣಿಗೆ, ಹೊಸ ಜೀವನ ಮೌಲ್ಯಗಳ ಆವಿರ್ಭಾವ, ದೇಶ ಗಳಿಸಿದ ಸ್ವಾತಂತ್ರ್ಯ, ವ್ಯಕ್ತಿ ಗಳಿಸಿದ ಸ್ವಾತಂತ್ರ್ಯ ಇವೆಲ್ಲ ಕಾರಣಗಳಿಂದಾಗಿ ಏರ್ಪಟ್ಟ ಹೊಸ ಸಮಾಜದ ಚಿತ್ರೀಕರಣಕ್ಕೆ ಹೊಸ ಭಾಷೆ, ಹೊಸ ಧಾಟಿಗಳ ಅಗತ್ಯ ಕಂಡುದರಲ್ಲಿ ಆಶ್ಚರ್ಯವಿಲ್ಲ. ನಮ್ಮಲ್ಲಿಯ ಪ್ರಗತಿಶೀಲ ಧೋರಣೆ ಈ ಬಗ್ಗೆ ಸಾಕಷ್ಟು ಹೊಸ ಕೆಲಸವನ್ನು ಮಾಡಿತು. ಆದರೆ ಅದರ ಉದ್ದೇಶ ವ್ಯಾಪ್ತಿಗಳಿಗೆ ಒಂದು ಮಿತಿ ಇತ್ತು. ಕಾರ್ಮಿಕರ, ದೀನ ದಲಿತರ ಉದ್ಧಾರ, ಬಂಡವಾಳ ಶಾಹಿಯ ನಿರೋಧ–ಇವೇ ಪ್ರಗತಿಶೀಲರ ಧೋರಣೆ.

ನವ್ಯ ಸಾಹಿತ್ಯ ಇದಕ್ಕಿಂತ ಇನ್ನೂ ನಾಲ್ಕು ಹೆಜ್ಜೆ ಮುಂದೆ ಹೋಯಿತೆನ್ನಬಹುದು ನವ್ಯರಿಗೆ ಯಾವ ಇಸಂನ ತೊಡಕೂ ಇಲ್ಲ. ಇಲ್ಲಿಯ ನವ್ಯತೆ ವ್ಯಕ್ತಿನಿಷ್ಠವಾದುದು. ಆಯ್ಕೆಯ ವಸ್ತು ಹೊಸತಾಗಬೇಕು. ಹೇಳುವ ಮಾತು, ನುಡಿಕಟ್ಟು ಬೇರೆಯದಾಗಬೇಕು. ಹೇಳುವ ವಸ್ತುವಿನ, ಅದನ್ನು ಕಂಡ ಕವಿಮನದ ಸಂಕೀರ್ಣತೆ ಹೇಳಿದ ಮಾತುಗಳಿಂದ ಅಭಿವ್ಯಕ್ತವಾಗಬೇಕು.

ನವ್ಯತೆಯ ಪರಂಪರೆ ಸದಾಶಿವರಾಯರಿಂದ, ವಿ.ಕೃ. ಗೋಕಾಕರಿಂದ ಪ್ರಾರಂಭವಾಗುತ್ತದೆ. ಪೇಜಾವರ ಸದಾಶಿವರಾಯರ ನಾಟ್ಯೋತ್ಸವ ಎಂಬ ಕವನ ಮತ್ತು ಅವರ ವರುಣ ಸಂಗ್ರಹದಲ್ಲಿಯ ಕೆಲವು ಕವಿತೆಗಳು ನವ್ಯ ಎನಿಸಿಕೊಂಡಿವೆ. ಗೋಕಾಕರು ನವ್ಯತೆ, ನವ್ಯಕಾವ್ಯ ಎಂಬ ಮಾತುಗಳನ್ನು ಮೊಟ್ಟ ಮೊದಲಿಗೆ ಬಳಸಿದರಲ್ಲದೆ 1950ರಲ್ಲಿ ಬೊಂಬಾಯಿಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಕವಿ ಗೋಷ್ಠಿಯ ಅಧ್ಯಕ್ಷರಾಗಿ ಆ ಬಗ್ಗೆ ಮಾತನಾಡಿದರು. ಅದೇ ವರ್ಷ ಅವರ ನವ್ಯಕವಿತೆಗಳು ಅಚ್ಚಾದುವು. ಗೋಕಾಕರು ನವ್ಯತೆ ಹಾಗೂ ಕಾವ್ಯ ಜೀವನ ಎಂಬ ತಮ್ಮ ಗ್ರಂಥದಲ್ಲಿ ಈ ವಿಷಯದ ಬಗ್ಗೆ ಸಾಕಷ್ಟು ಚರ್ಚೆ ನಡೆಸಿದ್ದಾರೆ. 1956ರಲ್ಲಿ ಪ್ರಕಟವಾದ ನವ್ಯಧ್ವನಿ ಎಂಬ ಸಂಕಲನದಲ್ಲಿ ಅಂದಿಗೆ ನವ್ಯವೆನಿಸಿದ ಗಂಗಾಧರ ಚಿತ್ತಾಲ, ಮೊಕಾಶಿ, ಅರವಿಂದ ನಾಡಕರ್ಣಿ, ಬಿ, ಎಚ್. ಶ್ರೀಧರ, ಜಿ. ಎಸ್. ಶಿವರುದ್ರಪ್ಪ, ಎಂ. ಅಕಬರ ಅಲಿ, ಶಾಂತಿನಾಥ ದೇಸಾಯಿ, ಆರ್. ಜಿ. ಕುಲಕರ್ಣಿ, ಚೆನ್ನವೀರ ಕಣವಿ, ವಿನಾಯಕ, ಕ. ವೆಂ. ರಾಜಗೋಪಾಲ, ರಾಮಚಂದ್ರಶರ್ಮ, ಗೋಪಾಲಕೃಷ್ಣ ಅಡಿಗ, ಅಂಬಿಕಾತನಯದತ್ತ—ಮೊದಲಾದವರ ಕವನಗಳಿವೆ. ನವ್ಯಕವನಗಳ ಬೃಹತ್ ಸಂಕಲನವೆಂದರೆ ಅಕ್ಷರ ಹೊಸಕಾವ್ಯ (1970). ಇದರಲ್ಲಿ ಮೂವತ್ತುನಾಲ್ಕು ಹೊಸ ಕವಿಗಳ 196 ಕವನಗಳಿವೆ. ಇದಲ್ಲದೆ 1959ರಲ್ಲಿ ಪ್ರಕಟವಾದ ನಡೆದು ಬಂದ ದಾರಿಯಲ್ಲಿ (ಮನೋಹರ ಗ್ರಂಥಮಾಲೆ) ಅಂದಿನ ಗಣ್ಯಕವಿಗಳ ಹೊಸ ಹೊಸ ಕವನಗಳಿವೆ.



ವಿ. ಕೃ. ಗೋಕಾಕ್

ನವ್ಯಕವಿಗಳ ಅನೇಕ ಕವನ ಸಂಕಲನಗಳು ಕಾಲಕಾಲಕ್ಕೆ ಪ್ರಕಟವಾಗಿವೆ. ಅವುಗಳಲ್ಲಿ ಅತಿಮುಖ್ಯವಾದವು ಇವು : ಸಮುದ್ರ ಗೀತಗಳು (ಗೋಕಾಕ್) , ಚಂಡೆ ಮದ್ದಳೆ, ಭೂಮಿಗೀತ, (ಗೋಪಾಲಕೃಷ್ಣ ಅಡಿಗ) ; ಶಿಲಾಲತೆ, ಮನೆಯಿಂದ ಮನೆಗೆ (ಕೆ. ಎಸ್. ನರಸಿಂಹಸ್ವಾಮಿ), ಹರಿವ ನೀರಿದು (ಗಂಗಾಧರ ಚಿತ್ತಾಲ) , ಅಂಜೂರ (ಕ. ವೆಂ. ರಾಜಗೋಪಾಲ), ಏಳುಸುತ್ತಿನ ಕೋಟೆ ಹೇಸರಗತ್ತೆ (ರಾಮಚಂದ್ರಶರ್ಮ), ದೀಪದ ಹೆಜ್ಜೆ (ಶಿವರುದ್ರಪ್ಪ ಜಿ. ಎಸ್.), ಮಣ್ಣಿನ ಮೆರವಣಿಗೆ (ಚೆನ್ನವೀರ ಕಣವಿ), ಹೊಕ್ಕುಳಲ್ಲಿ ಹೂವಿಲ್ಲ (ಎ. ಕೆ. ರಾಮಾನುಜನ್); ಉತ್ತರ (ಜಿ. ಎಸ್. ಸಿದ್ಧಲಿಂಗಯ್ಯ); ಬಾವಲಿ (ಅನಂತಮೂರ್ತಿ. ಯು. ಆರ್.); ಬಿಚ್ಚು (ಲಂಕೇಶ್ ಪಿ.), ಆಮೆ (ಚೆನ್ನಯ್ಯ ಎಚ್.ಎಂ.) ನಿಮ್ಮ ಪ್ರೇಮಕುಮಾರಿಯ ಜಾತಕ (ಸುಮತೀಂದ್ರ ನಾಡಿಗ), ಸಂಜೆ ಐದರ ಮಳೆ (ಕೆ. ಎಸ್. ನಿಸಾರ್ ಅಹಮದ್), ಹತ್ತೊಂಬತ್ತು ಕವನಗಳು (ಚಂದ್ರಶೇಖರ ಪಾಟೀಲ), ಬೃಹನ್ನಳೆ ಸೋಮುವಿನ ಸ್ವಗತಲಹರಿ (ಪೂರ್ಣಚಂದ್ರ ತೇಜಸ್ವಿ) : ಮಣ್ಣಿನ ಹಾಡು (ಶ್ರೀಕೃಷ್ಣ, ಆಲನಹಳ್ಳಿ).

ನವ್ಯಕವಿತೆ ತನ್ನ ಜಾಡನ್ನು ತಾನು ಕಂಡುಕೊಂಡಿದೆ ಎಂದು ಕೆಲವರು ಹೇಳಿದರೆ ಅದು ತನ್ನ ಜಾಡನ್ನು ಈಚೀಚೆಗೆ ರೂಪಿಸಿಕೊಳ್ಳುತ್ತಿದೆ ಎಂದು ಮತ್ತೆ ಕೆಲವರು ಹೇಳುತ್ತಾರೆ. ಗೋಪಾಲಕೃಷ್ಣ ಅಡಿಗರ ನೇರ ದಾರಿಯಿಂದ ಹಿಡಿದು ಎ. ಕೆ. ರಾಮಾನುಜನ್‌ರ ಚಿತ್ರವಿಚಿತ್ರ ಛಂದೋರಚನೆಯವರೆಗೆ ಅದರ ಹರಹು ವ್ಯಾಪಿಸಿದೆ. ನವ್ಯರಿಗೆ ಆದ್ಯರೆನಿಸಿದ ಗೋಕಾಕರ ಕಾವ್ಯಪ್ರಜ್ಞೆ ವೇದೋಪನಿಷತ್ತುಗಳಲ್ಲಿ ಊರಿ ನಿಂತು ಹೊಸಪ್ರಪಂಚದ ವಿವಿಧ ಅನುಭವಗಳತ್ತ ಕೈಚಾಚಿರುವುದನ್ನು ಕಂಡು ವಿಸ್ಮಯವಾಗುತ್ತದೆ. ಹಿಂದೆ ನವೋದಯ ಕಾಲದ ಹೊಸಬರೆವಣಿಗೆಗೆ ಇದ್ದ ಅಪವಾದಗಳೆಲ್ಲ ನವ್ಯಸಾಹಿತ್ಯಕ್ಕೂ ಇವೆ. ಅರ್ಥಸಂದಿಗ್ಧತೆಯನ್ನುಂಟುಮಾಡದೆ ತೀರ ಸಂಕೀರ್ಣವಾದ ಚಿತ್ರಗಳನ್ನೊದಗಿಸುವ ಶಕ್ತಿಯನ್ನು ಕಣವಿಯವರಲ್ಲಿ ಕಾಣಬಹುದು. ಅವರ ಅನೇಕ ಕವನಗಳಲ್ಲಿ ರೂಪಕ ಪರಂಪರೆಗಳೇ ಬರುತ್ತವೆ. ಭಾಷೆಯ ಸವಕಲುತನವನ್ನು ಆದಷ್ಟು ಕಡಿಮೆ ಮಾಡಬೇಕೆಂಬ ಉತ್ಸಾಹದಿಂದ ಬರೆಯುತ್ತಿರುವ ಲಂಕೇಶರ ಸಿದ್ಧಿಗೆ ಅವ್ವ ಮತ್ತು ದೇಶಭಕ್ತ ಸೂಳೆಮಗನ ಗದ್ಯಗೀತೆ ಎಂಬ ಕವನಗಳನ್ನು ನೋಡಬಹುದು. ನವ್ಯಕವಿತೆಯಲ್ಲಿ ಲೈಂಗಿಕತೆ, ಸಿನಿಕತನ ಹೆಚ್ಚು ಎನ್ನುವವರೂ ಇದ್ದಾರೆ. ಅಡಿಗರಂಥವರ ಕವನಗಳಲ್ಲಿ ಇದಕ್ಕೆ ನಿದರ್ಶನಗಳು ಇಲ್ಲದಿಲ್ಲ (ಪ್ರಾರ್ಥನೆ). ಇದೇ ಎಲ್ಲ ಅಲ್ಲ ಎಂಬುದಕ್ಕೆ ಇನ್ನು ಕೆಲವು ಉದಾಹರಣೆಗಳನ್ನೂ

ಕೂಡಬಹುದು. ಅನೇಕರಲ್ಲಿ ಪ್ರಣಯ, ಸ್ತ್ರೀದೇಹ ವರ್ಣನೆ, ಸಂಭೋಗಾದಿಗಳ ವಿವರ, ನಗ್ನತೆ–ಮೊದಲಾದವೇ ಕವನಗಳ ವಸ್ತುವಾಗುತ್ತವೆ. ಅನೇಕರು ತೋರುವ



ಗೋಪಾಲಕೃಷ್ಣ ಅಡಿಗ

ರೂಪಕಗಳೂ ಸಾಮತಿಗಳೂ ಅಪೂರ್ವವಾಗಿದ್ದು ಓದುಗರನ್ನು ದಿಗ್‌ಭ್ರಾಂತರನ್ನಾಗಿ ಮಾಡುತ್ತವೆ. ಅವಕ್ಕೂ ಕವನಕ್ಕೂ ಒಟ್ಟಾರೆ ಕವನದ ಅಭಿವ್ಯಕ್ತಿಗೂ ಸಂಬಂಧ ಕಲ್ಪನೆ ಸುಲಭವಾಗಿ ತೋರುವುದಿಲ್ಲ. ಹೀಗಾಗಿ ಎಷ್ಟೋವೇಳೆ ಕವನಗಳು ಸಾರ್ಥಕ ವೆನಿಸವು. ತಾವು ನವ್ಯರೆಂದು ಹೇಳಿಕೊಳ್ಳದ ಕೆಲವರಲ್ಲಿ (ಉದಾ: ಕುವೆಂಪು, ಪು.ತಿ.ನ, ಕೆ.ಎಸ್.ನ. ಬೇಂದ್ರೆ) ಕೂಡ ಅವರ ಈಚಿನ ಕೃತಿಗಳಲ್ಲಿ ನವ್ಯತೆಯನ್ನು ಖಚಿತ ವಾಗಿ ಗುರುತಿಸಬಹುದಾಗಿದೆ. ರಮ್ಯತೆಯ ಗೂಡು ಸೇರಿದ್ದ ಕವಿಗೆ ಭ್ರಮನಿರಸನ ವಾದಾಗ ನವ್ಯಕಾವ್ಯ ಹುಟ್ಟಿತು ಎನ್ನುವ ಮಾತೂ ಪೂರ್ಣ ಸತ್ಯವಾಗಲಾರದು. ಏಕೆಂದರೆ ಅಂದಿನ ಮೌಲ್ಯಗಳಲ್ಲಿ ಎಲ್ಲವೂ ಮಿಥ್ಯವಾಗಲಾರವು. ನಿರಾಶಾವಾದವೇ ತಾಂಡವವಾಡುತ್ತಿರುವಾಗಲೂ ಅಷ್ಟು ಸುಲಭವಾಗಿ ಆಶಾವಾದವನ್ನು ಕಿತ್ತೊಗೆಯ ಲಾಗದು. ಕಲೆಯ ಯೋಗ್ಯತೆ ಇರುವುದು ಅದು ಉಂಟುಮಾಡುವ ಪರಿಣಾಮದಲ್ಲಿ ಎಂಬ ಮಾತನ್ನು ಒಪ್ಪುವುದಾದರೆ ಕಾವ್ಯ ಎತ್ತಕಡೆ ಹೋಗಬೇಕು ಎಂಬ ಸುಳುಹು ತಾನೇ ತಿಳಿಯುತ್ತದೆ.

ಒಟ್ಟಿನಲ್ಲಿ ಇಷ್ಟು ಹೇಳಬಹುದು: ನವ್ಯತೆಯ ಒಂದು ದಾರಿರೂಪುಗೊಳ್ಳಲು ಪ್ರಾರಂಭವಾಗಿದೆ. ಅದರ ಧ್ಯೇಯಧೋರಣೆಗಳು, ಜಾಡು ಈಗೀಗ ರೂಪು ಗೊಳ್ಳುತ್ತಿವೆ. ಅನೇಕ ಕಡೆ ಅದು ತನ್ನ ನೂತನ ವಸ್ತುವಿನ ಆಯ್ಕೆಯಿಂದ, ಹೊಸಭಾಷಾವೈವಿಧ್ಯದಿಂದ, ಸಂಕೀರ್ಣತೆಯಿಂದ, ತನ್ನದೇ ಆದ ಸೊಗಸಿನಿಂದ ಜನ ಮನವನ್ನು ಆಕರ್ಷಿಸಿದೆ. ಆದರೆ ಅದರ ಬಹುಭಾಗ ಇನ್ನೂ ಸಾಧನೆಯ ಘಟ್ಟ ದಲ್ಲಿಯೇ ಇದೆ. ಸಾರ್ಥಕ ಕವನಗಳ ಒಂದು ಹೊಸ ಸಂಕಲನಕ್ಕೆ ಇನ್ನೂ ಅವಕಾಶವಿದ್ದೇ ಇದೆ.

*

**ಕನ್ನಡದಲ್ಲಿ ನಾಟಕಸಾಹಿತ್ಯ :** ಸಾಹಿತ್ಯವನ್ನು ದೃಶ್ಯ ಮತ್ತು ಶ್ರವ್ಯವೆಂದು ಎರಡು ಗುಂಪಾಗಿ ವಿಭಾಗಿಸಿದಾಗ ಮೊದಲನೆಯದಕ್ಕೆ ನಾಟಕಸಾಹಿತ್ಯ ಸೇರುತ್ತದೆ. ಅದನ್ನು ರೂಪಕ ಸಾಹಿತ್ಯವೆಂದೂ ಕರೆವುದಿದೆ. ನಾಟಕ ಒಂದು ಸಂಕೀರ್ಣ ಜಾತಿಗೆ ಸೇರಿದ ಕಲೆ. ಅದರಲ್ಲಿ ಬರೆವಣಿಗೆಯ ರೂಪದ ಸಾಹಿತ್ಯವಿದೆ. ಬರೆದ ಕವಿ ಇದ್ದಾನೆ. ಓದುವ ಅಥವಾ ನೋಡಿ ನಲಿಯುವ ಸಹೃದಯರಿದ್ದಾರೆ. ಆಡುವ ನಟನಟಿಯರಿದ್ದಾರೆ. ಆಡಿಸುವ ಸೂತ್ರಧಾರನಿದ್ದಾನೆ. ಆಡಬೇಕಾದ ರಂಗಸ್ಥಳ, ಅದರ ಸಜ್ಜಿಕೆ, ಹಿಮ್ಮೇಳ, ವೇಷಭೂಷಣಗಳು ಇವೆ. ಇಲ್ಲಿ ಕನ್ನಡಕ್ಕೆ ಸಂಬಂಧಿಸಿದಂತೆ ಚಾರಿತ್ರಿಕವಾಗಿ ನಾಟಕಸಾಹಿತ್ಯ ಬೆಳೆದುಬಂದ ಬಗೆಯನ್ನೂ ಅದರಲ್ಲಿನ ಪ್ರಮುಖ ಪ್ರಕಾರಗಳನ್ನೂ ಸ್ಥೂಲವಾಗಿ ಪರಿಶೀಲಿಸಲಾಗುತ್ತದೆ.

ಇಷ್ಟಾದರೂ ಕನ್ನಡ ಜನಕ್ಕೆ ನಾಟಕದ ಪರಿಚಯವೇ ಇರಲಿಲ್ಲವೆಂಬ ಮಾತನ್ನು ಒಪ್ಪುವುದು ಕಷ್ಟ. ನಿಜಗುಣಶಿವಯೋಗಿಯ ವಿವೇಕ ಚಿಂತಾಮಣಿಯಲ್ಲಿ (15ನೆಯ ಶ.) ಮಾರ್ಗ ಮತ್ತು ದೇಶೀ ಅಭಿನಯಗಳ ವಿವರಗಳು ಬಂದಿವೆ. ರತ್ನಾಕರವರ್ಣಿ (ಕ್ರಿ. ಶ. ಸು. 1550) ಪೂರ್ವನಾಟಕ ಉತ್ತರ ನಾಟಕ ಎಂಬ ಹೆಸರು ಗಳನ್ನು ಬಳಸುತ್ತಾನೆ. ಗೋವಿಂದ ವೈದ್ಯನ (ಕ್ರಿ. ಶ. ಸು. 1648) ಕಂಠೀರವ ವಿಜಯದಲ್ಲಿ ನಾಟ್ಯಶಾಲೆಯ ವರ್ಣನೆ ಇದೆ. ಭಟ್ಟಾಕಳಂಕ (ಕ್ರಿ. ಶ.ಸು. 1604) ತನ್ನ ಶಬ್ದಾನುಶಾಸನದಲ್ಲಿ ನಾಟಕಗಳ ಅಸ್ತಿತ್ವವನ್ನು ಸೂಚಿಸಿದ್ದಾನೆ. ಅದರ ಆಧಾರದ ಮೇಲೆ ಕರ್ಣಪಾರ್ಯನ (1140) ಮಾಳವೀ ಮಾಧವ, ಕೇಶಿರಾಜನ (1260) ಸುಭದ್ರಾಹರಣ, ಪ್ರಬೋಧ ಚಂದ್ರೋದಯಗಳು ನಾಟಕಗಳಾಗಿದ್ದಿರ ಬಹುದೆಂದು ಊಹಿಸಿದ್ದಾರೆ.

ಹತ್ತೊಂಬತ್ತನೆಯ ಶತಮಾನದ ಕೊನೆ ಕೊನೆಗೆ ಬರುವವರೆಗೂ ಕನ್ನಡ ನಾಟಕ ಕ್ಷೇತ್ರ ಬಹು ಬರಡಾಗಿ ಮರುಭೂಮಿಯಂತಿರುವ ವಿಷಯ ಸೋಜಿಗವನ್ನುಂಟು ಮಾಡುತ್ತದೆ. ಆ ಹರಹಿನಲ್ಲಿ ಕಾಣಬರುವ ಒಂದೇ ಒಂದು ನಾಟಕವೆಂದರೆ ಹದಿನೇಳನೆಯ ಶತಮಾನದ ಸಿಂಗರಾರ್ಯ ಬರೆದಿರುವ ಮಿತ್ರವಿಂದಾ ಗೋವಿಂದ ಎಂಬುದು. ಇದೂ ಸ್ವತಂತ್ರ ಕೃತಿಯಲ್ಲ. ಹರ್ಷನ ರತ್ನಾವಳಿ ಎಂಬ ಸಂಸ್ಕೃತ ನಾಟಕದ ಭಾವಾನುವಾದ. ಅದಕ್ಕೆ ಹಿಂದೆ ಯಾವ ನಾಟಕವೂ ಇದ್ದಂತೆ ಕಾಣದು. ಕವಿ ರನ್ನನ ಗದಾಯುದ್ಧವನ್ನು ನೋಡಿದರೆ ಅವನಿಗೆ ಭಟ್ಟನಾರಾಯಣನ ವೇಣೀ ಸಂಹಾರದ ಪರಿಚಯವಿದ್ದಂತೆ ಕಾಣುತ್ತದೆ. ರನ್ನನ ನಾಟಕೀಯ ಪ್ರಜ್ಞೆ ಅಚ್ಚರಿ ಗೊಳಿಸುವಂಥದು. ಹಾಗಿದ್ದುದರಿಂದಲೇ ಶ್ರೀ ಅವರು ಗದಾಯುದ್ಧದಿಂದ ಕೆಲ ಭಾಗಗಳನ್ನು ಆಯ್ದು ಪೋಣಿಸಿ ಗದಾಯುದ್ಧನಾಟಕವನ್ನು ಮಾಡಲು ಶಕ್ಯ ವಾಯಿತು. ಇದೇ ರೀತಿ ರಾಘವಾಂಕನಲ್ಲಿ ನಾಟಕೀಯತೆ ಎದ್ದು ಕಾಣುತ್ತದೆ. ಇಷ್ಟಾದರೂ ಅನುವಾದ ರೂಪದಲ್ಲಾದರೂ ನಾಟಕಗಳು ಕನ್ನಡದಲ್ಲಿ ದೊರೆಯ ದಿರುವುದು ಆಶ್ಚರ್ಯದ ಸಂಗತಿಯೇ ಆಗಿದೆ.

ಕನ್ನಡನಾಡಿನಲ್ಲಿ ನಾಟಕಶಾಲೆಗಳೂ ನಟರೂ ಇದ್ದುದಕ್ಕೆ ಕಾವ್ಯದ ಹೇಳಿಕೆಗಳೂ ಶಾಸನಗಳ ಆಧಾರಗಳೂ ದೊರೆಯುತ್ತವೆ (ಕೆಳದಿ ನೃಪವಿಜಯ, ಚಾಮ ರಾಜೇಂದ್ರ ಒಡೆಯರ ವಂಶರತ್ನಾಕರ; ಗಂಗದಾಸ ಪ್ರತಾಪ ವಿಲಾಸ; ರಘುನಾಥಾ ಭ್ಯುದಯ). ಮಾರ್ತಾಂಡಯ್ಯನೆಂಬುವನೊಬ್ಬ ಕಟ್ಟಿಸಿದ ನಾಟ್ಯಶಾಲೆಯ ವಿಷಯ ಧಾರವಾಡದ ಮೂಗಡವೆಂಬ ಗ್ರಾಮದಲ್ಲಿನ ಒಂದು ಶಾಸನದಲ್ಲಿ ಉಲ್ಲೇಖಿತವಾಗಿದೆ. ದೇವಾಲಯಗಳಲ್ಲಿನ ಪೂಜೆ ಪುರಸ್ಕಾರಗಳಲ್ಲಿ ಅಂಗಭೋಗದಂತೆ ರಂಗಭೋಗವೂ ಸೇರಿತ್ತು.

ಅಲ್ಲದೆ ಜನಪದದಲ್ಲಿ ಬಹು ಹಿಂದಿನಿಂದಲೂ ಇದ್ದು ಬೆಳೆದು ಬಂದಿರುವ ಯಕ್ಷ ಗಾನ, ಸೂತ್ರದ ಬೊಂಬೆಯಾಟ ಮೊದಲಾದುವನ್ನು ಗಮನಿಸಬಹುದು. ಇದಕ್ಕೆ ಬಯಲಾಟ, ಆಟ್ಟದಾಟ, ಪ್ರಸಂಗ, ತಾಳಮದ್ದಳೆ ಎಂಬ ಹೆಸರುಗಳಿವೆ. ಇಂಥ ದೊಂದು ಸಂಪ್ರದಾಯ ದಕ್ಷಿಣಭಾರತದಲ್ಲೆಲ್ಲ ಹಿಂದಿನಿಂದಲೂ ನಡೆದುಬಂದಿದೆ. ಕಥಕಳಿ, ಕೃಷ್ಣಾಟ್ಟಂ, ರಾಮನಾಟ್ಟಂ ಮೊದಲಾದವಕ್ಕೂ ನಮ್ಮ ಯಕ್ಷಗಾನಾದಿ ಗಳಿಗೂ ಸೂತ್ರ ಒಂದೇ. ಕ್ರಮ ಮಾತ್ರ ಕಾಲದೇಶಗಳಿಗೆ ತಕ್ಕಂತೆ ಭಿನ್ನ. ಸಂಸ್ಕೃತ ಭಾಷಾಸಾಹಿತ್ಯವೇ ಪ್ರಬಲವಾಗಿದ್ದ ಕಾಲದಲ್ಲಿ ದೇಶೀಯವೆನಿಸಿದ ಈ ಕಲೆಗಳಿಗೆ ತಕ್ಕ ಸ್ಥಾನ ಸಿಕ್ಕಲಿಲ್ಲವೆಂದು ತೋರುತ್ತದೆ. ಹೀಗಾಗಿ ಪ್ರಾಚೀನ ಸಾಹಿತ್ಯದಲ್ಲಿ ನಾಟಕಸಾಹಿತ್ಯ ಉಲ್ಲೇಖನಗೊಳ್ಳಲಿಲ್ಲವೆಂದು ತೋರುತ್ತದೆ. (**ನೋಡಿ—ತೊಗಲು ಬೊಂಬೆಯಾಟ ; ಯಕ್ಷಗಾನ ; ಸೂತ್ರದ ಬೊಂಬೆಯಾಟ**)

**ಭಾಷಾಂತರ ಯುಗ :** ಸಂಸ್ಕೃತ ರತ್ನಾವಳಿ ನಾಟಕದ ರೂಪಾಂತರವಾದ ಮಿತ್ರವಿಂದಾ ಗೋವಿಂದ ಕನ್ನಡದ ಮೊಟ್ಟಮೊದಲನೆಯ ನಾಟಕ. ಚಿಕ್ಕದೇವ ರಾಜ ಒಡೆಯರ (ಕ್ರಿ. ಶ. 1672–1704) ಕಾಲದಲ್ಲಿದ್ದ ಆಸ್ಥಾನ ಕವಿ ಸಿಂಗರಾರ್ಯ ಅದನ್ನು ಬರೆದ. ರಂಗಭೂಮಿ ಅಸ್ತಿತ್ವದಲ್ಲಿದ್ದ ಆ ಕಾಲದಲ್ಲಿ ಆಸ್ಥಾನದ ಪಂಡಿತರ ರಂಜನೆಗಾಗಿ ರಾಜಾಶ್ರಯದಿಂದ ಬರೆದ ಕೃತಿ ಇದು. ಮೂಲ ಸಂಸ್ಕೃತ ನಾಟಕದ ಕಥೆ, ಹೊರರೂಪ, ಹಳಗನ್ನಡ ಶೈಲಿ ಈ ಎಲ್ಲ ಅಂಶಗಳೂ ಸೇರಿರುವ ಈ ನಾಟಕ ಒಂದು ರೀತಿಯ ಕಲಬೆರಕೆಯಂತೆ ಇಂದು ನಮಗೆ ತೋರಿದರೆ ಆಶ್ಚರ್ಯವಿಲ್ಲ. ಅದೇನೆ ಇರಲಿ, ಸಂಸ್ಕೃತ ನಾಟಕವನ್ನು ಕನ್ನಡಕ್ಕೆ ಅಳವಡಿಸಿಕೊಳ್ಳುವ ಪರಂಪರೆ ಯನ್ನು ಸೃಷ್ಟಿಸಿದ ಕೀರ್ತಿ ಸಿಂಗರಾರ್ಯನದು. ಶೃಂಗಾರಮಯವಾದ ಸಂಗೀತ ನಾಟಕವನ್ನು ಕನ್ನಡಕ್ಕೆ ಇಳಿಸುವಾಗ ಕವಿ ತನಗೆ ಉಚಿತವೆಂದು ತೋರಿದ ಮಾರ್ಪಾಡು ಗಳನ್ನು ಮಾಡಿಕೊಂಡಿದ್ದಾನೆ. ಶ್ರೀವೈಷ್ಣವನಾದ ಕವಿ ಪಾತ್ರಗಳನ್ನು ಅಳವಡಿಸು ವಾಗ ತನ್ನ ಪೂರ್ವಗ್ರಹಗಳಿಂದ ತಪ್ಪಿಸಿಕೊಂಡಿಲ್ಲ. ಮೂಲನಾಟಕದ ವತ್ಸರಾಜ ಶ್ರೀಕೃಷ್ಣನಾಗಿ, ರಾಣಿ ರುಕ್ಮಿಣಿಯಾಗಿ, ರತ್ನಾವಳಿ ಸಂಸ್ಕೃತಿಯು ನೇಪ ಥ್ಯ.

ಹೊಟ್ಟೆಬಾಕ ವಿದೂಷಕ ಕುಚೇಲನಾಗಿ ಮಾರ್ಪಾಡಾಗಿರುವುದನ್ನು ಗಮನಿಸಬಹುದು. ಮೂಲನಾಟಕದ ಸುಂದರ ಸರಳ ಶೈಲಿ ಕನ್ನಡ ನಾಟಕದ ಹಳಗನ್ನಡ ಶೈಲಿಗೆ ಹೊಂದಿಕೊಂಡಿಲ್ಲ. ಈ ನಾಟಕ ಬಹುಮಟ್ಟಿಗೆ ನಮ್ಮ ಪ್ರೌಢಕಾವ್ಯಗಳ ರೂಪವನ್ನೇ ಹೋಲುತ್ತದೆ. ಒಟ್ಟಾರೆ ಅಷ್ಟೇನೂ ನವಿರಾದ ಸಾಹಿತ್ಯಕ ಅಂಶಗಳಿಲ್ಲದಿದ್ದರೂ, ನಮ್ಮ ಮೊಟ್ಟಮೊದಲನೆಯ ನಾಟಕವೆನ್ನುವ ದೃಷ್ಟಿಯಿಂದ ಇದೊಂದು ಗಮನಾರ್ಹ ಕೃತಿ. ಮುಂದಿನ ನಾಟಕಕಾರರಿಗೆ ಭಾಷಾಂತರ ಹಾಗೂ ರೂಪಾಂತರಗಳ ಕಷ್ಟಸಾಧ್ಯತೆಯನ್ನು ಸೂಚಿಸಲು ಈ ಕೃತಿ ನೆರವಾಗಿರಬಹುದು.

ಕಳೆದ ಶತಮಾನದ ಕೊನೆಯಿಂದ ಹಿಡಿದು ಈ ಶತಮಾನದ ಎರಡು ದಶಕಗಳವರೆಗೆ ಕನ್ನಡ ರಂಗಭೂಮಿ ಅಸ್ತಿತ್ವದಲ್ಲಿದ್ದರೂ ಸ್ವತಂತ್ರ ನಾಟಕಗಳಿಲ್ಲದ್ದರಿಂದ ಸಂಸ್ಕೃತ ಹಾಗೂ ಇಂಗ್ಲಿಷ್ ನಾಟಕಗಳ ಎರವಲು ಅನಿವಾರ್ಯವಾಯಿತು. ಕೇವಲ ರಂಗಭೂಮಿಯ ಪ್ರತಿ ನಿತ್ಯದ ಆವಶ್ಯಕತೆಗಾಗಿ ಕನ್ನಡದ ನಾಮಕರಣ ಮಾಡಿಸಿಕೊಂಡು ಈ ಕೃತಿಗಳಲ್ಲಿ ಹೇಳಿಕೊಳ್ಳುವಂಥ ಕಲಾತ್ಮಕತೆ ಇಲ್ಲವೆನ್ನಬಹುದು. ಕೇವಲ ನಾಟಕದ ಭಾಷೆಯ ಹೊರಮೈಯನ್ನು ಕುರಿತು ಹೇಳುವುದಾದರೆ, ಸಂಸ್ಕೃತ ನಾಟಕದ ಅನುವಾದ ಆ ಭಾಷೆಯ ಜಾಯಮಾನವನ್ನು ರಕ್ತಗತ ಮಾಡಿಕೊಂಡಿದ್ದ ನಮ್ಮ ಪಂಡಿತರಿಗೆ ಹೆಚ್ಚು ತೊಡಕನ್ನುಂಟುಮಾಡಲಿಲ್ಲ. ಆದರೆ ನಾಟಕದ ಕಲ್ಪನೆ, ರಚನಾತಂತ್ರ, ಮಾತಿನ ಧ್ವನಿ ಪರಂಪರೆ, ಮುಂತಾದ ಸೂಕ್ಷ್ಮ ಅಂಶಗಳನ್ನು ಗಮನಿಸಿದಾಗ ಕೇವಲ ಅಂಧಾನುಕರಣೆ ಮಾಡಹೊರಟ ಇವರು ಅನೇಕ ಕಡೆ ಎಡವಿದರೆಂಬುದು ಸುಸ್ಪಷ್ಟ.

ಕಳೆದ ಶತಮಾನದ ಕೊನೆಯ ತಿರುವಿನಲ್ಲಿ ನಡೆದ ಒಂದು ವಿಶೇಷ ಘಟನೆಯಿಂದಾಗಿ ಕನ್ನಡ ನಾಟಕದ ಬೆಳವಣಿಗೆಗೆ ಇಂಬು ದೊರೆಯಿತು. ಮೈಸೂರು ಸಂಸ್ಥಾನಕ್ಕೆ ಪಾರಸೀ ನಾಟಕ ಕಂಪನಿಯೊಂದು ಭೇಟಿ ಕೊಟ್ಟಾಗ ಇಲ್ಲಿನ ನಾಟಕಾಭಿಮಾನಿಗಳ ಅಭಿರುಚಿಯನ್ನು ಕೆರಳಿಸಿ ಅದು ಕನ್ನಡ ನಾಟಕದ ಬಗ್ಗೆ ವಿಶೇಷ ಆಸಕ್ತಿ ಹುಟ್ಟಿಸಿತೆನ್ನಲಾಗಿದೆ. ಮೈಸೂರಿನ ರಾಜರು ತೋರಿದ ಉತ್ಸಾಹ, ನೀಡಿದ ಪ್ರೋತ್ಸಾಹಗಳಿಂದಾಗಿ ಹಲವು ಪಂಡಿತರು ಸಂಸ್ಕೃತ ಹಾಗೂ ಇಂಗ್ಲಿಷ್ ಸಾಹಿತ್ಯದಿಂದ ನೇರವಾಗಿ ಭಾಷಾಂತರ ಇಲ್ಲವೇ ರೂಪಾಂತರ ಮಾಡುವುದರ ಮೂಲಕ ಹೊಸ ನಾಟಕಗಳನ್ನು ಬರೆಯಲು ಸಾಧ್ಯವಾಯಿತು. ಕಾಳಿದಾಸ, ಭಾಸ, ಭವಭೂತಿ, ಕ್ಷೇಮೀಶ್ವರ ಮುಂತಾದವರ ಕೃತಿಗಳ ಹರಹು ಹಾಗೂ ನಮ್ಮ ಪಂಡಿತರಿಗೆ ಕರತಲಾಮಲಕವಾಗಿದ್ದ ಚಂಪೂಕಾವ್ಯಗಳ ಹಂದರ—ಈ ಎರಡೂ ನಮ್ಮ ನಾಟಕಕಾರರ ಕಲ್ಪನೆ ಮತ್ತು ಕ್ರಿಯಾಶಕ್ತಿಯನ್ನು ಅರಳಿಸಲು ನೆರವಾದುವು. ಸಂಸ್ಕೃತ ನಾಟಕಕ್ಕೆ ಕನ್ನಡದ ಬಣ್ಣ ವೇಷ ತೊಡಿಸಲು ಮಾಡಿದ ಪ್ರಯತ್ನ ಸಾಕಷ್ಟು ಸಫಲವಾಯಿತೆನ್ನಬಹುದಾದರೂ ಇಂಗ್ಲಿಷ್ ನಾಟಕಗಳನ್ನು ಅದೇ ಅಚ್ಚಿನಲ್ಲಿ ಎರಕ ಹೊಯ್ದಾಗ ಆ ಪ್ರಯತ್ನ ಗುರಿ ಸಾಧಿಸಲಿಲ್ಲವೆನ್ನಬಹುದು. ಹಲವಾರು ಭಾಷಾಂತರ ಕೃತಿಗಳಲ್ಲಿ ಸಾಹಿತ್ಯದ ಅಂಶಗಳು ಉದ್ದೀಪನಗೊಳ್ಳಲಿಲ್ಲ. ಆದರೆ ಈ ಎಲ್ಲ ಭಾಷಾಂತರ ಕಾರ್ಯದಿಂದಾಗಿ ಉತ್ತಮ ನಾಟಕ ರಚನೆ, ಶ್ರೇಷ್ಠವಾದ ರಂಗಭೂಮಿಯ ಕಲಾತ್ಮಕ ಅಂಶಗಳು ಬೆಳೆಯಲು ಬೇಕಾದ ಕೃಷಿ ನಡೆಯುವಂತಾಯಿತು.

ಈ ಭಾಷಾಂತರಯುಗದಲ್ಲಿ ಹೊಮ್ಮಿದ, ಸದಭಿರುಚಿ ತುಂಬಿದ ಒಂದು ಅಪೂರ್ವ ಕೃತಿಯೆಂದರೆ ಬಸವಪ್ಪ ಶಾಸ್ತ್ರಿಗಳ ಕನ್ನಡ ಶಾಕುಂತಲ. ಅಲ್ಲಿಯವರೆಗೂ ನಡೆದ ವ್ಯಾಪಕವಾದ ಭಾಷಾಂತರ ಕಾರ್ಯದಲ್ಲಿ ಸಂಪೂರ್ಣಯಶಸ್ಸು ದೊರೆತದ್ದು, ಇದೊಂದು ಕೃತಿಗೇ. ಶಾಸ್ತ್ರಿಗಳೇ ಮಾಡಿದ ಇನ್ನುಳಿದ ಹಲವು ಭಾಷಾಂತರ ಕೃತಿಗಳನ್ನು ಗಮನಿಸಿ ಹೇಳುವುದಾದರೂ ಕನ್ನಡ ಶಾಕುಂತಲ ಒಂದು ಚಿರಂತನ ಕೃತಿ ಎನ್ನಬಹುದು. ಇದು ಭಾಷಾಂತರವಾದರೂ ಕಾಳಿದಾಸನ ನಾಟಕದ ತಿರುಳನ್ನು, ಒನಪು–ಲಾವಣ್ಯಗಳನ್ನು ಒಪ್ಪವಾಗಿ ಉಳಿಸಿಕೊಂಡ ನವೀನ ಸೃಷ್ಟಿ. ಕನ್ನಡ ಶಾಕುಂತಲವನ್ನೋದುವಾಗ ಬೇರೊಂದು ಭಾಷೆಯ ಭೂತದ ನೆರಳು ನಮ್ಮನ್ನು ಕಾಡುತ್ತಿದೆ ಎಂಬ ಭಾವನೆಗೆ ಅವಕಾಶ ಉಂಟಾಗುವುದಿಲ್ಲ. ಬಸವಪ್ಪ ಶಾಸ್ತ್ರಿಗಳು ಮಾಡಿ ತೋರಿಸಿದ ಭಾಷಾಂತರಕಾರ್ಯವನ್ನು ಆಸ್ಥಾನವಿದ್ವಾನ್ ಅಳಸಿಂಗರಾಚಾರ್ಯರು ಅಷ್ಟೇ ಅಚ್ಚುಕಟ್ಟಾಗಿ ನಡೆಸಿ ರೂಢಿಸಿದರು. ಸ್ವಪ್ನವಾಸವದತ್ತ, ಪಂಚರಾತ್ರ ನಾಟಕಗಳ ಅನುವಾದಗಳೆರಡೂ ಅವರ ಯಶಸ್ವೀ ಕೃತಿಗಳು. ಇದೇ ಪರಂಪರೆಯನ್ನುಳಿಸಿಕೊಂಡು ನಡೆದ ಮೈಸೂರು ಸೀತಾರಾಮ ಶಾಸ್ತ್ರಿಗಳ ಪ್ರತಿಮಾನಾಟಕ, ಅನಂತನಾರಾಯಣಶಾಸ್ತ್ರಿಗಳ ನಾಗಾನಂದ, ನಂಜನಗೂಡು ಸುಬ್ಬಾಶಾಸ್ತ್ರಿಗಳ ಮೃಚ್ಛಕಟಿಕ ಉತ್ತಮ ಭಾಷಾಂತರ ಕೃತಿಗಳು. ಇತ್ತೀಚಿಗೆ ಎಲ್. ಗುಂಡಪ್ಪನವರು ಮಾಡಿರುವ ಭಾಸನ ನಾಟಕಗಳ ಭಾಷಾಂತರಗಳು—ವಿಶೇಷವಾಗಿ ಮೂಲ ಶ್ಲೋಕಗಳನ್ನು ಹೊಸ ಛಂದಸ್ಸಿನಲ್ಲಿ ಅನುವಾದ ಮಾಡಿರುವ ಗದ್ಯವನ್ನು ಸುಲಭವೂ ನೇರವೂ ಆದ ಕನ್ನಡದಲ್ಲಿ ರೂಪಿಸಿರುವ ಅಂಶದಲ್ಲಿ ಮಾರ್ಗದರ್ಶಕವಾಗಿ ಪರಿಣಮಿಸಿವೆ ಎನ್ನಬಹುದು. ಎಸ್. ವಿ. ಪರಮೇಶ್ವರ ಭಟ್ಟ, ಕೆ. ಕೃಷ್ಣಮೂರ್ತಿ, ಗಣಪತಿ ಮೊಳೆಯಾರ, ಹಾಗೂ ಸಿ. ಪಿ. ಕೃಷ್ಣಕುಮಾರ್ ಅವರುಗಳು ಮಾಡಿರುವ ಭಾಷಾಂತರಗಳು ಉತ್ತಮ ಅಭಿರುಚಿ, ಭಾಷಾ ಪರಿಣತಿ ಮತ್ತು ಆಳವಾದ ಅಭ್ಯಾಸದ ಫಲಶ್ರುತಿಗಳೆನ್ನಬಹುದು.

ಸಂಸ್ಕೃತ ನಾಟಕಗಳನ್ನು ಅನುವಾದ ಮಾಡಿದಂತೆ, ಬಸವಪ್ಪ ಶಾಸ್ತ್ರಿಗಳು ಆ ಕಾಲದ ಸುಸಂಸ್ಕೃತ ವಿದ್ಯಾವಂತರಿಗೆ ಚಿರಪರಿಚಿತವಾಗಿದ್ದ ಷೇಕ್ಸ್‌ಪಿಯರ್‌ನ ಕೆಲವು ನಾಟಕಗಳನ್ನೂ ಅನುವಾದ ಮಾಡಿದರು. 1885ರ ಸುಮಾರಿನಲ್ಲೇ ಗುಂಡೋ ಕೃಷ್ಣ ಚುರಮುರಿಯವರು ಒಥೆಲೋ ನಾಟಕವನ್ನು ರಾಘವೇಂದ್ರರಾಯ ನಾಟಕವೆಂದು ರೂಪಾಂತರಿಸಿದ್ದರು. ಹತ್ತು ವರ್ಷದ ಅನಂತರ ಅದೇ ಕೃತಿ ಬಸವಪ್ಪ ಶಾಸ್ತ್ರಿಗಳ ಕೈಯಲ್ಲಿ ಶೂರಸೇನಚರಿತ್ರೆಯಾಯಿತು. ಕಾಳಿದಾಸನ ಪ್ರತಿಭೆಯನ್ನು ಅಷ್ಟೊಂದು ಚೆನ್ನಾಗಿ ಅರಗಿಸಿಕೊಂಡ ಶಾಸ್ತ್ರಿಗಳಿಗೆ ಷೇಕ್ಸ್‌ಪಿಯರನ ಮೂಲನಾಟಕದ ಭಾವನೆಯಾಗಲೀ ಕಾವ್ಯ ಶೈಲಿಯ ನಾಟಕಧ್ವನಿಯಾಗಲೀ ಎಟಕಿರಲಿಲ್ಲವೆನ್ನುವುದು ಸ್ಪಷ್ಟವಾಗಿ ತಿಳಿಯುತ್ತದೆ. ಎ. ಎನ್. ಮೂರ್ತಿರಾಯರು ಹೇಳುವಂತೆ ನಮ್ಮ ಜನರಿಗೆ ಇಂಗ್ಲಿಷ್ ನಾಟಕಗಳ ಪರಿಚಯವಾದದ್ದು ಆಂಗ್ಲಭಾಷೆಯಲ್ಲಿ ವಿದ್ಯಾಭ್ಯಾಸ ಮುಂದುವರಿದ ಕಾಲದಲ್ಲೇ ಎನ್ನಬಹುದಾದರೂ, ಷೇಕ್ಸ್‌ಪಿಯರನ ನಾಟಕಗಳ ಭಾಷಾಂತರ ರೂಪಾಂತರಗಳ ಕಸಿ ಆದದ್ದು ರಂಗಪ್ರೇಮಿಗಳಿಂದಲೇ ಹೊರತು ವಿದ್ವಜ್ಜನರಿಂದಲ್ಲ. ಮೈಸೂರಿನ ಪ್ಯಾಲೆಸ್ ಕಂಪನಿ ಸ್ಥಾಪಿತವಾದ ಅನಂತರ ದಿ ಮರ್ಚೆಂಟ್ ಆಫ್ ವೆನಿಸ್ (ಪಾಂಚಾಲೀ ಪರಿಣಯ) ರೋಮಿಯೋ ಅಂಡ್ ಜೂಲಿಯೆಟ್ (ರಾಮವರ್ಮ–ಲೀಲಾವತಿ) ನಾಟಕಗಳು ಭಾಷಾಂತರವಾದುವು. ಕೇವಲ ರಂಗಭೂಮಿಗಾಗಿಯೇ ರಚಿತವಾದ ಈ ಕೃತಿಗಳಲ್ಲಿ ನಮ್ಮ ದೇಶ–ಸಂಸ್ಕೃತಿಗಳಿಗೆ ಹೊಂದಿಕೊಳ್ಳುವಂಥ ಹೆಸರು ಹಿನ್ನೆಲೆಗೆ ಸಂಬಂಧಿಸಿದಂಥ ಮಾರ್ಪಾಡುಗಳು ಅನಿವಾರ್ಯವಾದುವು. ಉತ್ತರ ಕರ್ಣಾಟಕದಲ್ಲಿ ಕೆರೂರ್ ವಾಸುದೇವಾಚಾರ್ಯರ ವಸಂತ ಯಾಮಿನಿ ಚಮತ್ಕಾರಗಳು (ಎಮಿಡ್ ಸಮರ್ ನೈಟ್ಸ್ ಡ್ರೀಮ್) ಹಾಗೂ ಪತಿವಶೀಕರಣ (ಗೋಲ್ಡ್‌ಸ್ಮಿತ್ ಕವಿಯ ಷಿ ಸ್ಟೂಪ್ಸ್ ಟು ಕಾಂಕರ್ ನಾಟಕದ ರೂಪಾಂತರ) ಮೊದಲಾದುವು ಹೀಗೆ ಭಾಷಾಂತರವಾದ ಮನೋರಂಜಕ ಕೃತಿಗಳು. ಭಾಷಾಂತರ ಕೆಲಸದಲ್ಲಿ ವಿಶೇಷ ಆಸಕ್ತಿ ತೋರಿಸಿದ ಮೈಸೂರಿನ ಎಂ. ಎಲ್. ಶ್ರೀಕಂಠೇಶಗೌಡರು ಪ್ರತಾಪರುದ್ರೀಯ (ಮ್ಯಾಕ್‌ಬೆತ್) ಹಾಗೂ ಪ್ರಮೀಳಾರ್ಜುನೀಯ (ಎ ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್) ಎಂಬ ಹೆಸರಿನಲ್ಲಿ ಷೇಕ್ಸ್‌ಪಿಯರ್‌ನನ್ನು ಕನ್ನಡಕ್ಕೆ ಕರೆತಂದರು. ಎಂ. ಎಸ್. ಪುಟ್ಟಣ್ಣನವರ ಹೇಮಚಂದ್ರವಿಲಾಸವೂ (ಕಿಂಗ್ ಲಿಯರ್) ಇಂಥ ಒಂದು ಇತಿಹಾಸಾರ್ಹ ಕೃತಿ. ಈ ಎಲ್ಲ ಕೃತಿಗಳೂ ಇಂಗ್ಲಿಷ್ ನಾಟಕವನ್ನು ಕನ್ನಡ ನೆಲದಲ್ಲಿ ಕಸಿಮಾಡುವ ಪ್ರಯತ್ನಗಳು. ಇವರುಗಳಲ್ಲಿ ಯಾರಿಗೂ ಮೂಲಕೃತಿಯ ಜೀವಾಳವನ್ನು ಗುರುತಿಸಿ ಅಚ್ಚಕನ್ನಡವೆನ್ನಬಹುದಾದ, ರಂಗಭೂಮಿಗೆ ಯೋಗ್ಯವಾದ, ಭಾಷೆಯಲ್ಲಿ ಅವನ್ನು ರೂಪಿಸಲು ಸಾಧ್ಯವಾಗಲಿಲ್ಲವೆನ್ನುವುದು ಆಶ್ಚರ್ಯಕರ. ಇನ್ನೊಂದು ಅಂಶವೆಂದರೆ ಈ ಕೃತಿಗಳಲ್ಲಿ ನಾಟಕಯೋಗ್ಯವಾದ ಗದ್ಯದ ಜೊತೆ ತುಂಬ ಜಟಿಲವಾದ ಗ್ರಾಂಥಿಕವಾದ ಗದ್ಯವೂ ಬೆರೆತು ಭಾಷಾಂತರ ಶೈಲಿ ನಮಗೆ ವಿಚಿತ್ರವಾದ ಮೋಜೆನಿಸುತ್ತದೆ.

ಪೌರಾಣಿಕ ನಾಟಕ : ಆಗಿನ ಕಾಲದ ಈ ಎಲ್ಲ ನಾಟಕಗಳನ್ನು ವೃತ್ತಿ ರಂಗಭೂಮಿಯ ಅಭಿನಯಕ್ಕಾಗಿಯೇ ಬರೆಯಲಾಯಿತೆನ್ನುವುದು ನಾಟ್ಯಸಂಪ್ರದಾಯಕ್ಕೆ ಹೊಂದಿಕೊಳ್ಳುವ ಸಂಗತಿಯೇ ಹೌದು. ಈ ನಾಟಕಗಳನ್ನು ಸುಶಿಕ್ಷಿತರಾದ ನಟವರ್ಗ ಮೊಟ್ಟ ಮೊದಲು ಆಸ್ಥಾನದ ಆಶ್ರಯದಲ್ಲಿ ಆಡುತ್ತಿದ್ದರೂ ಕ್ರಮೇಣ ಅವು ಸಾರ್ವಜನಿಕ ಪ್ರದರ್ಶನಕ್ಕೂ ಒಗ್ಗಿಕೊಂಡುವು. ನಾಟಕ ಬರೆದವರ ಕೀರ್ತಿಗಿಂತಲೂ ಮಿಗಿಲಾಗಿ ಆಡುವ ನಟ-ನಟಿಯರ ಕೀರ್ತಿಯೇ ಜನರ ಕಣ್ಮನಗಳನ್ನು ಸೆಳೆಯಿತೆನ್ನುವುದು ಗಮನಾರ್ಹ. ಈ ನಾಟಕಗಳೆಲ್ಲವೂ ಸಂಸ್ಕೃತ ನಾಟಕದ ಚೌಕಟ್ಟನ್ನೇ ಉಳಿಸಿಕೊಂಡುವು. ಸಂಸ್ಕೃತನಾಟಕದ ವಿದೂಷಕನ ಹಾಸ್ಯ, ಸಂಗೀತ ಮುಂತಾದ ಅಂಶಗಳು ಭಾಷಾಂತರವಾದ ಕನ್ನಡನಾಟಕದಲ್ಲಿ ಧಾರಾಳವಾಗಿ ಸೇರಿಕೊಂಡುವು. ವೃತ್ತಿರಂಗಭೂಮಿಗಾಗಿಯೇ ಸಂಸ್ಕೃತ ನಾಟಕಗಳನ್ನು ಅನುವಾದಿಸಿ, ಅಳವಡಿಸಿ ಜಾನಪದ ಮನೋರಂಜನೆಯ ಸಾಧನಗಳಾದ ಬಯಲಾಟ, ಪುರಾಣ–ಪುಣ್ಯಕಥೆಗಳನ್ನು ಅನುಸರಿಸಿ ಪೌರಾಣಿಕಗಳೆಂದು ಕರೆಯುವ ನಾಟಕಗಳು ರಚಿತವಾದುವು. ಅಂಥ ನಾಟಕ ಬರೆದವರಲ್ಲಿ ನಾವು ಮುಖ್ಯವಾಗಿ ಉತ್ತರ ಕರ್ಣಾಟಕದ ಚುರಮುರಿ ಶೇಷಗಿರಿರಾಯರನ್ನು ಶಾಂತಕವಿಗಳನ್ನು ಕೆರೂರು ವಾಸುದೇವಾಚಾರ್ಯರನ್ನು, ಮೈಸೂರು ಕಡೆಯ ಬೆಳ್ಳಾವೆ ನರಹರಿ ಶಾಸ್ತ್ರಿಗಳನ್ನು ನಂಜನಗೂಡು ಶ್ರೀಕಂಠಶಾಸ್ತ್ರಿ, ಬಿ. ಪುಟ್ಟಸ್ವಾಮಯ್ಯನವರನ್ನು ನೆನೆಯಬಹುದು. ಚುರಮುರಿಯವರ ಕನ್ನಡ ಶಾಕುಂತಲದಲ್ಲಿ ಮೂಲಕೃತಿ ಹೇಗೆ ಸ್ವಾರಸ್ಯವಾದ ಪ್ರಾದೇಶಿಕತೆಯ ಜನಪ್ರಿಯ ಉಡುಪು ತೊಟ್ಟಿತೆಂದು ಗಮನಿಸಬಹುದು. ಮೂಲಕೃತಿಯ ವರ್ಣನೆಗಳು ಇಲ್ಲಿ ತೆಳುವಾಗಿವೆ. ಗದ್ಯಭಾಗವಿರುವೆಡೆಯಲ್ಲೆಲ್ಲ ಉತ್ತರ ಕರ್ಣಾಟಕದ ದೇಸಿಯನ್ನು ಬಳಸಲಾಗಿದೆ. ಮೂಲದ ಶ್ಲೋಕ, ವೃತ್ತಗಳನ್ನು ಹಾಡುಗಳನ್ನಾಗಿ ಪರಿವರ್ತಿಸಿರುವುದು ಈ ನಾಟಕದ ಮುಖ್ಯ ಲಕ್ಷಣವಾಗಿದೆ. ಆದರೆ ಕೇವಲ ರಂಗಭೂಮಿಯ ಪ್ರಾದೇಶಿಕ

ಆವಶ್ಯಕತೆಗಳನ್ನೂ ಜನರಂಜನೆಯನ್ನೂ ಲಕ್ಷಿಸಿ ಬೇಕೆಂದ ಹಾಗೆ ನಾಟಕವನ್ನು ಬಗ್ಗಿಸಿ ಹಿಗ್ಗಿಸಲಾಗಿದೆ. ಆದ್ದರಿಂದ ಒಟ್ಟಾರೆ ನಾಟಕದಲ್ಲಿ ಒಂದು ರೀತಿಯ ಶಿಥಿಲತೆ ಕಾಣಿಸುತ್ತದೆ. ಆದರೆ ಆ ಕಾಲದ ರಸಿಕರನ್ನು ರಂಗಭೂಮಿಗೆ ಸೆಳೆಯಲು ಈ ನಾಟಕ ನೆರವಾಯಿತೆನ್ನುವುದು ಮಹತ್ತ್ವದ ಮಾತು. ಮರಾಠಿ ನಾಟಕಗಳು ಪ್ರಬಲ ಪ್ರಭಾವ ಬೀರಿದ ಆ ಕಾಲದಲ್ಲಿ ಕನ್ನಡತನದ ಕೆಚ್ಚಿನಿಂದ ಕ್ರಿಯಾತ್ಮಕವಾದ ಪ್ರತಿಕ್ರಿಯೆ ತೋರಿಸಿದವರಲ್ಲಿ ಶಾಂತಕವಿಗಳು, ಗರೂಡ ಸದಾಶಿವರಾಯರು ಮುಖ್ಯರು. ವೃತ್ತಿ ರಂಗಭೂಮಿಗೆಂದೇ ಇವರು ನಾಟಕವನ್ನು ಬರೆದರು. ಅವುಗಳಲ್ಲಿ ಉಷಾಪಹರಣ, ವತ್ಸಲಾಹರಣ, ಸೀತಾರಣ್ಯ ಪ್ರವೇಶ ಮುಂತಾದವು ಸೇರಿವೆ. ಈ ನಾಟಕಗಳಿಗೆ ಸಂಸ್ಕೃತದ ಪ್ರೇರಣೆ ಇಲ್ಲವೆನ್ನ ಬಹುದಾದರೂ ಅಂಥ ಪ್ರೇರಣೆಯ ಊರೆಗೋಲಿಲ್ಲದೆ ಈ ನಾಟಕಗಳು ಹೇಗೆ ಕುಂಟುತ್ತವೆಂಬ ಅಂಶವನ್ನು ನಾವು ಗಮನಿಸಬಹುದು. ಸಂಸ್ಕೃತ ಪಂಡಿತರು ಬರೆದ ನಮ್ಮ ಪೌರಾಣಿಕಗಳಾದರೂ ನಮ್ಮ ನಾಟಕರಾರರ ಸಾಧನೆಯ ಇನ್ನೊಂದು ಮುಖವನ್ನು ಸೂಚಿಸುತ್ತವೆ. ನಾಟಕಗಳೇ ಅಭಾವವಾಗಿದ್ದ ಕಾಲದಲ್ಲಿ ಬಯಲಾಟ, ಭಾಗವತರಾಟ, ಹರಿಕಥೆ, ಪುರಾಣಶ್ರವಣಗಳೇ ಮನೋರಂಜನೆಯ ಸಾಧನಗಳಾಗಿದ್ದವಷ್ಟೆ. ರಾಮಾಯಣ-ಭಾರತ-ಭಾಗವತಗಳಿಂದ ಆರಿಸಿದ ಪುರಾಣಕಥೆಗಳನ್ನೂ ಹಾಡುವವರು ಕೇಳುವವರು ರಂಗಭೂಮಿಯ ನಾಟಕ ನೀಡುವಂಥ, ಅಥವಾ ಅದಕ್ಕೆ ಸಂವಾದಿಯಾದ ರಸಾನುಭವವನ್ನೇ ಪಡೆಯುತ್ತಿದ್ದ ಕಾಲ ಅದು. ಆದ್ದರಿಂದ ಆ ಕಾಲದ ಹಿನ್ನೆಲೆಯಲ್ಲಿ ರಚಿತವಾದ ಪೌರಾಣಿಕಗಳಲ್ಲಿ ಜನಪ್ರಿಯ ಮನೋರಂಜನೆಯ ರೂಪಲಕ್ಷಣಗಳಿಲ್ಲವನ್ನೂ ಕಾಣಬಹುದು. ರಂಗಭೂಮಿಗೆಂದೇ ರಚಿತವಾದ ಬೆಳ್ಳಾವೆ ನರಹರಿಶಾಸ್ತ್ರಿಗಳ ಕೃಷ್ಣ ಲೀಲಾ, ಶ್ರೀ ಕೃಷ್ಣ ಪಾರಿಜಾತ ಮುಂತಾದ ನಾಟಕಗಳಲ್ಲಿ ಪುರಾಣ ಶೈಲಿಯ ಮಾತುಕತೆ, ಕಣ್ಣು ಸೆಳೆಯುವಂಥ ದೃಶ್ಯಾವಳಿಗಳು, ಹಾಡುಗಳು ಸೇರಿವೆ. ನಾಟಕ ಜನಸಾಮಾನ್ಯರ ಜೀವನದಲ್ಲಿ ಪ್ರಮುಖ ಸ್ಥಾನ ಪಡೆದ ಆ ಕಾಲದಲ್ಲಿ ಪ್ರೇಕ್ಷಕರ ನಡುವೆ ಪಂಡಿತ-ಪಾಮರರೆಂಬ ಅಂತರ ಹೆಚ್ಚಾಗಿರಲಿಲ್ಲ. ಜನಸಾಮಾನ್ಯರ ಅಂತಃಕರಣವನ್ನು ನೇರವಾಗಿ ಮುಟ್ಟಿ, ಮನೋರಂಜನೆ ಒದಗಿಸುವ ಉದ್ದೇಶದಿಂದ ನಾಟಕಕಾರರು ಸರಳವಾದ ಆಡುಮಾತಿನ ಗದ್ಯವನ್ನೇ ಬಳಸಿದರು. ನಾಟಕದ ಕಥಾವಸ್ತು ಪೌರಾಣಿಕವಾದರೂ ನಾಟಕಕಾರರು ಜನಜೀವನಕ್ಕೆ ಸಂಪೂರ್ಣವಾಗಿ ಬೆನ್ನು ತಿರುಗಿಸಿ ನಿಲ್ಲಲಿಲ್ಲ. ಅದಕ್ಕೆ ಬದಲಾಗಿ ಜೀವನದ ಆದರ್ಶ, ಮೌಲ್ಯಗಳು, ಸಾಮಾನ್ಯ ಜನಜೀವನದ ಕನಸುಗಾರಿಕೆ, ಸುಖಲೋಲುಪತೆ, ಹಾಸ್ಯ ಮುಂತಾದ ಅಂಶಗಳನ್ನು ನಾಟಕದೊಳಕ್ಕೆ ಹಾಸುಹೊಕ್ಕಾಗಿ ಹೆಣೆದರು. ಎಲ್ಲಕ್ಕಿಂತ ಹೆಚ್ಚಾಗಿ ನಾಟಕದಲ್ಲಿ ಸಂಗೀತವನ್ನು ಬಳಸಿಕೊಳ್ಳುವುದರ ಮೂಲಕ ಒಂದು ತೆರನಾದ ಅಲೌಕಿಕ, ಅವಾಸ್ತವಿಕ ವಾತಾವರಣವನ್ನು ಸೃಷ್ಟಿಸಿದರು. ಪಾಶ್ಚಾತ್ಯ ಆಪೆರಗಳಲ್ಲಿ ಕಾಣಸಿಗುವಂಥ ವಾತಾವರಣವನ್ನು ನಮ್ಮ ಹಲವಾರು ಸುರಸ ಸಂಗೀತಮಯ ಪೌರಾಣಿಕಗಳಲ್ಲೂ ನಾವು ಗುರುತಿಸಬಹುದು. ವೃತ್ತಿ ರಂಗಭೂಮಿಗೆ ಸಾಕಷ್ಟು ಪ್ರೋತ್ಸಾಹ, ಜನಪ್ರಿಯತೆ ದೊರೆತ ಆ ಕಾಲದಲ್ಲಿ ರಂಗಭೂಮಿ ಬೆಳಕಿಗೆ ತಂದ ಪ್ರಖ್ಯಾತ ನಟರಲ್ಲಿ ವರದಾಚಾರ್ಯರು, ಬಳ್ಳಾರಿ ರಾಘವ ಅವರು, ಗರೂಡರವರು, ವಾಮನಮಾಸ್ತರು, ಗುಬ್ಬಿವೀರಣ್ಣನವರು, ಮಲ್ಲಪ್ಪನವರು, ಪೀರ್ ಅವರು, ಹಿರಣ್ಣಯ್ಯನವರು, ಗಂಗಾಧರ ರಾಯರು, ನಾಗೇಂದ್ರರಾಯರು, ನಾಗೇಶರಾಯರು, ಕೃಷ್ಣಮೂರ್ತಿರಾಯರು ಮುಂತಾದವರ ಹೆಸರನ್ನು ನೆನೆಯಬಹುದು. ಈ ಶತಮಾನದ ಮೂರು ನಾಲ್ಕನೆಯ ದಶಕದ ಸುಮಾರಿನಲ್ಲಿ ನಮ್ಮ ವೃತ್ತಿನಾಟಕರಂಗದ ಬೆಳಕು ಮಸುಕಾಗತೊಡಗಿತು, ವಿಪುಲವಾಗಿ ಹಬ್ಬುತ್ತ ಬಂದ ಔದ್ಯೋಗೀಕರಣದ ದೆಸೆಯಿಂದ ಕಂಪನಿಗಳ ಆರ್ಥಿಕ ಅವ್ಯವಸ್ಥೆ ಹೆಚ್ಚಿತು. ನಗರಗಳ ಬೆಳೆವಣಿಗೆ, ಚಲನಚಿತ್ರಗಳ ಆಕರ್ಷಣೆ, ಒಳ್ಳೆಯ ರಂಗಸಂಪ್ರದಾಯದ ಅಭಾವ-ಹೀಗೆ ಹಲವಾರು ಕಾರಣಗಳಿಂದಾಗಿ ನಮ್ಮ ಪ್ರೇಕ್ಷಕರ ದೃಷ್ಟಿ ಬದಲಾಯಿಸಿತು. ವೃತ್ತಿ ನಾಟಕ ಖಿಲವಾಗುವ ಚಿಹ್ನೆಗಳು ತಲೆದೋರಿದುವು. ಇಂಥ ಅವನತಿಯ ಕಾಲದಲ್ಲಿ ರಂಗಭೂಮಿ ಹೊಸ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸತೊಡಗಿತು. ನಾಟಕವೆಂದರೆ ವೃತ್ತಿರಂಗಭೂಮಿ ಎಂಬ ತಿಳಿವಳಿಕೆ ಮಾಯವಾಗಿ ನಾಟಕ ಬೇರೊಂದು ತಿರುವಿನಲ್ಲಿ ನಡೆಯಿತು. (ನೋಡಿ—ಕನ್ನಡ ವೃತ್ತಿರಂಗಭೂಮಿಯ ನಟರು)

**ಸಾಮಾಜಿಕ ನಾಟಕ ವಾಸ್ತವಿಕಪ್ರಜ್ಞೆ :** ಕನ್ನಡ ಸಾಮಾಜಿಕ ನಾಟಕದ ವಾಸ್ತವಿಕತೆಯನ್ನು ಕುರಿತು ಮಾತನಾಡುವಾಗ ಉತ್ತರ ಕನ್ನಡ ಜಿಲ್ಲೆಯಲ್ಲಿ ರಚಿತವಾಯಿತೆಂದು ಹೇಳಲಾಗುವ ಇಗ್ಗಪ್ಪ ಹೆಗ್ಗಡೆಯ ಪ್ರಹಸನ ನಮ್ಮ ಗಮನವನ್ನು ಸೆಳೆಯುತ್ತದೆ. ಉತ್ತರ ಕನ್ನಡದ ಜನರ ಸಾಮಾಜಿಕ ಹಿನ್ನೆಲೆಯಲ್ಲಿ 1887ರ ಸುಮಾರಿನಲ್ಲಿ ರಚಿತವಾದ ಈ ನಾಟಕವನ್ನು ನಮ್ಮ ವಾಸ್ತವಿಕ ರಂಗಭೂಮಿಯ ಪ್ರಪ್ರಥಮ ಸ್ವತಂತ್ರ ಕೃತಿ ಎನ್ನುವುದುಂಟು. ಇಳಿಯ ವಯಸ್ಸಿನ ಹವೀಕ ಬ್ರಾಹ್ಮಣ ಇಗ್ಗಪ್ಪ ಹೆಗಡೆಯ ವಿಷಮ ವಿವಾಹ, ಅದರ ದುರಂತತೆ ಈ ನಾಟಕದ ವಸ್ತು. ಸ್ವತಂತ್ರವಾದ ಸಾಮಾಜಿಕ ವಸ್ತುವನ್ನು ಒಳಗೊಂಡು, ಅಪ್ಪಟ ಆಡುಮಾತನ್ನೇ ಬಳಸಿಕೊಂಡು ಬರೆದ ಈ ನಾಟಕ ಒಂದು ನೈಜ, ಸಾಮಾಜಿಕ ಚಿತ್ರಣ. ಈ ನಾಟಕದ ರಂಗ ಸಾಧ್ಯತೆಯ ಬಗ್ಗೆ ಸ್ಪಷ್ಟವಾಗಿ ಏನನ್ನೂ ಹೇಳಲು ಸಾಧ್ಯವಿಲ್ಲವಾದುದರಿಂದ ಸದ್ಯಕ್ಕೆ ಈ ಕೃತಿಯ ಮಹತ್ತ್ವ ಕೇವಲ ಐತಿಹಾಸಿಕವೆಂದು ಮಾತ್ರ ಹೇಳಬೇಕಾಗಿದೆ.

ಕನ್ನಡ ನಾಟಕದಲ್ಲಿ ಸಾಮಾಜಿಕ ಪ್ರಜ್ಞೆಯನ್ನು ಮೂಡಿಸಿ ಹೊಸಯುಗವನ್ನೇ ಸೃಷ್ಟಿಸಿದ ಕೀರ್ತಿ ಟಿ. ಪಿ. ಕೈಲಾಸಂ ಹಾಗೂ ಶ್ರೀರಂಗರಿಗೆ ಸಲ್ಲುತ್ತದೆ. ಸಂಸ್ಕೃತ ನಾಟಕದ ಜಾಯಮಾನವನ್ನೇ ಅನುಸರಿಸಿ ಶಿಕ್ಷಣ ಸಂಭ್ರಮ, ಸ್ತ್ರೀಧರ್ಮರಹಸ್ಯ, ಪತಿತೋದ್ಧಾರದಂಥ ನಾಟಕಗಳು ಉತ್ತರ ಕರ್ಣಾಟಕದಲ್ಲಿ ವಿಪುಲವಾದ ಜನಪ್ರಿಯತೆ ದೊರಕಿಸಿಕೊಂಡುವು. ಇಗ್ಗಪ್ಪ ಹೆಗಡೆ ಪ್ರಹಸನದಂತೆ ಈ ನಾಟಕಗಳೂ ಸಮಾಜ ಸುಧಾರಣೆಯ ಪ್ರವಚನವನ್ನೇ ಉಕ್ಕಿಸುವುದರಿಂದ ಅವು ಹೆಚ್ಚು ಕಲಾತ್ಮಕತೆ ಸಾಧಿಸಿಲ್ಲ. ಪತಿತೋದ್ಧಾರದ ರಚನೆ ತೀರಾ ಜಾಳಾಗಿದ್ದು, ಅತಿಮುಗ್ಧ ಕಲ್ಪನೆಯಿಂದ ಕೂಡಿದೆ. ನಾಟಕದ ಮುಕ್ತಾಯ ಹದಿನೆಂಟನೆಯ ಶತಮಾನದ ಇಂಗ್ಲಿಷ್ ಸೆಂಟಿಮೆಂಟಲ್ ಕಾಮೆಡಿಗಳ ರೂಪವನ್ನೇ ನೆನಪು ಮಾಡುವಂತಿದೆ. ನಾಟಕದ ವಸ್ತು ಹೊಸತಾದರೂ ಅದರ ವಿನ್ಯಾಸದಲ್ಲಿ ನಾಟಕಕಾರ ಹೆಚ್ಚು ಸ್ಪಷ್ಟವಾದ ನವೀನತೆಯನ್ನಾಗಲೀ ಆತ್ಮ ಪ್ರತ್ಯಯವನ್ನಾಗಲೀ ಸಾಮಾಜಿಕ ಕಾಳಜಿಯನ್ನಾಗಲೀ ತೋರುವಂತೆ ಕಾಣುವುದಿಲ್ಲ. ಆದರೆ ನಿಜವಾದ ಸಾಮಾಜಿಕ ಅರಿವನ್ನು ನಾವು ಗುರುತಿಸುವುದು ಕೈಲಾಸಂ ಹಾಗೂ ಶ್ರೀರಂಗರ ನಾಟಕಗಳಲ್ಲಿ. ಇಬ್ಬರೂ ಪ್ರೌಢ ಶಿಕ್ಷಣದ ಸಲುವಾಗಿ ಕಡಲಾಚೆ ಪ್ರವಾಸ ನಡೆಸಿದಾಗ ಪಾಶ್ಚಾತ್ಯ ರಂಗಭೂಮಿಯ ಹಾಗೂ ಹೊಸ ಕಾಲದ ಜೀವನದ ಪ್ರಭಾವಗಳಿಗೆ ಮನಒಡ್ಡಿ, ಅಲ್ಲಿ ಮೊಗೆದು ತಂದ ಸಂವೇದನೆ, ಪರಿಣತಿಗಳನ್ನು ಕನ್ನಡ ನಾಟಕಕ್ಕೆ ತುಂಬಿಸಿ ಕೊಟ್ಟರು. ಆಗ ಇಂಗ್ಲೆಂಡಿನಲ್ಲಿ, ಇಬ್ಸೆನ್ನನ ನಾಟಕದಿಂದ ಪ್ರೇರಿತರಾಗಿದ್ದ ಷಾ, ಗಾಲ್ಸ್‌ವರ್ದಿಯಂಥವರ ಪ್ರಭಾವ ಕೈಲಾಸಂ, ಶ್ರೀರಂಗರ ಮೇಲೂ ಅದರ ನೆರಳನ್ನು ಚಾಚಿರಬೇಕು. ಆದರೆ ಸಂಸ್ಕೃತದಲ್ಲಿ ಪ್ರಾಗಲ್ಭ್ಯ ಪಾಂಡಿತ್ಯ ಪಡೆದ ಅವರಿಬ್ಬರೂ ಹಳೆಯ ಪರಂಪರೆಯನ್ನು ಗಮನವಿಟ್ಟುಕೊಂಡೇ ನಾಟಕ ಬರೆದರು. ಹೊಸ ಪ್ರಭಾವ, ಅಂತರ್ಗತವಾದ ಪ್ರತಿಭೆಯೊಡನೆ ಸೇರಿ ಕನ್ನಡ ನಾಟಕ ಸಾಹಿತ್ಯದಲ್ಲಿ ಹೊಸ ಮನ್ವಂತರಕ್ಕೆ ಕಾರಣವಾಯಿತು.

ಕೈಲಾಸಂ : ಕೈಲಾಸಂ ಎಲ್ಲ ಸೃಷ್ಟ್ಯಾತ್ಮಕ ಕಲಾವಿದರಿಗೆ ಸಹಜವಾದ ರೀತಿಯಲ್ಲಿ ಕೃತಿ ರಚಿಸಿದರು. ಅವರು ಯಾವ ಪೂರ್ವಸಿದ್ಧ ಥಿಯರಿಗಳನ್ನು ಅನುಸರಿಸಿ ನಾಟಕ ಬರೆಯಲಿಲ್ಲ. ಅವರು ತಮಗೆ ಬೇಕಾದ ರಂಗಭೂಮಿಯ ಪರಿಸರವನ್ನು ತಾವೇ ಸೃಷ್ಟಿಸಿಕೊಳ್ಳಬೇಕಾಯಿತು. ಕಂಪನಿ ನಾಟಕಗಳ ಅಬ್ಬರದ ಹಾವಳಿಗೆ ಸಿಕ್ಕ ರಂಗಭೂಮಿಯನ್ನು ಕೈವಶ ಮಾಡಿಕೊಳ್ಳಲು ಅವರಿಗೆ ಸಿಕ್ಕ ಸಾಧನವೆಂದರೆ ಹಾಸ್ಯ. ಅದನ್ನು ಪರಿಣಾಮಕಾರಿಯಾಗಿ ಪ್ರಯೋಗಿಸಲು ಅವರ ಸಹಜ ಪ್ರವೃತ್ತಿ ಅವರಿಗೆ ನೆರವಾಯಿತು. ನಾಟಕ ಜನಜೀವನವನ್ನು ಎತ್ತಿ ತೋರಿಸುವ ಸಾಧನವೆಂದು ನಂಬಿದ್ದ ಕೈಲಾಸಂ ವೃತ್ತಿರಂಗಭೂಮಿಯ ಅತಿರೇಕಗಳನ್ನು ವಿಡಂಬನೆ ಮಾಡುವ ದೃಷ್ಟಿಯಿಂದಲೇ ಬರೆದ ನಂ ಕಂಪ್ನಿ ವಿಕಟ ಹಾಸ್ಯ ತುಂಬಿದ ಅಣಕು ನಾಟಕ. ಹಾಸ್ಯೋಕ್ತಿಗೆ, ಪಾತ್ರಕಲ್ಪನೆಗೆ ಗಮನವಿತ್ತಷ್ಟು ಸಂವಿಧಾನ, ವಸ್ತು ವಿನ್ಯಾಸದತ್ತ ಕೈಲಾಸಂ ಚಿತ್ತಹರಿಸಲಿಲ್ಲ. ಆದರೆ ಗಂಡಸ್ಕತ್ರಿ, ಹುತ್ತದಲ್ಲಿ ಹುತ್ತ, ವೈದ್ಯನವ್ಯಾಧಿ ಹೋಂರೂಲು ನಾಟಕಗಳಲ್ಲಿ ಹಾಸ್ಯದ ವಿವಿಧ ಸ್ತರಗಳನ್ನು ನಾವು ಗುರುತಿಸಬಹುದು. ಗಂಡಸ್ಕತ್ರಿ, ವೈದ್ಯನವ್ಯಾಧಿ ನಾಟಕಗಳ ರಚನೆಯಲ್ಲಿ ಶಿಲ್ಪದ ಸಮರೂಪತೆ ಇದೆ. ಈ ಸಮರೂಪತೆಯನ್ನು ಕೈಲಾಸಂ ನಾಟಕೀಯ ಕಟಕಿಯ ಮೂಲಕ ಸಾಧಿಸಿದ್ದಾರೆ. ವೈದ್ಯನವ್ಯಾಧಿಯಲ್ಲಿ ರಂಗಣ್ಣನಂತೆಯೇ ಸುಬ್ಬಣ್ಣ



ಟಿ. ಪಿ. ಕೈಲಾಸಂ

ಕೋಳಿಕುಕ್ಕನಾಗಿರುವನೆಂಬ ರಹಸ್ಯ ಬಯಲಾಗುವ ಸನ್ನಿವೇಶ, ಹಾಗೂ ಗಂಡಸ್ಕತ್ರಿಯ ಮುಕ್ತಾಯ ಇದಕ್ಕೆ ಉದಾಹರಣೆಗಳು. ಸುಶಿಕ್ಷಿತರೆನ್ನಲಾದ ಮಧ್ಯಮ ವರ್ಗದ ಜನರ ಅಂಕುಡೊಂಕುಗಳನ್ನು ಪ್ರತಿಬಿಂಬಿಸಲು ಕೈಲಾಸಂ ಕರುಣೆ ಬೆರೆತ ಹಾಸ್ಯ ಹಾಗೂ ಉತ್ಪ್ರೇಕ್ಷೆಗಳನ್ನೇ ಹೆಚ್ಚಾಗಿ ಬಳಸಿದರು. ರಾಮಣ್ಣ, ಧೊಂಡೂರಾಯ, ಅಹೋಬ್ಳು, ಅಮ್ಮಾವ್ರಗಂಡದ ನರಸಿಂಹು ಮುಂತಾದ ಪ್ರಮುಖ ಪಾತ್ರಗಳ ಹಾಗೂ ಮುದ್ಮಣಿ, ಬಾಳು, ಮುಂತಾದ ಚಿಕ್ಕಪುಟ್ಟ ಪಾತ್ರಗಳ ಕಲ್ಪನೆಯಲ್ಲಿ ವ್ಯಂಗ್ಯಚಿತ್ರಶೈಲಿಯ ಉತ್ಪ್ರೇಕ್ಷೆ ಇದೆ. ಕೈಲಾಸಂ ಬಳಸುವ ಉತ್ಪ್ರೇಕ್ಷೆ ಹಲವು ವೇಳೆ ನಾಟಕದ ವಸ್ತುವನ್ನು ವಿಸ್ತಾರವಾಗಿ ಬೆಳೆಸಿ ಅದರ ಸಂಕೀರ್ಣತೆಯಲ್ಲಿ ಸೇರಿ ಹೋಗುವುದರಿಂದ, ಉತ್ಪ್ರೇಕ್ಷೆ ಕೈಲಾಸಂ ನಾಟಕದ ಒಂದು ತಂತ್ರವೆಂದೇ ಹೇಳಬಹುದು. ಬಹಿಷ್ಕಾರದ ಸಮಾಜ ವಿಮರ್ಶೆ ಉತ್ಪ್ರೇಕ್ಷೆಯ ನೆರಳಿನಲ್ಲೇ ಬೆಳೆದು ಹಬ್ಬಿದರೂ ಅದು ವಸ್ತುವಿನ ನಿರೂಪಣೆಗೆ ಧಕ್ಕೆತಾರದೆ, ಸಾಮಾಜಿಕ ದುರಂತದ ಒಂದು ಮುಖವಾಗುತ್ತದೆ. ಬಹುಮಟ್ಟಿಗೆ ಬೌದ್ಧಿಕ ಪಾತಳಿಯ ತಳಹದಿ ದುರ್ಬಲವಾದುದರಿಂದಲೇ ಕೈಲಾಸಂ ನಾಟಕಗಳು ಸಂಪೂರ್ಣವಾಗಿ ಗುರಿಸಾಧಿಸುವುದಿಲ್ಲ. ಅದರಿಂದ ಕೈಲಾಸಂರವರ ನಾಟಕ ಸಾಮಾನ್ಯರ ಮನಸ್ಸಿನಲ್ಲಿ ಕೇವಲ ಹಾಸ್ಯನಾಟಕಗಳಾಗಿ ಉಳಿದು ಬಿಡುವ ಅಪಾಯವಿದೆ. ಆದರೆ ಗಮನವಿಟ್ಟು ನೋಡಿದಾಗ ಉಕ್ತಿ ಚಾತುರ್ಯದಿಂದ ಸ್ಫುರಿಸುವ ಹಾಸ್ಯದ ವಿವಿಧ ರೇಕುಗಳಾದ ಪ್ರಾಸ, ಶ್ಲೇಷೆ, ಅಪಹಾಸ್ಯ ಕೊಂಕುನುಡಿ, ವಕ್ರೋಕ್ತಿಗಳನ್ನು ಅವರು ಎಷ್ಟು ಚೆನ್ನಾಗಿ ಬಳಸಿಕೊಂಡರೆಂದು ತಿಳಿಯಬಹುದು. ಕೈಲಾಸಂ ಗಂಭೀರವಾದ ಸಾಮಾಜಿಕ ಸಮಸ್ಯೆಗಳನ್ನು ಚರ್ಚಿಸುವಾಗಲೂ ಮಾನವೀಯವಾದ ಹಾಸ್ಯವನ್ನು ಬೆರೆಸಿ, ನಕ್ಕುನಗಿಸುವ ಹೊಸ ಪರಂಪರೆಯನ್ನೇ ಸೃಷ್ಟಿಸಿದರು.



ಶ್ರೀರಂಗ

ಶ್ರೀರಂಗ : ಕೈಲಾಸಂ ಸಾಧಿಸ ಹೊರಟ ಸಮಾಜವಿಮರ್ಶೆಯನ್ನು ಶ್ರೀರಂಗರು ಹೆಚ್ಚು ಅರ್ಥವತ್ತಾಗಿ ಸಾಧಿಸಿ, ಹೆಚ್ಚು ಸಂಕೀರ್ಣವಾದ ಹಾಸ್ಯ ಪ್ರಜ್ಞೆಯನ್ನು ಕನ್ನಡ ನಾಟಕಕ್ಕೆ ಅಳವಡಿಸಿದರು. ಶ್ರೀರಂಗರ ನಾಟಕಗಳಲ್ಲಿ ವೈಚಾರಿಕ ಸ್ತರಗಳು ಹೆಚ್ಚು ತೀಕ್ಷ್ಣವಾಗುತ್ತವೆ. ದಟ್ಟ ಅನುಭವಗಳೇ ಕಲಾತ್ಮಕ ಅಭಿವ್ಯಕ್ತಿಯನ್ನು ಕಂಡುಕೊಳ್ಳುವಾಗ ರೋಷ, ವಿಡಂಬನೆ, ಪ್ರತೀಕಾರದಂಥ ಅಮೂರ್ತ ಭಾವಗಳು ಹಾಸ್ಯದ ಜೋಡಿಕೆಯಲ್ಲಿ ಸೇರಿ ವಿಚಿತ್ರ ಮಿಶ್ರಣವಾಗುತ್ತವೆ. ವಿಷಾದ ಬೆರೆತ ವ್ಯಂಗ್ಯ ಶ್ರೀರಂಗರ ತಂತ್ರದ ಒಂದು ಅಂಶವಾಗಿ ಕಾಣಿಸಿಕೊಳ್ಳುತ್ತದೆ. ನಾಟಕದ ಒಳತಿರುಳಿನಲ್ಲಿ ಒಂದು ವಿಚಾರ, ಅದಕ್ಕೆ ತಕ್ಕುದಾದ ವಸ್ತು ಪ್ರತಿರೂಪ, ಬುದ್ಧಿಯ ವಿನ್ಯಾಸಕ್ಕೆ ಸಲ್ಲುವ ಭಾಷೆ, ವಾದ–ಪ್ರತಿ ವಾದಗಳ ಮೂಲಕ ಹೆಣೆಯುವ ಮಾತುಗಾರಿಕೆ, ಮಾರ್ಮಿಕವಾದ ಹಾಸ್ಯದ ಕಿಡಿಗಳು—ಇವು ಶ್ರೀರಂಗರ ನಾಟಕದಲ್ಲಿ ತೋರುವ ವಿಶಿಷ್ಟ ಗುಣಗಳು. ಕನ್ನಡ ಇಂಗ್ಲಿಷ್ ಬೆರೆತ ಆಡು ಮಾತಿನಲ್ಲಿ ಕೈಲಾಸಂ ರೂಪಿಸಿದ ನಾಟಕಗದ್ಯ ಶ್ರೀರಂಗರ ಕೈಯಲ್ಲಿ ಅರ್ಥದ ಉದ್ದ ಅಗಲಗಳನ್ನು ಪಡೆಯಿತೆನ್ನಬಹುದು. ಮೇಲುನೋಟಕ್ಕೆ ಹಾಸ್ಯದಂತೆ ತೋರುವ ಶ್ರೀರಂಗರ ಮಾತುಗಳಲ್ಲಿ ಸಮಾಜದ ಮೌಲ್ಯಗಳು, ವ್ಯಕ್ತಿಶಕ್ತಿಗಳು ತೀವ್ರ ಘರ್ಷಣೆಗೆ ಸಿಕ್ಕಿರುವುದನ್ನು ನಾವು ಕಾಣಬಹುದು. ತಮ್ಮ ತಮ್ಮ ಮೌಢ್ಯವನ್ನು, ಆಂತರಿಕ ಕೊರತೆಗಳನ್ನು, ಗುರುತಿಸಿಕೊಳ್ಳಲಾರದ ದುರ್ಬಲ ವ್ಯಕ್ತಿಗಳು ತಮ್ಮ ಅಸಹಾಯಕ ವೇದನೆಯಲ್ಲೇ ಸಿಕ್ಕಿ. ನರಳವುದನ್ನು ಶ್ರೀರಂಗರ ಹರಿಜನ್ವಾರ, ನರಕದಲ್ಲಿ ನರಸಿಂಹ, ಪ್ರಪಂಚಪಾಣಿ ದತ್ತು ಮುಂತಾದ ಮೊದಲಿನ ನಾಟಕಗಳಲ್ಲಿ ಗುರುತಿಸಬಹುದು. ಇತ್ತೀಚಿನ ಕೃತಿಗಳನ್ನು ನೋಡುವಾಗ, ಕೆಲವೊಮ್ಮೆ ಮಾತಿನ ಮೊನಚನ್ನು ಅವಲಂಬಿಸಿ ನಿಲ್ಲುವ ಶ್ರೀರಂಗರ ನಾಟಕಗಳು ಪ್ರಬಂಧ ನಾಟಕಗಳಾಗಿವೆಯೇನೊ ಅನಿಸುತ್ತದೆ. ನಾಟಕದಲ್ಲಿ ಹಾಸ್ಯದ ವ್ಯಂಗ್ಯದ ಪರಿಸರ ಸುತ್ತಿಕೊಂಡಿದ್ದರೂ ಅದು ನಾಟಕದ ಕ್ರಿಯೆಯಲ್ಲಿ ಪಾಲುಗೊಳ್ಳದೆ ಹೋಗುತ್ತದೆ. ಕೇಳುಜನಮೇಜಯ, ರಂಗ ಭಾರತ, ಶತಾಯು–ಗತಾಯು ಮುಂತಾದ ಈಚಿನ ಕೃತಿಗಳಲ್ಲಿ ಹಬ್ಬಿರುವ ಹಾಸ್ಯವಾಗಲೀ, ವ್ಯಂಗ್ಯವಾಗಲೀ ನಾಟಕದ ವಸ್ತುವಿನಲ್ಲಿ ತುಂಬಿರುವ ವಿಷಾದಕ್ಕೆ ಪೂರಕವಾಗಿ ನಿಲ್ಲದೆ ದುರ್ಬಲವಾಗುತ್ತವೆ. ನಾಟಕೀಯ ಕ್ರಿಯೆಯಲ್ಲಿ ಕಾವ್ಯ ಕ್ರಿಯೆಸಂಪರ್ಕ ಮೂಡಿಬರದೆ ಇರುವುದರಿಂದಲೋ ಏನೋ ಅದು ನೀರಸ ಚರ್ಚೆಯಾಗುತ್ತದೆ. ಶ್ರೀರಂಗರ ಹಾಸ್ಯ ಮೊದಲಿನ ನಾಟಕಗಳಲ್ಲಿರುವಂತೆ, ಗರಿಗೆದರಿಕೊಳ್ಳುವುದಿಲ್ಲವೆಂಬುದನ್ನು ಈಚಿನ ನಾಟಕಗಳಲ್ಲಿ ನೋಡಬಹುದು. ಆದರೆ ಶ್ರೀರಂಗರು ಯಾವಾಗಲೂ ಆಧುನಿಕತೆಗೆ ಬೆನ್ನು ತಿರುಗಿಸಿ ನಿಲ್ಲುವಂಥವರಲ್ಲ. ಅವರ ಕ್ರಿಯಾಶೀಲತೆ, ಕಲ್ಪನಾಶಕ್ತಿ ಯಾವಾಗಲೂ ಜೀವಂತವಾಗಿದ್ದು ಹೊಸ ವಿಚಾರದತ್ತ, ಅಭಿವ್ಯಕ್ತಿಯತ್ತ ಹಾಯುತ್ತಲೇ ಇರುತ್ತದೆ. ಇದಕ್ಕೆ ಉದಾಹರಣೆಯಾಗಿ ಅವರು 1960ರಿಂದೀಚೆಗೆ ಬರೆದ ಕತ್ತಲೆ ಬೆಳಕು ನಾಟಕವನ್ನು ವೀಕ್ಷಿಸಬಹುದು. ಯೂರೋಪಿನ ರಂಗಭೂಮಿಯಲ್ಲಿ ಹೊಸ ವಿಚಾರ ಕ್ರಾಂತಿ ಎಬ್ಬಿಸಿ ನಾಟಕದ ಬಗ್ಗೆ ಅಸ್ತಿತ್ವದಲ್ಲಿದ್ದ ಸಾಂಪ್ರದಾಯಿಕ ಅಭಿಪ್ರಾಯಗಳನ್ನೇ ಬುಡ ಮೇಲು ಮಾಡಿದ ಪಿರಾಂಡಿಲೊ (ನೋಡಿ) ಮುಂತಾದವರ ಪ್ರಭಾವನ್ನು ಶ್ರೀರಂಗರ ಈಚಿನ ನಾಟಕಗಳಲ್ಲಿ ಕಾಣಬಹುದು. ಜೀವನದ ಅಖಂಡತೆ, ವಾಸ್ತವಲೋಕದ ಅವ್ಯಕ್ತ ಸಂಕೀರ್ಣತೆ ಇವುಗಳನ್ನು ಅರಿತ ನಾಟಕಕಾರನ ಸೃಜನಶೀಲತೆಯ ಸ್ವರೂಪವೇನೆಂದು ಶ್ರೀರಂಗರು ಕತ್ತಲೆ ಬೆಳಕು ನಾಟಕದಲ್ಲಿ ವಿವೇಚಿಸಿದ್ದಾರೆ ; ಹೊಸ ನಾಟಕ ಯಾವ ದಾರಿಯತ್ತ ನಡೆಯಬಹುದೆಂದು ಸೂಚಿಸಿದ್ದಾರೆ.

ಕೈಲಾಸಂ, ಶ್ರೀರಂಗರಿಬ್ಬರೂ ಕನ್ನಡ ನಾಟಕಕ್ಕೆ ವಾಸ್ತವಿಕತೆಯ ಬುನಾದಿ ಹಾಕಿದರು. ಸಮಾಜ ಚಿತ್ರಣ ಮೂಡಿಸಿದರು. ಹವ್ಯಾಸಿ ರಂಗಭೂಮಿಗೆಂದೇ ಬರೆದ ವೃತ್ತಿ ರಂಗಭೂಮಿಯ ನಾಟಕಗಳಲ್ಲಿನ ಸಂಗೀತ, ಇವರ ನಾಟಕಗಳರಂಗಸಾಧ್ಯತೆಯನ್ನು ನಮ್ಮ ಜನ ಪರೀಕ್ಷಿಸಿದರು, ಮೆಚ್ಚಿಕೊಂಡರು. ಮಾತಿನ ಗ್ರಾಂಥಿಕತೆಗಳ, ಬದಲು ಸಾಮಾಜಿಕ ಗದ್ಯ ನಾಟಕಗಳನ್ನು ಸೃಷ್ಟಿಸಿದರು. ಆದರೆ ಈ ಸಂಕ್ರಮಣ ಕಾಲದಲ್ಲಿ ನಾಟಕದ ಕಾವ್ಯಾತ್ಮಕ ಅಂಶವನ್ನು ನಾಟಕಕಾರರು ಮರೆತರು, ನಾಟಕವನ್ನು ಅತಿವಾಸ್ತವಿಕತೆಯ ಅಪಾಯಕ್ಕೊಳಪಡಿಸಿದರು ಎಂದು ಹೇಳುವುದುಂಟು. ನಾಟಕ ಪ್ರಪಂಚ ವಾಸ್ತವ ಲೋಕದ ಪ್ರತಿಬಿಂಬ ಮಾತ್ರವಲ್ಲ. ಜೀವನದ ಅವ್ಯಕ್ತತೆಯನ್ನು ಸೂಚಿಸುವ, ಸಂಕೀರ್ಣ ಅನುಭವಗಳನ್ನು ಮೂಡಿಸುವ ಸಾಧನವೂ ಹೌದು. ಇದನ್ನು ಕೈಲಾಸಂ, ಶ್ರೀರಂಗರು ಯಾವ ಪ್ರಮಾಣದಲ್ಲಿ ಸಾಧಿಸಿದ್ದಾರೆಂದು ಇನ್ನು ಮುಂದೆ ವಿವೇಚಿಸಬೇಕಾಗಿದೆ.

ವಾಸ್ತವಿಕ ನಾಟಕದ ಪರಂಪರೆಯನ್ನೇ ಅನುಸರಿಸಿ ಬೇಂದ್ರೆಯವರು ಉದ್ಧಾರ, ನಗೆಯ ಹೊಗೆ, ಹೊಸಸಂಸಾರ, ಜಾತ್ರೆ, ಸಾಯೊ ಆಟ—ಮುಂತಾದ ಕೆಲವು ಸ್ವಾರಸ್ಯ ಕೃತಿಗಳನ್ನು ರಚಿಸಿದರು. ನಗೆಯ ಹೊಗೆಯನ್ನು ದುರಂತ ನಾಟಕವೆನ್ನಬಹುದಾದರೂ ಕಥಾವಸ್ತುವಿನ ವಿನ್ಯಾಸದಲ್ಲಾಗಲೀ, ಪಾತ್ರ ಸಂಯೋಜನೆಯಲ್ಲಾಗಲೀ ಸಾಕಷ್ಟು ಬೆಳೆವಣಿಗೆ ಇಲ್ಲ. ಉದ್ಧಾರ ಸಮಾಜದವಿಭಿನ್ನ ಶಕ್ತಿಗಳ ನಡುವೆ ನಡೆಯುವ ಘೋರ ಘರ್ಷಣೆಗಳ ವ್ಯಗ್ರಚಿತ್ರವಾಗಿದೆ. ನಾಟಕದ ಶಿಲ್ಪ ತುಂಬ ಕಲಾಮಯವಾಗಿದೆ. ಹಲವಾರು ಧ್ವನಿ ಸೂಚನೆಗಳಿಂದ ತುಂಬಿದ ಹೊಸ ಸಂಸಾರ ಒಂದು ಒಳ್ಳೆಯ ನಾಟಕ. ಬೇಂದ್ರೆಯವರ ನಾಟಕಗಳನ್ನು ನೋಡುವಾಗ ದುರಂತನಾಟಕ, ಸುಖಾಂತ ನಾಟಕಗಳೆನ್ನುವ ಪ್ರಭೇದಗಳ ನಡುವಣ ಅಂತರವೇ ಇಲ್ಲವಾಗಿದೆ ಎನ್ನುವುದನ್ನು ನಾವು ಗಮನಿಸಬಹುದು.

ಸಮಾಜದ ಕುಂದುಕೊರತೆಗಳತ್ತ ತೀಕ್ಷ್ಣವಾದ ನೋಟ ಹರಿಸಿದ ಕಾದಂಬರಿಕಾರ ಕಾರಂತರು ನಾಟಕಗಳನ್ನೂ ಬರೆದರು. ಗರ್ಭಗುಡಿ ಸಮಾಜದ ಮೌಢ್ಯವನ್ನೂ

ದುರಾಚಾರವನ್ನೂ ಬಯಲಿಗೆಳೆದು ವ್ಯಗ್ರವಾದ ಸಾಮಾಜಿಕ ಚಿತ್ರವನ್ನು ನೀಡುತ್ತದೆ. ಬಿತ್ತಿದ ಬೆಳೆ ಒಳ್ಳೆಯ ಕಥಾವಸ್ತುವನ್ನು ಒಳಗೊಂಡಿದ್ದರೂ ಕೇವಲ ಓದು ನಾಟಕವಾಗಿದೆ. ನಾಟಕಕ್ಕೆ ಅಗತ್ಯವಾದ ಚಲನೆಯನ್ನು, ಕ್ರಿಯೆಯನ್ನು ಅದು ಸಾಧಿಸಿಲ್ಲ.

ಹೊಸ ಕನ್ನಡ ಸಾಹಿತ್ಯ ಭಾಷಾಂತರ ಕೃತಿಗಳಿಂದಲೇ ಆರಂಭವಾಯಿತು ಎನ್ನುವ ಮಾತು ನಮ್ಮ ಹೊಸ ಕನ್ನಡ ನಾಟಕಗಳಿಗೆ ಅರ್ಥವತ್ತಾಗಿ ಅನ್ವಯಿಸುತ್ತದೆ. ಕುವೆಂಪು ಅವರ ಬಿರುಗಾಳಿ, ರಕ್ತಾಕ್ಷಿ—ಷೇಕ್ಸ್‌ಪಿಯರ್‌ನ ಮೂಲ ಕೃತಿಗಳನ್ನನುಸರಿಸಿ ರೂಪಾಂತರ ಮಾಡಿದ ಕೃತಿಗಳು. ತಮ್ಮ ಮಹಾಕಾವ್ಯದ ರಚನೆಗೆ ಬೇಕಾದ ಶೈಲಿಯನ್ನು ಅಣಿಗೊಳಿಸಿಕೊಳ್ಳುತ್ತಿದ್ದ ಕುವೆಂಪುರವರ ಛಂದಸ್ಸು ಈ ನಾಟಕಗಳಲ್ಲಿ ಹದವಾದ ರೂಪತಾಳುತ್ತಿರುವುದನ್ನು ಕಾಣಬಹುದು. ಇಂಗ್ಲಿಷ್ ಅಥವಾ ಬೇರೆ ಭಾಷೆಗಳಿಂದ ಕನ್ನಡಕ್ಕೆ ಅನುವಾದ ಅಥವಾ ರೂಪಾಂತರವಾದ ಕೃತಿಗಳಲ್ಲಿ ಡಿ.ವಿ.ಜಿ. ಅವರ ಮ್ಯಾಕ್‌ಬೆತ್, ಬಿ. ಎಂ. ಶ್ರೀಯವರ ಪಾರಸಿಕರು ಅಶ್ವತ್ಥಾಮನ್—ತುಂಬ ಯಶಸ್ವಿಯಾದವೆಂದು ಹೇಳಬಹುದು. ಗ್ರೀಕ್ ದುರಂತ ನಾಟಕದ ಕಲ್ಪನೆಗೆ ಅನುಸಾರವಾಗಿ ರಚಿಸಿದ ಅಶ್ವತ್ಥಾಮನ್ ಗದಾಯುದ್ಧ ನಾಟಕಗಳು ಅನನ್ಯ ಕೃತಿಗಳು. ಡಿ.ವಿ.ಜಿ. ಅವರ ಮ್ಯಾಕ್‌ಬೆತ್‌ನಲ್ಲಿಯೂ ಮಾಸ್ತಿಯವರು ಅನುವಾದ ಮಾಡಿರುವ ಷೇಕ್ಸ್‌ಪಿಯರ್ ನಾಟಕಗಳು ಮತ್ತು ನಾಟಕ ದೃಶ್ಯಗಳಲ್ಲಿಯೂ ಮೂಲಕೃತಿಗಳನ್ನು ಅವರು ಅರಗಿಸಿಕೊಂಡಿದ್ದಾರೆನ್ನುವುದು ಸ್ಪಷ್ಟವಾಗಿದೆ. ಕನ್ನಡಮ್ಯಾಕ್‌ಬೆತ್ ನಾಟಕದ ಭಾಷೆ ಪೆಡಸಾಗಿದ್ದರೂ ಅಲ್ಲಿ ಮೂಲಕೃತಿಯ ಗಟ್ಟಿಭದ್ರ ಆಕಾರ, ತೇಜಸ್ಸು–ಓಜಸ್ಸುಗಳು ಪಡಿ ಮೂಡಿವೆ ಎನ್ನಬಹುದು. ಅದಕ್ಕಿಂತ ಉತ್ತಮವಾದ ಭಾಷಾಂತರ ಯಾರಿಂದಲೂ ಸಾಧ್ಯವಾಗಿಲ್ಲ. ವಿ.ಸೀ. ಅವರ ಪಿಗ್‌ಮ್ಯಾಲಿಯನ್ ಅಚ್ಚುಕಟ್ಟಾಗಿ ಭಾಷಾಂತರವಾದ ಕೃತಿ. ಮಾಸ್ತಿಯವರ ಷೇಕ್ಸ್‌ಪಿಯರ್ ಭಾಷಾಂತರದಲ್ಲಿ ಮೂಲ ಕೃತಿಯ ಒಟ್ಟು ಅರ್ಥಕ್ಕೆ ಕುಂದಾಗದಂತೆ ಎಚ್ಚರಿಕೆ ವಹಿಸಿದ್ದರೂ ನಾಟಕದ ಶೈಲಿ ಜಾಳು ಜಾಳಾಗಿ ಕಾಣುತ್ತದೆ. ಪರಕೀಯವಾದ ವಾತಾವರಣದಲ್ಲಿ ನಮ್ಮ ದೇಶದ ಜನಜೀವನಕ್ಕೆ ಸಂಬಂಧಿಸಿದ ವಿಶಿಷ್ಟ ಪ್ರಸ್ತಾಪಗಳು ತಲೆ ಹಾಕಿ ಈ ಭಾಷಾಂತರಗಳು ಹಿತವಲ್ಲದ ವಿಚಿತ್ರ ವಾತಾವರಣ ಸೃಷ್ಟಿಸುತ್ತವೆ. ಷೇಕ್ಸ್‌ಪಿಯರನ ವಿವಿಧ ರಾಗ ಭಾವಗಳ ನೂರೆಂಟು ಸ್ವರಗಳನ್ನು ಹಿಡಿದಿಡುವಲ್ಲಿ ಮಾಸ್ತಿಯವರ ಏಕಮುಖವಾದ ಸರಳ ಗದ್ಯ ಶೈಲಿ ಅಷ್ಟು ಸಮರ್ಥವಾಗಿಲ್ಲವೆಂದು ಹೇಳಬೇಕು. ಎಸ್. ಜಿ. ಶಾಸ್ತ್ರಿಗಳು ಅನುವಾದ ಮಾಡಿದ ಮಟರ್‌ಲಿಂಕನ ಮೊನ್ನವನ್ನ ಮತ್ತು ಇಬ್ಸನ್‌ನ ನಾಟಕಗಳಲ್ಲಿ, ಗಮನಸೆಳೆಯುವಷ್ಟುಸೊಗಸು ಕಾಣಿಸುವುದಿಲ್ಲ. ಮೂಲಕೃತಿಯ ವಾಕ್ಯಗಳನ್ನು ಪದಕ್ಕೊಂದುಪದವಿಟ್ಟಂತೆ ಭಾಷಾಂತರ ಮಾಡಲಾಗಿದೆ. ಎಷ್ಟೋಸಲ ಮೂಲ ಕೃತಿಯ ಆಯಾ ಬಿಡಿಭಾಗಗಳನ್ನು ಓದದೆ ಅನುವಾದ ಅರ್ಥವಾಗುವುದೇ ಇಲ್ಲ. ಭಾಷಾಂತರ ಕ್ಲಿಷ್ಟವಾಗಿದೆ ಎನ್ನುವುದಕ್ಕಿಂತ ಅದು ಕೇವಲ ಯಾಂತ್ರಿಕವಾಗಿದೆ ಎಂದೇ ಹೇಳಬೇಕಾಗುತ್ತದೆ. ಸಾಫೋಕ್ಲಿಸ್‌ನ ಏಜಾಕ್ಸ್ ನಾಟಕವನ್ನು ಶ್ರೀಯವರು ಅಶ್ವತ್ಥಾಮನ್ ನಾಟಕವಾಗಿ ಅಳವಡಿಸಿಕೊಂಡಾಗ ವಾದ ವಿವಾದಗಳೆದ್ದವೆನ್ನುವ ಸಂಗತಿ ಈಗ ನಮಗೆ ಆಶ್ಚರ್ಯವನ್ನೇನು ಉಂಟುಮಾಡುವುದಿಲ್ಲ. ಮಹಾಭಾರತದಲ್ಲಿ ಬರುವ ಅಶ್ವತ್ಥಾಮನನ್ನು ಉದಾತ್ತ ದುರಂತ ನಾಯಕನ ಪಟ್ಟಕ್ಕೇರಿಸಿದ ವಿಚಾರವನ್ನು ಒಪ್ಪದಿರುವ ಸಾಧ್ಯತೆಯನ್ನು ನಾವು ಗ್ರಹಿಸಬೇಕು. ಆದರೆ ಬೇರೊಂದು ದೇಶದ, ಕಾಲದ ಮಹಾಕೃತಿಯೊಂದರಲ್ಲಿ ಚಿರಂತನ ಮೌಲ್ಯಗಳನ್ನು ಗ್ರಹಿಸುವ ಶ್ರೀಯವರ ಕಾಣ್ಕೆಯನ್ನು ನಾವು ಸರಿಯಾಗಿ ಅರ್ಥಮಾಡಿಕೊಂಡರೆ ಆಗ ನಮಗೆ ಅವರು ಕನ್ನಡ ನಾಟಕ ಇತಿಹಾಸದಲ್ಲಿ ಮಾಡಿದ ಸಾಧನೆಯ ಅರಿವು ಉಂಟಾಗುತ್ತದೆ. ಶ್ರೀಯವರ ಹಳಗನ್ನಡ ಶೈಲಿಯ ಜಾಡನ್ನೇ ಹಿಡಿದು, ಸಾಫೋಕ್ಲಿಸ್‌ನ ಅಂತಿಗೊನೆ ನಾಟಕವನ್ನು ಬಿಗಿಯಾದರೂ ಪ್ರಸನ್ನವಾದ ಶೈಲಿಯಲ್ಲಿ ಕ. ವೆಂ. ರಾಘವಾಚಾರ್ಯರು ಬರೆದರು. ಎ. ಎನ್. ಮೂರ್ತಿರಾಯರ ಆಷಾಢಭೂತಿ, ಬೇರೆ ಭಾಷೆಯಿಂದ ಬಂದದ್ದಾದರೂ ಸ್ವತಂತ್ರಕೃತಿಯೆನಿಸುವಷ್ಟು ಸೊಗಸಾದ ನಾಟಕ.

ಭವ್ಯವಾದ ನಮ್ಮ ಪುರಾಣೇತಿಹಾಸಗಳಿಂದ, ಮಹಾಕಾವ್ಯಗಳಿಂದ, ಸ್ವಾನುಭವ ಚಿಂತನೆಯಿಂದ ಪ್ರೇರಣೆ ಮತ್ತು ಸ್ಫೂರ್ತಿ ಪಡೆದ ನವೋದಯ ಕಾಲದ ನಮ್ಮ ಹಿರಿಯ ಕವಿಗಳು ಬೆಲೆಬಾಳುವಂಥ ನಾಲ್ಕಾರು ಕೃತಿಗಳನ್ನು ಬರೆದರು. ಇವೆಲ್ಲವೂ ಶುದ್ಧ ಸಾಹಿತ್ಯ ದೃಷ್ಟಿಯಿಂದ ಬರೆದ ನಾಟಕಗಳೇ. ರಂಗಭೂಮಿಯಲ್ಲಿ ಇವು ಮತ್ತೆ ಮತ್ತೆ ಪ್ರದರ್ಶಿತವಾದಲ್ಲಿ ಈ ನಾಟಕಗಳ ಗಟ್ಟಿಭದ್ರತೆಯನ್ನು ಒರೆಹಚ್ಚಿ ನೋಡಬಹುದು. ನವೋದಯ ಕವಿಗಳು ಬರೆದ ನಾಟಕಗಳಲ್ಲಿ ಕುವೆಂಪು ಅವರ ಶೂದ್ರತಪಸ್ವಿ, ಬೆರಳ್ಗೆಕೊರಳ್ ಉನ್ನತಶೈಲಿಯ, ಪುರಾತನ ವಾಸ್ತುಶಿಲ್ಪವನ್ನು ಹೋಲುವ ನಾಟಕಗಳು. ಮಾಸ್ತಿಯವರ ತಿರುಪಾಣಿ ಯಶೋಧರ ಭಾವಗೀತೆಯ ಒಟ್ಟಂದದ ಪ್ರಖರತೆಯನ್ನು ಪಡೆದ ನಾಟಕಗಳು. ಮಾಸ್ತಿಯವರ ಅಂತಃಕರಣ, ಅನನ್ಯ ಮಾನವೀಯತೆ ತುಂಬಿದ ಮಾತುಗಾರಿಕೆ ಅವರ ಪಾತ್ರಗಳಿಗೆ ಜೀವಸ್ಪಂದನ ನೀಡುತ್ತವೆ. ಸಿ. ಕೆ. ವೆಂಕಟರಾಮಯ್ಯನವರ ಮಂಡೋದರಿ ಅತಿ ಸರಳ ಮುಗ್ಧ ಶೈಲಿಯಲ್ಲಿದೆ : ನಚಿಕೇತ ಸತ್ವಶಾಲಿಯಾದ ನಾಟಕಾಂಶಗಳಿಂದ ಕೂಡಿದೆ. ವಿ.ಸೀ. ಅವರ ಸೊಹ್ರಾಬ್ ರುಸ್ತುಂ ಇಂಗ್ಲಿಷ್ ಕವನವನ್ನೇ ಅನುಸರಿಸಿದ್ದರೂ ಕಾಲದೇಶಗಳನ್ನು ಮೀರಿನಿಲ್ಲುವಂಥ ಮಾನವೀಯ ಸಂದರ್ಭವನ್ನು ತುಂಬ ಪರಿಣಾಮಕಾರಿಯಾಗಿ ರೂಪಿಸುತ್ತದೆ. ಆಗ್ರಹವೆಂಬ ನಾಟಕ ಪುರಾಣದನಾಯಕನ ವಾಸ್ತವ ಚಿತ್ರವನ್ನು ತೋರುತ್ತದೆ. ಅಶ್ವತ್ಥಾಮನ್ ನಾಟಕದ ವಸ್ತುವಿನ ಇನ್ನೊಂದು ಮುಖವನ್ನು ಇಲ್ಲಿ ಕಾಣಬಹುದು. ಜಿ. ಪಿ. ರಾಜರತ್ನಂ ಅವರ ಗಂಡುಗೊಡಲಿ ಸಾಮಯಿಕವಾದ ಸ್ಫೂರ್ತಿಯಿಂದ ಪ್ರೇರಿತವಾದ ಕೃತಿಯಾದರೂ ಇಂದಿಗೂ ರಂಗಭೂಮಿಯ ಮೇಲೆ ಉಸಿರಾಡಬಲ್ಲ ಶಕ್ತಿ ಸಾಮರ್ಥ್ಯಗಳಿಂದ ತುಂಬಿದೆ.

**ಏಕಾಂಕ ನಾಟಕ :** ಕನ್ನಡದ ಏಕಾಂಕ ನಾಟಕ ಅನನ್ಯವಾದ ಬೆಳೆವಣಿಗೆ ಪಡೆದು ವಿಪುಲ ಜನಮನ್ನಣೆ ಗಳಿಸಿಕೊಂಡಿದೆ. ಕನ್ನಡದಲ್ಲಿ ಇದೊಂದು ಹೊಸ ಪ್ರಭೇದ. ಪಾಶ್ಚಾತ್ಯ ನಾಟಕ ಸಾಹಿತ್ಯದಲ್ಲೂ ಏಕಾಂಕದ (ಒನ್ ಆಕ್ಟ್ ಪ್ಲೇ) ರೂಪ-ಲಕ್ಷಣಗಳನ್ನು ಎವೆರಿಮ್ಯಾನ್‌ನಂಥ ಹಳೆಯ ಜಾನಪದ ನಾಟಕದಲ್ಲಿ ಕಾಣಬಹುದಾದರೂ ಅಲ್ಲಿಯೂ ಏಕಾಂಕ ಹೊಸದೇ. ಏಕಾಂಕ ದೊಡ್ಡಂಕಿನ ನಾಟಕದ ತುಣುಕಲ್ಲ. ದೊಡ್ಡ ನಾಟಕದ ಎಲ್ಲ ಅಂಗಗಳೂ ಸಮಗ್ರ ರೂಪವೂ ಏಕಾಂಕದಲ್ಲೂ ಇರಬೇಕು. ನಾಟಕ ಚಿಕ್ಕದಾಗಿರಬೇಕು, ಅಖಂಡವಾದ ಪರಿಣಾಮ ಸಾಧಿಸುವಂತಿರಬೇಕು. ಕಥಾವಸ್ತು, ಪಾತ್ರ ವಿನ್ಯಾಸ, ಕ್ರಿಯೆ ಎಲ್ಲವೂ ಜೀವಂತವಾಗಿದ್ದು ಗಮನ ಸೆಳೆಯುವಂತಿರಬೇಕು. ಅಂದರೆ ಏಕಾಂಕಗಳನ್ನು ರಚಿಸುವ ನಾಟಕಕಾರ ನಾಟಕರಚನೆಯ ಎಲ್ಲ ರಹಸ್ಯಗಳನ್ನೂ ಕರತಲಾಮಲಕವಾಗಿಸಿಕೊಳ್ಳಬೇಕು. ಈ ದೃಷ್ಟಿಯಿಂದ ಕನ್ನಡ ಏಕಾಂಕ ನಾಟಕದ ಬೆಳೆ ಚೆನ್ನಾಗಿದೆ ಎಂದೇ ಹೇಳಬಹುದು. ಇಂಗ್ಲೆಂಡಿನ ಗಾಲ್ಸ್‌ವಾರ್ದಿ, ಷಾ, ಯೇಟ್ಸ್, ಸಿಂಗ್, ಬ್ಯಾರಿ ಮುಂತಾದ ಉದ್ದಾಮ ನಾಟಕಕಾರರೇ ಏಕಾಂಕ ರಚನೆಗೆ ಕೈಹಾಕಿ ಉತ್ತಮ ಕೃತಿಗಳನ್ನು ರಚಿಸಿ ಹೊಸ ಪ್ರಕಾರವೊಂದಕ್ಕೆ ಬುನಾದಿ ಹಾಕಿಕೊಟ್ಟರಷ್ಟೆ. ಹಾಗೆಯೇ ಕನ್ನಡ ಏಕಾಂಕದ ಪ್ರಾರಂಭದಲ್ಲಿ ಕೈಲಾಸಂ, ಬೇಂದ್ರೆ, ಶ್ರೀರಂಗ, ಕಾರಂತ, ಅನಕೃರಂಥ ಹಿರಿಯ ಪ್ರತಿಭಾವಂತರು ಏಕಾಂಕವನ್ನು ಬರೆದು ತೋರಿಸಿದ್ದು ಸುದೈವದ ಮಾತು. ಅಂದಿನಿಂದ ಈವರೆಗೂ ಏಕಾಂಕಗಳ ಸಂಖ್ಯೆ ಬೆಳೆಯುತ್ತಲೇ ಇದೆ. ನಮ್ಮ ಹವ್ಯಾಸಿ ರಂಗಭೂಮಿಯ ನಟರು ನಾಟಕಕಾರರುಗಳೇ ಬಹುತೇಕ ಏಕಾಂಕದ ಬೆಳೆವಣಿಗೆಗೆ ನೆರವಾಗಿದ್ದಾರೆಂಬುದು ಗಮನಾರ್ಹ. ಏಕಾಂಕಗಳ ಬೆಳೆವಣಿಗೆಗೆ ಈ ಹೊತ್ತಿನ ಮಾಸ ಪತ್ರಿಕೆಗಳು, ರೇಡಿಯೋ ಹಾಗೂ ಸ್ಕೂಲು, ಕಾಲೇಜುಗಳ ವಿದ್ಯಾರ್ಥಿ ಸಂಘಗಳೂ ಸಾಕಷ್ಟು ಕಾರಣವಾಗಿವೆ. ಇದರಿಂದಾಗಿ ಆಂತರಿಕ ಒತ್ತಡವಿಲ್ಲದೆ ಅನೇಕ ಬಾರಿ ಎಲ್ಲಿಂದಲೋ ಕದ್ದು ತಂದ ವಸ್ತುವಿನ ಮೇಲೆ ಬರೆದ ಹಲವಾರು ನಾಟಕಗಳು ಅರೆಬೆಂದ ಕೃತಿಗಳಾಗಿವೆ. ಹಾಸ್ಯವೇ ನಾಟಕ, ನಾಟಕವೆಂದರೆ ಹಾಸ್ಯವೆಂದು ನಮ್ಮ ಜನ ತಪ್ಪಾಗಿ ಭಾವಿಸುವಂತಾಗಿದೆ. ಆದರೂ ನಮಗೆ ಅಭಿಮಾನವೆನಿಸುವಷ್ಟು ಪ್ರಮಾಣದಲ್ಲಿ ಏಕಾಂಕಗಳು ಹೊರಹೊಮ್ಮಿ ಕನ್ನಡ ನಾಟಕರಂಗವನ್ನು ಸಮೃದ್ಧಿಗೊಳಿಸಿವೆ ಎನ್ನುವ ಮಾತನ್ನು ಮರೆಯಲಾಗದು. ಶ್ರೀರಂಗರ ಯಮುನಸೋಲು, ಅಶ್ವಮೇಧ, ಬೇಂದ್ರೆಯವರ ಜಾತ್ರೆ ಎನ್ಕೆಯವರ ಬಾರ್‌ರೂಮ್ ಕಾರಂತರ ಕಟ್ಟೆಪುರಾಣ ಮತ್ತು ಪರ್ವತವಾಣಿ, ಕೈವಾರ ರಾಜಾರಾವ್, ಕ್ಷೀರಸಾಗರ, ಎನ್. ಪಿ. ಕುಲಕರ್ಣಿ, ಎ. ಎಸ್. ಮೂರ್ತಿ, ಕೆ. ಗುಂಡಣ್ಣ ಮುಂತಾದವರ ಕೆಲವು ಒಳ್ಳೆಯ ಏಕಾಂಕಗಳು ಈ ಪ್ರಕಾರದ ರೂಪ ವೈವಿಧ್ಯವನ್ನು ಎತ್ತಿ ತೋರಿಸುವಂತಿವೆ. ಟಿ. ಎಸ್. ವೆಂಕಣ್ಣಯ್ಯನವರು ಹೇಳಿದಂತೆ ಸಂಜೆಯಲ್ಲಿ ಒಂದೆರಡು ಗಂಟೆಗಳ ಕಾಲ ಹಾಯಾಗಿ ಕುಳಿತು ಕಾಲ್ಪನಿಕ ಪ್ರಪಂಚದಲ್ಲಿ ಬೆರೆತು, ಜನರು ದಿನಚರಿಯ ವ್ಯವಹಾರದ ಕ್ಲೇಶವನ್ನೂ ಬೇಸರವನ್ನೂ ಮರೆತು ಬಿಡಲು ಸಾಧ್ಯವಾದರೆ ಇಂಥ ನಾಟಕದ ಉದ್ದೇಶವು ನೆರವೇರಿದಂತಾಗುತ್ತದೆ—ಎನ್ನುವ ಮಾತನ್ನು ನಮ್ಮ ಏಕಾಂಕಗಳು ಯಶಸ್ವಿಯಾಗಿ ಸಾಧಿಸಿವೆ. ಆದರೆ ನಾಟಕದ ಉದ್ದೇಶ ಅಷ್ಟರಿಂದ ಕೈಗೂಡಿತೆಂದು ತಿಳಿದರೆ ಮಾತ್ರ ತಪ್ಪಾದೀತು.(ನೋಡಿ—ಏಕಾಂಕ ನಾಟಕ)

**ಐತಿಹಾಸಿಕ ನಾಟಕಗಳು :** ಕನ್ನಡ ನವೋದಯದ ಕಾಲದಲ್ಲಿ ನಾಡಿನ ಭವ್ಯ ಇತಿಹಾಸದತ್ತ ನಮ್ಮ ನಾಟಕಕಾರರು ಕಣ್ಣು ಹಾಯಿಸಿದರು. ಇವರಲ್ಲಿ ಐತಿಹಾಸಿಕ ನಾಟಕಕಾರರೆಂದೇ ಹೆಸರಾಂತವರೆಂದರೆ ಸಂಸರು. ಇವರು ಬರೆದರೆಂದು ಹೇಳಲಾಗಿರುವ 23 ನಾಟಕಗಳಲ್ಲಿ ಈಗ ಆರು ಮಾತ್ರ ಉಳಿದುಕೊಂಡಿವೆ. ಈ ನಾಟಕಗಳ ವಿಶಿಷ್ಟ ಗುಣವೆಂದರೆ ಎಲ್ಲವೂ ಮೈಸೂರು ಚರಿತ್ರೆಯ ಆಧಾರದ ಮೇಲೆಯೇ ರಚಿತವಾಗಿವೆ. ಅರಮನೆಯ ರಾಜಕೀಯ, ಕುಟಿಲ ತಂತ್ರಿಗಳ ಸಂಚು ಹೊಂಚು, ಕಾರಸ್ಥಾನಗಳು ಸಂಸರ ನಾಟಕಗಳಿಗೆ ವಸ್ತುವನ್ನೊದಗಿಸುವುದರಿಂದ ಅವುಗಳ ಕ್ರಿಯೆಯಲ್ಲಿ ಸಾಕಷ್ಟು ವೈವಿಧ್ಯವೂ ಸ್ವಾರಸ್ಯವೂ ಇವೆ. ನಾಟಕದ ಕ್ರಿಯೆ ಒಂದು ಘಟನೆಯಿಂದ ಇನ್ನೊಂದು ಘಟನೆಗೆ ವೇಗವಾಗಿ ಚಲಿಸುವುದರಿಂದ ನಾಟಕಗಳ ವಾತಾವರಣ ಜೀವಂತವಾಗಿದೆ. ಸಂಸರ ನಾಟಕದಲ್ಲಿ ಹಳೆಯ ನಾಟಕದ ಅಂಶಗಳು

ಉಳಿದುಕೊಂಡಿದ್ದು ನಾಂದಿ, ಭರತವಾಕ್ಯಗಳು, ವೃತ್ತದಲ್ಲಿ ಬರುತ್ತವೆ. ಅಲ್ಲಲ್ಲಿ ಕಂದ ಪದ್ಯಗಳನ್ನು ಜೋಡಿಸಲಾಗಿದೆ. ತಮ್ಮ ನಾಟಕದಲ್ಲಿ ಹಳೆಯ ಕಾಲದ ಗಂಭೀರ ವಾತಾವರಣದ ಕಲ್ಪನೆಗೆ ನೆರವಾಗುವಂತೆ ಪೆಡಸಾದ ಪ್ರೌಢನಡುಗನ್ನಡ ಶೈಲಿಯನ್ನು ಸಂಸರು ಬೆಳಸಿದ್ದಾರೆ. ನಾಟಕ ನೇರವಾಗಿ ಪ್ರೇಕ್ಷಕರನ್ನು ಮುಟ್ಟುವಂತಿರಬೇಕಾದಲ್ಲಿ ಭಾಷೆ ಸರಳವಾಗಿರಬೇಕು. ಆದ್ದರಿಂದ ಸಂಸರ ಭಾಷೆಯು ಗ್ರಾಂಥಿಕ ಬಿಗಿ. ರಂಗಭೂಮಿಯಲ್ಲಿ ಎಷ್ಟರಮಟ್ಟಿಗೆ ಪರಿಣಾಮ ಸಾಧಿಸಬಲ್ಲದೋ ಹೇಳುವುದು ಕಷ್ಟ. ಅದೇನೇ ಇರಲಿ, ಕನ್ನಡ ಐತಿಹಾಸಿಕ ನಾಟಕದ ರಚನೆಯಲ್ಲಿ ಸಂಸರ ಸಾಧನೆಯನ್ನು ಅಪ್ರತಿಮವೆಂದು ಹೇಳಬೇಕು. ಸಂಸರು ಸೂಚಿಸಿದ ಐತಿಹಾಸಿಕ ನಾಟಕ ಪರಂಪರೆಯನ್ನು ಯಾರೂ ಅಷ್ಟೊಂದು ದೊಡ್ಡ ಪ್ರಮಾಣದಲ್ಲಿ ಅನುಸರಿಸಲಿಲ್ಲ. ಪುಟ್ಟಪ್ಪನವರ ರಕ್ತಾಕ್ಷಿ ಷೇಕ್ಸ್‌ಪಿಯರನ ಹ್ಯಾಂಲೆಟ್ ನಾಟಕವನ್ನು ಆಧಾರವಾಗಿಟ್ಟುಕೊಂಡಿರುವುದರಿಂದ ನಾಟಕದ ಹಿನ್ನೆಲೆಯನ್ನು ಐತಿಹಾಸಿಕವೆಂದು ಕರೆಯುವುದು ಕಷ್ಟವಾಗುತ್ತದೆ. ರಂ. ಶ್ರೀ ಮುಗಳಿಯವರ ಸೇವಾಪ್ರದೀಪ, ಅಕ್ಕಮಹಾದೇವಿ, ಮಾಸ್ತಿಯವರ ಕಾಕನಕೋಟೆ, ತಾಳೀಕೋಟೆ, ಎಂ.ಆರ್.ಶ್ರೀಯವರ ಧರ್ಮದುರಂತ, ನಾಗರಿಕ, ಗಿರೀಶ್ ಕಾರ್ನಾಡರ ತುಘಲಕ್ ನಾಟಕಗಳನ್ನು ಐತಿಹಾಸಿಕ ನಾಟಕಗಳೆಂದು ಪರಿಗಣಿಸಬೇಕು.

ಇತಿಹಾಸವೆಂಬುದು ಕೇವಲ ರಾಜ ಮಹಾರಾಜರ, ಕಳೆದು ಹೋದ ಕಾಲದ, ಪುರಾತನ ಯುಗದ ವ್ಯಕ್ತಿಗಳ ಕಥಾಸಮುದಾಯವಲ್ಲ, ಒಂದು ಸಮಾಜ ಅಥವಾ ಸಮೂಹಕ್ಕೆ ಸೇರಿದ ಜನರ ಜೀವನ ಪರಿಸ್ಥಿತಿ ಕಾಲವಶದಿಂದ ಹೇಗೆ ಮಾರ್ಪಾಡುಗಳಿಗೆ ಪಕ್ಕಾಯಿತೆನ್ನುವುದನ್ನು ಇತಿಹಾಸ ಅನುಲಕ್ಷಿಸುತ್ತದೆ. ಜನರ ಆಚಾರ—ವ್ಯವಹಾರ, ರಾಜಕೀಯ, ಆರ್ಥಿಕವ್ಯವಸ್ಥೆ, ನಡೆನುಡಿ, ಕಲೆ ಸಾಹಿತ್ಯ ಮತ ಧರ್ಮಗಳಿಗೆ ಸಂಬಂಧಿಸಿದ ಪ್ರಕ್ರಿಯೆಗಳು ಕರ್ಮ ಕಾಂಡಗಳು, ಈ ಎಲ್ಲ ವಿಚಾರಗಳನ್ನೂ ಕುರಿತು ಇತಿಹಾಸ ಚಿಂತಿಸುತ್ತದೆ. ಇವೆಲ್ಲವೂ ಇತಿಹಾಸದ ವಸ್ತುವೇ ಆಗಿವೆ. ಗತ ಕಾಲದಲ್ಲಿ ನಡೆದು ಹೋದ ಹಲವಾರು ಚಾರಿತ್ರಿಕ ಘಟನೆಗಳು ಜನರ ಆಚಾರವ್ಯವಹಾರಗಳಲ್ಲಿ ಅಂತರ್ಗತವಾಗಿ, ಅವರ ಕಲ್ಪನೆಯನ್ನು ಕೆರಳಿಸಿ ಕಾಲ ಕ್ರಮೇಣ ಅವು ಪುರಾಣಕತೆಗಳಾಗುತ್ತವೆಂದು ಹೇಳುತ್ತಾರೆ. ಐತಿಹಾಸಿಕ ನಾಟಕವನ್ನು ಬರೆಯುವಾಗ ಈ ಎಲ್ಲ ಅಂಶಗಳನ್ನು ಗಮನಿಸಬೇಕಾಗುತ್ತದೆ. ಈ ಐತಿಹಾಸಿಕ ಪ್ರಜ್ಞೆ ಐತಿಹಾಸಿಕ ನಾಟಕಗಳೆಂದು ಕರೆಯುವ ಎಲ್ಲ ನಾಟಕಗಳಲ್ಲೂ ಕಾಣಸಿಗುತ್ತದೆಂದು ಹೇಳುವುದು ಕಷ್ಟ. ಇತಿಹಾಸದ ಗತ ಕಾಲವನ್ನು ಯಥಾವತ್ತಾಗಿ ಚಿತ್ರಿಸುವ ಪ್ರಯತ್ನದಲ್ಲಿ ಮಾತ್ರ ನಮ್ಮ ನಾಟಕಕಾರರು ಒಳ್ಳೆಯ ಯಶಸ್ಸು ಪಡೆದಿದ್ದಾರೆ. ಈ ಅಂಶಗಳನ್ನು ಗಮನಿಸಿದರೆ, ಕಾರ್ನಾಡರ ತುಘಲಕ್ ಹಲವಾರು ದೃಷ್ಟಿಯಿಂದ ನಮ್ಮ ಕಾಲದ ಒಂದು ಪರಿಣತ ಕೃತಿ ಎನ್ನಬಹುದು. ಐಲುದೊರೆಯೆಂದೇಕಮನೆ ಮಾತಾಗಿರುವ ಮುಹಮ್ಮದ್ ಬಿನ್ ತುಘಲಕನ ಪಾತ್ರ ಚರಿತ್ರೆಯ ವಾಸ್ತವಿ ಅಂಶಗಳಿಂದಲೇ ಆವಿಷ್ಕಾರ ಪಡೆದಿದ್ದರೂ ನಾಟಕದ ಹಲವಾರು ಮುಖಗಳಲ್ಲಿ ನಾಟಕಕಾರನ ಐತಿಹಾಸಿಕ ಪ್ರಜ್ಞೆ ಒಡೆದು ಮೂಡಿದೆ. ವಿಸ್ತಾರವಾದ ಭವ್ಯಕಾವ್ಯದಂತೆ ಹರಿದು ಸಾಗುವ ನಾಟಕದಲ್ಲಿ ಇಡೀ ಜನಾಂಗದ ಆಸೆ ಆಮಿಷಗಳು, ಬದುಕಿನ ಹೋರಾಟ, ಪಾಪಪುಣ್ಯಗಳ ಸಂಘರ್ಷಣೆ ಎಲ್ಲವೂ ಹಂತ ಹಂತವಾಗಿ ಭಾಷೆಯ ವಿವಿಧಸ್ತರಗಳಲ್ಲಿ ಪಾತ್ರ ಹಾಗೂ ಸನ್ನಿವೇಶಗಳ ಮೂಲಕ ಅಭಿವ್ಯಕ್ತಿ ಪಡೆಯುತ್ತವೆ. ಚರಿತ್ರೆಯ ಕರ್ಬೊನನ್ನು ಕಾವ್ಯದ ಚಿಂಬೊನ್ನಾಗಿದೆ ಎಂದು ಸಂಸರ ನಾಟಕಗಳ ಬಗ್ಗೆ ರಾಜರತ್ನಂ ಹೇಳಿರುವ ಮಾತು ಕಾರ್ನಾಡರ ವಿಷಯದಲ್ಲೂ ನಿಜವೆನಿಸಿದೆ. (ನೋಡಿ—ಐತಿಹಾಸಿಕ ನಾಟಕಗಳು)

**ಗೀತ ನಾಟಕ :** ಹಲವಾರು ಸಾಹಿತ್ಯಪ್ರಭೇದಗಳನ್ನು ರಚಿಸುವುದರಲ್ಲಿ ಪಳಗಿದ ಕೈ ಎಂದು ಹೆಸರಾಂತ ಕಾರಂತರೇ ಕನ್ನಡದ ಗೀತನಾಟಕದ ಆದ್ಯ ಪ್ರವರ್ತಕರೆನ್ನಬಹುದು. 1930ರಲ್ಲಿ ಬರೆದ ಮುಕ್ತದ್ವಾರ ಅವರ ಮೊದಲನೆಯ ಗೀತನಾಟಕ. ನೃತ್ಯಗೀತೆಗಳ ಮಿಶ್ರಣದಂತಿರುವ ಈ ನಾಟಕದಲ್ಲಿ, ಯುಗದಿಂದ ಯುಗಕ್ಕೆ ಮನುಷ್ಯನ ವಿಚಾರಗಳು ಹೇಗೆ ವಿಕಾಸವಾದುವೆಂಬ ಅಮೂರ್ತ ವಸ್ತುವನ್ನು ರೂಪಿಸಲು ಕಾರಂತರು ಪ್ರಯತ್ನಿಸಿದ್ದಾರೆ. ಪುರಾಣ, ಇತಿಹಾಸ, ಜಾನಪದ ವಸ್ತುವಿನಿಂದ ಆರಿಸಿ, ಸಾಕಷ್ಟು ವೈವಿಧ್ಯಪಡೆದು ರಚಿತವಾದ ಕಿಸಾಗೌತಮಿ, ಬುದ್ಧೋದಯ, ಯಾರೊ ಅಂದರು—ಇವುಗಳೆಲ್ಲ ನೃತ್ಯದ ಅಂಶಗಳನ್ನು ಹೊಂದಿವೆ. ಪಾಶ್ಚಾತ್ಯ ಆಪೆರಗಳನ್ನು ಇವು ಸ್ವಲ್ಪಮಟ್ಟಿಗೆ ಹೋಲುತ್ತವೆ. ಕಾರಂತರೇ ಹೇಳಿದ ಮಾತುಗಳು ಅವರ ಗೀತನಾಟಕದ ಸ್ವರೂಪವನ್ನು ನಮಗೆ ಸೂಚಿಸುವಂತಿವೆ: 'ಪ್ರತಿ ವ್ಯಕ್ತಿಯೂ ಎರಡು ಬಗೆಯ ಸುಳಿವುಗಳಿಗೆ ಸಿಗುತ್ತಾನೆ. ಒಂದು ವಿಚಾರಾತ್ಮಕ ಸೆಳೆತ; ಇನ್ನೊಂದು ಭಾವ. ಇದು ಮಾತಿಗೆ ಮೈಗೂಡುವ ಶಕ್ತಿಯಲ್ಲ. ಬರಿಯ ಇದೊಂದನ್ನೇ ಎಣಿಸಿದಲ್ಲಿ—ಇದು ರಸಗಳ ಸಾಮ್ರಾಜ್ಯ. ನಗು, ಅಳು, ಉದ್ವೇಗ, ರೋಷ, ಅನುರಾಗ, ಶೃಂಗಾರ—ಇವೆಲ್ಲವುಗಳು ಅದರ ವಿಕಾರಗಳು. ಬರಿಯ ಇವನ್ನೇ ಚಿತ್ರಿಸಲು ಮಾತಿಗಿಂತ ಗೀತ, ನೃತ್ಯಗಳು, ಚಿತ್ರ, ಶಿಲ್ಪಗಳು ಉಪಯುಕ್ತ. ಹಾಗೆ ಚಿತ್ರಿಸುವಾಗ —ಅವನ್ನು ಪ್ರೇರಿಸಬಲ್ಲ ಶಕ್ತಿಗಳು ಸನ್ನಿವೇಶದಲ್ಲಡಗಿರುತ್ತವೆ. ಅದು ವಿಚಾರದಿಂದಲೂ ಪ್ರೇರಿತವಾಗಬಲ್ಲುದು. ಆಕಾರವುಳ್ಳ ವಸ್ತುಗಳು ಅವನ್ನು ಪ್ರೇರಿಸುವುವು. ವಿವಿಧ ಧ್ವನಿಗಳೂ ರೇಖೆಗಳೂ ಅವನ್ನು ಪ್ರೇರಿಸುವುವು—-ಎಲ್ಲಿ ಪ್ರೇರಣೆಯಲ್ಲಿ, ಭಾವಲೋಕದ ಆಳತೆ ಇನ್ನಷ್ಟು ಹೆಚ್ಚಿನ ಪ್ರಮಾಣದಿಂದ ಬೆರೆತಿದೆಯೋ ಆಗ ಮಾತಿಗೆ ಗೀತ ಬೆರೆತಲ್ಲಿ ಚಿತ್ರಣದ ಕೆಲಸವನ್ನು ಇನ್ನಷ್ಟು ಚೆನ್ನಾಗಿ ಮಾಡಬಹುದು. ಈ ಕೆಲಸ ಮಾಡುವುದಕ್ಕೆ–ಗೀತಕ್ಕೆ ಇರುವಷ್ಟು ಶಕ್ತಿ ಬರಿಯ ಮಾತಿಗಿಲ್ಲ. ಮಾತು ಬರಿಯ ಸೂಚನೆಗೆ ಮಾತ್ರ ಇದ್ದು, ಅದರ ಭಾವದ ಬೆಳವಣಿಗೆಯನ್ನು ಗೀತ ಮುಂದುವರಿಸಿಕೊಂಡು ಹೋಗುವುದು. ಇಂಥ ಸಂದರ್ಭಗಳಲ್ಲಿ ಗೀತನಾಟಕವೇ ಉತ್ತಮ ಚಿತ್ರಣ ಸಾಧನವಾಗುತ್ತದೆ. ನಮ್ಮ ಹಳೆಯ ನಾಟಕಗಳಂತೆ ಸಂಗೀತ ಹಾಗೂ ಗದ್ಯಗಳ ಬೆರಕೆಯಲ್ಲ ಗೀತ ನಾಟಕ. ಅವೆರಡೂ ಬೆರತೇ ಜನಿಸಬೇಕು, ಹರಿಯಬೇಕು ಎನ್ನುತ್ತಾರೆ ಕಾರಂತರು. ಹೀಗೆ ಬಹುಮಟ್ಟಿಗೆ ಸಂಗೀತವನ್ನೇ ಅವಲಂಬಿಸಿರುವುರಿಂದ ಕಾರಂತರ ಗೀತನಾಟಕಗಳಲ್ಲಿನ ಮಾತುಗಳು ಮುದ್ರಿತ ಪುಟದಲ್ಲಿ ಮೂಕಶಬ್ದಗಳಾಗಿ ಭಾಸವಾಗುತ್ತವೆ ; ಕಾವ್ಯಾಂಶವನ್ನು ಕಳೆದುಕೊಂಡಂತೆ ಕಾಣಿಸುತ್ತವೆ. ಅಷ್ಟಾಗಿ ನಾಟಕೀಯತೆಯ ಗುಣಗಳು ಕಾಣಿಸದಿದ್ದರೂ ಪು.ತಿ.ನ. ಅವರ ಗೋಕುಲ ನಿರ್ಗಮನ, ಶಬರಿ, ಹರಿಣಾಭಿಸರಣ ಮುಂತಾದ ಗೀತನಾಟಕಗಳಲ್ಲಿ ರಸಪುಷ್ಟಿಯ ಅಂಶಗಳಿವೆ. ಅವರ ಅಹಲ್ಯೆ ಚಿರಸ್ಮರಣೀಯ ಕೃತಿ. ಎಲ್ಲ ದೃಷ್ಟಿಯಿಂದ ಜೀವಂತವಾದ ಕನ್ನಡದ ಗೀತನಾಟಕವೆಂದರೆ ಅದೊಂದೇ ಎನ್ನಬಹುದು. ಅಹಲ್ಯೆ, ಇಂದ್ರ, ಗೌತಮ, ಶ್ರೀರಾಮ—ಮುಂತಾದ ಪಾತ್ರಗಳ ಕಲ್ಪನೆಯಲ್ಲಿ ಪು.ತಿ.ನ. ಅವರ ಸ್ವೋಪಜ್ಞತೆ ಎದ್ದು ಕಾಣಿಸುತ್ತದೆ. ನಾಟಕದಲ್ಲಿ ಬರುವ ಸುಂದರವಾದ ಗೀತೆಗಳು ಸಂವಿಧಾನದ ಶಿಲ್ಪಕ್ಕೊಂದು ಸಮಗ್ರತೆ ನೀಡುವಂತಿವೆ. ಗೀತನಾಟಕಗಳನ್ನು ರಚಿಸಿದವರಲ್ಲಿ ಕೆ. ವಿ. ಸುಬ್ಬಣ್ಣ, ಕೀರ್ತಿನಾಥ ಕುರ್ತಕೋಟಿ, ಅಮ್ಮೆಂಬಳ ಶಂಕರನಾರಾಯಣ ಮುಂತಾದವರ ಹೆಸರುಗಳನ್ನು ಸೇರಿಸಬಹುದು. ಕನ್ನಡದಲ್ಲಿ ಗೀತನಾಟಕ ಅಷ್ಟಾಗಿ ಬೆಳೆದುಬಂದಿಲ್ಲವಾದರೂ ಈ ಎರಡು ದಶಕಗಳಲ್ಲಿ ಕೆಲವು ಒಳ್ಳೆಯ ಕೃತಿಗಳು ಹೊರಬಂದಿವೆ. ನಾಟಕ ಹಾಗೂ ಕಾವ್ಯ ಎರಡರ ಚೆಲುವು ಹಾಗೂ ಕಲ್ಪನಾಶೀಲತೆಯನ್ನು ಬಳಸಿಕೊಂಡು ಗೀತನಾಟಕ ಆವಿರ್ಭವಿಸಿದೆ. ಶ್ರೀನಿವಾಸರ ಯಶೋಧರಾ, ವಿನಾಯಕರ ಮಹಾಶ್ವೇತೆ, ಕುವೆಂಪು, ರಾಜರತ್ನಂ ಮತ್ತು ಎಂ. ಆರ್. ಶ್ರೀ ಅವರು ಸರಳರಗಳೆಯಲ್ಲಿ ರಚಿಸಿದ ರೂಪಕಗಳಲ್ಲೂ ಗೀತ ನಾಟಕದ ಛಾಯೆಯನ್ನು ಗುರುತಿಸಬಹುದು.

**ರೇಡಿಯೋ ನಾಟಕ :** ಕನ್ನಡದಲ್ಲಿ ರೇಡಿಯೊ ನಾಟಕ ಬಹಳಷ್ಟು ತಡವಾಗಿಯೇ ಬಂದಿತೆನ್ನಬೇಕು. ಎಂ. ವಿ. ಗೋಪಾಲಸ್ವಾಮಿಯವರ ಮುತ್ಸದ್ದಿತನದ ಫಲವಾಗಿ ಸುಮಾರು 1935ರಲ್ಲಿ ಪ್ರಾರಂಭವಾದ ಖಾಸಗಿ ಪ್ರಸಾರ ಕೇಂದ್ರ 7 ವರ್ಷಗಳ ಅನಂತರ ಮೈಸೂರು ಸರ್ಕಾರದ ಆಡಳಿತಕ್ಕೆ ಬಂತು. ಮೊದಲಿನ ಹಲವು ವರ್ಷಗಳಲ್ಲಿ ರಂಗಭೂಮಿಗಾಗಿ ಬರೆದ ಕನ್ನಡ ನಾಟಕಗಳನ್ನೇ ಹೊಸೆದು ತಿದ್ದಿ ಪ್ರಸಾರ ಮಾಡಲಾಯಿತು. ರೇಡಿಯೊ ಪ್ರಸಾರಕ್ಕಾಗಿ ಬರೆಯುವ ನಾಟಕಗಳು ಒಂದು ವಿಶಿಷ್ಟ ಪ್ರಕಾರದವು ಎಂಬ ಅರಿವುಂಟಾಗಲು ಹಲವು ಕಾಲ ಹಿಡಿಯಿತು. ಆರ್. ಕೆ. ನಾರಾಯಣ್ ಅವರ ಮೂಲ ಇಂಗ್ಲಿಷ್ ಪ್ರಸಾರ ನಾಟಕವನ್ನು ವಿ. ಕೆ. ಶ್ರೀನಿವಾಸನ್ ಅವರು ಯಶಸ್ವಿಯಾಗಿ ಕನ್ನಡದಲ್ಲಿ ನೀರಗಂಟಿ ಮಾರ ಎಂದು ಪ್ರಸಾರ ಮಾಡಿದರು. ಅದೇ ಮೊಟ್ಟ ಮೊದಲಿನ ಕನ್ನಡ ಪ್ರಸಾರ ನಾಟಕ ಎನ್ನಲಾಗಿದೆ. ಚದುರಂಗರ ಶವದ ಮನೆ, ರಾ. ವೆಂ. ಶ್ರೀನಿವಾಸರ ಪುನರ್ಜನ್ಮ, ಕ್ಷೀರಸಾಗರರ ನಮ್ಮೂರಿನ ಪಶ್ಚಿಮಕ್ಕೆ, ಎಚ್. ಕೆ. ರಂಗನಾಥ ಬರೆದು ಸಾದರ ಪಡಿಸಿದ ದುರಂತ ಮುಂತಾದ ರೇಡಿಯೊ ನಾಟಕಗಳು ಎ. ಕೆ. ರಾಮಾನುಜನ್ ಅವರ ನಾದ ಬಿಂದು, ಬಡಪಾಯಿ ಬ್ರಹ್ಮರಾಕ್ಷಸ, (ಗಾನಪ್ರಿಯ), ಮನೆಯಲ್ಲೇ ಮಹಾಭಾರತ, ಪರ್ವತವಾಣಿಯವರ ಇಷ್ಟಾರ್ಥ ತರಾಸುರವರ, ನೃಪತುಂಗ, ಟೀಪೂಸುಲ್ತಾನ್, ಶ್ರೀರಂಗರ ಪ್ರಾರಬ್ಧ ರಾಮ. ಚಂದ್ರಶರ್ಮರ ಸೆರಗಿನ ಕೆಂಡ, ನಿರಂಜನರ ಪ್ರಥಮಾನುರಾಗ, ಸೂತ್ರ ಕಿತ್ತುಪಟ, ಎಸ್. ಎನ್. ಶಿವಸ್ವಾಮಿಯವರ ಹೃದಯಾಂತರಾಳ ಮತ್ತು ಇತರ ರೇಡಿಯೋ ನಾಟಕಗಳು ಪ್ರಸಾರ ಮಾಧ್ಯಮದಲ್ಲಿ ಹೆಚ್ಚಿನ ಪರಿಣಾಮ ಸಾಧಿಸಿದ ಒಳ್ಳೆಯ ಕೃತಿಗಳೆನ್ನಬಹುದು. ಇತ್ತೀಚಿಗೆ ಆಕಾಶವಾಣಿ ದೆಹಲಿಕೇಂದ್ರ ರಾಷ್ಟ್ರೀಯ ನಾಟಕ ಕಾರ್ಯಕ್ರಮದ ಅಂಗವಾಗಿ ಪ್ರಸಾರ ಮಾಡಿದ ಭಾರತದ ಬೇರೆ ಬೇರೆ ಭಾಷೆಯ ಕೃತಿಗಳನ್ನು ಕನ್ನಡಕ್ಕೆ ರೂಪಾಂತರಿಸಿ ಪ್ರಸಾರ ಮಾಡಲಾಗುತ್ತಿದೆ. ಈ ಕಾಲದ ಕೆಲವು ಒಳ್ಳೆಯ ಪ್ರಸಾರ ನಾಟಕಗಳು ನಮ್ಮ ಗಮನ ಸೆಳೆದಿವೆ. ಮಾಸ್ತಿಯವರ ಭಟ್ಟರಮಗಳು, ಕನ್ನಡರೂಪ ತಳೆದು ಬಂದ ಕೆ. ಪಿ. ರಂಗಾಚಾರಿಯವರ ಜೀವನದಿ, ರಾಜೇಂದ್ರಸಿಂಗ್ ಬೇಡಿಯವರ ಗರಂಕೋಟು, ಮುದ್ರಾರಾಕ್ಷಸರವರ ಲಾಯಿರಿ ಹರೋಬ—ಮುಂತಾದ ಬಾನುಲಿ ನಾಟಕಗಳು ಪ್ರಸಾರ ಮಾಧ್ಯಮದ

ಸೂಕ್ಷ್ಮ ಸಾಧ್ಯತೆಗಳನ್ನು, ನಾಟಕಕಾರರ ಪ್ರತಿಭಾವೈವಿಧ್ಯ ಹಾಗೂ ಸ್ವೋಪಜ್ಞತೆಯನ್ನು ಎತ್ತಿ ತೋರಿಸುವಂತಿವೆ. ಕನ್ನಡದ ಹಲವು ಪ್ರಸಿದ್ಧ ಕಥೆ—ಕಾದಂಬರಿಗಳನ್ನು ಪ್ರಸಾರಕ್ಕಾಗಿ ಅಳವಡಿಸಲಾಗಿದೆ. ತರಾಸು ಅವರ ಹಂಸಗೀತೆ, ಕಾರಂತರ ಸರಸಮ್ಮನ ಸಮಾಧಿ, ಬಿ. ಪುಟ್ಟಸ್ವಾಮಯ್ಯನವರು ಬಸವೇಶ್ವರರ ಜೀವನವನ್ನು ಕುರಿತು ಬರೆದ ಕಾದಂಬರಿಗಳು ಪ್ರಸಾರ ಮಾಧ್ಯಮದಲ್ಲಿ ತುಂಬ



ಬಿ. ಪುಟ್ಟಸ್ವಾಮಯ್ಯ

ಪರಿಣಾಮಕಾರಿಯಾದುವೆಂದು ವರದಿಯಾಗಿದೆ. ಸುಮಾರು 30-40 ವರ್ಷದ ಅವಿರತ ಶ್ರಮ ಹಾಗೂ ತಾಂತ್ರಿಕ ಪರಿಣತಿಯ ಫಲವಾಗಿ, ಪಾಶ್ಚಾತ್ಯ ಹಾಗೂ ಬೇರೆಬೇರೆ ಭಾರತೀಯ ಭಾಷೆಯ ನಾಟಕಕಾರರ ಪ್ರಭಾವದಿಂದಾಗಿ ಕನ್ನಡ ಬಾನುಲಿ ನಾಟಕ ತನ್ನದೇ ಆದ ರೂಪ ಲಾವಣ್ಯಗಳನ್ನು ಪಡೆಯುವ ಸಾಧ್ಯತೆಗಳನ್ನು ಸೂಚಿಸಿದೆ.

**ಆಧುನಿಕ ನಾಟಕ :** 1947ರಿಂದ ಹಿಡಿದು ಕಳೆದ ದಶಕದ ವರೆಗಿನ ಅವಧಿಯಲ್ಲಿ ಕನ್ನಡ ನಾಟಕ ಹೆಚ್ಚಾಗಿ ಏನನ್ನೂ ಸಾಧಿಸಲಿಲ್ಲವೆನ್ನಬಹುದು. ಕೈಲಾಸಂ, ಶ್ರೀರಂಗರು ಸೂಚಿಸಿದ ಪರಂಪರೆಯಲ್ಲಿ ಕಲಾತ್ಮಕ ಕೃತಿಗಳನ್ನು ಸೃಷ್ಟಿಸುವಂಥ ನಾಟಕಕಾರರು ಕಾಣಿಸಲಿಲ್ಲ. ಹಿಂದೆಯೇ ರಚಿತವಾದ ಕೆಲವು ಅಪೂರ್ವ ಕೃತಿಗಳು ರಂಗದ ಮೇಲೆ ಯಶಸ್ವಿಯಾಗಿ ಪ್ರದರ್ಶಿತವಾಗಲಿಲ್ಲ. ಮಾಸ್ತಿಯವರ ಕಾಕನ ಕೋಟೆ, ಯಶೋಧರಾ, ಶ್ರೀಯವರ ಅಶ್ವತ್ಥಾಮನ್, ಬೇಂದ್ರೆಯವರ ಹೊಸ ಸಂಸಾರದಂಥ ನಾಟಕಗಳನ್ನು ಮತ್ತೆ ಮತ್ತೆ ನೋಡುವ ಅವಕಾಶವೇ ದೊರೆಯಲಿಲ್ಲ. ಕೈಲಾಸಂ ಹಾಗೂ ಶ್ರೀರಂಗರ ನಾಟಕಗಳ ಉದ್ದೇಶವೇ ಬೇರೆಯಾಗಿದ್ದುದರಿಂದ ಅಲ್ಲಿ ಕಥೆಗಾಗಲೀ ವಸ್ತುವಿನ್ಯಾಸಕ್ಕಾಗಲೀ ಪ್ರಾಧಾನ್ಯ ಸಿಗಲಿಲ್ಲ. ಇದರಿಂದ ಕನ್ನಡ ನಾಟಕ ಒಂದು ತೆರನಾದ ಕೊರತೆಯನ್ನು ಅನುಭವಿಸಬೇಕಾಯಿತು. ಸಾಮಾನ್ಯ ಪ್ರೇಕ್ಷಕರ ಆಸಕ್ತಿಗೆ ತೃಪ್ತಿನೀಡುವ, ಸಾಮಾನ್ಯರನ್ನು ನಾಟಕ ರಂಗಭೂಮಿಗೆ ಸೆಳೆಯುವಂಥ ನಾಟಕದ ಗುಣಗಳು ವಿರಳವಾದುದು ಒಳ್ಳೆಯ ನಾಟಕದ ಅಭಾವಕ್ಕೂ ಕಾರಣವಾಯಿತು. ಕನ್ನಡ ರಾಜ್ಯದ ನಿರ್ಮಾಣವಾದ ಮೇಲೆ ಭಾಷೆಯ ಪ್ರಾದೇಶಿಕತೆಯ ಸಂಕೋಚ ಕುಗ್ಗಿ ಹೊಸ ನಾಟಕಕ್ಕೆ ಬೇಕಾದ ವ್ಯಾಪಕ ಹಿನ್ನೆಲೆ, ಹೆಚ್ಚು ಭಾಷಾ ಸ್ವಾತಂತ್ರ್ಯ ದೊರೆಯುವಂತಾಯಿತು. ಹೊಸ ನಾಟಕಗಳನ್ನು ಬರೆಯಲು, ನೋಡಲು ನಾಗರಿಕ ವಿದ್ಯಾವಂತರ ಸಮುದಾಯವೂ ಸಿದ್ಧವಾಯಿತು. ಇದರಿಂದಾಗಿ ಹೊಸದಾಗಿ ಏನು ಬಂದರೂ ಅದನ್ನು ಅಂಗೀಕರಿಸುವ ಹಂಬಲವೂ ಹೆಚ್ಚಿತು.

ಮೇಲೆ ಹೇಳಿದ ಅವಧಿಯಲ್ಲಿ ಶ್ರೀರಂಗರು ಹಲವಾರು ನಾಟಕಗಳನ್ನು ಬರೆದಿದ್ದಾರೆ. ಶೋಕ ಚಕ್ರ, ಹುಟ್ಟಿದ್ದು ಹೊಲೆಯೂರು, ಜೀವನ ಜೋಕಾಲಿ ಅವರ ಮೊದಲಿನ ನಾಟಕಗಳನ್ನೇ ಹೋಲುತ್ತವೆಯಾದರೂ ರಂಗಭಾರತ ಕತ್ತಲೆ ಬೆಳಕು ಕೇಳು ಜನಮೇಜಯ, ನೀ ಕೊಡೆ ನಾ ಬಿಡೆ, ಶತಾಯುಗತಾಯ ಇವು ಹೊಸ ಬಗೆಯ ನಾಟಕಗಳಾಗಿವೆ. ಈ ಸುಮಾರಿನಲ್ಲಿ ಬಂದ ಮೂಕಬಲಿ (ಜಡಭರತ) ಕಾವ್ಯಮಯವಾದ ಭಾಷೆಯ ಸೊಗಡಿನಿಂದ ಕೂಡಿದ್ದು, ಉತ್ಕಟವೂ ವ್ಯಗ್ರವೂ ಆದ ಒಂದು ಗಂಭೀರ ನಾಟಕ. ಸಮಾಜ ಜೀವನದ ವಾಸ್ತವ ಚಿತ್ರಣ ನೀಡುವ ಸಾಂಪ್ರದಾಯಿಕ ನಾಟಕಗಳಿಂದ ಇದು ಭಿನ್ನವಾಗಿದ್ದು ಅನುಭವದ ಉತ್ಕಟತೆಯನ್ನು ಸಾಂಕೇತಿಕವಾದ ಭಾಷೆ, ಧ್ವನಿಲಯಗಳಿಂದ ಸೂಚಿಸುವುದು ಈ ನಾಟಕದ ವಿಶಿಷ್ಟ ನೂತನ ಲಕ್ಷಣವಾಗಿದೆ. ಕಥೆ ಕೇವಲ ನಾಟಕದಲ್ಲಿ ಬರುವ ಪಾತ್ರಗಳ ಕಥೆಯಾಗಿರದೆ ಸುತ್ತಲಿನ ಅವ್ಯಕ್ತ ಜಗತ್ತಿನಾಚೆಗೂ ಹರಿಯುವಂತಾಗಿ ತನ್ನ ಧ್ವನಿಪರಂಪರೆಯನ್ನು ಹೆಚ್ಚಿಸಿ ಕೊಳ್ಳುತ್ತದೆ. ಹುಟ್ಟು ಸಾವುಗಳ ಸಂಬಂಧ, ದುಷ್ಟ ಶಕ್ತಿಗಳ ಹಾಗೂ ನೈತಿಕ ಮೌಲ್ಯಗಳ ತಿಕ್ಕಾಟ —ಇಂಥ ಮಾನವೀಯ ಅನುಭವಗಳು ಚಿರಪರಿಚಿತವಾದ ಹಳ್ಳಿಗಾಡಿನ ಪರಿಸರದಲ್ಲೇ ಸಂಕೀರ್ಣ ನಾಟಕೀಯ ಅಭಿವ್ಯಕ್ತಿಪಡೆಯುತ್ತವೆಯಾದ್ದರಿಂದ ಮೂಕಬಲಿ ಕಳೆದ ದಶಕದ ಒಂದು ಅಪೂರ್ವ ನಾಟಕವೆನ್ನಬಹುದು. ಇಷ್ಟೊಂದು ಭಾವ ಸಾಂದ್ರತೆ ಇಲ್ಲದಿದ್ದರೂ ಅನುಭವದ ಹಲವು ಪಂಕಗಳನ್ನು ತೆರೆದು ತೋರಿಸುವ ಇನ್ನೊಂದು ಒಳ್ಳೆಯ ನಾಟಕ ಆರ್. ವಿ. ಕುಲಕರ್ಣಿಯವರ ಗೌರಿ. ಈ ಇಬ್ಬರು ನಾಟಕಕಾರರೂ ಸಾಂಪ್ರದಾಯಿಕವಾದ ರೀತಿಯಲ್ಲಿ ಬರೆದರೂ ಹೊಸತನದ ಸಾಧ್ಯತೆಯನ್ನು ಮೂಡಿಸಿದರು. ಕನ್ನಡ ಕಾವ್ಯವನ್ನು ಆವರಿಸಿಕೊಂಡ ಪ್ರಮಾಣದಲ್ಲಿನ್ನೂ ನವ್ಯತೆ ನಾಟಕವನ್ನು ಹೊಕ್ಕಿಲ್ಲವೆನ್ನುವುದು ನಿಜವಾದರೂ ಈಗೀಗ ಹೊಸ ಕೃತಿಗಳು ಬರುತ್ತಿವೆ.

ಕನ್ನಡದಲ್ಲಿ ಇತ್ತೀಚೆಗೆ ಪ್ರಚಾರವಾಗುತ್ತಿರುವ ಅಸಂಗತ (ಅಬ್ಸರ್ಡ್) ನಾಟಕ ಈ ದಶಕದ ವಿಶಿಷ್ಟ ಕೊಡುಗೆ. ಪಿ. ಲಂಕೇಶರ ಟಿ. ಪ್ರಸನ್ನನ ಗೃಹಸ್ಥಾಶ್ರಮ, ನನ್ನ ತಂಗಿಗೊಂದು ಗಂಡು ಕೊಡಿ, ತೆರೆಗಳು, ಇಂಗ್ಲಿಷ್ ನಾಟಕಕಾರ ಆಸ್‌ಬರ್ನನ ಹಾಗೂ ಪಿಂಟರ್‌ನ ನಾಟಕಗಳನ್ನು ನೆನಪಿಸುವಂಥ ಪ್ರತಿಭಟನೆಯ ನಾಟಕಗಳು. ಇವುಗಳಲ್ಲಿ ನಾಟಕಕಾರ ಸಾಧಿಸಿರುವ ನಾಟಕೀಯ ಮೌಲ್ಯಗಳು ಇನ್ನೂ ಚಿಕ್ಕ ಪ್ರಮಾಣದವೇ ಆಗಿದ್ದು ಭವಿಷ್ಯದ ಬಗ್ಗೆ ಆಸಕ್ತಿ ಕೆರಳಿಸಿವೆ. ಸುಮತೀಂದ್ರ ನಾಡಿಗರು ಅಯೊನೆಸ್ಕೋವಿನ ನಾಟಕದಿಂದ ನೇರವಾಗಿ ಕನ್ನಡಕ್ಕೆ ಇಳಿಸಿದ ಬಕ್ಕತಲೆಯ ನರ್ತಕಿ ಅಬ್ಸರ್ಡ್ ನಾಟಕವನ್ನು ಕನ್ನಡ ಪ್ರೇಕ್ಷಕರಿಗೆ ಪರಿಚಯ ಮಾಡಿಸಲು ನೆರವಾಯಿತು. ಚಂದ್ರಶೇಖರ ಪಾಟೀಲ, ಚಂದ್ರಶೇಖರ ಕಂಬಾರ, ನ. ರತ್ನ ಇವರು ಈ ತೆರನಾದ ಹೊಸ ನಾಟಕ ಬರೆಯುತ್ತಿದ್ದಾರೆ. ಸಾಂಪ್ರದಾಯಿಕ ನಾಟಕದಲ್ಲಿ ಪ್ರೇಕ್ಷಕರು, ರಂಗಭೂಮಿಯ ಮೇಲೆ ಪ್ರದರ್ಶನವಾಗುವ ನಾಟಕ ಸನ್ನಿವೇಶಗಳನ್ನು ಬೌದ್ಧಿಕವಾಗಿ ಅರ್ಥಮಾಡಿಕೊಳ್ಳುತ್ತಾರೆ. ನಾಟಕ ಅವರಲ್ಲಿ ಪ್ರೇರಿಸುವ ಸಂವೇದನೆ ಅಂತಃಕರಣದ ತಲ್ಲೀನತೆಯಿಂದ ಉದ್ಭವವಾದುದು. ನಾಟಕದೊಳಗಣ ಪಾತ್ರ ಹಾಗೂ ಘಟನೆಗಳನ್ನು ಪ್ರೇಕ್ಷಕರು ತಾರ್ಕಿಕವಾಗಿ ವಿವೇಚಿಸಿ, ತಮ್ಮ ತಮ್ಮ ನೆನಪಿನ ಪದರದಲ್ಲಿ ಅಡಗಿರುವ ವೈಯಕ್ತಿಕ ಅನುಭವಗಳ ಮೂಲಕ ಗ್ರಹಿಸುತ್ತಾರೆ. ಆದ್ದರಿಂದ ನಾಟಕದಲ್ಲಿನ ಪಾತ್ರ, ಸಂಘಟನೆ, ಸನ್ನಿವೇಶ ಎಲ್ಲವೂ ಸ್ಫುಟವಾದ ಆಕಾರ ತಳೆದಂತೆ ಕಾಣುತ್ತವೆ. ಆದರೆ ಅಬ್ಸರ್ಡ್ ನಾಟಕದಲ್ಲಿ, ಮನುಷ್ಯನ ಬಾಳಿನ ನಿರರ್ಥಕತೆಯನ್ನು, ಭಿಕಾರಿತನವನ್ನು, ಅರಾಜಕತೆಯನ್ನು ನೇರವಾಗಿ (ರಂಗದಮೇಲೆ ನಡೆಯುವ ಕ್ರಿಯೆ ಹಾಗೂ ಮಾತಿನ ಅಸ್ಪಷ್ಟತೆ—ಗೊಂದಲಗಳ ಮೂಲಕ) ಅಭಿವ್ಯಕ್ತಗೊಳಿಸುತ್ತಾರೆ. ಪಾತ್ರಗಳಾಡುವ ಮಾತು, ಸೃಷ್ಟಿಸುವ ಸನ್ನಿವೇಶಗಳು ಮೇಲು ನೋಟಕ್ಕೆ ಪರಸ್ಪರ ಹೊಂದಾಣಿಕೆ ಇಲ್ಲದಂತೆ ಕಂಡರೂ ಅವು ಬಾಳಿನ ದುರಂತವನ್ನು ನಿರ್ಭಯವಾದ ನಗೆ, ಅಸಂಗತ ವಿಷಾದ ಬೆರೆತ ಹಾಸ್ಯಗಳ ಮೂಲಕ ಗುರುತಿಸಿ, ವೇದನೆಯನ್ನೂ ಜುಗುಪ್ಸೆಯನ್ನೂ ಕಲ್ಪಿಸುತ್ತವೆ. ಕಲಾತ್ಮಕವಾದ ರಂಗಭೂಮಿಯ ನಿರ್ವಹಣೆಯ ಮೂಲಕ ಈ ನಾಟಕಗಳು ಉದ್ದೇಶಿಸಿದ ಅನುಭವವನ್ನು ನೀಡುತ್ತವೆ. ಈ ಅಬ್ಸರ್ಡ್ ನಾಟಕದ ಜಾಡಿನಲ್ಲಿ ಬರೆಯುತ್ತಿರುವ ನಮ್ಮ ನಾಟಕಕಾರರ ಕೃತಿಗಳೆಲ್ಲವೂ ಕೇವಲ ಪ್ರಾಯೋಗಿಕ ತುಣುಕುಗಳಾಗಿವೆ. ಪಾಶ್ಚಾತ್ಯ ರಂಗಭೂಮಿಯ ಮೇಲೂ ಅಸಂಗತ ನಾಟಕಗಳು ಸಾಂಪ್ರದಾಯಿಕ ನಾಟಕಗಳನ್ನು ಸೋಲಿಸಿ ಓಡಿಸಿಲ್ಲ. ಅಂಥ ಸಂಭವವೂ ವಿರಳವೆಂದೇ ಹೇಳಬಹುದು. ಆದರೆ ಅಸಂಗತ ನಾಟಕದ ಹಲವು ಒಳ್ಳೆಯ ಅಂಶಗಳನ್ನು ನಮ್ಮದೇ ಆದ ಪರಂಪರೆಯ ಬೆನ್ನೆಲುಬು ಪಡೆದ ಕಥಾವಸ್ತುವಿನೊಳಕ್ಕೆ ಅಳವಡಿಸಿಕೊಳ್ಳಬಹುದೆಂದು ಕಾರ್ನಾಡರ ನಾಟಕಗಳು ಸೂಚಿಸಿವೆ. ಅವರ ನಾಟಕಗಳಲ್ಲಿ ಒಳ್ಳೆಯ ಕಥಾರಚನೆ, ಪಾತ್ರಸಂಯೋಜನೆಗಳಿವೆ. ಆದರೆ ಇಡಿಯ ನಾಟಕ ಹಲವಾರು ಅನುಭವದ ಪಾತಳಿಗಳ ಮೇಲೆ ನಡೆಯುತ್ತ ಸಂಕೀರ್ಣಾನುಭವಗಳನ್ನು ಕಲ್ಪಿಸುತ್ತವೆ. ಈವರೆಗಿನ ತಮ್ಮ ನಾಟಕಗಳಲ್ಲಿ ಚರಿತ್ರೆ ಅಥವಾ ಪುರಾಣದ ಕಥೆಗಳನ್ನೇ ಅಳವಡಿಸಿಕೊಂಡಿರುವ ಕಾರ್ನಾಡರಲ್ಲಿ ಪರಂಪರೆಯ ಪ್ರಾಮುಖ್ಯ ಎಷ್ಟೆಂಬುದು ಸ್ಪಷ್ಟವಾಗಿ ವ್ಯಕ್ತವಾಗುತ್ತದೆ.

**ಮಕ್ಕಳ ನಾಟಕಗಳು :** ಕನ್ನಡಕ್ಕೆ ನಾಟಕ ಹೇಗೆ ತಡವಾಗಿ ರೂಪಗೊಂಡು ಬಂದಿತೋ ಹಾಗೆ ಮಕ್ಕಳ ನಾಟಕವೂ ತಡವಾಗಿ ಬಂತು. ಆದರೂ ಪಾಶ್ಚಾತ್ಯ

ನಾಟಕ ರಂಗಭೂಮಿಯಲ್ಲಿ ಇರುವಹಾಗೆ ಮಕ್ಕಳ ನಾಟಕವೆನ್ನುವುದು ಒಂದು ವಿಶಿಷ್ಟ ಪ್ರಕಾರವಾಗಿ ಹೊಮ್ಮಿ ಬಂದಂತೆ ಕಾಣುವುದಿಲ್ಲ. ಇಂಥ ನಾಟಕಕ್ಕೆ ಬೇಕಾದ ಪ್ರೇರಣೆ ನಾಟಕದ್ರವ್ಯ, ನೋಡುವ ಪ್ರೇಕ್ಷಕ ವರ್ಗ, ಆಡುವ ನಟ ವರ್ಗ ಇಲ್ಲವೆನ್ನುವಂತಿಲ್ಲ. ಆದರೂ ನಮ್ಮ ನಾಟಕಕಾರರು ಈ ಬಗೆಯ ನಾಟಕ ರಚನೆಯಲ್ಲಿ ಹೆಚ್ಚಾಗಿ ಕೃಷಿ ನಡೆಸಲಿಲ್ಲ. ಭಾಸನ ಏಕಾಂಕ ನಾಟಕಗಳನ್ನಾಗಲೀ, ಕುವೆಂಪು ಅವರ ಕಿಂದರಿಜೋಗಿ ಕವನವನ್ನಾಗಲೀ ಠಾಕೂರರ ಮಕ್ಕಳ ನಾಟಕಗಳನ್ನಾಗಲೀ ಕಥೆಗಳನ್ನಾಗಲೀ ನಮ್ಮ ರಂಗಭೂಮಿ ಬಳಸಿಕೊಳ್ಳಬಹುದಾಗಿತ್ತು. ಈ ದಾರಿಯಲ್ಲಿ ನಡೆದ ಒಳ್ಳೆಯ ಪ್ರಯತ್ನಗಳಲ್ಲಿ ಹೊಯಿಸಳರ ಅಗಿಲಿನ ಮಗಳು, ಜಿ. ಸದಾಶಿವಯ್ಯನವರ ಸೊಂಪಿನ ಸಾಗರ, ಕುವೆಂಪು ಅವರು ಮಕ್ಕಳಿಗಾಗಿಯೇ ಬರೆದ ಮೋಡಣ್ಣನ ತಮ್ಮ, ನನ್ನ ಗೋಪಾಲ, ಬಿ. ಪಾಂಡುರಂಗರಾಯರ ಸುಳ್ಳಿನ ಸೋಲು ಕೈವಾರ ರಾಜರಾಯರ ಬಾಬರನ ಪಾಠ ಅಮ್ಮ ಇತ್ತೀಚೆಗೆ ಬಿ. ವಿ. ಕಾರಂತರು ಠಾಕೂರರ ಕಥೆಯನ್ನನುಸರಿಸಿ ರಚಿಸಿ ತಾವೇ ಪ್ರದರ್ಶಿಸಿದ ಯಶಸ್ವೀ ನಾಟಕ ಪಂಜರ ಶಾಲೆ ಕೀರ್ತಿನಾಥರ ಆಮನಿ ಇವುಗಳನ್ನು ಹೆಸರಿಸ ಬಹುದು. ಕೀರ್ತಿನಾಥರ ನಾಟಕ ಮೂಲತಃ ಮಕ್ಕಳ ನಾಟಕವೇ ಆದರೂ ವಾಸ್ತವಿಕತೆ ಹಾಗೂ ಅದ್ಭುತದಮ್ಮ ಅಂಶಗಳನ್ನು ಕಲಾತ್ಮಕವಾಗಿ ಒಂದು ಗೂಡಿಸಿಕೊಂಡ ಈ ನಾಟಕ ಒಂದು ಉತ್ತಮ ಸಾಂಕೇತಿಕ ನಾಟಕ. ಮಕ್ಕಳ ನಾಟಕದ ಬೆಳಸು ಹುಲುಸಾಗಿ ಬೆಳೆದಿದ್ದರೂ, ಆಗಬೇಕಾದ್ದು ಇನ್ನಷ್ಟು ಇದೆ ಎಂಬು ದನ್ನು ಮರೆಯಲಾಗದು. (ಎಚ್.ಕೆ.ಆರ್.)

**ಕನ್ನಡದಲ್ಲಿ ಪ್ರಬಂಧಸಾಹಿತ್ಯ:** ಪ್ರಬಂಧ ಎಂಬ ಸಾಹಿತ್ಯರೂಪ ಕನ್ನಡಕ್ಕೆ ಇಂಗ್ಲಿಷಿನ ಕೊಡುಗೆ. ಇಂಗ್ಲೆಂಡ್ ಆದರೂ ಪ್ರಬಂಧಕ್ಕೆ ತವರು ಮನೆಯಲ್ಲ. ಅದು ಹುಟ್ಟಿದ್ದು ಫ್ರಾನ್ಸಿನಲ್ಲಿ, ಹದಿನಾರನೆಯ ಶತಮಾನದಲ್ಲಿ. ಇಂಥ ದೊಂದು ಸಾಹಿತ್ಯರೂಪವನ್ನು ಮೊದಲ ಸಲಕ್ಕೆ ಸೃಷ್ಟಿಮಾಡಿದ ಕೀರ್ತಿ ಸಲ್ಲತಕ್ಕದ್ದು ಅಲ್ಲಿನ ಮಾಂಟೇನ್ ಎಂಬುವನಿಗೆ. ಹೊಸದೊಂದು ಸಾಹಿತ್ಯರೂಪವನ್ನು ಸೃಷ್ಟಿ ಮಾಡಬೇಕು ಎಂಬ ಹಂಬಲ ಅವನಿಗೆ ಮೂಡಿ, 1580ರಲ್ಲಿ ತನ್ನ 47ನೆಯ ವಯಸ್ಸಿನಲ್ಲಿ ತೋಟದ ಮನೆಯ ಪ್ರಶಾಂತಿಯನ್ನು ಆಶ್ರಯಿಸಿದ. ಅದೇ ವರ್ಷ ತನ್ನ ದೀರ್ಘಚಿಂತನೆಯ ಫಲವಾದ ಎರಡು ಸಂಕಲನಗಳನ್ನು ಎಸ್ಸೆಯ್ ಎಂಬ ಹೆಸರಿನಲ್ಲಿ ಪ್ರಕಟಿಸಿದ. ಆ ಪದದ ಅರ್ಥ ಒಂದು ಪ್ರಯೋಗ, ಪ್ರಯತ್ನ, ಉದ್ಯಮ ಎಂದು.

1603ರಲ್ಲಿ ಮಾಂಟೇನನ ಪ್ರಬಂಧಗಳು ಇಂಗ್ಲಿಷಿಗೆ ಅನುವಾದವಾಗಿ ಇಂಗ್ಲೆಂಡಿನಲ್ಲಿ ಪ್ರಚಾರವಾದುವು. ವಿಮರ್ಶಕ ಸರ್ ಎಡ್ಮಂಡ್ ಗಾಸ್ ಅವನ ಪ್ರಬಂಧಗಳ ವೈಶಿಷ್ಟ್ಯವನ್ನು ಕುರಿತು ಹೇಳಿರುವುದು ಹೀಗೆ: ತನ್ನ ಹೊಸ, ವಿಚಿತ್ರ ಪುಸ್ತಕದ ಆನಂದದಾಯಕ ಅಧ್ಯಾಯಗಳಲ್ಲಿ ಮಾಂಟೇನ್ ಸಂಕ್ಷಿಪ್ತವಾಗಿ, ಕ್ರಮಬದ್ಧವಲ್ಲದೆ ಆಗಾಗ ಆಚೀಚೆಗೆ ಸುತ್ತಾಡಿ, ಅಡೆತಡೆಗಳನ್ನು ಒಡ್ಡಿ, ಬರೆಯುವುದು ಹೇಗೆ ಎಂಬ ನಮೂನೆಯನ್ನು ಬಳಕೆಗೆ ತಂದ. ಅದರಲ್ಲಿ ಜಗತ್ತು ಬರೆಹಗಾರನಿಗೆ ಹೇಗೆ ಕಾಣುತ್ತದೋ ಹಾಗೆ ತೋರಿಸಿದ. ವಾಸ್ತವವಾಗಿ ಪ್ರತಿಯೊಂದು ಉತ್ತಮ ಪ್ರಬಂಧದ ಲಕ್ಷಣಗಳೂ ಇವೇ ಆಗಿವೆ.

ಮಾಂಟೇನನ ಹಾದಿಯಲ್ಲೇ ನಡೆದ ಇಂಗ್ಲಿಷ್ ಪ್ರಬಂಧಕಾರ ಏಬ್ರಹಾಂ ಕೌಲೆ. ಅವನ ಅನಂತರದ ಇಂಗ್ಲಿಷ್ ಸಾಹಿತ್ಯ ಅನೇಕ ಜನ ಪ್ರತಿಭಾನ್ವಿತ ಪ್ರಬಂಧಕಾರರನ್ನು ಪಡೆಯಿತು. ಅವರಲ್ಲಿ ಕೆಲವರು: ಫ್ರಾನ್ಸಿಸ್ ಬೇಕನ್, ಅಡಿಸನ್, ಸ್ಟೀಲ್, ಸರ್ ಥಾಮಸ್ ಓವರ್‌ಬರಿ, ಜಾನ್ ಅರ್ಲ್, ಹೆನ್ರಿ ಫೀಲ್ಡಿಂಗ್, ಡಾಕ್ಟರ್ ಜಾನ್ಸನ್, ಗೋಲ್ಡ್‌ಸ್ಮಿತ್, ಚಾರ್ಲ್ಸ್ ಲ್ಯಾಮ್, ಲೇ ಹಂಟ್, ಥಾಮಸ್ ಡಿಕ್ವಿನ್ಸಿ, ಮೆಕಾಲೆ, ಮ್ಯಾಥ್ಯೂ ಆರ್ನಾಲ್ಡ್, ವಾಲ್ಟರ್ ಪೇಟರ್, ಇ. ವಿ. ಲ್ಯೂಕಾಸ್, ಚೆಸ್ಟರ್‌ಟನ್, ರಾಬರ್ಟ್ ಲಿಂಡ್, ಎ. ಜಿ. ಗಾರ್ಡನರ್—ಇದೇ ಸಾಲಿನಲ್ಲಿ ನಿಲ್ಲುವ ನೂರಾರು ಜನ ಪ್ರಥಮ ದರ್ಜೆಯ ಪ್ರಬಂಧಕಾರರು ಇಂಗ್ಲಿಷ್ ಪ್ರಬಂಧಸಾಹಿತ್ಯದ ಶ್ರೀಮಂತಿಕೆಗೆ ಕಾರಣರಾಗಿದ್ದಾರೆ. ಶುದ್ಧ ಸ್ವಂತಿಕೆಯ ಜೊತೆಗೆ ಅವರಲ್ಲಿ ಕೆಲವು ಪ್ರಬಂಧಕಾರರ ಬರೆಹದ ಛಾಯೆಯನ್ನಾದರೂ ಕನ್ನಡ ಪ್ರಬಂಧಸಾಹಿತ್ಯದಲ್ಲಿ ನಾವು ಕಾಣಬಹುದು. ಅವರಲ್ಲಿ ಕೆಲವರ ಪ್ರಬಂಧಗಳನ್ನು ತಮ್ಮ ಯಶಸ್ವಿಯಾದ ಅನುವಾದಗಳ ಮೂಲಕ ಎಸ್. ವಿ. ಪರಮೇಶ್ವರ ಭಟ್ಟರೂ (ಕೆಲವು ಇಂಗ್ಲಿಷ್ ಪ್ರಬಂಧಗಳು, 1947), ಎಂ. ರಾಮರಾಯರೂ (ಇಪ್ಪತ್ತಾರು ಇಂಗ್ಲಿಷ್ ಪ್ರಬಂಧ ಗಳು 1953) ಪರಿಚಯ ಮಾಡಿಕೊಟ್ಟಿದ್ದಾರೆ. ಪರಮೇಶ್ವರ ಭಟ್ಟರ ಅನುವಾದದ ಮೊದಲಲ್ಲಿ ಬಿ. ಎಸ್. ಶಾಮರಾಯರು ಈ ಬಗೆಯ ಸಾಹಿತ್ಯದ ಬಗೆಗೆ ವಿದ್ವತ್ಪೂರ್ಣ ವಾದ ಮುನ್ನುಡಿಯನ್ನು ಬರೆದಿದ್ದಾರೆ. ರಾಮರಾಯರ ಅನುವಾದದ ಮೊದಲಲ್ಲೂ ಕೆಲವು ಇಂಗ್ಲಿಷ್ ಪ್ರಬಂಧಕಾರರ ಪರಿಚಯ ದೊರಕುತ್ತದೆ.

ಕನ್ನಡವಲ್ಲಾದರೆ ಈ ಸಾಹಿತ್ಯರೂಪ ಈಚಿನದು, ಇಂಗ್ಲಿಷಿನ ಪ್ರಭಾವದಿಂದಲೇ ಹುಟ್ಟಿದ್ದು, ಹತ್ತಿರ ಹತ್ತಿರ ಮುಕ್ಕಾಲು ಶತಮಾನಕಾಲ ಬೆಳೆಯುತ್ತ ಬಂದದ್ದು. ಇಂಗ್ಲಿಷಿನಂತೆ ಇಲ್ಲಿಯೂ ಪ್ರಬಂಧದ ಬೇರೆ ಬೇರೆ ರೂಪಗಳು ವಿಮರ್ಶಕರ ನಿರೀಕ್ಷೆಯಷ್ಟಲ್ಲದಿದ್ದರೂ ತಕ್ಕಮಟ್ಟಿಗೆ ತೃಪ್ತಿಕರವಾಗಿ ಬೆಳೆದು ಬಂದಿವೆ. ಅನೇಕ ಜನ ಪ್ರತಿಭಾವಂತರು ಈ ಕ್ಷೇತ್ರದಲ್ಲಿ ಕೆಲಸಮಾಡಿದ್ದಾರೆ; ಮಾಡುತ್ತಿದ್ದಾರೆ.

ಈ ವಿಭಾಗದಲ್ಲಿ ಸಮೀಕ್ಷಿಸುತ್ತಿರುವುದು ಪ್ರಬಂಧದ ಎಲ್ಲ ಪ್ರಕಾರಗಳನ್ನೂ ಅಲ್ಲ; ವಿಶೇಷವಾಗಿ ಲಲಿತ ಪ್ರಬಂಧವನ್ನು ಮಾತ್ರ. ಇಂಗ್ಲಿಷಿನ ಎಸ್ಸೆ ಎಂಬುದನ್ನು ಕನ್ನಡದಲ್ಲೂ ಎಸ್ಸೆ ಎಂದೇ ಬಳಸಿದವರುಂಟು. ಪ್ರಬಂಧ, ಲಘು ಪ್ರಬಂಧ, ನಿಬಂಧ, ಹರಟೆ, ನ್ಯಾಸ ಪ್ರಸಂಗ, ಲಲಿತ ಪ್ರಬಂಧ—ಈ ಎಲ್ಲವನ್ನೂ ಸಮಾನಾರ್ಥ ವಾಗಿ ಬಳಸಿರುವುದೂ ಉಂಟು. ಇವೆಲ್ಲಕ್ಕಿಂತ—ಪ್ರಬಂಧದ ಎಲ್ಲ ಲಕ್ಷಣಗಳನ್ನೂ ಗಮನಿಸಿದರೆ—ಲಲಿತ ಪ್ರಬಂಧ ಎಂದುದೇ ಹೆಚ್ಚು ಸಮರ್ಪಕ. ಆದುದರಿಂದ ಇಲ್ಲಿ ಲಲಿತ ಪ್ರಬಂಧ ಎಂಬುದನ್ನೇ ಉಳಿಸಿಕೊಂಡಿದೆ. ಅಲ್ಲದೆ ಈ ಲೇಖನದಲ್ಲಿ ಪ್ರಬಂಧ ಎಂದಷ್ಟೇ ಬಳಸಿದರೂ ಲಲಿತ ಪ್ರಬಂಧವನ್ನೇ ಅದು ನಿರ್ದೇಶಿಸುತ್ತದೆ ಎಂಬುದನ್ನು ಗ್ರಹಿಸಬೇಕು.

ಪದಗಳ ಉತ್ಪತ್ತಿಯನ್ನು ಕುರಿತು ಚರ್ಚಿಸಿರುವ ಪ್ರಬಂಧಗಳು, ಸಾಹಿತ್ಯ ವಿಮರ್ಶೆ, ವಿಮರ್ಶೆಯ ಮೂಲತತ್ತ್ವ–ಇವುಗಳನ್ನು ವಿವೇಚಿಸುವ ಪ್ರಬಂಧಗಳು, ತತ್ತ್ವ ಚಿಂತನೆ ಮೊದಲಾದವುಗಳಿಂದ ಭಾರವಾದ ಪ್ರಬಂಧಗಳು ಇಂಥವನ್ನೆಲ್ಲ ಇಲ್ಲಿ ಕೈಬಿಡಲಾಗಿದೆ. ಕೇವಲ ಲಘು ಹಾಸ್ಯವನ್ನೆ ಉದ್ದೇಶವಾಗುಳ್ಳ ಪ್ರಬಂಧಗಳನ್ನೂ ಇಲ್ಲಿ ವಿವೇಚಿಸಿಲ್ಲ. ಮೇಲೆ ಹೇಳಿದ ಈ ಎಲ್ಲವೂ ಬೇರೆ ಬೇರೆ ಕಡೆ ಪರಿಶೀಲನೆಗೆ ಒಳಗಾಗಿವೆ. (ನೋಡಿ: ಕನ್ನಡದಲ್ಲಿ ವಿಚಾರ ಸಾಹಿತ್ಯ; ಕನ್ನಡದಲ್ಲಿ ವಿಡಂಬನ ಸಾಹಿತ್ಯ; ಕನ್ನಡದಲ್ಲಿ ಶಾಸ್ತ್ರಸಾಹಿತ್ಯ; ಕನ್ನಡದಲ್ಲಿ ಹಾಸ್ಯ ಸಾಹಿತ್ಯ) ತನ್ನ ಮನಸ್ಸನ್ನು ಅದು ಹೋದಂತೆ ಹರಿಯ ಬಿಟ್ಟು, ಒಂದು ಕೇಂದ್ರ ಬಿಂದುವಿನ ಸುತ್ತ ಅತ್ತಿತ್ತ ಅಡ್ಡಾಡುತ್ತ, ಮತ್ತೆ ಮತ್ತೆ ಆ ಬಿಂದುವನ್ನು ಮುಟ್ಟುತ್ತ, ವಸ್ತುಗಳು, ವ್ಯಕ್ತಿಗಳು ಮತ್ತು ಘಟನೆಗಳನ್ನು ಅವು ತನಗೆ ಕಂಡಂತೆ ನೇರವಾಗಿಯೋ ವಕ್ರವಾಗಿಯೋ ಚಿತ್ರಿಸುತ್ತ, ನಮಗೆ ತಿಳಿವು ಉಲ್ಲಾಸಗಳನ್ನು ಏಕಕಾಲದಲ್ಲಿ ಒದಗಿಸುವ ಗದ್ಯರೂಪದ ಬಂಧವನ್ನು ಲಲಿತ ಪ್ರಬಂಧ ಎಂದು ಗಣಿಸಿ ಅಂಥ ಬರೆವಣಿಗೆಗಳನ್ನು ಇಲ್ಲಿ ಪರಿಶೀಲಿಸಿದೆ. ಲಲಿತ ಪ್ರಬಂಧದ ಲಕ್ಷಣ ಸಂಜೆ ಸಂಚಾರಕ್ಕೆ ಹೊರಟಂತೆ. ಒಂದು ನಿರ್ದಿಷ್ಟ ಉದ್ದೇಶ ಇಲ್ಲ ಎಂದಲ್ಲ, ಸಂಚಾರವೇ ಉದ್ದೇಶ. ಆದರೆ ಅದು ಇಂಥದೇ ರೀತಿಯಲ್ಲಿ ಆಗಬೇಕು ಎಂಬ ನಿಯಮ ಇಲ್ಲ ಅಷ್ಟೆ. ಮನೆ ಬಿಟ್ಟಾಯಿತು, ಮತ್ತೆ ಮನೆ ಮುಟ್ಟಬೇಕು—ಇದೇ ಚೌಕಟ್ಟು. ಕೆರೆ, ಕೊಳ, ಬೆಟ್ಟ, ಉದ್ಯಾನ–ಇಂಥ ಸುಂದರ ಸ್ಥಾನಗಳಿಗೆ ಹೋಗಿ ಅಲ್ಲಿ ಏಕಾಂಗಿಯಾಗಿ ಕುಳಿತು ಅಲ್ಲಿನ ಚೆಲುವನ್ನು ಸವಿಯ ಬಹುದು. ಅದರ ವಿವರಗಳನ್ನೆಲ್ಲ ಮನಸ್ಸು ಗ್ರಹಿಸುತ್ತಿರುತ್ತದೆ. ಮಧ್ಯೆ ಮಧ್ಯೆ ಇತರ ಯೋಚನೆಗಳೂ ಸುಳಿಯಬಾರದು ಎಂದಿಲ್ಲವಲ್ಲ. ಇಲ್ಲವೇ ಪೇಟೆಗೆ ಹೋಗಿ ಕಾಯಿಪಲ್ಲೆಗಳನ್ನು ಕೊಂಡು ಸಂಚಾರವನ್ನೂ ವ್ಯವಹಾರವನ್ನೂ ಒಂದುಗೂಡಿಸ ಬಹುದು. ದಾರಿಯಲ್ಲಿ ಯಾರಾದರೂ ಗುರುತಿನವರು ಸಿಕ್ಕುತ್ತಾರೆ. ಅವರೊಂದಿಗೆ ಅದೂ ಇದೂ ಮಾತನಾಡಬಹುದು. ಆದರೆ ಮತ್ತೆ ಮೂಲ ಉದ್ದೇಶದ ನೆನಪಾಗಿ ಹೊರಡಬಹುದು. ನಮಗೆ ಸಿಕ್ಕಿದ ವ್ಯಕ್ತಿಯ ಬಗ್ಗೆ, ನಾವು ನೋಡಿದ ನೋಟಗಳ ಬಗ್ಗೆ ಮತ್ತೆ ಮತ್ತೆ ಮನಸ್ಸು ಚಿಂತಿಸಬಹುದು. ಅವನ್ನು ಕುರಿತು ಇತರ ರೊಂದಿಗೆ ಸ್ವಾರಸ್ಯವಾಗಿ ಚರ್ಚಿಸಬಹುದು, ಇದು ಪ್ರಬಂಧದ ರೀತಿ. ಪ್ರಬಂಧಕಾರ ರಾ.ಕು. ಅವರ ಗಾಳಿಪಟದ ಮೊದಲಲ್ಲಿ ಸಂಪಾದಕ ಜಿ. ಬಿ. ಜೋಷಿ ಅವರು ಈ ಸಾಹಿತ್ಯಪ್ರಕಾರದ ಸ್ವರೂಪವನ್ನು ಅತ್ಯಂತ ಅಡಕವಾಗಿ, ಸಮರ್ಪಕವಾಗಿ ನಿರೂ ಪಿಸಿದ್ದಾರೆ: ಈ ಪ್ರಬಂಧದ ಜಾತಿ ಹೊರಜಗತ್ತಿನೊಡನೆ ಅತ್ಯಂತ ನಿಕಟ ಸಂಬಂಧ ವನ್ನಿಟ್ಟುಕೊಂಡು ಬೆಳೆಯಬೇಕಾದದ್ದಿರುತ್ತದೆ. ಪತ್ರಿಕಾವ್ಯವಸಾಯಿಯೊಬ್ಬನನ್ನು ಬಿಟ್ಟರೆ ಸಾಹಿತ್ಯದಲ್ಲಿ ಪ್ರಬಂಧಕಾರನಷ್ಟು ಸಮೀಪದಲ್ಲಿ ಜೀವನವನ್ನು ಸಂದರ್ಶಿಸುವ ವ್ಯಕ್ತಿ ಬೇರೊಬ್ಬನಿರಲಾರ. ಅಂತೆಯೇ ಇಂಥ ಬರೆವಣಿಗೆಗೆ ಬಂದೊದಗುವ ಗಂಡಾಂತರ ತೀರ ದೊಡ್ಡದಾಗುತ್ತದೆ. ಲೇಖಕ ಇಲ್ಲಿ ಮುಖಾನುಮುಖಿಯಾಗಿ ಜೀವನವನ್ನು ನೋಡುತ್ತಾನೆ. ಓದುಗನೊಡನೆ ಅದರ ಬಗ್ಗೆ ಮಾತನಾಡುತ್ತಾನೆ. ಶಿರೋನಾಮೆ ಸೂಚಿಸುವ ಮುಖ್ಯ ವಸ್ತುವನ್ನು ಧ್ರುವನಕ್ಷತ್ರವನ್ನಾಗಿಸಿಕೊಂಡು ಸಂಸಾರದ ಪರಿಚಿತ ವಸ್ತುಗಳಲ್ಲಿ ತುಂಬು ಕಣ್ಣುಳ್ಳವನಾಗಿ, ಅವುಗಳ ಗುಂಟ ಇವನು ಪರಿಭ್ರಮಿಸುತ್ತಾನೆ. ತಿರುಗಾಟ, ವಿಷಯಾಂತರ ಈ ಸಾಹಿತ್ಯಪ್ರಕಾರದ ಮುಖ್ಯ ಗುಣವಾಗಿರುತ್ತದೆ ಮತ್ತು ಅಷ್ಟೇ ಅದು ಅವಗುಣವೂ ಆಗಿರುತ್ತದೆ.

ಕನ್ನಡದಲ್ಲಿ ಮೊದಲನೆಯ ಪ್ರಬಂಧ ಸಂಕಲನ ಪ್ರಕಟವಾದದ್ದು ಬಹುಶಃ 1898ರಲ್ಲಿ ಎಂದು ತೋರುತ್ತದೆ. ಅದು ಲೋಕ ರಹಸ್ಯ: ಬಂಕಿಮ ಚಂದ್ರರ ಬಂಗಾಳೀ ಪ್ರಬಂಧಗಳ ಕನ್ನಡ ಅನುವಾದ. ಬಂಕಿಮ ಚಂದ್ರರ ಅನೇಕ ಕಾದಂಬರಿ ಗಳನ್ನು ಕನ್ನಡಕ್ಕೆ ತಂದ ಬಿ. ವೆಂಕಟಾಚಾರ್ಯರೇ ಇದನ್ನು ಅನುವಾದ ಮಾಡಿದ ವರು. ಅನಂತರ ಪ್ರಕಟವಾದ ಮೊದಲ ಕನ್ನಡ ಪ್ರಬಂಧ ಸಂಕಲನ–ಲಲಿತ ಪ್ರಬಂಧಗಳದ್ದೇ ಅಲ್ಲ–ಆರ್. ಶ್ರೀನಿವಾಸರಾವ್ ಅವರ ವಿವೇಕಮಂಜರಿ. ಅದು

ಪ್ರಕಟವಾದದ್ದು 1912ರಲ್ಲಿ. ಮರುವರ್ಷವೇ, ಎಂದರೆ 1913ರಲ್ಲಿ ಬಹುಶಃ ಕನ್ನಡದ ಮೊಟ್ಟಮೊದಲನೆಯ ಸ್ವತಂತ್ರ ಲಲಿತ ಪ್ರಬಂಧ ಬಿ. ವೆಂಕಟಾಚಾರ್ಯರ ದಾಡಿಯ ಹೇಳಿಕೆ ಪ್ರಕಟವಾಯಿತು. ಅವರ ಮರುವರ್ಷ, 1914 ಮತ್ತೆರಡು ಸ್ವತಂತ್ರ ಕೃತಿಗಳು ಬೆಳಕು ಕಂಡವು. ಒಂದು ಬಿ. ವೆಂಕಟಾಚಾರ್ಯರ ಚಿತ್ರ ವಿಚಿತ್ರಾವಳಿ. ಎರಡನೆಯದು ಪರೀಕ್ಷೆಯಲ್ಲಿ ಅನುತ್ತೀರ್ಣನಾದ ವ್ಯಕ್ತಿಯೊಬ್ಬನನ್ನು ಸ್ವಾನುಭವ ನಿರೂಪಣೆಯಾದ ಕಲಿಯುಗ ಸುಧನ್ವ. ಅದನ್ನು ಬರೆದವರು ಕೆ. ಲಕ್ಷ್ಮಣರಾವ್. ಮುಂದಿನ ಕೆಲವು ವರ್ಷಗಳ ಮೂರು ಉಲ್ಲೇಖನಾರ್ಹ ಕೃತಿಗಳೆಂದರೆ ಬಾಳಾಜಿ ಕೃಷ್ಣ ಹಳಪೇಟೆಯವರ ಎಲ್ಲಿದೆ ಸ್ತ್ರೀಯರಿಗೆ ಸೌಂದರ್ಯವು?–(1923), ಸಳಕೆರೆ ಜಯರಾವ್ ಅವರ ಒಂದು ಗಳಿಗೆ ಮೋಜು (1925) ಮತ್ತು ರಾಘವೇಂದ್ರ ಕೇಶವರಾವ್ ತಡಸ ಅವರ ಇತ್ಯಾದಿಯ ಆತ್ಮವೃತ್ತ ಕಥನ (1927). ಕನ್ನಡ ಪ್ರಬಂಧಗಳ ಚರಿತ್ರೆಯಲ್ಲಿ ಇದು ಜನನ ಬಾಲ್ಯಗಳ ಘಟ್ಟ. ಸುಮಾರು ಇಪ್ಪತ್ತೊಂಬತ್ತು ವರ್ಷಗಳ ಅವಧಿಯನ್ನು ಗಮನಿಸಿದರೆ ರಚಿತವಾದ ಲಲಿತ ಪ್ರಬಂಧಗಳ ಸಂಖ್ಯೆ ತೀರ ಕಡಿಮೆ. ಅಲ್ಲದೆ ಅವುಗಳ ರಚಕರು ಯಾರೂ ಪ್ರಬಂಧಕಾರರು ಎಂದು ಹೆಸರು ಗಳಿಸಿದವರೂ ಆಗಲಿಲ್ಲ.

ಲಲಿತ ಪ್ರಬಂಧಗಳ ಇತಿಹಾಸದ ಎರಡನೆಯ ಘಟ್ಟದ ಆರಂಭವರ್ಷ 1931 ಎಂದು ಇಟ್ಟುಕೊಳ್ಳಬಹುದು. ಅದು ಚಿರಸ್ಮರಣೀಯವಾದ ವರ್ಷ. ಕನ್ನಡದ ಲಲಿತ ಪ್ರಬಂಧಕಾರರಲ್ಲಿ ಆಚಾರ್ಯಪಟ್ಟ ಗಳಿಸಿದ ಅನೇಕ ಪ್ರಸಿದ್ಧರು ಈ ಸಾಹಿತ್ಯಪ್ರಕಾರದಲ್ಲಿ ಕೈಯಾಡಿಸತೊಡಗಿದ್ದು, ಅಥವಾ ತಮ್ಮ ಕೃಷಿಯ ಫಲವನ್ನು ಸಂಕಲನಗಳ ರೂಪದಲ್ಲಿ ಪ್ರಕಟಿಸಿದ್ದು ಆ ವರ್ಷವೇ. ಮೊದಲನೆಯದಾಗಿ ಅನೇಕ ದೃಷ್ಟಿಗಳಿಂದ ತುಂಬ ಸ್ವಾರಸ್ಯಕರವಾದ ಪ್ರಬಂಧಗಳನ್ನು ರಚಿಸಿ, ಪುಲ್ಲಯ್ಯನ ಪ್ರಬಂಧಗಳು ಎಂದು ಎರಡು ಭಾಗಗಳಲ್ಲಿ ಪ್ರಕಟಿಸಿದ ಎಂ. ಜಿ. ವೆಂಕಟೇಶಯ್ಯನವರನ್ನು ಹೆಸರಿಸಬೇಕು. 22 ಪುಟಗಳ ಎರಡನೆಯ ಭಾಗದಲ್ಲಿ ನಾಲ್ಕು ಪ್ರಬಂಧಗಳಿವೆ: ಜೈಲ್ದರ್ಶನ, ಶೈಲಿ, ಮೀಸೆ, ಮತ್ತು ಮುಖಸ್ತುತಿ. ಪುಟ ಸಂಖ್ಯೆಯನ್ನೂ ಪ್ರಬಂಧಗಳ ತಲೆಬರಹಗಳನ್ನೂ ಕೊಟ್ಟಿದ್ದರ ಉದ್ದೇಶ ಪ್ರಬಂಧಗಳ ವಸ್ತುವೈವಿಧ್ಯವನ್ನೂ ಸರಾಸರಿ ಹರವನ್ನೂ ತಿಳಿಸುವುದು. ಪ್ರಬಂಧಕಾರರು ಒಮ್ಮೆ ಜೈಲನ್ನು ನೋಡಲು ಹೋದದ್ದು ಮೊದಲ ಪ್ರಬಂಧದ ವಸ್ತು. ದಾರಿಯಲ್ಲಿ ಅವರಿಗೆ ಹೋಟೇಲಿನಲ್ಲಿ ಆದ ಅಷ್ಟೇನೂ ಮಧುರವಲ್ಲದ ಅನುಭವವನ್ನು ಪ್ರಸ್ತಾಪ ಮಾಡುತ್ತಾರೆ. ಇಂಥ ಪ್ರಬಂಧಗಳ ಲಕ್ಷಣ ಅವರಿಗೆ ಗೊತ್ತು. ಆದುದರಿಂದ ಆ ಅನುಭವದ ನಿರೂಪಣೆ ಅವರಿಗೆ ಅಪ್ರಸ್ತುತ ಎನಿಸಲಿಲ್ಲ. ಅಲ್ಲದೆ ಜೈಲಿನಲ್ಲಿ ಕಂಡದ್ದೆಲ್ಲವನ್ನೂ ಅವರು ವರ್ಣಿಸುವುದೂ ಇಲ್ಲ. ಆದ್ದರಿಂದ ಬರಿಯ ವಿಷಯನಿರೂಪಣೆ ತಮ್ಮ ಕರ್ತವ್ಯವಲ್ಲ ಎಂಬುದನ್ನೂ ಅವರು ಬಲ್ಲರು. ಮಧ್ಯೆ ನುಸುಳುವ ಹಾಸ್ಯದ ತುಣುಕುಗಳನ್ನು ಗಮನಿಸಿದರೆ ನಮ್ಮ ಮನಸ್ಸು ಭಾರವಾಗಬಾರದು ಎಂಬ ಎಚ್ಚರಿಕೆಯಲ್ಲಿ ಅವರಿದ್ದಾರೆ ಎಂಬುದೂ ಕಾಣುತ್ತದೆ. ಇನ್ನು ಎರಡನೆಯದಾದ ಶೈಲಿಯೆಂಬ ಪ್ರಬಂಧ. ಪ್ರಬಂಧದ ಲಕ್ಷಣಗಳನ್ನು ಅದು ಹದವಾಗಿ ಒಳಗೊಂಡಿದೆಯಾಗಿ ಅದರ ವಿವರವಾದ ಪರಿಶೀಲನೆ ಉಪಯುಕ್ತವಾದದ್ದು. ಲೇಖಕರು ಶೈಲಿಯ ವಿಚಾರ ಯೋಚಿಸುತ್ತಿದ್ದರು. ಅಲೆಕ್ಸಾಂಡರ ಪೋಪನ ಒಂದು ಲಕ್ಷಣ ನಿರೂಪಣೆ—ಶೈಲಿ ಯೋಚನೆಯ ಉಡಿಗೆತೊಡಿಗೆ—ಎಂಬುದು ಅವರಿಗೆ ಸಿಕ್ಕಿಬಿಟ್ಟಿತು. ಆದರಿಂದ ತೊಂದರೆಗಳ ಪರಂಪರೆಯೇ ಪ್ರಾಪ್ತವಾಯಿತು. ಯಾವ ವಾಕ್ಯವನ್ನು ಎಲ್ಲಿ ಓದಿದರೂ ಉಡಿಗೆತೊಡಿಗೆಗಳೇ ಕಣ್ಣುಮುಂದೆ ಕಾಣಲು ಪ್ರಾರಂಭವಾಯಿತು. ಈ ಮುಂದಿನ ಮಾತುಗಳೆಲ್ಲ ಪ್ರಬಂಧಕಾರರದ್ದು :

ನನಗೆ ಅನುಕೂಲಕ್ಕೆ ಬದಲಾಗಿ ದಾರೀಲಿ ಹೋಗೋ ಮಾರಮ್ಮ ಮನೆಗೆ ಬಂದು ಹೋಗು ಎಂದ ಹಾಗಾಯಿತು–ಯಾವುದು ಓದಲಿ, ಎಲ್ಲಿ ಓದಲಿ, ಯಾತಕ್ಕೆ ಓದಲಿ, ಈ ಶೈಲಿ ಎಂಬೋದು ದೊಡ್ಡ ಮಾರ್ಭೂತವಾಗಿ ಮುಂದೆ ಬಂದು ನಿಂತುಕೊಂಡು ಬರೋದೆ !

ಶಾಂಭವೀ ವರ ರಘಟ ಝ್ಝುಂಬಿತ ಶಬ್ದ ಸುಮಕುಂಭಿತ ಎಂದು ಓದೋ ಹೊತ್ತಿಗೆ ದರ್ಬಾರ್ ಪೋಷಾಕು ಮುಂದೆ ಬಂದು ನಿಲ್ಲೋದೆ! ಆ ಬಿಳೀ ಷರಾಯಿ ಕರೀ ಲಾಂಗ್ ಕೋಟು, ಕಾಲಿಗೇನೂ ಇಲ್ಲದೆ ನಡುವಿಗೆ ಕಂಬರ್‌ಬಂದ್ ಇವೆಲ್ಲಾ ಎದುರಿಗೆ ಸಿದ್ಧ.

ಸಕಲಗ್ರಹಬಲ ನೀನೆ ಸರಸಿಜಾಕ್ಷ—ಎಂದು ಓದಿದಾಗ, ಮನೇಲಿ ಬೇಕಾದರೆ ಹಾಕಿಕೊಳ್ಳೋ ಉಡಿಗೆತೊಡಿಗೆ.

ಕ್ರಿಸ್ತಾಬ್ದ ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಭರತಖಂಡದ ಧಾರ್ಮಿಕ ಮತ್ತು ಸಾಮಾಜಿಕ ಸ್ಥಿತಿಯು–ರಾಯರು ಆಫೀಸಿಗೆ ಡ್ರೆಸ್ ಮಾಡಿಕೊಂಡು ಹೊರಟಿದ್ದಾರೆ.

ಮಲೆನಾಡೆಂದರೆ ಕೆಲವರಿಗೆ ಬೇಸರ, ಅಸಹ್ಯ, ಜಿಗುಪ್ಸೆ ! ನಮ್ಮ ಕಡೆ ಗೋಲ್ ಕೀಪರ್ ಇವತ್ತೇನು ಷರಾಯಿ ಹಾಕಿಕೊಂಡು ಬಂದಹಾಗಿದೆ !

ಉಡುಪಿಯು ಮಹಾಕ್ಷೇತ್ರ. ಉಡುಪಿಯ ಕೃಷ್ಣನಂತೂ ಎಲ್ಲರ ಎದೆಯ ಆನಂದ ದೈವ–ನಿತ್ಯವೂ ಹಾಕಿಕೊಳ್ಳೋ ಕಚೇರಿ ಉಡುಪು ಇದ್ದೇ ಇದೆ. ಎಲ್ಲೋ, ಆ ಅಂಚಿನ ಪಂಚೆ ಹೀಗೆ ಹಾಕು ; ಇವತ್ತಾದರೂ ಹಾಗೆ ತಮಾಷೆಯಾಗಿ ಹೋಗಿ ಬಿಟ್ಟು ಬರುತ್ತೇನೆ.

ಹೀಗಾಗಿ ಏನು ಓದುವುದಕ್ಕೆ ಮೊದಲು ಮಾಡಿದರೂ ಈ ಪೋಷಾಕುಗಳೇ ಕಣ್ಣಿಗೆ ಕಟ್ಟಿದ ಹಾಗೆ ಆಗಿಹೋಗಿದೆ. ಕೆಲವನ್ನು ಓದುತ್ತಾ ಹೋದರೆ, ಮೈಸೂರು ರುಮಾಲ್, ಕ್ಲೋಸ್‌ಕಾಲರ್ ಕೋಟು, ಮೂರು ಬೆಟ್ಟಗಳ ರೇಷ್ಮೆ ಅಂಚಿನ ಪಂಚೆ, ಕಾಲಿಗೆ ಚಟುಕು ಪಟುಕು, ಹೊದ್ದುಕೊಂಡಿರೋ ವಲ್ಲಿ—ಇವೆಲ್ಲ ಕಾಣೋದೆ !

ಆಡುಮಾತಿನ ರೂಪಗಳನ್ನು ಅಲ್ಲಲ್ಲಿ ಬಳಸಿ, ಯಾವುದನ್ನೂ ಮಿತಿಮೀರಿ ಬೆಳಸದೆ, ಹದವಾದ ಹಾಸ್ಯವನ್ನು ಬೆರಸಿ ವೆಂಕಟೇಶಯ್ಯನವರು ಲಲಿತ ಪ್ರಬಂಧಗಳನ್ನು ರಚಿಸಿದ್ದಾರೆ.

ಇದೇ ವರ್ಷ ಪ್ರಕಟವಾದ ಇನ್ನೊಂದು ಗಮನಾರ್ಹ ಸಂಕಲನ ಹರಟೆಗಳು (ಹನ್ನೆರಡು ಹಾಸ ಪರಿಹಾಸಗಳು). ದ. ರಾ. ಬೇಂದ್ರೆ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ, ಚೆನ್ನಮಲ್ಲಪ್ಪ ಹಲಸಂಗಿ ಮುಂತಾದವರ ವೈಶಿಷ್ಟ್ಯಪೂರ್ಣ ಲಲಿತ ಪ್ರಬಂಧಗಳು ಇದರಲ್ಲಿವೆ.

ಪ್ರಬಂಧಕಾರರಾಗಿ ದೀರ್ಘಕಾಲ ಕೆಲಸ ಮಾಡಿದ ಪು.ತಿ.ನ. ತಮ್ಮ ರಾಮಾಚಾರಿಯ ನೆನಪು ಎಂಬುದನ್ನು ಪ್ರಕಟಿಸಿದ್ದೂ ಇದೇ ವರ್ಷವೇ. ಅವರು ಇದನ್ನು ಭಾವನಾಚಿತ್ರಗಳು ಎಂದು ಕರೆದಿದ್ದಾರೆ. ಅವರೇ ಹೇಳುವಂತೆ ಇಲ್ಲಿರುವ ಬರೆಹಗಳು ಒಂದು ಮುಖದಲ್ಲಿ ಪ್ರಬಂಧಗಳನ್ನು ಹೋಲುತ್ತವೆ. ಮತ್ತೊಂದು ಮುಖದಲ್ಲಿ ಕಥೆಗಳಂತಿವೆ. ಇಲ್ಲಿ ಲಘುಪ್ರಬಂಧ ಎಂದು ಕರೆಯಬಹುದಾದದ್ದು ಹಹ್ಹಾ, ಒಂದು ನಕ್ಷತ್ರ ಎಂಬುದು. ಮನೆಯ ಸೂರಿನ ತೂತು ನಕ್ಷತ್ರದಂತೆ ಕಂಡಿದ್ದರ ವರ್ಣನೆ ಇಲ್ಲಿದೆ. ಕವಿಯಾದ ಇವರನ್ನು ಅದು ಸಹಜವಾಗಿಯೇ ಭಾವನಾಲೋಕಕ್ಕೆ ಅಟ್ಟಿತು.



ಎ. ಎನ್. ಮೂರ್ತಿರಾವ್

ಇನ್ನು ಕಾಲಕ್ರಮದ ನಿರೂಪಣೆಯ ಕ್ರಮವನ್ನು ಅನಿವಾರ್ಯವಾಗಿ ಕೈಬಿಟ್ಟು ಪ್ರಮುಖ ಪ್ರಬಂಧಕಾರರ ಬರೆವಣಿಗೆಯ ನಿರೂಪಣೆಯನ್ನು ಅನುಸರಿಸಬೇಕಾಗಿದೆ ಲಲಿತಪ್ರಬಂಧಕಾರರ ಪಂಕ್ತಿಯಲ್ಲಿ ಅಗ್ರಸ್ಥಾನದಲ್ಲಿ ನಿಲ್ಲುವವರಲ್ಲಿ ಒಬ್ಬರು ಎ. ಎನ್. ಮೂರ್ತಿರಾವ್. ತಮ್ಮ ಅಪೂರ್ವ ಪ್ರಬಂಧಶಕ್ತಿಯನ್ನು ತಮ್ಮ ಮೂರು ಸಂಕಲನಗಳಲ್ಲಿ ಅವರು ತೋರಿಸಿದ್ದಾರೆ. ಅವರ ಮೊದಲನೆಯ ಸಂಕಲನ ಹಗಲುಗನಸುಗಳು (1937). ಅದರ ಮೊದಲ ಪ್ರಬಂಧ ಗೌರಜ್ಜಿ. ತಮಗೆ ತಿಳಿದ ಒಬ್ಬ ವ್ಯಕ್ತಿಯನ್ನು ಚಿತ್ರಿಸಹೊರಟಿದ್ದರೂ ಅಲ್ಲಿರುವುದು ಒಬ್ಬ ವ್ಯಕ್ತಿಯ ಇತಿಮಿತಿಗಳನ್ನು ಮೀರಿ, ಸಾಧಾರಣೀಕರಣವನ್ನು ಪಡೆದ ಚಿತ್ರ, ಯಾರದೇ ಮನೆಯಲ್ಲೂ ಇರಬಹುದಾದ, ಒಂದು ತಲೆಮಾರಿನ ಪ್ರತಿನಿಧಿಯೆನ್ನುವಂಥ ಒಬ್ಬ ವ್ಯಕ್ತಿಯ ಚಿತ್ರ. ತಮ್ಮ ಹೃದಯದ ಪರಿಪಕ್ವತೆಯಿಂದ ಯಾರದೇ ವ್ಯಕ್ತಿತ್ವವನ್ನೂ ಸಹಾನುಭೂತಿಯಿಂದ, ವಸ್ತುನಿಷ್ಠವಾಗಿ ನೋಡುವ ಶಕ್ತಿ ಲೇಖಕರಿಗೆ ಸಿದ್ಧಿಸಿವೆ. ಮೂರ್ತಿರಾಯರದ್ದು ತೂಕ ತಪ್ಪದ ಅಚ್ಚಗನ್ನಡ ಶೈಲಿ. ಗೌರಜ್ಜಿ ತಮ್ಮ ಇಳಿ ವಯಸ್ಸಿನಲ್ಲಿ ಹಳೆಯ ಕಷ್ಟಸುಖಗಳನ್ನು ನೆನಪು ಮಾಡಿಕೊಂಡು ಹೇಳುತ್ತಿದ್ದುದನ್ನು ಪ್ರಬಂಧಕಾರರು ವರ್ಣಿಸುತ್ತಾರೆ : 'ಕೊನೆಗೆ ಅವರು ತಮ್ಮ ಅತ್ತೆಯ ಕಿರುಕುಳದ ವಿಷಯ ಹೇಳುವಾಗಲೂ ಅವರ ಸಲುವಾಗಿ ನಮಗೆ ಕೋಪ ಬರುತ್ತಿತ್ತೇ ಹೊರತು ಆಕೆಯ ಮನಸ್ಸಿನಲ್ಲೇನೂ ಕೋಪವಿರುತ್ತಿರಲಿಲ್ಲ. ಅವರ ಅತ್ತೆಯ ವಿಷಯದಲ್ಲಿ ಆಕೆಗೆ ಒಂದು ವಿಧವಾದ ಮೆಚ್ಚಿಕೆಯೇ ಇದ್ದಂತೆ ತೋರುತ್ತದೆ. ಸಂಜೆಯ ಹೊಂಬಿಸಿಲಿನಲ್ಲಿ ದೂರದಲ್ಲಿರುವ ಗಿಡಮರಗಳಿಲ್ಲದ ಬರಿಯ ಕಲ್ಲು ಬೆಟ್ಟಕ್ಕೂ ಚಿನ್ನದ ಮೆರುಗು

ಬರುವುದು ; ಹಾಗೆಯೇ ಜನಗಳಿಗೆ ವಯಸ್ಸಾದ ಮೇಲೆ ಹಿಂದಿನ ಕಾಲಕ್ಕೆ ಸಂಬಂಧಪಟ್ಟದ್ದೆಲ್ಲ ಒಂದು ಕಾಂತಿಯನ್ನು ತಳೆದಂತೆ ತೋರಬಹುದು. ಅಥವಾ ಬಹುಕಾಲ ಸಂಸಾರದ ಸುಖದುಃಖಗಳಲ್ಲಿ ನುರಿತು ಪರಿಪಕ್ವವಾದ ಅವರ ಹೃದಯಕ್ಕೆ ಮಾನವ ಮನೋಧರ್ಮದಲ್ಲಿ ಇತರರಿಗೆ ಸಿಕ್ಕದ ಯಾವುದೋ ಒಂದು ಅಮೂಲ್ಯ ರಹಸ್ಯವು ಸಿಕ್ಕಿ, ಇತರರಿಗೆ ದೊಡ್ಡದಾಗಿ ಕಾಣುವ ಹುಳುಕುಗಳೆಲ್ಲ ಅತ್ಯಲ್ಪವಾಗಿ ತೋರುವುವೋ ಏನೋ.' ಹಾಗೆಯೇ ಈ ಸಂಕಲನದ ಇತರ ಆರು ಪ್ರಬಂಧಗಳೂ ಪ್ರಬಂಧಕಾರರ ಜೀವನಾನುಭವವನ್ನೂ ತಿಳಿಹಾಸ್ಯವನ್ನೂ ಆತ್ಮೀಯತೆಯ ಗುಣವನ್ನೂ ಪ್ರದರ್ಶಿಸುತ್ತ ಉತ್ತಮ ಲಲಿತ ಪ್ರಬಂಧಗಳ ಸಾಲಿಗೆ ಸೇರುತ್ತವೆ. ಮೂರ್ತಿರಾಯರ ಮುಂದಿನ ಎರಡು ಪ್ರಬಂಧ ಸಂಕಲನಗಳೂ—ಅಲೆಯುವ ಮನ (1957) ಮತ್ತು ಮಿನುಗು ಮಿಂಚು (1962)—ಅವರಿಗೆ ಈ ಕ್ಷೇತ್ರದಲ್ಲಿ ಆಚಾರ್ಯ ಪಟ್ಟ ದೊರಕಿಸಲು ನೆರವಾಗಿದೆ. ಮೂರ್ತಿರಾಯರ ಪ್ರಬಂಧಗಳ ಸಮಸ್ತ ಲಕ್ಷಣಗಳನ್ನೂ ಅ. ರಾ. ಮಿತ್ರ ಸುಂದರವಾಗಿ ಸಂಗ್ರಹಿಸಿ (ಚಿನ್ನದ ಬೆಳಸು) ನಿರೂಪಿಸಿದ್ದಾರೆ : ಲಲಿತವಾದ ಬರೆವಣಿಗೆ, ಉದ್ದಕ್ಕೂ ಚಿಮ್ಮುವ ತಿಳಿಹಾಸ್ಯವಾಹಿನಿ, ನವಪ್ರಣಯಿಗಳ ಮನೋವ್ಯಾಪಾರದ ಸೂಕ್ಷ್ಮ ವಿಶ್ಲೇಷಣೆ, ಗಂಭೀರ ವಿಷಯಗಳ ನೈತ್ರಿಕೊಂಡು ಹಗುರವಾದ ಶೈಲಿಯಲ್ಲೇ ನಡೆಸುವ ಮಾರ್ಮಿಕ ಹೃದ್ಬೋಧಕ ವಿಮರ್ಶೆ, ಎಲ್ಲ ಮಗ್ಗುಲುಗಳನ್ನು ಕಾಣಿಸುತ್ತ ಸಾಗುವ ವಿಚಾರಪುಷ್ಟಿ, ನಿರ್ಜೀವ ವಸ್ತುಗಳ ವಿವರಣೆಯಲ್ಲಿಯೂ ಕಂಡುಬರುವ ನಾಟ್ಯಶಕ್ತಿ—ಇಂಥ ಹಲವು ಗುಣಗಳು ಇವರ ಪ್ರಬಂಧಗಳಿಗೆ ವಿಶಿಷ್ಟತೆಯನ್ನು ತಂದುಕೊಟ್ಟಿವೆ. ಲೇಖಕನ ಆತ್ಮದ ವಿಶೇಷ ಲಕ್ಷಣಗಳನ್ನು ಪೃಥಕ್ಕಾಗಿ ತೋರಿಸುವಲ್ಲಿ ಇವರ ಪ್ರಬಂಧಗಳು ತುಂಬ ಯಶಸ್ವಿಯಾಗಿವೆ.

ಬಹು ಉತ್ತಮ ಮಟ್ಟದ ಮತ್ತೊಬ್ಬ ಪ್ರಬಂಧಕಾರರು ವಿ.ಸೀ. ಅವರಿಗೆ ಈ ಕ್ಷೇತ್ರದಲ್ಲಿ ಅಳಿಯದ ಕೀರ್ತಿಯನ್ನು ತಂದ ಪ್ರಬಂಧ—ಬಹುಶಃ ಮೈಸೂರು



ವಿ. ಸೀತಾರಾಮಯ್ಯ

ರುಮಾಲು. ಕಾಯಿಲೆಗಳು ಎಂಬ ಪ್ರಬಂಧವೂ ಅಷ್ಟೇ. ವಿ.ಸೀ. ಅವರ ಮನಸ್ಸು ಇಂಥ ಸಾಹಿತ್ಯವಿಚಾರಕ್ಕೆ ಗರಿಮೂಡಿ ನಿಂತದ್ದು. ನೂರು ಕಡೆ ಹಾರಿ, ನೂರು ವಿಷಯಗಳನ್ನು ಮೆಟ್ಟಿ, ತಾವು ಆಡುತ್ತಿರುವ ಮಾತಿಗೆ ಬಣ್ಣವನ್ನು ಮಾಧುರ್ಯವನ್ನು ತರುವ ಶಕ್ತಿ ಅವರದ್ದು. ಅವರ ಅಧ್ಯಯನದ ವ್ಯಾಪ್ತಿ, ಅವರು ಆಸಕ್ತಿಗಳನ್ನು ಬೆಳೆಸಿಕೊಂಡಿರುವ ವಿಷಯಗಳ ಸಂಖ್ಯೆ ಹೆಚ್ಚು ಮಂದಿ ಲೇಖಕರಲ್ಲಿ ಅಪೂರ್ವವಾದದ್ದು. ಅಲ್ಲದೆ ಮಾತಿನ ಕಲೆ ಅವರಿಗೆ ಮೀಸಲಾದದ್ದು. ಇವೆಲ್ಲ ಅವರ ಪ್ರಬಂಧಕ್ಕೆ ಗುಣ ಬಣ್ಣಗಳನ್ನು ತರತಕ್ಕ ಅಂಶಗಳಾಗಿದ್ದು ಅವರ ಪ್ರಬಂಧಗಳು ಯಾವುದೇ ಭಾಷೆಯ ಅತ್ಯುತ್ತಮ ಪ್ರಬಂಧಗಳಿಗೆ ಸರಿಸಮವಾಗಿ ನಿಲ್ಲಬಲ್ಲವಾಗಿವೆ. ಆಡುಮಾತಿನ ನೂರಾರು ವೈಖರಿಗಳನ್ನು ವಿ.ಸೀ. ನಿರರ್ಗಳವಾಗಿ ಉದ್ದಕ್ಕೂ ಬಳಸುತ್ತಾರೆ. ಅವರ ಸಂಕಲನಗಳು ಬೆಳುದಿಂಗಳು (1959) ಮತ್ತು ಸೀಕರಣೆ (1970) ಎಷ್ಟು ಸಲ ಓದಿದರೂ ಉಲ್ಲಾಸವನ್ನು ಹೆಚ್ಚಿಸತಕ್ಕವು. ಮೈಸೂರು ರುಮಾಲು ಪ್ರಬಂಧದ ಕೆಲವು ವಾಕ್ಯಗಳನ್ನು ನೋಡಬಹುದು: ಹೆಂಗಸಿನ ಮನಸ್ಸನ್ನಳೆಯಬಹುದು ; ನೀರಿನಲ್ಲಿರುವ ಮೀನಿನ ಕಾಲನ್ನು ಕಾಣಬಹುದು : ಅದೃಷ್ಟದಲ್ಲಿ ಏನು ಬರೆದಿದೆಯೆಂದು ಗುಣಿಸಬಹುದು. ಆದರೆ ರುಮಾಲನ್ನು ಕೆಡಿಸದೆ ಯಾವಾಗಲೂ ಸರಿಯಾಗಿಯೇ ಕಟ್ಟುತ್ತೇನೆನ್ನುವುದು ಒಂದು ಮಾತ್ರ ಅಸಾಧ್ಯ. ಸುಮ್ಮನೆ ನಮ್ಮನ್ನು ಸೊಗಸುಗಾರರು, ಬಯಲು ಡಂಬದವರು ಎಂದು ತಿಳಿಯದವರು ಆಕ್ಷೇಪಣೆ ಮಾಡುತ್ತಾರೆ. ಒರಟು ಜನ. ಈ ಸುಖ, ಈ ನಯ, ಈ ಸುಖದ ಈ ನಯ, ಈ ನಯದ ಈ ಸುಖ, ಇವು ಅನುಭವಿಸಿದವರಿಗೆ ಮಾತ್ರ ಗೊತ್ತು. ಇತರರಿಗೆ ಹೇಗೆ ಗೊತ್ತಾದೀತು ? ಸತ್ಕಾವ್ಯ ಸಿಕ್ಕಿದರೆ ಭೇಷ್, ಇದು ರಸವತ್ಕಾವ್ಯ ಎಂದು ಅದರ ಸವಿಯನ್ನು ಅನುಭವಿಸಿ ಹೇಗೆ ಆನಂದಿಸುವೆವೊ ಒಳ್ಳೆಯ ರುಮಾಲನ್ನು ಕಂಡಾಗಲೂ ಹಾಗೆಯೇ ಮೆಚ್ಚಿ ಅದಕ್ಕೆ ಕೈಮುಗಿಯುತ್ತೇವೆ. ಆದರೂ ಅನುಭವಸ್ಥರಾದ ನನ್ನಂಥವರು ಹೀಗೆ ಮಾಡಬೇಡಿ, ಹಾಗೆ ಮಾಡಬೇಡಿ ಎಂದು ಒಂದೆರಡು ನಿಷೇಧ ಸೂಚನೆಗಳನ್ನು ಮಾತ್ರ ಕೊಡಬಹುದು. ಕಣ್ಣಿನಲ್ಲಿ ನೀರು ಸುರಿಸಿ–ನೀರು ಸುರಿಯುವ ಕಣ್ಣಲ್ಲಿ ರಕ್ತ ಸುರಿಸಿ, ನೊಂದು ಬಳಲಿ ಪಡೆದುಕೊಂಡಿದ್ದರೇನೇ ಅನುಭವಕ್ಕೆ ಅನುಭವವೆಂಬ ಹೆಸರು ಸಲ್ಲಬೇಕಾದರೆ ! ಎಷ್ಟು ನೊಂದಿದ್ದರೆ ಅಷ್ಟೂ ಅಷ್ಟು ಆ ಅನುಭವಕ್ಕೆ ಗೌರವ ಹೆಚ್ಚು.

ಕಾವ್ಯಕ್ಷೇತ್ರದಂತೆಯೇ ಪ್ರಬಂಧ ಕ್ಷೇತ್ರದಲ್ಲಿಯೂ ವಿಜಯವನ್ನು ಸಾಧಿಸಿದವರು ಪು.ತಿ.ನ. ಅವರ ರಾಮಾಚಾರಿಯ ನೆನಪು ಸಂಕಲನದಲ್ಲಿ ಒಂದು ಒಳ್ಳೆಯ ಪ್ರಬಂಧ ಇದೆ ಎಂದು ಮೇಲೆ ಹೇಳಿದೆ. ಅನಂತರದ ಸಂಕಲನಗಳು ರಥಸಪ್ತಮಿ ಮತ್ತು ಇತರ ಚಿತ್ರಗಳು (1945). ಈಚಲು ಮರದ ಕೆಳಗೆ (1949) ಮತ್ತು ಧೇನುಕ ಪುರಾಣ (1967)—ಎಷ್ಟು ವೈವಿಧ್ಯಪೂರ್ಣವಾದ ಪ್ರಬಂಧಗಳನ್ನು ಪು.ತಿ.ನ. ಅವರು ರಚಿಸಬಲ್ಲರು ಎಂಬುದಕ್ಕೆ ಸಾಕ್ಷಿಯಾಗಿವೆ. ಇವರ ಅಂತರಂಗದ ಅನಂತ ಪದರಗಳಲ್ಲಿ ಒಂದು ಕಾವ್ಯವಾದರೆ ಮತ್ತೊಂದು ಚಿಂತನೆ. ಬದುಕನ್ನು ಮುಟ್ಟಿಯೂ ಮುಟ್ಟದಂತೆ ನಿಂತಿರುವ ಜೀವನಯೋಗ ಇವರಿಗೆ ಸಿದ್ಧಿಯಾಗಿದೆಯಾಗಿ ಪ್ರತಿಯೊಂದನ್ನೂ ಮಂದಹಾಸದಿಂದ ಇವರು ಮಾತನಾಡಿಸಬಲ್ಲರು. ಹೀಗಾಗಿ ಈ ಎಲ್ಲ ಲಕ್ಷಣಗಳೂ ಇವರ ಪ್ರಬಂಧಗಳಲ್ಲಿ ಹದವಾಗಿ ಬೆರೆತಿವೆ. ಈಚಲು ಮರದ ಕೆಳಗೆಎಂಬ ಸಂಕಲನದಲ್ಲಿನ ಪ್ರಬಂಧಗಳು ಮುಖ್ಯವಾಗಿ ಚಿಂತನಾಪ್ರಧಾನವಾದುವು. ತಮ್ಮ ಬರೆವಣಿಗೆಯ ಗುಣ–ದೋಷ ಎರಡನ್ನು ಅರಿತ ಅವರು ಪೀಠಿಕಾರೂಪವಾದ ತಮ್ಮ ಬಿನ್ನಹದಲ್ಲಿ ಅದಕ್ಕೆ ಮಾತುಕೊಟ್ಟಿದ್ದಾರೆ : ಈ ಬಂಧಗಳ ಧ್ಯೇಯ ಆಲೋಚನಾ ಪ್ರಚೋದನೆ, ಲೋಕದ ಡೊಂಕನ್ನು ತಿದ್ದಬೇಕೆಂಬ ಹಟ, ಹೊಸ ದೃಷ್ಟಿಯನ್ನು ಮೂಡಿಸಬೇಕೆಂಬ ಹಾಗೂ ಹೊಸ ತತ್ತ್ವಗಳನ್ನು ಹರಡಬೇಕೆಂಬ ಹಟ, ಇವೆರಡನ್ನೂ ಆದಷ್ಟು ಮಟ್ಟಿಗೆ ಹಿಡಿತದಲ್ಲಿಟ್ಟುಕೊಂಡು ಈ ಬರೆಹಗಳನ್ನು ಬರೆದಿದ್ದೇನೆ. ಇವೆರಡೂ ಇಲ್ಲಿನ ಲೇಖನಗಳಲ್ಲಿ ಅಲ್ಲಲ್ಲಿ ತಲೆ ಹಾಕಿದ್ದರೆ, ಅದು ನನ್ನ ದೌರ್ಬಲ್ಯವನ್ನು ತೋರಿಸುತ್ತದೆಯೇ ಹೊರತು, ಶಕ್ತಿಯನ್ನಲ್ಲ. ಸಂಸ್ಕೃತ ಶಬ್ದಗಳ ಪ್ರಾಚುರ್ಯ ಮತ್ತೊಂದು ಕುಂದು.

ಒಮ್ಮೆ ಚಿಂತನೆಯಿಂದ ಭಾರವಾಗಿ ಒಮ್ಮೆ ಕಾವ್ಯಸೌಂದರ್ಯದಿಂದ ಬಳುಕಿ, ಅನೇಕ ವಸ್ತುಗಳ, ಸಂಗತಿಗಳ ಅಂತರಂಗ ಜಗತ್ತಿಗೆ, ಪ್ರಕೃತಿಯ ಅಪರಿಚಿತ ಹೃದಯಕ್ಕೆ ನಮ್ಮನ್ನು ಕರೆದೊಯ್ಯುವ ಇವರ ಪ್ರಬಂಧಗಳು ಯಾವುದೇ ಸಾಹಿತ್ಯಕ್ಕೆ ಕೀರ್ತಿ ಕಳಶಗಳಾಗಬಲ್ಲಂಥವು. ಮಸಾಲೆ ದೋಸೆ ಎಂಬ ಪ್ರಬಂಧದ ಈ ಕೆಲವು ಪಂಕ್ತಿಗಳನ್ನು ನೋಡಿ: ನಿಜವಾಗಿ ಮಸಾಲೆ ದೋಸೆ ಕ್ರಾಂತಿಕಾರಕವಾದ ವಸ್ತುವೇನೋ ಹೌದು. ಅದು ಹಿಟ್ಟಿನ ಮುದ್ದೆಯಂತೆ ಸರಳವಾದ ಉಣಿಸಲ್ಲ. ಅದು ಬಹು ಸಂಕೀರ್ಣವಸ್ತು. ಅನೇಕ ತಂತಿಗಳಿಂದ ಕೂಡಿ ಶ್ರುತಿಗೆ ಸಿದ್ಧವಾದ ಪಿಟೀಲಿನ ಮೇಲೆ ಕುಶಲ ವಾದಕನು ಕಮಾನನ್ನು ಆಡಿಸುವ ಹಾಗಾಗುತ್ತದೆ. ಪ್ರವೀಣನಾದ ವಲಲನು ಹದವರಿತು ನಿರ್ಮಿಸಿದ ಮಸಾಲೆದೋಸೆಯ ಮೊದಲ ತುಣುಕು ರಸನೆಗೆ ಸೋಕಿದಾಗ, ಕಾಂತೆಯ ಪ್ರಣಯ ಕೋಪದಂತೆ ಅದು ಹೊರಗೆ ಕಟು, ಒಳಗೆ ಮೃದು. ಅಗ್ನಿಸಾಕ್ಷ್ಯವಾಗಿ ವರಿಸಿದ ಗೃಹಿಣಿಯೊಡನೆ ನಾವು ನಡೆಸುವ ಗಾರ್ಹಸ್ಥ್ಯದಂತಲ್ಲ, ಅದರೊಳಗಿನ ಮಸಾಲೆಯ ರುಚಿ. ಅನ್ಯಸ್ತ್ರೀ ಕಟಾಕ್ಷದಂತಿದೆ, ಆ ಪಲಾಂಡು ಮಾಧುರ್ಯ. ಇಂಗಿನ ಕಹಿ, ಮೆಂತ್ಯದ ಒಗಚು, ಹಸಿಶುಂಠಿ ಹಸಿ ಮೆಣಸಿನಕಾಯಿ ಮೆಣಸುಗಳ ವಿಶಿಷ್ಟವಾದ ಖಾರಗಳು, ಪಲ್ಯದ ಕಾಯಿಗಳ ವಿವಿಧ ಮಾಧುರ್ಯ, ಹಿಟ್ಟುಗಳ ಹುದುಗಿನ ಹಿತವಾದ ಹುಳಿ, ತುಪ್ಪದ ಕಂಪು, ಬೆಣ್ಣೆಯ ವಿಪುಲಾರ್ದ್ರತೆ—ಈ ಸಮೃದ್ಧ ರಸಗಳನ್ನು ಹೊಂದಿಸಿ ಸುತ್ತಲೂ ಕೆನ್ನಾಲಗೆಯನ್ನು ಚಾಚಿ ಕಾವಲಿಯ ಮೇಲಿರುವ ಭಕ್ಷ್ಯವನ್ನು ರುಚಿ ನೋಡಲು ಹವಣಿಸುವ ಅಗ್ನಿದೇವನನ್ನು ನೀರಿನಿಂದ ದಟ್ಟಿಸುತ್ತ ಕಣ್ಣಿಗೆ ನಾಲಗೆಯ ಹರಿತವನ್ನು ಕೊಟ್ಟು ಒಂದು ಕ್ಷಣವೂ ಹಿಂಚುಮುಂಚಿಲ್ಲದಂತೆ ಸಿದ್ಧ ಕ್ಷಣದಲ್ಲಿ ಎಲೆಗಿಳಿಸುವ ಕುಶಲ ಬಾಣಸಿಗನ ಕುಶಲಕೃತಿ ಈ ಮಸಾಲೆ ದೋಸೆ.

ಕಾವ್ಯದ ಹುಚ್ಚು ಇಲ್ಲದವನು ಪ್ರಬಂಧವನ್ನು ಬರೆಯಬಾರದು ಎಂಬುದೇ ನರಸಿಂಹಾಚಾರ್ಯರ ವಾದ.

ಕುವೆಂಪು ಅವರ ಮಲೆನಾಡಿನ ಚಿತ್ರಗಳು (1933) ಸಂಕಲನದಲ್ಲಿ ಉತ್ತಮ ಪ್ರಬಂಧಗಳಿವೆ. ಮಲೆನಾಡಿನ ಮಹಾರಣ್ಯವನ್ನು ನಿತ್ಯ ನಿವಾಸವನ್ನಾಗಿ ಮಾಡಿಕೊಂಡ ಕವಿಚೇತನ ಅಲ್ಲಿನ ರಸದೃಶ್ಯಗಳನ್ನು ರಸಸನ್ನಿವೇಶಗಳನ್ನು ಈ ಸಂಕಲನದ ಕೆಲವು ಪ್ರಬಂಧಗಳಲ್ಲಿ ಮನೋಹರವಾದ ರೀತಿಯಲ್ಲಿ ಚಿತ್ರಿಸಿದೆ. ಅವರ ಮಹಾಕಾವ್ಯದಲ್ಲಿ, ಮಹಾಕಾದಂಬರಿಗಳಲ್ಲಿ ಇನ್ನೂ ಎಷ್ಟೋ ಇಂಥವು ಲೀನವಾಗಿಹೋಗಿವೆ. ಅಷ್ಟರಮಟ್ಟಿಗೆ ಇಂಥ ಅನೇಕ ಸ್ವತಂತ್ರ ಸುಂದರ ಚಿತ್ರಗಳಿಂದ ಓದುಗರೂ ವಂಚಿತರಾಗಿದ್ದಾರೆ ಎನಿಸುತ್ತದೆ.

ಉಪವನ (1958) ಎಂಬ ಸಂಕಲನದಲ್ಲಿ ಒಂದೆರಡೇ ಪ್ರಬಂಧಗಳಿಂದ ಉತ್ತಮ ಪ್ರಬಂಧಕಾರರ ಪಂಕ್ತಿಯಲ್ಲಿ ಎಡೆ ಕಲ್ಪಿಸಿಕೊಂಡಿದ್ದಾರೆ, ಕವಿ ಕೆ.ಎಸ್. ನರಸಿಂಹಸ್ವಾಮಿ. ಮೋಹಕವಾದ ಗದ್ಯ, ನಾಲ್ಕು ಮಾತುಗಳಲ್ಲಿ ಸೊಗಸಾದ ಚಿತ್ರರಚನೆ—ಇವು ಅವರ ಪ್ರಬಂಧಗಳಿಗೆ ಮೆರುಗು ಕೊಟ್ಟಿರುವ ಲಕ್ಷಣಗಳು. ತುಂಗಭದ್ರ ಮತ್ತು ಸಿಟಿ ಬಸ್ಸುಗಳು ಉತ್ತಮ ಪ್ರಬಂಧಗಳು. ಈ ತುಂಗಭದ್ರ ಹೊಳೆಯಲ್ಲ ವರುಷದ ಮಗಳು—ಎಂಬ ತಮ್ಮದೇ ಕವನದ ಪಂಕ್ತಿಯನ್ನು ಉದ್ಧರಿಸಿ ಮೊದಲನೆಯ ಪ್ರಬಂಧವನ್ನು ಪ್ರಾರಂಭಿಸಿದ್ದಾರೆ. ಅನಂತರ ಅದು ಜುಳುಜುಳನೆ ಹರಿಯುವ ರೀತಿಯನ್ನು ನೋಡಿ: ನಮ್ಮ ತುಂಗಭದ್ರೆ ಹುಟ್ಟಿದ ಮೇಲೆ ನನ್ನ ಮನೋಧರ್ಮವೇ ಬದಲಾಯಿಸಿದೆ. ಒಂದು ಕಾಲದಲ್ಲಿ ನನ್ನ ಮನಸ್ಸಿನಲ್ಲಿ ಒಂದು ಬಗೆಯ ಸಿಡುಕು, ಅಬ್ಬರಗಳ ಸಿಡಿಲು ಮಿಂಚುಗಳು ಹೆಡೆಯಾಡುತ್ತಿದ್ದುವು: ಮಾತು ಮಳೆಯಂತೆ ಸುರಿಯುತ್ತಿತ್ತು. ಅದೊಂದು ಬಾಳಿನ ಮಳೆಗಾಲ. ಅದನ್ನು ದಾಟಿದ ಮೇಲೆ ಹಿಂದೆ ಆದುದನ್ನೆಲ್ಲ ನೆನೆದರೆ ಈಗ ನನಗೇ ನಗು ಬರುತ್ತದೆ. ಒಂದು ವೇಳೆ ನಾನು ಅದನ್ನೆಲ್ಲ ಮರೆತವನಂತೆ ಸುಮ್ಮನಿದ್ದೇನು; ಆದರೆ ಈ ಮೀನಾಕ್ಷಿ—ಸರ್ವಸಾಕ್ಷಿ—ಒಂದೊಂದು ಸಲ ಅರಿತೋ ಅರಿಯದೆಯೋ ಏನ್ರಿ ನೀವು ಹೀಗಿರಲಿಲ್ಲವಲ್ಲ? ಈಗೇನೋ ನನ್ನ ಪುಣ್ಯ! ಎಂದು ಹಳೆಯ ದಿನಗಳನ್ನು ಮಗುಚಿಹಾಕುವಾಗ ನನ್ನ ಜೀವ ಜಲ್ಲೆನ್ನುತ್ತದೆ. ಉಪಕಾರಿಗಳು ತಾವು ಮಾಡಿದ್ದನ್ನು ಆಡಬಾರದು ಎನ್ನುವುದು ಲೋಕನೀತಿ. ಇದು ಅಪಕಾರಿಗಳಿಗೂ ಅನ್ವಯಿಸುತ್ತದೆ. ನಾನು ಆಡಿದ್ದು ಮಾಡಿದ್ದು ಏನಿವೆಯೋ ಅವೆಲ್ಲ ಹೊಸಿಲ ಒಳಗಿದ್ದರೇ ಚೆನ್ನು ಎಂದು ನಾನು ಬಿಗಿ ಹಿಡಿದರೆ, ನಮ್ಮ ತುಂಗಭದ್ರೆ ಹೊಸಿಲ ದಾಟಿದ ದಿನವೇ ನನ್ನ ಅಂತರಂಗದ ನೆಳಲು ಬೆಳಕೆಲ್ಲ ಬೀದಿಗೆ ಬಂದದ್ದು ನನಗೆ ಇಷ್ಟವಲ್ಲ.

ಸಿಟಿ ಬಸ್ಸುಗಳನ್ನು ಕುರಿತ ಅವರ ಪ್ರಬಂಧದ ಮಾತುಗಳು ಇವು: ಕಾವ್ಯ ಬರೆಯದ, ಕಾವ್ಯ ಬರೆಯಲು ಇಷ್ಟವೋ ಸಾಮರ್ಥ್ಯವೋ ಇಲ್ಲದ, ಆದರೂ ಕಾವ್ಯ ಬೇಕು ಎನ್ನುವ ಜನಕ್ಕೆ ಕಾವ್ಯ ಒಲಿಯುವಂತೆ, ಶ್ರೀಮಂತರಲ್ಲದ, ವಾಹನ ಸೌಕರ್ಯವಿಲ್ಲದ ಬಡ ಜನಕ್ಕೆ ಸಿಟಿ ಬಸ್ಸು ಒಲಿದಿದೆ.........ಇದು ಸಿಟಿ ಬಸ್ಸಲ್ಲ ಗುಲಾಬಿಯ ಗುಡಿ.

ಕೆ. ಎಸ್. ನರಸಿಂಹಸ್ವಾಮಿಯವರ ವೆಂಕಣ್ಣಯ್ಯನವರನ್ನು ಕುರಿತ ಪ್ರಬಂಧ ಕನ್ನಡ ಸಾಹಿತ್ಯದಲ್ಲಿ ಅಮರವಾಗಿ ನಿಲ್ಲತಕ್ಕ ಕೃತಿ—ವ್ಯಕ್ತಿಚಿತ್ರಕ್ಕೆ ಅತ್ಯುತ್ತಮ ನಿದರ್ಶನ.

ಸಾವಧಾನ (1960) ಮತ್ತು ಬದುಕಿದ ಬಾಳು (1964) ಎರಡು ಸಂಕಲನಗಳು—ಎರಡನೆಯದು ಬರಿಯ ಪ್ರಬಂಧಗಳಿಗೇ ಮೀಸಲಾದದ್ದಲ್ಲ—ದ. ಬಾ. ಕುಲಕರ್ಣಿಯವರು ನಮ್ಮ ಅತ್ಯುತ್ತಮ ಪ್ರಬಂಧಕಾರರಲ್ಲಿ ಒಬ್ಬರು ಎಂದು ತೋರಿಸಿಕೊಟ್ಟಿವೆ. ಕುಟುಂಬ ಜೀವನದ ಆತ್ಮೀಯ ಚಿತ್ರಣದಲ್ಲಿ ಅವರದು ಸಿದ್ಧಹಸ್ತ ಎಂಬುದನ್ನು ಅವರ ತಪ್ತಕಾಂಚನ ಪ್ರಬಂಧದಲ್ಲಿ ಕಾಣಬಹುದು. ಅವರ ಶೈಲಿಯನ್ನು ಕುರಿತು ಕೀರ್ತಿನಾಥ ಕುರ್ತಕೋಟಿಯವರು ಹೇಳುತ್ತಾರೆ: ಈ ಪ್ರಬಂಧಗಳ ಭಾಷೆ ಒರೆಸಿಟ್ಟ ಕನ್ನಡಿಯಂತೆ ನಿರ್ಮಲವಾಗಿದ್ದು ಲೇಖಕರ ಭಾವನೆಗಳನ್ನು ಸರಿಯಾಗಿ ಪ್ರತಿಬಿಂಬಿಸುತ್ತದೆ. ದೇಸಿಯನ್ನು ಮಾರ್ಗದ ಹದಕ್ಕೆ ತಂದು, ಗ್ರಾಂಥಿಕ ಭಾಷೆಯನ್ನು ಆಡುಮಾತಿನ ರೀತಿಯಲ್ಲಿ ಪ್ರಯೋಗಿಸುವ ಜಾಣ್ಮೆ ದ. ಬಾ. ಅವರ ವೈಶಿಷ್ಟ್ಯವಾಗಿದೆ. ತಪ್ತಕಾಂಚನ, ಸಾವಧಾನದಂಥ ಪ್ರಬಂಧಗಳಲ್ಲಿ ಭಾಷೆ ಕಾವ್ಯದ ಮಟ್ಟಕ್ಕೇರಿದ್ದರೂ ತನ್ನ ಸಹಜತೆಯನ್ನು ಕಳೆದುಕೊಂಡಿಲ್ಲ.

ಜಿ. ವಾಮನಭಟ್ಟರ ಕೋದಂಡನ ಉಪನ್ಯಾಸಗಳು (1937) ಬಹಳ ಹಿಂದೆ ಪ್ರಕಟವಾದ ಪ್ರಬಂಧ ಸಂಕಲನಗಳಲ್ಲಿ ಒಂದು. ಅವರ ಪ್ರಬಂಧಗಳ ರೀತಿ ವಿಶಿಷ್ಟವಾದದ್ದು—ಒಂದೊಂದೂ ಸ್ವತಂತ್ರವಾಗಿಯೇ ನಿಲ್ಲಬಲ್ಲುದಾದರೂ ವಿಷಯ ಒಂದು ಪ್ರಬಂಧದಿಂದ ಮತ್ತೊಂದಕ್ಕೆ ಬಳ್ಳಿವರಿಯುತ್ತ ಹೋಗುತ್ತದೆ, ಎಂಬರ್ಥದಲ್ಲಿ. ಮಧ್ಯೆ ಹಿತವಾಗಿ ಹಾಸ್ಯವನ್ನು ಬೆರಸುತ್ತಾರೆ ಅವರು. ಎಂ. ರಾಮರಾವ್ ಅವರು ಒಂದು ವಿಷಯವನ್ನೆತ್ತಿಕೊಂಡು ವಿಸ್ತಾರವಾಗಿ ಬೆಳೆಸಿ, ಅದರ ವಿಷಯದಲ್ಲಿ ಎಲ್ಲ ವಿವರಗಳನ್ನು ಬೇಸರವಿಲ್ಲದೆ ನಿರೂಪಿಸುವುದರಲ್ಲಿ ಶಕ್ತರು. ವಿಷಯವನ್ನು ಆಮೂಲಾಗ್ರವಾಗಿ ವಿವರಿಸಬೇಕು ಎಂಬುದು ಅವರ ಮನೋಧರ್ಮ. ನಮ್ಮ ಅರಣ್ಯಯಾತ್ರೆ ಮತ್ತು ಇತರ ಪ್ರಬಂಧಗಳು (1957) ಅವರ ಪ್ರಬಂಧ ಸಂಕಲನ. ಶೀ. ನಂ. ಶ್ರೀಕಂಠಯ್ಯನವರ ನಂತರು ಅವರೊಬ್ಬ ಉತ್ತಮ ಪ್ರಬಂಧಕಾರರು ಎಂಬುದನ್ನು ತೋರಿಸುತ್ತದೆ.

ಗಂಭೀರವಾದ ಬರೆವಣಿಗೆಯೊಂದಿಗೆ ನವುರಾದ ಉತ್ತಮ ಮಟ್ಟದ ಹಾಸ್ಯವನ್ನು ಬೆರೆಸಿ ಕನ್ನಡಿಗರ ಹಾಸ್ಯಪ್ರಜ್ಞೆಯನ್ನು ಜಾಗೃತಗೊಳಿಸಿದ ಕೀರ್ತಿ, ಅದನ್ನು ಬೆಳೆಸುವುದರಲ್ಲಿ ಸಾಧಿಸಿದ ಕೃತಕೃತ್ಯತೆ ಮಲೆಯಾಳಿಗಳಾದ ನಾ. ಕಸ್ತೂರಿಯವರಿಗೆ ಸಲ್ಲುತ್ತದೆ. ಭಾಷೆಗೆ ದಿಢೀರನೆ ಹೊಸ ಹೊಸ ತಿರುವನ್ನು ನೀಡುವುದು, ಹೊಸ ಹೊಸ ಗಾದೆಗಳನ್ನು ಸೃಷ್ಟಿಸುವುದು, ಪದಗಳಲ್ಲಿನ ಅಕ್ಷರಗಳನ್ನು ಪಲ್ಲಟಿಸಿ, ಒಂದಕ್ಕೆ ಪ್ರತಿಯಾಗಿ ಮತ್ತೊಂದನ್ನಿಟ್ಟು ಚಿತ್ರವಿಚಿತ್ರವಾದ ಹೊಸ ಪದಗಳನ್ನು ಸೃಷ್ಟಿಸುವುದು, ನಾ. ಕಸ್ತೂರಿಯವರ ವೈಶಿಷ್ಟ್ಯ. ಅವರಂತೆ ಬದುಕಿನ ಆಳವಾದ ಗಂಭೀರತೆಯನ್ನೂ ಮೇಲಿನ ನಗೆಯ ಪದರವನ್ನೂ ಸಮಗ್ರವಾಗಿ ಕಂಡವರು ತೀರ ಕಡಿಮೆ. ನಾ. ಕಸ್ತೂರಿಯವರ ಒಂದು ಹೊಸ ಗಾದೆ ಇದು: ಅಲ್ಪನಿಗೆ ಅರ್ಥ ಸಿಕ್ಕರೆ ಅರ್ಧ ರಾತ್ರಿಯಲ್ಲಿ ಅಣು ಭೇದಿಸುತ್ತಾನೆ! ಡೊಂಕು ಬಾಲ (1944) ಮತ್ತು ಉಪಾಯ ವೇದಾಂತ (1951) ಇವು ಅವರ ಉತ್ತಮ ಸಂಕಲನಗಳು.

ಹಾಸ್ಯವನ್ನೂ ಗಭೀರತೆಯನ್ನೂ ಇನ್ನೂ ಇನ್ನೂ ಹದವಾಗಿ ಬೆರೆಸಿ ತಮ್ಮ ಸುತ್ತಣ ಸಾಧಾರಣ ಜಗತ್ತಿಗೆ ಸರ್ವಮಾನ್ಯತೆಯನ್ನು ಅಮರತೆಯನ್ನು ತಂದುಕೊಟ್ಟವರು ಗೊರೂರು ರಾಮಸ್ವಾಮಿ ಅಯ್ಯಂಗಾರ್ಯರು. ಅವರ ಬೈಲಹಳ್ಳಿಯ ಸರ್ವೆ, ಗರುಡಗಂಬದ ದಾಸಯ್ಯ, ಹೇಮಾವತಿಯ ತೀರದಲ್ಲಿ ಮತ್ತು ಇತರ ಪ್ರಬಂಧಗಳು (1966) ಇವುಗಳಲ್ಲಿ ರಚಿತವಾಗಿರುವ ಪ್ರಬಂಧಗಳಲ್ಲಿ ಹದಿನಾರಾಣೆ ಕನ್ನಡತನವಿದೆ. ಸಾವಧಾನವಾದ ರೀತಿಯಲ್ಲಿ ಸ್ವಲ್ಪವೂ ಬೇಸರ ಬಾರದಂತೆ ಪ್ರಕೃತಿ, ಜನ, ಘಟನೆ—ಇವೆಲ್ಲವುಗಳ ಅಂತರಂಗವನ್ನು ರಸಪೂರ್ಣವಾಗಿ ತೆರೆದು ತೋರಿಸಿದ್ದಾರೆ, ಗೊರೂರರು.

ಹಾಸ್ಯವೇ ಪ್ರಧಾನವಾಗಿ ಕಂಡರೂ ಜೀವನದ ಗಂಭೀರವಾದ ಮುಖವನ್ನು ಹಾಸ್ಯದ ಮೂಲಕವಾಗಿ ಪರಿಚಯ ಮಾಡಿಸಲು ಶ್ರಮಿಸಿರುವವರು ಅನೇಕರು. ಅವರ ಪ್ರಸ್ತಾಪ ಬೇರೆ ಕಡೆ ಬಂದಿದೆಯಾಗಿ, ಅವರು ಅಗ್ರಸ್ಥಾನದಲ್ಲಿ ನಿಲ್ಲುವ ಪ್ರಬಂಧಕಾರರಾದುದರಿಂದ ಅವರ ಹೆಸರನ್ನು ಮಾತ್ರ ಸೂಚಿಸಬೇಕಾಗಿದೆ. ರಾ. ಶಿ. ಅವರ ತುಟಿ ಮೀರಿದುದು, ಅ. ರಾ. ಸೇ. ಅವರ ಸುಳಿನಗು, ದಾಶರಥಿ ದೀಕ್ಷಿತರ ಗಾಂಪರ ಹರಟೆಗಳು, ಹಾ. ರಾ. ಅವರ ಕಬ್ಬು ಕುಡುಗೋಲು, ನಗೆನಾಣ್ಯ, ಅಷ್ಟಾವಕ್ರರ ಹಾಸ್ಯೋಲ್ಲಾಸ, ಸರಸ ಸಲ್ಲಾಪ, ಎನ್ಕೆ ಅವರ ಮುಂಗಾಲ್ ಪುಟಿಗೆ—ಇವು ಸ್ಮರಣೀಯವಾದ ಪ್ರಬಂಧ ಸಂಕಲನಗಳು. ಇವುಗಳ ಜೊತೆಗೆ ಸೇರಬೇಕಾದವು ಬೀಚಿಯವರ ಹುಚ್ಚುಹುರುಳು, ತಿಂಮನ ತಲೆ, ನಾಡಿಗೇರ ಕೃಷ್ಣರಾಯರ ಮೆಲ್ಲೋಗರ, ಅಡ್ಡಾದಿಡ್ಡಿ, ನಾಡಿಗೇರ ಗೋವಿಂದರಾಯರ ನಗೆಬರೆಹಗಳು, ಕುಡ್ವ ವಾಸುದೇವ ಶೆಣೈ ಅವರ ಕಸದ ಡಬ್ಬಿಗಳು, ವೆಂ. ತ. ಪದ್ಮ ಅವರ ಪೂರಟಿಗರ ಕೈಪಿಡಿ, ಕೌಜಲಗಿ ಹಣಮಂತರಾಯರ ಹಾಸ್ಯ ಪ್ರಬಂಧಗಳು, ಎನ್. ವಿ. ರಾವ್ ಅವರ ನಗೆ ದೀವಿಗೆ, ಎಂ. ಎಸ್. ನರಸಿಂಹಮೂರ್ತಿ ಅವರ ಟೈರ್ ಪ್ರಶಸ್ತಿ ವಿಜೇತ, ರಾಮಕೃಷ್ಣ ಉಡುಪರ ಇತ್ತೀಚಿನ ಸಂಕಲನ ನಾಮದ ಬಲ—ಇವು ಗಮನಾರ್ಹವಾದ ಸಂಕಲನಗಳು. ಎಚ್. ಕೆ. ರಂಗನಾಥ ಅವರ ವೈದ್ಯನಲ್ಲದ ಡಾಕ್ಟರು (1961), ಎ. ಎಸ್. ರಾಮಕೃಷ್ಣ ಅವರ ಹುಟ್ಟೂರಿನ ಮೋಹ (1963), ಉಮಾಪತಿ ಅವರ ಅಡಿಗೆ ಮನೆ (1958), ಎಸ್. ಅನಂತನಾರಾಯಣ ಅವರ ಇಂಥವರೂ ಇದ್ದಾರೆ, ಎಸ್. ಮಂಜುನಾಥ್ ಅವರ ಪುಸ್ತಕವನ್ನು ಬಿಡು, ಇವೂ ಗಮನಾರ್ಹವಾದ ಸಂಕಲನಗಳು.

ಪ್ರಬಂಧ ರಚಕರಲ್ಲಿ ಪ್ರತ್ಯೇಕ ಸ್ಥಾನ ಪಡೆದು ನಿಲ್ಲುವ ಲೇಖಕರು ರಾ.ಕು. ಅವರ ಹದಿನಾರು ಲಲಿತ ಪ್ರಬಂಧಗಳ ಸಂಗ್ರಹ ಗಾಳಿಪಟ (1960). ಅವುಗಳ ಎಲ್ಲ ಒಳ್ಳೆಯ ಲಕ್ಷಣಗಳನ್ನು ದ. ರಾ. ಬೇಂದ್ರೆಯವರು ತಮ್ಮ ಮೆಚ್ಚುಗೆಯ ಮಾತು ಹೇಳುವಾಗ ಅಡಕ ಮಾಡಿ ನಿರೂಪಿಸಿದ್ದಾರೆ: ಇವು ಪರಟಿ-ಕುದುರೆಗಳನ್ನು ಮೆಟ್ಟಿ ಶಿಳ್ಳೆಕೇತತನಕ್ಕೆ ಹೊರಟ ಹರಟೆಗಳಲ್ಲ. ಕೆಲವಂತೂ ವಿದಗ್ಧತೆಯಿಂದ ಬೆಂದು ಪಾಕಗೊಂಡಿವೆ. ರಾ. ಕು. ಅವರದು ಸಾಹಿತ್ಯ-ಪಾಂಡಿತ್ಯಗಳ ಮಿಶ್ರಕೃತಿ. ಅವರು ತಮ್ಮ ಪ್ರಬಂಧಗಳ ಕೆಲಭಾಗಗಳನ್ನು ಸ್ವಚ್ಛಂದ ರಗಳೆಯ ನವ್ಯಕಾವ್ಯಗಳೆಂದು ಚಲಾಯಿಸಿಬಿಡಬಹುದಾಗಿತ್ತು. ಸುಭಾಷಿತಗಳಂತೂ ಅವರಲ್ಲಿ ಹೇರಳವಾಗಿವೆ. ಕವಿ ಪ್ರವರರ ಮಾಣಿಕ್ಯ ಕೋಶದ ಭಂಡಾರವನ್ನೊಡೆದು ಸ್ವಾಲಂಕಾರಗಳನ್ನಾಗಿ ಮಾಡಿಕೊಂಡ ಜಾಣ್ಮೆ, ದೃಷ್ಟತೆಗಳಿರಲಿ, ಅವರ ಪ್ರಜ್ಞೆಯ ನವನವೋನ್ಮೇಷವೂ ಮೋಷ-ಪಾತ್ರ ಎನಿಸಿಕೊಳ್ಳುವಂಥವಲ್ಲ. ಅರ್ಧ ಸತ್ಯಗಳನ್ನು, ವಿಕೃತ ದೃಷ್ಟಿಕೋನಗಳನ್ನು ನಿರುತ್ತರವಾದಿತ್ವವನ್ನು, ಪ್ರೋಕ್ತತನವನ್ನು ಅವರು ಚೆನ್ನಾಗಿ ಮುಡಿಸಿಕೊಂಡಿದ್ದಾರೆ. ಉಕ್ತಿಗಳ ಟಂಕಸಾಲೆಯನ್ನು ಹಾಕಿದ್ದಾರೆ. ಅವರ ಲಲಿತ

ಪ್ರಬಂಧಕ್ಕೆ ಇಷ್ಟೊಂದು ಉಕ್ತಿಗಳ ಅಲಂಕರಣ ಹೊರೆಯಾಗುವ ಆಸ್ಪದ ಹೆಚ್ಚೆಂಬುದನ್ನು ಮರೆಯಬಾರದು.

ಎಂ. ವಿ. ಸೀತಾರಾಮಯ್ಯನವರ ಮುಗಿಲುಗಳು (1950) ವಿಚಾರಧಾರೆಯನ್ನು ನವುರಾದ ಹಾಸ್ಯದೊಂದಿಗೆ ಬೆರೆಸಿ ಹದವಾದ ಗದ್ಯದಲ್ಲಿ ನಿರೂಪಿಸಿರುವ ಸುಂದರ ಪ್ರಬಂಧಗಳ ಸಂಕಲನ. ಅವರ ಹಿಡಿ ಹೂವು (1946) ಸಂಕಲನದಲ್ಲಿ ಕೂಡ ಎರಡು ಮೂರು ಒಳ್ಳೆಯ ಪ್ರಬಂಧಗಳುಂಟು.

ಉತ್ತಮ ಪ್ರಬಂಧಕಾರರಾಗಿಯೇ ಸಾಹಿತ್ಯದಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿಕೊಂಡಿರುವ ಇಬ್ಬರು ಪ್ರಬಂಧಕಾರರು ಎನ್. ಪ್ರಹ್ಲಾದರಾವ್ ಮತ್ತು ಎಚ್ಚೆಸ್ಕೆ. ರಥ–ರಥಿಕ (1947), ಮಧುವ್ರತ (1963). ಮತ್ತು ಮುತ್ತಿನಹಾರ (1968) ಇವು ಪ್ರಹ್ಲಾದರಾಯರ ಪ್ರಬಂಧ ಸಂಕಲನಗಳು. ಇವರ ಬರೆಹದ ಪ್ರಧಾನ ಲಕ್ಷಣಗಳು ಮೂರು : ತಮ್ಮ ಆಳವಾದ ಸಾಹಿತ್ಯದ ಉಪಾಸನೆಯ—ಅದರಲ್ಲೂ ಕಾವ್ಯೋಪಾಸನೆಯ ಪಕ್ವ ಫಲಗಳನ್ನು ಓದುಗರಿಗೆ ಉಚಿತವಾದ ಸ್ಥಳದಲ್ಲಿ ದೊರಕಿಸುವುದು. ಎರಡನೆಯದು, ಉತ್ತಮ ಕಾವ್ಯದಲ್ಲಿ ಹೇಗೋ ಹಾಗೆ ಬುದ್ಧಿ ಭಾವಗಳ ಸಮತೂಕದ ಸ್ವಚ್ಛಂದ ವಿಹಾರ ನಡೆಸುವುದು. ತಿಳಿಹಾಸ್ಯದಿಂದ ಕೂಡಿದ ಪ್ರಸನ್ನತೆ. ಆತ್ಮನಿಷ್ಠವಾದ ಇವರ ಬರೆಹಗಳಲ್ಲಿ ಮತ್ತೆ ಮತ್ತೆ ಬರುವ ಜೀವನದ ಲಗುಬಿಗುಗಳ ಚಿತ್ರಣ ಹೃದಯಂಗಮವಾಗಿದೆ. ಕಳ್ಳ ಹೊಕ್ಕ ಮನೆ (1958) ಮತ್ತು ಜೇಡನ ಬಲೆ ಎಚ್ಚೆಸ್ಕೆ ಅವರ ಸಂಕಲನಗಳು. ನಮ್ಮ ಸುತ್ತಮುತ್ತಿನ ಅನೇಕ ಘಟನೆಗಳನ್ನು ಕಲ್ಪನೆಯ ಕುದುರೆಯ ಮೇಲೆ ಏರಿಸಿ ಅವುಗಳ ವಿಹಾರದ ಸೊಗಸನ್ನು ನಮಗೆ ಪರಿಚಯ ಮಾಡಿಕೊಡುವ ವೈಖರಿ ಅವರದ್ದು. ಸುಧಾ ಪತ್ರಿಕೆಯ ವಾರದ ವ್ಯಕ್ತಿ ಚಿತ್ರಣದಿಂದ ಶ್ರೀಯುತರು ಪ್ರಬಂಧಪ್ರಕಾರಕ್ಕೆ ತಮ್ಮದೇ ಆದ ಹೊಸ ಕೊಡುಗೆಯನ್ನು ಇತ್ತಿದ್ದಾರೆ. ಅಂಥ ವ್ಯಕ್ತಿಚಿತ್ರಗಳನ್ನೊಳಗೊಂಡ ಬದುಕು–ಬೆಳಕು ಎಂಬ ಸಂಕಲನ ಈಚೆಗೆ (1971) ಪ್ರಕಟವಾಗಿದೆ. ಇರುವ ಅಲ್ಪಾವಕಾಶದಲ್ಲಿ ಸಾಗರೋಪಮ ವ್ಯಕ್ತಿತ್ವವನ್ನುಳ್ಳ ಮಹನೀಯರ ಬಗ್ಗೆ ಅಭಿಮಾನ ಪಳಚ್ಚನೆ ಮೂಡುವಂತೆ ಬರೆಯಬಲ್ಲ ಇವರ ಕೈಚಳಕವನ್ನು ಈ ಲೇಖನಗಳಲ್ಲಿ ಕಾಣಬಹುದು. ಇವರ ಎಲ್ಲ ಪ್ರಬಂಧಗಳಲ್ಲೂ ಹಾಸುಹೊಕ್ಕಾಗಿ, ಅಡಿಪಾಯವಾಗಿ ಬರುವ ಅನೇಕ ಕವಿಸೂಕ್ತಿಗಳು ಇವರ ಬಹು ಶ್ರುತತ್ವಕ್ಕೆ ಸಾಕ್ಷಿಯಾಗಿವೆ.

ಈ ಕ್ಷೇತ್ರಕ್ಕೆ ಒಂದು ಅಮರ ಕೊಡುಗೆಯೆಂದರೆ ಹಾ. ಮಾ. ನಾಯಕರ ನಮ್ಮ ಮನೆಯ ದೀಪ (1956). ರಮಾ ಎಂಬ ಎಳೆಯ ಮಗುವಿನ ಸುತ್ತ ಹೆಣೆದ ಏಳು ಸುಂದರ ಪ್ರಬಂಧಗಳ ಸಂಕಲನ ಇದು. ಇವುಗಳನ್ನು ಕುರಿತು ಪು.ತಿ.ನ. ಹೇಳುವ ಮಾತುಗಳನ್ನು ಗಮನಿಸಿ : ಈ ಬಂಧಗಳ ಮತ್ತೊಂದು ಗುಣವೆಂದರೆ ಅವು ಎಲ್ಲೂ ಪದ್ಯತನವನ್ನು ಮುಟ್ಟದಿರುವುದು ; ಹಾಗೆ ಮುಟ್ಟದೆಯೇ ಕಾವ್ಯ ಗುಣವನ್ನು ಪ್ರದರ್ಶಿಸುವುದು......ಈ ಬಂಧಗಳಲ್ಲಿ ವೈಶದ್ಯಕ್ಕಾದ ವಿವರಣೆ, ಸಹಜತೆಗಾದ ಔಚಿತ್ಯ, ಸಂಸ್ಕಾರದಿಂದ ಲಭಿಸಿದ ಸರಳವೂ ನಿರ್ಮಲವೂ ಆದ ಪದಾವಲಿ, ತಿಳಿಮನಸ್ಸಿನ ಅಹಂರಾಹಿತ್ಯದಿಂದ ಲಭಿಸಿರುವ ರೀತಿ—ಇವು ಹೊಳಪು ಹಾಕಿವೆ.

ಹೆಚ್ಚು ಗಂಭೀರವಾದ ಬರೆವಣಿಗೆಯಲ್ಲೇ ಸದಾ ನಿರತರಾಗಿರುವ ಕೋ. ಶಿ. ಕಾರಂತರು ಆ ಗಾಂಭೀರ್ಯದ ಏಕನಾದವನ್ನು ಅಲ್ಲಲ್ಲಿ ತಪ್ಪಿಸಲೋ ಎಂಬಂತೆ ತುಂಬ ಸುಂದರವಾದ ಪ್ರಬಂಧಗಳನ್ನು ರಚಿಸಿ ಪ್ರಕಟಿಸಿದ್ದಾರೆ, ತಮ್ಮ ಮೈಲಿಕಲ್ಲಿನೊಡನೆ ಮಾತುಕತೆಗಳು (1944), ಗ್ನಾನ—ಇವುಗಳಲ್ಲಿ. ವಿಚಾರ ಮುಖ್ಯ, ವಿಡಂಬನೆ ಅದರ ಸಂಗಾತಿ. ಬರೆಹವೋ ಆಕರ್ಷಕ. ಇವು ಅಲ್ಲಿನ ಗುಣಗಳು. ಕಾರಂತರ ಹಳ್ಳಿಯ ಹತ್ತು ಸಮಸ್ತರು ಎಂಬ ಪುಸ್ತಕ ಕೂಡ ಪ್ರಬಂಧದ ಸಾಲಿಗೇ ಸೇರುವ ಉತ್ತಮ ಸಂಕಲನ. ಶ್ರೀರಂಗರ ಬರೆಹಗಳಲ್ಲಿ ವಿಚಾರಪ್ರಧಾನ ಚುಚ್ಚು ವಿಡಂಬನೆಯೂ ಉಂಟು, ರಾವಬಹದ್ದೂರರ ಮರೆಯದ ನೆನಹುಗಳು (1959) ಮತ್ತು ಲಾಂಗೂಲಾಚಾರ್ಯರ ಪ್ರಹಾರ (1965) ಉತ್ತಮ ಹಾಸ್ಯಪ್ರಧಾನ ಪ್ರಬಂಧ ಸಂಕಲನಗಳು.

ಜಿ. ಪಿ. ರಾಜರತ್ನಂ ಸ್ವಯಂ ಉತ್ತಮ ಪ್ರಬಂಧಕಾರರು. ಜೊತೆಗೆ ಅನೇಕ ವಿದ್ಯಾರ್ಥಿಗಳಿಂದ ಉತ್ತಮ ಪ್ರಬಂಧಗಳನ್ನು ಬರೆಸಿ ಪ್ರಕಟಿಸಿದ ಕೀರ್ತಿಯೂ ಅವರಿಗೆ ಸಲ್ಲುತ್ತದೆ.

ಸಿದ್ದವನಹಳ್ಳಿ ಕೃಷ್ಣಶರ್ಮ, ಹಾ. ಮಾ. ನಾಯಕ, ಚದುರಂಗ, ನಿರಂಜನ, ಮಾ. ನಾ. ಚೌಡಪ್ಪ, ಕು. ಶಿ. ಹರಿದಾಸಭಟ್ಟ, ಎಚ್ಚೆಸ್ಕೆ ಮೊದಲಾದವರು ಪತ್ರಿಕಾ ಬರೆಹಗಳ ಮೂಲಕ ಉತ್ತಮ ಪ್ರಬಂಧಗಳನ್ನು ಕೊಟ್ಟಿದ್ದಾರೆ. ಅವರಲ್ಲನೇಕರು ತಮ್ಮ ಬರೆಹಗಳನ್ನು ಗ್ರಂಥರೂಪವಾಗಿ ಪ್ರಕಟಿಸಿದ್ದಾರೆ.

ಇನ್ನು ಅನೇಕ ಪ್ರಬಂಧಕಾರರನ್ನೂ ಅವರ ಸಂಕಲನಗಳನ್ನೂ ನೆನಪು ಮಾಡಿಕೊಂಡೇ ತೃಪ್ತಿಪಡೆಯಬೇಕು. ಬಿ. ಆರ್. ವಾಡಪ್ಪಿ ಅವರ ತಾರ ಕಂಬಗಳು, ಸುಳಿಗಾಳಿ, ಗಾಳಿಗುದುರಿ; ಎನ್. ಎಸ್. ಗದಗಕರರ ಆಸೆ–ನಿರಾಸೆ, ಒಡೆದ ಕನ್ನಡಿ; ಕು. ಗೋ. ಅವರ ಅಕ್ಕನ ಮದುವೆ, ಡಿ. ಎಸ್. ಕರ್ಕಿ ಅವರ ನಾಲ್ದೆಸೆಯ ನೋಟ, ಕೆ. ಗೋಪಾಲಕೃಷ್ಣರಾಯರ ಕೆನ್‌ಸಿಂಗ್‌ಟನ್ ಪಾರ್ಕ್, ಮ. ಶ್ರೀಧರಮೂರ್ತಿ ಅವರ ಲಂಚ ಪ್ರಪಂಚ, ಜಿ. ಎ. ರೆಡ್ಡಿ ಅವರ ಮಾತಿನಬಳ್ಳಿ—ಇವೆಲ್ಲ ಗಮನಾರ್ಹ ಸಂಕಲನಗಳು. ಹಾಗೆಯೇ ಎ. ಎಸ್. ವೇಣುಗೋಪಾಲರಾಯರ ಬಾಳು ಬಂಗಾರ. ತಮ್ಮ ಬಾಲ್ಯನಿಯ ಬಂಧುಗಳು ಪ್ರಬಂಧ ಸಂಕಲನದಲ್ಲಿ ಓದುಗರ ಕುತೂಹಲವನ್ನು ಕೆರಳಿಸಿ, ಆಸೆಯನ್ನು ಹುಟ್ಟಿಸಿದ ಅ. ರಾ. ಮಿತ್ರ ತಾವು ಒಬ್ಬ ಅತ್ಯುತ್ತಮ ಲಲಿತ ಪ್ರಬಂಧಕಾರರು ಎಂಬುದನ್ನು ಯಾರೋ ಬಂದಿದ್ದರು ಎಂಬ ಸಂಕಲನದಲ್ಲಿಯೂ ತೋರಿಸಿದ್ದಾರೆ.

ಸಣ್ಣಕಥೆ, ಕಾದಂಬರಿಗಳಿಗೆ ಹೇಗೋ ಹಾಗೆ ಪ್ರಬಂಧಸಾಹಿತ್ಯಕ್ಕೂ ಪತ್ರಿಕೆಗಳಿಂದ ಅಪಾರ ಪ್ರೋತ್ಸಾಹ ದೊರೆಯುತ್ತಿದೆ. ಪ್ರಜಾವಾಣಿ, ಸಂಯುಕ್ತ ಕರ್ನಾಟಕ, ಕನ್ನಡಪ್ರಭ, ಸುಧಾ, ಮಯೂರ, ಕರ್ಮವೀರ, ಕಸ್ತೂರಿ, ಪ್ರಬುದ್ಧ ಕರ್ಣಾಟಕ, ಜೀವನ, ಕನ್ನಡ ನುಡಿ—ಮೊದಲಾದುವು ಸಾಧಾರಣವಾಗಿ ಪ್ರತಿ ಸಂಚಿಕೆಯಲ್ಲೂ ವಿಶೇಷವಾಗಿ ವಾರ್ಷಿಕ ಸಂಚಿಕೆಗಳಲ್ಲೂ ಉತ್ತಮವಾದ ಪ್ರಬಂಧಗಳನ್ನು ಪ್ರಕಟಿಸುತ್ತಿವೆ. ಹಳಬರ ಜೊತೆಗೆ ಅನೇಕ ಹೊಸಬರು ಈ ಮೂಲಕ ಸಾಹಿತ್ಯಕ್ಷೇತ್ರವನ್ನು ಪ್ರವೇಶಿಸುತ್ತಿದ್ದಾರೆ. ಆಕಾಶವಾಣಿಯವರೂ ಕಾಲಕಾಲಕ್ಕೆ ಲಘು ಹರಟೆಗಳನ್ನು ಪ್ರಬಂಧಗಳನ್ನು ಪ್ರಸಾರ ಮಾಡುತ್ತಿದ್ದಾರೆ. ಹೀಗೆ ಈ ಸಾಹಿತ್ಯಪ್ರಕಾರ, ಬೆಳೆಯಲು ಹದನಾದ ಸನ್ನಿವೇಶ ಏರ್ಪಟ್ಟಿದೆ.

ಕನ್ನಡ ಪ್ರಬಂಧಕ್ಷೇತ್ರ ಹೀಗೆ ಇಷ್ಟು ವೈವಿಧ್ಯಪೂರ್ಣವಾಗಿ ಬೆಳೆದಿದೆ. ಇಷ್ಟೊಂದು ಉತ್ತಮ ಪ್ರಬಂಧಕಾರರು ಇಲ್ಲಿ ಕೆಲಸಮಾಡುತ್ತಿದ್ದಾರೆ. ಇಷ್ಟಾದರೂ ಇನ್ನೂ ಹೆಚ್ಚಿನ ಪ್ರತಿಭಾ ವಿಲಾಸಕ್ಕೆ ಹೊಸ ಕೆಲಸಕ್ಕೆ ಅವಕಾಶವಿರುವಷ್ಟು ವಿಸ್ತಾರವಾಗಿದೆ, ಈ ಕ್ಷೇತ್ರ. (ಬಿ.)

**ಕನ್ನಡದಲ್ಲಿ ಪ್ರವಾಸ ಸಾಹಿತ್ಯ :** ಇಂಗ್ಲಿಷ್ ಸಾಹಿತ್ಯದಲ್ಲಿ ಪ್ರವಾಸ ಸಾಹಿತ್ಯವೆಂಬ ಪ್ರತ್ಯೇಕ ಪ್ರಕಾರ ಈಚಿನದಾದರೂ 17-18ನೆಯ ಶತಮಾನಗಳಿಂದಲೂ ಗದ್ಯ ಸಾಹಿತ್ಯದಲ್ಲಿ ಅದು ಸಮ್ಮಿಳಿತವಾಗಿಯೇ ನಡೆದುಕೊಂಡು ಬಂದಿದೆ. ಬಹುಸಂಖ್ಯಾತ ಸಾಹಿತಿಗಳು, ಕವಿಗಳು ತಮ್ಮ ತಮ್ಮ ಪ್ರವಾಸಾನುಭವಗಳನ್ನು ಕುರಿತು ತಮ್ಮ ಇಷ್ಟ ಮಿತ್ರರೊಂದಿಗೆ ನಡೆಸಿದ ಪತ್ರ ವ್ಯವಹಾರಗಳನ್ನು ದಿನಚರಿಗಳನ್ನು ವಿಶಿಷ್ಟ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಗದ್ಯ, ಪದ್ಯ, ನಾಟಕಾದಿ ಎಲ್ಲ ಸಾಹಿತ್ಯ ಪ್ರಕಾರಗಳಲ್ಲೂ ಪ್ರವಾಸಾನುಭವ ಎದ್ದು ಕಾಣುತ್ತದೆ. ಅಮೆರಿಕ, ಜರ್ಮನಿ ಮತ್ತು ರಷ್ಯ ದೇಶಗಳ ಸಾಹಿತಿಗಳೂ ಈ ಬಗೆಯ ಸಾಹಿತ್ಯವನ್ನು ತುಂಬ ಹುಲುಸಾಗಿ ಬೆಳೆಸಿದ್ದಾರೆ.

ಆಧುನಿಕ ಭಾರತೀಯ ಸಾಹಿತ್ಯಕ್ಕೆ ಪಾಶ್ಚಾತ್ಯ ಸಾಹಿತ್ಯವೇ ಆಧಾರವಾದರೂ ಪ್ರಾಚೀನ ಭಾರತದಲ್ಲಿ ಪ್ರವಾಸ ಸಾಹಿತ್ಯದ ಗುಂಪಿಗೆ ಸೇರಬಹುದಾದ ಹಲವು ಗ್ರಂಥಗಳಿವೆ. ಕ್ರಿ.ಶ. 1149–50ರಲ್ಲಿ ರಚಿತವಾದ ಕಲ್ಹಣನ ರಾಜತರಂಗಿಣಿ. ಕ್ರಿ.ಶ. 1459ರ ಜೋನ ರಾಜ ಮತ್ತಿವನ ಶಿಷ್ಯ ಶ್ರೀವರ, ಅನಂತರ ಪ್ರಾಜ್ಯ ಭಟ್ಟ, ಶುಕ ಸೋಮೇಶ್ವರ ಅರಿಸಿಂಹ ಮುಂತಾದವರು ಐತಿಹಾಸಿಕ ಭೌಗೋಳಿಕ ಹಾಗೂ ಅಂದಿನ ರಾಜಕೀಯ ಸ್ಥಿತಿಗತಿಗಳನ್ನು ತಿಳಿಸುವಂಥ ಗ್ರಂಥಗಳನ್ನು ರಚಿಸಿದ್ದಾರೆ.

ಪ್ರವಾಸ ಮಾನವನ ಒಂದು ಹವ್ಯಾಸ, ಪರ್ವತಾರೋಹಣ, ಧ್ರುವಪ್ರದೇಶಾನ್ವೇಷಣೆಗಳಿದ್ದಂತೆ. ಯಾವ ಕೆಲಸವಿರದಿದ್ದರೂ ಊರು ಬಿಟ್ಟು ಸಾವಿರಾರು ಅನನುಕೂಲಗಳನ್ನು ಸಹಿಸಿ, ಎಲ್ಲಿಯೋ ಹೋಗಿ ಎಲ್ಲೆಲ್ಲಿಯೋ ಅಲೆದಾಡಿ ಸುಖಪಟ್ಟೊ ಕಷ್ಟಪಟ್ಟೊ ಹಿಂತಿರುಗುವ ಮನುಷ್ಯನನ್ನು ನೆನೆದಾಗ ಪ್ರವಾಸದ ಚಪಲ ಎಷ್ಟು ಬಲವಾದುದು ಎಷ್ಟು ಅಪರಿಹಾರ್ಯವಾದುದು ಎಂಬುದನ್ನು ತಿಳಿಯಬಹುದು. ಸಾಮಾನ್ಯ ಜೀವನದ ನೀತಿ ನಿಯಮಗಳಿಂದ ಕೆಲಕಾಲವಾದರೂ ದೂರಾಗಿದ್ದು ಸ್ವಭಾವಗತವಾದ ಸ್ವಾತಂತ್ರ್ಯಾಭಿಲಾಷೆಯನ್ನು ಪೂರೈಸಿಕೊಳ್ಳಬೇಕೆಂಬುದೇ ಮನುಷ್ಯನಲ್ಲಿಯ ಪ್ರವಾಸದ ಚಪಲಕ್ಕೆ ಕಾರಣವಾಗಿರಬಹುದು. ಇಂದಿನವರ ಪ್ರವಾಸ ಹಿಂದಿನವರಿಗೆ ಯಾತ್ರೆಯಾಗಿತ್ತು. ಭಾರತೀಯರಿಗಂತೂ ಇದು ತೀರ ಹತ್ತಿರದ ಮಾತು. ಹಲವು ಕಾರಣಗಳಿಂದ ಹರಕೆ ಹೊತ್ತು ಅದರ ಪೂರೈಕೆಗಾಗಿ ಅವರು ತೀರ್ಥ ಕ್ಷೇತ್ರಗಳ ದರ್ಶನ ಮಾಡಿಕೊಂಡು ಬರುತ್ತಿದ್ದರು. ತಮ್ಮ ಪ್ರವಾಸ ಸಮಯದಲ್ಲಿ ತಾವು ಅನುಭವಿಸಿದ ಕಷ್ಟ ನಷ್ಟಗಳನ್ನೋ ಸುಖಸಂತೋಷಗಳನ್ನೊ ತಮ್ಮವರೊಂದಿಗೆ ಹೇಳಿಕೊಳ್ಳುತ್ತಿದ್ದರು. ಸ್ವಾತಂತ್ರ್ಯಾನಂತರ ಪ್ರವಾಸಿಗರ ಸಂಖ್ಯೆ ಹೆಚ್ಚಾಗುತ್ತಿದೆ. ಉನ್ನತ ವ್ಯಾಸಂಗ, ಸರ್ಕಾರಿ ಕೆಲಸ, ವ್ಯಾಪಾರ, ಸುಂದರ ಸ್ಥಳಗಳ ದರ್ಶನ, ವಿರಾಮ ವಿಹಾರ ಮುಂತಾದ ಕಾರಣಗಳಿಂದ ಹಲವು ಜನ ಪ್ರವಾಸ ಮಾಡುತ್ತಿದ್ದಾರೆ. ಆದರೆ ತಮ್ಮ ಅನುಭವವನ್ನು ಬರೆಹಕ್ಕಿಳಿಸಿದವರ ಸಂಖ್ಯೆ ಮಾತ್ರ ಹಿಂದಿನಂತೆ ಇಂದೂ ಅತಿ ವಿರಳ. ತಮ್ಮ ತಮ್ಮ ಅನುಭವಗಳನ್ನು ಅದೇ ವೈಶಿಷ್ಟ್ಯ ಎದ್ದು ಕಾಣುವಂತೆ ಬರೆಹಕ್ಕಿಳಿಸಿ ಹೇಳಿದಾಗ ಅಲ್ಲಿ ಸಾಹಿತ್ಯ ಸಾಕಾರವಾಗುತ್ತದೆ. ಲೇಖಕನ ಚಿಕಿತ್ಸಕ ದೃಷ್ಟಿ, ಸ್ವಂತ ಸೃಷ್ಟಿ, ಶಬ್ದಚಿತ್ರಗಳಲ್ಲಿ ಮೂಡಿದಾಗ ವಾಸ್ತವಿಕತೆಗೆ ಶೃಂಗಾರ ಮೂಡಿ ಕೃತಿ ರಸಾನುಭವಕ್ಕೆ ಯೋಗ್ಯವಾಗುತ್ತದೆ. ಇಂಥ ಬರೆವಣಿಗೆ ಯಾವ ಪ್ರಕಾರದಲ್ಲೂ ಇರಬಹುದು. ಪ್ರವಾಸಕಥನ,

ಪ್ರಬಂಧ, ದಿನಚರಿ, ಪತ್ರಲೇಖನ, ವಿಡಂಬನ, ಹಾಸ್ಯ, ಅಣಕ ಕವನಗಳು ಇತ್ಯಾದಿ.

ಪ್ರವಾಸ ಮಾಡಿದವರೆಲ್ಲ ಬರೆಯಲಾರರು. ಹಾಗೆ ಬರೆದರೂ ಅದು ಸಾಹಿತ್ಯವಾಗಲಾರದು. ಸಾಹಿತ್ಯವೆನ್ನಿಸಿಕೊಳ್ಳಬೇಕಾದರೆ ಅದಕ್ಕೊಂದು ರೂಪ ಬೇಕು. ಅದರಲ್ಲಿ ಓದುಗನಿಗೆ ಒಂದು ಅರ್ಥ ಬೇಕು. ಹಾಗಾಗಲು ಅನುಭವಿಸುವ ಹೃದಯ, ನೋಡುವ ಕಣ್ಣು ಎರಡೂ ಮುಖ್ಯ. ಯಾವ ಅನುಭವ ತನ್ನದಾಗಿ ಇನ್ನೂ ಹತ್ತು ಜನರದೂ ಆಗಿರಬಹುದೊ ಆಗಬಹುದೊ ಯಾವ ಅನುಭವದಲ್ಲಿ ಬಾಳಿನ ಒಂದು ಮೈಯನ್ನು ತಾನು ಕಂಡು ಎರಡನೆಯವರೂ ಕಾಣುವಂತೆ ಮಾಡಬಹುದೊ ಅಂಥ ಅನುಭವ ಸಾಹಿತ್ಯದ ಯಾವ ಬಗೆಗೂ ಆಧಾರವಾಗುವಂತೆ ಪ್ರವಾಸ ಸಾಹಿತ್ಯಕ್ಕೂ ಆಗಬಹುದು.

ಕರ್ಕಿ ವೆಂಕಟರಮಣ ಶಾಸ್ತ್ರಿ ಸೂರಿಯವರು 1890ರಲ್ಲಿ ದಕ್ಷಿಣ ಭಾರತಯಾತ್ರೆ ಎಂಬ ಪ್ರವಾಸ ಗ್ರಂಥವನ್ನು ಪ್ರಕಟಿಸಿದರು. 19ನೆಯ ಶತಮಾನದಲ್ಲಿಯೇ ಕನ್ನಡ ಪ್ರವಾಸ ಸಾಹಿತ್ಯ ಆರಂಭವಾಯಿತೆನ್ನಬಹುದಾದರೂ ಮುಂದೆ 35 ವರ್ಷಗಳ ಕಾಲ ಯಾವ ಗ್ರಂಥವೂ ಬರಲಿಲ್ಲ. 1926ರಲ್ಲಿ ವಿ. ಸೀ. ಯವರ ಪಂಪಾಯಾತ್ರೆ ಪ್ರಕಟವಾಯಿತು. ಈ ವಿಭಾಗದಲ್ಲಿ ಇದು ಆದ್ಯ ಹಾಗೂ ಮೇರು ಕೃತಿ. ಲೇಖಕರು ತಮ್ಮ ಮಿತ್ರರೊಂದಿಗೆ ಹಂಪೆಗೆ ಹೋಗಿ, ಅಲ್ಲಿನ ಪಾಳು ಹಂಪೆಯನ್ನು ಕಂಡು ತಮಗಾದ ಅನುಭವವನ್ನು ಈ ಗ್ರಂಥದಲ್ಲಿ ಪಡಿಮೂಡಿಸಿದ್ದಾರೆ. ಇದೊಂದು ರಸಭರಿತ ಪ್ರಬಂಧ. ಇಲ್ಲಿ ಲೇಖಕರ ಅಗಾಧವಾದ ಲೋಕಾನುಭವ, ತತ್ತ್ವಚಿಂತನ ಮತ್ತು ಜೀವನದೃಷ್ಟಿಗಳ ತ್ರಿವೇಣೀ ಸಂಗಮವನ್ನು ಕಾಣಬಹುದು. ಎರಡು ದಿನಗಳ ಅಲ್ಪಾವಧಿಯಲ್ಲಿ ಇನ್ನೂರ ಐವತ್ತು ವರ್ಷಗಳ ಚರಿತ್ರೆಯನ್ನು ಸತ್ತ್ವತಃ ಲೇಖಕರು ಇಲ್ಲಿ ಅನುಭವ ಮಾಡಿಸಿಕೊಡುತ್ತಾರೆ; ಸುಖ ದುಃಖಗಳೆರಡನ್ನೂ ಓದುಗರಿಗೆ ಉಣಬಡಿಸುತ್ತಾರೆ. ಕೊನೆಯಲ್ಲಿ ಬರುವ ಸ್ವಪ್ನ ಮಾಲಿಕೆಗಳಲ್ಲಿ ಗತಕಾಲದ ವೈಭವ, ವಿನಾಶಗಳು ಹೃದಯವಿದ್ರಾವಕವಾಗಿ ನಿರೂಪಿತವಾಗಿವೆ. ಕವಿಯ ಅನುಭವಕ್ಕೆ ಐತಿಹಾಸಿಕ ದೃಷ್ಟಿಯೂ ಉಜ್ಜ್ವಲ ಅಭಿಮಾನವೂ ಬೆಸೆದುಕೊಂಡಿವೆ. ನಾಲ್ಕು ಮುದ್ರಣಗಳನ್ನು ಕಂಡಿರುವುದೇ ಈ ಗ್ರಂಥದ ಅಗಾಧ ಜನಪ್ರಿಯತೆಗೆ ಸಾಕ್ಷಿ.

ಪಾಶ್ಚಾತ್ಯ ದೇಶಗಳಿಗೆ ಬೆಳಕು ಕಿಂಡಿಯಾದವರು ವಿ. ಕೃ. ಗೋಕಾಕರು. ಅವರ ಸಮುದ್ರದಾಚೆಯಿಂದ, ಇಂದಲ್ಲ ನಾಳೆ, ಮತ್ತು ಸಮುದ್ರದೀಚೆಯಿಂದ ಗ್ರಂಥಗಳು ಕನ್ನಡ ಪ್ರವಾಸ ಸಾಹಿತ್ಯದಲ್ಲಿ ಸಮಜೋಡಿಯಿಲ್ಲದ ಕೃತಿಗಳು. 1936–37 ರಲ್ಲಿ ಉನ್ನತ ವ್ಯಾಸಂಗಕ್ಕಾಗಿ ಇಂಗ್ಲೆಂಡಿಗೆ ಹೋದ ಗೋಕಾಕರು ತಾವು ಕಂಡುಂಡ ಅನುಭವಗಳನ್ನು ತಮ್ಮ ಧರ್ಮ ಪತ್ನಿ ಹಾಗೂ ಸ್ನೇಹಿತರನ್ನು ಸಂಬೋಧಿಸಿ ಬರೆದ ಪತ್ರಗಳ ಸಂಕಲನವೇ ಸಮುದ್ರದಾಚೆಯಿಂದ ಎಂಬ ಗ್ರಂಥ. ಇಂದಲ್ಲ ನಾಳೆ ಎಂಬ ಗ್ರಂಥದಲ್ಲಿ ಅಮೆರಿಕೆಯ ಗಡಿಬಿಡಿಯ ಬದುಕು, ನಿರಾಸಕ್ತಿ ನಾಗರಿಕತೆಗಳ ಚಿತ್ರಣ ಇಲ್ಲಿ ಕಾವ್ಯಮಯವಾಗಿ ಮೂಡಿ ಬಂದಿದೆ. ಇಲ್ಲಿನ ನವೀನ ಚಂಪೂ ಶೈಲಿ ವಸ್ತು ನಿರೂಪಣೆಯ ಹೊಸತೊಂದು ಮಾರ್ಗವನ್ನು ತೆರೆದಿದೆ. 1957ರಲ್ಲಿ ಪಿ. ಇ. ಎನ್. ಸಮ್ಮೇಳನಕ್ಕಾಗಿ ಜಪಾನಿಗೆ ಹೋದಾಗಿನ ಅವರ ಅನುಭವಗಳೆಲ್ಲ ಸಮುದ್ರದೀಚೆಯಿಂದ ಎಂಬ ಗ್ರಂಥದಲ್ಲಿ ಮೂಡಿವೆ. ಈ ಪ್ರವಾಸ ಗ್ರಂಥಗಳಲ್ಲಷ್ಟೇ ಅಲ್ಲದೆ ಅವರ ಸಮುದ್ರಗೀತೆಗಳು, ಉಗಮ, ಕಾಶ್ಮೀರ ಮುಂತಾದ ಕಾವ್ಯಸಂಕಲನಗಳಲ್ಲೂ ಸಮರಸವೇ ಜೀವನ ಕಾದಂಬರಿಯಲ್ಲೂ ಪ್ರವಾಸಾನುಭವ ಕೂಡಿ ಬಂದಿರುವುದನ್ನು ಕಾಣಬಹುದಾಗಿದೆ. ಒಟ್ಟಿನಲ್ಲಿ ಗೋಕಾಕರಿಗೆ ಕಾವ್ಯದ ಮುಖ್ಯ ಪ್ರೇರಣೆಯೇ ಪ್ರವಾಸ–ಎನ್ನುವ ಜಿ. ಎಸ್. ಶಿವರುದ್ರಪ್ಪನವರ ಮಾತು ಒಪ್ಪತಕ್ಕುದಾಗಿದೆ.

ಕೆ. ಶಿವರಾಮಕಾರಂತರ ಅಬುವಿಂದ ಬರಾಮಕ್ಕೆ, ಅಪೂರ್ವ ಪಶ್ಚಿಮ ಎಂಬ ಎರಡು ಕೃತಿಗಳು ಪ್ರವಾಸ ಸಾಹಿತ್ಯದ ಕಿರೀಟಗಳಂತಿವೆ. ನಾಲ್ಕು ಪುನರಾವೃತ್ತಿಗಳನ್ನು ಕಂಡ ಮತ್ತೊಂದು ಕನ್ನಡ ಪ್ರವಾಸಗ್ರಂಥವೆಂದರೆ ಅಬೂವಿಂದ ಬರಾಮಕ್ಕೆ. ಅಬು, ಅಜ್ಮೀರ, ಪುಷ್ಕರ, ಜಯಪುರ, ದಿಲ್ಲಿ, ಸಿಮ್ಲ, ಆಗ್ರ, ಕಾಶಿ, ಡಾಲ್ಮಿಯಾ, ಕಲ್ಕತ್ತ ಮತ್ತು ಬರಾಮಗಳಲ್ಲಿ ಸಂಚರಿಸಿ ಅಲ್ಲಿನ ನಿಸರ್ಗ, ವಾಸ್ತು, ಸಂಗೀತ ಸಾಹಿತ್ಯ ಜನಜೀವನಾದಿಗಳನ್ನು ಮನಂಬುಗುವಂತೆ ಇಲ್ಲಿ ಕಂಡರಿಸಲಾಗಿದೆ. 1953ರಲ್ಲಿ ಅಚ್ಚಾದ ಅವರ ಅಪೂರ್ವ ಪಶ್ಚಿಮ ಕನ್ನಡದಲ್ಲಿ ನಿಜಕ್ಕೂ ಅಪೂರ್ವ ಪ್ರವಾಸಗ್ರಂಥ. ಇದೊಂದು ಕಥೆ, ಅನುಭವದ ಕಥೆ, ಕಲೆಗಾರನ ಅನುಭವದ ಕಥೆ. ಇಲ್ಲಿ ಭಾವದ ಕಾವೂ ಆಲೋಚನೆಯ ತೀಕ್ಷ್ಣತೆಯೂ ಮಿಳಿತವಾಗಿವೆ. ಮಹಿಮೆ ಮಹಿಮೆಯನ್ನು ಸಂಸ್ಕೃತಿ ಸಂಸ್ಕೃತಿಯನ್ನು ಸಂಧಿಸುವ ಹಿರಿಮೆ ಇಲ್ಲಿ ಎದ್ದು ಕಾಣುತ್ತದೆ. ಹೀಗೆಂದು ದೇಜಗೌ ಇದನ್ನು ಪ್ರಶಂಸಿಸಿದ್ದಾರೆ. ಪಾಶ್ಚಾತ್ಯ ಪ್ರವಾಸದ ಅನುಭವಗಳು ಇಲ್ಲಿ ವಿಸ್ತಾರವಾಗಿ ಸವಿವರವಾಗಿ ಬಂದಿವೆ. ಕಾರಂತರ ಆತ್ಮಕಥನವಾದ ಹುಚ್ಚು ಮನಸ್ಸಿನ ಹತ್ತು ಮುಖಗಳು ಎಂಬ ಗ್ರಂಥದಲ್ಲೂ ಆಳ–ನಿರಾಳದಂಥ ಅವರ ಬಹುಪಾಲು ಕಾದಂಬರಿಗಳಲ್ಲೂ ಪ್ರವಾಸಾನುಭವ ಕಥೆಯೊಂದಿಗೆ ಮಿಳಿತವಾಗಿ ಬಂದಿದೆ.

ದಿನಕರ ದೇಸಾಯಿಯವರ ನಾ ಕಂಡ ಪಡುವಣ ಮನೋಹರ ಗ್ರಂಥಮಾಲೆಯವರ ನಡೆದು ಬಂದ ದಾರಿಯ ಮೂರನೆಯ ಸಂಪುಟದಲ್ಲಿ ಅಚ್ಚಾಗಿದೆ. ದೇಸಾಯಿಯವರು ಭಾರತದ ಪ್ರತಿನಿಧಿಯಾಗಿ ಅಂತರ ರಾಷ್ಟ್ರೀಯ ಕೂಲಿಕಾರ ಪರಿಷತ್ತಿನಲ್ಲಿ ಭಾಗವಹಿಸಲು ಪ್ರವಾಸ ಮಾಡಿದಾಗಿನ ಅನುಭವಮಾಲಿಕೆಯೇ ಈ ಕೃತಿ. ಈ ಗ್ರಂಥದಲ್ಲಿ ದೇಸಾಯಿಯವರು ಕೂಲಿಕಾರರ ಸಂಘಟನೆ, ಸಾರಿಗೆ ವ್ಯವಸ್ಥೆ, ಶಿಸ್ತು, ಪಾಕಶಾಸ್ತ್ರ ಮುಂತಾದವುಗಳ ಬಗ್ಗೆ ಕಥೆಯ ರೀತಿಯಲ್ಲಿ ತಮ್ಮ ಅನುಭವಗಳನ್ನು ನೀಡಿದ್ದಾರೆ. ಅಮೆರಿಕೆಯನ್ನು ಕುರಿತು ಬಂದ ಗ್ರಂಥಗಳಲ್ಲಿ ಬಿ.ಜಿ.ಎಲ್. ಸ್ವಾಮಿಯವರ ಅಮೆರಿಕದಲ್ಲಿ ನಾನು ಎಂಬುದು ಅತ್ಯುತ್ತಮ ಗ್ರಂಥ. ಸ್ವಾಮಿಯವರು ಸಸ್ಯಶಾಸ್ತ್ರದಲ್ಲಿ ಸಂಶೋಧನೆ ನಡೆಸಲು ಅಮೆರಿಕೆಗೆ ಹೋಗಿ ಆರು ವರ್ಷಗಳ ಕಾಲ ಅಲ್ಲಿದ್ದು ಅಲ್ಲಿನ ಜನಜೀವನ ಸಂಸ್ಕೃತಿ ವ್ಯವಹಾರ ಸ್ವಭಾವ ಧರ್ಮ ಹಾಗೂ ಭಾರತೀಯ ಮತ್ತು ಅಮೆರಿಕೆಯ ಜೀವನದಲ್ಲಿ ಕಂಡು ಬರುವ ವ್ಯತ್ಯಾಸಗಳನ್ನು ಕುರಿತು ಇಲ್ಲಿ ಬರೆಯುತ್ತಾರೆ. ಒಟ್ಟಿನಲ್ಲಿ ಅವರ ಅನುಭವ 'ನಮ್ಮಂತೆಯೇ ಅಮೆರಿಕನ್ನರು ಅಮೆರಿಕನ್ನರಂತೆಯೇ ನಾವು' ಎಂಬುದು. ನಾನೂ ಅಮೆರಿಕೆಗೆ ಹೋಗಿದ್ದೆ—ಎಂಬ ಗ್ರಂಥ ವಿಜ್ಞಾನಿ ಕೃಷ್ಣಾನಂದ ಕಾಮತರ ಅಮೆರಿಕ ಪ್ರವಾಸವನ್ನು ವಿವರಿಸುವ ಮತ್ತೊಂದು ಉತ್ತಮ ಕೃತಿ. ಹೋಗುವ ಮುಂಚೆ ಹಲವು ಕಲ್ಪನೆಗಳನ್ನು ಕಟ್ಟಿಕೊಂಡು ಹೋಗಿ ಅಲ್ಲಿ ಹೋದ ಬಳಿಕ ತಾವು ಎದುರಿಸಿದ ಸಮಸ್ಯೆಗಳನ್ನು ಇಲ್ಲಿ ಅವರು ಹೊಸ ಬಗೆಯಲ್ಲಿ ವಿವರಿಸಿದ್ದಾರೆ. ಅಮೆರಿಕ ಅಪ್ಸರೆಯರ ಸ್ವರ್ಗವೆಂದು ಭಾವಿಸಿರುವ ಯುವಕರು ಈ ಗ್ರಂಥವನ್ನು ಓದಬೇಕು. ಇಲ್ಲಿ ಕಾಮತರು ಹೊಸ ಅಮೆರಿಕವೊಂದನ್ನು ತೆರೆದು ತೋರಿಸಿದ್ದಾರೆ.

ಶ್ರೀರಂಗರ ಶ್ರೀರಂಗಯಾತ್ರೆ ಮತ್ತೊಂದು ಶ್ರೇಷ್ಠ ವಿದೇಶೀ ಪ್ರವಾಸಗ್ರಂಥ. ನಾಟಕಕಾರ ಶ್ರೀರಂಗರು ಇಲ್ಲಿಯೂ ಪಯಣಿಸುವ ನಾಟಕವನ್ನೇ ಹೆಣೆದಿದ್ದಾರೆ. ಯೂರೋಪಿನ ಈ ಪ್ರವಾಸಕಥನ ಕುತೂಹಲ ಭರಿತವಾಗಿದೆ. ಇವರು, ನೆಗಳೂರು ರಂಗನಾಥ, ಎಚ್. ಎಲ್. ಪಾಟೀಲ–ಈ ಮೂವರೂ ಕೂಡಿ 1946ರಲ್ಲಿ ಹಳೇಬೀಡು ಬೇಲೂರು ಶ್ರವಣಬೆಳಗೊಳ ಮುಂತಾದ ದಕ್ಷಿಣ ಮೈಸೂರಿನ ಪ್ರದೇಶಗಳಲ್ಲಿ ಮಾಡಿದ ಪ್ರವಾಸಕಥನ ತುಂಬ ಸುಂದರವಾಗಿ ಅಂದಿನ ಪ್ರವಾಸದ ಪ್ರಯಾಸಗಳ ವರ್ಣನೆಯೊಂದಿಗೆ ಮುಕ್ಕಣ್ಣಯಾತ್ರೆ ಎಂಬ ಪುಸ್ತಕದಲ್ಲಿ ರಮ್ಯವಾಗಿ ಚಿತ್ರಿತವಾಗಿದೆ. ಇದೂ ಒಂದು ಉತ್ತಮ ಕೃತಿ.

ನವರತ್ನ ರಾಮ್ ಬರೆದ ಪ್ಯಾರಿಸ್ಸಿನಿಂದ ಪ್ರೇಯಸಿಗೆ ಎಂಬ ಪುಸ್ತಕ ಆಕರ್ಷಕ ಶೈಲಿ ಹಾಗೂ ಸುಂದರ ಸನ್ನಿವೇಶಗಳಿಂದ ಕೂಡಿದೆ. ಪ್ಯಾರಿಸ್ಸಿನ ಸ್ವಚ್ಛಂದ ಪ್ರೇಮ ವಾತಾವರಣವನ್ನು ಚಿತ್ರಿಸುವುದರಲ್ಲಿ ರಾಮ್ ಯಶಸ್ವಿಯಾಗಿದ್ದಾರೆ. ವಕೀಲರಾದ ಕೆ. ಆರ್. ಕಾರಂತರು 1951ರಲ್ಲಿ ಯೂರೋಪಿನಲ್ಲಿ ಪ್ರವಾಸ ಮಾಡಿ ಪ್ರವಾಸಿಯ ಪತ್ರಗಳು ಎಂಬ ಗ್ರಂಥವನ್ನು ರಚಿಸಿದ್ದಾರೆ. ಇದರಲ್ಲಿ ರಾಜಕೀಯದ ಮತ್ತು ಪ್ರಜಾಪ್ರಭುತ್ವದ ವಿಶ್ಲೇಷಣೆ ವಿಶೇಷವಾಗಿ ಬಂದಿದೆ. ಸಾಗರದಾಚೆ ಮತ್ತು ನಮ್ಮ ಕಾಗದಗಳು ಎಂಬೆರಡು ಹೊತ್ತಗೆಗಳಲ್ಲಿ ನಾಡಿಗ ಕೃಷ್ಣಮೂರ್ತಿಯವರು ಪತ್ರಿಕೋದ್ಯಮದ ವಿಷಯ ಸಂಗ್ರಹಣೆಗಾಗಿ ಅಮೆರಿಕದಲ್ಲಿ ಪ್ರವಾಸ ಮಾಡಿದಾಗಿನ ತಮ್ಮ ಅನುಭವಗಳನ್ನು ವ್ಯಕ್ತಪಡಿಸಿದ್ದಾರೆ. ಪತ್ರಿಕೋದ್ಯಮದಲ್ಲಿ ಆಸ್ಥೆಯುಳ್ಳವರಿಗೆ ಇವು ತುಂಬ ಸಹಾಯಕವಾಗಿವೆ. ಎಂ. ವೀರಪ್ಪನವರ ಸಯೋನರ ಜಪಾನ್, ಜಪಾನಿ ಪ್ರವಾಸದ ಅನುಭವಗಳನ್ನು ತಿಳಿಸುವ ಪತ್ರರೂಪದ ಕಥನ. ಶ್ರೀಮಂತ ಲೂಯಿಸ್‌ರವರ ಕೊಲಂಬಿಯಾಯಾತ್ರೆ ಎಂಬುದು ಅಮೆರಿಕ ಪ್ರವಾಸದ ಅನುಭವಗಳನ್ನು ಕುರಿತು ಗೆಳೆಯನಿಗೆ ಬರೆದ 19 ಪತ್ರಗಳ ಸಂಕಲನ. ಈ ಗ್ರಂಥವನ್ನು ಕುರಿತು ಜಿ. ಪಿ. ರಾಜರತ್ನಂ ರವರು ಮತ್ತೆಯಾವುದಕ್ಕೆ ಅಲ್ಲದೆ ಹೋದರೂ ಅಭಿನ್ನತೆಯ ಐಕ್ಯಕ ಭಾವನೆಯ ಗಳಿಕೆಗಾದರೂ ಇದನ್ನು ಓದಿ ನೋಡಬೇಕು—ಎನ್ನುತ್ತಾರೆ.

ವಿದೇಶಗಳಲ್ಲಿ ನಾಲ್ಕು ವಾರ ಎಂಬುದು ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ದೇ. ಜವರೇಗೌಡರ ಪ್ರವಾಸಗ್ರಂಥ. 1970ರ ಅಕ್ಟೋಬರ್–ನವೆಂಬರ್ ತಿಂಗಳುಗಳಲ್ಲಿ ರಷ್ಯದ ಕೀವ್ ವಿಶ್ವವಿದ್ಯಾನಿಲಯದಲ್ಲಿ ಲೆನಿನ್ ಪ್ರಶಸ್ತಿ ಸ್ವೀಕರಿಸಲೂ ಆಸ್ಟ್ರಿಯ, ಜರ್ಮನಿ ಹಾಗೂ ಲಂಡನ್ ವಿಶ್ವವಿದ್ಯಾನಿಲಯಗಳನ್ನು ವೀಕ್ಷಿಸಲೂ ಕೈಗೊಂಡ ಪ್ರವಾಸ ಸಮಯದಲ್ಲಿನ ತಮ್ಮ ಅನುಭವಗಳ ದಿನಚರಿಯನ್ನು ಇಲ್ಲಿ ಕೊಡಲಾಗಿದೆ. 'ನನ್ನ ನಾಡು ಬಡವಾಗಿದ್ದರೂ ಅದೆ ನನಗೆ ಮೆಚ್ಚು; ನನ್ನ ಜನ ಹರಕು ಚಿಂದಿಯಲ್ಲಿದ್ದರೂ ಅವರೇ ನನಗೆ ಹೆಚ್ಚು; ನನ್ನ ನೆಲ ನನಗೆ ಹುಚ್ಚು. ಬೇರೆಯವರ ಬಗೆಗೆ ದ್ವೇಷವಿಲ್ಲ. ಅಷ್ಟೇ ಅಲ್ಲ ಅವರ ಬಗೆಗೆ ಅವರು ಸಾಧಿಸಿರುವ ಸಿದ್ಧಿಯ ಬಗೆಗೆ ನನಗೆ ಅಪಾರ ಗೌರವ. ನಮ್ಮ ಸಂಸ್ಕೃತಿಗೆ ಬಾಧಕವಾಗದಂತೆ ಅವರ ಪ್ರಗತಿಯ ಪ್ರವೃತ್ತಿಯಿಂದ ಅನ್ಯ ಸಂಸ್ಕೃತಿಯ ಶ್ರೇಷ್ಠಗುಣಗಳನ್ನು ಅಳವಡಿಸಿಕೊಳ್ಳಬೇಕೆಂಬುದೇ ನನ್ನ ಸ್ಪಷ್ಟ ನಿಲುವು'–ಎಂದು ಗೌಡರು ತಮ್ಮ ನಿಲುವನ್ನು ಸ್ಪಷ್ಟಪಡಿಸಿದ್ದಾರೆ. ಈ ಗ್ರಂಥದಲ್ಲಿ ಆಧುನಿಕ ಗದ್ಯ ಶಿಲ್ಪಿಗಳಲ್ಲೊಬ್ಬರಾದ ಅವರು ಸರಳವಾಗಿ ಆದರೂ ನೇರವಾಗಿ ಯಾವ ಮುಚ್ಚುಮರೆಯೂ ಇಲ್ಲದೆ ತಾವು ಕಂಡ

ದ್ದನ್ನು ತಮಗನಿಸಿದ್ದನ್ನು ತಮ್ಮದೇ ಆದ ಅನುಭವವನ್ನು ಮನಮೋಹಕ ರೀತಿಯಲ್ಲಿ ತಿಳಿಸಿದ್ದಾರೆ. ಪ್ರವಾಸ ಸಮಯದಲ್ಲೇ ಬರೆದು ಮುಗಿಸಿದ ಈ ಗ್ರಂಥದಲ್ಲಿ ಅವರು ಪ್ರವಾಸ ಮಾಡಿದ ದೇಶಗಳ ಜನರ ವಾಸ್ತವ ಚಿತ್ರಣ ನೈಜವಾಗಿ ಮೂಡಿಬಂದಿದೆ. ಅವರ ಗುರಿ ನಿಲುವು ಕರ್ತವ್ಯಶ್ರದ್ಧೆ ತಾಯ್ನಾಡು ಮತ್ತು ತಾಯ್ನುಡಿಗಳ ಬಗೆ ಅವರಿಗಿರುವ ಕಾಳಜಿಗಳು ಗ್ರಂಥದುದ್ದಕ್ಕೂ ಮಿನುಗುತ್ತವೆ. ಇತ್ತೀಚಿನ ಪ್ರವಾಸ ಗ್ರಂಥಗಳಲ್ಲಿ ಇದು ಶ್ರೇಷ್ಠ ಕೃತಿಯಾಗಿದೆ.

ವಿದೇಶ ಯಾತ್ರೆಯನ್ನು ಕುರಿತು ಈ ಗ್ರಂಥಗಳಲ್ಲದೆ ಹಲವು ಪತ್ರಿಕೆಗಳಲ್ಲಿ ಸಾಪ್ತಾಹಿಕ, ಮಾಸಿಕಗಳಲ್ಲಿ ಹಾಗೂ ಪ್ರಬಂಧ ಸಂಕಲನಗಳಲ್ಲಿ ಪ್ರಕಟವಾದ ಪ್ರವಾಸ ಸಾಹಿತ್ಯ ಲೇಖನಗಳಂತೂ ಅಸಂಖ್ಯಾತವಾಗಿವೆ. ಬಹುಪಾಲು ಉತ್ತಮ ಲೇಖನಗಳು ಹೀಗೆ ಚೆಲ್ಲಾಪಿಲ್ಲಿಯಾಗಿವೆ. ಮುಗಳಿ, ಎಸ್. ಪಿ. ಭಟ್ಟ, ಕಟ್ಟೀಮನಿ, ಸ.ಸ. ಮಾಳವಾಡ, ಜ್ಯೋತಿಷಿ ಬಿ.ವಿ. ರಾಮನ್, ಭಾಸ್ಕರ ರಾವ್ ಮಾಲೂರ್ಕರ್, ಸಿದ್ಧವನ ಹಳ್ಳಿ ಕೃಷ್ಣಶರ್ಮ, ತೀ ನಂ. ಶ್ರೀಕಂಠಯ್ಯ, ಆರ್. ಸಿ. ಹಿರೇಮಠ, ಹಾ. ಮಾ. ನಾಯಕ, ಸರೋಜಿನಿ ಮಹಿಷಿ, ಮತ್ತೀಹಳ್ಳಿ ನಾಗರಾಜರಾವ್, ಸಿಸು ಸಂಗಮೇಶ—ಮುಂತಾದವರ ಹೆಸರುಗಳನ್ನು ಉದ್ಧರಿಸಬಹುದು. ಬಿ. ಪುಟ್ಟಯ್ಯನವರ ಅಭಿವೃದ್ಧಿ ಸಂದೇಶ ಪಶ್ಚಿಮ ದೇಶದಲ್ಲಿಯ ಪ್ರವಾಸದ ಪ್ರಥಮಗ್ರಂಥ.

ಸರ್ಕಾರದ ಉನ್ನತ ಹುದ್ದೆಯಲ್ಲಿದ್ದು ವಿಶ್ವದಲ್ಲಿ ಹಲವು ಬಾರಿ ಸಂಚರಿಸಿ ಹಲವು ದೇಶದ ಹಲವು ಜನರ ಜೀವನ ಸಂಸ್ಕೃತಿಗಳನ್ನು ತುಂಬ ಹತ್ತಿರದಿಂದ ಕಂಡು ವಿದೇಶೀಯರ ಬಗೆಗೆ ಅತ್ಯಂತ ನೈಜವಾಗಿ ರಚಿತವಾಗಿರುವ ಗ್ರಂಥವೆಂದರೆ ಕೆ.ಪಿ. ಎಸ್. ಮೆನನ್‌ರವರ ವಿಶ್ವ ಪರ್ಯಟನೆ. ಇಂಗ್ಲಿಷಿನಲ್ಲಿರುವ ಈ ಗ್ರಂಥವನ್ನು ಮಾ. ಭೀ ಶೇಷಗಾರಿರಾವ್‌ರವರು ಕನ್ನಡಕ್ಕೆ ಅನುವಾದಿಸಿ ಕನ್ನಡ ಪ್ರವಾಸ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆ ಕೊಟ್ಟಿದ್ದಾರೆ.

ಕನ್ನಡದಲ್ಲಿ ಪ್ರಕಟವಾಗಿರುವ ಪ್ರವಾಸ ಕಥನಗಳಲ್ಲಿ ಅರ್ಧಕ್ಕಿಂತ ಹೆಚ್ಚು ಗ್ರಂಥಗಳು ಕ್ಷೇತ್ರ ಪರಿಚಯವನ್ನು ಮಾಡಿ ಕೊಡುವಂಥವು. ಭಾರತದ ಹಾಗೂ ಕರ್ಣಾಟಕದ ಹಲವು ಕ್ಷೇತ್ರಗಳನ್ನು ಪರಿಚಯಿಸುವ ಈ ಗ್ರಂಥಗಳಲ್ಲಿ ಸಾಹಿತ್ಯಮೌಲ್ಯಕ್ಕಿಂತ ಹೆಚ್ಚಾಗಿ ಕ್ಷೇತ್ರ ಪರಿಚಯವೇ ಮುಖ್ಯ ಗುರಿಯಾಗಿದೆ. ಇವುಗಳಲ್ಲಿ ಕೆಲವು ಗ್ರಂಥಗಳಲ್ಲಿ, ಕ್ಷೇತ್ರಮಹಿಮೆಯನ್ನು ಕುರಿತು ರಚಿತವಾಗಿರುವ ಹಾಡುಗಳಲ್ಲಿ, ಸಾಹಿತ್ಯಾಂಶವನ್ನು ಕಾಣಬಹುದಾಗಿದೆ. ಬಹು ಪಾಲು ಗ್ರಂಥಗಳು ಸಚಿತ್ರವಾಗಿರುವುದರಿಂದ ಆಕರ್ಷಕವಾಗಿವೆ. ಇವುಗಳಲ್ಲಿ ಕೆಲವನ್ನು ಮಾತ್ರ ಇಲ್ಲಿ ಹೆಸರಿಸಬಹುದು.

ಶ್ರೀಕ್ಷೇತ್ರ ಕುರವಪುರ ಕುರುಗಡಿಯ ಪರಿಚಯ, ಸವದತ್ತಿಯ ಎಲ್ಲಮ್ಮಾ, ಸಂಪೂರ್ಣ ಶ್ರೀಶೈಲ ಮಹಾಕ್ಷೇತ್ರ ದರ್ಶನ, ಶ್ರೀ ಹೊಂಬುಜ ಕ್ಷೇತ್ರ, ಕಾರ್ಕಳದ ಚರಿತ್ರೆ, ಗೋಸಾಮಿಯವರ ಹಿಮಾಲಯ ದರ್ಶನ, ಕೈಲಾಸ ಮಾನಸಸರೋವರ ಯಾತ್ರೆ ಮತ್ತು ಉತ್ತರ ಹಿಂದೂಸ್ತಾನದ ಪ್ರವಾಸ ; ಭಾರದ್ವಾಜರ ಸಚಿತ್ರ ಭಾರತಯಾತ್ರೆ, ಶ್ರೀನಿವಾಸ ಕಂಪನಿಯವರ ಸಚಿತ್ರ ವಿಜಯನಗರ, ನ.ರಾ. ಗಲಗಲಿಯವರ ಬದರಿನಾರಾಯಣ ದರ್ಶನ, ಜಿ. ವೆಂಕಟಯ್ಯನವರ ಚಿನ್ನದ ಗಿರಿಯಾತ್ರೆ, ಬನದ ಸೆರಗು, ' ಸೋಮನಾಥಾನಂದರ ಅಮರನಾಥಯಾತ್ರೆ ಮತ್ತು ಹೈಮಾಚಲ ಸಾನ್ನಿಧ್ಯದಲ್ಲಿ, ಬಿ. ಶಿವಮೂರ್ತಿಶಾಸ್ತ್ರಿಗಳ ಕರ್ಣಾಟಕ ಸಂದರ್ಶನ, ಯು. ರಾಘವೇಂದ್ರ ಭಟ್ಟರ ರಜತಪೀಠದಿಂದ ರಾಜತಾದ್ರಿಗೆ, ಮಹದೇವಿಯಮ್ಮನವರ ದೇವತಾತ್ಮ, ಪಿ. ಆರ್. ಜಯಲಕ್ಷ್ಮಮ್ಮನವರ ಬದರೀಯಾತ್ರೆ, ಮ.ನ. ಮೂರ್ತಿಯವರ ನಮ್ಮ ಪ್ರವಾಸ ಮತ್ತು ನಾವು ಕಂಡ ಬೆಂಗಳೂರು, ಡಿ.ಪಿ. ರಂಗಸ್ವಾಮಿಯವರ ಭಾರತ ಯಾತ್ರೆ, ಎಚ್. ಆರ್. ನಾಗರಾಜ್‌ರವರ ಹಿಮಾಚಲ ಪ್ರದೇಶ, ಜೆ.ವಿ. ನರಸಿಂಹಮೂರ್ತಿಯವರ ಆಸೇತು ಹಿಮಾಚಲಯಾತ್ರೆ, ಎಂ. ವೆಂಕಟಾಚಲ ಭಟ್ಟರ ಕಾಶ್ಮೀರ ಅಮರನಾಥ ಯಾತ್ರೆ, ಕೋ. ಚೆನ್ನಬಸಪ್ಪನವರ ದಕ್ಷಿಣೇಶ್ವರ ದರ್ಶನ, ಗುರುನಾಥ ಜೋಶಿಯವರ ಕಾಶ್ಮೀರ ಪ್ರವಾಸ, ಭದ್ರಗಿರಿ ಕೇಶವದಾಸರ ದಾಸ ಕೀರ್ತನ ಮಂಡಳಿಯ ಪ್ರಥಮ ಯಾತ್ರೆ, ಕೆ. ಗಣೇಶ ಮಲ್ಯರ ಶರಾವತಿಯಿಂದ ಗೋದಾವರಿ ವರೆಗೆ, ಶ್ರೀಕಂಠಶಾಸ್ತ್ರಿಯವರ ಮಾನಸ ಸರೋವರ ಮತ್ತು ಕೈಲಾಸ ಕ್ಷೇತ್ರ ಪ್ರಕರಣ, ಟಿ. ಚಂದ್ರರಾಜ ಶೆಟ್ಟಿಯವರ ಮಂಗಳೂರಿನಿಂದ ಮಧುರೆಗೆ, ಕೆ. ಗೋಪಾಲ ಕೃಷ್ಣ ರಾಯರ ತಿರುಪತಿ ಯಾತ್ರೆ, ವಿ.ನಾ. ಅವರ ಯಾತ್ರಿಕನ ಪತ್ರಗಳು, ಕೆ. ಕೊಟ್ರಗೌಡರ ನಮ್ಮ ಪ್ರವಾಸ, ಎಸ್. ರಜತಾದ್ರಿಯವರ ಪಶ್ಚಿಮದ ಹೊಂಬೆಳಕು ಮುಂತಾದ ಗ್ರಂಥಗಳು ಒಂದೇ ಮಾಲಿಕೆಯಲ್ಲಿ ಬರಬಹುದಾದ ಕೃತಿಗಳಾಗಿವೆ.

ಇವೇ ಅಲ್ಲದೆ ಬಾಲಕನೊಬ್ಬ ಬಾಲಕರಿಗಾಗಿ ಬರೆದ, ಅಜಿತ ಕುಮಾರನ ನನ್ನ ಪ್ರವಾಸ ಕಥನ, ಎಸ್. ವಿ. ಕೃಷ್ಣಮೂರ್ತಿರಾಯರ ದಿಲ್ಲಿಯ ಪತ್ರಗಳು, ಎಚ್.ವಿ. ಶ್ರೀರಂಗರಾಜುರವರ ಸೋವಿಯಟ್ ದಿನಚರಿ, ಗೊರೂರು ರಾಮಸ್ವಾಮಿ ಅಯ್ಯಂಗಾರ್‌ರವರ ಮಹಾತ್ಮಾ ಗಾಂಧಿಯವರ ದಕ್ಷಿಣ ಯಾತ್ರೆ, ಗುಂಡ್ಮಿ ಚಂದ್ರಶೇಖರ ಐತಾಳರ ಸೌಂದರ್ಯದ ಸಾನ್ನಿಧ್ಯದಲ್ಲಿ, ಜಿ. ವೆಂಕಟಯ್ಯನವರ ಬನದ ಸೆರಗು, ಮಿರ್ಜಿ ಅಣ್ಣಾರಾಯರ ನಾ ಕಂಡ ನಾಡು, ಎಚ್. ಜಿ. ಜೋಶಿಯವರ ಶಿಲಾಹೃದಯ, ವೆಂ. ಮು. ಜೋಶಿಯವರ ಸೈನಿಕ ಉವಾಚ, ಎನ್.ಎಸ್. ಗದಗಕರ್‌ರವರ ಗೋವಾಯಾತ್ರೆ, ಟಿ. ಚಂದ್ರರಾಜಸಿದ್ಧಶೆಟ್ಟಿ ಅವರ ಭಾರತದ ಮಹಾನಗರಗಳು. ಎ.ಎಂ. ಅಣ್ಣಿಗೇರಿಯವರ ಕರ್ಣಾಟಕದ ಸಾಂಸ್ಕೃತಿಕ ಸ್ಥಳಗಳು ಹಿರೇಮಲ್ಲೂರು ಈಶ್ವರನ್ ಅವರ ಕವಿ ಕಂಡ ನಾಡು—ಕನ್ನಡ ಪ್ರವಾಸಸಾಹಿತ್ಯಕ್ಕೆ ಕೊಟ್ಟ ಶ್ರೇಷ್ಠ ಕೊಡುಗೆಗಳಾಗಿವೆ.

ಕ್ಷೇತ್ರ ಪರಿಚಯ ಗ್ರಂಥಗಳಲ್ಲಿ ಕೆ.ಬಿ. ಪ್ರಭುಪ್ರಸಾದರ ದೇಗುಲಗಳ ದಾರಿಯಲ್ಲಿ ಎಂಬುದು ಒಂದು ಉತ್ತಮ ಗ್ರಂಥ. ಪ್ರವಾಸ ಸಾಹಿತ್ಯದಲ್ಲಿರಬೇಕಾದ ದೃಷ್ಟಿ ಮತ್ತು ರೂಪ ಇಲ್ಲಿ ಚೆನ್ನಾಗಿ ಮೇಳೈಸಿವೆ. ಬಹು ಸಹಜವಾಗಿ, ನೇರವಾಗಿ, ಸರಳವಾಗಿ ತಮ್ಮ ಅನುಭವಗಳನ್ನು ಲೇಖಕರು ಇಲ್ಲಿ ಮೂಡಿಸಿದ್ದಾರೆ. ಹ. ರಾ. ಪುರೋಹಿತರ ರಾಮೇಶ್ವರ ಕನ್ಯಾಕುಮಾರಿ ದರ್ಶನ ಮತ್ತು ಬದರಿ ಕೇದಾರನಾಥ ದರ್ಶನಗಳು ಅತ್ಯಂತ ಭಕ್ತಿಯಿಂದ ಶ್ರದ್ಧೆಯಿಂದ ಬರೆದ ಗ್ರಂಥಗಳಾಗಿವೆ.

1943ರಲ್ಲಿ ಶಿವಮೊಗ್ಗೆಯಲ್ಲಿ ನಡೆದ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಮಿತ್ರರೊಂದಿಗೆ ಹೋಗಿದ್ದ ಮಾಸ್ತಿ ನರಸಿಂಗರಾಯರು ತಮ್ಮ ಮತ್ತು ಮಿತ್ರರ ಅನುಭವಗಳನ್ನು ಕನ್ನಡ ಯಾತ್ರೆಯಲ್ಲಿ ತಂದುಕೊಟ್ಟಿದ್ದಾರೆ. ಕನ್ನಡದಲ್ಲಿ ಇದು ಮತ್ತೊಂದು ಉತ್ತಮ ಕೃತಿ. ಸಿದ್ದವನಹಳ್ಳಿ ಕೃಷ್ಣಶರ್ಮರ ವರ್ಧಾಯಾತ್ರೆ ಕಥನ ಕೌಶಲ, ತತ್ತ್ವಗ್ರಥನ, ವರ್ಣನ, ವಿನೋದ ವಿಲಾಸ ಮೊದಲಾದ ಅನೇಕ ಗುಣಗಳು ಕೃಷ್ಣಶರ್ಮರ ಮನಃ ಶಕ್ತಿಗಳ ಪರಿಪಾಕದೊಡನೆ ಇದರಲ್ಲಿ ಸ್ವಚ್ಛಂದವಾಗಿ ಬಂದಿವೆ—ಎನ್ನುವ ಬೇಂದ್ರೆಯವರ ಮಾತು ಸತ್ಯ. ಇವರ ಭೂದಾನಯಜ್ಞಯಾತ್ರೆ ಉತ್ತರ ಪ್ರವಾಸದ ವಿವರವನ್ನೊಳಗೊಂಡ ಮತ್ತೊಂದು ಕೃತಿ.

ಒಕ್ಕಲುತನದ ಪ್ರವಾಸ ಗ್ರಂಥಗಳಲ್ಲಿ ವೀ. ಚ. ಹಿತ್ತಲಮನಿಯವರ ಶರಾವತಿಯಿಂದ ಸಾಬರಮತಿ, ವಿ. ಪುರಂದರ ರೈರವರ ನಮ್ಮ ಪ್ರವಾಸಾನುಭವ ಗಣನೀಯ ಕೃತಿಗಳು.

ಜಿ. ಪಿ. ರಾಜರತ್ನಂರವರ ಚೀನಾದೇಶದ ಬೌದ್ಧಯಾತ್ರಿಕರು, ಫಾಹಿಯಾನನ ಕ್ಷೇತ್ರ ಯಾತ್ರೆ ಎಂಬುವು ವಿದೇಶೀ ಯಾತ್ರಿಕರ ಅನುಭವಗಳನ್ನು ಕುರಿತ ಅನುವಾದ ಗ್ರಂಥಗಳು. ಪ್ರಾಚೀನ ಕಾಲದಿಂದಲೂ ಭಾರತಕ್ಕೆ ಬಂದು ಹೋದ ನೂರಾರು ಪ್ರವಾಸಿಗಳ ಪ್ರವಾಸ ಕಥನವನ್ನು ಸಮಗ್ರವಾಗಿ ಕನ್ನಡಕ್ಕೆ ತಂದು ಕೊಟ್ಟ ಕೀರ್ತಿ ಎಚ್.ಎಲ್. ನಾಗೇಗೌಡರಿಗೆ ಸಲ್ಲುತ್ತದೆ. ಮಾರ್ಕೊಪೋಲೋನ ಪ್ರವಾಸ ಕಥನವನ್ನು ಮೊದಲು ಕನ್ನಡಕ್ಕೆ ತಂದು, ಈ ಅನುವಾದದಿಂದ ಪ್ರೋತ್ಸಾಹಿತರಾಗಿ, ದಶಕಗಳಷ್ಟು ಕಾಲ ಇಡೀ ಭಾರತದಲ್ಲಿ ಸಂಚರಿಸಿ ಹಲವು ಪ್ರಾಚ್ಯ ಕೋಶಾಗಾರಗಳಲ್ಲೂ ಗ್ರಂಥ ಹಾಗೂ ವಸ್ತು ಸಂಗ್ರಹಾಲಯಗಳಲ್ಲೂ ಹುದುಗಿದ್ದ ವರದಿಗಳನ್ನು ಎಕ್ಕಿ ತಂದು ಅವುಗಳ ಸಾರವನ್ನು ಬಟ್ಟಿ ಇಳಿಸಿ ಸುಮಾರು 200 ಜನ ವಿದೇಶೀ ಪ್ರವಾಸಿಗಳ ಪ್ರವಾಸ ಕಥನವನ್ನು ಕನ್ನಡದಲ್ಲಿ ಪ್ರವಾಸಿ ಕಂಡ ಇಂಡಿಯಾ ಎಂಬ ಹೆಸರಿನಲ್ಲಿ ನಾಲ್ಕು ಬೃಹತ್ ಸಂಪುಟಗಳಲ್ಲಿ ಈಗಾಗಲೇ ಶ್ರೀಯುತರು ಹೊರತಂದಿದ್ದಾರೆ; ಈ ಗ್ರಂಥಗಳ ಮೂಲಕ ಕನ್ನಡಸಾಹಿತ್ಯಕ್ಕೆ ಅತ್ಯಮೂಲ್ಯ ಕಾಣಿಕೆ ಕೊಟ್ಟು ಕನ್ನಡಿಗರೆಲ್ಲರ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಉನ್ನತ ಸರ್ಕಾರಿ ಹುದ್ದೆಯಲ್ಲಿದ್ದುಕೊಂಡೂ ಸಾಹಿತ್ಯಾಭಿಲಾಷೆಯನ್ನು ಉಳಿಸಿ ಬೆಳಸಿಕೊಂಡು ಸಹಸ್ರಾರು ಪುಟಗಳ ಈ ಗ್ರಂಥವನ್ನು ಸೃಷ್ಟಿಸಿರುವುದು ಅವರ ಸಾಹಿತ್ಯ ಪ್ರಿಯತೆಗೂ ನಾಡು ನುಡಿ ಪ್ರೇಮಕ್ಕೂ ಕರ್ತವ್ಯ ಶ್ರದ್ಧೆ ನಿಷ್ಠೆಗಳಿಗೂ ಜ್ವಲಂತ ಸಾಕ್ಷಿಯಾಗಿದೆ.

ಹೆಸರಿಸಬಹುದಾದ ಹಲವು ಉತ್ತಮ ಅನುವಾದ ಗಂಥಗಳು ಕನ್ನಡಕ್ಕೆ ಬಂದಿವೆ. ಬಂಗಾಳಿ ಲೇಖಕ ಪ್ರಬೋಧ ಕುಮಾರ್ ಸನ್ಯಾಲ್‌ರವರ ಪ್ರವಾಸ ಪ್ರಬಂಧವನ್ನು ಎಂ.ಕೆ. ಭಾರತೀರಮಣಾಚಾರ್ಯರು ಮಹಾ ಪ್ರಸ್ಥಾನದ ಪಥದಲ್ಲಿ ಎಂಬ ಹೆಸರಿನಿಂದ ಕನ್ನಡಕ್ಕೆ ತಂದಿದ್ದಾರೆ. ಇದು ಒಂದು ಉತ್ತಮ ಕಾದಂಬರಿಯಂತಿದೆ. ಸಾಮ್ಯುಯಲ್ ಎಲಿಯೆಟ್ ಮಾರಿಸನ್‌ರವರ ನಾವಿಕ ಕ್ರಿಸ್ಟೊಫರ್ ಕೊಲಂಬಸ್ ಗ್ರಂಥವನ್ನು ಎಚ್.ವಿ. ನಾರಾಯಣರಾಯರು, ಥಾರ್ ಹೆಯರ್ ಡಾಹಾಲ್‌ರ ಕಾಂಟಕಿಯ ಸಾಹಸವನ್ನು ಎಚ್.ಎನ್. ಮಾಧವರಾವ್ ಅವರೂ ಕನ್ನಡಕ್ಕೆ ಅನುವಾದಿಸಿದ್ದಾರೆ. ಯು. ಆರ್. ಅನಂತ ಮೂರ್ತಿ, ರಾಮಚಂದ್ರ ಶರ್ಮ ಮುಂತಾದ ನವ್ಯಸಾಹಿತಿಗಳು ತಮ್ಮ ವಿದೇಶ ಪ್ರವಾಸಗಳ ಹಿನ್ನೆಲೆಯಿಟ್ಟುಕೊಂಡು ಹಲವು ಕಥೆ ಕವಿತೆಗಳನ್ನು ರಚಿಸಿದ್ದಾರೆ. ಸ್ವಾಮಿ ವಿವೇಕಾನಂದರ ಕೊಲಂಬೊ ಇಂದ ಆಲ್ಮೊರಕ್ಕೆ ಮತ್ತು ಜವಹರ್‌ಲಾಲ್ ನೆಹರುರವರ ಮಗಳಿಗೆ ತಂದೆಯ ಓಲೆಗಳು ಎಂಬೆರಡು ಕೃತಿಗಳು ಕೂಡ ಕನ್ನಡದಲ್ಲಿ ಪ್ರಕಟವಾಗಿದ್ದು ಪ್ರವಾಸ ಸಾಹಿತ್ಯದ ಹರವಿಗೂ ಬರಬಹುದಾದ ಗ್ರಂಥಗಳಾಗಿವೆ.

ಜವಹರಲಾಲ್ ನೆಹರುರವರು ಕೆ.ಪಿ.ಎಸ್. ಮೆನನ್‌ರವರ ಗ್ರಂಥಕ್ಕೆ ಮುನ್ನುಡಿ ಬರೆಯುತ್ತ, ಪ್ರವಾಸ ಮಾಡುವುದು ಒಳ್ಳೆಯದು; ಹಾಗೆ ಪ್ರವಾಸ ಮಾಡಲಾರದೇ ಹೋದಾಗ ಪ್ರವಾಸದ ಬಗೆಗೆ ಬಂದಿರುವ ಸಾಹಿತ್ಯವನ್ನಾದರೂ ಓದುವುದು ಉತ್ತಮ ಹವ್ಯಾಸ—ಎಂದಿದ್ದಾರೆ. ಕನ್ನಡಿಗರಿಗೆ ಈ ಹವ್ಯಾಸ ಬೆಳಸಿಕೊಳ್ಳಲು ಸಾಕಷ್ಟು

ಸರಕಿದೆ. ಕನ್ನಡದಲ್ಲಿ ಪ್ರವಾಸ ಕಥನ ಬರೆದಿರುವವರಲ್ಲಿ ಬಹುಪಾಲು ಸುಪ್ರಸಿದ್ಧರಾದ ಸಾಹಿತಿಗಳು. ಪ್ರವಾಸ ಸಾಹಿತ್ಯದ ಬೆಳೆ ಕೃಶವಾಗಿದ್ದರೂ ಬಂದಿರುವ ಕೆಲವೇ ಗ್ರಂಥಗಳು ಅಪೂರ್ವವೂ ಸಾಹಿತ್ಯಶ್ರೀಮಂತವೂ ಆಗಿವೆಯೆಂಬುದು ಅಭಿಮಾನಾಸ್ಪದ ಸಂಗತಿ. ಪ್ರತಿಯೊಬ್ಬ ಲೇಖಕನೂ ತನ್ನದೇ ಆದ ವಿಶಿಷ್ಟ ರೀತಿಯಲ್ಲಿ ಹೊಸ ನಾಡಿನ ಹೊಸ ಕಥೆಯೊಂದನ್ನು ಕೊಟ್ಟಿದ್ದಾನೆ ; ಕೆಲವೊಂದು ಕಥನಗಳಂತೂ ಜಾಗತಿಕ ಪ್ರವಾಸ ಸಾಹಿತ್ಯಕೃತಿಗಳ ಮಟ್ಟಕ್ಕೆ ನಿಲ್ಲುವಷ್ಟು ಚೆನ್ನಾಗಿವೆ.

(ಜಿ.ಎಸ್.ಪಿ.ಎಂ.)

**ಕನ್ನಡದಲ್ಲಿ ಭಾವಗೀತೆ :** ಹತ್ತೊಂಬತ್ತನೆಯ ಶತಮಾನದ ಕೊನೆಯಲ್ಲಿ ಭಾರತಾದ್ಯಂತ ಬೀಸಿದ ಪುನರುಜ್ಜೀವನದ ಗಾಳಿಯಲ್ಲಿ ಕನ್ನಡವೂ ತನ್ನ ಹೊಸತನವನ್ನು ಕಂಡುಕೊಂಡು ನಿರ್ಮಾಣ ಮಾಡತೊಡಗಿದ ನವೋದಯ ಕಾವ್ಯಪ್ರಕಾರವೊಂದನ್ನು ನಿರ್ದೇಶಿಸಲು ಹುಟ್ಟಿಕೊಂಡ ಪದ ಭಾವಗೀತೆ ಎನ್ನುವುದು. ಇಂಗ್ಲಿಷಿನ ಲಿರಿಕ್ ಎನ್ನುವ ಪದಕ್ಕೆ ಸಂವಾದಿಯಾಗಿ ಮಾಡಿಕೊಂಡದ್ದು. ನವೋದಯ ಕಾವ್ಯ ಪಾಶ್ಚಾತ್ಯ ರೊಮ್ಯಾಂಟಿಕ್ ಕವಿಗಳ ಲಿರಿಕ್ ಕಾವ್ಯದ ಪ್ರೇರಣೆ ಪ್ರಚೋದನೆಗಳ ಪರಿಣಾಮವಾದುದರಿಂದ, ವಸ್ತುವಿನಲ್ಲಿ, ರೀತಿಯಲ್ಲಿ ಹಾಗೂ ದೃಷ್ಟಿಯಲ್ಲಿ ಹಿಂದಿನ ಕನ್ನಡ ಕಾವ್ಯಪ್ರಕಾರಗಳಿಂದ ಬೇರೆಯೆಂದೇ ತೋರುವ ಈ ನವೋದಯ ಕಾವ್ಯಪ್ರಕಾರವನ್ನು ಹೆಸರಿಸಲು ಲಿರಿಕ್ ಎಂಬ ಪದದ



ಕುವೆಂಪು

ಅನುವಾದವೆಂಬಂತೆ ತೋರುವ ಭಾವಗೀತೆ ಎಂಬ ಪದವನ್ನು ಬಳಸುತ್ತ ಬರಲಾಗಿದೆ. ಭಾವಗೀತೆ ಎನಿಸಿಕೊಂಡಿರುವ ಕಾವ್ಯಪ್ರಕಾರ ಪ್ರಧಾನವಾಗಿ ವ್ಯಕ್ತಿನಿಷ್ಠವಾದುದು. ಅಲ್ಲದೆ ಈ ಹಿಂದಿನ ಕಾವ್ಯಪ್ರಕಾರಗಳಿಂದ ಬೇರೆಯಾದ ಕೆಲವು ವಿಶಿಷ್ಟ ಲಕ್ಷಣಗಳನ್ನುಳ್ಳದ್ದು. ಒಂದೇ ಮಾತಿನಲ್ಲಿ ಹೇಳುವುದಾದರೆ ಅದರ ಲಕ್ಷಣ ಹೀಗಿದೆ : ಭಾವಗೀತೆ ಎನ್ನುವುದು ಕವಿಯ ವ್ಯಕ್ತಿನಿಷ್ಠವಾದ ಅನುಭವದ ತೀವ್ರಸಂವೇದನರೂಪವಾದ ಕೆಲವು ರಸಕ್ಷಣಗಳ ಗೇಯ ರೂಪದ, ಅತ್ಯಂತ ಸಂಗ್ರಹವಾದ ಸಶಕ್ತವಾದ ಒಂದು ಅಭಿವ್ಯಕ್ತಿ ವಿಶೇಷ.

ಇಲ್ಲಿ ಭಾವಗೀತೆ ವ್ಯಕ್ತಿನಿಷ್ಠ ಎಂದರೆ, ಅದು ಆವಶ್ಯಕವಾಗಿ ಆತ್ಮವೃತ್ತರೂಪವಾಗಿರಬೇಕೆಂಬ ನಿರ್ಬಂಧವೇನಿಲ್ಲ. ಭಾವಗೀತೆಯಲ್ಲಿ ಕಂಡುಬರುವ ವ್ಯಕ್ತಿನಿಷ್ಠತೆ, ಕೇವಲ ವೈಯಕ್ತಿಕವಾಗಿರದೆ ಸಾಧಾರಣೀಕೃತವಾದ ಭಾವದ ನಿಲುವಿನಲ್ಲಿ ಪ್ರಕಟವಾಗುತ್ತದೆ. ಭಾವಗೀತೆಯ ಮತ್ತೊಂದು ಲಕ್ಷಣ, ಅದು ಗೇಯ ರೂಪವಾದುದು ಅಥವಾ ಹಾಡಲು ಬರುವಂತಿರಬೇಕು—ಎನ್ನುವುದು. ಲಿರಿಕ್ ಎಂಬ ಪದವೇ ಸೂಚಿಸುವಂತೆ ಅದು ಲೈರ್ ಎಂಬ ತಂತೀ ವಾದ್ಯದೊಡನೆ ಹಾಡಬಹುದಾದ ಗೀತೆ ಎಂದೇ ಅರ್ಥ. ಲಿರಿಕ್ ಎಂಬ ಈ ಕಾವ್ಯಜಾತಿ ಮೂಲತಃ ಹಾಡುಗಬ್ಬವಾಗಿಯೇ ಗ್ರೀಸ್ ದೇಶದಲ್ಲಿ ಹುಟ್ಟಿಕೊಂಡಿತು. ಕಥನರೂಪವಾದ ಮಹಾಕಾವ್ಯಗಳಿಗಿಂತ, ಭಾವಗೀತೆ ವಿಶೇಷ ಬಗೆಯ ರೂಪವನ್ನುಳ್ಳದ್ದು ಎಂದು ಅನೇಕರ ಅಭಿಪ್ರಾಯ. ಸಂಗೀತದ ಸಹಾಯವಿಲ್ಲದೆಯೂ ಒಳ್ಳೆಯ ಭಾವಗೀತೆ ಭಾವಪೂರ್ಣವಾದ ವಾಚನ ಮಾತ್ರದಿಂದಲೇ ತಕ್ಕ ಪರಿಣಾಮವನ್ನು ಮಾಡುತ್ತದೆ—ಎಂಬ ಮಾತೂ ನಿಜ.

ಭಾವಗೀತೆಯ ಇತಿಹಾಸವೆಂದರೆ ಭಾವಗೀತೆ ಹೆಜ್ಜೆಹೆಜ್ಜೆಗೂ ಸಂಗೀತದ ಸೆರೆಯಿಂದ ಪಾರಾಗುವ ಹೋರಾಟವನ್ನು ಹೇಗೆ ಹೂಡಿತು ಎನ್ನುವುದರ ಚರಿತ್ರೆಯೇ ಆಗಿದೆ. ಭಾವಗೀತೆಗೆ ಸಂಗೀತದೊಂದಿಗೆ ಇದ್ದ ಸಾಹಚರ್ಯವನ್ನು ಬಿಡಿಸಿ, ಕಾವ್ಯದ ಭಾಷೆಯನ್ನು ಜನದ ಆಡುಮಾತಿನ ಹತ್ತಿರ ಹತ್ತಿರಕ್ಕೆ ತರುವುದೇ ಇತ್ತೀಚಿನ ಕವಿಗಳ ಸತತ ಪ್ರಯತ್ನವಾಗಿದೆ ಎನ್ನುವುದು ಗಮನಿಸಬೇಕಾದ ಅಂಶವಾಗಿದೆ. ಭಾವಗೀತೆಯ ಬಹುಮುಖ್ಯವಾದ ಇನ್ನೊಂದು ಲಕ್ಷಣ ಅದರ ಗಾತ್ರವನ್ನು ಕುರಿತದ್ದು. ಭಾವಗೀತೆ ಗಾತ್ರದಲ್ಲಿ ಕಿರಿದು. ಅಡಕ, ಅಚ್ಚುಕಟ್ಟು, ನಯ, ನುಣುಪು, ಅದರ ಲಕ್ಷಣ. ಭಾವಗೀತೆ ಹ್ರಸ್ವವಾಗಿರುತ್ತದೆ ಎಂದರೆ, ಎಷ್ಟು ಹ್ರಸ್ವ ಎನ್ನುವ ಪ್ರಶ್ನೆಯೂ ಏಳುತ್ತದೆ. ಎರಡು ಪಂಕ್ತಿಯಿಂದ ಇನ್ನೂರು ಪಂಕ್ತಿಯವರೆಗೂ ಇದರ ಗಾತ್ರ ಹೋಗಬಹುದು. ಆದರೆ ಯಾವ ಒಂದು ಹಿತವಾದ ಮಿತಿಯಲ್ಲಿಲ್ಲದಿದ್ದರೆ ಭಾವಗೀತೆ ಅಸಾಧ್ಯವಾಗಬಹುದೋ ಅಂಥ ಒಂದು ಮಿತಿಯಲ್ಲಿರಬೇಕು ಎಂದು ಮಾತ್ರ ಹೇಳಬಹುದು. ಆದರೆ ಹಿತವಾದ ಮಿತಿ ಎಂಬುದೇನೆಂಬುದನ್ನು ನಿಜವಾದ ಕವಿ ಬಲ್ಲ, ನಿಜವಾದ ಓದುಗ ಬಲ್ಲ.

ಭಾವಗೀತೆಯಲ್ಲಿ ಕಂಡುಬರುವ ವಸ್ತುಸ್ವಾತಂತ್ರ್ಯ ಬಹು ಮಹತ್ತ್ವದ್ದಾಗಿದೆ. ಹಿಂದಿನ ಕವಿಗಳಿಗೆ ಇಂಥದೇ ವಸ್ತುವಾಗಬೇಕು, ಇಂಥದೇ ರೀತಿಯಾಗಬೇಕು ಎನ್ನುವ ನಿರ್ಬಂಧ ನೆರಳಾಗಿ ಕಾಡುತ್ತಿತ್ತು. ಆದರೆ ಭಾವಗೀತೆಯ ಕವಿಗೆ ಜೀವನದಲ್ಲಿಯ ಒಂದು ರಸನಿಮಿಷ, ಪ್ರಕೃತಿಯ ಒಂದು ರಮ್ಯ ವಿವರ, ದುರ್ದಮ್ಯವಾಗಿ ಉಕ್ಕಿಬರುವ ಯಾವುದೋ ಒಂದು ಭಾವನೆ, ಅಪೂರ್ವವಾಗಿ ಮೂಡಿಬಂದ ಒಂದು ವಿಚಾರ, ಮನುಷ್ಯಜೀವನದ ಒಂದು ಸಣ್ಣ ಘಟನೆ ಹೀಗೆ ಮನಸ್ಸನ್ನು ಮುಟ್ಟಿದ ಹಾಗೂ ತಟ್ಟಿದ ಯಾವುದೇ ಆದರೂ ಕೇಂದ್ರಬಿಂದುವಾಗಿ ಕವಿಯ ಭಾವದಲ್ಲಿ ಪುಟಗೊಂಡು ಗೀತವಾಗಿ ಮೂಡಬಹುದು ಎನ್ನುವ ಸಂಗತಿ ಹೊಸದು. ಜೊತೆಗೆ ಹಾಗೆ ರೂಪುಗೊಳ್ಳುವ ರೀತಿಯೂ ವ್ಯಕ್ತಿ ವಿಶಿಷ್ಟವಾಗಿ ವೈವಿಧ್ಯಮಯವಾಗಿರುತ್ತದೆ.

ಹೊಸಗನ್ನಡದಲ್ಲಿ ಭಾವಗೀತೆಯ ಒಂದು ಹೊಸ ದಾರಿ ನಿರ್ಮಾಣವಾದದ್ದು ಆಚಾರ್ಯ ಶ್ರೀಯವರ ಇಂಗ್ಲಿಷ್ ಗೀತೆಗಳಿಂದಲೇ ಎನ್ನಬೇಕು. ಶ್ರೀಯವರಿಗೂ ಮೊದಲೇ ಇಂಗ್ಲಿಷ್ ಕಾವ್ಯದ ಪ್ರೇರಣೆ ಪ್ರಚೋದನೆಗಳಿಂದ ಅನುವಾದ ಹಾಗೂ ಸ್ವಂತವಾದ ಭಾವಗೀತೆಗಳ ರಚನೆಯ ಪ್ರಯತ್ನ ಎಸ್.ಜಿ. ನರಸಿಂಹಾಚಾರ್, ಹಟ್ಟಿಯಂಗಡಿ ನಾರಾಯಣರಾಯರು, ಪಂಜೆ ಮಂಗೇಶರಾಯರು ಮೊದಲಾದವರಿಂದ ನಡೆದಿದ್ದರೂ ಶ್ರೀಯವರ ಸಮಕಾಲೀನರಾದ ಕೆಲವು ತರುಣ ಕವಿಗಳು ಈ ಒಂದು ಪ್ರಯತ್ನದಲ್ಲಿದ್ದರೂ ಶ್ರೀಯವರ ಇಂಗ್ಲಿಷ್ ಗೀತೆಗಳೇ ಭಾವಗೀತೆಯ ಹೆದ್ದಾರಿಯೊಂದನ್ನು ತೆರೆದು ಉಳಿದವರಿಗೆ ನಡೆಯಲು ಪ್ರೇರಣೆಯನ್ನು ಕೊಟ್ಟವು ಎಂಬುದರಲ್ಲಿ ಸಂಶಯವಿಲ್ಲ. ಇಂಗ್ಲಿಷ್ ಗೀತೆಗಳಲ್ಲಿ ಕಂಡುಬರುವ ಆಶ್ವಂಕಿಲತೆ, ಹೊಸಗನ್ನಡ ಭಾಷೆಯ ಹದ, ಹೊಸ ಛಂದೋಲಯಗಳ ಆವಿಷ್ಕಾರ—ಇವು ಹೊಸ ಭರವಸೆಯನ್ನು ಬಿತ್ತಿದುವು. ಅನಂತರ ಕೇಳಿದ್ದು ನೂರು ಸ್ವರ—ಒಂದೊಂದೂ ಅತಿಮಧುರ.

ಇಂಗ್ಲಿಷ್ ಗೀತೆಗಳಲ್ಲಿ (1921) ಮೂರು ಸ್ವತಂತ್ರ ಕವನಗಳೂ ಅರುವತ್ತು ಅನುವಾದಿತ ಕವನಗಳೂ ಇವೆ. ಇಂಗ್ಲಿಷ್ ಭಾವಗೀತ ಲೋಕದಲ್ಲಿನ ಹೆಸರಾದ ಕವಿಗಳ ಕವಿತೆಗಳಲ್ಲಿ ಕೆಲವನ್ನಾಯ್ದು ಸ್ವತಂತ್ರವೆನ್ನುವ ರೀತಿಯಲ್ಲಿ ಅವನ್ನಿಲ್ಲಿ ಕನ್ನಡಿಸಲಾಗಿದೆ. ವಿಶೇಷವಾಗಿ 18–19ನೆಯ ಶತಮಾನದ ರೊಮ್ಯಾಂಟಿಕ್ ಕವಿಗಳಾದ ಷೆಲ್ಲಿ, ವರ್ಡ್ಸ್‌ವರ್ತ್, ಬರ್ನ್ಸ್, ಬ್ರೌನಿಂಗ್ ಇವರ ಕವನಗಳೇ ಹೆಚ್ಚು. ಬಹುಮಟ್ಟಿನ ಅನುವಾದಗಳಲ್ಲಿ ಕವಿಗಳ ಮೂಲಭಾವಗಳನ್ನು ವಿವರವಿವರವಾಗಿ ಮನನಮಾಡಿಕೊಂಡು ಅವುಗಳ ಜೀವಾಳಗಳೊಡನೆ ಒಂದಾಗುವಂತೆ ಕನ್ನಡ ಛಂದಸ್ಸಿನ ಮತ್ತು ನುಡಿಯ ಹೊಸರೂಪಗಳನ್ನು ಪ್ರತಿಭೆಯಿಂದ ಸಮ್ಮಿಲನಗೊಳಿಸಲಾಗಿದೆ. ಸೂಕ್ಷ್ಮ ವ್ಯಾಸಂಗ, ಕ್ರಾಂತದೃಷ್ಟಿ ಮತ್ತು ಪ್ರಸನ್ನ ಪ್ರತಿಭೆಗಳಿಂದಾಗಿ, ಇಲ್ಲಿ ಅನುವಾದಕಾರ್ಯ ತುಂಬ ಯಶಸ್ವಿಯಾಗಿದೆ.

ಕನ್ನಡ ಭಾವಗೀತೆ ಮೂರು ಕಡೆಯಿಂದ ತನ್ನ ಪ್ರೇರಣೆಯನ್ನು ಸಾಮಗ್ರಿಗಳನ್ನು ಎಳೆದುಕೊಂಡು, ಬಳಸಿಕೊಂಡು ಬೆಳೆಯಿತು. ಆಂಗ್ಲ ಸಾಹಿತ್ಯದಿಂದ ಅಭಿವ್ಯಕ್ತಿಯ ವಿಶೇಷತೆಗಳನ್ನೂ ಸಂಸ್ಕೃತದಿಂದ ಪರಂಪರೆಯನ್ನೂ ಜಾನಪದ ಕಾವ್ಯದಿಂದ ಸತ್ತ್ವವನ್ನೂ ಅದು ಮೈಗೂಡಿಸಿಕೊಂಡಿತು. ಕುವೆಂಪು, ಬೇಂದ್ರೆ, ಪುತಿನ, ರಾಜರತ್ನಂ, ಶ್ರೀನಿವಾಸ, ವಿನಾಯಕ, ಕೆ.ಎಸ್.ನ., ಗೋಪಾಲಕೃಷ್ಣ ಅಡಿಗ, ಎಕ್ಕುಂಡಿ, ಕಣವಿ, ಶಿವರುದ್ರಪ್ಪ—ಮೊದಲಾದ ಇನ್ನೂ ಅನೇಕ ಕವಿಗಳಿಂದ ಕನ್ನಡದ ಭಾವಗೀತಾ ಸಾಹಿತ್ಯ ಸಮೃದ್ಧವಾಗಿ ಬೆಳೆದು ತಕ್ಕಷ್ಟು ಫಲವನ್ನು ಕೊಟ್ಟಿದೆ.

ಭಾವಗೀತ ಪ್ರಪಂಚಕ್ಕೆ ಕುವೆಂಪು ಅವರ ಕೊಡುಗೆ ಅಪಾರವಾದುದು, ಅತಿಮುಖ್ಯವಾದುದು. ಅವರ ಕೊಳಲು, ನವಿಲು, ಪಾಂಚಜನ್ಯ, ಕಲಾಸುಂದರಿ, ಕೋಗಿಲೆ ಮತ್ತು ಸೋವಿಯಟ್ ರಷ್ಯಾ, ಪಕ್ಷಿಕಾಶಿ, ಪ್ರೇಮ ಕಾಶ್ಮೀರ, ಷೋಡಶಿ, ಅಗ್ನಿಹಂಸ,

ಜೇನಾಗುವ ಮೊದಲಾದ ಕವನಸಂಗ್ರಹಗಳಲ್ಲಿ ಪ್ರಕೃತಿ, ಪ್ರೇಮ, ಜೀವನದ ಉಳಿದ ಹಲವಾರು ಮುಖಗಳು, ಅಧ್ಯಾತ್ಮ, ಭಕ್ತಿ, ರಾಜಕೀಯ—ಹೀಗೆ ಬಹುಮುಖವಾದ ವಸ್ತುವನ್ನುಳ್ಳ ಉತ್ತಮ ಭಾವಗೀತೆಗಳಿವೆ. ಬೇಂದ್ರೆಯವರು ಹೊಸ ಕಾವ್ಯಯುಗದ ಪ್ರವರ್ತಕರಲ್ಲಿ ಒಬ್ಬರೆಂದು ಖ್ಯಾತರಾಗಿದ್ದಾರೆ. ಅಂಬಿಕಾತನಯ



ದ. ರಾ. ಬೇಂದ್ರೆ

ದತ್ತ ಎಂಬ ಹೆಸರಿನಿಂದ ಅವರು ಪ್ರಕಟಿಸಿರುವ ಕೃಷ್ಣಾಕುಮಾರಿ, ಗರಿ, ಮೂರ್ತಿ, ಉಯ್ಯಾಲೆ, ನಾದಲೀಲೆ, ಸಖೀಗೀತ, ಗಂಗಾವತರಣ, ಸೂರ್ಯಪಾನ, ಹೃದಯಸಮುದ್ರ, ಮುಕ್ತ ಕಂಠ, ಚೈತ್ಯಾಲಯ ಮೊದಲಾದ ಸಂಕಲನಗಳಲ್ಲಿ ಬಹುಪಾಲಿನ ಅವರ ಭಾವಗೀತೆಗಳು ಬಂದಿವೆ. ಅಲ್ಲಿನ ವಿಷಯ ವೈವಿಧ್ಯ, ನಿರೂಪಣೆಯ ವೈವಿಧ್ಯ ಬೆರಗುಗೊಳಿಸುವಂಥದು. ಬೇಂದ್ರೆಯವರ ಮಾತಿನ ಚಮತ್ಕೃತಿ ಸಹಜವಾಗಿ ಮಾಡುವ ಶ್ಲೇಷೆ ಮತ್ತು ಪ್ರಾಸ, ಅಧ್ಯಾತ್ಮವಿಚಾರಲಹರಿ ಇವುಗಳಿಂದಾಗಿ ಅವರ ಕವನಗಳು ಹೃದ್ಯವಾಗಿರುವಂತೆ ಬೌದ್ಧಿಕ ವಿಚಾರಲಹರಿಗಳನ್ನೂ ಉಳ್ಳ ತೂಕದ ಕವನಗಳಾಗಿವೆ. ಬೇಂದ್ರೆಯವರ ಧಾಟಿಯಲ್ಲಿ ಜಾನಪದ ಕವಿತೆಗಳಲ್ಲಿನ ಸೊಗಡು ಮರುಕಳಿಸಿರುವುದನ್ನು ಕಾಣಬಹುದು. ಪುತಿನ ಅವರು ಪ್ರಧಾನತಃ ಕವಿಗಳು, ಭಾವಗೀತೆಯ ಕವಿಗಳು. ಅವರ ನಾಟಕಗಳಲ್ಲೂ ಬಹುಭಾಗ ಭಾವಗೀತಾತ್ಮಕವಾಗಿದೆ. ಹಣತೆ, ಮಾಂದಳಿರು, ಶಾರದಯಾಮಿನೀ, ಗಣೇಶದರ್ಶನ, ರಸಸರಸ್ವತಿ, ಮಲೆದೇಗುಲ ಮೊದಲಾದ ಅವರ ಕವನಸಂಗ್ರಹಗಳಲ್ಲೂ ಗೋಕುಲನಿರ್ಗಮನದಂಥ ರೂಪಕಗಳಲ್ಲೂ ಬಹು ಸೊಗಸಾದ ಭಾವಗೀತೆಗಳಿವೆ. ದೈವತ್ವ, ಭಕ್ತಿಪಾರಮ್ಯ, ಸತಿಪತಿಭಾವ, ಪ್ರಕೃತಿ ವರ್ಣನೆ, ಸುಸಂಸ್ಕೃತ ಮನಸ್ಸಿನ ಉದಾರ ಭಾವನೆಗಳು ಅವರ ಕವನಗಳಲ್ಲಿ ಮಡುಗಟ್ಟಿ ನಿಲ್ಲುತ್ತವೆ. ಅಂತೆಯೇ ಅವರು ಹಾಸ್ಯ, ವಿಡಂಬನಗಳನ್ನೂ ನಡೆಸಬಲ್ಲರು. ವಸ್ತುವಿನ ಆಯ್ಕೆ, ಭಾಷೆಯ ನವೀನತೆ, ಹೊಸ ದೃಷ್ಟಿ ಮತ್ತು ಹೊಸ ಧಾಟಿಗಳಿಗಾಗಿ ಪ್ರಸಿದ್ಧರಾಗಿರುವವರು ಜಿ. ಪಿ. ರಾಜರತ್ನಂ. ಅವರ ರತ್ನನ ಪದಗಳಲ್ಲಿ, ನಾಗನ ಪದಗಳಲ್ಲಿ ಭಾವಗೀತೆಯ ಮತ್ತೊಂದು ಮುಖವನ್ನು ಕಾಣಬಹುದು.

ಶ್ರೀನಿವಾಸರು ಉತ್ತಮ ಕಥೆಗಾರರಾಗಿರುವಂತೆ ಕವಿಗಳೂ ಆಗಿದ್ದಾರೆ. ಅವರ ಬಿನ್ನಹ, ಅರುಣ, ತಾವರೆ, ಚೆಲುವು, ಮಲಾರ—ಮೊದಲಾದ ಕವನಸಂಕಲನಗಳಲ್ಲಿ ಉತ್ತಮ ಭಾವಗೀತೆಗಳು ದೊರಕುತ್ತವೆ. ಅಲ್ಲಿಯಂತೆ ಇಲ್ಲಿಯೂ ಇವರದು ಪ್ರಸನ್ನ, ಸರಳ, ಅನುದ್ರಿಕ್ತ, ಸುಸಂಸ್ಕೃತ ಮನೋಭಾವ; ಅದಕ್ಕೆ ಹಾಳತವಾಗಿ ಹೊಂದುವ ಶೈಲಿ. ಮಾತು ಗದ್ಯದ ಸಾಮಾನ್ಯತೆಗಿಳಿದರೂ ರಸಭಾವಗಳು ತುಂಬಿರುವುದರಿಂದ ಇವರ ಗೀತೆಗಳು ಬಹು ಹೃದ್ಯವಾಗಿರುತ್ತವೆ.

ವಿ. ಸೀ. ಯವರು ದೀಪಗಳು, ಗೀತಗಳು, ನೆಳಲು–ಬೆಳಕು, ದ್ರಾಕ್ಷಿದಾಳಿಂಬೆ ಮುಂತಾದ ಸಂಕಲನಗಳಲ್ಲಿ ಶುಚಿರುಚಿಯಾದ ಮನೋಧರ್ಮವನ್ನು ಪ್ರಕಟಿಸಿದ್ದಾರೆ. ಅವರ ಬಹುಪಾಲು ಕವಿತೆಗಳು ಸಂಗೀತದ ಚೌಕಟ್ಟಿನಲ್ಲಿ ಮೈದಾಳಿವೆ.

ನವ್ಯತೆಯನ್ನೂ ಸಾಂಪ್ರದಾಯಿಕತೆಯನ್ನೂ ಸಮಸಮನಾಗಿ ಮೈಗೂಡಿಸಿಕೊಂಡ ಕವಿ ಎಂದರೆ ವಿನಾಯಕರು. ಅವರು ತಮ್ಮ ಸುತ್ತಣ ನಾಡು ಮತ್ತು ಜನತೆಯನ್ನು ಆಳವಾಗಿ ಅರಿತವರು. ಇಂಗ್ಲಿಷ್ ಮತ್ತು ಕನ್ನಡ ಅನುಭಾವೀ ಸಾಹಿತ್ಯವನ್ನು ಜೀರ್ಣಿಸಿಕೊಂಡವರು. ಹೊಸ ನಾಡು, ನುಡಿ, ಜನಗಳ ನೇರ ಪರಿಚಯ, ಸಂಪರ್ಕ ಉಳ್ಳವರು. ಅರವಿಂದರ, ಸಾಯಿಬಾಬರ ಭಕ್ತರು. ಕಲೋಪಾಸಕ, ಪಯಣ, ಬಾಳದೇಗುಲದಲ್ಲಿ, ಉಗಮ, ದ್ಯಾವಾಪೃಥಿವೀ ಮೊದಲಾದ ಕವನಸಂಕಲನಗಳಲ್ಲಿ ಇಡಿಯಾಗಿಯೂ ಭಾಗಶಃವಾಗಿಯೂ ಅನೇಕ ಉತ್ತಮ ಭಾವಗೀತೆಗಳು ಸಿಗುತ್ತವೆ. ಅವುಗಳಲ್ಲಿ ನಾವು ಅಂತರ್ಮುಖಿಯಾದ ವಿಕಾಸಶೀಲ ಕವಿಯೊಬ್ಬನ ಸಮನ್ವಯ ಧೋರಣೆಯನ್ನು ಕಾಣುತ್ತೇವೆ.

ಸಂಸಾರದ ಸುರಸ ಸನ್ನಿವೇಶಗಳನ್ನು ಭಾವಲಹರಿಗಳನ್ನು ರಮ್ಯವಾಗಿ ಸೆರೆಹಿಡಿಯುವುದರ ಮೂಲಕ ಯುವಜನರ ಹೃದಯಗಳನ್ನು ಆಕರ್ಷಿಸಿರುವ ಕವಿಯೆಂದರೆ ಕೆ. ಎಸ್. ನರಸಿಂಹಸ್ವಾಮಿ—ಮೈಸೂರು ಮಲ್ಲಿಗೆಯ ನರಸಿಂಹಸ್ವಾಮಿ. ಬೇಂದ್ರೆ ಮತ್ತು ಕುವೆಂಪು ಅವರ ಮತ್ತು ತೀ. ನಂ. ಶ್ರೀ. ಅವರ ಮೊದಮೊದಲ ಪ್ರಣಯ ಕವನಗಳಿಂದ ಪ್ರಭಾವಿತನಾದ ಈ ಕವಿ ಅದೇ ದಾರಿಯಲ್ಲಿ ಮುಂದುವರಿದು ಹೊಸ ಹಾದಿಗಳನ್ನು ರಚಿಸಿದರು. ಮೈಸೂರು ಮಲ್ಲಿಗೆ, ಇರುವಂತಿಗೆ, ಉಂಗುರ, ದೀಪದ ಮಲ್ಲಿ, ಮನೆಯಿಂದ ಮನೆಗೆ, ಶಿಲಾಲತೆ, ಐರಾವತ, ಆಯ್ದ ಕವನಗಳು–ಈ ಸಂಕಲನಗಳಲ್ಲಿ ನರಸಿಂಹಸ್ವಾಮಿಗಳ ಬಹು ಉತ್ತಮವಾದ ಗೀತೆಗಳಿವೆ. ಪ್ರಣಯದ ನಾನಾ ಮುಖಗಳು, ಸುಖದುಃಖಗಳು, ಕೋಪತಾಪಗಳು, ನಡೆನುಡಿಗಳು—ಇವು ಕವಿಗೆ ಪ್ರಿಯವಾದ ವಸ್ತು. ಇದನ್ನು ಬಳಸಿಕೊಳ್ಳುವಲ್ಲಿ, ಬೆಳೆಸುವಲ್ಲಿ ಕವಿ ತೋರುವ ಸಂಯಮ, ಸಂಸ್ಕೃತಿ ಅಗಾಧವಾದುದು. ಇವರ ಎಲ್ಲ ಬರೆವಣಿಗೆಯಲ್ಲೂ ಎದ್ದುಕಾಣುವ ಗುಣವೆಂದರೆ ಅವುಗಳ ಚೊಕ್ಕತನ, ನಯ. ಬಹುಮಟ್ಟಿನ ಕವಿತೆಗಳಲ್ಲಿ ಗೇಯಾಂಶ ಸಾಕಷ್ಟು ಕಂಡುಬರುತ್ತದೆ. ಕವಿಯ ಬಣ್ಣನೆಯಲ್ಲಿ, ಕಾಣ್ಕೆಯಲ್ಲಿ ನಿರೂಪಣೆಯಲ್ಲಿ ಹೊಸತನವಿರುವುದನ್ನು ಗಮನಿಸಬಹುದು.

ಗೋಪಾಲಕೃಷ್ಣ ಅಡಿಗರು ಈ ತಲೆಮಾರಿನ ಗಣ್ಯ ಕವಿಗಳಲ್ಲಿ ಒಬ್ಬರು. ನವ್ಯ ಪಂಥದಲ್ಲಿ ಅವರ ಹೆಸರು ಮೊದಲು ಬರುತ್ತದೆ. ಅವರ ಮೊದಮೊದಲ ಸಂಕಲನಗಳಲ್ಲಿ ಉತ್ತಮವಾದ ಭಾವಗೀತೆಗಳು ಕಂಡುಬರುತ್ತವೆ. ಬರಬರುತ್ತ ಕವಿಯ ಮನೋಭಾವ ಕಲ್ಲಾಗಿ, ನೋಟ ಮಾಟಗಳೆರಡರಲ್ಲೂ ಅತೃಪ್ತಿ, ವ್ಯಂಗ್ಯ ಹೆಚ್ಚಾಗಿರುವುದನ್ನು ಕಾಣಬಹುದಾಗಿದೆ. ತನ್ನ ಸುತ್ತಣ ಪರಿಸರಕ್ಕೆ ತೀವ್ರವಾಗಿ ಮನಗೊಟ್ಟುದರಿಂದ ಹೀಗಾಗಿದೆಯೆನ್ನಬಹುದು. ಸಂಪ್ರದಾಯದ ಪ್ರತಿಭಟನೆ, ಹೊಸ ಜೀವನಕ್ರಮದ ಹಾರೈಕೆ, ಜನತೆಯ ಬಹುಮುಖಶೋಷಣೆಯ ಬಗೆ, ಕವಿಯ ಸಾತ್ತ್ವಿಕಾಗ್ರಹ—ಇವುಗಳಿಂದಾಗಿ ಇವರ ಈಚಿನ ಕವನಗಳಲ್ಲಿ ಉಗ್ರತೆ, ವ್ಯಂಗ್ಯ, ಕಟೂಕ್ತಿಗಳು ಹೆಚ್ಚು. ಆದರೂ ಭಾವತರಂಗ, ಕಟ್ಟುವೆವು ನಾವು, ನಡೆದು ಬಂದ ದಾರಿ—ಎಂಬ ಸಂಗ್ರಹಗಳಲ್ಲಿ ಮನೋಹರವಾದ ಭಾವಗೀತೆಗಳು ಸಿಗುತ್ತವೆ.

ಕಾವ್ಯಾಕ್ಷಿ, ಭಾವಜೀವಿ, ಆಕಾಶಬುಟ್ಟಿ, ಮಧುಚಂದ್ರ, ದೀಪಧಾರಿ ಮುಂತಾದ ಕವನಸಂಕಲನಗಳಿಂದ ಪ್ರಸಿದ್ಧರಾಗಿರುವ ಚೆನ್ನವೀರ ಕಣವಿಯವರು ಗೋಪಾಲಕೃಷ್ಣ ಅಡಿಗರಂತೆ ಭಾವಗೀತೆಯ ಕವಿಯೂ ಹೌದು, ನವ್ಯಕವಿಯೂ ಹೌದು. ವಿಷಯದ



ಪು. ತಿ. ನರಸಿಂಹಾಚಾರ್

ಆಯ್ಕೆ ಸಾಮಾನ್ಯವಾದರೂ ನಿರೂಪಣಾ ವಿಧಾನ ಈ ಕವಿಯಲ್ಲಿ ಬಹು ನವೀನ ವಾಗಿ ತೋರುತ್ತದೆ. ಒಂದು ದೃಷ್ಟಿಯಿಂದ ಇದೇ ಕವಿತೆಯ ಜೀವಾಳವೆನ್ನ ಬಹುದು. ರೂಪಕದೊಳಗೊಂದು ರೂಪಕವನ್ನು, ಅನೇಕ ವೇಳೆ ಸಂಕೀರ್ಣ ರೂಪಕ ಪರಂಪರೆಗಳನ್ನು ನೀಡಿ ಕವಿತೆಯ ಭಾವವನ್ನು ಅಭಿವ್ಯಕ್ತಗೊಳಿಸಬಲ್ಲ ಇವರ ಶೈಲಿ ವ್ಯಾಸಂಗಯೋಗ್ಯವಾಗಿದೆ.

ಭಾವಗೀತೆಯ ಚರಿತ್ರೆಯಲ್ಲಿ ಜಿ. ಎಸ್. ಶಿವರುದ್ರಪ್ಪನವರಿಗೊಂದು ಗಮನಾರ್ಹ ಸ್ಥಾನವಿದೆ. ಸಾಮಗಾನ, ಚೆಲುವು–ಒಲವು, ಸಂಜೆದಾರಿ, ದೇವಶಿಲ್ಪ ಮೊದಲಾದ ಸಂಕಲನಗಳಲ್ಲಿ ಹಾಡಬಲ್ಲ ಅನೇಕ ಉತ್ತಮ ಗೀತೆಗಳು ದೊರೆಯುತ್ತವೆ. ಇಲ್ಲಿಯೂ ಕವಿಯ ಮನೋಧರ್ಮ ಸಂಪ್ರದಾಯದ ಗಟ್ಟಿ ನೆಲದಲ್ಲಿ ನಿಂತು ನವ್ಯ ಕವಿತೆಗಳ ಕಡೆ ಅಲೆದಾಡುವುದನ್ನು ಗಮನಿಸಬಹುದು.

ಕನ್ನಡ ಭಾವಗೀತದ ಕ್ಷೇತ್ರದಲ್ಲಿ ಕೆಲಸಮಾಡಿ ಸಮೃದ್ಧವೂ ಸತ್ತ್ವಯುತವೂ ಆದ ಕೃತಿರಚನೆಗೆ ಕಾರಣರಾಗಿರುವ ಅನೇಕ ಹಿರಿಯ–ಕಿರಿಯ ಕವಿಗಳನ್ನು ಇಲ್ಲಿ ಪಟ್ಟಿ ಮಾಡುವುದು ಮಾತ್ರ ಸಾಧ್ಯ : ಗೋವಿಂದ ಪೈ, ಡಿವಿಜಿ, ಪಂಜೆ ಮಂಗೇಶರಾಯರು, ಕಡೆಂಗೋಡ್ಲು ಶಂಕರಭಟ್ಟ ಆನಂದಕಂದ, ಗಣಪತಿರಾವ್, ಮಧುರಚೆನ್ನ, ತೀ.ನಂ.ಶ್ರೀ, ಎಸ್. ವಿ. ಪರಮೇಶ್ವರಭಟ್ಟ, ಎಂ. ಆರ್. ಶ್ರೀನಿವಾಸಮೂರ್ತಿ, ಯರ್ಮುಂಜ ರಾಮಚಂದ್ರ, ಎಂ. ವಿ. ಸೀತಾರಾಮಯ್ಯ, ಕಾವ್ಯಾನಂದ, ರಂ. ಶ್ರೀ ಮುಗಳಿ, ಜಿ. ವರದರಾಜರಾವ್, ಎಸ್.ಅನಂತನಾರಾಯಣ, ಸೇಡಿಯಾಪು ಕೃಷ್ಣಭಟ್ಟ,



ಕಯ್ಯಾರ ಕಿಞ್ಞಣ್ಣ ರೈ

ಎಸ್. ಆರ್. ಎಕ್ಕುಂಡಿ, ಕಯ್ಯಾರ ಕಿಞ್ಞಣ್ಣರೈ, ಗಂಗಾಧರ ಚಿತ್ತಾಲ, ದಿನಕರ ದೇಸಾಯಿ, ವಿ. ಜಿ. ಭಟ್ಟ, ಡಿ. ಎಸ್. ಕರ್ಕಿ, ಬಿಳಿಗಿರಿ, ಎಂ. ಅಕಬರ ಅಲಿ, ನಿಸಾರ್ ಅಹಮದ್, ಜೀಶಂಪ, ಸಿ.ಪಿ.ಕೆ., ಚಂದ್ರಶೇಖರ ಕಂಬಾರ—ಇತ್ಯಾದಿ. ಇವರಲ್ಲಿ ಒಬ್ಬೊಬ್ಬರ ಕಾವ್ಯವೂ ವಿಸ್ತಾರವಾದ ಅಧ್ಯಯನವನ್ನು ಬಯಸು ವಂಥದು.

ಭಾವಗೀತೆ ಪ್ರಧಾನವಾಗಿ ಆಂಗ್ಲ ರೊಮ್ಯಾಂಟಿಕ್ ಕವಿಗಳಿಂದ ಪ್ರಚೋದನೆ ಯನ್ನು ಪಡೆದು ಮೂಡಿದರೂ ಪಾಶ್ಚಾತ್ಯ ರೊಮ್ಯಾಂಟಿಕ್ ಕಾವ್ಯದ ಅನುಕರಣ ವಾಗದೆ, ಸಹಜವಾದ ಪ್ರಯೋಗಶೀಲತೆಯಿಂದ ಹಾಗೂ ಭಾರತೀಯ ಪರಂಪರೆಯ ಪ್ರಜ್ಞೆಯಿಂದ, ಇಂಗ್ಲಿಷ್ ಕವಿತೆ ಸಾಧಿಸಿದ್ದಕ್ಕಿಂತ ಒಂದು ಹೆಜ್ಜೆ ಮುಂದೆಯೇ ಹೋಯಿತೆಂದು ಹೇಳಲು ಅಡ್ಡಿಯಿಲ್ಲ. ಕನ್ನಡದಲ್ಲಿ 1950ರಿಂದ ಈಚೆಗೆ ಭಾವಗೀತೆ ಯಿಂದ ಬೇರೆಯಾದ ಕವಲೊಂದು ನವ್ಯ ಕಾವ್ಯ ಎಂಬ ಹೆಸರಿನಿಂದ ಮುಂದೆ ಬರುತ್ತಿದೆಯಾದರೂ ಭಾವಗೀತೆಯ ಬಗೆಗೆ ಒಲವು ಇಂಗಿಲ್ಲ. ನವ್ಯರ ಕೆಲವು ಕೃತಿಗಳೂ ಭಾವಗೀತೆಗಳಾಗಿವೆ. ಕಳೆದ ಮೂವತ್ತು ವರ್ಷಗಳ ಅವಧಿಯಲ್ಲಿ ಈ ಭಾವ ಗೀತಾ ಕಾವ್ಯಪ್ರಕಾರ ನಡೆಸಿದ ಪ್ರಯೋಗ, ಸಾಧಿಸಿದ ಸಾಧನೆಗಳನ್ನು ತೂಗಿನೋಡಿದರೆ ಯಾರಾದರೂ ಖಂಡಿತ ಬೆರಗಾಗಲೇ ಬೇಕು. (ಜಿ.ಎಸ್.ಎಸ್.; ಆರ್.ವಿ.ಎಸ್.)

ನೋಡಿ—ಕನ್ನಡದಲ್ಲಿ ನವ್ಯಕಾವ್ಯ

**ಕನ್ನಡದಲ್ಲಿ ಭಾಷಾಂತರಗಳು :** ಭಾಷಾಂತರಗಳ ಪ್ರಯೋಜನ ಬಹು ಮುಖವಾದುದು. ಅವು ಭಾವೈಕ್ಯಕ್ಕೆ, ಜ್ಞಾನಾರ್ಜನೆಗೆ, ಲೋಕಾನುಭವ ಸಂಪಾದನೆಗೆ ನೆರವಾಗುತ್ತವೆ; ಹೊಸ ಹೊಸ ಆಲೋಚನೆ ವಿಚಾರಗಳನ್ನು ತಂದುಕೊಟ್ಟು ಜನ ಜೀವನದ ಉನ್ನತಿಯನ್ನು ಸಾಧಿಸುತ್ತವೆ. ಎಲ್ಲಕ್ಕಿಂತ ಮುಖ್ಯವಾಗಿ ಭಾಷೆ, ಸಾಹಿತ್ಯಗಳು ಭಾಷಾಂತರಗಳ ಮೂಲಕ ಶ್ರೀಮಂತವಾಗುತ್ತವೆ. ಯಾವುದೇ ಸಾಹಿತ್ಯದ ಪ್ರಾರಂಭಸ್ಥಿತಿಯಲ್ಲಿ ಎಂತೊ ಅಂತೆಯೇ ಪ್ರಬುದ್ಧ ಸ್ಥಿತಿಯಲ್ಲೂ ಭಾಷಾಂತರಗಳು ಅಗತ್ಯ. ಅವು ಸಾಹಿತ್ಯದ ಬೆಳೆವಣಿಗೆಗೆ ಪ್ರೇರಣೆ ಪ್ರಚೋದನೆಗಳನ್ನಿತ್ತು, ನವೀನ ಪ್ರಕಾರಗಳನ್ನು ಪ್ರವೇಶಗೊಳಿಸಿ, ಹೊಸ ದಿಕ್ಕುಗಳತ್ತ ಮಾರ್ಗದರ್ಶನ ನೀಡುತ್ತವೆ. ಜಗತ್ತಿನ ಯಾವ ಭಾಷೆ, ಸಾಹಿತ್ಯವನ್ನು ತೆಗೆದುಕೊಂಡರೂ ಅವುಗಳ ಸರ್ವತೋಮುಖ ಪ್ರಗತಿಯಲ್ಲಿ ಭಾಷಾಂತರಗಳು ವಹಿಸಿರುವ ಮಹತ್ತ್ವದ ಪಾತ್ರ ಕಂಡುಬರುತ್ತದೆ.

ಕನ್ನಡಸಾಹಿತ್ಯ ತನ್ನ ಸಾವಿರ ವರ್ಷಗಳ ಇತಿಹಾಸದಲ್ಲಿ ಉದ್ದಕ್ಕೂ ಭಾಷಾಂತರ ಗಳಿಂದ ಪುಷ್ಟವಾಗಿದೆ. ಈ ಭಾಷಾಂತರ ಪರಂಪರೆಯನ್ನು ಕವಿರಾಜ ಮಾರ್ಗದ ಕಾಲದಿಂದಲೂ ಗುರುತಿಸಬಹುದು. ಹಿಂದೆ ಸಂಸ್ಕೃತ ಪ್ರಾಕೃತಗಳಿಂದ, ಈ ಯುಗ ದಲ್ಲಿ ವಿಶೇಷವಾಗಿ ಇಂಗ್ಲಿಷಿನಿಂದ ಭಾಷಾಂತರಗಳು ಬಂದಿವೆ. ಪ್ರಾಚೀನ ಕನ್ನಡ ಸಾಹಿತ್ಯವೆಲ್ಲ ಭಾಷಾಂತರವೆಂದು ಹೇಳುವುದುಂಟು; ಇದು ಪೂರ್ಣ ಸತ್ಯವಲ್ಲ. ಹಿಂದಿನ ಕನ್ನಡ ಕವಿಗಳು ಸಂಸ್ಕೃತ ಪ್ರಾಕೃತಗಳಿಂದ ವಸ್ತುವನ್ನು ಸ್ವೀಕರಿಸುತ್ತಿದ್ದ ರೆಂಬ ಬಹುಸ್ಥೂಲವಾದ ಅರ್ಥದಲ್ಲಿ ಅವರ ಕೃತಿಗಳನ್ನು ಭಾಷಾಂತರಗಳೆನ್ನಬಹುದು. ಆದರೆ ಅವರು ತಮ್ಮ ಪ್ರತಿಭೆ ಸೋಪಜ್ಞತೆಗಳನ್ನು ತಮ್ಮ ಕಾವ್ಯಗಳಲ್ಲಿ ಮೇಳ ವಿಸುತ್ತಿದ್ದರು. ಅವರಲ್ಲಿ ಭಾಷಾಂತರ ಎನ್ನುವುದು ಕೇವಲ ಒಂದು ಅಂಗವಾಗಿತ್ತಷ್ಟೆ. ಆದ್ದರಿಂದ ಹಿಂದಿನ ಕನ್ನಡ ಕಾವ್ಯಗಳನ್ನು ಬರಿಯ ಭಾಷಾಂತರಗಳೆನ್ನದೆ ಸ್ವತಂತ್ರ ಕೃತಿಗಳೆಂದೂ ಪರಿಗಣಿಸಬೇಕಾಗುತ್ತದೆ. ಉದಾಹರಣೆಗೆ, ಪಂಪ, ಕುಮಾರವ್ಯಾಸರ ಭಾರತಗಳನ್ನು ಒಂದರ್ಥದಲ್ಲಿ ಭಾಷಾಂತರಗಳೆನ್ನಬಹುದಾದರೂ ಮತ್ತೊಂದು ದೃಷ್ಟಿ ಯಿಂದ ಅವು ಸ್ವತಂತ್ರ ಕಾವ್ಯಗಳೇ ಅಹುದು. ಇಂದು ಭಾಷಾಂತರವೆಂದರೆ ಯಾವ ನಿಷ್ಕೃಷ್ಟವಾದ, ಖಚಿತವಾದ ಕಲ್ಪನೆಯಿದೆಯೋ ಅದು ಹಿಂದಿನವರಿಗಿರಲಿಲ್ಲ. ಭಾಷಾಂತರಿಸುವುದು ಅವರ ಉದ್ದೇಶವಲ್ಲ. ಆದರೆ ಇಂದಿನ ಅರ್ಥದಲ್ಲಿ ಕೂಡ ಭಾಷಾಂತರದ ಅಂಶಗಳನ್ನು ಪ್ರಾಚೀನ ಕನ್ನಡ ಸಾಹಿತ್ಯ ವಿಪುಲವಾಗಿ ತೋರಿಸಿ ಕೊಡುತ್ತದೆ ಎಂಬುದು ಗಮನಾರ್ಹ ಸಂಗತಿ. ರೂಪಾಂತರ, ಭಾವಾನುವಾದ, ಸಂಗ್ರಹಾನುವಾದ, ವಿಸ್ತಾರಾನುವಾದ, ನಿಕಟಾನುವಾದ ಮುಂತಾದ ಬಗೆಗಳೆಲ್ಲ ಅದರಲ್ಲಿ ನಿದರ್ಶನಗಳಿವೆ. ನಮ್ಮ ಹಿಂದಿನ ಕವಿಗಳು ಯಾವುದೋ ಒಂದು ಆಕರ ವನ್ನು ಆಧಾರವಾಗಿಟ್ಟುಕೊಂಡಿದ್ದರೂ ಅದಕ್ಕೆ ಮಾತ್ರ ತಮ್ಮನ್ನು ಸೀಮಿತಗೊಳಿಸಿ ಕೊಳ್ಳದೆ, ವರ್ಣನಾವಸರದಲ್ಲಿ ನಾನಾ ಮೂಲಗಳಿಂದ ಅನುವಾದಿಸುವುದೂ ಉಂಟು; ಒಟ್ಟಿನಲ್ಲಿ ಪ್ರಾಚೀನ ಕನ್ನಡ ಕೃತಿಗಳು ಸ್ಥೂಲವಾಗಿ ಅಂಶತಃ ಭಾಷಾಂತರಗಳಾಗಿವೆ. ನಿಯತವಾದ ಅರ್ಥದಲ್ಲಿ ಅಪ್ಪಟ ಭಾಷಾಂತರಗಳನ್ನು ನಾವು ನೋಡುವುದು ಆಧುನಿಕ ಕಾಲದಲ್ಲೇ.

ಹಳಗನ್ನಡದಲ್ಲಿ ಕಂಡುಬರುವ ಕೆಲವು ಭಾಷಾಂತರ ನಿದರ್ಶನಗಳನ್ನು ಮೊದಲು ನೋಡಬಹುದು. ದಂಡಿಯ ಕಾವ್ಯಾದರ್ಶವನ್ನು ಬಹುಮಟ್ಟಿಗೆ ಅವಲಂಬಿಸಿರುವ ಕವಿರಾಜಮಾರ್ಗದ ಪ್ರಾರ್ಥನಪದ್ಯವೇ ಭಾಷಾಂತರವಾಗಿದೆ :

ದಂಡಿ : ಚತುರ್ಮುಖ ಮುಖಾಂಭೋಜ ವನಹಂಸವಧೂರ್ಮಮ<br>
ಮಾನಸೇ ರಮತಾಂ ನಿತ್ಯಂ ಸರ್ವಶುಕ್ಲಾ ಸರಸ್ವತೀ

ಕ. ರಾ. ಮಾ : ಶ್ರೀವಿಶದವರ್ಣೆ ಮಧುರಾ<br>
ರಾವೋಚಿತೆ ಚತುರರುಚಿರಪದರಚನೆ ಚಿರಂ<br>
ದೇವಿ ಸರಸ್ವತಿ ಹಂಸೀ<br>
ಭಾವದೆ ನೆಲೆಗೊಳ್ಗೆ ಕೂರ್ತು ಮನ್ಮಾನಸದೊಳ್

ಪಂಪ ತನ್ನ ಭಾರತದಲ್ಲಿ ಒಂದೆಡೆ ಕಾಳಿದಾಸನ ವಿಕ್ರಮೋರ್ವಶೀಯದ ಪದ್ಯವೊಂದನ್ನು ಭಾಷಾಂತರಿಸಿದ್ದಾನೆ :

ಕಾಳಿದಾಸ : ಅಸ್ಯಾಸ್ಸರ್ಗವಿಧೌ ಪ್ರಜಾಪತಿರಭೂತ್ ಚಂದ್ರೋನು ಕಾಂತಪ್ರಭಃ<br>
ಶೃಂಗಾರೈಕರಸಃ ಸ್ವಯಂ ನು ಮದನೋ ಮಾಸೋನು ಪುಷ್ಪಾಕರಃ<br>
ವೇದಾಭ್ಯಾಸ ಜಡಃ ಕಥಂ ಚ ವಿಷಯವ್ಯಾವೃತ್ತ ಕೌತೂಹಲೋ<br>
ನಿರ್ಮಾತುಂ ಪ್ರಭವೇತ್ ಮನೋಹರಮಿದಂ ರೂಪಂ ಪುರಾಣೋ<br>
ಮುನಿಃ

ಪಂಪ : ಜಗಮಂ ಮಾಡಿದ ಪದ್ಮಜಂ ಪಡೆದನಲ್ಲೀ ಕನ್ನೆಯಂ ಮಾಡುವ
ಲ್ಲಿಗೆ ಚಂದ್ರಂ ಮಳಯಾನಿಳಂ ಮಳಯಜಂ ನೀರೇಜಮಿಮ್ಮಾವು ಮ
ಲ್ಲಿಗೆಯೆಂದಿಂತಿವನಕ್ಕರಿಂದಮರ್ದಿನೊಳ್ ತಾನಳ್ತಿಯಿಂ ತೊಯ್ದು ಮೆ
ಲ್ಲಗೆ ಸಂದಂಗಜನೆಂಬಜಂ ಪಡೆದನಂತಾ ಕಾಂತಿಯಿಂ ಕಾಂತೆಯಂ

ಜನ್ನನ ಯಶೋಧರ ಚರಿತೆ ಕಾವ್ಯವೆಲ್ಲ ಬಹುಮಟ್ಟಿಗೆ ವಾದಿರಾಜನ ಸಂಸ್ಕೃತ ಯಶೋಧರಚರಿತದ ನಿಕಟಾನುವಾದವಾಗಿದೆ. ಅದರ ಒಂದು ಪದ್ಯ :

ವಾದಿರಾಜ : ತಸ್ಮಾದವಶ್ಯಮನುಭೋಕ್ತವ್ಯೇ ಕಿಮುದ್ವೇಗಃ ಕರಿಷ್ಯ ತೇ
ಕಿಂಚ ತೀವ್ರಂ ತಪಃ ಪ್ರಾಹುಃ ಪರೀಷಹಜಯಂ ಬುಧಾಃ

ಜನ್ನ : ನಿಯತಿಯನಾರ್ ಮೀರಿದಪರ್
ಭಯಮೇವುದೊ ಮುಟ್ಟಿದೆಡೆಗೆ ಸೈರಿಸುವುದೆ ಕೇಳ್
ನಯವಿದೆ ಪೆತ್ತ ಪರೀಷಹ
ಜಯಮೆ ತಪಂ ತಪಕೆ ಬೇರೆ ಕೋಡೆರಡೊಳವೇ

ಹೊಸಗನ್ನಡ ಸಾಹಿತ್ಯ ಭಾಷಾಂತರಗಳಿಗೆ ಬಹಳ ಋಣಿಯಾಗಿದೆ. 16ನೆಯ ಶತಮಾನವಾದ ಬಳಿಕ ಮಡುಗಟ್ಟಿ, ನಿಂತ ನೀರಾಗಿದ್ದ ಕನ್ನಡ ಸಾಹಿತ್ಯವಾಹಿನಿಗೆ 19–20ನೆಯ ಶತಮಾನಗಳಲ್ಲಿ ಹೊಸಪಾತ್ರವನ್ನು ನಿರ್ಮಿಸಿದ ಶ್ರೇಯಸ್ಸು ಭಾಷಾಂತರಗಳದು; ಅದರಲ್ಲೂ ಇಂಗ್ಲಿಷಿನಿಂದಾದ ಭಾಷಾಂತರಗಳದು. ವಿಲಿಯಂ ಕೇರಿಯ ಬೈಬಲಿನ ಭಾಷಾಂತರ 1829ರಲ್ಲೇ ಪ್ರಕಟವಾಯಿತು; ಮುದ್ರಾಮಂಜೂಷ ವನ್ನು ಬಿಟ್ಟರೆ ಇದೇ ಹೊಸಗನ್ನಡದಲ್ಲಿ ಮೊದಲ ಅನುವಾದ ಗದ್ಯಗ್ರಂಥ.

ನಾಟಕ : ಕನ್ನಡಸಾಹಿತ್ಯದಲ್ಲಿ ಹಿಂದೆ ನಾಟಕಗಳಿರಲಿಲ್ಲ. ಕನ್ನಡದಲ್ಲಿ ನಮಗೆ ಮೊದಲು ಸಿಕ್ಕುವ ನಾಟಕ 17ನೆಯ ಶತಮಾನದಲ್ಲಿ ರಚಿತವಾದ ಸಿಂಗರಾರ್ಯನ ಮಿತ್ರ ವಿಂದಾ ಗೋವಿಂದ. ಇದು ಸಂಸ್ಕೃತ ರತ್ನಾವಳಿಯ ಅನುವಾದ. ಮುಂದೆ 19–20ನೆಯ ಶತಮಾನಗಳಲ್ಲಿ ಮುಖ್ಯವಾದ ಸಂಸ್ಕೃತ ನಾಟಕಗಳೆಲ್ಲ ಕನ್ನಡಕ್ಕೆ ಬಂದುವು.



ಬಸವಪ್ಪಶಾಸ್ತ್ರಿಗಳು

ಬಸವಪ್ಪಶಾಸ್ತ್ರಿಗಳು ಶಾಕುಂತಲ, ವಿಕ್ರಮೋರ್ವಶೀಯ, ರತ್ನಾವಳಿ, ಉತ್ತರರಾಮ ಚರಿತೆ, ಚಂಡಕೌಶಿಕ ನಾಟಕಗಳನ್ನು ಭಾಷಾಂತರಿಸಿದರು; ಅವರ ಶಾಕುಂತಲದ ಅನುವಾದ ಶ್ರೇಷ್ಠವೆನಿಸಿದೆ. ಅವರಿಗಿಂತ ಮೊದಲೆ ಚುರಮುರಿ ಶೇಷಗಿರಿರಾಯರು ಶಾಕುಂತಲವನ್ನು ಹಾಡುವ ರೂಪದಲ್ಲಿ ಅನುವಾದಿಸಿದ್ದರು. ಬಿ. ಕೃಷ್ಣಪ್ಪನವರು ಅದನ್ನು ಗದ್ಯದಲ್ಲಿ ಪರಿವರ್ತಿಸಿದ್ದರು. ಧೊಂಡೊ ನರಸಿಂಹ ಮುಳಬಾಗಿಲರು ಉತ್ತರರಾಮಚರಿತೆ, ಮಾಲವಿಕಾಗ್ನಿಮಿತ್ರ, ಮೃಚ್ಛಕಟಿಕ, ವೇಣೀಸಂಹಾರಗಳನ್ನು ಭಾಷಾಂತರಿಸಿದ್ದಾರೆ. ಅಳಸಿಂಗಾಚಾರ್ಯರಿಂದ ಸ್ವಪ್ನವಾಸವದತ್ತ, ಪಂಚರಾತ್ರಗಳು, ಮೈಸೂರು ಸೀತಾರಾಮಶಾಸ್ತ್ರಿಗಳಿಂದ ಪ್ರತಿಮಾ ನಾಟಕ, ನಂಜನಗೂಡು ಸುಬ್ಬಾಶಾಸ್ತ್ರಿಗಳಿಂದ ಮೃಚ್ಛ ಕಟಿಕ, ಅನಂತರ ನಾರಾಯಣಶಾಸ್ತ್ರಿಗಳಿಂದ ನಾಗಾನಂದ ಅನುವಾದಗೊಂಡಿವೆ. ವೇಣೀಸಂಹಾರವನ್ನು ಸೀತಾರಾಮಶಾಸ್ತ್ರಿಗಳೂ ಜಯರಾಜಾಚಾರ್ಯರೂ ಭಾಷಾಂತರಿಸಿದ್ದಾರೆ. ಈ ಎಲ್ಲ ಭಾಷಾಂತರಗಳೂ ಕಂದವೃತ್ತಗಳ ರೂಪದಲ್ಲಿವೆ. ಹೊಸಗನ್ನಡ ಛಂದಸ್ಸಿನಲ್ಲೂ ಸಂಸ್ಕೃತ ನಾಟಕಗಳನ್ನು ಅನುವಾದಿಸಲಾಗಿದೆ. ಎಸ್. ವಿ. ಪರಮೇಶ್ವರಭಟ್ಟರು ಕಾಳಿದಾಸನ ಎಲ್ಲ ನಾಟಕಗಳನ್ನೂ ಕೆ. ಕೃಷ್ಣಮೂರ್ತಿಯವರು ಪ್ರತಿಮಾ ನಾಟಕ, ಉತ್ತರರಾಮಚರಿತೆ, ಯಜ್ಞಫಲ, ಆಶ್ಚರ್ಯ ಚೂಡಾಮಣಿಗಳನ್ನೂ ಕನ್ನಡಿಸಿದ್ದಾರೆ. ಎಲ್. ಗುಂಡಪ್ಪನವರು ಭಾಸನ ಏಕಾಂಕ ನಾಟಕಗಳನ್ನೂ ಪ್ರತಿಜ್ಞಾನಾಟಕ, ಸ್ವಪ್ನನಾಟಕಗಳನ್ನೂ ಅನುವಾದಿಸಿದ್ದಾರೆ. ತೀ. ನಂ. ಶ್ರೀಯವರ ರಾಕ್ಷಸನ ಮುದ್ರಿಕೆ ಸಂಸ್ಕೃತ ಮುದ್ರಾರಾಕ್ಷಸದ ಸಂಗ್ರಹಾನುವಾದ. ಸಿ. ಪಿ. ಕೆ. ಅವರಿಂದ ಸ್ವಪ್ನವಾಸದತ್ತ, ಪ್ರತಿಜ್ಞಾ ಯೌಗಂಧರಾಯಣ, ರತ್ನಾವಳಿ, ನಾಗಾನಂದಗಳು ಭಾಷಾಂತರಗೊಂಡಿವೆ.

ಇಂಗ್ಲಿಷಿನಿಂದ ನಾಟಕಗಳನ್ನು ಅನುವಾದಿಸಿದವರಲ್ಲಿ ಎಂ. ಎಲ್. ಶ್ರೀಕಂಠೇಶ ಗೌಡರು ಮೊದಲಿಗರು. ಅವರು ಷೇಕ್ಸ್‌ಪಿಯರನ ಮ್ಯಾಕ್‌ಬೆತ್, ಮಿಡ್‌ಸಮ್ಮರ್ ನೈಟ್ಸ್ ಡ್ರೀಮ್ ನಾಟಕಗಳನ್ನು ಪ್ರತಾಪರುದ್ರದೇವ, ಪ್ರಮೀಳಾರ್ಜುನೀಯ ಎಂದು ಕನ್ನಡಕ್ಕೆ ತಂದಿದ್ದಾರೆ. ಚುರಮುರಿಯವರು ಒಥೆಲೊ ನಾಟಕವನ್ನು ರಾಘವೇಂದ್ರ ರಾವ್ ನಾಟಕ ಎಂದೂ ಸಿ. ಆನಂದರಾಯರು ರೋಮಿಯೊ ಅಂಡ್ ಜೂಲಿಯಟ್ ನಾಟಕವನ್ನು ರಾಮವರ್ಮ ಲೀಲಾವತಿ ಎಂದೂ ಪರಿವರ್ತಿಸಿದ್ದಾರೆ. ಮ್ಯಾಕ್‌ಬೆತ್ ನಾಟಕವನ್ನು ಡಿ. ವಿ. ಜಿ. ಸೊಗಸಾಗಿ ಕನ್ನಡಿಸಿದ್ದಾರೆ. ಕುವೆಂಪು ಅವರ ರಕ್ತಾಕ್ಷಿ ಮತ್ತು ಬಿರುಗಾಳಿ ಷೇಕ್ಸ್‌ಪಿಯರನ ನಾಟಕಗಳ ರೂಪಾಂತರಗಳು. ಅವನ ಕೆಲವು ನಾಟಕಗಳು ಮಾಸ್ತಿಯವರಿಂದಲೂ ಅನುವಾದಗೊಂಡಿವೆ—ಲಿಯರ್ ಮಹಾರಾಜ, ಹ್ಯಾಂಲೆಟ್ ಇತ್ಯಾದಿ. ಬರ್ನಾರ್ಡ್ ಷಾನ ಪಿಗ್ಮೇಲಿಯನ್ ಮತ್ತು ಮೇಜರ್ ಬಾರ್ಬರಾಗಳನ್ನು ವಿ. ಸೀ. ಕನ್ನಡಿಸಿದ್ದಾರೆ.

ಗ್ರೀಕ್ ಸಾಹಿತ್ಯದಿಂದ ಈ ನಾಟಕಗಳು ಕನ್ನಡಕ್ಕೆ ಬಂದಿವೆ: ಅಶ್ವತ್ಥಾಮನ್, ಪಾರಸಿಕರು, ಅಂತಿಗೊನೆ, ಏಜಾಕ್ಸ್, ಈಡಿಪಸ್ ದೊರೆ, ಕಪ್ಪೆಗಳು, ಬದ್ಧ ಪ್ರಮಿತ್ಯೂಸ್, ಮೀಡಿಯಾ ಇವುಗಳನ್ನು ತಂದಿರುವವರು ಬಿ. ಎಂ. ಶ್ರೀ. ; ಕೆ. ವಿ. ರಾಘವಾಚಾರ್, ಸುಜನಾ, ಟಿ. ವಿ. ವೆಂಕಟಾಚಲಶಾಸ್ತ್ರಿ ಮತ್ತು ಕೆ. ಎಸ್. ನರಸಿಂಹಸ್ವಾಮಿಯವರು. ಇಬ್ಸನ್ನನ ಕೆಲವು ನಾಟಕಗಳನ್ನು ಎಸ್. ಜಿ. ಶಾಸ್ತ್ರಿ, ಅಡಿಗ, ಶ್ರೀರಂಗರು ಕನ್ನಡಿಸಿದ್ದಾರೆ. ಮೋಲಿಯರನ ಎರಡು ನಾಟಕಗಳನ್ನು ಎ. ಎನ್. ಮೂರ್ತಿರಾಯರು ಅನುವಾದಿಸಿದ್ದಾರೆ. ಗಯಟೆಯ ಫೌಸ್ಟ್ ನಾಟಕದ ಪ್ರಥಮ ಭಾಗ ಪು. ತಿ. ನ. ಅವರಿಂದ ಭಾಷಾಂತರವಾಗಿದೆ.

ಕಾವ್ಯ : ಹೊಸಗನ್ನಡ ಕವಿತೆ ಭಾಷಾಂತರಗಳಿಂದಲೇ ಮೊದಲಾಯಿತು. 19ನೆಯ ಶತಮಾನದ ಮಧ್ಯಭಾಗದಲ್ಲೆ ಇಂಗ್ಲಿಷ್, ಜರ್ಮನ್ ಮುಂತಾದ ಭಾಷೆಗಳಿಂದ ಕ್ರಿಶ್ಚಿಯನ್ ಮಿಷನರಿಗಳು ಕವಿತೆಗಳನ್ನೂ ಗೀತೆಗಳನ್ನೂ ಅನುವಾದಿಸಿ ಪ್ರಕಟಿಸಿದ್ದರು. ಕಳೆದ ಶತಮಾನದ ಕಡೆಯಲ್ಲಿ ಮತ್ತು ಈ ಶತಮಾನದ ಮೊದಲ ಎರಡು ದಶಕಗಳಲ್ಲಿ ಈ ಅನುವಾದ ಕಾರ್ಯ ವ್ಯಾಪಕವಾಗಿ ನಡೆಯಿತು. ಈ ಕ್ಷೇತ್ರದಲ್ಲಿ ಹಟ್ಟಿಯಂಗಡಿ ನಾರಾಯಣರಾಯರು, ಎಸ್.ಜಿ. ನರಸಿಂಹಾಚಾರ್ಯರು, ಜಯರಾಜಾಚಾರ್ಯರು, ಪಂಜೆಯವರು, ಗೋವಿಂದ ಪೈಗಳು, ಬಿ. ಎಂ. ಶ್ರೀಕಂಠಯ್ಯನವರು ಮುಖ್ಯರು. 1921ರಲ್ಲಿ ಪ್ರಕಟವಾದ ಶ್ರೀ ಯವರ ಇಂಗ್ಲಿಷ್ ಗೀತೆಗಳು ಹೊಸಗನ್ನಡ ಕಾವ್ಯದ ಚರಿತ್ರೆಯಲ್ಲಿ ಒಂದು ಮೈಲಿಗಲ್ಲು. ಅದು ಕನ್ನಡ ಕವಿಗಳಿಗೆ ಹೊಸ ಹೊಸ ವಸ್ತುಗಳನ್ನು ತೋರಿಸಿಕೊಟ್ಟಿತಲ್ಲದೆ, ಹೊಸ ಲಯಗಳನ್ನು ರೂಪಿಸಿ, ಭಾವಗೀತೆಗಳ ಯುಗಕ್ಕೆ ನಾಂದಿಯಾಯಿತು. ಕುವೆಂಪು ಅವರ ದೇವಕೇತು (ಹೌಂಡ್ ಆಫ್ ಹೆವನ್), ಬೊಮ್ಮನಹಳ್ಳಿಯ ಕಿಂದರಿಜೋಗಿ, ಎಲ್. ಗುಂಡಪ್ಪನವರ ಸೊಹ್ರಾಬ್–ರುಸ್ತುಂ, ಅಡಿಗರ ಹುಲ್ಲಿನ ದಳಗಳು (ಲೀವ್ಸ್ ಆಫ್ ಗ್ರಾಸ್) ಇತ್ಯಾದಿ ಅನುವಾದಗಳನ್ನು ಈ ಕ್ಷೇತ್ರದಲ್ಲಿ ಹೆಸರಿಸಬಹುದು. ಇಲಿಯಡ್ ಮತ್ತು ಒಡಿಸ್ಸಿ ಕಾವ್ಯಗಳು ಎಲ್. ಎಸ್. ಶೇಷಗಿರಿರಾವ್ ಹಾಗೂ ಜಿ. ಎ. ರೆಡ್ಡಿ ಯವರಿಂದ ಗದ್ಯರೂಪದಲ್ಲಿ ಕನ್ನಡಕ್ಕೆ ತರ್ಜುಮೆಗೊಂಡಿವೆ.

ಸಂಸ್ಕೃತದಿಂದ ಕೆಲವು ಕಾವ್ಯಗಳನ್ನು ಕನ್ನಡಕ್ಕೆ ತರಲಾಗಿದೆ. ಎ. ಆರ್. ಕೃಷ್ಣ ಶಾಸ್ತ್ರಿಗಳ ವಚನ ಭಾರತ ಹಾಗೂ ಕಥಾಮೃತ ಗಣ್ಯವಾದ ಕೃತಿಗಳು. ತೂರಮರಿಯವರಿಂದ ಬಾಣನ ಕಾದಂಬರಿ ಅನುವಾದಗೊಂಡಿದೆ. ಪರಮೇಶ್ವರಭಟ್ಟರು ಕಾಳಿದಾಸನ ಎಲ್ಲ ಕಾವ್ಯ ನಾಟಕಗಳನ್ನು ಮಾತ್ರವಲ್ಲದೆ ಗೀತಗೋವಿಂದ, ಗಾಥಾ ಸಪ್ತಶತಿ, ಅಮರುಶತಕ, ಭರ್ತೃಹರಿ ಶತಕಗಳನ್ನು ಕನ್ನಡಿಸಿದ್ದಾರೆ. ಬೇಂದ್ರೆಯವರ ಮೇಘದೂತದ ಅನುವಾದ ಶ್ಲಾಘ್ಯವಾಗಿದೆ. ಎಂ. ಜಿ. ನಂಜುಂಡಾರಾಧ್ಯರು ಶಿಶುಪಾಲ ವಧವನ್ನು, ಕಡವ ಶಂಭುಶರ್ಮರು ಸೌಂದರನಂದವನ್ನು, ವೈ. ನಾಗೇಶಶಾಸ್ತ್ರಿಗಳು ರಘುವಂಶವನ್ನು, ಅಮ್ಮೆಂಬಳ ಶಂಕರನಾರಾಯಣರು ಕುಮಾರಸಂಭವವನು

ಸಿ. ಪಿ. ಕೆ. ಅವರು ಯಶೋಧರ ಚರಿತ, ಸೌಂದರ್ಯಲಹರಿಗಳನ್ನು, ಮೇವುಂಡಿ ಮಲ್ಲಾರಿಯವರು ಶಿವಾನಂದ ಲಹರಿಯನ್ನು, ಕೆ. ಕೃಷ್ಣಮೂರ್ತಿಗಳು ಕಿರಾತಾರ್ಜುನೀಯದ ಕೆಲವು ಸರ್ಗಗಳನ್ನು ಅನುವಾದಿಸಿದ್ದಾರೆ. ತೀ.ನಂ.ಶ್ರೀ.ಯವರ ಬಿಡಿಮುತ್ತು ಸಂಸ್ಕೃತ ಸುಭಾಷಿತಗಳ ಚೆಲುವಾದ ಭಾಷಾಂತರ.

ಕಾವ್ಯಮೀಮಾಂಸೆ : ಅರಿಸ್ಟಾಟಲ್ ಮತ್ತು ಹೊರೇಸನ ಕಾವ್ಯಮೀಮಾಂಸೆ ಬಾಲಸುಬ್ರಹ್ಮಣ್ಯಂ ಅವರಿಂದ, ಷೆಲ್ಲಿಯ ಡಿಫೆನ್ಸ್ ಆಫ್ ಪೊಯಟ್ರಿ (ಕಾವ್ಯ ಸಮರ್ಥನೆ) ಸಿ. ಮಹದೇವಪ್ಪನವರಿಂದ, ಹಡ್ಸನ್ ಅಬರ್‌ಕ್ರಾಂಬಿ ಅವರ ಕೃತಿಗಳು ಸಿ. ಪಿ. ಕೆ. ಅವರಿಂದ, ಎಲಿಯಟ್ಟನ ಕೆಲವು ಬರೆಹಗಳು ಆರ್. ನಾಗರಾಜರಿಂದ ಭಾಷಾಂತರಗೊಂಡಿವೆ. ಪ್ರಮುಖವಾದ ಸಂಸ್ಕೃತ ಅಲಂಕಾರ ಗ್ರಂಥಗಳನ್ನೆಲ್ಲ ಕೆ. ಕೃಷ್ಣಮೂರ್ತಿಯವರೂ ದಶರೂಪಕವನ್ನು ಕೆ. ವಿ. ಸುಬ್ಬಣ್ಣನವರೂ ಕನ್ನಡಿಸಿದ್ದಾರೆ.

ಕಥೆ, ಕಾದಂಬರಿ : ರೆ. ವೀಗಲ್ ಮಾಡಿದ ಫಿಲ್‌ಗ್ರಿಮ್ಸ್ ಪ್ರೋಗ್ರೆಸ್ ಗ್ರಂಥದ ಭಾಷಾಂತರ ಯಾತ್ರಿಕನ ಸಂಚಾರ ಎಂಬ ಹೆಸರಿನಲ್ಲಿ 1847ರಲ್ಲಿ ಪ್ರಕಟವಾಯಿತು. ಮುದ್ರಾಮಂಜೂಷವನ್ನು ಬಿಟ್ಟರೆ ಸುದೀರ್ಘ ಕಥೆ ಅಥವಾ ಕಾದಂಬರಿಯಾಗಿ ಕನ್ನಡದಲ್ಲಿ ಇದೇ ಮೊದಲನೆಯದು. ಬಿ. ವೆಂಕಟಾಚಾರ್ಯರು ಬಂಗಾಳಿಯಿಂದ ಅನುವಾದಿಸಿದ ಮತ್ತು ಗಳಗನಾಥರು ಮರಾಠಿಯಿಂದ ರೂಪಾಂತರಿಸಿದ ಕಾದಂಬರಿಗಳು ಕನ್ನಡ ಕಾದಂಬರಿ ಪ್ರಪಂಚಕ್ಕೆ ತಳಹದಿಹಾಕಿದುವು. ವೆಂಕಟಾಚಾರ್ಯರು ಬಂಕಿಮಚಂದ್ರರನ್ನೂ ಗಳಗನಾಥರು ಹರಿನಾರಾಯಣ ಆಪ್ಟೆಯವರನ್ನೂ ಕನ್ನಡಕ್ಕೆ ತಂದರು. ಈಚೆಗೆ ಇಂಗ್ಲಿಷಿನಿಂದ ಅನೇಕ ಕಥೆ ಕಾದಂಬರಿಗಳು ಕನ್ನಡಕ್ಕೆ ಬಂದಿವೆ.

ವಾಲ್ಟರ್ ಸ್ಕಾಟ್‌ನ ಕೆನಿಲ್‌ವರ್ತ್‌ನ್ನು ನಾಗೇಗೌಡರು, ಸ್ಟೀವನ್‌ಸನ್ನನ ಡಾ. ಜೆಕಿಲ್ ಅಂಡ್ ಮಿ. ಹೈಡ್‌ನ್ನು ಆನಂದರು (ಪುರುಷಾಮೃಗ), ಡಿಕನ್ಸನ ಡೇವಿಡ್ ಕಾಫರ್ ಫೀಲ್ಡನ್ನು ಎ.ಪಿ. ಸುಬ್ಬಯ್ಯನವರು, ಜೇನ್ ಆಸ್ಟೆನ್ನಳ ಪ್ರೈಡ್ ಅಂಡ್ ಪ್ರಿಜುಡಿಸನ್ನು ದೇಜಗೌ ಅವರು (ಹಮ್ಮು-ಬಿಮ್ಮು), ಜಾರ್ಜ್ ಎಲಿಯಟ್ಟಳು ಸೈಲಾನ್ ಮಾರ್‍ನರನ್ನು, ಎಂ. ರಾಮರಾಯರು, ರೈಡರ್ ಹಗಾರ್ಡನ ಷಿ ಅನ್ನು, ಎ. ಮೈಲಾರಿರಾಯರು (ಆಷಾ) ಭಾಷಾಂತರಿಸಿದ್ದಾರೆ. ಥೋರೋನ ವಾಲ್ಡನ್ ದೇವುಡು ನರಸಿಂಹಶಾಸ್ತ್ರಿಗಳಿಂದ, ಹೆಮಿಂಗ್ವೆಯ ಓಲ್ಡ್‌ಮ್ಯಾನ್ ಅಂಡ್ ದಿ ಸೀ ಪಂಕಜಾ ಅವರಿಂದ (ಗೆದ್ದು ಸೋತವನು), ಹಾಥಾರ್‍ನನ ಹೌಸ್ ಆಫ್ ಸೆವನ್ ಗೇಬಲ್ಸ್ ಎಂ. ವಿ. ಸೀತಾರಾಮಯ್ಯನವರಿಂದ (ಏಳು ಇಪ್ಪಾರಿನ ಮನೆ) ಕನ್ನಡಿಸಲ್ಪಟ್ಟಿವೆ. ಹಾರ್ಡಿಯ ಮೇಯರ್ ಆಫ್ ಕ್ಯಾಸ್ಟರ್‌ಬ್ರಿಡ್ಜನ್ನು ಆನಂದರಾಯರು ಸಂಗ್ರಹಾನುವಾದ ಮಾಡಿದ್ದಾರೆ (ಪರಿಳಿತ). ಆರ್. ಕೆ. ನಾರಾಯಣ್, ಮುಲಗಾಂಕರ್ ಮೊದಲಾದ ಭಾರತೀಯ ಇಂಗ್ಲಿಷ್ ಲೇಖಕರ ಕೆಲವು ಕಾದಂಬರಿಗಳೂ ಕನ್ನಡಕ್ಕೆ ಬಂದಿವೆ. ಎ. ಎನ್. ಮೂರ್ತಿರಾಯರು ಅನೇಕ ಪಾಶ್ಚಾತ್ಯ ಕಥೆಗಳನ್ನು ಯೋಧನ ಪುನರಾಗಮನ ಮತ್ತು ಪಾಶ್ಚಾತ್ಯ ಸಣ್ಣ ಕಥೆಗಳು ಎಂಬೆರಡು ಸಂಕಲನಗಳಲ್ಲಿ ಕೊಟ್ಟಿದ್ದಾರೆ.

ಇತರ ಭಾಷೆಗಳ ಕೆಲವು ಕೃತಿಗಳು ಇಂಗ್ಲಿಷಿನ ಮೂಲಕ ಕನ್ನಡಕ್ಕಿಳಿದಿವೆ. ವಿಕ್ಟರ್ ಹ್ಯೂಗೋವಿನ ಲೇ ಮಿಸರಬಲ್ ಕಾದಂಬರಿಯನ್ನು ಇಬ್ಬರು—ಎ. ಪಿ. ಸುಬ್ಬಯ್ಯ ಮತ್ತು ನಾ. ಕಸ್ತೂರಿ—ಅನುವಾದಿಸಿದ್ದಾರೆ. ಡ್ಯೂಮಾನ ತ್ರೀ ಮಸ್ಕೆಟೀರ್ಸನ್ನು ಮಾಧವ ಬಾಳಿಗರು, ವಾಲ್ಟೇರನ ಕ್ಯಾಂಡಿಡನ್ನು ಜಿ. ಪಿ. ರಾಜರತ್ನಂ ಭಾಷಾಂತರಿಸಿದ್ದಾರೆ. ಲಿಯೊ ಟಾಲ್‌ಸ್ಟಾಯ್ ಅವರ ರಷ್ಯನ್ ಕಾದಂಬರಿ ರಿಸರಕ್ಷನ್ ದೇಜಗೌ ಅವರಿಂದ ಪುನರುತ್ಥಾನವಾಗಿ ಕನ್ನಡಕ್ಕೆ ಲಭಿಸಿದೆ. ಅದೇ ಲೇಖಕರ ಕೆಲವು ಕಥೆಗಳನ್ನು ಎಲ್. ಗುಂಡಪ್ಪನವರೂ ಅಲೆಕ್ಸಿ ಟಾಲ್‌ಸ್ಟಾಯ್ ಅವರ ಆರ್ಡಿಯಲನ್ನು ಆನಂದರೂ (ಉಗ್ರಪರೀಕ್ಷೆ) ಗಾರ್ಕಿಯ ಆತ್ಮಕಥೆಯನ್ನು ನಿರಂಜನರೂ ಭಾಷಾಂತರಿಸಿದ್ದಾರೆ. ಗೊರೂರು, ಶ್ರೀಧರಮೂರ್ತಿ, ತ. ರಾ. ಸು. ಅ. ನ. ಕೃ. ಮುಂತಾದವರು ರಷ್ಯನ್ ಕೃತಿಗಳನ್ನು ಅನುವಾದಿಸಿ ಕೊಟ್ಟಿದ್ದಾರೆ.

ಇತರ ಪ್ರಕಾರಗಳು : ಅನೇಕ ಇಂಗ್ಲಿಷ್ ಪ್ರಬಂಧಗಳನ್ನು ಎಸ್. ವಿ. ಪರಮೇಶ್ವರಭಟ್ಟ, ಎಂ. ರಾಮರಾವ್ ಮತ್ತು ರಾಮಚಂದ್ರಯ್ಯನವರು ಅನುವಾದಿಸಿದ್ದಾರೆ. ಪ್ಲೇಟೋನ ರಿಪಬ್ಲಿಕ್ ಕೆ. ವೆಂಕಟರಾಮಪ್ಪನವರಿಂದ, ಮ್ಯಾಕಿಯವೆಲ್ಲಿಯ ರಾಜನೀತಿ ನವರತ್ನ ರಾಮರಾಯರಿಂದ ಭಾಷಾಂತರಗೊಂಡಿವೆ. ಎಚ್. ಎಲ್. ನಾಗೇಗೌಡರ ಪ್ರವಾಸಿ ಕಂಡ ಇಂಡಿಯಾದ ಸಂಪುಟಗಳು ಪ್ರವಾಸ ಸಾಹಿತ್ಯದ ಅನುವಾದ. ಲೂಯಿ ಫಿಶರ್, ಲಾರೆನ್ಸ್ ಬಿನ್ಯನ್ ಮುಂತಾದವರು ಬರೆದ ಜೀವನ ಚರಿತ್ರೆಗಳೂ ಕೆಲವು ಆತ್ಮಕಥೆಗಳೂ ಕನ್ನಡಕ್ಕೆ ಬಂದಿವೆ. ಗಾಂಧಿ, ನೆಹರೂ, ವಿವೇಕಾನಂದ, ಅರವಿಂದ, ಟಾಗೂರ್, ಕೃಷ್ಣಾ ಹಥೀಸಿಂಗ್, ರಾಜಾಜಿ ಮುಂತಾದ ಭಾರತೀಯ ಲೇಖಕರ ಸಾಹಿತ್ಯ ಕನ್ನಡದಲ್ಲಿ ಸಿಗುತ್ತದೆ. ಸುಮಾರು ಇನ್ನೂರರಷ್ಟು ವಿಜ್ಞಾನ ಗ್ರಂಥಗಳು ಇಂಗ್ಲಿಷ್ ಹಾಗೂ ಇತರ ಭಾಷೆಗಳಿಂದ ಕನ್ನಡಕ್ಕೆ ಈ ವರೆಗೆ (1971) ಅನುವಾದಗೊಂಡಿವೆ ಎಂದು ಒಂದು ವಿಶ್ಲೇಷಣೆಯಿಂದ ತಿಳಿದಿದೆ. ಇವನ್ನು ಪಠ್ಯಪುಸ್ತಕಗಳು, ಜನಪ್ರಿಯ ಗ್ರಂಥಗಳು, ಆಕರ ಗ್ರಂಥಗಳು ಎಂದು ಮೂರು ವಿಭಾಗಗಳಾಗಿ ವಿಂಗಡಿಸಬಹುದು. 1969ರ ವರೆಗೂ ಪ್ರಕಟಗೊಂಡಿರುವ ಅನುವಾದ ಗ್ರಂಥಗಳು ಬಹುಪಾಲು ಮೊದಲಿನ ಎರಡು ವಿಭಾಗಗಳಿಗೇ ಸೀಮಿತವಾಗಿವೆ. ಈಗ ಸಿಕ್ಕಿರುವ ಮೊದಲ ಅನುವಾದಿತ ಗ್ರಂಥದ ಹೆಸರು ಅಂಕಗಣಿತವು (ಇಂಗ್ಲೀಷಿನಿಂದ ಅನುವಾದಿಸಿದವರು ಚನಬಸಪ್ಪಾ ಬಸಲಿಂಗಪ್ಪಾ ಧಾರವಾಡಕರ, 1873). 1969 ರಿಂದ ಈಚೆಗೆ, ಮುಖ್ಯವಾಗಿ ವಿಶ್ವವಿದ್ಯಾನಿಲಯಗಳ ನೆರವಿನಿಂದ, ಆಕರಗ್ರಂಥಗಳ ಕನ್ನಡ ಅನುವಾದಗಳೂ ಬರಲು ತೊಡಗಿವೆ. ಕನ್ನಡ ಬೋಧನ ಮಾಧ್ಯಮವಾಗಲು ಈ ಬಗೆಯ ಶಾಸ್ತ್ರ ಗ್ರಂಥಗಳ ಅನುವಾದ ಅಗತ್ಯವೆನಿಸಿದೆ. ಈ ಕಾರ್ಯ ಬಹು ತ್ವರೆಯಿಂದ ಜರುಗುತ್ತಿದ್ದು ಆಧಾರಗ್ರಂಥಗಳೆಲ್ಲವುಗಳ ಅನುವಾದ ನಡೆಯುತ್ತಿದೆ. ಅನೇಕ ಗ್ರಂಥಗಳು ಆಗಲೆ ಅಚ್ಚಾಗಿವೆ.

ದೇಶಭಾಷೆಗಳಿಂದ : ಹಿಂದಿ, ತಮಿಳು, ತೆಲುಗು, ಮಲೆಯಾಳಿ, ಬಂಗಾಳಿ, ಮರಾಠಿ ಮುಂತಾದ ಭಾರತೀಯ ಭಾಷೆಗಳೂ ಕನ್ನಡಕ್ಕೆ ಕೊಡುಗೆಗಳನ್ನಿತ್ತಿವೆ. ಈ ದಿಸೆಯಲ್ಲಿ ಸಾಹಿತ್ಯ ಅಕಾಡೆಮಿ, ದಕ್ಷಿಣ ಭಾಷಾ ಬುಕ್ ಟ್ರಸ್ಟ್‌ಗಳು ಮಹತ್ತ್ವದ ಪಾತ್ರವಹಿಸಿವೆ. ಹಿಂದಿಯಿಂದ ರಾಮಚರಿತ ಮಾನಸ, ಆಂಸೂ ಮುಂತಾದ ಕಾವ್ಯಗಳೂ ಪ್ರೇಮಚಂದ್, ವೃಂದಾವನ ಲಾಲವರ್ಮ, ಹಜಾರಿ ಪ್ರಸಾದ ದ್ವಿವೇದಿ, ದೇವಕಿನಂದನ ಖತ್ರಿ, ಜಯಶಂಕರ ಪ್ರಸಾದ್, ಡಾ. ನಗೇಂದ್ರ ಮುಂತಾದವರ ಕಥೆ ಕಾದಂಬರಿ ನಾಟಕ ಪ್ರಬಂಧಗಳೂ ಭಾಷಾಂತರಗೊಂಡಿವೆ. ದ. ಕೃ. ಭಾರದ್ವಾಜ, ಗುರುನಾಥ ಜೋಶಿ, ಕುಮುದಪ್ರಿಯ, ಎಂ. ಎಸ್. ಕೃಷ್ಣಮೂರ್ತಿ, ಮೇ. ರಾಜೇಶ್ವರಯ್ಯ, ಪ್ರಧಾನ್ ಗುರುದತ್ತ ಮುಂತಾದವರು ಈ ಕ್ಷೇತ್ರದಲ್ಲಿ ಕೆಲಸಮಾಡುತ್ತಿದ್ದಾರೆ. ಬಂಗಾಳಿಯಿಂದ ಶರಚ್ಚಂದ್ರ, ಟಾಗೂರ್ ಮೊದಲಾದವರ ಕೃತಿಗಳನ್ನು ಅಹೋಬಲ ಶಂಕರ, ಎಚ್. ಕೆ. ವೇದವ್ಯಾಸಾಚಾರ್ಯ, ಶಂಕರಾನಂದ ಸರಸ್ವತಿ, ಎಚ್. ವಿ. ಸಾವಿತ್ರಮ್ಮ ಮೊದಲಾದವರು ಕನ್ನಡಿಸಿದ್ದಾರೆ. ಟಾಗೂರರ ಪ್ರಬಂಧಗಳು ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಯವರಿಂದ ಅನುವಾದಿತವಾಗಿವೆ. ತಮಿಳಿನಿಂದ ಮತ್ತೂರು ಕೃಷ್ಣಮೂರ್ತಿ, ಎಲ್. ಗುಂಡಪ್ಪ, ಕೆ. ಸಂಪದ್ಗಿರಿರಾವ್ ಮುಂತಾದವರೂ ತೆಲುಗಿನಿಂದ ಕೆ. ವೆಂಕಟರಾಮಪ್ಪ, ಕೋ. ಚೆನ್ನಬಸಪ್ಪ, ವೀರಭದ್ರ ಮುಂತಾದವರೂ ಮಲೆಯಾಳಂನಿಂದ ನಾ. ಕಸ್ತೂರಿ, ಕರುಣಾಕರನ್ ಮೊದಲಾದವರೂ ಮರಾಠಿಯಿಂದ ಬಾಲಚಂದ್ರ ಘಾಣೇಕರ ಮೊದಲಾದವರೂ ಭಾಷಾಂತರಿಸಿದ್ದಾರೆ.

ಸಂಸ್ಕೃತದಿಂದ ವೇದ ಉಪನಿಷತ್ ಗೀತೆ ಪುರಾಣ ರಾಮಾಯಣ ಭಾರತಾದಿಗಳೂ ಹಲವಾರು ಶಾಸ್ತ್ರಕೃತಿಗಳೂ ಕನ್ನಡಕ್ಕೆ ಬಂದಿವೆ.

ಕನ್ನಡ ಭಾಷಾಂತರಗಳು ಇಂದು ಮುಖ್ಯವಾಗಿ ಕಥೆ ಕಾದಂಬರಿಗಳಂಥ ಸೃಜನಾತ್ಮಕ ಪ್ರಕಾರಗಳಿಗೆ ಸೀಮಿತವಾಗಿವೆ. ವಿಜ್ಞಾನ, ವಿಚಾರ, ವಿಮರ್ಶೆಗಳಿಗೆ ಸಂಬಂಧಿಸಿದ ಗ್ರಂಥಗಳು ಪಾಶ್ಚಾತ್ಯ ಭಾಷೆಗಳಿಂದ ಹೆಚ್ಚು ಹೆಚ್ಚಾಗಿ ಕನ್ನಡಕ್ಕೆ ಬರಬೇಕಾಗಿದೆ. ಕನ್ನಡ ಭಾಷಾಂತರ ಪರಂಪರೆಯ ಇದುವರೆಗಿನ ಚರಿತ್ರೆ ಕುತೂಹಲಕರವಾಗಿರುವುದು ಮಾತ್ರವಲ್ಲದೆ, ಅದರ ಭವಿಷ್ಯವೂ ಉಜ್ಜ್ವಲವಾಗಿದೆ. ಈ ಕ್ಷೇತ್ರದಲ್ಲಿ ಕೆಲಸ ಮಾಡುವವರಿಗೆ ಅವಕಾಶಗಳು ವಿಪುಲವಾಗಿವೆ. (ಸಿ.ಪಿ.ಕೆ.)

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಪ್ರಸಾರಾಂಗ ಹಾಗೂ ಕನ್ನಡ ಅಧ್ಯಯನ ಸಂಸ್ಥೆಗಳು ಪಾಂಕ್ತವಾಗಿ ಅನುವಾದ ಕಾರ್ಯಕ್ರಮವನ್ನು ನಡೆಸಿಕೊಂಡು ಬರುತ್ತಿವೆ. ಕರ್ನಾಟಕ ವಿಶ್ವವಿದ್ಯಾಲಯದಲ್ಲೂ ಈ ಕೆಲಸಕ್ಕಾಗಿ ಪ್ರತ್ಯೇಕ ವಿಭಾಗವೊಂದಿದೆ. ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಅನುವಾದಕ್ಕಾಗಿಯೇ ನಿಯೋಜಿತವಾಗಿರುವ ವಿಭಾಗದಲ್ಲಿ ಪಠ್ಯಪುಸ್ತಕಗಳು ಮತ್ತು ಇತರ ಆಕರ ಗ್ರಂಥಗಳ ಭಾಷಾಂತರ ನಡೆಯುತ್ತಿದೆ.

ನೋಡಿ— ಕನ್ನಡ ಅಧ್ಯಯನ ಸಂಸ್ಥೆ ; ಮೈಸೂರು ವಿಶ್ವವಿದ್ಯಾನಿಲಯ

**ಕನ್ನಡದಲ್ಲಿ ಮಕ್ಕಳ ಸಾಹಿತ್ಯ :** ಮಕ್ಕಳ ಮನಸ್ಸನ್ನು ಅರಳಿಸಿ, ಕುತೂಹಲವನ್ನು ಕೆರಳಿಸಿ, ಕಲ್ಪನೆಯನ್ನು ರೂಪಿಸಿ, ಭಾವನೆಗಳನ್ನು ಪ್ರಚೋದಿಸಿ, ಆನಂದದಲ್ಲಿ ಮೀಯಿಸಿ ಅವರ ವ್ಯಕ್ತಿತ್ವವನ್ನು ರೂಪಿಸುವ ಸಾಹಿತ್ಯವೇ ಮಕ್ಕಳ ಸಾಹಿತ್ಯ. ಎಲ್ಲ ದೇಶಗಳ, ಎಲ್ಲ ಭಾಷೆಗಳ ಅವಿಭಾಜ್ಯ ಅಂಗವಿದು. ಅಂಥ ಸಾಹಿತ್ಯ ಎಷ್ಟು ಪರಿಮಾಣದಲ್ಲಿ ಯಾವ ಯಾವ ಬಗೆಯಲ್ಲಿ ಕನ್ನಡದಲ್ಲಿ ಬಂದಿದೆ ಎನ್ನುವುದನ್ನು ಸ್ಥೂಲವಾಗಿ ಇಲ್ಲಿ ಪರಿಶೀಲಿಸಲಾಗಿದೆ.

ಕನ್ನಡ ಮಕ್ಕಳ ಸಾಹಿತ್ಯದ ಬೇರು ಅದರ ಜಾನಪದದಲ್ಲಿದೆ. ನಾವು ಕೇಳುವ ಲಾಲಿ ಪದಗಳಲ್ಲಿ, ಅಜ್ಜ ಅಜ್ಜಿಯರು ಹೇಳುವ ಕಥೆಗಳಲ್ಲಿ, ಪ್ರಾಸಬದ್ಧವಾದ ಆಟದ ಪದಗಳಲ್ಲಿ, ಕೋಲಾಟದ ಹಾಡುಗಳಲ್ಲಿ, ಒಗಟುಗಳಲ್ಲಿ ಅದರ ವಿವಿಧ ಮುಖಗಳನ್ನು ಕಾಣಬಹುದು. ರಾಜಕುಮಾರ, ರಾಜಕುಮಾರಿಯರ ಕಥೆಗಳು, ಅದ್ಭುತರಮ್ಯ ಪವಾಡಗಳನ್ನೊಳಗೊಂಡ ಕಥೆಗಳು, ರಾಮ, ಕೃಷ್ಣಾದಿ ಅವತಾರಪುರುಷರ ಲೀಲೆಗಳನ್ನು ವಿವರಿಸುವ ಕಥೆಗಳು, ಕಾಗಕ್ಕ ಗುಬ್ಬಕ್ಕನ ಕಥೆ, ಪಂಚತಂತ್ರದ ನೂರಾರು ಪ್ರಾಣಿಸಂಬಂಧಿ ಕಥೆಗಳು—ಇವೆಲ್ಲ ತಲತಲಾಂತರದಿಂದ ಮಕ್ಕಳ

ಮನಸ್ಸನ್ನು ಆಕರ್ಷಿಸಿವೆ, ಅರಳಿಸಿವೆ. ಅದು ಹೀಗೆ ಬಾಯಿಂದ ಬಾಯಿಗೆ, ಕಿವಿಯಿಂದ ಕಿವಿಗೆ ಹಬ್ಬಿ ಬಂದಿದೆ.

ಅಲ್ಲಿಂದ ಮುಂದೆ ಮುದ್ರಣಕಲೆ ಬಂದಮೇಲೆ ಶಾಲೆಗಳಿಗೋಸ್ಕರ ರಚಿತವಾದ ಪಠ್ಯಪುಸ್ತಕಗಳಲ್ಲಿ ಮಕ್ಕಳಿಗೆ ಒಗ್ಗುವ ಬರೆವಣಿಗೆಗಳು ವಿಪುಲವಾಗಿ ಬಂದಿರುವುದನ್ನು ಕಾಣಬಹುದು. ಅವುಗಳಲ್ಲಿ ಚ. ವಾಸುದೇವಯ್ಯನವರಿಂದ ರಚಿತವಾದ ಒಂದನೆಯ ಬಾಲಬೋಧೆ ಬಹಳ ಮುಖ್ಯವಾದುದು. ಅದು ಸರಳವಾಗಿ, ಸುಂದರವಾಗಿ ಸರಸವಾಗಿ ಮಕ್ಕಳ ಮನಸ್ಸನ್ನು ರೂಪಿಸಲು ಸಹಕಾರಿಯಾಗಿತ್ತು. ಅದರಲ್ಲಿ ಬರುವ

ಎಲೆ ಬೆಕ್ಕೆ ರೂಪಿನಿಂದಲೆ
ಹುಲಿ ಜಾತಿಗೆ ಸೇರ್ದೆನೆಂದು ಗರ್ವಿಸಬೇಡಾ
ಬಲುಮೆಯು ನಿನ್ನಲ್ಲಿಹ ದೇ
ನಿಲಿಗಳ ಹಿಡಿವುದರೊಳಾಯ್ತು ನಿನ್ನಯ ಶೌರ್ಯಂ

ಎಂಬ ಪದ್ಯ ಅಂದಿನ ಮಕ್ಕಳ ಪದ್ಯಗಳ ಬಗ್ಗೆ ಇದ್ದ ಕಲ್ಪನೆಗೆ ಒಂದು ಸಾಕ್ಷಿ. ಮುಂದೆ ಶ್ರೀನಿವಾಸರಾವ್ ಎಂಬುವರು ತಮ್ಮ ಎರಡನೆ ಬಾಲಬೋಧೆಯಲ್ಲಿ

ಮಿರುಮಿರುಗುವ ಹಾ ಕಿರುತಾರಗೆಯೇ
ಅರಿಯೆನು ನಾನೆಲೆ ನೀನಾರೋ
ಧರೆಗಿಳಿಯದೆ ನೀನಿರುತಿಹೆ ದೂರದಿ
ನೆರೆ ಹೊಳೆಯುವ ವಜ್ರದ ತೆರದಿ

ಎಂಬ ತೆರದ ಸುಲಭ, ರಮ್ಯ ಪದ್ಯಗಳನ್ನು ಮೊದಲ ಬಾರಿಗೆ ಅಚ್ಚುಹಾಕಿ ಹೊಸ ನೋಟಕ್ಕೆ, ಹೊಸ ಅಭಿರುಚಿಗೆ ಕಾರಣರಾದರು.

ಈ ಬಾಲಬೋಧೆಗಳ ಅನಂತರದ ಒಂದನೆಯ ಎರಡನೆಯ ಪುಸ್ತಕಗಳು ನಿಜವಾದ ಅರ್ಥದಲ್ಲಿ ಮೊತ್ತಮೊದಲಿನ ಮಕ್ಕಳ ಪುಸ್ತಕಗಳು. ಅವುಗಳಲ್ಲಿ ಮಕ್ಕಳಿಗೆ ತಿಳಿವಳಿಕೆ ಕೊಡುವ ತಿಳಿಯಾದ ಪಾಠಗಳು, ಪುಟ್ಟ ಪುಟ್ಟ ವಾಕ್ಯಗಳಲ್ಲಿ ರಚನೆಯಾದ ಕಥೆಗಳು, ಮಕ್ಕಳಿಗೆ ಸುಲಭವಾಗಿ ಅರ್ಥವಾಗುವ ಶ್ರಾವ್ಯಗುಣವುಳ್ಳ ಪದ್ಯಗಳು ಬಂದುವು. ಧರಣಿ ಮಂಡಲ ಮಧ್ಯದೊಳಗೆ, ಇಟ್ಟರೆ ಸಗಣಿಯಾದೆ, ನೊಗವೆತ್ತಿನ ಕೊರಳೊಳಿಡುವ ಪಾಡಿಲ್ಲ—ಇತ್ಯಾದಿ ಪದ್ಯಗಳು ಪ್ರಕಟವಾದದ್ದು ಇಲ್ಲಿ. ಈ ರಚನೆಗಳಿಗೆ ಎಂ. ಎಸ್. ಪುಟ್ಟಣ್ಣನವರೂ ಎಸ್. ಜಿ. ನರಸಿಂಹಾಚಾರ್ಯರೂ ಹೊಣೆಗಾರರೆಂದು ತಿಳಿದುಬಂದಿದೆ. ಎಂ. ಎಸ್. ಪುಟ್ಟಣ್ಣನವರ ನೀತಿ ಚಿಂತಾಮಣಿ ಮಕ್ಕಳ ಬಹು ಜನಪ್ರಿಯ ಪುಸ್ತಕ. ಎಸ್. ಜಿ. ನರಸಿಂಹಾಚಾರ್ಯರು ಕಾಳಿದಾಸನ ರಘುವಂಶದಿಂದ ದಿಲೀಪ ಚರಿತ್ರವನ್ನೂ ಅಜ ಮಹಾರಾಜನ ಚರಿತ್ರವನ್ನೂ ಪುಟ್ಟ ಪುಟ್ಟ ಷಟ್ಪದಿಗಳಲ್ಲಿ ಬರೆದಿದ್ದಾರೆ.

ಮೈಸೂರಿನ ಕಡೆ ಈ ಕೆಲಸ ನಡೆದಂತೆ ಧಾರವಾಡದ ಕಡೆ ಶಾಂತಕವಿಗಳು, ವೆಂಕಟ ರಂಗೋ ಕಟ್ಟಿ, ಡೆಪ್ಯುಟಿ ಚೆನ್ನಬಸಪ್ಪ ಇವರೇ ಮೊದಲಾದ ವಿದ್ಯಾಪ್ರೇಮಿಗಳು ತಮ್ಮ ಕ್ರಮಿಕ ಪುಸ್ತಕಗಳಲ್ಲಿ ಮಕ್ಕಳಿಗೆ ಪ್ರಿಯವಾಗುವಂಥ ಗದ್ಯಪದ್ಯಗಳನ್ನು ರಚಿಸಿಕೊಟ್ಟರು. ಹಾಗೆಯೇ ಮದ್ರಾಸಿನ ಕಡೆ ಮ್ಯಾಕ್ಮಿಲನ್ ಅವರ ರೀಡರುಗಳು ಬಂದುವು.

ಅನಂತರ ಬಂದ ಪಂಜೆ ಮಂಗೇಶರಾಯರು ಕನ್ನಡ ಮಕ್ಕಳ ಸಾಹಿತ್ಯ ರಚನೆಯಲ್ಲಿ ಅಗ್ರಸ್ಥಾನದಲ್ಲಿ ನಿಲ್ಲತಕ್ಕವರು. ಮಕ್ಕಳ ಮನಸ್ಸು, ಭಾವನೆ, ಭಾಷೆ, ಅಭಿರುಚಿಗಳನ್ನು ಅವರು ಅರಿತವರು. ಆ ದಿಸೆಯಲ್ಲಿ ಏನು ಕೆಲಸ ಮಾಡಬೇಕು, ಹೇಗೆ ಮಾಡಬೇಕು ಎಂಬುದನ್ನು ಬಲ್ಲವರು. ಅವರ ಈ ಮಕ್ಕಳ ಪ್ರೀತಿ ಮಂಗಳೂರಿನಲ್ಲಿ ಬಾಲಸಾಹಿತ್ಯ ಮಂಡಲವಾಗಿ ಆರಂಭವಾಯಿತು. ಆ ಮಂಡಲದಿಂದ ಬಂದ ಅನೇಕ ಪುಸ್ತಕಗಳು ಕನ್ನಡ ಮಕ್ಕಳ ಕಜ್ಜಾಯಗಳಾದುವು. ನಾಗರ ಹಾವೆ ಹಾವೊಳು ಹೂವೆ ಮೊದಲಾದ ಪದ್ಯಗಳು ಮಕ್ಕಳ ಬಾಯಲ್ಲಿ ನಲಿದವು. ಅಗೋಳಿ ಮಂಜಣ್ಣ, ಮೆಣಸಿನ ಕಾಳಪ್ಪ, ಒಡ್ಡನ ಓಟ, ಇಲಿಗಳ ತಕ್ಕಥೈ, ಗುಡುಗುಡು ಗುಮ್ಮಟ ದೇವರು, ಸಿಗಡಿ ಯಾಕೆ ಒಣಗಲಿಲ್ಲ ಮೊದಲಾದ ಮುದ್ದು ಕತೆಗಳು ಮಕ್ಕಳ ಮನಸ್ಸನ್ನು ತಣಿಸಿ ಕುಣಿಸಿದುವು.

ಹಾಗೆಯೇ ಮಕ್ಕಳ ಮನಸ್ಸನ್ನು ತಣಿಸಿ ಕುಣಿಸಿದ ಇನ್ನೊಂದು ಹೆಸರು ಎಂ. ಎನ್. ಕಾಮತ್ ಅವರದು. ಇವರೂ ಪಂಜೆಯವರಂತೆ ವೃತ್ತಿಯಲ್ಲಿ ಅಧ್ಯಾಪಕರು. ಮಕ್ಕಳ ಜೊತೆಗೆ ಬೆರೆಯುತ್ತಿದ್ದ ಇವರಿಗೆ ಮಕ್ಕಳ ಮನಸ್ಸು ತೆರೆದ ಕನ್ನಡಿ. ಪದ್ಯಕಥೆಗಳಿಗಿಂತ ಇವರು ಬರೆದ ನಾಟಕಗಳು ಇವರ ವಿಶಿಷ್ಟವಾದ ಕೊಡುಗೆಯೆನಿಸಿವೆ.

ಶಿಶುಸಾಹಿತ್ಯದಲ್ಲಿ ಇನ್ನೊಂದು ಪ್ರಿಯವಾದ ಹೆಸರು ಹೊಯಿಸಳರದ್ದು. ಇವರ ಮಗುವಿನ ಕೂಗು ಎಂಬ ಗ್ರಂಥ ಶಿಶುಸಾಹಿತ್ಯದ ಹೊಸತನದ ಕೂಗು. ಬಂದಾ ಬಂದಾ ಸಂತಮ್ಮಣ್ಣ, ಸಂಗೊತ್ತಿಲ್ಲಪ್ಪ—ಮೊದಲಾದ ಕವಿತೆಗಳು ಮಕ್ಕಳ ಮಾಣಿಕ್ಯಗಳಾಗಿವೆ. ಇವರ ಕವಿತೆಗಳಂತೆ ಕಥೆಗಳೂ ಬಲು ಸೊಗಸು. ಹೂವಿನ ಹಾಸಿಗೆ, ಪಚಾಕ್ಷಿ, ಪುಟ್ಟರಸು, ಪೋರಿಗಳಂತೆಯೆ ನಾಟಕಗಳಾದ ಕಳ್ಳ-ಸುಳ್ಳ-ಮಳ್ಳ ವಾತಾಪಿಗಳು ಮಕ್ಕಳ ಮನಸ್ಸನ್ನು ಅಪಹರಿಸಿದುವು.

ಮಕ್ಕಳ ಸಾಹಿತ್ಯವೆಂದರೆ ಜಿ. ಪಿ. ರಾಜರತ್ನಂ. ರಾಜರತ್ನಂ ಅಂದರೆ ಮಕ್ಕಳ ಸಾಹಿತ್ಯ—ಎಂಬ ಹಿರಿಮೆ ರಾಜರತ್ನಂ ಅವರದು. ಎಲ್ಲ ವಯಸ್ಸಿನ ಮಕ್ಕಳಿಗೂ ಅವರ ಕಾಣಿಕೆ ಸಂದಿದೆ ; ಅವರ ಮನಸ್ಸನ್ನು ಸೂರೆಗೊಂಡಿದೆ. ಉತ್ತಮ ಮಕ್ಕಳ ಸಾಹಿತ್ಯ ಹೇಗಿರಬೇಕೆಂಬುದಕ್ಕೆ ಅವರ ಕೃತಿಗಳು ಆದರ್ಶಗಳಾಗಿವೆ. ತುತ್ತೂರಿ, ಕಡಲೆಪುರಿ, ಚುಟುಕ, ಕಲ್ಲುಸಕ್ಕರೆ, ತುಂಟ ಗಣಪತಿ, ಮುದ್ದು ಕೃಷ್ಣ, ರಸಕವಳ, ಕೆನೆಹಾಲು, ಮೆರವಣಿಗೆ, ಪುಟಾಣಿ ಪಂಚತಂತ್ರ, ಭಾಸನ ಭಾರತ—ಮೊದಲಾದ ಅವರ ಕೃತಿಗಳು ಮಕ್ಕಳ ಮನಸ್ಸಿಗೆ ಒಂದು ನಿಧಿ.

ಮಕ್ಕಳ ಸಾಹಿತ್ಯಕ್ಕೆ ಹೊಸ ನಿಲುವು, ಹೊಸ ಧೀಶಕ್ತಿಯನ್ನು ಕೊಟ್ಟ ಧೀಮಂತರು ಶಿವರಾಮ ಕಾರಂತರು. ಅವರ ಬಾಲಪ್ರಪಂಚ ಮಕ್ಕಳ ಮೊದಲ ವಿಶ್ವಕೋಶ. ವೈಜ್ಞಾನಿಕ ವಿಷಯಗಳನ್ನು ಕುರಿತು ಮಕ್ಕಳಿಗಾಗಿ ಪುಟ್ಟ ಪುಸ್ತಕಗಳನ್ನು ಪ್ರಕಟಿಸಬೇಕೆಂದು ಕಾರಂತರ ಇತ್ತೀಚಿನ ಯೋಜನೆ. ಅದ್ಭುತ ಜಗತ್ತು ಎಂಬ ಈ ಪುಸ್ತಕ ಮಾಲೆಯಲ್ಲಿ ವಿಚಿತ್ರ ಖಗೋಳ ಮತ್ತು ನಮ್ಮ ಭೂಖಂಡಗಳು ಎಂಬ ಎರಡು ಹೊತ್ತಿಗೆಗಳು ಪ್ರಕಟವಾಗಿವೆ. ಕಾರಂತರು ಮಕ್ಕಳಿಗಾಗಿ ಢಂ ಢಂ ಡೋಲು ಮೊದಲಾದ ಶಿಶುಗೀತೆಗಳನ್ನೂ ಗಜರಾಜ ಮೊದಲಾದ ಕಥೆಗಳನ್ನೂ ಬರೆದಿದ್ದಾರೆ. ನಾಲ್ಕು ಸಂಪುಟಗಳಲ್ಲಿ ಪ್ರಕಟವಾಗಿರುವ ವಿಜ್ಞಾನ ಪ್ರಪಂಚ ಪ್ರೌಢ ಶಾಲೆಯ ಮಕ್ಕಳಿಗಾಗಿ ಬರೆದುದು, ಇಲ್ಲಿ ವಿಜ್ಞಾನ ವಿಭಾಗಗಳ ಸುರಸವಾದ ನೇರ ವಿಚಾರಗಳಿವೆ. ಕಾರಂತರ ಬಾಲಪ್ರಪಂಚದ ಅನಂತರ ಈಗ ಕರ್ಣಾಟಕ ಸಹಕಾರಿ ಪ್ರಕಾಶನದವರು ಜ್ಞಾನಗಂಗೋತ್ರಿ ಎಂಬ ಮಕ್ಕಳ ವಿಶ್ವಕೋಶ ಯೋಜನೆಯನ್ನು ಮಾಡಿದ್ದಾರೆ. ಅದರ ಮೊದಲನೆಯ ಸಂಪುಟ ಮನುಕುಲದ ಕಥೆ ಈಗ ಹೊರಬಂದಿದೆ (1970). (ನೋಡಿ—ಕನ್ನಡದಲ್ಲಿ ವಿಶ್ವಕೋಶಗಳು)

ರಾಷ್ಟ್ರಕವಿ ಕುವೆಂಪು ಅವರ ಬೊಮ್ಮನಹಳ್ಳಿಯ ಕಿಂದರಿಜೋಗಿ ಮಕ್ಕಳ ಸತತ ಆಕರ್ಷಣೆಯ ಕೃತಿ. ಅವರ ನನ್ನ ಗೋಪಾಲ, ಮೋಡಣ್ಣನ ತಮ್ಮ—ಉತ್ತಮ ಮಕ್ಕಳ ನಾಟಕಗಳು. ನನ್ನ ಮನೆ, ಮರಿವಿಜ್ಞಾನಿ, ಮೇಘಪುರ—ಇವು ಮೂರೂ ಶಿಶುಗೀತೆಗಳ ಸಂಕಲನಗಳು. ಕವಿ ಕುವೆಂಪುರವರು ಮಕ್ಕಳಮನೋಭಾವವನ್ನು ಅರಿತು ಅನುಭವಿಸಿದ ಸೂಕ್ಷ್ಮ ಸ್ಥಿತಿಯನ್ನು ನಾವಿಲ್ಲಿ ಕಾಣುತ್ತೇವೆ.

ಎಲ್. ಗುಂಡಪ್ಪನವರ ಚಟಾಕಿ; ರಾಘವರ ಹೂವಾಡಿಗಿತ್ತಿ ಮತ್ತು ಹಾವಾಡಿಗ; ಕಾವ್ಯಾನಂದರ ತುಪ್ಪಾರೊಟ್ಟಿ ಗೇ ಗೇ ಗೇ ; ಬಿ. ಎ. ಸನದಿಯವರ ಗುಲಾಬಿ ಗೊಂಚಲು, ಗೃಹಪಂಚಮಿ, ಜಿಲೇಬಿ ಝುಣ್ ಝುಣ್; ಪಳಕಳ ಸೀತಾರಾಮಭಟ್ಟರ ಕಂದನ ಕೊಳಲು, ಡೊಂಬನ ಡೋಲು; ತಮ್ಮನ ತಂಬೂರಿ; ದಿನಕರ ದೇಸಾಯಿಯವರ ಮಕ್ಕಳ ಗೀತೆಗಳು, ವಿಜಾಪುರದ ಭಾರತೀ ಸಾಹಿತ್ಯ ಭಂಡಾರದವರು ಕಲೆ ಹಾಕಿದ ಪುಟಚೆಂಡು ; ಬಿ. ರಾಮಚಂದ್ರಭಟ್ಟರ ಶಿಶುವಿಹಾರ ಮತ್ತು ಪುಟ್ಟನ ಪೀಟೀಲು ಮೊದಲಾದ ಕವನ ಸಂಕಲನಗಳು ಮಕ್ಕಳ ಸಾಹಿತ್ಯದ ಕಾವ್ಯಗಂಗೆಯ ಉತ್ತಮ ಕೊಡುಗೆಗಳು.

ದೇವುಡು ಅವರ ಮಂಗಪ್ಪಾಜಿ ಪುರಾಣ, ಬುದ್ಧಿಯ ಕಥೆಗಳು; ಡಿ.ವಿ.ಜಿ. ಅವರ ಇಂದ್ರವಜ್ರ, ಬೆಕ್ಕೋಜಿ; ಬಿ. ಶ್ರೀ. ಪಾಂಡುರಂಗರಾಯರ ತುಂಟರ ಗುರು, ಮುದ್ದು ಸಿಂಗಾರಿ ; ದಾಮೋದರ ಬಾಳಿಗರ ಸೀನಿನ ಶೀನ, ಚಾಡಿಮೈನ, ಅಳಿಲ ಸೇವೆ, ಭಾರತೀಸುತರ ಮರಿಯಾನೆ, ಕಿಲಾಡಿ ಗವುಜಿಗ, ಹುಲಿಗಳ ದಿಬ್ಬಣ, ಸಿಗೋರ; ಎಂ. ಎಸ್. ರಾಮರಾಯರ ಕಾಳಜ್ಜಿಯ ಭೂತರಾಯ, ಬುದ್ಧಿಯ ಕಲಿತನ ಜಂಬಣ್ಣ; ಎಂ. ರಾಮರಾಯರ ಸೋಮಾರಿ ಸಿದ್ದ, ಅನ್ನ ಕೊಡುವ ಹಕ್ಕಿ, ಚಿನ್ನ ಕೊಡುವ ಮರ ; ಮತಿಘಟ್ಟ ಕೃಷ್ಣಮೂರ್ತಿಯವರ ಗುರುವಾಕ್ಯ, ಜಾಣ ಕತ್ತೆ ; ಮಲ್ಲಾರಿಯವರ ಕೆಂಪು ಮೂತಿ ಹಂಪಣ್ಣ, ಚಿಕ್ಕ ಹುಡುಗಿ ಪುಟ್ಟ ತಮ್ಮ ; ಬಿ. ಶಂಕರಭಟ್ಟ ಮತ್ತು ಬಿ. ಎಂ. ಶರ್ಮಾ ಅವರು ಸೇರಿ ಪ್ರಕಟಿಸಿದ ಕಥಾಸಂಗ್ರಹಗಳು ಮಕ್ಕಳ ಪ್ರಿಯವಾದ ಕಥಾಗ್ರಂಥಗಳಾಗಿವೆ.

ಎಂ. ಆರ್. ಶ್ರೀ ಯವರ ಕಂಠೀರವ ವಿಜಯ ; ಹೊಯ್ಸಳರ ಸಮಾಜಸೇವೆ ನಾಲ್ಕು ನಾಟಕ; ಪಾಂಡುರಂಗರಾಯರ ಗುರುವೇ ದೊಡ್ಡವನು, ದೀಪಾವಳಿ ತಾಯಿಯೇ ದೇವರು ; ಮೈಸೂರು ಶಿಶುಸಾಹಿತ್ಯ ಸಂಘದವರು ಪ್ರಕಟಿಸಿರುವ ನಾಟಕಗಳು ಮಕ್ಕಳ ನಾಟಕ ವಿಭಾಗದ ಉತ್ತಮ ನಾಟಕಗಳು.

ನಾ. ಕಸ್ತೂರಿಯವರ ಪಾತಾಳದಲ್ಲಿ ಪಾಪಚ್ಚಿ ; ಮೂರ್ತಿರಾಯರ ಹವಳದ ದ್ವೀಪ; ಅಡಿಗರ ಭೂಗರ್ಭಯಾತ್ರೆ, ಸುವರ್ಣಕೀಟ ; ರಾಜರತ್ನಂ ಅವರ ಆಲಿವರ್ ಟ್ವಿಸ್ಟ್ ; ಆನಂದರ ಸಿರಿದ್ವೀಪ, ಪುರುಷಾಮೃಗ ; ಡಿ. ವಿ. ಶೇಷಗಿರಿರಾಯರ ಐಲುವೀರನ ಸಾಹಸ; ಬಿ. ಎಸ್. ರುಕ್ಕಮ್ಮನವರ ಶಾಲೆಯ ಮಕ್ಕಳು ಉತ್ತಮ ಅನುವಾದಗಳು.

ಎಂ. ಎನ್. ಕಾಮತರ ಸೀತಾರಾಮು ; ಭಾಗೋಜಿಯವರ ಕನ್ನಡ ಕಥಾವಳಿ ; ಕೆ. ಗುಂಡಪ್ಪನವರ ಚಿತ್ತೂರ ಪದ್ಮಿನಿ ; ನಾಗೇಶನ ಕಿತ್ತೂರ ಚೆನ್ನಮ್ಮ ರಾಣಿ; ದೇ.ಜ.ಗೌ.ರವರ ಮೆಡಾಂ ಕ್ಯೂರಿ ಮತ್ತು ಕುಮಾರ ರಾಮನನ್ನು ಕುರಿತ ಪುಸ್ತಕಗಳು ಉತ್ತಮ ಮಕ್ಕಳ ಐತಿಹಾಸಿಕ ಚಿತ್ರಗಳು. ತಮ್ಮ ಉತ್ತಮ ಕಥಾವಸ್ತುವಿನಿಂದ, ಅದರ ಉತ್ತಮ ನಿರೂಪಣೆಯಿಂದ ಮಕ್ಕಳ ಮನಸ್ಸನ್ನು ಸೆಳೆಯುವ ಉತ್ತಮ ಗ್ರಂಥಗಳಲ್ಲಿ ಒಂದು ಎಲ್. ಜಿ. ವಿಮಲರವರ ತುಂಟರ ತೇರು; ಇನ್ನೊಂದು ಪ. ವಿ. ಚಂದ್ರಶೇಖರ ಅವರ ಚಿನ್ನದ ಗರಿಗಳು.

ವಿಜ್ಞಾನವನ್ನು ಸರಳವಾಗಿ, ಸುಂದರವಾಗಿ, ಕಥಾರೂಪದಲ್ಲಿ ಮಕ್ಕಳಿಗೆ ಹೇಳುವ ಒಂದು ಶ್ಲಾಘನೀಯ ಪ್ರಯತ್ನ ಕನ್ನಡದಲ್ಲಿ ನಡೆಯುತ್ತಿದೆ. ಆ ಮಾಲೆಯಲ್ಲಿ ಬಿ. ಎಸ್. ರುಕ್ಕಮ್ಮನವರ ಕೀಟಗಳ ಒಡನಾಡಿ ಫೇಬರ್; ಪ. ವಿ. ಚಂದ್ರಶೇಖರ ಅವರ ಇರುವೆಯ ಕಥೆ; ಎನ್. ಪ್ರಹ್ಲಾದರಾಯರ ಮಿಂಚುಳ್ಳಿ, ಪದ್ಮಾ ನಾಡಿಗರ ಗಡಿಯಾರದ ಕಥೆ ಅಪೂರ್ವ ಪ್ರಯೋಗಗಳು.

ದೇ. ಜ. ಗೌ.ರವರ ಋಷಿಕವಿ ರವೀಂದ್ರರು, ಆಲ್‌ಬರ್ಟ್ ಐನ್‌ಸ್ಟೀನ್, ಗೋಪಾಲ ಕೃಷ್ಣ ಗೋಖಲೆ, ಬಿ. ಎಸ್. ರುಕ್ಕಮ್ಮನವರ ಮೇರಿಕ್ಯೂರಿ; ಸುಬೋಧ ರಾಮರಾಯರು, ಪಂ. ಕವಲಿಯವರು ಪ್ರಕಟಿಸಿದ ಮಹಾ ಪುರುಷ ಚರಿತ್ರೆಗಳು ಮಕ್ಕಳು ಮನಸ್ಸನ್ನು ಕಟ್ಟುವುದರಲ್ಲಿ ಅಪೂರ್ವ ಗ್ರಂಥಗಳು.

ಎ.ಆರ್.ಕೃ. ಅವರ ನಿರ್ಮಲ ಭಾರತೀ ಮಹಾಭಾರತದ ಕಥೆಯನ್ನು ಸೊಗಸಾಗಿ ಹೇಳಿರುವ ಅತ್ಯುತ್ತಮ ಸಚಿತ್ರ ಗ್ರಂಥ. ಅದೇ ರೀತಿಯಲ್ಲಿ ರಾಮಾಯಣ, ಮಹಾಭಾರತ, ಭಾಗವತಗಳೂ ಅನೇಕ ಜನರಿಂದ ಮಕ್ಕಳಿಗೆ ಬಂದಿವೆ.

ಮಕ್ಕಳ ಸಾಹಿತ್ಯರಚನೆಯಲ್ಲಿ ಇತ್ತೀಚಿನ ಪ್ರಮುಖಸಾಧನೆ ಎಂದರೆ ಮಕ್ಕಳಿಂದಲೇ ಪ್ರೇರಿತವಾಗಿ ಬಂದಿರುವ ಪುಸ್ತಿಕೆಗಳು. ಅವು ಬಿ. ಎಸ್. ರುಕ್ಕಮ್ಮನವರ ಪಾಪು ಅಮ್ಮನಿಗೆ ಹೇಳಿದ ಕಥೆಗಳು ; ಶ್ರೀಲತಾ ರಾಜರತ್ನಂ ಅವರ ನನ್ನ ಮುದ್ದುರಾಯಿಕ ; ಅಜಿತಕುಮಾರಿ ಮಿರ್ಜಿ ಅವರ ಕಾರಂಜಿ. ಪಾಪು ಅಮ್ಮನಿಗೆ ಹೇಳಿದ ಕಥೆಗಳಲ್ಲಿ ಮೂರು ವರ್ಷದ ಪುಟಾಣಿ ದೀಪಿಕಾಳ ಮನಸ್ಸು—ಮಾತು—ಹರಟೆ—ವಿನೋದ ತಾಯಿ ಬಿ. ಎಸ್. ರುಕ್ಕಮ್ಮನವರಿಂದ ಸಾರಭೂತವಾಗಿ ರಸವತ್ತಾಗಿ ಸಂಗ್ರಹಿತವಾಗಿದೆ. ಶಾಲೆಗೆ ಹೋಗುವ ಶ್ರೀಲತಾಳ ಬರವಣಿಗೆ ತಂದೆ ರಾಜರತ್ನಂ ಅವರಿಂದ ಪ್ರೋತ್ಸಾಹಿತವಾಗಿ ಪ್ರಕಾಶಿತವಾಗಿದೆ. ಬಾಲಕ ಅಜಿತ್‌ಕುಮಾರ ಮಿರ್ಜಿಯ ಮನಸ್ಸಿನ ಕಾರಂಜಿ ಹತ್ತು ಕವನಗಳಾಗಿ ಹೊರಹೊಮ್ಮಿ ತಂದೆ ಮಿರ್ಜಿ ಅಣ್ಣಾರಾಯರಿಗೆ ಪ್ರಿಯವಾಗಿದೆ. ಈ ಮೂವರು ಹಿರಿಯರು ಕಿರಿಯರೆಡೆಗೆ ಕೊಟ್ಟ ಲಕ್ಷ್ಯ, ಅಭಿಮಾನ, ಪ್ರೋತ್ಸಾಹ ಅಭಿನಂದನೀಯ. ಪ್ರತಿಯೊಂದು ಮನೆಯ ಹಿರಿಯರೂ ಈ ರೀತಿ ಗಮನ ಕೊಟ್ಟರೆ ಮಕ್ಕಳ ಸಾಹಿತ್ಯಕ್ಕೆ ಅಪೂರ್ವ ಶೋಭೆ ಬರುವುದರಲ್ಲಿ ಸಂಶಯವಿಲ್ಲ.

ಮಕ್ಕಳ ಸಾಹಿತ್ಯ ರಚನೆಯಲ್ಲಿ ಪತ್ರಿಕೆಗಳ ಪಾತ್ರ ಅಪೂರ್ವ. ಮಕ್ಕಳಿಗಾಗಿಯೆ ಪ್ರಕಟವಾದ ಅಶ್ವತ್ಥನಾರಾಯಣರ ಮಕ್ಕಳ ಪುಸ್ತಕ ಎಂಬ ಸಚಿತ್ರ ಮಾಸಪತ್ರಿಕೆ ಮಕ್ಕಳ ಸಾಹಿತ್ಯ ರಚನೆಯಲ್ಲೇ ಒಂದು ಮೈಲಿಗಲ್ಲು. ದ. ಕೃ. ಭಾರದ್ವಾಜರೂ ದೇವುಡು ಅವರೂ ಈ ಪತ್ರಿಕೆಯ ಸಂಪಾದಕರಾಗಿ ಶ್ರಮಿಸಿದರು. ಮಕ್ಕಳ ಪುಸ್ತಕವನ್ನು ಬಿಟ್ಟಮೇಲೆ ದೇವುಡು ಅವರು ನಮ್ಮ ಪತ್ರಿಕೆ ಎಂಬ ಮಾಸಪತ್ರಿಕೆ ನಡೆಸಿದರು. ಇದರಂತೆಯೇ ಹೊಯ್ಸಳರು ಕನಕ ಎಂಬ ಮಾಸಪತ್ರಿಕೆ ನಡೆಸಲು ಪ್ರಯತ್ನಿಸಿದರು. ಮೈಸೂರಿನ ಚಿಲ್ಡ್ರನ್ಸ್ ಬುಕ್ ಕೌನ್ಸಿಲ್‌ನವರು ಪ್ರಕಟಿಸಿದ ಕಂದ ಎಂಬ ಮಾಸಪತ್ರಿಕೆ ಕೆಲವರ್ಷ ಬಹು ಚೆನ್ನಾಗಿ ನಡೆಯಿತು. ಮಕ್ಕಳಿಗಾಗಿಯೇ ಬಣ್ಣಬಣ್ಣಗಳಲ್ಲಿ ಚಂದಮಾಮ, ಬಾಲಮಿತ್ರ ಪತ್ರಿಕೆಗಳು ಬರುತ್ತಿವೆ. ಪ್ರತಿ ಪತ್ರಿಕೆಯೂ ಮಕ್ಕಳಿಗಾಗಿ ನಿರ್ದಿಷ್ಟವಾದ ಜಾಗವನ್ನು ಕಾಯ್ದಿರಿಸಿ ಮಕ್ಕಳ ಸಾಹಿತ್ಯರಚನೆಗೆ ಪ್ರೋತ್ಸಾಹ ಕೊಡುತ್ತಿದೆ.

ಪತ್ರಿಕೆಗಳ ಹಾಗೆ ಪ್ರಕಾಶಕರೂ ಮಕ್ಕಳ ಸಾಹಿತ್ಯದ ಕಡೆಗೆ ಗಮನ ಹರಿಸಿದ್ದಾರೆ. ಅನೇಕ ಸಂಸ್ಥೆಗಳು ಬಣ್ಣಬಣ್ಣಗಳಲ್ಲಿ ಸಚಿತ್ರವಾಗಿ ಮಕ್ಕಳ ಪುಸ್ತಕಗಳನ್ನು ತರುತ್ತಿದ್ದಾರೆ. ಕಾವ್ಯಾಲಯ, ಮೋಹನ ಪ್ರಕಾಶನ, ಇಂಡಿಯ ಬುಕ್ ಹೌಸ್, ನ್ಯಾಷನಲ್ ಬುಕ್ ಟ್ರಸ್ಟ್, ಭಾರತೀ ಪ್ರಕಾಶನ, ಸತ್ಯಶೋಧನ ಪ್ರಕಟನಾಲಯ—ಮೊದಲಾದವು ಈ ಕ್ಷೇತ್ರದಲ್ಲಿ ಗಣನೀಯ ಕೆಲಸ ಮಾಡಿವೆ. ಒಟ್ಟನಲ್ಲಿ ಮಕ್ಕಳ ಸಾಹಿತ್ಯ ಭರದಿಂದ ಬೆಳೆಯುತ್ತಿದೆ. ಲೇಖಕರು ಹಿರಿಯರ ಸೇವೆಯಲ್ಲಿ ಸಣ್ಣ ಮಕ್ಕಳನ್ನು ಮರೆತಿಲ್ಲ. ಅವರಿಗೆ ಬೇಕಾದ, ಚಿತ್ರಗಳಿಂದ ಕೂಡಿದ, ಮುದ್ದಾದ ಶೈಲಿಯಲ್ಲಿ ಬರೆದಿರುವ, ಸಾಹಸ ಕಥೆಗಳು, ಆಶ್ಚರ್ಯ ಕಥೆಗಳು ದೇಶ ಸಂಚಾರಗಳು, ಸಮುದ್ರಯಾನಗಳು, ಪ್ರಕೃತಿಶಾಸ್ತ್ರದ ಅದ್ಭುತ ನಿರ್ಮಾಣಗಳು, ಭರತಖಂಡದ ಪೂರ್ವಚರಿತ್ರೆಯ ಸಾರಾಂಶಗಳು, ವೀರರ ನೈಜವೃತ್ತಾಂತಗಳು, ಮಕ್ಕಳ ಮುದ್ದು ಮಾತುಕತೆಗಳು, ಹಾಡುಪಾಡುಗಳು—ಹುಲುಸಾಗಿ ಹೊಮ್ಮುತ್ತಿವೆ. ಕನ್ನಡ ಸಾಹಿತ್ಯವೃಕ್ಷದಲ್ಲಿ ಮಕ್ಕಳ ಸಾಹಿತ್ಯ ಚಿಗುರು, ಹೂವಿನಂತೆ ಕಂಗೊಳಿಸುತ್ತಿದೆ. (ಪಿ.ವಿ.ಸಿ.)

**ಕನ್ನಡದಲ್ಲಿ ರುದ್ರನಾಟಕ :** ಪಾಶ್ಚಾತ್ಯ ಸಾಹಿತ್ಯದಲ್ಲಿಯ ಟ್ರಾಜಿಡಿ ಎಂಬ ನಾಟಕ ಪ್ರಕಾರಕ್ಕೆ ಕನ್ನಡದಲ್ಲಿ ರುದ್ರನಾಟಕ ಎಂಬುದು ರೂಢಿಯ ಹೆಸರು ; ಪರ್ಯಾಯವಾಗಿ ದುರಂತನಾಟಕ, ದುಃಖಾಂತ ನಾಟಕ, ವಿಷಾದಾಂತ ನಾಟಕ, ಗಂಭೀರ ನಾಟಕ, ಆವಿದ್ಧ ನಾಟಕ—ಎಂದೂ ಹೇಳುವುದುಂಟು. ನಾಯಕನ ಅಥವಾ ನಾಯಕನನ್ನೂ ಒಳಗೊಂಡು ಕೆಲವರ ಸಾವುನೋವುಗಳಿಂದ ನಾಟಕ ಮುಗಿಯುವುದು ಇದರ ಸಾಮಾನ್ಯ ಲಕ್ಷಣ. ಗ್ರೀಕ್ ಸಾಹಿತ್ಯದಲ್ಲಿ ಇದು ಆರಂಭವಾಯಿತು. ಡೈಯೊನಿಸಸ್ ದೇವತೆಯ ಮಹಿಮೆಗಳನ್ನೂ ಉಪಕಾರಗಳನ್ನೂ ಕುರಿತು ವಸಂತ ಜಾತ್ರೆಯಲ್ಲಿ ಭಕ್ತರ ಮೇಳವೊಂದು ಹಾಡುತ್ತಿದ್ದ ಡಿಥಿರ್‍ಯಾಂಬ್ ಸ್ತೋತ್ರಗೀತ ರುದ್ರನಾಟಕದ ಮೂಲವಾಗಿರಬೇಕೆಂದು ಭಾವಿಸಲಾಗಿದೆ. ಡೈಯೊನಿಸಸ್‌ಗೆ ಹಲವು ರೀತಿಯಲ್ಲಿ ಸಾದೃಶ್ಯವುಳ್ಳ, ರುದ್ರಭೂಮಿಗೆ ಅಧಿನಾಯಕನಾದ, ಆದರೂ ಮಂಗಳದಾಯಕನಾಗಿ ಭವರೋಗಕ್ಕೆ ಭಿಷಜನಾದ, ನಾಟ್ಯನಾಟಕಪ್ರದರ್ಶಕನಾದ ರುದ್ರನ ಹೆಸರಿಂದ ತಮ್ಮ ನಾಟಕಗಳಿಗೆ ರುದ್ರನಾಟಕ ಎಂದು ಹೆಸರು ಕೊಟ್ಟವರು ಶ್ರೀ (ಬಿ. ಎಂ. ಶ್ರೀಕಂಠಯ್ಯ) ಅವರು.



ಬಿ. ಎಂ. ಶ್ರೀಕಂಠಯ್ಯ

ಷೇಕ್ಸ್‌ಪಿಯರ್ ಕವಿಯ ಕೆಲವು ರುದ್ರನಾಟಕಗಳ ರೂಪಾಂತರ ಭಾಷಾಂತರಗಳ ಮೂಲಕವಾಗಿ 19ನೆಯ ಶತಾಬ್ದದ ಕೊನೆಯ ದಶಕದಿಂದ ಕನ್ನಡದಲ್ಲಿ ರುದ್ರನಾಟಕಗಳ ರಚನೆ ಆರಂಭವಾಯಿತು. ಗುಂಡೋ ಕೃಷ್ಣ ಚುರಮುರಿಯವರ ರಾಘವೇಂದ್ರರಾವ್ ನಾಟಕ (1885) ಮತ್ತು ಬಸವಪ್ಪಶಾಸ್ತ್ರಿಗಳ ಶೂರಸೇನ ಚರಿತ್ರೆ (1895) ಇವು ಒಥೆಲೋ ನಾಟಕದ ; ಎ. ಆನಂದರಾಯರ ರಾಮವರ್ಮ ಲೀಲಾವತಿ ಚರಿತ್ರೆ (1889) ಮತ್ತು ಹ್ಯಾಮ್ಲೆಟ್ (1905) ಇವು ರೋಮಿಯೋ ಅಂಡ್ ಜೂಲಿಯೆಟ್ ಮತ್ತು ಹ್ಯಾಮ್ಲೆಟ್ ನಾಟಕಗಳ ; ಎಂ. ಎಲ್. ಶ್ರೀಕಂಠೇಶ ಗೌಡರ ಪ್ರತಾಪರುದ್ರದೇವ (1895) ಮ್ಯಾಕ್ಬೆತ್ ನಾಟಕದ ; ಎಂ. ಎಸ್. ಪುಟ್ಟಣ್ಣನವರ ಹೇಮಚಂದ್ರರಾಜವಿಲಾಸ (1899) ಕಿಂಗ್ ಲಿಯರ್ ನಾಟಕದ ಅನುವಾದಗಳಾಗಿದ್ದು ಇಂಥವು ಸಾಮಾನ್ಯ ಪ್ರೇಕ್ಷಕರಿಗಾಗಿ ರಂಗಸ್ಥಲದ ಪ್ರಯೋಗಗಳೆಂದು ಸಿದ್ಧವಾದವಾಗಿವೆ. ಭಾರತೀಯ ವಾತಾವರಣಕ್ಕೆ ಸಹಜವಾಗಿರಲೆಂದು ನಾಟಕದ ಹೆಸರು ಪಾತ್ರವರ್ಗ ಮುಖ್ಯಾಯ ಮುಂತಾದವುಗಳಲ್ಲಿ ಸ್ವಾತಂತ್ರ್ಯ ವಹಿಸಿದ್ದರಿಂದಾಗಿ ಇವು ಮೂಲನಿಷ್ಠೆಯ ಅನುವಾದಗಳಾಗಿಲ್ಲ. ಭಾರತೀಯ ಆಚಾರವಿಚಾರಗಳಿಗೆ ವಿಪರೀತವಾದ ಸಂದರ್ಭಸನ್ನಿವೇಶಗಳೂ ಭಾಷಾವ್ಯಾಕರಣ ಶೈಥಿಲ್ಯಗಳೂ ಇರುವುದರಿಂದ ಇವು ಮೂಲಕೃತಿಗಳ ಘನತೆಯನ್ನೂ ಸ್ವಾರಸ್ಯವನ್ನೂ ಬಲುಮಟ್ಟಿಗೆ ಕುಗ್ಗಿಸಿವೆ.

20ನೆಯ ಶತಕದ ಪೂರ್ವಾರ್ಧದಿಂದ ಪೌರಾಣಿಕ, ಐತಿಹಾಸಿಕ ಮತ್ತು ಸಾಮಾಜಿಕ ನಾಟಕ ಪ್ರಕಾರಗಳಲ್ಲಿ ಮೂಲನಿಷ್ಠೆಯ ಅನುವಾದಗಳೂ ಸ್ವತಂತ್ರ ರಚನೆಗಳೂ ಮೊದಲಾದುವು. ಪ್ರತಿಭಾವಂತ ಐತಿಹಾಸಿಕ ನಾಟಕಕಾರರಾದ ಸಂಸರ ಸುಗುಣಗಂಭೀರ 1921–22ರಲ್ಲಿ ರಚಿತವಾಗಿ 1923ರಲ್ಲಿ ಅಭಿನಯವಾದಂತೆ ತಿಳಿದುಬಂದಿರುವುದನ್ನೂ ಅವರ ವಿಗಡ ವಿಕ್ರಮರಾಯ ಮೊದಲ ಬಾರಿಗೆ 1925ರಲ್ಲಿ ಪ್ರಕಟವಾದದ್ದನ್ನೂ ಗಮನಿಸಿ ಸಂಸರು ಕನ್ನಡದಲ್ಲಿ ಸ್ವತಂತ್ರ ರುದ್ರನಾಟಕಗಳ ಆದ್ಯ ಪ್ರವರ್ತಕರೆಂದು ಹೇಳಬಹುದು. ಆದರೆ ಶ್ರೀ ಅವರು ಗ್ರೀಕ್ ಸಂಪ್ರದಾಯದ ತಮ್ಮ ರುದ್ರನಾಟಕಗಳ ಮೂಲಕವಾಗಿ ಕನ್ನಡದಲ್ಲಿ ಪೌರಾಣಿಕ ಮತ್ತು ಅನುವಾದಿತ

ರುದ್ರನಾಟಕಗಳ ರಚನೆಗೆ ಹೆದ್ದಾರಿಯನ್ನು ಹಾಕಿದರು. ಶ್ರೀ ಅವರ ಗದಾಯುದ್ಧ ನಾಟಕಂ (1926) ರನ್ನಕವಿಯ ಗದಾಯುದ್ಧವನ್ನು ಸಂಪಾದ ಸಂದರ್ಭಾದಿಗಳಿಗೆ ತಕ್ಕ ಅಲ್ಪವ್ಯತ್ಯಾಸಗಳೊಡನೆ, ಸೇರ್ಪಡೆಗಳೊಡನೆ ನಾಟಕ ರೂಪದಲ್ಲಿ ಅಳವಡಿಸಿದ ಗ್ರೀಕ್ ರುದ್ರನಾಟಕ ಪದ್ಧತಿಯ ಕೃತಿಯಾಗಿದೆ. ಅಶ್ವತ್ಥಾಮನ್ (1929) ಸೋಫಕ್ಲೀಸನ ಏಜಾಕ್ಸ್ ನಾಟಕದ ರೂಪಾಂತರವಾಗಿದ್ದು, ಇಲ್ಲಿ ಗ್ರೀಕ್ ಮತ್ತು ಮಹಾಭಾರತ ಮೂಲಗಳ ಉತ್ತಮಾಂಶಗಳನ್ನೊಳಗೊಂಡು ಕಥೆ ಸನ್ನಿವೇಶ ಪಾತ್ರ ಸಂವಿಧಾನಾದಿಗಳು ಹೊಸ ಹುಟ್ಟು ಪಡೆದಿವೆ. ಕಥಾಸಮನ್ವಯದಲ್ಲಿ ಮಾಡಿರುವ ಮಾರ್ಪಾಡುಗಳು ಭಾರತೀಯ ಸಂಸ್ಕೃತಿಯ ದೃಷ್ಟಿಯಿಂದಲೂ ಕಲಾದೃಷ್ಟಿಯಿಂದಲೂ ಅಷ್ಟು ಉಚಿತವಾಗಲಿಲ್ಲವೆಂಬ ಆಕ್ಷೇಪಣೆಯಿದ್ದೂ ಅಶ್ವತ್ಥಾಮನ್ ಕನ್ನಡದಲ್ಲಿ ಒಂದು ಉತ್ಕೃಷ್ಟ ಕೃತಿಯೆನ್ನಿಸಿದೆ. ಈಸ್ಕಿಲಸ್ ಕವಿಯ ಪರ್ಸೆ ನಾಟಕದ ಸರಳ ಭಾವಾನುವಾದವಾದ ಪಾರಸಿಕರು (1935) ಕನ್ನಡದಲ್ಲಿ ಮೂಲನಿಷ್ಠೆಯ ಅನುವಾದಗಳಲ್ಲಿ ಮೊದಲನೆಯದು.

ಶ್ರೀ ಅವರ ನಾಟಕ ರಚನೆ, ಮಾರ್ಗದರ್ಶನ ಮತ್ತಿನ ನಾಟಕಾನುವಾದಗಳಿಗೆ ಪ್ರೇರಕವಾಯಿತು. ಭಾಷೆ ಛಂದಸ್ಸುಗಳಲ್ಲಿ ಶ್ರೀ ಅವರ ಮೇಲ್ಪಂಕ್ತಿಯನ್ನನುಸರಿಸಿ ಕ. ವೆಂ. ರಾಘವಾಚಾರ್ಯರು ಗ್ರೀಕ್ ಮೂಲದಿಂದ ಸೋಫಕ್ಲೀಸ್ ಕವಿಯ ಅಂತಿಗೊನೆ (1938) ಮತ್ತು ಈಡಿಪಸ್ ದೊರೆ (1965) ನಾಟಕಗಳನ್ನೂ ಈಸ್ಕಿಲಸ್ ಕವಿಯ ಆಗಮೆಮ್ನಾನ್ (1965) ನಾಟಕವನ್ನೂ ಅನುವಾದಿಸಿದ್ದಾರೆ. ಇವು ಖಚಿತವಾದ ನಿಷ್ಠಾನುವಾದಗಳು. ಈ ಇಬ್ಬರ ಮೇಲ್ಪಂಕ್ತಿಯಲ್ಲಿ ಇಂಗ್ಲಿಷ್ ಅನುವಾದಗಳ ಮೂಲಕವಾಗಿ ಟ್ರಾಕಿಯ ಪೆಣ್ಗಳ್ (1960), ಏಜಾಕ್ಸ್ (1961), ಬದ್ಧ ಪ್ರಮೀತ್ಯೂಸ್ (1962), ಮೀಡಿಯಾ (1965)—ಇವೂ ಕನ್ನಡಿಸಲ್ಪಟ್ಟಿವೆ. ಷೇಕ್ಸ್‌ಪಿಯರ್ ಕವಿಯ ರುದ್ರನಾಟಕದಲ್ಲಿ ಡಿ. ವಿ. ಗುಂಡಪ್ಪನವರ ಮ್ಯಾಕ್ಬೆತ್ (1936) ಮೊಟ್ಟಮೊದಲ ಯಥಾನುವಾದವಾಗಿದೆ. ಹ್ಯಾಮ್ಲೆಟ್ (1958) ಮತ್ತು ಲಿಯರ್ ಮಹಾರಾಜ (1959) ಇವು ಶ್ರೀನಿವಾಸರ ಅನುವಾದಗಳು. ಇವಲ್ಲದೆ ಅನ್ಯಭಾಷಾಸಾಹಿತ್ಯಗಳ ಆಧುನಿಕ ರುದ್ರನಾಟಕಗಳೂ ಕನ್ನಡಿಸಲ್ಪಟ್ಟಿವೆ. ಪ್ರಧಾನವಾಗಿ ಎಸ್. ಜಿ. ಶಾಸ್ತ್ರಿಗಳು ಇಂಗ್ಲಿಷ್ ಅನುವಾದಗಳ ಮೂಲಕವಾಗಿ ಕನ್ನಡಿಸಿರುವ ಹೆನ್ರಿಕ್ ಇಬ್ಸನ್ನಿನ ಹೆಲ್ಗೆಲಂಡಿನ ವೀರರು (ಆರ್ಯಕ) ಮತ್ತು ಸೂತ್ರದ ಬೊಂಬೆ (1936) ಲಾರೆನ್ಸ್ ಹೌಸ್‌ಮನ್ನಿನ ಸೋಕ್ರಟೀಸನ ಮರಣ (1930) ಮತ್ತು ಮಾರಿಸ್ ಮೆಟರ್‌ಲಿಂಕನ ಮೊನ್ನವನ್ನ (1952) ಇವನ್ನು ಉದಾಹರಿಸಬಹುದು.

ರಾಮಾಯಣ ಭಾರತಾದಿಗಳಲ್ಲಿಯ ದುರಂತ ವಸ್ತುವಿನ್ಯಾಸದ ಆಖ್ಯಾನೋಪಾಖ್ಯಾನಗಳು ಸ್ವತಂತ್ರ ರುದ್ರನಾಟಕಗಳ ರಚನೆಗೆ ಆಕರಗಳಾಗಿವೆ. ಯುದ್ಧದ ದುರಂತ ದುಷ್ಪರಿಣಾಮಗಳನ್ನು ಚಿತ್ರಿಸಿರುವ ಕುವೆಂಪು ಅವರ ಶ್ಮಶಾನ ಕುರುಕ್ಷೇತ್ರಂ (1931) ಮತ್ತು ಏಕಲವ್ಯನ ಕಥಾಭಿತ್ತಿಯಲ್ಲಿ ದ್ರೋಣರ ಬದುಕಿನ ದುರಂತವನ್ನು ರೂಪಿಸಿರುವ ಬೆರಳ್‌ಗೆ ಕೊರಳ್ (1947)–ಇವುಪ್ರಭಾವಶಾಲಿ ಸ್ವತಂತ್ರ ನಾಟಕಗಳಾಗಿವೆ. ಮೂಲಭಾರತ ಕಥಾನುಸಾರವಾಗಿ ಅಶ್ವತ್ಥಾಮನ ಬದುಕಿನ ದುರಂತವನ್ನು ಚಿತ್ರಿಸಿರುವ ವಿ.ಸೀ. ಅವರ ಅಗ್ರಹ (1931) ಮತ್ತು ದೇಶೀಯ ನಾಟಕದಲ್ಲಿ ವಿದೇಶೀಯವಾದ ಮೇಳವನ್ನು ಅಳವಡಿಸಿರುವ ಎಂ. ಗೋವಿಂದ ಪೈಗಳ ಹೆಬ್ಬೆರಳು (1946) ಮೂಲಕೃತಿಯ ದುರಂತವಸ್ತುವಿನ್ಯಾಸಕ್ಕೆ ಹೆಚ್ಚು ಹತ್ತಿರವಾಗಿವೆ. ಸಿ. ಕೆ. ವೆಂಕಟರಾಮಯ್ಯನವರ ಮಂಡೋದರಿ (1931) ಮತ್ತು ಟಿ. ಪಿ. ಕೈಲಾಸಂ ಅವರ ಕೀಚಕ (1948) ದುರಂತ ಲಕ್ಷಣದ ವ್ಯಕ್ತಿಗಳ ಚರಿತೆಯನ್ನು ಕಲಾದೃಷ್ಟಿಯಿಂದ ಉದಾತ್ತೀಕರಿಸಿರುವಂಥವು.

ಗತಕಾಲದ ಐತಿಹಾಸಿಕ ಘಟನಾವಳಿಗಳಲ್ಲಿ ದುರಂತ ಪರಿಣಾಮದ ಸಂದರ್ಭಗಳನ್ನೂ ವ್ಯಕ್ತಿಗಳನ್ನೂ ಆಶ್ರಯಿಸಿ ರಚಿಸಿದ ಸ್ವತಂತ್ರ ರುದ್ರನಾಟಕಗಳಲ್ಲಿ ಕೆಲವನ್ನು ನಿದರ್ಶಿಸಬಹುದು. ಮೈಸೂರು ರಾಜಮನೆತನದ ಘಟನೆಗಳನ್ನೂ ವ್ಯಕ್ತಿಗಳನ್ನೂ ಕುರಿತಿರುವ ಸಂಸರ ವಿಗಡ ವಿಕ್ರಮರಾಯ (1925–26), ಸುಗುಣ ಗಂಭೀರ (1933) ಮತ್ತು ಬೆಟ್ಟದ ಅರಸು (1952) ನಾಟಕಗಳ ಐತಿಹಾಸಿಕ ವಸ್ತುನಿರೂಪಣೆಯೂ ಗದ್ಯಶೈಲಿಯೂ ವಿಶಿಷ್ಟವಾದುದು. ಶ್ರೀನಿವಾಸರ ತಾಳಿಕೋಟೆ (1929) ವಿಜಯನಗರದ ಪತನ ಸಂದರ್ಭದ ದುರಂತವನ್ನು ವಿಸ್ತರಿಸಿದ್ದಾಗಿದೆ. ಪರ್ಷಿಯನ್ ಸಾಹಿತ್ಯದ ಕಥಾವಸ್ತುವುಳ್ಳ ವಿ.ಸೀ. ಅವರ ಸೊಹ್ರಾಬ್ ಮತ್ತು ರುಸ್ತುಂ (1930) ವಿಧಿಲೀಲೆಯನ್ನು ನಿರೂಪಿಸುತ್ತದೆ. ಬಿದನೂರು ಸಂಸ್ಥಾನದ ಪಾಳೆಯಪಟ್ಟಿನ ಕಥೆಯಾದ ಕುವೆಂಪು ಅವರ ರಕ್ತಾಕ್ಷಿ (1932) ಪಾತ್ರರಚನೆ ವಸ್ತುವಿನ್ಯಾಸಾದಿಗಳಲ್ಲಿ ಷೇಕ್ಸ್‌ಪಿಯರ್‌ನ ಹ್ಯಾಮ್ಲೆಟ್ ರುದ್ರನಾಟಕದ ಮಾದರಿಯಲ್ಲಿದೆ. ಎಂ. ಆರ್. ಶ್ರೀನಿವಾಸಮೂರ್ತಿಯವರ ಧರ್ಮದುರಂತ (1947) ಟಿಪ್ಪುಸುಲ್ತಾನನ ಕಾಲದ ಐತಿಹಾಸಿಕ ಘಟನೆಯನ್ನು ದುರಂತಕಥೆಯನ್ನಾಗಿ ಪರಿವರ್ತಿಸಿದ್ದಾಗಿದೆ. ಗಿರೀಶ ಕಾರ್ನಾಡರ ತುಘಲಕ್ (1964) ಆ ದೊರೆಯ ವಿಚಿತ್ರ ಮನಃಸ್ಥಿತಿಯ ಕ್ಷೋಭೆಯನ್ನೂ ಪರಿಣಾಮವನ್ನೂ ಚಿತ್ರಿಸುತ್ತದೆ.

ತತ್ಕಾಲೀನ ಸಮಾಜ ಜೀವನವನ್ನು ಒಳಹೊಕ್ಕು ನೋಡಿ ಸಮಾಜದ ಲೋಪದೋಷಗಳನ್ನೂ ಪ್ರತಿಗಾಮಿಯೂ ವಿನಾಶಕಾರಿಯೂ ಆದ ಆಚಾರವಿಚಾರಗಳನ್ನೂ ವ್ಯಕ್ತಿವ್ಯಕ್ತಿಗಳ ವೈಚಾರಿಕ ಸಂಘರ್ಷವನ್ನೂ ಚಿಕಿತ್ಸಕ ಬುದ್ಧಿಯಿಂದ ವಿಶ್ಲೇಷಿಸಿ ಕಲಾದೃಷ್ಟಿಯಿಂದ ಉತ್ಪ್ರೇಕ್ಷಿಸಿ ರಚಿಸಿದ ಶುದ್ಧ ಮತ್ತು ಸಮ್ಮಿಶ್ರ ರೀತಿಯ ಸಾಮಾಜಿಕ ರುದ್ರನಾಟಕಗಳು ಕನ್ನಡದಲ್ಲಿ ಹೆಚ್ಚಾಗಿವೆ. ನಾಟಕ ತಂತ್ರದಲ್ಲಿ ನಾವೀನ್ಯ ಸಾಂಕೇತಿಕತೆಗಳೂ ವಸ್ತುವಿವರಣೆಯಲ್ಲಿ ಮನೋವೈಜ್ಞಾನಿಕತೆ ವಸ್ತುನಿಷ್ಠೆಗಳೂ ಇವುಗಳಲ್ಲಿ ಕಂಡುಬರುತ್ತವೆ. ಕೈಲಾಸಂ, ಶ್ರೀರಂಗ, ದ. ರಾ. ಬೇಂದ್ರೆ, ಶಿವರಾಮ ಕಾರಂತ, ಅ. ನ. ಕೃಷ್ಣರಾಯ ಇಂಥವರ ದುಃಖಾಂತ ನಾಟಕಗಳು ಗಮನಾರ್ಹವಾಗಿವೆ. ಟಿ. ಪಿ. ಕೈಲಾಸಂ ಅವರ ಬಹಿಷ್ಕಾರ (1929) ; ದ. ರಾ. ಬೇಂದ್ರೆಯವರ ನಗೆಯ ಹೊಗೆ ಮತ್ತು ಉದ್ಧಾರ (1950) ಕನ್ಯಾವಿವಾಹ ಸಮಸ್ಯೆಯನ್ನೂ ಅಸ್ಪೃಶ್ಯತಾ ಸಮಸ್ಯೆಯನ್ನೂ ಕುರಿತಿರುವುದನ್ನು ಉದಾಹರಿಸಬಹುದು. (ಟಿ.ಎ.ವಿ.)

**ಕನ್ನಡದಲ್ಲಿ ವಚನಸಾಹಿತ್ಯ :** ವೀರಶೈವರು ಕನ್ನಡಕ್ಕೆ ನೀಡಿದ ವಿಶಿಷ್ಟ ಸಾಹಿತ್ಯಪ್ರಕಾರ ವಚನ : ವೀರಶೈವಸಾಹಿತ್ಯದ ಮೊದಲ ಬೆಳೆ. ಈ ಸಾಹಿತ್ಯವನ್ನು ಐತಿಹಾಸಿಕವಾಗಿ ಬಸವಪೂರ್ವಯುಗ, ಬಸವಯುಗ, ಬಸವೋತ್ತರಯುಗ ಎಂದು ವಿಭಾಗಿಸುತ್ತಾರೆ.

ಶಂಕರದಾಸಿಮಯ್ಯ, ಜೇಡರದಾಸಿಮಯ್ಯ, ಕೊಂಡಗುಳಿ ಕೇಶಿರಾಜ ಮೊದಲಾದವರು ಬಸವಪೂರ್ವಯುಗದ ಶರಣರು. ಇವರಲ್ಲಿ ಚಾಳುಕ್ಯ ಜಯಸಿಂಹನ (1015–1042) ಅರಸಿ ಸುಗ್ಗಲೆಯ ಗುರುವಾದ ಜೇಡರದಾಸಿಮಯ್ಯನ ವಚನಗಳು ಲಭಿಸಿವೆ. 10ನೆಯ ಶತಮಾನದ ಉತ್ತರಾರ್ಧದಲ್ಲಿ ಹುಟ್ಟಿರಬಹುದಾದ ಈತನ ಗುರು ಶಂಕರದಾಸಿಮಯ್ಯನೂ ವಚನಗಳನ್ನು ರಚಿಸಿರಬಹುದು. ಜೇಡರದಾಸಿಮಯ್ಯನ ಹದಗೊಂಡ ಶೈಲಿಯೂ ಈ ಹೇಳಿಕೆಗೆ ಪುಷ್ಟಿ ನೀಡುತ್ತದೆ. ಅದಕ್ಕಾಗಿ ಈ ಸಾಹಿತ್ಯಪ್ರಕಾರದ ಪ್ರಾಚೀನತೆ 10ನೆಯ ಶತಮಾನದಷ್ಟು ಹಿಂದೆ ಸರಿಯಬಹುದಾಗಿದೆ. ಈ ಕಾಲದ ವಚನಗಳು ಅಲ್ಲಲ್ಲಿ ಅಂಶಲಯ ಒಳಪ್ರಾಸಯುಕ್ತವಾಗಿದ್ದು ಗಾತ್ರದಲ್ಲಿ ಚಿಕ್ಕವಾಗಿವೆ. ತಡೆಗೋಲಿಲ್ಲದ ಬಂಡಿ ಹೊಡೆಗೆಡೆಯದಿಪ್ಪುದೆ, ಎತ್ತಪ್ಪೆ ಶರಣಂಗೆ ತೊತ್ತಪ್ಪೆ ಶರಣಂಗೆ, ಇಳೆ ನಿಮ್ಮ ದಾನ ಬೆಳೆ ನಿಮ್ಮ ದಾನ, ನಾನೊಂದು ಸುರಿಗೆಯನೇನೆಂದು ಹಿಡಿಯುವೆನು—ಇತ್ಯಾದಿಯಾದ ಜೇಡರದಾಸಿಮಯ್ಯನ ವಚನಗಳು ಇದಕ್ಕೆ ನಿದರ್ಶನ. ಮುಂದಣ ಯುಗದ ವಚನಸಾಹಿತ್ಯದ ಮೇಲೆ ಇವುಗಳ ಪ್ರಭಾವ ಕೆಲಮಟ್ಟಿಗೆ ತೋರಿಬರುತ್ತದೆ. ಈ ಯುಗದ ವಚನಸಾಹಿತ್ಯ ಈಗ ಕಡಿಮೆ ಪ್ರಮಾಣದಲ್ಲಿ ಸಿಕ್ಕಿದರೂ ಶೋಧಿಸಿದಲ್ಲಿ ಹೊಸ ವಚನಗಳು, ವಚನಕಾರರು ಹೊರಬರುವ ಸಂಭವವಿದೆ.

ಬಸವಯುಗ ವಚನಸಾಹಿತ್ಯದ ಸುಗ್ಗಿಕಾಲ. 12ನೆಯ ಶತಮಾನದ ಮಧ್ಯಭಾಗದಲ್ಲಿ ಮೈಮುರಿದು ಎದ್ದ ವೀರಶೈವ ಆಂದೋಲನ ಕನ್ನಡ ಸಮಾಜಕ್ಕೆ ಹೊಸ ತಿರುವು ಕೊಟ್ಟಿತು. ಆಚಾರ–ವಿಚಾರ, ಭಾಷೆ–ಸಾಹಿತ್ಯ ಮುಂತಾದ ಹಲವು ಕ್ಷೇತ್ರಗಳಲ್ಲಿ ಹೊಸತನ್ನು ತುಂಬಿತು.

ಬಸವಣ್ಣ, ಚನ್ನಬಸವ, ಪ್ರಭುದೇವ, ಅಕ್ಕಮಹಾದೇವಿ, ಸಿದ್ಧರಾಮ ಇವರು ಸುಪ್ರಸಿದ್ಧ ವಚನಕಾರರು. ಈ ಕಾಲದ ವಚನಸಂಖ್ಯೆ ಹಲವು ಸಾವಿರ, ಹಲವು ಲಕ್ಷ, ಕೋಟಿ ಎಂಬ ಹೇಳಿಕೆಗಳಿವೆ. ಕನ್ನಡಭಾಷೆಯ ಅಭಿವ್ಯಕ್ತಿ ಸಾಧ್ಯತೆಯನ್ನು ತಳಮುಟ್ಟ ಕೈವಶಮಾಡಿಕೊಂಡ ವಚನಕಾರರು ಆ ಸಾಧ್ಯತೆಯನ್ನು ಇನ್ನೂ ಹಿಗ್ಗಿಸಿದರು. ಅನುಭವ ಅಭಿವ್ಯಕ್ತಿಗಳಲ್ಲಿ ಪ್ರಾಮಾಣಿಕತೆಯನ್ನು ಸಾಧ್ಯ ಮಾಡಿ ತೋರಿಸಿದರು. ಈ ಆಂದೋಲನದ ಅಧಿನಾಯಕ ಬಸವಣ್ಣ. ಕಾರ್ಯಚಟುವಟಿಕೆಗಳ ಕೇಂದ್ರಸ್ಥಳ ಕಲ್ಯಾಣ.

ಅಂದಿನ ಅನುಭವಮಂಟಪದ ಅಧ್ಯಕ್ಷನಾಗಿ ಮೆರೆದವನೆಂದರೆ ಅಲ್ಲಮಪ್ರಭು. ಈತ ಹಿರಿಯ ಆತ್ಮಜ್ಞಾನಿ. ನಿಜವಾದ ವೈರಾಗ್ಯವನ್ನು ಪಡೆದವ. ತನಗಿಂತ ಕಿರಿಯರಾದ ಅಕ್ಕಮಹಾದೇವಿ, ಬಸವಣ್ಣ, ಸಿದ್ಧರಾಮ ಮೊದಲಾದವರ ಧ್ಯೇಯಧೋರಣೆಗಳಲ್ಲಿನ ಇತಿಮಿತಿಗಳನ್ನು ಎತ್ತಿ ತೋರಿಸಿ ಅವರನ್ನು ಸರಿಯಾದ ಮಾರ್ಗಕ್ಕೆ ಕೊಂಡೊಯ್ದ ಹಿರಿಯ. ಈತ ತನ್ನ ವಚನಗಳಲ್ಲಿ ತಾನು ಕಂಡ ಸತ್ಯವನ್ನು ತನಗೆ ಹಿಡಿಸದ ಆಚಾರವಿಚಾರಗಳನ್ನು ತೀಕ್ಷ್ಣವಾಗಿ ಪ್ರಸ್ತಾಪಿಸಿದ್ದಾನೆ. ಇವನಿಗೆ ತನ್ನವರು ಪರರು ಎಂಬ ಹಂಗಿಲ್ಲ. ಅನಾಚಾರವನ್ನು ಎಲ್ಲೇ ಕಾಣಲಿ ಈತ ಟೀಕಿಸುತ್ತಾನೆ. ವಚನಸಾಹಿತ್ಯದಲ್ಲೆಲ್ಲ ಈತನ ಅತಿ ವಚನಗಳು ಅತಿ ಕಠಿಣವೆನಿಸಿವೆ. ಈತನ ಬೆಡಗಿನ ವಚನಗಳಂತೂ ಪಾರಿಭಾಷಿಕ ಸಂಕೇತಗಳಿಂದ ಕೂಡಿ, ಭೇದಿಸಲಸಾಧ್ಯವಾಗಿವೆ.

> ಹೊಟ್ಟೆಯ ಮೇಲೆ ಕಟ್ಟೋಗರದ ಮೊಟ್ಟೆಯ ಕಟ್ಟಿದೊಡೇನು ?
> ಹಸಿವು ಹೋಹುದೇ ? ಅಂಗದ ಮೇಲೆ ಲಿಂಗಸ್ವಾಯತವಾದರೇನು ?
> ಇಟ್ಟ ಕಲ್ಲು ಮೆಳೆಯ ಮೇಲೆ ಸಿಕ್ಕಿದಡೆ ಆ ಕಲ್ಲು ಲಿಂಗವೆ ?
> ಆ ಮೆಳೆ ಭಕ್ತನೆ ? ಇಟ್ಟಾತ ಗುರುವೆ ? ಇಂತಪ್ಪವರ
> ಕಂಡಡೆ ನಾನು ನಾಚುವೆನಯ್ಯ ಗುಹೇಶ್ವರ.

ಮುನಿಯದಿರಿ, ಮುನಿಯನಿದಿರಿ, ನಿಮಗೊಂದು ಯುಕ್ತಿಯ
ಹೇಳುವೆನು. ಅದೆಂತೆಂದೊಡೆ ನೀವೆನ್ನ ವಂಶೀಭೂತರಾದ
ಕಾರಣ ನಿಮ್ಮ ಹೆಚ್ಚು ಕುಂದು ಎನ್ನದಾಗಿ, ನಿಮ್ಮ ಆಸ್ತಿ ನಾಸ್ತಿ
ಎನ್ನದಾಗಿ, ನಿಮ್ಮ ಹಾನಿ ವೃದ್ಧಿ ಎನ್ನದಾಗಿ. ಹಾವ ಹಿಡಿವರು
ಬೇಲಿಯ ಹೊಗದೆ ಹೋಹರೇ ಅಯ್ಯ ? ವ್ಯಾಧನು ಸೂಸಲ
ಚೆಲ್ಲಿ, ಜಂತ್ರವ ಹಣ್ಣಿ, ಅಡಿಗಲ್ಲನೊಡ್ಡಿ ಹೋದ ಬಳಿಕ,
ಸೂಸಲ ಕಂಪಿಂಗೆ ಹೆಗ್ಗಣ ಬಂದುಬಿದ್ದಂತೆ ಬಿದ್ದಿರಲ್ಲಾ
ಮಾಯದ ಬಲೆಯಲ್ಲಿ ! ಕೋಪವೆಂಬ ರಾಡನೊಡ್ಡಿ, ತಾಪವೆಂಬ
ಅಡಿಗಲ್ಲನಿರಿಸಿ, ಹುಸಿ ಎಂಬ ಮೀಟುಗಣೆಯ ಜಂತ್ರಿಸಿ,
ಹೊನ್ನು ಹೆಣ್ಣು ಮಣ್ಣೆಂಬ ಸೂಸಲ ಚೆಲ್ಲಿ ಕೆಡಹಿದನಲ್ಲಾ
ನಿಃಕರುಣಿ ಮುಕ್ಕಣ್ಣವ್ಯಾಧನು ! ಹೊನ್ನು ಹೆಣ್ಣು ಮಣ್ಣಿ
ನಾಶೆಯ ಬಿಟ್ಟು, ಕೋಪ ತಾಪವಂ ಬಿಟ್ಟು, ಭ್ರಾಂತಿ
ಭ್ರಮೆಯಂ ಬಿಟ್ಟು, ಜಂಗಮವಾಗಬೇಕು ಕಾಣಿರೋ
ಮರುಳುಗಳಿರಾ ! ಇಂತೀ ಷಡುಲೋಭದ ರುಚಿಯ
ಹಿಂಗಿ ಜಂಗಮನಾದಲ್ಲದೆ ಭವ ಹಿಂಗದು ಕಣಾ ಗುಹೇಶ್ವರಾ !

ಅಲ್ಲಮನ ವಚನಗಳು ಬಸವಣ್ಣ ಅಥವಾ ಮಹದೇವಿಯಕ್ಕನ ವಚನಗಳಷ್ಟು ಜನಪ್ರಿಯವಾಗಿರದಿದ್ದರೂ ತಮ್ಮ ಆಳವಾದ ತತ್ತ್ವಸಾರದಿಂದ, ಶೈಲಿಯಿಂದ, ಕಾವ್ಯತೆಯಿಂದ ಬಹು ಚೆನ್ನಾಗಿವೆ. ಉಳಿದವರಲ್ಲಿನ ಅತಿರೇಕಗಳಾವುವೂ ಅಲ್ಲಮನಲ್ಲಿ ಕಾಣವು. ಇದೊಂದೇ ದೃಷ್ಟಿಯಿಂದಲಾದರೂ ಇವನ ವಚನಗಳು ವ್ಯಾಸಂಗಯೋಗ್ಯವಾಗುತ್ತವೆ.

ಭಕ್ತಿಭಂಡಾರಿ ಎಂಬ ಕೀರ್ತಿಗೆ ಭಾಜನನಾದ ಬಸವಣ್ಣನ ವಚನಗಳಲ್ಲಿ ಭಕ್ತಿಯ ಅತಿರೇಕವನ್ನು ಕಾಣುತ್ತೇವೆ. ಹೆಂಗರುಳಿನ ಸಹಾನುಭೂತಿಯನ್ನು ಕಾಣುತ್ತೇವೆ. ಒಂದು ದೇಶದ ಮಹಾಮಂತ್ರಿಯಾಗಿದ್ದರೂ ಆತ ಅಹಂಕಾರಪಟ್ಟವನಲ್ಲ. ಜಂಗಮಸೇವೆಯೇ ಲಿಂಗದ ಸೇವೆ ಎಂದು ತನ್ನ ತನುಮಧನಗಳನ್ನು ಜಂಗಮ ದಾಸೋಹಕ್ಕಾಗಿ ಮುಡಿಪಾಗಿಟ್ಟ ಭಕ್ತಶ್ರೇಷ್ಠನೀತ. ಅನುಕಂಪ, ಜೀವನಾನುಭವದ ಸಾರ, ರಸಾರ್ದ್ರಹೃದಯ, ಲೋಕಹಿತಸಾಧನೆಯ ಉದ್ದೇಶ—ಇವು ಕ್ಷಣಕ್ಷಣಕ್ಕೂ ಈತನ ವಚನಗಳಲ್ಲಿ ಕಾಣುತ್ತವೆ. ಮತೋಪದೇಶಕ್ಕೆಂದೇ ಕಟ್ಟಿದವಾದರೂ ಈತನ ವಚನಗಳಲ್ಲಿ ಹೃದ್ಯವಾದ, ರಸಭಾವಗಳನ್ನು ಮಿಡಿವ ಮಾತುಗಳು ಉದ್ದಕ್ಕೂ ಬರುತ್ತವೆ.

ಅತ್ತಲಿತ್ತ ಹೋಗದಂತೆ ಹೆಳವನ ಮಾಡಯ್ಯ ತಂದೆ !
ಸುತ್ತಿ ಸುಳಿದು ನೋಡದಂತೆ ಅಂಧಕನ ಮಾಡಯ್ಯ ತಂದೆ !
ಮತ್ತೊಂದ ಕೇಳದಂತೆ ಕಿವುಡನ ಮಾಡಯ್ಯ ತಂದೆ !
ನಿಮ್ಮ ಶರಣರ ಪಾದವಲ್ಲದೆ ಅನ್ಯವಿಷಯಕ್ಕೆಳಸದಂತೆ ಇರಿಸು ಕೂಡಲ
ಸಂಗಮದೇವಾ.

ನಾದಪ್ರಿಯನಲ್ಲ, ವೇದಪ್ರಿಯನಲ್ಲ. ಭಕ್ತಿಪ್ರಿಯ ನಮ್ಮ
ಕೂಡಲಸಂಗಮದೇವ.

ಸಂಸಾರಸಾಗರ ತೆರೆಕೊಬ್ಬಿ, ಮುಖದ ಮೇಲೆ ಅಲೆವುತ್ತಲಿದ್ದುದೇ ?
ಸಂಸಾರಸಾಗರ ಉರದುದ್ದವೇ ಹೇಳಾ ?
ಸಂಸಾರಸಾಗರ ಕೊರಳುದ್ದವೇ ಹೇಳಾ ?
ಸಂಸಾರಸಾಗರ ಶಿರದುದ್ದವಾದ ಬಳಿಕ ಏನ ಹೇಳುವೆನಯ್ಯ ? ಅಯ್ಯಾ,
ಅಯ್ಯಾ, ಎನ್ನ ಹುಯ್ಯಲ ಕೇಳಯ್ಯ ಕೂಡಲ ಸಂಗಮದೇವಯ್ಯ
ನಾನೇವೆನಯ್ಯ.

ಕಾಂಚನವೆಂಬ ನಾಯ ನಚ್ಚಿ ನಿಮ್ಮ ನಾನು ಮರೆದೆನಯ್ಯ !
ಕಾಂಚನಕ್ಕೆ ವೇಳೆಯಲ್ಲದೆ ಲಿಂಗಕ್ಕೆ ವೇಳೆಯಿಲ್ಲ. ಹಡಕಿಗೆ
ಮೆಚ್ಚಿದ ಸೊಣಗನು ಅಮೃತದ ರುಚಿಯ ಬಲ್ಲುದೇ
ಕೂಡಲ ಸಂಗಮದೇವಾ.

ಹೀಗೆ ಬಸವಣ್ಣನಿಂದ ನೂರಾರು ಉತ್ತಮ ವಚನಗಳನ್ನು ಎತ್ತಿ ತೋರಿಸಬಹುದು. ಷಟ್ಪದಿಕಾರರಲ್ಲಿ ಕುಮಾರವ್ಯಾಸ, ದಾಸರಲ್ಲಿ ಪುರಂದರದಾಸ—ಇವರಂತೆ ವಚನಕಾರರಲ್ಲಿ ಬಸವಣ್ಣ ಬಹುಜನಪ್ರಿಯ.

ವಚನಸಾಹಿತ್ಯ ಪ್ರಧಾನವಾಗಿ ಅನುಭಾವಿಸಾಹಿತ್ಯ, ಭಕ್ತಿಸಾಹಿತ್ಯ. ಅಂಥದರಲ್ಲಿ ಜ್ಞಾನಮಾರ್ಗವನ್ನೇ ಹೆಚ್ಚಾಗಿ ಎತ್ತಿಹಿಡಿದವನೆಂದರೆ ಚೆನ್ನಬಸವಣ್ಣ. ಮುಕ್ತಿ ಸಾಧನೆಯ ಮಾರ್ಗಗಳಲ್ಲೆಲ್ಲ ಇದು ಕಠಿಣತಮವಾದುದು.

ಹೆಗ್ಗಣವನಿಕ್ಕಿ ನೆಲಗಟ್ಟು ಕಟ್ಟಿದಂತೆ ಆಯಿತೆನ್ನ ಕಾಯಗುಣ.
ಅಹಂಕಾರ ಪ್ರಬೋಧೆಗಳೇಕಯ್ಯ ? ಕಾಮ ಕ್ರೋಧ ಲೋಭ
ಮೋಹ ಮದ ಮತ್ಸರಂಗಳನಿಕ್ಕಿ ಎನ್ನ ಮಾಡಿದಿರಿ, ಎನ್ನ
ಬಾಧಿಸಲಿಂತು ಲಿಂಗಯ್ಯ ತಂದೆ ? ಆದಿ ವ್ಯಾಧಿಗಳಿಲ್ಲವ
ಕಳೆದು ನಿರ್ವಾಣವಪ್ಪ ಪದವ ಕರುಣಿಸಯ್ಯ ಕೂಡಲ
ಚೆನ್ನಸಂಗಮದೇವಾ.

ತಾಳು ಬೋಳು ಕಪ್ಪರವೆಂತೆಂಬರು. ತಾಳಾವುದು, ಬೋಳಾವುದು,
ಕಪ್ಪರವಾವುದೆಂದರಿಯರು. ಕಾಯದ ಕಳವಳದ ಗುಣವ
ತಾಳಬಲ್ಲಡೆ ತಾಳು. ಸಂಸಾರವಿಷಯವ ಬೋಳಿಸಬಲ್ಲಡೆ
ಬೋಳು. ಪರದಲ್ಲಿ ಪರಿಣಾಮಿಸಬಲ್ಲಡೆ ಕಪ್ಪರ. ಇಂತಿಲ್ಲ
ದಿದ್ದಡೆ ನಮ್ಮ ಕೂಡಲ ಚೆನ್ನಸಂಗಯ್ಯನಲ್ಲಿ ಡೊಂಬರ ಬೋಳು.

ಬಸವಣ್ಣನವರೇ ತನ್ನ ಗುರುವೆಂದೂ ಇಷ್ಟಲಿಂಗವನ್ನು ದಯಪಾಲಿಸಿ ತನ್ನನ್ನು ಉದ್ಧರಿಸಿದ ಮಹಾತ್ಮರೆಂದೂ ಹೇಳಿಕೊಂಡ ಚೆನ್ನಬಸವಣ್ಣ ಶುದ್ಧ ಜ್ಞಾನಮಾರ್ಗದ ಬೋಧಕನಾಗಿ ಹೆಸರುಪಡೆದಿದ್ದಾನೆ.

ಸಿದ್ಧರಾಮಯೋಗಿ ಕರ್ಮಯೋಗಿ. ಪರೋಪಕಾರ, ವಿದ್ಯಾಪ್ರಸಾರ ಮೊದಲಾದ ಸಮಾಜಸೇವೆಯೇ ತನ್ನ ಜೀವನದ ಧ್ಯೇಯವೆಂದು ಸಾರಿದಾತ. ಕೆರೆ ಕಟ್ಟಿಸುವುದು, ಮಠಾದಿಗಳನ್ನು ನಿರ್ಮಿಸುವುದು ಮುಂತಾದ ಕೆಲಸಗಳಲ್ಲಿ ನಿರತನಾಗಿ ಇದ್ದವ. ಇವನ ಉಪದೇಶವನ್ನು ಮೆಚ್ಚಿದ ಸಹಸ್ರಾರು ಶಿಷ್ಯರು ಇವನೊಡನೆ ಸೇರಿ ಕಾಯಕನಿರತರಾಗಿದ್ದರು.

ಕೃಷಿಯ ಮಾಡಿ ಉಣ್ಣದೆ, ಹಸಿವು ಹರಿವ ಪರಿ ಇನ್ನೆಂತೋ ?
ಕರ್ಮಯೋಗವ ಮಾಡದೆ ನಿರ್ಮಲ ಸುಚಿತ್ತವನರಿವ ಪರಿ ಇನ್ನೆಂತೋ ?
ಬೇಯದೆ ಅಶನನುಂಬ ಠಾವಾವುದು ಕಪಿಲಸಿದ್ಧ ಮಲ್ಲಿಕಾರ್ಜುನ ಲಿಂಗಕ್ಕೆ ?

ಮಹದೇವಿಯಕ್ಕ ಬಸವಣ್ಣನಂತೆ ಬಹು ಜನಪ್ರಿಯಳಾದ ವಚನಕಾರ್ತಿ. ವೈರಾಗ್ಯವನ್ನೂ ಶರಣಸತಿ ಲಿಂಗಪತಿ ಎಂಬ ತತ್ತ್ವವನ್ನೂ ಜೀವನದಲ್ಲಿ ಅನುಸರಿಸಿದಳಲ್ಲದೆ ವಚನಗಳಲ್ಲಿ ಬೋಧಿಸಿದಳು. ದೇವರ ಹಂಬಲವನ್ನೇ ವಸ್ತುವನ್ನಾಗುಳ್ಳ ಈಕೆಯ ವಚನಗಳು ಉತ್ತಮ ಕಾವ್ಯಗುಣವನ್ನು ಪಡೆದಿವೆ.

ಹಸಿವಾದಡೆ ಭಿಕ್ಷಾನ್ನಗಳುಂಟು. ತೃಷೆಯಾದಡೆ ಕೆರೆ ಹಳ್ಳಬಾವಿಗಳುಂಟು. ಶಯನಕ್ಕೆ ಹಾಳು ದೇಗುಲಗಳುಂಟು. ಚೆನ್ನಮಲ್ಲಿಕಾರ್ಜುನಯ್ಯ, ಆತ್ಮಸಂಗಾತಕ್ಕೆ ನೀನೆನಗುಂಟು.

ವನವೆಲ್ಲನೀವೆ. ವನದೊಳಗಣ ದೇವ ತರುವೆಲ್ಲ ನೀವೆ. ತರುವಿನೊಳಗಾಡುವ ಖಗಮೃಗವೆಲ್ಲ ನೀವೆ. ಚೆನ್ನಮಲ್ಲಿಕಾರ್ಜುನ ಸರ್ವಭರಿತನಾಗಿ ಎನಗೆ ಮುಖದೋರ.

ವಚನಸಾಹಿತ್ಯದ ಹಿರಿಮೆಯನ್ನು ಶ್ರುತಪಡಿಸಲು ಇಲ್ಲಿ ಹೀಗೆ ಕೆಲವು ಉದಾಹರಣೆಗಳನ್ನು ಮಾತ್ರ ಕೊಡಲಾಯಿತು. ನಿಜವಾಗಿ ವಚನಸಾಹಿತ್ಯದ ಮುತ್ತುರತ್ನಗಳನ್ನೆಲ್ಲ ಆಯ್ದು ಒಂದೆಡೆ ಇಟ್ಟು ನೋಡಿದಲ್ಲಿ ಅವುಗಳ ಯೋಗ್ಯತೆ, ಹಿರಿಮೆ ತಿಳಿಯುತ್ತದೆ. ಅಂದಿನಿಂದ ಇಂದಿನ ವರೆಗೂ ಅವುಗಳ ಕಾಂತಿ ಮಾಸಿಲ್ಲ.

13–14ನೆಯ ಶತಮಾನಗಳಲ್ಲಿ ವೀರಶೈವ ಶರಣರು ಆಂಧ್ರ ಪ್ರದೇಶ ಓರಂಗಲ್ಲು, ಶ್ರೀಶೈಲ, ಮಧ್ಯಕರ್ನಾಟಕದ ಉಳಿವಿ, ಹಂಪೆ, ದ್ವಾರಸಮುದ್ರಗಳಲ್ಲಿ ನೆಲೆನಿಂತರು. ವಚನರಚನೆ ಇಳಿಮುಖವಾಯಿತು. ವಚನಕಾರರ ಬದುಕನ್ನು ಬರೆಹಕ್ಕೆ ಇಳಿಸುವ ಕೆಲಸ ಪ್ರಾರಂಭವಾಯಿತು. ವೀರಶೈವ ಸಾಹಿತ್ಯದಲ್ಲಿ ಚರಿತ್ರೆ ಮತ್ತು ಪುರಾಣಗಳ ಯುಗ ಪ್ರಾರಂಭವಾಯಿತು. ಆದರೂ ವೀರಶೈವಕ್ಕೆ ಸ್ಥಿರನೆಲೆ ಸಿಕ್ಕುದು ನೂರೊಂದು ವಿರಕ್ತರು ಬಾಳಿದ ಪ್ರೌಢದೇವರಾಯನ ಕಾಲದಲ್ಲಿ. ವಿಪ್ಲವಕ್ಕೆ ಗುರಿಯಾಗಿ ನಷ್ಟಗೊಳ್ಳುತ್ತಿದ್ದ ಮತ್ತು ಪುರಾಣರಚನೆಯಿಂದ ಅಲಕ್ಷಿಸಲ್ಪಟ್ಟ ಹಿಂದಣ ವಚನಸಾಹಿತ್ಯದ ಸಂಗ್ರಹ, ಸಂಕಲನ, ಸಂಪಾದನಕಾರ್ಯ ಪ್ರಾರಂಭವಾಯಿತು. ಈ ಕಾರ್ಯವನ್ನು ನಿರ್ವಹಿಸಿದವರಲ್ಲಿ ಮಹಲಿಂಗ ಮೊದಲಾದವರೂ ಪ್ರೇರಣೆ ಕೊಟ್ಟವರಲ್ಲಿ ಲಕ್ಕಣದಂಡೇಶ ಮುಂತಾದವರೂ ಪ್ರಮುಖರು. ಇವರ ಪ್ರಯತ್ನದಿಂದಾಗಿ ಸಕಲಪುರಾತನರ ವಚನ, ಏಕೋತ್ತರಶತಸ್ಥಲ, ಲಿಂಗಲೀಲಾ ವಿಲಾಸಚಾರಿತ್ರ ಮೊದಲಾದ ಗ್ರಂಥಗಳಲ್ಲಿ ವಚನಗಳು ತತ್ತ್ವದ ತಳಹದಿಯ ಮೇಲೆ ಸೂತ್ರಬದ್ಧವಾಗಿ ಹೆಣೆಯಲ್ಪಟ್ಟವು. ಹೀಗೆ ವಚನಸಾಹಿತ್ಯ ಹೊಸ ರೂಪವನ್ನು ರೂಪಿಸಿಕೊಂಡು ಮುನ್ನಡೆಯಿತು. ಶಿವನಿಷ್ಠೆಯ ಸಂಗವಂಶ ಕೊನೆಗೊಂಡ ಹದಿನೈದನೆಯ ಶತಮಾನದಲ್ಲಿ ನಡೆದ ವಚನಸಾಹಿತ್ಯ ಸಂಬಂಧವಾದ ಆಂದೋಲನೆಯ ಕೇಂದ್ರವ್ಯಕ್ತಿ ತೋಂಟದ ಸಿದ್ಧಲಿಂಗ. ಷಟ್‌ಸ್ಥಲದ ಇತಿಹಾಸದಲ್ಲಿ ಎರಡನೆಯ ಚೆನ್ನಬಸವಣ್ಣನೆನಿಸಿದ ಈತನ ದೈವೀ ಬೆಂಬಲದಿಂದ ವಚನಗಳ ಸಂಕಲನ, ಸಂಪಾದನೆ ಇನ್ನೂ ತೀವ್ರಗೊಂಡಿತು. ಈ ಜಾಗ್ರತ ಸಮಯದಲ್ಲಿ ಹುಟ್ಟಿದ ನಾಲ್ಕು ಶೂನ್ಯಸಂಪಾದನೆಗಳಲ್ಲಿ ಕೊನೆಯವೆರಡು ಈತನ ಶಿಷ್ಯವರ್ಗದವರಿಂದ ರಚನೆಗೊಂಡುದು ಗಮನಿಸಬೇಕಾದ ಸಂಗತಿ. ಸಾಲದುದಕ್ಕೆ ಈತನ ಶಿಷ್ಯರಲ್ಲಿ ಸಂಪಾದನೆಯ ಒಂದು ಶಿಷ್ಯಪರಂಪರೆಯೇ ಮುಂದುವರಿಯಿತು. ಈ ಸಂಪ್ರದಾಯಕ್ಕೆ ಸಂಬಂಧಿಸಿದ ಸಂಪಾದನೆಯ ಚೆನ್ನಂಜೇದೇವ, ಸಂಪಾದನೆಯ ಬೋಳಬಸವದೇವ, ಸಂಪಾದನೆಯ ಗುರುಶಾಂತದೇವ, ಸಂಪಾದನೆ

ಸಿದ್ಧವೀರಣಾರ್ಯ ಮುಂತಾದವರು ಕಾರಣವಾಗಿ ಲಿಂಗವಿಕಳಾವಸ್ಥೆಯ ವಚನ, ಮಿಶ್ರಸ್ತೋತ್ರದ ವಚನ, ಆಚರಣೆಯ ವಚನ, ಬಸವಸ್ತೋತ್ರದ ವಚನ, ಶರಣಸ್ತೋತ್ರದ ವಚನ—ಇತ್ಯಾದಿ ಹೊಸ ಹೊಸ ವಚನಸಂಕಲನ ಗ್ರಂಥಗಳು ಹೊರಬಂದುವು. ಹೀಗೆ ಬಸವಣ್ಣನ ತರುವಾಯದ ಅವಧಿ ವಚನಗಳ ಸಂಕಲನ, ಸಂಪಾದನೆಗಳ ಯುಗವೆನಿಸಿದರೂ ತೋಂಟದ ಸಿದ್ಧಲಿಂಗ, ಘನಲಿಂಗಿದೇವ, ಕಾಡಸಿದ್ಧ, ಷಣ್ಮುಖಸ್ವಾಮಿ ಮೊದಲಾದವರು ವಚನಗಳನ್ನು ರಚಿಸಿದ್ದಾರೆ. ಗುಣ, ಗಾತ್ರ ಎರಡು ದೃಷ್ಟಿಯಿಂದಲೂ ಇವರ ವಚನಗಳು ಬಸವಯುಗದ ವಚನಗಳ ಎತ್ತರಕ್ಕೆ ಬಾರವು.

ಶರಣರು ತ್ರಿವಿಧಿ, ಮಂತ್ರಗೋಪ್ಯ, ಕರಣಹಸಿಗೆ, ವಿವಿಶ್ರಾರ್ಪಣ ಇತ್ಯಾದಿ ಪ್ರಕಾರಗಳನ್ನು ನಿರ್ಮಿಸಿದ್ದರೂ ವಚನ ಪ್ರಕಾರ ಅವರ ವ್ಯಕ್ತಿಸಿದ್ಧಿಯ ಪತಾಕೆ. ಇದರಲ್ಲಿ ವಚನ, ಸ್ವರವಚನವೆಂದು ಎರಡು ವಿಧಗಳುಂಟು. ಒಂದು ಅನುಭಾವದ ಗದ್ಯ ಪ್ರಕಾರ, ಇನ್ನೊಂದು ಅನುಭಾವದ ಗೀತಪ್ರಕಾರ. ವಚನಗಳು ತಮ್ಮ ಉಜ್ಜ್ವಲ ಸಾಹಿತ್ಯದಿಂದ, ಸ್ವರವಚನಗಳು ತಮ್ಮ ಗೇಯ ಗುಣದಿಂದ ಸಮಸ್ತ ಸಹೃದಯರನ್ನೂ ಆಕರ್ಷಿಸಿವೆ.

ಪ್ರತಿಯೊಬ್ಬ ಶರಣನ ವಚನ ಮತ್ತು ಸ್ವರವಚನಗಳ ಕೊನೆಗೆ ಕೃತಿಕಾರನನ್ನು ಸೂಚಿಸುವ, ಆರಾಧ್ಯದೈವನಾಮಾಂಕಿತವಾದ, ಮುದ್ರೆ ಇರುತ್ತದೆ. ಕೂಡಲಸಂಗಮದೇವ, ಕೂಡಲಚೆನ್ನಸಂಗಮದೇವ ಹೀಗೆ ಒಂದೊಂದು ದೇವತೆಯ ಸುತ್ತ ಇರುವ ಕೆಲವು ಅಂಕಿತಗಳು ಒಂದೊಂದು ವರ್ಗವನ್ನು ನಿರ್ಮಿಸುತ್ತವೆ.

ಗಾತ್ರದೃಷ್ಟಿಯಿಂದ ವಚನ ಒಂದು ಬಿಡಿ ಮುಕ್ತಕ. ಸ್ವರವಚನ 3-5, 7-9 ನುಡಿಗಳ ಒಂದು ಪುಂಜ. ಹಾಡುಗಬ್ಬಗಳಾದ ಈ ಸ್ವರವಚನಗಳು ಬಸವ ಮುಂತಾದವರಿಂದ ಪ್ರವೃತ್ತವಾಗಿದ್ದು ಮುಂದೆ ಬಂದ ನಿಜಗುಣಶಿವಯೋಗಿ, ಮುಪ್ಪಿನ ಷಡಕ್ಷರಿ, ಸರ್ಪಭೂಷಣ ಶಿವಯೋಗಿ, ಬಾಲಲೀಲಾಮಹಾಂತ ಶಿವಯೋಗಿ, ಕಡಕೋಳ ಮಡಿವಾಳಪ್ಪ, ಮೈಲಾರದ ಬಸವಲಿಂಗ ಶರಣ ಮೊದಲಾದವರ ಕೈಯಲ್ಲಿ ಉಚ್ಚಾಸ್ರಯಸ್ಥಿತಿಗೇರಿದುವು. ವಚನಸಾಹಿತ್ಯದ ಈ ರಮ್ಯ ಮಾರ್ಗ ವಿಕಾಸಗೊಂಡು ಹಲವು ಬಗೆಯಾಗಿ ಬೆಳೆದಿರುವುದನ್ನು ಮುಂದಿನ ದಾಸಸಾಹಿತ್ಯದಲ್ಲೂ ಇಸ್ಲಾಮೀ ಅನುಭಾವಿ ಸಾಹಿತ್ಯದಲ್ಲೂ ಕಾಣಬಹುದಾಗಿದೆ.

ವಚನಗಳು ಚರಿತ್ರೆ, ತತ್ತ್ವ, ಸಾಹಿತ್ಯ ದೃಷ್ಟಿಗಳಿಂದ ಅಮೂಲ್ಯವೆನಿಸಿವೆ. ತಾವು ಸತ್ಯವನ್ನು ಕಂಡ ಉಂಡ ಅನುಭವವನ್ನು ಅಭಿವ್ಯಕ್ತಗೊಳಿಸುವಲ್ಲಿ ಕೆಲವು ಸಲ ಶರಣರ ವ್ಯಕ್ತಿಗತ ಅಂಶಗಳೂ ವಚನಗಳಲ್ಲಿ ನುಸುಳಿಬಂದಿವೆ. ಆರು ಜನ್ಮದವ ಬಸವಣ್ಣನೆಂಬರು ಈ ಗಾರುಮಾತ ಕೇಳಲಾಗದು, ಆನು ಹಾರುವನೆಂದರೆ ಕೂಡಲಸಂಗಯ್ಯ ನಗುವನಯ್ಯ, ಕೆಟ್ಟಿತ್ತು ಕಲ್ಯಾಣ ಹಾಳಾಯಿತ್ತು ನೋಡಾ ಒಬ್ಬ ಜಂಗಮದ ಅಭಿಮಾನದಿಂದ, ಎನ್ನ ಸತಿ ನೀಲಲೋಚನೆ ಪೃಥ್ವಿಗಗ್ಗಳ ಚಲುವೆ—ಇಂಥ ಅಂಶಗಳು ಶರಣರ ಚರಿತೆ ಬರೆಯುವಲ್ಲಿ ಪ್ರಮಾಣಗಳಾಗಿ ನಿಲ್ಲುತ್ತವೆ.

ವಚನಗಳಲ್ಲಿ ಹೆಚ್ಚು ಸ್ಪಷ್ಟವಾಗಿ ಸಮಕಾಲೀನ ಸಮಾಜ ಚಿತ್ರ ಮೂಡಿದೆ. ಮಾರಿಕವ್ವೆಯನೋಂತು ಕೊರಳಲ್ಲಿ ಕಟ್ಟಿಕೊಂಬರು, ಮರನ ಗೋಟಿಗೆ ಬರ್ಪ ಕಿರುಕುಳದೈವಕ್ಕೆ ಕುರಿಯನಿತ್ತಿಹೆವೆಂದು ನಲಿನಲಿದಾಡುವರು, ವಿಷ್ಣುವ ಪೂಜಿಸಿ ಮುಡಿಹ ಸುಡಿಸಿಕೊಂಬುದ ಕಂಡೆ, ಜಿನನ ಪೂಜಿಸಿ ಬತ್ತಲೆಯಪ್ಪುದ ಕಂಡೆ, ಮೈಲಾರನ ಪೂಜಿಸಿ ನಾಯಾಗಿ ಬೊಗಳುವುದ ಕಂಡೆ—ಇಂಥ ಈ ವ್ಯಕ್ತಿಗತ ಸಂಗತಿ ಮತ್ತು ಸಮಾಜ ಚಿತ್ರಣಗಳಿಗಿಂತ ಶರಣರಿಗೆ ಮುಖ್ಯವಾದುದು ವೀರಶೈವಧರ್ಮದ ತತ್ತ್ವ ಮತ್ತು ಆಚರಣೆಗಳ ಪ್ರತಿಪಾದನೆ. ಹೀಗಾಗಿ ಷಟ್‌ಸ್ಥಲ, ಅಷ್ಟಾವರಣ, ಪಂಚಾಚಾರ ಇತ್ಯಾದಿಗಳ ತಾತ್ತ್ವಿಕ ವಿವೇಚನೆ ಅಲ್ಲಿ ವಸ್ತುವಾಗಿ ನಿಂತಿತು. ಕಾಯಕ, ಜಾತಿಭೇದ ನಿರ್ಮೂಲನ, ಸ್ತ್ರೀಪುರುಷ ಸಮಾನತೆ—ಮುಂತಾದ ಆಚರಣೆಗಳು ಅಲ್ಲಿ ಪ್ರತಿಪಾದಿಸಲ್ಪಟ್ಟು, ಕಾಯಕವೇ ಕೈಲಾಸ, ಸಕಲ ಜೀವಾತ್ಮರಿಗೆ ಲೇಸ ಬಯಸುವಲ್ಲಿಂ ಕುಲಜ, ದಯವೇ ಧರ್ಮದ ಮೂಲ, ಅರಿವೇ ಗುರು, ದೇವನೊಬ್ಬ ನಾಮ ಹಲವು ಕೂಡಲಸಂಗನ ಒಲಿಸಲು ಬಂದ ಪ್ರಸಾದಕಾಯವ ಕೆಡಿಸಲಾಗದು, ಭಕ್ತಿಪ್ರಿಯ ನಮ್ಮ ಕೂಡಲಸಂಗಮದೇವ, ಆಚಾರ ಸ್ವರ್ಗ ಅನಾಚಾರವೇ ನರಕ—ಎಂಬ ಲೋಕಮಾನ್ಯ ವಿಚಾರಗಳು ಆವಿರ್ಭವಿಸಿದುವು. ಹೀಗೆ ಹೊಸ ಆಚಾರ ಹೊಸ ವಿಚಾರಗಳನ್ನು ತುಂಬಿಕೊಂಡ ವಚನಗಳು ಹೊಸ ಭಾಷೆ ಹೊಸ ಸಾಮಗ್ರಿ ಹೊಸ ಸಂವೇದನೆಗಳನ್ನು ಹೊತ್ತು ಹೊರಬಂದುವು. ಇದರ ಫಲವಾಗಿ ಕಮ್ಮಟ, ಗಂಜಳ, ಹನ್ನಿಬ್ಬರು, ಉಳ್ಳವರು, ಮೇಳಾಪ, ತುಯ್ಯಲ ಇತ್ಯಾದಿ ದೇಶೀಪದಗಳು ಸಾಹಿತ್ಯದಲ್ಲಿ ಸಾರ್ಥಕಗೊಂಡುವು. ಬದುಕಿನ ಹಂಚು ಹರಳು ಇತ್ಯಾದಿ ವಸ್ತುಕೋಟಿಯೆಲ್ಲ ಅವರ ಕೈಯಲ್ಲಿ ಹದವಾಗಿ ಬಳಕೆಗೊಂಡುವು. ಅವರವರ ಕಾಯಕಗಳು ವಚನಗಳಲ್ಲಿ ರೂಪಕ ರೂಪತಾಳಿ ಶೋಭಿಸಿದುವು. ಇದರಿಂದ ಕನ್ನಡ ಭಾಷೆಯ ಅಭಿವ್ಯಕ್ತಿ, ಸತ್ತ್ವ ಸಾವಿರ ಪಾಲು ವಿಸ್ತಾರಗೊಂಡಿತು.

ಸಾಮಾನ್ಯವಾಗಿ ವಚನ ಸಾಹಿತ್ಯವೆಂದರೆ ಸ್ವಾನುಭವ ಲೋಕಾನುಭವಗಳ ಸಂಗಮ. ಶೈಲಿದೃಷ್ಟಿಯಿಂದ ಈ ಸಾಹಿತ್ಯವನ್ನು ಪ್ರಸನ್ನಶೈಲಿ, ಬೆಡಗಿನ ಶೈಲಿ, ಶಾಸ್ತ್ರಶೈಲಿಯೆಂದು ವಿಭಾಗಿಸಬಹುದು. ಪ್ರಸನ್ನಕ್ಕೆ ಬಸವ, ಬೆಡಗಿಗೆ ಪ್ರಭುದೇವ, ಶಾಸ್ತ್ರಕ್ಕೆ ಚೆನ್ನಬಸವ ಇವರ ವಚನಗಳು ಮಾದರಿ. ಆಡುಮಾತಿನ ಕೆಚ್ಚು, ಕಮನೀಯತೆ, ಅನುಭವದ ಪ್ರಾಮಾಣಿಕತೆ, ಅಭಿವ್ಯಕ್ತಿಯ ತೀವ್ರಪರಿಣಾಮ—ಇವು ಇದರ ಗುಣವಿಶೇಷಗಳು, ಹೀಗಾಗಿ ಇದು ಕನ್ನಡದ ಅನುಪಮ ಅನುಭಾವಸಾಹಿತ್ಯ, ವಿಶ್ವವಾಙ್ಮಯಕ್ಕೆ ಕನ್ನಡ ನೀಡಿದ ವಿಶಿಷ್ಟ ಸಾಹಿತ್ಯ ಎಂಬ ಕೀರ್ತಿ ಗಳಿಸಿದೆ.



ಎಂ. ಆರ್. ಶ್ರೀನಿವಾಸ ಮೂರ್ತಿ

ವಚನಶಾಸ್ತ್ರ ಪಿತಾಮಹರೆನಿಸಿದ ಫ. ಗು. ಹಳಕಟ್ಟಿಯವರು ಪ್ರಥಮತಃ ವಚನ ಸಾಹಿತ್ಯವನ್ನು ಸಂಗ್ರಹಿಸಿ ಮುದ್ರಿಸಿದ ಮೇಲೆ ಕರ್ನಾಟಕ ವಿಶ್ವವಿದ್ಯಾಲಯವೂ ಬೆಂಗಳೂರಿನ ಬಸವ ಸಮಿತಿಯೂ ವಚನ ಸಾಹಿತ್ಯವನ್ನು ಪರಿಷ್ಕರಿಸಿ ಮುದ್ರಿಸುವ ಕೆಲಸವನ್ನು ಮಾಡುತ್ತಿವೆ. ಎಂ. ಆರ್. ಶ್ರೀನಿವಾಸಮೂರ್ತಿಗಳು, ಬಿ. ಶಿವಮೂರ್ತಿಶಾಸ್ತ್ರಿಗಳು, ಆರ್. ಸಿ. ಹಿರೇಮಠ, ಭೂಸನೂರುಮಠ, ಸ. ಸ. ಮಾಳವಾಡ, ಎಲ್. ಬಸವರಾಜು, ಮೊದಲಾದ ವಿದ್ವಾಂಸರು ಈ ಕ್ಷೇತ್ರದಲ್ಲಿ ಗಣ್ಯ ಕೆಲಸ ಮಾಡಿದ್ದಾರೆ. (ಎಂ.ಎಂ.ಕೆ.)

**ಇಪ್ಪತ್ತನೆಯ ಶತಮಾನದಲ್ಲಿ :** ವಚನ ಕನ್ನಡ ಸಾಹಿತ್ಯಕ್ಕೇ ವಿಶಿಷ್ಟವಾದ ಒಂದು ಸಾಹಿತ್ಯಪ್ರಕಾರ. ಗದ್ಯವೂ ಅಲ್ಲದ ಪದ್ಯವೂ ಅಲ್ಲದ ಶಿವಶರಣರ ವಚನ ವಾಙ್ಮಯ ಲೋಕದ ಅನುಭಾವಸಾಹಿತ್ಯಕ್ಕೆ ಒಂದು ಶ್ರೀಮಂತ ಕೊಡುಗೆ. ಸುಮಾರು ಹನ್ನೆರಡನೆಯ ಶತಮಾನದ ಹೊತ್ತಿಗೆ ಯಶಸ್ಸಿನ ತುದಿಯನ್ನೇರಿದ ಈ ಸಾಹಿತ್ಯಪ್ರಕಾರ ಬರಬರುತ್ತಾ ತನ್ನ ಉಜ್ಜ್ವಲ ಕಾಂತಿಯನ್ನು ಕಳೆದುಕೊಂಡು ಕೊನೆಗೊಮ್ಮೆ ನಿಂತೇಹೋಯಿತು. ನಡುವೆ ಒಂದು ಸಲ ಅದರ ಪುನರುಜ್ಜೀವನದ ಪ್ರಯತ್ನ ನಡೆದಿರುವುದಕ್ಕೇನೋ ಸಾಹಿತ್ಯಚರಿತ್ರೆಯಲ್ಲಿ ಉಲ್ಲೇಖಗಳಿವೆ ; ಆದರೆ ಯಶಸ್ಸಿನ ದಾಖಲೆಗಳಿಲ್ಲ. ಬಸವಣ್ಣ, ಅಕ್ಕಮಹಾದೇವಿ ಮೊದಲಾದವರು ಈ ಅಭಿವ್ಯಕ್ತಿಮಾಧ್ಯಮದಲ್ಲಿ ತೋರಿದ ಕೌಶಲವೇ ಒಂದು ಜಲಚಿಹ್ನೆಯಾಗಿ ನಿಂತು ಹೋಯಿತು. ಇದನ್ನು ಅನುಸರಿಸಿದವರು ಅನುಕರಿಸಿದವರು ಅನೇಕರು; ಆದರೆ ಮೀರಿದವರು ಮಾತ್ರ ಒಬ್ಬರೂ ಇಲ್ಲ. ಸರಳವಾದ ಮಾತುಗಳಲ್ಲಿ ಅನುಭವ ತೀವ್ರತೆಯನ್ನು, ಪ್ರಾಮಾಣಿಕ ಆತ್ಮವಿಮರ್ಶೆಯಲ್ಲಿ ದಿಟ್ಟತನವನ್ನು, ಅಲಂಕಾರ ಭಾರವಿಲ್ಲದ ರಚನೆಯಲ್ಲಿ ಕಲೆಗಾರಿಕೆಯನ್ನು ಹೊಮ್ಮಿಸುವುದು ಮುಂದಿನವರಿಗೆ ಸಾಧ್ಯವಾಗಲಿಲ್ಲ. ಆದರೂ ಪ್ರಯೋಗಪ್ರಿಯರಿಗೆ ವಚನಗಳ ಮಾದರಿ ಯಾವಾಗಲೂ ಒಂದು ಆಹ್ವಾನವಾಗಿ ಉಳಿದದ್ದರಲ್ಲಿ ಆಶ್ಚರ್ಯವಿಲ್ಲ. ವಿಚಾರಧಾರೆ, ಆವೇಶ, ಉತ್ಸಾಹಗಳು ಛಂದಸ್ಸಿನ ಚೌಕಟ್ಟನಲ್ಲಿ ಸಿಕ್ಕಿ ಸೊರಗದಿರಬೇಕಾದರೆ ವಚನದಂಥ ಒಂದು ಮಾಧ್ಯಮ ಎಲ್ಲ ಕಾಲಕ್ಕೆ ಸಮರ್ಪಕವಾಗಿ ಅಗತ್ಯವಾಗಿ ತೋರಿದ್ದರಲ್ಲಿಯೆ ಈ ಪ್ರಕಾರದ ಮಹತ್ತ್ವವಿದೆ. ಅಂತೆಯೇ ಹೊಸ ಸಾಹಿತ್ಯದಲ್ಲಿಯೂ ವಚನ ಪ್ರಕಾರ ಒಂದು ಪ್ರೇರಣೆಯ ಸೆಲೆಯಾಗಿದೆ ; ಅನುಕರಣೆಗೆ ಮಾದರಿಯಾಗಿದೆ.

ಸಾಹಿತ್ಯಚರಿತ್ರೆಯ ಪರಿಭಾಷೆಯಲ್ಲಿ ನಮಗೆ ಪರಿಚಿತರಾಗಿರುವಂಥ ವಚನಕಾರರು ಇಂದು ಇಲ್ಲ. ಆದರೆ ಸಾಹಿತ್ಯಕ್ಷೇತ್ರದ ಬೇರೆಬೇರೆ ಪ್ರಕಾರಗಳಲ್ಲಿ ಇಂದು ಕೆಲಸ ಮಾಡುತ್ತಿರುವ ಅನೇಕರು ವಚನಗಳನ್ನು ರಚಿಸಿದ್ದಾರೆ. ಈ ಗದ್ಯಗೀತ ಪ್ರಕಾರದ

ರೂಪಾಂಶಕ್ಕೆ ಹೊಸ ಲೇಖಕರಿಗೆ ಅನ್ಯಮೂಲಗಳ ಸ್ಫೂರ್ತಿಯೂ ಲಭಿಸಿದೆ. ವಾಲ್ಟ್‌ವಿಟ್‌ಮನ್ನನ ಗರಿಕೆಗಳು, ರವೀಂದ್ರನಾಥ ಠಾಕೂರರ ಕವಿತೆಗಳ ಇಂಗ್ಲಿಷ್ ಅನುವಾದಗಳು ಈ ನಿಟ್ಟಿನಲ್ಲಿ ಒಡನೆಯೇ ನೆನಪಿಗೆ ಬರುವ ಮೂಲಗಳು.

ಸಮಕಾಲೀನರು ಅನೇಕರು ವಚನಗಳನ್ನು ಇಲ್ಲವೇ ರೂಪಾಂಶದಲ್ಲಿ ವಚನಗಳಿಗೆ ತೀರ ಹತ್ತಿರವಾದ ಕೃತಿಗಳನ್ನು ರಚಿಸಿದ್ದಾರೆ. ಸುಮಾರು ಇಪ್ಪತ್ತೆರಡು ಜನ ಲೇಖಕರು ಮೂವತ್ತಕ್ಕೂ ಹೆಚ್ಚು ಸಂಗ್ರಹಗಳನ್ನು ಪ್ರಕಟಿಸಿದ್ದಾರೆ. ಹದಿನೆಂಟು ಜನರ ವಚನಗಳು, ಬೇರೆ ಬೇರೆ ಗ್ರಂಥಗಳಲ್ಲಿ ಪತ್ರಿಕೆಗಳಲ್ಲಿ ಅಚ್ಚಾಗಿವೆ ಅಥವಾ ಹಸ್ತಪ್ರತಿಯ ರೂಪದಲ್ಲಿವೆ. ಈ ಲೇಖಕರಲ್ಲಿ ಮೂರೇ ಮೂರು ವಚನಗಳನ್ನು ಬರೆದ ತೀ. ನಂ. ಶ್ರೀಕಂಠಯ್ಯನವರೂ ಮೂರುಸಾವಿರದ ಐದುನೂರು ವಚನಗಳನ್ನು ಬರೆದು ಪ್ರಖ್ಯಾತರಾದ ಶ್ರೀಮನ್ನಿಡುಮಾಮಿಡಿ ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ಶ್ರೀ ಚೆನ್ನಬಸವರಾಜ ದೇಶಿಕೇಂದ್ರ ಮಹಾಸ್ವಾಮಿಗಳೂ (ಜಚನಿ) ಸೇರಿದ್ದಾರೆ ; ಶಂಕರಮ್ಮ, ಓಂಕಾರಮ್ಮನವರ ಹಾಗೆ ವಾಚಕರಿಗೆ ಪರಿಚಯವೇ ಇಲ್ಲದವರೂ ನಾಡಿನಲ್ಲಿ ಮನೆಮಾತಾಗಿರುವ ಕುವೆಂಪು, ಬೇಂದ್ರೆಯವರೂ ಇದ್ದಾರೆ ; ರಂಗಣ್ಣ, ದಿವಾಕರರಂಥ ಹಿರಿಯರೂ ಚಂದ್ರಶೇಖರ ಐತಾಳ, ಭೈರವಮೂರ್ತಿಯವರಂಥ ತರುಣರೂ ಸಿಂಪಿ ಲಿಂಗಣ್ಣನವರಂಥ ಮಾಸ್ತರರೂ ಸದಾಶಿವ ಶಿವಾಚಾರ್ಯರು, ಗಂಗಾಧರ ಶಿವಾಚಾರ್ಯರು ಅವರಂಥ ಮಠಾಧೀಶರೂ ಜೋಳದರಾಶಿ ದೊಡ್ಡನಗೌಡರಂಥ ಗಮಕಿಗಳೂ ಈ ಪಟ್ಟಿಯಲ್ಲಿ ಬರುತ್ತಾರೆ. ಈ ಎಲ್ಲ ಲೇಖಕರು ಬರೆದಿರುವ ವಚನಗಳ ಸಂಖ್ಯೆ ಒಂದು ಅಂದಾಜಿನಂತೆ ಸುಮಾರು ಹತ್ತು ಸಾವಿರವಾಗುತ್ತದೆ. ಇದೇನು ಸಾಮಾನ್ಯವಾದ ಸಾಧನೆಯಲ್ಲ.

ರಚನೆಯ ವಿನ್ಯಾಸದ ದೃಷ್ಟಿಯಿಂದಲೂ ವಸ್ತುವೈವಿಧ್ಯದ ದೃಷ್ಟಿಯಿಂದಲೂ ಈ ವಚನಗಳು ನಾನಾ ಬಗೆಯಾಗಿವೆ. ಇವುಗಳಲ್ಲಿ ಪ್ರಾಚೀನ ಸಂಪ್ರದಾಯವಿದೆ, ಆಧುನಿಕ ವಿಚಾರಧಾರೆಯಿದೆ, ಆತ್ಮಶೋಧನೆಯಿದೆ, ಪ್ರಕೃತಿವರ್ಣನೆಯಿದೆ, ಭಕ್ತಿ ಇದೆ, ರಾಜಕೀಯವಿದೆ, ಭಾವುಕತೆಯಿದೆ, ವೈಚಾರಿಕತೆಯಿದೆ, ಪರದ ಆದರ್ಶವಿದೆ, ಇಹದ ವಾಸ್ತವಿಕತೆಯಿದೆ, ಮರಗಟ್ಟಿಕೊಂಡ ಪ್ರತಿಭೆಯೊಡನೆ ಕುಡಿಯೊಡೆದ ಪ್ರಜ್ಞೆಯಿದೆ. ಇಲ್ಲಿ ಅರಳಿದ ವಚನಗಳಿವೆ, ಕರುಳಿನ ವಚನಗಳಿವೆ ; ಅನುಕರಿಸಿದ ವಚನಗಳಿಗೂ ಸೋಗಿನ ವಚನಗಳಿಗೂ ಬರವಿಲ್ಲ. ಈ ಆಧುನಿಕ ವಚನಸಾಹಿತ್ಯ ಮೈದಾಳಿರುವ ರೀತಿ, ಅದರ ಮುಖ್ಯ ಒಲವು ನಿಲವುಗಳು, ಪ್ರವೃತ್ತಿಗಳು ವಿಸ್ತಾರವಾದ ಪ್ರತ್ಯೇಕ ಅಧ್ಯಯನಕ್ಕೆ ಅರ್ಹವಾಗಿವೆ.

ಸಮಕಾಲೀನ ವಚನಕಾರರಲ್ಲಿ ಮೊದಲು ಗಮನ ಸೆಳೆಯುವ ಹೆಸರು ಎಸ್. ವಿ. ರಂಗಣ್ಣನವರದು. ಜಚನಿ ಅವರನ್ನು ಬಿಟ್ಟರೆ ರಂಗಣ್ಣನವರೇ ಅತಿ ಹೆಚ್ಚಿನ ಸಂಖ್ಯೆಯ ವಚನಗಳನ್ನು ಬರೆದಿದ್ದಾರೆ. ರಂಗಬಿನ್ನಪ ಎಂಬ ಹೆಸರಿನಲ್ಲಿ ಪ್ರಕಟವಾಗಿರುವ ಅವರ ವಚನಗಳು 1212. ಹೊಸ ಸಾಹಿತ್ಯದಲ್ಲಿ ಮೊತ್ತಮೊದಲಿಗೆ ವಚನಗಳನ್ನು ಬರೆದು ಪ್ರಕಟಿಸಿದ ಕೀರ್ತಿಯೂ ಅವರದೆ. 1925ರ ಅಕ್ಟೋಬರ್ ತಿಂಗಳಿನಲ್ಲಿ ಅವರು ತಮ್ಮ ಪ್ರಥಮ ವಚನವನ್ನು ಬರೆದುದಾಗಿ ಹೇಳಿಕೊಂಡಿದ್ದಾರೆ. ಸುಮಾರು ಹತ್ತು ವರ್ಷಗಳ ಅನಂತರ (1934) ರಂಗಣ್ಣನವರ ಹದಿನೈದು ವಚನಗಳನ್ನು ರಂಗಯ್ಯನ ವಚನಗಳು ಎಂಬ ಶೀರ್ಷಿಕೆಯಲ್ಲಿ ಪ್ರಬುದ್ಧ ಕರ್ಣಾಟಕ ಮೊದಲ ಬಾರಿಗೆ ಪ್ರಕಟಿಸಿತು. ಆಧುನಿಕರಲ್ಲಿ ಇದಕ್ಕಿಂತ ಮೊದಲು ಬೇರೊಬ್ಬರು ವಚನಗಳನ್ನು ಪ್ರಕಟಿಸಿರುವುದು ಗಮನಕ್ಕೆ ಬಂದಿಲ್ಲ. ಐತಿಹಾಸಿಕವಾಗಿ ಆಧುನಿಕ ವಚನಕಾರರಲ್ಲಿ ರಂಗಣ್ಣನವರು ಮೊದಲಿಗರಾಗಿರುವುದು ಮಾತ್ರವಲ್ಲದೆ ಈ ಸಾಹಿತ್ಯಪ್ರಕಾರಕ್ಕೆ ರಾಷ್ಟ್ರದ ಅತ್ಯುಚ್ಚ ಪ್ರಶಸ್ತಿಯನ್ನು ಗಳಿಸಿ ಸಫಲತೆಯನ್ನು ಪಡೆದಿದ್ದಾರೆ.

ಒಂದು ದೃಷ್ಟಿಯಿಂದ ಬೇಂದ್ರೆಯವರೇ ರಂಗಣ್ಣನವರಿಗಿಂತ ಮೊದಲು ವಚನಗಳನ್ನು ರಚಿಸಿದವರು ಎನ್ನಬೇಕು. ಅವರ ಪ್ರಖ್ಯಾತವಾದ ಕರುಳಿನ ವಚನಗಳು ಜಯ ಕರ್ನಾಟಕದಲ್ಲಿ 1931ರಲ್ಲಿ ಪ್ರಕಟವಾದರೂ ಅವನ್ನು ಪೂರ್ಣಗೊಳಿಸಿದ್ದು 1942ರಲ್ಲಿಯೆ ಎಂದೂ ಅವರು ಹೇಳಿದ್ದಾರೆ. ಆದರೆ ರಂಗಣ್ಣನವರ ವಚನಗಳು ರಚನಾವಿನ್ಯಾಸದಲ್ಲಿ ವಚನಗಳ ಚೌಕಟ್ಟಿನಲ್ಲಿ ಬರುವ ಹಾಗೆ ಬೇಂದ್ರೆಯವರ ವಚನಗಳು ಬರುವುದಿಲ್ಲ ಎಂಬುದನ್ನು ನಾವು ಗಮನಿಸಬೇಕು. ಬೇಂದ್ರೆಯವರ ವಚನಗಳು ಹೆಚ್ಚು ಕಡಿಮೆ ಫ್ರೀ–ವ್ಹರ್ಸಿಗೆ ಸರಿಯಾಗುವ ಸ್ವಚ್ಛಂದ ಗೀತೆಗಳೇ ಸರಿ. ಪ್ರಾಚೀನರ ವಚನಗಳು ಶುದ್ಧ ಪಾರಮಾರ್ಥಿಕ ಸಾಧನೆಯ ಮಾರ್ಗದೊಳಗಿನವು. ಕರುಳಿನ ವಚನಗಳೊ ಲೌಕಿಕ ಭಾವದ ಪ್ರಕಟನೆಗೆ ಬಳಸಿಕೊಂಡಂಥವು——ಎಂಬ ಬೇಂದ್ರೆಯವರ ಮಾತುಗಳು ಸಹಜವಾಗಿ ವಸ್ತುವನ್ನುದ್ದೇಶಿಸುತ್ತವೆ. ರೂಪಾಂಶದಲ್ಲಿ ಅವು ಪ್ರಾಚೀನರ ವಚನಗಳಿಗಿಂತಲೂ ವಿಟ್‌ಮನ್, ಠಾಕೂರರ ಕೃತಿಗಳಿಗೆ ಹತ್ತಿರವಾದ ಗದ್ಯಗೀತಗಳು. ಕುವೆಂಪು ಅವರ ಕಿಂಕಿಣಿಗೂ ದಿವಾಕರರ ಅಂತರಾತ್ಮನಿಗೆ ಕೃತಿಗೂ ಈ ಮಾತುಗಳೇ ಅನ್ವಯವಾಗುತ್ತವೆ.

ರಂಗಣ್ಣನವರ ವಚನಗಳಲ್ಲಿ ಪ್ರಾಚೀನ ವಚನಗಳ ಪ್ರತಿಧ್ವನಿಯನ್ನು ಸ್ಪಷ್ಟವಾಗಿ ಕೇಳಬಹುದಾಗಿದೆ. ಇದು ಆ ಸಾಹಿತ್ಯಪ್ರಕಾರ ಹೊಸ ಕಾಲದ ಲೇಖಕರ ಮೇಲೆ ಪ್ರಭಾವ ಬೀರಿರುವುದಕ್ಕೆ ಒಂದು ಉದಾಹರಣೆಯೂ ಹೌದು.

ಎಂಟುನೂರು ವರ್ಷಗಳಷ್ಟು ಹಿಂದಿನ ಆ ವಚನಗಳು ರೂಪಗೊಂಡ ಅನ್ಯಾದೃಶ ಸೊಗಸಿಗೆ, ಅವುಗಳಲ್ಲಿ ಅಭಿವ್ಯಕ್ತಗೊಂಡ ನಿಚ್ಚಳ ಪ್ರಮಾಣಿಕತೆಗೆ, ತೊಯ್ತ ತುಡಿತಗಳಿಗೆ ರಂಗಣ್ಣನವರ ಪ್ರತಿಭೆ ಸ್ಪಂದಿಸಿದ್ದರಲ್ಲಿ ಆಶ್ಚರ್ಯವಿಲ್ಲ. ಹೊಸ ಕಾಲಕ್ಕೆ ತಕ್ಕಂತೆ ಸಾಹಿತ್ಯವೂ ಹೊಸ ರೂಪವನ್ನು ಪಡೆಯುವುದು ಅನಿವಾರ್ಯವಾದುದರಿಂದ, ಈ ವಚನಗಳಾದರೂ ಪ್ರಾಚೀನದ ಪ್ರತಿರೂಪವಾದರೆ ಹೆಚ್ಚಿನದೇನನ್ನೂ ಸಾಧಿಸುವಂತಿರಲಿಲ್ಲ. ಆಗಲೇ ವಚನಸಾಹಿತ್ಯಸೃಷ್ಟಿಯ ಎರಡನೆಯ ಆವರ್ತದಲ್ಲಿಯೆ ವಚನಗಳ ಬಣ್ಣ ಅಳಿಸಿರುವುದು, ಕಾವು ಕಳೆದಿರುವುದು, ದನಿ ಮಾಸಿರುವುದು ಸಾಹಿತ್ಯಚರಿತ್ರೆಯ ವಿದ್ಯಾರ್ಥಿಗಳಿಗೆ ತಿಳಿದಿದೆ. ಬದಲಾದ ಮೌಲ್ಯಗಳು ಸಾಹಿತ್ಯನಿರ್ಮಾಣದಲ್ಲಿ ಸ್ಪಂದಿಸದೆ ಹೋದರೆ ಎಲ್ಲ ಕಾಲದ ಕಥೆಯೂ ಹೀಗಾಗುತ್ತದೆ. ಹೊಸ ಕಾಲದ ವಚನ ಹೀಗಾಗಬಾರದೆಂಬುದನ್ನು ಆರಂಭಕ್ಕೇ ರಂಗಣ್ಣನವರು ಅರಿತುಕೊಂಡರು. ಅವರಿಗೆ ವಚನಕಾರರ ಸೃಷ್ಟಿಯ ಸೀಮೆಯ ಪರಿಚಯವಿತ್ತು; ಸೀಮಿತಗಳ ತಿಳಿವಳಿಕೆಯಿತ್ತು. ವಚನ ಅದೇ ರೂಪದಲ್ಲಿ ಉಳಿಯುವುದು ಸಾಧ್ಯವಿಲ್ಲ ಎನ್ನುವುದೂ ಅವರಿಗೆ ಖಚಿತವಾಯಿತು. ಆಧುನಿಕ ವಚನ ಯಾವ ರೂಪ ತಾಳಬೇಕೆಂಬುದಕ್ಕೆ ಅವರು ವಿವಿಧ ಪ್ರಯೋಗಗಳನ್ನು ನಡೆಸಿದರು. ಹೊಸ ಕಾಲದ ಲೇಖಕರ ಈ ನಿಟ್ಟಿನ ಎಲ್ಲ ಪ್ರಯತ್ನಗಳಿಗೂ ಅವರು ಆಚಾರ್ಯರಾದರು.

ಕರ್ನಾಟ ಜನಪದವಿಂದು ಕುರಿಮಂದೆ, ನರಿಬಳಗ, ಹೆಬ್ಬಾವು ಸಂಸಾರ, ಎಮ್ಮೆ ದೊಡ್ಡಿ, ತಟ್ಟು ಕೊಟ್ಟಿಗೆ, ಇರುವೆ ಗೂಡು ; ಎಲ್ಲವನು ಎಲ್ಲರನು ಎಚ್ಚರಿಸಿ, ಇದಿರು ನಿಲ್ಲಿಸಿಕೊಂಡು, ಆಣತಿ ಪಾಲಿಸಯ್ಯ ; ಕನ್ನಡವ ಕಾಪಿಡಲು ಸಂಕಲ್ಪ ತಿಳಿಸಯ್ಯ, ಕೌಶಲ್ಯ ಕಲಿಸಯ್ಯ.

ಏಳನೆಯ ಮಾಸದಲ್ಲಿ ಬಸುರಿ ಬಲಬಾಹುವಿಗೆ ಕನ್ನಡ ರಕ್ಷೆ ಕಟ್ಟಬೇಕು. ಶಿಶು ಜನಿಸಿದ ಒಡನೆ ತಿನ್ನಿಸುವ ಬಜೆಬೆಣ್ಣೆಯ ಜೊತೆಗೆ ಕನ್ನಡವ ಬೆರೆಸುವುದ ಮರೆಯಬಾರದು. ಅನ್ಯಭಾಷೆಯ ಅನ್ಯಾಯ ಕಾಮವೆನ್ನುವ ಸಾಂಕ್ರಾಮಿಕ ಜಾಡ್ಯ ಸೋಂಕದಿರಲು, ಆರು ತಿಂಗಳು ತೀರುವುದರೊಳಗೆ ಕನ್ನಡ ಸಿಡುಬು ಹಾಕಿಸಬೇಕು. ಆಮೇಲೆ ಸಮಸಂವತ್ಸರ ನಡೆಯುವಾಗ ಕತ್ತರಿಸಲಯ್ಯ ಕನ್ನಡಕೆ ಮುಡಿಯ. ಓನಾಮ ಹಬ್ಬಕ್ಕೆ ಸ್ವಾಮಿಯಾಗಿರಲಿ ಕನ್ನಡದಿಂದ ಮಾಡಿದ ಸಿದ್ಧಿ ವಿಘ್ನೇಶ. ವಿದ್ಯಾಭ್ಯಾಸ ಆಗಬೇಕು ಕನ್ನಡ ಹಲಗೆ ಬಳಪ ಬಾಲಬೋಧೆಗಳ ಬಳಸುತ್ತ. ಮುಂಜಿಯಲಿ ಕನ್ನಡ ಜನಿವಾರ ಕನ್ನಡ ಗಾಯತ್ರಿ; ಮದುವೆಯಲಿ ಕನ್ನಡ ಭಾಷಿಂಗ ಕನ್ನಡ ಮಾಂಗಲ್ಯ, ಕನ್ನಡ ಸಂಕಲಿಕೆ ಕನ್ನಡ ಧಾರೆಯ ಸೀರೆ. ತರುವಾಯ ಮನೆ ಕಟ್ಟಬೇಕು ಕನ್ನಡ ಇಟ್ಟಿಗೆ ದೂಲ ಹೆಂಚುಗಳಿಂದ; ಮೇಲೆ ಏರಿಸಬೇಕು ಕನ್ನಡ ಬಾವುಟವ. ದಿನದಿನವು ಕನ್ನಡದ ಆಹಾರ, ಕನ್ನಡದ ವಿಹಾರ, ಕನ್ನಡದಲ್ಲಿ ಶಯನ; ಎದ್ದೊಡನೆ ಕನ್ನಡದ ಸ್ಮರಣೆ, ಮಧ್ಯಾಹ್ನ ಕನ್ನಡ ಪೂಜೆ. ಈ ನಾಡು ಆ ನಾಡು ನುಡಿಗಳೆಲ್ಲ ನೆಮ್ಮದಿಯ ದಾಸದಾಸಿಯರಾಗಿ ಓಡಾಡಿ ಗೆಯ್ಮೆ ದುಡಿದು ತಂದು ತುಂಬಿಸಲಿ ಕನ್ನಡ ಕುಟುಂಬದುಗ್ರಾಣವನ್ನ: ಕನ್ನಡ ಕುಲವ ಭಾರಿಯದಾಗಿ ಬೆಳೆಸಿ ಏಳಿಸಲಿ.

ಇಂಥ ಬಾಳ ಪದ್ಧತಿಯೆ ಕನ್ನಡಿಗನಿಗೆ ಸವಿ ಸಾರ್ಥಕವಾದ ನರಜನುಮದಾನಂದ ದೀಕ್ಷೆ ; ಅಪ್ಪಣೆಯ ಹಾಡಯ್ಯ, ಅನುಕೂಲ ಮಾಡಯ್ಯ. ವಿಧಿಕೂಸ ಹೊಕ್ಕಳಲಿ ಹೆತ್ತವನೆ ರಂಗಯ್ಯ.

ಹಾಗೆ ಕನಸಾಯ್ತು :  
ನೆನ್ನೆ ಮೊನ್ನೆ ಸರ್ಕಾರದಾಶ್ರಯದಲ್ಲಿ  
ಒಂದು ಗುಮಾಸ್ತಿಕೆಗಾಗಿ  
ಪರೀಕ್ಷೆ ತೆಗೆದುಕೊಂಡ ವಾಲ್ಮೀಕಿ.  
ಆ ವರ್ಷ ಸಾಹಿತ್ಯ ಪ್ರಶ್ನಪತ್ರಿಕೆಯಲಿ  
ರಾಮಾಯಣವ ಕುರಿತು ಕೆಲವ ಕೇಳಿತ್ತು.  
ವಾಲ್ಮೀಕಿ ತೇರ್ಗಡೆಯಾಗಲಿಲ್ಲ !  
ಏತಕ್ಕೆ ಆಗಲಿಲ್ಲ ?  
ಗೋವಿಂದರಾಜ ತಿಲಕ ಮಹೇಶ್ವರ ತೀರ್ಥ  
ಯಾವೊಂದು ವ್ಯಾಖ್ಯಾನವನು ಅವ ಓದಿಯೇ ಇರಲಿಲ್ಲ.  
ಏನಜ್ಞಾನ, ರಂಗ ಸರ್ವಜ್ಞ !

ಮನುಜನಿಗೂ ಮುಳ್ಳುಹಂದಿಗೂ ಸಾಮ್ಯವಂತೆ, ಬೇರ್ಪಡಿಸುವ ಮುಖ್ಯ ವ್ಯತ್ಯಾಸವೊಂದರ ಹೊರತು: ಕಣೆಗಳೆಲ್ಲ ಅದರ ಮೈಯಿಂದ ಹೊರಗೆ, ಅವನಿಗಾದರೊ ಒಳಗೆ ; ಮನುಷ್ಯನಿಗೆಂಥ ಪ್ರಶಸ್ತಿಪತ್ರ ಇದು, ರಂಗೇಶ ?

**ವಚನಕಾರರು :** ಕನ್ನಡನಾಡಿನಲ್ಲಿ ಒಂದು ವ್ಯಾಪಕವಾದ ಧಾರ್ಮಿಕ ಸಾಮಾಜಿಕ ಕ್ರಾಂತಿಯನ್ನೇ ಪ್ರಾರಂಭಿಸಿದ ವೀರಶೈವ ವಚನಕಾರರು ಸಮಾಜ ವಿಮರ್ಶಕರು. ತಮ್ಮ ಸುತ್ತಲೂ ಜನರಲ್ಲಿದ್ದ ಹಲವೆಂಟು ಕುಂದುಗಳನ್ನೂ ಡಂಭಾಚಾರಗಳನ್ನೂ ಕಂಡು ಸಿಡಿಮಿಡಿಗೊಂಡು, ಬಟ್ಟೆಯ ಮೇಲಣ ದೂಳನ್ನು ಕೊಡಹುವಂತೆ ವಿಡಂಬನದ ನೆರವಿನಿಂದ ಸಮಾಜವನ್ನು ಶುದ್ಧೀಕರಿಸಲು ಯತ್ನಿಸಿದರು. ವಚನಕಾರರಲ್ಲಿ ಹಿರಿಯ ರೆನಿಸಿಕೊಂಡವರಿಗಿಂತಲೂ ಪೂರ್ವಾಗ್ರಹವಿನಿತೂ ಇಲ್ಲ. ಅವರಿಗೆ ತಮ್ಮ ನಾಡವರಲ್ಲಿ ಕೇವಲ ಪ್ರೀತಿ. ಅವರ ವಚನಗಳಲ್ಲಿ ಕಟಕಿ, ಮೂದಲೆ, ಅಪಹಾಸ್ಯಗಳಿಗಿಂತ ಪರಿಹಾಸ, ಚತುರೋಕ್ತಿಗಳಿಗೆ ಹೆಚ್ಚು ಮೌಲ್ಯ. ಆದರೆ ಸಾಂದರ್ಭಿಕವಾಗಿ ಮೂದಲೆ, ಕಟಕಿ, ನಿಂದೆಗಳಲ್ಲೂ ಅವರು ತೊಡಗದವರಲ್ಲ. ಬಸವಣ್ಣನವರಿಗಿಂತ ಮುಂಚೆ ಇದ್ದ ಸಕಲೇಶಮಾದರಸನ—ಜನಮೆಚ್ಚೆ ಶುದ್ಧನಲ್ಲದೆ ಮನಮೆಚ್ಚೆ ಶುದ್ಧನಲ್ಲಯ್ಯಾ, ವೇಷದಲ್ಲಧಿಕನಲ್ಲದೆ ಭಾಷೆಯಲ್ಲಧಿಕನಲ್ಲಯ್ಯಾ, ನುಡಿಯ ಜಾಣನಲ್ಲದೆ ನಡೆಯ ಜಾಣ ನಲ್ಲಯ್ಯ. ಧನದೊರೆಯದಿರ್ದೊಡೆ ನಿಃಪ್ರಿಯನಲ್ಲದೆ ಧನದೊರೆತು ನಿಃಪ್ರಿಯ ನಲ್ಲಯ್ಯಾ. ಏಕಾಂತದ್ರೋಹಿ, ಗುಪ್ತಪಾತಕಿ, ಯುಕ್ತಿಹೀನಂಗೆ ಸಕಲೇಶ್ವರದೇವ ಎಂತೊಲಿವ ?—ಎಂಬ ವಚನದಲ್ಲಿ ವಚನಕಾರರ ಸಮಾಜವೀಕ್ಷಣೆಯ ವಿಶಿಷ್ಟ ದೃಷ್ಟಿ ಆ ವೇಳೆಗಾಗಲೇ ಪ್ರಕಟವಾಗಿತ್ತು. ಬಸವಣ್ಣನವರು ಕಲ್ಯಾಣದಲ್ಲಿ ನೆಲಸುವ ವೇಳೆಗೆ ಹಲವರು ಶಿವಶರಣರು ಅಲ್ಲಿಗೆ ಬಂದು ಸೇರಿದ್ದರು. ವೈರಾಗ್ಯ ಜ್ಞಾನನಿಧಿ ಅಲ್ಲಮ, ಯೋಗಿ ಚೆನ್ನಬಸವಣ್ಣ, ಕರ್ಮದ ನೆಲೆ ಸಿದ್ಧರಾಮ, ಶರಣೆ ಮಹದೇವಿಯಕ್ಕ—ಇಂಥವರೆಲ್ಲ ಒಂದೆಡೆ ಸೇರಿದಾಗ ಸಂಭವಿಸಿದ್ದು ಸಮಾಜಕ್ರಾಂತಿ, ಕೊಳಕಿನ ಕೊಲೆ. ದೋಷವನ್ನು ಕಂಡಾಗ ನಿರ್ದಾಕ್ಷಿಣ್ಯವಾಗಿ ಟೀಕಿಸುವ ಹಾದಿ ಇವರದು. ಸ್ಟೀಲ್ ಎಂಬ ಆಂಗ್ಲ ಪ್ರಬಂಧಕಾರ ಹೇಳುವ ಸಾತ್ತ್ವಿಕಕ್ರೋಧ ವಚನಕಾರರದು.

ಶಿವಶರಣರ ವಚನಗಳು ನಾನಾ ತೆರ : ತಮ್ಮ ಸಾಧನೆಯಲ್ಲಿ ಸಿದ್ಧಿ ದೊರಕ ದುದಕ್ಕಾಗಿ ದೇವರನ್ನೇ ವಿಡಂಬಿಸುವ ವಚನಗಳದು ಒಂದು ಗುಂಪು. ಧರ್ಮದ ಹೆಸರಿನಲ್ಲಿ ಸಮಾಜದಲ್ಲಿ ಆಚರಣೆಯಲ್ಲಿದ್ದ ಮೂಢನಂಬಿಕೆಗಳನ್ನೂ ಅನ್ಯಾಯಗಳನ್ನೂ ಬಯಲಿಗೆಳೆದವು ಇನ್ನೊಂದು ಗುಂಪು. ಈ ಜೀವನ ನಿತ್ಯವಲ್ಲ-ಎಂಬವು ಮೂರನೆಯ ಗುಂಪು. ಐಹಿಕ ಸುಖೋದ್ದೇಶದಿಂದ ವೀರಶೈವ ಮತಸ್ವೀಕಾರ ಮಾಡಿ, ಆ ಮತಕ್ಕೇ ಕಳಂಕ ತರುತ್ತಿದ್ದವರನ್ನು ಉದ್ದೇಶಿಸಿ ಆಡಿದ ವಚನಗಳದು ನಾಲ್ಕನೆಯ ಗುಂಪು. ವೀರಶೈವ ಮತದ ಮುನ್ನಡೆಯನ್ನು ಕಂಡು ಅಸೂಯೆಗೊಂಡು ಅವನ್ನು ತೆಗಳಿದವ ರಿಗೆ ಉತ್ತರ ರೂಪವಾಗಿ ಬಂದವು ಏಷ್ಟೋ ವಚನಗಳು. ಮತ, ಧರ್ಮ, ಭಕ್ತಿ, ಸಾಧನೆ—ಮುಂತಾದವುಗಳಿಗೆ ಸಂಬಂಧಿಸಿದ ವಚನಗಳೂ ಅಸಂಖ್ಯಾತವಾಗುಂಟು. ಕೊನೆಯವನ್ನು ಬಿಟ್ಟು ಉಳಿದೆಲ್ಲ ವಚನಗಳಲ್ಲೂ ವಿಡಂಬನೆಯ ನಾನಾ ಪ್ರಕಾರ ಗಳನ್ನು ಕಾಣಬಹುದು.

ಭಕ್ತನಾದಾತ ದೇವರ ಒಲುಮೆಯನ್ನು ಗುರಿಯಾಗಿಟ್ಟುಕೊಂಡು ಸಾಧನೆ ಮಾಡಿ ದಾಗ ಅವನನ್ನು ದೇವರು ನಾನಾ ವಿಧವಾಗಿ ಪರೀಕ್ಷಿಸುತ್ತಾನೆ. ಎಲ್ಲದರಲ್ಲೂ ಗೆದ್ದಮೇಲೆಯೇ ದೇವರ ಅನುಗ್ರಹ. ಆದರೆ ಭಕ್ತನಿಗೆ ಅಸಹನೆ, ದುಗುಡ. ದೇವರ ಒಳ್ಳೆಯತನದಲ್ಲೆ ಸಂದೇಹ. ಆಗ ಹೊರಡುತ್ತದೆ, ಅವನ ಬಾಯಿಂದ ವಿಡಂಬನೆ : ಹುಟ್ಟೆಂದು ಲೋಕದಲ್ಲಿ ಹುಟ್ಟಿಸಿ ಇಳಿಯಬಿಟ್ಟರೆ ನಿಮ್ಮ ನಗು ವರಯ್ಯ.

ಆದರೆ ದೇವರ ಒಲುಮೆಗಾಗಿ ದೃಢಚಿತ್ತದಿಂದ ಸಾಧನೆ ಮುಂದುವರಿಸುವ ವರಾದರೂ ಎಷ್ಟು ಮಂದಿ ? ಅನೇಕರದು ಬರಿಯ ತೋರಿಕೆಯ ಭಕ್ತಿ. ಏತ ತಲೆವಾಗಿದರೇನು, ಗುರುಭಕ್ತನಾಗಬಲ್ಲುದೆ ? ಇಕ್ಕುಳ ಕೈಮುಗಿದರೇನು, ಭೃತ್ಯಾ ಚಾರಿಯಾಗಬಲ್ಲುದೆ ? ಗಿಳಿಯೋದಿದರೇನು, ಲಿಂಗವೇದಿಯಾಗಬಲ್ಲುದೆ ? ಈ ರೀತಿ ಆಡಂಬರದ ಭಕ್ತಿ ತೋರಿ, ಇಹವನ್ನೇ ಶಾಶ್ವತವೆಂದು ನಂಬಿ ಫಲವೇನು ? ನೀರ ಬೊಬ್ಬುಳಿಗೆ ಕಬ್ಬುನದ ಕಟ್ಟ ಕೊಟ್ಟು ಸುರಕ್ಷಿತ ಮಾಡುವ ಭರ ಇದು.

ಆಗಿನ ಕಾಲದ ಮತವಾದರೂ ಅಷ್ಟೇ. ಆಡುವುದೊಂದು, ಮಾಡುವುದೊಂದು. ಕಲ್ಲ ನಾಗರಕ್ಕೆ ಹಾಲನೆರೆಯುವುದು. ದಿಟದ ನಾಗರ ಕಂಡರೆ ಕೊಲ್ಲೆಂಬುದು. ಕಿಚ್ಚು ದೈವವೆಂದು ಹವಿಯನಿಕ್ಕುವ ಹಾರುವರ ಮನೆಯಲು ಕಿಚ್ಚೆದ್ದು ಸುಡುವಾಗ ಬಚ್ಚಲ ನೀರ ಬೀದಿಯ ದೂಳವ ಹೊಯ್ದು ಬೊಬ್ಬಿಟ್ಟೆಲ್ಲರ ಕರೆಯುವ ರಯ್ಯ.

ಆದರೆ ವೀರಶೈವ ಧರ್ಮಾವಲಂಬಿಗಳೆಲ್ಲರೂ ಶಿವಜ್ಞಾನಿಗಳಲ್ಲ. ಅವರಲ್ಲಿ ಜಳ್ಳೂ ಉಂಟು, ಕಾಳೂ ಉಂಟು. ಕಷ್ಟಜೀವಿ ಮನುಜರೆಲ್ಲ ನೆಟ್ಟನೆ ಶಿವಜ್ಞಾನಿ ಗಳಾದರೆ ಮುಂದೆ ಭವದ ಬಳ್ಳಿಗೆ ಬೀಜವಿನ್ನೆಲ್ಲಿಹುದೊ.

ವಚನಕಾರರು ಎಲ್ಲರೂ ಒಂದೇ ತೆರನಲ್ಲ. ಒಬ್ಬೊಬ್ಬರ ವಚನ ಒಂದೊಂದು ರೀತಿಯದು. ಬಸವಣ್ಣನವರದು ತಿಳಿ ಮನಸ್ಸು. ಅವರಿಗೆ ಬೆಳ್ಳಗಿರುವುದೆಲ್ಲ ಹಾಲು. ಅಲ್ಲಮಪ್ರಭು ಬೇರೆ ತೆರ : ನಿರ್ದಾಕ್ಷಿಣ್ಯಪರ. ಲಿಂಗೈಕಶರಣರೆಂದು ತಿಳಿದಾಗ ಅವರಿಗೆ ಪ್ರಭುವಿನ ಪುರಸ್ಕಾರ. ಅಂಗಜೀವಿಗಳೆಲ್ಲ ಅಶನಕ್ಕೆ ನೆರೆದು ಲಿಂಗವಾರ್ತೆಯ ನುಡಿವರಯ್ಯಾ—ಎಂದು ನೇರವಾಗಿ ಹೇಳುವುದವರ ಸ್ವಭಾವ. ಗುಹೇಶ್ವರಾ ನೀನು ಕಲ್ಲಾದರೆ ನಾನೇನಪ್ಪೆನಯ್ಯಾ ?—ಎಂಬ ವಚನದ ಧ್ವನಿ ಬಲು ಹರಿತ. ಚೆನ್ನ ಬಸವಣ್ಣ ಮನೆವಾರ್ತೆಯ ಯಜಮಾನ. ಅಕ್ಕಮಹಾದೇವಿಯದು ಭಾವಾವೇಶ. ಇವರೆಲ್ಲ ಒಂದು ಕಡೆ ಸೇರಿ ಸಮಾಜದ ಮುಖಕ್ಕೆ ಉಬ್ಬುತಗ್ಗಿನ ಕನ್ನಡಿ ಹಿಡಿದು ಅದರ ವಕ್ರತೆಗಳನ್ನೆತ್ತಿ ತೋರಿದರು.

**ಹರಿಹರ ಯುಗ :** ಶಿವಶರಣರ ಸುತ್ತಲೂ ರಗಳೆಯ ಪ್ರಭಾವಳಿಯನ್ನು ನಿರ್ಮಿಸಿದವನೆಂದರೆ ಹರಿಹರ. ಈತ ವಿಡಂಬನಕ್ಕೂ ಕೈ ಹಚ್ಚಿದ ಕವಿ. ಒಂದು ಸುಂದರ ವರ್ಣನೆ, ಒಂದು ಮೈಮರೆಸುವ ಭಾವ, ಒಂದು ವಿಡಂಬನ—ಹೀಗೆ ಮೂರು ಕಾಲುಗಳಲ್ಲಿ ಇವನ ರಗಳೆಗಳು ಮುಂದೋಡುತ್ತವೆ. ಬಹುಶಃ ನಂಬಿಯಣ್ಣನ ರಗಳೆಯೊಂದನ್ನು ಬಿಟ್ಟರೆ ಉಳಿದೆಲ್ಲ ರಗಳೆಗಳಲ್ಲೂ ಅನ್ಯಮತ ವಿಡಂಬನ ಧಾರಾಳವಾಗಿ ಹರಿದಿದೆ. ಜಯಸಿಂಹರಾಯನ ರಾಜಧಾನಿಯಲ್ಲಿದ್ದ ವಿಷ್ಣುಗೃಹ ಕೋಳಿಯ ಗೂಡಿನಂತೆ ಇತ್ತು. ಶಂಕರದಾಸಿಮಯ್ಯ ತನ್ನ ನೊಸಲ ಕಣ್ಣು ತೆರೆದೊಡನೆ ಬೆಂಕಿ ಧಗಧಗಿಸಿ ಸುಳಿದು, ಧಗಿಲ್ ಧಗಿಲೆಂದು ಧೊಂಕನೆ ನೆಗೆದು, ಮುಂಗಾಣಿಸಿ ಹರಿದು, ನೃಸಿಂಹ ಪ್ರತಿಮೆಯುಮಂ ನೆರೆದುರುಹಿತು. ಆಗ ಜಯಸಿಂಹರಾಯನುಂ ವೈಷ್ಣವರುಂ ವಾದಿಗಳುಂ ಉರಿದು ಬೆಂಗಂಗೆಡೆ ಪರಸಮಯಿ ಗಳ್ಮೊರೆಯಿಟ್ಟು ಹಲ್ಲಂ ಕಿರಿದು ಹುಲ್ಲಂ ಕರ್ಚಿದರು. ಪದ್ಮಾವತಿಯ ಪಿತನಾದ ಜೈನ ಪಾರಿಷ ಪಂಡಿತಂ ಮೋರೆಗೆಟ್ಟ ಮತಿಹೀನಂ. ಕೋಪದಿಂ ಬಂದ ಹೊಸ ಋಷಿಯರು...ನೀಚರುಂ...ಬರಿಯ ಭಂಡರುಂ ಲೋಚಿನ ತಾಳ್ದರುಂ ಚಿತ್ತಲೆಯ ಘೃಷ್ಟರುಂ ಕುಂಚದ ಮಿಳಿರುಂ ತಟ್ಟುಗಳ ಅಜ್ಞಾನಿಗಳುಂ ನಾಚುವಾಯ ನರಕಿಗಳುಂ ಸರ್ವಮಲ ಭಾಂಡರುಂ. ಹರಿಹರ ಹಿರಿಯ ಕವಿಯಾದರೂ ತನ್ನ ಧರ್ಮದ ಹಿರಿಮೆ ಸಾಧಿಸುವ ವಿಚಾರ ಬಂದಾಗ ಆತ ಹಿಂದೆ ಮುಂದೆ ನೋಡುವುದಿಲ್ಲ ; ಅನ್ಯ ಮತಗಳ ನಿಂದೆಯನ್ನೇ ನೇಯುತ್ತಾನೆ. ಔಚಿತ್ಯಪ್ರಜ್ಞೆ ತಪ್ಪಿತೇನೋ ಎನಿಸಿದರೂ ಕಾವ್ಯಾವೇಶದ ದೃಷ್ಟಿಯಿಂದ ಆ ಕುಂದನ್ನು ಮರೆಯತಕ್ಕದ್ದು. ವಿಡಂಬನದ ಎಷ್ಟೊಂದು ಪ್ರಕಾರಗಳು ಎಷ್ಟೊಂದು ತೀವ್ರವಾಗಿ ಬಂದಿವೆಯೆಂಬುದು ಇಲ್ಲಿ ಗಮನಿಸಬೇಕಾದ ವಿಚಾರ. ಹರಿಹರನಿಂದೀಚೆಗೆ ಇತಿಹಾಸದಲ್ಲಿ ಬಹುದೂರ ಮುಂದೆ ಬಂದಿರುವ ಈ ಶತಮಾನದ ಜನಕ್ಕೆ ಆಗಿನ ವಾತಾವರಣದ ಇಣಿಕು ನೋಟ ಪಡೆಯಲು ಇಂಥ ಪರಮತ ವಿಡಂಬನಗಳೂ ಒಂದು ಸಾಧನ. ಹರಿಹರನ ರಗಳೆ ಗಳ ಇನ್ನು ಕೆಲವು ಸಾಲುಗಳನ್ನೂ ನೋಡಹುದು. ಕರ್ಮಲತೆಯಂತಿದ್ದ ಜನ್ನಿ ವಾರಮಂ ಕಳೆದು ಬಿಸುಟು, ಹೋತಿನ ಗಂಟಲಂ ಬಿಗಿವಂತಿರ್ದ ಮೌಂಜಿಯಂ ಹರಿದು ಬಿಸುಟು, ನವ್ಯದುಕೂಲಮಂ ತೆಗೆದುಟ್ಟು, ಬಸವಣ್ಣನವರು ಬಾಗೇವಾಡಿ ಯಿಂದ ಕಪ್ಪಡಿಸಂಗಮಕ್ಕೆ ಹೋದರು. ಬಿಜ್ಜಳನ ಗುರುಗಳು ಕಾಗೆಗಳಂತೆ ಚೀರಿ, ಗೂಗೆಗಳಂತೆ ಪಲುಂಬಿ, ಕತ್ತೆಗಳಂತೆ ತೊಳಲಿ, ಕೋಡಗಗಳಂತೆ ಪಲುಗಿರಿದು, ನರಿಗಳಂತೆ ಜಿನುಗಿ ಮಾತಾಡುವರು. ಶರಣರನ್ನು ನಿಂದಿಸುತ್ತಿದ್ದವರಂತೂ ಭಾಂಡಸರು, ವೇದಜಡರು, ಮಟ್ಟೆಯ ಮರುಳ್ಗಳು, ಹೆಬ್ಬೇಳಿಗಳು, ದರ್ಭೆಯ ನಿರ್ಭಾಗ್ಯರು. ಹರಿಹರನ ಬೈಗುಳದಲ್ಲೂ ಮಂತ್ರಶಕ್ತಿಯುಂಟು. ಶಬ್ದಗಳ ಆಯ್ಕೆ ಅಮೋಘ. ಹರಿಹರನ ಭರ್ತ್ಸನೆಗೆ ಈಡಾಗುವಂಥ ವ್ಯವಸ್ಥೆಯೊಂದಿದ್ದದ್ದರಿಂದಲೇ ಈ ಎಲ್ಲ ವಾಕ್‌ಪ್ರಹಾರ ; ನಿಂದೆ ಮೂದಲೆಗಳ ಚಂಡೆಮದ್ದಳೆ. ನಯಸೇನ ಬ್ರಹ್ಮ ಶಿವ ವೃತ್ತವಿಲಾಸರ ಚತುರೋಕ್ತಿ ಇಲ್ಲಿ ಕಡಿಮೆಯಾದರೂ ಕಟಕಿಗೇನೂ ಕೊರತೆ ಯಿಲ್ಲ. ಚತುರತೆಯ ಅರಕೆಯನ್ನು ಇವನ ಆವೇಶ ಭರ್ತಿ ಮಾಡುತ್ತದೆ.

ರಗಳೆಯನ್ನು ರೂಪಿಸಿದಾತ ಹರಿಹರ ಹೇಗೋ ಹಾಗೆ ಷಟ್ಪದಿಯ ಪಿತ ರಾಘ ವಾಂಕ. ಆತನ ಸೋಮನಾಥ ಚರಿತ್ರೆಯಲ್ಲಿ ಜೈನಮತ ಹೆಚ್ಚಾಗಿ ವಿಡಂಬನೆಗೆ ಈಡಾಗಿದೆ. ನರನೊಬ್ಬನ ಸತ್ಯವ್ರತವನ್ನು ಹೊಗಳ ಹೊರಟ ಹರಿಶ್ಚಂದ್ರ ಕಾವ್ಯ ದಲ್ಲಿ ಉದಾತ್ತ ವಿಡಂಬನೆಯನ್ನು ಎರಡು ಕಡೆಗಳಲ್ಲಿ ಕಾಣಬಹುದು. ವಸಿಷ್ಠ ವಿಶ್ವಾಮಿತ್ರರ ಸಂವಾದ ಮತ್ತು ಹರಿಶ್ಚಂದ್ರ-ಗಾಯಕಿಯರ ಮಾತಿನ ಚಕಮಕಿಗಳು ಕಟಕಿ ಮೂದಲೆ ಅಪಹಾಸ್ಯ ಚತುರೋಕ್ತಿ ವಕ್ರನುಡಿಗಳ ಚಕ್ರಬಂಧ.

ಚಾಮರಸನ ಪ್ರಭುಲಿಂಗಲೀಲೆಯಲ್ಲಿ ಕಾಣುವುದು ನವುರಾದ ವಿಡಂಬನ. ಕವಿ ಯದು ವ್ಯಂಗ್ಯಾನುಭೂತಿ. ಆ ಕೃತಿ, ಸತ್ಯವರ ಕಥೆಯಲ್ಲ ; ಜನನದ ಕುತ್ತದಲಿ ಕುದಿಕುದಿದು ಕರ್ಮದ ಕತ್ತಲೆಗೆ ಸಿಲುಕುವರ ಸೀಮೆಯ ಮಾತು ತಾನಲ್ಲ ; ಹೊತ್ತು ಹೋಗದ ಪುಂಡರಾಲಿಪ ಮತ್ತಮತಿಗಳ ಗೋಷ್ಠಿಯಲ್ಲ. ಆ ಕೃತಿಯಲ್ಲಿ ಕಾಣುವುದು ಪಾರಮಾರ್ಥಿಕ ವಿಡಂಬನೆ. ಮಾನವ ದೇವತ್ವಕ್ಕಡರಲು ಅಡ್ಡವಾಗಿ ಬರುವ ಕೊಳೆ ಯನ್ನು ಕಳೆಯಲು ವಿಡಂಬನವೊಂದು ಮೃದುವಾದ ಪೊರಕೆ. ಮಾಯೆ ಅರಣ್ಯ ವನ್ನು ಹೊಕ್ಕಾಗ ತಪಸ್ವಿಗಳು ಆಕೆಯನ್ನು ಕಂಡು ತಮ್ಮ ಕಂತೆ ಕಚ್ಚಟಗಳನ್ನೂ ವಿಭೂತಿಯ ಬುಟ್ಟಿಗಳನ್ನೂ ಎತ್ತಿಕೊಂಡು ಎದ್ದೋಡಿದರು ಹುಲಿಗಂಡ ಹುಲ್ಲೆ ಗಳಂತೆ ದೆಸೆದೆಸೆಗೆ. ಅಲ್ಲಮಪ್ರಭು ಕಂಡ ಸಿದ್ಧರಾಮನದು ಮೂಢಭಕ್ತಿ. ದೇವ ರನ್ನು ತನ್ನೊಳಗೇ ಕಂಡುಕೊಳ್ಳುವ ಬದಲು, ಸಕಲಕಲ್ಲನು ಕಡಿದು ಕಲ್ಲಿಗೆ ಶಿವನ

ದೇಗುಲವೆಂದು ಮಾಡಿಸಿ ಅಲ್ಲಿ ದೇವರನ್ನು ಹುಡುಕುತ್ತಿದ್ದಾನೆ. ಅವನ ಆಗಮ ಯುಕುತಿಯೆಲ್ಲ ಪಾಷಾಣಕ್ಕೆ ಬಂದುದು. ಅಲ್ಲಮಪ್ರಭುವಿನಿಂದ ಪರಿವರ್ತನೆಗೆ ಒಳಗಾದ ಇನ್ನೊಬ್ಬನೆಂದರೆ ಗೋರಕ್ಷನೆಂಬ ಸಿದ್ಧ. ತನ್ನ ವಿದ್ಯೆಯ ಸಿದ್ಧಿಯಿಂದ ಅವನಿಗೆ ವಜ್ರದೇಹ ಪ್ರಾಪ್ತವಾಗಿತ್ತು. ಅದೇ ಮುಕ್ತಿಯೆಂದು ಆತನಿಗೆ ಭ್ರಾಂತಿ. ಹೀಗೆ ಈ ಕಥೆಯ ಉದ್ದಕ್ಕೂ ಧರ್ಮನೀತಿಗಳೊಡನೆ ವಿಡಂಬನದ ಕಣ್ಣುಮುಚ್ಚಾಲೆಯಾಟ ನಡೆದಿದೆ. ಇಲ್ಲಿಯ ವಿಡಂಬನದ್ದು ಪ್ರಭುಘೂಚಿತವಾದ ಗಾಂಭೀರ್ಯ. ಓರಿತನ, ಹುಚ್ಚುನಗೆ, ತುಂಟನಗೆ, ನಂಜುನಗೆ ಇಲ್ಲಿ ಬಹುತೇಕ ವರ್ಜ್ಯ.

ಕುಮಾರವ್ಯಾಸನ ಭಾರತ ವಿಡಂಬನ ಕಾವ್ಯವಲ್ಲ. ಆದರೆ ಮಹಾಭಾರತದ ಕಥೆಯಲ್ಲಿ ಯಾವುದಕ್ಕೂ ಅಭಾವವಿಲ್ಲ. ಕಥೆಯ ಹಂದರದ ಮೇಲೆ ವಿಡಂಬನದ ನಾನಾ ಬಗೆಯ ಬಳ್ಳಿಗಳನ್ನೇ ಕುವರವ್ಯಾಸ ಹಬ್ಬಿಸಿದ್ದಾನೆ. ಬೇಂದ್ರೆಯವರೆಂದಿರುವಂತೆ ಕಟಕಿ, ಬಿರುನುಡಿ, ಕಿರುನುಡಿ, ವ್ಯಂಗ್ಯ, ಸರಸ, ವಕ್ರೋಕ್ತಿ, ಜಾಣ್ನುಡಿ, ಪರಿಹಾಸ—ಎಲ್ಲವೂ ಅವನ ಬತ್ತಳಿಕೆಯಲ್ಲಿವೆ. ಯುದ್ಧಭೀರುವನ್ನು ಯುದ್ಧ ವೀರನ ಸೋಗಿನಲ್ಲಿ ಕುಣಿಸಿರುವ ಉತ್ತರನ ಪಾತ್ರವೊಂದು ಉದಾಹರಣೆ. ಧನು ತನಗೆ ನೆಗಹಲ್ಕೆ ಕೃಷ್ಣಾಜಿನವೊ ಸಾಲಗ್ರಾಮದೇವರೊ ವಿನುತ ತುಳಸಿಯೊ ಕುಶವೊ ದರ್ಭೆಯೊ ಸಮಿಧೆಗಳ ಹೊರೆಯೊ ?—ಎಂದು ಮುಂತಾಗಿ ದ್ರೌಪದೀ ಸ್ವಯಂವರ ಕಾಲದಲ್ಲಿ ಬ್ರಾಹ್ಮಣ ವೇಷದ ಅರ್ಜುನನ ಬಗ್ಗೆ ಆಡಿಸಿರುವ ಮಾತು ಅಪಹಾಸ್ಯದ ಹುಚ್ಚುಹೊಳೆ. ಪತಿಗಳೆನ್ನನು ಮಾರಿ ಧರ್ಮಸ್ಥಿತಿಯ ಕೊಂಡರು—ಎಂದು ದ್ರೌಪದಿಯಾಡುವ ಮಾತು ಕಟಕಿಯ ಕೂರ್ಗಣೆ. ಹಿರಿಯರಿಲ್ಲದ ಸಭೆ ನೆರವಿಯದು ಸಭೆಯಲ್ಲ—ಎಂಬುದರ ಅರ್ಥ ಆ ಶಬ್ದಗಳಿಗೂ ಮೀರಿದ್ದು. ಕವಿತಾಗೌರವಕ್ಕೆ ಕುಂದಿಲ್ಲದಂತೆ ಅಲ್ಲಲ್ಲಿ ವಿಡಂಬನದ ಹರಳುಗಳನ್ನು ತನ್ನ ಮಹಾಭಾರತದ ಕುಂದಣದಲ್ಲಿಟ್ಟಿದ್ದಾನೆ — ಕುಮಾರವ್ಯಾಸ. ಆದರೂ ಇದು ವಿಡಂಬನ ಸಾಹಿತ್ಯವಲ್ಲ.

**ದಾಸಯುಗ :** ಭಕ್ತಿಪ್ರಧಾನವಾದ ದಾಸಸಾಹಿತ್ಯದಲ್ಲಿ ವಿಡಂಬನಕ್ಕೇನೂ ಕೊರತೆಯಿಲ್ಲ. ವಚನ ಸಾಹಿತ್ಯದ ಮನೋಧರ್ಮವನ್ನೇ ಇಲ್ಲೂ ಕಾಣಬಹುದು. ಆರಾಧ್ಯದೈವ ಮಾತ್ರ ಬೇರೆ ಅಷ್ಟೆ. ದಾಸರದು ವಿಷ್ಣುಪಾರಮ್ಯ. ಸಮಯದಲ್ಲಿ ಕೈಕೊಡುತ್ತಿದ್ದ ದೇವರನ್ನು ಕುರಿತು, ಆರು ಬದುಕಿದರಯ್ಯ ಹರಿ ನಿನ್ನ ನಂಬಿ ? ತೋರು ಈ ಜಗದೊಳಗೆ ಒಬ್ಬರನು ಕಾಣೆ—ಎನ್ನುತ್ತಾರೆ ದಾಸರು. ದೇವರನ್ನು ಬಿಟ್ಟು ಮಾನವರ ಬಳಿಗೆ ಬಂದರೂ ಅವರಲ್ಲೂ ಹಲವೊಮ್ಮೆ ಹೃದಯದ ಅಭಾವ. ಭಾರತ ರಾಮಾಯಣ ಪಂಚರಾತ್ರಾಗಮ ಸಾರತತ್ತ್ವದ ಬಿಂದು ಒಳಗೆ ಬಿದ್ದೀತೆಂದು ಗಯ್ಯಾಳಿ ಮೂಳೀ ಕದವನಿಕ್ಕಿದಾಳಿದಕೊ. ವ್ಯಕ್ತಿ ಹೀಗಿದ್ದಮೇಲೆ ಸಮಾಜವೂ ಇದರಪ್ಪ. ಉದರ ವೈರಾಗ್ಯವಿದು, ನಮ್ಮ ಪದುಮನಾಭನಲಿ ಲೇಶಭಕುತಿಯಿಲ್ಲ. ಮಡಿಮಡಿಮಡಿಯೆಂದು ಮೂರು ಮಾರು ಹಾರುತಿ ಮಡಿಯೆಲ್ಲಿ ಬಂತೆ ಬಿಕನಾಸಿ ? ಶಿವೋಹಂ ಎಂದು ಕಣ್ಣುಮುಚ್ಚಿ ಕೂತ ಬೂಟಕರನ್ನೂ ದಾಸರು ಬಿಟ್ಟಿಲ್ಲ. ಶಿವನೀ ಹೇಗಾದ್ಯೊ ? . . . ಶಿವ ನೀನಾದರೆ ಶಿವನರ್ಧಾಂಗಿಗೆ ಧವನಾದೆಯಲ್ಲೊ ಅವಿವೇಕಿ ಮೂಢ !—ಎನ್ನುತ್ತಾರೆ ಇವರು. ಸಾಹಿತ್ಯದ ನಿಲುಗನ್ನಡಿಗೆ ವಿಡಂಬನದ ಪಾದರಸ ಬಳಿದು ಅದರಲ್ಲಿ ಸಮಾಜದ ವಕ್ರಮುಖವನ್ನು ತೋರಿಸಿ ನಗಿಸುವ ಕೆಲಸದಲ್ಲಿ ದಾಸರೂ ಅಸಾಧ್ಯರು.

**ರಾಮಧಾನ್ಯ ಚರಿತ್ರೆ :** ಕನಕದಾಸರು ಬರೆದ ರಾಮಧಾನ್ಯ ಚರಿತ್ರೆ ಒಂದು ವಿಡಂಬನ ಕಾವ್ಯ. ರಾವಣಸಂಹಾರ ಮಾಡಿ ಸೀತೆಯೊಂದಿಗೆ ರಾಮ ಅಯೋಧ್ಯೆಗೆ ಹಿಂದಿರುಗುತ್ತಿದ್ದಾಗ ಹಾದಿಯಲ್ಲಿ ಗೌತಮಮುನಿಯ ಆಶ್ರಮದಲ್ಲಿ ನಡೆದ ಸಮಾರಾಧನೆಯ ವ್ಯಾಜದಿಂದಾಗಿ ರಾಗಿ ಬತ್ತಗಳ ನಡುವೆ ವ್ಯಾಜ್ಯವುಂಟಾಗುತ್ತದೆ. ತಂತಮ್ಮ ಹಿರಿಮೆಗಳ ಬಗ್ಗೆ ಈ ಎರಡು ಧಾನ್ಯಗಳ ನಡುವೆ ನಡೆಯುವ ವಾಗ್ವಾದ ಪೂರ ನಗೆಯಲ್ಲದ್ದಿದ ವಿಡಂಬನ, ಶ್ರೀಮಂತರ ಮತ್ತು ಬಡವರ ಅಂತರದ ಚಿತ್ರ, ಸುಸಂಸ್ಕೃತರೆಂದುಕೊಳ್ಳುವ ಡಾಂಭಿಕರನ್ನು ಕುರಿತ ನಗೆಪಾಟಲು. ಬುಧರು ಜರೆದು ನಿರಾಕರಿಸಿ ಬಿಡಲಂತು ನೀ ಶೂದ್ರಾನ್ನವಾದೆಯಲ— ಎಂದು ಬತ್ತದಿಂದ ರಾಗಿಯ ಬಗ್ಗೆ ತಿರಸ್ಕಾರ. ಕ್ಷಿತಿಯಮರರೂಪ ನವಮನದಲಿ ಸುವ್ರತ ಸುಭೋಜನ ಪರಮ ಮಂತ್ರಾಕ್ಷತೆಗಳಲಿ . . . . ದೇವರಿಗತಿಶಯದ ನೈವೇದ್ಯ ತಾನಹೆನೆಂದು ಬತ್ತಕ್ಕೆ ಜಂಬ. ಗೋವದು ಕರೆದ ಹಾಲಿಗೆ ಕುರಿಯ ಹಾಲಂತರವೆ—ಎಂಬ ಸುಪ್ರತಿಷ್ಠಿತ ಔದ್ಧತ್ಯ. ರಾಗಿಯಾದರೂ ಸೋಲುವುದಿಲ್ಲ. ಹೆತ್ತ ಬಾಣಂತಿಯರು ರೋಗಿಗೆ ಪಥ್ಯ ನಾನಹೆ ; ಹೆಣದ ಬಾಯಿಗೆ ತುತ್ತು ನೀನಹೆ ; ಎಳ್ಳು ದರ್ಭೆಗೆ ತೆತ್ತಿಗನು ನೀನಾದೆ ಎಂದು ಅದರ ಉತ್ತರ. ಈ ಜಗಳ ಪರಿಹರಿಸಲು ವಿಚಾರಣೆ ನಡಸಬೇಕೆಂದು ಶ್ರೀರಾಮ ಇವೆರಡನ್ನೂ ಸೆರೆಯಲ್ಲಿಟ್ಟದ್ದು ಅಯೋಧ್ಯೆಗೆ ಹಿಂದಿರುಗಿದ ಅನಂತರ ವ್ಯಾಜ್ಯವನ್ನೆತ್ತಿಕೊಳ್ಳುತ್ತಾನೆ. ದೀರ್ಘಕಾಲದ ಬಂಧನದಿಂದ ಬತ್ತ ನಿಸ್ಸತ್ತ್ವವಾಗಿದ್ದರೂ ರಾಗಿ ಮಾತ್ರ ಎಂದಿನಂತೆ ದೃಢಕಾಯದಿಂದಲೇ ಉಳಿದಿರುತ್ತದೆ. ರಾಮಾಯಣದ ಕತೆ ಹೇಳುವ ನೆಪಹೂಡಿ ಅದನ್ನೇ ವಿಸ್ತರಿಸಿ, ಅದರ ನಡುವೆ ನೆಲ್ಲು–ನರೆದಲೆಗಳ ರೂಪಕ ಕಥೆಯಲ್ಲಿ ವಿಡಂಬನದ ಗುಳಿಗೆಯನ್ನಿಟ್ಟಿರುವ ಕನಕದಾಸರ ಈ ಕೃತಿ ಸುಂದರವಾದ ಮತ್ತು ಕಾಂತಿಯುತವಾದ ವಿಡಂಬನ ಕಾವ್ಯವೆಂದು ದೇ. ಜವರೇಗೌಡ ಅವರು ಬರೆದಿದ್ದಾರೆ. ಬಿಂಕಗುಳಿಗಳ ಮದಾಂಧರ ಮತ್ತು ಪಟ್ಟಭದ್ರ ಹಿತಾಸಕ್ತರ ಮೂಗು ಕತ್ತಿ, ಅವರ ಓರೆಕೋರೆಗಳನ್ನು ತಿದ್ದಬೇಕೆಂಬುದೇ ಕವಿಯ ಪ್ರತಿಜ್ಞೆಯಾಗಿದೆ; ಜೊತೆಗೆ ಈ ಓರೆಕೋರೆಗಳು ಸಾಮಾನ್ಯರಿಗೆ ಗ್ರಹಿಕೆಯಾಗಿ ಅವರು ಎಚ್ಚತ್ತುಕೊಳ್ಳಬೇಕೆಂಬುದು ಅವನ ಆಶಯವಾಗಿದೆ. ಸತ್ಯಾಸತ್ಯಗಳ ನಡುವೆ ರಾಜಿಯ ಸೂತ್ರ ಸಲ್ಲದೆಂಬುದು ಕವಿಯ ದೃಢನಿಲುವಾಗಿದೆ. ಅವನ ಗ್ರಾಮೀಣ ಸ್ವಭಾವಕ್ಕೆ ಅವನ ರೂಕ್ಷ ಪ್ರತಿಭೆಗೆ ಉಪಾಯ ಹುನಾರುಗಳಾಗಲೀ, ಮಂತ್ರ ತಂತ್ರಗಳಾಗಲೀ, ಮರೆಮೋಸಗಳಾಗಲೀ, ನುಣ್ಣನೆಯ ಬೆಣ್ಣೆ ಮಾತುಗಳಾಗಲೀ ಒಗ್ಗುವಂತಿಲ್ಲ. ಒರಟುತನ, ನಿಷ್ಕಾಪಟ್ಯ, ತತ್ತ್ವನಿಷ್ಠೆ, ಶ್ರದ್ಧೋತ್ಸಾಹಗಳು ಅವನ ಪ್ರವೃತ್ತಿ ಜಾಯಮಾನಗಳಿಗೆ ಪೋಷಕವಾಗಿರುವ ದ್ರವ್ಯ ವಿಶೇಷಗಳು. ಆದ್ದರಿಂದ ಅವನ ವಿಡಂಬನೆಯಲ್ಲಿ ಕಹಿಯಿದೆ ವಿಷವಿಲ್ಲ, ಮೊನಚಿದೆ ನೋವಿಲ್ಲ, ಹಠವಿದೆ ದ್ವೇಷವಿಲ್ಲ, ಕಾವಿದೆ ತಾಪವಿಲ್ಲ, ಕೋಪವಿದೆ ವೈರವಿಲ್ಲ, ಚುರುಕಿದೆ ಉರಿಯಿಲ್ಲ ; ಎಲ್ಲಿಯೂ ಬ್ರಹ್ಮಶಿವ ವೃತ್ತವಿಲಾಸರ ಮತಾಂಧತೆಯ ದೋಷಲೇಪವಿಲ್ಲ. ಕರ್ತವ್ಯಪ್ರಜ್ಞೆ, ಸತ್ಯನಿಷ್ಠೆ, ಲೋಕಕಾರುಣ್ಯ, ನೈತಿಕ ಶ್ರದ್ಧೆ, ಮೇಲಾಗಿ ಧರ್ಮಕೋಪ—ಇವು ಆ ವಿಡಂಬನೆಯ ಹಿಂದಿರುವ ಮೂಲಭೂತವಾದ ಪ್ರೇರಕಪ್ರವೃತ್ತಿಗಳು—ಎಂದು ದೇ. ಜವರೇಗೌಡರು ಹೇಳಿರುವ ಮಾತುಗಳು ವಿಡಂಬನ ಕಾವ್ಯಕ್ಷೇತ್ರದಲ್ಲಿ ರಾಮಧಾನ್ಯಚರಿತ್ರೆಗಿರುವ ಭದ್ರಸ್ಥಾನದ ಬಗ್ಗೆ ನೀಡಲಾಗಿರುವ ನಿರ್ಣಯ.

**ಸರ್ವಜ್ಞ :** ಸರ್ವಜ್ಞಕವಿ ವಿಡಂಬನ ಸಾರ್ವಭೌಮ. ಈತ ಇದ್ದ ಕಾಲದ ಬಗ್ಗೆ ನಿರ್ದಿಷ್ಟ ಮಾಹಿತಿಯಿಲ್ಲ. ಆದರೆ ಯಾವಾಗಲೋ ಇದ್ದು ನಾಡಿನಲ್ಲೆಲ್ಲ ಗುಡುಗಾಡಿ ಸಮಾಜದ ದೋಷದ ಬಂಡೆಗಳನ್ನೆಲ್ಲ ಸೀಳಿದ್ದು ನಿಜ. ಈತ ಸ್ವಾತಂತ್ರ್ಯಪ್ರಿಯ. ತಾಯಿ ಕುಂಬಾರಗಿತ್ತಿ. ತಂದೆ ಆರಾಧ್ಯ ಬ್ರಾಹ್ಮಣ. ಈತ ಉಟ್ಟಿದ್ದೊಂದು ತುಂಡು. ಹೆಗಲಮೇಲೊಂದು ಕಂಬಳಿ. ಕೈಯಲ್ಲೊಂದು ಕಪ್ಪರ. ಇವನ ಬಣ್ಣ ಅಚ್ಚಕಪ್ಪು. ನಕ್ಕರೆ ಬೆಳುದಿಂಗಳ ಹಾಲು ಚೆಲ್ಲು. ನುಡಿಯಲ್ಲಿ ಕಿಡಿ. ಇದು ವಿಡಂಬನಕ್ಕೇ ಒಪ್ಪುವಂಥ ಬಣ್ಣನೆ. ವಿಡಂಬನದ ಬಗ್ಗೆ ಹಯನೆ ಕವಿ ಇಂಥದೇ ಬಣ್ಣನೆ ನೀಡಿದ್ದಾನೆಂಬುದು ಗಮನಾರ್ಹ. ಎಸ್. ವಿ. ರಂಗಣ್ಣನವರು ಮಹಾಕವಿ ಪುರುಷಸರಸ್ವತಿ ಗ್ರಂಥದ ಮುನ್ನುಡಿಯಲ್ಲಿ ಅದನ್ನು ಹೀಗೆ ಅನುವಾದಿಸಿದ್ದಾರೆ : ವಿಡಂಬನಕ್ಕೆ ನ್ಯಾಯವೇ ಅಮ್ಮ, ಪ್ಯಾನನೇ ಅಪ್ಪ. ತಾಯಿ ಸಿಂಹಾಸಮಂಡಿತಳಾದ ದೇವಿ ; ಸಮೃದ್ಧಿಯ ಪೂರ್ಣಕುಂಭ ಅವಳ ಬಲದ ಕೈಯಲ್ಲಿ, ಎಡದ ಕೈಯಲ್ಲಿ ತೂಗುವ ತಕ್ಕಡಿ ; ತೊಡೆಗಳ ಮೇಲೆ ಅಡ್ಡಲಾಗಿಟ್ಟಿದೆ ಒಂದು ಬಿಚ್ಚು ಕತ್ತಿ. ತಂದೆಗಾದರೋ ಚಪ್ಪಟೆ ಮೂಗು, ಚೂಪಾದ ಕಿವಿ, ಹೋತನ ಹೆಜ್ಜೆ, ಕುದುರೆಯ ಬಾಲ ; ಅವನು ವಿಷಯಲಂಪಟನಾಗಿ ನೃತ್ಯಸಂಗೀತಗಳಲ್ಲಿ ತೀವ್ರಾಸಕ್ತನೂ ಆಗಿ ಕೊಳಲನ್ನು ಮನೋಹರವಾಗಿ ಬಾರಿಸುತ್ತ ವನದಲ್ಲಿ ವಿಹರಿಸುವ ಅರ್ಧ ದೇವತೆ, ಅರ್ಧ ಪಶು. ಅಂದರೆ ವಿಡಂಬನಕ್ಕೆ ಆನುವಂಶಿಕವಾಗಿ ಒಂದು ಕಡೆಯಿಂದ ನಿಷ್ಪಕ್ಷಪಾತ, ಋಜುತ್ವ, ಖಂಡಿತ ಜಾಯಮಾನ ಮತ್ತು ಧೈರ್ಯ ದತ್ತವಾಗಿದೆ. ಇನ್ನೊಂದು ಕಡೆಯಿಂದ ಸ್ವಾತಂತ್ರ್ಯ, ಲವಲವಿಕೆ, ಭಯಾನಕ ಸ್ವರೂಪ, ಇಂಪು ಮತ್ತು ಏಕೀಕರಣಶಕ್ತಿ ಉಂಟಾಗಿದೆ. ತಾಯಿಯ ಖಡ್ಗದಿಂದ ಅನಿಷ್ಟವಾದ್ದನ್ನು ಕತ್ತರಿಸುವುದು ; ಭಿನ್ನ ಭಿನ್ನವಾದ ಅದಕ್ಕೆ ತಂದೆಯ ವೇಣುವಾದ್ಯದಿಂದ ಸುಖ ಮರಣವನ್ನಾಗಿಸುವುದು— ಇದು ವಿಡಂಬನದ ದ್ವೈತಪದ್ಧತಿ. ಸರ್ವಜ್ಞ ಈ ಪದ್ಧತಿಯನ್ನೇ ಅಚ್ಚುಕಟ್ಟಾಗಿ ಅನುಸರಿಸಿದ್ದಾನೆ. ಆಡುಮುಟ್ಟದ ಸೊಪ್ಪಿಲ್ಲ. ಸರ್ವಜ್ಞ ಕುರಿತಾಡದ ದೋಷವಿಲ್ಲ. ಅವನೊಬ್ಬ ಖಂಡಿತವಾದಿ. ಮೂಢ ನಂಬಿಕೆಯಿಂದ ರಾಜಕಾರಣದವರೆಗೆ ಎಲ್ಲ ವಿಷಯಗಳೂ ಅವನ ಸೊತ್ತೇ. ಎಪಿಗ್ರಂ ಜಾತಿಯ ತ್ರಿಪದಿಗೆ ಹೊಸ ಬೆಡಗನ್ನೂ ಚುರುಕನ್ನೂ ನೀಡಿ ಸಾಸಿವೆಯ ಗಾತ್ರದಲ್ಲಿ ಬ್ರಹ್ಮಾಂಡದ ಶಕ್ತಿಯನ್ನು ತುಂಬಿರುವ ಸರ್ವಜ್ಞನ ವಚನಗಳಲ್ಲಿ ವಿಡಂಬನದ ಹಲವು ಶ್ರೇಣಿಗಳನ್ನು ಕಾಣಬಹುದು.

> ಒಂದಾಡ ತಿಂಬಾತ ಹೊಂದಿದಡೆ ಸ್ವರ್ಗವನು ।
>
> ಎಂದೆಂದು ಅಜನ ಕಡಿತಿಂಬ ಕಟುಕ ತಾ ।
>
> ನಿಂದ್ರನೇಕಾಗ ಸರ್ವಜ್ಞ ? ॥

— ಎಂಬುದು ಸರ್ವಜ್ಞನ ವಿಡಂಬನ ವಿಧಾನ. ವಿಪರ್ಯಯವೆನಿಸುವಂಥ ಎರಡು ಸನ್ನಿವೇಶಗಳನ್ನು ಮೂರೇ ಸಾಲಿನಲ್ಲಿ ಒಟ್ಟಿಗಿಟ್ಟು ಸಾಧಿಸಿರುವ ಪರಿಣಾಮ ಅದ್ಭುತ.

**ಇತರ ಕೃತಿಗಳು :** ಮುಪ್ಪಿನ ಷಡಕ್ಷರಿ ಬರೆದಿರುವ ಹಲವಾರು ಹಾಡುಗಳಲ್ಲಿ ವಿಡಂಬನವಿಲ್ಲದೆ ಇಲ್ಲ. ಇವರ ಉದ್ದೇಶವೂ ಸಾಮಾನ್ಯವಾಗಿ ಪಾರಮಾರ್ಥಿಕ.

ಈ ಕವಿ ಬರೆದಿರುವ ತಿರುಕನ ಕನಸು ಒಂದು ಉತ್ತಮ ವಿಡಂಬನ ಕೃತಿ. ಇಂಗ್ಲಿಷ್ ಪ್ರಬಂಧಕಾರ ಅಡಿಸನ್ ಬರೆದ ವಿಷನ್ ಆಫ್ ಮಿರ್ಜಾನಂತೆ ಇದು ವಿಶಿಷ್ಟ ಪರಿಣಾಮಕಾರಿ. ಕನ್ನಡದ ಜಾನಪದ ಸಾಹಿತ್ಯದಲ್ಲೂ ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ ಮುಂತಾದ ಕಾವ್ಯಗಳಲ್ಲೂ ನೀತಿ, ನಗೆ, ಕನಸು, ನನಸು ಗಳೊಂದಿಗೆ ವಿಡಂಬನವೂ ಬೆರೆತುಕೊಂಡಿದೆ. ಗಾದೆಗಳಂತೂ ವಿಡಂಬನದ ಹುತ್ತ. ಅಪ್ಪಾಭಟ್ಟರ ಮಗಳಾಗಿ, ತಿಪ್ಪಾಭಟ್ಟರ ಸೊಸೆಯಾಗಿ, ಲವಣ ಅಂದರೆ ಕಾಣೆನೆ, ದೊಡ್ಡೆಮ್ಮ ಸಗಣಿ; ದುಡ್ಡಿನ ಆಸೆಗೆ ಬೆಲ್ಲ ಮಾರಿ ಗೋಣಿಚೀಲ ನೆಕ್ಕಿದ ; ಇತ್ತಿತ್ತ ಬಾ ಎಂದರೆ ಇದ್ದ ಮನೆಯನ್ನೂ ಕಿತ್ತುಕೊಂಡು ಕಳಿಸಿದ—ಮುಂತಾದ ಸಾವಿರಾರು ವಜ್ರಗಳ ನಾನಾ ಪಕ್ಕಗಳಲ್ಲಿ ಬಾಳಿನ ಹಲವು ಮುಖಗಳು ಪ್ರತಿಬಿಂಬಿತವಾಗಿವೆ.

**ಇಪ್ಪತ್ತನೆಯ ಶತಮಾನ :** ಇಪ್ಪತ್ತನೆಯ ಶತಮಾನದಲ್ಲಿ ನಾಡು ಹೊಸ ಹುಟ್ಟು ಪಡೆಯಿತು. ಸಾಹಿತ್ಯವೂ ಹೊಸ ಹುರುಪು ತಳೆದು ನಾನಾ ಬಗೆಯಾಗಿ ಚಿಗುರೊಡೆಯಿತು. ತಮ್ಮ ಸಾಹಿತ್ಯವನ್ನೂ ಇತರ ಭಾಷೆಗಳ ಸಾಹಿತ್ಯಗಳನ್ನೂ ತೌಲನಿಕವಾಗಿ ನೋಡುವ ಅಭ್ಯಾಸ ಕನ್ನಡಿಗರಲ್ಲಿ ಬೆಳೆಯಿತು. ಈ ಎಪ್ಪತ್ತು ವರ್ಷಗಳಲ್ಲಿ ವಿಡಂಬನ ಸಾಹಿತ್ಯವೂ ಸಾಕಷ್ಟು ಬೆಳೆದಿದೆ. ಸಮಾಜ ವಿಡಂಬನ, ರಾಜಕೀಯ ವಿಡಂಬನ, ಸಾಹಿತ್ಯಕ ವಿಡಂಬನ ಮುಂತಾದ ನಾನಾ ಪ್ರಕಾರಗಳು ಹುಟ್ಟಿಕೊಂಡಿವೆ. ವಿಡಂಬನಾತ್ಮಕ ಸಣ್ಣಕಥೆ, ಕಾದಂಬರಿ, ಪದ್ಯ, ಪ್ರಬಂಧಗಳಿಗೇನೂ ಕಡಿಮೆಯಿಲ್ಲ. ದಿನೇದಿನೇ ಬೆಳೆಯುತ್ತಿರುವ ಈ ಸಾಹಿತ್ಯದಲ್ಲಿ ಗಟ್ಟಿಯಾದ್ದನ್ನು ಆರಿಸಿ ಪಟ್ಟಿಮಾಡಿ ಪರಿಸುವುದು ಇನ್ನೂ ಸ್ವಲ್ಪಕಾಲ ಸರಿದ ಮೇಲೆ ಮಾತ್ರ ಸಾಧ್ಯ. ಆದರೂ ಕಳೆದ ಒಂದೆರಡು ತಲೆಮಾರುಗಳಲ್ಲಿ ಓದುಗರ ಮೇಲೆ ಮುದ್ರೆಯೊತ್ತಿರುವ ಕೆಲವು ಲೇಖಕರ ಮತ್ತು ಕೃತಿಗಳ ಅನೆಹೆಜ್ಜೆಗಳನ್ನು ಇಲ್ಲಿ ಗುರುತಿಸಬಹುದಾಗಿದೆ.

ಕನ್ನಡಕ್ಕೊಬ್ಬರೇ ಎಂದು ಕೀರ್ತಿಗಳಿಸಿರುವ ಕೈಲಾಸಂ ಹಾಸ್ಯ ಚಕ್ರವರ್ತಿ; ವಿಡಂಬನ ಪ್ರವೀಣ. ನಡೆ, ನುಡಿ, ನಾಟಕ—ಎಲ್ಲಕ್ಕೂ ಹಾಸ್ಯದ ಉಡುಪು, ವಿಡಂಬನದ ಒಡ್ಯಾಣ. ಮೊನೆಮಾತು ಎಸೆದು ಚುಚ್ಚಿ ಕೊಲ್ಲುವುದಕ್ಕಿಂತ ಹಾಸ್ಯದ ಹೋಳಿ ಹರಿಸಿ ಕೊಚ್ಚಿ ಬಿಸಾಡುವುದು ಇವರ ವಿಧಾನ. ಸಮಾಜದಲ್ಲಿ ಟೊಳ್ಳೆಂಬುದು ಗಟ್ಟಿ, ಗಟ್ಟಿಯೆನಿಸಿದ್ದು ಟೊಳ್ಳು. ಪೋಲಿಕಿಟ್ಟಿಯದು ಪರಮ ಪುರುಷಾರ್ಥ. ವ್ಯರ್ಥಜೀವಿ ನಾಗತ್ತೆಯ ಮಾತಿನ ವಿಷದ ಬಟ್ಟಲ ಅಡಿಯಲ್ಲಿ ಹೃದಯಕ್ಕೆ ಔಷಧಿ. ಬಂಡ್ವಾಳ್ವಿಲ್ಲದ ಬಡಾಯಿ, ಹೋಂರೂಲು, ಅಮ್ಮಾವ್ರಗಂಡ, ನಂಬ್ರಾಹ್ಮಣ್ಕೆ, ಗಂಡಸ್ಕತ್ರಿ—ಎಲ್ಲೆಲ್ಲೂ ಇಂಗ್ಲಿಷ್ ಬೆರೆಸಿದ ಕನ್ನಡದ ಸಮಾಜದ ದೂಳೊರಸುವ ಪ್ರವೃತ್ತಿ; ವಿವಿಧ ಭಂಗಿಗಳಿಂದ ಇದನ್ನು ಕಾಣುವ ವಿಚಿತ್ರ ರೀತಿ. ಪುಟ್ಟು, ಮಾಧು, ನಾಗತ್ತೆ, ಥಳಕಿನ ಪುತ್ಥಳಿ ಪಾತೂ ಮಗಳ ಮದುವೆಗಾಗಿ ಅಂಚಿಯವನಿಗೆ ಕೊಡ ಕಾಸು ಕೊಡದೆ ಹಣಕೂಡಿಡುತ್ತಿದ್ದ ಲಾಯರ್ ನರಸಿಂಹಯ್ಯ, ದೊಡ್ಡ ಮನುಷ್ಯನ ಸೋಗು ಹಾಕಿ ಸಮಾಜದ ರಕ್ತಹೀರುವ ಜಿಗಣೆ ರಂಗಣ್ಣ, ರಾಮಣ್ಣ ವಿ.ಸಿ, (ವರಪೂಜೆ ಛಾಂಪಿಯನ್), ಬಂಡ್ವಾಳ್ವಿಲ್ಲದ ಬಡಾಯಿಗಾರ ಬುಳ್ಳಾಪುರದ ಲಾಯರಿ ಅಹೋಬ್ಲು—ಇವರೆಲ್ಲ ನಮ್ಮ ಸಮಾಜದ ವ್ಯಕ್ತಿಗಳೇ. ಇವರೇ ವಿಡಂಬನಕ್ಕೆ ಇಲ್ಲಿ ಆಹಾರ. ಅವನ ಮಾತಿಗೆ ನಗದಿದ್ದರೆ ಬಂತು ಆವೇಶ, ಮಾತು ಸುರಿಮಳೆ. ತಡೆಯಿಲ್ಲ, ಕಡೆಯಿಲ್ಲ. ನಗದವನೂ ನಕ್ಕ, ನಕ್ಕವನು ಅತ್ತ. ಅಂದರೆ ನಗೆಯಲ್ಲಿ ಹೊಗೆ ಬಹಳ. ಇಬ್ಸೆನ್‌ದು ಇನಿವಾತು, ಗ್ಯಾಲ್ಸ್‌ವರ್ದೀದು ಗೆಳೆವಾತು, ಷಾನದು ಸುಡೋ ಮಾತು, ಕೈಲಾಸಂದು ಕೊಡಲಿಪೆಟ್ಟು—ಇದು ಕೈಲಾಸಂ ಅಭಿಪ್ರಾಯ. ಟೊಳ್ಳುತನಕ್ಕೆ ಪೆಟ್ಟುಕೊಟ್ಟು ಉರುಳಿಸುವುದರಲ್ಲಿ ಕೈಲಾಸಂ ಪ್ರವೀಣ. ಪ್ರಾಸ, ಶ್ಲೇಷೆ, ವಕ್ರೋಕ್ತಿ, ಚತುರೋಕ್ತಿ, ವಿಕಟಹಾಸ್ಯ—ಇವೇ ಇವರ ಸೇನೆ. ಆದರೆ ಇದಕ್ಕೆ ದ್ವೇಷ ಅಥವಾ ಕ್ರೋಧ ಮೂಲವಲ್ಲ : ಸಹಾನುಭೂತಿಯೇ ಇದರ ಜೀವಾಳ. ಆದ್ದರಿಂದ ಇವರ ನಗುವಿನ ಹಿಂದೆಯೇ ಅಳು ಮಡುಗಟ್ಟಿ ನಿಂತೇ ಇರುತ್ತದೆ.

ಕಿರಿ ಆಳದ ನಗೆನೀರಿನ ಮೇಲೆ
ತಿರುಗುತ ಬಹು ವೇಳೆ
ಕಣ್ಣೀರಿನ ಕಡಲಿನ ಪಾಲು
ಹಾಸ್ಯದ ಹರಿಗೋಲು

—ಎಂಬುದು ಅವರ ಮಾತು. ಬಂಡ್ವಾಳ್ವಿಲ್ಲದ ಬಡಾಯಿಯ ಒಂದು ಪಾತ್ರವಾದ ಚೋರನನ್ನು ಕುರಿತು, ಬೀದೀಲೇನಾದ್ರೂ ಬಿಡಿಗಾಸು ಬಿದ್ದಿಧೇಂತ ಬಗ್ನೋಡ್ತ ಬರ್‍ತಿದೀಯೇನೋ ಬಕ್ವೇ—ಎಂದು ಅಹೋಬ್ಲು ಆಡುವ ಪ್ರಾಸಬದ್ಧ ಕಿರಿಚಾಟದ ತತ್‌ಕ್ಷಣದ ಪ್ರತಿಕ್ರಿಯೆಯೆಂದರೆ ಕೇಕೆ ನಗು—ಆದರೆ ಅದರ ಹಿಂದೆಯೇ ಬಡತನದ ದಾರುಣಚಿತ್ರವನ್ನು ನೆನೆದು ಕಣ್ಣೀರು ; ಅಹೋಬ್ಲುವಿನ ಠೊಳ್ಳುಜಂಬದ ಬಗ್ಗೆ ಮರುಕ. ಇದು ಕೈಲಾಸಂ ವಿಡಂಬನದ ಪರಿಣಾಮ.

ನಾಟಕಪ್ರಪಂಚದ ಇನ್ನೊಬ್ಬ ವಿಡಂಬನಕಾರರು ಶ್ರೀರಂಗ. ಇವರ ಮಾತು ಹೆಚ್ಚು ಮಾರ್ಮಿಕ. ಇವರದು ಬರ್ನಾರ್ಡ್ ಷಾ ಮಾರ್ಗ. ಎಂ.ವಿ. ಸೀತಾರಾಮಯ್ಯ ನವರು ಶ್ರೀರಂಗರ ಬಗ್ಗೆ ಬರೆಯುತ್ತ, ಅವರ ಹರಿತವಾದ ಬುದ್ಧಿಶಕ್ತಿ, ವ್ಯಂಗ್ಯ, ಕಟುಹಾಸ್ಯ, ವಿಡಂಬನೆ, ಮಾರ್ಮಿಕವಾದ ಮಾತುಗಾರಿಕೆ, ಹದಿರುನುಡಿಯ ಹೆಕ್ಕಳ ಮತ್ತು ಅವರ ವಿಚಾರಸರಣಿ, ವ್ಯಕ್ತಿತ್ವ—ಇವುಗಳೆಲ್ಲ ಅವರ ನಾಟಕಗಳಲ್ಲಿ ಚೆನ್ನಾಗಿ ಹೊಮ್ಮಿವೆ. ಬರಿಯ ವಿನೋದಕ್ಕಾಗಿ ಇಲ್ಲ ಇವರ ನಾಟಕಗಳು : ಅವು ವಿಚಾರಕ್ಕಾಗಿ, ವಿಕಾಸಕ್ಕಾಗಿ—ವಿಡಂಬನ ವಿನೋದಗಳ ಮೂಲಕ ಎಂದು ಹೇಳಿದ್ದಾರೆ. ಮೂರು ಸಾವಿರ ವರ್ಷಗಳಿಂದ ಮುರಿಯದಂತೆ ಕಾಯ್ದುಕೊಂಡು ಬಂದ ಸಂಪ್ರದಾಯಕ್ಕೂ ನಾಗಾಲೋಟದಿಂದ ಮುನ್ನುಗ್ಗುತ್ತಿರುವ ನವೋನವ ಪರಿಕಲ್ಪನೆಗಳಿಗೂ ವಿಜ್ಞಾನ ಸಾಧನೆಗಳಿಂದಾಗಿ ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ವ್ಯವಸ್ಥೆಗೂ ನಡುವಣ ತಿಕ್ಕಾಟ ವನ್ನು ಇವರ ನಾಟಕಗಳಲ್ಲಿ ಕಾಣಬಹುದು. ಕಟ್ಟಿದ ಮನೆಯನ್ನು ರಿಪೇರಿ ಮಾಡುವುದು ಎಷ್ಟು ಮೂರ್ಖತನವೋ ಸಮಾಜವನ್ನು ಸುಧಾರಿಸುವುದೂ ಅಷ್ಟೇ ಮೂರ್ಖತನ. ಚಿರಕಾಲ ಬಾಳಬೇಕಾದರೆ ಹೊಸ ಮನೆಯಲ್ಲೇ ಬಾಳಬೇಕು. ಹೊಸ ಸಮಾಜವನ್ನೇ ರೂಪಿಸಬೇಕು—ಎಂಬ ಭಾವನೆಯಿಂದ ಹೊರಟ ಇವರ ಈಗಿನ ಹಲವಾರು ಕೃತಿಗಳು ಭ್ರಮನಿರಸನದ ಪ್ರತೀಕಗಳಾಗಿವೆ. ನಮ್ಮ ಸ್ವರ್ಗೀಯ ಶತ್ರುಗಳು ಎಂಬ ಪ್ರಬಂಧಗಳಲ್ಲಿ ದೇವತೆಗಳನ್ನು ಕೋರ್ಟಿಗೆಳೆದಿರುವ ಶ್ರೀರಂಗರ ಕೃತಿಗಳಲ್ಲಿ ಭಾವದ ಕಾವಿಗಿಂತ ಕ್ರೋಧದ ನೋವು ಹೆಚ್ಚು. ಇವರ ನಗೆ ಬಲು ಹರಿತ. ವಿಶ್ವಾಮಿತ್ರನ ಸೃಷ್ಟಿ ಕಾದಂಬರಿಯಲ್ಲಿ ಬರುವ ಹೋಟಲು ಮಾಲೀಕನ ಚಿತ್ರವಿದು: ಕ್ಷೀರಸಾಗರದಲ್ಲಿ ಒರಗಿದ ವಿಷ್ಣುವಿಗೆ ಒಲಿದ ಲಕ್ಷ್ಮಿಯು ಚಹದಂಗಡಿಯವನಿಗೆ ಒಲಿಯುವುದು ಆಶ್ಚರ್ಯವೇ ? ಇದ್ದಷ್ಟು ಕ್ಷೀರವನ್ನೇ ಸಾಗರವನ್ನಾಗಿ ಮಾಡುವ ಮಹಾಮಾಯಿಯಿವನು, ಲಕ್ಷ್ಮಿಯು ಅವನ ದಾಸಿಯಾಗಿದ್ದಾಳೆ ; ಎರಡೂ ಕಿವಿಗಳಿಂದ ಜೋತುಬಿದ್ದಿದ್ದಾಳೆ ; ಎರಡು ಕೈಯಲ್ಲಿ ಕುಣಿಯುತ್ತಿದ್ದಾಳೆ : ಬೆರಳುಗಳಲ್ಲಿ ಬಳುಕುತ್ತಲಿದ್ದಾಳೆ ಮಾಲಕನ ಲಕ್ಷ್ಮಿ.

ಬೇಂದ್ರೆಯವರು ವಿಡಂಬನ ಕೃತಿಗಳನ್ನೂ ರಚಿಸದೆ ಇಲ್ಲ. ಇವರ, ಅವರ್ಣನೀಯ ಅರ್ವಾಚೀನ ಸೌಂದರ್ಯ, ಶೂನ್ಯ ಮುಂತಾದ ಹಲವು ಪದ್ಯಗಳಲ್ಲಿ ಕಾವ್ಯದ ಕಾವು ಕಡಿಮೆಯಾಗಿ ವಿಡಂಬನದ ಮೊನೆಯ ಅನುಭವವಾಗುತ್ತದೆ. ಬೇಂದ್ರೆಯವರು ರಾಜಕೀಯವನ್ನೂ ವಿಡಂಬನಕ್ಕೆ ತುತ್ತಾಗಿಸಿದ್ದಾರೆ. ಅವರ ಜಾತ್ರೆಯಿಂದ ಒಂದು ಉದಾಹರಣೆಯಿದು :

ಯಾರೆಂದರು ಪ್ಲೇಗೆಂದು ? ಈ ಅರಮನೆಯಲ್ಲಿ
ನನ್ನ ಅಪ್ಪಣೆಯಿಲ್ಲದೆ ಪ್ಲೇಗೂ ಬರಕೂಡದು,
ಯಾರೂ ಬರಕೂಡದು. ನಾನು ಪ್ಲೇಗಿದೆ ಎನ್ನುವ
ವರೆಗೆ ಯಾರೂ ಪ್ಲೇಗು ಎಂಬ ಮಾತೂ ಎತ್ತಕೂಡದು.

ಭಾರತದ ನಿರಂಕುಶರಾಜನ ಹುಚ್ಚಾಟದ ಈ ಚಿತ್ರವನ್ನೋದಿದಾಗ ಗ್ರಿಕ್ ನಾಟಕ ಕಾರ ಅರಿಸ್ಟೋಫೆನೀಸನ ನಾಟಕಗಳ ನೆನಪಾಗುತ್ತದೆ.

ಕಾರಂತರ ಕೃತಿಗಳಲ್ಲಿ ಕಂಡುಬರುವ ಮುಖ್ಯ ಸೂತ್ರಗಳಲ್ಲಿ ವಿಡಂಬನವೂ ಒಂದು. ಇದು ಒಮ್ಮೆ ಹಾಸ್ಯದ ಕಡೆಗೂ ಇನ್ನೊಮ್ಮೆ ಕ್ರೋಧದ ಕಡೆಗೂ ಮತ್ತೊಮ್ಮೆ ವಿಷಾದದ ಕಡೆಗೂ ಒಲುತ್ತದೆ. ಅವರ ಗ್ನಾನ, ದೇವದೂತರು, ಹಳ್ಳಿಯ ಹತ್ತು ಸಮಸ್ತರು, ಮೈಲಿಕಲ್ಲುಗಳೊಡನೆ ಮಾತುಕತೆಗಳು—ಇವೆಲ್ಲ ವಿಡಂಬನ ಕೃತಿಗಳು. ಅವರ ಅನೇಕ ಕಾದಂಬರಿಗಳಲ್ಲೂ ಈ ಪರಶುರಾಮನ ಕೊಡಲಿಯ ಹರಿತದ ಅನುಭವವಾಗದೆ ಇರುವುದಿಲ್ಲ.

ಕುವೆಂಪು ಅವರ ರಾಮಾಯಣ ದರ್ಶನದಲ್ಲಿ, ಶೂದ್ರತಪಸ್ವಿಯಲ್ಲಿ, ಬೆರಳ್ಗೆ ಕೊರಳ್ ನಾಟಕದಲ್ಲಿ, ಕಾನೂರು ಹೆಗ್ಗಡಿತಿಯಲ್ಲಿ ಅವರು ಬರೆದಿರುವ ನೂರಾರು ಕವನಗಳಲ್ಲಿ ವಿಡಂಬನಕ್ಕೇನೂ ಕೊರತೆಯಿಲ್ಲ. ರಕ್ತಾಕ್ಷಿನಾಟಕದಲ್ಲಿ ಬರುವ ಸಾಮಾನ್ಯ ಪಾತ್ರಗಳಲ್ಲಿ ಹೊಮ್ಮುವ ಅಸಾಮಾನ್ಯ ವಿಡಂಬನವನ್ನು ಕಂಡಾಗ ಅವರು ಇದೇ ಪ್ರಧಾನವಾಗಿ ಉಳ್ಳಕೃತಿಯೊಂದನ್ನು ಹೆಣೆಯಬಾರದೆ ಎಂದು ಯಾರಿಗಾದರೂ ಎನಿಸೀತು. ಕವಿಶೈಲದ ಎತ್ತರದಲ್ಲಿ ಕೂತು ಸುತ್ತಣ ವಿಶಾಲ ನೆಲದತ್ತ ದೃಷ್ಟಿ ಹಾಯಿಸಿರುವ ಕುವೆಂಪು ಅವರ ಕವನಗಳಲ್ಲಿ ಬರುವ ವಿಡಂಬನೆಗಳಲ್ಲಿ ಕವಿಗೂ ಶ್ರೀಸಾಮಾನ್ಯರಿಗೂ ಬುದ್ಧಿ ಪ್ರತಿಭೆಗಳಲ್ಲಿ ಇರುವ ಮಹದಂತರದ ಪ್ರಜ್ಞೆ ಉಂಟಾ ಗುತ್ತದೆ.

ಪ್ರಬಂಧಕಾರರ ಪೈಕಿ ಗೊರೂರರದು ಸತ್ಯಂಬ್ರೂಯಾತ್ ಪ್ರಿಯಂ ಬ್ರೂಯಾತ್ ಜಾತಿ. ವಿಡಂಬನಕ್ಕೆ ತುತ್ತಾದ ವ್ಯಕ್ತಿಗಳ ಪೈಕಿ ಅವರಿಗೆ ಎಳ್ಳಷ್ಟೂ ಅಗೌರವವಿಲ್ಲ. ಅವರದು ವಿಡಂಬನದ ಸರಳಮಾರ್ಗ. ಅಡಿಸನನ ಸರ್ ರೋಜರ್ ಡಿ ಕವರ್ಲೆ ಮತ್ತು ಗೆಳೆಯರಂತೆ ಗೊರೂರರ ಶಾಲುಸಾಬಿ, ಜೋಡಿದಾರರು, ಶೀನಪ್ಪ, ರಂಗೇಗೌಡ—ಮುಂತಾದವರು. ಇವರು ನಿತ್ಯಹಸುರೆಲೆಯ ಮರಗಳಿದ್ದ ಹಾಗೆ. ರಾಶಿಯವರ ತುಟಿಮೀರಿ ಹೊಮ್ಮುವ ಹಾಸ್ಯದ್ದು ವಿವಿಧ ಮುಖ. ಅದಕ್ಕೆ ನಗರದ ಸಂಸ್ಕಾರ ಇದೆ. ಅದು ಸೌಮ್ಯವಾಗಿ ಕೆಲಸಮಾಡುವ ಅಗ್ನಿಪರ್ವತ. ರಾಶಿಯವರ ಗರಡಿಯಲ್ಲಿ

ತಯಾರಾದವರ ಪೈಕಿ ಸುನಂದಮ್ಮ, ದಾಶರಥಿ ದೀಕ್ಷಿತ್ ಇವರ ಕೃತಿಗಳಲ್ಲಿ ನಗೆಯ ಅಂಶ ಹೆಚ್ಚು. ಅ.ರಾ.ಸೇ. ಬಲು ಚುರುಕು. ದೀಕ್ಷಿತರ ಕನ್ನಡದ ಗಾಡಿಯಲ್ಲಿ ಅವರ ವೈಶಿಷ್ಟ್ಯ ವ್ಯಕ್ತವಾಗುತ್ತದೆ. ಅವರ ಗಾಂಪರ ಗುಂಪು ನಗೆಗಡಲಿನ ತಮ್ಮ. ರಾಶಿಯವರ ಉರಿಗಾಳು, ಅರವಾಮೊದ್ದು, ಕೊರವ, ಹೆಬ್ಬಿ ಗುಬ್ಬಾಲೆಯ ಜನ—ಎಲ್ಲ ಚಿರಂಜೀವಿಗಳು. ಉರಿಗಾಳು ಪ್ರಚಲಿತ ಖಾರ. ಶ್ರೀರಂಗರ ಹಾದಿಯಲ್ಲಿ ನಡೆದ ಎನ್ಕೆ ಕುಲಕರ್ಣಿ ಇನ್ನೊಬ್ಬ ವಿಡಂಬನಕಾರ. ಶ್ರೀನಿವಾಸರನ್ನು ವಿಡಂಬನಕಾರರ ಪಟ್ಟಿಯಲ್ಲಿ ಸೇರಿಸುವುದಾಗುವುದಿಲ್ಲವಾದರೂ ಅವರ ಡೂಬಾಯಿ ಪಾದ್ರಿಯ ಪತ್ರದಂಥ ಹಲವು ಪ್ರಬಂಧಗಳಲ್ಲಿ ಮೃದು ಮಧುರ ವಿಡಂಬನವಿದೆ.

ಬೀಚಿಯವರೊಬ್ಬ ವಿಡಂಬನ ಬ್ರಹ್ಮ. ಅವರ ತಿಂಮ ಚಿರಂಜೀವಿ. ಅವನೆಂದೂ ಮುದುಕನಾಗುವುದೇ ಇಲ್ಲ. ಆದ್ದರಿಂದ ಅವನಿಗೆ ಅನುಭವವೂ ಬರುವುದಿಲ್ಲ. ತಿಂಮನಂಥವರು ಜಗದಲ್ಲಿ ತುಂಬಿರುವ ವರೆಗೂ ಬೀಚಿಹಾಸ್ಯಕ್ಕೆ ಆಹಾರದ ಕೊರತೆಯಿಲ್ಲ. ಪ್ರತಿಯೊಂದು ಸನ್ನಿವೇಶದಲ್ಲೂ ಹಾಸ್ಯವನ್ನು ಕಾಣುವ ಕಣ್ಣು ಬೀಚಿಯವರಿಗಿದೆ. ನಾಡಿಗೇರರ ನಗೆಬರಹಗಳ ಹಿಂದೆಯೂ ವ್ಯಂಗ್ಯ ನೋಟದ ಕೊಂಡಿಯಿದೆ.

ಹಿಂದಿನ ತಲೆಮಾರಿನವರ ಪೈಕಿ ಹಾಸ್ಯವನ್ನೇ ತಮ್ಮ ಖಾಯಂ ಹವ್ಯಾಸವಾಗಿ ಮಾಡಿಕೊಂಡ ಕಸ್ತೂರಿ ಅವರ ನಗೆಪದ್ಯಗಳಲ್ಲೂ ಅಣಕವಾಡುಗಳಲ್ಲೂ ಲಘು ಪ್ರಬಂಧಗಳಲ್ಲೂ ನಗರಜೀವಿಗಳ ಅಷ್ಟಾವಕ್ರದ ಹಾಸ್ಯನೋಟವಿದೆ. ಆಧುನಿಕ ಸಾಹಿತ್ಯದಲ್ಲಿ ಹಾಸ್ಯಕ್ಕೆಂದೇ ಹಲವು ಅಂತಸ್ತುಗಳ ಮಹಲೊಂದನ್ನು ಕಟ್ಟಿದವರು ನಾ. ಕಸ್ತೂರಿ. ಒಂದು ಹನಿಯಷ್ಟು ಟೀಕೆಯ ಕಷಾಯಕ್ಕೆ ಲೋಟ ಪೂರ ಹಾಸ್ಯದ ಪಾಕ ತುಂಬಿ ಗಟಗಟ ಕುಡಿಸುವುದು ಕಸ್ತೂರಿ ವಿಧಾನ. ಉದಾಹರಣೆಗಾಗಿ ಅವರ ಅನರ್ಥ ಕೋಶದ ಶಬ್ದಗಳ ಪೈಕಿ ಎರಡನ್ನಿಲ್ಲಿ ಕೊಟ್ಟಿದೆ:

ಕನ್ಯಾರ್ಥಿ—ಕಾಲೇಜು ವಿದ್ಯಾರ್ಥಿ; ತನಗಿಂತ ಹೆಚ್ಚು ಸೌಂದರ್ಯ, ಕಡಿಮೆ ವಿದ್ಯೆ ಇರುವ ಹೆಣ್ಣನ್ನೇ ಹುಡುಕುವವ.

ಮೂಗು—ಅನೇಕರ ನಶ್ಯದ ಡಬ್ಬಿ; ಕನ್ನಡಕ ಧರಿಸಲು ಅತ್ಯಾವಶ್ಯಕವಾದ ಅಂಗ; ಇದರ ನೇರಕ್ಕೆ ನಡೆವವರೇ ಹೆಚ್ಚು; ಧ್ಯಾನಕ್ಕೆ ಇದರ ತುದಿ ತುಂಬ ಅನುಕೂಲ; ಇದರ ಡೊಂಕನ್ನು ತಿದ್ದುವುದು ಬಲು ಕಷ್ಟ, ದೇವರಿಂದಲೂ ಅಸಾಧ್ಯ. ನಮಗೆ ಇದೊಂದು ಸಂಗೀತೋಪಕರಣ; ನೆಗಡಿಯ ನೆಲವೀಡು.

ಪಾಶ್ಚಾತ್ಯರಲ್ಲಿ ಸಾಹಿತ್ಯ ವಿಡಂಬನವೆಂಬ ವಿಶಿಷ್ಟ ಪ್ರಕಾರವೊಂದು ಬೆಳೆದು ಬಂದಿದೆ. ಸಾಹಿತ್ಯದಲ್ಲಿ ಕಂಡುಬರುವ ನಾನಾ ವಿಕಾರಗಳನ್ನೂ ಅರ್ಥವಿಲ್ಲದ ಸಂಪ್ರದಾಯಗಳನ್ನೂ ಗೇಲಿಮಾಡುವುದು ಇದರ ಉದ್ದೇಶ. ಅಣಕವೇ ಇದರ ಅಸ್ತ್ರ. ವಿಡಂಬನಕ್ಕೆ ತುತ್ತಾದ ಕೃತಿಗಳಲ್ಲಿ ಎದ್ದು ಕಾಣುವ ಮಾತಿನ ಚಟಗಳನ್ನೇ ಎತ್ತಿ ಹಾಸ್ಯಕ್ರೀಡೆ ಮಾಡುವುದು ಇದರ ವಿಧಾನ. ಆದರೆ ಅಣಕಿಸುವುದು ಅಷ್ಟೇನೂ ಸುಲಭವಲ್ಲ. ಅಣಕಿಸುವವನಿಗೆ ಮೂಲದ ಕೃತಿಯ ಲೇಖಕನಷ್ಟೇ, ಹಲವೇಳೆ ಅದಕ್ಕಿಂತ ಹೆಚ್ಚಾಗಿ, ಶಕ್ತಿ ಇರಬೇಕು. ಸಾಹಿತ್ಯ ವಿಡಂಬನವನ್ನೇ ಪ್ರಧಾನಗುರಿಯಾಗಿ ಇಟ್ಟುಕೊಂಡು ಹೊರಬಿದ್ದ ಉತ್ತಮ ಕೃತಿಯೆಂದರೆ ರಾಜರತ್ನಂ ಅವರ ಮಹಾಕವಿ ಪುರುಷಸರಸ್ವತಿ ಒಂದೇ. ಕರ್ಣಾಟಕವೆಂಬ ಪದ ಸರಿಯೋ, ಕರ್ನಾಟಕ ಸರಿಯೋ—ಎಂಬ ವಾದದ ಬಿರುಗಾಳಿ ನಾಡಿನಲ್ಲಿ ಬೀಸಿದಾಗ ಪುರುಷಸರಸ್ವತಿ ಹುಟ್ಟಿಕೊಂಡ. ಕನ್ನಡ ಕವಿಗಳಲ್ಲಿ ಪರಂಪರೆಯಾಗಿ ಬಂದ ಕುಕವಿನಿಂದೆ, ಸ್ವಪ್ರತಿಷ್ಠೆಯ ಸ್ಥಾಪನೆ, ಅಲಂಕಾರ ಪ್ರಿಯತೆ, ಪ್ರಾಸದ ಪೂಜೆ, ನಾಯಕನ ವರ್ಣನೆ, ನಾಯಕ ನಿವಾಸ ವರ್ಣನೆ, ನಿರ್ಜೀವ ವಸ್ತು ಸಂಭಾಷಣೆ, ಬಲವಂತದ ಉಪಮಾನ ಜೋಡಣೆ—ಮುಂತಾದ ಇಡೀ ಪರಂಪರೆಯನ್ನೇ ರಾಜರತ್ನಂ ಇಲ್ಲಿ ಗೇಲಿ ಮಾಡಿದ್ದಾರೆ. ಇದೊಂದು ತುರುಚುಗಬ್ಬ. ಓದುವಾಗ ಹುಚ್ಚುನಗೆ. ಮುಗಿಸಿದ ಮೇಲೆ ಪಂಕ್ತಿಪಂಕ್ತಿಯ ನಡುವೆ ಕುಟುಕುವ ನೂರಾರು ಚೇಳುಗಳ ತಂಡ. ಪದ್ಯ ತುಂಬಿದ ಈ ಪುಸ್ತಕದಲ್ಲಿ ಗದ್ಯವೂ ಉಂಟು. ಸಭೆ ಭಾಷಣಗಳಿಂದ ಹಿಡಿದು ಸಂಶೋಧನೆಯ ವರೆಗೆ ಎಲ್ಲವನ್ನೂ ಎಲ್ಲರನ್ನೂ ಗೇಲಿ ಮಾಡಿದ್ದಾರೆ ಇಲ್ಲಿ. ಪುಸ್ತಕ ಹೇಗಾದರೂ ಇರಲಿ, ದೊಡ್ಡವರ ಮುನ್ನುಡಿಯೊಂದಿದ್ದರೆ ಸಾಕೆಂಬ ಮನೋಭಾವದ ವಿಡಂಬನವಾಗಿ ಈ ಪುಸ್ತಕಕ್ಕೆ ಏಳು ಜನರ ಮುನ್ನುಡಿಯಿದೆ.



ಜಿ. ಪಿ. ರಾಜರತ್ನಂ

ಮಾತಿಗೆ ಅರ್ಥ ಹೇಗೋ ಹಾಗೆ ನಗೆಯೊಂದಿಗೆ ಸಾಮಾನ್ಯವಾಗಿ ಜನ್ಮವೆತ್ತುವ ವಿಡಂಬನದ್ದು ಸರ್ವಾಂತರ್ಯಾಮಿ ಗುಣ. ಕನ್ನಡ ಸಾಹಿತ್ಯದಲ್ಲೂ ಇದು ಓತಪ್ರೋತವಾಗಿ ಹರಿದಿರುವುದಷ್ಟೇ ಅಲ್ಲ, ಪೂರ್ತಿಯಾಗಿ ವಿಡಂಬನವೇ ಧ್ಯೇಯಾಂತ ಕೃತಿಗಳು ಹೊರಬರುತ್ತಲೇ ಇವೆ. ನೋಡಿ—ಕನ್ನಡದಲ್ಲಿ ಹಾಸ್ಯಸಾಹಿತ್ಯ.

(ಎಚ್. ಎಸ್. ಕೆ.)

**ಕನ್ನಡದಲ್ಲಿ ವಿಮರ್ಶನ ಸಾಹಿತ್ಯ:** ಪ್ರಾಚೀನ ಕನ್ನಡ ಸಾಹಿತ್ಯದಲ್ಲಿ ವಿಮರ್ಶೆ ಪ್ರತ್ಯೇಕವಾಗಿ ಬೆಳೆದು ಬರಲಿಲ್ಲ. ಕವಿರಾಜಮಾರ್ಗ ಕಾವ್ಯಾವಲೋಕನ ಇತ್ಯಾದಿ ಗ್ರಂಥಗಳು ಕಾವ್ಯತತ್ತ್ವಗಳನ್ನು ವಿವೇಚಿಸುತ್ತವೆ. ಕಾವ್ಯಗಳ ಪ್ರಾರಂಭದಲ್ಲಿ ಕವಿಗಳು ಕಾವ್ಯಸ್ವರೂಪದ ಬಗ್ಗೆ, ತಮ್ಮ ಕಾವ್ಯಗಳ ಮಹತ್ತ್ವದ ಬಗ್ಗೆ, ಕುಕವಿಗಳ ಬಗ್ಗೆ ಹೇಳುತ್ತಾರೆ. ಆದರೆ ವಿಮರ್ಶೆಯನ್ನು ಕಾಣಬೇಕಾದರೆ 20ನೆಯ ಶತಮಾನಕ್ಕೇ ಬರಬೇಕು. ರಾಮಾನುಜಯ್ಯಂಗಾರ್ ಮುಂತಾದವರು ಹಳೆಯ ಕಾವ್ಯಗಳನ್ನು ಹೊರತಂದದ್ದಲ್ಲದೆ ಅವುಗಳಿಗೆ ವಿದ್ವತ್ಪೂರ್ಣವಾದ ಮುನ್ನುಡಿ ಬರೆದರು. ಆರ್. ನರಸಿಂಹಾಚಾರ್ಯರ ಕರ್ಣಾಟಕ ಕವಿಚರಿತ್ರೆ ಪ್ರಾಚೀನ ಕವಿ ಕಾವ್ಯಗಳನ್ನು ವಿಮರ್ಶಿಸುವ ಕೆಲಸವನ್ನೂ ಮಾಡಿತು. ಹೀಗೆ ಕನ್ನಡದಲ್ಲಿ ಕಾವ್ಯವಿಮರ್ಶೆ ಪ್ರಾರಂಭವಾಯಿತು ಎನ್ನಬೇಕು.

ಆಮೇಲೆ ಆಧುನಿಕ ಕನ್ನಡಸಾಹಿತ್ಯದ ಪಿತಾಮಹರಾದ ಬಿ. ಎಂ. ಶ್ರೀ. ಪ್ರಾಚೀನ ಕಾವ್ಯಗಳಿಗೆ ಬೆಲೆಕಟ್ಟುವ, ಆಧುನಿಕರಿಗೆ ಅವನ್ನು ಅರ್ಥಪೂರ್ಣವಾಗಿ ವಿವರಿಸುವ ಕೆಲಸ ಮಾಡಿದರು. ಅವರು ಬರೆದಿರುವ ಅನೇಕ ಮುನ್ನುಡಿಗಳು ವಿಮರ್ಶೆಗಳೇ ಆಗಿವೆ. ಹೀಗೆ ಸಾಹಿತ್ಯವಿಮರ್ಶೆಗೂ ಅವರನ್ನೇ ಪಿತಾಮಹರೆನ್ನಬೇಕು. ಇಂಗ್ಲಿಷ್ ಸಾಹಿತ್ಯ ಮತ್ತು ಸಂಸ್ಕೃತ ಸಾಹಿತ್ಯಗಳನ್ನೂ ಚೆನ್ನಾಗಿ ಬಲ್ಲವರಾಗಿದ್ದ ಅವರು ಅಲ್ಲಿನ ಕಾವ್ಯತತ್ತ್ವಗಳನ್ನು ಅಳವಡಿಸಿಕೊಂಡು ಪ್ರಾಚೀನ ಕನ್ನಡ ಕವಿಗಳ ಕಾವ್ಯಗಳನ್ನು ವಿಮರ್ಶಿಸಿದರು. ಕುವೆಂಪು, ಡಿ. ವಿ. ಜಿ. ಮುಂತಾದವರ ಬರೆವಣಿಗೆಗಳಲ್ಲಿ, ಕಾವ್ಯ ವಿಮರ್ಶೆಗಳಲ್ಲಿ, ಶೆಲ್ಲಿ, ವರ್ಡ್ಸ್‌ವರ್ತ್, ಆರ್ನಾಲ್ಡ್, ಅರಿಸ್ಟಾಟಲ್—ಇವರುಗಳ ಚಿಂತನೆಗಳೊಂದಿಗೆ ಬೆರೆತಂತೆ ಭಾರತೀಯ ಕಾವ್ಯಮೀಮಾಂಸೆಯ ಧ್ವನಿ ರಸಸಿದ್ಧಾಂತಗಳೂ ಸೇರಿಕೊಂಡುವು. ಕುವೆಂಪು, ಬೇಂದ್ರೆ ಹೇಗೆ ಕಾವ್ಯ ರಚಿಸುವ ಉದ್ಯೋಗದಲ್ಲಿ ನಿರತರಾದರೊ ಹಾಗೆಯೆ ಆ ಕಾವ್ಯದ ಲಕ್ಷಣಗಳನ್ನು ನಿರೂಪಿಸುವ ವ್ಯಾಖ್ಯಾನಿಸುವ ಕೆಲಸವನ್ನೂ ಮಾಡಿದರು. ಆಧುನಿಕ ಕನ್ನಡ ಸಾಹಿತ್ಯದ ನವೋದಯದ ಕಾಲದಲ್ಲಿ ಬಂದ ವಿಮರ್ಶೆ ಕನ್ನಡದ ವಿಮರ್ಶನ ಸಾಹಿತ್ಯಕ್ಕೆ ತಳಹದಿ ಹಾಕಿತು.

ಈಗ ಬರೆಹಗಾರ ತುಂಬ ಸಂಶ್ಲಿಷ್ಟವಾದ ಸಮಸ್ಯೆಗಳನ್ನು ಎದುರಿಸುತ್ತಿದ್ದಾನೆ. ಸೃಷ್ಟ್ಯಾತ್ಮಕ ಬರೆವಣಿಗೆಗಳಲ್ಲಿ ಕಂಡುಬರುತ್ತಿರುವ ಈ ಸಂಶ್ಲಿಷ್ಟತೆ ಇತ್ತೀಚೆಗೆ ವಿಮರ್ಶೆಯ ಲೇಖನಗಳಲ್ಲೂ ಕಾಣಿಸಿಕೊಳ್ಳುತ್ತಿದೆ. ಒಂದು ಕಡೆ ಶುದ್ಧ ಸಾಹಿತ್ಯಕ ವಿಮರ್ಶೆ ಬರುತ್ತಿದ್ದರೆ, ಇನ್ನೊಂದು ಕಡೆ ಆಧುನಿಕ ಶಾಸ್ತ್ರಗಳಾದ ಸಮಾಜವಿಜ್ಞಾನ, ಮನೋವಿಜ್ಞಾನ, ಅಸ್ತಿತ್ವವಾದಗಳಂಥ ಶುದ್ಧ ತಾತ್ತ್ವಿಕ ವಿಚಾರ, ಮಾರ್ಕ್ಸ್‌ವಾದ—ಇವುಗಳ ಹಿನ್ನೆಲೆಯನ್ನೊಳಗೊಂಡ ಸಾಹಿತ್ಯ ವಿಮರ್ಶೆಯೂ ಬರುತ್ತಿದೆ. ನಿಜವಾಗಿ ವಿಮರ್ಶೆ ಬಹು ವ್ಯಾಪಕವಾದ ಪದ. ಪತ್ರಿಕೆಗಳಲ್ಲಿ ಬರುವ ಪ್ರಾಸಂಗಿಕ ಪುಸ್ತಕಾವಲೋಕನದಿಂದ ಹಿಡಿದು ಪ್ರೌಢ ವಿಮರ್ಶನ ಪ್ರಬಂಧದ ವರೆಗೆ ಅದು ವ್ಯಾಪಿಸಿದೆ. ವಿಮರ್ಶೆ ಒಬ್ಬ ಕವಿಯನ್ನು ಕುರಿತುದಾಗಿರಬಹುದು. ಒಂದು ಪ್ರಸ್ಥಾನವನ್ನು ಕುರಿತುದಾಗಿರಬಹುದು. ತುಲನಾತ್ಮಕವಾದುದಾಗಿರಬಹುದು. ಕಾವ್ಯಮೀಮಾಂಸೆಯ ಮೂಲ ತತ್ತ್ವಗಳನ್ನು ಕುರಿತುದಾಗಿರಬಹುದು. ವಿವರಣಾತ್ಮಕ, ಪರಿಚಯಾತ್ಮಕ ಉದ್ದೇಶವುಳ್ಳದ್ದಾಗಿರಬಹುದು. ಈ ಎಲ್ಲ ಬಗೆಗಳನ್ನು ನಾವು ಕನ್ನಡ ವಿಮರ್ಶನ ಕ್ಷೇತ್ರದಲ್ಲಿ ಕಾಣಬಹುದು.

ಟಿ. ಎಸ್. ವೆಂಕಣ್ಣಯ್ಯ ಮತ್ತು ಎ. ಆರ್. ಕೃಷ್ಣಶಾಸ್ತ್ರಿಗಳ ನೇತೃತ್ವದಲ್ಲಿ ಪ್ರಾರಂಭವಾದ ಪ್ರಬುದ್ಧ ಕರ್ಣಾಟಕ ಒಳ್ಳೆಯ ವಿಮರ್ಶೆಗೆ ತಳಹದಿ ಹಾಕಿತು. ಆ ಕೆಲಸ ಇಂದಿಗೂ ಮುಂದುವರಿದುಕೊಂಡು ಬರುತ್ತಿದೆ. ಎ. ಆರ್. ಕೃಷ್ಣಶಾಸ್ತ್ರಿಗಳ ಭಾಸ ಕವಿ, ಸಂಸ್ಕೃತ ನಾಟಕ ಎಂಬೆರಡು ಗ್ರಂಥಗಳು ಅವರ ಪಾಂಡಿತ್ಯಕ್ಕೆ ಖಚಿತ ವಿಮರ್ಶೆಗೆ ನಿದರ್ಶನಗಳು. ಅವರು ಆಧುನಿಕ ಸಾಹಿತ್ಯವನು ಕುರಿತು ಬರೆದಿರುವ ಲೇಖನಗಳು—ಮುಖ್ಯವಾಗಿ, ಕೆಲವು ಸಣ್ಣ ಕಥೆಗಳ ಮೇಲೆ,

ಪೌರಾಣಿಕ ಕಾದಂಬರಿಯ ಮೇಲೆ ಬರೆದಿರುವ ಲೇಖನ—ದೋಷ ಸಾಹಿತ್ಯದ ಬಗ್ಗೆ ಅವರಿಗಿರುವ ಧೋರಣೆಗಳನ್ನು ಸ್ಪಷ್ಟಪಡಿಸುತ್ತವೆ. ಅವರ ಇತ್ತೀಚಿನ ಬಂಕಿಮ ಚಂದ್ರ ಎಂಬುದು ಬಂಕಿಮಚಂದ್ರರ ಜೀವನ ಕೃತಿಗಳನ್ನು ಕುರಿತ ವಿದ್ವತ್ಪೂರ್ಣ ಕೃತಿಯಾಗಿದೆ. ಡಿ. ವಿ. ಜಿ. ಕನ್ನಡದ ಧೀಮಂತ ವ್ಯಕ್ತಿಗಳಲ್ಲೊಬ್ಬರು. ಅವರ ಜೀವನ ಸೌಂದರ್ಯ ಮತ್ತು ಸಾಹಿತ್ಯ, ಸಾಹಿತ್ಯಶಕ್ತಿ ಎರಡೂ ವಿಮರ್ಶನ ಸಾಹಿತ್ಯ ದಲ್ಲಿ ಮುಖ್ಯವಾದ ಕೃತಿಗಳು. ಈ ಕೃತಿಗಳಲ್ಲಿ ಸಾಹಿತ್ಯ ಮತ್ತು ವಿಜ್ಞಾನಕ್ಕಿರುವ ಸಂಬಂಧವನ್ನು ಕುರಿತು, ಸಾಮ್ಯವೈಷಮ್ಯಗಳನ್ನು ಕುರಿತು. ವಿಜ್ಞಾನ ದೃಷ್ಟಿಯನ್ನು ಕುರಿತು ವಿವೇಚಿಸಲಾಗಿದೆ. ರಾಷ್ಟ್ರಕನಿಗೆ ಸಾಹಿತ್ಯ ಬೇಕೆ? ನವ್ಯತೆಯೇ ಜೀವನ, ಈ ಲೇಖನಗಳು ಇಲ್ಲಿ ಮುಖ್ಯ. ಕಾವ್ಯಸಂಸ್ಕಾರವಿಲ್ಲದವ ಮಾಡುವ ರಾಜ್ಯ ಶಾಸನ ಕುರುಡ ಹಿಡಿದ ತುಪಾಕಿ : ನವ್ಯತೆಯೇ ಜೀವನ, ಹಳಸಿಕೆಯೆ ಸಾವು— ಈ ಮಾತುಗಳು ಜೀವನ ಮತ್ತು ಸಾಹಿತ್ಯಗಳ ಬಗ್ಗೆ ಅವರು ತಾಳಿರುವ ಧೋರಣೆ ಗಳನ್ನು ಹೇಳುತ್ತವೆ. ಡಿ. ವಿ. ಜಿ. ಹೆಚ್ಚಾಗಿ, ಪಾಶ್ಚಾತ್ಯ ಮತ್ತು ಭಾರತೀಯ ಕಾವ್ಯಮೀಮಾಂಸೆಯ ಹಿನ್ನೆಲೆಯುಳ್ಳ ಸೈದ್ಧಾಂತಿಕ ವಿಮರ್ಶೆಯನ್ನು ಬರೆದಿದ್ದಾರೆ. ಈ ಎರಡು ಪದ್ಧತಿಗಳಲ್ಲಿನ ಚಿಂತನೆಗಳನ್ನು ಕುರಿತು ವಿವೇಚಿಸುವಾಗ ಸ್ವತಂತ್ರ ವಿಚಾರಶಕ್ತಿಯನ್ನು ತೋರಿದ್ದಾರೆ.

ಮಾಸ್ತಿಯವರ, ಸಾಹಿತ್ಯ ಎಂಬ ಕೃತಿಯೂ ಸೈದ್ಧಾಂತಿಕ ವಿಮರ್ಶೆಯನ್ನುಳ್ಳ ಗ್ರಂಥ. ಇಲ್ಲಿ ಸಾಹಿತ್ಯಕ್ಕೆ ಸಂಬಂಧಿಸಿದ ಅನೇಕ ವಿಷಯಗಳ ಬಗ್ಗೆ ಚರ್ಚಿಸಿದ್ದಾರೆ. ಆದರ ಹುಟ್ಟು ಬೆಳೆವಣಿಗೆ, ಸಾಹಿತ್ಯ ನೀತಿಗಳಿಗೆ ಇರುವ ಸಂಬಂಧ, ಕಾವ್ಯ ಪ್ರಯೋಜನ ಇತ್ಯಾದಿ ಮೂಲಭೂತ ವಿಷಯಗಳ ಬಗ್ಗೆ ಪಾಶ್ಚಾತ್ಯ ಸಾಹಿತ್ಯ ಮತ್ತು ಭಾರತೀಯ ಸಾಹಿತ್ಯದ ಅಭ್ಯಾಸದಿಂದ ಬಂದ ವಿಚಾರಗಳನ್ನು ಇಲ್ಲಿ ಪ್ರಕಟಿಸಿದ್ದಾರೆ. ಇವರು ವಾಲ್ಮೀಕಿ ಮತ್ತು ರವೀಂದ್ರರ ಕಾವ್ಯಗಳ ಮೇಲೆ ಎರಡು ಗ್ರಂಥ ಬರೆದಿದ್ದಾರೆ. ಆ ಕವಿಗಳ ಕಾವ್ಯಸ್ವರೂಪವನ್ನು ಪರಿಚಯಿಸಿಕೊಟ್ಟು ಅವುಗಳ ವಿಮರ್ಶೆಯನ್ನೂ ಮಾಡಿದ್ದಾರೆ. ಆದರೆ ಇಲ್ಲೆಲ್ಲ ವಿಮರ್ಶೆಗಿಂತ ರಸಾಸ್ವಾದ ಮುಖ್ಯ ವಾಗಿದೆ. ಅವರು ಬರೆದ ಹಲವಾರು ಮುನ್ನುಡಿಗಳು ಉತ್ತಮ ವಿಮರ್ಶೆಗಳಾಗಿವೆ. ಅನೇಕ ಭಾಗಗಳಾಗಿ ಪ್ರಕಟವಾಗಿರುವ ಮಾಸ್ತಿಯವರ ವಿಮರ್ಶೆಎಂಬ ಕೃತಿ ಯಲ್ಲಿಯೂ ಅನೇಕ ಪರಿಚಯಾತ್ಮಕ ವಿಮರ್ಶೆಗಳಿವೆ.


ಎಸ್. ವಿ. ರಂಗಣ್ಣ

ಇಂಗ್ಲಿಷ್, ಸಂಸ್ಕೃತ, ಪ್ರಾಚೀನ ಕನ್ನಡ ಕಾವ್ಯ ಗಳಲ್ಲಿ ಪಂಡಿತರಾಗಿರುವ ಎಸ್. ವಿ. ರಂಗಣ್ಣನವರು ಮುಖ್ಯವಾಗಿ ವಿಮರ್ಶ ಕರೂ ಹೌದು. ಅವರ ಶೈಲಿ– ಎರಡು ಸಂಪುಟಗಳ ಕೃತಿ —ಅವರ ಉದ್ದಾಮ ಪಾಂಡಿತ್ಯಕ್ಕೆ ನಿದರ್ಶನ ವಾಗಿದೆ. ಇಲ್ಲಿ ಅವರು ಅನೇಕ ಪ್ರಾಚೀನ ಕವಿಗಳ ಶೈಲಿಗಳನ್ನು ಕುರಿತು ವಿವೇಚಿಸಿದ್ದಾರೆ. ಹೀಗೆ ವಿವೇಚಿಸುವಾಗ, ಅರಿಸ್ಟಾಟಲ್, ಡ್ರೈಡನ್, ಕೋಲ್ ರಿಜ್ ಇತ್ಯಾದಿ ಪಾಶ್ಚಾತ್ಯ ವಿಮರ್ಶಕರ ಚಿಂತನೆಗಳನ್ನು ಮೂಲವಾಗಿಟ್ಟು ಕೊಂಡಿದ್ದಾರೆ. ಪಂಪನ ಧ್ವನಿ ಪೂರ್ಣತೆ, ರನ್ನನ ಮಹೋನ್ನತಿ, ಕುಮಾರವ್ಯಾಸನ ರೂಪಕ ಸೃಷ್ಟಿ, ರಾಘ ವಾಂಕನ ನಾಟಕೀಯತೆ, ಹೀಗೆ, ಆ ಕವಿಗಳ ಬಗ್ಗೆ ಬರೆಯುವಾಗ ಆಯಾ ಕವಿಗಳ ಪ್ರಮುಖ ಗುಣಗಳನ್ನು ಎತ್ತಿ ತೋರಿಸಿದ್ದಾರೆ. ಅವರ ಇತ್ತೀಚಿನ ಪಾಶ್ಚಾತ್ಯ ಗಂಭೀರ ನಾಟಕಗಳು ಉದ್ದಾಮಕೃತಿ. ಅದರಲ್ಲಿ ಗಂಭೀರ ನಾಟಕದ ಹುಟ್ಟು, ಗ್ರೀಕ್ ರುದ್ರ ನಾಟಕಕಾರರ ಪರಿಚಯ, ನಾಟಕಗಳ ವಿಮರ್ಶೆ, ಷೇಕ್ಸ್‌ಪಿಯರ್, ರಾಸೀನ್. ಲ್ಯೂಗಿ ಪಿರ್ಯಾಂಡಲೋ, ಸಾರ್ತ್ರ್, ಬೆಕೆಟ್ ಇತ್ಯಾದಿ ಪಾಶ್ಚಾತ್ಯ ನಾಟಕಕಾರರನ್ನು ಕುರಿತು ಚರ್ಚೆ—ಇವೆಲ್ಲಾ ಬರುತ್ತವಾದ್ದರಿಂದ ಈ ಕೃತಿ ಕನ್ನಡದಲ್ಲಂತೂ ಅನನ್ಯವಾದದ್ದು.

ಕುವೆಂಪುರವರ ಕಾವ್ಯವಿಚಾರ, ತಪೋನಂದನ, ವಿಭೂತಿಪೂಜೆ, ರಸೋವೈಸಃ —ಈ ವಿಮರ್ಶ ಲೇಖನಗಳ ಸಂಕಲನಗಳು ಹಲವು ಶ್ರೇಷ್ಠ ವಿಮರ್ಶೆಗಳನ್ನೊಳ ಗೊಂಡಿವೆ. ತಪೋನಂದನ ಕುವೆಂಪುರವರ ಶ್ರೇಷ್ಠ ವಿಮರ್ಶಾಕೃತಿಗಳಲ್ಲೊಂದು ಗ್ರಂಥ. ಮಹಾಶ್ವೇತೆಯ ತಪಸ್ಸು. [illegible] ಯಲ್ಲಿ—ಇವು ಉತ್ತಮ ಅನ್ವಯಿಕ ವಿಮರ್ಶೆಗಳಾಗಿವೆ. [illegible] ಮುಖಾಂತರ ನಮ್ಮ ದೇಶಕ್ಕೆ ಆಗಮಿಸಿದ ಪಾಶ್ಚಾತ್ಯ ಸಾಹಿತ್ಯ ಸಂಸ್ಕೃತಿಗಳು ಭಾರತೀಯರ ಜೀವನದ ಮೇಲೆ ಬೀರಿದ ಪ್ರಭಾವವೇ ಆಧುನಿಕ ನವೋದಯಕ್ಕೆ ಕಾರಣ ಎಂಬ ಮಾತೂ ಕವಿತೆಯಲ್ಲೇ ಗಮನಿಸಿ ಹೇಳಬಹುದಾಗಿದೆ. ಆ ಪ್ರಭಾವ ನೇರವಾಗಿ ಬಂದಿದೆ ಎಂದೇ ಹೇಳಬೇಕು......ಇಂದಿನ ನವೋದಯಯುಗಕ್ಕೆ ಸ್ವಮತಾಭಿಮಾನವೆ ಮುಖ್ಯ ಪ್ರಚೋದನವಾದ ಇಂದಿನ ನವೋದಯಕ್ಕೆ ಸ್ವದೇಶ ಪ್ರೇಮ ಮತ್ತು ಸ್ವರಾಷ್ಟ್ರಾಭಿಮಾನ ಮೂಲವಾದ ಸ್ವಾತಂತ್ರ್ಯ ಸಂಗ್ರಾಮ ಭಾವನೆ ಯಿಂದಲೇ ಆ ಪ್ರೇರಣೆ ವಿಪುಲ ಪ್ರಮಾಣದಲ್ಲಿ ಒದಗಿತೆಂದು ಹೇಳಬೇಕಾಗುತ್ತದೆ ಎಂಬ ಮಾತೂ ಆಯಾಕಾಲದ ಕಾವ್ಯದ ಸ್ವರೂಪಕ್ಕೆ ಕನ್ನಡಿ ಹಿಡಿಯುವಂತಿವೆ.

ದ. ರಾ. ಬೇಂದ್ರೆಯವರು ತಮ್ಮ ಸಾಹಿತ್ಯ ಹಾಗೂ ವಿಮರ್ಶೆ, ಸಾಹಿತ್ಯ ಸಂಶೋಧನೆ ಎಂಬ ಕೃತಿಗಳಲ್ಲಿ ಸಾಹಿತ್ಯಸೃಷ್ಟಿ, ರಸೋತ್ಪಾದನೆ, ರಸಾಸ್ವಾದ ಇತ್ಯಾದಿ ವಿಷಯಗಳನ್ನು ಚರ್ಚಿಸಿದ್ದಾರೆ. ಮನ್ವಂತರದಲ್ಲಿ ತಮ್ಮ ಕಾವ್ಯಸೃಷ್ಟಿಯ ಬಗ್ಗೆ ತಾವೇ ಬರೆದಿರುವ ದೀರ್ಘವಾದ ಪ್ರಬಂಧದಲ್ಲಿ ಅವರು ಕವಿಯಾಗಿ ಎದುರಿಸಿದ ಸಮಸ್ಯೆಗಳನ್ನು ವಿವೇಚಿಸಿದ್ದಾರೆ.

ತೀ. ನಂ. ಶ್ರೀ. ಅವರ ಕಾವ್ಯ ಮೀಮಾಂಸೆ, ಕಾವ್ಯ ಸಮೀಕ್ಷೆ, ಸಮಾಲೋಕನ ಇವು ಮಹತ್ತ್ವಪೂರ್ಣವಾದ ಗ್ರಂಥಗಳು. ಮೊದಲನೆಯದು ಭಾರತೀಯ ಕಾವ್ಯ ಮೀಮಾಂಸೆ ಬೆಳೆದು ಬಂದ ರೀತಿಯನ್ನು ವಿವರಿಸುವ, ವಿವೇಚಿಸುವ ಶ್ರೇಷ್ಠ ಗ್ರಂಥ. ಭರತ ಭಾಮಹ ದಂಡಿಗಳಿಂದ ಹಿಡಿದು ಆನಂದವರ್ಧನನ ವರೆಗೆ ಅಲಂಕಾರ, ಕಾವ್ಯ, ಕಾವ್ಯಪ್ರಯೋಜನ, ಧ್ವನಿ, ರಸ–ಇತ್ಯಾದಿ ಸಿದ್ಧಾಂತಗಳನ್ನು ಕುರಿತಾದ ಚಿಂತನೆ ಬೆಳೆದು ಬಂದ, ವಿಕಾಸ ಹೊಂದಿದ, ಕ್ರಮವನ್ನು ಒಂದೆಡೆ ಹಿಡಿದಿಟ್ಟಿರುವ ಏಕೈಕ ಕೃತಿಯಿದು.

ರಂ. ಶ್ರೀ. ಮುಗಳಿಯವರ ವಿಮರ್ಶೆಯ ಕೃತಿಗಳಲ್ಲಿ ಕನ್ನಡ ಸಾಹಿತ್ಯ ಚರಿತ್ರೆ ಮುಖ್ಯವಾದದ್ದು. ಇದರಲ್ಲಿ ಪ್ರಾಚೀನ ಕನ್ನಡ ಸಾಹಿತ್ಯ ಚರಿತ್ರೆಯನ್ನು ಸಮಗ್ರ ವಾಗಿ ಬರೆಯಲಾಗಿದೆ; ಪ್ರಾಚೀನ ಕನ್ನಡ ಕಾವ್ಯದ ಮುಖ್ಯ ಘಟ್ಟಗಳಾದ ಪಂಪ, ವಚನಕಾರರು, ಕುಮಾರವ್ಯಾಸ–ಇವರಸ್ಥಾನ ನಿರ್ದೇಶ ಮಾಡುವುದರ ಜೊತೆಗೆ, ಉಳಿದ ಹಲವಾರು ಪ್ರಮುಖ ಅಪ್ರಮುಖ ಕವಿಗಳ ಕಾವ್ಯಗಳನ್ನೂ ಇಲ್ಲಿ ಸಮೀಕ್ಷಿಸಲಾಗಿದೆ.

ವಿ. ಸೀ. ಅವರ ವಿಮರ್ಶೆ ಪಾಶ್ಚಾತ್ಯ ವಿಮರ್ಶಕರ ಚಿಂತನೆಗಳಿಂದ ಪ್ರಭಾವಿತ ವಾಗಿದೆ. ಅವರ ಕವಿ–ಕಾವ್ಯ–ದೃಷ್ಟಿ ಎಂಬ ಗ್ರಂಥದಲ್ಲಿ ಸಾಹಿತ್ಯಸ್ವರೂಪ, ಕಲೆಯ ಬಗ್ಗೆ ಎದ್ದಿರುವ ವಾದ ವಿವಾದಗಳು, ಒಂದು ಕೃತಿಯ ಅರ್ಥ ನಿರ್ಣಯ, ಮೌಲ್ಯ ಮಾಪನ–ಇತ್ಯಾದಿಗಳನ್ನು ಚರ್ಚಿಸಲಾಗಿದೆ. ಪ್ರತಿಯೊಂದು ಸಾಹಿತ್ಯಕೃತಿಯೂ ಒಂದು ಜೀವಂತಸೃಷ್ಟಿ ; ಅಲ್ಲಿ ಬರುವ ಛಂದಸ್ಸು, ಲಯ, ಪ್ರಾಸ ಇತ್ಯಾದಿಗಳೆಲ್ಲವೂ ಆ ಕೃತಿಯಲ್ಲಿ ಅವಿಭಾಜ್ಯವಾಗಿ ಸೇರಿಕೊಂಡಿರುತ್ತವೆ. ಅವನ್ನು ವಿಮರ್ಶೆಯ ಅನುಕೂಲ ಕ್ಕಾಗಿ ಮಾತ್ರ ಬೇರೆ ಬೇರೆ ಮಾಡಿಕೊಳ್ಳಬಹುದು–ಎಂಬ ವಿಷಯಗಳನ್ನು ಚರ್ಚಿಸು ವಾಗ ಸ್ಫೂರ್ತಿ ಮತ್ತು ಪ್ರಜ್ಞಾಪೂರ್ವಕವಾಗಿ ಮಾಡುವ ಕಲೆಗಾರಿಕೆಗಳಿಗಿರುವ ಸಂಬಂಧ ಹಾಗೂ ಅವು ಹೇಗೆ ಕೆಲಸಮಾಡುತ್ತವೆ ಎನ್ನುವುದನ್ನು ವಿವೇಚಿಸಲಾಗಿದೆ. ಅವರ ಇನ್ನೊಂದು ಗ್ರಂಥ,ಸಾಹಿತ್ಯ ವಿಮರ್ಶೆಗಳಲ್ಲಿ ಅರ್ಥ ಮತ್ತು ಮೌಲ್ಯ ಎಂಬುದು. ಅದರಲ್ಲಿ ಬರುವ ಈ ಮಾತುಗಳು ಮುಖ್ಯ : ಈ ಘರ್ಷಣೆಗೆ ಒಡ್ಡಿನಿಂತು ಹೊಸ ಪ್ರಕಾರ ವೀರ್ಯವಂತವಾಗಿರುವಾಗ ಅವನ್ನು ಎದುರಿಸಿದ ಹೊರತು ಹಳತಿಗೆ ವಿಸ್ತಾರವಿಲ್ಲ.

ಪು.ತಿ.ನ. ಅವರ ಕಾವ್ಯಕುತೂಹಲದಲ್ಲಿರುವ ರಸಸರಸ್ವತಿಯ ಮುನ್ನುಡಿ ಮುಖ್ಯ ವಾದದ್ದು. ಕಾವ್ಯದ ಉತ್ಪತ್ತಿಗೆ ಕವಿಗೆ ಹುಟ್ಟಿನಿಂದಲೇ [illegible] ಎರಡು ಗಣಗಳಿರಬೇಕೆಂದು ತೋರುತ್ತದೆ. ಭವದ ತೀವ್ರಸಂವೇದನಾರೂಪವಾದ ಪ್ರಜ್ಞೆ ಮತ್ತು ನಿಮಗ್ನತೆಯಿಂದ ಪಾರಾಗಿ ನಿಲ್ಲುವ ಲಘಿಮಾಕೌಶಲ. ಈ ಎರಡು ಗುಣ ಕವಿಗಿದ್ದ ಹೊರತು ಕಾವ್ಯ ಸಿದ್ಧಿ ಸಿಕ್ಕಲಾರದು. ಇವು ಕಾವ್ಯಸೃಷ್ಟಿಯ ಬಗ್ಗೆ ಹೇಳಲಾದ ಮಹತ್ತ್ವಪೂರ್ಣ ಮಾತುಗಳಾಗಿವೆ.

ಗೋಕಾಕರು ಭಾರತೀಯ ಸಂಪ್ರದಾಯ ಚಿಂತನೆಗಳಿಗೂ ಪಾಶ್ಚಾತ್ಯ ಸಂಪ್ರ ದಾಯ ಚಿಂತನೆಗಳಿಗೂ ಘರ್ಷಣೆ ಬರದಂತೆ ಸಮನ್ವಯ ಗೊಳಿಸುವ ಇಚ್ಛೆಯಿಂದ ಸಾಹಿತ್ಯ ನಿರ್ಮಿಸಿದವರು, ವಿಮರ್ಶೆ ಬರೆದವರು. ಇಂದಿನ ಕಾವ್ಯದ ಗೊತ್ತು ಗುರಿಗಳು ಎಂಬ ಗ್ರಂಥದಲ್ಲಿ ಅವರು ಹೊಸಕಾವ್ಯದ ತಂತ್ರ, ರಚನಾರೀತಿ, ಇತ್ಯಾದಿ ಗಳನ್ನು ಚರ್ಚಿಸಿದ್ದಾರೆ. ನವ್ಯತೆ ಹಾಗೂ ಕಾವ್ಯಜೀವನದಲ್ಲಿ, ಸಾಹಿತ್ಯ ಹಾಗೂ ನವ್ಯತೆ, ನವ್ಯಕಾವ್ಯದ ರೀತಿ, ಕಾವ್ಯದಲ್ಲಿ ನವ್ಯತೆ—ಇವುಗಳ ಬಗ್ಗೆ ಈ ಪ್ರಬಂಧಗಳಲ್ಲಿ ಚರ್ಚಿಸಿದ್ದಾರೆ. ನವ್ಯಕಾವ್ಯವೆಂದರೆ ಆಧುನಿಕ ಕಾವ್ಯದಿಂದ [illegible] ವಿಶೇಷ ತಂತ್ರ ವಿಧಾನಗಳನ್ನು ಪಡೆದ ಕಾವ್ಯವೆಂಬರ್ಥದಲ್ಲಿ ಈ ಶಬ್ದ ಉಪಯೋಗಿ ಸುತ್ತಿದ್ದೇನೆ. ನವ್ಯಕಾವ್ಯ ಒಂದು ವಿಧಾನ. ಒಂದು ತಂತ್ರ. ಅದು ಯಾವ [illegible]

ದಲ್ಲೂ ಬಳಕೆಗೆ ಬರಬಲ್ಲದು. ಗೂಗೆ, ಜೇಡ, ಸಿಗರೇಟಿನ ತುಂಡು, ಗವಳಿಗನ ಎಮ್ಮೆ—ಇವೆಲ್ಲ ನವ್ಯಕಾವ್ಯದ ಪ್ರತಿಮೆಗಳಾಗಿವೆ ಎಂಬ ಅವರ ಮಾತು ಗಮನಾರ್ಹವಾಗಿದೆ.

ವಿಮರ್ಶೆಯ ಕ್ಷೇತ್ರದಲ್ಲಿ ದೇಜಗೌ ಅವರದು ಮುಖ್ಯ ಹೆಸರು. ಅವರ ಕುಲಪತಿಯ ಭಾಷಣಗಳು ಎಂಬ ಪುಸ್ತಕದಲ್ಲೂ ಮುನ್ನುಡಿಗಳು ಎಂಬ ಪುಸ್ತಕದಲ್ಲೂ ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಬಗ್ಗೆ, ಅಲ್ಲಿಯ ಪ್ರಕಾರಗಳ ಬಗ್ಗೆ, ಸಮಸ್ಯೆಗಳ ಬಗ್ಗೆ ಬಹು ತೂಕವಾದ ವಿಮರ್ಶೆಗಳು ಬಂದಿವೆ. ನಂಜುಂಡಕವಿ, ಷಡಕ್ಷರದೇವ ಎಂಬವು ಆಯಾ ಕವಿ, ಕೃತಿಗಳನ್ನು ಕುರಿತವಾದರೆ ಅವರ ಸಾಹಿತ್ಯಮಾರ್ಗ, ಸಾಹಿತಿಗಳ ಸಂಗದಲ್ಲಿ ಎಂಬ ಪುಸ್ತಕಗಳು ಇಂದಿನ ಪ್ರಮುಖ ಕವಿಗಳನೇಕರನ್ನು ಕುರಿತವಾಗಿವೆ. ದೇಜಗೌ ಅವರದು ಪೂರ್ಣದೃಷ್ಟಿಯ ತೂಕವಾದ ವಿಮರ್ಶೆ. ಅಲ್ಲಿ ಉತ್ಪ್ರೇಕ್ಷೆಗೆ ಎಡೆ ಇಲ್ಲ. ಆದರೆ ಗುಣಪಕ್ಷಪಾತ ಮಾತ್ರ ವಿಪುಲವಾಗಿ ಉಂಟು. ಇವರ ವಿಮರ್ಶನ ಶೈಲಿಯೂ ಅಷ್ಟೆ. ಓದುಗನಮೇಲೆ ತನ್ನ ಪ್ರಭಾವವನ್ನು ಬೀರದೆ ಹಿಂದೆ ಸರಿದು ವಿಷಯವನ್ನು ಮುಂದೂಡುವಷ್ಟು ಸರಳವೂ ನೇರವೂ ಆಗಿದೆ.

ಗೋಪಾಲಕೃಷ್ಣ ಅಡಿಗರ ಮಣ್ಣಿನ ವಾಸನೆ ನವ್ಯಕಾವ್ಯವನ್ನು ಕುರಿತಾದ ಅವರ ದೃಷ್ಟಿಯನ್ನು ತಿಳಿಸುತ್ತದೆ. ಅವರು ಕಾವ್ಯಸೃಷ್ಟಿಯ ಬಗ್ಗೆ ಹೀಗೆ ಹೇಳುತ್ತಾರೆ : ಗದ್ಯ ವಿವರಣೆ ಜಾಗೃತ ಮನಸ್ಸಿನ ಕೆಲಸ; ಕಾವ್ಯರಚನೆ ಸುಪ್ತಚೇತನ, ಜಾಗೃತ ಮನಸ್ಸುಗಳ ಅಪೂರ್ವ ಸಹಕಾರದ ಅಥವಾ ಸ್ವಪ್ನಜಾಗೃತಿ ಪರಿಶ್ರಮಗಳ ಏಕತ್ರ ಸಂಯೋಗದ ಫಲ. ಜೀವ ಪ್ರಪಂಚಕ್ಕೆ ಸೇರಿದ ಸಾಹಿತ್ಯದಲ್ಲಿ ಎಂತೆಂಥ ಉದಾತ್ತವಾದ ವಿಚಾರಗಳೂ ಕಲ್ಪನೆಗಳೂ ಇರಲಿ, ಅದರಲ್ಲೂ ಈ ಪಾರ್ಥಿವ ಲೋಕದ ವಾಸನೆ ಹೊಡೆಯುತ್ತಿದ್ದರೆ ಮಾತ್ರ ಅದು ನಿಜವಾದದ್ದೂ ಸಾರ್ಥಕವಾದದ್ದೂ ಆಗಬಲ್ಲದು. ಈ ಮಣ್ಣಿನ ವಾಸನೆ ಇಲ್ಲದ್ದು ಮೃತ್ಯು ಲೋಕಕ್ಕೆ ಅಥವಾ ಅಮೃತಲೋಕಕ್ಕೆ ಸೇರಿದ್ದಲ್ಲದೆ, ನಮ್ಮ ಬಡ ಮೃಣ್ಮಯ ಲೋಕಕ್ಕೆ ಸೇರಿದ್ದಂತೂ ಅಲ್ಲ. ಕಾವ್ಯ ಎಂದರೆ ಅನೇಕ, ಪರಸ್ಪರ ವಿರುದ್ಧವೆನ್ನಿಸುವಂಥ ಮೂಲ ವಸ್ತುಗಳ ಹಠಾತ್ ಸಂಯೋಗದಿಂದ ಹುಟ್ಟುವ ಹೊಸ ವಸ್ತು. ಒಂದೊಂದು ಕಾಲದಲ್ಲಿ ಒಂದೊಂದು ಮೂಲ ವಸ್ತುವಿನ ಮೇಲೆ ಘಾತ ಬಿದ್ದು ಕಾವ್ಯಕ್ಕೆ ಸಮಕಾಲೀನತೆ ಬರುತ್ತದೆ. ಈ ಮಾತುಗಳನ್ನು ಗೋಕಾಕರ ಮಾತುಗಳೊಂದಿಗೆ ಹೋಲಿಸಿದಾಗ ನವ್ಯಕಾವ್ಯದ ಬಗ್ಗೆ ಇರುವ ಇಬ್ಬರ ದೃಷ್ಟಿಭೇದವನ್ನು ಗುರುತಿಸಬಹುದಾಗಿದೆ.

ಕೆ. ಡಿ. ಕುರ್ತಕೋಟಿಯವರ ಯುಗಧರ್ಮ ಹಾಗೂ ಸಾಹಿತ್ಯದರ್ಶನ ಮತ್ತು ಮನ್ವಂತರದ ಎರಡನೆಯ ಸಂಪುಟದಲ್ಲಿ ನವ್ಯಕಾವ್ಯದ ಬಗ್ಗೆ ಬರೆದಿರುವ ದೀರ್ಘ ಲೇಖನ ಮುಖ್ಯವಾದವು. ಮೊದಲನೆಯದು ಸಮಗ್ರ ಕನ್ನಡ ಸಾಹಿತ್ಯದ ವಿಮರ್ಶೆಯಾಗಿದೆ. ಕಾವ್ಯ,ಸಣ್ಣಕಥೆ, ಕಾದಂಬರಿ, ಸಾಹಿತ್ಯವಿಮರ್ಶೆ—ಹೀಗೆ ಇಡೀ ಸಮಕಾಲೀನ ಕನ್ನಡ ಸಾಹಿತ್ಯವನ್ನು ಕುರಿತ ವಿಮರ್ಶೆ ಕನ್ನಡದಲ್ಲಿ ಇದೇ ಮೊದಲನೆಯದು. ಇಲ್ಲಿ ಕನ್ನಡದ ಪ್ರಮುಖ ಬರೆಹಗಾರರ ಬಗ್ಗೆ, ಕವಿಗಳ ಬಗ್ಗೆ, ವಿಮರ್ಶಕರ ಬಗ್ಗೆ, ಕನ್ನಡಸಾಹಿತ್ಯದ ಮುಖ್ಯ ಒಲವುಗಳ ಬಗ್ಗೆ ಶ್ರೀಯುತರು ಬರೆದಿದ್ದಾರೆ; ಮೌಲ್ಯವಿವೇಚನೆಯ ಪ್ರಯತ್ನ ಮಾಡಿದ್ದಾರೆ; ಇಂದಿನ ಕನ್ನಡ ಸಾಹಿತ್ಯಸೃಷ್ಟಿಯ ಸಂದರ್ಭದಲ್ಲಿ ಲೇಖಕರ ಸ್ಥಾನವನ್ನು ನಿರ್ಧರಿಸಲು ಯತ್ನಿಸಿದ್ದಾರೆ. ಎರಡನೆಯದರಲ್ಲಿ, ಪ್ರಮುಖರಾದ ನವ್ಯಕವಿಗಳ ಕಾವ್ಯವನ್ನು ಕುರಿತು ವಿವೇಚಿಸಿದ್ದಾರೆ. ಸುಮತೀಂದ್ರ ನಾಡಿಗರು ತಮ್ಮ ಎಂ. ಗೋಪಾಲಕೃಷ್ಣ ಅಡಿಗ: ಒಂದು ಕಾವ್ಯಾಭ್ಯಾಸ—ಎಂಬ ಗ್ರಂಥದಲ್ಲಿ, ಅಡಿಗರ ಹಲವು ಕವನಗಳ ವಿಶ್ಲೇಷಣೆಯ ಮೂಲಕ ಅವರ ಕಾವ್ಯದ ಬೆಲೆಕಟ್ಟುವ ಪ್ರಯತ್ನ ಮಾಡಿದ್ದಾರೆ. ತಿಪ್ಪೇರುದ್ರಸ್ವಾಮಿಯವರ ಕುವೆಂಪುರವರ ನಾಟಕಗಳು ಎಂಬ ಗ್ರಂಥ ಕುವೆಂಪುರವರ ನಾಟಕಗಳ ವಿಮರ್ಶೆಯಾಗಿದೆ.

ಸುಜನಾ ಅವರ ಹೃದಯ ಸಂವಾದದಲ್ಲಿ ಅವರು ಯಾರೂ ಕಾಯಲಿಲ್ಲ ಮತ್ತು ಬಸವಣ್ಣನವರ ಪ್ರಾಣಿರೂಪಕಗಳು ಮುಖ್ಯವಾದ ಪ್ರಬಂಧಗಳು. ಕುವೆಂಪು ಅವರ ಮೂಲಕ ಪ್ರಚಾರಕ್ಕೆ ಬಂದ ದರ್ಶನವಿಮರ್ಶೆಯ ಕೆಲವು ಬಗೆಗಳನ್ನಿಲ್ಲಿ ಕಾಣಬಹುದು. ಜಿ.ಎಸ್. ಶಿವರುದ್ರಪ್ಪನವರ ವಿಮರ್ಶೆಯ ಪೂರ್ವ ಪಶ್ಚಿಮ ಎಂಬ ಗ್ರಂಥ ಭಾರತೀಯ ಮತ್ತು ಪಾಶ್ಚಾತ್ಯ ವಿಮರ್ಶೆಗೆ ಒಳ್ಳೆಯ ಪ್ರವೇಶವಾಗಿದೆ. ತ.ಸು. ಶಾಮರಾಯರ ಕನ್ನಡ ನಾಟಕಗಳು ಎಂಬ ಗ್ರಂಥದಲ್ಲಿ ಅದುವರೆಗೆ ಪ್ರಕಟವಾದ ಕನ್ನಡ ನಾಟಕಗಳ ಪರಿಚಯಾತ್ಮಕ ವಿಮರ್ಶೆ ದೊರೆಯುತ್ತದೆ. ಗಿರಡ್ಡಿ ಗೋವಿಂದರಾಜರು ಸಣ್ಣಕಥೆಯ ಹೊಸ ಒಲವುಗಳು ಎಂಬ ತಮ್ಮ ಗ್ರಂಥದಲ್ಲಿ ಇತ್ತೀಚಿನ ಸಣ್ಣಕಥೆಯ ಬೆಳವಣಿಗೆಯನ್ನು ಸಮೀಕ್ಷಿಸಿದ್ದಾರೆ. ಹಾ. ಮಾ. ನಾಯಕರ ಸಂಕೀರ್ಣ ಎಂಬ ಪುಸ್ತಕದಲ್ಲಿನ ಕುವೆಂಪು ಅವರ ಶಿಶುಗೀತೆಗಳು, ಬೆಳೆಯುತ್ತಿರುವ ಕಾದಂಬರಿ, ಕನ್ನಡದಲ್ಲಿ ವಿಮರ್ಶೆ ಎಂಬ ಲೇಖನಗಳು ಮುಖ್ಯವಾದವು. ಅವರ ಇನ್ನೊಂದು ಗ್ರಂಥವಾದ ಸಮೀಕ್ಷೆ ಎಂಬುದರಲ್ಲಿ ಕನ್ನಡ ವಿಮರ್ಶೆ ಕನ್ನಡ ಸಾಹಿತ್ಯ ಇತ್ಯಾದಿ ವಿಷಯಗಳ ಮೇಲೆ ಹತ್ತು ವರ್ಷಗಳ (1960–70) ಸಮೀಕ್ಷಾ ಲೇಖನಗಳಿವೆ. ಸಂಚಯ ಅವರ ಸಂಕ್ರಾಂತಿ ಗ್ರಂಥ. ಈ ಸಂಕಲನದಲ್ಲಿ 1965–66ರ ಕನ್ನಡ ಸಾಹಿತ್ಯ, ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳು—ಈ ಲೇಖ



ರಂ. ಶ್ರೀ. ಮುಗಳಿ

ನಗಳು ಮುಖ್ಯ. ಸಿ.ಪಿ.ಕೆ. ಅವರ ಕನ್ನಡ ಚತುರ್ಮುಖ ಮತ್ತು ಪರಿಭಾವನೆಯಲ್ಲಿ ವರ್ಣನಾತ್ಮಕ ವಿಮರ್ಶೆ ಇದೆ. ವಿ.ಸೀ. ಯವರ ಸಂಪ್ರದಾಯ ಮತ್ತು ಹೊಸ ಮಾರ್ಗ, ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು, ಇತ್ತೀಚೆಗೆ ಪ್ರಕಟವಾಗಿವೆ. ದೇಜಗೌರವರು ಸಂಪಾದಿಸಿರುವ ಕವಿದರ್ಶನದಲ್ಲಿರುವ ಕುವೆಂಪುರವರ ಕವನ ಪಕ್ಷಿಯ ಬಗ್ಗೆ ಮೂವರು ಬರೆದಿರುವ ಮೂರು ಲೇಖನಗಳು ಕುತೂಹಲಕಾರಿಯಾಗಿವೆ. ದೇಜಗೌರವರ ನಂಜುಂಡ ಕವಿ ಎಂಬುದು ಕವಿ ಕಾವ್ಯವನ್ನು ಕುರಿತಾದ ಪಾಂಡಿತ್ಯಪೂರ್ಣ ಕೃತಿಯಾಗಿದೆ. ಎ. ಆರ್. ಕೃಷ್ಣಶಾಸ್ತ್ರಿಗಳ ಬಂಕಿಮಚಂದ್ರ, ಎಂಬುದು ಬಂಕಿಮಚಂದ್ರರ ವ್ಯಕ್ತಿತ್ವ ಹಾಗೂ ಕೃತಿಗಳನ್ನು ಪರಿಚಯಿಸಿಕೊಡುವ ಗ್ರಂಥವಾಗಿದೆ. ಕೆ. ಎಸ್. ನರಸಿಂಹಸ್ವಾಮಿಗಳ ಉಪವನದಲ್ಲಿರುವ ಕನ್ನಡದ ನವ್ಯಕಾವ್ಯಸ್ವರೂಪ ಎಂಬ ಲೇಖನ ಮುಖ್ಯವಾಗಿದೆ. ನಮ್ಮ ಅನೇಕ ಹಿರಿಯ ಲೇಖಕರಿಗೆ ಅರ್ಪಿಸಿರುವ ಸಂಭಾವನಗ್ರಂಥಗಳಲ್ಲಿ ಹಲವಾರು ಒಳ್ಳೆಯ ವಿಮರ್ಶೆಗಳು ಸಿಕ್ಕುತ್ತವೆ. ಮುಖ್ಯವಾಗಿ ಈ ಕೆಲವು ಗ್ರಂಥಗಳನ್ನು ಹೆಸರಿಸಬಹುದು: ಗಂಗೋತ್ರಿ, ಕಾರಂತ ಪ್ರಪಂಚ, ಸಂವೇದನೆ, ಕಟ್ಟೀಮನಿ : ಬದುಕು-ಬರಹ, ವಿನಾಯಕ ವಾಙ್ಮಯ, ದೇ ಜ ಗೌ : ವ್ಯಕ್ತಿ ಮತ್ತು ಸಾಹಿತ್ಯ, ಉಡುಗೊರೆ, ಬಾಗಿನ, ಅಭಿವಂದನೆ, ಉಪಾಯನ. ಎಚ್. ತಿಪ್ಪೇರುದ್ರಸ್ವಾಮಿಯವರ ಶರಣರ ಅನುಭಾವಸಾಹಿತ್ಯ, ಜಿ. ಎಸ್. ಶಿವರುದ್ರಪ್ಪನವರ ಸೌಂದರ್ಯ ಸಮೀಕ್ಷೆ, ಜಿ. ವರದರಾಜರಾಯರ ಕುಮಾರರಾಮನ ಸಾಂಗತ್ಯಗಳು, ಪ್ರಭುಶಂಕರರ ಕನ್ನಡದಲ್ಲಿ ಭಾವಗೀತೆ, ಈ ಡಾಕ್ಟರೇಟ್ ಪ್ರಬಂಧಗಳು ಆಯಾ ವಿಷಯಗಳ ಮೇಲೆ ವಿದ್ವತ್ಪೂರ್ಣ ಕೃತಿಗಳಾಗಿವೆ. ಎಸ್, ಅನಂತನಾರಾಯಣರ ಹೊಸಗನ್ನಡ ಕವಿತೆಯ ಮೇಲೆ ಇಂಗ್ಲಿಷ್ ಪ್ರಭಾವ ಒಂದು ಪ್ರಮುಖ ಗ್ರಂಥವಾಗಿದೆ. ಭಾವಗೀತೆ, ಸಾನೆಟ್, ಪ್ರಗಾಥ ಇತ್ಯಾದಿಗಳ ಬಗ್ಗೆ ಇದರಲ್ಲಿ ವಿವರವಾಗಿ ಬರೆಯಲಾಗಿದೆ.

ಇತ್ತೀಚೆಗೆ ಕೆಲವು ನಿಯತಕಾಲಿಕ ಸಾಹಿತ್ಯಿಕ ಪತ್ರಿಕೆಗಳು ಬರುತ್ತಿವೆ : ಲಹರಿ, ಸಾಕ್ಷಿ, ಸಂಕ್ರಮಣ, ಮನ್ವಂತರ, ಸಮೀಕ್ಷಕ, ಸಂಕೀರ್ಣ, ಸಮನ್ವಯ, ಇತ್ಯಾದಿ. ಇವು ಅನೇಕ ಹೊಸ ಹಳೆಯ ಲೇಖಕರಿಗೆ ತಮ್ಮ ವಿಚಾರಗಳನ್ನು ಧೈರ್ಯವಾಗಿ ವ್ಯಕ್ತಪಡಿಸಲು ವೇದಿಕೆಗಳಾಗಿ ಪರಿಣಮಿಸಿವೆ. ಇಲ್ಲಿ ಅನೇಕ ಉತ್ತಮ ವಿಮರ್ಶಾ ಲೇಖನಗಳು ಬಂದಿವೆ; ಕೃತಿನಿಷ್ಠ ವಿಮರ್ಶೆ ಬಂದಿದೆ; ಸಾಹಿತ್ಯದಲ್ಲಿ ವೈಚಾರಿಕತೆಯ ಬಗ್ಗೆ ಪ್ರಬುದ್ಧವಾದ ಚರ್ಚೆ ನಡೆದಿದೆ; ನಾಟಕಗಳ ಬಗ್ಗೆ ಕೃತಿನಿಷ್ಠ ವಿಮರ್ಶೆ ಬಂದಿದೆ; ಇಲ್ಲಿಯ ಹಲವಾರು ಲೇಖನಗಳು ಪ್ರಬುದ್ಧ ವಿಮರ್ಶೆಗೆ ಉದಾಹರಣೆಗಳಾಗಿವೆ. ಇಲ್ಲಿಯ ಲೇಖಕರಲ್ಲಿ ಮುಖ್ಯವಾಗಿ ಈ ಹೆಸರುಗಳನ್ನು ಹೇಳಬಹುದು. ಯು.ಆರ್. ಅನಂತಮೂರ್ತಿ, ಎಂ.ಜಿ. ಕೃಷ್ಣಮೂರ್ತಿ, ಕೆ. ಡಿ. ಕುರ್ತಕೋಟಿ, ಗಿರೀಶ ಕಾರ್ನಾಡ, ಎಚ್.ಎಂ. ಚನ್ನಯ್ಯ, ಸುಮತೀಂದ್ರ

ನಾಡಿಗ, ಲಂಕೇಶ, ರಾಜೀವ ತಾರಾನಾಥ, ಜಿ.ಎಸ್. ಆಮೂರ, ಶಾಂತಿನಾಥ ದೇಸಾಯಿ, ಬಿ. ದಾಮೋದರರಾವ್, ಗಿರಡ್ಡಿ ಗೋವಿಂದರಾಜ, ಶಂಕರ ಘಾಣೇಕರ, ಆರ್.ಸಿ. ಕುಲಕರ್ಣಿ.

ಈ ಲೇಖಕರಿಂದ ಇತ್ತೀಚೆಗೆ, ಆಮೂರರ ಕೃತಿಪರೀಕ್ಷೆ, ಅನಂತಮೂರ್ತಿಯವರ ಪ್ರಜ್ಞೆ ಮತ್ತು ಪರಿಸರ, ಎಂ. ಜಿ. ಕೃಷ್ಣಮೂರ್ತಿಯವರ ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು, ಲಂಕೇಶರ ಪ್ರಸ್ತುತ—ಈ ಗ್ರಂಥಗಳು ಬಂದಿವೆ. ಈ ಎಲ್ಲ ಲೇಖಕರು ತಮ್ಮ ಗ್ರಂಥಗಳಲ್ಲಿ ಮುಖ್ಯವಾಗಿ ಇತ್ತೀಚಿನ ಕನ್ನಡದ ಮಹತ್ತ್ವಪೂರ್ಣ ಕೃತಿಗಳಾದ ಗ್ರಾಮಾಯಣ, ಸಂಸ್ಕಾರ, ಬಿರುಕು ಇತ್ಯಾದಿ ಕಾದಂಬರಿಗಳ ಬಗ್ಗೆ, ಅಡಿಗರ ಕಾವ್ಯ ಮತ್ತು ಅನಂತರದ ಹಲವಾರು ಕವಿಗಳ ಕಾವ್ಯದ ಬಗ್ಗೆ ಬರೆದಿದ್ದಾರೆ. ಹೀಗೆ ಬರೆಯುವಾಗ ಹೊಸಸಾಹಿತ್ಯದ ಸ್ವರೂಪದ ಬಗ್ಗೆ, ಅದರ ಮೇಲಾಗಿರುವ ಪ್ರಭಾವಗಳ ಬಗ್ಗೆ, ಅದರ ಗುಣಾವಗುಣಗಳ ಬಗ್ಗೆ ಬರೆದಿದ್ದಾರೆ.

ಅನಂತಮೂರ್ತಿಯವರು ತಮ್ಮ ಪ್ರಜ್ಞೆ ಮತ್ತು ಪರಿಸರದಲ್ಲಿ ಲೇಖಕನ ಪ್ರಜ್ಞೆ ಮತ್ತು ಅವನು ಬದುಕುತ್ತಿರುವ ಪರಿಸರಗಳಿಗಿರಬೇಕಾದ ಸಂಬಂಧವನ್ನು, ಮಾರ್ಕ್ಸ್ ವಾದ, ಸಾರ್ತ್ರನ ಅಸ್ತಿತ್ವ ವಾದಗಳ ಆಧಾರದ ಮೇಲೆ ಚರ್ಚಿಸುತ್ತಾರೆ. ಮಾರ್ಕ್ಸ್‌ವಾದ ಮತ್ತು ಸಾಹಿತ್ಯದಲ್ಲಿ ನಿಷ್ಠೆಯ ಪ್ರಶ್ನೆ, ಬದಲಾಗುತ್ತಿರುವ ಕನ್ನಡ ಕಾವ್ಯಮಾರ್ಗ, ಅಡಿಗರ ಭೂಮಿಗೀತ ಸಂಕಲನ, ಚನ್ನಯ್ಯನವರ ಆಮೆ, ಭಾರತೀಯ ಸಂಸ್ಕೃತಿ ಮತ್ತು ಲೇಖಕ, ಚಿತ್ತಾಲರ ಕವನಗಳು—ಇವು ಮಹತ್ತ್ವಪೂರ್ಣಲೇಖನಗಳಾಗಿವೆ. ಎಂ.ಜಿ. ಕೃಷ್ಣಮೂರ್ತಿಯವರ ಆಧುನಿಕ ಭಾರತೀಯ ಸಾಹಿತ್ಯ ಮತ್ತು ಇತರ ಲೇಖನಗಳು ಎಂಬ ಗ್ರಂಥದಲ್ಲಿರುವ ಭೂಮಿಗೀತ, ಐದು ವಚನಗಳು—ಒಂದು ವಿಶ್ಲೇಷಣೆ, ಗ್ರಾಮಾಯಣ—ಒಂದು ವಿಶ್ಲೇಷಣೆ, ಕುವೆಂಪು ಅವರ ಕಾನೂರು ಹೆಗ್ಗಡಿತಿ, ಕುವೆಂಪು ಅವರ ಮಲೆಗಳಲ್ಲಿ ಮದುಮಗಳು, ಅನಂತಮೂರ್ತಿಯವರ ಸಂಸ್ಕಾರ, ಪಿ. ಲಂಕೇಶರ ಬಿರುಕು—ಈ ಲೇಖನಗಳು ಉತ್ತಮ ವಿಶ್ಲೇಷಣಾತ್ಮಕ ವಿಮರ್ಶೆಗಳಷ್ಟೆ ಆಗಿರದೆ, ತೌಲನಿಕ ವಿಮರ್ಶೆಗಳೂ ಆಗಿವೆ. ಆಮೂರರ ಕೃತಿಪರೀಕ್ಷೆಯಲ್ಲಿ ಬೆಟ್ಟದ ಜೀವ, ಸಂಸ್ಕಾರ, ಹಳದಿಮೀನು, ಗ್ರಾಮಾಯಣ ಇತ್ಯಾದಿಗಳನ್ನು ಕುರಿತ ಲೇಖನಗಳು ಉತ್ತಮ ಕೃತಿನಿಷ್ಠ ವಿಮರ್ಶೆಗಳಾಗಿವೆ. ಪಿ. ಲಂಕೇಶರ ಪ್ರಸ್ತುತದಲ್ಲಿರುವ ಪ್ರಶ್ನೆ : ಯು.ಆರ್. ಅನಂತಮೂರ್ತಿ; ಎ. ಕೆ. ರಾಮಾನುಜನ್- ಹೊಕ್ಕುಳಲ್ಲಿ ಹೂವಿಲ್ಲ; ತುಘಲಕ್-ಒಂದು ಟಿಪ್ಪಣಿ —ಈ ಲೇಖನಗಳು ಮುಖ್ಯವಾಗಿವೆ.

ಸುಮಾರು ಈ ಶತಮಾನದ ಮೊದಲಲ್ಲಿ ಪ್ರಾರಂಭವಾದ ಕನ್ನಡ ಸಾಹಿತ್ಯ ವಿಮರ್ಶೆ, ಅನೇಕ ಪ್ರಭಾವಗಳಿಗೆ ಒಳಗಾಗುತ್ತ, ಅವುಗಳನ್ನು ಅರಗಿಸಿಕೊಳ್ಳುತ್ತ, ತನ್ನತನವನ್ನು ಪಡೆದುಕೊಳ್ಳಲು ಪ್ರಯತ್ನಿಸುತ್ತಿರುವುದು ಕಂಡುಬರುತ್ತದೆ. ಬೆಳೆಯೇನೋ ಬೇಕಾದಷ್ಟಿದೆ. ಆದರೆ ಕೊಯ್ಯುವವರು ಬೇಕು—ಎಂದು ಶ್ರೀ ಅವರು ಒಮ್ಮೆ ವ್ಯಕ್ತಪಡಿಸಿದ ಆರಕೆ ಈಚೆಗೆ ತುಂಬಿದೆ. ಬೆಳೆ ಹೆಚ್ಚುತ್ತಿದ್ದು ಅದನ್ನು ತೂರುವ, ಕೇರುವ, ಒಕ್ಕುವ, ಜಳ್ಳು ತೆಗೆದು ಕಾಳನ್ನು ಉಳಿಸಿಕೊಳ್ಳುವ ಸಾಮರ್ಥ್ಯವುಳ್ಳ ವಿಮರ್ಶಕರೂ ಹೆಚ್ಚುತ್ತಿದ್ದಾರೆ. (ಎಚ್‌.ಎಂ.ಸಿ.)

**ಕನ್ನಡದಲ್ಲಿ ವಿಶ್ವಕೋಶಗಳು :** ಜ್ಞಾನದ ವಿವಿಧ ಶಾಖೆಗಳ ವ್ಯಾಪಕ ವಿವೇಚನೆಯನ್ನುಳ್ಳ, ಸಾಮಾನ್ಯವಾಗಿ ಬಿಡಿ ಲೇಖನಗಳನ್ನು ಅಕಾರಾದಿಯಾಗಿ ಒಳಗೊಂಡ ಲೇಖನ ಭಂಡಾರವೇ ವಿಶ್ವಕೋಶ ಎಂದು ವೆಬ್‌ಸ್ಟರ್ ನಿಘಂಟು ಹೇಳುತ್ತದೆ. ಇದು ಸಾಮಾನ್ಯ ವಿಶ್ವಕೋಶದ ಲಕ್ಷಣ. ಎನ್‌ಸೈಕ್ಲೋಪೀಡಿಯ ಬ್ರಿಟ್ಯಾನಿಕ, ಎವ್ವೆರಿಮ್ಯಾನ್ಸ್ ಎನ್‌ಸೈಕ್ಲೋಪೀಡಿಯ, ಎನ್‌ಸೈಕ್ಲೋಪೀಡಿಯ ಅಮೆರಿಕಾನ, ಕಾಲಿಯರ್ಸ್ ಎನ್‌ಸೈಕ್ಲೋಪೀಡಿಯ—ಮೊದಲಾದುವು ಸಾಮಾನ್ಯ ವಿಶ್ವಕೋಶಕ್ಕೆ ಉತ್ತಮ ನಿದರ್ಶನಗಳು. ಇವಲ್ಲದೆ ವಿಷಯಗಳಿಗೆ ಸಂಬಂಧಿಸಿದಂತೆ ವಿಷಯ ವಿಶ್ವಕೋಶಗಳೂ ಇವೆ. ವಿಜ್ಞಾನಕ್ಕೆ ಸಂಬಂಧಿಸಿದಂತೆ ಮೆಕ್‌ಗ್ರಾ-ಹಿಲ್ ಎನ್‌ಸೈಕ್ಲೋಪೀಡಿಯ ಆಫ್ ಸೈನ್ಸ್ ಅಂಡ್ ಟೆಕ್ನಾಲಜಿ, ವ್ಯಾನ್ ನಾಸ್ಟ್ರ್ಯಾಂಡ್ಸ್ ಸೈಂಟಿಫಿಕ್ ಎನ್‌ಸೈಕ್ಲೋಪೀಡಿಯ—ಇವು ಪ್ರಸಿದ್ಧವಿವೆ. ಇವಲ್ಲದೆ ಭೂವಿಜ್ಞಾನ, ಜೀವವಿಜ್ಞಾನ, ರಸಾಯನ ಶಾಸ್ತ್ರ, ಭೌತಶಾಸ್ತ್ರ, ಸಾಹಿತ್ಯ, ರಾಜ್ಯಶಾಸ್ತ್ರ, ವಾಣಿಜ್ಯಶಾಸ್ತ್ರ, ಚರಿತ್ರೆ—ಇತ್ಯಾದಿ ವಿಷಯಗಳ ಬಗ್ಗೆ ಪ್ರತ್ಯೇಕ ವಿಶ್ವಕೋಶಗಳಿವೆ. ಇವಲ್ಲದೆ ಆಸ್ಟ್ರೇಲಿಯ, ದಕ್ಷಿಣ ಆಫ್ರಿಕ ಮೊದಲಾದ ದೇಶಗಳವರು ತಮ್ಮ ದೇಶಗಳನ್ನು ಕುರಿತೇ ವಿಶ್ವಕೋಶ ರಚನೆ ಮಾಡಿದ್ದಾರೆ. ರೀಡರ್ಸ್ ಡೈಜೆಸ್ಟ್ ಸಂಸ್ಥೆಯವರು ಮೂರು ಸಂಪುಟಗಳಲ್ಲಿ ವಿಶ್ವಕೋಶ ಮಾದರಿಯ ನಿಘಂಟೊಂದನ್ನು ತಯಾರಿಸಿದ್ದಾರೆ.

ವಿಶ್ವಕೋಶದ ಗುಣವನ್ನು ನಿರ್ಧರಿಸುವುದು ಕೋಶಾತ್ಮಕವಾದ ಅದರ ನಿಘಂಟಿನ ಮಾದರಿ. ಎಲ್ಲ ವಿಶ್ವಕೋಶಗಳಲ್ಲೂ ಶೀರ್ಷಿಕೆಗಳನ್ನು ಅಕಾರಾದಿಯಾಗಿ ಜೋಡಿಸಿರುತ್ತಾರೆ. ಬೇಕಾದ ವಿಷಯವನ್ನು ಸುಲಭವಾಗಿ ತೋರಿಸುವುದೇ ಕೋಶಗಳ ಕೆಲಸ. ಪ್ರತಿಯೊಂದು ಶೀರ್ಷಿಕೆಯ ಕೆಳಗೂ ಅದಕ್ಕೆ ಸಂಬಂಧಪಟ್ಟ ವಿಷಯ [illegible] ಹೆಚ್ಚಿನ ವಿವರ ಬಯಸುವವರು ಇನ್ನೆಲ್ಲೆಲ್ಲಿ ನೋಡಬೇಕೆಂಬ ಸೂಚನೆಯೂ ಇರುತ್ತದೆ. ಯಾವ ವಿಶ್ವಕೋಶವೂ ಎಲ್ಲ ವಿಷಯಗಳ ಬಗ್ಗೆಯೂ ಇರುವ ಸಮಗ್ರ ವಿವರಗಳನ್ನು ಕೊಡಲಾರದು. ಇನ್ನು ಮೇಜಿನ ಬಳಕೆಗಾಗಿ ಹುಟ್ಟಿರುವ ಏಕ ಸಂಪುಟವಿಶ್ವಕೋಶಗಳಲ್ಲಿ ವಿಷಯಗಳೆಲ್ಲ ಇರುತ್ತವಾದರೂ ಸಾಕಷ್ಟು ವಿವರಗಳಿರುವುದಿಲ್ಲ. ದಿ ಕೊಲಂಬಿಯ ಎನ್‌ಸೈಕ್ಲೊಪೀಡಿಯ, ದಿ ಕೊಲಂಬಿಯ-ವೈಕಿಂಗ್ ಡೆಸ್ಕ್ ಎನ್‌ಸೈಕ್ಲೋಪೀಡಿಯ, ದಿ ಬೇಸಿಕ್ ಎನ್‌ಸೈಕ್ಲೋಪೀಡಿಯ—ಇವು ಇಂಥವಕ್ಕೆ ಒಳ್ಳೆಯ ಉದಾಹರಣೆಗಳು. ಹೆಚ್ಚಿನ ವಿವರಗಳಿಗೆ ನೋಡಿ—ವಿಶ್ವಕೋಶ

ಕರ್ಣಾಟಕ ರಾಜ್ಯದಲ್ಲಿ ಪ್ರಬುದ್ಧ ಸಮಾಜಕ್ಕೆ ಅಗತ್ಯವೆನಿಸಿದ ಹಲವಾರು ಶಾಸ್ತ್ರಗಳ ಸಾರವನ್ನು ಒಂದೇ ಗ್ರಂಥವಾಗಿ ರಚಿಸುವ ಬಗೆಗೆ ಸುಮಾರು 800 ವರ್ಷಗಳಿಂದ ಒಂದಾದಮೇಲೊಂದು ಪ್ರಯತ್ನ ಪ್ರಾಜ್ಞರಿಂದ ನಡೆದಿದೆ. ಈ ವಿಷಯದಲ್ಲಿ ಕಲ್ಯಾಣದ ಚಾಳುಕ್ಯ ಚಕ್ರವರ್ತಿ ಸೋಮೇಶ್ವರದೇವ (1126–1138) ಅಗ್ರಗಣ್ಯನಾಗಿದ್ದಾನೆ. ಈತ ಸಂಸ್ಕೃತ ಭಾಷೆಯಲ್ಲಿ ವಿಶ್ವಕೋಶದಂಥ ಒಂದು ಗ್ರಂಥವನ್ನು ರಚಿಸಿದ್ದಾನೆ. ಅದರ ಹೆಸರು ಮಾನಸೋಲ್ಲಾಸ ಅಥವಾ ಅಭಿಲಷಿತಾರ್ಥ ಚಿಂತಾಮಣಿ ( 1120).

ಈ ಗ್ರಂಥದ ಮೊದಲ ಪ್ರಕರಣಗಳು ಮೈಸೂರಿನ ಪ್ರಾಚ್ಯ ವಿದ್ಯಾ ಸಂಶೋಧನ ವಿಭಾಗದಿಂದಲೂ (1926) ಪೂರ್ಣಗ್ರಂಥ ಬರೋಡದ ಗಾಯಕವಾಡ್ ಗ್ರಂಥ ಭಂಡಾರದಿಂದಲೂ (1961) ಪ್ರಕಟವಾಗಿವೆ. ಇದರಲ್ಲಿ 5 ಪ್ರಕರಣಗಳೂ 100 ಅಧ್ಯಾಯಗಳೂ ಇವೆ. ಮೊದಲನೆಯ ಪ್ರಕರಣದಲ್ಲಿ ಮತಪದ್ಧತಿ, ಸಮಾಜಸೇವೆ, ವಿಗ್ರಹನಿರ್ಮಾಣ, ರೋಗಗಳ ಕಾರಣ ಮತ್ತು ಪರಿಹಾರ ಇತ್ಯಾದಿ ವಿಷಯಗಳಿವೆ. ಎರಡನೆಯ ಪ್ರಕರಣದಲ್ಲಿ ರಾಜ, ಮಂತ್ರಿ, ಮಿತ್ರರು, ಭಂಡಾರ, ಕೋಟೆಕೊತ್ತಳಗಳು, ನ್ಯಾಯಾಂಗ, ದೇಶವಿದೇಶಗಳ ಬಾಂಧವ್ಯ, ಸಾಮ್ರಾಜ್ಯ ರಕ್ಷಣೆ—ಇತ್ಯಾದಿ ವಿಷಯಗಳಿವೆ. ನಾಲ್ಕು ಮತ್ತು ಐದನೆಯ ಪ್ರಕರಣಗಳಲ್ಲಿ ಗಣಿತ, ಜ್ಯೋತಿಷ್ಯ, ಹಸ್ತಸಾಮುದ್ರಿಕ, ಶಕುನ, ವಿನೋದಗಳು, ಆನೆ ಕುದುರೆ ಮೊದಲಾದುವುಗಳನ್ನು ಪಳಗಿಸುವುದು, ಪಶುವೈದ್ಯ, ಖನಿಜಶಾಸ್ತ್ರ, ರಸವಿಜ್ಞಾನ, ರತ್ನಪರೀಕ್ಷೆ—ಇತ್ಯಾದಿ ಸಂಗತಿಗಳಿವೆ. ಆದರೆ ಈ ಗ್ರಂಥದಲ್ಲಿ ದೇವರು, ಧರ್ಮಶಾಸ್ತ್ರ, ಸಂಧ್ಯಾವಂದನೆ ಮೊದಲಾದ ಮತವಿಚಾರಗಳನ್ನೂ ವೇದಶಾಸ್ತ್ರ ಮೊದಲಾದ ಸಂಗತಿಗಳನ್ನೂ ಕುರಿತು ಹೇಳದಿರುವುದು ಆಶ್ಚರ್ಯ. ವಿವಾಹ, ಶಿಶುರಕ್ಷಣೆ, ಮದ್ಯ ತಯಾರಿಕೆ, ನೃತ್ಯ, ಸುಗಂಧದ್ರವ್ಯಗಳು, ವಾಹನಗಳು ಮೊದಲಾದ ವಿಷಯಗಳನ್ನು ಕಡೆಯ ಪ್ರಕರಣದಲ್ಲಿ ಹೇಳಲಾಗಿದೆ. ಹದಿನಾರನೆಯ ಅಧ್ಯಾಯದಲ್ಲಿ ಛಂದಃಶಾಸ್ತ್ರದ ಬಗ್ಗೆ ಅನೇಕ ಸಂಗತಿಗಳು ಬರುತ್ತವೆ. ರಾಗಲಕ್ಷಣ ಪ್ರಬಂಧಲಕ್ಷಣಗಳಲ್ಲದೆ ಶ್ಲೋಕ, ವೃತ್ತ ತ್ರಿಪದಿ, ಷಟ್ಪದಿ, ಚೌಪದಿ, ಕಂದ—ಇವುಗಳ ಲಕ್ಷಣವೂ ಓವಿಯ ವಿವರವೂ ಇಲ್ಲಿ ಬಂದಿವೆ. ಇದನ್ನೆಲ್ಲ ಪರಿಶೀಲಿಸಿದರೆ ಆಗಿನ ಕಾಲದಲ್ಲಿ ಇದ್ದ ಜನಾಭಿರುಚಿಯ ವಿಷಯಗಳನ್ನೇ ಸೋಮೇಶ್ವರ ಈ ಗ್ರಂಥದಲ್ಲಿ ತನ್ನ ಆಸ್ಥಾನಪಂಡಿತರ ಸಹಾಯದಿಂದ ಸಂಗ್ರಹಿಸಿ ಹೇಳಿದ್ದಾನೆಂದು ತಿಳಿಯಬಹುದು. ಈ ಅಮೋಘ ಕಾರ್ಯದಿಂದಾಗಿ ಸೋಮೇಶ್ವರ ಸರ್ವಜ್ಞಭೂಪನೆಂಬ ಬಿರುದಿಗೆ ಪಾತ್ರನಾಗಿದ್ದಾನೆ.

ಅಸತ್ಯ, ಪರದ್ರೋಹ, ಅಗಮ್ಯ ಮತ್ತು ಅಭಕ್ಷ್ಯ ವಸ್ತುಗಳು, ಅಸೂಯಾ, ಪತಿತಸಂಗ, ಕ್ರೋಧ, ಆತ್ಮಸ್ತುತಿ ಇವನ್ನು ವರ್ಜಿಸಬೇಕೆಂದು ಈ ಗ್ರಂಥದ ಪ್ರಾರಂಭದಲ್ಲೇ ಸೂಚನೆ ಇದೆ. ದಾನ, ಮನೋಹರವಾಕ್ಯ, ಇಷ್ಟಾಪೂರ್ವಪ್ರವರ್ತನಾ, ಗೋವಿಪ್ರಭಕ್ತಿ, ದೇವತಾಭಕ್ತಿ, ಪಿತೃತರ್ಪಣ, ಅತಿಥಿಪೂಜೆ, ಗುರುಶುಶ್ರೂಷೆ, ತಪಸ್ಸು, ತೀರ್ಥಸ್ನಾನ, ದೀನಾನಾಥ ಪೋಷಣೆ ಇತ್ಯಾದಿಗಳನ್ನು ಮಾಡಬೇಕೆಂಬ ಬೋಧೆಯೂ ಇಲ್ಲಿದೆ. 2ನೆಯ ಪ್ರಕರಣದಲ್ಲಿ ಅಮಾತ್ಯ, ಸುಹೃತ್, ಪುರೋಹಿತ, ಸೇನಾಪತಿ, ಧರ್ಮಾಧಿಕಾರಿ, ಗಣಕ, ಲೇಖಕ, ಸಾರಥಿ, ಅಡಿಗೆಯವ, ವೈದ್ಯ ಇತ್ಯಾದಿ ವಿಷಯಗಳು ನಿರೂಪಿತವಾಗಿವೆ. ಈ ಗ್ರಂಥದ ಕಟ್ಟ ಕಡೆಯಲ್ಲಿ ಗೀತಾದಿ ವಿನೋದ, ವಾದ್ಯವಿನೋದ, ನೃತ್ಯವಿನೋದ, ಚಮತ್ಕಾರ ವಿನೋದ ಇತ್ಯಾದಿ ವಿಷಯಗಳೂ ಸ್ವಾರಸ್ಯವಾಗಿ ನಿರೂಪಿತವಾಗಿವೆ. ಭೂಧರಕ್ರೀಡೆ, ವನಕ್ರೀಡೆ, ಆಂದೋಲನ ಕ್ರೀಡೆ, ಸೇಚನಕ್ರೀಡೆ, ವಾನುಕಾಕ್ರೀಡೆ, ತಿಮಿರಕ್ರೀಡೆ, ವೀರಕ್ರೀಡೆ, ರತಿಕ್ರೀಡೆ ಇವುಗಳ ವಿವರಗಳೊಂದಿಗೆ ಗ್ರಂಥ ಮುಕ್ತಾಯವಾಗುತ್ತದೆ. ಈ ವಿಚಾರಗಳು ಅಂದಿನ ಜನಜೀವನ ಸ್ಥಿತಿಗಳನ್ನು ಅಭಿರುಚಿಗಳನ್ನು ತಿಳಿಯಲು ತುಂಬಾ ಸಹಾಯಕವಾಗಿವೆ.

ಅನಂತರ ಕನ್ನಡನಾಡಿನ ತೆಂಕಣ ದಿಕ್ಕಿನಲ್ಲಿ ಮೈಸೂರು ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಶಂಭುಲಿಂಗನ ಬೆಟ್ಟದಲ್ಲಿ (ಚಿಲಕವಾಡಿ ಬೆಟ್ಟ) ಸುಮಾರು 13ನೆಯ ಶತಮಾನದ ಉತ್ತರಾರ್ಧದಲ್ಲಿ [illegible] ಕನ್ನಡ ಭಾಷೆಯಲ್ಲಿ ರಚಿಸಿರುವ ವಿವೇಕ ಚಿಂತಾಮಣಿ ಗಮನಾರ್ಹವಾಗಿದೆ. ಇದು ಕನ್ನಡದಲ್ಲಿ ಮೊಟ್ಟ ಮೊದಲು ರಚಿಸಲ್ಪಟ್ಟ ಜ್ಞಾನಕೋಶ. ಇಲ್ಲಿ ಕೋಶ ಎಂಬುದನ್ನು ನಿಘಂಟು ಎಂಬರ್ಥದಲ್ಲಿ ಬಳಸದೆ ಸಂಕಲನ ಎಂಬರ್ಥದಲ್ಲಿ ಬಳಸಿದೆ. ಈ

ಮಹತ್ತ್ವದ ಗ್ರಂಥವನ್ನು ಸತಾರ ಜಿಲ್ಲೆಯ ಸಿಂಘಣಾಪುರದ ಕಾಂತೇಶ್ವರನೆಂಬ ಕವಿ 16ನೆಯ ಶತಮಾನದಲ್ಲಿ ಮರಾಠಿಗೂ ತಮಿಳುನಾಡಿನಲ್ಲಿ 17ನೆಯ ಶತಮಾನದಲ್ಲಿ ಪ್ರಸಿದ್ಧನಾಗಿದ್ದ ಶಿವಪ್ರಕಾಶನೆಂಬ ಮಹಾಕವಿ ತಮಿಳು ಭಾಷೆಗೂ 18ನೆಯ ಶತಮಾನದಲ್ಲಿ ಮೈಸೂರು ಭಾಗದ ಹರಪುರದ ಲಿಂಗರಾಜ ಸಂಸ್ಕೃತ ಭಾಷೆಗೂ ಭಾಷಾಂತರಿಸಿದರೆಂಬುದು ಇಲ್ಲಿ ಗಮನಾರ್ಹ. ವೇದ ಪುರಾಣಶಾಸ್ತ್ರದೊಳ್ ನೇಮಿಸಿತೋರ್ಪ ವಿಶ್ವವಿಷಯಂಗಳ ಸಂಸ್ಥಿತಿಯಂ ವಿವೇಕ ಚಿಂತಾಮಣಿ ಎಂಬ ಪೆಸರಿಟ್ಟು ಪ್ರೇಮದಿ ಪೇಳ್ವೆಂ–ಎಂಬುದಾಗಿ ಕವಿ ಗ್ರಂಥವನ್ನು ಪ್ರಾರಂಭಿಸಿದ್ದಾನೆ. ಈ ಗ್ರಂಥ 10 ಪರಿಚ್ಛೇದಗಳಾಗಿ ವಿಭಾಗಿಸಲ್ಪಟ್ಟಿದೆ. 535 ವಿವಿಧ ವಿಷಯಗಳನ್ನು ಕುರಿತು ಇಲ್ಲಿ ಹೇಳಲಾಗಿದೆ. ಈಶ್ವರ, ವೇದ, ವೇದಾಂಗ, ಉಪನಿಷತ್ತು, ಸ್ಮೃತಿಗಳು, ಕರ್ಮಗಳು, ವರ್ಣಧರ್ಮಗಳು, ಗಣಿತ, ತರ್ಕಪ್ರಮಾಣ, ಪುರಾಣಗಳು, ಇತಿಹಾಸಗಳು, ಚಾರ್ವಾಕ, ಬೌದ್ಧ ಕೌಳಯಾಮಲ, ಶಾಕ್ತೇಯ, ಪಾಂಚರಾತ್ರ, ವೈದಿಕ, ಲೌಕಿಕಶಾಸ್ತ್ರಗಳು, ಮೀಮಾಂಸೆ, ವೈಶೇಷಿಕ, ಸಾಂಖ್ಯ, ಪಾತಂಜಲ, ಮೋಕ್ಷ ಪ್ರತಿಪಾದನೆ, ಸೂತ್ರ, ಭಾಷ್ಯ, ವ್ಯಾಖ್ಯಾನ, ಲಕ್ಷಣಗಳು—ಇತ್ಯಾದಿ ವಿಷಯಗಳಿಂದ ಈ ಗ್ರಂಥ ಮುಂದುವರಿದಿದೆ. ಆಗಮಭೇದ, ಆಗಮ ಸಂಖ್ಯೆ, ಆಗಮಸಾರ, ಶೈವಭೇದಗಳು, ವಿಭೂತಿ, ರುದ್ರಾಕ್ಷ, ಲಿಂಗ, ಮಂತ್ರಸಾಧನೆಗಳು, ಸೃಷ್ಟಿಸ್ವರೂಪ, ಅಷ್ಟದಿಗ್ಗಜಗಳು, ಮರಣಸೂಚನೆ, ಕಾಮಧೇನು, ಕಲ್ಪವೃಕ್ಷ, ಚಿಂತಾಮಣಿ, ಭೂಕೈಲಾಸ, ಹೇಮಕೂಟ, ಸಿದ್ಧವಟ, ಭರತವರ್ಷ, ರಾಜಲಕ್ಷಣ, ಛಂದಸ್ಸು, ಅಲಂಕಾರ, ಮಹಾಕಾವ್ಯ, ಗಮಕಿ, ವಾದಿ, ವಾಗ್ಮಿ, ಪುಣ್ಯಕ್ಷೇತ್ರಗಳು, ಅಹೋರಾತ್ರಿಗಳ ಕಲ್ಪನೆಗಳು, ನಕ್ಷತ್ರಮಂಡಲ, ಉತ್ತಮ ಲೋಕಪ್ರಾಪ್ತಿ, ಪಾಪಿಷ್ಠರಿಗೆ ದುರ್ಗತಿ, ಚತುರ್ಯುಗಗಳು, ಶಾಸ್ತ್ರ ಪ್ರಯೋಜನ—ಇತ್ಯಾದಿ ವಿಷಯಗಳನ್ನು ಕುರಿತು ಗ್ರಂಥಕಾರ ಹೃದಯಂಗಮವಾಗಿ ವಿವೇಚಿಸಿದ್ದಾನೆ. ನಿಜವಾಗಿಯೂ ಇದು ಒಂದು ಕನ್ನಡದ ಜ್ಞಾನಭಂಡಾರವೆಂದು ಹೇಳಬಹುದು. ಮೊಟ್ಟಮೊದಲು ಸಂಗೀತಶಾಸ್ತ್ರವನ್ನು ಕುರಿತು ವಿಸ್ತಾರವಾಗಿ ಹೇಳಿರುವುದು ಈ ಗ್ರಂಥದಲ್ಲಿ ಮಾತ್ರವೆಂಬುದು ಇಲ್ಲಿ ಸ್ಮರಣಾರ್ಹವಾಗಿದೆ.

ಆಮೇಲೆ ಕರ್ಣಾಟಕದ ಮಲೆನಾಡಿನಲ್ಲಿ ರಾಜ್ಯಭಾರ ಮಾಡುತ್ತಿದ್ದ ಕೆಳದಿಯ ಬಸವರಾಜ (1696—1714) ಸಂಸ್ಕೃತ ಭಾಷೆಯಲ್ಲಿ ಬರೆದಿರುವ ಶಿವತತ್ತ್ವ ರತ್ನಾಕರಃ ಎಂಬ ಬೃಹದ್‌ಗ್ರಂಥ ಕನ್ನಡನಾಡಿನಲ್ಲಿ ರಚನೆಯಾದ ಒಂದು ಹಿರಿಯ ಜ್ಞಾನಕೋಶವೆಂದು ಹೇಳಬಹುದು. ಇದು ಹಿಂದಿನ ಎರಡು ವಿಶ್ವಕೋಶಗಳಿಗಿಂತಲೂ ಬೃಹತ್ತು ಮತ್ತು ಮಹತ್ತುಗಳಿಂದ ಅಧಿಕವಾಗಿದೆ. ಇದರಲ್ಲಿ 9 ಕಲ್ಲೋಲಗಳೂ 108 ತರಂಗಗಳೂ ಇವೆ; ಒಟ್ಟು 13,117 ಶ್ಲೋಕಗಳಿವೆ. ಗ್ರಂಥಕಾರ ಪ್ರತಿಯೊಂದು ತರಂಗದ ಕಡೆಯಲ್ಲಿಯೂ ತಾನು ಯಾವಯಾವ ಪ್ರಾಚೀನ ಗ್ರಂಥಗಳಿಂದ ವಿಷಯವನ್ನು ಸಂಗ್ರಹಿಸಿದ್ದಾನೆಂಬುದನ್ನು ಸ್ಪಷ್ಟವಾಗಿ ಹೇಳಿದ್ದಾನೆ. ಇದು ಅವನ ಅಗಾಧವಾದ ಜ್ಞಾನಕ್ಕೂ ಪ್ರಾಮಾಣಿಕತೆಗೂ ನಿದರ್ಶನವಾಗಿದೆ. ಈ ಕೃತಿ 1927ರಲ್ಲಿ ಮದರಾಸಿನಲ್ಲೂ 1964ರಲ್ಲಿ ಮೈಸೂರಿನಲ್ಲೂ ಅಚ್ಚಾಗಿದೆ. ಇತ್ತೀಚೆಗೆ ಕನ್ನಡ ಲಿಪಿಯಲ್ಲಿ ಚಿತ್ರದುರ್ಗ ಮುರುಘಾಮಠದಲ್ಲಿಯೂ ಬೆಳಕಿಗೆ ಬಂದಿದೆ (1965). ಇದರಲ್ಲಿ ಕೆಳದಿಯ ರಾಜರು, ವಿಜಯನಗರ ರಾಜ್ಯಸ್ಥಾಪನೆ, ಬಸವೇಶ್ವರ ಚರಿತ್ರೆ, ಮೊದಲಾದ ಐತಿಹಾಸಿಕ ಸಂಗತಿಗಳಿವೆ.

ವೇದ, ವೇದಾಂಗ, ಉಪನಿಷತ್ತು, ಮೀಮಾಂಸೆ, ಪುರಾಣ ಆಗಮಗಳು, ಆಯುರ್ವೇದ, ಧನುರ್ವೇದ, ಗಾಂಧರ್ವವೇದ, ಅರ್ಥಶಾಸ್ತ್ರ, ನ್ಯಾಯಶಾಸ್ತ್ರ, 68 ಕಲೆಗಳು, ಗುರು, ಭಕ್ತ, ಜಂಗಮ, ಪ್ರಣವ, ಪಂಚಾಕ್ಷರಿ, ಜಗತ್ತು, ಇಪ್ಪತ್ತೈದು ತತ್ತ್ವಗಳು, ಇತ್ಯಾದಿಗಳಿವೆಯಲ್ಲದೆ ಬ್ರಹ್ಮಾಂಡ, ನರಕ, ಪಾತಾಳ, ಸಪ್ತ ದ್ವೀಪಗಳು, ಅಷ್ಟದಿಕ್ಪಾಲಕರು, ನವಖಂಡಗಳು, ಸಮುದ್ರ, ಊರ್ಧ್ವಲೋಕ, ನವಗ್ರಹಗಳು, ಗಾಂಧರ್ವಲೋಕ, ನಕ್ಷತ್ರಮಂಡಲ, ಕಾಮಭೇದಗಳು ಇತ್ಯಾದಿ ವಿಷಯಗಳೂ ಇವೆ. ಅನಂತರ ಭರತವರ್ಷ, ಸಪ್ತಕುಲಾಚಲಗಳು, ಚತುರ್ವರ್ಣಗಳು, ಚತುರಾಶ್ರಮಗಳು, ಶರಭಾವತಾರ, ಪಾಶುಪತಯೋಗ, ವಿಜಯನಗರದ ರಾಜರು ಇತ್ಯಾದಿ ವಿಷಯಗಳನ್ನು ನಿರೂಪಿಸಿ ಗ್ರಂಥ ಮುಂದುವರಿಯುತ್ತದೆ.

ಮಾನಸೋಲ್ಲಾಸ ಕರ್ಣಾಟಕದ ಉತ್ತರದ ಕಲ್ಯಾಣದಲ್ಲಿಯೂ ವಿವೇಕ ಚಿಂತಾಮಣಿ ದಕ್ಷಿಣದಿಕ್ಕಿನ ಕೊಳ್ಳೇಗಾಲದ ಶಂಭುಲಿಂಗನ ಬೆಟ್ಟದಲ್ಲಿಯೂ ಶಿವತತ್ತ್ವರತ್ನಾಕರ ಪಶ್ಚಿಮ ದಿಕ್ಕಿನ ಕೆಳದಿಯಲ್ಲಿಯೂ ವಿರಚಿತವಾಗಿರುವುದು ಇಲ್ಲಿ ಗಮನಾರ್ಹವಾಗಿದೆ.

ಮೇಲ್ಕಂಡ ಗ್ರಂಥಗಳು ಜ್ಞಾನಕೋಶವೆಂಬ ಹೆಸರಿಗೆ ತಕ್ಕವೆನಿಸುವ ಮೂರು ಹೆಜ್ಜೊತ್ತಗೆಗಳು. ಇವಲ್ಲದೆ ಕ್ರಿ. ಶ. ಸುಮಾರು 1145ರಲ್ಲಿ ಇದ್ದ ನಾಗವರ್ಮ ಬರೆದಿರುವ ಲೋಕೋಪಕಾರ, ಕ್ರಿ. ಶ. ಸುಮಾರು 1425ರಲ್ಲಿ ವಿಜಯನಗರದಲ್ಲಿ ದಂಡನಾಯಕನಾಗಿದ್ದ ಲಕ್ಕಣ್ಣದಂಡೇಶ ಬರೆದಿರುವ ಶಿವತತ್ತ್ವಚಿಂತಾಮಣಿ ; 1513ರಲ್ಲಿ ತುಮಕೂರು ಜಿಲ್ಲೆಯ ಗುಬ್ಬಿಯಲ್ಲಿ ಜೀವಿಸಿದ್ದ ಮಹಾಕವಿ ಮಲ್ಲಣಾರ್ಯ ಬರೆದಿರುವ ವೀರಶೈವಾಮೃತ ಮಹಾಪುರಾಣ, ಕ್ರಿ. ಶ. ಸು. 1700ರಲ್ಲಿ ಮೈಸೂರಿನಲ್ಲಿ ಜೀವಿಸಿದ್ದ ವೀರರಾಜ ಬರೆದಿರುವ ಸಕಲವೈದ್ಯ ಸಂಹಿತಾಸಾರಾರ್ಣವ ಎಂಬ ಗ್ರಂಥಗಳು ವಿಶ್ವಕೋಶವನ್ನು ರಚಿಸುವವರಿಗೆ ಹೆಚ್ಚು ವಿಷಯಗಳನ್ನು ಒದಗಿಸಿಕೊಡುವ ಮಹತ್ತ್ವದ ಗ್ರಂಥಗಳಾಗಿವೆ. (ಬಿ.ಎಸ್.)

ಜ್ಞಾನ ಭಂಡಾರಗಳೆನಿಸಿದ ಇಂಥ ಗ್ರಂಥಗಳ ರಚನೆ ಈಚಿನ ವಿಶ್ವಕೋಶಗಳ ತಳಹದಿಯಾಯಿತೆನ್ನಬಹುದು. ಶಾಸ್ತ್ರೀಯವಾದ ವಿಶ್ವಕೋಶ ರಚನೆ ಪ್ರಾರಂಭವಾದುದು ಈಚೆಗೆ—ಇಪ್ಪತ್ತನೆಯ ಶತಮಾನದ ಎರಡು ಮೂರು ದಶಕಗಳು ಕಳೆದ ಮೇಲೆ.

**ಶಿವರಾಮಕಾರಂತ :** ಶಿವರಾಮ ಕಾರಂತರ ಬಾಲಪ್ರಪಂಚ (1931) ಮೂರು ಸಂಪುಟಗಳ ಮೊದಲ ವಿಶ್ವಕೋಶ. ಸಚಿತ್ರವಾದ ಈ ಗ್ರಂಥ ಮಕ್ಕಳಿಗಾಗಿ ಸೃಷ್ಟಿಯಾದುದು. ಇಲ್ಲಿ ಶಾಸ್ತ್ರ ವಿಷಯಗಳು ಬರುತ್ತವೆ. ನಡುನಡುವೆ ಕಥೆ, ಕವನ ಮುಂತಾದ ರಂಜಕ ವಿಷಯಗಳು ಬರುವುದರಿಂದ ಮಕ್ಕಳು ಆಸಕ್ತಿಯಿಂದ ಇವನ್ನು ಓದಲು ಅನುಕೂಲವೇರ್ಪಟ್ಟಿದೆ. ಇಂಗ್ಲಿಷಿನಲ್ಲಿ ಆರ್ಥರ್ ಮೀ ಎಂಬಾತ ಮೊದಲು ಮಕ್ಕಳಿಗಾಗಿ ಒಂದು ವಿಶ್ವಕೋಶವನ್ನು ರಚಿಸಿದ. ಅದರಲ್ಲಿ ಸಾಹಿತ್ಯದಿಂದ ಆಯ್ದ ಅನೇಕಾನೇಕ ಸುಂದರ ಕಥೆಗಳು, ಕವನಗಳು ಇವೆ. ಮಕ್ಕಳು ಕೇಳಬಹುದಾದ ಸಾವಿರಾರು ಪ್ರಶ್ನೆಗಳು, ಅವಕ್ಕೆ ಸಮಂಜಸವಾದ ಉತ್ತರಗಳು ಇವೆ. ಶಾಸ್ತ್ರವಿಷಯಗಳು ಸಚಿತ್ರವಾಗಿ ಬಂದಿವೆ. ಈ ಮಾದರಿ ಮಕ್ಕಳಿಗೆ ಹೇಳಿ ಮಾಡಿಸಿದ್ದು. ಪ್ರಕಟವಾದೊಡನೆಯೆ ಆರ್ಥರ್ ಮೀಯ ಈ ಸಂಪುಟಗಳು ಮಕ್ಕಳ ಮತ್ತು ಪೋಷಕರ ಗಮನವನ್ನು ಸೆಳೆದುವು. ಅಲ್ಲಿಂದೀಚೆಗೆ ಇದೇ ಮಾದರಿಯ ಅನೇಕಾನೇಕ ಗ್ರಂಥಗಳು ಇಂಗ್ಲಿಷ್‌ನಲ್ಲಿ ಬಂದಿವೆ. ಕಾರಂತರ ಬಾಲಪ್ರಪಂಚ ಕನ್ನಡದಲ್ಲಿ ಇಂಥದೊಂದು ಸಾಹಸ.

ಇದಾದ ಮೇಲೆ ಕಾರಂತರು ನಾಲ್ಕು ಸಂಪುಟಗಳಲ್ಲಿ (1959–1964) ವಿಜ್ಞಾನ ಪ್ರಪಂಚವೆಂಬ ವಿಷಯ ವಿಶ್ವಕೋಶವೊಂದನ್ನು ಪ್ರಕಟಿಸಿದ್ದಾರೆ. ಮೊದಲ ಭಾಗವಾದ ಈ ಜಗತ್ತು ಎಂಬುದರಲ್ಲಿ ಖಗೋಳ, ಭೂಗೋಳ, ಸಾಗರ, ವಾತಾವರಣ ಮುಂತಾದ ವಿಷಯಗಳೂ ಎರಡನೆಯ ಭಾಗವಾದ ಜೀವ, ಜೀವನದಲ್ಲಿ ಜೀವ ವಿಜ್ಞಾನ, ಸಸ್ಯವಿಜ್ಞಾನ, ಪ್ರಾಗ್‌ಜೀವವಿಜ್ಞಾನ, ಆರೋಗ್ಯಶಾಸ್ತ್ರ, ಮನಃಶಾಸ್ತ್ರ, ಪ್ರಕೃತಿ ವಿಜ್ಞಾನಗಳೂ ಮೂರನೆಯ ಭಾಗವಾದ ವಸ್ತು, ಚೈತನ್ಯದಲ್ಲಿ ವಿಜ್ಞಾನದ ಇತಿಹಾಸ, ಪರಮಾಣುಚರಿತ್ರೆ, ರಸಾಯನಶಾಸ್ತ್ರ, ಭೌತವಿಜ್ಞಾನ, ಸಾಪೇಕ್ಷ ಸಿದ್ಧಾಂತ ಮೊದಲಾದ ವಿಷಯಗಳೂ ನಾಲ್ಕನೆಯ ಭಾಗವಾದ ವಿಜ್ಞಾನ ಸಾಧನದಲ್ಲಿ ಎಲೆಕ್ಟ್ರಾನಿಕ್ಸ್, ಎಂಜಿನಿಯರಿಂಗ್, ಬದುಕಿನ ಸಮಸ್ಯೆಗಳು, ಸಾಹಸಗಳು, ವಿಜ್ಞಾನಿಗಳು—ಮುಂತಾದ ವಿಷಯಗಳೂ ಬಂದಿವೆ. ಪ್ರೌಢಶಾಲೆಯ ಕೊನೆಯ ಹಂತದಲ್ಲಿರುವ ವಿದ್ಯಾರ್ಥಿ ಶ್ರಮವಿಲ್ಲದೆ ನೇರವಾಗಿ ಕನ್ನಡದ ಮೂಲಕ ವಿಜ್ಞಾನ ವಿಷಯಗಳನ್ನು ತಿಳಿಯಲು ಈ ಗ್ರಂಥಗಳು ಉತ್ತಮ ಸಾಧನಗಳಾಗಿವೆ. ಪಾರಿಭಾಷಿಕ ಶಬ್ದಗಳನ್ನು ಆಯುವಲ್ಲಿ, ಶಾಸ್ತ್ರೀಯ ವಿಷಯವನ್ನು ಪ್ರತಿಪಾದಿಸುವಲ್ಲಿ ಉದ್ದಕ್ಕೂ ಲೇಖಕರು ತಮ್ಮ ಸಹಜ, ಸರಳ ಮನೋಧರ್ಮವನ್ನು ಇಲ್ಲಿ ವ್ಯಕ್ತಪಡಿಸಿದ್ದಾರೆ. ಉದಾಹರಣೆಗಳು ಕೇವಲ ವಿದೇಶೀಯವಾಗಿಲ್ಲ. ಬೇಕಾದಷ್ಟು ದೇಶೀಯ ನಿದರ್ಶನಗಳೂ ಬರುತ್ತವೆ. ಹತ್ತು ಕಡೆಯಿಂದ ಸಂಗ್ರಹಿಸಿದ ಮಕರಂದವನ್ನಿಲ್ಲಿ ಸ್ವಾನುಭವದಿಂದ ಮಧುವನ್ನಾಗಿ ಮಾಡಲಾಗಿದೆ. ವಿಜ್ಞಾನದ ಸಮಗ್ರ ಆದರೂ ಸಂಕ್ಷೇಪ ನಿರೂಪಣೆಯನ್ನು ಇಲ್ಲಿ ಕಾಣಬಹುದಾಗಿದೆ. ವಿಷಯಕ್ಕೆ ಒಪ್ಪುವ ಹಲವಾರು ಚಿತ್ರಗಳಿವೆ. ಇದೆಲ್ಲವೂ ಒಬ್ಬ ವ್ಯಕ್ತಿಯ ಸಾಧನೆ ಎಂಬ ವಿಷಯವನ್ನು ನೆನೆದಾಗಲಂತೂ ಓದುಗರ ಕೃತಜ್ಞತೆ ಉಕ್ಕುತ್ತದೆ.

**ಅನುವಾದಿತ ವಿಶ್ವಕೋಶ :** ಕನ್ನಡ ವಿಶ್ವಕೋಶ ಚರಿತ್ರೆಯಲ್ಲಿ ಗಮನಾರ್ಹವಾದ ಒಂದು ಗ್ರಂಥ 1927ರಲ್ಲಿ ಪ್ರಕಟವಾಯಿತು. ಬೆಂಗಳೂರಿನ ಟ್ರ್ಯಾಕ್ಟ್ ಅಂಡ್ ಬುಕ್ ಸೊಸೈಟಿಯವರು ಪ್ರಕಟಿಸಿರುವ ಈ ಎರಡು ಸಂಪುಟಗಳ ಹೆಸರು ಹೊಸ ಒಡಂಬಡಿಕೆಯ ವೇದಕೋಶ—ಎಂದು. ಇದರಲ್ಲಿ ಕ್ರೈಸ್ತಧರ್ಮ, ಪುರಾಣ ಮತ್ತು ಆಚರಣೆಗಳಿಗೆ ಸಂಬಂಧಿಸಿದ ವಿಷಯಗಳನ್ನು ಅಕಾರಾದಿಯಾಗಿ ಕೊಡಲಾಗಿದೆ. ತಮಿಳಿನಲ್ಲಿ ಇದು ಮೊದಲು ಅಚ್ಚಾಗಿದ್ದು ಅನಂತರ ಹೆಚ್ಚಿನ ವಿವರಗಳೊಂದಿಗೆ ಕನ್ನಡಕ್ಕೆ ಅನುವಾದಗೊಂಡಿದೆ. ಸಂಪಾದಕರು ಚಿಂತಾಮಣಿ ಕೇಲೆಬ್ ಮತ್ತು ಇ. ಸ್ಟಾಂಲೆ ಎಡ್ವರ್ಡ್ಸ್. ಇಲ್ಲಿಯವನ್ನು ಬಾಲಪಾಠಗಳು ಎನ್ನಲಾಗಿದೆ. ಅಂದರೆ ಕ್ರೈಸ್ತಧರ್ಮಾದಿಗಳನ್ನು ತಿಳಿಯಬಯಸುವವರಿಗೆ ಇದು ಪ್ರವೇಶಕವಿದ್ದಂತೆ. ಇಲ್ಲಿಯ ಲೇಖನಗಳು ಅಧಿಕೃತವಾಗಿವೆ. ಭಾಷೆ ಲಲಿತವಾಗಿದೆ. ಪ್ರತಿವಿಷಯಕ್ಕೂ ವಿಪುಲವಾಗಿ ಆಧಾರಗಳನ್ನು ಕೊಡಲಾಗಿದೆ. ಉದಾಹರಣೆಗಾಗಿ ಇಲ್ಲಿಯ ಒಂದು ಶೀರ್ಷಿಕೆಯನ್ನು ನೋಡಬಹುದು.

**ಬೊಕ್ಕಸ ಕಾಣಿಕೇ ಪೆಟ್ಟಿಗೆ :** ದೇವರು ನಮಗೆ ಅನುಗ್ರಹಿಸಿದ ವಿಶೇಷವಾದ ಉಪಕಾರಗಳಿಗಾಗಿ ಕಾಣಿಕೆ ಕೊಡುವವರಿಗಾಗಿ ಕೆಲವು ಪೆಟ್ಟಿಗೆಗಳೂ ಅದಕ್ಕೆ ಹಿಂದಿನ ವರುಷಗಳಲ್ಲಿ ಕಡಿಮೆಯಾಗಿ ಕಾಣಿಕೆಹಾಕಿದವರಿಗೆ ಕೆಲವು ಪೆಟ್ಟಿಗೆಗಳೂ ದೇವಾಲಯದ ಖರ್ಚಿಗೆಂದು ಹುದುವಾಗಿ ಕೊಡು

ವವರಿಗೆ ಕೆಲವು ಪೆಟ್ಟಿಗೆಗಳೂ ಹೀಗೆ ಒಟ್ಟು ಹದಿಮೂರು ಕಾಣಿಕೆಯ ಪೆಟ್ಟಿಗೆಗಳು ಯೆರೂಸಲೇಮಿನ ದೇವಾಲಯದಲ್ಲಿ ಇಡಲ್ಪಟ್ಟಿದ್ದುವು (ಮಾರ್ಕ $12^{41}$ : ಲೂಕ $21^{1}$. ಮತ್ತು $27^{6}$ರಲ್ಲಿ ಹೇಳಿರುವ ಕಾಣಿಕೆಯ ಪೆಟ್ಟಿಗೆಯೂ ದೇವಾಲಯದಲ್ಲಿದ್ದ ಬೊಕ್ಕಸದ ಮನೆಯನ್ನು ಸೂಚಿಸುತ್ತದೆ.

ಯೋಹಾ $8^{20}$ರಲ್ಲಿ ಹೇಳಿರುವ ಕಾಣಿಕೆಯ ಪೆಟ್ಟಿಗೆಯು ಇದ್ದ ಸ್ಥಳವು. ದೇವಾಲಯದಲ್ಲಿ ಯೆಹೂದ್ಯರು ಕೊಡುವ ಕಾಣಿಕೆಗಾಗಿ ಹದಿಮೂರು ಕಾಣಿಕೆ ಪೆಟ್ಟಿಗೆಗಳಿಟ್ಟಿದ್ದ ಆ ಸ್ಥಳವೇ. ಇದು ಸ್ತ್ರೀಯರ ಅಂಗಳದ ಪಕ್ಕದಲ್ಲಿದ್ದ ಒಂದು ಕಲ್ಲಿನ ಮಂಟಪ.

ಭಾಷಾದೃಷ್ಟಿಯಿಂದಲೂ ಈ ಗ್ರಂಥ ವಿಚಾರಯೋಗ್ಯವಾಗಿದೆ.

**ಕನ್ನಡ ವಿಶ್ವಕೋಶ :** ಹದಿನಾಲ್ಕು ಸಂಪುಟಗಳ ಸಾಮಾನ್ಯ ವಿಶ್ವಕೋಶ ಯೋಜನೆಯಲ್ಲಿ ಓದುಗರ ಕೈಯಲ್ಲಿರುವ ಇದು ಮೂರನೆಯದು. 1969ರ ನವೆಂಬರ್ 21 ರಂದು ಪ್ರಥಮ ಸಂಪುಟವೂ 1970ರ ಅಕ್ಟೋಬರ್ 12 ರಂದು ದ್ವಿತೀಯ ಸಂಪುಟವೂ ಬಿಡುಗಡೆಯಾಗಿವೆ. 1976ರ ವೇಳೆಗೆ ಹದಿನಾಲ್ಕು ಸಂಪುಟಗಳೂ ಪ್ರಕಟವಾಗುವ ನಿರೀಕ್ಷೆ ಇದೆ. ಇದರ ಸಂಕ್ಷಿಪ್ತ ಚರಿತ್ರೆ ಮತ್ತು ವಿವರಗಳು ಹೀಗಿವೆ :

1954ರಷ್ಟು ಹಿಂದೆಯೇ ಕೆ. ವಿ. ಪುಟ್ಟಪ್ಪನವರ ನೇತೃತ್ವದಲ್ಲಿ ಮೈಸೂರು ವಿಶ್ವವಿದ್ಯಾನಿಲಯ ಈ ಬಗ್ಗೆ ಯೋಜನೆಯೊಂದನ್ನು ಸಿದ್ಧಪಡಿಸಿ ಮೈಸೂರು ಸರ್ಕಾರಕ್ಕೆ ಒಪ್ಪಿಸಿತು. ಈ ಯೋಜನೆಯ ಪೂರೈಕೆಗೆ ವಿದ್ಯಾಭ್ಯಾಸ ಇಲಾಖೆಯ ಅಂಗವಾಗಿ ಒಂದು ಪ್ರತ್ಯೇಕ ಭಾಗವನ್ನೇ ಸರ್ಕಾರ ತೆರೆಯಿತಾದರೂ ಈ ಕೆಲಸ ಕುಂಠಿತವಾಗಿ ನಡೆದಿತ್ತು. ಹತ್ತು ವರ್ಷ ಕಳೆದ ಮೇಲೂ ಪ್ರಥಮ ಸಂಪುಟ ಜನ್ಮ ವೆತ್ತುವ ಚಿಹ್ನೆಗಳೇ ಇರಲಿಲ್ಲ. ಯೋಜನೆಯನ್ನು ಮೈಸೂರು ವಿಶ್ವವಿದ್ಯಾನಿಲಯಕ್ಕೆ ವರ್ಗಾಯಿಸಲಾದದ್ದು 1968ರಲ್ಲಿ.

ಅದೇ ವರ್ಷ ಮೇ ತಿಂಗಳಿನಲ್ಲಿ ಮಾನಸಗಂಗೋತ್ರಿಯ ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ಕನ್ನಡ ವಿಶ್ವಕೋಶದ ಕಾರ್ಯ ವ್ಯವಸ್ಥಿತವಾಗಿ ಆರಂಭ ವಾಯಿತು. ಮೊದಲ ಕೆಲವು ತಿಂಗಳುಗಳಲ್ಲಿ ಎದುರಾದ ವಿಘ್ನಗಳು ಅನೇಕ. ಕಾರ್ಯ ಕೈಕೊಳ್ಳಲು ಅಗತ್ಯವಾದ ಸೂಕ್ತ ಸಿಬ್ಬಂದಿಯ ಅಭಾವ, ವಿಷಯಗಳ ಮತ್ತು ಲೇಖಕರ ಆಯ್ಕೆ, ವಿಶ್ವಕೋಶದ ಸ್ವರೂಪ ನಿಷ್ಕರ್ಷೆ, ಚಿತ್ರರಚನೆ, ಲೇಖನಗಳ ಬೆರಳಚ್ಚು, ಮುದ್ರಣಕಾರ್ಯ—ಇವು ಪರಿಹಾರವಾಗಬೇಕಾಗಿದ್ದ ಕೆಲವು ಸಮಸ್ಯೆಗಳು. ಒಟ್ಟಿನಲ್ಲಿ ವಿಶ್ವಕೋಶ ತನ್ನದೇ ಆದ ವಿಧಾನವೊಂದನ್ನು ರೂಪಿಸಿ ಕೊಳ್ಳುವುದು ಅವಶ್ಯವಾಗಿತ್ತು. ಆ ವರ್ಷ ಕಳೆಯುವುದರೊಳಗೆ ಕಾರ್ಯದ ಸಮಗ್ರ ಯೋಜನೆ ಸಿದ್ಧವಾಯಿತು. 1969 ಅಂತ್ಯವಾಗುವ ಮುನ್ನವೇ ವಿಶ್ವ ಕೋಶದ ಪ್ರಥಮ ಸಂಪುಟವನ್ನು ಜನತೆಯ ಕೈಯಲ್ಲಿಡಬಹುದೆಂಬ ಭರವಸೆ ಮೂಡಿದ್ದು ಆಗ.

1969ರ ನವೆಂಬರ್ 21ರಂದು ಪ್ರಥಮ ಸಂಪುಟದ ಬಿಡುಗಡೆಯಾದದ್ದು ಕನ್ನಡ ಭಾಷೆಯ ಇತಿಹಾಸದಲ್ಲೊಂದು ಮಹೋಜ್ಜ್ವಲ ಘಟನೆ. ಈ ಕೋಶ ಮತ್ತೊಂದು ವಿಚಾರವನ್ನೂ ಸ್ಪಷ್ಟಪಡಿಸಿದೆ. ವೈಜ್ಞಾನಿಕ, ಮಾನವಿಕ, ತಾಂತ್ರಿಕ—ಯಾವುದೇ ವಿಷಯವನ್ನಾದರೂ ಕನ್ನಡದಲ್ಲಿ ಸರಳವಾಗಿ, ಸುಲಭವಾಗಿ, ಹೃದಯ ವೇದ್ಯವಾಗುವಂತೆ ಹೇಳಬಹುದೆಂಬುದಕ್ಕೆ ಈ ಸಂಪುಟ ಸಾಕ್ಷೀಭೂತವಾಗಿದೆ. ಕನ್ನಡ ವಿಜ್ಞಾನ ಭಾಷೆಯಾಗಿ ಬೆಳೆದಿಲ್ಲವೆಂಬ ಸೊಲ್ಲು ಎಷ್ಟು ನಿರರ್ಥಕವಾದುದೆಂಬುದನ್ನು ಈ ಸಂಪುಟ ಪ್ರಮಾಣೀಕರಿಸುತ್ತದೆ —ಎಂದು ಆಗ ಪ್ರಧಾನ ಸಂಪಾದಕರಾಗಿದ್ದ ದೇ. ಜವರೇಗೌಡ ಅವರು ಪೀಠಿಕೆಯಲ್ಲಿ ಬರೆದಿದ್ದಾರೆ.

ಪ್ರಥಮ ಸಂಪುಟದ ಮುಖ್ಯ ಲಕ್ಷಣಗಳಿವು: ಗ್ರಂಥದ ಆಕಾರ ಡೆಮಿ ಚತುರ್ಥಾಕಾರದ ಸುಮಾರು 1,000 ಪುಟ ; 10 ಪಾಯಿಂಟ್ ಅಕ್ಷರದಲ್ಲಿ ಆಕರ್ಷಕ ಮುದ್ರಣ; ಕನ್ನಡ ವರ್ಣಮಾಲೆಯ ಆಕಾರದಿಂದಾರಂಭವಾಗಿ ಆರ್ಸೆನಿಕ್‌ವರೆಗೆ 1,500 ವಿಷಯಗಳ ಮೇಲೆ ಲೇಖನಗಳು; ಅವಶ್ಯವಿದ್ದೆಡೆಯಲ್ಲೆಲ್ಲ ಚಿತ್ರ (ಇವುಗಳಲ್ಲಿ ಹಲವು ಹೊಳಪು ಕಾಗದದ ಮೇಲೆ ಅಚ್ಚಾಗಿರುವುದಲ್ಲದೆ ಕೆಲವು ವರ್ಣರಂಜಿತ) ; ಇಂಗ್ಲಿಷಿನ ಬ್ರಿಟಾನಿಕ ವಿಶ್ವಕೋಶದ ಮಾದರಿಯಲ್ಲಿ ಇದರ ವಿನ್ಯಾಸ. ಮಾನವ ಚಂದ್ರನ ಮೇಲೆ, ಅಬು ಸಿಂಬೆಲ್, ಆಧುನಿಕ ಬೀಜಗಣಿತ, ಆಧುನಿಕ ಪಾಶ್ಚಾತ್ಯ ಚಿಂತನ ಇವು ಅಲ್ಲಿ ವಿವೇಚಿಸಲಾಗಿರುವ ಪ್ರಮುಖ ವಿಷಯಗಳಲ್ಲಿ ಕೆಲವು.

ಎರಡನೆಯ ಸಂಪುಟದ ಮೊದಲ ಲೇಖನ ಆಲ ; ಕೊನೆಯದು ಎರಟಾಸ್ತನೀಸ್. ಈ ಎರಡು ಸಂಪುಟಗಳಲ್ಲಿ ಕನ್ನಡದ ಮೊದಲ ಏಳು ಅಕ್ಷರಗಳು ಸಂಪೂರ್ಣ ವಾಗಿಯೂ ಎಂಟನೆಯದು ಭಾಗಶಃವಾಗಿಯೂ ಬಂದಿವೆ. ಆಕಾರವೇ ಮುಂತಾದ ಎಲ್ಲದರಲ್ಲೂ ಮೊದಲನೆಯ ಸಂಪುಟದಂತೆಯೇ ಎರಡನೆಯದು ಕೂಡ. 1970ರ ಅಕ್ಟೋಬರ್ 12ರಂದು ಎರಡನೆಯ ಸಂಪುಟದ ಬಿಡುಗಡೆಯಾಯಿತು. ಇಸ್ಲಾಂ, ಋಗ್ವೇದ, ಉಪನಿಷತ್, ಎಕ್ಸ್‌ಕಿರಣ ಖಗೋಳಶಾಸ್ತ್ರ, ಎಕ್ಸ್‌ಪೊ, ಇಮ್ಯೂನೋ ರಸಾಯನಶಾಸ್ತ್ರ, ಈಜಿಪ್ಟ್, ಇಂಟರ್‌ಫೆರಾನ್—ಇವು ಈ ಸಂಪುಟದಲ್ಲಿ ವಿವೇಚಿಸಲಾದ ಸುಮಾರು 1,000 ಶೀರ್ಷಿಕೆಗಳಿಂದ ಅಲ್ಲಲ್ಲಿ ಹೆಕ್ಕಿ ತೆಗೆದ ಕೆಲವು ಮುಖ್ಯ ವಿಷಯಗಳು.

ಸಾಮಾನ್ಯ ವಿಶ್ವಕೋಶದಲ್ಲಿ ಈ ಶಾಸ್ತ್ರಗಳೆಲ್ಲ ಅಡಕವಾಗಿವೆ: ಸೌಂದರ್ಯತತ್ತ್ವ ಪಾಶ್ಚಾತ್ಯ ಸಾಹಿತ್ಯ, ಪೌರಸ್ತ್ಯ ಸಾಹಿತ್ಯ, ಜಾನಪದ ಸಾಹಿತ್ಯ, ಕಲೆ, ಜೀವನ, ಅರ್ಥಶಾಸ್ತ್ರ, ತತ್ತ್ವ ಮತ್ತು ಧರ್ಮ, ಸಮಾಜಶಾಸ್ತ್ರ, ಪ್ರಾಕ್ತನಶಾಸ್ತ್ರ, ಇತಿಹಾಸ, ಭೂಗೋಳ, ರಾಜ್ಯಶಾಸ್ತ್ರ, ವಾಣಿಜ್ಯ, ವ್ಯಾಪಾರ, ಶಿಕ್ಷಣ, ಸಮಾಜ ವಿಜ್ಞಾನ, ನ್ಯಾಯಶಾಸ್ತ್ರ, ಮನಶ್ಶಾಸ್ತ್ರ, ಲಲಿತ ಕಲೆ, ಉಪಯುಕ್ತ ಕಲೆ, ಸಂಸ್ಕೃತ ಭಾಷೆ–ಸಾಹಿತ್ಯ, ಕನ್ನಡ ಭಾಷೆ–ಸಾಹಿತ್ಯ, ಭಾಷಾಶಾಸ್ತ್ರ, ಭೌತಶಾಸ್ತ್ರ, ರಸಾಯನಶಾಸ್ತ್ರ, ಗಣಿತಶಾಸ್ತ್ರ, ಸಸ್ಯಶಾಸ್ತ್ರ, ಪ್ರಾಣಿಶಾಸ್ತ್ರ, ಭೂವಿಜ್ಞಾನ, ವೈದ್ಯ, ಆಯುರ್ವೇದ, ಯುನಾನಿ, ಹೋಮಿಯೋಪತಿ, ಕೃಷಿ, ತೋಟಗಾರಿಕೆ, ಪಶುವೈದ್ಯ, ಶಿಲ್ಪ, ಕ್ರೀಡೆ, ಪತ್ರಿಕೋದ್ಯಮ, ಗ್ರಂಥಾಲಯ ಶಾಸ್ತ್ರ, ಮುದ್ರಣ, ಸಂಖ್ಯಾಶಾಸ್ತ್ರ ಮತ್ತು ಅರಣ್ಯಶಾಸ್ತ್ರ.

ಪ್ರಥಮ ಸಂಪುಟ ಗಳಿಸಿದ ಯಶಸ್ಸಿನ ದೃಷ್ಟಿಯಿಂದ ವಿಷಯ ವಿಶ್ವಕೋಶ ಗಳನ್ನು ಹೊರತರಲು ಬೃಹದ್ಯೋಜನೆಯೊಂದನ್ನು ತಯಾರಿಸಲಾಗಿದೆ. ಪ್ರಾಣಿ ಶಾಸ್ತ್ರ, ಗಣಿತಶಾಸ್ತ್ರ, ವೈದ್ಯಶಾಸ್ತ್ರ ಮುಂತಾದ 16 ವಿಜ್ಞಾನ ವಿಷಯಗಳು; ಇತಿಹಾಸ, ಕರ್ಣಾಟಕ, ತತ್ತ್ವಶಾಸ್ತ್ರ, ಭಾಷಾಶಾಸ್ತ್ರ ಮುಂತಾದ 14 ಮಾನವಿಕ ಶಾಸ್ತ್ರ ವಿಷಯಗಳು—ಹೀಗೆ ಒಟ್ಟು 30 ಸ್ವತಂತ್ರ ಸಂಪುಟಗಳನ್ನು ಹೊರ ತರಲು ಯೋಜನೆ ಯೊಂದು ಈಗ ಸಿದ್ಧವಾಗಿದೆ. ಇಡೀ ಯೋಜನೆಯ ವೆಚ್ಚ 90 ಲಕ್ಷ ರೂಪಾಯಿಗಳು. ಮೈಸೂರು ಸರ್ಕಾರ ಈ ಯೋಜನೆಯನ್ನು ಸಂಪೂರ್ಣವಾಗಿ ಒಪ್ಪಿಕೊಂಡಿದೆ ಯಲ್ಲದೆ ಈ ಹೊಣೆಯನ್ನೂ ಮೈಸೂರು ವಿಶ್ವವಿದ್ಯಾನಿಲಯಕ್ಕೇ ವಹಿಸಿಕೊಟ್ಟಿದೆ. ಕನ್ನಡ ಅಧ್ಯಯನ ಸಂಸ್ಥೆಯ ಆಶ್ರಯದಲ್ಲಿ ಈ ಕೆಲಸ ಈಗ ಪ್ರಾರಂಭವಾಗಿದೆ. ಐದು ಸಂಪುಟಗಳನ್ನು ಹೊರತರಲು ಸಾಕಷ್ಟು ಪೂರ್ವಭಾವಿ ಸಿದ್ಧತೆಗಳು ಈಗಾಗಲೇ ಮುಗಿದಿವೆ. 1972ರ ವೇಳೆಗೆ ಮೊದಲ ಎರಡು ಸಂಪುಟಗಳು ಹೊರಬರಲಿವೆ.

ಕನ್ನಡ ವಿಶ್ವಕೋಶ ಕಚೇರಿಯ ಕಾರ್ಯವಿಧಾನದ ಬಗ್ಗೆ ಕೆಲವು ಮಾತುಗಳನ್ನು ಇಲ್ಲಿ ಬರೆಯಬಹುದು. ಕನ್ನಡ ಅಧ್ಯಯನ ಸಂಸ್ಥೆಯ ನಿರ್ದೇಶಕರು ವಿಶ್ವಕೋಶದ ಅಧಿಕಾರ ಪ್ರಯುಕ್ತ (ಎಕ್ಸ್–ಅಫಿಷಿಯೊ) ಪ್ರಧಾನ ಸಂಪಾದಕರು. ಈ ಕಾರ್ಯ ನಿರ್ವಹಣೆಯಲ್ಲಿ ಇವರಿಗೆ ನೆರವು ನೀಡುವವರು ನಾಲ್ವರು ಸಂಪಾದಕರು : ವಿಜ್ಞಾನಕ್ಕಾಗಿ ಒಬ್ಬರು, ಮಾನವಿಕ ವಿಭಾಗಕ್ಕೊಬ್ಬರು, ಇಡೀ ಸಂಪಾದನ ಕಾರ್ಯದ ಸಂಯೋಜನೆಗಾಗಿ ಒಬ್ಬರು, ಯೋಜನೆಯ ಕಾರ್ಯನಿರ್ವಹಣೆಗಾಗಿ ಒಬ್ಬರು ; ಇವರ ಜೊತೆಗೆ ಇಬ್ಬರು ಸಹಾಯಕ ಸಂಪಾದಕರು ಮತ್ತು ಮೂವರು ಉಪ ಸಂಪಾದಕರು. ವಿವಿಧ ಕ್ಷೇತ್ರಗಳಲ್ಲಿ ಲೇಖನಗಳನ್ನು ಬರೆಯುವ ಕಾರ್ಯವನ್ನು ಸಮರ್ಥ ವಿದ್ವಾಂಸರಿಗೆ ಒಪ್ಪಿಸಲಾಗುತ್ತದೆ. ಈ ಲೇಖನಗಳನ್ನು ಅವರು ಕನ್ನಡದಲ್ಲೇ ಬರೆಯಬೇಕೆಂಬ ಕಡ್ಡಾಯವೇನೂ ಇಲ್ಲ. ಅಧುನಾತನ ವಿಷಯ ಗಳನ್ನು ಸರಳಶೈಲಿಯಲ್ಲಿ ನಿಷ್ಕೃಷ್ಟವಾಗಿ ನಿರೂಪಿಸಬೇಕೆಂಬುದು ಮುಖ್ಯ ಉದ್ದೇಶ. ಹೀಗೆ ಸಿದ್ಧವಾದ ಲೇಖನಗಳನ್ನು ಸಂಪಾದಕರು ಪರಿಶೀಲಿಸುವರಲ್ಲದೆ ಸಂಬಂಧಪಟ್ಟ ಕೆಲವನ್ನು ಗೌರವ ಸಮಾಲೋಚಕರ ಅವಗಾಹನೆಗಾಗಿಯೂ ಕಳುಹಿಸಲಾಗುವುದು. ವಿಷಯದ ಹೂರಣ, ಅಭಿವ್ಯಕ್ತಿ, ಚಿತ್ರಗಳು, ಅವಶ್ಯವಾದ ಹಾಗೂ ಲಭ್ಯವಿರುವ ಹೊಸ ವಿಚಾರಗಳ ಅಡಕ, ಶೈಲಿ ಮತ್ತು ತಾಂತ್ರಿಕ ಶಬ್ದಗಳ ಏಕರೂಪತೆ, ಸೂಕ್ತ ಸ್ವರೂಪ—ಇವು ಸಂಪಾದಕರು ಮುಖ್ಯವಾಗಿ ಗಮನಿಸುವ ವಿಚಾರ. ಲೇಖಕರಿಂದ ತರಿಸಿದ ಲೇಖನಗಳೇ ಅಲ್ಲದೆ ಅನೇಕ ಹೊಸ ಲೇಖನಗಳನ್ನೂ ಸಂಪಾದಕವರ್ಗದವರು ಬರೆಯುತ್ತಾರೆ. ಸದಾ ಕಣ್ಣಿಟ್ಟು ವಿಷಯ ವೈವಿಧ್ಯವನ್ನೂ ಅದರ ವಿಭಿನ್ನ ಮುಖ ಗಳನ್ನೂ ಒದಗಿಸುವುದು ಸಂಪಾದಕ ವರ್ಗದ ವಿಶಿಷ್ಟ ಕಾರ್ಯಭಾರ.

ಇಂತು ಸಾಗಿದೆ–ಕನ್ನಡ ವಿಶ್ವಕೋಶದ ಮಹಾಕಾರ್ಯ. ಕೋಶದ ಒಂದೊಂದು ಹೊಸ ಸಂಪುಟದ ಬಿಡುಗಡೆಯೊಂದಿಗೂ ಕನ್ನಡಭಾಷೆಗೆ ಒಂದೊಂದು ಹೊಸ ಆಯಾಮ ಲಭ್ಯವಾಗುತ್ತದೆ. ಭಾಷೆಗೆ ದೊರಕಿದ ಈ ಹೊಸ ಸತ್ತ್ವಸಂಪತ್ತಿಯಿಂದ ಕೋಶದ ಮುಂದಿನ ಸಂಪುಟಗಳು ಮತ್ತಷ್ಟು ಶ್ರೀಮಂತವಾಗುತ್ತವೆ.

**ಜ್ಞಾನಗಂಗೋತ್ರಿ :** ಏಳು ಸಂಪುಟಗಳಲ್ಲಿ ಪ್ರಕಟವಾಗಲಿರುವ ಕಿರಿಯರ ವಿಶ್ವಕೋಶವಿದು. ಕನ್ನಡ ವಿಶ್ವಕೋಶ ರಚನೆಯ ಹೊಣೆಯನ್ನು ಮೈಸೂರು ವಿಶ್ವವಿದ್ಯಾನಿಲಯ ವಹಿಸಿಕೊಂಡ ಸರಿ ಸುಮಾರಿನಲ್ಲೆ (1968) ಇದರ ಯೋಜನೆಯೂ ಪ್ರಾರಂಭವಾಯಿತು. ಬೆಂಗಳೂರಿನ ಕರ್ಣಾಟಕ ಸಹಕಾರೀ ಪ್ರಕಾಶನದವರಿಗೆ ಈ ಯೋಜನೆಯನ್ನು ವಹಿಸಿಕೊಟ್ಟ ಸರ್ಕಾರ ಇದರ ಬಗ್ಗೆ 34 ಲಕ್ಷ ರೂಪಾಯಿಗಳನ್ನು ಮಂಜೂರು ಮಾಡಿತು. ಮನುಕುಲದ ಕಥೆ ; ಜೀವ ವಿಜ್ಞಾನ ; ಭೌತ ವಿಜ್ಞಾನ ; ತಾಂತ್ರಿಕಜ್ಞಾನ ; ಕಲೆ, ಸಾಹಿತ್ಯ ; ಕ್ರೀಡೆ, ಮನೋಲ್ಲಾಸ; ಭಾರತ—ಹೀಗೆ ಏಳು ಸಂಪುಟಗಳುಳ್ಳ ಜ್ಞಾನ ಗಂಗೋತ್ರಿಯ ಸಂಪಾದಕ ಮಂಡಳಿಗೆ ದೇಜಗೌ ಅಧ್ಯಕ್ಷರು

ನಿರಂಜನರು ನಿಯಂತ್ರಕರು ಹಾಗೂ ಪ್ರಧಾನ ಸಂಪಾದಕರು. ಎಲ್. ಎಸ್. ಶೇಷಗಿರಿರಾಯರು ಸಂಪಾದಕರು. ಈಗಾಗಲೆ ಪ್ರಥಮ ಸಂಪುಟವಾದ ಮನುಕುಲದ ಕಥೆ ಹೊರಬಿದ್ದಿದೆ (1970). ಡೆಮಿ ಚತುರ್ಥಾಕೃತಿಯ 745 ಪುಟಗಳ ಈ ಬೃಹತ್ ಸಂಪುಟದಲ್ಲಿ 600 ಲೇಖನಗಳಿವೆ. ಮಾನವನ ನಾಗರಿಕತೆ, ಸಂಸ್ಕೃತಿ, ಧರ್ಮ, ದರ್ಶನ, ಶಿಕ್ಷಣ, ರಾಜ್ಯಶಾಸ್ತ್ರ, ಅರ್ಥಶಾಸ್ತ್ರ,—ಇವೆಲ್ಲ ಕ್ಷೇತ್ರಗಳಲ್ಲಿ ಆಗಿರುವ ಮಹತ್ಸಾಧನೆಗಳು ಮತ್ತು ಅವನ್ನು ನಿರ್ವಹಿಸಿದ ಮಹಾಪುರುಷರು—ಈ ವಿಷಯಗಳು ಅಕಾರಾದಿಯಾಗಿ ಇಲ್ಲಿ ಬಂದಿವೆ. ಮೊದಲ 72 ಪುಟಗಳಲ್ಲಿ ಒಟ್ಟು ಮನುಕುಲದ ಕಥೆಯ ವಿಸ್ತಾರವಾದ ಸಮೀಕ್ಷೆ ಬಂದಿದೆ. ಸಂಪಾದಕರಾದ ಶೇಷಗಿರಿ ರಾಯರು ಈ ಕೆಲಸವನ್ನು ಸಮರ್ಪಕವಾಗಿ ಲಲಿತವಾದ ಶೈಲಿಯಲ್ಲಿ ಬಹು ಸಮರ್ಥವಾಗಿ ನಿರ್ವಹಿಸಿದ್ದಾರೆ. ಈ ಸಂಪುಟವನ್ನು ಸಿದ್ಧಪಡಿಸುವಾಗ ಕನ್ನಡ ನಾಡಿನ ಪ್ರಸಿದ್ಧ ಲೇಖಕರನೇಕರಿಂದ ಮೂಲ ಸಾಹಿತ್ಯವನ್ನೂ ಸಿದ್ಧ ಲೇಖನಗಳನ್ನೂ ತರಿಸಿಕೊಳ್ಳಲಾಗಿದೆ. ಅಂಥ ಲೇಖಕರಲ್ಲಿ ಎಚ್. ಸಿ. ಕಪಿನೀಪತಿಭಟ್ಟ, ಡಿ. ವಿ. ಗುಂಡಪ್ಪ, ಜಿ.ಟಿ. ನಾರಾಯಣರಾವ್, ಹಾ.ಮಾ. ನಾಯಕ, ಎಚ್ಚೆಸ್ಕೆ, ಎಂ. ಚಿದಾನಂದ ಮೂರ್ತಿ, ಎ. ಎನ್. ಮೂರ್ತಿರಾವ್, ಕೋ. ಚನ್ನಬಸಪ್ಪ, ಕೆ. ಎಸ್. ದೇಶಪಾಂಡೆ—ಮೊದಲಾದವರಿದ್ದಾರೆ. 11 ರಿಂದ 18ರ ವರೆಗಿನ ವಯಸ್ಸಿನವರನ್ನು ಉದ್ದೇಶದಲ್ಲಿಟ್ಟುಕೊಂಡು ಸಿದ್ಧಮಾಡಿದ ಈ ಗ್ರಂಥದಲ್ಲಿ ಪ್ರತಿಪುಟದಲ್ಲೂ ಚಿತ್ರವಿದೆ. ವರ್ಣ ವೈವಿಧ್ಯವಂತೂ ಆಕರ್ಷಕವಾಗಿದೆ. ಕೊನೆಯಲ್ಲಿರುವ ಸಂದರ್ಭಸೂಚಿ ತುಂಬ ಉಪಯುಕ್ತವಾದ ಅನುಬಂಧವಾಗಿದೆ. ಅನಂತರ ಬರುವ ಶಬ್ದಕೋಶದಲ್ಲಿ ಮುಖ್ಯ ಕನ್ನಡ ಪದಗಳಿಗೆ ಸಂವಾದಿಯಾದ ಇಂಗ್ಲಿಷ್ ಪದಗಳನ್ನು ಅಕಾರಾದಿಯಾಗಿ ಕೊಡಲಾಗಿದೆ. ಕನ್ನಡ ಜ್ಞಾನಸಾಹಿತ್ಯಕ್ಷೇತ್ರದಲ್ಲಿ ಜ್ಞಾನಗಂಗೋತ್ರಿಗೆ ಗಣ್ಯ ಸ್ಥಾನವಿದೆಯೆಂಬುದನ್ನು ಮನುಕುಲದ ಕಥೆ ಸಿದ್ಧಪಡಿಸಿ ತೋರಿಸುತ್ತಿದೆ. *

**ಕನ್ನಡದಲ್ಲಿ ಶತಕಸಾಹಿತ್ಯ :** ಸುಮಾರು 1500 ವರ್ಷಗಳ ಪ್ರಾಚೀನತೆಯುಳ್ಳ ಕನ್ನಡಸಾಹಿತ್ಯದಲ್ಲಿ ಚಂಪೂ, ಷಟ್ಪದಿ, ವಚನ, ತ್ರಿಪದಿ, ಹಾಡುಗಳು, ನಾಟಕಗಳು ಮೊದಲಾದ ಸಾಹಿತ್ಯಭಾಗಗಳಿರುವಂತೆ ಶತಕಸಾಹಿತ್ಯವೂ ಉಂಟು. ನೂರು ಪದ್ಯಗಳಿಂದ ಕೂಡಿದ ಗ್ರಂಥವನ್ನು ಶತಕ ಎಂದು ಕರೆಯುತ್ತಾರೆ. ವೃತ್ತ, ಕಂದ, ಷಟ್ಪದಿ, ಸಾಂಗತ್ಯ—ಹೀಗೆ ಯಾವುದಾದರೊಂದು ಛಂದಸ್ಸನ್ನು ಇಲ್ಲಿ ಬಳಸಿರುವುದುಂಟು. ಈ ಶತಕಗಳು ಭಕ್ತಿ, ಜ್ಞಾನ, ವೈರಾಗ್ಯಬೋಧಕವಾಗಿಯಾಗಲಿ, ನೀತಿಬೋಧಕವಾಗಿಯಾಗಲಿ ಇರುತ್ತವೆ. ಕೆಲವು ಶತಕಗಳಲ್ಲಿ 101, 108, 110ರ ವರೆಗೆ ಪದ್ಯಗಳಿರುವುದುಂಟು. ಪೀಠಿಕೆ ಮತ್ತು ಉಪಸಂಹಾರ ಭಾಗದಲ್ಲಿ ಕೆಲವು ಪದ್ಯಗಳು ಸೇರಿ ಬಹುಶಃ ಪದ್ಯಸಂಖ್ಯೆ ನೂರನ್ನು ದಾಟುತ್ತದೆಂದು ಕಾಣುತ್ತದೆ. ಈ ಶತಕಗಳು ಹಿತಮಿತವಾದ ಭಾಷೆಯಲ್ಲಿ ಲೌಕಿಕರ ಮನಸ್ಸಿಗೆ ಹಿಡಿಯುವ ರೀತಿಯಲ್ಲಿರುವುದರಿಂದ ಹೆಚ್ಚು ಜನಪ್ರಿಯವೆನಿಸಿವೆ.

ಸಂಸ್ಕೃತ ಹಲವಾರು ವಿಷಯಗಳಲ್ಲಿ ಕನ್ನಡಕ್ಕೆ ಮಾರ್ಗದರ್ಶಕವಾಗಿರುವಂತೆ ಶತಕಗಳ ನಿರ್ಮಾಣದಲ್ಲಿಯೂ ದಿಗ್ದರ್ಶಕವೆನಿಸಿದೆ. ಶತಕಸಾಹಿತ್ಯಕ್ಕೆ ಸಂಸ್ಕೃತ ಸಾಹಿತ್ಯದ ಪ್ರೇರಣೆ—ಮಾರ್ಗದರ್ಶನಗಳೂ ವಚನಸಾಹಿತ್ಯದ ಅನುಭಾವಸಂಪತ್ತಿನ ಪುಷ್ಟಿಯೂ ದೊರೆಯಿತು. ಗೀರ್ವಾಣಭಾಷೆಯಾದ ಸಂಸ್ಕೃತದಲ್ಲಿ ಭರ್ತೃಹರಿಯ ಶತಕತ್ರಯ, ಸೂರ್ಯಶತಕ, ನ್ಯಾಯಶತಕ ಮೊದಲಾದವು ಪ್ರಸಿದ್ಧವಾಗಿವೆ. ಅಂತೆಯೇ ಕನ್ನಡದಲ್ಲಿಯೂ ಹಂಪೆಯ ಹರೀಶ್ವರನ ಪಂಪಾಶತಕ, ರಕ್ಷಾಶತಕಗಳೂ ರತ್ನಾಕರವರ್ಣಿಯ ಅಪರಾಜಿತೇಶ್ವರ ಮತ್ತು ರತ್ನಾಕರಾಧೀಶ್ವರ ಶತಕಗಳೂ ಪುಲಿಗೆರೆ ಸೋಮಕವಿಯ ಸೋಮೇಶ್ವರಶತಕವೂ ಅಳಸಿಂಗರಾಚಾರ್ಯರ ಚೆಲ್ವನಾರಾಯಣಶತಕವೂ ಪ್ರಸಿದ್ಧವಾಗಿವೆ. ಮುಮ್ಮಡಿ ಕೃಷ್ಣರಾಜ ಒಡೆಯರ ಪಾರ್ವತೀವಲ್ಲಭಶತಕ ಮತ್ತು ಸಿರಿನಂಜುಂಡಶತಕ, ಬಸವಪ್ಪಶಾಸ್ತ್ರಿಗಳ ನೀತಿಶತಕ, ಶಂಕರಶತಕ ಮತ್ತು ಕನ್ನಡ ಭರ್ತೃಹರಿಶತಕ, ಆರ್ಯಶತಕ ಸ್ವಾದಿ ಸದಾಶಿವರಾಜನ ಪಂಚಶತಕ ವಿರೂಪಾಕ್ಷನ ಶತಕ, ಚನ್ನಮಲ್ಲಿಕಾರ್ಜುನನ ಶಿವಮಹಿಮಾಶತಕ, ಶಿವಭಕ್ತಿಸಾರ, ಕನಕದಾಸರ ಹರಿಭಕ್ತಿಸಾರ, ಮೊಗ್ಗೆ ಮಾಯಿ ದೇವರ ಶತಕತ್ರಯಗಳು, ಪಿ. ಆರ್. ಕರಿಬಸವಶಾಸ್ತ್ರಿಗಳ ನಯಶತಕ ಇವು ವಿದ್ವಾಂಸರ ಮನ್ನಣೆಗೆ ಪಾತ್ರವಾಗಿವೆ. ಅಂತೂ ಕನ್ನಡದಲ್ಲಿ ನಾಲ್ಕುನೂರು ಶತಕಗಳಿವೆಯೆಂದು ವಿದ್ವಾಂಸರು ಗುರುತಿಸಿದ್ದಾರೆ. ಇವುಗಳಲ್ಲಿ ಒಂಬತ್ತು ಶತಕಗಳ ಕರ್ತೃಗಳು ಯಾರೆಂಬುದು ತಿಳಿಯದಾಗಿದೆ. ಕವಿ ಕಾಮನೆಂಬವನು (1200) ಸ್ತನಶತಕವೆಂಬ ಗ್ರಂಥವನ್ನು ರಚಿಸಿರುವುದಾಗಿ ಪಾರ್ಶ್ವನಾಥ ಪುರಾಣದಿಂದ ತಿಳಿಯುತ್ತದಾದರೂ ಗ್ರಂಥ ಅನುಪಲಬ್ಧ.

ಕಾಲಮಾನ ದೃಷ್ಟಿಯಿಂದ ಕ್ರಿ.ಶ. 1070ರಲ್ಲಿದ್ದ ನಾಗವರ್ಮಾಚಾರ್ಯನ ಚಂದ್ರಚೂಡಾಮಣಿಶತಕವೇ ಕನ್ನಡದಲ್ಲಿ ಮೊದಲನೆಯದು. ಇದಕ್ಕೆ ಜ್ಞಾನಸಾರವೆಂಬ ಹೆಸರೂ ಇದೆ. ಅನಂತರ ಕ್ರಿ.ಶ. 1190ರಲ್ಲಿದ್ದ ಕೊಂಡಗುಳಿ ಕೇಶಿರಾಜನ ಷಡಕ್ಷರಿ ಕಂದ ಗೋಚರವಾಗುತ್ತದೆ. ಆಮೇಲೆ ಹರೀಶ್ವರನ ಪಂಪಾಶತಕ ರಕ್ಷಾಶತಕಗಳು ಬರುತ್ತವೆ. ಎಲ್ಲ ಶತಕಗಳಿಗೂ ಒಂದೊಂದು ಅಂಕಿತವಿರುತ್ತದೆ. ಅದರಿಂದ ಶತಕ ಯಾವ ಕವಿಗೆ ಸೇರಿದುದು ಇತ್ಯಾದಿಗಳನ್ನು ತಿಳಿಯಬಹುದು.

ಮಾದರಿಗೆಂದು ಕೆಲವು ಶತಕಗಳಿಂದ ಆಯ್ದ ಪದ್ಯಗಳನ್ನಿಲ್ಲಿ ಕೊಡಲಾಗಿದೆ :

1 ಉದಯಾದಿತ್ಯನ ಸಂಧಿವಿಗ್ರಹಿಲಲಾಮಂ ನಾಗವರ್ಮಂ ಸರ್ವಂ ।
ತುದಯಾದಿತ್ಯನ ರಾಯಭಾರಿಯೆನಿಸಿರ್ದಾತ್ಮಾಗ್ರಜಂ ಭಾಸ್ಕರಂ ॥
ಮೊದಲಾದೀಶ್ವರ ಭಕ್ತರಪ್ಪವರ್ಗೆ ಪೇಳ್ದೀ ಜ್ಞಾನಸಾರಂ ಸುಖಾ ।
ಸ್ಪದವೊಲ್ದೋದುಗೆ ಭುಕ್ತಿ ಮುಕ್ತಿ ಫಲಮಂ ಶ್ರೀಚಂದ್ರಚೂಡಾಮಣೀ ॥
(ಚಂದ್ರಚೂಡಾಮಣಿಶತಕ)

2 ಪುಣ್ಯಂಗೆಯ್ಯದೆ ಪೂರ್ವದೊಳ್ಪರಿದೆ ತಾನೀಗಳ್ಮನಂ ನೋಡೆ ಲಾ ।
ವಣ್ಯಕ್ಕಾಭರಣಕ್ಕೆ ಭೋಗಕೆನಸುಂ ರಾಗಕ್ಕೆ ಜಾಗಕ್ಕೆ ತಾ॥
ರುಣ್ಯಕ್ಕಗ್ಗದ ಲಕ್ಷ್ಮಿಗಂ ಬಯಸಿ ಬಾಯಂಬಿಟ್ಟು ಕಾಂಕ್ಷಾಮಹಾ ।
ರಣ್ಯಂಬೊಕ್ಕಕಟೇಕೆ ಚಿಂತಿಸುವುದೋ ರತ್ನಾಕರಾಧೀಶ್ವರಾ ॥
(ರತ್ನಾಕರಾಧೀಶ್ವರಶತಕ)

3 ಪಗೆಯ ವಶಕ್ಕೆ ಸಿಲ್ಕಿ ಸೆರೆಯಿರ್ದ ಮಹಾನುಭವಂಗೆ ನಿದ್ರೆ ತಾ ।
ನೊಗೆವುದೊ ಭೋಗದಿಚ್ಛೆಯೆ ವಿಡಾಯವೆ ಮಚ್ಚರವುಂಟೆ ದಿವ್ಯಯೋ ॥
ಗಿಗೆ ರಿಪುಮೋಹಮಂ ಜಯಿಸಿ ಮೆಯ್ಸೆರೆಯಂ ಕಳೆವಂದು ಜೋಕೆಯು ।
ಜ್ಜುಗವದೆ ಚಿಂತೆಯೈಸೆ ಪೆರತೊಂದಿಹುದೇ ಅಪರಾಜಿತೇಶ್ವರಾ ॥
(ಅಪರಾಜಿತೇಶ್ವರಶತಕ)

4 ಮನವೆನ್ನಂ ದುರ್ವಿಕಾರಕ್ಕೆಳೆದಪುದು ಮನಂ ಮಾನವಮಂ ನುರ್ಗುಗುಟ್ಟು ।
ತ್ತೆನಸುಂ ತಾಂ ವಹ್ನಿಯೊಳ್ ನೂಂಕಿದಪುದು ಮನಮೀಮಾಯೆಯಂ
ಬಿಟ್ಟು ನಿಮ್ಮಂ ॥
ನೆನೆಯಲ್ ತಾನೀಯದಯ್ಯೋ ಶಿವನೆ ಭವನೆ ಕಾರುಣ್ಯವಾರಾಶಿಯೆನ್ನೀ ।
ಮನಮಂ ಸೈತಿಟ್ಟು ಪಂಪಾಪುರದರಸ ವಿರೂಪಾಕ್ಷ ರಕ್ಷಿಪ್ಪುದೆನ್ನಂ ॥
(ರಕ್ಷಾಶತಕ)

5 ಮನುಜರ ಮೇಲೆ ಸಾವವರ ಮೇಲೆ ಕನಿಷ್ಠರ ಮೇಲೆಯಕ್ಕಟಾ ।
ತನತನಗಿಂದ್ರಚಂದ್ರ ರವಿಕರ್ಣದಧೀಚಿ ಬಲೀಂದ್ರರೆಂದು ಮೇಣ್ ॥
ಅನವರತಂ ಪೊಗಳ್ದು ಕೆಡಬೇಡೆಲೆ ಮಾನವ ನೀನಹರ್ನಿಶಂ ।
ನೆನೆ ಪೊಗಳರ್ಚಿಸೆಮ್ಮ ಕಡುಸೊಂಪಿನ ಪೆಂಪಿನ ಹಂಪೆಯಾಳ್ದನಂ ॥
(ಪಂಪಾಶತಕ)

6 ಅತಿದಾನವ್ರತದಿಂದೆ ಕರ್ಣನತಿಕೋಪೋದ್ರೇಕದಿಂದೆ ಚೈದ್ಯನಂ ।
ತತಿಮಾನೋನ್ನತಿಯಿಂ ಸುಯೋಧನನತಿಕಾಮೋದ್ರೇಕದಿಂ ರಾವಣಂ ॥
ಅತಿಯಾಗುಂಡುದರಿಂದೆ ವಹ್ನಿಯುಳಲ್ಬಂ, ಮುತ್ತಾವುದುಂ ಲೋಕದೊಳ್ ।
ಮಿತಿಮೀರಲ್ ಗತಿಗೇಡೆಲ್ಲೆ ಯದುಗಿರಿಶ್ರೀಚೆಲ್ವನಾರಾಯಣ
(ಶ್ರೀಚೆಲ್ವನಾರಾಯಣಶತಕ)

7 ಶ್ರೀಗೌರಿಯನರ್ಧಾಂಗದೆ
ರಾಗದೆ ಗಂಗಾತರಂಗಮಂ ಮಸ್ತಕದೊಳ್ ।
ಬೀಗುವ ಚಂದ್ರನ ಧರಿಸಿದ
ನಾಗಾಜಿನವಸ್ತ್ರ ಸಲಹು ಸಿರಿನಂಜುಂಡಾ ॥
(ಸಿರಿನಂಜುಡ ಶತಕ)

8 ಶುಚಿ ತಾನಾಗದೆ ಸರ್ವಶಾಸ್ತ್ರನಿಪುಣಂ ತಾನಾಗದೇ ಕಾಮಮಂ ।
ಪಚನಂ ಗೆಯ್ಯದೆ ಕೋಪಮಂ ಬಿಡದೆ ಲೋಭಚ್ಛೇದಮಂ ಮಾಡದೇ
ರುಚಿ ಮೋಹಕ್ಕೊಳಗಾಗದಂತು ಮದಮಾತ್ಸರ್ಯಂಗಳಂ ನೀಗದೇ ।
ವಚನಬ್ರಹ್ಮದೆ ಮುಕ್ತಿಯೇ ಹರಹರಾ ಶ್ರೀಚೆನ್ನಸೋಮೇಶ್ವರಾ ॥
(ಶ್ರೀಸೋಮೇಶ್ವರಶತಕ)

ಸ್ತೋತ್ರಸಾಹಿತ್ಯದಲ್ಲಿ ಶತಕಗಳಿಗೆ ಹಿರಿಯ ಸ್ಥಾನವಿದೆ. ಶತಕಸಾಹಿತ್ಯ ತನ್ನ ತತ್ತ್ವೋದ್ದೇಶವನ್ನು ರಸಪಥದ ಮೂಲಕವೇ ಸಾಧಿಸಿದೆ. ಓದುಗ ಆತ್ಮಾನುಭವದ ರಸದಲ್ಲಿ ತೇಲಿ ತನ್ಮಯವಾಗುವಂತೆ ಶತಕಕಾರ ಮಾಡಬಲ್ಲ. ಆಧ್ಯಾತ್ಮಿಕ ವಿಚಾರಗಳನ್ನು ಮನಂಬುಗುವಂತೆ ನಿರೂಪಿಸಬಲ್ಲ. ಸಮಾಜದ ಆತ್ಮಪ್ರಗತಿಗೆ ಸಾಧಕವಾದ ಸುಮಾರ್ಗವನ್ನವನು ತೋರಬಲ್ಲ. ಚಂಪೂಕೃತಿಗಳ ಸಂಪ್ರದಾಯಬದ್ಧವಾದ ಕಟ್ಟುಪಾಡಿನಲ್ಲಿ ಸಿಲುಕಿದ್ದ ಕವಿ, ಶತಕರಚನೆಯಲ್ಲಿ ಆತ್ಮಸ್ವಾತಂತ್ರ್ಯವನ್ನು ಪಡೆದಂತೆ ತೋರುತ್ತದೆ. ಶತಕಸಾಹಿತ್ಯ ವಸ್ತುನಿಷ್ಠವಾಗಿರುವುದಕ್ಕಿಂತಲೂ ಆತ್ಮನಿಷ್ಠವಾಗಿದೆ ಎಂಬ ಮಾತು ಸತ್ಯ. ಶತಕಗಳು ಸ್ವಾನುಭಾವದ ಕುಸುಮಗಳು. ಮುಕ್ತಿ

ಸಾಧನೆಗೆ ಮೂಲವಾದ ಭಕ್ತಿ, ಜ್ಞಾನ, ವೈರಾಗ್ಯಗಳ ನಿರೂಪಣೆಯೇ ಶತಕ ರಚನೆಯ ಮೂಲೋದ್ದೇಶ. ಇವು ಹಾಡುಗಬ್ಬಗಳಂತೆ ಜನರ ನಿತ್ಯಜೀವನದಲ್ಲಿ ಉಪಯೋಗವಾಗುತ್ತಿವೆ. ಕರ್ಣಾಟಕ ಕವಿಚರಿತೆಯೇ ಮೊದಲಾದ ಕನ್ನಡ ಸಾಹಿತ್ಯ ಚರಿತ್ರೆಗಳಲ್ಲಿ ಉಕ್ತವಾಗದಿರುವ 23 ಶತಕಗಳನ್ನು ಶಂಕರಶತಕಗ್ರಂಥದ ಪೀಠಿಕೆಯ ಒಂದು ಅಧ್ಯಾಯದಲ್ಲಿ ಪರಿಚಯ ಮಾಡಿಕೊಡಲಾಗಿದೆ. 1620ರಲ್ಲಿ ಇದ್ದಿರಬಹುದಾದ ಗುರುನಂಜೇಸ್ವಾಮಿಯ ಮೂರು ಶತಕಸಂಕಲನಗಳು ಶತಕಸಾಹಿತ್ಯದಲ್ಲಿ ಹೊಸ ಆಧ್ಯಾಯವನ್ನೇ ತೆರೆದಿವೆ. (ಬಿ.ಎಸ್.)

**ಕನ್ನಡದಲ್ಲಿ ಶಾಸ್ತ್ರ ಸಾಹಿತ್ಯ :** ಭಾರತೀಯ ಸಾಹಿತ್ಯವನ್ನು ಕುರಿತು ವಿಂಟರ್‌ನಿಟ್ಜ್ ಹೀಗೆ ಹೇಳುತ್ತಾನೆ : ವಿಷಯಸಾಮಗ್ರಿಯ ದೃಷ್ಟಿಯಿಂದ ನೋಡುವುದಾದರೆ ಭಾರತೀಯ ಸಾಹಿತ್ಯವು 'ಸಾಹಿತ್ಯ' ಎಂಬ ಮಾತು ಅದರ ವಿಶಾಲಾರ್ಥದಲ್ಲಿ ಏನೇನನ್ನು ಒಳಗೊಳ್ಳುತ್ತದೆಯೋ ಅಷ್ಟನ್ನೂ ಒಳಗೊಳ್ಳುತ್ತದೆ—ಧಾರ್ಮಿಕ ಕಾವ್ಯ, ಲೌಕಿಕ ಕಾವ್ಯ, ಮಹಾಕಾವ್ಯ, ಭಾವಗೀತೆ, ನಾಟಕ, ನೀತಿಪ್ರಧಾನ ಕಾವ್ಯ, ಜೊತೆಗೆ ನಿರೂಪಣ ಹಾಗೂ ವೈಜ್ಞಾನಿಕ ಗದ್ಯ. ಈ ಮಾತುಗಳು ಕನ್ನಡಕ್ಕೂ ಬಹುಮಟ್ಟಿಗೆ ಅನ್ವಯಿಸುತ್ತವೆ.

ಕಾವ್ಯ, ಶಾಸ್ತ್ರ ಎಂಬುವು ಬೇರೆ ಬೇರೆ ಎಂದು ನಾವು ಭಾವಿಸುವುದಾದರೂ ಅಂಥ ಭೇದವನ್ನು ಸ್ಪಷ್ಟವಾಗಿ ಎಲ್ಲ ಕಡೆಗಳಲ್ಲಿಯೂ ತೋರಿಸುವುದು ಕಷ್ಟವಾಗಬಹುದು. ಕಾವ್ಯವೆಂದು ನಾವು ಕರೆಯುವ ಗ್ರಂಥದಲ್ಲಿ ಒಂದು ಧರ್ಮದ ಬೋಧನೆಗಳೂ ತತ್ತ್ವಗಳೂ ಬಂದಿರಬಹುದು. ಜ್ಯೋತಿಷ್ಯಕ್ಕೆ ಸಂಬಂಧಿಸಿದ ಒಂದು ಕೃತಿಯನ್ನುಅದರ ಕೃತಿಕಾರ ಶಾಸ್ತ್ರಕವಿತ್ವಕ್ಕೆ ಭೂಷಣಪ್ರಾಯವಾದುದು ಎಂದು ಹೇಳಿಕೊಂಡಿದ್ದಾನೆ. ಕಾಮಶಾಸ್ತ್ರಕ್ಕೆ ಸಂಬಂಧಿಸಿದ ಒಂದು ಕೃತಿಯ ಕರ್ತೃ ತನ್ನನ್ನು ಕವಿಯೆಂದೇ ಹೇಳಿಕೊಂಡಿದ್ದಾನೆ. ಕೆಲವು ಬರೆಹಗಳನ್ನಂತೂ ಶಾಸ್ತ್ರವೋ ಕಾವ್ಯವೋ ನಿರ್ಣಯಿಸುವುದು ಕಷ್ಟ. ಆದರಿಂದ್ದ ಈ ಲೇಖನದಲ್ಲಿ ಬಂದಿರುವ ಶಾಸ್ತ್ರಗ್ರಂಥಗಳನ್ನು ಉಳಿದ ಗ್ರಂಥಗಳಿಂದ ಪ್ರತ್ಯೇಕಿಸಿರುವುದಕ್ಕೆ ಖಚಿತವಾದ ಆಧಾರವಿಲ್ಲವೆಂದೂ ಅನುಭವಕ್ಕಿಂತ ಹೆಚ್ಚಾಗಿ ವಸ್ತುಸ್ವರೂಪವನ್ನು ತಿಳಿಸುವ ಮತ್ತು ಬುದ್ಧಿಪೂರ್ವಕವಾಗಿ ಗ್ರಹಿಸಬೇಕಾದ ಗ್ರಂಥಗಳನ್ನು ಸ್ಥೂಲವಾಗಿ ಶಾಸ್ತ್ರಗಳೆಂದು ಭಾವಿಸಿದೆಯೆಂದೂ ತಿಳಿಯಬೇಕು.

ಹಿಂದೆ ಕನ್ನಡದಲ್ಲಿ ಕವಿಯಾಗಲಿ, ಶಾಸ್ತ್ರಕಾರನಾಗಲಿ ಸಾಧ್ಯವಾದಷ್ಟು ಕ್ಷೇತ್ರಗಳಲ್ಲಿ ಪಾಂಡಿತ್ಯವನ್ನು ಪಡೆಯಬೇಕಾಗಿತ್ತು. ಪಂಪ ಅರ್ಜುನನ ವಿದ್ಯಾಭ್ಯಾಸವನ್ನು ಹೀಗೆ ವರ್ಣಿಸುತ್ತಾನೆ 'ಅಂತು ಪಂಚಾಂಗ ವ್ಯಾಕರಣದ ವೃತ್ತಿಭೇದಮಪ್ಪ ಛಂದೋವೃತ್ತಿಯೊಳಂ ಶಬ್ದಾಲಂಕಾರ ನಿಷ್ಠಿತಮಪ್ಪಲಂಕಾರದೊಳಂ ವ್ಯಾಸವಾಲ್ಮೀಕಿ ಕಶ್ಯಪ ಪ್ರಭೃತಿ ವಿರಚಿತಗಂಳಪ್ಪ ಮಹಾಕಾವ್ಯಂಗಳೊಳಂ ನಾಂದೀ ಪ್ರರೋಚನಾ ಪ್ರಸ್ತಾವನೇತಿವೃತ್ತ ಸಂಧಿಪ್ರ ವೇಶ ವಿಷ್ಕಂಭ ಕಪೋತಿಕಾ ವ್ಯಾಳಿಕಾದಿ ಲಕ್ಷಣೋಪೇತಂಗಳಪ್ಪ ನಾಟಕಂಗಳೊಳಂ ಪದಿನೆಂಟು ಧರ್ಮಶಾಸ್ತ್ರಂಗಳೊಳಂ ನಾಲ್ಕು ವೇದದೊಳಮಾಱಿಂಗದೊಳಯ್ದು ತೆಱದ ಮಂತ್ರಗಳೊಳಮಾಱುಂದರ್ಶನದೊಳಂ ಪ್ರತ್ಯಕ್ಷಾನುಮಾನ ಪ್ರಮಾಣಂಗಳೊಳಂ ಭರತಪ್ರಣೀತ ನೃತ್ಯಶಾಸ್ತ್ರದೊಳಂ ನಾರದಾದಿ ಪ್ರಣೀತ ಗಾಂಧರ್ವ ವಿದ್ಯಾವಿಶೇಷಂಗಳೊಳಂ ಗಜಾಗಮಜ್ಞ ರಾಜಪುತ್ರ ಗೌತಮ ವಾದ್ವಾಕಿ ಪಾಳಕಶ್ಯಪ ಸುಪತಿ ಶ್ರೀಹರ್ಷಾದಿ ಪುರಾಣಪುರುಷ ವಿರಚಿತಂಗಳಪ್ಪ ಹಸ್ತಿಶಾಸ್ತ್ರಂಗಳೊಳಂ ಚಿತ್ರಕರ್ಮ ಪತ್ರಚ್ಛೇದ ಗ್ರಹ ಗಣಿತ ರತ್ನಪರೀಕ್ಷೆಗಳೊಳಂ ದಾರುಕರ್ಮ ವಾಸ್ತು ವಿದ್ಯಾಪೂರ್ವಯಂತ್ರಪ್ರಯೋಗ ವಿಷಾಪಹರಣ ಸರಭೇದರತಿ ತಂತ್ರೇಂದ್ರಜಾಲ ವಿವಿಧ ವಿದ್ಯೆಗಳೊಳಮನೇಕಾಕ್ಷರ ಸ್ವರೂಪಂಗಳೊಳಂ ಚಾಪ ಚಕ್ರ ಪರಶು ಕೃಪಾಳ ಶಕ್ತಿ ತೋಮರ ಮುಸಲ ಮುಸುಂಡಿ ಭಿಂಡಿವಾಳ ಮುದ್ಗರ ಗದಾದಿ ವಿವಿಧಾಯುಧಂಗಳೊಳಮತಿ ಪ್ರವೀಣನುಮಾರೂಢ ಸರ್ವಜ್ಞ ಮಹೇಂದ್ರಜಾಣನುಮಾಗಿ.' ಇದು ಪಂಪನಿಗೆ ಗೊತ್ತಿದ್ದ ವಿದ್ಯಾಭ್ಯಾಸದ ಚಿತ್ರಣವೂ ಆಗಿರಬಹುದು. ಮದನತಿಲಕದ ಕರ್ತೃ ಚಂದ್ರರಾಜ ತನ್ನ ಪಾಂಡಿತ್ಯವನ್ನು ಹೀಗೆ ಹೇಳಿಕೊಂಡಿದ್ದಾನೆ–'ಸಕಲ ವ್ಯಾಕರಣಾರ್ಥಶಾಸ್ತ್ರ ಗಣಿತಾಲಂಕಾರ ಸತ್ಕಾವ್ಯ ನಾ। ಟಕ ವಾತ್ಸ್ಯಾಯನ ನೃತ್ತಗೀತ ಹಯ ಶಾಸ್ತ್ರಾದ್ವೈತ ಗಾಂಧರ್ವ ತಾ।ರ್ಕ ಕವೀಂದ್ರಾಗಮ ವೈದ್ಯ ವಾದ್ಯ ಶಕುನೋದ್ಯದ್ಧ್ಯದ್ಯ ವಿದ್ಯಾಕದಂ। ಬಕಮುಂ ಚಂದ್ರ ಕವೀಂದ್ರನೊರ್ವನೆ ವಲಂ ಬಲ್ಲಂ ಪೆಱರ್ ಬಲ್ಲರೇ.' ಬಳ್ಳಿಗಾವೆಯ ಕೋಡಿಯ ಮಠದಂಥ ವಿದ್ಯಾಕೇಂದ್ರಗಳ ವರ್ಣನೆಯನ್ನು ನೋಡಿದರೆ, ಅಂಥ ಕಡೆಗಳಲ್ಲಿ ಎಂಥ ವಿದ್ವಾಂಸರು ಶಿಕ್ಷಣ ಪಡೆದು ಹೊರಬರುತ್ತಿದ್ದರೆಂಬುದನ್ನು ಕಲ್ಪಿಸಿಕೊಳ್ಳಬಹುದು. ಹೀಗೆ, ಪಾಂಡಿತ್ಯವೆನ್ನುವುದು ಎಲ್ಲರೂ ಪಡೆಯಬೇಕಾದ್ದು ಎಂಬ ಭಾವನೆಯಿದ್ದುದರಿಂದ, ಹಿಂದಿನ ಕನ್ನಡದ ಕಾವ್ಯಗಳಲ್ಲಾಗಲಿ ಶಾಸ್ತ್ರಗಳಲ್ಲಾಗಲಿ ಅದು ಎದ್ದು ಕಾಣಿಸುವ ಅಂಶವಾಗಿದೆ. (ಎಲ್ಲಿ ಪಾಂಡಿತ್ಯ ಕಾವ್ಯವಾಗಿ ಬಂದಿದೆ, ಎಲ್ಲಿ ಪಾಂಡಿತ್ಯ ಹಾಗೇ ವಿರಾಜಿಸಿದೆ ಎಂಬುದು ಕಾವ್ಯವಿಮರ್ಶೆಯ ಮಾತಾಗಿರುವುದರಿಂದ ಅದರ ಪ್ರಸಕ್ತಿ ಇಲ್ಲಿ ಬರುವುದಿಲ್ಲ.) ಕೇವಲ ವಿಷಯನಿರೂಪಣೆ ಅಥವಾ ನೀತಿಬೋಧನೆ ಪ್ರಧಾನವಾಗಿರುವ, ಸು. 1900ಕ್ಕಿಂತ ಹಿಂದೆ ರಚಿತವಾಗಿರುವ ಗ್ರಂಥಗಳನ್ನು ಮಾತ್ರ ಕೆಳಗೆ ಲಕ್ಷಿಸಲಾಗಿದೆ.

**ಅಲಂಕಾರಶಾಸ್ತ್ರ :** ಕನ್ನಡದ ಉಪಲಬ್ಧ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವೆನ್ನಬಹುದಾದ ಶ್ರೀವಿಜಯನ (ಸು. 850) ಕವಿರಾಜಮಾರ್ಗ ದಂಡಿಯ ಕಾವ್ಯಾದರ್ಶದ ಮಾದರಿಯಲ್ಲಿ ರಚಿತವಾಗಿರುವ ಗ್ರಂಥ. (ಅನೇಕ ಕಡೆಗಳಲ್ಲಿ ದಂಡಿಯ ಅನುವಾದವೂ ಉಂಟು.) ಇಲ್ಲಿ ಕನ್ನಡ ನಾಡು, ನುಡಿಗಳಿಗೆ, 850ಕ್ಕಿಂತ ಹಿಂದಿನ ಕನ್ನಡ ಸಾಹಿತ್ಯದ ಬಗ್ಗೆ, ಅನೇಕ ಕಾವ್ಯಪ್ರಕಾರಗಳ ಬಗ್ಗೆ ಹಲವು ಸ್ವಾರಸ್ಯಕರವಾದ ಹೇಳಿಕೆಗಳಿವೆ. ಗ್ರಂಥದಲ್ಲಿ ದೋಷಾದೋಷಾನುವರ್ಣನನಿರ್ಣಯಂ, ಶಬ್ದಾಲಂಕಾರವರ್ಣನನಿರ್ಣಯಂ, ಅರ್ಥಾಲಂಕಾರಪ್ರಕರಣಂ ಎಂಬ ಮೂರು ಅಧ್ಯಾಯಗಳಿವೆ. ರಸಗಳಲ್ಲಿ ಶಾಂತವನ್ನು ಇವನು ಹೇಳಿರುವುದು ಗಮನಾರ್ಹವಾಗಿದೆ. ಕಾವ್ಯಕ್ಕೆ ಸೌಂದರ್ಯವನ್ನು ತಂದುಕೊಡುವ ಎಲ್ಲವೂ ಅಲಂಕಾರವೆಂದು ಇವನ ಅಭಿಪ್ರಾಯ. (ದಂಡಿಯನ್ನು ಈ ಮಾತು ನೆನಪಿಗೆ ತರುತ್ತದೆ.) ಕವಿರಾಜಮಾರ್ಗವಾದ ಮೇಲೆ ಹನ್ನೆರಡನೆಯ ಶತಮಾನದ ವರೆಗೆ ಕನ್ನಡದಲ್ಲಿ ಸಾಕಷ್ಟು ಸಾಹಿತ್ಯ ನಿರ್ಮಾಣವಾಯಿತು. ಪಂಪ, ರನ್ನ, ಮೊದಲನೆಯ ನಾಗವರ್ಮ, ನಯಸೇನರಂಥ ಉತ್ತಮ ಕವಿಗಳು ಕಾಣಿಸಿಕೊಂಡರು. ಸು. 1145ರಲ್ಲಿದ್ದ ನಾಗವರ್ಮ ಕನ್ನಡಕ್ಕೆ ಕೊಟ್ಟಿರುವ ಕೊಡುಗೆಗಳು ಅನೇಕ : ವ್ಯಾಕರಣ, ಅಲಂಕಾರಶಾಸ್ತ್ರ, ಕೋಶ, ಛಂದಸ್ಸು ಇವುಗಳಿಗೆ ಸಂಬಂಧಿಸಿದ ಕೃತಿಗಳನ್ನು ಬರೆದಿರುವುದಲ್ಲದೆ ಇವನು ಕಾವ್ಯಗಳನ್ನೂ ಬರೆದಿದ್ದನೆಂದು ಊಹಿಸಲವಕಾಶವಿದೆ. ಈತನ ಕನ್ನಡ ಕಾವ್ಯಾವಲೋಕನದಲ್ಲಿ ಶಬ್ದಸ್ಮೃತಿ, ಕಾವ್ಯಮಲವ್ಯಾವೃತ್ತಿ, ಗುಣವಿವೇಕ, ರೀತಿಕ್ರಮರಸನಿರೂಪಣ, ಕವಿಸಮಯಗಳೆಂಬ ಐದು ಪರಿಚ್ಛೇದಗಳಿವೆ. ಮೊದಲನೆಯ ಪರಿಚ್ಛೇದ ವ್ಯಾಕರಣಕ್ಕೆ ಸಂಬಂಧಿಸಿದ್ದು ; ಉಳಿದ ನಾಲ್ಕು ಅಲಂಕಾರಶಾಸ್ತ್ರಕ್ಕೆ ಸಂಬಂಧಪಟ್ಟಿವೆ. ವಾಮನ, ರುದ್ರಟ, ಭಾಮಹ, ದಂಡಿಯರಿಂದ ಅನೇಕ ಭಾಗಗಳನ್ನು ಈತ ತೆಗೆದುಕೊಂಡಿದ್ದಾನೆ ; ಕವಿಸಮಯದ ಭಾಗಕ್ಕೆ ರಾಜಶೇಖರನಿಗೆ ಋಣಿಯಾಗಿರಬಹುದು. ಇವನ ಸಮಕಾಲೀನನಾಗಿರಬಹುದಾದ ಉದಯಾದಿತ್ಯನ ಉದಯಾದಿತ್ಯಾಲಂಕಾರ 76 ಪದ್ಯಗಳ ಒಂದು ಚಿಕ್ಕ ಗ್ರಂಥ. ಉದಯಾದಿತ್ಯ ಬಹುಮಟ್ಟಿಗೆ ದಂಡಿಯನ್ನು ಅನುಸರಿಸಿದ್ದರೂ ರೀತಿಗಳ ವಿಷಯವನ್ನು ಹೇಳುವಾಗ ರುದ್ರಟನನ್ನು ಅನುಸರಿಸಿದ್ದಾನೆ. ಕವಿ ಕಾಮನ (ಸು. 1200) ಶೃಂಗಾರರತ್ನಾಕರ ರಸದ ವಿಷಯವನ್ನು ವಿಸ್ತಾರವಾಗಿ ಪ್ರತಿಪಾದನೆ ಮಾಡಿರುವ ಕೃತಿಗಳಲ್ಲಿ ಮೊದಲನೆಯದು. 'ರಸಮೇ ಮೊದಲ್ ಕವಿತೆಗೆ' ಎಂದೀತ ಹೇಳಿದ್ದಾನೆ. ಸಂಸ್ಕೃತದ ಆಲಂಕಾರಿಕರು ರಸದ ಬಗ್ಗೆ ಹೇಳಿರುವುದಕ್ಕಿಂತ ಭಿನ್ನವಾದ ಒಂದೆರಡು ಅಂಶಗಳು ಇವನಲ್ಲುಂಟು. ಇವನಿಗೆ ಅದ್ಭುತವಾದ ಅವಧಾನ ಶಕ್ತಿಯಿದ್ದಂತೆ ಒಂದು ಪದ್ಯದಿಂದ ಊಹಿಸಬಹುದು : ಎಸಕಂಬೆತ್ತ ಮತಿಪ್ರಕಾಶ ಮದನಿನ್ನೇನೆಂದಪೆಂ ಚೇಟಿ ನಾ।ಲ್ದೆಸೆಯೊಳ್ ನಾಲ್ವರ ಕಂಠದೊಳ್ ಬರೆಯೆ ಕಬ್ಬಂಬೇಳ್ವನೊಲ್ದತ್ತಲಾ। ಡಿಸುವಂ ನೆತ್ತಮನಿತ್ತಲೋದಿದೊಡೆ ತಪ್ಪಂ ಪೇೞ್ವುದಂ ತಿರ್ದಿಯಾ। ಲಿಸುವಂ ಗೀತಮನೆನ್ನುಮಂ ನಗಿಸುವಂ ಶೃಂಗಾರರತ್ನಾಕರಂ॥ ಕವಿರಾಜಮಾರ್ಗ ಮತ್ತು ಶೃಂಗಾರರತ್ನಾಕರಗಳಲ್ಲಿ ದಂಡಿಯ ಪ್ರಭಾವವಿದ್ದರೂ ಅವನ ಕಾವ್ಯಾದರ್ಶದ ಅನುವಾದ ಸು. 1500ರಲ್ಲಿ ಕಾಣಿಸಿಕೊಂಡಿತು. ಮಾಧವನ ಮಾಧವಾಲಂಕಾರ ಸಂಸ್ಕೃತ ಕಾವ್ಯಾದರ್ಶದ ಸರಳ ಅನುವಾದ. ಆದರೆ ಮಾಧವನಿಗಿಂತ ಹೆಚ್ಚು ಗಣನೀಯ ವ್ಯಕ್ತಿ ಸು. 1550ರಲ್ಲಿದ್ದ ಸಾಳ್ವ. ಅವನಿಗೆ ಆನಂದವರ್ಧನನ ಧ್ವನ್ಯಾಲೋಕದ ಪರಿಚಯವಿದ್ದಿತಾದ್ದರಿಂದ, ರಸ ಮತ್ತು ಧ್ವನಿಗಳನ್ನು ವಿಸ್ತಾರವಾಗಿ ಪ್ರತಿಪಾದಿಸಿದ ಕೀರ್ತಿ ಅವನಿಗೆ ಸಲ್ಲಬೇಕು. ಅವನ ರಸರತ್ನಾಕರದಲ್ಲಿ ರಸದ ಪ್ರತಿಪಾದನೆಯೂ ಬಹುಶಃ ಅವನದೇ ಆಗಿರಬಹುದಾದ ಶಾರದಾವಿಲಾಸದಲ್ಲಿ ರಸದ ಮತ್ತು ಧ್ವನಿಯ ಪ್ರತಿಪಾದನೆಯೂ ಕಂಡುಬರುತ್ತದೆ. ಇದು ಧ್ವನಿಯ ಚರ್ಚೆಯಿರುವ ಮೊದಲ ಕನ್ನಡ ಆಲಂಕಾರಿಕ ಗ್ರಂಥ. ಚಿಕ್ಕದೇವರಾಜ ಒಡೆಯರ ಕಾಲದಲ್ಲಿದ್ದ ತಿರುಮಲಾರ್ಯ ತನ್ನ ಅಪ್ರತಿಮವೀರಚರಿತದಲ್ಲಿ ಶಬ್ದಾಲಂಕಾರ, ಅರ್ಥಾಲಂಕಾರಗಳ ವಿವರಣೆಯನ್ನಿತ್ತಿದ್ದಾನೆ. ಅಪ್ಪಯ್ಯದೀಕ್ಷಿತನ ಸಂಸ್ಕೃತ ಕುವಲಯಾನಂದವನ್ನು 1734ರಲ್ಲಿದ್ದ ಜಾಯೇಂದ್ರ ಕನ್ನಡಕ್ಕೆ ಅನುವಾದ ಮಾಡಿದ. ಅವನದೇ ರಸಮಂಜರಿಯಲ್ಲಿ ನಾಯಕ, ನಾಯಿಕೆಯರ ಪ್ರಭೇದಗಳನ್ನು ವಿವರಿಸಲಾಗಿದೆ. ಹತ್ತೊಂಬತ್ತನೆಯ ಶತಮಾನದ ಅಳಿಯ ಲಿಂಗರಾಜನ (ಕ್ರಿ.ಶ. 1867) ನರಪತಿಚರಿತ ಶಬ್ದಾಲಂಕಾರ ಅರ್ಥಾಲಂಕಾರಗಳನ್ನು ಹೇಳುವಲ್ಲಿ ಸಂಸ್ಕೃತ ಕುವಲಯಾನಂದವನ್ನು ಅನುಸರಿಸಿದೆ. ಅದೇ ಶತಮಾನದ ಉತ್ತರಾರ್ಧದಲ್ಲಿದ್ದ ಚಾವಲಿ ರಾಮಸ್ವಾಮಿ ಶಾಸ್ತ್ರಿಗಳ ಕರ್ಣಾಟಕ ಛಂದೋಲಂಕಾರ ಸಾಹಿತ್ಯಲಕ್ಷಣಸಂಗ್ರಹ ಛಂದಸ್ಸು ಮತ್ತು ಅಲಂಕಾರಶಾಸ್ತ್ರಗಳ ಕೈಪಿಡಿಯಾಗಿದೆ.

**ಛಂದೋಗ್ರಂಥಗಳು :** ನಮಗೆ ದೊರಕುವ ಛಂದೋಗ್ರಂಥಗಳಲ್ಲಿ ಮೊದಲನೆಯ ನಾಗವರ್ಮನ (ಸು. 990) ಛಂದೋಂಬುಧಿಯೇ ಬಹು ಪ್ರಾಚೀನವಾದುದು.

ಆದರೆ ಅದಕ್ಕಿಂತ ಹಿಂದೆ ಒಂಬತ್ತನೆ ಶತಮಾನದಲ್ಲಿ ಗುಣಗಾಂಕಿಯು ಎಂಬ ಛಂದೋಗ್ರಂಥವಿದ್ದಿತೆಂದು ಊಹೆ ಮಾಡಲವಕಾಶವಿದೆ. ಆದರೆ ಆ ಗ್ರಂಥ ದೊರೆತಿಲ್ಲ. ಸು. 850ರಲ್ಲಿ ರಚಿತವಾದ ಕವಿರಾಜಮಾರ್ಗದಲ್ಲಿ ಛಂದಸ್ಸಿಗೆ ಸಂಬಂಧಿಸಿದ ಅನೇಕ ಮುಖ್ಯ ಸಂಗತಿಗಳಿವೆ. ಆದರೂ ಛಂದೋಂಬುಧಿ ಕನ್ನಡದ ಏಕೈಕ, ಅಧಿಕೃತ ಪ್ರಾಚೀನ ಲಕ್ಷಣಗ್ರಂಥ. ನಾಗವರ್ಮನಿಗೆ ಪಿಂಗಳನ ಛಂದಸ್ಸು ಆಧಾರಗ್ರಂಥ. ತನ್ನ ಕೃತಿಯಲ್ಲಿ ವರ್ಣವೃತ್ತ, ಮಾತ್ರಾವೃತ್ತ, ಅಂಶವೃತ್ತಗಳನ್ನು ಲಕ್ಷಣ–ಲಕ್ಷ್ಯಸಮೇತವಾಗಿ ವಿವರಿಸಿರುವುದಲ್ಲದೆ, ಈತ ಕೊನೆಯ ಅಧಿಕಾರದಲ್ಲಿ ಷಟ್ಪ್ರತ್ಯಯಗಳನ್ನು ನಿರೂಪಿಸಿದ್ದಾನೆ. ಈ ಗ್ರಂಥ ತನ್ನ ಜನಪ್ರಿಯತೆಯಿಂದಾಗಿ ಈಚೆಗೆ ಬೇರೆ ಬೇರೆ ಪ್ರತಿಕಾರರ ಕೈಯಲ್ಲಿ ಅನೇಕ ಮಾರ್ಪಾಟುಗಳನ್ನು ಪಡೆದಿದೆ. ಸು. 1100ರಲ್ಲಿದ್ದ ಜಯಕೀರ್ತಿಯ ಛಂದೋನುಶಾಸನ, ಮೂರನೆಯ ಸೋಮೇಶ್ವರನ ಮಾನಸೋಲ್ಲಾಸ (ಇದು ವಿಶ್ವಕೋಶದಂಥ ಗ್ರಂಥ), ಶಾರ್ಙ್ಗದೇವನ ಸಂಗೀತರತ್ನಾಕರಗಳು ಸಂಸ್ಕೃತದಲ್ಲಿದ್ದರೂ ಅವುಗಳಲ್ಲಿ ಕನ್ನಡ ಛಂದಸ್ಸಿಗೆ ಸಂಬಂಧಿಸಿದ ಅನೇಕ ಸಂಗತಿಗಳು ದೊರಕುತ್ತವೆ. ಸು. 1145ರಲ್ಲಿದ್ದ ಎರಡನೆಯ ನಾಗವರ್ಮನ ಛಂದೋವಿಚಿತಿ ಎಂಬ ಗ್ರಂಥ ಉಪಲಬ್ಧವಾಗಿಲ್ಲ. ಸು. 1500ರಲ್ಲಿದ್ದ ಈಶ್ವರ ಕವಿಯ ಕವಿಜಿಹ್ವಾಬಂಧನದಲ್ಲಿ ಗಣಗಳು, ಅವುಗಳ ವರ್ಣ, ವಾಹನ, ಶತ್ರುತ್ವ, ಮಿತ್ರತ್ವ ಇತ್ಯಾದಿ ವಿಷಯಗಳೂ ಪ್ರಾಸವಡಿಗಳ ವಿಷಯವೂ ಬಂದಿದೆ. ಸು. 1650ರಲ್ಲಿದ್ದ ಗುಣಚಂದ್ರನ ಛಂದಸ್ಸಾರ ಒಂದು ಪುಟ್ಟ ಗ್ರಂಥ. ಕಂದ, ಷಟ್ಪದಿ ಮುಂತಾದ ಮಾತ್ರಾವೃತ್ತಗಳನ್ನು, ಅಕ್ಷರವೃತ್ತಗಳನ್ನು, ಲಾವಣಿ, ಸೀಸ ಇತ್ಯಾದಿ ಪದ್ಯಗಳನ್ನು ವಿವರಿಸಿದೆ. ಶಾಲ್ಯದ ಕೃಷ್ಣರಾಜನಿಂದ (1748) ರಚಿತವಾದ ಷಟ್ಪ್ರತ್ಯಯದಲ್ಲಿ ಪ್ರಸ್ತಾರ, ನಷ್ಟ, ಉದ್ದಿಷ್ಟ, ಏಕದ್ವ್ಯಾದಿಲಗಕ್ರಿಯೆ, ಸಂಖ್ಯಾನ, ಅಧ್ವಯೋಗ ಎಂಬ ಆರು ಪ್ರತ್ಯಯಗಳ ವಿವರಣೆಯಿದೆ. ಸಂಸ್ಕೃತದಲ್ಲಿ ಸುಪ್ರಸಿದ್ಧವಾದ ವೃತ್ತರತ್ನಾಕರಕ್ಕೆ ಸು. 1775ರಲ್ಲಿ ಬರೆದ ಒಂದು ಟೀಕೆಯೂ ದೊರೆಯುತ್ತದೆ. ಅದರ ಕೃತಿಕಾರನ ಹೆಸರು ತಿಳಿದುಬಂದಿಲ್ಲ. ಹತ್ತೊಂಬತ್ತನೆಯ ಶತಮಾನದ, ಬಹುಶಃ ಕೊಲ್ಲಿಪಾಕೆಯ, ವೀರಭದ್ರಕವಿಯಿಂದ ರಚಿತವಾದ ನಂದಿಛಂದಸ್ಸು ಎಂಬ ಪುಟ್ಟ ಕೃತಿಯೊಂದುಂಟು. ಇದರಲ್ಲಿ ಹೇಳಿಕೊಳ್ಳುವಂಥ ವಿಷಯವೇನೂ ಕಾಣಬರದು. ಗಂಗಾಧರ ಮಡಿವಾಳೇಶ್ವರರ (ಸು. 1870) ಕವಿತಾಪದ್ಧತಿ, ಧೋಂಡೋ ನರಸಿಂಹ ಮುಳಬಾಗಿಲು (ಸು. 1890) ಅವರ ಛಂದಸ್ಸಾರ ಇತ್ಯಾದಿ ಕೃತಿಗಳು ಈಚಿನ ಛಂದೋಗ್ರಂಥಗಳು.

**ಸಂಗೀತ ಶಾಸ್ತ್ರ ಇತ್ಯಾದಿ :** ಪಂಪನ ಆದಿಪುರಾಣ, ಭೀಮಕವಿಯ ಬಸವಪುರಾಣ, ಪದ್ಮಣಾಂಕನ ಪದ್ಮರಾಜಪುರಾಣ, ರತ್ನಾಕರನ ಭರತೇಶವೈಭವ ಮುಂತಾದ ಕಾವ್ಯಗಳಲ್ಲಿ ನರ್ತನ, ಸಂಗೀತಗಳಿಗೆ ಸಂಬಂಧಿಸಿದ ವರ್ಣನೆಗಳು ಬರುತ್ತವೆ. ಅವುಗಳಲ್ಲಿ ಅನೇಕ ಪಾರಿಭಾಷಿಕ ಪದಗಳನ್ನು ಗುರುತಿಸಬಹುದು. ಶಿವಶರಣರೂ ಹರಿದಾಸರೂ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ಆದರೆ ಕನ್ನಡದಲ್ಲಿ ಸಂಗೀತಕ್ಕೆ ಸಂಬಂಧಿಸಿದ ಶಾಸ್ತ್ರೀಯ ನಿರೂಪಣೆ ಮೊದಲು ದೊರಕುವುದು ನಿಜಗುಣಶಿವಯೋಗಿಗಳ ವಿವೇಕಚಿಂತಾಮಣಿಯ ನಾಲ್ಕನೆಯ ಅಧ್ಯಾಯದಲ್ಲಿ. ಸಂಗೀತರತ್ನಾಕರ ಎಂಬ ಒಂದು ಗ್ರಂಥ ಪ್ರಕಟವಾಗಿದೆ. ಅದು ಶಾರ್ಙ್ಗದೇವನ ಅದೇ ಹೆಸರಿನ ಸಂಸ್ಕೃತ ಗ್ರಂಥವನ್ನು ನೆನಪಿಗೆ ತಂದರೂ ಅದರ ಅನುವಾದವಲ್ಲ. ನಾಟ್ಯಶಾಸ್ತ್ರಕ್ಕೆ ಸಂಬಂಧಿಸಿದಂತೆ ಸಿಂಹಣ ಅಥವಾ ಸಿಂಹಭೂಪಾಲ (16ನೆಯ ಶತಮಾನ) ವಿರಚಿತ ಲಾಸ್ಯರಂಜನಂ ಎಂಬ ಗ್ರಂಥವೊಂದಿದೆ. ಇದಕ್ಕೆ ಆಕರ ಭರತನ ನಾಟ್ಯಶಾಸ್ತ್ರವಾದರೂ ಅದೊಂದನ್ನೇ ಅವಲಂಬಿಸಿ ರಚಿತವಾಗಿದೆಯೆಂದು ಹೇಳುವುದು ಕಷ್ಟ. ಲಾಸ್ಯಮುಕುರ, ತತ್ತ್ವಾಭಿನಯ ನಿಘಂಟು ಎಂಬ ನಾಟ್ಯಸಂಬಂಧಿ ಗ್ರಂಥಗಳೂ ಇರುವಂತೆ ತಿಳಿದುಬರುತ್ತದೆ.

**ವ್ಯಾಕರಣ ಗ್ರಂಥಗಳು :** ಕವಿರಾಜಮಾರ್ಗದಲ್ಲಿ ಕನ್ನಡ ಭಾಷೆ, ಅದರ ಉಪಭಾಷೆಗಳು ಮತ್ತು ವ್ಯಾಕರಣಗಳಿಗೆ ಸಂಬಂಧಿಸಿದಂತೆ ಅನೇಕ ಸ್ವಾರಸ್ಯವಾದ ಸಂಗತಿಗಳಿದ್ದರೂ ಅದು ಮುಖ್ಯವಾಗಿ ಅಲಂಕಾರಶಾಸ್ತ್ರದ ಗ್ರಂಥವೇ ಆಗಿದೆ. ರನ್ನ (993) ಮತ್ತು ನಯಸೇನರು (1112) ವ್ಯಾಕರಣಗಳನ್ನು ಬರೆದಿರುವರೆಂಬ ಊಹೆಯಿದ್ದರೂ ಅವರ ಕೃತಿಗಳು ನಮಗೆ ದೊರಕಿಲ್ಲ. ಎರಡನೆಯ ನಾಗವರ್ಮ (ಸು. 1145) ನಮಗೆ ತಿಳಿದಮಟ್ಟಿಗೆ ಮೊಟ್ಟಮೊದಲ ವ್ಯಾಕರಣಕಾರ. ಅವನ ಕಾವ್ಯಾವಲೋಕನ ಪ್ರಧಾನವಾಗಿ ಅಲಂಕಾರಶಾಸ್ತ್ರ ಗ್ರಂಥವಾಗಿದ್ದರೂ ಮೊದಲನೆಯ ಅಧ್ಯಾಯವಾದ ಶಬ್ದಸ್ಮೃತಿಯನ್ನು ವ್ಯಾಕರಣಕ್ಕೆ ಆತ ಮೀಸಲಾಗಿಟ್ಟಿದ್ದಾನೆ. ಇದನ್ನೇ ಮುಂದೆ ಕೇಶಿರಾಜ ವಿಸ್ತರಿಸಿದ ಎಂದು ಹೇಳಲೂ ಸಾಧ್ಯ. ಅವನ ಭಾಷಾಭೂಷಣ ಸಂಸ್ಕೃತ ಭಾಷೆಯಲ್ಲಿರುವ ಕನ್ನಡ ವ್ಯಾಕರಣ. ಸೂತ್ರ, ವೃತ್ತಿಗಳು ಸಂಸ್ಕೃತದಲ್ಲಿವೆ ; ಆದರೆ ಲಕ್ಷ್ಯಗಳಾಗಿ ಪೂರ್ವಕವಿಗಳ ಕನ್ನಡ ಗ್ರಂಥಗಳಿಂದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಸು. 1260ರಲ್ಲಿದ್ದ ಕೇಶಿರಾಜನ ಶಬ್ದಮಣಿದರ್ಪಣ ಹಳಗನ್ನಡದ ಶ್ರೇಷ್ಠ ವ್ಯಾಕರಣ. ಕೇಶಿರಾಜ ಸ್ವತಃ ಕವಿಯಾಗಿದ್ದು, ಅನೇಕ ಕಾವ್ಯಗಳನ್ನು ರಚಿಸಿದಂತೆ ತಿಳಿದಿದ್ದರೂ ಅವು ಯಾವುವೂ ಉಪಲಬ್ಧವಾಗಿಲ್ಲ. ಸೂತ್ರಗಳು ಶಬ್ದಸ್ಮೃತಿಯಲ್ಲಿನಂತೆ ಕಂದಪದ್ಯರೂಪವಾಗಿವೆ. ಅವುಗಳಿಗೆ ಅವನೇ ಗದ್ಯದಲ್ಲಿ ವೃತ್ತಿಯನ್ನು ಕೊಟ್ಟು, ಬೇರೆ ಕಾವ್ಯಗಳಿಂದ ಉದಾಹರಣೆಗಳನ್ನು ಕೊಟ್ಟಿದ್ದಾನೆ. ಶಬ್ದಮಣಿದರ್ಪಣಕ್ಕೆ ನಿಟ್ಟೂರು ನಂಜಯ್ಯ (ಸು. 1725), ಅವನಿಗಿಂತ ಹಿಂದಿದ್ದ ಲಿಂಗಣಾರಾಧ್ಯ ಎಂಬುವರು ಟೀಕೆಗಳನ್ನು ಬರೆದಿದ್ದಾರೆ. 1604ರಲ್ಲಿದ್ದ ಭಟ್ಟಾಕಳಂಕನ ಕರ್ಣಾಟಕ ಶಬ್ದಾನುಶಾಸನ ಭಾಷಾಭೂಷಣದಂತೆಯೇ ಕನ್ನಡ ವ್ಯಾಕರಣವನ್ನು ಹೇಳುವ ಪ್ರೌಢ ಸಂಸ್ಕೃತ ಗ್ರಂಥ. ಇವನು ಮಹಾವಿದ್ವಾಂಸನಾಗಿದ್ದು, ಪಾಣಿನಿಯ ಮಾರ್ಗದಲ್ಲಿ ನಡೆದಿದ್ದಾನೆ. ತನ್ನ ಕೃತಿಗೆ ಭಾಷಾಮಂಜರಿ ಎಂಬ ವೃತ್ತಿಯನ್ನೂ ಮಂಜರೀ ಮಕರಂದ ಎಂಬ ವ್ಯಾಖ್ಯಾನವನ್ನೂ ಸಂಸ್ಕೃತದಲ್ಲಿ ತಾನೇ ಬರೆದಿದ್ದಾನೆ. ಕನ್ನಡ ಅನೇಕ ಶಾಸ್ತ್ರಗ್ರಂಥಗಳಿಗೆ ಜನ್ಮವಿತ್ತಿರುವುದರಿಂದ ಮಹಾಜನಪರಿಗ್ರಾಹ್ಯವಾದುದೆಂದು ಘೋಷಿಸಿದ್ದಾನೆ. ಹತ್ತೊಂಬತ್ತನೆಯ ಶತಮಾನದಲ್ಲಿ ಅನೇಕ ಪಾದ್ರಿಗಳು, ಐರೋಪ್ಯ ಮತ್ತು ದೇಶೀಯ ವಿದ್ವಾಂಸರು ವ್ಯಾಕರಣಗಳನ್ನು ಬರೆದರು. ರೆ. ಕೇರಿಯವರ ಎ ಗ್ರಾಮರ್ ಆಫ್ ದಿ ಕರ್ಣಾಟಕ ಲ್ಯಾಂಗ್ವೇಜ್ 1817ರಲ್ಲಿಯೂ ಜಿ. ಎಂ. ಮೆಕೆರಲ್ ಅವರ ಗ್ರಾಮರ್ ಆಫ್ ದಿ ಕರ್ಣಾಟಕ ಲ್ಯಾಂಗ್ವೇಜ್ 1820ರಲ್ಲಿಯೂ ಅಚ್ಚಾಗಿವೆ. ಶ್ರೀರಂಗಪಟ್ಟಣದ ಕೃಷ್ಣಮಾಚಾರ್ಯರ ಹೊಸಗನ್ನಡ ನುಡಿಗನ್ನಡಿ 1838ರಲ್ಲಿ ಪ್ರಕಟವಾಯಿತು. ಇದಲ್ಲದೆ ಅವರು ಹಳಗನ್ನಡ ನುಡಿಗನ್ನಡಿ ಎಂಬ ಗ್ರಂಥವನ್ನೂ ಬರೆದಂತೆ ತೋರುತ್ತದೆ. ಥಾಮಸ್ ಹಾಡ್ಸನ್ (1859) ಅವರ ವ್ಯಾಕರಣ, ಸಿ. ಕ್ಯಾಂಬೆಲ್ ಅವರ ಕನ್ನಡ ವ್ಯಾಕರಣ ಸಾರ, ಧೊಂಡೋ ಮುಳಬಾಗಿಲು ಅವರ ನುಡಿಗಟ್ಟು (1892), ವೆಂಕಟರಂಗೋ ಕಟ್ಟಿಯವರ (1880) ಕನ್ನಡ ಲಘು ವ್ಯಾಕರಣ, ಆರ್. ರಘುನಾಥರಾಯರ ಕರ್ನಾಟಕ ಭಾಷಾವ್ಯಾಕರಣೋಪನ್ಯಾಸಮಂಜರಿ (1894), ಬಿ. ಮಲ್ಲಪ್ಪನವರ ಶಬ್ದಾದರ್ಶ (1901)—ಇವು ಹೆಸರಿಸಬಹುದಾದ ಕೆಲವು ವ್ಯಾಕರಣಗಳು.

**ನಿಘಂಟುಗಳು :** ರನ್ನನ ರನ್ನಕಂದ ಎಂಬುದು ಕನ್ನಡದಲ್ಲಿ ಈಗ ದೊರಕುವ ನಿಘಂಟುಗಳಲ್ಲಿ ಮೊದಲನೆಯದು. ಹಳಗನ್ನಡದ ಶಬ್ದಗಳಿಗೆ ಅರ್ಥ ಹೇಳುವ ಈ ಕೃತಿಯ ಕೆಲವು ಕಂದಪದ್ಯಗಳು ಮಾತ್ರ ಸಿಕ್ಕಿವೆ. ಕನ್ನಡ ಶಬ್ದಗಳಿಗೆ ಅರ್ಥ ಕೊಡುವ ಇತರ ನಿಘಂಟುಗಳು ಹೀಗಿವೆ: ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಕನ್ನಡ ಧಾತುಪಾಠ, ಪ್ರಯೋಗಸಾರ ಮತ್ತು ಱಳಕುಳ ಶಬ್ದಗಳು—ಎಂಬ ಭಾಗಗಳಲ್ಲಿ ಅನೇಕ ಅಪೂರ್ವ ಶಬ್ದಗಳಿಗೆ ಅರ್ಥ ಹೇಳಿದೆ. ಹಾಗೆಯೆ ಸು. 1400ರಲ್ಲಿ ರಚಿತವಾದ ಗದ್ಯರೂಪದ ಕರ್ನಾಟಕ ಶಬ್ದಸಾರದಲ್ಲಿ, ಸುಮಾರು ಅದೇ ಕಾಲದ ಕರ್ಣಾಟಕ ನಿಘಂಟುವಿನ ಕಂದ, ವೃತ್ತಗಳಲ್ಲಿ ಅನೇಕ ಕನ್ನಡ ಪದಗಳಿಗೆ ಅರ್ಥ ಹೇಳಿದೆ. ಲಿಂಗಮಂತ್ರಿಯ (1530) ಕಬ್ಬಿಗರ ಕೈಪಿಡಿ, ಶೃಂಗಾರ ಕವಿಯ (ಸು. 1600) ಕರ್ಣಾಟಕ ಸಂಜೀವನ (ಇವೆರಡೂ ವಾರ್ಧಕ ಷಟ್ಪದಿಯಲ್ಲಿವೆ), ಸೂರ್ಯಕವಿಯ (1640) ಕವಿಕಂಠಹಾರ (ಇದು ಕಂದಪದ್ಯರೂಪವಾಗಿದೆ)–ಇವುಗಳಲ್ಲಿಯೂ ಕನ್ನಡ ಪದಗಳಿಗೆ ಅರ್ಥ ವಿವರಣೆ ಬಂದಿದೆ. ಸಂಸ್ಕೃತ ಪದಗಳಿಗೆ ಕನ್ನಡದಲ್ಲಿ ಅರ್ಥ ಹೇಳಿರುವ ಕೋಶಗಳು ಇಂತಿವೆ : ಎರಡನೆಯ ನಾಗವರ್ಮನ ಅಭಿಧಾನ ವಸ್ತುಕೋಶ, ಎರಡನೆಯ ಮಂಗರಾಜನ (1398) ಅಭಿನವಾಭಿಧಾನಂ, ಕರ್ತೃ ಗೊತ್ತಿಲ್ಲದ ಶಬ್ದರತ್ನಾಕರ (ಸು. 1600), ಚೆನ್ನಕವಿಯ (ಸು. 1600) ನಾನಾರ್ಥಕಂದ, ದೇವೋತ್ತಮನ (ಸು. 1600) ನಾನಾರ್ಥರತ್ನಾಕರ, ಏಕಾಕ್ಷರ ನಿಘಂಟು ಇತ್ಯಾದಿಗಳಲ್ಲಿ ಸಂಸ್ಕೃತ ಪದಗಳಿಗೆ ಅರ್ಥ ಹೇಳಿದೆ. ಅಮೃತನಂದಿಯ (ಸು. 1300) ಅಕಾರಾದಿ ವೈದ್ಯ ನಿಘಂಟು, ಕರ್ತೃ ಗೊತ್ತಿಲ್ಲದ ಧನ್ವಂತರೀಯ ನಿಘಂಟು (ಸು. 1500), ಇಂದ್ರದೀಪಿಕಾ ನಿಘಂಟು, ಮದನಾರಿ ವೈದ್ಯ ನಿಘಂಟುಗಳಲ್ಲಿ ವೈದ್ಯಕ್ಕೆ ಸಂಬಂಧಿಸಿದ ಸಂಸ್ಕೃತ ಶಬ್ದಗಳಿಗೆ ಅರ್ಥ ದೊರೆಯುತ್ತದೆ. ಸಂಸ್ಕೃತ ನಿಘಂಟುಗಳಿಗೆ ಕನ್ನಡ ವ್ಯಾಖ್ಯಾನಗಳು ದೊರೆಯುತ್ತವೆಯೆಂಬುದು ಗಮನಾರ್ಹವಾದ ಅಂಶ. ಭಟ್ಟ ಹಲಾಯುಧನ ಸಂಸ್ಕೃತ ಅಭಿಧಾನರತ್ನಮಾಲಾ ಗ್ರಂಥಕ್ಕೆ ಕರ್ಣಾಟಕ ಟೀಕೆಯೊಂದಿದೆ. ಸಂಸ್ಕೃತದ ಸುಪ್ರಸಿದ್ಧ ಅಮರಕೋಶಕ್ಕೆ ನಾಚಿರಾಜ (ಸು. 1300) ನಾಚಿರಾಜೀಯವೆಂಬ ವ್ಯಾಖ್ಯಾನವನ್ನು ಬರೆದಿದ್ದಾನೆ. ಅಮರಕೋಶಕ್ಕೆ ಇನ್ನೂ ಹಲವಾರು ಟೀಕೆಗಳಿವೆ. ಸಂಸ್ಕೃತದ ಧನಂಜಯ ನಿಘಂಟಿಗೂ ವ್ಯಾಖ್ಯಾನವೊಂದು ದೊರಕುತ್ತದೆ. ಚೆನ್ನವೀರ ಕವಿಯ (ಸು. 1500) ಕಾಶಕೃತ್ಸ್ನ ಧಾತುವ್ಯಾಖ್ಯಾನದಲ್ಲಿ ಸಂಸ್ಕೃತ ಧಾತುಗಳಿಗೆ ಕನ್ನಡದ ಅರ್ಥ ಹೇಳಿದೆ. ಚತುರಾಸ್ಯ ಬೊಮ್ಮರಸನ (1450) ಚತುರಾಸ್ಯ ನಿಘಂಟು, ವಿರಕ್ತ ತೋಂಟದಾರ್ಯನ (ಸು. 1560) ಕರ್ಣಾಟಕ ಶಬ್ದಮಂಜರಿಗಳಲ್ಲಿ ದೇಶ್ಯ, ತತ್ಸಮ, ತದ್ಭವ ಶಬ್ದಗಳಿಗೆ ಅರ್ಥ ಹೇಳಿದೆ. ಕರ್ಣಾಟಕ ಶಬ್ದಮಂಜರಿ ಬಹಳವಾಗಿ ಬಳಕೆಯಲ್ಲಿದ್ದ ಕೃತಿಯಾಗಿದ್ದು ಅದಕ್ಕೆ ನಾಲ್ಕು ಬೇರೆ ಬೇರೆ ಟೀಕೆಗಳು ದೊರೆಯುತ್ತವೆ. ಪದ್ಯನಾನಾರ್ಥ, ನಾನಾರ್ಥಕಂದ, ನಾನಾರ್ಥರತ್ನಾಕರಗಳಲ್ಲಿ ಸಂಸ್ಕೃತ, ಕನ್ನಡ ಪದಗಳಿಗೆ ನಾನಾರ್ಥಗಳು ದೊರೆಯುತ್ತವೆ. ಮುಮ್ಮಡಿ ಕೃಷ್ಣರಾಜ ಒಡೆಯರ (1848)

ಚಾಮುಂಡಿಕಾ ಲಘುನಿಘಂಟಿನಲ್ಲಿ ದೇವತೆಗಳು ಮೊದಲಾದವರು ಹಿಡಿಯುವ ಆಯುಧಗಳು, ಹಸ್ತವಿಶೇಷಗಳು ಇತ್ಯಾದಿಗಳನ್ನು ಹೇಳುವ ಸಂಸ್ಕೃತ ಪದಗಳಿಗೆ ಅರ್ಥವನ್ನು ಕೊಟ್ಟಿದೆ. ಕುಮಾರವ್ಯಾಸನೇ ಬರೆದಿರುವನೆಂಬ ಪ್ರತೀತಿ ಇರುವ ಭಾರತ ನಿಘಂಟಿನಲ್ಲಿ ಕುಮಾರವ್ಯಾಸಭಾರತದ ಕೆಲವು ದೇಶ್ಯ ಪದಗಳಿಗೆ ಅರ್ಥ ಹೇಳುವ 67 ಕಂದ ಪದ್ಯಗಳಿವೆ. ಹತ್ತೊಂಬತ್ತನೆಯ ಶತಮಾನದಿಂದ ಈಚೆಗೆ ಅನೇಕ ಪಾದ್ರಿಗಳು, ದೇಶೀಯ ವಿದ್ವಾಂಸರು ನಿಘಂಟುಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಮುಖ್ಯವಾದುವು ಇವು : ರೆ. ರೀವ್ ಅವರ ಕನ್ನಡ–ಇಂಗ್ಲಿಷ್ ನಿಘಂಟು (1832). ಡೇನಿಯಲ್ ಸ್ಯಾಂಡರ್‌ಸನ್ ಅವರ ನಿಘಂಟು (1858) ರೀವ್ ಅವರ ಕೋಶದ ಪರಿಷ್ಕಾರವಾಗಿದೆ. ರೆ. ಎಫ್. ಕಿಟ್ಟೆಲ್ ಅವರ ಕನ್ನಡ–ಇಂಗ್ಲಿಷ್ ನಿಘಂಟು (1893) ಅಂಥ ಕೃತಿಗಳಲ್ಲಿ ಸದ್ಯಕ್ಕೆ ಅತ್ಯಂತ ಶ್ರೇಷ್ಠವಾದುದು. ಕನ್ನಡದ ಪ್ರೌಢ ವಿದ್ಯಾರ್ಥಿಗಳಿಗೆ, ವಿದ್ವಾಂಸರಿಗೆ ಇದು ಮಾರ್ಗದರ್ಶಿಯಾಗಿ ಇಂದಿಗೂ ಉಳಿದಿದೆ. ಕನ್ನಡ ಪದಗಳಿಗೆ ಸಂವಾದಿಯಾದ ಇತರ ಮುಖ್ಯ ದ್ರಾವಿಡ ಭಾಷೆಯ ಪದಗಳನ್ನು ಕೊಟ್ಟಿರುವುದಲ್ಲದೆ, ಸಂಸ್ಕೃತ ಮತ್ತು ತದ್ಭವಗಳಿಗೂ ಅರ್ಥವನ್ನು ಕೊಟ್ಟಿದೆ. ಇಲ್ಲಿ ಸಾಧ್ಯವಾದಷ್ಟು ಕಡೆ ಪ್ರಯೋಗಗಳನ್ನು ಸೂಚಿಸಿದೆ. ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧದಲ್ಲಿ ದೇಶೀಯ ವಿದ್ವಾಂಸರು ಬರೆದ ಕೋಶಗಳು ಹೀಗಿವೆ : ಗುರುರಾವ ವಿಠಲ ಮೋಹರೆ ಅವರ ಶಬ್ದಸಂಗ್ರಹ (1874), ರಾಮಸ್ವಾಮಿ ಶಾಸ್ತ್ರಿ ಮತ್ತು ಹೆಸರುಘಟ್ಟದ ಹೊನ್ನಪ್ಪನವರ ಕರ್ಣಾಟಕ ಕಲ್ಪದ್ರುಮ (1885), ಗಂಗಾಧರ ಮಡಿವಾಳೇಶ್ವರ ತುರುಮುರಿ ಅವರ ಶಬ್ದಮಂಜರಿ (1890), ನರಸಿಂಗರಾಯರ ಕಿಸಂವಾರ್ ಗ್ಲಾಸರಿ (1891), ಜಯರಾಯಾಚಾರ್ಯರ ಕರ್ಣಾಟಕ ಭಾಷಾಕರ (1891).

**ವೈದ್ಯಶಾಸ್ತ್ರ :** ಕನ್ನಡ ವೈದ್ಯ ಗ್ರಂಥಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದುದೆಂದರೆ ಚಾಳುಕ್ಯ ರಾಜಕುಮಾರ ಕೀರ್ತಿವರ್ಮನ (ಸು. 1100) ಗೋವೈದ್ಯ. ಇದರಲ್ಲಿ ಗೋಗಳ ವ್ಯಾಧಿಗಳಿಗೆ ಔಷಧ, ಯಂತ್ರ ಕಟ್ಟುವುದು, ಬರೆ ಹಾಕುವುದು ಇತ್ಯಾದಿ ವಿಷಯಗಳನ್ನು ಹೇಳಿದೆ. ಜಗದ್ದಳ ಸೋಮನಾಥನ (ಸು. 1175) ಕರ್ಣಾಟಕ ಕಲ್ಯಾಣಕಾರಕ ಪೂಜ್ಯಪಾದನ ಸಂಸ್ಕೃತ ಕಲ್ಯಾಣಕಾರಕದ ಭಾಷಾಂತರ. ಪೂಜ್ಯಪಾದನ ಕೃತಿಯಲ್ಲಿ ಚಿಕಿತ್ಸೆಗಾಗಿ ಮದ್ಯ, ಮಾಂಸ, ಮಧುಗಳನ್ನು ನಿಷೇಧಿಸಿದೆಯಾದ್ದರಿಂದ ಅದು ಬಾಹಟ, ಸಿದ್ಧಸಾರ, ಚರಕರ ವೈದ್ಯಗ್ರಂಥಗಳಿಗಿಂತ ಶ್ರೇಷ್ಠವೆಂದು ಸೋಮನಾಥ ಸಾರಿದ್ದಾನೆ. ಹದಿನಾರು ರೀತಿಯ ಜ್ವರಗಳಿಗೆ ನಿದಾನ ಚಿಕಿತ್ಸೆಗಳು ಇಲ್ಲಿ ಸೂಚಿತವಾಗಿವೆ. ಬಹಳ ಹಳೆಯ ಹುಣಿಸೆಯ ಹಣ್ಣಿನಿಂದ ಮಾಡಿದ ಲೇಹ್ಯವನ್ನು ತಿನ್ನಿಸಿದರೆ ಸನ್ನಿಪಾತ ಜ್ವರದಿಂದ ಬಿದ್ದು ಹೋದ ನಾಲಗೆ ಸರಿಹೋಗುತ್ತದೆಂದು ಇಲ್ಲಿ ಹೇಳಿದೆ. ಇಂಥ ಅನೇಕಾನೇಕ ಚಿಕಿತ್ಸೆಗಳನ್ನು ಇಲ್ಲಿ ಕಾಣಬಹುದು. ಸು. 1200 ರಲ್ಲಿದ್ದ ದೇವೇಂದ್ರಮುನಿ ಬಾಲಗ್ರಹ ಚಿಕಿತ್ಸೆಯನ್ನು ಬರೆದಿದ್ದಾನೆ. ಸು. 1360ರಲ್ಲಿದ್ದ ಒಂದನೆಯ ಮಂಗರಾಜನ ಖಗೇಂದ್ರಮಣಿದರ್ಪಣ ಸುಪ್ರಸಿದ್ಧ ವಿಷವೈದ್ಯ ಗ್ರಂಥ. ಮರ, ಗಾಳಿ, ಸೂಳೆ, ಬೇಟೆ ಮುಂತಾದುವನ್ನು ಹೊಗಳಿ ಕಾವ್ಯವನ್ನು ಬರೆಯುವುದಕ್ಕಿಂತ ಸರ್ವಜನೋಪಕಾರವಾದ ವೈದ್ಯಶಾಸ್ತ್ರವನ್ನು ಹೇಳುವುದರಿಂದ ಜನತೆಗೆ ಹೆಚ್ಚು ಉಪಕಾರವಾಗುತ್ತದೆ—ಎಂದಿದ್ದಾನೆ ಮಂಗರಾಜ. ನರರಿಗೆ ಔಷಧದಿಂದ ಆರೋಗ್ಯ, ಆರೋಗ್ಯದಿಂದ ದೇಹ, ದೇಹದಿಂದ ಜ್ಞಾನ, ಪರಮಜ್ಞಾನದಿಂದ ಮೋಕ್ಷ ಎಂದು ಹೇಳಿ, ವೈದ್ಯಶಾಸ್ತ್ರದ ಪರಮಪ್ರಯೋಜನ ಮೋಕ್ಷವೇ ಎಂದು ಘೋಷಿಸಿದ್ದಾನೆ. ಅವನ ಗ್ರಂಥಕ್ಕೆ ಮೂಲ ಪೂಜ್ಯಪಾದನ ವೈದ್ಯಗ್ರಂಥದ ಸ್ಥಾವರ ವಿಷ ಪ್ರಕ್ರಿಯೆ. ವಿಷವೈದ್ಯದಲ್ಲಿ ಖಗೇಂದ್ರಮಣಿದರ್ಪಣಕ್ಕೆ ಸಾಟಿಯಾದ ಗ್ರಂಥ ಮತ್ತೊಂದಿಲ್ಲ. ಕನ್ನಡದ ಇತರ ವೈದ್ಯಗ್ರಂಥಗಳು ಹೀಗಿವೆ : ಶ್ರೀಧರದೇವನ (ಸು. 1500) ವೈದ್ಯಾಮೃತ (ಇವನು ಜಗದೇಕಮಹಾಮಂತ್ರವಾದಿಯಾಗಿದ್ದನಂತೆ), ಸಾಳ್ವನ (ಸು. 1550) ವೈದ್ಯಸಾಂಗತ್ಯ, ಚೆನ್ನರಾಜನ (ಸು. 1570) ವೈದ್ಯಸಾರಸಂಗ್ರಹ, ನಂಜನಾಥ ಭೂಪಾಲನ (ಸು. 1700) ವೈದ್ಯಸಾರಸಂಗ್ರಹ. ವೀರರಾಜ ತನ್ನ (ಸು. 1700) ವೈದ್ಯಸಂಹಿತಾಸಾರಾರ್ಣವದಲ್ಲಿ ವೈದ್ಯಶಾಸ್ತ್ರ ಸುಖವನ್ನು ಕೊಡುವುದಾದರೂ ಅದರ ಬೋಧನೆ ಮಾತ್ರ ತಗ್ಗುತ್ತ ಬಂದಿದೆಯೆಂದು ಹೇಳಿ ತಾನು ಕೃತಿರಚನೆ ಮಾಡಿದ್ದಕ್ಕೆ ಕಾರಣವನ್ನು ತಿಳಿಸಿದ್ದಾನೆ. ಧನ್ವಂತರಿ ಮೊದಲಾದವರ ಗ್ರಂಥಗಳನ್ನು ಕ್ರೋಡೀಕರಿಸಿ, ಪರಿಷ್ಕರಿಸಿ, ಅವುಗಳ ಸಾರಾಂಶವನ್ನು ಕೊಟ್ಟಿರುವುದಾಗಿ ತಿಳಿಸಿದ್ದಾನೆ. ಬ್ರಹ್ಮನ (ಸು. 1750) ವೈದ್ಯಕಂದ, ತಿಮ್ಮರಾಜ ಗೌಡನ (ಸು. 1750) ಸ್ತ್ರೀವೈದ್ಯ ಇತರ ಉಲ್ಲೇಖನೀಯ ವೈದ್ಯಗ್ರಂಥಗಳು.

**ಅಶ್ವಶಾಸ್ತ್ರ ಮತ್ತು ಗಜಶಾಸ್ತ್ರ :** ಅಶ್ವಶಾಸ್ತ್ರವನ್ನು ಬರೆದ ಮೊದಲ ಕನ್ನಡ ಕೃತಿಕಾರನೆಂದರೆ ಸು. 1400ರಲ್ಲಿದ್ದ ಅಭಿನವಚಂದ್ರ. ಸಿಂಹದತ್ತ, ದಿನಕರತನಯ, ರೇವಂತ ಮುಂತಾದ ಪೂರ್ವಾಚಾರ್ಯರ ಮತಗಳನ್ನು ಹೊಸಗನ್ನಡದಲ್ಲಿ ಹೇಳಿರುವುದಾಗಿ ಹೇಳಿಕೊಂಡಿದ್ದಾನೆ. ಬಹುತೇಕ ಕಂದಪದ್ಯಗಳಿರುವ ಈ ಕೃತಿಯಲ್ಲಿ ಕುದುರೆಗಳ ಸರ್ವಾಂಗಪರೀಕ್ಷೆ, ವರ್ಣ, ಸುಳಿ, ಹಲ್ಲಿನಿಂದ ವಯಸ್ಸನ್ನು ನಿರ್ಣಯಿಸುವುದು, ಚಿಕಿತ್ಸೆ ಇತ್ಯಾದಿ ವಿಷಯಗಳಿವೆ. ತನ್ನ ನಿಜಕವಿತೆಯ ಬಿನ್ನಣವನ್ನು ತಿಳಿಸಲೆಂದು ಇದನ್ನು ಪದ್ಯರೂಪವಾಗಿ ಬರೆದಿರುವುದಾಗಿ ಕವಿ ಹೇಳಿಕೊಂಡಿದ್ದಾನೆ. ಸು. 1500 ರಲ್ಲಿದ್ದ ಬಾಚರಸ ಎಂಬಾತ ಅಶ್ವವೈದ್ಯವನ್ನು ಬರೆದಿದ್ದಾನೆ. ಸು. 1625 ರಲ್ಲಿದ್ದ ರಾಮಚಂದ್ರ ಎಂಬಾತ ಶಾಲಿಹೋತ್ರನ ಅಶ್ವಶಾಸ್ತ್ರವನ್ನು ಗದ್ಯರೂಪದಲ್ಲಿ ಕನ್ನಡಕ್ಕೆ ಭಾಷಾಂತರ ಮಾಡಿದ್ದಾನೆ. 1627ರಲ್ಲಿದ್ದ ಪದ್ಮಣಪಂಡಿತ ಹಯಸಾರ ಸಮುಚ್ಚಯವೆಂಬ ಗ್ರಂಥವನ್ನು 1617—37ರಲ್ಲಿ ಆಳಿದ ಚಾಮರಾಜ ದೊರೆಗಳ ಆಜ್ಞಾನುಸಾರವಾಗಿ ಬರೆದ. ಗಜಶಾಸ್ತ್ರಕ್ಕೆ ಸಂಬಂಧಿಸಿದ ಗ್ರಂಥಗಳಲ್ಲಿ ಗಂಗರ ದೊರೆ ಸೈಗೊಟ್ಟ ಶಿವಮಾರನ (ಸು. 800) ಗಜಾಷ್ಟಕ ಪ್ರಾಚೀನವಾದುದು. ನಗರದ 35ನೆಯ ಶಾಸನದಲ್ಲಿ ಶಿವಮಾರ, ಶಿವಮಾರಮತವೆಂಬ ಗಜಶಾಸ್ತ್ರವನ್ನು ಮಾಡಿದನೆಂದೂ ಆ ಗಜಾಷ್ಟಕ ಲೋಕದಲ್ಲಿ ಓವನಿಗೆಯೂ ಒನಕೆವಾಡೂ ಆಗುವಷ್ಟು ಜನಪ್ರಿಯವಾಯಿತೆಂದೂ ಹೇಳಿದೆ. ಆದರೆ ಗಜಾಷ್ಟಕ ಉಪಲಬ್ಧವಾಗಿಲ್ಲ. ಸು. 1600ರಲ್ಲಿದ್ದ ವೀರಭದ್ರರಾಜನೆಂಬಾತ ಪಾಲಕಾಪ್ಯನ ಹಸ್ತ್ಯಾಯುರ್ವೇದಕ್ಕೆ ಕನ್ನಡ ಟೀಕೆಯನ್ನು ಬರೆದಿದ್ದಾನೆ.

**ಜ್ಯೋತಿಷ್ಯ ಮತ್ತು ಗಣಿತಶಾಸ್ತ್ರ :** ಶ್ರೀಧರಾಚಾರ್ಯನ (1049) ಜಾತಕ ತಿಲಕ ಕನ್ನಡದ ಮೊತ್ತಮೊದಲ ಜ್ಯೋತಿಷ್ಯಗ್ರಂಥ. ಕವಿಯೂ ಆಗಿದ್ದ ಈತ ತನ್ನ ಚಂದ್ರಪ್ರಭಚರಿತೆಯಲ್ಲಿ ಕಾವ್ಯಧರ್ಮವನ್ನೂ ಜಾತಕತಿಲಕದಲ್ಲಿ ಗಣಿತಧರ್ಮವನ್ನೂ ತಿಳಿಯಬಹುದೆಂದು ಹೇಳುತ್ತಾನೆ. (ಅವನ ಕಾವ್ಯ ಉಪಲಬ್ಧವಾಗಿಲ್ಲ). ಜ್ಯೋತಿಶ್ಶಾಸ್ತ್ರದ ಮೂರು ಸ್ಕಂಧಗಳು—ಗಣಿತ, ಹೋರಾ ಮತ್ತು ಸಂಹಿತೆ. ಸೂರ್ಯ ಚಂದ್ರರು ಎಲ್ಲಿದ್ದಾರೆ, ಅವರ ಗ್ರಹಣಗಳು, ವರ್ಷಮಾಸಾದಿಗಳನ್ನು ಲೆಕ್ಕಮಾಡಿ ಹೇಳುವುದು ಗಣಿತ ; ವಿಧ್ಯುಕ್ತ ಕರ್ಮಗಳನ್ನು ಮಾಡಲು ಮುಹೂರ್ತ, ವ್ಯಕ್ತಿಯ ಜೀವನದ ಮುಂದಿನ ಘಟನೆಗಳನ್ನು ಹೇಳತಕ್ಕ ಫಲಭಾಗಗಳನ್ನು ಹೇಳುವುದು ಹೋರಾ ; ಗ್ರಹಗಳ ಸನ್ನಿವೇಶ ಮತ್ತು ಉತ್ಪಾತಗಳಿಂದ ದೇಶಕ್ಕೆ ಒಟ್ಟಾಗಿ ಸಂಭವಿಸುವ ಫಲಾಫಲಗಳನ್ನು ಹೇಳುವುದು ಸಂಹಿತೆ. ಇವು ಮೂರೂ ಇಲ್ಲಿ ವರ್ಣಿತವಾಗಿವೆ. ವರಾಹ ಮಿಹಿರನ ಬೃಹಜ್ಜಾತಕ ಮತ್ತು ಲಘುಜಾತಕಗಳು, ಕಲ್ಯಾಣ ವರ್ಮನ ಸಾರಾವಳಿ ಇತ್ಯಾದಿಗಳಿಂದ ವಿಷಯ ಸಂಗ್ರಹ ಮಾಡಿದ್ದಾನೆ. ಗಂಗಾಧರನ (ಸು. 1550) ರಟ್ಟನ ಜಾತಕದಲ್ಲಿ ಪ್ರಶ್ನಭಾಗ, ಗ್ರಹಗಳಿಗೆ ಷಡ್ಬಲ, ಆಯುರ್ದಾಯ ಇತ್ಯಾದಿ ವಿಷಯಗಳಿವೆ. ಅನೇಕ ಶಕುನಗ್ರಂಥಗಳು ಕನ್ನಡದಲ್ಲಿ ಹುಟ್ಟಿವೆ. ಸು. 1500ರಲ್ಲಿದ್ದ ಶುಭಚಂದ್ರನ ನರಪಿಂಗಳಿ, ಲಕ್ಷ್ಮಣಾಂಕನ ಶಕುನಸಾರ, ಚಾಕರಾಜನ ಶಕುನಪ್ರಪಂಚ, ಸು. 1650 ರಲ್ಲಿದ್ದ ಮಾಧವದೇವನ ನರಪಿಂಗಲಿ, ದೇವನ (1725) ಶಕುನಪ್ರಪಂಚ—ಇವು ಶಕುನಗ್ರಂಥಗಳು. ಕೊನೆಯ ಶಕುನಪ್ರಪಂಚ ಸಿಕ್ಕಿಲ್ಲ. ಗಣಿತಶಾಸ್ತ್ರಕ್ಕೆ ಸಂಬಂಧಿಸಿದಂತೆ ರಾಜಾದಿತ್ಯ ಎಂಬಾತ (ಸು. 1190) ಒಟ್ಟು ಆರು ಗ್ರಂಥಗಳನ್ನು ಬರೆದಿದ್ದಾನೆ—ವ್ಯವಹಾರಗಣಿತ, ಕ್ಷೇತ್ರಗಣಿತ, ವ್ಯವಹಾರರತ್ನ, ಲೀಲಾವತಿ, ಚಿತ್ರಹಸುಗೆ, ಮತ್ತು ಜೈನಗಣಿತಸೂತ್ರ ಟೀಕೋದಾಹರಣ. ಇವನಿಗೆ ಗಣಿತವಿರಿಂಚಿ, ಓಜೆವೆಡಂಗ, ಪದ್ಯವಿದ್ಯಾಧರ ಮುಂತಾದ ಬಿರುದುಗಳಿದ್ದುವು. ವ್ಯವಹಾರಗಣಿತದಲ್ಲಿ ಈತ ಸೂತ್ರಗಳನ್ನು ಪದ್ಯದಲ್ಲಿ ಬರೆದು ಟೀಕೆಯನ್ನೂ ಉದಾಹರಣೆಗಳನ್ನೂ ಕೊಟ್ಟಿದ್ದಾನೆ. ಈ ಗ್ರಂಥವನ್ನು ಜನೋಪಕಾರಕ್ಕಾಗಿ, ಅವರ ವ್ಯವಹಾರಕ್ಕೆ ಆಧಾರವಾಗಲಿ ಎಂಬ ಆಸೆಯಿಂದ ಐದು ದಿನಗಳಲ್ಲಿ ಬರೆದನಂತೆ. ತನ್ನ ಗ್ರಂಥದಲ್ಲಿ ಸಹಜತ್ರಯರಾಶಿ, ವ್ಯಸ್ತತ್ರಯರಾಶಿ, ಸಹಜಪಂಚರಾಶಿ ಮುಂತಾದ ವಿಷಯಗಳನ್ನು ಪ್ರತಿಪಾದನೆ ಮಾಡಿದ್ದಾನೆ. ಆ ಕಾಲದ ಗಣಿತಶಾಸ್ತ್ರಕ್ಕೆ ಸಂಬಂಧಪಟ್ಟ ಎಲ್ಲ ವಿಷಯಗಳನ್ನೂ ತನ್ನ ಗ್ರಂಥಗಳಲ್ಲಿ ಈತ ತಿಳಿಸಿದ್ದಾನೆ. ಸು. 1650ರಲ್ಲಿದ್ದ ಭಾಸ್ಕರ ಬೇಹಾರಗಣಿತವನ್ನು ತನಗೆ ಪರಿಣತಿ ಲೆಕ್ಕದಲ್ಲಿ ಮಾತ್ರವಲ್ಲ,ಕವಿತಾಶಕ್ತಿಯಲ್ಲೂ ಇದೆಯೆಂದು ತೋರಿಸಲು ಬರೆದುದಾಗಿ ಹೇಳಿಕೊಂಡಿದ್ದಾನೆ. ಇವನಿಗೆ ಗಣಿತವಿಳಾಸ, ಶಾರದೆಗುವರ ಮುಂತಾದ ಬಿರುದುಗಳಿದ್ದುವಂತೆ. ಸು.1700ರಲ್ಲಿದ್ದ ತಿಮ್ಮರಸನ ಕ್ಷೇತ್ರ ಗಣಿತದಲ್ಲಿನ ಸ್ವಾರಸ್ಯವಾದ ಸಂಗತಿಯೆಂದರೆ ಹೊಲಗಳನ್ನು ಅಳೆಯಲು ಬೇರೆ ಬೇರೆ ದೇಶಗಳಲ್ಲಿ ಬೇರೆ ಬೇರೆ ಗಳೆಗಳು ಬಳಕೆಯಾಗುತ್ತವೆ 'ಎಂದು ಹೇಳಿರುವುದು. ಹೊಲದ ಅಳತೆಗಳಾದ ಕಂಬ ಮುಂತಾದುವುಗಳ ವಿವರಣೆ ಇಲ್ಲಿ ದೊರಕುತ್ತದೆ. ದೈವಜ್ಞವಲ್ಲಭ (ಸು. 1700) ಮಹಾವೀರಾಚಾರ್ಯನ ಗಣಿತಕ್ಕೆ ಕನ್ನಡ ವ್ಯಾಖ್ಯಾನವನ್ನು ಬರೆದಿದ್ದಾನೆ. ಇದೇ ವ್ಯಾಖ್ಯಾನವನ್ನು ತೆಲುಗಿನಲ್ಲಿಯೂ ಬರೆದಂತೆ ಕಾಣುತ್ತದೆ. ಬಾಲವೈದ್ಯದ ಚೆಲುವನ (ಸು. 1715) ಕನ್ನಡ ಲೀಲಾವತಿಯಲ್ಲಿ ಸಾಧಾರಣ ಗಣಿತ ಮತ್ತು ಕ್ಷೇತ್ರಗಣಿತಗಳೆರಡನ್ನೂ ನಿರೂಪಿಸಲಾಗಿದೆ.

**ಕಾಮಶಾಸ್ತ್ರ :** ಚಂದ್ರರಾಜನ (1040) ಮದನತಿಲಕ ಕನ್ನಡದ ಮೊತ್ತಮೊದಲ ಕಾಮಶಾಸ್ತ್ರ ಗ್ರಂಥ. ಕೃತಿಕಾರ ಅರುವತ್ತನಾಲ್ಕು ಕಲೆಗಳಲ್ಲೂ ನಿಪುಣನಾಗಿದ್ದ. ಅವನ ಪ್ರಕಾರ ಕಾಮ ನಿಂದನೀಯವಾದುದಲ್ಲ. ಅದರಿಂದಲೇ ಪ್ರಜಾಭಿವೃದ್ಧಿಯಾಗುವುದು. ಧರ್ಮ ಅರ್ಥಗಳೆರಡೂ ಕಾಮಕ್ಕೆ ಹೇತುವಾದ್ದರಿಂದ ಕಾಮವೇ ಮುಖ್ಯ

ಹಾಮದುದು. ಅವನು ವಾತ್ಸ್ಯಾಯನ, ವೈಶಿಕ, ಚಾರಾಯಣ, ಸ್ವರ್ಣನಾಭ ಮುಂತಾದ ಹಿಂದಿನ ಲೇಖಕರನ್ನು ಸ್ಮರಿಸಿ ಅವರಿಂದ ವಿಷಯಸಂಗ್ರಹಮಾಡಿ ಕೃತಿರಚನೆ ಮಾಡಿದ್ದಾನೆ. ಈ ಗ್ರಂಥದಲ್ಲಿ ಅನೇಕ ಅಪೂರ್ವ ವೃತ್ತಗಳನ್ನು ಬಳಸಿರುವುದು ಗಮನಾರ್ಹ ಸಂಗತಿ. ಜನ್ನನ (1203) ಅನುಭವಮುಕುರವು ಸುಂದರಿಯರು, ಅವರ ಸೌಂದರ್ಯ, ಪ್ರೇಮಗಳನ್ನು ಕುರಿತಾದ ಗ್ರಂಥ. ಕಲ್ಲರಸನ (ಸು. 1450) ಜನವಶ್ಯ ದಲ್ಲಿ ವಾತ್ಸ್ಯಾಯನ ಮುಂತಾದವರ ಮತಗಳನ್ನು ಸಂಗ್ರಹಿಸಲಾಗಿದೆ. ಕವಿ ಲಿಂಗ ಎಂಬಾತನ (ಸು. 1490) ಹಾಡುಗಳಲ್ಲಿ ಶೃಂಗಾರರಸ ಪ್ರಧಾನವಾಗಿದೆ. ಪಂಪ, ನೇಮಿಚಂದ್ರ, ಷಡಕ್ಷರಿ ಮುಂತಾದ ಕವಿಗಳ ವೇಶ್ಯಾವಾಟಿಕೆ ವರ್ಣನೆಗಳಲ್ಲಿ, ಪ್ರೇಮ ಪ್ರಸಂಗ ಚಿತ್ರಣಗಳಲ್ಲಿ ಅವರಿಗಿದ್ದ ಕಾಮಶಾಸ್ತ್ರದ ಜ್ಞಾನ ಸುವ್ಯಕ್ತವಾಗಿರುವುದನ್ನು ಗುರುತಿಸಬಹುದು.

**ಸೂಪಶಾಸ್ತ್ರ, ನೀತಿಶಾಸ್ತ್ರ, ವೃಷ್ಟಿಶಾಸ್ತ್ರ ಮತ್ತು ರತ್ನಶಾಸ್ತ್ರ :** ಚಾವುಂಡ ರಾಯನ (ಸು. 1150) ಲೋಕೋಪಕಾರದಲ್ಲಿ ಸೂಪಶಾಸ್ತ್ರ ಎಂಬ ಒಂದು ಪ್ರತ್ಯೇಕ ಅಧ್ಯಾಯವಿದೆ. ಈ ಅಧ್ಯಾಯಕ್ಕೆ ಒಂದು ಕನ್ನಡ ಟೀಕೂ ಸಿಗುತ್ತದೆ. ಮೂರನೆಯ ಮಂಗರಸನ (1508) ಸೂಪಶಾಸ್ತ್ರದಲ್ಲಿ ಪಿಷ್ಟಪಾಕ, ಪಾನಕ, ಕಳಮಾನ್ನಪಾಕ, ಶಾಕಪಾಕ ಇತ್ಯಾದಿ ರೀತಿಯ ಅಡುಗೆಗಳ ನಿರೂಪಣೆಯಿದೆ. ತನ್ನ ಕೃತಿಯಲ್ಲಿ ನಳ, ಭೀಮ, ಗೌರಿಯರ ಮತಗಳನ್ನು ಸಂಗ್ರಹಿಸಿರುವುದಾಗಿ ಹೇಳಿಕೊಂಡಿದ್ದಾನೆ. ಇಂದ್ರಿಯ ಗಳಲ್ಲಿ ನಾಲಗೆ ಬಹು ಮುಖ್ಯವೆಂದೂ ಅದು ತೃಪ್ತಿಹೊಂದಿದರೆ ಇಹ, ಪರ ಸೌಖ್ಯಗಳೆರಡೂ ಲಭ್ಯವಾಗುತ್ತವೆಂದೂ ಮಂಗರಸನ ನಂಬಿಕೆ. ಅವನ ಕೃತಿ ಯಲ್ಲಿ ಅನೇಕ ಸೊಗಸಾದ ತಿಂಡಿಗಳನ್ನು ಮಾಡುವ ಬಗೆ ಹೇಳಿದೆ. ಅವನದೇ ಕಾವ್ಯ ವಾದ ಸಮ್ಯಕ್ತ್ವಕೌಮುದಿಯಲ್ಲಿ ಭೋಜನದ ಸಹಜ ವಿನೋದಪೂರ್ಣ ವರ್ಣನೆ ದೊರಕುತ್ತದೆ. ದುರ್ಗಸಿಂಹನ (1031) ಪಂಚತಂತ್ರ ಕಾವ್ಯವೂ ಹೌದು, ನೀತಿ ಶಾಸ್ತ್ರವೂ ಹೌದು. ಇದು ವಸುಭಾಗಭಟ್ಟನ ಸಂಸ್ಕೃತ ಮೂಲಕೃತಿಯ ಆಧಾರದ ಮೇಲೆ ರಚಿತವಾಗಿರುವ ಕೃತಿ (ವಸುಭಾಗಭಟ್ಟನ ಕೃತಿ ಈಗ ಅಲಭ್ಯವಾಗಿದೆ). ಇದರಲ್ಲಿ ಪ್ರಾಣಿಗಳ ಕಥೆಗಳ ಮೂಲಕ ಕವಿಯು ಲೌಕಿಕ ನೀತಿಯನ್ನು ಬಿತ್ತರಿಸಿದ್ದಾನೆ. ಇದಲ್ಲದೆ ಕನ್ನಡದಲ್ಲಿ ಇನ್ನೂ ಅನೇಕ ಪಂಚತಂತ್ರ ಕೃತಿಗಳು ದೊರಕುತ್ತವೆ (ಉದಾ : ಶಂಕರಕವಿಯ ಕನ್ನಡ ಪಂಚತಂತ್ರ). ಚಿಕ್ಕುಪಾಧ್ಯಾಯ (1672) ಸಂಸ್ಕೃತ ಕಾಮಂದಕ ನೀತಿಗೆ ಗದ್ಯರೂಪವಾದ ಟೀಕೊಂದನ್ನು ಬರೆದಿದ್ದಾನೆ. ಇದಕ್ಕೆ ಉಪಾಧ್ಯಾಯನಿರಪೇಕ್ಷಾ ಎಂಬ ಹೆಸರೂ ಉಂಟು. ರಟ್ಟಕವಿಯ (ಸು.1300) ರಟ್ಟಮತ ವೃಷ್ಟಿಶಾಸ್ತ್ರಕ್ಕೆ ಸಂಬಂಧಿಸಿದ ಏಕೈಕ ಗ್ರಂಥ. ಮಳೆಯ ಕುರುಹು, ಶಕುನ ಗಳು, ಬಿತ್ತುವ ಕಾಲ, ಉದಕಾರ್ಗಳ (ಬಾವಿ ತೋಡಿದರೆ ನೀರು ಬರುವ ಜಾಗ), ಮೋಡಗಳ ವಿಷಯ, ಕ್ಷಾಮದ ಲಕ್ಷಣ, ಭೂಕಂಪ ಇತ್ಯಾದಿ ಅನೇಕ ಸಂಗತಿಗಳು ಇಲ್ಲಿವೆ. ರತ್ನೋಜ್ವಲಸಂಹಿತೆ, ವರಾಹಮಿಹಿರ ಮತ್ತು ಗಾರ್ಗ್ಯರ ಸಂಹಿತೆಗಳು ಇವನ ಗ್ರಂಥಕ್ಕೆ ಆಧಾರಗಳು. ಬಾಲವೈದ್ಯದ ಚೆಲುವ (ಸು. 1715) ರತ್ನಶಾಸ್ತ್ರ ವನ್ನು ಬರೆದಿದ್ದಾನೆ. ಇದರಲ್ಲಿ ರತ್ನಗಳ ಹೆಸರು, ಗಣಿಗಳು, ವರ್ಣ, ಜಾತಿ, ದೋಷ, ಬೆಲೆ, ಕೃತ್ರಿಮರತ್ನ ಇತ್ಯಾದಿ ವಿಷಯಗಳಿವೆ.

**ಧಾರ್ಮಿಕಶಾಸ್ತ್ರಗ್ರಂಥಗಳು :** ಇವುಗಳಲ್ಲಿ ಯಾವುದು ಕಾವ್ಯ, ಯಾವುದು ಶಾಸ್ತ್ರ ಎಂಬುದನ್ನು ನಿರ್ಣಯಿಸುವುದು ಎಲ್ಲ ಕಡೆಗಳಲ್ಲಿಯೂ ಸುಲಭವಾಗಲಾರದು. ಪ್ರಾಚೀನರಿಗೆ ಕಾವ್ಯವೆನ್ನುವುದು ಧರ್ಮಬೋಧನೆಯ ಮಾಧ್ಯಮಗಳಲ್ಲೊಂದಾ ಗಿದ್ದುದು ಇದಕ್ಕೆ ಕಾರಣ. ಆದಿಪುರಾಣ ಮುಂತಾದ ಜೈನಪುರಾಣಗಳಲ್ಲಿ, ಚೆನ್ನ ಬಸವ ಪುರಾಣದಂಥ ವೀರಶೈವ ಪುರಾಣಗಳಲ್ಲಿ ಆಯಾ ಮತದ ತತ್ತ್ವ, ಬೋಧನೆ ಗಳನ್ನು ಅವಕಾಶ ಸಿಕ್ಕಾಗ ನಿರೂಪಿಸುವುದನ್ನು ಕಾಣುತ್ತೇವೆ. ವಚನಗಳನ್ನು ಶಾಸ್ತ್ರವೆಂದು ಕೆಲವರೂ ಸಾಹಿತ್ಯವೆಂದು ಕೆಲವರು ಈಗಲೂ ವ್ಯವಹರಿಸುವುದನ್ನು ಗಮನಿಸಬಹುದು. ಇದಕ್ಕೆ ಕಾರಣ ವಚನಗಳಲ್ಲಿ ಶಾಸ್ತ್ರಾಂಶವೂ ಸಾಹಿತ್ಯಾಂಶವೂ ಹೆಚ್ಚುಕಡಿಮೆ ಸಮನಾಗಿಯೇ ಇರುವುದು. ಇದೇ ಮಾತನ್ನು ಹರಿದಾಸ ಸಾಹಿತ್ಯದ ಅನೇಕ ಭಾಗಗಳಿಗೂ ಹೇಳಬಹುದು. ಆದರೂ ಇಂಥ ಕೃತಿಗಳನ್ನು ಬಿಟ್ಟು ಕೇವಲ ವಿಷಯನಿರೂಪಣೆಯೇ ಮುಖ್ಯವಾಗಿರುವ ಗ್ರಂಥಗಳನ್ನು ಇಲ್ಲಿ ಲಕ್ಷಿಸುತ್ತ ವಿಚಾರ ಮಾಡಲಾಗಿದೆ

**1 ಜೈನಧರ್ಮ :** ಅನೇಕ ಸಂಸ್ಕೃತ, ಪ್ರಾಕೃತ ಗ್ರಂಥಗಳಿಗೆ ಜೈನವಿದ್ವಾಂಸರು ವ್ಯಾಖ್ಯಾನಗಳನ್ನು ಬರೆದಿದ್ದಾರೆ. ದಿವಾಕರಣಂದಿ (1062) ಗೃಧ್ರಪಿಂಛಾಚಾರ್ಯನ ತತ್ತ್ವಾರ್ಥಸೂತ್ರಕ್ಕೆ ಕನ್ನಡ ವೃತ್ತಿ ಬರೆದಿದ್ದಾನೆ. ಈ ಸಂಗತಿಯನ್ನೇ ಶಾಸನ ವೊಂದರಲ್ಲಿ 'ಜಡರುಂ ಬಾಳರುಂ ಬುಧ ಪ್ರಕರಮುಂ ತತ್ತ್ವಾರ್ಥಮಂ ಕಲ್ತಘಂ ಕಿಡೆ ಸಮ್ಯಕ್ತ್ವಮನೆಯ್ದಿ ಸಪ್ತ ಪರಮ ಸ್ಥಾನಾಪ್ತಿಯಂ ನಿಶ್ಚಯಂ ಪಡೆಯಲ್ ಮಾಡಿದರ್'—ಎಂದು ಹೇಳಿದೆ. ವೀರಣಂದಿ (1153) ತನ್ನದೇ ಆಚಾರಸಾರಕ್ಕೆ ಕನ್ನಡ ವ್ಯಾಖ್ಯಾನ ಬರೆದಿದ್ದಾನೆ. ಬಾಲಚಂದ್ರ (ಸು. 1170) ಪ್ರಾಭೃತಕತ್ರಯಕ್ಕೆ ವ್ಯಾಖ್ಯಾನವನ್ನೂ ಉಮಾಸ್ವಾಮಿಯ ತತ್ತ್ವಾರ್ಥಸೂತ್ರಕ್ಕೆ ತತ್ತ್ವರತ್ನಪ್ರದೀಪಿಕೆ ಎಂಬ ವ್ಯಾಖ್ಯಾನವನ್ನೂ ಬರೆದಿದ್ದಾನೆ. ಶುಭಚಂದ್ರ (ಸು. 1200) ಕಾರ್ತಿಕೇಯಾ ನುಪ್ರೇಕ್ಷೆಗೂ ಮಾಘಣಂದಿ (ಸು. 1253) ಪದಾರ್ಥಸಾರ ಇತ್ಯಾದಿಗಳಿಗೂ ಬಾಳ ಚಂದ್ರಪಂಡಿತ (1273) ದ್ರವ್ಯಸಂಗ್ರಹ ಸೂತ್ರಕ್ಕೂ ಪ್ರಭಾಚಂದ್ರ (ಸು. 1300) ಸಿದ್ಧಾಂತಸಾರ, ಚಾರಿತ್ರಸಾರಗಳಿಗೂ ಕನಕಚಂದ್ರ (ಸು 1300) ಕೊಂಡಕುಂದಾ ಚಾರ್ಯರ ಮೋಕ್ಷಪ್ರಾಭೃತಕ್ಕೂ ಅಭಿನವಶ್ರುತಮುನಿ (ಸು. 1365) ಮಲ್ಲಿಷೇಣನ ಸಜ್ಜನಚಿತ್ತವಲ್ಲಭಕ್ಕೂ ಕಮಲಪಂಡಿತ ಸಮಂತಭದ್ರನ ರತ್ನಕರಂಡಕಕ್ಕೂ ಟೀಕೆ ಬರೆದಿದ್ದಾರೆ. ಬ್ರಹ್ಮಶಿವ (ಸು. 1140) ತನ್ನ ಸಮಯಪರೀಕ್ಷೆಯಲ್ಲಿ ತನ್ನ ಕಾಲದ ಎಲ್ಲ ಮತಗಳನ್ನೂ (ಶೈವ, ವೈಷ್ಣವ, ಬೌದ್ಧ, ಕೌಳ, ಕಾಪಾಲಿಕ ಇತ್ಯಾದಿ), ಅವುಗಳ ಲೋಪದೋಷಗಳನ್ನು ಗಮನದಲ್ಲಿಟ್ಟುಕೊಂಡು, ಚರ್ಚಿಸಿ, ಕೊನೆಗೆ ಜೈನಧರ್ಮವೇ ಅವುಗಳಲ್ಲಿ ಶ್ರೇಷ್ಠವೆಂಬ ತೀರ್ಮಾನಕ್ಕೆ ಬಂದಿದ್ದಾನೆ. ಆಚಣ್ಣ (ಸು. 1195) ಶ್ರೀಪದಾಶೀತಿಯಲ್ಲಿ ಪಂಚಪದ ಮಹಿಮೆಯನ್ನು ಹೇಳಿದ್ದಾನೆ. ಚಂದ್ರಕೀರ್ತಿಯ (ಸು. 1400) ಪರಮಾಗಮಸಾರವು ಜೈನಧರ್ಮದ ಸಾರವನ್ನು ಕೊಡುತ್ತದೆ. ಶಾಂತರ ಸನ (ಸು. 1600) ಯೋಗರತ್ನಾಕರದಲ್ಲಿ ಜೈನಮತಾನುಸಾರವಾಗಿ ಯಮ, ನಿಯಮ ಇತ್ಯಾದಿ ಎಂಟು ಅಂಗಗಳ ವಿವರಣೆಯಿದ್ದರೆ ಚಂದ್ರಮನ (ಸು. 1650) ಲೋಕಸ್ವರೂಪದಲ್ಲಿ ಮೂರು ಲೋಕಗಳ ಸ್ವರೂಪ ನಿರೂಪಿತವಾಗಿದೆ.

**2 ವೀರಶೈವ:** ಹದಿನೈದನೆಯ ಶತಮಾನದಿಂದ ಈಚೆಗೆ ಬಂದ ವಚನಗಳ ವ್ಯಾಖ್ಯಾನ ನಡೆದದ್ದು ಮುಖ್ಯವಾಗಿ ಶಾಸ್ತ್ರದೃಷ್ಟಿಯಿಂದಲೇ ಎನ್ನಬಹುದು. ಆ ವ್ಯಾಖ್ಯಾನ ಕಾರರು ವಚನಗಳನ್ನು ಕಾವ್ಯದೃಷ್ಟಿಯಿಂದ ನೋಡಿರುವುದು ಇಲ್ಲವೇ ಇಲ್ಲ ಎಂದರೂ ತಡೆಯುತ್ತದೆ. ಅಂಥ ವ್ಯಾಖ್ಯಾನಗಳಲ್ಲಿ ಮಹಾಲಿಂಗದೇವ (ಸು. 1425) ಬರೆದಿರುವ ಏಕೋತ್ತರಶತಸ್ಥಲ ಮತ್ತು ಪ್ರಭುದೇವರ ಪಟ್ಸ್ಥಲಜ್ಞಾನಚಾರಿತ್ರ ವಚನದ ಟೀಕೆ ಗಳು, ಕಲ್ಲಮಠದ ಪ್ರಭುದೇವರ (ಸು. 1430) ಲಿಂಗಲೀಲಾವಿಲಾಸಚಾರಿತ್ರ, ಜಕ್ಕಣಾ ರ್ಯನ (ಸು. 1430) ಏಕೋತ್ತರಶತಸ್ಥಲ ಇವನ್ನು ಹೆಸರಿಸಬಹುದು. ಅದೇ ಕಲ್ಲಮಠದ ಪ್ರಭುದೇವ ಅಲ್ಲಮನ ಮಂತ್ರಗೋಪ್ಯಕ್ಕೂ ಎರಡನೆಯ ಚೆನ್ನಬಸವ (ಸು. 1500) ಚೆನ್ನಬಸವಣ್ಣನ ಮಂತ್ರಗೋಪ್ಯಕ್ಕೂ ಟೀಕೆ ಬರೆದಿದ್ದಾರೆ. ಗುಬ್ಬಿಯ ಮಲ್ಲಣ್ಣ (ಸು. 1475) ತನ್ನ ಗಣಭಾಷಿತರತ್ನಮಾಲೆಯಲ್ಲಿ ನೂರೊಂದು ಸ್ಥಲಗಳ ವಿವರಣೆ ಕೊಟ್ಟಿರುವ ರೀತಿ ಹೀಗಿದೆ. ಒಂದೊಂದು ಸ್ಥಲದ ಆರಂಭದಲ್ಲೂ ಆಯಾ ವಿಷಯಕ್ಕೆ ಸಂಬಂಧಿಸಿದಂತೆ ಸಂಸ್ಕೃತ ಆಗಮ, ಪುರಾಣಗಳಿಂದ ಶ್ಲೋಕಗಳನ್ನು ಕನ್ನಡಾನುವಾದ ಸಮೇತ ಉದಾಹರಿಸಿ, ಅದೇ ವಿಷಯವಿರುವ ವಚನಗಳನ್ನು ಅನಂತರ ಉದಾಹರಿಸುತ್ತಾನೆ. ಅನೇಕ ಶೈವಾಗಮಗಳಿಗೆ ಮತ್ತು ಇತರ ಗ್ರಂಥ ಗಳಿಗೆ ವೀರಶೈವ ವಿದ್ವಾಂಸರು ಬರೆದ ಟೀಕೆಗಳು ದೊರೆಯುತ್ತವೆ: ಗುಬ್ಬಿಯ ಮಲ್ಲಣ್ಣ (ಸು. 1475) ವಾತುಲತಂತ್ರಕ್ಕೆ ಟೀಕೆ ಬರೆದಿದ್ದರೆ, ಕಲ್ಯಾಣದ ಸ್ವಾಮಿ (ಸು. 1500) ಕಾರಣಾಗಮವನ್ನು ವಾರ್ಧಕದಲ್ಲಿ ಹೇಳಿದ್ದಾನೆ. ವೀರಶೈವ ಸಿದ್ಧಾಂತವನ್ನು ಪ್ರತಿಪಾದಿಸುವ ಗ್ರಂಥಗಳ ಇತರ ಟೀಕುಗಳು ಹೀಗಿವೆ : ನೀಲಕಂಠ ಶಿವಾಚಾರ್ಯನ (ಸು. 1400) ಬ್ರಹ್ಮಸೂತ್ರ ವ್ಯಾಖ್ಯಾನರೂಪವಾದ ಕ್ರಿಯಾಸಾರ, ಸಾನಂದ ಶಿವಯೋಗಿಯ (ಸು. 1480) ವೀರಶೈವ ಮಾಹೇಶ್ವರಾಚಾರ ಸಾರೋದ್ಧಾರ ಟೀಕೆ, ಗುರುನಂಜನ ಭಟ್ಟಭಾಸ್ಕರಕೃತ ಯಜುರ್ವೇದಭಾಷ್ಯಕ್ಕೆ ಟೀಕೆ, ಉಜ್ಜನೀಶನ ವೀರಶೈವಸಿದ್ಧಾಂತಶಿಖಾಮಣಿ ಟೀಕೆ ಇತ್ಯಾದಿ. ವೀರಶೈವ ಸಿದ್ಧಾಂತವನ್ನು ಪ್ರತಿಪಾದನೆ ಮಾಡುವ ಗ್ರಂಥಗಳಲ್ಲಿ ಕೆಲವು ಹೀಗಿವೆ: ಕರಸ್ಥಲದ ನಾಗಿದೇವರ (ಸು. 1430) ತ್ರಿವಿಧಿಗಳು, ಮಗ್ಗೆಯ ಮಾಯಿದೇವನ ಅನುಭವಸೂತ್ರ, ಗುರು ಬಸವನ ಸಪ್ತಕಾವ್ಯಗಳು (ಶಿವಯೋಗಾಂಗಭೂಷಣ, ಸದ್ಗುರುರಹಸ್ಯ, ಕಲ್ಯಾಣೇಶ್ವರ, ಸ್ವರೂಪಾಮೃತ, ವೃಷಭಗೀತೆ, ಅವಧೂತಗೀತೆ, ಮನೋವಿಜಯ ಕಾವ್ಯ), ನಿಜಗುಣ ಶಿವಯೋಗಿಯ ಪರಮಾನುಭವಬೋಧೆ, ಪರಮಾರ್ಥಪ್ರಕಾಶಿಕೆ ಇತ್ಯಾದಿ ಕೃತಿಗಳು, ಶಾಂತಮಲ್ಲನ (ಸು. 1650) ಅನುಭಮುದ್ರೆ ಇತ್ಯಾದಿ.

**3 ಅದ್ವೈತ:** ಪರಂಜ್ಯೋತಿಯತಿಯ (ಸು. 1450) ಅನುಭವಮುಕುರ, ರಂಗನಾಥನ (ಸು. 1675) ಅನುಭವಾಮೃತ, ಚಿದಾನಂದನ (ಸು. 1725) ಚಿದಖಂಡಾನುಭವಸಾರ, ಚಿದಾನಂದಾವಧೂತನ (ಸು. 1750) ಜ್ಞಾನಸಿಂಧು—ಇವು ಅದ್ವೈತ ವೇದಾಂತವನ್ನು ಪ್ರತಿಪಾದನೆಮಾಡುತ್ತವೆ. ಇವುಗಳಲ್ಲಿ ರಂಗನಾಥ ಮತ್ತು ಚಿದಾನಂದಾವಧೂತರ ಗ್ರಂಥಗಳು ಬಹು ಜನಪ್ರಿಯತೆಯನ್ನು ಗಳಿಸಿವೆ. ರಾಮಬ್ರಹ್ಮಾನಂದ (ಸು. 1700) ವಿದ್ಯಾರಣ್ಯರ ವಾಕ್ಯಸುಧೆಗೂ ಜಕ್ಕಣಾಮಾತ್ಯ (ಸು. 1750) ಶಂಕರರ ಸೌಂದರ್ಯ ಲಹರಿಗೂ ಟೀಕುಗಳನ್ನು ಬರೆದಿದ್ದಾರೆ.

**4 ದ್ವೈತ:** ಜಗನ್ನಾಥದಾಸರ (1775) ಹರಿಕಥಾಮೃತಸಾರ ದ್ವೈತವೇದಾಂತ ಬೋಧಕವಾಗಿದೆ. ಕೆಲವು ಕಡೆ ಅನಿವಾರ್ಯವಾಗಿ ವಿಷಯನಿರೂಪಣೆ ಜಟಿಲವಾಗು ವುದರಿಂದ ಅನೇಕರು ಇದಕ್ಕೆ ವ್ಯಾಖ್ಯಾನ ಬರೆದು ಅಭ್ಯಾಸಿಗಳಿಗೆ ಸಹಾಯಮಾಡಿ ದ್ದಾರೆ. ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯಕ್ಕೆ ವಾದಿರಾಜರು (1480–1600) ಕನ್ನಡದಲ್ಲಿ ಟೀಕೆಯನ್ನು ಬರೆದಿದ್ದಾರೆ.

5 ವಿಶಿಷ್ಟಾದ್ವೈತ : ರಂಗರಾಜನ (ಸು. 1660) ಸಾತ್ವಿಕ ಬ್ರಹ್ಮ ವಿದ್ಯಾವಿಲಾಸ ವಿಶಿಷ್ಟಾದ್ವೈತ ಸಿದ್ಧಾಂತವನ್ನು ನಿರೂಪಿಸುತ್ತದೆ. ಅವನ ಮಗ ಚಿಕುಪಾಧ್ಯಾಯ ಅದನ್ನೇ ಚಂಪೂ ರೂಪಕ್ಕೆ ತಿರುಗಿಸಿದ್ದಾನೆ. ಅದೇ ಚಿಕುಪಾಧ್ಯಾಯನ ಅರ್ಥಪಂಚಕ ತಮಿಳಿನಿಂದ ಅನುವಾದಿತವಾದ ಗ್ರಂಥವಾಗಿದ್ದರೆ, ತಿರುವಾಯ್ಮೊಳಿ ಟೀಕೆ ನಮ್ಮಾಳ್ವಾರರ ತಮಿಳು ಪ್ರಬಂಧಕ್ಕೆ ವ್ಯಾಖ್ಯಾನವಾಗಿದೆ. ಇವರು ಚಿಕ್ಕ ದೇವರಾಜ ಒಡೆಯನ ಕಾಲದಲ್ಲಿದ್ದವರು. ಚಿಕ್ಕದೇವರಾಜ ಒಡೆಯ ಶ್ರೀವೈಷ್ಣವ ಧರ್ಮಾನುಯಾಯಿಯಾಗಿದ್ದು ಆ ಧರ್ಮಕ್ಕೆ ವಿಶೇಷ ಪ್ರೋತ್ಸಾಹವನ್ನು ಕೊಟ್ಟದ್ದು ಮಾತ್ರವಲ್ಲದೆ, ತಾನೇ ಸ್ವತಃ ಚಿಕ್ಕದೇವರಾಜಬಿನ್ನಪದಲ್ಲಿ ವಿಶಿಷ್ಟಾದ್ವೈತಸಿದ್ಧಾಂತದ ಸಾರವನ್ನು ಸಂಗ್ರಹಿಸಿ ಕೊಟ್ಟ. ಶ್ರೀಶೈಲಾರ್ಯನ (ಸು. 1700) ತತ್ತ್ವತ್ರಯವಿವರಣ ದಲ್ಲಿ ಚಿತ್ತು, ಅಚಿತ್ತು, ಈಶ್ವರ ಎಂಬ ಮೂರು ತತ್ತ್ವಗಳ ವಿವೇಚನೆಯಿದೆ.

**ಜ್ಞಾನಕೋಶಗಳು :** ಅನೇಕ ವಿಷಯಗಳನ್ನೊಳಗೊಂಡ ವಿಶ್ವಕೋಶಗಳಂಥ ಕೆಲವು ಗ್ರಂಥಗಳು ಕನ್ನಡದಲ್ಲಿ ಬಂದಿವೆ. ಇವುಗಳಲ್ಲಿ ಚಾವುಂಡರಾಯನ (1025) ಲೋಕೋಪಕಾರ ಮೊದಲನೆಯದು. ಲೋಕಹಿತಾರ್ಥವಾಗಿ ಯಾವ ಯಾವ ವಿದ್ಯೆಗಳು ಉಂಟೋ ಅವೆಲ್ಲವೂ ತನ್ನ ಗ್ರಂಥದಲ್ಲಿರುವುದರಿಂದ ತನ್ನ ಗ್ರಂಥಕ್ಕೆ ಲೋಕೋಪಕಾರವೆಂಬುದು ಅನ್ವರ್ಥವಾಗಿದೆಯೆಂದು ಹೇಳಿಕೊಂಡಿದ್ದಾನೆ. (ಮೇದಿನಿ ಯುಪಕಾರಂ ಕಲಿವೋದುಗಳಿನಿತೊಳವವಿಲ್ಲಿ ನೆಲಸಿರ್ದು ಬುಧೋಪಾದೇಯಮಾದ ದೂಸಱಿನಾದುದು ಲೋಕೋಪಕಾರಮೇನನ್ವರ್ಥಂ). ತನ್ನ ಗ್ರಂಥದಲ್ಲಿ ಹಲವಾರು ಲೌಕಿಕ ಶಾಸ್ತ್ರಗಳಿರುವುದರಿಂದ ಅದು ರಾಜರಿಂದ ಪೂಜಿತವಾಗಿದೆಯೆಂದೂ ಹೇಳಿ ಕೊಂಡಿದ್ದಾನೆ. 'ಪಲವುಂ ಲೌಕಿಕಶಾಸ್ತ್ರಮುಳ್ಳುದಱಿನೀ ಲೋಕೋಪಕಾರಂ ಜಗತ್ತಿಲಕಂ ರಾಜಸಮಾಜಪೂಜಿತಂ.' ಇದರ ಹನ್ನೆರಡು ಆಶ್ವಾಸಗಳಲ್ಲಿ ಬಂದಿರುವ ವಿಷಯಗಳು ಹೀಗಿವೆ : 1 ಪಂಚಾಂಗ ಫಲ—ತಿಥಿ, ವಾರ, ನಕ್ಷತ್ರಗಳ ಸ್ವರೂಪ ; 2 ನವಪಟಲ—ಷೋಡಶ ಕರ್ಮಗಳಿಗೆ ಯೋಗ್ಯಾಯೋಗ್ಯ ಕಾಲಗಳು ; 3 ಉತ್ಪಾತಶಾಂತಿ—ಉತ್ಪಾತ ಕಾರಣ ಮತ್ತು ನಿವಾರಣ ; 4 ವಾಸ್ತು—ಗೃಹಪ್ರತಿಷ್ಠೆಗೆ ಶುಭಲಗ್ನ ; 5 ಉದಕಾರ್ಗಳ–ಸರೋವರ ಬಾವಿಗಳ ನಿರ್ಮಾಣ ಇತ್ಯಾದಿ ; 6 ವೃಕ್ಷಾಯುರ್ವೇದ—ಬಿತ್ತಲು ಒಳ್ಳೆಯ ಕಾಲ, ಒಳ್ಳೆಯ ನೆಲ, ಸಸ್ಯಗಳಿಗೆ ರೋಗ, ನಿವಾರಣೆ. ಕಸಿ ಮಾಡುವ ಕ್ರಮ, ವಾಸನೆಯ ಪರಿವರ್ತನೆ ಇತ್ಯಾದಿ ; 7 ಸುಗಂಧ—ಚೂರ್ಣ, ತೈಲ ಇತ್ಯಾದಿ ; 8 ಸೂಪಶಾಸ್ತ್ರ—ಅಡುಗೆಗಳ ವಿಷಯ ; 9 ವೈದ್ಯ—ನರವೈದ್ಯ, ಸ್ತ್ರೀ ವೈದ್ಯ, ಬಾಲವೈದ್ಯ, ಗೋವೈದ್ಯ, ಅಶ್ವವೈದ್ಯ, ಗಜವೈದ್ಯ ; 10 ವಿಷತತ್ತ್ವ ; 11 ಲಕ್ಷಣ—ಸ್ತ್ರೀ, ಪುರುಷ, ಗೋ, ಕುಕ್ಕುಟಗಳ ಲಕ್ಷಣ ; 12 ಶಕುನ—ನಾನಾ ಬಗೆಯ ಶಕುನಗಳು. ಹನ್ನೆರಡನೆಯ ಶತಮಾನದಲ್ಲಿ ಹುಟ್ಟಿದ ಸೋಮೇಶ್ವರನ ಮಾನಸೋಲ್ಲಾಸ ಒಂದು ಜ್ಞಾನಕೋಶವಾದರೂ ಅದು ಸಂಸ್ಕೃತ ದಲ್ಲಿರುವುದರಿಂದ ಅದರ ಪ್ರಸಕ್ತಿ ಇಲ್ಲಿ ಬರುವುದಿಲ್ಲ. (ಕೆಳದಿಯ ಬಸವರಾಜನ ಶಿವ ತತ್ತ್ವ ರತ್ನಾಕರವೂ ಸಂಸ್ಕೃತದಲ್ಲಿದೆ). 13ನೆಯ ಶತಕಕ್ಕಿಂತ ಈಚಿನ ನಿಜಗುಣ ಶಿವ ಯೋಗಿಗಳ ವಿವೇಕಚಿಂತಾಮಣಿ ಅನೇಕ ವಿಷಯಗಳನ್ನೊಳಗೊಂಡಿರುವ ಮತ್ತೊಂದು ಜ್ಞಾನಕೋಶ. ಇದರಲ್ಲಿ ಹತ್ತು ಪರಿಚ್ಛೇದಗಳಿದ್ದು ನೂರಾರು ಬೇರೆ ಬೇರೆ ಸಂಗತಿ ಗಳು ನಿರೂಪಿತವಾಗಿವೆ. ಇಲ್ಲಿ ಪುರಾಣ, ಉಪಪುರಾಣಗಳು, ಮತಗಳು, ದರ್ಶನಗಳು, ಆಗಮಗಳು, ಶೈವ ಮತ್ತು ವೀರಶೈವ ಪ್ರಭೇದಗಳು, ಯೋಗ, ಬ್ರಹ್ಮಾಂಡ, ಲೋಕ ಗಳು, ಭೂಮಿಯ ವರ್ಣನೆ, ಛಂದಸ್ಸು, ಅಲಂಕಾರಶಾಸ್ತ್ರ, ಗಮಕಿ ವಾದಿ ವಾಗ್ಮಿಗಳ ಲಕ್ಷಣಗಳು, ರಸಸಿದ್ಧಾಂತ, ಕಾಮಶಾಸ್ತ್ರ, ಸಂಗೀತಶಾಸ್ತ್ರ, ಸಮುದ್ರಗಳು ಇತ್ಯಾದಿ ಇತ್ಯಾದಿ ವಿಷಯಗಳಿವೆ. ಅವುಗಳಿಗೆ ಸಂಬಂಧಿಸಿದ ವಿವರಗಳಿವೆ. ಆ ಕಾಲದ ಸಾಂಪ್ರ ದಾಯಿಕ ಲೌಕಿಕ ಮತ್ತು ಧಾರ್ಮಿಕ ಜ್ಞಾನದ ಒಂದು ಸಮಗ್ರ ಕೈಪಿಡಿ—ಈ ಕೃತಿ ಎನ್ನ ಬಹುದು. ಕುಮುದೇಂದುವಿನದೆಂದು ಹೇಳಲಾದ ಸಿರಿಭೂವಲಯ ವಿದ್ವಾಂಸರಿಂದ ಪಡೆಯಬೇಕಾದಷ್ಟು ಗಮನವನ್ನು ಪಡೆದಿಲ್ಲ. ಆದರ ಕಾಲ, ಕೃತಿಕರ್ತೃ ಇತ್ಯಾದಿ ಗಳೆಲ್ಲವೂ ವಾದಗ್ರಸ್ತವಾಗಿವೆ. ಅದನ್ನು ಅಧ್ಯಯನ ಮಾಡಿರುವ ಎಸ್. ಶ್ರೀಕಂಠಶಾಸ್ತ್ರಿ ಗಳವರ ಪ್ರಕಾರ ಜೈನ ಮತ್ತು ಇತರ ದರ್ಶನಗಳ ಪರಿಚಯಮಾತ್ರವಲ್ಲದೆ, ಭಾರ ತೀಯ ಗಣಿತಶಾಸ್ತ್ರ, ಭೌತವಿಜ್ಞಾನ, ರಸಾಯನ ವಿಜ್ಞಾನ, ಜೀವವಿಜ್ಞಾನ, ಆಯು ರ್ವೇದ, ಜ್ಯೋತಿಷ್ಯ, ವಾಸ್ತು, ಶಿಲ್ಪ, ಚಿತ್ರ ಮುಂತಾದ ಲಲಿತಕಲೆಗಳು—ಇವುಗಳ ಚರ್ಚೆ ಇಲ್ಲಿ ದೊರಕುತ್ತದೆ. ರಾಮಕೃಷ್ಣ ಶಾಸ್ತ್ರಿ (ಸು. 1808) ಭುವನಪ್ರದೀಪಿಕೆ ಎಂಬ ತನ್ನ ಸಂಸ್ಕೃತ ಗ್ರಂಥಕ್ಕೆ ತಾನೇ ಟೀಕೆ ಬರೆದಿದ್ದಾನೆ. ಇದರಲ್ಲಿ ಸೃಷ್ಟಿ, ಕಾಲಪ್ರ ಮಾಣ, ಭೂಗೋಳ, ಖಗೋಳ, ಪುರಾಣಗಳು, ವರ್ಣಾಶ್ರಮ ಧರ್ಮಗಳು, ಮೈಸೂರು ದೊರೆಗಳ ಇತಿಹಾಸ ಇತ್ಯಾದಿ ಸಂಗತಿಗಳು ಬಂದಿವೆ.

ಇಲ್ಲಿಯ ವರೆಗೆ ನೋಡಿದಂತೆ ಕನ್ನಡ ಶಾಸ್ತ್ರಕಾರರು ವಿಶೇಷವಾಗಿ ಸಂಸ್ಕೃತಕ್ಕೆ ಋಣಿಗಳಾಗಿದ್ದಾರೆ. ಅಲಂಕಾರವಾಗಲೀ ವೇದಾಂತವಾಗಲೀ ಬೇರೆ ಇನ್ನಾವುದೇ ಶಾಖೆಯಾಗಲಿ ಆಯಾ ಕ್ಷೇತ್ರದಲ್ಲಿ ಅವರು ಸ್ವತಂತ್ರ ಆಲೋಚನೆಯನ್ನು ಮಾಡಿರುವುದು ಪ್ರಾಯಶಃ ಕಡಿಮೆ. ಇದಕ್ಕೆ ಕಾರಣ ಸ್ವಂತವಾಗಿ ಆಲೋಚಿಸಬಲ್ಲ ಪ್ರತಿಭಾ ಶಾಲಿಗಳು ಸಂಸ್ಕೃತದಲ್ಲಿ ಬರೆದದ್ದು. ಇದೂ ಸಹಜವೇ. ಏಕೆಂದರೆ ಸಂಸ್ಕೃತದಲ್ಲಿ ಬರೆದರೆ ಹೆಚ್ಚು ಸಂಖ್ಯೆಯ ವಿದ್ವಾಂಸರಿಗೆ ಮುಟ್ಟುತ್ತಿತ್ತು. (ಇಂಥ ಪರಿಸ್ಥಿತಿ ಈಗಿನ ಕನ್ನಡದಲ್ಲೂ ಒಂದಲ್ಲ ಒಂದು ಬೇರೆ ರೀತಿಯಲ್ಲಿ ಇದ್ದೇ ಇದೆ. ಸಂಸ್ಕೃತದ ಸ್ಥಾನ ದಲ್ಲಿ ಈಗ ಇಂಗ್ಲಿಷ್ ಇದೆ.) ಆದರೂ ಅವರು ಸಾಮಾನ್ಯರಿಗಾಗಿ, ಅಂಥ ವಿದ್ಯಾ ವಂತರಲ್ಲದವರಿಗಾಗಿ ಲೋಕಕ್ಕೆ ಉಪಕಾರಮಾಡುವ ಬಯಕೆಯಿಂದಾಗಿ ಕನ್ನಡದಲ್ಲಿ ಗ್ರಂಥರಚನೆ ಮಾಡಿದ್ದು ಮೆಚ್ಚಬೇಕಾದ್ದು. ವೈದ್ಯ, ಗಣಿತ, ವೃಷ್ಟಿಶಾಸ್ತ್ರ ಮುಂತಾದುವು ಗಳಿಗೆ ಸಂಬಂಧಿಸಿದ ಗ್ರಂಥಗಳನ್ನು ಆಯಾ ಕ್ಷೇತ್ರದಲ್ಲಿ ತಜ್ಞರಾದವರು ಓದಿ ಅವುಗಳ ಸಾರಾಸಾರವನ್ನು ಗುರುತಿಸುವ ಅಗತ್ಯ ಬಹಳವಾಗಿದೆ. ಇಪ್ಪತ್ತನೆಯ ಶತಮಾನದಲ್ಲಿ ಕನ್ನಡ ಭಾಷೆ, ಸಾಹಿತ್ಯಗಳಿಗೆ, ಪ್ರೋತ್ಸಾಹ ಬಂದಿತಾಗಿ ಹಂತ ಹಂತವಾಗಿ ಕನ್ನಡ ಮಾಧ್ಯಮ ಜಾರಿಗೆ ಬಂದು ಆ ಭಾಷೆಯಲ್ಲಿ ವಿಪುಲವಾಗಿ ಶಾಸ್ತ್ರಗ್ರಂಥಗಳು ರಚಿತ ವಾಗುತ್ತಿವೆ. ಅದರ ಬಹುಮುಖವಾದ ವಿವರಗಳನ್ನು ತಿಳಿಯಲು ಈ ಲೇಖನ ಗಳನ್ನು ನೋಡಿ : **ಕನ್ನಡ ಅಧ್ಯಯನ ಸಂಸ್ಥೆ ; ಕನ್ನಡದಲ್ಲಿ ಕಾವ್ಯ ಮೀಮಾಂಸೆ, ಕನ್ನಡದಲ್ಲಿ ಗದ್ಯ ಸಾಹಿತ್ಯ, ಕನ್ನಡದಲ್ಲಿ ಭಾಷಾಂತರಗಳು ; ಕನ್ನಡದಲ್ಲಿ ವಿಚಾರ ಸಾಹಿತ್ಯ ; ಕನ್ನಡದಲ್ಲಿ ವಿಜ್ಞಾನ ಸಾಹಿತ್ಯ ; ಕನ್ನಡದಲ್ಲಿ ವಿಶ್ವಕೋಶಗಳು ; ಕನ್ನಡ ಸಂಶೋಧನ ಸಂಸ್ಥೆ ; ಕನ್ನಡ ಸಾಹಿತ್ಯ ಪರಿಷತ್ತು.** (ಎಂ.ಸಿ.)

## ಕನ್ನಡದಲ್ಲಿ ಷಟ್ಪದೀ ಕಾವ್ಯಗಳು :

ಷಟ್ಪದಿ ಎನ್ನುವುದು ಆರು ಸಾಲಿನ ಪದ್ಯ ಜಾತಿಯೊಂದನ್ನು ನಿರ್ದೇಶಿಸುತ್ತದೆ. ಅದರಲ್ಲಿ 1, 2, 4, 5ನೆಯ ಪಾದಗಳು ಒಂದು ರೀತಿಯಾಗಿಯೂ 3, 6ನೆಯ ಪಾದಗಳು ಒಂದು ರೀತಿ ಯಾಗಿಯೂ ಇರುತ್ತವೆ. ಷಟ್ಪದಿ ಆರು ಬಗೆಯಾಗಿದೆ : ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕ. ಈ ಷಟ್ಪದಿಗಳು ಮಾತ್ರಾ ಗಣಗಳಿಂದ ಕೂಡಿದುವಾಗಿರುವುದರಿಂದ ಇವನ್ನು ಮಾತ್ರಾಷಟ್ಪದಿಗಳೆಂದು ಕರೆಯ ಬಹುದು. ಈ ಎಲ್ಲ ಮಾತ್ರಾಷಟ್ಪದಿಗಳಿಗೆ ಮೂಲವಾಗಿ ಒಂದು ಷಟ್ಪದಿಯಿತ್ತು. ಅದನ್ನು ಮೂಲಷಟ್ಪದಿಯೆಂದೋ ಅಂಶಷಟ್ಪದಿಯೆಂದೋ ಅಥವಾ ತೀ. ನಂ. ಶ್ರೀಕಂಠಯ್ಯನವರನ್ನನುಸರಿಸಿ ಬರಿಯ ಷಟ್ಪದವೆಂದೋ ನಿರ್ದೇಶಿಸಬಹುದು. ಈ ಮೂಲಷಟ್ಪದಿ ಅಥವಾ ಷಟ್ಪದ ಅಂಶಗಣಗಳಿಂದ ಕೂಡಿದ್ದು, ಈ ಲಕ್ಷಣವನ್ನು ಪಡೆದಿದ್ದಿತು. (ವಿ–ವಿಷ್ಣುಗಣ : ರು–ರುದ್ರಗಣ) :

ವಿ । ವಿ ।
ವಿ । ವಿ ।
ವಿ । ವಿ । ರು ॥
ವಿ । ವಿ ।
ವಿ । ವಿ ।
ವಿ । ವಿ । ರು ॥

ನಾಗವರ್ಮ, ಜಯಕೀರ್ತಿಗಳು ತಮ್ಮ ಲಕ್ಷಣಗ್ರಂಥಗಳಲ್ಲಿ ಷಟ್ಪದಿಯ ಗುಣ ಲಕ್ಷಣಗಳನ್ನು ವರ್ಣಿಸಿರುವರಲ್ಲದೆ, ಅದು ಅನೇಕ ಶಾಸನಗಳಲ್ಲೂ (ಉದಾ : ಅಮ್ಮಿನಬಾವಿ ಶಾಸನ), ಅನೇಕ ಚಂಪೂಕಾವ್ಯಗಳಲ್ಲಿಯೂ (ಉದಾ : ಸುಕುಮಾರ ಚರಿತೆ) ಕಾಣಿಸಿಕೊಂಡಿದೆ. ಚಾಳುಕ್ಯ ಚಕ್ರವರ್ತಿ ಸೋಮೇಶ್ವರನ ಮಾನಸೋಲ್ಲಾ ಸದಲ್ಲಿಯೂ (ಕ್ರಿ.ಶ. 1129) ಅಂಶಗಣ ಘಟಿತವಾದ ಷಟ್ಪದ ಕಾಣಿಸಿಕೊಳ್ಳುತ್ತದೆ. ಆ ಕಾಲಕ್ಕಾಗಲೇ ಷಟ್ಪದರೂಪವಾದ ಕಥೆಗಳು ಹುಟ್ಟಿದ್ದುವೆಂಬುದಕ್ಕೆ ಆ ಕೃತಿಯ ಲ್ಲಿಯೇ ಆಧಾರವಿರುವುದಾದರೂ ನಮಗೆ ಷಟ್ಪದರೂಪದ ಯಾವ ಕಾವ್ಯವೂ ದೊರಕಿಲ್ಲ. ಎಂದರೆ ಹನ್ನೆರಡನೆಯ ಶತಮಾನದ ಮಧ್ಯದ ವರೆಗೆ ದೊರಕಿರುವ ಷಟ್ಪದಗಳೆಲ್ಲವೂ ಶಾಸನಗಳಲ್ಲಿ, ಕಾವ್ಯಗಳಲ್ಲಿ ಕಾಣಿಸಿಕೊಳ್ಳುವ ಬಿಡಿ ಪದ್ಯಗಳಾಗಿವೆ.

ಹನ್ನೆರಡನೆಯ ಶತಮಾನದ ಮಧ್ಯಭಾಗದಲ್ಲಿ ಅಂಶಗಣಗಳ ಸ್ಥಾನದಲ್ಲಿ ಮಾತ್ರಾ ಗಣಗಳನ್ನು ತರುವ ರೂಢಿ ಪ್ರಬಲವಾದ ಮೇಲೆ, ಮೂಲಷಟ್ಪದಿ ಅಥವಾ ಷಟ್ಪದ ಆರು ರೀತಿಯ ಮಾತ್ರಾಷಟ್ಪದಿಗಳಾಗಿ ವಿಕಾಸ ಹೊಂದಿತು. ಅವನ್ನೇ ಶರ, ಕುಸುಮ, ಭೋಗ, ಭಾಮಿನಿ, ಪರಿವರ್ಧಿನಿ ಮತ್ತು ವಾರ್ಧಕಗಳೆಂದು ಕರೆದಿರುವುದು. ಆಯಾ ಷಟ್ಪದಿಗಳ ಮೊದಲ ಪಾದದ ಲಕ್ಷಣ ಹೀಗಿರುತ್ತದೆ. (ಮೂರನೆಯ ಪಾದ ಆದರ ಒಂದೂವರೆಯಷ್ಟು + 1 ಗುರು ಆಗಿರುತ್ತದೆ).

| | | |
|---|---|---|
| ಶರ (4+4) | = | 8 ಮಾತ್ರೆಗಳು |
| ಕುಸುಮ (5+5) | = | 10 ಮಾತ್ರೆಗಳು |
| ಭೋಗ (3+3+3+3) | = | 12 ಮಾತ್ರೆಗಳು |
| ಭಾಮಿನಿ (3+4+3+4) | = | 14 ಮಾತ್ರೆಗಳು |
| ಪರಿವರ್ಧಿನಿ (4+4+4+4) | = | 16 ಮಾತ್ರೆಗಳು |
| ವಾರ್ಧಕ (5+5+5+5) | = | 20 ಮಾತ್ರೆಗಳು |

ಇವುಗಳಲ್ಲಿ ಭಾಮಿನಿ, ವಾರ್ಧಕಗಳು ಹೆಚ್ಚು ಪ್ರಚಾರದಲ್ಲಿದ್ದು, ಕನ್ನಡದ ಕೆಲವು ಅತ್ಯಂತ ಶ್ರೇಷ್ಠ ಕಾವ್ಯಗಳು ಅವುಗಳ ಮೂಲಕ ರಚಿತವಾಗಿವೆ.

ಷಟ್ಪದೀ ಕಾವ್ಯಗಳ ಸಮಗ್ರ ಇತಿಹಾಸವನ್ನು ಕೊಡುವುದು ಇಲ್ಲಿ ಸಾಧ್ಯವಿಲ್ಲ ವಾದುದರಿಂದ ಕೆಲವು ಪ್ರಮುಖ ಕಾವ್ಯಗಳ ಪರಿಚಯವನ್ನು ಮಾತ್ರ ಕಾಲಾನು ಕ್ರಮವಾಗಿ ಕೊಡಲು ಪ್ರಯತ್ನಿಸಿದೆ.

ಕ್ರಿ. ಶ. 1224ರ ಹರಿಹರದ ಶಾಸನದಲ್ಲಿ ಪೋಲಾಳ್ವ ದಂಡನಾಥನೆಂಬಾತ ಹರಿ ಚಾರಿತ್ರವೆಂಬ ಕಾವ್ಯವನ್ನು ಷಟ್ಪದೀರೂಪವಾಗಿ ರಚಿಸಿದನೆಂದು ಹೇಳಿದೆ. ಆ ಕಾವ್ಯ ದೊರೆತಿಲ್ಲವಾದ್ದರಿಂದ ಅದರ ಬಗ್ಗೆ ಇನ್ನೇನೂ ಹೇಳಲು ಸಾಧ್ಯವಿಲ್ಲ. ಆದ ಕಾರಣ ಅವನ ಸಮಕಾಲೀನನಾದ ರಾಘವಾಂಕನಿಂದ (ಸು. 1230) ಷಟ್ಪದೀಕಾವ್ಯ ಗಳ ಇತಿಹಾಸವನ್ನು ಆರಂಭಿಸಬಹುದು.

ರಾಘವಾಂಕನ ಒಟ್ಟು ನಾಲ್ಕು ಕಾವ್ಯಗಳು ದೊರಕಿವೆ—ಹರಿಶ್ಚಂದ್ರಕಾವ್ಯ, ಸಿದ್ಧರಾಮಪುರಾಣ, ಸೋಮನಾಥ ಚಾರಿತ್ರ ಮತ್ತು ವೀರೇಶಚರಿತೆ. (ಅವನ ಶರಭಚಾರಿತ್ರ ಮತ್ತು ಹರಿಹರಮಹತ್ತ್ವಗಳು ಅಲಭ್ಯವಾಗಿವೆ). ಇವುಗಳಲ್ಲಿ ಮೊದಲ ಮೂರು ವಾರ್ಧಕಷಟ್ಪದಿಯಲ್ಲಿದ್ದರೆ (5+5+5+5) ವೀರೇಶಚರಿತೆ ಉದ್ದಂಡ ಷಟ್ಪದಿಯಲ್ಲಿದೆ (4+4+4+4+4). ಇವುಗಳಲ್ಲೆಲ್ಲ ಅತ್ಯಂತ ಶ್ರೇಷ್ಠ ಕಾವ್ಯ ವೆಂದರೆ ಹರಿಶ್ಚಂದ್ರಕಾವ್ಯ. ಇದರ ವಸ್ತು ಸುಪ್ರಸಿದ್ಧನಾದ ಹರಿಶ್ಚಂದ್ರನ ಕಥೆಯೇ ಆಗಿದೆ. ಸಿದ್ಧರಾಮಚಾರಿತ್ರ ಹನ್ನೆರಡನೆಯ ಶತಮಾನದ ಕರ್ಮಯೋಗಿ ಮತ್ತು ವಚನಕಾರ ಸಿದ್ಧರಾಮನ ಜೀವನಚರಿತ್ರೆಯನ್ನು ನಿರೂಪಿಸುವ ಒಂದು ಸುಂದರ ಕಾವ್ಯ. ಸೋಮನಾಥ ಚಾರಿತ್ರದಲ್ಲಿ ವೀರಭಕ್ತನಾದ ಆದಯ್ಯನ ಸಾಹಸವನ್ನೂ ವೀರೇಶಚರಿತೆಯಲ್ಲಿ ದಕ್ಷಾಧ್ವರವನ್ನು ಧ್ವಂಸಮಾಡಿದ ವೀರಭದ್ರನ ಕಥೆಯನ್ನೂ ಕವಿ ನಿರೂಪಿಸಿದ್ದಾನೆ. ಅವನ ಹರಿಹರಮಹತ್ತ್ವ ಅವನ ಸೋದರಮಾವನೂ ರಗಳೆಗಳ ಕರ್ತೃವೂ ಆದ ಹರಿಹರ ಕವಿಯನ್ನು ಕುರಿತ ಕೃತಿಯೆಂದು ತಿಳಿದುಬರುತ್ತದೆ. ತನ್ನ ಬಹು ಶ್ರೇಷ್ಠ ಕೃತಿಗಳಿಂದಲೂ ನಮಗೆ ತಿಳಿದಮಟ್ಟಿಗೆ ಮೊದಲ ಷಟ್ಪದೀ ಕಾವ್ಯ ಗಳನ್ನು ಬರೆದ ಕವಿ ಆಗಿರುವುದರಿಂದಲೂ ರಾಘವಾಂಕ ಷಟ್ಪದೀ ಸಂಪ್ರದಾಯದ ಪ್ರವರ್ತಕನೆಂದು ಹೇಳಬಹುದು.

ರಾಘವಾಂಕನ ಅನಂತರ ಷಟ್ಪದೀ ಕಾವ್ಯಗಳು ಹೆಚ್ಚು ಸಂಖ್ಯೆಯಲ್ಲಿ ಕಾಣಿಸಿ ಕೊಳ್ಳಲಾರಂಭಿಸುತ್ತವೆ. ಸು. 1250–60ರಲ್ಲಿದ್ದ ಕುಮಾರಪದ್ಮರಸ ರಾಘವಾಂಕನ ಸಮಕಾಲೀನನೂ ತನ್ನ ತಂದೆಯೂ ಆದ ಕೆರೆಯಪದ್ಮರಸನ ಸಂಸ್ಕೃತ ಕೃತಿ ಸಾನಂದಚರಿತೆಯನ್ನು ಕನ್ನಡಕ್ಕೆ ಅನುವಾದಿಸಿದ್ದಾನೆ. ಇದರಲ್ಲಿ ಅನೇಕ ಬಗೆಯ ಷಟ್ಪದಿಗಳಿದ್ದರೂ ಕುಸುಮಷಟ್ಪದಿಗಳ ಬಾಹುಳ್ಯವನ್ನು ಇಲ್ಲಿ ಕಾಣಬಹುದು. ಸು. 1275ರಲ್ಲಿದ್ದ ಕುಮುದೇಂದುವಿನ ಕುಮುದೇಂದು ರಾಮಾಯಣದಲ್ಲಿ ಶರ, ಭೋಗಗಳನ್ನು ಬಿಟ್ಟರೆ ಉಳಿದೆಲ್ಲ ಷಟ್ಪದಿಗಳೂ ಬಳಕೆಯಾಗಿವೆ. ಜೈನ ಸಂಪ್ರ ದಾಯದ ರಾಮಾಯಣದ ಕಥೆ ಇಲ್ಲಿ ಬಂದಿದೆ. ಕವಿ ತನಗಿಂತ ಹಿಂದಿದ್ದ ನಾಗಚಂದ್ರ ನನ್ನು ಯಥೇಷ್ಟವಾಗಿ ಅನುಕರಿಸಿರುವುದು ಕಂಡುಬರುತ್ತದೆ. ಕ್ರಿ.ಶ. 1369 ರಲ್ಲಿದ್ದ ಭೀಮಕವಿಯ ಬಸವಪುರಾಣ ಒಂದು ಪ್ರಮುಖ ಕೃತಿ. ಬಸವಣ್ಣನವರನ್ನು ಕುರಿತಾದ ಕನ್ನಡ ಕಾವ್ಯಗಳಲ್ಲಿ ಇದು ಅತ್ಯಂತ ಜನಪ್ರಿಯವಾದುದು. ವಾಸ್ತವವಾಗಿ ಇದು ಸ್ವತಂತ್ರ ಕೃತಿಯಲ್ಲ; ಪಾಲ್ಕುರಿಕೆ ಸೋಮನ ತೆಲುಗು ಬಸವಪುರಾಣದ ಪ್ರಾಮಾಣಿಕವಾದ ಕನ್ನಡ ಅನುವಾದವಷ್ಟೆ. ಇದು ಭಾಮಿನೀ ಷಟ್ಪದಿಯಲ್ಲಿ ರಚಿತ ವಾದ ಮೊಟ್ಟಮೊದಲ ಸಮಗ್ರ ಗ್ರಂಥ. ಸು. 1400ರಲ್ಲಿದ್ದ ಪದ್ಮಣಾಂಕನ ಪದ್ಮ ರಾಜ ಪುರಾಣವೂ ಒಂದು ಗಮನಾರ್ಹ ಕೃತಿಯೇ. ವಾರ್ಧಕಷಟ್ಪದಿಯ ಈ ಕಾವ್ಯಕ್ಕೆ ಕೆರೆಯಪದ್ಮರಸನೇ ಕಥಾವಸ್ತು. ಹೀಗೆ ತಮಗಿಂತ ಹಿಂದೆ ಮನುಷ್ಯರಂತೆಯೇ ಬದುಕಿ, ಶಿವನ ಕೃಪೆಯನ್ನು ಪಡೆದ ಭಕ್ತರ ಕಥೆಗಳನ್ನು ಆರಿಸಿಕೊಂಡು ಕಾವ್ಯಗಳನ್ನು ರಚಿಸುವ ಹರಿಹರನ ಸಂಪ್ರದಾಯ ವಿಶೇಷವಾಗಿ ವೀರಶೈವಕವಿಗಳಲ್ಲಿ ಬೆಳೆದುಕೊಂಡು ಬಂದಿರುವುದು ಒಂದು ಮುಖ್ಯ ಸಂಗತಿಯಾಗಿದೆ.

ಹದಿನಾಲ್ಕನೆಯ ಶತಮಾನದ ಉತ್ತರಾರ್ಧದಲ್ಲಿಯೋ ಹದಿನೈದನೆಯ ಶತಮಾನದ ಆರಂಭದಲ್ಲಿಯೋ ಇದ್ದ ಕುಮಾರವ್ಯಾಸ (ಸು. 1400) ಕನ್ನಡದ ಅತ್ಯಂತ ಶ್ರೇಷ್ಠ ಕವಿಗಳಲ್ಲೊಬ್ಬ. ಅವನ ಕನ್ನಡ ಭಾರತ ಕನ್ನಡದ ಅತಿ ಜನಪ್ರಿಯ ಕಾವ್ಯಗಳ ಲ್ಲೊಂದು. ವ್ಯಾಸರ ಸಂಸ್ಕೃತ ಮಹಾಭಾರತವನ್ನು ಕನ್ನಡಕ್ಕೆ ಭಾಮಿನೀ ಷಟ್ಪದಿಗಳಲ್ಲಿ ಈತ ಯಶಸ್ವಿಯಾಗಿ ತಂದಿದ್ದಾನೆ. ಭಾರತ ಪಾಂಡವರ ಕಥೆ ಯಾದರೂ ಕುಮಾರವ್ಯಾಸನ ಪ್ರಕಾರ ಅದರ ನಾಯಕ ಕೃಷ್ಣನೇ ಆಗಿದ್ದಾನೆ. ಅವನ ಚರಿತಾಮೃತವನ್ನು ಕವಿ ಮೈಮರೆತು ಹಾಡಿದ್ದಾನೆ. ಕುಮಾರವ್ಯಾಸನ ಪ್ರಭಾವ ಮುಂದಿನ ಕವಿಗಳ ಮೇಲೆ ಅಪರಿಮಿತವಾಗಿದೆ. ಉದಾಹರಣೆಗೆ ಕ್ರಿ.ಶ. 1424 ರಲ್ಲಿದ್ದ ಭಾಸ್ಕರ ಎಂಬ ಜೈನಕವಿ ತನ್ನ ಜೀವಂಧರಚರಿತೆಯೆಂಬ ಭಾಮಿನೀ ಷಟ್ಪದೀ ಕಾವ್ಯದಲ್ಲಿ ಕುಮಾರವ್ಯಾಸನನ್ನು ಅನೇಕ ಕಡೆಗಳಲ್ಲಿ ಅನುಕರಿಸಿರುವುದು ಸುಸ್ಪಷ್ಟವಾಗಿದೆ.

ಹದಿನೈದನೆಯ ಶತಮಾನದ ಇನ್ನೊಬ್ಬ ಪ್ರಮುಖ ಕವಿ ಚಾಮರಸ (ಸು. 1430). ಇವನ ಪ್ರಭುಲಿಂಗಲೀಲೆ ಅಲ್ಲಮಪ್ರಭುವನ್ನು ವಸ್ತುವಾಗಿ ಉಳ್ಳ ಶ್ರೇಷ್ಠ ಕಾವ್ಯ. ಅನೇಕ ಸಾಧಕರನ್ನು ಎಚ್ಚರಿಸಿ, ಸಾಂತ್ವನಗೊಳಿಸಿ ಅವರನ್ನು ಉದ್ಧರಿಸಿದ ಅಲ್ಲಮನ ಚಿತ್ರ ಉದಾತ್ತವಾದ ರೀತಿಯಲ್ಲಿ ಇಲ್ಲಿ ಚಿತ್ರಿತವಾಗಿದೆ. ಇವನು ಭಾಮಿನೀಷಟ್ಪದಿ ಗಳನ್ನು ಬಳಸುವುದರಲ್ಲಿ, ಸೊಗಸಾದ ರೂಪಕಗಳನ್ನು ನಿರ್ಮಿಸುವುದರಲ್ಲಿ ಕುಮಾರ ವ್ಯಾಸನನ್ನು ಹೋಲುತ್ತಾನೆ. ಇವನ ಸಮಕಾಲೀನನಾಗಿದ್ದ ಲಕ್ಕಣ್ಣದಂಡೇಶ ಪ್ರೌಢದೇವರಾಯನ ಮಂತ್ರಿಯಾಗಿದ್ದು ಶಿವತತ್ತ್ವ ಚಿಂತಾಮಣಿಯೆಂಬ ವಾರ್ಧಕ ಷಟ್ಪದೀ ಕಾವ್ಯವನ್ನು ಬರೆದಿದ್ದಾನೆ. ಇದರಲ್ಲಿ ಅನೇಕ ಪುರಾತನ ಹಾಗೂ ನೂತನ ಶಿವಭಕ್ತರ ಕಥೆಗಳು ದೊರೆಯುತ್ತವೆ. ಇದೇ ಕಾಲದ ಗುರುಬಸವನ ಏಳುಕಾವ್ಯಗಳು ಸಪ್ತಕಾವ್ಯಗಳೆಂದು ಪ್ರಸಿದ್ಧವಾಗಿವೆ. ಅವುಗಳಲ್ಲಿ ಶಿವಯೋಗಾಂಗಭೂಷಣ ಪರಿ ವರ್ಧಿನಿಯಲ್ಲಿಯೂ ವೃಷಭಗೀತೆ ಭೋಗ ಷಟ್ಪದಿಯಲ್ಲಿಯೂ ಮನೋವಿಜಯಕಾವ್ಯ ಕುಸುಮಷಟ್ಪದಿಯಲ್ಲಿಯೂ ರಚಿತವಾಗಿವೆ. ಅದೇ ಕಾಲದ ಬತ್ತಲೇಶ್ವರ ಎಂಬ ವೀರ ಶೈವ ಕವಿ ಬತ್ತಲೇಶ್ವರ ರಾಮಾಯಣವನ್ನು ಬರೆದಿದ್ದಾನೆ. ಷಟ್ಪದೀ ಕಾವ್ಯಗಳನ್ನು ಬರೆದ ಈ ಶತಮಾನದ ಇತರ ವೀರಶೈವ ಕವಿಗಳೆಂದರೆ—ಬೊಮ್ಮರಸ (ಸು. 1450. ಕೃತಿ—ಸೌಂದರ ಪುರಾಣ); ನೀಲಕಂಠಾಚಾರ್ಯ (ಸು. 1485. ಕೃತಿ—ಆರಾಧ್ಯ ಚಾರಿತ್ರ); ಚತುರ್ಮುಖ ಬೊಮ್ಮರಸ (ಸು. 1500. ಕೃತಿ—ರೇವಣಸಿದ್ಧೇಶ್ವರ ಕಾವ್ಯ); ಸಿಂಗಿರಾಜ (ಸು. 1500. ಕೃತಿ–ಅಮಲಬಸವಚಾರಿತ್ರ ಅಥವಾ ಸಿಂಗಿರಾಜ ಪುರಾಣ. ಇದರಲ್ಲಿ ಬಸವಣ್ಣನವರ ಕಥೆ ನಿರೂಪಿತವಾಗಿದೆ. ಇದು ಬಸವಣ್ಣನವರ ಪವಾಡಗಳ ಬಗ್ಗೆ ಹೆಚ್ಚು ಒಲವನ್ನು ತೋರಿರುವ ಕೃತಿಯಾಗಿದೆ).

ಹದಿನೈದನೆಯ ಶತಮಾನದ ಜೈನಕವಿಗಳಲ್ಲಿ ಕಲ್ಯಾಣಕೀರ್ತಿ (1439) ಮತ್ತು ತೆರಕಣಾಂಬಿ ಬೊಮ್ಮರಸರು (ಸು. 1485) ಉಲ್ಲೇಖಾರ್ಹರು. ಬೊಮ್ಮರಸನ ಸನತ್ಕುಮಾರಚರಿತೆ ಭಾಮಿನೀ ಷಟ್ಪದಿಯ ಕಾವ್ಯವಾಗಿದ್ದು, ವಡ್ಡಾರಾಧನೆಯಲ್ಲಿ ಗದ್ಯರೂಪವಾಗಿ ಕಾಣಿಸಿಕೊಂಡಿದ್ದ ಸನತ್ಕುಮಾರನ ಕಥೆಯನ್ನು ಸೊಗಸಾದ ರೀತಿಯಲ್ಲಿ ನಿರೂಪಿಸುತ್ತದೆ.

ಕುಮಾರವ್ಯಾಸನ ಸಂಪ್ರದಾಯದಲ್ಲಿ ರಾಮಾಯಣವನ್ನು ವಸ್ತುವನ್ನಾಗಿ ಮಾಡಿಕೊಂಡು ಕಾವ್ಯರಚನೆ ಮಾಡಿದ ನರಹರಿ ಅಥವಾ ಕುಮಾರವಾಲ್ಮೀಕಿ ಸು. 1500ರಲ್ಲಿದ್ದನೆಂದು ಊಹಿಸಬಹುದಾಗಿದೆ. ಅವನ ತೊರವೆ ರಾಮಾಯಣ ಅಂಥ ಉತ್ತಮ ಕಾವ್ಯವಲ್ಲದಿದ್ದರೂ ಕಥಾವಸ್ತುವಿನಿಂದಾಗಿ ಒಂದು ಕಾಲಕ್ಕೆ ಅತ್ಯಂತ ಜನಪ್ರಿಯ ಕೃತಿಗಳಲ್ಲೊಂದಾಗಿದ್ದಿತು.

ಹದಿನಾರನೆಯ ಶತಮಾನದ ಕವಿಗಳಲ್ಲಿ ಗಮನಾರ್ಹರಾದ ಕೆಲವರಿದ್ದಾರೆ: ಮೂರನೆಯ ಮಂಗರಸನ (1508) ಜಯನೃಪಕಾವ್ಯ ಪರಿವರ್ಧಿನಿಯಲ್ಲಿದೆ. ಗುಬ್ಬಿಮಲ್ಲಣಾರ್ಯನ (1513) ಭಾವಚಿಂತಾರತ್ನ ಚಮತ್ಕಾರಗಳಿಂದ ಕೂಡಿದ ಪ್ರೌಢರಚನೆಯ ಕಾವ್ಯ. ಪಂಚಾಕ್ಷರೀ ಮಂತ್ರದ ಮಹಿಮೆಯನ್ನು ಸಾರುವ ಸುಪ್ರಸಿದ್ಧ ಸತ್ಯೇಂದ್ರಚೋಳನ ಕಥೆ ಇದರ ವಸ್ತು. ಅವನ ವೀರಶೈವಾಮೃತ ಮಹಾಪುರಾಣ ದೊಡ್ಡ ಗಾತ್ರದ ವಾರ್ಧಕ ಷಟ್ಪದೀ ಕಾವ್ಯ. ವೀರಶೈವ ಧರ್ಮಕ್ಕೆ ಸಂಬಂಧಿಸಿದ ಅನೇಕ ಪೌರಾಣಿಕ, ನೂತನ ಕಥೆಗಳನ್ನೊಳಗೊಂಡ ಕೃತಿ ಇದು. ಸು. 1550ರಲ್ಲಿದ್ದ ಗುರುಲಿಂಗವಿಭುವಿನ ಭಿಕ್ಷಾಟನಚರಿತೆಯಲ್ಲಿ ಶಿವನ ಅದೇ ಹೆಸರಿನ ಲೀಲೆಯೊಂದನ್ನು ನಿರೂಪಿಸಿದೆ. ಅವನ ಸಮಕಾಲೀನನಾದ ಚನ್ನಬಸವಾಂಕನ ಮಹಾದೇವಿಯಕ್ಕನ ಪುರಾಣದಲ್ಲಿ ಅಕ್ಕಮಹದೇವಿಯ ಕಥೆ ಹಲವು ಬಗೆಯ ಷಟ್ಪದಿಗಳಲ್ಲಿ ವರ್ಣಿತವಾಗಿದೆ.

ಈ ಶತಮಾನದ ಪ್ರಮುಖ ಷಟ್ಪದೀ ಕವಿಗಳೆಂದರೆ ಲಕ್ಷ್ಮೀಶ (ಸು. 1550), ಕನಕದಾಸ (ಸು. 1550) ಮತ್ತು ವಿರೂಪಾಕ್ಷಪಂಡಿತ (1584). ಕುಮಾರವ್ಯಾಸ ಮಹಾಭಾರತದ ಮೊದಲ ಹತ್ತು ಪರ್ವಗಳನ್ನು ಕನ್ನಡಕ್ಕೆ ತಂದಿದ್ದರೆ, ತಿಮ್ಮಣ್ಣ (ಸು. 1510) ಅದರ ಮುಂದಿನ ಎಂಟು ಪರ್ವಗಳನ್ನು ಕನ್ನಡದಲ್ಲಿ ನಿರೂಪಿಸಿದ. ಲಕ್ಷ್ಮೀಶನ ಜೈಮಿನಿಭಾರತ ಕೌರವನ ಸಾವಿನ ಬಳಿಕ ಪಾಂಡವರು ರಾಜ್ಯದಲ್ಲಿ ಪ್ರತಿಷ್ಠಿತರಾದ ಮೇಲಿನ ಕಥೆಯನ್ನು ವಸ್ತುವಾಗಿ ಪಡೆದ ಒಂದು ಅತ್ಯಂತ ಜನಪ್ರಿಯ ಕಾವ್ಯ. ಪಾಂಡವರು ಅಶ್ವಮೇಧಯಾಗ ಮಾಡಿ ಜ್ಞಾತಿವಧೆಯಿಂದ ಬಂದ ಮಾಲಿನ್ಯವನ್ನು ಹೋಗಲಾಡಿಸಿಕೊಂಡರೆಂಬುದೇ ಮುಖ್ಯ ಕಥೆಯಾದರೂ ಕಥೆಯ ಒಳಗೆ ಅನೇಕ ಉಪಕಥೆಗಳು ಸೇರಿಕೊಂಡು ಕಾವ್ಯದ ಸ್ವಾರಸ್ಯವನ್ನು ಹೆಚ್ಚಿಸಿವೆ. ಕನಕದಾಸ ಮನೋಹರವಾದ ಕೀರ್ತನೆಗಳನ್ನು ರಚಿಸಿದ ಭಕ್ತಶ್ರೇಷ್ಠ. ಅವನ ರಾಮಧಾನ್ಯಚರಿತೆ ರಾಗಿಯ ಶ್ರೇಷ್ಠತೆಯನ್ನು ಸ್ಥಾಪಿಸಲಿಕ್ಕಾಗಿ ಹುಟ್ಟಿದ ಕಾಲ್ಪನಿಕ ಕಥೆಯೊಂದನ್ನು ಹೇಳುತ್ತದೆ. ಈ ಕಥೆಯ ಮೂಲವೇನೋ ತಿಳಿಯದು. ಅವನ ನಳಚರಿತ್ರೆ ಕನ್ನಡದ ಜನಪ್ರಿಯ ಕಾವ್ಯಗಳಲ್ಲೊಂದು. ವಾರ್ಧಕ ಷಟ್ಪದಿ ಗಳನ್ನು ಬರೆಯುವುದರಲ್ಲಿ ಲಕ್ಷ್ಮೀಶನಿಗೆ ಹೆಗಲೆಣೆಯಾದ ಕವಿ ವಿರೂಪಾಕ್ಷಪಂಡಿತ. ಅವನ ಚನ್ನಬಸವಪುರಾಣ ನೆಪಕ್ಕೆ ಮಾತ್ರ ಚನ್ನಬಸವಣ್ಣನ ಕಥೆಯನ್ನು

ಅಪ್ರಾಯಾಸಿ. ಆದರೆ ಅದರ ತುಂಬ ಶಿವನ ಅನೇಕ ಲೀಲೆಗಳು, ವೀರಶೈವ ಧರ್ಮದ ತತ್ತ್ವಗಳು, ಕಾಲಜ್ಞಾನಗಳು ಸೇರಿಕೊಂಡು ಕಾವ್ಯವನ್ನು ಹಿಗ್ಗಲಿಸಿವೆ. ಇದೇ ಶತಮಾನದ ಇನ್ನೊಬ್ಬ ಉಲ್ಲೇಖಾರ್ಹವಾದ ಕವಿಯೆಂದರೆ ಕನ್ನಡ ಭಾಗವತವನ್ನು ಬರೆದ ಚಾಟುವಿಠ್ಠಲನಾಥ (ಸು. 1530). ಆ ಕೃತಿ ತೊರವೆ ರಾಮಾಯಣದಂತೆಯೇ ಕೇವಲ ಕಥೆಯ ಕಾರಣದಿಂದಾಗಿ ಜನಪ್ರಿಯತ್ವವನ್ನು ಪಡೆದಿದ್ದ ಇನ್ನೊಂದು ಕಾವ್ಯ.

ಹದಿನಾರನೆಯ ಶತಮಾನಕ್ಕೆ ಉತ್ತಮ ಷಟ್ಪದೀ ಕಾವ್ಯಗಳ ಕಾಲ ಮುಗಿಯಿತೆಂದು ಭಾವಿಸಬಹುದು. ರಕ್ಕಸತಂಗಡಿ ಯುದ್ಧದಲ್ಲಿ (ಕ್ರಿ.ಶ. 1565) ವಿಜಯನಗರ ಸಾಮ್ರಾಜ್ಯ ಒಡೆದ ಮೇಲೆ ಸಾಹಿತ್ಯಕ್ಕಿದ್ದ ರಾಜಾಶ್ರಯ ತಪ್ಪಿತು. ಜನಜೀವನ ಅಸ್ತವ್ಯಸ್ತವಾಯಿತು. ಮುಂದೆ, ಮೈಸೂರು ಕೆಳದಿ ಮುಂತಾದ ಅರಸರು ಆಶ್ರಯವನ್ನು ಕೊಟ್ಟರೂ ಒಟ್ಟಿನಲ್ಲಿ ಯಾವುದೇ ರೀತಿಯ ಶ್ರೇಷ್ಠ ಕಾವ್ಯಗಳ ಕಾಲ ಅಲ್ಲಿಗೆ ಮುಗಿಯಿತೆಂದೂ ಅಲ್ಲಿಂದ ಏನಿದ್ದರೂ ಆಧುನಿಕ ಯುಗಕ್ಕೆ ಬಂದಾಗಲೇ ಉತ್ತಮ ಕೃತಿಗಳನ್ನು ನಾವು ನೋಡುವುದೆಂದೂ ಹೇಳಬಹುದು. ಹದಿನೇಳನೆಯ ಶತಕದಿಂದೀಚೆಗೆ ಹುಟ್ಟಿದ ಕೆಲವು ಕೃತಿಗಳ ಪಟ್ಟಿಯನ್ನು ಮಾತ್ರ ಇಲ್ಲಿ ಕೊಡಲಾಗಿದೆ. ಕ್ರಿ.ಶ. 1606ರಲ್ಲಿದ್ದ ಎಳಂದೂರ ಹರೀಶ್ವರ ಪ್ರಭುದೇವರ ಪುರಾಣವನ್ನು ಬರೆದಿದ್ದಾನೆ. ಇದರಲ್ಲಿ ಅಲ್ಲಮಪ್ರಭುವಿನ ಕಥೆಯ ಜೊತೆಗೆ ಬೇರೆ ಭಕ್ತರ ಕಥೆಗಳೂ ದೊರಕುತ್ತವೆ. ಸು. 1650ರಲ್ಲಿದ್ದ ಸಿದ್ಧನಂಜೇಶ ಅಥವಾ ಚಿಕ್ಕ ನಂಜೇಶನ ಎರಡು ವಾರ್ಧಕ ಷಟ್ಪದೀ ರೂಪವಾದ ಕೃತಿಗಳಿವೆ: ಗುರುರಾಜ ಚಾರಿತ್ರ ಮತ್ತು ರಾಘವಾಂಕ ಚರಿತೆ. ಗುರುರಾಜಚಾರಿತ್ರದಲ್ಲಿ ಅನೇಕ ಶಿವಭಕ್ತರ ಕಥೆಗಳು ವರ್ಣಿತವಾಗಿವೆ. ರಾಘವಾಂಕಚಾರಿತ್ರ ಬೇರೊಂದು ದೃಷ್ಟಿಯಿಂದ ಮಹತ್ತ್ವದ ಕೃತಿ. ಕವಿ ರಾಘವಾಂಕನ ಬಗ್ಗೆ ನಮಗೆ ತಿಳಿದಿರುವ ಸಂಗತಿಗಳಿಗೆ ಇದು ಮುಖ್ಯ ಆಕರ. ಜೊತೆಗೆ, ಸಿದ್ಧನಂಜೇಶ ರಾಘವಾಂಕನ ಎಲ್ಲ ಕಾವ್ಯಗಳ ಸಾರಾಂಶವನ್ನು ಕೊಡುವಂತೆ ಹರಿಹರಮಹತ್ತ್ವ ಎಂಬ ಕೃತಿಯ ಸಾರಾಂಶವನ್ನೂ ಕೊಟ್ಟಿದ್ದಾನೆ. ರಾಘವಾಂಕನ ಈ ಕೃತಿ ಇಂದು ಅಲಭ್ಯವಾಗಿದೆಯಾದರೂ ಅದರ ಸಾರಾಂಶ ನಮಗೆ ದೊರಕುವುದರಿಂದಾಗಿ, ಹರಿಹರನ ವೈಯಕ್ತಿಕ ಜೀವನದ ಕೆಲವಾದರೂ ಪ್ರಮುಖ ಘಟನೆಗಳು ತಿಳಿದುಬರುವುದು ಇದರಿಂದ ಸಾಧ್ಯವಾಗಿದೆ. ಸು. 1650ರಲ್ಲಿದ್ದ ಗೋವಿಂದ (ಕೃತಿ: ನಂದಿ ಮಹಾತ್ಮ್ಯ), 1723ರಲ್ಲಿದ್ದ ಲಕ್ಷ್ಮಕವಿ (ಕೃತಿ: ಭಾರತ), 1750ರಲ್ಲಿದ್ದ ಬಬ್ಬೂರು ರಂಗ (ಕೃತಿ: ಅಂಬಿಕಾವಿಜಯ), ಸುಮಾರು ಅದೇ ಕಾಲದ ಕೋನಯ್ಯ (ಕೃತಿ: ಗಯಚರಿತ್ರೆ) — ಇವರೆಲ್ಲರೂ ಕುಮಾರವ್ಯಾಸನಿಂದ ಪ್ರಭಾವಿತರಾದ ಕವಿಗಳು. ಸು. 1675ರಲ್ಲಿದ್ದ ಮಹಲಿಂಗರಂಗನ ಅನುಭವಾಮೃತ ಅದ್ವೈತ ತತ್ತ್ವಗಳನ್ನು ಸುಲಭಶೈಲಿಯಲ್ಲಿ ಬೋಧಿಸುವ ಒಂದು ಬಹು ಜನಪ್ರಿಯ ಕೃತಿ. ದ್ವೈತ ತತ್ತ್ವಗಳನ್ನು ಬೋಧಿಸುವ ಜಗನ್ನಾಥದಾಸರ (ಸು. 1775) ಹರಿಕಥಾಮೃತ ಸಾರ ಇನ್ನೊಂದು ಜನಪ್ರಿಯ ಗ್ರಂಥವಾಗಿದೆ.



ಮುದ್ದಣ

ಷಟ್ಪದೀ ಗ್ರಂಥಗಳ ಮಾಲಿಕೆಯಲ್ಲಿ ಕೊನೆಯದಾಗಿ ಮುದ್ದಣನ (ಕ್ರಿ.ಶ. 1869–1901) ಹೆಸರನ್ನು ಹೇಳಬಹುದು. ಇವನು ಹಳೆಯ ಮತ್ತು ಹೊಸ ಸಾಹಿತ್ಯಗಳ ಸಂಧಿಕಾಲದಲ್ಲಿದ್ದ ಕವಿ. ಇವನ ಗದ್ಯಕೃತಿಗಳಾದ ರಾಮಾಶ್ವಮೇಧ ಮತ್ತು ಅದ್ಭುತರಾಮಾಯಣಗಳು ಪ್ರಖ್ಯಾತವಾಗಿವೆ. ಅಷ್ಟೊಂದು ಪ್ರಸಿದ್ಧವಲ್ಲದ ಇವನ ಕೃತಿ ಶ್ರೀರಾಮಪಟ್ಟಾಭಿಷೇಕ ವಾರ್ಧಕದಲ್ಲಿ ರಚಿತವಾಗಿರುವ ಸುಂದರ ಕಾವ್ಯ. ರಾವಣನನ್ನು ಕೊಂದು ಶ್ರೀರಾಮ ಸೀತೆಯೊಡನೆ ತನ್ನ ರಾಜಧಾನಿಗೆ ಬಂದು ಪಟ್ಟಾಭಿಷಿಕ್ತನಾಗುವ ಕಥೆಯನ್ನು ಹೇಳುವ ನೆಪದಲ್ಲಿ ಅನೇಕ ಸುಂದರವಾದ ವರ್ಣನೆಗಳನ್ನು ಕವಿ ಇಲ್ಲಿ ತಂದಿದ್ದಾನೆ. ವಸ್ತು, ರೀತಿಗಳೆರಡರ ದೃಷ್ಟಿಯಿಂದಲೂ ಈ ಕಾವ್ಯ ಸಂಪ್ರದಾಯಬದ್ಧವಾದುದಾಗಿದೆ.

ಮುದ್ದಣನಾದ ಮೇಲೂ ಹಲವರು ಷಟ್ಪದೀ ಕಾವ್ಯಗಳನ್ನು ಬರೆದಿರುವರಾದರೂ ಅವು ಅಷ್ಟಾಗಿ ಪರಿಗಣನೆಗೆ ಯೋಗ್ಯವಲ್ಲವೆಂದು ಇಲ್ಲಿ ಕೈಬಿಟ್ಟಿದೆ.

ಹಿಂದಿನ ಕನ್ನಡ ಸಾಹಿತ್ಯದಲ್ಲಿ ಎರಡು ಪ್ರಕಾರಗಳು ವಿಶೇಷವಾಗಿ ನಮ್ಮ ಗಮನವನ್ನು ಸೆಳೆಯುತ್ತವೆ—ಒಂದು ಚಂಪೂ, ಮತ್ತೊಂದು ಷಟ್ಪದಿ. ಕನ್ನಡ ಹಿರಿಯ ಕವಿಗಳು ವಿಶೇಷವಾಗಿ ಈ ಎರಡು ಪ್ರಕಾರಗಳನ್ನು ಆಶ್ರಯಿಸಿರುವುದೂ ಲಕ್ಷಿಸಬೇಕಾದ ಸಂಗತಿ (ಇದಕ್ಕೆ ಅಪವಾದಗುಳಂಟು). ಚಂಪೂ ವಿದ್ವಾಂಸರಿಗೆ ಪ್ರಿಯವಾದ ರೀತಿ. ಚಂಪೂಕಾವ್ಯಗಳು ಎಷ್ಟರಮಟ್ಟಿಗೆ ಜನಪ್ರಿಯವಾಗಿದ್ದುವೋ ತಿಳಿಯದು. ಆದರೆ ಬಹು ಹಿಂದಿನಿಂದ ಷಟ್ಪದೀ ಕಾವ್ಯಗಳು ಅತ್ಯಂತ ಜನಪ್ರಿಯವಾಗಿವೆ. ರಾಘವಾಂಕನ ಹರಿಶ್ಚಂದ್ರಕಾವ್ಯ, ಕುಮಾರವ್ಯಾಸ ಮತ್ತು ಲಕ್ಷ್ಮೀಶರ ಭಾರತಗಳು, ಕನಕದಾಸರ ನಳಚರಿತ್ರೆ ಇವು ಇದಕ್ಕೆ ಉದಾಹರಣೆಗಳು. ಇವನ್ನು ಇಂದಿಗೂ ಗಮಕಿಗಳು ವಾಚನಮಾಡಿ ಶ್ರೋತೃಗಳನ್ನು ತಣಿಸುತ್ತಾರೆ. ಇವು ಕವಿತೆಯ ದೃಷ್ಟಿಯಿಂದಲೂ ಉನ್ನತಮಟ್ಟದವು ಎಂಬುದರಲ್ಲಿ ಸಂದೇಹವಿಲ್ಲ. ಇವುಗಳ ವಸ್ತು ಸುಪ್ರಸಿದ್ಧ; ಭಾಷೆ ಸರಳ, ಜೊತೆಗೆ ರಾಗವಾಗಿ ಹಾಡಲೂ ಅನುಕೂಲ. ಅನುಭವಾಮೃತದಂಥ ವೇದಾಂತ ಗ್ರಂಥವೂ ಷಟ್ಪದೀರೂಪವಾಗಿದೆಯೆಂಬುದನ್ನು ಇಲ್ಲಿ ಸ್ಮರಿಸಬಹುದು.

ಇಪ್ಪತ್ತನೆಯ ಶತಮಾನದಲ್ಲಿ ಷಟ್ಪದೀ ಧೋರಣೆಯನ್ನು ಬಹುಯಶಸ್ವಿಯಾಗಿ ಬಳಸಿಕೊಂಡಿರುವವರೆಂದರೆ ಜಿ. ಪಿ. ರಾಜರತ್ನಂ. ಅವರ ಪುರುಷ ಸರಸ್ವತಿಯಲ್ಲಿ ಭಾಮಿನಿಯನ್ನು ಕನ್ನಡ–ಇಂಗ್ಲಿಷ್ ಭಾಷೆಯ ಮೂಲಕ ಹೊಸ ಮಾದರಿಯಲ್ಲಿ ಹೊಸ ಉದ್ದೇಶಕ್ಕಾಗಿ ಬಳಸಲಾಗಿದೆ. ಪುರುಷಸರಸ್ವತಿಯ ಗುಣಕಥನ ಮಾಡುವಾಗಲಾಗಲಿ, ಕುಕವಿನಿಂದೆ, ಸತ್ಕವಿಪ್ರಶಂಸೆಮಾಡುವಾಗಲಾಗಲಿ, ಹಾರ್ಮೋನಿಯಂ ಹರಣದಂತೆ ಕರ್ಣಕಥೆಯನ್ನು ಹೇಳುವಾಗಲಾಗಲಿ ತನಿಯಾದ ಹಾಸ್ಯ ವ್ಯಂಗ್ಯ ಬಹು ಸಹಜವಾಗಿ, ಅದ್ಭುತವಾಗಿ ಮೂಡಿನಿಂತಿದೆ. (ಎಂ.ಸಿ.)

**ಕನ್ನಡದಲ್ಲಿ ಸಣ್ಣ ಕಥೆಗಳು :** ಕಾದಂಬರಿಯ ತರುವಾಯ ಕನ್ನಡದಲ್ಲಿ ಸಣ್ಣ ಕಥೆಯೇ ಅತ್ಯಂತ ಜನಪ್ರಿಯವಾದ ಪ್ರಕಾರ. ಕಥೆ ಯಾವ ದೇಶಕ್ಕೂ ಹೊಸತಲ್ಲ. ಕಥಾಸರಿತ್ಸಾಗರ, ಪಂಚತಂತ್ರ ಮುಂತಾದ ಗಣಿಗಳು ಎಲ್ಲ ಭಾರತೀಯ ಭಾಷೆಗಳ ಸ್ವತ್ತು. ಆದರೆ ಸಣ್ಣಕಥೆ ಒಂದು ವಿಶಿಷ್ಟ ರೂಪವಾಗಿ ಜನ್ಮ ತಾಳಿದುದು ಸುಮಾರು ಐವತ್ತು ವರ್ಷಗಳ ಹಿಂದೆ. ಹೊಸಗನ್ನಡದಲ್ಲಿ ಈವರೆಗೆ ಬಂದಿರುವ ಕಥೆಗಾರರ ಸಣ್ಣ ಕಥೆಗಳ ಸಂಖ್ಯೆಯನ್ನು ಪಟ್ಟಿ ಮಾಡುವುದು ಪ್ರಯಾಸದ ಕೆಲಸ. ವಾರಪತ್ರಿಕೆ, ದಿನಪತ್ರಿಕೆ, ಮಾಸಪತ್ರಿಕೆಗಳಲ್ಲಿ ಹೊಸ ಹೊಸ ಕಥೆಗಾರರು ಹುಟ್ಟುತ್ತಲೇ ಇದ್ದಾರೆ. ಇದರ ತಂತ್ರ, ವ್ಯಾಪ್ತಿ, ಬರೆವಣಿಗೆಯ ರೀತಿ, ಒಟ್ಟಂದದ ಪರಿಣಾಮ ಹಾಗೂ ತೊಡಬಹುದಾದ ಅನೇಕ ರೂಪಗಳಿಗೆ **ನೋಡಿ—ಸಣ್ಣ ಕಥೆ.**

ಕನ್ನಡದಲ್ಲಿ ಸಣ್ಣಕಥೆಗೆ ವಿಶಿಷ್ಟ ರೂಪ ಕೊಟ್ಟವರು, ಚಾರಿತ್ರಿಕವಾಗಿ ಮೊಟ್ಟಮೊದಲು ಕಥೆಗಳನ್ನು ಬರೆದವರು ಯಾರು ಎಂಬ ಬಗ್ಗೆ ಜಿಜ್ಞಾಸೆಯಿದೆ. ಕೆರೂರು ವಾಸುದೇವಾಚಾರ್ಯರು, ಎಂ. ಎನ್. ಕಾಮತರು, ಪಂಜೆ ಮಂಗೇಶರಾಯರು ಇವರೆಲ್ಲ ಆರಂಭದಲ್ಲಿ ಸಣ್ಣ ಕಥೆಗಳನ್ನು ಬರೆದವರೆಂದು ಹೇಳಲಾಗಿದೆ. ಆದರೆ ಇವರಾರೂ ಅದೊಂದು ಸಾಹಿತ್ಯಜಾತಿಯೆಂಬ ಪ್ರಜ್ಞೆಯನ್ನು ಮೂಡಿಸಿರಲಿಲ್ಲ. ಆ ಪ್ರಜ್ಞೆಯನ್ನು ಮೂಡಿಸಿ ಅದನ್ನೇ ಮಾಧ್ಯಮವನ್ನಾಗಿ ಬಳಸಿದವರಲ್ಲಿ ಮೊದಲಿಗರು ಶ್ರೀನಿವಾಸರು. ಇವರ ನಿಜನಾಮ ಮಾಸ್ತಿ ವೆಂಕಟೇಶ ಅಯ್ಯಂಗಾರ್. ಸೀತೆಗೆ ಜನಕರಾಜ ಹೇಗೆ ತಂದೆಯೋ ಹಾಗೆ ಶ್ರೀನಿವಾಸರು ಸಣ್ಣಕಥೆಗೆ ಜನಕರೆಂಬ ರಂ. ಶ್ರೀ ಮುಗಳಿಯವರ ಮಾತು ಅರ್ಥಗರ್ಭಿತವಾಗಿದೆ. ಶ್ರೀನಿವಾಸರ ವಸ್ತುವಿನ ಆಯ್ಕೆ, ದೃಷ್ಟಿ, ತಿಳಿಹಾಸ್ಯ, ಸರಳಶೈಲಿ, ಪಾತ್ರಗಳ ಗಂಭೀರ ಸ್ವಭಾವ—ಇವು ಕನ್ನಡ ಕಥಾಲೋಕಕ್ಕೆ ಮಾರ್ಗದರ್ಶನವಾಗಿವೆ. ಇವರ ಕಥೆಗಳು ಅನೇಕ ಸಂಪುಟಗಳಲ್ಲಿ ಹರಿದಿವೆ. ಇವರ ಸುಬ್ಬಣ್ಣನನ್ನು ಸಣ್ಣಕಥೆಯ ಮಾದರಿಯೆಂದೇ ಕರೆಯುವವರಿದ್ದಾರೆ. ರಂಗಪ್ಪನ ದೀಪಾವಳಿಯಿಂದ ಹಿಡಿದು ಇವರ ಎಲ್ಲ ಕಥೆಗಳಲ್ಲಿ ಕಾಣುವುದು ಸಾಮಾನ್ಯ

ಘಟನೆಗಳನ್ನು ಉತ್ಪ್ರೇಕ್ಷೆಯಿಲ್ಲದೆ ಹೇಳುವ ಕಲೆ. ಇವರ ಗಮನ ಮುಖ್ಯವಾಗಿ ಆತ್ಮದ ಬೆಳವಣಿಗೆಯ ಕಡೆಗೆ. ಇವರ ಕಥೆಗಳಲ್ಲಿ ಆವೇಶವಿಲ್ಲ, ಚಮತ್ಕಾರವಿಲ್ಲ, ವಿಸ್ಮಯವಿಲ್ಲ. ಉದಾತ್ತಗುಣಗಳಿಂದ ತುಂಬಿದ ಆತ್ಮದ ಹಿರಿಯ ಚೇತನವನ್ನು ಎಲ್ಲ ಕಥೆಗಳಲ್ಲೂ ಕಾಣುತ್ತೇವೆ. ಇವರ ಇಂದಿರೆಯೊ ? ಅಲ್ಲವೊ ? ಬೀದಿಯಲ್ಲಿ ಹೋಗುವ ನಾರಿ, ನಮ್ಮ ಮೇಷ್ಟ್ರು, ರಂಗಸ್ವಾಮಿಯ ಅವಿವೇಕ—ಇವುಗಳಲ್ಲಿ ಸಣ್ಣಕಥೆಯ ಎಲ್ಲ ಸಲ್ಲಕ್ಷಣಗಳನ್ನೂ ಕಾಣಬಹುದು.



ಮಾಸ್ತಿ ವೆಂಕಟೇಶ ಅಯ್ಯಂಗಾರ್

ಶ್ರೀನಿವಾಸರ ಎಲ್ಲ ಕಥೆಗಳನ್ನು ಬಿಡಿಯಾಗಿ ನೋಡಬಾರದು: ಹಿಡಿಯಾಗಿ ನೋಡಬೇಕು. ಅವರಲ್ಲಿ ಸಾಮಾಜಿಕ, ಪೌರಾಣಿಕ, ಐತಿಹಾಸಿಕ ಎಲ್ಲ ಬಗೆಯ ಕಥೆಗಳೂ ಇವೆ. ಸಾಮಾಜಿಕ ಕಥೆಗಳಲ್ಲಿ ಜೀವನಶ್ರದ್ಧೆ ಕಂಡರೆ ಐತಿಹಾಸಿಕ, ಪೌರಾಣಿಕ ಕಥೆಗಳಲ್ಲಿ ಗುಪ್ತಗಾಮಿನಿಯಾಗಿ ಹರಿಯುವ ಸಂಸ್ಕೃತಿ ಪ್ರವಾಹವನ್ನು ಕಾಣಬಹುದು. ಬಾದಷಹನ ದಂಡನೆ, ಪಂಡಿತನ ಮರಣಶಾಸನ ಇವುಗಳಲ್ಲಿ ರಾಜಕೀಯ ಜೀವನ ಕಂಡರೆ ನಿಜಗಲ್ಲಿನ ರಾಣಿ, ಪೆನಗೊಂಡೆಯ ಕೃಷ್ಣಮೂರ್ತಿ ಕಥೆಗಳಲ್ಲಿ ನಾಡಿನ ಹೆಣ್ಣುಮಕ್ಕಳ ಧೀರೋದಾತ್ತ ಚಿತ್ರಗಳನ್ನು ಕಾಣಬಹುದು. ಸಾರಿಪುತ್ರನ ಕೊನೆಯ ದಿನಗಳು, ಒಂದು ಹಳೆಯ ಕಥೆ, ಆಚಾರ್ಯರ ಪತ್ನಿ, ಹೇಮಕೂಟದಿಂದ ಬಂದಮೇಲೆ, ಮಸುಮತ್ತಿ, ಗೌತಮಿ ಹೇಳಿದ ಕಥೆ ಇವುಗಳಲ್ಲಿ ವಸ್ತುವಿನ ಆಯ್ಕೆಯ ಅನನ್ಯತೆಯನ್ನು ಕಾಣಬಹುದು.

ಶ್ರೀನಿವಾಸರ ಮಾರ್ಗದಲ್ಲಿ ಬೆಳೆದು ಬಂದ ಕೆಲವು ಕಥೆಗಾರರಲ್ಲಿ ಮುಖ್ಯರೆಂದರೆ ಆನಂದರು (ಎ. ಸೀತಾರಾಂ). ಇವರ ಕಥೆ ಭವತಿ ಭಿಕ್ಷಾಂ ದೇಹಿ ಮೊದಲು ಪ್ರಬುದ್ಧ ಕರ್ಣಾಟಕದಲ್ಲಿ ಪ್ರಕಟವಾಯಿತು. ವಾರದ ಹುಡುಗನ ದುಃಖಮಯ ಜೀವನ ಇಲ್ಲಿ ಚಿತ್ರಿತವಾಗಿದೆ. ಆನಂದರು ಕಥೆಗಾರರೆಂದು ಹೆಸರಾದುದು ಶೃಂಗಾರ ಹಾಗೂ ಪ್ರಣಯಕಥೆಗಳಿಂದ. ಹೆಂಡತಿಯ ಕಾಗದ, ಪದ್ಮಪಾಕ, ರಾಧೆಯ ಕ್ಷಮೆ, ನಾವು ಹಾಗೆಯೇ—ಇವು ಪ್ರಣಯಜೀವನದ ನಯನಾಜೂಕುಗಳನ್ನು ಚಿತ್ರಿಸುತ್ತವೆ. ಗಂಡಹೆಂಡತಿಯರ ಸಂಭಾಷಣೆ ಅತ್ಯಂತ ನವುರಾಗಿ ಮಾರ್ಮಿಕವಾಗಿ ಯಥಾವತ್ತಾಗಿ ಇವರ ಕಥೆಗಳಲ್ಲಿ ಕಾಣಬಹುದು. ನಾನು ಕೊಂದ ಹುಡುಗಿ ಇವರ ಅತ್ಯುತ್ತಮ ಕೃತಿ. ಒಂದು ಸುಂದರ ಜಗತ್ತನ್ನೇ ಕಥೆಯ ಪ್ರಾರಂಭದಲ್ಲಿವರು ಸೃಷ್ಟಿಸಿಬಿಡುತ್ತಾರೆ. ಕಥೆಯ ಕೊನೆಯೂ ಅತಿ ರಮ್ಯವಾದುದು. ಇಲ್ಲಿ ಯಾವ ಭಾವಾತಿರೇಕಕ್ಕೂ ಎಡೆಗೊಟ್ಟಿಲ್ಲ. ಇವರ ಹೆಂಡತಿಯ ಕಾಗದ ಕಥಾರಚನಾ ಕೌಶಲ್ಯಕ್ಕೆ ಮತ್ತೊಂದು ಸಾಕ್ಷಿ. ಶೈಲಿಯ ದೃಷ್ಟಿಯಿಂದಲೂ ಕನ್ನಡ ಗದ್ಯ ಸಾಹಿತ್ಯಕ್ಕೆ ಮಹತ್ತ್ವದ ಕೊಡುಗೆಗಳಾಗಿವೆ—ಇವರ ಕಥೆಗಳು.

ಶ್ರೀ ಸ್ವಾಮಿ ಹಾಗೂ ಕೆ. ಗೋಪಾಲಕೃಷ್ಣರಾಯರನ್ನೂ ಇದೇ ಗುಂಪಿಗೆ ಸೇರಿಸಬಹುದು. ಇವರು ತಮ್ಮ ಕಥೆಗಳಲ್ಲಿ ವ್ಯಕ್ತಿಯ ಬಾಳಿನ ರೀತಿನೀತಿ, ಗುರಿಗಳತ್ತ ತಮ್ಮ ದೃಷ್ಟಿ ಹಾಯಿಸಿದ್ದಾರೆ. ಇವರ ಜಟಕಾ ಸಾಹೇಬು, ಮಾಗಡಿ ರಂಗ ಇವು ಮಾನವಸ್ವಭಾವದ ಸುಪ್ತ ಹಿರಿಮೆಯ ದ್ಯೋತಕಗಳಾಗಿವೆ. ಸುಶೀಲಾ ಸಂಕೇತ್ ಸೊಗಸಾದ ಕಥೆ; ಹೆಣೆದಿರುವ ರೀತಿ ಅತೀವ ಮನೋಹರವಾದುದು. ಶ್ರೀ ಸ್ವಾಮಿಯವರು ಸುಂದರ ಕಥೆಗಳನ್ನು ಬರೆಯಬಲ್ಲರು. ಪುಷ್ಪಮಾಲೆ, ನಂಜಮ್ಮ ಗೋಧೂಳಿಲಗ್ನ ಕಥೆಗಳಲ್ಲಿ ಭಾವನೆಗಳಲ್ಲದೆ ಪಾತ್ರಸೃಷ್ಟಿಯೂ ಹಿತವಾಗಿದೆ. ಪತಿ ಪರಾಯಣೆ, ಬೀಬಿ ನಾಚ್ಚಿಯಾರ್ ಅಂಥ ಕಥೆಗಳನ್ನು ಆಸಕ್ತಿಯಿಂದ ಓದಬಹುದು. ಜೀವನದ ಯಾವ ಅಂಶವನ್ನಾದರೂ ತೆಗೆದುಕೊಂಡು ಕಥೆಯಾಗಿ ಮಾರ್ಪಡಿಸಬಲ್ಲ ಶಕ್ತಿ ಇವರದು.

ಎ. ಆರ್. ಕೃಷ್ಣಶಾಸ್ತ್ರಿಗಳ ಶ್ರೀಪತಿಯ ಕಥೆಗಳು ಸೊಗಸಾದ ಕಥಾ ಸಂಕಲನ. ಶಾಸ್ತ್ರಿಗಳ ಕಥೆಗಳಲ್ಲಿ ಜೀವನದ ಒಂದು ದರ್ಶನ, ಮೌಲ್ಯಗಳ ಸೂಚನೆ ಅಂತರ್ಗತವಾಗಿ ಬರುತ್ತದೆ. ಇತರರು ಹತ್ತು ಮಾತಿನಲ್ಲಿ ಹೇಳುವುದನ್ನು ಶಾಸ್ತ್ರಿಗಳು ಒಂದೇ ಮಾತಿನಲ್ಲಿ ಖಚಿತವಾಗಿ ಮರೆಯದಂತೆ ಹೇಳಬಲ್ಲರು. ಊಟದಲ್ಲಿ ಉಪಚಾರ, ಅಗ್ಗದ ಮನೆಗಳಲ್ಲಿ ಹಾಸ್ಯವಿದ್ದರೆ ಶ್ಯಾನುಭೋಗನ ಪುಣ್ಯದಲ್ಲಿ ಹಳ್ಳಿಯ ಕಲಕಿದ ರಾಜಕೀಯವಿದೆ. ಇವರ ಎಲ್ಲ ಕಥೆಗಳಲ್ಲೂ ಕನ್ನಡತನ ಎದ್ದು ಕಾಣುತ್ತದೆ.

ಎಸ್. ಜಿ. ಶಾಸ್ತ್ರಿಗಳ ಕಥೆಗಳನ್ನು ಬೇರೊಂದು ಗುಂಪಿಗೆ ಸೇರಿಸಬಹುದು. ಮಧ್ಯಮ ವರ್ಗದವರ ಜೀವನದ ಹೊಳಪು ಇವರ ಕಥೆಗಳಲ್ಲಿ ಎದ್ದುಕಾಣುತ್ತದೆ. ಕಥೆಗಳ ಸೊಗಸು, ಭಾವಗಳು ಚೆನ್ನಾಗಿ ಪ್ರಖರವಾಗಿವೆ. ಪರಪುರುಷದಲ್ಲಿ ರಚನಾ ವೈವಿಧ್ಯವನ್ನು ಕಾಣಬಹುದು. ತುಂಟಮರಿಯಲ್ಲಿ ಮನ ಕರಗಿಸುವ ಚಿತ್ರವಿದೆ. ಶಾಸ್ತ್ರಿಗಳ ಕಥೆಗಳಲ್ಲಿ ನೈಸರ್ಗಿಕ ಕಲಾವಂತಿಕೆಯಿದೆ.

ನವರತ್ನ ರಾಮರಾಯರ ಕಥೆಗಳಲ್ಲಿ ಕುತೂಹಲತೆಗೆ ವಿಪುಲ ಆದ್ಯತೆಯಿದೆ. ಲಕ್ಷ್ಮಣರಾಯನ ಭಾಗ್ಯದಲ್ಲಿ ಲಕ್ಷ್ಮಣರಾಯ ದೇವಿಯ ಮಂದಿರಕ್ಕೆ ಸೇರಿ ಮಂಗ ಮಾರಿ ಸಾಹೇಬರನ್ನು ಕಂಡು ಬಹುಮಾನ ಪಡೆಯುವವರೆಗೆ ಪತ್ತೆದಾರಿ ಕಾದಂಬರಿಯಂತೆ ಕುತೂಹಲ ಕೆರಳುತ್ತಿರುತ್ತದೆ. ಹೆಣ್ಣುಹೃದಯ ಉತ್ತಮ ಕಥೆ. ಮಾತಿನ ಧೋರಣೆಯಲ್ಲಿ ಸನ್ನಿವೇಶ ರಚನೆಯಲ್ಲಿ ಕಾಣುವ ಕಚೇರಿ ವಾತಾವರಣ ಇವರ ಕೃತಿಗಳಿಗೆ ವಿಶಿಷ್ಟ ಸೊಗಸು ತಂದಿದೆ.

ಉತ್ತರ ಕರ್ಣಾಟಕದ ಭಾಗದಿಂದಲೂ ಸಣ್ಣ ಕಥಾಸಾಹಿತ್ಯ ವಿಪುಲವಾಗಿ ಬೆಳೆಯಿತು. ಧಾರವಾಡದ ಆನಂದಕಂದರ ಕಥೆಗಳು ಇಂದಿಗೂ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡಿವೆ. ಅಲ್ಲಿನ ಹಳ್ಳಿಗಳಲ್ಲಿಯ ಜೀವನವೇ ಇವರ ಕಥಾವಸ್ತು. ಇವರ ಕಥೆಗಳಲ್ಲಿ ಭಾವನಾಪರವಶತೆ ಮಾಯವಾಗಿ ವಾಸ್ತವ ದೃಷ್ಟಿ ಹರಿದಿದೆ. ಇಬ್ಬಣದ ದಿಬ್ಬಣದಲ್ಲಿ ಶುದ್ಧ ವಾಸ್ತವತೆಯನ್ನು ಕಾಣಬಹುದು. ಭಾಷೆಯ ಬಳಕೆಯಲ್ಲೂ ಆನಂದಕಂದರ ಕೈ ಮಿಗಿಲಾದುದು. ಸೀಮೆಯಕಲ್ಲಿನ ಶಾಸನದ ಭಾಷೆ, ಜೋಗತಿ ಕಲ್ಲಿನಲ್ಲಿ ಧರಮಣ್ಣನ ಕೆಚ್ಚು ತುಂಬಿದ ಕನ್ನಡ, ಕಂಕಣದ ಕೈಯ ಐತಿಹಾಸಿಕತೆ ಹೊರ ಸೂಸುವ ಭಾಷೆ ಇವರ ಭಾಷಾ ಪ್ರಭುತ್ವವನ್ನು ಸಾರುತ್ತವೆ.

ಈ ಕಡೆಯ ಇನ್ನೊಬ್ಬ ಪ್ರಮುಖ ಕಥೆಗಾರರೆಂದರೆ ಕೃಷ್ಣಕುಮಾರ ಕಲ್ಲೂರ. ಇವರ ಮೊದಲ ಸಂಗ್ರಹವಾದ ಬಿಸಿಲುಗುದುರೆಯಲ್ಲಿ ಭಾಷೆ ಕಾವ್ಯಮಯವಾಗಿದ್ದರೂ ಅನುಭವದ ದೃಷ್ಟಿಯಿಂದ ಅಪಕ್ವಕತೆಗಳೆನಿಸಿದರೂ ಇವರ ಎರಡನೆಯ ಸಂಕಲನ ಜೀವನ ಎಂಬುದರಲ್ಲಿ ಉತ್ತಮ ಕಥೆಗಳಿವೆ. ಇವರ ಕಥೆಗಳಲ್ಲಿ ಗೆಳೆತನ ಹಾಗೂ ಆದರ್ಶಪ್ರಿಯತೆಗಳು ವೈಚಾರಿಕವಾಗಿ ಬಂದಿವೆ. ಜೀವನ ಎಂಬ ಕಥೆಯಲ್ಲಿನ ರಮಾಬಾಯಿಯ ಪಾತ್ರಸೃಷ್ಟಿ ಅದ್ಭುತವಾದುದು. ಇದು ಕೃಷ್ಣಕುಮಾರರ ಕಲಾವಂತಿಕೆಗೆ ಸಾಕ್ಷಿಯಾಗಿದೆ. ಮಧ್ಯವಯಸ್ಸಿನಲ್ಲೆ ಮೃತ್ಯುವನ್ನಪ್ಪಿದ ಇವರ ಕೆಲವು ಕಥೆಗಳನ್ನು ನೋಡಿದಾಗ ಕಥಾವಸ್ತುವಿನ ಆಯ್ಕೆಯಿಂದ ಹಿಡಿದು ಅದರ ನಿರ್ವಹಣದ ವರೆಗೆ ಇವರ ಕಲೆಗಾರಿಕೆ ನಿರಂತರವಾಗಿ ಹರಿದಿರುವುದರ ಅರಿವಾಗುತ್ತದೆ. ಒಂದು ಕಾದಂಬರಿಗೆ ತುಂಬುವಷ್ಟು ವಸ್ತು ಅವರ ಹತ್ತೆಂಟು ಪುಟಗಳ ಕಥೆಗಳಲ್ಲಿ ಹರಿದಿದೆ. ಅಸಮರ್ಥ ಕಥೆಗಾರನ ಕೈಗೆ ಸಿಕ್ಕಾಗ ಇದು ದೊಡ್ಡ ದೋಷವೇ ಆಗಬಹುದು.

ಗಂಗೆಯ ಗುತ್ತಿಗೆಯನ್ನು ಬರೆದು ಪ್ರಸಿದ್ಧರಾದ ಟೇಂಗ್ಸೆ ಗೋವಿಂದರಾಯರ ಕೈಯಲ್ಲಿ ಸಣ್ಣಕಥೆ ಹೊಸ ರೂಪು ತಳೆಯಿತು. ಟೇಂಗ್ಸೆಯವರ ಗಂಗೆಯ ಗುತ್ತಿಗೆ ಹಾಗೂ ಛಪ್ಪರಬಂಧ ಪ್ರತಿಭೆಯ ಎರಡು ಮುಖಗಳು. ಮೊದಲನೆಯದರಲ್ಲಿ ವಿನೋದದ ಆವರಣವಿದ್ದರೆ ಎರಡನೆಯದರಲ್ಲಿ ಬಡತನದ ವಿಷಮತೆಯಿದೆ. ಪರಿಣಾಮದ ದೃಷ್ಟಿಯಿಂದ ಛಪ್ಪರಬಂಧ ಯಶಸ್ವೀ ಕಥೆ.

ರಂ. ಶ್ರೀ. ಮುಗಳಿಯವರ ಕನಸಿನ ಕೆಳದಿ ಸಂಕಲನದಲ್ಲಿ ಉತ್ತಮವಾದ ಕಥೆಗಳಿವೆ. ಸುಸಂಬದ್ಧವಾದ ಕಥಾರಚನೆ, ಗುರಿತಪ್ಪದ ಪರಿಣಾಮ ಇವರ ಕಥೆಗಳ ವೈಶಿಷ್ಟ್ಯ. ಮಧ್ಯಮವರ್ಗದ ಜನರ ಅನೇಕ ತೊಂದರೆ ತೊಡಕುಗಳು ಹೃದಯಂಗಮವಾಗಿ ಚಿತ್ರಿತವಾಗಿವೆ. ವಿತಂತು ವೇಶ್ಯೆಯಲ್ಲಿ ಉತ್ತಮ ಕಥೆಯ ಎಲ್ಲ ಗುಣಗಳೂ ಇವೆ. ಶೈಲಿ ನಿರರ್ಗಳವಾಗಿ ಹರಿಯುತ್ತದೆ. ದುರ್ದೈವಿ ಹೆಣ್ಣೊಬ್ಬಳ ಹೃದಯವಿದ್ರಾವಕ ಚಿತ್ರಣ ಇಲ್ಲಿದೆ.

ಇನ್ನು ಗೊರೂರು ರಾಮಸ್ವಾಮಿ ಅಯ್ಯಂಗಾರ್ ಹಾಗೂ ಪಡುಕೋಣೆ ರಮಾನಂದರಾಯರ ಕಥೆಗಳನ್ನು ಪ್ರತ್ಯೇಕವಾಗಿಯೇ ನೋಡಬೇಕು. ಇಬ್ಬರೂ ಹೆಸರಾದ ನಗೆಗಾರರು. ಇವರ ಹಾಸ್ಯ, ವ್ಯಕ್ತಿಗಳ ವಿಕ್ಷಿಪ್ತತೆ ಹಾಗೂ ಘಟನೆಗಳ ಚಮತ್ಕಾರ

ಗಳಿಂದಾಗಿ ಕಳೆಗೂಡಿ ನಿಲ್ಲುತ್ತದೆ. ತಾಂತ್ರಿಕವಾಗಿ ಇವರ ಬರೆಹಗಳಲ್ಲಿ ಸಣ್ಣಕಥೆಯ ಅಂಶಗಳು ಕಡಿಮೆಯಿದ್ದರೂ ಕಥನರೀತಿ ದೃಢವಾದುದು. ರಮಾನಂದರಾಯರ ಹುಚ್ಚು ಬೆಳುದಿಂಗಳಿನ ಹೂಬಾಣಗಳು ಎಂಬ ಆಧಾರಿತ ಸಂಗ್ರಹದಲ್ಲಿ ಸಣ್ಣಕಥೆ ಗಳೆನಿಸುವ ಕೃತಿಗಳಿದ್ದರೂ ಅವು ಚೆಲ್ಲುವ ಹಾಸ್ಯಗಳಿಂದಾಗಿ ಅವು ನಗೆಬರೆಹ ಗಳಾಗಿಯೇ ಉಳಿದಿವೆ. ಗೊರೂರರ ಎಲ್ಲ ಬರೆಹಗಳಿಂದಲೂ ಕೆಲವು ಕಥೆಗಳನ್ನು ಆರಿಸಬಹುದು. ಪೈಯ್ಯಾರಿ, ಗರುಡಗಂಬದ ದಾಸಯ್ಯ, ಬೆಸ್ತರ ಕರಿಯ, ಶಿವರಾತ್ರಿ ಈ ಸಂಗ್ರಹಗಳಲ್ಲಿ ಹಲವು ಉತ್ತಮ ಕಥೆಗಳಿವೆ. ಅಂದರೆ ಗೊರೂರರ ಹಾಸ್ಯ ಪ್ರತಿಭೆಯಲ್ಲಿ ಕಥಾಂಶ ಮಸುಕಾಗುತ್ತದೆ. ಹಾಸ್ಯರಸ ಹೊನಲಾದಾಗ ಇವರ ಕಥೆ ಗಳು ಉಪಕಥೆಗಳ ಗೊಂಚಲಾಗುತ್ತವೆ. ಹಾರುವಯ್ಯ ಹಜಾಮನಾದುದ್ದು, ಆಚಾರ ಕೆಟ್ಟರೂ ಆಕಾರ ಕೆಡಬಾರದು, ಡೋಂಕುಬಾಲದಂಥ ಉಜ್ಜ್ವಲ ಕಥೆಗಳೂ ಸಂಕಲನ ಗಳಲ್ಲಿವೆ. ಗೊರೂರರ ಕಥೆಗಳು ಹೆಚ್ಚು ಚಿತ್ರಮಯವೂ ಆ ಚಿತ್ರಗಳು ಹಾಸ್ಯ ಮಯವೂ ಆಗಿವೆಯೆನ್ನಬಹುದು. ವಾಸ್ತವತೆಯ ಒಂದು ಕಾರ್ಯವಾದ ಜೀವನ ಚಿತ್ರಣದಲ್ಲಿ ಗೊರೂರರು ಯಶಸ್ವಿಯಾಗಿದ್ದಾರೆ ಎನ್ನಬೇಕು.

ಕೊಡಗಿನ ಗೌರಮ್ಮನವರ ಹೆಸರು ಸಣ್ಣಕಥೆಯೊಂದಿಗೆ ನಿಕಟಸಂಬಂಧವನ್ನು ಬೆಳೆಸಿಕೊಂಡಿದೆ. ಹೆಣ್ಣಿನ ಬಾಳಿನ ತೊಡಕುತೊಂದರೆಗಳನ್ನು ತಮ್ಮ ಕಥೆಗಳ ಮೂಲಕ ಈಕೆ ಚಿತ್ರಿಸಿದ್ದಾರೆ. ಮರದ ಬೊಂಬೆ ಕಥೆಯಲ್ಲಿ ಕಾಣುವ ಹೆಣ್ಣು ಜೀವನದ ದೃಷ್ಟಿಕೋನ ಇವರು ಒಳ್ಳೆಯ ಕಥೆಗಾರ್ತಿ ಎನ್ನಲಿಕ್ಕೆ ಸಾಕ್ಷಿಯಾಗಿದೆ. ಇವರ ಜೊತೆಗೇ ಹೇಳಬೇಕಾದ ಇನ್ನೊಂದು ಹೆಸರೆಂದರೆ ಶ್ಯಾಮಲಾದೇವಿಯರದು. ಹೂಬಿಸಿಲು, ಹೊಂಬಿಸಿಲು ಎಂಬ ಎರಡು ಕಥಾಸಂಗ್ರಹಗಳಲ್ಲೂ ಮಧ್ಯಮವರ್ಗದ ಕೌಟುಂಬಿಕ ಜೀವನ ಚಿತ್ರಿತವಾಗಿದೆ.

ಈ ಗುಂಪಿನಲ್ಲಿ ಹೆಸರಿಸಬೇಕಾದ ಇನ್ನೊಂದು ಹೆಸರೆಂದರೆ ದೇವುಡು ಅವರದು. ಪಾತ್ರಗಳ ಕ್ರಮಬದ್ಧ ವಿಕಾಸ, ಕಥೆ ಪಡೆಯುವ ಏರಿಳಿತಗಳು ಸನ್ನಿವೇಶಗಳ ಯಥಾರ್ಥತೆಗಳಿಂದಾಗಿ ದೇವುಡು ಅವರ ಕಥೆಗಳು ಮಹತ್ತ್ವದ್ದಾಗಿವೆ.

ಈಗ ಪ್ರಸಿದ್ಧ ಕವಿಗಳೆನಿಸಿದ ಬೇಂದ್ರೆ, ಕುವೆಂಪು, ಪುತಿನ ಇವರುಗಳೂ ಕಥೆ ಗಳನ್ನು ಬರೆದಿದ್ದಾರೆ. ಇವನ್ನು ಪ್ರತ್ಯೇಕವಾಗಿಯೇ ನೋಡಬೇಕು. ಸಣ್ಣಕಥೆ ತನ್ನ ಸ್ವಭಾವದಲ್ಲಿ ಭಾವಗೀತೆಗೆ ಸಮೀಪನಾಗಿರುವುದರಿಂದ ಇವರು ಬರೆದ ಕಥೆಗಳು ಪ್ರಮಾಣದಲ್ಲಿ ಅಲ್ಪವಾದರೂ ಹಿರಿಮೆಯಲ್ಲಿ ಮಹತ್ತ್ವಪೂರ್ಣವಾಗಿವೆ. ಬೇಂದ್ರೆ ಯವರ ಪಾಲಾ ಪೂ, ಹಿಂದ ಕತ್ತಿ, ಏಕಾಕಿನಿ ಉತ್ತಮವಾದ ಕಥೆಗಳಾಗಿವೆ. ಕೆಲವಂತೂ ಗದ್ಯದಲ್ಲಿ ಬರೆದ ಭಾವಗೀತೆಗಳಾಗಿವೆ. ಬೇಂದ್ರೆಯವರ ಶೈಲಿ ಈ ಕೃತಿಗಳಲ್ಲಿ ಸಂಗೀತದ ನಾದ ಲೋಲುಪತೆಯನ್ನು ಪಡೆದಿದೆ.

ಆದರ್ಶವಾದ, ಸಮಾಜವನ್ನು ತಿದ್ದುವ ಬಯಕೆ ಕುವೆಂಪು ಅವರಲ್ಲಿದ್ದರೂ ನಿಸರ್ಗಪ್ರಿಯರಾದ ಅವರ ಕಥೆಗಳಲ್ಲಿ ಸುಧಾರಣಾಮನೋಭಾವ ಹಿನ್ನೆಲೆಯಲ್ಲಿ ಉಳಿದಿದೆ. ನನ್ನ ದೇವರು ಮುಂತಾದ ಕಥೆಗಳಲ್ಲಿ ಆದರ್ಶತ್ವವನ್ನು ಕಂಡರೆ ಧನ್ವಂತರಿಯ ಚಿಕಿತ್ಸೆ ಎಂಬ ಕಥೆಯಲ್ಲಿ ಸಾಮಾಜಿಕ ಕ್ರಾಂತಿಯ ಒಲವನ್ನು ಕಾಣ ಬಹುದು. ಮೀನಾಕ್ಷಿಯ ಮನೆ ಮೇಷ್ಟ್ರು ಕಥೆಯಲ್ಲಿ ಕಥೆಗಾರರನ್ನು ಆಕರ್ಷಿಸುವ ವಸ್ತುವಿನ ವಿಶಿಷ್ಟ ನಿರೂಪಣೆಯನ್ನು ಕಾಣಬಹುದು. ಇಲ್ಲಿನ ವಸ್ತು ಚಿರಪರಿಚಿತ ಭಗ್ನ ಪ್ರಣಯ. ತಾರುಣ್ಯದ ಭಗ್ನಪ್ರಣಯ ಸುಂದರವಾಗಿ ಇಲ್ಲಿ ನಿರೂಪಿತವಾಗಿದೆ. ಯಾರೂ ಅರಿಯದ ವೀರದಲ್ಲಿ ಕಥೆಗಾರರು ಉತ್ತಮ ಕಥೆಗಾರಿಕೆಯ ತುತ್ತತುದಿ ಯನ್ನು ಮುಟ್ಟಿದ್ದಾರೆ. ಇವರ ಶೈಲಿ ಭಾವಗೀತೆಯಂತಿದ್ದರೂ ಮಹಾಕಾವ್ಯದ ಸನ್ನಿವೇಶವೊಂದರ ಪ್ರಭಾವವನ್ನು ಬೀರುತ್ತದೆ.

ಪುತಿನ ಅವರ ಧ್ವಜರಕ್ಷಣೆಯಲ್ಲಿ ಕೆಲವು ಸತ್ತ್ವಪೂರ್ಣ ಕಥೆಗಳಿವೆ. ಧ್ವಜ ರಕ್ಷಣೆಯ ವಸ್ತು ರಾಜಕೀಯಕ್ಕೆ ಸಂಬಂಧಿಸಿದ್ದರೂ ಆದರ್ಶಪ್ರಿಯ ಯುವಕನ ಅಂತ ರಂಗದ ತುಮುಲವನ್ನೂ ಚಿತ್ರಿಸುತ್ತದೆ.

ಇವರುಗಳಲ್ಲದೆ ಮೊದಲ ತಲೆಮಾರಿನಲ್ಲಿ ಇನ್ನೂ ಅನೇಕರು ಕಥೆಗಳನ್ನೂ ಬರೆದರು. ಭಾರತೀಪ್ರಿಯರ ವೀಣೆ ಹಾಗೂ ಒಂದು ಹಳೆಯ ಕತೆ ಕನ್ನಡದ ಜನ ಎಂದೂ ಮರೆಯಲಾರದಂಥ ಕೃತಿಗಳು. ಇವರ ಕಥೆಗಳಲ್ಲಿ ಸನ್ನಿವೇಶವನ್ನು ಮನಸ್ಸಿನಲ್ಲಿ ಕೆತ್ತಿನಿಲ್ಲಿಸುವಂತೆ ಮಾಡುವ ಮೋಡಿಯಿದೆ. ರಾಹು, ನಾದನಾಮಕ್ರಿಯಾ, ಸಾಧನೆ ಮೊದಲಾದ ಕಥೆಗಳಲ್ಲಿ ಹೊಳಪಿನ ಶೈಲಿಯನ್ನು ಕಂಡರೆ ಮೋಚಿಯಲ್ಲಿ ನಿರಾಡಂಬರ ವಾದ ಶೈಲಿಯಿದೆ. ಮೋಚಿ ಇವರ ಪ್ರಾತಿನಿಧಿಕ ಕಥೆಯಲ್ಲದಿದ್ದರೂ ಉತ್ತಮ ಕಥೆ.

ಕ್ಷೀರಸಾಗರರ ನಮ್ಮೂರಿನ ಪಶ್ಚಿಮಕ್ಕೆ, ಭಾವಪೂರ್ಣತೆ ಹಾಗೂ ರಸೋತ್ಕರ್ಷ ಗಳಿಗೆ ಮಾದರಿಯಾದ ಕಥೆ. ಎಂ. ವಿ. ಸೀತಾರಾಮಯ್ಯನವರ ಹುಟ್ಟಿನ ಹಂಬಲು ಹೃದಯವೇದಕವಾದ ಕಥೆ. ವೈನಾಡಿನ ಸ್ಥಾನಿಕ ಸೌಂದರ್ಯವನ್ನಲ್ಲದೆ ಅಲ್ಲಿಯ ಜನರ ವಿಚಿತ್ರ ನಡೆವಳಿಕೆಗಳನ್ನು ಭಾರತೀಸುತರ ಕಥೆಗಳಲ್ಲಿ ಕಾಣಬಹುದು. ಹೀಗೆಯೇ ಶಂಕರಭಟ್ಟರ ಅದ್ದಿಟ್ಟು, ಜಡಭರತರ ಡೂಗಜ್ಜನ ಬಹಿಷ್ಕಾರ ಮೊದಲಾದ ಕಥೆಗಳೂ ಉತ್ತಮ ಕಥೆಗಳಾಗಿವೆ. ಸೇಡಿಯಾಪು ಕೃಷ್ಣಭಟ್ಟರ ಕಥೆಗಳ ಸ್ವರೂಪ ವಡ್ಡಾರಾಧನೆಯ ಕಥೆಗಳನ್ನು ಕಸಿ ಮಾಡಿದಂತಿದೆ. ಮೇವುಂಡಿಯವರೂ ಅಚ್ಚ ಗನ್ನಡದ ಬಿಗುವು ತೊಟ್ಟ ಹಲವು ಕಥೆಗಳನ್ನು ನೀಡಿದರು. ಕಾದಂಬರಿ ಕ್ಷೇತ್ರದಲ್ಲಿ ಹಸನಾದ ಕೆಲಸ ಮಾಡಿರುವ ಕಾರಂತರು ತಮ್ಮ ಹಸಿವು ಮತ್ತು ಹಾವು ಎಂಬ ಎರಡು ಸಂಕಲನಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿನ ಜನತೆಯ ಬಾಳನ್ನು ಮನ ಕರಗುವಂತೆ ಚಿತ್ರಿಸಿದ್ದಾರೆ. ಅವರ ಹಳ್ಳಿಯ ಹತ್ತು ಸಮಸ್ತರು ಒಂದು ರೀತಿಯ ಕಥಾಸಂಕಲನವೇ ಆಗಿದೆ. ಎಕ್ಕುಂಡಿಯವರು ತಮ್ಮ ಕಥೆಗಳಲ್ಲಿ ಪೌರಾಣಿಕ ಸನ್ನಿವೇಶಗಳನ್ನು ಉಜ್ಜ್ವಲವಾಗಿ ಹಿಡಿದಿಟ್ಟಿದ್ದಾರೆ.

ಎಂ. ವಿ. ಸೀತಾರಾಮಯ್ಯ

1920 ರಿಂದ 1942ರ ವರೆಗಿನ ಸಣ್ಣ ಕಥೆಯ ಮಜಲನ್ನು ಇಲ್ಲಿ ನೋಡಿದ್ದಾಯಿತು. ಆದರೂ ಸಣ್ಣಕಥಾ ಸಾಹಿತ್ಯ ನಿರೀಕ್ಷಿಸಿದಷ್ಟು ಬೆಳೆಯಲಿಲ್ಲ. ಹೊಸಗನ್ನಡದ ಓದುಗರು ಕಾದಂಬರಿಗೆ ಮನ ತೆತ್ತರು. ಕಥೆಗಳಿಗಾಗಿಯೇ ಮೀಸಲಾದ ಪತ್ರಿಕೆಗಳು ಕ್ರಮೇಣ ನಿಂತುಹೋದವು. ಮೊದಲಿಗೆ ಮಿಂಚಿನ ಬಳ್ಳಿ ಕನ್ನಡದಲ್ಲಿ ಸತ್ತ್ವಶಾಲಿಯಾದ ಕಥೆಗಳು ಹೊರಬರಲು ಕಾರಣವಾಯಿತು. ಸೆಂಟ್ರಲ್ ಕಾಲೇಜಿನ ಕರ್ಣಾಟಕ ಸಂಘದಿಂದ ಆಗ ಹೊರಡುತ್ತಿದ್ದ ಪ್ರಬುದ್ಧ ಕರ್ಣಾಟಕ ತ್ರೈಮಾಸಿಕ ಸಣ್ಣ ಕಥೆಯ ಸಾಹಿತ್ಯಜಾತಿಯನ್ನು ಕನ್ನಡಿಗರಿಗೆ ಕೊಡಲು ತುಂಬ ಆಸ್ಥೆವಹಿಸಿತು. ಸುಪ್ರಸಿದ್ಧ ಕಥೆಗಾರ ಆನಂದರು ಬೆಳಕಿಗೆ ಬಂದದ್ದು ಈ ಪತ್ರಿಕೆಯ ಮುಖೇನವೇ. ಅ. ನ. ಕೃಷ್ಣರಾಯರು ಹೊರಡಿಸುತ್ತಿದ್ದ ಕಥಾಂಜಲಿ ಅನೇಕ ತರುಣ ಕಥೆಗಾರರನ್ನೂ ಬೆಳಕಿಗೆ ತಂದಿತು. ಧಾರವಾಡದ ಜಯಂತಿ, ಜಯ ಕರ್ಣಾಟಕವೂ ವಿಪುಲವಾಗಿ ಸಣ್ಣ ಕಥೆಗಳನ್ನು ಪ್ರಕಟಿಸಿತು.

**ಪ್ರಗತಿಶೀಲತೆ :** ಕನ್ನಡ ಸಾಹಿತ್ಯದಲ್ಲಿ ಪ್ರಗತಿಶೀಲತೆಯ ಚಳವಳಿ ಸಣ್ಣಕಥೆ ಯಿಂದಲೇ ಆರಂಭವಾಯಿತು ಎನ್ನಬೇಕು. 1936 ರಿಂದ 1942ರ ವರೆಗೆ ನಡೆದ ರಾಜಕೀಯ ಆಂದೋಲನಗಳು, ಪತ್ರಿಕೆಯಲ್ಲಿ ನಡೆಯುತ್ತಿದ್ದ ಪ್ರಗತಿಶೀಲತೆಯ ಪ್ರಚಾರ, ರಷ್ಯನ್ ಹಾಗೂ ಹಿಂದಿ ಕಥೆಗಳ ಅನುವಾದ ಇವೆಲ್ಲ ಪ್ರಭಾವಗಳ ಪರಿ ಣಾಮವಾಗಿ ಪ್ರಗತಿಶೀಲ ಸಾಹಿತ್ಯಪಂಥದ ಜನ್ಮವಾಯಿತು. ಪ್ರಗತಿಶೀಲ ಸಾಹಿತ್ಯ ಕನ್ನಡದಲ್ಲಿ ಹಲವು ಪ್ರಭಾವಗಳಿಗೊಳಗಾದರೂ ಬರೆಹಗಾರರು ಎಲ್ಲ ವಿಧದಲ್ಲೂ ಸತ್ತ್ವಯುತ ಸಾಹಿತ್ಯರಚನೆ ಮಾಡಿದರೆನ್ನುವ ಮಾತನ್ನು ಮರೆಯಲಾಗದು.

ಕನ್ನಡ ಸಣ್ಣಕಥೆಯ ಇತಿಹಾಸದ ಎರಡನೆಯ ಹಂತ 1943ರ ನವೆಂಬರಿನಲ್ಲಿ ಆರಂಭ ವಾದ ಪ್ರಗತಿಶೀಲ ಚಳವಳಿಯಿಂದ ಆರಂಭವಾಯಿತು. ಅ. ನ. ಕೃ. ಅವರ ನೇತೃತ್ವದಲ್ಲಿ ತ. ರಾ. ಸು., ನಿರಂಜನ, ಬಸವರಾಜ ಕಟ್ಟೀಮನಿ, ಚದುರಂಗ ಮುಂತಾದ ಲೇಖಕರು ಸಣ್ಣಕಥೆಯಲ್ಲಿ ವಿಶೇಷವಾಗಿ ಪ್ರಗತಿಶೀಲತೆಯನ್ನು ತಂದರು. ದಲಿತವರ್ಗಗಳ ಬಗ್ಗೆ ಸಹಾನುಭೂತಿ, ಶೋಷಣೆಯ ವಿರುದ್ಧ ಆಕ್ರೋಶ, ಸಾಮಾಜಿಕ ವೈಷಮ್ಯಗಳ ಬಗ್ಗೆ ಅಸಮಾಧಾನ ಇವರ ಪ್ರಮುಖ ದೃಷ್ಟಿಕೋನಗಳಾದುವು. ನವೋ ದಯದ ಲೇಖಕರನ್ನು ಪ್ರತಿಗಾಮಿಗಳೆಂದು ಕರೆದು, ಸಮಾಜದ ಡಂಭಾಚಾರವನ್ನು ಎತ್ತಿತೋರಿಸಿದರು. ವಾಸ್ತವತಾವಾದ ಇವರ ಕೈಯಲ್ಲಿ ಅತಿರೇಕಕ್ಕೆ ಹೋಯಿತು. ಸಾಮ್ಯವಾದ ಈ ದೇಶಕ್ಕೆ ಅಕಾಲಿಕವಾಗಿದ್ದುದರಿಂದಲೋ ಅಥವಾ ವೈಚಾರಿಕತೆ ಪ್ರಗತಿ ಶೀಲರ ಮನೋಧರ್ಮದಲ್ಲೇ ಸರಿಯಾಗಿ ಅರಗಲಿಲ್ಲವೆಂದೋ—ಈ ಪ್ರಗತಿಶೀಲ ಬಿರುಗಾಳಿ ಕ್ರಮೇಣ ಸ್ತಬ್ಧವಾಯಿತು. ಪರಸ್ಪರ ಕೊಳುಕೊಡುಗೆಗಳು ಹೆಚ್ಚಿದುದ ರಿಂದ ಇಂದು ಪ್ರಗತಿಶೀಲರಿಗೂ ನವೋದಯ ಲೇಖಕರಿಗೂ ವಿಶೇಷ ಅಂತರವೇನೂ ಕಾಣಬರುವುದಿಲ್ಲ.

ಪ್ರಗತಿಶೀಲತೆಯಿಂದ ಕನ್ನಡ ಸಣ್ಣಕಥೆಯಲ್ಲಿ ಕೆಲವು ಬದಲಾವಣೆಗಳಾದುವು. ವಸ್ತು ಸಮಾಜಸಮ್ಮುಖವಾಗಿ ವೈಯಕ್ತಿಕ ತೀವ್ರತೆಯನ್ನು ಕಳೆದುಕೊಂಡಿತು.

ವಸ್ತುವಿನ ಆಯ್ಕೆ ಸೀಮಿತವಾಯಿತು. ಆದರೆ ಬರವಣಿಗೆಗೆ ಹೆಚ್ಚು ವೇಗ ಬಂತು. ಒಂದು ಬಗೆಯ ಅತೃಪ್ತ ವಾತಾವರಣ ಹುಟ್ಟಿಕೊಂಡಿತು. ಸಂಭಾಷಣೆಗಳಲ್ಲಿ ಆಡುಮಾತಿನ ಬಳಕೆ ಹೆಚ್ಚಾಯಿತು.



ಚದುರಂಗ

ಅ.ನ. ಕೃಷ್ಣರಾಯರದು ಕನ್ನಡದಲ್ಲಿ ಪ್ರಖ್ಯಾತವಾದ ಹೆಸರು. ಅವರು ಒಂದು ಪ್ರಭಾವಯುತವಾದ ಶಕ್ತಿಯಾದರು. ಹೊರದೇಶಗಳ ಸಾಹಿತ್ಯಪ್ರಜ್ಞೆಯನ್ನು ಹೆಚ್ಚಿಸಿದರು. ಅವರು ಈಗ ಸಣ್ಣಕಥೆಯ ಕ್ಷೇತ್ರವನ್ನು ತೊರೆದು ಕಾದಂಬರಿ ಸೃಷ್ಟಿಗೇ ಅಂಟಿದ್ದಾರೆ. ಅ.ನ.ಕೃ. ಅವರಿಗೆ ಕಥೆ ಹೇಳುವ ಕಲೆ ಅದ್ಭುತವಾಗಿ ಸಾಧಿಸಿದೆ. ಅವರ ಶೈಲಿ ತುಂಬಿ ಹರಿಯುವ ತೊರೆಯಂತೆ. ಕಥೆಗಳಲ್ಲಿ ಕಲಾವಂತಿಕೆ ಹಿಂದೆ ಬಿದ್ದರೂ ಶೈಲಿಯಿಂದ ಎಂಥ ಕಳಪೆಯ ವಿಷಯವನ್ನಾದರೂ ರಸಭರಿತವಾಗಿ ಮಾಡುವ ವೋಡಿಯಿದೆ. ಮಣ್ಣಿನ ಮಗ ಒಂದು ಉತ್ತಮ ಕೃತಿ. ಅನ್ನವಿತ್ತ ನೆಲವನ್ನು ನಿರ್ಲಕ್ಷಿಸಿದವನಿಗೆ ಮೋಕ್ಷವಿಲ್ಲ ಎಂಬ ಆಶಯವನ್ನು ಹೊತ್ತ ನಾಯಕನ ಪ್ರತಿಬಿಂಬ ಆ ಕೃತಿ. ಇವರ ಅಗ್ನಿಕನ್ಯೆ ಸಂಕಲನದಲ್ಲಿ ಹಲವು ಪ್ರಗತಿಶೀಲ ಕಥೆಗಳಿವೆ. ಇವರ ಕೆಲವು ಕಥೆಗಳಲ್ಲಿ ಲೈಂಗಿಕ ಜೀವನದ ವಿಶ್ಲೇಷಣೆಯಿದೆ.

ಅ.ನ.ಕೃ ಅವರ ಪ್ರಗತಿಶೀಲತೆಯ ವಾದ ಉಳಿದವರ ಮೇಲೆ ಹೆಚ್ಚು ಪರಿಣಾಮವನ್ನು ಮಾಡಿತು. ಇವರ ಪ್ರಭಾವ ಎರಡು ಮೂರು ಪೀಳಿಗೆಗಳ ಲೇಖಕರ ಮೇಲೆ ಬಿದ್ದಿದೆ. ತ.ರಾ.ಸು., ನಿರಂಜನ, ಚದುರಂಗ, ಬಸವರಾಜ ಕಟ್ಟೀಮನಿ, ಆರ್ಚಿಕ ವೆಂಕಟೇಶ, ವೆಂಕಟರಾಜ ಪಾನಸೆ ಮೊದಲಾದವರು ಸಾಹಿತ್ಯವನ್ನು ಸಮಾಜದ ಕನ್ನಡಿಯಲ್ಲಿ ನೋಡಲು ಯತ್ನಿಸಿದ್ದಾರೆ. ತ.ರಾ.ಸು. ಅವರು ಈಚೆಗೆ ಕಾದಂಬರಿ ಸೃಷ್ಟಿಗೆ ಅಂಟಿಕೊಂಡರೂ ಅವರು ಕೆಲವು ಅತ್ಯುತ್ತಮ ಕಥೆಗಳನ್ನು ನೀಡಿದ್ದಾರೆ. 0-0=0, ಎಕ್ಸ್, ಇನ್ನೊಂದು ಮುಖ ಮೊದಲಾದ ಪರಿಪೂರ್ಣ ಕಥೆಗಳನ್ನು ನೀಡಿದ್ದಾರೆ. ಇನ್ನೊಂದು ಮುಖ ತಂತ್ರದ ದೃಷ್ಟಿಯಿಂದ ಯಶಸ್ವಿಯಾದ ಕಥೆ. ಇವರ ಜೊತೆಯಲ್ಲಿಯೇ ನೆನೆಯಬೇಕಾದ ಇನ್ನೊಂದು ಹೆಸರೆಂದರೆ ನಿರಂಜನ ಅವರದು. ನಿರಂಜನರು ಪರಿಣಾಮಕಾರಿಯಾಗಿ ಕಥೆ ಹೇಳುವ ಕಲೆ ಸಾಧಿಸಿಕೊಂಡಿದ್ದಾರೆ. ಜೀವಾನುಭವದ ಆಳವಲ್ಲಿ ಮುಳುಗಿ ಅಲ್ಲಿಯ ನೋವು ನಲಿವುಗಳನ್ನು ಖಂಡತುಂಡವಾಗಿ ಇವರು ಚಿತ್ರಿಸಬಲ್ಲರು. ಇವರದು ಹರಿತವಾದ ಶೈಲಿ. ಕೊನೆಯ ಗಿರಾಕಿ ಇವರ ಅತ್ಯುತ್ತಮ ಪ್ರಾತಿನಿಧಿಕ ಕಥೆ. ಹೆಣ್ಣನ್ನು ಭೋಗದ ವಸ್ತುವಾಗಿ, ಅಸಹ್ಯವಾಗಿ, ಕ್ರೂರವಾಗಿ ಬಳಸಲೆತ್ನಿಸುವ ಜಗತ್ತಿನ ರುದ್ರವಾಸ್ತವಿಕತೆ ಮೂಡಿ ಬಂದಿದೆ ಇದರಲ್ಲಿ. ಒಂದು ಬೃಹತ್ ಕಾದಂಬರಿ ಮಾಡಲಾರದಷ್ಟು ಪರಿಣಾಮ ಇದೊಂದು ಕಥೆ ಮಾಡಿದೆ.

ಕನ್ನಡ ಕಥಾಪ್ರಪಂಚದಲ್ಲಿ ಇನ್ನೊಂದು ಮರೆಯಲಾಗದ ಹೆಸರೆಂದರೆ ಬಸವರಾಜ ಕಟ್ಟೀಮನಿ ಅವರದು. ಇವರು ಕೊಳೆ ಇರುವ ಕಡೆ ತನ್ನ ಬೆಂಕಿಯನ್ನು ಉಗುಳುವ ಕನ್ನಡದ ಜೀವಂತ ಜ್ವಾಲಾಮುಖಿ. ಅನ್ಯಾಯಗಳ ವಿರುದ್ಧ ನಿಲ್ಲುವುದೇ ಇವರ ಸ್ವಭಾವ. ಮೊದಮೊದಲು ಇವರ ಕಥೆಗಳಲ್ಲಿ ರಾಜಕೀಯ ತುಂಬಿದ್ದರೂ ಈಚಿನ ಕಥೆಗಳಲ್ಲಿ ಸಾಮಾಜಿಕತೆಯೇ ಹೆಚ್ಚು ಇದೆ. ಗಿರಿಜಾ ಕಂಡ ಸಿನಿಮಾ, ಬೂಟ್ ಪಾಲಿಷ್, ರಕ್ತಧ್ವಜ, ನೀಲಗಂಗಾ ನಾಗರ ಪಂಚಮಿಗೆ ಬಂದದ್ದು, ಜೀವನಕಲೆ—ಇವು ಇವರ ಉತ್ತಮ ಕಥೆಗಳಲ್ಲಿ ಹಲವು. ಕಟ್ಟೀಮನಿಯವರಲ್ಲಿ ಕಥೆಗಾರನಿಗಿರಬೇಕಾದ ಎಲ್ಲ ನೈಜ ಗುಣಗಳೂ ಇವೆ. ಭಾಷೆಯನ್ನೂ ಸಜೀವವಾಗಿ ಇವರು ಉಪಯೋಗಿಸಬಲ್ಲರು.

ಕೋ. ಚೆನ್ನಬಸಪ್ಪನವರು ಕಟ್ಟೀಮನಿಯವರಂತೆ ಹಳ್ಳಿಯ ಜೀವನವನ್ನು ಚೆನ್ನಾಗಿ ಅರಿತವರು. ಅವರದೂ ಶಕ್ತಿಪೂರ್ಣ ಶೈಲಿ. ನಮ್ಮೂರಿನ ದೀಪ, ಉಂಗುರದ ಉರುಲು ಅವರ ಉತ್ತಮ ಕಥೆಗಳು. ಪರಿಣಾಮದ ದೃಷ್ಟಿಯಿಂದ ಚೆನ್ನಾಗಿವೆ. ಒಕ್ಕಲಿಗ ಬಾಳಿನ ಪ್ರತಿ ಎಳೆಯನ್ನು ಬಿಡಿಸಿ ತೋರಿಸುವ ಆಸಕ್ತಿ ಇವರದು.

ಗ್ರಾಮಜೀವನದ ವಿವಿಧ ಮುಖಗಳ ಚಿತ್ರಣವನ್ನು ಸಶಕ್ತವಾಗಿ ಸಣ್ಣಕಥೆಯ ಚೌಕಟ್ಟಿನಲ್ಲಿ ಎರಕ ಹೊಯ್ದವರು ಎಂದರೆ ಜೀಶಂಪ, ಸುಧಾಕರ ಹಾಗೂ ಬೆಸಗರಹಳ್ಳಿ ರಾಮಣ್ಣ ಮೊದಲಾದವರು.

ಸಂಪ್ರದಾಯ–ಪ್ರಗತಿಶೀಲ ಮನೋಭಾವಗಳ ಮಧ್ಯವರ್ತಿಯ ವಿಧಾನವನ್ನು ತುಳಿದ ಕಥೆಗಾರರ ಪಂಗಡವೊಂದುಂಟು. ಜೀವನದ ವೈವಿಧ್ಯವೇ ಇವರ ಪ್ರಥಮ ಆಕರ್ಷಣೆ. ಇವರಿಗೆ ಸಮಾಜ ಸುಧಾರಣೆಯ ಬಯಕೆಯುಂಟು. ಈ ಮಾರ್ಗದಲ್ಲಿ ನಡೆದ ಎಂ. ವಿ. ಸೀತಾರಾಮಯ್ಯ, ಅಶ್ವತ್ಥ, ಎಸ್. ಅನಂತನಾರಾಯಣ, ನರೇಂದ್ರಬಾಬು, ಚದುರಂಗ, ಎಚ್. ಪಿ. ಜೋಶಿ. ದ. ಬಾ. ಕುಲಕರ್ಣಿ, ರಾಮಚಂದ್ರ ಕೊಟ್ಟಲಗಿ, ವರದರಾಜ ಹುಯಿಲುಗೋಳ, ಎಲ್. ಎಸ್. ಶೇಷಗಿರಿ ರಾವ್, ಹಿರೇಮಲ್ಲೂರ ಈಶ್ವರನ್, ವರಗಿರಿ, ಶ್ರೀಕಂಠ ಪುತ್ತೂರು, ಮಿರ್ಜಿ ಅಣ್ಣಾರಾಯ, ಎ. ಜಿ. ಭಟ್ಟ, ರಾ. ವೆಂ. ಶ್ರೀನಿವಾಸ, ಕೊ. ಸು. ಸೀತಾರಾಮ್, ಜೀ. ಶಂ. ಪರಮಶಿವಯ್ಯ, ಸುಧಾಕರ, ನಂಜರಾಜ ಅರಸು, ಉಮಾಶಂಕರ, ಚಿದಂಬರಾನಂದ, ಬೆಸಗರಹಳ್ಳಿ ರಾಮಣ್ಣ, ಶೇಷನಾರಾಯಣ, ಜನಾರ್ದನ ಗುರ್ಕಾರ್, ಶ್ರೀನಿವಾಸ ಉಡುಪ, ಶ್ರೀಕಾಂತ, ಕ. ವೆಂ. ರಾಜಗೋಪಾಲ್, ಶಾಂತಿನಾಥ ದೇಸಾಯಿ, ನಾರಾಯಣ ಬಲ್ಲಾಳ, ಸೇವ ನಮಿರಾಜ ಮಲ್ಲ, ಆರ್. ಬಸವರಾಜ್, ವೆಂ. ಮು. ಜೋಶಿ, ವೀರಭದ್ರ, ವೀಣಾ ಯಲಬುರ್ಗಿ, ಪ. ಸು. ಭಟ್ಟ ಮುಂತಾದವರು ಉತ್ತಮ ಕಥೆಗಳನ್ನು ಸೃಷ್ಟಿಸಿದ್ದಾರೆ. ಈವರೆಗೆ ಬಂದಿರುವ ಸಾವಿರಾರು ಕಥೆಗಳಲ್ಲಿ ಸತ್ತ್ವಕ್ಕಿಂತ ಟೊಳ್ಳೇ ಹೆಚ್ಚಿದ್ದರೂ ಸ್ವಾತಂತ್ರ್ಯೋತ್ತರ ಕಾಲದಲ್ಲಿ ರಚಿತವಾದವಲ್ಲಿ ಹಲವಾರು ಉತ್ತಮ ಕಥೆಗಳಿವೆ. ಇದರಿಂದ ಸಣ್ಣಕಥೆಗೆ ಕನ್ನಡದಲ್ಲಿ ದಾರಿದ್ರ್ಯವಿಲ್ಲ ಎನ್ನುವ ಮನೋಭಾವ ಮೂಡಿದೆ.

ಇತ್ತೀಚಿನ ದಿನಗಳಲ್ಲಿ ಹಲವಾರು ಲೇಖಕಿಯರು ಉತ್ತಮ ಕಥೆಗಳನ್ನು ಸೃಜಿಸಿದ್ದಾರೆ. ತ್ರಿವೇಣಿ, ವಾಣಿ, ಅನುಪಮಾ ನಿರಂಜನ, ಗೀತಾ ಕುಲಕರ್ಣಿ, ಎಚ್. ವಿ. ಸಾವಿತ್ರಮ್ಮ, ಎಂ. ಕೆ. ಜಯಲಕ್ಷ್ಮಿ, ಶಾಂತಾದೇವಿ ಕಣವಿ, ಆನಂದಿ ಸದಾಶಿವರಾವ್, ಎಚ್. ಎಸ್. ಕಾತ್ಯಾಯಿನಿ, ರಾಜಲಕ್ಷ್ಮಿ ಎನ್. ರಾವ್, ಚಂಪಾ ಮಹಿಷಿ, ಲಲಿತಾಂಬ ಚಂದ್ರಶೇಖರ್, ವಿಶಾಲಾಕ್ಷಿ ಲಕ್ಷ್ಮಣಗೌಡ, ನೀಳಾದೇವಿ, ಪ್ರೇಮಾಭಟ್, ಎ.ಪಿ. ಮಾಲತಿ ಮುಂತಾದವರು ಸೊಗಸಾದ ಕಥೆಗಳನ್ನು ರಚಿಸಿದ್ದಾರೆ.

ಸ್ವಾತಂತ್ರ್ಯ ಬಂದ ಕೆಲವೇ ವರ್ಷಗಳಲ್ಲಿ ಕನ್ನಡದಲ್ಲಿ ನವ್ಯ ಪಂಥವೊಂದು ಉದಯವಾಯಿತು. ನವೋದಯ ಹಾಗೂ ಅನಂತರ ಬಂದ ಪ್ರಗತಿಶೀಲ ಪಂಥಕ್ಕೆ ಇವರು ಸ್ವಲ್ಪ ಭಿನ್ನರಾದರು. ಮನಸ್ಸಿನ ಬೆನ್ನು ಹತ್ತಿ ಅದರ ಪರಿ–ಪರಿಧಿಗಳನು ಬಿಚ್ಚಿ ತೋರಿಸುವ ಸಾಹಸ ಮಾಡಿದರು. ಇದರಿಂದಾಗಿ ಹಲವು ಮನೋವೈಜ್ಞಾನಿಕ



ಬಸವರಾಜ ಕಟ್ಟೀಮನಿ

ಕಥೆಗಳು ಹುಟ್ಟಿ ಬಂದುವು. ಕಥಾಪ್ರಪಂಚದಲ್ಲೂ ನವ್ಯತೆ ಮೂಡಿತು. ಈ ದಿಶೆಯಲ್ಲಿ ಪ್ರಸಿದ್ಧರಾಗಿರುವವರು ರಾಮಚಂದ್ರ ಶರ್ಮರು. ಇವರ ಸಂಗಮ, ಏಳನೆಯ ಜೀವ, ಸೆರಗಿನ ಕೆಂಡ ಇವು ಕೆಲವು ಮಾದರಿಯ ನವ್ಯ ಕಥೆಗಳು.



ತ್ರಿವೇಣಿ

ಯು. ಆರ್. ಅನಂತಮೂರ್ತಿಯವರ ಎಂದೆಂದೂ ಮುಗಿಯದ ಕಥೆ ನವ್ಯಕಥೆಗಳ ಪ್ರಾತಿನಿಧಿಕ ಸಂಗ್ರಹ. ಶಾಂತಿನಾಥ ದೇಸಾಯಿ, ಯಶವಂತ ಚಿತ್ತಾಲ, ಪಿ. ಲಂಕೇಶ, ಕೆ. ಸದಾಶಿವ, ಪೂರ್ಣಚಂದ್ರ ತೇಜಸ್ವಿ ಮುಂತಾದವರು ಹಲವಾರು ಉತ್ತಮ ನವ್ಯಕಥೆಗಳನ್ನು ನೀಡಿದ್ದಾರೆ. ನವ್ಯತೆ ಕನ್ನಡ ಸಣ್ಣ ಕಥೆಯ ವಸ್ತು, ಶೈಲಿಗಳಲ್ಲಿ ಬದಲಾವಣೆ ತಂದಿದೆ. ತಂತ್ರದಲ್ಲೂ ಅನೇಕ ಬದಲಾವಣೆಗಳನ್ನು ಮೂಡಿಸಿದೆ. ಭಾಷೆಯ ಬಳಕೆಯ ದೃಷ್ಟಿಯಿಂದ ಇವರು ಅಗಾಧವಾದ ಕೆಲಸ ಮಾಡಿದ್ದಾರೆ. ಇವರ ಕೃತಿಗಳಲ್ಲಿ ತಂತ್ರ, ಅಭಿವ್ಯಕ್ತಿ, ಅನಿವಾರ್ಯವಾಗಿವೆ. ಅನುಭವವನ್ನು ಅರಗಿಸಿ ಕೊಂಡು ಆದರಿಂದ ದೂರ ನಿಂತು ತಾದಾತ್ಮ್ಯವನ್ನು ಸಾಧಿಸಿ ವಿಮರ್ಶಕ ಪ್ರಜ್ಞೆಯನ್ನು ಇಟ್ಟುಕೊಂಡು ಕೃತಿರಚನೆಗೆ ತೊಡಗಿದ್ದಾರೆ. ವೀರ್ಯವತ್ತಾದ ಶೈಲಿ ಇವರದು. ಈ ಕಥೆಗಾರರಲ್ಲಿ ಮುಖ್ಯರಾದವರು ರಾಮಚಂದ್ರ ಶರ್ಮ, ಯಶವಂತ ಚಿತ್ತಾಲ, ಅನಂತಮೂರ್ತಿ, ಲಂಕೇಶ, ಶಾಂತಿನಾಥ ದೇಸಾಯಿ, ಸದಾಶಿವ ಮೊದಲಾದವರು.

ನವ್ಯರು ವಸ್ತುವಿನ ಆಯ್ಕೆಯಲ್ಲಿ ಬದಲಾವಣೆಗಳನ್ನು ತಂದರು. ನವೋದಯ ಹಾಗೂ ಪ್ರಗತಿಶೀಲ ಕಥೆಗಾರರಿಗಿದ್ದಂತೆ ವಿರೋಧಿಸಲಿಕ್ಕೆ ನಿಶ್ಚಿತ ಮೌಲ್ಯಗಳಿರಲಿಲ್ಲ. ಜೀವನದಲ್ಲಿ ಮಾರ್ಗದರ್ಶಕವಾಗುವ ಸಾಮಾನ್ಯ ಮೌಲ್ಯಗಳು ಉಂಟೆ ? ಎಂಬುದೇ ಇವರ ಪ್ರಶ್ನೆ. ಆದ್ದರಿಂದ ಇಡಿಯ ಸಮಾಜದ ಸಮಸ್ಯೆಗಳಿಗಿಂತ ವೈಯಕ್ತಿಕ ಸಮಸ್ಯೆಗಳಿಗೇ ಹೆಚ್ಚು ಬೆಲೆ. ಇಂಥ ವೈಯಕ್ತಿಕ ಕಥೆಯೇ ಉತ್ಕಟತೆಯ ಮೂಲಕ ಸಾರ್ವತ್ರಿಕವಾಗಬಲ್ಲುದೆಂದು ಇವರ ನಂಬಿಕೆ. ಸಾಮಾಜಿಕ ಬದಲಾವಣೆಗಳನ್ನು ಇವರು ವ್ಯಕ್ತಿಯ ಸಂವೇದನೆಯ ಮೇಲಾಗುವ ಪರಿಣಾಮಗಳಲ್ಲಿ ಗ್ರಹಿಸುತ್ತಾರೆ. ವ್ಯಕ್ತಿಯ ಮನಸ್ಸಿನ ಹೊಯ್ದಾಟ ತುಯ್ದಾಟಗಳ ರಹಸ್ಯಗಳನ್ನು ಸಂಕೋಚವಿಲ್ಲದೆ ಚಿತ್ರಿಸುತ್ತಾರೆ. ಪ್ರಜ್ಞೆಯ ಬೆಲೆಯುಳ್ಳ ಸ್ಥಿತಿಗಳನ್ನು ಹಿಡಿದಿಡುವುದು ಇವರ ಉದ್ದೇಶ. ಇಂಥ ಸೂಕ್ಷ್ಮ ಹಾಗೂ ಸಂಕೀರ್ಣ ಉದ್ದೇಶಗಳಿಗೆ ಲೆಕ್ಕ ಹಾಕಿ ಇವರ ಬರೆವಣಿಗೆಯೂ ಜಟಿಲವಾಗಿದೆ. ಮುಖ್ಯವಾಗಿ ಬಾಹ್ಯ ಘಟನೆಗಳ ಚಮತ್ಕಾರಿಕತೆ, ಕುತೂಹಲ ಕೆರಳಿಸುವ ನಿರೂಪಣಕ್ರಮವನ್ನು ಬಿಟ್ಟುಕೊಟ್ಟು ಘಟನೆಗಳ ಹಿಂದಿನ ಧ್ವನಿಯ ಮೇಲೆ ಅನುಭವದ ಅರ್ಥವಿಶ್ಲೇಷಣೆಯ ಮೇಲೆ ತಮ್ಮ ಗಮನವನ್ನು ಕೇಂದ್ರೀಕರಿಸುತ್ತಾರೆ. ಈ ಪ್ರಯತ್ನದಲ್ಲಿ ಘಟನೆಗಳ ತಾರ್ಕಿಕ ಜೋಡಣೆಯನ್ನು ಉದ್ದೇಶಪೂರ್ವಕವಾಗಿ ನಿರಾಕರಿಸುತ್ತಾರೆ. ಪ್ರಜ್ಞಾಪ್ರವಾಹ ತಂತ್ರದ ಮೂಲಕ ಘಟನೆ ಹಾಗೂ ಪರಿಸರದ ವಿವರಗಳನ್ನೆಲ್ಲ ಸಾಂಕೇತಿಕವಾಗಿ ಬಳಸಿಕೊಂಡು ಅನುಭವ ಅರ್ಥದ ಪದರುಗಳನ್ನು ವಿಸ್ತರಿಸಿರುತ್ತಾರೆ. ಹೀಗಾಗಿ ಸಣ್ಣಕಥೆ ಕವಿತೆಗೆ ತೀರಾ ಹತ್ತಿರವಾಗಿದೆ. ಭಾಷೆಯನ್ನು ಅತ್ಯಂತ ಕಾಳಜಿಯಿಂದ ಬಳಸತೊಡಗಿದ್ದಾರೆ. ಅನುಭವದ ದೃಷ್ಟಿಯಿಂದಲೂ ಸರಳಗೊಳಿಸದೆ ಅದರ ಪರ ವಿರೋಧಿಗಳನ್ನು ಕಥೆಯ ಹಾಸಿನಲ್ಲೇ ನಿರೀಕ್ಷಿಸಿ ವಿವೇಚಿಸುತ್ತಾರೆ. ವಾಸ್ತವವಾದದ ನಿರ್ಬಂಧಗಳನ್ನು ಮುರಿದು ಮಾನವಶಾಸ್ತ್ರ ಹಾಗೂ ಅಸ್ತಿತ್ವವಾದಗಳ ಪ್ರಭಾವವನ್ನು ಕಥೆಗಳಲ್ಲಿ ಮೂಡಿಸುತ್ತಾರೆ. ನವ್ಯ ಕಥೆಗಾರರು ತಮ್ಮ ಅನುಭವಕ್ಷೇತ್ರವನ್ನು ಸಂಕುಚಿತ ಗೊಳಿಸುತ್ತಿದ್ದಾರೆಂದೂ ಕಾಮಕ್ಕೆ ಅವಾಸ್ತವ ಮಹತ್ತ್ವ ಕೊಟ್ಟು ಅಶ್ಲೀಲವಾಗಿ ಬರೆಯುತ್ತಾರೆಂದೂ ಸಾಮಾನ್ಯ ಓದುಗರಿಗೆ ಇವರ ಕಥೆಗಳು ಅರ್ಥವಾಗುವುದಿಲ್ಲ ವೆಂದೂ ಟೀಕೆಗಳು ಬಂದಿವೆ.

ನವ್ಯಕಥೆಗಳ ಜೊತೆಗೆ ಆಧುನಿಕ ಕಥೆಗಳ ಬರೆವಣಿಗೆಯೂ ವಿಪುಲವಾಗಿ ಸಾಗಿದೆ. ಇಂದು ಯಾವ ಪತ್ರಿಕೆಯೂ ಕಥೆಗಳನ್ನು ಪ್ರಕಟಿಸದೆ ಇಲ್ಲ. ಎಲ್ಲ ಪತ್ರಿಕೆಗಳಲ್ಲೂ ಸಣ್ಣಕಥೆ ವಿಭಾಗ ಇದ್ದೇ ಇದೆ. ಒಂದು ದೃಷ್ಟಿಯಿಂದ ಸಣ್ಣ ಕಥೆಗಳು ಇಷ್ಟೊಂದು ಸಂಖ್ಯೆಗಳಲ್ಲಿ ಹೊರಬರಲು ನಾಡಿನ ಪತ್ರಿಕೆಗಳು ಮಹತ್ತ್ವಪೂರ್ಣ ಪಾತ್ರವಹಿಸಿವೆ. ಕೆಲವು ಪತ್ರಿಕೆಗಳು ವಿಶೇಷ ಸಂದರ್ಭಗಳಲ್ಲಿ ಆಕರ್ಷಕ ಮೊತ್ತದ ಬಹುಮಾನ ಗಳನ್ನಿಟ್ಟು ಉತ್ತಮ ಸಣ್ಣಕಥೆಗಳನ್ನು ಆಹ್ವಾನಿಸುತ್ತಿದ್ದಾರೆ. ಅಲ್ಲದೆ ಹಲವಾರು ಸಾಹಿತ್ಯಿಕ ಸಂಘಸಂಸ್ಥೆಗಳು ಆಗಾಗ್ಗೆ ಸ್ಪರ್ಧೆಯನ್ನು ಏರ್ಪಡಿಸಿ ಸಣ್ಣಕಥೆಗಳನ್ನು ಆಹ್ವಾನಿಸುತ್ತಿದ್ದಾರೆ. ಇದೆಲ್ಲದರಿಂದ ಸಣ್ಣಕಥಾಪ್ರಪಂಚ ಸಮೃದ್ಧವಾಗುತ್ತಿದೆ.

ಪಂಜೆಯವರು, ಶ್ರೀನಿವಾಸರಿಂದ ಹಿಡಿದು ಇಂದಿನ ವರೆಗೆ ಸುಮಾರು ಐವತ್ತು ವರುಷಗಳ ಕಥೆಗಾರರ ಕೃತಿಗಳು ಕನ್ನಡ ಸಣ್ಣ ಕಥೆಗಳ ಸಾಹಿತ್ಯದ ಶ್ರೀಮಂತಿಕೆ ಯನ್ನು ಹೆಚ್ಚಿಸಿವೆ.

ಹಾಗೆಂದ ಮಾತ್ರಕ್ಕೆ ಸಣ್ಣಕಥಾಪ್ರಪಂಚ ಪರಿಪೂರ್ಣವಾಗಿದೆ ಎಂದಲ್ಲ.

ಇಂದಿನ ಹೆಚ್ಚು ಕಥೆಗಳು ಶೃಂಗಾರ ಹಾಗೂ ಪ್ರಣಯ ಜೀವನಕ್ಕೆಸಂಬಂಧಿ ಸಿದುವು. ವಸ್ತುವಿನ ಆಯ್ಕೆಯಲ್ಲಿ ಸಮತೂಕವಿಲ್ಲ ಎಂಬ ಮಾತೂ ಇದೆ. ಇತ್ತೀಚೆಗೆ ಇತರ ಭಾಷೆಗಳಿಂದ ಅನೇಕ ಕಥೆಗಳು ಅನುವಾದವಾಗಿ ಬರುತ್ತಿರುವುದು ಒಂದು ಸಂತೋಷದಾಯಕ ಸಂಗತಿ. ಹಾಗೆಯೇ ನಮ್ಮವರ ಅನೇಕ ಉತ್ತಮ ಕಥೆಗಳು ಭಾರತೀಯ ಹಾಗೂ ಹೊರ ದೇಶಗಳ ಭಾಷೆಗೆ ಅನುವಾದವಾಗಿರುವುದು ಗಮನಿಸಬೇಕಾದ ಅಂಶ. ಇದೆಲ್ಲವನ್ನೂ ಗಮನಿಸಿದಾಗ ಕನ್ನಡ ಸಣ್ಣ ಕಥೆಗಳಿಗೆ ಉಜ್ಜ್ವಲ ಭವಿಷ್ಯವಿದೆ ಎನ್ನಲೇಬೇಕು.

ಕನ್ನಡದಲ್ಲಿ ಸಣ್ಣ ಕಥೆಗಳು ಕೇವಲ ಪತ್ರಿಕೆಗಳಲ್ಲಿ ಕಾಣುತ್ತಿದ್ದ ಕಾಲವೊಂದಿತ್ತು. ಈಗ ಅವು ಹಲವಾರು ರೂಪದ ಸಂಗ್ರಹದಲ್ಲಿ ಕಾಣುತ್ತಿವೆ. ಲೇಖಕರು ಹೊರತರುವ ಸಂಗ್ರಹಗಳಲ್ಲದೆ ಪ್ರಸಿದ್ಧ ಲೇಖಕರ ಪ್ರಾತಿನಿಧಿಕ ಕಥೆಗಳ ಸಂಗ್ರಹಗಳೇ ಹೊರ ಬರುತ್ತಿವೆ. ಕನ್ನಡ ಸಾಹಿತ್ಯ ಪರಿಷತ್ತು ಉತ್ತಮ ಕಥೆಗಳನ್ನು ಆಯ್ದು ಪ್ರಕಟಿಸಿದೆ. ದಕ್ಷಿಣ ಭಾಷಾ ಬುಕ್ ಟ್ರಸ್ಟಿನವರು, ಸಾಹಿತ್ಯ ಅಕಾಡೆಮಿಯವರು ಉತ್ತಮ ಸಣ್ಣ ಕಥೆಗಳ ಸಂಗ್ರಹಗಳನ್ನು ತಂದಿದ್ದಾರೆ. ಸಾಲದ್ದಕ್ಕೆ ಒಬ್ಬನೇ ಲೇಖಕನ ಆಯ್ದ ಕಥೆಗಳ ಸಂಕಲನಗಳೂ ಬರುತ್ತಿವೆ. ವಿವಿಧ ಲೇಖಕರ ಕೃತಿಗಳನ್ನೊಳಗೊಂಡ ಬೃಹತ್ ಕಥಾಸಂಕಲನಗಳೂ ಈಚೆಗೆ ಹೊರಕಂಡಿವೆ. ಉದಾ. ದಿಗಂತ. ಇದಲ್ಲದೆ ಕನ್ನಡ ನಾಡಿನ ವಿವಿಧ ಲೇಖಕಿಯರ ಕಥೆಗಳ ಸಂಕಲನವೂ ಈಚೆಗೆ ಹೊರಬಂದಿದೆ.

(ಟಿ.ಎಸ್.ಎಸ್.,ಜಿ.ಕೆ.)

**ಕನ್ನಡದಲ್ಲಿ ಸಾಂಗತ್ಯಕಾವ್ಯ :** ಕನ್ನಡದಲ್ಲಿ ಸಾಂಗತ್ಯಕೃತಿಗಳು ವಿಪುಲವಾಗಿವೆ. ಸಾಂಗತ್ಯದ ಪ್ರಾಚೀನತೆಯ ಬಗೆಗೆ ವಿದ್ವಾಂಸರಲ್ಲಿ ಒಮ್ಮತವಿಲ್ಲ. ಕರ್ಣಾಟಕ ಕವಿಚರಿತೆಕಾರರು ಕ್ರಿ.ಶ. 1233ರ ಶಿಶುಮಾಯಣನೇ ಪ್ರಥಮ ಸಾಂಗತ್ಯ ಕಾರನೆಂದು ಹೇಳಿದ್ದಾರೆ. ಆದರೆ ಈತನ ಕಾಲ ಹದಿನೈದನೆಯ ಶತಮಾನದ ಕಡೆಯ ಭಾಗ ಎಂದು ತರುವಾಯದ ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಸದ್ಯದಲ್ಲಿ ಕ್ರಿ.ಶ. 1410ರಲ್ಲಿದ್ದ ದೇಪರಾಜನ ಸೊಬಗಿನ ಸೋನೆಯೇ ಪ್ರಥಮ ಸಾಂಗತ್ಯಕೃತಿ.

ಸಾಂಗತ್ಯ ಅಂಶಗಣಗಳಿಂದ ಸಂಘಟಿತವಾದುದು. ಇದರಲ್ಲಿ ಒಟ್ಟು ಹದಿನಾಲ್ಕು ಗಣಗಳಿರುತ್ತವೆ. ಅದರ ಒಂದು ಮತ್ತು ಮೂರನೆಯ ಪಾದಗಳು ಒಂದು ಸಮನಾಗಿಯೂ ಎರಡು ಮತ್ತು ನಾಲ್ಕನೆಯ ಪಾದಗಳು ಮತ್ತೊಂದು ಸಮ ನಾಗಿಯೂ ಇರುತ್ತವೆ. ಒಂದು ಮತ್ತು ಮೂರನೆಯ ಪಾದಗಳಲ್ಲಿ ನಾಲ್ಕು ನಾಲ್ಕು ವಿಷ್ಣುಗಣಗಳೂ ಎರಡು ಮತ್ತು ನಾಲ್ಕನೆಯ ಪಾದಗಳಲ್ಲಿ ಮೂರು ಮೂರು ವಿಷ್ಣು ಗಣಗಳೂ ಕೊನೆಯಲ್ಲಿ ಒಂದು ಬ್ರಹ್ಮಗಣವೂ ಇರುತ್ತವೆ. ಮಾದರಿಗಾಗಿ ಒಂದು ಪದ್ಯವನ್ನು ನೋಡಬಹುದು.

ವಿ ವಿ ವಿ ವಿ
ಪರಮ ಪ । ರಂಜ್ಯೋತಿ । ಕೋಟಿ ಚಂ । ದ್ರಾದಿತ್ಯ
ವಿ ವಿ ಬ್ರ
ಕಿರಣ ಸು । ಜ್ಞಾನ ಪ್ರ । ಕಾಶ
ವಿ ವಿ ವಿ ವಿ
ಸುರರ ಮ । ಕುಟಮಣಿ । ರಂಜಿತ । ಚರಣಾಬ್ಜ
ವಿ ವಿ ಬ್ರ
ಶರಣಾಗು । ಪ್ರಥಮ ಜಿ । ನೇಶ (ಭರತೇಶವೈಭವ)

ಸಾಂಗತ್ಯ ಹಾಡುಗಬ್ಬದ ಜಾತಿಗೆ ಸೇರಿದುದು. ಆದುದರಿಂದ ಅರ್ಥ ಸ್ವಾರಸ್ಯಕ್ಕಾಗಿ, ಹಾಡಿನ ಸೌಲಭ್ಯಕ್ಕಾಗಿ ವಿಷ್ಣುಗಣದ ಸ್ಥಾನದಲ್ಲಿ ಬ್ರಹ್ಮವೋ ರುದ್ರವೋ ಬ್ರಹ್ಮಗಣದ ಸ್ಥಾನದಲ್ಲಿ ವಿಷ್ಣುವೋ ರುದ್ರವೋ ಪರ್ಯಾಯವಾಗಿ ಬರುವುದುಂಟು. ಒಂದು ಉದಾಹರಣೆ:

ಬ್ರ ವಿ ರು ವಿ
ಕುರು ರಾ । ಯನ ಮೈದು । ನನ ಕೊಲೆಗೆ । ಧರ್ಮಜ
ವಿ ವಿ ಬ್ರ
ನರನ ಕ । ಳುಪುವ ತೆ । ಱದೊಳು
ವಿ ವಿ ವಿ ವಿ
ನರಪತಿ । ಯೊಡಬಟ್ಟು । ಕಳುಪಿದ । ರಾಮನ
ವಿ ವಿ ಬ್ರ
ಪರಬಲ । ಜಲನಿಧಿ । ಯೆಡೆಗೆ

(ರಾಮನಾಥಚರಿತೆ)

ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಆದಿಪ್ರಾಸ ಒಂದು ಅಪರಿಹಾರ್ಯವಾದ ಅಂಶ. ಸಾಂಗತ್ಯಕಾರರೂ ಈ ನಿಯಮವನ್ನು ಕಟ್ಟುನಿಟ್ಟಾಗಿ ಪಾಲಿಸಿಕೊಂಡು ಬಂದಿದ್ದಾರೆ. ಆದರೆ ಕೆಲವು ಸಾಂಗತ್ಯಕೃತಿಗಳಲ್ಲಿ ಪ್ರಾಸೋಲ್ಲಂಘನೆಯಾಗಿರುವುದನ್ನು ಕಾಣಬಹುದು.

ಸಮಯ ಕಾಲವನರಿತು ಗೆಲಬೇಕು ವೈರಿಯ
ಮುಳುಗು ಮುಗ್ಗಿದ ಕಾಲದೊಳಗೆ
ನರಿ ಬಂದು ಗುಂಡಿಯ ಕೆಡೆದಾಗ ಜನಕೊಂದು
ಯಿಡಬೇಕು ಕಲ್ಲೆಂಬ ಗಾದೆ

(ಕುಮಾರರಾಮನ ಸಾಂಗತ್ಯಗಳು)

ಪ್ರಾಚೀನ ಕನ್ನಡ ಛಂದಃಕಾರರು ಸಾಂಗತ್ಯದ ಲಕ್ಷಣವನ್ನು ಹೇಳಿಲ್ಲ. ನಾಗವರ್ಮನ ಛಂದೋಂಬುಧಿಯಲ್ಲೂ ಜಯಕೀರ್ತಿಯ ಛಂದೋನುಶಾಸನದಲ್ಲೂ ಈಚಿನ ಇತರ ಕನ್ನಡ ಛಂಧೋಗ್ರಂಥಗಳಲ್ಲಿಯೂ ಈಶ್ವರ ಕವಿಯ ಕವಿಜಿಹ್ವಾಬಂಧನ ದಲ್ಲೂ ನಂದಿಯ ನಂದಿಛಂದಸ್ಸಿನಲ್ಲೂ ಸಾಂಗತ್ಯದ ಉಲ್ಲೇಖವಿಲ್ಲ. ಹೀಗಾಗಿ ಸಾಂಗತ್ಯದ ಉಗಮ ಎಂದಾಯಿತು ಎಂದು ನಿರ್ಧರಿಸುವುದು ಶಕ್ಯವಿಲ್ಲವಾಗಿದೆ. ಕನ್ನಡ ಸಾಹಿತ್ಯದ ಪ್ರಥಮ ಸಾಂಗತ್ಯಕೃತಿಯೆಂದು ವಿದ್ವಾಂಸರು ಅಭಿಪ್ರಾಯಪಟ್ಟಿರುವ ದೇಪರಾಜನ ಸೊಬಗಿನ ಸೋನೆ ಒಂದು ವಿಶಿಷ್ಟ ರೀತಿಯದು. ಈ ಕೃತಿಯಲ್ಲಿನ ಪ್ರತಿಯೊಂದು ಪದ್ಯದಲ್ಲಿಯೂ ಬ್ರಹ್ಮಗಣಗಳಿಗೆ ಪರ್ಯಾಯವಾಗಿ ವಿಷ್ಣುಗಣಗಳನ್ನು ಬಳಸಲಾಗಿದೆ. ಕೆಲವು ವಿದ್ವಾಂಸರು ಇದನ್ನು ಬ್ರಹ್ಮಗಣ ಮತ್ತು ಒಂದು ಅಂಶ ಎಂದು ಅಭಿಪ್ರಾಯ ಪಡುತ್ತಾರೆ.

ಸೊಬಗಿನ। ಸೋನೆಯ। ನೊಲಿದಾ। ಲಿಸಿ ಕೇಳಿ
ಸೊಬಗಿನೀ। ಸೋನೆಯೆ। ನಿಪಂ ಪ್ರಿಯೆ
ಕಬರಿಯಿಂ। ದೆಸೆವಕಂ। ಜರಿಮಾಳ। ವನವರಿ
ಸಬಲೆ ನೀ। ನೆಂದ ವಿ। ಕ್ರಮನೆಂದು

(ಸೊಬಗಿನ ಸೋನೆ)

ಆಧುನಿಕ ವಿದ್ವಾಂಸರಲ್ಲಿ ಕೆಲವರು ಗೀತಿಕೆಯ ಎರಡು ಪಾದಗಳ ರೂಪಾಂತರವೇ ಸಾಂಗತ್ಯವಾಗಿ ತೋರುವುದು (ಕನ್ನಡ ಕೈಪಿಡಿ) ಎಂದೂ ಸಾಂಗತ್ಯ ತ್ರಿಪದಿಯಿಂದ ಹೊರಟ ಮಟ್ಟೆಂದೂ ತ್ರಿಪದಿಯ ಚರಣವನ್ನು ಆವೃತ್ತಿ ಮಾಡಿ ಹಾಡುವ ರೂಢಿ ಸಾಂಗತ್ಯದ ರೂಪನಿರ್ಮಾಣಕ್ಕೆ ದಾರಿಯುನ್ನು ಮಾಡಿತು (ಕನ್ನಡ ಛಂದೋವಿಕಾಸ) ಎಂದು ಅಭಿಪ್ರಾಯಪಟ್ಟಿದ್ದಾರೆ. ಗೀತಿಕೆಯಿಂದಾಗಲಿ ತ್ರಿಪದಿ ಅಥವಾ ಪಿರಿಯ ಕ್ಕರದಿಂದಾಗಲಿ ಸಾಂಗತ್ಯ ಆವಿರ್ಭವಿಸಿತೆಂದು ಹೇಳುವುದು ಅಷ್ಟು ಸಮಂಜಸವಾಗಿ ತೋರುವುದಿಲ್ಲ. ಏಕೆಂದರೆ ಅದನ್ನು ಸಾಧಿಸುವುದು ಕಷ್ಟ. ಸಾಂಗತ್ಯ ಶುದ್ಧ ದೇಶೀಯ ಮಟ್ಟು. ಅಂಶಗಣ ಘಟಿತವಾದ ಸಾಂಗತ್ಯಕ್ಕಿಂತಲೂ ಪ್ರಾಚೀನವಾದ ತ್ರಿಪದಿ, ಕಾಲಕ್ರಮದಲ್ಲಿ ಮಾತ್ರಾಗಣಕ್ಕೆ ತಿರುಗಿದ್ದರೂ ಸಾಂಗತ್ಯ ಇಂದಿಗೂ ಅಂಶ ಗಣಘಟಿತವಾಗಿಯೇ ಉಳಿದುಕೊಂಡು ಬಂದಿರುವುದರಿಂದ ಇದಕ್ಕೆ ಪ್ರತ್ಯೇಕ ಅಸ್ತಿತ್ವವಿದ್ದಿತೆಂದು ಭಾವಿಸುವುದಕ್ಕೆ ಅವಕಾಶವುಂಟು.

ಕನ್ನಡ ಸಾಹಿತ್ಯದ ಸಾಂಗತ್ಯಚರಿತ್ರೆಯಲ್ಲಿ ಬಸವೇಶ್ವರ ವಿರಚಿತ ಕಾಲಜ್ಞಾನವೇ ಪ್ರಥಮ ಕೃತಿಯೆಂದು ಹೇಳಿ ಕರ್ಕಿಯವರು ಕವಿಚರಿತ್ರೆಯಿಂದ ಒಂದು ಪದ್ಯವನ್ನು ಉದಾಹರಿಸಿದ್ದಾರೆ.

ಮಳೆಯಿಲ್ಲ ಬೆಳೆಯಿಲ್ಲ ಹೊಳೆಯಿಲ್ಲ ಕೆರೆಯಿಲ್ಲ
ನೆಳಲಿಲ್ಲ ಉದಕ ಮುನ್ನಿಲ್ಲ
ಮೊಳೆಯಿಲ್ಲ ಸೂರ್ಯನ ಕಳೆಯಿಲ್ಲ ಗೆಲವಿಲ್ಲ
ಉಳಿವಿಲ್ಲ ಆ ಪಾಪಿಗಳಿಗೆ

(ಕನ್ನಡ ಛಂದೋವಿಕಾಸ)

ಈ ಪದ್ಯದಲ್ಲಿ ಪ್ರಧಾನವಾಗಿ ಎದ್ದುಕಾಣುವ ಅಂಶವೆಂದರೆ ಅಂಶಗಣಗಳಿಗೆ ಬದಲಾಗಿ ಮಾತ್ರಾಗಣಗಳು ಬಂದಿರುವುದು. ಪ್ರಥಮ ಸಾಂಗತ್ಯಕೃತಿಯೆಂದು ಭಾವಿಸಲಾಗಿರುವ ಈ ಕಾಲಜ್ಞಾನವಚನ ಬಸವೇಶ್ವರರ ಹೆಸರಿಗೆ ಆರೋಪಿಸಲ್ಪಟ್ಟಿ ರುವ ಪ್ರಕ್ಷಿಪ್ತ ಕೃತಿಯಾಗಿರಬಹುದು. ತರುವಾಯ ಕಾಣಿಸಿಕೊಳ್ಳುವ ಸಾಂಗತ್ಯಕಾರ ಕಾಲದೃಷ್ಟಿಯಿಂದ ಸಂದಿಗ್ಧತೆಗೊಳಗಾಗಿರುವ ಶಿಶುಮಾಯಣ. ಆತನ ಕೃತಿಗಳು—ತ್ರಿಪುರದಹನಸಾಂಗತ್ಯ ಮತ್ತು ಅಂಜನಾಚರಿತ್ರೆ. ಗುಣದ ದೃಷ್ಟಿಯಿಂದಲೂ ಗಾತ್ರದ ದೃಷ್ಟಿಯಿಂದಲೂ ಇವು ಮಿಗಿಲಾಗಿವೆ. ಅಂಜನಾಚರಿತ್ರೆ ಸಾಹಿತ್ಯ ಮತ್ತು ಐತಿಹಾಸಿಕ ದೃಷ್ಟಿಗಳಿಂದ ಉಲ್ಲೇಖಾರ್ಹವಾಗಿದೆ.

ಹದಿನಾರನೆಯ ಶತಮಾನ ಶ್ರೇಷ್ಠ ಸಾಂಗತ್ಯಕೃತಿಗಳನ್ನು ಸೃಷ್ಟಿಸಿದೆ. ಈ ಶತಮಾನದಲ್ಲಿ ಸುಮಾರು ಇಪ್ಪತ್ತೆಂಟು ಸಾಂಗತ್ಯಕೃತಿಗಳು ಹುಟ್ಟಿಕೊಂಡಿವೆ. ಮೂರನೆಯ ಮಂಗರಸನ ನೇಮಿಜಿನೇಶ ಸಂಗತಿ, ಪ್ರಭಂಜನಚರಿತೆ, ಶ್ರೀಪಾಲ ಚರಿತೆಗಳು, ನಂಜುಂಡನ ರಾಮನಾಥಚರಿತೆ, ಕನಕದಾಸರ ಮೋಹನತರಂಗಿಣಿ, ರತ್ನಾಕರವರ್ಣಿಯ ಭರತೇಶವೈಭವ, ರಾಮರಸ ವಿರೂಪಾಕ್ಷ, ಬೊಂಬೆಯ ಲಕ್ಕ ಹಲಗ, ಓದುವಗಿರಿಯ ಇವರ ಹರಿಚಂದ್ರ ಸಾಂಗತ್ಯಕೃತಿಗಳು ಹೆಸರಿಸತಕ್ಕುವು. ಈ ಶತಮಾನದ ಮತ್ತೊಂದು ಕೃತಿ ಕಿಕ್ಕೇರಿಯಾರಾಧ್ಯ ನಂಜುಂಡ ವಿರಚಿತ ಭೈರವೇಶ್ವರಕಾವ್ಯ. ಇದು ಛಂದಸ್ಸಿನ ದೃಷ್ಟಿಯಿಂದ ವಿದ್ವಾಂಸರ ಗಮನವನ್ನು ಸೆಳೆದಿದೆ. ಇದರ ಸಂಪಾದಕರು ಈ ಕಾವ್ಯವನ್ನು ಷಟ್ಪದಿಯೆಂದು ನಿರ್ಧರಿಸಿ ಪ್ರತಿಪದ್ಯವನ್ನೂ ಆರು ಪಾದಗಳಾಗಿ ವಿಂಗಡಿಸಿ ಅಚ್ಚುಮಾಡಿದ್ದಾರೆ. ಅವರ ಅಭಿಪ್ರಾಯದಂತೆ ಪ್ರತಿ ಪದ್ಯದ ಒಂದು ಎರಡು ನಾಲ್ಕು ಮತ್ತು ಐದನೆಯ ಪಾದಗಳು ಶರಷಟ್ಪದಿಯಲ್ಲೂ ಮೂರು ಮತ್ತು ಆರನೆಯ ಪಾದಗಳು ಕುಸುಮಷಟ್ಪದಿ ಯಲ್ಲೂ ರಚಿತವಾಗಿವೆ. ಒಂದು ಪದ್ಯದ ಬೇರೆ ಬೇರೆ ಪಾದಗಳು ಬೇರೆ ಬೇರೆ ಛಂದಸ್ಸಿ ನಲ್ಲಿ ರಚಿತವಾಗಿರುವುದು ಕನ್ನಡ ಸಾಹಿತ್ಯದಲ್ಲಿ ಎಲ್ಲೂ ಕಂಡುಬರುವುದಿಲ್ಲ. ವಾಸ್ತವ ವಾಗಿ ಈ ಕಾವ್ಯದ ಛಂದಸ್ಸು ಸಾಂಗತ್ಯ, ಷಟ್ಪದಿಯಲ್ಲ. ಪ್ರತಿ ಪದ್ಯದಲ್ಲೂ ಖಂಡ ಪ್ರಾಸವಿರುವುದೇ ಈ ಭ್ರಾಂತಿಗೆ ಕಾರಣ. ಈ ರೀತಿ ಖಂಡಪ್ರಾಸವನ್ನು ಒಳಕೊಂಡಿ ರುವ ಕೃತಿಗಳು ಇನ್ನೂ ಕೆಲವು ಕಂಡುಬರುತ್ತವೆ.

ಹದಿನೇಳನೆಯ ಶತಮಾನದಲ್ಲಿ ಸುಮಾರು ಅರುವತ್ತು ಸಾಂಗತ್ಯ ಕೃತಿಗಳು ಹುಟ್ಟಿಕೊಂಡಿವೆ. ಸಂಖ್ಯಾದೃಷ್ಟಿಯಿಂದ ಈ ಶತಮಾನದ ಕೃತಿಗಳು ವಿಪುಲವಾಗಿದ್ದರೂ ಕಾವ್ಯಗುಣದ ದೃಷ್ಟಿಯಿಂದ ಹೇಳಿಕೊಳ್ಳುವಂಥವು ಹೆಚ್ಚಾಗಿಲ್ಲ. ಪಂಚಬಾಣನ ಭುಜಬಲಿಚರಿತೆ, ಶಾಂತಮಲ್ಲನ ಅನುಭವಮುದ್ರೆ, ಶೇಷಕವಿಯ ರುಕ್ಮಾಂಗದ ಚರಿತೆ, ತಿರುಮಲಾರ್ಯನ ಕರ್ಣವೃತ್ತಾಂತ ಕಥೆ, ಚಿಕುಪಾಧ್ಯಾಯನ ಯಾದವಗಿರಿ ಮಹಾತ್ಮೆ, ಪಶ್ಚಿಮರಂಗ ಮಹಾತ್ಮೆ, ರಂಗಧಾಮಸ್ತುತಿ ಸಾಂಗತ್ಯ, ರಂಗಧಾಮ ಪುರುಷ ವಿರಹ ಸಾಂಗತ್ಯ, ಚಿತ್ರಶತಕ ಸಾಂಗತ್ಯ, ರಂಗನಾಯಕ ರಂಗನಾಯಕೀ ಸ್ತುತಿ ಸಾಂಗತ್ಯ, ನೇಮಿವೃತಿಯ ಸುವಿಚಾರಚರಿತೆ, ಧರಣಿಪಂಡಿತನ ಬಿಜ್ಜಳ ರಾಯಚರಿತೆ, ಚಂದ್ರಮನ ಕಾರ್ಕಳದ ಗೊಮ್ಮಟೇಶ್ವರಚರಿತೆ, ಪದ್ಮನಾಭನ ಪದ್ಮಾ ವತೀ ಚರಿತೆ, ಜಿನದತ್ತರಾಯನ ಚರಿತೆ, ಬಸವಕವಿಯ ರೇಣುಕಾಚಾರ್ಯಚರಿತೆ, ಚೆಲ್ಲಮಲ್ಲೇಶನ ದೀಪದಕಲಿಯಾರ ಕಾವ್ಯ, ಸಿದ್ಧಕವಿಯ ಸಿರುಮನ ಸಾಂಗತ್ಯ, ಚಾಮಯ್ಯನ ದೇವರಾಜೇಂದ್ರ ಸಾಂಗತ್ಯ—ಇವು ಹೆಸರಿಸತಕ್ಕವು. ಗೋವಿಂದ ವೈದ್ಯನ ಕಂಠೀರವ ನರಸರಾಜವಿಜಯ ಒಂದು ಅಪೂರ್ವಕೃತಿ. ಈ ಕವಿ ವೀರರಸ ಪ್ರತಿಪಾದನೆಗೆ ಸಾಂಗತ್ಯವನ್ನು ಪರಿಣಾಮಕಾರಿಯಾಗಿ ಬಳಸಿಕೊಳ್ಳುವುದು ಸಾಧ್ಯ ವೆಂಬುದನ್ನು ತೋರಿಸಿಕೊಟ್ಟಿದ್ದಾನೆ. ಈ ಶತಮಾನದ ವೈಶಿಷ್ಟ್ಯವೆಂದರೆ ಸ್ತ್ರೀಯರು ಸಾಂಗತ್ಯರಚನೆಗೆ ತೊಡಗಿದ್ದು. ಚಿಕ್ಕದೇವರಾಜನ ಆಸ್ಥಾನದಲ್ಲಿದ್ದ ಸಂಚಿಯ ಹೊನ್ನಮ್ಮನ ಹದಿಬದೆಯ ಧರ್ಮ ಒಂದು ಉತ್ಕೃಷ್ಟ ಕೃತಿ. ಶೃಂಗಾರಮ್ಮ ಪದ್ಮಿನಿ ಪರಿಣಯವನು ಬರೆದಿದ್ದಾಳೆ.

ಹದಿನೆಂಟು ಮತ್ತು ಹತ್ತೊಂಬತ್ತನೆಯ ಶತಮಾನಗಳಲ್ಲಿ ಸಾಂಗತ್ಯದ ಬೆಳಸು ಅಷ್ಟೊಂದು ಹುಲುಸಾಗಿದ್ದಂತೆ ಕಂಡುಬರುವುದಿಲ್ಲ. ಹದಿನೆಂಟನೆಯ ಶತಮಾನದಲ್ಲಿ ಕೇವಲ ಹದಿನೇಳು ಸಾಂಗತ್ಯಕೃತಿಗಳೂ ಹತ್ತೊಂಬತ್ತನೆಯ ಶತಮಾನದಲ್ಲಿ ಕೇವಲ ಎಂಟು ಸಾಂಗತ್ಯಕೃತಿಗಳೂ ಹೊರಬಂದಿವೆ. ಹದಿನೆಂಟನೆಯ ಶತಮಾನದಲ್ಲಿ

ಗೋಪಾಲಾಚಾರ್ಯ ಶಿಷ್ಯನ ಜೀವೇಶ್ವರ ಸಾಂಗತ್ಯ, ತತ್ತ್ವದ ಸೊಬಗಿನ ಸೋನೆ, ಗುರುಸಿದ್ದಪ್ಪನ ಮಾದೇಶ್ವರ ಸಾಂಗತ್ಯ, ಚಲುವ ಕವಿಯ ಮಡಿವಾಳಯ್ಯನ ಚರಿತೆ, ದೇಪನ ದೇವಾಂಗಪುರಾಣ, ನೂರೊಂದನ ಸೌಂದರಕಾವ್ಯ, ಪಾಯಣ್ಣನ ಅಹಿಂಸಾ ಚರಿತೆ, ಪದ್ಮನಾಭನ ರಾಮಚಂದ್ರಚರಿತೆ, ತರಳ ಚಲಪತಿಯ ಗಂಗಾಗೌರಿ ಸಂವಾದ —ಇವು ಮುಖ್ಯವಾದುವು. ಕ್ರಿ.ಶ. 1750ರಲ್ಲಿದ್ದ ಹೆಳವನಕಟ್ಟೆ ಗಿರಿಯಮ್ಮ ಸುಪ್ರಸಿದ್ಧಳು. ಈಕೆ ಚಂದ್ರಹಾಸನ ಕಥೆ, ಉದ್ದಾಳಿಕನ ಕಥೆ ಮೊದಲಾದ ಭಕ್ತಿ ಮತ್ತು ನೀತಿಪ್ರದವಾದ ಕೃತಿಗಳನ್ನು ರಚಿಸಿದ್ದಾಳೆ. ಮತ್ತೊಬ್ಬ ಕವಯಿತ್ರಿ ಚಲುವಾಂಬೆಯ ರಚನೆ ವರನಂದಿ ಕಲ್ಯಾಣ.

ಇಪ್ಪತ್ತನೆಯ ಶತಮಾನದಲ್ಲೂ ಸಾಂಗತ್ಯದ ರಚನೆ ಮುಂದುವರಿದುಕೊಂಡು ಬಂದಿದೆ. ಬಿ. ಎಂ. ಶ್ರೀಕಂಠಯ್ಯ, ಬೇಂದ್ರೆ, ಪು. ತಿ. ನರಸಿಂಹಾಚಾರ್, ಎಸ್. ವಿ. ಪರಮೇಶ್ವರಭಟ್ಟ ಮೊದಲಾದವರು ಸಾಂಗತ್ಯದಲ್ಲಿ ಕೃತಿಗಳನ್ನು ರಚಿಸಿದ್ದಾರೆ. ಪರಮೇಶ್ವರ ಭಟ್ಟರು ನೀಳವಾದ ತಮ್ಮ ಆತ್ಮವೃತ್ತವನ್ನು ಹೇಳುವುದಕ್ಕೂ ಬಿಡಿ ಮುಕ್ತಕ ರಚನೆಗೂ ಸಾಂಗತ್ಯವನ್ನು ಬಳಸಿದ್ದಾರೆ. ಪರಿಮಾಣ ಮತ್ತು ಯೋಗ್ಯತೆ ಎರಡು ದೃಷ್ಟಿಯಿಂದಲೂ ಇವರ ಸಾಂಗತ್ಯ ಕೃತಿಗಳು ಗಮನಾರ್ಹವಾಗಿವೆ.

ಕಳೆವುದು ಸಾಬೂನು ಬಟ್ಟೆಯ ಕೊಳೆಯನು
 ಕಳೆವುದು ಸೀಗೆ ಎಣ್ಣೆಯನು
ಪ್ರಾರ್ಥನೆ ತೊಡೆವುದು ಮನದ ಕಿಲ್ಬಿಷವನು
 ಆ ಸೋಪು ಸೀಗೆಗಳಂತೆ

(ಚಂದ್ರವೀಧಿ)

ಸ್ಕೂಟರು ಹೆಳವನಿಗೇನುಪಯೋಗವು
 ಬೋಳನಿಗೇಕೆ ಬಾಚಣಿಗೆ
ಅರಸಿಕನಿಗೆ ಏಕೆ ಕಾವ್ಯದ ಗಮಕವು
 ಟ್ರಾನ್ಸಿಸ್ಟರೇಕೆ ಕೆಪ್ಪನಿಗೆ

(ಇಂದ್ರಚಾಪ)

ಈ ಎರಡೂ ಪರಮೇಶ್ವರ ಭಟ್ಟರ ಎರಡು ಕೃತಿಗಳಿಂದ ಉದ್ಧರಿಸಿರುವ ಎರಡು ಸಾಂಗತ್ಯ ಪದ್ಯಗಳು.

ಪ್ರಾಚೀನ ಕಾವ್ಯಪರಂಪರೆಯಲ್ಲಿ ಪ್ರಮುಖವಾದ ಚಂಪೂ, ಷಟ್ಪದಿ, ತ್ರಿಪದಿ ಮುಂತಾದ ಛಂದೋಬಂಧಗಳಲ್ಲಿ ನಿರೂಪಿತವಾಗಿದ್ದ ಕಾವ್ಯ, ಶಾಸ್ತ್ರ, ಧರ್ಮ ಪ್ರತಿಪಾದನೆ ಮೊದಲಾದ ನಿಗೂಢ ವಿಷಯಗಳು ಜನಸಾಮಾನ್ಯಕ್ಕೆ ಸುಲಭವಾಗಿ ನಿಲುಕುವಂತೆ ಶುದ್ಧ ದೇಶೀಯ ಛಂದಸ್ಸಿನಲ್ಲಿ ಹೊರಬರುವುದಕ್ಕೆ ವಾಹಕವಾದುದು ಎಂದರೆ ಒಂದು ಸಾಂಗತ್ಯ ಇನ್ನೊಂದು ಷಟ್ಪದಿ (ನೋಡಿ—ಕನ್ನಡದಲ್ಲಿ ಷಟ್ಪದೀ ಕಾವ್ಯಗಳು). ಕನ್ನಡ ಛಂದಶ್ಶಾಸ್ತ್ರದ ಇತಿಹಾಸದಲ್ಲಿ ಬೇರಾವ ಛಂದೋಪ್ರಕಾರಕ್ಕೂ ಇಲ್ಲದ ವೈಶಿಷ್ಟ್ಯ ಸಾಂಗತ್ಯಕ್ಕಿದೆ. ಇದು ತನ್ನ ಗೇಯತೆ ಮತ್ತು ಸೌಲಭ್ಯಗಳಿಂದ ಜನಪ್ರಿಯತೆಯನ್ನು ಗಳಿಸಿರುವುದೇ ಅಲ್ಲದೆ ಕನ್ನಡ ಸಾಹಿತ್ಯಕ್ಕೆ ಮಕುಟಪ್ರಾಯವಾದ ಕೃತಿಗಳನ್ನು ಒದಗಿಸಿದೆ. (ಎಸ್.ವಿ.)

**ಕನ್ನಡದಲ್ಲಿ ಹಾಸ್ಯ ಸಾಹಿತ್ಯ :** ಮಾನವನ ಮನೋಧರ್ಮದಲ್ಲಿ ಹಾಸ್ಯ ಒಂದು ಸ್ಥಾಯೀಪ್ರಜ್ಞೆ. ಹಾಸ್ಯಕ್ಕೆ ಸಮಾನವಾದ ಇಂಗ್ಲಿಷ್ ಪದಕ್ಕೆ ಲ್ಯಾಟಿನ್ ಭಾಷೆಯಲ್ಲಿ ಕಂಪು, ರುಚಿ ಎಂಬ ಅರ್ಥಗಳಿವೆ. ಈ ಬಗೆಯ ಹಾಸ್ಯ ದೃಷ್ಟಿ ಬೆಳೆದರೆ ಲೋಕದಲ್ಲಿ ವಸ್ತುವಿನ ಆವರಣವನ್ನು ಕಳಚಿ ಪ್ರತ್ಯಕ್ಷವಾಗಿ ನೋಡುವ ಒಂದು ಹದವಾದ ಮನಸ್ಸಿನ ವೇದಿಕೆ ಸಿದ್ಧವಾಗುತ್ತದೆ. ವಿಕಾರವಾದ ಅನ್ಯರ ವೇಷಾಲಂಕಾರಗಳು, ನಾಚಿಕೆಗೇಡಿನ ಸ್ವಭಾವ, ವಿಷಯ ಚಾಪಲ್ಯ, ಕುಚೇಷ್ಟೆ, ಅಂಗವೈಕಲ್ಯ, ಕೆಟ್ಟ ಮಾತು, ದೋಷಾರೋಪಣೆ ಮೊದಲಾದ ವಿಭಾವಗಳಿಂದ ಹಾಸ್ಯ ಉದಯಿಸುತ್ತದೆ. ದೊಡ್ಡ ವಸ್ತುಗಳಲ್ಲಿ ಇರುವ ಸಣ್ಣತನವನ್ನೂ ಭವ್ಯವಾದವುಗಳಲ್ಲಿ ಇರುವ ಹುಳುಕನ್ನೂ ಕಾಣಿಸಿಕೊಡುವ ಶಕ್ತಿ ಹಾಸ್ಯ ಮನೋಧರ್ಮಕ್ಕುಂಟು. ಆದ್ದರಿಂದ ಹಾಸ್ಯವನ್ನು ಮಾನವಸ್ವಭಾವದ ಬಹಿರಂಗ ವಿಚಾರಣೆಯ ಚಾವಡಿ ಎನ್ನುತ್ತಾರೆ. ಬಿಡುವಾದ ಮನಸ್ಸನ್ನು ರಂಜನಗೊಳಿಸತಕ್ಕ ವಿಕಟಕಾಂತಿ ಇರುವಂತೆಯೇ ಹಾಸ್ಯಕ್ಕೆ ಎಲ್ಲ ಸಮಸ್ಯೆಗಳ ಬುಡದಲ್ಲೂ ಹಾಯಬಲ್ಲ ಉನ್ನತ ಪ್ರಜ್ಞೆಯೂ ಉಂಟು.

**ಹಳಗನ್ನಡ :** ಹಳೆಯ ಕನ್ನಡ ಸಾಹಿತ್ಯದಲ್ಲಿ ಇಂಥ ಹಾಸ್ಯದೃಷ್ಟಿ ಅಲ್ಲಲ್ಲಿ ಮಿಂಚಿದೆ. ಹಳಗನ್ನಡದಲ್ಲಿ ಹಾಸ್ಯಪ್ರಧಾನವಾದ ಕೃತಿರಚನೆಯ ಪ್ರಯತ್ನ ನಡೆದಿಲ್ಲ. ಆದರೆ ಹಾಸ್ಯದ ಸನ್ನಿವೇಶಗಳು ಕೃತಿಯ ಒಡಲಲ್ಲಿ ಬಂದಾಗ ಕವಿಗಳು ತಮ್ಮ ಹಾಸ್ಯ ಪ್ರೌಢಿಮೆಯನ್ನು ಮೆರೆದಿದ್ದಾರೆ. ಕಾವ್ಯದ ಪ್ರಸ್ತಾವನಾ ಭಾಗದಲ್ಲಿ ಬರುವ ಕುಕವಿನಿಂದೆಯಂಥ ಸಿದ್ಧ ಬರೆಹರೂಪಗಳಲ್ಲಿ, ಶೃಂಗಾರ ಸನ್ನಿವೇಶಗಳಲ್ಲಿ, ರಾಜರ ಸುಖಸಂಕಥಾವಿನೋದಗಳಲ್ಲಿ, ಸಾಮಯಿಕ ಚತುರೋಕ್ತಿಗಳಲ್ಲಿ, ಯುದ್ಧ ಪ್ರಸಂಗಗಳಲ್ಲಿ, ವೀರರ ಮೂದಲಿಕೆಯ ಮಾತುಗಳಲ್ಲಿ, ವಾಗ್ವಾದದ ಸಂದರ್ಭಗಳಲ್ಲಿ, ಇಂಥ ಹತ್ತಾರು ಕಡೆ ಹಾಸ್ಯರಂಜನೆಗೆ ಅವರು ಅವಕಾಶ ಮಾಡಿಕೊಂಡಿದ್ದಾರೆ. ಕನ್ನಡದ ಅಸಂಖ್ಯಾತ ಶಾಸನಗಳಲ್ಲಿ ಅಲ್ಲಲ್ಲಿ ಹಾಸ್ಯಪ್ರಸಂಗಗಳು ಮಿಂಚುವುದನ್ನು ಕಾಣಬಹುದು. ಸಾಮಾನ್ಯರನ್ನು ಇಂದ್ರಾದಿ ದೇವತೆಗಳೆಂದು ಹೊಗಳಿದಾಗ ಹಾಸ್ಯ ಹೊಮ್ಮುವುದು ಸಹಜ. ವಿದ್ವಾಂಸನಾಗಿದ್ದ ನಯಸೇನಸೂರಿಯನ್ನು ಪ್ರಶಂಸಿಸುವ ಒಂದು ಶಾಸನದಲ್ಲಿ ಆತ ಸರಸ್ವತಿಯನ್ನೇ ತನ್ನ ಹೆಂಡತಿಯಾಗಿ ಮಾಡಿಕೊಂಡನೆಂದು ಹೇಳಿದೆ. ಅಷ್ಟೇ ಅಲ್ಲ. ಅವನ ಇನ್ನೊಬ್ಬ ಹೆಂಡತಿಯಾಗಿದ್ದ ಕೀರ್ತಿಯೆಂಬ ಲಲನೆ ಸವತಿಮಾತ್ಸರ್ಯಕ್ಕೊಳಗಾಗಿ ದಶದಿಕ್ಕುಗಳಿಗೆ ಓಡಿ ಹೋದಳು. ಈ ಅತಿಶಯೋಕ್ತಿ ಚಮತ್ಕಾರಗಳ ಹಿಂದೆ ಶಾಸನಕರ್ತನೇ ಬಹುಶಃ ನಿರೀಕ್ಷಿಸದಷ್ಟು ನಗೆಗೆ ಪ್ರಚೋದನೆಯಿದೆ. ಇನ್ನೊಂದು ಶಾಸನದ ನಾಯಕ ವಿಕ್ರಮಸಾಂತ. ಈತ ದಾನವಿನೋದಿ. ರಣರಂಗದಲ್ಲಿ ಇವನ ಪ್ರತಾಪ ಅಷ್ಟಿಷ್ಟಲ್ಲ. ಈತ ಕೊಂದ ಅರಿಗಳ ಹೆಣಗಳನ್ನುಂಡ ಮರುಳುಗಳಿಗೆ ಹಬ್ಬ, ಅಜೀರ್ಣ. ಅವು ವೈದ್ಯಮರುಳನ ಬಳಿಗೆ ಹೋದಾಗ ಆ ವೈದ್ಯ ಸೂಚಿಸಿದ ಔಷಧವಾದರೂ ಮರುಳುಗಳಿಗೆ ಮಾತ್ರವೇ ಉಚಿತ. ಅಜೀರ್ಣವಾದಾಗ ಆನೆ ನುಂಗುವುದೇ ಮದ್ದು. ಮರುಳುಗಳು ಹಾಗೆಯೇ ಮಾಡಿದುವು. ರೋಗ ಹಾರಿತು. ವಿಸಂಗತ ವಿಚಾರದಿಂದ ಮಿನುಗುವ ಹಾಸ್ಯಕ್ಕೆ ಇದೊಂದು ಉತ್ತಮ ದೃಷ್ಟಾಂತ.

9ನೆಯ ಶತಮಾನದಲ್ಲಿ ರಚಿತವಾದ ಕವಿರಾಜಮಾರ್ಗ ಒಂದು ಲಕ್ಷಣ ಗ್ರಂಥ. ವ್ಯಾಕರಣ, ಛಂದಸ್ಸು, ಭಾಷೆ—ಮುಂತಾದವನ್ನು ಕುರಿತ ವಿವೇಚನೆಯ ನಡು ನಡುವೆ ಉದಾಹರಣೆಗಾಗಿ ಕೊಟ್ಟಿರುವ ಪೂರ್ವಕವಿ ಕೃತಿಖಂಡಗಳಲ್ಲಿ ಅಲ್ಲಲ್ಲಿ ಬಗೆಬಗೆಯ ಹಾಸ್ಯ ಮಿನುಗುತ್ತದೆ. ಕವಿರಾಜಮಾರ್ಗಕಾರನಿಗೆ ಹಿಂದೆ ಇದ್ದ ಕವಿಗಳು ಹಾಸ್ಯವೇ ಪ್ರಧಾನವಾದ ಕೃತಿಗಳ ರಚನೆ ಮಾಡದಿದ್ದರೂ ಹಾಸ್ಯದ ನಾನಾ ಪ್ರಕಾರಗಳನ್ನವರು ಅರಿಯದವರಾಗಿರಲಿಲ್ಲವೆಂಬುದು ಇವುಗಳಿಂದ ವೇದ್ಯವಾಗುತ್ತದೆ. ಕವಿರಾಜಮಾರ್ಗಕಾರನಿಗೂ ಹಾಸ್ಯವನ್ನು ಗುರುತಿಸುವ ಶಕ್ತಿಯಿತ್ತು; ಅದನ್ನು ಸಾರಿಕೊಳ್ಳುವ ಉದ್ದೇಶವಿಲ್ಲದಿದ್ದರೂ ಅಂಥ ಹಾಸ್ಯ ಪ್ರಸಂಗಗಳ ಮೇಲೆ ಆಶ ಛೆರಳಿಟ್ಟು ಕಚಕುಳಿ ಅನುಭವಿಸಿದ್ದಾನೆ—ಎನ್ನಬಹುದು.

ಇನ್ನು ಚಂಪೂ ಯುಗದ ವಿಚಾರ. ಧರ್ಮಕ್ಕಾಗಿ ಆದಿಪುರಾಣವನ್ನೂ ಕಾವ್ಯ ಧರ್ಮಕ್ಕಾಗಿ ವಿಕ್ರಮಾರ್ಜುನ ವಿಜಯವನ್ನೂ ಬರೆದ ಪಂಪ ಕವಿ (941) ಹಾಸ್ಯವನ್ನರಿಯದವನಲ್ಲ. ವಿಕ್ರಮಾರ್ಜುನವಿಜಯ ಕೌರವ ಪಾಂಡವರ ಕಥೆಯಾದ್ದರಿಂದ ಅಲ್ಲಿ ಬರುವ ಹಲವು ಸನ್ನಿವೇಶಗಳಲ್ಲಿ ಹಾಸ್ಯದ ನಾನಾ ಪ್ರಕಾರಗಳಿಗೆ ಧಾರಾಳವಾಗಿ ಅವಕಾಶವುಂಟು. ಹಾಸ್ಯ ಸನ್ನಿವೇಶಗಳನ್ನೊಳಗೊಂಡ ಇಡೀ ಭಾಗಗಳೂ ಹಾಸ್ಯ ಪಾತ್ರಗಳೂ ಅನೇಕ—ಬರಿಯ ಸರಸವೇ ಅಲ್ಲ; ಕಟಕಿ, ಮೂದಲೆ, ಅಪಹಾಸ್ಯ, ನಿಂದೆ, ಹೊಗೆಯ ನಗೆ—ಎಲ್ಲ ಉಂಟು. ಬಾಲ್ಯದಲ್ಲಿ ಕೌರವ ಪಾಂಡವರು ಮರಗೆರಸೆಯಾಡುತ್ತಿದ್ದಾಗ ಮರವೇರಿ ಕುಳಿತು ಹಂಗಿಸಿದ ಕೌರವರಿಗೆ ಬುದ್ಧಿ ಕಲಿಸುವ ಸಲುವಾಗಿ ಭೀಮಸೇನ ಆ ಮರವನ್ನೇ ಅಳ್ಳಾಡಿಸಿ ಅಷ್ಟು ಜನರನ್ನೂ ಕೆಳಗೆ ಉದಿರಿಸಿದನಂತೆ. ಈ ಕೊಂಚಾಟ ದಾಯಾದಿಮತ್ಸರವನ್ನೇ ಬೆಳೆಸಿದ ಚುಚ್ಚುಹಾಸ್ಯ. ದ್ರುಪದನ ಮೇಲೆ ಸೇಡು ತೀರಿಸಿಕೊಳ್ಳುವ ಉದ್ದೇಶದಿಂದ ದ್ರೋಣಾಚಾರ್ಯರು ತಮ್ಮ ಶಿಷ್ಯನಿಂದ ದ್ರುಪದನನ್ನು ಹಿಡಿತರಿಸಿ ಮಂಚದ ಕಾಲಿಗೆ ಕಟ್ಟಿಸಿ ಅವನ ತಲೆಯ ಮೇಲೆ ಕಾಲಿಟ್ಟಾಗಿನ ಸನ್ನಿವೇಶವೂ ಅಷ್ಟೇ ಬರಡು ಹಾಸ್ಯ. ಇದೂ ಸನ್ನಿವೇಶಕೃತ. ಗೆದ್ದು ತಂದ ಭೀಷ್ಮ ತನ್ನನ್ನು ವರಿಸಲೊಲ್ಲದೆ ಹೋದಾಗ ಅಂಬೆಯೆಂಬುವಳು ಸಾಲ್ವನಲ್ಲಿಗೆ ಹೋಗಿ, ಅವನಾದರೂ ತನ್ನನ್ನು ವರಿಸಬೇಕೆಂದು ಬೇಡಿದಾಗ ಅವನು ಬಹುಶಃ ತುಂಟನಗೆ ನಕ್ಕು ಭೀಷ್ಮ ನನ್ನನ್ನು ಓಡಿಸಿ ನಿನ್ನನ್ನು ಕೊಂಡೊಯ್ದ. ಆದ್ದರಿಂದ ನಾನೂ ಅವನ ಹೆಂಡತಿಯೆ ಆದ ಹಾಗಾಯಿತು. ನಾನು ಹೇಗೆ ನಿನ್ನನ್ನು ವರಿಸಲಿ ? ಎಂದನಂತೆ. ಇದು ನುಡಿಯ ಚಮತ್ಕಾರದಿಂದ ಉದಿಸುವ ಹಾಸ್ಯ. ಇಲ್ಲಿ ನಂಜೇನೂ ಅಷ್ಟಾಗಿ ಇಲ್ಲ. ನಿನ್ನ ಕೈದುವನೆಂತುಂ ಬಿಸುಟಿರ್ದ ಲೆಕ್ಕಮೆ; ಕೊಱೆವೊಡೆ ಬೆಟ್ಟುಗಳ್ ಬಿರಿವುವು; ಮಾದೇವರ ಮುಂದಣಾತನೆವಲಂ–ಮುಂತಾದ ನುಡಿಗಳಲ್ಲಿ ಪಂಪನ ನಿಶಿತ ಹಾಸ್ಯ ಪ್ರಜ್ಞೆಯನ್ನು ಗುರುತಿಸಬಹುದು. ಆದರೆ ದುರ್ಯೋಧನನ್ನು ಹಂಗಿಸುವ ದ್ರೌಪದಿಯ ಹಲವಾರು ಮಾತುಗಳು ಶುದ್ಧ ಹಾಸ್ಯವಲ್ಲ. ಅದೂ ಇರಲಿ. ಸತ್ತವರನ್ನೂ ಪಂಪ ನಗಿಸದೆ ಬಿಟ್ಟಿಲ್ಲ. ಯುದ್ಧಭೂಮಿಯಲ್ಲಿ ಮರುಳುಗಳ ಆಟವನ್ನು ನೋಡಿ ವೀರಭಟರ ಪಂದಲೆಗಳು ಮುಗುಳ್ನಗೆ ನಕ್ಕುವಂತೆ. ಇದು ಪರಮಾವಧಿ.

ರನ್ನನ (990) ಸಾಹಸಭೀಮವಿಜಯವೂ ಮಹಾಭಾರತವನ್ನೇ ಆಧರಿಸಿ ರಚಿಸಿದ ಕೃತಿಯಾದ್ದರಿಂದ ಇದರಲ್ಲಿ ಅಲ್ಲಲ್ಲಿ ಮಿಂಚುವ ಹಾಸ್ಯ ಕೂಡ ಸನ್ನಿವೇಶ ಮತ್ತು ಪಾತ್ರಗಳನ್ನೇ ಅವಲಂಬಿಸಿದ್ದು. ಇಲ್ಲಿಯೂ ಹಾಸ್ಯ ಗೌಣ. ಆದರೆ ಸಂಸ್ಕೃತ ನಾಟಕಗಳಲ್ಲಿರುವಂತೆ ವಿದೂಷಕನ ಪಾತ್ರವನ್ನು ನಿರ್ಮಿಸಿರುವುದು ರನ್ನನ ಕೃತಿಯ ವೈಶಿಷ್ಟ್ಯ. ಕೌರವ ಪಾಂಡವರ ನಡುವೆ ಸಂಧಾನ ಫಲಿಸಬಹುದೆಂಬ ಸೂಚನೆ ಬಂದಾಗ ಎಲ್ಲರಿಗಿಂತ ಆತಂಕಗೊಂಡವಳು ದ್ರೌಪದಿ. ಸಂಧಿ ವಿಫಲವಾದಾಗ.

ಹಾಗಾದರೆ ಪಾಂಡವರಿಗೆ ನೆಲೆ ತಪ್ಪುತ್ತದೆ. ತನಗೆ ಜೀವನ ಬೇಡವಾಗುತ್ತದೆ—ಎಂದು ಆಕೆ ಭೀಮನಲ್ಲಿಗೆ ಬಂದು ಅಳುತ್ತಾಳೆ. ದುರ್ಯೋಧನನ ತೊಡೆ ಮುರಿಯುವುದಾಗಿ ಆಗ ಭೀಮ ಸತ್ಯಪ್ರತಿಜ್ಞೆ ಮಾಡಿದ. ಇಂಥ ಗಂಭೀರ ಪರಿಸ್ಥಿತಿಯಲ್ಲಿ ಬರುತ್ತದೆ—ವಿದೂಷಕನ ನಗೆಮಾತು. ದೇವಾಸುರ ಯುದ್ಧಕ್ಕೆ ಕರಗಂಬೊತ್ತ ಡಾವರಡಾಕಿನಿಯೇ ಪಾಂಚಾಲಿ—ಎಂಬುದು ಅವನ ವರ್ಣನೆ. ಅಲ್ಲದೆ—

ಕುರುಕುಲಮಂ ನುಂಗಿದೆಯಿ ।
ನ್ನರೆಬರುಮಂ ನುಂಗಲಿರ್ಪೆ ಕುರುಪತಿಯುಮನಿ ॥
ನ್ನೆರಡನೆಯ ಹಿಡಂಬಿಯನೆ ।
ಮ್ಮರಸಂ ರಕ್ಕಸಿಯನೆಲ್ಲಿ ತಂದನೊ ನಿನ್ನಂ ॥
ಮಾರುತಿ ನಿಜವೇಣೀಸಂ ।
ಹಾರಂ ಮಾಡಿದೊಡೆ ಮಾಳ್ಪುದೆನಗಂ ನಿನಗಂ ॥
ಪೂರಣೆಗೆ ಜಠರ ಪಿಠರಕ ।
ಪೂರಣೆಗೇಂ ಮಾಡದೆಂತು ಕರೆವೆಂ ನಿನ್ನಂ ॥

—ಎಂದು ಅಳುತ್ತ ಬಂದ ತನ್ನನ್ನು ನಗುತ್ತ ಹೋಗುವಂತೆ ವಿದೂಷಕ ಸಂತೋಷಪಡಿಸಿದುದಕ್ಕೆ ಒಡಂಬಟ್ಟು ಚಾರುಹಾಸಿನಿ (ದ್ರೌಪದಿ) ನಿಜನಿವಾಸಕ್ಕೆ ಹೋದಳು. ಇದು ರನ್ನನ ಕಾವ್ಯದಲ್ಲಿ ಹಾಸುಹೊಕ್ಕಾಗಿರುವ ವಿದೂಷಕ ಸಮ್ಮಿತಿ.

ನಾಗಚಂದ್ರ (1100) ಅಭಿನವಪಂಪ. ಅವನ ಕಾಲದಲ್ಲೇ ಕಂತಿಯೆಂಬ ಕವಯಿತ್ರಿಯಿದ್ದಳೆಂದು ಪ್ರತೀತಿ. ಅವಳಿಗೂ ಅವನಿಗೂ ಕಾವ್ಯದಲ್ಲೇ ವಾಗ್ವಾದ. ಕಂತಿ ಹಂಪನ ಸಮಸ್ಯೆಗಳೆಂದು ಪ್ರಸಿದ್ಧವಾಗಿರುವ ಪದ್ಯಗಳು ಸಂಸ್ಕೃತದ ಚತುರೋಕ್ತಿಗಳಿಗೆ ಸಮವಾಗಿವೆ. ಇವು ಶ್ಲೇಷೆ, ವಿಚಿತ್ರ ಪದಜೋಡಣೆ ಮತ್ತು ಸರಸಹಾಸ್ಯಗಳ ತವರು. ನಾಗಚಂದ್ರ ಒಂದು ಸಾಲು ಪದ್ಯ ಕಟ್ಟಿ ಒಡ್ಡಿದ ಸಮಸ್ಯೆಯನ್ನು ಕಂತಿ ಪೂರೈಸುತ್ತಿದ್ದಳು. ಉದಾಹರಣೆಗೆ ಒಂದು ಚುಟುಕವನ್ನಿಲ್ಲಿ ಕೊಡಬಹುದು :—

ಅಭಿನವಪಂಪ (ಸಮಸ್ಯೆ)—ದನವಂ ಕಡಿಕಡಿದು ಬಸದಿಗೆಟಿ³ಯುತ್ತಿರ್ದರ್ ।
ಕಂತಿ (ಸಮಸ್ಯಾಪೂರಣ)–ವನದೊಳಗೆ ಪುಟ್ಟಿ ಬೆಳೆಯುತೆ ।
ತನಿಗಂಪಂ ಪತ್ತುದೆಸೆಗೆ ಬೀಱುತ್ತಿರ್ಪಾ ॥
ಘನತರ ಸುರುಚಿರ ಸಚ್ಚಂ ।
ದನವಂ ಕಡಿಕಡಿದು ಬಸದಿಗೆಟಿ³ಯುತ್ತಿರ್ದರ್ ॥

ಇನ್ನೊಂದು ಉದಾಹರಣೆ—

ಅಭಿನವಪಂಪ—ಹರವಿ ವಿರಹವಾಗಬಹುದಲ್ಲವೆ ?
ಕಂತಿ—ಕಡೆದೊಡೆಯಲ್ ಹರನಾಮಂ
ನಡುದೊಡೆಯಲ್ ಹವಿಯ ನಾಮಮಾದ್ಯಕ್ಷರಮಂ ॥
ತೊಡೆಯಲ್ಕೆ ರವಿಯ ನಾಮಂ ।
ಕಡೆಯಿಂದೋದಲ್ಕೆ ವಿರಹ ಕೇಳಲೆ ಪಂಪಾ ॥

ಇಂಥ ಪಂಥಗಳಲ್ಲಿ ಪ್ರತಿಬಾರಿಯೂ ಕಂತಿಯೇ ಗೆಲ್ಲುತ್ತಿದ್ದಳು. ಆದರೂ ಅಭಿನವಪಂಪನಿಗೆ ತಾನು ದೊಡ್ಡ ಕವಿಯೆಂದೇ ಪರಿಭಾವನೆ. ಹೇಗಾದರೂ ಅವಳಿಂದ ಒಮ್ಮೆಯಾದರೂ ಹೊಗಳಿಸಿಕೊಳ್ಳಬೇಕೆಂದು ಒಂದು ಸಂಚು ಹೂಡಿದ. ಸತ್ತಂತೆ ಒಮ್ಮೆ ನಿಶ್ಚೇಷ್ಟನಾಗಿ ಮಲಗಿದ. ಆತ ಸತ್ತನೆಂದೇ ಭ್ರಮಿಸಿದ ಕಂತಿಗೆ ದುಃಖ ಒತ್ತರಿಸಿಬಂತು. ಅವನನ್ನು ಹೊಗಳಿ ಪದ್ಯ ಕಟ್ಟಿದಳು. ನಾಗಚಂದ್ರ ಗೆದ್ದೆನೆಂದು ಎದ್ದು ಕುಳಿತ. ಇದು ಹಾಸ್ಯಾಚಾರಕ್ಕೆ (ಪ್ರಾಕ್ಟಿಕಲ್ ಜೋಕ್) ಒಂದು ಉದಾಹರಣೆ ಅಭಿನವ ಪಂಪನ ಕಾಲದಲ್ಲಿ ಕಂತಿಯೆಂಬವಳು ಇದ್ದಳೋ ಇಲ್ಲವೋ, ಮೇಲೆ ಹೇಳಿದಂಥ ಸಂಭಾಷಣೆಗಳು ನಡೆದುವೋ ಅಥವಾ ಬೇರೆಯಾರಾದರೂ ಇವನ್ನು ಕಟ್ಟಿದರೋ—ಅಂತೂ ಇವನ್ನು ಇಂತಿಷ್ಟು ಕೊಂಕಾಗಲಿ ದ್ವೇಷವಾಗಲಿ ಅಸೂಯೆಯಾಗಲಿ ಇಲ್ಲದ ಶುದ್ಧ ಹಾಸ್ಯಸಾಹಿತ್ಯವೆನ್ನಬಹುದು.

ಮತೀಯ ವಿಕಾರ, ಪುರಾಣ ಕಲ್ಪನೆ, ತತ್ತ್ವಕ್ಕೂ ಆಚರಣೆಗೂ ನಡುವಣ ಭೇದ—ಇವನ್ನು ಸ್ವಾರಸ್ಯವೂ ಹಾಸ್ಯಪೂರ್ಣವೂ ಆದ ಕಥಾರೂಪದಲ್ಲಿ ವರ್ಣಿಸುವ ಕಲೆಯಲ್ಲಿ ಜೈನಕವಿಗಳಾದ ನಯಸೇನ (1112), ಬ್ರಹ್ಮಶಿವ (1125) ಮತ್ತು ವೃತ್ತವಿಲಾಸ (1160) ಸಮರ್ಥರು. ಇವುಗಳಲ್ಲಿ ಬರುವುದು ಶುದ್ಧ ಹಾಸ್ಯವಲ್ಲ ; ನಂಜುನಗೆ, ವಿಡಂಬನ. ವೈದಿಕ ಮತದ ಅಂಧಶ್ರದ್ಧೆಯನ್ನು ಅವಹೇಳನ ಮಾಡುವಾಗ ಈ ಬಗೆಯ ನಗೆ ಹೊಮ್ಮುತ್ತದೆ. ಅಲ್ಲಲ್ಲಿ ಲೋಕವೀಕ್ಷಣೆಯ ಫಲವಾದ ಸರಸ ಹಾಸ್ಯವೂ ಹರಿಯುವುದುಂಟು. ಮುದುಕನ ಮದುವೆಯ ಹುಚ್ಚನ್ನು ವೃತ್ತವಿಲಾಸ ವರ್ಣಿಸಿರುವ ಪರಿಯಿದು :

ನೆರೆದಲೆ ಜೋಲ್ದ ಪುರ್ಬು ಕುಟಿ³ದಕ್ಷಿಯುಗಂ ತುಟಿಯರ್ತ
ಬೋಡಬಾಯ್ ।
ತೆರೆಮುಸಗಿರ್ದ ಮೋರೆಯುಡುಗಿರ್ದುರಮುಕ್ಕುಳಿಸಿರ್ದ ಪೊಟ್ಟೆ ಮೇ ॥
ಲ್ನೆರೆಮುಸಗಿರ್ದ ಕಾಲ್ ಮುಱಿದ ಬೆನ್ನುಱೆ ಕಂಪಿಪ ಹಸ್ತಮಸ್ತಕಂ ।
ಪರಿಕಿಸೆ ತಾಪಸಂಗೆನಗೆ ಪೇಸದೆ ಕನ್ನೆಯನ್ನೀಯಬಲ್ಲರೆ ॥

ಸುಮಾರು 1180ರಲ್ಲಿ ಇದ್ದ ರುದ್ರಭಟ್ಟ ಕವಿಯ ಜಗನ್ನಾಥ ವಿಜಯ ಭಕ್ತಿ ರಸ ಪ್ರಧಾನ ಕಾವ್ಯ. ನವರಸಗಳಲ್ಲೊಂದಾದ ಹಾಸ್ಯರಸವೂ ಇಲ್ಲಿ ಕೋಡಿವರಿದಿದೆ. ಉತ್ಪ್ರೇಕ್ಷೆ ಅತಿಶಯೋಕ್ತಿ ಚಮತ್ಕಾರಗಳು ತುಂಬಿರುವ ಈ ಕೃತಿ ಸಂಸ್ಕೃತದ ಉಕ್ತಿಗಳನ್ನು ನೆನಪಿಗೆ ತರುತ್ತದೆ. ಕೃಷ್ಣನನ್ನು ರಮಿಸಲು ಅವನ ತಾಯಿ ಕಥೆ ಹೇಳಿದ ಪರಿಯಿದು :—

ಕಥೆಯಂ ಕೇಳೆಲೆ ಕಂದ ಹುಂ ರಘುಜನೆಂಬಂ ಹುಂ ಸಕಾಂತಂ ವನ ।
ಸ್ಥಿತನಾದಂ ಗುರು ಪೇಟಿ³ ಹುಂ ದಶಶಿರಂ ಕೊಂಡೊಯ್ದನಾ ರಾಮನಾ ॥
ಸತಿಯಂ ತಾನೆನೆ ಪೂರ್ವಮಂ ನೆನೆಯುತುಂ ಹುಂಕೊಳ್ಳದುತ್ಕೋಪ ಹುಂ ।
ಕೃತಿಯಂ ಮಾಡುತುಮೌಂಡುಗರ್ಚಿ ಕಿಸುಗಣ್ಬೆಟ್ಟಚ್ಯುತಂ ರಂಜಿಕುಂ ॥

**ನಡುಗನ್ನಡ :** ಹನ್ನೆರಡನೆಯ ಶತಮಾನಕ್ಕೆ ಬಂದಾಗ ಪ್ರಮುಖವಾಗಿ ನೆನಪಾಗುವವರು ವೀರಶೈವ ವಚನಕಾರರು. ಮೃದುಹಾಸ್ಯ ಮತ್ತು ವಿಡಂಬನೆಗಳಿಗೂ ಶಿವಶರಣರ ವಚನಗಳು ತವರು. ಸಾಮಾನ್ಯರ ಬಗೆಗೆ ನಿಲುಕುವಂತೆ ಚಮತ್ಕಾರದಿಂದ ಹೇಳುವುದರಲ್ಲಿ ವಚನಕಾರರು ಅಸಾಮಾನ್ಯರು. ಏತ ತಲೆವಾಗಿದಲೇನು ? ಭೃತ್ಯಾಚಾರಿಯಾಗಬಲ್ಲುದೇ ಅಯ್ಯ ? ಇಕ್ಕುಳ ಕೈ ಮುಗಿದರೇನು ? ಲಿಂಗವೇದಿಯಾಗಬಲ್ಲುದೇ ಅಯ್ಯ ? ಎನ್ನುವುದು ಬಸವಣ್ಣನವರ ನಗೆಯ ರೀತಿನೀತಿ. ಗುಡಿ ಕೆರೆ ಕಟ್ಟಿಸಿ, ಪರಮಾರ್ಥದ ತೃಪ್ತಿ ಪಡೆದನೆನ್ನುತ್ತಿದ್ದ ಸಿದ್ಧರಾಮನನ್ನು ಹಿರಿಯ ಒಡ್ಡನೆಂದು ಪರಿಹಾಸ ಮಾಡಿದ ಅಲ್ಲಮಪ್ರಭುವಿನದು ನಿರ್ದಾಕ್ಷಿಣ್ಯ ದೃಷ್ಟಿ. ಕಲಿಕಂಭನೆಂಬ ಶರಣನಿಗೆ ಭಕ್ತರನ್ನು ನಗಿಸುವುದೇ ಕಾಯಕ. ವಿಕೃತ ವೇಷಭೂಷಣಗಳನ್ನು ನೋಡಿ ನಗೆಯಾಡುವುದು ಹಲವು ವಚನಕಾರರ ಸಹಜಪ್ರವೃತ್ತಿ. ಹೀಗೆ ವಚನಕಾರರ ಕೃತಿಗಳಲ್ಲಿ ನಗೆ, ಸಹಾನುಭೂತಿ, ಚುಚ್ಚುನುಡಿಗಳು ಕೂಡಿ ಹರಿದಿವೆ.

ರಗಳೆಗಳನ್ನು ಪ್ರಚಾರಕ್ಕೆ ತಂದು ಹೊಸ ಕಾವ್ಯ ಪ್ರಕಾರವೊಂದರ ಪ್ರವರ್ತಕನಾದ ಹರಿಹರನ (1200) ಕೃತಿಗಳು ಭಕ್ತಿಪ್ರಧಾನವಾದರೂ ಅವುಗಳಲ್ಲೂ ಹಾಸ್ಯಕ್ಕೇನೂ ಕೊರತೆಯಿಲ್ಲ. ಬಸವರಾಜದೇವರ ರಗಳೆಯಲ್ಲಿ ಶಿವನ ಒಡ್ಡೋಲಗದ ರಸಸನ್ನಿವೇಶದಲ್ಲಿ ಬಂದಿರುವ ಭೃಂಗಿಯ ನಗೆಯ ನೃತ್ಯ ಒಂದು ಉದಾಹರಣೆಯಾದರೆ, ಅವತಾರಪುರುಷನಾದ ನಂಬಿಯಣ್ಣನ ರಗಳೆಯಲ್ಲಿ ಅಲ್ಲಲ್ಲಿ ಮಿಂಚುವ ಹಾಸ್ಯ ಇನ್ನೊಂದು ಉದಾಹರಣೆ. ನಂಬಿಯಣ್ಣನಿಗೆ ಆಗಲಿದ್ದ ಮದುವೆಯನ್ನು ತಪ್ಪಿಸಿ, ಆತ ಇನ್ನೊಬ್ಬಳನ್ನು ಲಗ್ನವಾಗುವಂತೆ ಮಾಡಬೇಕೆಂಬ ಉದ್ದೇಶದಿಂದ ಶಿವನೇ ವೃದ್ಧನ ವೇಷ ಧರಿಸಿ ಬಂದಾಗಿನ ಸನ್ನಿವೇಶದ ತುಂಬ ನಗೆಯೇ ಹಾಸುಹೊಕ್ಕಾಗಿದೆ. ಕಯ್ಯ ಕೊಡೆಯಿಂ, ಮಯ್ಯ ತೆರೆಯಿಂ, ಜೋಲ್ವ ಪುರ್ವಿಂ, ನೇಲ್ವ ತೋಳತೊವಲಿಂ, ಇಟ್ಟ ವಿಭೂತಿಯಿಂ, ಊಱಿದ ಯಷ್ಟಿಯ ಕೋಲಿಂ, ಪಿಡಿದ ಕಮಂಡಲದಿಂದಿಳಿದ ಬೆಳುಗಡ್ಡದಿಂ, ನಡುಗುವ ನರೆದಲೆಯಿಂ, ನರೆತು ಸಡಿಲ್ವ ಸರ್ವಾಂಗದಿಂ, ಪುಣ್ಯಂ ಪಣ್ಣಾದಂತೆ ಒಮ್ಮೊಮ್ಮೆ, ಕೆಮ್ಮುತೊಮ್ಮೊಮ್ಮೆ ಗೊಹೆಗೊಹೆಗುಟ್ಟುತುಂ ಶಿಥಿಲಾಕ್ಷರಂಗಳಿಂ ನಮಃಶಿವಾಯಯೆನುತ್ತೆನಲಾಱದಂತೆ ನಡುಗುತ್ತುಂ ಬಂದ ಶಿವ ಹೆಂಗಸರ ನಡುವೆ ನಡೆದು, ವಿಪ್ರರ ಸಮೂಹವನ್ನು ಬಳಸಿ, ಮನಸ್ಸಿನಲ್ಲೇ ನಗುತ್ತ, ಕೋಲನೂಱುತೆ ಕೆಮ್ಮಿ ಕಮ್ಮುತ್ತೆ ಸಾಲ್ಗೊಂಡಿರ್ದ ತುಪ್ಪದ ಕೊಡಂಗಳೊಳ್ ನಾಲ್ಕೆರಡನೆಡಹಿ ನಮಃಶಿವಾಯ ಎಂಬ ವೃದ್ಧಧ್ವನಿ ಪುಟ್ಟೆ ಕೊಡಂಗಳ ಮೇಲೊಡೆಬೀಳ್ದು ಕುಳ್ಳಿರ್ದರ ಮುಖದೊಳಂ, ಕಣ್ಣೊಳಂ ಮಯ್ಯೊಳಂ ತುಪ್ಪಂ ಚೆಲ್ಲೆ ಎಲ್ಲರೆರ್ದುಮಲ್ಲಳಿಗೊಂಡು ಘೊಳ್ಳೆಂದು ಬಿಳ್ದ ವೃದ್ಧಮಾಹೇಶ್ವರನಂ ಮುತ್ತಿಕೊಂಡೆತ್ತಲನುವಾಗಿ ಮೆಲ್ಲನೆ ನೆಗಪಿ ಹೊರಗೆ ತಂದು ಬಿಡುತ್ತಾರೆ. ಆದರೆ ಅಲ್ಲಿಗೆ ಬಿಟ್ಟನೇ ಆ ಮುದುಕ ? ಅವನ ಉದ್ದೇಶ ನೆರವೇರಬೇಡವೆ ? ಆತ ಮೆಲ್ಲಗೆ ಒಳಹೊಕ್ಕು ಗಳಿಗೆ ಬಟ್ಟಲ ಮೇಲೆ ಬಿದ್ದ, ಕಳಸಿಗೆಯನ್ನೊಡೆದ, ಹಾಸಕ್ಕಿಯನ್ನು ಸೂರೆಮಾಡಿದ. ಎಲ್ಲರಿಗೂ ಸಿಟ್ಟು. ಆದರೆ ಏನೂ ಮಾಡುವ ಹಾಗಿಲ್ಲ. ಮುಟ್ಟಿದರೆ ಸಾಯುವಂತಿರುವ ಮುದುಕನನ್ನು ಶಿಕ್ಷಿಸುವುದು ಹೇಗೆ ? ಇದೊಂದು ಅಪೂರ್ವ ಹಾಸ್ಯ ಸನ್ನಿವೇಶ. ಇಂಥ ಮಧುರ ಹಾಸ್ಯಗಳಿಂದ ಹಿಡಿದು ಪರಸಮಯಿಗಳನ್ನು ಕೆರಳಿಸುವ ಚುಚ್ಚು ನುಡಿಯ ವರೆಗೆ ಹಾಸ್ಯದ ನಾನಾ ಪ್ರಕಾರಗಳು ಹರಿಹರನ ಕೃತಿಗಳಲ್ಲಿ ಯಥೇಷ್ಟವಾಗಿವೆ.

ಅಹಿಂಸಾವ್ರತದ ಮಹಿಮೆಯನ್ನು ಸಾರುವುದೇ ಜನ್ನನ (1230) ಯಶೋಧರ ಚರಿತೆಯ ಮುಖ್ಯೋದ್ದೇಶವಾದರೂ ಆತ ಸರಸ ಹಾಸ್ಯಗಾರ. ವಿಸಂಗತ ಸನ್ನಿವೇಶಗಳನ್ನು ತಂದೊಡ್ಡಿ ಹಾಸ್ಯದ ಬುಗ್ಗೆ ಹೊಮ್ಮಿಸುವುದೇ ಆತ ಇಲ್ಲಿ ಅನುಸರಿಸಿರುವ ವಿಧಾನ. ಅರಮನೆಯ ಸಕಲ ಭೋಗಭಾಗ್ಯಗಳೂ ಅಮೃತಮತಿಗೆ ಇದ್ದರೂ ಆಕೆಗೆ ಪಱಿದಲೆ, ಕುಟಿ³ನೊಸಲು, ಅಟಿಗಣ್ಣು, ಹಪ್ಪಳಿಕೆ ಮೂಗೂ ಟೊಂಕ ಮುಱಿದ ಕತ್ತೆಯ ಕಾಲಂ ಮಱೆಯಿಸುವ ಕಾಲೂ ಇದ್ದ ಬಧಿರನಲ್ಲಿ ಕಾಮ.

ಅವನಿಗೋ, ಇವಳೊಮ್ಮೆ ತಡವಾಗಿ ಹೋದಾಗ ಕ್ರೋಧಕೆರಳುತ್ತದೆ. ತಡವಾದುದುಂಟು ನಲ್ಲನೆ ಬಿಡು ಮುಳಿಯದಿರ್ ಎಂದು ಆಕೆ ಅಂಗಲಾಚುತ್ತಾಳೆ. ಇದು ಬೇರೆಲ್ಲೂ ಸಿಗದ ವಿಕೃತ ಹಾಸ್ಯ ಸನ್ನಿವೇಶ.

ಷಟ್ಪದಿಯನ್ನು ರಚಿಸಿದ ಕವಿಗಳ ಕೃತಿಗಳಲ್ಲೂ ಅಲ್ಲಲ್ಲಿ ಹಾಸ್ಯಕ್ಕೇನೂ ಕೊರತೆಯಿಲ್ಲ. ವಿಶ್ವಾಮಿತ್ರನ ವಿಚಿತ್ರ ಪ್ರತಿಜ್ಞೆಯಿಂದ ಆರಂಭವಾಗಿ ಹರಿಶ್ಚಂದ್ರನ ಸತ್ಯಸ್ಥಾಪನೆಯಲ್ಲಿ ಕೊನೆಗೊಳ್ಳುವ ಹರಿಶ್ಚಂದ್ರಕಾವ್ಯದ ಕರ್ತೃವಾದ ರಾಘವಾಂಕನ ಶಬ್ದ ಚಮತ್ಕೃತಿಯಲ್ಲಿ ಬರುವ ಹಾಸ್ಯ ವಿಶಿಷ್ಟವಾದದ್ದು. 'ಗರಳಗೊರಳವನರಳಸರಳಂಗೆ ಮುನಿವಂತೆ' ಎಂಬ ಮಾತು ಒಂದು ಉದಾಹರಣೆ. ಮಕ್ಕಳು ಮಾಡುವ ಅಕ್ಷರಗಳ ದೊಂಬರಾಟವನ್ನಿಲ್ಲಿ ಕಾಣಬಹುದು. ಇಂಥವನ್ನು ರಾಘವಾಂಕನೇ ಅಲ್ಲದೆ ಅನೇಕರು ಹೊಸೆದಿದ್ದಾರೆ. ಆದರೆ ಹಾಸ್ಯಖಂಡಗಳನ್ನೇ ಕಾವ್ಯದಲ್ಲಿ ನೆಯ್ದಿರುವ ಷಟ್ಪದಿಕಾರರಲ್ಲಿ ಕುಮಾರವ್ಯಾಸ (1430) ಅಗ್ರಗಣ್ಯ. ಬಕಾಸುರನ ಹೊಟ್ಟೆಬಾಕತನ, ದ್ರೌಪದೀ ಸ್ವಯಂವರದ ಕಾಲದಲ್ಲಿ ಹಾಜರಿದ್ದ ಅರ್ಜುನನ ಬ್ರಾಹ್ಮಣ ವೇಷ, ಉತ್ತರನ ಪೌರುಷ—ಇವೆಲ್ಲ ಕುಮಾರವ್ಯಾಸನ ಹಾಸ್ಯದೃಷ್ಟಿಯನ್ನು ಪ್ರತಿಪಾದಿಸುವ ಪ್ರಸಂಗಗಳು. ಕಟಕಿ ನಿಂದೆ ಮೂದಲೆಗಳೇ ಮುಂತಾದ ವಿಡಂಬನೆಯ ನಾನಾ ಪ್ರಕಾರಗಳಿಗೂ ಕುಮಾರವ್ಯಾಸನ ಕೃತಿಯಲ್ಲಿ ಕೊರತೆಯಿಲ್ಲ. ಚಾಮರಸನ (1430) ಪ್ರಭುಲಿಂಗಲೀಲೆಯಲ್ಲಿ ಕಾಣುವುದು ಸಹಾನುಭೂತಿ ಮಿಶ್ರಿತ ತಿಳಿಹಾಸ್ಯ, ಲಘುವಿಡಂಬನೆ. ತೀವಿದ ಎಳನಗೆಯ ಬೆಳುದಿಂಗಳನ್ನು ಪಸರಿಸುವ ದೇವಪುರ ಲಕ್ಷ್ಮೀರಮಣನ ಆಸ್ಯಚಂದ್ರದ ಆನಂದದಲ್ಲಿ ಮಿಂದ ಲಕ್ಷ್ಮೀಶನ (1550) ಹಾಸ್ಯ ಅವನಿಗೇ ವಿಶಿಷ್ಟವಾದದ್ದು. ಧರ್ಮರಾಜ ಅಶ್ವಮೇಧ ಮಾಡುವ ಪ್ರಸ್ತಾಪ ಬಂದಾಗ ಭೀಮ-ಕೃಷ್ಣರ ನಡುವೆ ನಡೆಯುವ ಹುಸಿ ಜಗಳ, ಷಡ್ರಸಾನ್ನದ ಆರೋಗಣೆಯಲ್ಲಿರುವ ಕೃಷ್ಣನೊಂದಿಗೆ ಹೆಂಡತಿಯ ಸರಸ ವಿನೋದ, ಬೀಗರು ಪರಸ್ಪರವಾಗಿ ಮಾಡುವ ಹುಚ್ಚು ಹಾಸ್ಯ, ಚಂಡಿಯ ಕಥೆಯ ವಿಧಿಯ ವಿಕೃತ ಹಾಸ್ಯ, ಅಲ್ಲಲ್ಲಿ ಮೊಗದೋರುವ ವ್ಯಂಗ್ಯ, ಕಟಕಿ, ನಿಂದೆ, ಮೂದಲೆ—ಇವು ಲಕ್ಷ್ಮೀಶನನ್ನು ನಗೆಗಾರನನ್ನಾಗಿ ಮಾಡಿವೆ. ಗೊರೂರು ರಾಮಸ್ವಾಮಯ್ಯಂಗಾರ್ಯರು ಹೇಳಿರುವ ಹಾಗೆ, ಲಕ್ಷ್ಮೀಶ ಹಾಸ್ಯಕ್ಕಾಗಿಯೇ ಆಭಾಸಪೂರ್ಣವಾದ ಪದ್ಯಗಳನ್ನು ಹೆಣೆದು ಸೇರಿಸಿಲ್ಲ. ಅವನ ಕೃತಿಯಲ್ಲಿ ಕಾಣುವುದು ಬಲಾತ್ಕಾರದ ಕಚಕುಳಿಯ ನಗೆಯಲ್ಲ ; ಔಚಿತ್ಯ, ಗಾಂಭೀರ್ಯ, ಹಿತಮಿತಿ–ಇವುಗಳಿಂದ ಕೂಡಿದ ಸಹಜ ಹಾಸ್ಯವದು.

ಸಾಂಗತ್ಯಕಾರ ರತ್ನಾಕರವರ್ಣಿಯಲ್ಲಿ (1560) ಹಾಸ್ಯದ ಒರತೆಯನ್ನೇ ಕಾಣಬಹುದಾಗಿದೆ. ರಾಗರಸಿಕ ಮತ್ತು ವೀತರಾಗರಸಿಕನಾದ ರತ್ನಾಕರವರ್ಣಿ ಸರಸ ವಿನೋದಿ. ಬಿಸುನಗೆಯಾವುದು ತಣ್ಣಗೆಯಾವುದು। ಹುಸಿನಗೆ ಮುಗುಳುನಗೆಗಳು॥ ರಸನಗೆಯೆಳನಗೆಯೆಂಬವೆಂತಿಹವು—ಎಂದು ಈತ ಬಲ್ಲ. ಡಾ. ಎಂ. ಎಸ್. ಸುಂಕಾಪುರರು ಹೇಳುವಂತೆ ಭರತೇಶನ ಅರಮನೆಗೆ ಶೃಂಗಾರದ ನೆಲಗಟ್ಟು, ಹಾಸ್ಯದ ಚಪ್ಪರ, ನಗೆಯ ತೋರಣ. ಅವನಿಗೆ ಗೊತ್ತಿಲ್ಲದ ಹಾಸ್ಯದ ಬಗೆಯಿಲ್ಲ. ಭರತೇಶನೊಮ್ಮೆ ಬಾಹುಬಲಿಯ ಮೇಲೆ ಯುದ್ಧಕ್ಕೆ ಹೊರಟಿದ್ದ. ಅವನ ಸೈನಿಕರಲ್ಲಿ ಕೆಲವರು ಅವನನ್ನು ಹೊಗಳಿಯೂ ಇನ್ನು ಕೆಲವರು ಹಗುರವಾಗಿಯೂ ಮಾತಾಡಿಕೊಳ್ಳುತ್ತಿದ್ದರು. ಈತ ದೊಡ್ಡವನಾದದ್ದು ನಮ್ಮಿಂದ. ಸ್ವತಃ ಇವನಿಗೇನು ಶಕ್ತಿ? ಎಂದು ಕೆಲವರ ಭಾವನೆ. ಭರತೇಶನ ಕಿವಿಗೆ ಇದು ಬಿತ್ತು. ಆತ ಕೋಪಗೊಳ್ಳಲಿಲ್ಲ. ಅವರಿಗೆ ತನ್ನ ಶಕ್ತಿಯ ಮನವರಿಕೆ ಮಾಡಲು ಒಂದು ಉಪಾಯ ಹೂಡಿದ. ಕಿರುಬೆರಳಿಗೆ ಬೇನೆ ಬಂದು ಅದು ಡೊಂಕಾದಂತೆ ನಟಿಸಿದ. ಮೂಲಿಕೆ ಹಚ್ಚಲು ವೈದ್ಯರೂ ಮಂತ್ರಿಸಲು ಮಂತ್ರವಾದಿಗಳೂ ಬೀಜಾಕ್ಷರ ಮಂತ್ರವನ್ನು ಬರೆದು ಕಟ್ಟಲು ಮಂತ್ರಸಿದ್ಧರೂ ಬೆರಳನ್ನು ತಿಕ್ಕಿ ಮಣಿಸಲು ಜಟ್ಟಿಗಳೂ ಮುಂದಾದರು. ಭರತೇಶ ಮೊದಲು ಜಟ್ಟಿಗಳನ್ನು ಕರೆದು ಕಿರುಬೆರಳು ನೀಡಿದ. ಅವರೆಷ್ಟು ಜಗ್ಗಿದರೂ ಬೆರಳು ನೆಟ್ಟಗಾಗಲಿಲ್ಲ. ಚಿನ್ನದ ಸರಪಳಿ ಕಟ್ಟಿ ಎಳೆದರೂ ಅಲುಗಲಿಲ್ಲ. ವಿನೋದಕ್ಕಾಗಿ ಭರತೇಶ ಬೆರಳು ಸಡಿಲಬಿಟ್ಟ. ಸರಪಳಿ ಹಿಡಿದೆಳೆಯುತ್ತಿದ್ದವರೆಲ್ಲ ದಿಂಡುರುಳಿ ಹೊರಳಿದರು. ಎಲ್ಲರಿಗೂ ನಗೆ. ಭರತೇಶನೆಂಥ ಪರಾಕ್ರಮಿಯೆಂದು ಎಲ್ಲರಿಗೂ ದಿಗ್ಭ್ರಮೆ. ಇದು ರತ್ನಾಕರನ ಹಾಸ್ಯದ ಒಂದು ತುಣುಕು.

ತ್ರಿಪದಿಯನ್ನು ಅಪ್ರತಿಮವಾದ ರೀತಿಯಲ್ಲಿ ಬಳಸಿರುವ ಸರ್ವಜ್ಞನ ಹಾಸ್ಯದ್ದು ನಿರ್ದಾಕ್ಷಿಣ್ಯದ ಬಣ್ಣ. ಬೊಮ್ಮವನು ಅರಿದಿಹರೆ ಸುಮ್ಮನಿದ್ದಿರಬೇಕು ; ಬೊಮ್ಮವನರಿದು ಉಸುರಿದರೆ ಕಳಹೋಗಿ ಕೆಮ್ಮಿದಂತಕ್ಕು—ಮುಂತಾದವಲ್ಲಿ ಹೋಲಿಕೆಯ ಸಹಜ ಹಾಸ್ಯವಿದೆ. ಗಣಿಕೆಯ ಮೂಗಿನಲಿ ಮೊಣಕಾಲು ಹುಟ್ಟಿಹುದು ತೃಣನುಂಡು ನೀರನುಣಲೊಲ್ಲದಂತದಕೆ ಎಣಿಕೆಯಿಲ್ಲ—ಎಂಬುದರಲ್ಲಿ ಒಗಟೆಯ ಚಮತ್ಕಾರವನ್ನು ಕಾಣಬಹುದು. ಆಲದಾ ಬಿಳಲಂತೆ ಜೋಲು ಜಡೆಗಳ ಬಿಟ್ಟು ನಾಲಗೆ ಕೌಪ ಶುದ್ಧಿಲ್ಲ ಮರಿನಾಯ ಬಾಲದಂತಕ್ಕು—ಎಂಬುದು ಬೂಟಿಕೆಯ ಜನರ ಬಗ್ಗೆ ಹಾಸ್ಯಬೆರೆತ ಭರ್ತ್ಸನೆ. ತೊಗೆಯಿಲ್ಲದೂಟ ಸಂಪಿಗೆಯಿಲ್ಲದೆಲೆದೋಟ ನಗೆಯಿಲ್ಲದವಳ ಒಡನಾಟ ಬೆರಣಿಯ ಹೊಗೆಯ ಕುಡಿದಂತೆ—ಎಂಬುದು ಸರ್ವಜ್ಞನ ನಿರ್ಣಯ. ನಗೆಯ ಎಲ್ಲ ಮೆಟ್ಟಿಲುಗಳನ್ನೂ ವಿಡಂಬನೆಯ ಸೋಪಾನವನ್ನೂ ಕಾಣಲು ಸರ್ವಜ್ಞನಲ್ಲಿಗೆ ಹೋಗಬೇಕು.

ಜಾನಪದ ಸಾಹಿತ್ಯಕ್ಕೂ ಸರಸಹಾಸ್ಯಕ್ಕೂ ನಿತ್ಯಗಂಟು. ದೇಹದ ವಿಕಾರ, ಸನ್ನಿವೇಶದ ವೈಪರೀತ್ಯ, ಲೋಕಾಚಾರ, ಸಂಸಾರದ ಸೊಬಗು ಮುಂತಾದ ನಾನಾ ಸಂದರ್ಭಗಳಿಗೊಪ್ಪುವ ಹಾಸ್ಯದ ಹಾಡುಗಳು ಅಸಂಖ್ಯಾತ. ಗಾದೆಗಳಲ್ಲಂತೂ ನಗೆಯ ನಾನಾ ಪ್ರಕಾರಗಳನ್ನೇ ಕಾಣಬಹುದು. ಅಂಗೈಯಲ್ಲಿ ಕೈಲಾಸವನ್ನು ತೋರುವ ಸಾಹಸಪ್ರಯತ್ನಗಳಿವು.

ಹರಿದಾಸ ಸಾಹಿತ್ಯತರಂಗಿಣಿಯಲ್ಲಿ ಹಾಸ್ಯದ್ದೇ ಒಂದು ದೊಡ್ಡ ಕವಲು. ಹಾಸ್ಯ ವಿಡಂಬನಗಳ ಎಲ್ಲ ಪ್ರಕಾರಗಳೂ ಇಲ್ಲಿ ಮೈವೆತ್ತಿವೆ. ರಾಗಿ ತಂದೀರ್ಯಾ ಭಿಕ್ಷಕೆ ರಾಗಿ ತಂದೀರ್ಯಾ ? ಯೋಗ್ಯರಾಗಿ ಭೋಗ್ಯರಾಗಿ ಭಾಗ್ಯವಂತರಾಗಿ ನೀವು—ಎಂಬುದರಲ್ಲಿನ ಶ್ಲೇಷೆ ಅಸದೃಶ. ತುರುಕರು ಕರೆದರೆ ಉಣಬಹುದಣ್ಣಾ, ತುರುಕರು ಕರೆದರೆ ಅತಿಪುಣ್ಯವಣ್ಣಾ—ಎಂಬುದರಲ್ಲಿ ಧ್ವನಿಯೂ ಉಂಟು. ನಿಂದಕರಿರಬೇಕು, ಹಂದಿಯಿದ್ದರೆ ಕೇರಿ ಹ್ಯಾಂಗೆ ಶುದ್ಧವೊ ಹಾಂಗೆ—ಎನ್ನುವ ಮಾತಿನಲ್ಲಿ ಚುರುಕು ಹೆಚ್ಚು. ನೀನ್ಯಾಕೋ ನಿನ್ನ ಹಂಗ್ಯಾಕೋ ನಿನ್ನ ನಾಮದ ಬಲವೊಂದಿದ್ದರೆ ಸಾಕೋ ಎಂಬುದು ಸರಸ ಬೆರೆತ ಸವಾಲು. ದಾಸರ ಹಾಸ್ಯ ಬಲು ವಿಸ್ತಾರ.

ಕನ್ನಡದ ಹಳೆ-ಹೊಸ ಹುಟ್ಟುಗಳ ನಡುಗಡ್ಡೆಯ ಮೇಲೆ ನಿಂತಿರುವ ಮುದ್ದಣ ಹಾಸ್ಯಪ್ರಿಯ. ಬಾಳಿನ ನೋವನ್ನು ನುಂಗಿ ನಗುವುದು ಅವನ ಸ್ವಭಾವ. ರಾಮಾಶ್ವಮೇಧದ ಪುಟಪುಟದಲ್ಲೂ ಪುಟಿಯುವ ಮುದ್ದಣ-ಮನೋರಮೆಯರ ಸರಸ ಸಂಭಾಷಣೆಯಲ್ಲಿ ಮೃದುಹಾಸ್ಯವನ್ನು ಯಥೇಷ್ಟವಾಗಿ ಸವಿಯಬಹುದು. ಅನ್ಯಥಾ ನೀರಸವೆನಿಸಬಹುದಾದ ಆ ಗದ್ಯಕಾವ್ಯಕ್ಕೆ ಹೊಸತನದ ಮೆರುಗು ತಂದಿರುವುದು ಹಾಸ್ಯವೇ. ಅದರೊಳಗೂ ಭವತಿ ಭಿಕ್ಷಾಂದೇಹಿ ಎಂಬ ಸಪ್ತಾಕ್ಷರೀ ಮಂತ್ರದ ಪ್ರಸಂಗದಲ್ಲಿ ಬೆಡಗೂ ಚಮತ್ಕಾರವೂ ಇವೆ ; ಆಧುನಿಕ ಸಣ್ಣಕತೆಯಲ್ಲಿನಂತೆ ಕೊನೆಯ ವರೆಗೂ ಬೆಳೆಸುವ ಕುತೂಹಲದ ಮಾದರಿಯ ತಂತ್ರವಿದೆ. ಮುದ್ದಣ ತನ್ನ ಪ್ರಿಯತಮೆಯಾದ ಮನೋರಮೆಯನ್ನು ಕೊನೆಯತನಕವೂ ಕಾಡಿಸಿ ಯಥಾ ಸಾವಕಾಶವಾಗಿ ಆಕೆಯ ಕುತೂಹಲವನ್ನು ತಣಿಸುವ ಉತ್ತರ ನೀಡಿದಾಗ ಹುಸಿಗೋಪ ಬೆರೆತ ನಗುವಿನ ಅಲೆಗಳೇ ಅಪ್ಪಳಿಸುತ್ತವೆ. ಇಂಥ ಹಾಸ್ಯದಲ್ಲಿ ಮುದ್ದಣನಿಗೆ ಯಾರೂ ಸಾಟಿಯಿಲ್ಲ.

**ಆಧುನಿಕ ಸಾಹಿತ್ಯ :** ಹಿಂದಿನ ಕೃತಿಕಾರರಲ್ಲಿ ಹಾಸ್ಯ ಅಲ್ಲೊಮ್ಮೆ ಇಲ್ಲೊಮ್ಮೆ ಇಣುಕುಹಾಕುತ್ತಿತ್ತು, ಅಷ್ಟೆ. ನವರಸಗಳಲ್ಲಿ ಹಾಸ್ಯವೂ ಒಂದಾದ್ದರಿಂದ, ಜೀವನದಲ್ಲಿ ಹಾಸ್ಯವೂ ಬೆರೆತಿರುವುದರಿಂದ, ಅದೂ ಪ್ರಕಟವಾಗಬೇಕಾದ್ದು ಅನಿವಾರ್ಯ. ಆದರೆ ಶೃಂಗಾರ ವೀರ ಕರುಣಾದ್ಭುತಗಳೇ ಮುಂತಾದ ರಸಗಳನ್ನು ಮುಖ್ಯೋದ್ದೇಶವಾಗಿಟ್ಟುಕೊಂಡು ರಚಿಸಿದ ಕೃತಿಗಳು ಇದ್ದಂತೆ ಹಾಸ್ಯಪ್ರಧಾನವಾದ ಕೃತಿಗಳು ಹಿಂದೆ ಇರಲಿಲ್ಲವೆಂದೇ ಹೇಳಬೇಕು. ಅವರು ಹಾಸ್ಯಭರಿತ ಸನ್ನಿವೇಶವನ್ನೋ ವ್ಯಕ್ತಿಯನ್ನೋ ಕಂಡು ಚಿತ್ರಿಸುತ್ತಿದ್ದುದುಂಟಾದರೂ ಪ್ರತಿಯೊಂದು ಸನ್ನಿವೇಶದಲ್ಲೂ ಹಾಸ್ಯವನ್ನು ಕಾಣುವ ದೃಷ್ಟಿಗೇ ಅಷ್ಟಾಗಿ ಪ್ರಾಧಾನ್ಯ ನೀಡಲಿಲ್ಲ. ಆಧುನಿಕ ಕನ್ನಡ ಸಾಹಿತ್ಯ ಈ ಅರಕೆಯನ್ನು ತುಂಬಿದೆ. ಹಾಸ್ಯಪ್ರಧಾನವಾದ ಕಾದಂಬರಿ, ಕಥೆ, ಹರಟೆ, ಕವನಗಳೇ ಮುಂತಾದವು ಹಲವು ಪ್ರಕಟವಾಗಿವೆ. ದಿನ, ವಾರ, ಮಾಸಪತ್ರಿಕೆಗಳೂ ಹಲವು ಪ್ರಕಟನ ಸಂಸ್ಥೆಗಳೂ ಅಚ್ಚಿನ ಮನೆಯ ನೆರವಿನಿಂದ ಹಲವಾರು ಲೇಖಕರ ಕೃತಿಗಳನ್ನು ಹೊರತರುತ್ತಿರುವ ಈ ಕಾಲದಲ್ಲಿ ಇವನ್ನೆಲ್ಲ ವೈಜ್ಞಾನಿಕವಾಗಿ ವಿಂಗಡಿಸಿ ವಿಶ್ಲೇಷಣೆಮಾಡಿ ವಿವೇಚನೆ ನಡೆಸುವುದು ಕಷ್ಟಸಾಧ್ಯವೇ ಸರಿ. ಹಲವು ಹೆಸರುಗಳೂ ಕೃತಿಗಳೂ ಬಿಟ್ಟುಹೋಗುವುದು ಅಸಂಭವವಲ್ಲವಷ್ಟೇ ಅಲ್ಲ, ಅದು ಅನಿವಾರ್ಯ. ಮುಖ್ಯ ಲೇಖಕರನ್ನೂ ಪ್ರವೃತ್ತಿಗಳನ್ನೂ ಮಾತ್ರವೇ ಇಲ್ಲಿ ಗುರುತಿಸಬಹುದಾಗಿದೆ.

ಕನ್ನಡದಲ್ಲಿ ಮೊಟ್ಟಮೊದಲು ಸ್ವತಂತ್ರ ಕಾದಂಬರಿಯನ್ನು ಸೃಷ್ಟಿಸಿದವರಲ್ಲಿ ಎಂ. ಎಸ್. ಪುಟ್ಟಣ್ಣನವರೊಬ್ಬರು. ಇವರ ಮಾಡಿದ್ದುಣ್ಣೋ ಮಹಾರಾಯದಲ್ಲಿ ಲೇಖಕರಿಗೆ ಹಾಸ್ಯ ಹಸ್ತಗತವಾಗಿದೆ. ಸ್ವಭಾವ ವೈಚಿತ್ರ್ಯ, ಕುರೂಪ, ಅಸಂಬದ್ಧ ಸನ್ನಿವೇಶ ಇವುಗಳ ಸುತ್ತಲೂ ಹಾಸ್ಯದ ತರತಮಗಳೂ ವ್ಯಂಗ್ಯವೈವಿಧ್ಯಗಳೂ ಮಾಲೆಮಾಲೆಯಾಗಿ ಹಬ್ಬಿವೆ. ಈ ಕಾದಂಬರಿಯ ಒಂದು ಪಾತ್ರವಾದ ನಕಲಿ ನಾರಣಪ್ಪನಿಗೆ ನಗಿಸುವುದೇ ನಿರಂತರ ಹವ್ಯಾಸ. ಆತನ ಪಂಚಾಂಗ ವೀಕ್ಷಣೆಯ ಪ್ರಮಾದ ಒಂದು ಉದಾಹರಣೆ : ಪ್ರಮಾದ ಸಂವತ್ಸರವಾದ್ದರಿಂದ ಪ್ರಮಾದಗಳು ನಡೆಯುವಂಥಾದ್ದು ; ಮಾರ್ಗಶಿರ ಪಂಚಮಿಯಾದ್ದರಿಂದ, ಮಾರ್ಗಶಿರ—ದಾರಿಯಲ್ಲಿ ಹೋಗತಕ್ಕವರ ತಲೆಯು ಬಹುಳ—ಎಂದರೆ ವಿಶೇಷವಾಗಿ, ಪಂಚಮಿ ಎಂದರೆ ಪಂಚತ್ವ ಅಥವಾ ಮರಣವನ್ನು ಹೊಂದುವುದು. ಇಲ್ಲಿ ಶಬ್ದಗಳನ್ನೇ

ಅರೆದು, ವಿಚಿತ್ರಾರ್ಥಗಳನ್ನು ಹೊರಡಿಸಿ, ಹಾಸ್ಯವನ್ನು ಹಿಂಡುವ ಪ್ರಯತ್ನವನ್ನು ಕಾಣಬಹುದು. ಅದರೂ ಆಧುನಿಕ ಕನ್ನಡ ಗದ್ಯಸಾಹಿತ್ಯದಲ್ಲಿ ಮೊಟ್ಟಮೊದಲಿಗೆ ಹಾಸ್ಯಕ್ಕೂ ಎತ್ತರದ ಆಸನ ಹಾಕಿ ಚಾಮರ ಬೀಸಿದ ಕೀರ್ತಿ ಪುಟ್ಟಣ್ಣನವರದು.



ಆರ್. ನರಸಿಂಹಾಚಾರ್ಯ

ಕನ್ನಡದಲ್ಲಿ ಮೊಟ್ಟಮೊದಲನೆಯ ಎಂ.ಎ. ಪದವಿ ಪಡೆದ ಆರ್. ನರಸಿಂಹಾಚಾರ್ಯರು ಕರ್ಣಾಟಕ ಕವಿಚರಿತೆಗಷ್ಟೇ ಪ್ರಸಿದ್ಧರಲ್ಲ. ಅವರು ಬರೆದ ನಗೆಗಡಲಿನ ವಸ್ತುವೇನೆಂಬುದು ಅದರ ಹೆಸರಿನಲ್ಲೆ ವ್ಯಕ್ತವಾಗುತ್ತದೆ. ಗಾಂಪರೊಡೆಯರ ಮತ್ತು ಅವರ ಶಿಷ್ಯರ ಪ್ರತಾಪಗಳಲ್ಲಿ ಕಾಣುವುದು ಹುಚ್ಚು ಹಾಸ್ಯ, ಚುಚ್ಚು ಹಾಸ್ಯ—ಪೆದ್ದುತನದ ಲೇವಡಿ. ಇ.ಜಿ.ಇ. ಬೆಶ್ಚಿ ಕೃತಿಯ ಭಾಷಾಂತರವಿದು. ಜನಪದ ಸಾಹಿತ್ಯದಲ್ಲಿಯ ಜಂತದಕ್ಕಯ್ಯಕಥೆ, ಮಂಕುಭಟ್ಟನ ಕಥೆ, ಕಪಿ ಹಾರಿದ ಕಥೆ, ಹೆಂಟೆಗೊದ್ದನ ಕಥೆ, ಮುಂತಾದವುಗಳ ಪರಂಪರೆಗೆ ಇದೂ ಸೇರಿದ್ದೆನ್ನಬಹುದು. ಅಂತೆಯೇ ತೆನ್ನಾಲಿ ರಾಮಕೃಷ್ಣ ಮತ್ತು ಬೀರಬಲರವೆನ್ನಲಾದ ಹಲವಾರು ಕಥೆಗಳು ಇಂಥ ಹಾಸ್ಯವನ್ನು ಕನ್ನಡಿಸಿವೆ.

ಇವು ಸಂಬಂಧಪಟ್ಟ ವ್ಯಕ್ತಿಗಳನ್ನು ಕುರಿತ ಚತುರೋಕ್ತಿ ಸನ್ನಿವೇಶಗಳು. ಪಂಜೆ ಮಂಗೇಶರಾಯರು ಮಕ್ಕಳಿಗೆಂದು ಬರೆದ ಕಥೆಗಳಲ್ಲಿ ತಿಳಿಹಾಸ್ಯವನ್ನು ಕಾಣಬಹುದು. ಶ್ರೀನಿವಾಸ ಕೃತ ರಂಗಪ್ಪನ ಕತೆಗಳಂಥ ಹಲವಾರು ಕಥಾಶ್ರೇಣಿಗಳು ತಿಳಿಹಾಸ್ಯದ ಹೊನಲುಗಳು. ಈ ಹಾಸ್ಯ ಹಲವು ವೇಳೆ ಕಣ್ಣೀರು ಬೆರೆತಿದ್ದೂ ಆಗಿರುವುದುಂಟು. ವಿಡಂಬನೆಗೂ ಇಲ್ಲಿ ಕೊರತೆಯಿಲ್ಲ. ಕಥನ ಕವನಗಳಲ್ಲೂ ಭಾವಗೀತೆಗಳಲ್ಲೂ ಮಿಂಚುವುದು ಲಲಿತ ಮಧುರ ಹಾಸ್ಯ, ಶೀಲವಂತ ಜೀವಿ ಕಾಣುವ ಚೊಕ್ಕ ನುಡಿ, ಸನ್ನಿವೇಶ—ಸಂಭಾವಿತರಲ್ಲೂ ಸುಳಿಯುವ ದುಷ್ಟ ಆಲೋಚನೆಗಳಿಗೆ ಯಥೋಚಿತ ಮುಚ್ಚುಮರೆ. ತಡೆತಡೆದು ಪುಟ್ಟ ಕಂತುಗಳಲ್ಲಿ ಹೊರಬೀಳುವ ನಗೆಯಿಂದ ಅಜೀರ್ಣವೆಂದೂ ಸಾಧ್ಯವಿಲ್ಲ.

ಕುವೆಂಪು ಅವರ ವಿಪುಲ ಸಾಹಿತ್ಯದಲ್ಲಿ ಹಾಸ್ಯಕ್ಕೇನೂ ಕೊರತೆಯಿಲ್ಲ. ಅದೊಂದು ವಲಸರಕಿನ ಅಂಗಡಿ. ಕಾನೂರು ಹೆಗ್ಗಡಿತಿಯ ಹಲವು ಪಾತ್ರಗಳಿಗೆ ಹಾಸ್ಯ ರೇಶಿಮೆಯ ತೆಳು ಉಡಿಪಿನಶೃಂಗಾರವಿದೆ. ನಗೆ ಬಂದಾಗ ನಗಲು ಇವು ಎಂದೂ ಹಿಂದೆ ಮುಂದೆ ನೋಡುವುದಿಲ್ಲ. ಈ ಸಹಜ ಪ್ರಕ್ರಿಯೆಗೇಕೆ ಅತಿಯಾದ ಸಂಕೋಚ ? ಮುತ್ತಳ್ಳಿ ಶಾಮಯ್ಯಗೌಡರು ಒಬ್ಬರೇ ಸಾಕು. ಅವರ ಸ್ನಾನ ಪೂಜೆಗಳನ್ನು ವರ್ಣಿಸುವಾಗಲಂತೂ ಕುವೆಂಪು ಅವರಿಗೆ ಹಾಸ್ಯದ್ದೇ ಕುಂಚ. ಮಲೆನಾಡಿನ ಚಿತ್ರಗಳಲ್ಲಿ ಅಜ್ಜಯ್ಯನ ಅಭ್ಯಂಜನವನ್ನು ನೆನಸಿಕೊಂಡರೆ ಸಾಕು, ಹಾಸ್ಯದ ಚಿಪಾಟು ಕೀಳುತ್ತದೆ. ತುಂಗಾತೀರದ ಬಲಗಡೆಯಲ್ಲಿರುವ ಬೊಮ್ಮನಹಳ್ಳಿಯೊಂದು ಹಾಸ್ಯವಾಸ ; ಎಲ್ಲ ವಯಸ್ಸಿನ ಮಕ್ಕಳೂ ಚಪ್ಪರಿಸುವ ಸಾಹಿತ್ಯವದು. ಇನ್ನೊಂದು ಸಂದರ್ಭದಲ್ಲಿ, ಹೆಂಡತಿ ಹೊಲಿಯುತ್ತಿರುವ ಅಂಗಿಯನ್ನು ಕಂಡಾಗ ಕವಿ ಆಡುವ ಮಾತುಗಳು ಈ ರೀತಿ ಇವೆ :

ಬರಲಿರುವ ಕಂದಂಗೊ
ಬಂದ ಕಂದಂಗೊ
ಹೊಲಿಯುತಿರುವೀ ಅಂಗಿ
ಆರಿಗರ್ಥಾಂಗಿ ?

—ಇದು ಇವರ ಹಾಸ್ಯಕ್ಕಿರುವ ಇನ್ನೊಂದು ಮೈ. ಮಹಾಕಾವ್ಯವಾದ ಶ್ರೀ ರಾಮಾಯಣದರ್ಶನಂನಲ್ಲಿ ಹಾಸ್ಯಕ್ಕೆ ಮೀಸಲಾದ ಪುಟಗಳ ಸಂಖ್ಯೆಯಂತೂ ಲೆಕ್ಕವಿಲ್ಲ. ನೆಲದಂತರಾಳದಲ್ಲಿ ಹರಿಯುತ್ತಿರುವ ಹೊನಲು ಅಲ್ಲಲ್ಲಿ ಮೇಲೆದ್ದು ಬಂದಂತೆ ಈ ಕಾವ್ಯದುದ್ದಕ್ಕೂ ಕಂಗೊಳಿಸುವ ಹಾಸ್ಯದ ಪ್ರಕಾರಗಳನ್ನೆಲ್ಲ ಪಟ್ಟಿ ಮಾಡಿದರೆ, ಈ ಕ್ಷೇತ್ರದಲ್ಲೂ ಕವಿಯ ಪ್ರತಿಭೆ ಎಂಥದೆಂದು ವೇದ್ಯವಾಗುತ್ತದೆ. ಕೃಪೆಗೆಯ್ ತಾಯೆ, ಪುಟ್ಟನಂ ಕನ್ನಡದ ಪೊಸಸುಗ್ಗಿ ಬನದ ಈ ಪರಪುಟ್ಟನಂ ಎಂಬ ಮಾತಿನ ಶ್ಲೇಷೆಯಿಂದ ಉದ್ಭವಿಸುವ ಮೃದುಹಾಸ್ಯ, ಆಗಸದ ಚಂದ್ರ ಬೇಕೆಂದು ಹಟ ಹಿಡಿದು ಅಳುತ್ತಿದ್ದ ಪುಟ್ಟ ರಾಮನ ಮುಖಕ್ಕೆ ಮುದುಕಿಯೊಬ್ಬಳು ಕನ್ನಡಿಯನ್ನು ಹಿಡಿದು ಚಂದ್ರನನ್ನು ತೋರಿಸಿದ ಪ್ರಸಂಗದ ತಿಳಿಹಾಸ್ಯ, ಆ ಕನ್ನಡಿಯಂತುಟಾಕೆಯುಂ ಪ್ರತಿಬಿಂಬರೀತಿಯಂ ಕೈಗೊಂಡಳಾ ಜನದ ಮನದ ವಿಕೃತಿಗೆ ತನ್ನ ಮೆಯ್ ವಿಡಂಬನಮಪ್ಪವೋಲ್ ಎಂಬುದಾಗಿ ಕವಿ ಹೇಳಿರುವ ಮಂಥರೆಯ ವಿಕೃತಿ ವಕ್ರತೆಯ ರೂಪಿನ ಬಣ್ಣನೆಯಿಂದ ಉದ್ಭವಿಸುವಂಥ ವಿಕಟಹಾಸ್ಯ, ರಾಮಲಕ್ಷ್ಮಣ ಸೀತೆಯರು ಚಿತ್ರಕೂಟದಲ್ಲಿದ್ದಾಗ ಅವರವರೇ ಹೇಳಿಕೊಂಡು ತಾವು ನಕ್ಕದ್ದಲ್ಲದೆ ಓದುಗರನ್ನೂ ನಗಿಸುವ ಸರಸಸಲ್ಲಾಪ—ಇಂಥ ಹಲವಾರು ಪ್ರಭೇದಗಳನ್ನು ಇಲ್ಲಿ ಕಾಣಬಹುದು. ಇನ್ನು ಅವರ ಸರಳರಗಳೆಗಳಲ್ಲೂ ಕಥನಕವನಗಳಲ್ಲೂ ಭಾವಗೀತೆಗಳಲ್ಲೂ ಹಾಸ್ಯವೂ ತೊರೆಯಾಗಿ ಹರಿದಿದೆ, ಮಡುಗಟ್ಟಿ ನಿಂತಿದೆ. ಕನ್ನಡದ ಇಬ್ಬರು ಮಹಾಲೇಖಕರಾದ ಶ್ರೀನಿವಾಸ, ಕುವೆಂಪು ಇವರ ಹಾಸ್ಯದ ಸಾಮ್ಯ ವೈಲಕ್ಷಣ್ಯಗಳನ್ನು ವಿವೇಚಿಸುವುದು ಸ್ವಾರಸ್ಯವೂ ಪ್ರಯೋಜನಕಾರಿಯೂ ಆದೀತು.

ಬೇಂದ್ರೆಯವರ ಹಾಸ್ಯದ್ದು ಇನ್ನೊಂದು ಪೀಳಿಗೆ. ಅದರಲ್ಲಿ ಅವರ ವ್ಯಕ್ತಿತ್ವದ ಮುದ್ರೆ ಹೆಚ್ಚು ನಿಚ್ಚಳ. ಬಿಚ್ಚುಮನದಿಂದ ಹಾಸ್ಯಕೊಚ್ಚುವುದು ಅವರ ಸ್ವಭಾವ. ಹಲವೊಮ್ಮೆ ಅದು ವಾಚ್ಯವೂ ಹರಿತವೂ ಆದೀತು, ಜೋಕೆ. ಜನಪದದ ಮೆರುಗು ಈ ಹಾಸ್ಯದ ಇನ್ನೊಂದು ವೈಶಿಷ್ಟ್ಯ. ಹುಬ್ಬಳ್ಳಿಯವನಿನ್ನೂ ಬರಲಿಲ್ಲವೆಂದು ಕಾದು ಕುಳಿತ ಹೆಣ್ಣು, ಬಳಿಯಲ್ಲಿ ನಲ್ಲನಿಲ್ಲದಾಗ ಕೈ ಗಲ್ಲ ಹಚ್ಚಿ ಕೂತ ಕನ್ನೆ—ಮುಂತಾದ ಕವನಗಳ ಕಾಮಕಸ್ತೂರಿಯ ಸೊನೆ ಬೆರೆತ ನಗೆಯಂತಿರಲಿ, ಹರಟೆಗಳಲ್ಲೂ ಅಣಕವಾಡುಗಳಲ್ಲೂ ಹರಿದಿರುವ ಹಾಸ್ಯಕ್ಕೂ ತುಂಬುಹೊಳೆಯ ಆವೇಶ. ಅವರ ನಿರಾಭರಣ ಸುಂದರಿಯೆಂಬುದು ಬಹುತೇಕ ಹಾಸ್ಯ ಬರೆಹಗಳೇ ಇರುವ ಪುಸ್ತಕ. ಕುಯ್ಗುಡುವ ಭಟ್ಟರ ನಾಯಿಯ ವರ್ಣನೆ, ಕೇರಿಗೊಂದು ಕೆಮ್ಮುವ ಮುದುಕಿ ಇರಲೇಬೇಕೆಂಬ ವಿಚಿತ್ರ ವಾದ, ಈ ಜಗದ ಶುದ್ಧಿಕರಣಕ್ಕೆಂದು ಧ್ವಜವೆತ್ತಿ ಮೇಲಕ್ಕೆ ಹೊರಟಿರುವ ಕಸಪೊರಕೆ, ಹಕ್ಕಿ ಹಾರುತಿದೆ ನೋಡಿದಿರಾ ಎಂಬ ಕವನವನ್ನು ತಾವೇ ಅಣಕಿಸಿ ಬೆಕ್ಕು ಹಾರುತಿದೆ ನೋಡಿದಿರಾ?—ಎಂದು ಕಟ್ಟಿದ ಪದ್ಯದ ಅಪ್ಪಟ ಹಾಸ್ಯ—ಇವುಗಳದೊಂದು ತೂಕವಾದರೆ, ಅವರ ಹುಚ್ಚಾಟ ಮತ್ತು ನಗೆಯ ಹೊಗೆ ನಾಟಕಗಳ ನಂಜುನಗೆಯದು ಇನ್ನೊಂದು ತೂಕ. ವಿಡಂಬನದ ನಾನಾ ಪದರಗಳನ್ನಿಲ್ಲಿ ಕಾಣಬಹುದು. ಕಾರಂತರ ಹಲವಾರು ಕಾದಂಬರಿಗಳಲ್ಲಿ ಸನ್ನಿವೇಶಜನ್ಯವಾದ ಹಾಸ್ಯದ ಸೆಲೆಯೇ ಇದೆ. ಆದರೆ ದೇವದೂತರು, ಗ್ನಾನ ಮುಂತಾದವುಗಳಲ್ಲಿ ಜನರ ನಡೆನುಡಿಗಳಿಗೆ ಅವರು ನಗೆಯ ರಾವುಗನ್ನಡಿಯನ್ನೇ ಹಿಡಿದಿದ್ದಾರೆ. ಇಲ್ಲಿ ಬರುವ ಹಾಸ್ಯ ಬಲು ಹರಿತ. ಗರಗಸದಂತೆ ಹೋಗುತ್ತಲೂ ಕೊಯ್ಯುತ್ತದೆ, ಬರುತ್ತಲೂ ಕೊಯುತ್ತದೆ. ಈ ವಿಡಂಬನದ ನಗೆಹಲ್ಲಿಗೆ ತಮ್ಮ ಕತ್ತನ್ನೇ ಒಡ್ಡಿಕೊಂಡವರೂ ನಗುನಗುತ್ತಲೇ ಬಲಿಯಾಗುತ್ತಾರೆ. ವಿಡಂಬನಕ್ಕೆ ಪಟ್ಟಕಟ್ಟಿ, ಹಾಸ್ಯಕ್ಕೆ ಯುವರಾಜಾಭಿಷೇಕಮಾಡಿರುವ ಇನ್ನೊಬ್ಬ ಲೇಖಕರೆಂದರೆ ಶ್ರೀರಂಗ. ಅವರ ನಾಟಕಗಳದು ವ್ಯಂಗ್ಯಾನುಭೂತಿ. ಆದರೆ ಮಾತಿನ ಮಸೆದಾಟದಿಂದ, ಚತುರೋಕ್ತಿಯಿಂದ, ಶ್ಲೇಷೆಯ ಬಲದಿಂದ ಉಕ್ಕಿಬರುವ ಹಾಸ್ಯವೂ ಉಂಟು.

ಇವೆಲ್ಲ ಕನ್ನಡದ ಕೆಲವು ಪ್ರಧಾನ ಲೇಖಕರ ಕೃತಿಗಳಲ್ಲಿಯ ಹಾಸ್ಯವನ್ನು ಕುರಿತ ವಿವೇಚನೆಯಾಯಿತು. ಆದರೆ ಹಾಸ್ಯವನ್ನೇ ಪ್ರಧಾನ ಉದ್ಯೋಗವಾಗಿ ಮಾಡಿಕೊಂಡ ಲೇಖಕರ ಸಂಖ್ಯೆಗೇನೂ ಕನ್ನಡದಲ್ಲಿ ಕೊರತೆಯಿಲ್ಲ. ಕೈಲಾಸಂ ಇವರಿಗೆ ಆದ್ಯಪುರುಷ, ತಿಪ್ಪಾರಳ್ಳಿಯ ಬೋರ, ಕೋಳೀಕೆ ರಂಗ ಮುಂತಾದ ನಗೆವಾಡುಗಳ ದೊಗಲೆಬಗಲೆಯನ್ನೂ ಟೊಳ್ಳು-ಗಟ್ಟಿ, ಅಮ್ಮಾವ್ರಗಂಡ, ನಂಬ್ರಾಹ್ಮಣ್ಕೇ, ಬಂಡ್ವಾಳ್ವಿಲ್ಲದ ಬಡಾಯಿ, ಹುತ್ತದಲ್ಲಿ ಹುತ್ತ ಮುಂತಾದ ನಾಟಕಗಳಲ್ಲಿ ಮಧ್ಯಮವರ್ಗದ ಒಂದು ಪಂಗಡದ ಜನರ ಮೇಲೆ ಹರಿಸಿದ ಹಾಸ್ಯದ ವೃಷ್ಟಿಯನ್ನೂ ನೋಡಿದಾಗ ಕೈಲಾಸಂ ಎಂಬುದು ಹಾಸ್ಯಕ್ಕೆ ಪರ್ಯಾಯಪದವೆಂದೇ ಹೇಳಬೇಕು. ಆಗಿನ ಕಾಲದ ವಿದ್ಯಾವಂತರೆನಿಸಿಕೊಂಡವರ ವೃತ್ತಗಳಲ್ಲಿ ಅತಿಯಾಗಿ ಬೆಳೆದಿದ್ದ ಇಂಗ್ಲಿಷ್ ಮೋಹವನ್ನೂ ಡಾಂಭಿಕತನವನ್ನೂ ಸಂಪ್ರದಾಯ ಮೌಢ್ಯವನ್ನೂ ದಾಸ್ಯ ಮನೋವೃತ್ತಿಯನ್ನೂ ಇವರಂತೆ ಬಯಲಿಗೆಳೆದವರು ಇನ್ನೊಬ್ಬರಿಲ್ಲ. ತಾವರೆಕೆರೆ ಪ್ರಬಂಧ ಸಂಕಲನದಲ್ಲೂ ಹಾಸ್ಯದ ಮೆರವಣಿಗೆಯೇ ನಡೆದಿದೆ. ಇವರ ಅನೇಕ

ಬಿಡಿನುಡಿಗಳೂ ಹಾಸ್ಯದ ಊಟೆಗಳೇ. ಎಕ್ಕಡದಂತೆ ಇದ್ದೂ ಬೂಟ್ಸಿನಂತೆ ಕಟ್ಟಬಹುದಾದ ಚಪ್ಪಲಿಗೆ ಎಕ್ಕಡದ ಎಲಿಗೆನ್ಸೂ ಬೂಟ್ಸಿನ ಬಡಾಯಿಯೂ ಇದೆಯೆಂದು ವರ್ಣಿಸಿರುವ ಕೈಲಾಸಂ ಅವರ ನಗೆಗೆ ತುತ್ತಾಗಿರುವುದೆಲ್ಲ ಬಹಳ ಮಟ್ಟಿಗೆ ಈ ಬಗೆಯ ಮನಃಪ್ರವೃತ್ತಿಯೇ. ಅಳು-ನಗುಗಳ ನಡುಗೆರೆಯೆಷ್ಟು ಸಪೂರವೆಂಬುದನ್ನೂ ಕೈಲಾಸಂ ಅರಿತಿದ್ದವರು. ಆದ್ದರಿಂದಲೇ ಇವರ ನಗೆಯಲ್ಲಿ ವ್ಯಂಗ್ಯದ್ದು ನೂರಕ್ಕೆ ನಲವತ್ತು ಪಾಲಾದರೆ ಸಹಾನುಭೂತಿಯದು ಅರವತ್ತು ಪಾಲು. ಓದುಗರು ಸ್ವಲ್ಪ ಹೆಚ್ಚು ಹೊತ್ತು ತಮ್ಮ ಮನಸ್ಸನ್ನು ತಂಗಿಸಿದರೆ ಕಾಣುವುದು ನಗೆಯಲ್ಲ, ಕವಿಯ ಕಣ್ಣೀರು. ಹಲವೊಮ್ಮೆ ಇವರ ಹಾಸ್ಯ ಒರಟಾಗುವುದೂ ಉಂಟು. ಅತಿಯಾದ ಪ್ರಾಸ ಪ್ರಯೋಗವೂ ತಿಣುಕೂ ಬೇಸರ ಬರಿಸಬಹುದು. ಆದರೂ ಕೈಲಾಸಂ ಕನ್ನಡದ ಹಾಸ್ಯ ಚಕ್ರವರ್ತಿ. ಹಿಂದಿನ ನಾಟಕಗಳಲ್ಲಿ ವಿದೂಷಕನ ಸೆರಗಿಗೆ ಕಟ್ಟಿದ್ದ ಹಾಸ್ಯವನ್ನು ಬಿಡಿಸಿ ಭದ್ರಾಸನದ ಮೇಲೆ ಕುಳ್ಳಿರಿಸಿದ ಕೀರ್ತಿ ಕೈಲಾಸಂಗೆ ಸಲ್ಲುತ್ತದೆ.

ಕೈಲಾಸಂ ಪೀಳಿಗೆ ಬಲು ದೊಡ್ಡದು. ಅವರ ಆನಂತರ ಬಂದ ಅನೇಕ ನಾಟಕ ಲೇಖಕರು ಈ ಪ್ರಭಾವದಿಂದ ಬಿಡಿಸಿಕೊಳ್ಳಲಾಗಲಿಲ್ಲ. ಅತಿಯೆನಿಸುವ ಮಟ್ಟಿಗೆ ಇವರು ಹಳೆಯ ಪ್ರಯೋಗಗಳನ್ನೇ ಬೆಳೆಸಿದರು. ಆದರೂ ತಮ್ಮತನವನ್ನೂ ಉಳಿಸಿಕೊಂಡ ಕೆಲವರ ಹೆಸರನ್ನಾದರೂ ಇಲ್ಲಿ ಹೇಳಬಹುದು. ಕ್ಷೀರಸಾಗರ, ಪರ್ವತವಾಣಿ, ಎ. ಎಸ್. ಮೂರ್ತಿ—ಇವು ಮೂರು ಹೆಸರುಗಳು. ಇದೇ ರೀತಿ ಶ್ರೀರಂಗರಿಂದ ಪ್ರಭಾವಿತರಾದವರೆಂದರೆ ಎನ್ಕೆ ಕುಲಕರ್ಣಿ ಮತ್ತು ಬೇಂದ್ರೆ ಲಕ್ಷ್ಮಣರಾವ್.

ನಗೆಯನ್ನೇ ತಮ್ಮ ಲೇಖನದ ಕಸಬನ್ನಾಗಿ ಮಾಡಿಕೊಂಡ ಇನ್ನೊಬ್ಬರು ನಾ. ಕಸ್ತೂರಿ. ಇವರು ಹರಟೆಗಳನ್ನು ಹೊಸೆದಿದ್ದಾರೆ; ನಾಟಕಗಳನ್ನು ಬರೆದಿದ್ದಾರೆ, ಕವನಗಳನ್ನು ಕಟ್ಟಿದ್ದಾರೆ, ಪಡಿನುಡಿಗಳನ್ನು ಎರಚಾಡಿದ್ದಾರೆ. ಇಂಗ್ಲಿಷ್ ಹಾಸ್ಯದ ವಿಶ್ವರೂಪವನ್ನು ಕಂಡು ಅನುಭವಿಸಿ ಅದನ್ನು ಕನ್ನಡಿಸಿದ್ದಲ್ಲದೆ, ಕನ್ನಡದಲ್ಲಿಯ ಹಾಸ್ಯಜಾಯಮಾನವನ್ನು ಗುರುತಿಸಿ ಇದನ್ನೂ ಅದನ್ನೂ ಸೇರಿಸಿ ಕಸಿಮಾಡಿ ಹೊಸದೊಂದು ಜಾತಿಯನ್ನೇ ಸೃಷ್ಟಿಸಿದ್ದಾರೆ. ಇವರು ಬರೆದ ಅಣಕವಾಡುಗಳೂ ಹಾಸ್ಯ ಪದ್ಯಗಳೂ ಅನೇಕ.



ಗೊರೂರು ರಾಮಸ್ವಾಮಯ್ಯಂಗಾರ್

ಗೊರೂರು ರಾಮಸ್ವಾಮಯ್ಯಂಗಾರ್ಯರ ನಮ್ಮ ಊರಿನ ರಸಿಕರದು ಇನ್ನೊಂದು ಜಾತಿ. ತಮ್ಮ ಊರಿನ ನಾನಾ ವ್ಯಕಿಗಳನ್ನು ಸಹಾನುಭೂತಿಯಿಂದ ನೋಡಿ, ಅವರ ಕ್ಷಮ್ಯವಾದ ಕುಂದುಗಳಲ್ಲಿ ಹಾಸ್ಯವನ್ನು ಬಿತ್ತಿ ಬೆಳೆಸಿರುವ ಗೊರೂರರ ದೃಷ್ಟಿ ವಿಶಿಷ್ಟವಾದದ್ದು. ಇದೇ ಜಾಡಿನ ಇನ್ನೊಂದು ವಿಶಿಷ್ಟ ಕೃತಿಯೆಂದರೆ ಎಚ್. ಎಲ್. ನಾಗೇಗೌಡರ ನನ್ನೂರು.

ಹಾಸ್ಯಕ್ಕೇ ತಮ್ಮ ಲೇಖನಿಯನ್ನು ಮುಡಿಪು ಮಾಡಿದ ರಾ.ಶಿ.ಯವರು ಸ್ವತಃ ಕೃತಿರಚನೆ ಮಾಡಿದ್ದಲ್ಲದೆ ಹಾಸ್ಯಬರೆಹಗಾರರ ದೊಡ್ಡ ಪಡೆಯನ್ನೇ ಕಟ್ಟಿದರು. ಇವರು ಇಪ್ಪತ್ತೈದು ವರ್ಷ ನಡೆಸಿದ ಪತ್ರಿಕೆ ಕೊರವಂಜಿ ಇಂಗ್ಲಿಷ್‌ನ ಪಂಚ್ ಮಾದರಿಯದು. ದಾಶರಥಿ ದೀಕ್ಷಿತ್, ಸುನಂದಮ್ಮ, ಅ. ರಾ. ಸೇ, ಅಷ್ಟಾವಕ್ರ, ಹಾ. ರಾ. ಮುಂತಾದ ಹಲವರು ಕೊರವಂಜಿಯ ಗರಡಿಯಲ್ಲಿ ತಯಾರಾದವರು. ವಿಕಟವಿನೋದಿನಿ, ವಿನೋದ ಇವು ಹಾಸ್ಯಕ್ಕೇ ಮೀಸಲಾದ ಇನ್ನೆರಡು ಪತ್ರಿಕೆಗಳು.

ರಾಜರತ್ನಂ, ನಾಡಿಗೇರ ಕೃಷ್ಣರಾಯ, ಬೀಚಿ ಇವರ ಹೆಸರು ಹೇಳದೆ ಕನ್ನಡ ಹಾಸ್ಯ ಸಾಹಿತ್ಯದ ಅವಲೋಕನ ಸಂಪೂರ್ಣವಾಗುವುದಿಲ್ಲ. ರತ್ನನ ಪದಗಳಲ್ಲಿ ಅಲ್ಲಲ್ಲಿ ಹಾಸ್ಯದ ಹರಳುಗಳನ್ನು ಚೆಲ್ಲಿರುವ ರಾಜರತ್ನಂ ಅವರ ನರಕದ ನ್ಯಾಯವೆಂಬ ನಾಟಕ ಹಳ್ಳಿಗರ ಮಾತಿನಲ್ಲಿ ಹೆಣೆದು ನೀಡಿದ ಹುಚ್ಚುಹಾಸ್ಯ. ಸತ್ಯವಾನ್-ಸಾವಿತ್ರಿಯರ ಕಥೆಯನ್ನು ರಾಜರತ್ನಂ ಇಲ್ಲಿ ಹಾಸ್ಯಗನ್ನಡಿಯಿಂದ ನೋಡಿದ್ದಾರೆ. ಸಾಹಿತ್ಯದ ನಾನಾ ವಕ್ರ ಬೆಳೆವಣಿಗೆಗಳನ್ನೂ ಅರ್ಥವಿಲ್ಲದ ಸಂಪ್ರದಾಯಗಳನ್ನೂ ಗೇಲಿ ಮಾಡಿರುವ ಮಹಾಕವಿ ಪುರುಷ ಸರಸ್ವತಿಯೊಂದು ವಿಡಂಬನ ಕೃತಿ. ನಾಡಿಗೇರರು ತಮ್ಮ ನಗೆಬರಹಗಳಲ್ಲಿ ತಮ್ಮನ್ನೇ ಆದರೂ ಹಾಸ್ಯಕ್ಕೆ ಒಡ್ಡಿಕೊಂಡು ಓದುಗರನ್ನು ನಗೆಯ ಅಲೆಯಡಿಯಲ್ಲಿ ಮುಳುಗಿಸಿ ತೇಲಿಸುವ ಹವ್ಯಾಸದಲ್ಲಿ ತೊಡಗಿದ್ದಾರೆ.

ಬೀಚಿಯವರ ಹಾಸ್ಯ ಹಲವೊಮ್ಮೆ ಹೆಚ್ಚು ಮಾರ್ಮಿಕ. ಅವರು ಬಣ್ಣಿಸುವ ತಿಂಮನ ತಲೆ ಯಾರದಾದರೂ ಆಗಿರಬಹುದು. ಅವರು ಸಿಡಿಸಿರುವ ಹಲವಾರು ನಗೆಹನಿಗಳಲ್ಲೂ ಹಾಸ್ಯ ಚಟಾಕಿಗಳಲ್ಲೂ ಕುಹಕ, ಕಟಕಿ, ಬೆಡಗು, ಚುರುಕು, ಚತುರತೆಗಳು ತುಂಬಿವೆ. ದಿನಕರ ದೇಸಾಯಿ, ಜಿ.ಪಿ. ರಾಜರತ್ನಂ ಮುಂತಾದವರು ಬರೆದಿರುವ ಚುಟಕಗಳು ಸಂಸ್ಕೃತದ ಚಾಟೂಕ್ತಿಗಳಂತೆ, ಸರ್ವಜ್ಞನ ವಚನಗಳಂತೆ, ಇಂಗ್ಲಿಷಿನ ಎಪಿಗ್ರಂಗಳಂತೆ-ಪರಮಾಣು ಬಾಂಬುಗಳು.

ಕನ್ನಡದ ನಾನಾ ಪತ್ರಿಕೆಗಳಲ್ಲಿ ಪ್ರಕಟವಾಗುತ್ತಿರುವ ನಗೆಹನಿಗಳು, ಪ್ರಬಂಧಗಳು, ರಾಜಕೀಯ ಟೀಕೆ ಟಿಪ್ಪಣಿಗಳನ್ನೊಳಗೊಂಡ ಲಘು ಬರೆಹಗಳು, ಪ್ರಶ್ನೋತ್ತರಗಳು, ಕುಹಕಿಡಿಗಳು, ಉರಿಗಾಳುಗಳು ಇವುಗಳಲ್ಲಿ ಹಾಸ್ಯದ ಒಂದು ವಿಸ್ತೃತ ಶಬ್ದ ಭಂಡಾರವೇ ದಿನದಿನವೂ ಸೃಷ್ಟಿಯಾಗುತ್ತಿದೆ. ಆಧುನಿಕ ಕನ್ನಡದ ಹಾಸ್ಯ ಸಾಹಿತ್ಯದ್ದು ಬಲು ದೊಡ್ಡ ಕುಟುಂಬ. ನೋಡಿ-ಕನ್ನಡದಲ್ಲಿ ವಿಡಂಬನಸಾಹಿತ್ಯ. (ಎ.ಆರ್.ಎಂ.ಎಚ್.ಎಸ್.ಕೆ.)

**ಕನ್ನಡ ನುಡಿ:** ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸುತ್ತಿರುವ ಎರಡು ನಿಯತ ಕಾಲಿಕಗಳಲ್ಲಿ ಒಂದು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (ನೋಡಿ) ಮೇಲು ಮಟ್ಟದ ಸಾಹಿತ್ಯ ವಿಚಾರಗಳನ್ನೂ ಭಾಷಾಲಕ್ಷಣಗಳನ್ನೂ ಪರಿಶೋಧನೆಗಳನ್ನೂ ಒಳಗೊಂಡು ಸಾಹಿತ್ಯಪರಿಚಯವುಳ್ಳವರ ಪ್ರಯೋಜನಕ್ಕಾಗಿರುವ ವಿದ್ವತ್ ಪತ್ರಿಕೆಯಾದರೆ ಕನ್ನಡ ನುಡಿ ಕನ್ನಡದ ಚಳವಳಿಗಾಗಿಯೇ ಮೀಸಲಾದ ಪತ್ರಿಕೆಯಾಗಿದೆ. ಕನ್ನಡದ ಹಿರಿಮೆಯನ್ನು ಎತ್ತಿಹೇಳಿ ಕನ್ನಡ ಪ್ರಚಾರಕ್ಕಾಗಿಯೇ ಮೀಸಲಾದ ಒಂದು ಪತ್ರಿಕೆ ಇರುವುದರ ಆವಶ್ಯಕತೆಯಿದೆಯೆಂದು ಮನಗಂಡ ಬಿ.ಎಂ.ಶ್ರೀ.ಯವರ ಅಪೇಕ್ಷೆಯಂತೆ 1938ರ ಅಕ್ಟೋಬರ್ ತಿಂಗಳಲ್ಲಿ ಅ.ನ.ಕೃ. ಅವರ ಸಂಪಾದಕತ್ವದಲ್ಲಿ ಕನ್ನಡ ನುಡಿ ವಾರಪತ್ರಿಕೆಯಾಗಿ ಜನ್ಮ ತಾಳಿತು (ಫೂಲ್ಸ್‌ಕ್ಯಾಪ್ ಆಕಾರ. ಪುಟಗಳು 8. ಬೆಲೆ 6 ಕಾಸು). 1949ರಲ್ಲಿ ಪಕ್ಷಪತ್ರಿಕೆಯಾಯಿತು. 1950ನೆಯ ಆಗಸ್ಟ್ ತಿಂಗಳಿಂದ ಮಾಸಪತ್ರಿಕೆಯಾಗಿ ಪರಿವರ್ತಿತವಾಯಿತು. 1969ರ ನವೆಂಬರಿನಿಂದ ಮತ್ತೆ ಪಕ್ಷಪತ್ರಿಕೆಯಾಗಿ ಹೊರಡುತ್ತಿದೆ. ಅ. ನ. ಕೃಷ್ಣರಾಯ, ಬಿ. ವೆಂಕೋಬರಾವ್, ಬಿ.ಎಂ. ಶ್ರೀ. ಎಂ. ಜಿ. ನಂಜುಂಡಾರಾಧ್ಯ, ಮೋಟಗಾನಹಳ್ಳಿ ಸುಬ್ರಹ್ಮಣ್ಯ ಶಾಸ್ತ್ರೀ, ಎಸ್. ಕೃಷ್ಣಶರ್ಮ, ಡಿ. ಸಿ. ಸುಬ್ಬರಾಯಪ್ಪ, ವಿ.ಸೀ., ಎಂ.ವಿ. ಸೀತಾರಾಮಯ್ಯ, ಎಂ.ಆರ್.ಶ್ರೀ., ಬಿ. ಶಿವಮೂರ್ತಿಶಾಸ್ತ್ರೀ. ಡಿ. ಆರ್. ರಾಮಯ್ಯ. ಸಿ. ಕೆ. ವೆಂಕಟರಾಮಯ್ಯ, ಜಿ. ವೆಂಕಟಸುಬ್ಬಯ್ಯ-ಮೊದಲಾದವರು ಕನ್ನಡ ನುಡಿಯ ಸಂಪಾದಕರಾಗಿದ್ದರು. ವಿದ್ವತ್ತು, ಭಾಷೆಯ ಮೇಲಿನ ಸ್ವಾಮ್ಯ, ಸಾಹಿತ್ಯಾಭಿರುಚಿ, ವಿಶಾಲ ದೃಷ್ಟಿ, ಪರಿಷತ್ತಿನ ಮಮತೆ—ಈ ಗುಣಗಳಿಂದ ಕೂಡಿದ್ದ ಸಂಪಾದಕ ವರ್ಗವನ್ನು ಹೊಂದಿದ್ದು ಈ ಪತ್ರಿಕೆಯ ವೈಶಿಷ್ಟ್ಯವಾಗಿದೆ.

ಕನ್ನಡ ನುಡಿಯ ಧ್ಯೇಯಧೋರಣೆಗಳನ್ನು ಕುರಿತು ಈ ಮಾಸಪತ್ರಿಕೆಯಲ್ಲಿ ಕನ್ನಡ ಸಾಹಿತ್ಯ ಸಂಸ್ಕೃತಿಗಳಿಗೆ ಸಂಬಂಧಪಟ್ಟ ಮತ್ತು ವಿದ್ಯಾಭ್ಯಾಸಕ್ಕೆ ಸಂಬಂಧಿಸಿದ ಸರ್ವಜನೋಪಯುಕ್ತವಾದ ಲೇಖನಗಳು ಬರುತ್ತವೆ. ಪರಿಷತ್ತು ನಡೆಸುವ ಸ್ಪರ್ಧೆಗಳಲ್ಲಿ ಬಹುಮಾನ ಪಡೆದ ಪ್ರಬಂಧಗಳೂ ಸಣ್ಣಕಥೆಗಳೂ ಏಕಾಂಕ ನಾಟಕಗಳೂ ಪ್ರಕಟವಾಗುತ್ತವೆ. ದತ್ತಿಗಳಿಂದಲೂ ವಿಶೇಷೋತ್ಸವಗಳಲ್ಲೂ ನಡೆಯುವ ಉಪನ್ಯಾಸಗಳ ಸಂಗ್ರಹವನ್ನು ಕೊಡಲಾಗುತ್ತದೆ. ಪ್ರಾಚೀನ ಸಾಹಿತ್ಯದ ಉದ್ಗ್ರಂಥಗಳ ಪರಿಚಯ, ಆಧುನಿಕ ಸಾಹಿತ್ಯದ ಉತ್ತಮ ಕೃತಿಗಳ ಪರಿಚಯ, ವೈಜ್ಞಾನಿಕ ವಿಚಾರ, ಕಾವ್ಯಾವಲೋಕನ, ಅಂಗಸಂಸ್ಥೆಗಳಾದ ಕರ್ನಾಟಕ ಸಂಘಗಳ ಕಾರ್ಯಕಲಾಪಗಳ ಸಂಗ್ರಹ...ಮುಖ್ಯವಾಗಿ ಜನಸಾಮಾನ್ಯಕ್ಕೆ ಉಪಯೋಗವಾಗುವ

ರೀತಿಯಲ್ಲಿ ಮತ್ತು ಅರ್ಥವಾಗುವ ಶೈಲಿಯಲ್ಲಿ ಈ ಪತ್ರಿಕೆಯನ್ನು ನಡೆಸಲಾಗುತ್ತದೆ. —ಎಂದು ಎಂ.ಆರ್.ಶ್ರೀ. ಅವರು 1950ರಲ್ಲಿ ಬರೆದಿದ್ದಾರೆ. ಮಾಸ್ತಿಯವರು ಕನ್ನಡ ನುಡಿ ಪರಿಷತ್ತಿನ ತಕ್ಕುದೊಂದು ಮುಖವಾಗಬೇಕು ಎಂದು ಬಯಸಿದರು. ಬಿ.ಎಂ.ಶ್ರೀ. ಯವರು ಅದು ಕರ್ಣಾಟಕದ ಗೆಜ಼ೆಟಿಯರ್ ಆಗಬೇಕು ಎಂದು ಹಂಬಲಿಸಿದ್ದರು. ಅವರ ಬಯಕೆ ಹಂಬಲಗಳನ್ನು ಕನ್ನಡ ನುಡಿಯ ಅನೇಕ ಸಂಪುಟಗಳು ಸಾರ್ಥಕಗೊಳಿಸಿವೆ. ನಾಡಿನ ಮತ್ತು ಹೊರನಾಡಿನ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳ ವರದಿ, ಕನ್ನಡ ಪ್ರಚಾರ, ಪರಿಷತ್ತಿನ ಪರೀಕ್ಷಾ ಪ್ರಕಟನೆಗಳು, ಇಂಥ ಸುದ್ದಿಗಳೇ ಅಲ್ಲದೆ ಕನ್ನಡ ಭಾಷೆ, ಸಾಹಿತ್ಯ, ಕಲೆ, ಗ್ರಂಥಲೋಕ, ಶಿಲ್ಪ, ಶಾಸನ, ವಿಜ್ಞಾನ ಭೂಮಿಕೆಗಳಲ್ಲೂ ಪ್ರಶಂಸಾರ್ಹವಾದ ನೂರಾರು ಲೇಖನಗಳು ಇಲ್ಲಿ ಬೆಳಕು ಕಂಡಿವೆ.

ದ. ಕೃ. ಭಾರದ್ವಾಜ, ಸ. ಸ. ಮಾಳವಾಡ, ಶಿವಮೂರ್ತಿಶಾಸ್ತ್ರೀ, ವೆಂಕಟೇಶ ಸಾಂಗಲಿ ಮೊದಲಾದವರು ಕೀರ್ತಿವಂತ ಕನ್ನಡಿಗರು, ಕನ್ನಡನುಡಿಯ ಭಕ್ತರು, ಮುಂತಾದ ಶೀರ್ಷಿಕೆಗಳ ಅಡಿಯಲ್ಲಿ ಚಿತ್ರಿಸಿರುವ ಹತ್ತಾರು ವ್ಯಕ್ತಿಚಿತ್ರಗಳು ಸಂಗ್ರಹಯೋಗ್ಯವಾಗಿವೆ. ಶಿಲಾಶಾಸನ, ಕನ್ನಡ ಜೀವನ, ಈ ವಿಷಯವಾಗಿ ತಿ. ತಾ. ಶರ್ಮರ ಬಿಡಿ ಲೇಖನಗಳು, ಅ.ನ.ಕೃ. ಬರೆದ ಸಂಗೀತಗಾರರ ಮತ್ತು ಚಿತ್ರ ಕಲಾವಿದರ ನೆನಪುಗಳು, ರೋರಿಕ್ ಸಂದರ್ಶನಾರ್ಥ ಎಂಬ ದೀರ್ಘ ಲೇಖನ ಮಾಲಿಕೆ, ನನ್ನ ಜೀವನ ದರ್ಶನ ಎಂಬ ಶೀರ್ಷಿಕೆಯಲ್ಲಿ ಜಿ. ಪಿ. ರಾಜರತ್ನಂ ಹಾಗೂ ಅಡಿಗರ ಲೇಖನಗಳು ವಿಚಾರಪೂರ್ಣವಾಗಿವೆ. ಭಾಷಾವಿಹಾರ ಪದಶುದ್ಧಿ ಎಂಬ ಶಿರೋನಾಮೆಯ ಬರೆಹಗಳಲ್ಲಿ ಡಿ. ಎಲ್. ನರಸಿಂಹಾಚಾರ್, ಪಿ. ಬಿ. ದೇಸಾಯಿ, ಶಂ.ಬಾ. ಜೋಶಿ, ಬೇಂದ್ರೆ, ಎ. ಕೆ. ಪುಟ್ಟರಾಮು ಮೊದಲಾದ ವಿದ್ವಾಂಸರು ವಿಪುಲ ಸಾಕ್ಷ್ಯಾಧಾರಗಳನ್ನೊದಗಿಸಿ ಶಬ್ದಜಿಜ್ಞಾಸೆ ನಡೆಸಿದ್ದಾರೆ. ಮುದ್ದಣ್ಣನಿಗೆ ಸಂಬಂಧಿಸಿದಂತೆ 1944ರಲ್ಲಿ ಪ್ರಕಟಗೊಂಡಿರುವ ಎರಡು ಹೇಳಿಕೆಗಳು, 1947ರಲ್ಲಿ, ಕನ್ನಡ ಲಿಪಿ ಸುಧಾರಣೆಯ ವಿಷಯವಾಗಿ ಬಿ.ಎಂ.ಶ್ರೀ., ದೇವುಡು, ಕಾಶಿಯ ಜಂಗಮವಾಡಿ ಮಠದ ಶರ್ಮರು ಮೊದಲಾದವರು ನಡೆಸಿರುವ ತೀವ್ರ ಚರ್ಚೆ, ಕನ್ನಡದ ಊರುಗಳು ಎಂಬ ಶೀರ್ಷಿಕೆಯಲ್ಲಿ ಹುಲ್ಲೂರು ಶ್ರೀನಿವಾಸ ಜೋಯಿಸರು ಬರೆದಿರುವ ಹಲವಾರು ಉತ್ತಮ ಲೇಖನಗಳು ನುಡಿಯ ಸತ್ತ್ವವನ್ನು ಹೆಚ್ಚಿಸಿವೆ. ಸೀಬಯ್ಯ, ಬಿ. ಆರ್. ಶೇಷಾಚಾರ್ ಮೊದಲಾದವರ ವಿಜ್ಞಾನ ಲೇಖನಗಳೂ ಜನಪ್ರಿಯವಾಗಿವೆ.

ಕನ್ನಡ ನುಡಿಯ ವಿಶೇಷ ಸಂಚಿಕೆಗಳು ಬೆರಗುಗೊಳಿಸುವಷ್ಟಿದ್ದು ತುಂಬ ಉಪಯುಕ್ತ ಮಾಹಿತಿಯನ್ನೊದಗಿಸಿವೆ. ಇವುಗಳಲ್ಲಿ ಮುಖ್ಯವಾದವು 1957ರ ಸನ್ಮಾನೋತ್ಸವ ವಿಶೇಷ ಸಂಚಿಕೆ ಮತ್ತು 1963ರಲ್ಲಿ ಪ್ರಕಟವಾದ ಒಂದು ನೂರು ಪುಟಗಳ ಬೆಳ್ಳಿ ಸಂಚಿಕೆ. ಮೊದಲನೆಯದರಲ್ಲಿ ಸಾಹಿತ್ಯ ಪರಿಷತ್ತಿನ ಚರಿತ್ರೆ ಮತ್ತು ಅದುವರೆಗಿನ ಸಾಹಿತ್ಯ ಸಮ್ಮೇಳನಗಳ ಅಧ್ಯಕ್ಷಭಾಷಣಗಳ ಸಂಗ್ರಹ ವರದಿ ಮತ್ತು ಕರ್ನಾಟಕದ ವಾಸ್ತುಶಿಲ್ಪ ಮೊದಲಾದ ವಿಶೇಷ ಲೇಖನಗಳಿವೆ. ಬೆಳ್ಳಿ ಸಂಚಿಕೆಯಲ್ಲಿ ಸ್ವಾತಂತ್ರ್ಯಪೂರ್ವದ ಮತ್ತು ಅನಂತರದ ಕನ್ನಡ ಸಾಹಿತ್ಯದ ವಿವಿಧ ಕವಲುಗಳಲ್ಲಿ ನಡೆದಿರುವ ವ್ಯವಸಾಯವನ್ನು ಕುರಿತ ಪ್ರೌಢ ಲೇಖನಗಳಿವೆ. ರವೀಂದ್ರ ಸಂಚಿಕೆ, ಕುವೆಂಪು ಲೇಖನ ಮಾಲೆ, ಎಂ.ಆರ್.ಶ್ರೀ. ಬಾಷ್ಪಾಂಜಲಿ ಸಂಚಿಕೆ (1953) ತೀ.ನಂ.ಶ್ರೀ. ಸ್ಮರಣ ಸಂಚಿಕೆ (1966) ಇವು ಕವಿ–ಕೃತಿ ದರ್ಶನಕ್ಕೆ ಸಹಾಯಕವಾದ ಸಂಚಿಕೆಗಳಾಗಿವೆ.

ಸಾಹಿತ್ಯ ಸಮ್ಮೇಳನಗಳ ನೆನಪಿಗೆ ಪ್ರಕಟವಾಗುವ ಸಮ್ಮೇಳನ ವಿಶೇಷಾಂಕಗಳು ವೈಶಿಷ್ಟ್ಯಪೂರ್ಣವಾಗಿರುತ್ತವೆ. ಸಮ್ಮೇಳನಾಧ್ಯಕ್ಷರ ವ್ಯಕ್ತಿ–ಕೃತಿ ಪರಿಚಯಗಳು, ಸಮ್ಮೇಳನ ನಡೆಯಬೇಕಾದ ನಗರ, ಜಿಲ್ಲೆ, ಪ್ರದೇಶಗಳ ಸಾಂಸ್ಕೃತಿಕ ಐತಿಹಾಸಿಕ ಮತ್ತು ಸಾಹಿತ್ಯ ಪರಂಪರೆಗಳ ಪರಿಚಯ ಮಾಡಿಕೊಡುವ ವಿಶೇಷ ಲೇಖನಗಳು, ಹಲವಾರು ಗೋಷ್ಠಿಗಳಲ್ಲಿ ಭಾಗವಹಿಸುವ ವಿದ್ವಾಂಸರು ಸಾದರಪಡಿಸುವ ಲೇಖನಗಳು, ಭಾವಚಿತ್ರಗಳು ಈ ವಿಶೇಷಾಂಕಗಳಲ್ಲಿ ಪ್ರಕಟಗೊಂಡು ಉತ್ತಮ ದಾಖಲೆಗಳೆನಿಸಿವೆ.

(ಎ.ಆರ್.ಎಂ., ಎಸ್.ಎಚ್.ಕೆ.)

**ಕನ್ನಡ ಪತ್ರಿಕೋದ್ಯಮ:** ವಾರ್ತಾಪತ್ರಿಕೆ, ನಿಯತಕಾಲಿಕ ಮುಂತಾದವುಗಳ ಬರೆವಣಿಗೆ, ಸಂಪಾದನೆ ಮತ್ತು ಪ್ರಕಟಣೆಗಳೇ ಅಲ್ಲದೆ, ಸುದ್ದಿಯ ಸಂಗ್ರಹಣ, ಪ್ರಸರಣ, ಪತ್ರಿಕೆಗಳ ನಿರ್ವಹಣ, ಜಾಹೀರಾತು ಮುಂತಾದ ಚಟುವಟಿಕೆಗಳನ್ನೆಲ್ಲ ಒಳಗೊಂಡಿರುವ ಕನ್ನಡ ಭಾಷಾ ಪತ್ರಿಕೋದ್ಯಮಕ್ಕೆ ಸುಮಾರು 130 ವರ್ಷಗಳ ಇತಿಹಾಸವಿದೆ. ಭಾರತಕ್ಕೆ ಬಂದ ಪಾಶ್ಚಾತ್ಯ ಕ್ರೈಸ್ತಪಾದ್ರಿಗಳ ಪ್ರಯತ್ನದ ಫಲವಾಗಿ ಮೊಳೆತು, ಕನ್ನಡ ನವೋದಯದ ಕಾಲದಲ್ಲಿ ಊರ್ಜಿತಗೊಂಡು, ರಾಷ್ಟ್ರ ಬಿಡುಗಡೆಯ ಮತ್ತು ಜವಾಬ್ದಾರಿ ಸರ್ಕಾರದ ಹೋರಾಟ ಕಾಲದಲ್ಲಿ ಜನರಲ್ಲಿ ರಾಷ್ಟ್ರಪ್ರಜ್ಞೆಯನ್ನು ಜಾಗೃತಗೊಳಿಸಿ, ದ್ವಿತೀಯ ಯುದ್ಧಾನಂತರ ಕಾಲದಲ್ಲಿ ಬೃಹದ್ಗಾತ್ರದ್ದಾಗಿ ಪರಿವರ್ತನೆಗೊಂಡು ಬೆಳೆಯುತ್ತಿರುವ ಕನ್ನಡ ಪತ್ರಿಕೆ ಭಾರತದ ಇತರ ಭಾಷೆಗಳ ಪತ್ರಿಕೆಗಳಂತೆಯೇ ಕನ್ನಡ ಜನಜೀವನದ ನಾನಾ ಮುಖಗಳ ಪ್ರತಿಬಿಂಬವಾಗಿದೆ.

ಪ್ರಥಮ ಕನ್ನಡ ಪತ್ರಿಕೆ ಯಾವುದು, ಯಾವಾಗ ಎಲ್ಲಿ ಆರಂಭವಾಯಿತು ಎಂಬುದು ವಾದಗ್ರಸ್ತವಾದ ವಿಚಾರವಾಗಿದೆ. ಇದುವರೆಗೆ ತಿಳಿದುಬಂದಿರುವಂತೆ 1843ರ ಜುಲೈ 1ರಂದು ಮಂಗಳೂರಿನಲ್ಲಿ ಪ್ರಕಟವಾದ ಮಂಗಳೂರು ಸಮಾಚಾರ ಎಂಬುದೇ ಪ್ರಥಮ ಕನ್ನಡ ಪತ್ರಿಕೆ. ಸ್ವಿಟ್ಸರ್ಲೆಂಡಿನ ಬಾಸೆಲ್ ಇವ್ಯಾಂಜಲಿಕಲ್ ಸೊಸೈಟಿಯ (ಬಾಸೆಲ್ ಮಿಷನ್) ಸದಸ್ಯನಾಗಿದ್ದ ರೆವರೆಂಡ್ ಮ್ಯೊಗ್‌ಲಿಂಗ್ ಇದರ ಸಂಪಾದಕ. ಮೊಟ್ಟಮೊದಲಿಗೆ ಇದನ್ನು ಮುದ್ರಿಸುತ್ತಿದ್ದು ಕಲ್ಲಚ್ಚಿನ ವಿಧಾನದಿಂದ. ಕ್ರೈಸ್ತಮತಪ್ರಚಾರವೇ ಇದರ ಮುಖ್ಯೋದ್ದೇಶ. ಪ್ರತಿತಿಂಗಳ 1 ಮತ್ತು 15ರಂದು ಪ್ರಕಟವಾಗುತ್ತಿದ್ದ ಈ ಪತ್ರಿಕೆ ಎಂಟು ತಿಂಗಳುಗಳ ಅನಂತರ ಬಳ್ಳಾರಿಗೆ ವರ್ಗವಾಯಿತೆಂದೂ ಆ ವೇಳೆಗೆ ಇದರ ಹೆಸರು ಕಂನಡ ಸಮಾಚಾರ (ನೋಡಿ) ಎಂದು ಬದಲಾಯಿತೆಂದೂ ಹೇಳಲಾಗಿದೆ. ಕಲ್ಲಚ್ಚಿನ ಬದಲು ಅಚ್ಚಿನ ಮೊಳೆಗಳನ್ನು ಜೋಡಿಸಿ ಮುದ್ರಿಸುವ ವಿಧಾನ ಕ್ರಮೇಣ ಜಾರಿಗೆ ಬಂತು. 1844ರ ಮಾರ್ಚ್ 1ನೆಯ ತಾರೀಖಿನಿಂದ ಬಳ್ಳಾರಿಯಲ್ಲಿ ಮುದ್ರಿತವಾಗಿ ಪ್ರಕಟವಾದ ಈ ಪತ್ರಿಕೆಯ ಪುಟಸಂಖ್ಯೆ 4ರಿಂದ 8ಕ್ಕೂ ಬಿಡಿಪ್ರತಿಯ ಬೆಲೆ (ಅಂಚೆವೆಚ್ಚವೂ ಸೇರಿ) ಒಂದು ದುಡ್ಡಿನಿಂದ (ಅಂದಿನ ನಾಲ್ಕುಕಾಸು; ರೂಪಾಯಿಯ 1/48 ಭಾಗ) ಎರಡು ದುಡ್ಡಿಗೂ ಏರಿದುವು. ಈ ಪತ್ರಿಕೆ 1844ರ ಕೊನೆಯ ವರೆಗೆ ನಡೆಯಿತೆಂದು ಹೇಳಲಾಗಿದೆ. ಪತ್ರಿಕೆ ಬಳ್ಳಾರಿಯಲ್ಲೇ ಕಂನಡ ಸಮಾಚಾರವೆಂದು ಮೊದಲು ಪ್ರಾರಂಭವಾಯಿತೆಂದೂ ಅನಂತರ ಮಂಗಳೂರಿಗೆ ಬಂತೆಂದೂ ಕ್ರಮವಾಗಿ ಮಂಗಳೂರು ಸಮಾಚಾರ, ಕನ್ನಡ ಸುವಾರ್ತಿಕ, ಕರ್ಣಾಟಕ ಪತ್ರಿಕೆ, ಬಾಲಪತ್ರ, ಸತ್ಯದೀಪಿಕೆ, ಕ್ರೈಸ್ತಸಭಾಪತ್ರ ಎಂಬ ಬೇರೆ ಬೇರೆ ಹೆಸರುಗಳಿಂದ 1940ರ ವರೆಗೂ ಪ್ರಕಟವಾಯಿತೆಂದೂ ಒಂದು ವಾದವುಂಟು. ಕಂನಡ ಸಮಾಚಾರ ಆರಂಭವಾಗುವುದಕ್ಕೂ ಮುಂಚೆ—1840ರಲ್ಲಿ—ಭಾವಾ ಎಂಬ ಒಂದು ಪತ್ರಿಕೆ ಜನ್ಮತಳೆದು ಕೆಲವು ಕಾಲ ಪ್ರಕಟವಾಗುತ್ತಿದ್ದು ನಿಂತುಹೋಯಿತೆಂದು ಹೇಳಲಾಗಿದೆ.

1956ರ ವರೆಗೂ ಕನ್ನಡ ಪ್ರದೇಶಗಳು ಮುಖ್ಯವಾಗಿ ಮೈಸೂರು, ಮದ್ರಾಸು, ಬೊಂಬಾಯಿ ಮತ್ತು ಹೈದರಾಬಾದ್ ಕರ್ಣಾಟಕಗಳೆಂದು ಪ್ರತ್ಯೇಕ ಆಡಳಿತಗಳ ಅಡಿಯಲ್ಲಿದ್ದುದರಿಂದ ಕನ್ನಡ ಪತ್ರಿಕೋದ್ಯಮದ ಇತಿಹಾಸವನ್ನು ಈ ಮೂರು ಪ್ರತ್ಯೇಕ ವಿಭಾಗಗಳಲ್ಲಿ ಪರಿಶೀಲಿಸಬೇಕಾಗುತ್ತದೆ.

**ಹಳೆಯ ಮೈಸೂರಿನಲ್ಲಿ:** ಕಂನಡ ಸಮಾಚಾರದ ಪ್ರಕಟಣೆ ನಿಂತ ಮೇಲೂ ವಿವಿಧ ಪಂಥಗಳ ಕ್ರೈಸ್ತಪಾದ್ರಿಗಳು ಮಂಗಳೂರು, ಉಡುಪಿ, ಬೆಂಗಳೂರು, ಮೈಸೂರು ಮುಂತಾದ ಸ್ಥಳಗಳಿಂದ ಕನ್ನಡ ಇಂಗ್ಲಿಷ್ ದ್ವಿಭಾಷಾಪತ್ರಿಕೆಗಳನ್ನು ನಡೆಸಿಕೊಂಡು ಬಂದರು. ಇವರು ಮಾತ್ರವೇ ಅಲ್ಲದೆ ಹಳೆಯ ಮೈಸೂರು ಸಂಸ್ಥಾನದಲ್ಲಿ ಅನೇಕ ಖಾಸಗಿ ಪ್ರಮುಖರೂ ನಿವೃತ್ತ ಸರ್ಕಾರಿ ಅಧಿಕಾರಿಗಳೂ ಪತ್ರಿಕಾವ್ಯವಸಾಯದಲ್ಲಿ ನಿರತರಾಗಿ ಅನೇಕ ಸಾಹಸಗಳನ್ನು ಮೆರೆದರು. ಇವರಲ್ಲನೇಕರು ನಿರ್ಭಯವಾದ ಧೋರಣೆ ತಳೆದಿದ್ದರಲ್ಲದೆ ಆಗಿನ ಸರ್ಕಾರದ ರೀತಿನೀತಿಗಳನ್ನು ಟೀಕಿಸುವುದಕ್ಕೂ ಹಿಂದೆಗೆಯಲಿಲ್ಲವಲ್ಲದೆ ಜನಾಭಿಪ್ರಾಯವನ್ನು ರೂಪಿಸುವಲ್ಲಿ ಪತ್ರಿಕೆಯನ್ನು ಒಂದು ಪ್ರಧಾನ ಮಾಧ್ಯಮವಾಗಿ ಬಳಸಿದರು. ಪತ್ರಿಕಾಸ್ವಾತಂತ್ರ್ಯಕ್ಕೆ ಸರ್ಕಾರದ ಮನ್ನಣೆ ಸಿಗದಿದ್ದ ಆ್ ಕಾಲದಲ್ಲಿ ಇದು ದೊಡ್ಡ ಸಾಹಸವೇ ಎನ್ನಬೇಕು.


ಕರ್ಣಾಟಕ ... ಪ್ರಕಾಶಿಕಾ.
THE KARNATAKA PRAKASIKA
PUBLISHED EVERY MONDAY MORNING

ಮೈಸೂರು ಸಂಸ್ಥಾನದ ಪ್ರಥಮ ವಾರಪತ್ರಿಕೆ ಮೈಸೂರು ವೃತ್ತಾಂತಬೋಧಿನೀ. ಮುಮ್ಮಡಿ ಕೃಷ್ಣರಾಜ ಒಡೆಯರ ಪ್ರೇರಣೆಯಿಂದಾಗಿ ಪ್ರಾರಂಭವಾದ ಈ ಪತ್ರಿಕೆಯ ಸಂಪಾದಕರು ವಿದ್ವಾನ್ ಭಾಷ್ಯಂ ಭಾಷ್ಯಾಚಾರ್ಯರು. ಹಲವು ವಿದ್ವಾಂಸರ ಬರೆವಣಿಗೆಯಿಂದ ಕೂಡಿದ್ದು ಉಚ್ಚಮಟ್ಟದ್ದಾಗಿದ್ದು ಈ ಪತ್ರಿಕೆ 1864ರ ವರೆಗೂ ನಡೆದುಕೊಂಡು ಬಂತೆಂದೂ 1865ರ ಜುಲೈ ತಿಂಗಳಲ್ಲಿ ಭಾಷ್ಯಾಚಾರ್ಯರ ತಂದೆಯವರಾದ ವಿದ್ವಾನ್ ಭಾಷ್ಯಂ ತಿರುಮಲಾಚಾರ್ಯರು ಕರ್ಣಾಟಕ ಪ್ರಕಾಶಿಕಾ ಎಂಬ ವಾರಪತ್ರಿಕೆಯನ್ನು ಸ್ಥಾಪಿಸಿ ಕೆಲಕಾಲ ನಡೆಸಿಕೊಂಡು ಬಂದರೆಂದೂ ಗೊತ್ತಾಗುತ್ತದೆ. ಭಾಷ್ಯಾಚಾರ್ಯರು ಕರ್ಣಾಟಕ ಪ್ರಕಾಶಿಕಾ ಕೆಲಸದಲ್ಲಿ ತಂದೆಗೆ ಸ್ವಲ್ಪ ಕಾಲ ನೆರವು ನೀಡಿದರು. 1866ರಲ್ಲಿ ಅವರು ಸರ್ಕಾರಿ ಗೆಜ಼ೆಟಿನ ಕನ್ನಡ ಅನುವಾದಕರಾದ ಮೇಲೆ ತಿರುಮಲಾಚಾರ್ಯರೇ ಪತ್ರಿಕೆಯನ್ನು ಮುಂದುವರಿಸಿಕೊಂಡು ಹೋದರು. ಈ ಪತ್ರಿಕೆ 1868ರ ವರೆಗೂ ಮತ್ತು 1873ರಿಂದ 1898ರ ವರೆಗೂ ಪ್ರಕಟವಾಗುತ್ತಿತ್ತು. ಭಾಷ್ಯಂ ತಿರುಮಲಾಚಾರ್ಯರು 1877ರಲ್ಲಿ ತೀರಿಕೊಂಡರು. ಆಗ ಭಾಷ್ಯಾಚಾರ್ಯರ ಮಗ ವೆಂಕಟಾಚಾರ್ಯರು ಸಂಪಾದಕರಾಗಿಯೂ ಟಿ. ಸಿ. ಶ್ರೀನಿವಾಸಾಚಾರ್ಯರು ಒಡೆಯರಾಗಿಯೂ ಇದನ್ನು ಮುಂದುವರಿಸಿಕೊಂಡು ಹೋದರೆಂದೂ 1898ರ ಕೊನೆಯಲ್ಲಿ ಸಂಪಾದಕರೂ ಒಡೆಯರೂ ಪ್ಲೇಗಿನಿಂದ ಮೃತಪಟ್ಟುದರಿಂದ ಇದರ ಪ್ರಕಟಣೆ ನಿಂತುಹೋಯಿತೆಂದೂ ಗೊತ್ತಾಗುತ್ತದೆ. ಮೈಸೂರಿನಲ್ಲಿ ಮೈಸೂರೇತರರಿಗೆ ಹೆಚ್ಚಿನ ಉದ್ಯೋಗಾವಕಾಶಗಳಿದ್ದುದನ್ನು ವಿರೋಧಿಸಿ, ಮೈಸೂರಿಗರ ಪರವಾಗಿ ಹೋರಾಟ ನಡೆಸಿದುದಲ್ಲದೆ ಜನಸಾಮಾನ್ಯರ ಒಳಿತಿಗೆ ಸಂಬಂಧಿಸಿದಂತೆ ನಾನಾವಿಚಾರಗಳನ್ನು ಪ್ರಕಟಿಸುತ್ತಿದ್ದ ಈ ಪತ್ರಿಕೆಯ ಲೇಖನಗಳು ಪ್ರಭಾವಶಾಲಿಯಾಗಿದ್ದುವು.

ವೆಸ್ಲಿಯನ್ ಮಿಷನ್ ಎಂಬ ಕ್ರೈಸ್ತ ಧರ್ಮ ಪ್ರಚಾರ ಸಂಸ್ಥೆಯಿಂದ 1887ರಲ್ಲಿ ಮೈಸೂರು ನಗರದಲ್ಲಿ ಪ್ರಾರಂಭವಾದ ವೃತ್ತಾಂತ ಪತ್ರಿಕೆ ಐವತ್ತು ವರ್ಷಗಳಿಗೂ ಹೆಚ್ಚುಕಾಲ ನಡೆಯಿತು. ಸುದ್ದಿ, ಟೀಕೆ, ಅಭಿಪ್ರಾಯ, ಸಲಹೆಗಳೇ ಮುಂತಾದವನ್ನೆಲ್ಲ ಒಳಗೊಂಡಿದ್ದ ಈ ಪತ್ರಿಕೆಯನ್ನಾರಂಭಿಸಿದವರು ರೆವರೆಂಡ್ ಹೆನ್ರಿ ಹಾ ಹೈ. ಇದೊಂದು ವಾರಪತ್ರಿಕೆ. 1888ರಲ್ಲಿ ಬಿ. ನರಸಿಂಗರಾಯರು ಆರಂಭಿಸಿದ ಸೂರ್ಯೋದಯ ಪ್ರಕಾಶಿಕಾ ಎಂಬುದು ದಿನಪತ್ರಿಕೆ. ಇದು ಸಾಕಷ್ಟು ಲಾಭದಾಯಕವಾಗದ್ದರಿಂದ ವಾರಪತ್ರಿಕೆಯಾಗಿ ಪರಿವರ್ತನೆಗೊಂಡಿತು. 1874ರಲ್ಲಿ ಆರಂಭವಾದ ದೇಶಾಭಿಮಾನಿ ವಾರಪತ್ರಿಕೆ ನಿರ್ಭೀತ ಅಭಿಪ್ರಾಯಗಳಿಗೆ ಹೆಸರಾಗಿತ್ತು. ಈ ಕಾರಣದಿಂದಾಗಿ ಅದು ಆಗಿನ ಸರ್ಕಾರದ ಆಗ್ರಹಕ್ಕೊಳಗಾಯಿತು. ಮುದ್ರಣಾಲಯವನ್ನು ಸರ್ಕಾರ ವಶಪಡಿಸಿಕೊಂಡಿತು.

20ನೆಯ ಶತಮಾನದ ಆರಂಭದ ಕಾಲದಲ್ಲಿ ಪ್ರಾರಂಭವಾದ ಪತ್ರಿಕೆ ಮೈಸೂರು ಸ್ಟಾರ್. ಹಿಂದುಳಿದ ವರ್ಗಗಳ ಮುನ್ನಡೆಗಾಗಿ ಹೋರಾಟ ನಡೆಸುತ್ತಿದ್ದ ಈ ಪತ್ರಿಕೆ ಕೆಲವೇ ವರ್ಷಗಳಲ್ಲಿ ನಿಂತುಹೋಯಿತು.

ಮುಮ್ಮಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಬ್ರಿಟಿಷರು ವಹಿಸಿಕೊಂಡಿದ್ದ ಮೈಸೂರಿನ ಆಡಳಿತ ಮತ್ತೆ ಒಡೆಯರ ಮನೆತನಕ್ಕೆ ಬಂದ ಅನಂತರದ ಕಾಲದಲ್ಲಿ ಮೈಸೂರು ಸಂಸ್ಥಾನದಲ್ಲಿ ವೃತ್ತಪತ್ರಿಕೋದ್ಯಮ ಹುರುಪಿನಿಂದ ಮುಂದುವರಿಯಿತೆನ್ನಬಹುದು. ಈ ಕಾಲದಲ್ಲಿ ಪತ್ರಿಕೋದ್ಯಮದ ಬೆಳೆವಣಿಗೆಗಾಗಿ ಬಹಳಮಟ್ಟಿಗೆ ಶ್ರಮಿಸಿದ್ದಲ್ಲದೆ ತಮ್ಮ ಪತ್ರಿಕೆಗಳನ್ನು ಹೋರಾಟದ ಮಾಧ್ಯಮವಾಗಿ ಬಳಸಿಕೊಂಡವರು ಎಂ. ವೆಂಕಟಕೃಷ್ಣಯ್ಯ. 1885ರಲ್ಲಿ ಇವರು, ವೃತ್ತಾಂತ ಚಿಂತಾಮಣಿ, ಎಂಬ ವಾರಪತ್ರಿಕೆಯನ್ನು ಪ್ರಾರಂಭಿಸಿದರು. ಹಿತಬೋಧಿನಿ, ಉದಂತ ಚಿಂತಾಮಣಿ, ಸಂಪದಭ್ಯುದಯ, ಸಾಧ್ವಿ ಮುಂತಾದ ಹಲವಾರು ಪತ್ರಿಕೆಗಳನ್ನು ಇವರು ನಡೆಸಿದರಲ್ಲದೆ ಪತ್ರಿಕೋದ್ಯಮಿಗಳ ಪಡೆಯೊಂದನ್ನೇ ನಿರ್ಮಿಸಿದರು. ಇವರಿಂದ ಸ್ಫೂರ್ತಿಪಡೆದ ಇಬ್ಬರು ತರುಣರು ಬೆಂಗಳೂರಿನಲ್ಲಿ ಕನ್ನಡ ನಡೆಗನ್ನಡಿ ಎಂಬ ಪತ್ರಿಕೆ ಸ್ಥಾಪಿಸಿದರು. ಪತ್ರಿಕೋದ್ಯಮವನ್ನೇ ತಮ್ಮ ವೃತ್ತಿಯನ್ನಾಗಿ ಮಾಡಿಕೊಂಡು ಅವರು ನಡೆಸತೊಡಗಿದ ಪತ್ರಿಕೆ ಜನಹಿತ ಪ್ರತಿಪಾದನೆ ಮಾಡಿದ ತಪ್ಪಿಗಾಗಿ ಸರ್ಕಾರದ ಆಗ್ರಹಕ್ಕೆ ತುತ್ತಾಯಿತು. 1908ರಲ್ಲಿ ಮೈಸೂರು ಸರ್ಕಾರ ಜಾರಿಗೆ ತಂದ ಪತ್ರಿಕಾ ಕಾಯಿದೆಯಿಂದಾಗಿ ಪತ್ರಿಕೆಗಳಿಗೆ ಹಿಂದೆ ಇದ್ದ ಅಷ್ಟಿಷ್ಟು ಸ್ವಾತಂತ್ರ್ಯವೂ ನಷ್ಟವಾಯಿತು. ಈ ಕಾಲದಲ್ಲಿ ಆರಂಭವಾದ ಅನೇಕ ಪತ್ರಿಕೆಗಳು ಪ್ರೋತ್ಸಾಹದ ಅಭಾವದಿಂದಲೂ ಉಗ್ರಕಾಯಿದೆಯ ಫಲವಾಗಿಯೂ ಬಾಲಾರಿಷ್ಟಕ್ಕೆ ತುತ್ತಾದುವು. ಪತ್ರಿಕಾ ಕಾಯಿದೆಯನ್ನು ಅನೇಕರು ವಿರೋಧಿಸಿದರು. ಸರ್ಕಾರಕ್ಕೆ ದೂರು ಕೊತ್ತರು. ಆದರೂ ಸರ್ಕಾರದ ಧೋರಣೆ ಬದಲಾಗಲಿಲ್ಲ.

ಇಪ್ಪತ್ತನೆಯ ಶತಮಾನದಲ್ಲಿ ಕನ್ನಡ ಪತ್ರಿಕೋದ್ಯಮದಲ್ಲಿ ತೊಡಗಿದ ಇನ್ನೊಬ್ಬರು ಡಿ. ವಿ. ಗುಂಡಪ್ಪನವರು. ಇವರು ಹೊರಡಿಸಿದ ಸಮಾಚಾರ ಸಂಗ್ರಹ, ಸುಮತಿ ಎಂಬವು ಕನ್ನಡ ವಾರಪತ್ರಿಕೆಗಳು. ಜನಾಭಿಪ್ರಾಯವನ್ನು ರೂಪಿಸುವುದರಲ್ಲೂ ಸರ್ಕಾರದ ಅನ್ಯಾಯಗಳನ್ನು ಟೀಕಿಸುವುದರಲ್ಲೂ ಮುಂದಾದವರ ಪೈಕಿ ಡಿ. ವಿ. ಗುಂಡಪ್ಪನವರು ಪ್ರಮುಖರು. ಇಂಗ್ಲಿಷಿನಲ್ಲಿಯೂ ಇವರು ಬಹುಕಾಲ ಪತ್ರಿಕೆ ನಡೆಸಿ ಒಂದು ಒಳ್ಳೆಯ ಸಂಪ್ರದಾಯವನ್ನೇ ನಿರ್ಮಿಸಿದರು.

1910ರಿಂದ ಮುಂದೆ ಸ್ವಲ್ಪ ಕಾಲ ಮೈಸೂರಿನ ರಾಜಕೀಯ ವಾತಾವರಣ ಪತ್ರಿಕಾ ವ್ಯವಸಾಯಕ್ಕೆ ತಕ್ಕಮಟ್ಟಿಗೆ ಅನುಕೂಲಕರವಾಗಿಯೇ ಪರಿಣಮಿಸಿತ್ತು.



ಡಿ. ವಿ. ಗುಂಡಪ್ಪ

1908ರ ಪತ್ರಿಕಾ ಕಾಯಿದೆಯ ಕೆಲವು ನಿರ್ಬಂಧಗಳು ಸಡಿಲವಾಗಿದ್ದುವು. ದಿವಾನ್ ಎಂ. ವಿಶ್ವೇಶ್ವರಯ್ಯನವರ ಕಾಲದಲ್ಲಿ ಸರ್ಕಾರ ಸ್ವಲ್ಪ ಔದಾರ್ಯದಿಂದಲೇ ವರ್ತಿಸುತ್ತಿತ್ತು. ಆದರೆ ಈ ನೀತಿಯನ್ನು ಬದಲಿಸಬೇಕೆಂದು ಬ್ರಿಟಿಷ್ ಸರ್ಕಾರದ ಒತ್ತಾಯ ಹೇರಳವಾಗಿತ್ತು. ಅನಂತರ ಬಂದ ದಿವಾನ್ ಮಿರ್ಜಾ ಇಸ್ಮಾಯಿಲರ ಕಾಲದಲ್ಲಿ ಭಾರತದ ಉಳಿದ ಕಡೆಗಳಂತೆ ಮೈಸೂರಿನ ರಾಜಕೀಯ ವಾತಾವರಣದಲ್ಲೂ ಬಿಸಿ ಏರಿತು. ಸಾಕಷ್ಟು ಓದುಗರ ಸಂಖ್ಯೆಯಾಗಲಿ, ಬಂಡವಾಳದ ಬೆಂಬಲವಾಗಲಿ, ಅನುಭವಿ ಜನಸಹಾಯವಾಗಲಿ ಇಲ್ಲದೆ ಕುಡಿಯಲ್ಲೆ ಬಾಡುತ್ತಿದ್ದ ಪತ್ರಿಕೆಗಳು ಹೊಸದೊಂದು ವಾತಾವರಣವನ್ನೆದುರಿಸಬೇಕಾಯಿತು. ತನ್ನ ನಡೆಗಳನ್ನು ವಿರೋಧಿಸುವ ಪತ್ರಿಕೆಗಳನ್ನು ಸರ್ಕಾರ ಸಹಿಸುವುದು ಸಾಧ್ಯವಿರಲಿಲ್ಲ. ಬಂಗಾಲ ವಿಭಜನೆಯಿಂದಾರಂಭವಾಗಿ, ತಿಲಕ್, ಗೋಖಲೆ, ಗಾಂಧಿ ಮುಂತಾದವರ ಚಳವಳಿಗಳಿಂದ ಮೈದುಂಬಿ, ರಾಜಾರಾಂ ಮೋಹನರಾಯ್, ಶ್ರೀರಾಮಕೃಷ್ಣ, ಥಿಯಾಸೊಫಿ, ಆರ್ಯಸಮಾಜ, ರಾಷ್ಟ್ರಾಭಿಮಾನ, ಕನ್ನಡತನ ಮುಂತಾದ ವ್ಯಕ್ತಿ. ಘಟನೆಗಳಿಂದ ಮನತುಂಬಿ, ನವಚೈತನ್ಯದಿಂದ ಪುಟಿಯುತ್ತಿದ್ದ ಜನತೆಯ ಆಶೋತ್ತರಗಳನ್ನು ಪ್ರತಿಬಿಂಬಿಸಿ ಅವರಿಗೆ ನೇರದಾರಿ ತೋರುವ ಪತ್ರಿಕೆಗಳಿಗೆ ಆಗ ಸುವರ್ಣಾವಕಾಶ. ಪತ್ರಿಕೋದ್ಯಮ ಆಗ ಲಾಭದೃಷ್ಟಿಯ ವ್ಯವಹಾರವಲ್ಲ. ಅಲ್ಲಿ ಕೆಲಸ ಮಾಡುವುದೆಂದರೆ ಭದ್ರತೆ ತುಂಬಿದ ವೃತ್ತಿಯ ಅನುಸರಣೆಯಲ್ಲ. ಅದೊಂದು ಸೇವಾವಕಾಶ. ಭಾರತದ ಇತರ ಕಡೆಗಳಲ್ಲಿ ಅನೇಕ ರಾಜಕಾರಣಿಗಳೂ ಹೋರಾಟದ ನಾಯಕರೂ ಸ್ವತಃ ಪತ್ರಿಕೋದ್ಯಮಿಗಳಾದಂತೆ ಇಲ್ಲಿಯೂ ಉತ್ಸಾಹಶಾಲಿಗಳನೇಕರು ಪತ್ರಿಕೋದ್ಯಮದಲ್ಲಿ ಕೈಹಾಕಿದರು.

ಇಂಥ ಪತ್ರಿಕೆಗಳ ಪೈಕಿ ವಿಶ್ವಕರ್ಣಾಟಕವನ್ನು ಇಲ್ಲಿ ಮುಖ್ಯವಾಗಿ ಹೆಸರಿಸಬೇಕು. ಬೆಳಗಾವಿಯಲ್ಲಿ ಸಮಾವೇಶಗೊಂಡಿದ್ದ ರಾಷ್ಟ್ರೀಯ ಕಾಂಗ್ರೆಸ್ ಅಧಿವೇಶನಾನಂತರ ಪ್ರಕಟನೆಯನ್ನಾರಂಭಿಸಿದ ವಿಶ್ವಕರ್ಣಾಟಕ ಪತ್ರಿಕೆಯ ಸ್ಥಾಪಕ ಸಂಪಾದಕರು ತಿರುಮಲೆ ತಾತಾಚಾರ್ಯ ಶರ್ಮ. ದೇಶಾಭಿಮಾನ, ಭಾಷಾ ಪಾರಿಶುದ್ಧ್ಯ, ಸಾಹಿತ್ಯದ ಗುಣ, ಸುದ್ದಿಯ ಪ್ರಾಶಸ್ತ್ಯ, ವಿಚಾರಪೂರ್ಣಲೇಖನ, ಕಥೆ, ವ್ಯಂಗ್ಯ—ಮುಂತಾದವನ್ನೆಲ್ಲ ಒಳಗೊಂಡು ಹೊರಬರುತ್ತಿದ್ದ ವಿಶ್ವಕರ್ಣಾಟಕ ದಿನಪತ್ರಿಕೆಯಾಗಿ ಬಹುಕಾಲ ಬೆಳಗಿ ಸರ್ಕಾರದ ಕ್ರಮಗಳಿಗೆ ಹಲವೇಳೆ ತುತ್ತಾಗಿ ಹೊಸ ಪರಾಕ್ರಮದಿಂದ ಹೋರಾಟ ಮುಂದುವರಿಸಿದ ಕಥೆ ರೋಮಾಂಚಕಾರಕ. ನಿರ್ಭೀತಿಯಿಂದ ಅಭಿಪ್ರಾಯ ವ್ಯಕ್ತಪಡಿಸಲು ಅಡ್ಡಿ[illegible] ಪತ್ರಿಕಾ [illegible] ಕಿತ್ತು ಹಾಕುವ ವರೆಗೂ ಅಗ್ರಲೇಖನ ಬರೆಯುವುದಿಲ್ಲವೆಂದು ಶಪಥಮಾಡಿದ ಪತ್ರಿಕೆ ಇದು. ಸರ್ಕಾರದ ಮುಟ್ಟುಗೋಲು, ಹಣದ ಮುಗ್ಗಟ್ಟು, ಸ್ವಾತಂತ್ರ್ಯ

ಚಳವಳಿಯ ಬಿರಸು ಮುಂತಾದ ಕಾರಣಗಳಿಂದಾಗಿ ಈ ಪತ್ರಿಕೆಯ ಕೈಬದಲಾಯಿತು. ಕೂಡುಬಂಡವಾಳ ಸಂಸ್ಥೆಯ ಒಡೆತನಕ್ಕೊಳಪಟ್ಟು, ಯುದ್ಧಾನಂತರ ಕಾಲದಲ್ಲಿ ಟೆಲಿಪ್ರಿಂಟರ್ ಸುದ್ದಿವ್ಯವಸ್ಥೆ, ರೋಟರಿ ಮುದ್ರಣ ಯಂತ್ರ ಮುಂತಾದವನ್ನು ಹೊಂದಿ, ದೊಡ್ಡ ಪ್ರಮಾಣದಲ್ಲಿ ಕೆಲಕಾಲ ನಡೆದು ಅನಂತರ ನಿಂತುಹೋದ ಈ ಪತ್ರಿಕೆಗೆ ನಡುವೆ ಕೆಲಕಾಲ ಸಿದ್ದವನಹಳ್ಳಿ ಕೃಷ್ಣಶರ್ಮರೂ ಅನಂತರ ಹೊಸ ಆಡಳಿತದಲ್ಲಿ ಎನ್. ಎಸ್. ವೆಂಕೋಬರಾಯರೂ ಸಂಪಾದಕರಾಗಿದ್ದರು.



ತಿ. ತಾ. ಶರ್ಮ

ಹಳೆಯ ಮೈಸೂರಿನ ಇನ್ನೊಂದು ಮುಖ್ಯಪತ್ರಿಕೆಯೆಂದರೆ ತಾಯಿನಾಡು. ವೆಂಕಟಕೃಷ್ಣಯ್ಯನವರ ಶಿಷ್ಯರಲ್ಲೊಬ್ಬರಾದ ಪಿ. ಆರ್. ರಾಮಯ್ಯನವರಿಂದ ಮೈಸೂರಿನಲ್ಲಿ ಸ್ಥಾಪಿತವಾಗಿ (1926), ಬೆಂಗಳೂರಿಗೆ ವರ್ಗವಾಗಿ, ದಿನಪತ್ರಿಕೆಯಾಗಿ ಮಾರ್ಪಟ್ಟು, ರಾಷ್ಟ್ರಾಭಿಮಾನ ಹೊಂದಿದ್ದರೂ ಉಗ್ರನೀತಿಯನ್ನನುಸರಿಸದೆ, ಸುದ್ದಿ ಲೇಖನ, ಅಭಿಪ್ರಾಯ ನಿರೂಪಣೆ ಮುಂತಾದವಕ್ಕೆ ಪ್ರಾಧಾನ್ಯ ನೀಡಿ ಬೆಳೆದ ಪತ್ರಿಕೆಯಿದು. ಮೊದಲು ಪಿ. ಆರ್. ರಾಮಯ್ಯನವರೂ ಅನಂತರ ಪಿ. ಬಿ. ಶ್ರೀನಿವಾಸನ್ನರೂ ಸಂಪಾದಕರಾಗಿದ್ದ ಈ ಪತ್ರಿಕೆ ರಜತಮಹೋತ್ಸವವನ್ನೂ ಆಚರಿಸಿಕೊಂಡಿತು. ರಾಷ್ಟ್ರೀಯ ಅಂತರರಾಷ್ಟ್ರೀಯ ಸುದ್ದಿಗಳ ಜೊತೆಗೆ ಸ್ವಂತ ಬಾತ್ಮೀದಾರರಿಂದ ಸಂಸ್ಥಾನದ ನಾನಾ ಕಡೆಗಳಿಂದಲೂ ಹೊರಗಿನ ಪ್ರಮುಖ ಸ್ಥಳಗಳಿಂದಲೂ ಬಂದ ಸುದ್ದಿಗಳನ್ನು ಪ್ರಕಟಿಸುತ್ತಿದ್ದ ತಾಯಿನಾಡು ಕನ್ನಡ ಪತ್ರಿಕೋದ್ಯಮಕ್ಕೆ ದಿನಬಳಕೆಯ ಮಾತಿನ ವೈಯಕ್ತಿಕ ಶೈಲಿಯನ್ನು ತಂದುಕೊಟ್ಟಿತೆನ್ನಬಹುದು. ನಗರ ಸಂಚಾರಿಯ ಡೈರಿ ಎಂಬ ಅಂಕಣದಲ್ಲಿ ಸಂಪಾದಕರು ಬರೆಯುತ್ತಿದ್ದ ನವುರಾದ ಲಘುಬರೆಹದ ಶೈಲಿ ಇದಕ್ಕೇ ವಿಶಿಷ್ಟವಾದದ್ದು. ಮುಂದೆ ಈ ಪತ್ರಿಕೆಯ ಮಾಲೀಕತ್ವವೂ ಸಂಪಾದಕತ್ವವೂ ಬದಲಾದುವು. ಟಿ. ಸಿದ್ದಪ್ಪ ಅವರ ಸಂಪಾದಕತ್ವದಲ್ಲಿ ಈ ಪತ್ರಿಕೆ ದೊಡ್ಡ ಪ್ರಮಾಣದಲ್ಲಿ ಮುಂದುವರಿದು ಕೊನೆಗೆ ನಿಂತುಹೋಯಿತು. ಈ ಕಾಲದಲ್ಲಿ ಈ ಸಂಸ್ಥೆಯಿಂದಲೇ ಹೊರಟು ಸ್ವಲ್ಪಕಾಲ ಜನಪ್ರಿಯವಾಗಿ ನಡೆಯುತ್ತಿದ್ದ ವಾರಪತ್ರಿಕೆಯ ಹೆಸರು ಗೋಕುಲ.



ಪಿ. ಆರ್. ರಾಮಯ್ಯ

ಈ ಕ್ಷೇತ್ರದಲ್ಲಿ ಕೆಲಸಮಾಡಿದ ಇನ್ನೊಬ್ಬ ವ್ಯಕ್ತಿಯೆಂದರೆ ಬಿ. ಎನ್. ಗುಪ್ತ. ಇವರು ಹೊರಡಿಸುತ್ತಿದ್ದ ಪ್ರಜಾಮತ, ಜನವಾಣಿಗಳು ಕ್ರಮವಾಗಿ ವಾರ ಮತ್ತು ದಿನಪತ್ರಿಕೆಗಳು. ಹಲವು ಆದರ್ಶಪ್ರಿಯ ತರುಣರನ್ನು ಕಲೆಹಾಕಿ ತರಬೇತು ಮಾಡಿದ ಗುಪ್ತರ ಪ್ರಜಾಮತ ಆ ಕಾಲದ ಪತ್ರಿಕೋದ್ಯಮದ ಒಂದು ಸಾಹಸ. ಜನಕ್ಕೆ ಪ್ರಿಯವಾದ್ದನ್ನು ಕೊಡುವ ಬಗ್ಗೆ ನಾನಾ ಬಗೆಯ ಪ್ರಯೋಗ ನಡೆಸಿ, ಭಿನ್ನ ರುಚಿಗಳ ಜನರನ್ನಾಕರ್ಷಿಸಿ, ಮೈಸೂರಿನ ಜವಾಬ್ದಾರಿ ಸರ್ಕಾರದ ಚಳವಳಿಯ ಕಾಲದಲ್ಲಿ ಸರ್ಕಾರವನ್ನೆದುರಿಸಿ, ಅದರ ಆಗ್ರಹಕ್ಕೆ ತುತ್ತಾಗಿ, ಮುಟ್ಟುಗೋಲಿನ ಕ್ರಮಕ್ಕೆ ಸಿಲುಕದೆ ಹುಬ್ಬಳ್ಳಿಗೆ ಪ್ರಯಾಣ ಬೆಳೆಸಿ, ಅಲ್ಲಿ ವಾರಕ್ಕೊಂದು ಹೆಸರು ತಳೆದು ಪತ್ರಿಕೋದ್ಯಮದ ಸಾಹಸ ಮೆರೆದ ಪ್ರಜಾಮತದ ನೆನಪು ಈ ಕಾರಣದಿಂದಾಗಿ ಚಿರಕಾಲ ಹಸುರಾಗಿರುತ್ತದೆ. ಸ್ವಾತಂತ್ರ್ಯಾನಂತರ ಕಾಲದಲ್ಲಿ ಈ ಪತ್ರಿಕೆಗಳ ಮಾಲೀಕತ್ವವೂ ಬದಲಾಯಿತು. ಪ್ರಜಾಮತ ಈಗಲೂ ಪ್ರಕಟವಾಗುತ್ತಿದೆ. ಎನ್. ಎಸ್. ಸೀತಾರಾಮಶಾಸ್ತ್ರಿಗಳ ಸಂಪಾದಕತ್ವದಲ್ಲಿ ಎನ್. ಎಸ್. ಹೊಸಾಳಿಯವರಿಂದ ಆರಂಭವಾದ ಜನಪ್ರಗತಿ ವಾರಪತ್ರಿಕೆಯನ್ನು ಬಿ. ಎನ್. ಗುಪ್ತರು ಅನಂತರ ಪಡೆದುಕೊಂಡರು.

1907ರಲ್ಲಿ ಒಕ್ಕಲಿಗರ ಸಂಘದ ಮುಖಪತ್ರವಾಗಿ ಬೆಂಗಳೂರಿನಲ್ಲಿ ಸಣ್ಣ ಪ್ರಮಾಣದಲ್ಲಿ ಆರಂಭವಾಗಿ, ಮೈಸೂರು ನಗರದ ವೃತ್ತಾಂತ ಪತ್ರಿಕೆಯಂತೆಯೇ ನಡೆದು ಬಂದು, ಇಂದಿಗೂ ಪ್ರಕಟವಾಗುತ್ತಿರುವ ಪತ್ರಿಕೆಯೊಂದನ್ನು ಇಲ್ಲಿ ಉಲ್ಲೇಖಿಸಬೇಕು. ಅದರ ಹೆಸರು ಒಕ್ಕಲಿಗರ ಪತ್ರಿಕೆ. (ನೋಡಿ) ಅದರ ಪ್ರಥಮ ಸಂಪಾದಕರು ಸಿ. ಲಕ್ಷ್ಮಣಗೌಡ. 20ನೆಯ ಶತಮಾನದ ಮೂರನೆಯ ದಶಕದಲ್ಲಿ ಆರಂಭವಾಗಿ ನಿರ್ಭಯವಾದ ಟೀಕೆ ಟಿಪ್ಪಣಿಗಳಿಗೆ ಹೆಸರಾಗಿದ್ದ ಪತ್ರಿಕೆಯೆಂದರೆ ಎಂ. ಸೀತಾರಾಮಶಾಸ್ತ್ರಿಗಳ ವೀರಕೇಸರಿ. ಸರ್ಕಾರದ ಪತ್ರಿಕೆಯಾಗಿ ಹೊರಟು, ಖಾಸಗಿ ಒಡೆತನಕ್ಕೆ ವರ್ಗವಾಗಿ, ಎನ್. ಎಸ್. ವೆಂಕೋಬರಾವ್, ಬಿ. ಎಸ್. ವೆಂಕಟರಾಂ, ಎನ್. ಎಸ್. ಸೀತಾರಾಮಶಾಸ್ತ್ರಿ ಇವರ ನೇತೃತ್ವದಲ್ಲಿ ಚೆನ್ನಾಗಿ ಹೊರಬಂದ ದೇಶಬಂಧು ದಿನ ಮತ್ತು ವಾರಪತ್ರಿಕೆಗಳು ಮಾಡಿದ ಕೆಲಸ ಗಮನಾರ್ಹ.

ಮೈಸೂರಿನ ರಾಜಕೀಯ ಆಂದೋಲನದಲ್ಲಿ ಮುಖ್ಯಪಾತ್ರ ವಹಿಸಿದವರಲ್ಲೊಬ್ಬರಾದ ಎಚ್. ಕೆ. ವೀರಣ್ಣಗೌಡರ ಸಂಪಾದಕತ್ವದಲ್ಲಿ ಹೊರಬರುತ್ತಿದ್ದ ಚಿತ್ರಗುಪ್ತ ವಾರಪತ್ರಿಕೆಯೂ ನಿರ್ಭಯ ಟೀಕೆಗಳಿಗೆ ಹೆಸರಾಗಿತ್ತು. ಮುಂದೆ ಇದು ಎಂ. ಎಸ್. ಭಾರದ್ವಾಜರ ಸಂಪಾದಕತ್ವದಲ್ಲಿ ಸ್ವಲ್ಪಕಾಲ ಮುಂದುವರಿದು ನಿಂತುಹೋಯಿತು. 1957ರಲ್ಲಿ ಮಂಡ್ಯದಿಂದ ಪ್ರಕಟನೆಯನ್ನಾರಂಭಿಸಿದ ಜನಮನ ಪತ್ರಿಕೆ (ಸಂಪಾದಕರು : ಕೆ. ವಿ. ಶಂಕರಗೌಡ) ಹಲವಾರು ಪ್ರಮುಖ ಸಾಹಿತಿಗಳ ಲೇಖನಗಳನ್ನೊಳಗೊಂಡು ಆದರ್ಶವಾಗಿ ಬಾಳಿ ನಿಂತಿತು.



ಎಚ್. ಕೆ. ವೀರಣ್ಣಗೌಡ

ಸ್ವಾತಂತ್ರ್ಯಾನಂತರ ಕಾಲದಲ್ಲಿ ಪ್ರಕಟನೆಯನ್ನಾರಂಭಿಸಿದ ದಿನಪತ್ರಿಕೆ ಪ್ರಜಾವಾಣಿ (1948) (ನೋಡಿ). ಬಿ. ಪುಟ್ಟಸ್ವಾಮಯ್ಯ ಇದರ ಪ್ರಥಮ ಸಂಪಾದಕರು. ಈಗಿನವರು ಟಿ. ಎಸ್. ರಾಮಚಂದ್ರರಾವ್. ಶೀಘ್ರ ಸುದ್ದಿಶೇಖರಣೆಗಾಗಿ ಟೆಲಿಪ್ರಿಂಟರ್ ಸೌಕರ್ಯ, ಭೂರಿ ಉತ್ಪಾದನೆಗಾಗಿ ರೋಟರಿ ಯಂತ್ರವ್ಯವಸ್ಥೆ, ವಿತರಣೆಗಾಗಿ ವಿಶಿಷ್ಟ ಸಾರಿಗೆ, ಇವೆಲ್ಲಕ್ಕೂ ಅನುವಾದ ಬಂಡವಾಳದ ಮೊತ್ತ—ಈ ನಾನಾ ಸೌಲಭ್ಯಗಳಿಂದ ಆರಂಭವಾದ ಈ ಪತ್ರಿಕೆ ಆಧುನಿಕ ಬೃಹದ್ಗಾತ್ರ ಉದ್ಯಮದ ಒಂದು ಉದಾಹರಣೆ. ಅನೇಕ ಯುವಕರನ್ನೂ ಅನುಭವಿಗಳನ್ನೂ ಆಕರ್ಷಿಸಿದ ಪ್ರಜಾವಾಣಿ ಕನ್ನಡ ಪತ್ರಿಕೋದ್ಯಮದಲ್ಲಿ ಒಂದು ಮೈಲಿಗಲ್ಲು. ಸುದ್ದಿಯ ನಿಖರ ನಿರೂಪಣೆ, ವಿಚಾರ ವೈವಿಧ್ಯ, ಜ್ಞಾನಪ್ರಸಾರ, ಸಾಹಿತ್ಯ ಪೋಷಣೆ—ಮುಂತಾದವಕ್ಕೆ ಹೆಸರಾದ ಈ ಪತ್ರಿಕೆಯ ಮುದ್ರಣದ ಅಂದಚೆಂದಕ್ಕಾಗಿ ಅನೇಕ ಸಾರಿ ಕೇಂದ್ರ ಸರ್ಕಾರದ ಬಹುಮಾನ ಗಳಿಸಿದೆ. ಪ್ರಜಾವಾಣಿಯ ಮಾಲೀಕ ಸಂಸ್ಥೆಯಾದ ಪ್ರಿಂಟರ್ಸ್ (ಮೈಸೂರ್) ಪ್ರೈವೇಟ್ ಲಿಮಿಟೆಡ್‌ನ ಆಶ್ರಯದಲ್ಲಿ 1965ರಲ್ಲಿ ಪ್ರಾರಂಭವಾದ ಸುಧಾ (ನೋಡಿ) ವಾರಪತ್ರಿಕೆ ಅತ್ಯಲ್ಪಕಾಲದಲ್ಲೇ ಅತ್ಯಧಿಕ ಪ್ರಸಾರ ಪಡೆಯುವಷ್ಟು ಜನಪ್ರಿಯತೆ ಗಳಿಸಿತು. ಇದರ ಸಂಪಾದಕರು ಇ. ಆರ್. ಸೇತೂರಾಂ.

ಹುಬ್ಬಳ್ಳಿಯಿಂದ ಹೊರಡುತ್ತಿರುವ ಸಂಯುಕ್ತ ಕರ್ನಾಟಕದ ಬೆಂಗಳೂರು ಆವೃತ್ತಿಯೂ ಇಂಡಿಯನ್ ಎಕ್ಸ್‌ಪ್ರೆಸ್ ಪತ್ರಿಕಾ ಗುಂಪಿಗೆ ಸೇರಿದ ಕನ್ನಡ ಪ್ರಭವೂ (ನೋಡಿ) ಇನ್ನೆರಡು ದೊಡ್ಡ ಪತ್ರಿಕೆಗಳು. 1967ರಲ್ಲಿ ಆರಂಭವಾದ ಕನ್ನಡ ಪ್ರಭದ ಪ್ರಥಮ ಸಂಪಾದಕರು ಎನ್.ಎಸ್. ಸೀತಾರಾಮಶಾಸ್ತ್ರಿ; ಈಗಿನವರು (1971) ಕೆ. ಎಸ್. ರಾಮಕೃಷ್ಣಮೂರ್ತಿ. ಪ್ರಜಾವಾಣಿಯಂತೆಯೇ ಬಂಡವಾಳದ ಸೌಲಭ್ಯ ಪಡೆದು ದೊಡ್ಡ ಪ್ರಮಾಣದಲ್ಲಿ ಸುದ್ದಿ ಶೇಖರಣೆ, ಪತ್ರಿಕಾ ಪ್ರಕಟನೆ ಮತ್ತು ವಿತರಣೆ ಕೈಕೊಂಡಿರುವ ಕನ್ನಡ ಪ್ರಭ ಪತ್ರಿಕೆಯೂ ಜನಪ್ರಿಯವಾಗುತ್ತಿದೆ.

**ಉತ್ತರ ಕರ್ನಾಟಕದಲ್ಲಿ :** ಹಿಂದಿನ ಬೊಂಬಾಯಿ ಪ್ರಾಂತ್ಯಕ್ಕೆ ಸೇರಿದ್ದ ಕರ್ನಾಟಕದ ಭಾಗದಲ್ಲೂ ಪತ್ರಿಕೋದ್ಯಮದ ಇತಿಹಾಸ ಒಂದು ಶತಮಾನಕ್ಕಿಂತ ದೊಡ್ಡದು. ಈಗ ತಿಳಿದಿರುವ ಮಟ್ಟಿಗೆ ಸುಬುದ್ಧಿ ಪ್ರಕಾಶ ಅಲ್ಲಿಯ ಪ್ರಥಮ ಪತ್ರಿಕೆ (1849). ಇದರ ಆರಂಭ ಬೆಳಗಾವಿಯಲ್ಲಿ. ಶುದ್ಧ ಭಾಷೆ. ತಿದ್ದಿ ತೀಡಿದ ಬರೆಹ. ಸಂಪಾದಕರು ಯಾರೆಂಬುದು ಗೊತ್ತಿಲ್ಲ. ಕಲ್ಲಚ್ಚಿನ ಮುದ್ರಣ. ಈ ಪತ್ರಿಕೆಯೇ ಅಲ್ಲದೆ ಬೊಂಬಾಯಿ ಕರ್ನಾಟಕದಲ್ಲಿ ಇನ್ನೂ ಅನೇಕ ಪತ್ರಿಕೆಗಳು ಹುಟ್ಟಿದುವು. 1857ರ ಬಂಡಾಯದ ಕಿಡಿ ಉತ್ತರ ಕರ್ನಾಟಕವನ್ನೂ ತಾಕಿತ್ತು. ನರಗುಂದ, ರಾಮದುರ್ಗ, ಜಮಖಂಡಿ, ಧಾರವಾಡ, ಬೆಳಗಾಂವಿ—ಇವು ಬ್ರಿಟಿಷ್ ವಿರೋಧಿ ಚಟುವಟಿಕೆಯ ಕೇಂದ್ರಗಳಾಗಿದ್ದುವು. ಈ ರಣೋತ್ಸಾಹಕ್ಕೆ ಹಲವು ಕೈಬರೆಹದ ಪತ್ರಿಕೆಗಳೂ ಕಲ್ಲಚ್ಚಿನ ಪತ್ರಿಕೆಗಳೂ ಇಂಬುಗೊಟ್ಟುವು.

19ನೆಯ ಶತಮಾನದ ಉತ್ತರಾರ್ಧದಲ್ಲಿ ಪ್ರಕಟವಾದ ಪತ್ರಿಕೆಗಳು ಹಲವಾರು. ಹಿತೇಚ್ಛು, ವಿಜಯ, ರಾಜಹಂಸ, ಕರ್ನಾಟಕ ಚಂದ್ರೋದಯ, ಪುಷ್ಪಮಾಲಿಕೆ, ಕರ್ನಾಟಕ ಪತ್ರ—ಇವನ್ನು ಇಲ್ಲಿ ಹೆಸರಿಸಬಹುದು. ಇವು ಜನರಲ್ಲಿ ಸುದ್ದಿಯ ಬಗ್ಗೆ ಕುತೂಹಲವನ್ನೂ ರಾಷ್ಟ್ರದ ಬಗ್ಗೆ ಅಭಿಮಾನವನ್ನೂ ಕುದುರಿಸಿದ ಮೊದಮೊದಲ ಪತ್ರಿಕೆಗಳು.

ಬೊಂಬಾಯಿ ಪ್ರಾಂತ್ಯದ ಸೆರಗಿನಂತಿದ್ದು ಮರಾಠಿ ಪ್ರಭಾವಕ್ಕೆ ಒಳಗಾಗಿದ್ದ ಕನ್ನಡ ಪ್ರದೇಶದಲ್ಲಿ ಭಾಷಾಭಿಮಾನವನ್ನು ಕೆರಳಿಸಿ, ಕರ್ನಾಟಕ ಏಕೀಕರಣದ ಬಗ್ಗೆ ಜನರನ್ನು ಹುರಿದುಂಬಿಸಿ, ವಿದೇಶೀ ಸರ್ಕಾರದ ದಬ್ಬಾಳಿಕೆಯನ್ನೆದುರಿಸುವ ಕೆಚ್ಚನ್ನು ಜನರಲ್ಲಿ ತುಂಬುವ ಉದ್ದೇಶದಿಂದ ಹತ್ತೊಂಬತ್ತನೆಯ ಶತಮಾನದ ಕೊನೆಯ ಪಾದದಲ್ಲಿ ಆರಂಭವಾದ ಉಜ್ಜ್ವಲ ವಾರಪತ್ರಿಕೆಗಳೆಂದರೆ ಲೋಕಶಿಕ್ಷಕ, ಕರ್ನಾಟಕವೃತ್ತ, ಲೋಕಬಂಧು, ರಾಜಹಂಸ ಮತ್ತು ಧನಂಜಯ. ಇದಕ್ಕೆಲ್ಲ ಸ್ಫೂರ್ತಿಪ್ರಾಯರಾಗಿದ್ದವರು ಮುದವೀಡು ಕೃಷ್ಣರಾಯರು. ಅವರೇ ಆರಂಭಿಸಿದ ವಾರಪತ್ರಿಕೆಯ ಹೆಸರು ಕರ್ನಾಟಕವೃತ್ತ. ಅವರು ಉತ್ತರ ಕರ್ನಾಟಕದ ಪ್ರತಿಕೋದ್ಯಮದ ಪಿತಾಮಹ. ಗಂಡು ಭಾಷೆ, ಹರಿತ ವಿಚಾರ, ಕೆಚ್ಚು, ಅಭಿಮಾನ—ಇವು ಇವರ ಬರೆವಣಿಗೆಯ ಲಕ್ಷಣ. ಉತ್ತರ ಕರ್ನಾಟಕದ ಪ್ರತಿಕೋದ್ಯಮದ ಆದ್ಯಪ್ರವರ್ತಕರಲ್ಲಿ ಇನ್ನೊಬ್ಬರು ಕೆರೂರು ವಾಸುದೇವಾಚಾರ್ಯ. ಹುಬ್ಬಳ್ಳಿಯ ಕನ್ನಡ ಕೇಸರಿ ಮತ್ತು ಸಚಿತ್ರಭಾರತೆಗಳಿಗೆ ಇವರ ಸಂಪಾದಕತ್ವ. ಇವರ ಸ್ಫೂರ್ತಿಯಿಂದಲೇ ಆರಂಭವಾದ ಇನ್ನೊಂದು ಪತ್ರಿಕೆಯೆಂದರೆ ಧಾರವಾಡದ ಸುಭೋದಯ. 1895ರಲ್ಲಿ ಬಿಜಾಪುರದಲ್ಲಿ ಆರಂಭವಾದ ಕರ್ನಾಟಕ ವೈಭವದ ಸ್ಥಾಪಕಸಂಪಾದಕರು ಮಣ್ಣೂರು ಗುಂಡೇರಾವ್. ಅನಂತರ ಜಯರಾವ್ ದೇಶಪಾಂಡೆಯವರೂ ಮೊಹರೆ ಹಣಮಂತರಾಯರೂ ಸಂಪಾದಕರಾದರು. ಕ್ರಾಂತಿಯ ಪ್ರತಿಪಾದನೆಯೇ ಇದರ ಪ್ರಧಾನ ಲಕ್ಷಣ. 1902ರಲ್ಲಿ ಧಾರವಾಡದಲ್ಲಿ ಬಿಂದುರಾವ್ ಮುತಾಲಿಕ ದೇಸಾಯರು ಹೊರಡಿಸಲಾರಂಭಿಸಿದ ಕನ್ನಡಕೇಸರಿ (ನೋಡಿ) ಪತ್ರಿಕೆ ತಿಲಕರ ಮರಾಠಿ ಪತ್ರಿಕೆಯ ಕನ್ನಡ ಅವತರಣ. ಡಾ. ನಾ. ಸು. ಹರ್ಡೀಕರರ ಲೇಖನಿಯ ಮಸೆತಕ್ಕೆ ಇಂಬುಗೊಟ್ಟ ಈ ಪತ್ರಿಕೆಯೂ ಕ್ರಾಂತಿಯ ಪೀಳಿಗೆಗೇ ಸೇರಿದ್ದು. ಹುಬ್ಬಳ್ಳಿ ಗೆಜೆಟ್, ಜೈಹಿಂದ್ ಪತ್ರಿಕೆಗಳು ಈ ಕಾಲದ ಇನ್ನೆರಡು. 20ನೆಯ ಶತಮಾನದ ಎರಡನೆಯ ದಶಕದಲ್ಲಿ ಉತ್ತರ ಕನ್ನಡ ಜಿಲ್ಲೆಯಲ್ಲಿ ಆರಂಭವಾದ ಪತ್ರಿಕೆಗಳು ಕಾನಡಾ ವೃತ್ತ (ನೋಡಿ) ಮತ್ತು ಕಾನಡಾ ಧುರೀಣ (ನೋಡಿ).


ಮೊಹರೆ ಹಣಮಂತರಾವ್

ಉತ್ತರ ಕರ್ನಾಟಕದ ಪತ್ರಿಕೋದ್ಯಮದಲ್ಲಿ ಕರ್ಮವೀರ (ನೋಡಿ) ಮತ್ತು ಸಂಯುಕ್ತ ಕರ್ನಾಟಕ (ನೋಡಿ) ಪತ್ರಿಕೆಗಳ ಸ್ಥಾಪನೆ ಒಂದು ಮೈಲಿಗಲ್ಲು. ಕಬ್ಬೂರು ಮಧ್ವರಾವ್, ಹುಕ್ಕೇರಿಕರ ರಾಮರಾವ್, ರಂಗನಾಥ ರಾಮಚಂದ್ರ ದಿವಾಕರ—ಇವರಿಂದ 1921ರಲ್ಲಿ ಪ್ರಾರಂಭವಾದ ಕರ್ಮವೀರ ಆ ಕಾಲದಲ್ಲಿ ಹೋರಾಟಕ್ಕೆ ವೀರ ಕರೆಕೊಟ್ಟ ಮುಖ್ಯ ಪತ್ರಿಕೆ. ಸರ್ಕಾರದ ಜಪ್ತಿ, ದಂಡ, ಸಂಪಾದಕರ ದಸ್ತಗಿರಿ ಮುಂತಾದುವಕ್ಕೆ ಎದೆಗುಂದದೆ ಬೆಳೆದು ಬಂದು ಜೀವನದ ಸಕಲ ಮುಖಗಳನ್ನೂ ಪ್ರತಿಬಿಂಬಿಸುತ್ತಿರುವ ಕರ್ಮವೀರಕ್ಕೀಗ ಐವತ್ತು ವರ್ಷ (1971). ದಿವಾಕರರು ಸಂಪಾದಕರು. ಸ್ವಾತಂತ್ರ್ಯ ಹೋರಾಟಕಾಲದಲ್ಲಿ ಇವರು ದಸ್ತಗಿರಿಯಾದಾಗ ಹುಕ್ಕೇರಿಕರರು ಸಂಪಾದಕರಾಗಿದ್ದರು. ಆಲೂರ ವೆಂಕಟರಾಯರು ಬೆಂಬಲವಾಗಿ ನಿಂತಿದ್ದರು. ಧಾರವಾಡದಲ್ಲಿ ಹುಟ್ಟಿದ ಈ ಪತ್ರಿಕೆ ಈಗ ಪ್ರಕಟವಾಗುತ್ತಿರುವುದು ಹುಬ್ಬಳ್ಳಿಯಿಂದ.


ರಂ. ರಾ. ದಿವಾಕರ

ಉತ್ತರ ಕರ್ನಾಟಕದಲ್ಲಿ ಸಂಯುಕ್ತ ಕರ್ನಾಟಕವೇ ದೊಡ್ಡ ಪ್ರಮಾಣದ ದಿನ ಪತ್ರಿಕೆ. 1929ರಲ್ಲಿ ಬೆಳಗಾವಿಯಲ್ಲಿ ದತ್ತಾತ್ರೇಯ ಬೆಳವಿ, ನಾರಾಯಣರಾವ್ ಜೋಶಿ, ಕೇಶವರಾವ್ ಇವರಿಂದ ವಾರ ಪತ್ರಿಕೆಯಾಗಿ ಆರಂಭವಾಗಿ, ನಾಲ್ಕೇ ವರ್ಷಗಳಲ್ಲಿ ದಿನಪತ್ರಿಕೆಯಾಗಿ, ಕರ್ನಾಟಕ ವೈಭವದ ಮೊಹರೆ ಹಣಮಂತರಾಯರ ಸಂಪಾದಕತ್ವವನ್ನು ಗಳಿಸಿಕೊಂಡು, ಅನಂತರ ದಿವಾಕರರನ್ನಾಕರ್ಷಿಸಿ, ಹುಬ್ಬಳ್ಳಿಗೆ ಪ್ರಯಾಣ ಮಾಡಿ ಅಲ್ಲೇ ನಿಂತ ಈ ಪತ್ರಿಕೆಗೆ ಈಗ ಬೆಂಗಳೂರಿನಲ್ಲೊಂದು ಕವಲು. ಗಂಡುಭೇರುಂಡನ ಎರಡು ಮುಖಗಳಂತೆ ಹುಬ್ಬಳ್ಳಿ–ಬೆಂಗಳೂರುಗಳಿಂದ ಏಕಕಾಲದಲ್ಲಿ ಹೊರಬರುತ್ತಿರುವ ಸಂಯುಕ್ತ ಕರ್ನಾಟಕವೂ ಟೆಲಿಪ್ರಿಂಟರ್, ರೋಟರಿ ಮುಂತಾದವುಗಳಿಂದ ಸಜ್ಜಿತವಾದ ಭಾರಿ ಉದ್ಯಮಕ್ಕೊಂದು ಉದಾಹರಣೆ.

ಸ್ವಾತಂತ್ರ್ಯಾನಂತರ ಕಾಲದಲ್ಲಿ ಹುಬ್ಬಳ್ಳಿಯಲ್ಲಿ ಹುಟ್ಟಿದ ವಾರಪತ್ರಿಕೆಗಳ ಪೈಕಿ ಪ್ರಪಂಚ (ನೋಡಿ) ಮುಖ್ಯವಾದದ್ದು. ನಿರ್ದಾಕ್ಷಿಣ್ಯಪರ ಟೀಕೆ ಟಿಪ್ಪಣಿಗಳಿಂದ ಕೂಡಿದ ಈ ಪತ್ರಿಕೆಯ ಸಂಪಾದಕರು ಪಾಟೀಲ ಪುಟ್ಟಪ್ಪ. ಹೈದರಾಬಾದಿನ ಸಾಧನಾ ಎಂಬುದು ಆ ಸಂಸ್ಥಾನದ ಪ್ರಜೆಗಳ ವಿಮೋಚನೆಗಾಗಿ ಹೋರಾಟ ನಡೆಸಿದ ವಾರಪತ್ರಿಕೆ. ಕೊಡಗಿನಲ್ಲಿ ಆಗಿಹೋದ ಮತ್ತು ಈಗಲೂ ಇರುವ ಪತ್ರಿಕೆಗಳ ಒಟ್ಟು ಸಂಖ್ಯೆ 20ಕ್ಕೂ ಹೆಚ್ಚು.

**ದಕ್ಷಿಣ ಕನ್ನಡ ಜಿಲ್ಲೆಯಲ್ಲಿ :** 19ನೆಯ ಶತಮಾನದಲ್ಲಿ ಮಂಗಳೂರಿನಲ್ಲಿ ಕ್ರೈಸ್ತಧರ್ಮ ಪ್ರಚಾರಕರಿಂದ ಆರಂಭವಾದ ಪತ್ರಿಕೆಗಳ ವಿಚಾರವನ್ನು ಹಿಂದೆಯೇ ತಿಳಿಸಿದ್ದಾಗಿದೆ. ಕನ್ನಡ ಪತ್ರಿಕೋದ್ಯಮದ ಆದ್ಯ ಪ್ರಯತ್ನಗಳು ನಡೆದ ಈ ಜಿಲ್ಲೆಯಲ್ಲಿ ಮುಂದೆಯೂ ಅನೇಕ ಪತ್ರಿಕೆಗಳು ಹುಟ್ಟಿದುವು. ಅವುಗಳಲ್ಲಿ ಹಲವು ಬಹುಕಾಲ ಬಾಳದಿದ್ದರೂ ಅವುಗಳ ಪ್ರಭಾವ ಕಡಿಮೆಯಲ್ಲ. ಹುರುಳಿ ಭೀಮರಾಯರ ಕಂಠೀರವ (ನೋಡಿ), ಕಡೆಂಗೋಡ್ಲು ಶಂಕರಭಟ್ಟರ ರಾಷ್ಟ್ರಬಂಧು (ನೋಡಿ) ಮತ್ತು ರಾಷ್ಟ್ರಮತ (ನೋಡಿ)—ಇವು ಉಜ್ಜ್ವಲ ರಾಷ್ಟ್ರಪ್ರೇಮದಿಂದ ಪ್ರಚೋದಿತವಾಗಿದ್ದು ಸಾಹಿತ್ಯಮೌಲ್ಯವನ್ನು ಬೆಳೆಸಿದ ವಾರಪತ್ರಿಕೆಗಳು. ಪಂಜೆ ಮಂಗೇಶರಾವ್, ಮಂಜೇಶ್ವರ ಗೋವಿಂದ ಪೈ, ಬೆನಗಲ್ ರಾಮರಾವ್, ರಾಜಗೋಪಾಲರಾವ್, ಉಲ್ಲಾಳ ವೆಂಕಟರಾವ್—ಇಂಥ ವಿದ್ವಾಂಸರು ಸಂಪಾದಕರಾಗಿಯೋ ಲೇಖಕರಾಗಿಯೋ ಬೆಳಸಿದ ಇಲ್ಲಿಯ ಪತ್ರಿಕೆಗಳು ಪ್ರಾದೇಶಿಕ ವೈಶಿಷ್ಟ್ಯದಿಂದ ಕೂಡಿದ ರಾಷ್ಟ್ರಪ್ರಜ್ಞೆಯ ಪ್ರತೀಕಗಳಾಗಿವೆ. ಎ. ಬಿ. ಶೆಟ್ಟರಿಂದ ಸ್ಥಾಪಿತವಾಗಿ, ಕೆ. ಕೆ. ಶೆಟ್ಟಿ, ಎಂ. ವಿ. ಹೆಗ್ಡೆ ಮುಂತಾದವರ ಸಹಯೋಗದಿಂದ ವಿಶಿಷ್ಟ ಲಕ್ಷಣಗಳನ್ನು ಬೆಳೆಸಿಕೊಂಡಿರುವ ನವಯುಗ (ನೋಡಿ) ವಾರಪತ್ರಿಕೆ ಚಿನ್ನದ ಹಬ್ಬ ಆಚರಿಸುತ್ತಿದೆ (1971). ಅದರ ಈಗಿನ ವ್ಯವಸ್ಥಾಪಕ ಸಂಪಾದಕರು ಕೆ. ಹೊನ್ನಯ್ಯಶೆಟ್ಟಿ. ಕುಡ್ಪಿ ವಾಸುದೇವ ಶೆಣೈ ಸಂಪಾದಕರಾಗಿರುವ ನವಭಾರತವೇ ದಕ್ಷಿಣಕನ್ನಡ ಜಿಲ್ಲೆಯ ಹಳೆಯ ದಿನ ಪತ್ರಿಕೆ. ಒಳ್ಳೆಯ ಸಾರಿಗೆ ವ್ಯವಸ್ಥೆ, ಬೃಹದ್ಯಂತ್ರ ಸ್ಥಾಪನೆ, ಟೆಲಿಪ್ರಿಂಟರ್ ಸೌಕರ್ಯ, ಜಿಲ್ಲೆಯ ಜನರ ಹಿತಪ್ರತಿಪಾದನೆ—ಮುಂತಾದವುಗಳಿಂದಾಗಿ ಈ ಪತ್ರಿಕೆ ಜನಪ್ರಿಯವಾಗಿದೆ. 1970ರಲ್ಲಿ ಸ್ಥಾಪಿತವಾಗಿ ಮಣಿಪಾಲದಿಂದ ಹೊರಡುತ್ತಿರುವ ಉದಯವಾಣಿ (ನೋಡಿ) ದೊಡ್ಡಗಾತ್ರದ ದಿನಪತ್ರಿಕೆ. ಅಧುನಾತನಯಂತ್ರ ಸೌಲಭ್ಯದಿಂದೊಡಗೂಡಿದ ಈ ಪತ್ರಿಕೆಗೆ ಒಳ್ಳೆಯ ಭವಿಷ್ಯವಿದೆ.

**ನಿಯತಕಾಲಿಕಗಳು :** ಕಥೆ, ಕಾದಂಬರಿ, ಚಲನಚಿತ್ರ, ಸಾಹಿತ್ಯ, ವಿಮರ್ಶೆ, ಮಕ್ಕಳ ಸಾಹಿತ್ಯ, ವಿಜ್ಞಾನ, ವೃತ್ತಿಹಿತರಕ್ಷಣೆ—ಮುಂತಾದ ವಿಶಿಷ್ಟೋದ್ದೇಶಗಳಿಗೆ ಮೀಸಲಾದ ನಿಯತಕಾಲಿಕಗಳಿಗಂತೂ ಕನ್ನಡದಲ್ಲಿ ಲೆಕ್ಕವಿಲ್ಲ. ಈ ಕ್ಷೇತ್ರಗಳಲ್ಲಿ ಜನನ ಮರಣಗಳೆರಡರ ಪ್ರಮಾಣವೂ ಹೆಚ್ಚು. ಇವುಗಳ ಓದುಗರ ಸಂಖ್ಯೆ ಕಿರಿದಾದರೂ ಪ್ರಭಾವ ಕಿರಿದಲ್ಲ. ಇವು ನಿಧಾನವಾಗಿಯಾದರೂ ಶಾಶ್ವತ ಪರಿಣಾಮ ಉಂಟುಮಾಡಬಲ್ಲವಾಗಿವೆ. ಇವುಗಳಲ್ಲಿ ಹಲವು, ಆಧುನಿಕ ಯುಗದ ಆವಶ್ಯಕತೆಗಳಾದ ಬೃಹತ್ ಬಂಡವಾಳ, ಭೂರಿ ಉತ್ಪಾದನೆ, ಜಾಹೀರಾತು ಶೇಖರಣೆ—ಮುಂತಾದ ವಿಚಾರಗಳಲ್ಲಿ ಹಿಂದೆ ಬಿದ್ದು, ನಿಂತೇ ಹೋದುವಾದರೂ ಇವು ಮಾಡಿರುವ ಕೆಲಸ ಅಲ್ಪವಲ್ಲ.

ಸಾಹಿತ್ಯಕ್ಕೇ ಮೀಸಲಾದ ಪತ್ರಿಕೆಗಳ ಪೈಕಿ ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಮಾಸಿಕೆಯಾಗಿ 1896ರಲ್ಲಿ ಪ್ರಾರಂಭವಾದ ವಾಗ್ಭೂಷಣ ಮೊದಲನೆಯದು. ಇದು ಹಲವು ವರ್ಷಕಾಲ ನಡೆದು ನಿಂತೇ ಹೋಗಿ, 1938ರಲ್ಲಿ ಮತ್ತೆ ಆರಂಭ ವಾಯಿತು. ಪಂಜೆ ಮಂಗೇಶರಾವ್, ಉಲ್ಲಾಳ ಮಂಗೇಶರಾವ್ ಮತ್ತು ಬೋಳಾರ ವಿಠಲರಾವ್ ಅವರ ನೇತೃತ್ವದಲ್ಲಿ, ಬೆನಗಲ್ ರಾಮರಾಯರ ಸಂಪಾದಕತ್ವದಲ್ಲಿ, 1900ರಲ್ಲಿ ಪ್ರಕಟನೆಯನ್ನಾರಂಭಿಸಿದ್ದು ಸುವಾಸಿನಿ. ಧಾರವಾಡದ ಸುದರ್ಶನ, ಮೈಸೂರಿನ ವಿದ್ಯಾದಾಯಿನಿ ಮತ್ತು ಮಧುರವಾಣಿ, ಉಡುಪಿಯ ಕೃಷ್ಣಸೂಕ್ತಿ, ಮದ್ರಾಸಿನ ಕನ್ನಡ ನುಡಿಗನ್ನಡಿ—ಇವು ಕಥೆ, ಸಾಹಿತ್ಯಗಳಿಗಾಗಿ ಮೀಸಲಾಗಿದ್ದುವು. ಕಾವ್ಯಮಂಜರಿ (1892), ಕಾವ್ಯಕಲಾನಿಧಿ (1899), ಕರ್ಣಾಟಕ ಗ್ರಂಥಮಾಲೆ—ಇವು ಅಭಿಜಾತ ಕವಿಕೃತಿಗಳ ಪ್ರಕಟನೆಗಾಗಿ ಮೀಸಲಾಗಿದ್ದ ನಿಯತಕಾಲಿಕಗಳು. ಅಗಡಿಯ ಆನಂದವನದಿಂದ ಪ್ರಕಟವಾಗುತ್ತಿದ್ದ ಸದ್ಬೋಧ ಚಂದ್ರಿಕೆಯೆಂಬುದು ಗಳಗನಾಥರ ಧಾರಾವಾಹಿ ಕಾದಂಬರಿಗಳಿಗೆ ಮೀಸಲು. ಬಿ. ವೆಂಕಟಾಚಾರ್ಯರ ಅವಕಾಶ ತೋಷಿಣಿಯೂ ಇಂಥದೇ ಪತ್ರಿಕೆ (1906–07). 1915ರಲ್ಲಿ ತ್ರೈಮಾಸಿಕವಾಗಿ ಆರಂಭವಾಗಿ ಈಗ ಷಾಣ್ಮಾಸಿಕೆಯಾಗಿರುವ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (ಆಗ ಕರ್ಣಾಟಕ ಸಾಹಿತ್ಯ ಪರಿಷತ್‌ಪತ್ರಿಕೆ) ಸಾಹಿತ್ಯ ವಿಮರ್ಶೆಗೆ ಮುಡಿಪಾಗಿದೆ. ಎ. ಆರ್. ಕೃಷ್ಣಶಾಸ್ತ್ರಿಗಳ ಸಂಪಾದಕತ್ವದಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜ್ ಕರ್ಣಾಟಕ ಸಂಘದ ಆಶ್ರಯದಲ್ಲಿ ಪ್ರಾರಂಭವಾಗಿ, 1932ರಿಂದ ಮೈಸೂರು ವಿಶ್ವ ವಿದ್ಯಾನಿಲಯದ ಆಶ್ರಯದಲ್ಲಿ ಪ್ರಕಟವಾಗುತ್ತಿರುವ ಪ್ರಬುದ್ಧ ಕರ್ಣಾಟಕ ಹಲವು ಹೊಸ ಕವಿ ಲೇಖಕ ವಿಮರ್ಶಕರನ್ನು ಸೃಷ್ಟಿಸಿದೆ. ವಿಜ್ಞಾನ, ಮಾನವಿಕ ವಿಚಾರ ಗಳನ್ನೊಳಗೊಂಡ ಎರಡು ಪ್ರತ್ಯೇಕ ತ್ರೈಮಾಸಿಕೆಗಳು ಇದರ ಬೆಳೆವಣಿಗೆಯ ಕುರುಹು. ಕರ್ನಾಟಕ ವಿಶ್ವವಿದ್ಯಾಲಯದ ಕರ್ನಾಟಕ ಭಾರತಿ ಅಯನ ಪತ್ರಿಕೆ. ಬೆಂಗಳೂರು ವಿಶ್ವವಿದ್ಯಾಲಯದ್ದು ಸಮನ್ವಯ.

ಶಿವಮೊಗ್ಗದಿಂದ ಸಂಜೀವಮ್ಮನವರು ಹೊರಡಿಸುತ್ತಿದ್ದ ಭಾಗ್ಯೋದಯ (1914), ನಂಜನಗೂಡಿನ ತಿರುಮಲಮ್ಮನವರ ಕರ್ನಾಟಕ ನಂದಿನಿ (1916)—ಇವು ಹಲವು ಲೇಖಕರ ಕೃತಿಗಳ ಪ್ರಕಟನಮಾಧ್ಯಮವಾದುವು.


ಆಲೂರ ವೆಂಕಟರಾಯರು

ಕರ್ನಾಟಕ ಕುಲಪುರೋಹಿತರೆನಿಸಿದ ಆಲೂರ ವೆಂಕಟರಾಯರು ಪ್ರಾರಂಭಿಸಿದ ಜಯಕರ್ನಾಟಕದ ಕಾಣಿಕೆ ಅಲ್ಪವಲ್ಲ. ಕವಿ ವಿಮರ್ಶಕ ಶ್ರೇಷ್ಠರಾದ ಗೆಳೆಯರ ಗುಂಪು ಕಟ್ಟಿ, ಕಾವ್ಯ ಕಥೆ ವಿಮರ್ಶೆ ವಿಚಾರಗಳನ್ನು ಬಹುಕಾಲ ವಿತರಣೆ ಮಾಡಿದ ಈ ಪತ್ರಿಕೆ ಈಗಿಲ್ಲ. ಜೀವನ ಇನ್ನೊಂದು ಮಾಸಿಕೆ. ಧಾರವಾಡದಲ್ಲಿ ಹುಟ್ಟಿ ಬೆಂಗಳೂರಿಗೆ ಬಂದು, ಮಾಸ್ತಿಯವರ ಆರೈಕೆಯಿಂದ ಬೆಳೆದು ಈಗಲೂ ನಡೆಯುತ್ತಿದೆ. ಬೆಟಗೇರಿ ಕೃಷ್ಣಶರ್ಮರ ಜಯಂತಿಯನ್ನು (ಧಾರವಾಡ) ಮರೆಯುವುದು ಹೇಗೆ ತಾನೇ ಸಾಧ್ಯ? ಅದರದೂ ಸಾಹಿತ್ಯವಿಮರ್ಶೆಯು ಕ್ಷೇತ್ರ. ಅದೂ ಈಗ ಬದುಕಿಲ್ಲ. ಕಾರಂತರ ವಸಂತವೂ ಕಿರುಕಾಲ ಬದುಕಿ ಮರೆಯಾದ ಒಂದು ಪತ್ರಿಕೆ. ಅ.ನ.ಕೃ. ಅವರ ಕಥಾಂಜಲಿ, ಜಿ. ವಿ. ನರಸಿಂಹಮೂರ್ತಿಯವರ ಕತೆಗಾರ, ಓ. ವಿ. ಗುಪ್ತರ ಕಥಾವಳಿ, ವಿ. ಬಿ. ಬಳ್ಳಾರಿಯವರ ಉಷಾ, ಬಿ. ಎಸ್. ವೆಂಕಟರಾಮರ ಛಾಯಾ, ಎಸ್. ಎಸ್. ಸೀತಾರಾಮಾಶಾಸ್ತ್ರಿಯವರು ಸಂಪಾದಕರಾಗಿದ್ದ ಕೈಲಾಸ ಮುಂತಾದ ಹಲವು ಮಾಸಿಕೆಗಳು ಹೊಸ ಲೇಖಕರ ಪೀಳಿಗೆಗಳನ್ನೇ ಸೃಷ್ಟಿಸಿವೆ. ಉಷಾ ಪ್ರಗತಿಶೀಲ ಪರಂಪರೆಯ ಹರಿಕಾರ. ಇಂಥ ಪತ್ರಿಕೆಗಳು ಇನ್ನೂ ಅನೇಕ.

ನವ್ಯಸಾಹಿತ್ಯ ಪ್ರತಿಪಾದನೆಯನ್ನೂ ಹೊಸ ಪ್ರಜ್ಞೆಯ ಪರಿಚಯವನ್ನೂ ಗುರಿಯಾಗಿಟ್ಟುಕೊಂಡು ಹೊರಬರುತ್ತಿರುವ ನಿಯತಕಾಲಿಕಗಳೆಂದರೆ ಸಾಕ್ಷಿ, ಸಂಕ್ರಮಣ, ಸಮೀಕ್ಷಕ, ಮನ್ವಂತರ ಮತ್ತು ಸಂಕೀರ್ಣ. ಜಾನಪದ ಪರಿಷತ್ತಿನ ಪತ್ರಿಕೆ ಜಾನಪದ. ಸಂಯುಕ್ತ ಕರ್ನಾಟಕ ಗುಂಪಿನ ಕಸ್ತೂರಿ (ನೋಡಿ) ಒಂದು ಡೈಜೆಸ್ಟ್. ಪ್ರಜಾವಾಣಿ ಗುಂಪಿನ ಮಯೂರ (ನೋಡಿ), ಬಿ. ಎನ್. ಗುಪ್ತರು ಪ್ರಾರಂಭಿಸಿದ ಮಲ್ಲಿಗೆ (ನೋಡಿ) ಇವು ಕಥೆಗಳಿಗಾಗಿ ಮೀಸಲು.

ಕನ್ನಡದಲ್ಲಿ ಧಾರ್ಮಿಕ ಪತ್ರಿಕೆಗಳಿಗೇನೂ ಕೊರತೆಯಿಲ್ಲ. ಬೆಂಗಳೂರಿನ ಎಂ. ರಾಮರಾಯರ ಸುಬೋಧ, ಫ.ಗು. ಹಳಕಟ್ಟಿಯವರ ಶಿವಾನುಭವ (ಬಿಜಾಪುರ) ; ಪದ್ಮಶ್ರೀ ಬಿ. ಶಿವಮೂರ್ತಿ ಶಾಸ್ತ್ರಿಗಳ ಶರಣಸಾಹಿತ್ಯ, ಹರ್ಡೇಕರ ಮಂಜಪ್ಪನವರ ಶರಣ ಸಂದೇಶ, ಹೋಳೇನರಸಿಪುರದ ಅಧ್ಯಾತ್ಮ ಪ್ರಕಾಶ—ಇವು ಕೆಲವು ಹೆಸರುಗಳು. (ಆಯಾ ಶೀರ್ಷಿಕೆಗಳನ್ನು ನೋಡಿ)

ರಾ.ಶಿ. ಯವರ ಸಂಪಾದಕತ್ವದಲ್ಲಿ ದೀರ್ಘಕಾಲ ನಡೆದು ಬಂದು, ಆರ್ಥಿಕ ಮುಗ್ಗಟ್ಟಿನಿಂದಾಗಿ ಕಾಡಿಗೆ ಹೋದ ಕೊರವಂಜಿ (ನೋಡಿ), ದೀರ್ಘಾಯು ವಿಕಟ ವಿನೋದಿನಿ (ನೋಡಿ), ಜಿ. ನಾರಾಯಣರ ವಿನೋದ (ನೋಡಿ)—ಇವು ಹಾಸ್ಯಕ್ಕೆ ಮೀಸಲಾದ ಮುಖ್ಯ ಪತ್ರಿಕೆಗಳು. ರಂಗಭೂಮಿಯ ಪ್ರಗತಿಗೆಂದೇ ಹೊರಟು ನಿಂತದ್ದು ರಂಗಭೂಮಿ. ಅಶ್ವತ್ಥನಾರಾಯಣರಾಯರ ಮಕ್ಕಳ ಪುಸ್ತಕ, ದೇವುಡು ನರಸಿಂಹಶಾಸ್ತ್ರಿಗಳ ನಮ್ಮ ಪುಸ್ತಕ, ಮೈಸೂರಿನ ಕಂದ (ನೋಡಿ)—ಇವು ಶಿಶುಸಾಹಿತ್ಯ ಪತ್ರಿಕೆಗಳು. ಹಲವು ಭಾಷೆಗಳಲ್ಲಿ ಪ್ರಕಟವಾಗುತ್ತಿರುವ ಚಂದಮಾಮ ಮತ್ತು ಬಾಲಮಿತ್ರ ಇದೇ ಜಾತಿಯವು. ಆರ್. ಕಲ್ಯಾಣಮ್ಮನವರ ಸರಸ್ವತಿ (ನೋಡಿ) ಮಹಿಳೆಯರ ಪತ್ರಿಕೆಯಾಗಿ ಪ್ರಕಟವಾಗುತ್ತಿತ್ತು. ಬೆಳಕು, ಪುಸ್ತಕ ಪ್ರಪಂಚ ವಯಸ್ಕರ ಶಿಕ್ಷಣ ಸಂಸ್ಥೆಯ ಪ್ರಕಟನೆಗಳು. ಸಹಕಾರ ಕ್ಷೇತ್ರಕ್ಕೇ ಮೀಸಲಾದದ್ದು ಮೈಸೂರು ಸಹಕಾರ ಪತ್ರಿಕೆ. ಪತ್ರಿಕೋದ್ಯಮಿಯೆಂಬುದು ಮೈಸೂರು ವಿಶ್ವವಿದ್ಯಾನಿಲಯದ ಪತ್ರಿಕೋದ್ಯಮ ವಿದ್ಯಾರ್ಥಿ ಪತ್ರಿಕೆ. ಚಲನ ಚಿತ್ರಪತ್ರಿಕೆಗಳೂ ಕೆಲವಿವೆ.

ವಿಜ್ಞಾನ ಲೇಖನ ಪ್ರಕಟಿಸುತ್ತಿದ್ದ ಪ್ರಬುದ್ಧ ಕರ್ಣಾಟಕದ ಚಿನ್ನದ ಹಬ್ಬದ ಸಂದರ್ಭದಲ್ಲಿ ಪುರವಣಿಯಾಗಿ ಹೊರಬಿದ್ದ ವಿಜ್ಞಾನ ಸಂಚಿಕೆ ಒಂದು ಬೃಹದ್ಗಾತ್ರದ ಸಾಹಸ. ವಿಜ್ಞಾನ ಕ್ಷೇತ್ರದಲ್ಲಿ ಕನ್ನಡದಲ್ಲಿ ಅದುವರೆಗೆ ಅಷ್ಟೊಂದು ವೈವಿಧ್ಯಮಯವಾದ ಲೇಖನ ಒಟ್ಟಿಗೆ ಸೃಷ್ಟಿಯಾಗಿ ಪ್ರಕಟವಾಗಿರಲಿಲ್ಲ. ಇದಕ್ಕೆ ದೊರಕಿದ ಸ್ವಾಗತದ ಫಲವಾಗಿ ಈಗ ಮೈಸೂರು ವಿಶ್ವವಿದ್ಯಾನಿಲಯದ ಆಶ್ರಯದಲ್ಲಿ ವಿಜ್ಞಾನ ಕರ್ಣಾಟಕ ತ್ರೈಮಾಸಿಕೆ ಪ್ರಕಟವಾಗುತ್ತಿದೆ. ಮಾನವಿಕ ವಿಚಾರಗಳಿಗಾಗಿ ಮೀಸಲಾದ ಮಾನವಿಕ ಕರ್ಣಾಟಕ ಇತ್ತೀಚಿನ ಪ್ರಕಟನೆ. ಈ ಎಲ್ಲ ವಿಶಿಷ್ಟ ಪ್ರಕಾರಗಳ ಪತ್ರಿಕೆಗಳೂ ಕನ್ನಡ ಜ್ಞಾನಸಾಹಿತ್ಯದ ಸಂಪತ್ತನು ಬಹುಮುಖವಾಗಿ ಹೆಚ್ಚಿಸುತ್ತಿರುವುವಲ್ಲದೆ ಕನ್ನಡ ಭಾಷೆಗೆ ಹೊಸಹೊಸ ಆಯಾಮಗಳನ್ನು ಸೃಷ್ಟಿಸುತ್ತಿವೆ.

**ಶುಭಾಶುಭಗಳು :** ಕನ್ನಡದ ದಿನ ವಾರಪತ್ರಿಕೆಗಳು ಅಂದಂದಿನ ಆವಶ್ಯಕತೆಗಳಿಗಾಗಿ ಟಂಕಿಸುತ್ತಿರುವ ಶಬ್ದಸಂಪತ್ತಿ ಅಗಾಧ. ಪ್ರಾದೇಶಿಕತೆಯ ಪ್ರತ್ಯೇಕ ಮನೋಭಾವವನ್ನು ಇವು ಬಹುಮಟ್ಟಿಗೆ ಅಳಿಸಿಹಾಕಿವೆ. ಪತ್ರಿಕೆಗಳಲ್ಲಿ ಪ್ರಕಟವಾಗುವ ಸುದ್ದಿಯ ತುಣುಕುಗಳು ಅನೇಕ ಲೇಖಕರಿಗೆ ವಸ್ತುಗಳನ್ನೊದಗಿಸಿವೆ. ದಿನಪತ್ರಿಕೆಗಳ ಸಾಪ್ತಾಹಿಕ ಪುರವಣಿಗಳೂ ದಿನವಾರಪತ್ರಿಕೆಗಳ ವಿಶೇಷ ಸಂಚಿಕೆಗಳೂ ಸಾಹಿತ್ಯ, ವಿಜ್ಞಾನ, ಮಕ್ಕಳ ಸಾಹಿತ್ಯ—ಮುಂತಾದ ನಾನಾ ಕ್ಷೇತ್ರಗಳಲ್ಲಿಯ ಕಣಜಗಳನ್ನು ತುಂಬುತ್ತಿವೆ. ಪ್ರಜಾವಾಣಿ ನಡೆಸುತ್ತಿರುವ ದೀಪಾವಳಿಕಥಾಸ್ಪರ್ಧೆ, ಸುಧಾ ಪತ್ರಿಕೆಯ ಕಾದಂಬರೀ ಸ್ಪರ್ಧೆ ಇವುಗಳಿಂದ ಬೆಳಕಿಗೆ ಬಂದಿರುವ ಹೊಸ ಲೇಖಕರು ಅನೇಕ. ಪತ್ರಿಕೆಗಳು ಜನತಾ ವಿಶ್ವವಿದ್ಯಾನಿಲಯಗಳು—ಎಂಬ ಮಾತನ್ನು ಕನ್ನಡ ಪತ್ರಿಕೆಗಳು ಸಾರ್ಥಕಪಡಿಸಿವೆ.

ಬೃಹದ್ಗಾತ್ರ ಉತ್ಪಾದನವ್ಯವಸ್ಥೆಯ ಒಳಿತು ಕೆಡುಕುಗಳು ಕನ್ನಡ ಪತ್ರಿಕೋದ್ಯಮದಲ್ಲೂ ಕಾಣಿಸಿಕೊಂಡಿವೆಯೆನ್ನಬಹುದು. ಭೂರಿ ಉತ್ಪಾದನೆ, ಬಹುಸಂಖ್ಯೆಯ ಓದುಗರಿಗೆ ವಿತರಣೆ, ಜಾಹೀರಾತು ಬಲದಿಂದ ಕಡಿಮೆ ಬೆಲೆಗೆ ಹೆಚ್ಚು ಪುಟಗಳ ಸರಬರಾಜು, ಭಿನ್ನರುಚಿಗಳ ಜನಕ್ಕೆ ಸಮಾರಾಧನೆ, ಲೇಖಕರಿಗೆ ಸಂಭಾವನೆ—ಇವು ಒಳ್ಳೆಯ ಫಲಗಳು. ಜನರಿಗೆ ವಿಕರೀತವು ಅಭಿಪ್ರಾಯದ ಸಮುದಸ್ತದ ತೊಡಿಗೆ. ಬಂಡವಾಳದ ಪ್ರಾಧಾನ್ಯ, ಸಣ್ಣ ಪತ್ರಿಕೆಗಳಿಗೆ ಪ್ರೋತ್ಸಾಹದ ಅಭಾವ—ಇವು

ಕೆಲವು ದುಷ್ಪಫಲಗಳು. ಆದರೂ ಹಲವರು ಸಣ್ಣ ಪತ್ರಿಕೆಗಳು ಆಯಾ ಸ್ಥಳಗಳ ವೈಶಿಷ್ಟ್ಯಗಳನ್ನು ಎತ್ತಿ ಹಿಡಿದು ಬದುಕಲು ಅವಕಾಶವಿದೆ; ಬದುಕುತ್ತಿವೆ. ಅಂಥ ಹಲವು ಪತ್ರಿಕೆಗಳು ದೀರ್ಘಕಾಲದಿಂದಲೂ ಪ್ರಕಟವಾಗುತ್ತಲೇ ಇವೆ.

ಕಳೆದ ಅರುವತ್ತು ವರ್ಷಗಳಲ್ಲಿ ಕನ್ನಡ ಪ್ರತಿಕಾಪ್ರಪಂಚದಲ್ಲಿ ಆಗಿರುವ ಬದಲಾವಣೆಗಳನ್ನು ಡಿ. ವಿ. ಗುಂಡಪ್ಪನವರು ತಮ್ಮ ವೃತ್ತಪತ್ರಿಕೆ ಎಂಬ ಪುಸ್ತಕದಲ್ಲಿ ಈ ರೀತಿ ಸಂಗ್ರಹಿಸಿ ಕೊಟ್ಟಿದ್ದಾರೆ :

| | ವಿಷಯ | ಆಗ | ಈಗ |
|---|---|---|---|
| 1 | ಬಂಡವಾಳ | ಕೆಲವು ಸಾವಿರ ರೂಪಾಯಿ | ಕೆಲವು ಲಕ್ಷ |
| 2 | ಸಿಬ್ಬಂದಿ | ಹತ್ತಿಪ್ಪತ್ತು ಮಂದಿ | ನೂರಿನ್ನೂರು ಮಂದಿ |
| 3 | ಯಂತ್ರೋಪಕರಣ | ಪ್ರಾಥಮಿಕ (ಪ್ರಿಮಿಟಿವ್)—ಸ್ವಲ್ಪ | ಪ್ರೌಢ— ಮಹತ್ತರ |
| 4 | ಪ್ರಚಾರ | ಒಂದೆರಡು ಸಾವಿರ ಪ್ರತಿ | ಒಂದೆರಡು ಲಕ್ಷ ಪ್ರತಿ |
| 5 | ವಿಚಾರ | ಹತ್ತಿಪ್ಪತ್ತು ಪ್ರಶ್ನೆ | ನೂರು—ಇನ್ನೂರು |
| 6 | ಧ್ಯೇಯ | ವಿದ್ಯಾಸ್ಥಾನ | ವ್ಯಾಪಾರಸ್ಥಾನ |
| 7 | ಸ್ವಭಾವ | ವ್ರತದೀಕ್ಷೆ | ಜೀವನೋಪಾಯ |
| 8 | ಉದ್ದೇಶ | ಜನಬೋಧನೆ | ಜನರಂಜನೆ |
| 9 | ಧೋರಣೆ | ಇತ್ಯರ್ಥ ವಿಚಾರ | ಪೂರ್ವಸಿದ್ಧಾಂತ ಪ್ರಚಾರ |
| 10 | ಮಾಲೀಕ | ಬಡತನ | ಭಾಗ್ಯ |
| 11 | ಉದ್ಯೋಗಿ | ಅರೆಹೊಟ್ಟೆ | ಎರಡು ಹೊತ್ತು ಊಟ |
| 12 | ಒಟ್ಟು ದೃಷ್ಟಿ | ಅನ್ನಸತ್ರ | ಹೋಟೆಲು |

ಮೇಲಣ ಅಂಶಗಳು ದೊಡ್ಡ ದಿನಪತ್ರಿಕೆಗಳ ವಿಚಾರಕ್ಕೆ ನಿಜವೆನಿಸಬಹುದೆ ವಿನಾ ಸಾಮಾನ್ಯವಾಗಿ ಎಲ್ಲ ಪತ್ರಿಕೆಗಳಿಗೂ ಅನ್ವಯವಾಗುವುದಿಲ್ಲ.

ಕನ್ನಡದಲ್ಲಿ ಪತ್ರಿಕೋದ್ಯಮವೂ ಒಂದು ವೃತ್ತಿಯಾಗಿದೆ. ಪತ್ರಿಕೆ ಸಣ್ಣ ಪ್ರಮಾಣದ್ದಾಗಿದ್ದಾಗ ಪತ್ರಿಕೋದ್ಯಮಿಗೆ ಬಹುಶ್ರುತತ್ವ ಅವಶ್ಯವಾಗಿತ್ತು. ಆದರೆ ಈಗ ಹಾಗಲ್ಲ. ಸುದ್ದಿಸಂಗ್ರಹ ಮತ್ತು ವಿತರಣೆ, ವರದಿ, ಸಂಪಾದನ, ಅಗ್ರಲೇಖನ ಮುಂತಾದ ಒಂದೊಂದೇ ವಿಭಾಗದಲ್ಲಿ ವಿಶೇಷ ಪ್ರಾವೀಣ್ಯ ಪಡೆಯಲವಕಾಶವಿದೆ ಇತರ ಕಾರ್ಮಿಕ ಸಂಘಗಳಂತೆ ಕನ್ನಡ ನಾಡಿನಲ್ಲೂ ಪತ್ರಿಕೋದ್ಯಮಿಗಳ ಸಂಘಗಳಿವೆ

ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಈಗ ಪತ್ರಿಕೋದ್ಯಮವೂ ಒಂದು ವ್ಯಾಸಂಗ ವಿಷಯ.

ಇತರ ಭಾಷಾ ಪತ್ರಿಕೆಗಳಿಗೆ ಹೋಲಿಸಿದರೆ ಕನ್ನಡದ ಪತ್ರಿಕೆಗಳು ಗುಣಮಟ್ಟದಲ್ಲಿ ಕಡಿಮೆಯೇನೂ ಅಲ್ಲ. ಜನರಲ್ಲಿ ವಿದ್ಯಾಪ್ರಸಾರವೂ ವಾಚನಾಭಿರುಚಿಯೂ ಹೆಚ್ಚಿದಂತೆ ಪತ್ರಿಕೆಗಳ ಸಂಖ್ಯೆಯೂ ಪ್ರಸಾರವೂ ಹೆಚ್ಚುತ್ತಿವೆ. 1962–67ರ ಅವಧಿಯಲ್ಲಿ ಕನ್ನಡ ಪತ್ರಿಕೆಗಳು ಪಡೆದ ಪ್ರಗತಿಯನ್ನು ಮುಂದಿನ ಪಟ್ಟಿಯಲ್ಲಿ ಕೊಡಲಾಗಿದೆ :

| ವರ್ಷ | ದಿನಪತ್ರಿಕೆಗಳು | ವಾರಪತ್ರಿಕೆಗಳು | ಇತರ | ಒಟ್ಟು |
|---|---|---|---|---|
| 1962 | 32 | 81 | 106 | 219 |
| 1963 | 39 | 92 | 120 | 251 |
| 1964 | 39 | 98 | 124 | 261 |
| 1965 | 40 | 85 | 122 | 247 |
| 1966 | 37 | 88 | 119 | 244 |
| 1967 | 34 | 78 | 117 | 229 |

ಈ 229 ಪತ್ರಿಕೆಗಳ ಪೈಕಿ ದೆಹಲಿ, ಕಲ್ಕತ್ತ, ಬೊಂಬಾಯಿ ಮತ್ತು ಮದ್ರಾಸ್ ನಗರಗಳಿಂದ ಪ್ರಕಟವಾಗುತ್ತಿದ್ದವು 10, ಬೆಂಗಳೂರಿನಿಂದ 67 ; ಒಂದು ಲಕ್ಷಕ್ಕಿಂತ ಹೆಚ್ಚು ಪ್ರಜಾಸಂಖ್ಯೆಯ ನಗರಗಳಿಂದ 64 ಮತ್ತು ಒಂದು ಲಕ್ಷಕ್ಕಿಂತ ಕಡಿಮೆಯ ಜನಸಂಖ್ಯೆಯ ಸ್ಥಳಗಳಿಂದ 88. ರಾಜ್ಯಾನುಗುಣವಾಗಿ ಇವನ್ನು ಹೀಗೆ ವಿಂಗಡಿಸಬಹುದು: ಮೈಸೂರು ರಾಜ್ಯದಿಂದ ಪ್ರಕಟವಾಗುತ್ತಿದ್ದವು 214, ಮಹಾರಾಷ್ಟ್ರದಿಂದ 8, ಕೇರಳ ತಮಿಳುನಾಡುಗಳಿಂದ ತಲಾ 3. ಪಾಂಡಿಚೆರಿಯಿಂದ 1. ಎಲ್ಲ ಪತ್ರಿಕೆಗಳ ಒಟ್ಟು ಪ್ರಸಾರ 5·80 ಲಕ್ಷ. ಇದರಲ್ಲಿ ಮೈಸೂರಿನ ಪತ್ರಿಕೆಗಳದೇ 5·42 ಲಕ್ಷ.

ಕನ್ನಡ ಪತ್ರಿಕೆಗಳ ಪ್ರಸಾರದಲ್ಲಿ ಆಗಿರುವ ಪ್ರಗತಿಯನ್ನು ಮುಂದಿನ ಪಟ್ಟಿ ಸೂಚಿಸುತ್ತದೆ :

('೦೦೦)

| ವರ್ಷ | ದಿನಪತ್ರಿಕೆ | ವಾರಪತ್ರಿಕೆ | ಇತರ | ಒಟ್ಟು |
|---|---|---|---|---|
| 1962 | 2,10 | 2,36 | 1,85 | 6,31 |
| 1963 | 1.93 | 2,34 | 1,99 | 6,26 |
| 1964 | 2,36 | 2,52 | 2,12 | 7,00 |
| 1965 | 2,40 | 2,32 | 2,16 | 6,88 |
| 1966 | 2,47 | 2,62 | 2,03 | 7,12 |
| 1967 (ಅಂದಾಜು) | 2,06 | 1,92 | 1,82 | 5,80 |

ಕನ್ನಡದ ಒಟ್ಟು ದಿನಪತ್ರಿಕೆಗಳ ಪೈಕಿ ಸೇಕಡಾ 80 ಸಣ್ಣವು ; ತಲಾ 15,000ಕ್ಕಿಂತ ಕಡಿಮೆ ಪ್ರಸಾರದವು. ಒಟ್ಟು ಪ್ರಸಾರದಲ್ಲಿ ಇವುಗಳ ಪಾಲು ಸೇಕಡಾ ಸು. 28 ಮಾತ್ರ. ಕಲ್ಕತ್ತೆಯ ದೈನಿಕವಾದ ಆನಂದ ಬಜ಼ಾರ್ ಪತ್ರಿಕಾ (ಪ್ರಸಾರ: 1,92,124), ಮದ್ರಾಸಿನ ಸಾಪ್ತಾಹಿಕವಾದ ಕುಮುದಂ (ಪ್ರಸಾರ : 3,26,500) ಇವು ದೇಶದಲ್ಲೇ ಅತ್ಯಧಿಕ ಪ್ರಸಾರದ ದೈನಿಕ ಹಾಗೂ ಸಾಪ್ತಾಹಿಕಗಳು. ಇವುಗಳೊಡನೆ ಹೋಲಿಸಿದರೆ ಕನ್ನಡದ ಪತ್ರಿಕೆಗಳ ಬೆಳವಣಿಗೆಗೆ ಧಾರಾಳವಾದ ಅವಕಾಶವಿದೆ. ಆದರೆ ಮುದ್ರಣದ ಅಂದಚೆಂದ ಮತ್ತು ಪುಟವಿನ್ಯಾಸಗಳಲ್ಲಿ ಕನ್ನಡ ಪತ್ರಿಕೆಗಳದೇ ವಿಕ್ರಮ. ಕನ್ನಡದ ಪ್ರಜಾವಾಣಿ ದಿನಪತ್ರಿಕೆ ಹಲವು ಬಾರಿ ಇದಕ್ಕಾಗಿ ರಾಷ್ಟ್ರಪ್ರಶಸ್ತಿ ಗಳಿಸಿದೆ.

(ಎಂ. ಎನ್. ಸಿಎಚ್.)

**ಕನ್ನಡ ಪ್ರಭ :** ಭಾರತದ ಅತ್ಯಂತ ದೊಡ್ಡ ಪತ್ರಿಕಾ ಸಮೂಹವನ್ನು ನಿರ್ವಹಿಸುತ್ತಿರುವ ಇಂಡಿಯನ್ ಎಕ್ಸ್‌ಪ್ರೆಸ್ ಸಂಸ್ಥೆಯ ಅಂಗವಾಗಿ 1967ರ ಕನ್ನಡ ರಾಜ್ಯೋತ್ಸವ ಹಾಗೂ ದೀಪಾವಳಿಯ ದಿನದಂದು ಬೆಂಗಳೂರಿನಿಂದ ಆರಂಭವಾದ ಕನ್ನಡ ದಿನಪತ್ರಿಕೆ. ಪ್ರಥಮ ಸಂಚಿಕೆಯಲ್ಲಿ ತನ್ನ ಧ್ಯೇಯೋದ್ದೇಶಗಳನ್ನು ಕುರಿತು ಪತ್ರಿಕೆ ಹೀಗೆಂದು ಹೇಳಿದೆ : ನಾವು ಯಾವ ಪಕ್ಷಕ್ಕೂ ಸೇರಿದವರಲ್ಲ. ಜನಸಾಮಾನ್ಯರ ಬದುಕನ್ನು ಹಸನುಗೊಳಿಸಲು ಪ್ರಯತ್ನಪಡುವ ಎಲ್ಲರೊಡನೆಯೂ

ನಾವು ಸಹಕರಿಸುತ್ತೇವೆ. ಜನಸಾಮಾನ್ಯರ ಯೋಗಕ್ಷೇಮ ಪಾಲನೆಯಲ್ಲಿ ನಿರತರಾಗಿರುವವರೆಲ್ಲರ ಜತೆಯಲ್ಲೂ ಶ್ರಮಿಸುತ್ತೇವೆ. ಇದಕ್ಕಿಂತ ಹಿರಿದಾದ, ಶ್ರೇಯಸ್ಕರವಾದ ಜನಸೇವೆಯಿಲ್ಲ, ನಾಡ ಸೇವೆಯಿಲ್ಲ. ಇದೇ ಪ್ರಜಾಧರ್ಮ... ಒಟ್ಟಿನ ಒಳಿತಿಗಾಗಿ ವ್ಯಕ್ತಿಯ ಹಿತವನ್ನಾಗಲಿ ವ್ಯಕ್ತಿಯ ಹಿತಕ್ಕಾಗಿ ಒಟ್ಟಿನ ಒಳಿತನ್ನಾಗಲಿ ಕಡೆಗಾಣಲು ನಾವು ಒಪ್ಪೆವು. ಒಂದರಿಂದ ಮತ್ತೊಂದು ಸಾಧನೆಯಾಗಬೇಕು. ಒಂದು ಮತ್ತೊಂದಕ್ಕೆ ದಾರಿಯಾಗಬೇಕು. ಈ ಸಮಷ್ಟಿ ವ್ಯಷ್ಟಿಗಳ ಸಮರಸವನ್ನು ಎತ್ತಿಹಿಡಿಯಲು ನಾವು ಉದ್ಯುಕ್ತರಾಗುತ್ತೇವೆ...

ಇಂಗ್ಲಿಷ್ ಪತ್ರಿಕೆಯೊಂದನ್ನು ಪ್ರಕಟಿಸುವ ಸಂಸ್ಥೆಯೇ ಈ ಪತ್ರಿಕೆಯನ್ನು ಪ್ರಕಟಿಸುತ್ತಿದ್ದರೂ ಇದು ಇಂಗ್ಲಿಷ್ ಪತ್ರಿಕೆಯ ಅನುಕರಣವಲ್ಲ. ಕನ್ನಡ ಜನತೆಯ ಪ್ರತಿನಿಧಿಯಾಗಿ ಸ್ವತಂತ್ರ ಧೋರಣೆಗಳನ್ನುಳ್ಳ ಪತ್ರಿಕೆಯಿದು. ಪತ್ರಿಕೆಗಳ ಪ್ರಥಮ ಲಕ್ಷ್ಯವಾದ ಸುದ್ದಿವಿತರಣೆಯಲ್ಲಿ ಈ ಪತ್ರಿಕೆಗೆ ವ್ಯಾಪಕವಾದ ಸುದ್ದಿಮೂಲಗಳಿವೆ. ರಾಜ್ಯದ ಹಾಗೂ ದೇಶ ವಿದೇಶಗಳ ಸುದ್ದಿಸಂಗ್ರಹದಲ್ಲಿ ಮಾಮೂಲಿ ಸುದ್ದಿ ಸಂಗ್ರಹ ಸಂಸ್ಥೆಗಳ ಜೊತೆಗೆ, ಪ್ರಪಂಚದಾದ್ಯಂತ ವ್ಯಾಪಕವಾದ ಎಕ್ಸ್‌ಪ್ರೆಸ್ ನ್ಯೂಸ್ ಸರ್ವಿಸಿನ ವಿಶೇಷ ವ್ಯವಸ್ಥೆಯೂ ಈ ಪತ್ರಿಕೆಗಿದೆ. ಸುದ್ದಿ ಹಾಗೂ ಅಭಿಪ್ರಾಯ ಪ್ರಕಟಣೆಯಲ್ಲಿ ಸ್ವತಂತ್ರ ನಿಲುವು ತಳೆದು ತನ್ನದೇ ಆದ ವಿಚಾರ ವೈಶಿಷ್ಟ್ಯವನ್ನು ಇದು ಕಾಪಾಡಿಕೊಂಡಿದೆ. ವಾಚಕೋಪಯುಕ್ತವಾದ ಹಲವು ವೈಶಿಷ್ಟ್ಯಪೂರ್ಣ ಪ್ರಯೋಗಗಳನ್ನೂ ಕನ್ನಡ ಪ್ರಭ ನಡೆಸಿದೆ. ಓದುಗರಲ್ಲಿ ವಾಚನಾಭಿರುಚಿಯನ್ನು ಬೆಳೆಸುವ ಹಾಗೂ ಮನೋರಂಜನೆಯನ್ನು ಒದಗಿಸುವ ಸಲುವಾಗಿ ದೈನಿಕ ಧಾರಾವಾಹಿ ಕಾದಂಬರಿಯನ್ನು ಮೊತ್ತಮೊದಲು ಆರಂಭಿಸಿದ ದಿನಪತ್ರಿಕೆ ಇದು. ಕಿರಿಯ ಓದುಗರಿಗಾಗಿ ದೈನಿಕ ಜ್ಞಾನಪ್ರಭ, ಮಹಿಳೆಯರಿಗಾಗಿ ಮಹಿಳಾಪ್ರಭ ಕೂಡ ಈ ಪತ್ರಿಕೆಯ ಇತರ ವೈಶಿಷ್ಟ್ಯಗಳು. ವಿದ್ಯಾರ್ಥಿಗಣಕ್ಕೆ ಪ್ರಿಯವಾದ ಕ್ರೀಡಾವರದಿಗಳ ಜೊತೆಗೆ, ಓದಿನಲ್ಲಿ ಅಭಿರುಚಿಯನ್ನೂ ಮಾರ್ಗದರ್ಶನವನ್ನೂ ನೀಡುವ ಸಲುವಾಗಿ ಸಮಗ್ರ ಸ್ವರೂಪದ ವಿದ್ಯಾರ್ಥಿಮಾರ್ಗದರ್ಶಿಯನ್ನು ಪ್ರಪ್ರಥಮವಾಗಿ ಆರಂಭಿಸಿದ್ದೂ ಈ ಪತ್ರಿಕೆಯೇ. ವಾಣಿಜ್ಯ ವಿಭಾಗ, ಸಾಹಿತ್ಯ ವಿಮರ್ಶೆ, ಚಿತ್ರಕಲೆ, ಸಂಗೀತ, ನಾಟಕ, ನೃತ್ಯ ಪ್ರದರ್ಶನಗಳ ವಿಮರ್ಶಾತ್ಮಕ ವರದಿಗಳನ್ನೂ ನಿರಂತರವಾಗಿ ಪ್ರಕಟಿಸುತ್ತಿದೆ. ಅಲ್ಲದೆ ಪ್ರತಿ ಸೋಮವಾರದ ಪತ್ರಿಕೆಯಲ್ಲಿ ಸಾಹಿತ್ಯದ ಆಗುಹೋಗುಗಳನ್ನು ಕುರಿತ ಸಾಹಿತ್ಯ ಸಲ್ಲಾಪವೆಂಬ ವಿಶೇಷ ಲೇಖನಮಾಲೆ ವಾರವಾರವೂ ಪ್ರಕಟವಾಗುತ್ತಿದೆ. ನಾಡಿನ ಹಿರಿಯ ಲೇಖಕರ ಬರೆಹಗಳನ್ನು ಪ್ರಕಟಿಸಿ, ವಾಚಕರಿಗೆ ಸರ್ವತೋಮುಖವಾದ ವಿಚಾರವಾಹಿನಿಯನ್ನು ಒದಗಿಸಲು ಪತ್ರಿಕೆ ಶ್ರಮಿಸುತ್ತಿದೆ. ಮೂರು ವರ್ಷಗಳಲ್ಲಿಯೇ ಇದರ ಪ್ರಸಾರ ಅರ್ಧ ಲಕ್ಷಕ್ಕೆ ಮೀರಿದೆ. ಇದರ ಮೊದಲ ಸಂಪಾದಕರು ಎನ್. ಎಸ್. ಸೀತಾರಾಮಶಾಸ್ತ್ರಿ ; ಇಂದಿನ ಸಂಪಾದಕರು ಕೆ. ಎಸ್. ರಾಮಕೃಷ್ಣಮೂರ್ತಿ. (ಕೆ.ಎಸ್.ಆರ್.ಎಂ.)

**ಕನ್ನಡ ಭಾಷೆ :** ಭಾರತದ ಸಂವಿಧಾನದಲ್ಲಿ ಮಾನ್ಯತೆಪಡೆದ ಹದಿನೈದು ಭಾಷೆಗಳಲ್ಲಿ ಒಂದಾಗಿಯೂ ಮೈಸೂರು ರಾಜ್ಯದ ಜನರ ಮನೆಮಾತಾಗಿಯೂ ಇರುವ ಕನ್ನಡ ಭಾಷೆ ದ್ರಾವಿಡ ಭಾಷಾ ಪರಿವಾರದ ನಾಲ್ಕು ಪ್ರಮುಖ ಭಾಷೆಗಳಲ್ಲೊಂದು. ಸುಮಾರು ಒಂದುವರೆ ಸಾವಿರ ವರ್ಷಗಳ ಸಾಹಿತ್ಯ ಹಾಗೂ ಶಿಲಾಶಾಸನಗಳ ಚರಿತ್ರೆಯನ್ನು ಹೊಂದಿದ ಈ ಭಾಷೆ ಸುಸಂಸ್ಕೃತ ಜನಾಂಗವೊಂದರ ಆಡುನುಡಿಯಾಗಿಯೂ ಸಾಹಿತ್ಯರಚನೆಗೆ ಮಾಧ್ಯಮವಾಗಿಯೂ ವಿಕಾಸಗೊಂಡು ವಿಶ್ವಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಗಳನ್ನು ಸಲ್ಲಿಸಿದೆ. ಮೈಸೂರು ರಾಜ್ಯದ ಆಡಳಿತ ಭಾಷೆಯಾಗಲು ಮತ್ತು ಮೈಸೂರು ಜನತೆಯ ಶಿಕ್ಷಣಮಾಧ್ಯಮವಾಗಲು ಸಮರ್ಥವಾಗಿದೆ.

1961ನೆಯ ಜನಗಣತಿಯ ಪ್ರಕಾರ ಭಾರತದ 17,41,15,827 ಜನರಿಗೆ ಕನ್ನಡ ಮಾತೃಭಾಷೆಯಾಗಿದೆ. ಇವರಲ್ಲಿ 15,371,753 ಜನ ಭಾಷಾವಾರು ಪ್ರಾಂತವಿಂಗಡಣೆಯ ಫಲವಾಗಿ 1956 ರಲ್ಲಿ ರಚಿತವಾದ ಹೊಸ ಮೈಸೂರು ರಾಜ್ಯದಲ್ಲಿಯೂ ಮಿಕ್ಕವರು ಮೈಸೂರು ರಾಜ್ಯದ ಗಡಿಯಿಂದಾಚೆಗಿರುವ ಕಾಸರಗೋಡು, ಮಂಜೇಶ್ವರ, ಸೊಲ್ಲಾಪುರ, ಅಕ್ಕಲಕೋಟೆ, ಹೊಸೂರು, ತಾಳವಾಡಿ, ಆದವಾನಿ ಮುಂತಾದ ಪ್ರದೇಶಗಳಲ್ಲಿಯೂ ಬೊಂಬಾಯಿ, ಮದರಾಸು, ದೆಹಲಿ, ಕಲ್ಕತ್ತ, ಹೈದರಾಬಾದು ಮುಂತಾದ ಪ್ರಮುಖ ಪಟ್ಟಣಗಳಲ್ಲಿಯೂ ಇದ್ದಾರೆ. ಇದಲ್ಲದೆ ಇತರ ಭಾಷೆಗಳನ್ನಾಡುವ ಜನರಲ್ಲಿ 3,550,642 ಜನ ಕನ್ನಡವನ್ನು ತಮ್ಮ ಎರಡನೆಯ ಭಾಷೆಯಾಗಿ ಮಾತಾಡುತ್ತಾರೆಂದೂ ಜನಗಣತಿಯಿಂದ ತಿಳಿದುಬಂದಿದೆ.

ಕನ್ನಡ ಎಂಬ ಶಬ್ದ ಈ ಭಾಷೆಯ ಹೆಸರನ್ನು ಸೂಚಿಸುವಂತೆ ಈ ಭಾಷೆಯನ್ನಾಡುವ ಜನ ವಾಸಿಸುವ ಪ್ರದೇಶವನ್ನೂ ಸೂಚಿಸುತ್ತಿತ್ತೆಂದು ಪ್ರಾಚೀನ ಗ್ರಂಥಗಳಿಂದ ತಿಳಿದುಬರುತ್ತದೆ. ಕವಿರಾಜಮಾರ್ಗದಲ್ಲಿ ಕಾವೇರಿಯಿಂದಮಾ ಗೋದಾವರಿಯ ವರಮಿರ್ದ ನಾಡದಾ ಕನ್ನಡದೊಳ್ ಎಂದೂ ಕಬ್ಬಿಗರ ಕಾವದಲ್ಲಿ ಕನ್ನಡಮೆನಿಪ್ಪಾ ನಾಡು ಎಂದೂ ಉಕ್ತವಾಗಿದೆ. ಕವಿರಾಜಮಾರ್ಗದಲ್ಲಿ ಕಾವೇರಿಯಿಂದ ಗೋದಾವರಿಯ ವರೆಗೆ ವಿಸ್ತರಿಸಿತ್ತು ಎನ್ನಲಾದ ಈ ಪ್ರದೇಶ ಈಗ ತುಂಬ ಸಂಕುಚಿತವಾಗಿ ಬೆಳಗಾಂ ಬೀದರ್ ಪ್ರದೇಶದಿಂದ ಕೊಡಗು ಮೈಸೂರು ವರೆಗೂ ಅರಬ್ಬೀ ಸಮುದ್ರತೀರದಿಂದ ಕೋಲಾರ ಬಳ್ಳಾರಿ ವರೆಗೂ ಸೀಮಿತವಾಗಿದೆ.

ಈ ಶಬ್ದದ ರೂಪನಿಷ್ಪತ್ತಿಯ ವಿಚಾರದಲ್ಲಿ ಸಾಕಷ್ಟು ಚರ್ಚೆ ನಡೆದಿದೆ. ಕನ್ನಡವನ್ನು ಸಂಸ್ಕೃತಜನ್ಯವೆಂದು ನಂಬಿದ ವಿದ್ವಾಂಸರು ಈ ಶಬ್ದ ಕರ್ಣಾಟ ಅಥವಾ ಕರ್ಣಾಟಕ ಎಂಬ ಸಂಸ್ಕೃತ ಶಬ್ದದಿಂದ ಬಂದಿದೆ ಎನ್ನುತ್ತಾರೆ. ಪ್ರಸಿದ್ಧ ವೈಯಾಕರಣಿಯಾದ ಕೇಶಿರಾಜನೂ ಇದೇ ಅಭಿಪ್ರಾಯವನ್ನು ಹೊಂದಿದ್ದ. ಕರ್ಣಾಟಕ ಎಂಬ ಶಬ್ದ ಕರುನಾಡಗಂ ಎಂಬ ದ್ರಾವಿಡ ಮೂಲ ಪದದ ಸಂಸ್ಕೃತ ರೂಪವೆಂದೂ ಕೆಲವು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಹೀಗೆ ಸಂಸ್ಕೃತ ರೂಪವನ್ನು ಪಡೆದ ಮೇಲೆ ಅದರ ನಿಷ್ಪತ್ತಿಯೂ ಕರ್ಣೇಷು ಅಟತಿ ಸರ್ವೇಷಾಂ ಕರ್ಣೇಷು ಭ್ರಮತೀತಿ —ಯಾವ ದೇಶದ ಪ್ರಸಿದ್ಧಿ ಜನರ ಕಿವಿಯಲ್ಲಿ ಮೊಳಗುತ್ತಿರುವುದೋ ಆ ದೇಶ —ಎಂದಾಯಿತು. ಆರ್. ನರಸಿಂಹಾಚಾರ್ಯರು ಕಮ್ಮಿತು ನಾಡು ಎಂದು ಈ ಶಬ್ದದ ಅರ್ಥನಿಷ್ಪತ್ತಿ ಮಾಡುತ್ತಾರೆ. ಕಮ್ಮಿತು ಎಂದರೆ ಸುವಾಸನೆಯುಳ್ಳ ಎಂದರ್ಥ. ಗಂಧದ ಮರಗಳಿಂದ ಕೂಡಿದ ಈ ರಾಜ್ಯಕ್ಕೆ ಇದು ಅನ್ವರ್ಥನಾಮವಾಗಬಹುದು ಅಥವಾ ಕನ್ನಡಿಗರ ಅಭಿಮಾನಸೂಚಕವೂ ಆಗಬಹುದು. ಗುಂಡರ್ಟ್ ಮತ್ತು ಕಾಲ್ಡ್‌ವೆಲ್ ಅವರ ಅಭಿಪ್ರಾಯದಂತೆ ಜೋಳ ಮತ್ತು ಹತ್ತಿಯ ಬೆಳೆವಣಿಗೆಗೆ ಅನುಗುಣವಾದ ಕಪ್ಪು ಮಣ್ಣಿನ ಪ್ರದೇಶಕ್ಕೆ ಕರ್ ನಾಡು ಅಥವಾ ಕಪ್ಪು ಮಣ್ಣಿನ ಪ್ರದೇಶ ಎಂಬ ಹೆಸರು ಬಂತು. ಆದರೆ ಈ ಕಪ್ಪು ಮಣ್ಣು ಮೈಸೂರು ರಾಜ್ಯದ ದಕ್ಷಿಣ ಪ್ರದೇಶದಲ್ಲಿಲ್ಲ ಎಂಬುದು ಗಮನಾರ್ಹ. ಇನ್ನು ಕೆಲವರು ಕರುನಾಡು ಎಂಬ ಶಬ್ದಕ್ಕೆ ದೊಡ್ಡ ಪ್ರದೇಶ ಅಥವಾ ಮಹಾರಾಷ್ಟ್ರ ಎನ್ನುವ ನಿಷ್ಪತ್ತಿ ತೋರಿಸುವ ಪ್ರಯತ್ನವನ್ನೂ ಮಾಡಿದ್ದಾರೆ.

ಕನ್ನಡ ಭಾಷೆಯನ್ನಾಡುವವರು ದ್ರಾವಿಡ ಜನಾಂಗಕ್ಕೆ ಸೇರಿದವರು. ಆರ್ಯರು ಭಾರತಕ್ಕೆ ಬರುವ ಮುಂಚೆಯೇ ಇವರು ಇಲ್ಲಿಗೆ ಬಂದವರು. ಜಗತ್ತಿನಲ್ಲಿ ನಾಗರಿಕತೆಯ ವಿಕಾಸ ಪ್ರಾರಂಭವಾದಾಗಲೇ ಇವರು ಭಾರತದಲ್ಲಿ ನೆಲೆಸಿದ್ದರು. ಆಮೇಲೆ ಉತ್ತರದಲ್ಲಿ ಆರ್ಯರ ಪ್ರಾಬಲ್ಯ ಹೆಚ್ಚಾಗಿ ದ್ರಾವಿಡರು ದಕ್ಷಿಣದ ಕಡೆಗೆ ಬಂದಿರಬೇಕು ಎಂದು ಇತಿಹಾಸಜ್ಞರ ಅಭಿಪ್ರಾಯ. ಭಾರತಕ್ಕೆ ಬರುವ ಮೊದಲು ಈ ಜನಾಂಗದವರು ಭಾರತದ ಉತ್ತರದಲ್ಲಿ ಸೈಬೀರಿಯದ ಕಡೆಯಲ್ಲಿದ್ದರೆಂದು ಹಂಗೆರಿ, ಫಿನಿಶ್ ಮುಂತಾದ ಭಾಷೆಗಳಲ್ಲಿ ಕಂಡುಬರುವ ಕೆಲವು ದ್ರಾವಿಡ ಶಬ್ದಗಳ ಆಧಾರದಿಂದ ಊಹಿಸಬಹುದು. ಸಿಥಿಯನ್ ಹಾಗೂ ಸುಮೇರಿಯನ್ ಭಾಷೆಗಳನ್ನಾಡುವ ಜನಾಂಗದೊಡನೆ ಮೂಲ ದ್ರಾವಿಡ ಜನಾಂಗ ಸಂಪರ್ಕಹೊಂದಿತ್ತೆಂದು ಊಹಿಸಲು ಹಲವು ಆಧಾರಗಳಿವೆ. ಮಧ್ಯ ಹಾಗೂ ಪಶ್ಚಿಮ ಏಷ್ಯದಲ್ಲಿನ ಈ ದ್ರಾವಿಡ ಜನ ಬಲೂಚಿಸ್ತಾನದ ಮಾರ್ಗವಾಗಿ ಸಿಂಧ್ ಕಣಿವೆಯ ಮೂಲಕ ಇಲ್ಲಿಗೆ ಬಂದು ಪೂರ್ವದಲ್ಲಿ ಬಿಹಾರದ ವರೆಗೂ ದಕ್ಷಿಣದಲ್ಲಿ ಸಿಂಹಳದ ವರೆಗೂ ವಿಸ್ತರಿಸಿ ನೆಲೆಸಿದರೆಂಬುದನ್ನು ಬಲೂಚಿಸ್ತಾನದಲ್ಲಿ ಇನ್ನೂ ಆಡುನುಡಿಯಾಗಿ ಉಳಿದಿರುವ ಬ್ರಾಹುಈ ಭಾಷೆ, ಹರಪ್ಪ ಮೊಹೆಂಜದಾರೊ ಅವಶೇಷಗಳು, ಬಿಹಾರ್ ಪ್ರದೇಶದಲ್ಲಿ ಪ್ರಚಾರದಲ್ಲಿರುವ ಕುಡುಖ್ ಮಾಲ್ಟೋ ಭಾಷೆಗಳು ಹಾಗೂ ಸಿಂಹಳದ ವರೆಗೆ ಹಬ್ಬಿದ ತಮಿಳು ಭಾಷೆ ಮುಂತಾದವುಗಳ ಆಧಾರದಿಂದ ತಿಳಿಯಬಹುದು. ಈ ಜನಾಂಗದ ಮೂಲಭಾಷೆಯನ್ನು ಮೂಲದ್ರಾವಿಡ ಎಂದು ಕರೆಯಬಹುದು. ಜನಾಂಗ ಕವಲುಕವಲಾಗಿ ಒಡೆದುಹೋದಾಗ ಈ ಕರ್ಣಾಟಕ ಪ್ರದೇಶದಲ್ಲಿ ನೆಲಸಿದ ಗುಂಪಿನ ಉಪಭಾಷೆಯಲ್ಲಿ ಉಂಟಾದ ಮಾರ್ಪಾಡುಗಳಿಂದಾಗಿ ಅದು ಇತರ ಉಪಭಾಷೆಗಳಿಂದ ಪ್ರತ್ಯೇಕವಾಗಿ ಕನ್ನಡವೆನಿಸಿತು ಎಂದು ಹೇಳಬಹುದು.

ಹೀಗೆ ಪ್ರತ್ಯೇಕಿಸಲ್ಪಟ್ಟ ಆಡುನುಡಿ ಯಾವ ಶತಮಾನದಿಂದ ಸ್ವತಂತ್ರ ಭಾಷೆಯಾಗಿ ಪರಿವರ್ತನೆಗೊಂಡಿತು ಎಂದು ನಿಶ್ಚಿತವಾಗಿ ಹೇಳಬರುವುದಿಲ್ಲ. ಒಂದು ಭಾಷೆಯಲ್ಲಿ ಸಾಹಿತ್ಯ ಸೃಷ್ಟಿಯಾಗುವುದಕ್ಕಿಂತ ಎಷ್ಟೋ ಶತಮಾನ ಹಿಂದೆಯೇ ಆ ಭಾಷೆ ಆಡುನುಡಿಯಾಗಿ ಬಳಕೆಯಲ್ಲಿರಬಹುದು. ಆದರೂ ಉಪಲಬ್ಧ ಸಾಹಿತ್ಯ, ಶಾಸನ ಹಾಗೂ ಇತರ ಭಾಷೆಗಳಲ್ಲಿನ ಉಲ್ಲೇಖದಿಂದ ಈ ಭಾಷೆ ಇಂಥ ಶತಮಾನಕ್ಕಿಂತ ಹಿಂದೆಯೇ ಬಳಕೆಯಲ್ಲಿದ್ದಿರಬೇಕೆಂದು ಮಾತ್ರ ಖಚಿತವಾಗಿ ಹೇಳಬಹುದು.

ವೇದಕಾಲದಲ್ಲಿಯೂ ಕನ್ನಡ ಭಾಷೆ ಪ್ರಚಾರದಲ್ಲಿತ್ತೆಂದು ಊಹಿಸಲು ಕೆಲವು ಆಧಾರಗಳುಂಟು. ಛಾಂದೋಗ್ಯ ಉಪನಿಷತ್ತಿನಲ್ಲಿ ಮಟಚಿ ಮೊದಲಾದ ಕನ್ನಡ ಶಬ್ದಗಳಿವೆ. ಪದ್ಮ ಹಾಗೂ ಮಾರ್ಕಂಡೇಯ ಪುರಾಣಗಳಲ್ಲಿ ಕರ್ಣಾಟಕದ ಪ್ರಸ್ತಾಪವಿದೆ. ಕ್ರಿಸ್ತಶಕ ಎರಡನೆಯ ಶತಮಾನದ್ದೆನ್ನಲಾದ ಒಂದು ಗ್ರೀಕ್ ಪ್ರಹಸನದಲ್ಲಿ ಕನ್ನಡ ಮಾತುಗಳಿರುವುದನ್ನು ಕಂಡು ಕ್ರಿ. ಶ. ಎರಡನೆಯ ಶತಮಾನಕ್ಕಿಂತ ಮುಂಚೆಯೇ ದಕ್ಷಿಣ ಕನ್ನಡದ ಸಮುದ್ರತೀರದಲ್ಲಿ ಕನ್ನಡ ವ್ಯವಹಾರದಲ್ಲಿತ್ತು ಎಂದು ಗೋವಿಂದ ಪೈ ಮುಂತಾದ ವಿದ್ವಾಂಸರು ಸಾಧಿಸಿದ್ದಾರೆ. ಇದೂ ಅಲ್ಲದೆ

ರಾಮಾಯಣ ಮಹಾಭಾರತಾದಿ ಗ್ರಂಥಗಳಲ್ಲಿ ಬರುವ ವಿವರಗಳಿಂದಲೂ ಕ್ರಿ.ಶ. ಎರಡನೆಯ ಶತಮಾನದ ತಮಿಳು ಗ್ರಂಥ ಶಿಲಪ್ಪದಿಗಾರಂದಲ್ಲಿ ಬರುವ ಕರುನಾಡರ್ ಎಂಬ ಪ್ರಯೋಗದಿಂದಲೂ ಕ್ರಿಸ್ತಶಕದ ಆರಂಭಕ್ಕಿಂತ ಮುಂಚೆಯೇ ಕನ್ನಡ ಭಾಷೆ ಈ ಪ್ರಾಂತ್ಯದ ಜನರ ಆಡುನುಡಿಯಾಗಿತ್ತೆಂದು ಊಹಿಸಬಹುದು. ಮೊಹೆಂಜದಾರೊ ಮತ್ತು ಹರಪ್ಪಗಳ ಅವಶೇಷಗಳ ಸಂಶೋಧನೆಯಿಂದ ಈ ಊಹೆಗೆ ಮತ್ತಷ್ಟು ಪುಷ್ಟಿ ದೊರಕಿದೆ. ಅಲ್ಲಿ ಕಾಣಬರುವ ಸಂಸ್ಕೃತಿ ಆರ್ಯರಿಗೂ ಹಿಂದಿದ್ದ ದ್ರಾವಿಡ ಸಂಸ್ಕೃತಿ ಎಂದು ಹೇಳುವ ವಿದ್ವಾಂಸರ ವಾದದಲ್ಲಿ ಹುರುಳಿಲ್ಲದಿಲ್ಲ.

ಕ್ರಿ.ಶ. ಐದನೆಯ ಶತಮಾನದ ಶಾಸನಗಳೂ ಒಂಬತ್ತನೆಯ ಶತಮಾನದ ಸಾಹಿತ್ಯ ಗ್ರಂಥಗಳೂ ನಮಗೆ ಸಿಕ್ಕಿದ ಲಿಖಿತ ಪುರಾವೆಗಳಲ್ಲಿ ಅತ್ಯಂತ ಪ್ರಾಚೀನವಾದವುಗಳು. ಕ್ರಿ.ಶ. 450ರ ಹಲ್ಮಿಡಿ ಶಾಸನ ನಮಗೆ ಸಿಕ್ಕಿದ ಶಾಸನಗಳಲ್ಲಿ ಅತ್ಯಂತ ಪ್ರಾಚೀನವೆನಿಸಿದೆ. ಇದರ ಭಾಷೆಯನ್ನು ನೋಡಿದರೆ ಆ ಸಮಯಕ್ಕಾಗಲೇ ಕನ್ನಡದಲ್ಲಿ ಪ್ರೌಢವಾದ ಗದ್ಯದ ಬಳಕೆಯಿತ್ತೆಂದೂ ಸಂಸ್ಕೃತ ಭಾಷೆಯ ಪ್ರಭಾವ ಕನ್ನಡದ ಮೇಲೆ ಸಾಕಷ್ಟಾಗಿತ್ತೆಂದೂ ತಿಳಿಯಬಹುದು. ಆ ತರುವಾಯ ಸಿಕ್ಕಿದ ಒಂಬತ್ತು ಹತ್ತನೆಯ ಶತಮಾನಗಳ ಕವಿರಾಜಮಾರ್ಗ, ವಡ್ಡಾರಾಧನೆ, ಪಂಪಭಾರತ ಮುಂತಾದ ಗ್ರಂಥಗಳಲ್ಲಿ ಹಿಂದಿನ ಕವಿಗಳನ್ನು, ಕಾವ್ಯಪ್ರಕಾರಗಳನ್ನು ಸ್ಮರಿಸಿರುವುದರಿಂದಲೂ ಕವಿರಾಜಮಾರ್ಗಕಾರ ತನಗಿಂತ ಹಿಂದಿದ್ದ ಕನ್ನಡವನ್ನು ಹಳಗನ್ನಡ ಎಂದು ಕರೆದಿರುವುದರಿಂದಲೂ ಈ ಕವಿಗಳಿಗಿಂತಲೂ ಶಾಸನಕಾರರಿಗಿಂತಲೂ ಎಷ್ಟೋ ಶತಮಾನಗಳ ಹಿಂದೆಯೇ ಕನ್ನಡ ಸಾಹಿತ್ಯದಲ್ಲಿ ಸಾಕಷ್ಟು ಕೃಷಿಯಾಗಿತ್ತೆಂದು ನಿಸ್ಸಂದೇಹವಾಗಿ ಹೇಳಬಹುದು. ಹೀಗಾಗಿ ಕ್ರಿಸ್ತಶಕದ ಆರಂಭಕಾಲದಿಂದಲೇ ಕನ್ನಡ ಭಾಷೆ ಸುಸಂಸ್ಕೃತರಾದ ಕನ್ನಡಿಗರ ಆಡುನುಡಿಯಾಗಿತ್ತೆಂದೂ ಅವರು ಅದನ್ನು ಸಾಹಿತ್ಯ ಶಾಸನಾದಿಗಳನ್ನು ಬರೆಯಲು ಉಪಯೋಗಿಸುತ್ತಿದ್ದರೆಂದೂ ನಿರ್ವಿವಾದವಾಗಿ ಹೇಳಬಹುದು.

ನಮಗೆ ಸಿಕ್ಕಿರುವ ಪ್ರಾಚೀನ ದಾಖಲೆಗಳಲ್ಲಿಯೂ ಮುಂದಿನ ಕನ್ನಡ ಸಾಹಿತ್ಯದಲ್ಲಿಯೂ ಸಂಸ್ಕೃತದ ಪ್ರಭಾವ ತುಂಬ ಕಂಡುಬಂದರೂ ಚಾರಿತ್ರಿಕವಾಗಿ ಸಂಸ್ಕೃತ ಅಥವಾ ಇತರ ಆರ್ಯಭಾಷೆಗಳಿಂದ ಕನ್ನಡ ಜನಿಸಲಿಲ್ಲ. ಇದರ ಧ್ವನಿವ್ಯವಸ್ಥೆ, ವ್ಯಾಕರಣವ್ಯವಸ್ಥೆ ಮತ್ತು ವಾಕ್ಯರಚನಾಕ್ರಮ ಆರ್ಯಭಾಷೆಗಳಿಂದ ಭಿನ್ನವಾಗಿದ್ದು ತಮಿಳು ತೆಲುಗು ಇತ್ಯಾದಿ ಭಾಷೆಗಳೊಡನೆ ಹೋಲುವುದರಿಂದಲೇ ಈ ಭಾಷೆಗಳು ದ್ರಾವಿಡವೆಂಬ ಬೇರೆ ಬುಡಕಟ್ಟಿಗೆ ಸೇರಿದವು ಎಂದು ಹೇಳುವುದು. ಆರ್ಯಭಾಷೆಗಳಲ್ಲಿಲ್ಲದ ಹ್ರಸ್ವ ಎ, ಒ ಕಾರಗಳು, ಱ, ಳ, ೞ ವ್ಯಂಜನಗಳು ದ್ರಾವಿಡ ಭಾಷೆಗಳಲ್ಲಿವೆ. ಆರ್ಯಭಾಷೆಗಳಲ್ಲಿರುವ ಮಹಾಪ್ರಾಣಗಳೂ ಶ, ಷ ವ್ಯಂಜನಗಳೂ ಋ, ೠ, ಌ, ೡ ಸ್ವರಗಳೂ ದ್ರಾವಿಡ ಭಾಷೆಯ ಮೂಲ ಶಬ್ದಗಳಲ್ಲಿಲ್ಲ. ಸ್ವರಾಂತಪದಗಳ ಬಾಹುಲ್ಯ ಮತ್ತು ಶಬ್ದಾದಿಯ ವ್ಯಂಜನ ಗುಚ್ಛಗಳ ಅಭಾವವೂ ದ್ರಾವಿಡ ಭಾಷೆಗಳ ವೈಶಿಷ್ಟ್ಯವೆನ್ನಬಹುದು. ಆರ್ಯಭಾಷೆಗಳಲ್ಲಿರುವಂಥ ಲಿಂಗವ್ಯವಸ್ಥೆಯಾಗಲಿ, ಕರ್ಮಣಿ ಪ್ರಯೋಗವಾಗಲಿ, ವಿಶೇಷಣಗಳಲ್ಲಿ ಲಿಂಗವಿವಕ್ಷೆಯಾಗಲಿ, ತರತಮ ಭಾವವಾಗಲಿ ದ್ರಾವಿಡ ಭಾಷೆಗಳಲ್ಲಿಲ್ಲ. ದ್ರಾವಿಡ ಭಾಷೆಗಳಲ್ಲಿ ಆರ್ಯಭಾಷೆಗಳಲ್ಲಿಲ್ಲದಿರುವ ಕ್ರಿಯಾಪದದ ನಿಷೇಧ ರೂಪಗಳೂ ಕೆಲವು ವಿಶಿಷ್ಟ ಪ್ರಯೋಗದ ಕೃದ್ವಾಚಿಗಳೂ ಕ್ರಿಯಾಧಾತುವನ್ನು ನಾಮಪದವಾಗಿ ಉಪಯೋಗಿಸುವ ಸಂಪ್ರದಾಯವೂ ಉತ್ತಮ ಪುರುಷ ಬಹುವಚನ ಸರ್ವನಾಮದಲ್ಲಿ ಕೇಳುವವನನ್ನು ಸೇರಿಸಿ ಹೇಳುವ ಅಥವಾ ಬಿಟ್ಟು ಹೇಳುವ ಸಮಾವಿಷ್ಟ ಮತ್ತು ಅಸಮಾವಿಷ್ಟ ರೂಪಗಳೂ ಇವೆ. ಅಲ್ಲದೆ ಈ ಎರಡು ಬುಡಕಟ್ಟುಗಳಿಗೆ ಸೇರಿದ ಭಾಷೆಗಳ ಕ್ರಿಯಾರೂಪಗಳ ವ್ಯವಸ್ಥೆಯಲ್ಲಿಯೂ ನಾಮಪದಗಳ ವಿಭಕ್ತಿ ಪ್ರತ್ಯಯ ವ್ಯವಸ್ಥೆಯಲ್ಲಿಯೂ ತುಂಬ ವ್ಯತ್ಯಾಸಗಳಿವೆ. ಹೀಗೆ ರಚನಾತ್ಮಕವಾಗಿ ಆರ್ಯಭಾಷೆಗಳಿಗಿಂತ ಭಿನ್ನವಾಗಿದ್ದರೂ ಕೆಲವು ಚಾರಿತ್ರಿಕ ಹಾಗೂ ಸಾಮಾಜಿಕ ಕಾರಣಗಳಿಂದಾಗಿ ಎಷ್ಟೋ ಸಂಸ್ಕೃತ ಶಬ್ದಗಳು ಕನ್ನಡವೇ ಮೊದಲಾದ ದ್ರಾವಿಡ ಭಾಷೆಗಳಲ್ಲಿ ಸೇರಿಕೊಂಡಿವೆ. ಸಂಸ್ಕೃತದಷ್ಟು ದೊಡ್ಡ ಪ್ರಮಾಣದಲ್ಲಿ ಅಲ್ಲದಿದ್ದರೂ ದ್ರಾವಿಡ ಭಾಷೆಗಳೂ ಸಂಸ್ಕೃತದ ಭಂಡಾರಕ್ಕೆ ತಮ್ಮ ಕೊಡುಗೆಗಳನ್ನು ನೀಡಿವೆಯೆಂಬುದನ್ನು ಇಲ್ಲಿ ಸ್ಮರಿಸಬಹುದು.

ಹೀಗೆ ಸಂಸ್ಕೃತ ಹಾಗೂ ಇತರ ಆರ್ಯ ಭಾಷೆಗಳಿಂದ ಭಿನ್ನವಾದ ಈ ದ್ರಾವಿಡ ಭಾಷಾಪರಿವಾರಕ್ಕೆ ಸೇರಿದ ಇಪ್ಪತ್ತೈದಕ್ಕೂ ಮಿಕ್ಕಿದ ಭಾಷೆಗಳನ್ನು ಭೌಗೋಳಿಕವಾಗಿ ಮತ್ತು ಚಾರಿತ್ರಿಕವಾಗಿ ಮೂರು ವಿಭಾಗಗಳಾಗಿ ವಿಂಗಡಿಸಬಹುದು. ಬಿಹಾರದ ಕುಡುಖ್, ಮಾಲ್ಟೋ ಮತ್ತು ಬಲೂಚಿಸ್ತಾನದ ಬ್ರಾಹುಈ ಭಾಷೆಗಳನ್ನು ಉತ್ತರ ದ್ರಾವಿಡ ಭಾಷೆಗಳೆಂದೂ ಮಹಾರಾಷ್ಟ್ರ, ಮಧ್ಯಪ್ರದೇಶ, ಆಂಧ್ರ, ಒರಿಸ್ಸಗಳ ಕೊಲಾಮಿ, ಗೋಂಡಿ, ಪಾರ್ಜಿ, ತೆಲುಗು ಮುಂತಾದವನ್ನು ಮಧ್ಯದ್ರಾವಿಡ ಭಾಷೆಗಳೆಂದೂ ದಕ್ಷಿಣದ ತಮಿಳು, ಮಲೆಯಾಳ, ಕನ್ನಡ, ತುಳು ಇತ್ಯಾದಿಗಳನ್ನು ದಕ್ಷಿಣ ದ್ರಾವಿಡ ಭಾಷೆಗಳೆಂದೂ ವರ್ಗೀಕರಿಸಬಹುದು. ದ್ರಾವಿಡ ಭಾಷೆಗಳನ್ನಾಡುವ ಜನರ ಸಂಖ್ಯೆ ಸುಮಾರು ಹದಿಮೂರು ಕೋಟಿಯಿದೆ. ಅವರಲ್ಲಿ ಸುಮಾರು ಆರನೆಯ ಒಂದು ಭಾಗದಷ್ಟು ಜನಕ್ಕೆ ಕನ್ನಡ ಆಡುಮಾತಾಗಿದೆ ಎಂದು ಸ್ಥೂಲವಾಗಿ ಹೇಳಬಹುದು.

ಹೀಗೆ ಇಪ್ಪತ್ತೈದಕ್ಕೂ ಹೆಚ್ಚಾಗಿ ಒಡೆದ ದ್ರಾವಿಡ ಭಾಷಾಪ್ರಭೇದಗಳಲ್ಲೊಂದಾದ ಕನ್ನಡದ ಮುಖ್ಯ ಲಕ್ಷಣಗಳೇನು, ಅದು ತನ್ನ ಮೂಲದ್ರಾವಿಡದ ರೂಪದಿಂದ ಯಾವ ರೀತಿ ವ್ಯತ್ಯಾಸಗಳನ್ನು ಪಡೆದಿದೆ, ಆಮೇಲೆ ತನ್ನ ಎರಡು ಸಾವಿರ ವರ್ಷಗಳ ಸಾಹಿತ್ಯ ಹಾಗೂ ಆಡುನುಡಿಯ ಚರಿತ್ರೆಯಲ್ಲಿ ಏನೇನು ಬದಲಾವಣೆಗಳನ್ನು ಮಾಡಿಕೊಂಡಿದೆ, ಇದರ ಆಧುನಿಕ ಸ್ವರೂಪದ ವೈಶಿಷ್ಟ್ಯಗಳೇನು—ಎಂಬುದನ್ನು ಇಲ್ಲಿ ಸ್ಥೂಲವಾಗಿ ನಿರೂಪಿಸಬಹುದು.

ಎರಡು ಸಾವಿರ ವರ್ಷಗಳ ಇತಿಹಾಸವಿರುವ ಆಡುನುಡಿಯಲ್ಲಿ ನಡೆದ ಮಾರ್ಪಾಡುಗಳನ್ನು ಗುರುತಿಸಲು ಬೇರೆ ಬೇರೆ ಶತಮಾನಗಳ ಆಡುನುಡಿಯ ಸ್ವರೂಪಕ್ಕೆ ದಾಖಲೆಗಳಿಲ್ಲ. ಆದರೆ ಶಾಸನ ಹಾಗೂ ಸಾಹಿತ್ಯಗ್ರಂಥಗಳ ಸಹಾಯದಿಂದ ಲಿಖಿತ ಭಾಷೆಯಲ್ಲಿ ಯಾವ ರೀತಿಯ ಪರಿವರ್ತನೆ ನಡೆದಿದೆ ಎಂದು ತಿಳಿಯಬಹುದು. ಭಾಷೆಯ ವಿಕಾಸದ ಆಧಾರದ ಮೇಲೆ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಕೆಲವು ಯುಗಗಳಾಗಿ ವಿಂಗಡಿಸಬಹುದು—ಈ ವಿಭಜನೆಯಲ್ಲಿ ರೈಸ್, ಕಿಟ್ಟೆಲ್, ಬಿ.ಎಂ.ಶ್ರೀ. ಅವರಲ್ಲಿ ಮತಭೇದವಿದೆ. ಸಾಮಾನ್ಯವಾಗಿ ನಾವು ನಾಲ್ಕು ಕಾಲಗಳನ್ನು ಗುರುತಿಸಬಹುದು. ಐದು, ಆರು, ಏಳನೆಯ ಶತಮಾನಗಳ ವರೆಗಿನ ಶಾಸನದ ಭಾಷೆಯನ್ನು ಪೂರ್ವದ ಹಳಗನ್ನಡ ಎಂದೂ ಅಲ್ಲಿಂದ ಹದಿಮೂರನೆಯ ಶತಮಾನದ ವರೆಗಿನ ಜೈನ ಕವಿಗಳ ಕಾವ್ಯದ ಭಾಷೆಯನ್ನು ಹಳಗನ್ನಡ ಎಂದೂ ಅಲ್ಲಿಂದ ಹದಿನಾರು, ಹದಿನೇಳನೆಯ ಶತಮಾನಗಳ ವರೆಗಿನ ವೀರಶೈವ ಹಾಗೂ ವೈಷ್ಣವ ಸಾಹಿತ್ಯದ ಭಾಷೆಯನ್ನು ನಡುಗನ್ನಡವೆಂದೂ ಅಲ್ಲಿಂದೀಚೆಗಿನ ಸಾಹಿತ್ಯದ ಭಾಷೆಯನ್ನು ಹೊಸಗನ್ನಡ ಎಂದೂ ಹೇಳಬಹುದು. ಹೊಸಗನ್ನಡದ ಆಡುಮಾತನ್ನು ಭೌಗೋಲಿಕ ಹಾಗೂ ಸಾಮಾಜಿಕ ಪ್ರಭೇದಗಳಾಗಿ ವಿಂಗಡಿಸಿ ಅವುಗಳ ಸ್ವರೂಪವನ್ನು ತಿಳಿಯಬಹುದು.

ಕನ್ನಡಿಗರ ಆಡುನುಡಿ ಹಿಂದೆ ಹೇಗಿತ್ತೆಂಬ ಬಗ್ಗೆ ದಾಖಲೆಗಳು ಇಲ್ಲದಿರುವುದರಿಂದ ಲಿಖಿತಭಾಷೆಯ ಚಾರಿತ್ರಿಕ ಸ್ವರೂಪವನ್ನು ಮಾತ್ರ ತಿಳಿಯಲು ಸಾಧ್ಯ. ಲಿಖಿತ ಭಾಷೆಯ ಸ್ವರೂಪವನ್ನು ತಿಳಿಯಲು ಕನ್ನಡ ಕವಿಗಳ ಕಾವ್ಯಗಳನ್ನೂ ನಾಗವರ್ಮ, ಕೇಶಿರಾಜ, ಭಟ್ಟಾಕಳಂಕರು ಬರೆದ ವ್ಯಾಕರಣ ಗ್ರಂಥಗಳನ್ನೂ ಪರಿಶೀಲಿಸಬೇಕು. ಹನ್ನೆರಡನೆಯ ಶತಮಾನದ ನಾಗವರ್ಮ ಶಬ್ದಸ್ಮೃತಿ ಎಂಬ ವ್ಯಾಕರಣವನ್ನು ಕನ್ನಡದಲ್ಲಿಯೂ ಕರ್ಣಾಟಕ ಭಾಷಾಭೂಷಣ ಎಂಬ ವ್ಯಾಕರಣ ಗ್ರಂಥವನ್ನು ಸಂಸ್ಕೃತದಲ್ಲಿಯೂ ಬರೆದಿದ್ದಾನೆ. ಹದಿಮೂರನೆಯ ಶತಮಾನದ ಕೇಶಿರಾಜ ಶಬ್ದಮಣಿದರ್ಪಣವೆಂಬ ವ್ಯಾಕರಣ ಗ್ರಂಥವನ್ನು ಕನ್ನಡದಲ್ಲಿ ಬರೆದಿದ್ದಾನೆ. ಹದಿನೇಳನೆಯ ಶತಮಾನದ ಭಟ್ಟಾಕಳಂಕ ಬರೆದ ಶಬ್ದಾನುಶಾಸನ ಸಂಸ್ಕೃತದಲ್ಲಿದೆ. ಇವುಗಳಲ್ಲಿ ಶಬ್ದಮಣಿದರ್ಪಣವೇ ಎಲ್ಲಕ್ಕಿಂತ ಪ್ರಸಿದ್ಧವಾಗಿದೆ.

ಕನ್ನಡ ವರ್ಣಮಾಲೆಯಲ್ಲಿ ಒಟ್ಟು 47 ಅಕ್ಷರಗಳಿವೆ. ಸಂಸ್ಕೃತ ವರ್ಣಮಾಲೆಯ 52 ಅಕ್ಷರಗಳಲ್ಲಿ ಋ, ೠ, ಌ, ೡ, ಎಂಬ ಸ್ವರಗಳು, ಶ, ಷ, ಳ ಎಂಬ ವ್ಯಂಜನಗಳು ಮೂರು ಯೋಗವಾಹಗಳು ಸೇರಿ ಹತ್ತು ಅಕ್ಷರಗಳು ಕನ್ನಡದಲ್ಲಿಲ್ಲ. ಅವಕ್ಕೆ ಬದಲಾಗಿ ಎ, ಒ, ಱ, ೞ, ಕುಳ ಎಂಬ ಐದು ದೇಶೀಯ ಅಕ್ಷರಗಳನ್ನು ಸೇರಿಸಿದರೆ 47 ಅಕ್ಷರಗಳಾಗುತ್ತವೆ. ಆಗ ಕನ್ನಡ ವರ್ಣಮಾಲೆ ಈ ರೂಪ ತಾಳುತ್ತದೆ.

ಸ್ವರಗಳು : ಅ ಆ ಇ ಈ ಉ ಊ ಎ ಏ ಐ ಒ ಓ ಔ

ವ್ಯಂಜನಗಳು :

ವರ್ಗೀಯ : ಕ ಖ ಗ ಘ ಙ
ಚ ಛ ಜ ಝ ಞ
ಟ ಠ ಡ ಢ ಣ
ತ ಥ ದ ಧ ನ
ಪ ಫ ಬ ಭ ಮ

ಅವರ್ಗೀಯ : ಯ ರ ಲ ವ ಸ ಹ ಳ

ಅನುಸ್ವಾರ : ಂ

ಈ ನಲವತ್ತೇಳರಲ್ಲೂ ಹತ್ತು ಮಹಾಪ್ರಾಣಗಳು ಸಂಸ್ಕೃತ ತತ್ಸಮ ಪದಗಳಲ್ಲಿ ಮಾತ್ರ ಕಂಡುಬರುವುದರಿಂದ ಇವು ಕನ್ನಡದ ಜಾಯಮಾನಕ್ಕೆ ಸೇರಿದವುಗಳಲ್ಲ ಎನ್ನಬಹುದು. ಕನ್ನಡದ ಒಂದೆರಡು ಸಂಖ್ಯಾವಾಚಕ ಶಬ್ದಗಳಲ್ಲಿ ಹಾಗೂ ಅನುಕರಣ ವಾಚಕಗಳಲ್ಲಿ ಮಾತ್ರ ಮಹಾಪ್ರಾಣಗಳು ಕಾರಣಾಂತರದಿಂದ ಸೇರಿಹೋಗಿವೆ. ಐ ಔ ಗಳೂ ಕನ್ನಡಕ್ಕೆ ಅವಶ್ಯವಲ್ಲ. ಅವುಗಳನ್ನು ಅಯ್ ಅವ್ ಎಂದೂ ಬರೆಯಬಹುದು. ಸಂಸ್ಕೃತ ಶಬ್ದಗಳನ್ನು ಬರೆಯಲಿಕ್ಕಾಗಿ ಋ ಎಂಬ ಸ್ವರವನ್ನು ಶ, ಷ, ವಿಸರ್ಗ ಮುಂತಾದ ವ್ಯಂಜನಗಳನ್ನು ಸೇರಿಸಬೇಕಾಗುತ್ತದೆ. ಆಧುನಿಕ ಕನ್ನಡದಲ್ಲಿ

ಆಂಗ್ಲಭಾಷೆಯ ಪದಗಳೂ ಸೇರಿರುವುದರಿಂದ ಅವುಗಳನ್ನು ಬರೆಯಲಿಕ್ಕೆ ಫ಼ (F) ಜ಼ (Z) ಮುಂತಾದ ವರ್ಣಗಳನ್ನು ಕಲ್ಪಿಸಿಕೊಳ್ಳಬೇಕಾಗುತ್ತದೆ.

ಕನ್ನಡದ ನಾಮಪದಗಳಲ್ಲಿ ಲಿಂಗ, ವಚನ, ವಿಭಕ್ತಿಗಳ ವಿವಕ್ಷೆಯಿದೆ. ನಾಮಪದಕ್ಕೆ ಲಿಂಗ, ವಚನವನ್ನು ಸೂಚಿಸುವ ಪ್ರತ್ಯಯ ಮತ್ತು ವಿಭಕ್ತಿಪ್ರತ್ಯಯ ಸೇರುತ್ತದೆ. ಕನ್ನಡದಲ್ಲಿ ಪುಲ್ಲಿಂಗ, ಸ್ತ್ರೀಲಿಂಗ, ನಪುಂಸಕಲಿಂಗಗಳೆಂಬ ಮೂರು ಲಿಂಗಗಳೂ ಏಕವಚನ, ಬಹುವಚನಗಳೆಂಬ ಎರಡು ವಚನಗಳೂ ಐದು ವಿಭಕ್ತಿಗಳೂ ಇವೆ. ಉತ್ತಮಪುರುಷ ಹಾಗೂ ಮಧ್ಯಮಪುರುಷ ಸರ್ವನಾಮಗಳಲ್ಲಿ ಲಿಂಗ ವಿವಕ್ಷೆ ಇಲ್ಲ. ಪ್ರಥಮಪುರುಷ ಸರ್ವನಾಮ ಹಾಗೂ ಇತರ ನಾಮಪದಗಳಲ್ಲಿ ಮಹತ್, ಅಮಹತ್ ಅಥವಾ ಮೇಲು ಜಾತಿ ಮತ್ತು ಕೀಳು ಜಾತಿ ಎಂಬ ಭೇದವನ್ನು ಕಾಣಬಹುದು. ಮನುಷ್ಯವಾಚಕ ಮತ್ತು ವಿವೇಚನಾಶಕ್ತಿಯುಳ್ಳ ಜೀವಿಗಳನ್ನು ಹೇಳುವ ಶಬ್ದಗಳನ್ನು ಮೇಲು ಜಾತಿ ಎಂದೂ ಇತರ ಪ್ರಾಣಿವಾಚಕ ಹಾಗೂ ನಿರ್ಜೀವ ವಸ್ತುಗಳನ್ನು ದ್ಯೋತಿಸುವ ಶಬ್ದಗಳನ್ನು ಕೀಳು ಜಾತಿ ಎಂದೂ ಕರೆಯಬಹುದು. ಮಹತ್ ಶಬ್ದಗಳಲ್ಲಿ ನೈಸರ್ಗಿಕ ಲಿಂಗಭೇದಕ್ಕನುಸಾರವಾಗಿ ಪುಲ್ಲಿಂಗ, ಸ್ತ್ರೀಲಿಂಗವೆಂಬ ಭೇದವಿದೆ. ಅಮಹತ್ ಶಬ್ದ ಯಾವಾಗಲೂ ನಪುಂಸಕ ಲಿಂಗವಾಗಿರುತ್ತವೆ. ಪುಂಸ್ತ್ರೀಭೇದವನ್ನು ಏಕವಚನದಲ್ಲಿ ಅನ್ ಅಳ್ ಪ್ರತ್ಯಯಗಳೂ ಬಹುವಚನದಲ್ಲಿ ಅರ್, ಇರ್, ದಿರ್, ವಿರ್ ಪ್ರತ್ಯಯಗಳೂ ಸೂಚಿಸುತ್ತವೆ. ನಪುಂಸಕಲಿಂಗಸೂಚಕವಾಗಿ ಕೆಲವೊಮ್ಮೆ ಅಮ್ ಪ್ರತ್ಯಯವೂ ಬಹುವಚನದಲ್ಲಿ ಗಳ್ ಪ್ರತ್ಯಯವೂ ಸೇರುತ್ತವೆ. ಸರ್ವನಾಮದಲ್ಲಿ ನಪುಂಸಕ ಲಿಂಗ ಪ್ರತ್ಯಯಗಳು ಏಕವಚನ ಬಹುವಚನಗಳಲ್ಲಿ ಅನುಕ್ರಮವಾಗಿ ದು, ವು ಎಂದಿರುತ್ತವೆ. ಆಧುನಿಕ ಕನ್ನಡ ನಾಮಪದಗಳಲ್ಲಿ ಏಕವಚನ ಪ್ರತ್ಯಯವೂ ನಪುಂಸಕಲಿಂಗದಲ್ಲಿ ಬಹುವಚನ ಪ್ರತ್ಯಯವೂ ಲೋಪವಾಗುತ್ತವೆ.

ಕನ್ನಡದಲ್ಲಿ ಐದು ವಿಭಕ್ತಿಗಳಿವೆ. ಸಂಸ್ಕೃತದ ಪ್ರಥಮಾ ಮತ್ತು ಪಂಚಮೀ ಕನ್ನಡದಲ್ಲಿಲ್ಲ ಎನ್ನಬಹುದು. ಪ್ರಥಮಾ ವಿಭಕ್ತಿಯ ಅರ್ಥದಲ್ಲಿ ಪ್ರತ್ಯಯವಾವುದೂ ಬರದೆ ಪ್ರಕೃತಿಮಾತ್ರವೇ ಪ್ರಯೋಗದಲ್ಲಿದೆ. ಪಂಚಮೀವಿಭಕ್ತಿಯ ಅರ್ಥದಲ್ಲಿ ಪ್ರತ್ಯೇಕವಾದ ವಿಭಕ್ತಿಪ್ರತ್ಯಯವಿರದೆ ದೆಸೆ, ಅತ್ತ ಎಂಬ ಶಬ್ದಗಳನ್ನು ಸೇರಿಸಿ ಅದರ ಮೇಲೆ ತೃತೀಯಾ ವಿಭಕ್ತಿಪ್ರತ್ಯಯವಾದ ಇಂದವನ್ನು ಸೇರಿಸುವುದು ವಾಡಿಕೆ. ಹಳಗನ್ನಡದ ಮ್ ಎಂಬುದನ್ನು ಪ್ರಥಮಾವಿಭಕ್ತಿಪ್ರತ್ಯಯವೆಂದು ಪರಿಗಣಿಸಿದ್ದರೂ ಅದು ವಿಭಕ್ತಿಪ್ರತ್ಯಯವಲ್ಲವೆಂದೂ ಲಿಂಗಸೂಚಕವೆಂದೂ ಹೇಳಬಹುದು. ಹೊಸಗನ್ನಡದಲ್ಲಿ ಅದು ಕೂಡ ಲೋಪವಾಗಿದೆ. ದ್ವಿತೀಯಾವಿಭಕ್ತಿ ಪ್ರತ್ಯಯದ ರೂಪ ಹಳಗನ್ನಡದಲ್ಲಿ ಅಂ, ಅಂ ಎಂದೂ ನಡುಗನ್ನಡದಲ್ಲಿ ಅಂ, ಅನು ಎಂದೂ ಆಗುತ್ತದೆ. ತೃತೀಯಾ ವಿಭಕ್ತಿಪ್ರತ್ಯಯವನ್ನು ಹಳಗನ್ನಡ ನಡುಗನ್ನಡದಲ್ಲಿ ಇಂ, ಇಂದಂ ಎಂದೂ ಹೊಸಗನ್ನಡದಲ್ಲಿ ಇಂದ ಎಂದೂ ಕಾಣುತ್ತೇವೆ. ಚತುರ್ಥಿ ವಿಭಕ್ತಿಪ್ರತ್ಯಯ ಕೆ ಅಥವಾ ಗೆ. ಷಷ್ಠೀವಿಭಕ್ತಿಪ್ರತ್ಯಯ ಅ. ಸಪ್ತಮೀವಿಭಕ್ತಿಪ್ರತ್ಯಯ ಒಳ್, ಒಳಗೆ ಅಥವಾ ಅಲ್ಲಿ. ಈ ವಿಭಕ್ತಿಪ್ರತ್ಯಯಗಳೆಲ್ಲ ಮೊದಲು ಸ್ವತಂತ್ರ ಶಬ್ದಗಳಾಗಿದ್ದುವೆಂದೂ ಕಾಲಕ್ರಮದಲ್ಲಿ ಪ್ರತ್ಯಯಗಳಾಗಿ ಮಾರ್ಪಟ್ಟುವೆಂದೂ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಉತ್ತಮಪುರುಷ ಸರ್ವನಾಮಗಳು ಹಳಗನ್ನಡದಲ್ಲಿ ಆನ್ ಆಮ್ ಎಂದಿದ್ದು ನಡುಗನ್ನಡದ ಕಾಲಕ್ಕೆ ನಾನ್ ನಾಮ್ ಆದುವು. ಮಧ್ಯಮಪುರುಷ ಸರ್ವನಾಮಗಳು ನೀನ್ ಮತ್ತು ನೀಮ್. ಪ್ರಥಮಪುರುಷ ಸರ್ವನಾಮಗಳು ಅ, ಇ, ಉ ಎಂಬ ಸ್ಥಾನನಿರ್ದೇಶಿಗಳಿಗೆ ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗ ಪ್ರತ್ಯಯಗಳು ಸೇರಿ ಅವನ್ ಇವನ್ ಅದು ಇತ್ಯಾದಿ ರೂಪಗಳು ಸಿದ್ಧಿಸಿವೆ. ಅ ಎಂಬುದು ದೂರವನ್ನೂ ಇ ಎಂಬುದು ಸಮೀಪವನ್ನೂ ಉ ಎಂಬುದು ಎರಡಕ್ಕೂ ಮಧ್ಯವನ್ನೂ ನಿರ್ದೇಶಿಸತ್ತವೆ. ಉ ಕಾರದಿಂದ ಪ್ರಾರಂಭವಾಗುವ ಸರ್ವನಾಮಗಳು ಹಳಗನ್ನಡದಲ್ಲಿ ಕೆಲವೆಡೆ ಮಾತ್ರ ಪ್ರಯೋಗದಲ್ಲಿದ್ದು ಆಮೇಲೆ ಕಾಣಬರುವುದಿಲ್ಲ. ಉದಾ : ಆತ ಈತ ಊತ, ಆಕೆ ಈಕೆ ಊಕೆ, ಅದು ಇದು ಉದು. ಪ್ರಶ್ನಾರ್ಥಕ ಸರ್ವನಾಮಗಳು ಆವನ್ ಆವಳ್ ಇತ್ಯಾದಿಗಳಾಗಿದ್ದು ಹೊಸಗನ್ನಡದಲ್ಲಿ ಅವುಗಳ ಆದಿ ಆ ಕಾರದ ಮುಂದೆ ಯ ಕಾರ ಬಂದು ಯಾವನ್ ಯಾವನು ಇತ್ಯಾದಿಗಳಾಗಿವೆ.

ಕನ್ನಡ ಭಾಷೆಯ ಕ್ರಿಯಾಪದಗಳು ಗುಣವಾಚಕ ವಿಶೇಷಣಗಳಾಗಿಯೂ ನಾಮಪದಗಳಾಗಿಯೂ ಉಪಯೋಗಿಸಲ್ಪಡುತ್ತವೆ. ಕ್ರಿಯಾಪದಕ್ಕೆ ಹತ್ತುವ ಪುರುಷ–ವಚನಸೂಚಕ ಪ್ರತ್ಯಯಗಳೂ ಸರ್ವನಾಮಗಳ ರೂಪಗಳೇ ಎಂಬುದನ್ನು ಗಮನಿಸಬಹುದು. ಉತ್ತಮಪುರುಷ ಏಕವಚನ ಎನ್, ಎನು ಮತ್ತು ಎ, ಬಹುವಚನ ಎಮ್, ಎವು ; ಮಧ್ಯಮ ಪುರುಷ ಏಕವಚನ ಅಯ್, ಎ ; ಬಹುವಚನ ಇರ್, ಇರಿ; ಪ್ರಥಮಪುರುಷ ಏಕವಚನ ಅನ್, ಅಳ್. ಬಹುವಚನ ಅರ್; ನಪುಂಸಕ ಲಿಂಗ ಏಕವಚನ ಉದು, ಉತ್ತು, ಬಹುವಚನ ಉವು. ಈ ಎಲ್ಲ ಪ್ರತ್ಯಯಗಳೂ ಮೇಲೆ ಹೇಳಿದ ಸರ್ವನಾಮಗಳ ಸವೆದ ರೂಪಗಳೆಂದು ತೋರಿಸುವುದು ಕಷ್ಟವಲ್ಲ. ಈ ಪ್ರತ್ಯಯಗಳನ್ನು ಧಾತುವಿನ ಕೃದ್ವಾಚಿಗಳಿಗೆ ಸೇರಿಸಿ ಬೇರೆ ಬೇರೆ ಕ್ರಿಯಾರೂಪಗಳನ್ನು ಸಿದ್ಧಿಸಿಕೊಳ್ಳಬಹುದು. ಕನ್ನಡದ ಕ್ರಿಯಾಪದಗಳಲ್ಲಿ ಭೂತ ಮತ್ತು ಭವಿಷ್ಯದ್ವರ್ತಮಾನ ಎಂಬ ಎರಡೇ ಕಾಲಗಳಿವೆ. ಭೂತಕಾಲದಲ್ಲಿ ಧಾತುವಿಗೆ ದ ಪ್ರತ್ಯಯ ಮತ್ತು ಭವಿಷ್ಯತ್ಕಾಲದಲ್ಲಿ ಪ, ಬ ಅಥವಾ ವ ಪ್ರತ್ಯಯ ಸೇರುತ್ತವೆ. ಹಳಗನ್ನಡದ ವರ್ತಮಾನ ಕಾಲ ಪ್ರತ್ಯಯದಲ್ಲಿ ಕಾಣಬರುವ ದಪ್ಪ ಅಥವಾ ದಪ ಪ್ರತ್ಯಯದಲ್ಲಿನ ಅಪ್ಪ ಅಪ ರೂಪ ಆಗು ಧಾತುವಿನ ಭವಿಷ್ಯದ್ರೂಪ. ಹೀಗೆ ಸಿದ್ಧಿಸಿದ ರೂಪ ವರ್ತಮಾನ ಹಾಗೂ ಭವಿಷ್ಯದರ್ಥವನ್ನೂ ಸಂದೇಹಾರ್ಥವನ್ನೂ ಸೂಚಿಸುತ್ತಿತ್ತು. ನಡುಗನ್ನಡದಲ್ಲಿ ಈ ದಪ್ಪ ದಹವಾಯಿತು. ಹೊಸಗನ್ನಡದಲ್ಲಿ ಈ ರೀತಿಯ ವರ್ತಮಾನಕಾಲ ರೂಪ ಮಾಯವಾಗಿ ಉತ್ತ ಎನ್ನುವ ಕೃದ್ವಾಚಿಗೆ ಪುರುಷವಾಚಕ ಪ್ರತ್ಯಯಗಳನ್ನು ಸೇರಿಸಿ ಮಾಡಿದ ಹೊಸತೊಂದು ರೀತಿಯ ವರ್ತಮಾನಕಾಲ ರೂಪಗಳು ಪ್ರಚಾರಕ್ಕೆ ಬಂದುವು. ಆದರೆ ಈ ಉತ್ತ ಪ್ರತ್ಯಯಕ್ಕೆ ಸೇರುವ ಪುರುಷವಾಚಕ ಪ್ರತ್ಯಯಗಳಲ್ಲಿ ಹಲಕೆಲವು ಮಾರ್ಪಾಡುಗಳಾಗಿವೆ ಎಂಬುದನ್ನು ಗಮನಿಸಬಹುದು.

ಧಾತುವಿಗೆ ಆ ಅಥವಾ ಅದೆ ಪ್ರತ್ಯಯ ಸೇರುವುದರಿಂದಲೂ ಕ್ರಿಯಾಪದಕ್ಕೆ ಅಲ್ಲ ಇಲ್ಲ ರೂಪಗಳನ್ನು ಸೇರಿಸುವುದರಿಂದಲೂ ನಿಷೇಧಕ್ರಿಯೆ ಸಿದ್ಧಿಸುತ್ತದೆ. ಧಾತುವಿನ ಮೂಲರೂಪ ವಿಧ್ಯರ್ಥಕ ಮಧ್ಯಮಪುರುಷ ಏಕವಚನವಾಗಿ ಬಳಸಲ್ಪಡುತ್ತದೆ. ಇದರ ಬಹುವಚನ ರೂಪ ಸಿದ್ಧಿಸಿಲಿಕ್ಕೆ ಹಳಗಳನ್ನಡದಲ್ಲಿ ಇಮ್ ಪ್ರತ್ಯಯವೂ ನಡುಗನ್ನಡ ಹೊಸಗನ್ನಡಗಳಲ್ಲಿ ಇ, ಇರಿ ಪ್ರತ್ಯಯಗಳೂ ಸೇರುತ್ತವೆ. ವಿಧ್ಯರ್ಥಕ ಉತ್ತಮಪುರುಷ ಬಹುವಚನ ಸಿದ್ಧಿಸಲಿಕ್ಕೆ ಹಳಗನ್ನಡದಲ್ಲಿ ವಮ್ ಅಥವಾ ಅಮ್ ಪ್ರತ್ಯಯವನ್ನೂ ಹೊಸಗನ್ನಡದಲ್ಲಿ ಓಣ ಪ್ರತ್ಯಯವನ್ನೂ ಸೇರಿಸುತ್ತಾರೆ. ಪ್ರಥಮಪುರುಷ ರೂಪ ಸಿದ್ಧಿಸಲಿಕ್ಕೆ ಹಳಗನ್ನಡದಲ್ಲಿ ಕೆ, ಗೆ ಪ್ರತ್ಯಯವನ್ನೂ ಹೊಸಗನ್ನಡದಲ್ಲಿ ಅಲಿ ಪ್ರತ್ಯಯವನ್ನೂ ಸೇರಿಸುತ್ತಾರೆ. ವರ್ತಮಾನಕಾಲ ವಾಚಕ ಕೃದ್ವಾಚಿ ಅಥವಾ ಅಸಂಪೂರ್ಣ ಕ್ರಿಯೆ ಧಾತುವಿಗೆ ಉತ್ ಸೇರಿಸುವುದರಿಂದಲೂ ಭೂತಕಾಲವಾಚಕ ಅಸಂಪೂರ್ಣ ಕ್ರಿಯೆ ದು ಅಥವಾ ಮ ಸೇರುವುದರಿಂದಲೂ ಸಿದ್ಧಿಸುತ್ತವೆ. ಉಕಾರಾಂತ ಧಾತುಗಳಿಗೆ ಮಾತ್ರ ದು ಅಥವಾ ತು ಪ್ರತ್ಯಯ ಬರುವುದಿಲ್ಲ. ಅದಕ್ಕೆ ಬದಲಾಗಿ ಧಾತುವಿನ ಅಂತ್ಯ ಉಕಾರ ಲೋಪವಾಗಿ ಇ ಕಾರ ಸೇರುತ್ತದೆ (ಮಾಡಿ, ಹೋಗಿ—ಇತ್ಯಾದಿ).

ಕನ್ನಡ ಭಾಷೆಯ ಧ್ವನಿ ಮತ್ತು ವ್ಯಾಕರಣ ವ್ಯವಸ್ಥೆಯ ಸ್ಥೂಲವಾದ ಪರಿಚಯವನ್ನು ಮಾಡಿಕೊಂಡ ಮೇಲೆ ಈಗ ಈ ಭಾಷೆ ಮೂಲದ್ರಾವಿಡದಿಂದ ಬೇರ್ಪಟ್ಟಾಗ ಏನೇನು ಬದಲಾವಣೆಗಳು ನಡೆದಿವೆ ಎಂದು ಪರಿಶೀಲಿಸೋಣ. ಕನ್ನಡದಲ್ಲಿ ಮೂಲದ್ರಾವಿಡದಲ್ಲಿದ್ದಂತೆ ಅ ಇ ಉ ಎ ಒ ಎಂಬ ಐದು ಹ್ರಸ್ವಸ್ವರ್ವಗಳೂ ಅವುಗಳ ದೀರ್ಘರೂಪಗಳೂ ಇವೆ. ಆದರೆ ಅವು ಬರಬಹುದಾದ ಸನ್ನಿವೇಶಗಳಲ್ಲಿ ಕೆಲವು ವ್ಯತ್ಯಾಸಗಳನ್ನು ಕಾಣಬಹುದು. ಮೂಲದ್ರಾವಿಡದಲ್ಲಿ ಪದಾಂತ್ಯದಲ್ಲಿ ಅ ಇ ಉ ಗಳು ಮಾತ್ರ ಬರಬಲ್ಲವು. ಆದರೆ ಕನ್ನಡದಲ್ಲಿ ಪದಾಂತ್ಯದಲ್ಲಿ ಎ ಕೂಡ ಬರಬಹುದು. ಮೂಲದ್ರಾವಿಡದಲ್ಲಿ ಶಬ್ದದ ಆದ್ಯಕ್ಷರದಲ್ಲಿ ಬರುವ ಇ ಉ ಕಾರಗಳು ಕನ್ನಡದಲ್ಲಿ ಅವುಗಳ ಮುಂದೆ ಒಂದು ವ್ಯಂಜನವಿದ್ದು ಆಮೇಲೆ ಪ್ರಕೃತಿ ಸಾಧಕವಾದ ಮತ್ತು ಅ ಕಾರದಿಂದ ಪ್ರಾರಂಭವಾಗುವ ಪ್ರತ್ಯಯ ಪರವಾದಾಗ ಅನುಕ್ರಮವಾಗಿ ಎ, ಒ ಕಾರಗಳಾಗುತ್ರವೆ. ಉದಾ: ಇರ್—ಎರಡು, ಸುಡು—ಸೊಡರು ಇತ್ಯಾದಿ. ಇದೇ ರೀತಿ ಇಯಲ್ ಉಡಲ್ ಮುಂತಾದ ಶಬ್ದಗಳ ಆದಿ ಇ, ಉ ಕಾರಗಳು ಎ, ಒ ಕಾರಗಳಾಗಿ ಎಲೆ, ಒಡಲು ಎಂದಾಗಿರುವುದನ್ನು ಗಮನಿಸಬಹುದು.

ಮೂಲ ದ್ರಾವಿಡದಲ್ಲಿ ಪ, ತ, ಟ, ಚ, ಕ ಮತ್ತು ಱ (ವರ್ತ್ಸ್ಯ ಸ್ಪರ್ಶ) ಎಂಬ ಆರು ಸ್ಪರ್ಶ ವ್ಯಂಜನಗಳೂ ಮ, ನ, ಣ, ಞ ಎಂಬ ನಾಲ್ಕು ಅನುನಾಸಿಕಗಳೂ ರ ಎಂಬ ರೇಫವೂ ಲ, ಳ ಎಂಬ ಎರಡು ಪಾರ್ಶ್ವಿಕಗಳೂ ವ, ೞ, ಯ ಎಂಬ ಮೂರು ಅಂತಸ್ಥಗಳೂ ಸೇರಿ ಹದಿನಾರು ವ್ಯಂಜನಗಳಿದ್ದುವು. (ಇದರ ಜೊತೆಗೆ ಆಯ್ದಂ ಎಂಬ ಮತ್ತೊಂದು ಧ್ವನಿಯೂ ಇತ್ತೆಂಬ ಕಲ್ಪನೆಗೂ ಅವಕಾಶವಿದೆ.) ಕನ್ನಡದಲ್ಲಿ ಪ, ತ, ಟ, ಚ, ಕ ಎಂಬ ಐದು ಸ್ಪರ್ಶಗಳು ಘೋಷ ಮತ್ತು ಅಘೋಷಗಳಾಗಿ ಒಡೆದು ಹತ್ತು ಸ್ಪರ್ಶಗಳಾಗಿವೆ. ಮೂಲ ದ್ರಾವಿಡದಲ್ಲಿ ಈಗ ತಮಿಳಿನಲ್ಲಿರುವಂತೆ ಈ ಘೋಷ–ಅಘೋಷಭೇದ ಸನ್ನಿವೇಶಬದ್ಧ ಮಾತ್ರವಾಗಿತ್ತು. ಕನ್ನಡದಲ್ಲಿ ಪ. ತ. ಟ. ಚ, ಕ ಇವುಗಳಲ್ಲದೆ ಬ. ದ. ಡ. ಜ. ಗ ಇವುಗಳೂ ಪ್ರತ್ಯೇಕ ಧ್ವನಿಮಗಳಾದುವು. ವರ್ತ್ಸ್ಯ ಸ್ಪರ್ಶವೆನ್ನಲಾದ ಱ ಎಂಬ ವಿಶಿಷ್ಟ ಧ್ವನಿ ಸ್ವರಮಧ್ಯದಲ್ಲಿ ಶಕಟರೇಫವಾಗಿಯೂ ಉಳಿದೆಡೆಗಳಲ್ಲಿ ಮುಂದೆ ಬರುವ ಧ್ವನಿಗೆ ಅನುಸಾರವಾಗಿ ಕ, ದ ಅಥವಾ ರ ಆಗಿಯೂ ಬದಲಾವಣೆ ಹೊಂದಿದೆ. ಮೂಲ ದ್ರಾವಿಡದಲ್ಲಿ ಪದಮಧ್ಯದಲ್ಲಿ ಬರುವ ಸ್ಪರ್ಶಗಳು ಕನ್ನಡದಲ್ಲಿ ಘೋಷ ಸ್ಪರ್ಶಗಳಾಗಿಯೇ ಉಳಿದಿವೆ. ಆದರೆ ಪದಮಧ್ಯದ ಚ ಕಾರ ಸ ಕಾರವಾಗಿಯೂ ಪ ಕಾರ ವ ಕಾರ

ವಾಗಿಯೂ ಪರಿಣಮಿಸಿವೆ ಎಂದು ಬೀಸು. ಕವುಚು ಮುಂತಾದ ಉದಾಹರಣೆಗಳಿಂದ ತಿಳಿಯಬಹುದು. ಅನುನಾಸಿಕಕ್ಕೆ ಪರವಾಗಿ ಬರುವ ಸ್ಪರ್ಶಗಳೂ ಮೂಲದ್ರಾವಿಡದಂತೆ ಕನ್ನಡದಲ್ಲಿಯೂ ಘೋಷವಾಗಿಯೇ ಉಳಿದಿವೆ. ಆದರೆ ಱ ಕಾರ ಮಾತ್ರ ಈ ಸನ್ನಿವೇಶದಲ್ಲಿ ದ ಕಾರವಾಗಿದೆ. ಒನ್ಱು ಎಂಬುದು ಒಂದು ಎಂದಾಗಿದೆ. ಮೂಲ ದ್ರಾವಿಡದ ಸ್ಪರ್ಶವ್ಯಂಜನಗಳಲ್ಲಿ ಪ, ತ, ಚ ಮತ್ತು ಕ ಗಳು ಮಾತ್ರ ಶಬ್ದದ ಆದಿಯಲ್ಲಿ ಬಂದು ಅಘೋಷಗಳಾಗಿ ಉಚ್ಚರಿಸಲ್ಪಡುತ್ತಿದ್ದುವು. ಕನ್ನಡದಲ್ಲಿಯೂ ಇವುಗಳಲ್ಲಿ ಹೆಚ್ಚಿನವು ಅಘೋಷಗಳಾಗಿಯೇ ಉಳಿದರೂ ಕೆಲವು ಮಾತ್ರ ಘೋಷಗಳಾಗಿಯೂ ಬದಲಾವಣೆಗೊಂಡಿವೆ. ಉದಾಹರಣೆಗೆ ದಟ್ಟ, ಜಾರು, ಗಂಡು ಮುಂತಾದ ಶಬ್ದಗಳನ್ನು ಗಮನಿಸಬಹುದು. ಆದಿ ಚ ಕಾರ ಮಾತ್ರ ಕೆಲವೆಡೆ ಸ ಕಾರವಾಗಿಯೂ (ಸುಡು, ಸಾಲು ಇತ್ಯಾದಿ) ಕೆಲವೆಡೆ ಲೋಪವಾಗಿಯೂ ಪರಿಣಾಮ ಹೊಂದಿದೆ (ಉಪ್ಪು, ಆರು ಇತ್ಯಾದಿ ಶಬ್ದಗಳಲ್ಲಿ ಆದಿ ಚ ಕಾರ ವಿತ್ತೆಂದು ವಿದ್ವಾಂಸರ ಅಭಿಪ್ರಾಯ). ಮೂಲದ ದ್ವಿಸ್ಪರ್ಶಗಳು ಕನ್ನಡದಲ್ಲಿ ದೀರ್ಘಸ್ವರಕ್ಕೆ ಪರವಾಗಿ ಬಂದಾಗ ದ್ವಿತ್ವವನ್ನು ಕಳೆದುಕೊಂಡಿವೆ. ಹೀಗಾಗಿ ಆಟ್ಟಂ ಇದ್ದುದು ಆಟ ಆಗಿದೆ. ವರ್ತ್ಸ್ಯ ಸ್ಪರ್ಶವಾದ ಱ ಮೂಲದಲ್ಲಿ ದ್ವಿತ್ವರೂಪದಲ್ಲಿದ್ದುದು ಕನ್ನಡಕ್ಕೆ ಬರುವಾಗ ಹ್ರಸ್ವಸ್ವರದ ಪರದಲ್ಲಿ ದ್ವಿತ್ವ ತ ಕಾರವಾಗಿಯೂ ದೀರ್ಘಸ್ವರಕ್ಕೆ ಪರವಾದಾಗ ಏಕ ತ ಕಾರವಾಗಿಯೂ ಪರಿಣಮಿಸಿದೆ. ಎಱ್ಱು ಎಂದಿದ್ದುದು ಎತ್ತು ಎಂದೂ ಏಱ್ಱು ಎಂದಿದ್ದುದು ಏತ ಎಂದೂ ಆಗಿವೆ. ಮೂಲ ಯ ಕಾರ ಶಬ್ದಾದಿಯಲ್ಲಿ ಲೋಪವಾಗಿದೆ. ಯಾನಯ್ ಇದ್ದುದು ಆನೆಯಾಗಿದೆ. ಈ ಉದಾಹರಣೆಯಿಂದಲೇ ಶಬ್ದಾಂತ್ಯದಲ್ಲಿರುವ ಯ ಕಾರ ಲೋಪವಾಗಿ ಅದಕ್ಕೆ ಹಿಂದಿನ ಅ ಕಾರ ಎ ಕಾರವಾಗಿದೆ ಎಂದೂ ತಿಳಿಯಬಹುದು.

ಮೂಲದ್ರಾವಿಡದ ಕ್ರಿಯಾಧಾತುಗಳು ಏಕಾಕ್ಷರಿಗಳಾಗಿದ್ದು ಕನ್ನಡದಲ್ಲಿ ಅವುಗಳಲ್ಲಿ ಕೆಲವು ಏಕಾಕ್ಷರಿಗಳಾಗಿಯೇ ಉಳಿದು ಇನ್ನು ಕೆಲವು ಉಚ್ಚಾರಣಾಸೌಕರ್ಯಕ್ಕಾಗಿ ಸೇರಿದ ಉ ಕಾರದಿಂದಾಗಿಯೂ ಕೆಲವು ಪ್ರಕೃತಿಸಾಧಕ ಪ್ರತ್ಯಯಗಳನ್ನು ಸೇರಿಸಿದ್ದರಿಂದಲೂ ಎರಡು ಅಥವಾ ಮೂರು ಅಕ್ಷರಗಳನ್ನು ಪಡೆದಿವೆ. ಏಕಾಕ್ಷರಿಗಳಿಗೆ ಉದಾಹರಣೆಯಾಗಿ ತಿನ್ ಆಳ್ ಎಂಬ ಧಾತುಗಳನ್ನೂ ದ್ವ್ಯಕ್ಷರಿಗೆ ಆಡು ಕಟ್ಟು ಇತ್ಯಾದಿಗಳನ್ನೂ ತ್ರ್ಯಕ್ಷರಿಗೆ ತಿರುಗು ತುಱುಕು ಇತ್ಯಾದಿಗಳನ್ನೂ ನೋಡಬಹುದು. ಮೂಲದ್ರಾವಿಡ ಕ್ರಿಯಾಧಾತುಗಳಲ್ಲಿ ಸಕರ್ಮಕ ಅಕರ್ಮಕದ ವಿವಕ್ಷೆ ಇತ್ತೆಂದೂ ಅಕರ್ಮಕ ಪ್ರಕೃತಿಯಲ್ಲಿರುವ ಅನುನಾಸಿಕಯುಕ್ತ ಸ್ಪರ್ಶವ್ಯಂಜನ ಸಕರ್ಮಕವಾದಾಗ ದ್ವಿಸ್ಪರ್ಶವಾಗುತ್ತದೆಯೆಂದೂ ಹೇಳಬಹುದು. ಈ ಪ್ರವೃತ್ತಿ ಕನ್ನಡದಲ್ಲಿ ಸುಂದು, ಸುತ್ತು ಮುಂತಾದ ಕೆಲವು ಧಾತುಗಳಲ್ಲಿ ಉಳಿದುಕೊಂಡಿದ್ದರೂ ಹೆಚ್ಚಿನ ಕಡೆ ಈ ಭೇದ ಕಂಡುಬರುವುದಿಲ್ಲ. ಕ್ರಿಯಾಧಾತುಗಳಿಗೆ ಮೂಲದ್ರಾವಿಡದಲ್ಲಿ ಭೂತ ಮತ್ತು ಭವಿಷ್ಯದರ್ಥವನ್ನು ಸೂಚಿಸುವ ಎರಡು ಪ್ರತ್ಯಯಗಳಿದ್ದಿರಬೇಕು. ಅವುಗಳಲ್ಲಿ ಭವಿಷ್ಯತ್‌ಸೂಚಕ ಪ್ರತ್ಯಯ ಕನ್ನಡದಲ್ಲಿ ವ, ಪ ಮತ್ತು ಬ ಎಂದು ಪರಿವರ್ತನೆ ಹೊಂದಿದೆ. ಭೂತಕಾಲಸೂಚಕ ಪ್ರತ್ಯಯ ಮೂಲದ್ರಾವಿಡದಲ್ಲಿ ನ್ತ ಎಂದಿದ್ದು ಕನ್ನಡದಲ್ಲಿ ಅನುನಾಸಿಕ ಲೋಪವಾಗಿ ದ ಎಂಬುದಾಗಿ ಪರಿಣಾಮಗೊಂಡು ಈ ದಕಾರ ಸನ್ನಿವೇಶಕ್ಕನುಸಾರವಾಗಿ ದ, ಡ, ಟ, ತ, ಕ ಎಂದು ಬೇರೆ ಬೇರೆ ರೂಪದಲ್ಲಿ ಬರುತ್ತದೆ. ಕನ್ನಡದಲ್ಲಿ ಪ್ರತ್ಯೇಕವಾದ ವರ್ತಮಾನಕಾಲ ಹುಟ್ಟಿಕೊಂಡ ಬಗೆಯನ್ನು ಆಗಲೇ ಸೂಚಿಸಿದೆ. ಉತ್ತಮಪುರುಷ ಬಹುವಚನ ಸರ್ವನಾಮದಲ್ಲಿ ಸಮಾವಿಷ್ಟ (ಯಾರೊಡನೆ ಮಾತನಾಡುತ್ತಿರುವೆವೋ ಅವರನ್ನು ಸೇರಿಸಿ) ಮತ್ತು ಅಸಮಾವಿಷ್ಟ (ಮಾತನಾಡುತ್ತಿರುವವರನ್ನು ಬಿಟ್ಟು) ಎಂಬ ಎರಡು ರೂಪಗಳಿದ್ದು ಕನ್ನಡದಲ್ಲಿ ಈ ವ್ಯತ್ಯಾಸ ಲೋಪವಾಗಿದೆ.

ಮೂಲದ್ರಾವಿಡದ ಉಪಭಾಷೆಗಳಿಂದ ಕನ್ನಡ ಬೇರ್ಪಟ್ಟು ಸ್ವತಂತ್ರ ಭಾಷೆಯಾಗುವ ಕಾಲಕ್ಕೆ ನಡೆದ ಕೆಲವು ಮುಖ್ಯವಾದ ಪರಿವರ್ತನೆಗಳನ್ನು ಸ್ಥೂಲವಾಗಿ ಹಿಂದೆ ನಿರೂಪಿಸಿದೆ. ಇನ್ನು ಈ ಭಾಷೆಯ ಪೂರ್ವದ ಹಳಗನ್ನಡ, ಹಳಗನ್ನಡ, ನಡುಗನ್ನಡ, ಹೊಸಗನ್ನಡಗಳೆಂಬ ನಾಲ್ಕು ಹಂತಗಳಲ್ಲಿ ನಡೆದ ಕೆಲವು ಪ್ರಮುಖವಾದ ಬದಲಾವಣೆಗಳನ್ನು ಪರಿಶೀಲಿಸಬಹುದು.

ಶಾಸನಗಳಲ್ಲಿ ಕಾಣಬರುವ ಪೂರ್ವದ ಹಳಗನ್ನಡ ಪಂಪ, ಕವಿರಾಜಮಾರ್ಗಾದಿ ಗ್ರಂಥಗಳಲ್ಲಿ ಕಾಣಬರುವ ಕನ್ನಡಕ್ಕಿಂತ ಎಷ್ಟೋ ಭಿನ್ನವಾಗಿದೆ. ಅದರಲ್ಲಿ ಮೂಲ ವಕಾರ ವಕಾರವಾಗಿಯೇ ಉಳಿದಿದೆ (ಮುಂದಿನ ಶತಮಾನಗಳಲ್ಲಿ ವಕಾರ ಬಕಾರವಾಗಿದೆ) ವಿತ್ತು–ಬಿತ್ತು, ವೆಟ್ಟ–ಬೆಟ್ಟ ಮುಂತಾದ ಉದಾಹರಣೆಗಳನ್ನು ನೋಡಬಹುದು. ಮೂಲದ್ರಾವಿಡದ ಆದ್ಯಕ್ಷರದಲ್ಲಿ ಎ ಕಾರ ಇಲ್ಲವೆ ಒ ಕಾರವಿದ್ದು ಅದಕ್ಕೆ ಪರವಾಗಿ ಇ ಕಾರ ಇಲ್ಲವೆ ಉ ಕಾರ ಬಂದರೆ ಶಾಸನಗಳ ಕನ್ನಡದ ಎ ಕಾರ ಒ ಕಾರಗಳಲ್ಲಿ ಯಾವ ಬದಲಾವಣೆಯೂ ಆಗುವುದಿಲ್ಲ. ಆದರೆ ಮುಂದಿನ ಶತಮಾನಗಳ ಕನ್ನಡದಲ್ಲಿ ಎ ಒ ಕಾರಗಳು ಇ ಉ ಕಾರಗಳಾಗಿ ಮಾರ್ಪಡುತ್ತವೆ. ಶಾಸನದ ಕನ್ನಡದ ಎಱುದು, ಕೆಡುಗೆ ಶಬ್ದಗಳು ಹಳಗನ್ನಡದಲ್ಲಿ ಇಱುದು ಕಿಡುಗೆ ಎಂದಾಗುತ್ತವೆ. ಪೂರ್ವದ ಹಳಗನ್ನಡದ ಪ್ರಥಮಪುರುಷ ಪ್ರತ್ಯಯ, ನಿಷೇಧಾರ್ಥ ಪ್ರತ್ಯಯ, ದ್ವಿತೀಯಾವಿಭಕ್ತಿ ಪ್ರತ್ಯಯ, ಷಷ್ಠೀವಿಭಕ್ತಿ ಪ್ರತ್ಯಯ ಮುಂತಾದುವುಗಳಲ್ಲಿ ದೀರ್ಘರೂಪವಿರುವುದನ್ನು ಸ್ವರ್ಗಾಗ್ರಮಾನೇರಿದಾನ್, ವೆಳಿಯಾದೆ ಕೆಡುಗೆ, ಪ್ರಾಸಾದಾಂತರವಾನ್, ಭಟಾರರಾ ಪತ್ತಿ ಮುಂತಾದ ಉದಾಹರಣೆಗಳಿಂದ ಕಾಣಬಹುದು. ಸಪ್ತಮೀವಿಭಕ್ತಿ ಪ್ರತ್ಯಯ ಈ ಕಾಲದಲ್ಲಿ ಉಳ್ ಎಂಬ ರೂಪದಲ್ಲಿತ್ತು.

ಪೂರ್ವದ ಹಳಗನ್ನಡದ ಕಾಲವನ್ನು ದಾಟಿ ಪಂಪರನ್ನಾದಿ ಕವಿಗಳ ಹಳಗನ್ನಡದ ಕಾಲಕ್ಕೆ ಬಂದಾಗ ವ ಕಾರ ಬ ಕಾರವಾಗುವುದೂ ಮುಂದಿನ ಅಕ್ಷರದಲ್ಲಿ ಇ, ಉ ಎಂಬ ಉಚ್ಚಸ್ವರ ಬಂದಾಗ ಎ ಒ ಎಂಬ ಮಧ್ಯಸ್ವರ ಉಚ್ಚಸ್ವರವಾಗುವುದೂ ಕಂಡುಬರುತ್ತದೆ. ಈ ಕಾಲದಲ್ಲಿ ೞ, ಱಗಳ ಸ್ವರೂಪದಲ್ಲೇನೂ ಬದಲಾವಣೆಯಾದದ್ದು ಕಂಡುಬರುವುದಿಲ್ಲ. ಆದರೆ ಜನರ ಉಚ್ಚಾರಣೆಯಲ್ಲಿ ಳ ಮತ್ತು ೞಗಳ ನಡುವಿನ ಭೇದ ಕಡಿಮೆಯಾಗಿತ್ತೆಂದು ತೋರುತ್ತದೆ. ನಡುಗನ್ನಡಕ್ಕೆ ಬರುವಾಗ ೞ ಮತ್ತು ಱಗಳು ಜನರ ಉಚ್ಚಾರಣೆಯಿಂದ ಲೋಪವಾಯಿತೆನ್ನಬಹುದು. ೞಕಾರ ಬರೆಹದಲ್ಲಿಯೂ ಲೋಪವಾಯಿತು. ಆದರೆ ಱಕಾರ ಮಾತ್ರ ಬರೆಹದಲ್ಲಿ ಸುಮಾರು ಹದಿನಾರನೆಯ ಶತಮಾನದ ವರೆಗೆ ಬಳಕೆಯಲ್ಲಿದ್ದುದು ಕಂಡುಬರುತ್ತದೆ. ಪ ಕಾರ ಹ ಕಾರವಾಗಿ ಮಾರ್ಪಾಟಾಯಿತು. ಹೊಸಗನ್ನಡದಲ್ಲಿ ವ್ಯಂಜನ ಗುಚ್ಛಗಳಲ್ಲಿರುವ ರ, ೞ ಮತ್ತು ಱ ಕಾರಗಳು ಲೋಪವಾಗಿವೆ. ಈ ಪ್ರವೃತ್ತಿ ಕೇಶಿರಾಜನ ಕಾಲದಲ್ಲಿಯೇ ಇತ್ತೆಂದು ಊಹಿಸಬಹುದು. ದೀರ್ಘಸ್ವರಕ್ಕೆ ಪರದಲ್ಲಿರುವಾಗ ಇವು ಲೋಪವಾಗುತ್ತವೆ. ಹ್ರಸ್ವಸ್ವರಕ್ಕೆ ಪರದಲ್ಲಿದ್ದಾಗ ಈ ರ ೞಗಳು ಲೋಪವಾಗಿ ಅವುಗಳ ಪರದಲ್ಲಿರುವ ವ್ಯಂಜನ ದ್ವಿತ್ವವನ್ನು ಪಡೆಯುತ್ತದೆ. ಉದಾ ; ಬಾರ್ಚು–ಬಾಚು, ಸೊರ್ಕು–ಸೊಕ್ಕು. ಅನುನಾಸಿಕಯುಕ್ತವಾದ ವ್ಯಂಜನ ಗುಚ್ಛಗಳು ದೀರ್ಘಸ್ವರಕ್ಕೆ ಪರವಾದಾಗ ಅಥವಾ ಶಬ್ದದ ಎರಡನೆಯ ಹ್ರಸ್ವ ಸ್ವರಕ್ಕೆ ಪರವಾದಾಗ ಅನುನಾಸಿಕ ಲೋಪವಾಗುತ್ತದೆ. ಉದಾ : ನಾಂಟು–ನಾಟು, ಕಲಂಕು–ಕಲಕು ಇತ್ಯಾದಿ. ಹೊಸಗನ್ನಡದಲ್ಲಿ ಕ್ರಿಯಾಪದದ ಭವಿಷ್ಯತ್‌ಕಾಲ ರೂಪಗಳೂ ನಿಷೇಧಾರ್ಥರೂಪಗಳೂ ಲೋಪವಾಗಿವೆ ಎನ್ನಬಹುದು. ಹಳಗನ್ನಡದ ದಪ್ಪ ಪ್ರತ್ಯಯಯುಕ್ತವಾದ ವರ್ತಮಾನಕಾಲ ರೂಪಗಳು ಲೋಪವಾಗಿ ಅದರ ಸ್ಥಾನದಲ್ಲಿ ಹೊಸದೊಂದು ರೀತಿಯ ವರ್ತಮಾನಕಾಲ ರೂಪ ಹುಟ್ಟಿದ್ದರ ಬಗ್ಗೆ ಹಿಂದೆಯೇ ಪ್ರಸ್ತಾಪಿಸಿದೆ.

ಆಧುನಿಕ ಕನ್ನಡದ ಆಡುನುಡಿಗಳ ಸಾಮಾಜಿಕ ಮತ್ತು ಭೌಗೋಲಿಕ ಪ್ರಭೇದಗಳನ್ನು ಪರಿಶೀಲಿಸುವಾಗ ಬಡಗರು ಮತ್ತು ಸೋಲಿಗರು ಬಳಸುವ ಎರಡು ಉಪಭಾಷೆಗಳು ಮೊದಲು ನಮ್ಮ ಗಮನ ಸೆಳೆಯುತ್ತವೆ. ಇವು ಕನ್ನಡದ ಇತರ ಪ್ರಭೇದಗಳಿಗಿಂತ ತೀರ ಭಿನ್ನವಾಗಿವೆ. ಪ್ರತಿವೇಷ್ಟಿತ ಸ್ವರ (ರೆಟ್ರೊಫ್ಲೆಕ್ಸ್ ವೊವೆಲ್ಸ್) ಗಳಿರುವುದು ಈ ಭಾಷೆಗಳ ವೈಶಿಷ್ಟ್ಯ. ಕನ್ನಡದಲ್ಲಿ ಲೋಪವಾದ ಮಧ್ಯಮಪುರುಷ ಸಮಾವಿಷ್ಟ ಮತ್ತು ಅಸಮಾವಿಷ್ಟ ಉತ್ತಮಪುರುಷ ಬಹುವಚನ ಸರ್ವನಾಮಗಳು ಬಡಗದಲ್ಲಿವೆ. ಕ್ರಿಯಾಧಾತುಗಳಲ್ಲಿ ಸಕರ್ಮಕ–ಅಕರ್ಮಕ ವಿವಕ್ಷೆಯೂ ಅದರಲ್ಲಿದೆ. ಹೊಸಗನ್ನಡದಲ್ಲಿ ಲೋಪವಾದ ರ ಱ ವ್ಯತ್ಯಾಸ ಸೋಲಿಗರ ಕನ್ನಡದಲ್ಲಿ ಕಾಣಬರುತ್ತದೆ. ಳ ಕಾರಕ್ಕೆ ಕೆಲವೆಡೆ ೞ ಕಾರದ ಉಚ್ಚಾರಣೆಯೂ ಅದರಲ್ಲಿ ಕಂಡುಬರುತ್ತದೆ.

ಆಧುನಿಕ ಕನ್ನಡದ ಆಡುಮಾತಿನ ಇತರ ಪ್ರಭೇದಗಳನ್ನು ಭೌಗೋಲಿಕವಾಗಿ ಕರಾವಳಿ ಕನ್ನಡ ಮತ್ತು ಒಳನಾಡಿನ ಕನ್ನಡವೆಂದು ವಿಭಜಿಸಬಹುದು. ಒಳನಾಡಿನ ಕನ್ನಡವನ್ನು ಉತ್ತರದ (ಧಾರವಾಡ ಕಡೆಯ) ಕನ್ನಡ ಮತ್ತು ದಕ್ಷಿಣದ (ಮೈಸೂರು ಕಡೆಯ) ಕನ್ನಡವೆಂದು ಸ್ಥೂಲವಾಗಿ ವಿಭಜಿಸಬಹುದು. ಕರಾವಳಿ ಪ್ರದೇಶದ ಗೌಡ, ಹವ್ಯಕ, ಕೋಟ, ಹಾಲಕ್ಕಿ ಮುಂತಾದ ಪ್ರಭೇದಗಳಲ್ಲಿ ಒಳನಾಡಿನ ಕನ್ನಡಕ್ಕಿಂತ ತುಂಬ ಬೇರೆಯಾದ ಮತ್ತು ಹಳಗನ್ನಡಕ್ಕೆ ಸಮೀಪವಾದ ರೂಪಗಳು ಕಂಡುಬರುತ್ತವೆ. ಮೇಲೆ ವಿವರಿಸಿದಂತೆ ಎ, ಒ ಕಾರಗಳು ಇ, ಉ ಕಾರಗಳಾಗುವುದಾಗಲಿ ದೀರ್ಘಸ್ವರಕ್ಕೆ ಪರವಾಗಿ ಬರುವ ಅನುನಾಸಿಕ ಮತ್ತು ಸ್ಪರ್ಶಗುಚ್ಛದಿಂದ ಅನುನಾಸಿಕ ಲೋಪವಾಗುವುದಾಗಲಿ ಈ ಪ್ರಭೇದದಲ್ಲಿ ಕಂಡುಬರುವುದಿಲ್ಲ. ಉದಾಹರಣೆಗೆ ಕೆಮಿ (ಕಿವಿ) ಕೊದಿ (ಕುದಿ) ದಾಂಟು (ದಾಟು) ಶಬ್ದಗಳನ್ನು ನೋಡಬಹುದು. ಕ್ರಿಯಾಪದದ ಭವಿಷ್ಯತ್ ಮತ್ತು ನಿಷೇಧಾರ್ಥಕ ರೂಪಗಳು ನಷ್ಟವಾಗಿಲ್ಲ. ಮೂಲದ್ರಾವಿಡದ ಸಮಾವಿಷ್ಟ ಅಸಮಾವಿಷ್ಟ ಭೇದ ಸರ್ವನಾಮದಲ್ಲಿ ಉಳಿದಿದೆ. ಒಳನಾಡಿನ ಕನ್ನಡದಂತೆ ವರ್ತಮಾನ ಮತ್ತು ಭೂತಕಾಲಗಳಿಗೆ ಪ್ರತ್ಯೇಕವಾದ ಪುರುಷವಾಚಕ ಪ್ರತ್ಯಯಗಳಿಲ್ಲ. (ಕುಡಿತ್ತೆ ವರ್ತಮಾನಕಾಲ, ಕುಡುದೆ ಭೂತಕಾಲ). ಒಳನಾಡಿನ ಕನ್ನಡದ ಉತ್ತರ ಮತ್ತು ದಕ್ಷಿಣ ಪ್ರಭೇದಗಳಲ್ಲಿನ ವೈಶಿಷ್ಟ್ಯಗಳಲ್ಲಿ ಪ್ರಮುಖವಾದುವು ಹೀಗಿವೆ: ಉತ್ತರದ ಪ್ರಭೇದದಲ್ಲಿ ಎ ಕಾರಾಂತ ಶಬ್ದಗಳು ಇ ಕಾರಾಂತವಾಗಿವೆ (ಮನೆ–ಮನಿ): ಉಕಾರಾಂತ ಶಬ್ದಗಳು

ಅ ಕಾರಾಂತವಾಗಿವೆ (ಉಗುರು–ಉಗುರ). ಅಕಾರ ಉತ್ತರದ ಪ್ರಭೇದದಲ್ಲಿ ಸಂವೃತ ಅಕಾರ (ಉಚ್ಚ ಅಕಾರ) ಮತ್ತು ವಿವೃತ ಅಕಾರಗಳಾಗಿ (ನಿಮ್ನ ಅಕಾರ) ಒಡೆದಿದೆ. ಅಲ್ಲಿನ ಚ ಕಾರ ಜ ಕಾರಗಳು ಪಶ್ಚಸ್ವರಗಳಾದ ಉ, ಒ, ಅ ಕಾರಗಳ ಮುಂದೆ ಬಂದಾಗ ವತ್ಸರ್ಯಗಳಾಗಿ (ತ್ಸ ದ್ಸ ಗಳಂತೆ) ಉಚ್ಚರಿಸಲ್ಪಟ್ಟು ಬೇರೆ ಕಡೆ ತಾಲವ್ಯಗಳಾಗಿ ಉಚ್ಚರಿಸಲ್ಪಡುತ್ತವೆ. ಸಪ್ತಮೀ ವಿಭಕ್ತಿ ಪ್ರತ್ಯಯ ಉತ್ತರದಲ್ಲಿ ಅಗ ಎಂದೂ ದಕ್ಷಿಣದಲ್ಲಿ ಅಲ್ಲಿ ಎಂದೂ ಬಳಕೆಯಲ್ಲಿದೆ. ಉತ್ತರದ ಪ್ರಭೇದಗಳಲ್ಲಿ ಶಬ್ದಾದಿಯ ಹ ಕಾರ ಲೋಪವಾಗುವುದಿಲ್ಲ. ದಕ್ಷಿಣದ ಹೆಚ್ಚಿನ ಸಾಮಾಜಿಕ ಪ್ರಭೇದಗಳಲ್ಲಿ ಹ ಕಾರ ಲೋಪವಾದದ್ದು ಕಂಡುಬರುತ್ತದೆ.

ಹೀಗೆ ಕರಾವಳಿ ಕನ್ನಡ, ಉತ್ತರ ಕರ್ಣಾಟಕದ ಕನ್ನಡ ದಕ್ಷಿಣ ಕರ್ಣಾಟಕ ಅಥವಾ ಮೈಸೂರಿನ ಕನ್ನಡ ಎಂದು ಸ್ಥೂಲವಾಗಿ ಹೇಳಬಹುದಷ್ಟೆ, ಈ ಒಂದೊಂದು ಪ್ರದೇಶದಲ್ಲಿಯೂ ಭೌಗೋಲಿಕ ಹಾಗೂ ಸಾಮಾಜಿಕವಾಗಿ ಹತ್ತು ಹಲವಾರು ಪ್ರಭೇದಗಳನ್ನೂ ಗುರತಿಸಬಹುದು. ಕೆಲವೇ ಮೈಲಿಗಳ ಅಂತರದಲ್ಲಿ ಬಳಕೆಯಲ್ಲಿರುವ ಆಡುನುಡಿಗಳಲ್ಲಿ ವ್ಯತ್ಯಾಸಗಳು ಕಂಡುಬರುತ್ತವೆ. ಹಾಗೆಯೇ ಒಂದೇ ಹಳ್ಳಿಯಲ್ಲಿ ಬಳಕೆಯಲ್ಲಿರುವ ಬೇರೆ ಬೇರೆ ಜಾತಿ ಪಂಗಡಗಳ ಭಾಷೆಯಲ್ಲಿ ಗಮನಾರ್ಹವಾದ ವ್ಯತ್ಯಾಸಗಳು ಇವೆಯೆಂಬುದು ಜನಸಾಮಾನ್ಯರಿಗೂ ತಿಳಿದೇ ಇದೆ. ಬ್ರಾಹ್ಮಣರ ಭಾಷೆ, ಗೌಡರ ಭಾಷೆ, ಹರಿಜನರ ಭಾಷೆ ಎಂದು ಮುಂತಾಗಿ ಹಲವಾರು ಪ್ರಭೇದಗಳನ್ನು ಗಮನಿಸಬಹುದು. ಈ ಎಲ್ಲ ಪ್ರಭೇದಗಳ ಅಧ್ಯಯನ ಇನ್ನೂ ನಡೆದಿಲ್ಲವಾದರೂ ಕೆಲವು ಪ್ರಮುಖ ಪ್ರದೇಶ ಹಾಗೂ ಪಂಗಡಗಳ ಆಡುನುಡಿಯ ವೈಶಿಷ್ಟಗಳನ್ನು ಇಲ್ಲಿ ಗುರುತಿಸಬಹುದು.

ಕರಾವಳಿಯ ಕನ್ನಡ ಪ್ರಭೇದಗಳಲ್ಲಿ ಅನೇಕ ರೀತಿಯ ಸಾದೃಶ್ಯಗಳಿದ್ದರೂ ದಕ್ಷಿಣ ಕನ್ನಡದ ಹವ್ಯಕ, ಗೌಡ, ಕುಂದಾಪುರ ಮತ್ತು ಕೋಟ ಹಾಗೂ ಉತ್ತರ ಕನ್ನಡದ ಹಾಲಕ್ಕಿ ಮುಂತಾದ ಪ್ರಭೇದಗಳು ತಮ್ಮದೇ ಆದ ವೈಶಿಷ್ಟ್ಯಗಳಿಂದ ಕೂಡಿವೆ. ಗೌಡ ಮತ್ತು ಹವ್ಯಕದಲ್ಲಿ ಗಳು ಎನ್ನುವ ವಚನ ಪ್ರತ್ಯಯದ ಳು ಲೋಪವಾಗಿ ಗ ಮಾತ್ರ ಉಳಿದಿದೆ. ಈ ಪ್ರಭೇದಗಳಲ್ಲಿ ದ್ವಿತೀಯ ಮತ್ತು ಷಷ್ಠೀ ವಿಭಕ್ತಿ ಪ್ರತ್ಯಯಗಳು ಒಂದೇ ಆಗಿವೆ. ಗೌಡ ಕನ್ನಡದಲ್ಲಿ ಸ. ಶ. ಷ ಕಾರಗಳು ಒಂದುಗೂಡಿ ಸಕಾರ ಮಾತ್ರ ಉಳಿದರೆ ಹಾಲಕ್ಕಿಯಲ್ಲಿ ಚ–ಸಕಾರಗಳೂ ನ–ಣ ಗಳೂ ಲ–ಳಗಳೂ ಒಂದುಗೂಡಿವೆ. ಕುಂದಾಪುರದ ಕೆಲವು ಪ್ರಭೇದಗಳ ಕ್ರಿಯಾಪದಗಳ ಪ್ರಥಮ ಪುರುಷ ಏಕವಚನದಲ್ಲಿ ಪುಲ್ಲಿಂಗ ಸ್ತ್ರೀಲಿಂಗ ನಪುಂಸಕಲಿಂಗ ವಿವಕ್ಷೆಯೂ ಬಹುವಚನದಲ್ಲಿ ಪುಂ–ಸ್ತ್ರೀ ಮತ್ತು ನಂಪುಂಸಕವೆಂಬ ಎರಡು ರೂಪಗಳೂ ಇವೆ. ಆದರೆ ಇತರ ಪ್ರಭೇದಗಳಲ್ಲಿ ಪುಲ್ಲಿಂಗ ಸ್ತ್ರೀಲಿಂಗ ವ್ಯತ್ಯಾಸ ಕಂಡುಬರದೆ ಪುಲ್ಲಿಂಗ ಮತ್ತು ಪುಲ್ಲಿಂಗೇತರ ಎಂಬ ವಿವಕ್ಷೆಯಿದೆ. ಬಹುವಚನದಲ್ಲಿ ಈ ವಿವಕ್ಷೆಯೂ ಇಲ್ಲದೆ ಒಂದೇ ರೂಪವಿರುವುದು ಗೌಡ, ಹಾಲಕ್ಕಿ ಮುಂತಾದ ಪ್ರಭೇದಗಳಲ್ಲಿ ಕಂಡುಬರುತ್ತದೆ. ಉದಾ: ಗೌಡ ಕನ್ನಡ ಅವು ಬಂದೊ (ಅವರು ಬಂದರು, ಅವು ಬಂದುವು) ಈ ರೂಪವೇ ಉತ್ತಮ ಮತ್ತು ಮಧ್ಯಮ ಪುರುಷ ಬಹುವಚನಗಳಲ್ಲಿಯೂ ಕಂಡು ಬರುತ್ತದೆ. ಕರಾವಳಿ ಪ್ರಭೇದಗಳ ಕೆಲವು ವಿಶಿಷ್ಟ ಶಬ್ದಗಳೂ ಪ್ರಯೋಗಗಳೂ ಈ ರೀತಿ ಇವೆ—ಹೌದಾ, ಮಾರಾಯಾ, ಉಂಟು. (ಇದೆ ಎಂಬ ಅರ್ಥದಲ್ಲಿ) ಆಯ್ತು (ಆಗಲಿ) ಕೂಗು (ಅಳು) ಕ್ರಯ (ಬೆಲೆ) ಮದ್ದು (ಔಷಧಿ) ಅತ್ಲಾಗಿ (ಆ ಕಡೆ) ತೋರ(ದಪ್ಪಗೆ) ಸಪುರ (ತೆಳ್ಳಗೆ) ಪದಾರ್ಥ(ಪಲ್ಯ) ಮಾಡುವ (ಮಾಡೋಣ) ಸೈಕಲ್ ಬಿಡು (ಸೈಕಲ್ ಹೊಡೆ) ಬೀಡಿ ಎಳೆ (ಬೀಡಿ ಸೇದು) ನಿದ್ದೆ ತೆಗಿ (ನಿದ್ದೆ ಮಾಡು) ಕ್ರಯಕ್ಕೆ ತಕ್ಕೊಳ್ಳು (ಕೊಂಡುಕೊಳ್ಳು)

ಒಳನಾಡಿನ ಕನ್ನಡದ ಉತ್ತರದ ಪ್ರಭೇದಗಳಲ್ಲಿ ಧಾರವಾಡ, ಬೆಳಗಾಂ, ಬಿಜಾಪುರ, ಬೀದರ್–ಗುಲ್ಬರ್ಗ, ಬಳ್ಳಾರಿ ಮುಂತಾದ ಪ್ರಭೇದಗಳು ಪ್ರಮುಖವಾದವು. ಧಾರವಾಡದಲ್ಲಿ ಚತುರ್ಥಿ ವಿಭಕ್ತಿಯ ರೂಪ ಗ ಎಂದಿದ್ದರೆ ಬೆಳಗಾಮಿನಲ್ಲಿ ಗಿ ಎಂದಿದೆ. ಉ ಕಾರಾಂತ ಶಬ್ದಗಳು ಧಾರವಾಡದಲ್ಲಿ ಆ ಕಾರಾಂತವಾದರೆ ಬೆಳಗಾಮಿನಲ್ಲಿ ಅ ಕಾರಾಂತವಾಗುತ್ತವೆ. ಹಾಲಾ (ಹಾಲು) ಮೊಸರಾ (ಮೊಸರು) ಇತ್ಯಾದಿ. ಅಲ್ಲಿನ ಕ್ರಿಯಾ ಪದಗಳಲ್ಲಿ ಹಾಕಿಳು, ಮಾಡಿಳು, ತರತೇತಿ, ತಂದೇತಿ, ತೈಂದಾನ, ಹೌಂದು. ಮಾಡತೀನ, ತಿನ್‌ಲಾಕ್ (ತಿನ್ನಲಿಕ್ಕೆ) ಮುಂತಾದ ರೂಪಗಳು ಕಂಡುಬರುತ್ತವೆ. ಇಲ್ಲಿನ ಕನ್ನಡದಲ್ಲಿ ಧಾರವಾಡ ಕನ್ನಡಕ್ಕಿಂತಲೂ ಮರಾಠೀ ಪ್ರಭಾವ ಜಾಸ್ತಿಯಿದ್ದು ಮರಾಠೀ–ಕನ್ನಡ ಮಿಶ್ರಿತ ರೂಪಗಳು ತುಂಬ ಕಂಡುಬರುತ್ತವೆ. ಉದಾ : ವಾಚಾಸತ್ಯಾನ (ಓದುತ್ತಾನೆ) ಲಾಜಾಸ್ತಾಳ (ನಾಚುತ್ತಾಳೆ). ಬಿಜಾಪುರದ ಕನ್ನಡದಲ್ಲಿ ಅಲ್ಲಿ, ಇಲ್ಲಿ, ಎಲ್ಲಿ ಮುಂತಾದ ಕಡೆ ಕಲ್ಲಿ ಕಿಲ್ಲಿ ಕೆಲ್ಲಿ ರೂಪಗಳೂ ಹಾಗೆ, ಹೀಗೆ ಎಂಬ ಕಡೆ ಖಾಂಗ, ಖೀಂಗ ರೂಪಗಳೂ ಕಂಡುಬರುತ್ತವೆ. ಇರು ಧಾತುವಿನ ವರ್ತಮಾನ ಕಾಲ ರೂಪಗಳಾಗಿ ಹೀನಿ, ಹೀವಿ, ಹೀದಿ, ಹೀರಿ, ಹಾನ, ಹಾಳ, ಹಾರ, ಅರ ಅವ ರೂಪಗಳೂ ಕುಡಿತುನು, ಕುಡೀತಾತಿ ಮುಂತಾದ ಕ್ರಿಯಾರೂಪಗಳೂ ಕುಡೀವಲ್‌ನಿ, ಕುಡೀವಲ್ಲವಿ ಮುಂತಾದ ನಿಷೇಧಾರ್ಥ ಕ್ರಿಯಾಪದಗಳೂ ಈ ಪ್ರಭೇದದ ವೈಶಿಷ್ಟ್ಯಗಳು. ಧಾರವಾಡ, ಬೆಳಗಾಂ ಬಿಜಾಪುರದ ಹೆಚ್ಚಿನ ಪ್ರಭೇದಗಳಲ್ಲಿ ಚತುರ್ಥೀ ವಿಭಕ್ತಿ ದ್ವಿತೀಯ ವಿಭಕ್ತಿಯ ಅರ್ಥದಲ್ಲಿ ಉಪಯೋಗಿಸಲ್ಪಡುವುದರಿಂದ ಅವನಿಗೆ ಕರಿ, ಅವನಿಗೆ ನೋಡು ಮುಂತಾದ ರೂಪಗಳು ದೊರೆಯುತ್ತವೆ. ಈ ಪ್ರಭೇದಗಳ ಶಬ್ದಭಂಡಾರದಲ್ಲಿ ಮರಾಠೀ ಶಬ್ದಗಳು ಅಧಿಕ ಸಂಖ್ಯೆಯಲ್ಲಿ ತುಂಬಿವೆ. ಸಂಖ್ಯಾವಾಚಿ ಶಬ್ದಗಳಲ್ಲಿಯೂ ಮರಾಠಿ ಶಬ್ದಗಳೇ ಜಾಸ್ತಿ. ಅಲ್ಲಿಯ ಜನರಿಗೆ ಸಾಡೇ ದಹಾ ಬಡಿತು ಎಂದರೆ ಅರ್ಥವಾಗುತ್ತದೆಯೇ ಹೊರತು ಹತ್ತೂವರೆ ಗಂಟೆ ಆಯಿತು ಎಂದರೆ ಅರ್ಥವಾಗುವುದಿಲ್ಲ. ನೆಟ್ಟಗಿಲ್ಲ (ಚೆನ್ನಾಗಿಲ್ಲ) ಅಗದಿ (ತುಂಬ) ಛಲೋ (ಚೆನ್ನಾಗಿ) ಜಳಕ (ಸ್ನಾನ) ಗಂಗಾಳ (ತಟ್ಟೆ) ಖರೆ (ನಿಜ) ಮಂದಿ (ಜನ) ಅವ್ವ (ಅಮ್ಮ) ಪಗಾರ (ಸಂಬಳ) ಒದರು (ಹೇಳು) ಹಿಂದಾಕಡೆ (ಆಮೇಲೆ) ಲಗೂನೆ (ಬೇಗನೆ) ಮುಂತಾದ ಶಬ್ದಗಳನ್ನು ಈ ಪ್ರಭೇದಗಳನ್ನಾಡುವ ಜನರಿಂದ ಯಾವಾಗಲೂ ಕೇಳಬಹುದು.

ಧಾರವಾಡ, ಬೆಳಗಾಂ ಕಡೆಯ ಭಾಷೆಯ ಮೇಲೆ ಮರಾಠಿಯ ಪ್ರಭಾವ ಬಿದ್ದಂತೆಯೇ ಗುಲ್ಬರ್ಗ, ಬೀದರ್ ಕಡೆಯ ಆಡುನುಡಿಯಲ್ಲಿ ಉರ್ದು ಭಾಷೆಯ ಪ್ರಭಾವವನ್ನು ಗುರುತಿಸಬಹುದು. ಉರ್ದು ಭಾಷೆ ಅಲ್ಲಿನ ಶಬ್ದಭಂಡಾರದ ಮೇಲೆ ಮಾತ್ರವಲ್ಲದೆ ವಾಕ್ಯರಚನೆಯ ಮೇಲೂ ತನ್ನ ಪ್ರಭಾವವನ್ನು ಬೀರಿದೆ. ಪ್ರಧಾನ ವಾಕ್ಯಾಂಶವನ್ನು ಮೊದಲು ಹೇಳಿ ಕಿ ಎಂಬ ಸಂಯೋಜಕಾವ್ಯಯವನ್ನು ಸೇರಿಸಿ ಉದ್ಧೃತ ವಾಕ್ಯಾಂಶವನ್ನು ಹೇಳುವ ಉರ್ದು ಭಾಷೆಯ ಪದ್ಧತಿ ಇಲ್ಲಿನ ಕನ್ನಡದಲ್ಲಿಯೂ ಕಂಡುಬರುತ್ತದೆ. ಉದಾ : ಅವ ಅಂದ ಕಿ ನಾನ್ ಭೀ ನಿಮಿ್ ಸರಿ ಬರ್ತೆ (ಉಸ್ ನೇ ಕಹಾ ಕೀ ಮೈಭೀ ತುಮ್ಹಾರೇ ಸಾಥ್ ಆವೂಂಗಾ) ಉರ್ದು—ಕನ್ನಡ ಮಿಶ್ರಿತ ಸಮಾಸ ಶಬ್ದಗಳು, ಉರ್ದು ಶಬ್ದಕ್ಕೆ ಕನ್ನಡ ಇಸು ಪ್ರತ್ಯಯ ಅಥವಾ ಮಾಡು ಸೇರಿಸಿ ಮಾಡಿದ ಧಾತುಗಳು ಇಲ್ಲಿ ಸಾಕಷ್ಟು ಸಂಖ್ಯೆಯಲ್ಲಿ ಕಂಡುಬರುತ್ತವೆ. ಥೋಲ್ ಮಂದಿ (ತುಂಬ ಮಂದಿ) ಬಾಜೀಮನಿ (ನೆರೆಮನೆ) ಹಠಾಯಿತು (ದೂರಮಾಡು) ರುಕಾಯಿಸು (ತಡೆ) ಡಕಾಸು (ದಣಿಯುವುದು) ಸಕಾಸು (ಸಾಧ್ಯವಾಗು) ನಿಕಾಲ್‌ಮಾಡು (ಹೊರಡಿಸು) ಇತ್ಯಾದಿ. ಎಷ್ಟೋ ಉರ್ದು ಪ್ರತ್ಯಯಗಳೂ ಅವ್ಯಯಗಳೂ ಇಲ್ಲಿನ ಆಡುನುಡಿಯಲ್ಲಿ ಸೇರಿಕೊಂಡಿವೆ. ಘರ್ ಬರ್ ಕಾ ಮಂದಿ (ಮನೆಯ ಜನರು) ಬೆಣ್ಣೆ ಕಾ ಭಾವ (ಬೆಣ್ಣೆಯ ಬೆಲೆ) ಬಗೀಚೇ ಕಾ ಅಗಿ (ತೋಟದ ಗಿಡ) ಹರ್ ಮನುಷ್ಯ (ಪ್ರತಿಯೊಬ್ಬ ಮನುಷ್ಯ) ಅದರ್ ಬಾದ್ (ಆಮೇಲೆ) ಇತ್ಯಾದಿ—ಹ್ರಸ್ವ ಅ ಕಾರಾಂತ ಶಬ್ದಗಳೂ ಕೆಲವು ಕ್ರಿಯಾರೂಪಗಳೂ ವ್ಯಂಜನಾಂತವಾಗಿವೆ. ಉದಾ : ಮಾಡ್‌ತದ್ (ಮಾಡುತ್ತದೆ). ಗಿಂತ ಪ್ರತ್ಯಯ ಇಲ್ಲಿ ಕಿನ ಆಗಿದೆ. ಅವನ್‌ಕಿನ (ಅವನಿಗಿಂತ), ಖೂನಾ (ಪರಿಚಯ) ಬಕ್ಕಳ (ಬಹಳ) ಹಳ್ಳಗ (ನಿಧಾನವಾಗಿ) ಧಮ್ಮಗ (ಜೋರಾಗಿ) ಹಿನಾ (ಇನ್ನೂ) ಫೇಕಿ (ಸಲ) ಸರಿಹೋಗು (ಸಾಯು) ಹತ್ತಿದೆ (ಪ್ರಾರಂಭಿಸಿದೆ) ಪಾರ (ಹುಡುಗ) ಕಳ್ವಿ (ಬತ್ತ) ಮುಂತಾದ ಎಷ್ಟೋ ಶಬ್ದಗಳು ಕನ್ನಡದ ಈ ಪ್ರಭೇದದ ಜಾಯಮಾನಕ್ಕೆ ಸೇರಿಹೋಗಿವೆ.

ಒಳನಾಡಿನ ಕನ್ನಡದ ದಕ್ಷಿಣದ ಪ್ರಭೇದಗಳಲ್ಲಿ ಕೊಡಗು, ಮೈಸೂರು, ಕೋಲಾರ ಮುಂತಾದ ಕೆಲವು ಮುಖ್ಯವಾದ ಪ್ರಭೇದಗಳನ್ನು ನಾವು ಗುರುತಿಸಬಹುದು. ಕೊಡಗಿನ ಜೇನುಕುರುಬರು ಆಡುವ ಮಾತಿನಲ್ಲಿ ಮೂರಕ್ಷರದ ಶಬ್ದಗಳಲ್ಲಿ ಎರಡನೆಯ ಅಕ್ಷರದ ಅಕಾರ ದೀರ್ಘವಾಗುವುದು ಕಂಡಬರುತ್ತದೆ. ಉದಾ : ಜಗಾಲಿ (ಜಗಲಿ) ಕೂದಾಲು (ಕೂದಲು) ಕೆಚ್ಚಾಲು (ಕೆಚ್ಚಲು) ಇತ್ಯಾದಿ. (ಕನ್ನಡದ ಇತರ ಪ್ರಭೇದಗಳಲ್ಲಿ ಈ ಸ್ವರವು ಲೋಪವಾಗುವುದು ಕಂಡುಬರುತ್ತದೆ. ಉದಾ : ಜಗ್ಲಿ ಕೂದ್ಲು, ಇತ್ಯಾದಿ). ಇಲ್ಲಿನ ಆಡುನುಡಿಯಲ್ಲಿ ಚ ಕಾರ, ಸ ಕಾರದೊಂದಿಗೆ ವಿಲೀನಗೊಂಡಿದೆ. ಸೇಳು (ಚೇಳು) ಸಿನ್ನ (ಚಿನ್ನ) ಸಂದ (ಚಂದ) ಇತ್ಯಾದಿ. ಮಚ್ಚ (ಮಂಚ) ಬಿಕ್ಕಿ (ಬಿಂಕಿ) ಮಿಚ್ಚು (ಮಿಂಚು) ಗಿತ್ತ (ಗಿಂತ) ಕುಕ್ಕುಮ (ಕುಂಕುಮ) ಮುಂತಾದವುಗಳಲ್ಲಿ ಅನುನಾಸಿಕ ಲೋಪ ಗಮನಾರ್ಹವಾಗಿದೆ. ಕ್ರಿಯಾಧಾತುಗಳ ಉ ಕಾರ ವರ್ತಮಾನ ಕಾಲ ಪ್ರತ್ಯಯದ ಮುಂದೆ ಇ ಕಾರವಾಗುತ್ತದೆ. ಉದಾ : ಇಡಿತೀನಿ (ಇಡುತ್ತೇನೆ). ಇ ಕಾರಾಂತ ಧಾತುಗಳ ಭೂತಕಾಲ ರೂಪದಲ್ಲಿ ದ ಪ್ರತ್ಯಯದ ಬದಲಿಗೆ ಎಷ್ಟೋ ಕಡೆ ತ ಪ್ರತ್ಯಯ ಕಂಡುಬರುತ್ತದೆ. ಕುಡ್‌ತೆ (ಕುಡಿದೆ) ಕ್ರಿಯಾಪದಗಳಲ್ಲಿ ಪುರುಷ ಮತ್ತು ವಚನಸೂಚಕ ಪ್ರತ್ಯಯಗಳಿದ್ದರೂ ವಾಡಿಕೆಯಲ್ಲಿ ಹೆಚ್ಚಾಗಿ ಇಗೆ ಎಂಬ ಒಂದೇ ಪ್ರತ್ಯಯವಿದೆ. ನಾನು ಕುಡಿತಿಗೆ, ನಾವು ಕುಡಿತಿಗೆ, ನೀವು ಕುಡಿತಿಗೆ ಅವ ಕುಡಿತಿಗೆ ಇತ್ಯಾದಿ. ಸಪ್ತಮೀ ವಿಭಕ್ತಿ ರೂಪ ಲು ಎಂದಿದ್ದು ದೇಶಾಲು (ದೇಶದಲ್ಲಿ) ಗಾಡೀಲು (ಗಾಡಿಯಲ್ಲಿ) ಮುಂತಾದ ರೂಪಗಳಿವೆ.

ಮೈಸೂರಿನ ಆಸುಪಾಸು ಪ್ರದೇಶದ ಆಡುನುಡಿಯಲ್ಲಿ ನಿಷೇಧಾರ್ಥ ಕ್ರಿಯಾರೂಪದ ಲ ಕಾರಕ್ಕೆ ಬದಲಾಗಿ ನ ಕಾರ ಕಂಡುಬರುತ್ತದೆ. ಉದಾ : ಬರ್‍ನಿಲ್ಲ (ಬರಲಿಲ್ಲ) ಹೋಗ್‍ನಿಲ್ಲ (ಹೋಗಲಿಲ್ಲ) ಇತ್ಯಾದಿ. ಕೊಳ್ಳು ಎನ್ನುವ ಕ್ರಿಯಾಪದದ ಭೂತಕಾಲ ರೂಪದಲ್ಲಿ ಮೂರ್ಧನ್ಯ ಧ್ವನಿ ಕಂಡುಬರುವುದಿಲ್ಲ. ಮಾಡ್‍ಕಂದೆ (ಮಾಡಿಕೊಂಡೆ) ತಗಂದು (ತೆಗೆದುಕೊಂಡು). ಓಣ ಪ್ರತ್ಯಯಕ್ಕೆ ಬದಲಾಗಿ ಮ ಪ್ರತ್ಯಯವಿದೆ. ಹಾಕ್‍ಮ (ಹಾಕೋಣ) ಹೋಗ್‍ಮ (ಹೋಗೋಣ) ಇತ್ಯಾದಿ. ಉ ಕಾರಾಂತ ಭೂತ ಕೃದಂತ ಇಲ್ಲಿ ಇ ಕಾರಾಂತವಾಗಿದೆ. ಕೊಟ್ಟಿ (ಕೊಟ್ಟು) ತಿಂದಿ ಬಂದೆ (ತಿಂದು ಬಂದೆ) ಇತ್ಯಾದಿ. ಇ, ಎ, ಕಾರಗಳು ಪರವಾದಾಗ ಕ ಕಾರವು ಚ ಕಾರವಾಗುವುದೂ ಗ ಕಾರ ಜ ಕಾರ ವಾಗುವುದೂ ಇಲ್ಲಿನ ಕೆಲವು ಪ್ರಭೇದಗಳಲ್ಲಿ ಕಂಡುಬರುತ್ತವೆ. ಚಿವಿ (ಕಿವಿ) ಜಿಣಿ (ಗಿಣಿ) ಜೆಲ್ಲು (ಗೆಲ್ಲು) ಇತ್ಯಾದಿ. ಸ ಕಾರ ಇ ಕಾರ ಎ ಕಾರಗಳು ಪರವಾದಾಗ ಶ ಕಾರವಾಗುವುದೂ ಕೆಲವೆಡೆ ಕಾಣಬರುತ್ತದೆ. ಶಿಟ್ಟು (ಸಿಟ್ಟು) ಶಿಮ್ಮ (ಸಿಂಹ) ಇತ್ಯಾದಿ. ಜ ಕಾರ ಸ್ವರಗಳ ಮಧ್ಯದಲ್ಲಿಯೂ ಬಂದು ಮಜ (ಮಗ) ನೊಜ (ನೊಗ) ಮುಂತಾದ ರೂಪಗಳು ಸಿದ್ಧಿಸುತ್ತವೆ.

ಕೋಲಾರ ಜಿಲ್ಲೆ ಕರ್ಣಾಟಕದ ದಕ್ಷಿಣ ಭಾಗದಲ್ಲಿದ್ದರೂ ಅಲ್ಲಿನ ಆಡುನುಡಿಯಲ್ಲಿ ಉತ್ತರದ ಕರ್ಣಾಟಕದಂತೆ ಚ ಕಾರ ಜ ಕಾರಗಳಲ್ಲಿ ವರ್ತ್ಸ್ಯ ಧ್ವನಿಯನ್ನು ಗಮನಿಸಬಹುದು. ಕ್ರಿಯಾಪದದ ಭೂತಕಾಲ ರೂಪದ ಪುರುಷವಾಚಕ ಪ್ರತ್ಯಯಗಳಲ್ಲಿ ನ ಕಾರ ಉಳಿದಿದೆ. ಮಾಡಿದ್ನು. ಬಂದ್ನು ಬನ್ನು ಇತ್ಯಾದಿ ಇ ಕಾರಾಂತ ಧಾತುಗಳ ಅಂತ್ಯ ಇಕಾರವು ವರ್ತಮಾನ ಕಾಲಪ್ರತ್ಯಯ ಪರವಾದಾಗ ಉ ಕಾರವಾಗುತ್ತದೆ. ಕುಡುತಿನಿ (ಕುಡಿಯುತ್ತೇನೆ) ಬರಲಿಕ್ಕೆ, ಇಡಲಿಕ್ಕೆ ಮುಂತಾದೆಡೆಗಳಲ್ಲಿ ಬರುಕು ಇಡುಕ ರೂಪಗಳಿವೆ. ಕೊಯ್ಯು, ಬಯ್ಯು ಮುಂತಾದ ಧಾತುಗಳ ಯ ಕಾರಗಳು ವ ಕಾರಗಳಾಗುತ್ತವೆ. ಉದಾ: ಕೊವ್‍ತಿನಿ, ಬವ್‍ತಿನಿ, ಇತ್ಯಾದಿ. ನಿಷೇಧಾರ್ಥ ಕ್ರಿಯಾಪದ ತೆಲುಗಿನಂತೆ, ತೆಳೀದು (ತಿಳಿಯದು) ಎಂಬ ರೂಪದಲ್ಲಿದೆ. ಸಹಾಯಕ ಕ್ರಿಯಾಪದವಾಗಿ ಇಕ್ಕು ಅಟ್ಟು ಧಾತುಗಳು ಬಳಕೆಯಲ್ಲಿವೆ. ಮಾಡಿಕ್ಕಿದ್ನಿ ಇತ್ಯಾದಿ. ದ್ವಿತೀಯ ವಿಭಕ್ತಿ ಪ್ರತ್ಯಯ ವ ಎಂದಾಗಿದೆ. ಮನೆವ ನೋಡ್‍ದ್ನಿ, (ಮನೆಯನ್ನು ನೋಡಿದೆನು). ತುಲನಾತ್ಮಕ ಪ್ರತ್ಯಯ ಇಂಥ ಪ್ರಭೇದಲ್ಲಿ ಕಾನ ಎಂದಾಗಿದೆ. ಅವನ್‍ಕಾನ (ಅವನಿಗಿಂತ) ತೆಲುಗು ಶಬ್ದಗಳು ಇಲ್ಲಿನ ಆಡುನುಡಿಯಲ್ಲಿ ತುಂಬ ಸಂಖ್ಯೆಯಲ್ಲಿ ಸೇರಿಕೊಂಡಿದೆ ಎಂಬುದಕ್ಕೆ ಗೋರು (ಉಗುರು) ಪೆದುವು (ತುಟಿ) ಸದು (ಓದು) ಎಕ್ಕು (ಏರು) ಎದುಕು (ಹುಡುಕು) ಮಂತಾದ ಹಲವಾರು ಉದಾಹರಣೆಗಳನ್ನು ಕೊಡಬಹುದು.

ಹೀಗೆ ದೇಶ, ಕಾಲ ಮತ್ತು ಸಮಾಜಕ್ಕನುಗುಣವಾಗಿ ಆಡುನುಡಿಯಲ್ಲಿ ನೂರಾರು ಪ್ರಭೇದಗಳಿರುವುದು ಜೀವಂತ ಭಾಷೆಯ ಲಕ್ಷಣ. ಆಡುನುಡಿಯ ವೈವಿಧ್ಯಗಳಿಂದ ಕನ್ನಡ ಭಾಷೆ ಶೋಭಿತವಾಗಿದೆಯೆಂದು ನಿಸ್ಸಂದೇಹವಾಗಿ ಹೇಳಬಹುದು. (ಯು.ಪಿ.ಯು.)

**ಕನ್ನಡ ರಂಗಭೂಮಿ :** ಕನ್ನಡ ರಂಗಭೂಮಿಯ ಉಗಮ ಎಂದು ಹೇಗೆ ಆಯಿತೆಂಬುದು ಸ್ಪಷ್ಟವಾಗಿಲ್ಲವಾದರೂ ಇದರ ಪರಂಪರೆ ಅತ್ಯಂತ ಪ್ರಾಚೀನವಾದದ್ದೆಂಬುದರಲ್ಲಿ ಸಂದೇಹವಿಲ್ಲ. ಇಂದು ದೊರೆತಿರುವ ಕನ್ನಡ ನಾಟಕಗಳಲ್ಲಿ ತುಂಬ ಹಳೆಯದು ಚಿಕ್ಕದೇವರಾಜರ ಆಸ್ಥಾನದಲ್ಲಿದ್ದ ಸಿಂಗರಾರ್ಯ ರಚಿಸಿದ ಮಿತ್ರವಿಂದಾ ಗೋವಿಂದ. ಇದು ಹದಿನೇಳನೆಯ ಶತಮಾನದ ಅಂತ್ಯಭಾಗದಲ್ಲಿ ರಚಿತವಾದ ಕೃತಿ ; ಶ್ರೀಹರ್ಷನ ರತ್ನಾವಳೀ ನಾಟಕದ ಕನ್ನಡ ರೂಪ. ಒಂದು ದೃಷ್ಟಿಯಿಂದ, ಇದು ಮೂಲಕೃತಿಯಷ್ಟು ತೃಪ್ತಿಕೊಡಲಾರದ ಕನ್ನಡರೂಪವೆಂದು ಹೇಳಬಹುದು. ಆದರೂ, ಇದಕ್ಕಿಂತ ಪ್ರಾಚೀನವಾದ ಕನ್ನಡ ನಾಟಕ ದೊರೆತಿಲ್ಲ ಎನ್ನುವುದರಿಂದಲೇ ಇವಕ್ಕೆ ಹಿರಿಮೆ ಪ್ರಾಪ್ತವಾಗಿದೆ. ದೊರೆತಿಲ್ಲ ಎಂದರೆ ಇರಲಿಲ್ಲ ಎಂದು ಹೇಳಿದಂತಲ್ಲ. ಪ್ರಾಚೀನ ಕನ್ನಡ ಸಾಹಿತ್ಯದಲ್ಲೂ ಶಾಸನಗಳಲ್ಲೂ ನಾಟಕ ಎಂಬ ಮಾತು ಮತ್ತೆ ಮತ್ತೆ ಕಾಣಸಿಗುತ್ತದೆ.

**ಪ್ರಾಚೀನ ನಾಟಕಶಾಲೆಗಳು :** ಕನ್ನಡ ನಾಡಿನಲ್ಲಿ ಹಿಂದೆ ಅನೇಕ ನಾಟಕಶಾಲೆಗಳಿದ್ದುವೆಂದು ತಿಳಿಯಲು ಆಧಾರಗಳಿವೆ. ಮೈಸೂರಿನ ಕಂಠೀರವ ನರಸರಾಜರ (1638–1659) ಅರಮನೆಯಲ್ಲಿ ಮನೋಹರವಾದ ನಾಟಕಶಾಲೆ ಇತ್ತೆಂದು ಆ ರಾಜರ ಚರಿತ್ರೆಯನ್ನು ರಚಿಸಿದ ಗೋವಿಂದವೈದ್ಯ ಕವಿ ತನ್ನ ಕಾವ್ಯದಲ್ಲಿ ಹೇಳಿದ್ದಾನೆ. ಕೆಳದಿಯ ವೆಂಕಟಪ್ಪ ನಾಯಕ (1582–1629) ತನ್ನ 'ಇಕ್ಕೇರಿಯರಮನೆಯೊಳ್ ಚಿತ್ರಕರ ರಚನಾಕೌಶಲ್ಯದಿಂ ನಾಟಕಶಾಲೆಯಂ ನಿರ್ಮಿಸಿದನ್' ಎಂದು ಲಿಂಗಣ್ಣ ಕವಿಯ ಕೆಳದಿನೃಪವಿಜಯದಲ್ಲಿ ಖಚಿತವಾದ ಮಾತಿದೆ. ಅದಕ್ಕಿಂತ ನೂರು ವರ್ಷಗಳ ಹಿಂದೆ, ಕವಿ ರತ್ನಾಕರವರ್ಣಿ, ತನ್ನ ಭರತೇಶವೈಭವ ಕಾವ್ಯದ ಪೂರ್ವನಾಟಕ ಸಂಧಿ ಉತ್ತರನಾಟಕ ಸಂಧಿಗಳಲ್ಲಿ ಶೃಂಗಾರಮಯವಾದ ನಾಟಕಶಾಲೆಯ ವರ್ಣನೆಯನ್ನು ಕೊಡುತ್ತಾನೆ. ವಿಜಯನಗರ ಸಾಮ್ರಾಜ್ಯದ ಸಂಪತ್ಸಮೃದ್ಧಿಯ ಕಾಲದಲ್ಲಿಯಂತೂ ಕೃಷ್ಣದೇವರಾಯನ ರಾಜಧಾನಿಯಲ್ಲಿದ್ದ ಪಟ್ಟದ ನಾಟಕಶಾಲೆಯಲ್ಲದೆ ಇಕ್ಕೇರಿ, ತಂಜಾವೂರು ಮೊದಲಾದ ಪ್ರಾದೇಶಿಕ ಕೇಂದ್ರಗಳಲ್ಲೂ ರತ್ನಖಚಿತವಾದ ಅಲಂಕಾರಗಳನ್ನು ಹೊಂದಿದ್ದ ನಾಟಕಶಾಲೆಗಳಿದ್ದುವೆಂದು ಬಿ. ಎ. ಸಾಲೆತೊರೆಯವರು ಹೇಳಿದ್ದಾರೆ. ಇದೆಲ್ಲಕ್ಕಿಂತ ಹಿಂದೆ, ಕ್ರಿ.ಶ. 1045ರಲ್ಲಿ ಧಾರವಾಡದ ಸಮೀಪದ ಮುಗುಂದದಲ್ಲಿ (ಇಂದು ಮುಗದ ಎಂಬ ಹಳ್ಳಿ) ನಿಲ್ಲಿಸಿ ಇಂದಿಗೂ ಬಿಸಿಲು ಮಳೆಗಾಳಿಗಳಿಗೆ ಮೈಯೊಡ್ಡಿ ನಿಂತಿರುವ ದೊಡ್ಡದೊಂದು ಶಿಲಾಫಲಕ—

> ಶ್ರೀಮನ್ಮಹಾಸಾಮನ್ತಂ ಮಾರ್ತಾಣ್ಡಯ್ಯಂ
> ತಮ್ಮ ಮುತ್ತಯ್ಯಂ ಮಾಡಿಸಿದ ಬಸದಿಯಂ ಪಡಿಸಲಿಸಿ
> ನಾಟಕಶಾಲೆಯಂ ಮಾಡಿಸಿ, ತನ್ನ ಕೀರ್ತಿಶಿಳಾಸ್ತಂಭಮಂ
> ಆಚಂದ್ರಾರ್ಕತಾರಂಬರಂ ನಿಲಿಸಿದಂ

ಎಂದು ಹನ್ನೊಂದನೆಯ ಶತಮಾನದ ಕನ್ನಡ ನಾಟಕಶಾಲೆಯ ಕತೆಯನ್ನು ಹೇಳುತ್ತಿದೆ.

**ನಾಟಕದ ಪ್ರಾಚೀನತೆ :** ನಾಟಕ ಎಂಬ ಮಾತೂ ಕನ್ನಡನಾಡಿನಲ್ಲಿ ತುಂಬ ಹಳೆಯದು. ಗೋವಿಂದವೈದ್ಯ, ರತ್ನಾಕರವರ್ಣಿಗಳ ಕೃತಿಗಳಲ್ಲಿ ನಾಟಕ ಎಂಬ ಪದವೂ ನಾಟಕದ ವರ್ಣನೆಯೂ ಕಂಡುಬರುತ್ತವೆ. ಹದಿನೇಳನೆಯ ಶತಮಾನದ ಆದಿಭಾಗದಲ್ಲಿದ್ದ ಭಟ್ಟಾಕಳಂಕ, ಕಾವ್ಯನಾಟಕಾಲಂಕಾರಕಲಾಶಾಸ್ತ್ರವಿಷಯಾಣಾಂಚ ಬಹೂನಾಂ ಗ್ರಂಥಾನಾಮಪಿ ಭಾಷಾಕೃತಾನಾಮುಪಲಭ್ಯಮಾನತ್ವಾತ್—ಎಂದು ಬರೆದಿದ್ದಾನೆ. ಕುಮಾರವ್ಯಾಸಕವಿ ನಾಟಕ ಎಂಬ ಮಾತನ್ನು ಅನೇಕ ಎಡೆಗಳಲ್ಲಿ ಉಪಯೋಗಿಸಿದ್ದಾನೆ. ಬಸವಪುರಾಣವನ್ನು ರಚಿಸಿದ ಭೀಮಕವಿ, ಶೃಂಗಾರಗೊಂಡು ಒಡವೆಗಳಿಂದ ಅಲಂಕೃತವಾಗಿ ನಾಟಕಕ್ಕಳವಟ್ಟು ರೀತಿಯೊಳೊಪ್ಪಿ ನಡೆತಂದ ಚದುರೆ ಸೋಮಲದೇವಿಯನ್ನು ವರ್ಣಿಸಿದ್ದಾನೆ. ಶೃಂಗಾರರತ್ನಾಕರವನ್ನು ರಚಿಸಿದ ಕವಿ ಕಾಮದೇವನೂ ಪೇಳ್ದಭಿನಯಿಸಿ ನಾಟಕಂಗಳಸಂತುಂ ಪಡೆದಲ್ಲದೆ ಬರ್ಕುಮೆ ಎಂದು ನಾಟಕದ ಬಗ್ಗೆ ನುಡಿದಿದ್ದಾನೆ. ಮಹಾದೇವೀ, ರೂಪಾದೇವೀ ಎಂಬ ರಾಣಿಯರು ಸೀತೆ–ರಾಮರಾಗಿ ಕೃತಕ ನಾಟಕಮನಾಡಿದ ರೀತಿಯನ್ನು ಪಂಚತಂತ್ರ ಕೃತಿಕಾರ ದುರ್ಗಸಿಂಹ ತಿಳಿಸಿದ್ದಾನೆ. ಹೆಸರಾಂತ ಹೊಯ್ಸಳ ದೊರೆ ವೀರಬಲ್ಲಾಳ ಕಲಾವಂತನಾದ ನಟನಾಗಿದ್ದನೆಂದು ಸೊರಬದ ಶಿಲಾಶಾಸನದಲ್ಲಿ (1208) ಹೇಳಿದೆ. ನೀಲಾಂಜನೆ ನಾಟಕವಾಡಿದುದರ ಬಣ್ಣನೆ ಪಂಪನ ಆದಿಪುರಾಣದಲ್ಲಿದೆ. ಪೊನ್ನಕವಿ ತನ್ನ ಶಾಂತಿಪುರಾಣದಲ್ಲಿ ಚಂದ್ರೋದಯವನ್ನು ನಾಟಕಾರಂಭಕ್ಕೆ ಹೋಲಿಸುತ್ತ, ನಕ್ಷತ್ರಗಳು ಸೂತ್ರಧಾರ ಪೂಸಿದ ಪುಷ್ಪಗಳೆಂದೂ ಸರಿದು ಹೋಗುತ್ತಿರುವ ಕತ್ತಲೆಯೆ ಮೇಲೇರುತ್ತಿರುವ ತೆರೆಯೆಂದೂ ರಾತ್ರಿಯ ನಾಲ್ಕು ಪ್ರಹರಗಳು ನಾಟಕದ ನಾಲ್ಕು ಅಂಕಗಳು ಎಂದೂ ವರ್ಣಿಸಿದ್ದಾನೆ. ಅಜಿತಪುರಾಣದ ಕರ್ತೃವಾದ ರನ್ನಕವಿಯ ಕಾವ್ಯದಲ್ಲಿ ನಾಟಕವಿಧಿಯ ವಿವರಣೆಯನ್ನು ನೋಡಬಹುದು. ನಾಟಕವೆಂಬ ಹೆಸರಿನ ಮನೋರಂಜನೆ ಕನ್ನಡನಾಡಿನಲ್ಲಿ ಹತ್ತನೆಯ ಶತಮಾನದಿಂದಲಾದರೂ ಇದ್ದಿತೆಂದು ನಂಬಲು ಇವೆಲ್ಲ ಆಧಾರಗಳುಂಟು. ಭಾರತದ ಉಳಿದ ಭಾಷೆಗಳಲ್ಲಿ ನಾಟಕದ ಹಳಮೆಯ ಬಗೆಗೆ ಇಷ್ಟೊಂದು ಖಚಿತವಾದ ಆಧಾರ ಸಿಕ್ಕಿಲ್ಲ.

**ಹಿಂದಿನ ನಾಟಕಗಳ ಸ್ವರೂಪ :** ಅಂದಿನ ಆ ನಾಟಕಗಳ ರೂಪರೇಷೆಗಳೇನು ಎಂಬ ಪ್ರಶ್ನೆಗೆ ನಿಶ್ಚಿತವಾದ ಉತ್ತರವಿನ್ನೂ ದೊರೆತಿಲ್ಲ. ಗೋವಿಂದವೈದ್ಯನ ಅಥವಾ ರತ್ನಾಕರವರ್ಣಿ ಬಣ್ಣಿಸಿದ ನಾಟಕದ ವರ್ಣನೆಯನ್ನು ಗಮನಿಸಿದರೆ ಅದು ನಾಟ್ಯ ಅಥವಾ ಭಾವಪ್ರಧಾನವಾದ ನೃತ್ಯದ ವರ್ಣನೆಯೇನೋ ಎನಿಸುತ್ತದೆ. ರತ್ನಾಕರ ಚಿತ್ರಿಸಿದ ತಾಳ ಹಿಡಿದ ಸೂತ್ರಧಾರನೂ ಬಸವಪುರಾಣದ ನಾಟಕಪಂಡಿತನಂತೆ ಇಂದಿನ ಯಕ್ಷಗಾನದ ಭಾಗವತನನ್ನೇ ಹೋಲುತ್ತಾನೆ. ಇಟ್ಟು ಜಡೆಬೊಲ್ಲ ಹವಮರ್ದಿರೆ, ತೊಟ್ಟು ಕಂಚುಕಮಂ ದುಕೂಲವನುಟ್ಟು, ಚಲ್ಲಣಮಂ ರಚಿಸಿ, ಮಣಿಖಚಿತ ಸಿಂಜಿನಿಯ ಕಟ್ಟಿಕೊಂಡು—ಬಸವಪುರಾಣದಲ್ಲಿ ನಾಟಕವಾಡಿದ ಸೋಮಲದೇವಿಯ ವರ್ಣಿಕೆಯೂ ಅಲಂಕಾರವೂ ಆಕೆ ನರ್ತಕಿ ಎಂದೇ ಸೂಚಿಸುತ್ತವೆ. ಕವಿ ಕಾಮದೇವನೂ ನಾಟಕವೆಂದರೆ ಅಭಿನಯಪ್ರಧಾನವಾದ ನೃತ್ಯಕಲೆಯೆಂದು ಸೂಚಿಸುವಂತಿದೆ. ಆದಿಪಂಪ ನೀಲಾಂಜನೆಯ ನೃತ್ಯವನ್ನು ಬಣ್ಣಿಸುವಾಗ ನಾಟಕ ಎಂಬ ಪದವನ್ನು ಪ್ರಯೋಗಿಸುತ್ತಾನೆ. ಕೃತಾನುಕರಣಮೆ ನಾಟಕಮಪ್ಪುದು ಎಂದು ಆತ ಹೇಳಿದರೂ ಆ ಅನುಕರಣದಲ್ಲಿ ಪಾತ್ರಕ್ಕೆ ಆಡುವ ಮಾತಿದೆಯೇ ಎಂಬುದು ಸ್ಪಷ್ಟವಾಗುವುದಿಲ್ಲ. ಈ ಎಲ್ಲದರಿಂದಾಗಿ, ಭರತೇಶವೈಭವ ಕಾವ್ಯದ ಜಲಕನ್ನಿಕಾನಾಟ್ಯ, ದಿಕ್ಕನ್ನಿಕಾನಾಟ್ಯಗಳಂತೆ ಅಭಿನಯಪ್ರಧಾನವಾದ ನೃತ್ಯಗಳೇ ಕನ್ನಡದ ಪ್ರಾಚೀನ ನಾಟಕಗಳಾಗಿದ್ದಿರಬೇಕು ಎನಿಸುತ್ತದೆ. ಅಭಿನವ ಮಂಗರಾಜನ ಅಭಿಸವಾಭಿದಾನ ಎಂಬ ನಿಘಂಟಿನಲ್ಲಿಯೂ (1378) ನಾಟಕಕ್ಕೆ ಇದೇ ಅರ್ಥವನ್ನು ತರುವ ವಿವರಣೆ ಇದೆ : ನೃತ್ಯದೊಳು ಹಸ್ತಾಂಗ ದೃಷ್ಟಿಗತಿ ಪದ್ಧತಿಯೊಳಾಡೆ ನಾಟಕಮೆನಿಕ್ಕುಂ.

ಈ ಎಲ್ಲ ಮಾತುಗಳನ್ನೂ ವಿವೇಚಿಸಿದಾಗ, ಕೆ. ಜಿ. ಕುಂದಣಗಾರರು ಬರೆದಂತೆ, ಕನ್ನಡನಾಡಿನ ಪ್ರಾಚೀನ ನಾಟಕ ಇಂದಿನ ಕಥಕಳಿಯಂತೆ, ಭಾವ ಮತ್ತು ಗೀತ

ಪ್ರಧಾನವಾದ, ಆಡುಮಾತಿಲ್ಲದ ಒಂದು ನೃತ್ಯಪ್ರಕಾರವಾಗಿರಬೇಕು ಎನಿಸುತ್ತದೆ. ಅಂದಿನ ರಂಗಭೂಮಿಗೆ ಆಶ್ರಯವಿತ್ತ ರಾಜಾಸ್ಥಾನಗಳಲ್ಲಿ ಸಂಕೇತಪ್ರಧಾನವಾದ ಇಂಥ ಪ್ರಯೋಗಗಳೇ ಹೆಚ್ಚು ಪ್ರಿಯವಾಗಿ, ಆಡುಮಾತಿನ ನಾಟಕಗಳು ಕಡಿಮೆ ಇದ್ದಿರಬೇಕು.

ಇದರ ಜೊತೆಗೆ ಕನ್ನಡ ರಾಯರ ಆಸ್ಥಾನಗಳಲ್ಲಿ ಆಡು ಮಾತಿನ ನಾಟಕಗಳನ್ನೂ ಆಡುತ್ತಿದ್ದರು ಎನ್ನುವುದಕ್ಕೆ ಕೆಲವೊಂದು ಆಧಾರಗಳಿವೆ. ಚಿಕ್ಕದೇವರಾಜರ ಆಸ್ಥಾನದಲ್ಲಿ ಮಿತ್ರವಿಂದಾ ಗೋವಿಂದ ಪ್ರದರ್ಶಿತವಾಯಿತು. ಸಂಸ್ಕೃತದಲ್ಲೂ ಆಡುಮಾತಿನ ನಾಟಕಗಳು ಇನ್ನೂ ಹಿಂದಿನ ಕಾಲದಿಂದಲೂ ಆಸ್ಥಾನಗಳಲ್ಲಿ ಪ್ರದರ್ಶಿತವಾಗುತ್ತಿದ್ದುವು. ವಿಜಯನಗರದ ಅರಸ ಕೃಷ್ಣದೇವರಾಯ ಸಂಸ್ಕೃತದಲ್ಲಿ ರಚಿಸಿದ ಜಾಂಬವತೀಕಲ್ಯಾಣಂ ಎಂಬ ನಾಟಕವನ್ನು ಚೈತ್ರೋತ್ಸವದಂದು ನೆರೆದ ಮಹಾಪ್ರಜೆಗಳ ಸಮ್ಮುಖದಲ್ಲಿ ಪ್ರದರ್ಶಿಸಲಾಯಿತು. ಜ್ಯೋತಿರೀಶ್ವರ ಕವಿ ವೇಬರಾಚಾರ್ಯರ ಧೂರ್ತಸಮಾಗಮ ಪ್ರಹಸನವೂ ಆಸ್ಥಾನವನ್ನು ರಂಜಿಸಿದ ಸಂಸ್ಕೃತ ನಾಟಕವೇ.

ಆಡುಮಾತಿನ ಕನ್ನಡ ನಾಟಕಗಳು ಅಂದು ಇದ್ದುವೆ ಎಂಬ ವಿಷಯವನ್ನು ಎಂ. ಗೋವಿಂದ ಪೈಯವರು ಪರಿಶೀಲಿಸುತ್ತಾ, ಕೇಶಿರಾಜನ ಶಬ್ದಮಣಿದರ್ಪಣದಲ್ಲಿ ಸೂಚಿತವಾದ ಸುಭದ್ರಾಹರಣ ಮತ್ತು ಪ್ರಬೋಧಚಂದ್ರ ಇವು ಕನ್ನಡ ನಾಟಕಗಳಾಗಿದ್ದಿರಬೇಕೆಂದು ಅಭಿಪ್ರಾಯಪಟ್ಟಿದ್ದಾರೆ. ಎರಡನೆಯ ನಾಗವರ್ಮನ ಕಾವ್ಯಾವಲೋಕನದಲ್ಲಿ ಕಾಳಿದಾಸನ ವಿಕ್ರಮೋರ್ವಶೀಯದ ಒಂದು ಪದ್ಯದ (ಅಂಕ 1, ಪದ್ಯ 3) ಹಾಗೂ ಶ್ರೀಹರ್ಷನ ನಾಗಾನಂದದ ಮತ್ತು ಭವಭೂತಿಯ ಮಾಲತೀಮಾಧವದ ಕೆಲವು ಪದ್ಯಗಳ ಕನ್ನಡ ರೂಪಗಳಿವೆ. ಛಂದಾನುಶಾಸನದ ಕರ್ತೃ ಜಯಕೀರ್ತಿ ಹೇಳಿದ ಪ್ರತಿಥಂ ಕರ್ಣಾಟಮಾಲತೀಮಾಧವ ಪ್ರಭೃತಿಕಾವ್ಯೇ ಎಂಬ ಮಾತಿನಿಂದ ಭವಭೂತಿಯ ಆ ನಾಟಕ ಕನ್ನಡಕ್ಕೆ ಅನುವಾದವಾಗಿದ್ದಿರಬಹುದೆಂದು ಸಂಶೋಧಕರು ಭಾವಿಸುತ್ತಾರೆ. ಹೀಗೆ ಹತ್ತನೆಯ ಶತಮಾನದಿಂದ ಬಳಕೆಗೆ ಬಂದ ನಾಟಕ ರಾಜಾಸ್ಥಾನದಲ್ಲಿ ತುಂಬ ಪ್ರಿಯವೆನಿಸಿದ್ದ ನೃತ್ಯಪ್ರಕಾರಗಳನ್ನಲ್ಲದೆ ಸಂಸ್ಕೃತನಾಟಕಗಳ ಕನ್ನಡ ರೂಪಗಳನ್ನೂ ಒಳಗೊಂಡಿದ್ದಿರಬೇಕು.

ಜನಪದರಂಗಭೂಮಿ : ಹಿಂದೆ ಹೇಳಿದ್ದು ರಾಜಾಶ್ರಯದಲ್ಲಿದ್ದ ರಂಗಭೂಮಿಯ ನಾಟಕಗಳ ಮಾತು; ಆದರೆ ಜನಪದ ರಂಗಭೂಮಿ ಅದಕ್ಕಿಂತ ಹಳೆಯದು. ಮೆಟ್ಟಲುಮೆಟ್ಟಲಾಗಿ ಕಾಲಮಾನದಲ್ಲಿ ಹಿಂದೆ ಹಿಂದೆ ಹೋಗಿ ಪರೀಕ್ಷಿಸಿದರೆ ಕನ್ನಡ ನಾಡಿನ ಜನಪದಭೂಮಿ ಸಾವಿರ ವರ್ಷಕ್ಕಿಂತ ಹಿಂದಿನದು ಎಂದು ತಿಳಿಯುತ್ತದೆ. ದಶಾವತಾರದ ಮಾತನ್ನೇ ಎತ್ತಿಕೊಳ್ಳೋಣ. 1812ರಲ್ಲೇ ಧರ್ಮಸ್ಥಳದ ಯಕ್ಷಗಾನಮೇಳವೊಂದು ಮೈಸೂರಿನ ಮುಮ್ಮಡಿ ಕೃಷ್ಣರಾಜರ ಆಸ್ಥಾನದಲ್ಲಿ ರಾಜಾಶ್ರಯ ಪಡೆಯಿತು. ಅದಕ್ಕಿಂತ ಹಿಂದೆ, ಹದಿನೇಳನೆಯ ಶತಮಾನದ ಉತ್ತರಾರ್ಧದಲ್ಲಿ ಬಿದನೂರಿನ ವೀರಭದ್ರನಾಯಕ ದಶಾವತಾರ ನಾಟಕವೊಂದನ್ನು ಬಿಜಾಪುರದ ಬಾದಷಹನ ಸಮ್ಮುಖದಲ್ಲಿ ಆಡಿತೋರಿಸಿ, ರಂಜನೆಗೊಂಡ ಆತನಿಂದ ತನ್ನ ಶತ್ರುಗಳನ್ನು ಓಡಿಸಲು ಸಹಾಯ ಪಡೆದನಂತೆ. 1648ರಲ್ಲಿ ಗೋವಿಂದವೈದ್ಯ ಕವಿ ರಚಿಸಿದ ಕಂಠೀರವ ನರಸರಾಜವಿಜಯದಲ್ಲಿ ದಶಾವತಾರದ ಮಾತಿದೆ. ಯಕ್ಷಗಾನ ಒಂದು ವಿಶಿಷ್ಟ ಸಂಗೀತಪದ್ಧತಿ ಎಂಬುದಾಗಿ ಗೋವಿಂದ ದೀಕ್ಷಿತರು 1628ರಲ್ಲಿ ರಚಿಸಿದ ಸಂಗೀತ ಸುಧೆಯಲ್ಲಿ ಉಲ್ಲೇಖವಿದೆ. 1577ರಲ್ಲಿ ರಚಿತವಾದ ಭರತೇಶವೈಭವದಲ್ಲಿ ಬರುವ ಎಕ್ಕಡಿಗರು ಯಕ್ಷಗಾನಕಲಾವಿದರಿದ್ದಿರಬೇಕೆಂದು ಸಂಶೋಧಕರ ಅಭಿಪ್ರಾಯ. ಕವಿ ಕುಮಾರವ್ಯಾಸ ನಾಡಾಡಿಗಳ ನಾಟಕದ ಮಾತು ಹೇಳಿದ್ದಾನೆ. ನಿಜಗುಣಶಿವಯೋಗಿ ಹೇಳಿದ ನಾಟಕದಲ್ಲಿ ದಿನದಿನಕ್ಕಭಿನಯಿಸಲ್ತಕ್ಕ ರಸ ಭಾವ ಸಂವಿಧಾನ ಆಶ್ರಯಗಳೆಂಬ ಚತುರ್ವಿಧ ಪ್ರಬಂಧಾಂಶಂಗಳಂ, ಮುಖ ದೃಷ್ಟಿ ಹಸ್ತ ಪಾದಂಗಳಭಿನಯಿಪ ಲಕ್ಷಣಂ ತಪ್ಪದೆ...ಚತುರ್ವಿಧ ಮೋಹಮಂ ಮೆಯ್ವೆತ್ತು ಶುದ್ಧದೇಶೀಯವೆಂಬ ದ್ವಯಮಾ ವಿವರಗೊಂಡ ನಾಟಕದ ರೀತಿಯನ್ನು ಓದಿದ್ದರೆ ಅದು ಇಂದಿನ ಯಕ್ಷಗಾನದ ಹಳೆಯ ರೂಪವನ್ನು ಕುರಿತು ಹೇಳಿದ ಮಾತೇನೊ ಎನ್ನಿಸುತ್ತದೆ. ದೇಗುಲಗಳ ಆವಾರಗಳಲ್ಲಿದ್ದ ಜಾನಪದ ರಂಗಮಂಟಪಗಳ ಬಗೆಗೆ ಕ್ರಿ.ಶ. 1125 ರಿಂದ ಮಾಹಿತಿ ಕಾಣಸಿಕ್ಕುವುದೆಂದು ಬಿ. ಎ. ಸಾಲೆತೊರೆಯವರು ಆಧಾರಸಹಿತವಾಗಿ ಬರೆದಿದ್ದಾರೆ. ನೃಪತುಂಗ ಹೇಳಿದ ನಾಲ್ಪಗರಣವೆಂದರೆ ಕನ್ನಡ ಜಾನಪದರಂಗಭೂಮಿಯ ಒಂದು ಪ್ರಕಾರ. ಎಂಟನೆಯ ಶತಮಾನದ ಪಟ್ಟದಕಲ್ ಶಿಲಾಶಾಸನದಲ್ಲಿ ಇನ್ನಾತನೆ ನರ್ತಕಂ, ನಟರೊಳಗ್ಗಳಂ ಈ ಭುವನಾಸ್ತ ರಂಗದೊಳ್ ಎಂದು ಕೀರ್ತಿಗೊಂಡ ನಟಸೇವ್ಯ, ಕನ್ನಡ ಜಾನಪದ ರಂಗಭೂಮಿಯ ಹೆಸರಾಂತ ಕಲಾವಿದನಿದ್ದಿರಬೇಕೆಂದು ಸಂಶೋಧಕರ ಮತ. ಇದೆಲ್ಲಕ್ಕಿಂತ ಹಿಂದೆ ಸಿಕ್ಕುವ ಆಧಾರವೆಂದರೆ, ಭಾಗವತದ ಹರಿವಂಶಪುರಾಣದಲ್ಲಿ (ಕ್ರಿ.ಶ. 200–400?) ವಜ್ರನಾಭಾಸುರನ ಸಂಹಾರಕ್ಕಾಗಿ ಕಟ್ಟಿದ ಆಟದ ಅಂಗವಾಗಿ, ಭದ್ರನಟನ ನಾಯಕತ್ವದಲ್ಲಿ ನಡೆದ ಭಾಗವತ ಮೇಳದ ಮಾತು ಎಂದು ಕೆರೋಡಿ ಸುಬ್ಬರಾಯರು ಸೂಚಿಸಿದ್ದಾರೆ. ಕನ್ನಡ ಜಾನಪದದ ಕಲಾವಂತಿಕೆಯ ಮಾತು ಪ್ರಾಚೀನ ತಮಿಳು ಸಾಹಿತ್ಯದಲ್ಲೂ ಬರುತ್ತದೆ. ಕ್ರಿಸ್ತಶಕದ ಮೊದಲ ವರ್ಷಗಳಲ್ಲಿ ರಚಿತವಾದ ಶಿಲಪ್ಪದಿಗಾರಂ ಕಾವ್ಯದಲ್ಲಿ ಚೇರರಾಜನಾದ ಶೆಂಗುಟ್ಟುವನ್ ನೀಲಗಿರಿಗೆ ಬಂದಾಗ, ಅವನ ಮನೋರಂಜನೆಗಾಗಿ ಕರುನಾಟಕದ ನಟಿ ನರ್ತಕಿಯರು ಆಡಿದ ಗೀತಾನೃತ್ಯದ ವರ್ಣನೆಯಿದೆ. ಇಷ್ಟು ಪ್ರಾಚೀನವೂ ವೈಭವಯುಕ್ತವೂ ಆದ ನಮ್ಮ (ದ್ರಾವಿಡರ) ಜನಪದ ರಂಗಭೂಮಿಯ ಪ್ರಭಾವ ಭರತನ ನಾಟ್ಯಶಾಸ್ತ್ರದ ಮೇಲೆ ಬಿದ್ದಿರಬೇಕೆಂದು ಪ್ರೊ. ಕೃಷ್ಣಶಾಸ್ತ್ರಿಯವರು ಅಭಿಪ್ರಾಯಪಟ್ಟಿದ್ದಾರೆ.

ಹಳೆಮೆಯೊಂದೇ ಕನ್ನಡ ರಂಗಭೂಮಿಯ ಹಿರಿಮೆಯಲ್ಲ ಎಂದು, ಕಳೆದ ನೂರು ನೂರೈವತ್ತು ವರ್ಷಗಳ ಕಾಲಾವಧಿಯಲ್ಲಿ ಅದರ ಇತಿಹಾಸವನ್ನು ವಿವೇಚಿಸಿದಾಗ ತಿಳಿದು ಬರುತ್ತದೆ. ಕನ್ನಡ ರಂಗಭೂಮಿ ಮೂರು ಮುಖ ತಳೆದು, ಜನಪದ ರಂಗಭೂಮಿಯಲ್ಲಿಯೂ ವೃತ್ತಿನಿರತ (ಪ್ರೊಫೆಷನಲ್) ರಂಗಭೂಮಿಯಲ್ಲಿಯೂ ವಿಲಾಸಿ (ಅಮೆಚೂರ್) ರಂಗಭೂಮಿಯಲ್ಲಿಯೂ ತನ್ನ ವೈಶಿಷ್ಟ್ಯವನ್ನು ಕಾಯ್ದುಕೊಂಡು ಬೆಳೆದು ಬಂದಿದೆ.

**ಜನಪದ ರಂಗಭೂಮಿ :** ಕನ್ನಡ ಜನಪದ ರಂಗಭೂಮಿಯ ಮೂಲ ಅಂಶಗಳೂ ದೈವಾರಾಧನೆಯಲ್ಲಿಯೇ ಕಂಡುಬರುತ್ತವೆ. ದೈವವನ್ನೋ ದೆವ್ವವನ್ನೋ ತೃಪ್ತಿಪಡಿಸಿ, ಅದರಲ್ಲಿ ತಮ್ಮ ಏಳಿಗೆಯನ್ನು ಕಂಡುಕೊಳ್ಳುತ್ತಿದ್ದ ಹಳ್ಳಿಗರ ಆರಾಧನೆಯಲ್ಲಿ ಆ ದೈವ ಅಥವಾ ದೆವ್ವದ ಅನುಕರಣ ಅನಿವಾರ್ಯವಾಯಿತು. ಇಂಥ ಅನುಕರಣ ಇಂದಿಗೂ ಕನ್ನಡನಾಡಿನ ಕರಾವಳಿಯ ಹಳ್ಳಿಗಳಲ್ಲಿರುವ ಭೂತಸ್ಥಾನಗಳಲ್ಲಿ ಕೋಲ ಮೊದಲಾದ ಉತ್ಸವಗಳಲ್ಲಿ ಕಂಡುಬರುತ್ತದೆ. ಈ ಅನುಕರಣ ಜನ ನಂಬುವಷ್ಟು ಪ್ರಭಾವಶಾಲಿಯಾಗುವಂತೆ ಮಾಡುವ ಸಲುವಾಗಿ ಬಳಸಿದ ಮುಖವರ್ಣಿಕೆ, ವೇಷಭೂಷಣ, ಅಲಂಕಾರ, ಆಯುಧಾದಿಗಳಿಂದ ಹಿಡಿದು, ಮಾತು ಗೀತೆ ಕುಣಿತಗಳ ವರೆಗೆ ಎಲ್ಲವೂ ನಾಟಕದ ಮೂಲ ಅಂಶಗಳೇ. ಕನ್ನಡನಾಡಿನಲ್ಲಿ ನಾಟಕದ ಮೂಲಪ್ರಕಾರವೆನಿಸುವ ವೈದ್ಯರ ಕುಣಿತ ನಾಗನೃತ್ಯಗಳು ಇಂದಿಗೂ ಕರಾವಳಿಯ ಹಳ್ಳಿಗಳಲ್ಲಿ ಆಗಾಗ ನೋಡಸಿಗುತ್ತವೆ.

ನಾಟಕೀಯವಾದ ಈ ಆರಾಧನೆಗಳು ನೋಡುವವರ ಮನಸ್ಸಿಗೂ ರಂಜನೆಯಾಡಿಸುವಂತೆ, ಸ್ಥೂಲವಾದ ಕಥಾವಸ್ತುವನ್ನು ಕ್ರಮೇಣ ಒಳಗೊಂಡುವು. ಸಾಮೂಹಿಕ ನೃತ್ಯಪ್ರಕಾರಗಳೂ ಬಳಕೆಗೆ ಬಂದುವು. ಮಲೆಕುಡಿಯರ ಕುಣಿತ, ಪರವಂತರ ಕುಣಿತ, ರಾಣಿಯರ ಕೋಲಾಟ, ಬೀರೇದೇವರ ಕುಣಿತ, ವೀರಭದ್ರನ ಕುಣಿತ ಮೊದಲಾದವು ಈ ಬಗೆಯಲ್ಲಿ ಕೆಲವು. ಇಂಥ ಆಟಗಳು ಬೆಳೆದು ನಾಟಕವಾಗುವ ನಡೆಯಲ್ಲಿ ನೃತ್ಯಗೀತೆಗಳೊಂದಿಗೆ ಅಭಿನಯವೂ ಅಭಿನಯದೊಂದಿಗೆ ಆಯಾ ಪಾತ್ರಗಳ ಮಾತುಗಳೂ ಸೇರಿಕೊಳ್ಳಬೇಕಾಯಿತು. ನೃತ್ಯ–ಗೀತೆಗಳಿಗಿಂತ ಹೆಚ್ಚಾಗಿ ನಾಟಕೀಯವಾದ ಸಂಭಾಷಣೆಗಳಲ್ಲಿ ಪರಿಣತರಾಗಿದ್ದ ನಟ್ಟುವ, ಬಹುರೂಪಿ ನಕಲಿ, ಹಾಸ್ಯಗಾರರೂ ಹಿಂದೆಯೇ ವೇಷ ಕಟ್ಟಿ ಆಟವಾಡುತ್ತಿದ್ದರು. ಹಿಂದಿನ ನೃತ್ಯಗೀತೆಗಳೊಂದಿಗೆ ಅವರ ಮಾತಿನ ಚಾತುರ್ಯ ಮಿಲನವಾಗಿ, ಕೋಲೆಬಸವ, ಗಂಗೆ–ಗೌರೀ ಸಂವಾದ, ಹಗಲುವೇಷದ ಆಟ ಮೊದಲಾದ ಸರಸವಾದ ಆಟಗಳು (ಅವುಗಳನ್ನು ಇನ್ನೂ ನಾಟಕ ಎನ್ನುವಂತಿರಲಿಲ್ಲ) ಜನಮನವನ್ನು ರಂಜಿಸಿದುವು.

ದಾಸರ ಆಟ : ರಂಗಕಲೆ ಇನ್ನೂ ಪ್ರಬುದ್ಧವಾದಾಗ, ನಾಟಕದ ಚೌಕಟ್ಟಿನಲ್ಲಿಯೇ ಬರುವಂಥ ಜಾನಪದ ರಂಗ ಪ್ರಕಾರಗಳು ಮೈತಳೆದು ಬಂದುವು. ಇವುಗಳಲ್ಲಿ ಉತ್ತರ ಮೈಸೂರಿನ ದಾಸರಾಟ ಮುಖ್ಯವಾದುದು. ಗಂಡು ಮತ್ತು ಹೆಣ್ಣು ದಾಸರ ಮೇಳವನ್ನೊಳಗೊಂಡ ಈ ಮನೋರಂಜನಪ್ರಕಾರದಲ್ಲಿ ರಂಗದ ಮೇಲೆ ನಾಯಕ ಗೊಡ್ಡಿಭೀಮಣ್ಣ, ನಾಯಿಕೆ ಚಿಮಣಾ ಮತ್ತು ವಿದೂಷಕ ಜವ್ವಾರಿ ಇವರು ಗಂಡು ಹೆಚ್ಚೋ ಹೆಣ್ಣು ಹೆಚ್ಚೋ ಎಂಬ ವಸ್ತುವಿನ ಮೇಲೆ ಎಲ್ಲೆಲ್ಲಿಂದಲೋ ಎಳೆದು ತಂದ ಆಧಾರಗಳನ್ನೆಲ್ಲ ಉಪಯೋಗಿಸಿ, ನೋಡುವವರ ಕಣ್ಣು ಮನ ತಣ್ಣಿಯುವ ರೀತಿಯಲ್ಲಿ ನಾಟಕವಾಡುತ್ತಾರೆ. ನೃತ್ಯ–ಗೀತ ಸಂಭಾಷಣೆಗಳ ಸರಸ ಸಂಗಮವಾದ ಈ ಆಟವೇ ಮಹಾರಾಷ್ಟ್ರದ ತಮಾಷಾ ಆಗಿ ಪರಿವರ್ತನೆಗೊಂಡು, ಅಲ್ಲಿ ಮತ್ತಿಷ್ಟು ಪರಿಷ್ಕಾರಗೊಂಡಮೇಲೆ ಉತ್ತರ ಕನ್ನಡ ರಂಗಭೂಮಿಗೆ ರಾಧಾನ ಆಟ ಎಂಬ ಹೆಸರಿನಿಂದ ಹಿಂದಿರುಗಿ ಬಂದಿತು. ಈ ಆಟದಲ್ಲಿಯೂ ನಿರ್ದಿಷ್ಟವಾದ, ರಂಜಕವಾದ ಕಥಾವಸ್ತು ಇಲ್ಲದಿದ್ದರೂ ಮನಸ್ಸನ್ನು ಆಹ್ಲಾದಗೊಳಿಸುವ ಹಾಡುಗಳಿಂದಾಗಿ, ಕುಣಿತದಿಂದಾಗಿ, ತಡೆಯರಿಯದ ಹಾಸ್ಯದಿಂದಾಗಿ, ಪಾತ್ರಪೋಷಣೆಯಿಂದಾಗಿ ಇಂದೂ ಉತ್ತರ ಮೈಸೂರಿನಲ್ಲಿ ಜನರ ಅನುರಾಗ ಗಳಿಸಿದೆ.

ಜನಪದ ರಂಗದಲ್ಲಿ ಮಾತುಗಾರಿಕೆಯಲ್ಲಿ ನಾಟಕಗಳನ್ನೇ ಹೋಲುವ ಪ್ರಯೋಗಗಳೆಂದರೆ ನಲವತ್ತು ಐವತ್ತು ವರ್ಷಗಳಿಗೆ ಈಚಿನ ಪ್ರಯೋಗಗಳೇ. ರೂಪಸಿಂಗನ ಆಟ, ಮುಕ್ಕುಂದ–ಗೋವಿಂದ, ಸಂಗ್ಯಾ–ಬಾಳ್ಯಾ ಮೊದಲಾದ ಜಾನಪದ ನಾಟಕಗಳ ವೈಶಿಷ್ಟ್ಯವೆಂದರೆ, ಈ ಎಲ್ಲ ಆಟಗಳೂ ಸಾಮಾಜಿಕ ಕಥಾವಸ್ತುವನ್ನು ಕುರಿತು ಕಟ್ಟಿದಂಥವು. ಎರಡನೆಯದಾಗಿ ಹಾಡು, ಕುಣಿತಗಳಿಗಿಂತ ಸರಸವಾದ ಸಂಭಾಷಣೆಯಲ್ಲಿ ಮೇಲುಗೈ ಪಡೆದಿರುವಂಥವು.

**ಬೊಂಬೆಯಾಟ :** (ಪಪೆಟ್) ಕನ್ನಡ ಜನಪದ ರಂಗಭೂಮಿಯಲ್ಲಿ ಬಹಳ ಜನಾನುರಾಗ ಗಳಿಸಿದ ಒಂದು ಮನೋರಂಜನ ಪ್ರಕಾರವೆಂದರೆ ಬೊಂಬೆಯಾಟ. ಬೊಂಬೆಗಳಿಗೆ ಪಾತ್ರಗಳಂತೆ ವೇಷತೊಡಿಸಿ ಅಲಂಕಾರಮಾಡಿ, ಅವುಗಳಿಂದ ಮಾನವ ಚಟುವಟಿಕೆಗಳ ಅನುಕರಣಮಾಡಿಸುವ ಕಲೆ ಅದು. ತುಂಬ ಹಿಂದಿನ ಕಾಲದಿಂದ ಈ ಕಲೆ ಅನೇಕ ಪೌರಸ್ತ್ಯ ದೇಶಗಳಲ್ಲಿ ಬೆಳೆದುಬಂದಿದೆ. ಸೂತ್ರದ ಬೊಂಬೆ ಎಂದು ಕರೆಸಿಕೊಳ್ಳುವ ಈ ಕಲೆ ಕನ್ನಡನಾಡಿನಲ್ಲಿ ಹಿಂದಿನ ಕಾಲದಿಂದ ಇದ್ದಿರಬೇಕು. ಗೊಂಬೆಯಾಟವನಾಡಿಸಿದ ಮಹಾಭಾರತವ ಎಂಬ ಪುರಂದರದಾಸರ ನುಡಿ ಅಥವಾ ಡಿಂಭದೊಳು ಪ್ರಾಣವಿರಲು ಕಾಂಬ ಸೂತ್ರಗೊಂಬೆಯಂತೆ ಎಂಬ ಕನಕದಾಸರ ನುಡಿ ಈ ಮಾತಿನ ಸತ್ಯಾರ್ಥವನ್ನು ಸೂಚಿಸುತ್ತದೆ. ಭರತೇಶನ ಆಸ್ಥಾನಕ್ಕೆ ಆಗಮಿಸಿದ ಆಟಗಾರರಲ್ಲಿ ಗೊಂಬೆಯಾಡಿದವರೂ ಇದ್ದರೆಂದು ರತ್ನಾಕರವರ್ಣಿ ಹಾಡಿದ್ದಾನೆ. ವಿಜಯನಗರ ಕಾಲದ ಶಿಲಾಶಾಸನಗಳಲ್ಲಿಯೂ ಬೊಂಬೆಯಾಟವನ್ನು ಕುರಿತು ಮಾತುಗಳಿವೆ.

ಪಾತ್ರಗಳಂತೆ ವೇಷಭೂಷಣಗಳನ್ನು ಧರಿಸಿದ ಬೊಂಬೆಗಳನ್ನು ಸೂತ್ರ ಹಿಡಿದು ಆಡಿಸುವವನೇ ಸೂತ್ರಧಾರ. ರಾಮಾಯಣ, ಮಹಾಭಾರತ, ಭಾಗವತಗಳ ಅನೇಕ ನಾಟಕೀಯ ಕಥಾವಸ್ತುಗಳನ್ನು ಬೊಂಬೆಯಾಟಕ್ಕೆ ಅಳವಡಿಸಿಕೊಳ್ಳಲಾಗಿದೆ. ಬೊಂಬೆಗಳು ಆಡುವಾಗ, ಕುಣಿಯುವಾಗ, ಯುದ್ಧಮಾಡುವಾಗ, ಅಭಿನಯಮಾಡುವಾಗ ಹಿಮ್ಮೇಳದ ಗೀತೆ ಮಾತು ಶಬ್ದವಿಶೇಷಗಳ ಸಂಯೋಜನೆಯನ್ನು ಪರದೆಯ ಹಿಂದೆ ನಿಂತು ಬೊಂಬೆಗಳ ಅವಯವಗಳಿಗೆ ಕಟ್ಟಿದ ಸೂತ್ರಗಳನ್ನು ತನ್ನ ಕೈಬೆರಳು ಹಸ್ತ ಮುಂಗಟ್ಟುಗಳಿಗೆ ಕಟ್ಟಿಕೊಂಡು ಆಡಿಸುವ ಸೂತ್ರಧಾರ ಹಾಗೂ ಮೇಳದವರು ಒದಗಿಸುತ್ತಾರೆ. ಬೆಳಗಾಂವಿಯ ಗೊಂಬೆ ಅನಂತಪ್ಪನವರು ಮನೆತನದಿಂದ ಗೊಂಬೆಯಾಟದ ಕಲೆಯಲ್ಲಿ ಪರಿಣತರು. ಅವರ ಮೇಳದವರು ರಂಗದ ಮೇಲೆ ಒಟ್ಟಿಗೆ ಹತ್ತಾರು ಬೊಂಬೆಗಳನ್ನು ಪಾತ್ರದಲ್ಲಿ ತರುತ್ತಿದ್ದರು. ಸತ್ಯಭಾಮೆಯ ಪಾತ್ರ ವಹಿಸಿದ ಬೊಂಬೆ ಕೃಷ್ಣನ ಮೇಲೆ ಮುನಿಸಿಕೊಂಡು, ತನ್ನ ಆಭರಣಗಳನ್ನೆಲ್ಲ—ಮೂಗುತಿಯನ್ನು ಮೊದಲು ಮಾಡಿ—ಕಳೆದೆಸೆದು ಶೋಕಾಭಿನಯಮಾಡುವಾಗ ಪ್ರೇಕ್ಷಕರ ಕಣ್ಣು ಒದ್ದೆಯಾಗುತ್ತಿದ್ದುವೆಂದು ಮುದವೀಡು ಕೃಷ್ಣರಾಯರು ಬರೆದಿದ್ದಾರೆ. ಅತ್ಯಂತ ನಿಷ್ಕೃಷ್ಟವಾದ ಸಾಧನೆಯಿಂದ ಕರಗತಮಾಡಿಕೊಂಡಿದ್ದ ಕಲೆ ಅದು. ಹಿಂದಿನ ಕಾಲದ ಜಾತ್ರೆ ಉತ್ಸವಗಳಲ್ಲಿನ ಮುಖ್ಯ ಮನೋರಂಜನ ಪ್ರಕಾರವಾಗಿದ್ದ ಬೊಂಬೆಯಾಟ ಇಂದು ಕನ್ನಡನಾಡಿನಲ್ಲಿ ಇಳಿಮುಖವಾಗುತ್ತಿದೆ.

**ತೊಗಲು ಬೊಂಬೆ :** ತೊಗಲುಬೊಂಬೆ ಕನ್ನಡದ ಜನಪದರಂಗದ ಇನ್ನೊಂದು ಪ್ರಮುಖ ಮನೋರಂಜನ ಪ್ರಕಾರ. ಬಲು ತೆಳ್ಳಗಾಗುವಂತೆ ಚರ್ಮವನ್ನು ಹದಮಾಡಿ, ಮಾನವ ಮತ್ತು ಪ್ರಾಣಿಪಕ್ಷಿಗಳ ಆಕಾರ ಬರುವಂತೆ ಕತ್ತರಿಸಿ, ಮಡಿಸಿ ಪಟ್ಟಿಗಳನ್ನು ಹೆಣೆದು, ಕತ್ತರಿಯಿಂದಲೇ ಕುಸುರಿ ಕೆಲಸಮಾಡಿ, ಅಂಗ ಉಡುಪು ಕೇಶಗಳನ್ನು ಸೂಚಿಸುವಂತೆ ಬೇರೆ ಬೇರೆ ಬಣ್ಣಗಳನ್ನು ಸೂಕ್ತವಾಗಿ ತುಂಬಿ—ಆ ಆಕೃತಿಯ ಎರಡೂ ತುದಿಗಳನ್ನು ಸೀಳುಬೆತ್ತಕ್ಕೆ ಸಿಕ್ಕಿಸಿದ ಅನಂತರ ಅವನ್ನು ಬಿಳಿಯ ಪರದೆಯ ಹಿಂದೆ ಹಿಡಿದು ಅದರ ಹಿಂದಿನಿಂದ ತೀಕ್ಷ್ಣವಾದ ಬೆಳಕನ್ನು ಬೀಳಿಸುತ್ತಾರೆ. ಪರದೆಯ ಮೇಲೆ ಬಿದ್ದ ಆ ವರ್ಣರಂಜಿತ ಆಕಾರಗಳು—ಹತ್ತು ತಲೆಯ ರಾವಣ, ಸಾವಿರ ಹೆಡೆಯ ಆದಿಶೇಷ, ಬೃಹತ್ತಾಗಿ ಬೆಳೆದು ಆಕಾಶವನ್ನು ಅಳೆಯುವ ತ್ರಿವಿಕ್ರಮ, ಇಂತಹವಂತೂ ಬಲು ಪರಿಣಾಮಕಾರಿಯಾದ ಚಿತ್ರಗಳಾಗುತ್ತವೆ. ನಡೆದಾಡುವಂತೆ, ಹಾರುವಂತೆ, ಕುಣಿಯುವಂತೆ, ಕದನವಾಡುವಂತೆ, ಸಂಭಾಷಿಸುವಂತೆ ಕೈಚಳಕದಿಂದ ಆಡಿಸುತ್ತಾರೆ. ಪರದೆಯ ಮುಂದೆ ಕುಳಿತ ಜನಕ್ಕೆ ವರ್ಣರಂಜಿತ ಚಲನಚಿತ್ರವನ್ನೇ ನೋಡಿದ ಅನುಭವವಾಗುತ್ತವೆ. ಈ ಆಟದಲ್ಲಿಯೂ ಪೌರಾಣಿಕ ಪ್ರಸಂಗಗಳೇ ಬಹಳ. ಮಾತು, ಗೀತೆ, ಶಬ್ದವಿಶೇಷಗಳನ್ನೆಲ್ಲ ಆಟಗಾರ ಮತ್ತು ಅವನ ಮೇಳದವರು (ಎಂದರೆ, ಆತನ ತಂದೆ, ತಾಯಿ, ಹೆಂಡತಿ, ಮಕ್ಕಳು ಮೊದಲಾದವರು) ಪರದೆಯ ಮೇಲಿನ ಪಾತ್ರಗಳಿಗೆ ಸರಿಯಾಗಿ ಹೊಂದಿಸಿ ಹೊರಡಿಸುತ್ತಾರೆ. ಕಿಳ್ಳೆಕೇತರೆಂಬ ಹೆಸರಿನ ಈ ಆಟಗಾರರು ತೊಗಲುಬೊಂಬೆಯ ಕಲೆಯಲ್ಲಿ ನಿಷ್ಣಾತರು. ಈ ಜನದ ಅನೇಕ ಮನೆತನಗಳು ಕನ್ನಡನಾಡಿನ ಬಳ್ಳಾರಿ ಜಿಲ್ಲೆಯಲ್ಲಿ ಇದ್ದುವು. ಬೊಂಬೆಯಾಟದಂತೆಯೇ ತೊಗಲುಬೊಂಬೆಯೂ ಇಂದು ಕನ್ನಡ ಜನಮನದಿಂದ ಮೆಲ್ಲ ಮೆಲ್ಲನೆ ಮರೆಯಾಗುತ್ತಿದೆ.

**ಮೂಡಲಪಾಯ :** ಕರಾವಳಿಯ ಯಕ್ಷಗಾನವನ್ನು ಸ್ಥೂಲವಾಗಿ ಹೋಲುತ್ತ, ಘಟ್ಟದ ಮೇಲಿನ ಮೈದಾನ ಪ್ರದೇಶಗಳಲ್ಲಿ ಪ್ರಸಿದ್ಧವಾಗಿರುವ ಜನಪದರಂಗಭೂಮಿಯ ಮತ್ತೊಂದು ಪ್ರಕಾರ ಮೂಡಲಪಾಯ. ಈ ಆಟಕ್ಕೆ ಅಟ್ಟದಾಟ, ಬಯಲಾಟ, ದೊಡ್ಡಾಟ, ದೊಂಬಿದಾಸರ ಕುಣಿತ, ದಶಾವತಾರದ ಆಟ ಎಂಬ ಹೆಸರುಗಳೂ ಇವೆ. ಪಾತ್ರಗಳ ಹಾಡು, ಕುಣಿತ, ಸಂಭಾಷಣೆ, ಅಭಿನಯಗಳ ದೃಷ್ಟಿಯಿಂದ ಇದರಲ್ಲಿ ಯಕ್ಷಗಾನದಲ್ಲಿನಷ್ಟು ನಿಷ್ಕೃಷ್ಟತೆ, ನಿಶ್ಚಯತೆ ಇಲ್ಲ. ಇದರ ಕಲಾವಿದರು ಯಕ್ಷಗಾನದ ಕಲಾವಿದರಂತೆ ಸುಶಿಕ್ಷಿತರಲ್ಲ, ಸುಸಂಸ್ಕೃತರಲ್ಲ ಎಂದರೂ ಸಲ್ಲುತ್ತದೆ. ಆದ್ದರಿಂದ ಪಾತ್ರಪೋಷಣೆಯಲ್ಲಿ ಅರಕೆಯಾಗುತ್ತದೆ. ಅರ್ಥ ಶಿಥಿಲವಿದ್ದರೂ ಶಬ್ದದ ಆಟಾಟೋಪಕ್ಕೆ ಮರುಳಾಗಿ, ಬಲು ಭಾರವಾದ ಭಾಷೆಯನ್ನು ಪಾತ್ರಧಾರಿಗಳು ಗಟ್ಟಿಮಾಡಿ ಉರುಳಿಸಿಬಿಡುತ್ತಾರೆ. ಸಮರದ ಸಂದರ್ಭಗಳಲ್ಲಿ ಬಣ್ಣದ ವೇಷದ ನೃತ್ಯ ನೆಗೆದಾಟಗಳೂ ಆಗಬಹುದು. ಇಷ್ಟಾದರೂ, ವೀರರಸ ಪ್ರತಿಪಾದನೆಯಲ್ಲಿ ಮೂಡಲಪಾಯ ಹೆಸರುಪಡೆದಿದೆ.

ಪುರಾಣದ ಪ್ರಸಂಗಗಳೇ ಮೂಡಲಪಾಯದ ಕಥಾವಸ್ತುಗಳು. ರಾತ್ರಿಯಿಂದ ಮುಂಜಾವಿನ ವರೆಗೆ ನಡೆಯುವ ರಂಗದ ಮೇಲಿನ ಈ ಆಟಗಳಲ್ಲಿ ಹಾಡು, ಕುಣಿತ, ಹಾಸ್ಯ, ಮಾತು ಯಥೇಚ್ಛವಾಗಿರುತ್ತವೆ. ಇಲ್ಲಿಯ ವೇಷಭೂಷಣ ಮುಖವರ್ಣಿಕೆಗಳು ಸೂಕ್ಷ್ಮತೆಯನ್ನು ಮೀರಿದಂಥವು. ಪಾತ್ರಗಳನ್ನು ಸಭೆಗೆ ಪರಿಚಯಮಾಡಿಕೊಡುವ ಸಲುವಾಗಿ, ಅಲ್ಲದೆ ರಂಗಕ್ಕೆ ಬಂದ ಪ್ರತಿಯೊಂದು ಪಾತ್ರದಿಂದಲೂ ಹಿಂದಿನ, ಇಂದಿನ, ಮುಂದಿನ ಸಂಗತಿಗಳನ್ನು ಹೊರಡಿಸುವ ಸಲುವಾಗಿ ಸಾರಥಿ ಇಲ್ಲವೆ ಕೋಡಂಗಿ ಎಂಬ ಹಾಸ್ಯಪಾತ್ರವಿರುತ್ತದೆ. ರಂಗದ ಮೇಲೆ, ಹಿಂದಿನ ಪರದೆಯ ಮುಂದೆ, ಮಧ್ಯದಲ್ಲಿ, ಭಾಗವತನನ್ನು ಹೊಂದಿಕೊಂಡು ಹಾಡುವ ಹಿಮ್ಮೇಳದವರಿರುತ್ತಾರೆ. ಸುಂದರಿ, ಮೃದಂಗ, ತಾಳ ಮೊದಲಾದ ವಾದ್ಯವಿಶೇಷಗಳನ್ನು ಹಿಮ್ಮೇಳ ಬಳಸುತ್ತದೆ.

ಮೂಡಲಪಾಯದಲ್ಲಿ ಪ್ರಧಾನಪಾತ್ರವೆಂದರೆ ಕಥಾನಾಯಕನಲ್ಲ, ಖಳನಾಯಕ, ಎಂದರೆ ಇಲ್ಲಿ ರಾಮನಿಗಿಂತ ರಾವಣನಿಗೆ ಹೆಚ್ಚಿನ ಮಹತ್ತ್ವ ಕೊಟ್ಟು ಆ ಪಾತ್ರವನ್ನು ತುಂಬ ಎಚ್ಚರಿಕೆಯಿಂದ ಸಿದ್ಧಗೊಳಿಸುತ್ತಾರೆ. ಖಳನಾಯಕನ ಪಾತ್ರಕ್ಕೆ ಬಣ್ಣದ ವೇಷ ಎಂದೂ ಹೆಸರು. ಬಣ್ಣದ ವೇಷ ಕಟ್ಟುವ ಕಲಾವಿದ, ಚಾವಡಿಯಲ್ಲೊ ತನ್ನ ಹಟ್ಟಿಯಲ್ಲೊ ರೌದ್ರಾಲಂಕಾರ ಮಾಡಿಕೊಂಡು, ವೇಷಭೂಷಣಗಳನ್ನು ಧರಿಸಿ, ಬೆಳಕಿನ ಮಧ್ಯೆ, ಓಲಗ ತಮಟೆ ತುತ್ತೂರಿಗಳನ್ನು ಮುಂದೆ ಮಾಡಿಕೊಂಡು ಮೆರವಣಿಗೆಯಲ್ಲಿ ರಂಗಮಂಚಕ್ಕೆ ಬರುವುದು ವಾಡಿಕೆ. ಮಾರ್ಗದ ಮಧ್ಯೆ ಅಲ್ಲಲ್ಲಿ ನಿಂತು ಆತ ಸುತ್ತು ನೃತ್ಯಮಾಡುತ್ತಾನೆ, ಹಾರುತ್ತಾನೆ, ನೆಗೆಯುತ್ತಾನೆ, ಅಟ್ಟಹಾಸ ಆಟೋಪಗಳನ್ನು ಮಾಡುತ್ತಾ ಬರುತ್ತಾನೆ. ರಾತ್ರಿ ಪ್ರಾರಂಭವಾದ ಆಟ ಮುಂಜಾನೆ ಮುಗಿಯುವ ಹೊತ್ತಿಗೆ ಆತನ ಚಿತ್ರ ನೋಟಕರ ಕಣ್ಣಿಗೆ ಕಟ್ಟಿಹೋಗುತ್ತದೆ; ಧ್ವನಿ ಕಿವಿಗಳಲ್ಲಿ ಮೊರೆಯುತ್ತದೆ. ಆತ ಒಳ್ಳೆಯ ನಟನಾದರಂತೂ ನೋಟಕರ ಮೈಯಲ್ಲಿ ಅಡಿಗಡಿಗೆ ಜುಮ್ಮುತಟ್ಟುತ್ತದೆ.

ಮೂಡಲಪಾಯ ಕನ್ನಡನಾಡಿನ ಬಯಲುಸೀಮೆಯ ಹಳ್ಳಿಗಳಲ್ಲಿನ ಒಂದು ಅದ್ಭುತರಮ್ಯ ಮನೋರಂಜನ ಪ್ರಕಾರ. ಇಂದು ಅದರ ಮೇಲೆ ಪಟ್ಟಣಗಳಲ್ಲಿನ ವೃತ್ತಿನಿರತ ರಂಗಭೂಮಿಯ ಪ್ರಭಾವ ಹೆಚ್ಚಾಗಿ ಬಿದ್ದು ಅದರ ಮೂಲರೂಪ ಬದಲಾಗುತ್ತ ನಡೆದಿದ್ದರೂ ಉತ್ತರ ಮೈಸೂರಿನಲ್ಲಿ ಹೆಚ್ಚು ಪ್ರಚಲಿತವಾಗಿರುವ ಕೃಷ್ಣಪಾರಿಜಾತದಂಥ ದೊಡ್ಡಾಟದ ಪ್ರಕಾರಗಳ ಪ್ರಭಾವ ವೈಶಿಷ್ಟ್ಯಗಳು ಇನ್ನೂ ಮಾಸಿಹೋಗಿಲ್ಲ.

**ಸಣ್ಣಾಟ :** ಮೂಡಲಪಾಯದ ಛಾಯೆಯನ್ನೇ ಪಡಿಮೂಡಿಸುತ್ತಿದ್ದರೂ ವೃತ್ತಿನಿರತ ನಾಟಕದ ಪರದೆ, ಪರಿಕರಣಗಳನ್ನು ಬಳಸಿಕೊಂಡು ಇತ್ತೀಚೆಗೆ ಹೆಸರು ಪಡೆಯುತ್ತಿರುವ ಮತ್ತೊಂದು ಜಾನಪದ ಪ್ರಕಾರವೆಂದರೆ ಸಣ್ಣಾಟ. ಮೂಡಲಪಾಯಕ್ಕೂ ವೃತ್ತಿನಿರತ ರಂಗಭೂಮಿಗೂ ಮಧ್ಯದ ಮೈಲುಗಲ್ಲು ಇದು. ಮೂಡಲಪಾಯದಂತೆ ಇಲ್ಲೂ ಭಾಗವತನೂ ಹಿಮ್ಮೇಳದವರೂ ಕಥೆಯ ಸೂತ್ರಗಳನ್ನು ಪದ್ಯರೂಪದಲ್ಲಿ ಹೇಳಿದಮೇಲೆ ಪಾತ್ರಗಳು ಮಾತನಾಡಿ ಅಭಿನಯಿಸುತ್ತವೆ. ಆದರೆ ಇಲ್ಲಿಯ ವೇಷಭೂಷಣ, ರಂಗಸಜ್ಜಿಕೆ, ಪಾತ್ರಾಲಂಕಾರಗಳೆಲ್ಲ ಕಂಪನಿಯ ನಾಟಕಗಳನ್ನೇ ಅನುಕರಿಸಿ ಮಾಡಿದಂಥವು. ಅಲ್ಲದೆ ಇದರ ಕಥಾವಸ್ತು ಪೌರಾಣಿಕವಲ್ಲ. ಸಾಧುಸಂತರ ಜೀವನಗಳನ್ನು ಕುರಿತು ಕಟ್ಟಿದ ಆಟಗಳು ಇವು. ಧಾರವಾಡದ ಬಳಿಯ ಕೆಳಗೇರಿಯಲ್ಲಿಯ ಪ್ರಸಿದ್ಧವಾದ ಕಲೆಗಾರ ತಂಡ ಕನ್ನಡನಾಡಿನ ಹಾಗೂ ಹೊರಗಿನ ಸಾಧುಸಂತರ ಜೀವನಗಳನ್ನು ಸಣ್ಣಾಟಗಳಲ್ಲಿ ಅಳವಡಿಸಿದೆ. ನೀತಿಪ್ರಸಾರವೇ ಸಣ್ಣಾಟದ ಗುರಿ.

**ವೃತ್ತಿನಿರತ ರಂಗಭೂಮಿ :** ಕಲಿತವರ ಮನೋರಂಜನೆಯ ಸಲುವಾಗಿ, ಸಂಸ್ಕೃತ ನಾಟಕಗಳನ್ನು ಆಧಾರವಾಗಿಟ್ಟುಕೊಂಡಿದ್ದ ಅರಮನೆ ರಂಗಭೂಮಿಗೂ ಕಲಿಯದವರ ಮನೋರಂಜನೆ ಮಾಡುತ್ತಿದ್ದ ಜಾನಪದ ರಂಗಭೂಮಿಗೂ ನಡುವೆ, ಜನಸಾಮಾನ್ಯರ ಎಂದರೆ ಮಧ್ಯಮಾರ್ಗದ ಜನತೆಯನ್ನು ರಂಜಿಸುವ ಧ್ಯೇಯದಿಂದ, ಹುಟ್ಟಿದುದೇ ವೃತ್ತಿನಿರತರಂಗಭೂಮಿ. ಭಾರತದಲ್ಲಿ ಇದರ ಬೆಳವಣಿಗೆಯಾಗಿರುವುದು ಕಳೆದ ಸುಮಾರು ನೂರೈವತ್ತು ವರ್ಷಗಳ ಕಾಲದಲ್ಲಿ ಅಷ್ಟೆ. ಪಾಶ್ಚಾತ್ಯ ಸಂಪರ್ಕದಿಂದಾಗಿ ರಂಗಕಲೆಯ ಬಗ್ಗೆ ಜನರಲ್ಲಿ ಬಂದ ಹೊಸ ಅರಿವು ಭಾರತದ ವೃತ್ತಿರಂಗಭೂಮಿಯ ಸ್ಥಾಪನೆಗೆ ಪ್ರಚೋದನೆ ಕೊಟ್ಟಿತು. ದುಡ್ಡಿಗಾಗಿ ದುಡಿಯುವ ಈ ರಂಗಭೂಮಿ, 1775–76ರಲ್ಲಿ ಮೊದಲಿಗೆ ಕಲ್ಕತ್ತದಲ್ಲಿ ಪ್ರಾರಂಭವಾಯಿತು. 1842ರ ಹೊತ್ತಿಗೆ ಬೊಂಬಾಯಿಯಲ್ಲಿ ಬಾಡಿಗೆಗೆ ಕೊಡಮಾಡುವ ರಂಗಶಾಲೆಗಳನ್ನು

ನಿರ್ಮಿಸಲಾಯಿತು. ಮೂವತ್ತು ವರ್ಷಗಳ ಅನಂತರ ಪಾರ್ಸಿ ಹಾಗೂ ಮರಾಠೀ ನಾಟಕ ಕಂಪನಿಗಳು ಉತ್ತರ ಕರ್ಣಾಟಕ ಹಾಗೂ ಮೈಸೂರಿಗೆ ಭೇಟಿಯಿತ್ತು ನಾಟಕಗಳನ್ನು ಪ್ರದರ್ಶಿಸಿದ ಮೇಲೆ ಕನ್ನಡನಾಡಿನಲ್ಲಿ ವೃತ್ತಿನಿರತ ರಂಗಭೂಮಿಯು ಅವತಾರವಾಯಿತೆನ್ನಬೇಕು.

ಉತ್ತರ ಕರ್ಣಾಟಕದಲ್ಲಿ : 1870ರ ವೇಳೆಗೆ ಪಾರ್ಸಿ ಹಾಗೂ ಮರಾಠೀ ನಾಟಕ ಕಂಪನಿಗಳು ಉತ್ತರ ಕರ್ಣಾಟಕದ ಮುಖ್ಯಪಟ್ಟಣಗಳಿಗೆ ಭೇಟಿ ಕೊಟ್ಟುವು. ಮರಾಠೀ ಭಾಷೆಯ ಅಲ್ಪಸ್ವಲ್ಪ ಪರಿಚಯವಿದ್ದ ಈ ಕ್ಷೇತ್ರದ ಜನ ಮರಾಠಿ ನಾಟಕಗಳಿಗೆ ಮಾರುಹೋದರು, ಧನದ ಸೂರೆಯಾಯಿತು. ಇದನ್ನು ನೋಡಿ ಖತಿಗೊಂಡ ಸಕ್ಕರಿ ಬಾಳಾಚಾರ್ಯರು (ಶಾಂತಕವಿ) ಕನ್ನಡದಲ್ಲಿಯೇ ನಾಟಕಗಳನ್ನು ರಚಿಸಿ ಆಡಿಸಬೇಕೆಂದು ಪಣತೊಟ್ಟು ನಿಂತರು. ಕನ್ನಡ ಜಾನಪದ ರಂಗಭೂಮಿಯ ಭಾಗವತರಾಟವೇ ಮಹಾರಾಷ್ಟ್ರದ ವೃತ್ತಿರಂಗಭೂಮಿಗೆ ಪ್ರಚೋದನೆಯನ್ನಿತ್ತ ಶಕ್ತಿಯೆಂಬುದನ್ನರಿತಿದ್ದ ಶಾಂತಕವಿಗಳು ಅದೇ ಭಾಗವತರಾಟವನ್ನೇ ತಮ್ಮ ಹೊಸ ನಾಟಕದ ಅಡಿಪಾಯವನ್ನಾಗಿ ಇಟ್ಟುಕೊಂಡು. ಮರಾಠೀ ನಾಟಕಗಳು ಬಳಸುತ್ತಿದ್ದ ರಂಗಪರಿಕರಗಳನ್ನು ಸಿದ್ಧಗೊಳಿಸಿ ಅಳವಡಿಸಿಕೊಂಡು, 1877ರ ವೇಳೆಗೆ ಗದಗಿನಲ್ಲಿ ಶ್ರೀವೀರನಾರಾಯಣ ಪ್ರಸಾದಿತ ಕೃತಪುರ ನಾಟಕ ಮಂಡಳಿಯನ್ನು ಸ್ಥಾಪಿಸಿದರು. ಈ ಸಂಘ ಅಭಿನಯಿಸಿದ ಮೊದಲ ನಾಟಕ, ಶಾಂತಕವಿಗಳು ರಚಿಸಿದ ಉಷಾಹರಣ. ಇದಲ್ಲದೆ, ಈ ಸಂಘಕ್ಕಾಗಿ ಕೀಚಕವಧಾ, ವತ್ಸಲಾಹರಣ, ಸೀತಾರಣ್ಯಪ್ರವೇಶ, ಸುಂದೋಪಸುಂದ ಮೊದಲಾದ ಹತ್ತಾರು ನಾಟಕಗಳನ್ನು ರಚಿಸಿ, ನಟರನ್ನು ಕಲೆಹಾಕಿ ನಿರ್ದೇಶಿಸಿ ಹಟದಿಂದ ನಾಟಕಗಳನ್ನು ಆಡಿಸಿದುದರಿಂದ ಶಾಂತಕವಿಗಳು ಕರ್ಣಾಟಕ ನಾಟಕ ಪ್ರಥಮಗುರು ಎನ್ನಿಸಿಕೊಂಡರು.

ಸುಮಾರು ಹದಿನಾರು ವರ್ಷಗಳ ಕಾಲ ವಿಜಯವೈಭವದಿಂದ ಮೆರೆದ ಕೃತಪುರ ನಾಟಕಮಂಡಳಿಯ ವರ್ಚಸ್ಸು, ಉತ್ತರ ಕರ್ಣಾಟಕದ ಹಳ್ಳಿ ಪಟ್ಟಣಗಳಲ್ಲಿ ಅನೇಕ ನಾಟಕ ಸಂಸ್ಥೆಗಳ ಹುಟ್ಟಿಗೆ ಕಾರಣವಾಯಿತು. ಹೀಗೆ ಹುಟ್ಟಿದ ಅನೇಕ ಸಂಘಗಳಲ್ಲಿ ಹಲತಿಗ್ಗಿ ಕಂಪನಿಯ ಹೆಸರು ಹೇಳುವಂತಹುದು. 1878–79ರಲ್ಲಿ ಸ್ಥಾಪಿತವಾದ ಈ ಸಂಘಕ್ಕಾಗಿ ವೆಂಕಣ್ಣಾಚಾರ್ಯ ಅಗಳಗಟ್ಟಿಯವರು (ಶ್ರೀನಿವಾಸ ಕವಿ) ಶ್ರೀಮತಿ ಪರಿಣಯ, ದ್ರೌಪದೀವಸ್ತ್ರಾಪಹರಣ ಮೊದಲಾದ ಪ್ರಭಾವಶಾಲಿ ಪೌರಾಣಿಕ ನಾಟಕಗಳನ್ನು ರಚಿಸಿಕೊಟ್ಟರು. ನರಗುಂದ, ನವಲಗುಂದ, ಧಾರವಾಡ, ಬಾದಾಮಿ, ರಬಕವಿ ಮೊದಲಾದ ಊರುಗಳಲ್ಲಿಯ ನಾಟಕಸಂಘಗಳು ಹೆಸರುಗಳಿಸಿದಂಥವು. ಇವುಗಳಲ್ಲಿ ಮುಖ್ಯವಾದುದೆಂದರೆ ಧಾರವಾಡದ ತಂತುಪುರಸ್ಥ ನಾಟಕಮಂಡಳಿ. ಮಹಾರಾಷ್ಟ್ರ, ಆಂಧ್ರ, ತಮಿಳುನಾಡುಗಳಲ್ಲಿ ಯಶಸ್ವಿಯಾಗಿ ನಾಟಕಗಳನ್ನಾಡಿದ ಈ ಸಂಘದಲ್ಲಿ ಭೀಮಾಚಾರ್ಯ ಏರಿ, ಗೋಪೀನಾಥರಾವ್ ಜೋಷಿಯವರಂಥ ಮಹಾನ್ ನಟರಿದ್ದರು. (ಈ ಸಂಘ ಆಂಧ್ರ ನಾಟಕರಂಗದ ಹುಟ್ಟಿಗೆ ಕಾರಣವಾಯಿತೆಂದು ಅಲ್ಲಿಯ ರಂಗವಿಮರ್ಶಕರಾದ ಸಿ. ನಾರಾಯಣರಾವ್ ಬರೆದಿದ್ದಾರೆ). ಉತ್ತರ ಕರ್ಣಾಟಕದಲ್ಲಿ ರಂಗನಾಟಕದ ಈ ಪರಂಪರೆಯನ್ನು ಉಳಿಸಿ ಬೆಳೆಸಿದ ಯಶಸ್ಸು ದಿ ಹಿಂದೂ ಯೂನಿಯನ್ ಕ್ಲಬ್, ಶಾಹುನಗರವಾಸೀ ನಾಟಕಮಂಡಳಿ, ಮದಿಹಾಳದ ಪ್ರಾಚ್ಯಕ್ರೀಡಾ ಸಂವರ್ಧಕ ಮಂಡಳಿ, ಭರತ ಕಲೋತ್ತೇಜಕ ಸಂಗೀತ ಸಮಾಜ ಮೊದಲಾದ ನಾಟಕ ಸಂಸ್ಥೆಗಳಿಗೆ ಸೇರಬೇಕು, ಈ ಸಂಘಗಳಿಂದಾಗಿ ಕನ್ನಡ ರಂಗಭೂಮಿಗೆ ಹೊಸ ಕಳೆ, ಹೊಸ ಬಲ ಬಂದಂತಾಯಿತು. 1869–70ರಲ್ಲಿಯೇ ತುರಮುರಿ ಶೇಷಗಿರಿರಾಯರು ಕನ್ನಡಕ್ಕೆ ಪರಿವರ್ತಿಸಿದ್ದ ಶಾಕುಂತಲಾ ನಾಟಕ ಆಗ ಅಲ್ಲಲ್ಲಿ ಪ್ರದರ್ಶಿತವಾಯಿತು. ಮರಾಠೀ ನಾಟಕ ಮಂಡಳಿಗಳು ಮತ್ತೆ ಕನ್ನಡನಾಡಿಗೆ ಬರಲು ಹಿಂಜರಿದುವು. ಮುಂದೆ ಉತ್ತರ ಕರ್ಣಾಟಕದ ರಂಗಕಲೆಯನ್ನು ಮೆರೆಯಿಸಿದ ನಾಟಕಸಂಸ್ಥೆಗಳೆಂದರೆ ಶಿರಹಟ್ಟಿ ವೆಂಕೋಬರಾಯರ ಶ್ರೀ ಮಹಾಲಕ್ಷ್ಮೀ ಪ್ರಸಾದಿತ ನಾಟಕ ಮಂಡಳಿ (1906–1936), ಶಿವಮೂರ್ತಿಸ್ವಾಮಿ ಕಣಬರ್ಗಿಮಠ ಅವರ ಕೊಣ್ಣೂರ್‌ಕರ್ ಕಾಡಸಿದ್ಧೇಶ್ವರ ಸಂಗೀತನಾಟಕ ಮಂಡಳಿ (1901–1922), ವಾಮನರಾವ ಮಾಸ್ತರರ ವಿಶ್ವಗುಣಾದರ್ಶ ನಾಟಕ ಮಂಡಳಿ (1913–1935), ಹಲಗೇರಿ ಜೆಟ್ಟಪ್ಪನವರ ಶ್ರೀ ಹಾಲಸಿದ್ಧೇಶ್ವರ ಪ್ರಸಾದಿತ ಸಂಗೀತನಾಟಕ ಮಂಡಳಿ (1913–38), ಗರೂಡ ಸದಾಶಿವರಾಯರ ಶ್ರೀ ದತ್ತಾತ್ರೇಯ ನಾಟಕ ಮಂಡಳಿ (1916–52) ಮೊದಲಾದವು.

ಈ ಎಲ್ಲ ಸಂಘಗಳು ಕೊಟ್ಟ ಸ್ಫೂರ್ತಿಯಿಂದಾಗಿ ಉತ್ತರ ಕರ್ಣಾಟಕದಲ್ಲಿ ನೂರಾರು ನಾಟಕ ಸಂಸ್ಥೆಗಳು ತಲೆ ಎತ್ತಿ ಕೆಲಕಾಲ ಮೆರೆದು ಮರೆಯಾದುವು. ಇಂದಿಗೂ ಉತ್ತರ ಮೈಸೂರು ಕ್ಷೇತ್ರದಲ್ಲಿ ರಂಗಕಲೆಯನ್ನು ಉದ್ಯೋಗವಮಾಡಿ ಪ್ರಭಾವಶಾಲಿಯಾಗಿರುವ ನಾಟಕ ಸಂಸ್ಥೆಗಳೆಂದರೆ ಪುಟ್ಟಯ್ಯ ಗವಾಯಿಗಳ ಶ್ರೀಕುಮಾರೇಶ್ವರ ಕೃಪಾಪೋಷಿತ ನಾಟಕ ಸಂಘ, ಏಣಗಿ ಬಾಳಪ್ಪನವರ ಕಲಾವೈಭವ ನಾಟಕ ಸಂಘ, ಬಸವರಾಜ ಹೊಸಮನಿಯವರ ಶಾರದಾ ಸಂಗೀತ ನಾಟಕ ಮಂಡಳಿ, ಗಂಗಾಧರ ಶಾಸ್ತ್ರಿಯವರ ಕುಮಾರೇಶ್ವರ ಸಂಗೀತ ನಾಟಕ ಮಂಡಳಿ ಮೊದಲಾದವು. ಹೀಗೆ ಈ ಸುಮಾರು ಎಂಬತ್ತು ವರ್ಷಗಳಲ್ಲಿ ಉತ್ತರ ಕರ್ಣಾಟಕ ಕ್ಷೇತ್ರದಲ್ಲಿ ಶಾಂತಕವಿ, ಶ್ರೀನಿವಾಸಕವಿಗಳಂಥ ಅಭಿಮಾನಿಗಳ ನೇತೃತ್ವದಲ್ಲಿ ಪ್ರಾರಂಭವಾದ ವೃತ್ತಿನಿರತರಂಗಭೂಮಿ ಗದಗ್, ಹಲಸಿಗಿ, ಬಾದಾಮಿ, ಧಾರವಾಡಗಳಲ್ಲಿ ಮೈಯುಂಡು, ನಾರಾಯಣರಾವ್ ಹುಯಿಲಗೋಳ, ಕೆರೂರು ವಾಸುದೇವಾಚಾರ್ಯ, ವಾಮನರಾವ ಮಾಸ್ತರ, ಕಂದಗಲ್ ಹನುಮಂತರಾಯ ಮತ್ತು ಈಚೆಗೆ ಜಿ. ಜಿ. ಹೆಗಡೆ, ಮಹಾಂತೇಶ ಶಾಸ್ತ್ರಿಗಳಂಥ ಉತ್ಸಾಹೀ ನಾಟಕಕಾರರ ಕಾರ್ಯದಿಂದಾಗಿ ಪ್ರಭಾವಶಾಲಿಯಾಗಿ ಮೆರೆಯಿತು. ಗರೂಡ, ಹಂದಿಗನೂರು ಸಿದ್ಧರಾಮಪ್ಪ, ಗಂಗೂಬಾಯಿ ಗುಳೇದಗುಡ್ಡ, ಅದೃಶ್ಯಪ್ಪ, ಬಸವರಾಜ ಮನ್ಸೂರ್, ಸೋನೂಬಾಯಿ ದೊಡ್ಡಮನಿ, ಮಧ್ವರಾವ ಉಮರ್ಜಿ, ಏಣಗಿ ಬಾಳಪ್ಪ ಮತ್ತು ಶಾಂತಕುಮಾರರಂಥ ಕಲಾವಂತ ನಟನಟಿಯರು ಅದರ ಹಿರಿಮೆಯನ್ನು ಹೆಚ್ಚಿಸಿದರು. ಅಲ್ಲಿಯ ಕನ್ನಡ ನಾಟಕಗಳಲ್ಲಿ ಬಹುಭಾಗ ಮರಾಠೀ ನಾಟಕಗಳ ಅನುವಾದವಾದರೂ ಪೌರಾಣಿಕ ಹಾಗೂ ಐತಿಹಾಸಿಕ ಕಥಾವಸ್ತುಗಳನ್ನು ಅವಲಂಬಿಸಿ ಸ್ವತಂತ್ರ ನಾಟಕಗಳನ್ನು ಶಾಂತಕವಿಗಳೂ ಶ್ರೀನಿವಾಸಕವಿಗಳೂ ಗರೂಡರೂ ಕಂದಗಲ್ಲರೂ ರಚಿಸಿ ರಂಗಭೂಮಿಗೆ ಬಲವನ್ನಿತ್ತರು.

ಮೈಸೂರಿನಲ್ಲಿ : ಕನ್ನಡನಾಡಿನ ವೃತ್ತಿನಿರತರಂಗಭೂಮಿಯು ಇನ್ನೊಂದು ಮಹಾಶಾಖೆ ಮೈಸೂರು ಅರಮನೆಯಲ್ಲಿ ರಾಜಾಶ್ರಯದಲ್ಲಿ ಬೆಳೆಯಿತು.

1812ರಿಂದಲೂ ಅರಮನೆಯ ಆಶ್ರಯದಲ್ಲಿ ಬಿಡಾರದ ದಶಾವತಾರ ಮೇಳ ದಶಾವತಾರ ಆಟಗಳನ್ನು ಆಡುತ್ತಿತ್ತು. ಆಸ್ಥಾನದ ಸಭಿಕರ ಹಾಗೂ ಪಂಡಿತರ ಮನೋರಂಜನೆಯಷ್ಟೇ ಅದರ ಧ್ಯೇಯ. ಜನಸಾಮಾನ್ಯರ ದೃಷ್ಟಿಗೆ ಅದು ನಿಲುಕಿರಲಿಲ್ಲ. 1876–77ರಲ್ಲಿ ಸಾಂಗಲಿಯ ಮರಾಠಿ ನಾಟಕ ಕಂಪನಿಯೂ ಬೊಂಬಾಯಿಯ ಬಾಲೀವಾಲಾ ಪಾರ್ಸಿ ನಾಟಕ ಕಂಪನಿಯೂ ಮೈಸೂರಿಗೆ ಬಂದು ಅರಮನೆಯಲ್ಲಿ ದೊರೆ ಚಾಮರಾಜ ಒಡೆಯರ ಸಮ್ಮುಖದಲ್ಲಿ ಇಂದ್ರಸಭಾ, ಗುಲೇಬಕಾವಲೀ ಮೊದಲಾದ ನಾಟಕಗಳನ್ನಾಡಿದ ಮೇಲೆ ದೊರೆಗಳು ಕನ್ನಡದಲ್ಲಿಯೂ ಅಂಥ ನಾಟಕಗಳಾಗಬೇಕೆಂದು ಆದೇಶ ಕೊಟ್ಟರು. ಅಂಥ ರಂಗಮಂಟಪವೊಂದು ಅರಮನೆಯಲ್ಲಿ ರೂಪುಗೊಂಡು ಆಸ್ಥಾನ ಪಂಡಿತರ ಹಾಗೂ ಗಾನಪಟುಗಳ ನೆರವನ್ನು ಪಡೆದು ಆಧುನಿಕ ರಂಗಸಜ್ಜಿಕೆಯನ್ನು ಒಳಗೊಂಡು ಹೊಸ ಹೊಸ ನಾಟಕಗಳನ್ನು ಕನ್ನಡದಲ್ಲಿಯೇ ಆಡಿಸಬೇಕೆಂಬ ಅವರ ಅಭೀಷ್ಟ ಮೂರು ವರ್ಷಗಳೊಳಗಾಗಿ ಕೈಗೂಡಿತು. ಆಸ್ಥಾನದ ಕರಿಬಸವಪ್ಪ ಶಾಸ್ತ್ರಿ, ಸೋಸಲೆ ಅಯ್ಯಶಾಸ್ತ್ರಿ, ಜಯರಾಯಾಚಾರ್ಯ ಮೊದಲಾದ ಮಹಾಪಂಡಿತರು ಹೆಸರಾಂತ ಸಂಸ್ಕೃತ ನಾಟಕಗಳನ್ನು ದೊರೆಗಳ ಆಜ್ಞೆಯಂತೆ ಕನ್ನಡಕ್ಕೆ ಪರಿವರ್ತಿಸತೊಡಗಿದರು. ಅರಮನೆಗೆ ಸೇರಿದ ರಾಯಲ್ ಶಾಲೆಯ ವಿದ್ಯಾರ್ಥಿಗಳು ಪ್ರಹ್ಲಾದ ಎಂಬ ಮರಾಠೀ ನಾಟಕವನ್ನು 1880ರಲ್ಲಿ ಪ್ರಯೋಗಾರ್ಥವಾಗಿ ಪ್ರದರ್ಶಿಸಿ ಯಶಸ್ವಿಗಳಾದ ಮೇಲೆ, ಆಸ್ಥಾನದ ಪರಿಣತರೂ ಗಾಯಕರೂ ರಾಯಲ್ ಶಾಲೆಯ ಅಧ್ಯಾಪಕವರ್ಗವೂ ಒಟ್ಟಾಗಿ ಕಲೆತು, ಕರಿಬಸವಪ್ಪಶಾಸ್ತ್ರಿಗಳು ಅಮೋಘವಾದ ರೀತಿಯಲ್ಲಿ ಕನ್ನಡಕ್ಕೆ ಪರಿವರ್ತಿಸಿದ ಶಾಕುಂತಲ ನಾಟಕವನ್ನು ಅಭ್ಯಾಸಮಾಡಿ, 1881ರ ನವಂಬರ್ 9ರಂದು ದೊರೆಗಳ ಸಮ್ಮುಖದಲ್ಲಿ ಪ್ರದರ್ಶಿಸಿದರು. ಅದ್ಭುತವೆನಿಸಿದ ಆ ನಾಟಕ, ಕಲ್ಯಾಣಿ ಮೈದಾನದಲ್ಲಿ ಕಟ್ಟಿದ ಭವ್ಯವಾದ ರಂಗಮಂಟಪದಲ್ಲಿ ಜನಸಾಮಾನ್ಯರಿಗಾಗಿ ಮತ್ತೊಮ್ಮೆ ಪ್ರದರ್ಶಿತವಾಯಿತು. ನಾಟಕವನ್ನು ನೋಡಿದ ಜನ ಬೆರಗಾದುರು. ಅರಮನೆಯ ಈ ನಾಟಕಸಂಸ್ಥೆಗೆ 1882ರಲ್ಲಿ ಶ್ರೀಚಾಮರಾಜೇಂದ್ರ ಕರ್ಣಾಟಕ ನಾಟಕ ಸಭಾ ಎಂಬ ಹೆಸರಿಡಲಾಯಿತು. ಅಲ್ಲಿಂದ 1917ರ ವರೆಗೆ ಈ ಸಂಸ್ಥೆ ಅನೇಕ ನಾಟಕಗಳನ್ನಾಡುತ್ತಾ (ಸಂಸ್ಕೃತ ನಾಟಕಗಳ ಮತ್ತು ಷೇಕ್ಸ್‌ಪಿಯರನ ಇಂಗ್ಲಿಷ್ ನಾಟಕಗಳ ಅನುವಾದಗಳು) ಕನ್ನಡನಾಡಿನ ಬೇರೆ ಬೇರೆ ಭಾಗಗಳಿಗೂ ಆಂಧ್ರ ತಮಿಳುನಾಡುಗಳ ಮುಖ್ಯಪಟ್ಟಣಗಳಿಗೂ ಭೇಟಿ ಕೊಟ್ಟಿತು. 1917ರಲ್ಲಿ ಅರಮನೆಯಿಂದ ಬೇರೆಯಾದ ಮೇಲೆ ಇದು ಶಾಕುಂತಲ ಕರ್ಣಾಟಕ ನಾಟಕ ಸಭಾ ಎಂಬ ಹೆಸರಿನಿಂದಲೂ 1919ರಿಂದ ಶ್ರೀ ಚಾಮುಂಡೇಶ್ವರೀ ಕರ್ಣಾಟಕ ನಾಟಕ ಸಭಾ ಎಂಬ ಹೆಸರಿನಿಂದಲೂ ನಾಟಕಗಳನ್ನು ಪ್ರದರ್ಶಿಸತೊಡಗಿತು.

ಅರಮನೆ ಕಂಪನಿಯ ಸ್ಫೂರ್ತಿಯಿಂದ ಮೈಸೂರು ಕ್ಷೇತ್ರದ ಮುಖ್ಯಪಟ್ಟಣಗಳಲ್ಲೆಲ್ಲ ನಾಟಕ ಸಂಘಗಳು ಸ್ಥಾಪಿತವಾದುವು. ಬೆಂಗಳೂರಿನಲ್ಲಿ ಬುಳ್ಳಪ್ಪನ ನಾಟಕ ಕಂಪನಿ ಮತ್ತು ಮೈಸೂರಿನಲ್ಲಿ ಮಂಡ್ಯದ ರಂಗಾಚಾರ್ಯರು ಕಟ್ಟಿದ ರಾಜಧಾನಿ ನಾಟಕಮಂಡಲಿ ಕೆಲಸ ಮಾಡತೊಡಗಿದವು. ಮಹಾ ನಟರೆಂದು ಪ್ರಸಿದ್ಧರಾದ ರಂಗಾಚಾರ್ಯರ ನಾಟಕಮಂಡಲಿ ಅರಮನೆ ಕಂಪನಿಯ ಎದುರಾಳಿ ಎನಿಸುವಷ್ಟು ದೊಡ್ಡ ಯಶಸ್ಸುಗಳಿಸಿತು. ಆ ಸಮಯದಲ್ಲಿ, ಎಂದರೆ 1884ರಲ್ಲಿಯೇ, ಪ್ರಾರಂಭವಾಗಿ ಇಂದಿಗೂ ನಡೆಯುತ್ತಿರುವ ಕನ್ನಡದ ನಾಟಕಸಂಸ್ಥೆಯೆಂದರೆ ಗುಬ್ಬಿ ಶ್ರೀ ಚೆನ್ನಬಸವೇಶ್ವರ ಕೃಪಾಪೋಷಿತ ನಾಟಕ ಸಂಘ. ಗುಬ್ಬಿ ಚಂದಣ್ಣನವರು

ಸ್ಥಾಪಿಸಿದ ಈ ಸಂಸ್ಥೆ ಮುಂದೆ ಜಿ. ಎಚ್. ವೀರಣ್ಣನವರ ಆಡಳಿತಕ್ಕೆ ಬಂದ ಮೇಲೆ ಮಹಾಪ್ರಗತಿಯನ್ನು ಸಾಧಿಸಿ ದಕ್ಷಿಣಭಾರತದ ಅತ್ಯಂತ ಪ್ರಭಾವಿ ನಾಟಕ ಸಂಸ್ಥೆ ಎನಿಸಿಕೊಂಡಿತು. ನಾಟಕಶಿರೋಮಣಿಗಳಾಗಿದ್ದ ಕನ್ನಡದ ಮಹಾನಟ ಎ. ವಿ. ವರದಾಚಾರ್ ಅವರು 1904ರಲ್ಲಿ ಸ್ಥಾಪಿಸಿ 1925ರ ವರೆಗೆ ನಡೆಸಿದ ರತ್ನಾವಳೀ ನಾಟಕಸಭೆ ಕನ್ನಡ ರಂಗಭೂಮಿಯ ಇತಿಹಾಸದಲ್ಲಿ ಮಹತ್ತ್ವದ ಪಾತ್ರವಹಿಸಿತು. ವರದಾಚಾರ್ಯರ ಪ್ರತಿಭೆ ಬಹುಮುಖವಾದುದು. ರಂಗಭೂಮಿಯ ಸಂಗೀತ, ರಂಗಸಜ್ಜಿಕೆ, ಅಲಂಕಾರ, ವೇಷಭೂಷಣ ಮತ್ತು ಅಭಿನಯಕಲೆಯ ಸುಧಾರಣೆಯಲ್ಲಿ ಅವರ ಸಾಧನೆ ಕ್ರಾಂತಿಕಾರಕವೆನಿಸಿತು.

ಕಳೆದ ಮೂವತ್ತು ವರ್ಷಗಳಲ್ಲಿ, ನೋಡಿದ ಜನ ಎಂದೂ ಮರೆಯದಷ್ಟು ವೈಶಿಷ್ಟ್ಯಪೂರ್ಣವಾಗಿ, ಪ್ರಭಾವಶಾಲಿಯಾಗಿ ನಾಟಕಗಳನ್ನಾಡಿದ ಸಂಸ್ಥೆಗಳೆಂದರೆ, ನಾಗೇಂದ್ರರಾಯರು ಮತ್ತು ಸುಬ್ಬಯ್ಯನಾಯ್ಡು ಒಟ್ಟಾಗಿ ಕಟ್ಟಿದ ಸಂಗೀತ ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿ, ಸುಪ್ರಸಿದ್ಧ ಹಾಸ್ಯನಟ ಕೆ. ಹಿರಣ್ಣಯ್ಯನವರ ಮಿತ್ರ ಮಂಡಳಿ ಮೊದಲಾದವು. ತಲತಲಾಂತರದಿಂದ ರಂಗಭೂಮಿಯನ್ನು ಆಕ್ರಮಿಸಿದ್ದ ದೇವದಾನವರನ್ನು ಅಲ್ಲಿಂದ ಓಡಿಸಿ ಕನ್ನಡ ರಂಗಭೂಮಿಯ ಮೇಲೆ ಸಾಧುಸಂತರ ಚರಿತ್ರೆಗಳನ್ನೂ ಜನಸಾಮಾನ್ಯ ಪಾತ್ರಗಳನ್ನೂ ಪ್ರತಿಷ್ಠಾಪಿಸಿದ ಕೀರ್ತಿ ಪೀರ್ ಅವರಿಗೂ ಹಿರಣ್ಣಯ್ಯನವರಿಗೂ ಸಲ್ಲಬೇಕು. ಪ್ರಸಿದ್ಧ ನಟರಾದ ಎಚ್. ನರಸಿಂಹಮೂರ್ತಿಯವರ ನೇತೃತ್ವದಲ್ಲಿ ಹಿರಣ್ಣಯ್ಯ ಮಿತ್ರಮಂಡಳಿಯೂ ಎಂ. ಸಿ. ಮಹಾದೇವಸ್ವಾಮಿಯವರ ಮುಂದಾಳುತನದಲ್ಲಿ ಕನ್ನಡ ಥಿಯೇಟರ್ಸ್ ಲಿಮಿಟೆಡ್ ಸಂಸ್ಥೆಯೂ ಕಲಾವಿದ ಎ. ಎನ್. ಶೇಷಾಚಾರ್ಯರ ನಾಯಕತ್ವದಲ್ಲಿ ಶೇಷಕಲಾ ನಾಟಕ ಮಂಡಳಿಯೂ ಪ್ರಭಾವಶಾಲಿಯಾಗಿ ಕೆಲಸಮಾಡುತ್ತಿವೆ (1971). ಮುಖ್ಯವಾಗಿ ಸಂಸ್ಕೃತದಿಂದ, ಇಂಗ್ಲಿಷಿನಿಂದ, ಅನಂತರ ತೆಲಗು ಮತ್ತು ಬಂಗಾಳಿ ಭಾಷೆಗಳಿಂದ ಹೆಸರಾಂತ ನಾಟಕಗಳು ಕನ್ನಡಕ್ಕೆ ಪರಿವರ್ತನೆಗೊಂಡಿವೆ. ತಮ್ಮ ಸ್ವತಂತ್ರ ನಾಟಕಗಳಿಂದ ಕನ್ನಡ ರಂಗಭೂಮಿಗೆ ಶಕ್ತಿ ತುಂಬಿದವರೆಂದರೆ ಬೆಳ್ಳಾವೆ ನರಹರಿಶಾಸ್ತ್ರಿ ಮತ್ತು ಬಿ. ಪುಟ್ಟಸ್ವಾಮಯ್ಯ. ಮೈಸೂರು ಕ್ಷೇತ್ರದ ಕನ್ನಡ ರಂಗಮಂಟಪಕ್ಕೆ ಈ ಇಬ್ಬರು ಹಿರಿಯರು ಈ ಮೂವತ್ತು ವರ್ಷಗಳ ಕಾಲ ಸತ್ತ್ವವನ್ನೂ ನಿತ್ಯ ನೂತನತೆಯನ್ನೂ ತುಂಬಿದ್ದಾರೆ,

ಮಂಗಳೂರು–ಬಳ್ಳಾರಿ ಕ್ಷೇತ್ರಗಳಲ್ಲಿ : ಕನ್ನಡ ರಂಗಭೂಮಿಯ ಇನ್ನೆರಡು ಪುಟ್ಟಶಾಖೆಗಳು ಮಂಗಳೂರಿನಲ್ಲಿ ಮತ್ತು ಬಳ್ಳಾರಿ ಕ್ಷೇತ್ರದಲ್ಲಿ ಬೆಳೆದಂಥವು. ಮಂಗಳೂರು ಕ್ಷೇತ್ರದ ಅನೇಕ ನಾಟಕ ಸಂಸ್ಥೆಗಳಲ್ಲಿ ಅತ್ಯಂತ ಪ್ರಭಾವಶಾಲಿಯಾಗಿ ದುಡಿದ ಸಂಘವೆಂದರೆ ಎಂ. ರಂಗನಾಥಭಟ್ಟರ ಶ್ರೀ ಅಂಬಾಪ್ರಸಾದಿತ ಕರ್ಣಾಟಕ ನಾಟಕ ಮಂಡಲಿ (1920–40). ಬಳ್ಳಾರಿ ಕ್ಷೇತ್ರದಲ್ಲಿ ಕೆ. ಶ್ರೀನಿವಾಸರಾವ್, ಡಿ. ಗೋಪಾಲಾಚಾರ್ಲು, ಎಚ್. ಹನುಮಂತಗೌಡ, ತೋರಣಗಲ್ ರಾಜಾರಾವ್, ಟಿ. ರಾಘವ, ಜೋಳದ ರಾಶಿ ಕೆ. ದೊಡ್ಡನಗೌಡ ಮೊದಲಾದ ನಾಟಕಕಾರರ ಹಾಗೂ ಕಲಾವಂತರ ನೆರವಿನಿಂದ, ಸ್ಫೂರ್ತಿಯಿಂದ ಅನೇಕ ನಾಟಕ ಸಂಸ್ಥೆಗಳು ಹುಟ್ಟಿದುವು. ಕೊಕಟೂರಿನ ಸರಸ್ವತೀ ನಾಟಕ ಸಭಾ, ಹರಪನಹಳ್ಳಿಯ ಬಸವೇಶ್ವರ ನಾಟಕ ಮಂಡಳಿ, ಆಲೂರಿನ ಮಾರುತೀ ನಾಟಕ ಮಂಡಳಿ ಇವು ತುಂಬ ಪ್ರಸಿದ್ಧಿ ಪಡೆದ ನಾಟಕ ಸಂಘಗಳು. 1948, 1950 ಮತ್ತು 1952ರಲ್ಲಿ ಕ್ರಮವಾಗಿ ಸದಾಶಿವರಾವ್ ಗರೂಡ, ಆರ್. ನಾಗೇಂದ್ರರಾವ್ ಮತ್ತು ಸುಪ್ರಸಿದ್ಧ ಸಾಹಿತಿ ಅ. ನ. ಕೃಷ್ಣರಾಯರ ಹಿರಿತನದಲ್ಲಿ ಬಳ್ಳಾರಿಯಲ್ಲಿ ನಡೆದ ನಾಟಕ ಸಮ್ಮೇಳನಗಳು ಕನ್ನಡ ರಂಗಭೂಮಿಯ ನಡೆಯನ್ನು ವಿಮರ್ಶಾತ್ಮಕವಾಗಿ ಸಮಾಲೋಚಿಸಿದುವು.

ಹೀಗೆ ಕಳೆದ ಸುಮಾರು ನೂರು ವರ್ಷಗಳಲ್ಲಿ ಕನ್ನಡನಾಡಿನಲ್ಲಿ ನೂರಾರು ನಾಟ್ಯಸಂಘಗಳು ಅರಳಿ ಅಳಿದುಹೋಗಿವೆ. ಕನ್ನಡದ ರಂಗಭೂಮಿಯ ಕಲಾದೀವಿಗೆ ನಂದಿಹೋಗದಂತೆ ಅವು ನೋಡಿಕೊಂಡಿವೆ. ನೂರು ವರ್ಷಗಳ ದೊಡ್ಡ ಬದುಕಿನ ವರ್ಚಸ್ಸು ನೆರೆಪ್ರಾಂತ್ಯಗಳ ಮೇಲೆ ಬಿದ್ದು ಮಹಾರಾಷ್ಟ್ರ, ಆಂಧ್ರ, ತಮಿಳುನಾಡುಗಳ ವೃತ್ತಿನಿರತ ರಂಗಭೂಮಿಗಳ ಹುಟ್ಟುಬೆಳೆವಣಿಗೆಗಳಿಗೆ ಪ್ರಚೋದನೆ ಕೊಟ್ಟಿದೆ.

**ಆಧುನಿಕ ನಾಟಕ :** ಕಳೆದ ಸುಮಾರು ಮೂವತ್ತು ವರ್ಷಗಳಲ್ಲಿ ಕನ್ನಡ ರಂಗಭೂಮಿಯ ಇತಿಹಾಸ ಕಣ್ಣಮುಂದೆಯೇ ಇದೆ. ಕಲಾವಿಲಾಸಿ ಸಂಘಗಳ ಮೇಲ್ಮೆಯ ಈ ಕಾಲದಲ್ಲಿ ಕನ್ನಡದ ಹೊಸ ನಾಟಕ ನಾಲ್ಕಾರು ನಡೆಗಳಲ್ಲಿ ಮುಂದುವರೆದಿದೆ. ಪೌರಾಣಿಕ, ಐತಿಹಾಸಿಕ, ಸಾಮಾಜಿಕ ರಂಗನಾಟಕಗಳ ಜೊತೆಜೊತೆಯಲ್ಲಿ ಗೀತನಾಟಕಗಳೂ ಛಾಯಾನಾಟಕಗಳೂ ಆಶುನಾಟಕಗಳೂ ನೃತ್ಯನಾಟಕಗಳೂ ಸಮಸ್ಯಾತ್ಮಕ ನಾಟಕಗಳೂ ಪ್ರಸಾರನಾಟಕಗಳೂ ಬೆಳೆದುಬಂದಿವೆ. ಮೊದಲಿಗೆ ನಾರಾಯಣರಾವ್ ಹುಯಿಲಗೋಳ ಅವರೂ ಕೆರೂರು ವಾಸುದೇವಾಚಾರ್ಯರೂ ಉತ್ತರ ಕರ್ಣಾಟಕದಲ್ಲಿಯೂ ಕೈಲಾಸಂ ಮತ್ತು ಅ. ನ. ಕೃಷ್ಣರಾಯರು ಮೈಸೂರಿನಲ್ಲಿಯೂ ಸಾಮಾಜಿಕ ನಾಟಕಗಳಿಗೆ ಮಹತ್ತ್ವದ ಸ್ಥಾನವನ್ನು ಕಲ್ಪಿಸಿಕೊಟ್ಟರು. ಸಮಾಜದ ಅಂಧಶ್ರದ್ಧೆ, ಸಂಪ್ರದಾಯ, ಸಂಕುಚಿತಮನೋಭಾವದ ಆಚಾರವಿಚಾರಗಳನ್ನು ಅವಹೇಳನಮಾಡುತ್ತ ಅವಿರತವಾಗಿ ವಿಡಂಬನಾತ್ಮಕ ನಾಟಕಗಳನ್ನು ರಚಿಸಿದ ಕೈಲಾಸಂ, ಶ್ರೀರಂಗ ಮತ್ತು ಶಿವರಾಮ ಕಾರಂತರು ಕನ್ನಡ ರಂಗಭೂಮಿಯ ಹೊಸ ಯುಗದ ತ್ರಿಮೂರ್ತಿಗಳೆನಿಸಿಕೊಂಡರು. ಉದ್ಧಾರ, ಸಾಯೋ ಆಟಗಳಂಥ ಕ್ರಾಂತಿಕಾರಕ ಸಾಮಾಜಿಕ ನಾಟಕಗಳನ್ನು ದ. ರಾ. ಬೇಂದ್ರೆ ಬರೆದರು. ಹ. ಪಿ. ಜೋಷಿ, ವಿ. ಕೃ. ಗೋಕಾಕ, ರಂ. ಶ್ರೀ. ಮುಗಳಿ. ಕೃಷ್ಣಕುಮಾರ ಕಲ್ಲೂರ್, ಲಕ್ಷಣರಾವ್ ಬೇಂದ್ರೆ, ಎನ್ಕೆ ಮೊದಲಾದ ಪ್ರತಿಭಾವಂತ ಸಾಹಿತಿಗಳು ತಮ್ಮ ವೈವಿಧ್ಯಪೂರ್ಣವಾದ ನಾಟಕಗಳಿಂದಾಗಿ ಉತ್ತರ ಕರ್ಣಾಟಕದ ನಾಟಕಸಾಹಿತ್ಯಕ್ಕೆ ಕಳೆಯನ್ನು ತಂದುಕೊಟ್ಟಿದ್ದಾರೆ. ಇತ್ತ ಮೈಸೂರಿನಲ್ಲಿ, ಕೈಲಾಸಂ ಪ್ರಾರಂಭಿಸಿದ ಮನೆಮಾತಿನ ನಾಟಕಸಂಪ್ರದಾಯಕ್ಕೆ ನರಕದ ನ್ಯಾಯದಂಥ ವರ್ಚಸ್ವೀ ನಾಟಕಗಳನ್ನು ಬರೆದ ರಾಜರತ್ನಂ ಚಾಲನೆ ಕೊಟ್ಟರು. ಪರ್ವತವಾಣಿಯವರು ಈ ದಿಶೆಯಲ್ಲಿ ಇನ್ನೂ ಮುಂದುವರಿದು, ಮೀನಾಮದುವೆ, ವಾರ್ಷಿಕೋತ್ಸವ, ಪದ್ಮಾವತೀಪರಿಣಯಗಳಂಥ ಉತ್ತಮ ರಂಗನಾಟಕಗಳನ್ನು ರಚಿಸಿದರು. ಕ್ಷೀರಸಾಗರರರರೂ ಕೈವಾರ ರಾಜಾರಾಯರೂ ಮನಮುಟ್ಟುವಂಥ ಸಂಸಾರಚಿತ್ರಗಳನ್ನು ತಮ್ಮ ನಾಟಕಗಳಲ್ಲಿ ಸೆರೆಹಿಡಿದಿದ್ದಾರೆ. ಜಿ. ಜಿ. ಹೆಗಡೆ, ನರೇಂದ್ರಬಾಬು, ಕುಮಾರ ವೆಂಕಣ್ಣ, ಕೆ. ಗುಂಡಣ್ಣ, ರಾ.ವೆಂ.ಶ್ರೀ., ಎ. ಎಸ್. ಮೂರ್ತಿ, ದಾಶರಥಿ ದೀಕ್ಷಿತ್, ಡಿ. ಜಿ. ಕುಲಕರ್ಣಿ ಮೊದಲಾದ ನಾಟಕಕಾರರ ಕೃತಿಗಳು—ನಗೆನಾಟಕಗಳು—ಕನ್ನಡ ಏಕಾಂಕದ ಸಮೃದ್ಧಿಗೆ ಕಾರಣವಾಗಿವೆ.

ಭಾರತದ ಇತರ ಪ್ರಾದೇಶಿಕ ರಂಗಭೂಮಿಗಳಲ್ಲಿರುವಂತೆ, ಕನ್ನಡನಾಡಿನಲ್ಲಿ ಇಂದು ಸಾಮಾಜಿಕ ಮತ್ತು ಸಮಸ್ಯಾಪರ ನಾಟಕಗಳು ರಂಗಭೂಮಿಯ ಮೇಲಿವೆ. ಆಡುಮಾತಿನ ಏಕಾಂಕಗಳು ವಿಪುಲವಾಗಿವೆ. ಆದರೂ ಕನ್ನಡನಾಟಕ ಸಾಹಿತ್ಯದಲ್ಲಿನ ವೈವಿಧ್ಯ ಕಡಿಮೆಯದಲ್ಲ. ಕುವೆಂಪು ಮತ್ತು ಅವರ ಹಿರಿಯ ಸಮಾಕಾಲೀನರಾದ ಬಿ. ಎಂ. ಶ್ರೀಕಂಠಯ್ಯ, ಮಾಸ್ತಿ ವೆಂಕಟೇಶ ಅಯ್ಯಂಗಾರ್, ಡಿ. ವಿ. ಗುಂಡಪ್ಪ, ಎಂ.ಆರ್. ಶ್ರೀನಿವಾಸಮೂರ್ತಿ ಮೊದಲಾದವರು ಕಸಿಮಾಡಿ ಬೆಳೆಸಿದ ಸರಳರಗಳೆಯ ನಾಟಕಗಳೂ ಸಂಸರು ರಚಿಸಿದ ಮಹಾನ್ ಐತಿಹಾಸಿಕ ನಾಟಕಗಳೂ ಪು. ತಿ. ನರಸಿಂಹಾಚಾರ್ಯ, ಗೌರೀಶ ಕಾಯ್ಕಿಣಿ ಮತ್ತು ಕೀರ್ತಿನಾಥ ಕುರ್ತಕೋಟಿಯವರ ಸಂಗೀತನಾಟಕಗಳೂ ಎಸ್. ಎನ್. ಅಜ್ಜಂಪೂರರ ಜಾನಪದ ನಾಟಕಗಳೂ ನಾ. ಕಸ್ತೂರಿಯವರ ಆಶುನಾಟಕಗಳೂ ಶಿವರಾಮ ಕಾರಂತರ ಗೀತನಾಟಕ ಛಾಯಾನಾಟಕಗಳೂ ಶ್ರೀನಿವಾಸ ಕುಲಕರ್ಣಿ, ಉಮೇಶ ಹರಂಜಲ ಮೊದಲಾದ ನೃತ್ಯಪಟುಗಳು ನಿಯೋಜಿಸಿದ ನೃತ್ಯನಾಟಕಗಳೂ ಕೌಜಲಗಿ ಹನುಮಂತರಾಯರು, ಕ್ಷೀರಸಾಗರ, ಕೃಷ್ಣಕುಮಾರ ಕಲ್ಲೂರ್, ಎನ್ಕೆ ಮೊದಲಾದವರ ನಾಟ್ಯಛಟಗಳೂ ಎಸ್. ಎನ್. ಶಿವಸ್ವಾಮಿ, ಚದುರಂಗ, ರಾಮಚಂದ್ರ ಶರ್ಮ, ರಂಗನಾಥರ ಪ್ರಸಾರ ನಾಟಕಗಳೂ ವಿ. ಸೀತಾರಾಮಯ್ಯ, ಎಸ್.ಜಿ. ಶಾಸ್ತ್ರಿ, ಎ.ಎನ್. ಮೂರ್ತಿರಾವ್, ಪರ್ವತವಾಣಿ ಮೊದಲಾದವರು ಕನ್ನಡಕ್ಕೆ ಪರಿವರ್ತಿಸಿದ ಪಾಶ್ಚಾತ್ಯ ನಾಟಕಗಳೂ ಕುವೆಂಪು, ಹೊಯ್ಸಳ, ಪಾಂಡುರಂಗರಾವ್ ಮುಂತಾದವರು ರಚಿಸಿದ ಮಕ್ಕಳ ನಾಟಕಗಳೂ ಎ.ಎಸ್. ಮೂರ್ತಿ ಮುಂತಾದವರ ನಗೆನಾಟಕಗಳೂ ಇಂದಿನ ಕನ್ನಡ ನಾಟಕ ಸಾಹಿತ್ಯದಲ್ಲಿ ಸತ್ತ್ವ, ಸಮೃದ್ಧಿ, ವೈವಿಧ್ಯಗಳಿವೆಯೆಂದು ತೋರಿಸುತ್ತವೆ. ಅಂಥ ಒಂದೊಂದೇ ನಾಟಕಗಳನ್ನು ಬರೆದರೂ ಆ ಮನಿಯ ಕೀರ್ತಿನಾಥ ಕುರ್ತಕೋಟಿಯವರೂ ಬಿಡುಗಡೆಯ ಕರ್ತೃವಾದ ವಿ. ಎಂ. ಇನಾಂದಾರರೂ ಮೂಕಬಲಿಯನ್ನು ರಚಿಸಿದ ಜಿ. ಬಿ. ಜೋಶಿಯವರೂ ಕನ್ನಡ ನಾಟಕಕಾರರ ಕರ್ತೃತ್ವಶಕ್ತಿ ಕುಂದಿಲ್ಲವೆಂಬುದನ್ನು ತೋರಿಸಿದ್ದಾರೆ. (ನೋಡಿ—ಕನ್ನಡದಲ್ಲಿ ನಾಟಕ ಸಾಹಿತ್ಯ),

ರಾಷ್ಟ್ರಕ್ಕೆ ಸ್ವಾತಂತ್ರ್ಯ ಬಂದಮೇಲೆ ದೊರೆತ ಪ್ರೋತ್ಸಾಹದಿಂದಾಗಿ ಕನ್ನಡ ರಂಗಭೂಮಿಯೂ ತನ್ನಹಿರಿಮೆಯನ್ನು ಸಾರಲು ಸಾಧ್ಯವಾಗಿದೆ. ಯಕ್ಷಗಾನ ಮತ್ತೊಮ್ಮೆ ತನ್ನ ಮೊದಲ ಸ್ಥಾನವನ್ನು ಗಳಿಸಿಕೊಂಡಿದೆ. ಜಿ. ಎಚ್. ವೀರಣ್ಣ, ಎಂ. ಸಿ. ಮಹಾದೇವಸ್ವಾಮಿ, ಎಚ್. ನರಸಿಂಹಮೂರ್ತಿ ಹಾಗೂ ಪುಟ್ಟಯ್ಯ ಗವಾಯಿ ಮೊದಲಾದವರ ನೇತೃತ್ವದಲ್ಲಿ ವೃತ್ತಿನಿರತ ರಂಗಭೂಮಿ ಮತ್ತೆ ಚೇತರಿಸಿಕೊಳ್ಳುತ್ತಿದೆ. ಟಿ. ರಾಘವರ ಹಿರಿತನದಲ್ಲಿ ಹತ್ತಾರು ವರ್ಷಗಳ ಕಾಲ ಅತ್ಯಂತ ಪ್ರಭಾವಶಾಲಿಯಾಗಿ ಮೆರೆದು ಇಪ್ಪತ್ತು ವರ್ಷಗಳ ಹಿಂದೆಯೇ ಮುಳುಗಿಹೋದ, ಬೆಂಗಳೂರಿನ ಅಮೆಚ್ಯೂರ್ ಡ್ರಮಾಟಿಕ್ ಅಸೋಸಿಯೇಷನ್ ಸಂಘವನ್ನು ನೆನಪಿಗೆ ತರುವಷ್ಟು ಘನವಾದ ಕಲಾವಿಲಾಸಿ ಸಂಸ್ಥೆಗಳು ಕನ್ನಡನಾಡಿನ ಅನೇಕ ಕಡೆಗಳಲ್ಲಿ ಮೂಡಿಬರುತ್ತಿವೆ. (ನೋಡಿ—ಕನ್ನಡ ವಿಲಾಸಿ ರಂಗಭೂಮಿ) ಕನ್ನಡನಾಡಿನ ಪ್ರತಿಯೊಂದು ಮುಖ್ಯಪಟ್ಟಣದಲ್ಲಿಯೂ ಸುಸಜ್ಜಿತವಾದ ರಂಗಮಂಟಪವನ್ನು ಕಟ್ಟುವ ಯೋಜನೆ ಕಾರ್ಯಗತವಾಗುತ್ತಿದೆ. ಸಮಾವೇಶವಾಗುತ್ತಿರುವ ನಾಟ್ಯಸಮ್ಮೇಲನ, ನಾಟ್ಯೋತ್ಸವ. ನಾಟಕಸ್ಪರ್ಧೆಗಳು ರಂಗಭೂಮಿಯ ಮುನ್ನಡೆಗೆ ಒತ್ತಾಸೆ ನೀಡುತ್ತಿವೆ. ಇಂದಿನ ಪ್ರೇಕ್ಷಕರು ಹೆಚ್ಚು ಹೆಚ್ಚು ವಿಚಾರಶೀಲರೂ ವಿಮರ್ಶಕರೂ ಆಗುತ್ತಿದ್ದಾರೆ. ಈ

ಎಲ್ಲರಿಂದಾಗಿ ಕನ್ನಡ ರಂಗಭೂಮಿಯು ಹಳಮೆ ಹಿರಿಮೆಗಳಿಗೆ ಸರಿತೂಗುವಂಥ ಉಜ್ಜ್ವಲವಾದ ಭವಿಷ್ಯವೂ ಅದಕ್ಕೆ ಇದೆಯೆಂದು ನಂಬಬಹುದು. (ಆರ್.ಎಚ್.ಕೆ.)

**ಕನ್ನಡ ಲಿಪಿ:** ಕನ್ನಡ ಲಿಪಿ ಭಾರತ ದೇಶದ ಇತರ ಲಿಪಿಗಳಂತೆ ಕ್ರಿಸ್ತ ಪೂರ್ವ 3ನೆಯ ಶತಮಾನದ ಅಶೋಕನ ಬ್ರಾಹ್ಮೀ ಲಿಪಿಯಿಂದ (ನೋಡಿ) ಉದ್ಭವಿಸಿದೆ. ಈ ಬ್ರಾಹ್ಮೀ ಲಿಪಿ ಭಾರತದಲ್ಲಿ ಇದುವರೆಗೆ ಓದಿ ಗುರುತಿಸಲ್ಪಟ್ಟಿರುವ ಅತ್ಯಂತ ಪ್ರಾಚೀನ ಲಿಪಿಯಾಗಿದೆ. ಇದಕ್ಕಿಂತ ಪ್ರಾಚೀನವಾದ ಸಿಂಧುಕೊಳ್ಳದ ಮುದ್ರೆಗಳ ಲಿಪಿಯನ್ನು ಇದುವರೆಗೆ ವಿದ್ವಾಂಸರು ಸಮರ್ಪಕವಾಗಿ ಓದಿ ಅರ್ಥಮಾಡಿರುವುದಿಲ್ಲ. ಅಶೋಕನ ಬ್ರಾಹ್ಮೀ ಲಿಪಿ ಉತ್ತರಕ್ಕೆ ಕಾಲಸಿ ಮತ್ತು ಭಾರತ-ನೇಪಾಲ ಗಡಿಯಲ್ಲಿರುವ ರುಮ್ಮಿಂದೈಯಿಂದ ದಕ್ಷಿಣಕ್ಕೆ ಮೈಸೂರ ವರೆಗೂ ಪೂರ್ವಕ್ಕೆ ಒರಿಸ್ಸದಿಂದ ಪಶ್ಚಿಮಕ್ಕೆ ಜುನಾಗಢ ಮತ್ತು ಬೊಂಬಾಯಿವರೆಗೂ ದೊರೆತ ಅಶೋಕ ಸಮ್ರಾಟನ ಧರ್ಮಶಾಸನಗಳಲ್ಲಿ ಕಂಡುಬರುತ್ತದೆ. ಈ ಲಿಪಿ ಸಂಸ್ಕೃತ ಭಾಷೆಯಿಂದ ಪ್ರಭಾವಿತವಾಗಿದ್ದು ಅಶೋಕನ ಕಾಲದಲ್ಲಿ ಪ್ರಚಲಿತವಿದ್ದ ಪ್ರಾಕೃತ ಭಾಷೆಗಾಗಿ ಉಪಯೋಗಿಸಲ್ಪಟ್ಟಿದೆ. ಆ ಕಾಲಕ್ಕಾಗಲೇ ಅದು ಪರಿಪೂರ್ಣತೆಯನ್ನು ಪಡೆದಿದ್ದು ಪ್ರಾಕೃತ ಭಾಷೆಯ ಪ್ರತಿಯೊಂದು ಶಬ್ದ ಅಥವಾ ಧ್ವನಿಗೆ ಪ್ರತ್ಯೇಕವಾದ ಅಕ್ಷರ ಅಥವಾ ಸಂಜ್ಞೆಯನ್ನು ಅದರಲ್ಲಿ ಕಲ್ಪಿಸಲಾಗಿದೆ. ಈ ಲಿಪಿ ಎಡದಿಂದ ಬಲಕ್ಕೆ ಬರೆಯಲ್ಪಟ್ಟಿದ್ದು ಅದರಲ್ಲಿಯ ಸರಳ, ಸುಂದರ ಅಕ್ಷರಗಳು ಸುಲಭವಾಗಿ ಗುರುತಿಸುವಂತಿವೆ. ಈ ಅಕ್ಷರಗಳಿಗೆ ತಲೆಕಟ್ಟು ಇರುವುದಿಲ್ಲ. ಥ, ಪ, ಮ, ವ, ಲ, ಹ, ಮುಂತಾದ ಅಕ್ಷರಗಳ ಬುಡಕಟ್ಟು ದುಂಡಾಗಿರುತ್ತವೆ. ಸಂಸ್ಕೃತ ಭಾಷೆಯ ಋಕಾರ, ವಿಸರ್ಗ, ಜಿಹ್ವಾಮೂಲೀಯ ಮತ್ತು ಉಪಧ್ಮಾನೀಯಗಳನ್ನು ನಿರ್ದೇಶಿಸುವ ಸಂಜ್ಞೆಗಳಿರುವುಲ್ಲ. ಅದರಂತೆ ಪದಾದಿಯ ದೀರ್ಘ ಈ ಕಾರವಿಲ್ಲ. ಕರ್ಣಾಟಕವಲ್ಲಿ ಅಶೋಕನ ಬ್ರಾಹ್ಮೀ ಲಿಪಿಯ ಶಾಸನಗಳು ಚಿತ್ರದುರ್ಗ ಜಿಲ್ಲೆಯ ಬ್ರಹ್ಮಗಿರಿ, ಸಿದ್ದಾಪುರ ಮತ್ತು ಜಟಿಂಗ ರಾಮೇಶ್ವರ ಎಂಬ ಸ್ಥಳಗಳಲ್ಲಿಯೂ ರಾಯಚೂರು ಜಿಲ್ಲೆಯ ಮಾಸ್ಕಿ, ಪಾಲ್ಕಿಗುಂಡು ಮತ್ತು ಗವಿಮಠ ಎಂಬ ಸ್ಥಳಗಳಲ್ಲಿಯೂ ದೊರೆತಿವೆ.

ಅಶೋಕನ ಬ್ರಾಹ್ಮೀ ಲಿಪಿ ಮುಂದೆ ಕ್ರಿ.ಶ. 3ನೆಯ ಶತಮಾನದ ವರೆಗೆ ಶುಂಗ, ಕುಶಾನ, ಕ್ಷತ್ರಪ, ಆಂಧ್ರ, ಶಾತವಾಹನ ಮುಂತಾದ ಅರಸರ ಶಾಸನಗಳಲ್ಲಿ ಭಾರತದ ಬೇರೆ ಬೇರೆ ಭಾಗಗಳಲ್ಲಿ ವಿಕಾಸ ಹೊಂದಿರುತ್ತದೆ. ಕುಶಾನ ಕಾಲದ ಲಿಪಿಯ ಅಕ್ಷರಗಳು ಕಡಿಮೆ ಎತ್ತರವಾಗಿಯೂ ಅಗಲವಾಗಿಯೂ ದಪ್ಪವಾಗಿಯೂ ಇರುತ್ತವೆ. ಕ್ಷತ್ರಪ ಹಾಗೂ ಶಾತವಾಹನರ ಕಾಲದ ಲಿಪಿಗಳೂ ಹೆಚ್ಚು ಕಡಿಮೆ ಇವೇ ವೈಶಿಷ್ಟ್ಯಗಳನ್ನೊಳಗೊಂಡಿವೆ. ಕರ್ಣಾಟಕದಲ್ಲಿ ಅಶೋಕನ ಬ್ರಾಹ್ಮೀ ಲಿಪಿಯ ಮುಂದಿನ ಹಂತವನ್ನು ಕ್ರಿ.ಶ. 2-3ನೆಯ ಶತಮಾನದ ಮಳವಳ್ಳಿ ಮತ್ತು ಬನವಾಸಿಯ ಸಾತಕರ್ಣಿಯ ಶಾಸನಗಳಲ್ಲಿ ಹಾಗೂ ಮ್ಯಾಕದೋನಿಯ (ಬಳ್ಳಾರಿ ಜಿಲ್ಲೆ) ಪುಳುಮಾವಿಯ ಶಾಸನದಲ್ಲಿ ಕಾಣುತ್ತೇವೆ. ಇಲ್ಲಿಯೂ ಅಕ್ಷರಗಳ ಎತ್ತರ ಕಡಿಮೆಯಾಗಿದ್ದು ಕೆಲವು ಅಕ್ಷರಗಳಿಗೆ ತ್ರಿಕೋಣಾಕೃತಿಯುಳ್ಳ ತಲೆಕಟ್ಟು ಇರುತ್ತದೆ. ಅಗಲವಾದ ತುದಿಯುಳ್ಳ ಲೇಖನಿಯನ್ನು ಉಪಯೋಗಿಸಿದ್ದರಿಂದ ಇಂಥ ತಲೆಕಟ್ಟುಗಳು ತಲೆದೋರಿವೆಯೆಂದು ಕೆಲವು ವಿದ್ವಾಂಸರು ಹೇಳುತ್ತಾರೆ. ಅ, ಕ, ರ, ಮುಂತಾದ ಅಕ್ಷರಗಳ ಲಂಬರೇಖೆಯ ಕೆಳಭಾಗ ವೃತ್ತಾಕಾರವಾಗಿ ಎಡಗಡೆ ಹೊರಳಿದೆ. ಇತ್ತೀಚಿಗೆ ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬ ಸ್ಥಳದಲ್ಲಿ ದೊರೆತ ಕ್ರಿ.ಶ. 3ನೆಯ ಶತಮಾನದ ಶಾಸನಗಳಲ್ಲಿಯ ಕೆಲವು ಅಕ್ಷರಗಳು ಆಂಧ್ರಪ್ರದೇಶದ ನಾಗಾರ್ಜುನಕೊಂಡದ ಇಕ್ಷ್ವಾಕು ಅರಸರ ಶಾಸನಗಳ ಅಕ್ಷರಗಳಂತೆ ಸುಂದರವಾಗಿಯೂ ಅಲಂಕಾರಯುತವಾಗಿಯೂ ಕೆತ್ತಲ್ಪಟ್ಟಿವೆ.

ಕ್ರಿ.ಶ. 4-5ನೆಯ ಶತಮಾನದ ಕದಂಬ ಅರಸರ ಶಾಸನಗಳಲ್ಲಿ ಕಂಡುಬರುವ ಕನ್ನಡ ಲಿಪಿ ಮುಂದಿನ ಬೆಳೆವಣಿಗೆಗೆ ತಳಹದಿಯಾಗಿದೆಯೆಂದು ಹೇಳಬಹುದು. ಈ ಕಾಲದಿಂದ ಕರ್ಣಾಟಕದಲ್ಲಿ ಬಾಳಿ ಬೆಳಗಿದ ಗಂಗ, ಬಾದಾಮಿ ಚಾಳುಕ್ಯ, ರಾಷ್ಟ್ರಕೂಟ, ಕಲ್ಯಾಣಿ ಚಾಳುಕ್ಯ, ಕಳಚುರಿ, ಯಾದವ, ಹೊಯ್ಸಳ ಮತ್ತು ವಿಜಯನಗರದ ಅರಸರ ಸಾವಿರಾರು ಶಾಸನಗಳು ದೊರೆತಿದ್ದರಿಂದ ಕನ್ನಡ ಲಿಪಿಯ ಅವಿಚ್ಛಿನ್ನವಾದ ಬೆಳೆವಣಿಗೆಯನ್ನು ತಿಳಿದುಕೊಳ್ಳಲಿಕ್ಕೆ ಸಾಧ್ಯವಾಗಿದೆ. ಕದಂಬ ಕಾಲದ ಕನ್ನಡ ಲಿಪಿಯ ಮುಖ್ಯವಾದ ವೈಶಿಷ್ಟ್ಯವೆಂದರೆ ಕೆಲವು ಶಾಸನಗಳ ಅಕ್ಷರಗಳಲ್ಲಿ ಕಂಡುಬರುವ ಚೌಕಾಕೃತಿಯ ತಲೆಕಟ್ಟು. ಇಂಥ ತಲೆಕಟ್ಟು ಇದೇ ಕಾಲದ ಗುಪ್ತ ಅರಸರ ಮಾಳವದಲ್ಲಿರುವ ಶಾಸನಗಳಲ್ಲೂ ವಾಕಾಟಕ ಅರಸರ ಮಧ್ಯಪ್ರದೇಶದಲ್ಲಿರುವ ಶಾಸನಗಳಲ್ಲೂ ಕಂಡುಬರುತ್ತದೆ. ಈ ತಲೆಕಟ್ಟು ಪೆಟ್ಟಿಗೆಯ ಆಕಾರದ್ದಿರುವುದರಿಂದ ಇಂಥ ಅಕ್ಷರಗಳಿಗೆ ಪೆಟ್ಟಿಗೆಯ ತಲೆಕಟ್ಟುಳ್ಳ ಅಕ್ಷರಗಳೆಂದು ಹೇಳುವುದುಂಟು. ಕದಂಬ ಲಿಪಿಯ ಅಕ್ಷರಗಳು ಎತ್ತರದಲ್ಲಿ ಕಡಿಮೆಯಿದ್ದು ಹೆಚ್ಚಿಗೆ ದುಂಡಾಗುವ ಪ್ರವೃತ್ತಿಯನ್ನು ಹೊಂದಿರುತ್ತವೆ. ಇದರಲ್ಲಿ ಸಂಸ್ಕೃತ ಭಾಷೆಯ ವಿಸರ್ಗ, ಜಿಹ್ವಾಮೂಲೀಯ, ಉಪಧ್ಮಾನೀಯ ಮುಂತಾದುವನ್ನು ಸೂಚಿಸುವ ಸಂಜ್ಞೆಗಳನ್ನೂ ಕನ್ನಡ ಭಾಷೆಯ ಶಕಟರೇಫ, ಱ ೞ, ಮುಂತಾದುವನ್ನು ಸೂಚಿಸುವ ಸಂಜ್ಞೆಗಳನ್ನೂ ಸೇರಿಸಲಾಗಿದೆ. ಕ್ರಿ.ಶ. 6-8ನೆಯ ಶತಮಾನದಲ್ಲಾಳಿದ ಬಾದಾಮಿ ಚಾಳುಕ್ಯರ ಶಾಸನಗಳಲ್ಲಿ ಕನ್ನಡ ಲಿಪಿಯ ಮುಂದಿನ ಬೆಳೆವಣಿಗೆಯನ್ನು ಕಾಣುತ್ತೇವೆ. ಈ ಲಿಪಿಯಲ್ಲಿ ಅಕ್ಷರಗಳ ತಲೆಕಟ್ಟು ಬಹು ಚಿಕ್ಕದಾದ ಸರಳರೇಖೆಯಿಂದೊಡಗೂಡಿರುತ್ತದೆ. ಕೆಲವು ಶಾಸನಗಳಲ್ಲಿ ಕ ಮತ್ತು ರ ಅಕ್ಷರಗಳ ಲಂಬರೇಖೆಯ ಎಡಭಾಗ ಮೇಲಕ್ಕೆ ಹೋಗಿ ಮೇಲ್ಭಾಗದ ಅಡ್ಡಗೆರೆಗೆ ಹೊಂದಿಕೊಂಡಿರುತ್ತದೆ. ಕ್ರಿ.ಶ. 8-10ನೆಯ ಶತಮಾನದ ರಾಷ್ಟ್ರಕೂಟರ ಶಾಸನಗಳಲ್ಲಿ ಪದಾದಿಯ ಆ ಮತ್ತು ಇ ಅಕ್ಷರಗಳು ಹೆಚ್ಚಿನ ಬೆಳೆವಣಿಗೆಯನ್ನು ವ್ಯಕ್ತಪಡಿಸುತ್ತವೆ.

ಕನ್ನಡ ಲಿಪಿ ಕ್ರಿ.ಶ. 10-12ನೆಯ ಶತಮಾನದಲ್ಲಿ ಕಲ್ಯಾಣಿ ಚಾಳುಕ್ಯರ ಶಾಸನಗಳಲ್ಲಿ ವಿಶೇಷ ಬದಲಾವಣೆಯನ್ನು ಹೊಂದಿ ಒಂದು ಮುಖ್ಯವಾದ ಹಂತವನ್ನು ಸೂಚಿಸುತ್ತದೆ. ಈ ಕಾಲದ ಕೆಲವು ಅಕ್ಷರಗಳು ಇನ್ನಷ್ಟು ದುಂಡಾಗಿದ್ದು ಆಧುನಿಕ ಕನ್ನಡ ಲಿಪಿಯ ಅಕ್ಷರಗಳ ಲಕ್ಷಣಗಳನ್ನು ವ್ಯಕ್ತಪಡಿಸುತ್ತದೆ. ಉದಾಹರಣೆಗಾಗಿ ಕ, ರ, ಯ ಮುಂತಾದ ಅಕ್ಷರಗಳ ಮೈಕಟ್ಟು ಹೆಚ್ಚುಕಡಿಮೆ ಈಗಿನಂತೆಯೇ ಇದೆ. ಕೆಲವು ಅಕ್ಷರಗಳ ತಲೆಕಟ್ಟು ಕೋನಾಕೃತಿಯುಳ್ಳದ್ದಾಗಿದೆ. ಚ, ವ, ಮ, ಮುಂತಾದ ಅಕ್ಷರಗಳ ತಲೆಕಟ್ಟಿನ ಭಾಗ ಎರಡು ಭಾಗವಾಗಿ ಬೇರ್ಪಡೆಯಾಗಿದ್ದು ತಲೆಕಟ್ಟು ಬಲಭಾಗದ ರೇಖೆಗೆ ಹೊಂದಿಕೊಂಡಿರುತ್ತದೆ. ಅನೇಕ ಅಕ್ಷರಗಳ ತಲೆಕಟ್ಟು ಸ್ಪಷ್ಟವಾಗಿ ಎದ್ದುಕಾಣುವಂತಿದೆ. ಮುಂದೆ ಕ್ರಿ.ಶ. 12-13ನೆಯ ಶತಮಾನದಲ್ಲಿ ಹೊಯ್ಸಳ ಅರಸರ ಅನೇಕ ಶಾಸನಗಳನ್ನು ನುಣುಪಾದ ಕಲ್ಲಿನ ಹಲಗೆಗಳ ಮೇಲೆ ಅಲಂಕಾರಯುತವಾಗಿಯೂ ಕಲಾತ್ಮಕವಾಗಿಯೂ ಬರೆಯಲ್ಪಟ್ಟಿದ್ದು ಅಲ್ಲಿಯ ಅಕ್ಷರಗಳು ಬಹು ಸುಂದರವಾಗಿ ಕಾಣುತ್ತವೆ. ಈ ಅಕ್ಷರಗಳನ್ನು ಸ್ಪಷ್ಟವಾಗಿಯೂ ಹೆಚ್ಚು ದುಂಡಾಗಿಯೂ ಬರೆಯಲಾಗಿದೆ. ಇಲ್ಲಿ ಕನ್ನಡ ಲಿಪಿ ಊರ್ಜಿತಾವಸ್ಥೆಯನ್ನು ಹೊಂದಿದೆಯೆಂದು ಹೇಳಬಹುದು. ಆದರೆ ಮುಂದಿನ ಎರಡು ಮೂರು ಶತಮಾನಗಳ ಕಾಲದಲ್ಲಿ ಅಂದರೆ ಕ್ರಿ.ಶ. 14-16ನೆಯ ಶತಮಾನದ ವಿಜಯನಗರ ಅರಸರ ಶಾಸನಗಳಲ್ಲಿ ಅಕ್ಷರಗಳನ್ನು ಡೊಂಕು ಡೊಂಕಾಗಿ ಬರೆಯಲಾಗಿದ್ದು ಅವುಗಳ ಜೋಡಣೆಯ ವಿಷಯದಲ್ಲಿ ಅಷ್ಟು ಗಮನವನ್ನಿತ್ತಿಲ್ಲ. ಆದುದರಿಂದ ಕಲ್ಯಾಣಿ ಚಾಳುಕ್ಯ ಹಾಗೂ ಹೊಯ್ಸಳರ ಕಾಲದ ಲಿಪಿಯ ಅಕ್ಷರಗಳಂತೆ ವಿಜಯನಗರ ಕಾಲದ ಲಿಪಿಯ ಅಕ್ಷರಗಳು ಅಂದವಾಗಿ ಕಾಣುವುದಿಲ್ಲ. ಆದರೂ ಈ ಕಾಲದ ಲಿಪಿಯ ಅಕ್ಷರಗಳು ಕನ್ನಡ ಲಿಪಿಯ ಬೆಳೆವಣಿಗೆಯ ದೃಷ್ಟಿಯಿಂದ ಗಮನಾರ್ಹವಾಗಿವೆ. ಅ, ಇ, ಣ, ಷ, ಳ ಮುಂತಾದ ಅಕ್ಷರಗಳು ಈಗಿನ ರೂಪುಗಳನ್ನು ಹೆಚ್ಚಾಗಿ ಹೋಲುತ್ತವೆ. ದ, ಡ, ಪ ಮುಂತಾದ ಅಲ್ಪಪ್ರಾಣದ ಅಕ್ಷರಗಳಿಗೆ ಕೆಳಗಡೆ ಒಂದು ರೇಖೆಯನ್ನು ಸೇರಿಸಿ ಧ, ಢ, ಫ, ಮುಂತಾದ ಮಹಾಪ್ರಾಣಗಳ ಸಂಜ್ಞೆಗಳನ್ನು ಸೂಚಿಸಲಾಗಿದೆ. ಇದುವರೆಗೆ ಅಕ್ಷರಗಳ ಮೇಲ್ಭಾಗದಲ್ಲಿ ಒಂದು ಚುಕ್ಕೆ ಅಥವಾ ಚಿಕ್ಕ ಬಿಂದುವಿನಿಂದ ಸೂಚಿಸಲ್ಪಡುತ್ತಿದ್ದ ಅನುಸ್ವಾರವನ್ನು ಆಯಾ ಅಕ್ಷರಗಳ ಬಲಗಡೆಗೆ ಅಷ್ಟೇ ಗಾತ್ರದ ಬಿಂದುವಿನಿಂದ ತೋರಿಸಲಾಗಿದೆ. ಕ್ರಿ. ಶ. 18ನೆಯ ಶತಮಾನದಲ್ಲಿ ಮೈಸೂರು ಅರಸರ ಕಾಲದಲ್ಲಿ ಕನ್ನಡ ಲಿಪಿ ವಿಜಯನಗರ ಕಾಲದ ಅಕ್ಷರಗಳ ಕೆಲವು ಲಕ್ಷಣಗಳನ್ನು ಉಳಿಸಿಕೊಂಡಿದ್ದರೂ ಆಧುನಿಕ ಕನ್ನಡ ಲಿಪಿಗೆ ಬಹಳ ಹತ್ತಿರವಾಗಿ ತೋರುತ್ತದೆ. ಇತ್ತೀಚಿಗೆ ಮುದ್ರಣ ಬಂದಮೇಲೆ ಇತರ ಲಿಪಿಗಳಂತೆ ಕನ್ನಡ ಲಿಪಿಯಾದರೂ ಒಂದು ಸ್ಥಿರತೆಯನ್ನು ಹೊಂದಿದ್ದರಿಂದ ಹೆಚ್ಚಿನ ವಿಕಾಸಕ್ಕೆ ಆಸ್ಪದವಿಲ್ಲದಂತಾಗಿದೆ. ಆದರೂ ಮುದ್ರಣದ ಲಿಪಿಯಲ್ಲಿ ಸಹ ಕಾಲಕಾಲಕ್ಕೆ ಕೆಲವು ಸುಧಾರಣೆಗಳನ್ನು ಮಾಡಿಕೊಂಡು ಹೆಚ್ಚಿನ ಅಂದವಾದ ಅಕ್ಷರಗಳನ್ನು ಅಚ್ಚು ಹಾಕುತ್ತಿರುವುದನ್ನು ನೋಡುತ್ತೇವೆ.

ಕನ್ನಡ ಲಿಪಿಯ ಒಂದು ವೈಶಿಷ್ಟ್ಯವೆಂದರೆ ಪ್ರಾಚೀನ ಕಾಲದಿಂದಲೂ ಕಾಗುಣಿತಾಕ್ಷರದ ಹ್ರಸ್ವ ಮತ್ತು ದೀರ್ಘ ಎ ಮತ್ತು ಏ ಕಾರಗಳನ್ನು ಹಾಗೂ ಒ ಮತ್ತು ಓ ಕಾರಗಳನ್ನು ಒಂದೇ ಸಂಜ್ಞೆಯಿಂದ ಸೂಚಿಸುತ್ತಿದ್ದು ಅವುಗಳಲ್ಲಿಯ ಹ್ರಸ್ವ ಮತ್ತು ದೀರ್ಘ ವರ್ಣಗಳ ಭೇದವನ್ನು ಸಂದರ್ಭಾನುಸಾರವಾಗಿ ತಿಳಿದುಕೊಳ್ಳಬೇಕಾಗಿತ್ತು. ಇತ್ತೀಚಿಗೆ ಅಂದರೆ ಕ್ರಿ.ಶ. 17-18ನೆಯ ಶತಮಾನದಿಂದೀಚಿಗೆ ಮಾತ್ರ ಕಾಗುಣಿತಾಕ್ಷರದ ದೀರ್ಘ ಏ ಕಾರ, ದೀರ್ಘ ಓ ಕಾರ ಮತ್ತು ದೀರ್ಘ ಈ ಕಾರಗಳನ್ನು ಆಯಾ ಅಕ್ಷರಗಳ ಬಲಗಡೆ ಕೊಂಡಿಯುಳ್ಳ ಒಂದು ರೇಖೆಯಿಂದ ಸೂಚಿಸಲಾಗಿದೆ.

ಇನ್ನು ಕ್ರಿ.ಶ. 4-5ನೆಯ ಶತಮಾನದಿಂದ ಕ್ರಿ.ಶ. 13-14ನೆಯ ಶತಮಾನದ ವರೆಗೆ ಕರ್ಣಾಟಕ ಮತ್ತು ಆಂಧ್ರಪ್ರದೇಶದ ಶಾಸನಗಳಲ್ಲಿ ಸುಮಾರು ಒಂದೇ ಮಾದರಿಯ ಲಿಪಿಯನ್ನು ಉಪಯೋಗಿಸಿದ್ದುದರಿಂದ ಇವೆರಡೂ ಭಾಗದ ಲಿಪಿಗಳಿಗೆ ಕನ್ನಡ-ತೆಲುಗು ಲಿಪಿಯೆಂದು ಹೇಳುವುದುಂಟು. ಅದರಲ್ಲೂ ವಿಶೇಷವಾಗಿ ಬಾದಾಮಿ ಚಾಳುಕ್ಯ, ರಾಷ್ಟ್ರಕೂಟ ಮತ್ತು ಕಲ್ಯಾಣಿ ಚಾಳುಕ್ಯರ ಕಾಲದ ಕನ್ನಡ-ತೆಲುಗು ಲಿಪಿ ಒಂದೇ ಸ್ವರೂಪದ್ದಾಗಿದೆಯೆಂದು ಹೇಳಬಹುದು. ಕ್ರಿ. ಶ. 14-15ನೆಯ ಶತಮಾನಗಳಲ್ಲಿ ಕನ್ನಡ ಮತ್ತು ತೆಲುಗು ಲಿಪಿಗಳಲ್ಲಿ ಕೆಲವು ವ್ಯತ್ಯಾಸ

ಗಳು ತಲೆದೋರಿದ್ದು ಮುಂದಿನ ಎರಡು ಮೂರು ಶತಮಾನಗಳಲ್ಲಿ ಗಮನಾರ್ಹ ವಾದ ಭೇದಗಳು ಕಂಡುಬರುತ್ತವೆ. ಆದರೂ ಅಲ್ಪ ಪ್ರಯತ್ನದಿಂದ ಕನ್ನಡಿಗರು ತೆಲುಗು ಲಿಪಿಯನ್ನೂ ಅದರಂತೆ ಆಂಧ್ರರು ಕನ್ನಡ ಲಿಪಿಯನ್ನೂ ಸುಲಭವಾಗಿ ತಿಳಿದುಕೊಳ್ಳಬಹುದು. ಬಾದಾಮಿ ಚಾಳುಕ್ಯರ ಕಾಲದಲ್ಲಿ ಕನ್ನಡ ಲಿಪಿ ಮಹಾರಾಷ್ಟ್ರ ಮತ್ತು ಗುಜರಾತ್ ಪ್ರಾಂತ್ಯಗಳಲ್ಲಿಯೂ ಪ್ರಚಲಿತವಿದ್ದು ಮುಂದೆ ಅಲ್ಲಿ ನಾಗರೀ ಲಿಪಿ ಬಳಕೆಗೆ ಬಂತು.

ಅಂತೂ ಮೇಲಿನ ವಿವೇಚನೆಯಿಂದ ಕನ್ನಡ ಲಿಪಿ ಸುಮಾರು ಎರಡು ಸಾವಿರ ವರ್ಷಕ್ಕೂ ಹೆಚ್ಚಿನ ಪರಂಪರೆಯುಳ್ಳದ್ದಾಗಿದೆಯೆಂದು ವಿಶದವಾಗುತ್ತದೆ. ಒಂದು ಲಿಪಿಯ ಹುಟ್ಟು ಮತ್ತು ಬೆಳೆವಣಿಗೆ ಅದನ್ನು ಉಪಯೋಗಿಸುವ ಜನರ ಸಂಸ್ಕೃತಿಯ ಪ್ರತೀಕವಾಗಿರುತ್ತದೆ. ಒಂದು ಆದರ್ಶ ಲಿಪಿಯಲ್ಲಿ ಪ್ರತಿಯೊಂದು ಶಬ್ದದ ಉಚ್ಚಾರಣೆಗೆ ಅಸಂದಿಗ್ಧವಾದ ಸಂಜ್ಞೆಯಿರಬೇಕು. ಬರೆದಂತೆ ಓದುವಂತಿರಬೇಕು. ಓದಿದಂತೆ ಬರೆಯುವಂತೆಯೂ ಇರಬೇಕು. ಅಂದರೆ ಉಚ್ಚಾರಿತ ಅಕ್ಷರ ಹಾಗೂ ಲಿಖಿತ ವರ್ಣ ಇವುಗಳ ಸಂಬಂಧ ಸಂಪೂರ್ಣವಿರಬೇಕು. ಈ ದೃಷ್ಟಿಯಿಂದ ವಿಚಾರಿಸಿದರೆ ಕನ್ನಡ ಲಿಪಿ ಪರಿಪೂರ್ಣತೆಯನ್ನು ಪಡೆದಿದೆಯೆಂದು ಹೇಳಬಹುದು. ಈ ಲಿಪಿಯಲ್ಲಿ ಸ್ವರ ಮತ್ತು ವ್ಯಂಜನಗಳು ಪೂರ್ಣವಾಗಿದ್ದು ಆರ್ಯ ಮತ್ತು ದ್ರಾವಿಡ ಭಾಷೆಗಳ ಧ್ವನಿಗಳನ್ನು ಕೊರತೆಯಿಲ್ಲದೆ ಸೂಚಿಸಲಿಕ್ಕೆ ಉಪಯುಕ್ತವಾದ ಸಂಕೇತಗಳಿವೆ. ವ್ಯಂಜನಾಕ್ಷರಗಳೊಡನೆ ಸ್ವರಗಳ ಸುಂದರವಾದ ಸಂಯೋಗವಿದೆ. ಹೀಗೆ ಕನ್ನಡ ಲಿಪಿ ಅಶೋಕನ ಬ್ರಾಹ್ಮೀಲಿಪಿಯಿಂದ ಉದ್ಭವಿಸಿ ಕಾಲಕ್ರಮದಲ್ಲಿ ಅನೇಕ ಮಾರ್ಪಾಟುಗಳನ್ನು ಹೊಂದಿ ವೈವಿಧ್ಯಪೂರ್ಣವಾದ ವಿಕಾಸವನ್ನು ಪಡೆದು ಸಾಹಿತ್ಯ-ಸಂಸ್ಕೃತಿಗಳ ಹಿರಿಮೆಯನ್ನು ವ್ಯಕ್ತಪಡಿಸುತ್ತದೆ. ಕನ್ನಡ ವರ್ಣಮಾಲೆಯ ಪ್ರತಿಯೊಂದು ಅಕ್ಷರದ ಉಗಮ, ವಿಕಾಸ, ಉಚ್ಚಾರಣೆ ಮೊದಲಾದ ವಿವರಗಳು ಆಯಾ ಅಕ್ಷರಗಳ ಶೀರ್ಷಿಕೆಗಳಲ್ಲಿ ಬಂದಿವೆ. ಅವನ್ನು ನೋಡಬಹುದು.

ಈಚೆಗೆ ಪರಭಾಷೆಯ ಪದಗಳನ್ನು ಎರವಲಾಗಿ ತೆಗೆದುಕೊಳ್ಳಬೇಕಾದ ಅಗತ್ಯ ಒದಗಿಬಂದುದರಿಂದ Father, Faisal, Zoo, Man ಮೊದಲಾದುವನ್ನು ಬರೆಯಲು ವಿಶಿಷ್ಟ ಸಂಜ್ಞೆಗಳನ್ನು ಬಳಸಲಾಗುತ್ತಿದೆ. ಉದಾ : ಫಾದರ್, ಫೈಸಲ್, ಝೂ, ಮ್ಯಾನ್—ಹೀಗೆ. ನೋಡಿ—ಕನ್ನಡ ಭಾಷೆ. (ಜಿ.ಎಸ್.ಜಿ.)

**ಕನ್ನಡ ವಿಲಾಸಿ ರಂಗಭೂಮಿ :** ನಾಟಕ ಕಲೆಯನ್ನು ಕಸಬಿಗಾಗಿ ಅಥವಾ ಸಂಪಾದನೆಗಾಗಿ ಕಲಿಯದೆ ಆತ್ಮವಿನೋದಕ್ಕಾಗಿ ಅಭ್ಯಾಸ ಮಾಡಿ ಅಭಿನಯಿಸುವವರ ವಿಲಾಸಿ ರಂಗಭೂಮಿ ಅಥವಾ ಹವ್ಯಾಸಿ ರಂಗಭೂಮಿ ಕನ್ನಡದಲ್ಲಿ ಈ ಕಲೆಯ ಬೆಳೆವಣಿಗೆಗೆ ತಕ್ಕಮಟ್ಟಿಗೆ ಕಾರಣವಾಗಿದೆ. ಕನ್ನಡ ರಂಗಭೂಮಿಯ ಬೆಳೆವಣಿಗೆಯಲ್ಲಿ ಒಂದು ಕಾಲದಲ್ಲಿ ವೃತ್ತಿನಿರತರ ಕಂಪನಿಗಳು ಪ್ರಮುಖ ಪಾತ್ರ ವಹಿಸಿ ಜನತೆಯಲ್ಲಿ ಅಭಿಮಾನ ಮೂಡಿಸಿದ್ದುವು. ಸುಮಾರು 1930ರ ದಶಕದಲ್ಲಿ ವೃತ್ತಿ ರಂಗಭೂಮಿಯ ಇಳಿಮುಖದ ಸೂಚನೆಗಳು ಕಾಣತೊಡಗಿದುವು. ಬದಲಾಗುತ್ತಿದ್ದ ಸಮಾಜಕ್ಕೆ ಕಂಪನಿ ನಾಟಕಗಳು ರುಚಿಸದೇ ಹೋದುವು. ಆ ನಾಟಕಗಳ ವಸ್ತು ಮತ್ತು ಶೈಲಿ, ಅವುಗಳಿಗೆ ವ್ಯಯವಾಗುತ್ತಿದ್ದ ಕಾಲ, ಚಲನಚಿತ್ರಗಳ ಪ್ರವೇಶ ಮೊದಲಾದವು ಕಂಪನಿ ನಾಟಕಗಳು ರುಚಿಸದೆ ಇದ್ದುದಕ್ಕೆ ಕಾರಣಗಳು. ಇದೇ ಸಮಯಕ್ಕೆ ಸರಿಯಾಗಿ ಕಾಲೇಜುಗಳಲ್ಲಿ ಇಂಗ್ಲಿಷ್ ನಾಟಕಗಳು ಪ್ರಯೋಗಿಸಲ್ಪಡುತ್ತಿದ್ದವು. ವಿದ್ಯಾವಂತ ಜನಕ್ಕೆ ತಾವೂ ಕನ್ನಡದಲ್ಲಿ ನಾಟಕಗಳನ್ನು ಪ್ರಯೋಗಿಸಬೇಕೆಂಬ ಅಭಿಲಾಷೆ ಉಂಟಾಯಿತು. ಕಾಲೇಜು ದಿನಾಚರಣೆ ಇತ್ಯಾದಿಗಳಲ್ಲಿ ನಾಟಕ ಪ್ರಯೋಗ ಅನಿವಾರ್ಯವೆನಿಸಿತ್ತು. ಇದಕ್ಕಾಗಿ ಆಡಲು ಹೊಸ ನಾಟಕಗಳು ಬೇಕಾದುವು. ಈ ನಾಟಕಗಳ ಬರೆವಣಿಗೆ ಪ್ರಧಾನವಾಗಿ ಗದ್ಯ. ಪೌರಾಣಿಕ ಐತಿಹಾಸಿಕ ನಾಟಕಗಳಿಗೆ ಬೇಕಾಗುವಂತೆ ಹೆಚ್ಚು ಪಾಲು ನಾಟಕಗಳಿಗೆ ಉಡಿಗೆತೊಡಿಗೆಗಳಾಗಲಿ, ರಂಗಸಜ್ಜಿಕೆಯಾಗಲಿ, ದೀಪಾಲಂಕಾರವಾಗಲಿ ಬೇಕಿರಲಿಲ್ಲ. ಇದರಿಂದಾಗಿ ಹಲವು ನಾಟಕಗಳು ಕನ್ನಡದಲ್ಲಿ ಬಂದುವು. ಈ ರೀತಿಯಾದ ಬೆಳೆವಣಿಗೆ ಕಾಲೇಜುಗಳಿಗೇ ಸೀಮಿತವಾಗಿರಲಿಲ್ಲ. ಬೇರೆ ಬೇರೆ ರೀತಿಯ ನಾಗರಿಕ ಸಂಘ ಸಂಸ್ಥೆಗಳೂ ಈ ದಿಸೆಯಲ್ಲಿ ಕೆಲಸ ಮಾಡಲು ಪ್ರಾರಂಭಿಸಿದ್ದುವು. ಕನ್ನಡ ನಾಡಿನ ವಿವಿಧ ಭಾಗಗಳಲ್ಲಿ ಒಂದು ಕಾಲಕ್ಕೆ ವೃತ್ತಿನಿರತ ನಾಟಕ ಕಂಪನಿಗಳು ಹುಟ್ಟಿಕೊಂಡಂತೆ ವಿಲಾಸಿ ತಂಡಗಳು ಹುಟ್ಟಿಕೊಂಡದ್ದು ಆಗ.

ಇಪ್ಪತ್ತನೆಯ ಶತಮಾನದ ಆದಿಭಾಗದಲ್ಲಿ ಪ್ರಾರಂಭವಾದ ಭರತ ಕಲೋತ್ತೇಜಕ ಸಂಗೀತ ಸಮಾಜ ಮೊದಲ ವಿಲಾಸಿ ತಂಡವೆಂದು ಹೇಳಬಹುದು. ಇದು ಹೆಚ್ಚು ಕಾಲ ಬಾಳದೆ ಹೋದರೂ ಉತ್ತರ ಕರ್ಣಾಟಕದಲ್ಲಿ ಅನೇಕ ವಿಲಾಸಿ ತಂಡಗಳು ಹುಟ್ಟಿಕೊಳ್ಳಲು ಕಾರಣವಾಯಿತು. ಆದ್ದರಿಂದ ಭರತ ಕಲೋತ್ತೇಜಕ ಸಂಗೀತ ಸಮಾಜಕ್ಕೆ ಐತಿಹಾಸಿಕ ಮಹತ್ತ್ವವಿದೆ. ಈ ತಂಡದ ಪ್ರಭಾವದಿಂದ ಹುಟ್ಟಿಕೊಂಡ ವಿಲಾಸಿ ತಂಡಗಳಲ್ಲಿ ಪ್ರಮುಖವಾದದ್ದು ಗದಗಿನ ದಿ ಯಂಗ್ ಮೆನ್ಸ್ ಫುಟ್‌ಬಾಲ್ ಕ್ಲಬ್ ಅಸೋಸಿಯೇಷನ್. ಹುಯಿಲಗೋಳ ನಾರಾಯಣರಾಯರು ಈ ವಿಲಾಸಿ ತಂಡದ ಉಸಿರಾಗಿದ್ದರು. ಈ ತಂಡದ ಮೂಲಕ ಹೊಸ ಹೊಸ ತಂತ್ರ ಹಾಗೂ ಹೊಸ ಹೊಸ ವಸ್ತುಗಳುಳ್ಳ ನಾಟಕಗಳನ್ನು ಹುಯಿಲಗೋಳರು ರಂಗದ ಮೇಲೆ ತಂದರು. ಬಾಗಲಕೋಟೆಯ ವಾಸುದೇವ ವಿನೋದಿನೀ ಸಭಾವನ್ನೂ ಪ್ರಮುಖ ವಿಲಾಸೀ ತಂಡಗಳ ಸಾಲಿನಲ್ಲಿ ಹೆಸರಿಸುವುದು ಆವಶ್ಯಕ. ಈ ವಿಲಾಸಿ ತಂಡ ಪ್ರಮುಖವಾಗಿ ಮೊದಲಿಗೆ ಕೆರೂರು ವಾಸುದೇವಾಚಾರ್ಯರ, ಅನಂತರ ಶ್ರೀರಂಗರ ನಾಟಕಗಳನ್ನೇ ಪ್ರದರ್ಶಿಸಿತು. ಈ ತಂಡ ಕರ್ಣಾಟಕದ ವಿವಿಧ ಭಾಗಗಳಲ್ಲಿ ನಾಟಕಗಳ ಪ್ರದರ್ಶನವನ್ನು ಏರ್ಪಡಿಸುತ್ತಿತ್ತು ಎಂದು ತಿಳಿದುಬರುತ್ತದೆ. ಕನ್ನಡ ನಾಟ್ಯವಿಲಾಸಿ ಸಂಘ ಧಾರವಾಡದಲ್ಲಿ ಶ್ರೀರಂಗರ ನೇತೃತ್ವದಲ್ಲಿ ಆರಂಭವಾಯಿತು. ಶ್ರೀರಂಗರೇ ಈ ತಂಡಕ್ಕೆ ನಾಟಕಗಳನ್ನು ಬರೆದರು ; ಭಾರತದ ವಿವಿಧ ಭಾಗಗಳಲ್ಲಿ ಆಡಿಸಿದರು. ಧಾರವಾಡದ ಕಲೋಪಾಸಕ ಮಂಡಳಿಯೂ ಧಾರವಾಡದ ವಿಲಾಸಿ ತಂಡಗಳಲ್ಲಿ ಮುಖ್ಯವಾದದ್ದು. ಈ ತಂಡ ದ. ರಾ. ಬೇಂದ್ರೆಯವರ, ಎಲ್. ಜಿ. ಬೇಂದ್ರೆಯವರ ಮತ್ತು ಹುಯಿಲಗೋಳ ನಾರಾಯಣರಾಯರ ನಾಟಕಗಳನ್ನು ಅಭ್ಯಾಸ ಮಾಡಿ, ಉತ್ತರ ಕರ್ಣಾಟಕದ ಪ್ರಮುಖ ಊರುಗಳಲ್ಲಿ, ಮಹಾರಾಷ್ಟ್ರದ ವಿವಿಧ ಭಾಗಗಳಲ್ಲಿ ಪ್ರದರ್ಶಿಸಿದೆ. ಈ ರೀತಿ ದುಡಿದ ವಿಲಾಸಿ ತಂಡಗಳಲ್ಲಿ ಕನ್ನಡ ಕಲೋದ್ಧಾರಕ ಸಂಘವೂ ಒಂದು. ಧಾರವಾಡದ ಕರ್ನಾಟಕ ಕಾಲೇಜು ಆ



ಸಾಮಾಜಿಕ ನಾಟಕ ಒಂದರಲ್ಲಿ ಸಂಪತ್ ಮತ್ತು ಇತರರು

ಭಾಗದ ಸಾಂಸ್ಕೃತಿಕ ಜೀವನದ ಕೇಂದ್ರವಾಗಿದ್ದು, ಅನೇಕ ನಟರನ್ನು ವಿಲಾಸಿ ರಂಗಭೂಮಿಗೆ ಕೊಟ್ಟಿದೆ. ಮನೋಹರ ಗ್ರಂಥಮಾಲೆಯ ಜಿ. ಬಿ. ಜೋಶಿಯವರು ವಿಲಾಸಿಗಳಿಂದ ನಾಟಕಾಭ್ಯಾಸ ಮಾಡಿಸಿ, ಉತ್ತರ ಕರ್ಣಾಟಕದ ವಿವಿಧ ಭಾಗಗಳಲ್ಲಿ ಹಾಗೂ ಪೂನ, ಬೊಂಬಾಯಿ ಮುಂತಾದ ಪ್ರಮುಖ ಊರುಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ಮಾಡಿದುದನ್ನು ಇಲ್ಲಿ ಉಲ್ಲೇಖಿಸ ಬಹುದು. ಧಾರವಾಡದ ಆಕಾಶ ವಾಣಿ ವಿಭಾಗದಲ್ಲಿ ನಾಟಕ ನಿರ್ದೇಶಕ ರಾಗಿರುವ ಎನ್. ಎಸ್. ವಾಮನ್ ಆಕಾಶವಾಣಿಯ ಹೊರಗೂ ಕೆಲಸ ಮಾಡುತ್ತಿದ್ದಾರೆ. ತಮ್ಮ ಸ್ನೇಹಿತರೊಡ ಗೂಡಿ ಅಲ್ಲಲ್ಲೆ ನಾಟಕಗಳನ್ನು ಪ್ರದರ್ಶಿ ಸುವುದರ ಜೊತೆಗೆ ನಾಟಕ ತಂಡಗಳಿಗೆ ಸಹಾಯ ಮಾಡುತ್ತಿದ್ದಾರೆ. ಕರ್ನಾ ಟಕ ವಿಶ್ವವಿದ್ಯಾಲಯದ ಅಧ್ಯಾಪಕ ಮಿತ್ರರು ಈಚೆಗೆ ಅಂತರಂಗವೆಂಬ ಒಂದು ವಿಲಾಸಿ ತಂಡವನ್ನು ರಚಿಸಿ ಕೊಂಡಿದ್ದಾರೆ.



ಸಿಂಧುವಳ್ಳಿ ಅನಂತಮೂರ್ತಿ ಅವರ ಕಾಡುಪ್ರಾಣಿ ನಾಟಕದ ಒಂದು ದೃಶ್ಯ

ಬೆಂಗಳೂರಿನ ಅಮೆಚ್ಯೂರ್ ಡ್ರಮಾಟಿಕ್ ಅಸೋಸಿಯೇಷನ್ (ಎ.ಡಿ.ಎ.) ಬಹಳ ಹಳೆಯ ಹಾಗೂ ಬಹುಮುಖ್ಯ ವಿಲಾಸಿತಂಡ. ಆಧುನಿಕ ಕನ್ನಡ ನಾಟಕಗಳ ಜನಕ ಕೈಲಾಸಂ ಅವರ ಮೊದಲ ನಾಟಕವಾದ ಟೊಳ್ಳುಗಟ್ಟಿಯ ಜನನಕ್ಕೆ ಎ.ಡಿ.ಎ. ಕಾರಣ. 1943ರಲ್ಲಿ ಬೆಂಗಳೂರಿನಲ್ಲಿ ಛಾಯಾ ಕಲಾವಿದರ ತಂಡದ ಜನನವಾಯಿತು. ಇವರು ಮೊದಲಿಗೆ ಕೈಲಾಸಂ ನಾಟಕಗಳನ್ನೂ ಅನಂತರ ಪರ್ವತವಾಣಿಯವರ ನಾಟಕ ಗಳನ್ನೂ ಪ್ರದರ್ಶಿಸಿದರು. ಅಲ್ಲದೆ ಬೆಂಗಳೂರಿನ ರವಿ ಕಲಾವಿದರು, ಶಶಿ ಕಲಾವಿದರು ಚಿತ್ರಕಲಾವಿದರು, ಕಮಲ ಕಲಾಮಂದಿರ ಇವೇ ಮೊದಲಾದ ತಂಡಗಳು ವಿಲಾಸಿ ರಂಗಭೂಮಿಯಲ್ಲಿ ಸಾಕಷ್ಟು ಕೆಲಸಮಾಡಿವೆ. ಇತ್ತೀಚೆಗೆ ಅಸ್ತಿತ್ವಕ್ಕೆ ಬಂದ ಬೆಂಗಳೂರಿನ ಕಲಾಕುಂಜ, ಕಲಾಘೋಷಿಣಿ, ಮಿತ್ರಬಳಗ, ಸಾಧನಾ ಕಲಾವಿದರು, ಕನ್ನಡ ಸಾಹಿತ್ಯ ಕಲಾಸಂಘ, ಪ್ರತಿಮಾ ನಾಟಕರಂಗ ಇವೇ ಮೊದಲಾದವು ಇತರ ಭಾಷೆಗಳ ಅನುವಾದಗಳನ್ನು, ಅಸಂಗತ ನಾಟಕಗಳನ್ನು, ಕನ್ನಡದ ಉತ್ತಮ ನಾಟಕಗಳನ್ನು ರಂಗದ ಮೇಲೆ ತಂದು ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿವೆ. ಬೆಂಗಳೂರಿ ನಲ್ಲಿರುವ ನಾಟ್ಯಸಂಘ ವಿಲಾಸಿ ತಂಡಗಳಿಂದ ಪ್ರದರ್ಶನಗಳನ್ನು ಏರ್ಪಡಿಸುವುದರ ಜೊತೆಗೆ ಉಲ್ಲಾಳ್ ಪಾರಿತೋಷಕ ಸ್ಪರ್ಧೆಯನ್ನೂ ವರ್ಷಕ್ಕೊಮ್ಮೆ ಏರ್ಪಡಿಸಿ ವಿಲಾಸಿ ರಂಗಭೂಮಿಯ ಶ್ರೇಯಸ್ಸಿಗೆ ಕಾರಣವಾಗಿದೆ.

ನಾಟಕ ರಂಗದಲ್ಲಿ ಕ್ರಾಂತಿಯನ್ನುಂಟು ಮಾಡಿದ ಇನ್ನೊಂದು ಹೆಸರು ಶ್ರೀರಂಗ. ಶ್ರೀರಂಗರ ಹೊಸ ರೀತಿಯ ನಾಟಕಗಳು ಬೆಂಗಳೂನ ರಂಗಭೂಮಿಯ ಮೇಲೆ ಆಗಾಗ ಕಾಣಿಸಿಕೊಳ್ಳುತ್ತಿವೆ. ಹೊಸ ಹೊಸ ತಂತ್ರ ಹಾಗೂ ಹೊಸ ಹೊಸ ಪ್ರಯೋಗಗಳನ್ನು ಮಾಡುವುದರಲ್ಲಿ ಇವರು ಎತ್ತಿದ ಕೈ. ಉತ್ತಮ ನಟರೂ ನಾಟಕಕಾರರೂ ಆದ ಪರ್ವತವಾಣಿ ಮತ್ತು ಎಚ್. ಕೆ. ರಂಗನಾಥ್ ಅವರೂ ಬೆಂಗಳೂರಿನ ವಿಲಾಸಿ ರಂಗಭೂಮಿಯ ಮೇಲೆ ಆಗಾಗ್ಗೆ ಕಾಣಿಸಿಕೊಳ್ಳುವುದೇ ಅಲ್ಲದೆ, ಈ ದಿಸೆಯಲ್ಲಿ ಕೆಲಸ ಮಾಡುತ್ತಿರುವವರಿಗೆ ಮಾರ್ಗದರ್ಶಕರಾಗಿರುತ್ತಾರೆ. ಬಿ. ಎಸ್. ರಾಮರಾವ್, ಬಿ. ಎಸ್. ನಾರಾಯಣರಾವ್, ಬಿ. ಎಸ್. ವೆಂಕಟರಾಂ, ಬಿ. ಚಂದ್ರಶೇಖರ್, ಬಿ. ಎನ್. ನಾರಾಯಣರಾವ್, ಎಂ. ವಿ. ಕೃಷ್ಣಸ್ವಾಮಿ, ಎಂ. ಎಸ್. ಶ್ರೀನಿವಾಸ್, ಪಿ. ಲಂಕೇಶ್, ಎಸ್. ಜಿ. ರಾಮಚಂದ್ರ, ಬಿ. ಕೃಷ್ಣ, ನಾಗರತ್ನ, ಜಿ. ವಿ. ಶಿವಾನಂದ, ಉಮೇಶ ರುದ್ರ, ಪಿ. ಎ ವೇಣುಗೋಪಾಲ್, ನಾಗೇಶ್, ಕೆ. ವೆಂ. ರಾಜಗೋಪಾಲ್, ಎ. ಎಸ್. ಮೂರ್ತಿ ಇವರೇ ಮೊದಲಾದ ನಟರೂ ನಿರ್ದೇಶಕರೂ ವಿಲಾಸಿ ರಂಗಭೂಮಿಯನ್ನು ಜೀವಂತಗೊಳಿಸಿಕೊಂಡು ಬರುತ್ತಿರುವುದರ ಜೊತೆಗೆ ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿದ್ದಾರೆ; ವಿಲಾಸಿ ರಂಗಭೂಮಿಯಲ್ಲಿ ಹೊಸ ಬೆಳಕನ್ನು ಚೆಲ್ಲುತ್ತಿದ್ದಾರೆ.

ಮೈಸೂರು ನಗರದಲ್ಲಿ 1919ರಲ್ಲಿ ಡಿ. ಲಕ್ಷ್ಮಣಯ್ಯನವರ ನೇತೃತ್ವದಲ್ಲಿ ಪ್ರಾರಂಭ ವಾದ ದಿ ಲಿಟರರಿ ಅಂಡ್ ಡ್ರಮಾಟಿಕ್ ಅಸೋಸಿಯೇಷನ್ 1944ರ ವರೆಗೂ ಕೆಲಸ ಮಾಡಿತು. ಮಹಾರಾಜ ಕಾಲೇಜಿನಲ್ಲಿದ್ದ ಯಾಕೂಬ್ಸ್, ಮಿತ್ರಮೇಳ ಮತ್ತು ಕರ್ಣಾಟಕ ಸಂಘ—ಇವು ಹವ್ಯಾಸಿ ರಂಗಭೂಮಿಗೆ ಉತ್ತಮ ನಟರನ್ನು ಕೊಡುವುದರ ಜೊತೆಗೆ ಉತ್ತಮ ನಾಟಕಕಾರರನ್ನೂ ಕೊಟ್ಟಿವೆ. ಮೈಸೂರು ನಗರದ ಪ್ರಮುಖ ವಿಲಾಸಿ ತಂಡ ಸ್ಯಾಮ್ಸ್ ಲಿಟಲ್ ಥಿಯೇಟರ್ ಇಂದಿಗೂ ಸಂಪತ್ ಅವರ ನೇತೃತ್ವ ದಲ್ಲಿ ಕೆಲಸ ಮಾಡಿಕೊಂಡು ಬರುತ್ತಿದೆ. ಈಚೆಗೆ ಜನ್ಮತಾಳಿದ ಸಮತೆಂತೋ, ಅಮರ ಕಲಾವಿದರು—ಈ ತಂಡಗಳೂ ಬೆಂಗಳೂರಿನ ತಂಡಗಳಂತೆ ಮೈಸೂರು ನಗರದಲ್ಲಿ ಅನುವಾದಿತ ನಾಟಕಗಳನ್ನೂ ಅಸಂಗತ ನಾಟಕಗಳನ್ನೂ ರಂಗದ ಮೇಲೆ ತಂದು ಹೊಸ ಹೊಸ ಪ್ರಯೋಗಗಳನ್ನು ಮಾಡುತ್ತಿರುವುದಲ್ಲದೆ ಹಳೆಯ ಉತ್ತಮ ನಾಟಕ ಗಳನ್ನು ರಂಗದ ಮೇಲೆ ತರುತ್ತಿವೆ. ಆರ್. ಗುರುರಾಜರಾವ್ ಅವರು ವಿಲಾಸಿ ತಂಡಗಳು ಪ್ರದರ್ಶಿಸುವ ನಾಟಕಗಳಿಗೆ ಸಹಾಯ ಮಾಡುತ್ತಿದ್ದಾರೆ.

ದಕ್ಷಿಣ ಕನ್ನಡದಲ್ಲಿ ಹವ್ಯಾಸಿ ರಂಗಭೂಮಿಗಾಗಿ ಶಿವರಾಮ ಕಾರಂತರು ಅನೇಕ ಪ್ರಯೋಗಗಳನ್ನು ಮಾಡಿದ್ದಾರೆ. ಕನ್ನಡ ನಾಡಿನ ಮುಖ್ಯನಗರಗಳಾದ ಬೆಂಗಳೂರು ಮೈಸೂರುಗಳನ್ನು ಬಿಟ್ಟು ಕನ್ನಡ ನಾಡಿನ ಉಳಿದ ಭಾಗಗಳಲ್ಲೂ ವಿಲಾಸಿ ತಂಡ ಗಳು ಕೆಲಸ ಮಾಡಿಕೊಂಡು ಬರುತ್ತಿವೆ. ಹೆಗ್ಗೋಡಿನ ಶ್ರೀ ನೀಲಕಂಠೇಶ್ವರ ನಾಟ್ಯ ಸೇವಾ ಸಂಘ, ಸಾಗರದ ಎನ್. ಆರ್. ಮಾಸೂರ್ ಮತ್ತು ಮಿತ್ರರು, ಧಾರವಾಡದ ಎನ್. ವಿ. ಜಗನ್ನಾಥರಾವ್ ಮತ್ತು ಮಿತ್ರರು ಮೊದಲಾದವರನ್ನು ಇಲ್ಲಿ ಹೆಸರಿಸಬಹುದು. ಕನ್ನಡ ನಾಡಿನಲ್ಲಿ ಅಲ್ಲದೆ ಭಾರತದ ಪ್ರಮುಖ ನಗರಗಳಾದ ದೆಹಲಿ, ಬೊಂಬಾಯಿ, ಪೂನ, ನಾಗಪುರ, ಹೈದರಾಬಾದು, ಮದ್ರಾಸು—ಮುಂತಾದ ಕಡೆಗಳಲ್ಲಿ ಕನ್ನಡ ನಾಟಕಗಳು ವಿಲಾಸಿ ತಂಡಗಳಿಂದ ಪ್ರದರ್ಶಿತವಾಗುತ್ತಿವೆ. ಅಲ್ಲದೆ ಭಾರತದ ವಿವಿಧ ಭಾಗಗಳಲ್ಲಿರುವ ಕೈಗಾರಿಕಾ ನಗರಗಳಲ್ಲಿ ಕರ್ಣಾಟಕ ಸಂಘಗಳ ಮೂಲಕ ವಿಲಾಸಿ ನಾಟಕಗಳು ಬೆಳಕು ಕಾಣುತ್ತಿವೆ. ಈ ದಿಸೆಯಲ್ಲಿ ಪ್ರಮುಖ ವಾಗಿ ಬೊಂಬಾಯಿಯ ಕನ್ನಡ ಥಿಯೇಟರ್ಸ್, ದೆಹಲಿಯ ಕನ್ನಡ ಭಾರತಿ ಮುಂತಾದ ಸಂಸ್ಥೆಗಳಲ್ಲದೆ, ಬೊಂಬಾಯಿಯಲ್ಲಿರುವ ಕೆ. ಕೆ. ಸುವರ್ಣ, ವಿ. ಕೆ. ಮೂರ್ತಿ, ಕೆ. ಎಂ. ಮುತಾಲಿಕ್, ದೆಹಲಿಯಲ್ಲಿರುವ ಬಿ. ವಿ. ಕಾರಂತ. ಪ್ರೇಮಾ ಕಾರಂತ, ಯು. ಪ್ರಭಾಕರರಾವ್, ಎಂ. ವಿ. ನಾರಾಯಣರಾವ್, ಡಿ. ರಮೇಶ್, ಎಂ. ಎಸ್. ಸತ್ಯು, ಮದ್ರಾಸಿನಲ್ಲಿರುವ ಪಿ. ಶೇಷಗಿರಿರಾವ್ ಇವರೇ ಮೊದಲಾದವರು ಹವ್ಯಾಸಿ ನಾಟಕಗಳಲ್ಲಿ ಆಸ್ಥೆ ತೋರಿಸುತ್ತಿದ್ದಾರೆ. ಬಿ. ವಿ. ಕಾರಂತ ಅವರ ಕಾರ್ಯವ್ಯಾಪ್ತಿ ಈಗ ದೆಹಲಿಗೇ ಸೀಮಿತವಾಗಿರದೆ ಕನ್ನಡ ನಾಡಿನ ಇತರ ಭಾಗಗಳಲ್ಲೂ ವ್ಯಾಪಿಸಿದೆ.

ಈ ಖಾಸಗಿ ಸಂಸ್ಥೆಗಳು, ತಂಡಗಳು ಮತ್ತು ವ್ಯಕ್ತಿಗಳು ವಿಲಾಸಿ ರಂಗಭೂಮಿ ಗಾಗಿ ಕೆಲಸ ಮಾಡುತ್ತಿದ್ದಂತೆಯೇ ಸರ್ಕಾರವೂ ಈ ದಿಸೆಯಲ್ಲಿ ಇತ್ತೀಚಿನ ವರ್ಷ ಗಳಲ್ಲಿ ಆಸಕ್ತಿ ತೋರಿಸುತ್ತಿದೆ. ಸಂಗೀತ ನಾಟಕ ಅಕಾಡೆಮಿಯು ಆಶ್ರಯದಲ್ಲಿ ಹವ್ಯಾಸಿ ರಂಗಭೂಮಿಗೆ ಪ್ರೋತ್ಸಾಹವಿದೆ. ದೇಶದ ಪ್ರಮುಖ ವಿಲಾಸಿ ತಂಡ

ಗಳಿಂದ ಪ್ರಯೋಗಗಳನ್ನು ಏರ್ಪಡಿಸುವುದರ ಮೂಲಕ ಇದು ಹವ್ಯಾಸಿ ರಂಗಭೂಮಿಯನ್ನು ಜೀವಂತವಾಗಿಟ್ಟಿದೆ ಎನ್ನಬಹುದು. ನಾಟಕ ಕೇವಲ ಹವ್ಯಾಸವಷ್ಟೇ ಅಲ್ಲ, ಅದೊಂದು ಶಾಸ್ತ್ರ; ಅದರ ಅಭ್ಯಾಸ ಹಾಗೂ ಪ್ರಯೋಗ ವೈಜ್ಞಾನಿಕ- ಎಂಬುದನ್ನು ಮೈಸೂರು ವಿಶ್ವವಿದ್ಯಾನಿಲಯವೂ ಗಮನಿಸಿ, ಆ ಶಾಸ್ತ್ರವನ್ನು ಅಭ್ಯಾಸಕ್ಕಿಟ್ಟಿದೆ. ಇದರಿಂದ ಉತ್ಸಾಹೀ ಹವ್ಯಾಸಿಗಳನ್ನು ಈ ದಿಸೆಯಲ್ಲಿ ಪ್ರೋತ್ಸಾಹಿಸುತ್ತಿದೆ ಎನ್ನಬಹುದು. ಕೇಂದ್ರ ಸರ್ಕಾರದ ವಿದ್ಯಾ ಇಲಾಖೆ ಎರಡು ಮೂರು ಬಾರಿ ದೇಶದ ಬೇರೆ ಬೇರೆ ಭಾಗಗಳಲ್ಲಿ ನಾಟಕ ತರಬೇತಿ ಶಿಬಿರಗಳನ್ನು ವಿಶ್ವವಿದ್ಯಾನಿಲಯಗಳ ಅಧ್ಯಾಪಕರಿಗಾಗಿ ನಡೆಸಿದುದುಂಟು. ಅಲ್ಲಿ ತರಬೇತಿ ಪಡೆದ ಅಧ್ಯಾಪಕರು ತಮ್ಮ ತಮ್ಮ ವಿದ್ಯಾರ್ಥಿಗಳಿಗೆ ಇದರಿಂದ ಸಹಾಯ ಮಾಡಿದ್ದೂ ಉಂಟು. ಕೆಲವು ವರ್ಷಗಳಿಂದ ಆ ಕಾರ್ಯಕ್ರಮ ನಿಂತುಹೋದಂತಿದೆ. ರಾಜ್ಯ ಸರ್ಕಾರದ ಸಂಗೀತ ನಾಟಕ ಅಕೆಡಮಿ ಪ್ರೌಢಶಾಲೆಯ ಅಧ್ಯಾಪಕರಿಗೆ ಹಾಗೂ ಹವ್ಯಾಸಿಗಳಿಗೆ ತರಬೇತಿ ಶಿಬಿರಗಳನ್ನು ನಡೆಸುತ್ತಿದೆ. ಹವ್ಯಾಸಿ ರಂಗಭೂಮಿ ವ್ಯವಸ್ಥಿತ ರೀತಿಯಲ್ಲಿ ಬೆಳೆಯಲು ಇದರಿಂದ ಸಹಾಯವಾಗುವುದರಲ್ಲಿ ಸಂದೇಹವಿಲ್ಲ.

ವಿಲಾಸಿ ನಾಟಕಗಳಲ್ಲಿ ಅಭಿನಯಿಸುವುದರ ಮೂಲಕ ಹವ್ಯಾಸಿ ರಂಗಭೂಮಿಗೆ ವರ್ಚಸ್ಸು ತಂದುಕೊಡಲು ನಾಡಿನ ಹಲವಾರು ಸುಶಿಕ್ಷಿತರೂ ಸಾಹಿತಿಗಳೂ ಕಾರಣರಾಗಿದ್ದಾರೆ. ಕೈಲಾಸಂ, ಶಿವರಾಮ ಕಾರಂತ, ಶ್ರೀರಂಗ, ದೇವುಡು ನರಸಿಂಹಶಾಸ್ತ್ರಿ, ಬಳ್ಳಾರಿ ರಾಘವಾಚಾರಿ, ಎಂ. ಎಲ್. ಶ್ರೀನಿವಾಸಶಾಸ್ತ್ರಿ, ಡಿ. ಲಕ್ಷ್ಮಣಯ್ಯ, ಸಿ. ಆನಂದರಾವ್, ಎನ್. ಎಸ್. ನಾರಾಯಣ ಶಾಸ್ತ್ರಿ, ಎ. ಎಂ. ನಟೇಶ್, ನಾ. ಕಸ್ತೂರಿ, ವಿ. ಕೆ. ಶ್ರೀನಿವಾಸನ್, ಎ. ಸಿ. ನರಸಿಂಹಮೂರ್ತಿ, ಸಿ. ಬಿ. ಜಯರಾವ್, ಸಂಪತ್, ಆರ್. ಗುರುರಾಜರಾವ್, ಟಿ. ಎಂ. ಅಮೀರ್, ಸಿ. ಕೆ. ನಾಗರಾಜರಾವ್. ಟಿ. ಸದಾಶಿವಯ್ಯ, ಎಸ್. ಎಚ್. ಪಾರ್ವತಿ, ಹೇಮಾ, ಯಮುನಾ, ವಿಜಯಾ, ಬಿ. ಎಸ್. ವೆಂಕಟರಾಂ, ಮಂಗಳವೇಡೆ. ಸಿ. ಎಸ್. ಬೆನ್ನೂರ, ಕೆ. ಜಿ. ಹಲಸಗಿ, ಜಿ. ವಿ. ಹಿರೇಮಠ, ವಿ. ಎಂ. ಇನಾಂದಾರ್, ಜೋಳದ ರಾಶಿ ದೊಡ್ಡನಗೌಡ, ವೈ. ಎಂ. ಚಂದ್ರಯ್ಯ ಇವರೇ ಮೊದಲಾದವರೂ ವಿಲಾಸಿ ರಂಗಭೂಮಿಗಾಗಿ ವಿವಿಧ ರೀತಿಯಲ್ಲಿ ಕೆಲಸ ಮಾಡಿದವರೂ ಬಹಳ ಹಿಂದೆಯೇ ನಾಟಕಗಳಲ್ಲಿ ಅಭಿನಯಿಸಿ ಹವ್ಯಾಸೀ ರಂಗಭೂಮಿಗೆ ಒಂದು ಅಸ್ತಿತ್ವವನ್ನು ತಂದುಕೊಟ್ಟರು. ಇತ್ತೀಚೆಗೆ ಹವ್ಯಾಸಿ ರಂಗಭೂಮಿಯಲ್ಲಿ ಆಗಾಗ್ಗ ಕಾಣಿಸಿಕೊಳ್ಳುತ್ತಿರುವ ಹಲವಾರು ನಟರೂ ನಟಿಯರೂ ನೇಪಥ್ಯ ವರ್ಗದವರೂ ಈ ರಂಗಭೂಮಿಯನ್ನು ಪ್ರಗತಿಪಥದತ್ತ ಒಯ್ಯುತ್ತಿದ್ದಾರೆ. ನಾಡಿನ ಬಹಳೆಡೆಗಳಲ್ಲಿ ವಿಲಾಸಿ ನಾಟಕಗಳ ಪ್ರಯೋಗ ನಡೆಯುತ್ತಿದ್ದು, ಪ್ರಮುಖ ನಗರಗಳಾದ ಬೆಂಗಳೂರು, ಮೈಸೂರುಗಳಲ್ಲಿ ಈ ಚಟುವಟಿಕೆ ಹೆಚ್ಚಾಗಿ ಕಾಣಬರುತ್ತಿದೆ. ಇದನ್ನು ದೃಷ್ಟಿಯಲ್ಲಿಟ್ಟುಕೊಂಡು ಹಲವು ಉತ್ತಮ ನಟನಟಿಯರನ್ನೂ ನೇಪಥ್ಯವರ್ಗದವರನ್ನೂ ಇಲ್ಲಿ ಹೆಸರಿಸಬಹುದು. ಅವರುಗಳೆಂದರೆ (ಈ ಹಿಂದೆ ಹೆಸರಿಸಿದವರಲ್ಲದೆ) ಬೆಂಗಳೂರಿನಲ್ಲಿ–ಸಿಂಹ, ನಾಗರತ್ನ, ಲೋಕನಾಥ್, ಬಿ. ಆರ್. ಜಯರಾಂ, ಸೀತಾರಾಂ, ಲೋಕೇಶ್, ವಿಮಲಾ ರಂಗಾಚಾರ್, ಶಿವರಾಮಯ್ಯ, ನೀಲಿ, ಜಿ. ನೀಲಕಂಠರಾವ್, ಜಿ. ವಿ. ಜಯಶ್ರೀ, ಎಚ್. ಜಿ. ಸೋಮಶೇಖರರಾವ್, ಪದ್ಮನಾಭ್ (ಪದ್ದು), ವೆಂಕಟಸುಬ್ಬರಾವ್, ಲಲಿತಾ ಕುಪ್ಪಸ್ವಾಮಿ, ಮಾಲತಿ, ವಿಜಯಲಕ್ಷ್ಮಿ, ಶಾಂತಾ, ಶಾಂತಾ ದೇವುಡು, ರಾಮಮೂರ್ತಿ, ಜಯಶ್ರೀ, ಸುಶೀಲ, ಭಾರ್ಗವಿ ಇವರೇ ಮೊದಲಾದವರು, ಮೈಸೂರಿನಲ್ಲಿ ಚಲನಚಿತ್ರ ನಟ ಕೆ. ಎಸ್. ಅಶ್ವತ್ಥ, ಬಿ. ಎ. ಸತ್ಯನಾರಾಯಣರಾವ್, ಎಚ್. ಎನ್. ದೊಡ್ಡನಾರಣಪ್ಪ, ಪಾಸು, ಬಸವರಾಜ್, ಕೆ. ಇಂದಿರಾ, ನ. ರತ್ನ, ವಿಶ್ವನಾಥ ಮಿರ್ಲೆ, ಎಚ್. ಎಂ. ಚನ್ನಯ್ಯ, ಸಿಂಧುವಳ್ಳಿ ಅನಂತಮೂರ್ತಿ, ರಾಮೇಶ್ವರೀ ವರ್ಮ, ನರಸಿಂಹನ್, ರಾಮನಾಥ್, ಬಿ.ಆರ್. ವೆಂಕಟರಾಂ ಇವರೇ ಮೊದಲಾದವರು. ಹವ್ಯಾಸಿ ರಂಗಭೂಮಿಯ ಕೊಡುಗೆಗಳು ಗಮನಾರ್ಹ. ಬಿ. ಎಂ. ಶ್ರೀ. ಕುವೆಂಪು, ಕೈಲಾಸಂ, ಶ್ರೀರಂಗ, ಸಂಸ, ಎಸ್. ಜಿ. ಶಾಸ್ತ್ರಿ, ಎಂ. ಆರ್. ಶ್ರೀ ವೆಂಬಾರ್, ವೆಂಕಣ್ಣಚಾರ್, ಪು. ತಿ. ನ., ಮಾಸ್ತಿ, ಶಿವರಾಮ ಕಾರಂತ, ಪರ್ವತವಾಣಿ, ಕ್ಷೀರಸಾಗರ, ಎ. ಎನ್. ಮೂರ್ತಿರಾವ್, ನಾ. ಕಸ್ತೂರಿ, ಟಿ. ಸದಾಶಿವಯ್ಯ, ಜಿ. ಬಿ. ಜೋಶಿ, ಕೀರ್ತಿನಾಥ ಕುರ್ತಕೋಟಿ, ದ. ರಾ. ಬೇಂದ್ರೆ, ಜಿ. ಪಿ. ರಾಜರತ್ನಂ; ಗಿರೀಶ ಕಾರ್ನಾಡ ಲಂಕೇಶ್, ಚಂದ್ರಶೇಖರ ಪಾಟೀಲ್, ಚಂದ್ರಶೇಖರ ಕಂಬಾರ, ಎಚ್. ಕೆ. ರಾಮಚಂದ್ರಮೂರ್ತಿ, ರಾಮಚಂದ್ರ ಶರ್ಮ, ನ. ರತ್ನ ಮೊದಲಾದ ನಾಟಕಕಾರರನ್ನು ಕೊಟ್ಟಿದೆ. ಸಾಹಿತ್ಯಿಕವಾಗಿ, ವೈಚಾರಿಕವಾಗಿ ನಾಟಕ ಪ್ರದರ್ಶನವನ್ನು ನೋಡಲು ಸಾಧ್ಯವಾಗಿದೆ. ಹಿನ್ನೆಲೆ, ರಂಗಸಜ್ಜಿಕೆ ದೀಪದ ವ್ಯವಸ್ಥೆ, ನಿರ್ದೇಶನ, ಅಭಿನಯ ಇವೇ ಮೊದಲಾದವುಗಳಲ್ಲಿ ಪ್ರಯೋಗ ಶೀಲತೆ ಕಂಡುಬರುತ್ತದೆ. ಪ್ರೇಕ್ಷಕರು ಹಣ ಕೊಟ್ಟು ನಾಟಕ ನೋಡುವ ಪ್ರವೃತ್ತಿ ಬೆಳೆಯುತ್ತಿದೆ. ಹವ್ಯಾಸಿ ರಂಗಭೂಮಿಯಲ್ಲಿ ಹಿಂದೆಂದೂ ಕಾಣದಷ್ಟು ಲವಲವಿಕೆ ಇಂದು ಕಂಡು ಬರುತ್ತಿದ್ದು, ಕನ್ನಡ ರಂಗಭೂಮಿಯ ಭವಿಷ್ಯದ ಬಗ್ಗೆ ಭರವಸೆ ಉಂಟಾಗಿದೆ. (ಎಸ್.ಎ.ಎಂ.)



ಎಚ್. ಕೆ. ರಾಮಚಂದ್ರಮೂರ್ತಿ ಅವರ ಮನವೆಂಬ ಮರ್ಕಟ ನಾಟಕದ ಒಂದು ದೃಶ್ಯ

**ಕನ್ನಡ ವೃತ್ತಿರಂಗಭೂಮಿಯ ನಟರು:** ಕನ್ನಡ ನಾಡಿನ ನಟವರ್ಗದಲ್ಲಿ ಹಿರಿಯರು ಕೆಲವರು ಕ್ರಿಸ್ತಶಕದ ಆದಿಯಲ್ಲೆ ನೀಲಗಿರಿಯಲ್ಲಿ ತಮಿಳು ದೊರೆ ಶೆಂಗುಟ್ಟವನ್ ಎಂಬಾತನ ಸಮಕ್ಷದಲ್ಲಿ ನಾಟಕವಾಡಿ ತೋರಿಸಿದರೆಂದು ಶಿಲಪ್ಪದಿಗಾರಂ ಎಂಬ ತಮಿಳು ಗ್ರಂಥದಲ್ಲಿ ಉಲ್ಲೇಖವಾಗಿರುವುದನ್ನು ಆಧಾರವಾಗಿಟ್ಟುಕೊಳ್ಳುವುದಾದರೆ ಕನ್ನಡ ನಟವರ್ಗಕ್ಕೂ ಒಂದು ಪ್ರಾಚೀನ ಪರಂಪರೆ ಇದೆಯೆಂದು ಊಹಿಸಬಹುದು.

ವಿಜಯನಗರದ ಉಚ್ಛ್ರಾಯಕಾಲದಲ್ಲಿ ಅಲ್ಲಿ ಮೆರೆದ ಭಾರತದ ಆರ್ಯ ಸಂಸ್ಕೃತಿಯ ಪ್ರಾದೇಶಿಕ ಸ್ವರೂಪದಲ್ಲಿ ಕನ್ನಡ ನಾಟಕಗಳಿಗೂ ಯೋಗ್ಯಪಾತ್ರ ಒಂದಿತ್ತೆಂಬುದರಲ್ಲಿ ಸಂದೇಹವಿಲ್ಲ. ಮೈಸೂರಿನ ಒಡೆಯರ ಕಾಲದಲ್ಲಿ ಮತ್ತು ಹೈದರನ ಆಡಳಿತದಲ್ಲಿ ಕನ್ನಡ ನಾಟಕಗಳನ್ನು ಅಭಿನಯಿಸಿ ದೊರೆಗಳ ಮತ್ತು ಜನಗಳ ಮನವನ್ನೊಲಿಸುತ್ತಿದ್ದ ನಟ ನಟಿಯರಿದ್ದರೆಂದು ಕಾಣುತ್ತದೆ. ಚಿಕ್ಕದೇವರಾಜ ಒಡೆಯರ ಕಾಲದ ಮಿತ್ರವಿಂದಾಗೋವಿಂದ ನಾಟಕ ಯೋಗ್ಯ ನಟರಿಂದ ಅಭಿನಯಿಸಲ್ಪಟ್ಟದ್ದರಿಂದಲೇ ಬೆಳಕಿಗೆ ಬರುವುದು ಸಾಧ್ಯವಾಯಿತು. ಬರಬರುತ್ತ ರಾಜಾಶ್ರಯ ಕ್ಷೀಣಿಸಲು ಈ ನಟರು ಹಳ್ಳಿಯನ್ನು ಸೇರಿ ಅಥವಾ ತಮ್ಮ ಹುಟ್ಟೂರನ್ನು ಸೇರಿ, ಹರಿಕಥೆ ಮಾಡಿಯೋ, ಬಯಲಾಟ ನಡೆಸಿಯೋ, ಯಕ್ಷಗಾನ ಪ್ರಸಂಗ ತೋರಿಸಿಯೋ, ತಮ್ಮ ಹೊಟ್ಟೆಹೊರೆಯಬೇಕಾದ ಸ್ಥಿತಿ ಬಂತು.

**ಆದ್ಯಪ್ರವರ್ತಕರು :** ಕನ್ನಡ ನಾಡಿನಲ್ಲಿ ಹೀಗೆ ಮೂಲೆ ಗುಂಪಾದ ನಟರಿಗೆ ಅದೃಷ್ಟದ ಬೆಳಕು ಬಂದುದು 19ನೆಯ ಶತಮಾನದ ಉತ್ತರಾರ್ಧದಲ್ಲಿ. ಸುಮಾರಿಗೆ ಮೈಸೂರರಸರಾಗಿದ್ದ ಮುಮ್ಮಡಿ ಕೃಷ್ಣರಾಜ ಒಡೆಯರಿಗೆ ನಾಟಕ ನೋಡುವುದೆಂದರೆ ಬಹು ಪ್ರಿಯ. ಒಳ್ಳೆಯ ನಟನಟಿಯರಿಗೆ ಆಹ್ವಾನವಿತ್ತು, ತಮ್ಮ ರಾಣಿವಾಸ, ಪರಿವಾರ, ಬಂಧು ಜನರು, ಪುರಜನರಲ್ಲಿ ಗಣ್ಯರು ಇವರನ್ನು ಕರೆಸಿಕೊಂಡು ಅರಮನೆಯ ಅಂಗಳದಲ್ಲಿ ಅವರೆದುರಿಗೆ ನಾಟಕವಾಡಿಸುತ್ತಿದ್ದರಂತೆ. ಆ ಜನ ಮೆಚ್ಚಿದರೆಂದರೆ ದೊರೆಗೂ ಆನಂದ, ನಟರಿಗೆ ಯೋಗ್ಯ ಪುರಸ್ಕಾರ. ದೊರೆಯ ರಸಿಕ ಪ್ರಿಯತೆಯ ಕಥೆ ಕೇಳಿದ್ದ ಮಂಗಳೂರಿನ ದಶಾವತಾರದ ನಟರ ಗುಂಪೊಂದು ಮೈಸೂರಿಗೆ ಬಂದಿಳಿಯಿತು. ಊರ ಜನರೆಲ್ಲ ನೋಡಲೆಂದು ದೊರೆಯ ಆಸೆ. ಅರಮನೆಯ ಮುಂಭಾಗದಲ್ಲೇ ಒಂದು ಚಪ್ಪರ ನಿರ್ಮಾಣವಾಯಿತು. ನಾಟಕ ನೋಡಿ ಆನಂದಿಸಿದವರಲ್ಲಿ ನಗರದ ತರುಣರ ಗುಂಪೊಂದು ಸೇರಿ ಒಂದು ನಾಟಕವನ್ನು ಆರಿಸಿಕೊಂಡು ದೊರೆಯ ಮುಂದೆ ಅದೇ ರೀತಿ ಆಡಿ ಮೆಚ್ಚಿಸಿದಾಗ ಜನತೆಗೂ ಅದನ್ನು ತೋರಿಸಲು ಈಗಿನ ಪುರಭವನದ ಮುಂದಿನ ಮೈದಾನದಲ್ಲಿ ದೊಡ್ಡ ಚಪ್ಪರ ನಿರ್ಮಿಸಿ ನಾಟಕವಾಡಿದರಂತೆ. ಹೀಗೆ ಆಡಿದ ನಾಟಕ ದ್ರೌಪದೀ ಸ್ವಯಂವರ; ವಸ್ತು ಕುಮಾರವ್ಯಾಸನ ಭಾರತದ್ದು; ರಚಿಸಿದವರು ಗಿರಿಭಟ್ಟರ ತಮ್ಮಯ್ಯ. ಅನಂತರ ಬಂದದ್ದು ಜೈಮಿನಿ ಭಾರತದ ಆಧಾರದ ಮೇಲೆ ಬರೆದ ಸುಧನ್ವ ಕಾಳಗ. 1860ರ ಸುಮಾರಿಗೆ ಮೈಸೂರು ನಗರದ ನಟರೂ ಇವರನ್ನು ನೋಡಿ ಯಳಂದೂರಿನಲ್ಲೊಂದು ಗುಂಪು ಕಟ್ಟಿಕೊಂಡ ನಟರೂ ಇದೇ ಕಾಲಕ್ಕೆ ಧಾರವಾಡದಲ್ಲಿ ಶೇಷಗಿರಿರಾಯರೆಂಬುವರು ಬರೆದ ಕನ್ನಡ ಶಾಕುಂತಲವಾಡಿದ ಮಂಡಲಿಯ ನಟರೂ ಹೆಸರಿಗೆ ಆಸೆಪಡದೆ ಎಲೆಮರೆಯ ಕಾಯಂತೆ ಜನ ಸೇವೆಗೈದರು. ಇವರೇ ಕನ್ನಡ ನಾಡಿನ ಈಚಿನ ಪ್ರಪ್ರಥಮ ನಟನಟಿಯರು.

ಈ ವೇಳೆಗೆ ಮೈಸೂರಿನಲ್ಲಿ ಇನ್ನೂ ಅನೇಕ ತರುಣರಿಗೆ ನಾಟಕದಲ್ಲಿ ಅಭಿರುಚಿ ಬೆಳೆಯಿತು. ಮಹಾರಾಜರ ಪ್ರೋತ್ಸಾಹದಿಂದ ಇಂಗ್ಲಿಷ್ ಸಂಸ್ಕೃತ ನಾಟಕಗಳ ಅನುವಾದಗಳ ಅಭಿನಯ ಯಶಸ್ವಿಯಾಯಿತು. ನಾಟಕದ ತಂಡ ಕಂಪನಿಯಾಗಿ ಬೆಳೆಯಲು ಒಬ್ಬೊಬ್ಬ ಮುಖ್ಯ ನಟರು ಕಾರಣರಾಗಲೇಬೇಕಷ್ಟೆ. ಸಂಗೀತದಿಂದಲೋ ಗದ್ಯಭಾಗವನ್ನು ಸ್ಪಷ್ಟವಾಗಿ ಅಭಿನಯಪೂರ್ವಕವಾಗಿ ಅನ್ನುವುದರಿಂದಲೋ ಜನ ಮನ ಮೆಚ್ಚಿಸುವುದು ಆಗಿನ ಪದ್ಧತಿ. ಸಂಗೀತದಿಂದ ಜನರನ್ನು ಮೆಚ್ಚಿಸಿದ ಮೈಸೂರಿನ ಮೊಟ್ಟಮೊದಲಿನ ನಟರು ಜುಂಜೋಟಿ ರಂಗಾಚಾರ್ಯ. ಒಳ್ಳೆಯ ಶಾರೀರ; ಹಾಡಿನ ಜೊತೆಗೇ ಗಂಭೀರವಾಗಿ ಔಚಿತ್ಯದ ಮೇರೆಯನ್ನು ಎಲ್ಲಿಯೂ ಮೀರದ ಹಾವಭಾವ ವಿಲಾಸವಿನ್ಯಾಸ; ಆ ವಿನ್ಯಾಸವನ್ನು ಎತ್ತಿ ಕಾಣಿಸುವಂಥ ಮನೋಹರವಾದ ಮುದ್ದಾದ ಮಾಟವಾದ ಶರೀರ, ರೂಪ; ನಾಟಕದಲ್ಲಿ ನಾಯಕನ ಪಾತ್ರವನ್ನು ಅಚ್ಚೊತ್ತಿದಂತೆ ಅಭಿನಯಿಸಿ ತೋರಿಸುವ ಉತ್ಸಾಹ—ಇವು ರಂಗಾಚಾರ್ಯರ ಲಕ್ಷಣಗಳು. ಹಣವಂತರಿಗಂತೂ ಆಚಾರ್ಯರನ್ನು ಕಂಡರೆ ಹುಚ್ಚು. ಬಡವರಿಗೆ ಅವರ ಸರಳತೆಯನ್ನೂ ದಾನಶೀಲತೆಯನ್ನೂ ಕಂಡರೆ ಮೆಚ್ಚು. ಮೈಸೂರಿನ ಸಂತೆ ಪೇಟೆಯ ದೇವಸ್ಥಾನದ ಮುಂದಿನ ಚಪ್ಪರದಲ್ಲಿ ಅವರ ನಾಟಕಮಂದಿರವಿತ್ತು. ಆವರು ಜುಂಜೋಟಿ ರಾಗ ಹಾಡುತ್ತಿದ್ದುದು ಅರ್ಧ ಗಂಟೆ. ಆ ಸ್ವರ ಕೇಳಿಸುತ್ತಿದ್ದುದು ಅರ್ಧಮೈಲಿಗೆ. ಕೇಳಿದ ಜನ ರೋಮಾಂಚಗೊಳ್ಳುತ್ತಿದ್ದರು. ಇವರ ಅನಂತರದವರು ಗೌರೀನರಸಿಂಹಯ್ಯ: ಒಳ್ಳೆಯ ನಟರಾಗಿ, ಗಾಯನಪಟುಗಳಾಗಿ, ಕಂಪನಿಯ ನೇತೃವಾಗಿ, ನಟರಿಗೂ ನಾಟಕಕ್ಕೂ ನಿರ್ದೇಶಕರಾಗಿ, ವಿಜೃಂಭಿಸಿದರು. ಗೌರೀನರಸಿಂಹಯ್ಯನವರಿಗೆ ದೈವದತ್ತವಾದ ಶರೀರ, ಶಾರೀರ; ನಾಯಕರಾಗಿ ಒಂದು ಗುಂಪನ್ನು ತಯಾರಿಸಿ ಶಿಸ್ತಿನಿಂದ ನಡೆಸಲು ಬೇಕಾದ ಆತ್ಮಶಕ್ತಿ ಮತ್ತು ಸತ್ತ್ವ ಇದ್ದುವು. ಈ ಸಂಪತ್ತಿನ ಯೋಗ್ಯ ಪ್ರದರ್ಶನದಿಂದಲೇ ಇವರು ನಡೆಸುತ್ತಿದ್ದ ಕಂಪನಿ ಜೀವಂತವಾಗಿತ್ತು.

**ವರದಾಚಾರ್ಯರ ಯುಗ :** ಗೌರೀನರಸಿಂಹಯ್ಯನವರ ಶಿಷ್ಯರಲ್ಲಿ ವರದಾಚಾರ್ಯ ಅಗ್ರಗಣ್ಯ. ವರದಾಚಾರ್ಯರು ಬೆಂಗಳೂರು ಸೆಂಟ್ರಲ್ ಕಾಲೇಜಿನಲ್ಲಿ ಓದಿದ್ದವರು. ಚಿಕ್ಕಂದಿನಿಂದಲೂ ಇವರಿಗೆ ನಾಟಕ ನೋಡುವ ಆಸೆ. ನಟರನ್ನು ಅನುಕರಿಸುವ ಹಂಬಲ. ಕ್ರಮೇಣ ಈ ಆಸೆ ಬಲವಾಗಿ ಇವರು ಕಾಲೇಜು ಬಿಟ್ಟು ಗೌರೀನರಸಿಂಹಯ್ಯನವರನ್ನು ಗುರುವಾಗಿ ಆರಿಸಿದರು. ಮುಂದೆ ಕೀರ್ತಿವಂತ ನಟನಾಗುವ ಲಕ್ಷಣವನ್ನು ವರದಾಚಾರ್ಯರಲ್ಲಿ ಕಂಡ ಗೌರೀ ನರಸಿಂಹಯ್ಯನವರು ವರದಾಚಾರ್ಯರಿಗೆ ಸಂಗೀತ ಶಾಸ್ತ್ರಾಭ್ಯಾಸ ಮಾಡಿಸಿ, ಅಭಿನಯದೊಂದಿಗೆ ಸಂಗೀತವನ್ನೂ ಹಿತಮಿತವಾಗಿ ಜೋಡಿಸುವ ಸೂಕ್ಷ್ಮತೆಯನ್ನು ಕಲಿಸಿದರು. ಅತ್ಯಂತ ಪ್ರತಿಭಾಶಾಲಿಗಳಾಗಿದ್ದ ವರದಾಚಾರ್ಯರಿಗೆ ಕೀರ್ತಿಯ ಹೆದ್ದಾರಿ ತೆರೆಯಿತು. ಗೌರೀನರಸಿಂಹಯ್ಯನವರಲ್ಲಿ ಶಿಷ್ಯವೃತ್ತಿ ಮುಗಿದಂತೆ ವರದಾಚಾರ್ಯರು ರತ್ನಾವಳೀ ಥಿಯೇಟ್ರಿಕಲ್ ಕಂಪನಿಯನ್ನು ಹುಟ್ಟುಹಾಕಿದರು. ಕಂಪನಿಯ ಆಡಳಿತವನ್ನು ನಿರ್ದುಷ್ಟವಾಗಿ ನಡೆಸಬಲ್ಲ ಕುಶಲತೆ, ನಾಟಕದಲ್ಲಿ ಜೊತೆಗೆ ಬರುವ ನಟವರ್ಗವನ್ನು ತಯಾರಿಸುವ ಸಾಮರ್ಥ್ಯ, ಯಥೋಚಿತವಾಗಿ ಬಾರಿಸುವ ವಾದ್ಯಗಾರರು, ನಾಟಕಕ್ಕೆ ಬೇಕಾದ ಪರದೆಗಳನ್ನು ಬರೆಸುವ ಚಾತುರ್ಯ ಇವೆಲ್ಲ ಆಚಾರ್ಯರಿಗೆ ಕರಗತವಾಗಿದ್ದುವು. ನಾಯಕನ ಪಾತ್ರಕ್ಕೆ ಬೇಕಾದ ಅಂಗಸೌಷ್ಠವ, ಗಾಂಭೀರ್ಯ ಎಲ್ಲ ಅವರಿಗೆ ಒಲಿದಿತ್ತು. ರೂಪಕ್ಕೆ ತಕ್ಕ ಪಾಂಡಿತ್ಯ ಅವರಿಗೆ ಪರಂಪರಾಗತ. ಅವರ ರೂಪ ಪಾಂಡಿತ್ಯ ಘನತೆಗಳು ಮೆರೆದುದು ಅವರ ಕಂಠಬಲದಿಂದ. 1904ರಲ್ಲಿ ಹೀಗೆ ಅವರಿಂದ ಆರಂಭವಾದ ರತ್ನಾವಳೀ ನಾಟಕ ಕಂಪನಿ ಒಳ್ಳೆಯ ದೆಸೆಯಲ್ಲೆ ಸುಮಾರು ಎರಡು ದಶಕಗಳ ಕಾಲ ಮುನ್ನಡೆಯಿತು. ಈ ಅವಧಿಯನ್ನು ವರದಾಚಾರ್ಯರ ಯುಗವೆನ್ನಬಹುದು.

ವರದಾಚಾರ್ಯರು ತಮ್ಮ ಕಂಪನಿಯಲ್ಲಿ ಅನೇಕಾನೇಕ ನಟರನ್ನು ತಯಾರಿಸಿ ಕೀರ್ತಿಭಾಜನರಾದರು. ವರದಾಚಾರ್ಯರ ಶಿಷ್ಯರು ರಂಗಭೂಮಿಯ ಮೇಲೆ ಬರುತ್ತಾರೆಂದರೆ, ಅವರ ಅಭಿನಯದ ಮಟ್ಟದ ಔನ್ನತ್ಯದ ಬಗ್ಗೆ ಜನತೆಯ ಮನಸ್ಸಿನಲ್ಲಿ ಆಗಲೇ ಒಂದು ನಿಶ್ಚಿತಾಭಿಪ್ರಾಯವಿರುತ್ತಿತ್ತು. ವರದಾಚಾರ್ಯರ ಯುಗದಲ್ಲಿ ಬೋಧರಾವ್, ಶಾಮರಾವ್, ಕೃಷ್ಣಮೂರ್ತಿ, ಜಯರಾವ್, ನಾಗೇಂದ್ರರಾವ್, ಮರಿರಾವ್, ದೊಡ್ಡ ಶೇಷಗಿರಿ, ಚಿಕ್ಕ (ಹಾರ್ಮೋನಿಯಂ) ಶೇಷಗಿರಿ, ಶಂಕರನಾರಾಯಣ, ವೆಂಕಟರಾಮು, ನರಸಿಂಹಮೂರ್ತಿ, ನರಸಿಂಹಯ್ಯ ಮುಂತಾದ ಶ್ರೇಷ್ಠ ನಟರು ಬಂದರು. ಆಚಾರ್ಯರು ರಂಗಸ್ಥಲದ ಮೇಲೆ ಕಾಣಿಸಿಕೊಂಡರೆಂದರೆ, ಜನ ಉಸಿರು ಕಟ್ಟಿದಷ್ಟು ನಿಶ್ಶಬ್ದವಾಗಿ ಅವರ ಮಾತು ಹಾಡುಗಳನ್ನು ಆಲಿಸುತ್ತಿದ್ದರು. ಆಚಾರ್ಯರು ನಿರ್ಮಿಸುತ್ತಿದ್ದ ನಾಟಕಪ್ರಪಂಚದಲ್ಲಿ ಮೈಮರೆಯುತ್ತಿದ್ದರು. ಹಾಗೆಂದು ಅವರು ನೇಪಥ್ಯಕ್ಕೆ ತೆರಳಿದೊಡನೆ ಆ ಅನುಭವ ಮಾಯವಾಗುತ್ತಿತ್ತೆಂದಲ್ಲ. ಉಳಿದ ನಟರೂ ಜನದ ಮನವನ್ನು ನಾಟಕಪೂರ್ತಿ ಸೆರೆಹಿಡಿದಿಟ್ಟು ಆಚಾರ್ಯರ ಪ್ರಭಾವ ಪ್ರತಿ ದೃಶ್ಯದಲ್ಲೂ ಮುಂದುವರಿಯುವಂತೆ ನಟಿಸುತ್ತಿದ್ದರು. ವರದಾಚಾರ್ಯರ ನಾಟಕಕ್ಕೆ ಹೋಗುವುದೆಂದರೆ ಒಂದು ಸಣ್ಣ ಯಾತ್ರೆಯಲ್ಲಿ ಭಾಗವಹಿಸಿದಂತೆ: ಪುಣ್ಯಕ್ಷೇತ್ರಕ್ಕೆ ದಿವ್ಯದರ್ಶನಕ್ಕೆ ಹೋದಂತೆ. ಹೀಗೆ ಅವರ ನಾಟಕ ಜನತೆಗೆ ರಂಜನೆಯೊಂದನ್ನೇ ಒದಗಿಸುವ ವಸ್ತುವಾಗಿರಲಿಲ್ಲ; ಅದು ಮಿದುಳಿಗೂ ಕೆಲಸ ಕೊಡುತ್ತಿತ್ತು. ಅನೇಕಾನೇಕ ವಿಷಯಗಳನ್ನು ಕುರಿತು ಚಿಂತನಕ್ಕೆ ಅವಕಾಶ ಮಾಡಿಕೊಡುತ್ತಿತ್ತು. ನಾಟಕವೆಂದರೆ ಒಂದು ಊರಿಂದ ಇನ್ನೊಂದು ಊರಿಗೆ ಚಲಿಸಿ ಬುದ್ಧಿ ಕಲಿಸುವ ಜಾಣ್ಮೆಯ ವಿಶ್ವ ವಿದ್ಯಾನಿಲಯ ಎನ್ನಬಹುದಾಗಿತ್ತು. ನಾಟಕವೇ ವಿಶ್ವವಿದ್ಯಾನಿಲಯವಾಗಿದ್ದುದು ವರದಾಚಾರ್ಯರ ಯುಗದ ವೈಶಿಷ್ಟ್ಯ. ವರದಾಚಾರ್ಯರು ಕನ್ನಡ ನಾಟಕ ಅಭಿನಯವೊಂದರಿಂದ ರವೀಂದ್ರನಾಥ ಠಾಕೂರರನ್ನು ಮೆಚ್ಚಿಸಿದರು. ಡಾ. ಆನಿ ಬೆಸಂಟರು ಕೂಡ ಆಚಾರ್ಯರನ್ನು ಪ್ರತಿಭಾನ್ವಿತ ನಟನೆಂದು ಹೊಗಳಿದರು.

ವರದಾಚಾರ್ಯರ ರತ್ನಾವಳೀ ನಾಟಕ ಕಂಪನಿಗೆ ಮಹಾಜನತೆಯ ಆಶ್ರಯವಿತ್ತು. ಅರಮನೆ ಕಂಪನಿಗೆ ರಾಜಾಶ್ರಯವಿತ್ತು. ಆ ಆಶ್ರಯದಲ್ಲಿ ದೇವರಾಜ್, ಸುಬ್ಬಣ್ಣ, ಲಕ್ಷ್ಮೀಪತಿಶಾಸ್ತ್ರಿ, ಶಾಮಣ್ಣ, ಮಲ್ಲಪ್ಪ, ಚಿಕ್ಕ ರಾಮರಾವ್ ಮುಂತಾದವರು ಕೀರ್ತಿವಂತರಾದರು. 19ನೆಯ ಶತಮಾನದ ಅಂತ್ಯದಲ್ಲಿ ಆರಂಭವಾದ ಅರಮನೆ ಕಂಪನಿಯ ಕೀರ್ತಿಯನ್ನು ವರದಾಚಾರ್ಯರ ಕೀರ್ತಿ ಮಸುಳಿಸುವ ಸ್ಥಿತಿ ಬಂತು. ರತ್ನಾವಳೀ ನಾಟಕ ಕಂಪನಿಗೆ ಆರಂಭವಾದ ಶುಕ್ರದೆಸೆ ಹನ್ನೆರಡು ವರ್ಷಗಳಿಗೂ ಮಿಕ್ಕು ನಡೆದು ಬಂತು. ಹರಿಶ್ಚಂದ್ರ, ದುಷ್ಯಂತ, ಸಂತಾಪಕ, ಕೀಚಕ, ಅರ್ಜುನ, ಶಿಶುಪಾಲ, ರಾವಣ, ಹಿರಣ್ಯಕಶಿಪು ಪಾತ್ರಗಳಲ್ಲಿ ವರದಾಚಾರ್ಯರೂ ಹಾಸ್ಯ ಪಾತ್ರಗಳಲ್ಲಿ ವಿದೂಷಕನಾಗಿ ಕೃಷ್ಣಮೂರ್ತಿ ರಾಯರೂ ಭೂದೇವಿ, ನಿರುಪಮ, ಸೀತೆಯರ ಪಾತ್ರಗಳಲ್ಲಿ ನಾಗೇಂದ್ರರಾಯರೂ ಮಗುವಾಗಿದ್ದಾಗ ಪ್ರಹ್ಲಾದ, ಧ್ರುವ, ಲೋಹಿತಾಶ್ವ ಪಾತ್ರಗಳಲ್ಲಿ ಮತ್ತು ದೊಡ್ಡವರಾದ ಮೇಲೆ ವಿದೂಷಕ, ನಂದನಕ ಪಾತ್ರಗಳಲ್ಲಿ ಮರಿರಾಯರೂ ಶಕುಂತಲೆ, ಕಮಲೆ, ವಾಸವದತ್ತೆ, ಕಯಾದು ಪಾತ್ರಗಳಲ್ಲಿ ಬೋಧರಾಯರೂ ವಿಶ್ವಾಮಿತ್ರ ಮುಂತಾದವರ ಪಾತ್ರಗಳಲ್ಲಿ ಶಾಮರಾಯರೂ ನಾರದ, ವಿಜಯವರ್ಮರ ಪಾತ್ರಗಳಲ್ಲಿ ಜಯರಾಯರೂ ಕೀರ್ತಿ ಗಳಿಸಿದರು.

ಅರಮನೆ ಕಂಪನಿಯಾಗಿ ಮುಂದೆ ಶಾಕುಂತಲ ಕರ್ಣಾಟಕ ನಾಟಕ ಸಭೆ ಮತ್ತು ಚಾಮುಂಡೇಶ್ವರಿ ಕರ್ಣಾಟಕ ಸಭೆಗಳಲ್ಲಿದ್ದಾಗ ಲಕ್ಷ್ಮೀಪತಿ ಶಾಸ್ತ್ರಿಗಳು ವಿದೂಷಕನ ಪಾತ್ರದಲ್ಲೂ ರಾಯಚೂಟಿ, ಚಿಕ್ಕ ರಾಮರಾವ್, ಶ್ರೀಕಂಠಯ್ಯ, ನರಸಿಂಹಯ್ಯ, ರಾಮಕೃಷ್ಣ ಮುಂತಾದವರು ವಿವಿಧ ನಾಯಕ ನಾಯಕಿಯರ ಪಾತ್ರಗಳಲ್ಲೂ ಬೆಳಗಿದರು. ಸುಬ್ಬಣ್ಣನವರ ಮೋಹಿನೀ ಮತ್ತು ಕೃಷ್ಣ, ಮಹಾಲಿಂಗಪ್ಪನವರ ದ್ರೌಪದಿ ಪಾತ್ರ—ಇವು ಅನನ್ಯಾದೃಶವಾಗಿದ್ದುವು.

**ಗುಬ್ಬಿ ವೀರಣ್ಣನವರ ಯುಗ :** ವರದಾಚಾರ್ಯರ ಯುಗದ ಅನಂತರ ಇನ್ನೊಂದು ಯುಗ ಆರಂಭವಾಯಿತು. ಅದು ಗುಬ್ಬಿ ವೀರಣ್ಣನವರ ಯುಗ. ಗುಬ್ಬಿ ಕಂಪನಿ ಚಂದ್ರಣ್ಣನವರಿಂದ ವೀರಣ್ಣನವರ ಕೈಗೆ ಬಂದದ್ದೇ ತಡ, ಬೆಂಗಳೂರಲ್ಲಿ



ಜಿ. ಎಚ್. ವೀರಣ್ಣ

ಖ್ಯಾತಿ ಗಳಿಸಿ ಮೈಸೂರಿಗೆ ಬಂದು. ಅಲ್ಲಿಯ ಜನರನ್ನು ಮೆಚ್ಚಿಸಿ ಹಿರಿಯರ ಕಂಪನಿಯ ಜೊತೆಗೆ ಕಿರಿಯ ನಟನಟಿಯರನ್ನು ಕಲೆಹಾಕಿ ಎರಡೂ ಕಂಪನಿಗಳನ್ನು ನಡೆಸಿಕೊಂಡು ಬಂದ ಕೀರ್ತಿ ವೀರಣ್ಣನವರದು. ವೀರಣ್ಣನವರು ಜನರನ್ನು ಅನಾಯಾಸವಾಗಿ ನಗಿಸಬಲ್ಲರು. ಸದಾರಮೆಯ ಕಳ್ಳನ ಪಾತ್ರದಲ್ಲಂತೂ ಇದರನ್ನು ಮೀರಿಸಿದವರಿಲ್ಲ. ಉತ್ತಮ ನಟರಾದದ್ದೇ ಅಲ್ಲದೆ ಹಲವಾರು ನಟ ನಟಿಯರನ್ನು ತಯಾರಿಸಿ ಇತರ ನಾಟಕ ಕಂಪನಿಗಳಿಗೆ ಕೊಟ್ಟ ಕೀರ್ತಿ ವೀರಣ್ಣನವರದು. ಕನ್ನಡ ನಾಡು ದಾಟಿ ತಮಿಳು, ತೆಲುಗು. ಮಹಾರಾಷ್ಟ್ರ ಪ್ರಾಂತ್ಯಗಳಲ್ಲೂ ಜಯ ಭೇರಿ ಬಾರಿಸಿದವರು ವೀರಣ್ಣ. ಚಲನಚಿತ್ರ ರಂಗದಲ್ಲೂ ಜಯಪ್ರದರು. ಇವರಿಂದಾಗಿ ಈ 20--25 ವರ್ಷಗಳಲ್ಲಿ ನೂತನ ದೃಶ್ಯ ಪರಿಕರಗಳು ಬಂದಿವೆ. ನವೀನ ರಂಗ ಸ್ಥಳಗಳೆದ್ದಿವೆ. ಇವೆಲ್ಲಕ್ಕೂ ವೀರಣ್ಣನವರು ಮೂಲವೆಂದರೆ ಸರಿಯಾದ ಮಾತು.

ವೀರಣ್ಣನವರ ಕಂಪನಿ ನಡೆಯುತ್ತಿದ್ದ ಕಾಲದಲ್ಲೆ ಷಹಜಹಾನ್ ನಾಟಕದಲ್ಲಿ ದಾರಾಷಿಕೋನ ಪಾತ್ರವಹಿಸಿ ಕರುಳು ಕರಗಿಸುತ್ತಿದ್ದ ಮಹಮದ್ ಪೀರ್, ಸಂಸಾರ ನೌಕ ನಾಟಕದಲ್ಲಿ ಸಿಂಹ ಮತ್ತು ಡಿಕ್ಕಿ ಮಾಧವರಾವ್, ಚಾಮುಂಡೇಶ್ವರೀ ಕಂಪನಿಯ ದಾನಶೂರಕರ್ಣದಲ್ಲಿ ಕೊಟ್ಟೂರಪ್ಪ. ರಾಜಸೂಯಯಾಗದಲ್ಲಿ ಬಸವರಾಜ್ ಸೋದರರು ಮತ್ತು ಗಂಗಾಧರರಾಯರು ಉತ್ತಮ ವರ್ಗದ ನಟರಾಗಿ ಖ್ಯಾತಿಗಳಿಸಿದರು. ಗಂಗಾಧರರಾಯರು ಹಿರಣ್ಯಕಶಿಪುವಿನ ಪಾತ್ರವಹಿಸಿ ನಟ ಭಯಂಕರರೆನಿಸಿಕೊಂಡವರು. ನಾಗೇಶರಾಯರು ಕಂದವೃತ್ತಗಳ ಹಾಡಿಕೆಯಲ್ಲಿ ವರದಾಚಾರ್ಯರಿಗಿಂತ ಒಂದು ಕೈ ಮೇಲೆನಿಸಿಕೊಂಡರು.

ಮಹಿಳಾ ವೃಂದದವರ ಪೈಕಿ ಮಳವಳ್ಳಿ ಸುಂದರಮ್ಮನವರು ಕಾಳಿದಾಸ ನಾಟಕದಲ್ಲಿ ರಾಜಕುಮಾರಿಯ ಪಾತ್ರದಲ್ಲೂ ಲಕ್ಷ್ಮೀಬಾಯಿಯವರು ಭೂ ಕೈಲಾಸದಲ್ಲಿ ಪಾರ್ವತಿ ಮಂಡೋದರಿಗಳ ಪಾತ್ರಗಳಲ್ಲೂ ಜಯಮ್ಮನವರೂ ಸುಂದರಮ್ಮನವರೂ ವೀರಣ್ಣನವರ ಜೊತೆಗೆ ಅನೇಕಾನೇಕ ನಾಯಕಿಯರ ಪಾತ್ರಗಳಲ್ಲೂ ವಿಜೃಂಭಿಸಿದ್ದಾರೆ.



ಬಿ. ಜಯಮ್ಮ

ಇದೇ ಅವಧಿಯಲ್ಲಿ ಉತ್ತರ ಕರ್ನಾಟಕದಿಂದ ಮೈಸೂರು ಕಡೆ ಬಂದು ಒಂದೊಂದು ನಾಟಕವನ್ನೂ ಹತ್ತಿಪ್ಪತ್ತು ಬಾರಿ ಜನತೆಗೆ ತೋರಿಸಿದರೂ ಇನ್ನೂ ಒಮ್ಮೆ ನೋಡಬೇಕಾಮದ ಎನ್ನಿಸುವಂತೆ ಅಭಿನಯಿಸಿದ ವಾಮನರಾವ್ ಮಾಸ್ತರರು ಒಬ್ಬ ಕೀರ್ತಿವಂತ ನಟ. ಅವರ ಜೊತೆಗೇ ಗಂಗೂಬಾಯಿ ಗುಳೇದಗುಡ್ಡ ಅವರು ಸತಿ ಸಕ್ಕೂಬಾಯಿ ಪಾತ್ರದಲ್ಲಿ ಜನರನ್ನು ಮೈಮರೆಸುತ್ತಿದ್ದರು.

**ಕಂಪನಿಗಳು:** ಗೌರೀನರಸಿಂಹಯ್ಯನವರಿಗಿಂತಲೂ ಮುಂಚೆ. ಅಂದರೆ 19ನೆಯ ಶತಮಾನದ ಕೊನೆಯ ಎರಡು ದಶಕಗಳ ಅವಧಿಯಲ್ಲಿ, ಕೆಲವು ಸಾಹಸಿಗಳು ಕಂಪನಿಗಳನ್ನು ಕಟ್ಟಿ ನಡೆಸಿದ ದಾಖಲೆಗಳು ಇವೆ. ಆದರೆ ಈ ಕಂಪನಿಗಳು ಒಬ್ಬೊಬ್ಬ ನಟರ ಅದೃಷ್ಟವನ್ನು ಮಾತ್ರ ಅವಲಂಬಿಸಿಕೊಂಡು ಬೆಳೆದುವು. ಕ್ಷೀಣಿಸಿದುವು. ಅಳಿದೂ ಹೋದುವು. ಅರಮನೆ ಕಂಪನಿಯ ಹುಟ್ಟಿನೊಂದಿಗೇ. ಬಳ್ಳಾರಿ (1881) ರಸಿಕ ಮನೋಲ್ಲಾಸಿನೀ-ನಾಟಕ ಸಭಾದ ಹೇರಿ ಶಾಮ ಅಯ್ಯಂಗಾರ್ (1884) ಗೊಲ್ಲರ ಹಟ್ಟಿಯ ನಾಟಕ ಕಂಪನಿಯ ನಟರು. ಶ್ರೀಕಂಠೇಶ್ವರ ನಾಟಕ ಸಭಾದ ಎಂ. ಎಲ್. ಶ್ರೀಕಂಠೇಶಗೌಡ ಇವರೆಲ್ಲ ನಟರಾಗಿದ್ದುದರ ಜೊತೆಗೆ ಕಂಪನಿಗಳನ್ನೂ ಕಟ್ಟಿ ನಡೆಸಿದರು. 1920ರ ವರೆಗೂ ಈ ಕಂಪನಿಗಳು ಮತ್ತು ಈ ನಟರ ಹೆಸರುಗಳು ಅಲ್ಲಲ್ಲಿ ಕೇಳಿಬರುತ್ತಿದ್ದುವು.



ಎಂ. ಎಲ್. ಶ್ರೀಕಂಠೇಶಗೌಡ

ಅರಮನೆ ಕಂಪನಿಗೆ ಸವಾಲು ಎಂಬಂತೆ ಬೆಳೆದ ರತ್ನಾವಳೀ ಕಂಪನಿ ಆರಂಭಿಸಿದವರು ಮಂಡ್ಯಂ ರಂಗಾಚಾರ್ಯರು. ಸುಶಿಕ್ಷಿತರಾದ ವಕೀಲರು. ಅಧಿಕಾರಿಗಳ ನೆರವಿನಿಂದ ಈ ಕಂಪನಿ ಕೆಲಕಾಲ ಬೆಳೆಯಿತು. ಆದರೆ ಮಂಡ್ಯಂ ಅರಮನೆಕಂಪನಿ ಸೇರಿಬಿಟ್ಟರು.



ಲಕ್ಷ್ಮೀಬಾಯಿ

ರಂಗಾಚಾರ್ಯರ ಜೊತೆಗೆ ಸ್ತ್ರೀಪಾತ್ರಗಳನ್ನು ಬಹು ಯಶಸ್ವಿಯಾಗಿ ಅಭಿನಯಿಸುತ್ತಿದ್ದರೂ ಗೌರೀನರಸಿಂಹಯ್ಯನವರು ಕಂಪನಿಯ ಅವಶೇಷವನ್ನು ಕಲೆಹಾಕಿ 1886ರಲ್ಲಿ ಸರಸ್ವತೀ ವಿಲಾಸ ನಾಟಕ ಸಭಾ ಸ್ಥಾಪಿಸಿ ನಡೆಸಿದರು. 1889ರಲ್ಲಿ ನಾಟಕರಂಗದಲ್ಲಿ ಕಾಲಿಟ್ಟ ವರದಾಚಾರ್ಯರು ಇದನ್ನು 1904ರಲ್ಲಿ ರತ್ನಾವಳೀ ನಾಟಕ ಕಂಪನಿಯೆಂದೇ ಪುನರುಜ್ಜೀವನಗೊಳಿಸಿದರು. 1912ರಲ್ಲಿ ದಕ್ಷಿಣ ಭಾರತದ ಈರೋಡು, ಕೊಯಮತ್ತೂರು, ಕಾರೈಕುಡಿ, ಸೇಲಂ, ಕುಂಭಕೋಣಂ, ಮಂಗಳೂರು, ಉಡುಪಿ, ಕುಂದಾಪುರ, ತೀರ್ಥಹಳ್ಳಿ, ಶಿವಮೊಗ್ಗ, ಬಳ್ಳಾರಿಗಳಲ್ಲಿ ಪ್ರವಾಸ ಮಾಡಿದರು. ತಮ್ಮ ಎರಡು ದಶಕಗಳಿಗಿಂತಲೂ ಹೆಚ್ಚಿನ ರಂಗಭೂಮಿಯ ಸೇವೆಯಲ್ಲಿ 50ಕ್ಕೂ ಮಿಕ್ಕು ಮೊದಲ ವರ್ಗದ ನಟರನ್ನು ತಯಾರಿಸಿ ರಂಗಭೂಮಿಗೆ ಕಾಣಿಕೆಯಾಗಿ ಕೊಟ್ಟರು. ಕರ್ನಾಟಕದಲ್ಲಿ ಸುಶಿಕ್ಷಿತ ಗೌರವಯುತ ನಾಟಕರಂಗ ಎಂಬುದೇ ಇಲ್ಲದಿದ್ದಾಗ ವರದಾಚಾರ್ಯರು ನಾಯಕನಾಗಿ, ಕೃಷ್ಣಮೂರ್ತಿರಾಯರು ವಿದೂಷಕನಾಗಿ ಕನ್ನಡಕ್ಕೆ ಅದನ್ನು ರಚಿಸಿಕೊಟ್ಟರು. ಚಾಮುಂಡೇಶ್ವರೀ ಕರ್ನಾಟಕ ನಾಟಕ ಸಭೆಯ ನೇತಾರ ಎನ್. ಸುಬ್ಬಣ್ಣ (1919–1946). ಅನಂತರ ಅಲ್ಲಿಗೆ ತೆರಳಿ ಯಾಜಮಾನ್ಯ ವಹಿಸಿದ ಆರ್. ನಾಗೇಂದ್ರರಾವ್ ಅವರ ಹೆಸರು ಮೈಸೂರಿನಲ್ಲಿ ಮನೆಮಾತು. ಚಂದ್ರಕಲಾ ನಾಟಕಮಂಡಳಿ ಸ್ಥಾಪಿಸಿದ ಮಹಮದ್ ಪೀರ್ ಅಪೂರ್ವ ಪ್ರತಿಭಾವಂತರು. ಇವರ ಜೊತೆಗೆ ಚಂದ್ರಮ್ಮ ತೇಜೋವಂತ ನಟಿ. ಪೀರ್ ಕಂಪನಿ ಬಿ. ಪುಟ್ಟಸ್ವಾಮಯ್ಯನವರ ಷಹಜಹಾನ್ ನಾಟಕದಲ್ಲಿ ಬಹಳ ಕೀರ್ತಿ ಗಳಿಸಿತು. ಸುಬ್ಬಣ್ಣ, ನಾಗೇಂದ್ರರಾಯರ ಕಂಪನಿಯ ಜಿ. ನಾಗೇಶರಾವ್, ಟಿ. ಮಲ್ಲಪ್ಪ, ಕೃಷ್ಣಮೂರ್ತಿ, ಮರಿರಾವ್, ಬಿ. ರಾಚಪ್ಪ, ಕೊಟ್ಟೂರಪ್ಪ ಮುಂತಾದವರು ನಾಟಕ ವೃತ್ತಿಗೊಂದು ಭೂಷಣವಾಗಿದ್ದರು. ಮಹಮದ್ ಪೀರರ ಜೊತೆಗೆ ಅಭಿನಯಿಸಿ ಎಚ್.ಎಲ್.ಎನ್. ಸಿಂಹ, ಡಿಕ್ಕಿ ಮಾಧವರಾವ್ ಮತ್ತು ಎಂ. ವಿ. ರಾಜಮ್ಮ ಹೆಸರು ಗಳಿಸಿದರು.



ಮಹಮದ್ ಪೀರ್

ಅನಂತರ ಸಿ. ಬಿ. ಮಲ್ಲಪ್ಪನವರ ಶ್ರೀ ಚಂದ್ರಮೌಳೀಶ್ವರ ನಾಟಕ ಸಭೆ ಕಬೀರದಾಸ್, ತುಕಾರಾಮ್, ತುಲಸೀದಾಸ್ ನಾಟಕಗಳನ್ನಾಡಿ, ಮಲ್ಲಪ್ಪನವರಿಗೆ ಅಭಿನವ ಭಕ್ತಶಿರೋಮಣಿ ಎಂಬ ಪ್ರಶಸ್ತಿ ತಂದಿತ್ತಿತು. ಇವರಾದ ಮೇಲೆ ಮತ್ತೆ ನಾಟಕ ರಂಗಕ್ಕೆ ಹೊಸ ಹಾದಿ ಹಾಕಿಕೊಟ್ಟು ಜಯ ಗಳಿಸಿದವರು ಹಿರಣ್ಣಯ್ಯ. ಬೆಂಗಳೂರಿನ ಸುಗುಣಬೋಧಕ ಸಮಾಜ (1932), ತುಮಕೂರು ಟಿ. ಸೀತಾರಾಮಯ್ಯನವರ ಸೀತಾಮನೋಹರ ಕಂಪನಿ (1934), ಗುಬ್ಬಿ ಕಂಪನಿ (1935), ಸಾಹಿತ್ಯ ಸಾಮ್ರಾಜ್ಯ ನಾಟಕ ಮಂಡಳಿಗಳೇ ಮುಂತಾದ ನಾಟಕ ಸಂಸ್ಥೆಗಳಲ್ಲಿ 15 ವರ್ಷಕಾಲ ಪಾಲುದಾರರಾಗೋ ಸಂಬಳದಾರರಾಗೋ ಬಿಟ್ಟಿಯಾಗೋ ಕೆಲಸ ಮಾಡಿ ಪೂರ್ಣಾನುಭವ ಪಡೆದ ಹಿರಣ್ಣಯ್ಯನವರು ಎಚ್ಚಮನಾಯಕ, ಆಶಾಪಾಶ ನಾಟಕಗಳಿಂದ ಹೆಸರಾಂತವರಾಗಿದ್ದರು. 1942ರಲ್ಲಿ ತಮ್ಮದೇ ಆದ ಮಿತ್ರಮಂಡಳಿ ಸ್ಥಾಪಿಸಿದರು. 1954ರವರೆಗೆ 12 ವರ್ಷಕಾಲ ನಾಟಕರಂಗದಲ್ಲಿ ತಮ್ಮ ಧ್ವಜ ಸ್ಥಾಪಿಸಿ ಮೆರೆದರು. ಸ್ವಂತ ಕಲ್ಪನೆಯಾದ ದೇವದಾಸಿಯನ್ನು ಇವರು ಪ್ರದರ್ಶಿಸಿದ್ದು 1944ರಲ್ಲಿ. 1 ವರ್ಷ 22 ದಿನಗಳ ಕಾಲ—ಎಂದರೆ 387 ಬಾರಿ—ದೇವದಾಸಿ ಪ್ರದರ್ಶಿತವಾಯಿತು. ಜೊತೆಗೆ ಪಂಗನಾಮ ಮತ್ತು ಮಖಮಲ್ ಟೋಪಿ ಯಶಸ್ವಿಯಾದುವು. ಕೈಲಾಸಂರಂತೆ ಆಡುಭಾಷೆಯನ್ನು ನಾಟಕದಲ್ಲಿ ಯಶಸ್ವಿಯಾಗಿ ಪ್ರದರ್ಶಿಸಿದವರಲ್ಲಿ ಹಿರಣ್ಣಯ್ಯ ಅಗ್ರಗಣ್ಯ. ಇವರ ಜೊತೆಗೇ ಕನ್ನಡ ರಂಗಭೂಮಿಯ ಸೇವೆ ನಡೆಸಿದವರೆಂದರೆ ಸುಬ್ಬಯ್ಯ ನಾಯ್ಡು, ಎಂ.ಸಿ. ಮಹಾದೇವಸ್ವಾಮಿ, ಎ. ಎನ್. ಶೇಷಾಚಾರ್ಯ ಮುಂತಾದವರು. ಕನ್ನಡ ನಾಟಕವನ್ನು ಇಡೀ ದಕ್ಷಿಣ ಭಾರತದಲ್ಲೇ ಅತ್ಯಂತ ಜೀತೋದ್ಧಾರಿಯಾಗಿಸುವುದಕ್ಕೆ ಶ್ರಮಿಸಿದರು ಮೇಲ್ಕಂಡವರಲ್ಲದೆ ಗರೂಡ ಸದಾಶಿವರಾವ್, ವಾಮನರಾವ್ ಮಾಸ್ತರ್, ಹಂದಿಗನೂರು ಸಿದ್ಧರಾಮಪ್ಪ, ಬಸವರಾಜ ಮನ್ಸೂರ್, ಗಂಗೂಬಾಯಿ ಗುಳೇದಗುಡ್ಡ, ಪಂತುಲು, ಕರೆನಾಡಿನ ರಂಗನಾಥ ಭಟ್ಟ ಮತ್ತು ಕೆ. ಸೀತಾರಾಮ ಶಾಸ್ತ್ರಿ; ಬಳ್ಳಾರಿಯಲ್ಲಿ ಟಿ. ರಾಘವಾಚಾರಿ ಮತ್ತು ವಟ್ಟಂ ಶಾಮರಾವ್. 1890ರಿಂದ ಪ್ರಯೋಗಯುಗವಾಗಿಯೂ 1900ರ ಸುಮಾರಿನಿಂದ ಸ್ವರ್ಣಯುಗವಾಗಿಯೂ 1950ರಿಂದ ಹತ್ತು ವರ್ಷಗಳ ಕಾಲ ಗೊಂದಲಸ್ಪರ್ಧೆಯ ಯುಗವಾಗಿಯೂ 1950ರಿಂದ ಈಚೆಗೆ ಸ್ವಾತಂತ್ರ್ಯದ ಸ್ಫೂರ್ತಿಯಿಂದ ಹೊಮ್ಮಿದ ನವಯುಗದ ಪ್ರತೀಕವಾಗಿಯೂ ಕನ್ನಡ ರಂಗಭೂಮಿಯ ಇತಿಹಾಸ ಬೆಳೆದಿದೆ.

**ಇತರ ಕೆಲವು ನಟರು :** ಎಳೆತನದಲ್ಲಿ ರಂಗಭೂಮಿಯಿಂದ ಆಕರ್ಷಿತರಾದ ಹಂದಿಗನೂರು ಸಿದ್ಧರಾಮಪ್ಪನವರ ದೈವದತ್ತ ವರವೆಂದರೆ ಅವರ ಕಂಠ. ಧ್ವನಿಯನ್ನು ಏರಿಸಿ ಇಳಿಸುವ ಕಲೆ ಅವರಿಗೆ ಲೀಲಾಜಾಲ. ತೂಕ ಮಾಡಿ ಮಾತನಾಡಿ ರಂಗವನ್ನೂ ಪ್ರೇಕ್ಷಕರನ್ನೂ ತಮ್ಮ ಕಿರುಬೆರಳ ಮೇಲಾಡಿಸುವ ಪ್ರತಿಭೆ ಅವರದು. ಅವರ ಭೀಷ್ಮ, ಕರ್ಣ ಪಾತ್ರಗಳಂತೂ ಆ ಮಹಾವ್ಯಕ್ತಿಗಳನ್ನು ಕಣ್ಣ ಮುಂದೆ ಕಡೆದು ನಿಲ್ಲಿಸುವಂತಿತ್ತು.

ಸದಾಶಿವರಾವ್ ಗರೂಡರಿಂದ ಶಿಕ್ಷಣ ಪಡೆದ ಪ್ರತಿಭಾವಂತ ನಟರು ಬಿಜಾಪುರದ ಮಧ್ವರಾಜ ಉಮರ್ಜಿ. ಎಳೆತನದಲ್ಲೇ ರಂಗಭೂಮಿಗೆ ಕಾಲಿಟ್ಟು ಹತ್ತು ವರ್ಷ



ಎಂ. ವಿ. ಸುಬ್ಬಯ್ಯನಾಯ್ಡು

ಸೇವೆ ಸಲ್ಲಿಸಿದರು. ಹರಿಶ್ಚಂದ್ರ, ಅರ್ಜುನ, ಕೃಷ್ಣರ ಪಾತ್ರಗಳಲ್ಲಿ ಮೇಲುಗೈಯಾಗಿದ್ದ ಇವರು ತಮ್ಮ 38ನೆಯ ವಯಸ್ಸಿನಲ್ಲೇ ತೀರಿಕೊಂಡರು. 1947ರಲ್ಲಿ ಹಂದಿಗನೂರರ ಮರಣ, 1954ರಲ್ಲಿ ಉಮರ್ಜಿಯವರ ಮರಣ—ಇವುಗಳಿಂದ ರಂಗಭೂಮಿಯ ಎರಡು ತಾರೆಗಳು ಕಣ್ಮರೆಯಾದಂತಾಯಿತು.

ಸುಬ್ಬಯ್ಯನಾಯ್ಡು ಇನ್ನೊಬ್ಬ ಸಮರ್ಥನಟ. ಭೂಕೈಲಾಸ ನಾಟಕದ ರಾವಣನ ಪಾತ್ರ ಅವರಿಗೆ ಚೆನ್ನಾಗಿ ಒಪ್ಪುತ್ತಿತ್ತು. ಚಿಕ್ಕಂದಿನಲ್ಲಿ ದನ ಕಾದು, ಬಾಲ್ಯದಲ್ಲಿ ಕೈಗೆಲಸದ ಕೂಲಿಯ ಕೂಳು ತಿಂದು ತಾಯಿಯನ್ನೂ ಸಾಕಿ, ಬೆಳೆದಂತೆ ಮರಗೆಲಸ ಮಾಡುತ್ತ, ಒಮ್ಮೊಮ್ಮೆ ಕೊಟ್ಟಣ ಕುಟ್ಟಿ ಹೊಟ್ಟೆ ಹೊರೆದು ಸಂಕಟದಿಂದ ಬೆಳೆದ ಜೀವ ಅದು. ಅನಂತರ ಸಂಗೀತದ ಗೀಳು, ನಾಲ್ಕಾಣೆ ನಾಟಕಕ್ಕೆಂದು ಕೂಲಿ ಮಾಡಿ ನಾಟಕದಲ್ಲಿ ಪಾತ್ರ ವಹಿಸಿ, ನಾಟಕದ ಗೀಳೂ ವೃದ್ಧಿಯಾಗಿ ಗುಬ್ಬಿ ಕಂಪನಿ ಸೇರಿದರು. ರಾಜಭಕ್ತಿಯಲ್ಲಿ ವಿಕ್ರಾಂತನ, ಕರ್ಣಾಟಕ ಸಾಮ್ರಾಜ್ಯದಲ್ಲಿ ತಿರುಮಲ ರಾಯನ, ಸ್ವಾಮಿನಿಷ್ಠೆಯಲ್ಲಿ ಶಿವಾಜಿಯ ಪಾತ್ರಗಳನ್ನು ನಿರ್ವಹಿಸಿ ನಾಟಕದಿಂದ ನಾಟಕಕ್ಕೆ ತಮ್ಮ ಕಲೆಯನ್ನು ಬೆಳೆಸಿಕೊಂಡು ದಕ್ಷಿಣ ಭಾರತ ತಮ್ಮ ಕಡೆಗೆ ನೋಡುವಂತೆ ಮಾಡಿಕೊಂಡವರು ಇವರು. ಪಾತ್ರದ ಔನ್ನತ್ಯಕ್ಕೆ ತಕ್ಕಂತೆ ಧ್ವನಿ ಏರಿಸಿ, ಇಳಿಸಿ, ಸ್ಪಷ್ಟವಾದ ಉಚ್ಚಾರಣೆಯಿಂದ ಕೂಡಿದ ಇವರ ಕನ್ನಡ ನಾಟಕವನ್ನು ನೋಡಿ ತಮಿಳರೂ ತಲೆದೂಗುವಂತೆ ಮಾಡಿದರು. (ಬಿ.ಎಸ್.ಆರ್.ಆರ್.)

**ಕನ್ನಡ ಶಾಸನಗಳು :** ಕನ್ನಡ ಭಾಷೆ ಕನ್ನಡನಾಡಿನಲ್ಲಿ ಯಾವ ಕಾಲದಲ್ಲಿ ಜನಗಳಾಡುವ ಭಾಷೆಯಾಗಿತ್ತು, ಹೇಗೆ ಬೆಳೆಯಿತು ಎಂದು ತಿಳಿಯಲು ನಮಗೆ ದೊರೆಯುವ ಆಧಾರಗಳಲ್ಲಿ ಶಾಸನಾಧಾರವೇ ಬಹುಮುಖ್ಯವಾದದ್ದು. ಕರ್ಣಾಟ ಶಬ್ದ ಪ್ರಯೋಗ ಮಹಾಭಾರತದಲ್ಲಿ ಕಂಡುಬಂದರೂ ಅದರ ಸ್ವರೂಪವೇನು ಎಂಬುವುದು ತಿಳಿಯುವುದಿಲ್ಲ. ದಕ್ಷಿಣ ಇಂಡಿಯದ ಪಶ್ಚಿಮತೀರದಲ್ಲಿ ನಡೆದಂತೆ ಊಹಿಸಿರುವ ಆಕ್ಸಿರಿಂಕಸ್ ಪಪ್ಯೆರಸ್ ಎಂಬ ಗ್ರೀಕ್ ಪ್ರಹಸನದಲ್ಲಿ ಬರುವ ಸಂವಾದಗಳೆಲ್ಲ ಕನ್ನಡ ಭಾಷೆಯೆಂದು ಆರ್. ಶಾಮಾಶಾಸ್ತ್ರಿಗಳು ಪ್ರತಿಪಾದಿಸಿರುವರು. ಈ ಗ್ರೀಕ್ ಪ್ರಹಸನದ ಕಾಲ ಕ್ರಿ.ಶ. 2ನೆಯ ಶತಮಾನ. ಕ್ರಿ.ಶ. ಐದನೆಯ ಶತಮಾನಕ್ಕೆ ಮೊದಲು ಬರೆದ ಕೆಲವು ಸಂಸ್ಕೃತ ಪ್ರಾಕೃತ ಶಾಸನಗಳಲ್ಲಿ ಕೆಲವು ಕನ್ನಡ ಶಬ್ದಗಳು ಬರುವುವು. ಆದರೆ ಕನ್ನಡ ಭಾಷೆಯಲ್ಲಿಯೇ ಬರೆದ ಬರೆವಣಿಗೆ ಕ್ರಿ.ಶ. ಐದನೆಯ ಶತಮಾನಕ್ಕೆ ಮೊದಲು ಇದುವರೆವಿಗೂ ಎಲ್ಲಿಯೂ ದೊರೆತಿಲ್ಲ. ಮೊಟ್ಟ ಮೊದಲು ಕನ್ನಡ ಭಾಷೆಯಲ್ಲೇ ಬರೆದ ಬರೆವಣಿಗೆ ಎಂದರೆ ಹಲ್ಮಿಡಿಯ ಶಿಲಾ ಲೇಖನವೇ. ಈ ಶಿಲಾಶಾಸನದ ಮಂಗಳಶ್ಲೋಕ ಸಂಸ್ಕೃತಭಾಷೆಯಾಗಿದ್ದು ಉಳಿದದ್ದು ಕನ್ನಡ ಲಿಪಿ ಮತ್ತು ಭಾಷೆಯಲ್ಲಿದೆ. ಇಲ್ಲಿಂದ ಮುಂದೆ ಕನ್ನಡ ಭಾಷೆಯಲ್ಲಿ ರಚಿತವಾದ ಕವಿರಾಜಮಾರ್ಗ ಗ್ರಂಥದ ಕಾಲದ ವರೆಗೆ ಸಿರಿಗುಂದದ ದುರ್ವಿನೀತನ ಶಾಸನ, ಬಾದಾಮಿಯ ಮಂಗಳೇಶನ ಶಾಸನವೇ ಮೊದಲಾದ ಶಾಸನಗಳು, ವೀರಗಲ್ಲುಗಳು, ಶ್ರವಣಬೆಳುಗೊಳದ ನಿಸಿದಿಕಲ್ಲುಗಳು ಕನ್ನಡ ಭಾಷೆಯಲ್ಲಿವೆ.

**ಶಾಸನಸಂಗ್ರಹ :** ಭಾರತದ ಎಲ್ಲ ಪ್ರಾಂತ್ಯಗಳಿಗಿಂತಲೂ ಚೆನ್ನಾಗಿ ಮೈಸೂರು ಸರ್ಕಾರ ಪ್ರಾಚೀನಕಾಲದ ಶಿಲಾಲೇಖನ ತಾಮ್ರಶಾಸನಗಳನ್ನು ಒಂದು ಕ್ರಮವರಿತು ಸಂಗ್ರಹಿಸಿ ಪ್ರಕಟಸಿತು. ಚಿಕ್ಕದೇವರಾಜ ಒಡೆಯರ ಕಾಲದಲ್ಲಿಯೇ ಅನೇಕ ಶಾಸನಗಳ ಪ್ರತಿಮಾಡಿಸಿ ಅರಮನೆಯಲ್ಲಿ ಇಟ್ಟಿದ್ದುದಾಗಿಯೂ ಮುಂದೆ ಬಂದ ಟೀಪೂಸುಲ್ತಾನನ ಕಾಲದಲ್ಲಿ ಅವುಗಳೆಲ್ಲವೂ ನಾಶವಾದುವೆಂದು ತಿಳಿದುಬರುವುದು. ಪ್ರಾಚೀನಕಾಲದ ಬರೆವಣಿಗೆಯ ಈ ವಿಧವಾದ ಶಿಲಾಲೇಖನಗಳ ಪ್ರತಿಗಳನ್ನು ಸಂಗ್ರಹಿಸಿ ಅವುಗಳಲ್ಲಿ ಹೇಳಿರುವ ದಾನ, ಧರ್ಮ, ತ್ಯಾಗ, ಚರಿತ್ರಾಂಶಗಳನ್ನು ಬೆಳಕಿಗೆ ತಂದ ಕೀರ್ತಿ ಪಾಶ್ಚಾತ್ಯ ವಿದ್ವಾಂಸರಿಗೆ ಸೇರಿದುದು. 1879ರಲ್ಲಿ ಮೈಸೂರು ದೇಶದ ವಿದ್ಯಾಭ್ಯಾಸದ ಇಲಾಖೆಯ ಮುಖ್ಯಾಧಿಕಾರಿಯಾಗಿದ್ದ ಬಿ. ಎಲ್. ರೈಸರ ನೇತೃತ್ವದಲ್ಲಿ ಶಾಸನಗಳ ಸಂಗ್ರಹಕಾರ್ಯ ಪ್ರಾರಂಭವಾಯಿತು. ಈ ಪುರಾತನ ಬರೆವಣಿಗೆ ಇರುವ ಲೇಖನಗಳು ಹೆಚ್ಚುಹೆಚ್ಚಾಗಿ ಕಣ್ಣಿಗೆ ಬೀಳಲು ಸರ್ಕಾರದವರು ಮೈಸೂರು ದೇಶದಲ್ಲಿ ಪ್ರತ್ಯೇಕವಾಗಿ ಒಂದು ಇಲಾಖೆಯನ್ನೇ ತೆರೆದರು. ಅದರ ಮುಖ್ಯಾಧಿಕಾರಿಯನ್ನಾಗಿ ಬಿ.ಎಲ್. ರೈಸ್ ಅವರನ್ನೇ ನೇಮಿಸಲಾಯಿತು. ಇವರ ಅಧಿಕಾರಕ್ಕೆ ಬಂದಕೂಡಲೇ ಹಳೆಯ ಮೈಸೂರಿನ ಪ್ರತಿಯೊಂದು ಡಿಸ್ಟ್ರಿಕ್ಟ್ ಡೆಪ್ಯುಟಿ ಕಮಿಷನರವರಿಗೆ ಒಂದು ಸರ್ಕಾರಿ ಆಜ್ಞೆ ಹೊರಡಿಸಿ ಆಯಾಯಾ ಡಿಸ್ಟ್ರಿಕ್ಟಿನ ಪ್ರತಿಯೊಂದು ತಾಲ್ಲೂಕು ಅಮಲ್ದಾರರು ಶಾನುಭೋಗ ಪಟೇಲರ ಸಹಾಯದಿಂದ ತಮ್ಮ ಗ್ರಾಮಗಳಲ್ಲಿರುವ ಪ್ರಾಚೀನ ಬರೆವಣಿಗೆಗಳಿರುವ ಕಲ್ಲುಗಳ ಪಟ್ಟಿಗಳನ್ನು ಶಾಸನದ ಇಲಾಖೆಗೆ ತಿಳಿಸುವಂತೆ ಅಪ್ಪಣೆ ಮಾಡಿದರು. ಈ ರೀತಿಯಿಂದ ಬಂದ ಪಟ್ಟಿಗಳಲ್ಲಿ ಕೆಲವು ಬಾಂದು ಕಲ್ಲು, ಮೈಲಿಕಲ್ಲುಗಳ ವಿಳಾಸಗಳೂ ಇದ್ದವೆಂದು ತಿಳಿದುಬಂದಿದೆ. ಈ ಪಟ್ಟಿಯ ಸಹಾಯದಿಂದ ಬಿ. ಎಲ್. ರೈಸ್ ಅವರು ಅನೇಕ ಕನ್ನಡ ಸಂಸ್ಕೃತ ಪಂಡಿತರ ತಂಡದೊಡನೆ ಪ್ರತಿಯೊಂದು ತಾಲ್ಲೂಕಿನಲ್ಲೂ ಸಂಚರಿಸಿ ಸಂಗ್ರಹಿಸಿ ಪ್ರಕಟಿಸಿದ ಶಾಸನಗಳ ಪುಸ್ತಕವೇ ಎಪಿಗ್ರಾಫಿಯ ಕರ್ಣಾಟಿಕ ಸಂಪುಟಗಳು. (ನೋಡಿ–ಎಪಿಗ್ರಾಫಿಯ ಕರ್ಣಾಟಿಕ) ಅಲ್ಲಿಂದ ಮುಂದೆ ಡೈರೆಕ್ಟರಾಗಿ ಆರ್. ನರಸಿಂಹಾಚಾರ್, ಆರ್. ಶಾಮಾ ಶಾಸ್ತ್ರಿಗಳು, ಎಂ. ಎಚ್. ಕೃಷ್ಣ ಇವರುಗಳ ಕಾಲದಲ್ಲಿ ಸಂಗ್ರಹವಾದ ಶಾಸನಗಳ ಪಟ್ಟಿಯನ್ನು ಕೆಳಗೆ ಕೊಡಬಹುದು.

| ಮೈಸೂರು ಸಂಸ್ಥಾನದಲ್ಲಿ | ಸಂಗ್ರಹಿಸಿದ ಶಾಸನಗಳ ಸಂಖ್ಯೆ | |
|---|---|---|
| 1879ರಿಂದ 1906 ರವರೆಗೆ | ಸು. | 9,000 |
| 1906ರಿಂದ 1922ರ ವರೆಗೆ | ,, | 5,000 |
| 1922ರಿಂದ 1944ರ ವರೆಗೆ | ,, | 1,817 |
| ಮದ್ರಾಸ್ ಕರ್ಣಾಟಕದಲ್ಲಿ | | |
| 1892ರಿಂದ 1944ರ ವರೆಗೆ | ,, | 1,418 |
| ಬೊಂಬಾಯಿ ಕರ್ಣಾಟಕದಲ್ಲಿ | | |
| 1926ರಿಂದ 1944ರ ವರೆಗೆ | ,, | 2,164 |

ಇವುಗಳಲ್ಲದೆ ಹೈದರಾಬಾದ್ ಕನ್ನಡ ಪ್ರಾಂತ್ಯಗಳಲ್ಲಿ ಅನೇಕ ಕನ್ನಡ ಶಾಸನಗಳನ್ನು ಸಂಗ್ರಹಿಸಿ ಕೊಪ್ಪಳದ ಕನ್ನಡ ಶಾಸನಗಳು ಎಂಬ ಅಂಕಿತದಿಂದ ಪ್ರಕಟಿಸಿದ್ದಾರೆ. 1944ರಿಂದ ಈಚೆಗೂ ಶಾಸನ ಸಂಗ್ರಹಗಳಾಗುತ್ತಿವೆ. ಈಚೆಗೆ ಭಾರತದಲ್ಲಿ ವಿಲೀನವಾದ ಗೋವೆಯಲ್ಲಿಯೂ ಹೈದರಾಬಾದ್ ಕರ್ಣಾಟಕದಲ್ಲಿಯೂ ಇನ್ನೂ ಹೊರಬೀಳದ ಶಿಲಾ ಲೇಖನಗಳಿವೆ ಎಂದು ಅನೇಕರು ಅಭಿಪ್ರಾಯ ಪಡುವರು.

**ಪ್ರಕಟಣೆ :** 1879ರಿಂದ 1906ರ ವರೆಗೆ ಬಿ. ಎಲ್. ರೈಸ್ ಅವರು ಸಂಗ್ರಹಿಸಿದ ಶಾಸನಗಳೆಲ್ಲ ಎಫಿಗ್ರಾಫಿಯ ಕರ್ಣಾಟಿಕ ಎಂಬ ಅಂಕಿತದ ಹನ್ನೆರಡು ಸಂಪುಟಗಳಲ್ಲಿ ಪ್ರಕಟವಾಗಿವೆ.ಅವರ ನಂತರ ಬಂದ ರಾವ್‌ಬಹದ್ದೂರ್ ಆರ್.ನರಸಿಂಹಾಚಾರ್ಯರು ತಮ್ಮ ಕಾಲದಲ್ಲಿ ಸಂಗ್ರಹಿಸಿದ ಶಾಸನಗಳನ್ನೆಲ್ಲ ಮೈಸೂರು ಶಾಸನ ಇಲಾಖಾ ವರದಿಗಳಲ್ಲಿ ಮುದ್ರಿಸಿರುವುದಲ್ಲದೆ ಹಿಂದಿನ ರೈಸ್ ಸಾಹೇಬರು ಪ್ರಕಟಿಸಿದ ಕೆಲವು ಶಾಸನಗಳ ತಿದ್ದುಪಡಿ ಸಹಾ ಮಾಡಿರುವರು. ಅವರ ನಂತರ ಡಾಕ್ಟರ್ ಶಾಮಾಶಾಸ್ತ್ರಿ ಮತ್ತು ಡಾಕ್ಟರ್ ಎಂ. ಎಚ್. ಕೃಷ್ಣರವರು ಸಂಗ್ರಹಿಸಿವ ಶಾಸನಗಳು 1954ರವರೆಗೆ ಮೈಸೂರು ಶಾಸನದ ಇಲಾಖಾ ವರದಿಗಳಲ್ಲಿ ಮುದ್ರಿತವಾಗಿವೆ. ಮದರಾಸ್ ಪ್ರಾಂತದ ಕನ್ನಡಶಾಸನಗಳು ಸೌತ್ ಇಂಡಿಯನ್ ಇನ್‌ಸ್ಕ್ರಿಪ್‌ಷನ್ಸ್ ಎಂಬ ಗ್ರಂಥದಲ್ಲಿಯೂ ಬೊಂಬಾಯಿ ಕನ್ನಡ ಪ್ರಾಂತ್ಯದ ಶಾಸನಗಳು ಧಾರವಾಡದ ಪ್ರಾಚ್ಯವಸ್ತು ಸಂಶೋಧನಾಲಯಗಳ ವರದಿಗಳಲ್ಲೂ ಪ್ರಕಟವಾಗಿವೆ. ಅಲ್ಲದೆ ಐತಿಹಾಸಿಕ ದೃಷ್ಟಿಯಿಂದ ಮುಖ್ಯವಾದ ಅನೇಕ ಶಾಸನಗಳು ಏಷಿಯಾಟಿಕ್ ಸೊಸೈಟಿ ಜರ್ನಲ್, ಎಫಿಗ್ರಾಫಿಯ ಇಂಡಿಕ, ಇಂಡಿಯನ್ ಆಂಟಿಕ್ವೆರಿ ಮೊದಲಾದ ವಿದ್ವತ್ಪೂರ್ಣ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

ಎಫಿಗ್ರಾಫಿಯ ಕರ್ಣಾಟಿಕದ ಎಲ್ಲ ಸಂಪುಟಗಳನ್ನೂ ಮತ್ತೆ ಪರಿಶೀಲಿಸಿ, ಶುದ್ಧೀಕರಿಸಿ, ಹೊಸತಾಗಿ ದೊರೆತಿರುವ ಶಾಸನಗಳನ್ನು ಸೇರಿಸಿ ಪುನರ್ ಮುದ್ರಿಸುವ ಕೆಲಸವನ್ನು ಈಚೆಗೆ (1971) ಮೈಸೂರು ಸರ್ಕಾರ ಕನ್ನಡ ಅಧ್ಯಯನ ಸಂಸ್ಥೆಗೆ ವಹಿಸಿದೆ.

**ಕನ್ನಡ ಶಾಸನಗಳ ವ್ಯಾಪ್ತಿ :** ಮೇಲೆ ಕೊಟ್ಟಿರುವ ಶಾಸನ ಸಂಗ್ರಹಗಳ ಪಟ್ಟಿಯಂತೆ ಸುಮಾರು ಇದುವರೆಗೂ ಕನ್ನಡನಾಡಿನಲ್ಲಿ ಇಪ್ಪತ್ತು ಸಾವಿರ ಶಾಸನಗಳು ಸಿಕ್ಕಿವೆ. ಇವುಗಳಲ್ಲಿ 80% ಭಾಗ ಕನ್ನಡ ಲಿಪಿ ಮತ್ತು ಭಾಷೆಯಲ್ಲಿವೆ. ಕನ್ನಡಭಾಷೆಯ ಶಾಸನಗಳು ಕೆಲವು ಈಗ ವಿಂಗಡವಾಗಿರುವ ಭಾಷಾವಾರು ರಾಜ್ಯಗಳಲ್ಲಿ ಆಂಧ್ರಪ್ರದೇಶ, ತಮಿಳುನಾಡು,ಕೇರಳ ಮತ್ತು ಮಹಾರಾಷ್ಟ್ರ ಪ್ರದೇಶಗಳಲ್ಲಿ ದೊರೆಯುತ್ತವೆ. ಕನ್ನಡ ಪ್ರಾಂತ್ಯಗಳೆಂದೇ ಹೇಳಬಹುದಾದ ಕೆಲವು ಸ್ಥಳಗಳು ಹಳೆಯ ಕನ್ನಡ ಶಾಸನಗಳಿರುವ ಪ್ರದೇಶಗಳು ಕನ್ನಡ ನಾಡಿಗೆ ಈಗ ಎಂದರೆ 1956ರಲ್ಲಿ ಭಾಷಾವಾರು ಪ್ರಾಂತ್ಯ ವಿಂಗಡಣೆಯಾದ ಮೇಲೆ—ಸೇರಿಲ್ಲ. ಕನ್ನಡ ಹೆಸರಿನ ಊರುಗಳು ಮತ್ತು ವೀರಗಲ್ಲುಗಳಿರುವ, ಈಗಲೂ ಕನ್ನಡ ಭಾಷೆ ಬಳಕೆಯಲ್ಲಿರುವ ಸೇಲಂ ಜಿಲ್ಲೆಯ ಧರ್ಮಪುರಿ, ಕೊಯಮುತ್ತೂರು ಜಿಲ್ಲೆಯ ಕೆಲವು ಭಾಗಗಳು, ನೀಲಗಿರಿ—ಈ ಭಾಗಗಳಲ್ಲಿ ಬಹಳ ಪ್ರಾಚೀನಕಾಲದ ಕನ್ನಡ ಭಾಷೆಯ ಶಿಲಾಲೇಖನಗಳಿವೆ. ಮಧ್ಯಪ್ರಾಂತ್ಯದಲ್ಲೂ ಒಂದು ಕನ್ನಡ ಶಿಲಾಲೇಖನವಿದೆ. ಈಗ ನಿರ್ಮಾಣವಾಗಿರುವ ವಿಶಾಲಕರ್ಣಾಟಕವಲ್ಲದೆ ಸೀಮಾಂತದಲ್ಲಿರುವ ಅನೇಕ ಗ್ರಾಮಗಳಲ್ಲಿ ಕನ್ನಡ ಶಾಸನಗಳು ದೊರೆಯುತ್ತವೆ. ನೃಪತುಂಗ ಹೇಳುವಂತೆ ಕಾವೇರಿಯಿಂದ ಗೋದಾವರಿ ನದಿಯ ವರೆಗಿನ ನಾಡೇ ಹಿಂದೆ ಕನ್ನಡನಾಡಾಗಿತ್ತು.

**ತಾಮ್ರಶಾಸನಗಳು :** ಕೆಲವು ಕನ್ನಡ ಶಿಲಾಶಾಸನಗಳ ಪ್ರತಿಗಳು ಭಾರತ ಮತ್ತು ಪಾಶ್ಚಾತ್ಯದೇಶಗಳ ವಸ್ತುಪ್ರದರ್ಶನಾಲಯಗಳಲ್ಲಿವೆ. ಸರ್ ವಾಲ್ಟರ್ ಎಲಿಯಟ್ ಕರ್ಣಾಟಕ ಪ್ರಾಂತ್ಯ ನಿಜಾಮ ರಾಜ್ಯದ ಪಶ್ಚಿಮಭಾಗ ಮತ್ತು ಮೈಸೂರು ಪ್ರಾಂತ್ಯದ ಉತ್ತರಭಾಗದಲ್ಲಿ ಸಂಗ್ರಹಿಸಿದ 1300 ಶಿಲಾ ಮತ್ತು ತಾಮ್ರಶಾಸನಗಳಲ್ಲಿ 595 ಲೇಖನಗಳು ಕರ್ನಾಟಕದ ಲೇಖನಗಳು ಎಂಬ ಹೆಸರಿನಿಂದ

ಎಡಿನ್‌ಬರೋ ವಿಶ್ವವಿದ್ಯಾಲಯದಲ್ಲಿ ಎರಡು ಸಂಪುಟಗಳಾಗಿ ದೊರಕುತ್ತವೆ. ಕಲ್ಕತ್ತದ ನಹರ್ ವಸ್ತುಪ್ರದರ್ಶನಾಲಯದಲ್ಲಿ ಕನ್ನಡ ಬರೆವಣಿಗೆಯಿರುವ ಕೆಲವು ಮೂರ್ತಿಗಳಿವೆ. ಬೊಂಬಾಯಿನ ಪ್ರಿನ್ಸ್ ಆಫ್ ವೇಲ್ಸ್ ವಸ್ತುಪ್ರದರ್ಶನಾಲಯದಲ್ಲಿ ಕೆಲವು ಕನ್ನಡದ ಶಿಲಾಲೇಖನಗಳು ಪ್ರದರ್ಶಿತವಾಗಿವೆ.

**ಕನ್ನಡ ರಾಜಮನೆತನಗಳು, ಕಾಲ :** ಕನ್ನಡ ಮಾತನಾಡುತ್ತಿದ್ದ ಮೊಟ್ಟ ಮೊದಲನೆಯ ರಾಜಮನೆತನದವರು ಕದಂಬರು. ಅವರನಂತರ ಗಂಗ, ಬಾದಾಮಿಚಾಳುಕ್ಯ, ರಾಷ್ಟ್ರಕೂಟ, ವೈದುಂಭ, ಬಾಣ, ಸೇನಾವರ, ನೊಳಂಬ,





ಕದಂಬ ಮೃಗೇಶನ ದಾನ ಶಾಸನ

ಪಶ್ಚಿಮಚಾಳುಕ್ಯ, ಹೊಯ್ಸಳ, ದೇವಗಿರಿಯಾದವ, ಕಳಚುರ್ಯ, ಉಚ್ಚಂಗಿ ಪಾಂಡ್ಯ—ಮೊದಲಾದ ಪ್ರಸಿದ್ಧ ರಾಜಮನೆತನದ ಅರಸರು ಕನ್ನಡಿಗರು. ದಕ್ಷಿಣಾಪಥೇಶ್ವರನಾದ ಬಾದಾಮಿಯ ಇಮ್ಮಡಿ ಪುಲಿಕೇಶಿ, ರಾಷ್ಟ್ರಕೂಟರ ಮೂರನೆಯ ಗೋವಿಂದ, ಕಲ್ಯಾಣಿ ಚಾಳುಕ್ಯವಂಶಜನಾದ ವಿಕ್ರಮಾದಿತ್ಯ—ಇವರ ಹೆಸರು ಕರ್ಣಾಟಕಕ್ಕೆ ಹೆಮ್ಮೆ ತರತಕ್ಕವುಗಳಾಗಿವೆ. ಹದಿನಾಲ್ಕನೆಯ ಶತಮಾನದಲ್ಲಿ ಹುಟ್ಟಿದ ವಿಜಯನಗರ ಸಾಮ್ರಾಜ್ಯದ ರಾಜಭಾಷೆ ಕನ್ನಡ, ವಿಜಯನಗರ ಸಾಮ್ರಾಜ್ಯ ಕ್ಷೀಣದೆಶೆಗೆ ಬಂದಮೇಲೆ ಆ ಸರ್ಕಾರದ ಅಧೀನದಲ್ಲಿದ್ದ ಪ್ರಾಂತ್ಯಾಧಿಕಾರಿಗಳಾದ ಅನೇಕ ಜನ ಪಾಳೆಯಗಾರರು ತಾವೇ ಸ್ವತಂತ್ರರೆಂದು ಆಳಲು ಆರಂಭಿಸಿದರು. ಮೈಸೂರು, ಚಿತ್ರದುರ್ಗ, ಕೆಳದಿ, ಇಕ್ಕೇರಿ, ಮಾಗಡಿ, ಉಮ್ಮತ್ತೂರು, ಕಿತ್ತೂರು ಮೊದಲಾದ ಸಣ್ಣಸಣ್ಣ ಪಾಳೆಪಟ್ಟುಗಳು ಹುಟ್ಟಿಕೊಂಡುವು. ಈ ರಾಜಮನೆತನಗಳ ಭಾಷೆ ಕನ್ನಡ. ಹೀಗೆ ಕ್ರಿ.ಶ. ಮೂರನೆಯ ಶತಮಾನದಿಂದ ಆಧುನಿಕ ಕಾಲದ ವರೆಗೆ ಅನೇಕ ರಾಜಮನೆತನಗಳು ರಾಜಭಾಷೆಯಾಗಿ ಹೊರಡಿಸಿರುವ ಸಾವಿರಾರು ಶಾಸನಗಳು ದೊರೆಯುತ್ತವೆ.

**ಲಿಪಿ :** ಕನ್ನಡನಾಡಿನಲ್ಲಿ ದೊರೆಯುವ ತಾಮ್ರಶಾಸನ, ಶಿಲಾಶಾಸನಗಳಲ್ಲಿ ತಾಮ್ರ ಶಾಸನಗಳ ಭಾಷೆ (ಪಾಳೆಯಗಾರರ ಕಾಲದ ಹಿಂದಿನವು) ಸಂಸ್ಕೃತ. ಲಿಪಿ ಕನ್ನಡ, ದೇವನಾಗರಿ, ನಂದಿನಾಗರಿ. ಸಾಮಾನ್ಯವಾಗಿ ಶಿಲಾಶಾಸನಗಳು ಕನ್ನಡ ಲಿಪಿಯಲ್ಲಿಯೇ ಇವೆ. ಇವುಗಳಲ್ಲಿ ರಾಜಪ್ರಶಂಸೆ ಇರುವ ಕೆಲವು ಕನ್ನಡ ಶಾಸನಗಳಲ್ಲಿ ಸಂಸ್ಕೃತ ಶ್ಲೋಕಗಳಿವೆ. ತಾಮ್ರಶಾಸನಗಳ ಕೊನೆಯಲ್ಲಿ ದಾನಕೊಟ್ಟ ಗ್ರಾಮ, ಭೂಮಿಗಳ ಎಲ್ಲೆಗಳನ್ನು ತಿಳಿಸುವ ಶಬ್ದಗಳು ಕನ್ನಡ ಭಾಷೆಯವು. ಶುದ್ಧ ಸಂಸ್ಕೃತ ಭಾಷೆಯಲ್ಲಿಯೇ ಬರೆಯಲ್ಪಟ್ಟ ಐಹೊಳೆಯ ಶಾಸನದಲ್ಲಿ ಶುದ್ಧ ಕನ್ನಡ ಲಿಪಿಗಳಾದ ಱ, ೞ ಪ್ರಯೋಗಗಳಿವೆ. ಸಾಮಾನ್ಯವಾಗಿ ವೀರಗಲ್ಲು, ಮಾಸ್ತಿಕಲ್ಲು, ತುರುಗಲ್ಲು, ರಕ್ತಕೊಡಿಗೆ ಕಲ್ಲು ಮೊದಲಾದುವುಗಳ ಭಾಷೆ ಮತ್ತು ಲಿಪಿ ಕನ್ನಡ. ಕನ್ನಡನಾಡಿನಲ್ಲಿ ಚೋಳರ ಆಳ್ವಿಕೆಗೆ ಒಳಪಟ್ಟ ಭಾಗಗಳಲ್ಲಿ ತಮಿಳು ಗ್ರಂಥಾಕ್ಷರದ ತಮಿಳು ಶಾಸನಗಳೂ ಕನ್ನಡ ಲಿಪಿಯಲ್ಲಿ ಬರೆದ ತಮಿಳು ಶಾಸನಗಳೂ ದೊರೆಯುತ್ತವೆ. ವಿಜಯನಗರ ಸಾಮ್ರಾಜ್ಯಕಾಲದ ಸಂಗಮರಾಜಮನೆತನದ ಕನ್ನಡ ಶಾಸನಗಳು ದೇವನಾಗರಿ ಲಿಪಿಯಲ್ಲಿವೆ. ಕನ್ನಡ ಲಿಪಿ ಚರಿತ್ರೆಯನ್ನು ತಿಳಿಯಲು ಅಂದಂದಿನ ಕೈಬರೆಹದ ಗ್ರಂಥಗಳಂತೆ ಶಾಸನಗಳ ಬರೆಹಗಳೂ ಸಾಧನವಾಗಿವೆ. ಅಶೋಕನ ಕಾಲದ (ಕ್ರಿ.ಪೂ. 3ನೆಯ ಶತಮಾನ) ಬ್ರಾಹ್ಮೀಲಿಪಿ ಶಾತವಾಹನರ ಕಾಲದಲ್ಲೂ (ಕ್ರಿ.ಶ. 2ನೆಯ ಶತಮಾನ) ಸರಿಸುಮಾರಾಗಿ ಅದೇ ಮಾದರಿಯಲ್ಲಿಯೇ ಮುಂದುವರಿಯುತ್ತದೆ. ಅನಂತರ ಕದಂಬ (ಕ್ರಿ.ಶ. 5ನೆಯ ಶತಮಾನ) ಮತ್ತು ಗಂಗರ (ಕ್ರಿ.ಶ. 6ನೆಯ ಶತಮಾನ) ಕಾಲಗಳಲ್ಲಿ ಅಕ್ಷರ ರಚನೆಯೂ ಚೌಕ್ಕಯಾಗಿದ್ದುದು ಗೆರೆಯಾಗಿಯೂ ಗೆರೆ ಬಳುಕು ಕೊಂಡಿಯಾಗಿ ಮಾರ್ಪಡುವುದನ್ನು ಕಾಣಬಹುದು. ಬಾದಾಮಿ ಚಾಳುಕ್ಯ (ಕ್ರಿ.ಶ. 6ನೆಯ ಶತಮಾನ) ಮತ್ತು ಕಲ್ಯಾಣಿ ಚಾಳುಕ್ಯರ (ಕ್ರಿ.ಶ. 11ನೆಯ ಶತಮಾನ) ಕಾಲದಲ್ಲಿ ಬಿಡಿಬಿಡಿಯಾದ ಅಕ್ಷರ ಭಾಗಗಳನ್ನು ಸೇರಿಸುವ ಪ್ರಯತ್ನ ನಡೆದಂತೆ ತೋರುತ್ತದೆ.



ಬಾದಾಮಿಯ ಜಂಬುಲಿಂಗ ದೇವಾಲಯದಲ್ಲಿನ ಒಂದು ಹಳೆಯ ಶಾಸನ. ಅಲ್ಲಿನ ಕಲ್ಲು ಕಂಬವೊಂದರ ಮೇಲಿದೆ, ಇಲ್ಲಿನ ಹಳಗನ್ನಡ ಲಿಪಿ ಸುಮಾರು ಎಂಟನೆಯ ಶತಮಾನದ್ದು

ಬರೆವಣಿಗೆಯ ವೇಗ ಹೆಚ್ಚಿದಂತೆಲ್ಲ ಚೌಕಾಕಾರಗಳು ಗುಂಡಾಗುವುದೂ ಬಿಡಿ ಬಿಡಿಯಾದುವು ಒಂದಾಗುವುದೂ ಅನಿವಾರ್ಯ. ಕಳಚೂರಿ, ಹೊಯ್ಸಳ, ಸೇವುಣರ (ಕ್ರಿ.ಶ. 13ನೆಯ ಶತಮಾನ) ಮತ್ತು ವಿಜಯನಗರದ (ಕ್ರಿ.ಶ. 15ನೆಯ ಶತಮಾನ) ಕಾಲಗಳಲ್ಲಿ ಬಿಡಿ ಭಾಗಗಳೆಲ್ಲ ಸಂಪೂರ್ಣ ಒಂದಾಗಿ ಲಿಪಿಗೆ ಈಗಿನ ರೂಪ ಬರಲು ಮೊದಲಾದುದನ್ನು ಗಮನಿಸಬಹುದು. ಹೊಸಗನ್ನಡದ ಅನೇಕ ಅಕ್ಷರ ರೂಪಗಳು ವಿಜಯನಗರ ಕಾಲಕ್ಕಾಗಲೇ ಕಾಣಸಿಗುತ್ತದೆ. ಈ ಕೆಲಸ ಪೂರ್ಣವಾದದ್ದು ಮೈಸೂರು ಅರಸರ (ಕ್ರಿ.ಶ. 18ನೆಯ ಶತಮಾನ) ಕಾಲದಲ್ಲಿ.

ಹೆಚ್ಚಿನ ವಿವರಗಳಿಗೆ, ಚಿತ್ರಗಳಿಗೆ ಅ, ಆ, ಇ, ಈ,—ಮೊದಲಾದ ಶೀರ್ಷಿಕೆಗಳನ್ನೂ ಕನ್ನಡ ಲಿಪಿ ಎಂಬ ಲೇಖನವನ್ನೂ ನೋಡಿ.

**ಭಾಷೆ :** ಶಾಸನಗಳ ಭಾಷೆ ವ್ಯಾಸಂಗಾರ್ಹವಾದ ವಿಷಯವೇ ಆಗಿದೆ. ಇಲ್ಲಿನದು ಆಡುಮಾತಿಗೆ ತೀರ ಹತ್ತಿರವಾದುದೆಂದು ಹೇಳುತ್ತಾರಾದರೂ ಆಯಾಕಾಲದ ಪ್ರಸಿದ್ಧ ಕವಿಗಳ, ಕಾವ್ಯಗಳ ಪ್ರಭಾವ ಶಾಸನ ಭಾಷೆಯ ಮೇಲೂ ಆಗಿರುವುದನ್ನು ಕಡೆಗಣಿಸುವಂತಿಲ್ಲ. ಮೊದಮೊದಲಿಗೆ ಸಂಸ್ಕೃತ ಶ್ಲೋಕಗಳ, ಸಂಸ್ಕೃತ ಸಮಾಸಗಳ ಬಳಕೆ ಹೆಚ್ಚಾಗಿರುವುದು ಕಂಡುಬರುತ್ತದೆ. ಕೆಲವು ಶಾಸನಗಳಲ್ಲಿ ಪ್ರಸಿದ್ಧ ಕವಿಗಳ ರಚನೆಗಳನ್ನು ಅನಾಮತ್ತಾಗಿ ಎತ್ತಿ ಬಳಸಿರುವುದುಂಟು, ಕನ್ನಡಕ್ಕೆ ಪ್ರಾಧಾನ್ಯ ಬಂದಾಗಲೂ ಖ್ಯಾತ ಕರ್ಣಾಟಕಗಳ ಒಲವೇ ಹೆಚ್ಚಾಗಿರುವುದನ್ನು ಕಡೆಗಣಿಸಲಾಗದು. ಗದ್ಯ ಶುದ್ಧವಾಗಿರುವಂತೆ ಗ್ರಾಮ್ಯವಾಗಿರುವುದಕ್ಕೆ ನೂರಾರು ನಿದರ್ಶನಗಳನ್ನು ಕೊಡಬಹುದು. ಗೌಡ, ಅಯ್ಯ, ಅದು, ಇದು, ಯಾವನು—ಮೊದಲಾದ ಪದಗಳ ರೂಪವ್ಯತ್ಯಾಸಗಳಂತೂ ಹೇರಳವಾಗಿ ಸಿಗುತ್ತವೆ. ಕ್ರಿ.ಶ. 597ರಿಂದ ಹಿಡಿದು 750ರ ಸುಮಾರಿನ ವರೆಗಿನ ಕೆಲವು ಶಾಸನಗಳಲ್ಲಿ ಕಂಡು ಬರುವ ಕೆಲವು ವಿಚಿತ್ರ ರೂಪಗಳಿಂದಾಗಿ ಹಳಗನ್ನಡಕ್ಕೂ ಹಿಂದೆ ಒಂದು ರೀತಿಯ ಕನ್ನಡವಿದ್ದಿರಬೇಕೆಂದೂ ಅದನ್ನು ಪೂರ್ವದ ಹಳಗನ್ನಡವೆನ್ನಬಹುದೆಂದೂ ಕೆಲವರು ಅಭಿಪ್ರಾಯಪಡುತ್ತಾರೆ. ಸ್ವರ್ಗಾಗ್ರಮಾಪೇಱಿದಾರ್ (700), ಏಟಿನೆಯಾ ಸರಕದಾ ಪುಲು ಅಕ್ಕುಂ (597), ವೈಶಾಖಮಾಸದುಳ್ (725)—ಮೊದಲಾದುವು ಅವರು ಕೊಡುವ ಉದಾಹರಣೆಗಳು.

ಗಂಗ ಅರಸ ಹರಿವರ್ಮನ ಕೂಡಲೂರು ಶಾಸನದ ಒಂದು ಭಾಗ

ಲಿಪಿಯಲ್ಲಿ ಆಗಿರುವ ಮಾರ್ಪಾಡು, ಪದರಚನೆ, ವಾಕ್ಯರಚನೆ, ಱ, ೞ ಕಾರಗಳ ಪ್ರಯೋಗ—ಇತ್ಯಾದಿ ಹಲವು ದೃಷ್ಟಿಯಿಂದ ಶಾಸನಗಳ ಭಾಷೆ ವ್ಯಾಸಂಗಯೋಗ್ಯವಾಗುತ್ತದೆ.

**ಕನ್ನಡ ಶಾಸನಗಳ ವೈವಿಧ್ಯ :** ಕನ್ನಡನಾಡಿನ ಶಾಸನಗಳನ್ನು ಕನ್ನಡ ಭಾಷೆಯ ಶಾಸನಗಳು, ಇತರ ಭಾಷೆಯ ಶಾಸನಗಳೆಂದು ಎರಡು ಗುಂಪು ಮಾಡಬಹುದು. ರಾಜಾಸ್ಥಾನದ ಪಂಡಿತರಿಂದ ರಚಿತವಾದ ದಾನಪತ್ರಗಳೆಲ್ಲವೂ ಸಂಸ್ಕೃತ ಭಾಷೆಯವು; ಸಾರ್ವಜನಿಕರ ಗಮನಕ್ಕೆ ತರಲು ಹಾಕಿರುವ ವೀರಗಲ್ಲು ಮೊದಲಾದ ಶಾಸನಗಳು ಕನ್ನಡ ಭಾಷೆಯವು. ಕೋಲಾರ ಪ್ರಾಂತ್ಯದ ಕೆಲವು ಕಡೆ ತೆಲುಗು ಭಾಷೆಯ ಶಾಸನಗಳು ದೊರೆತಿವೆ. ಬಿಜಾಪುರ ಸುಲ್ತಾನರ, ಔರಂಗಜೇಬನ ಕಾಲದ ಕೆಲವು ಬರೆವಣಿಗೆಗಳು ಉರ್ದುಭಾಷೆ ಮತ್ತು ಲಿಪಿಯಲ್ಲಿವೆ. ಪೇಷ್ವೆಗಳ ಕಾಲದಲ್ಲಿ ಕನ್ನಡನಾಡಿನಲ್ಲಿ ಮರಾಠಿ, ಉರ್ದು, ಕನ್ನಡ ಮೂರು ಭಾಷೆಗಳಲ್ಲೂ ರಾಜಾಜ್ಞೆಗಳನ್ನು ಬರೆದು ಪ್ರಕಟಿಸುತ್ತಿದ್ದರು.

ಮೊದಮೊದಲು ಬರೆವಣಿಗೆಗೆ ಸಾಧನವಾದುದು ಭೂರ್ಜಪತ್ರ, ತಾಳೆಗರಿ, ಮರದ ತೊಗಟೆ. ಅನಂತರ ತಾವು ಕೊಟ್ಟ ದಾನ ಶಾಶ್ವತವಾಗಿ ಉಳಿಯಬೇಕೆಂದು ಕಲ್ಲುಗಳ ಮೇಲೂ ಲೋಹಗಳ ಕಂಬ, ತಗಡುಗಳ ಮೇಲೂ ಬರೆಸಿ ಅವನ್ನು ಎಲ್ಲ ಜನರಿಗೂ ತಿಳಿಯುವ ಸ್ಥಳಗಳಲ್ಲಿ ನೆಡಸಿದರು. ಕೊನೆ ಕೊನೆಗೆ ಬರೆವಣಿಗೆಗೆ ಅವಕಾಶ ಸಿಕ್ಕಿದ ಕಡೆಗಳಲ್ಲಿ ತಮ್ಮ ಕೀರ್ತಿ ಬೆಳಗಬೇಕೆಂದು ಬರೆಸಿದವರುಂಟು. ದೇವಸ್ಥಾನ, ಮಠಗಳ ಚಿನ್ನ. ಬೆಳ್ಳಿ ಮೊದಲಾದ ಲೋಹಗಳ ಪಾತ್ರೆಗಳು, ಮಡಕೆಗಳು ಲೋಹದ ತಗಡುಗಳು ಕಬ್ಬಿಣದ ಕಂಬ, ದೇವರ ಪೀಠಗಳು, ಮೂರ್ತಿಗಳ ಬೆನ್ನು ಭಾಗ ದೇವಸ್ಥಾನಗಳ ತಳಪಾಯದಕಲ್ಲು, ಕಂಬ,ಗೋಡೆ ಬಲಿಪೀಠ ಗೋಪುರದ ಕಲಶ -ಇವೇ ಮೊದಲಾದ ಕಡೆಗಳಲ್ಲಿ ಬರೆವಣಿಗೆಗಳಿವೆ. ಇವುಗಳಲ್ಲದೆ, ಹಳೆಯ ಊರುಗಳ ಮುಂಭಾಗದಲ್ಲಿ, ಕಾಡುಗಳಲ್ಲಿ ನೆಟ್ಟ ಬೋರುಕಲ್ಲು, ಯಂತ್ರಕಲ್ಲು, ವೀರಗಲ್ಲು, ತುರುಗಲ್ಲು, ಲಿಂಗಮುದ್ರೆಕಲ್ಲು, ವಾಮನ ಮುದ್ರೆಕಲ್ಲು ಮಾಸ್ತಿಕಲ್ಲುಗಳೆಂದು ಕರೆಯಲ್ಪಡುವ ಅನ್ವರ್ಥವಾದ ಶಿಲಾಲೇಖನಗಳಿವೆ. ಪುಣ್ಯಕ್ಷೇತ್ರ ಮತ್ತು ಬೆಟ್ಟಗಳ ಬಂಡೆಗಳಲ್ಲಿ, ನದೀತೀರಗಳಲ್ಲಿ, ಕೊಳಗಳ ಪಕ್ಕದಲ್ಲಿ ಅಲ್ಲಿಗೆ ಬಂದ ಯಾತ್ರಾರ್ಥಿಗಳ, ರಾಜರ, ಕವಿಗಳ ಸ್ಮಾರಕ ಬರೆವಣಿಗೆಗಳಿವೆ. ಕೆರೆ ಕಟ್ಟಿಸಿ ತೂಬಿನಮೇಲೆ ಬರೆಸಿರುವ ಶಾಸನಗಳೂ ಸಿಕ್ಕಿವೆ. ಅನಶನ ವ್ರತದಿಂದ ಪ್ರಾಣಾರ್ಪಣೆ ಮಾಡಿದವರ ಜ್ಞಾಪಕಾರ್ಥವಾದ ನಿಸಿಧಿಕಲ್ಲು ತಮ್ಮ ಸ್ವಾಮಿಗೆ ಭಕ್ತಿ ಸಲ್ಲಿಸಲು ಶರೀರ ತ್ಯಾಗಮಾಡಿದ ಭೃತ್ಯರ ತ್ಯಾಗಿಗಳ ಗರುಡಕಲ್ಲುಗಳು ಇವೆ.

ಈ ಎಲ್ಲ ಬಗೆಗಳ ಶಾಸನಗಳನ್ನೂ ಅವುಗಳಲ್ಲಿ ಬರೆದಿರುವ ಬರೆವಣಿಗೆಗನುಸಾರವಾಗಿ ಮೂರು ಗುಂಪು ಮಾಡಬಹುದು.

1. ದಾನಪತ್ರಗಳು 2. ಪತಿಯ ಮೇಲಿನ ಪ್ರೇಮಕ್ಕಾಗಿ. ಸ್ವಾಮಿಭಕ್ತಿಗಾಗಿ. ಸಂಸಾರತ್ಯಾಗಕ್ಕಾಗಿ. ಪ್ರಾಣಾರ್ಪಣಮಾಡಿದ ವಿಷಯ ತಿಳಿಸುವ ಮಾಸ್ತಿಕಲ್ಲು, ಗರುಡಗಲ್ಲು, ನಿಸಿದಿಕಲ್ಲು, ಹೀಗೆಯೇ ದೇಶರಕ್ಷಣೆ ರಾಜ್ಯರಕ್ಷಣೆಗಾಗಿ ಪ್ರಾಣಾರ್ಪಣೆಮಾಡಿದ ವೀರಗಲ್ಲುಗಳು, 3 ಇತರ ಸ್ಮಾರಕಗಳು.

1 ದಾನಪತ್ರಗಳು : ಸಾಮಾನ್ಯವಾಗಿ ಶ್ರೋತ್ರಿಯರಿಂದ ಬ್ರಾಹ್ಮಣರ ಜೀವಿಕೆಗಾಗಿ ರಾಜರುಗಳು ಮತ್ತು ಧನಿಕರು ಭೂ, ಗೃಹ, ಮೊದಲಾದುವನ್ನು ದಾನ ಮಾಡಿದ ವಿವರ ತಿಳಿಸುವ ತಾಮ್ರಶಾಸನ ಮತ್ತು ಶಿಲಾಶಾಸನಗಳಿವೆ. ವೈಯಕ್ತಿಕವಾಗಿ ದಾನಮಾಡಿದ ವಿಷಯ ತಿಳಿಸುವ ಶಾಸನಗಳು ಸಾಮಾನ್ಯವಾಗಿ ತಾಮ್ರದ ಹಲಗೆಗಳ ಮೇಲೆ ಬರೆಯಲ್ಪಟ್ಟಿವೆ. ಮಠ ದೇವಸ್ಥಾನಗಳನ್ನು ಕಟ್ಟಿಸಿ ದಿನವಹಿ ನಡೆಯುವ ಅವುಗಳ ಪೂಜಾದಿಗಳಿಗೆ ಬಿಟ್ಟಿರುವ ದತ್ತಿಗಳು ವಿಶೇಷವಾಗಿ ಶಿಲಾಶಾಸನಗಳು. ಕೆಲವು ಪುಸ್ತಕರೂಪದಲ್ಲಿರುವ ತಾಮ್ರ ಶಾಸನಗಳೂ ಇವೆ. ಇವು ಚಂಪೂ ಕಾವ್ಯದಷ್ಟು ಪ್ರೌಢವಾಗಿವೆ. ಇವುಗಳ ಸೂಕ್ಷ್ಮ ಪರಿಚಯವನ್ನು ಕೆಳಗೆ ಕೊಟ್ಟಿದೆ.

**ತಾಮ್ರಶಾಸನಗಳು :** ಕದಂಬ, ಗಂಗ, ರಾಷ್ಟ್ರಕೂಟ, ಚಾಳುಕ್ಯ ಮೊದಲಾದ ರಾಜಮನೆತನಗಳ ಶಾಸನಗಳು ತಾಮ್ರದ ಹಲಗೆಗಳ ಮೇಲಿವೆ. ಗಂಗರಾಜರ ತಾಮ್ರ ಶಾಸನಗಳು ಅತ್ಯಧಿಕವಾಗಿ ಕನ್ನಡನಾಡಿನಲ್ಲೇ ದೊರಕಿವೆ. ಇವುಗಳ ಸಂಖ್ಯೆ ಎಪ್ಪತ್ತು. ಮೊದಮೊದಲು ಬರೆಸಿದ ತಾಮ್ರಶಾಸನಗಳು ತಾಳೆಗರಿಯ ಹಾಗೆಯೇ ಉದ್ದ ಅಗಲಗಳಿದ್ದು ತಾಳೆಗರಿಗಿಂತ ದಪ್ಪನಾಗಿ ನಾಲ್ಕು ಕಡೆಯೂ ಉಬ್ಬಾಗಿ ಒಳಮೈ ಒಂದೇ ಮಟ್ಟದ ಹಲಗೆಗಳ ಎರಡು ಪಕ್ಕಗಳಲ್ಲೂ ನಾಲ್ಕು ಐದು ಪಕ್ಕೆಗಳಿದ್ದು ಕನ್ನಡ ಲಿಪಿಗಳಲ್ಲಿ ಬರೆಯಲ್ಪಟ್ಟಿವೆ. ಒಂದು ಕಟ್ಟಿನಲ್ಲಿ ಮೂರು, ಐದು, ಏಳು ಹಲಗೆಗಳಿರುವುದುಂಟು. ಮೊದಲನೆಯ ಹಲಗೆಯ ಮತ್ತು ಕೊನೆ ಹಲಗೆಯ ಹೊರಮೈಗಳಲ್ಲಿ ಬರೆವಣಿಗೆ ಇರುವುದಿಲ್ಲ. ಒಂದೇ ಪ್ರಮಾಣದ ಈ ಹಲಗೆಗಳನ್ನೆಲ್ಲ ಎಡಗಡೆ ಅಂಚಿನಲ್ಲಿ ಅರ್ಧ ಅಂಗುಲವರ್ತುಲಗಳ ರಂಧ್ರಮಾಡಿ ತಾಮ್ರದ ಬಳೆಳನ್ನು ಪೋಣಿಸಿ ಬಳೆಯ ಎರಡು ತುದಿಗಳನ್ನೂ ಬೆಸೆದು, ಬೆಸೆದಿರುವ ಭಾಗದಲ್ಲಿ ಆಯಾರಾಜರ ರಾಜಚಿಹ್ನೆಗಳುಳ್ಳ ಮುದ್ರಿಕೆಗಳನ್ನು ಹಾಕಿರುವುದಲ್ಲದೆ ಒಳಗಡೆ ರಾಜನ ಹೆಸರನ್ನೂ ಬರೆಸಿರುವುದು ಕಂಡು ಬರುತ್ತದೆ. ಗಂಗರ ಆನೆ, ಚಾಳುಕ್ಯರ ವರಾಹ, ಹೊಯ್ಸಳರ ವ್ಯಾಘ್ರ, ಮೊದಲಾದ ಪ್ರಾಣಿಗಳ ಸುಂದರ ಚಿತ್ರಗಳನ್ನುಳ್ಳ ಈ ಮುದ್ರಿಕೆಗಳು ಸುಮಾರು ಈಗಿನ ರೂಪಾಯಿಯಷ್ಟು ಅಥವಾ ಅದಕ್ಕಿಂತ ಸ್ವಲ್ಪ ದೊಡ್ಡದಾಗಿರುವುದುಂಟು.

ಹತ್ತು ಹನ್ನೊಂದನೆಯ ಶತಮಾನಗಳ ಅನಂತರ ಬರೆಸಿರುವ ತಾಮ್ರಶಾಸನಗಳ ಆಕಾರ. ಹಲಗೆಗಳ ಸಂಖ್ಯೆ ಬದಲಾವಣೆ ಹೊಂದಿ ಕ್ರಮೇಣ ಉದ್ದ ಅಗಲ ದಪ್ಪ

ಗಂಗ ಶ್ರೀಪುರುಷನ ಶಾಸನ. ಕೋಲಾರ ತಾಲ್ಲೂಕು

ಹೆಚ್ಚಿರುವುದು ಕಂಡುಬರುತ್ತದೆ. ಉಂಗುರ, ಮುದ್ರೆಗಳಿಲ್ಲದ ಶಾಸನಗಳು ನಂಬಲರ್ಹವಾದವುಗಳಲ್ಲ.

ಗಂಗರ ಎಲ್ಲ ತಾಮ್ರಶಾಸನಗಳಲ್ಲಿಯೂ ಸ್ವಸ್ತಿ ಜಿತಂ ಭಗವತಾ ಎಂದು ಪ್ರಾರಂಭವಾಗುವ ವಾಕ್ಯವೂ ಇತರ ರಾಜಮನೆತನಗಳ ಶಾಸನಗಳಲ್ಲಿ ದೇವತಾ ಸ್ತುತಿಯೂ ಇರುತ್ತದೆ. ಮುಂದೆ ರಾಜರ ಪೀಳಿಗೆ, ಆಯಾ ರಾಜರು ಮಾಡಿದ ಮಹತ್ಕಾರ್ಯ—ಇವನ್ನು ತಿಳಿಸಿ ಕೊನೆಗೆ ದಾನ ತೆಗೆದುಕೊಳ್ಳುವವನ ಯೋಗ್ಯತೆ, ಅವನ ಪಾಂಡಿತ್ಯ, ಗೋತ್ರ, ಪ್ರವರ, ದಾನಕೊಟ್ಟ ಗ್ರಾಮಭೂಮಿಗಳನ್ನೂ ಅದರ ಎಲ್ಲೆಕಟ್ಟುಗಳನ್ನೂ ನಮೂದಿಸಿರುತ್ತದೆ. ಸಾಮಾನ್ಯವಾಗಿ ತಾಮ್ರಶಾಸನಗಳು ಸಂಸ್ಕೃತ ಭಾಷೆಯಲ್ಲಿವೆ. ನಾಯಕರ ಕಾಲದ ಶಾಸನಗಳಾದರೋ ದೇಶಭಾಷೆಯಲ್ಲಿವೆ. ಎಲ್ಲೆಗಳನ್ನು ತಿಳಿಸುವಾಗ ಮಾತ್ರ ಸಂಸ್ಕೃತ ಶಾಸನಗಳ ಕೊನೆಯಲ್ಲಿ ದೇಶಭಾಷೆ ಬರುತ್ತದೆ. ಪ್ರಾಚೀನ ತಾಮ್ರಶಿಲಾಶಾಸನಗಳು ಗದ್ಯದಲ್ಲಿವೆ. ತಾಮ್ರಶಾಸನದ ಕೊನೆಯಲ್ಲಿ ಫಲಶ್ರುತಿ ದಾನಕೊಟ್ಟವನ ಹಸ್ತಾಕ್ಷರಗಳಿರುತ್ತವೆ. ಗಂಗರ ಮಾರಸಿಂಘನ ಶಾಸನ ಒಂದು ಸಣ್ಣ ಪುಸ್ತಕದಷ್ಟು ದೊಡ್ಡದಾಗಿದೆ. ಮೈಸೂರು ಅರಸರು ಕೊಟ್ಟ ಹದಿನೈದು ಹಲಗೆಯ ತಾಮ್ರಶಾಸನವೇ ಇದುವರೆಗೂ ಸಿಕ್ಕಿರುವುವುಗಳಲ್ಲಿ ದೊಡ್ಡದು ಎಂದು ಹೇಳಬಹುದು.

**ಶಿಲಾಶಾಸನಗಳು :** ಶಿಲಾಶಾಸನಗಳು ವಿಪುಲವಾಗಿವೆ. ಬಂಡೆಗಳು, ಗೋಡೆಗಳು, ತಳಪಾಯಕಲ್ಲು, ಬೋದಿಗೆಕಲ್ಲು, ಕಲ್ಲಿನ ತೊಲೆಗಳು ಕಂಬಗಳು ಇವುಗಳ ಮೇಲೆಲ್ಲ ಬರೆವಣಿಗೆಗಳಿವೆ. ಸಾಮಾನ್ಯವಾಗಿ 8′ × 10′ ಚದುರವಿರುವ ದೊಡ್ಡ ಕಲ್ಲಿನ ಒಳ



ಬೀರನೊಳಂಬನ ಶಾಸನ. ಕೋಲಾರ ತಾಲ್ಲೂಕು.

ಭಾಗವನ್ನೆಲ್ಲ ಒಂದೇ ಮಟ್ಟಕ್ಕೆ ತಂದು ಅಂಚುಕಟ್ಟಿ ಮೇಲ್ಗಡೆ ಭಾಗವನ್ನು ಅರ್ಧಚಂದ್ರಾಕೃತಿಯಿರುವಂತೆ ಮಾಡಿಕೊಂಡು ಅಂದವಾಗಿ, ಕಲ್ಲಿನ ಒಳಭಾಗದಲ್ಲಿ ಬರೆಸಿರುವ ಶಾಸನಗಳೇ ಹೆಚ್ಚು. ಶಾಸನಗಳ ಮೇಲ್ಗಡೆ ಅರ್ಧಚಂದ್ರಾಕೃತಿಯ ಭಾಗದಲ್ಲಿ ಶೈವದೇವಸ್ಥಾನದ ದಾನಪತ್ರವಾದರೆ, ಲಿಂಗ ಬಸವ ಪೂಜಾರಿ ಹಸುಕರುಗಳು, ಎಡಬಲ ಭಾಗಗಳಲ್ಲಿ ಸೂರ್ಯಚಂದ್ರರ ಚಿತ್ರಗಳಿರುತ್ತವೆ. ವೈಷ್ಣವ ದೇವಸ್ಥಾನಗಳವಾದರೆ ವಾಮನನ ಚಿತ್ರ, ಗೋಪಾಲಕೃಷ್ಣ ಅಥವಾ ಆ ದೇವಸ್ಥಾನದಲ್ಲಿ ಪ್ರತಿಷ್ಠಿತವಾದ ಮೂರ್ತಿಯ ಚಿತ್ರ ಕೆತ್ತಲ್ಪಟ್ಟಿರುತ್ತದೆ. ಜೈನಶಾಸನವಾದರೆ ಜಿನಬಿಂಬವಿರುತ್ತದೆ. ಈ ಎಲ್ಲ ಶಾಸನಗಳ ಪ್ರಾರಂಭದಲ್ಲಿ ಶೈವರಾದರೆ ನಮಸ್ತುಂಗ ಶಿರಶ್ಚುಂಬಿ ಎಂಬ ಶ್ಲೋಕವನ್ನೂ ವೈಷ್ಣವರಾದರೆ ಹರೇರ್ಲೀಲಾವರಾಹಸ್ಯ ಎಂಬ ಶ್ಲೋಕವನ್ನೂ ಜೈನರಾದರೆ ಶ್ರೀಮತ್ಪರಮಗಂಭೀರ ಎಂಬ ಶ್ಲೋಕವನ್ನೂ ಬರೆದು ಮುಂದೆ ವಿಷಯವನ್ನು ಪ್ರಾರಂಭಿಸುವರು. ಮುಂದೆ, ದಾನಕೊಟ್ಟವನು ರಾಜನಾದರೆ ಅವನ ಪೀಳಿಗೆ ಅವನ ಶೌರ್ಯಪರಾಕ್ರಮಾದಿಗಳು ಅವನ ದಿಗ್ವಿಜಯಗಳನ್ನು ತಿಳಿಸಿ ಕಾಲವನ್ನು ಸೂಚಿಸಿ ತಾನು ಮಾಡಿದ ಪ್ರಕೃತ ಧರ್ಮವನ್ನೂ ತಿಳಿಸಲಾಗುವುದು. ಕೊನೆಗೆ ದಾನಕೊಟ್ಟ ಗ್ರಾಮಭೂಮಿಗಳ ಎಲ್ಲೆಕಟ್ಟು ಸಾಕ್ಷಿಗಳು ಫಲಶ್ರುತಿ ಮೊದಲಾದುವುಗಳು ಇರುವುವು. ಕೊನೆಯಲ್ಲಿ ರಾಜನ ಅಥವಾ ಅಧಿಕಾರಿಯ ಹಸ್ತಾಕ್ಷರವಿರುವುದು. ಸಾಮಾನ್ಯವಾಗಿ ಸ್ವದತ್ತಾಂ ಪರದತ್ತಾಂ ವಾಯೋ ಹರೇತ ವಸುಂಧರಾ। ಷಷ್ಟಿರ್ವರ್ಷಸಹಸ್ರಾಣಿ ವಿಷ್ಟಾಯಾಂ ಜಾಯತೇ ಕ್ರಿಮಿಃ —ಎಂಬ ಶ್ಲೋಕ ಮತ್ತು ಇತರ ಫಲಶ್ರುತಿ ಇರುತ್ತವೆ. ಕೆಲವು ಶಾಸನಗಳ ಕೊನೆಯಲ್ಲಿ ಶಾಸನದ ಸಾಹಿತ್ಯರಚನೆ ಮಾಡಿದ ಕವಿಯ ಹೆಸರೂ ಕಲ್ಲುಕೊರೆದ ಬಡಗಿಯ ಹೆಸರೂ ಸೂಚಿಸಲ್ಪಟ್ಟಿರುತ್ತವೆ. ಈ ರೀತಿಯಾಗಿ ಬರೆಸಿರುವ ಶಿಲಾಶಾಸನಗಳಲ್ಲಿ ಹೊಯ್ಸಳರ ಕಾಲದ ಲೇಖನಗಳು ಅಂದವಾಗಿದ್ದು ಓದಲು ನೋಡಲು ರಮ್ಯವಾಗಿವೆ. ವಿಜಯನಗರದ ಕಾಲದ ಶಾಸನಗಳು ಒರಟುಕಲ್ಲಿನ ಮೇಲೆ ಇರುವುದೂ ಉಂಟು. ಹೊಯ್ಸಳರ ಶಾಸನಗಳೆಲ್ಲ ಸಾಮಾನ್ಯವಾಗಿ ಬಳಪದಕಲ್ಲಿನ ಮೇಲೆಯೇ ಇವೆ.

2. ಆತ್ಮಾರ್ಪಣೆಮಾಡಿದ ತ್ಯಾಗಿಗಳ ಶಾಸನಗಳು : ಇವನ್ನು ವೀರಗಲ್ಲುಗಳೆಂದು ಕರೆಯುವರು. ಅನೇಕ ಪುರಾತನ ಪಟ್ಟಣಗಳ, ರಾಜಧಾನಿಗಳ, ಹಳೆ ಊರುಗಳ ಮುಂಭಾಗದಲ್ಲಿ ಸಾಲಾಗಿ ನೆಡಿಸಿರುವ ಚಿತ್ರಗಳುಳ್ಳ ಕಲ್ಲುಗಳವು. ಈ ಕಲ್ಲುಗಳ ಆಯ 8′ × 10′ ಅಡಿಗಳಿರುವುದುಂಟು. ಕೆಲವು 3′ × 6′ ಪ್ರಮಾಣದ ಕಲ್ಲುಗಳೂ ಇವೆ. ಚಪ್ಪಡಿಗಳ ಹೊರಮೈಯನ್ನು ನುಣುಪಾಗಿ ಮಾಡಿಕೊಂಡು ಸುತ್ತಲೂ ಉಬ್ಬಿರು



ಹೊಯ್ಸಳರ ಸಾಮಂತ ಸೇನವಾರರ ಶಾಸನ. ಚಿಕ್ಕಮಗಳೂರು ತಾಲ್ಲೂಕು

ವಂತೆ ಮಾಡಿ ಮೇಲ್ಭಾಗ ಕಮಾನಿನ ಆಕಾರಮಾಡಿಕೊಂಡು ಒಳಮೈಯಲ್ಲಿ ಮೂರು ಅಥವಾ ಐದು ಅಪರೂಪವಾಗಿ ಏಳು ಚಚ್ಚೌಕನಾದ ಭಾಗಗಳನ್ನು ವಿಂಗಡಿಸಿಕೊಂಡು ಅದರಲ್ಲಿ ಕಾಳಗದಲ್ಲಿ ಪ್ರಾಣಾರ್ಪಣಮಾಡಿದವನ ವಿಷಯ, ಅವನಿಗೆ ಉಂಟಾಗುವ ಫಲ—ಎಲ್ಲವನ್ನೂ ಚಿತ್ರಗಳ ಮೂಲಕ ತೋರಿಸಿರುತ್ತಾರೆ. ಕೆಲವು ಕಲ್ಲುಗಳಲ್ಲಿ ಅಷ್ಟಪಟ್ಟಿ ತಳಭಾಗದಲ್ಲಿ ಜಾಗವಿದ್ದರೆ ಅಲ್ಲಿ ಆ ದಿವಸದ ವಿಷಯ, ಕಕ್ಷಿ ಪ್ರತಿಕಕ್ಷಿಯ ಅದರಲ್ಲಿ ಪ್ರಾಣಾರ್ಪಣ ಮಾಡಿದವನ ತ್ಯಾಗ. ಅವನ ಕುಟುಂಬಕ್ಕೆ ಕೊಟ್ಟ ದಾನದ ವಿಷಯ–ಇವುಗಳ ಉಲ್ಲೇಖವಿರುವುದು.



ಬೇಲೂರು ದೇವಾಲಯದ 1117ರ ತಾಮ್ರಶಾಸನ

ಕೆಳಗಡೆ ಪಟ್ಟಿಯಲ್ಲಿ ಎರಡೂ ಪಕ್ಷದವರು ಆಯಾ ಕಾಲದಲ್ಲಿ ಬಳಕೆಯಲ್ಲಿದ್ದ ಆಯುಧ ಹಿಡಿದು ಜಗಳವಾಡುವುದು. ಅದರ ಮೇಲುಗಡೆ ಪಟ್ಟಿಯಲ್ಲಿ ಅಪ್ಸರ ಸ್ತ್ರೀಯರು ವೀರನನ್ನು ಸ್ವರ್ಗಕ್ಕೆ ಕರೆದುಕೊಂಡು ಹೋಗುವುದು, ಕೊನೆಗೆ ಮೇಲ್ಗಡೆ ಕಮಾನಾಗಿ ವಿಂಗಡಿಸಿರುವ ಭಾಗದಲ್ಲಿ ಲಿಂಗ, ಬಸವ. ಪೂಜಾರಿ, ವೀರ. ಕೆಲವು ಕಡೆ ವೀರನ ಹೆಂಡತಿಯ ಚಿತ್ರಗಳೂ ಇರುತ್ತವೆ. ವೀರಗಲ್ಲುಗಳಲ್ಲಿ ಶೈವ. ವೈಷ್ಣವ, ಜೈನಮತದ ವೀರಗಲ್ಲುಗಳೆಂದು ಕಲ್ಲುಗಳನ್ನು ನೋಡಿದ ತತ್ಕ್ಷಣವೇ ತಿಳಿಯಲು ಅದರ ಮೇಲ್ಭಾಗದಲ್ಲಿರುವ ಲಿಂಗ ಬಸವನ ಚಿತ್ರ, ಗೋಪಾಲಕೃಷ್ಣ. ಹಸುಕರು ಮುಂತಾದ ಚಿತ್ರಗಳಿಂದಲೇ ತಿಳಿಯಬಹುದು.

ಈ ವೀರಗಲ್ಲುಗಳ ಮೊದಲಲ್ಲಿ ಜಿತೇನ ಲಭ್ಯತೇ ಲಕ್ಷ್ಮೀ। ಮೃತೇನಾಪಿ ಸುರಾಂಗನಾ। ಕ್ಷಣವಿಧ್ವಂಸಿನಿ ಕಾಯೇ ಕಾ ಚಿಂತಾ ಮರಣೇ ರಣೇ॥ ಎಂಬ ಶ್ಲೋಕವಿರುವುದು. ಮುಂದೆ ಕಕ್ಷಿ ಪ್ರತಿಕಕ್ಷಿಗಳು, ಕಾಳಗಕ್ಕೆ ಕಾರಣ, ಕಾಲ, ಸತ್ತವನ ಹೆಸರು. ದಾನಕೊಟ್ಟ ಭೂಮಿ ಮೊದಲಾದ ವಿಷಯಗಳ ವಿವರಣೆ ಇರುತ್ತವೆ. ಈ ವಿಧವಾದ ವೀರಗಲ್ಲುಗಳು ಗಂಗರ ಕಾಲದಲ್ಲಿ ಹೆಚ್ಚಾಗಿ ಸಿಕ್ಕುವುವು. ಶಿವಮೊಗ್ಗ ಜಿಲ್ಲೆಯಲ್ಲಿ ಹಾಕಿಸಿರುವ ಕೆಲವು ವೀರಗಲ್ಲುಗಳು ಕಲಾದೃಷ್ಟಿಯಿಂದ ಬಹಳ ಭವ್ಯವಾಗಿವೆ. ಹಿರೆಗುಂಡುಗಲ್ಲು ಎಂಬ ಪ್ರದೇಶದಲ್ಲಿ ಗಂಗರ ಕಾಲದ ಸುಮಾರು ಹದಿನೇಳು ವೀರಗಲ್ಲುಗಳು ಒಂದೇ ಜಾಗದಲ್ಲಿವೆ. ಬಹಳ ಪ್ರಾಚೀನವಾದ ಕನ್ನಡ ಶಿಲಾಶಾಸನಗಳೆಲ್ಲ ವೀರಗಲ್ಲುಗಳು ಹಲ್ಮಿಡಿ, ತಮಟಕಲ್ಲು, ಅಣಜಿ, ಗದ್ದೆಮನೆ, ಹಿರೆಗುಂಡುಗಲ್ಲು, ಚಿಕ್ಕಮಧುರೆ, ಆಸಂದಿ ಮೊದಲಾದ ಕಡೆ ಇರುವ ವೀರಗಲ್ಲುಗಳು ಕ್ರಿ.ಶ. ಎಂಟನೆಯ ಶತಮಾನಕ್ಕೆ ಮುಂಚೆ ಹುಟ್ಟಿದವೆಂದು ತೋರುತ್ತದೆ.

ಈ ವೀರಗಲ್ಲುಗಳಲ್ಲಿ ಊರಿನ ಗೋವುಗಳನ್ನು ಕಾಪಾಡಲು ಪ್ರಾಣ ಬಿಟ್ಟವನ ಜ್ಞಾಪಕಾರ್ಥವಾಗಿ ಹಾಕಿರುವ ಕಲ್ಲಿಗೆ ತುರುಕಲ್ಲೆಂದು ಹೆಸರು. ಹೆಂಗಸರು ತಮ್ಮ ಗಂಡ ಸತ್ತಾಗ ಪ್ರಾಣ ಬಿಟ್ಟಿದ್ದಕ್ಕೆ ಹಾಕಿರುವ ಕಲ್ಲುಗಳೇ ಮಾಸ್ತಿಕಲ್ಲುಗಳು. ಮಹಾಸತಿ ಎಂಬುದು ಮಾಸ್ತಿ ಆದಂತೆ ತೋರುತ್ತದೆ. ಹುಲಿಯೊಡನೆ ಕಾಳಗ, ನಾಯಿ ಕಾಳಗ ಮೊದಲಾದುವುಗಳನ್ನು ಸೂಚಿಸುವ ಚಿತ್ರವಿರುವ ವೀರಗಲ್ಲುಗಳೂ ಇವೆ.



ಚಿತ್ರದುರ್ಗದ ಮದಕರಿನಾಯಕನ ಹೊಂಬಳಲ ಶಾಸನ

ಮಂಡ್ಯದ ತಾಲ್ಲೂಕು ಆತಕೂರಿನಲ್ಲಿರುವ ವೀರಗಲ್ಲು ಗಮನಾರ್ಹವಾದುದು. ಕಾಡುಹಂದಿ ಮತ್ತು ತನ್ನ ಸಾಕುಪ್ರಾಣಿಯಾದ ನಾಯಿಗಳ ಜಗಳದಲ್ಲಿ ನಾಯಿ ಸತ್ತು ಹೋದುದಕ್ಕಾಗಿ ಗಂಗರಾಜ ದೇವಾಲಯವನ್ನು ಕಟ್ಟಿಸಿ ದೇವರ ಮುಂದೆ ಆ ನಾಯಿಯ ಶ್ರೇಯಸ್ಸಿಗಾಗಿ ನಂದಾದೀವಿಗೆ ಇಡಲು ದಾನಕೊಟ್ಟಿದ್ದಾನೆ. ಗಂಗ, ಹೊಯ್ಸಳ ರಾಜರ ಕಾಲಗಳಲ್ಲಿ ರಾಜ ಸತ್ತಾಗ ಅವನೊಡನೆ ಆತ್ಮಾರ್ಪಣ ಮಾಡಿರುವ ವೀರರ ಸ್ಮಾರಕಗಳನ್ನು ಗರುಡಗಲ್ಲುಗಳೆಂದು ಕರೆಯುವರು.

ಜೈನರಲ್ಲಿ ಅವಸಾನಕಾಲ ಪ್ರಾಪ್ತವಾದಾಗ ಅಥವಾ ಜೀವನದಲ್ಲಿ ಜುಗುಪ್ಸೆತೋರಿ ವೈರಾಗ್ಯ ಬಂದಾಗ ಅನಶನವ್ರತ ಮಾಡಿ ಪ್ರಾಣಾರ್ಪಣ ಮಾಡಿರುವುದಕ್ಕಾಗಿ ಹಾಕಿಸಿರುವ ಕಲ್ಲುಗಳಿಗೆ ನಿಸಿದಿಕಲ್ಲುಗಳೆಂದು ಹೆಸರು. ನಿಸಿದಿಕಲ್ಲುಗಳ ಮೇಲ್ಗಡೆ ಜೈನಯತಿ, ವ್ಯಾಸಪೀಠ, ತಮಟೆಕೋಲು— ಇವುಗಳ ಚಿತ್ರಗಳೂ ಶಿಷ್ಯನ ಚಿತ್ರವೂ ಇರುತ್ತವೆ. ಕೆಳಗಡೆ ವ್ಯಕ್ತಿ ಮತ್ತು ಕಾಲಗಳ ಮಾಹಿತಿಯೇ ಮೊದಲಾದ ವಿವರಣೆಗಳನ್ನೂ ಪ್ರಾಣಾರ್ಪಣೆಯ ವಿಷಯವನ್ನೂ ತಿಳಿಸಿರುತ್ತದೆ. ಶ್ರವಣಬೆಳಗೊಳ ಒಂದರಲ್ಲಿಯೇ ಇಂಥ ಅರುವತ್ತು ನಿಸಿದಿಕಲ್ಲುಗಳಿವೆ.

3. ಇತರ ಸ್ಮಾರಕಗಳು: ರಾಜರು ಕವಿಗಳು ಪುಣ್ಯಕ್ಷೇತ್ರ ತೀರ್ಥಕ್ಷೇತ್ರಗಳಿಗೆ ಹೋದಾಗ ಜ್ಞಾಪಕಾರ್ಥವಾಗಿ ಹಾಕಿಸಿರುವ ಸ್ವಹಸ್ತಾಕ್ಷರ ಲೇಖನಗಳು, ಅನೇಕ ಜನ ಶ್ರೀಮಂತರು ಕೆರೆ ಕಟ್ಟಿಸಿದುದಕ್ಕೂ ತೂಬನ್ನು ಇಡಿಸಿದುದಕ್ಕೂ ಬರೆಸಿರುವ ಶಾಸನಗಳು, ರಾಜ್ಯದ ಎರಡು ಮತದವರ ವೈಮನಸ್ಯವನ್ನು ಹೋಗಲಾಡಿಸಿ ಒಪ್ಪಂದ ಮಾಡಿಸಿರುವಂಥವು (ಬುಕ್ಕರಾಯನ ಶಾಸನ) ಈ ಮೊದಲಾದ ಅನೇಕ ಶಾಸನಗಳಿವೆ. ರಾಜ್ಯದಲ್ಲಿ ಶ್ರಮಣರಿಗೂ ಬ್ರಾಹ್ಮಣರಿಗೂ ಆದ ಜಗಳವನ್ನು ಪರಿಹರ ಪರಿಹಾರ ಮಾಡಿದ ವಿಷಯ ಪ್ರಸ್ತಾಪಿತವಾಗಿರುವ ಈ ಶಾಸನದ ಪ್ರತಿಯನ್ನು ಶ್ರವಣಬೆಳಗೊಳದಲ್ಲಿಡಲಾಗಿದೆ (ಶ್ರ, ಬೆ. 344). ಹಳೇಬೂದನೂರು ಶಾಸನದಲ್ಲಿ ಸಾವರಾಶಿ ಭಟ್ಟಾರಕ ಒಂದು ಕೆರೆಯನ್ನು ನಿರ್ಮಿಸಿದ ವಿಷಯವನ್ನು ಹೇಳಲಾಗಿದೆ. ಕೆರೆಯಲ್ಲಿದ್ದ ಮಣ್ಣನ್ನು ತೆಗೆದು ಹೆಚ್ಚು ನೀರು ಅಲ್ಲಿ ಸಂಗ್ರಹವಾಗುವಂತೆ ಮಾಡಿದುದಕ್ಕಾಗಿ ಚಟ್ಟಲದಾಸ ಬೋಯಿಗೆ ಮುಮ್ಮಡಿ ಕೆಂಪೇಗೌಡ ಒಂದು ಕೆರೆಯ ಭಂಡಿಯನ್ನು ಬಿಟ್ಟಂತೆ ಮಾಗಡಿಯ ಶಾಸನವೊಂದು ತಿಳಿಸುತ್ತದೆ.

ಇದಲ್ಲದೆ ಕನ್ನಡದ ಅರಸರು ಯಾತಾರ್ಥಿಗಳಾಗಿ ಹೊರದೇಶಗಳಿಗೆ ಹೋಗಿದ್ದಾಗ ಅದರ ಸ್ಮಾರಕಾರ್ಥವಾಗಿ ಕೆತ್ತಿಸಿದ್ದ ಹಲವಾರು ಶಾಸನಗಳು ಕನ್ನಡನಾಡಿನ ಹೊರ ಭಾಗಗಳಲ್ಲಿ ಕಂಡುಬಂದಿವೆ. ಹೊಯ್ಸಳ ಅರಸರು ಗಯಾ ಕ್ಷೇತ್ರಕ್ಕೆ ಹೋಗಿದ್ದ ಘಟನೆಯನ್ನು ಅಲ್ಲಿ ಕಂಡುಬಂದಿರುವ ಕನ್ನಡ ಶಾಸನವೊಂದು ತಿಳಿಸಿದರೆ, ಅದೇ ವಂಶದ ಬಲ್ಲಾಳ ಕೊಲ್ಲಾಪುರದ ಮಹಾಲಕ್ಷ್ಮಿ ದೇವಾಲಯಕ್ಕೆ ಭೇಟಿಕೊಟ್ಟ ಸಮಾಚಾರ ಕೊಲ್ಲಾಪುರದ ಶಾಸನವೊಂದರಿಂದ ತಿಳಿದುಬರುತ್ತದೆ. ಕನ್ನಡದ ಅನೇಕ ಶಾಸನಗಳು ತಮಿಳುನಾಡು, ಆಂಧ್ರ ಮತ್ತು ಮಹಾರಾಷ್ಟ್ರಗಳಲ್ಲೂ ಪಾಶ್ಚಾತ್ಯ ದೇಶಗಳಲ್ಲಿರುವ ವಸ್ತು ಪ್ರದರ್ಶನಾಲಯಗಳಲ್ಲಿರುವ ಕಲ್ಲಿನ ವಿಗ್ರಹಗಳ ಮೇಲೂ ಕಂಡುಬಂದಿವೆ. ಭಾರತೀಯರ ಪ್ರಾಚೀನ ಚರಿತ್ರೆ ಬರೆಯಲು ಶಿಲಾ ಲೇಖನಗಳು ಅತ್ಯಂತ ನಂಬಿಕೆಗೆ ಅರ್ಹವಾದ ಮುಖ್ಯವಾದ ಸಾಧನಗಳು. ಈ ಎಲ್ಲ ಶಾಸನಗಳಿಂದ ಅಂದಂದಿನ ರಾಜಕೀಯ, ಸಾಮಾಜಿಕ, ಚಾರಿತ್ರಿಕ, ಸಾಂಸ್ಕೃತಿಕ ವಿಷಯಗಳು ತಿಳಿಯುವುದು. ಅಲ್ಲದೆ ಭಾಷೆ, ಲಿಪಿ, ಬರವಣಿಗೆಯ ರೀತಿ— ಮೊದಲಾದ ಅಂಶಗಳನ್ನು ತಿಳಿಯಲು ಇವು ಸಾಧನಗಳಾಗಿವೆ. (ಆರ್.ಸಿ.)

**ಕನ್ನಡ ಸಂಶೋಧನ ಸಂಸ್ಥೆ :** ಹಿಂದಿನ ಬೊಂಬಾಯಿ ಪ್ರಾಂತ್ಯದ ಕನ್ನಡ ಜಿಲ್ಲೆಗಳಾಗಿದ್ದ ಬೆಳಗಾಂ, ಬಿಜಾಪುರ, ಧಾರವಾಡ ಮತ್ತು ಕಾರವಾರ ಪ್ರದೇಶಗಳ ಇತಿಹಾಸ, ಸಂಸ್ಕೃತಿ ಮತ್ತು ಸಾಹಿತ್ಯಗಳ ಅಭ್ಯಾಸ ಮತ್ತು ಸಂಶೋಧನೆಯ ಕಾರ್ಯಗಳಿಗಾಗಿ 1939ರಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಸಂಸ್ಥೆ (ಕನ್ನಡ ರಿಸರ್ಚ್ ಇನ್‌ಸ್ಟಿಟ್ಯೂಟ್).

**ಇತಿಹಾಸ :** ಕನ್ನಡ ಸಂಶೋಧನ ಸಂಸ್ಥೆ ಸ್ಥಾಪಿತವಾಗುವ ವೇಳೆಗೆ ಆಗಲೇ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕರ್ನಾಟಕ ಇತಿಹಾಸ ಸಂಶೋಧಕ ಮಂಡಳಗಳು (ಕರ್ನಾಟಕ ಹಿಸ್ಟಾರಿಕಲ್ ರಿಸರ್ಚ್ ಇನ್‌ಸ್ಟಿಟ್ಯೂಟ್) ಧಾರವಾಡದಲ್ಲಿದ್ದರೂ ಅವುಗಳ ಕಾರ್ಯಕ್ಷೇತ್ರ ಸೀಮಿತವಾಗಿತ್ತು. ಆದ್ದರಿಂದ ಇಂಥ ವ್ಯಾಪಕೋದ್ದೇಶವುಳ್ಳ ಸಂಸ್ಥೆಯೊಂದರ ಆವಶ್ಯಕತೆಯನ್ನು ಮನಗಂಡ ಜನತೆಯ ಆಶೋತ್ತರವನ್ನು ಪೂರೈಸುವ ಸಲುವಾಗಿ ಆಗಿನ ಬೊಂಬಾಯಿ ಸರ್ಕಾರ 1938ರಲ್ಲಿ ಕರ್ನಾಟಕ ಕಾಲೇಜಿನ ಪ್ರಿನ್ಸಿಪಾಲ್ ಎ. ಸಿ. ಫ್ಯಾರಸರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನೇಮಿಸಿತು. ಕನ್ನಡ ಸಂಶೋಧನ ಸಂಸ್ಥೆಯನ್ನು ಸ್ಥಾಪಿಸಬೇಕೆಂದೂ ಅದು ಕನ್ನಡ ಸಾಹಿತ್ಯ ಸಂಸ್ಕೃತಿಗಳ ಅಧ್ಯಯನಕ್ಕೆ ಸಹಾಯಕವಾದ ಮೂಲಸಾಮಗ್ರಿಗಳನ್ನು ಸಂಗ್ರಹಿಸಿ, ಅಭ್ಯಸಿಸುವ ಕಾರ್ಯದಲ್ಲಿ ತೊಡಗಬೇಕೆಂದೂ ಆ ಸಮಿತಿ ಸಲಹೆಮಾಡಿತು. ಈ ಸಲಹೆಗೆ ಅನುಗುಣವಾಗಿ ಅಸ್ತಿತ್ವಕ್ಕೆ ಬಂದ ಕನ್ನಡ ಸಂಶೋಧನ ಸಂಸ್ಥೆಗೆ ಆರ್. ಎಸ್. ಪಂಚಮುಖಿಯವರು ನಿರ್ದೇಶಕರಾಗಿ ನೇಮಕವಾದರು. ಬೊಂಬಾಯಿ ಸರ್ಕಾರದಿಂದ ಈ ಸಂಸ್ಥೆಗೆ ಮಂಜೂರಾದ ಸಹಾಯಧನ ವರ್ಷಕ್ಕೆ 12,000 ರೂಪಾಯಿಗಳು; ಜೊತೆಗೆ ಮೊದಲನೆಯ ವರ್ಷಕ್ಕೆ 8,000 ರೂ.ಗಳ ಅಧಿಕ ಧನವೂ ದೊರೆಯಿತು. ನಿರ್ದೇಶಕರಿಗೆ ಸೂಕ್ತಸಲಹೆಗಳನ್ನು ನೀಡಲು ಒಂದು ಸಲಹಾಸಮಿತಿಯನ್ನು ರಚಿಸಲಾಯಿತು. ಎಸ್. ಸಿ. ನಂದೀಮಠ, ಕೆ. ಜಿ. ಕುಂದಣಗಾರ, ಡಿ. ಪಿ. ಕರಮರ್‌ಕರ್, ದ. ರಾ. ಬೇಂದ್ರೆ, ವಿ. ಕೆ. ಗೋಕಾಕ್, ಎಸ್.ಎಸ್ ಮಾಳವಾಡ, ಎ. ಡಿ ಥೋಪೇಶ್ವರಕರ—ಇವರು ಈ ಮೊಟ್ಟಮೊದಲ ಸಮಿತಿಯಲ್ಲಿ ಸದಸ್ಯರು. ಈ ಸಂಸ್ಥೆ ಮೊದಲ ಎರಡು ವರ್ಷಗಳ ಕಾಲ ಕರ್ನಾಟಕ ಕಾಲೇಜಿನ ಕಟ್ಟಡದಲ್ಲೂ ಅನಂತರ ಸುಮಾರು 1947ರ ವರೆಗೆ ಸಾರಸ್ವತಪುರದಲ್ಲೂ 1947 ರಿಂದ 1959ರ ವರೆಗೆ ಮಾಳಮಡ್ಡಿಯ ಧಾರಾಮಹಲಿನಲ್ಲೂ ಇತ್ತು.

1956ರಲ್ಲಿ ವಿಶಾಲ ಮೈಸೂರು ರಾಜ್ಯವಾದಾಗ ಉತ್ತರ ಕರ್ನಾಟಕದ ಜಿಲ್ಲೆಗಳು ಮೈಸೂರಿಗೆ ಸೇರಿದುವು. ಅದುವರೆವಿಗೂ ಬೊಂಬಾಯಿ ಸರ್ಕಾರದ ಅಧೀನದಲ್ಲಿದ್ದ ಈ ಸಂಸ್ಥೆ ಮೈಸೂರು ಸರ್ಕಾರಕ್ಕೆ ಸೇರಿತು. ಧಾರವಾಡದಲ್ಲಿ ಕರ್ನಾಟಕ ವಿಶ್ವವಿದ್ಯಾಲಯ ಆರಂಭವಾಗಿ ಆರು ವರ್ಷಗಳಾಗಿದ್ದುವು. ಕರ್ನಾಟಕ ವಿಶ್ವವಿದ್ಯಾಲಯವೇ ಈ ಸಂಸ್ಥೆಯನ್ನು ನಡೆಸಿಕೊಂಡು ಹೋಗಲು ಮೈಸೂರು ಸರ್ಕಾರ ಒಪ್ಪಿ ಇದನ್ನು ವಿಶ್ವವಿದ್ಯಾಲಯಕ್ಕೆ ಒಪ್ಪಿಸಿತು. ಆ ವೇಳೆಗಾಗಲೇ ಸಂಸ್ಥೆ ಹಿರಿದಾಗಿ ಬೆಳೆದಿತ್ತು. ಅನೇಕ ಶಾಸನಗಳ ಪಡಿಯಚ್ಚುಗಳು, ಹಸ್ತಪ್ರತಿಗಳು, ಶಿಲಾ ಹಾಗೂ ತಾಮ್ರ ಶಾಸನಗಳು, ಪ್ರಾಚ್ಯವಸ್ತು ಶೋಧನದಲ್ಲಿ ಸಂಗ್ರಹಿಸಲಾದ ಇತರ ಅವಶೇಷಗಳು, ನಾಣ್ಯಗಳು, ಕಲ್ಲು ಮತ್ತು ಧಾತುಗಳಲ್ಲಿ ನಿರ್ಮಿತವಾದ ಸುಂದರ ಮೂರ್ತಿಗಳು ಮತ್ತು ವೀರಗಲ್ಲುಗಳು ಸಂಸ್ಥೆಯಲ್ಲಿ ಸಂಗ್ರಹವಾಗಿದ್ದು, ಅವನ್ನು ವ್ಯವಸ್ಥಿತ ರೀತಿಯಲ್ಲಿ ಪ್ರದರ್ಶಿಸಲು ಒಂದು ವಸ್ತುಸಂಗ್ರಹಾಲಯ ಆವಶ್ಯಕವಾಗಿತ್ತು. ಧಾರಾ ಮಹಲಿನ ಆವರಣದಲ್ಲಿ ಸಣ್ಣದಾದ ಒಂದು ಸಂಗ್ರಹಾಲಯವನ್ನು ರೂಪಿಸಿದ್ದರೂ ಅದು ಸಾಕಾಗಿರಲಿಲ್ಲ. ಈ ಸಂಸ್ಥೆಗಾಗಿ ಸುಮಾರು 3 ಲಕ್ಷ ರೂ.ಗಳ ವೆಚ್ಚದಲ್ಲಿ ಒಂದು ಪ್ರತ್ಯೇಕ ಭವನವನ್ನು ಕಟ್ಟಿಸಲಾಯಿತು. ವಿಶ್ವವಿದ್ಯಾಲಯದ ಪ್ರಮುಖ ಕಟ್ಟಡಕ್ಕೆ ಹೊಂದಿದಂತೆ ನಿರ್ಮಿಸಲಾದ ತನ್ನದೇ ಆದ ಕಲೆ ಮತ್ತು ಪುರಾತತ್ತ್ವಶಾಸ್ತ್ರ ವಸ್ತುಸಂಗ್ರಹಾಲಯದ (ಮ್ಯೂಸಿಯಂ ಆಫ್ ಆರ್ಟ್ ಅಂಡ್ ಆರ್ಕಿಯಾಲೊಜಿ) ಕಟ್ಟಡವನ್ನು ಈ ಸಂಸ್ಥೆ ಪ್ರವೇಶಿಸಿದ್ದು 1964ರಲ್ಲಿ. ವಿಶ್ವವಿದ್ಯಾಲಯ 1962ರ ಪ್ರಾಚೀನ ಭಾರತೀಯ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನ ವಿಭಾಗವನ್ನು ಆರಂಭಿಸಿತು. ಅದು ಕನ್ನಡ ಸಂಶೋಧನ ಸಂಸ್ಥೆಯೊಡನೆ ಕೂಡಿ ಕೆಲಸ ಮಾಡತೊಡಗಿತು.

ಕನ್ನಡ ಸಂಶೋಧನ ಸಂಸ್ಥೆಯ ಮೊದಲ ನಿರ್ದೇಶಕರಾದ ಆರ್.ಎಸ್. ಪಂಚಮುಖಿಯವರು ಈ ಸಂಸ್ಥೆಯಿಂದ ನಿವೃತ್ತರಾದಾಗ (1953) ಈ ಸ್ಥಾನಕ್ಕೆ ಬಂದವರು ಕರ್ನಾಟಕದ ಕಾಲೇಜಿನ ಕನ್ನಡ ಪ್ರಾಧ್ಯಾಪಕರಾಗಿದ್ದ ಪ್ರೊ. ಎಸ್. ಎಸ್. ಮಾಳವಾಡರು. ಕರ್ನಾಟಕದ ಖ್ಯಾತ ಇತಿಹಾಸಜ್ಞ ಬಿ. ಎ. ಸಾಲೆತೊರೆ ಅನಂತರ ಈ ಅಧಿಕಾರ ನಿರ್ವಹಿಸಿದರು (1957–1962). ಕರ್ನಾಟಕ ವಿಶ್ವವಿದ್ಯಾಲಯ ಈ



ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ. ವಸ್ತು ಸಂಗ್ರಹಾಲಯದ ಒಳಗಣ ದೃಶ್ಯ

ಸಂಸ್ಥೆಯ ಆಡಳಿತದ ಜವಾಬ್ದಾರಿಯನ್ನು ವಹಿಸಿಕೊಂಡದ್ದು ಇವರ ಕಾಲದಲ್ಲೇ. ಅನಂತರ ಈ ಹೊಣೆ ಹೊತ್ತವರು ಪಿ. ಬಿ. ದೇಸಾಯಿಯವರು.

ಕನ್ನಡ ಸಂಶೋಧನ ಸಂಸ್ಥೆಯ ಕಾರ್ಯಕ್ಷೇತ್ರ ವರ್ಷೇ ವರ್ಷೇ ವಿಸ್ತರಿಸುತ್ತಿದೆ. 1970–71ರಲ್ಲಿ ಈ ಸಂಸ್ಥೆಗಾಗಿ ವಿಶ್ವವಿದ್ಯಾಲಯ ಮಾಡಿದ ವೆಚ್ಚ 1,50,000 ರೂ. ವಿಶ್ವವಿದ್ಯಾಲಯದ ಅಂಗವಾಗಿ ಈ ಸಂಸ್ಥೆ ಕಾರ್ಯನಿರ್ವಹಣೆ ಮುಂದುವರಿಸಿದಾಗ ಇದರ ಕಾರ್ಯಕ್ಷೇತ್ರದಲ್ಲೂ ಬದಲಾವಣೆಗಳಾಗಿವೆ. ಆರಂಭದಲ್ಲಿ ಕರ್ನಾಟಕದ ಇತಿಹಾಸವಲ್ಲದೆ ಸಾಹಿತ್ಯ, ಸಂಸ್ಕೃತಿ, ಮತ್ತು ಜನಪದ ಸಾಹಿತ್ಯಗಳಲ್ಲೂ ಈ ಸಂಸ್ಥೆ ಆಸಕ್ತಿ ವಹಿಸಿತ್ತು. ಇತಿಹಾಸ, ಕನ್ನಡ ಮತ್ತು ಸಮಾಜಶಾಸ್ತ್ರಗಳ ಅಧ್ಯಯನ ಅಧ್ಯಾಪನಗಳಿಗೆ ಇಲ್ಲಿ ಅನುಕೂಲ ಕಲ್ಪಿಸಲಾಗಿತ್ತು. ಈ ಸಂಸ್ಥೆ ವಿಶ್ವವಿದ್ಯಾಲಯಕ್ಕೆ ಸೇರಿದ ಮೇಲೆ ಸಮಾಜಶಾಸ್ತ್ರ ಹಾಗೂ ಕನ್ನಡ ವಿಭಾಗಗಳು ಪ್ರತ್ಯೇಕವಾಗಿ ಕಾರ್ಯದಲ್ಲಿ ತೊಡಗಿದ್ದರಿಂದ ಕರ್ನಾಟಕದ ಮತ್ತು ಭಾರತದ ಇತಿಹಾಸ, ಸಂಸ್ಕೃತಿ, ಕಲೆ ಮತ್ತು ಪ್ರಾಕ್ತನಶಾಸ್ತ್ರಗಳಿಗೆ ಸಂಬಂಧಿಸಿದಂತೆ ಇದರ ಕ್ಷೇತ್ರ ಈಗ ಮಿತ ಗೊಂಡಿದೆ.

**ಸಾಧನೆಗಳು :** ಮೂವತ್ತು ವರ್ಷಗಳಲ್ಲಿ ಈ ಸಂಸ್ಥೆ ನಾಡಿಗೆ ಬಹುಮುಖ ಸೇವೆಸಲ್ಲಿಸಿದೆ. ಕರ್ನಾಟಕದ ಈ ಭಾಗದಲ್ಲಿನ ಸಾವಿರಾರು ಶಾಸನಗಳ ಪ್ರತಿಗಳನ್ನು ಪಡೆದು, ಅವನ್ನು ಪ್ರಕಟಿಸುವುದು ಇದರ ಹೊಣೆಗಳಲ್ಲಿ ಒಂದು. 1500ಕ್ಕೂ ಹೆಚ್ಚು ಶಾಸನಗಳ ಪ್ರತಿಗಳು ಸಂಸ್ಥೆಯಲ್ಲುಂಟು. ಇದನ್ನು ಸಂಸ್ಥೆಯ ವಾರ್ಷಿಕ ವರದಿಗಳಲ್ಲಿ ಸೂಕ್ಷ್ಮವಾಗಿ ಅವಲೋಕಿಸಲಾಗಿದೆಯಲ್ಲದೆ ಶಾಸನಗಳ ಪಾಠ, ಸಾರಾಂಶ, ಮಹತ್ತ್ವದ ವಿವೇಚನೆ ಇವನ್ನು ಕರ್ನಾಟಿಕ್ ಇನ್‌ಸ್ಕ್ರಿಪ್ಷನ್ಸ್ ಎಂಬ ಸಂಪುಟಗಳಲ್ಲಿ ಪ್ರಕಟಿಸುತ್ತ ಬರಲಾಗಿದೆ. ಇದುವರೆಗೆ ಹೊರಬಿದ್ದಿರುವ ಇಂಥ ಸಂಪುಟಗಳು ಐದು. ಮೊದಲ ಮೂರಕ್ಕೆ ಪಂಚಮುಖಿಯವರೂ ನಾಲ್ಕನೆಯದಕ್ಕೆ ಎಂ. ಎಂ. ಅಣ್ಣಿಗೇರಿಯವರೂ ಐದನೆಯದಕ್ಕೆ ಬಿ. ಆರ್. ಗೋಪಾಲರೂ ಸಂಪಾದಕರು. ಉತ್ತರ ಕರ್ನಾಟಕಕ್ಕೆ ಸೇರಿದ ಗುಲ್ಬರ್ಗ, ಬಿದರೆ, ರಾಯಚೂರು ಜಿಲ್ಲೆಗಳಲ್ಲಿ ಅನೇಕ ಶಾಸನಗಳಿವೆ. ಸಂಸ್ಥೆ ಅವನ್ನು ಪ್ರತಿಮಾಡಿ ಪ್ರಕಟಿಸುವ ಕಾರ್ಯದಲ್ಲಿ ತೊಡಗಿದೆ.

ಸಂಸ್ಥೆ ಕಂಡುಹಿಡಿದ ಶಾಸನಗಳಲ್ಲಿ ಅತಿ ಪ್ರಾಚೀನವಾದದ್ದು ವಡಗಾಂವ–ಮಾಧವಪುರದಲ್ಲಿ ದೊರೆತ ಷಟ್ಕೋಣಾಕಾರದ ಸ್ತಂಭಶಿಲಾಲಿಪಿ. ಇದರದು ಪ್ರಾಕೃತ ಭಾಷೆ, ಬ್ರಾಹ್ಮೀಲಿಪಿ. ಶಾಸನದ ಕಾಲ ಕ್ರಿ.ಪೂ. 1ನೆಯ ಶತಮಾನ. ಬಾದಾಮಿಯಲ್ಲಿ ಬಂಡೆಗಲ್ಲಿನ ಮೇಲೆ ಕೊರೆಯಲಾದ ಶಕವರ್ಷ 456ರ (ಕ್ರಿ.ಶ. 543) ಮೊದಲನೆಯ ಪುಲಿಕೇಶಿಯ ಶಾಸನ ಇನ್ನೊಂದು ಮಹತ್ತ್ವದ ಶೋಧ. ಇತ್ತೀಚೆಗೆ ಗುಲ್ಬರ್ಗ ಜಿಲ್ಲೆಯ ಸನ್ನತಿ ಎಂಬ ಗ್ರಾಮದಲ್ಲಿ ಕೈಕೊಂಡ ಅನ್ವೇಷಣೆಯಲ್ಲಿ ಕ್ರಿ.ಶ. 2ನೆಯ ಶತಮಾನಕ್ಕೆ ಸೇರಿದ ಬೌದ್ಧ ಸಂಸ್ಕೃತಿಯ ಅವಶೇಷಗಳೂ ಕೆಲವು ಬ್ರಾಹ್ಮೀ ಲಿಪಿಯ ಶಾಸನಗಳೂ ದೊರೆತಿವೆ. ಚಾಳುಕ್ಯ ಮಂಗಳೇಶನ ಮತ್ತು ಗಂಗವಂಶದ ಮಾರಸಿಂಗನ ತಾಮ್ರಪಟಗಳು ಐತಿಹಾಸಿಕ ದೃಷ್ಟಿಯಲ್ಲಿ ಬಹಳ ಮುಖ್ಯವಾದವು. ಮಂಗಳೇಶನ ಶಾಸನದ ರಾಜಮುದ್ರೆಯಲ್ಲಿ ತನ್ನ ಮರಿಗೆ ಹಾಲು ಕುಡಿಸುತ್ತಿರುವ ಹೆಣ್ಣುಹುಲಿಯ ಆಕೃತಿ ಇದೆ. ಇದುವರೆಗೆ ದೊರೆತ ಎಲ್ಲ ತಾಮ್ರಶಾಸನಗಳಲ್ಲಿ ಇದು ಅಪೂರ್ವವಾದದ್ದು. ಕ್ರಿ.ಶ. 6—7ನೆಯ ಶತಮಾನಗಳಲ್ಲಿ ಪಶ್ಚಿಮ ಕರಾವಳಿ ಪ್ರದೇಶದಲ್ಲಿ ಆಳಿದ ಸಾಮಂತ ಅರಸರಾದ ಮೌರ್ಯ ಮತ್ತು ಭೋಜಮನೆತನ ಗಳ ಅರಸರ ತಾಮ್ರಪಟಗಳನ್ನು ಸಂಗ್ರಹಿಸಿ ಪ್ರಕಟಿಸಲಾಗಿದೆ.

ಪುರಾತತ್ತ್ವ ಶೋಧನೆಯಲ್ಲಿ ಈ ಸಂಸ್ಥೆ ಸಾಕಷ್ಟು ಕೆಲಸಮಾಡಿದೆ. ಪ್ರಾಚೀನ ಶಿಲಾಯುಗ, ನವಶಿಲಾಯುಗ ಮತ್ತು ಬೃಹತ್ ಶಿಲಾಯುಗ, (ಧಾತುಯುಗ) ಗಳಿಗೆ ಸೇರಿದ ಅನೇಕ ನಿವೇಶನಗಳನ್ನು ಗುರುತಿಸಲಾಗಿದೆ. ಮಲಪ್ರಭಾ, ಘಟಪ್ರಭಾ ಮತ್ತು ಕೃಷ್ಣಾನದಿಗಳ ತೀರಗಳಲ್ಲಿ ದೊರೆತ ಅನೇಕ ಶಿಲಾಯುಧಗಳನ್ನು ಸಂಗ್ರಹಿಸ ಲಾಗಿದೆ. ಕೆಲವು ನಿವೇಶನಗಳಲ್ಲಿ ಉತ್ಖನನ ಕಾರ್ಯ ನಡೆದಿದೆ.

ಮಹಾರಾಷ್ಟ್ರದ ಕೊಲ್ಲಾಪುರದಲ್ಲಿನ ಮಹಾಲಕ್ಷ್ಮೀ ದೇವಾಲಯದ ಸಮೀಪದ ಬ್ರಹ್ಮಪುರಿ ಒಂದು ಪ್ರಾಚೀನ ನಿವೇಶನ. ಈ ಸ್ಥಳದಲ್ಲಿ ಮೊದಲ ಬಾರಿ ಕನ್ನಡ ಸಂಶೋಧನ ಸಂಸ್ಥೆ ಅನ್ವೇಷಣೆ ನಡೆಸಿ ಅನೇಕ ಮಹತ್ತ್ವದ ಐತಿಹಾಸಿಕ ವಿಷಯಗಳನ್ನು ಬೆಳಕಿಗೆ ತಂದಿತು. ಪುಣೆಯಲ್ಲಿ ಡೆಕ್ಕನ್ ಕಾಲೇಜಿನಲ್ಲಿರುವ ಸಂಶೋಧನ ಸಂಸ್ಥೆ ಯೊಡನೆ ಕೂಡಿಕೊಂಡು, ಬಳ್ಳಾರಿ ಜಿಲ್ಲೆಯ ತೆಕ್ಕಲಕೋಟ ಗ್ರಾಮದಲ್ಲಿ ಉತ್ಖನನ ಕಾರ್ಯವನ್ನು ಕೈಗೊಳ್ಳಲಾಯಿತು. ಹಾಗೆಯೇ ಧಾರವಾಡ ಜಿಲ್ಲೆಯ ಹಳ್ಳೂರಿ ನಲ್ಲೂ ಒಂದು ನಿವೇಶನವನ್ನು ವೈಜ್ಞಾನಿಕ ರೀತಿಯಲ್ಲಿ ಅಗೆಯಲಾಗಿದೆ. ಈ ಅಗೆತಗಳಿಂದ ಕರ್ನಾಟಕದ ನವಶಿಲಾಸಂಸ್ಕೃತಿಗೆ ಸಂಬಂಧಿಸಿದ ಅನೇಕ ಹೊಸ ವಿಷಯಗಳು ಗೋಚರವಾಗಿವೆ. ಈ ದಿಶೆಯಲ್ಲಿ ಇನ್ನೂ ನಾಲ್ಕಾರು ನಿವೇಶನಗಳ ಉತ್ಖನನವನ್ನು ಕೈಗೊಳ್ಳಲು ಸಂಸ್ಥೆ ಯೋಚಿಸಿದೆ.

ಕರ್ನಾಟಕದ ಕಲೆ ವಾಸ್ತುಶಿಲ್ಪಗಳ ಅಭ್ಯಾಸಕ್ಕಾಗಿ ಅನೇಕ ವಿಗ್ರಹಗಳನ್ನೂ ವೀರಗಲ್ಲು, ಮಕರತೋರಣ ಮುಂತಾದವನ್ನೂ ಸಂಸ್ಥೆ ತನ್ನ ಸಂಗ್ರಹಾಲಯದಲ್ಲಿ ಪ್ರದರ್ಶಿಸಿದೆ. ಜೈನರ ತೀರ್ಥಂಕರರ ವಿಗ್ರಹಗಳನ್ನು ಇಲ್ಲಿ ಕಾಣಬಹುದು. ಇವುಗಳಲ್ಲೆಲ್ಲ ಬಹಳ ಮುಖ್ಯವಾದುದು ಪಟ್ಟದಕಲ್ಲಿನಲ್ಲಿ ದೊರೆತ [illegible] ವಿಗ್ರಹ. ಕೆಂಪು ಶಿಲೆಯ ಈ ವಿಗ್ರಹ ಸಾಮಾನ್ಯವಾಗಿ ಕಾಣಬರುವ ಇಂಥ ಮೂರ್ತಿ ಗಳಿಗಿಂತ ಭಿನ್ನವಾದದ್ದು. ಅನೇಕ ಶಿಲಾಶಾಸನಗಳೂ ಇಲ್ಲಿವೆ. ಬಸವೇಶ್ವರರನ್ನು



ಕನ್ನಡ ಸಂಶೋಧನ ಸಂಸ್ಥೆ, ಧಾರವಾಡ. ವಸ್ತುಸಂಗ್ರಹಾಲಯದಲ್ಲಿರುವ ಶಿಲ್ಪಗಳು, ವೀರಗಲ್ಲುಗಳು

ಕುರಿತ ಖಚಿತವಾದ ಶಾಸನಾಧಾರವೆನಿಸಿದ ಅರ್ಜುನವಾಡದ ಶಿಲಾಶಾಸನ ಈಗ ಈ ಸಂಸ್ಥೆಯಲ್ಲುಂಟು. ಇಲ್ಲಿಯ ವಸ್ತುಸಂಗ್ರಹಾಲಯವನ್ನು ಇತ್ತೀಚೆಗೆ ಆಧುನಿಕ ರೀತಿಯಲ್ಲಿ ಪುನರ್ ರೂಪಿಸಲಾಗಿದೆ. ಹರಪ್ಪಾ–ಮೊಹೆಂಜೊದಾರೊಗಳಲ್ಲಿ ದೊರೆತ ಅವಶೇಷಗಳಲ್ಲಿ ಕೆಲವನ್ನೂ ಕೆಲವು ಪ್ರತಿಕೃತಿಗಳನ್ನು (ಪ್ಲ್ಯಾಸ್ಟರ್‌ಕ್ಯಾಸ್ಟ್) ಕರ್ನಾಟಕದ ಪ್ರಾಗೈತಿಹಾಸಿಕ ಕಾಲದ ಶಿಲಾಯುಧಗಳು, ಮಡಕೆಗಳು, ಕಬ್ಬಿಣದ ಆಯುಧಗಳು ಮುಂತಾದುವನ್ನೂ ಇಲ್ಲಿ ಕಾಣಬಹುದು. ಕನ್ನಡಲಿಪಿಯ ಬೆಳವಣಿಗೆ ಯನ್ನು ತೋರಿಸುವ ಮೂಲಶಾಸನ ಪ್ರತಿಗಳನ್ನೂ ಚಿತ್ರಗಳನ್ನೂ ಅಲ್ಲದೆ ಕರ್ನಾ ಟಕದ ಕಲೆಯನ್ನು ರೂಪಿಸುವ ಚಿತ್ರಗಳನ್ನೂ ಇಲ್ಲಿ ಪ್ರದರ್ಶಿಸಲಾಗಿದೆ.

ಸಂಸ್ಥೆಯಲ್ಲಿ ಅನೇಕ ವಿದ್ಯಾರ್ಥಿಗಳು ಸಂಶೋಧನ ಕಾರ್ಯದಲ್ಲಿ ತೊಡಗಿದ್ದಾರೆ. ಅವರಿಗೂ ಇತರರಿಗೂ ಸಹಾಯವಾಗುವಂತೆ ಪ್ರತಿವರ್ಷ ಪಂಡಿತರಿಂದ ವಿವಿಧ ವಿಷಯಗಳ ಮೇಲೆ ಪಾಂಡಿತ್ಯಪೂರ್ಣ ಸಂಶೋಧನ ಉಪನ್ಯಾಸಗಳನ್ನೇರ್ಪಡಿಸಿ ಅನಂತರ ಅವನ್ನು ಪ್ರಕಟಿಸುವುದು ಈ ಸಂಸ್ಥೆಯ ಕಾರ್ಯಗಳಲ್ಲಿ ಒಂದು. ಈಗ ಕನ್ನಡ ಮತ್ತು ಇಂಗ್ಲಿಷ್ ಭಾಷೆಗಳ ತಲಾ 8 ಉಪನ್ಯಾಸಗಳು ಪ್ರಕಟವಾಗಿವೆ.

ಕರ್ನಾಟಕದಲ್ಲಿ ಅನೇಕ ಕಡೆ ಮಠಗಳಲ್ಲೂ ವಿದ್ವಾಂಸರ ಪುರಾತನ ಮನೆತನ ಗಳಲ್ಲೂ ಓಲೆಗರಿಯಲ್ಲಿ ಬರೆದ ಗ್ರಂಥಗಳು ಸಿಗುತ್ತವೆ. ಇವುಗಳಲ್ಲಿ ಪ್ರಾಚೀನ ಸಾಹಿತ್ಯಗ್ರಂಥಗಳನೇಕವಿವೆ. ಸರಿಯಾದ ರಕ್ಷಣೆಯಿಲ್ಲದೆ ನಾಶವಾಗುತ್ತಿರುವ ಈ ಗ್ರಂಥ ಗಳನ್ನು ಸಂಗ್ರಹಿಸಿ ಸುಸ್ಥಿತಿಯಲ್ಲಿ ಕಾಪಾಡುವ ಕಾರ್ಯವನ್ನು ಸಂಸ್ಥೆ ಕೈಗೊಂಡಿತು. ಈಗ ಸಂಸ್ಥೆಯಲ್ಲಿ ಇಂಥ ಸುಮಾರು 2,000 ಗ್ರಂಥಗಳಿವೆ. ಇವನ್ನು ಪರೀಕ್ಷಿಸಿ, ವ್ಯಾಕರಣ, ನಿಘಂಟು, ಪುರಾಣ ಮತ್ತು ಕಾವ್ಯ, ಜೀವನ ವೃತ್ತಾಂತ, ವೇದಾಂತ, ಧರ್ಮಶಾಸ್ತ್ರ, ತತ್ತ್ವಜ್ಞಾನ, ಲೌಕಿಕಶಾಸ್ತ್ರಗಳು, ಐತಿಹಾಸಿಕ—ಹೀಗೆ ವಿಷಯಾನು ಗುಣವಾಗಿ ವಿಂಗಡಿಸಿ ಈ ಗ್ರಂಥಗಳ ವಿವರಣಾತ್ಮಕ ಗ್ರಂಥಸೂಚಿಗಳನ್ನು (ಡಿಸ್ಕ್ರಿಪ್ಟಿವ್ ಕ್ಯಾಟಲಾಗ್ಸ್) ಪ್ರಕಟಿಸಲಾಗುತ್ತಿದೆ. ಇಂಥ ಒಂಬತ್ತು ಸಂಪುಟಗಳು ಈಗಾಗಲೇ ಪ್ರಕಟವಾಗಿವೆ. ಅವುಗಳಲ್ಲಿ ಐದು ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಲಾಗಿದೆ. ಕವಿಜಿಹ್ವಾಬಂಧನ, ಮದನತಿಲಕ, ಐರಾವತ, ವಿರೂಪಾಕ್ಷ ವಸಂತೋತ್ಸವ ಚಂಪೂ ಮತ್ತು ಸಮಯಪರೀಕ್ಷೆ—ಇವೇ ಆ ಗ್ರಂಥಗಳು. ಅಲ್ಲದೆ ಕಲೆ, ಸಂಸ್ಕೃತಿಗಳಿಗೆ ಸಂಬಂಧಿಸಿದ ಸಂಶೋಧನಾತ್ಮಕವಾದ 11 ಪ್ರಬಂಧಗಳನ್ನೂ ಪ್ರಕಟಿಸಲಾಗಿದೆ.

ಕರ್ನಾಟಕದ ಇತಿಹಾಸವನ್ನು ಆಧಾರಭೂತವಾಗಿ ಸವಿಸ್ತಾರವಾಗಿ 12 ಸಂಪುಟ ಗಳಲ್ಲಿ ರಚಿಸಬೇಕೆಂಬುದು ಸಂಸ್ಥೆಯ ಇತ್ತೀಚಿನ ಯೋಜನೆ. ಈ ದಿಶೆಯಲ್ಲಿ ಮೊದಲ ಹೆಜ್ಜೆಯಾಗಿ, ಸಾಮಾನ್ಯ ಓದುಗರಿಗೂ ವಿಶ್ವವಿದ್ಯಾಲಯದ ವಿದ್ಯಾರ್ಥಿ ಗಳಿಗೂ ಅನುಕೂಲವಾಗುವಂತೆ ಸಮಗ್ರ ಇತಿಹಾಸಗ್ರಂಥವೊಂದನ್ನು ಹೊರತರ ಲಾಗಿದೆ. ಪಿ. ಬಿ. ದೇಸಾಯರು ಇದರ ನಿರ್ದೇಶನದ ಹೊಣೆಹೊತ್ತಿದ್ದು ಅವರೊಂದಿಗೆ ಬಿ.ಆರ್. ಗೋಪಾಲ್ ಮತ್ತು ಶ್ರೀನಿವಾಸ ರಿತ್ತಿಯವರು ಕೂಡಿ

ಈ ಗ್ರಂಥವನ್ನು ಬರೆದಿದ್ದಾರೆ. ಈ ಯೋಜನೆಯಂತೆ ಕಲ್ಯಾಣದ ಚಾಳುಕ್ಯರ ಮತ್ತು ಸೇವುಣರ (ದೇವಗಿರಿ ಯಾದವರ) ಇತಿಹಾಸವನ್ನು ಕುರಿತ ಎರಡು ಗ್ರಂಥಗಳು ಅಚ್ಚಿನಲ್ಲಿವೆ.

ಕರ್ಣಾಟಕದ ಪ್ರತಿ ಗ್ರಾಮದಲ್ಲೂ ಸಾಮಾನ್ಯವಾಗಿ ಒಂದೆರಡಾದರೂ ಶಿಲಾ ಶಾಸನಗಳು ಸಿಗುತ್ತವೆ. ಕನ್ನಡ ನಾಡಿನ ಇತಿಹಾಸ ಸಂಸ್ಕೃತಿಗಳನ್ನು ಅರಿಯಲು ಇವು ಮೂಲಾಧಾರ. ಸಂಶೋಧನೆಯಲ್ಲಿ ತೊಡಗಿರುವವರು ಮೂಲಶಾಸನಗಳನ್ನು ತಾವೇ ಓದಿಕೊಳ್ಳಬಹುದೆಂಬ ಆಶಯದಿಂದ 1965ರಲ್ಲಿ ಲಿಪಿಶಾಸ್ತ್ರಕ್ಕೆ ಸಂಬಂಧಿಸಿದಂತೆ ಒಂದು ಶಿಕ್ಷಣತರಗತಿಯನ್ನು (ಡಿಪ್ಲೊಮ ಕೋರ್ಸ್ ಇನ್ ಎಪಿಗ್ರಫಿ) ತೆರೆಯಲಾಯಿತು. ಅನೇಕ ವಿದ್ಯಾರ್ಥಿಗಳು ಇದರ ಪ್ರಯೋಜನ ಪಡೆಯುತ್ತಿದ್ದಾರೆ. ಭಾರತದ ಬೇರೆ ಯಾವ ವಿಶ್ವವಿದ್ಯಾಲಯದಲ್ಲೂ ಈ ಬಗೆಯ ಶಿಕ್ಷಣ ನೀಡುತ್ತಿಲ್ಲ.

ಇದಕ್ಕೆ ಒಂದು ಗ್ರಂಥಾಲಯ ಆವಶ್ಯಕವೆಂಬುದನ್ನು ಮನಗಂಡು ಸಂಸ್ಥೆ ಆರಂಭವಾದಾಗಲೇ ಇದನ್ನೂ ಆರಂಭಿಸಲಾಯಿತು. ಇಂದು ಗ್ರಂಥಾಲಯದಲ್ಲಿ ಇತಿಹಾಸ, ಕಲೆ, ಸಂಸ್ಕೃತಿ ಮುಂತಾದ ವಿಷಯಗಳಿಗೆ ಸಂಬಂಧಿಸಿದ ಸುಮಾರು 10,000 ಗ್ರಂಥಗಳಿವೆ.

(ಜಿ.ಬಿ.ಆರ್)

**ಕನ್ನಡ ಸಾಹಿತ್ಯ:** ಕನ್ನಡ ಸಾಹಿತ್ಯಕ್ಕೆ ಬಹು ಪ್ರಾಚೀನವೂ ಸಮೃದ್ಧವೂ ಆದ ಚರಿತ್ರ ಇದೆ. ಸದ್ಯಕ್ಕೆ ಆರ್. ನರಸಿಂಹಾಚಾರ್ಯರ ಕರ್ಣಾಟಕ ಕವಿಚರಿತ್ರೆಯ ಆಧಾರದ ಮೇಲೆ ಹೇಳುವುದಾದರೆ ಹತ್ತೊಂಬತ್ತನೆಯ ಶತಮಾನದ ಆದಿಭಾಗದ ವರೆಗಾಗಲೇ ಸಾವಿರದ ಇನ್ನೂರು ಕವಿಗಳು ಕಾಣಸಿಗುತ್ತಾರೆ. ಈಚೆಗಿನ ಅನುಕ್ತ ಕೃತಿಸೂಚಿಯನ್ನು ಗಮನಿಸಿದಾಗ ಇನ್ನೂ ನಾನೂರು ಹೊಸ ಹೆಸರುಗಳು ಗೋಚರವಾಗುತ್ತವೆ. ಕನ್ನಡ ಸಾಹಿತ್ಯ ಚರಿತ್ರೆ ಕನ್ನಡ ನಾಡಿನ ರಾಜಕೀಯ, ಧಾರ್ಮಿಕ, ಸಾಮಾಜಿಕ ಜೀವನದ ಚರಿತ್ರೆಯೂ ಆಗಿದ್ದು ಅಂದಂದಿನ ಯುಗ ಧರ್ಮವನ್ನು ಪ್ರತಿಬಿಂಬಿಸುವಂತಿದೆ. ಒಟ್ಟಾರೆಯಾಗಿ ಗಮನಿಸುವುದಾದರೆ ಭಾರತೀಯ ಭಾಷಾ ಸಾಹಿತ್ಯಗಳ ಮೂಲ ಧೋರಣೆ, ಸಾಂಸ್ಕೃತಿಕ ದೃಷ್ಟಿ ಕೋಣಗಳನ್ನು ಇಲ್ಲೂ ಕಾಣಬಹುದಾಗಿದೆ. ಪಂಪ, ರನ್ನ, ಜನ್ನ, ನಾಗವರ್ಮ, ಬಸವಣ್ಣ, ಮಹದೇವಿಯಕ್ಕ, ಹರಿಹರ, ರಾಘವಾಂಕ, ನಾರಣಪ್ಪ, ಲಕ್ಷ್ಮೀಶ, ಸರ್ವಜ್ಞ, ರತ್ನಾಕರವರ್ಣಿ, ಕೆಂಪುನಾರಾಯಣ, ಮುದ್ದಣ–ಈ ಮೊದಲಾದವರ ಕೃತಿಗಳಲ್ಲಿ ಹಲವು ಪ್ರಪಂಚದ ಅತಿಶ್ರೇಷ್ಠ ಕೃತಿಗಳ ಮಟ್ಟದವಾಗಿವೆ. ಸಂಸ್ಕೃತದ ಗಾಢಾಲಿಂಗನದಿಂದ ಕನ್ನಡ ಭಾಷೆ ಮತ್ತು ಸಾಹಿತ್ಯ ಕ್ರಮೇಣ ಹೊರಬಂದು ತನ್ನದೇ ಆದ ಧ್ಯೇಯ, ಶೈಲಿಗಳನ್ನು ರೂಪಿಸಿಕೊಂಡ ಬಗೆ ಅಚ್ಚರಿಗೊಳಿಸುವಂಥದು. ಚಂಪೂ ಕ್ರಮೇಣ ಷಟ್ಪದಿ ವಚನ ಸಾಂಗತ್ಯ ತ್ರಿಪದಿಗಳಿಗೂ ಪದ್ಯ ಗದ್ಯಕ್ಕೂ ಎಡೆಮಾಡಿ ಕೊಟ್ಟಿದೆ. ಪದ್ಯಕ್ಕಿದ್ದ ಸ್ಥಾನಮಾನಗಳನ್ನು ಇಂದು ಗದ್ಯ ಗೆದ್ದಿದೆ. ಧಾರ್ಮಿಕ ದೃಷ್ಟಿ, ಲೌಕಿಕ ದೃಷ್ಟಿ, ಸೃಷ್ಟಿಗಳಿಗೆ ಎಡೆಮಾಡಿದೆ. ಕಾವ್ಯಪ್ರಕಾರದೊಂದಿಗೆ ಶಾಸ್ತ್ರಪ್ರಕಾರ ಹೆಚ್ಚಿನ ಪ್ರಾಮುಖ್ಯ ಗಳಿಸುತ್ತಿದೆ. ಹಿಂದೆ ಸಂಸ್ಕೃತಕ್ಕಿದ್ದ ಪ್ರಾಶಸ್ತ್ಯ ಈಗ ಇಂಗ್ಲಿಷಿಗೆ ದೊರೆತಿದೆ. ಅಂದಿನಂತೆ ಇಂದು ಇಂಗ್ಲಿಷಿನಿಂದ, ಅಂದಿಗಿಂತ ಹೆಚ್ಚಿನ ಪ್ರಮಾಣದಲ್ಲಿ ಧೋರಣೆಗಳ ಪ್ರಕಾರಗಳ ಕೃತಿಗಳ ಅನುಕರಣೆ ಅನುವಾದ ನಡೆದಿದೆ. ಇಪ್ಪತ್ತನೆಯ ಶತಮಾನದ ಕನ್ನಡ ಸಾಹಿತ್ಯ ಬಹುಮುಖ ಬೆಳೆವಣಿಗೆಯಿಂದಾಗಿ ಬೆರಗುಗೊಳಿಸುತ್ತಿದೆ. ಮೈಸೂರು ವಿಶ್ವವಿದ್ಯಾನಿಲಯ ಈಚೆಗೆ ಪ್ರಕಟಿಸಿರುವ ಕನ್ನಡ ಗ್ರಂಥ ಸೂಚಿ, ಸಂಪುಟ 1 ರ ಆಧಾರದ ಮೇಲೆ ಹೇಳುವುದಾದರೆ ಕನ್ನಡದಲ್ಲಿ ಅಚ್ಚಾಗಿರುವ (1817–1968) ಗ್ರಂಥಗಳ ಸಂಖ್ಯೆ 350,000. ಅನುಪಲಬ್ಧವಾಗಿದ್ದರೂ ಹೆಸರು ತಿಳಿದಿರುವ ಪುಸ್ತಕಗಳ ಸಂಖ್ಯೆ 10,000. ಅಚ್ಚಾಗಿರುವ ವಿಜ್ಞಾನ ಪುಸ್ತಕಗಳು 1,149. ಕಥೆ, ಕಾದಂಬರಿ, ಪ್ರಬಂಧ, ಜೀವನಚರಿತ್ರೆ, ಪ್ರವಾಸ ಸಾಹಿತ್ಯ, ವಿಜ್ಞಾನ ಸಾಹಿತ್ಯ–ಈ ಮುಂತಾದ ಕ್ಷೇತ್ರಗಳಲ್ಲಿ ವಿಶ್ವ ಸಾಹಿತ್ಯದ ಮಟ್ಟಕ್ಕೇರಬಲ್ಲ–ಅನೇಕ ಕೃತಿರತ್ನಗಳು ಕನ್ನಡದಲ್ಲಿ ಬಂದಿವೆ.

ಪ್ರಕೃತ ಲೇಖನದಲ್ಲಿ ಕನ್ನಡ ಸಾಹಿತ್ಯದ ಚರಿತ್ರೆಯನ್ನು ಅದರ ಪ್ರಾರಂಭಕಾಲದಿಂದ ಹತ್ತೊಂಬತ್ತನೆಯ ಶತಮಾನದ ಆರಂಭಕಾಲದ ವರೆಗೆ ಸ್ಥೂಲವಾಗಿ, ಒಟ್ಟಾರೆ ಚಿತ್ರಬರುವಂತೆ ಪ್ರತಿಪಾದಿಸಲಾಗಿದೆ. ಸಾಹಿತ್ಯಕ್ಕೆ ಸಂಬಂಧಪಟ್ಟ ವಿವರಗಳು ಅನೇಕಾನೇಕ ಇತರ ಶೀರ್ಷಿಕೆಗಳಲ್ಲಿ ಹಂಚಿ ಹೋಗಿವೆ. ಪ್ರಸಿದ್ಧ ಕವಿಗಳ ಬಗ್ಗೆ ಪ್ರತ್ಯೇಕ ಲೇಖನಗಳೇ ಇವೆ. ಇವಲ್ಲದೆ ಆಯಾ ಪ್ರಕಾರಗಳನ್ನು ಕುರಿತಾದ ಲೇಖನಗಳನ್ನು ಇಲ್ಲಿ ನಮೂದಿಸಿದೆ. ಈ ಪಟ್ಟಿಯಲ್ಲಿ ಕನ್ನಡ ಭಾಷೆ, ಕನ್ನಡದ ಕೆಲಸಗಳ ಬಗೆಗಿನ ಲೇಖನಗಳೂ ಸೇರುತ್ತವೆ. ಇವೆಲ್ಲವನ್ನೂ ನೋಡಿದಾಗ ಆಧುನಿಕ ಕನ್ನಡ ಸಾಹಿತ್ಯದ ಒಂದು ಪಕ್ಷಿನೋಟ ಸಿಕ್ಕಂತಾಗುತ್ತದೆ. ಹೆಚ್ಚಿನ ವಿವರ ಬೇಕೆನ್ನುವವರು ಇವನ್ನು ನೋಡಬಹುದು.

ಕನ್ನಡ ಅಧ್ಯಯನ ಸಂಸ್ಥೆ; ಕನ್ನಡ ಚಂಪೂಸಾಹಿತ್ಯ; ಕನ್ನಡ ಛಂದಸ್ಸು ; ಕನ್ನಡ ಜಾನಪದ ; ಕನ್ನಡದಲ್ಲಿ ಅಷ್ಟಕಗಳು; ಕನ್ನಡದಲ್ಲಿ ಆತ್ಮಕಥೆಗಳು; ಕನ್ನಡದಲ್ಲಿ ಕಾದಂಬರೀ ಸಾಹಿತ್ಯ; ಕನ್ನಡದಲ್ಲಿ ಕಾವ್ಯಮೀಮಾಂಸೆ; ಕನ್ನಡದಲ್ಲಿ ಗದ್ಯಸಾಹಿತ್ಯ ; ಕನ್ನಡದಲ್ಲಿ ಗಾಂಧಿ ಸಾಹಿತ್ಯ; ಕನ್ನಡದಲ್ಲಿ ಗಾದೆಗಳು; ಕನ್ನಡದಲ್ಲಿ ಜೀವನ ಚರಿತ್ರೆಗಳು; ಕನ್ನಡದಲ್ಲಿ ನವ್ಯಕಾವ್ಯ; ಕನ್ನಡದಲ್ಲಿ ನಾಟಕಸಾಹಿತ್ಯ; ಕನ್ನಡದಲ್ಲಿ ಪ್ರಬಂಧಗಳು; ಕನ್ನಡದಲ್ಲಿ ಪ್ರವಾಸಸಾಹಿತ್ಯ; ಕನ್ನಡದಲ್ಲಿ ಭಾವಗೀತೆ; ಕನ್ನಡದಲ್ಲಿ ಭಾಷಾಂತರಗಳು; ಕನ್ನಡದಲ್ಲಿ ಮಕ್ಕಳಸಾಹಿತ್ಯ; ಕನ್ನಡದಲ್ಲಿ ರುದ್ರನಾಟಕ; ಕನ್ನಡದಲ್ಲಿ ವಚನಸಾಹಿತ್ಯ; ಕನ್ನಡದಲ್ಲಿ ವಿಚಾರಸಾಹಿತ್ಯ; ಕನ್ನಡದಲ್ಲಿ ವಿಜ್ಞಾನಸಾಹಿತ್ಯ; ಕನ್ನಡದಲ್ಲಿ ವಿಡಂಬನ ಸಾಹಿತ್ಯ; ಕನ್ನಡದಲ್ಲಿ ವಿಶ್ವಕೋಶಗಳು; ಕನ್ನಡದಲ್ಲಿ ಶತಕಸಾಹಿತ್ಯ; ಕನ್ನಡದಲ್ಲಿ ಶಾಸ್ತ್ರ ಸಾಹಿತ್ಯ; ಕನ್ನಡದಲ್ಲಿ ಷಟ್ಪದೀ ಕಾವ್ಯಗಳು ; ಕನ್ನಡದಲ್ಲಿ ಸಣ್ಣಕಥೆ ; ಕನ್ನಡದಲ್ಲಿ ಸಾಂಗತ್ಯ ಕಾವ್ಯ; ಕನ್ನಡದಲ್ಲಿ ಹಾಸ್ಯಸಾಹಿತ್ಯ; ಕನ್ನಡ ಭಾಷೆ; ಕನ್ನಡ ಸಂಶೋಧನ ಸಂಸ್ಥೆ; ಕನ್ನಡ ಸಾಹಿತ್ಯ ಪರಿಷತ್ತು;

ನೃಪತುಂಗ ಚಕ್ರವರ್ತಿ ಬರೆದುದೆಂದು ಪ್ರಸಿದ್ಧವಾಗಿರುವ ಕವಿರಾಜಮಾರ್ಗ (ಕ್ರಿ. ಶ. 817) ಕನ್ನಡದಲ್ಲಿ ಇದುವರೆಗೆ ಲಭಿಸಿರುವ ಗ್ರಂಥಗಳಲ್ಲೆಲ್ಲ ಅತ್ಯಂತ ಪ್ರಾಚೀನವಾದದ್ದು. ಆದರೆ ಅದಕ್ಕೂ ಹಿಂದೆಯೇ ಕನ್ನಡದಲ್ಲಿ ಕಾವ್ಯರಚನೆ ವಿಶೇಷವಾಗಿ ನಡೆದಿತ್ತೆಂದು ನಂಬಲು ಹಲವು ಕಾರಣಗಳಿವೆ. ಅದರ ಹೆಸರೇ ಹೇಳುವಂತೆ ಕವಿರಾಜಮಾರ್ಗ ಒಂದು ಲಕ್ಷಣಗ್ರಂಥ. ವ್ಯಾಕರಣ, ಅಲಂಕಾರಗಳಿಗೆ ಸಂಬಂಧಿಸಿದ ಹಲವು ಅಂಶಗಳನ್ನು ಒಳಗೊಂಡ ಈ ಕೃತಿ ಕನ್ನಡ ಕವಿಗಳಿಗೆ ಮಾರ್ಗದರ್ಶನ ಮಾಡುತ್ತದೆ. ಕಾವ್ಯರಚನೆಯೇ ನಡೆಯದಿದ್ದ ಭಾಷೆಯಲ್ಲಿ ಮೊದಲು ಇಂಥ ಶಾಸ್ತ್ರ ಗ್ರಂಥಗಳು ಹುಟ್ಟುವುದು ಅಸಂಭವ. ಕವಿರಾಜ ಮಾರ್ಗದ ಕರ್ತೃವೇ ತನಗಿಂತ ಹಿಂದಿನ ಅನೇಕ ಕವಿಗಳ ಹೆಸರುಗಳನ್ನು ಹೇಳಿದ್ದಾನೆ. ಅವರಲ್ಲಿ ಪದ್ಯಗದ್ಯ ಕರ್ತೃಗಳಿಬ್ಬರೂ ಇದ್ದಾರೆ. ಆಗ್ಗೆ ಬಳಕೆಯಲ್ಲಿದ್ದ ಚತ್ತಾಣ, ಬೆದಂಡೆ ಮೊದಲಾದ ಕಾವ್ಯ ಜಾತಿಗಳನ್ನು ಹೆಸರಿಸಿ ಅವುಗಳ ಲಕ್ಷಣಗಳನ್ನೂ ಹೇಳಿರುವುದರಿಂದ ಆ ಕಾಲಕ್ಕೇ ಕನ್ನಡದಲ್ಲಿ ಅನೇಕ ಕೃತಿಗಳು ಹುಟ್ಟಿದ್ದುವೆಂದು ತಿಳಿಯಬಹುದು. ಅಲ್ಲದೆ ಆ ಗ್ರಂಥದಲ್ಲಿ ಕೊಟ್ಟಿರುವ ಹಲವು ಉದಾಹರಣ ಪದ್ಯಗಳು ಆ ಕಾಲದ ಕನ್ನಡ ಕೃತಿಗಳಿಂದ ಆರಿಸಿಕೊಂಡಂಥವೆಂದು ಭಾವಿಸಲು ಕಾರಣವಿದೆ.

ಕನ್ನಡದ ಮೊದಲ ಕವಿಯೆಂಬ ಪ್ರಶಸ್ತಿಗೆ ಪಾತ್ರನಾದ ಪಂಪ ತನಗಿಂತ ಮುಂಚೆ ಸಮಸ್ತ ಭಾರತವನ್ನೂ ಬರೆದ ಕವಿಗಳಿಲ್ಲವೆಂದು ಹೇಳಿಕೊಂಡಿರುವುದರಿಂದ ಅವನಿಗಿಂತ ಮುಂಚೆ ಭಾರತ ಕಥೆಯ ಭಾಗಗಳನ್ನು ಆಯ್ದುಕೊಂಡು ಕೃತಿರಚನೆ ಮಾಡಿದ ಕನ್ನಡ ಕವಿಗಳಿದ್ದರೆಂದು ತಿಳಿಯಬೇಕಾಗಿದೆ. ಅಲ್ಲದೆ ತನ್ನ ಎರಡು ಮಹಾ ಪ್ರಬಂಧಗಳು ಮುನ್ನಿನ ಕಬ್ಬಗಳನ್ನೆಲ್ಲ ಇಕ್ಕಿಮೆಟ್ಟಿದುವು ಎಂಬ ಹೇಳಿಕೆ ಪಂಪ ಭಾರತದ ಕಡೆಯಲ್ಲಿ ಬಂದಿದೆ. ಆದ್ದರಿಂದ ಅವನಿಗಿಂತ ಮುಂಚೆ ಕನ್ನಡದಲ್ಲಿ ಅನೇಕ ಕೃತಿಗಳ ರಚನೆಯಾಗಿದ್ದಿತೆಂಬ ವಿಷಯದಲ್ಲಿ ಸಂದೇಹಕ್ಕೆ ಎಡೆಯಿಲ್ಲ.

ಕನ್ನಡ ದೇಶದ ಮೊದಲ ರಾಜರಾದ ಗಂಗರಲ್ಲಿ ಹಲವರು ಕೃತಿಕರ್ತರಾಗಿದ್ದರೆಂದು ಶಾಸನಾಧಾರಗಳಿಂದ ತಿಳಿದುಬಂದಿದೆ. ಕ್ರಿ. ಶ. ಮೂರನೆಯ ಶತಾಬ್ದದ ಇಮ್ಮಡಿ ಮಾಧವ ದತ್ತಕದ ಸೂತ್ರವನ್ನು ಕುರಿತು ಬರೆದಿದ್ದನಂತೆ. ಐದನೆಯ ಶತಮಾನದ ದುರ್ವಿನೀತ (ಈ ಹೆಸರು ಕವಿರಾಜಮಾರ್ಗದಲ್ಲಿಯೂ ಇದೆ) ಭಾರವಿಯ ಕಿರಾತಾರ್ಜುನೀಯಕ್ಕೆ ವ್ಯಾಖ್ಯಾನವನ್ನು ರಚಿಸಿದ. ಸುಮಾರು ಕ್ರಿ. ಶ. 800 ರಲ್ಲಿದ್ದ ಸೈಗೊಟ್ಟ ಶಿವಮಾರ ಗಜಶಾಸ್ತ್ರವನ್ನು ಬರೆದನೆಂದೂ ಅದು ಒನಕೆವಾಡು (ನೋಡಿ) ಆಗಿದ್ದಿತೆಂದೂ ನಗರದ 35ನೆಯ ಶಾಸನ ಹೇಳುತ್ತಿದೆ.

ಚೂಡಾಮಣಿ ಎಂಬ ಹೆಸರಿನ ತತ್ತ್ವಾರ್ಥ ಮಹಾಶಾಸ್ತ್ರ ವ್ಯಾಖ್ಯಾನರೂಪವಾದ ತೊಂಬತ್ತಾರು ಸಾವಿರ ಶ್ಲೋಕಗಳುಳ್ಳ ಒಂದು ಕನ್ನಡ ಗ್ರಂಥ ಇತ್ತೆಂದು ಶ್ರವಣಬೆಳಗೊಳದ ಒಂದು ಶಾಸನ ಹೇಳುತ್ತದೆ. ಆ ಗ್ರಂಥವನ್ನು ದಂಡಿ ಸ್ತೋತ್ರ ಮಾಡಿದನೆಂದೂ ತಿಳಿಯುತ್ತದೆ. ಈ ಕೃತಿಯನ್ನು ಕುರಿತು ಶಬ್ದಾನುಶಾಸನಕಾರನಾದ ಭಟ್ಟಾಕಳಂಕ ಹೇಳಿದ್ದಾನೆ. ದೇವಚಂದ್ರನ ರಾಜಾವಳೀ ಕಥೆಯಲ್ಲಿಯೂ ಇದರ ಪ್ರಸ್ತಾಪವಿದೆ. ಇದನ್ನು ಬರೆದವ ಶ್ರೀವರ್ಧದೇವನೇ ತುಂಬುಲೂರು ಆಚಾರ್ಯನೇ ಎಂಬ ಬಗ್ಗೆ ಸಂದೇಹವಿದೆ. ಶ್ರೀವರ್ಧದೇವನೇ ತುಂಬುಲೂರಿನ ಆಚಾರ್ಯನಿದ್ದರೂ ಇರಬಹುದೆಂಬ ಊಹೆಯೂ ಇಲ್ಲದೆ ಇಲ್ಲ. ಅದು ಹೇಗೇ ಇರಲಿ, ಸಾವಿರಾರು ಪದ್ಯವನ್ನೊಳಗೊಂಡ ಬೃಹದ್ಗ್ರಂಥವೊಂದು ಆ ಕಾಲಕ್ಕೆ ಕನ್ನಡದಲ್ಲಿ ಪ್ರಸಿದ್ಧವಾಗಿದ್ದಿತೆಂದು ತಿಳಿಯಬೇಕಾಗಿದೆ.

ಆದರೆ ಈ ಕಾವ್ಯಗಳು ಯಾವುವೂ ಲಭಿಸಿಲ್ಲವಾದ್ದರಿಂದ ಆ ಕಾಲದ ಕನ್ನಡ ಸಾಹಿತ್ಯದ ಸ್ವರೂಪ, ವಿಸ್ತಾರ, ವ್ಯಾಪ್ತಿ ಮೊದಲಾದ ಸಂಗತಿಗಳು ಯಾವುವೂ ತಿಳಿಯವು. ಆದರೆ ಆರಂಭ ಕಾಲದಲ್ಲಿ ಅನೇಕ ಕನ್ನಡ ಶಾಸನಗಳು ಲಭಿಸಿದ್ದು ಅವುಗಳಲ್ಲಿ ಅನೇಕ ಸುಂದರವಾದ ಕನ್ನಡ ಪದ್ಯಗಳು ಸಿಕ್ಕಿವೆ. ಶಿಲಾಶಾಸನಗಳಲ್ಲಿಯೇ ಇಷ್ಟು ಶ್ರೇಷ್ಠವಾದ ಕವನಗಳನ್ನು ಬರೆದ ಕವಿಗಳು ತಮ್ಮ ಆತ್ಮಸಂತೋಷಕ್ಕಾಗಿ ಬರೆದ ಕಾವ್ಯಗಳು ಇನ್ನೂ ಮುದ್ದಾಗಿ ಇದ್ದಿರಬೇಕು. ಅನೇಕ ಕವಿಗಳ ಹೆಸರುಗಳೂ ಶಾಸನಗಳಲ್ಲಿ ಲಭಿಸಿವೆ. ಭುವನೈಕ ರಾಮಾಭ್ಯುದಯ, ಹರಿವಂಶ, ಶೂದ್ರಕ ಮೊದಲಾದ ಹಲವು ಕೃತಿಗಳ ಪ್ರಶಂಸೆ ಶಾಸನಗಳಲ್ಲಿಯೂ ಕಾವ್ಯಗಳಲ್ಲಿಯೂ ಲಕ್ಷಣ

ಗ್ರಂಥಗಳಲ್ಲಿಯೂ ಬಂದಿದೆ. ಆದರೆ ಆ ಕೃತಿಗಳು ಲಭಿಸಿಲ್ಲ. ನೃಪತುಂಗ ಪಂಪರಿಗಿಂತ ಹಲವು ಶತಮಾನಗಳ ಹಿಂದೆಯೇ ಕನ್ನಡದಲ್ಲಿ ಕಾವ್ಯರಚನೆ ಬೇಕಾದ ಹಾಗೆ ನಡೆದಿದ್ದಿತೆಂದು ತಿಳಿಯಲು ಅಡ್ಡಿಯಿಲ್ಲ.

ಕನ್ನಡ ನಾಡಿನಲ್ಲಿ ಅನೇಕ ಶಿಲಾಶಾಸನಗಳೂ ತಾಮ್ರ ಶಾಸನಗಳೂ ಲಭಿಸಿವೆ. ಸಾಮಾನ್ಯವಾಗಿ ರಾಜರೇ ಮೊದಲಾದ ದಾತೃಗಳು ಕೊಟ್ಟ ಕೊಡುಗೆಗಳನ್ನು ಕುರಿತು ಹೇಳುವ ದಾನ ಶಾಸನಗಳು ಅನೇಕವಾಗಿ ಸಿಕ್ಕಿವೆ. ಇವುಗಳ ಸಹಾಯದಿಂದ ಕನ್ನಡ ನಾಡಿನ ಇತಿಹಾಸವನ್ನು ಊಹಿಸಲು ಶಕ್ಯವಾಗಿದೆ. ಇನ್ನು ಕೆಲವು ವೀರಗಲ್ಲುಗಳು. ಯುದ್ಧಭೂಮಿಯಲ್ಲಿ ಶತ್ರುಗಳನ್ನು ಇದಿರಿಸಿ ಕಾದಿ ಸತ್ತು ವೀರಸ್ವರ್ಗ ಪಡೆದವರ ಮತ್ತು ತುರುಗಾಳಗಳಲ್ಲಿ, ಸ್ತ್ರೀಯರ ಮಾನರಕ್ಷಣೆಗಾಗಿ ಹೋರಾಡಿ ಸತ್ತವರ ಚರಿತ್ರೆಗಳನ್ನು ಹೇಳುವ ಶಾಸನಗಳನ್ನು ವೀರಗಲ್ಲುಗಳೆಂದು ಕರೆಯುವುದು ವಾಡಿಕೆ. ಗಂಡನ ಶವದೊಡನೆ ಚಿತೆಯೇರಿ ಆತ್ಮಾರ್ಪಣೆ ಮಾಡಿಕೊಂಡು ಕೈವಲ್ಯ ಪಡೆದ ಮಹಾಸತಿಯರ ಹಿರಿಮೆಯನ್ನು ಹೊಗಳುವ ಮಾಸ್ತಿ ಕಲ್ಲುಗಳೂ ಅನೇಕವಾಗಿ ಲಭಿಸಿವೆ. ಈ ಎಲ್ಲ ಶಾಸನಗಳಲ್ಲಿಯೂ ಕನ್ನಡದ ಬರೆವಣಿಗೆ ಲಭಿಸಿದೆ. ಅತ್ಯಂತ ಪ್ರಾಚೀನವಾದ ಕನ್ನಡ ಶಾಸನ ಹಾಸನ ಜಿಲ್ಲೆಯ ಹಲ್ಮಿಡಿ ಗ್ರಾಮದಲ್ಲಿ ಲಭಿಸಿದ ಒಂದು ಶಿಲಾಲೇಖ. ಇದು ಕ್ರಿ.ಶ. 450ರ ವೇಳೆಯಲ್ಲಿ ರಚಿತವಾಯಿತೆಂದು ತಿಳಿದಿದೆ. ಆ ಕಾಲಕ್ಕಾಗಲೆ ಕನ್ನಡದ ಮೇಲೆ ಸಂಸ್ಕೃತ ಭಾಷೆಯ ಪ್ರಭಾವ ವಿಶೇಷವಾಗಿ ಆಗಿದ್ದಿತೆಂದು ಆ ಶಾಸನದಿಂದ ಗೊತ್ತಾಗುತ್ತದೆ. ಅದರಲ್ಲಿ ಅನೇಕ ಸಂಸ್ಕೃತ ಶಬ್ದಗಳು ಬಂದಿವೆ. ಆರಂಭದಲ್ಲಿ ಒಂದು ಶ್ಲೋಕವೇ ಇದೆ. ಆಮೇಲಿನ ಹಲವು ಶಾಸನಗಳಲ್ಲಿ ಸ್ರಗ್ಧರಾ, ಮಹಾಸ್ರಗ್ಧರಾ ಮೊದಲಾದ ಸಂಸ್ಕೃತ ವೃತ್ತಗಳಲ್ಲಿ ಬರೆದ ಕನ್ನಡ ಪದ್ಯಗಳು ಅನೇಕವಾಗಿ ಸಿಕ್ಕಿವೆ. ಕನ್ನಡ ಪದ್ಯಜಾತಿಗಳನ್ನು ಬಳಸಿದವರು ಕಡಿಮೆ. ಅಪೂರ್ವವಾಗಿ ಒಂದೊಂದು ಕನ್ನಡ ವೃತ್ತ ಕಾಣಿಸುತ್ತದೆ. ಕ್ರಿ.ಶ. 700ರ ಸುಮಾರಿನಲ್ಲಿ ರಚಿತವಾದ ಒಂದು ಬಾದಾಮಿ ಶಾಸನದಲ್ಲಿ ಕಪ್ಪೆ ಅರಭಟ್ಟನೆಂಬುವನನ್ನು ಹೊಗಳುವ ತ್ರಿಪದಿಗಳು ಸಿಕ್ಕಿವೆ. ಇದರಿಂದ ಕನ್ನಡ ಸಾಹಿತ್ಯ ಚರಿತ್ರೆಯ ಆರಂಭಕಾಲದಲ್ಲಿಯೇ ತ್ರಿಪದಿ ಬಳಕೆಯಲ್ಲಿದ್ದು ಜನಪ್ರಿಯವಾಗಿದ್ದಿತೆಂದು ಸ್ಪಷ್ಟವಾಗುತ್ತದೆ. ಸಂಸ್ಕೃತದ ಪ್ರಭಾವಕ್ಕೆ ಒಳಗಾಗಿದ್ದರೂ ಆ ಕಾಲಕ್ಕೂ ಕನ್ನಡ ಪುಷ್ಟವಾಗಿ ಬೆಳೆದು ತನ್ನದೇ ಆದ ಛಂದಸ್ಸನ್ನು ರೂಪಿಸಿಕೊಂಡು ಜನಮಾನ್ಯತೆಗೆ ಪಾತ್ರವಾಗಿತ್ತು.

ಕವಿರಾಜಮಾರ್ಗ ಕ್ರಿ.ಶ. 817ರಿಂದ ಮಾನ್ಯಖೇಟ (ಇಂದಿನ ಮಳಖೇಡ) ನಗರದಲ್ಲಿ ರಾಜ್ಯಭಾರ ಮಾಡುತ್ತಿದ್ದ ನೃಪತುಂಗನ ಹೆಸರಿನಲ್ಲಿ ಪ್ರಚುರವಾಗಿದೆ. ಈ ಲಕ್ಷಣ ಗ್ರಂಥವನ್ನು ಆ ರಾಜ ಬರೆಯಲಿಲ್ಲವೆಂದೂ ಅವನ ಆಶ್ರಿತನಾದ ಕವಿಯೊಬ್ಬ ಬರೆದನೆಂದೂ ವಿವಾದವುಂಟಾಗಿದೆ. ಆ ಕವಿ ಶ್ರೀವಿಜಯನೇ ಕವೀಶ್ವರನೇ ಎಂಬುದು ಇತ್ಯರ್ಥವಾಗಿಲ್ಲ. ಅದು ಹೇಗೇ ಇದ್ದರೂ ಈ ಕೃತಿ ನೃಪತುಂಗ ದೇವಾನುಮತವಾದುದೆಂದೂ ಅವನ ಆಸ್ಥಾನದಲ್ಲಿ ಪ್ರಕಟಿತವಾಗಿ ಪ್ರಸಿದ್ಧಿ ಹೊಂದಿತೆಂದೂ ಎಲ್ಲರೂ ಒಪ್ಪುತ್ತಾರೆ. ಇದು ಬಹಳ ಮಟ್ಟಿಗೆ ಸಂಸ್ಕೃತ ಲಾಕ್ಷಣಿಕ ಕವಿ ದಂಡಿಯ ಕಾವ್ಯಾದರ್ಶದ ಮಾದರಿಯಂತೆ ರಚಿತವಾಗಿದೆ. ಆದರೆ ಕನ್ನಡ ನಾಡು, ನುಡಿ, ಜನ ಮೊದಲಾದ ವಿಷಯಗಳನ್ನು ಕುರಿತು ಈ ಗ್ರಂಥಕರ್ತ ಹೇಳಿರುವ ಮಾತುಗಳು ಬಹಳ ಉಪಯುಕ್ತವಾಗಿವೆ. ಕನ್ನಡ ನಾಡು ಆ ಕಾಲಕ್ಕೆ ಕಾವೇರಿಯಿಂದ ಗೋದಾವರಿವರೆಗೆ ಹಬ್ಬಿದ್ದಿತೆಂದೂ ಕಿಸುವೊಳಲು, ಕೊಪಣ, ಒಂಕುಂದ ಮತ್ತು ಪುಲಿಗೆರೆಯೆಂಬ ನಾಲ್ಕು ನಗರಗಳ ನಡುವಣ ಪ್ರದೇಶ ಕನ್ನಡ ನಾಡಿನ ತಿರುಳಾದ ಭಾಗವೆಂದೂ ಕವಿ ಹೇಳಿದ್ದಾನೆ. ಕನ್ನಡಿಗರು ಸುಸಂಸ್ಕೃತರೂ ಕಾವ್ಯರಸಿಕರೂ ಗುಣದೋಷಗಳನ್ನು ಅರಿತುಕೊಳ್ಳಬಲ್ಲ ವಿಮರ್ಶಕರೂ ಆಗಿದ್ದರೆಂದು ಕವಿ ಅಭಿಮಾನದಿಂದ ಹೊಗಳಿದ್ದಾನೆ. ಆ ಕಾಲಕ್ಕೆ ಪ್ರಸಿದ್ಧರಾಗಿದ್ದ ಗದ್ಯಾಶ್ರಮಪದಗುರುಗಳೆನಿಸಿಕೊಂಡ ವಿಮಳೋದಯ, ನಾಗಾರ್ಜುನ, ಜಯಬಂಧು, ದುರ್ವಿನೀತ ಮೊದಲಾದವರನ್ನೂ ಅನೇಕ ಪದ್ಯಕವಿಗಳನ್ನೂ ನೃಪತುಂಗ ಹೆಸರಿಸಿದ್ದಾನೆ. ಅಕ್ಕರ, ಚೌಪದಿ, ಗೀತಿಕೆ, ತಿವಿದಿ ಮೊದಲಾದ ಪದ್ಯಜಾತಿಗಳು ಆ ಕಾಲಕ್ಕೆ ಪ್ರಚಾರದಲ್ಲಿದ್ದು ಕಂದ ವೃತ್ತಗಳೂ ಬಳಕೆಗೆ ಬಂದಿದ್ದುವೆಂದು ಈತನ ಹೇಳಿಕೆಗಳಿಂದ ತಿಳಿಯುತ್ತದೆ.

ದೋಷಾನುವರ್ಣನ ನಿರ್ಣಯ, ಶಬ್ದಾಲಂಕಾರ, ಅರ್ಥಾಲಂಕಾರ ಎಂದು ಮೂರು ಪ್ರಕರಣಗಳನ್ನೊಳಗೊಂಡ ಕವಿರಾಜಮಾರ್ಗ ಗ್ರಂಥ ಕವಿತಾಪ್ರಾಶಸ್ತ್ಯ, ಕಾವ್ಯ ಪ್ರಯೋಜನ ಮೊದಲಾದ ಹಲವು ವಿಷಯಗಳನ್ನು ವಿಚಾರ ಮಾಡುತ್ತದೆ. ಇದು ಕೇವಲ ಶಾಸ್ತ್ರಗ್ರಂಥವೇ ಆದರೂ ಇದರಲ್ಲಿ ಸಮಯೋಚಿತವೂ ಅರ್ಥಭರಿತವೂ ಆದ ಅನೇಕ ಸುಂದರ ಉಪಮೆಗಳನ್ನು ಕವಿ ಕೊಟ್ಟಿದ್ದಾನೆ. ಸಂಸ್ಕೃತ ಕನ್ನಡಗಳ ಅಮಿತವಾದ ಬಳಕೆ ಮಱುಗುವ ಪಾಲ್ಗೆ ಅಳಿಯ ಪನಿಗಳಂ ಬೆರಸಿದವೊಲ್; ಲಘುಪದವಾಗುತ್ತಲೇ ಸಂಯುಕ್ತಾಕ್ಷರಗಳನ್ನು ಬಳಸುವುದು, ಕೂಸಿನತಲೆಯೊಳ್ ಬಿಣ್ಪೊಱೆಯ ಸಿಟ್ಟವೊಲ್ ಅಸುಖಕರಂ; ಸ್ವೋಪಜ್ಞತೆಯಿಲ್ಲದೆ ಇತರರ ಮಾತಿನ ರೀತಿಯನ್ನೇ ಅನುಕರಿಸುವನನ ಕೃತಿ ನಗದ ಗುಹಾಧ್ವನಿ—ಎಂಬ ಈ ಹೋಲಿಕೆಗಳು ಸಾರ್ಥಕವೂ ಹೃದಯಂಗಮವೂ ಆಗಿವೆ.

ನೃಪತುಂಗನ ತರುವಾಯ, ಕನ್ನಡ ಸಾಹಿತ್ಯದಲ್ಲಿ ಅಗ್ರಮಾನ್ಯನಾದ ಪಂಪನನ್ನು ಗಮನಿಸಬೇಕು. ಈತ ಲೆಂಬುಳಪಾಟಕದ ಇಮ್ಮಡಿ ಅರಿಕೇಸರಿಯ ಆಸ್ಥಾನದಲ್ಲಿದ್ದು ವಿಕ್ರಮಾರ್ಜುನವಿಜಯಂ ಮತ್ತು ಆದಿಪುರಾಣಂ ಎಂಬ ಎರಡು ಬೃಹತ್ಕಾವ್ಯಗಳನ್ನು ರಚಿಸಿ ಪಸರಿಪ ಕನ್ನಡಕ್ಕೊಡೆಯನೊರ್ವನೆ ಸತ್ಕವಿ ಪಂಪನಾವಗಂ—ಎಂಬ ಅಪೂರ್ವವಾದ ಪ್ರಶಸ್ತಿಗೆ ಪಾತ್ರನಾಗಿದ್ದಾನೆ. ಆಮೇಲಿನ ಕನ್ನಡ ಕವಿಗಳನೇಕರು ಪಂಪನಿಂದ ಪ್ರಭಾವಿತರಾಗಿದ್ದು ಅವನ ಕವಿತ್ವವೈಭವವನ್ನು ಬಾಯಿ ತುಂಬ ಹೊಗಳಿದ್ದಾರೆ. ಆದಿಪುರಾಣ ಆದಿತೀರ್ಥಂಕರಸ್ವಾಮಿಯ ಪುಣ್ಯಚರಿತ್ರೆ. ವೃಷಭನಾಥನ ಭವಾವಳಿ ಮತ್ತು ಆತ ಪುರುದೇವನಾಗಿ ಹುಟ್ಟಿ ವೈರಾಗ್ಯ ಪಡೆದು ದೀಕ್ಷೆ ವಹಿಸಿ ತಪಸ್ಸು ಮಾಡಿ ಕೈವಲ್ಯ ಪಡೆದ ವೃತ್ತಾಂತಗಳು ಈ ಚಂಪೂ ಕಾವ್ಯದ ಕಥಾವಸ್ತು. ಇದರಲ್ಲಿ ಜಿನಧರ್ಮದ ಮಹಿಮಾನಿರೂಪಣೆಗೇ ಹೆಚ್ಚಿನ ಪ್ರಾಶಸ್ತ್ಯ. ಆದರೆ ರಸಿಕನಾದ ಪಂಪಕವಿ ವೈರಾಗ್ಯಪ್ರಧಾನವಾದ ಈ ಧಾರ್ಮಿಕ ಕಾವ್ಯದಲ್ಲಿಯೂ ಅವಕಾಶ ಕಲ್ಪಿಸಿಕೊಂಡು ಅಲ್ಲಲ್ಲಿ ಶೃಂಗಾರ ಸನ್ನಿವೇಶಗಳನ್ನು ಅತ್ಯಂತ ಹೃದ್ಯವಾದ ರೀತಿಯಲ್ಲಿ ಚಿತ್ರಿಸಿ ಓದುಗರ ಮನಸ್ಸನ್ನು ತಣಿಸಿದ್ದಾನೆ. ಶೃಂಗಾರರಸಪ್ರಧಾನವಾದ ಪ್ರಸಂಗಗಳೇ ವೈರಾಗ್ಯಕ್ಕೆ ದಾರಿ ಮಾಡುತ್ತವೆ. ಪುರುದೇವನ ಸನ್ನಿಧಿಯಲ್ಲಿ ಇಂದ್ರ ಏರ್ಪಡಿಸಿದ ನೀಲಾಂಜನೆಯ ನಾಟ್ಯಪ್ರಸಂಗ ಇದಕ್ಕೆ ಉತ್ತಮ ದೃಷ್ಟಾಂತ. ನೀಲಾಂಜನೆಯೆಂಬ ಅಮರನರ್ತಕಿ ನೋಟಕರ ಕಣ್ಮನಗಳನ್ನು ಆಕರ್ಷಿಸಿ, ಸೆರೆಹಿಡಿದು, ಅದ್ಭುತವಾಗಿ ನೃತ್ಯ ಮಾಡುತ್ತಿರುವಾಗಲೇ ಅವಳ ಆಯುರ್ದಾಯ ಮುಗಿದು ಹೋಯಿತಂತೆ! ಇಂದ್ರ ಅದನ್ನು ಮೊದಲೇ ಅರಿತುಕೊಂಡು ತಟ್ಟನೆ ಮಾಯಾನೀಲಾಂಜನೆಯನ್ನು ಸೃಷ್ಟಿ ಮಾಡಿ ನಾಟ್ಯ ಪ್ರದರ್ಶನ ಮುಂದುವರಿಯುವಂತೆ ಮಾಡಿದ. ಯಾರೂ ಈ ಸಂಗತಿಯನ್ನು ಗ್ರಹಿಸಲಿಲ್ಲ. ಆದರೆ ಪುರುದೇವನ ಸೂಕ್ಷ್ಮದೃಷ್ಟಿಗೆ ಇದು ಗೋಚರವಾಗಿ ಜೀವನ ಮಹಾನಶ್ವರವೆಂಬುದರ ಅರಿವಾಗಲಾಗಿ ಆತ ವೈರಾಗ್ಯಕ್ಕೆ ಮನಸ್ಸು ಕೊಟ್ಟನಂತೆ! ಶ್ರೀಮತಿ, ವಜ್ರಜಂಘ, ಲಲಿತಾಂಗದೇವ ಮೊದಲಾದವರ ಕಥಾನಕಗಳು ಬಹಳ ರಮ್ಯವಾದ ಪ್ರಕರಣಗಳು. ಪಂಪನೇ ಹೇಳಿರುವಂತೆ ಈ ಜಿನೇಂದ್ರ ಚರಿತ್ರೆಯಲ್ಲಿ ಧರ್ಮ ಮತ್ತು ಕಾವ್ಯಧರ್ಮಗಳೆರಡನ್ನೂ ಮನಗಾಣಬಹುದಾಗಿದೆ.

ಪಂಪನ ಇನ್ನೊಂದು ಮೇರುಕೃತಿ ವಿಕ್ರಮಾರ್ಜುನವಿಜಯ, ಇದಕ್ಕೆ ಪಂಪಭಾರತವೆಂದೂ ಹೆಸರು. ತನ್ನ ಅರಸನ ಅಕ್ಕರೆಯ ಕೋರಿಕೆಯಂತೆ ಪಂಪ ವ್ಯಾಸಭಾರತಕಥೆಯನ್ನು ಕನ್ನಡದಲ್ಲಿ ಹೇಳ ಹೊರಟು ಅದಕ್ಕೆ ಅರ್ಜುನನೇ ಕಥಾನಾಯಕನೆಂದು ಕಲ್ಪಿಸಿ ಅರಿಕೇಸರಿಗೂ ಅರ್ಜುನನಿಗೂ ಅಭೇದವನ್ನು ಹೇಳಿ ತನ್ನ ಆಶ್ರಯದಾತನ ಬಿರುದುಗಳನ್ನೆಲ್ಲ ಕುಂತೀಪುತ್ರನಾದ ಅರ್ಜುನನಿಗೆ ಆರೋಪಿಸಿ ಭಾರತ ಕಥೆಯನ್ನು ಅದಕ್ಕೆ ತಕ್ಕಂತೆ ಅಳವಡಿಸಿ ಸಂಗ್ರಹಿಸಿ ರಚಿಸಿದ್ದಾನೆ. ಈ ಕಾರಣದಿಂದ ಮಹಾಭಾರತ ಕಥೆಯಲ್ಲಿ ಕೆಲವು ಮಾರ್ಪಾಟುಗಳನ್ನು ಆತ ಮಾಡಬೇಕಾಯಿತು. ದ್ರೌಪದಿ ಪಂಚವಲ್ಲಭೆಯೆಂದು ಹೇಳದೆ ಅರ್ಜುನನ ಮಡದಿಯೆಂದು ಕವಿ ಕಲ್ಪಿಸಿದನಾದರೂ ಕೊನೆಯತನಕ ಹಾಗೆಯೇ ನಿರ್ವಹಿಸಲು ಸಾಧ್ಯವಾಗದೆ ಕಷ್ಟಪಟ್ಟಿದ್ದಾನೆ. ಕಡೆಯಲ್ಲಿ ರಾಜ್ಯಾಭಿಷೇಕ ಅರ್ಜುನ ಸುಭದ್ರೆಯರಿಗೇ ಹೊರತು ಧರ್ಮರಾಯ ದ್ರೌಪದಿಯರಿಗಲ್ಲ! ಇಂಥ ಒಂದೆರಡು ಪ್ರಸಂಗಗಳು ವ್ಯಾಸ ಭಾರತದ ಕಥೆಯ ಚೌಕಟ್ಟಿಗೆ ಹೊಂದದಿದ್ದರೂ ಒಟ್ಟಿನಲ್ಲಿ ಗ್ರಂಥ ವ್ಯಾಸರ ಭಾರತ ಕಥಾನುವಾದವೇ ಹೊರತು ಜೈನಭಾರತದ್ದಲ್ಲ. ಕಾವ್ಯದಲ್ಲಿ ಆಳವಾಗಿ ಪರಿಶೀಲನೆ ಮಾಡಿದ ಹೊರತು ಅಲ್ಲಿನ ಜೈನಧರ್ಮದ ಪ್ರಭಾವ ಗೋಚರವಾಗುವುದಿಲ್ಲ. ವೇದಧರ್ಮಪಕ್ಷಪಾತಿಯಾದ ಅರಿಕೇಸರಿಯ ಪ್ರಾರ್ಥನೆಯಂತೆ ಅವನ ಕೀರ್ತಿ ಸ್ಥಾಪನೆಗಾಗಿ ರಚನೆಗೊಂಡ ಈ ಕಾವ್ಯ ಬಹಳಮಟ್ಟಿಗೆ ವ್ಯಾಸಮುನೀಂದ್ರರುಂದ್ರ ವಚನಾಮೃತವಾರ್ಧಿಯಲ್ಲಿ ಮುಳುಗಿ ತಂದ ಮುತ್ತುರತ್ನಗಳಿಂದ ಅಲಂಕೃತವಾಗಿ ಲೋಕಪೂಜ್ಯವಾಗಿದೆ. ಪಂಪನ ಕವಿತಾ ಪ್ರತಿಭೆ, ಪಾಂಡಿತ್ಯ, ಸನ್ನಿವೇಶ ಚಿತ್ರಣ ಸಾಮರ್ಥ್ಯ, ವಾಗ್ವೈಭವ ಎಲ್ಲ ಮಹೋನ್ನತವಾಗಿದ್ದು ಕನ್ನಡ ಕಾವ್ಯಪ್ರಪಂಚದಲ್ಲಿ ಅವನಿಗೆ ಅಗ್ರಮಾನ್ಯತೆಯನ್ನು ಗಳಿಸಿಕೊಟ್ಟಿವೆ.

ಪಂಪ ಕ್ರಿ.ಶ. 902ರಲ್ಲಿ ಜನ್ಮವೆತ್ತಿ ತನ್ನ ಮೂವತ್ತನೆಯ ವಯಸ್ಸಿನಲ್ಲಿ ಆದಿಪುರಾಣವನ್ನು ರಚಿಸಿ ಜಿನಪದಾಂಭೋಜ ವರಪ್ರಸಾದೋತ್ಪನ್ನ ಪ್ರಸನ್ನ ಗಂಭೀರವಚನ ರಚನ ಚತುರ ಕವಿತಾ ಗುಣಾರ್ಣವನೆಂಬ ಹೆಮ್ಮೆಯ ಪ್ರಶಸ್ತಿಯನ್ನು ಪಡೆದುಕೊಂಡ. ಇದರಿಂದ ಆತ ಅರಿಕೇಸರಿಯ ಗಮನವನ್ನು ಸೆಳೆದು ಅವನ ಆದರದ ಆಹ್ವಾನದಂತೆ ಆ ರಾಜನ ಆಸ್ಥಾನ ಸೇರಿ ಅಕ್ಕರೆಯ ಬಹುಮತಿಯನ್ನು ಸ್ವೀಕರಿಸಿ ಅವನ ಕೋರಿಕೆಯಂತೆ ಭಾರತವನ್ನು ರಚಿಸಿ ಕೀರ್ತಿಗಳಿಸಿದ.

ಹತ್ತನೆಯ ಶತಮಾನವನ್ನು ಪಂಪಯುಗವೆಂದೇ ಕರೆಯುವುದು ವಾಡಿಕೆ. ಪಂಪಭಾರತದ ಹದಿಮೂರನೆಯ ಆಶ್ವಾಸದ ಕಥೆಯಾದ ಗದಾಯುದ್ಧವನ್ನು ತನ್ನ

ಕಾವ್ಯದ ವಸ್ತುವಾಗಿ ಇಟ್ಟುಕೊಂಡ ಕವಿರನ್ನ (993) ತನ್ನ ಸಾಹಸಭೀಮ ವಿಜಯವನ್ನು ರಚಿಸಿದ. ಆತ ತನ್ನ ಕಾವ್ಯದಲ್ಲಿ ಪಂಪನಿಂದ ಹಲವು ವಾಕ್ಯಗಳನ್ನು ಉಂಡುಂಡೆಯಾಗಿ ತೆಗೆದು ಬಳಸಿಕೊಳ್ಳುತ್ತ ಅಲ್ಪಸ್ವಲ್ಪ ವ್ಯತ್ಯಾಸ ಮಾಡಿ ಆ ವಾಕ್ಯಗಳ ಅರ್ಥಸ್ವಾರಸ್ಯವನ್ನು ಹೆಚ್ಚಿಸುತ್ತಾನೆ. ರನ್ನನಂಥ ಪ್ರತಿಭಾಸಂಪನ್ನನಾದ ವಾಗ್ವಿದಗ್ಧ ಪಂಪನನ್ನು ವಿಶೇಷವಾಗಿ ಗೌರವಿಸಿರುವುದು ಪಂಪನ ಹಿರಿಮೆಗೂ ರನ್ನನ ಕಾವ್ಯರಸಿಕತೆಗೂ ಉತ್ತಮ ಸಾಕ್ಷಿಯಾಗಿದೆ. ರನ್ನನ ಗದಾಯುದ್ಧ ಒಂದು ಅಪೂರ್ವವಾದ ರಸಘಟ್ಟಿ. ಅವನ ವಾಗ್ವಿಲಾಸ ಕೊಂಡಾಡುವಂಥಾದ್ದು. ತನ್ನ ಕಾವ್ಯಕ್ಕೆ ಭೀಮದುರ್ಯೋಧನರ ಗದಾಯುದ್ಧವನ್ನೇ ಕಥಾವಸ್ತುವಾಗಿ ಆಯ್ದು ಕೊಂಡಿದ್ದರೂ ಸಿಂಹಾವಲೋಕನ ಕ್ರಮದಿಂದ ಇಡೀ ಭಾರತ ಕಥೆಯನ್ನೇ ವರ್ಣಿಸಿರುವುದಾಗಿ ರನ್ನ ಹೇಳಿಕೊಂಡಿದ್ದಾನೆ. ಈ ಕಾವ್ಯದ ಅನೇಕ ಪಾತ್ರಗಳು ಮತ್ತೆ ಮತ್ತೆ ತಮ್ಮ ಹಿಂದಿನ ದಿನಗಳ ಘಟನೆಗಳನ್ನು ಪ್ರಸ್ತಾಪಿರುವುದರಿಂದ ಪೂರ್ವಕಥೆಯೆಲ್ಲ ಮತ್ತೆ ಮತ್ತೆ ಓದುಗರ ಮನಸ್ಸಿನಲ್ಲಿ ಚಿತ್ರಿತವಾಗುತ್ತದೆ. ರನ್ನನ ಸಂಭಾಷಣಾ ಶೈಲಿ ಗದಾಯುದ್ಧದಲ್ಲಿ ಬಹಳ ಚೆನ್ನಾಗಿ ಪ್ರಕಟವಾಗಿದೆ. ಆದ್ದರಿಂದಲೇ ಶ್ರೀಯುವರು ರನ್ನನ ಮಾತುಗಳನ್ನೇ ಆರಿಸಿಕೊಂಡು ಗದಾಯುದ್ಧ ನಾಟಕವನ್ನು ರೂಪಿಸಲು ಸಾಧ್ಯವಾಯಿತು.

ಅರ್ಥೋಚಿತವಾದ ಪದಪ್ರಯೋಗ, ಪಾತ್ರಚಿತ್ರಣ, ಸನ್ನಿವೇಶ ಕಲ್ಪನೆ, ವೀರ್ಯವತ್ತಾದ ಶೈಲಿ, ವೀರ, ರೌದ್ರ, ಭಯಾನಕ, ಭೀಭತ್ಸಾದಿರಸಗಳ ಪ್ರತಿಪಾದನೆ ರನ್ನಕವಿಯ ಸೊತ್ತು. ಪಂಪನಿಗೆ ನಮ್ರತೆ ಹೆಚ್ಚಾದರೆ ರನ್ನನಿಗೆ ಆತ್ಮಪ್ರತ್ಯಯ ಹೆಚ್ಚು. ತನ್ನ ಕವಿತಾಶಕ್ತಿಯನ್ನು ರನ್ನ ಧಾರಾಳವಾಗಿ ಹೊಗಳಿಕೊಂಡಿದ್ದಾನೆ. ಫಣಿಪತಿಯ ಫಣಾರತ್ನಮುಮಂ ರನ್ನನ ಕೃತಿರತ್ನಮುಮಂ ಪೇಳ್ ಪರೀಕ್ಷಿಪಂಗೆ ಎಂಟೆರ್ದೆಯೆ, ವಾಗ್ದೇವಿಯ ಭಂಡಾರದ ಮುದ್ರೆಯನೊಡೆದಂ ಸಾರಸ್ವತಮೆನಿಪ ಕವಿತೆಯೊಳ್ ಕವಿರತ್ನಂ—ಮೊದಲಾದ ಹೇಳಿಕೆಗಳು ರನ್ನನ ಮನೋಧರ್ಮವನ್ನು ಸೂಚಿಸುತ್ತವೆ. ತಾನು ಚತುರ್ಮುಖಂ ಕವಿರನ್ನಂ ಎಂದು ಹೇಳಿಕೊಳ್ಳುವುದಕ್ಕೂ ಈ ಕವಿ ಹಿಂತೆಗೆದಿಲ್ಲ. ಆದರೆ ಇದೆಲ್ಲ ಒಣಜಂಬದ ಬಡಾಯಿ ಮಾತುಗಳೆಂದು ಭಾವಿಸಲು ಆಗದು. ಬಂಡವಾಳವಿಲ್ಲದ ಬಡಾಯಿ ರನ್ನನ ಲಕ್ಷಣವಲ್ಲ. ಅವನಿಗೆ ತನ್ನ ಶಕ್ತಿಯ ಸಂಪೂರ್ಣವಾದ ಅರಿವಿತ್ತು. ಅದನ್ನು ಸ್ಪಷ್ಟೋಕ್ತಿಯಿಂದ ಹೇಳಿಕೊಳ್ಳಲು ಆತ ಹಿಂಜರಿದಿಲ್ಲ.

ರನ್ನನ ಅಜಿತತೀರ್ಥಂಕರ ಪುರಾಣತಿಲಕ ಕನ್ನಡ ಸಾಹಿತ್ಯದಲ್ಲಿ ಗಣ್ಯಸ್ಥಾನವನ್ನು ಪಡೆದ ಕಾವ್ಯ. ಇದರಲ್ಲಿ ರನ್ನನ ವೈರಾಗ್ಯೋಪದೇಶ ಸಾಮರ್ಥ್ಯ ಸುವ್ಯಕ್ತವಾಗಿದೆ. ಕವಿ ದೇಹಾನಿತ್ಯತೆಯನ್ನು ವರ್ಣಿಸುವಾಗ ಎಂಥ ಭೋಗಾಭಿಲಾಷಿಯಾದರೂ ಗಾಬರಿಗೀಡಾಗಿ ದುಃಖಿಸಿಯಾನು ! ಅಜಿತಪುರಾಣ ಪುರಾಣತಿಲಕವಾಗಿರುವಂತೆ ಉತ್ತಮ ಕಾವ್ಯವೂ ಆಗಿದೆ. ಈ ಎರಡು ಶ್ರೇಷ್ಠ ಕೃತಿಗಳು ಕವಿರನ್ನನ ಕೀರ್ತಿಸ್ತಂಭಗಳಂತೆ ಹೊಳೆಯುತ್ತವೆ.

ಈ ಕಾಲದ ಇನ್ನೊಬ್ಬ ಕವಿ ಪೊನ್ನ (ಸು.950). ಪಂಪನ ಸಮಕಾಲೀನ ಇದ್ದರೂ ಇರಬಹುದು. ಈತ ತನ್ನ ಕಾವ್ಯದಲ್ಲಿ ಬೇರೆ ಯಾವ ಕನ್ನಡ ಕವಿಯ ಹೆಸರನ್ನೂ ಸ್ಮರಿಸಿಲ್ಲ. ರನ್ನ ಮಾತ್ರ ಪಂಪ ಪೊನ್ನರಿಬ್ಬರನ್ನೂ ಹೊಗಳಿದ್ದಾನೆ. ಈ ಮೂವರು ಕವಿಗಳನ್ನೂ ಕನ್ನಡದ ರತ್ನತ್ರಯರೆಂದು ಹೇಳುವುದು ವಾಡಿಕೆ. ಪೊನ್ನ ಶಾಂತಿಪುರಾಣ ಮತ್ತು ಭುವನೈಕರಾಮಾಭ್ಯುದಯ ಎಂಬ ಎರಡು ಕೃತಿಗಳನ್ನು ರಚಿಸಿದ್ದಾನೆ. ಮೊದಲ ಕೃತಿ ದೊರೆತಿದೆ. ಎರಡನೆಯದು ಸಿಕ್ಕಿಲ್ಲ. ಇವನನ್ನು ಕುರುಳ್ಗಳಸವಣ ಎಂದು ಕರೆಯುತ್ತಿದ್ದರೆಂದು ತಿಳಿಯುವುದರಿಂದ ಇವನು ಯತಿಯಾಗಿದ್ದರೂ ಇರಬಹುದು. ಈತ ತನ್ನ ಹಿರಿಮೆಯನ್ನು ಹೊಗಳಿಕೊಳ್ಳುತ್ತ ತಾನು ಕಾಳಿದಾಸಂಗೆ ನೂರ್ಮಡಿ ಎಂದು ಹೇಳಿಕೊಂಡಿದ್ದಾನೆ. ಆದರೆ ಇದು ಸಲ್ಲದ ಮಾತು. ಕಾಳಿದಾಸನ ರಘುವಂಶದ ಕೆಲವು ಶ್ಲೋಕಗಳನ್ನು ಅನುವಾದ ಮಾಡಲು ಯತ್ನಿಸಿದ್ದಾನಾದರೂ ಆ ಮಹಾಕವಿಯ ವಾಕ್ಕೌಶಲ, ಅರ್ಥ ಗಾಂಭೀರ್ಯ, ಪೊನ್ನನಲ್ಲಿ ಸುತರಾಂ ಕಾಣಿಸುವುದಿಲ್ಲ. ಪಂಪರನ್ನರ ಸಾಲಿಗೆ ಸೇರಿಸಿದ್ದರಿಂದ ಪೊನ್ನನಿಗೆ ಸಲ್ಲದ ಪೂಜ್ಯತೆ ಲಭಿಸಿದೆಯೆಂದು ಹೇಳಿದರೆ ತಪ್ಪಲ್ಲ. ಪೊನ್ನ ಕವಿ ಗಮಕಿವಾದಿವಾಗ್ಮಿಗಳ ದರ್ಪವನ್ನು ಅಡಗಿಸಬಲ್ಲ ಪಂಡಿತನಾಗಿದ್ದಿರ ಬಹುದೇ ಹೊರತು ಪ್ರತಿಭಾವಂತನಾದ ಹುಟ್ಟು ಕವಿಯಲ್ಲ.

. ಈ ಶತಾಬ್ದದ ಇನ್ನೊಬ್ಬ ಹಿರಿಯ ಕವಿ ಮೊದಲನೆಯ ನಾಗವರ್ಮ (ಸು. 990). ಇವನು ಬಾಣಭಟ್ಟನ ಮೇರುಕೃತಿಯಾದ ಕಾದಂಬರಿಯನ್ನು ಯಶಸ್ವಿಯಾಗಿ ಕನ್ನಡಿಸಿದ್ದಾನೆ. ಮೂಲ ಗದ್ಯಗ್ರಂಥವಾದರೂ ನಾಗವರ್ಮ ಅದನ್ನು ಗದ್ಯ ಪದ್ಯಾತ್ಮಕವಾದ ಚಂಪೂ ರೂಪದಲ್ಲಿ ಬರೆದು ಜನಪ್ರಿಯವಾಗಿಸಿದ್ದಾನೆ. ನಾಗವರ್ಮನ ಕಥನಕೌಶಲ ಕೊಂಡಾಡುವಂಥಾದ್ದು. ಸ್ವಾತಂತ್ರ್ಯವಹಿಸಿ ಮೂಲಕಥೆಯಲ್ಲಿ ಯಾವ ಬದಲಾವಣೆಯನ್ನೂ ಮಾಡುವ ಗೋಜಿಗೆ ಆತ ಹೋಗಿಲ್ಲ. ಅನೇಕ ದೀರ್ಘ ವರ್ಣನೆಗಳನ್ನು ಸಂಕ್ಷೇಪಗೊಳಿಸಿ ಕಾವ್ಯದ ಅಂದವನ್ನು ಹೆಚ್ಚಿಸಿದ್ದಾನೆ. ಈತನ ಪದ್ಯಗಳು ಬಹಳ ಹೃದ್ಯವಾಗಿವೆ. ಅನಿವಾರ್ಯವಾಗಿ ಈ ಕೃತಿಯಲ್ಲಿ ಸಂಸ್ಕೃತ ಪದಗಳ ಬಳಕೆ ಹೆಚ್ಚಾಗಿದೆ. ಆದರೆ ಅದು ದುರ್ಜೋಧವಾದ ಅಪ್ರಸಿದ್ಧ ಪದ ಪ್ರಯೋಗವಲ್ಲ. ಪಾಂಡಿತ್ಯ ಪ್ರದರ್ಶನದ ಚಟ ನಾಗವರ್ಮನಿಗೆ ಇಲ್ಲ. ಮೂಲಕೃತಿಯ ಕಥಾಸ್ವಾರಸ್ಯಕ್ಕಾಗಲಿ ಸನ್ನಿವೇಶ ಸೌಂದರ್ಯಕ್ಕಾಗಲಿ ಸ್ವಲ್ಪವೂ ಚ್ಯುತಿ ಬರದಂತೆ ಈ ಪಂಡಿತಕವಿ ಅನುವಾದ ಕಾರ್ಯವನ್ನು ನಿರ್ವಹಿಸಿ ಮುಂದಿನ ಕವಿಗಳಿಗೆ ಈ ಕ್ಷೇತ್ರದಲ್ಲಿ ಮಾರ್ಗದರ್ಶಕನಾಗಿದ್ದಾನೆ.

ನಾಗವರ್ಮನ ಇನ್ನೊಂದು ಕೃತಿ ಛಂದೋಂಬುಧಿ. ಕನ್ನಡ ಛಂದಸ್ಸನ್ನು ಹೇಳುವ ಮೊತ್ತಮೊದಲನೆಯ ಗ್ರಂಥ. ಪಿಂಗಳಾಚಾರ್ಯನನ್ನೂ ಜಯದೇವ ಎಂಬ ಸಂಸ್ಕೃತ ಛಂದಶ್ಶಾಸ್ತ್ರಕಾರನನ್ನೂ ಅನುಸರಿಸಿ ಬರೆದಿರುವುದಾಗಿ ನಾಗವರ್ಮನೇ ಹೇಳಿಕೊಂಡಿದ್ದಾನೆ. ಇದು ಆರು ಅಧಿಕಾರಗಳುಳ್ಳ ಗ್ರಂಥ. ಇದರಲ್ಲಿ ಸಂಸ್ಕೃತದ ಸಮವೃತ್ತ, ಅರ್ಧ ಸಮವೃತ್ತ ವಿಷಮವೃತ್ತ—ಮೊದಲಾದ ಪದ್ಯಜಾತಿಗಳ ಲಕ್ಷಣ ಗಳನ್ನೂ ಕನ್ನಡ ಪದ್ಯಜಾತಿಯ ಲಕ್ಷಣಗಳನ್ನೂ ಹೇಳಿದೆ.

ಈ ಕವಿ ವೆಂಗಿಮಂಡಲದ ವೆಂಗಿಪಟು ಎಂಬ ಗ್ರಾಮದ ವೆಣ್ಣಮಯ್ಯನ ಮಗ. ತನ್ನನ್ನು ಈತ ನಾಕಿ, ಸೈಯಡಿಯಾತಂ ಎಂದೂ ಹೇಳಿಕೊಂಡಿದ್ದಾನೆ. ಈತ ಕವಿ ಮಾತ್ರನಲ್ಲದೆ ಯುದ್ಧ ವೀರನೂ ಆಗಿದ್ದನೆಂದು ಅವನ ಮಾತಿನಿಂದ ಊಹಿಸಬಹು ದಾಗಿದೆ. ಶಾಸ್ತ್ರಗ್ರಂಥವನ್ನು ಈ ಕವಿ ಪದ್ಯಗಳಿಂದ ಕೂಡಿದ ಚಂಪೂಶೈಲಿಯಲ್ಲಿಯೇ ಬರೆದಿರುವುದು ಆ ಕಾಲದ ಕವಿಗಳಿಗೆ ಪದ್ಯದ ಮೇಲಿದ್ದ ಪಕ್ಷಪಾತವನ್ನು ತೋರಿ ಸುತ್ತದೆ.

ಈ ಕಾಲದಲ್ಲಿ ಹೆಚ್ಚಾಗಿ ಚಂಪೂಕೃತಿಗಳೇ ಹುಟ್ಟಿವೆಯಾದರೂ ಗದ್ಯಗ್ರಂಥ ಗಳೂ ಇಲ್ಲದೆ ಹೋಗಿಲ್ಲ. ಶಿವಕೋಟ್ಯಾಚಾರ್ಯನೆಂಬ ಜೈನಕವಿ ವಡ್ಡಾರಾಧನೆ ಎಂಬ ಅತಿ ಶ್ರೇಷ್ಠವಾದ ಗದ್ಯಕೃತಿಯನ್ನು ರಚಿಸಿದ್ದಾನೆ. ಇವನು ಪಂಪನ ಸಮ ಕಾಲೀನನೋ ಅಥವಾ ಅವನಿಗಿಂತ ಕೊಂಚ ಹಿಂದಿನವನೊ ಇದ್ದಿರಬೇಕು. ಈತನ ಕೃತಿಯಲ್ಲಿ ಪೂರ್ವದ ಹಳಗನ್ನಡ ಶಬ್ದರೂಪಗಳು ಹೆಚ್ಚಾಗಿವೆ. ವಡ್ಡಾರಾಧನೆ ಉಪ ಸರ್ಗ ಕೇವಲಿಗಳ ಪುಣ್ಯಕಥೆಗಳನ್ನೊಳಗೊಂಡ ಪುಣ್ಯಗ್ರಂಥ. ಜೈನಧರ್ಮದ ಹಿರಿಮೆಯನ್ನು ಹೊಗಳುವ ಈ ಕೃತಿಯಲ್ಲಿ ಅನೇಕ ಕಥೆ ಉಪಕಥೆಗಳು ಸೇರಿಕೊಂಡು ಓದುಗರ ಮನಸ್ಸು ಹೃದಯಗಳನ್ನು ಒಲಿಸಿ ನಲಿಸುವ ದೊಡ್ಡ ಕಥಾಕೋಶದಂತೆ ಇದೆ. ನಮಗೆ ದೊರೆತಿರುವ ಕನ್ನಡ ಗದ್ಯಕೃತಿಗಳಲ್ಲಿ ಇದೇ ಅತ್ಯಂತ ಪ್ರಾಚೀನ ವಾದದ್ದು.

ಈ ಶತಾಬ್ದದ ಇನ್ನೊಂದು ಗದ್ಯಕೃತಿ ಚಾವುಂಡರಾಯ(978) ರಚಿಸಿದ ತ್ರಿಷಷ್ಟಿಲಕ್ಷಣಮಹಾಪುರಾಣ. ಇದಕ್ಕೆ ಚಾವುಂಡರಾಯಪುರಾಣವೆಂದೇ ಹೆಸರಿದೆ. ಜಿನಭದ್ರಗುಣಸೇನಾಚಾರ್ಯರ ಪೂರ್ವಪುರಾಣ ಮತ್ತು ಉತ್ತರಪುರಾಣಗಳಲ್ಲಿ ಹೇಳಿರುವ ಅರವತ್ತುಮೂವರು ಶಲಾಕಾಪುರುಷರ ಕಥೆಗಳನ್ನು ಚಾವುಂಡರಾಯ ಗದ್ಯದಲ್ಲಿ ಹೇಳಿದ್ದಾನೆ. ಆದರೆ ಇದು ಶಿವಕೋಟ್ಯಾಚಾರ್ಯನ ಕೃತಿಯಂತೆ ರಸವತ್ತಾ ಗಿಲ್ಲ. ಇದರಲ್ಲಿ ಕವಿ ಪಂಪನ ಆದಿಪುರಾಣದಿಂದಲೂ ರನ್ನನ ಅಜಿತಪುರಾಣದಿಂದಲೂ ಅನೇಕ ಪದಪುಂಜಗಳನ್ನು ಉಂಡುಂಡೆಯಾಗಿ ತೆಗೆದುಕೊಂಡಿರುವುದು ಕಾಣುತ್ತದೆ. ವಡ್ಡಾರಾಧನೆ ದೊರೆಯುವ ಮುನ್ನ ಇದೇ ಅತ್ಯಂತ ಪ್ರಾಚೀನ ಕನ್ನಡ ಗದ್ಯ ಗ್ರಂಥವೆಂಬ ಪ್ರಶಸ್ತಿಯನ್ನು ಪಡೆದಿತ್ತು.

ಚಾವುಂಡರಾಯ ಗಂಗರಾಜ ರಾಚಮಲ್ಲ ಸತ್ಯವಾಕ್ಯನಲ್ಲಿ ಅಮಾತ್ಯನಾಗಿಯೂ ಸೇನಾಪತಿಯಾಗಿಯೂ ಇದ್ದು ಕೀರ್ತಿವಂತನಾದ ಧರ್ಮಾಭಿಮಾನಿ. ಶ್ರವಣಬೆಳ ಗೊಳದ ಗೊಮ್ಮಟೇಶ್ವರನ ವಿಗ್ರಹವನ್ನು ಸ್ಥಾಪಿಸಿದವ ಇವನೇ. ದೊರೆ ಇವನ ಔದಾರ್ಯವನ್ನೂ ಪರಾಕ್ರಮವನ್ನೂ ಮೆಚ್ಚಿಕೊಂಡು ಇವನಿಗೆ ರಾಯ ಎಂಬ ಬಿರುದನ್ನು ಕೊಟ್ಟು ಗೌರವಿಸಿದ. ಕವಿ ರನ್ನನಿಗೆ ಬಹಳ ಸಹಾಯ ಮಾಡಿದ ಯಶಸ್ಸು ಚಾವುಂಡರಾಯನದು. ಇವನನ್ನು ಕವಿಗಳು ಅಕ್ಕರೆಯಿಂದ ಅಣ್ಣ ಎಂದು ಕರೆದಿದ್ದಾರೆ. ಇವನು ಸ್ವಯಂ ಲೇಖಕನೂ ಕವಿಪೋಷಕನೂ ಆಗಿದ್ದು ಕನ್ನಡ ಕಾವ್ಯದೇವಿಯ ರಥವನ್ನು ಮುಂದಕ್ಕೆ ನಡೆಸಿದ ಭಾಷಾಭಿಮಾನಿಯೆನಿಸಿದ್ದಾನೆ.

ಹನ್ನೊಂದನೆಯ ಶತಾಬ್ದದಲ್ಲಿ ಹಲವು ಕವಿಗಳ ಹೆಸರುಗಳನ್ನು ಕೇಳುತ್ತೇವೆ. ಆದರೆ ಅವರ ಕಾವ್ಯಗಳು ಲಭಿಸಿಲ್ಲ. ಗಜಾಂಕುಶ, ಮನಸಿಜ, ಚಂದ್ರಭಟ್ಟ, ನಾರಾಯಣಭಟ್ಟ ಈ ಕಾಲದವರು. ಕೊನೆಯ ಕವಿಯ ಹೆಸರನ್ನು ತೆಲುಗು ಸಾಹಿತ್ಯದ ಮೊದಲ ಕವಿಯಾದ ನನ್ನಯಭಟ್ಟ ಹೊಗಳಿದ್ದಾನೆ. ಈತ ಪೈಶಾಚಿ ಮೊದಲಾದ ಹಲವು ಭಾಷೆಗಳ ಪರಿಶ್ರಮವಿದ್ದ ಮಹಾಪಂಡಿತನಂತೆ. ಕನ್ನಡದಲ್ಲಿ ಯಾವ ಕೃತಿಯನ್ನು ರಚಿಸಿದ್ದನೊ ತಿಳಿಯದು.

ಈ ಶತಾಬ್ದದ ಹಿರಿಯ ಕವಿಗಳಲ್ಲಿ ಚಾವುಂಡರಾಯ (1150) ನೆಂಬವನು ಲೋಕೋಪಕಾರ ಎಂಬ ಶಾಸ್ತ್ರಗ್ರಂಥವನ್ನು ರಚಿಸಿದ್ದಾನೆ. ಇದರಲ್ಲಿ ಜ್ಯೋತಿಷ್ಯದಿಂದ ಹಿಡಿದು ವಿಷವೈದ್ಯವರೆಗೆ ಹಲವು ಉಪಯುಕ್ತ ವಿಷಯಗಳಿದ್ದು ಲೋಕೋಪಕಾರ ಎಂಬ ಅದರ ಹೆಸರನ್ನು ಅನ್ವರ್ಥವಾಗಿಸಿವೆ.

ಇವನಾದ ಮೇಲೆ ಕಿಸುಕಾಡು ನಾಡಿನ ದುರ್ಗಸಿಂಹನೆಂಬ(ಸು. 1145) ಇನ್ನೊಬ್ಬ ಬ್ರಾಹ್ಮಣ ಕವಿ ವಸುಭಾಗಭಟ್ಟನ ಪಂಚತಂತ್ರವನ್ನು ಕನ್ನಡಕ್ಕೆ ತಂದಿದ್ದಾನೆ. ಇದರ ಮೂಲಗ್ರಂಥವಾದ ಸಂಸ್ಕೃತಕೃತಿ ಲಭ್ಯವಾಗಿಲ್ಲವಾದ್ದರಿಂದ ಈ ಕನ್ನಡಕೃತಿ ಮೂಲಕ್ಕೆ ಸರಿಯಾದ ಅನುವಾದವೇ ಅಲ್ಲವೇ ಎಂಬುದನ್ನು ನಿರ್ಣಯಿಸಲು ಸಾಧ್ಯವಿಲ್ಲ. ದುರ್ಗಸಿಂಹ ಪಂಪನ ಕೃತಿಗಳನ್ನು ಮೆಚ್ಚಿಕೊಂಡು ಅವನಿಂದ ಪ್ರಭಾವಿತನಾಗಿದ್ದಾನೆ. ಹುಲಿ, ಜಿಂಕೆ, ನರಿ ಮೊದಲಾದ ವನ್ಯಜಂತುಗಳ ಕಥೆಗಳನ್ನೇ ಹೆಚ್ಚಾಗಿ ಹೇಳುತ್ತಿದ್ದರೂ ಪಂಚತಂತ್ರದ ತತ್ತ್ವನೀತಿಗಳೆಲ್ಲ ಮಾನವರ ವರ್ತನೆಗೆ ಸಂಬಂಧಿಸಿದುವೇ ಆಗಿವೆ. ದುರ್ಗಸಿಂಹ ಚಂಪೂಕವಿಯಾದರೂ ಅವನ ಕೃತಿಯಲ್ಲಿ ಬಹಳ ಸರಳವಾದ ಗದ್ಯವಿದೆ. ಕನ್ನಡ ಗದ್ಯದ ಬೆಳೆವಣಿಗೆಯಲ್ಲಿ ಪಂಚತಂತ್ರ ಒಂದು ಮುಖ್ಯವಾದ ಹಂತ. ಇದರಲ್ಲಿ ಕವಿ ಗದ್ಯವನ್ನು ಪಾಂಡಿತ್ಯ ಪ್ರದರ್ಶನಕ್ಕೆ ಬಳಸಿಕೊಳ್ಳದೆ ಅರ್ಥವ್ಯಕ್ತಿ, ವಿಚಾರ ನಿರೂಪಣೆ, ಕಥನ ನಿರೂಪಣೆಗಳಿಗೆ ಬಳಸಿದ್ದಾನೆ.

ಜಾತಕತಿಲಕವೆಂಬ ಜ್ಯೋತಿಷ ಗ್ರಂಥವನ್ನು ಬರೆದ ಶ್ರೀಧರಾಚಾರ್ಯ ಈ ಶತಮಾನದವನೇ. ಛಂದಸ್ಸಿನ ಅಗತ್ಯಗಳಿಗಾಗಿ ಪಾದಪೂರಣಾದಿಗಳನ್ನು ಬಳಸದೆ ಶಾಸ್ತ್ರಾರ್ಥವನ್ನು ಕುಂದಿಲ್ಲದೆ ನಿರೂಪಿಸಿರುವೆನೆಂದು ಹೇಳಿ ಕವಿ ಚಂಪೂರೂಪದಲ್ಲಿ ಸಮಗ್ರ ಗ್ರಂಥವನ್ನು ನಿರ್ವಹಿಸಿದ್ದಾನೆ.

ಅಭಿನವ ಪಂಪನೆಂಬ ಬಿರುದು ಧರಿಸಿದ ನಾಗಚಂದ್ರ (ಸು. 1100) ಈ ಶತಾಬ್ದದ ಅತ್ಯಂತ ಮುಖ್ಯ ಕವಿಯೆನ್ನಬೇಕು. ಮಲ್ಲಿನಾಥಪುರಾಣ ಮತ್ತು ರಾಮಚಂದ್ರ ಚರಿತ ಪುರಾಣ ಎಂಬ ಎರಡು ಚಂಪೂಕಾವ್ಯಗಳನ್ನು ಈತ ರಚಿಸಿದ್ದಾನೆ. ಹತ್ತೊಂಬತ್ತನೆಯ ತೀರ್ಥಂಕರನಾದ ಮಲ್ಲಿದೇವನ ಚರಿತ್ರೆಯೇ ಮಲ್ಲಿನಾಥಪುರಾಣ. ಶ್ವೇತಾಂಬರ ಸಂಪ್ರದಾಯದ ಪ್ರಕಾರ ಮಲ್ಲಿ ಹೆಂಗಸು; ರಾಜಕುಮಾರಿ. ಅತ್ಯಂತ ಸುಂದರಿಯಾದ ಮಲ್ಲಿಯನ್ನು ಮದುವೆಯಾಗಬಯಸಿ ತನ್ನ ತಂದೆಯ ಮೇಲೆ ದಂಡೆತ್ತಿಬಂದ ಐದಾರು ರಾಜರನ್ನು ಮಲ್ಲಿ ಉಪಾಯವಾಗಿ ಸಮಾಧಾನ ಪಡಿಸಿ ಬರಮಾಡಿಕೊಂಡು ದೇಹ ಅಶಾಶ್ವತ, ಅನೇಕ ಕಲ್ಮಷಗಳ ನೆಲೆ, ಹೊರಗಿನ ಆಕಾರ ನೋಡಿ ಮೋಹಿಸಬಾರದು ಎಂದು ಉಪದೇಶ ಮಾಡಿ ಅವರಿಗೆ ಜಿನದೀಕ್ಷೆ ತೊಡಿಸಿ ತಾನೂ ಜಿನದೀಕ್ಷೆ ವಹಿಸಿದಳಂತೆ! ನಾಗಚಂದ್ರ ಕವಿಯ ಧರ್ಮಾನುರಾಗ, ಜಿನಭಕ್ತಿ ಈ ಕೃತಿಯಲ್ಲಿ ಉಜ್ಜ್ವಲವಾಗಿ ಪ್ರಕಟವಾಗಿವೆ.

ಪಂಪರಾಮಾಯಣವೆಂದೇ ಹೆಸರಾಗಿರುವ ಇವನ ಇನ್ನೊಂದು ಕೃತಿ ರಾಮಚಂದ್ರ ಚರಿತಪುರಾಣ ಜೈನಸಂಪ್ರದಾಯಾನುಗುಣವಾದ ರಾಮಕಥೆ. ವಾಲ್ಮೀಕಿ ರಾಮಾಯಣಕ್ಕೂ ಇದಕ್ಕೂ ಅನೇಕ ವ್ಯತ್ಯಾಸಗಳಿವೆ. ಇದರ ಪ್ರಕಾರ ರಾವಣನನ್ನು ಕೊಂದವನು ಲಕ್ಷ್ಮಣನೇ ಹೊರತು ರಾಮನಲ್ಲ. ಸುಗ್ರೀವ, ಆಂಜನೇಯ ಮೊದಲಾದ ವೀರರು ಕಪಿಧ್ವಜರೇ ಹೊರತು ಕಪಿಗಳಲ್ಲ. ರಾಮಲಕ್ಷ್ಮಣರಿಗೇ ಅಲ್ಲದೆ ಆಂಜನೇಯನಿಗೂ ಈ ರಾಮಾಯಣದಲ್ಲಿ ಹಲವು ಮದುವೆಗಳಾಗುತ್ತವೆ. ಈ ಕಾವ್ಯದ ಎಲ್ಲ ಪಾತ್ರಗಳೂ ಜೈನರು. ಕೊನೆಯಲ್ಲಿ ಶ್ರೀರಾಮನೂ ಜಿನದೀಕ್ಷೆ ಸ್ವೀಕರಿಸಿ ತಪಸ್ಸಿನಿಂದ ಕೈವಲ್ಯ ಹೊಂದುತ್ತಾನೆ.

ನಾಗಚಂದ್ರ ಮೃದುಪದಬಂಧಕ್ಕೆ ಹೆಸರಾದ ಕವಿ. ಈತನ ಕವಿತಾಶೈಲಿ ಆಮೇಲಿನ ಅನೇಕ ಕವಿಗಳಿಗೆ ಆದರ್ಶವಾಯಿತು. ಹನ್ನೊಂದನೆಯ ಶತಾಬ್ದವನ್ನು ಅಭಿನವಪಂಪನ ಯುಗವೆಂದೇ ಹೇಳಿದರೂ ಸಲ್ಲುತ್ತದೆ. ಇವನ ಜೊತೆಯಲ್ಲಿ ಕಂತಿಯೆಂಬ ಒಬ್ಬ ಕಬ್ಬಿಗಿತಿಯಿದ್ದಳೆಂದು ದೋರಸಮುದ್ರದ ರಾಜಸಭೆಯಲ್ಲಿ ಸಮಸ್ಯಾಪೂರಣ ಮಾಡುತ್ತಿದ್ದಳೆಂದೂ ಒಂದು ಕಥೆಯಿದೆ. ಕಂತಿ ಹಂಪನ ಸಮಸ್ಯೆಗಳು ಎಂದು ಒಂದು ಗ್ರಂಥವೂ ದೊರೆತಿದೆ. ಆದರೆ ಕಂತಿಯೆಂಬುದು ಜೈನಸಂನ್ಯಾಸಿಯ ಹೆಸರು. ಇದು ಒಂದು ವ್ಯಕ್ತಿಯ ಹೆಸರಿನಂತೆ ತೋರುವುದಿಲ್ಲ. ಈ ಸಮಸ್ಯಾಪೂರಣ ಸಂಸ್ಕೃತ ಕವಿಗಳಿಗೆ ಬಹಳ ಪ್ರಿಯವಾದ ಹವ್ಯಾಸ. ಈ ಕಟ್ಟುಕಥೆಗಳ ಆಧಾರದ ಮೇಲೆ ಕಂತಿಯೆಂಬ ಕಬ್ಬಿಗಿತಿಯಿದ್ದಳೆಂದು ನಂಬುವುದು ಕಷ್ಟ. ಈಗ ಉಪಲಬ್ಧವಾಗಿರುವ ಕಂತಿಹಂಪರ ಸಮಸ್ಯೆಗಳು ಎಂಬ ಪುಸ್ತಕದ ಕರ್ತೃ ಯಾರೋ ಯಾವ ಕಾಲದವನೋ ತಿಳಿಯದು.

ಕನ್ನಡ ಸಾಹಿತ್ಯದ ಇತಿಹಾಸದಲ್ಲಿ ಹನ್ನೆರಡನೆಯ ಶತಮಾನ ಬಹಳ ಮುಖ್ಯವಾದ ಕಾಲ. ಈ ಕಾಲದಲ್ಲಿ ಹಳೆಯ ಸಂಪ್ರದಾಯದಂತೆ ಚಂಪೂಕಾವ್ಯಗಳನ್ನು ರಚಿಸಿದವರು ಅನೇಕರಿದ್ದಾರೆ. ಕಾವ್ಯವಸ್ತು, ಭಾಷೆ, ಛಂದಸ್ಸು, ಯಾವುದಕ್ಕೂ ಸಂಸ್ಕೃತವನ್ನು ಅವಲಂಬಿಸದೆ ಆಡುಮಾತಿಗೆ ಹತ್ತಿರವಾದ ಭಾಷೆಯಲ್ಲಿ ಕೃತಿರಚನೆ ಮಾಡಿದ ವಚನಕಾರರು ಅವತರಿಸಿದುದು ಈ ಶತಮಾನದಲ್ಲಿಯೇ. ಇವರಲ್ಲದೆ ರಗಳೆಯ ಕವಿ ಎಂಬ ಖ್ಯಾತಿಗೆ ಪಾತ್ರನಾದ ಹಂಪೆಯ ಹರಿಹರ ಕವಿ ಅನೇಕ ಶಿವಶರಣರ ಚರಿತ್ರೆಗಳನ್ನು ಬರೆದು ಪ್ರಸಿದ್ಧನಾದದ್ದೂ ಈ ಕಾಲದಲ್ಲಿಯೇ. ಹರಿಶ್ಚಂದ್ರ ಕಾವ್ಯವೇ ಮೊದಲಾದ ಹಲವು ಷಟ್ಪದೀ ಕಾವ್ಯಗಳನ್ನು ಬರೆದು ಆ ಛಂದಸ್ಸನ್ನು ಬಳಕೆಗೆ ತಂದ ರಾಘವಾಂಕ ಕವಿಯೂ ಈ ಶತಮಾನದವನೇ. ಚಂಪೂ, ವಚನ, ರಗಳೆ, ಷಟ್ಪದೀ ಈ ನಾಲ್ಕು ಕಾವ್ಯವಾಹಿನಿಗಳ ಸಂಗಮ ಈ ಶತಾಬ್ದದ ವೈಶಿಷ್ಟ್ಯ.

ನಯಸೇನನ ಧರ್ಮಾಮೃತ ಪಂಚತಂತ್ರದಂತೆಯೇ ಅನೇಕ ಕಥೆ ಉಪಕಥೆಗಳನ್ನೊಳಗೊಂಡು ಒಂದು ಕಥಾಕೋಶವೇ ಆಗಿದೆ. ಜೈನಧರ್ಮದ ಹಿರಿಮೆಯನ್ನು ಹೊಗಳುವ ಹಿರಿಯಾಸೆಯಿಂದ ನಯಸೇನ ಈ ಚಂಪೂಕೃತಿಯನ್ನು ರಚಿಸಿದ್ದಾನೆ. ಈತ ಹಿಂದಿನ ಜೈನಕವಿಗಳಂತಲ್ಲ. ಸ್ವಧರ್ಮ ಉತ್ಕರ್ಷವನ್ನು ಹೇಳುತ್ತ ಹೇಳುತ್ತ ಅಲ್ಲಲ್ಲಿ ಅನ್ಯಧರ್ಮಗಳನ್ನೀತ ಹಾಸ್ಯಮಾಡುತ್ತಾನೆ. ಆದರೆ ಈ ಕವಿ ತನ್ನ ಕೃತಿಯಲ್ಲಿ ಉತ್ತಮ ಗದ್ಯರಚನಾ ಕೌಶಲವನ್ನು ಮೆರೆದಿದ್ದಾನೆ. ಇವನ ಸರಳ ಶೈಲಿ ಮೆಚ್ಚುವಂಥಾದ್ದು. ಇವನ ಉಪಮೆಗಳು ಅನೇಕ ವೇಳೆ ಸಾಲುಗಟ್ಟಿ ಬರುತ್ತವೆ. ನಯಸೇನ ಕನ್ನಡದ ಅಭಿಮಾನಿ. ಕನ್ನಡಕ್ಕೆ ಸಂಸ್ಕೃತ ಬೆರೆಸುವುದು ಇವನಿಗೆ ಸಮ್ಮತವಲ್ಲ. ಅನಗತ್ಯವಾದ ಸಂಸ್ಕೃತ ಶಬ್ದಗಳನ್ನು ಬಳಸಿ ಕನ್ನಡದಲ್ಲಿ ಬರೆಯ ಹೊರಡುವುದು ತುಪ್ಪಕ್ಕೆ ಎಣ್ಣೆ ಸೇರಿಸಿದಂತೆ ಆಗುವುದೆಂದು ಅವನ ಹೇಳಿಕೆ. ಆದರೆ ಆಂಡಯ್ಯನಂತೆ ಸಂಸ್ಕೃತಪದಗಳನ್ನು ಬಳಸಲೇಬಾರದೆಂಬ ಹಟ ನಯಸೇನನಿಗೆ ಇಲ್ಲ. ಸುಲಭವಾಗಿ ಎಲ್ಲರಿಗೂ ತಿಳಿಯುವ ಸಂಸ್ಕೃತ ಮಾತುಗಳ ಬಳಕೆಗೆ ನಯಸೇನನ ವಿರೋಧವಿಲ್ಲ. ಧರ್ಮಾಮೃತ ಜೈನಧರ್ಮದ ತತ್ತ್ವಗಳ ಉತ್ತಮ ಕೈಪಿಡಿಯಂತೆ ಇದೆಯಾದರೂ ಅದೊಂದು ಸುಂದರವಾದ ಕಾವ್ಯ.

ನಯಸೇನ ಆರಂಭಿಸಿದ ಅನ್ಯಧರ್ಮದ ಹಾಸ್ಯ ಈ ಶತಮಾನನ ಬೇರೆ ಕವಿ ಕೃತಿಗಳಲ್ಲಿ ಇನ್ನೂ ವೃದ್ಧಿಯಾಗಿದೆ. ಬ್ರಹ್ಮಶಿವನ ಸಮಯಪರೀಕ್ಷೆ ವೃತ್ತವಿಲಾಸನೆಂಬ ಕವಿಯ ಧರ್ಮಪರೀಕ್ಷೆ ಅನ್ಯಮತಗಳನ್ನು ಕುರಿತ ಅಪಹಾಸ್ಯಕ್ಕೆ ಉತ್ತಮ ನಿದರ್ಶನಗಳೆನ್ನಬಹುದು. ಸಮಯಪರೀಕ್ಷೆಯಲ್ಲಿ ಆ ಪ್ತಾ ಗ ಮ ಧ ರ್ಮ ವ ನ್ನೂ ಅನಾಪ್ತಾಗಮ ಧರ್ಮವನ್ನೂ ಹೇಳಿರುವೆನೆಂದು ಕವಿ ತಿಳಿಸಿದ್ದಾನೆ. ಜೈನಧರ್ಮವೇ ಆಪ್ತಾಗಮ ಧರ್ಮ. ಶೈವವೈಷ್ಣವ ಧರ್ಮಗಳೇ ಅನಾಪ್ತಾಗಮಧರ್ಮಗಳು. ಇತರ ಮತಗಳನ್ನು ನಿಂದಿಸುವುದು ತಪ್ಪಲ್ಲವೆಂದೇ ಬ್ರಹ್ಮಶಿವನ ಮತ. ಗ್ರಂಥ ಪದ್ಯರೂಪವಾಗಿದೆ. ಆಡುಮಾತಿನಂತೆ ಸಹಜವೂ ಸರಳವೂ ಆದ ಭಾಷೆಯ ಬಳಕೆ ಬ್ರಹ್ಮಶಿವನ ಶೈಲಿಗೆ ಮೆರಗು ತಂದಿದೆ.

ಚಂದ್ರಪ್ರಭಪುರಾಣವನ್ನು ರಚಿಸಿದ ಅಗ್ಗಳದೇವ, ಲೀಲಾವತೀ ಪ್ರಬಂಧಂ ಮತ್ತು ನೇಮಿನಾಥಪುರಾಣಗಳನ್ನು ರಚಿಸಿದ ನೇಮಿಚಂದ್ರ ಮೊದಲಾದ ಜೈನಕವಿಗಳು ಈ ಶತಾಬ್ದದ ಹಿರಿಯ ಕವಿಗಳು. ಇವರ ಪ್ರತಿಭೆ, ಪಾಂಡಿತ್ಯ, ಕಲ್ಪನಾವಿಲಾಸ, ವರ್ಣನಾಕುಶಲತೆಗಳು ಕೊಂಡಾಡುವಂಥವು. ಕೆಲವು ವೇಳೆ ಕಥೆಗಿಂತ ವರ್ಣನೆ ಹೆಚ್ಚು—ಎಂಬ ಆಕ್ಷೇಪಣೆಗೂ ಇವರು ಗುರಿಯಾಗಿದ್ದಾರೆ. ಇವರೂ ಈ ಕಾಲದ ಇತರ ಚಂಪೂ ಕವಿಗಳೂ ಸಂಸ್ಕೃತದಲ್ಲಿ ವಿಶೇಷವಾದ ಪಾಂಡಿತ್ಯಗಳಿಸಿದವರು. ಇವರ ಭಾಷಾಪ್ರಭುತ್ವ ಅತಿಶಯವಾದದ್ದು. ರುದ್ರಭಟ್ಟನೆಂಬ ಬ್ರಾಹ್ಮಣಕವಿ ವಿಷ್ಣುಪುರಾಣದ ಐದನೆಯ ಅಂಶವನ್ನೇ ಆಧಾರವಾಗಿಟ್ಟುಕೊಂಡು ರಚಿಸಿದ ಜಗನ್ನಾಥ ವಿಜಯ ಮಹಾಪ್ರೌಢವಾದ ಚಂಪೂಕಾವ್ಯ. ಇದು ಸಂಸ್ಕೃತ ವಿದ್ವಾಂಸರ ಗಮನವನ್ನು ಸೆಳೆದಿದೆ. ಈ ಕಾವ್ಯದ ಮೊದಲ ಪದ್ಯಗಳಿಗೆ ಸಂಸ್ಕೃತ ವ್ಯಾಖ್ಯಾನವೊಂದು ಹುಟ್ಟಿದೆ. ವೈದಿಕ ಪುರಾಣಕಥೆಗಳನ್ನು ಕನ್ನಡದಲ್ಲಿ ಬರೆದ ಕವಿಗಳಲ್ಲಿ ರುದ್ರಭಟ್ಟನೇ ಮೊದಲನೆಯವ. ಈತನ ಕವಿತಾವೈಖರಿಯನ್ನು ಸಮಕಾಲೀನರು ವಿಶೇಷವಾಗಿ ಮೆಚ್ಚಿಕೊಂಡಿದ್ದರು. ಈತ ಪಂಪನ ಕೃತಿಗಳಿಂದ ಪ್ರಭಾವಿತನಾಗಿದ್ದಾನೆ.

ಈ ಕಾಲದಲ್ಲಿ ಉದಯಾದಿತ್ಯ, ಇಮ್ಮಡಿ ನಾಗವರ್ಮ ಮೊದಲಾದ ಪಂಡಿತ ಕವಿಗಳು ಕಾವ್ಯಾಭ್ಯಾಸಕ್ಕೆ ಉಪಯುಕ್ತವಾದ ವ್ಯಾಕರಣ, ಅಲಂಕಾರ, ನಿಘಂಟು ಮೊದಲಾದ ಶಾಸ್ತ್ರ ಗ್ರಂಥಗಳನ್ನು ರಚಿಸಿ ಪ್ರಸಿದ್ಧರಾದರು.

ಈ ಕಾಲದಲ್ಲಿ ಸಾಹಿತ್ಯಕ್ಷೇತ್ರದಲ್ಲಿ ಒಂದು ಕ್ರಾಂತಿಯನ್ನೇ ನಡೆಸಿದ ಯಶಸ್ಸು ವೀರಶೈವ ವಚನಕಾರರದು. ಇದುವರೆಗಿನ ಕನ್ನಡಕವಿಗಳು ಬಹಳಮಟ್ಟಿಗೆ ಸಂಸ್ಕೃತದಿಂದ ಸಾರಸಂಗ್ರಹಪರಾಯಣರಾಗಿದ್ದರು. ಸಂಸ್ಕೃತದ ಗ್ರಂಥಗಳನ್ನು ಅನುವಾದ ಮಾಡುವ ಹವ್ಯಾಸ ಅವರದು. ಛಂದಸ್ಸು ಸಂಸ್ಕೃತದ್ದು. ಬಳಸುವ ಭಾಷೆಯಲ್ಲಿಯೂ ಸಂಸ್ಕೃತ ಪದಗಳ ಆಧಿಕ್ಯವಿತ್ತು. ವಸ್ತು, ರೀತಿ, ಭಾಷೆ, ಶಬ್ದಸಂಪತ್ತು—ಎಲ್ಲಕ್ಕೂ ಚಂಪೂಕವಿಗಳು ಸಂಸ್ಕೃತದ ಕಡೆಗೇ ನೋಡುತ್ತಿದ್ದರು. ವಚನಕಾರರು ಈ ಪರಾವಲಂಬನವನ್ನು ತೊರೆದರು. ಅವರ ವಚನಗಳು ಬೇರೆ ಯಾವ ಕವಿ ಕೃತಿಗಳ ಅನುವಾದಗಳೂ ಅಲ್ಲ. ಮತಪ್ರಚಾರ, ತತ್ತ್ವೋಪದೇಶ, ನೀತಿ ನಿರೂಪಣೆಗಳ ಉದ್ದೇಶದಿಂದ ಶಿವಶರಣರು ಈ ಕಾಲದಲ್ಲಿ ತಮ್ಮ ಅನೇಕ ವಚನಗಳನ್ನು ರಚಿಸಿದರು. ಅವು ಬಹುಮಟ್ಟಿಗೆ ಆಶು ಕವಿತೆಗಳಂತೆ ಕಾಣುತ್ತವೆ. ಶರಣರು ತಾವು ಬದುಕಿನಲ್ಲಿ ಕಂಡ ಅನೇಕ ಅನ್ಯಾಯಗಳನ್ನು ಪ್ರತಿಭಟಿಸಲು ಆವೇಶದಿಂದ ಮಾತನಾಡಿದ್ದಾರೆ. ಶರಣರು ಭಕ್ತಿಯ ಭರದಲ್ಲಿ ಮಾಡಿದ ಉಪದೇಶವಾಕ್ಯಗಳನ್ನು ಶ್ರೋತೃಗಳಾದ ಭಕ್ತರು ಬರೆದಿಟ್ಟರೆಂದು ತೋರುತ್ತದೆ. ಜೇಡರದಾಸಿಮಯ್ಯನೆಂಬ ಭಕ್ತಾಗ್ರೇಸರನೇ ವಚನಕಾರರಲ್ಲಿ ಮೊದಲನೆಯವನೆಂದು

ತಿಳಿಯುತ್ತದೆ. ಈತ ಬಸವಣ್ಣನಿಗಿಂತ ಪ್ರಾಚೀನನೇ ಇರಬಹುದು. ರಾಮನಾಥ ಎಂಬ ಅಂಕಿತವನ್ನು ಬಳಸುವ ಈ ಶರಣ ಶಿವಭಕ್ತಿಯ ಹಿರಿಮೆಯನ್ನು ಹೃದ್ಯವಾದ ಶೈಲಿಯಲ್ಲಿ ನಿರೂಪಿಸಿದ್ದಾನೆ. ಆದರೆ ವಚನ ಸಾಹಿತ್ಯ ಹೆಚ್ಚು ಬಳಕೆಗೆ ಬಂದು ಪ್ರಸಿದ್ಧವಾದದ್ದು ಕಲ್ಯಾಣದ ಬಿಜ್ಜಳನ ಭಂಡಾರಿಯಾಗಿದ್ದ ಬಸವಣ್ಣನ ಕಾಲದಲ್ಲಿಯೇ. ಬಸವಣ್ಣ ವೀರಶೈವ ಮತಸ್ಥಾಪಕನಲ್ಲದಿದ್ದರೂ ಅತಿಶಯವಾದ ಮನ್ನಣೆ ಭಕ್ತಿಗಳಿಗೆ ಪಾತ್ರನಾದ, ಮತಪ್ರಚಾರಕನಾದ ಆಚಾರ್ಯ. ಲಿಂಗಧಾರಣೆ, ಜಂಗಮಾರಾಧನೆ, ಮೊದಲಾದ ತತ್ತ್ವಗಳನ್ನು ಈತ ತನ್ನ ವಚನಗಳಲ್ಲಿ ಯಶಸ್ವಿಯಾಗಿ ನಿರೂಪಿಸಿದ್ದಾನೆ. ಅನೇಕ ಪುರಾತನರ ಚರಿತ್ರೆಗಳನ್ನೂ ಅಲ್ಲಲ್ಲಿ ಸೂಕ್ಷ್ಮವಾಗಿ ಹೇಳಿದ್ದಾನೆ. ಎಲ್ಲಕ್ಕಿಂತ ಮಿಗಿಲಾಗಿ ವೀರಶೈವ ಧರ್ಮದ ಸಾರತತ್ತ್ವಗಳನ್ನು ತಿಳಿಗನ್ನಡದಲ್ಲಿ ಎಲ್ಲರಿಗೂ ಸುಲಭವಾಗಿ ಬೋಧೆಯಾಗುವಂತೆ ಉಪದೇಶಿಸಿ ಕೃತಕೃತ್ಯನಾಗಿದ್ದಾನೆ. ಈತನ ಸಮಕಾಲೀನರಾದ ಅಲ್ಲಮಪ್ರಭು, ಸಿದ್ಧರಾಮ, ಚೆನ್ನಬಸವ, ಅಂಬಿಗರ ಚೌಡಯ್ಯ, ಮಡಿವಾಳ ಮಾಚಯ್ಯ ಮೊದಲಾದ ಅನೇಕ ಶಿವಶರಣರು ವಚನಗಳನ್ನು ರಚಿಸಿದ್ದಾರೆ. ಅಕ್ಕಮಹಾದೇವಿಯೆಂಬ ಶರಣೆಯೊಬ್ಬಳು ಚನ್ನಮಲ್ಲಿಕಾರ್ಜುನ ಎಂಬ ಅಂಕಿತದಲ್ಲಿ ಅನೇಕ ಸುಂದರವಾದ ವಚನಗಳನ್ನು ರಚಿಸಿದ್ದಾಳೆ. ವೀರಶೈವ ವಚನಕಾರ್ತಿಯರಲ್ಲಿ ಈಕೆ ಪ್ರಮುಖಳಾದವಳು. ಇನ್ನೂ ಅನೇಕ ಮಹಿಳೆಯರು ಈ ಕಾಲದಲ್ಲಿ ಸ್ಫೂರ್ತಿಯಿಂದ ವಚನರಚನೆಗೆ ಕೈ ಹಾಕಿದರು.

ಇದುವರೆಗೆ ರಾಜಾಸ್ಥಾನದಲ್ಲಿಯೇ ರಾರಾಜಿಸುತ್ತಿದ್ದ ಕನ್ನಡ ಕಾವ್ಯ ವಚನಕಾರರ ಕೃಪೆಯಿಂದ ಜನಪಥಕ್ಕೆ ಬಂತು. ಬಸವಣ್ಣ ಬಿಜ್ಜಳನ ಆಸ್ಥಾನದಲ್ಲಿದ್ದನಾದರೂ ರಾಜನ ಸಂತೋಷಾರ್ಥವಾಗಿ ಕೃತಿರಚನೆ ಮಾಡಲಿಲ್ಲ. ವಚನಕಾರರನೇಕರು ಪಂಡಿತರಲ್ಲ. ಭಕ್ತಿಶ್ರೀಮಂತರಾದ ಈ ಜನ ತಮ್ಮ ಸಾಧನೆಯಿಂದ ಶಿವಸಾಕ್ಷಾತ್ಕಾರ ಪಡೆದು ತಮ್ಮ ಶಿವಾನುಭವವನ್ನು ಲೋಕ ಹಿತಾರ್ಥವಾಗಿ ವಚನರೂಪದಲ್ಲಿ ಹೇಳಿದರು. ಅಲ್ಲಮಪ್ರಭುವಿನ ಅಧ್ಯಕ್ಷತೆಯಲ್ಲಿ ನಡೆಯುತ್ತಿದ್ದ ಅನುಭವಮಂಟಪದ ಧರ್ಮ ಸಭೆಗಳಲ್ಲಿ ಶಿವಶರಣರು ತತ್ತ್ವ ಮಥನಮಾಡಿ ತೇಲಿದ ಇತ್ಯರ್ಥಗಳನ್ನು ಜನತೆಯಲ್ಲಿ ಪ್ರಸಾರಮಾಡುತ್ತಿದ್ದರೆಂದು ಹೇಳಲಾಗಿದೆ. ಹೀಗೆ ತತ್ತ್ವ ಜಿಜ್ಞಾಸೆಯಿಂದಲೂ ಸ್ವಾನುಭವದ ತೀವ್ರತೆಯಿಂದಲೂ ಮೂಡಿಬಂದ ಕೃತಿಗಳಾದ್ದರಿಂದ ವಚನಗಳ ಮಾತುಗಳು ಭಾವಭರಿತವಾಗಿದ್ದು ಶಕ್ತಿಯುತವಾಗಿವೆ. ಗಹನವಾದ ತತ್ತ್ವಗಳನ್ನು ಶರಣರು ಸುಲಭವಾದ ಕನ್ನಡದಲ್ಲಿ ಹೇಳಿದ್ದಾರೆ. ಕನ್ನಡ ಭಾಷೆಯ ಶಕ್ತಿಯನ್ನು ಅರಿತುಕೊಳ್ಳಬೇಕಾದರೆ ವೀರಶೈವ ವಚನಸಾಹಿತ್ಯವನ್ನು ಗಮನಿಸಬೇಕು. ವಚನಗಳಲ್ಲಿ ವಾಗಾಡಂಬರಕ್ಕೆ. ಅಲಂಕಾರಶೈಲಿಗೆ ಎಡೆಯಿಲ್ಲ. ಸಾಮಾನ್ಯ ಜನರನ್ನು ಸೇರಬೇಕಾದ್ದರಿಂದ ಇವುಗಳ ಭಾಷೆ ಅತ್ಯಂತ ಸುಲಭವಾಗಿರಬೇಕಾದದ್ದು ಅಗತ್ಯವಾಯಿತು. ಶಬ್ದಾಲಂಕಾರ ಅರ್ಥಾಲಂಕಾರಗಳನ್ನು ಬುದ್ಧಿಪೂರ್ವಕವಾಗಿ ತಂದು ತುಂಬುವ ಹವ್ಯಾಸ ಇಲ್ಲಿ ಸುತರಾಂ ಸಲ್ಲದು. ವೈಖರಿಯಲ್ಲಿ ಅಲಂಕಾರಗಳು, ಉಕ್ತಿ ಚಮತ್ಕಾರಗಳು ಬರುತ್ತವಾದರೂ ಅವೆಲ್ಲ ಸಹಜವೂ ಸುಂದರವೂ ಉಚಿತವೂ ಆಗಿವೆ.

> ಅರಗು ತಿಂದು ಕರಗುವ ದೈವವನೆಂತು ಸರಿಯೆಂಬೆನಯ್ಯಾ
> ಅವಸರಬಂದರೆ ಮಾರುವ ದೈವವನೆಂತು ಸರಿಯೆಂಬೆನಯ್ಯಾ
> ಅಂಜಿಕೆ ಬಂದರೆ ಹೂಳುವ ದೈವವನೆಂತು ಸರಿಯೆಂಬೆನಯ್ಯಾ
> ಸಹಜಭಾವದ ನಿಜೈಕ್ಯ ಸ್ಥಿರರೂಪ ನಿರ್ವಿಕಾರ ನಿರಂಜನ
> ಕೂಡಲಸಂಗಮದೇವನೊರ್ವನೇ ದೇವ ಕಾಣಿರೋ

ಎಂದು ನುಡಿದು ಶರಣರು ನಿರಾಕಾರ ಭಗವಂತನ ಆರಾಧನೆಯ ಹಿರಿಮೆಯನ್ನು ಹಾಡಿ ಹೊಗಳಿದ್ದಾರೆ. ಭಜನೆ, ಸ್ಮರಣೆ, ಕಥನ, ಶ್ರವಣಗಳಿಂದಲೇ ಧನ್ಯತೆಯನ್ನು ಪಡೆಯಬಹುದಾದರೂ ಭಕ್ತವೇಷಿಗಳ ಬೂಟಾಟಿಕೆಯ ಆಚಾರ ಖಂಡನೀಯವೆ.

> ಕರಿಕ ಕಂಚನ ನೆನೆದಡೆ ಕೆಂಚನಾಗಬಲ್ಲನೆ ? ದರಿದ್ರ
> ಸಿರಿವಂತನಾಗಬಲ್ಲನೆ ? ಮುನ್ನಿನ ಪುರಾತನರ ನೆನೆದು
> ಧನ್ಯನಾದೆನೆಂಬ ಮಾತಿನರಂಜಕರನೇನೆಂಬೆ ಕೂಡಲಸಂಗಮದೇವ

ತಳಕ್ಕೆ ನೀರೆರೆದರೆ ಮೇಲೆ ಪಲ್ಲವಿಸಿತ್ತು ನೋಡ ಎಂದು ವೃಕ್ಷದ ದೃಷ್ಟಾಂತದಿಂದ, ಭೂಲೋಕದಲ್ಲಿರುವ ಜಂಗಮನಿಗೆ ನೀಡಿದ್ದು ಕೈಲಾಸದಲ್ಲಿರುವ ಶಿವನಿಗೆ ಸೇರುವುದೆಂದು ಹೇಳಿ ಜಂಗಮಲಿಂಗ ಸಾಮರಸ್ಯವನ್ನು ನಿರೂಪಿಸಿದ್ದಾನೆ, ಬಸವಣ್ಣ. ಜಂಗಮನೇ ಲಿಂಗ ಕಾಣಾ ಎಂದು ಹೇಳುವುದಕ್ಕೂ ಶರಣರು ಹಿಂತೆಗೆದಿಲ್ಲ. ಆದರೆ ಭಕ್ತರ ಈ ಭಕ್ತಿ ಔದಾರ್ಯಗಳ ದುರ್ಲಾಭ ಪಡೆಯಲು ಹವಣಿಸುವ ದುಷ್ಟ ಜಂಗಮರನ್ನು ಖಂಡಿಸುವುದನ್ನೂ ಶರಣರು ಮರೆತಿಲ್ಲ.

> ಒಡೆಯನೊಡಗೊಂಡು ಒಡೆಯನರಮನೆಗೆ ಹೋದರೆ ಕೂಳ
> ಸೊಕ್ಕು ತಲೆಗೇರಿ ಒಡೆಯನರಸಿಯ ಸಂಗಡ ಸರಸಬೇಡ ಕಾಣಿರೋ

ಅಂದಿನ ವೀರಶೈವ ಸಮಾಜದ ಕುಂದುಕೊರತೆಗಳನ್ನು ಅನ್ಯಧರ್ಮಗಳವರ ಲೋಪದೋಷಗಳನ್ನು ಖಂಡಿಸುವುದೇ ಅಲ್ಲದೆ ವಚನಕಾರರು ತಮ್ಮ ಸಾಧನೆ, ಸಿದ್ಧಿ, ತಪಸ್ಸುಗಳ ಕಥೆಯನ್ನೂ ಅಲ್ಲಲ್ಲಿ ಹೇಳಿಕೊಂಡಿರುತ್ತಾರೆ. ಆದ್ದರಿಂದ ವಚನಗಳು ಶರಣರ ಆಧ್ಯಾತ್ಮಿಕ ಕಥೆಗಳಂತೆ ಇರುವುದೂ ಉಂಟು.

ಒಬ್ಬಿಬ್ಬರ ಹೊರತು ಎಲ್ಲ ವಚನಕಾರರೂ ಸಾಧಾರಣವಾಗಿ ಕೊನೆಯಲ್ಲಿ ಹೆಸರುಗಳನ್ನು ಹೇಳಿಕೊಳ್ಳದೆ ತಮ್ಮ ಅಂಕಿತಗಳನ್ನೇ ಬಳಸಿದ್ದಾರೆ. ರಾಮನಾಥ, ಕೂಡಲಸಂಗಮದೇವ, ಚೆನ್ನಮಲ್ಲಿಕಾರ್ಜುನ. ಕಪಿಲಸಿದ್ಧ ಮಲ್ಲಿಕಾರ್ಜುನ, ಗುಹೇಶ್ವರ ಮೊದಲಾದ ಅಂಕಿತಗಳು ಸುಪ್ರಸಿದ್ಧವಾಗಿವೆ. ವಚನಕಾರರಿಗೆ ಭಕ್ತಿಪ್ರಚಾರ ಮುಖ್ಯವಾಗಿತ್ತೇ ಹೊರತು ತಮಗೆ ಕವಿಕೀರ್ತಿ ಲಭಿಸಬೇಕೆಂಬ ಅಪೇಕ್ಷೆ ಇರಲಿಲ್ಲ. ತತ್ತ್ವದ ಉಪದೇಶ, ಸಮಾಜದ ಸುಧಾರಣೆ, ಜನತೆಯ ಅಭ್ಯುದಯ ಇಷ್ಟೇ ಶರಣರಾದ ವಚನಕಾರರ ಬದುಕಿನ ಧ್ಯೇಯ.

ವಚನಸಾಹಿತ್ಯ ಹುಲುಸಾಗಿ ಬೆಳೆಯುತ್ತಿದ್ದ ಕಾಲದಲ್ಲಿಯೇ ಹಂಪೆಯ ಹರೀಶ್ವರನೆಂಬ ಭಕ್ತ ಕವಿ ಅವತರಿಸಿ ಹಂಪೆಯಲ್ಲಿ ನೆಲೆಸಿ ವಿರೂಪಾಕ್ಷಸ್ವಾಮಿಯ ಭಕ್ತಾಗ್ರೇಸರನಾಗಿ ಅನೇಕ ಶಿವಶರಣ ಶರಣೆಯರ ಪುಣ್ಯ ಕಥೆಗಳನ್ನು ರಗಳೆಯ ಛಂದಸ್ಸಿನಲ್ಲಿ ರಚಿಸಿ ವೀರಶೈವಧರ್ಮ ಪ್ರಚಾರಕ್ಕೆ ಮಿಗಿಲಾದ ನೆರವು ನೀಡಿದ. ಬಸವರಾಜದೇವರ ರಗಳೆ ಎಂಬ ಈತನ ಅಪೂರ್ಣಕೃತಿ ಬಸವಣ್ಣನ ಜೀವನ ಕಥೆಯನ್ನೇ ಹೇಳುವಂಥಾದ್ದು. ಬಸವನ ಸಮಕಾಲೀನರಾದ ಪ್ರಭುದೇವ, ಮಹದೇವಿ, ಸಿದ್ಧರಾಮ ಮೊದಲಾದ ಶರಣರ ಕಥೆಗಳನ್ನೂ ಹರಿಹರ ರಚಿಸಿದ್ದಾನೆ. ತಮಿಳುನಾಡಿನ ಪ್ರಾಚೀನ ಶಿವಭಕ್ತರನೇಕರ ಕಥೆಗಳನ್ನು ಹೇಳಿದ್ದಾನೆ. ತಿರುನೀಲಕಂಠರು, ನಂಬಿಯಣ್ಣ, ಕಾರಿಕಾಲಮ್ಮೆ ಮೊದಲಾದುವು ಪ್ರಸಿದ್ಧವಾಗಿವೆ. ಹರಿಹರ ಒಟ್ಟು ನೂರೊಂದು ರಗಳೆಗಳನ್ನು ರಚಿಸಿರುವಂತೆ ತಿಳಿಯುತ್ತದೆ. ಗಿರಿಜಾಕಲ್ಯಾಣವೆಂಬ ಒಂದೇ ಒಂದು ಚಂಪೂಕಾವ್ಯವನ್ನು ಈತ ರಚಿಸಿರುವನಾದರೂ ಇವನಿಗೆ ರಗಳೆಯ ಛಂದಸ್ಸು ಚೆನ್ನಾಗಿ ಒಗ್ಗಿದೆ. ಆದ್ದರಿಂದಲೇ ಈತ ರಗಳೆಯ ಕವಿ ಎಂಬ ಖ್ಯಾತಿಯನ್ನು ಗಳಿಸಿದ್ದಾನೆ. ಬೇರೆ ಯಾವ ಕನ್ನಡ ಕವಿಯೂ ರಗಳೆಗಳನ್ನು ಇಷ್ಟು ಯಶಸ್ವಿಯಾಗಿ ಪ್ರಯೋಗಿಸಿಲ್ಲ. ಓದುಗರಲ್ಲಿ ಭಕ್ತಿಯ ಆವೇಶವೇ ಮೂಡುವಂತೆ ಬರೆಯಬಲ್ಲ ಅಸಾಧಾರಣ ಶಕ್ತಿ ಹರಿಹರನಿಗೆ ಇದೆ. ಶಿವಕಥೆ, ಶಿವಭಕ್ತರ ಕಥೆಗಳನ್ನಲ್ಲದೆ ಉಳಿದವರ ಕಥೆ ಹೇಳುವುದಿಲ್ಲವೆಂದು ಹರಿಹರನ ಪ್ರತಿಜ್ಞೆ. ತನ್ನ ಪ್ರತಿಜ್ಞೆಯನ್ನು ಸಾಧಿಸಿ ಈತ ಧನ್ಯನಾಗಿದ್ದಾನೆ. ಪ್ರಾಸಾದಿಕಶೈಲಿ, ಕಥನ ಕೌಶಲ, ಮಾತಿನ ಮೋಡಿ, ವರ್ಣನಾಚಾತುರ್ಯಗಳಿಂದಾಗಿ ಹರಿಹರ ಕನ್ನಡಸಾಹಿತ್ಯ ಜಗತ್ತಿನಲ್ಲಿ ಶಾಶ್ವತವಾದ ಸ್ಥಾನವನ್ನು ಗಳಿಸಿದ್ದಾನೆ. ಇವನ ಸಮಕಾಲೀನರೂ ಆಮೇಲಿನವರೂ ಆದ ಅನೇಕ ಕವಿಗಳು ಈತನಿಂದ ಸ್ಫೂರ್ತಿ ಪಡೆದು ಇವನನ್ನು ಆದರ್ಶವಾಗಿಟ್ಟುಕೊಂಡು ಕೃತಿರಚನೆಮಾಡಿ ಇವನನ್ನು ಕೊಂಡಾಡಿದ್ದಾರೆ.

ಹರಿಹರ ರಗಳೆಯ ಛಂದಸ್ಸಿನಲ್ಲಿ ಇಡೀ ಕಾವ್ಯವನ್ನೇ ಬರೆಯಲು ಮೊದಲಿಗನಾದರೆ ಅವನ ಸೋದರಳಿಯನೂ ಶಿಷ್ಯನೂ ಆದ ರಾಘವಾಂಕ ಷಟ್ಪದಿಯಲ್ಲಿ ಕಾವ್ಯ ರಚನೆ ಮಾಡಿರುವವರಲ್ಲಿ ಮೊದಲನೆಯವನಾಗಿದ್ದಾನೆ. ಇವನಿಗಿಂತ ಮುಂಚೆ ಇದ್ದ ಪೋಲಾಳ್ವ ದಂಡನಾಥನೆಂಬ ಕವಿ ಹರಿಚಾರಿತ್ರ ಎಂಬ ಒಂದು ಷಟ್ಪದೀ ಕಾವ್ಯವನ್ನು ರಚಿಸಿದನೆಂಬ ಹೇಳಿಕೆ ಪ್ರಸಿದ್ಧವಾಗಿದೆಯಾದರೂ ಆ ಕೃತಿ ಅಲಭ್ಯ. ರಾಘವಾಂಕನ ಹರಿಶ್ಚಂದ್ರಕಾವ್ಯ, ಸೋಮನಾಥಚರಿತ್ರೆ, ಸಿದ್ಧರಾಮಪುರಾಣ, ವೀರೇಶಚರಿತೆ ಎಂಬ ಕೃತಿಗಳು ಪ್ರಸಿದ್ಧವಾಗಿವೆ. ಅವನ ಉಳಿದೆರಡು ಕೃತಿಗಳು ಲಭಿಸಿಲ್ಲ.

ಹರಿಶ್ಚಂದ್ರ ಪರಮ ಶಿವಭಕ್ತನೆಂದೂ ಸತ್ಯವೆಂಬುದೆ ಹರನು, ಹರನೆಂಬುದೇ ಸತ್ಯ ಎಂಬ ತತ್ತ್ವವನ್ನು ಲೋಕಕ್ಕೆ ಬೆಳಗಿದ ಧನ್ಯನೆಂದೂ ಹೇಳಿ ರಾಘವಾಂಕ ಹರಿಶ್ಚಂದ್ರನ ಶಿವಭಕ್ತಿಯ ಆಧಿಕ್ಯವನ್ನು ವರ್ಣಿಸಿದ್ದರೂ ಹರಿಶ್ಚಂದ್ರನೆಂಬ ನರನ ಸ್ತುತಿಮಾಡಿದನೆಂದು ಸಿಟ್ಟುಗೊಂಡು ಹರಿಹರ ಅವನ ಹಲ್ಲು ಮುರಿದನೆಂದು ಒಂದು ಕಟ್ಟುಕಥೆ ಪ್ರಚಾರದಲ್ಲಿದೆ. ಬಹುಶಃ ಹರಿಶ್ಚಂದ್ರಕಾವ್ಯಕ್ಕಿಂತ ಅವನ ಸೋಮನಾಥ ಚರಿತ್ರೆ, ಸಿದ್ಧರಾಮ ಚರಿತ್ರೆಗಳು ವೀರಶೈವಭಕ್ತರಿಗೆ ಹೆಚ್ಚು ಪ್ರಿಯವೂ ಪೂಜ್ಯವೂ ಆಗಿವೆಯೆಂಬ ಅಂಶವನ್ನು ಈ ಕಥೆ ಧ್ವನಿಸುತ್ತದೆಂದು ತೋರುತ್ತದೆ. ಸೋಮನಾಥ ಚರಿತೆ ಅಥವಾ ಆದಿಶೆಟ್ಟಿಪುರಾಣ ಎಂಬ ಕಾವ್ಯದಲ್ಲಿ ಆದಯ್ಯನೆಂಬ ಶಿವಭಕ್ತ ಜೈನರ ಮೂದಲಿಕೆಗೆ ಮುನಿಸುಗೊಂಡು ಸುರಹೊನ್ನೆಯ ಬಸದಿಯೆಂದು ಪ್ರಸಿದ್ಧವಾಗಿದ್ದ ದೊಡ್ಡ ಜಿನಾಲಯದಲ್ಲಿದ್ದ ಜಿನಮೂರ್ತಿಯನ್ನು ಕಿತ್ತು ಅದರ ಸ್ಥಾನದಲ್ಲಿ ಸೋಮನಾಥನನ್ನು ಸ್ಥಾಪಿಸಿದ ಕಥೆಯಿದೆ. ಸಿದ್ಧರಾಮಚರಿತೆ ಅದರ ಹೆಸರೇ ಹೇಳುವಂತೆ ಬಸವಣ್ಣನ ಸಮಕಾಲೀನನಾದ ಕರ್ಮಯೋಗಿ ಶಿವಸಿದ್ಧರಾಮನ ದಿವ್ಯ ಚರಿತ್ರೆಯನ್ನು ಒಳಗೊಂಡಿದೆ. ಕಥೆಯ ನಿರೂಪಣೆ, ಸಂಭಾಷಣೆಯ ಚತುರತೆ, ನಾಟಕೀಯ ಸನ್ನಿವೇಶಗಳ ರಚನೆ, ಪಾತ್ರಚಿತ್ರಣ—ಈ ಎಲ್ಲ ದೃಷ್ಟಿಯಿಂದಲೂ ರಾಘವಾಂಕನ ಕೃತಿಗಳಲ್ಲಿ ಹರಿಶ್ಚಂದ್ರಕಾವ್ಯ ಅತ್ಯುತ್ತಮವಾದುದಾಗಿದೆ. ಕಥೆ ಹೇಳುವುದರಲ್ಲಿ ರಾಘವಾಂಕ ಜಾಣ. ಇವನ ಸಂಭಾಷಣೆಯ ಶೈಲಿ ರಮ್ಯವಾಗಿದ್ದು

ಇಂದಿಗೂ ಜನಮೆಚ್ಚಿಗೆಗೆ ಪಾತ್ರವಾಗಿದೆ. ರಾಘವಾಂಕ ಹರಿಹರನಿಗೆ ತಕ್ಕ ಶಿಷ್ಯನೇ ಸರಿ. ಪ್ರಾಯಿಕವಾಗಿ ಎಲ್ಲ ವೀರಶೈವ ಕವಿಗಳ ಹೊಗಳಿಕೆಗೂ ಈತ ಪಾತ್ರ ನಾಗಿದ್ದಾನೆ.

ಹರಿಹರ, ರಾಘವಾಂಕ, ಕೆರೆಯಪದ್ಮರಸರು ಸಮಕಾಲೀನರೆಂದು ತಿಳಿದುಬಂದಿದೆ. ಹನ್ನೆರಡನೆಯ ಶತಮಾನದ ಕೊನೆಯ ವೇಳೆಗೆ ಚಂಪೂ, ವಚನ, ರಗಳೆ, ಷಟ್ಪದಿ ಮೊದಲಾದ ಕಾವ್ಯಜಾತಿಗಳು ಬಳಕೆಗೆ ಬಂದು ಕನ್ನಡಸಾಹಿತ್ಯ ಬಹುಮುಖವಾಗಿ ಅಭಿವೃದ್ಧಿಹೊಂದತೊಡಗಿತು. ಜೈನ, ವೈಷ್ಣವ, ಶೈವಕವಿಗಳು ಕನ್ನಡದಲ್ಲಿ ಕೃತಿರಚನೆ ಮಾಡುತ್ತಿದ್ದರು. ತಮ್ಮ ತಮ್ಮ ಮತಧರ್ಮಗಳಿಗೆ ಸಂಬಂಧಿಸಿದ ಕೃತಿಗಳನ್ನೇ ಅಲ್ಲದೆ ಹಲವು ಲಕ್ಷಣ ಗ್ರಂಥಗಳನ್ನೂ ಈ ಕಾಲದ ಕವಿಗಳು ರಚಿಸಿ ಕನ್ನಡಶಾಸನ ಸಂಪತ್ತನ್ನು ಸಮೃದ್ಧವಾಗಿಸಿದರು.

ಹದಿಮೂರನೆಯ ಶತಾಬ್ದದಲ್ಲಿ ಬ್ರಾಹ್ಮಣ, ಜೈನ, ವೀರಶೈವ ಕವಿಗಳೆಲ್ಲರೂ ಕನ್ನಡ ಕಾವ್ಯದೇವಿಯ ಕೈಂಕರ್ಯವನ್ನು ನಡೆಸಿದರು. ಈ ಕಾಲದಲ್ಲಿ ಸಾಂಗತ್ಯ ಛಂದಸ್ಸು ಮನ್ನಣೆ ಪಡೆಯಿತು. ಶಿಶುಮಾಯಣ ಮೊದಲಾದವರು ತಮ್ಮ ಕೃತಿಗಳನ್ನು ಸಾಂಗತ್ಯದಲ್ಲಿಯೇ ಬರೆದರು. ನರಹರಿತೀರ್ಥ ಈ ಕಾಲದಲ್ಲಿ ಕೆಲವು ಕೀರ್ತನೆಗಳನ್ನು ರಚಿಸಿ ವೈಷ್ಣವ ಭಕ್ತಿಸಾಹಿತ್ಯದ ಆರಂಭೋತ್ಸವವನ್ನು ನೆರವೇರಿಸಿದ. ಅಂಡಯ್ಯನೆಂಬ ಜೈನಕವಿ ಸಂಸ್ಕೃತದ ನೆರವಿಲ್ಲದೆ ಕನ್ನಡದಲ್ಲಿ ಕಾವ್ಯಸೃಷ್ಟಿ ಸಾಧ್ಯವಾಗದೆಂಬ ಮೂದಲಿಕೆಯಿಂದ ಕವಿಗಳನ್ನು ರಕ್ಷಿಸುವುದಕ್ಕಾಗಿ ಕಬ್ಬಿಗರ ಕಾವ ಎಂಬ ಅಚ್ಚಗನ್ನಡದ ಕಾವ್ಯವನ್ನು ರಚಿಸಿದುದು ಈ ಶತಾಬ್ದದಲ್ಲಿಯೇ. ಮಲ್ಲಿಕಾರ್ಜುನನೆಂಬ ಪಂಡಿತಕವಿ ಸೂಕ್ತಿಸುಧಾರ್ಣವ ಎಂಬ ಒಂದು ಸಂಕಲನ ಗ್ರಂಥವನ್ನು ರಚಿಸಿದುದೂ ಕನ್ನಡದ ಅತ್ಯಂತ ಪ್ರಸಿದ್ಧ ವ್ಯಾಕರಣಗ್ರಂಥ ಶಬ್ದಮಣಿ ದರ್ಪಣ ಹುಟ್ಟಿದುದೂ ಕನ್ನಡದ ಮೊದಲ ರಸವಿವೇಚನಾಗ್ರಂಥ ಶೃಂಗಾರ ರತ್ನಾಕರ ಹುಟ್ಟಿದುದೂ ಈ ಶತಾಬ್ದದಲ್ಲಿಯೇ.

ಶಿಶುಮಾಯಣನ ಅಂಜನಾಚರಿತ್ರೆ ಹದಿನೈದು ಸಂಧಿಗಳುಳ್ಳ ಸಾಂಗತ್ಯಗ್ರಂಥ. ರವಿಷೇಣನ ಸಂಸ್ಕೃತದ ಪದ್ಮಚರಿತೆ ಇದಕ್ಕೆ ಮೂಲ. ತ್ರಿಪುರದಹನ ಸಾಂಗತ್ಯ ಎಂಬ ಇನ್ನೊಂದು ಸಣ್ಣ ಗ್ರಂಥ ಜನನಜರಾಮರಣಗಳೆಂಬ ಹೆಸರಿಂದ ಘನತರವಹ ಮೂರು ಪುರಗಳನ್ನು ಗೆಲ್ಲುವ ಕಥೆಯಾಗಿದೆ. ಬಂಧುವರ್ಮ ಜೀವಸಂಬೋಧನೆ ಮತ್ತು ಹರಿವಂಶಾಭ್ಯುದಯ ಎಂಬ ಎರಡು ಚಂಪೂಕಾವ್ಯಗಳನ್ನು ಲಲಿತಶೈಲಿಯಲ್ಲಿ ರಚಿಸಿದ್ದಾನೆ. ನಯಸೇನನಂತೆ ಇವನೂ ಜೀವಸಂಬೋಧನೆಯಲ್ಲಿ ದ್ವಾದಶಾನುಪ್ರೇಕ್ಷೆಗಳನ್ನು ಹನ್ನೆರಡು ಅಧಿಕಾರಗಳಲ್ಲಿ ವರ್ಣಿಸಿ ನೀತಿ ವೈರಾಗ್ಯಗಳನ್ನು ಬೋಧಿಸುವುದರಲ್ಲಿ ತೊಡಗಿದ್ದಾನೆ. ಪ್ರತಿ ಆಶ್ವಾಸದಲ್ಲಿಯೂ ಒಂದು ಕಥೆ ಇದೆ. ಹರಿವಂಶಾಭ್ಯುದಯ 22ನೆಯ ತೀರ್ಥಂಕರನಾದ ನೇಮಿನಾಥಸ್ವಾಮಿಯ ಚರಿತ್ರೆ. ಇದರಲ್ಲಿ ಜೈನಸಂಪ್ರದಾಯಾನುಸಾರವಾದ ಕೃಷ್ಣಕಥೆ ಬಂದಿದೆ.

ಲೆಕ್ಕಿಗರ ಪಿರಿಯನೆನಿಸಿಕೊಂಡ ಅಂಡಯ್ಯ (ನೋಡಿ) ಚಿಕ್ಕದಾದರೂ ಚೊಕ್ಕವಾದ ಒಂದು ಸುಂದರಕಾವ್ಯವನ್ನು ರಚಿಸಿದ್ದಾನೆ. ಇದು ಮನ್ಮಥ ವಿಜಯದ ಕಥೆಯನ್ನೊಳಗೊಂಡಿರುವುದರಿಂದ ಕಾವನಗೆಲ್ಲ; ಕಾವ್ಯದ ಉದ್ದಕ್ಕೂ ಪ್ರಕೃತಿ ಸೌಂದರ್ಯದ ವರ್ಣನೆ ಇರುವುದರಿಂದ ಸೊಬಗಿನ ಸುಗ್ಗಿ; ' ಎಲ್ಲಕ್ಕಿಂತ ಮಿಗಿಲಾಗಿ ಕನ್ನಡ ಕವಿಗಳಿಗೆ ಅದುವರೆಗೆ ಅಂಟಿಕೊಂಡಿದ್ದ ಒಂದು ಆಕ್ಷೇಪವನ್ನು ನಿವಾರಿಸುವುದರಿಂದ ಕಬ್ಬಿಗರ ಕಾವ. ಸಂಸ್ಕೃತವನ್ನು ಬಳಸದೆ ಕನ್ನಡದಲ್ಲಿ ಸ್ವತಂತ್ರವಾಗಿ ಕೃತಿರಚನೆ ಮಾಡುವುದು ಸಾಧ್ಯವೆಂಬುದನ್ನು ಅಂಡಯ್ಯ ತನ್ನ ಕೃತಿಯಿಂದ ಸಿದ್ಧಾಂತಮಾಡಿ ತೋರಿಸಿದ್ದಾನೆ. ಹಾಗೆ ಮಾಡುವಾಗ ತದ್ಭವ ಶಬ್ದಗಳನ್ನು ಯಥೇಷ್ಟವಾಗಿ ಬಳಸಿಕೊಂಡಿದ್ದಾನೆ.

ಈ ಶತಾಬ್ದದ ಗಣ್ಯಕವಿ ಜನ್ನ. ವೀರಬಲ್ಲಾಳನೆಂದು ಹೆಸರುಗೊಂಡ ಗಿರಿದುರ್ಗಮಲ್ಲರಾಜನ ಆಸ್ಥಾನಕವಿ. ಜನ್ನ, ಜನ್ನಯ್ಯ, ಜನ್ನಮಯ್ಯ, ಜನ್ನಿಗ, ಜನ್ನಮರಸ, ಜನಾರ್ದನದೇವ, ಜಾನಕಿ ಎಂದು ಕವಿ ತನ್ನ ಹೆಸರನ್ನು ವಿಧವಿಧವಾಗಿ ಹೇಳಿಕೊಂಡಿದ್ದಾನೆ. ಕವಿಭಾಳನೇತ್ರ, ಅಸಹಾಯಸುಕವಿ, ಸಾಹಿತ್ಯರತ್ನಾಕರ ಎಂದು ಜನ್ನ ತನ್ನನ್ನು ಹೊಗಳಿಕೊಂಡಿದ್ದಾನೆ. ಈತ ಯಶೋಧರಚರಿತೆ ಮತ್ತು ಅನಂತನಾಥ ಪುರಾಣ ಎಂಬ ಎರಡು ಕೃತಿಗಳನ್ನು ಕನ್ನಡಕ್ಕೆ ನೀಡಿದ್ದಾನೆ. ಯಶೋಧರಚರಿತೆ ನಾಲ್ಕು ಅವತಾರಗಳ ಚಿಕ್ಕ ಪದ್ಯಕಾವ್ಯ. ಕೇವಲ ಕಂದ ಛಂದಸ್ಸಿನಲ್ಲಿಯೆ ಸಂಕೀರ್ಣವಾದ ಕಥೆಯನ್ನು ಮನೋಜ್ಞವಾಗಿ ಹೇಳಿರುವ ಕವಿಪ್ರತಿಭೆ ಪ್ರಶಂಸನೀಯವಾದುದು. ಇದರಲ್ಲಿ ಜೀವ ಹಿಂಸೆಯಿಂದೊದಗುವ ಅನರ್ಥಪರಂಪರೆಯನ್ನು ಮನ ಮುಟ್ಟುವಂತೆ ಚಿತ್ರಿಸಿ ಜೀವದಯೆಯ ಮಹಿಮೆಯನ್ನು ಕವಿ ಕೊಂಡಾಡಿದ್ದಾನೆ. ಜಿನಧರ್ಮದ ಪ್ರಾಶಸ್ತ್ಯ ನಿರೂಪಣೆಯೇ ತನ್ನ ಮುಖ್ಯಧ್ಯೇಯವಾದರೂ ಜನ್ನ ಬಹು ಚಮತ್ಕಾರವಾಗಿ ಕಥೆಯನ್ನು ಹೆಣೆದು ಕೇವಲ ಸಂಕಲ್ಪವಧೆಯಿಂದ ಯಶೋಧರ ರಾಜನಿಗೆ ಹಲವು ಹೀನಜನ್ಮಗಳುಂಟಾದುದನ್ನೂ ಜಿನದೀಕ್ಷೆಯನ್ನು ವಹಿಸಿ ಸಮಾಧಿಮರಣವುಂಟಾದ ಮಾತ್ರದಿಂದ ಉತ್ತಮವಾದ ಮಾನುಷಜನ್ಮ ಲಭಿಸಿದುದನ್ನೂ ಹೇಳಿ ಕಥೆಯ ಸನ್ನಿವೇಶಗಳಿಂದಲೇ ಜೀವದಯೆಯ ಮಹಿಮೆಯನ್ನು ಪ್ರತಿಪಾದಿಸಿದ್ದಾನೆ. ಕಾವ್ಯದ ಯಾವ ಭಾಗದಲ್ಲಿಯೂ ಕವಿ ನೇರವಾಗಿ ಧರ್ಮೋಪದೇಶ ನಡೆಸುವುದಿಲ್ಲ. ವರ್ಣನಾಕೌಶಲ, ಸನ್ನಿವೇಶ ರಚನಾ ಚಾತುರ್ಯ, ಪಾತ್ರಗಳನ್ನು ಚಿತ್ರಿಸಿರುವ ಜಾಣತನ, ಎಲ್ಲ ಅವನಿಗೆ ಕವಿಚಕ್ರವರ್ತಿಯೆಂಬ ಬಿರುದನ್ನು ಗಳಿಸಿಕೊಟ್ಟಿವೆ. ವೈರಾಗ್ಯ ಪ್ರಧಾನವಾದ ಪುರಾಣಕಥೆಗಳಲ್ಲಿಯೂ ಜನ್ನ ಪ್ರಣಯದ ಹಲವು ಮುಖಗಳನ್ನು ಚಿತ್ರಿಸಿದ್ದಾನೆ. ನೇಮಿ ಜನ್ನರಿರ್ವರೆ ಕರ್ಣಾಟ ಕೃತಿಗೆ ಸೀಮಾಪುರುಷರ್ ಎಂದು ಆ ಇಬ್ಬರನ್ನೂ ಮುಂದಿನ ಕವಿಗಳು ಕೊಂಡಾಡಿದ್ದಾರೆ.

ಜನ್ನ ಕವಿ ಸುಮನೋಬಾಣನ ಮಗ, ಅವನ ಶಿಷ್ಯನೂ ಹೌದು. ಸೂಕ್ತಿಸುಧಾರ್ಣವವನ್ನು ರಚಿಸಿದ ಮಲ್ಲಿಕಾರ್ಜುನ ಈತನ ಸೋದರಿಯ ಗಂಡ ; ಶಬ್ದಮಣಿದರ್ಪಣಕಾರನಾದ ಕೇಶಿರಾಜ ಸೋದರಳಿಯ. ಕನ್ನಡಸಾಹಿತ್ಯ ಚರಿತ್ರೆಯಲ್ಲಿ ಒಂದೇ ಸಂಸಾರಕ್ಕೆ ಸೇರಿದ ಹಲವರು ಕಾವ್ಯ ಪ್ರಚಾರಮಾಡಿರುವ ನಿದರ್ಶನ ಬಹುಶಃ ಇದೊಂದೇ ಎಂದು ತೋರುತ್ತದೆ.

ಮಲ್ಲಿಕಾರ್ಜುನ ಕವಿ ಕಾವ್ಯಾಂಗಗಳ ವರ್ಣನಾರೂಪವಾದ ಪದ್ಯಗಳನ್ನು ಪೂರ್ವ ಕವಿಗಳಿಂದ ಆಯ್ದು ಸಂಗ್ರಹಮಾಡಿ ಸೂಕ್ತಿಸುಧಾರ್ಣವವನ್ನು ರಚಿಸಿದ್ದಾನೆ. ಇದಕ್ಕೆ ಕಾವ್ಯಸಾರ ಎಂಬ ಇನ್ನೊಂದು ಹೆಸರೂ ಇದೆ. ಸರಸಕವೀಶ್ವರ ಸಭೆಯೊಳ್ ಸರಸ ಕವೀಶಂ ಎಂದು ತನ್ನ ವಿಷಯವಾಗಿ ಮಲ್ಲಿಕಾರ್ಜುನನೇ ಹೇಳಿಕೊಂಡಿದ್ದಾನೆ. ಯೋಗಪ್ರವರ ಚಿದಾನಂದ ಮಲ್ಲಿಕಾರ್ಜುನ ಎಂದು ಕೇಶಿರಾಜ ಇವನನ್ನು ಹೊಗಳಿರುವುದರಿಂದ ಇವನು ಜೈನಯತಿಯಾಗಿದ್ದಿರಬಹುದು. ಮುನಿಗಳ ಸಭೆಯೊಳ್ ಈತ ಪರಮಮುನಿಯಾಗಿದ್ದಿರಬೇಕು. ಇಂಥ ಸಂಕಲನ ಗ್ರಂಥ ಕನ್ನಡದಲ್ಲಿ ಇದೇ ಮೊದಲನೆಯದು. ಇದರಿಂದ ಅನೇಕ ಕವಿಗಳ ಕಾಲನಿರ್ಣಯಕ್ಕೆ ಸಹಾಯವಾಗಿದೆ. ಕಾವ್ಯ ರಸಿಕನಾದ ಮಲ್ಲಿಕಾರ್ಜುನ ತನಗೆ ಮೆಚ್ಚುಗೆಯಾದ ಉತ್ತಮ ಪದ್ಯಗಳನ್ನು ಸಂಗ್ರಹ ಮಾಡಿದರೆ ಇವನ ಸುಪುತ್ರನಾದ ಕೇಶಿರಾಜ ಇವುಗಳ ಆಧಾರದಿಂದ ಹಳಗನ್ನಡದ ಒಂದು ಶಾಸ್ತ್ರೀಯ ವ್ಯಾಕರಣವನ್ನು ಬರೆದ.

ಕುಮುದೇಂದುರಾಮಾಯಣ ಈ ಕಾಲದ ಇನ್ನೊಂದು ಮುಖ್ಯವಾದ ಕನ್ನಡಕಾವ್ಯ. ಇದು ಎಲ್ಲ ಜಾತಿಯ ಷಟ್ಪದಿಗಳನ್ನೂ ಒಳಗೊಂಡ ಜೈನರಾಮಾಯಣ. ಬಹಳ ಮಟ್ಟಿಗೆ ಇದು ನಾಗಚಂದ್ರನ ಕೃತಿಯನ್ನೇ ಅನುಸರಿಸುತ್ತದೆ. ಪರವಾದಿಗಂಡ ಭೇರುಂಡ, ಚತುರ್ವಿಧ ಪಾಂಡಿತ್ಯ ಚಕ್ರವರ್ತಿ ಮೊದಲಾದ ಬಿರುದುಗಳನ್ನು ಧರಿಸಿದ್ದ ಕುಮುದೇಂದುವೇ ಈ ಗ್ರಂಥದ ಕರ್ತೃ. ಕವಿಯ ಹೆಸರೇ ಕಾವ್ಯಕ್ಕೂ ಬಂದಿದೆ. ಇವನ ಕಾಲಕ್ಕೆ ಷಟ್ಪದಿ ಬಳಕೆಗೆ ಬಂದಿದ್ದು ಜೈನಕವಿಗಳೂ ಅದನ್ನು ಬಳಸಲು ಆರಂಭಿಸಿದ್ದರೆಂಬುದಕ್ಕೆ ಕುಮುದೇಂದು ನಿದರ್ಶನನಾಗಿದ್ದಾನೆ. ಇವನೂ ಪಂಡಿತ ವಂಶಕ್ಕೆ ಸೇರಿದವ. ಇವನ ತಂದೆ, ದೊಡ್ಡಪ್ಪ ಮುಂತಾದವರೂ ಕವಿಗಳೂ ಪಂಡಿತರೂ ಆಗಿದ್ದರೆಂದು ತಿಳಿದುಬಂದಿದೆ. ಪರವಾದಿ ಗಿರಿವಜ್ರ ಎಂದು ಕುಮುದೇಂದು ಹೊಗಳಿಕೊಂಡಿರುವುದರಿಂದ ಇವನು ಜೈನಧರ್ಮ ಪ್ರಚಾರದಲ್ಲಿ ಆಸಕ್ತನಾಗಿ ಅನ್ಯ ಧರ್ಮಗಳವರೊಡನೆ ವಾದ ವಿವಾದಗಳಲ್ಲಿ ತೊಡಗುತ್ತಿದ್ದನೆಂದು ತಿಳಿಯಬೇಕಾಗಿದೆ.

ಕುಮಾರಪಾಲ ಘೂರ್ಜರ ಅಥವಾ ಉದ್ಭಟನೆಂಬ ಭಕ್ತನ ಕಥೆಯನ್ನು ಹನ್ನೆರಡು ಆಶ್ವಾಸಗಳ ಚಂಪೂಕಾವ್ಯವಾಗಿ ಬರೆದ ಸೋಮರಾಜನನ್ನು ಇಲ್ಲಿ ಸ್ಮರಿಸಬೇಕು. ಓಬಿಲಯ್ಯ ಆಕಾಶಯಾನ ಮಾಡುತ್ತ ಕೈಲಾಸಕ್ಕೆ ಹೋಗುತ್ತಿದ್ದುದನ್ನು ಕಂಡು ಮೇಲಾಟಕ್ಕಾಗಿ ಉದ್ಭಟ ತನ್ನ ಇಡೀ ನಗರವನ್ನೇ ಕೈಲಾಸಕ್ಕೆ ಕರೆದುಕೊಂಡು ಹೋದನೆಂಬುದೇ ಈ ಕಾವ್ಯದ ಕಥಾವಸ್ತು.

ಆಂಧ್ರದೇಶದ ನಾರಣಪುರದ ಅತ್ತಿರಾಜನ ಮಗನಾದ ಪೋಲಾಳ್ವದಂಡನಾಥ ಹರಿಚಾರಿತ್ರವೆಂಬ ಷಟ್ಪದೀ ಕಾವ್ಯವನ್ನು ರಚಿಸಿದನೆಂದು ದಾವಣಗೆರೆ 25ನೆಯ ಶಾಸನದಲ್ಲಿ ಹೇಳಿದೆ. ಗ್ರಂಥಸಿಕ್ಕಿಲ್ಲ. ಅದು ಎಂದಾದರೂ ಸಿಕ್ಕಿದರೆ ಅತ್ಯಂತ ಪ್ರಾಚೀನ ಷಟ್ಪದೀ ಕಾವ್ಯವೆನಿಸುತ್ತದೆ. ಈ ಕವಿ ಹೊಯ್ಸಳ ವೀರಬಲ್ಲಾಳನಲ್ಲಿಯೂ ಅವನ ಮಗ ವೀರನರಸಿಂಹನಲ್ಲಿಯೂ ಅಮಾತ್ಯನಾಗಿದ್ದ, ಪರಾಕ್ರಮಶಾಲಿಯೂ ದಾತನೂ ಆಗಿದ್ದು ಎಲ್ಲರ ಹೊಗಳಿಕೆಗೆ ಪಾತ್ರನಾಗಿದ್ದ. ಸತ್ಯಜ್ಞಾನಲಕ್ಷ್ಮಿಪರಹಿತಚರಿತೋದ್ಯೋಗದಿಂದ ಧಾತ್ರಿಗೆ ಗುರುವೆನಿಸಿ ಕೊಂಡನಂತೆ, ಆತ. ಪೋಲಾಳ್ವನಂ ಪೊಗಟ್ಟುದ್ದು ಇನ್ನು ಅನ್ಯರನ್ ಅಣ್ಣ ಪೊಗಟ್ಟುವುದೇ ಪಾಲುಂಡು ಮೇಲುಂಬುದೆ—ಎಂದು ಒಬ್ಬ ಕವಿ ಇವನನ್ನು ಪ್ರಶಂಸಿಸಿದ್ದಾನೆ.

ಈ ಕಾಲದ ಇನ್ನೊಬ್ಬ ವೈಷ್ಣವ ಕವಿ ನರಹರಿತೀರ್ಥ. ಈ ಮಾಧ್ವ ಕವಿ ವಿಷ್ಣುಸ್ತುತಿರೂಪವಾದ ಕೆಲವು ಹಾಡುಗಳನ್ನು ಬರೆದು ದಾಸರ ಪದಗಳೆಂದು ಪ್ರಸಿದ್ಧವಾಗಿರುವ ಕೀರ್ತನಸಾಹಿತ್ಯರಚನೆಗೆ ಮೊದಲಿಗನಾಗಿದ್ದಾನೆ. ಮಧ್ವಾಚಾರ್ಯರ ನಾಲ್ವರು ಅಂತರಂಗ ಶಿಷ್ಯರಲ್ಲಿ ನರಹರಿತೀರ್ಥನೂ ಒಬ್ಬ. ಮಧ್ವಾಚಾರ್ಯರ ತರುವಾಯ ಈತ ಮೂರನೆಯ ಪಟ್ಟದ ಸ್ವಾಮಿಯಾದ. ಸನ್ಯಾಸಿಯಾಗುವ ಮುನ್ನ ಶ್ರೀಕಾಕುಳಂ ತಾಲ್ಲೂಕಿನ ಶ್ರೀಕೂರ್ಮಂ ಎಂಬಲ್ಲಿ ಯೋಗಾನಂದ ನರಸಿಂಹಸ್ವಾಮಿಯ ಆಲಯವನ್ನು ಕಟ್ಟಿಸಿದನೆಂದು ಅಲ್ಲಿನ ಶಾಸನ

ಹೇಳುತ್ತದೆ. ಜಗನ್ನಾಥದಿಂದ ರಾಮ ಮತ್ತು ಸೀತೆಯರ ಮೂಲವಿಗ್ರಹಗಳನ್ನು ತರುವ ಸಲುವಾಗಿ ಮಧ್ವಾಚಾರ್ಯರು ಈತನನ್ನು ಉತ್ಕಲದೇಶಕ್ಕೆ ಕಳುಹಿಸಿದ್ದರಂತೆ. ಈತ ಬರೆದ ಕೀರ್ತನೆಗಳು ಹೆಚ್ಚಾಗಿ ಲಭಿಸಿಲ್ಲ. ಕವಿಚರಿತೆಕಾರರು ಹೇಳಿರುವ ಕೀರ್ತನೆ ಒಂದು, ಬೇಲೂರು ಕೇಶವದಾಸರು ಉದ್ಧರಿಸಿರುವ ಕೀರ್ತನೆ ಇನ್ನೊಂದು. ಇವೆರಡು ಮಾತ್ರ ಲಭಿಸಿವೆ. ಇವನಿಗಿಂತ ಹಿಂದೆ(?) ಅಚಲಾನಂದ ದಾಸನೆಂಬುವನೊಬ್ಬನಿದ್ದನೆಂದು ಹೇಳಿಕೆಯುಂಟು. ಆದರೆ ಆತನ ಕೀರ್ತನೆಗಳಾವುವೂ ಲಭಿಸಿಲ್ಲ.

ಅಂತೂ ಈ ಶತಮಾನದಲ್ಲಿ ಚಂಪೂ, ಷಟ್ಪದಿ, ರಗಳೆ, ಸಾಂಗತ್ಯ, ಹಾಡು, ವಚನ—ಈ ಎಲ್ಲ ಬಗೆಯ ಕಾವ್ಯಗಳೂ ಹುಟ್ಟಿದುವು. ಜೈನರು, ಶೈವರು ಮತ್ತು ವೈಷ್ಣವರೂ ಕನ್ನಡ ಸಾಹಿತ್ಯ ಕೈಂಕರ್ಯವನ್ನು ನಡೆಸಿದರು.

ಹದಿನಾಲ್ಕನೆಯ ಶತಮಾನದಲ್ಲಿ ಕನ್ನಡನಾಡಿನಲ್ಲಿ ಜನಪ್ರಿಯವಾಗಿರುವ ಬಸವಪುರಾಣವೆಂಬ ಷಟ್ಪದೀಕಾವ್ಯ ರಚಿತವಾಯಿತಾದರೂ ಇನ್ನೂ ಚಂಪೂಕಾವ್ಯಗಳ ಪ್ರಾಶಸ್ತ್ಯ ತಗ್ಗಿರಲಿಲ್ಲ. ಚೌಂಡರಸ ಅಭಿನವದಶಕುಮಾರಚರಿತೆ ಎಂಬ ಚಂಪೂ ಕೃತಿಯನ್ನು ಬರೆದ. ದಂಡಿ ರಚಿಸಿದ ದಶಕುಮಾರ ಚರಿತೆಯೆಂಬ ಸಂಸ್ಕೃತ ಕಾವ್ಯವೇ ಇದರ ಮೂಲ. ಮಗಧ ರಾಜ್ಯದ ಕುಸುಮಪುರದ ಅರಸನಾದ ರಾಜಹಂಸ ರಾಜ್ಯಭ್ರಷ್ಟನಾಗಿ ಅರಣ್ಯದಲ್ಲಿ ನೆಲೆಸಿದ್ದಾಗ ಹುಟ್ಟಿದ ಮಗನ ಜೊತೆಯಲ್ಲಿ ತನ್ನ ಏಳು ಜನ ಮಂತ್ರಿಗಳ ಮಕ್ಕಳನ್ನೂ ಅಲ್ಲಿಗೆ ಬಂದು ಸೇರಿದ ಇನ್ನಿಬ್ಬರು ಹುಡುಗರನ್ನೂ ಸಲಹಿ ಬೆಳೆಸಿದನಂತೆ. ಆ ಹತ್ತು ಜನ ಕುಮಾರರ ಜೀವನದ ವೃತ್ತಾಂತವೇ ದಶಕುಮಾರಚರಿತೆ. ಇದಲ್ಲದೆ ಚೌಂಡರಸ ನಳಚಂಪೂ ಎಂಬ ಇನ್ನೊಂದು ಸುಂದರಕಾವ್ಯವನ್ನೂ ಬರೆದಿದ್ದಾನೆ.

ಭೀಮಕವಿಯ ಬಸವಪುರಾಣ ಈ ಕಾಲದ ಮುಖ್ಯವಾದ ಷಟ್ಪದೀಕಾವ್ಯ. ಕಲ್ಯಾಣದ ಬಸವೇಶ್ವರನ ಚರಿತ್ರೆಯೇ ಕಾವ್ಯದ ಕಥಾವಸ್ತು. ಸೋಮನಾಥಂ ರಸವೊಸರೆ ಮುನ್ನುಸಿರ್ದುದನೆ ಕನ್ನಡಿಸಿ ಪೇೞ್ವೆಂ– ಎಂದು ಹೇಳಿಕೊಂಡಿರುವುದರಿಂದ ಪಾಲ್ಕುರಿಕೆ ಸೋಮನಾಥ ರಚಿಸಿದ ತೆಲುಗಿನ ಬಸವಪುರಾಣವೇ ಇವನ ಕೃತಿಗೆ ಮೂಲವೆಂದು ತಿಳಿಯಬಹುದು. ಪ್ರತಿ ಸಂಧಿಯ ಕೊನೆಯಲ್ಲಿಯೂ ಪಾಲ್ಕುರಿಕೆ ಸೋಮನ ಸ್ಮರಣೆಯಿದೆ. ಕನಸಿನಲ್ಲಿ ಪಾಲ್ಕುರಿಕೆ ಸೋಮ ದರ್ಶನ ಕೊಟ್ಟು ಬರೆದುಕೊಳ್ಳುವಂತೆ ಆಜ್ಞಾಪಿಸಿದನೆಂದೂ ಆದರಂತೆ ತಾನು ಬಸವಪುರಾಣವನ್ನು ಬರೆದೆನೆಂದೂ ಭೀಮಕವಿ ಹೇಳಿಕೊಂಡಿದ್ದಾನೆ. ಬಸವಪುರಾಣ ಎಂಟು ಸಂಧಿಗಳುಳ್ಳ ಭಾಮಿನೀ ಷಟ್ಪದಿಯ ಕಾವ್ಯ. ಇದರಲ್ಲಿ ಬಸವಣ್ಣ ಮಾಡಿದ ಪವಾಡಗಳ ವರ್ಣನೆ ಚೆನ್ನಾಗಿ ಮೂಡಿಬಂದಿದೆ.

ಉಭಯ ಕವಿತಾವಿಳಾಸನೆಂದು ಪ್ರಸಿದ್ಧನಾದ ನಾಗರಾಜನೆಂಬ ಜೈನಕವಿ ಪುಣ್ಯಾಸ್ರವ ಎಂಬ ಹನ್ನೆರಡು ಅಧಿಕಾರಗಳುಳ್ಳ ಚಂಪೂ ಗ್ರಂಥವನ್ನು ರಚಿಸಿ ಜೈನ ಸಾಗಾರ (ಗೃಹಸ್ಥ) ಧರ್ಮವನ್ನು ವಿವರಿಸಿದ್ದಾನೆ. ಬಂಧುವರ್ಮ ಮತ್ತು ನಯಸೇನರ ಹಾಗೆ ಇವನೂ ಜಿನಧರ್ಮಾಚರಣೆಯಿಂದ ಪ್ರಸಿದ್ಧರಾದ ಪುರಾಣಪುರುಷರ ಕಥೆಗಳನ್ನು ಹೇಳಿದ್ದಾನೆ. ಸುಲಲಿತ ಕವಿತಾಕಲ್ಪವಲ್ಲೀವಸಂತ, ಸರಸ್ವತೀ ಮುಖತಿಲಕ, ಭಾರತೀ ಭಾಳನೇತ್ರ ಎಂದು ಕವಿ ಹೆಮ್ಮೆಯಿಂದ ತನ್ನ ಬಿರುದುಗಳನ್ನು ಹೊಗಳಿಕೊಂಡಿದ್ದಾನೆ.

ಈ ಶತಾಬ್ದದ ಶ್ರೇಷ್ಠಕವಿ ಮಧುರ. ಇವನು ಹದಿನೈದನೆಯ ತೀರ್ಥಂಕರನಾದ ಧರ್ಮನಾಥಸ್ವಾಮಿಯ ಚರಿತ್ರೆಯನ್ನು ಬರೆದಿದ್ದಾನೆ. ಆದರೆ ಇವನ ಧರ್ಮನಾಥ ಪುರಾಣದ ಸಮಗ್ರಪ್ರತಿ ಲಭಿಸಿಲ್ಲ. ಇವನು ಗುಮ್ಮಟಸ್ತುತಿ ಎಂಬ ಒಂದು ಅಷ್ಟಕವನ್ನೂ ಬರೆದಿದ್ದಾನೆ. ಭೂನಾಥನಾಸ್ಥಾನಚೂಡಾಮಣಿ, ಮಧುರಕವೀಂದ್ರ ಎಂದು ಹೇಳಿಕೊಂಡಿರುವುದರಿಂದ ಇವನು ಬಹುಶಃ ಹರಿಹರನ ಆಸ್ಥಾನದಲ್ಲಿ ಮನ್ನಣೆ ಪಡೆದಿರಬಹುದು. ಬುಕ್ಕರಾಜನ ಮಗನಾದ ಹರಿಹರನ ಪ್ರಧಾನಿ ಮುದ್ದ ದಂಡೇಶ ಈ ಕವಿಯ ಪೋಷಕ. ಮಧುರ ಆತ್ಮಪ್ರಶಂಸೆಯಲ್ಲಿ ಹಿಂತೆಗೆದಿಲ್ಲ. ಇವನಲ್ಲಿ ಕುಕವಿನಿಂದೆಯ ಭಾಗ ಬಹಳ ಚೆನ್ನಾಗಿದೆ. ಆದರೆ ಈಗ ದೊರೆತಿರುವ ನಾಲ್ಕು ಆಶ್ವಾಸಗಳಲ್ಲಿ ಕಥೆಗಿಂತ ವರ್ಣನೆಯೇ ಹೆಚ್ಚಾಗಿದೆಯೆಂದು ತೋರುತ್ತದಾದರೂ ಇವನ ವರ್ಣನೆಗಳು ಬಹಳ ರಮ್ಯವಾಗಿವೆ. ಕಾವ್ಯ ಪಂಡಿತರಿಗೇ ಹೊರತು ಸಾಮಾನ್ಯ ಜನಕ್ಕೆ ವಿಷಯವಲ್ಲವೆಂದು ಮಧುರನ ಮತ.

> ಪಂಡಿತರುಂ ವಿವಿಧಕಳಾ
> ಮಂಡಿತರುಂ ಕೇಳತಕ್ಕ ಕೃತಿಯಂ ಕ್ಷಿತಿಯೊಳ್
> ಕಂಡರ್ ಕೇಳ್ವೊಡೆ ಗೊರವರ
> ಡುಂಡುಚಿಯೇ ಬೀದಿ ವಱಿವ ಬೀರನ ಕತೆಯೇ

ಎಂದು ಮಧುರನ ಸವಾಲು. ಇವನು ಪಂಡಿತಪಕ್ಷಪಾತಿ. ಪಂಪನನ್ನೂ ನೇಮಿಚಂದ್ರ ಜನ್ನರನ್ನೂ ಮಧುರ ಹೊಗಳಿದ್ದಾನೆ.

ಹದಿನೈದನೆಯ ಶತಮಾನದಲ್ಲಿ ಚಂಪೂಕಾವ್ಯಗಳ ಪ್ರಾಬಲ್ಯ ಕಾಣಬರದು. ಷಟ್ಪದಿ ಸಾಂಗತ್ಯ ಮತ್ತು ತ್ರಿಪದಿಗಳ ಬಳಕೆಯೇ ಹೆಚ್ಚು. ಈ ಶತಾಬ್ದದಲ್ಲಿ ಕನ್ನಡ ಅತ್ಯಂತ ಸ್ವತಂತ್ರ ಮನೋಧರ್ಮದ ಷಟ್ಪದೀಕವಿ ಕುಮಾರವ್ಯಾಸ ಅವತರಿಸಿ ತನ್ನ ಗದುಗಿನ ಭಾರತವನ್ನು ರಚಿಸಿದ್ದಾನೆ. ಚಾಮರಸ ಅಲ್ಲಮ ಪ್ರಭುವಿನ ಚರಿತ್ರೆಯನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದುದು ಈ ಕಾಲದಲ್ಲಿಯೇ. ಇವರಲ್ಲದೆ ಲಕ್ಕಣ್ಣ ದಂಡೇಶ, ಭಾಸ್ಕರ ಮೊದಲಾದ ಇನ್ನೂ ಕೆಲವರು ತಮ್ಮ ಕೃತಿಗಳನ್ನು ಬರೆದರು. ವಚನರಚನೆ ಹೆಚ್ಚಾಗಿ ನಡೆದಂತೆ ಕಾಣುವುದಿಲ್ಲ. ಹಿಂದಿನವರ ವಚನಗಳನ್ನು ಷಟ್ಸ್ಥಲಗಳಿಗೆ ಅನುಗುಣವಾಗಿ ವಿಂಗಡಿಸುವುದು, ಅವುಗಳಿಗೆ ಟೀಕೆ ಬರೆಯುವುದು ಮುಂತಾದ ಕೆಲಸಗಳು ನಡೆದುವು.

ಕಲ್ಯಾಣ ಕೀರ್ತಿಯ ಕಾಮನ ಕಥೆ, ತೆರಕಣಾಂಬಿ ಬೊಮ್ಮರಸನ ಜೀವಂಧರ ಸಾಂಗತ್ಯ ಮೊದಲಾದ ಸಾಂಗತ್ಯಕಾವ್ಯಗಳೂ ಭಾಸ್ಕರನ ಜೀವಂಧರ ಚರಿತೆ, ಬೊಮ್ಮರಸನ ಸೌಂದರಪುರಾಣ, ಲಕ್ಕಣ್ಣದಂಡೇಶನ ಶಿವತತ್ತ್ವ ಚಿಂತಾಮಣಿ—ಎಂಬ ಷಟ್ಪದಿ ಕಾವ್ಯಗಳೂ ಬೆಳಕಿಗೆ ಬಂದುವು. ಆದರೆ ಈ ಶತಾಬ್ದದಲ್ಲಿ ಪ್ರಧಾನರಾಗಿ ಕಾಣುವ ಕವಿಗಳಿಬ್ಬರೇ–ಚಾಮರಸ ಮತ್ತು ಕುಮಾರವ್ಯಾಸ.

ಚಾಮರಸನ ಪ್ರಭುಲಿಂಗಲೀಲೆ ವೀರಶೈವ ಸಾಹಿತ್ಯದಲ್ಲಿ ಉನ್ನತಸ್ಥಾನ ಗಳಿಸಿದ ಕಾವ್ಯ. ಹೆಸರೇ ಸೂಚಿಸುವಂತೆ ಇದು ಅಲ್ಲಮ ಪ್ರಭುವಿನ ಚರಿತ್ರೆ. ಈ ಕಾವ್ಯದ ಆದಿ ಭಾಗದಲ್ಲಿ ಬರುವ ಮಾಯಾನಿರಸನ ಪ್ರಕರಣ ಬಹಳ ಸ್ವಾರಸ್ಯವಾಗಿದ್ದು ಉತ್ತಮಕಾವ್ಯ ಗುಣಗಳನ್ನೊಳಗೊಂಡಿದೆ. ಆಮೇಲೆ ಅಲ್ಲಮ ಊರಿಂದ ಊರಿಗೆ ಸಂಚರಿಸಿ ತನ್ನ ಭಕ್ತರನ್ನು ಸಂಧಿಸಿ ಅವರಿಗೆ ಜ್ಞಾನೋಪದೇಶಮಾಡಿದ ಕಥೆ ವಿವರವಾಗಿ ಮೂಡಿಬಂದಿದೆ. ಆನುಷಂಗಿಕವಾಗಿ ಈ ಕಾವ್ಯದಲ್ಲಿ ಬಸವ, ಸಿದ್ಧರಾಮ, ಮುಕ್ತಾಯಕ್ಕ, ಮಹದೇವಿ, ಗೋರಕ್ಷ ಮೊದಲಾದ ಶರಣಶರಣೆಯರ ಚರಿತ್ರೆಯೂ ಬಂದಿದೆ, ಅಲ್ಲಮನ ಹಿರಿಮೆ, ಲೋಕಕಾರುಣ್ಯ, ಮಹಿಮಾತಿಶಯ ಮುಂತಾದ ಅಂಶಗಳನ್ನು ಚಾಮರಸ ಯಶಸ್ವಿಯಾಗಿ ಚಿತ್ರಿಸಿದ್ದಾನೆ. ಹರಿಹರ ಹೇಳಿರುವ ಈ ಭಕ್ತರ ಕಥೆಗಳಿಗೂ ಚಾಮರಸ ಹೇಳಿರುವ ಕಥೆಗಳಿಗೂ ಹಲವು ಅಂಶಗಳಲ್ಲಿ ವ್ಯತ್ಯಾಸವಿದೆ.

ಕುಮಾರವ್ಯಾಸನೆಂದು ಹೆಸರಾಗಿರುವ ನಾರಣಪ್ಪ ಗದುಗಿನ ವೀರನಾರಾಯಣ ಸ್ವಾಮಿಯ ಭಕ್ತ. ಆ ದೇವರ ದಯೆಯಿಂದ ಸ್ಫೂರ್ತಿ ಪಡೆದು ಕೃತಿರಚನೆ ಮಾಡಿದ. ವೀರನಾರಾಯಣನ ಕಿಂಕರನೆಂದು ಹೇಳಿಕೊಳ್ಳುವುದರಲ್ಲೇ ಕವಿಗೆ ಬಹಳ ಸಂತೋಷ. ಆದ್ದರಿಂದಲೇ ಅವನ ಹೆಸರು ನಾರಣಪ್ಪನೆ, ಕುಮಾರವ್ಯಾಸನೆ, ಶುಕರೂಪನೆ ಎಂದು ನಿರ್ಣಯವಾಗದೆ ವಿದ್ವಾಂಸರಲ್ಲಿ ಚರ್ಚೆ ನಡೆದಿದೆ. ನಾರಣಪ್ಪ ಶಾನುಭೋಗರ ಮನೆತನದವನೆಂದೂ ಕೋಳಿವಾಡ ಗ್ರಾಮದ ನಿವಾಸಿಯೆಂದೂ ಜನಶ್ರುತಿ. ವ್ಯಾಸರ ಪರಮಾನುಗ್ರಹಕ್ಕೆ ಪಾತ್ರನಾದುದರಿಂದ ಕುಮಾರವ್ಯಾಸನೆಂಬ ಹೆಸರಿನಲ್ಲಿಯೇ ಈತ ಕಾವ್ಯರಚನೆಮಾಡಿದ್ದಾನೆ.

ನಾರಣಪ್ಪ ವ್ಯಾಸಪ್ರಣೀತವಾದ ಭಾರತ ಕಥೆಯನ್ನೇ ಹೇಳಬೇಕೆಂದು ಸಂಕಲ್ಪಿಸಿದವ. ಆದರೆ ಲಕ್ಷಶ್ಲೋಕಗಳಷ್ಟು ವಿಸ್ತಾರವಾದ ಆ ಮಹಾಕಾವ್ಯವನ್ನು ಯಥಾತಥವಾಗಿ ಅನುವಾದ ಮಾಡುವುದು ಸಾಧ್ಯವಾಗದೆಂದು ಮನಗಂಡು ಅದನ್ನು ಸಂಗ್ರಹ ಮಾಡಿದ್ದಾನೆ. ಭಾರತಕಥೆಯನ್ನು ಸಂಪೂರ್ಣವಾಗಿ ರಚಿಸಲು ಉದ್ದೇಶಿಸಿದಂತೆಯೂ ಕಾಣದು. ಧರ್ಮರಾಯನ ಪಟ್ಟಾಭಿಷೇಕದ ಕಥೆಯೊಡನೆ ಕೃತಿ ಮುಗಿದಿದೆ.

ತನ್ನ ಕೃತಿಗೆ ಕವಿ ಕರ್ಣಾಟಭಾರತಕಥಾಮಂಜರಿ ಎಂದು ಹೆಸರುಕೊಟ್ಟಿರುವನಾದರೂ ಅದು ಕನ್ನಡಭಾರತ, ಗದುಗಿನ ಭಾರತ ಎಂದೇ ಪ್ರಸಿದ್ಧವಾಗಿದೆ. ನಾರಣಪ್ಪನ ಈ ದಶಪರ್ವಭಾರತ ಅತ್ಯಂತ ಜನಪ್ರಿಯವಾಗಿದ್ದು ಪಂಡಿತರ ಮನ್ನಣೆಗೆ ಪಾತ್ರವಾಗಿದೆ.

ನಾರಣಪ್ಪ ಹುಟ್ಟು ಕವಿ. ವೀರನಾರಾಯಣಸ್ವಾಮಿಯ ಕೃಪೆಯಿಂದ ಅವನಿಗೆ ಕವಿತಾಶಕ್ತಿಬಂದಿತೆಂದು ಹೇಳಿಕೊಂಡಿದ್ದಾನೆ. ಈತನ ಕಾವ್ಯದಲ್ಲಿ ರಸದ ಹೊನಲೇ ಹರಿದಿದೆಯೆಂದು ಹೇಳಿದರೆ ಹೆಚ್ಚಲ್ಲ. ನಾರಣಪ್ಪ ಭಕ್ತಿಯೋಗಿ. ಶ್ರೀಕೃಷ್ಣನಲ್ಲಿ ಅವನಿಗೆ ಅನುಪಮವಾದ ಭಕ್ತಿ. ಅವನ ದೃಷ್ಟಿಯಲ್ಲಿ ಭಾರತಕ್ಕೆ ಕೃಷ್ಣನೇ ಕಥಾನಾಯಕ. ಅವನೇ ಭಾರತ ಸೂತ್ರಧಾರ. ಉಳಿದಪಾತ್ರಗಳು ಅವನ ಕೈಗೊಂಬೆಗಳು. ಭಾರತ ಕೃಷ್ಣರಾಯನ ಚರಿತೆ. ಕಪಟನಾಟಕ ಸೂತ್ರಧಾರಿಯೆನಿಸಿದ ಶ್ರೀಕೃಷ್ಣನ ಲೀಲಾವಿಲಾಸವೇ ಭಾರತ. ಸನ್ನಿವೇಶರಚನೆ ಪಾತ್ರಚಿತ್ರಣಗಳಲ್ಲಿ ನಾರಣಪ್ಪ ಅನನ್ಯಸಾಧಾರಣವಾದ ಸಾಮರ್ಥ್ಯ ಹೊಂದಿದ್ದಾನೆ. ಕನ್ನಡ ಮಾತುಗಳ ಜೀವನಾಡಿಯನ್ನು ಕಂಡುಕೊಂಡನವನು. ಉಚಿತ ಪದ ಜೋಡಣೆಯಲ್ಲಿ ಇವನು ಎತ್ತಿದ ಕೈ. ಇವನಿಗೆ ಸಂಸ್ಕೃತವನ್ನು ಕಂಡರೆ ದ್ವೇಷವಿಲ್ಲ. ಸಂಸ್ಕೃತವನ್ನು ಹದವರಿತು ಬಳಸಿದ್ದಾನಾದರೂ ಕನ್ನಡದ ಮಾತುಗಳನ್ನು ವಿಪುಲವಾಗಿ ಬಳಸಿ ತನ್ನ ಕೃತಿಗೆ ಹೆಚ್ಚಾದ ಮೆರುಗು ಕೊಟ್ಟಿದ್ದಾನೆ. ಅವನು ವಾಗ್ವೈಭವ ವಾಚಕರನ್ನು ಬೆರಗುಗೊಳಿಸುತ್ತದೆ. ಯಾವ ದೃಷ್ಟಿಯಿಂದ ನೋಡಿದರೂ ಕುಮಾರವ್ಯಾಸ ಮೊದಲದರ್ಜೆಯ ಕವಿಯೆಂದು ಮನಗಾಣಬಹುದು. ತನ್ನ ಭಾರತ 'ಕಾವ್ಯಕೆ ಗುರು' ಎಂದು ಕವಿ ಹೇಳಿಕೊಂಡಿರುವುದು ಒಣಜಂಬದ ಮಾತಲ್ಲ. ಅದು ಅರಸುಗಳಿಗೆ ವೀರ, ದ್ವಿಜರಿಗೆ ಪರಮವೇದದ ಸಾರ. ಪಂಡಿತರಿಗೆ ಅಲಂಕಾರ,

ವಿರಹಿಗಳಿಗೆ ಶೃಂಗಾರ, ಯೋಗೀಶ್ವರರಿಗೆ ಪರಮತತ್ತ್ವವಿಚಾರ —ಹೀಗೆ ಯಾರಿಗೆ ಏನು ಬೇಕಾದರೂ ಕೊಡುವ ಕಲ್ಪತರುವಿನಂಥ ಕಾವ್ಯವದು.

ಹದಿನಾರನೆಯ ಶತಮಾನದಲ್ಲಿ ಕನ್ನಡಕ್ಕೆ ವಿಶಿಷ್ಟವಾದ ಸೇವೆ ಸಲ್ಲಿಸಿದ ವೈಷ್ಣವ ದಾಸರನ್ನು ಮೊದಲು ಸ್ಮರಿಸಬೇಕು. ಅವರು ಮತಪ್ರಚಾರದ ಉದ್ದೇಶದಿಂದಲೇ ಕೃತಿರಚನೆ ಮಾಡಿದರೂ ಅವರ ಕೃತಿಗಳಲ್ಲಿ ಹೃದ್ಯವಾದ ಭಾವನಿರೂಪಣೆಯಿದೆ. ಜೀವನದ ಸಮಸ್ಯೆಗಳ ವಿಮರ್ಶೆ, ಸಾಮಾಜಿಕ ಲೋಪದೋಷಗಳನ್ನು ಖಂಡಿಸಿ ಸಮಾಜಸುಧಾರಣೆ ಮಾಡುವ ಪ್ರಯತ್ನ, ಭಗವನ್ಮಹಿಮಾಕಥನ—ಇವು ದಾಸರ ಕೃತಿಗಳ ಪ್ರಧಾನ ಲಕ್ಷಣಗಳು.

ಹದಿಮೂರನೆಯ ಶತಮಾನದ ನರಹರಿತೀರ್ಥನಾದ ಮೇಲೆ ಕೀರ್ತನ ಸಾಹಿತ್ಯವನ್ನು ಕನ್ನಡದಲ್ಲಿ ರಚಿಸಿ ಪ್ರಸಿದ್ಧನಾದವನೆಂದರೆ ಮುಳಬಾಗಿಲು ಶ್ರೀಪಾದರಾಯ. ಸಂಸ್ಕೃತ ಕನ್ನಡಗಳಲ್ಲಿ ವಿಶೇಷ ಪಾಂಡಿತ್ಯ ಗಳಿಸಿದ್ದ ಈತ ರಂಗವಿಠಲ ಎಂಬ ಅಂಕಿತದಲ್ಲಿ ಹಲವು ಕೀರ್ತನೆಗಳನ್ನು ರಚಿಸಿದ್ದಾನೆ. ಈತ ಮುಳಬಾಗಿಲ ಮಠದ ಪೀಠಾಧೀಶ. ಈತನ ಶಿಷ್ಯನೇ ಪ್ರಸಿದ್ಧನಾದ ವ್ಯಾಸರಾಯಸ್ವಾಮಿ. ವ್ಯಾಸರಾಯನೂ ಹಲವು ಕೀರ್ತನೆಗಳನ್ನು ರಚಿಸಿದ. ಆದರೆ ಅದಕ್ಕಿಂತ ಹೆಚ್ಚಾಗಿ ಆತ ಅನೇಕ ಹರಿದಾಸರಿಗೆ ಸ್ಫೂರ್ತಿ ನೀಡಿದ ಪರಮಗುರು. ಪುರಂದರದಾಸ, ಕನಕದಾಸ ಇಬ್ಬರೂ ವ್ಯಾಸರಾಯನ ಶಿಷ್ಯರು. ವಿಜಯನಗರದ ಶ್ರೀಕೃಷ್ಣದೇವರಾಯನ ಭಕ್ತಿಗೌರವಗಳಿಗೆ ಪಾತ್ರನಾದ ವ್ಯಾಸರಾಯ ರಾಜನಿಗೆ ಕುಹೂ ಯೋಗ ಬಂದಾಗ ತಾನೇ ಸಿಂಹಾಸನದ ಮೇಲೆ ಕುಳಿತು ಅರಸನಿಗೆ ಒದಗಲಿದ್ದ ಹಾನಿಯನ್ನು ತಪ್ಪಿಸಿದನೆಂದು ಒಂದು ಕಥೆ. ಈತ ಸೋಸಲೆಯ ಮಠದ ಸ್ವಾಮಿ. ಸಂಸ್ಕೃತದಲ್ಲಿ ಮಹಾಪಂಡಿತನಾಗಿದ್ದರೂ ಮಧ್ವಮತ ತತ್ತ್ವಗಳನ್ನು ಪ್ರಚಾರಮಾಡುವ ಧ್ಯೇಯದಿಂದ ಕನ್ನಡದಲ್ಲಿ ತಾನೇ ಕೃತಿರಚನೆ ಮಾಡಿದುದಲ್ಲದೆ ಅನೇಕ ಹರಿದಾಸರನ್ನು ಈ ಮಹಾ ಕಾರ್ಯದಲ್ಲಿ ಈತ ತೊಡಗಿಸಿದ.

ಈ ಶತಮಾನದಲ್ಲಿ ಪ್ರಸಿದ್ಧರಾದ ಹರಿದಾಸರೆಂದರೆ ಪುರಂದರದಾಸ ಮತ್ತು ಕನಕದಾಸ. ಇವರಿಬ್ಬರೂ ಮೊದಲು ಲೌಕಿಕ ವ್ಯವಹಾರ ಮಗ್ನರಾಗಿದ್ದು ಯಾವುದೋ ಸನ್ನಿವೇಶದಲ್ಲಿ ವಿರಕ್ತಿ ಪಡೆದು ಐಶ್ವರ್ಯ ಅಧಿಕಾರಗಳ ವ್ಯಾಮೋಹವನ್ನು ತೊರೆದು ಭಗವದ್ಭಕ್ತರಾಗಿ ಹರಿಕೀರ್ತನೆ ಮಾಡುತ್ತ ನಾಡಿನಲ್ಲೆಲ್ಲ ಸಂಚರಿಸಿದರು. ಹರಿಸಂಕೀರ್ತನೆ ಹರಿಮಹಿಮಾನಿರೂಪಣೆಗಳೇ ಇವರ ಕೀರ್ತನೆಗಳ ವಸ್ತು. ತಮ್ಮ ದೇಶ ಸಂಚಾರದ ಕಾಲದಲ್ಲಿ ಗಮನಕ್ಕೆ ಬಂದ ಅನೇಕ ಸಾಮಾಜಿಕ ಸಮಸ್ಯೆಗಳನ್ನೂ ದಾಸರು ತಮ್ಮ ಕೀರ್ತನೆಗಳಲ್ಲಿ ಪ್ರಸ್ತಾಪಿಸಿದ್ದಾರೆ; ನೀತ್ಯುಪದೇಶವನ್ನೂ ಮಾಡಿದ್ದಾರೆ.

ಪುರಂದರದಾಸ ಮೊದಲು ಪುರಂದರಗಡದಲ್ಲಿ ಗಣ್ಯ ಶ್ರೀಮಂತನಾಗಿದ್ದು, ಲೇವಾದೇವಿ ನಡೆಸುತ್ತ ಬಹಳ ಲೋಭಿಯಾಗಿದ್ದನೆಂದೂ ಜ್ಞಾನೋದಯವಾದ ಮೇಲೆ ತನ್ನ ಸಮಸ್ತ ಐಶ್ವರ್ಯವನ್ನೂ ದಾನಮಾಡಿ ಭಿಕ್ಷಾವೃತ್ತಿಯಿಂದ ಜೀವಿಸುತ್ತ ಹರಿಕೀರ್ತನೆಮಾಡುತ್ತ ನಾಡಿನಲ್ಲೆಲ್ಲ ಸಂಚರಿಸಿ ವಿಜಯನಗರಕ್ಕೆ ಹೋಗಿ ಅಲ್ಲಿ ವ್ಯಾಸರಾಯನನ್ನು ಕಂಡು ಅವನಿಂದ ಉಪದೇಶ ಪಡೆದು ಪುರಂದರವಿಠಲ ಎಂಬ ಅಂಕಿತದಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿದನೆಂದೂ ಪ್ರತೀತಿ. ಕರ್ಣಾಟಕ ಸಂಗೀತದ ಆದ್ಯ ಪ್ರವರ್ತಕರಲ್ಲಿ ಪುರಂದರದಾಸನೂ ಒಬ್ಬ. ಇವನ ಕೀರ್ತನೆಗಳಲ್ಲಿ ದ್ವೈತಮತ ಪ್ರಚಾರ, ಹರಿಸರ್ವೋತ್ತಮತ್ವ ನಿರೂಪಣೆ ಮೊದಲಾದ ಅಂಶಗಳಿಗೆ ಪ್ರಾಮುಖ್ಯವಿದೆ. ಭಕ್ತಿ ಸಾಧನೆ ಮಾಡಿ ಸಿದ್ಧಿಹೊಂದಿದ ತನ್ನ ಅಧ್ಯಾತ್ಮ ಜೀವನದ ಚರಿತ್ರೆಯನ್ನು ಪುರಂದರದಾಸ ಅನೇಕ ಕಡೆ ತನ್ನ ಹಲವಾರು ಕೀರ್ತನೆಗಳಲ್ಲಿ ಹೇಳಿಕೊಂಡಿದ್ದಾನೆ. ಹರಿಸೇವೆ, ಹರಿಕೀರ್ತನೆ, ಹರಿಭಕ್ತರ ನಿರಂತರ ಕೈಂಕರ್ಯ–ಇವು ಜೀವಿಯನ್ನು ಸಂಸಾರ ಬಂಧನದಿಂದ ಬಿಡುಗಡೆ ಮಾಡಿಸಿ ಪಾರುಮಾಡುವ ಪರಮೋಪಾಯಗಳು. ಆದರೆ ಎಲ್ಲ ಮಾನವರೂ ಒಂದೇ ರೀತಿಯಾಗಿ ದೀಕ್ಷೆವಹಿಸಿ ಇವುಗಳನ್ನೆಲ್ಲ ಏಕಚಿತ್ತದಿಂದ ಸಾಧಿಸಲು ಸಾಧ್ಯವಿಲ್ಲ. ಅಂಥ ದುರ್ಬಲರಿಗಾಗಿ ಪುರಂದರದಾಸ ಒಂದು ಸುಲಭ ಪೂಜೆಯನ್ನು ಸೂಚಿಸುತ್ತಾನೆ.

> ಸುಲಭ ಪೂಜೆಯ ಮಾಡಿ ಬಲವಿಲ್ಲದವರು
> ನಳಿನನಾಭನ ಪಾದನಳಿನ ಸೇವಕರು

ಎಂದೇ ಈತನ ಒಂದು ಕೀರ್ತನೆಯ ಪಲ್ಲವಿ. ಅನುದಿನವೂ ನಾವು ಮಾಡುವ ಕೆಲಸಗಳನ್ನೇ ಹರಿಪೂಜೆಯೆಂದು ಭಾವಿಸಿ ನಡೆದರೆ ಹರಿ ಅದರಿಂದ ಸುಪ್ರೀತನಾಗುವನಂತೆ. ಇರುಳು ಹಚ್ಚುವ ದೀಪ ಹರಿಗೆ ನೀರಾಜನವು, ತಿರುಗಾಡಿ ದಣಿಯುವುದೇ ಹರಿಗೆ ಪ್ರದಕ್ಷಿಣೆಯು ನುಡಿದ ಮಾತುಗಳೆಲ್ಲ ಕಡಲಶಯನನ ಜಪವು. ಹೀಗೆ ಭಾವಿಸಿಕೊಂಡು ತಮ್ಮ ನಿತ್ಯಕರ್ಮಗಳನ್ನು ಭಗವಂತನ ಆರಾಧನೆಯೆಂದು ನಂಬಿ ಮಾಡಿದರೆ ನಡುಮನೆಯು ಅಂಗಳವು ಉಡುಪಿ ವೈಕುಂಠಗಳು. ಹೀಗೆಂದು ಕವಿ ಅಭಯ ನೀಡುತ್ತಾನೆ.

ಪುರಂದರದಾಸ ವಿಜಯನಗರದಲ್ಲಿದ್ದಾಗಲೇ ಅಲ್ಲಿಗೆ ಕನಕದಾಸನೂ (ನೋಡಿ) ಬಂದ. ವ್ಯಾಸರಾಯಸ್ವಾಮಿ ಕನಕನಿಗೆ ಅನುಗ್ರಹ ಮಾಡಿದುದು ವ್ಯಾಸಮುನಿಯ ಮಠದವರಿಗೆ ಸಹಿಸಲಿಲ್ಲವೆಂಬ ಸಂಗತಿಯನ್ನು ಪುರಂದರದಾಸ ತನ್ನ ಒಂದು ಕೀರ್ತನೆಯಲ್ಲಿ ಪ್ರಸ್ತಾಪಿಸಿದ್ದಾನೆ. ಕನಕದಾಸ ಬೇಡರ ಜಾತಿಯಲ್ಲಿ ಹುಟ್ಟಿ ಪಾಳೆಯಗಾರನಾಗಿದ್ದು ವೈರಾಗ್ಯ ಹುಟ್ಟಿದ ಮೇಲೆ ಹರಿದಾಸನಾಗಿ ಕನ್ನಡನಾಡಿನಲ್ಲೆಲ್ಲ ಸಂಚರಿಸಿ ಮುಕ್ತನಾದ. ಈತ ಅನೇಕ ಕೀರ್ತನೆಗಳನ್ನೇ ಅಲ್ಲದೆ ಹರಿಭಕ್ತಿಸಾರ, ಮೋಹನತರಂಗಿಣಿ, ರಾಮಧಾನ್ಯ ಚರಿತ್ರೆ ಮತ್ತು ನಳಚರಿತ್ರೆ ಎಂಬ ಕಾವ್ಯಗಳನ್ನೂ ರಚಿಸಿದ್ದಾನೆ. ಕಾಗಿನೆಲೆಯ ಆದಿಕೇಶವಸ್ವಾಮಿ ಇವನ ಇಷ್ಟದೈವ. ಆತನ ಅಂಕಿತದಲ್ಲಿಯೇ ಕನಕ ಕೀರ್ತನೆಗಳನ್ನು ಕಟ್ಟಿದ್ದಾನೆ. ಮೋಹನತರಂಗಿಣಿ ಶೃಂಗಾರರಸ ಪ್ರಧಾನವಾದ ಸಾಂಗತ್ಯ ಗ್ರಂಥ. ಇದರಲ್ಲಿ ಶ್ರೀಕೃಷ್ಣ ಮಹಿಮಾಕಥನ ಮುಖ್ಯವಾಗಿದೆ. ಹರಿಭಕ್ತಸಾರ ಮತ್ತು ನಳಚರಿತ್ರೆಗಳು ಲೋಕಪ್ರಸಿದ್ಧವಾಗಿವೆ. ರಾಮಧಾನ್ಯ ಚರಿತ್ರೆ ಒಂದು ವಿಚಿತ್ರ ಕಥೆಯನ್ನು ಹೇಳುವ ಕಾವ್ಯ. ಇದರಲ್ಲಿ ಶ್ರೀರಾಮನ ಎದುರಿಗೆ ವ್ರೀಹಿಗೂ ನರೆದಲೆಗನಿಗೂ (ರಾಗಿ) ನಾನು ಹೆಚ್ಚು ತಾನು ಹೆಚ್ಚು ಎಂಬ ವ್ಯಾಜ್ಯ ನಡೆಯಲು ಅವರಿಬ್ಬರನ್ನೂ ತೀವ್ರವಾದ ವಿಚಾರಣೆಗೆ ಗುರಿಮಾಡುವುದು, ಕೊನೆಗೆ ರಾಗಿಯೇ ಹೆಚ್ಚೆಂದು ತೀರ್ಮಾನವಾಗಲು ರಾಮ ಅದಕ್ಕೆ ರಾಘವಧಾನ್ಯ ಎಂದು ತನ್ನ ಹೆಸರನ್ನೇ ಕೊಟ್ಟದ್ದು ಮೊದಲಾದ ಘಟನೆಗಳ ಸ್ವಾರಸ್ಯಪೂರ್ಣವಾದ ನಿರೂಪಣೆ ಇದೆ. ಈ ಕೃತಿಯಲ್ಲಿ ಕನಕದಾಸನ ಹಾಸ್ಯ ಮನೋವೃತ್ತಿ ಬಹಳ ಮನೋಜ್ಞವಾಗಿ ಪ್ರಕಟಗೊಂಡಿದೆ.

ಹಯವದನ ಎಂಬ ಅಂಕಿತದಲ್ಲಿ ಹಲವು ಕೀರ್ತನೆಗಳನ್ನೂ ವೈಕುಂಠವರ್ಣನೆ, ಲಕ್ಷ್ಮಿಶೋಭಾನೆ, ಸ್ವಪ್ನಗದ್ಯ, ಭ್ರಮರಗೀತ ಎಂಬ ಕೃತಿಗಳನ್ನು ರಚಿಸಿ ಪ್ರಸಿದ್ಧನಾಗಿರುವ ವಾದಿರಾಜನೂ ಈ ಕಾಲದವನೇ. ಈತ ಉಡುಪಿಯ ಕೃಷ್ಣಮಠದ ಅಧ್ಯಕ್ಷನಾಗಿದ್ದ.

ದಾಸ ಸಾಹಿತ್ಯದ ಜೊತೆಜೊತೆಯಲ್ಲಿಯೇ ಈ ಕಾಲದಲ್ಲಿ ಷಟ್ಪದೀಕಾವ್ಯಗಳ ರಚನೆಯೂ ವಿಶೇಷವಾಗಿ ನಡೆಯಿತು. ಕುಮಾರ ವಾಲ್ಮೀಕಿಯೆಂದು ಹೆಸರಿಟ್ಟುಕೊಂಡ ತೊರವೆಯ ನರಹರಿ ವಾಲ್ಮೀಕಿರಾಮಾಯಣವನ್ನು ಅನುಸರಿಸಿ ಕನ್ನಡದಲ್ಲಿ ಭಾಮಿನಿ ಷಟ್ಪದಿಯ ಒಂದು ಕಾವ್ಯವನ್ನು ರಚಿಸಿದ್ದಾನೆ. ಇದಕ್ಕೆ ತೊರವೆಯ ರಾಮಾಯಣ ಎಂದೇ ಹೆಸರಾಗಿದೆ. ಬ್ರಾಹ್ಮಣ ಕವಿಗಳು ಬರೆದ ರಾಮಾಯಣಗಳಲ್ಲಿ ಇದೇ ಮೊದಲನೆಯದು. ಈತ ಕುಮಾರವ್ಯಾಸನ ಮಾದರಿಯಲ್ಲಿ ಕಾವ್ಯ ಕಟ್ಟಲು ಹೆಣಗಿದ್ದಾನೆ. ಆದರಿವನು ನಾರಣಪ್ಪನಷ್ಟು ಶಕ್ತನಲ್ಲ. ಅವನಿಗೆ ಲಭಿಸಿದ್ದ ಪ್ರಾಸಾದಿಕವಾಣಿ ಇವನಿಗೆ ಇರಲಿಲ್ಲ. ಹೀಗಿದ್ದರೂ ಲಭಿಸಿರುವ ಕನ್ನಡ ರಾಮಾಯಣಗಳಲ್ಲಿ ಇದು ಉತ್ಕೃಷ್ಟವಾದುದೆಂದು ತೋರುತ್ತದೆ.

ಕುಮಾರವ್ಯಾಸ ಹೇಳದೇ ಬಿಟ್ಟ ಭಾರತದ ಉತ್ತರಭಾಗವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದ ತಿಮ್ಮಣ್ಣನೂ ಈ ಕಾಲದವನೇ. ಶ್ರೀಕೃಷ್ಣದೇವರಾಯನೇ ಇವನನ್ನು ಭಾರತರಚನಾಕಾರ್ಯಕ್ಕೆ ತೊಡಗಿಸಿದ. ಶಾಂತಿಪರ್ವದಿಂದ ಕೊನೆಯವರೆಗೂ ತಿಮ್ಮಣ್ಣ ಭಾರತವನ್ನು ಬರೆದು ಮುಗಿಸಿದ್ದಾನೆ. ಇವನ ಕೃತಿಯಲ್ಲಿ ತೆಲುಗು ಭಾರತಕರ್ತರಲ್ಲೊಬ್ಬನಾದ ತಿಕ್ಕನ ಸೋಮಯಾಜಿಯ ಪ್ರಭಾವ ವಿಶೇಷವಾಗಿ ಕಾಣುತ್ತದೆ. ಆದರೆ ತಿಕ್ಕನನ ವಚೋವಿಲಾಸವಾಗಲಿ ನಾರಣಪ್ಪನ ಪ್ರತಿಭಾತಿಶಯವಾಗಲಿ ಈತನ ಕೃತಿಯಲ್ಲಿ ಕಾಣಿಸುವುದಿಲ್ಲ.

ಕನ್ನಡ ಭಾಗವತವನ್ನು ರಚಿಸಿದ ಚಾಟುವಿಠಲನಾಥನೂ ಈ ಕಾಲದವನೇ. ಭಾಗವತದ ಕೊನೆಯ ಸ್ಕಂಧದಲ್ಲಿ ಚಾಟುವಿಠಲನೆಂಬ ಹೆಸರೇ ಬಂದಿದೆಯಾದರೂ ಉಳಿದ ಭಾಗಗಳಲ್ಲೆಲ್ಲ ಸದಾನಂದಯೋಗಿ ಎಂಬ ಹೆಸರೇ ಇದೆ. ಗ್ರಂಥದ ಉದ್ದಕ್ಕೂ ನಿತ್ಯಾತ್ಮ ಎಂಬ ಅಂಕಿತವಿದೆ. ಈತ ಅಚ್ಯುತಾರಣ್ಯನೆಂಬ ಯತಿಯ ಶಿಷ್ಯ. ಆತನ ಪ್ರೇರಣೆಯಿಂದಲೇ ಭವತಾರಕವಾದ ಈ ಗ್ರಂಥವನ್ನು ರಚಿಸ ತೊಡಗಿದುದಾಗಿ ಹೇಳಿಕೊಂಡಿದ್ದಾನೆ. ಭಾಗವತದ ಅರ್ಥವನ್ನು ಸಂಗ್ರಹವಾಗಿ ಸುಲಭಶೈಲಿಯಲ್ಲಿ ಎಲ್ಲರಿಗೂ ತಿಳಿಯುವಂತೆ ಹೇಳುವುದು ಕವಿಯ ಧ್ಯೇಯ. ಹರಿಗುಣಸ್ತುತಿ, ಹರಿಪದಾಂಬುಜಶರಣಜನಸಂಕೀರ್ತನಗಳೇ ಈ ಭಾಗವತಕಾವ್ಯದ ಮುಖ್ಯ ಅಂಶಗಳು. ಪ್ರತಿಯೊಂದು ಸ್ಕಂದಕ್ಕೂ ಪ್ರತ್ಯೇಕವಾದ ಪೀಠಿಕೆಯಿರುವುದರಿಂದಲೂ ಅಲ್ಲಲ್ಲಿ ವಿದ್ಯಾಯೋಗಿ, ನಿರ್ವಾಣನಾಥ, ಚಾಟುವಿಠಲ, ಸದಾನಂದ ಎಂಬ ಬೇರೆ ಬೇರೆ ಹೆಸರುಗಳು ಬಂದಿರುವುದರಿಂದಲೂ ಈ ಕಾವ್ಯವನ್ನು ಹಲವು ಕವಿಗಳು ಬರೆದಿರಬೇಕೆಂಬ ಊಹೆಗೆ ಅವಕಾಶವಾಗಿದೆ. ಹನ್ನೆರಡು ಸಾವಿರಕ್ಕೂ ಹೆಚ್ಚಿನ ಪದ್ಯಗಳನ್ನೊಳಗೊಂಡ ಈ ಭಾಗವತ ವಿಸ್ತಾರವಾದ ಕಾವ್ಯವಾಗಿದೆ. ಈ ಕೃತಿಯೂ ಕುಮಾರವ್ಯಾಸನಿಂದ ಪ್ರಭಾವಿತವಾಗಿರುವ ಸಂಗತಿ ಸುವೇದ್ಯವಾಗಿದೆ.

ವೈಷ್ಣವ ಕಾವ್ಯಗಳು ರಚನೆಯಾಗುತ್ತಿದ್ದಂತೆಯೇ ಈ ಕಾಲದಲ್ಲಿ ವಿರೂಪಾಕ್ಷ ಪಂಡಿತ, ಸಿಂಗಿರಾಜ ಮೊದಲಾದ ವೀರಶೈವ ಕವಿಗಳೂ ಷಟ್ಪದೀಕಾವ್ಯಗಳನ್ನು ರಚಿಸಿದರು. ಸಿಂಗಿರಾಜನ ಬಸವಚರಿತ್ರೆಗೆ ಮಲಬಸವಚಾರಿತ್ರ ಎಂದು ಹೆಸರಿದೆ. ಅದು ಬಹುಶಃ ವಿಮಲಬಸವಚಾರಿತ್ರ ಎಂದು ಇದ್ದಿರಬೇಕು. ಇದನ್ನು ಸಾಮಾನ್ಯವಾಗಿ ಸಿಂಗಿರಾಜಪುರಾಣ ಎಂದೇ ಕರೆಯುತ್ತಾರೆ. ಇದರಲ್ಲಿ ಬಸವಣ್ಣನ ಅನೇಕ ಪವಾಡಗಳ ವರ್ಣನೆ ಬಂದಿದೆ. ಇದು ವಾರ್ಧಕ ಷಟ್ಪದಿಯಲ್ಲಿದೆ. ಅಲ್ಲಲ್ಲಿ

ಉಳಿದ ಷಟ್ಪದೀಪದ್ಯಗಳೂ ಬಂದಿವೆ. ಶಿವನ ಆಸ್ಥಾನದ ಇಬ್ಬರು ದ್ವಾರಪಾಲಕರು ಶಾಪಹತರಾಗಿ ಭೂಮಿಯ ಮೇಲೆ ಬಿಜ್ಜಳ, ಕರ್ಣದೇವರಾಗಿ ಹುಟ್ಟಿದರಂತೆ. ನಂದಿ ಕೈಲಾಸದಲ್ಲಿ ತಾನು ಧರಿಸಿದ್ದ ಲಿಂಗವನ್ನು ಕಳೆದುಕೊಂಡಿದ್ದರಿಂದ ಆಸ್ಥಾನಕ್ಕೆ ಪ್ರವೇಶ ದೊರೆಯದೆ ಶಿವನ ಆಣತಿಯಂತೆ ಬಸವಣ್ಣನಾಗಿ ಭೂಲೋಕದಲ್ಲಿ ಹುಟ್ಟಿ ತನ್ನ ಎಂಟನೆಯ ವಯಸ್ಸಿನಲ್ಲಿ ಒಬ್ಬ ಹುಡುಗನನ್ನು ಬಾವಿಗೆ ತಳ್ಳಿದನೆಂಬ ಅಪವಾದಕ್ಕೆ ಸಿಕ್ಕಿ ತನ್ನ ಸೋದರಿಯೊಡನೆ ಕಪ್ಪಡಿ ಸಂಗಮಕ್ಕೆ ಹೊರಟು ಹೋದ ನೆಂದೂ ಹೇಳಲಾಗಿದೆ. ವಿರೂಪಾಕ್ಷವಿರಚಿತವಾದ ಚನ್ನಬಸವ ಪುರಾಣ ಜನಪ್ರಿಯ ವಾದ ವಾರ್ಧಕ ಷಟ್ಪದೀಕಾವ್ಯ.

ಗುರುಲಿಂಗವಿಭು ಬರೆದ ಭಿಕ್ಷಾಟನ ಚರಿತ್ರೆ ಸ್ವಾರಸ್ಯವಾದ ಕಾವ್ಯ. ಶಿವ ದ್ವಾರಾವತಿಗೆ ಹೋಗಿ ಭಿಕ್ಷಾಟನೆ ಮಾಡಿ ಬ್ರಹ್ಮಕಪಾಲವನ್ನು ತುಂಬುವಂತೆ ಶ್ರೀಕೃಷ್ಣನಿಗೆ ಹೇಳಲು ಅದು ಅವನಿಂದ ಸಾಧ್ಯವಾಗಲಿಲ್ಲ. ಆಗ ಅವನು ಭಾರತಯುದ್ಧ ಹೂಡಿ ಆ ಕಪಾಲವನ್ನು ರಕ್ತದಿಂದ ತುಂಬಿದನೆಂಬುದೇ ಈ ಕಾವ್ಯದ ಕಥಾವಸ್ತು. ಕಥೆಗಿಂತ ಕವಿಯ ವಚೋವಿಲಾಸವೇ ಆಕರ್ಷಕವಾಗಿದೆ. ಇವನ ಕಾವ್ಯ ವಸ್ತುಕಕವೀಂದ್ರರ, ವರ್ಣಕಕವೀಶ್ವರರ ಕರ್ಣಾಭರಣ. ಆಶು, ಮಧುರಂ, ಚಿತ್ರ, ವಿಸ್ತಾರ ಎಂಬ ನಾಲ್ಕು ಬಗೆಯಲ್ಲಿಯೂ ಈತ ಕಾವ್ಯವಿರಚಿಸಲು ಬಲ್ಲನಂತೆ. ಈ ಮೋಹಕಕೃತಿ ರಸಿಕರಾಭರಣ ಎಂಬ ಸ್ವಪ್ರಶಂಸೆ ಪೂರ್ಣವಾಗಿ ಸುಳ್ಳಲ್ಲ. ಹೆಸರು ಹಾಲಯ್ಯನು ಎರೆದುಣ್ಬುದಂಬಲವು—ಎಂದುಸಿರುವರ ಗಾದೆಯಂತಲ್ಲವೆನ್ನೀಕೃತಿಯ ಹೆಸರು—ಎಂದು ಕವಿ ತನ್ನ ಕಾವ್ಯದ ಹಿರಿಮೆಯನ್ನು ಹೊಗಳಿಕೊಂಡಿದ್ದಾನೆ.

ಸಾಳ್ವನೆಂಬ ಜೈನಕವಿ ರಚಿಸಿದ ಜಿನಭಾರತ ಈ ಕಾಲದ ಇನ್ನೊಂದು ಗಣ್ಯ ಷಟ್ಪದೀಕಾವ್ಯ. ಇದಕ್ಕೆ ನೇಮೀಶ್ವರಚರಿತ್ರೆಯೆಂದೂ ಹೆಸರು. ಇತರ ಭಾರತಗಳು ದೂಷ್ಯವೆಂದೂ ತನ್ನ ಈ ಕೃತಿ ಜಿನಪಾವನವಾದ್ದರಿಂದ ಮಹಾಪವಿತ್ರವೆಂದೂ ಕವಿ ಹೆಮ್ಮೆಯಿಂದ ಹೇಳಿಕೊಂಡಿದ್ದಾನೆ. ಇದು ಹಾಡುಗಬ್ಬವಾದ್ದರಿಂದ ಱ, ೞ, ಶಿಥಿಲದ್ವಿತ್ವ ಮುಂತಾದವನ್ನು ಇಲ್ಲಿ ನಿರೀಕ್ಷಿಸಬಾರದೆಂದು ಸಾಳ್ವ ಹೇಳಿಕೊಂಡಿದ್ದಾನೆ. ಈ ಕಾವ್ಯದಲ್ಲಿ ಹರಿವಂಶ ಕುರುವಂಶಗಳೆರಡರ ಕಥೆಯನ್ನೂ ಹೇಳಿದೆ.

ದೊಡ್ಡಯ್ಯನ ಚಂದ್ರಪ್ರಭಚರಿತ್ರೆ, ರತ್ನಾಕರವರ್ಣಿಯ ಭರತೇಶವೈಭವ, ನಂಜುಂಡ ಕವಿಯ ಕುಮಾರರಾಮನ ಕಥೆ—ಇವು ಈ ಕಾಲದ ಪ್ರಧಾನವಾದ ಸಾಂಗತ್ಯಕಾವ್ಯಗಳು.

ಕರ್ಣಾಟ ದೇಶಾಧೀಶ್ವರನಾದ ಕಂಪನೃಪತಿಯ ಕುಮಾರ ರಾಮನಾಥನ ಚರಿತ್ರೆಯೇ ನಂಜುಂಡಕವಿಯ ಕಾವ್ಯದ ವಸ್ತು. ಈ ಕಾವ್ಯದಲ್ಲಿ ಅಂದಿನ ಕನ್ನಡ ನಾಡಿನ ಚರಿತ್ರೆಯ ಪರಿಚಯವಾಗುತ್ತದೆ. ಐತಿಹಾಸಿಕ ವಿಷಯವನ್ನು ಆರಿಸಿ ಕೊಂಡು ಕೃತಿ ರಚನೆ ಮಾಡಿದವರಲ್ಲಿ ನಂಜುಂಡಕವಿಯೇ ಮೊದಲಿಗನೆಂದು ತೋರು ತ್ತದೆ. ಇವನಿಗೆ ಕವಿತಾವಿಶಾರದನೆಂದು ಬಿರುದು. ಕಾಳಿದಾಸನ ವಿಷಯದಲ್ಲಿ ನಂಜುಂಡನಿಗೆ ಬಹಳ ಭಕ್ತಿ.

ಕವಿತಾ ವನಿತೆಯ ಸಂಗಕೆ ಪೆಣ್ಮನ<br>
ಸವಿಯೆಲ್ಲವೆಂದಾವಾಣಿ<br>
ತವಕದಿಂ ಗಂಡುರೂಪಾಂತಳೆಂಬಂತಿರ್ದ<br>
ಕವಿಕಾಳಿದಾಸಗೆಱಗುವೆ

ಎಂದು ಕವಿಕುಲಗುರುವೆನಿಸಿದ ಕಾಳಿದಾಸನನ್ನು ನಂಜುಂಡ ಹೊಸ ಬಗೆಯಾಗಿ ಹೊಗಳಿದ್ದಾನೆ. ಕಾವ್ಯದಲ್ಲಿ ಬರುವ ಕುಮಾರರಾಮನ ಪರದಾರಾಸಹೋದರತ್ವ ಮತ್ತು ಯುದ್ಧರಂಗದಲ್ಲಿ ಆತ ತೋರಿದ ಸಾಹಸಗಳ ವರ್ಣನೆಗಳಿಂದಾಗಿ ಕಥೆಗೆ ವಿಶೇಷ ಆಕರ್ಷಣೆ ಒದಗಿದೆ. ಯುದ್ಧಚಿತ್ರಣವಂತೂ ಬಹುನೈಜವಾಗಿ ಮೂಡಿ ನಿಂತಿದೆ.

ಎಂಟನೆಯ ತೀರ್ಥಂಕರನಾದ ಚಂದ್ರಪ್ರಭನ ದಿವ್ಯಚರಿತ್ರೆಯೇ ದೊಡ್ಡಯ್ಯನ ಕಾವ್ಯವಸ್ತು. ಆದಿತೀರ್ಥಂಕರನ ಕಾಲದ ಭರತಚಕ್ರವರ್ತಿಯ ಬದುಕಿನ ಹಿರಿಮೆ ಯನ್ನು ಕೊಂಡಾಡುವುದೇ ರತ್ನಾಕರವರ್ಣಿಯ ವಿಸ್ತಾರವಾದ ಕೃತಿಯ ಏಕೈಕ ಧ್ಯೇಯ. ಹರಿಹರನಿಗೆ ರಗಳೆ ಹೇಗೆ ಒಲಿಯಿತೋ ರತ್ನಾಕರನಿಗೆ ಹಾಗೆ ಸಾಂಗತ್ಯ ಒಲಿದಿದೆಯೆನ್ನಬೇಕು. ಸಾಂಗತ್ಯ ಕವಿಗಳಲ್ಲಿ ಇವನು ಅಗ್ರಗಣ್ಯನೆನ್ನಬಹುದು. ಇವನ ಧಾರಾವಾಹಿಯಾದ ಶೈಲಿ ಮೆಚ್ಚುವಂಥಾದ್ದು. ಭರತ ಗಣನೆಗೆ ಸಿಕ್ಕದ ರಾಜ್ಯೈಶ್ವರ್ಯದ ಸುಖೋಪಭೋಗಗಳಲ್ಲಿ ಓಲಾಡಿ ಕೊನೆಗೆ ಕ್ಷಣಮಾತ್ರದಲ್ಲಿ ಕರ್ಮ ವನ್ನು ಸುಟ್ಟು ಜಿನನಾದ ವೈಭವವನ್ನು ಕವಿ ಈ ಕಾವ್ಯದಲ್ಲಿ ವರ್ಣಿಸಿದ್ದಾನೆ. ಜನರು ಅಲ್ಪರ ಕಥೆಗಳಿಗೆ ಮನಸ್ಸು ಕೊಟ್ಟು ಕೆಡಬಾರದೆಂಬ ಉದ್ದೇಶದಿಂದ ಅಂಗಸುಖಿಯ ಮೋಕ್ಷಸುಖಿಯ ಕಾವ್ಯವನಿಷ್ಟು ಶೃಂಗಾರದಲಿ ಹೇಳಿದುದಾಗಿ ಘೋಷಿಸಿದ್ದಾನೆ. ಸುಖಭೋಗದಲ್ಲಿ ಭಾಗವಹಿಸಿದರೂ ಪರಮ ವೈರಾಗ್ಯ ಭಾವದಿಂದ ನಡೆದು ಕೊಳ್ಳುವ ಭರತನ ಮನೋಧರ್ಮ ಕಾವ್ಯದುದ್ದಕ್ಕೂ ಕಂಡು ಬರುತ್ತದೆ. ಮೊದಲಿಗೆ ಪಂಪಕವಿ ತನ್ನ ಆದಿ ಪುರಾಣದಲ್ಲಿ ಭರತ ಬಾಹುಬಲಿಗಳ ಯುದ್ಧ ಸಂದರ್ಭವನ್ನು ಲೋಕ ಪ್ರಸಿದ್ಧವಾದ ರೀತಿಯಲ್ಲಿ ಚಿತ್ರಿಸಿ ಕೃತಾರ್ಥನಾದನಷ್ಟೆ. ಇಲ್ಲಿ ಭರತೇಶ ವೈಭವದಲ್ಲಿ ರತ್ನಾಕರವರ್ಣಿ ಅದೇ ಸಂದರ್ಭವನ್ನೆತ್ತಿಕೊಂಡು ಚಮತ್ಕಾರವಾಗಿ ಅದಕ್ಕೊಂದು ತಿರುವು ಕೊಟ್ಟು ಯುದ್ಧವೇ ನಡೆಯದಂತೆ ಮಾಡಿದ್ದಾನೆ. ಈ ಭಾಗವೂ ಮೊದಲಿನ ಭೋಗಭಾಗವೂ ಬಹು ಸುಂದರವಾಗಿ ರೂಪುಗೊಂಡಿವೆ. ಕಾವ್ಯದ ಉದ್ದಕ್ಕೂ ಪುಟ್ಟ ಸಾಂಗತ್ಯದ ಮಿತವ್ಯಾಪ್ತಿಯಲ್ಲಿ ಕವಿ ತೋರುವ ವರ್ಣನಾ ಸಾಮರ್ಥ್ಯ ಅನನ್ಯಸಾಧಾರಣವಾದುದು. ಈ ಶತಾಬ್ದದ ಜೈನಕವಿಗಳಲ್ಲಿ ರತ್ನಾಕರ ನಿಸ್ಸಂಶಯವಾಗಿ ಅಗ್ರಗಣ್ಯ. ಭರತೇಶವೈಭವವನ್ನೇ ಅಲ್ಲದೆ ಈತ ತ್ರಿಲೋಕ ಶತಕ ಮತ್ತು ಅಪರಾಜಿತೇಶ್ವರ ಶತಕ ಎಂಬ ಎರಡು ಶತಕಗಳನ್ನೂ ರಚಿಸಿದ್ದಾನೆ. ಇವುಗಳಲ್ಲಿ ನೀತಿ, ವೈರಾಗ್ಯ, ಆತ್ಮವಿಚಾರಗಳನ್ನು ಜೈನಮತಾನುಸಾರದ ಪ್ರಪಂಚ ಸ್ವರೂಪವನ್ನು ವರ್ಣಿಸಲಾಗಿದೆ.

ಷಟ್ಪದಿ, ಸಾಂಗತ್ಯ, ಕೀರ್ತನೆಗಳೇ ಅಲ್ಲದೆ ಈ ಕಾಲದಲ್ಲಿ ಕೆಲವು ಚಂಪೂ ಕೃತಿಗಳೂ ಬೆಳಕಿಗೆ ಬಂದವು. ಸುರಂಗಕವಿಯ ತ್ರಿಷಷ್ಟಿಪುರಾತನರ ಚರಿತ್ರೆ, ವೀರಭದ್ರರಾಜನ ವೀರಭದ್ರವಿಜಯ ಮೊದಲಾದವನ್ನು ಹೆಸರಿಸಬಹುದು.

ನಿಜಗುಣಶಿವಯೋಗಿ ಅನುಭವಸಾರವೆಂಬ ಒಂದು ತ್ರಿಪದಿಯ ಗ್ರಂಥವನ್ನೇ ರಚಿಸಿದ್ದಾನೆ. ತ್ರಿಪದಿ ಬಹಳ ಹಿಂದಿನ ಕಾಲದಲ್ಲಿಯೇ ಬಳಕೆಯಲ್ಲಿದ್ದಿ ತಾದರೂ ಒಂದು ಇಡೀ ಗ್ರಂಥವನ್ನೇ ಆ ಛಂದಸ್ಸಿನಲ್ಲಿ ಬರೆದವರಲ್ಲಿ ನಿಜಗುಣ ಶಿವಯೋಗಿಯೇ ಮೊದಲನೆಯವ. ಅರುವತ್ತುಮೂವರ ತ್ರಿಪದಿ ಎಂಬ ಇನ್ನೊಂದು ತ್ರಿಪದೀ ಗ್ರಂಥವೂ ಇವನದೇ. ಅನುಭವಸಾರವೆಂಬುದು ಗುರುಶಿಷ್ಯ ಸಂವಾದರೂಪದ ಗ್ರಂಥ. ಸಕಲ ವೇದಾಂತಸಾರವನೆ ತಿಳಿವಂತೆ ಸಾಧಕರಿಗೆ ಬರೆವೆನು—ಎಂಬುದು ಕವಿಯ ಪ್ರತಿಜ್ಞೆ. ಈ ಕವಿ ಕೆಲವು ಹಾಡುಗಳನ್ನೂ ವಿವೇಕ ಚಿಂತಾಮಣಿಯೆಂಬ ಗದ್ಯಗ್ರಂಥವನ್ನೂ ಪರಮಾನುಭವ ಬೋಧೆ ಎಂಬ ಒಂದು ಸಾಂಗತ್ಯ ಗ್ರಂಥವನ್ನೂ ರಚಿಸಿದ್ದಾನೆ.

ಅಭಿನವವಾದಿವಿದ್ಯಾನಂದನೆಂಬ (ನೋಡಿ) ಒಬ್ಬ ಜೈನ ಕವಿ ಈ ಶತಾಬ್ದದಲ್ಲಿ ಒಂದು ಸಂಕಲನ ಗ್ರಂಥವನ್ನು ರಚಿಸಿದ್ದಾನೆ. ಇದು ಬಹಳ ಮಟ್ಟಿಗೆ ಮಲ್ಲಿಕಾರ್ಜುನನ ಸೂಕ್ತಿಸುಧಾರ್ಣವವನ್ನು ಹೋಲುತ್ತದೆ. ಇವನು ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ ತಾನು ಪದ್ಯಗಳನ್ನು ಆಯ್ಕೆ ಮಾಡಿದ ಮೂಲ ಕಾವ್ಯಗಳ ಹೆಸರುಗಳನ್ನೂ ಹೇಳಿದ್ದಾನೆ. ಆದ್ದರಿಂದ ಹಿಂದಿನ ಕವಿಗಳ ಕಾಲನಿರ್ಣಯಕ್ಕೆ ಈ ಕೃತಿ ಸಹಾಯಕ ವಾಗಿದೆ. ವಿಜಯ ಸಂವತ್ಸರದ ಭಾದ್ರಪದ ಬಹುಳ ಮೂರರಲ್ಲಿ ಶ್ರೀಮದಭಿನವ ವಾದಿವಿದ್ಯಾನಂದಸ್ವಾಮಿಗಳು ಭಲ್ಲಾತಕೀಪುರವರಾಧೀಶ್ವರ ವೈರಾಗಿಗೆ ಬರೆಸಿಕೊಟ್ಟ ಕಾವ್ಯಸಾರ ಎಂದು ಹೇಳಿರುವುದರಿಂದ ಈ ವಿದ್ಯಾನಂದ ಯಾವುದೋ ಮಠದ ಸ್ವಾಮಿಯಾಗಿದ್ದಿರಬಹುದೆಂದು ತೋರುತ್ತದೆ.

ರಸರತ್ನಾಕರ ಮತ್ತು ಶಾರದಾವಿಲಾಸ ಎಂಬ ಎರಡು ಶಾಸ್ತ್ರಗಳು ಈ ಕಾಲದಲ್ಲಿ ಹುಟ್ಟಿದುವು. ಕನ್ನಡದಲ್ಲಿ ಧ್ವನಿ ವಿಷಯಕವಾದ ಗ್ರಂಥವೆಂದರೆ ಈ ಶಾರದಾ ವಿಲಾಸವೊಂದೇ ಎಂದು ತೋರುತ್ತದೆ.

ಹದಿನೇಳನೆಯ ಶತಾಬ್ದ ಮೈಸೂರು ರಾಜರು ಅಭಿವೃದ್ಧಿಗೆ ಬಂದಕಾಲ. ಚಾಮರಾಜ ಮತ್ತು ಚಿಕ್ಕದೇವರಾಯರು ಕವಿಪೋಷಕರಾಗಿ ಅನೇಕ ಕನ್ನಡ ಕೃತಿಗಳ ರಚನೆಗೆ ಪ್ರೇರಕರಾದರು. ಚಿಕ್ಕದೇವರಾಯ ಸ್ವಯಂ ಕವಿಯೂ ಆಗಿದ್ದ. ಈ ಕಾಲದಲ್ಲಿ ವೈಷ್ಣವ ಸಾಹಿತ್ಯ ವಿಶೇಷವಾಗಿ ಬೆಳೆಯಿತು. 1617ರಿಂದ 1637ರವರೆಗೆ ರಾಜ್ಯವಾಳಿದ ಚಾಮರಾಜ ವಿರೂಪಾಕ್ಷನೆಂಬ ಮಹಾವಿದ್ವಾಂಸನಿಂದ ವಾಲ್ಮೀಕಿ ರಾಮಾಯಣಕ್ಕೆ ಗದ್ಯರೂಪವಾದ ಟೀಕೆಯನ್ನು ಬರೆಯಿಸಿದ. ಇದಕ್ಕೆ ಚಾಮರಾಜೋಕ್ತಿವಿಲಾಸವೆಂದು ಹೆಸರು. (ಟೀಕಾಂ ಕಾರಯಿಷ್ಯನ್ ನೃಪೋತ್ತಮಃ ಲೋಕಾನಾಮುಪಕಾರಾಯ ವಿರೂಪಾಕ್ಷೇಣ ಧೀಮತಾ ॥ ವಿದುಷಾಕೃತವಾನ್ ಸಮ್ಯಕ್ ಪ್ರತಿಜ್ಞಾ ಚಾಮಭೂಪತಿಃ.) ಈ ಗ್ರಂಥದ ಆದಿಯಲ್ಲಿ ವಿಷ್ವಕ್ಸೇನ ಮತ್ತು ಗಣೇಶರ ಸ್ತೋತ್ರವಿದೆ. ಈ ಅರಸನ ಆಶ್ರಯದಲ್ಲಿಯೇ ಬ್ರಹ್ಮೋತ್ತರ ಖಂಡ ಟೀಕೆ ಅಥವಾ ಮಣಿ ಪ್ರಕಾಶ ಎಂಬ 22 ಸಂಧಿಗಳ ಒಂದು ವ್ಯಾಖ್ಯಾನಗ್ರಂಥದ ರಚನೆ ನಡೆಯಿತು.

ಚಿಕ್ಕದೇವರಾಯ ಮೈಸೂರು ರಾಜ್ಯವನ್ನು ವಿಸ್ತಾರ ಮಾಡಿ ಬಹಳ ಪ್ರಭಾವ ಶಾಲಿಯಾಗಿದ್ದ ದೊರೆ. ಈತ ಸ್ವಯಂ ಕವಿ, ಸಾಹಿತ್ಯವಿದ್ಯಾನಿಕಷಪ್ರಸ್ತರಂ, ರಸಿಕಜನಕರ್ಣರಸಾಯನೀಕೃತಸಂಗೀತವಿಸ್ತರಂ—ಎಂಬ ಬಿರುದುಗಳು ಈ ಪ್ರಭುವಿಗೆ ಸಂದಿವೆ. ಚಿಕ್ಕದೇವರಾಜಬಿನ್ನಪ ಎಂಬ ಗದ್ಯಗ್ರಂಥ ವಿಶಿಷ್ಟಾದ್ವೈತ ಮತತತ್ತ್ವ ಗಳನ್ನು ನಿರೂಪಿಸುವ ಮೂವತ್ತು ಬಿನ್ನಪಗಳನ್ನೊಳಗೊಂಡಿದೆ. ಮೇಲುಕೋಟೆ ನಾರಾಯಣಸ್ವಾಮಿಯಲ್ಲಿ ಕವಿ ಭಕ್ತಿಯಿಂದ ನಿವೇದಿಸಿಕೊಂಡ ಬಿನ್ನಪಗಳ ಸಂಗ್ರಹವಿದು.

ಗೀತಗೋಪಾಲ ಎಂಬುದು ಜಯದೇವನ ಗೀತಗೋವಿಂದದ ಮಾದರಿಯಲ್ಲಿ ರಚಿತವಾದ ಭಕ್ತಿಪ್ರಧಾನವಾದ ಗೀತಸಂಕಲನ. ಇದರಲ್ಲಿನ ಅನೇಕ ಹಾಡುಗಳು

ಸಂಗೀತಕ್ಕೆ ಬಹಳ ಚೆನ್ನಾಗಿ ಹೊಂದಿಕೊಳ್ಳುತ್ತವೆ. ಈ ಕೃತಿಯನ್ನು ಅರಸನ ಆಶ್ರಿತನಾದ ತಿರುಮಲಾರ್ಯನೆಂಬ ಕವಿ ರಚಿಸಿದನೆಂಬ ಸಂದೇಹವೂ ಇದೆ. ಕೆಲವು ಹಾಡುಗಳಲ್ಲಿ ತಿರುಮಲಾರ್ಯನ ಅಂಕಿತವಿದೆ.

ಈ ಎರಡೂ ಗ್ರಂಥಗಳಲ್ಲಿ ಸ್ಪಷ್ಟವಾದ ಧರ್ಮನಿರೂಪಣೆಯಿರುವುದರೊಂದಿಗೆ ಕಾವ್ಯತೆಯೂ ಎದ್ದು ಕಾಣುತ್ತದೆ.



ಚಿಕ್ಕದೇವರಾಯ ಒಡೆಯರು

ಚಿಕ್ಕದೇವರಾಜಸೂಕ್ತಿವಿಲಾಸ ಎಂಬ ಹೆಸರಿನಲ್ಲಿ ಸಂಸ್ಕೃತಭಾಗವತಕ್ಕೆ ಬರೆದ ಕನ್ನಡ ಟೀಕೆಯೂ ಶಾಂತಿಪರ್ವದಿಂದ ತೊಡಗಿ ಭಾರತದ ಉಳಿದ ಪರ್ವಗಳಿಗೆ ಬರೆದ ಒಂದು ಟೀಕೆಯೂ ಈ ರಾಜನ ಕಾಲದಲ್ಲಿ ರಚಿತವಾಗಿವೆ. ವೈಷ್ಣವರಿಗೆ ಆದರಣೀಯವಾದ ಮಹಾ ಗ್ರಂಥಗಳಿಗೆ ಕನ್ನಡ ಟೀಕೆ ಬರೆಯುವ ಸಂಪ್ರದಾಯ ಈ ಕಾಲದಲ್ಲಿ ಬೆಳೆಯಿತು. ಚಿಕ್ಕದೇವರಾಜನ ಆಶ್ರಿತನಾದ ಚಿಕ್ಕುಪಾಧ್ಯಾಯನೆಂಬ ಬ್ರಾಹ್ಮಣ ಕಾಮಂದಕನೀತಿ, ಶೇಷಧರ್ಮ, ಯದುಗಿರಿ ಮಹಾತ್ಮ್ಯ ಮೊದಲಾದ ಹಲವು ಗದ್ಯ ಗ್ರಂಥಗಳನ್ನು ರಚಿಸಿದ ; ಶುಕಸಪ್ತತಿಯೆಂಬ ಸಂಸ್ಕೃತ ಕೃತಿಯನ್ನೂ ವಿಷ್ಣುಪುರಾಣವನ್ನೂ ಕನ್ನಡಕ್ಕೆ ಅನುವಾದ ಮಾಡಿದ.

ಚಿಕ್ಕುಪಾಧ್ಯಾಯ ಇಪ್ಪತ್ತೆಂಟಕ್ಕಿಂತ ಹೆಚ್ಚಿನ ಕೃತಿಗಳನ್ನು ಕನ್ನಡದಲ್ಲಿ ರಚಿಸಿದ್ದಾನೆ. ಅವುಗಳಲ್ಲಿ ಹಲವು ಚಂಪೂಕಾವ್ಯಗಳೂ ಸಾಂಗತ್ಯಕೃತಿಗಳೂ ಇವೆ. ಎಲ್ಲ ಕೃತಿಗಳಲ್ಲಿಯೂ ಶ್ರೀವೈಷ್ಣವಸಿದ್ಧಾಂತ ಪ್ರತಿಪಾದನೆಗೇ ಪ್ರಾಮುಖ್ಯ. ನೀತಿಪ್ರಚಾರ, ಭಗವದ್ಗುಣಗಾನ, ಹಲವು ಪುಣ್ಯಕ್ಷೇತ್ರಗಳ ಮಹಿಮಾನಿರೂಪಣೆ ಇವು ಕವಿಯ ಮುಖ್ಯ ಗುರಿಗಳು.

ತಿರುಮಲಾರ್ಯ ಚಿಕ್ಕದೇವರಾಯನ ಬಾಲ್ಯಸ್ನೇಹಿತನಾದ ಕವಿ. ಅವನೊಲ್ಮೆ ಪುಮಾಕೃತಿವೆತ್ತವೊಲೆಸೆವ ಸುಕೃತಿ ತಿರುಮಲೆಯಾರ್ಯಂ—ಎಂದು ಅವನೇ ಹೇಳಿಕೊಂಡಿದ್ದಾನೆ. ಈತ ಅಪ್ರತಿಮವೀರಚರಿತೆ ಎಂಬ ಅಲಂಕಾರಶಾಸ್ತ್ರಕೃತಿಯನ್ನೂ ಚಿಕದೇವರಾಯವಂಶಾವಳಿ ಎಂಬ ಗದ್ಯಗ್ರಂಥವನ್ನೂ ರಚಿಸಿದ್ದಾನೆ. ಅಪ್ರತಿಮವೀರ ಎಂಬುದು ಅರಸನ ಪ್ರೀತಿಯ ಬಿರುದು. ಅವನ ಪರಾಕ್ರಮ ವರ್ಣನೆಯನ್ನೊಳಗೊಂಡ ಉದಾಹರಣ ಪದ್ಯಗಳ ಗ್ರಂಥವಾದ್ದರಿಂದ ಇವನ ಅಲಂಕಾರಶಾಸ್ತ್ರಗ್ರಂಥಕ್ಕೆ ಅಪ್ರತಿಮವೀರಚರಿತೆ ಎಂಬ ಹೆಸರು. ಚಿಕದೇವರಾಯವಂಶಾವಳಿ ಅಪೂರ್ಣ ಗ್ರಂಥ. ಅರಸನ ಬಾಲ್ಯದ ವರ್ಣನೆಯಾಗುತ್ತಲೇ ಕಾವ್ಯ ನಿಂತು ಹೋಗಿದೆ. ಉದ್ದೇಶಪೂರ್ವಕವಾಗಿ ಆ ಕಾಲದ ಆಡುಮಾತನ್ನು ಬಿಟ್ಟು ಹಳಗನ್ನಡದಲ್ಲಿ ಬರೆದ ಕೃತಿ ಇದು. ಇದರಲ್ಲಿಯೂ ಅಳಹಿಯ ಸಿಂಗರಾರ್ಯನ ಕಥೆಯ ಸಂದರ್ಭದಲ್ಲಿ ವಿಶಿಷ್ಟಾದ್ವೈತ ಮತತತ್ತ್ವಗಳ ನಿರೂಪಣೆ ಬಂದಿದೆ. ಈತನ ಚಿಕದೇವರಾಜವಿಜಯ ಎಂಬ ಚಂಪೂಕಾವ್ಯವೂ ಅಸಮಗ್ರವಾಗಿದ್ದು ಅದರ ಆರು ಆಶ್ವಾಸಗಳು ಮಾತ್ರ ದೊರೆತಿವೆ. ಈ ಕಾಲದಲ್ಲಿ ಚಂಪೂಸಂಪ್ರದಾಯದ ಪುನರುಜ್ಜೀವನದ ಪ್ರಯತ್ನ ನಡೆಯಿತಾದರೂ ಕೃತಿಗಳಾವುವೂ ಪಂಪ ರನ್ನರ ಅಂತಸ್ತಿಗೇರಲಾರದೆ ಹೋದುವು.

ಈ ಕಾಲದ ಅತ್ಯಂತ ಪ್ರೌಢ ಚಂಪೂಕವಿ ಷಡಕ್ಷರ ದೇವ. ಈತ ರಾಜಶೇಖರ ವಿಳಾಸ, ಶಬರಶಂಕರವಿಲಾಸ ಮತ್ತು ಬಸವರಾಜವಿಜಯ ಎಂಬ ಮೂರು ಚಂಪೂಕಾವ್ಯಗಳನ್ನು ರಚಿಸಿದ್ದಾನೆ. ಸಂಸ್ಕೃತ ಕನ್ನಡಗಳೆರಡರಲ್ಲಿಯೂ ಅಮಿತವಾದ ಪಾಂಡಿತ್ಯ ಗಳಿಸಿ ಅಪೂರ್ವವಾದ ಭಾಷಾಪ್ರಭುತ್ವವನ್ನು ಹೊಂದಿದ್ದ ಕವಿ ಈತ. ಈತ ವರ್ಣನಾಕುಶಲ. ಪ್ರಧಾನವಾಗಿ ಪಂಡಿತ ಕವಿ. ಇವನಲ್ಲಿ ಸಂಸ್ಕೃತಪದಗಳ ಬಳಕೆ ವಿಶೇಷ. ರಾಜಶೇಖರವಿಳಾಸವೆಂಬುದು ಸತ್ಯೇಂದ್ರ ಚೋಳನ ಮಗ ರಾಜಶೇಖರನ ವೀಥೀವಿಹಾರಕಾಲದಲ್ಲಿ ಶಿವಭಕ್ತ ಬಾಲಕನೊಬ್ಬ ಕುದುರೆಯ ಕಾಲಿಗೆ ಸಿಕ್ಕಿ ಸಾಯಲು ಅರಸನಿಂದ ಮರಣದಂಡನೆಗೆ ಗುರಿಯಾದ ರಾಜಶೇಖರ ಶಿವಭಕ್ತಿಯ ಪ್ರಭಾವದಿಂದ ತಾನೂ ಬದುಕಿ ಇತರರನ್ನೂ ಉಜ್ಜೀವಿಸಿದ ಕಥೆ. ಕಥೆ ಸ್ವಲ್ಪ, ವರ್ಣನೆ ಹೆಚ್ಚು. ಈ ಸಣ್ಣ ಕಥೆಯೇ ಷಡಕ್ಷರಿಯ ಕೈಲಿ ಹದಿನಾಲ್ಕು ಆಶ್ವಾಸಗಳ ವಿಸ್ತಾರವಾದ ಚಂಪೂಕಾವ್ಯವಾಗಿ ಬೆಳೆದಿದೆ. ಶಬರ ಶಂಕರವಿಲಾಸ, ಅದರ ಹೆಸರೇ ಹೇಳುವಂತೆ ಕಿರಾತಾರ್ಜುನೀಯ ವೃತ್ತಾಂತವನ್ನು ಹೇಳುವ ಕಾವ್ಯ. ಬಸವರಾಜ ವಿಜಯ ಅಥವಾ ವೃಷಭರಾಜೇಂದ್ರವಿಜಯ ಬಸವಣ್ಣನವರ ಜೀವನವೃತ್ತಾಂತವನ್ನು ಹೇಳುವ ಕೃತಿ. ಬಹಳಮಟ್ಟಿಗೆ ಇದು ಪಾಲ್ಕುರಿಕೆ ಸೋಮನಾಥನ ಕೃತಿಯನ್ನು ಅನುಸರಿಸುತ್ತದೆ.

ಶಿಂಗರಾರ್ಯನೆಂಬ ರಾಜಾಶ್ರಿತನಾದ ಶ್ರೀವೈಷ್ಣವ ಕವಿ ಮಿತ್ರವಿಂದಾ ಗೋವಿಂದ ಎಂಬ ಒಂದು ನಾಟಕ ಬರೆದಿದ್ದಾನೆ. ರತ್ನಾವಳಿ ನಾಟಕದ ಆಧಾರದಿಂದ ರಚಿತವಾದ ಈ ಕೃತಿಯಲ್ಲಿ ವತ್ಸರಾಜನಿಗೆ ಪ್ರತಿಯಾಗಿ ಶ್ರೀಕೃಷ್ಣನೇ ಕಥಾನಾಯಕ. ಮಿತ್ರವಿಂದೆಯೇ ನಾಯಕಿ. ಕನ್ನಡದ ಮೊದಲ ನಾಟಕವಿದು.

ಈ ಕಾಲದ ಮುಖ್ಯ ಕಬ್ಬಿಗಿತಿ ಸಂಚಿಯ ಹೊನ್ನಮ್ಮ. ಈಕೆ ಚಿಕ್ಕದೇವರಾಯನ ಅಂತಃಪುರದ ಊಳಿಗದವಳು ; ಅರಸಿಯ ಆಣತಿಯಂತೆ ಹದಿಬದೆಯ ಧರ್ಮ ಎಂಬ ಚಿಕ್ಕದಾದರೂ ಚೊಕ್ಕನಾದ ಒಂದು ಸಾಂಗತ್ಯ ಗ್ರಂಥವನ್ನು ರಚಿಸಿದ್ದಾಳೆ. ಇದು ಒಂಬತ್ತು ಸಂಧಿಗಳ ಪುಟ್ಟ ಕೃತಿ. ರಾಮಾಯಣ ಭಾರತಗಳಿಂದಲೂ ಮನ್ವಾದಿಧರ್ಮಶಾಸ್ತ್ರಗಳಿಂದಲೂ ಉಪಯುಕ್ತ ವಿಷಯಗಳನ್ನು ಸಂಗ್ರಹಿಸಿ ಈ ಗ್ರಂಥ ಬರೆದಂತೆ ಹೊನ್ನಮ್ಮ ಹೇಳಿಕೊಂಡಿದ್ದಾಳೆ. ಇದರಲ್ಲಿ ಸ್ತ್ರೀಧರ್ಮದ ನಿರೂಪಣೆ ಇದೆ. ಇವಳ ಅನೇಕ ಅಭಿಪ್ರಾಯಗಳು ಎಲ್ಲ ಕಾಲಕ್ಕೂ ಅನ್ವಯಿಸುವ ನೀತಿಗಳಾಗಿದ್ದು ಅವನ್ನು ಹೇಳಿರುವ ರೀತಿ ಬಹಳ ಹಿತವಾಗಿದೆ.

ಈ ಕಾಲದ ಇನ್ನಿಬ್ಬರು ಗಣ್ಯರಾದ ಜನಪ್ರಿಯ ಕವಿಗಳೆಂದರೆ ರಂಗನಾಥ ಮತ್ತು ಲಕ್ಷ್ಮೀಶ. ರಂಗನಾಥ ಅಥವಾ ಮಹಲಿಂಗರಂಗ ಎಂದು ಪ್ರಸಿದ್ಧನಾಗಿರುವ ಕವಿ ಅನುಭವಾಮೃತ ಎಂಬ ಹನ್ನೊಂದು ಅಧ್ಯಾಯಗಳ ಕಾವ್ಯವನ್ನು ಭಾಮಿನೀ ಷಟ್ಪದಿಯಲ್ಲಿ ರಚಿಸಿದ್ದಾನೆ. ಅಖಿಳವೇದಾಂತಾರ್ಥವನು ಸಂಗ್ರಹಿಸಿ ಹೇಳುವೆ ಸಕಲರಿಗೆ ತಿಳಿವಂತೆ—ಎಂದು ಸಂಕಲ್ಪಿಸಿ ಕವಿ ಅಧಿಕಾರನಿರ್ಣಯ, ವೈರಾಗ್ಯ, ಪರಮಾತ್ಮಪದ ನಿರ್ಣಯ, ಮಾಯಾ ಮಿಥ್ಯಾತ್ವ, ಜೀವನ್ಮುಕ್ತಿ ಮೊದಲಾದ ವಿಷಯಗಳನ್ನು ಪ್ರತಿಪಾದಿಸಿದ್ದಾನೆ. ಕನ್ನಡದ ಪ್ರಾಶಸ್ತ್ಯ ವಿಷಯದಲ್ಲಿ ಇವನ ಉಕ್ತಿಗಳು ಬಹಳ ಪ್ರಸಿದ್ಧವಾಗಿವೆ. ಈ ಕವಿಗೆ ರಂಗಾವಧೂತನೆಂಬ ಹೆಸರೂ ಉಂಟು. ಇವನು ಸಹವಾಸಿ ವಂಶದ ಮಹಾಲಿಂಗದೇವನ ಮಗ. ಪರಮಹಂಸ ಪರಿವ್ರಾಜಕಾಚಾರ್ಯ ಸಹಜಾನಂದನ ಶಿಷ್ಯನಾದ ಈ ಕವಿ ಅದ್ವೈತ ತತ್ತ್ವವನ್ನು ಸರಳ ಭಾಷೆಯಲ್ಲಿ ನಿರೂಪಿಸಿದ್ದಾನೆ. ಜ್ಞಾನಸಿಂಧುವನ್ನು ಬರೆದ ಚಿದಾನಂದಾವಧೂತ ಬಹಳ ಮಟ್ಟಿಗೆ ಈ ಗ್ರಂಥವನ್ನೇ ಅನುಸರಿಸಿರುವಂತೆ ತೋರುತ್ತದೆ.

ಕನ್ನಡನಾಡಿನಲ್ಲಿ ವಿಶೇಷ ಪ್ರಚಾರವಾಗಿ ಬಹಳ ಜನಪ್ರಿಯವಾಗಿರುವ ಜೈಮಿನಿ ಭಾರತವನ್ನು ರಚಿಸಿದ ಕವಿಶ್ರೇಷ್ಠ—ಲಕ್ಷ್ಮೀಶ. ಈತನ ಕಾಲದ ವಿಚಾರದಲ್ಲಿಯೂ ಸ್ಥಳದ ವಿಚಾರದಲ್ಲಿಯೂ ವಿದ್ವಾಂಸರಲ್ಲಿ ತೀವ್ರವಾದ ಅಭಿಪ್ರಾಯ ಭೇದವಿದೆ. ಲಕ್ಷ್ಮೀಶ ತಾನು ಕರ್ಣಾಟಕವಿಚೈತ್ರವನಚೂತನೆಂದು ತನ್ನ ಪ್ರಾಶಸ್ತ್ಯವನ್ನು ಹೇಳಿಕೊಂಡಿದ್ದಾನೆ. ಕೃತಿ ವಾರ್ಧಕ ಷಟ್ಪದಿಯಲ್ಲಿ ರಚಿತವಾಗಿದ್ದು ಅರ್ಥ ಚಮತ್ಕಾರಗಳಿಂದಲೂ ಶಬ್ದಾಲಂಕಾರ ಅರ್ಥಾಲಂಕಾರಗಳಿಂದಲೂ ತುಂಬಿದ್ದು ಕನ್ನಡನಾಡಿನಲ್ಲಿ ಅತಿಶಯ ಪ್ರಾಶಸ್ತ್ಯವನ್ನು ಗಳಿಸಿಕೊಂಡಿದೆ. ಲಕ್ಷ್ಮೀಶನ ಸಂಚಾರದಿಂಪು ರಸಿಕಜನಮನೋರಂಜಕವಾಗಿದೆ. ಧರ್ಮರಾಯನ ಅಶ್ವಮೇಧ ಯಾಗದ ವೃತ್ತಾಂತವನ್ನೇ ಪ್ರಧಾನ ಕಥಾವಸ್ತುವಾಗಿ ಉಳ್ಳ ಈ ಕಾವ್ಯದಲ್ಲಿ ಅನೇಕ ವೀರ ಶೃಂಗಾರರಸಪ್ರಧಾನವಾದ ಕಥೆಗಳು ಬರುತ್ತವೆ. ಅಲ್ಲದೆ ಶ್ರೀಕೃಷ್ಣ ಅರ್ಜುನನಿಗೆ ಅನೇಕ ಪ್ರಸಂಗಗಳಲ್ಲಿ ರಕ್ಷಣೆ ನೀಡಿದ ಕಥನವೂ ಇದರಲ್ಲಿವೆ. ಪುಣ್ಯಮಿದು ಕೃಷ್ಣಚರಿತಾಮೃತಂ—ಎಂದೇ ಲಕ್ಷ್ಮೀಶ ತನ್ನ ಕಾವ್ಯವನ್ನು ವರ್ಣಿಸಿದ್ದಾನೆ. ಆದ್ದರಿಂದ ಭಕ್ತರಿಗೆ ಇದು ಬಹಳ ಪ್ರಿಯವಾದ ಕಾವ್ಯ. [illegible]

ಬಭ್ರುವಾಹನ ಕಾಳಗ, ಸುಧನ್ವನಕಾಳಗ ಮೊದಲಾದ ಯುದ್ಧಕಥೆಗಳೂ ಚಂದ್ರಹಾಸ ಮೊದಲಾದ ಭಕ್ತರ ಕಥನಗಳೂ ಸೇರಿ ಈ ಕಾವ್ಯ ಲೋಕಪ್ರಿಯವೆನಿಸಿದೆ. ಮಹಾಭಾರತದ ಈ ಕಥೆಯ ನಡುವೆ ಕವಿ ಚಮತ್ಕಾರದಿಂದ ಉತ್ತರ ರಾಮಾಯಣದ ಕಥಾಸನ್ನಿವೇಶವನ್ನು ದೃಷ್ಟಾಂತವಾಗಿ ತಂದು ಬಹು ಸಮರ್ಥರೀತಿಯಲ್ಲಿ ನಿರ್ವಹಿಸಿದ್ದಾನೆ. ಭಾರತದ ಯುದ್ಧವೃತ್ತಾಂತಗಳಿಂದ ತೃಪ್ತಿಪಡೆಯದೆ ಕವಿ ಇದರಲ್ಲಿ ಲವಕುಶರ ಕಾಳಗದ ಕಥೆಯನ್ನೂ ಸವಿಸ್ತಾರವಾಗಿ ವರ್ಣಿಸಿದ್ದಾನೆ.

ಚಂಪೂ, ಷಟ್ಪದೀ, ಗದ್ಯ, ಸಾಂಗತ್ಯ ಮೊದಲಾದ ವಿವಿಧಪ್ರಕಾರದ ಗ್ರಂಥಗಳ ರಚನೆ ಈ ಶತಾಬ್ದದಲ್ಲಿ ಸಮೃದ್ಧಿಯಾಗಿ ನಡೆಯುತ್ತಿದ್ದಾಗಲೇ ಆದಿಕಾಲದಿಂದ ಬೆಳೆದು ಬಂದ ಜನಪದ ಸಾಹಿತ್ಯವೂ ಜೊತೆಜೊತೆಯಾಗಿ ಬೆಳೆದು ಬಂದಿತ್ತೆಂದು ತಿಳಿಯಬೇಕಾಗಿದೆ. ಇಂಥ ಜಾನಪದ ಕವಿಗಳು ತಮ್ಮ ಹೆಸರನ್ನೂ ತಿಳಿಸದೆ ತಮ್ಮ ಕೃತಿಗಳನ್ನು ಗಾಳಿಯಲ್ಲಿ ತೇಲಿಬಿಟ್ಟಿದ್ದಾರೆ. ಗರತಿಯ ಹಾಡು, ಲಾವಣಿ, ಮೊದಲಾದುವು ಬಹಳ ಹಿಂದಿನಿಂದಲೂ ಬಳಕೆಯಲ್ಲಿದ್ದಿರಬೇಕು. ಇಂಥ ಜಾನಪದ ಕವಿಗಳೆಲ್ಲರ ಪ್ರತಿನಿಧಿಯೆಂಬಂತೆ ಒಬ್ಬ ಸರ್ವಜ್ಞ ಈ ಕಾಲದಲ್ಲಿ ಪ್ರಸಿದ್ಧನಾಗಿದ್ದಾನೆ. ಇವನ ನಿಜವಾದ ಹೆಸರೇನೊ ತಿಳಿಯದು. ಇವನ ಜನ್ಮವೃತ್ತಾಂತ ಖಚಿತವಾಗಿ ಗೊತ್ತಿಲ್ಲ. ಆದರೆ ಇವನು ಕನ್ನಡನಾಡಿನ ನಾನಾಭಾಗಗಳಲ್ಲಿ ಸಂಚರಿಸಿ ಸರ್ವಜ್ಞನೆಂಬ ಅಂಕಿತದಲ್ಲಿ ಅನೇಕ ತ್ರಿಪದಿಗಳನ್ನು ಹಾಡಿದ್ದಾನೆ. ಇವನ ಪದ್ಯಗಳು ವೀರಶೈವಧರ್ಮದ ತಿರುಳನ್ನು ಹೇಳುತ್ತವೆ. ಅದಕ್ಕಿಂತ ಮಿಗಿಲಾಗಿ ಅಂದಿನ ಜನ ಜೀವನದ ನಾನಾ ಸುಖದುಃಖಗಳನ್ನು ಅವು ವರ್ಣಿಸುತ್ತವೆ. ಸರ್ವಜ್ಞ ಆಶುಕವಿ. ಕುಂತಲ್ಲಿ ನಿಂತಲ್ಲಿ ಪದ ಹೇಳುವ ಸಂಪ್ರದಾಯಕ್ಕೆ ಆತ ಸೇರಿದವ. ಜೈನಯತಿಗಳ ಹಿರಿಮೆಯನ್ನು ಮನಗಂಡಾಗ ಸರ್ವಜ್ಞ ಅವರನ್ನು ಹೊಗಳಲು ಹಿಂಜರಿಯುವುದಿಲ್ಲ. ಶ್ರವಣರು ತಪ್ಪಾಡಿದಂದು ಉಪ್ಪು ಸಪ್ಪಗಾಗುತ್ತದೆಯಂತೆ, ಸರ್ಪನಿಗೆ ಬಾಲವೆರಡಾಗುತ್ತದೆಯಂತೆ. ಹಾಗೆಯೇ ನೀತಿಯನರಿದ ವಿಪ್ರನು ಜಗದೊಳು ಜ್ಯೋತಿಯಿದ್ದಂತೆ ಎಂದು ಹೇಳಲೂ ಸರ್ವಜ್ಞನಿಗೆ ಸಂತೋಷ. ಮಲೆನಾಡಿಗೆ ಹೋಗಿ ಅಲ್ಲಿನ ಚಳಿಗಾಳಿಗಳಿಗೆ ಸಿಕ್ಕಿ ನೊಂದು ಮಲೆನಾಡ ಕಾಡು ಸಾಕೆಂದವ ಸರ್ವಜ್ಞ. ಮಲೆನಾಡಿನ ಅತಿಥಿಸತ್ಕಾರವನ್ನು ಪಡೆದು ಸಂತುಷ್ಟನಾದಾಗ ಮಲೆನಾಡನಲ್ಲೆನ್ನಬಹುದೆ—ಎಂದು ಯಾವ ಸಂಕೋಚವೂ ಇಲ್ಲದೆ ಆತ ಹೊಗಳಿದ್ದಾನೆ. ಸರ್ವಜ್ಞ ಸಾಮಯಿಕ ಕವಿ; ನೀತಿಪ್ರಚಾರಕ; ಸಮಾಜ ಸುಧಾರಣೆಗೆ ಶ್ರಮಿಸಿದವ. ತನ್ನ ಅಭಿಪ್ರಾಯಗಳನ್ನು ಸುಲಭವಾದ ಭಾಷೆಯಲ್ಲಿ ತ್ರಿಪದಿರೂಪದಲ್ಲಿ ಬಹು ಅಂದವಾಗಿ ಈತ ನಿರೂಪಿಸಿದ್ದಾನೆ.

ಈ ಶತಮಾನದ ದೊಡ್ಡ ವೈಯಾಕರಣ ಭಟ್ಟಾಕಳಂಕನನ್ನು ಮರೆಯಲಾಗದು. ಈತ ಶಬ್ದಾನುಶಾಸನವೆಂಬ ಪ್ರೌಢವ್ಯಾಕರಣಗ್ರಂಥವನ್ನು ರಚಿಸಿದ್ದಾನೆ. ನಾಗವರ್ಮ ಹಿಂದೆ ಭಾಷಾಭೂಷಣವನ್ನು ಬರೆದ ಹಾಗೆ ಇವನೂ ಕನ್ನಡ ವ್ಯಾಕರಣವನ್ನು ಸಂಸ್ಕೃತದಲ್ಲಿ ಬರೆದಿದ್ದಾನೆ. ಸೂತ್ರ, ವೃತ್ತಿ, ವ್ಯಾಖ್ಯಾನ, ಮೂರೂ ಸಂಸ್ಕೃತದಲ್ಲಿಯೇ ಇವೆ. ನಾಲ್ಕು ಪಾದಗಳಾಗಿ ವಿಂಗಡನೆಗೊಂಡು ಸುಮಾರು ಆರುನೂರು ಸೂತ್ರಗಳಿಂದ ಕೂಡಿದ ಈ ಶಾಸ್ತ್ರಗ್ರಂಥಕ್ಕೆ ಭಟ್ಟಾಕಳಂಕ ಭಾಷಾಮಂಜರೀ ಎಂಬ ವೃತ್ತಿಯನ್ನೂ ಮಂಜರಿಮಕರಂದವೆಂಬ ವ್ಯಾಖ್ಯಾನವನ್ನೂ ಬರೆದಿದ್ದಾನೆ. ಕನ್ನಡ ಭಾಷೆಯ ಅಗ್ಗಳಿಕೆಯನ್ನೀತ ಮನಸಾರ ಉದ್ಘೋಷಿಸಿದ್ದಾನೆ.

ಹದಿನೆಂಟನೆಯ ಶತಮಾನದಲ್ಲಿ ಕಂಠೀರವ ನರಸರಾಜ ಒಡೆಯರು ಕವಿಪೋಷಕರಾಗಿ ಅನೇಕ ಕನ್ನಡ ಕವಿಗಳಿಗೆ ಆಶ್ರಯದಾತರಾಗಿದ್ದರು (ನೋಡಿ—ಒಡೆಯರ ಕಾಲದ ಕನ್ನಡ ಸಾಹಿತ್ಯ.) ಶಾಲ್ಮದ ಕೃಷ್ಣರಾಜ ಕನ್ನಡ ತೆಲುಗು ಸಂಸ್ಕೃತಗಳಲ್ಲಿ ಕೃತಿರಚನೆ ಮಾಡಿದ್ದಾನೆ. ಹೈದರಾಲಿಯ ಬಳಿ ಮಂತ್ರಿಯಾಗಿದ್ದ ವೆಂಕಾಮಾತ್ಯ ಅನೇಕ ಕೃತಿಗಳನ್ನು ರಚಿಸಿದ್ದಾನೆ. ಕನ್ನಡ ಕವಿಗಳಲ್ಲಿ ಭಾಸನ ಹೆಸರನ್ನು ಹೇಳಿರುವಾತ ಇವನೊಬ್ಬನೇ ಎಂದು ತಿಳಿಯುತ್ತದೆ. ಇವನು ಹನುಮದ್ವಿಲಾಸ, ಇಂದಿರಾಭ್ಯುದಯ ಮತ್ತು ರಾಮಾಯಣಗಳನ್ನು ವಾರ್ಧಕ ಷಟ್ಪದಿಯಲ್ಲಿ ರಚಿಸಿದ್ದಾನೆ.

1800 ರಿಂದ ಈಚೆಗೆ ಮುಮ್ಮಡಿ ಕೃಷ್ಣರಾಜ ಒಡೆಯರು, ಚಾಮರಾಜ ಒಡೆಯರು ರಾಜ್ಯವಾಳಿ ಕವಿಪೋಷಕರಾದರು. ಮುಮ್ಮಡಿ ಕೃಷ್ಣರಾಜಒಡೆಯರು ಸ್ವಯಂ ಕವಿಗಳೂ ಆಗಿದ್ದರು. ಆಶ್ರಿತರಾದ ಅನೇಕ ವಿದ್ವಾಂಸರಿಂದ ಅವರು ಹಲವು ಕೃತಿಗಳನ್ನು ಕನ್ನಡದಲ್ಲಿ ಬರೆಯಿಸಿದರು. ಇವರ ಹೆಸರಿನಲ್ಲಿ ಐವತ್ತಕ್ಕಿಂತ ಹೆಚ್ಚು ಗ್ರಂಥಗಳಿವೆ. ಕೃಷ್ಣರಾಜವಾಣೀವಿಲಾಸಭಾರತ, ಶಾಕುಂತಲ ನಾಟಕನವೀನಟೀಕೆ ಇವು ಬಹಳ ಪ್ರಸಿದ್ಧವಾಗಿವೆ. ಇವರ ಕಾಲದಲ್ಲಿಯೇ ಹೊಸಗನ್ನಡ ಗದ್ಯ ಆರಂಭವಾಯಿತೆಂದು ಹೇಳಬಹುದು. ಇವರ ಆಶ್ರಿತನಾದ ಕೆಂಪು ನಾರಾಯಣ ಬರೆದಿರುವ ಮುದ್ರಾಮಂಜೂಷ ಹೊಸಗನ್ನಡ ಶೈಲಿಯಲ್ಲೇ ಇದೆ. ಚಂದ್ರಗುಪ್ತ ಚಾಣಕ್ಯರ ವೃತ್ತಾಂತವನ್ನೊಳಗೊಂಡ ಈ ಗದ್ಯಗ್ರಂಥ ತನ್ನ ಗಂಭೀರವಾದ ಭಾಷಾಶೈಲಿಯಿಂದ ಕನ್ನಡಿಗರಿಗೆ ಅಚ್ಚುಮೆಚ್ಚಾಗಿದೆ.

ಆಮೇಲೆ ಶ್ರೀ ಚಾಮರಾಜ ಒಡೆಯರ ಆಸ್ಥಾನ ಕವಿ ಬಸಪ್ಪಶಾಸ್ತ್ರಿಗಳು ಅಭಿಜ್ಞಾನ ಶಾಕುಂತಲ, ಚಂಡಕೌಶಿಕ, ಉತ್ತರರಾಮಚರಿತ್ರೆ ಎಂಬ ನಾಟಕಗಳನ್ನು ಭರ್ತೃಹರಿಯ ಸುಭಾಷಿತಗಳನ್ನೂ ಕನ್ನಡಿಸಿದರು. ಸಾವಿತ್ರೀ ಚರಿತ್ರೆ ಮತ್ತು ದಮಯಂತೀ ಸ್ವಯಂವರವೆಂಬ ಕಾವ್ಯಗಳನ್ನು ಸ್ವತಃ ಕಟ್ಟಿದರು. ಇಂಗ್ಲಿಷಿನ ಒಥೆಲೋ ನಾಟಕದ ಆಧಾರದಿಂದ ಶೂರಸೇನ ಚರಿತ್ರೆ ಎಂಬ ನಾಟಕವನ್ನು ಬರೆದರು. ಅಂದಿನಿಂದ ಸಂಸ್ಕೃತ ನಾಟಕಗಳ ಕನ್ನಡ ಪರಿವರ್ತನೆ ವಿಶೇಷವಾಗಿ ನಡೆಯಿತು.



ಮುಮ್ಮಡಿ ಕೃಷ್ಣರಾಜ ಒಡೆಯರು

ಇಂಗ್ಲಿಷ್ ಭಾಷಾಸಾಹಿತ್ಯಗಳ ಪರಿಚಯ ಬೆಳೆದ ಮೇಲೆ ಕನ್ನಡದಲ್ಲಿ ಕಾದಂಬರಿ, ಸಣ್ಣಕಥೆ, ಪ್ರಹಸನ, ಲಘು ಪ್ರಬಂಧ, ಭಾವಗೀತೆ, ಮೊದಲಾದ ವಿವಿಧ ಪ್ರಕಾರಗಳು ಬಳಕೆಗೆ ಬಂದುವು. ಪ್ರಾಚೀನ ಛಂದಸ್ಸುಗಳನ್ನು ಕೈಬಿಟ್ಟು ಹೊಸ ಬಗೆಯ ಪದ್ಯರಚನೆ ಆರಂಭವಾಯಿತು. ವೃತ್ತಪತ್ರಿಕೆಗಳು ಹುಟ್ಟಿ ಕನ್ನಡದ ಬಹುಮುಖವಾದ ಅಭಿವೃದ್ಧಿ ಮೊದಲಾಯಿತು. ಬಂಗಾಳಿ, ಹಿಂದಿ, ತಮಿಳು, ಮರಾಠಿ ಮೊದಲಾದ ಭಾಷೆಗಳಿಂದಲೂ ಕಥೆ ಕಾದಂಬರಿಗಳ ಅನುವಾದಗಳು ಬರತೊಡಗಿದವು. ಇಂದು ಕನ್ನಡದಲ್ಲಿಯೇ ಆಧುನಿಕ ವಿಜ್ಞಾನವನ್ನೂ ಕಲಿಸಬೇಕೆಂಬ ಸಂಕಲ್ಪದಿಂದ ತಜ್ಞರು ವೈಜ್ಞಾನಿಕ ಗ್ರಂಥಗಳನ್ನೂ ರಚಿಸುತ್ತಿದ್ದಾರೆ. ಪ್ರಾಚ್ಯ ವಿದ್ಯಾಸಂಶೋಧನೆಗೆ ಆರಂಭವಾಗಿ ಅನೇಕ ಶಾಸನಗಳನ್ನು ಬೆಳಕಿಗೆ ತರಲಾಗಿದೆ. ಪ್ರಾಚೀನ ಗ್ರಂಥಗಳನ್ನು ಶೋಧಿಸಿ ಅಚ್ಚು ಮಾಡಿಸುವ ಕೆಲಸ ಬಹು ಹಿಂದಿನಿಂದ ನಡೆಯುತ್ತಿದೆ. ರಸಾತ್ಮಕವಾದ ಕಾವ್ಯಗಳಿಂದ ಕೂಡಿ ಓದುಗರಿಗೆ ಆನಂದವಾಹಿನಿಯಾಗಿದ್ದ ಕನ್ನಡ ಈಗ ಲೋಕ ಪರಿಚಯವನ್ನೂ ಶಾಸ್ತ್ರ ಪರಿಚಯವನ್ನೂ ನೀಡುವ ಜ್ಞಾನವಾಹಿನಿಯೂ ಆಗುತ್ತಿದೆ. (ಕ.ವಿಅ.)

**ಕನ್ನಡ ಸಾಹಿತ್ಯ ಪರಿಷತ್ತು :** ಕನ್ನಡ ಭಾಷೆ ಮತ್ತು ಸಾಹಿತ್ಯದ ಸರ್ವತೋಮುಖವಾದ ಬೆಳವಣಿಗೆ, ಕನ್ನಡದ ಸ್ಥಾನಮಾನ ಹಾಗೂ ಕನ್ನಡ ಏಕೀಕರಣ, ಕನ್ನಡ ಜನಜಾಗೃತಿ ಮೊದಲಾದ ಮಹತ್ಕಾರ್ಯಗಳನ್ನು ನಡೆಸುತ್ತಿರುವ ಪ್ರಮುಖ ಸಂಸ್ಥೆ. ಸುಮಾರು ಐವತ್ತು ವರ್ಷಗಳಿಂದಲೂ ಉದ್ದೇಶಿತ ಧ್ಯೇಯಕ್ಕಾಗಿ ಅವಿರತವಾಗಿ ಶ್ರಮಿಸುತ್ತಿರುವ ಈ ಸಂಸ್ಥೆ 1970ರಲ್ಲಿ ತನ್ನ ಚಿನ್ನದ ಹಬ್ಬವನ್ನು ಆಚರಿಸಿತು. ಈ ಮಹಾಸಂಸ್ಥೆ ಹುಟ್ಟಿದಂದಿನ ಸಾಮಾಜಿಕ ಹಿನ್ನೆಲೆ, ಸಂಸ್ಥೆಯ ಕಾರ್ಯಕಲಾಪಗಳು, ಸಾಧನೆಗಳು ಮುಂತಾದ ವಿಷಯಗಳನ್ನಿಲ್ಲಿ ಪ್ರಸ್ತಾಪಿಸಿದೆ.

**ಹಿನ್ನೆಲೆ :** ಕಾವೇರಿಯಿಂದಮಾ ಗೋದಾವರಿವರಮಿರ್ದ ನಾಡದಾ ಕನ್ನಡದೊಳ್ ಭಾವಿಸಿದ ಜನಪದಂ ಎಂದು ಕವಿರಾಜಮಾರ್ಗಕಾರ ಪ್ರಾಚೀನ ಕರ್ನಾಟಕದ ಎಲ್ಲೆ ಕಟ್ಟನ್ನು ನಿರ್ದೇಶಿಸಿದ್ದಾನಷ್ಟೆ. ರಾಷ್ಟ್ರಕೂಟರ ನೃಪತುಂಗನ ಕಾಲದ (814–877) ಈ ಕನ್ನಡ ನಾಡು ಕಾಲಕಾಲಕ್ಕೆ ಕುಗ್ಗುತ್ತ ಬಂದರೂ ಮೈಸೂರು ರಾಜ್ಯದ

ಹೈದರ್ ಟಿಪ್ಪೂಸುಲ್ತಾನರ ಕಾಲದಲ್ಲಿಯೂ ತಕ್ಕಮಟ್ಟಿಗೆ ಉದ್ದಗಲವನ್ನು ಪಡೆದಿತ್ತು. 1799ರಲ್ಲಿ ಇಂಗ್ಲಿಷರು ಟಿಪ್ಪುವನ್ನು ಸೋಲಿಸಿದ ಮೇಲೆ, ತಾವು ಗೆದ್ದ ರಾಜ್ಯದ ಕೆಲವು ಭಾಗಗಳನ್ನು ತಾವೇ ಉಳಿಸಿಕೊಂಡರು. ಸ್ವಲ್ಪ ಭಾಗವನ್ನು ತಮಗೆ ಯುದ್ಧದಲ್ಲಿ ನೆರವಾಗಿದ್ದ ಹೈದರಾಬಾದು ನಿಜಾಮನಿಗೆ ಕೊಟ್ಟರು; ಹೈದರನಿಗೆ ಮುಂಚೆ ಮತ್ತು ಅವನ ಕಾಲದಲ್ಲಿ—ಮೈಸೂರು ಒಡೆಯರ ವಶದಲ್ಲಿದ್ದ ರಾಜ್ಯದ ಬಹುಭಾಗ ಅವರಿಗೇ ಹಿಂದಿರುಗಿ ಬಂದಿತು. ಪುನರುದಯವಾದ ಮೈಸೂರು ಸಂಸ್ಥಾನ ಮೈಸೂರು ಅರಸರ ಆಳ್ವಿಕೆಯಲ್ಲಿ ಬಹುಮುಖವಾದ ಏಳಿಗೆಯನ್ನು ಹೊಂದುತ್ತ ಬಂದಿತು.

ಮೈಸೂರು ಅರಸರ ಆಶ್ರಯಗಲ್ಲಿ ಕನ್ನಡ ಭಾಷೆ ಸಾಹಿತ್ಯಗಳ ಏಳಿಗೆಗೆ ಉದಾರವಾದ ಆಶ್ರಯವಿತ್ತು. ನಾಲ್ವಡಿ ಕೃಷ್ಣರಾಜರ ಆಳ್ವಿಕೆಯಲ್ಲಿ ಅವರ ಪ್ರೋತ್ಸಾಹದಿಂದಲೂ ದಿವಾನರಾಗಿದ್ದ ಸರ್ ಎಂ. ವಿಶ್ವೇಶ್ವರಯ್ಯನವರ ಪ್ರೇರಣೆಯಿಂದಲೂ ಸಂಪದಭ್ಯುದಯ ಸಮಾಜ (ಮೈಸೂರು ಎಕನಾಮಿಕ್ ಕಾನ್ಫರೆನ್ಸ್), ಮೈಸೂರು ವಿಶ್ವವಿದ್ಯಾನಿಲಯ (1916) ಸ್ಥಾಪಿತವಾದುವು. ರಾಜಮಂತ್ರಪ್ರವೀಣ ಎಚ್. ವಿ. ನಂಜುಂಡಯ್ಯನವರು ವಿಶ್ವವಿದ್ಯಾನಿಲಯದ ಪ್ರಥಮ ಉಪಕುಲಪತಿಗಳಾದರು. ಕನ್ನಡ ಭಾಷೆ ಮತ್ತು ಸಾಹಿತ್ಯಗಳ ಬೆಳೆವಣಿಗೆಗೆ ಪ್ರೋತ್ಸಾಹ ಕೊಡುವುದು, ಕನ್ನಡದ ಮೂಲಕ ವಿದ್ಯೆ ಮತ್ತು ಜ್ಞಾನಗಳ ಪ್ರಸಾರ ಮಾಡುವುದು—ವಿಶ್ವವಿದ್ಯಾನಿಲಯದ ಧ್ಯೇಯವಾಗಿದ್ದುವು. ಇದಕ್ಕೂ ಮುಂಚೆ ಚಾಮರಾಜ ಒಡೆಯರ ಕಾಲದಲ್ಲಿ ಕರ್ಣಾಟಕ ಭಾಷೋಜ್ಜೀವಿನಿ ಸಭೆ ಸ್ಥಾಪಿತವಾಗಿತ್ತು; ಪ್ರಾಚ್ಯವಿದ್ಯಾಸಂಶೋಧನಾಲಯ (ಓರಿಯಂಟಲ್ ಲೈಬ್ರರಿ) ಏರ್ಪಟ್ಟಿತ್ತು. ಕಿಟ್ಟೆಲ್, ರೈಸ್, ಆರ್. ನರಸಿಂಹಾಚಾರ್, ಎಸ್.ಜಿ. ನರಸಿಂಹಚಾರ್, ಬಿ.ಎಂ. ಶ್ರೀಕಂಠಯ್ಯ, ಶಾಂತಕವಿ, ವೆಂಕಟ ರಂಗೋಕಟ್ಟಿ, ಪಂಜೆ ಮಂಗೇಶರಾವ್ ಮುಂತಾದ ವಿದ್ವಾಂಸರು ಕನ್ನಡ ಪ್ರಾಚೀನ ಗ್ರಂಥಗಳ ಪ್ರಕಟನೆ, ಲೇಖನ, ಭಾಷಣ, ಮುಂತಾದ ಕಾರ್ಯಗಳ ಮೂಲಕ ಕನ್ನಡ ಭಾಷಾ ಸಾಹಿತ್ಯಗಳ ಸೇವೆ ಮಾಡುತ್ತಿದ್ದರು. 1890ರಲ್ಲಿ ಧಾರವಾಡದಲ್ಲಿ ಸ್ಥಾಪಿತವಾದ ಕರ್ನಾಟಕ ವಿದ್ಯಾವರ್ಧಕ ಸಂಘದ (ನೋಡಿ) ಕಟ್ಟಡ ನಿರ್ಮಾಣಕ್ಕೆ ಮೈಸೂರು ಸರ್ಕಾರ ಉದಾರವಾಗಿ ಧನಸಹಾಯ ಮಾಡಿತು (1905); ಅಸ್ತಿವಾರ ಹಾಕುವಾಗ, ಆ ಸಹಾಯದ ಸ್ಮರಣಾರ್ಥವಾಗಿ ಕಟ್ಟಡಕ್ಕೆ ಚಾಮರಾಜ ಮಂದಿರ ಎಂದು ಹೆಸರಿಡಲಾಯಿತು. ವಿದ್ಯಾವರ್ಧಕ ಸಂಘ ತನ್ನ ಸಾಹಿತ್ಯ ಪರೀಕ್ಷೆಗಳಿಗೆ ಮೈಸೂರು ಸರ್ಕಾರದ ಮೂಲಕ ಮೈಸೂರಿನ ಕನ್ನಡ ವಿದ್ವಾಂಸರ ನೆರವು ಪಡೆಯುತ್ತಿತ್ತು. ಸಂಘ 1908, 1909 ನೆಯ ವರ್ಷಗಳಲ್ಲಿ, ಕರ್ಣಾಟಕ ಗ್ರಂಥಗಳಲ್ಲಿ ಉಪಯೋಗಿಸುವ ಭಾಷೆಯಲ್ಲಿ ಏಕರೂಪತೆಯನ್ನುಂಟುಮಾಡುವ ಉದ್ದೇಶದಿಂದ, ಅಖಿಲ ಕರ್ಣಾಟಕ ಪ್ರಾತಿನಿಧ್ಯವುಳ್ಳ ಗ್ರಂಥಕರ್ತರ ಸಮ್ಮೇಳನಗಳನ್ನು ಕೂಡಿಸಿತ್ತು. ಹೀಗೆ ಕರ್ಣಾಟಕ ವಿದ್ಯಾವರ್ಧಕ ಸಂಘದ ಬೆಳವಣಿಗೆಯಲ್ಲೂ ಕಾರ್ಯಕಲಾಪಗಳಲ್ಲೂ ಅಖಿಲ ಕರ್ಣಾಟಕ ದೃಷ್ಟಿಯೇ ಇತ್ತು. ಎರಡನೆಯ ಸಮ್ಮೇಳನವನ್ನು ಬೆಂಗಳೂರಿನಲ್ಲಿ ಕರೆಯಬೇಕೆಂಬ ಆಲೋಚನೆಯಿದ್ದು, ಅದನ್ನು ಆಗಿನ ವಿದ್ಯಾಧಿಕಾರಿಗಳಾದ ಎಂ. ಶಾಮರಾಯರು ಅನುಮೋದಿಸಿದ್ದರೂ ಅದು ಕಾರ್ಯಗತವಾಗಲಿಲ್ಲ. ಆದರೆ ಎರಡೂ ಕಡೆಯ ವಿದ್ವಾಂಸರಲ್ಲಿ ಈ ಬಯಕೆ ಬತ್ತಿರಲಿಲ್ಲ. 1915ರಲ್ಲಿ ಈ ಬಯಕೆ ಹಸಿರೊಡೆದು ಕನ್ನಡ ಸಾಹಿತ್ಯ ಪರಿಷತ್ತಿನ ಸ್ಥಾಪನೆಯಾಯಿತೆನ್ನಬಹುದು.

**ಸ್ಥಾಪನೆ :** ಮೈಸೂರಿನ ಆರ್ಥಿಕ ಮತ್ತು ಸಾಂಸ್ಕೃತಿಕ ಅಭಿವೃದ್ಧಿಗಾಗಿ ಏರ್ಪಟ್ಟಿದ್ದ ಸಂಪದಭ್ಯುದಯ ಸಮಾಜ ಕನ್ನಡದ ಏಳಿಗೆಯನ್ನು ಸಾಧಿಸುವ ಉದ್ದೇಶದಿಂದ 1914ರಲ್ಲಿ ಕೂಡಿಸಿದ ವಾರ್ಷಿಕ ಸಮ್ಮೇಳನದಲ್ಲಿ ಭಾಷಾಸಂಸ್ಕರಣ ವಿಷಯವೂ ಕರ್ಣಾಟಕ ಗ್ರಂಥಾವಳಿಯ ವೃದ್ಧಿಯ ವಿಷಯವೂ ಚರ್ಚಿತವಾದುವು. ಕರ್ಣಾಟಕ ಭಾಷೆಯಲ್ಲಿ ವಿವಿಧ ಗ್ರಂಥಗಳನ್ನು ರಚಿಸುವವರ ಪ್ರೋತ್ಸಾಹಕ್ಕಾಗಿ ಸ್ವತಂತ್ರಾಧಿಕಾರವುಳ್ಳ ಪರಿಷತ್ತೊಂದು ಇರಬೇಕು ಮತ್ತು ಸರ್ಕಾರದವರು ಆ ಪರಿಷತ್ತನ್ನು ಅಂಗೀಕರಿಸಿ ಅದಕ್ಕೆ ಎಲ್ಲ ಬಗೆಯ ಸಹಾಯವನ್ನು ಮಾಡುವುದು ಉಚಿತವೆಂದು ಸಂಪದಭ್ಯುದಯ ಸಮಾಜ ಸರ್ಕಾರಕ್ಕೆ ಶಿಫಾರಸು ಮಾಡಬೇಕು ಎಂದು ತೀರ್ಮಾನವಾಯಿತು. ಈ ತೀರ್ಮಾನಕ್ಕೆ ಅನುಗುಣವಾಗಿ 31–10–1914ರಂದು, ಕನ್ನಡನಾಡುಗಳ ಪ್ರಮುಖರನ್ನು ಬೆಂಗಳೂರಿಗೆ ಆಹ್ವಾನಮಾಡಿ, ಕರ್ಣಾಟಕ ಭಾಷಾ ಪರಿಷ್ಕರಣಕ್ಕೂ ಕರ್ಣಾಟಕ ಗ್ರಂಥಾಭಿವೃದ್ಧಿಗೂ ಅನುಕೂಲವಾಗುವಂತೆ ಸಂಘವೊಂದನ್ನು ಏರ್ಪಡಿಸುವ ಕಾರ್ಯವನ್ನು ನಿರ್ವಹಿಸಲು ಒಂದು ಉಪಸಮಿತಿಯನ್ನು ಸಮಾಜದ ವಿದ್ಯಾವಿಷಯಕ ಮಂಡಲಿ ನೇಮಕಮಾಡಿತು. ಎಂ.ಶಾಮರಾವ್, ಕರ್ಪೂರ ಶ್ರೀನಿವಾಸರಾವ್, ಡಾ. ಪಿ.ಎಸ್. ಅಚ್ಯುತರಾವ್–ಇವರು ಉಪಸಮಿತಿಯ ಸದಸ್ಯರು. ಉಪಸಮಿತಿಯ ಕೋರಿಕೆಯಂತೆ, ಮೇಲ್ಕಂಡ ಉದ್ದೇಶ ಸಾಧನೆಗೆ ಸಲಹೆಗಳನ್ನೊಳಗೊಂಡ 31 ಲೇಖನಗಳು ವಿದ್ವಾಂಸರಿಂದ ಬಂದುವು. ಉಪಸಮಿತಿಯ 22–3–1915ರ ಸಭೆಯಲ್ಲಿ, ಸಮ್ಮೇಳನ ಕಾರ್ಯ ಪ್ರಾರಂಭವಾಗಬೇಕೆಂದು ತೀರ್ಮಾನವಾಯಿತು. ಅದರಂತೆ, 3–5–1915ರಂದು ಅಪರಾಹ್ನ 3 ಗಂಟೆಗೆ ಬೆಂಗಳೂರು ಸರ್ಕಾರಿ ಪ್ರೌಢ ವಿದ್ಯಾಶಾಲೆಯ ವಿಶಾಲವಾದ ಹಜಾರದಲ್ಲಿ ಸಮ್ಮೇಳನ ಪ್ರಾರಂಭವಾಯಿತು. ಧಾರವಾಡ, ಬಿಜಾಪುರ, ಬೆಳಗಾಂ, ಕಾರವಾರ, ಬೊಂಬಾಯಿ ನಗರ, ಬಳ್ಳಾರಿ, ದಕ್ಷಿಣ ಕನ್ನಡ, ಮೈಸೂರು ಸಂಸ್ಥಾನದ ಜಿಲ್ಲೆಗಳು ; ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘ ಮತ್ತು ಕರ್ನಾಟಕ ವಿದ್ಯಾವ್ಯಾಸಂಗ ಸಮಾಜದ ಬೊಂಬಾಯಿ ನಗರದ ಕಾಲೇಜು ಮತ್ತು ಹೈಸ್ಕೂಲುಗಳು—ಇವುಗಳ ಪ್ರತಿನಿಧಿಗಳೂ ಧಾರವಾಡದ ಕರ್ನಾಟಕ ವೃತ್ತ ಮತ್ತು ಧನಂಜಯ, ಹುಬ್ಬಳ್ಳಿಯ ಸಚಿತ್ರಭಾರತ ಮಂಗಳೂರಿನ ಸ್ವದೇಶಾಭಿಮಾನಿ ಮತ್ತು ಮೈಸೂರು ಸಂಸ್ಥಾನದ ವೃತ್ತಾಂತ ಪತ್ರಿಕೆಗಳ ಸಂಪಾದಕರೂ ಹಾಜರಿದ್ದರು. ಆ ಸಮ್ಮೇಳನಕ್ಕೆ ಕನ್ನಡ ನಾಡುಗಳ ಎಲ್ಲ ಕಡೆಗಳಿಂದಲೂ ಪ್ರತಿನಿಧಿಗಳು ಬಂದಿದ್ದಂತೆ ಭಾವಿಸಬಹುದು. ಆ ಪ್ರಥಮ ಸಮ್ಮೇಳನದ ಪ್ರಥಮ ಸಭೆಯ ಅಗ್ರಸ್ಥಾನಾಧಿಪತಿಯಾಗಿ ರಾಜಮಂತ್ರಪ್ರವೀಣ ಎಚ್. ವಿ. ನಂಜುಂಡಯ್ಯನವರನ್ನು ನೆರೆದಿದ್ದ ಮಹಾಜನರು ಒಮ್ಮತದಿಂದ ಚುನಾಯಿಸಿದರು. ಸಮ್ಮೇಳನ ನಾಲ್ಕು ದಿನ ನಡೆಯಿತು. ಮುಂದಿನ ದಿನಗಳಲ್ಲಿ ರಾಜಸಭಾಭೂಷಣ ಕೆ. ಪಿ. ಪುಟ್ಟಣ್ಣಶೆಟ್ಟರು, ಮತ್ತು ಕರ್ಪೂರ ಶ್ರೀನಿವಾಸರಾಯರು ಅಧ್ಯಕ್ಷರಾಗಿದ್ದರು. ಮೂರನೆಯ ದಿನದ ಸಭೆಯಲ್ಲಿ ಪರಿಷತ್ತಿನ ರಚನಾಕ್ರಮ ಮತ್ತು ನಿಬಂಧನೆಗಳು ಜಿಜ್ಞಾಸಾಪೂರ್ವಕವಾಗಿ ತೀರ್ಮಾನಿಸಲ್ಪಟ್ಟುವು.

ಸಂಘಕ್ಕೆ ಕರ್ಣಾಟಕ ಸಾಹಿತ್ಯ ಪರಿಷತ್ತು ಎಂದು ಹೆಸರಿರತಕ್ಕದ್ದಲ್ಲದೆ ಪರಿಷತ್ತಿನ ಮುಖ್ಯ ಕಾರ್ಯಸ್ಥಾನ ಬೆಂಗಳೂರಿನಲ್ಲಿರತಕ್ಕದ್ದು. ಕರ್ಣಾಟಕ ಭಾಷಾ ಪರಿಷ್ಕರಣವೂ ಭಾಷೋನ್ನತಿಯೂ ಕರ್ಣಾಟಕ ಗ್ರಂಥಾಭಿವೃದ್ಧಿಯೂ ಪರಿಷತ್ತಿನ ಮುಖ್ಯ ಉದ್ದೇಶಗಳು. ಈ ಮುಖ್ಯೋದ್ದೇಶವನ್ನು ಸಾಧಿಸುವ ಮಾರ್ಗಗಳು: 1 ಕನ್ನಡ ವ್ಯಾಕರಣ, ಭಾಷಾಚರಿತ್ರೆ, ನಿಘಂಟುಗಳು—ಇವುಗಳ ರಚನೆ; ರಚನೆಗೆ ಸಹಾಯ. 2 ಕನ್ನಡಶಾಸ್ತ್ರ ಗ್ರಂಥಗಳ ಪಾರಿಭಾಷಿಕ ಶಬ್ದಕೋಶಗಳ ನಿರ್ಮಾಣ. 3 ತತ್ತ್ವವಿಚಾರ, ಭೌತಿಕಶಾಸ್ತ್ರ ಚರಿತ್ರೆ, ಸಾಹಿತ್ಯ ಗ್ರಂಥಗಳ ಲೇಖನಕ್ಕೆ ಪ್ರೋತ್ಸಾಹ ; ಅವುಗಳ ಪ್ರಕಟನೆ. 4 ಕನ್ನಡ ಭಾಷೆ, ಕನ್ನಡ ಗ್ರಂಥಗಳು—ಇವುಗಳ ವಿಷಯವಾಗಿ ಚರ್ಚೆ, ನಿರ್ಣಯಗಳ ಅಂಗೀಕಾರ. 5 ಇತರ ಭಾಷೆಗಳ ಉತ್ತಮ ಗ್ರಂಥಗಳ ಭಾಷಾಂತರಗಳ ಪ್ರಕಟನೆ. 6 ಉತ್ಕೃಷ್ಟ ಪ್ರಾಚೀನ ಗ್ರಂಥಗಳ ಪ್ರಕಟನೆ; ಕನ್ನಡ ಸಂಸ್ಥಾನಗಳ ಚರಿತ್ರೆಗಳ ಸಂಗ್ರಹ, ಪ್ರಕಟನೆ ; ಪ್ರಾಚೀನ ವಸ್ತುಸಂಗ್ರಹಾಲಯ. 7 ಕರ್ಣಾಟಕ ಭಾಷಾಸಂಸ್ಕರಣ, ಗ್ರಂಥಾಭಿವೃದ್ಧಿ—ಈ ವಿಷಯಕ ಉಪನ್ಯಾಸಗಳನ್ನು ಒಳಗೊಂಡ ಪತ್ರಿಕೆಗಳ ಪ್ರಕಟನೆ. 8 ಗ್ರಂಥಪ್ರತಿಗಳನ್ನು ಅಥವಾ ಗ್ರಂಥಸ್ವಾಮ್ಯವನ್ನು ಕೊಳ್ಳುವ ಮೂಲಕ, ಸ್ವಂತವಾಗಿ ಗ್ರಂಥಪ್ರಕಟನೆ ಮಾಡುವ ಗ್ರಂಥಕರ್ತರಿಗೆ ಬಿರುದುಗಳನ್ನೋ ಸಂಭಾವನೆಯನ್ನೋ ಕೊಡುವ ಮೂಲಕ ಪ್ರೋತ್ಸಾಹ ನೀಡಿಕೆ. 9 ಕನ್ನಡ ಭಾಷಾಸಾಹಿತ್ಯ ಸಂಬಂಧವಾದ ಪರಿಶೋಧನ ಕಾರ್ಯನಿರತ ವಿದ್ವಾಂಸರಿಗೆ ಪಂಡಿತ ವೇತನ. 10 ಮೇಲ್ಕಂಡ ಮುಖ್ಯೋದ್ದೇಶ ಸಾಧನಕ್ಕೆ ಆಯಾ ಸರ್ಕಾರದವರ ಸಹಾಯ ಸಂಪಾದನ. 11 ಕನ್ನಡ ಮಾತಾಡುವ ಪ್ರದೇಶಗಳಲ್ಲಿ ಕನ್ನಡ ವಾಚನಾಲಯ ಮತ್ತು ಪುಸ್ತಕ ಭಂಡಾರಗಳ ಏರ್ಪಾಡು. 12 ಕನ್ನಡ ನಾಡುಗಳ ಪ್ರಮುಖರ ಸಭೆಗಳನ್ನೂ ವಿದ್ವಾಂಸರ ಉಪನ್ಯಾಸಗಳನ್ನೂ ಏರ್ಪಡಿಸುವುದು. 13 ಉದ್ದೇಶಕ್ಕೆ ಸಾಧಕಗಳಾದ ಇತರ ಪ್ರಯತ್ನಗಳು.

**ಪರಿಷತ್ತಿನ ರಚನೆ :** ಪೋಷಕ, ಉಪಪೋಷಕ, ಪ್ರದಾತೃ, ಆಶ್ರಯದಾತ, ಅಜೀವ ಸಾಮಾಜಿಕ, ಒಂದನೆಯ ಮತ್ತು ಎರಡನೆಯ ವರ್ಗದ ಸಾಮಾನ್ಯ ಸಾಮಾಜಿಕರು, ರಾಜ್ಯಗಳನ್ನಾಳುವ ಉನ್ನತ ಪದವಿಯಲ್ಲಿರುವವರು, ಉನ್ನತ ಪದವಿಯಲ್ಲಿರುವವರು ಪ್ರಸಿದ್ಧ ವಂಶೀಯರು—ಇವರು ಮಾತ್ರ ಪೋಷಕರೂ ಉಪಪೋಷಕರೂ ಆಗತಕ್ಕದ್ದು.

ಕಾರ್ಯನಿರ್ವಾಹಕ ಮಂಡಲಿ : ಒಟ್ಟು 30 ಮಂದಿ ಸದಸ್ಯರು : ಅಧ್ಯಕ್ಷರು, ಉಪಾಧ್ಯಕ್ಷರು, ಸನ್ಮಾನ್ಯ ಕೋಶಾಧ್ಯಕ್ಷರು, ಸನ್ಮಾನ್ಯ ಕಾರ್ಯದರ್ಶಿಗಳು. ಪ್ರಾತಿನಿಧ್ಯ : ಮೈಸೂರು ಸಂಸ್ಥಾನ (12 ಮಂದಿ) ; ಬೊಂಬಾಯಿ ಆಧಿಪತ್ಯ (8) ; ಮದರಾಸು (5) ; ಹೈದರಾಬಾದು (2); ದಕ್ಷಿಣ ಮಹಾರಾಷ್ಟ್ರ ಸಂಸ್ಥಾನಗಳು (2); ಕೊಡಗು (1).

ವಾರ್ಷಿಕ ಸಮ್ಮೇಳನ ಕಾಲದಲ್ಲಿ ವಿದ್ವಾಂಸರು ಉಪನ್ಯಾಸ ಮಾಡುವಂತೆಯೂ ಪ್ರೌಢ ಲೇಖನಗಳನ್ನು ಓದುವಂತೆಯೂ ಕಾರ್ಯನಿರ್ವಾಹಕ ಮಂಡಲಿಯವರು ಏರ್ಪಡಿಸತಕ್ಕದ್ದು. ಪ್ರಸಿದ್ಧ ಪಂಡಿತರನ್ನು ಪರಿಷತ್ತಿಗೆ ಸನ್ಮಾನ್ಯ ಸಾಮಾಜಿಕರನ್ನಾಗಿ ಸೇರಿಸಿಕೊಳ್ಳಲು ಪರಿಷತ್ತಿನ ಸಾಮಾನ್ಯ ಸಭೆಗೆ ಶಿಫಾರಸು ಮಾಡುವುದಕ್ಕೆ [illegible]ರ್ಯನಿರ್ವಾಹಕ ಮಂಡಲಿಗೆ ಸ್ವಾತಂತ್ರ್ಯವಿರತಕ್ಕದ್ದು ಎಂಬಿವು ಇತರ ನಿಬಂಧನೆಗಳಲ್ಲಿ ಮುಖ್ಯವಾದುವು.

ಪ್ರಥಮ ಕಾರ್ಯನಿರ್ವಾಹಕ ಮಂಡಲಿಯ ಅಧಿಕಾರಿವರ್ಗ ಇದು : ಅಧ್ಯಕ್ಷ—ರಾಜಮಂತ್ರಪ್ರವೀಣ ಎಚ್. ವಿ. ನಂಜುಂಡಯ್ಯ. ಉಪಾಧ್ಯಕ್ಷ—ಎಂ. ಶಾಮರಾವ್. ಕಾರ್ಯದರ್ಶಿ—ಬಿ. ಕೃಷ್ಣಪ್ಪ. ಕೋಶಾಧಿಕಾರಿ—ಡಾ. ಪಿ. ಎಸ್. ಅಚ್ಯುತರಾವ್.

ಅದರ ಸದಸ್ಯರಲ್ಲಿ ಕೆಲವರನ್ನು ಹೆಸರಿಸಬಹುದು: ಸರ್ದಾರ್ ಎಂ. ಕಾಂತರಾಜ ಅರಸರು, ಕೆ. ಪಿ. ಪುಟ್ಟಣ್ಣಶೆಟ್ಟರು, ಕರ್ಪೂರ ಶ್ರೀನಿವಾಸರಾಯರು, ಎಂ. ವೆಂಕಟಕೃಷ್ಣಯ್ಯ, ಆರ್. ನರಸಿಂಹಾಚಾರ್, ಆರ್. ರಘುನಾಥರಾಯರು, ಬಾಪೂ ಸುಬ್ಬರಾಯರು, ಚ. ವಾಸುದೇವಯ್ಯನವರು, ಕವಿತಿಲಕ ಸೋಸಲೆ ಅಯ್ಯಾಶಾಸ್ತ್ರಿಗಳು, ಪಿ. ಜಿ. ಹಳಕಟ್ಟಿ, ಆಲೂರು ವೆಂಕಟರಾಯರು, ಬೆನಗಲ್ ರಾಮರಾಯರು, ರಾಜ ಗೋಪಾಲಕೃಷ್ಣರಾಯರು, ಎಂ. ಡಿ. ಅಳಸಿಂಗರಾಚಾರ್ಯರು, ಎ. ವೆಂಕಟರಾವ್, ಆರ್. ತಾತಾ, ರಾಜಕಾರ್ಯಪ್ರಸಕ್ತ ಎಂ. ಮುತ್ತಣ್ಣ. (ಅಡಿಗೀಟು ಹಾಕಿರುವ ಹೆಸರಿನವರು ಸಮ್ಮೇಳನಾಧ್ಯಕ್ಷರುಗಳೂ ಆಗಿದ್ದರು).

ನಿಬಂಧನೆ ಅಂಗರಚನೆಗಳಲ್ಲಿ ಕಾಲಕಾಲಕ್ಕೆ ಕಾಲೋಚಿತವಾಗಿ ಮಾರ್ಪಾಡುಗಳಾಗಿವೆ. ಅತ್ಯಂತ ಈಚಿನ ನಿಬಂಧನಾವಳಿಯನ್ನು (ತಾ 24–2–1967ರ ಪರಿಷತ್ತಿನಲ್ಲಿ ನಡೆದ, ಸದಸ್ಯ ಸಭೆಯಲ್ಲಿ ತಿದ್ದುಪಾಟುಗಳೊಡನೆ ಅಂಗೀಕೃತವಾದದ್ದು) ಪರಿಶೀಲಿಸಿದರೆ, ಈಗಿನ ರೂಢಿಯ ಪ್ರಯೋಗಕ್ಕೆ ಅನುಗುಣವಾಗಿ ಶಾಬ್ದಿಕ ವ್ಯತ್ಯಾಸಗಳಾಗಿದ್ದು, ಒಂದೆರಡು ಹೆಚ್ಚಿನ ಅಂಶಗಳು (ಉದಾ. ಸಾಹಿತ್ಯ, ಸಂಗೀತ, ಗಮಕ ತರಗತಿಗಳ ಏರ್ಪಾಡು, ಕಲಾಪ್ರದರ್ಶನ ; ಸಂಶೋಧನ ಶಾಖೆ) ಸೇರಿವೆ ; ಕೆಲವು ವರ್ಜಿತ ವಾಗಿವೆ. (ಉದಾ. ಪ್ರಾಚೀನ ವಸ್ತುಸಂಗ್ರಹಾಲಯದ ವ್ಯವಸ್ಥೆ) ; ಒಟ್ಟಿನ ಮೇಲೆ, ಮೂಲೋದ್ದೇಶ ಅದೇ ; ಉದ್ದೇಶಸಾಧನ ಮಾರ್ಗಗಳೂ ಅವೇ.

**ಮಾರ್ಪಾಡುಗಳು** : ಅಂಗರಚನೆಯ ದೃಷ್ಟಿಯಿಂದ, ಕಾಲಾನುಗುಣವಾದ ಮಾರ್ಪಾಡುಗಳು ಆಗಿವೆ. ಇವು ಮುಖ್ಯವಾಗಿ ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ಕಾರ್ಯಕಾರಿಯಾಗಿ ಅಖಿಲ ಕರ್ನಾಟಕಕ್ಕೆ ಅನ್ವಯಿಸುವುದಕ್ಕೆ ಸಂಬಂಧಿಸಿದವು. ಧಾರವಾಡದಲ್ಲಿ ಪರಿಷತ್ತಿನ ಶಾಖೆಯೊಂದು ಆಗಬೇಕೆಂಬ ಸೂಚನೆ 1934ರಲ್ಲಿ ರಾಯಚೂರು ಸಮ್ಮೇಳನದ ಕಾಲದಲ್ಲಿ ನಡೆದ ಸದಸ್ಯ ಸಭೆಯಲ್ಲಿ ಚರ್ಚೆಗೆ ಬಂದಿತು. ಇದು ಆಗ ಕಾರ್ಯಸಾಧ್ಯವಾಗಿ ಕಂಡುಬರಲಿಲ್ಲ. ಶಾಖಾ ರಚನೆಯ ಉದ್ದೇಶವನ್ನು, ಎಂದರೆ ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿ, ಪರಿಷತ್ತು ಕೇವಲ ಪಂಡಿತರ ಸಂಸ್ಥೆ ಎಂದೆನಿಸದೆ ಜನಕ್ಕೂ ಸೇರಿದ ಸಂಸ್ಥೆ ಎನಿಸುವ ಉದ್ದೇಶವನ್ನು, ಕಾರ್ಯಗತ ಮಾಡಲು ಪ್ರಾಂತಸಮಿತಿಗಳನ್ನು ರಚಿಸಿ, ಸದಸ್ಯ ಸಂಪತ್ತನ್ನು ಹೆಚ್ಚಿಸುವ ಪ್ರಯತ್ನಗಳು ನಡೆದುವು. 1970ರ ಸ್ಥಿತಿಯಂತೆ ಏಕೀಕೃತ ಕರ್ನಾಟಕದ 19 ಜಿಲ್ಲೆಗಳನ್ನು ಪ್ರತಿನಿಧಿಸುವ 19 ಜಿಲ್ಲಾಸಮಿತಿಗಳು ಏರ್ಪಟ್ಟಿವೆ ; ಕೆಲವು ಜಿಲ್ಲಾ ಸಮಿತಿಗಳು (ಕೋಲಾರ, ತುಮಕೂರು, ಮಂಡ್ಯ) ಜಿಲ್ಲಾಸಮ್ಮೇಳನಗಳನ್ನು ನಡೆಸಿವೆ ; ಸದಸ್ಯಸಂಪತ್ತು ಹೆಚ್ಚುತ್ತಿದೆ.

ಇನ್ನೊಂದು ಮುಖ್ಯ ಮಾರ್ಪಾಡು, ಪರಿಷತ್ತಿನ ಹೆಸರಿನದು : ಕರ್ಣಾಟಕ ಸಾಹಿತ್ಯ ಪರಿಷತ್ತು ಎಂದು ಇದ್ದದ್ದು ಬಳ್ಳಾರಿಯಲ್ಲಿ (1939) ನಡೆದ ಸದಸ್ಯ ಸಭೆಯಲ್ಲಿ ಬಹುಮತದಿಂದ ಕನ್ನಡ ಸಾಹಿತ್ಯ ಪರಿಷತ್ತು ಎಂದು ಮಾರ್ಪಾಡಾಯಿತು.

**ಪರಿಷನ್ಮಂದಿರ ನಿರ್ಮಾಣ :** ಪರಿಷತ್ತು ಸ್ಥಾಪಿತವಾದ ಮೇಲೆ ಹತ್ತಾರು ವರ್ಷಗಳ ವರೆಗೆ ಅದು ಬಾಡಿಗೆ ಕಟ್ಟಡಗಳಲ್ಲೇ ಕಾಲಕ್ಷೇಪ ಮಾಡಿತು. ಅಖಿಲ ಕರ್ಣಾಟಕ ವ್ಯಾಪ್ತಿಯುಳ್ಳ ಪ್ರಮುಖ ಸಾಂಸ್ಕೃತಿಕ ಸಂಸ್ಥೆಯಾದ ಪರಿಷತ್ತಿಗೆ ಅದರ ಘನತೆಗನುಗುಣವಾದ ಸ್ವಂತ ಕಟ್ಟಡ ಇಲ್ಲದ್ದು ದೊಡ್ಡ ಕೊರತೆಯಾಗಿತ್ತು. ಈ ಅಂಶವನ್ನು ಮನಗಂಡು ಕಾರ್ಯೋನ್ಮುಖರಾದವರೆಂದರೆ, ಪರಿಷತ್ತಿನ ಸಂಸ್ಥಾಪಕ ಸದಸ್ಯರೂ 1920 ರಿಂದ ಹದಿಮೂರು ವರ್ಷಗಳ ಕಾಲ ಪರಿಷತ್ತಿನ ಉಪಾಧ್ಯಕ್ಷರೂ ಆಗಿದ್ದ ರಾಜಸಭಾಭೂಷಣ ಕರ್ಪೂರ ಶ್ರೀನಿವಾಸರಾಯರು. ವೃತ್ತಿಯಿಂದ ಎಂಜಿನಿಯರ್ ಆಗಿದ್ದ ಇವರು ಕಟ್ಟಡ ವಿನ್ಯಾಸ, ರಚನೆ ಮುಂತಾದ ಹಲವಾರು ವಿವರಗಳಿಗೆ ಸ್ವತಃ ಗಮನಕೊಟ್ಟು ಅವನ್ನು ನಿರ್ಧರಿಸಿದರು ; ಕಟ್ಟಡದ ನಿರ್ಮಾಣಕ್ಕೆ ಆವಶ್ಯಕವಾಗಿದ್ದ ನಿವೇಶನ ಮತ್ತು ಹಣವನ್ನು ಸಂಗ್ರಹಿಸಿದರು. ಈ ಮಹನೀಯರ ಪರಿಶ್ರಮದ ಫಲವಾಗಿ ಈಗ ಪರಿಷತ್ತಿನ ಕಟ್ಟಡವಿರುವ ನಿವೇಶನ ಉಚಿತವಾಗಿ ದೊರೆಯಿತು. ಕಟ್ಟಡದ ನಿಧಿಗಾಗಿ ಶ್ರೀಮನ್ಮಹಾರಾಜ ಕೃಷ್ಣರಾಜ ಒಡೆಯರವರು ಐದು ಸಾವಿರ ರೂಪಾಯಿಗಳನ್ನೂ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರವರು ಮೂರು ಸಾವಿರ ರೂಪಾಯಿಗಳನ್ನೂ ಅಂದು ಪರಿಷತ್ತಿನ ಅಧ್ಯಕ್ಷರಾಗಿದ್ದ ರಾಜಬಂಧು, ರಾಜಸೇವಾಧುರೀಣ ಎಂ. ಕಾಂತರಾಜ ಅರಸರು ಐದು ಸಾವಿರ ರೂಪಾಯಿಗಳನ್ನೂ ದಾನಮಾಡಿದರು ; ಮೈಸೂರು ಸರ್ಕಾರ ಹದಿನಾರು ಸಾವಿರ ರೂಪಾಯಿಗಳನ್ನು ಸಹಾಯಧನವಾಗಿ ಕೊಟ್ಟಿತು. ಈ ನಿಧಿಗೆ ಪರಿಷತ್ತು ತನ್ನ ಸಂಪನ್ಮೂಲಗಳಿಂದ ಮೂರು ಸಾವಿರ ರೂಪಾಯಿಗಳನ್ನು ಸೇರಿಸಿ ಕಟ್ಟಡವನ್ನು ನಿರ್ಮಿಸಿತು. 1931ನೆಯ ಏಪ್ರಿಲ್ 12ನೆಯ ತಾರೀಖಿನಂದು ಕರ್ಪೂರ ಶ್ರೀನಿವಾಸರಾಯರೇ ಕಟ್ಟಡದ ಶಂಕುಸ್ಥಾಪನೆ ಮಾಡಿದರು.

ವಿಶೇಷ ಪರಿಶ್ರಮದಿಂದ ಸಿದ್ಧವಾದ ಈ ಕಟ್ಟಡಕ್ಕೆ ಶ್ರೀಕೃಷ್ಣರಾಜ ಪರಿಷನ್ಮಂದಿರ ಎಂದು ನಾಮಕರಣಮಾಡಿ ಬಾಡಿಗೆ ಕಟ್ಟಡದಲ್ಲಿದ್ದ ಪರಿಷತ್ತಿನ ಕಚೇರಿಯನ್ನು 1933 ರಲ್ಲಿ ಅಲ್ಲಿಗೆ ವರ್ಗಾಯಿಸಲಾಯಿತು. ಈ ಭವ್ಯ ಭವನದ ಕಟ್ಟಣೆಯ ಮೇಲ್ವಿಚಾರಣೆಯನ್ನು ಅತ್ಯಂತ ಶ್ರದ್ಧೆಯಿಂದ ನಡೆಸಿದ ಎಕ್ಸಿಕ್ಯುಟಿವ್ ಎಂಜಿನಿಯರ್ ವಿ. ತಾಂಡೋಣೆರಾವ್ ಅವರ ನಿಷ್ಕಾಮಪೂರ್ಣ ಸೇವೆ ಚಿರಸ್ಮರಣೀಯ.

**ಪರಿಷತ್ತಿನ ಏಳಿಗೆ, ವ್ಯಕ್ತಿಗಳ ಸೇವೆ :** ಪರಿಷತ್ತು ತನ್ನ ಮೂಲೋದ್ದೇಶಗಳಿಗೆ ಅನುಗುಣವಾಗಿ ಕಾರ್ಯಗಳನ್ನು ನಡೆಸಿಕೊಂಡು ಬರುತ್ತಿದೆಯಲ್ಲದೆ, ಕಾರ್ಯವ್ಯಾಪ್ತಿಯನ್ನು ವಿಸ್ತರಿಸಿಕೊಂಡು ಬರುತ್ತಿದೆ. ಒಂದು ದೇಶದ ಏಳಿಗೆ ಅದರ ನಾಯಕರನ್ನೂ ವ್ಯಕ್ತಿಮಹಿಮೆಯನ್ನೂ ಅವಲಂಬಿಸಿರುವಂತೆ, ಸಂಸ್ಥೆಯ ಏಳಿಗೆಯೂ ವ್ಯಕ್ತಿಯ ಸಾಮರ್ಥ್ಯವನ್ನವಲಂಬಿಸಿರುತ್ತದೆ. ಆ ವ್ಯಕ್ತಿಯಾದರೂ ಕಾಲಧರ್ಮಕ್ಕೆ ತಕ್ಕಂತೆ ಕಾರ್ಯ ನಡೆಸಿಕೊಂಡು ಹೋಗುವುದು ಅನಿವಾರ್ಯವಾಗುತ್ತದೆ. ಪರಿಷತ್ತಿನ ಚರಿತ್ರೆಯಲ್ಲಿಯೂ ಈ ಅಂಶ ವ್ಯಕ್ತಪಟ್ಟಿದೆ. 1933ರ ವರೆಗೆ, ಪರಿಷತ್ತಿನ ಅಧ್ಯಕ್ಷರುಗಳೂ ಉಪಾಧ್ಯಕ್ಷರುಗಳೂ (ಮೈಸೂರಿನ ಶ್ರೀಮದ್ಯುವರಾಜ ಕಂಠೀರವ ನರಸಿಂಹರಾಜ ಒಡೆಯರು ಅಧ್ಯಕ್ಷರು ; ಕರ್ಪೂರ ಶ್ರೀನಿವಾಸರಾಯರೂ ಎಂ. ಶಾಮರಾಯರೂ ಉಪಾಧ್ಯಕ್ಷರುಗಳು) ಕಾರ್ಯಚಟುವಟಿಕೆಯ ದೃಷ್ಟಿಯಿಂದ ಕೇವಲ ಸ್ಥಾನಗೌರವಕ್ಕೆ ಪಾತ್ರರಾಗಿದ್ದರು.

ಬೆಳ್ಳಾವೆ ವೆಂಕಟನಾರಾಯಣಪ್ಪನವರು ಒಂದೆರಡು ಸಲ ಕಾರ್ಯದರ್ಶಿಯಾಗಿದ್ದರು, ಅಷ್ಟೆ ; 1933ರ ವರೆಗೆ ಸತತವಾಗಿ ಗೌರವ ಕೋಶಾಧಿಕಾರಿಗಳಾಗಿದ್ದರು. ಮಾಸ್ತಿ ವೆಂಕಟೇಶ ಅಯ್ಯಂಗಾರರು (ಬೆಳ್ಳಾವೆಯವರು ತೀರಿಕೊಂಡಾಗ) ಹೇಳಿದಂತೆ, ಕಸ ಗುಡಿಸುವ ಕೆಲಸದಿಂದ ಹಿಡಿದು ಗ್ರಂಥ ಸಂಪಾದನ ಕಾರ್ಯದವರೆಗೆ ಪರಿಷತ್ತಿನ



ಕರ್ಪೂರ ಶ್ರೀನಿವಾಸರಾವ್

ಸಕಲ ಕಾರ್ಯಗಳನ್ನೂ ಬೆಳ್ಳಾವೆಯವರು ನಿರ್ವಹಿಸುತ್ತಿದ್ದರು. 10 ವರ್ಷಕ್ಕೆ ಮೇಲ್ಪಟ್ಟು ಉಪಾಧ್ಯಕ್ಷರಾಗಿದ್ದ ಕರ್ಪೂರ ಶ್ರೀನಿವಾಸರಾಯರು ಪರಿಷತ್ತಿನ ಭವನ ನಿರ್ಮಾಣಕಾರ್ಯದಲ್ಲಿ ಪ್ರಮುಖಪಾತ್ರ ವಹಿಸಿದ್ದರೂ ಕಚೇರಿಯ ಕೆಲಸ, ಪರಿಷತ್ ಪತ್ರಿಕಾಸಂಪಾದನೆ, ಪ್ರಾಚೀನ ಗ್ರಂಥಗಳ ಸಂಪಾದನೆ, ವಾರ್ಷಿಕ ಸಮ್ಮೇಳನ ಸದಸ್ಯಾಧಿವೇಶನಗಳ ಸಿದ್ಧತೆ—ಮುಂತಾದ ಸಕಲ ಕಾರ್ಯಗಳಿಗೂ ಅವರೇ ಹೃದಯ, ಮಿದುಳು, ಕೈಕಾಲು ಎಲ್ಲ. ಈ ಕಾಲದಲ್ಲಿ ಪಂಪಭಾರತ, ಪಂಪರಾಮಾಯಣ, ಚಾವುಂಡರಾಯಪುರಾಣ, ಸೋಮೇಶ್ವರಶತಕ, ಕುಸುಮಾವಳಿ ಕಾವ್ಯ—ಇವುಗಳ ಸಂಪಾದನೆಯ ಕಾರ್ಯ ಅವರ ಸಂಪಾದಕತ್ವದಲ್ಲಿ ಮೇಲುಪಂಕ್ತಿಯಾಗುವಂತೆ ನಡೆಯಿತು. ಜ್ಯೋತಿರ್ವಿನೋದಿನಿ, ಜೇಮ್ಸ್ ಎಬ್ರಹಮ್ ಗಾರ್‌ಫೀಲ್ಡನ ಚರಿತ್ರೆ ಇವನ್ನು ಪ್ರಕಟಿಸಿ, ಕಾವ್ಯೇತರ ಗದ್ಯಸಾಹಿತ್ಯ ಪ್ರಕಟಣೆಗೆ ಮೇಲುಪಂಕ್ತಿ ಹಾಕಿದವರೂ ವೆಂಕಟನಾರಾಯಣಪ್ಪನವರೇ. ಇವರು ಬಹು ಶ್ರಮವಹಿಸಿ ಸಿದ್ಧಪಡಿಸಿದ ಷಟ್ಪದಿ ಕಾವ್ಯಗಳ ನಿಘಂಟು—ಒಂದು ವಿಧದಲ್ಲಿ ಪರಿಷತ್ತಿನ ನಿಘಂಟು ಕಾರ್ಯರಚನೆಗೆ ನಾಂದಿಯಾಯಿತೆನ್ನಬಹುದು. ಈ ಕಾಲದಲ್ಲಿ ಪರಿಷತ್ತಿನೊಂದಿಗೆ ಸಂಪರ್ಕವಿಟ್ಟುಕೊಂಡ ಜನ ಬಹುಮಟ್ಟಿಗೆ ಭಾಷಾಪಂಡಿತರು, ವಿದ್ವಾಂಸರು, ಸರ್ಕಾರದ ಉನ್ನತಾಧಿಕಾರಿಗಳು. ಅಂದಿಗೆ ಇದು ತೀರ ಸಹಜವೆನ್ನಿಸಿತ್ತು.

ಡಿ. ವಿ. ಗುಂಡಪ್ಪನವರು (1934-1937) ಮೂರು ವರ್ಷ ಉಪಾಧ್ಯಕ್ಷರಾಗಿದ್ದರು. ಇವರ ಕಾಲದಲ್ಲಿ ನೂತನ ಮಂದಿರದ ನೂತನ ಸಭಾಮಂಟಪದಲ್ಲಿ ಉಪನ್ಯಾಸ, ಕಾವ್ಯ ವಾಚನ (ಗಮಕ), ಸಂಗೀತ, ನಾಟಕ, ನೃತ್ಯ ಇತ್ಯಾದಿ ಸಾಹಿತ್ಯಸಂಸ್ಕೃತಿಸಂಬಂಧವಾದ ಕಾರ್ಯ ಕಲಾಪಗಳೇ ಮೊದಲಾದವಲ್ಲಿ ಏನಾದರೊಂದು ಪ್ರತಿವಾರವೂ ನಡೆಯುತ್ತಿತ್ತು. ಪ್ರತಿವರ್ಷವೂ ಬೇಸಗೆಯ ರಜಾಕಾಲದಲ್ಲಿ ಆಧುನಿಕ ವಿಚಾರೋಪನ್ಯಾಸಗಳು ಹಾಗೂ ವಿವಿಧ ಮನೋರಂಜನೆಯ ಕಾರ್ಯಗಳನ್ನೊಳಗೊಂಡ ವಿಶೇಷ ಸಾಹಿತ್ಯೋತ್ಸವ ಎಂಬ ಜ್ಞಾನಪ್ರಸಾರ ಕಾರ್ಯಕ್ರಮ ಪ್ರಾರಂಭವಾಯಿತು. ಇದು ಈಗಲೂ (1936 ರಿಂದ) ವಸಂತ ಸಾಹಿತ್ಯೋತ್ಸವ ಎಂಬ ಹೆಸರಿನಿಂದ ನಡೆದುಕೊಂಡು ಬರುತ್ತಿದೆ. ಗಮಕ ಕಲಾ ಶಿಕ್ಷಣ ತರಗತಿಗಳು ಪ್ರಾರಂಭವಾದದ್ದು ಇವರ ಕಾಲದಲ್ಲಿಯೇ. ಕರ್ಣಾಟಕಕ್ಕೆ ವಿಶಿಷ್ಟವೆನ್ನಬಹುದಾದ ಗಮಕ ಕಲೆ ಪ್ರಾಚೀನ ಕನ್ನಡ ಕಾವ್ಯಗಳನ್ನು ಜನಪ್ರಿಯವಾಗಿ ಮಾಡಲು ಉತ್ತಮ ಸಾಧನ ಎಂಬುದನ್ನು ಮನಗಂಡ ಗುಂಡಪ್ಪನವರು ದೂರ ದೃಷ್ಟಿಯಿಂದ ಪ್ರಾರಂಭಿಸಿದ ಈ ಏರ್ಪಾಡು ಇಂದಿಗೂ ನಡೆದುಕೊಂಡು ಬರುತ್ತಿದ್ದು, ಉತ್ತಮ ಫಲವನ್ನು ಕೊಟ್ಟಿದೆ. ಗಮಕ ಶಿರೋಮಣಿ ಎಸ್. ಜಿ. ಬಿಂದೂರಾಯರು ಪ್ರಥಮ ಶಿಕ್ಷಕರಾಗಿ ನೇಮಕಗೊಂಡರು. ಈಗ ಜನಪ್ರಿಯರಾಗಿರುವ ಅನೇಕ ಮಂದಿ ಗಮಕಿಗಳು ಪರಿಷತ್ತಿನ ಗಮಕ ಪರೀಕ್ಷೆಗಳಲ್ಲಿ ತೇರ್ಗಡೆಯಾದವರು.

ಸಮ್ಮೇಳನಗಳಿಗೂ ಪರಿಷತ್ತಿನ ವಾರ್ಷಿಕ ಸಭೆಗಳಿಗೂ ಪರಿಷತ್ತಿನ ಕಾರ್ಯಾಲಯಕ್ಕೂ ಈ ಕಾಲದಲ್ಲಿ ಹೆಚ್ಚು ವ್ಯವಸ್ಥಿತ ರೂಪ ಬಂದಿತು. ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ (ನೋಡಿ) ವಿದ್ವತ್ಪೂರ್ಣವಾಗಿರುವುದರ ಜೊತೆಗೆ, ವೈವಿಧ್ಯಪೂರ್ಣವೂ ಆಧುನಿಕ ವಿದ್ವತ್‌ದೃಷ್ಟಿಯನ್ನು ಪ್ರತಿಬಿಂಬಿಸತಕ್ಕ ಮಾಧ್ಯಮವೂ ಆಗಿ ರೂಪಗೊಂಡಿತು. ಇದರ ಶ್ರೇಯಸ್ಸು ಅದರ ಸಂಪಾದಕರಾಗಿದ್ದ ಎ. ಆರ್. ಕೃಷ್ಣಶಾಸ್ತ್ರಿಗಳಿಗೆ ಸಲ್ಲಬೇಕು. (ಈಗ ಇದು ಪಾಣ್ಮಾಸಿಕವಾಗಿದೆ.)

ಬಿ. ಎಂ. ಶ್ರೀಕಂಠಯ್ಯನವರು ಪರಿಷತ್ತಿನ ಉಪಾಧ್ಯಕ್ಷರಾದ ಮೇಲೆ ಪರಿಷತ್ತಿಗೂ ಸಾಮಾನ್ಯ ಪ್ರಜಾವರ್ಗಕ್ಕೂ ಸಂಪರ್ಕ ಇನ್ನಷ್ಟು ಬಲಪಟ್ಟಿತು ; ವಿಸ್ತಾರಗೊಂಡಿತು. ಮಹಿಳಾ ಶಾಖೆಯೊಂದು ಏರ್ಪಟ್ಟು, ಅದು ಈಗಲೂ ಕೆಲಸ ಮಾಡಿಕೊಂಡು ಬರುತ್ತಿದೆ. ಬಿ. ಎಂ. ಶ್ರೀಯವರ ಗಮನಾರ್ಹ ಕೊಡುಗೆ ಎಂದರೆ, ಕನ್ನಡ ಬಾವುಟದ ಕಲ್ಪನೆ ; ಕನ್ನಡ ನಾಡಿನ ಭೂಪಟದ ಮುದ್ರಿಕೆಯ ಲಾಂಛನವೊಂದನ್ನು ಕಲ್ಪಿಸಿ, ಪರಿಷತ್ತಿನ ಪುಸ್ತಕ ಪ್ರಕಟನೆಗಳಲ್ಲಿ ಮುದ್ರಿಸುವ ಏರ್ಪಾಡು. (ಈ ಲಾಂಛನವನ್ನು ಈಗ ಸ್ವಲ್ಪ ಮಾರ್ಪಡಿಸಿ, ಮತ್ತೆ ಬಳಕೆಗೆ ತಂದಿದೆ). ಕನ್ನಡ




ಪರಿಷತ್ತಿನ ಲಾಂಛನ

ಬಾವುಟ ಎಂಬ ತಮ್ಮ ಕಲ್ಪನೆಗೆ ಅವರು ಜೀವ ತುಂಬಿ, ಆ ಹೆಸರಿನ ಕಾವ್ಯಸಂಕಲನವನ್ನು ಹೊರತಂದರು. ಕನ್ನಡ ನಾಡಿನ ಚರಿತ್ರೆಯನ್ನು ತಕ್ಕ ಲೇಖಕರಿಂದ ಬರೆಯಿಸಿ ಪ್ರಕಟಿಸಿದರು. ಕನ್ನಡ ನುಡಿ (ನೋಡಿ) ಎಂಬ ವಾರಪತ್ರಿಕೆಯನ್ನು (4-10-1938ರ ವಿಜಯದಶಮಿಯಂದು) ಪ್ರಾರಂಭಿಸಿದರು. ಅ. ನ. ಕೃಷ್ಣರಾಯರು ಅದರ ಮೊದಲ ಸಂಪಾದಕರು. (ಈ ಪತ್ರಿಕೆ ಈಗಲೂ ಪಕ್ಷಪತ್ರಿಕೆಯಾಗಿ ನಡೆಯು ತ್ತಿದೆ). ಈ ಕನ್ನಡ ನುಡಿಯ ಪ್ರಕಟನೆಗೆಂದೇ ಅವರು 6,000 ರೂಪಾಯಿ ದಾನ ಮಾಡಿ ಸ್ಥಾಪಿಸಿದ ಅಚ್ಚುಕೂಟ ಈಗ ವಿಸ್ತಾರವಾಗಿ, ಪರಿಷತ್ತಿನ ಮುದ್ರಣಾಲಯವನ್ನು ನಿರ್ವಹಿಸುತ್ತಿದೆ. ಪರಿಷತ್ತಿನ ಅಖಿಲ ಕರ್ಣಾಟಕ ಸ್ವರೂಪವನ್ನು ಪ್ರತಿಬಿಂಬಿಸಲೆಂದು ಪ್ರಾಂತಸಮಿತಿಗಳನ್ನು ಏರ್ಪಡಿಸಿ, ಪರಿಷತ್ತಿನ ಕಾರ್ಯವ್ಯಾಪ್ತಿಯನ್ನು ನಾಡಿಗೆಲ್ಲ ಶ್ರೀ ಅವರು ಹರಡಿದರು. ಕನ್ನಡ ಬಾವುಟವನ್ನು (ಸಾಂಕೇತಿಕವಾಗಿ) ಕೈಯಲ್ಲಿ ಹಿಡಿದು ನಾಡನ್ನೆಲ್ಲ ಸುತ್ತಾಡಿ, ಕನ್ನಡದ ಮತ್ತು ಪರಿಷತ್ತಿನ ಸಂದೇಶವನ್ನು ಎಲ್ಲೆಲ್ಲೂ ಹರಡಿ, ಕನ್ನಡಿಗರಿಗೆ ಕನ್ನಡ ತಾಯಿನೋಟವನ್ನು ಕಾಣಿಸಿದರು. ಒಂದು ಮಾತಿನಲ್ಲಿ, ಶ್ರೀಯವರು ತನುಮನಧನವನ್ನರ್ಪಿಸಿ ಪರಿಷತ್ತಿನ ಸೇವೆ ಮಾಡಿದರು. ಪರಿಷತ್ತಿನ ಮೂಲೋದ್ದೇಶಗಳಲ್ಲಿ ಒಂದಾದ ಪಾಂಡಿತ್ಯಸಂವರ್ಧನೆಗಾಗಿ ಅವರು ಕೈಗೊಂಡ ಮುಖ್ಯ ಕಾರ್ಯಕ್ರಮ ಎಂದರೆ ಕನ್ನಡ ಸಾಹಿತ್ಯ ಪರೀಕ್ಷೆಗಳು. (ಈ ಏರ್ಪಾಡು ಈಗಲೂ ಯಶಸ್ವಿಯಾಗಿ ನಡೆದುಕೊಂಡು ಬರುತ್ತಿದೆ). ಶ್ರೀಯವರು ಉಪಾಧ್ಯಕ್ಷರಾಗಿದ್ದಾಗ (1940ರ ಜೂನ್ 30-ಜುಲೈ 1 ರಂದು) ಪರಿಷತ್ತಿನ ಬೆಳ್ಳಿಯ ಹಬ್ಬ ವಿಜೃಂಭಣೆಯಿಂದ ನಡೆಯಿತು. ಆಗ ಮೈಸೂರಿನ ಮಹಾರಾಜರಾಗಿದ್ದ ನಾಲ್ಮಡಿ ಕೃಷ್ಣರಾಜ ಒಡೆಯರು ಉತ್ಸವವನ್ನು ಉದ್ಘಾಟಿಸಿದರು.

ಶ್ರೀಯವರ ಅನಂತರ ಉಪಾಧ್ಯಕ್ಷರಾದವರು ಮಾಸ್ತಿ ವೆಂಕಟೇಶ ಅಯ್ಯಂಗಾರ್ಯರು (1943-1947). ಹಿಂದಿನ ಇಬ್ಬರು ಉಪಾಧ್ಯಕ್ಷರುಗಳು ಏರ್ಪಾಡು ಮಾಡಿದ್ದ ಎಲ್ಲ ಕಾರ್ಯಕ್ರಮಗಳನ್ನೂ ಇವರು ನಿಷ್ಠೆಯಿಂದ ಮುಂದುವರಿಸಿಕೊಂಡು ಬಂದರು. ಈ ಕಾಲದಲ್ಲಿ ಪರಿಷತ್ತಿನ ಸದಸ್ಯ ಸಂಪತ್ತು ಗಮನಾರ್ಹವಾಗಿ ಬೆಳೆಯಿತು. ಅನೇಕ ದತ್ತಿಗಳನ್ನು ಸಂಪಾದಿಸಿ, ದತ್ತಿ ಉಪನ್ಯಾಸಗಳು ಸಾರ್ಥಕವಾಗಿ ನಡೆಯುವಂತೆ ಇವರು ಏರ್ಪಾಡು ಮಾಡಿದರು. 1941ರಲ್ಲಿಯೇ ಕನ್ನಡ-ಕನ್ನಡ ನಿಘಂಟು ನಿರ್ಮಾಣದ ಸಂಕಲ್ಪವನ್ನು ಪರಿಷತ್ತು ಕೈಗೊಂಡಿತ್ತು ; ಅದು ಕಾರ್ಯರೂಪಕ್ಕೆ ಬಂದು, ಅದಕ್ಕಾಗಿ ಪ್ರತ್ಯೇಕ ಕಾರ್ಯಾಲಯ ಆರಂಭವಾದದ್ದು ಇವರ ಕಾಲದಲ್ಲಿ. ಶ್ರೀಯವರಂತೆ ಮಾಸ್ತಿಯವರೂ ಕನ್ನಡ ನಾಡನ್ನೆಲ್ಲ ಸುತ್ತಾಡಿ ಪರಿಷತ್ತಿನ ಅಖಿಲ ಕರ್ಣಾಟಕ ಸ್ವರೂಪವನ್ನು ಬಲಪಡಿಸಿದರು ; ಕರ್ಣಾಟಕ ಏಕೀಕರಣ ಚಳವಳಿಗೆ ಪುಷ್ಟಿ ಕೊಟ್ಟರು.

**ಅಧ್ಯಕ್ಷರುಗಳು :** ರಾಜಮನೆತನದವರು ಅಥವಾ ಉನ್ನತ ಪದವಿಯಲ್ಲಿರುವವರು ಪರಿಷತ್ತಿನ ಅಧ್ಯಕ್ಷರಾಗಬೇಕೆಂಬ ನಿಬಂಧನೆಗೆ ಅನುಗುಣವಾಗಿ, ಎಚ್. ವಿ. ನಂಜುಂಡಯ್ಯನವರು (1915-1920), ಸರ್ ಎ. ಕಾಂತರಾಜ ಅರಸರು (1920-1923), ಕಂಠೀರವ ನರಸಿಂಹರಾಜ ಒಡೆಯರ್ (1923-1940), ಜಯಚಾಮರಾಜ ಒಡೆಯರ್ (1940), ಜಂಟಮುರಿಯ ರಾಜಾ ಲಖಮನಗೌಡ ಸರದೇಸಾಯಿ (1941-1946), ಲೋಕೂರ ನಾರಾಯಣರಾವ್ ಸ್ವಾಮಿರಾವ್ (1947) —ಇವರು ಕ್ರಮವಾಗಿ ಪರಿಷತ್ತಿನ ಅಧ್ಯಕ್ಷರುಗಳಾದರು. 1947ರಲ್ಲಿ, ವಾರ್ಷಿಕ ಸಮ್ಮೇಳನದ ಅಧ್ಯಕ್ಷರೇ ಪರಿಷತ್ತಿನ ಅಧ್ಯಕ್ಷರೂ ಆಗಿರಬೇಕೆಂದು ನಿಬಂಧನೆ ವ್ಯಪರ್ಾಡಾಯಿತು. ಇದರ ಮೇರೆಗೆ ತಿರುಮಲೆ ತಾತಾಚಾರ್ಯ ಶರ್ಮರೂ ಚೆನ್ನಪ್ಪ ಉತ್ತಂಗಿಯವರೂ ಒಂದು ವರ್ಷದ ಅವಧಿಗೆ ಅಧ್ಯಕ್ಷರಾಗಿದ್ದರು. ಎಂ. ಆರ್. ಶ್ರೀನಿವಾಸಮೂರ್ತಿಯವರು (1950ರಲ್ಲಿ) ಅಧ್ಯಕ್ಷರಾದಾಗ, ನಿಬಂಧನೆ ಮತ್ತೆ ಮಾರ್ಪಾಡಾಗಿ ಅಧ್ಯಕ್ಷಪದವಿಯ ಅವಧಿ ಮೂರು ವರ್ಷ ಎಂದಾಯಿತು. ಈ ಹೊಸ ನಿಯಮದಂತೆ ಅಧ್ಯಕ್ಷರುಗಳಾಗಿ ಪರಿಷತ್ತನ್ನು ಯಥಾಶಕ್ತಿ ಮುನ್ನಡೆಸಿಕೊಂಡು ಬಂದವರೆಂದರೆ : ಎ. ಎನ್. ಮೂರ್ತಿರಾಯರು (1954-1956), ಬಿ. ಶಿವಮೂರ್ತಿ ಶಾಸ್ತ್ರಿಗಳು (1956-1964) ; ಜಿ. ವೆಂಕಟಸುಬ್ಬಯ್ಯನವರು (1964-1969) ; ಜಿ. ನಾರಾಯಣರು (1969 ರಿಂದ).



ಬಿ. ಎಂ. ಶ್ರೀಕಂಠಯ್ಯ

**ಕನ್ನಡ ನಿಘಂಟು :** ಎಂ. ಆರ್. ಶ್ರೀನಿವಾಸಮೂರ್ತಿಯವರು ಅಧ್ಯಕ್ಷರಾಗಿದ್ದಾಗ ನಿಘಂಟುವಿನ ರಚನಾಕಾರ್ಯಕ್ಕೆ ವ್ಯವಸ್ಥಿತ ರೂಪ ಬಂದಿತು. ಹಸ್ತಪ್ರತಿ ಸಿದ್ಧವಾಗತೊಡಗಿದ ಮೇಲೆ, ಮುದ್ರಣಕಾರ್ಯಕ್ಕೆ ಸರ್ಕಾರದಿಂದ ವಿಶೇಷ ಧನಸಹಾಯ ದೊರಕಿಸಿಕೊಟ್ಟವರು ಬಿ. ಶಿವಮೂರ್ತಿ ಶಾಸ್ತ್ರಿಗಳು.

26–4–1964ರಲ್ಲಿ ಇದರ ಮೊದಲ ಸಂಚಿಕೆ ಪ್ರಕಟವಾಯಿತು. ನಿಘಂಟು ರಚನೆಯ ಕಾರ್ಯದ ಸಂಪಾದಕ ಮಂಡಲಿ ಅಖಿಲ ಕರ್ನಾಟಕ ಪ್ರಾತಿನಿಧ್ಯವುಳ್ಳದ್ದಾಗಿದೆ. ಎ. ಆರ್. ಕೃಷ್ಣಶಾಸ್ತ್ರೀ, ತೀ. ನಂ. ಶ್ರೀಕಂಠಯ್ಯ, ಡಿ. ಎಲ್. ನರಸಿಂಹಾಚಾರ್—



ಡಿ. ಎಲ್. ನರಸಿಂಹಾಚಾರ್

ಇವರು ಅನುಕ್ರಮವಾಗಿ ಸಂಪಾದಕ ಮಂಡಲಿಯ ಅಧ್ಯಕ್ಷರುಗಳು. ಡಿ. ಎಲ್. ನರಸಿಂಹಾಚಾರ್ ಮತ್ತು ಎಲ್. ಗುಂಡಪ್ಪ ಕೆಲಕೆಲವು ವರ್ಷ ಸಂಪಾದಕರಾಗಿಕೆಲಸ ಮಾಡಿದ ಮೇಲೆ, ಈಗ ಎನ್. ಬಸವಾರಾಧ್ಯರು ಅದರ ಸಂಪಾದಕರಾಗಿದ್ದಾರೆ. ಪರಿಷತ್ತಿನ ಸುವರ್ಣ ಮಹೋತ್ಸವ ಸಂದರ್ಭದಲ್ಲಿ (1970) 12 ಸಂಚಿಕೆಗಳುಳ್ಳ ಅದರ ಪ್ರಥಮ ಸಂಪುಟ ಪ್ರಕಟವಾಯಿತು. ನಿಘಂಟು ಆಧುನಿಕ ನಿಘಂಟುಶಾಸ್ತ್ರಕ್ಕೆ ಅನುಗುಣವಾಗಿ ರಚನೆಯಾಗುತ್ತಿದೆ. ಪ್ರಕಟವಾದ ಮೇಲೆ ಸುಮಾರು 5,000 ಪುಟಗಳ ಪ್ರಮಾಣವುಳ್ಳದ್ದಾಗುವ ನಿರೀಕ್ಷೆಯಿದೆ. ಈ ಬಗೆಯ ಶಾಸ್ತ್ರೀಯವೂ ಸರ್ವಾಂಗ ಸಂಪೂರ್ಣವೂ ಆದ ನಿಘಂಟು ಭಾರತೀಯ ಭಾಷೆಗಳಲ್ಲಿ ಯಾವುದರಲ್ಲೂ ಪ್ರಕಟವಾಗಿಲ್ಲ ಎಂಬುದು ವಿದ್ವಾಂಸರ ಅಭಿಪ್ರಾಯ.

ಈಗಿನ ಪರಿಷದಧ್ಯಕ್ಷರಾದ ಜಿ. ನಾರಾಯಣಅವರು ಒಂದು ತ್ರೈವಾರ್ಷಿಕ ಯೋಜನೆಯನ್ನು ರೂಪಿಸಿ, ಅದರಂತೆ ಕಾರ್ಯ ನಡೆಸಲು ಸಂಕಲ್ಪ ಮಾಡಿದ್ದಾರೆ. ಎಂದಿನಿಂದಲೂ ಪರಿಷತ್ತಿಗೆ ಉದಾರವಾಗಿ ಧನಸಹಾಯ ಮಾಡಿಕೊಂಡು ಬರುತ್ತಿರುವ ಮೈಸೂರು ಸರ್ಕಾರ ಈ ವರ್ಷದಿಂದ ಅದನ್ನು ಬಹುಗುಣವಾಗಿ ಹೆಚ್ಚಿಸಿದೆ. ತ್ರೈವಾರ್ಷಿಕ ಯೋಜನೆಯಂತೆ, 1920ರ ಡಿಸೆಂಬರ್ 26ರಂದು ಪರಿಷತ್ತಿನ ಸುವರ್ಣ ಮಹೋತ್ಸವ ನಡೆಯಿತು. ಇದರ ಸವಿನೆನಪಾಗಿ ಚಿನ್ನದ ಬೆಳಸು ಎಂಬ ಬೃಹತ್ ಸ್ಮರಣ ಸಂಪುಟ ಪ್ರಕಟವಾಯಿತು. ಪರಿಷತ್ತಿನ ಆವರೆಗಿನ ಜೀವಿತಾವಧಿಯ 55 ವರ್ಷಗಳಲ್ಲಿ ಕನ್ನಡ ಭಾಷಾಸಾಹಿತ್ಯಗಳಲ್ಲಿ ಆದ ಬಹುಮುಖವಾದ ಬೆಳವಣಿಗೆಯನ್ನು ಪ್ರತಿಬಿಂಬಿಸುವ ಈ ಸಂಪುಟಕ್ಕೆ ಎಂ. ವಿ. ಸೀತಾರಾಮಯ್ಯ ಸಂಪಾದಕರು. ಉತ್ಸವದ ಅಂಗವಾಗಿ, ರಂ. ಶ್ರೀ. ಮುಗಳಿಯವರ ಸಂಪಾದಕತ್ವದಲ್ಲಿ 25 ಗ್ರಂಥಗಳು ಏಕಕಾಲದಲ್ಲಿ ಪ್ರಕಟಗೊಂಡದ್ದು ಇನ್ನೊಂದು ವಿಶೇಷ. ಇದೇ ಸಂದರ್ಭದಲ್ಲಿ 47ನೆಯ ಸಾಹಿತ್ಯ ಸಮ್ಮೇಳನವೂ ನಡೆಯಿತು ; ಮೈಸೂರು ವಿಶ್ವವಿದ್ಯಾನಿಲಯದ ಕುಲಪತಿ ದೇ. ಜವರೇಗೌಡರು ಸಮ್ಮೇಳನದ ಅಧ್ಯಕ್ಷರಾದರು.

ಒಟ್ಟಿನ ಮೇಲೆ, ಕನ್ನಡ ಭಾಷೆ ಸಾಹಿತ್ಯಗಳ ಅಭಿವೃದ್ಧಿಯಲ್ಲೂ ಕರ್ನಾಟಕ ಏಕೀಕರಣ ಕಾರ್ಯದಲ್ಲೂ ಪರಿಷತ್ತು ಸ್ಫೂರ್ತಿಕೇಂದ್ರವಾಗಿದ್ದುಕೊಂಡು, ತನ್ನ ವಾರ್ಷಿಕ ಸಭೆಸಮ್ಮೇಳನಗಳ ಮೂಲಕವೂ ಪತ್ರಿಕೆ ಪ್ರಕಟನೆಗಳ ಮೂಲಕವೂ ಅಧಿಕಾರಿವರ್ಗದ ಪ್ರವಾಸ ಪ್ರಚಾರಕಾರ್ಯಗಳ ಮೂಲಕವೂ ಪ್ರತ್ಯಕ್ಷವಲ್ಲದಿದ್ದರೂ ಪ್ರಮುಖ ಪಾತ್ರವನ್ನು ವಹಿಸಿದೆ. ಈಗ ಪರಿಷತ್ತು ತನ್ನ ವ್ಯಾಪ್ತಿಯನ್ನು 19 ಜಿಲ್ಲಾ ಸಮಿತಿಗಳ ಏರ್ಪಾಡಿನ ಮೂಲಕ ವಿಸ್ತರಿಸಿಕೊಂಡಿದೆ. ಪಂಡಿತರ ಸಂಸ್ಥೆಯಾಗಿದ್ದ ಪರಿಷತ್ತು ಈಗ ಜನತೆಯ ಸಂಸ್ಥೆಯಾಗಿ ಮಾರ್ಪಡುವ ಸೂಚನೆಗಳೂ ಕಂಡುಬರುತ್ತಿವೆ. ಭಿನ್ನದೃಷ್ಟಿಗಳನ್ನು ಸಮನ್ವಯ ಮಾಡಿಕೊಂಡು, ಕನ್ನಡ ನಾಡಿನ ವಿಶ್ವವಿದ್ಯಾನಿಲಯಗಳು ಜ್ಞಾನವಿಜ್ಞಾನಗಳ ಪೀಠಗಳಾಗಿರುವಂತೆ ಕನ್ನಡ ಸಾಹಿತ್ಯ ಪರಿಷತ್ತು ಅನ್ವರ್ಥಕವಾಗಿ ಕನ್ನಡ ವಿದ್ಯಾಪೀಠವಾಗಿ ಚಿರಕಾಲ ಬಾಳಲೆಂಬುದು ಈ ಹಿರಿಯ ಸಂಸ್ಥೆಯ ಹಿತೈಷಿಗಳ ಹಾರೈಕೆ. ನೋಡಿ—ಕನ್ನಡ ಸಾಹಿತ್ಯ ಸಮ್ಮೇಳನಗಳು. (ಎಂ.ವಿ.ಎಸ್.)

**ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ :** 1915ರಲ್ಲಿ ಸ್ಥಾಪಿತವಾದ ಕನ್ನಡ ಸಾಹಿತ್ಯಪರಿಷತ್ತಿನ ಪ್ರಧಾನ ಮುಖಪತ್ರ. 1916ರ ಏಪ್ರಿಲಿನಿಂದ ಪ್ರಕಟವಾಗುತ್ತಿದೆ. ಪರಿಷತ್ತಿನ ಧ್ಯೇಯವೇ ಪತ್ರಿಕೆಯ ಧ್ಯೇಯವೂ ಆಗಿದೆ. ಕನ್ನಡ ನಾಡು, ನುಡಿ, ಸಂಸ್ಕೃತಿಗಳ ಪುನರುಜ್ಜೀವನ, ಜ್ಞಾನಪ್ರಸಾರ, ಕನ್ನಡ ಏಕೀಕರಣದ ಬಗ್ಗೆ ಪ್ರಚಾರ, ವಿದ್ವತ್ ಪ್ರೌಢಿಮೆಯಿಂದ ಕೂಡಿದ ಲೇಖನಗಳ ಪ್ರಕಟನೆ—ಮೊದಲಾದವು ಈ ಪತ್ರಿಕೆಯ ಧ್ಯೇಯಗಳು. ಇದರ ಮೊದಲ ಹೆಸರು ಕರ್ನಾಟಕ ಸಾಹಿತ್ಯ ಪರಿಷತ್ ಪತ್ರಿಕೆ. 1938ರಲ್ಲಿ ಬಿ. ಎಂ. ಶ್ರೀಕಂಠಯ್ಯನವರು ಪರಿಷತ್ತಿನ ಉಪಾಧ್ಯಕ್ಷರಾಗಿದ್ದಂದು ಪರಿಷತ್ತಿನ ಹೆಸರನ್ನು ಕನ್ನಡ ಸಾಹಿತ್ಯ ಪರಿಷತ್ತು ಎಂದು ಬದಲಾಯಿಸಿದಾಗ ಈ ಪತ್ರಿಕೆಯ ಹೆಸರನ್ನೂ ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ ಎಂದು ಮಾರ್ಪಡಿಸಲಾಯಿತು. ಪರಿಷತ್ಪತ್ರಿಕೆಯ ಮೊತ್ತಮೊದಲ ಸಂಚಿಕೆ ಡೆಮ್ಮಿ ⅛ರ ಆಕಾರದಲ್ಲಿದ್ದು ಅದರಲ್ಲಿ ನೂರು ಪುಟಗಳಿದ್ದುವು. ಮೊದಲ ಸಂಚಿಕೆಯಲ್ಲಿ ಕರ್ನಾಟಕ ಭಾಷಾ ಸಾಹಿತ್ಯಗಳು, ಗ್ರಾಂಥಿಕ ಪ್ರಯೋಗಗಳ ಏಕೀಕರಣ, ಸದುದ್ದೇಶಪಂಚಕ ಮೊದಲಾದ ಉಪಯುಕ್ತ ಲೇಖನಗಳಿವೆ.

ಕೆಲವು ಕಾಲ ಈ ಪತ್ರಿಕೆ ತ್ರೈಮಾಸಿಕವಾಗಿ ಮುಂದುವರಿಯಿತಾದರೂ ಸ್ವಲ್ಪ ಕಾಲಾನಂತರ ಅದು ನಿರಂತರವಾಗಿ ವರ್ಷಕ್ಕೆ ಎರಡು ಸಂಚಿಕೆಗಳಂತೆ ಷಾಣ್ಮಾಸಿಕ ಪತ್ರಿಕೆಯಾಗಿ ಪ್ರಕಟವಾಗುತ್ತ ಬಂದಿದೆ. ಪತ್ರಿಕೆಯ ಮುಖಪುಟದಲ್ಲಿ ಇತ್ತೀಚೆಗೆ ವ್ಯತ್ಯಾಸವಾಗಿದೆ. ಮೊದಲಿನಿಂದಲೂ ಪರಿಷತ್ಪತ್ರಿಕೆಯ ರಕ್ಷಾಪುಟದ ಮೇಲೆ ನಾಟ್ಯಸರಸ್ವತಿಯ ದೊಡ್ಡ ಚಿತ್ರವಿರುತ್ತಿತ್ತು. ಈಗ ಅದರ ಬದಲು ಪರಿಷತ್ತಿನ ಕಟ್ಟಡದ ರೇಖಾಚಿತ್ರವಿದೆ. ಪತ್ರಿಕೆಯ ಆಕಾರ ಕೂಡ ಈಗ ಸ್ವಲ್ಪ ಕಿರಿದಾಗಿದೆ. ಈಗ ಅದು ಪ್ರಬುದ್ಧ ಕರ್ನಾಟಕದ ಅಳತೆಗೆ ಹೊಂದಿಕೆಯಾಗಿದೆ.

ಪರಿಷತ್ಪತ್ರಿಕೆಯನ್ನು ಪ್ರಾರಂಭದಲ್ಲಿ ಒಂದು ಸಂಪಾದಕ ಮಂಡಲಿ ನಡೆಸುತ್ತಿತ್ತು. ಅನಂತರ ಸಂಪಾದಕ ಮಂಡಲಿಯ ಜೊತೆಗೆ ಪ್ರತ್ಯೇಕ ಸಂಪಾದಕರನ್ನು ನೇಮಿಸಲಾಯಿತು. ಬೆಳ್ಳಾವೆ ವೆಂಕಟನಾರಾಯಣಪ್ಪ, ಎಂ. ಆರ್. ಶ್ರೀನಿವಾಸ ಮೂರ್ತಿ, ಡಿ. ಎಲ್. ನರಸಿಂಹಾಚಾರ್, ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪ ಮೊದಲಾದವರು ಪರಿಷತ್ಪತ್ರಿಕೆಯ ಸಂಪಾದಕರಾಗಿದ್ದರು.

ಪರಿಷತ್ಪತ್ರಿಕೆ ಅನೇಕ ಜನ ಹಿರಿಯ ಸಾಹಿತಿಗಳ, ವಿಚಾರವಂತರ, ಕವಿಗಳ ಬರೆಹಗಳನ್ನು ಪ್ರಕಟಿಸಿದೆ. ಇಂದು ಗ್ರಂಥರೂಪದಲ್ಲಿ ಹೊರಬಂದಿರುವ ಹಲವು ಕೃತಿಗಳು ಮೊದಲು ಲೇಖನ ರೂಪದಲ್ಲಿ ಬಿಡಿಯಾಗಿ ಪರಿಷತ್ಪತ್ರಿಕೆಯಲ್ಲಿ ಬೆಳಕು ಕಂಡಿವೆ. ಅವುಗಳಲ್ಲಿ ಕವಿಚರಿತೆ ಹಾಗೂ ವಡ್ಡಾರಾಧನೆಗಳನ್ನು ಸ್ಮರಿಸಬಹುದು. ಹೀಗೆಯೇ ಸಾಹಿತ್ಯದ ವಿವಿಧ ಪ್ರಕಾರಗಳನ್ನು ಕುರಿತ ಬರೆಹಗಳು ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆಯಲ್ಲಿ ಪ್ರಕಟವಾಗಿವೆ. ಅಲ್ಲಿಯ ಪತ್ರವ್ಯವಹಾರ, ಟೀಕೆಟಿಪ್ಪಣಿ, ವಿಮರ್ಶೆ, ಸಾಹಿತ್ಯ ಸಮ್ಮೇಳನಗಳ ವಿವರವಾದ ವರದಿ, ಭಾಷಣಗಳು, ನಿರ್ಣಯಗಳು—ಮೊದಲಾದವು ಅಲ್ಲಿ ಮಾತ್ರ ಸಿಗುವ ವಿವರಗಳಾಗಿವೆ. ಕನ್ನಡನಾಡಿನ ಹೊರಗಿರುವ ಇತರ ಭಾಷಾ ಪಂಡಿತರಿಗೆ ಅನುಕೂಲವಾಗಲೆಂಬ ದೃಷ್ಟಿಯಿಂದ ಹಿಂದಿನಿಂದಲೂ ಇದರಲ್ಲಿ ಪ್ರಕಟವಾಗುವ ಪ್ರತಿಯೊಂದು ಬರೆಹದ ಸಂಕ್ಷಿಪ್ತವಾದ ಇಂಗ್ಲಿಷ್ ಅನುವಾದವನ್ನು ಕೊಡುತ್ತಿದ್ದರು.

ಕಳೆದ ಅರ್ಧ ಶತಮಾನದ ಅವಧಿಯಲ್ಲಿ ವಿದ್ವತ್ ಪ್ರಪಂಚಕ್ಕೆ, ಸಂಶೋಧನ ವಿಭಾಗಕ್ಕೆ, ವಿಮರ್ಶೆಯ ಕ್ಷೇತ್ರಕ್ಕೆ ಪರಿಷತ್ಪತ್ರಿಕೆ ಸಲ್ಲಿಸಿರುವ ಸೇವೆ ಅಸದಳ. ಇದು ತನಕ (1970) ಪರಿಷತ್ಪತ್ರಿಕೆಯಲ್ಲಿ ಸುಮಾರು ಮುನ್ನೂರಕ್ಕೂ ಹೆಚ್ಚು ಜನ ಲೇಖಕರು ಬರೆದಿದ್ದಾರೆ. ಸುಮಾರು 850 ಬರೆಹಗಳು ಪ್ರಕಟವಾಗಿವೆ. ಇದರಿಂದ ಪರಿಷತ್ಪತ್ರಿಕೆ ಹೊರತಂದ ಹಾಗೂ ಪ್ರಕಾಶಪಡಿಸಿದ ಬರೆಹದ ಗಾತ್ರವನ್ನು ಅರಿಯಬಹುದು. ಇಂದಿಗೂ ಪತ್ರಿಕೆಯ ಹಳೆಯ ಸಂಚಿಕೆಗಳು ಕನ್ನಡಕ್ಕೆ ಸಂಬಂಧಿಸಿದ ವಿದ್ವತ್ಪೂರ್ಣ ಬರೆಹಗಳಿಗೆ ಅತ್ಯಗತ್ಯ ಆಕರಗ್ರಂಥಗಳಾಗಿವೆ. (ಎಚ್. ಪಿ.ಎಸ್.)

**ಕನ್ನಡ ಸಾಹಿತ್ಯ ಸಮ್ಮೇಳನಗಳು :** ಕರ್ನಾಟಕ ಭಾಷಾ ಸಂಸ್ಕರಣಕ್ಕಾಗಿಯೂ ಕರ್ನಾಟಕ ಗ್ರಂಥಾವಳಿಯ ಅಭಿವೃದ್ಧಿಗಾಗಿಯೂ ಬೆಂಗಳೂರಲ್ಲಿ ಕರ್ನಾಟಕ ಸಾಹಿತ್ಯ ಪರಿಷತ್ತು ಎಂಬ ಹೆಸರಿನ ಪ್ರಧಾನ ಸಭೆಯೊಂದನ್ನು ಸ್ಥಾಪಿಸಬೇಕೆಂದು ಬೆಂಗಳೂರಲ್ಲಿ 1915ರ ಮೇ 3ರಂದು ಗೌರ್ನಮೆಂಟ್ ಹೈಸ್ಕೂಲಿನ ವಿಶಾಲವಾದ ಹಜಾರದಲ್ಲಿ ಸೇರಿದ ಸಮ್ಮೇಳನದಲ್ಲಿ ತೀರ್ಮಾನವಾಯಿತು. ಆ ಸಮ್ಮೇಳನದ ಅಧ್ಯಕ್ಷತೆಯನ್ನು ರಾಜಮಂತ್ರಪ್ರವೀಣ ಎಚ್. ವಿ. ನಂಜುಂಡಯ್ಯನವರು ವಹಿಸಿದ್ದರು. ಕರ್ನಾಟಕ ಭಾಷಾಸಂಸ್ಕರಣಕ್ಕೂ ಕರ್ನಾಟಕ ಗ್ರಂಥಾಭಿವೃದ್ಧಿಗೂ ಅನುಕೂಲವಾಗುವಂಥ ಸಂಘವನ್ನು ಸ್ಥಾಪಿಸಲೋಸುಗ ಕನ್ನಡ ನಾಡಿನ




ಮೊದಲ 24 ಸಾಹಿತ್ಯ ಸಮ್ಮೇಳನಾಧ್ಯಕ್ಷರುಗಳು

ಪ್ರಮುಖರೆಲ್ಲ ಈ ಸಮ್ಮೇಳನಕ್ಕಾಗಿ ಬೆಂಗಳೂರಿಗೆ ಆಗಮಿಸಿದ್ದರು. ಅಂದೇ ಸಾಹಿತ್ಯ ಪರಿಷತ್ತು ಅಸ್ತಿತ್ವಕ್ಕೆ ಬಂದದ್ದು. ಅದೇ ಪ್ರಪ್ರಥಮ ಸಾಹಿತ್ಯ ಸಮ್ಮೇಳನ. ಅಂದಿನ ಸಮ್ಮೇಳನದಲ್ಲಿ ಭಾಷಾಸಾಹಿತ್ಯಗಳ ಅಭಿವೃದ್ಧಿಮಾರ್ಗವನ್ನು ಕುರಿತು ಅನೇಕ ಮಂದಿ ವಿದ್ವಾಂಸರಿಂದ ಲೇಖನಗಳನ್ನು ತರಿಸಿ ಸಭೆಯಲ್ಲಿ ಓದಿ ಚರ್ಚಿಸಲಾಯಿತು.

ಈ ಸಂಪ್ರದಾಯವನ್ನು ಅನುಸರಿಸಿ ಕನ್ನಡ ಸಾಹಿತ್ಯ ಪರಿಷತ್ತು ಪ್ರತಿವರ್ಷವೂ ಕನ್ನಡ ನಾಡಿನ ಒಂದೊಂದು ಮುಖ್ಯ ಪಟ್ಟಣಗಳಲ್ಲಿ ಕನ್ನಡ ಭಾಷಾಭಿಮಾನಿಗಳ ಸಮ್ಮೇಳನಗಳನ್ನು ನಡೆಯಿಸುತ್ತ ಬಂದಿದೆ. ಇದು ಹಿಂದೆ ಮೇ ತಿಂಗಳಲ್ಲಿ ನಡೆಯುತ್ತಿತ್ತು. ಈಗ ಡಿಸೆಂಬರ್ ತಿಂಗಳ ಕೊನೆಯ ವಾರದಲ್ಲಿ ಮೂರು ದಿನಗಳ ಕಾಲ ನಡೆಯುತ್ತದೆ. 1970ರ ವರೆಗೆ 47 ಸಮ್ಮೇಳನಗಳು ನಡೆದಿವೆ. ಸಮ್ಮೇಳನಗಳು ನಡೆದ ಸ್ಥಳ, ಅಧ್ಯಕ್ಷರುಗಳ ಪಟ್ಟಿಯನ್ನು ಮುಂದೆ ಕೊಡಲಾಗಿದೆ.

ಸಮ್ಮೇಳನಗಳ ಕಾರ್ಯವಿವರಣೆ ಸ್ಥೂಲವಾಗಿ ಈ ರೀತಿಯಿದೆ : ಈ ಸಮ್ಮೇಳನಗಳ ಅಧ್ಯಕ್ಷತೆಗೆ ಪ್ರಮುಖರಾದ ಕನ್ನಡ ಭಾಷಾಭಿಮಾನಿಗಳೊಬ್ಬರನ್ನು ಆರಿಸಲಾಗುತ್ತದೆ. ಅಧ್ಯಕ್ಷರಾಗಿ ಆಯ್ಕೆಯಾದವರು ಸಾಮಾನ್ಯವಾಗಿ ತಮ್ಮ ಭಾಷಣದಲ್ಲಿ ಕನ್ನಡ ಭಾಷೆಯ ಸದ್ಯದ ಪರಿಸ್ಥಿತಿಯನ್ನು ವಿವರಿಸಿ ಕನ್ನಡ ಭಾಷೆಯ ಮತ್ತು ದೇಶದ ಅಭಿವೃದ್ಧಿಸ್ಥಿತಿಯನ್ನು ಕುರಿತು ಕರ್ನಾಟಕದ ನಾನಾ ಭಾಗಗಳಲ್ಲಿಯ ಕನ್ನಡಿಗರಲ್ಲಿ ಸೌಹಾರ್ದ ಹುಟ್ಟುವಂತೆ ಉಪನ್ಯಾಸ ಮಾಡುವರು. ಇದಲ್ಲದೆ ನಾನಾ ಪ್ರಾಂತ್ಯಗಳಿಂದ ಸಮ್ಮೇಳನಕ್ಕೆ ಬಂದ ಕನ್ನಡಿಗರು ಕನ್ನಡ ಭಾಷೆಯ ಮತ್ತು ದೇಶದ ಏಳಿಗೆಗಾಗಿ ಆವಶ್ಯಕವೆಂದು ತೋರುವ ಅನೇಕ ಗೊತ್ತುವಳಿಗಳನ್ನು ಮಾಡುವರು. ಇವನ್ನು ಪರಿಷತ್ತು ಆಯಾ ಅಧಿಕಾರಿಗಳಿಗೆ ತಿಳಿಯಪಡಿಸಿ ಅವರಿಂದ ಬಂದ ಉತ್ತರಗಳನ್ನು ಮುಂದಿನ ಸಮ್ಮೇಳನದ ಮುಂದೆ ಇಡುತ್ತದೆ. ಈ ಮೂರು ದಿನಗಳ ಸಮ್ಮೇಳನದಲ್ಲಿ ನಾನಾ ಪ್ರಾಂತ್ಯಗಳಿಂದ ವಿದ್ವಾಂಸರು ಕನ್ನಡ ಸಾಹಿತ್ಯದ ಹಲವು ಪ್ರಕಾರಗಳನ್ನು ಕುರಿತ ವಿದ್ವತ್ಪೂರಿತ ಪ್ರಬಂಧಗಳನ್ನು ಬರೆದೋದುವರು. ಇದರ ಜೊತೆಗೆ ಕನ್ನಡ ಲೇಖಕರ ಗೋಷ್ಠಿ, ನಾಟ್ಯನಾಟಕ ಗೋಷ್ಠಿ, ಇತಿಹಾಸ ಗೋಷ್ಠಿ, ಮಹಿಳಾ ಗೋಷ್ಠಿ, ವೃತ್ತಪತ್ರಿಕಾ ಕರ್ತರ ಗೋಷ್ಠಿ ಮುಂತಾದ ಹಲವಾರು ಗೋಷ್ಠಿಗಳು ನಡೆಯುತ್ತವೆ. ಈ ಎಲ್ಲ ಗೋಷ್ಠಿಗಳಲ್ಲೂ ಸಮ್ಮೇಳನಾಧ್ಯಕ್ಷರು ಅಗ್ರಸ್ಥಾನದಲ್ಲಿರುತ್ತಾರೆ. ಇವುಗಳ ಜೊತೆಗೆ ಮನೋರಂಜನೆ ಕಾರ್ಯಕ್ರಮದ ಅಂಗವಾಗಿ ಕನ್ನಡ ಲಾವಣಿ, ಸಂಗೀತ, ನಾಟಕ ಮೊದಲಾದವೂ ಪ್ರದರ್ಶಿಸಲ್ಪಡುತ್ತವೆ.

ಹಿಂದೆ ಸಮ್ಮೇಳನಾಧ್ಯಕ್ಷರಿಗೂ ಪರಿಷತ್ತಿನ ಕಾರ್ಯಕಾರಿ ಸಮಿತಿಗೂ ನಿಕಟ ಸಂಬಂಧವಿರಲಿಲ್ಲ. ಸಮ್ಮೇಳನದಲ್ಲಾದ ಗೊತ್ತುವಳಿಗಳನ್ನು ಆಚರಣೆಗೆ ತರುವುದರಲ್ಲಾಗಲಿ, ಪರಿಷತ್ತಿನ ಧೋರಣೆಯನ್ನು ರೂಪುಗೊಳಿಸುವುದರಲ್ಲಾಗಲಿ ಅವರಿಗೆ ಸ್ಥಾನವಿರಲಿಲ್ಲ. ಈಚೆಗೆ ಈ ಸ್ಥಿತಿ ಮಾರ್ಪಟ್ಟಿದೆ. ಸಮ್ಮೇಳನದ ಅಧ್ಯಕ್ಷರು ಕಾರ್ಯಸಮಿತಿಯ ಸದಸ್ಯರಾಗಿರಬೇಕೆಂಬ ಒಂದು ತೀರ್ಮಾನವನ್ನು 1939ರಲ್ಲಿ ಅಂಗೀಕರಿಸಲಾಯಿತು. ಎರಡನೆಯದಾಗಿ ಪರಿಷತ್ತಿನ ಅಧ್ಯಕ್ಷರು ತಾವು ನಡೆಸುವ ಮುಖ್ಯ ಕಾರ್ಯಗಳ ವಿವರಗಳನ್ನು ಆಗಿಂದಾಗ್ಗೆ ಸಮ್ಮೇಳನಾಧ್ಯಕ್ಷರಿಗೆ ತಿಳಿಸಿ, ಅವರ ಸಲಹೆ ಪಡೆಯುವುದು ರೂಢಿಗೆ ಬಂದಿದೆ. ಇವರು ಸ್ವತಂತ್ರವಾಗಿಯೋ ಅಧ್ಯಕ್ಷರ ಜೊತೆಯಲ್ಲಿಯೋ ನಾಡಿನಲ್ಲಿ ಪ್ರವಾಸ ಮಾಡಿ ಪರಿಷತ್ತಿನ ಧ್ಯೇಯಗಳನ್ನು ಜನಸಾಮಾನ್ಯರಲ್ಲಿ ಹರಡುತ್ತಿದ್ದಾರೆ.

ಸಮ್ಮೇಳನಗಳು ಕರ್ನಾಟಕದ ಎಲ್ಲ ಪ್ರಮುಖ ಸ್ಥಳಗಳಲ್ಲೂ ನಡೆದಿವೆ. ನಾಡಿನ ಸುಪ್ರಸಿದ್ಧ ಸಾಹಿತಿಗಳು ಅಧ್ಯಕ್ಷರಾಗಿದ್ದಾರೆ. ಸಹಸ್ರ ಸಂಖ್ಯೆಯಲ್ಲಿ ಜನ ಸೇರಿ ಸಮ್ಮೇಳನಗಳ ಕಾರ್ಯಕಲಾಪಗಳನ್ನು ವೀಕ್ಷಿಸಿದ್ದಾರೆ; ಶುದ್ಧ ಮಾದರಿಯ ಮನೋರಂಜನ ಕಾರ್ಯಕ್ರಮಗಳನ್ನು ನೋಡಿ ಆನಂದಿಸಿದ್ದಾರೆ. ಅನೇಕ ಸ್ಥಳೀಯರು ಸಕ್ರಿಯವಾಗಿ ಭಾಗವಹಿಸಿದ್ದಾರೆ. ಜನತೆಯಲ್ಲಿ ಕನ್ನಡದ ಪ್ರಜ್ಞೆಯನ್ನು ಕುದುರಿಸುವಲ್ಲಿ ಈ ಸಮ್ಮೇಳನಗಳು ವಹಿಸಿದಪಾತ್ರ ಅಪೂರ್ವವಾದುದು. ಪ್ರತಿ ಸಮ್ಮೇಳನದಲ್ಲೂ ನಾಡು, ನುಡಿಗಳ ಏಳಿಗೆಯ ಬಗ್ಗೆ ಚರ್ಚೆ ನಡೆದು ಉಪಯುಕ್ತ ನಿರ್ಣಯಗಳಾಗಿವೆ. ಆ ನಿರ್ಣಯಗಳಲ್ಲಿ ಬಹುಪಾಲು ಕಾರ್ಯರೂಪಕ್ಕೂ ಬಂದಿವೆ. ಮುಂದಿನ ಪಟ್ಟಿ ಅಧಿವೇಶನಗಳ ಬಗ್ಗೆ ಮಾಹಿತಿ ನೀಡುತ್ತದೆ.



## ಕನ್ನಡ ಸಾಹಿತ್ಯ ಸಮ್ಮೇಳನಗಳ ಅಧಿವೇಶನಗಳು

| ಕ್ರಮ ಸಂಖ್ಯೆ | ಅಧಿವೇಶನ ಸ್ಥಳ | ಅಧ್ಯಕ್ಷರು | ವರ್ಷ |
|---|---|---|---|
| 1 | ಬೆಂಗಳೂರು | ಎಚ್. ವಿ. ನಂಜುಂಡಯ್ಯ | 1915 |
| 2 | ಬೆಂಗಳೂರು | ಎಚ್. ವಿ. ನಂಜುಂಡಯ್ಯ | 1916 |
| 3 | ಮೈಸೂರು | ಎಚ್. ವಿ. ನಂಜುಂಡಯ್ಯ | 1917 |
| 4 | ಧಾರವಾಡ | ಆರ್. ನರಸಿಂಹಾಚಾರ್ | 1918 |
| 5 | ಹಾಸನ | ಕರ್ಪೂರ ಶ್ರೀನಿವಾಸರಾಯರು | 1919 |
| 6 | ಹೊಸಪೇಟೆ | ರೊದ್ದ ಶ್ರೀನಿವಾಸರಾಯರು | 1920 |
| 7 | ಚಿಕ್ಕಮಗಳೂರು | ಕೆ. ಪಿ. ಪುಟ್ಟಣ್ಣಶೆಟ್ಟರು | 1921 |
| 8 | ದಾವಣಗೆರೆ | ಎಂ. ವೆಂಕಟಕೃಷ್ಣಯ್ಯ | 1922 |
| 9 | ಬಿಜಾಪುರ | ಸಿದ್ಧಾಂತಿ ಶಿವಶಂಕರಶಾಸ್ತ್ರೀ | 1923 |
| 10 | ಕೋಲಾರ | ಹೊಸಕೋಟೆ ಕೃಷ್ಣಶಾಸ್ತ್ರೀ | 1924 |
| 11 | ಬೆಳಗಾವಿ | ಬೆನಗಲ್ ರಾಮರಾವ್ | 1925 |
| 12 | ಬಳ್ಳಾರಿ | ಫ. ಗು. ಹಳಕಟ್ಟಿ | 1926 |
| 13 | ಮಂಗಳೂರು | ಆರ್. ತಾತಾಚಾರ್ಯ | 1927 |
| 14 | ಕಲಬುರ್ಗಿ | ಬಿ. ಎಂ. ಶ್ರೀಕಂಠಯ್ಯ | 1928 |
| 15 | ಬೆಳಗಾವಿ | ಮಾಸ್ತಿ ವೆಂಕಟೇಶಯ್ಯಂಗಾರ್ | 1929 |
| 16 | ಮೈಸೂರು | ಆಲೂರ ವೆಂಕಟರಾಯರು | 1930 |
| 17 | ಕಾರವಾರ | ಮುಳಿಯ ತಿಮ್ಮಪ್ಪಯ್ಯ | 1931 |
| 18 | ಮಡಿಕೇರಿ | ಡಿ. ವಿ. ಗುಂಡಪ್ಪ | 1932 |
| 19 | ಹುಬ್ಬಳ್ಳಿ | ವೈ. ನಾಗೇಶಶಾಸ್ತ್ರೀ | 1933 |
| 20 | ರಾಯಚೂರು | ಪಂಜೆ ಮಂಗೇಶರಾಯರು | 1934 |
| 21 | ಮುಂಬಯಿ | ಎನ್. ಎಸ್. ಸುಬ್ಬರಾಯರು | 1935 |
| 22 | ಜಮಖಂಡಿ | ಬೆಳ್ಳಾವೆ ವೆಂಕಟನಾರಾಯಣಪ್ಪ | 1937 |
| 23 | ಬಳ್ಳಾರಿ | ರಂ. ರಾ. ದಿವಾಕರ್ | 1938 |
| 24 | ಬೆಳಗಾವಿ | ಮುದವೀಡು ಕೃಷ್ಣರಾಯರು | 1939 |
| 25 | ಧಾರವಾಡ | ವೈ ಚಂದ್ರಶೇಖರಶಾಸ್ತ್ರೀ | 1940 |
| 26 | ಹೈದರಾಬಾದ್ | ಎ. ಆರ್. ಕೃಷ್ಣಶಾಸ್ತ್ರೀ | 1941 |
| 27 | ಶಿವಮೊಗ್ಗ | ದ. ರಾ. ಬೇಂದ್ರೆ | 1943 |
| 28 | ರಬಕವಿ | ಎಸ್. ಎಸ್. ಬಸವನಾಳರು | 1944 |
| 29 | ಮದರಾಸು | ಟಿ. ಪಿ. ಕೈಲಾಸಂ | 1945 |
| 30 | ಹರಪನಹಳ್ಳಿ | ಸಿ. ಕೆ. ವೆಂಕಟರಾಮಯ್ಯ | 1947 |
| 31 | ಕಾಸರಗೋಡು | ತಿರುಮಲೆ ತಾತಾಚಾರ್ಯ ಶರ್ಮ | 1948 |
| 32 | ಕಲಬುರ್ಗಿ | ಉತ್ತಂಗಿ ಚನ್ನಪ್ಪ | 1949 |
| 33 | ಸೊಲ್ಲಾಪುರ | ಎಂ. ಆರ್. ಶ್ರೀನಿವಾಸಮೂರ್ತಿ | 1950 |
| 34 | ಮುಂಬಯಿ | ಎಂ. ಗೋವಿಂದ ಪೈ | 1951 |
| 35 | ಬೇಲೂರು | ಎಸ್. ಸಿ. ನಂದೀಮಠ | 1952 |
| 36 | ಕುಮಟ | ವಿ. ಸೀತಾರಾಮಯ್ಯ | 1954 |
| 37 | ಮೈಸೂರು | ಶಿವರಾಮ ಕಾರಂತ | 1955 |
| 38 | ರಾಯಚೂರು | ಆದ್ಯ ರಂಗಾಚಾರ್ಯ | 1955 |
| 39 | ಧಾರವಾಡ | ಕೆ. ವಿ. ಪುಟ್ಟಪ್ಪ | 1957 |
| 40 | ಬಳ್ಳಾರಿ | ವಿ. ಕೆ. ಗೋಕಾಕ್ | 1958 |
| 41 | ಬಿದರೆ | ಡಿ. ಎಲ್. ನರಸಿಂಹಾಚಾರ್ | 1960 |
| 42 | ಮಣಿಪಾಲ | ಅ. ನ. ಕೃಷ್ಣರಾಯರು | 1960 |
| 43 | ಗದಗ | ಕೆ. ಜಿ. ಕುಂದಣಗಾರ | 1961 |
| 44 | ಸಿದ್ಧಗಂಗಾ | ರಂ. ಶ್ರೀ. ಮುಗಳಿ | 1963 |
| 45 | ಕಾರವಾರ | ಕಡೆಂಗೋಡ್ಲು ಶಂಕರಭಟ್ಟ | 1965 |
| 46 | ಶ್ರವಣಬೆಳಗೊಳ | ಆ. ನೇ. ಉಪಾಧ್ಯೆ | 1967 |
| 47 | ಬೆಂಗಳೂರು | ದೇ. ಜವರೇಗೌಡ | 1970 |

ಕನ್ನಡದ ಸರ್ವತೋಮುಖವಾದ ಬೆಳವಣಿಗೆಯ ಬಗ್ಗೆ ಅಧ್ಯಕ್ಷರು ನೀಡಿರುವ ...ಸ್ತೃತವೂ ವಿದ್ವತ್ಪೂರ್ಣವೂ ಆದ ಭಾಷಣಗಳಿಂದ ಆಯ್ದ ಕೆಲವು ಭಾಗ...ನ್ನು ಇಲ್ಲಿ ಕೊಡಲಾಗಿದೆ.

ಕನ್ನಡ ಭಾಷೆಯು ಮೈಸೂರು ಸಂಸ್ಥಾನದವರಿಗೆ ಮಾತ್ರವೇ ಸೇರಿರುವುದಾಗಿಲ್ಲ. ಕನ್ನಡವನ್ನು ಮಾತನಾಡುವುದರಲ್ಲಿ ಅರ್ಧಪಾಲಿಗಿಂತಲೂ ಹೆಚ್ಚು ಮಂದಿ ಸಂಸ್ಥಾನದ ಸುತ್ತಮುತ್ತಲೂ ಇರುವ ಬ್ರಿಟಿಷ್ ಇಂಡಿಯಾದಲ್ಲಿಯೂ ಹೈದರಾಬಾದ್ ಸಂಸ್ಥಾನದಲ್ಲಿಯೂ ವಾಸಿಸುತ್ತಿರುವರು. ರಾಜಕೀಯ ವಿಷಯಗಳಲ್ಲಿ ಮೂರು ನಾಲ್ಕು ಸರ್ಕಾರದವರಿಗೆ ಅಧೀನವಾಗಿದ್ದರೂ ಬೇರೆಬೇರೆಯಾಗಿ ಕಾಣುವ ಕನ್ನಡ ನಾಡುಗಳಲ್ಲಿಯೂ ಕನ್ನಡ ಮಾತನಾಡುವವರಲ್ಲಿಯೂ ಕೆಲವು ಸಾಮಾನ್ಯ ಲಕ್ಷಣಗಳು ಕಾಣಬರುತ್ತವೆ. ಆದುದರಿಂದ ಭಾಷಾಭಿವೃದ್ಧಿ, ಗ್ರಂಥರಚನೆ ಇವುಗಳ ವಿಷಯದಲ್ಲಿ ಕನ್ನಡಿಗರೆಲ್ಲರನ್ನೂ ಒಟ್ಟುಗೂಡಿಸಲಾದರೆ, ವಿಶೇಷ ಪ್ರಯೋಜನವುಂಟು. ಈ ಉದ್ದೇಶದಿಂದಲೇ, ಕನ್ನಡ ಭಾಷಾಭಿವೃದ್ಧಿಯಲ್ಲಿ ಆಸಕ್ತರಾಗಿಯೂ ಸಮರ್ಥರಾಗಿಯೂ ಕಾರ್ಯಭಾರವನ್ನು ವಹಿಸಲು ತಕ್ಕವರಾಗಿಯೂ ಇರುವ ಜನಗಳು ಸೇರಿ, ಅನ್ಯೋನ್ಯ ಸಹಾಯದಿಂದ ಒಟ್ಟುಗೂಡಿ ಕೆಲಸ ಮಾಡತಕ್ಕ ಒಂದು ಸಭೆಯನ್ನು ಸರ್ಕಾರದ ಸಂಬಂಧವಿಲ್ಲದೆ ನಿರ್ಮಿಸಬೇಕೆಂದು ಈ ಸಮ್ಮೇಳನವನ್ನು ಏರ್ಪಾಡು ಮಾಡಲಾಗಿದೆ.

—ಎಚ್. ವಿ. ನಂಜುಂಡಯ್ಯ

ಪೂರ್ವದಂತೆ ಉದ್ದಾಮಕವಿಗಳು ಹುಟ್ಟಬೇಕೆಂದಾಗಲಿ, ಪೂರ್ವದಂತೆ ರಾಜರೂ ಮಾಂಡಲಿಕರೂ ಅಧಿಕಾರಿಗಳೂ ಪ್ರೋತ್ಸಾಹಕರಾಗಬೇಕೆಂದಾಗಲಿ ಹಾರೈಸುವುದರಿಂದ ಫಲವಿಲ್ಲ. ಪ್ರಕೃತ ಕಾಲಕ್ಕೆ ಅನುಗುಣವಾಗಿ ಕನ್ನಡಿಗರೆಲ್ಲರೂ ಅಸಡ್ಡೆಯನ್ನು ತೊಲಗಿಸಿ ಭಾಷಾಸೇವೆಯಲ್ಲಿ ನಿರತರಾಗಬೇಕು. ಪಂಡಿತರನ್ನು ಗೌರವಿಸಬೇಕು. ಕನ್ನಡ ನುಡಿಗಾಗಿ ಶ್ರಮಪಡುವವರಿಗೆ ಮರ್ಯಾದೆಯನ್ನು ಮಾಡಬೇಕು. ಸಾಹಿತ್ಯವನ್ನು ವೃದ್ಧಿಗೊಳಿಸುವುದಕ್ಕಾಗಿ ಶಾಸ್ತ್ರೀಯ ಗ್ರಂಥಗಳೇ ಮೊದಲಾದುವನ್ನು ಅನ್ಯಭಾಷೆಗಳಿಂದ ಪರಿವರ್ತಿಸಬೇಕು. ಕೋಶಗಳನ್ನೂ ಸಾಂಕೇತಿಕ ಶಬ್ದಗಳ ಪಟ್ಟಿಯನ್ನೂ ಏರ್ಪಡಿಸಬೇಕು. ಗ್ರಂಥಸ್ಥ ಭಾಷೆಗೆ ಏಕರೂಪತೆಯನ್ನು ಉಂಟುಮಾಡಬೇಕು. ವಿದ್ಯಾವಂತನಾದ ಪ್ರತಿಯೊಬ್ಬ ಕನ್ನಡಿಗನೂ ತನಗಿಂತ ವಿದ್ಯೆಯಲ್ಲಿ ಕಡಿಮೆಯಾದ ಕನ್ನಡಿಗರ ಉಪಯೋಗಾರ್ಥವಾಗಿ ಗ್ರಂಥ ನಿರ್ಮಾಣವನ್ನು ಮಾಡುವುದು ತನ್ನ ಕರ್ತವ್ಯವೆಂದು ತಿಳಿಯಬೇಕು. ಜ್ಞಾನವೃದ್ಧಿಕರವಾದ ಪತ್ರಿಕೆಗಳನ್ನು ಹೊರಡಿಸಬೇಕು. ಭಾಷೆಯ ಏಕೀಭಾವ, ಪರಸ್ಪರ ಮೈತ್ರಿ, ಮುದ್ರಣ ಸೌಕರ್ಯ, ಗ್ರಂಥ ಪ್ರಚಾರಕ್ಕೆ ಅನುಕೂಲ್ಯ ಇವುಗಳನ್ನು ಉಂಟುಮಾಡುವುದಕ್ಕಾಗಿ ಗ್ರಂಥಕರ್ತರ ಮತ್ತು ಪತ್ರಿಕಾ ಸಂಪಾದಕರ ಒಂದು ಸಂಘವನ್ನು ಏರ್ಪಡಿಸಬಹುದು. ಎಲ್ಲಾ ಕರ್ನಾಟಕ ಭಾಗಗಳ ವಿದ್ವಾಂಸರನ್ನು ಸೇರಿಸಿ ಒಂದು ಗ್ರಂಥಪರಿಶೀಲಕ ಮಂಡಲಿಯನ್ನೂ ಏರ್ಪಡಿಸಬಹುದು.

—ಆರ್. ನರಸಿಂಹಾಚಾರ್ಯ

ಇಟ್ಟಿಗೆಗಳು ಒಂದಕ್ಕೊಂದನ್ನಂಟಿಸಿ ಭದ್ರಪಡಿಸುವ ಗಾರೆಯಂತೆ ಭಾಷೆಯು ಜನರನ್ನು ಸೇರಿಸತಕ್ಕ ಒಂದು ಅಂಟು. ಮಂಗಳೂರಿನವರಿಗೂ ಧಾರವಾಡದವರಿಗೂ ಮೈಸೂರಿನವರಿಗೂ ಸಂಬಂಧವೇನು ? ಅವರನ್ನು ಇಲ್ಲಿ ಸೇರುವಂತೆ ಮಾಡಿದುದಾವುದು ? ಕನ್ನಡ ನುಡಿಯಲ್ಲವೆ ? ಇಟ್ಟಿಗೆಯ ಬಲವೂ ಗಾರೆಯ ಅಂಟೂ ಹೆಚ್ಚಿದಷ್ಟೂ ಗೋಡೆಯ ಬಲವೂ ಹೆಚ್ಚುವುದಷ್ಟೆ ! ಕನ್ನಡ ನುಡಿಯ ಅಭಿವೃದ್ಧಿಯಾದಷ್ಟೂ ಕನ್ನಡಿಗರ ಬಲವೂ ಅಧಿಕವಾಗುವುದರಲ್ಲಿ ಸಂದೇಹವೇಕೆ ?

—ಕೆ. ಪಿ. ಪುಟ್ಟಣ್ಣಶೆಟ್ಟಿ

ಭಾಷೆಗೆ ಕುಲವಿಲ್ಲ. ಗೋತ್ರವಿಲ್ಲ. ಮತವಿಲ್ಲ ; ಅದು ಎಲ್ಲರಿಗೂ ಸೇರಿದುದು, ಎಲ್ಲರಿಗೂ ಬೇಕಾದುದು. ಪೂರ್ವಕಾಲದಲ್ಲಿ ಎಲ್ಲ ಮತಜಾತಿಗಳವರೂ ಅದರ ಸೇವೆ ಮಾಡಿ ಅದನ್ನು ಬೆಳೆಯಿಸಿದರು. ಈಗಲೂ ನಾವು ನಮ್ಮ ಭೇದಗಳನ್ನು ಬಿಟ್ಟು ಒಮ್ಮನಸ್ಸಿನಿಂದ ಭಾಷಾಸೇವೆಗೆ ನಿಂತರೆ. ಬೇಗನೆ ನಮ್ಮ ಸಾಹಿತ್ಯವು ಪ್ರಪಂಚದಲ್ಲಿ ಮಾನ್ಯ ಸ್ಥಾನವನ್ನು ಪಡೆದು ನಮ್ಮ ದೇಶವು ಸುಖಸಂಪತ್ತುಗಳಿಗೆ ಆವಾಸಸ್ಥಾನವಾಗುವುದರಲ್ಲಿ ಸಂದೇಹವಿಲ್ಲ.

—ಎಂ. ವೆಂಕಟಕೃಷ್ಣಯ್ಯ

ಸಾಹಿತ್ಯದಲ್ಲಿ ನಡೆಯಬೇಕಾಗಿರುವ ಊಳಿಗವನ್ನು ಮಾತ್ರ ನಾವೆಲ್ಲರೂ ಕೂಡಿ ಮಾಡಿದಲ್ಲದೆ ಸಾಹಿತ್ಯದ ಉತ್ತರೋತ್ತರವು ನೆಟ್ಟಗಾಗಲಾರದು. ಆದುದರಿಂದ ಈ ವರೆಗೆ ಅಶ್ರದ್ಧೆಯೋ ಸಮಯವಿರೋಧವೋ ವ್ಯಕ್ತಿವೈರವೋ ದೇಶಾಂತರ ವಿವಾದವೋ ವಿಷಯಾಂತರಾಳವೋ ಮತವಿರೋಧವೋ ಏನಿದ್ದರೂ ತೊರೆದು ಮರೆತು ನಮ್ಮ ಸಜ್ಜನಿಕೆಯನ್ನೂ, ಕಾರ್ಯದಕ್ಷತೆಯನ್ನೂ ನೈಪುಣ್ಯವನ್ನೂ ಸಾಹಿತ್ಯವನ್ನೂ ಮೆರೆಯಲು ನಾವೆಲ್ಲರೂ ನೆರೆಯಬೇಕೆಂಬುದು ನನ್ನ ಸವಿನಯಪ್ರಾರ್ಥನೆ.

—ಆರ್. ತಾತಾಚಾರ್ಯ

ಇಂಗ್ಲಿಷ್ ಸಂಸ್ಕಾರದಿಂದ ಅಂಜನ ಹಾಕಿ ಪರೆ ತೆಗೆದ ಹೊಸ ಕಣ್ಣಿನಿಂದ, ಹೊಸ ಬೆಳಗಳ ತಿಳಿವಳಿಕೆಯಿಂದ, ವಿಮರ್ಶನ ಮಿಳಿತವಾದ ಶ್ರದ್ಧೆಯಿಂದ, ವೇದಗಳು, ಉಪನಿಷತ್ತುಗಳು, ಇತಿಹಾಸ ಪುರಾಣಗಳು. ದರ್ಶನಗಳು, ಶಾಸ್ತ್ರಗಳು. ಕಲೆಗಳು, ವೈದಿಕ ಬೌದ್ಧ ಜೈನ ವೈಷ್ಣವ ಧರ್ಮಗಳು—ಇವುಗಳ ಪವಿತ್ರ ಮೂಲಗಳನ್ನು ಪರಿಶೋಧನೆ ಮಾಡಿ ಹಸಿದು ಕಂಗೆಟ್ಟಿರುವ ನಮ್ಮ ಜನಸಾಮಾನ್ಯಕ್ಕೆ ಶುದ್ಧಾಹಾರ

ವನ್ನು. ದೇಹಪುಷ್ಟಿ, ಆತ್ಮಪುಷ್ಟಿ ಆಗುವ ನಿರ್ಮಲಾಹಾರವನ್ನು ಒದಗಿಸುವುದು ವಿದ್ಯಾವಂತರ ಕರ್ತವ್ಯವಲ್ಲವೆ ? —ಬಿ. ಎಂ. ಶ್ರೀಕಂಠಯ್ಯ

ಚತುರ್ಮುಖವಾದ ಕರ್ನಾಟಕವು ಏಕಮುಖವಾಗಿದೆ. ಈಗ ಅದರ ನಾಲ್ಕು ಮೋರೆಗಳನ್ನು ಏಕಮುಖವಾಗಿ ಮಾಡುವುದಕೋಸ್ಕರ ಅಖಿಲ ಕರ್ನಾಟಕ ವಿಶ್ವ ವಿದ್ಯಾಲಯವು ಅವಶ್ಯವಾಗಿ ಬೇಕಾಗಿದೆ. —ಆಲೂರ ವೆಂಕಟರಾಯರು

ನಮ್ಮ ಸಂಸ್ಕೃತಿ ಉದಾತ್ತವಾಗಿ ಹಬ್ಬಬೇಕಾದರೆ ಸಾಹಿತ್ಯವು ಸಾರ್ವಜನಿಕವಾಗ ಬೇಕಾದರೆ ಭಿನ್ನ ಭಿನ್ನ ಪ್ರಾಂತಗಳಾಗಿ ತುಂಡಾದ "ಕರ್ಣಾಟಕ"ವು ಒಂದಾಗಬೇಕು ; ಆ ಉದ್ದೇಶವು ಸಿದ್ಧಿಸದಿದ್ದರೆ ಈ ಎಲ್ಲಾ ಬಣ್ಣವನ್ನೂ ಮಸಿ ನುಂಗಿದಂತಾಗುವುದಲ್ಲವೆ? ಎಂಬ ಪ್ರಶ್ನೆಯೊದಗಬಹುದು. —ಮುಳಿಯ ತಿಮ್ಮಪ್ಪಯ್ಯ

ನಮ್ಮಲ್ಲಿ ಹಳೆಯ ತೆರದ ಪಾಂಡಿತ್ಯವು ಕಡಮೆಯಾಗಕೂಡದೆಂದು ನನ್ನ ಕೋರಿಕೆ. —ಡಿ. ವಿ. ಗುಂಡಪ್ಪ

ಕರ್ಣಾಟಕ ಸಾಹಿತ್ಯ ಪರಿಷತ್ತು ಏನೂ ಕೆಲಸ ಮಾಡಲಿಲ್ಲವೆಂದು ಆಗಾಗ್ಗೆ ದೂರು ಕೇಳುತ್ತೇವೆ. ನಾವೆಲ್ಲರೂ ಸೇರಿದುದೇ ಅಲ್ಲವೇ ಪರಿಷತ್ತು ! ಕೆಲಸ ಮಾಡದೆ ನಮ್ಮನ್ನು ನಾವೇ ದೂರಿಕೊಂಡಲ್ಲಿ ಸಾರ್ಥಕವೇನು ? ಯಾವ ಕೆಲಸಕ್ಕೂ ಹಣ ಬೇಕು. ಪರಿಷತ್ತು ಇಷ್ಟು ಪುಟ್ಟಿಗೆ ಕೆಲಸ ಮಾಡುತ್ತಿರುವುದು ಮೈಸೂರು ಶ್ರೀಮನ್ಮಹಾ ರಾಜರ ಉದಾರಾಶ್ರಯದಿಂದ. ನಾವೆಲ್ಲರೂ ನಮ್ಮ ಯೋಗ್ಯತೆಗೆ ತಕ್ಕ ಕಾಣಿಕೆ ಸಲ್ಲಿಸ ದಿದ್ದರೆ ಪರಿಷತ್ತಿನ ಕೆಲಸಗಳು ನಡೆಯುವುದೆಂತು ? ಪರಿಷತ್ತಿನ ಸದಸ್ಯರ ಪಟ್ಟಿಯನ್ನು ನೋಡಿರಿ, ಎಷ್ಟು ಪುಟ್ಟದಾಗಿದೆ ! —ಬೆಳ್ಳಾವೆ ವೆಂಕಟನಾರಾಯಣಪ್ಪ

ಇವುಗಳಲ್ಲಿ ಮಾತೃಭಾಷೆಗೆ ಮೊದಲನೆಯ ಸ್ಥಾನ, ದೇಶಭಾಷೆ ಎರಡನೆಯದು, ಇಂಗ್ಲೀಷು ಮೂರನೆಯದು. —ಎ. ಆರ್. ಕೃಷ್ಣಶಾಸ್ತ್ರೀ

ಹಾಗೆ ಕನ್ನಡ ಜನದ ಮೋಕ್ಷ ಕನ್ನಡದ ಮೂಲಕವೇ ಆಗಬೇಕೆಂಬುದು ಸಹಜವಾಗಿದೆ. —ತಿರುಮಲೆ ತಾತಾಚಾರ್ಯ ಶರ್ಮ

ನಾವು ಯಾವ ಕಾರ್ಯವನ್ನೇ ಮಾಡಲಿ, ಅದು ಕನ್ನಡದ ಸೇವೆಯೆಂದಾಗು ಬೇಕು. —ಚನ್ನಪ್ಪ ಉತ್ತಂಗಿ

ಲೋಕದ ಆಯಾ ಪ್ರಧಾನ ಭಾಷೆಗಳ ಅಮೂಲ್ಯವಾದ ಗ್ರಂಥಗಳನ್ನು (ಎಲ್ಲವನ್ನಲ್ಲ, ಶ್ರೇಷ್ಠವಾದುವನ್ನು ಮಾತ್ರ) ಕನ್ನಡದಲ್ಲಿ ಅನುವಾದಿಸಬೇಕು. —ಮಂ. ಗೋವಿಂದ ಪೈ

ಕರ್ನಾಟಕ ವಿಶ್ವವಿದ್ಯಾಲಯ, ಮೈಸೂರು ವಿಶ್ವವಿದ್ಯಾನಿಲಯ ಹಾಗೂ ಸಾಹಿತ್ಯ ಪರಿಷತ್ತು ಇವೆಲ್ಲ ಪರಸ್ಪರ ಸಹಕಾರದಿಂದ ನಾಡುನುಡಿಗಳ ಹಿತಕ್ಕಾಗಿ ದುಡಿಯಬೇಕಾಗಿದೆ. ಸಾಹಿತ್ಯಕ್ಷೇತ್ರದಲ್ಲಿ ಮಾಡತಕ್ಕ ಕೆಲಸವು ಬಹಳವಿದೆ. ಈಗ ಸಾಧಿಸಿದುದು ಅತ್ಯಲ್ಪ. ಈಗ ಕನ್ನಡ ವಿಷಯವನ್ನು ಎಂ.ಎ. ವರ್ಗದವರಿಗೆ ಕಲಿಸುವ ವ್ಯವಸ್ಥೆ ಮುಂಬಯಿ, ಪೂನಾ, ಮೈಸೂರು, ಮದ್ರಾಸ್, ಉಸ್ಮಾನಿಯಾ —ಈ ವಿಶ್ವವಿದ್ಯಾನಿಲಯಗಳಲ್ಲಿ ಆಗಿದೆ. ಈ ವಿಷಯದಲ್ಲಿ ತಜ್ಞರಾದ ಪ್ರಾಧ್ಯಾಪಕರು ಕೆಲಸಮಾಡುತ್ತಿರುವರು. ಈ ಎಲ್ಲ ಪ್ರಾಧ್ಯಾಪಕರೂ ಕೂಡಿ ವಿಶ್ವವಿದ್ಯಾನಿಲಯ ಗಳಲ್ಲಿ ಕನ್ನಡದ ಮಟ್ಟವನ್ನು ಏರಿಸಬೇಕಾಗಿದೆ. ಇವೆಲ್ಲ ವಿಶ್ವವಿದ್ಯಾನಿಲಯಗಳ ಅಧಿಕಾರಿಗಳೂ ಈ ಕಾರ್ಯದಲ್ಲಿ ಸಹಾಯಮಾಡಬೇಕು. ಕರ್ನಾಟಕ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ಮೇಲೆ ಹೆಚ್ಚಿನ ಹೊಣೆಯಿದೆ. ಮೈಸೂರು ಸರ್ಕಾರದವರು ಬಹುಕಾಲದಿಂದ ಕನ್ನಡದ ಪ್ರಗತಿಗಾಗಿ ಪ್ರಯತ್ನಪಟ್ಟಿರುವರು. ಇದರಂತೆ ಮುಂಬಯಿ ಸರ್ಕಾರವೂ ಕರ್ನಾಟಕ ವಿಶ್ವವಿದ್ಯಾಲಯದ ಮುಖಾಂತರ ಕನ್ನಡವನ್ನು ಪ್ರೋತ್ಸಾಹಿಸಬೇಕು. —ಎಸ್. ಸಿ. ನಂದಿಮಠ



ಆ. ನೇ. ಉಪಾಧ್ಯೆ

ಬಂಧುಗಳೇ, ನಾವು ಎಂಥ ಅಮೂಲ್ಯವಾದ ಪಿತ್ರಾರ್ಜಿತ ಆಸ್ತಿಗೆ ಹಕ್ಕುದಾರ ರೆನ್ನುವುದನ್ನು ಮರೆಯದಿರೋಣ. ಅದರ ಹಿರಿಮೆಗರಿಮೆಗಳನ್ನು ನೆನೆದಾಗ ಮೈ ಪುಳಕಗೊಳ್ಳುತ್ತದೆ. ನಮ್ಮ ನುಡಿ ಅತ್ಯಂತ ಪ್ರಾಚೀನವಾದದ್ದು ; ಇಂದು ಅಂತರರಾಷ್ಟ್ರೀಯ ಖ್ಯಾತಿಗೆ ಪಾತ್ರವಾಗಿ ಮೆರೆಯುತ್ತಿರುವ ಭಾಷೆಗಳು ಇನ್ನೂ ಭ್ರೂಣಾವಸ್ಥೆಯಲ್ಲಿದ್ದಾಗಲೇ ವಿಶ್ವಸಾಹಿತ್ಯದ ಮಟ್ಟಕ್ಕೇರಬಲ್ಲ ಮೇರುಕೃತಿಗಳಿಗೆ ಜನ್ಮನೀಡಿದ ಭಾಷೆಯಿದು ; ಇನ್ನೂ ನೆರೆಹೊರೆಯ ರಾಜ್ಯಗಳು ಕಣ್ಣುಬಿಡದಿದ್ದಾಗ ಭರತಖಂಡದಲ್ಲಿ ನಾಯಕ ಸ್ಥಾನದಲ್ಲಿದ್ದ ನಾಡು ನಮ್ಮದು ; ಹಿಂದೂ ಸಂಸ್ಕೃತಿಯನ್ನು ರಕ್ಷಿಸಿದ ವಿಜಯನಗರ ಸಾಮ್ರಾಜ್ಯವನ್ನು ಸೃಷ್ಟಿಸಿದ ಹಿರಿಯ ನಾಡು ಇದು ; ಸರ್ವಮತಧರ್ಮಗಳ ಆಡುಂಬೊಲವಾಗಿ ಮತಸಹಿಷ್ಣುತೆಗೆ ಹೆಸರಾದ ನಾಡು ಇದಲ್ಲದೆ ಬೇರೊಂದಿಲ್ಲ ; ಕರ್ಣಾಟಕ ಸಂಗೀತದ ಜನ್ಮಭೂಮಿ, ಶಿಲ್ಪಕಲೆಯ ತವರು, ಚಿತ್ರಕಲೆಯ ಸೀಮೆ ನಮ್ಮದು ; ಇಮ್ಮಡಿ ಪುಲಿಕೇಶಿ ವಿಷ್ಣುವರ್ಧನ ಶಾಂತಲೆ ನೃಪತುಂಗ ಕೃಷ್ಣ ಮೂರನೆಯ ಗೋವಿಂದರ, ಬಸವವಿದ್ಯಾರಣ್ಯರ, ಶಾರ್ಙ್ಗದೇವ ವಿಜ್ಞಾನೇಶ್ವರರ, ಜಿನಸೇನಗುಣಭದ್ರರ, ಡಂಕಣ ಜಕಣರ, ಪಂಪ ರನ್ನ ಹರಿಹರ ರಾಘವಾಂಕ ನಾರಣಪ್ಪ ಪುರಂದರದಾಸ ಕನಕದಾಸರ, ಇನ್ನೂ ಎಷ್ಟೆಷ್ಟೋ ಕವಿಗಳ ಕಲೆಗಳ ದೊರೆಗಳ ಕಲಾವಿದರ ಸಂತರ ಶರಣರ ದಾಸರ ಕರ್ಣಾಟಕ ಸಂಸ್ಕೃತಿಯನ್ನು ಬೆಳೆಸಿ, ಭಾರತೀಯ ಸಂಸ್ಕೃತಿಯನ್ನು ಬೆಳಗಿದ ಮಹಾಮಹಿಮರ ಪೀಳಿಗೆಗೆ ಸೇರಿದವರೆಂಬ ಹೆಮ್ಮೆ ನಮ್ಮದು ; ಈ ಹೆಮ್ಮೆಗೆ ಪಾತ್ರರಾದ ನಾವು ಯಾರಿಗೂ ಕೀಳಲ್ಲ, ಯಾರಿಗೂ ಅಂಜಬೇಕಾಗಿಲ್ಲ, ಯಾರಿಗೂ ತಲೆಬಾಗಬೇಕಾಗಿಲ್ಲ. ಅವರು ಹಿಂದೆ ಬಿಟ್ಟುಹೋಗಿರುವ ತಪಶ್ಶಕ್ತಿ ನಮಗಿಂದು ರಕ್ಷೆಯ ಪರಿವೇಷವಾಗಿದೆ; ಇಂಥ ಆಸ್ತಿಗೆ ಹಕ್ಕುದಾರರಾದ ನಾವು ದರಿದ್ರರಲ್ಲ, ಆಗರ್ಭಶ್ರೀಮಂತರು. ನುಡಿಯ ಅಳಿವುಳಿವು, ನಮ್ಮ ಅಳಿವುಳಿವು ; ನಾಡುನುಡಿಗಳಿಗೊದಗುವ ಅನ್ಯಾಯ ಅಪಚಾರಗಳನ್ನು ಸಹಿಸೆವು. ನಾಡುನುಡಿಗಳ ಅಭ್ಯುದಯವೊಂದೇ ನಮ್ಮ ಬಾಳಿನ ಏಕೈಕ ಗುರಿ ; ಇದಕ್ಕಾಗಿ ನಾವು ಎಂಥ ತ್ಯಾಗಕ್ಕಾದರೂ ಸಿದ್ಧವೆಂದು ಈ ಎಲ್ಲ ಪೂರ್ವಜರ ಹೆಸರಿನಲ್ಲಿ, ಜ್ಯೋತಿಶ್ಶರೀರಿಗಳಾಗಿ ಈ ಮಹೋತ್ಸವವನ್ನು ದರ್ಶಿಸುತ್ತಿರುವ ಅವರ ನೇತೃತ್ವದಲ್ಲಿ ನಾವು ದೀಕ್ಷಾಬದ್ಧರಾಗೋಣ.

--ದೇ. ಜವರೇಗೌಡ

*

**ಕನ್ನಡಿ :** ಪ್ರತಿಫಲನದಿಂದ ವಸ್ತುಗಳ ಪ್ರತಿಬಿಂಬವನ್ನು ಉಂಟುಮಾಡುವ ಉಪಕರಣ (ಮಿರರ್). ಸಾಮಾನ್ಯವಾಗಿ ಬೆಳಕನ್ನು ಪ್ರತಿಫಲಿಸುವ ಉಪಕರಣ ವನ್ನು ಕನ್ನಡಿ ಎಂದರೂ ಶಬ್ದ, ರೇಡಿಯೋ ತರಂಗ ಮುಂತಾದುವನ್ನು ಪ್ರತಿಫಲಿ ಸುವ ಕನ್ನಡಿಗಳೂ ಇವೆ. ವಸ್ತುಗಳು ನಮಗೆ ಕಾಣಿಸಬೇಕಾದರೆ ಬೆಳಕು ಅಗತ್ಯ. ಸ್ವಪ್ರಕಾಶವಿರುವ ವಸ್ತುವಿನ ಬೆಳಕು ನಮ್ಮ ಕಣ್ಣನ್ನು ಪ್ರವೇಶಿಸುವುದರಿಂದ ಆ ವಸ್ತು ನಮಗೆ ಕಾಣಿಸುತ್ತದೆ. ಉದಾಹರಣೆಗೆ ದೀಪ. ಆದರೆ ಪ್ರಕಾಶರಹಿತವಾದ ವಸ್ತು ನಮಗೆ ಕಾಣಿಸುವುದು ಅದರ ಮೇಲೆ ಬಿದ್ದು, ಅದರಿಂದ ಚದರಿಸಲ್ಪಟ್ಟ ಬೆಳಕು ನಮ್ಮ ಕಣ್ಣನ್ನು ಪ್ರವೇಶಿಸುವುದರಿಂದ. ಉದಾಹರಣೆಗೆ ಈ ಪುಟ. ಇದು ಬೆಳಕನ್ನು ಚದರಿಸುತ್ತದೆಯಾದರೂ ಇದನ್ನು ಕನ್ನಡಿ ಎನ್ನುವುದಿಲ್ಲ. ಆದರೆ ಬೆಳಕನ್ನು ಕ್ರಮವಾಗಿ ಪ್ರತಿಫಲಿಸುವಂಥ, ಮೇಲ್ಮೈಗೆ ಹೊಳಪು ಕೊಟ್ಟಿರುವ ಲೋಹ ಫಲಕ ಅಥವಾ ಹಿಂಭಾಗದಲ್ಲಿ ಲೋಹದ ತೆಳುಲೇಪನ ಇರುವ ನಯವಾದ ಗಾಜನ್ನು ಕನ್ನಡಿ ಎನ್ನುತ್ತೇವೆ. ಯೋಗ್ಯ ಪ್ರತಿಫಲನ ಕೊಡಲು ಕನ್ನಡಿಯ ಮೇಲ್ಮೈ ನಯವಾಗಿರಬೇಕು ಅಥವಾ ಅದರಲ್ಲಿನ ಉಬ್ಬುತಗ್ಗುಗಳು ಅದು ಪ್ರತಿಫಲಿಸುವ ಬೆಳಕಿನ ತರಂಗದೂರಕ್ಕಿಂತ ಕಡಿಮೆಯಾಗಿರಬೇಕು. ಬೆಳಕಿನ ತರಂಗದೂರ ಸುಮಾರು $2 \times 10^{-4}$ ಸೆಂ.ಮೀ.ನಷ್ಟು, ಶಬ್ದದ ತರಂಗದೂರ ಸುಮಾರು 100 ಸೆಂ.ಮೀ. ನಷ್ಟು. ಹೀಗಿರುವಾಗ ಶಬ್ದಕ್ಕೆ ಕನ್ನಡಿಯಾಗುವಂಥ ಮೇಲ್ಮೈ [illegible] ಒರಟಾಗಿರುವುದರಿಂದ ಅದೆಂದೂ ಬೆಳಕಿಗೆ ಕನ್ನಡಿಯಾಗಲಾರದು. ಬೆಳಕು ವಸ್ತು

ವಿನ ಮೇಲೆ ಬಿದ್ದಾಗ ಅದರ ಸ್ವಲ್ಪ ಭಾಗ ಪ್ರತಿಫಲಿತವಾಗಬಹುದು; ಮತ್ತೆ ಸ್ವಲ್ಪ ಭಾಗ ವಸ್ತುವಿನ ಮೂಲಕ ಹಾದುಹೋಗಬಹುದು ; ಮತ್ತೆ ಸ್ವಲ್ಪ ಭಾಗ ವಸ್ತುವಿನಲ್ಲಿ ಹೀರಲ್ಪಡಬಹುದು. ಆದ್ದರಿಂದ ಒಂದು ನುಣುಪಾದ ಮೇಲ್ಮೈಯಿರುವ ವಸ್ತು ಕನ್ನಡಿಯಾಗಬೇಕಾದರೆ ಅದರ ಮೇಲ್ಮೈ ತುಂಬ ಹೊಳಪಾಗಿದ್ದು ಬೆಳಕಿನ ಬಹುಭಾಗವನ್ನು ಪ್ರತಿಫಲಿಸುವಂತಿರಬೇಕು.



ಚಿತ್ರ 1

**ಸಮತಲ ಕನ್ನಡಿ:** ಚಿತ್ರ 1 ರಲ್ಲಿ MM′ ಎಂಬುದು ಕನ್ನಡಿ. OA ಯು Oವಸ್ತುವಿನಿಂದ ಹೊರಟು ಕನ್ನಡಿ ಮೇಲೆ ಬೀಳುತ್ತಿರುವ ಕಿರಣ, ಅಂದರೆ ಪತನಕಿರಣ. ಇದು ಕನ್ನಡಿಯಲ್ಲಿ ಪ್ರತಿಫಲಿತವಾದ ತರುವಾಯ ಹೋಗುವ ದಾರಿ AR, ಅಂದರೆ AR ಪ್ರತಿಫಲಿತ ಕಿರಣ. ವಸ್ತುವಿನಿಂದ ಹೊರಟ ಕಿರಣಾವಳಿ ಪ್ರತಿಫಲಿತವಾಗಿ ನಮ್ಮ ಕಣ್ಣನ್ನು ಪ್ರವೇಶಿಸುವುದರಿಂದ ನಾವು ಪ್ರತಿಬಿಂಬವನ್ನು ಕಾಣುತ್ತೇವೆ. ಆದರೂ ಸಮಸ್ಯೆಯ ಸರಳತೆಗೋಸ್ಕರ ಒಂದೇ ಕಿರಣವನ್ನು ಪರಿಶೀಲಿಸಿದರೆ ತಪ್ಪಾಗುವುದಿಲ್ಲ. ಪತನಬಿಂದು Aಯಲ್ಲಿ ಕನ್ನಡಿಗೆ ಲಂಬವಾಗಿ AN ಅನ್ನು ಎಳೆದು ∠OAN ಕೋನವನ್ನು ಪತನಕೋನವೆಂದೂ ∠RAN ಕೋನವನ್ನು ಪ್ರತಿಫಲನಕೋನ ಎಂದೂ ಕರೆಯುತ್ತೇವೆ. ಯಾವಾಗಲೂ ಪತನಕೋನ ಪ್ರತಿಫಲನಕೋನಕ್ಕೆ ಸಮವಾಗಿರುತ್ತದೆ. ಇದು ಪ್ರತಿಫಲನದ ಮೂಲನಿಯಮ.

ಪ್ರತಿಫಲನ ನಿಯಮದ ನಿರೂಪಣೆಗೆ ಒಂದು ಕನ್ನಡಿಯನ್ನು ಒಂದು ಗಾಜಿನ ಅಗಲವಾದ ಪೆಟ್ಟಿಗೆಯ ತಳದಲ್ಲಿಟ್ಟು ಒಂದು ಕೋನಮಾಪಕವನ್ನು ಚಿತ್ರ 2ರಲ್ಲಿ



ಚಿತ್ರ 2

ತೋರಿಸಿರುವಂತೆ ಇಡಬೇಕು. ಒಂದು ಕಾಗದದ ಚೂರನ್ನು ಸುಟ್ಟು ಪೆಟ್ಟಿಗೆಯಲ್ಲಿ ಹೊಗೆ ತುಂಬುವಂತೆ ಮಾಡಿ ಪೆಟ್ಟಿಗೆಯ ಮೇಲ್ಭಾಗವನ್ನು ಒಂದು ಸಣ್ಣ ರಂಧ್ರವಿರುವ ದೊಡ್ಡ ರಟ್ಟಿನಿಂದ ಮುಚ್ಚಬೇಕು. ಈಗ ಆ ತೂತಿನ ಮೂಲಕ ಬೆಳಕನ್ನು ಕಳುಹಿಸಿದರೆ ಪತನ ಕಿರಣಾವಳಿ ಮತ್ತು ಪ್ರತಿಫಲನ ಕಿರಣಾವಳಿಗಳನ್ನು ಕಾಣಬಹುದು. ಕೋನಮಾಪಕದ ಸಹಾಯದಿಂದ ಅಳೆದು ಪತನಕೋನ ಮತ್ತು ಪ್ರತಿಫಲನಕೋನ ಯಾವಾಗಲೂ ಸಮವಾಗಿರುವುದನ್ನು ಪರಿಶೀಲಿಸಬಹುದು.

ಚಿತ್ರ 3ರಲ್ಲಿ O ವಸ್ತುವಿನಿಂದ ಹೊರಟ ಕಿರಣಾವಳಿ ಪ್ರತಿಫಲನ ನಿಯಮದ ಪ್ರಕಾರ ಪ್ರತಿಫಲನಗೊಂಡು ಕಣ್ಣನ್ನು ಪ್ರವೇಶಿಸುವುದನ್ನು ತೋರಿಸಿದೆ. ಪ್ರತಿಫಲಿತ ಕಿರಣಗಳನ್ನು ಹಿಂದಕ್ಕೆ ವೃದ್ಧಿಸಿದರೆ ಅವು Iಯಲ್ಲಿ ಸಂಧಿಸುತ್ತವೆ, ಅಂದರೆ ಪ್ರತಿಫಲಿತ ಕಿರಣಾವಳಿ Iಯಿಂದ ಬರುತ್ತಿರುವ ಹಾಗೆ ಕಾಣಿಸುತ್ತದೆ. Iಯಲ್ಲಿ Oನಂಥ ವಸ್ತು ಇದ್ದ ಹಾಗೆ ಕಾಣುತ್ತದೆ. Iಯನ್ನು Oನ ಪ್ರತಿಬಿಂಬ ಅಥವಾ ಸರಳವಾಗಿ ಬಿಂಬ ಎನ್ನುತ್ತೇವೆ. ವಾಸ್ತವಿಕವಾಗಿ, Iಯ ಮೂಲಕ ಪ್ರತಿಫಲಿತ ಕಿರಣಗಳು ಹಾದುಹೋಗುವುದಿಲ್ಲ. ಅಂದರೆ, I ಬಿಂಬವನ್ನು ತೆರೆಯ ಮೇಲೆ ಪಡೆಯಲು ಸಾಧ್ಯವಿಲ್ಲ. ಆದ್ದರಿಂದ Iಯು ಮಿಥ್ಯಬಿಂಬ



ಚಿತ್ರ 3

ಚಿತ್ರ 3ರಲ್ಲಿ OA ಪತನಕಿರಣದ ಪತನ ಬಿಂದುವಾದ A ನಲ್ಲಿ ಕನ್ನಡಿಗೆ ಲಂಬವಾಗಿ ANಅನ್ನು ಎಳೆದರೆ ಆಗ ಪತನಕೋನ ∠OAN=ಪ್ರತಿಫಲನ ಕೋನ ∠RAN. ಆದರೆ ∠OAN=∠AOM ಮತ್ತು ∠RAN=∠AIM ಆದ್ದರಿಂದ ∠AOM=∠AIM. ಅಲ್ಲದೆ ∠OMA=∠IMA=90°. ಮತ್ತು AM ರೇಖೆ OAM ಮತ್ತು IAM ತ್ರಿಕೋಣಗಳೆರಡಕ್ಕೂ ಸಾಮಾನ್ಯ. ಆದ್ದರಿಂದ OAM ಮತ್ತು IAM ತ್ರಿಕೋಣಗಳು ಸರ್ವಸಮ. ಆದ್ದರಿಂದ OM=IM. ಅಂದರೆ ವಸ್ತು ಕನ್ನಡಿಯ ಮುಂದೆ ಎಷ್ಟು ದೂರದಲ್ಲಿದೆಯೋ ಅದರ ಬಿಂಬ ಕನ್ನಡಿಯ ಹಿಂದೆ ಅಷ್ಟೇ ದೂರದಲ್ಲಿದೆ.

ವಸ್ತುವಿನ ಎಡಭಾಗ ಬಿಂಬದ ಬಲಭಾಗವಾಗಿಯೂ ವಸ್ತುವಿನ ಬಲಭಾಗ ಬಿಂಬದ ಎಡಭಾಗವಾಗಿಯೂ ಕಾಣಿಸುತ್ತದೆ. ಅಂದರೆ ಕನ್ನಡಿಗೆ ಸಮಾನಾಂತರ ಸಮತಲದಲ್ಲಿರುವ ವಸ್ತುಬಿಂದುಗಳು ಅದರ ಪರಸ್ಪರ ಸ್ಥಾನಗಳನ್ನು ಉಳಿಸಿಕೊಳ್ಳುತ್ತವೆ. ಆದರೆ ಕನ್ನಡಿಗೆ ಲಂಬವಾಗಿರುವ ಸಮತಲದಲ್ಲಿನ ವಸ್ತುಬಿಂದುಗಳು ಸ್ಥಾನಗಳನ್ನು ಅದಲುಬದಲು ಮಾಡಿಕೊಳ್ಳುತ್ತವೆ. ಪ್ರತಿಫಲನದಿಂದ ಉಂಟಾಗುವ ಈ ಎಡಬಲ ವ್ಯತ್ಯಾಸ ಅಥವಾ ಪಾರ್ಶ್ವ ವಿಪರ್ಯಾಸ (ಲ್ಯಾಟರಲ್ ಇನ್ವರ್ಶನ್) ಈ ಮುದ್ರಿತ ಹಾಳೆಯನ್ನು ಕನ್ನಡಿಯ ಮುಂದಿಟ್ಟು ನೋಡಿದಾಗ ಅರಿವಾಗುತ್ತದೆ.

ಎರಡು ಕನ್ನಡಿಗಳನ್ನು ಅವುಗಳ ಮಧ್ಯೆ ಒಂದು ಕೋನ ಉಂಟಾಗುವಂತೆ ಜೋಡಿಸಬೇಕು. ಅವುಗಳ ಎದುರು ಒಂದು ವಸ್ತುವನ್ನು ಇಟ್ಟು ನೋಡಿದಾಗ ಅದರ ಹಲವಾರು ಪ್ರತಿಬಿಂಬಗಳು ಕಾಣಿಸುತ್ತವೆ. ವಸ್ತುವಿನಿಂದ ಹೊರಟ ಕಿರಣಗಳು ಈ ಕನ್ನಡಿಗಳಲ್ಲಿ ಹಲವಾರು ಸಲ ಪ್ರತಿಫಲನ ಮತ್ತು ಪುನರ್‌ಪ್ರತಿಫಲನಗೊಳ್ಳುವುದೇ ಇದರ ಕಾರಣ. ಎರಡು ಕನ್ನಡಿಗಳ ನಡುವೆ ಕೋನ 90° ಇದ್ದಾಗ 3 ಬಿಂಬಗಳೂ 60° ಇದ್ದಾಗ 5 ಬಿಂಬಗಳೂ, 30° ಇದ್ದಾಗ 11 ಬಿಂಬಗಳೂ ಕಾಣುತ್ತವೆ. (ಎಲ್ಲ ಬಿಂಬಗಳೂ ಒಂದೇ ಸ್ಥಾನದಿಂದ ಒಟ್ಟಿಗೇ ಕಾಣಿಸಬೇಕೆಂದೇನೂ ಇಲ್ಲ). ಸಾಮಾನ್ಯವಾಗಿ ಆ ಕನ್ನಡಿಗಳ ನಡುವಿನ ಕೋನ $x°$ ಯು 360° ಯನ್ನು ನಿಶ್ಶೇಷವಾಗಿ ಭಾಗಿಸಿದರೆ ಆಗ ಒಟ್ಟು ಕಾಣಿಸುವ ಬಿಂಬಗಳ ಸಂಖ್ಯೆ $\left(\frac{360}{x} - 1\right)$. ಇಲ್ಲಿ ಪ್ರತಿಬಿಂಬದ ಸ್ಥಾನ ವಸ್ತುವಿನ ಸ್ಥಾನ, ಕನ್ನಡಿಗಳ ನಡುವಣ ಕೋನ ಮತ್ತು ಆ ಕನ್ನಡಿಗಳ ಛೇದ ರೇಖೆಯ ದಿಕ್ಕನ್ನು ಮಾತ್ರ ಅವಲಂಬಿಸಿದೆ. ಕನ್ನಡಿಗಳ ನಡುವಣ ಕೋನವನ್ನು ಬದಲಾಯಿಸದೇ ಆ ಛೇದರೇಖೆಯ ಸುತ್ತಲೂ ಆ ಕನ್ನಡಿಗಳನ್ನು ತಿರುಗಿಸಿದರೆ ಬಿಂಬದ ಸ್ಥಾನ ಬದಲಾಯಿಸುವುದಿಲ್ಲ. ಒಂದು ಸ್ವಾರಸ್ಯ ಸಂಗತಿಯೆಂದರೆ $x=0$ ಆದಾಗ, ಅಂದರೆ ಕನ್ನಡಿಗಳು ಒಂದಕ್ಕೊಂದು ಸಮಾನಾಂತರವಾಗಿದ್ದಾಗ ಬಿಂಬಗಳ ಸಂಖ್ಯೆ ಅನಂತ.

ಚಿತ್ರ 4ರಲ್ಲಿ $MM_1$ ಮತ್ತು $MM_2$ ಕನ್ನಡಿಗಳ ನಡುವೆ 90° ಇದೆ. O ವಸ್ತುವಿನ $I_1$ ಬಿಂಬ $MM_1$ ಕನ್ನಡಿಯಿಂದಲೂ $I_2$ ಬಿಂಬ $MM_2$ ಕನ್ನಡಿಯಿಂದಲೂ $I_3$ ಬಿಂಬ ಇವೆರಡು ಕನ್ನಡಿಗಳಲ್ಲಿ ಪ್ರತಿಫಲಿತವಾದ ಕಿರಣಗಳಿಂದಲೂ ಉಂಟಾಗಿವೆ. $I_1$ ಮತ್ತು $I_2$ ಬಿಂಬಗಳಲ್ಲಿ ಪಾರ್ಶ್ವ ವಿಪರ್ಯಾಸವಿದೆ. ಆದರೆ $I_3$ ಬಿಂಬದಲ್ಲಿ ಪಾರ್ಶ್ವ ವಿಪರ್ಯಾಸ ಇರುವುದಿಲ್ಲ. ಇಲ್ಲಿ ಕನ್ನಡಿಗಳ ಛೇದರೇಖೆಗೆ ಲಂಬವಾಗಿರುವ

ಸಮತಲದಲ್ಲಿರುವ ಬಿಂದುಗಳೆಲ್ಲವೂ ಆಯಾ ಬಿಂದುವನ್ನು ಛೇದರೇಖೆಗೆ ಸೇರಿಸಿ ವೃದ್ಧಿಸಿದ ಗೆರೆಯ ಮೇಲೆ ಛೇದರೇಖೆಗೆ ಹಿಂದೆ ಬಿಂಬಗಳನ್ನು ಕೊಡುತ್ತವೆ ಮತ್ತು ವಸ್ತುಬಿಂದುವಿನಿಂದ ಛೇದರೇಖೆಗೆ ಇರುವಷ್ಟೇ ದೂರ ಬಿಂಬಬಿಂದುವಿಗೂ ಛೇದರೇಖೆಗೂ ಇರುತ್ತದೆ.

ಚಿತ್ರ 4

ಮೂರು ಕನ್ನಡಿಗಳನ್ನು ಪರಸ್ಪರ ಲಂಬವಾಗಿರುವಂತೆ ಜೋಡಿಸಿದಾಗ ಆ ತ್ರಿವಳಿ ಕನ್ನಡಿಯಲ್ಲಿ ಆಗುವ ಪ್ರತಿಫಲನ ಸ್ವಾರಸ್ಯಕರ. ತ್ರಿವಳಿ ಕನ್ನಡಿಯ ಸಾಮಾನ್ಯ ಬಿಂದುವಿನ ಹೆಸರು ಶೃಂಗ. ಒಂದು ಬಿಂದುವಸ್ತುವನ್ನು ಈ ಶೃಂಗಕ್ಕೆ ಜೋಡಿಸುವ ರೇಖೆಗೆ ಬಿಂದು–ಶೃಂಗ ರೇಖೆ ಎಂದು ಹೆಸರು. ಈಗ, ವಸ್ತುವಿನ ಪ್ರತಿಫಲನ ಬಿಂದು–ಶೃಂಗ ರೇಖೆಯ ಮೇಲೆ ಬಿಂದು–ಶೃಂಗ ಅಂತರದಷ್ಟು ದೂರದಲ್ಲಿದೆ. ವಸ್ತುವಿನ ಸ್ಥಾನವನ್ನು ಬದಲಾಯಿಸದೆ ತ್ರಿವಳಿ ಕನ್ನಡಿಯನ್ನು ಶೃಂಗದ ಸುತ್ತ ತಿರುಗಿಸಿದರೆ ಬಿಂಬದ ಸ್ಥಾನ ಬದಲಾಗುವುದಿಲ್ಲ. ತ್ರಿವಳಿ ಕನ್ನಡಿಯಲ್ಲಿ ನಮ್ಮನ್ನೇ ನಾವು ನೋಡಿದಾಗ ಯಾವ ಕಣ್ಣಿನಿಂದ ನೋಡುತ್ತೇವೆಯೋ ಆ ಕಣ್ಣು ಶೃಂಗದಲ್ಲಿದ್ದಂತೆ ತೋರುತ್ತದೆ. ನೋಡುತ್ತಿರುವ ಕಣ್ಣನ್ನು ಮುಚ್ಚಿ ಮತ್ತೊಂದು ಕಣ್ಣನ್ನು ತೆರೆದರೆ ಶೃಂಗ ಆ ನೇರಕ್ಕೆ ಹಾರಿದಂತೆ ತೋರುತ್ತದೆ. ಎರಡು ಕಣ್ಣುಗಳಿಂದಲೂ ಒಟ್ಟಿಗೆ ನೋಡಿದರೆ ಒಂದೊಂದು ಕಣ್ಣಿನ ನೇರಕ್ಕೆ ಒಂದೊಂದರಂತೆ ಎರಡು ಶೃಂಗಗಳು ಕಾಣಿಸುತ್ತವೆ. ಈ ತ್ರಿವಳಿ ಕನ್ನಡಿಯ ಮೂರು ಕನ್ನಡಿಗಳಲ್ಲೂ ಪ್ರತಿಫಲನಗೊಂಡ ಕಿರಣ ಪತನದಿಕ್ಕಿನಲ್ಲೇ ಹಿಂತಿರುಗುತ್ತದೆ. ಈ ತತ್ತ್ವವನ್ನು ಉಪಯೋಗಿಸಿ ದಾರಿಯ ತೋರುಫಲಕದ ಅಕ್ಷರಗಳಿಗೆ ತ್ರಿವಳಿ ಕನ್ನಡಿಯಂತೆ ಹಳ್ಳಗಳಿರುವ ಕನ್ನಡಿಯನ್ನು ಉಪಯೋಗಿಸುತ್ತಾರೆ. ಚಲಿಸುತ್ತಿರುವ ವಾಹನದ ತಲೆದೀಪದ ಬೆಳಕು ತೋರುಫಲಕದ ಮೇಲೆ ಬಿದ್ದು ಪುನಃ ವಾಹನದ ಕಡೆಗೇ ಹಿಂತಿರುಗುವುದರಿಂದ ವಾಹನ ಆ ಫಲಕದ ಮುಂದೆ ಎಲ್ಲೇ ಇರಲಿ ಆ ಫಲಕ ಪ್ರಕಾಶಮಾನವಾಗಿ ಕಾಣುತ್ತದೆ.

ಒಂದು ಬೆಳಕಿನ ಕಿರಣ ಕನ್ನಡಿಯಿಂದ ಪ್ರತಿಫಲಿತವಾಗುತ್ತಿರುವಾಗ ಆ ಕನ್ನಡಿಯನ್ನು ನಾವು ಎಷ್ಟು ತಿರುಗಿಸುತ್ತೇವೆಯೋ ಪ್ರತಿಫಲಿತ ಕಿರಣ ಅದರ ಎರಡರಷ್ಟು ತಿರುಗುತ್ತದೆ. ಚಿತ್ರ 5ರಲ್ಲಿ $M_1M_2$ ಕನ್ನಡಿ. OA ಪತನಕಿರಣ ಮತ್ತು AR ಅದರ ಪ್ರತಿಫಲಿತ ಕಿರಣ. ಅಂದರೆ $O\hat{A}N = R\hat{A}N$. ಈಗ ಕನ್ನಡಿಯನ್ನು $M_1\hat{A}M_1' = x^\circ$ ಯಷ್ಟು ತಿರುಗಿಸಬೇಕು. ಕನ್ನಡಿಯ ಹೊಸ ಸ್ಥಾನ $M'_1M'_2$ ಆಗಿದ್ದು ಹೊಸ ಪ್ರತಿಫಲಿತ ಕಿರಣ AR′ ಆದರೆ $O\hat{A}N = R'\hat{A}N'$. ಇಲ್ಲಿ AN ಮತ್ತು AN′ಗಳು $M_1M_2$ ಮತ್ತು $M_1'M_2'$ಗೆ ಲಂಬರೇಖೆಗಳು. ಪ್ರತಿಫಲಿತ ಕಿರಣ ತಿರುಗಿದ ದೂರ $= R\hat{A}R' = O\hat{A}R - O\hat{A}R' = 2(O\hat{A}N - O\hat{A}N') = 2\ N\hat{A}N' = 2x$. ಕಾರಣ ಕನ್ನಡಿ $x^\circ$ಯಷ್ಟು ತಿರುಗಿದಾಗ ಅದರ ಲಂಬವೂ $x$ನಷ್ಟು ತಿರುಗಿರುತ್ತದೆ. ಆದ್ದರಿಂದ ಪ್ರತಿಫಲಿತ ಕಿರಣದ ತಿರುಗುವಿಕೆ ಕನ್ನಡಿಯ ತಿರುಗುವಿಕೆಯ ಎರಡರಷ್ಟು.

ಚಿತ್ರ 5

ಕನ್ನಡಿಗಳನ್ನು ಮುಖ ನೋಡಿಕೊಳ್ಳಲು ಉಪಯೋಗಿಸುತ್ತಾರೆ. ಚಿಕ್ಕ ಅಂಗಡಿಯ ಗೋಡೆಗಳನ್ನೆಲ್ಲ ಕನ್ನಡಿಯಿಂದ ಮುಚ್ಚಿ ಅಂಗಡಿ ವಿಶಾಲವಾಗಿ ಕಾಣುವಂತೆ ಮಾಡುತ್ತಾರೆ. ಕನ್ನಡಿಯು ಕಿರಣದೂರವನ್ನು (ಆಪ್ಟಿಕಲ್ ಪಾತ್) ಮಡಚುವಂತೆ ಮಾಡುವುದರಿಂದ ಬೆಳಕಿನ ಉಪಕರಣಗಳ ಉದ್ದ ಕಡಿಮೆ ಮಾಡಲು ಕನ್ನಡಿಯನ್ನು ಉಪಯೋಗಿಸುತ್ತಾರೆ. ದಾರಿಯ ತಿರುವುಗಳಲ್ಲಿ ಕನ್ನಡಿಯಿಟ್ಟು ನಾವು ತಿರುಗುವ ಮೊದಲೇ ತಿರುವಿನ ಆ ಕಡೆಯಿಂದ ಬರುತ್ತಿರುವ ವಾಹನಗಳು ನಮಗೆ ಕಾಣಿಸುವಂತೆ ಮಾಡುತ್ತಾರೆ. ಜಲಾಂತರ್ಗಾಮಿ ನೀರಿನಲ್ಲಿ ಮುಳುಗಿರುವಾಗ ನೀರಿನ ಮೇಲಿರುವ ಹಡಗುಗಳನ್ನೊ ವಸ್ತುಗಳನ್ನೊ ನೋಡಲು ಮತ್ತು ಕಂದಕದಲ್ಲಿ ಅಡಗಿ ಮೇಲೆ ವೈರಿಗಳ ಚಲನವಲನಗಳನ್ನು ನೋಡಲು ಉಪಯೋಗಿಸುವ ಪೆರಿಸ್ಕೋಪುಗಳಲ್ಲಿ ಚಿತ್ರ 6ರಲ್ಲಿ ತೋರಿಸಿರುವಂತೆ ಉದ್ದವಾದ ಕೊಳವೆಯಲ್ಲಿ ಎರಡು ಕನ್ನಡಿಗಳನ್ನು ಊರ್ಧ್ವ ದಿಕ್ಕಿಗೆ 45° ಕೋನ ಉಂಟುಮಾಡಿ ಪರಸ್ಪರ ಸಮಾನಾಂತರವಾಗಿರುವಂತೆ ಇಟ್ಟಿರುತ್ತಾರೆ. ಆಗ ಮೇಲಿರುವ ವಸ್ತುಗಳಿಂದ ಹೊರಟ ಬೆಳಕಿನ ಕಿರಣಗಳು ಎರಡು ಕನ್ನಡಿಗಳಲ್ಲೂ ಪ್ರತಿಫಲನಗೊಂಡು ಕೆಳಗೆ ಇರುವವರ ಕಣ್ಣನ್ನು ಪ್ರವೇಶಿಸುವುದರಿಂದ ಅವರಿಗೆ ಕಾಣಿಸುತ್ತದೆ. ಕಲೈಡೋಸ್ಕೋಪಿನಲ್ಲಿ ಮೂರು ಉದ್ದವಾದ ಕನ್ನಡಿಗಳನ್ನು ಪರಸ್ಪರ 60° ಕೋನ ಉಂಟುಮಾಡುವಂತೆ ಒಂದು ಕೊಳವೆಯಲ್ಲಿ ಜೋಡಿಸಿರುತ್ತಾರೆ. ಇದರ ಒಂದು ತುದಿಯಲ್ಲಿರುವ ಬಣ್ಣ ಬಣ್ಣದ ಚೂರುಗಳನ್ನು ಇನ್ನೊಂದು ತುದಿಯಿಂದ ನೋಡುತ್ತ ಇದನ್ನು ತಿರುಗಿಸಿದರೆ ಚಿತ್ರವಿಚಿತ್ರ ವಿನ್ಯಾಸಗಳು ಕಾಣಿಸುತ್ತವೆ. ಈ ಕಲೈಡೋಸ್ಕೋಪನ್ನು ಮಕ್ಕಳ ಆಟಕ್ಕೂ ಬಟ್ಟೆಗಳ ಮೇಲೆ ಮುದ್ರಿಸಬೇಕಾದ ಚಿತ್ರ ವಿನ್ಯಾಸಗಳನ್ನು ಕಂಡುಹಿಡಿಯಲೂ ಉಪಯೋಗಿಸುತ್ತಾರೆ.

ಚಿತ್ರ 6

**ಗೋಳ ಕನ್ನಡಿ :** ಕನ್ನಡಿಯ ಪ್ರತಿಫಲಿಸುವ ಮೈ ಗೋಳದ ಒಂದು ಭಾಗವಾದಾಗ ಅದಕ್ಕೆ ಗೋಳಕನ್ನಡಿ ಎಂದು ಹೆಸರು. ಗೋಳ ಕನ್ನಡಿ ಯಾವ ಗೋಳದ ಭಾಗವೆಂದು ಪರಿಗಣಿಸಬಹುದೋ ಅದರ ಕೇಂದ್ರವನ್ನು ಕನ್ನಡಿಯ ವಕ್ರತಾಕೇಂದ್ರ ಎಂದೂ ಆ ಗೋಳದ ತ್ರಿಜ್ಯವನ್ನು ವಕ್ರತಾ ತ್ರಿಜ್ಯ ಎಂದೂ ಕರೆಯುತ್ತೇವೆ. ಕನ್ನಡಿಯನ್ನು ನಾವು ನೋಡುವಾಗ ಅದರಲ್ಲಿ ತಗ್ಗು ಇದ್ದಹಾಗೆ ಕಂಡರೆ ಅಥವಾ ಅದರ ಪ್ರತಿಫಲಿಸುವ ಮೈ ಗೋಳಕೇಂದ್ರದೆಡೆಗೆ ಇದ್ದರೆ ಅದನ್ನು ತಗ್ಗು ಕನ್ನಡಿ ಎಂದೂ ಅದರಲ್ಲಿ ಉಬ್ಬು ಇದ್ದಹಾಗೆ ಕಂಡರೆ ಅಥವಾ ಅದರ ಪ್ರತಿಫಲಿಸುವ ಮೈ ಗೋಳ ಕೇಂದ್ರದ ವಿರುದ್ಧ ದಿಕ್ಕಿಗೆ ಇದ್ದರೆ ಅದನ್ನು ಉಬ್ಬು ಕನ್ನಡಿ ಎಂದೂ ಅನ್ನುತ್ತೇವೆ. ಗೋಳ ಕನ್ನಡಿಯ ಮಧ್ಯ ಬಿಂದುವಿನ ಹೆಸರು ಧ್ರುವ ; ದೃಶ್ಯಭಾಗದ ವ್ಯಾಸದ ಹೆಸರು ದೃಗ್ವ್ಯಾಸ. ಕನ್ನಡಿಯ ಧ್ರುವವನ್ನು ಅದರ ವಕ್ರತಾಕೇಂದ್ರಕ್ಕೆ ಸೇರಿಸುವ ಸರಳರೇಖೆಗೆ ಕನ್ನಡಿಯ ಪ್ರಧಾನ ಅಕ್ಷ ಎಂದು ಹೆಸರು.

ಪ್ರಧಾನ ಅಕ್ಷಕ್ಕೆ ಸಮಾನಾಂತರವಾದ ಕಿರಣಾವಳಿ ಗೋಳ ಕನ್ನಡಿಯಿಂದ ಪ್ರತಿಫಲನಗೊಂಡು ಅಕ್ಷದ ಮೇಲಿನ ಒಂದು ಬಿಂದುವನ್ನು ಹಾದುಹೋಗುತ್ತದೆ

(ತಗ್ಗು ಕನ್ನಡಿಯಲ್ಲಿ); ಅಥವಾ ಪ್ರಧಾನ ಅಕ್ಷದ ಮೇಲಿನ ಒಂದು ಬಿಂದುವಿನಿಂದ ಹೊರಟ ಹಾಗೆ ಕಾಣುತ್ತದೆ (ಉಬ್ಬು ಕನ್ನಡಿಯಲ್ಲಿ). ಆ ಬಿಂದುವಿಗೆ ಕನ್ನಡಿಯ ನಾಭೀಬಿಂದು (ಫೋಕಲ್ ಪಾಯಿಂಟ್) ಎಂದೂ ಧ್ರುವದಿಂದ ಅದಕ್ಕೆ ಇರುವ ದೂರಕ್ಕೆ ಆ ಕನ್ನಡಿಯ ನಾಭೀದೂರ (ಫೋಕಲ್ ಲೆಂತ್) ಎಂದೂ ಹೆಸರು. ನಾಭೀದೂರ ವಕ್ರತಾತ್ರಿಜ್ಯದ ಅರ್ಧದಷ್ಟು ಇರುತ್ತದೆಂದು ಜ್ಯಾಮಿತಿ ಮತ್ತು ಪ್ರತಿಫಲನ ನಿಯಮಗಳಿಂದ ತೋರಿಸಬಹುದು.

ವಸ್ತುವಿನ ಒಂದು ಬಿಂದುವಿನಿಂದ ಪ್ರಧಾನ ಅಕ್ಷಕ್ಕೆ ಸಮಾನಾಂತರವಾಗಿ ಹೊರಟ ಕಿರಣ ಪ್ರತಿಫಲನಗೊಂಡು ನಾಭಿಯನ್ನು ಹಾದುಹೋಗುವುದೆಂಬುದನ್ನೂ ವಸ್ತುವಿನ ಅದೇ ಬಿಂದುವಿನಿಂದ ಕೇಂದ್ರವನ್ನು ಹಾದುಹೋಗುವ ಕಿರಣ ಪ್ರತಿಫಲನಗೊಂಡು ಅದೇ ದಾರಿಯಲ್ಲಿ ಹಿಂತಿರುಗುತ್ತದೆಂಬುದನ್ನೂ ಉಪಯೋಗಿಸಿ ಗೋಳ ಕನ್ನಡಿಯಿಂದ ಉಂಟಾಗುವ ಬಿಂಬದ ಸ್ಥಾನವನ್ನು ಕಂಡುಹಿಡಿಯುತ್ತೇವೆ. ಈ ಎರಡು ಪ್ರತಿಫಲಿತ ಕಿರಣಗಳು ಸಂಧಿಸುವ ಬಿಂದುವೇ ಬಿಂಬಬಿಂದು. ಸಮತಲ ಕನ್ನಡಿಯಲ್ಲಿ ಮಾಡಿದಂತೆ ಇಲ್ಲಿಯೂ ಹೊಗೆಪೆಟ್ಟಿಗೆಯನ್ನು ಉಪಯೋಗಿಸಿ ಕಿರಣಗಳ ದಾರಿಯನ್ನು ನೋಡಬಹುದು.

ಚಿತ್ರ 7 (a) ಮತ್ತು 7 (b) ಯಲ್ಲಿ P,F,C ಗಳು ಕ್ರಮವಾಗಿ ಧ್ರುವ, ನಾಭಿ ಮತ್ತು ಕೇಂದ್ರಬಿಂದುಗಳು. ಈ ಗೋಳಕನ್ನಡಿಯ ಮುಂದೆ AB ವಸ್ತುವನ್ನು ಇಟ್ಟಿದೆ. B ಯಿಂದ ಪ್ರಧಾನ ಅಕ್ಷಕ್ಕೆ ಸಮಾನಾಂತರವಾಗಿ ಹೊರಟ BM ಕಿರಣ ಪ್ರತಿಫಲನಗೊಂಡು F ಅನ್ನು ಹಾದು ಹೋಗುತ್ತದೆ, ಅಥವಾ F ನಿಂದ ಹೊರಟ




ಚಿತ್ರ 7 (a)

ಹಾಗೆ ಕಾಣುತ್ತದೆ. B ಯಿಂದ C ಯ ದಿಕ್ಕಿನಲ್ಲಿ ಹೊರಟ ಕಿರಣ ಕನ್ನಡಿಗೆ ಲಂಬವಾಗಿರುವುದರಿಂದ ಪ್ರತಿಫಲನಗೊಂಡ ಮೇಲೆ ಅದೇ ಗೆರೆಯಲ್ಲಿ ಹಿಂತಿರುಗುತ್ತದೆ. ಈ ಎರಡು ಪ್ರತಿಫಲಿತ ಕಿರಣಗಳು b ಯಲ್ಲಿ ಸಂಧಿಸುತ್ತವೆ, ಅಥವಾ b ಯಿಂದ ಹೊರಟ ಹಾಗೆ ಕಾಣುತ್ತವೆ. ಆದ್ದರಿಂದ b ಬಿಂದು Bಯ ಬಿಂಬ. ba ಯನ್ನು ಪ್ರಧಾನ ಅಕ್ಷಕ್ಕೆ ಲಂಬವಾಗಿ ಎಳೆದರೆ ಅದು BA ವಸ್ತುವಿನ ಬಿಂಬವನ್ನು ಸೂಚಿಸುತ್ತದೆ.

ಕನ್ನಡಿ ಎಂತಹುದು ಮತ್ತು ಅದರ ಮುಂದೆ ಇರುವ ವಸ್ತುವಿನ ದೂರವೆಷ್ಟು ಎಂಬುದನ್ನು ಅವಲಂಬಿಸಿ ಬಿಂಬದ ಸ್ಥಾನ, ಗಾತ್ರ ಮತ್ತು ಬಿಂಬ ನೆಟ್ಟಗಿದೆಯೋ ತಲೆಕೆಳಗಾಗಿದೆಯೋ, ಸತ್ಯವೋ ಮಿಥ್ಯವೋ ಎಂಬ ಅಂಶಗಳು ಇರುತ್ತವೆ. ಮೇಲೆ ನಿರೂಪಿಸಿರುವ ರೀತಿಯಲ್ಲಿ ರೇಖಾಚಿತ್ರಗಳನ್ನೆಳೆದು ಈ ಕೆಳಗಿನ ಪಟ್ಟಿಯಲ್ಲಿರುವ ವಿವರಗಳನ್ನು ಪಡೆಯಬಹುದು.




ಚಿತ್ರ 7 (b)

ಚಿತ್ರ 7 *(a)* ಯಲ್ಲಿ ಕನ್ನಡಿಯ ನಾಭೀದೂರ $f$, ಕನ್ನಡಿಯಿಂದ ವಸ್ತುವಿನ ದೂರ $u$ ಮತ್ತು ಬಿಂಬದ ದೂರ $v$ ಆಗಿರಲಿ :

ABC ಮತ್ತು abC ತ್ರಿಕೋಣಗಳು ಸದೃಶ,

ಆದ್ದರಿಂದ $$\frac{ab}{AB}=\frac{aC}{AC} \qquad ...(1)$$

MPF ಮತ್ತು abF ತ್ರಿಕೋನಗಳು ಸದೃಶ. ಆದ್ದರಿಂದ (ಸರಿಸುಮಾರಾಗಿ)

$$\frac{ab}{PM}=\frac{aF}{PF} \qquad ...(2)$$

ಆದರೆ PM=AB. ಆದ್ದರಿಂದ ಸಮೀಕರಣ (1) ಮತ್ತು (2) ರಿಂದ

$$\frac{aC}{AC}=\frac{aF}{PF} \qquad ...(3)$$

ಆದರೆ ಚಿತ್ರ 7(a) ಯಲ್ಲಿ $aC=PC-Pa=2f-v$

$AC=PA-PC=u-2f$, $aF=Pa-PF=v-f$ ಮತ್ತು $PF=f$

ಇವನ್ನು ಸಮೀಕರಣ (3) ಕ್ಕೆ ಅಳವಡಿಸಿದರೆ $\frac{2f-v}{u-2f}=\frac{v-f}{f}$ ಇದನ್ನು ಸರಳೀಕರಿಸಿದರೆ $\frac{1}{f}=\frac{1}{v}+\frac{1}{u}$ ಎಂಬ ಸೂತ್ರ ದೊರೆಯುತ್ತದೆ. ಇದಕ್ಕೆ ಗೋಳಕನ್ನಡಿ ಸೂತ್ರ ಎಂದು ಹೆಸರು. ತಗ್ಗು ಕನ್ನಡಿಯಾಗಲಿ, ಉಬ್ಬು ಕನ್ನಡಿಯಾಗಲಿ ಸತ್ಯಬಿಂಬವಾಗಲಿ, ಮಿಥ್ಯಬಿಂಬವಾಗಲಿ ಈ ಸೂತ್ರವನ್ನು ಉಪಯೋಗಿಸಬಹುದು. ಆದರೆ ಸತ್ಯವಾದ ವಸ್ತು ಮತ್ತು ಬಿಂಬಗಳ ದೂರವನ್ನು ಧನ ಚಿಹ್ನೆಯದ್ದಾಗಿಯೂ ಮಿಥ್ಯಬಿಂಬದ ದೂರವನ್ನು ಋಣ ಚಿಹ್ನೆಯದ್ದಾಗಿಯೂ ಪರಿಗಣಿಸಬೇಕು. ಚಿಹ್ನೆಯ ಈ ನಿಯಮದ ಅನುಸಾರವಾಗಿ ತಗ್ಗು ಕನ್ನಡಿಯ ನಾಭೀದೂರ ಧನ ಚಿಹ್ನೆಯದು, ಉಬ್ಬುಕನ್ನಡಿಯ ನಾಭೀದೂರ ಋಣ ಚಿಹ್ನೆಯದು.

ತಗ್ಗು ಕನ್ನಡಿಯಲ್ಲಿ ಸತ್ಯಬಿಂಬ ಉಂಟಾದಾಗ $u$, $v$ ಮತ್ತು $f$ ಗಳು ಧನ ಚಿಹ್ನೆಯವಾದ್ದರಿಂದ $\frac{1}{f}=\frac{1}{v}+\frac{1}{u}$ ಸೂತ್ರದಲ್ಲಿ $v$ ಮತ್ತು $u$ ಗಳನ್ನು ಅವಲು

| ಕನ್ನಡಿಯ ನಮೂನೆ | ವಸ್ತುವಿನ ಸ್ಥಾನ | ಪ್ರತಿಬಿಂಬ | | | |
|---|---|---|---|---|---|
| | | ಸ್ಥಾನ | ಗಾತ್ರ | ನೆಟ್ಟಗೆ/ ತಲೆಕೆಳಗೆ | ಸತ್ಯ/ಮಿಥ್ಯ |
| ತಗ್ಗು ಕನ್ನಡಿ | ಅನಂತದೂರದಲ್ಲಿ | F ನಲ್ಲಿ | ಬಿಂದು | — | ಸತ್ಯ |
| ,, | C ಯ ಆಚೆ | F ಮತ್ತು C ನಡುವೆ | ಚಿಕ್ಕದು | ತಲೆಕೆಳಗೆ | ಸತ್ಯ |
| ,, | C ಯಲ್ಲಿ | C ಯಲ್ಲಿ | ವಸ್ತುವಿನಷ್ಟೆ | ತಲೆಕೆಳಗೆ | ಸತ್ಯ |
| ,, | F ಮತ್ತು C ನಡುವೆ | C ಯ ಆಚೆ | ದೊಡ್ಡದು | ತಲೆಕೆಳಗೆ | ಸತ್ಯ |
| ,, | F ನಲ್ಲಿ | ಅನಂತದೂರದಲ್ಲಿ | — | — | — |
| ,, | P ಮತ್ತು F ನಡುವೆ | ಕನ್ನಡಿಯ ಹಿಂದೆ | ದೊಡ್ಡದು | ನೆಟ್ಟಗೆ | ಮಿಥ್ಯ |
| ಉಬ್ಬು ಕನ್ನಡಿ | ಎಲ್ಲಾದರೂ ಸರಿ | ಕನ್ನಡಿಯ ಹಿಂದೆ | ಚಿಕ್ಕದು | ನೆಟ್ಟಗೆ | ಮಿಥ್ಯ |

ಬದಲು ಮಾಡಿದರೂ ವ್ಯತ್ಯಾಸವೇನೂ ಆಗುವುದಿಲ್ಲ. ಆದ್ದರಿಂದ ವಸ್ತುಸ್ಥಾನವನ್ನೂ ಬಿಂಬಸ್ಥಾನವನ್ನೂ ಅದಲುಬದಲು ಮಾಡಬಹುದು. ಅಂದರೆ 0 ನಲ್ಲಿನ ವಸ್ತು I ಯಲ್ಲಿ ಬಿಂಬವನ್ನು ಕೊಟ್ಟರೆ Iಯಲ್ಲಿನ ವಸ್ತು 0ನಲ್ಲಿ ಬಿಂಬವನ್ನು ಕೊಡುತ್ತದೆ ಎಂದರ್ಥ. ಇಂಥ ಎರಡು ಬಿಂದುಗಳಿಗೆ ಪರ್ಯಾಯ ಬಿಂದುಗಳು ಎಂದು ಹೆಸರು.

ಗೋಳಕನ್ನಡಿಯಲ್ಲಿ ಬಿಂಬದ ಉದ್ದ ಮತ್ತು ವಸ್ತುವಿನ ಉದ್ದ ಇವುಗಳ ಪ್ರಮಾಣಕ್ಕೆ ವರ್ಧನ (ಮ್ಯಾಗ್ನಿಫಿಕೇಶನ್) ಎಂದು ಹೆಸರು. ಬಿಂಬದೂರ $v$ ಗೂ ವಸ್ತುದೂರ $u$ ಗೂ ಇರುವ ಪ್ರಮಾಣಕ್ಕೆ ವರ್ಧನ ಸಮವೆಂದು ತೋರಿಸಬಹುದು.

ತಗ್ಗು ಕನ್ನಡಿಯ ನಾಭಿದೂರವನ್ನು ಕಂಡುಹಿಡಿಯಲು ಚಿತ್ರ 8ರಲ್ಲಿ ತೋರಿಸಿರುವಂತೆ ಕನ್ನಡಿಯ ಮುಂದೆ ಒಂದು ತಂತಿಬಲೆಯನ್ನು ಇಡಬೇಕು. ಅದರ ಮೇಲೆ




ಚಿತ್ರ 8

ವಿದ್ಯುದ್ದೀಪದಿಂದ ಬೆಳಕು ಬೀಳಿಸಿ, ಕನ್ನಡಿಯ ಮುಂದೆ ಇಟ್ಟಿರುವ ಒಂದು ಪರದೆಯ ಸ್ಥಾನವನ್ನು ಬದಲಾಯಿಸಿ ಬಲೆಯ ಸ್ಪಷ್ಟವಾದ ಬಿಂಬವನ್ನು ಪರದೆಯ ಮೇಲೆ ಪಡೆಯಬೇಕು. ಆಗ ಕನ್ನಡಿಯಿಂದ ಬಲೆಗೆ ದೂರ $u$ ಮತ್ತು ಪರದೆಗೆ ದೂರ $v$ ಇವನ್ನು ಅಳೆದು ಕನ್ನಡಿ ಸೂತ್ರದ ಸಹಾಯದಿಂದ ನಾಭಿದೂರವನ್ನು ಗಣಿಸಬಹುದು.

ಉಬ್ಬು ಕನ್ನಡಿಯ ನಾಭಿದೂರವನ್ನು ಕಂಡು ಹಿಡಿಯುವುದು ಇಷ್ಟು ಸುಲಭವಲ್ಲ. ಏಕೆಂದರೆ ಅದು ಯಾವಾಗಲೂ ಮಿಥ್ಯ ಬಿಂಬವನ್ನೇ ಕೊಡುತ್ತದೆ. ಚಿತ್ರ 9ರಲ್ಲಿ ತೋರಿಸಿರುವಂತೆ ಉಬ್ಬು ಕನ್ನಡಿಯ ಸುಮಾರು ಅರ್ಧಪಷ್ಟು ಮುಚ್ಚುವ ಹಾಗೆ ಅದರ ಮುಂದೆ ಒಂದು ಸಮತಲ ಕನ್ನಡಿಯನ್ನು ಇಡಬೇಕು. ಇವೆರಡರ ಮುಂದೆ ಇಟ್ಟರುವ ಒಂದು ಉದ್ದವಾದ ಕಡ್ಡಿಯ ಎರಡು ಬಿಂಬಗಳು ಕಾಣಿಸುತ್ತವೆ. ಎರಡು ಕನ್ನಡಿಗಳ ನಡುವಣ ದೂರ $x$ ಮತ್ತು ಸಮತಲ ಕನ್ನಡಿಗೂ ಕಡ್ಡಿಗೂ ನಡುವಣ ದೂರ $y$ ಯನ್ನು ಬದಲಾಯಿಸಿ ಆ ಎರಡು ಬಿಂಬಗಳಿಗೂ ದಿಗಂತರ (ಪ್ಯಾರಲ್ಲೆಕ್ಸ್) ಇಲ್ಲದಂತೆ (ಬೇರೆ ಬೇರೆ ಕಡೆಗಳಿಂದ ನೋಡಿದರೂ




ಚಿತ್ರ 9

ಬಿಂಬಗಳ ಸ್ಥಾನ ಬದಲಾಗದಂತೆ ಇರುವುದು) ಮಾಡಬಹುದು. ಹೀಗೆ ಆಗಬೇಕಾದರೆ ಆ ಎರಡು ಕನ್ನಡಿಗಳಿಂದಾದ ಬಿಂಬಗಳೂ ಒಂದೇ ಸ್ಥಳದಲ್ಲಿರಬೇಕು. ಆದ್ದರಿಂದ ಉಬ್ಬು ಕನ್ನಡಿಗೆ $u=x+y$ ಮತ್ತು $v=y-x$. ಈಗ $x$ ಮತ್ತು $y$ ಗಳನ್ನು ಅಳೆದು ಕನ್ನಡಿ ಸೂತ್ರದ ಸಹಾಯದಿಂದ ಉಬ್ಬು ಕನ್ನಡಿಯ ನಾಭಿದೂರವನ್ನು ಲೆಕ್ಕ ಹಾಕಬಹುದು. ಹೀಗೆ ಲೆಕ್ಕ ಹಾಕುವಾಗ $v$ ಋಣ ಚಿಹ್ನೆಯದು ಎಂಬುದನ್ನು ಮರೆಯಬಾರದು.

ಹೆಚ್ಚು ನಾಭೀದೂರದ ತಗ್ಗು ಕನ್ನಡಿಗಳನ್ನು ದೂರದರ್ಶಕಗಳಲ್ಲಿ ಉಪಯೋಗಿಸುತ್ತಾರೆ. ಕಾರು, ಬಸ್ಸು, ರೈಲುಗಳ ತಲೆದೀಪ ಮತ್ತು ಶೋಧನದೀಪಗಳ ಹಿಂದೆ ತಗ್ಗು ಕನ್ನಡಿ ಅಥವಾ ಪ್ಯರಾಬೊಲಾಕಾರದ ಕನ್ನಡಿಗಳನ್ನು ಅಳವಡಿಸಿರುತ್ತಾರೆ. ನಾಭಿಗೂ ತಗ್ಗು ಕನ್ನಡಿಗೂ ನಡುವೆ ಇರುವ ವಸ್ತುವಿನ ದೊಡ್ಡದಾದ, ನೆಟ್ಟಗಿರುವ ಮಿಥ್ಯಬಿಂಬ ಉಂಟಾಗುವುದರಿಂದ ಮುಖಕ್ಷೌರ ಮಾಡಿಕೊಳ್ಳುವಾಗ ತಗ್ಗು ಕನ್ನಡಿಯನ್ನು ಉಪಯೋಗಿಸುತ್ತಾರೆ. ಉಬ್ಬು ಕನ್ನಡಿ ಯಾವಾಗಲೂ ನೆಟ್ಟಗಿರುವ, ಚಿಕ್ಕದಾದ ಪ್ರತಿಬಿಂಬವನ್ನೇ ಕೊಟ್ಟರೂ ಅದು ಕಾಣುವ ಕ್ಷೇತ್ರದ ವಿಸ್ತೀರ್ಣ ಹೆಚ್ಚಾದ್ದರಿಂದ ಅದನ್ನು ವಾಹನಗಳಲ್ಲಿ ಚಾಲಕರು ಹಿಂದಿನಿಂದ ಬರುತ್ತಿರುವ ಇತರ ವಾಹನಗಳನ್ನು ನೋಡಲು ಉಪಯೋಗಿಸುತ್ತಾರೆ.

**ಕನ್ನಡಿಯ ಲೇಪನ :** ಸಾಮಾನ್ಯವಾಗಿ ಎಲ್ಲ ಕನ್ನಡಿಗಳನ್ನೂ ಸರಿಯಾದ ಆಕಾರದ ಗಾಜಿನ ಮೇಲ್ಮೈ ಮೇಲೆ ಪ್ರತಿಫಲಿಸುವ ವಸ್ತುವಿನ ತೆಳು ಲೇಪ ಕೊಟ್ಟು ಮಾಡುತ್ತಾರೆ. ಮೊದಲು ಹಂತ ಹಂತಕ್ಕೂ ಹೆಚ್ಚು ಹೆಚ್ಚು ನಯವಾದ ಘರ್ಷಕಗಳಿಂದ ಉಜ್ಜಿ ನಮಗೆ ಬೇಕಾದ ವಕ್ರತೆಯುಳ್ಳ ನಯವಾದ ಮೇಲ್ಮೈಯನ್ನು ಪಡೆದು ಅನಂತರ ಅದರ ಮೇಲೆ ಹೊಳಪನ್ನು ಕೊಡುತ್ತಿದ್ದರು ; ಅಥವಾ ಲೋಹದ ಲೇಪವನ್ನು ರಾಸಾಯನಿಕ ರೀತ್ಯ ಮಾಡುತ್ತಿದ್ದರು. ಆದರೆ ಈಗ ಯಾವ ಗಾಜಿಗೆ ಲೇಪನ ಮಾಡಬೇಕೋ ಅದರ ಮುಂದೆ ಹತ್ತಿರದಲ್ಲಿ ಯಾವ ವಸ್ತುವಿನ ಲೇಪನವನ್ನು ಕೊಡಬೇಕೋ ಆ ವಸ್ತುವಿನ ಚೂರನ್ನು ಟಂಗ್‌ಸ್ಟನ್ ತಂತಿಗಳಿಗೆ ಜೋಡಿಸಿ ಇಡುತ್ತಾರೆ. ಇದನ್ನು ಒಂದು ಪಾತ್ರೆಯಲ್ಲಿಟ್ಟು ಆ ಪಾತ್ರೆಯಲ್ಲಿ ನಿರ್ವಾತ ಉಂಟಾಗುವಂತೆ ಅದರಲ್ಲಿನ ಗಾಳಿಯನ್ನೆಲ್ಲ ಪಂಪಿನ ಸಹಾಯದಿಂದ ಹೊರ ತೆಗೆಯುತ್ತಾರೆ. ಆಮೇಲೆ ವಿದ್ಯುತ್ ಪ್ರವಾಹದಿಂದ ಆ ಲೇಪನ ವಸ್ತುವನ್ನು ಹಬೆಯಾಗಿಸಿದರೆ ಗಾಳಿಯ ಅಣುಗಳ ತಡೆ ಸಹ ಇಲ್ಲದೆ ಆ ಹಬೆ ಗಾಜಿನ ಮೇಲೆ ಬಿದ್ದು, ಘನೀಕರಿಸಿ ಅತಿ ಪ್ರತಿಫಲನ ಶಕ್ತಿ ಹೊಂದಿರುವ, ಸುಮಾರು $10^{-5}$ ಸೆಂ.ಮೀ. ದಪ್ಪದ ಲೇಪ ಉಂಟಾಗುತ್ತದೆ. ಈ ರೀತಿಯ ನಿರ್ವಾತ ಲೇಪಗಳ ಪ್ರತಿಫಲನ ಶಕ್ತಿ ಲೇಪನ ಮಾಡುವ ವಿಧಾನವನ್ನು ಅವಲಂಬಿಸಿದೆ. ಸಾಮಾನ್ಯವಾಗಿ ಹೆಚ್ಚು ಬಾಳಿಕೆ ಮತ್ತು ಹೆಚ್ಚು ಪ್ರತಿಫಲನ ಶಕ್ತಿ ಹೊಂದಲು ಆ ಗಾಜಿನ ಮೇಲ್ಮೈ ಶುದ್ಧವಾಗಿರಬೇಕು, ನಿರ್ವಾತ ಆದಷ್ಟೂ ಪೂರ್ಣ ($10^{-5}$ ಮಿ.ಮೀ. ಪಾದರಸ) ಆಗಿರಬೇಕು ಮತ್ತು ಲೇಪನ ಆದಷ್ಟೂ ಕ್ಷಿಪ್ರವಾಗಿ ಆಗಬೇಕು. ಲೇಪನ ವಸ್ತುವನ್ನು ಆ ಕನ್ನಡಿಯನ್ನು ಉಪಯೋಗಿಸುವ ರೋಹಿತ ವ್ಯಾಪ್ತಿಯನ್ನು (ಸ್ಪೆಕ್ಟ್ರಲ್ ರೇಂಜ್) ಅನುಸರಿಸಿ ಆಯ್ಕೆ ಮಾಡುತ್ತಾರೆ.

ಕಣ್ಣಿಗೆ ಕಾಣುವ ಬೆಳಕಿನ (3500 ರಿಂದ 7000Å) ಕನ್ನಡಿಗಳಲ್ಲಿ ಬಳಸಲು ಅತಿ ಹೆಚ್ಚು ಪ್ರತಿಫಲನ ಶಕ್ತಿ ಇರುವ ಬೆಳ್ಳಿ ಉತ್ತಮ. ಆದರೂ ಸಾಮಾನ್ಯವಾಗಿ ಅಲ್ಯೂಮಿನಿಯಮನ್ನೇ ಉಪಯೋಗಿಸುತ್ತಾರೆ. ಏಕೆಂದರೆ ಗಾಳಿಯ ಸಂಪರ್ಕದಿಂದ ಅದರ ಮೇಲೆ ಉಂಟಾಗುವ ಅತಿ ತೆಳುವಾದ, ರಾಸಾಯನಿಕ ನಿಷ್ಕ್ರಿಯದ ಆಕ್ಸೈಡ್ ಪದರದಿಂದ ಅದರ ಬಾಳಿಕೆ ಹೆಚ್ಚಾಗುತ್ತದೆ. ಅತಿರಕ್ತ ಕಿರಣಗಳ ಕನ್ನಡಿಯಲ್ಲಿ ಬಳಸಲು ಅತಿ ಹೆಚ್ಚು ಪ್ರತಿಫಲನ ಶಕ್ತಿ ಇರುವ ಚಿನ್ನವಿದ್ದರೂ ಅಲ್ಯೂಮಿನಿಯಂ ಅಥವಾ ನಿಕ್ಕಲನ್ನು ಉಪಯೋಗಿಸುವುದು ವಾಡಿಕೆ. ಅಲ್ಯೂಮಿನಿಯಂ ಹೆಚ್ಚು ಗಟ್ಟಿಯಾಗಿರುವುದೇ ಇದರ ಕಾರಣ. ಅತಿನೇರಿಳೆ ಕಿರಣಗಳ ಕನ್ನಡಿಗೆ ಅಲ್ಯೂಮಿನಿಯಮ್ಮೇ ಅತ್ಯುತ್ತಮ. ಆದರೆ ತರಂಗದೂರ 1000Å ಗಿಂತ ಕಡಿಮೆಯಾದರೆ ಅಲ್ಯೂಮಿನಿಯಂ ಪಾರದರ್ಶಕವಾಗುವುದರಿಂದ ಅತಿ ಹೆಚ್ಚು ಪ್ರತಿಫಲನ ಶಕ್ತಿ ಇರುವ ಪ್ಲಾಟಿನಮನ್ನು ಉಪಯೋಗಿಸುತ್ತಾರೆ.

ಗಾಜಿನಲ್ಲಿನ ಅವಶೋಷಣೆ (ಅಬ್‌ಸಾರ್ಪ್ಷನ್) ಮತ್ತು ವಕ್ರೀಭವನವನ್ನು ತಪ್ಪಿಸಬೇಕಾದಲ್ಲಿ ಮುಂದುಗಡೆಯ ಮೈಮೇಲೆ ಲೇಪನ ಮಾಡುತ್ತಾರೆ. ಮೈಕಲ್‌ಸನ್ ಆತಂಕಮಾಪಕ ಮುಂತಾದ ಉಪಕರಣಗಳಲ್ಲಿ ಹೀಗೆ ಮೇಲ್ಮೈ ಲೇಪನವಿರುವ ಕನ್ನಡಿಗಳನ್ನು ಉಪಯೋಗಿಸುತ್ತಾರೆ. (ಬಿ.ಎಸ್.ಎಸ್.)

**ಕನ್ನೆಸೊಪ್ಪಿನ ಕುಟುಂಬ :** ಏಕದಳ ಸಸ್ಯಗಳ ಗುಂಪಿಗೆ ಸೇರಿದ ಕಮಲೈನೇಸೀ ಎಂಬ ಶಾಸ್ತ್ರೀಯ ಹೆಸರಿನ ಒಂದು ಕುಟುಂಬ. ಇದರಲ್ಲಿ 28 ಜಾತಿಗಳು, ಸುಮಾರು 400 ಪ್ರಭೇದಗಳು ಇವೆ. ಬಹುಪಾಲು ಸಸ್ಯಗಳು ಉಷ್ಣವಲಯದ ಏಷ್ಯ ಖಂಡದ ಪ್ರದೇಶಗಳಲ್ಲೂ ಮತ್ತು ಯೂರೋಪಿನ ಕೆಲವು ದೇಶಗಳಲ್ಲೂ ಬೆಳೆಯುತ್ತವೆ.

ಸಸ್ಯಗಳು ರಸಭರಿತವಾದ ವಾರ್ಷಿಕ ಅಥವಾ ಬಹುವಾರ್ಷಿಕ ಮೂಲಿಕೆಗಳು. ಕೆಲವು ಹಂಬಿನಂತೆ ಬೆಳೆಯುತ್ತವೆ. ಕಾಂಡದಲ್ಲಿ ಹಲವಾರು ಗಿಣ್ಣುಗಳಿವೆ. ಬೇರುಗಳು— ತೊಡಕು ಬೇರಿನ ವರ್ಗಕ್ಕೆ ಸೇರಿವೆ.

ಎಲೆಗಳು ಸರಳ ರೀತಿಯವು, ಪರ್ಯಾಯವಾಗಿ ಜೋಡಣೆಗೊಂಡಿವೆ. ಎಲೆಗಳ ಬುಡದ ಸುತ್ತ ಒಂದು ರೀತಿಯ ಕವಚವಿದೆ. ಎಲೆಯ ನರವಿನ್ಯಾಸ ಸಮಾನಾಂತರ ಮಾದರಿಯದು.

ಹೂಗೊಂಚಲು ಮಧ್ಯಾರಂಭಿ (ಸೈಮೋಸ್) ರೀತಿಯದು. ಇದು ಗಿಡದ ತುದಿಯಲ್ಲೋ ಎಲೆಯ ಕಂಕುಳುಗಳಲ್ಲೋ ಇರುತ್ತದೆ. ಕೆಲವು ಸಸ್ಯಗಳಲ್ಲಿ ಏಕಪಾರ್ಶ್ವ ಮಧ್ಯಾರಂಭಿಯಾಗಿಯೂ ಕೆಲವು ವೇಳೆ ಪರ್ಯಾಯ ಪಾರ್ಶ್ವ ಮಧ್ಯಾರಂಭಿಯಾಗಿಯೂ ಮತ್ತೆ ಕೆಲವು ಸಸ್ಯಗಳಲ್ಲಿ ಸಂಕೀರ್ಣ ಮಾದರಿಯಂತೆಯೂ ಇರುವುದುಂಟು.

ಹೂಗಳು ದ್ವಿಲಿಂಗಿಗಳು. ಬಹುಪಾಲು ದೋಣಿಯಾಕಾರದವು. ಬಣ್ಣ ನಸುನೀಲಿ, ಬಿಳುಪು ಅಥವಾ ನಸುಗೆಂಪು. ಪ್ರತಿಯೊಂದು ಹೂವೂ ಪರಿಪೂರ್ಣವಾಗಿದ್ದು ಬ್ರ್ಯಾಕ್ಟ್ ಮತ್ತು ಬ್ರ್ಯಾಕ್ಟಿಯೋಲುಗಳನ್ನು ಪಡೆದಿರುತ್ತದೆ. ಹೂಗಳು ಆರೀಯ ಸಮಾಂಗತೆ ಅಥವಾ ಉಭಯಪಾರ್ಶ್ವಸಮಾಂಗತೆ ಉಳ್ಳವು.

ಹೂಗಳಲ್ಲಿ ಪುಷ್ಪಪತ್ರಗಳಾಗಲಿ ದಳಗಳಾಗಲಿ ಬೇರೆಬೇರೆಯಾಗಿಲ್ಲ. ಒಂದೇ ಬಗೆಯ ಪೆರಿಯಾಂತುಗಳೆಂಬ 6 ಬಿಡಿ ಭಾಗಗಳುಂಟು. ಇವು ಎರಡು ಸುತ್ತುಗಳಲ್ಲಿ ಜೋಡಣೆಗೊಂಡಿದ್ದು ಒಂದೊಂದು ಸುತ್ತಿನಲ್ಲಿ ಮೂರು ಭಾಗಗಳಿವೆ. ಹೊರಸುತ್ತಿನ ದಳಗಳು ಹಸಿರು ಬಣ್ಣದವು, ಒಳಸುತ್ತಿನವು ನೀಲಿ, ಬಿಳುಪು ಅಥವಾ ನಸುಗೆಂಪು ಬಣ್ಣದವು. ಹೂವಿನಲ್ಲಿ ಸಾಮಾನ್ಯವಾಗಿ 6 ಕೇಸರಗಳಿವೆ. ಒಂದೊಂದು ವಲಯದಲ್ಲಿ ಮೂರು ಮೂರರಂತೆ ಎರಡು ವಲಯಗಳಲ್ಲಿ ಜೋಡಣೆಯಾಗಿವೆ. ಸಾಧಾರಣವಾಗಿ ಎಲ್ಲ ಕೇಸರಗಳೂ ಫಲಕಾರಿಯಾಗಿರುವುದುಂಟು. ಆದರೆ ಕೆಲವು ಸಾರಿ 3 ಕೇಸರಗಳು ಫಲಕಾರಿಯಾಗಿದ್ದು, ಉಳಿದ ಮೂರು ಬರಡಾಗಿರುತ್ತವೆ. ಅಪರೂಪಕ್ಕೆ ಒಂದೇ ಒಂದು ಕೇಸರ ಮಾತ್ರ ಫಲಕಾರಿಯಾಗಿರುವುದೂ ಉಂಟು. ಕೇಸರ ತಂತುವಿಗೆ(ದಂಡ) ಅನೇಕ ವೇಳೆ ರೋಮಮಯವಾದ ಮಣಿಯಂಥ ಉಪಾಂಗಗಳ (ಅಪೆಂಡೇಜ್) ಬೆಳವಣಿಗೆಗಳಿರುತ್ತವೆ. ಪರಾಗಕೋಶಗಳು ಎರಡು. ಇವು ಬಲಿತಾಗ ಅವುಗಳ ತುದಿಯಲ್ಲಿರುವ ರಂಧ್ರದಿಂದಲೋ ಅಥವಾ ಉದ್ದುದ್ದಕ್ಕೆ ಬಿರಿದೋ ಪರಾಗವನ್ನು ಹೊರಚೆಲ್ಲುತ್ತವೆ. ಅಂಡಾಶಯ ಮೂರು ಕಾರ್ಪೆಲು ಗಳಿಂದಾದ ಸಂಯುಕ್ತ ಮಾದರಿಯದು. ಕೆಲವು ವೇಳೆ ಒಂದೇ ಕಾರ್ಪೆಲಿರುವುದೂ ಉಂಟು. ಉಚ್ಚಸ್ಥಾನದ ಇದರಲ್ಲಿ ಮೂರು ಕೋಣೆಗಳಿವೆ. ಅಪರೂಪಕ್ಕೆ ಎರಡೇ ಕೋಣೆಗಳಿರಬಹುದು. ಒಂದೊಂದು ಕೋಣೆಯಲ್ಲೂ ಹಲವಾರು ಅಂಡಕಗಳಿವೆ. ಶಲಾಕೆ ಸರಳರೂಪದ್ದು. ಶಲಾಕಾಗ್ರ 3 ಭಾಗಗಳಾಗಿ ಒಡೆದಿದೆ.

ಫಲ ಒಡೆಯುವ ಅಥವಾ ಒಡೆಯದಿರುವ ಸಂಪುಟ (ಕ್ಯಾಪ್ಸ್ಯೂಲ್) ಮಾದರಿಯದು. ಕೆಲವೊಮ್ಮೆ ಫಲದ ಸುತ್ತ ರಸಭರಿತವಾದ ಪುಷ್ಪಪತ್ರಗಳಿರುವುದುಂಟು. ಬೀಜಗಳು ಅನೇಕ. ಎಲ್ಲವೂ ಭ್ರೂಣಾಹಾರಪೂರಿತ.

ಕನ್ನೆಗಿಡದ ಕುಟುಂಬದ ಕೆಲವು ಮುಖ್ಯ ಪ್ರಭೇದಗಳು ಇವು: ಕಮಲೈನ ಕಮ್ಯೂನಿಸ್ (ಕನ್ನೆಸೊಪ್ಪು, ಗುಬ್ಬಚ್ಚಿಬಾಳೆ), ಕಮಲೈನ ಒಬ್ಲಿಕ (ಕಲ್ನಾಳು), ಕಮಲೈನ ಸ್ಕಾಲಿಸಿಫೋಲಿಯ, ಏನಯಿಲಿಮ ನ್ಯೂಡಿಫ್ಲೋರಮ್ (ನೆಲಚೀಳು ಸೊಪ್ಪು), ರಿಯೋ ಡಿಸ್ಕಲರ್, ಟ್ರಾಡೆಸ್‌ಕ್ಯಾನ್ಷಿಯ ಡಿಸ್ಕಲರ್ ಮತ್ತು ಸೈನೋಟಿಸ್ ಆಕ್ಸಿಲ್ಲಾರಿಸ್.

ಆರ್ಥಿಕವಾಗಿ ಈ ಕುಟುಂಬದ ಸಸ್ಯಗಳೇನೂ ಅಷ್ಟೊಂದು ಉಪಯುಕ್ತವಾಗಿಲ್ಲ. 8–10 ಜಾತಿಗಿಡಗಳನ್ನು ಅಲಂಕಾರದ ಸಸ್ಯಗಳಾಗಿ ತೋಟಗಳಲ್ಲಿ ಬೆಳೆಸುತ್ತಾರೆ.

(ಎಚ್.ಕೆ.ಎಂ.)

**ಕನ್ನೆಸೊಪ್ಪು:** ಕಮಲೈನೇಸೀ ಕುಟುಂಬಕ್ಕೆ ಸೇರಿದ ಒಂದು ಸಣ್ಣ ಸಸ್ಯ. ಇದರ ವೈಜ್ಞಾನಿಕ ನಾಮ ಕಮಲೈನ ಕಮ್ಯೂನಿಸ್. ಹೊಲ ಮತ್ತು ತೋಟಗಳಲ್ಲಿ ಕಳೆಯಂತೆ ಸ್ವಾಭಾವಿಕವಾಗಿ ಬೆಳೆಯುವ ಏಕವಾರ್ಷಿಕ ಸಸ್ಯ ಇದು.

ಇದು ಮೂಲಿಕೆಯ (ಶಾಕ) ರೂಪದಲ್ಲಿ ಸುಮಾರು 1′ ಎತ್ತರಕ್ಕೆ ಬೆಳೆಯುತ್ತದೆ. ನೆಲದಲ್ಲಿಯೇ ಹರಡಿ ಬಹುವಾಗಿ ಕವಲೊಡೆದು ಬೆಳೆಯುವ ಗಿಣ್ಣುಗಳಿಂದ ಕೂಡಿದ ಕಾಂಡವಿದೆ. ಎಲೆಗಳು ಸರಳ, ಪರ್ಯಾಯ ಮಾದರಿಯಲ್ಲಿ ಜೋಡಣೆಗೊಂಡಿವೆ, ಅವುಗಳ ಆಕಾರ ಕರನೆಯಂತೆ ಅಥವಾ ದೀರ್ಘವೃತ್ತದಂತೆ. ಎಲೆಯ ಅಂಚು ಅಲೆಯಂತಿದೆ, ತುದಿ ಮೊನಚಾಗಿದೆ. ಎಲೆಗಳ ಬುಡವನ್ನು ಪೊರೆಯಂಥ ರಚನೆ ಆವರಿಸಿರುತ್ತದೆ.

ಹೂ ಬಿಡುವ ಕಾಲದಲ್ಲಿ ಕಾಂಡದ ಬುಡದ ಗಿಣ್ಣುಗಳಿಂದ ಹೂಗೊಂಚಲುಗಳು ಮೂಡುತ್ತವೆ. ಅವು ಮಧ್ಯಾರಂಭಿ (ಸೈಮೋಸ್) ಮಾದರಿಯವು. ಹೂಗೊಂಚಲನ್ನು ಆಲಿಕೆಯಾಕಾರದ ಕವಚ (ಸ್ಪೇತ್) ಆವರಿಸಿದೆ. ಹೂಗಳು ದ್ವಿಲಿಂಗಿಗಳು; ನೀಲಿ ಬಣ್ಣದವು. ಪುಷ್ಪಪತ್ರಗಳು ಮೂರು, ಬಿಡಿಬಿಡಿಯಾಗಿವೆ. ಹೂದಳಗಳು ಮೂರು. ಇವುಗಳಲ್ಲಿ ಎರಡು ದೊಡ್ಡವು. ಕೆಲವೊಮ್ಮೆ ಮೂರನೆಯ ದಳ ಇಲ್ಲದಿರಬಹುದು. ಕೇಸರಗಳು 3, ಇವುಗಳಲ್ಲಿ ಸಾಮಾನ್ಯವಾಗಿ ಎರಡು ಬರಡು ಕೇಸರಗಳು. ಅಂಡಾಶಯ ಉಚ್ಚಸ್ಥಾನದ್ದು (ಸುಪೀರಿಯರ್); ಮೂರು ಕೋಣೆಗಳನ್ನೊಳಗೊಂಡಿದೆ. ಪ್ರತಿಕೋಣೆಯಲ್ಲಿ 1–2 ಅಂಡಕಗಳಿವೆ. ಕೆಲವು ಬಗೆಗಳಲ್ಲಿ



ಕನ್ನೆಸೊಪ್ಪು

ಒಂದು ಕೋಣೆ ಇರುವುದಿಲ್ಲ. ಫಲ ಕೋಣೆಗಭಿಮುಖವಾಗಿ ಒಡೆಯುವಂಥ ಸಂಪುಟ ಮಾದರಿಯದು (ಕ್ಯಾಪ್ಸ್ಯೂಲ್).

ಕನ್ನೆಗಿಡದ ಎಳೆಯ ಎಲೆ ಮತ್ತು ಕಾಂಡವನ್ನು ಸೊಪ್ಪು ತರಕಾರಿಯಾಗಿ ಉಪಯೋಗಿಸುತ್ತಾರೆ. ಆಯುರ್ವೇದ ಔಷಧಿಗಳಲ್ಲೂ ಇದರ ಬಳಕೆಯಿದೆ. ಇದು ಜಾನುವಾರುಗಳಿಗೆ ಉತ್ತಮವಾದ ಮೇವೂ ಹೌದು. (ಡಿ.ಎಂ.)

**ಕನ್ಯಕಾಪರಮೇಶ್ವರಿ:** ವೈಶ್ಯರ ಕುಲದೇವತೆ. ವಾಸವಾಂಬಾ ಈಕೆಯ ನಾಮಾಂತರ. ಒಮ್ಮೆ ಬ್ರಹ್ಮ ಇಂದ್ರನ ಮಗನಾದ ಜಯಂತನಿಗೆ ಶತಜಿಹ್ವನೆಂಬ ರಾಕ್ಷಸನನ್ನು ಕೊಲ್ಲುವಂತೆ ಆಜ್ಞೆ ಮಾಡಿದಾಗ ಶಚೀದೇವಿ ಮಗನನ್ನು ತಡೆದುದರ ಸಲುವಾಗಿ ಬ್ರಹ್ಮಶಾಪಕ್ಕೊಳಗಾಗಿ ಭೂಲೋಕದಲ್ಲಿ ವೈಶ್ಯಜಾತಿಯಲ್ಲಿ ಜನಿಸಿದಳು. ವಿಷ್ಣುವರ್ಧನನೆಂಬ ಅರಸು ಇವಳನ್ನು ತನಗೆ ಕೊಟ್ಟು ಮದುವೆ ಮಾಡಬೇಕೆಂದು ವಾಸವಾಂಬೆಯ ತಂದೆ ಕುಸುಮಶ್ರೇಷ್ಠಿಯನ್ನು ಬಲವಂತಪಡಿಸಿದ. ಅದಕ್ಕೆ ಒಪ್ಪದೆ ಆ ಕುಟುಂಬದವರೆಲ್ಲ ವಾಸವಾಂಬೆಯ ಜೊತೆಗೂಡಿ ಅಗ್ನಿಪ್ರವೇಶ ಮಾಡಲು ನಿಶ್ಚಯಿಸಿದರು. ವಾಸವಾಂಬೆ ತನಗೆ ಬಂದ ಶಾಪಾದಿ ವಿಷಯಗಳನ್ನು ತಿಳಿಸಿ ನಿಜಸ್ವರೂಪವನ್ನು ಪಡೆಯಲು ಅಗ್ನಿಯಲ್ಲಿ ಧುಮುಕಿದಳು. ಇತರರೂ ಹಾಗೆಯೇ ಮಾಡಿದರು. ವೈಶ್ಯರು ಅಂದಿನಿಂದ ವಾಸವಾಂಬೆಯನ್ನು ತಮ್ಮ ಕುಲದೇವತೆಯೆಂದು ಭಾವಿಸಿ ಕನ್ಯಕಾಪರಮೇಶ್ವರಿ ಎಂಬ ಹೆಸರಿನಿಂದ ಪೂಜಿಸುತ್ತಾರೆ. ಈ ದೇವತೆಯ ಹೆಸರಿನಲ್ಲಿ ದಕ್ಷಿಣ ಭಾರತದಲ್ಲಿ ದೇವಾಲಯಗಳೂ ಕಲ್ಯಾಣಮಂಟಪಗಳೂ ಇವೆ. (ಜಿ.ಎಚ್.)

**ಕನ್ಯಾಕೀಟ:** ಓಡೋನೇಟ ಗಣದ ಜೈಗಾಪ್ಟೆರ ಉಪಗಣಕ್ಕೆ ಸೇರಿದ ಅನೇಕ ಜಾತಿಯ ಕೀಟಗಳಿಗಿರುವ ಸಾಮಾನ್ಯ ಹೆಸರು. ಪ್ರಪಂಚದಲ್ಲೆಲ್ಲ ಇವುಗಳ ವ್ಯಾಪ್ತಿಯಿದ್ದರೂ ಉಷ್ಣವಲಯದಲ್ಲಿ ಹೆಚ್ಚು ಸಂಖ್ಯೆಯಲ್ಲಿವೆ. ಸಾಧಾರಣ ಗಾತ್ರದ ಇವುಗಳ ದೇಹ ತೆಳುವಾಗಿ ಕೋಮಲವಾಗಿವೆ. ಎರಡು ಜೋಡಿ ಸಮರೂಪದ ನವಿರಾದ ಪೊರೆಯಂಥ ರೆಕ್ಕೆಗಳಿವೆ. ಇವುಗಳ ಹಾರಾಟ ದುರ್ಬಲವಾದದ್ದು. ಪ್ರೌಢಜೀವಿಗಳ ಬಣ್ಣ ಮಬ್ಬಾಗಿರುವುದು ಸಾಮಾನ್ಯ ಲಕ್ಷಣವಾದರೂ ಕೆಲವು ಕೀಟಗಳ ರೆಕ್ಕೆಗಳ ಮೇಲೆ ಕೆಂಪು ಅಥವಾ ಕಪ್ಪು ಬಣ್ಣದ ಪಟ್ಟೆಗಳಿರುತ್ತವೆ. ದೇಹ ಮತ್ತು ರೆಕ್ಕೆಗಳು ಮಿರುಗುವ ಹಚ್ಚಹಸುರಿನ ಬಣ್ಣದಿಂದ ಕೂಡಿರುವುದೂ ಉಂಟು.

ಕನ್ಯಾಕೀಟಗಳ ದೇಹವನ್ನು ತಲೆ, ವಕ್ಷ ಮತ್ತು ಉದರ ಭಾಗಗಳೆಂದು ವಿಭಾಗಿಸಬಹುದು. ತಲೆಯಲ್ಲಿ ಗುಂಡಗಿನ, ಚೆನ್ನಾಗಿ ಬೆಳೆದ, ಕೊಂಚ ಹೊರಚಾಚಿರುವಂತಿರುವ ಎರಡು ಸಂಯುಕ್ತ ಕಣ್ಣುಗಳೂ ಬಲಯುತವಾದ ಎರಡು ದವಡೆಗಳೂ ಇವೆ. ವಕ್ಷ

ಭಾಗದಲ್ಲಿ ಮೂರು ಖಂಡಗಳಿವೆ. ಎರಡನೆಯ ಮತ್ತು ಮೂರನೆಯ ಖಂಡಗಳು ಆಯತಾಕಾರವಾಗಿದ್ದು ಸ್ವಲ್ಪ ಹಿಂದಕ್ಕೆ ಚಾಚಿರುತ್ತವೆ. ಸಮರೂಪದ ರೆಕ್ಕೆಗಳಿವೆ.




ಕನ್ಯಾಕೀಟ : A ಪ್ರೌಢ ಜೀವಿ ; B ಅಪ್ಸರಿ ಕೀಟ

ರೆಕ್ಕೆಗಳ ಬುಡ ಮಾತ್ರ ಸ್ವಲ್ಪ ಕಿರಿದು. ತೆಳುವಾಗಿ ಪಾರದರ್ಶಕವಾಗಿರುವ ಈ ರೆಕ್ಕೆಗಳ ಮೇಲೆ ಬಲೆಯಂಥ ನರವಿನ್ಯಾಸವಿದೆ. ಕನ್ಯಾಕೀಟಗಳು ನೆಲದ ಮೇಲೆ ಕುಳಿತಾಗ ರೆಕ್ಕೆಗಳು ಅಗಲವಾಗಿ ಹರಡದೆ ಮಡಿಚಿಕೊಂಡು ಎದೆಯ ಭಾಗದಿಂದ ಹಿಂಚಾಚಿಕೊಳ್ಳುವುದು ಇವುಗಳ ವಿಶಿಷ್ಟ ಲಕ್ಷಣ. ವಕ್ಷದ ಮೂರು ಖಂಡಗಳಲ್ಲೂ ಒಂದೊಂದು ಜೊತೆ ಸಂಧಿಪಾದಗಳಿವೆ. ಉದರ ಭಾಗ ಹತ್ತು ಖಂಡಗಳಿಂದ ಕೂಡಿದೆ. ಗಂಡಿನಲ್ಲಿ ಉದರದ ಕೊನೆಯ ಖಂಡದ ತುದಿಯಲ್ಲಿ ಅಧಿಗುದದ ತಟ್ಟೆ ಇಲ್ಲ. ಗಂಡಿನ ಉದರದ ಎರಡನೆಯ ಮತ್ತು ಮೂರನೆಯ ಖಂಡಗಳ ತಳಭಾಗದಲ್ಲಿ ಒಂದು ಮೈಥುನಾಂಗ ಮತ್ತು ಅದಕ್ಕೆ ಸಂಬಂಧಿಸಿದ ಒಂದು ಚೀಲವಿದೆ. ಅಲ್ಲದೆ ಸಂಭೋಗಕಾಲದಲ್ಲಿ ಹೆಣ್ಣನ್ನು ಆಲಿಂಗಿಸಿ ಹಿಡಿದುಕೊಳ್ಳಲು ಸಹಾಯಕವಾಗುವ ಆಲಿಂಗಕಗಳು (ಕ್ಲಾಸ್ಪರ್) ಕೊನೆಯ ಖಂಡದಲ್ಲಿವೆ. ಹೆಣ್ಣಿನ ಉದರಭಾಗದ ಕೊನೆಯಲ್ಲಿ ಜನನೇಂದ್ರಿಯದ ದ್ವಾರದ ಬಳಿ ಚೆನ್ನಾಗಿ ರೂಪುಗೊಂಡ ಅಂಡನಿಕ್ಷೇಪವಿದೆ. (ಓವಿಪಾಸಿಟರ್ಸ್). ಸಂಭೋಗಕಾಲದಲ್ಲಿ ಗಂಡು ತನ್ನ ಜನನೇಂದ್ರಿಯ ದ್ವಾರದ ಮೂಲಕ ಬಂದ ಶುಕ್ರಾಣುಗಳನ್ನು ಮೈಥುನಾಂಗದ ಬಳಿಯಿರುವ ಚೀಲಕ್ಕೆ ತುಂಬಿಕೊಳ್ಳುತ್ತದೆ. ಅನಂತರ ಅದು ತನ್ನ ಆಲಿಂಗಕಗಳ ಸಹಾಯದಿಂದ ಹೆಣ್ಣಿನ ಕುತ್ತಿಗೆಯನ್ನು ಬಿಗಿಯಾಗಿ ಹಿಡಿದು ಯಾವುದಾದರೂ ಜಲಸಸ್ಯದ ರೆಂಬೆಗಳನ್ನು ತನ್ನ ಕಾಲುಗಳಿಂದ ಬಿಗಿಯಾಗಿ ಹಿಡಿಯುತ್ತದೆ. ಹೆಣ್ಣುಕೀಟ ತನ್ನ ದೇಹವನ್ನು ಕಮಾನಿನಂತೆ ಬಾಗಿಸಿಕೊಂಡು ತನ್ನ ಜನನೇಂದ್ರಿಯ ದ್ವಾರವನ್ನು ಗಂಡಿನ ಮೈಥುನಾಂಗದ ಬಳಿಗೆ ಸಾಗಿಸಿ ಅದರ ಮೂಲಕ ಶುಕ್ರಾಣುಗಳನ್ನು ಸ್ವೀಕರಿಸುತ್ತದೆ. ಅನಂತರ ಹೆಣ್ಣು ಅದೇ ಭಂಗಿಯಲ್ಲಿ ತನ್ನ ಉದರವನ್ನು ಬೇರ್ಪಡಿಸಿಕೊಂಡು ಗಿಡದ ರೆಂಬೆಯನ್ನು ಬಲವಾಗಿ ಹಿಡಿದುಕೊಂಡು ತನ್ನ ಅಂಡನಿಕ್ಷೇಪಕದ ಸಹಾಯದಿಂದ ಗಿಡದ ಮೃದುತೊಗಟೆಯನ್ನು ತೂತುಮಾಡಿ ತನ್ನ ಗರ್ಭಾಂಕುರಿತ ಅಂಡಾಣುಗಳನ್ನು ಇಡುತ್ತದೆ. ಹೆಣ್ಣು ಮೊಟ್ಟೆಗಳನ್ನು ಇಡುವ ವರೆಗೂ ಗಂಡು ತನ್ನ ಹಿಡಿತವನ್ನು ಸಾಮಾನ್ಯವಾಗಿ ಸಡಿಲಿಸುವುದಿಲ್ಲ.

ಮೊಟ್ಟೆಯಿಂದ ಹೊರಬಂದ ಮರಿಗಳು ಅಥವಾ ಡಿಂಭಗಳು ನೀರಿನ ಪರಿಸರದಲ್ಲಿಯೇ ಜೀವಿಸುತ್ತವೆ. ಇವುಗಳಿಗೆ ನೆಯಾಡ್‌ಗಳೆಂದು ಹೆಸರು. ಮಾಂಸಾಹಾರಿಗಳಾದ ಇವು ಸೊಳ್ಳೆಮರಿ, ಇತರ ಸೂಕ್ಷ್ಮ ಕಠಿಣಚರ್ಮಿಗಳನ್ನು ತಿಂದು ಜೀವಿಸುತ್ತವೆ. ಇವುಗಳ ದೇಹವೂ ಬಹಳ ತೆಳುವಾಗಿದ್ದು ದುರ್ಬಲವಾಗಿರುತ್ತದೆ. ಈ ಜಲಜೀವನ ಸುಮಾರು ಒಂದು ವರ್ಷ ಕಾಲ ಸಾಗುತ್ತದೆ. ಈ ಕಾಲದಲ್ಲಿ 10–15 ಬಾರಿ ಇವು ತಮ್ಮ ಹೊರಕವಚವನ್ನು ವಿಸರ್ಜಿಸಿಕೊಂಡು ದೊಡ್ಡದಾಗುತ್ತವೆ. ರೆಕ್ಕೆಗಳಿಲ್ಲದ ಈ ಡಿಂಭಗಳ ದೇಹದ ಕೊನೆಯಲ್ಲಿ ದೋಣಿಯ ಹುಟ್ಟಿನ ಆಕಾರದ ಮೂರು ದೊಡ್ಡ ಶ್ವಸನನಾಳಿ ಕಿವಿರು (ಟ್ರಾಕಿಯಲ್ ಗಿಲ್ಸ್) ಗಳಿರುವುದು ಒಂದು ವೈಶಿಷ್ಟ್ಯ. ಇವು ನೀರಿನಲ್ಲಿ ಉಸಿರಾಡಲು ನೆರವಾಗುತ್ತವೆ. ಪ್ರೌಢಜೀವಿ ರೂಪುಗೊಳ್ಳುವುದಕ್ಕೆ ಪೂರ್ವಭಾವಿಯಾಗಿ ಈ ಜಲವಾಸಿ ಡಿಂಭದ ಜೀವನ ಚಟುವಟಿಕೆ ಕುಂಟುತ್ತದೆ. ಪ್ರೌಢಜೀವಿಯ ರೆಕ್ಕೆಗಳು ಒಳಗೆ ರೂಪುಗೊಂಡ ಮೇಲೆ ಹಾಗೂ ಇತರ ಅಂಗಗಳ ರಚನೆಯಾದ ಮೇಲೆ ಡಿಂಭ ನೀರಿನಿಂದ ಹೊರಬಂದು ಒಂದು ಮರದ ನೆಲೆಯ ಮೇಲೆ ತಂಗುತ್ತದೆ. ಅದರ ಕವಚದ ಪರೆ ಒಣಗಿದ ಮೇಲೆ ಅದು ಬಿರಿದು ಅದರೊಳಗಿನಿಂದ ಪ್ರೌಢಜೀವಿ ಹೊರಬಂದು ಹಾರಲಾರಂಭಿಸುತ್ತದೆ.
(ಬಿ.ಎಸ್.ಬಿ.)

**ಕನ್ಯಾಕುಮಾರಿ :** ಭಾರತದ ದಕ್ಷಿಣತಮ ಭೂಶಿರ ; ಇದೇ ಹೆಸರಿನ ಜಿಲ್ಲೆ. ಭೂಶಿರ ಉ.ಅ. 8° 4′ ಮತ್ತು ಪೂ. ರೇ. 77° 35′ 35″ ನಲ್ಲಿ ಪಶ್ಚಿಮಘಟ್ಟಗಳ ಶಾಖೆಯಾದ ಏಲಕ್ಕಿ ಗುಡ್ಡದ ದಕ್ಷಿಣತುದಿಯಲ್ಲಿದೆ. ಇಲ್ಲಿ ಕನ್ಯಾಕುಮಾರಿಯ ದೇಗುಲವಿರುವುದರಿಂದ ಈ ಸ್ಥಳಕ್ಕೆ ಕನ್ಯಾಕುಮಾರಿ ಎಂಬ ಹೆಸರು ಬಂದಿದೆ. ತಿರುವನಂತಪುರದಿಂದ ಇದು 87 ಕಿಮೀ. ದೂರದಲ್ಲಿದೆ. ಇಲ್ಲಿಯ ಭೂಭಾಗ ಬಹು ಕಿರಿದಾಗಿದ್ದು ಸಮುದ್ರದೊಳಕ್ಕೆ ನಾಲಗೆಯಂತೆ ಚಾಚಿಕೊಂಡಿರುವುದರಿಂದ ಸೂರ್ಯೋದಯ ಸೂರ್ಯಾಸ್ತಗಳೆರಡೂ ಇಲ್ಲಿಂದ ನೋಡಲು ಬಲು ಚೆಲುವು, ವರ್ಣಮಯ. ಇದನ್ನು ನೋಡಲೆಂದೇ ಸಹಸ್ರಾರು ಪ್ರವಾಸಿಗಳು ಇಲ್ಲಿಗೆ ಬರುತ್ತಾರೆ. ಇದು ಹಿಂದೂಗಳ ಪುಣ್ಯಕ್ಷೇತ್ರ. ಭೂಭಾಗದ ದಕ್ಷಿಣತುದಿಯಲ್ಲಿ ಕನ್ಯಾಕುಮಾರಿಯ ಪುರಾತನ ದೇವಾಲಯವಿದೆ. ಇದು ಬಹು ಹಿಂದಿನಿಂದಲೂ ಕನ್ಯಾತೀರ್ಥವೆಂದು ಪ್ರಸಿದ್ಧವಾಗಿದ್ದಿತೆಂದು ಅನೇಕ ಶಾಸನಗಳಿಂದ ತಿಳಿದುಬರುತ್ತದೆ. ಕನ್ಯಾಕುಮಾರಿಯ ಬಳಿಯ ಸಮುದ್ರದಲ್ಲಿ ಸ್ನಾನ ಮಾಡಿ ಕನ್ನಿಕಾಪರಮೇಶ್ವರಿಯನ್ನು ಪೂಜಿಸಿದರೆ ಸರ್ವಪಾಪಗಳಿಂದ ವಿಮೋಚನೆಯಾಗುತ್ತದೆಂದು ನಂಬಿಕೆ. ಕಾಶಿಯ ಒಬ್ಬ ಬ್ರಾಹ್ಮಣನ ಹೆಂಡತಿ ಪಾತಿವ್ರತ್ಯ ಕೆಡಿಸಿಕೊಂಡು ಪಶ್ಚಾತ್ತಾಪಹೊಂದಿ ಕನ್ಯಾಕುಮಾರಿಗೆ ನಡೆದು ಬಂದು ಅಲ್ಲಿ ದೇವರ ಪೂಜೆ ಮಾಡಿ ಪಾಪವಿಮುಕ್ತಳಾದಳೆಂಬ ಒಂದು ಸ್ಥಳಪುರಾಣವಿದೆ. ದೇವಾಲಯದ ಸಮೀಪದಲ್ಲಿರುವ ಗಾಂಧೀಸ್ಮಾರಕ ಇತ್ತೀಚೆಗೆ ಕಟ್ಟಿದ ಒಂದು ಸುಂದರ ಕಟ್ಟಡ. ಭೂಭಾಗದ ಅಂಚಿನಿಂದ ಕೆಲವೇ ಗಜಗಳ ದೂರದಲ್ಲಿ ವಿವೇಕಾನಂದರ ಬಂಡೆ ಎಂಬ ನಡುಗಡ್ಡೆಯಿದೆ. ಇಲ್ಲಿ ವಿವೇಕಾನಂದರ ಬೃಹತ್ ಸ್ಮಾರಕವೊಂದರ ನಿರ್ಮಾಣವಾಗಿದೆ. ಕನ್ಯಾಕುಮಾರಿ ಮೀನುಗಾರಿಕೆ ಕೇಂದ್ರ ಕೂಡ. ಕಡಲ ದಂಡೆಯ ಮರಳಿನಲ್ಲಿ ಇಲ್ಮೆನೈಟ್ ಮತ್ತು ಮೊನಾಜ಼ೈಟ್ ನಿಕ್ಷೇಪಗಳಿವೆ.



ಕನ್ಯಾಕುಮಾರಿ ದೇವಸ್ಥಾನ

ಕನ್ಯಾಕುಮಾರಿ ಜಿಲ್ಲೆಯ ವಿಸ್ತೀರ್ಣ 643 ಚ.ಮೈ. ಜನಸಂಖ್ಯೆ 9,96,015 (1961). ಈ ಪ್ರದೇಶ ಮೊದಲು ಕೇರಳಕ್ಕೆ ಸೇರಿತ್ತು. 1956ರಲ್ಲಿ ಇದನ್ನು ಮದ್ರಾ



ಗಾಂಧಿಭವನ—ಕನ್ಯಾಕುಮಾರಿ

ಸಿಗೆ (ಈಗಿನ ತಮಿಳುನಾಡು) ಸೇರಿಸಿ ಕನ್ಯಾಕುಮಾರಿ ಜಿಲ್ಲೆಯನ್ನು ನಿರ್ಮಿಸಲಾಯಿತು. ನಾಗರ್ ಕೋಯಿಲ್ ಈ ಜಿಲ್ಲೆಯ ಮುಖ್ಯ ಪಟ್ಟಣ.

ನೋಡಿ—ನಾಗರ್‌ಕೋಯಿಲ್ (ಎನ್.ಎ.; ಎಸ್. ಎನ್.; ಜಿ ಎಚ್.)

**ಕನ್ಯಾದಾನ :** ಹಿಂದೂ ಸಂಸ್ಕಾರಗಳಲ್ಲಿ ಅತಿಮುಖ್ಯವಾದ ವಿವಾಹ ಸಂಸ್ಕಾರದ ಒಂದು ಮುಖ್ಯವಾದ ಅಂಗ. ಕನ್ಯೆ ಎಂದರೆ ಎಂಟು ಹತ್ತು ವರ್ಷಗಳ ಬಾಲಕಿ. ಮನುಧರ್ಮಶಾಸ್ತ್ರ ಹಿಂದೂ ಸಮಾಜದಲ್ಲಿ ಪ್ರಚಲಿತವಾಗುವ ಹೊತ್ತಿಗೆ ಬಾಲ್ಯವಿವಾಹ ಪದ್ಧತಿ ರೂಢಿಗೆ ಬಂದಿತ್ತು. ಮನುವಿನ ಪ್ರಕಾರ ಸ್ತ್ರೀ ಬಾಲ್ಯದಲ್ಲಿ ತಂದೆಯ ವಶದಲ್ಲಿಯೂ ವಿವಾಹಾನಂತರ ಪತಿಯ ಅಧೀನದಲ್ಲಿಯೂ ವೃದ್ಧಾಪ್ಯದಲ್ಲಿ ಪುತ್ರನ ವಶದಲ್ಲಿಯೂ ಪೋಷಿಸಲ್ಪಡತಕ್ಕವಳು. ಬಾಲ್ಯದಲ್ಲಿ ಅವಳು ಮಾತಾಪಿತೃಗಳಿಗೆ ಸೇರಿದವಳಾದ್ದರಿಂದ ಪ್ರಾಪ್ತ ವಯಸ್ಕಳಾದಾಗ ಸಕಾಲದಲ್ಲಿ ಅವಳನ್ನು ಯೋಗ್ಯ ವರನಿಗೆ ದಾನ ಮಾಡಬೇಕಾದ್ದು ಅವರ ಕರ್ತವ್ಯವೆಂದು ಧರ್ಮಶಾಸ್ತ್ರಕಾರರು ವಿಧಿಸಿದರು. ವಿವಾಹಕಾಲದಲ್ಲಿ ಕನ್ಯಾದಾನವನ್ನು ಮಾಡಲಾಗುತ್ತದೆ.

ಪಿತನೇ ಕನ್ಯಾದಾನ ಮಾಡಲು ಅಧಿಕಾರವುಳ್ಳವನೆಂದು ಗೃಹ್ಯಸೂತ್ರ ಹೇಳುತ್ತದೆ. ಸ್ಮೃತಿಗಳು ಈ ಅಧಿಕಾರವನ್ನು ತಂದೆಯ ಅನಂತರ ಪಿತಾಮಹನಿಗೆ, ಅಣ್ಣನಿಗೆ, ಮಾತೆಗೆ ಕ್ರಮವಾಗಿ ಕೊಟ್ಟಿವೆ. ನಾರದನಾದರೋ ಪಿತಾಮಹನಿಗೆ ಅಧಿಕಾರವನ್ನು ಕೊಡದೆ ಮಾತಾಮಹನಿಗೂ ರಾಜ್ಯಕ್ಕೂ ಕೊಟ್ಟಿದ್ದಾನೆ.

ಕನ್ಯೆಯನ್ನು ದಾನ ಮಾಡುವುದು ಕೇವಲ ಒಂದು ಹೊಣೆಗಾರಿಕೆಯನ್ನು ಕಳೆದುಕೊಳ್ಳುವ ಉದ್ದೇಶದಿಂದಲ್ಲ. ಕನ್ಯೆಯ ಪೋಷಕ ಅವಳನ್ನು ದಾನ ಮಾಡುವಾಗ ಅರ್ಥಗರ್ಭಿತವಾದ ಮಂತ್ರೋಚ್ಚಾರಣೆಯ ಮೂಲಕ ಧರ್ಮ ಅರ್ಥ ಕಾಮಗಳ ಪೂರೈಕೆಗಾಗಿ ಈ ದಾನವನ್ನು ಮಾಡುತ್ತಿರುವುದಾಗಿ ತಿಳಿಸಿ ಅವಳನ್ನು ಧರ್ಮ ಅರ್ಥ ಕಾಮಗಳ ಸಾಧನೆಯಲ್ಲಿ ತನ್ನ ಸಹಧರ್ಮಿಣಿಯಾಗಿರಲು ನಾನು ಸ್ವೀಕರಿಸುತ್ತಿದ್ದೇನೆಂದು ವರನಿಂದ ಮೂರು ಬಾರಿ ವಚನ ತೆಗೆದುಕೊಳ್ಳುತ್ತಾನೆ.

ಕನ್ಯೆಯನ್ನು ಸಾಲಂಕೃತಳಾಗಿ ದಾನ ಮಾಡಬೇಕೆಂಬ ಸಂಪ್ರದಾಯ ಹಿಂದೂ ಸಮಾಜದಲ್ಲಿ ರೂಢಿಗೆ ಬಂತು. ವಿವಾಹಸಂಸ್ಕಾರವನ್ನು ಇತರ ಸಂಸ್ಕಾರಗಳಂತೆ ಒಂದು ಯಜ್ಞವೆಂದು ಭಾವಿಸಲಾಗಿತ್ತು. ಯಜ್ಞಕಾಲದಲ್ಲಿ ಮಾಡುವ ದಕ್ಷಿಣಾಸಹಿತವಾದ ದಾನವನ್ನು ಮಾತ್ರ ಶ್ರೇಷ್ಠವೆಂದು ಪರಿಗಣಿಸಲಾಗಿದ್ದುದರಿಂದ, ಕನ್ಯಾದಾನದಲ್ಲಿ ದಕ್ಷಿಣೆಗೆ ಬದಲಾಗಿ ಆಭರಣಾದಿಗಳನ್ನು ಕನ್ಯೆಯೊಂದಿಗೆ ನೀಡುವ ಪದ್ಧತಿಯನ್ನು ಸ್ಥಾಪಿಸಲಾಯಿತು. ಅಲ್ಲದೆ ಸ್ತ್ರೀಯ ಸ್ಥಾನಮಾನಗಳನ್ನು ಭದ್ರಪಡಿಸುವ ಉದ್ದೇಶದಿಂದಲೂ ಅವಳಿಗೆ ಆಭರಣಗಳನ್ನು ಆಸ್ತಿಯಂತೆ ಪಡೆಯುವ ಹಕ್ಕನ್ನು ಕೊಡಲಾಯಿತು. ಅದನ್ನು ಸ್ತ್ರೀಧನವೆಂದು ಕರೆಯಲಾಯಿತು.

ದಾನಗಳಲ್ಲೆಲ್ಲ ಕನ್ಯಾದಾನ ಅತಿಶ್ರೇಷ್ಠವಾದುದೆಂಬ ದೃಢವಾದ ನಂಬಿಕೆ ಹಿಂದೂ ಸಮಾಜದಲ್ಲಿ ಬೆಳೆದು ಬಂತು. ಸತ್ಕುಲಪ್ರಸೂತಳಾದ ಕನ್ಯೆಯನ್ನು ಸತ್ಕುಲಪ್ರಸೂತನಾದ ವರನಿಗೆ ದಾನ ಮಾಡಿದರೆ ಅವಳು ಸತ್ಪುತ್ರನನ್ನು ಪಡೆದು, ಹುಟ್ಟಿದ ಕುಲವನ್ನೂ ಸೇರಿದ ಕುಲವನ್ನೂ ಉದ್ಧಾರ ಮಾಡುವಳೆಂಬ ನಂಬಿಕೆ ಇದೆ. ಆದ್ದರಿಂದ ಅವಳನ್ನು ದಾನ ಮಾಡುವಾಗ ವಧೂವರರ ಪ್ರವರ ಮತ್ತು ಗೋತ್ರಗಳನ್ನು ಪಠಿಸಿದ ಅನಂತರ ದಾನ ಮಾಡಲಾಗುತ್ತದೆ. ಹೆಣ್ಣುಶಿಶುವನ್ನು ಪಡೆಯುವುದು ಒಂದು ಭಾಗ್ಯವೆಂದು ಎಣಿಸಿ ಅದಕ್ಕಾಗಿ ಯಜ್ಞವನ್ನು ಸಹ ಮಾಡುತ್ತಿದ್ದರೆಂದು ಧರ್ಮಶಾಸ್ತ್ರಗಳಿಂದ ತಿಳಿದುಬಂದಿದೆ. ಆ ಶಿಶುವಿನಿಂದ ಎರಡು ಕುಲಗಳು ಉದ್ಧಾರವಾಗುವುದೆಂಬುದೇ ಇದರ ಮಹತ್ತ್ವಕ್ಕೆ ಕಾರಣವೆನ್ನಬಹುದು. (ಸಿ.ಎಸ್.ಬಿ.)

**ಕನ್ಯಾಮೇರಿ :** ಯಹೂದ್ಯ ಜನಾಂಗದವಳಾದ ಈಕೆ ಪ್ಯಾಲೆಸ್ಟೈನಿನ ಸಂತ ಜೋಸೆಫನ ಧರ್ಮಪತ್ನಿ. ಹೀಬ್ರೂ ಭಾಷೆಯಲ್ಲಿ ಮೇರಿ (ಮಿರಿಯಮ್) ಎಂದರೆ ಸಭ್ಯಸ್ತ್ರೀ ಎಂದರ್ಥ. ಯಹೂದ್ಯ ಜನಾಂಗದಲ್ಲಿ ಸುಪ್ರಸಿದ್ಧ ರಾಜನಾದ ದಾವೀದನ ವಂಶದವಳಾದ ಈಕೆ ಹುಟ್ಟಿದ್ದು ನಜ಼ಾರತ್ (ನಜರೇತು) ಎಂಬ ಹಳ್ಳಿಯಲ್ಲಿ. ತಂದೆ ಜೋರೆಂ ಎಂದೂ ತಾಯಿ ಅನ್ನಾ ಎಂದೂ ಪರಂಪರೆ ಹೇಳುತ್ತದೆ. ಜೀವಮಾನವಿಡೀ ಬ್ರಹ್ಮಚರ್ಯವನ್ನು ಪಾಲಿಸುವ ವ್ರತವಿಟ್ಟುಕೊಂಡಿದ್ದ ಈಕೆ ದೇವರ ಏಕಮಾತ್ರಪುತ್ರ ಭಗವಾನ್ ಯೇಸುಕ್ರಿಸ್ತನ ಮಾತೆಯಾಗುವ ಅತ್ಯುನ್ನತ ಹಾಗೂ ವಿಸ್ಮಯಕಾರಕ ಗೌರವಕ್ಕೆ ಪಾತ್ರಳಾದಳು. ದೇವರಿಂದ ಸೃಷ್ಟಿಸಲ್ಪಟ್ಟ ಎಲ್ಲ ಮಾನವರಲ್ಲಿ ಉತ್ತಮಳಾದ ಈಕೆ ಜೀವಿತಕಾಲವೆಲ್ಲ ಸರ್ವರಿಗೂ ಅಂಟಿಬರುವ ಆದಿಪಾಪದಿಂದ ವಿಮೋಚಿತಳಾಗಿದ್ದಳು. ಇದೂ ಅಲ್ಲದೆ ಮಾತೃವರ್ಗಕ್ಕೇ ಆದರ್ಶಪ್ರಾಯವಾದ ಸಜ್ಜೀವನವನ್ನು ನಡೆಸಿ, ಗತಿಸಿದೊಡನೆ ಇತರರಂತೆ ಕೊಳೆಯದೆ, ದೈವಕೃಪೆಯಿಂದ ಸಶರೀರೆಯಾಗಿ ಸ್ವರ್ಗಕ್ಕೆತ್ತಲ್ಪಟ್ಟಳೆಂದು ಕೆಥೊಲಿಕರು ನಂಬುತ್ತಾರೆ.

ಕ್ರೈಸ್ತ ಮಂಡಲಿಯಲ್ಲಿ ಮೇರಿಗೆ ಗೌರವದ ಸ್ಥಾನವಿದೆ. ಯೇಸುವಿನ ಲೋಕಹಿತ ಕಾರ್ಯದಲ್ಲಿ ಇವಳೂ ಭಾಗಿಯಾಗಿ ಸಲ್ಲಿಸಿದ ಸೇವೆಯ ಫಲವಾಗಿ ಕೆಥೊಲಿಕರು ಇವಳಲ್ಲಿ ಅನುಪಮ ಭಕ್ತಿಯನ್ನು ತೋರಿಸುತ್ತಾರೆ. ಯೇಸುವಿನ ತರುವಾಯ, ಇವಳಿಗೆ ಇನ್ನೂ ಹೆಚ್ಚಿನ ಗೌರವ ಸಲ್ಲುವಂತಾಯಿತು. ಆಗಾಗ್ಗೆ, ಕೆಲವು ಸ್ಥಳಗಳಲ್ಲಿ ಈಕೆ ಈಗಲೂ ಕಾಣಿಸಿಕೊಂಡು, ಸತ್ಯದ ದಾರಿಯಲ್ಲಿ ನಡೆಯುವಂತೆ ಪ್ರೋತ್ಸಾಹಿಸುತ್ತಿರುವಳೆಂದು ಜನ ನಂಬಿದ್ದಾರೆ. (ಎ.ಪಿಆರ್. : ಡಿ.ಎಸ್‌ಪಿ.)

**ಕನ್ಯಾರಾಶಿ :** ಆಕಾಶದಲ್ಲಿರುವ 88 ನಕ್ಷತ್ರಪುಂಜಗಳಲ್ಲಿ ಒಂದು (ವರ್ಗೊ). ವಿಷುವದಂಶ 11 ಗಂ. 35 ಮಿ–15 ಗಂ. 10 ಮಿ. ಘಂಟಾವೃತ್ತಾಂಶ 15° ಉ–22° ದ. ಪ್ರಧಾನ ನಕ್ಷತ್ರಗಳು ಹಸ್ತಾ ಮತ್ತು ಚಿತ್ತಾ. ಸಪ್ತರ್ಷಿಮಂಡಲದ ವಕ್ರರೇಖೆಯನ್ನು ಸರಾಗವಾಗಿ ಪೂರ್ವ–ದಕ್ಷಿಣ ದಿಕ್ಕಿಗೆ ವಿಸ್ತರಿಸಿದಾಗ ಮೊದಲು ಎದುರಾಗುವ ಉಜ್ಜ್ವಲ ನಕ್ಷತ್ರ ಸ್ವಾತೀ; ತರುವಾಯ ಸಾಧಾರಣ ಪ್ರಕಾಶದ ಚಿತ್ತಾ; ಮುಂದೆ ನಾಲ್ಕು ನಕ್ಷತ್ರಗಳು ರಚಿಸುವ ಸ್ಪಷ್ಟ ಚತುಷ್ಕೋನಾಕೃತಿಯಲ್ಲಿ (ಹಸ್ತಾ) ಈ ರೇಖೆ ಅಂತ್ಯವಾಗುವುದು. ರಾಶಿಚಕ್ರ ಮತ್ತು ವಿಷುವದ್ವೃತ್ತ ಇವೆರಡರ ಮೇಲೆಯೂ ಕನ್ಯಾರಾಶಿ ಇದೆ. ಸೂರ್ಯನ ವಾರ್ಷಿಕ ಭೂಪರಿಭ್ರಮಣೆಯಲ್ಲಿ ಕನ್ಯಾರಾಶಿ ಒಂದು ಗಡಿ ಬಿಂದು–ಇಲ್ಲಿ ಸೂರ್ಯ ವಿಷುವದ್ವೃತ್ತವನ್ನು ಉತ್ತರದಿಂದ ದಕ್ಷಿಣಕ್ಕೆ ಅಡ್ಡಹಾಯುತ್ತದೆ (ಸುಮಾರು ಸೆಪ್ಟೆಂಬರ್ 23). ಮುಂದಿನ ದಿವಸಗಳಲ್ಲಿ (ಮಾರ್ಚ್ 21ರ ವರೆಗೆ) ಸೂರ್ಯ ದಕ್ಷಿಣಾರ್ಧ ಗೋಳದಲ್ಲಿಯೇ ಇರುವುದರಿಂದ ಉತ್ತರಾರ್ಧಗೋಳದ ಜನರಿಗೆ (ಉದಾಹರಣೆ ಭಾರತ) ಹಗಲಿನ ಉದ್ದ ರಾತ್ರಿಗಿಂತ ಕಿರಿದು. ರೇಡಿಯೋ ಮತ್ತು ಎಕ್ಸ್ ಕಿರಣಾಕರಗಳನ್ನು ಕನ್ಯಾರಾಶಿಯಲ್ಲಿ ಗುರುತಿಸಲಾಗಿದೆ.



ಕನ್ಯಾರಾಶಿ

**ಕನ್ಯಾಶುಲ್ಕ :** ಮದುವೆಯ ಕಾಲದಲ್ಲಿ ಗಂಡು ಹೆಣ್ಣಿನ ಕಡೆಯವರಿಗೆ ತೆರುವ ಶುಲ್ಕ. ಸಮಾಜಶಾಸ್ತ್ರಕಾರನಾದ ಮನು ಸಮಾಜಸಮ್ಮತವಾದ ನಾಲ್ಕು ವಿವಾಹಪದ್ಧತಿಗಳನ್ನು ನಿರೂಪಿಸಿದ್ದಾನೆ. ಅವು ಪ್ರಾಜಾಪತ್ಯ, ಆರ್ಷ, ದೈವ ಮತ್ತು ಬ್ರಾಹ್ಮ ವಿವಾಹಗಳು. ಆರ್ಷವಿವಾಹದಲ್ಲಿ ಕನ್ಯಾಪಿತೃ ವರನ ಕಡೆಯಿಂದ ಒಂದು ಜೊತೆ ಗೋವುಗಳನ್ನು ತೆಗೆದುಕೊಂಡು ಅವಳನ್ನು ಅವನಿಗೆ ಒಪ್ಪಿಸುತ್ತಾನೆ. ಹೀಗೆ ತೆಗೆದುಕೊಳ್ಳುವುದನ್ನು ಕನ್ಯಾಶುಲ್ಕವೆಂದು ಕರೆಯಲಾಗಿದೆ. ಇದರಲ್ಲಿ ಕನ್ಯೆಯನ್ನು ವಿಕ್ರಯಮಾಡುವ ಉದ್ದೇಶವಿದ್ದಂತೆ ಕಾಣುವುದಿಲ್ಲ. ಏಕೆಂದರೆ ಗೋವುಗಳನ್ನು ಯಜ್ಞಕ್ಕಾಗಿ ತೆಗೆದುಕೊಳ್ಳಲಾಗುತ್ತಿತ್ತೇ ಹೊರತು ಲಾಭಕ್ಕಾಗಿ ಅಲ್ಲ. ಮತ್ತು ಅದು ಕನ್ಯೆಯ ಬೆಲೆಯೂ ಅಲ್ಲ. ಅವನ್ನು ಪುನಃ ಕನ್ಯೆಯೊಂದಿಗೆ ದಾನಮಾಡಲಾಗುತ್ತಿತ್ತು. ಆಶ್ವಲಾಯನ, ಬೌಧಾಯನ ಮತ್ತು ಆಪಸ್ತಂಬ ಸ್ಮೃತಿಗಳೂ ಕನ್ಯಾಶುಲ್ಕವನ್ನು ಪ್ರಸ್ತಾಪಿಸಿವೆ.

ಕನ್ಯಾಶುಲ್ಕವನ್ನು ತೆಗೆದುಕೊಳ್ಳುವ ಪದ್ಧತಿ ಯಜ್ಞಯಾಗಾದಿಗಳ ಪ್ರಾಬಲ್ಯ ಕಡಿಮೆಯಾದ ಮೇಲೆ ಕ್ರಮೇಣ ನಿಂತುಹೋದಂತೆ ತೋರುತ್ತದೆ. ದಾನವನ್ನು ಕೊಡುವಾಗ ಯಾವ ನಿಬಂಧನೆಯೂ ಇರಕೂಡದೆಂಬ ಭಾವನೆ ಬಂದುದೂ ಇದು ನಿಂತುಹೋಗುವುದಕ್ಕೆ ಕಾರಣವೆನ್ನಬಹುದು. ತ್ರಿವರ್ಣಗಳಲ್ಲಿ ಕಾಣಬರದಿದ್ದರೂ ಶೂದ್ರವರ್ಣದಲ್ಲಿ ಇದು ಈಗ ವಾಡಿಕೆಯಲ್ಲಿದೆ ಎನ್ನಬಹುದು.

ಉತ್ತರ ಅಮೆರಿಕದ ಅನೇಕ ಪ್ರಾಚೀನ ಜನಗಳಲ್ಲಿ ವಿವಾಹದ ಎರಡು ಕುಲಗಳೂ ಸಮಾನಬೆಲೆಯುಳ್ಳ ವಸ್ತ್ರಾಭರಣಗಳನ್ನು ವಿನಿಮಯ ಮಾಡಿಕೊಳ್ಳುತ್ತವೆ. ಕನ್ಯಾಶುಲ್ಕವನ್ನೂ ವರದಕ್ಷಿಣೆಯನ್ನೂ ಸರಿಹೊಂದಿಸುವ ಈ ಪದ್ಧತಿಯನ್ನು ಕನ್ಯಾವಿಕ್ರಯವೆನ್ನಲಾಗುವುದಿಲ್ಲ. ಕನ್ಯಾಶುಲ್ಕಕ್ಕೆ ಬದಲಾಗಿ ಏನನ್ನೂ ಪಡೆಯದಿದ್ದಲ್ಲಿ, ಪತಿಗೆ ಕೆಲವು ವಿಶೇಷ ಹಕ್ಕುಗಳು ದೊರೆಯುತ್ತವೆ. ನ್ಯೂಗಿನಿಯಲ್ಲಿ, ಪತ್ನಿ ದ್ರೋಹವೆಸಗಿದರೆ ಪತಿ ಕನ್ಯಾಶುಲ್ಕವನ್ನು ಹಿಂದಕ್ಕೆ ಪಡೆಯುತ್ತಾನೆ. ಆದರೆ ಅವಳಿಗೆ ಸೇರಿದ ಆಸ್ತಿ ಮತ್ತು ಮಕ್ಕಳ ಮೇಲೆ ಅವನಿಗೆ ಯಾವ ಅಧಿಕಾರವೂ ಇಲ್ಲ.

ಉತ್ತರ ಸೈರ್ ಪ್ರದೇಶದಲ್ಲಿ, ಮಕ್ಕಳನ್ನು ಪಡೆಯುವ ವರೆಗೂ ವಧುವನ್ನು ಪತ್ನಿಯೆಂದು ಗಣಿಸಲಾಗುವುದಿಲ್ಲ. ಅನಂತರ ಅವಳಿಗೆ ಕೊಡಬೇಕಾದ ಶುಲ್ಕವನ್ನು ಅವಳ ತಾಯಿಗೆ ಕೊಡಲಾಗುತ್ತದೆ. ಅದನ್ನು ಅವಳ ಸಹೋದರ ಕ್ರಮವಾಗಿ ತನ್ನ ವಧುವಿಗೆ ಕೊಡಬೇಕಾಗುತ್ತದೆ. ಸ್ತ್ರೀ ಪತಿವಂಚಕಳಾದರೆ ಅವಳ ಶುಲ್ಕವನ್ನು ಹಿಂತಿರುಗಿಸಬೇಕಾಗುತ್ತದೆ. ಅಥವಾ ಅವಳ ಸಹೋದರನ ಮಕ್ಕಳನ್ನೋ ಮಕ್ಕಳಿಲ್ಲದ ಪಕ್ಷದಲ್ಲಿ ಅವನ ಪತ್ನಿಯನ್ನೋ ಒಪ್ಪಿಸಬೇಕಾಗುತ್ತದೆ. ಕನ್ಯಾವಿಕ್ರಯ ಸ್ತ್ರೀಯ ಸ್ಥಾನಮಾನಗಳಿಗೆ ಅವಹೇಳನ ಮಾಡಿದಂತಾಗಿರದೆ ಒಂದು ವಿಧದಲ್ಲಿ ಗೌರವಾರ್ಹ ವೆಂದೆಣಿಸಲಾಗಿದೆ. ಬಂಟೂನ ಪಂಗಡದಲ್ಲಿ ಕನ್ಯಾಶುಲ್ಕವನ್ನು ನೀಡುವುದು ಅವಳ ಪಾತಿವ್ರತ್ಯಕ್ಕೆ ಪ್ರಶಸ್ತಿಪತ್ರದಂತೆ ಎಂದು ಪರಿಗಣಿಸಲಾಗಿದೆ.

ಆಫ್ರಿಕದಲ್ಲಿ ಕನ್ಯಾಶುಲ್ಕವನ್ನು ಕೊಡುವಷ್ಟು ಹಣವಂತರಾದವರು ಮಾತ್ರ ಅನೇಕ ಪತ್ನಿಯರನ್ನು ಪಡೆಯುವರು.

ಇಸ್ಲಾಂ ಮತದಂತೆ ಸೈಬೀರಿಯದ ತಾರ್ತರಿಯವ ತನ್ನ ಪತ್ನಿಯನ್ನು ಇಚ್ಛೆ ಬಂದಾಗ ವಿಚ್ಛೇದ ಮಾಡಬಲ್ಲನಾದರೂ ತನ್ನಿಂದ ಅವಳ ಕಡೆಯವರು ಪಡೆದ ಅನೇಕ ಪಶುಪ್ರಾಣಿಗಳಿಗಾಗಿ ಹೀಗೆ ಮಾಡಲು ಆತ ಚಿಂತೆಗೆಯುತ್ತಾನೆ. ಮತ್ತೊಂದು ಪಂಗಡದಲ್ಲಿ ಕನ್ಯೆಗಾಗಿ ಅನೇಕ ಕುದುರೆಗಳನ್ನು ನೀಡುವ ಪದ್ಧತಿಯೂ ಇದೆ.

ಕೆಲವು ವೇಳೆ ಕನ್ಯಾಶುಲ್ಕ ವಿವಾಹಕ್ಕೆ ಅಡ್ಡಬರ ವಷ್ಟು ಅಧಿಕವಾಗಿರಬಹುದು. ಅದನ್ನು ಕೊಡುವುದು ಕಷ್ಟಸಾಧ್ಯವಾಗಿರುವಲ್ಲಿ ವಿವಾಹವಾಗುವವರ ವಯಸ್ಸು ಮೀರಬಹುದು. ಕೆಲವು ಸಮಾಜಗಳಲ್ಲಿ ವರದಕ್ಷಿಣೆಯಂತೆಯೇ ಇದೂ ಎಷ್ಟೋ ಮಂದಿ ಅವಿವಾಹಿತರಾಗಿರುವುದಕ್ಕೆ ಕಾರಣವಾಗಬಹುದು. ಕನ್ಯಾಶುಲ್ಕವನ್ನು ಒಟ್ಟಿಗೆ ಕೊಡಲು ಕಷ್ಟಸಾಧ್ಯವಾಗಿರುವುದರಿಂದ ಕೆಲವು ಪಂಗಡಗಳಲ್ಲಿ ಅದನ್ನು ವಿಭಾಗಿಸಿ, ವಿವಾಹಕಾಲದಲ್ಲಿ ಮತ್ತೆ ಸಂತಾನ ಪಡೆದಾಗ ಕೊಟ್ಟು ತೀರಿಸಲಾಗುತ್ತದೆ. ಕನ್ಯಾಶುಲ್ಕವನ್ನು ಕೊಡಲಾಗದಿದ್ದವರು ಸಮೀಪಬಂಧುಗಳಲ್ಲಿಯೇ ವಿವಾಹವಾಗುವುದೂ ಉಂಟು.

ಭಾರತದಲ್ಲಿ ಮತ್ತು ಯೂರೋಪಿನಲ್ಲಿ ಕನ್ಯಾಶುಲ್ಕಕ್ಕಿಂತಲೂ ವರದಕ್ಷಿಣೆಯೇ (ನೋಡಿ) ಹೆಚ್ಚು ರೂಢಿಯಲ್ಲಿದೆ. (ಸಿ.ಎಸ್.ಬಿ.)

**ಕನ್ಯಾಶ್ರೀ :** ಬೆಸಿಡಿಯೋಮೈಸೀಟೀಸ್ ವರ್ಗ, ಹೋಮೋಬೆಸಿಡಿಯೋಮೈಸೀಟೀಸ್ ಉಪವರ್ಗ, ಫೆಲೇಲೀಸ್ ಗಣಕ್ಕೆ ಸೇರಿದ ಹಲವಾರು ಜಾತಿಯ ಶಿಲೀಂಧ್ರಗಳಿಗೆ ಇರುವ ಸಾಮಾನ್ಯ ಹೆಸರು. ಇವುಗಳ ಫಲೋತ್ಪಾದಕಾಂಗಗಳು (ಫ್ರುಕ್ಟಿಫಿಕೇಶನ್ಸ್) ಬಹಳ ಕೆಟ್ಟ ವಾಸನೆ ಬೀರುವುದರಿಂದ ಇವನ್ನು ಇಂಗ್ಲಿಷಿನಲ್ಲಿ ಸ್ಟಿಂಕ್ ಹಾರ್ನ್ಸ್ ಎನ್ನುತ್ತಾರೆ. ಪೂತಿಜನ್ಯ ಸಸ್ಯಗಳಾದ ಇವು ಸಾವಯವ ಯುಕ್ತವಾದ ಮಣ್ಣು, ಕೊಳೆಯುತ್ತಿರುವ ಮರ ಮತ್ತು ಸಗಣಿ ಗುಪ್ಪೆಗಳ ಮೇಲೆ ಬೆಳೆಯುತ್ತವೆ.

ಇವುಗಳ ದೇಹ ಬಿಳಿಯ, ಹಳದಿ ಬಣ್ಣದ ಅಥವಾ ಕಿತ್ತಳೆ ಬಣ್ಣದ ಸೂಕ್ಷ್ಮ ಎಳೆಗಳಿಂದ ಕೂಡಿದ ಕವಕಜಾಲವಾಗಿದೆ (ಮೈಸೀಲಿಯ). ಇದರಲ್ಲಿ ಪ್ರೈಮರಿ, ಸೆಕೆಂಡರಿ ಮತ್ತು ಟರ್ಶಿಯರಿ ಎಂಬ ಮೂರು ಅವಸ್ಥೆಗಳನ್ನು ಗುರುತಿಸಬಹುದು. ಸಾಧಾರಣವಾಗಿ ಕವಕಜಾಲ ಮಣ್ಣಿನಲ್ಲಿ ಹುದುಗಿಕೊಂಡು ಕವಲೊಡೆದು ಬೆಳೆಯುತ್ತದೆ. ಸಂತಾನಾಭಿವೃದ್ಧಿಯ ಕಾಲದಲ್ಲಿ ಸಸ್ಯದೇಹದ ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಕೋಳಿಮೊಟ್ಟೆಯಾಕಾರದ ಬಿಳಿಯ ಬಣ್ಣದ ರಚನೆಗಳು ಬೆಳೆಯ ತೊಡಗುತ್ತವೆ. ಇವುಗಳೊಳಗೆ ವಿಶಿಷ್ಟ ಬಗೆಯ ಬೆಸಿಡಿಯಗಳೆಂಬ ಸಣ್ಣ ಚೀಲಗಳು ಇವೆ. ಇವುಗಳಿಂದ ಬೆಸಿಡಿಯೋಸ್ಪೋರುಗಳೆಂಬ ಬೀಜಾಣುಗಳು ಉತ್ಪತ್ತಿಯಾಗುತ್ತವೆ. ಮೊದಮೊದಲು ಬೆಸಿಡಿಯಗಳ ಸುತ್ತ ಒಂದು ಬಗೆಯ ಆವೃತಕೋಶ (ಪೆರಿಡಿಯಮ್) ಇರುತ್ತದೆ. ಕ್ರಮೇಣ ಅವು ಬಲಿತಂತೆ ಆವೃತಕೋಶ ಬಿರಿದು ಸ್ತಂಭಾಕೃತಿಯ ಸ್ಪಂಜಿನಂಥ ಫಲೋತ್ಪಾದಕಾಂಗಗಳು ಹೊರಬರುತ್ತವೆ. ಇವುಗಳಲ್ಲಿ ತುದಿಯಲ್ಲಿರುವ ಪೈಲಿಯಸ್ ಎಂಬ ಟೋಪಿಯಂಥ ಭಾಗವನ್ನೂ ಸ್ಟೈಪ್ ಎಂಬ ಉದ್ದವಾದ ತೊಟ್ಟಿನ ಭಾಗವನ್ನೂ ಕಾಣಬಹುದು. ಬುಡದಲ್ಲಿ ಬಿರಿದ ಆವೃತಕೋಶ ಒಂದು ರೀತಿಯ ಪೊರೆಯಂತೆ ಸುತ್ತಿಕೊಂಡಿದೆ. ಪೈಲಿಯಸ್ ಭಾಗ ಬೇರೆ ಬೇರೆ ಕನ್ಯಾಶ್ರೀಗಳಲ್ಲಿ ಬೇರೆ ಬೇರೆ ಆಕಾರವಾಗಿರುತ್ತದೆ.



ಫ್ಯಾಲಸ್ ಇಂಪ್ಯೂಡಿಕಸ್ ಎಂಬ ಕನ್ಯಾಶ್ರೀ

ಪೈಲಿಯಸ್ ಭಾಗದ ಒಳಗಡೆ ಗ್ಲೀಬ ಎಂಬ ಫಲವತ್ತಾದ ವಲಯವಿದೆ. ಇದರಲ್ಲೇ ಬೆಸಿಡಿಯಗಳು ಇರುವುವು. ಬೆಸಿಡಿಯಗಳು ಬಲಿತು ಬೀಜಾಣುಗಳನ್ನು ಉತ್ಪಾದಿಸುತ್ತವೆ. ಕ್ರಮೇಣ ಗ್ಲೀಬ ಕರಗಿಹೋಗಿ ಬೀಜಾಣುಗಳು ಹೊರಬರುತ್ತವೆ. ಜಿಗುಟಾಗಿ ಹಸಿರು ಬಣ್ಣಕ್ಕಿರುವ ಇವು ಸಿಪಿಯಾಗಿವೆ. ಇವು ಹೊರಬರುವ ಕಾಲದಲ್ಲಿ ಒಂದು ಬಗೆಯ ದುರ್ವಾಸನೆಯೂ ಹೊರಡುತ್ತಿದ್ದು ಕೀಟಗಳನ್ನು ಆಕರ್ಷಿಸುತ್ತದೆ. ಕೀಟಗಳು ಪೈಲಿಯಸ್ ಭಾಗದ ಮೇಲೆ ಕುಳಿತಾಗ ಅವಕ್ಕೆ ಬೀಜಾಣುಗಳು ಅಂಟಿಕೊಳ್ಳುತ್ತವೆ. ಈ ರೀತಿ ಬೀಜಾಣುಗಳ ಪ್ರಸಾರ ನಡೆಯುತ್ತದೆ.

ಕನ್ಯಾಶ್ರೀಗಳಲ್ಲಿ ಅನೇಕ ಜಾತಿಗಳಿವೆ. ಅವುಗಳಲ್ಲಿ ಫ್ಯಾಲಸ್ ಇಂಪ್ಯೂಡಿಕಸ್, ಕ್ಲಾತ್ರಸ್, ಡಿಕ್ಟಿಯೋಫೋರ ಮುಂತಾದುವು ಮುಖ್ಯವಾದುವು. (ಎ.ಕೆ.)

**ಕನ್ವಾಲ್ವುಲಸ್ :** ಕಲ್ವಾಲ್ವುಲೇಸೀ ಕುಟುಂಬಕ್ಕೆ ಸೇರಿದ ಬಳ್ಳಿಯಂಥ ಏಕವಾರ್ಷಿಕ ಅಥವಾ ಬಹುವಾರ್ಷಿಕ ಸಸ್ಯಜಾತಿ. ಸುಂದರವಾದ ಹೂಬಿಡುವ ಈ ಜಾತಿಯಲ್ಲಿ ಅನೇಕ ಪ್ರಭೇದಗಳಿವೆ. ಇವು ಉಷ್ಣ ಹಾಗೂ ಸಮಶೀತೋಷ್ಣವಲಯ ಪ್ರದೇಶಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತವೆ. ಕೆಲವನ್ನು ತೋಟಗಳಲ್ಲಿ ಅಲಂಕಾರಕ್ಕಾಗಿ ಬೆಳೆಸುತ್ತಾರೆ. ಬಳ್ಳಿಯಂತೆ ನೆಲದ ಮೇಲೆ ಹರಡಿಕೊಂಡು ಅಥವಾ ಯಾವುದಾದರೂ ಆಸರೆಯನ್ನು ಹಬ್ಬಿ ಬೆಳೆಯುವುದೂ ಸರಳವಾದ ಅಥವಾ ಹಾಲೆಗಳುಳ್ಳ ಬಾಣದ ಮೊನೆಯಂಥ ಅಥವಾ ಹೃದಯದಾಕಾರದ ಎಲೆಗಳೂ ಸಾಧಾರಣವಾಗಿ ಎಲೆಗಳ ಕಂಕುಳಲ್ಲಿ ಒಂದೊಂದೇ ಹೂವಿರುವುದೂ ಹೂವಳ ಗಂಟೆಯಾಕಾರದ್ದೋ ಆಲಿಕೆಯಾಕಾರದ್ದೋ ಆಗಿರುವುದೂ ಈ ಗಿಡದ ಮುಖ್ಯ ಲಕ್ಷಣಗಳು. ಹೂಗಳು ನೀಲಿ ಅಥವಾ ಊದಾ ಬಣ್ಣಕ್ಕಿದ್ದು ಅವುಗಳ ಕೇಂದ್ರಭಾಗ ಬಿಳಿ ಅಥವಾ ಹಳದಿ ಬಣ್ಣದ್ದಾಗಿರುತ್ತದೆ.

ತೋಟಗಾರಿಕೆ ಪ್ರಾಮುಖ್ಯವನ್ನು ಪಡೆದಿರುವ ಪ್ರಭೇದಗಳು ಇವು: ಕ.ಮೇಜಸ್ ಮತ್ತು ಕ.ಮೈನರ್ ಅಥವಾ ಕ.ಟ್ರೈಕಲರ್.

ಇವುಗಳಲ್ಲಿ ಮೊದಲನೆಯದು ಮನೆಗಳ ಮೇಲೆ ಮತ್ತು ಅಲಂಕಾರದ ತಂತಿಗಳ ಮೇಲೆ ಹಬ್ಬಿಸುವುದಕ್ಕೆ ಯೋಗ್ಯವಾದ ಬಳ್ಳಿ. ಪ್ರತಿನಿತ್ಯ ಯಥೇಚ್ಛವಾಗಿ ಹೂಬಿಡುತ್ತದೆ. ಹೂಗಳು ಮುಂಜಾನೆ ಅರಳಿ ಮಧ್ಯಾಹ್ನ ಮುಚ್ಚಿಕೊಳ್ಳುತ್ತವೆ ಯಾದ್ದರಿಂದ ಈ ಗಿಡವನ್ನು ಮಾರ್ನಿಂಗ್ ಗ್ಲೋರಿ ಎಂದು ಕರೆಯುವುದುಂಟು. ಕ.ಮೈನರ್ ಎಂಬುದು ಚಿಕ್ಕದಾದ ವಾರ್ಷಿಕ ಬಳ್ಳಿ. ಬುಟ್ಟಿಗಳಲ್ಲೊ ಅಂಚುಗಳಲ್ಲೊ ಸುಲಭವಾಗಿ ಬೆಳೆಸಬಹುದು. ಎರಡೂ ಬಗೆಗಳನ್ನು ಬೀಜದ ಮುಖಾಂತರ ವೃದ್ಧಿಸುತ್ತಾರೆ. ಬೀಜಗಳನ್ನು ಬೇಸಿಗೆಕಾಲ ಬಿಟ್ಟು ಇನ್ನಾವ ಕಾಲದಲ್ಲಾದರೂ ಬಿತ್ತಬಹುದು. (ಕೆ.)

**ಕನ್ಹೇರಿ :** ಬೊಂಬಾಯಿಯ ಹತ್ತಿರವಿರುವ ಒಂದು ಸ್ಥಳ. ಬಂಡೆಗಲ್ಲಿನಲ್ಲಿ ಕೊರೆದ ಎಪ್ಪತ್ತಕ್ಕೂ ಮೇಲ್ಪಟ್ಟು ಬೌದ್ಧ ಗುಹಾಂತರ್ದೇವಾಲಯಗಳೂ ವಿಹಾರಗಳೂ ಇಲ್ಲಿ ಇವೆ. ಕ್ರಿ.ಶ. ಸು. 180ರಲ್ಲಿ ಕೊರೆಯಲಾದ, ಹೀನಯಾನ ಪಂಥಕ್ಕೆ ಸಂಬಂಧಿಸಿದ ಚೈತ್ಯ ಗುಹಾಂತರ್ದೇವಾಲಯು ಇವುಗಳಲ್ಲಿ ಮುಖ್ಯವಾದ್ದು. ಇದರ ಸುತ್ತಮುತ್ತಲಿನ ಪ್ರದೇಶ ಗಿಡಮರಗಳಿಂದಲೂ [illegible] [illegible] ಝರಿಗಳಿಂದಲೂ ಕೂಡಿ ರಮ್ಯವಾಗಿದೆ. ಈ ಚೈತ್ಯ ಕಾರ್ಲಾ ಚೈತ್ಯಾಲಯದ ಒಂದು



ಕನ್ಹೇರಿ-ಗುಹೆ 3 : ಮಿಥುನ ಶಿಲ್ಪಗಳು



ಕನ್ಹೇರಿ-ಗುಹೆ 2 : ಸ್ತೂಪ

ಅನುಕರಣೆ. ಅದರ ಕೈರಷ್ಟು ಮಾತ್ರ ಇದು ವಿಸ್ತಾರವಾಗಿದೆ. ಇದನ್ನು ಅಪೂರ್ಣವಾಗಿ ಕೆತ್ತಲಾಗಿದ್ದು, ಕ್ರಿ. ಶ. 5ನೆಯ ಶತಮಾನದ ವರೆಗೆ ಇದು ಹೀನಯಾನ ಪಂಥೀಯರ ಪ್ರಾರ್ಥನಾಮಂದಿರವಾಗಿತ್ತು. ಮಹಾಯಾನ ಪಂಥದವರು ಬೌದ್ಧ ಧರ್ಮವನ್ನು ಪುನರುಜ್ಜೀವನಗೊಳಿಸುವ ಕಾಲಕ್ಕೆ ಇದರ ಹೊರಭಾಗದಲ್ಲಿ ಕೆಲವು ಸುಂದರ ದೇವತಾವಿಗ್ರಹಗಳನ್ನು ನಿರ್ಮಿಸಿದರು.

ಈ ಚೈತ್ಯಮಂಟಪವನ್ನು ಪ್ರವೇಶಿಸಲು ಮೂರು ದ್ವಾರಗಳಿವೆ. ಹಿಂಭಾಗದಲ್ಲಿ ಇದು ಅರ್ಧವರ್ತುಲಾಕಾರವಾಗಿದೆ. ಇದರ ಉದ್ದ 86′, ಅಗಲ 40′ ಮತ್ತು ಎತ್ತರ 50′. ಮಧ್ಯ ಅಂಕಣವನ್ನು 38 ಕಂಬಗಳು ಬೇರ್ಪಡಿಸುತ್ತವೆ. ಇವು ಕೆಲಮಟ್ಟಿಗೆ ಕಾರ್ಲಾ ಚೈತ್ಯದ ಕಂಬಗಳನ್ನು ಹೋಲುತ್ತವೆ.

ಈ ಗುಹಾಂತರ್ದೇವಾಲಯದ ಮುಂದಿನ ಅಂಗಳದಲ್ಲಿ ಕಾರ್ಲಾ ಚೈತ್ಯದಲ್ಲಿರುವಂತೆ ಎರಡು ಸಿಂಹಸ್ತಂಭಗಳಿವೆ. ಅವು ಇಲ್ಲಿ ಕಲ್ಲಿಗೆ ಹೊಂದಿಕೊಂಡಿವೆ; ಪ್ರತ್ಯೇಕವಾಗಿ ನಿಂತಿಲ್ಲ. (ಎ.ಎಂ.ಎ.)

**ಕಪಿಗಳು :** ಸಸ್ತನಿವರ್ಗದ ಪ್ರೈಮೇಟುಗಳ ಗಣದ ಆಂತ್ರೊಪಾಯ್ಡಿಯ ಉಪಗಣಕ್ಕೆ ಸೇರಿದ ಪ್ರಾಣಿಗಳು (ಮಂಕೀಸ್). ಮನುಷ್ಯ ಮತ್ತು ವಾನರಗಳನ್ನೂ ಒಳಗೊಂಡಿರುವ ಈ ಉಪಗಣದಲ್ಲಿ ಬಾಲವಿರುವ ಪ್ರಾಣಿಗಳನ್ನು ಮಾತ್ರ ಕಪಿಗಳೆನ್ನಬಹುದು. ಮಂಗ, ಕೋಡಗ, ಕೋತಿ ಮುಂತಾದುವು ಇವುಗಳ ಪರ್ಯಾಯ ನಾಮಗಳು. ಆಂತ್ರೊಪಾಯ್ಡಿಯ ಉಪಗಣದಲ್ಲಿ ಪ್ಲಾಟಿರೈನಿ ಮತ್ತು ಕ್ಯಾಟರೈನಿ ಎಂಬ ಎರಡು ಬುಡಕಟ್ಟುಗಳಿವೆ. ಮೊದಲನೆಯ ಬುಡಕಟ್ಟಿನ ಕಪಿಗಳಿಗೆ ನವಪ್ರಪಂಚದ (ಅಮೆರಿಕ ಮುಂತಾದ ದೇಶಗಳು) ಕಪಿಗಳೆಂತಲೂ ಎರಡನೆಯ ಬುಡಕಟ್ಟಿನ ಪ್ರಾಣಿಗಳಿಗೆ ಪ್ರಾಚೀನ ಪ್ರಪಂಚದ ಕಪಿಗಳೆಂತಲೂ ಹೆಸರು.

ನವಪ್ರಪಂಚದ ಕಪಿಗಳು ದಕ್ಷಿಣ ಮತ್ತು ಮಧ್ಯ ಅಮೆರಿಕಗಳಲ್ಲಿ ಹೆಚ್ಚಾಗಿ ಕಾಣಬರುತ್ತವೆ. ದಕ್ಷಿಣ ಮೆಕ್ಸಿಕೋವರೆಗೂ ಇವುಗಳ ಪ್ರಸಾರವುಂಟು. ಈ ಬುಡಕಟ್ಟಿನ ಕೋತಿಗಳಲ್ಲಿ ಮೂಗಿನ ಹೊಳ್ಳೆಗಳು ಮೇಲ್ಮುಖವಾಗಿ ತೆರೆದಿವೆ. ಅವುಗಳ ಮಧ್ಯೆ

ಅಗಲವಾದ ಅಸ್ಥಿತಟ್ಟೆಯ ಗೋಡೆಯಿದೆ. ಬಹುಪಾಲು ಕಪಿಗಳಲ್ಲಿ ಬಾಲ ಸುರುಳಿ ಸುತ್ತಿಕೊಳ್ಳುವಂತಿದೆ. ಏಮರು ಬದರಾಗಿಲ್ಲದ ಕಾರಣ ಹೆಬ್ಬೆರಳನ್ನು ಅದೇ ಹಸ್ತದ ಇತರ ಬೆರಳುಗಳಿಗೆ ಮುಟ್ಟಿಸಲು ಸಾಧ್ಯವಿಲ್ಲ. ದವಡೆಯಲ್ಲಿ ಆಹಾರ ಶೇಖರಿಸ ಬಹುದಾದ ಚೀಲಗಳಿಲ್ಲ. ಕುಂಡೆಗಳ ಮೇಲೆ ರೋಮಗಳಿವೆ. ಕಿವಿಯೊಳಗಿನ ಟಿಂಪ್ಯಾನಿಕ್ ಮೂಳೆ ಸರಳವಾಗಿದೆ. ಅದರಲ್ಲಿ ಯಾವ ಬಗೆಯ ಎಲುಬಿನ ಕೊಳವೆಯೂ ಇಲ್ಲ. ಕೆರೋಟಿಡ್ ರಕ್ತನಾಳ ಪರಯಾಟಿಕ್ ಮೂಳೆಯ ಹಿಂಭಾಗದಲ್ಲಿ ಸಾಗಿ ಮೆದುಳನ್ನು ಸೇರುತ್ತದೆ. ಈ ಕಪಿಗಳಲ್ಲಿ ಮೂರು ಮುಂದವಡೆ ಹಲ್ಲುಗಳಿವೆ. ಈ ಬುಡಕಟ್ಟಿನಲ್ಲಿ ಹಪಾಲಿಡೀ ಅಥವಾ ಕ್ಯಾಲ್ಲಿಥ್ರಿಸಿಡೀ (ಹಪಾಲೆ ಮತ್ತು ಮಾರ್ಮೊಸೆಟ್ ಕಪಿಗಳು) ಮತ್ತು ಸೆಬಿಡೀ (ಕಪೂಚಿನ್ ಮತ್ತು ಜೇಡರ ಕೋತಿಗಳು) ಎಂಬ ಎರಡು ಕುಟುಂಬಗಳಿವೆ. ಮೊದಲನೆಯ ಕುಟುಂಬದ ಕೋತಿಗಳಲ್ಲಿ ಮುಂದಿನ ಕಾಲುಗಳು ಹಿಂದಿನವಕ್ಕಿಂತ ಚಿಕ್ಕವು, ಕಿರುಬೆರಳು ಬಿಟ್ಟು ಉಳಿದೆಲ್ಲ ಬೆರಳುಗಳಲ್ಲಿ ಉಗುರುಗಳಿಗೆ ಬದಲಾಗಿ ಪಂಜಗಳಿವೆ. ಕಿವಿಯ ಹಾಲೆ ಕೂದಲಿನಿಂದ ಮುಚ್ಚಿದೆ. ಬಾಲ ಪೊದೆಯಂತಿದೆ ; ಸುರುಳಿ ಸುತ್ತಲಾರದು. ಹೆಬ್ಬೆರಳು ಉದ್ದ. ಅದು ಇತರ ಬೆರಳುಗಳಿಗೆ ಅಭಿಮುಖವಾಗಿಲ್ಲ. ಈ ಕಪಿಗಳಿಗೆ ಕೀಟ ಮತ್ತು ಹಣ್ಣುಗಳೇ ಆಹಾರ. ಹೆಣ್ಣು ಸಾಮಾನ್ಯವಾಗಿ ಒಂದು ಸಲಕ್ಕೆ ಎರಡು ಅಥವಾ ಮೂರು ಮರಿಗಳನ್ನು ಹೆರುತ್ತದೆ. ಎರಡನೆಯ ಕುಟುಂಬವಾದ ಸೆಬಿಡೀಗೆ ಸೇರಿದ ಕೋತಿಗಳಲ್ಲಿ ಬಾಲ ಸುರುಳಿ ಸುತ್ತಿಕೊಳ್ಳುವಂತಿದೆ. ಎಲ್ಲ ಬೆರಳುಗಳಲ್ಲೂ ಉಗುರುಗಳಿವೆ. ಹೆಬ್ಬೆರಳು ಇತರ ಬೆರಳುಗಳಿಗೆ ಅಭಿಮುಖವಾಗಿದೆ. ಕಿವಿಯ ಹಾಲೆಯನ್ನು ಕೂದಲು ಆವರಿಸಿಲ್ಲ.

ಪ್ರಾಚೀನ ಪ್ರಪಂಚದ ಕಪಿಗಳಲ್ಲಿ ಮೂಗಿನ ಹೊಳ್ಳೆಗಳು ಕೆಳಮುಖವಾಗಿವೆ. ಹೊಳ್ಳೆಗಳ ಮಧ್ಯೆ ಕಿರಿದಾದ ಅಸ್ಥಿತಟ್ಟೆಯ ಗೋಡೆಯಿದೆ. ಬಾಲ ಸುರುಳಿ ಸುತ್ತಿಕೊಳ್ಳುವುದೇ ಇಲ್ಲ. ಹೆಬ್ಬೆರಳು ಇತರ ಬೆರಳುಗಳಿಗೆ ಅಭಿಮುಖವಾಗಿದೆ. ವಾನರಗಳನ್ನು (ಏಪ್ಸ್) ಬಿಟ್ಟು ಉಳಿದೆಲ್ಲ ಕಪಿಗಳಲ್ಲಿ ದವಡೆ ಚೀಲವಿದೆ. ಅಂತೆಯೇ ವಾನರ ಹಾಗೂ ಲಾಂಗುರ್‌ಗಳನ್ನುಳಿದು ಇತರ ಕಪಿಗಳಲ್ಲಿ ಕುಂಡೆ ರೋಮರಹಿತ. ಕಿವಿಯೊಳಗಿನ ಟಿಂಪ್ಯಾನಿಕ್ ಮೂಳೆಯಲ್ಲಿ ಒಂದು ಎಲುಬಿನ ಕೊಳವೆಯಿದೆ. ಕೆರೋಟಿಡ್ ರಕ್ತನಾಳ ಪರಯಾಟಿಕ್ ಮೂಳೆಯನ್ನು ಕೊರೆದುಕೊಂಡು ಸಾಗಿ ಮೆದುಳನ್ನು ತಲಪುತ್ತದೆ. ಇವುಗಳಲ್ಲಿ ಮುಂದವಡೆ ಹಲ್ಲುಗಳ ಸಂಖ್ಯೆ ಎರಡು. ಈ ಗುಂಪಿನಲ್ಲಿ ನಾಲ್ಕು ಕುಟುಂಬಗಳಿವೆ. ಅವು : 1 ಸೈನೋಮಾರ್ಫ (ಸರ್ಕೋಪಿಥಿಸಿಡೀ)—ಬೆಬೂನ್ ಮತ್ತು ಮ್ಯಾಂಡ್ರಿಲ್‌ಗಳು. 2 ಸಿಮ್ಮೈಯಿಡೀ ಅಥವಾ ಪಾಂಗಿಡೀ ಅಥವಾ ಆಂತ್ರೊಪೋಮಾರ್ಫ—ಗೋರಿಲ್ಲ, ಚಿಂಪಾಂಜಿ, ಗಿಬನ್ ಮತ್ತು ಒರಾಂಗೂಟಾನ್. 3 ಕೊಲೊಬಿಡೀ—ನೀಲಗಿರಿಯ ಲಾಂಗುರ್‌ಗಳು ಮತ್ತು 4 ಹೋಮಿನಿಡೀ—ಮಾನವ. ಇವುಗಳ ವಿವರಗಳು ಆಯಾ ಶೀರ್ಷಿಕೆಗಳಲ್ಲಿವೆ

ನೋಡಿ—ಪ್ರೈಮೇಟುಗಳು : ವಾನರಗಳು. (ಎಲ್‌ಎಸ್.ಜಿ.)

**ಕಪಿಟ್‌ಜಾ ಪೀಟರ್ :** 1894—. ಸೋವಿಯತ್ ರಷ್ಯದ ಭೌತವಿಜ್ಞಾನಿ. ಸೋವಿಯಟ್ ರಷ್ಯದ ಕೋನ್‌ಸ್ಟಾಟ್ ನಗರದಲ್ಲಿ ಜೂನ್ 26, 1894ರಂದು ಹುಟ್ಟಿದ. ಇವನ ತಂದೆ ಮತ್ತು ತಾತ ಇಬ್ಬರೂ ಸೈನ್ಯದಲ್ಲಿ ಅಧಿಕಾರಿಗಳಾಗಿದ್ದವರು. ಲೆನಿನ್‌ಗ್ರಾಡ್ (ಹಿಂದೆ ಪೆಟ್ರೋಗ್ರಾಡ್ ಎಂಬ ಹೆಸರಿದ್ದ) ನಗರದಲ್ಲಿರುವ ಪಾಲಿಟೆಕ್ನಿಕ್ ಸಂಸ್ಥೆಯಲ್ಲಿ 1919ರಲ್ಲಿ ಪದವಿ ಪಡೆದು, ಅಲ್ಲಿಯೇ 1921ರ ವರೆಗೆ ಅಧ್ಯಾಪಕನಾಗಿದ್ದ. ಅನಂತರ ಇಂಗ್ಲೆಂಡಿನಲ್ಲಿರುವ ಕೇಂಬ್ರಿಜ್ ವಿಶ್ವವಿದ್ಯಾನಿಲಯದ ಕ್ಯಾವೆಂಡಿಷ್ ಪ್ರಯೋಗಶಾಲೆಯಲ್ಲಿ ಲಾರ್ಡ್ ರುದರ್‌ಫೋರ್ಡನೊಂದಿಗೆ ಸಂಶೋಧನೆ ನಡೆಸಿದ. 1924ರಲ್ಲಿ ಅದೇ ಪ್ರಯೋಗಶಾಲೆಯಲ್ಲಿ ಕಾಂತತೆಯ ಪ್ರಯೋಗಶಾಖೆಗೆ ಸಹಾಯಕ ನಿರ್ವಾಹಕನಾಗಿ ನೇಮಕಗೊಂಡ. 1929ರಲ್ಲಿ ರಾಯಲ್ ಸೊಸೈಟಿಗೆ ಚುನಾಯಿತನಾದ. 200 ವರ್ಷಗಳಲ್ಲಿ ಇದಕ್ಕೆ ಸದಸ್ಯರಾದ ಪರಕೀಯರಲ್ಲಿ ಈತನೇ ಮೊದಲನೆಯವ. ಅನಂತರ ಅದೇ ಸೊಸೈಟಿಯ ಮೆಸ್ಸೆಲ್ ಪ್ರಾಧ್ಯಾಪಕನಾದಾಗ ಸೊಸೈಟಿ ಈತನಿಗೋಸ್ಕರವೇ ಮಾಂಡ್ ಪ್ರಯೋಗಶಾಲೆಯನ್ನು ಕಟ್ಟಿಸಿತು (1933).

ಯಾವಾಗಲೂ ಹೋಗುವಂತೆ 1934ರಲ್ಲೂ ಕಪಿಟ್‌ಜಾ ತನ್ನ ಉದ್ಯೋಗಕ್ಕೆ ಸಂಬಂಧಪಟ್ಟ ಸಭೆಗೆಂದು ಸೋವಿಯತ್ ರಷ್ಯಕ್ಕೆ ಹೋದ ; ಆದರೆ ಮತ್ತೆ ಅಲ್ಲಿಂದ ಆತ ವಾಪಸ್ಸು ಬರಲಿಲ್ಲ. 1935ರಲ್ಲಿ ಮಾಂಡ್ ಪ್ರಯೋಗಶಾಲೆಯನ್ನು ಸೋವಿಯತ್ ಸರ್ಕಾರ ಅಸಲುಬೆಲೆಗೆ ಕೊಂಡುಕೊಂಡು ಮಾಸ್ಕೊ ನಗರದ ವಿಜ್ಞಾನ ಅಕೆಡಮಿಯ ಭೌತಶಾಸ್ತ್ರ ಸಮಸ್ಯೆಗಳ ಇನ್‌ಸ್ಟಿಟ್ಯೂಟಿಗೆ ವರ್ಗ ಮಾಡಿತು. ಅಲ್ಲಿ ಕಪಿಟ್‌ಜಾ ಅದರ ಕಾರ್ಯನಿರ್ವಾಹಕನಾದ. ಅಲ್ಲದೆ ಆತನಿಗೆ ಮಿತಿಯಿಲ್ಲದಷ್ಟು ಅನುಕೂಲತೆಗಳೂ ದೊರೆತವು.

ಅಲ್ಪತಾಪಭೌತಶಾಸ್ತ್ರ ಮತ್ತು ಕಾಂತತೆಗಳ ಮೇಲೆ ಕಪಿಟ್‌ಜಾ ಬಹಳ ಸಂಶೋಧನೆಗಳನ್ನು ನಡೆಸಿದ್ದಾನೆ. ಈತ ಹೀಲಿಯಂ ಅನಿಲವನ್ನು ಹೊಸ ರೀತಿಯಲ್ಲಿ ದ್ರವೀಕರಣ ಮಾಡುವುದನ್ನು ಕಂಡುಹಿಡಿದ (ನೋಡಿ—ಅನಿಲ ದ್ರವೀಕರಣ). ಗಾಳಿಯನ್ನು ಹೆಚ್ಚಿನ ಪ್ರಮಾಣದಲ್ಲಿ ಮತ್ತು ಕಡಿಮೆ ಬೆಲೆಯಲ್ಲಿ ದ್ರವೀಕರಣ ಮಾಡುವ ತಿರುಬಾನಿಯನ್ನು ಕಂಡುಹಿಡಿದ. ಆಮ್ಲಜನಕದ್ರವೀಕರಣದ ಸಂಬಂಧವಾಗಿ ಈತ ಮಾಡಿದ ಸಂಶೋಧನೆಗಳಿಂದ ಕೈಗಾರಿಕೆಗಳ ಬೆಳೆವಣಿಗೆಗೆ, ಅದರಲ್ಲೂ ಸೋವಿಯತ್ ರಷ್ಯದ ಉಕ್ಕು ತಯಾರಿಕೆಗೆ, ಬಹಳ ಅನುಕೂಲವಾಯಿತು. ಸೋವಿಯತ್ ದೇಶದ ಪರಮಾಣು ಮತ್ತು ಹೈಡ್ರೊಜನ್ ಬಾಂಬುಗಳ ತಯಾರಿಕೆಯಲ್ಲಿ ಈತನ ಪಾತ್ರ ಬಲು ದೊಡ್ಡದೆಂದು ಹಲವರು ಅಭಿಪ್ರಾಯ ಪಡುತ್ತಾರೆ. ಪ್ಲಾಸ್ಮ ಭೌತಶಾಸ್ತ್ರದಲ್ಲಿಯೂ ಕಪಿಟ್‌ಜಾ ಸಂಶೋಧನೆಗಳನ್ನು ನಡೆಸಿದ್ದಾನೆ. ಸೋವಿಯತ್ ರಷ್ಯದಲ್ಲಿ 1955ರಂದು ಸ್ಥಾಪಿಸಲ್ಪಟ್ಟ ಅಂತರಗ್ರಹ ಮಂಡಲಿಗೆ ಈತ ಮುಖ್ಯಸ್ಥನಾಗಿದ್ದ. 1957ರಲ್ಲಿ ಉಡಾಯಿಸಿದ ಎರಡು ಕೃತಕ ಉಪಗ್ರಹಗಳಿಗೆ ಈತನೇ ಹೆಚ್ಚು ಕಾರಣ ಎಂದು ನಂಬಿಕೆ.

ಕಪಿಟ್‌ಜಾನಿಗೆ ಹಲವಾರು ಗೌರವ ಪದವಿಗಳು ಬಂದಿವೆ. 1946ರಲ್ಲಿ ಈತ ವಿಜ್ಞಾನದ ರಾಷ್ಟ್ರೀಯ ಅಕೆಡಮಿಯ ಸದಸ್ಯನಾಗಿ ಚುನಾಯಿತನಾದ. ಸೋವಿಯತ್ ಸರ್ಕಾರದಿಂದ ಈತನಿಗೆ ಸ್ಟಾಲಿನ್ ಪ್ರಶಸ್ತಿ, ಆರ್ಡರ್ ಆಫ್ ಲೆನಿನ್ ಪ್ರಶಸ್ತಿ ಮತ್ತು ಇತರ ಬಹುಮಾನಗಳು ಬಂದಿವೆ. (ಎನ್.ತಿ.ಪಿ.)

**ಕಪಿಲ :** ಸಾಂಖ್ಯದರ್ಶನ ಪ್ರವರ್ತಕ. ಕಾಲ ಯಾವುದೆಂದು ತೀರ್ಮಾನವಾಗಿಲ್ಲ ಐತಿಹಾಸಿಕ ವ್ಯಕ್ತಿಯೋ ಅಥವಾ ಕೇವಲ ಪೌರಾಣಿಕ ವ್ಯಕ್ತಿಯೋ ಹೇಳಲು ಸಾಧ್ಯವಿಲ್ಲ ಅಂತೂ ವೈದಿಕ ಋಷಿಗಳ ಪರಂಪರೆಯಲ್ಲಿ ಯಾರೂ ಇವನನ್ನು ಸ್ಮರಿಸಿಲ್ಲ. ಭಾಗವತ ಪುರಾಣದ ಪ್ರಕಾರ ಕಪಿಲ ಮಹಾವಿಷ್ಣುವಿನ ಅವತಾರ. ಸಿದ್ಧರಲ್ಲಿ ತಾನು ಕಪಿಲನೆಂದು ಕೃಷ್ಣ ಭಗವದ್ಗೀತೆಯಲ್ಲಿ ಹೇಳಿಕೊಂಡಿದ್ದಾನೆ. ಸಗರಪುತ್ರರನ್ನು ತನ್ನ ತಪಃಪ್ರಭಾವದಿಂದ ಸುಟ್ಟವ ಈತನೇ ಇರಬಹುದೆಂದು ಹಲವರ ಮತ. ಅಂತೂ ಕಪಿಲ ಸಾಂಖ್ಯಮತ ಪ್ರವರ್ತಕನೆಂಬುದರಲ್ಲಿ ಯಾವ ಸಂಶಯವೂ ಇಲ್ಲ.

ವಿದ್ವಾಂಸರ ಅಭಿಪ್ರಾಯದ ಪ್ರಕಾರ ಕಪಿಲಸೂತ್ರ ಅಥವಾ ಸಾಂಖ್ಯಸೂತ್ರವೆಂಬ ಗ್ರಂಥ ಕ್ರಿ.ಶ. 12ನೆಯ ಶತಮಾನದ್ದು. ಬಹುಶಃ ಈ ಸೂತ್ರಗ್ರಂಥ ಕಪಿಲ ಋಷಿಯ ಸ್ವಂತ ಕೃತಿಯಲ್ಲ. ತತ್ತ್ವಸಮಾಸ ಎಂಬ ಸಾಂಖ್ಯಗ್ರಂಥದ ಪ್ರಸ್ತಾವನೆಯಲ್ಲಿ ಈತ ಆಸುರಿ (ನೋಡಿ) ಎನ್ನುವವನಿಗೆ ಪ್ರತ್ಯಕ್ಷನಾಗಿ ತತ್ತ್ವಸಮಾಸವನ್ನು ಬೋಧಿಸಿದ ವಿವರಣೆಯುಂಟು. ಬಹುಶಃ ಗಾತ್ರದಲ್ಲಿ ಬಹು ಚಿಕ್ಕದಾದ ತತ್ತ್ವಸಮಾಸವೇ ಸಾಂಖ್ಯದರ್ಶನದ ಆದಿಯಾಗಿರಬಹುದು. ಈ ದರ್ಶನದ ಅತ್ಯುತ್ತಮ ಹಾಗೂ ಶಾಸ್ತ್ರಯುಕ್ತವಾದ ಗ್ರಂಥ ಈಶ್ವರಕೃಷ್ಣನೆಂಬಾತ ಬರೆದ ಸಾಂಖ್ಯಕಾರಿಕಾ. ಈ ಗ್ರಂಥದ ಕೊನೆಯಲ್ಲಿ ಸಾಂಖ್ಯದರ್ಶನ ಕಪಿಲ ಮುನಿಯಿಂದ ಬೋಧಿಸಲ್ಪಟ್ಟು ಆಸುರಿ, ಪಂಚಶಿಖಾದಿಗಳಿಂದ ವಿಸ್ತೃತವಾಗಿ ಶಿಷ್ಯಪರಂಪರಾನುಗತವಾಗಿ ತನ್ನವರೆಗೆ ಬಂದು ತಾನು ಕಾರಿಕಾರೂಪದಲ್ಲಿ ತನ್ನ ಸಾಂಖ್ಯಾಕಾರಿಕಾ ಗ್ರಂಥವನ್ನು ಬರೆದೆನೆಂದು ಈಶ್ವರಕೃಷ್ಣ ಹೇಳುತ್ತಾನೆ.

ನೋಡಿ---ಸಾಂಖ್ಯದರ್ಶನ (ಕೆ.ಬಿ.ಆರ್.)

**ಕಪಿಲರ್ :** ತಮಿಳು ಸಾಹಿತ್ಯ ಚರಿತ್ರೆಯಲ್ಲಿ ಈ ಹೆಸರಿರುವ ನಾಲ್ಕು ಕವಿಗಳಿದ್ದಾರೆ. ಸಂಗಂ ಕಾಲದಲ್ಲೊಬ್ಬನೂ ಅನಂತರದ ಕತ್ತಲ ಯುಗ (ಕ್ರಿ.ಶ. 3 ರಿಂದ 6ನೆಯ ಶತಮಾನ) ದಲ್ಲೊಬ್ಬನೂ ಮಧ್ಯಕಾಲದಲ್ಲೊಬ್ಬನೂ (ಕ್ರಿ.ಶ. 6ನೆಯ ಶತಮಾನದ ಅನಂತರ) ಇದ್ದಾರೆ. ಈ ನಾಲ್ವರೂ ಒಬ್ಬರೇ ಎಂದು ಈ ಶತಮಾನದ ಆರಂಭದ ತನಕವೂ ಪಂಡಿತರು ಎಣಿಸಿದ್ದರು. ಆದರೆ ಈಗ ಆ ಹೆಸರಿನ ನಾಲ್ವರಿದ್ದಾರೆಂದು ಎಲ್ಲರೂ ಒಪ್ಪುತ್ತಾರೆ.

ತೊಲ್‌ಕಪಿಲರ್ ಸಂಗಂ ಸಾಹಿತ್ಯದಲ್ಲಿ 20 ಹಾಡುಗಳನ್ನು ರಚಿಸಿದ್ದಾನೆ. ಕತ್ತಲ ಯುಗದ ಕಪಿಲರ್ ಇನ್ನಾನಾರ್ಪದ್ ಎಂಬ (ಯಾವಾವುದು ಕೆಟ್ಟದ್ದು ಎಂದು ಹೇಳುವ) ನಲವತ್ತು ಪದ್ಯಗಳನ್ನು ಹಾಡಿದ್ದಾನೆ. ಮಧ್ಯಕಾಲದ ಕಪಿಲದೇವರ್ ಇರಟ್ಟೈ ಮಣಿಮಾಲೈ ಎಂಬ ಭಕ್ತಿಕೃತಿಯನ್ನು ರಚಿಸಿದ್ದಾನೆ. ಇವರು ಮೂವರಲ್ಲದೆ ಸಂಗಂ ಸಾಹಿತ್ಯದಲ್ಲಿ ಹೆಚ್ಚು ಸಂಖ್ಯೆಯ ಹಾಡುಗಳನ್ನು ಹಾಡಿದ ಕಪಿಲರ್ ಅನ್ನು ಕುರಿತು ಇಲ್ಲಿ ವಿವೇಚಿಸಲಾಗುತ್ತದೆ. ಈ ಕಪಿಲರ್ ಬರೆದವೆಂದು ಹೇಳಲಾದ 206 ಹಾಡುಗಳು ಸಂಗಂ ಕಾಲದ ಕಾವ್ಯಸಂಗ್ರಹದಲ್ಲಿ ದೊರೆಯುತ್ತವೆ.

ಈತನೇ ತನ್ನನ್ನು ಅಂದಣನ್—ಎಂದು ಹೇಳಿಕೊಂಡಿದ್ದಾನೆ. ಇತರ ಕವಿಗಳೂ ಅದನ್ನೇ ಹೇಳುತ್ತಾರೆ. ಅಂದಣನ್ ಎಂಬುದು ಇಂದಿನ ಬ್ರಾಹ್ಮಣ ಪದಕ್ಕೆ ಸಮಾನಾರ್ಥಕ. ಈತನ ಹಾಡುಗಳಲ್ಲಿ ಬರುವ ರಾಮಾಯಣ ಭಾರತ ಕಥಾಸನ್ನಿವೇಶಗಳನ್ನೊಳಗೊಂಡ ಉಪಮೆಗಳು, ಕುದುರೆಯ ಕುತ್ತಿಗೆಯ ಮೇಲಿನ ಕೂದಲನ್ನು ಬ್ರಾಹ್ಮಣ ಕುಮಾರನ ಜುಟ್ಟಿನಂತಿತ್ತೆಂದು ವರ್ಣಿಸಿರುವುದು, ಈ ವಿಷಯಗಳನ್ನು ಪುಷ್ಟೀಕರಿಸುತ್ತವೆಂಬುದು ಗಮನಿಸತಕ್ಕ ವಿಷಯ. ಈತನ ಜೀವನಚರಿತ್ರೆಯನ್ನು ಕುರಿತು ಬೇರೆ ವಿವರಗಳು ದೊರೆಯುವುದಿಲ್ಲ. ಆದರೂ ಈತನ ಹಾಡುಗಳಿಂದ ಇವನ ಬಾಳಿನ ಕೆಲ ಸನ್ನಿವೇಶಗಳನ್ನು ಎತ್ತಿ ಹೇಳಬಹುದು.

ಈತ ವೇಳ್‌ಪಾರಿ ಎಂಬ ಅರಸನ ಪ್ರಾಣಸ್ನೇಹಿತನಾಗಿಯೂ ಆಸ್ಥಾನಕವಿಯಾಗಿಯೂ ಇದ್ದ. ಆದರೂ ಇತರ ಕೆಲವು ರಾಜರಲ್ಲಿಗೆ ಹೋಗಿ ಅವರನ್ನು ಕುರಿತೂ ಈತ ಹಾಡಿದ್ದುಂಟು. ತಿರುಮುಡಿಕ್ಕಾರಿ ಎಂಬೊಬ್ಬ ಅರಸನ ಉದಾರತೆಯನ್ನು ಈತ ಹೊಗಳಿದ್ದಾನೆ. ಪೇಗನ್ ಎಂಬ ಇನ್ನೊಬ್ಬ ಅರಸ ತನ್ನ ಪತ್ನಿಯಾದ ಕಣ್ಣಗಿಯನ್ನು ತೊರೆದಿದ್ದಾಗ ಅವರಿಬ್ಬರನ್ನೂ ಕಪಿಲರ್ ಪುನಃ ಸೇರಿಸಿದನೆಂದು ಕಥೆ ಇದೆ. ವೇಳ್‌ಪಾರಿಯ ಕುಮಾರಿಯರು ಮದುವೆಯ ವಯಸ್ಕರಾಗಲು ಚೇರ, ಚೋಳ, ಪಾಂಡ್ಯರೆಂಬ ರಾಜತ್ರಯರು (ಮೂವೇಂದರ್) ಅವರನ್ನು ಮದುವೆ ಮಾಡಿಕೊಳ್ಳಲು ಬಯಸಿದರು. ಆದರೆ ವೇಳ್‌ಪಾರಿ ಅವರಿಗೆ ತನ್ನ ಕುಮಾರಿಯರನ್ನು ಮದುವೆ ಮಾಡಿಕೊಡಲೊಪ್ಪಲಿಲ್ಲ. ಆದುದರಿಂದ ಕುಪಿತರಾದ ರಾಜರು ವೇಳ್‌ಪಾರಿಯ ಪರಂಬುಮಲೆಯೆಂಬ ರಾಜಧಾನಿಯನ್ನು ಮುತ್ತಿ, ಯುದ್ಧಮಾಡಿ, ಅದನ್ನು ವಶಮಾಡಿಕೊಂಡರು. ಆಮೇಲೆ ವೇಳ್‌ಪಾರಿಯೂ ಸತ್ತುಹೋದ. ಕಪಿಲರ್ ಇವನ ಕುಮಾರಿಯರಿಗೆ ವಿವಾಹಮಾಡಲು ಯೋಚಿಸಿ ಹಲವು ರಾಜರ ಹತ್ತಿರ ಹೋದ. ಮಲೆನಾಡಿಗೆ ಹೋಗಿ ಶೆಲ್ವಕಡುಂಗೋವಾಳಿಯಾದನ್ ಎಂಬವನನ್ನು ಹೊಗಳಿ ಹತ್ತು ಕವಿತೆಗಳನ್ನು ಹಾಡಿ, ಬಹುಮಾನ ಪಡೆದ. ಇತರ ಕೆಲವು ರಾಜರ ಹತ್ತಿರವೂ ಹೋದನಾದರೂ ಎಲ್ಲಿಯೂ ತನ್ನ ಉದ್ದೇಶ ಸಫಲವಾಗದಿರಲು ಆ ಕುಮಾರಿಯರನ್ನು ಬ್ರಾಹ್ಮಣರ ವಶಕ್ಕೆ ಕೊಟ್ಟು, ತಾನು ಉತ್ತರಾಭಿಮುಖಿಯಾಗಿ ಪ್ರಯಾಣ ಮಾಡುತ್ತ ಉಪವಾಸವ್ರತಮಾಡಿ ಜೀವ ಬಿಟ್ಟನೆಂದು ಹೇಳುತ್ತಾರೆ.

ಈತ ಕುರಿಂಜಿತ್ತಿಣೈ (ವಿವಾಹಪೂರ್ವದ ಪ್ರೇಮದ ವರ್ಣನೆ. ಇದರಲ್ಲಿ ಬೆಟ್ಟಸ್ಥಳ, ಚಳಿಗಾಲ ಮತ್ತು ಮಧ್ಯರಾತ್ರಿಯ ವರ್ಣನೆಗಳಿರುತ್ತವೆ) ಹಾಡುವುದರಲ್ಲಿ ಬಲ್ಲಿದ. ಈತನ ಹಾಡುಗಳಲ್ಲಿ 91 ಕುರಿಂಜಿತ್ತಿಣೈ ಜಾತಿಗೆ ಸೇರಿದವು. ಕುರಿಂಜಿಪಾಟ್ಟು ಎಂಬ 261 ಚರಣಗಳುಳ್ಳ ಒಂದು ನೀಳ್ಗವಿತೆಯನ್ನೂ ಈತ ರಚಿಸಿದ್ದಾನೆ. ಈ ಕವಿತೆ ಆರ್ಯರಾಜನಾದ ಬೃಹದತ್ತನಿಗೆ ತಮಿಳು ಸಾಹಿತ್ಯರಸವನ್ನು ತಿಳಿಸಿಕೊಡುವುದಕ್ಕಾಗಿ ರಚಿತವಾದುದೆನ್ನುತ್ತಾರೆ. ಪ್ರಣಯಕಾರಣದಿಂದ ಶರೀರಕ್ಷೀಣತೆಯನ್ನು ಪಡೆದಿದ್ದ ನಾಯಿಕೆಯ ಸ್ಥಿತಿಯ ವರ್ಣನೆ ಇದರಲ್ಲಿ ಇದೆ. ನಾಯಿಕೆ ಸಖಿಯೊಡನೆ ಸ್ನಾನಮಾಡಿ, ಹಲವು ಬಗೆಯ ಹೂಗಳನ್ನು ಕೊಯ್ದು ಬೆಟ್ಟದಲ್ಲಿ ರಾಶಿಹಾಕಿದಳು ಎಂಬುದನ್ನು ಬಣ್ಣಿಸುವಾಗ 99 ಹೂಗಳ ಹೆಸರು ಬರುತ್ತದೆ.

ಸಾಮಾನ್ಯವಾಗಿ ಈತ ಸರಳವಾದ ಉಪಮೆಗಳ ಮೂಲಕ ಮಹತ್ತಾದ ವಿಷಯಗಳನ್ನು ಬಣ್ಣಿಸುವುದರಲ್ಲಿ ಬಲ್ಲಿದ. ನಾಯಿಕೆಯ ಆತ್ಮ ಕಿರಿದು, ಆದರೆ ಕಾಮ ಹಿರಿದು ಎಂಬುದನ್ನು ಹಲಸಿನ ಮರದಲ್ಲಿಯ ಚಿಕ್ಕ ಕೊಂಬೆಯಲ್ಲಿ ದೊಡ್ಡ ಹಣ್ಣು ತೂಗುತ್ತಿರುವಂತೆ ಎಂದು ವರ್ಣಿಸುತ್ತಾನೆ.

ಪರ್ವತಪ್ರದೇಶದಲ್ಲಿಯ ಹಲವು ಪಕೃತಿದೃಶ್ಯಗಳನ್ನು ಅಲ್ಲಲ್ಲಿ ರಸವತ್ತಾಗಿ ವರ್ಣಿಸಲಾಗಿದೆ. ಕಿರಿಯ ಬೆಟ್ಟದಲ್ಲಿರುವ ಹೊಂಡದಲ್ಲಿ ಹಲವು ಹಣ್ಣುಗಳಿಂದುಂಟಾದ ಜೇನನ್ನು ನೀರೆಂದು ಕುಡಿದ ನವಿಲು ಆಯಾಸಗೊಂಡು ನಿಲ್ಲುತ್ತದೆ ; ಅವರೆಯನ್ನು ತುಂಬ ತಿಂದ ಮಂಗ ಹಲವು ಸಾಮಾನುಗಳನ್ನು ಮಾರುವವರ ಚೀಲದಂತೆ ತೋರುತ್ತದೆ ; ಹುಲಿಯನ್ನೆದುರಿಸಿದ ಆನೆ ಕನಸಿನಲ್ಲೂ ಅದನ್ನು ನೋಡಿ ಬೆಚ್ಚಿ ಎದ್ದು ಹೊಸದಾಗಿ ಹೂಬಿಟ್ಟ ಬೇಂಗೆಯ ಮರವನ್ನು ನೋಡಿ ಹುಲಿಯೆಂದು ಭ್ರಮಿಸಿ, ಹಾಯ್ದು, ಕೋಪ ತಣಿದ ಅನಂತರ ಅದನ್ನು ಮರವೆಂದು ತಿಳಿದು ನಾಚುತ್ತದೆ.—ಎಂಬಂಥ ಹಲವು ದೃಶ್ಯಗಳು ಇಲ್ಲಿಯ ಹಾಡುಗಳಲ್ಲಿ ಕಾಣಬರುತ್ತವೆ.

ಕಪಿಲರ್ ತಾನು ಬಾಳಿದ ಕಾಲದಲ್ಲಿಯೇ ಇತರ ಕವಿಗಳ ಹೊಗಳಿಕೆಗೆ ಪಾತ್ರನಾದವ. ಈತನ ಜ್ಞಾನವನ್ನೂ ಕವಿತಾಸಾಮರ್ಥ್ಯವನ್ನೂ ಯಶಸ್ಸನ್ನೂ ಅನೇಕ ಕವಿಗಳು ಕೊಂಡಾಡಿದ್ದಾರೆ. (ಎಸ್.ವಿ.ಎಸ್.)

**ಕಪಿಲವಸ್ತು :** ಪ್ರಾಚೀನ ಭಾರತದ ಪ್ರಸಿದ್ಧ ಪಟ್ಟಣಗಳಲ್ಲಿ ಒಂದು. ಉತ್ತರ ಪ್ರದೇಶದ ಬಸ್ತಿ ಜಿಲ್ಲೆಯ ಉತ್ತರಕ್ಕೆ ನೇಪಾಳ ತರೈ ಭೂಮಿಯಲ್ಲಿದೆ. ಕಪಿಲನ ನಿವಾಸ ಎಂದು ಇದರ ಅರ್ಥ. ಸಾಂಖ್ಯದರ್ಶನದ ಪ್ರತಿಪಾದಕನಾದ ಕಪಿಲನಿಗೂ ಈ ಸ್ಥಳಕ್ಕೂ ಏನಾದರೂ ಸಂಬಂಧವಿತ್ತೇ ಎಂಬುದು ಐತಿಹಾಸಿಕವಾಗಿ ಸ್ಥಿರಪಟ್ಟಿಲ್ಲ. ಇಕ್ಷ್ವಾಕುವಂಶದ ರಾಜನಾದ ವಿರುದ್ಧಕನ ನಾಲ್ವರು ಪುತ್ರರು ಅವನಿಂದ ಉಚ್ಚಾಟನೆಹೊಂದಿ ಹಿಮಾಲಯದ ತಪ್ಪಲಿನಲ್ಲಿ ಅಲೆದಾಡುತ್ತಿದ್ದಾಗ ಭಾಗೀರಥೀ ನದಿಯ ದಂಡೆಯಲ್ಲಿ ಆಶ್ರಮ ಕಟ್ಟಿಕೊಂಡು ವಾಸಿಸುತ್ತಿದ್ದ ಕಪಿಲ ಮಹರ್ಷಿಯನ್ನು ಸಂದರ್ಶಿಸಿದರೆಂದೂ ಋಷಿ ಅವರನ್ನು ಸತ್ಕರಿಸಿದನಲ್ಲದೆ ಅವರಿಗೆ ಒಂದು ನಿವೇಶನವನ್ನು ತೋರಿಸಿದನೆಂದೂ ಅಲ್ಲಿ ಆ ರಾಜಪುತ್ರರು ಆ ಋಷಿಯ ನೇತೃತ್ವದಲ್ಲಿ ಒಂದು ಪಟ್ಟಣವನ್ನು ನಿರ್ಮಾಣಮಾಡಿದರೆಂದೂ ಐತಿಹ್ಯವಿದೆ. ಕಪಿಲ ಮಹರ್ಷಿ ದಾನಮಾಡಿದ ನೆಲದಲ್ಲಿ ಕಟ್ಟಲಾದ ಆ ಪಟ್ಟಣಕ್ಕೆ ಕಪಿಲವಸ್ತು ಎಂದು ಹೆಸರು ಬಂತೆಂದು ಹೇಳಲಾಗಿದೆ.

ಕಪಿಲವಸ್ತು ಬುದ್ಧನ ಜನ್ಮಸ್ಥಳ. ಬಾಲ್ಯ ಮತ್ತು ಯೌವನಗಳನ್ನು ಆತ ಇಲ್ಲೇ ಕಳೆದ. ಇದರಿಂದಾಗಿ ಈ ನಗರ ಬೌದ್ಧರಿಗೆ ಒಂದು ಪವಿತ್ರ ಯಾತ್ರಾಸ್ಥಳವಾಯಿತು. ಶಾಕ್ಯಪಂಗಡದ ನಾಯಕನೂ ಗೌತಮಬುದ್ಧನ ತಂದೆಯೂ ಆದ ಶುದ್ಧೋಧನನಿಗೆ ಕಪಿಲವಸ್ತುವೇ ರಾಜಧಾನಿಯಾಗಿತ್ತು. ಬುದ್ಧನ ಕಾಲದಲ್ಲಿ ಕೋಸಲ ದೇಶದ ರಾಜನಾಗಿದ್ದ ವಿರೂಪಾಕ್ಷ ಕಪಿಲವಸ್ತುವಿನ ಮೇಲೆ ದಾಳಿ ಮಾಡಲು ಪ್ರಯತ್ನ ನಡೆಸಿ ವಿಫಲನಾಗಿದ್ದ. ಆದರೆ ಗೌತಮಬುದ್ಧನ ಮರಣಾನಂತರ ಆತ ಕಪಿಲವಸ್ತುವಿನ ಮೇಲೆ ಮತ್ತೊಮ್ಮೆ ದಾಳಿ ನಡೆಸಿ ಶಾಕ್ಯಕುಲವನ್ನೇ ನಾಶಮಾಡಿದ.

ಅಶೋಕ ಚಕ್ರವರ್ತಿ ಕಪಿಲವಸ್ತುವಿಗೆ ಭೇಟಿ ಕೊಟ್ಟಿದ್ದರ ಜ್ಞಾಪಕಾರ್ಥವಾಗಿ ಅಲ್ಲಿ ಅನೇಕ ಸ್ಮಾರಕಗಳನ್ನು ಸ್ಥಾಪಿಸಿದ. ಚೀನದ ಯಾತ್ರಿಕನಾದ ಹ್ಯುಯೆನ್ ತ್ಸಾಂಗ್ ಭಾರತಕ್ಕೆ ಬರುವ ವೇಳೆಗೆ (629–645) ಈ ಇತಿಹಾಸಪ್ರಸಿದ್ಧ ಪಟ್ಟಣ ಸಂಪೂರ್ಣವಾಗಿ ನಾಶವಾಗಿತ್ತೆಂದು ಆತನ ಬರವಣಿಗೆಯಿಂದಲೇ ತಿಳಿಯುತ್ತದೆ. (ಎಸ್.ಕೆ.ಎಸ್.)

**ಕಪಿಲಾ ಯೋಜನೆ :** ಮೈಸೂರು ಜಿಲ್ಲೆಯ ಹೆಗ್ಗಡದೇವನಕೋಟೆಯ ಬಿದರಹಳ್ಳಿ–ಬೀಚನಹಳ್ಳಿ ಸಮೀಪದಲ್ಲಿ ಕಪಿಲಾ ನದಿಗೆ ಅಡ್ಡವಾಗಿ ನಿರ್ಮಿಸುತ್ತಿರುವ (1971) ಕಟ್ಟೆ; ಅದರಿಂದ ಶೇಖರಿತವಾಗುವ ನೀರು; ಅದರ ನೀರಾವರಿ ಉಪಯೋಗ –ಇಷ್ಟೂ ಈ ಯೋಜನೆಯಲ್ಲಿ ಅಡಕವಾಗಿವೆ (ಕಬಿನಿ ರಿಸ್ರ್ವಾಯರ್ ಪ್ರೊಜೆಕ್ಟ್).

**ಕಪಿಲಾ ನದಿ :** ಕಾವೇರಿ ನದಿಯ ಪ್ರಧಾನ ಉಪನದಿಗಳಲ್ಲಿ ಇದೂ ಒಂದು. ನದಿಯ ಉಗಮಸ್ಥಾನ ಕೇರಳದ ವೈನಾಡು ತಾಲ್ಲೂಕಿನ ಪಶ್ಚಿಮಘಟ್ಟಗಳ ಸಾಲಿನಲ್ಲಿದೆ. ಇದರ ಎತ್ತರ ಸಮುದ್ರಮಟ್ಟದಿಂದ 7000′. ನದಿಯು 132 ಮೈಲಿಗಳಷ್ಟು ಉದ್ದಕ್ಕೆ ಹರಿದು ತಿರುಮಕೂಡಲು ನರಸೀಪುರದಲ್ಲಿ ಕಾವೇರಿಯನ್ನು ಸಂಗಮಿಸುವುದು. ಉಗಮಸ್ಥಾನದಲ್ಲಿ ವಾರ್ಷಿಕ ಮಳೆ 70″–125″ ವರೆಗೆ ಇದೆ. ತಳದ ಅರಣ್ಯ ಪ್ರದೇಶದಲ್ಲಿ ಇದು 30″–70″ಗಳಷ್ಟು ಕಡಿಮೆ ಆಗುವುದು. ಮುಂದೆ ಮೈಸೂರು ಜಿಲ್ಲೆಯ ಬಯಲು ಪ್ರದೇಶವನ್ನು ಪ್ರವೇಶಿಸುವ ಹೊತ್ತಿಗೆ ಹಲವಾರು ಉಪನದಿಗಳು ತಂದು ಸುರಿಯುವ ನೀರಿನಿಂದ ಕಪಿಲಾ ನದಿ ಪುಷ್ಟಿಗೊಂಡು ಸಮೃದ್ಧವಾಗಿರುತ್ತದೆ. ಮೈಸೂರು ಜಿಲ್ಲೆಯಲ್ಲಿರುವ ಹೆಗ್ಗಡದೇವನ ಕೋಟೆ, ನಂಜನಗೂಡು, ತಿರುಮಕೂಡಲು ನರಸೀಪುರ, ಯಳಂದೂರು, ಚಾಮರಾಜನಗರ, ಕೊಳ್ಳೆಗಾಲ ತಾಲ್ಲೂಕುಗಳಲ್ಲಿನ ಪರಿಸ್ಥಿತಿ ಯೋಜನೆಯ ನಿರ್ವಹಣೆಗೆ ತೀರ ಅನುಕೂಲವಾದದ್ದು—ಕಡಿಮೆ ಮಳೆ, ಬಯಲನಾಡು, ತುಂಬುನೀರಿನ ನದಿ. ಅಂಕೆಗೆ ಒಳಪಡುವ ನದಿಯ ನೀರು ಇಲ್ಲಿ ಹೊಸ ನೆಲ ಹೊಸ ಪರಿಸರವನ್ನೇ ಸೃಷ್ಟಿಸುವುದರಲ್ಲಿ ಸಂದೇಹವಿಲ್ಲ.

**ಯೋಜನೆಯ ರೂಪರೇಖೆಗಳು :** ಮೊದಲು 1959ರಲ್ಲಿ ಸರ್ಕಾರದ ಆಡಳಿತ ಅಂಗೀಕಾರ ಪಡೆದ ಈ ಯೋಜನೆ ಕಾಲಕ್ರಮೇಣ ಹಲವಾರು ಮಾರ್ಪಾಡುಗಳನ್ನು ಹೊಂದಿ ಇಂದಿನ ಪರಿಷ್ಕೃತ ರೂಪದಲ್ಲಿ ನಿರ್ಮಾಣಗೊಳ್ಳುತ್ತಿದೆ. ಇದರ ಕೆಲವು ವಿವರಗಳು ಹೀಗಿವೆ :

| | |
|---|---|
| ಜಲಾನಯನ ಪ್ರದೇಶದ ವ್ಯಾಪ್ತಿ | ... 827 ಚದರ ಮೈಲಿಗಳು |
| ಜಲಾಶಯದ ಘನಗಾತ್ರ | ... 19,200 ಮಿಲಿಯನ್ ಘನ ಅಡಿಗಳು. |
| ಪ್ರಧಾನ ಉಪಯೋಗ | ... 1,26,000 ಎಕ್ರೆ ಜಮೀನಿನ ವ್ಯವಸಾಯ, ಮಿಶ್ರ ಬೆಳೆ. ಮುಂದೆ 1,85,000 ಎಕ್ರೆಗಳಿಗೆ ವಿಸ್ತರಿಸುವ ಯೋಜನೆ ಉಂಟು. |
| ಇತರ ಉಪಯೋಗಗಳು | ... 32,000 ಕಿ.ವಾ. ವಿದ್ಯುಚ್ಛಕ್ತಿಯ ಉತ್ಪಾದನೆ. ಬೆಂಗಳೂರು ನಗರಕ್ಕೆ 2,800 ಮಿಲಿಯನ್ ಘನ ಅಡಿಗಳಷ್ಟು ನೀರಿನ ಸರಬರಾಜು. |
| ನೀರಾವರಿ ಉಪಯೋಗ ಲಭಿಸುವ ಪ್ರದೇಶಗಳು | ... ಮೈಸೂರು ಜಿಲ್ಲೆಯ ಹೆಗ್ಗಡದೇವನ ಕೋಟೆ, ನಂಜನಗೂಡು, ಚಾಮರಾಜನಗರ, ಮೈಸೂರು, ತಿರುಮಕೂಡಲು ನರಸೀಪುರ, ಕೊಳ್ಳೆಗಾಲ, ಯಳಂದೂರು ತಾಲ್ಲೂಕುಗಳಿಗೂ ಮಂಡ್ಯ ಜಿಲ್ಲೆಯ ಶ್ರೀರಂಗಪಟ್ಟಣ ತಾಲ್ಲೂಕಿಗೂ ಈ ಯೋಜನೆಯ ನೆರವು ಭಾಗಶಃ ದೊರೆಯುವುದು. |
| ನಾಲೆಗಳು | ... ಕಪಿಲಾ ಬಲದಂಡೆ ನಾಲೆ (ಈಗ ಉದ್ದ 96 ಮೈಲಿಗಳು; ಮುಂದೆ 130 ಮೈಲಿಗಳಿಗೆ ವಿಸ್ತರಿಸುವ ಯೋಜನೆ ಉಂಟು). ಕಪಿಲಾ ಎಡದಂಡೆ ನಾಲೆ (ಉದ್ದ 20 ಮೈಲಿಗಳು) ಮತ್ತು ಕೃಷ್ಣರಾಜಸಾಗರದಿಂದ ಬಲದಂಡೆ ಎತ್ತರಮಟ್ಟದ ನಾಲೆ (ಉದ್ದ 36 ಮೈಲಿಗಳು). |

ನಡುವಿನ ಗಾರೆ ಕಟ್ಟಡದ ಕಟ್ಟೆಯ ಉದ್ದ ... 835 ಅಡಿಗಳು
ಕಟ್ಟೆಯ ಒಟ್ಟು ಉದ್ದ ... 8965 ಅಡಿಗಳು
ನದೀಪಾತ್ರದ ಸರಾಸರಿ ಮಟ್ಟದ
ಮೇಲೆ ಕಟ್ಟೆಯ ಎತ್ತರ ... 90 ಅಡಿಗಳು
ಜಲಾಶಯದ ಪಾತ್ರದಿಂದ ಅಡಿಪಾಯ
ಸಾಗಿರುವ ಅತಿ ಆಳ ... 94 ಅಡಿಗಳು
ಜಲಾಶಯದ ವಿಸ್ತಾರದಿಂದ ಮುಳು
ಗಡೆಯಾಗುವ ಪ್ರದೇಶದ ವ್ಯಾಪ್ತಿ ... 15,434 ಎಕರೆಗಳು
ಕಟ್ಟೆಯ ಮೇಲಣ ರಸ್ತೆಯ ಅಗಲ ... 24 ಅಡಿಗಳು
ಕಟ್ಟೆಯ ನಿವೇಶನದಲ್ಲಿ ಪ್ರವಹಿಸುವ ... ಸುಮಾರು 1,94,000 ಕ್ಯೂಸೆಕುಗಳು
ನೀರಿನ ಗರಿಷ್ಠ ಬೆಲೆ (ಕ್ಯೂಬಿಕ್ ಫೀಟ್ ಪರ್ ಸೆಕೆಂಡ್)
ಯೋಜನೆಯ ಒಟ್ಟು ಖರ್ಚಿನ ಅಂದಾಜು ... ರೂ. 24·80 ಕೋಟಿ

**ನೀರಾವರಿ :** ಯೋಜನೆ ಪೂರ್ಣವಾದಾಗ ಲಭಿಸುವ ಕೆಲವು ಮುಖ್ಯ ಪ್ರಯೋಜನಗಳನ್ನು ಮುಂದಿನ ಯಾದಿ ತೋರಿಸುತ್ತದೆ (ಸಂಖ್ಯೆಗಳು ಎಕರೆಗಳನ್ನು ಸೂಚಿಸುತ್ತವೆ).

| ಕ್ರ. ಸಂ. | ವಿವರಗಳು | ಬತ್ತ | ಅರೆಶುಷ್ಕ | ಎರಡನೆಯ ಬೆಳೆ | ಜುಮ್ಲ |
|---|---|---|---|---|---|
| 1 | ಕಪಿಲಾ ಬಲದಂಡೆ ನಾಲೆ | 30,000 | 47,000 | ... | 77,000 |
| 2 | ಕಪಿಲಾ ಎಡದಂಡೆ ನಾಲೆ | 5,000 | ... | ... | 5,000 |
| 3 | ಕೃಷ್ಣರಾಜಸಾಗರದಿಂದ ಬಲದಂಡೆ ಎತ್ತರ ನಾಲೆ | 24,000 | ... | ... | 24,000 |
| 4 | ಬಲ ಮತ್ತು ಎಡದಂಡೆ ನಾಲೆಗಳು (ಕಪಿಲಾ ಜಲಾಶಯ ಯೋಜನೆಯಲ್ಲಿ) ಮತ್ತು ಹಳೆಯ ಕಟ್ಟೆಯ ನಾಲೆಗಳು | ... | ... | 20,000 | 20,000 |
| | ಜುಮ್ಲ | 59,000 | 47,000 | 20,000 | 1,26,000 |

ನೀರಾವರಿ ಸೌಕರ್ಯವನ್ನು ಕ್ರಮೇಣ 1,85,000 ಎಕರೆಗಳಷ್ಟು ಪ್ರದೇಶಕ್ಕೆ ವಿಸ್ತರಿಸುವ ಯೋಜನೆ ಇದೆಯೆಂದು ಹಿಂದೆ ಹೇಳಿದೆ. ಅದು ಕಾರ್ಯರೂಪಕ್ಕೆ ಬಂದಾಗ ಬೇಸಾಯದಲ್ಲಿ ಆಗುವ ಪ್ರಗತಿಯ ಅಂದಾಜನ್ನು ಮುಂದಿನ ಯಾದಿ ತೋರಿಸುತ್ತದೆ.

| ಕ್ರ. ಸಂ. | ವಿವರಗಳು | ಮುಂಗಾರು ಬೆಳೆ | ಬೇಸಗೆ ಬೆಳೆ | | ಜುಮ್ಲ |
|---|---|---|---|---|---|
| | | | ಜಲಾಶಯ | ಕಟ್ಟೆ ಕಾಲುವೆ | |
| 1 | ಕಪಿಲಾ ಬಲದಂಡೆ ನಾಲೆ | 1,16,000 | 15,000 | ... | 1,31,000 |
| 2 | ಕಪಿಲಾ ಎಡದಂಡೆ ನಾಲೆ | 5,000 | 2,500 | ... | 7,500 |
| 3 | ಕೃಷ್ಣರಾಜಸಾಗರದಿಂದ ಬಲದಂಡೆ ಎತ್ತರ ಮಟ್ಟದ ನಾಲೆ | 24,000 | ... | ... | 24,000 |
| 4 | ಕಪಿಲಾ ಬಲದಂಡೆ ಎತ್ತರ ಮಟ್ಟದ ನಾಲೆ | 1,000 | ... | ... | 1,000 |
| 5 | ಕಪಿಲಾ ಎಡದಂಡೆ ಎತ್ತರ ಮಟ್ಟದ ನಾಲೆ | 1,500 | ... | ... | 1,500 |
| 6 | ಕಟ್ಟೆಯ ಕಾಲುವೆಗಳು | ... | ... | 20,000 | 20,000 |
| | ಜುಮ್ಲ | 1,47,500 | 17,500 | 20,000 | 1,85,000 |

ಯೋಜನೆಯ ವಿವಿಧ ಹಂತಗಳು ಮುಖ್ಯವಾಗಿ ಏಳು–ಕಟ್ಟೆಯ ನಿವೇಶನದ ಆಯ್ಕೆ, ಪ್ರಾದೇಶಿಕ ಬೆಳೆಯ ಸಮಗ್ರ ವಿವರ ಸಂಗ್ರಹಣೆ, ಯೋಜನೆಯ ನೀಲನಕ್ಷೆ ಮತ್ತು ಅಂದಾಜುಪತ್ರ, ಸರ್ಕಾರದ ಮಂಜೂರಾತಿ, ಕಾಮಗಾರಿಯನ್ನು ಕುರಿತಂತೆ ಟೆಂಡರನ್ನು ಕರೆದು ಒಪ್ಪುವುದು, ಜಲಾಶಯದಿಂದ ಮುಳುಗಡೆಯಾಗುವ ಪ್ರದೇಶಗಳ ಜನರ ಪುನರ್ನಿವೇಶನ, ಯೋಜನೆಯ ಕಾರ್ಯ.

1 **ನಿವೇಶನದ ಆಯ್ಕೆ :** ಕಪಿಲಾ ಯೋಜನೆಯ ಪ್ರಧಾನ ಉಪಯೋಗ ನೀರಾವರಿ. ವಿದ್ಯುದುತ್ಪಾದನೆ ಇಲ್ಲಿ ಆನುಷಂಗಿಕ (ಶರಾವತಿ ಯೋಜನೆಯಲ್ಲಿ ವಿದ್ಯುದುತ್ಪಾದನೆ ಪ್ರಧಾನ ಉದ್ದೇಶ). ಆದ್ದರಿಂದ ಈ ಯೋಜನೆಯ ನಿವೇಶನದ ಆಯ್ಕೆಯಲ್ಲಿ ಗಮನಿಸಿದ ಅಂಶಗಳು ಹೀಗಿವೆ––(i) ನೀರಾವರಿಯ ಪ್ರಯೋಜನ ಬಹುಭಾಗಕ್ಕೆ ಲಭ್ಯವಾಗಬೇಕು ; (ii) ಕಟ್ಟೆ ಹಾಗೂ ನಾಲೆ ವ್ಯವಸ್ಥೆಯ ಖರ್ಚು ಮಿತಿಯಲ್ಲಿರಬೇಕು. 1916ರಷ್ಟು ಹಿಂದೆಯೇ ಮೈಸೂರು ಸರ್ಕಾರ ಕಪಿಲಾ ನದಿಯ ನೀರನ್ನು ನಿಯಂತ್ರಿಸಲು ಯುಕ್ತ ಸ್ಥಳಪರಿಶೀಲನೆ ನಡೆಸಿತ್ತು. ನಂಜನಗೂಡು ಪಟ್ಟಣದಿಂದ ಮೇಲುಭಾಗದಲ್ಲಿರುವ ಒಂಬತ್ತು ನಿವೇಶನಗಳನ್ನು ಆಯ್ದು ಪರೀಕ್ಷಿಸಿ ಅಂತಿಮವಾಗಿ ಈಗಿನ ನಿವೇಶನವನ್ನು ಒಪ್ಪಲಾಯಿತು. ಈ ಕಟ್ಟೆಯನ್ನು ಬಿದರಹಳ್ಳಿ–ಬೀಚನಹಳ್ಳಿಯ ಈಗಿನ ನಿವೇಶನಕ್ಕಿಂತ ಮೇಲುನದಿಯಲ್ಲಿ ಕಟ್ಟಿದ್ದರೆ ಕೇರಳರಾಜ್ಯದಲ್ಲಿ ಇನ್ನಷ್ಟು ಪ್ರದೇಶ ಮುಳುಗಡೆ ಆಗುತ್ತಿತ್ತು. ಕೆಳನದಿಯಲ್ಲಿ ಎಲ್ಲಿಯಾದರೂ ನಿವೇಶನವನ್ನು ಆರಿಸಿದ್ದರೆ ಆಗ ಕಟ್ಟೆಯ ವಿಸ್ತಾರ ಏರುತ್ತಿತ್ತು ; ಜೊತೆಯಲ್ಲೇ ನೀರಾವರಿಯಿಂದ ಉಪಯೋಗ ಪಡೆಯುವ ಪ್ರದೇಶಗಳ ವ್ಯಾಪ್ತಿ ಕುಂಠಿತವಾಗುತ್ತಿತ್ತು. ಇದರಿಂದ ಆಗುತ್ತಿದ್ದುದು ಉಭಯನಷ್ಟ. ಹೀಗೆ ನಿವೇಶನದ ಆಯ್ಕೆ ಪರ ಮತ್ತು ವಿರುದ್ಧಗಳ ನಡುವಿನ ಒಂದು ವಿಧದ ಸಮತೋಲನ.

2 **ಪ್ರಾದೇಶಿಕ ಬೆಳೆ :** ಕಪಿಲಾ ಯೋಜನೆಯ ಎಂಜಿನಿಯರಿಂಗ್ ವಿಭಾಗ ವ್ಯವಸಾಯ ಇಲಾಖೆಯಿಂದ ಪ್ರಾದೇಶಿಕ ಬೆಳೆಗಳ ಸಮಗ್ರ ವಿವರಗಳನ್ನು ಸಂಗ್ರಹಿಸಿತು. ನೀರಾವರಿಯ ಗರಿಷ್ಠ ಲಾಭ ಪಡೆಯಲು ಈ ಅಂಶಗಳು ಅಗತ್ಯ. ಕಟ್ಟೆಯ ಎತ್ತರ, ನಾಲೆಗಳ ವಿನ್ಯಾಸ ಮುಂತಾದುವನ್ನು ನಿರ್ಧರಿಸುವಲ್ಲಿ ಭೌಗೋಲಿಕ ಸನ್ನಿವೇಶದಷ್ಟೇ ಮಹತ್ತ್ವ ಪ್ರಾದೇಶಿಕ ಬೆಳೆಗಳನ್ನು ಕುರಿತ ವಿವರಗಳಿಗೂ ಇದೆ. ನಾಲೆಗಳ ವ್ಯವಸ್ಥೆ ವ್ಯಾಪಿಸುವ ಒಟ್ಟುಪ್ರದೇಶದಲ್ಲಿ ಭಿನ್ನದರ್ಜೆಯ ಮಣ್ಣುಗಳಿವೆ. ಇವುಗಳಲ್ಲಿ ಪ್ರಧಾನವಾದವು ಕಂಕರೆ, ಕೆಂಪು ಮತ್ತು ಕಪ್ಪು ಮಣ್ಣುಗಳು. ಮಳೆ ಕಡಿಮೆ. ಆ ನೀರನ್ನೇ ಆಶ್ರಯಿಸಿ ರಾಗಿ, ಜೋಳ ಮುಂತಾದ ಬೆಳೆಗಳನ್ನು ಮಾತ್ರ ಈಗ ಬೆಳೆಸುತ್ತಿದ್ದಾರೆ. ಇಲ್ಲಿಗೆ ಜಲಾಶಯದಿಂದ ವ್ಯವಸ್ಥಿತವಾಗಿ ಮತ್ತು ನಿರಂತರವಾಗಿ ನೀರು ಪೂರೈಕೆ ಆಗತೊಡಗಿದರೆ ಬತ್ತ, ಹಿಪ್ಪುನೇರಳೆ ಮುಂತಾದ ಬೆಳೆಗಳನ್ನು ಬೆಳೆಸಬಹುದು. ಇದರಿಂದ ಈ ಪ್ರದೇಶಗಳು ಆರ್ಥಿಕವಾಗಿ ಮುಂದುವರಿಯುತ್ತವೆ.

3 **ನೀಲನಕ್ಷೆ ಮತ್ತು ಅಂದಾಜುಪತ್ರ :** ಕಟ್ಟೆಯ ಸ್ಥೂಲ ಚಿತ್ರ ಮೇಲೆ ಹೇಳಿದ ಎರಡು ಪ್ರಧಾನ ಅಂಶಗಳಿಂದ ನಿರ್ಧರಿತವಾಗುತ್ತದೆ. ಈಗ ಕಟ್ಟೆಯ ತಳಪಾಯ, ಉದ್ದ ಅಗಲ ಮತ್ತು ಎತ್ತರ, ಯಾವ ಮಾದರಿಯ ಕಟ್ಟೆಯ ರಚನೆ ಆಗಬೇಕು, ಕಟ್ಟೆಯ ಎರಡು ಬದಿಗಳ ಒಡ್ಡುಗಳ ರಚನೆ ಹಾಗೂ ವಿನ್ಯಾಸ ಹೇಗಿರಬೇಕು, ದಿಡ್ಡಿಬಾಗಿಲುಗಳು (ಕ್ರೆಸ್ಟ್‌ಗೇಟ್ಸ್), ತೂಬುಗಳು (ಸ್ಲೂಸಸ್) ಮತ್ತು ನಾಲೆಗಳು ಇವುಗಳಿಗೆ ಸಂಬಂಧಿಸಿದ ವಿವರಗಳು––ಇವನ್ನೆಲ್ಲ ಲಕ್ಷ್ಯದಲ್ಲಿರಿಸಿ ಯೋಜನೆಯ ಒಂದು ಸಮಗ್ರ ನೀಲನಕ್ಷೆಯನ್ನೂ ಅದರ ಜೊತೆಯಲ್ಲೇ ಒಂದು ಅಂದಾಜುಪತ್ರವನ್ನೂ ಸಿದ್ಧಗೊಳಿಸುತ್ತಾರೆ. ಗಾರೆಕಟ್ಟಡದ ಕಟ್ಟೆ ಹಾಗೂ ಮಣ್ಣಿನ ಒಡ್ಡುಗೋಡೆಗಳು ಇವುಗಳ ಆಲೇಖ್ಯದ (ಡಿಸೈನ್) ರಚನೆಯಲ್ಲಿ ಲಕ್ಷಿಸಿದ ಪ್ರಧಾನ ಅಂಶಗಳು ಇವು––(i) ಮೇಲುನದಿಯಲ್ಲಿ ನೀರಿನ ಹಾಗೂ ಗೋಡುಮಣ್ಣಿನ ತೂಕ ; (ii) ಗಾರೆ ಕೆಲಸದ ನಿಶ್ಚಲ ತೂಕ ; (iii) ಮೇಲುನದಿಯ ನೀರು ಹಾಗೂ ತೆರೆಗಳ ಪರಿಣಾಮವಾಗಿ ಉತ್ಪಾದನೆಗೊಳ್ಳುವ ಮಟ್ಟಸ ಬಲಗಳು (ಹಾರಿಸಾಂಟಲ್ ಫೋರ್ಸಸ್) ; (iv) ಜಲಾಶಯದ ನೀರಿನ ಮೇಲೊತ್ತಡ.

ಅಂದಾಜುಪತ್ರದಲ್ಲಿ ಪ್ರಧಾನವಾಗಿ ಎರಡು ವಿಭಾಗಗಳಿವೆ– ಕಪಿಲಾಕಟ್ಟೆ ಮತ್ತು ಮುಳುಗಡೆ ಪ್ರದೇಶಗಳ ಒಟ್ಟು ವೆಚ್ಚ ರೂ. 11.80 ಕೋಟಿ ; ನಾಲೆಗಳ ಒಟ್ಟು ವೆಚ್ಚ ರೂ. 13.00 ಕೋಟಿ. ಆದ್ದರಿಂದ ಯೋಜನೆಯ ಒಟ್ಟುವೆಚ್ಚದ ಅಂದಾಜು ರೂ. 24.80 ಕೋಟಿ. ನೀಲನಕ್ಷೆ ಮತ್ತು ಅಂದಾಜುಪತ್ರದ ತಯಾರಿಕೆಯಲ್ಲಿ ಹಲವಾರು ಅಂಶಗಳನ್ನು ಆಧಾರಭಾವನೆಗಳಾಗಿ ಇಟ್ಟುಕೊಳ್ಳಬೇಕಾಗುತ್ತದೆ. ಉದಾಹರಣೆಗೆ ಕಟ್ಟೆಯ ತಳಪಾಯ ಇಂತಿಷ್ಟು ಅಡಿಗಳು ಇದ್ದರೆ ಸಾಕೆಂದು ತೀರ್ಮಾನಿಸಿ ಆ ಆಧಾರಭಾವನೆಯ ಮೇಲೆ ಸಮಗ್ರ ನೀಲನಕ್ಷೆಯನ್ನೂ ಅದರ ಅಂದಾಜುಪತ್ರವನ್ನೂ ತಯಾರಿಸುತ್ತಾರೆ. ಆದರೆ ವಾಸ್ತವಿಕವಾಗಿ ಕಾರ್ಯಕ್ಕೆ ತೊಡಗಿದಾಗ ತಳಪಾಯದ ಆಳ ಸಾಲದೆಂದಾದರೆ ಅಥವಾ ರಚನೆಯಲ್ಲಿ ವ್ಯತ್ಯಾಸ ಅನಿವಾರ್ಯವೆಂದೆನ್ನಿಸಿದರೆ ಇಡೀ ನೀಲನಕ್ಷೆಯನ್ನು ಬದಲಾಯಿಸುವುದೊಂದೇ ಯುಕ್ತಮಾರ್ಗ. ಇದರಿಂದ ಮಾತ್ರವಲ್ಲ, ಬದಲಾಗುತ್ತಿರುವ ದೇಶದ ಆರ್ಥಿಕ ಹವೆಯಿಂದಲೂ ಅಂದಾಜುಪತ್ರದ ಮೇಲೆ ಸಾಕಷ್ಟು ಪರಿಣಾಮಗಳಾಗದಿರುವುದಿಲ್ಲ. ಉದಾಹರಣೆಗೆ ಸಾಮಗ್ರಿಗಳ ಹಾಗೂ ಕಾಮಗಾರಿಯ ಬೆಲೆಗಳು ವರ್ಷದಿಂದ ವರ್ಷಕ್ಕೆ ಏರುತ್ತಿವೆ. ಇಲ್ಲೆಲ್ಲ ವಾಸ್ತವಿಕ ಪರಿಸ್ಥಿತಿಯನ್ನು ಗಮನಿಸಿ ಯೋಜನೆಯಲ್ಲಿ ಸಾಕಷ್ಟು ಬದಲಾವಣೆಗಳನ್ನು ಮಾಡಿಕೊಳ್ಳಲು ಎಡೆ ಇದ್ದೇ ಇರುತ್ತದೆ.

## ಕಪಿಲಾ ಯೋಜನೆ













1 ತಾಂತ್ರಿಕ ಸಿಬ್ಬಂದಿಯಿಂದ ಕೆಲಸದ ಪರಿಶೀಲನೆ

2 ಕೆಳನದಿಯಿಂದ ಕಟ್ಟೆಯ ಒಂದು ನೋಟ. ಎಡಭಾಗದ ಒಡ್ಡುಗೋಡೆ ಹಿನ್ನೆಲೆಯಲ್ಲಿದೆ

3 ಕೆಳನದಿಯಿಂದ ಕಟ್ಟೆಯ ಇನ್ನೊಂದು ನೋಟ

4 ಕಪಿಲಾ ನದಿ ಬಲದಂಡೆಯಲ್ಲಿನ ತಿರುವುನಾಲೆಯ ನೋಟ

5 ಮೇಲು ನದಿಯಿಂದ ಕಟ್ಟೆ ಮತ್ತು ಎಡ ಒಡ್ಡು ಗೋಡೆಗಳ ಸಮಗ್ರ ನೋಟ

6 ಬಲದಂಡೆ ನಾಲೆಯ ನೀರಿನ ಬಿಡುಗಂಡಿಗಳು




ಕಪಿಲಾ ಯೋಜನೆಯ ನಿವೇಶನವನ್ನು ತೋರಿಸುವ ನಕ್ಷೆ

ನೀಲನಕ್ಷೆ ಮತ್ತು ಅಂದಾಜುಪತ್ರ ಯೋಜನೆ ಸಾಗುವ ದಾರಿಸೂಚಕಗಳೇ ವಿನಾ ದಾರಿಯೇ ಅಲ್ಲ.

4 **ಸರ್ಕಾರದ ಮಂಜೂರಾತಿ :** ರೂ. 320 ಲಕ್ಷದ ಮೊದಲ ಯೋಜನೆಗೆ ಸರ್ಕಾರ 1959ರಲ್ಲಿ ಅಂಗೀಕಾರ ನೀಡಿತು. ಆದರೆ ಪರಿಶೀಲನೆ ಮುಂದುವರಿದಂತೆ ಹೊಸ ಸಮಸ್ಯೆಗಳೂ ಅವುಗಳಿಗೆ ಪರಿಹಾರಗಳೂ ಕಂಡುಕೊಂಡಂತೆ ರೂ. 24.80 ಕೋಟಿ ವೆಚ್ಚದ ಯೋಜನೆಗೆ ಬೇರೆ ಬೇರೆ ಹಂತಗಳಲ್ಲಿ ಸರ್ಕಾರದ ಒಪ್ಪಿಗೆ ದೊರೆತಿದೆ. 1974ರಲ್ಲಿ ಯೋಜನೆ ಪೂರ್ಣವಾಗುವ ವೇಳೆಗೆ ಈ ಅಂದಾಜನ್ನು ಪುನಃ ಪರಿಷ್ಕರಿಸುವ ಸನ್ನಿವೇಶ ಉಂಟಾಗಬಹುದು.

5 **ಕಾಮಗಾರಿ ಟೆಂಡರುಗಳು :** ಇಂಥ ಬೃಹದ್ಯೋಜನೆಯನ್ನು ನಿರ್ವಹಿಸಲು ಸ್ಥಾಪಿಸಿದ ಎಂಜಿನಿಯರಿಂಗ್ ವಿಭಾಗ ಕಾಮಗಾರಿಯನ್ನು ವಿವಿಧ ಕಾರ್ಯಕಾರೀ ವಿಭಾಗಗಳಾಗಿ ವಿಭಜಿಸಿ ಒಂದೊಂದನ್ನೂ ಪ್ರತ್ಯೇಕವಾಗಿ ನೆರವೇರಿಸಲು ಟೆಂಡರುಗಳನ್ನು ಕರೆಯುವುದು. ಉದಾಹರಣೆಗೆ ನಿವೇಶನಕ್ಕೆ ಲಾರಿಸಾಗುವ ದಾರಿಯ ರಚನೆ, ಒಡ್ಡುಗಳಿಗೆ ಮಣ್ಣು ಸಾಗಿಸುವ ಕೆಲಸ, ಕಟ್ಟೆಯ ತಳಪಾಯದ ರಚನೆ, ದಿಡ್ಡಿ ಬಾಗಿಲುಗಳ ನಿರ್ಮಾಣ ಮುಂತಾದುವು ಇಂಥ ಬೇರೆ ಬೇರೆ ಬಿಡಿ ಕೆಲಸಗಳು. ಎಂಜಿನಿಯರಿಂಗ್ ವಿಭಾಗ ಒಪ್ಪಿದ ಟೆಂಡರುದಾರರು ಅವರಿಗೆ ವಿಧಿಸಿದ ಕಾರ್ಯಗಳನ್ನು ಗೊತ್ತಾದ ವಿಧಿ, ನಿಯಮ, ದರಗಳ ಅನುಸಾರ ನಡೆಸಬೇಕು. ಇದು ಆಗುತ್ತಿರುವಾಗ ಹೆಜ್ಜೆಹೆಜ್ಜೆಗೂ ಉಸ್ತುವಾರಿ ನೋಡಿಕೊಳ್ಳಲು, ಎಲ್ಲವೂ ನೀಲನಕ್ಷೆ ಪ್ರಕಾರ ಮುಂದುವರಿಯುತ್ತಿವೆಯೇ ಎಂದು ದೃಢಪಡಿಸಿಕೊಳ್ಳಲು, ಅಲ್ಲಿ ನಮೂದಿಸಿರದ ಹೊಸ ಪರಿಸ್ಥಿತಿ ಕಾರ್ಯರಂಗದಲ್ಲಿ ತಲೆದೋರಿದರೆ ಸೂಕ್ತಪರಿಹಾರ ಅರಸಿ ಟೆಂಡರುದಾರನಿಗೂ ಸರ್ಕಾರಕ್ಕೂ ಅನ್ಯಾಯವಾಗದಂತೆ ಕೆಲಸ ಮುಂದುವರಿಸಿಕೊಂಡು ಹೋಗಲು—ಇವೇ ಮುಂತಾದ ಕಾರ್ಯನಿರ್ವಹಣೆಗೋಸ್ಕರ ಎಂಜಿನಿಯರಿಂಗ್ ವಿಭಾಗ ತನ್ನ ಒಂದು ದೊಡ್ಡ ಪಡೆಯನ್ನೇ ಯೋಜನೆಯ ವಿವಿಧ ಪ್ರದೇಶಗಳಲ್ಲಿ ವಿವಿಧ ಹಂತಗಳಿಗೆ ನಿಯೋಜಿಸಿರುತ್ತದೆ.

6 **ಮುಳುಗಡೆ ಪ್ರದೇಶದ ಪುನರ್ನಿವೇಶನ :** ನದೀಪಾತ್ರದ ಇಕ್ಕೆಲಗಳಲ್ಲೂ ಜನ, ಕೃಷಿ ವಿಪುಲವಾಗಿ ಹಬ್ಬಿರುವುದು ವಾಡಿಕೆ. ಆದ್ದರಿಂದ ಕಟ್ಟೆಯ ನಿರ್ಮಾಣದಿಂದ ಮೇಲುನದಿಯ ದಂಡೆಗಳ ಬಹುಭಾಗ ನೀರಿನಿಂದ ಮುಳುಗಿಹೋಗಿ ಅಲ್ಲಿನ ಜನರಿಗೂ ಅವರ ಸಂಪತ್ತಿಗೂ ಅಪಾರ ಹಾನಿ ಆಗುವುದು ಸಹಜ. ಈ ಜನವನ್ನು ಒಂದು ಯೋಜನಾನುಸಾರ ಸ್ಥಾನಾಂತರಿಸಿ ಪುನರ್ನಿವೇಶನಗೊಳಿಸಬೇಕು ; ಅಲ್ಲದೇ ಅವರಿಗೆ ಆಗುವ ಸಂಪತ್ತುನಷ್ಟಕ್ಕೆ ಯುಕ್ತ ಪರಿಹಾರ ನೀಡಬೇಕು. ಕಪಿಲಾ ಜಲಾಶಯದಿಂದ ಮುಳುಗಡೆಯಾಗುವ ಪ್ರದೇಶಗಳ ವಿವರ ಹೀಗಿದೆ—

ಮೈಸೂರು ರಾಜ್ಯದಲ್ಲಿ

| | | |
|---|---|---|
| ವ್ಯವಸಾಯಯೋಗ್ಯ ಭೂಮಿ | ... | 8,650 ಎಕರೆಗಳು |
| ಅರಣ್ಯಪ್ರದೇಶ | ... | 6,530 ಎಕರೆಗಳು |

ಕೇರಳ ರಾಜ್ಯದಲ್ಲಿ

| | | |
|---|---|---|
| ವ್ಯವಸಾಯಯೋಗ್ಯ ಭೂಮಿ | ... | 254 ಎಕರೆಗಳು |

(ಇದರ ಪೂರ್ಣ ವಿವರಣೆ ಇನ್ನೂ ದೊರೆಯಬೇಕಾಗಿದೆ.)

ಮೈಸೂರು ರಾಜ್ಯದಲ್ಲಿ 20 ಹಳ್ಳಿಗಳನ್ನು (2692 ಕುಟುಂಬಗಳು) ಸ್ಥಾನಾಂತರಿಸಿ ಪುನರ್ನಿವೇಶನ ಮಾಡಬೇಕಾಗಿದೆ. ಈ ಕಡೆ ನಡೆಯಬೇಕಾದ ಕೆಲಸ ಭರದಿಂದ ಮುಂದುವರಿಯುತ್ತಿದೆ. ಜಲಾಶಯ ಪೂರ್ತಿ ಆಗುವ ಮೊದಲೇ ಇದು ಮುಗಿದಿರುವುದು. ಇಂಥ ಪುನರ್ನಿವೇಶನಗಳಿಂದ ಒದಗುವ ಒಂದು ಅನುಕೂಲತೆ ಎಂದರೆ ಹೊಸ ವಸತಿಯಲ್ಲಿ ಜನ ಹೊಸ ಮಾದರಿಯ ಆಧುನಿಕ ಜೀವನವನ್ನು ತೊಡಗಬಹುದು.

7 **ಯೋಜನೆಯ ಕಾರ್ಯ :** ಕಟ್ಟೆ ರಚಿಸಬೇಕೆಂದು ಉದ್ದೇಶಿಸಿದ ಸ್ಥಳದಲ್ಲಿ ತಳಪಾಯದ ರಚನೆ ಆರಂಭಿಸಿದಾಗ ಒಂದು ಹೊಸ ಸಂಗತಿ ವ್ಯಕ್ತವಾಯಿತು — ಕೆಲವು ಕಡೆ 100′ಗಳ ವರೆಗೆ ಗುಂಡಿ ತೋಡಿದಾಗ ಮಾತ್ರ ಕಲ್ಲಿನ ಭದ್ರ ನೆಲ ದೊರೆಯಿತು. ಪೂರ್ವಭಾವೀ ವೀಕ್ಷಣೆಯಲ್ಲಿ ಇಲ್ಲದ ಈ ಅಂಶದಿಂದ ಕಟ್ಟೆಯ ರಚನೆ ಮತ್ತು ಖರ್ಚುಗಳಲ್ಲಿ ಸಹಜವಾಗಿ ವ್ಯತ್ಯಾಸ ಉಂಟಾಯಿತು. ಕಟ್ಟೆಯಲ್ಲಿ ಐದು ಪ್ರಧಾನ ವಿಭಾಗಗಳಿವೆ—ತಳಪಾಯ, ಸ್ಥಿರವಾದ ತಡೆಕಟ್ಟೆ, ದಿಡ್ಡಿಬಾಗಿಲುಗಳು, ತೂಬುಗಳು, ಕಟ್ಟೆಮೇಲಿನ ರಸ್ತೆ. ಗಾರೆಕಟ್ಟಡದ ಕಟ್ಟೆಯ ಅಡಿಪಾಯದ ರಚನೆ

(ಉದ್ದ 835 ಅಡಿಗಳು) ಈಗ (1971) ಪೂರ್ಣವಾಗಿದೆ. ಕಟ್ಟೆಯ ಉಳಿದ ಭಾಗ, ತೂಬಿನ ರಚನೆ, ತಡೆಬಾಗಿಲಿನ ಅಳವಡಿಕೆ, ನಾಲೆಗಳ ನಿರ್ಮಾಣ ಇವೆಲ್ಲವೂ ತ್ವರಿತಗತಿಯಿಂದ ಸಾಗಿವೆ. ಸರ್ಕಾರದ ಹಲವಾರು ಇಲಾಖೆಗಳು ಸಹಕರಿಸಿ ಏಕೋದ್ದೇಶ ಪ್ರೇರಿತವಾಗಿ ನಡೆಸಬೇಕಾದ ಈ ಮಹಾಕಾರ್ಯದ ಮುನ್ನಡೆ ಉತ್ಸಾಹದಾಯಕವಾಗಿದೆ. 1974ರ ಸುಮಾರಿಗೆ ಈ ಯೋಜನೆ ಪೂರ್ಣಗೊಳ್ಳಬೇಕೆಂದು ಸರಕಾರದ ಆಶಯ. ಯೋಜನೆಯ ನಿರ್ಮಾಣದ ಹೊಣೆ ಹೊತ್ತಿರುವ ಎಂಜಿನಿಯರಿಂಗ್ ವಿಭಾಗದ ಇಂದಿನ ಕಾರ್ಯಪ್ರಗತಿಯನ್ನು ಗಮನಿಸುವಾಗ ಈ ಆಶಯ ಸಫಲವಾಗುವುದರಲ್ಲಿ ಸಂದೇಹವಿಲ್ಲ.

ಕಪಿಲಾ ಜಲಾಶಯ ಹಾಗೂ ಕಪಿಲಾ ನಾಲೆಗಳ ವ್ಯವಸ್ಥೆ ಪೂರ್ಣವಾದಾಗ ಈ ಯೋಜನೆಯ ವ್ಯಾಪ್ತಿಗೆ ಒಳಪಡುವ ಪ್ರದೇಶಗಳಲ್ಲಿ ವಿಶೇಷವಾದ ವ್ಯಾವಸಾಯಿಕ ಮತ್ತು ಆರ್ಥಿಕ ಚಟುವಟಿಕೆಗಳು ತಾವಾಗಿಯೇ ತಲೆದೋರುತ್ತವೆ. ಬತ್ತದ ಬೆಳೆಗೆ ಅಧಿಕ ವೇಗೋತ್ಕರ್ಷ ದೊರೆತರೆ ಹಿಪ್ಪುನೇರಳೆಯ ಅಧಿಕ ವ್ಯವಸಾಯದಿಂದ ರೇಷ್ಮೆ ಉದ್ಯಮಕ್ಕೆ ಹೆಚ್ಚಿನ ಸಂವೇಗ (ಮೊಮೆಂಟಂ) ಲಭಿಸುತ್ತದೆ. ಹೆಚ್ಚು ಜನರಿಗೆ ಹೆಚ್ಚಿನ ಉದ್ಯೋಗಾವಕಾಶ ದೊರೆತು ದೇಶದ ಸರ್ವಾಂಗೀಣ ಆರ್ಥಿಕಾಭ್ಯುದಯಕ್ಕೆ ಕಪಿಲಾ ಯೋಜನೆ ಒಂದು ವಿಶಿಷ್ಟ ಕೊಡುಗೆಯಾಗುವುದು. (ಎಚ್.ಸಿ.ಕೆ.)

**ಕಪಿಲೇಶ್ವರ ಗಜಪತಿ :** ಸು. 1435–1470. ಒರಿಸ್ಸವನ್ನಾಳಿದ ಗಜಪತಿ ರಾಜವಂಶದ ಮೊದಲನೆಯ ದೊರೆ. ಪೂರ್ವ ಗಂಗರ ಕೊನೆಯ ರಾಜನಾದ ನಾಲ್ಕನೆಯ ಭುವನೇಂದ್ರನ ಅನಂತರ ಒರಿಸ್ಸದ ಸಿಂಹಾಸನವನ್ನಾಕ್ರಮಿಸಿಕೊಂಡ (1453). ಕಪಿಲೇಂದ್ರನೆಂದೂ ಈತನ ಹೆಸರು. ಗಜಪತಿ, ಗೌಡೇಶ್ವರ ಮತ್ತು ನವಕೋಟಿ ಕರ್ಣಾಟ ಕಲವರಗೇಶ್ವರ ಎಂಬವು ಈತನ ಬಿರುದುಗಳು. ಈತ ಬಲುಶಕ್ತ, ದಕ್ಷ, ಆಡಳಿತಕ್ಕೆ ಬಂದ ಕೂಡಲೇ ಆಂತರಿಕ ದಂಗೆಗಳನ್ನೆಲ್ಲ ಅಡಗಿಸಿದನಲ್ಲದೆ ರಾಜ್ಯವನ್ನು ಹೂಗ್ಲಿಯ ತಡಿಯಿಂದ ಕಾವೇರಿಯ ಮಡಿಲ ವರೆಗೂ ಹಬ್ಬಿಸಿ ಒರಿಸ್ಸದ ಕೀರ್ತಿ ಬೆಳೆಸಿದ. ಬಂಗಾಲದ ಕೆಲವು ಭಾಗಗಳು 1450ರ ಸುಮಾರಿನಲ್ಲಿ ಇವನಿಗೆ ವಶವಾಗಿದ್ದುವು. ಅನಂತರ ಈತ ಬಹಮನೀ ರಾಜ್ಯವನ್ನು ಮುತ್ತಿದ. 1465 ರಲ್ಲಿ ಕಂಚಿಯನ್ನು ವಶಪಡಿಸಿಕೊಂಡು ತಿರುಚನಾಪಳ್ಳಿಯವರೆಗೂ ನುಗ್ಗಿದ. ಕಪಿಲೇಶ್ವರ ಪಗೋಡ ಎಂಬ ನಾಣ್ಯಗಳನ್ನು ಟಂಕಿಸಿ ಚಲಾವಣೆಗೆ ತಂದ. ಕಪಿಲೇಶ್ವರನ ಮರಣಾನಂತರ ಪುರುಷೋತ್ತಮ (1470–97) ಪಟ್ಟಕ್ಕೆ ಬಂದ. ನೋಡಿ—ಪುರುಷೋತ್ತಮ ಗಜಪತಿ. ಅನಂತರ ಬಂದ ದೊರೆ ಅವನ ಮಗನಾದ ಪ್ರತಾಪರುದ್ರ (1497–1540) (ನೋಡಿ—ಪ್ರತಾಪರುದ್ರ). 1541ರ ಸುಮಾರಿನಲ್ಲಿ ಈ ವಂಶದ ಆಡಳಿತ ಕೊನೆಗೊಂಡಿತು. ಭೋಯಿ ವಂಶ ಪ್ರಬಲವಾಯಿತು.
ನೋಡಿ—ಭೋಯಿ ಮನೆತನ. (ಜಿ.ಆರ್.ಆರ್.)

**ಕಪೇಶಿಯನರು :** ಫ್ರೆಂಚ್ ಮೂಲದ ರಾಜವಂಶ. ಫ್ರಾನ್ಸಿನಲ್ಲೂ ಯೂರೋಪಿನ ಇತರ ಕೆಲವೆಡೆಗಳಲ್ಲೂ ಈ ವಂಶದ ದೊರೆಗಳು ಆಳಿದರು. ಫ್ರಾನ್ಸಿನಲ್ಲಿ (987–996) ಆಳಿದ ಹ್ಯೂ ಕಾಪೆಟನಿಂದ ಶಾಖೋಪಶಾಖೆಗಳಾಗಿ ಒಡೆದ ವಂಶದ ದೊರೆಗಳನ್ನೆಲ್ಲ ಕಪೇಶಿಯನರೆಂದೇ ಕರೆಯಲಾಗಿದೆ. ಮೆರೊವಿಂಗಿಯನ್, ಕೆರೊಲಿಂಗಿಯನ್ ವಂಶಗಳ ಅನಂತರದ್ದು ಈ ರಾಜವಂಶ. ಆಂಜೂ ಮತ್ತು ಬ್ಲ್ವಾ ಪ್ರದೇಶಗಳ ಕೌಂಟ್ ಆಗಿದ್ದ ರಾಬರ್ಟ್ ದಿ ಸ್ಟ್ರಾಂಗ್ ಈ ವಂಶದ ಮೂಲಪುರುಷ. ಇವನ ಮಕ್ಕಳಾದ ಯೂಡ್ಸ್ ಮತ್ತು ಒಂದನೆಯ ರಾಬರ್ಟರಿಗೆ ಅನುಕ್ರಮವಾಗಿ 888 ಮತ್ತು 922 ರಲ್ಲಿ ಫ್ರಾಂಕರ ದೊರೆಗಳೆಂದು ಪಟ್ಟಕಟ್ಟಲಾಗಿತ್ತು. ರಾಬರ್ಟನ ಅನಂತರ ಅವನ ಮಗ ಹ್ಯೂ ದಿ ಗ್ರೇಟ್ ಕ್ಯಾರೊಲಿಂಜಿಯನ್ ವಂಶವನ್ನು ಮತ್ತೆ ಅಧಿಕಾರಕ್ಕೆ ತಂದ (936). ಆದರೆ 987 ರಲ್ಲಿ ಕ್ಯಾರೊಲಿಂಜಿಯನ್ ಉತ್ತರಾಧಿಕಾರಿಯ ಹಕ್ಕನ್ನು ಕಡೆಗಣಿಸಿ ಹ್ಯೂ ದಿ ಗ್ರೇಟನ ಮಗ ಹ್ಯೂ ಕಾಪೆಟ್ ದೊರೆಯಾಗಿ ಆಯ್ಕೆ ಹೊಂದಿದ. ಪ್ಯಾರಿಸ್ ಇವನ ಕಾಲದಲ್ಲಿ ರಾಜಧಾನಿಯಾಯಿತು. ಆರಂಭದಲ್ಲಿ ಕೇವಲ ಒಂದು ಊಳಿಗಮಾನ್ಯ ಪದ್ಧತಿಯದಾಗಿದ್ದ ತಮ್ಮ ರಾಜ್ಯವನ್ನು ಒಂದು ಪ್ರಬಲರಾಷ್ಟ್ರವಾಗಿ ಈ ವಂಶಜರು ಕಟ್ಟಿದರು. ಫ್ರಾನ್ಸಿನಲ್ಲಿ ಹ್ಯೂ ಕಾಪೆಟನಿಂದ ಕ್ರಮವಾಗಿ ವಂಶಪಾರಂಪರ್ಯವಾಗಿ ಬಂದ 13 ದೊರೆಗಳು ಕಪೇಶಿಯನರ ನೇರ ವಂಶೀಯರೆಂದು ಹೇಳಲಾಗಿದೆ. ಇವರ ಅನಂತರ ವ್ಯಾಲಾಯಿ ವಂಶದ 13 ಮಂದಿ ಕಪೇಶಿಯನ್ ದೊರೆಗಳು ಆಳಿದರು. ಆ ಮೇಲೆ ಬೌರ್ಬನಿನ ಕಪೇಶಿಯನರು ಬಂದರು.

ಫ್ರೆಂಚ್ ರಾಜವಂಶದ ಉಪಶಾಖೆಗಳವರು ಬರ್ಗಂಡಿಯ ಡ್ಯೂಕರಾಗಿದ್ದರು. ಪೂರ್ವದ ರೋಮನ್ ಸಾಮ್ರಾಜ್ಯದ ಮೂವರು ಸಮ್ರಾಟರಾದ (1216–1261) ಪೀಟರನೂ (ಈತ ಫ್ರಾನ್ಸಿನ ಆರನೆಯ ಲೂಯಿಯ ಮೊಮ್ಮಗ) ಅವನ ಮಕ್ಕಳಾದ ರಾಬರ್ಟ್ ಮತ್ತು ಎರಡನೆಯ ಬಾಲ್ಡ್‌ವಿನ್ ಇವರೂ ಕಪೇಶಿಯನರೇ.

ನೇಪಲ್ಸಿನಲ್ಲಿ 1266 ರಿಂದ 1435ರ ವರೆಗೆ ಆಳಿದ ಎಂಟು ಮಂದಿಯೂ ಕಪೇಶಿಯನರು. ಈ ಶಾಖೆಯ ಮೊದಲ ದೊರೆ ಚಾರಲ್ಸ್ ಫ್ರಾನ್ಸಿನ ಒಂಬತ್ತನೆಯ ಲೂಯಿಯ ಸೋದರನ ವಂಶಜ. ಇವನ ಮರಿಮಗ ಚಾರಲ್ಸ್ ರಾಬರ್ಟ್ 1310 ರಲ್ಲಿ ಹಂಗರಿಯ ಅರಸನಾದ. ಈ ವಂಶ 1382ರ ವರೆಗೆ ಅಲ್ಲಿ ಆಳುತ್ತಿತ್ತು. ಅಲ್ಲಿ ಆಳಿದ ಇನ್ನೊಬ್ಬ ದೊರೆ ಲೂಯಿ. ಫ್ರಾನ್ಸಿನ ದಕ್ಷಿಣದಲ್ಲಿದ್ದ ನವಾರನ್ನು ಇದೇ ವಂಶದ ಮೂವರು ದೊರೆಗಳು 1425ರ ವರೆಗೆ ಆಳಿದರು. ಮೊದಲ ದೊರೆ ಮೂರನೆಯ ಫಿಲಿಪ್ ಫ್ರಾನ್ಸಿನ ಮೂರನೆಯ ಫಿಲಿಪನ ಮೊಮ್ಮಗ. (ಎಸ್.ಎಚ್.ಕೆ.)

**ಕಪೂಚಿನ್ ಕೋತಿ :** ಸಿಬಸ್ ಕಪೂಸಿನಸ್ ಎಂಬ ಶಾಸ್ತ್ರೀಯ ಹೆಸರಿನ ಕೋತಿ. ಪ್ರೈಮೇಟುಗಳ ಗಣದ ಪ್ಲಾಟಿರೈನಿ ಬುಡಕಟ್ಟಿನ ಸಿಬಿಡೀ ಕುಟುಂಬಕ್ಕೆ



ಸೇರಿದೆ. ಅಮೆರಿಕದ ಉಷ್ಣವಲಯಗಳಲ್ಲಿ ಸಿಕ್ಕುವ ಇದು ನಿಕರಾಗುವದಿಂದ ಪರಗ್ವೆಯ ವರೆಗೂ ಹರಡಿದೆ. ಬಾಲ ಸುರುಳಿ ಸುತ್ತಿಕೊಳ್ಳಬಲ್ಲುದು. ಇದೇ ಕುಟುಂಬದ ಇತರ ಕೋತಿಗಳೊಂದಿಗೆ ಹೋಲಿಸಿದರೆ ಇದರ ಬಾಲ ಬಹಳ ಚಿಕ್ಕದು ಮತ್ತು ಇದರಲ್ಲಿ ಕುಂಡೆಗಳ ಮೇಲೆ ರೋಮಗಳಿವೆ. ಗಾತ್ರದಲ್ಲಿ ಇದು ಬೆಕ್ಕಿನಂತಿದೆ. ಮೈ ಮೇಲಿನ ಕೂದಲು ಉಣ್ಣೆಯಂತಿಲ್ಲ.

ಸಾಮಾನ್ಯವಾಗಿ ಇವು ಗುಂಪು ಗುಂಪಾಗಿ ಎತ್ತರವಾದ ಮರಗಳ ಮೇಲೆ ಓಡಾಡಿಕೊಂಡಿರುತ್ತವೆ. ಹಣ್ಣು, ಎಳೆಯ ಕಾಂಡ, ಮೊಗ್ಗುಗಳು, ಕೀಟಗಳು, ಮೊಟ್ಟೆ ಮತ್ತು ಮರಿಹಕ್ಕಿಗಳು ಇವುಗಳ ಪ್ರಧಾನ ಆಹಾರ. ಇವನ್ನು ಹಿಡಿದು ಸುಲಭವಾಗಿ ಪಳಗಿಸಬಹುದು, ಬಹಳ ಸಾಧು ಪ್ರಾಣಿಗಳಾದ ಇವು ಮನೆಯಲ್ಲಿ ಹಾಗೂ ಪ್ರಾಣಿ ಸಂಗ್ರಹಾಲಯಗಳಲ್ಲಿ ಸಾಕಲು ಯೋಗ್ಯವಾದುವು.
ನೋಡಿ—ಪ್ರೈಮೇಟುಗಳು. (ಎಚ್.ಬಿ.ಡಿ.)

**ಕಪೂರ್ಥಲ :** ಪಂಜಾಬ್ ರಾಜ್ಯದ ಜಲಂಧರ್ ವಿಭಾಗದಲ್ಲಿರುವ ಒಂದು ಪಟ್ಟಣ. ಇದೇ ಹೆಸರಿನ ಜಿಲ್ಲೆಯ ಮುಖ್ಯ ಪಟ್ಟಣ, ತಹಸೀಲಿನ ಕೇಂದ್ರ. ಜಲಂಧರ್ ನಗರದಿಂದ ಪಶ್ಚಿಮಕ್ಕೆ 11 ಮೈ. ದೂರದಲ್ಲಿದೆ. ಜಲಂಧರ್ ನಗರದೊಂದಿಗೆ ರೈಲ್ವೇ ಮತ್ತು ರಸ್ತೆ ಸಂಪರ್ಕವಿದೆ. ಈ ಪಟ್ಟಣದ ಜನಸಂಖ್ಯೆ 29,334 (1961). ಇಲ್ಲಿ ಸುಂದರವಾದ ಅರಮನೆ ಮತ್ತು ಉದ್ಯಾನಗಳೂ ಕಾಲೇಜು ಮತ್ತು ಆಸ್ಪತ್ರೆಗಳೂ ಇವೆ. ಈ ಪಟ್ಟಣ 11ನೆಯ ಶತಮಾನದಲ್ಲಿ ಸ್ಥಾಪಿತವಾಯಿತು. 1780ರಲ್ಲಿ ಸರ್ದಾರ್ ಜಸ್ಸಾಸಿಂಗ್ ಇದನ್ನು ಗೆದ್ದುಕೊಂಡ. ಅಂದಿನಿಂದ 1948ರ ವರೆಗೆ ಇದು ಕಪೂರ್ಥಲ ಸಂಸ್ಥಾನದ ರಾಜಧಾನಿಯಾಗಿತ್ತು.

ಕಪೂರ್ಥಲ ಜಿಲ್ಲೆಯ ವಿಸ್ತೀರ್ಣ 643 ಚ.ಮೈ. ಜನಸಂಖ್ಯೆ 3,43,778 (1961). ಹಿಂದಿನ ಕಪೂರ್ಥಲ ಸಂಸ್ಥಾನದ ವಿಸ್ತೀರ್ಣ ಈ ಜಿಲ್ಲೆಯಷ್ಟೇ ಇತ್ತು. ಇದು ಜಲಂಧರ್ ಜಿಲ್ಲೆಯ ವಾಯುವ್ಯಕ್ಕೆ ಬೀಯಾಸ್ ನದಿಯಗುಂಟ ಹಬ್ಬಿದೆ. ಇದು ವ್ಯವಸಾಯ ಪ್ರಧಾನವಾದ ಜಿಲ್ಲೆ. ಗೋದಿ, ಕಡಲೆ, ಹತ್ತಿ ಮತ್ತು ಕಬ್ಬು ಮುಖ್ಯ ಬೆಳೆ.

ಸುಲ್ತಾನ್‌ಪುರ ಮತ್ತು ಫಗ್ವಾರ ಈ ಜಿಲ್ಲೆಯ ಇನ್ನೆರಡು ಪಟ್ಟಣಗಳು. ಜನಸಂಖ್ಯೆ (1961) ಕ್ರಮವಾಗಿ 7,661 ಮತ್ತು 37,929. ಫಗ್ವಾರ ಮುಖ್ಯ

ವ್ಯಾಪಾರ ಕೇಂದ್ರ. ವ್ಯವಸಾಯದ ಉಪಕರಣ, ಹತ್ತಿ ಮತ್ತು ಸಕ್ಕರೆ ಕಾರ್ಖಾನೆಗಳಿವೆ. ಸುಲ್ತಾನ್‌ಪುರ ಕೈಮಗ್ಗದ ಬಟ್ಟೆಗಳಿಗೆ ಪ್ರಸಿದ್ಧ. (ಎಂ.ಎಚ್.)

**ಕಪೆಲ್ಲಾ :** ಆರಿಗಾ (ನೋಡಿ) ನಕ್ಷತ್ರ ಪುಂಜದ ಅತ್ಯಂತ ಉಜ್ಜ್ವಲ ನಕ್ಷತ್ರ. ಶಾಸ್ತ್ರನಾಮ α–ಆರಿಗಾ. ಇದೊಂದು ರೋಹಿತ ಯಮಳ ನಕ್ಷತ್ರ (ಸ್ಪೆಕ್ಟ್ರೊಸ್ಕೋಪಿಕ್ ಬೈನರಿ ಸ್ಟಾರ್). ಇದರ ಪರಿಭ್ರಮಣಾವಧಿ 104 ದಿವಸಗಳು. ಘಟಕ ನಕ್ಷತ್ರಗಳ ದ್ರವ್ಯರಾಶಿಗಳು ಸೂರ್ಯ ದ್ರವ್ಯರಾಶಿಯ 4.3 ಮತ್ತು 3.3 ಪಾಲಿನಷ್ಟು ಇವೆ. ಬರಿಗಣ್ಣಿಗೆ ಕಾಣುವ ನಕ್ಷತ್ರಗಳನ್ನು ಉಜ್ಜ್ವಲತೆಯ ರೀತಿ ಪಂಕ್ತಿಸಿದಾಗ ಸೂರ್ಯನಿಗೆ ಮೊದಲ ಮಣೆ ; ಕಪೆಲ್ಲಾ ನಕ್ಷತ್ರಕ್ಕೆ ಐದನೆಯ ಮಣೆ. ಈ ನಕ್ಷತ್ರದ ವಿಷುವದಂಶ 5 ಗಂ. 13 ಮಿ. 0 ಸೆ. ಮತ್ತು ಘಂಟಾವೃತ್ತಾಂಶ 45° 57′ ಉ. *

**ಕಪೋತ [1] :** ಕೊಲಂಬಿಡೀ ಕುಟುಂಬಕ್ಕೆ ಸೇರಿದ ಹಕ್ಕಿಗಳು. ಇವನ್ನು ಬೆಳವಗಳೆಂದೂ ಕರೆಯುವುದುಂಟು. ಪಾರಿವಾಳಗಳೂ ಇದೇ ಕುಟುಂಬಕ್ಕೆ ಸೇರಿವೆ. ಕಪೋತಗಳಿಗೂ ಪಾರಿವಾಳಗಳಿಗೂ ಗುಣಲಕ್ಷಣಗಳಲ್ಲಿ ಅಷ್ಟೇನೂ ಭಿನ್ನತೆ ಕಂಡು ಬರುವುದಿಲ್ಲ. ಈ ಹಕ್ಕಿಗಳನ್ನು ಪಾರಿವಾಳಗಳಿಂದ ಬೇರೆ ಮಾಡಲು ತಾಂತ್ರಿಕ ಭೇದಗಳೂ ಇಲ್ಲ. ಇವು ಸಾಧಾರಣವಾಗಿ ಪಾರಿವಾಳಗಳಿಗಿಂತ ಗಾತ್ರದಲ್ಲಿ ಸಣ್ಣವು. ನಸುನೀಲಿ, ಕಂದು, ಬೂದು ಅಥವಾ ಈ ಬಣ್ಣಗಳ ಮಿಶ್ರಣ ಇವುಗಳ ಬಣ್ಣ. ಯಾವ ಬಣ್ಣವಿದ್ದರೂ ಹೊಳಪು ಕಾಣುವುದು. ಕೊಕ್ಕು, ತಲೆ, ಕತ್ತು, ದೇಹ, ರೆಕ್ಕೆ ಕಾಲುಗಳು ಸಾಧಾರಣವಾಗಿ ಪಾರಿವಾಳದ ಹಾಗೇ ಇರುತ್ತವೆ. ಇವು ಸಣ್ಣ ದನಿಯಲ್ಲಿ ಅಥವಾ ಕೂ ಎಂಬ ಶಬ್ದದಲ್ಲಿ ಕೂಗುತ್ತವೆ. ಅನೇಕ ಪ್ರಭೇದಗಳು ಉಷ್ಣ ಮತ್ತು ಸಮಶೀತೋಷ್ಣ ವಲಯಗಳ ಗುಡ್ಡ ಮತ್ತು ಬಯಲು ಪ್ರದೇಶಗಳಲ್ಲಿ ವಾಸಿಸುತ್ತವೆ. ಸಾಮಾನ್ಯವಾಗಿ ಜೊತೆಯಾಗಿ ನೆಲದ ಮೇಲೆ ಅಥವಾ ಮರಗಳ ಮೇಲೆ ವಾಸಿಸುತ್ತವೆ, ಬೀಜ, ಕಾಳು, ಹಣ್ಣು, ಕೀಟ ಮತ್ತು ಹುಳುಗಳು ಇವುಗಳ ಆಹಾರ.

ಇವು ಗೂಡುಗಳನ್ನು ಸಣ್ಣ ಕಡ್ಡಿಗಳಿಂದ ಕಟ್ಟುತ್ತವೆ. ಗೂಡನ್ನು ಗುಡ್ಡ, ಮರದ ತುದಿ, ದೊಡ್ಡ ಕಟ್ಟಡಗಳು, ಮರದ ಪೊಟರೆ ಅಥವಾ ನೆಲದ ಮೇಲಿನ ಸಸ್ಯಗಳ ಮಧ್ಯೆ ನಿರ್ಮಿಸುವುದು ವಾಡಿಕೆ. ಮೊಟ್ಟೆಗಳು ಸಾಮಾನ್ಯವಾಗಿ ಬಿಳುಪು. ಕೆಲವು ಸಾರಿ ಮಾಸಲು ಬಿಳುಪಾಗಿರುತ್ತವೆ. ಪ್ರತಿಯೊಂದು ಸಾರಿಗೂ 1–3 ಮೊಟ್ಟೆಗಳನ್ನಿಡುತ್ತವೆ. ಸಾಧಾರಣವಾಗಿ ಗಂಡು ಹೆಣ್ಣುಗಳೆರಡೂ ಮೊಟ್ಟೆಗಳ ಮೇಲೆ ಕೂತು ಕಾವನ್ನು ಕೊಡುತ್ತವೆ.

ಬಹುಮಟ್ಟಿಗೆ ಬಾಳಿನ ಉದ್ದಕ್ಕೂ ಒಂದು ಗಂಡು ಒಂದೇ ಹೆಣ್ಣಿನೊಡನೆ ವಾಸಿಸುತ್ತದೆ. ಅವುಗಳಲ್ಲೊಂದು ಆಕಸ್ಮಿಕಕ್ಕೊಳಗಾದಾಗ ಇನ್ನೊಂದು ಏಷ್ಟೋ ಕಾಲ ಸುಮ್ಮನಿದ್ದು ಅನಂತರ ಇನ್ನೊಂದನ್ನು ವರಿಸುವುದು. ಕಪೋತಗಳಲ್ಲಿ ಅನೇಕ ವಿಧಗಳುಂಟು. ಬೆಟ್ಟದ ಕಪೋತದ ಬಣ್ಣ ನಸುಬೂದು. ಮರುಗುವ ಕಪೋತದ (ಮೌರ್ನಿಂಗ್ ಡವ್-ಜನೈಡೂರ ಮ್ಯಾಕ್ರೂರ) ವಿಚಾರವನ್ನು ಚೆನ್ನಾಗಿ ಅಧ್ಯಯನ ಮಾಡಿದ್ದಾರೆ. ಇದರ ಹೃದಯದ ಬಡಿತ ಒಂದು ಮಿನಿಟಿಗೆ 135. ಇದರ ರೆಕ್ಕೆ ಬಡಿತದಿಂದ ಈ ಪಕ್ಷಿಯನ್ನು ಗುರುತಿಸಬಹುದು. ಗಂಡು ಹಕ್ಕಿ ಹೆಣ್ಣು ಹಕ್ಕಿಗೆ ಗೂಡು ಕಟ್ಟುವ ಸ್ಥಳವನ್ನು ತೋರಿಸುತ್ತದೆ ಮತ್ತು ಗೂಡಿಗೆ ಬೇಕಾಗುವ ಪದಾರ್ಥಗಳನ್ನು ಒದಗಿಸುತ್ತದೆ. ಇದು ಮೊಟ್ಟೆಗಳಿಗೆ 21 ದಿನ ಕಾವು ಕೊಡುವುದು. ಋತುಮಾಸ ಮಾರ್ಚಿಯಿಂದ ಅಕ್ಟೋಬರ್ ವರೆಗೆ ವ್ಯಾಪಿಸುತ್ತದೆ. ಚಕ್ರ ಅಥವಾ ಆಮೆ ಕಪೋತ (ರಿಂಗ್ ಡವ್ ಅಥವಾ ಟರ್ಟ್ಲ್ ಡವ್) ಬೇರೆ ಜಾತಿಯ ಕಪೋತಗಳ ಮೊಟ್ಟೆಗಳಿಗೆ ಕಾವನ್ನು ಕೊಡುವುದು. ಹಣ್ಣು ತಿನ್ನುವ ಕಪೋತ (ಫ್ರೂಟ್ ಡವ್–ಟೆಲಿನೋಪಸ್) ದಕ್ಷಿಣ ಪೆಸಿಫಿಕ್ ದ್ವೀಪಗಳಲ್ಲಿದೆ.

ಅನೇಕ ಹೆಸರಿನ ಆಮೆ ಕಪೋತಗಳು (ಟರ್ಟ್ಲ್ ಡವ್) ಮತ್ತು ಕೋಗಿಲೆ ಕಪೋತಗಳೂ (ಕಕೂ ಡವ್) ನಮ್ಮ ದೇಶದಲ್ಲಿವೆ. ಇವು ಮ್ಯಾಕ್ರೊಪೈಜಿಯ ಮತ್ತು ಸ್ಟ್ರೆಪ್ಟೊಪೇಲಿಯ ಜಾತಿಗೆ ಸೇರಿವೆ.

ಭಾರತ, ನೇಪಾಳ್, ಭೂತಾನ, ಪಾಕಿಸ್ತಾನ್ ದೇಶಗಳಲ್ಲಿ ಸುಮಾರು 20 ಪ್ರಭೇದಗಳಿವೆ. ಅಂಡಮಾನ್ ನಿಕೋಬಾರ್ ದ್ವೀಪಗಳಲ್ಲಿ ಎರಡು ಪ್ರಭೇದಗಳನ್ನು ವಿವರಿಸಿದ್ದಾರೆ.

ಮಾನವ ಕ್ರಿ.ಪೂ. ಮೂರು ಸಹಸ್ರ ವರ್ಷಗಳ ಹಿಂದೆಯೆ ಪಾರಿವಾಳವನ್ನು ಪಳಗಿಸಲು ಆರಂಭಿಸಿದ. ಆದಿಕಾಲದ ಆ ಕಾಡು ಪಾರಿವಾಳದ ಪೂರ್ವಜನಿಂದ ಇಂದಿಗೆ ಸುಮಾರು 200ಕ್ಕೂ ಹೆಚ್ಚು ವಿವಿಧ ರೀತಿಯ ತಳಿಗಳು ರೂಪುಗೊಂಡಿವೆ. ಈ ವಿಚಾರವಾಗಿ ಸುದೀರ್ಘವಾದ ಅಧ್ಯಯನವನ್ನು ನಡೆಸಿ ಮೊದಲು ಪರಿಚಯ ಮಾಡಿಕೊಟ್ಟ ಕೀರ್ತಿ ಚಾರ್ಲ್ಸ್ ಡಾರ್ವಿನ್ನನಿಗೆ ಸಲ್ಲುತ್ತದೆ.

ಪಾರಿವಾಳಗಳಲ್ಲಿ ಕೆಲವು ಪ್ರಭೇದಗಳಿಗೆ ವಿವಿಧ ರೀತಿಯ ತರಪೇತು ನೀಡಬಹುದು. ದೂರ ಪ್ರಯಾಣದಲ್ಲಿ ನಿರ್ದಿಷ್ಟ ಸ್ಥಳವನ್ನು ಗುರುತಿಟ್ಟುಕೊಂಡು ಹೋಗುವುದು ಮತ್ತು ಹೊರಟ ಸ್ಥಳಕ್ಕೆ ಸರಿಯಾಗಿ ಹಿಂದಿರುಗುವುದು, ಪಂದ್ಯಾಟಗಳಿಗೆ (ರೇಸಿಂಗ್) ಪಳಗಿಸುವುದು, ಟಪಾಲು ಸಾಗಿಸುವುದು ಇತ್ಯಾದಿ ಕಾರ್ಯಗಳನ್ನು ಅವಕ್ಕೆ ಕಲಿಸುವುದು ಸಾಧ್ಯ. ಇಂದಿಗೂ ಕೆಲವು ಸಂದರ್ಭಗಳಲ್ಲಿ ಅಂಚೆಯನ್ನು ಸಾಗಿಸಲು ಪಳಗಿದ ಪಾರಿವಾಳಗಳನ್ನು ಬಳಸುವುದುಂಟು.

ನೋಡಿ—ಪಾರಿವಾಳ. (ಎಚ್.ಎ.ಎ.)

**ಕಪೋತ [2] :** ಕಟ್ಟಡದ ಗೋಡೆಗಳ ಮೇಲುಭಾಗದಲ್ಲಿ ಉದ್ದಕ್ಕೂ ಕಟ್ಟಿರುವ ಚಡಿ(ಕಾರ್ನಿಸ್). ಪ್ರಧಾನ ಉದ್ದೇಶ ಗೋಡೆಗಳ ಮೇಲೆ ನೀರು ಸೋರದಿರಲೆಂದು. ಗಾರೆ, ಕಾಂಕ್ರೀಟ್, ಕಲ್ಲುಚಪ್ಪಡಿ, ಪ್ಲಾಸ್ಟರ್ ಆಫ್ ಪ್ಯಾರಿಸ್, ಕಂಬಿ, ಮರ ಮುಂತಾದುವುಗಳಿಂದ ಕಟ್ಟುತ್ತಾರೆ. ಕಪೋತಗಳನ್ನು ವೈವಿಧ್ಯಪೂರ್ಣವಾಗಿ ಸೌಂದರ್ಯಯುಕ್ತವಾಗಿ ರಚಿಸಿ ಕಟ್ಟಡದ ಅಂದವನ್ನು ಹೆಚ್ಚಿಸುವುದು ವಾಡಿಕೆ. ಇವನ್ನು ಕಟ್ಟಡದ ಮುಂಭಾಗ, ಅಕ್ಕಪಕ್ಕ ಮತ್ತು ಕೆಲವು ಸಂದರ್ಭಗಳಲ್ಲಿ ಸುತ್ತಲೂ ಕಟ್ಟುತ್ತಾರೆ. ಕಟ್ಟಡದ ಮೇಲ್ಛಾವಣಿಯ ಕೆಳಮಟ್ಟದಿಂದ ಅರ್ಧ ಅಡಿಯಿಂದ ಮೂರು ಅಥವಾ ನಾಲ್ಕು ಅಡಿಗಳವರೆಗೆ ಮುಂದಕ್ಕೆ ಅಡ್ಡಲಾಗಿ ನೂಕಿ ಅದರ ಕೆಳಭಾಗದಲ್ಲಿ ವಿವಿಧ ರೀತಿಯ ಆಕಾರಗಳನ್ನು ಮಾಡುತ್ತಾರೆ. ಕಪೋತಗಳ ಅಗಲಕ್ಕೂ ಆಳಕ್ಕೂ ಸಂಬಂಧವಿದೆ. ಇವುಗಳ ಗಾತ್ರ ಕಟ್ಟಡದ ಗಾತ್ರವನ್ನು ಅನುಸರಿಸಿ ಇರುವುದು. ಇವು ಕಟ್ಟಡದ ಯಾವ ತೂಕವನ್ನೂ ಹೊರಲಾರವು. ಸಾಮಾನ್ಯವಾಗಿ ಮುಖ್ಯ ಹಾಗೂ ಸಾರ್ವಜನಿಕ ಸ್ಥಳಗಳಾದ ದೇವಸ್ಥಾನ, ವಿಶ್ವವಿದ್ಯಾಲಯ ಕಚೇರಿ, ಶಾಲಾಕಾಲೇಜುಗಳು, ಪುಸ್ತಕಭಂಡಾರ, ವಸ್ತುಸಂಗ್ರಹಾಲಯ ನಾಟಕ ಮತ್ತು ಸಿನಿಮಾ ಮಂದಿರಗಳ ಕಟ್ಟಡಗಳಲ್ಲಿ ಕಪೋತಗಳನ್ನು ಕಾಣಬಹುದು. ರೋಮ್, ಗ್ರೀಸ್, ಈಜಿಪ್ಟ್ ಭಾರತಗಳಲ್ಲಿ ಹಿಂದಿನ ಕಾಲದಲ್ಲಿ ಕಟ್ಟಿರುವ ಕಟ್ಟಡಗಳಲ್ಲಿ ಕಪೋತಗಳಿವೆ. (ಜಿ.ಟಿ.ಜಿ.)



ಕಪೋತದ ಒಂದು ಬಗೆ

**ಕಪೋತವಾಕ್ಯ :** ಮಹಾಭಾರತದ ಶಾಂತಿಪರ್ವದಲ್ಲಿ ಬರುವ ಒಂದು ನೀತಿ ಕಥೆ. ಈ ವ್ಯಾಧ–ಕಪೋತೋಪಾಖ್ಯಾನದಲ್ಲಿ ಮುಚುಕುಂದನನ್ನು ಕುರಿತು ಭಾರ್ಗವ ಹೇಳಿದ ಅತಿಥಿಸತ್ಕಾರದ ಹಿರಿಮೆಯ ವರ್ಣನೆ ಇದೆ.

ಒಂದು ಮಹಾರಣ್ಯದಲ್ಲಿ ಒಬ್ಬ ಕ್ರೂರಿಯಾದ ಬೇಡರವನು ಬೇಟೆಯಾಡಲು ಸಂಚಾರ ಮಾಡುತ್ತಿರುವಾಗ ಭಯಂಕರವಾದ ಮಹಾವೃಷ್ಟಿಯಾಗಿ ಎಡೆಬಿಡದೆ ಧಾರಾಕಾರವಾಗಿ ಮಳೆ ಹುಯ್ದು ಅಸಾಧ್ಯವಾದ ಚಳಿ ಉಂಟಾಯಿತು. ಮರೆಯಾದ ಒಂದು ಆಸರೆಯೂ ಸಿಕ್ಕದೆ ಒದ್ದಾಡುತ್ತ ಕಳವಳಗೊಂಡ ವ್ಯಾಧ ಒಂದು ಮರದಡಿಗೆ ಬಂದು ಅಲ್ಲಿ ವಾಸಿಸಬೇಕೆಂದು ನಿಶ್ಚಯಿಸಿ ಅಲ್ಲಿಯ ವನದೇವತೆಗೆ ನಮಸ್ಕರಿಸಿ ತನ್ನನ್ನು ಆ ಕಷ್ಟದಿಂದ ಪಾರು ಮಾಡಬೇಕೆಂದು ಪ್ರಾರ್ಥಿಸಿ ಒಂದು ಶಿಲೆಯ ಮೇಲೆ ತಲೆಯನ್ನಿಟ್ಟುಕೊಂಡು ಎಲೆ ಹಾಸಿಗೆಯ ಮೇಲೆ ಮಹತ್ತರ ದುಃಖದೊಡನೆ ಮಲಗಿದ. ಅದೇ ಮರದ ಕೊಂಬೆಯೊಂದರಲ್ಲಿ ಒಂದು ಕಪೋತ ಅನೇಕ ಗೆಳೆಯ ಪಕ್ಷಿಗಳೊಡನೆ ವಾಸವಾಗಿತ್ತು. ಅದರ ಮಡದಿ ಕಪೋತಿ ಬೆಳಗ್ಗೆ ಆಹಾರಕ್ಕೋಸ್ಕರ ಹೊರಕ್ಕೆ ಹೋದುದು ಅಲ್ಲಿಯ ವರೆವಿಗೂ ಗೂಡಿಗೆ ಬರದೇ ಇದ್ದುದನ್ನು ಕಂಡ ಗಂಡು ಹಕ್ಕಿ ಬಹಳಮಟ್ಟಿಗೆ ನೊಂದು ಹೆಂಡತಿಯ ಅಗಲಿಕೆಯ ದುಃಖವನ್ನು ತೋಡಿಕೊಳ್ಳುತ್ತಿತ್ತು. ಇತ್ತ ಮರದ ಕೆಳಗೆ ಮಲಗಿದ್ದ ಬೇಡರವನ ಬುಟ್ಟಿಯಲ್ಲಿ ಸಿಕ್ಕಿಬಿದ್ದಿದ್ದ ಕಪೋತಿ ತನ್ನ ಪತಿಯ ಮಾತುಗಳನ್ನು ಕೇಳಿ ಪ್ರತ್ಯಕ್ಷ ಪರೋಕ್ಷಗಳಲ್ಲಿ ಏಕರೂಪವಾಗಿ ಪತಿಯಿಂದ ಸ್ತುತಿಸಲ್ಪಡುವ ಸ್ತ್ರೀಯೇ ಧನ್ಯಳು, ಪತಿಯ ಸಂತೋಷವೇ ಪ್ರಿಯೆಯ ಜೀವನ ಸರ್ವಸ್ವ–ಎಂದು ಹೇಳಿಕೊಂಡು ತನ್ನಪತಿಯನ್ನು

ಕೂಗಿ ಪ್ರಾಣವಲ್ಲಭನೇ ! ನಾವು ಜಾತಿಯಲ್ಲಿ ಕಪೋತಗಳಾದರೂ ಧರ್ಮರಕ್ಷಣಾ ಕಾರ್ಯವನ್ನು ಮರೆಯಬಾರದು. ಆದ್ದರಿಂದ ನಿನ್ನ ಶರೀರವೋಹವನ್ನು ತೊರೆದು ಮನೆಬಾಗಿಲಿಗೆ ಬಂದಿರುವ ಅತಿಥಿಯ ಪೂಜೆಯನ್ನು ಯತ್ನಪೂರ್ವಕವಾಗಿ ಮಾಡು. ಈ ದೇಹ ಸ್ಥಿರವಲ್ಲ. ಧರ್ಮ ಶಾಶ್ವತಫಲ ಕೊಡುವುದು--ಎಂದು ಹೇಳಲಾಗಿ, ಆ ಮಾತನ್ನು ಕೇಳಿ ಹರ್ಷಗೊಂಡ ಕಪೋತ ಬೇಡರವನನ್ನು ಕಂಡು ಶಾಸ್ತ್ರೀಯ ವಿಧಾನದಿಂದ ಮನಃಪೂರ್ವಕವಾದ ಸ್ವಾಗತವನ್ನು ಬಯಸಿ ಅವನನ್ನು ಪೂಜಿಸಿತು. ಅವನ ಇಚ್ಛೆಯಂತೆ ಒಣ ಎಲೆಗಳ ಹಾಸಿಗೆಯನ್ನು ಮಾಡಿಕೊಟ್ಟು ಎಲ್ಲಿಂದಲೋ ಉರಿಯುವ ಕೊಳ್ಳಿಯನ್ನು ತಂದು ಕಾಸಿಕೊಳ್ಳಲು ಬೆಂಕಿ ಮಾಡಿಕೊಟ್ಟಿತು. ಬೇಡರವನು ಹಸಿವೆಂದು ಹೇಳಿದಾಗ ಎರಡು ಯೋಚಿಸದೆ ತನ್ನನ್ನೇ ಆಹಾರವಾಗಿ ಉಪಯೋಗಿಸೆಂದು ಬೇಡನಿಗೆ ಹೇಳಿ ಅಗ್ನಿಪ್ರವೇಶ ಮಾಡಿ ಅಸು ನೀಗಿತು. ಈ ಕೊನೆಯ ಭಾಗದಲ್ಲಿ ಅತಿಥಿಸತ್ಕಾರದ ವರ್ಣನೆ, ಉಪದೇಶ ಬರುತ್ತವೆ.

ಕನ್ನಡದಲ್ಲಿ ಬಹಳ ಹಿಂದೆಯೇ ಈ ಕಥೆ ಸಾಂಗತ್ಯರೂಪದಲ್ಲಿ ರಚನೆಗೊಂಡಿದೆ. ಇದರ ಕರ್ತೃ ನಂಜಕವಿ (ಸು. 1700), ಸಂಪಿಗೆ ಸಿದ್ದೇಶ್ವರನ ಭಕ್ತ. ಇದರ ರಚನೆ ಬಹು ಸೊಗಸಾಗಿದೆ.

ಒಂದು ಕಪೋತಿಯು ಸಂದ ಕಪೋತಿಯೊ  
ಳೊಂದು ವನದಿ ಸುಖವಾಗಿ  
ಕಂದನ ಪಡೆದುಕೊಂಡಂದದಲಿರುತಿರೆ  
ಮುಂದೊಂದು ವಿಘ್ನ ಪ್ರಾಪ್ತಿಸಿತು

ಎಂದು ಮೊದಲಾಗುವ ಈ ಸಾಂಗತ್ಯ ಹಿಂದಿನ ಪಠ್ಯಪುಸ್ತಕಗಳಲ್ಲಿ ಸೇರಿತ್ತಾಗಿ ಎಲ್ಲ ಮಕ್ಕಳಿಗೂ ಇದರ ಪರಿಚಯವಿತ್ತು. ನಿರರ್ಗಳವಾದ ಸಾಂಗತ್ಯಶೈಲಿಯಲ್ಲಿ ಹಿತಮಿತವಾದ ವಿವರ. ವರ್ಣನೆಗಳೊಂದಿಗೆ ಕವಿ ಇಲ್ಲಿ ಕಥೆ ಹೇಳುತ್ತಾನೆ. ಮೂಲದಂತೆ ನೀತಿಯ ಅತಿರೇಕ ಇಲ್ಲಿ ಕಾಣದು. (ಎನ್.ಎಸ್.ಆರ್.ಬಿ.)

**ಕಪ್ಪಂಗಿಯುವರು :** ಒಂದನೆಯ ಮಹಾಯುದ್ಧದ ಅನಂತರದ ಕಾಲದಲ್ಲಿ ಇಟಲಿಯಲ್ಲಿ ಉದ್ಭವಿಸಿದ್ದ ಅನಾಯಕತ್ವದ ಪರಿಸ್ಥಿತಿಯಲ್ಲಿ ಪ್ರಬಲನಾಗುತ್ತಿದ್ದ ಬೆನಿಟೊ ಮುಸೊಲೀನಿ ಸಂಘಟಿಸಿದ ಜನತಾ ಸೈನ್ಯ (ಬ್ಲ್ಯಾಕ್‌ಷರ್ಟ್ಸ್). ನಿವೃತ್ತ ಸೈನಿಕರೂ ಅಧಿಕಾರಿಗಳೂ ವಿಶ್ವವಿದ್ಯಾನಿಲಯದ ಅಧ್ಯಾಪಕರೂ ವಿದ್ಯಾರ್ಥಿಗಳೂ ಕೃಷಿಕರೂ ಕಾರ್ಮಿಕರೂ ಇದ್ದ ಶಿಸ್ತಿನ ಸೇನೆಯ ಸದಸ್ಯರು ಕಪ್ಪನೆಯ ಸಮವಸ್ತ್ರ ಧರಿಸುತ್ತಿದ್ದುದರಿಂದ ಅವರಿಗೆ ಈ ಹೆಸರು ಬಂತು. ಧೈರ್ಯ ಕಷ್ಟಸಹಿಷ್ಣುತೆಗಳಿಗೆ ಕಪ್ಪು ಅಂಗಿ ಸಂಕೇತವೆಂದು ಪರಿಗಣಿಸಲಾಗಿತ್ತು. ವ್ಯಕ್ತಿಗಿಂತ ರಾಷ್ಟ್ರ ಮುಖ್ಯ, ರಾಷ್ಟ್ರೋನ್ನತಿಗಾಗಿ ವ್ಯಕ್ತಿಗಳು ಶ್ರಮಿಸಬೇಕು, ಹೋರಾಟದಿಂದ ಅದನ್ನು ಸಾಧಿಸಬೇಕು ಎಂಬುದೇ ಈ ಸಂಘಟನೆಯ ನೀತಿಯಾಗಿತ್ತು. ಕಪ್ಪಂಗಿಯುವರು ಕಮ್ಯೂನಿಸಂ ಮತ್ತು ಪ್ರಜಾಪ್ರಭುತ್ವಗಳ ವಿರೋಧಿಗಳಾಗಿದ್ದರು. (ಪಿ.ಬಿ.ಡಿ.)

**ಕಪ್ಪಿಗಳು ಮತ್ತು ಪಟ್ಟಿಗಳು :** ಒಂದು ಚಾಲಕದಂಡದಿಂದ ಮತ್ತೊಂದು ಚಾಲಕದಂಡಕ್ಕೆ ಭ್ರಾಮಕಶಕ್ತಿಯನ್ನು ರವಾನಿಸುವ ಯಾಂತ್ರಿಕ ವ್ಯವಸ್ಥೆ (ಪುಲ್ಲೀಸ್ ಅಂಡ್ ಬೆಲ್ಟ್ಸ್). ಚಾಲಕ ಕಪ್ಪಿಯ ಬಳಿ ಉತ್ಪತ್ತಿಯಾದ ಭ್ರಾಮಕಶಕ್ತಿಯನ್ನು ಅದು ಪಟ್ಟಿಗೆ ವರ್ಗಾಯಿಸುತ್ತದೆ. ಇದನ್ನು ಪಟ್ಟಿ ಅದರ ಸುತ್ತು ಚಲನೆಯಲ್ಲಿ ಚಾಲಿತ ಕಪ್ಪಿಗೆ ರವಾನಿಸುತ್ತದೆ.

ಪಟ್ಟಿ ಚಾಲನಗಳ (ಬೆಲ್ಟ್ ಡ್ರೈವ್ಸ್) ಬಳಕೆ : ಚಾಲಕದಂಡಗಳ ನಡುವಣ ಅಂತರ ಹೆಚ್ಚು ಇರುವಲ್ಲಿ, ಸಂದರ್ಭಕ್ಕೆ ತಕ್ಕಂತೆ ಹೊಂದಿಕೊಂಡು ಆಘಾತಗಳನ್ನು ತಾಳಿಕೊಳ್ಳಬೇಕಾದಲ್ಲಿ, ಯಂತ್ರ ಭಾಗಗಳಿಗೆ ಅಪಾಯವಾಗದಂತೆ ಅತಿ ಹೆಚ್ಚಿನ ತೂಕವನ್ನು ತಡೆದುಕೊಳ್ಳಬೇಕಾದಲ್ಲಿ (ತೂಕ ಅತಿ ಹೆಚ್ಚಾದಾಗ ಪಟ್ಟಿ ಜಾರುವುದರಿಂದ ಇದು ಸಾಧ್ಯ), ವೆಚ್ಚ ಕಡಿಮೆ ಆಗಬೇಕಾದಲ್ಲಿ ಮತ್ತು ಕಾರ್ಯಾಚರಣೆಯಲ್ಲಿ ಶಬ್ದ ಕಡಿಮೆ ಇರಬೇಕಾದಲ್ಲಿ ಪಟ್ಟಿ ಚಾಲಿಗಳ ಬಳಕೆ ಇದೆ. ಪಟ್ಟಿ ಚಾಲಿಗಳಿಂದ ನಿಷ್ಕೃಷ್ಟ ವೇಗ ಪರಿಮಾಣ ಪಡೆಯಲು ಸಾಧ್ಯವಿಲ್ಲ. ಏಕೆಂದರೆ ತೂಕ ಹೆಚ್ಚು ಇದ್ದಲ್ಲಿ ಪಟ್ಟಿಯ ಮತ್ತು ಕಪ್ಪಿಯ ಮೇಲ್ಮೈಗಳ ನಡುವೆ ಜಾರುವಿಕೆ ಉಂಟಾಗುತ್ತದೆ. ಒಂದು ಪಕ್ಷ ಇದು ಉಂಟಾಗದಿದ್ದರೂ ಜರುಗು (ಕ್ರೀಪ್) ಇದ್ದೇ ಇರುತ್ತದೆ. ಕಾರಣ, ಪಟ್ಟಿಯ ಪದಾರ್ಥ ಸ್ಥಿತಿಸ್ಥಾಪಕ ಗುಣವುಳ್ಳದ್ದು. ಆದ್ದರಿಂದ ಅದರ ಸಡಿಲ ಭಾಗದ ಉದ್ದಕ್ಕಿಂತ ಬಿಗಿ ಭಾಗದ ಉದ್ದ ಹೆಚ್ಚು ಹಿಗ್ಗುತ್ತದೆ. ಅಂದರೆ ಅಸಮ ಹಿಗ್ಗುವಿಕೆ ಇರುತ್ತದೆ. ಇದರ ಪರಿಣಾಮವನ್ನು ಅಳೆಯುವ ಬಗೆ ಹೀಗೆ—ಪಟ್ಟಿಯ ಏಕಮಾನ ಉದ್ದವನ್ನು ತೆಗೆದುಕೊಳ್ಳೋಣ. ಅದು ಬಿಗಿ ಭಾಗದಲ್ಲಿ $(1+c_1)$ಕ್ಕೂ ಸಡಿಲ ಭಾಗದಲ್ಲಿ $(1+c_2)$ಕ್ಕೂ ಹಿಗ್ಗಲಿ. ಇಲ್ಲಿ $c_1 > c_2$. ಚಾಲಕ ಕಪ್ಪಿಗೆ ಪಟ್ಟಿ ಬಿಗಿ ಭಾಗದಿಂದ ಬರುತ್ತದೆ. ಆದರೆ ಚಾಲಿತ ಕಪ್ಪಿಗೆ ಪಟ್ಟಿ ಸಡಿಲ ಭಾಗದಿಂದ ಬರುತ್ತದೆ. ಏಕಮಾನ ಉದ್ದವನ್ನು ಪರಿಗಣಿಸಿದಲ್ಲಿ ಚಾಲಕ ಕಪ್ಪಿ $(1+c_1)$ ಉದ್ದವನ್ನು ಪಡೆದು $(1+c_2)$ ಉದ್ದವನ್ನು ಕೊಡುತ್ತದೆ. ಅಂದರೆ ಹೆಚ್ಚು ಉದ್ದವನ್ನು ಪಡೆದು ಕಡಿಮೆ ಉದ್ದವನ್ನು ಕೊಡುತ್ತದೆ. ಆದ್ದರಿಂದ ಪಟ್ಟಿ $(c_1-c_2)$ ರಷ್ಟು ಹಿಂದೆ ಜರುಗುತ್ತದೆ. ಚಾಲಿತ ಕಪ್ಪಿ ಕಡಿಮೆ ಉದ್ದವನ್ನು ಪಡೆದು ಹೆಚ್ಚು ಉದ್ದವನ್ನು ಕೊಡುತ್ತದೆ. ಎಂದರೆ ಪಟ್ಟಿ $(c_1-c_2)$ ರಷ್ಟು ಮುಂದೆ ಜರುಗುತ್ತದೆ. ಕಪ್ಪಿಯ ಹೊರಮೈ ವೇಗ ಅದು ಪಡೆಯುವ ಪಟ್ಟಿಯ ಉದ್ದವನ್ನು ಅವಲಂಬಿಸಿದೆ. ಆದ್ದರಿಂದ ಚಾಲಿತ ಕಪ್ಪಿಯ ಹೊರಮೈ ವೇಗ ಚಾಲಕ ಕಪ್ಪಿಯದಕ್ಕಿಂತ ಕಡಿಮೆ. ಈ ಪ್ರಕರಣವೇ ಜರುಗು. ಜರುಗು ಒಂದೇ ಕಾರ್ಯವೇಗವನ್ನು ಸುಮಾರು 1% ರಷ್ಟು ಕಡಿಮೆ ಮಾಡುತ್ತದೆ. ಜಾರುವಿಕೆಯಿಂದಾಗಿ ಈ ವೇಗ ಮತ್ತೆ 2%ರಷ್ಟು ಕಡಿಮೆಯಾಗುತ್ತದೆ. ಜೊತೆಗೆ ಅತಿ ಹೆಚ್ಚಿನ ಜಾರುವಿಕೆ ಪಟ್ಟಿಗೆ ಹಾನಿಕರ. ಪಟ್ಟಿಗಳ ವೇಗ ಸಾಮಾನ್ಯವಾಗಿ ಸೆಕೆಂಡಿಗೆ 25 ಮೀಟರುಗಳು. ಇದಕ್ಕಿಂತ ವೇಗ ಹೆಚ್ಚು ಇದ್ದಲ್ಲಿ ಪಟ್ಟಿಯ ಶಕ್ತಿಗೆ ತೂಕಕ್ಕಿಂತಲೂ ಹೆಚ್ಚಾಗಿ ಕೇಂದ್ರಾಪಗಮನಶಕ್ತಿಯ ಹೊಡೆತವೇ ಅಧಿಕ ಆಗುತ್ತದೆ.

ಪಟ್ಟಿ ಮತ್ತು ಕಪ್ಪಿಗಳಿಗೆ ಸಂಸ್ಪರ್ಶವಿರಬೇಕಾದಲ್ಲಿ ಪಟ್ಟಿಯ ಎರಡು ಭಾಗಗಳಲ್ಲೂ ಸಾಕಷ್ಟು ತುಯ್ತ ಇರಬೇಕು. ಪಟ್ಟಿಯ ಬಿಗಿ ಭಾಗದ ತುಯ್ತ $T_1$ ಇರಲಿ. ಸಡಿಲ ಭಾಗದ ತುಯ್ತ $T_2$ ಇರಲಿ. ಈ ತುಯ್ತಗಳ ವ್ಯತ್ಯಾಸ $T_1-T_2$. ಇದು ಕಪ್ಪಿಯ ಮೇಲ್ಮೈಸಲ್ಲಿ ಭ್ರಾಮಕಶಕ್ತಿಯನ್ನು ಉತ್ಪತ್ತಿಮಾಡುತ್ತದೆ. ಭ್ರಾಮಕಶಕ್ತಿ ಪರಿಣಾಮಕಾರಿ ಶಕ್ತಿಯ ಪ್ರಮಾಣವನ್ನು ಅವಲಂಬಿಸಿದೆ. ತಾತ್ತ್ವಿಕವಾಗಿ ಈ ರೀತಿಯ ಸಮೀಕರಣವನ್ನು ಬರೆಯಬಹುದು.

$$\frac{T_1 - T_c}{T_2 - T_c} = e^{\mu\theta \operatorname{cosec} \alpha}$$

ಇಲ್ಲಿ $T_c$ ಕೇಂದ್ರಾಪಗಮನ ಬಲ; $e=2{\cdot}718$, $\mu=$ ಮೇಲ್ಮೈ ನಡುವಣ ಘರ್ಷಣಗುಣಕ, $\alpha=$ ತೋಡುಕೋನದ (ಗ್ರೂವ್ ಆಂಗಲ್) ಅರ್ಧಭಾಗ ; $\theta=$ ಕಪ್ಪಿ ಮತ್ತು ಪಟ್ಟಿಯ ನಡುವಣ ಸ್ಪರ್ಶಕೋನ. $T_1$ರ ಗರಿಷ್ಠ ಬೆಲೆ ಪಟ್ಟಿಯ ಕರ್ಷಕ ಬಲವನ್ನು ಅವಲಂಬಿಸಿದೆ. ಶಕ್ತಿ ರವಾನಿಸುವ ಸಾಮರ್ಥ್ಯ ಪರಿಣಾಮಕಾರಿ ಬಲ $(T_1-T_2)$ನ್ನು ಅವಲಂಬಿಸಿದೆ. ಆದ್ದರಿಂದ $e^{\mu\theta \operatorname{cosec} \alpha}$ದ ಬೆಲೆ ಅಧಿಕತಮವಾದಾಗ ಶಕ್ತಿ ರವಾನಿಸುವ ಸಾಮರ್ಥ್ಯವೂ ಅಧಿಕತಮವಾಗುತ್ತದೆ.

**ಕಪ್ಪಿಯ ರಚನೆ :** ಕಪ್ಪಿಗಳನ್ನು ತಾಂಡವಾಳ, ಉಕ್ಕು, ಮರ ಮತ್ತು ಪಿತ್ತಾಳೆಗಳಿಂದ ಮಾಡುತ್ತಾರೆ. ಅಖಂಡವಾಗಿ ಎರಕ ಹೊಯ್ದ ತಾಂಡವಾಳದ ಕಪ್ಪಿಗೆ ಅಖಂಡ ಅಥವಾ ಹೋಳುಗುಂಬ ಇರುತ್ತದೆ. ಅಖಂಡ ಗುಂಬ ಇರುವ ಕಪ್ಪಿಯನ್ನು ಚಾಲಕದಂಡಕ್ಕೆ ಬೆಣೆ (ಕೀ), ಶಂಕುಬೆಣೆ (ಕೋನ್ ಕೀ) ಮತ್ತು ತಿರುಪ್ಪೊತ್ತಿಗೆ (ಸೆಟ್ ಸ್ಕ್ರೂಸ್) ಇವುಗಳಿಂದ ಅಥವಾ ಇವುಗಳ ಯಾವುದಾದರೂ ಎರಡರ ಸಹಾಯದಿಂದ ಜೋಡಿಸಬಹುದು. ಹೋಳುಗುಂಬ ಇರುವ ಕಪ್ಪಿಗಳಿಗೆ ಬಂಧಿಸಿ ಬೋಲ್ಟುಗಳಿವೆ. ಇವನ್ನು ಬಿಗಿ ಮಾಡಿದಾಗ ಚಾಲಕ ದಂಡಕ್ಕೆ ಬಿಗಿಯಾಗಿ ಕೂರುವಂತೆ ಅವು ಗುಂಬಗಳ ಭಾಗಗಳನ್ನು ಸೆಳೆಯುತ್ತವೆ. ಅಂಥ ಕಪ್ಪಿಗಳಿಗೆ ಇರುವ ತೋಳುಗಳ ಸಂಖ್ಯೆ ಸಾಮಾನ್ಯವಾಗಿ ಆರು. ಕಪ್ಪಿ ಚಿಕ್ಕದಾದಲ್ಲಿ ತೋಳುಗಳ ಸಂಖ್ಯೆ 4. ಕಪ್ಪಿಯ ವ್ಯಾಸ ಐದು ಅಡಿಗೂ ಹೆಚ್ಚಿದ್ದಲ್ಲಿ ತೋಳುಗಳ ಸಂಖ್ಯೆ 8 ಇರಬಹುದು. ಕಪ್ಪಿಯನ್ನು ಅಖಂಡವಾಗಿ ಎರಕ ಹೊಯ್ಯುವುದರ ಬದಲು ಎರಡು ಭಾಗಗಳಾಗಿ ಎರಕ ಹೊಯ್ಯಬಹುದು. ಇಂಥ ಕಪ್ಪಿಯೇ ಹೋಳು ಕಪ್ಪಿ. ಎರಡೂ ಹೋಳುಗಳನ್ನು ಗುಂಬ ಮತ್ತು ನೇಮಿಗಳ ಬಳಿ ಬೋಲ್ಟುಗಳಿಂದ ಒಂದಾಗಿ ಬಂಧಿಸಲಾಗುತ್ತದೆ. ಕಪ್ಪಿಯ ಮುಖದ ಅಗಲ 10″ ಗಳಿಗಿಂತಲೂ ಹೆಚ್ಚು ಇರುವುದು ಆವಶ್ಯಕವಾದಾಗ ಹೋಳುಕಪ್ಪಿಯನ್ನು ಅಥವಾ ಹೋಳುಗುಂಬವಿರುವ ಕಪ್ಪಿಯನ್ನು ಬಳಸಲು ಅಪೇಕ್ಷಿಸುತ್ತಾರೆ. ಕಪ್ಪಿಯ ಮುಖದ ಅಗಲ 20-24″ ಗಳಿಗೂ ಮೀರಿದ್ದಲ್ಲಿ ನೇಮಿಗೆ ಹೆಚ್ಚಿನ ಆಧಾರ ಬೇಕು. ಇದನ್ನು ಎರಡು ಜೊತೆ ಹೋಳುಗಳ ಸಹಾಯದಿಂದ ಕೊಡಬಹುದು. ಮರದ ಮುಖದ ಕಪ್ಪಿಗಳು, ತಾಂಡವಾಳದ ಕಪ್ಪಿಗಳಿಗಿಂತಲೂ ಹೆಚ್ಚು ಹಗುರ. ಸಮತಲಪಟ್ಟಿ ಚಾಲಿಗಳಲ್ಲಿ ಇವು ತಾಂಡವಾಳದ ಕಪ್ಪಿಗಳಿಗಿಂತಲೂ ಹೆಚ್ಚು ಶಕ್ತಿಯನ್ನು ರವಾನಿಸುತ್ತವೆ. ಉಕ್ಕಿನ ತಗಡಿನಿಂದ ಮಾಡಿದ ಕಪ್ಪಿ ತೂಕದಲ್ಲಿ ಹಗುರ. ಎರಕ ಹೊಯ್ದ ಕಪ್ಪಿಯಲ್ಲಿ ಉಳಿಕೆ ಒತ್ತಾಯ (ರೆಸಿಡ್ಯೂಅಲ್ ಸ್ಟ್ರೆಸ್) ಇರುವ ಸಾಧ್ಯತೆ ಇದೆ. ಆದರೆ ಉಕ್ಕಿನ ತಗಡಿನಿಂದ ಮಾಡಿದ ಕಪ್ಪಿಯಲ್ಲಿ ಇದು ಇರುವುದಿಲ್ಲ. ಇದು ಮಿತವ್ಯಯದಿಂದ ಕೆಲಸ ಮಾಡುತ್ತದೆ. ಅಲ್ಲದೆ ಅದರಷ್ಟೇ ಇರುವ ತಾಂಡವಾಳದ ಕಪ್ಪಿಗಿಂತಲೂ ಇದರ ಜಾರುವಿಕೆ ಕಡಿಮೆ. ಚಿಕ್ಕ ಕಪ್ಪಿಗಳನ್ನು ಪಿತ್ತಾಳೆಯಿಂದ ಮಾಡಬಹುದು. ದಾರ ಮತ್ತು ದುಂಡಗಿರುವ ಪಟ್ಟಿಗಳನ್ನು ಉಪಯೋಗಿಸುವಲ್ಲಿ ಇಂಥವು ಉಪಯುಕ್ತ. ಅಖಂಡ ಕಪ್ಪಿಯ ನೇಮಿಯ

ಗರಿಷ್ಠ ವೇಗ ಸೆಕೆಂಡಿಗೆ 25 ಮೀಟರುಗಳು. ಹೋಳುಕಪ್ಪಿಯ ನೇಮಿಯ ವೇಗ ಇದರ 50-60% ಇರಬಹುದು.




ಚಿತ್ರ 1 A. ಚಾಲಕದಂಡ, B. ಚಾಲಿತ ದಂಡ

ಕಪ್ಪಿಯ ಗುಂಬದ ಹೊರವ್ಯಾಸ ನಾಳದ ವ್ಯಾಸದ (ಬೋರ್) ಎರಡರಷ್ಟಿದೆ. ಗುಂಬದ ಅಗಲ ಹೆಚ್ಚು ಕಡಿಮೆ ಕಪ್ಪಿಯ ಅಗಲದಷ್ಟೇ ಇದೆ. ಗುಂಬವನ್ನು ತೋಳುಗಳ ಸಹಾಯದಿಂದ ನೇಮಿಗೆ ಸೇರಿಸಿರುತ್ತಾರೆ. ತೋಳುಗಳ ಒಳನೋಟ ಅಂಡಾಕೃತಿ. ನೇಮಿಯ ಮೇಲ್ಮೈಯನ್ನು ಉಪಯೋಗಿಸುವ ಪಟ್ಟಿಗೆ ಅನುಗುಣವಾಗಿ ಮಾಡಿರುತ್ತಾರೆ. ಕಪ್ಪಿಯ ಮೇಲ್ಮೈನಲ್ಲಿ ತೋಡು ಇದ್ದರೆ ಅದು ಕಪ್ಪಿಚಕ್ರ.

**ಕಪ್ಪಿಯ ಅನ್ವಯ:** ಚಾಲಕ ಮತ್ತು ಚಾಲಕ ದಂಡದ ವೇಗ ಒಂದೇ ಇರಬೇಕು. ಆದರೆ ಅದರಿಂದ ಚಲಿಸಲ್ಪಡುವ ಚಾಲಕ ದಂಡದಿಂದ ವಿವಿಧ ವೇಗಗಳನ್ನು ಪಡೆಯಬೇಕು. ಅಂಥ ಸಂದರ್ಭಗಳಲ್ಲಿ ಹಂತ ಕಪ್ಪಿಗಳನ್ನು (ಸ್ಟೆಪ್ಡ್ ಪುಲ್ಲೀಸ್) ಬಳಸಬಹುದು (ಚಿತ್ರ 1). ಅಂಥ ಕಪ್ಪಿಗಳ ವ್ಯಾಸಗಳು ಯಾವುದೇ ಹಂತದಲ್ಲಿ ಬೇಕಾದ ವೇಗ ಪರಿಮಾಣ ಮತ್ತು ಸಾಕಷ್ಟು ಕಟ್ಟಿಯ ತುಯ್ತವನ್ನು ಕಾಯ್ದುಕೊಳ್ಳಬೇಕು. ಹಂತ ಕಪ್ಪಿಗಳಲ್ಲಿ ದಾಟು ಪಟ್ಟಿಗಳನ್ನು ಬಳಸಿದಾಗ ಯಾವುದೇ ಒಂದು ಹಂತದ ವ್ಯಾಸಗಳ ಮೊತ್ತ ಮತ್ತಾವುದೇ ಹಂತದ ವ್ಯಾಸಗಳ ಮೊತ್ತಕ್ಕೆ ಸಮ ಇರಬೇಕು. ಒಂದೇ ಅಳತೆಯ ಒಂದು ಜೊತೆ ಕಪ್ಪಿಗಳನ್ನು ಸಾಮಾನ್ಯವಾಗಿ ಬಳಸುತ್ತಾರೆ.



ಚಿತ್ರ 2 ಬಿಗಿ ಮತ್ತು ಸಡಿಲ ಕಪ್ಪಿಗಳು

ಶಂಕು ಕಪ್ಪಿಗಳನ್ನು (ಕೋನ್ ಪುಲ್ಲೀಸ್) ಬಳಸಿಯೂ ಮೇಲೆ ತಿಳಿಸಿದಂತೆ ವಿವಿಧ ವೇಗಗಳನ್ನು ಪಡೆಯಬಹುದು. ಇವು ಹಂತ ಶಂಕುವಿನಂತೆಯೇ (ಸ್ಟೆಪ್ಡ್ ಕೋನ್) ಇರುತ್ತವೆ. ಒಂದೇ ವ್ಯತ್ಯಾಸವೆಂದರೆ, ವ್ಯಾಸವ್ಯತ್ಯಾಸ ಹಂತಗಳಲ್ಲಿ ಇರುವುದರ ಬದಲು ಕ್ರಮೇಣ ಇರುತ್ತದೆ. ಇವನ್ನು ಬಳಸುವಲ್ಲಿ ಒಂದು ಅಡಚಣೆ ಉಂಟು. ಪಟ್ಟಿಯು ಕಪ್ಪಿಯ ಗರಿಷ್ಠ ವ್ಯಾಸದ ಕಡೆಗೆ ಹತ್ತಬಹುದು. ಹೀಗಾಗದಂತೆ ಪಟ್ಟಿಯನ್ನು ನಿರ್ದೇಶಿಸುವುದು ಅತ್ಯಗತ್ಯ.

ಚಾಲಕದಂಡಗಳು ಅವು ಇರಬೇಕಾದ ಸ್ಥಳದಿಂದ ಎಳ್ಳಷ್ಟು ಜರುಗಿದ್ದರೂ ಇಲ್ಲವೆ ಪಟ್ಟಿಯಲ್ಲಿ ನ್ಯೂನತೆ ಇದ್ದರೂ ಪಟ್ಟಿ ಕಪ್ಪಿಯಿಂದ ಜಾರಲು ಪ್ರೇರೇಪಣೆ ಉಂಟಾಗುತ್ತದೆ. ನೇಮಿಯಲ್ಲಿ ಪಕ್ಕ ಪಟ್ಟಿಗಳನ್ನು ಬಳಸುವುದರಿಂದ ಪಟ್ಟಿ ಜಾರುವುದನ್ನು ತಡೆಗಟ್ಟಬಹುದಾದರೂ ಉಬ್ಬುಕಪ್ಪಿಗಳನ್ನು ಬಳಸುವುದು ಸೂಕ್ತ. ಏಕೆಂದರೆ ಪಕ್ಕಪಟ್ಟಿಗಳನ್ನು ಬಳಸಿದಲ್ಲಿ ಪಟ್ಟಿಯ ಎರಡು ಪಕ್ಕಗಳು ಪಕ್ಕಪಟ್ಟಿಯನ್ನು ಉಜ್ಜುತ್ತವೆ. ತತ್ಪರಿಣಾಮವಾಗಿ ಪಟ್ಟಿಯ ಸವೆತ ಹೆಚ್ಚು. ಉಬ್ಬುಕಪ್ಪಿಯನ್ನು ಬಳಸಿದಲ್ಲಿ ಈ ತೊಂದರೆ ಇರುವುದಿಲ್ಲ. ಉಬ್ಬು ಬಹಳ ಕಡಿಮೆ ಇರಬೇಕು. ಸಾಮಾನ್ಯವಾಗಿ ಇದು ಕಪ್ಪಿಯ ಒಂದು ಮೀಟರ್ ಅಗಲಕ್ಕೆ 25 ಮಿ.ಮೀ. ನಿಂದ 70 ಮಿ. ಮೀ. ವರೆಗೆ ಇರುತ್ತದೆ.

ಚಾಲಿತದಂಡ ನಿಂತರೂ ಚಾಲಕದಂಡ ಚಲಿಸುತ್ತಲೇ ಇರಬೇಕಾದಲ್ಲಿ ಬಿಗಿ ಮತ್ತು ಸಡಿಲ ಕಪ್ಪಿಗಳನ್ನು ಬಳಸಬೇಕು (ಚಿತ್ರ 2). ಬೆಣೆ ಅಥವಾ ತಿರುಪೊತ್ತಿಗೆಗಳಿಂದ ಬಿಗಿ ಕಪ್ಪಿಯನ್ನು ಚಾಲಕದಂಡಕ್ಕೆ ಭದ್ರವಾಗಿ ಸೇರಿಸಲಾಗುತ್ತದೆ. ಆದರೆ ಸಡಿಲಕಪ್ಪಿ ಚಾಲಿತದಂಡದ ಮೇಲೆ ನಿರರ್ಗಳವಾಗಿ ಸುತ್ತುತ್ತದೆ. ಸೂಕ್ತ ಉಪಕರಣಗಳಿಂದ ಪಟ್ಟಿಯನ್ನು ಬಿಗಿ ಅಥವಾ ಸಡಿಲ ಕಪ್ಪಿಯ ಮೇಲಕ್ಕೆ ತಳ್ಳಬಹುದು.

**ಚಾಲನ ವಿಧಗಳು** (ಟೈಪ್ಸ್ ಆಫ್ ಡ್ರೈವ್) : ತೆರದ ಪಟ್ಟಿ ಚಾಲನ (ಓಪನ್ ಬೆಲ್ಟ್ ಡ್ರೈವ್) ಮತ್ತು ದಾಟು ಪಟ್ಟಿ ಚಾಲನ (ಕ್ರಾಸ್ಡ್ ಬೆಲ್ಟ್ ಡ್ರೈವ್): ಎರಡು ಸಮಾನಂತರ ಚಾಲಕದಂಡಗಳ ನಡುವಣ ಅಂತರ 15 ಮೀಟರುಗಳ




ಚಿತ್ರ 3 ತೆರೆದ ಪಟ್ಟಿ ಚಾಲಕ : 1 ಚಾಲಕ ಕಪ್ಪಿ, 2 ಚಾಲಿತ ಕಪ್ಪಿ, 3 ತಟಸ್ಥ ಭಾಗ, 4 ಪರಿಣಾಮಕಾರಿ ತ್ರಿಜ್ಯ

ಒಳಗಿದ್ದಲ್ಲಿ ತೆರೆದ ಪಟ್ಟಿ ಚಾಲಿಗಳನ್ನು ಬಳಸುತ್ತಾರೆ. ಈ ರೀತಿಯ ಚಾಲನಗಳಲ್ಲಿ ಸಮಾನಾಂತರ ಚಾಲಕದಂಡಗಳನ್ನು ಸೇರಿಸುವ ಎರಡು ಕಪ್ಪಿಗಳೂ ಒಂದೇ ದಿಕ್ಕಿನಲ್ಲಿ ಸುತ್ತುತ್ತವೆ (ಚಿತ್ರ 3). ಆದರೆ ದಾಟು ಪಟ್ಟಿ ಚಾಲನಗಳಲ್ಲಿ ಕಪ್ಪಿಗಳು ವಿರುದ್ಧ ದಿಕ್ಕಿನಲ್ಲಿ ಸುತ್ತುತ್ತವೆ. ದಾಟು ಪಟ್ಟಿಗಳನ್ನು ಬಳಸುವುದರಿಂದ ಹೆಚ್ಚಿನ ಸಂಸ್ಪರ್ಶ ಕೋನವನ್ನು ಪಡೆಯಬಹುದಾದರೂ ಪಟ್ಟಿ ದಾಟುವೆಡೆಯಲ್ಲಿ ಉಜ್ಜುವಿಕೆ ಇರುವುದರಿಂದ ಪಟ್ಟಿ ಬೇಗ ಸವೆದು ಹೋಗುತ್ತದೆ (ಚಿತ್ರ 4).

ಕಪ್ಪಿಗಳ ವ್ಯಾಸ $d_1$, $d_2$ ಮತ್ತು ಅವುಗಳ ಕೇಂದ್ರಾಂತರ $c$ ಇದ್ದಲ್ಲಿ ತೆರೆದ

ಪಟ್ಟಿಯ ಉದ್ದ, $$L = \frac{\pi}{2}(d_1+d_2)+2c+\frac{(d_1-d_2)^2}{4c}$$

ದಾಟು ಪಟ್ಟಿಯ ಉದ್ದ, $$L = \frac{\pi}{2}(d_1+d_2)+2c+\frac{(d_1+d_2)^2}{4c}$$




ಚಿತ್ರ 4 ದಾಟು ಪಟ್ಟಿ : 1 ಚಾಲಕ ಕಪ್ಪಿ, 2 ಚಾಲಿತ ಕಪ್ಪಿ

ಪಟ್ಟಿಯ ಹೊರ ಮತ್ತು ಒಳ ಮೇಲ್ಮೈಗಳ ಉದ್ದ ಒಂದೇ ಇರುತ್ತದೆ. ಕಪ್ಪಿಗಳ ಮೇಲೆ ಪಟ್ಟಿ ಹಿಗ್ಗಿದಾಗ ಅದರ ಒಳಮೇಲ್ಮೈ ಕುಗ್ಗುತ್ತದೆ ಮತ್ತು ಹೊರ ಮೇಲ್ಮೈ ಹಿಗ್ಗುತ್ತದೆ. ಇವೆರಡರ ನಡುವೆ ಯಾವುದೋ ಒಂದು ನಿರ್ದಿಷ್ಟ ಸ್ಥಳದಲ್ಲಿ ಪಟ್ಟಿ ಹಿಗ್ಗುವುದೂ ಇಲ್ಲ, ಕುಗ್ಗುವುದೂ ಇಲ್ಲ. ಇದೇ ತಟಸ್ಥಭಾಗ. ಇದು ಸರಿಯಾಗಿ ಪಟ್ಟಿಯ ಹೊರ ಮತ್ತು ಒಳ ಮೇಲ್ಮೈಗಳ ಮಧ್ಯದಲ್ಲಿದೆ. ತಟಸ್ಥಭಾಗ ಸ್ಪರ್ಶಕವಾಗುವಂತೆ ಕಪ್ಪಿಯ ಮಧ್ಯಭಾಗವನ್ನು ಕೇಂದ್ರವಾಗಿಟ್ಟುಕೊಂಡು ಎಳೆಯಬಹುದಾದ ಕಾಲ್ಪನಿಕ ವೃತ್ತದ ಹೆಸರು ಅಂತರ ಮೇಲ್ಮೈ. ಇದರ ತ್ರಿಜ್ಯವೇ ಕಪ್ಪಿಯ ಪರಿಣಾಮಕಾರಿ ತ್ರಿಜ್ಯ. ತಟಸ್ಥಭಾಗದ ಮೂಲಕ ಹಾಯ್ದುಹೋಗುವ ರೇಖೆ ಎರಡೂ ಕಪ್ಪಿಗಳ ಅಂತರ ಮೇಲ್ಮೈಗಳನ್ನು ಸೇರಿಸುತ್ತದೆ. ಹೀಗೆ ಸೇರಿಸುವ ರೇಖೆಯೇ ಅಂತರ ರೇಖೆ (ಚಿತ್ರ 3).




ಚಿತ್ರ 5 ಮಧ್ಯವರ್ತಿಕಪ್ಪಿ : 1 ಚಾಲಕಕಪ್ಪಿ, 2 ಚಾಲಿತಕಪ್ಪಿ




ಚಿತ್ರ 6 ಪಾದತಿರುಗುಚಾಲಿ : 1 ಚಾಲಕಕಪ್ಪಿ, 2 ಚಾಲಿತಕಪ್ಪಿ




ಚಿತ್ರ 7 ಕೋನಚಾಲಿ : 1 ಚಾಲಿತ ಕಪ್ಪಿ, 2 ಕಾಪು ಕಪ್ಪಿಗಳು, 3 ಚಾಲಕ ಕಪ್ಪಿ

ಮಧ್ಯವರ್ತಿ ಕಪ್ಪಿ (ಇಂಟರ್ಮೀಡಿಯೆಟ್ ಕಪ್ಪಿ) : ಹೆಚ್ಚಿನ ವೇಗ ಪರಿಮಾಣ ಪಡೆಯಲು ಇವನ್ನು ಬಳಸುತ್ತಾರೆ (ಚಿತ್ರ 5).

ಕೋನ ಮತ್ತು ಲಂಬಕೋನ ಚಾಲಿ : ಸಮಾನಾಂತರವಿಲ್ಲದ ಚಾಲಕದಂಡಗಳ ಮೇಲೆ ಸುತ್ತುವ ಕಪ್ಪಿಗಳನ್ನು ಸೇರಿಸಲೂ ಪಟ್ಟಿಯನ್ನು ಉಪಯೋಗಿಸಬಹುದು. ಸಂದರ್ಭ ಯಾವುದೇ ಇರಲಿ, ಕಪ್ಪಿಯನ್ನು ತಲುಪುತ್ತಿದ್ದಂತೆ ಪಟ್ಟಿಯ ಮಧ್ಯರೇಖೆ ಕಪ್ಪಿಯ ಮಧ್ಯ ಮೇಲ್ಮೈನಲ್ಲಿರಬೇಕು. ಪಾದ ತಿರುಗುಚಾಲಿ (ಕ್ವಾರ್ಟರ್ ಟರ್ನ್ ಡ್ರೈವ್) ಇದಕ್ಕೆ ಉತ್ತಮ ನಿದರ್ಶನ (ಚಿತ್ರ 6). ಚಿತ್ರ 7ರಲ್ಲಿ ಕೋನಚಾಲಿಯನ್ನು ತೋರಿಸಿದೆ.

ಕಾಪು ಕಪ್ಪಿ (ಐಡ್ಲ್ ಪುಲ್ಲಿ) : ಪಟ್ಟಿಯ ತುಯ್ತವನ್ನು ಹೆಚ್ಚಿಸಲು ಮತ್ತು ಪಟ್ಟಿಯ ಹಿಗ್ಗುವಿಕೆಯಿಂದಾಗುವ ತೊಂದರೆಯನ್ನು ನಿವಾರಿಸಲು ಇದನ್ನು ಬಳಸುತ್ತಾರೆ (ಚಿತ್ರ 8). ಇದು ಜಾರುವಿಕೆಯನ್ನು ಕಡಿಮೆ ಮಾಡಿ ಪಟ್ಟಿಯ ಆಯುಸ್ಸನ್ನು ಹೆಚ್ಚಿಸುತ್ತದೆ. ಅನೇಕ ಕಾಪು ಕಪ್ಪಿಗಳನ್ನು ಬಳಸಿ ಒಂದು ಚಾಲಕ ದಂಡದಿಂದ ಅನೇಕ ಚಾಲಕದಂಡಗಳಿಗೆ ಚಲನೆಯನ್ನು ವರ್ಗಾಯಿಸಲು ಸಾಧ್ಯ.




ಚಿತ್ರ 8 ಕಾಪು ಕಪ್ಪಿ : 1 ಚಾಲಕಕಪ್ಪಿ, 2 ಕಾಪು ಕಪ್ಪಿ, 3 ಚಾಲಿತಕಪ್ಪಿ, 4 ಭಾರ

**ಪಟ್ಟಿಯ ಪದಾರ್ಥಗಳು :** ಪಟ್ಟಿಯ ಪದಾರ್ಥಗಳು ಶಕ್ತಿ, ಬಾಗುವಿಕೆ, ಬಾಳಿಕೆ ಮತ್ತು ಹೆಚ್ಚು ಘರ್ಷಣಗುಣಕವನ್ನು ಹೊಂದಿರಬೇಕು. ಸಾಮಾನ್ಯವಾಗಿ ಪಟ್ಟಿಗಳನ್ನು ಚರ್ಮ ಅಥವಾ ನೇದ ವಸ್ತುಗಳಿಂದ ಮಾಡಿ ರಬ್ಬರ್ ಅಥವಾ ಅಂಥದ್ದೆ ಪದಾರ್ಥಗಳಿಂದ ತುಂಬುತ್ತಾರೆ. ಕಪ್ಪಿಯ ಮೇಲ್ಮೈ ರಬ್ಬರಿನಿಂದ ಮಾಡಿದ್ದಲ್ಲಿ ಉಕ್ಕಿನ ಪಟ್ಟಿಗಳನ್ನು ಬಳಸಬಹುದಾದರೂ ಅವು ಅಷ್ಟಾಗಿ ಬಳಕೆಯಲ್ಲಿಲ್ಲ. ಬಹಳವಾಗಿ ಸಮತಲ ಪಟ್ಟಿಗಳನ್ನು ಓಕ್‌ಹದಮಾಡಿದ (ಓಕ್ ಟ್ಯಾನ್ಡ್) ಚರ್ಮದಿಂದ ಮಾಡುತ್ತಾರೆ. ಬಹಳ ಬಾಗುವ ಪಟ್ಟಿ ಬೇಕಾದಲ್ಲಿ ಕ್ರೋಮ್ ಚರ್ಮವನ್ನು ಉಪಯೋಗಿಸಬಹುದು. (ಎಚ್.ಎಲ್.ಕೆ.)

**ಕಪ್ಪಿ ಚಕ್ರ :** ನೇಮಿಯಲ್ಲಿ (ರಿಮ್) ಕುಣಿಯಿರುವ (ಗ್ರೂವ್) ಚಕ್ರ (ಷೀವ್). ಸಾಮಾನ್ಯವಾಗಿ ಇದು ಚಕ್ರದ ಅಕ್ಷಕ್ಕೆ ಅಡ್ಡವಾಗಿರುತ್ತದೆ. ಉತ್ತಮ ಘರ್ಷಣೆಯ ಗುಣಗಳಿಗಾಗಿ ಎರಕದ ಕಬ್ಬಿಣದಿಂದಲೂ ಜಾರುವಿಕೆಯ ಅವಗುಣ ವಿದ್ದರೂ ಕಡಿಮೆ ವೆಚ್ಚ ಮತ್ತು ಕಡಿಮೆ ತೂಕಕ್ಕಾಗಿ ಒತ್ತಿದ ಉಕ್ಕಿನಿಂದಲೂ




ಚಿತ್ರ 1 ನೇಮಿಗಳು—ಕುಳಿಗಳು : 1 ಕುಣಿಯಿರುವ ನೇಮಿ, 2 ನೇಮಿಯ ಕುಳಿಗಳಲ್ಲಿ ಸರಿಯಾಗಿ ಕುಳಿತಿರುವ ಹಗ್ಗಗಳು, 3 ನೇಮಿಯ ಕುಳಿಗಳಲ್ಲಿ ಸರಿಯಾಗಿ ಕುಳಿತಿರುವ V-ಬೆಲ್ಟುಗಳು

(ಪ್ರೆಸ್ಡ್‌ಸ್ಟೀಲ್) ಇದನ್ನು ತಯಾರಿಸುತ್ತಾರೆ. ಕಪ್ಪಿ ಚಕ್ರವನ್ನು ಒಂದೇ ಭಾಗವಾಗಿ ತಯಾರಿಸಿದರೆ, ದಂಡದ (ಷಾಫ್ಟ್) ಕೊನೆಯಿಂದ ಮಾತ್ರ ಅದನ್ನು ತೂರಿಸಲು ಸಾಧ್ಯ. ಅದನ್ನು ಎರಡು ವಕ್ರಕಾಂಡಗಳ (ಕ್ರ್ಯಾಂಕ್ಸ್) ನಡುವೆ ಇರಿಸಲು ಎರಡು ಭಾಗಗಳಗಲ್ಲಿ ತಯಾರಿಸಿ, ಅವನ್ನು ಬೋಲ್ಟುಗಳಿಂದ ಜೋಡಿಸಬೇಕು.

ಕಪ್ಪಿ ಚಕ್ರಗಳ ನೇಮಿಯಲ್ಲಿ ಅಕ್ಷಕ್ಕೆ ಅಡ್ಡಲಾಗಿ V–ಆಕಾರದ ಕುಣಿಯನ್ನು ಕೊರೆದು, ಹಗ್ಗ ಅಥವಾ V–ಆಕಾರದ ಬೆಲ್ಟಿನಿಂದ ಒಂದು ಕಡೆಯಿಂದ ಇನ್ನೊಂದು ಕಡೆಗೆ ಸಾಮರ್ಥ್ಯದ ಪ್ರಸರಣವನ್ನು (ಪವರ್ ಟ್ರಾನ್ಸ್‌ಮಿಶನ್) ಮಾಡಬಹುದು. ಒಂದು ಕಪ್ಪಿ ಚಕ್ರದಲ್ಲಿ ಸುಮಾರು ಇಪ್ಪತ್ತನಾಲ್ಕರವರೆಗೆ ಕುಣಿಗಳಿರಬಹುದು. ಹಗ್ಗ ಅಥವಾ ಪಟ್ಟಿಗೆ ಹೊಂದಿಕೊಂಡಂತೆ ಕುಣಿಯಿರಬೇಕಾದದು ಆವಶ್ಯಕ. ಹೀಗಿಲ್ಲದೆ ದೊಡ್ಡದಾಗಿದ್ದರೆ ಹಗ್ಗ ಅಥವಾ ಬೆಲ್ಟಿಗೆ ಸಿಗುವ ಹಿಡಿತ (ಸಪೋರ್ಟ್) ಕಡಿಮೆಯಾಗಿ ಇವು ತಮ್ಮ ಅಡ್ಡಕೊಯ್ತದ ಆಕಾರವನ್ನು ಬದಲಾಯಿಸಬಹುದು. ಕಡಿಮೆಯಿದ್ದರೆ ಹಗ್ಗ ಅಥವಾ ಬೆಲ್ಟಿನ ಸಾಮಾನ್ಯ ಪರಿಭ್ರಮಣಕ್ಕೆ ಅಡ್ಡಿಯಾಗುತ್ತದೆ.

ನೇಮಿಯಲ್ಲಿ ಅಕ್ಷಕ್ಕೆ ಸಮಾನಾಂತರವಾಗಿ ಕುಣಿಗಳುಳ್ಳ ಒಂದು ವಿಧವಾದ ಕಪ್ಪಿ ಚಕ್ರವನ್ನು ಉಬ್ಬುಗಳುಳ್ಳ (ಟ್ರೆಡ್ಸ್) ಪಟ್ಟಿಯೊಂದಿಗೆ ಉಪಯೋಗಿಸುವ ವಾಡಿಕೆಯಿದೆ. ಈ ರೀತಿಯ ಕಪ್ಪಿ ಚಕ್ರಗಳನ್ನು ಹೊಲೆಯುವ ಯಂತ್ರ, ಕಾಲನಿರ್ಣಯ ಚಾಲನೆ (ಟೈಮಿಂಗ್ ಡ್ರೈವ್), ಸಾಮರ್ಥ್ಯ ಪ್ರಸರಣ ಮುಂತಾದುವುಗಳಲ್ಲಿ ಉಪಯೋಗಿಸಬಹುದು.




ಚಿತ್ರ 2 ಕಪ್ಪಿ ಚಕ್ರಗಳು : 1 ಉತ್ಕೇಂದ್ರಕ ಕಪ್ಪಿ ಚಕ್ರ, 2 ಒಡೆದ ಉತ್ಕೇಂದ್ರಕ ಕಪ್ಪಿ ಚಕ್ರ

ನೇಮಿಯಲ್ಲಿ ಮೆಟ್ಟಲು ಅಥವಾ ಕುಣಿಯಿರುವ ಹಾಗೂ ಕೇಂದ್ರಕ್ಕೆ ದೂರವಾಗಿ ಕೊರೆದ ರಂಧ್ರವುಳ್ಳ ಚಕ್ರಕ್ಕೆ ಉತ್ಕೇಂದ್ರಕ ಕಪ್ಪಿ ಚಕ್ರವೆಂದು (ಎಕ್ಸೆಂಟ್ರಿಕ್ ಷೀವ್) ಹೆಸರು. ಇದನ್ನು ಆವಿ ಎಂಜಿನ್ನುಗಳ ಕವಾಟಯಂತ್ರದಲ್ಲಿ (ವಾಲ್ವ್‌ಗಿಯರ್) ಪರಿಭ್ರಮಣ ಚಲನೆಯನ್ನು (ರೋಟರಿ ಮೋಷನ್) ಪ್ರತ್ಯಾಗಾಮಿಚಲನೆಯನ್ನಾಗಿ (ರೆಸಿಪ್ರೊಕೇಟಿಂಗ್ ಮೋಷನ್) ಮಾರ್ಪಡಿಸಲು ಉಪಯೋಗಿಸುತ್ತಾರೆ.

ಮೇಲೆ ಹೇಳಿದ ವಿಧಗಳಿಗೆ ವ್ಯತಿರಿಕ್ತವಾಗಿ, ನೇಮಿಯಲ್ಲಿರುವ ಕುಣಿಗಳ ಅಗಲವನ್ನು ಇಷ್ಟಪ್ರಕಾರ ಬದಲಾಯಿಸಲು ಅವಕಾಶವಿರುವ ಕಪ್ಪಿಚಕ್ರಗಳೂ ಉಂಟು.

(ಕೆ.ಆರ್.ಎಂ.ಒ.)

**ಕಪ್ಪಿನಿ :** ನೀತಿಬೋಧಕವಾದ ನಂಜುಂಡಶತಕವನ್ನು ನಂಜನಗೂಡು ನಂಜುಂಡೇಶ್ವರನ ಅಂಕಿತದಲ್ಲಿ ಬರೆದಿರುವ (1880) ಕವಿ ನಂಜುಂಡಲಿಂಗ ನತಜನಸಂಗಾ ಎಂಬುದು ಅಂಕಿತ. ಸಂಸ್ಕೃತಶ್ಲೋಕಂಗಳ ಪರಿಮಳದಲರುಗಳ ಕಂದ ಪದ್ಯಾಂತರದೊಳ್ ಸರಗಟ್ಟುವೆ ಸುಜನರ ಕಿವಿದುರುಬಿಗೆ—ಎಂಬ ಮಾತಿನಿಂದ ಇವು ಸಂಸ್ಕೃತ ಪದ್ಯಗಳ ಕನ್ನಡ ಭಾಷಾಂತರ ಎಂಬುದು ಸ್ಪಷ್ಟವಾಗುತ್ತದೆ. ಗ್ರಂಥದಲ್ಲಿ 103 ಕಂದಪದ್ಯಗಳಿವೆ.

(ಎಂ.ಜಿ.ಎನ್.)

**ಕಪ್ಪುಕೋತಿ :** ಪ್ರೈಮೇಟುಗಳ ಗಣದ ಕ್ಯಾಟರೈನಿ ಬುಡಕಟ್ಟಿನ ಸೈನೋಪಿತಿಕಾಯಿಡೀ ಕುಟುಂಬಕ್ಕೆ ಸೇರಿದ ಸೈನೋಪಿತಿಕಸ್ ನೈಜರ್ ಎಂಬ ಶಾಸ್ತ್ರೀಯ ಹೆಸರಿನ ಕೋತಿ. ಆಸ್ಟ್ರೇಲಿಯದ ಬಳಿಯ ಸೆಲೆಬಸ್ ದ್ವೀಪಗಳಗಲ್ಲಿ ಹೇರಳವಾಗಿ ಕಾಣಬರುತ್ತದೆ. ನೋಡುವುದಕ್ಕೆ ಬೆಬೂನ್ ಕೋತಿಯಂತೆಯೇ ಇದೆ. ದೇಹದ ಗಾತ್ರ, ನಿಲ್ಲುವ ಭಂಗಿ, ದಪ್ಪ ಮತ್ತು ಪ್ರಮುಖವಾದ ಹುಬ್ಬುಗಳು, ನಾಯಿಯಂಥ ಮೂತಿ, ತೆಳುವಾದ ಉದ್ದನೆಯ ನಾಸಿಕ ಮತ್ತು ಕಣ್ಣುಗಳ ಕೆಳಗೆ ಮೂಗಿನ ಎರಡೂ ಪಕ್ಕಗಳಲ್ಲಿ ಇರುವ ರೋಮರಹಿತ ಕಪ್ಪು ಚರ್ಮದ ಉಬ್ಬು—ಇವುಗಳೆಲ್ಲ ಬೆಬೂನ್ ಕೋತಿಯನ್ನು ಹೋಲುತ್ತದೆ. ಮೈ ಕಾಡಿಗೆಗಪ್ಪು ಬಣ್ಣದ್ದು. ಒತ್ತಾಗಿ ಬೆಳೆದ ಕೂದಲುಗಳಿಂದ ಕೂಡಿದ ಚರ್ಮ ಮತ್ತು ತಲೆಯ



ಮೇಲೆ ಉದ್ದವಾದ ಬಿರುಸಾದ ಕೂದಲುಗಳು ಇವೆ. ಬೇಕೆಂದಾಗ ಕೋತಿ ಈ ಕೂದಲುಗಳನ್ನು ನಿಮಿರಿಸಿ ಶತ್ರುಗಳನ್ನು ಹೆದರಿಸಲು ವಿಲಕ್ಷಣ ರೂಪ ತಾಳುವುದು. ಇದು ಬಹಳ ಬುದ್ಧಿವಂತ ಪ್ರಾಣಿಯೆಂದು ಹೆಸರಾಗಿದೆ. ನಮ್ಮಲ್ಲಿರುವ ಕೋತಿ ಮೊಸಳೆಯ ಕತೆಯಷ್ಟೆ ಚತುರವಾದ ಕತೆಗಳು ಇದರ ಬಗ್ಗೆ ಇವೆ. ಸೆಲೆಬಸ್ ದ್ವೀಪವಾಸಿಗಳು ಇವನ್ನು ಬಹಳ ಪೂಜ್ಯಭಾವನೆಯಿಂದ ನೋಡುತ್ತಾರೆ. ಅಲ್ಲದೆ ಮಾನವರಿಗಿಂತಲೂ ಇವು ಶ್ರೇಷ್ಠವೆಂತಲೂ ತಾವು ಇವುಗಳ ವಂಶಜರೆಂದೂ ಹೇಳಿಕೊಳ್ಳುತ್ತಾರೆ.

(ಎಚ್.ಬಿ.ಡಿ.)

**ಕಪ್ಪುವಸ್ತು :** ಒಂದು ವಸ್ತುವಿನ ಮೇಲೆ ಪಾತವಾಗುವ ಉಷ್ಣದ ಅಥವಾ ಬೆಳಕಿನ ವಿಸರಣೆಯನ್ನು ಅದು ಪೂರ್ಣವಾಗಿ ಹೀರಿಕೊಂಡರೆ (ಅವಶೋಷಣೆ–ಅಬ್‌ಸಾರ್ಪ್‌ಷನ್) ಅದಕ್ಕೆ ಕಪ್ಪುವಸ್ತು (ಬ್ಲಾಕ್ ಬಾಡಿ) ಎಂದು ಹೆಸರು. ಇಂಥ ಒಂದು ವಸ್ತು ಇದ್ದರೆ ಅದರ ಮೇಲೆ ಪಾತವಾಗುವ ಎಲ್ಲ ವಿಸರಣೆಯನ್ನೂ ಅದು ಹೀರಿಕೊಂಡು ಒಂದಿಷ್ಟನ್ನೂ ಪ್ರತಿಫಲಿಸದು, ಎಂದರೆ, ಈ ವಸ್ತುವಿನ ಪ್ರತಿಫಲನಗುಣ ಶೂನ್ಯ ಮತ್ತು ಅವಶೋಷಣಗುಣ 100%. ಪಾತವಾಗುವ ಎಲ್ಲ ವಿಸರಣೆಯನ್ನು ಪ್ರತಿಫಲಿಸುವ—ಎಂದರೆ ಪ್ರತಿಫಲನಗುಣ 100% ಮತ್ತು ಅವ

ಶೋಷಣ ಗುಣ ಶೂನ್ಯವಿರುವ—ವಸ್ತುವಿನ ಹೆಸರು ಬಿಳಿವಸ್ತು. ದಟ್ಟ ಮಸಿಲೇಪಿತವಸ್ತು ಈ ಮಾನಕದಲ್ಲಿ ಕಪ್ಪುವಸ್ತುವಲ್ಲ—ಕಾರಣ, ಅದರ ಅವಶೋಷಣಾಂಶ 100% ಆಗಿರುವುದಿಲ್ಲ. ಪ್ರಾಯೋಗಿಕವಾಗಿ ಸನ್ನಿಹಿತ ಕಪ್ಪು ವಸ್ತುವನ್ನು ಪಡೆಯುವ ವಿಧಾನ ಹೀಗಿದೆ : ಒಂದು ದಪ್ಪವಾದ ಅಪಾರದರ್ಶಕ ಘನವಸ್ತುವಿನಲ್ಲಿ ಕುಹರವನ್ನು ಕೊರೆಯಬೇಕು ; ಕುಹರದ ಒಳಮೈಯನ್ನೂ ಬಾಯನ್ನೂ ಪೂರ್ಣವಾಗಿ ಮಸಿಯಿಂದ ಮೆತ್ತಬೇಕು (ಪ್ಲಾಟಿನಂ ಮಸಿ 98% ಕಪ್ಪು ವಸ್ತು) ; ಈ ಕುಹರದ ಪ್ರತಿಫಲನ ಗುಣ ಕನಿಷ್ಠವೂ ಅವಶೋಷಣ ಗುಣ ಗರಿಷ್ಠವೂ ಆಗಿವೆ.




ಕಪ್ಪುವಸ್ತು ವಿಸರಣದ ಬಗ್ಗೆ ಕಿರ್ಚಾಫ್, ವೀನ್ ಮತ್ತು ಲುಮ್ಮರ್ ಮುಂತಾದ ಭೌತಶಾಸ್ತ್ರಜ್ಞರು ಅಧ್ಯಯನ ಮತ್ತು ಪ್ರಯೋಗಗಳನ್ನು ನಡೆಸಿದ್ದಾರೆ. ಸಮಾನವಾಗಿ ಕಾಯಿಸಿದ ಆವರಣದೊಳಗಿನ ವಿಸರಣೆ ಪೂರ್ಣವಾಗಿ ಕಪ್ಪಾಗಿರುತ್ತದೆ ಎಂದು ಕಿರ್ಚಾಫ್ ಸಾಧಿಸಿದ (1858). ಈ ತತ್ತ್ವವನ್ನೇ ಬಳಸಿಕೊಂಡು ವೀನ್, ಲುಮ್ಮರ್ ಮತ್ತು ಫೆರಿ ಪ್ರಯೋಗಯೋಗ್ಯ ಕಪ್ಪುವಸ್ತುಗಳನ್ನು ಪಡೆದರು. ಇವನ್ನು ವೀನ್ಸ್ ಕಪ್ಪುವಸ್ತು ಮತ್ತು ಫೆರಿ ಕಪ್ಪುವಸ್ತು ಎಂದು ಕರೆಯಲಾಗಿದೆ. ಇವುಗಳಲ್ಲಿ ಸರಳವಾದ ಫೆರಿ ಕಪ್ಪುವಸ್ತುವಿನ ವಿವರ ಹೀಗಿದೆ : ಚಿತ್ರದಲ್ಲಿ ತೋರಿಸಿರುವಂತೆ G ಒಂದು ಟೊಳ್ಳಾಗಿರುವ ದುಂಡನೆಯ ಕೋಶ. ಇದನ್ನು ಹಿತ್ತಾಳೆ ಅಥವಾ ಪ್ಲಾಟಿನಂನಿಂದ ತಯಾರಿಸಿರುತ್ತಾರೆ. ಇದು ಆತುಕೊಳ್ಳಬೇಕಾಗಿರುವ ಉಷ್ಣತೆಗೆ ಅನುಗುಣವಾಗಿ ಇದರ ಒಳಭಾಗಕ್ಕೆಲ್ಲ ಮಸಿ ಬಳಿದಿದೆ. ಇದರ ಒಳಭಾಗದಲ್ಲಿ ಒಂದು ಭಾಗದಲ್ಲಿ ಶಂಕ್ವಾಕೃತಿಯ ಒಂದು ವಿಶೇಷ ರಚನೆ (P) ಇದೆ. ಇದಕ್ಕೆ ವಿರುದ್ಧ ದಿಕ್ಕಿನಲ್ಲಿ ಕೋಶದ ಬಾಯಿ (O) ಇದೆ: ರಂಧ್ರದ ಹೊರಗಿನಿಂದ ನೇರವಾಗಿ ಬೀಳುವ ವಿಸರಣೆಯನ್ನು P ಯಿಂದ ತಡೆಯುವುದು ಸಾಧ್ಯವಾಗುತ್ತದೆ. O ಮೂಲಕ ಪ್ರವೇಶಿಸಿದ ಯಾವುದೇ ವಿಸರಣ Cಯ ಒಳಮೈ ಮೇಲೆ ಬಿದ್ದು ಹಲವು ಸಲ ಪ್ರತಿಫಲನಗೊಳ್ಳುವುದು ಸಾಧ್ಯ. ಹೀಗಾದ ತರುವಾಯ ಮತ್ತೆ C ಗೆ ಬರುವಲ್ಲಿ ಆ ವಿಸರಣೆ ತನ್ನ ಶಕ್ತಿಯನ್ನು ಬಹಳವಾಗಿ ಕಳೆದುಕೊಂಡಿರುತ್ತದೆ. ಆದರೆ Cಯ ಒಳಮೈಯನ್ನು ಕಪ್ಪುಲೇಪನ ಮಾಡಿರುವುದರಿಂದ ಒಳಹೊಕ್ಕ ವಿಸರಣೆ ಒಂದು ಸಲ ಪ್ರತಿಫಲನಗೊಳ್ಳುವಲ್ಲಿಯೇ ಅದು ಪೂರ್ಣವಾಗಿ ಕಪ್ಪುಲೇಪನದಿಂದ ಹೀರಲ್ಪಡುತ್ತದೆ. ಹೀಗೆ ಕೋಶದ ರಂಧ್ರ ಕಪ್ಪುವಸ್ತುವಾಗಿ ವರ್ತಿಸುತ್ತದೆ. ಇದರ ಒಳಗಡೆ ಇಟ್ಟ ಒಂದು ಕನ್ನಡಿಯೂ ಕಪ್ಪುವಸ್ತುವಾಗುತ್ತದೆ.

ಕಪ್ಪುವಸ್ತುವಿನ ವಿಸರಣದ ಅಧ್ಯಯನದಿಂದಾಗಿ ಬೆಳಕಿನ ಪ್ರಭಾಣುತತ್ತ್ವಕ್ಕೂ ಶಕಲ ಬಲವಿಜ್ಞಾನಕ್ಕೂ ಹೆಚ್ಚಿನ ಪುಷ್ಟಿ ದೊರೆತಿದೆ. ಪ್ಲಾಂಕನ ನಿಯಂತಾಕ ಸ್ಥಿರಪಟ್ಟಿದೆ. (ಬಿ.ಎಸ್.ಎಂ.)

**ಕಪ್ಪು ಸಮುದ್ರ :** ಉತ್ತರ ಮತ್ತು ಪೂರ್ವಗಳಲ್ಲಿ ರಷ್ಯದಿಂದಲೂ ಪಶ್ಚಿಮದಲ್ಲಿ ರೂಮೇನಿಯ ಮತ್ತು ಬಲ್ಗೇರಿಯಗಳಿಂದಲೂ ದಕ್ಷಿಣ ಮತ್ತು ನೈಋತ್ಯಗಳಲ್ಲಿ ತುರ್ಕಿಯಿಂದಲೂ ಆವೃತವಾದ ಭೂಮಧ್ಯ ಸಮುದ್ರ. ಬಾಸ್ಪೊರಸ್ ಜಲಸಂಧಿಯ ಮೂಲಕವಾಗಿ ಮಾರ್ಮರ ಸಮುದ್ರಕ್ಕೂ ಡಾರ್ಡನಲ್ಸ್ ಮೂಲಕವಾಗಿ ಮೆಡಿಟರೇನಿಯನ್ ಸಮುದ್ರದ ಏಜಿಯನ್ ಶಾಖೆಗೂ ಸಂಬಂಧವಿದೆ. ಈಶಾನ್ಯದ ಅಜ಼ಾಫ್ ಸಮುದ್ರಕ್ಕೂ ಇದಕ್ಕೂ ನಡುವೆ ಕೆರ್ಚ್ ಜಲಸಂಧಿಯಿದೆ.

630 ಮೈಲಿ ಉದ್ದವಾಗಿಯೂ 330 ಮೈಲಿ ಪರಮಾವಧಿ ಅಗಲವಾಗಿಯೂ ಇರುವ ಈ ಸಮುದ್ರದ ವಿಸ್ತಾರ 1,80,000 ಚ.ಮೈ. ಇದರ ತಳ ಉತ್ತರದಿಂದ ದಕ್ಷಿಣಕ್ಕೆ ಇಳಿಜಾರಾಗಿದೆ. ಕ್ರಿಮಿಯದ ಪಶ್ಚಿಮಕ್ಕೆ ಇದರ ಆಳ 500 ಅಡಿಗಳಿಗಿಂತ ಹೆಚ್ಚಿಲ್ಲ. ಇದರ ಹೆಚ್ಚಿನ ಭಾಗ 150 ಅಡಿಗಳಿಗಿಂತ ಕಡಿಮೆಯೆಂದೇ ಹೇಳಬಹುದು. ಕ್ರಿಮಿಯದ ದಕ್ಷಿಣದಲ್ಲಿ ಇದರ ಆಳ ಶೀಘ್ರವಾಗಿ ಹೆಚ್ಚಿ 5,000 ಅಡಿಗಳಾಗಿ ಅನಟೋಲಿಯ ತೀರದ ಸಿನಾಪಿನ ವಾಯುವ್ಯದಲ್ಲಿ 7,000 ಅಡಿಗಳಿಗೂ ಹೆಚ್ಚು ಆಳವಾಗಿರುತ್ತದೆ. ಇದು ಪರಮಾವಧಿ.

ಪ್ರಾಚೀನ ಭೂಯುಗದಲ್ಲಿ ಕಪ್ಪು ಸಮುದ್ರ ರೂಪಗೊಂಡಿತು. ಮೆಡಿಟರೇನಿಯನ್ ಸಮುದ್ರದೊಂದಿಗೆ ಇದರ ಸಂಪರ್ಕವೇರ್ಪಟ್ಟಿತು. ಅದಕ್ಕೆ ಮೊದಲು ಇದೊಂದು ಆಳವಾದ ಉಪ್ಪುಸರೋವರವಾಗಿತ್ತು. ಆಗ ನೀರಿನ ಮಟ್ಟ ಏರಿ ಉತ್ತರದ ತೀರದ ತಗ್ಗುನೆಲವನ್ನೆಲ್ಲ ಆವರಿಸಿ, ನದಿಗಳ ಮುಖಗಳನ್ನೆಲ್ಲ ಮುಳುಗಿಸಿತು. ಡ್ಯಾನ್ಯೂಬ್, ನೀಪರ್ ಮುಂತಾದ ನದಿಗಳಿಂದ ಅಗಾಧ ಜಲರಾಶಿ ಇದಕ್ಕೆ ಬಂದು ಸೇರುವುದರಿಂದ ಇದರ ಮೇಲ್ಭಾಗ ಸಾಪೇಕ್ಷವಾಗಿ ಹೆಚ್ಚು ಸಿಹಿಯಾಗಿದ್ದರೂ 650 ಅಡಿಗಳ ಕೆಳಗಣ ಭಾಗ ನಿಂತ ನೀರಿನಿಂದ ಕೂಡಿರುತ್ತದೆ. ಹೈಡ್ರೊಜನ್ ಸಲ್ಫೈಡ್ ಅಧಿಕವಾಗಿರುವುದಕ್ಕೂ ಆಳದಲ್ಲಿ ವಾಸಿಸುವಂಥ ಜೀವರಾಶಿ ಇಲ್ಲದಿರುವುದಕ್ಕೂ ಇದು ಕಾರಣ. ಪ್ರವಾಹದ ದಿಕ್ಕು ಅಪ್ರದಕ್ಷಿಣೆ. ಮೇಲಣ ನೀರು ಬಾಸ್ಪೊರಸ್ ಮೂಲಕ ಹರಿದು ಹೋಗುತ್ತದೆ. 65 ಅಡಿಗಳ ಕೆಳಗೆ ಮೆಡಿಟರೇನಿಯನ್ ನೀರು ಒಳಬರುತ್ತದೆ. ಇಲ್ಲಿ ಉಬ್ಬರಗಳಿಲ್ಲ. ಆದರೆ ಬಿರುಗಾಳಿ ಅನಿರೀಕ್ಷಿತವಾಗಿ ಪದೇ ಪದೇ ಸಂಭವಿಸಿ ನೀರಿನ ಮಟ್ಟದ ಏರಿಕೆಗೆ ಕಾರಣವಾಗುತ್ತದೆ.

ಕಪ್ಪು ಸಮುದ್ರದ ತೀರಪ್ರದೇಶದಲ್ಲಿ ಭಿನ್ನತೆಗಳುಂಟು. ಪಶ್ಚಿಮದಲ್ಲಿ, ರುಮೇಲಿ ಭೂಶಿರದಿಂದ ಕಲಿಯಾಕ್ರ ಭೂಶಿರದ ವರೆಗೆ, ಸಮುದ್ರದ ಸುತ್ತಣಭಾಗ ಸ್ವಲ್ಪ ಎತ್ತರವಾಗಿದೆ. ಅದರ ಹಿಂದೆ ಭವ್ಯವಾದ ಪರ್ವತ ಶ್ರೇಣಿಗಳುಂಟು. ವಾಯುವ್ಯ ಮತ್ತು ಉತ್ತರ ಭಾಗಗಳಲ್ಲಿ ತೀರಪ್ರದೇಶ ತಗ್ಗು, ವಿಸ್ತಾರವಾಗಿಯೂ ಕಡಿದಾಗಿಯೂ ಇರುವ ಮುಮ್ಮೈಯುಳ್ಳ ಅನೇಕ ದಿಣ್ಣೆಗಳು ರಷ್ಯದ ಬಂದರಾದ ಒಡೆಸ್ಸಕ್ಕೆ ಒಂದು ಆಕರ್ಷಣೀಯವಾದ ಆವರಣವನ್ನು ಒದಗಿಸಿಕೊಟ್ಟಿವೆ. ನದಿಗಳ ಬಾಯಿಗಳಲ್ಲಿ ಹೆಚ್ಚಿನ ಪ್ರಮಾಣದಲ್ಲಿ ಮೆಕ್ಕಲು ಮಣ್ಣು ಶೇಖರಣೆಯಾಗುವುದರಿಂದ ಸಮುದ್ರಯಾನ ಕಷ್ಟಕರ. ಡ್ಯಾನ್ಯೂಬ್ ನದಿಯ ಮುಖಜಭೂಮಿ ವಿಸ್ತಾರವಾಗಿದೆ. ಅದು ಮರಳು ರಾಶಿಯನ್ನೇ ನಿರ್ಮಿಸಿದೆ. ತೀರದ ಬಳಿ ಆಳವೂ ಲವಣತ್ವವೂ ಕಡಿಮೆಯಾಗಿರುವುದರಿಂದ ಚಳಿಗಾಲದಲ್ಲಿ ಸಾಮಾನ್ಯವಾಗಿ ನೀರು ಗಡ್ಡೆಕಟ್ಟುವುದುಂಟು. ಅಜ಼ಾಫ್ ಸಮುದ್ರ ಮೂರು ತಿಂಗಳ ಕಾಲ ಗಡ್ಡೆಕಟ್ಟಿರುತ್ತದೆ. ಕ್ರಿಮಿಯದ ದಕ್ಷಿಣದ ತೀರಕ್ಕೆ ಸಮಾನಾಂತರವಾಗಿ ಪರ್ವತಗಳುಂಟು. ಕೆಲವು ಕಡೆಗಳಲ್ಲಿ (ಉದಾ : ಮಾಲ್ಟ) ಸಣ್ಣ ಆಳ ಕೊಲ್ಲಿಗಳಿವೆ. ಕ್ರಿಮಿಯ ಪರ್ಯಾಯದ್ವೀಪಕ್ಕೆ ಪಶ್ಚಿಮದಲ್ಲಿರುವ ಸೆವಾಸ್ಟಪೋಲ್ ಬಂದರು ಎಲ್ಲ ದೃಷ್ಟಿಗಳಿಂದಲೂ ಬಲು ಪ್ರಶಸ್ತವಾದದ್ದು.

ಕಪ್ಪುಸಮುದ್ರದ ಪೂರ್ವದ ಕಡೆಗೆ ಕಾಕಸಸ್ ಪರ್ವತಗಳು ಎದ್ದು ನಿಂತಿವೆ. ಕೆಲವು ಶ್ರೇಣಿಗಳು ಸಮುದ್ರದ ವರೆಗೂ ಬಂದಿರುವುದುಂಟು. ತೀರ ಪ್ರದೇಶ ನೇರವಾಗಿದೆ. ಉತ್ತರದಲ್ಲಿ ನವರೊಸಿಕ್ ಒಂದು ದೊಡ್ಡ ಹಡಗುನಿಲ್ದಾಣ. ಅನಟೋಲಿಯದ ತೀರದಲ್ಲೂ ಒಳ್ಳೆಯ ಬಂದರುಗಳಿಲ್ಲ. ಉತ್ತರದಿಂದ ಬೀಸುವ ಗಾಳಿಗೆ ಎದುರಾಗಿರುವುದರಿಂದ ಅಲ್ಲಿ ಸಮುದ್ರಯಾನ ಕಷ್ಟಕರ.

ಈ ಸಮುದ್ರಕ್ಕೆ ಕಪ್ಪು ಸಮುದ್ರವೆಂದು ನಾಮಕರಣ ಮಾಡಿದವರು ತುರ್ಕರು. ಚಂಡಮಾರುತದಿಂದ ಅಲ್ಲೋಲಕಲ್ಲೋಲವಾಗುತ್ತಿದ್ದ ಸಮುದ್ರವನ್ನು ನೋಡಿ ಹೆದರಿ ಅವರು ಇದಕ್ಕೆ ಆ ಹೆಸರಿಟ್ಟರು. ಇದೊಂದು ಕಪ್ಪಾದ ಅನುಭವವಾದ್ದರಿಂದ ಇದು ಕಪ್ಪು ಸಮುದ್ರ ಆಯಿತು. ಕ್ರಿ.ಪೂ. ಏಳು ಶತಮಾನಗಳ ಹಿಂದೆ ಗ್ರೀಕರು ದಕ್ಷಿಣ ತೀರ ಪ್ರದೇಶದಲ್ಲಿ ತಮ್ಮ ವ್ಯಾಪಾರ ಕೋಠಿಗಳನ್ನು ಕಟ್ಟಿಕೊಂಡು ಏಜಿಯನ ದ್ವೀಪಗಳೊಡನೆ ವ್ಯಾಪಾರ ನಡೆಸುತ್ತಿದ್ದರು. ಕೆರ್ಚ್ ಜಲಸಂಧಿಯಲ್ಲಿ ಅವರು ವಸಾಹತುಗಳನ್ನು ಸ್ಥಾಪಿಸಿ, ಅಜ಼ಾಫ್ ಪ್ರದೇಶದ ವ್ಯಾಪಾರವೆಲ್ಲವನ್ನೂ ತಮ್ಮ ಹತೋಟಿಯಲ್ಲಿಟ್ಟುಕೊಂಡಿದ್ದರು.

ಕ್ರಿ.ಶ. 330ರಲ್ಲಿ ಕಾನ್‌ಸ್ಟಾಂಟಿನೋಪಲನ್ನು ಸ್ಥಾಪಿಸಲಾಯಿತು. ಇದರಿಂದ ಕಪ್ಪು ಸಮುದ್ರದ ಪ್ರಾಮುಖ್ಯ ಹೆಚ್ಚಿತು. 8ನೆಯ ಶತಮಾನದಿಂದ 10ನೆಯ ಶತಮಾನದ ವರೆಗೆ ತುರ್ಕರ ಬುಡಕಟ್ಟಿಗೆ ಸೇರಿದ ಖಾಜ಼ರರಿಗೂ ಬಿಜ಼ಾಂಟಿಯಂಗೂ ವ್ಯಾಪಾರ ಬೆಳೆಯಿತು. ಕ್ರಿ.ಶ. 907ರಲ್ಲಿ ಕೀವ್ ದೇಶದ ದೊರೆ ಕಾನ್‌ಸ್ಟಾಂಟಿನೋಪಲಿನ ಮೇಲೆ ಆಕ್ರಮಣ ನಡೆಸಲಾಗಿ ಬಿಜ಼ಾಂಟಿಯಂಗೂ ಕೀವ್‌ಗೂ ವಾಣಿಜ್ಯ ಕೌಲು ಏರ್ಪಟ್ಟಿತು. ಆದರೆ ಕಪ್ಪು ಸಮುದ್ರದ ವ್ಯಾಪಾರವನ್ನು ಕೀವ್ ತನ್ನ ಹತೋಟಿಯಲ್ಲಿಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. 11ನೆಯ ಶತಮಾನದಲ್ಲಿ ಸೆಲ್ಜುಕ್ ತುರ್ಕರು ಮತ್ತೆ ಕಪ್ಪು ಸಮುದ್ರದ ಆಗ್ನೇಯ ತೀರದ ಮೇಲೆ ದಾಳಿಯಿಟ್ಟು ಆ ಪ್ರದೇಶದ ಜನರನ್ನು ಹಿಂಸಿಸಿದರು. 1453ರಲ್ಲಿ ಆಟೋಮನ್ ತುರ್ಕರು ಕಾನ್‌ಸ್ಟಾಂಟಿನೋಪಲ್‌ನ್ನು ವಶಪಡಿಸಿಕೊಂಡಾಗ ಹೊಸ ಯುಗದ ಪ್ರಾರಂಭವಾಯಿತು. ಅಲ್ಲಿಂದ ಮುಂದೆ ಅದು ತುರ್ಕಿ ಸರೋವರವೆಂದು ಪರಿಗಣಿತವಾಯಿತು. ಇಟಾಲಿಯನರ ಮತ್ತು ಫ್ರೆಂಚರ ಕೈಯಲ್ಲೂ ಅನಂತದಲ್ಲಿ ಇಂಗ್ಲಿಷರ ಕೈಯಲ್ಲೂ ಇಲ್ಲಿಯ ವ್ಯಾಪಾರವಿತ್ತು.

ಮಸ್ಕೋವಿ ರಾಜ್ಯ ಬೆಳೆದಾಗ, ರಷ್ಯದ ಪೀಟರ್ ಮಹಾಶಯ ಕಪ್ಪು ಸಮುದ್ರದ ಮೇಲೆ ಕಣ್ಣಿಟ್ಟ. ತುರ್ಕರ ದಾಳಿಯಿಂದ ತನ್ನ ದೇಶದ ವ್ಯಾಪಾರ ಹಿತಾಸಕ್ತಿಗಳನ್ನು ರಕ್ಷಿಸಲು ಪ್ರಬಲವಾದ ನೌಕಾಪಡೆ ಕಟ್ಟಿದ. ಕ್ರಿಮಿಯದಲ್ಲಿ ಆಳುತ್ತಿದ್ದ ಮಂಗೋಲ್ ವಿರುದ್ಧ ದಾಳಿ ಮಾಡಲು ಅಜ಼ಾಫ್ ಸಮುದ್ರದಲ್ಲಿ ತೋಪುಖಾನೆಗಳನ್ನು ನಿರ್ಮಿಸಲಾಯಿತು. ಕಪ್ಪುಸಮುದ್ರದಿಂದ ಮೆಡಿಟರೇನಿಯನ್ ಸಮುದ್ರಕ್ಕೆ ಸಂಬಂಧ ಕಲ್ಪಿಸುವ ಜಲಸಂಧಿಗಳ ಮೇಲೆ ಹತೋಟಿಗಾಗಿ ರಷ್ಯನರಿಗೂ

ಆಟೋಮನ್ ಸಾಮ್ರಾಜ್ಯಕ್ಕೂ ಯುದ್ಧಗಳು ಜರುಗುತ್ತಲೇ ಇದ್ದುವು. ರಷ್ಯ ಕ್ರಮೇಣ ಸುತ್ತಮುತ್ತಣ ನೆಲವನ್ನು ಆಕ್ರಮಿಸಿಕೊಂಡಿತು.

ಆರ್ಥಿಕ ಅಭಿವೃದ್ಧಿಯಾದಂತೆ ಬಂದರುಗಳು ಬೆಳೆದುವು. ನಿಕಲಯೆಫ್, ಒಡೆಸ್ಸ, ಸೆವಾಸ್ಟಪೋಲ್ ನೌಕಾ ನೆಲೆ—ಇವೆಲ್ಲ ನಿರ್ಮಿತವಾದುವು. 18ನೆಯ ಮತ್ತು 19ನೆಯ ಶತಮಾನಗಳಲ್ಲಿ ಬೆಸರೇಬಿಯದ ನೈಋತ್ಯಕ್ಕೆ ಆಟೊಮನ್ ಪ್ರಭಾವ ತಗ್ಗಿತು. ಸ್ವತಂತ್ರ ರೂಮೇನಿಯ ಬಲ್ಗೇರಿಯಗಳು ಜನ್ಮ ತಳೆದುವು. ಕ್ರಿಮಿಯನ್ ಯುದ್ಧವನ್ನು ಕೊನೆಗೊಳಿಸುವ ಪ್ಯಾರಿಸ್ ಕೌಲು (1856) ಆದಾಗ ಕಪ್ಪುಸಮುದ್ರದಲ್ಲಿ ರಷ್ಯದ ಪ್ರಭಾವಕ್ಕೆ ಕುಂದುಂಟಾಯಿತು. ಆದರೆ 1870ರಲ್ಲಿ ರಷ್ಯ ಈ ನಿರ್ಬಂಧಗಳನ್ನು ಕಿತ್ತೊಗೆದಂದಿನಿಂದ 1914ರ ವರೆಗೂ ಅದು ಕಪ್ಪು ಸಮುದ್ರದಲ್ಲಿ ತನ್ನ ಚಟುವಟಿಕೆ ಬೆಳೆಸಿಕೊಳ್ಳಲು ಯಾವ ತಡೆಯೂ ಇರಲಿಲ್ಲ. ಸೋವಿಯತ್ ದೇಶಕ್ಕೆ ಕಪ್ಪು ಸಮುದ್ರದಿಂದ ಸರ್ವಋತುಗಳಲ್ಲೂ ಸಾಗರ ಸಂಬಂಧವೇರ್ಪಟ್ಟಿದೆ. ಅಪ್ಪರಿಂದ ಅದಕ್ಕೆ ಈ ಸಮುದ್ರ ಬಲು ಮುಖ್ಯ. ಬಟೂಂ ಮತ್ತು ನಾವರಸ್ಸೀಸ್ಕ್ ಗಳಿಂದ ತೈಲವೂ ಪಾಟಿಯಿಂದ ಮ್ಯಾಂಗನೀಸೂ ಜ್ಡನಫ್‌ನಿಂದ ಕಲ್ಲಿದ್ದಲೂ ಕೆರ್ಚಿನಿಂದ ಕಬ್ಬಿಣದ ಅದುರೂ ನಾವರಸ್ಸೀಸ್ಕ್‌ನಿಂದ ಸಿಮೆಂಟೂ ಒಡೆಸ್ಸ, ನ್ಯಿಕಲಯೆಫ್, ಕೆರ್ಸನ್ ಮತ್ತು ನಾವರಸ್ಸೀಸ್ಕ್‌ಗಳಿಂದ ಧಾನ್ಯವೂ ಸಾಗುತ್ತವೆ.

ಸಿನಾಪ್ ಮತ್ತು ಟ್ರಾಬ್‌ಜ಼ಾನ್‌ಗಳು ಹಿಂದೆ ತುರ್ಕಿಯ ಪ್ರಮುಖ ಬಂದರುಗಳಾಗಿದ್ದುವು. ಈಗ ಪಶ್ಚಿಮದ ಜಾಂಗುಲ್ಡಾಕ್ ಮುಖ್ಯ. ರೂಮೇನಿಯದ ಕಾನ್‌ಸ್ಟಾಂಟ್ ಮತ್ತು ಬಲ್ಗೇರಿಯದ ವಾರ್ನಾ ಮತ್ತು ಬುರ್ಗಾಸ್‌ಗಳು ಸ್ಥಳೀಯ ಪ್ರಾಮುಖ್ಯ ಪಡೆದಿವೆ. (ಬಿ.ಎಂ.)

**ಕಪ್ಪೆ :** ಕಶೇರುಕಗಳ ಗುಂಪಿನ ದ್ವಿಚರವರ್ಗದ (ಆಂಫಿಬಿಯ) ಎನ್ಯೂರ ಗಣಕ್ಕೆ ಸೇರಿದ ಪ್ರಾಣಿ. ಸಾಮಾನ್ಯವಾಗಿ ಬಾಲವಿಲ್ಲದ ದ್ವಿಚರಿಗಳಿಗೆಲ್ಲ ಈ ಹೆಸರು ಅನ್ವಯವಾಗುತ್ತದೆ. ಇವುಗಳ ವರ್ಗದ ಹೆಸರೇ ಸೂಚಿಸುವಂತೆ ಕಪ್ಪೆಗಳು ನೀರಿನಲ್ಲೂ ನೆಲದ ಮೇಲೂ ಜೀವಿಸಬಲ್ಲುವು. ಇಂಥ ಜೀವನಕ್ಕೆ ತಕ್ಕಂತೆ ದೇಹದ ಮಾರ್ಪಾಟುಗಳನ್ನೂ ಹೊಂದಿವೆ. ಕಪ್ಪೆಗಳಲ್ಲಿ ಹಲವಾರು ವಿಧಗಳಿವೆ. ಇವುಗಳಲ್ಲಿ ನೀರಿನಲ್ಲಿ ವಾಸಿಸುವ ಕಪ್ಪೆ (ಫ್ರಾಗ್), ನೆಲಗಪ್ಪೆ (ಟೋಡ್) ಮತ್ತು ಹಾರುಗಪ್ಪೆ (ಫ್ಲ್ಯೆಯಿಂಗ್ ಫ್ರಾಗ್) ಮುಖ್ಯವಾದುವು. ಸಾಧಾರಣವಾಗಿ ನೀರಿನಲ್ಲಿ ವಾಸಿಸುವ ಕಪ್ಪೆಗಳು ತಮ್ಮ ಬದುಕನ್ನು ಸಂಪೂರ್ಣವಾಗಿ ನೀರಿನಲ್ಲೇ ಸಾಗಿಸುತ್ತವೆ. ಇವುಗಳ ಚರ್ಮ ನುಣುಪಾಗಿದ್ದು ಲೋಳೆಯಿಂದ ಆವೃತವಾಗಿರುತ್ತದೆ. ಅಲ್ಲದೆ ಇವುಗಳ ಭುಜಕಟ್ಟಿನ (ಶೋಲ್ಡರ್ ಗರ್ಡಲ್) ಎರಡು ಭಾಗಗಳು ಕೂಡಿಕೊಂಡು ಒಂದು ದೃಢವಾದ ಪಟ್ಟಿಯಾಗಿವೆ. ನೆಲಗಪ್ಪೆಗಳು ನೀರಿನಲ್ಲೇ ಜನ್ಮ ತಾಳುವುವಾದರೂ ಪ್ರೌಢಾವಸ್ಥೆಯನ್ನು ನೆಲದ ಮೇಲೆ ಕಳೆಯುತ್ತವೆ. ಮೊಟ್ಟೆಯಿಡಲು ಮಾತ್ರ ಅವು ನೀರಿಗೆ ಹೋಗುತ್ತವೆ. ಇವುಗಳ ಚರ್ಮ ಒರಟು ಹಾಗೂ ಒಣಗಿರುತ್ತದೆಯಲ್ಲದೆ ಅದರ ಮೇಲೆಲ್ಲ ಬುಗುಟುಗಳಿವೆ. ಇವುಗಳಲ್ಲಿ ಭುಜಕಟ್ಟಿನ ಎರಡು ಭಾಗಗಳು ಕೂಡಿಕೊಂಡಿರದೆ ಒಂದರ ಮೇಲೊಂದು ಚಾಚಿಕೊಂಡಿವೆ. ಹಾರುಗಪ್ಪೆ ನೀರಿನಲ್ಲಿ ವಾಸಿಸುವ ಕಪ್ಪೆಯಂತೆಯೇ ಇದೆ. ಆದರೆ ಅದಕ್ಕಿಂತ ಗಾತ್ರದಲ್ಲಿ ಚಿಕ್ಕದು. ಕೈಕಾಲುಗಳ ಬೆರಳುಗಳ ಮಧ್ಯೆ ರೆಕ್ಕೆಯಂತೆ ಹರಡಿರುವ ಜಾಲಪಾದವಿದೆ. ಮರದಿಂದ ಮರಕ್ಕೆ ಹಾರುವಾಗ ಈ ಜಾಲಪಾದವನ್ನು ಪ್ಯಾರಾಚೂಟಿನಂತೆ ಬಳಸಿಕೊಳ್ಳಬಲ್ಲುದು.

ಕಪ್ಪೆ ಸಾಮಾನ್ಯವಾಗಿ ಕೆರೆ, ಕುಂಟೆ, ಸಣ್ಣತೊರೆಗಳು ಮತ್ತಿತರ ತೇವಪೂರಿತ ಸ್ಥಳಗಳಲ್ಲಿ ವಾಸಿಸುತ್ತದೆ. ಸಣ್ಣಪುಟ್ಟ ಹುಳುಗಳು, ಬಸವನ ಹುಳುಗಳು ಮತ್ತು ಕೀಟಗಳು ಇದರ ಪ್ರಧಾನ ಆಹಾರ. ಹೀಗೆ ಇಂಥ ಪ್ರಾಣಿಗಳನ್ನು ತಿಂದು ನಾಶಪಡಿಸುವುದರಿಂದ ರೈತನಿಗೆ ಬಹಳ ಸಹಾಯಕವಾಗಿದೆ.

ಕಪ್ಪೆಯ ದೇಹವನ್ನು ತಲೆ, ಮುಂಡ ಮತ್ತು ಕೈಕಾಲುಗಳೆಂದು ವಿಭಾಗಿಸಬಹುದು. ತಲೆ ಚಪ್ಪಟೆಯಾಗಿಯೂ ತ್ರಿಕೋಣಾಕಾರವಾಗಿಯೂ ಇದೆ. ಮೂತಿಯ ತುದಿಯಲ್ಲಿ ಒಂದು ಅಗಲವಾದ ಬಾಯಿಯೂ ಕೊಂಚ ಮೇಲ್ಭಾಗದಲ್ಲಿ ಒಂದು ಜೊತೆ ಹೊರನಾಸಿಕ ರಂಧ್ರಗಳೂ ಇವೆ. ಸ್ವಲ್ಪ ಹಿಂದಕ್ಕೆ ಎರಡು ದೊಡ್ಡ ಉಬ್ಬಿಕೊಂಡ ಕಣ್ಣುಗಳಿವೆ. ಕಣ್ಣುಗಳಿಗೆ ಮನುಷ್ಯರಲ್ಲಿರುವಂತೆಯೇ ಎರಡು ಸಾಮಾನ್ಯ ರೆಪ್ಪೆಗಳೂ ಪಾರದರ್ಶಕವಾದ ನಿಮೇಷಕ ಪಟಲ (ನಿಕ್ಟಿಟೇಟಿಂಗ್ ಮೆಂಬ್ರೇನ್) ಎಂಬ ಮೂರನೆಯ ರೆಪ್ಪೆಯೂ ಇವೆ. ಕಣ್ಣುಗಳ ಹಿಂಬದಿಯಲ್ಲಿ ದುಂಡಾದ ಕಿವಿಯ ತಮಟೆಗಳಿವೆ. ತಲೆಗೂ ಮುಂಡಕ್ಕೂ ನಡುವೆ ಸ್ಪಷ್ಟವಾದ ಕುತ್ತಿಗೆಯಿಲ್ಲ. ಮುಂಡಭಾಗ ಹೆಚ್ಚು ಕಡಿಮೆ ಕೊಳವೆಯಾಕಾರವಾಗಿದ್ದು ಎರಡು ಜೊತೆ ಕಾಲುಗಳನ್ನು ಹೊಂದಿದೆ. ಮುಂಡದ ಹಿಂತುದಿಯಲ್ಲಿ ಹಿಂಗಾಲುಗಳ ನಡುವೆ ಮಲ, ಮೂತ್ರ ಹಾಗೂ ಜನನೇಂದ್ರಿಯ ದ್ವಾರವಾದ ಕ್ಲೋಯಕ ಎಂಬ ರಂಧ್ರವಿದೆ. ಮುಂಗಾಲಿನಲ್ಲಿ ನಾಲ್ಕು ಬೆರಳುಗಳೂ ಹಿಂಗಾಲಿನಲ್ಲಿ ಐದು ಬೆರಳುಗಳೂ ಇವೆ. ಹಿಂಗಾಲುಗಳು ಮುಂಗಾಲುಗಳಿಗಿಂತ ಬಹಳ ಉದ್ದ. ಎಲ್ಲ ಬೆರಳುಗಳ ನಡುವೆ ಜಾಲಪಾದವಿದೆ. ಇದು ಈಜುವುದಕ್ಕೆ ಸಹಕಾರಿ. ಗಂಡು ಕಪ್ಪೆಯಲ್ಲಿ ದವಡೆಗಳ ಬಳಿ ಎರಡೂ ಪಕ್ಕಗಳಲ್ಲಿ ಬಾಯಿ ಅಂಗಳದೊಳಕ್ಕೆ ತೆರೆಯುವಂಥ ಎರಡು ಧ್ವನಿಚೀಲಗಳಿವೆ. ಕಪ್ಪೆಯ ವಿಚಿತ್ರವಾದ ಹಾಗೂ ವಿಶಿಷ್ಟವಾದ ವಟಗುಟ್ಟುವ ಶಬ್ದವನ್ನು ವರ್ಧಿಸಲು ಇವು ಸಹಕಾರಿಯಾಗಿವೆ.



ನೀರಿನಲ್ಲಿ ವಾಸಿಸುವ ಕಪ್ಪೆಯ ಮೊಟ್ಟೆಗಳು

ಕಶೇರುಕಗಳ ರಚನೆಯ ಅಭ್ಯಾಸಕ್ಕೆ ಇದು ಸರಳವಾದ ಮತ್ತು ಮೂಲರಚನೆಯನ್ನು ತೋರುವ ಮಾದರಿಯಾದುದರಿಂದ ಕಶೇರುಕಗಳ ಅಭ್ಯಾಸವನ್ನು ಕಪ್ಪೆಯಿಂದಲೇ ಆರಂಭಿಸುತ್ತಾರೆ.

ಮನುಷ್ಯದೇಹದಲ್ಲಿರುವಂತೆಯೇ ಕಪ್ಪೆಯಲ್ಲಿಯೂ ಚೆನ್ನಾಗಿ ರೂಪುಗೊಂಡ ಅಸ್ಥಿಪಂಜರವಿದೆ. ಇದನ್ನು ಮುಖ್ಯವಾಗಿ ಅಕ್ಷೀಯ ಅಸ್ಥಿಪಂಜರ, ಅನುಬಂಧಿ ಅಸ್ಥಿಪಂಜರ ಮತ್ತು ಅವಯುವಭಾಗ ಎಂದು ವಿಭಾಗಿಸಬಹುದು. ಅಕ್ಷೀಯ ಭಾಗದಲ್ಲಿ ಒಂಬತ್ತು ಕಶೇರುಖಂಡವನ್ನೊಳಗೊಂಡ ಬೆನ್ನುಮೂಳೆಯೂ ಭಾಗಶಃ ಮೂಳೆ ಮತ್ತು ಭಾಗಶಃ ಮೃದ್ವಸ್ಥಿಯಿಂದಾದ ತಲೆಬುರುಡೆಯೂ ಇವೆ. ಬೆನ್ನುಮೂಳೆಯ ಹಿಂತುದಿಯಲ್ಲಿ ಅಪರಷ್ಟೇ ಉದ್ದವಾದ ಯುರೋಸ್ಟೈಲ್ ಎಂಬ ಕಡ್ಡಿಯಂಥ ಭಾಗವಿದೆ. ತಲೆಬುರುಡೆಯಲ್ಲಿ ಹಲವಾರು ಎಲುಬುಗಳಿಂದಾದ ಮಿದುಳುಪೆಟ್ಟಿಗೆ, ಮೇಲಿನ ಹಾಗೂ ಕೆಳಗಿನ ದವಡೆಗಳು ಮತ್ತು ಹೈಯಾಯಿಡ್ ಉಪಕರಣವೆಂಬ ವಿಶೇಷ ರೀತಿಯ ಭಾಗವೂ ಇವೆ. ಈ ಉಪಕರಣ ಕಪ್ಪೆಮರಿಯಲ್ಲಿ ಕಿವಿರುಗಳಿಗೆ ಆಧಾರವಾಗಿರುತ್ತದೆ. ಅನುಬಂಧಿ ಅಸ್ಥಿಪಂಜರದಲ್ಲಿ ಹಲವಾರು ಎಲುಬುಗಳಿಂದಾದ ಭುಜಾಸ್ಥಿ ವಲಯವೂ V–ಆಕಾರದ ಕಟ್ಯಸ್ಥಿವಲಯವೂ ಇವೆ. ಭುಜಾಸ್ಥಿವಲಯಕ್ಕೆ ಮುಂಗಾಲುಗಳ ಆಧಾರಮೂಳೆಗಳೂ ಕಟ್ಯಸ್ಥಿವಲಯಕ್ಕೆ ಹಿಂಗಾಲುಗಳ ಮೂಳೆಗಳೂ ಕೂಡಿಕೊಂಡಿವೆ. ಕಾಲುಗಳ ಮೂಳೆಗಳು ಹೆಚ್ಚು ಕಡಿಮೆ ಮನುಷ್ಯರಲ್ಲಿರುವಂತೆಯೇ ಇವೆ.

ಕಪ್ಪೆಯ ಜೀರ್ಣಾಂಗಗಳು ಮನುಷ್ಯರಲ್ಲಿರುವಂತೆಯೇ ಇವೆ. ಬಹಳ ದೊಡ್ಡ ಬಾಯಿ, ವಿಚಿತ್ರವಾದ ನಾಲಗೆ ಮತ್ತು ದೊಡ್ಡ ದವಡೆಗಳು—ಇವು ಕಪ್ಪೆಯ ವಿಶೇಷ ಲಕ್ಷಣಗಳು. ನಾಲಗೆ ಬಾಯಂಗಳದ ಮುಂಭಾಗದಲ್ಲಿ ಅಂಟಿಕೊಂಡು ಹಿಂದಕ್ಕೆ ಮಡಿಚಿಕೊಂಡಿದೆ. ಈ ನಾಲಗೆಯನ್ನು ಸಾಕಷ್ಟು ದೂರ ಚಾಚಿ, ಹಾರಾಡುವ ಕೀಟಗಳನ್ನು ಅರೆಕ್ಷಣದಲ್ಲಿ ಹಿಡಿದು ಬಾಯಿಗೆ ಹಾಕಿಕೊಳ್ಳಬಲ್ಲುದು. ನಾಲಗೆಯ ತುದಿ ಅಂಟಾಗಿರುವುದರಿಂದ ಕೀಟಗಳನ್ನು ಹಿಡಿಯುವುದು ಸುಲಭ. ದವಡೆಗಳಲ್ಲಿ ಹಲ್ಲುಗಳಿಲ್ಲ. ಆದ್ದರಿಂದ ತಿಂದ ಆಹಾರವನ್ನು ಅಗಿಯದೆ ಹಾಗೆಯೇ ಗಂಟಲಿನ ಮೂಲಕ ಜಠರಕ್ಕೆ ಸಾಗಿಸುತ್ತದೆ. ಅಲ್ಲಿಂದ ಆಹಾರ ಸಣ್ಣಕರುಳಿಗೂ

ಅನಂತರ ದೊಡ್ಡ ಕರುಳಿಗೂ ಸಾಗುತ್ತದೆ. ಪಚನಕ್ರಿಯೆಯಲ್ಲಿ ಸಹಾಯಕವಾಗಲು ಎರಡು ಹಾಲೆಗಳಿಂದಾದ ಯಕೃತ್ತೂ ಹಲವಾರು ಹಾಲೆಗಳುಳ್ಳ ಮೇದೋಜೀರಕವೂ ಇವೆ. ಎರಡರಿಂದ ಹೊರಡುವ ನಾಳಗಳು ಕೂಡಿಕೊಂಡು ದೊಡ್ಡ ಕರುಳಿನೊಳಕ್ಕೆ ತೆರೆಯುತ್ತವೆ. ಕರುಳಿನಿಂದ ಗುದನಾಳ ಹೊರಟು ಕ್ಲೋಯಕ ರಂಧ್ರದೊಡನೆ ಸಂಬಂಧ ಕಲ್ಪಿಸುತ್ತದೆ. ಪಚನಕ್ರಿಯೆ ಮನುಷ್ಯದೇಹದಲ್ಲಿ ನಡೆದಂತೆಯೇ ನಡೆಯುತ್ತದೆ.

ಕಪ್ಪೆಯಲ್ಲಿ ಉಸಿರಾಟ ಬಹುಪಾಲು ಶ್ವಾಸಕೋಶಗಳಿಂದಲೇ ನಡೆಯುತ್ತದೆ. ಶ್ವಾಸಾಂಗದಲ್ಲಿ ಬಾಯಂಗಳದಲ್ಲಿ ತೆರೆಯುವಂಥ ಗ್ಲಾಟಿಸ್ ಭಾಗವೂ ಲ್ಯಾರಿಂಗೊ–ಟ್ರೇಕಿಯಲ್ ಅವಕಾಶವೂ ಒಂದು ಜೊತೆ ಶ್ವಾಸಕೋಶಗಳೂ ಇವೆ. ಹೊರನಾಸಿಕ ರಂಧ್ರದಿಂದ ಬಾಯ ಅಂಗಳದೊಳಕ್ಕೆ ಗಾಳಿ ಬರುತ್ತದೆ. ಆಗ ಬಾಯಿ ಮುಚ್ಚಿಕೊಂಡು ಆ ಗಾಳಿ ಲ್ಯಾರಿಂಗೊ–ಟ್ರೇಕಿಯಲ್ ಕೊಳವೆಯ ಮೂಲಕ ಶ್ವಾಸಕೋಶದೊಳಕ್ಕೆ ಹೋಗುತ್ತದೆ. ಶ್ವಾಸಕೋಶದಲ್ಲಿ ಮನುಷ್ಯರಲ್ಲಿರುವಂತೆ ಅನೇಕ ಸೂಕ್ಷ್ಮ ಗಾಳಿಚೀಲಗಳಿದ್ದು ಅವು ಸೂಕ್ಷ್ಮ ರಕ್ತನಾಳಗಳಿಗೆ ಆಮ್ಲಜನಕವನ್ನು ಕೊಡುತ್ತವೆ. ರಕ್ತನಾಳಗಳಿಂದ ಇಂಗಾಲಾಮ್ಲ ಹೊರಬಿದ್ದು ಅಶುದ್ಧ ಗಾಳಿಯಾಗಿ ಬಂದ ದಾರಿಯಲ್ಲೆ ಹಿಂದಕ್ಕೆ ಬರುತ್ತದೆ. ಕಪ್ಪೆಯ ಚರ್ಮಕ್ಕೂ ಉಸಿರಾಟದ ಶಕ್ತಿಯಿದೆ. ಚರ್ಮದ ಕೆಳಗೆ ಅನೇಕ ಸೂಕ್ಷ್ಮ ರಕ್ತನಾಳಗಳಿದ್ದು ಅವು ನೇರವಾಗಿ ಹೊರಗಿನ ವಾತಾವರಣದಿಂದ ಆಮ್ಲಜನಕವನ್ನು ಹೀರಿಕೊಂಡು ಇಂಗಾಲಾಮ್ಲವನ್ನು ಬಿಟ್ಟುಕೊಡಬಲ್ಲವು. ಇದರಿಂದಾಗಿ ಕಪ್ಪೆ ನೀರಿನಲ್ಲಿ ಮುಳುಗಿದ್ದಾಗಲೂ ಚರ್ಮದ ಮೂಲಕ ಉಸಿರಾಡಬಲ್ಲುದು. ಕಪ್ಪೆಮರಿಗಳಲ್ಲಿ ಉಸಿರಾಟ ಕಿವಿರುಗಳ ಮೂಲಕ ನಡೆಯುತ್ತದೆ.

ಕಪ್ಪೆಯಲ್ಲಿ ರಕ್ತಪರಿಚಲನೆಗೆ ಸಂಬಂಧಿಸಿದಂತೆ ಹೃದಯ, ಅಪಧಮನಿ ಸಮೂಹ ಮತ್ತು ಅಭಿಧಮನಿ ಸಮೂಹ ಇವೆ. ರಕ್ತಪರಿಚಲನಾಕ್ರಮ ಮನುಷ್ಯರಲ್ಲಿರುವಂತೆ ಇದ್ದರೂ ಹಲವಾರು ಮುಖ್ಯ ವ್ಯತ್ಯಾಸಗಳನ್ನು ಇಲ್ಲಿ ಕಾಣಬಹುದು. ಕಪ್ಪೆಯ ಹೃದಯದಲ್ಲಿ ಮೇಲ್ಭಾಗದಲ್ಲಿ ಎರಡು ಕೋಣೆಗಳೂ (ಆರಿಕಲ್ಸ್) ಕೆಳಭಾಗದಲ್ಲಿ ಒಂದೇ ಕೋಣೆಯೂ (ವೆಂಟ್ರಿಕಲ್) ಇವೆ. ದೇಹದ ಇತರ ಭಾಗಗಳಿಂದ ಹರಿದು ಬರುವ ಅಶುದ್ಧರಕ್ತ ಅಭಿಧಮನಿಗಳ ಮೂಲಕ ಹೃದಯದ ಮೇಲಿನ ಬಲ ಕೋಣೆಯನ್ನು ಸೇರುತ್ತದೆ. ಮೇಲಿನ ಎಡಕೋಣೆಯಲ್ಲಿ ಶ್ವಾಸಕೋಶಗಳಿಂದ ಬರುವ ಶುದ್ಧರಕ್ತ ಸೇರುತ್ತದೆ. ಎರಡು ಬಗೆಯ ರಕ್ತಗಳೂ ಮೇಲಿನ ಎರಡು ಕೋಣೆಗಳಿಂದ ಒಂದೇ ಸಾಮಾನ್ಯದ್ವಾರದ ಮೂಲಕ ಕೆಳಕೋಣೆಯನ್ನು ಸೇರುತ್ತವೆ. ಹೀಗೆ ಈ ರಕ್ತ ಹೊರಡುತ್ತಿದ್ದಂತೆಯೇ ಎಡಕೋಣೆಯಿಂದ ಉಳಿದ ಶುದ್ಧರಕ್ತ ಮತ್ತೆ ಕೆಳಕೋಣೆಗೆ ಬರುತ್ತದೆ. ಈ ರಕ್ತ ಪುನಃ ಕೆಳಕೋಣೆಯ ಸಂಕುಚನದಿಂದ ಮಿದುಳುಭಾಗಕ್ಕೆ ಸಾಗುತ್ತದೆ. ಹೀಗೆ ಮಿದುಳುಭಾಗಕ್ಕೆ ಮಾತ್ರ ಸಂಪೂರ್ಣ ಶುದ್ಧರಕ್ತ ಪೂರೈಕೆಯಾಗುತ್ತದೆ. ಈ ರೀತಿಯ ರಕ್ತಪರಿಚಲನೆ ಕಪ್ಪೆಗೆ ವಿಶಿಷ್ಟವಾದುದು.

ಕಪ್ಪೆಯ ನರಸಮೂಹದಲ್ಲಿ, ಮಿದುಳು, ಬೆನ್ನುಹುರಿ ಮತ್ತು ಅವುಗಳಿಂದ ದೇಹದ ನಾನಾಭಾಗಗಳಿಗೆ ಹೊರಡುವ ನರವ್ಯವಸ್ಥೆಯೂ ಇವೆ. ಇವುಗಳ ಸ್ಥೂಲರಚನೆ ಮತ್ತು ಕೆಲಸದ ರೀತಿ ಸಾಮಾನ್ಯವಾಗಿ ಮನುಷ್ಯದೇಹದಲ್ಲಿರುವಂತೆಯೇ. ನರಕಣಗಳ ಸಂವೇದನಾಶಕ್ತಿ, ಸಂವೇದನೆಗಳು ಮಿದುಳನ್ನು ಸೇರುವ ಬಗೆ ಹಾಗೂ ಮಿದುಳಿನಿಂದ ಬರುವ ಪ್ರತಿಕ್ರಿಯೆ ಚಲಿಸುವ ಕ್ರಮ ಎಲ್ಲವೂ ಮನುಷ್ಯರಲ್ಲಿರುವಂತೆಯೆ ಇರುವುದರಿಂದ ಕಪ್ಪೆಯನ್ನು ನರಸಂಬಂಧದ ಪ್ರಯೋಗಗಳಲ್ಲಿ ಬಳಸುತ್ತಾರೆ.

ಕಪ್ಪೆಯ ಮೂತ್ರ ವಿಸರ್ಜನೆಯ ಪ್ರಮುಖ ಅಂಗಗಳು ಉದ್ದುದ್ದನಾದ ಚಪ್ಪಟೆಯಾದ ಒಂದು ಜೊತೆ ಮೂತ್ರಜನಕಾಂಗಗಳು. ಇವು ಬೆನ್ನುಮೂಳೆಯ ಯುರೋಸ್ಟೈಲಿನ ಎರಡು ಪಾರ್ಶ್ವಗಳಲ್ಲಿವೆ. ಇವುಗಳಿಂದ ಒಂದೊಂದು ಮೂತ್ರನಾಳ ಹೊರಟು ಕ್ಲೋಯಕ ರಂಧ್ರವನ್ನು ಸೇರುತ್ತವೆ.

ಕಪ್ಪೆಯಲ್ಲಿ ಲಿಂಗಗಳು ಭಿನ್ನವಾಗಿವೆ. ಗಂಡಿನಲ್ಲಿ ಒಂದು ಜೊತೆ ಹಳದಿ ಬಣ್ಣದ ಅಂಡಾಕಾರದ ವೃಷಣಗಳೂ ಅವುಗಳಿಂದ ಹೊರಡುವ ಎರಡು ವೀರ್ಯಾಣುನಾಳಗಳೂ ಇವೆ. ಈ ನಾಳಗಳು ಮೂತ್ರಜನಕಾಂಗದ ಮೂಲಕ ಸಾಗಿ ಮೂತ್ರನಾಳದೊಂದಿಗೆ ಸೇರುತ್ತವೆ. ಮೂತ್ರನಾಳಗಳು ಕ್ಲೋಯಕ ರಂಧ್ರದ ಮೂಲಕ ಹೊರಕ್ಕೆ ತೆರೆಯುತ್ತವೆ. ವೃಷಣಗಳಲ್ಲಿ ಉತ್ಪತ್ತಿಯಾದ ವೀರ್ಯಾಣುಗಳು ಮೂತ್ರನಾಳದ ಮೂಲಕವೇ ಹೊರಬರಬೇಕು. ಹೆಣ್ಣುಕಪ್ಪೆಯಲ್ಲಿ ಒಂದು ಜೊತೆ ಮಡಿಕೆಮಡಿಕೆಯಾದ ಅಂಡಾಶಯಗಳಿವೆ. ಅವುಗಳ ಬಳಿಯಲ್ಲಿ ಆದರೆ ಅವುಗಳೊಂದಿಗೆ ಸಂಬಂಧವಿರದ ಓವಿಡಕ್ಟ್ ಎಂಬ ಎರಡು ನಾಳಗಳಿವೆ. ಇವುಗಳ ಒಂದು ತುದಿ ಆಲಿಕೆಯಂತಿದ್ದು ಇನ್ನೊಂದು ತುದಿ ಕ್ಲೋಯಕ ರಂಧ್ರದೊಳಕ್ಕೆ ತೆರೆಯುತ್ತದೆ. ಅಂಡಾಶಯಗಳಲ್ಲಿ ಉತ್ಪತ್ತಿಯಾದ ಅಂಡಾಣುಗಳು ಅಂಡಾಶಯಗಳ ಸುತ್ತ ಇರುವ ದೇಹಾವಕಾಶದೊಳಕ್ಕೆ ಬರುತ್ತವೆ. ಅಲ್ಲಿಂದ ಓವಿಡಕ್ಟ್‌ಗಳ ಆಲಿಕೆಯಂಥ ತುದಿಯ ಮುಖಾಂತರ ಅವು ಕ್ಲೋಯಕ ರಂಧ್ರಕ್ಕೆ ಬಂದು ಹೊರಬೀಳುತ್ತವೆ. ಮೊಟ್ಟೆಯಿಡುವುದರಲ್ಲಿ ಕಪ್ಪೆಗಳು ಮತ್ತು ನೆಲಗಪ್ಪೆಗಳು ವೈಶಿಷ್ಟ್ಯಪೂರ್ಣವಾದ ನಡತೆಯನ್ನು ಪ್ರದರ್ಶಿಸುತ್ತವೆ. ಕಪ್ಪೆಗಳು ಅಕ್ರಮವಾದ ಗುಚ್ಛಗಳ ರೀತಿಯಲ್ಲಿ ಮೊಟ್ಟೆಯನ್ನಿಟ್ಟರೆ ನೆಲಗಪ್ಪೆಗಳು ಮಣಿಸರದಂತೆ ಮೊಟ್ಟೆಯಿಡುತ್ತವೆ. ಎಲ್ಲ ಕಪ್ಪೆಗಳಲ್ಲೂ ಗರ್ಭಾಂಕುರತೆ ದೇಹದ ಹೊರಗೆ ನಡೆಯುತ್ತದೆ. ಆ ಕಾಲದಲ್ಲಿ ಗಂಡುಕಪ್ಪೆ ಹೆಣ್ಣಿನ ಮೇಲೆ ಕೂತು ಅದನ್ನು ಬಲವಾಗಿ ಹಿಡಿದುಕೊಳ್ಳುತ್ತದೆ. ಆಗ ಹೆಣ್ಣು ಮೊಟ್ಟೆಗಳನ್ನು ತನ್ನ ವಿಶಿಷ್ಟರೀತಿಯಲ್ಲಿ ಹೊರಬಿಡುತ್ತದೆ. ಅನಂತರ ಗಂಡುಕಪ್ಪೆ ತನ್ನ ವೀರ್ಯಾಣುಗಳನ್ನು ಮೊಟ್ಟೆಗಳ ಮೇಲೆ ಸೇಚಿಸುತ್ತದೆ. ಹೀಗೆ ಗರ್ಭಾಂಕುರಗೊಂಡ ಮೊಟ್ಟೆಗಳು ನೀರಿನ ಮೇಲೆಯೇ ತೇಲುತ್ತಿದ್ದು ಅವುಗಳೊಳಗೆ ಭ್ರೂಣದ ಬೆಳವಣಿಗೆ ಸಾಗುತ್ತದೆ. ಕೆಲವು ದಿನಗಳ ಅನಂತರ ಮೊಟ್ಟೆಯಿಂದ ಪುಟ್ಟಮರಿಯೊಂದು ಹೊರಬಿದ್ದು ತನ್ನ ಉಳಿದ ಬೆಳವಣಿಗೆಯನ್ನು ಬಾಹ್ಯಪರಿಸರದಲ್ಲಿ ನಡೆಸುತ್ತದೆ. ಈ ಮರಿಯಲ್ಲಿ ದೊಡ್ಡ ತಲೆಯೂ ಕೊಳವೆಯಂಥ ಮುಂಡವೂ ಉದ್ದವಾದ ಬಾಲವೂ ಇವೆ. ಮುಂಡ ಮತ್ತು ತಲೆ ಸೇರುವಲ್ಲಿ ಎರಡು ಜೊತೆ ಕವಲೊಡೆದ ಹೊರಕಿವಿರುಗಳಿವೆ. ಈ ಮರಿಯನ್ನು ಗೊದಮೊಟ್ಟೆಯೆನ್ನುತ್ತಾರೆ. ತಲೆಯ ತುದಿಯಲ್ಲಿ ಅಗಲವಾದ ಬಾಯೊಂದು ಕಾಲಕ್ರಮೇಣ ಮೂಡುತ್ತದೆ. ಬಾಲದ ಸಹಾಯದಿಂದ ಈಜುವ ಈ ಮರಿ ಸಸ್ಯಾಹಾರಿ. ನೀರಿನಲ್ಲಿ ಬೆಳೆಯುವ ಸಣ್ಣಪುಟ್ಟ ಗಿಡಗಳನ್ನು ತಿಂದು ಜೀವಿಸುತ್ತದೆ. ನಿಧಾನವಾಗಿ ಹೊರಕಿವಿರುಗಳು ಮಾಯವಾಗಿ ತಲೆಯ ಎರಡೂ ಪಕ್ಕಗಳಲ್ಲಿ ಒಳಕಿವಿರುಗಳು ಹುಟ್ಟುತ್ತವೆ. ಬೆಳವಣಿಗೆ ಮುಂದುವರಿದಂತೆಲ್ಲ ಮುಂದಿನ ಮತ್ತು ಹಿಂದಿನ ಕಾಲುಗಳು ಹುಟ್ಟಿಕೊಳ್ಳುತ್ತವೆ. ದೇಹದ ಒಳಗೂ ಹಲವಾರು ಬದಲಾವಣೆಗಳು ಕಾಣಿಸಿಕೊಂಡು ಗೊದಮೊಟ್ಟೆ ಪ್ರೌಢಜೀವಿಯಾಗುತ್ತದೆ. ಶ್ವಾಸಾಂಗಗಳ ಹುಟ್ಟು, ಕಿವಿರುಗಳು ಮಾಯವಾಗುವಿಕೆ, ಬಾಲ ಚಿಕ್ಕದಾಗುವುದು—ಇವು ಈ ಕಾಲದ ಮುಖ್ಯ ಬದಲಾವಣೆಗಳು.



ನೆಲಗಪ್ಪೆಯ ಮೊಟ್ಟೆಗಳು

ಬಹುಪಾಲು ಕಪ್ಪೆಗಳಲ್ಲಿ ಸಂತಾನರಕ್ಷಣೆಯಿಲ್ಲವಾದರೂ ಕೆಲವು ಬಗೆಯ ಕಪ್ಪೆಗಳಲ್ಲಿ ಅದು ಉಚ್ಚಮಟ್ಟದ್ದಾಗಿದೆ. ಅಲೈಟಿಸ್ (ಸೂಲಗಿತ್ತಿ ಕಪ್ಪೆ) ಇದಕ್ಕೆ ಉತ್ತಮ ನಿದರ್ಶನ. ಇದರಲ್ಲಿ ಗಂಡುಕಪ್ಪೆ ಮೊಟ್ಟೆಗಳ ರಕ್ಷಣೆಯನ್ನು ನಿರ್ವಹಿಸುವುದು ಕಂಡುಬರುತ್ತದೆ, ವಸಂತಕಾಲದಲ್ಲಿ ಅನೇಕ ಗಂಡುಕಪ್ಪೆಗಳು ಒಂದೇ ಒಂದು ಹೆಣ್ಣು ಕಪ್ಪೆಯನ್ನು ಸುತ್ತುವರಿದು ಅದಕ್ಕಾಗಿ ಒಂದು ಸಮರವನ್ನೇ ನಡೆಸುತ್ತವೆ. ಯಶಸ್ವಿಯಾದ ಗಂಡು ಹೆಣ್ಣಿನಿಂದ ಹೊರಬಂದ

ವೊಟ್ಟೆಗಳ ಗರ್ಭಧಾರಣೆ ಮಾಡಿ, ವೊಟ್ಟೆಗಳ ಕುಚ್ಚನ್ನು ತನ್ನ ಹಿಂಗಾಲುಗಳ ಸುತ್ತ ಸುತ್ತಿಕೊಂಡು ನೀರಿನಲ್ಲಿ ಈಜಲು ತೊಡಗುತ್ತದೆ. ಅನಂತರ ಯಾವುದಾದರೂ ಒಂದು ಬಿಲವನ್ನು ಸೇರಿ ಅಡಗಿಕೊಳ್ಳುತ್ತದೆ. ಕಾಲಾನುಕಾಲಕ್ಕೆ ವೊಟ್ಟೆಗಳನ್ನು ಹೊರತಂದು ನೀರಿನಲ್ಲಿ ಮುಳುಗಿಸಿ ಅವು ಹಸಿಯಾಗಿರುವಂತೆ ಮಾಡುತ್ತಿರುತ್ತದೆ. ಈ ಕಾಲದಲ್ಲಿ ವೊಟ್ಟೆಗಳಲ್ಲಿ ಭ್ರೂಣ ಬೆಳೆಯುತ್ತಿದ್ದು ಸಂಪೂರ್ಣ ಬೆಳೆವಣಿಗೆಯಾದ ಮೇಲೆ ಗೊದವೊಟ್ಟೆಗಳು ಹೊರಬರುತ್ತವೆ. ಇಲ್ಲಿಗೆ ಗಂಡುಕಪ್ಪೆಯ ಕೆಲಸ ಮುಗಿಯಿತು. ಹೈಲ ಜೋಲ್ಡಿ ಎಂಬ ಮರಗಪ್ಪೆಯಲ್ಲಿಯೂ ವಿಚಿತ್ರ ರೀತಿಯ ಸಂತಾನರಕ್ಷಣೆಯ ಕ್ರಮವಿರುವುದನ್ನು ಕಾಣಬಹುದು. ಇದರಲ್ಲಿ ಹೆಣ್ಣುಕಪ್ಪೆಯ ಬೆನ್ನಿನ ಮೇಲೆ ಒಂದು ಬಗೆಯ ಚೀಲವಿದೆ. ಗರ್ಭಧರಿಸಿದ ವೊಟ್ಟೆಗಳನ್ನು ಈ ಚೀಲದೊಳಕ್ಕೆ ತುಂಬಿಕೊಂಡು ಅವು ಮರಿಯಾಗಿ ಹೊರಬರುವವರೆಗೂ ಪಾಲಿಸುತ್ತದೆ. ಇದೇ ಬಗೆಯ ಚೀಲವನ್ನು ಅಮೆರಿಕದ ಉಷ್ಣಪ್ರದೇಶಗಳಲ್ಲಿ ಕಾಣಬರುವ ಮಾರ್ಸೂಪಿಯಲ್ ನೆಲಗಪ್ಪೆಗಳಲ್ಲಿ (ನೋಟೋಟ್ರೀಮ) ನೋಡಬಹುದು.

ಕಪ್ಪೆಗಳು ಪ್ರಪಂಚದ ಎಲ್ಲ ಪ್ರದೇಶಗಳಲ್ಲೂ ಕಾಣಬರುತ್ತವೆ. ದಕ್ಷಿಣಭಾರತದಲ್ಲಿ ಅನೇಕ ಜಾತಿಯ ಕಪ್ಪೆಗಳು ಸಿಕ್ಕುತ್ತವೆ. ಮುಖ್ಯವಾಗಿ ರಾನ ಎಂಬ ಜಾತಿಗೆ ಸೇರಿದ ಮೂರು ಪ್ರಭೇದಗಳು ಬಹು ಸಾಮಾನ್ಯ. ಇವು—1 ರಾನ ಹೆಕ್ಸಡ್ಯಾಕ್ಟೈಲ (ಹಸಿರುಕಪ್ಪೆ)—ಇದರ ಹಿಂಗಾಲುಗಳಲ್ಲಿ ಅಂಕುರಾವಸ್ಥೆಯಲ್ಲಿರುವ ಆರನೆಯ ಬೆರಳಿರುವುದು ಇದರ ವೈಶಿಷ್ಟ್ಯ. 2 ರಾನ ಟೈಗ್ರಿನ (ಗೂಳಿಗಪ್ಪೆ). 3 ರಾನ ಸೈಯಾನೊಫ್ಲಿಕ್ಟಿಸ್ (ಬಿಳಿಯ ಕಪ್ಪೆ). ಇವುಗಳಲ್ಲಿ ಮೊದಲೆರಡು ಪ್ರಭೇದಗಳು ಆರ್ಥಿಕ ದೃಷ್ಟಿಯಿಂದ ಮುಖ್ಯವಾದುವು. ಇವುಗಳ ಹಿಂಗಾಲುಗಳು ಪಾಶ್ಚಾತ್ಯ ದೇಶಗಳಲ್ಲಿ ರುಚಿಕರ ಹಾಗೂ ಪ್ರಿಯವಾದ ಭಕ್ಷ್ಯವೆನಿಸಿದೆ. ಇವುಗಳ ರಫ್ತಿನಿಂದ ಭಾರತಕ್ಕೆ ಆವಶ್ಯಕವಾದ ವಿದೇಶೀ ವಿನಿಮಯದ ಗಳಿಕೆಯಾಗುತ್ತಿದೆ. ಬಿಳಿಯ ಕಪ್ಪೆಯನ್ನು ಪ್ರಾಯೋಗಿಕ ಪ್ರಾಣಿಯಾಗಿ ಮೈಸೂರು ವಿಶ್ವವಿದ್ಯಾನಿಲಯದಲ್ಲಿ ಕಳೆದ 15 ವರ್ಷಗಳಿಂದ ಬಳಸುತ್ತಿದ್ದಾರೆ. ರಾನ ಜಾತಿಯಲ್ಲದೆ ಬ್ಯೂಫೊ ಮೆಲನೋಸ್ಟಿಕ್ಟಸ್ ಎಂಬ ನೆಲಗಪ್ಪೆಯೂ ಯೂಪೆರೊಡಾನ್ ಸಿಸ್ಟೆಮ ಎಂಬ ಮರಳುಗಪ್ಪೆಯೂ ರಾಮನೆಲ್ಲ ಮೈಕ್ರೊಹೈಲ ಎಂಬ ಕಪ್ಪೆಯೂ ದಕ್ಷಿಣ ಭಾರತದಲ್ಲಿ ಹೇರಳವಾಗಿ ಕಾಣಬರುತ್ತವೆ. ಇವಲ್ಲದೆ ಯೂರೋಪಿನಲ್ಲಿ ವಾಸಿಸುವ ಅಗ್ನಿಉದರದ ನೆಲಗಪ್ಪೆ (ನೋಡಿ) (ಫೈರ್‌ಬೆಲ್ಲೀಡ್ ಟೋಡ್), ಗಯಾನದಲ್ಲಿರುವ ಪೈಪ ಪೈಪ ಎಂಬ ಕಪ್ಪೆ, ಬೋರ್ನಿಯೊ ಮತ್ತು ಮಲಯಗಳಲ್ಲಿ ದೊರಕುವ ರ್‍ಯಾಕೊಫೋರಸ್ ಜಾತಿಯ ಹಾರುಗಪ್ಪೆ—ಇವು ಇನ್ನಿತರ ಮುಖ್ಯ ಬಗೆಯ ಕಪ್ಪೆಗಳು.

ನೋಡಿ—ದ್ವಿಜೀವಿಗಳು (ಎಚ್‌.ಎಸ್‌.ಎನ್‌.)

**ಕಪ್ಪೆಚಿಪ್ಪು ಹುಳು :** ಸಿಹಿ ನೀರಿನಲ್ಲಿ ವಾಸಿಸುವ ಎರಡು ಚಿಪ್ಪು ಹೋಳುಗಳ ಕವಚವನ್ನುಳ್ಳ ಒಂದು ಮೃದ್ವಂಗಿ (ಫ್ರೆಷ್ ವಾಟರ್ ಮಸಲ್). ಇದು ಲ್ಯಾಮೆಲ್ಲಿಬ್ರಾಂಕಿಯ ಅಥವಾ ಪೆಲಿಸಿಪೋಡ ವರ್ಗಕ್ಕೂ ಯೂಲ್ಯಾಮೆಲ್ಲಿಬ್ರಾಂಕಿಯ ಗಣದ ಯೂನಿಯೋನಿಡೀ ಕುಟುಂಬಕ್ಕೂ ಸೇರಿದೆ. ಈ ಕುಟುಂಬದಲ್ಲಿ 85 ಜಾತಿಗಳೂ 750 ಪ್ರಭೇದಗಳೂ ಇವೆ. ಮುತ್ತಿನಂತೆ ಮಿರುಗುವ ಚಿಪ್ಪಿನ ಒಳಮೈ, ಸಮಪ್ರಮಾಣದಲ್ಲಿ ಸ್ಫುಟಗೊಂಡ ಸ್ನಾಯು ಕಲೆಗಟ್ಟುಗಳು, ಸುಸ್ಪಷ್ಟವಾದ ಒಂದು ಮ್ಯಾಂಟಲ್ ರೇಖೆ, ಪುಟ್ಟ ಜಲನಾಳಗಳು ಮತ್ತು ಮರಳನ್ನು ತೋಡಲು ನೆರವಾಗುವ ಪುಷ್ಟವಾಗಿ ಬೆಳೆದ ಕೈಗೊಡಲಿ ರೂಪದ ಪಾದ–ಇವು ಈ ಕುಟುಂಬದ ವಿಶೇಷ ಲಕ್ಷಣಗಳು. ಯೂನಿಯೊ, ಅನೊಡಾಂಟ, ಕ್ವಾಡ್ರುಲ, ಲಾಂಪ್ಸಿಲಿಸ್, ಲಾಮೆಲ್ಲಿಡೆನ್ಸ್ ಮೊದಲಾದ ಜಾತಿಗಳು ಮುಖ್ಯವಾದುವು. ಇವು ಸಾಧಾರಣವಾಗಿ ದೊಡ್ಡ ಕೆರೆ ಕೊಳಗಳಲ್ಲಿ ಹಾಗೂ ಶಾಂತವಾಗಿ ನೀರು ಹರಿಯುವ ನದಿ ತೊರೆಗಳ ತಳಭಾಗದ ಮೃದುವಾದ ಮಣ್ಣಿನಲ್ಲಿ ಬಿಲ ಮಾಡಿಕೊಂಡು ವಾಸಿಸುತ್ತವೆ. ಇವುಗಳ ದೇಹದ ಸ್ವಲ್ಪ ಭಾಗ ಮಾತ್ರ ಮಣ್ಣಿನ ಮೇಲ್ಭಾಗದಲ್ಲಿರುತ್ತದೆ. ಪ್ರಾಣಿ ಸತ್ತಮೇಲೆ ಚಿಪ್ಪು ಹೋಳುಗಳ ಮಧ್ಯೆ ಇರುವ ಮೃದುದೇಹ ನಶಿಸಿ ಹೋದಮೇಲೆ ಚಿಪ್ಪಿನ ಹೋಳುಗಳು ಅಲೆಗಳ ಹೊಡೆತಕ್ಕೆ ಸಿಕ್ಕಿ ನದಿ ಅಥವಾ ಕೆರೆ ದಂಡೆಗಳಲ್ಲಿ ಬಂದು ಬೀಳುತ್ತವೆ. ಒಮ್ಮೊಮ್ಮೆ ಈ ಚಿಪ್ಪುಗಳ ಮೇಲೆ ಅಥವಾ ಅವುಗಳ ಬಳಿ ಸಣ್ಣ ಸಣ್ಣ ಕಪ್ಪೆಗಳು ಕಂಡು ಬರುವುದರಿಂದ ಈ ಚಿಪ್ಪು ಪ್ರಾಣಿಗಳಿಗೆ ಕನ್ನಡದಲ್ಲಿ ಕಪ್ಪೆ ಚಿಪ್ಪು ಹುಳು ಎಂದು ಹೆಸರು ಬಂದಿರಬೇಕು.

ಕಪ್ಪೆಚಿಪ್ಪು ಹುಳುವಿನ ದೇಹ ಮೃದುವಾಗಿದೆ. ಇದನ್ನು ಚಿಪ್ಪಿನ ಹೋಳುಗಳನ್ನು ಬಿಚ್ಚಿ ನೋಡಬಹುದು. ದೇಹದಲ್ಲಿ ಮೂರು ಭಾಗಗಳನ್ನು ಗುರುತಿಸಬಹುದು. 1 ಒಳ ಅಂಗಗಳನ್ನೊಳಗೊಂಡ ಮುದ್ದೆ ಅಥವಾ ವಿಸರಲ್ ಮಾಸ್, 2 ಅದರ ತಳಭಾಗದಿಂದ ಇಳಿಬಿದ್ದು ಮುಂದೆ ಚಾಚಿರುವ ಕೈಗೊಡಲಿ ರೂಪದ ಸ್ನಾಯುಮಯ ಪಾದ, 3 ದೇಹದ ಇಕ್ಕೆಡೆಗಳಲ್ಲಿ ವಿಸರಲ್ ಮಾಸನ್ನು ಆವರಿಸಿ ಇಳಿಬಿದ್ದಿರುವ ಎರಡು ತೆಳುವಾದ ಮ್ಯಾಂಟಲ್‌ಗಳು—ಇವೇ ಆ ಮೂರು ಭಾಗಗಳು. ಇದರಲ್ಲಿ ಇತರ ಮೃದ್ವಂಗಿಗಳಲ್ಲಿರುವಂತೆ ಸ್ಪಷ್ಟವಾದ ತಲೆ ಇಲ್ಲ. ದೇಹ ದ್ವಿಪಾರ್ಶ್ವ ಸೌಷ್ಟವ ಉಳ್ಳದ್ದು. ದೇಹವನ್ನು ಹಾಯ್ದು ಹೋಗುವ ಎರಡು ಅಭಿವರ್ತನಿ ಸ್ನಾಯುಗಳು ಚಿಪ್ಪು ಹೋಳುಗಳನ್ನು ಬಂಧಿಸುತ್ತವೆ. ಇವುಗಳಿಗೆ ಅಗ್ರ ಅಭಿವರ್ತನಿ ಸ್ನಾಯು ಮತ್ತು ಪಶ್ಚ ಅಭಿವರ್ತನಿ ಸ್ನಾಯು ಎಂದು ಹೆಸರು. ಈ ಪ್ರಾಣಿಯ ಬಾಯಿ ಅಗ್ರ ಅಭಿವರ್ತನಿ ಸ್ನಾಯುವಿನ ತಳಭಾಗದಲ್ಲಿ ಇದೆ. ಬಾಯಿಯ ಎಡಬಲದಲ್ಲಿ ಎರಡೆರಡು ತ್ರಿಕೋನಾಕಾರದ ಜೋಲು ತುಟಿಗಳಿವೆ (ಲೇಬಿಯಲ್ ಪ್ಯಾಲ್ಪ್ಸ್), ಮ್ಯಾಂಟಲ್ ಪಾಲಿಗಳ ನಡುವಣ ಪ್ರದೇಶಕ್ಕೆ ಮ್ಯಾಂಟಲ್ ಕುಹರ (ಮ್ಯಾಂಟಲ್ ಕ್ಯಾವಿಟಿ) ಎಂದು ಹೆಸರು. ಈ ಮ್ಯಾಂಟಲ್ ಕುಹರದಲ್ಲಿ ಪಾದ,




ಚಿತ್ರ 1 ಕಪ್ಪೆಚಿಪ್ಪುಹುಳುವಿನ ಸಾಮಾನ್ಯ ನೋಟ : 1 ಆವಾಹಿದ್ವಾರ, 2 ಅಪವಾಹಿದ್ವಾರ, 3 ಪಾದ

ಶ್ವಸನಾಂಗ ವಿಸರ್ಜನಾಂಗಗಳು ಮತ್ತು ಜನನಾಂಗಗಳ ದ್ವಾರಗಳು ಇವೆಲ್ಲ ಇವೆ. ಮ್ಯಾಂಟಲ್ ಪಾಲಿಗಳು ದೇಹದ ಪಶ್ಚಭಾಗದಲ್ಲಿ ಪರಸ್ಪರ ಕೂಡಿಕೊಂಡಿವೆ. ಆ ಭಾಗದಲ್ಲಿ ಎರಡು ದ್ವಾರಗಳಿವೆ. ಒಂದು ಬೆನ್ನುಭಾಗದ ಅಪವಾಹಿ ದ್ವಾರ (ಎಕ್ಸ್‌ಹೇಲೆಂಟ್ ಸೈಫನ್) ಮತ್ತು ಎರಡನೆಯದು ಉದರಭಾಗದ ಆವಾಹಿ ದ್ವಾರ (ಇನ್ಹೇಲೆಂಟ್ ಸೈಫನ್).

ಶ್ವಸನಾಂಗಗಳಾದ ಕಿವಿರು (ಗಿಲ್ಸ್) ಮತ್ತು ಓಷ್ಠದ ಪ್ಯಾಲ್ಪುಗಳ ಮೇಲೆ ಲೋಮಾಂಗಗಳಿರುತ್ತವೆ (ಸಿಲಿಯ). ಇವುಗಳ ಚಲನೆಯ ಫಲವಾಗಿ ಮ್ಯಾಂಟಲಿನಲ್ಲಿರುವ ನೀರು ಪ್ರವಾಹದಂತೆ ಚಲಿಸಲಾರಂಭಿಸುತ್ತದೆ. ಕಿವಿರಿನ ಮೇಲೆಲ್ಲ ಅಸಂಖ್ಯಾತ ಸೂಕ್ಷ್ಮತಮವಾದ ರಂಧ್ರಗಳಿವೆ. ಆವಾಹಿದ್ವಾರದಿಂದ ಮ್ಯಾಂಟಲ್ ಕುಹರವನ್ನು ಪ್ರವೇಶಿಸಿದ ನೀರು ಕಿವಿರುಗಳ ರಂಧ್ರಗಳ ಮೂಲಕ ಹಾಯ್ದು, ನೀರ್ನಳಿಕೆಗಳ (ವಾಟರ್ ಟ್ಯೂಬ್) ಮೂಲಕ ಸಂಚರಿಸಿ ಅಧಿಕ್ಲೋಮ ಗೂಡನ್ನು (ಸೂಪ್ರಬ್ರಾಂಕಿಯಲ್ ಚೇಂಬರ್) ಹೊಕ್ಕು ಅಪವಾಹಿದ್ವಾರದ ಮೂಲಕ ಹೊರಬರುತ್ತದೆ. ಈ ಪ್ರಾಣಿಯ ಕಿವಿರುಗಳು ಶ್ವಸನ ಕಾರ್ಯದಲ್ಲಿ ನೆರವಾಗುವುದಲ್ಲದೆ, ಸೂಕ್ಷ್ಮ ಆಹಾರಜೀವಿಗಳನ್ನು ಒಳಗೊಂಡ ನೀರಿನ ಪ್ರವಾಹವನ್ನು ಬಾಯಿಯ ಕಡೆ ಸಾಗಿಸುವುದಕ್ಕೂ ಸಹಾಯ ಮಾಡುತ್ತವೆ. ಮತ್ತು ಅವು ಕಾವಿನ ಗೂಡಾಗಿಯೂ (ಇಂಕ್ಯುಬೇಷನ್ ಚೇಂಬರ್) ವರ್ತಿಸುತ್ತವೆ. ಚಿಪ್ಪಿನ ಎರಡು ಹೋಳುಗಳು ಪೃಷ್ಠಭಾಗದಲ್ಲಿ ಒರಟು ಹಾಗು ಸ್ಥಿತಿಸ್ಥಾಪನಶಕ್ತಿಯುಳ್ಳ ಒಂದು ಅಸ್ಥಿರಜ್ಜುವಿನ (ಹಿಂಜ್ ಲಿಗಮೆಂಟ್) ಸಹಾಯದಿಂದ ಕೂಡಿಕೊಂಡಿರುತ್ತವೆ. ಹೀಗೆ ಕೂಡಿರುವ ಕ್ಷೇತ್ರಕ್ಕೆ ಕೀಲು ರೇಖೆ ಎಂದು ಹೆಸರು. ಈ ಅಸ್ಥಿರಜ್ಜುವಿನ ನೆರವಿನಿಂದ ಚಿಪ್ಪಿನ ಹೋಳುಗಳು ತಳಭಾಗದಲ್ಲಿ ಅಗಲಿಸಿ ಸಂದು ಬಿಟ್ಟುಕೊಳ್ಳುತ್ತವೆ. ಆದರೆ ಜೀವಂತ ಪ್ರಾಣಿಯಲ್ಲಿ ದೇಹದ ಅಗ್ರ ಮತ್ತು ಪಶ್ಚ ಅಭಿವರ್ತಿನಿ ಸ್ನಾಯುಗಳ ಸಂಕೋಚನದಿಂದ ಚಿಪ್ಪಿನ ಹೋಳುಗಳು ಮುಚ್ಚಿಕೊಂಡಿರುತ್ತವೆ. ಸ್ನಾಯುಗಳು ಸಡಿಲಿದಾಗ ಚಿಪ್ಪಿನ ಹೋಳುಗಳು ಬಾಯಿ ಬಿಟ್ಟುಕೊಳ್ಳುತ್ತವೆ. ಹೀಗೆ ಉಂಟಾದ ಸಂದುವಿನ ಮೂಲಕ ಪ್ರಾಣಿ ತನ್ನ ಪಾದವನ್ನು ಹೊರಚಾಚುತ್ತದೆ. ಕೀಲುರೇಖೆಯ ಸ್ಥಳದಲ್ಲಿ ಎರಡೂ ಹೋಳುಗಳ ಅಂಚಿನಲ್ಲಿ ಹಲ್ಲುಗಳಿದ್ದು ಒಂದು ಹೋಳಿನ ಹಲ್ಲುಗಳು ಮತ್ತೊಂದರ ಹಲ್ಲುಗಳ ನಡುವೆ ಇರುವ ತೆರವುಸ್ಥಳಗಳಲ್ಲಿ ಹೊಂದಿಕೊಳ್ಳುವಂಥ ಏರ್ಪಾಟು ಇದೆ. ಭ್ರೂಣಾವಸ್ಥೆಯಲ್ಲಿ ಚಿಪ್ಪಿನ ಕವಚ ಚಿಪ್ಪು ಗ್ರಂಥಿಯಿಂದ ಸ್ರವಿಸಲ್ಪಡುತ್ತದೆ. ಆದರೆ ದೊಡ್ಡದಾಗಿ ಬೆಳೆದಂತೆ ಮ್ಯಾಂಟಲಿನಲ್ಲಿರುವ ಗ್ರಂಥಿಗಳೂ ಕವಚದ ನಿರ್ಮಾಣಕಾರ್ಯದಲ್ಲಿ ಪಾಲುಗೊಳ್ಳುತ್ತವೆ. ಪ್ರಾಣಿ ಬೆಳೆದಂತೆಲ್ಲ ಚಿಪ್ಪಿನ ಗಾತ್ರ ದೊಡ್ಡದಾಗುತ್ತದೆ. ಮತ್ತು ಅದರ ಹೋಳುಗಳ ಹೊರಮೈ ಮೇಲೆ ಬೆಳೆವಣಿಗೆಯ ರೇಖೆಗಳು ಹೆಚ್ಚುತ್ತ ಹೋಗುತ್ತವೆ. ಈ ರೇಖೆಗಳು ಚಿಪ್ಪಿನ ಅಂಚಿಗೆ ಸಮಾನಾಂತರವಾಗಿವೆ. ಚಿಪ್ಪಿನ ಅತ್ಯಂತ ಹಳೆಯ ಭಾಗ ದಪ್ಪನಾಗಿದೆ. ಇದಕ್ಕೆ ಅಂಬೊ ಎಂದು ಹೆಸರು. ಇದು ಕೀಲುರೇಖೆಯ ಸಮೀಪದಲ್ಲಿದೆ.

ಚಿಪ್ಪಿನಲ್ಲಿ ಮೂರು ಪದರಗಳಿವೆ. ಇವು ತಮ್ಮ ರಚನೆಯಲ್ಲಿ ವೈವಿಧ್ಯ ತೋರುವುದಲ್ಲದೆ ಬೇರೆ ಬೇರೆ ರಾಸಾಯನಿಕ ವಸ್ತುಗಳಿಂದ ರಚಿತವಾಗಿವೆ. 1 ಪೆರಿಆಸ್ಟ್ರಕಂ ವಸ್ತುವಿನಿಂದ ಕೂಡಿರುವ ಕಪ್ಪು ಮಿಶ್ರವಾದ ಕಂದು ಬಣ್ಣದ ಹೊರ ಪದರ. 2 ಮಧ್ಯದ ಪ್ರಿಸ್ಮಾಟಿಕ್ ಪದರ; ಇದರಲ್ಲಿ ಅಸಂಖ್ಯಾತ ಸುಣ್ಣದ ಹರಳುಗಳು ಕಾಂಕಿಯೋಲಿನ್ ಎಂಬ ವಸ್ತುವಿನಲ್ಲಿ ಹುದುಗಿರುತ್ತವೆ. 3 ನಾಕ್ರಿಯಸ್ ಪದರ. ಮೊದಲ ಎರಡು ಪದರಗಳು ಮ್ಯಾಂಟಲಿನ ಅಂಚುಗಳಿಂದ ಉತ್ಪಾದನೆಯಾದವು. ಇದರ ಫಲವಾಗಿ ಬೆಳವಣಿಗೆಯ ಸಮಾನ ಕೇಂದ್ರೀಯ ಗುರುತುಗಳನ್ನು ಚಿಪ್ಪಿನ ಮೇಲೆ ಕಾಣಬಹುದು. ಮೂರನೆಯ ಪದರ ಮ್ಯಾಂಟಲಿನ ಇಡೀ ಮೇಲ್ಮೈಯಿಂದ ರಚಿತವಾದ್ದು. ಈ ಪದರಕ್ಕೂ ಮತ್ತು ಮ್ಯಾಂಟಲಿನ ಹೊರಪದರಕ್ಕೂ ನಡುವೆ ಯಾವುದಾದರೊಂದು ಪರಕೀಯ ವಸ್ತು ಅಥವಾ ಪರತಂತ್ರ ಜೀವಿ ಪ್ರವೇಶಿಸಿದರೆ ಅದರ ಸುತ್ತಲೂ ಸುಣ್ಣದ ಪದರಗಳು ಬೆಳೆದು ಅದನ್ನು ಆವರಿಸುತ್ತವೆ. ಮುತ್ತಿನ ಚಿಪ್ಪಿನ ಹುಳುವಿನಲ್ಲಿ ಮುತ್ತು ನಿರ್ಮಾಣವಾಗುವುದು ಈ ವಿಧಾನದಿಂದಲೇ.

ಕಪ್ಪೆಚಿಪ್ಪು ಹುಳುವಿನ ಬೆಳೆವಣಿಗೆಯ ಕ್ರಮ ಮೃದ್ವಂಗಿಗಳಲ್ಲೆಲ್ಲ ಒಂದು ವಿಶಿಷ್ಟ ಸ್ಥಾನವನ್ನು ಗಳಿಸಿದೆ. ಗಂಡು ಮತ್ತು ಹೆಣ್ಣುಗಳಲ್ಲಿ ಭೇದವಿದ್ದರೂ ಈ ಭೇದ ಗಳನ್ನು ಹೊರನೋಟದಲ್ಲಿ ಗುರುತಿಸುವುದು ಕಷ್ಟ. ಹೆಣ್ಣಿನ ಅಂಡಾಶಯದಿಂದ ಪರಿಪಕ್ವವಾದ ಅಂಡಾಣುಗಳು ಹೊರಬಂದು ಕಿವಿರುಗಳ ಜಲನಳಿಕೆಗಳಲ್ಲಿ ಬೀಳುತ್ತವೆ. ಗಂಡಿನ ವೀರ್ಯಾಣುಗಳು ಮ್ಯಾಂಟಲ್ ಕುಹರವನ್ನು ಹೊಕ್ಕು ಕಿವಿರುಗಳ ಮೇಲಿ ರುವ ರಂಧ್ರಗಳ ಮೂಲಕ ಸಾಗಿ ಕಿವಿರುಗಳ ಒಳಾಂಗಣದಲ್ಲಿರುವ ಅಂಡಾಣುಗಳನ್ನು ಗರ್ಭಾಂಕುರಗೊಳಿಸುತ್ತವೆ. ಗರ್ಭಧರಿಸಿದ ಅಂಡಾಣುಗಳು ನೀರು ನಳಿಕೆಗಳಲ್ಲಿ ಬೆಳೆಯಲಾರಂಭಿಸುತ್ತವೆ. ಕೆಲ ದಿನಗಳಲ್ಲಿಯೇ ಅಂಡಾಣು ಕವಚಗಳಿಂದ ಸಣ್ಣ ಸಣ್ಣ ಗ್ಲಾಕಿಡಿಯಂ ಡಿಂಭಗಳು ಹೊರಬರುತ್ತವೆ. ಕೆಲಕಾಲದ ನಂತರ ಇವು ತಾಯಿ ದೇಹದ ಅಪವಾಹಿದ್ವಾರದ ಮೂಲಕ ಹೊರ ಬಂದು ಸ್ವತಂತ್ರ ಜೀವನವನ್ನು ಸಾಗಿಸುತ್ತವೆ. ಈ ಡಿಂಭಕ್ಕೆ ಎರಡು ತ್ರಿಕೋನಾಕಾರದ ತೆಳುವಾದ ಚಿಪ್ಪಿನ ಪಾಲಿ ಗಳಿವೆ. ಪ್ರತಿ ಚಿಪ್ಪಿನ ಪಾಲಿಯ ಬಿಡುವಾದ ಅಂಚಿನಲ್ಲಿ ಒಳಕ್ಕೆ ಬಾಗಿದ ಮುಳ್ಳಿ ನಂತಿರುವ ಒಂದು ಹಲ್ಲು ಇದೆ. ಇದರ ಮ್ಯಾಂಟಲ್ ಪಾಲಿಗಳು ಬಹು ಚಿಕ್ಕವು ಮತ್ತು ಅವುಗಳ ಅಂಚಿನಲ್ಲಿ ಮೂರು ಅಥವಾ ನಾಲ್ಕು ಗ್ರಂಥೀಯ ಜೀವಕೋಶ ಗಳಿವೆ. ಇವುಗಳ ಸ್ರಾವದಿಂದ ಒಂದು ಉದ್ದವಾದ ತಾತ್ಕಾಲಿಕ ಬೈಸಸ್ ಎಂಬ ದಾರ ರೂಪುಗೊಂಡು ಹೊರಚಾಚಿರುತ್ತದೆ. ಮ್ಯಾಂಟಲ್ ಪಾಲಿಗಳ ಒಳಮೈ ಮೇಲೆ ವಿಚಿತ್ರವಾದ ಕುಂಚದಂಥ ಜ್ಞಾನೇಂದ್ರಿಯಗಳಿವೆ. ಈ ಗ್ಲಾಕಿಡಿಯಂ ಡಿಂಭಗಳು ನೀರಿನ ತಳಭಾಗಕ್ಕೆ ಇಳಿಯಬಹುದು ಅಥವಾ ನೀರಿನ ಪ್ರವಾಹದ ಮೂಲಕ ಬೇರೆಡೆಗೆ ವಿತರಣೆಯಾಗಬಹುದು. ಕೆಲಕಾಲ ನೀರಿನಲ್ಲಿ ಈಜುತ್ತಿದ್ದಂತೆ




ಚಿತ್ರ 2 ಗ್ಲಾಕಿಡಿಯಂ ಡಿಂಭ : 1 ಚಿಪ್ಪು 2 ಬೈಸಸ್ ದಾರ 3 ಕೊಕ್ಕೆ

ತಮ್ಮ ಸುತ್ತಮುತ್ತ ಈಜುವ ಮೀನುಗಳ ಕಿವಿರುಗಳಿಗೆ ತಮ್ಮ ಕೊಕ್ಕೆ ಮತ್ತು ಬೈಸಸ್ ದಾರದ ಸಹಾಯದಿಂದ ಅಂಟಿಕೊಂಡು ತಮ್ಮ ಸುತ್ತಲೂ ಮೀನಿನ ಅಂಗದ ಆವರಣವನ್ನು ಬೆಳೆಸಿಕೊಂಡು ಕಾಯ ಪರಿವರ್ತನೆಯನ್ನು ಹೊಂದುತ್ತವೆ. ಅಂದರೆ ಇವು ತಮ್ಮ ಎರಡನೆಯ ಡಿಂಭಾವಸ್ಥೆಯನ್ನು ಪರತಂತ್ರ ಜೀವನದಲ್ಲಿ ಕಳೆಯುತ್ತವೆ. ಈ ಜೀವನದಲ್ಲಿ ತಮಗೆ ಬೇಕಾದ ಪೌಷ್ಟಿಕಾಂಶವನ್ನು ತಮ್ಮ ಆತಿಥೇಯ ಮೀನಿನಿಂದ ಪಡೆಯುತ್ತವೆ. ಕಾಯ ಪರಿವರ್ತನೆಯ ಕಾಲದಲ್ಲಿ ಬೈಸಸ್ ದಾರ ಮತ್ತು ಜ್ಞಾನೇಂದ್ರಿಯಗಳು ನಶಿಸಿಹೋಗುತ್ತವೆ. ಬಾಯಿ, ಗುದ, ದೇಹದ ತಳಭಾಗದಲ್ಲಿ ಸ್ನಾಯುಮಯವಾದ ಪಾದ ಮತ್ತು ಕಿವಿರುಗಳು ರೂಪುಗೊಳ್ಳುತ್ತವೆ. ಅನಂತರ ಅವು ತಮ್ಮ ಪೋಷಕ ಜೀವಿಯ ದೇಹದಿಂದ ಹೊರಬಂದು ನೀರಿನಲ್ಲಿ ಇಳಿದು ತಳವನ್ನು ಸೇರಿ ಸ್ವತಂತ್ರ ಜೀವನವನ್ನು ಸಾಗಿಸುತ್ತ ಬೆಳೆಯಲಾರಂಭಿಸುತ್ತವೆ. ಯೂನಿಯೋ, ಕ್ವಾಡ್ರುಲ ಜಾತಿಯ ಕಪ್ಪೆಚಿಪ್ಪುಹುಳುಗಳು ಬೇಸಗೆಯಲ್ಲಿ ಸಂತಾನೋತ್ಪತ್ತಿ ಮಾಡುತ್ತವೆ. ಅನೊಡಾಂಟ, ಲಾಂಪ್ಸಿಲಿಸ್ ಜಾತಿಯವು ಬೇಸಗೆಯ ಕೊನೆಯ ಭಾಗದಲ್ಲಿ ಸಂತಾನೋತ್ಪತ್ತಿ ಮಾಡಿ ತಮ್ಮ ಗ್ಲಾಕಿಡಿಯಂ ಡಿಂಭಗಳನ್ನು ಮುಂಬರುವ ವಸಂತಋತುವಿನ ವರೆಗೂ ತಮ್ಮ ದೇಹದಲ್ಲಿಯೇ ಇಟ್ಟುಕೊಳ್ಳುತ್ತವೆ.

ಉತ್ತರ ಅಮೆರಿಕದ ಒಹಾಯೊ ಮತ್ತು ಅಲಬಾಮ ನದಿ ಪ್ರಾಂತಗಳಲ್ಲೂ ಯೂರೋಪಿನ ಕೆಲದೇಶಗಳಲ್ಲೂ ಮುತ್ತಿನ ಗುಂಡಿಗಳಿಗಾಗಿ ಯೂನಿಯೋ ಜಾತಿಗೆ ಸೇರಿದ ಕಪ್ಪೆಚಿಪ್ಪು ಹುಳುಗಳನ್ನು ಬೆಳೆಸುವ ಉದ್ಯಮ ಬೆಳೆದಿತ್ತು. ಆದರೆ ಪ್ಲಾಸ್ಟಿಕ್ ಉದ್ಯಮ ಹೆಚ್ಚಾದಂತೆ ಈ ಮುತ್ತಿನ ಗುಂಡಿಗಳ ಬೇಡಿಕೆ ಕಡಿಮೆ ಯಾಗುತ್ತಾ ಬಂದಿದೆ. ಹಿಂದೆ ಮಾನವನಿಗೆ ಈ ಪ್ರಾಣಿಗಳು ಆಹಾರ ವಸ್ತುವಾದ ದ್ದುವೆಂದು ತೋರುತ್ತದೆ. ಕೆಲದೇಶಗಳಲ್ಲಿ ಈ ಪ್ರಾಣಿಗಳ ಚಿಪ್ಪು ಮತ್ತು ಮೃದು ದೇಹದಿಂದ ಹಂದಿ ಮತ್ತು ಕೋಳಿಗಳ ಆಹಾರವನ್ನು ತಯಾರು ಮಾಡುತ್ತಾರೆ.

(ವೈ.ಎ.ಎಚ್.)

**ಕಪ್ಲಾನ್ ತಿರುಬಾನಿ :** ನೀರಿನ ಎತ್ತರ ಕಡಿಮೆ ಇರುವಾಗ ನೀರೆತ್ತಲು ಬಳಸುವ ಜಲಯಂತ್ರ (ಕಪ್ಲಾನ್ ಟರ್ಬೈನ್). ಇದರ ಚಕ್ರ ಹಡಗು ಇಲ್ಲವೇ ವಿಮಾನದ ಚಾಲಕಗಳ (ಪ್ರೊಪೆಲ್ಲರ್ಸ್) ಮಾದರಿಯಲ್ಲಿ ಇದೆ. ಇದರಲ್ಲಿ ಕಡಿಮೆ ಸಂಖ್ಯೆಯ— ಸಾಧಾರಣವಾಗಿ ನಾಲ್ಕರಿಂದ ಆರರ ವರೆಗೆ–ಅಲಗುಗಳಿವೆ. ಇವು ಚಲನೆ ಯಲ್ಲಿದ್ದಂತೆಯೇ ತಮ್ಮ ಅಕ್ಷದ ಮೇಲೆ ತಿರುಗಬಲ್ಲವು. ಆದ್ದರಿಂದ ಸಾಮರ್ಥ್ಯದ ಉತ್ಪನ್ನಕ್ಕೆ ಅನುಸಾರವಾಗಿ ಅಲಗುಗಳ ಕೋನಗಳನ್ನು ಬದಲಾಯಿಸುವುದು ಸಾಧ್ಯ. ಅಲಗುಗಳನ್ನು ತಿರುಗಿಸುವ ಯಂತ್ರ ಸಂವಿಧಾನ ಚಕ್ರದ ನಾಭಿಯೊಳಗೆ ಅಡಕವಾಗಿದೆ. ತಿರುಬಾನಿಯ ನಿಯಾಮಕವು ಸರ್ವೋ ಮೋಟಾರಿನ ಮೂಲಕ ಈ ಯಂತ್ರಭಾಗ ವನ್ನು ನಿಯಂತ್ರಿಸುವುದು. ಇಂಥ ಸ್ವಯಂಚಾಲಿತ ಯಂತ್ರವ್ಯವಸ್ಥೆ ಇರುವುದ ರಿಂದ ತಿರುಬಾನಿ ಉತ್ಪಾದಿಸುತ್ತಿರುವ ಸಾಮರ್ಥ್ಯ ಎಷ್ಟೇ ಆಗಿರಲಿ ಅದರ ಕಾರ್ಯ ಕ್ಷಮತೆ ಹೆಚ್ಚು ಕಡಿಮೆ ಏಕಪ್ರಕಾರವಾಗಿರುತ್ತದೆ. ನೀರಿನ ಎತ್ತರ 9′–50′ ಗಳಿರುವ ಕಡೆಗಳಲ್ಲಿ ಕಪ್ಲಾನ್ ತಿರುಬಾನಿಯನ್ನು ಉಪಯೋಗಿಸಬಹುದು. 25′ ವ್ಯಾಸದ ಚಕ್ರ ಇರುವ, 7,000 ಅಶ್ವಸಾಮರ್ಥ್ಯವನ್ನು ಉತ್ಪನ್ನ ಮಾಡುವ ಯಂತ್ರಗಳು ಉಪಯೋಗದಲ್ಲಿವೆ. ಕಪ್ಲಾನ್ ತಿರುಬಾನಿಗಳ ಕಾರ್ಯಕ್ಷಮತೆಯ ಗರಿಷ್ಠ ಪ್ರಮಾಣ 90%ಕ್ಕಿಂತಲೂ ಹೆಚ್ಚು. (ಬಿ.ಪಿ.ಜಿ)

**ಕಫ :** ನೋಡಿ—ತ್ರಿದೋಷಗಳು

**ಕಫಾ :** ಇಥಿಯೋಪಿಯದ ನೈಋತ್ಯದಲ್ಲಿರುವ ಒಂದು ಪ್ರಾಂತ್ಯ. ಆ ರಾಜ್ಯದ ದಕ್ಷಿಣದಲ್ಲಿ, ಸಮುದ್ರದಿಂದ ಬಲುದೂರ, ರೂಡಾಲ್ಫ್ ಸರೋವರದ ಉತ್ತರದಂಚಿನ ವರೆಗೆ ಹಬ್ಬಿದೆ. ನಡುನಡುವೆ ಕೊಚ್ಚಿದಂತಿರುವ ಪ್ರಸ್ಥಭೂಮಿಯಿಂದ ಆವೃತವಾದ ಈ ಪ್ರದೇಶದ ಸರಾಸರಿ ಎತ್ತರ 6,000 ಅಡಿ. ಕೆಲವು ಪರ್ವತ ಶಿಖರಗಳು 10,000 ಅಡಿಗಳಿಗಿಂತಲೂ ಎತ್ತರವಾಗಿವೆ.

ಇದರ ಪೂರ್ವದ ಗಡಿಯಾಗಿ ಹರಿಯುವ ಓಮೋ ನದಿಗೆ ಅಲ್ಲಲ್ಲಿ ಜಲಪಾತಗಳಿ ರುವುದರಿಂದ ಅದು ನೌಕಾಸಂಚಾರಯೋಗ್ಯವಾಗಿಲ್ಲ. ವಿದ್ಯುದುತ್ಪಾದನೆಯ ಸಾಧ್ಯತೆ ಗಳನ್ನು ಬಳಸಿಕೊಂಡಿಲ್ಲ.

ಉತ್ತರ ಅಕ್ಷಾಂಶ 5° ಯಿಂದ ಉತ್ತರಕ್ಕಿರುವ ಈ ಪ್ರಾಂತ್ಯದ ವಾಯುಗುಣ ತಂಪಾಗಿದೆ. ಇದರ ಮಧ್ಯಂತರ ಉಷ್ಣತೆ 60° ಫ್ಯಾ.—80° ಫ್ಯಾ. ಅತ್ಯಂತ ಎತ್ತರದ ಪ್ರದೇಶಗಳಲ್ಲಿ ಹಿಮ ಬೀಳುವುದೂ ಉಂಟು. ಉತ್ತರಕ್ಕಿಂತ ದಕ್ಷಿಣದ ಕಡೆಗೆ ಮಳೆ ಕಡಿಮೆ. ನೆಲವೂ ತಗ್ಗು.

ಕಾಫಿ ಇಲ್ಲಿಯ ಮುಖ್ಯ ಉತ್ಪನ್ನ. ಇದು ಇಲ್ಲಿ ಬಹುತೇಕ ಕಾಡು ಸಸ್ಯ. ನೈಋತ್ಯ ಪ್ರದೇಶದಲ್ಲಿ ವಿಶೇಷವಾಗಿ ಬೆಳೆಯುತ್ತದೆ. ಕಾಫಿ ಎಂಬ ಹೆಸರು ಬಂದದ್ದೇ ಕಫಾದಿಂದ ಎಂಬುದಾಗಿ ಕೆಲವರು ಭಾವಿಸುತ್ತಾರೆ. ಉಷ್ಣವಲಯದ ಗಟ್ಟಿ ಮತ್ತು ಮೆದುಮರಗಳು ಇತರ ಅರಣ್ಯೋತ್ಪನ್ನಗಳು. ಬತ್ತ, ಬಾರ್ಲಿ, ಎಣ್ಣೆ ಬೀಜ ಮತ್ತು ಜೋಳ ಮುಖ್ಯ ಬೆಳೆಗಳು. ಪ್ರಸ್ಥಭೂಮಿ ಪ್ರದೇಶದಲ್ಲಿ ಕುದುರೆ ಮತ್ತು ಕುರಿಗಳನ್ನು ಸಾಕುತ್ತಾರೆ. ಚಿನ್ನವೇ ಮುಂತಾದ ಖನಿಜಗಳಿರುವು ವಾದರೂ ಅವನ್ನು ಹೆಚ್ಚಾಗಿ ತೆಗೆಯುತ್ತಿಲ್ಲ.

ಜಿಮ್ಮ ಮುಖ್ಯಪಟ್ಟಣ, ವಾಣಿಜ್ಯಕೇಂದ್ರ. ಇಲ್ಲಿಂದ [illegible] ಮತ್ತು ವಿಮಾನ ಸಂಪರ್ಕಗಳಿವೆ. ಈ ಪ್ರಾಂತ್ಯದ [illegible] ಪಟ್ಟಣಗಳೊಂದಿಗೂ ವಿಮಾನ ಸಂಪರ್ಕವುಂಟು.

ಈ ಪ್ರಾಂತ್ಯದ ವಿಸ್ತೀರ್ಣ 19,000 ಚ.ಮೈ. ಜನಸಂಖ್ಯೆ ಸು. 11,00,000 (1959).

16ನೆಯ ಶತಮಾನದಲ್ಲಿ ಈ ಪ್ರದೇಶವನ್ನು ಮುಸ್ಲಿಮರು ಆಕ್ರಮಿಸಿಕೊಂಡರು. ಇಲ್ಲಿದ್ದ ಅನೇಕರು ಮುಸ್ಲಿಮರಾದರು. ಕಥಾ ರಾಜ್ಯವನ್ನು ಮೊದಲು ಒಬ್ಬ ನಿರಂಕುಶ ದೊರೆ ಆಳುತ್ತಿದ್ದ. ಇದರ ಸುತ್ತಲೂ, ನಿಸರ್ಗ ಸಹಜವಾದ ಪ್ರತಿಬಂಧಕಗಳಿಲ್ಲದಲ್ಲಿ, ಕಂದಕಗಳನ್ನೂ ಕಾಪುಗೋಡೆಗಳನ್ನೂ ನಿರ್ಮಿಸಲಾಗಿತ್ತು. 1897–99ರಲ್ಲಿ ಈ ಪ್ರಾಂತ್ಯವನ್ನು ಎರಡನೆಯ ಮೆನೆಲಿಕ್ ಜಯಿಸಿ ಇಥಿಯೋಪಿಯನ್ ಸಾಮ್ರಾಜ್ಯದಲ್ಲಿ ಸೇರಿಸಿಕೊಂಡ. ಮುಖ್ಯಕೇಂದ್ರಗಳ ಜನ ಕ್ರೈಸ್ತಧರ್ಮೀಯರಾದರು. ಆದರೂ ಬಹಳ ಕಾಲ ಇಲ್ಲಿಯ ಜನರನ್ನು ಗುಲಾಮರಂತೆ ಹೊರಕ್ಕೆ ಸಾಗಿಸಿ ಮಾರಾಟ ಮಾಡಲಾಗುತ್ತಿತ್ತು. (ಕೆ.ಆರ್.ಆರ್.)

**ಕಬಂಧ:** ರಾಮನಿಂದ ಹತರಾದ ರಾಕ್ಷಸರಲ್ಲಿ ಒಬ್ಬ. ಕುವೆಂಪು ಅವರು ಈತನನ್ನು ಅಕಶೀರು ಕಶ್ಮಲ ಸರೀಸೃಪ—ಎಂದು ಬಣ್ಣಿಸಿದ್ದಾರೆ. ಶ್ರೀರಾಮ ಸುವರ್ಣಮೃಗ ರೂಪವನ್ನು ಧರಿಸಿದ ಮಾರೀಚನನ್ನು ಕೊಂದು ಹಿಂತಿರುಗಿ ಸೀತಾಶೂನ್ಯವಾದ ಆಶ್ರಮವನ್ನು ಕಂಡು ನೊಂದು, ಸೀತೆಯನ್ನು ಹುಡುಕುತ್ತ ಮುಂದೆ ಸಾಗುತ್ತಿರಲಾಗಿ ದಂಡಕಾರಣ್ಯದ ದಕ್ಷಿಣ ಭಾಗದಲ್ಲಿ ಮೇಘಾಕೃತಿಯ ಮಹಾಪರ್ವತದಂತೆಯೂ ಸಾಲವೃಕ್ಷದಂತೆ ಹೆಗಲುಳ್ಳವನಾಗಿಯೂ ದೊಡ್ಡದಾದ ಭುಜಗಳುಳ್ಳವನಾಗಿಯೂ ಎದೆಯ ಭಾಗದಲ್ಲಿ ವಿಸ್ತಾರವಾದ ಕಣ್ಣುಳ್ಳವನಾಗಿಯೂ ಇದ್ದ, ಬೃಹದಾಕಾರವಾದ ಹೊಟ್ಟೆಯೆಂಬ ಮುಖವುಳ್ಳ, ಘೋರಾಕೃತಿಯ ಪುರುಷನೊಬ್ಬನನ್ನು ಕಂಡ. ಕೂಡಲೆ ರಾಮ ಅವನ ಎಡಭುಜವನ್ನೂ ಲಕ್ಷ್ಮಣ ಬಲಭುಜವನ್ನೂ ಕತ್ತರಿಸಿದರು. ಕಬಂಧ ಅಸು ನೀಗಿದ. ಒಡನೆಯೆ ಅವನ ದೇಹದಿಂದ ದಿವ್ಯಾಕೃತಿಯ ಪುರುಷನೊಬ್ಬ ಹೊರಬಂದು ಅಂತರಿಕ್ಷದಲ್ಲಿ ಸೂರ್ಯನಂತೆ ಜ್ವಲಿಸುತ್ತ ನಿಂತು, ಹಿಂದೆ ವಿಶ್ವಾವಸುವೆಂಬ ಗಂಧರ್ವನಾದ ತನಗೆ ಬ್ರಾಹ್ಮಣ ಶಾಪದಿಂದ ರಾಕ್ಷಸ ಸ್ವರೂಪ ಬಂದುದನ್ನೂ ರಾಮಾದಿಗಳಿಂದ ಶಾಪವಿಮೋಚನೆಯಾದುದನ್ನೂ ತಿಳಿಸಿ, ರಾವಣ ಸೀತೆಯನ್ನು ಕದ್ದೊಯ್ದು ಲಂಕಾಪುರಿಯಲ್ಲಿ ಇಟ್ಟಿರುವನೆಂದೂ ಸಮಾನ ವ್ಯಸನಿಯಾದ ಸುಗ್ರೀವನಿಂದ ಸೀತಾಪ್ರಾಪ್ತಿಗೆ ಬೇಕಾದ ಅನುಕೂಲವೆಲ್ಲ ದೊರಕುವುದೆಂದೂ ತಿಳಿಸಿ ಅದೃಶ್ಯನಾದ. ಇದು ವಾಲ್ಮೀಕಿ ರಾಮಾಯಣದ ವಿವರ. (ಎನ್.ಎಸ್.ಆರ್.ಬಿ.)

**ಕಬಿಂಡ:** ಕಾಂಗೋ ನದೀಮುಖದ ಭೂಮಿಯ ಉತ್ತರದಲ್ಲಿ ಆಫ್ರಿಕದ ಪಶ್ಚಿಮ ತೀರದಲ್ಲಿರುವ ಒಂದು ಪೋರ್ಚುಗೀಸ್ ವಸಾಹತು. ಪಶ್ಚಿಮದಲ್ಲಿ ಅಟ್ಲಾಂಟಿಕ್ ಸಾಗರವೂ ಉಳಿದ ಕಡೆಗಳಲ್ಲಿ ಕಾಂಗೋ ಗಣರಾಜ್ಯವೂ ಇವೆ. ಕಬಿಂಡದ ಕರಾವಳಿಯ ಉದ್ದ 56 ಮೈ. ಈ ಪ್ರದೇಶದ ಗರಿಷ್ಠ ಅಗಲ 70 ಮೈ. ವಿಸ್ತೀರ್ಣ 2,807 ಚ.ಮೈ. ಜನಸಂಖ್ಯೆ (1960) 58,547. ಇವರಲ್ಲಿ 1,992 ಮಂದಿ ಐರೋಪ್ಯರೂ 634 ಮಿಶ್ರ ಜನಾಂಗದವರೂ ಇದ್ದಾರೆ. ಆಡಳಿತ ದೃಷ್ಟಿಯಿಂದ ಕಬಿಂಡ ಅಂಗೋಲದ ಒಂದು ಪ್ರಾಂತ್ಯ. ಕಾಂಗೋ ನದಿಯೂ ಕಾಂಗೋ ಗಣರಾಜ್ಯದ ಒಂದು ತುಣುಕೂ ಇದನು ಅಂಗೋಲದಿಂದ ಪ್ರತ್ಯೇಕಿಸಿವೆ. ಇದರಲ್ಲಿ ಕಬಿಂಡ, ಕಕಾಂಗೋ, ಮಯೊಂಬೆ ಎಂಬ ವಿಭಾಗಗಳಿವೆ. ಕಬಿಂಡದ ಜನ ಬಂಟು ನೀಗ್ರೋಗಳು. ಕಬಿಂಡರೆಂದೇ ಇವರನ್ನು ಕರೆಯುತ್ತಾರೆ. ಈ ಜನ ಬುದ್ಧಿವಂತರು, ಸಮರ್ಥರು, ಚತುರರು. ಕೆಚ್ಚಿನ ನಾವಿಕರೆಂದೂ ಒಳ್ಳೆಯ ವ್ಯಾಪಾರಿಗಳೆಂದೂ ಹೆಸರು ಗಳಿಸಿದ್ದಾರೆ. ಮಯೊಂಬೆ ಅರಣ್ಯ ಸಂಪತ್ಸಮೃದ್ಧವಾದದ್ದು. ಇದು ಪ್ರವಾಸಿಗಳ ಸ್ವರ್ಗ. ಸಾರಿಗೆಯದೇ ತೊಂದರೆ.

ಕಬಿಂಡದ ಮುಖ್ಯ ಉತ್ಪನ್ನಗಳು ಕಾಫಿ, ಕೋಕೋ, ತಾಳೆ ಎಣ್ಣೆ, ಮತ್ತು ತಿರುಳು ಮತ್ತು ಮರದ ದಿಮ್ಮಿ. ರಬ್ಬರ್ ಮತ್ತು ಹಣ್ಣುಗಳ ಉತ್ಪಾದನೆಗೂ ಹೆಚ್ಚು ಅನುಕೂಲವುಂಟು. ದಂತವೂ ಧಾರಾಳವಾಗಿ ದೊರಕುತ್ತದೆ. ಮಣ್ಣಿನಿಂದ ಚಿನ್ನ ತೆಗೆಯಲಾಗುತ್ತದೆ. ಇಲ್ಲಿಯ ಖನಿಜಸಂಪತ್ತಿನಲ್ಲಿ ಅಮೆರಿಕನ್ ಕಂಪನಿಗಳಿಗೆ ಬಹಳ ಆಸಕ್ತಿಯುಂಟು. 1957ರಲ್ಲಿ ಪೆಟ್ರೋಲ್ ತೆಗೆಯಲು ಒಪ್ಪಂದ ಮಾಡಿಕೊಳ್ಳಲಾಯಿತು. ಇಲ್ಲಿಯ ಮುಖ್ಯಪಟ್ಟಣ ಮತ್ತು ಬಂದರು ಕಬಿಂಡ —ಬಿಲಿ ಎಂಬ ಸಣ್ಣ ನದಿಯ ಬಲದಂಡೆಯ ಮೇಲಿದೆ. ಈ ಪಟ್ಟಣದ ಜನಸಂಖ್ಯೆ (1960) 13,499. ಇವರಲ್ಲಿ 1,106 ಮಂದಿ ಬಿಳಿಯರು. ಉತ್ತರದಲ್ಲಿರುವ ಲಾಂಡನ ಇನ್ನೊಂದು ಪಟ್ಟಣ ಮತು ಬಂದರು. (ಬಿ.ಎಸ್.ಎಚ್.)

**ಕಬೀರ ದಾಸ:** 1440–1518. ಭರತ ವರ್ಷದ ಉತ್ತರ ಭಾಗಗಳಲ್ಲಿ, ಬಹಳವಾಗಿ ಪ್ರಚಾರಕ್ಕೆ ಬಂದ ಒಂದು ಧರ್ಮ ಪಂಥದ ಸ್ಥಾಪಕ. ಹುಟ್ಟಿದ್ದು ವಾರಾಣಸಿಯಲ್ಲಿ. ಅಲ್ಲಿಯ ಮುಸಲ್ಮಾನ ನೆಯ್ಗೆಕಾರ ಒಬ್ಬ ಊರಿಂದ ಕೆಲವು ಮೈಲಿಗಳ ದೂರದ ಲಹರ್ ತಲಾವ್ ಎಂಬ ಕೆರೆಯಲ್ಲಿ ತೇಲುತ್ತಿದ್ದ ಮಗುವೊಂದನ್ನು ಕಂಡು ಎತ್ತಿಕೊಂಡು ಮನೆಗೆ ತಂದನಂತೆ. ಅವನ ಹೆಂಡತಿ ಮಗುವನ್ನು ಸಾಕಿದಳು. ಅವರು ಅದಕ್ಕೆ ಕಬೀರ್ ಎಂದು ಹೆಸರಿಟ್ಟರು. ಕಬೀರ್ ಎಂದರೆ ಅರಬ್ಬೀಭಾಷೆಯಲ್ಲಿ ಮಹಿಮಾನ್ವಿತ ಎಂದು ಅರ್ಥ. ಬೆಳೆಯುವ ದಿನದಲ್ಲಿ ಗೋಸಾಯಿ ಅಷ್ಟಾಪಂದ್ ಎಂಬಾತನ ಪ್ರಭಾವದಿಂದ ಕಬೀರ್ ದೇವರನ್ನು ಹರಿ ಎಂದೂ ರಾಮ ಎಂದೂ ಕರೆದ. ಮುಸ್ಲಿಂ ಜನ ಇವನನ್ನು ಧರ್ಮಭ್ರಷ್ಟ ಎಂದು ದೂರಿದರು. ಧರ್ಮಭ್ರಷ್ಟ ನಾನಲ್ಲ, ಕೆಟ್ಟ ಬಾಳು ನಡೆಸುವ ಜನ ಧರ್ಮಭ್ರಷ್ಟರು, ಎಂದು ಪ್ರತಿ ಹೇಳಿದ. ಜಾತಿಮುಖ್ಯವಲ್ಲ, ಗುಣ ಮುಖ್ಯ ಎಂಬ ನಂಬಿಕೆಯಲ್ಲಿ ನಡೆದು ಕಬೀರ್ ಜನರಲ್ಲಿ ಒಬ್ಬ ಪ್ರಮುಖನಾಗಿ ನಿಂತ. ಕಬೀರ್ ಒಮ್ಮೆ ಜನಿವಾರ ಹಾಕಿಕೊಂಡು ತಾನು ದ್ವಿಜನಾದೆ ಎಂದನಂತೆ. ಒಬ್ಬ ಬ್ರಾಹ್ಮಣ ಈ ನಡತೆಯನ್ನು ನಿಷೇಧಿಸಿದ. ಜನಿವಾರ ಹೃದಯದಲ್ಲಿ ದೇವರಿರುವುದರ ಗುರುತು.



ಮಹಾತ್ಮಾ ಕಬೀರ್ ಚಲನಚಿತ್ರದಲ್ಲಿ ಎಂ. ವಿ. ಸುಬ್ಬಯ್ಯನಾಯ್ಡು—ಕಬೀರನ ಪಾತ್ರದಲ್ಲಿ

ನನ್ನ ಹೃದಯದಲ್ಲಿ ದೇವರಿದ್ದಾನೆ, ನಿನ್ನ ಹೃದಯದಲ್ಲಿಲ್ಲ; ಇದನ್ನು ಹಾಕಿಕೊಳ್ಳುವುದಕ್ಕೆ ನಿನಗಿಂತ ನನಗೆ ಹೆಚ್ಚು ಅಧಿಕಾರ–ಎಂದು ಕಬೀರ್ ಹೇಳಿದನಂತೆ. ದಿನ ಕಳೆದಂತೆ ಜನ ಇವನನ್ನು ಒಬ್ಬ ಸಂತನೆಂದು, ಗುರು ಎಂದು ಒಪ್ಪಿಕೊಂಡರು. ಶುಷ್ಕ ಆಚಾರ, ಭಾವಹೀನ ಪೂಜನ ಇಂಥ ವ್ಯರ್ಥವರ್ತನವನ್ನು ಕಬೀರ್ ಖಂಡಿಸಿ, ನಿಷ್ಕಾಮಕರ್ಮದ ಉಪದೇಶಕನಾದ. ರಾಮಾನಂದನಲ್ಲಿಗೆ ಹೋಗಿ ಅವನನ್ನು ಗುರುವಾಗಿ ಸ್ವೀಕರಿಸಿದ. ದೇವರನ್ನು ರಾಮ ಎಂದು ರಹೀಮ್ ಎಂದು ಹೇಗೆ ಕರೆದರೂ ಸರಿಯೇ, ಭಕ್ತಿಯಿಂದ ಕರೆಯಿರಿ, ಎಂದು ಹೇಳಿ ಕಬೀರ್ ಆಚಾರವಂತ ಹಿಂದೂ ಆಚಾರವಂತ ಮುಸಲ್ಮಾನ ಇವರ ಎರಡು ಸಮುದಾಯವನ್ನೂ ಹಗೆಮಾಡಿಕೊಂಡ. ಆದರೆ ಇವನನ್ನು ಮೆಚ್ಚಿ ಅನೇಕ ಜನ ಇವನ ಅನುಯಾಯಿಗಳಾದರು. ತನ್ನ ಶುದ್ಧ ಜೀವನದಿಂದ ಕಬೀರ್ ಅನೇಕ ಸಿದ್ಧಿಗಳನ್ನು ಗಳಿಸಿದ. ಇವನ ಮಹಿಮೆಯನ್ನು ಕೇಳಿ ಬಾದಷಹ ಸಿಕಂದರ್ ಲೋದಿ ಇವನಿಗೆ ಹಣವನ್ನು, ನೆಲವನ್ನು ಕೊಡುವೆನೆಂದ. ಕಬೀರ್ ಅವನ್ನು ಸ್ವೀಕರಿಸಲಿಲ್ಲ. ಕಬೀರನನ್ನು ಕುರಿತು ಅನೇಕ ಪವಾಡ ಕಥೆಗಳಿವೆ. ಧರ್ಮವನ್ನು ಕುರಿತು ವಾದಿಸಲು ಬಂದ ಅನೇಕರನ್ನು ಕಬೀರ್ ಸೋಲಿಸಿದ. ಅದಕ್ಕೂ ಹೆಚ್ಚಿನ ಸಂಗತಿ ಇವನ ಹಗೆಗಳು ಇವನಿಗೆ ಒಡ್ಡಿದ ಪ್ರಲೋಭನ, ವಿಷಪರೀಕ್ಷೆಗಳಲ್ಲಿ ಇವನು ಸೋಲದೆ ನಿಂತದ್ದು. ವಾರಾಣಸಿ ಪುಣ್ಯಕ್ಷೇತ್ರ, ಅಲ್ಲಿ ಸತ್ತವರಿಗೆ ಮುಕ್ತಿ—ಎಂಬ ಮಾತಿನಲ್ಲಿ ಹುರುಳಿಲ್ಲ ಎಂದು ತೋರಿಸುವುದಕ್ಕೆ ಕಬೀರ್ ಇಲ್ಲಿ ಸತ್ತವರು ಕತ್ತೆಯಾಗಿ ಹುಟ್ಟುತ್ತಾರೆ ಎಂದು ಪ್ರತೀತಿ ಪಡೆದಿದ್ದ ಮಗಹರ ಎಂಬ ಸ್ಥಳದಲ್ಲಿ ನಿಂತು ಅಲ್ಲಿ ತೀರಿಕೊಂಡನಂತೆ. ಜನ ಮಹನೀಯರೆಂದು ಗಣಿಸಿರುವ ಇಂಥ ಇತರ ಹಿರಿಯರ ವಿಷಯದಲ್ಲಿ ಬೆಳೆದಿರುವಂತೆ ಇವನ ವಿಷಯದಲ್ಲೂ ಒಂದು ಕಥೆ ಬೆಳೆದಿದೆ. ಶಿಷ್ಯರಲ್ಲಿ ಹಿಂದೂಗಳಾದವರು ಇವನ ದೇಹವನ್ನು ಸುಡಬೇಕೆಂದೂ ಮುಸಲ್ಮಾನರು ಹೂಳಬೇಕೆಂದೂ ಅಪೇಕ್ಷಿಸಿದರು. ದೇಹ ಇವರಿಗೂ ಸಿಕ್ಕಲಿಲ್ಲ, ಅವರಿಗೂ ಸಿಕ್ಕಲಿಲ್ಲ. ಅದಕ್ಕೆ ಹೊದ್ದಿಸಿದ್ದ ಹಚ್ಚಡವನ್ನು ತೆಗೆದು ನೋಡಿದಾಗ ಅದರಡಿ ಒಂದಿಷ್ಟು ಹೂವಿನ ರಾಶಿ ಮಾತ್ರ ಇತ್ತು. ಶಿಷ್ಯವರ್ಗದವರು ಇದರ ಮೇಲೆ ಒಂದು ಮಂದಿರವನ್ನೂ ಒಂದು ಸಮಾಧಿಯನ್ನೂ ಅಕ್ಕಪಕ್ಕದಲ್ಲಿ ಕಟ್ಟಿದರು. ಮೃತನಾದ ಕಬೀರ್ ಆಮೇಲೆ ಮರಳಿ ಎದ್ದನೆಂದೂ ತನ್ನ ಅನಂತರ ಗುರುವಾಗಿರಲು ತಾನೇ ನೇಮಿಸಿದ ಧರ್ಮದಾಸನಿಗೆ ಇತರ ಕೆಲವು ಶಿಷ್ಯರಿಗೆ, ಕಂಡನೆಂತಲೂ ಇನ್ನೊಂದು ಕಥೆ ಹೇಳುತ್ತದೆ. ಹೀಗೆ ಕಂಡಾಗ ಅವನು ತನ್ನ ಪಂಥದ ಆಧಾರ ಸೂತ್ರಗಳೆಂದು ನಲವತ್ತೆರಡು ಸಂಗತಿಗಳನ್ನು ಹೇಳಿ ಅನಂತರ ದಿವ್ಯವಸ್ತು ಸೇರಿದನಂತೆ.

ಕಬೀರನ ಗೀತಗಳು ನೂರಾರು. ಕನ್ನಡ ದೇಶದಲ್ಲೂ ಭಕ್ತಜನರು ಭಜನೆಗಳಲ್ಲಿ ಇವನ ಗೀತಗಳನ್ನು ಹಾಡುತ್ತಾರೆ. ಕಹತ ಕಬೀರಾ ಸುನೋ ಭೈ ಸಾಧು—ಎಂಬ

ಕೊನೆಯ ಪಲ್ಲವಿಯನ್ನುಳ್ಳ ಹಲವು ಹಾಡುಗಳು ನಮಗೆಲ್ಲ ಪರಿಚಿತವಾಗಿವೆ. ಬೆತ್ತಲೆ ನಡೆದಾಡಿ ಸಾಯುಜ್ಯ ಪಡೆಯುವುದಾದರೆ ಅರಣ್ಯದ ಮೃಗಗಳೆಲ್ಲ ಮುಕ್ತ ಜೀವಿಗಳಿ. ಬೆತ್ತಲೆ ನಡೆದೂ ಇಲ್ಲ; ತೊಗಲನ್ನು ಹೊದೆದೂ ಏನೂ ಫಲವಿಲ್ಲ. ಒಳಗೆ ದೈವಸಿದ್ಧಿ ಆಗಬೇಕು. ತಲೆ ಬೋಳಿಸಿಕೊಂಡಷ್ಟಕ್ಕೆ ಒಬ್ಬ ಪೂರ್ಣನಾಗ ಬಹುದಾದರೆ ಉಣ್ಣೆ ಕತ್ತರಿಸಿದ ಕುರಿಗಳು ಏಕೆ ಪೂರ್ಣ ಅಲ್ಲ ? ಇಂದ್ರಿಯ ಸುಖವನ್ನು ಕಾಣದವ ಮುಕ್ತನೆನ್ನುವುದಾದರೆ ಷಂಡರು ಷಂಡರಾದ ಕಾರಣದಿಂದಲೆ ಬ್ರಹ್ಮವನ್ನು ಮುಟ್ಟಿರಬೇಕು. ಕಬೀರ ಹೇಳುತ್ತಾನೆ, ಕೇಳಿ, ಸಾಧು ಸಹೋದರರೆ ಭಗವಂತನ ಪಾವನ ನಾಮದ ಮೂಲಕ ಹೊರತು ಯಾರಿಗೂ ಮುಕ್ತಿ ದೊರಕಿಲ್ಲ. ಇದು ಒಂದು ಕಬೀರವಚನ. (ಎಂ.ವಿ.ಐ.;ಎಚ್‌.ಆರ್‌.ಆರ್‌.ಐ.)

ಕಬೀರನ ಉಪದೇಶಗಳಲ್ಲಿ ಸೂಫಿಪಂಥದ ಮತ್ತು ವೇದಾಂತಧರ್ಮದ ಸಾಮರಸ್ಯವನ್ನು ಕಾಣಬಹುದು. ವೇದಾಂತಿಯಾಗಿದ್ದರೂ ಈತ ಆರಾಧಿಸುತ್ತಿದ್ದ ದೇವರು ನಿರ್ಗುಣಬ್ರಹ್ಮನೇ ಸಗುಣೇಶ್ವರನೇ ಎಂಬ ವಿಷಯದಲ್ಲಿ ವಿವಾದ ಹುಟ್ಟಿದೆ. ಇವನು ನಿರ್ಗುಣ ಪಂಥಕ್ಕೆ ಸೇರಿದವನೆಂದು ಕೆಲವು ವಿದ್ವಾಂಸರು ಅಭಿಪ್ರಾಯ ಪಡುತ್ತಾರೆ. ಮತ್ತೆ ಕೆಲವರು ಇವನ ಇಷ್ಟದೇವತೆ ರಾಮನಾಗಿದ್ದ ನೆಂದೂ ಇವನು ಸಗುಣೇಶ್ವರೋಪಾಸಕನೆಂದೂ ಅಭಿಪ್ರಾಯಪಡುತ್ತಾರೆ. ಇವನಿಗೆ ಕರ್ಮ ಮತ್ತು ಪುನರ್ಜನ್ಮಗಳಲ್ಲಿ ನಂಬಿಕೆ ಇದ್ದಂತೆ ತೋರುತ್ತದೆ. ಇವನ ಪದ್ಯಗಳಲ್ಲಿ ಭಗವದ್ಭಕ್ತಿ ತುಳುಕಾಡುತ್ತದೆ.

ಕಬೀರನ ಪದ್ಯಗಳು ಹಿಂದೀ ಭಾಷೆಯ ರೂಪಾಂತರವಾದ ಅವಧಿ ಭಾಷೆಯಲ್ಲಿದೆ. ಇವನ ಕವಿತೆಗಳು ಕೃತಕ ಶೈಲಿಯಲ್ಲಿಲ್ಲದೆ ಸಹಜವಾಗಿ ಹೃದಯದಿಂದ ಹೊರ ಹೊಮ್ಮಿದ ಮಾತುಗಳಂತೆ ಇವೆ. ಸುಮಾರು 1570ರಲ್ಲಿ ಕಬೀರನ ಪದ್ಯಗಳ ವಚನಗಳ ಸಂಕಲನ ಬೀಜಕ್ ಎಂಬ ಹೆಸರಿನಿಂದ ಪ್ರಕಟವಾಯಿತು. ಇದಾದ ಸುಮಾರು ಮೂವತ್ತು ವರ್ಷಗಳ ಅನಂತರ ಇವನ ವಚನಗಳು ಸಿಖ್ಖರ ಗ್ರಂಥದೊಳಗೆ ಅಳವಟ್ಟುವು.

ಕಬೀರನ ಅನುಯಾಯಿಗಳು ಕಬೀರ ಪಂಥಿಗಳೆಂದು ಕರೆದುಕೊಂಡಿದ್ದಾರೆ. ಇದಲ್ಲದೆ ಕಬೀರನ ಸ್ಫೂರ್ತಿಯಿಂದ ಹುಟ್ಟಿದ ಭಕ್ತಿಪಂಥಗಳು ನಾನಾ ಬಗೆಯಾಗಿವೆ. ಇವುಗಳಲ್ಲಿ ಪ್ರಸಿದ್ಧವಾದವು ಸಿಖ್ಖರು, ದಾದುಪಂಥಿಗಳು, ಲಾಲ್‌ದಾಸಿಗಳು ಮೊದಲಾದವರು. ಸಿಖ್‌ಮತದ ಸ್ಥಾಪಕನಾದ ನಾನಕ್ ಮತ್ತು ದಾದು ಎಂಬ ಸಂತರ ಮೇಲೆ ಕಬೀರನ ಪ್ರಭಾವ ವಿಶೇಷವಾಗಿ ಬಿದ್ದಿದೆ. ಕಬೀರನಿಂದ ಸ್ಫೂರ್ತಿಗೊಂಡ ಈ ಎಲ್ಲ ಪಂಥಗಳಿಗೆ ಸಮಾನವಾದ ಅಭಿಪ್ರಾಯಗಳು ಹೀಗಿವೆ :

1 ಜಗತ್ತಿಗೆಲ್ಲ ದೇವರು ಒಬ್ಬನೇ. ಅವನನ್ನೇ ಆರಾಧನೆ ಮಾಡಬೇಕು. ಅವನ ಪೂಜೆ ವಿಗ್ರಹದ ಮೂಲಕವಾಗಿ ಅಲ್ಲ.

2 ಅಧ್ಯಾತ್ಮ ಸಾಧನೆ ಜಾತಿ ಕುಲ ಭೇದಗಳಿಲ್ಲದೆ ಎಲ್ಲರಿಗೂ ತೆರೆದ ದಾರಿ ಯಾಗಿದೆ.

3 ಭಕ್ತಿಪಂಥ ಹಿಂದುಗಳಿಗೂ ಮುಸಲ್ಮಾನರಿಗೂ ಸಮಾನವಾಗಿ ತೆರೆದಿಟ್ಟ ಪಂಥ.

4 ಅಧ್ಯಾತ್ಮ ಜೀವನದಲ್ಲಿ ಮುಂದುವರಿಯಬೇಕಾದರೆ ಸದ್ಗುರುವಿನ ಸಾನ್ನಿಧ್ಯ ಆವಶ್ಯಕ.

5 ಭಕ್ತಿಸಾಹಿತ್ಯವೆಲ್ಲ ಪಂಡಿತರ ಭಾಷೆಯಲ್ಲಿಲ್ಲದೆ ಸಾಮಾನ್ಯ ಜನಕ್ಕೆ ಎಟುಕ ಬಲ್ಲ ಸಾಮಾನ್ಯ ದೇಶಭಾಷೆಯಲ್ಲಿರಬೇಕು.

ಬರಬರುತ್ತ ಕಬೀರನ ಪಂಥ ಹಿಂದೂಧರ್ಮದ ಇತರ ಭಾವ ಭಾವನೆಗಳನ್ನು ಅಳವಡಿಸಿಕೊಂಡು ಹಿಂದೂಧರ್ಮದ ಇತರ ಪಂಥಗಳಂತೆ ಅದರ ಒಂದು ಶಾಖೆ ಯಾಗಿ ಪರಿವರ್ತಿತವಾಯಿತು.

ರವೀಂದ್ರನಾಥ ಠಾಕೂರರು ಕಬೀರನ ಒಂದು ನೂರು ಆರಿಸಿದ ಪದ್ಯಗಳನ್ನು ಇಂಗ್ಲಿಷ್ ಭಾಷೆಗೆ ಅನುವಾದ ಮಾಡಿದ್ದಾರೆ. ಕನ್ನಡಕ್ಕೂ ಅನೇಕ ವಚನಗಳು ಅನುವಾದವಾಗಿವೆ. (ಎಂ.ವೈ.)

ಕಬೀರ ತನ್ನ ಭಾಷೆಯನ್ನು ಪೂರಬೀ (ಪೂರ್ವದ ಭಾಷೆ) ಎಂದಿದ್ದಾನೆ. ಭೋಜಪುರೀ ಭಾಷೆಗೆ ಪೂರಬೀ ಎಂದು ಹೆಸರಿದೆ. ವಾರಾಣಸಿಯಿಂದ ಗೋರಖ ಪುರದ ವರೆಗಿನ ಭಾಷೆ ಭೋಜಪುರೀ. ಕಬೀರ ಬಾಳಿ ಬದುಕಿದ್ದುದು ವಾರಾಣಸಿಯಲ್ಲಿ. ಆದರೆ ಇವನ ಭಾಷೆಯ ಮೇಲೆ ಪಂಜಾಬೀ ಭಾಷೆಯ ಪ್ರಭಾವ ಎದ್ದುಕಾಣುತ್ತದೆ. ಈತನ ಪಂಜಾಬದತ್ತಣ ಲಿಪಿಕಾರಶಿಷ್ಯರ ಕಾರ್ಯ ಇದಾಗಿರಬೇಕೆಂದು ಡಾ. ರಾಮ ಕುಮಾರವರ್ಮರ ಅಭಿಮತವಾಗಿದೆ.

ಕಬೀರ ಲೋಕಸಂಚಾರಿ. ಜನತೆಯ ಮಡಿಲಲ್ಲಿಯೇ ಮೆರೆದವ. ಹೋದ ಹೋದ ಕಡೆಯ ಜನಭಾಷೆಯ ಪ್ರಭಾವ ಅವನ ಭಾಷೆಯ ಮೇಲೆ ಬಿದ್ದಿರುವುದು ಸಹಜ ವಾದದ್ದು. ಹೀಗಾಗಿ ಅವನದು ಭೋಜಪುರೀ, ಪಂಜಾಬೀ, ವ್ರಜ, ಅವಧೀ ಹಾಗೂ ಖಡಿಬೋಲಿಗಳ ಸಮ್ಮಿಶ್ರವಾದ ಲೋಕಭಾಷೆಯಾಗಿದೆ. ಇದನ್ನು ರಾಮಚಂದ್ರ ಶುಕ್ಲ ಸಾಧುಕ್ಕಡೀ (ಸಾಧುಗಳ ಭಾಷೆ) ಎಂದಿದ್ದಾರೆ.

ಕಬೀರ ಸರ್ವಜ್ಞನಂತೆ ನಿರಂತರ ವಾಗ್ವಿಭೂತಿಯ ಚೆಲುವನ್ನು ಬೆಳಗುವ ದೇವ ದೂತನಾಗಿದ್ದ. ಇವನ ಸಾಹಿತ್ಯ ಅಪಾರವಾದದ್ದು. ತಾನೇ ಹೇಳಿಕೊಂಡಿರುವಂತೆ ಈತ ಮಸಿ ಕಾಗದ ಮುಟ್ಟಲ್ಲ, ಕರದಲ್ಲಿ ಲೇಖನಿ ಹಿಡಿದಿಲ್ಲ. ಆದರೆ ನಾಲ್ಕು ಯುಗಗಳ ಮಹಾತ್ಮ್ಯವನ್ನು ಬಾಯ ಮಾತಿನಿಂದಲೇ ಸಾರಿದ್ದಾನೆ. ಶಿಷ್ಯರು ಅವನ್ನು ಸಂಗ್ರಹಿಸಿದರು, ಅಷ್ಟೇ.

ಕಬೀರನ ಕೃತಿಗಳು : 1 ಕಬೀರ ಸಾಹಬಕೀ ಶಬ್ದಾವಲಿ, 2 ಕಬೀರನಕೀ ಪದ, 3 ಸಾಖಿಯಾಂ, 4 ಬೀಜಕ್, 5 ಸಂತಕಬೀರ, 6 ಕಬೀರ ವಚನಾವಲಿ ಹಾಗೂ 7 ಕಬೀರ ಗ್ರಂಥಾವಲಿ—ಈ ಗಂಥಗಳಲ್ಲಿ ಕಬೀರ ಗ್ರಂಥಾವಲಿ ಹೆಚ್ಚು ಪ್ರಾಮಾಣಿಕ ವೆಂದು ನಂಬಲಾಗಿದೆ. ಇವನ ಕೃತಿಗಳು ಹಾಡುಗಳ ಹಾಗೂ ಪದ್ಯಗಳ ರೂಪವಾಗಿ ರಚಿಸಲ್ಪಟ್ಟಿವೆ. ಅವನ್ನು ಮೂರು ವಿಧವಾಗಿ ವಿಂಗಡಿಸಿದ್ದಾರೆ. 1 ಸಾಖೀ, 2 ಸಬದ ಅಥವಾ ಸಬದೀ 3 ರಮೈನೀ.

1 ಸಾಖೀ : ಇದು ಸಾಕ್ಷಿ ಶಬ್ದದ ವಿಕೃತರೂಪ. ಸಾಕ್ಷೀಭೂತವಾಗಿ ಕಂಡು ಅನುಭವಿಸಿದ ಈ ಉಕ್ತಿಗಳಿಗೆ ಸಾಕ್ಷಿ ಎಂದು ಹೆಸರು. ಸಾಕ್ಷಿಯೇ ಜ್ಞಾನದ ಅಕ್ಷಿ ಎಂದು ಈತನೇ ಒಂದೆಡೆ ಘೋಷಿಸಿದ್ದಾನೆ. ಇವೆಲ್ಲ ದೋಹಾ ಹಾಗೂ ಸೋರಠಾ ಎಂಬ ದ್ವಿಪದಿ ಛಂದಗಳಲ್ಲಿ ವ್ಯಕ್ತವಾಗಿವೆ. ಕಬೀರನ ಜ್ಞಾನದ ಭಂಡಾರಗಳೇ ಈ ಸಾಕ್ಷಿಗಳು. ಇವನ್ನು ಗುರುವಿನ ಅಂಗ, ವಿರಹ ವಿಚಾರ, ಸ್ಮರಣೆಯ ವಿಚಾರ–ಎಂದು ಮುಂತಾಗಿ ವಿಭಾಗಿಸಿದ್ದಾರೆ.

2 ಸಬದ್ ಅಥವಾ ಸಬದೀ : ಕಬೀರ ಹಾಡಿದ ಪದಗಳ ಸಂಗ್ರಹಕ್ಕೆ ಸಬದ್ ಅಥವಾ ಸಬದೀ ಎನ್ನುತ್ತಾರೆ. ಕಬೀರನ ನಿಜವಾದ ರಸಸ್ರೋತವಿರುವುದೇ ಇವುಗಳಲ್ಲಿ. ಸಬದೀ ಎಂದರೆ ಧ್ವನಿ. ಅಂತರಂಗಸ್ಫೂರ್ತ ಆ ನಾದಧ್ವನಿಯೇ ಸಬದಿಯಾಗಿ ಹೊರಬಂದಿದೆ——ಎಂಬ ಭಾವ ಇದರದಾಗಿರಬೇಕು.

ದಾಂಪತ್ಯಪ್ರೇಮಶೀಲವಾದ ಕಬೀರನ (ಮಧುರಾ) ಭಕ್ತಿಗೀತೆಗಳು ಲೋಕ ಪ್ರಸಿದ್ಧವಾಗಿವೆ.

ಘೂಂಘಟಕಾ ಪಟ ಖೋಲರೇ, ಅಬ ಪೀವ ಮಿಲೇಂಗೆ (ಮುಖದ ಸೆರಗನ್ನು ಸರಿಸು ರಮಣೀ, ಈಗ ಪ್ರಿಯತಮನ ಮಿಲನ ಸಮಯ) ಎಂಬ ಲೋಕವಿಖ್ಯಾತ ಗೀತ ಈ ಸಬದಿಯ ಒಂದುರೂಪವೆನ್ನಬೇಕು.

2 ರಮೈನೀ : ಆಧ್ಯಾತ್ಮದಲ್ಲಿ ಸೂಕ್ಷ್ಮ ವಿಚಾರಗಳ ಉದ್ಘಾಟನೆಯೇ ರಮೈನೀ ಯಾಗಿರಬೇಕು. ರಮೈನೀಗಳು ದೋಹಾ (ದ್ವಿಪದಿ) ಹಾಗೂ ಚೌತಾಯಿ (ಚೌಪದಿ) ಗಳಲ್ಲಿ ರಚಿಸಲ್ಪಟ್ಟಿವೆ. ಜ್ಞಾನಮಾರ್ಗದ ಅನೇಕ ತತ್ತ್ವಗಳು ಇಲ್ಲಿ ನಿರೂಪಿತವಾಗಿವೆ. (ಆರ್‌.ಜಿ.ಕೆ.)

**ಕಬೀಲಾ :** ಭಾರತದ ಆದಿವಾಸಿಗಳ ಅಥವಾ ಗಿರಿಜನರ ಬುಡಕಟ್ಟನ್ನು ಸೂಚಿಸುವ ಶಬ್ದ. ಕಬೀಲಿ ಎಂಬುದು ಆ ಬುಡಕಟ್ಟಿಗೆ ಸೇರಿದ ವ್ಯಕ್ತಿಯನ್ನು ಸೂಚಿಸುತ್ತದೆ. ಕಬೀಲ್ ಮತ್ತು ಕಬೀಲಿ ಎಂಬ ರೂಪಗಳು ಗುಣವಾಚಕಗಳ ರೂಪದಲ್ಲಿ ಬಳಕೆಯಲ್ಲಿವೆ. ಇಷ್ಟಾದರೂ ಕಬೀಲಾ ಶಬ್ದಕ್ಕೆ ನಿರ್ದಿಷ್ಟವಾದ ವ್ಯಾಖ್ಯೆ ದೊರೆತಿಲ್ಲ. ಈ ವಿಚಾರದ ಬಗ್ಗೆ ವಿದ್ವಾಂಸರಲ್ಲಿ ಭಿನ್ನಾಭಿಪ್ರಾಯಗಳಿವೆ. ಇವರ ಜನಸಂಖ್ಯೆ ಮತ್ತಿತರ ವಿವರಗಳ ಬಗ್ಗೆ ಸಂದೇಹಾತೀತವಾದ ನಿರ್ದುಷ್ಟ ಮಾಹಿತಿ ಗಳಿಲ್ಲ. ಈ ಬಗೆಯ ವೈಚಾರಿಕ ಮತಬೇಧಗಳಿಂದಾಗಿ ಜನಗಣತಿಯ ವರದಿಗಳಲ್ಲಿಯೂ ಕಬೀಲಿಗಳ ಸಾರಣೀಕರಣ, ವರ್ಗೀಕರಣ ಮತ್ತು ವಿಶ್ಲೇಷಣಗಳಲ್ಲಿ ವ್ಯತ್ಯಾಸಗಳು ಕಾಣದೊರೆಯುತ್ತವೆ. ಕೆಲವೊಮ್ಮೆ ನಿಮ್ನ ಮತ್ತು ಅನುಸೂಚಿತ ವರ್ಗಗಳಲ್ಲಿ ಹಲವಾರು ಕಬೀಲಿಗಳನ್ನು ಸೇರಿಸಲಾಗಿದೆ. ಕೆಲವನ್ನು ಈ ಪಟ್ಟಿಯಿಂದ ಹೊರ ತಾಗಿಸಲಾಗಿದೆ. ಆತ್ಮವಾದವೇ ಭಾರತೀಯ ಆದಿವಾಸಿಗಳೆಲ್ಲರ ಧರ್ಮ ಎಂಬುದಾಗಿ ಒಂದು ಜನಗಣತಿಯ ವರದಿಯಲ್ಲಿ ಉಲ್ಲೇಖ ಕಾಣದೊರೆತರೆ, ಮತ್ತೊಂದು ವರದಿಯಲ್ಲಿ ಕಬೀಲಿ ಧರ್ಮವನ್ನು ಬೇರೊಂದು ಬಗೆಯ ವಿಶಿಷ್ಟ ಧರ್ಮವೆಂದೇ ನಮೂದಿಸಿರುವುದೂ ಉಂಟು. ಕಬೀಲಿ ವೃತ್ತಿಗಳ ವಿಶಿಷ್ಟೀಕರಣ ಕಾಣ ಬರುವುದಿಲ್ಲ. ಪ್ರಾದೇಶಿಕ ಸೌಲಭ್ಯಾನುಕೂಲಗಳಿಗನುಗುಣವಾಗಿ ಅವು ವ್ಯತ್ಯಾಸ ಹೊಂದುತ್ತ ಬರುತ್ತವೆ. ನಿಶ್ಚಿತ ಭೌಗೋಳಿಕ ಅಥವಾ ಪ್ರಾದೇಶಿಕ ವಲಯಗಳಲ್ಲಿ ವಾಸಮಾಡುವ ಅಂತರ್‌ವಿವಾಹ ವ್ಯವಸ್ಥೆಯುಳ್ಳ ಸಾಮಾಜಿಕ ವರ್ಗವನ್ನು ಸ್ಥೂಲವಾಗಿ ಕಬೀಲಾ ಎಂದು ಕರೆಯಬಹುದಾಗಿದೆ. ಒಂದೊಂದು ಕಬೀಲಾ ಗುಂಪಿಗೂ ಒಂದೊಂದು ಭಾಷೆ ಅಥವಾ ಉಪಭಾಷೆಯಿದ್ದು, ಕಬೀಲಿಗಳ ಸಂಘಟನೆಗೂ ಅದು ಕಾರಣವಾಗಿರುತ್ತದೆ. ಪ್ರತಿ ಕಬೀಲಾಕ್ಕೂ ಒಬ್ಬ ಮುಖಂಡ ನುಂಟು. ಅವನೇ ಬಹಳ ಮಟ್ಟಿಗೆ ಸರ್ವಾಧಿಕಾರಿಯಂತೆ ಅಲ್ಲಿ ಕಾರ್ಯನಿರ್ವಹಿಸು ತ್ತಾನೆ. ಈ ಕೆಲವು ಕಾರಣಗಳಿಂದಾಗಿ, ಒಂದೋದು ಕಬೀಲಾ ಮತ್ತು ಕಬೀಲಿ ಜಾತಿಗಳಲ್ಲೂ ಭೇದವೆಣಿಸುವ ಪದ್ಧತಿ ಸಾಮಾನ್ಯವಾಗಿ ಕಾಣದೊರೆಯುತ್ತದೆ.

ಇಷ್ಟಾದರೂ ಇದು ಸ್ಪೃಶ್ಯಾಸ್ಪೃಶ್ಯ ಭಾವನೆಗಳಿಗಾಗಲಿ, ಸಾಮಾಜಿಕ ದ್ವೇಷಾಸೂಯೆಗಳಿಗಾಗಲಿ ಎಡೆಗೊಟ್ಟಿಲ್ಲವೆಂಬುದು ಗಮನಾರ್ಹವಾದ ಸಂಗತಿ. ಬಹಳಮಟ್ಟಿಗೆ ಹೊರಗಣ ಪ್ರಭಾವಕ್ಕೆ ಸುಲಭವಾಗಿ ಒಳಗಾಗದಂಥ ಭೌಗೋಳಿಕ ಪರಿಸರದಲ್ಲಿ, ಗುಡ್ಡಗಾಡುಗಳಲ್ಲಿ ವಾಸಮಾಡುವುದರಿಂದ ಈ ವನ್ಯನಿವಾಸಿಗಳ ಜೀವನ ವಿಧಾನ, ರೀತಿನೀತಿಗಳು, ಸಂಪ್ರದಾಯಗಳು, ನಂಬಿಕೆಗಳು ಬೇರೆ ಬೇರೆಯಾಗಿವೆ.

ಸಂಸ್ಕೃತಿಯ ಪ್ರಭಾವಕ್ಕೊಳಗಾಗಿರುವುದನ್ನೇ ಅಳತೆಗೋಲಾಗಿ ಇಟ್ಟುಕೊಂಡು ಕಬೀಲಾಗಳನ್ನು ಮೂರು ವರ್ಗಗಳಾಗಿ ವಿಂಗಡಿಸಿದ್ದಾರೆ ; 1 ಅನ್ಯಸಂಸ್ಕೃತಿಯ ಸಂಪೂರ್ಣ ಪ್ರಭಾವಕ್ಕೆ ಒಳಗಾಗಿರುವವು, 2 ಕೆಲಮಟ್ಟಿಗೆ ಮಾತ್ರ ಇದರ ಪ್ರಭಾವಕ್ಕೆ ಒಳಗಾಗಿರುವವು ಮತ್ತು 3 ಅನ್ಯಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗದೆ ಇರುವವು. ನಾಗಾ, ಕೋಸಿ, ಗಾರೋ, ಭೋಟಿಯಾ ಮೊದಲಾದವರು ಮೊದಲನೆಯ ವರ್ಗಕ್ಕೂ ಸಂತಾಲರು, ಮುಂಡಾಗಳು, ಕೊರವರು ಮೊದಲಾದವರು ಎರಡನೆಯ ವರ್ಗಕ್ಕೂ, ಭಿಲ್ಲರು ಮತ್ತಿತರ ಹಿಮಾಲಯದ ಕೆಲವು ಆರ್ಯವಂಶಿ ಜನರು ಮೂರನೆಯ ವರ್ಗಕ್ಕೂ ಸೇರುತ್ತಾರೆ. ಭಾಷಿಕ ದೃಷ್ಟಿಯಿಂದ ಇವನ್ನು ಟಿಬೆಟೊ–ಬರ್ಮನ್ ಮತ್ತು ದ್ರಾವಿಡ ಭಾಷಾ ಪರಿವಾರಕ್ಕೆ ಸೇರಿದ ಬುಡಕಟ್ಟುಗಳಾಗಿ ವರ್ಗೀಕರಿಸಬಹುದು. ಆದರೆ ಬದಲಾಗುತ್ತಿರುವ ಪರಿಸ್ಥಿತಿಗಳಿಗೆ ಕ್ರಮೇಣ ಹೊಂದಿಕೊಳ್ಳುತ್ತಿರುವ ಈ ಬುಡಕಟ್ಟುಗಳು ತಮ್ಮ ನಿಕಟತಮ ಪ್ರದೇಶಗಳಲ್ಲಿ ಪ್ರಚಲಿತವಾಗಿರುವ ಪ್ರಾದೇಶಿಕ ಭಾಷೆ ಅಥವಾ ಉಪ-ಭಾಷೆಗಳನ್ನೇ ಬಳಸತೊಡಗಿವೆ. ಶಸ್ತ್ರಸನ್ನದ್ಧವಾಗಿದ್ದು, ಬಹುಮಟ್ಟಿಗೆ ಅಪರಾಧ ಕೃತ್ಯಗಳಲ್ಲೇ ತೊಡಗಿರುತ್ತಿದ್ದ ಕೆಲವು ಬುಡಕಟ್ಟುಗಳೂ ಇದ್ದುವು ; ಈಗಲೂ ಇಂಥ ಕೆಲವು ಬುಡಕಟ್ಟುಗಳು ಇವೆ. ಈಚೆಗೆ ಜಾತಿ ಅಥವಾ ವೃತ್ತಿಸೂಚಕವಾದ ವಂಶನಾಮ ಮತ್ತು ಉಪನಾಮಗಳನ್ನು ಅಳವಡಿಸಿಕೊಳ್ಳುವ ಪ್ರವೃತ್ತಿ ಕಂಡುಬಂದಿದೆ. ಈ ಕೆಲವು ಕಾರಣಗಳಿಂದಾಗಿ, 1961ರಲ್ಲಿ ನಡೆಸಿದ ಜನಗಣತಿಯ ವರದಿಯಲ್ಲಿ ಕಬೀಲಿಗಳ ಒಟ್ಟು ಸಂಖ್ಯೆ ಸುಮಾರು 2 ಕೋಟಿ ಎಂದು ನಮೂದಿಸಲಾಗಿದೆ. ಆದರೆ ಹಿಂದಿನ ಜನಗಣತಿಗಳಲ್ಲಿ ಈ ಸಂಖ್ಯೆ ಸುಮಾರು 3 ಕೋಟಿ ಎಂದು ನಮೂದಿತವಾಗಿತ್ತೆಂಬುದನ್ನು ಇಲ್ಲಿ ಸ್ಮರಿಸಬಹುದಾಗಿದೆ.

ಸಂಸ್ಕೃತಿಸ್ವೀಕರಣ ದೃಷ್ಟಿಯಿಂದ ಈ ಬುಡಕಟ್ಟುಗಳನ್ನು ವರ್ಗೀಕರಿಸಿರುವ ಇತರ ಕೆಲವು ವಿದ್ವಾಂಸರು ಕಬೀಲಾಗಳನ್ನು ಅನುಕೂಲಕ (ಅಡಾಪ್ಟಿವ್) ಮತ್ತು ಸಾತ್ಮೀಕಾರಕ (ಅಸ್ಸಿಮಿಲೇಟಿವ್) ವರ್ಗಗಳೆಂದು ವಿಂಗಡಿಸಿದ್ದಾರೆ. ಅನುಕೂಲಕ ವರ್ಗವನ್ನು ಮೂರು ಉಪವರ್ಗಗಳನ್ನಾಗಿ ವಿಭಜಿಸಲಾಗಿದೆ : ಸಹಭೋಜಿ, ಸಮಜೀವಿ ಮತ್ತು ಅನ್ಯಸಂಸ್ಕೃತಿಧಾರಕ. ನೆರೆಹೊರೆಯ ವರ್ಗಗಳೊಡನೆ ಸಮಾನ ಕಾರ್ಯಕ್ರಮಗಳಲ್ಲಿ ಭಾಗವಹಿಸುವ ಉಪವರ್ಗವೇ ಸಹಭೋಜಿ. ಆರ್ಥಿಕವಾಗಿ ಮತ್ತು ಸಾಂಸ್ಕೃತಿಕವಾಗಿ ತಮ್ಮ ಕಾಲ ಮೇಲೆ ನಿಂತಿರುವ ಉಪವರ್ಗಗಳನ್ನು ಸಮಜೀವಿ ಎಂದು ಹೆಸರಿಸಲಾಗಿದೆ. ಹೊರಗಣ ಸಂಸ್ಕೃತಿಯನ್ನು ಒಮ್ಮುಖವಾಗಿ ಸ್ವೀಕರಿಸಿರುವ ವರ್ಗಗಳು ಅನ್ಯಸಂಸ್ಕೃತಿಧಾರಕ ಎಂಬ ಹೆಸರನ್ನು ಪಡೆದಿವೆ. ಕೆಲವಂತೂ, ತಮ್ಮ ಮೂಲವೈಶಿಷ್ಟ್ಯಗಳೂ ಮರೆಯಾಗುವಷ್ಟರ ಮಟ್ಟಿಗೆ ಅನ್ಯ ಸಂಸ್ಕೃತಿಯಲ್ಲಿ ಲೀನವಾಗಿವೆ. ಹೊಸ ಸಂಸ್ಕೃತಿಗಳು ಹೊಸ ಸಮಸ್ಯೆಗಳನ್ನು ಸೃಷ್ಟಿಸಿವೆ ಎಂಬುದೂ ನಿಜ. ಇತ್ತ ಹೊರಗಣ ಸಂಸ್ಕೃತಿಯ ಪ್ರಭಾವಕ್ಕೆ ಸುತರಾಂ ಒಳಗಾಗದಿರುವ ಬುಡಕಟ್ಟುಗಳು ಇಂದಿಗೂ ಅಲ್ಲಲ್ಲಿ ಕಾಣಬರುತ್ತವೆ ಎಂಬುದನ್ನು ಇಲ್ಲಿ ಅಗತ್ಯವಾಗಿ ಉಲ್ಲೇಖಿಸಬೇಕು. ಆದರೆ, ಸಾಂಸ್ಕೃತಿಕ ಸಂಪರ್ಕದ ಕ್ಷೇತ್ರದಲ್ಲಿ ಶೂನ್ಯಬಿಂದು ಬಹಳಮಟ್ಟಿಗೆ ಕಾಣದೊರೆಯುವುದಿಲ್ಲ, ಎಂಬುದನ್ನು ಮರೆಯುವಂತಿಲ್ಲ. ಭಾರತದ ಮಟ್ಟಿಗಂತೂ ಈ ಮಾತು ಇನ್ನೂ ಚೆನ್ನಾಗಿ ಅನ್ವಯಿಸುತ್ತದೆ. ದೇಶೀಯ ಮತ್ತು ವಿದೇಶೀಯ ಸಂಸ್ಕೃತಿಗಳ ಸಂಪರ್ಕವನ್ನು ಪಡೆಯದಿರುವ, ತತ್ಪರಿಣಾಮವಾಗಿ ವಿಶಿಷ್ಟ ಸಮಸ್ಯೆಗಳನ್ನು ಎದುರಿಸದಿರುವ ಆದಿವಾಸಿ ಸಮಾಜವಿಲ್ಲ. ಇದ್ದರೆ ಅದು ಕೇವಲ ಅಪವಾದಸ್ವರೂಪವಾಗಿದೆ ಎಂದು ಹೇಳಬೇಕಾಗುತ್ತದೆ. ಧರ್ಮಪ್ರಚಾರಕರ, ಉದ್ಯಮಶೀಲರ ಸಾಹಸ ಮತ್ತು ಪ್ರಯತ್ನಗಳ ಫಲವಾಗಿ ಸೂರ್ಯನ ಕಿರಣವೂ ಸೋಕದ ಎಡೆಗಳಲ್ಲಿ ವಾಸಿಸುತ್ತಿದ್ದ ಗಿರಿಜನರ ಸಾಮಾಜಿಕ ಸಾಂಸ್ಕೃತಿಕ ಜೀವನದಲ್ಲೂ ಏರುಪೇರುಗಳುಂಟಾದುವು. ವಿದೇಶೀ ಸಂಸ್ಕೃತಿ ಕೆಲವೊಂದು ಸಮಸ್ಯೆಗಳನ್ನು ಸೃಷ್ಟಿಸಿತು. ಈ ಬಗೆಯ ಸಂಪರ್ಕ ಸಾಹಚರ್ಯಗಳಿಂದುಂಟಾದ ಲೈಂಗಿಕ ರೋಗಗಳ ಫಲವಾಗಿ ಕೆಲವು ಬುಡಕಟ್ಟುಗಳ ಸಂಖ್ಯೆ ತೀವ್ರವಾಗಿ ಕ್ಷೀಣಿಸಿತು ಎಂಬ ವಾದವೂ ಇದೆ. ಹೀಗಾಗಿ ವಿದೇಶೀ ಸಂಸ್ಕೃತಿ ವರವಾಗಿ ಬಂದಂತೆಯೇ ಅಭಿಶಾಪವೂ ಆಗಿ ಪರಿಣಮಿಸಿತೆನ್ನಬಹುದು.

ಕಬೀಲಿಗಳು ಬಹಳಮಟ್ಟಿಗೆ ಗುಡ್ಡಗಾಡುಗಳಲ್ಲಿಯೇ ವಾಸಿಸುವ ಜನ. ನೈಸರ್ಗಿಕ ಸಾಧನ–ಸೌಲಭ್ಯಗಳನ್ನೇ ಅವಲಂಬಿಸಿಕೊಂಡು ಈ ಜನ ಜೀವನಯಾಪನೆ ಮಾಡಬೇಕಾಗುತ್ತದೆ. ಕೇರಳದ ಕಾಡಾರ್, ಮದರಾಸಿನ ಪಲಿಯನ್ ಮತ್ತು ವೈನಾಡಿನ ಪಣಿಯನ್ ಮೊದಲಾದ ಬುಡಕಟ್ಟುಗಳು ಈ ವರ್ಗಕ್ಕೆ ಸೇರಿದವು. ಆಹಾರ ಪದಾರ್ಥಗಳ ಸಂಗ್ರಹ ಮತ್ತು ವ್ಯವಸಾಯ ಕಾರ್ಯಗಳನ್ನು ಕೈಗೊಂಡಿರುವ ಕೆಲವು ಕಬೀಲಾಗಳೂ ಇವೆ. ಸಂಗ್ರಹಕಾರ್ಯದ ಬಗ್ಗೆ ಯಾವುದೋ ಒಂದು ನಂಬಿಕೆಯೂ ಈ ಜನರಲ್ಲಿ ಮನೆಮಾಡಿಕೊಂಡಂತೆ ತೋರುತ್ತದೆ. ಏಕೆಂದರೆ, ಕೆಲವು ಬುಡಕಟ್ಟುಗಳು ವ್ಯವಸಾಯವನ್ನೇ ಸಂಪೂರ್ಣವಾಗಿ ಅವಲಂಬಿಸಿದ್ದರೂ ಸಂಗ್ರಹಕಾರ್ಯವನ್ನೂ ತಮ್ಮ ಮುಖ್ಯವೃತ್ತಿ ಎಂಬಂತೆ ಮುಂದುವರಿಸಿಕೊಂಡು ಬಂದಿವೆ.

ಸ್ವಾತಂತ್ರ್ಯಪೂರ್ವ ಅವಧಿಯಲ್ಲಿ ಬ್ರಿಟಿಷ್ ಸರ್ಕಾರ ಗಿರಿಜನರ ಏಳಿಗೆಯ ಬಗ್ಗೆ ವಿಶೇಷ ಆಸಕ್ತಿಯನ್ನೇನೂ ತೋರಲಿಲ್ಲ. ಆದರೆ, ಸ್ವಾತಂತ್ರ್ಯಾನಂತರ ಭಾರತ ಸರ್ಕಾರ ಈ ವಿಚಾರದಲ್ಲಿ ತುಂಬ ಆಸಕ್ತಿವಹಿಸಿದೆ. ಅದರ ಪ್ರಗತಿಗಾಗಿ ವಿಶೇಷವಾಗಿ ಶ್ರಮಿಸುತ್ತಿದೆ. ಗಿರಿಜನರ ಮರುವಸತಿಕಾರ್ಯ ನಡೆಯುತ್ತಿದೆ. ಆದರೆ, ಬೇರೆ ಬೇರೆ ರೀತಿಗಳಲ್ಲಿ ಬೇರೆ ಬೇರೆ ಪ್ರಮಾಣಗಳಲ್ಲಿ ಅನ್ಯಸಂಸ್ಕೃತಿಯ ಪ್ರಭಾವಕ್ಕೆ ಒಳಗಾಗಿ ತತ್ಫಲವಾಗಿ ಅವುಗಳ ಪ್ರಗತಿಯಲ್ಲೂ ಗಮನಾರ್ಹ ವ್ಯತ್ಯಾಸಗಳು ಕಂಡುಬರುವುದರಿಂದ ನೀತಿ ನಿರ್ಧಾರಣ ಅಷ್ಟೇನೂ ಸುಲಭವಾಗಿ ಪರಿಣಮಿಸಿಲ್ಲ. ಈ ಮರುವಸತಿ ಅಥವಾ ಪುನರ್ನಿವೇಶನಕಾರ್ಯದಲ್ಲಿಯ ಉತ್ಸಾಹ ಅವರ ಪರಂಪರಾಗತ ಸಂಸ್ಕೃತಿಯ ವಿನಾಶಕ್ಕೆ ಕಾರಣವಾಗದಂತೆ ಎಚ್ಚರವಹಿಸಲಾಗಿದೆ.

ಕಬೀಲಿ ಜನರು ಹಿಂಸಾತ್ಮಕ ಚಟುವಟಿಕೆಗಳಲ್ಲಿ ತೊಡಗುತ್ತಿದ್ದುದೂ ಉಂಟು. ಸಾಹುಕಾರರು ಮತ್ತು ವಿದೇಶೀಯ ವರ್ತಕರು ಕಬೀಲಿ ಜನರ ಆಸ್ತಿಪಾಸ್ತಿಗಳನ್ನು ಒಂದಲ್ಲ ಒಂದು ರೀತಿಯಿಂದ ವಶಪಡಿಸಿಕೊಂಡು ಅವರನ್ನು ಹೊರಗಟ್ಟುತ್ತಿದ್ದುದು, ಸಾಮಾಜಿಕವಾಗಿ ಆರ್ಥಿಕವಾಗಿ ಅವರನ್ನು ಶೋಷಿಸತೊಡಗಿದ್ದು, ಕಬೀಲಿ ಜನರ ನೈಸರ್ಗಿಕ ಸಾಧನ ಸೌಲಭ್ಯಗಳನ್ನು ಹೊರಗಿನವರು ಆಕ್ರಮಿಸಿಕೊಂಡು ಉಪಭೋಗಿಸತೊಡಗಿ ಅವರ ಜೀವನವನ್ನು ಕ್ಲೇಶಪೂರ್ಣವಾಗಿಸಿದ್ದು—ಇವು ಹಿಂಸಾತ್ಮಕ ಚಟುವಟಿಕೆಗಳಿಗೆ ಕಾರಣವಾದುವು. ಹೀಗಾಗಿ, ಬ್ರಿಟಿಷರ ಕಾಲದಲ್ಲಿ ಲೂಟಿ, ದರೋಡೆ, ಕ್ರಾಂತಿಯ ವರದಿಗಳು ಆಗಿಂದಾಗ ಕೇಳಿ ಬರುತ್ತಿದ್ದು, ಕಬೀಲಿ ಜನರೆಂದರೆ ಅಪರಾಧೋಪಜೀವಿಗಳು ಎನ್ನುವ ಭಾವನೆ ಮೂಡುವಂತಾಗಿತ್ತು. ಶಾಸನಬದ್ಧ ರೀತಿಯಲ್ಲಿ ಈ ಸಮಸ್ಯೆಗೆ ಪರಿಹಾರವನ್ನು ಕಂಡುಹಿಡಿಯುವ ಪ್ರಯತ್ನ ನಡೆಯಲಿಲ್ಲ. ಶಾಸನ ಹಾಗೂ ಶಸ್ತ್ರಾಸ್ತ್ರಗಳ ಬಲದಿಂದ ಅವರನ್ನು ನಿಗ್ರಹಿಸಬೇಕೆಂದು ವರ್ತಕರೂ, ಜಮೀನುದಾರರೂ ಸರ್ಕಾರವನ್ನು ಒತ್ತಾಯಪಡಿಸತೊಡಗಿದಾಗ, ಸೈನಿಕರ ನೆರವು ಪಡೆದುಕೊಳ್ಳುವ ಪ್ರಯತ್ನಗಳು ನಡೆದಾಗ, ಹಿಂಸೆಯ ಪ್ರಾಬಲ್ಯ ಹೆಚ್ಚುತ್ತಲೇ ಹೋಯಿತು. ಇಂಥ ಪರಿಸ್ಥಿತಿಗಳಲ್ಲಿ ಕಬೀಲಿ ಜನ ತಮ್ಮ ಮುಖಂಡರಿಗೆ ಕಾರ್ಯಾಚರಣೆಯ ಮತ್ತು ದಂಡನೆಯ ಅಧಿಕಾರಗಳನ್ನು ನೀಡಿದರು. ಈ ದಂಗೆಗಳನ್ನು ಅಡಗಿಸಲು ಕಬೀಲಿ ನಾಯಕರಿಗೆ ಸರ್ಕಾರದವರು ಸನ್ನದುಗಳನ್ನು ಕೊಟ್ಟು ಸೇಡಿನ ಜ್ವಾಲೆ ಶಾಂತವಾಗುವಂತೆ ಮಾಡಿದ್ದೂ ಉಂಟು. ಶಿಸ್ತು, ನ್ಯಾಯ ಮತ್ತು ಶಾಂತಿ ಪಾಲನೆಯ ದೃಷ್ಟಿಯಿಂದ ಕಬೀಲಿ ಜನಕ್ಕೂ ನಾಗರಿಕ ಅಧಿಕಾರಗಳನ್ನು, ಹಕ್ಕುಗಳನ್ನು ಕೊಡಬೇಕೆಂಬ ಸತ್ಯವನ್ನು ಅಂದಿನ ಬ್ರಿಟಿಷ್ ಸರ್ಕಾರ ತಡವಾಗಿಯಾದರೂ ಮನಗಂಡಿತು. ವಿಶೇಷಾಧಿಕಾರವುಳ್ಳ ಅಧಿಕಾರಿಯೊಬ್ಬನನ್ನು ನೇಮಿಸಿ, ಗಿರಿಜನರ ಯೋಗಕ್ಷೇಮದ ಭಾರವನ್ನು ಅವನಿಗೆ ವಹಿಸಲಾಯಿತು. ನಾಡಿನ ಇತರ ಭಾಗಗಳಲ್ಲಿ ಪ್ರಚುರವಾಗಿದ್ದ ನಿಯಮಗಳಿಗೂ ಇವಕ್ಕೂ ಸಾಕಷ್ಟು ವ್ಯತ್ಯಾಸಗಳಿದ್ದುವು. ಕಬೀಲಿ ಜನರನ್ನು ಸಾಮಾನ್ಯ ನ್ಯಾಯಾಲಯಗಳ ವ್ಯಾಪ್ತಿಯಿಂದ ಹೊರತಾಗಿಸಲಾಯಿತು. ಈ ವಿಶೇಷಾಜ್ಞೆ 1872ರಲ್ಲಿ ಜಾರಿಗೆ ಬಂದಿತು. ಸಾಮಾಜಿಕ ಅತ್ಯಾಚಾರ ಮತ್ತು ಆರ್ಥಿಕ ಶೋಷಣೆಗಳು ಮುಂದುವರಿದಾಗ 1886ರಲ್ಲಿ ಸಂತಾಲರ ದಂಗೆಯೆಂದು ಪ್ರಸಿದ್ಧವಾಗಿರುವ ದಂಗೆ ನಡೆಯಿತು. ಛೋಟಾನಾಗಪುರ ಮತ್ತು ಸಂತಾಲ ಪರಗಣ ಈ ಕ್ರಾಂತಿಯ ಕೇಂದ್ರಗಳಾಗಿದ್ದುವು. ಕಬೀಲಾ ಸಮಸ್ಯೆಗಳನ್ನು ಪರಿಹರಿಸುವತ್ತ ತೀವ್ರಗಮನಕೊಡುವುದು ಅನಿವಾರ್ಯವಾಯಿತು. ಸಂತಾಲ ಪರಗಣ ಎಂಬ ಹೆಸರಿನಲ್ಲಿ ಒಂದು ಹೊಸ ಜಿಲ್ಲೆಯನ್ನೇ ಸ್ಥಾಪಿಸಿ ಒಬ್ಬ ವಿಶೇಷ ಆಡಳಿತಾಧಿಕಾರಿಯನ್ನು ನೇಮಿಸಲಾಯಿತು. 1855ರ 38ನೆಯ ಕಾಯಿದೆಯಂತೆ ಈ ಗಿರಿಜನರು ವಾಸಿಸುತ್ತಿದ್ದ ಕ್ಷೇತ್ರಗಳನ್ನು ವಿಶೇಷಾಧಿಕಾರ ವಲಯಗಳೆಂದು ಘೋಷಿಸಲಾಯ್ತು. ಫೋರ್ಟ್ ವಿಲಿಯಂ, ಫೋರ್ಟ್ ಸೇಂಟ್ ಜಾರ್ಜ್ ಮತ್ತು ಬೊಂಬಾಯಿಯ ಆಡಳಿತ ಮಂಡಳಿಗಳು ಹೊಸ ಅಧಿನಿಯಮಗಳನ್ನು ಜಾರಿಗೆ ತಂದವು. 1870ರ ಭಾರತ ಸರ್ಕಾರದ ಕಾಯಿದೆಗನುಗುಣವಾಗಿ ಈ ಪ್ರಾಂತೀಯ ಅಧಿಕಾರಿಗಳಿಗೆ ವಿಶೇಷ ನಿಯಮಗಳನ್ನು ರೂಪಿಸುವ ಅಧಿಕಾರವನ್ನು ಕೊಡಲಾಯಿತು. ಬ್ರಿಟಿಷ್ ಭಾರತದ ಉಳಿದ ಭಾಗಗಳಿಗೆ ಅನ್ವಯವಾಗುತ್ತಿದ್ದ ಕಾನೂನುಗಳನ್ನು ಈ ಗಿರಿಜನರಿಗೆ ಅನ್ವಯಿಸುವಂತೆ ಇರಲಿಲ್ಲ. ಹಾಗೇನಾದರೂ ಮಾಡಬೇಕಾದರೆ ಪೂರ್ವ ಸೂಚನೆ ನೀಡಿ ಪೂರ್ವಾನುಮತಿ ಪಡೆದುಕೊಳ್ಳಬೇಕಾಗುತ್ತಿತ್ತು. 1874ರಲ್ಲಿ ವಿಧಾನಮಂಡಲ ಅಂಗೀಕರಿಸಿದ್ದ 14ನೆಯ ಜಿಲ್ಲಾ ಅನುಸೂಚಿತ ಕಾಯಿದೆಗಳಿಗೆ ಅನುಗುಣವಾಗಿ ಸ್ಥಳೀಯ ವಿಶೇಷಾಧಿಕಾರಗಳನ್ನು ನಿರ್ದಿಷ್ಟ ವಲಯಗಳಲ್ಲಿ ಜಾರಿಗೆ ಕೊಡುವ ಅಧಿಕಾರವನ್ನು ನೀಡಲಾಯಿತು. ಅಗತ್ಯಾನುಸಾರ, ಕಾನೂನುಗಳನ್ನು ಸೀಮಿತರೂಪದಲ್ಲಿ ಬಳಸುವುದಾದಲ್ಲಿ ಅಥವಾ

ತಿದ್ದುಪಡಿಗಳನ್ನು ಮಾಡಬೇಕಾಗಿದ್ದಲ್ಲಿ ಕೇಂದ್ರ ಸರ್ಕಾರಕ್ಕೆ ಆ ವಿವರಗಳನ್ನು ತಿಳಿಸುವುದು ಕಡ್ಡಾಯವಾಗಿತ್ತು. ಇಷ್ಟಾದರೂ, ಈ ವಿಶಿಷ್ಟ ಆಡಳಿತ ವ್ಯವಸ್ಥೆಯೂ ಗಿರಿಜನರ ಸಮಸ್ಯೆಗಳನ್ನು ಪೂರ್ಣವಾಗಿ ಪರಿಹರಿಸಲಾರದೆ ಹೋಯಿತು.

ಪ್ರತ್ಯಕ್ಷ, ಪರೋಕ್ಷ ಅನ್ಯಾಯ ಅಥವಾ ಶೋಷಣೆಗಳನ್ನು ತಪ್ಪಿಸುವ ದೃಷ್ಟಿಯಿಂದ 1876ರಲ್ಲಿ ಕಬೀಲಿ ಆಸ್ತಿಪಾಸ್ತಿಗಳ ಪರಭಾರೆ ಮತ್ತು ಮಾರಾಟಗಳ ಮೇಲೆ ವಿಧಿ–ನಿಷೇಧಗಳನ್ನು ಹಾಕಲಾಗಿತ್ತು. ವೈಯಕ್ತಿಕವಾಗಿ ಅಥವಾ ನ್ಯಾಯಾಲಯಗಳ ಆಜ್ಞೆಯ ಮೂಲಕ ಕಬೀಲಿ ಆಸ್ತಿಪಾಸ್ತಿಗಳನ್ನು ಕೈಬದಲುಮಾಡುವುದನ್ನು ನಿಷೇಧಿಸಲಾಗಿತ್ತು. ಜಮೀನುದಾರರಿಂದ ಶೋಷಣೆಗಳಿಗೊಳಗಾಗುವುದನ್ನು ತಪ್ಪಿಸುವ ದೃಷ್ಟಿಯಿಂದ 1917ರಲ್ಲಿ ಮದ್ರಾಸ್ ಸರ್ಕಾರವೂ ಒಂದು ವಿಶೇಷ ಕಾಯಿದೆಯನ್ನು ಜಾರಿಗೆ ತಂದಿತು. ಕಬೀಲಿಗಳಿಗೆ ನೀಡುವ ಸಾಲದ ಮೇಲೆ ಒಡ್ಡಿಯ ಮಿತಿ ವಿಧಿಸಲಾಯಿತು.

ಕಬೀಲಿ ಸ್ಥಿತಿಗತಿಗಳನ್ನು ಉತ್ತಮಪಡಿಸುವ ದೃಷ್ಟಿಯಿಂದ ಮಾಂಟ್‌ಫರ್ಡನ ಅಧ್ಯಕ್ಷತೆಯಲ್ಲಿ ಸಮಿತಿಯೊಂದನ್ನು ರಚಿಸಲಾಗಿತ್ತು. ಈ ಸಮಿತಿ 1916ರ ಕಾಯಿದೆಯ 52ನೆಯ ಕಲಮಿನನ್ವಯ ಆಡಳಿತವರ್ಗದ ಹೊಣೆಗಾರಿಕೆ ಎಷ್ಟೆಂಬುದನ್ನು ಸ್ಪಷ್ಟಪಡಿಸಿತು. 1935ರಲ್ಲಿ ಗಿರಿಜನರ ಸಂಖ್ಯೆ ಅನೂನವಾಗಿ ಮುಂದುವರೆಯುವಂತೆ ಮಾಡಲು ಕೆಲವು ರಕ್ಷಣಾತ್ಮಕ ವಿಧಾನಗಳನ್ನೂ ಮುಂಜಾಗರೂಕತೆಯ ಕ್ರಮಗಳನ್ನೂ ಕಾರ್ಯರೂಪಕ್ಕೆ ತರಲಾಯಿತು. ಭಾರತೀಯ ಸಂವಿಧಾನವೂ ಗಿರಿಜನರ ಏಳಿಗೆಯ ವಿಚಾರಕ್ಕೆ ವಿಶೇಷ ಪ್ರಾಧಾನ್ಯ ನೀಡಿದೆ. ಸಮಾಜಕಲ್ಯಾಣ, ಸಮುದಾಯ ವಿಕಾಸ ಮತ್ತು ಆರೋಗ್ಯ ಹಾಗೂ ಶಿಕ್ಷಣ ಯೋಜನೆಗಳನ್ನು ಜಾರಿಗೆ ತರಲಾಗಿದೆ. ಗಿರಿಜನರಿಗೆ ಆಡಳಿತ ಸೇವಾವ್ಯವಸ್ಥೆಯಲ್ಲಿ, ಶಾಸನಸಭೆ ಮತ್ತು ಲೋಕಸಭೆಗಳಲ್ಲಿ ಕೆಲವು ಸ್ಥಾನಗಳನ್ನು ಮೀಸಲಾಗಿಟ್ಟಿದೆ. ಇವರ ಕಲ್ಯಾಣ ಸಾಧನೆಗಾಗಿ ಒಬ್ಬ ಕಮಿಷನರನ್ನು ನೇಮಿಸಲಾಗಿದೆ. ಈ ಇಲಾಖೆ ಗಿರಿಜನರ ಜೀವನ ವಿಧಾನಗಳನ್ನು ಉತ್ತಮಪಡಿಸುವ ಸದಾಶಯದಿಂದ ಮುನ್ನಡೆಯುತ್ತಿದೆ. (ಪಿ.ಜಿ.ಡಿ.)

**ಕಬ್ಬಡ್ಡಿ :** ಭಾರತದಲ್ಲಿ ಹುಟ್ಟಿದ ಎರಡು ಪ್ರಮುಖ ಆಟಗಳಲ್ಲಿ ಒಂದು. (ಇನ್ನೊಂದು ಖೊಕ್ಕೊ). ಪಟ್ಟಣಗಳಲ್ಲೇ ಅಲ್ಲದೆ ಹಳ್ಳಿಗಳಲ್ಲೂ ಇದು ಜನಪ್ರಿಯ ಆಟ. ಹಿಂದೆ ಇದು ಯುವಕರು ಮತ್ತು ಬಾಲಕರಿಗೆ ಮಾತ್ರ ಮೀಸಲಾಗಿತ್ತು. ಆದರೆ ಈ ಆಟದ ಪ್ರಾಮುಖ್ಯವೂ ನಿಯಮಗಳೂ ಬದಲಾದಂತೆ ಮಹಿಳೆಯರೂ ಇದರಲ್ಲಿ ಭಾಗವಹಿಸಲಾರಂಭಿಸಿ, ಇವರೂ ಪುರುಷರಷ್ಟೇ ಚಾಕಚಕ್ಯತೆಯಿಂದ ಆಡುವ ಮಟ್ಟಿಗೆ ಈ ಆಟ ಬೆಳೆದಿದೆ. ಈ ಆಟವನ್ನು ಕೆಲವು ಕಡೆ ಹುತ್ — ಹುತ್ – ಹುತ್ ಎಂದೂ ಮತ್ತೆ ಕೆಲವು ಕಡೆ ಚಡುಗುಡು ಎಂದೂ ಕೆಲವು ಕಡೆ ಕಬ್ಬಡ್ಡಿ ಎಂದೂ ಆಡುತ್ತಾರೆ. ಕಬ್ಬಡ್ಡಿಗೆ ಯಾವ ಸಲಕರಣೆಯೂ ಬೇಕಾಗಿಲ್ಲದಿರುವುದರಿಂದ ಇದನ್ನು ಸುಲಭವಾಗಿ ಎಲ್ಲ ಕಡೆಯೂ ಆಡಬಹುದು. ಈಗ ಇದೊಂದು ರಾಷ್ಟ್ರೀಯ ಆಟ. ಒಂದೊಂದು ವರ್ಷ ಒಂದೊಂದು ರಾಜ್ಯಕ್ಕೆ ಎಲ್ಲ ರಾಜ್ಯಗಳ ಮಹಿಳೆಯರ ಮತ್ತು ಪುರುಷರ ತಂಡಗಳನ್ನು ಆಹ್ವಾನಿಸಿ ಇದರಲ್ಲಿ ಭಾಗವಹಿಸುವಂತೆ ಮಾಡುವ ವ್ಯವಸ್ಥೆಯಿದೆ.

ಮಟ್ಟಸವಾದ, ಕೆಮ್ಮಣ್ಣು ಮತ್ತು ಮರದ ಹೊಟ್ಟು ಮಿಶ್ರಿತವಾದ ಮೃದುವಾದ ಸ್ಥಳ ಈ ಆಟಕ್ಕೆ ಅವಶ್ಯ. ಆಟದ ಮೈದಾನ ಪುರುಷರಿಗೆ 13 ಮೀ. ಉದ್ದ 10 ಮೀ. ಅಗಲವಾಗಿರಬೇಕು. ಬಾಲಕರು ಮತ್ತು ಮಹಿಳೆಯರಿಗೆ 11 ಮೀ. ಉದ್ದ 8 ಮೀ. ಅಗಲವಾಗಿರಬೇಕು. ಉದ್ದವನ್ನು ಸಮವಾಗಿ ಎರಡಾಗಿ ವಿಭಾಗಿಸಬೇಕು. ಮೈದಾನದ ಉದ್ದಕ್ಕೂ ಎರಡೂ ಕಡೆ ಒಂದೊಂದು ಮೀಟರ್ ಅಗಲದ ಸ್ಥಳಕ್ಕೆ ಲಾಬಿ ಎಂದು ಹೆಸರು. ಮಧ್ಯರೇಖೆಯ ಆಚೀಚೆ ತಲಾ 3 ಮೀ. ಅಗಲವಾಗಿ ಸಮಾನಾಂತರವಾಗಿ ಎಳೆದಿರುವ ರೇಖೆಗಳಿಗೆ ಪಾಟ್‌ಲಾಗ್ ಅಥವಾ ಜೀವದಾನ ರೇಖೆಗಳೆಂದು (ಬಾಕ್‌ಲೈನ್ಸ್) ಹೆಸರು. ಬಾಲಕರ ಮತ್ತು ಮಹಿಳೆಯರ ಮೈದಾನದಲ್ಲಿ ಈ ರೇಖೆಗಳು ಮಧ್ಯರೇಖೆಯ ಆಚೀಚೆ 2.5 ಮೀ. ದೂರದಲ್ಲಿರುತ್ತವೆ. ಪ್ರತಿಯೊಂದು ರೇಖೆಯೂ ಎರಡು ಅಂಗುಲ ದಪ್ಪವಾಗಿರಬೇಕು. ಆಟ ಪ್ರಾರಂಭವಾಗುವುದಕ್ಕೆ ಮೊದಲು ಮುಖ್ಯ ತೀರ್ಪುಗಾರ ನಾಣ್ಯವನ್ನು ಚಿಮ್ಮಿಸುತ್ತಾನೆ. ತನ್ನ ಟೀಮಿಗೆ ಮೊದಲು ಕ್ಷೇತ್ರ ಬೇಕೇ ಅಥವಾ ತಾನು ದಾಳಿ ಪ್ರಾರಂಭಿಸುತ್ತಾನೆಯೇ—ಎಂಬುದನ್ನು ಆಯ್ಕೆ ಮಾಡಿಕೊಳ್ಳುವ ಸ್ವಾತಂತ್ರ್ಯ ಟಾಸ್ ಗೆದ್ದ ನಾಯಕನಿಗೆ ಉಂಟು. ಅರ್ಧಸಮಯದ ಅನಂತರ ಕ್ಷೇತ್ರಗಳನ್ನು ಬದಲಾಯಿಸಬೇಕು. ಅರ್ಧವೇಳೆಯ ಕೊನೆಯಲ್ಲಿ ಉಳಿದಿರುವ ಆಟಗಾರರ ಸಂಖ್ಯೆಯೇ ಮುಂದಿನ ಅರ್ಧ ಆಟವನ್ನು ಪ್ರಾರಂಭಿಸಬೇಕು. ದಾಳಿ ಪ್ರಾರಂಭಿಸುವ ಆಟಗಾರನಿಗೆ ದಾಳಿಕಾರ (ರೈಡರ್) ಎಂದೂ ಪ್ರತಿಸ್ಪರ್ಧಿಗಳಿಗೆ ದಾಳಿವಿರೋಧಿ (ಆಂಟಿ ರೈಡರ್ಸ್) ಅಥವಾ ಎದುರಾಳಿಗಳು ಎಂದೂ ಹೆಸರು.

ಪ್ರತಿ ಪಕ್ಷದ ಆಟಗಾರರ ಸಂಖ್ಯೆಯೂ 12. ಮೊದಲು 7 ಆಟಗಾರರು ಮಾತ್ರ ಆಡಬೇಕು. ಉಳಿದ ಐದು ಆಟಗಾರರನ್ನು ಯಾವಾಗ ಬೇಕಾದರೂ ಮುಖ್ಯ ತೀರ್ಪುಗಾರರ ಅಪ್ಪಣೆ ಪಡೆದು ಯಾವ ಆಟಗಾರನ ಬದಲಿಗೆ ಯಾರು ಎಂದು ಹೇಳಿ ಬದಲಾಯಿಸಿಕೊಳ್ಳಬಹುದು. ಆದರೆ ಆಟವನ್ನು ಮಾತ್ರ ನಿಲ್ಲಿಸಲಾಗುವುದಿಲ್ಲ. ಈ ಬದಲಾವಣೆಯನ್ನು ಟೀಮಿನ ನಾಯಕ ಅಥವಾ ಟೀಮಿನ ಶಿಕ್ಷಕ (ಕೋಚ್) ಮಾತ್ರ ಮಾಡಬೇಕು. ನಾಯಕನಲ್ಲದೆ ಬೇರೆ ಯಾವ ಆಟಗಾರನೂ ಆಟದ ಸಮಯದಲ್ಲಿ ಮಾತನಾಡಬಾರದು. ನಾಯಕ ತನ್ನ ಆಟಗಾರರಿಗೆ ತನ್ನ ಕ್ಷೇತ್ರದಲ್ಲಿ ಮಾತ್ರ ಸೂಚನೆ ಕೊಡಬೇಕು.

ದಾಳಿಕಾರ ಕಬ್ಬಡ್ಡಿ ಕಬ್ಬಡ್ಡಿ ಎಂದು ಉಸಿರು ಕಟ್ಟಿ ಎದುರಾಳಿಗಳ ಕ್ಷೇತ್ರವನ್ನು ಪ್ರವೇಶಿಸುತ್ತಾನೆ. ಈತ ತನ್ನ ಕ್ಷೇತ್ರದಿಂದಲೇ ಉಸಿರು ಕಟ್ಟಬೇಕು. ದಾಳಿಗೆ ಒಳಗಾದ ಕ್ಷೇತ್ರದಲ್ಲಿರುವ ಪ್ರತಿಯೊಬ್ಬ ಆಟಗಾರನೂ ಈತನಿಗೆ ಎದುರಾಳಿ. ದಾಳಿಕಾರ ಎದುರಾಳಿಯ ಕ್ಷೇತ್ರವನ್ನು ಪ್ರವೇಶಿಸುವ ಮೊದಲು, ಅಂದರೆ ತನ್ನ ಕ್ಷೇತ್ರದಿಂದಲೇ, ಕಬ್ಬಡ್ಡಿ ಎಂಬ ಪದವನ್ನು ಒಂದು ಉಸಿರಾಟದ ಅವಧಿಯಲ್ಲಿ ಸ್ಪಷ್ಟವಾಗಿ ಕೇಳಿಸುವಂತೆ ಉಚ್ಚಾರ ಮಾಡುತ್ತಾ ಒಮ್ಮೆಯಾದರೂ ಜೀವದಾನ ರೇಖೆಯನ್ನು ದಾಟಿ, ಎದುರು ಪಕ್ಷದ ಆಟಗಾರರನ್ನು ಸಾಧ್ಯವಾದರೆ ಮುಟ್ಟಿ ತನ್ನ ಕ್ಷೇತ್ರಕ್ಕೆ ಬಂದು ಸೇರಬೇಕು. ಹಾಗೆ ಮುಟ್ಟಿ ಹಿಂದಿರುಗಿದಾಗ ಇವನಿಂದ ಮುಟ್ಟಿಸಿಕೊಂಡವರು ಔಟಾದರೆಂದು ಪರಿಗಣಿಸಲಾಗುವುದು. ದಾಳಿಕಾರ ದಾಳಿ ಮಾಡಿದಾಗ ಆತ ಉಸಿರು ಬಿಡುವವರೆಗೂ ಅವನನ್ನು ಎದುರಾಳಿಗಳು ತಮ್ಮ



ನಾಗಪುರದಲ್ಲಿ ಬೊಂಬಾಯಿ ವಿಶ್ವವಿದ್ಯಾನಿಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ನಡುವೆ ನಡೆದ ಕಬ್ಬಡ್ಡಿ ಪಂದ್ಯದ ಸ್ವಾರಸ್ಯ ಘಟ್ಟ



ಪೂನದಲ್ಲಿ ಕರ್ನಾಟಕ ವಿಶ್ವವಿದ್ಯಾನಿಲಯ ಮತ್ತು ಮೈಸೂರು ವಿಶ್ವವಿದ್ಯಾನಿಲಯಗಳ ನಡುವೆ ನಡೆದ ಕಬ್ಬಡ್ಡಿ ಪಂದ್ಯ

ಕ್ಷೇತ್ರದಲ್ಲಿ ಹಿಡಿದಿಟ್ಟು ಅವನ ಕ್ಷೇತ್ರಕ್ಕೆ ವಾಪಸಾಗುವುದಕ್ಕೆ ಅವಕಾಶ ಕೊಡದಿದ್ದರೆ ದಾಳಿಕಾರ ಹಿಡಿಯಲ್ಪಟ್ಟನೆಂದು ಅರ್ಥ. ದಾಳಿಕಾರನನ್ನು ಹಿಡಿದಾಗ ಅವನ ಬಾಯಿ ಮುಚ್ಚುವುದು, ಅವನನ್ನು ಹೊರಕ್ಕೆ ತಳ್ಳುವುದು, ಕತ್ರಿಪಟ್ಟು ಹಾಕುವುದು ಮುಂತಾದ ಅಸಭ್ಯ ವಿಧಾನಗಳನ್ನನುಸರಿಸಬಾರದು. ಎರಡು ಪಕ್ಷಗಳೂ ಸರದಿಯಂತೆ ದಾಳಿ ಮತ್ತು ಎದುರಾಳಿ ಪಕ್ಷಗಳಾಗಿರುತ್ತವೆ.

ಆಟದ ಅವಧಿ ತಲಾ 20 ನಿಮಿಷಗಳ ಎರಡು ಅರ್ಧಗಳಿಂದ ಕೂಡಿರುತ್ತದೆ. ಬಾಲಕರಿಗೆ ಮತ್ತು ಮಹಿಳೆಯರಿಗೆ ಆಟಾರ್ಧ 15 ನಿಮಿಷ. ಮಧ್ಯೆ ಐದು ನಿಮಿಷ ವಿರಾಮ.

ಆಟಕ್ಕೆ ಬೇಕಾದ ಅಧಿಕಾರಿಗಳು : ಒಬ್ಬ ಮುಖ್ಯ ತೀರ್ಪುಗಾರ, ಇಬ್ಬರು ಉಪತೀರ್ಪುಗಾರರು, ಇಬ್ಬರು ರೇಖಾ ನಿರೀಕ್ಷಕರು (ಲೈನ್ ಮೆನ್) ದಾಖಲೆದಾರ (ಸ್ಕೋರರ್) ಮತ್ತು ಒಬ್ಬ ಕಾಲಗಣಕ (ಟೈಮರ್).

ಪ್ರತಿಯೊಬ್ಬ ಎದುರಾಳಿ ಔಟಾದಾಗಲೂ ಔಟ್ ಮಾಡಿದ ಪಕ್ಷಕ್ಕೆ ಪ್ರತಿಯೊಂದು ಔಟಿಗೂ ಒಂದೊಂದು ಅಂಕ (ಪಾಯಿಂಟ್) ಬರುತ್ತದೆ, ಮತ್ತು ತನ್ನ ಕಡೆ ಔಟಾದ ಆಟಗಾರರ ಪೈಕಿ ಒಬ್ಬ ಪುನಃ ಬಂದು ಸೇರುವ ಅವಕಾಶವಿದೆ. ಪ್ರತಿಸ್ಪರ್ಧಿಗಳೆಲ್ಲರನ್ನೂ ಔಟ್ ಮಾಡಿದ ಪಕ್ಷಕ್ಕೆ ಒಂದು ಲೋನ—ಎಂದರೆ ನಾಲ್ಕು ಅಂಕಗಳು ಅಧಿಕ—ದೊರೆಯುತ್ತದೆ. (ಬಿ.ವಿ.ಕೆ.)

**ಕಬ್ಬನ್, ಸರ್ ಮಾರ್ಕ್ :** 1785–1861. ಮೈಸೂರು ಸಂಸ್ಥಾನದ ಆಡಳಿತವನ್ನು ಬ್ರಿಟಿಷ್ ಸರ್ಕಾರ ವಹಿಸಿಕೊಂಡಿದ್ದ ಕಾಲದಲ್ಲಿ (1831–1881) ಆ ಸಂಸ್ಥಾನದ ಕಮಿಷನರ್ ಆಗಿದ್ದವ (1834–1861). ಐರಿಷ್ ಸಮುದ್ರದಲ್ಲಿರುವ ಐಲ್ ಆಫ್ ಮ್ಯಾನ್ ದ್ವೀಪದ ಮ್ಯಾಂಕ್ಸ್‌ನಲ್ಲಿ ಪಾದ್ರಿಯೊಬ್ಬನ ಮಗನಾಗಿ 1785ರ ಸೆಪ್ಟೆಂಬರಿನಲ್ಲಿ ಜನಿಸಿದ. 1800ರಲ್ಲಿ ಭಾರತಕ್ಕೆ ಬಂದ. ಕರ್ನಲ್ ವಿಲ್ಕ್ಸನ ಸೋದರಸಂಬಂಧಿಯಾದ ಈತ ಮದ್ರಾಸ್ ಇನ್‌ಫೆಂಟ್ರಿಯನ್ನು ಸೇರಿ 1816ರಲ್ಲಿ ಕ್ಯಾಪ್ಟನ್ ಪದವಿಗೇರಿದ. 1817–18ರಲ್ಲಿ ಪಿಂಡಾರಿಗಳ ವಿರುದ್ಧ ನಡೆದ ಕಾರ್ಯಾಚರಣೆಯಲ್ಲಿ ಪಾತ್ರವಹಿಸಿದ್ದು, 1818ರಲ್ಲಿ ಲೆಫ್ಟಿನೆಂಟ್ ಕರ್ನಲ್ ಆದ. ಮೈಸೂರಿನ ವಿದ್ಯಮಾನಗಳ ಬಗ್ಗೆ ವಿಚಾರಣೆ ನಡೆಸಲು ಲಾರ್ಡ್ ವಿಲಿಯಂ ಬೆಂಟಿಂಕ್ ಏರ್ಪಡಿಸಿದ್ದ ಸಮಿತಿಯಲ್ಲಿ (1831) ಈತನೂ ಒಬ್ಬ ಸದಸ್ಯ, ಮುಮ್ಮಡಿ ಕೃಷ್ಣರಾಜಒಡೆಯರಿಂದ ವಶಪಡಿಸಿಕೊಂಡ ಸಂಸ್ಥಾನಾಡಳಿತವನ್ನು ನಿರ್ವಹಿಸುವುದಕ್ಕಾಗಿ ಈತ ಕಿರಿಯ ಕಮಿಷನರ್ ಅಧಿಕಾರಿಯಾಗಿದ್ದು 1834ರಲ್ಲಿ ಅದರ ಏಕೈಕ ಕಮಿಷನರ್ ಆಗಿ ನೇಮಕವಾದ. 27 ವರ್ಷಗಳ ಕಾಲ ಈ ಹುದ್ದೆಯಲ್ಲಿದ್ದ ಈತ ಸಂಸ್ಥಾನದ ಆಡಳಿತ ಮತ್ತು ಆರ್ಥಿಕ ಸ್ಥಿತಿಗತಿಗಳನ್ನು ಬಹಳ ಮಟ್ಟಿಗೆ ಸುಧಾರಿಸಿದ. ಸಂಸ್ಥಾನವನ್ನು ಬೆಂಗಳೂರು, ಚಿತ್ರದುರ್ಗ, ಅಷ್ಟಗ್ರಾಮ ಮತ್ತು ನಗರಗಳೆಂಬ ನಾಲ್ಕು ವಿಭಾಗಗಳನ್ನಾಗಿ ಮಾಡಿ ಅವಕ್ಕೆ ಮೇಲಧಿಕಾರಿಗಳನ್ನು ನೇಮಿಸಿದ. ಪ್ರತಿಯೊಂದು ತಾಲ್ಲೂಕಿಗೂ ಒಬ್ಬ ಅಮಲ್ದಾರನನ್ನೂ ಪ್ರತಿ ಹೋಬಳಿಗೂ ಒಬ್ಬ ಶೇಕ್‌ದಾರನನ್ನೂ ನೇಮಿಸಲಾಯಿತು. ತನ್ನ ಆಪ್ತ ಕಾರ್ಯದರ್ಶಿಯನ್ನೆ ಪ್ರಮುಖ ಕಾರ್ಯದರ್ಶಿಯನ್ನಾಗಿ ನೇಮಿಸಿ ಆಡಳಿತವನ್ನು ಬಿಗಿಗೊಳಿಸಿದ್ದಲ್ಲದೆ ಸರ್ಕಾರದ ಚಟುವಟಿಕೆಗಳನ್ನು ಜನರಿಗೆ ತಿಳಿಯಪಡಿಸುವ ವ್ಯವಸ್ಥೆಯನ್ನು ವಿಸ್ತರಿಸಿದ. 85 ತಾಲ್ಲೂಕು ನ್ಯಾಯಾಲಯಗಳು, 8 ಪ್ರಧಾನ ಸದರ್ ಮುನ್ಸಿಫ್ ನ್ಯಾಯಾಲಯಗಳು, 3 ಸೂಪರಿಂಟೆಂಡೆಂಟ್ ನ್ಯಾಯಾಲಯಗಳು ಮತ್ತು ಮೂವರು ನ್ಯಾಯಾಧೀಶರಿರುವ ಒಂದು ಹುಜೂರ್ ಅದಾಲತ್ ನ್ಯಾಯಾಲಯ ಇರುವಂತೆ ನ್ಯಾಯಾಂಗವನ್ನು ಪುನರ್ವ್ಯವಸ್ಥೆಗೊಳಿಸಿ ದೃಢಗೊಳಿಸಿದ. ಒಟ್ಟು 1,600 ಮೈಲಿ ಉದ್ದದ ರಸ್ತೆಗಳೂ ಅನೇಕ ಸೇತುವೆಗಳೂ ಈತನ ಕಾಲದಲ್ಲಿ ರಚಿತವಾಗಿ ಬೆಂಗಳೂರಿಗೂ ಜಿಲ್ಲಾ ಕೇಂದ್ರಗಳಿಗೂ ಸಂಪರ್ಕ ಸುಲಭವಾಯಿತು. ಜಾಲಾರ್ ಪೇಟೆ–ಬೆಂಗಳೂರು ರೈಲುಮಾರ್ಗ ನಿರ್ಮಾಣವಾದದ್ದು ಈತನ ಕಾಲದಲ್ಲೇ (1859). ಸಂಸ್ಥಾನದ ಆದಾಯವೂ ಹೆಚ್ಚಿತು. 1834ರಲ್ಲಿ 68ಲಕ್ಷ ರೂ. ಇದ್ದ ವಾರ್ಷಿಕ ಆದಾಯ



ಕಬ್ಬನ್, ಸರ್ ಮಾರ್ಕ್‌ನ ಪ್ರತಿಮೆ

1855–56ರಲ್ಲಿ 85 ಲಕ್ಷ ರೂ. ಗಳಿಗೆ ಏರಿತು. ಸರ್ಕಾರದ ಎಲ್ಲ ಸಾಲಗಳನ್ನೂ ತೀರಿಸಲು ಸಾಧ್ಯವಾಗಿ, ಹಣಕಾಸಿನ ಸ್ಥಿತಿ ಸುಧಾರಿಸಲು ಸಾಧ್ಯವಾದದ್ದು ಈತನ ದಕ್ಷ ಆಡಳಿತದಿಂದ.

ಕಬ್ಬನ್ ಕೊನೆಯ ತನಕವೂ ಅವಿವಾಹಿತನಾಗಿಯೇ ಇದ್ದ. 60 ವರ್ಷಗಳ ಕಾಲ ಭಾರತದಲ್ಲಿ ಸೇವೆ ಸಲ್ಲಿಸಿದ. ಈತ ಈ ಕಾಲದಲ್ಲಿ ಒಮ್ಮೆಯೂ ಭಾರತವನ್ನು ಬಿಟ್ಟುಹೋಗಲಿಲ್ಲ. 1861ರಲ್ಲಿ ಅನಾರೋಗ್ಯದ ನಿಮಿತ್ತ ಕೆಲಸಕ್ಕೆ ರಾಜೀನಾಮೆ ನೀಡಿ ಸ್ವದೇಶಕ್ಕೆ ಹಿಂದಿರುಗುತ್ತಿದ್ದಾಗ ಹಾದಿಯಲ್ಲಿ ಸೂಯೆಜ್‍ನಲ್ಲಿ ತೀರಿಕೊಂಡ. ಇವನ ಪಾರ್ಥಿವ ಶರೀರವನ್ನು ಐಲ್ ಆಫ್ ಮ್ಯಾನ್‍ಗೆ ಕೊಂಡೊಯ್ದು ಅಲ್ಲಿ ಸಮಾಧಿ ಮಾಡಲಾಯಿತು. ಹಲವು ಶತಮಾನಗಳಲ್ಲಿ ಆ ದ್ವೀಪದಲ್ಲಿ ಹುಟ್ಟಿದವರ ಪೈಕಿ ಅತಿ ದೊಡ್ಡ ವ್ಯಕ್ತಿಯೀತನೆಂದು ಅಲ್ಲಿಯ ಜನ ಘೋಷಿಸಿದರು.

ಕಮಿಷನರ್ ಆಗಿ ಕೆಲಸ ಮಾಡುತ್ತಿದ್ದಾಗ 1852ರಲ್ಲಿ ಈತನಿಗೆ ಸೈನ್ಯದ ಹುದ್ದೆಯಲ್ಲಿ ಲೆಫ್ಟೆನೆಂಟ್ ಜನರಲ್ ಆಗಿ ಬಡ್ತಿ ಸಿಕ್ಕಿತ್ತು. ಬ್ರಿಟಿಷ್ ರಾಣಿ ಈತನಿಗೆ 1856ರಲ್ಲಿ ಸಿ.ಬಿ. ಪ್ರಶಸ್ತಿಯನ್ನೂ 1859ರಲ್ಲಿ ಕೆ.ಸಿ.ಬಿ. ಪ್ರಶಸ್ತಿಯನ್ನೂ ನೀಡಿದಳು. (ಎಸ್.ಎಸ್.ಕೆಎ.)

**ಕಬ್ಬಾರೆ ಹಕ್ಕಿ :** ಸಿಕೋನಿಫಾರ್ಮಿಸ್ ಗಣದ ಆರ್ಡೆಯಿಡೀ ಕುಟುಂಬಕ್ಕೆ ಸೇರಿದ ನೀಳಗಾಲಿನ ನೀರಿನಲ್ಲಿ ನಡೆದಾಡುವ ಹಕ್ಕಿಗಳು (ಹೆರಾನ್). ಒಂದು ಬಗೆಯ ಕಬ್ಬಾರೆಯನ್ನು ಕನ್ನಡ ನಾಡಿನ ಕೆಲವೆಡೆ ನಾರಾಯಣಿ ಪಕ್ಷಿ ಎಂದು ಕರೆಯುತ್ತಾರೆ.



ಇವು ಪ್ರಪಂಚದ ಉಷ್ಣ ಹಾಗೂ ಸಮಶೀತೋಷ್ಣ ವಲಯಗಳಲ್ಲಿ ಸಾಮಾನ್ಯವಾಗಿ ಕಂಡು ಬರುತ್ತವೆ. ಇವುಗಳ ದೇಹದ ಗಾತ್ರ ಕೋಳಿಯ ಗಾತ್ರದಿಂದ ಹಿಡಿದು ರಣಹದ್ದಿನ ಗಾತ್ರಕ್ಕೂ ಸ್ವಲ್ಪ ದೊಡ್ಡದಾಗಿರುತ್ತದೆ. ಇವುಗಳ ಕೊಕ್ಕು ನೀಳ ಮತ್ತು ಚೂಪು. ಭಲ್ಲೆಯ ಆಕಾರ; ಕೆಲವು ಪ್ರಭೇದಗಳಲ್ಲಿ ಕೊಕ್ಕಿನ ಅಂಚು ಸ್ವಲ್ಪಮಟ್ಟಿಗೆ ದಂತಿತವಾಗಿರುತ್ತದೆ. ಕುತ್ತಿಗೆ ಅನೇಕ ಪ್ರಭೇದಗಳಲ್ಲಿ ನೀಳ. ತೆಳು ಹಾಗೂ ಬಳುಕುವಂಥದ್ದು. ಕುತ್ತಿಗೆಯ ಮಧ್ಯಭಾಗ ಕೊಂಕಾಗಿರುವುದರಿಂದ ಇವು ಹಾರುವಾಗ ಅಥವಾ ಕಾಲುಗಳ ಮೇಲೆ ನಿಂತಾಗ, ಕುತ್ತಿಗೆ *S* ಆಕಾರದಂತಿರುವುದು ಈ ಹಕ್ಕಿಗಳ ಮತ್ತೊಂದು ವೈಶಿಷ್ಟ್ಯ. ಇವುಗಳ ಕಾಲುಗಳಲ್ಲಿ ಟಿಬಿಯ ಎಲುಬು ಇರುವ ಭಾಗ ನೀಳವಾಗಿದ್ದು, ಭಾಗಶಃ ಬೋಳಾಗಿರುತ್ತದೆ. ಬೆರಳುಗಳು ನೀಳವಾಗಿ ತೆಳುವಾಗಿವೆ. ಮಧ್ಯದ ಮತ್ತು ಹೊರ ಬೆರಳುಗಳ ಮಧ್ಯೆ ಒಂದು ಚಿಕ್ಕ ಜಲಪಾದವಿದೆ. ಮಧ್ಯದ ಬೆರಳಿನ ಸ್ವಲ್ಪಭಾಗದ ಚೂಪು ನಖದ ಮೇಲೆ ಬಾಚಣಿಗೆಯಂಥ ರಚನೆಯಿದೆ. ಹಿಂಬೆರಳು ಚೆನ್ನಾಗಿ ಬೆಳೆದು ಇತರ ಬೆರಳುಗಳ ಮಧ್ಯದಲ್ಲಿಯೇ ಇರುವುದರಿಂದ ಹಕ್ಕಿ ನಿಂತುಕೊಂಡಾಗ ದೇಹದ ಭಾರ ಎಲ್ಲ ಬೆರಳುಗಳ ಮೇಲೆ ಬೀಳುತ್ತದೆ. ದೇಹವನ್ನು ಆವರಿಸಿರುವ ತುಪ್ಪಳ ಮೃದು ಮತ್ತು ಸಾಮಾನ್ಯವಾಗಿ ವಿರಳ. ದೇಹದ ಬಣ್ಣ ಬಿಳುಪು, ಬೂದು, ಕಂದು ಅಥವಾ ಪಾಟಲ. ಕೆಲವು ಪ್ರಭೇದಗಳಲ್ಲಿ ಗರಿಗಳು ಮಚ್ಚೆ ಮತ್ತು ಪಟ್ಟೆಗಳಿಂದ ಕೂಡಿರುವುದೂ ಉಂಟು. ಸಂತಾನವೃದ್ಧಿಯ ಕಾಲದಲ್ಲಿ ಕೆಲವು ಬಗೆಯ ಪಕ್ಷಿಗಳ ತಲೆಯ ಮತ್ತು ಬೆನ್ನಿನ ಮೇಲೆ ಉದ್ದದ, ನಾರು ರೂಪದ ಅಲಂಕಾರದ ಗರಿಗಳು ಮೂಡುತ್ತವೆ. ಗಂಡು ಮತ್ತು ಹೆಣ್ಣು ಪಕ್ಷಿಗಳು ಹೊರನೋಟಕ್ಕೆ ಒಂದೇ ಬಗೆ. ಇವು ಸಾಮಾನ್ಯವಾಗಿ ಕೆರೆ, ಕೊಳ, ತೊರೆ, ಖಾರಿ ಮತ್ತು ಅಳಿವೆಗಳಲ್ಲಿ ಕಂಡುಬಂದರೂ ಕೆಲವು ಸಂದರ್ಭಗಳಲ್ಲಿ ಒಣ ಭೂಪ್ರದೇಶದ ಮೇಲೂ ನಡೆದಾಡುವುದನ್ನು ಕಾಣಬಹುದು. ಇವುಗಳ ರೆಕ್ಕೆ ಅಗಲ, ಬಾಲ ಮೊಟಕು. ಇವು ನೀರಿನ ಮೇಲೆ ಕೆಳಮಟ್ಟದಲ್ಲಿಯೇ ಹಾರುತ್ತವೆ. ಉತ್ತಳ ನೀರಿನಲ್ಲಿ ನಿಶ್ಚಲವಾಗಿ ನಿಲ್ಲುವುದು ಇವಕ್ಕೆ ಪ್ರಿಯ. ಈ ಭಂಗಿಯಲ್ಲಿಯೇ ಇವು ತಮ್ಮ ಆಹಾರ ಜೀವಿಯನ್ನು ಹೊಂಚು ಹಾಕಿ ಸಮಯ ಸಿಕ್ಕಿದಾಗ ತಮ್ಮ ಚೂಪಾದ ಕೊಕ್ಕಿನಿಂದ ಹಿಡಿದು ಇಡಿಯಾಗಿ ಗಬಕ್ಕನೆ ನುಂಗುತ್ತವೆ. ಅಜೀರ್ಣವಾದ ಆಹಾರವನ್ನು ತುತ್ತುಗಳ ರೂಪದಲ್ಲಿ ಹೊರಕ್ಕೆ ಹಾಕುತ್ತವೆ. ನೀರಿನಲ್ಲಿ ವಾಸಿಸುವ ಮೀನು, ಕಪ್ಪೆ, ಏಡಿ, ಸೀಗಡಿ ಮೊದಲಾದುವು ಇವುಗಳ ಮುಖ್ಯ ಆಹಾರ. ಬಯಲಿನಲ್ಲಿದ್ದಾಗ ಕೀಟ ಮತ್ತು ಹಲ್ಲಿಗಳನ್ನು ಹಿಡಿಯುವುದೂ ಉಂಟು. ಆಹಾರಾರ್ಜನೆ ಮಾಡುವಾಗ ಇವು ಒಂಟೊಂಟಿಯಾಗಿ ಕಂಡು ಬಂದರೂ ಸಂತಾನೋತ್ಪತ್ತಿ ಕಾಲದಲ್ಲಿ ಗುಂಪುಗೂಡಿ ಸಾಮೂಹಿಕವಾಗಿ ಮರಗಳ ಮೇಲೆ, ಪೊದೆಗಳಲ್ಲಿ ಅಥವಾ ಭೂಮಿಯ ಮೇಲೆ ಮರದ ಕಡ್ಡಿಗಳ ಒರಟು ಗೂಡುಗಳನ್ನು ಕಟ್ಟುತ್ತವೆ. ಒಂದು ಗೂಡಿನಲ್ಲಿ 3–6 ಮೊಟ್ಟೆಗಳನ್ನಿಡುತ್ತವೆ. ಮೊಟ್ಟೆಗಳ ಬಣ್ಣ ಮಾಸಲು ಕಂದು ಅಥವಾ ನೀಲಿಮಿಶ್ರಿತ ಬೂದು. 21–26 ದಿನಗಳವರೆಗೆ ಕಾವು ಕೊಟ್ಟಮೇಲೆ ಮೊಟ್ಟೆಯಿಂದ ಮರಿಗಳು ಹೊರಬರುತ್ತವೆ. ಗೂಡು ಕಟ್ಟುವುದರಲ್ಲಿ, ಕಾವು ಕೊಡುವುದರಲ್ಲಿ ಮತ್ತು ಮರಿಗಳಿಗೆ ಗುಟುಕು ಕೊಟ್ಟು ಪಾಲನೆ ಮಾಡುವುದರಲ್ಲಿ ಗಂಡು ಹೆಣ್ಣು ಎರಡೂ ಭಾಗಿಯಾಗುತ್ತವೆ.

ನಮ್ಮ ದೇಶದಲ್ಲಿ ಕಬ್ಬಾರೆ ಎಂದು ಕರೆಯುವ ಹಕ್ಕಿಗಳು ಬೇರೆ ಬೇರೆ ಜಾತಿಗೆ ಸೇರಿವೆ. ಅಲ್ಲದೆ ಇವುಗಳ ಬೇರೆ ಬೇರೆ ಪ್ರಭೇದಗಳು ಅಮೆರಿಕ, ಯೂರೋಪು, ಆಫ್ರಿಕ ಖಂಡಗಳಲ್ಲೂ ವ್ಯಾಪಿಸಿವೆ. ಭಾರತದಲ್ಲಿ ಆರ್ಡೆಯ ಜಾತಿಯಲ್ಲಿ ಆರ್ಡೆಯ ಇನ್ಸಿಗ್ನಿಸ್ (ಬಿಳಿ ಹೊಟ್ಟೆ ಕಬ್ಬಾರೆ), ಆರ್ಡೆಯ ಗೋಲಿಯಾಸ್ (ಐದಡಿ ನಿಲುವಿನ ಪಕ್ಷಿ), ಆರ್ಡೆಯ ಸಿನೇರಿಯ (ನಾರಾಯಣಿ ಪಕ್ಷಿ) ಮತ್ತು ಆರ್ಡೆಯ ಪರ್ಪ್ಯೂರಿಯ (ಕೆಂಪು ನಾರಾಯಣಿ ಪಕ್ಷಿ)—ಇವು ಪ್ರಮುಖ ಪ್ರಭೇದಗಳು. ಬೂಟೊರಿಡಿಸ್ ಸ್ಟ್ರಯೇಟಸ್ (ಪುಟ್ಟ ಹಸಿರು ಕಬ್ಬಾರೆ), ಆರ್ಡಿಯೋಲ ಗ್ರಾಯಿ (ಬತ್ತದ ಗದ್ದೆಯ ಅಥವಾ ಕೊಳದ ಕಬ್ಬಾರೆ) ನಿಕ್ಟಿಕೊರಾಕ್ಸ್ ನಿಕ್ಟಿಕೊರಾಕ್ಸ್ (ಇರುಳ ಕಂಕ)—ಈ ಜಾತಿ ಪ್ರಭೇದಗಳೂ ಕಂಡುಬರುತ್ತವೆ. (ಬಿ.ಎಚ್.ಬಿ.)

**ಕಬ್ಬಾಳ ದುರ್ಗ :** ಮಂಡ್ಯ ಜಿಲ್ಲೆಯ ಮಳವಳ್ಳಿ ತಾಲ್ಲೂಕಿನಲ್ಲಿರುವ ಒಂದು ಬೆಟ್ಟ. ಸಮುದ್ರಮಟ್ಟದಿಂದ 3,507′ ಎತ್ತರವಿದ್ದು ಶಂಕುವಿನಾಕಾರದಲ್ಲಿದೆ. ಕಡಿದಾದ ಪಕ್ಕಗಳಿಂದ ಕೂಡಿದ ಈ ಬೆಟ್ಟದ ಮೇಲೆ ದುರ್ಭೇದ್ಯವಾದ ಕೋಟೆಯೊಂದನ್ನು ಕಟ್ಟಿರುವುದರಿಂದ ಇದಕ್ಕೆ ಈ ಹೆಸರು ಬಂದಿದೆ. ಕೋಟೆಯನ್ನು ಕಟ್ಟಿಸಿದವ ಗಾಥಿಕ್ ರಾಜ ಎಂಬ ಹೆಸರಿನ ಪಾಳೆಯಗಾರನೆಂಬ ಪ್ರತೀತಿಯಿದೆ. ಒಂದು ಕಡೆಯಿಂದ ಮಾತ್ರ ಈ ಬೆಟ್ಟದ ಮೇಲೇರಿಹೋಗುವುದು ಸಾಧ್ಯ. ಅಲ್ಲೂ ಮೆಟ್ಟಿಲುಗಳು ಬಲು ಕಡಿದು; ಅದನ್ನು ಬಂಡೆಯಲ್ಲೇ ಕೊರೆಯಲಾಗಿದೆ. ಕೆಲವು ಕಡೆಗಳಲ್ಲಿ ಮೆಟ್ಟಿಲುಗಳು ಆರು ಅಂಗುಲಗಳಿಗೂ ಕಿರಿದಾಗಿವೆ. ಆದ್ದರಿಂದ ಇದನ್ನು ಹತ್ತುವುದು ಬಲುಕಷ್ಟ. ಸಾಕಷ್ಟು ಆಹಾರ ನೀರುಗಳನ್ನೊದಗಿಸಿಕೊಂಡು ಇಲ್ಲಿ ಉಳಿದರೆ ಶತ್ರುವಿನ ಆಕ್ರಮಣದ ಭಯವಿಲ್ಲದೆ ಇರುವುದು ಸಾಧ್ಯವಿತ್ತು. ಈ ಪ್ರದೇಶವನ್ನಾಳುತ್ತಿದ್ದ ಹಿಂದೂ ಮುಸ್ಲಿಂ ಆಡಳಿತಗಾರರೂ ಮುಮ್ಮಡಿ ಕೃಷ್ಣರಾಜ ಒಡೆಯರ ಸರ್ಕಾರದವರೂ ಅಪಾಯಕಾರಿಗಳಾದ ರಾಜದ್ರೋಹಿಗಳನ್ನು ಇಲ್ಲಿ ಇಡುತ್ತಿದ್ದರು. ಇಲ್ಲಿಯ ನೀರು ಕೂಡ ವಿಷಮಯವೆಂದು ಪರಿಗಣಿತವಾಗಿತ್ತು. ಅಹಿತಕರ ವಾತಾವರಣವೂ ಅತೃಪ್ತಿಕರ ಆಹಾರವೂ ಖೈದಿಯ ಬಂಧನದ ನೋವಿನ ಅವಧಿಯನ್ನು ಮೊಟಕುಮಾಡಿ ಬೇಗ ಅವನನ್ನು ಪರಲೋಕಕ್ಕೆ ಅಟ್ಟುತ್ತಿತ್ತೆಂದು ಕರ್ನಲ್ ವಿಲ್ಕ್ಸ್ ಬರೆದಿದ್ದಾನೆ. ಮೈಸೂರನ್ನಾಳುತ್ತಿದ್ದ (1731–1734) ಏಳನೆಯ ಚಾಮರಾಜ ಒಡೆಯರನ್ನೂ ಅವರ ಪತ್ನಿಯನ್ನೂ ದಳವಾಯಿ ದೇವರಾಜ ಸೆರೆಯಲ್ಲಿಟ್ಟಿದ್ದದ್ದು ಈ ದುರ್ಗದಲ್ಲೇ. ಅವರು ಇಲ್ಲಿ ಬಹುಕಾಲ ಬದುಕಲಿಲ್ಲ. ಹೈದರ್‌ಅಲಿ (ನೋಡಿ) ಇಲ್ಲಿಯ ಕೋಟೆಯನ್ನು ದುರಸ್ತುಗೊಳಿಸಿ ಇದಕ್ಕೆ ಜಾಫರಾಬಾದ್ ಎಂದು

ಹೆಸರಿಟ್ಟ. ಆದರೆ ಇಂದು ಯಾರೂ ಇದನ್ನು ಆ ಹೆಸರಿನಿಂದ ಕರೆಯುವುದಿಲ್ಲ. 1864 ರಲ್ಲಿ ಇಲ್ಲಿಯ ಫಿರಂಗಿಗಳನ್ನೂ ಮದ್ದನ್ನೂ ನಾಶಗೊಳಿಸಲಾಯಿತಲ್ಲದೆ ಇಲ್ಲಿದ್ದ ಸಿಬ್ಬಂದಿಯನ್ನು ಸ್ಥಳಾಂತರಗೊಳಿಸಲಾಯಿತು. (ಕೆ.ಆರ್.ಆರ್.)

**ಕಬ್ಬಿಣ :** ಆವರ್ತಕೋಷ್ಟಕದಲ್ಲಿ 8ನೆಯ ಗುಂಪಿನ ಸಂಕ್ರಾಂತಿಲೋಹ. ಪರಮಾಣು ತೂಕ $55.847 \pm 0.003$. ರಾಸಾಯನಿಕ ಸಂಕೇತ Fe (ಲ್ಯಾಟಿನ್ನಿನಲ್ಲಿ Ferrum). ನೈಸರ್ಗಿಕವಾಗಿ ದೊರೆಯುವ ಸಮಸ್ಥಾನಿಗಳು 54,56,57,58. ಎಲೆಕ್ಟ್ರಾನಿಕ್ ವಿನ್ಯಾಸ $1s^2\ 2s^2\ 2p^6\ 3s^2\ 3p^6\ 3d^6\ 4s^2$. ಅಯಾನಿಕ್ ತ್ರಿಜ್ಯ $Fe^{+2}$ 0.80 Å; $Fe^{+3}$ 0.67 Å. ಲೋಹ ತ್ರಿಜ್ಯ 1.2412 Å. ಪ್ರಥಮ ಅಯಾನೀಕರಣ ವಿಭವ 7.896 eV; ದ್ವಿತೀಯ 16.5 eV.

ವಿಪುಲತೆಯಲ್ಲಿ ಲೋಹಗಳ ಪೈಕಿ ಕಬ್ಬಿಣಕ್ಕೆ ಎರಡನೆಯ ಸ್ಥಾನ (ಮೊದಲನೆಯದು ಅಲ್ಯೂಮಿನಿಯಂ). ಭೂಮಿಯ ತಿರುಳಿನ ಬಹ್ವಂಶವೂ ಕಬ್ಬಿಣ ಲೋಹದಿಂದ ಕೂಡಿದೆ. ಹೊರಕವಚಕ್ಕೆ ಬಂದಂತೆ ಈ ಲೋಹ ಇತರ ಪದಾರ್ಥಗಳೊಡನೆ ಬೆರೆತು ರಾಸಾಯನಿಕ ಕ್ರಿಯೆಗಳು ಜರುಗಿ ಶುದ್ಧ ಕಬ್ಬಿಣವೆಂಬುದೊಂದು ವಿರಳ ವಸ್ತು ಎನ್ನಿಸಿದೆ. ಬಾಹ್ಯಾಕಾಶದಿಂದ ಭೂಮಿಗೆ ಕೆಡೆಯುವ ಉಲ್ಕಾಪಿಂಡಗಳೇ ಪ್ರಾಚೀನ ಮಾನವನಿಗೆ ಶುದ್ಧ ಕಬ್ಬಿಣ ಲೋಹದ ಮೂಲಗಳಾಗಿದ್ದುವು. ಆದ್ದರಿಂದ ಮಾನವ ಮೊಟ್ಟಮೊದಲು ಬಳಸಿದ ಕಬ್ಬಿಣ ಪ್ರಾಯಶಃ ಉಲ್ಕಾಪಿಂಡಮೂಲದ್ದಾಗಿರಬೇಕು. ಭೂಮಿಯಲ್ಲಿ ನಮಗೆ ದೊರೆಯುವ ಕಬ್ಬಿಣ ಸಂಯುಕ್ತ ರೂಪದಲ್ಲಿದೆ. ಕಬ್ಬಿಣದ ಪ್ರಮಾಣ ಹೆಚ್ಚಾಗಿರುವ ಕಬ್ಬಿಣದ ಅದುರುಗಳ ನಿಕ್ಷೇಪಗಳು ಸಾಕಷ್ಟು ಇವೆ. ಇವುಗಳಿಂದ ಲೋಹವನ್ನು ಸುಲಭವಾಗಿಯೂ ಅಗ್ಗವಾಗಿಯೂ ಪಡೆಯುವ ಸಾಧ್ಯತೆಯೂ ಕಬ್ಬಿಣವನ್ನು ಇಂಗಾಲ ಮತ್ತು ಇತರ ವಿಶೇಷ ಲೋಹಗಳೊಡನೆ ಸೂಕ್ತ ಪ್ರಮಾಣಗಳಲ್ಲಿ ಮಿಶ್ರಿಸುವುದರಿಂದ ಮತ್ತು ಉಷ್ಣ ನಿಯಂತ್ರಣದಿಂದ ಅಪೇಕ್ಷಿತ ದೃಢತೆ, ಕಾಠಿಣ್ಯ ಮತ್ತು ಇತರ ಗುಣಗಳಿರುವ ವಿವಿಧ ರೀತಿಯ ಉಕ್ಕುಗಳ ತಯಾರಿಕೆಯ ಸೌಲಭ್ಯವೂ ಕಬ್ಬಿಣಕ್ಕೆ ಲೋಹಗಳ ಪೈಕಿ ಅಗ್ರಸ್ಥಾನವನ್ನು ತಂದುಕೊಟ್ಟಿವೆ.

**ಕಬ್ಬಿಣದ ಅದುರುಗಳು :** ಅದುರುಗಳಾಗಿ ಉಪಯೋಗಿಸಲು ಯೋಗ್ಯವಾದ ಕಬ್ಬಿಣದ ಖನಿಜಗಳಲ್ಲಿ ಈ ಕೆಳಗಿನವು ಮುಖ್ಯವಾದವು—ಹೆಮಟೈಟ್ $Fe_2O_3$ (ಕಬ್ಬಿಣದ ಅಂಶ 70%) ; ಮ್ಯಾಗ್ನಟೈಟ್ $Fe_3O_4$ (ಕಬ್ಬಿಣದ ಅಂಶ 72.4%) ; ಲಿಮೊನೈಟ್ $xFe_2O_3 . yH_2O$ (ಕಬ್ಬಿಣದ ಅಂಶ 52.3-66.3%), ಸಿಡರೈಟ್ $FeCO_3$ (ಕಬ್ಬಿಣದ ಅಂಶ 48.38%). ಈ ಅದುರುಗಳು ಬೃಹತ್ಪ್ರಮಾಣದಲ್ಲಿ ಶುದ್ಧರೂಪದಲ್ಲಿ ದೊರಕುವುದು ವಿರಳ. ಸಾಮಾನ್ಯವಾಗಿ ಇದರೊಡನೆ ಕಲ್ಲುಮಣ್ಣುಗಳು—ವಿಶೇಷವಾಗಿ ಸಿಲಿಕೇಟುಗಳು ಮಿಶ್ರಿತವಾಗಿರುವುವು. ಅನೇಕ ವೇಳೆ ಸಲ್ಫೈಡುಗಳೂ ಫಾಸ್ಫೇಟುಗಳೂ ಈ ಅದುರುಗಳಲ್ಲಿ ಅಪದ್ರವ್ಯಗಳಾಗಿರುವುದುಂಟು. ಹೇರಳವಾಗಿ ದೊರೆಯುವ ಆದರೆ ಕಬ್ಬಿಣದ ತಯಾರಿಕೆಗೆ ಉಪಯೋಗವಲ್ಲದ ಇನ್ನೊಂದು ಖನಿಜ ಪಿರೈಟೀಸ್ $FeS_2$. ಸಲ್ಫ್ಯೂರಿಕ್‌ಆಮ್ಲದ ತಯಾರಿಕೆಗೆ ಅವಶ್ಯವಾದ ಸಲ್ಫರ್ ಡೈ ಆಕ್ಸೈಡಿನ ತಯಾರಿಕೆಗೆ ಇದನ್ನು ಉಪಯೋಗಿಸುವರು. ಟ್ಯಾಕೊನೈಟ್ ಎಂಬ ಸಿಲಿಕೇಟ್ ಅದುರು ಭಾರಿ ಪ್ರಮಾಣದಲ್ಲಿ ಸಂಯುಕ್ತ ಸಂಸ್ಥಾನದಲ್ಲಿರುವ ಇನ್ನೊಂದು ಕಬ್ಬಿಣದ ಅದುರು. ಆದರೆ ಇದರಲ್ಲಿ ಕಬ್ಬಿಣದ ಅಂಶ 20–30% ಆಗಿದ್ದು ಇದರಿಂದ ಲೋಹವನ್ನು ಲಾಭದಾಯಕ ರೀತಿಯಲ್ಲಿ ಪಡೆಯುವ ವಿಧಾನವನ್ನು ಇನ್ನೂ ಕಂಡುಹಿಡಿಯಲಾಗಿಲ್ಲ. ಇದಕ್ಕಾಗಿ ಪ್ರಯತ್ನಗಳು ನಡೆಯುತ್ತಿವೆ. ಪ್ರಾಯಶಃ ಭವಿಷ್ಯದಲ್ಲಿ ಇದು ಕಬ್ಬಿಣದ ಮುಖ್ಯ ಮೂಲಗಳಲ್ಲಿ ಒಂದಾಗಬಹುದು.

**ಕಬ್ಬಿಣದ ತಯಾರಿಕೆ :** ಈಗ್ಗೆ ಸುಮಾರು 4000 ವರ್ಷಗಳ ಹಿಂದೆಯೇ ಮಾನವ ಕಬ್ಬಿಣವನ್ನು ಉಪಯೋಗಿಸುತ್ತಿದ್ದನೆಂಬುದಕ್ಕೆ ಸಾಕ್ಷ್ಯಗಳು ದೊರಕಿವೆ. ಪ್ರಾಚೀನರು ಕಬ್ಬಿಣವನ್ನು ಅದುರುಗಳಿಂದ ಒಂದು ರೀತಿಯ ಒರಟು ಕುಲುಮೆಗಳಲ್ಲಿ ತಯಾರಿಸುತ್ತಿದ್ದರು. ಕಬ್ಬಿಣದ ಅದುರನ್ನು ಇದ್ದಲಿನೊಡನೆ ಮಿಶ್ರಮಾಡಿ ಈ ರಾಶಿಯ ಮೂಲಕ ಗಾಳಿ ಬೀಸುವಂತೆ ತಳದಲ್ಲಿ ಒಂದು ರಂಧ್ರ ಮತ್ತು ಮೇಲ್ಭಾಗದಲ್ಲಿ ಒಂದು ರಂಧ್ರವನ್ನಿಟ್ಟು ಅನಂತರ ಇದ್ದಲನ್ನು ಹೊತ್ತಿಸುತ್ತಿದ್ದರು. ಒಂದು ಭಾಗ ಇದ್ದಲು ಉರಿದು ಕಾರ್ಬನ್ ಡೈ ಆಕ್ಸೈಡ್ ಆಗುತ್ತಿತ್ತು. ಇದು ಮೇಲೇರಿ ಇದ್ದಲಿನಿಂದ ಅಪಕರ್ಷಿತವಾಗಿ ಕಾರ್ಬನ್ ಮಾನಾಕ್ಸೈಡ್ ಆಗಿ ಕಬ್ಬಿಣದ ಆಕ್ಸೈಡನ್ನು ಕಬ್ಬಿಣವಾಗಿ ಅಪಕರ್ಷಿಸುತ್ತಿತ್ತು.

ಆಧುನಿಕ ರೀತಿಯಲ್ಲಿ ಕಬ್ಬಿಣದ ತಯಾರಿಕೆ 1620 ರಿಂದ ಆರಂಭವಾಯಿತೆನ್ನಬಹುದು. ಈಗ ಕಬ್ಬಿಣದ ಅದುರುಗಳನ್ನು ಊದು ಕುಲುಮೆಗಳಲ್ಲಿ ಕರಗಿಸಿ ಕಬ್ಬಿಣವನ್ನು ತಯಾರಿಸುವರು. (ನೋಡಿ-ಉಕ್ಕು). ಕುಲುಮೆಯಲ್ಲಿ ಅನೇಕ ರಾಸಾಯನಿಕ ವರ್ತನೆಗಳಾಗುವ ಪರಿಣಾಮವಾಗಿ ಕರಗಿದ ಕಬ್ಬಿಣ ಮತ್ತು ಕರಗಿದ ಕಿಟ್ಟಗಳು (ಸ್ಲ್ಯಾಗ್) ಉತ್ಪನ್ನವಾಗುವುವು. ಹೆಚ್ಚು ಸಾಂದ್ರವಾದ ಕರಗಿದ ಕಬ್ಬಿಣ ಕುಲುಮೆಯ ತಳದಲ್ಲಿ ಶೇಖರವಾಗುವುದು. ಇದರ ಮೇಲ್ಭಾಗದಲ್ಲಿ ಕಿಟ್ಟ ಶೇಖರವಾಗುವುದು. ನಿರ್ದಿಷ್ಟ ಅವಧಿಗಳಲ್ಲಿ ಕುಲುಮೆಯ ತಳದಲ್ಲಿರುವ ಲೋಹದ್ವಾರವನ್ನು ತೆರೆದು ಕಬ್ಬಿಣವನ್ನು ಈಚೆಗೆ ಹರಿಸಿ ಇದನ್ನು ಮರಳಿನಿಂದ ಮಾಡಿದ ಅಚ್ಚುಗಳಿಗೆ ಹಾಯಿಸಿ, ಕಬ್ಬಿಣದ ತುಂಡುಗಳನ್ನಾಗಿ ಮಾಡುವರು. ಸ್ವಲ್ಪ ಮೇಲಿರುವ ಇನ್ನೊಂದು ರಂಧ್ರದ ಮೂಲಕ ಕಿಟ್ಟ ಸಂತತವಾಗಿ ಹೊರಹರಿಯುವುದು.

ಕುಲುಮೆಯಲ್ಲಿ ನಡೆಯುವ ರಾಸಾಯನಿಕ ವರ್ತನೆಗಳು : ತಳದಿಂದ ಕುಲುಮೆಯನ್ನು ಪ್ರವೇಶಿಸುವ ಗಾಳಿ ಕೋಕ್‌ನ ಒಂದು ಭಾಗವನ್ನು ಉರಿಸಿ ಕಾರ್ಬನ್ ಡೈ ಆಕ್ಸೈಡಿಗೆ ಪರಿವರ್ತಿಸುವುದು. ಈ ಪ್ರದೇಶದಲ್ಲಿ ಉಷ್ಣತೆ ಸುಮಾರು 1600° ಸೆಂ. ಇಲ್ಲಿಂದ ಮೇಲಕ್ಕೆ ಹೋದಂತೆಲ್ಲ ಉಷ್ಣತೆ ಕಡಿಮೆಯಾಗುತ್ತ ಹೋಗುವುದು. ಅದು 1300° ಸೆಂ. ಇರುವ ಭಾಗದಲ್ಲಿ ಸುಣ್ಣಕಲ್ಲು ವಿಭಜಿಸಿ ಸುಟ್ಟ ಸುಣ್ಣ (CaO) ಮತ್ತು ಕಾರ್ಬನ್ ಡೈ ಆಕ್ಸೈಡುಗಳು ($CO_2$) ಉಂಟಾಗುವುವು. ಈ ಪ್ರದೇಶದಲ್ಲಿಯೂ ಇಲ್ಲಿಂದ ಕೆಳಗೂ ಅದುರಿನ ಅಪದ್ರವ್ಯಗಳಾದ ಮರಳು ಮತ್ತು ಫಾಸ್ಫೇಟುಗಳು ಸುಟ್ಟಸುಣ್ಣದೊಡನೆ ವರ್ತಿಸಿ, ಕ್ಯಾಲ್ಸಿಯಂ ಸಿಲಿಕೇಟ್ ಮತ್ತು ಕ್ಯಾಲ್ಸಿಯಂ ಫಾಸ್ಫೇಟುಗಳಾಗಿ ಪರಿವರ್ತಿತವಾಗುವುವು. ಸುಮಾರು ಇದೇ ಪ್ರದೇಶದಲ್ಲಿ ಕಾರ್ಬನ್ ಡೈ ಆಕ್ಸೈಡು ಕೋಕ್‌ನಿಂದ ಕಾರ್ಬನ್ ಮಾನಾಕ್ಸೈಡಿಗೆ ಅಪಕರ್ಷಿತವಾಗುವುದು. ಕಬ್ಬಿಣದ ಆಕ್ಸೈಡನ್ನು ಕಬ್ಬಿಣಕ್ಕೆ ಅಪಕರ್ಷಿಸುವ ಮುಖ್ಯ ಅಪಕರ್ಷಣಕಾರಿ ಕಾರ್ಬನ್ ಮಾನಾಕ್ಸೈಡ್. ಕಬ್ಬಿಣದ ಮಾನಾಕ್ಸೈಡಿನ ಅಪಕರ್ಷಣ ಕಾರ್ಯ ಉಷ್ಣತೆ ಸುಮಾರು 400° ಸೆಂ. ಇರುವ ಕುಲುಮೆಯ ಮೇಲ್ಭಾಗದಲ್ಲಿಯೇ ಆರಂಭವಾಗುವುದು. ಕಾರ್ಬನ್ ಮಾನಾಕ್ಸೈಡ್ ಫೆರಿಕ್ ಆಕ್ಸೈಡನ್ನು ಮೊದಲು ಫೆರಸ್ ಆಕ್ಸೈಡಿಗೂ ಅನಂತರ ಕಬ್ಬಿಣಕ್ಕೂ ಅಪಕರ್ಷಿಸುವುದು. ಈ ವರ್ತನೆಗಳು ಹಿಮ್ಮರಳುವ ವರ್ತನೆಗಳಾಗಿದ್ದು, ಪರಿವರ್ತನಾನಂತರವೂ ಗಣನೀಯ ಪ್ರಮಾಣದಲ್ಲಿ ಕಾರ್ಬನ್ ಮಾನಾಕ್ಸೈಡ್ ಇರುವುದು. ಅಲ್ಪ ಭಾಗ ಫೆರಿಕ್ ಆಕ್ಸೈಡ್ ಇದ್ದಲಿನಿಂದ ನೇರವಾಗಿ ಅಪಕರ್ಷಿತವಾಗುವುದು. ಹೀಗೆ ಉಂಟಾದ ಕಬ್ಬಿಣದ ಮೇಲೆ ಇಂಗಾಲ ಶೇಖರಿಸುವುದು. ಈ ಇಂಗಾಲ ಶೇಖರಣೆ ಕಾರ್ಬನ್ ಮಾನಾಕ್ಸೈಡ್, ಕಾರ್ಬನ್ ಡೈ ಆಕ್ಸೈಡ್ ಮತ್ತು ಕಾರ್ಬನ್ ಆಗಿ ವಿಭಜಿಸುವುದರಿಂದ ಆದದ್ದು. ಈ ಕಬ್ಬಿಣ ಸುಮಾರು 1200° ಸೆಂ. ಉಷ್ಣತೆಯ ಪ್ರದೇಶಕ್ಕೆ ಬಂದಾಗ ಕರಗಿ ದ್ರವವಾಗುವುದು. ಕರಗಿದ ಕಬ್ಬಿಣದಲ್ಲಿ 3–4% ಭಾಗ ಇಂಗಾಲ ವಿಲೀನವಾಗುವುದು. ಕುಲುಮೆಯಲ್ಲಿ ನಡೆಯುವ ಮುಖ್ಯ ರಾಸಾಯನಿಕ ಕ್ರಿಯೆಗಳನ್ನು ಕೆಳಗಿನ ಸಮೀಕರಣಗಳು ಸೂಚಿಸುತ್ತವೆ.

(i) $C + O_2 \rightarrow CO_2$

(ii) $CaCO_3 \rightarrow CaO + CO_2$

(iii) $CO_2 + C \rightleftharpoons 2CO$

(iv) $CaO + SiO_2 \rightarrow CaSiO_3$

(v) $3CaO + P_2O_5 \rightarrow Ca_3(PO_4)_2$

(vi) $Fe_2O_3 + 3CO \rightleftharpoons 2Fe + 3CO_2$

(vii) $FeO + CO \rightleftharpoons Fe + CO_2$

(viii) $Fe_2O_3 + 3C \rightleftharpoons 2Fe + 3CO$

**ತಾಂಡವಾಳ (ಕ್ಯಾಸ್ಟ್ ಐರನ್) :** ಊದು ಕುಲುಮೆಯಿಂದ ಹೊರಬಂದ ಕಬ್ಬಿಣಕ್ಕೆ ತಾಂಡವಾಳವೆಂದು ಹೆಸರು. ಇದರಲ್ಲಿ 3–4.5% ಭಾಗದಷ್ಟು ಇಂಗಾಲವೂ ಅಲ್ಪ ಪ್ರಮಾಣದಲ್ಲಿ ಸಿಲಿಕಾನ್, ಮ್ಯಾಂಗನೀಸ್, ಸಲ್ಫರ್ ಮತ್ತು ಫಾಸ್ಫರಸುಗಳೂ ಇವೆ. ಕರಗಿದ ತಾಂಡವಾಳವನ್ನು ದೊಡ್ಡ ದೊಡ್ಡ ಮೂಸೆಗಳಿಗೆ ಹಾಯಿಸಿ ಅದನ್ನು ನೇರವಾಗಿ ಉಕ್ಕಿನ ತಯಾರಿಕೆಗೆ ಉಪಯೋಗಿಸುವರು. ಅಥವಾ ಇದನ್ನು ಕಬ್ಬಿಣದ ತುಂಡುಗಳಾಗಿ ಅಚ್ಚು ಹಾಕಿ ಅದನ್ನು ಇತರ ಕಾರ್ಯಗಳಿಗೆ ಉಪಯೋಗಿಸುವರು.

ತಾಂಡವಾಳದಲ್ಲಿ ಎರಡು ವಿಧಗಳು : 1 ಬೂದು ತಾಂಡವಾಳ, 2 ಬಿಳಿಯ ತಾಂಡವಾಳ. ಮರಳಿನ ಅಚ್ಚುಗಳಲ್ಲಿ ಅಚ್ಚು ಹಾಕಿ ಪಡೆದ ತಾಂಡವಾಳ ಬೂದು ತಾಂಡವಾಳ. ಇದನ್ನು ಬೆಸೆಯಲಾಗಲಿ ತಗಡಾಗಿ ಮಾಡಲಾಗಲಿ ಸಾಧ್ಯವಿಲ್ಲ. ಇದು ತುಂಬ ಪೆಡಸು (ಬ್ರಿಟಲ್) ಆಗಿರುವುದು. ಅಚ್ಚು ಹಾಕಿ ತಯಾರಿಸುವ ಕಬ್ಬಿಣದ ಒಲೆಗಳು, ಗ್ರೇಟಿಂಗುಗಳು ಮುಂತಾದ ಸಾಮಾನುಗಳನ್ನು ಮಾತ್ರ ಇದರಿಂದ ತಯಾರಿಸಬಹುದು. ಕರಗಿದ ಕಬ್ಬಿಣ ಘನವಾದಾಗ ಇದರಲ್ಲಿರುವ ಇಂಗಾಲದ ಬಹುಭಾಗ ಸಿಮೆಂಟೈಟ್ ಎಂಬ ಕಬ್ಬಿಣದ ಕಾರ್ಬೈಡ್ ರೂಪದಲ್ಲಿರು

ವುದು. ಕಾದ ಕಬ್ಬಿಣ ನಿಧಾನವಾಗಿ ತಣ್ಣಗಾದಾಗ. ಈ ಕಾರ್ಬೈಡು ವಿಭಜಿಸಿ, ಇಂಗಾಲವು ಗ್ರಾಫೈಟ್ ರೂಪದಲ್ಲಿ ಹೊರಸೂಸುವುದು. ಬೂದು ತಾಂಡವಾಳ ಬಣ್ಣ ಮತ್ತು ಅದರ ಇತರ ಗುಣಗಳಿಗೆ ಹೀಗೆ ಉಂಟಾದ ಗ್ರಾಫೈಟು ಮುಖ್ಯ ಕಾರಣ.

ಕಬ್ಬಿಣ ನಿಧಾನವಾಗಿ ತಣ್ಣಗಾಗುವುದನ್ನು ತಡೆದು ಥಟ್ಟನೆ ಶೈತ್ಯಗೊಳಿಸಿದರೆ ಅದರಲ್ಲಿರುವ ಇಂಗಾಲದ ಬಹುಭಾಗ ಸಿಮೆಂಟೈಟ್ ರೂಪದಲ್ಲಿಯೇ ಇರುವುದು. ಇದೇ ಬಿಳಿಯ ತಾಂಡವಾಳ. ಇದಕ್ಕೆ ಹೆಚ್ಚಿನ ಕಾಠಿಣ್ಯ ಮತ್ತು ಪೆಡಸುತನವಿದ್ದು ಇದು ಸವೆತವನ್ನು ನಿರೋಧಿಸುತ್ತದೆ. ಬಿಳಿಯ ತಾಂಡವಾಳವನ್ನು 50 ರಿಂದ 70 ಗಂಟೆಗಳ ವರೆಗೆ ಕೆಂಗಾವಿನಲ್ಲಿಟ್ಟು ನಿಧಾನವಾಗಿ ತಣಿಸಿದರೆ, ಮೆದು ತಾಂಡವಾಳ (ಮ್ಯಾಲಿಯೇಬಲ್ ಕ್ಯಾಸ್ಟ್ ಐರನ್) ಉಂಟಾಗುವುದು. ಈ ವಿಧವಾದ ತಾಂಡ ವಾಳದಲ್ಲಿ ಭಾರಿ ಪ್ರಮಾಣದ ಯಂತ್ರಗಳ ಕೆಲವು ಭಾಗಗಳ ಮತ್ತು ಕೃಷಿ ಸಾಧನಗಳ ತಯಾರಿಕೆಗೆ ಅಪೇಕ್ಷಣೀಯವಾದ ಗುಣಗಳು ಇವೆ. ಇದು ಅಷ್ಟೊಂದು ಕಠಿಣ ವಾಗಿಲ್ಲ, ಆದರೂ ಹೆಚ್ಚು ಬಲಯುತವಾಗಿದೆ. ಇದನ್ನು ಬೆಸೆಯಲಾಗುವುದಿಲ್ಲ. ತಾಂಡವಾಳದ ಕರಗುವ ಉಷ್ಣತೆ ಶುದ್ಧ ಕಬ್ಬಿಣದ ಕರಗುವ ಉಷ್ಣತೆಗಿಂತ ಕಡಿಮೆ. ತಾಂಡವಾಳವನ್ನು ಕರಗಿಸಿ ಅಚ್ಚು ಹಾಕುವುದು ಸುಲಭ.

**ಮೆದು ಕಬ್ಬಿಣ :** (ರಾಟ್ ಐರನ್) : ಇದು ತಕ್ಕಮಟ್ಟಿಗೆ ಶುದ್ಧವಾಗಿರುವ ಕಬ್ಬಿಣ. ಊದು ಕುಲುಮೆಯ ಉತ್ಪನ್ನದ ಕಬ್ಬಿಣದಲ್ಲಿರುವ ಅಪದ್ರವ್ಯಗಳನ್ನು ಉರಿಸಿ ತೆಗೆದು ಇದನ್ನು ತಯಾರಿಸುವರು. ಇದರ ತಯಾರಿಕೆಗೆ ಪ್ರತಿವರ್ತಕ ಕುಲುಮೆಯನ್ನು ಉಪಯೋಗಿಸುತ್ತಾರೆ. ಹೀಗೆ ತಯಾರಿಸಿದ ಕಬ್ಬಿಣದಲ್ಲಿ ಇಂಗಾಲ 0.2% ಕ್ಕಿಂತ ಕಡಿಮೆ ಇರುವುದು. ಇದು ನಾರಾಗಿದ್ದು, ತಾಂಡವಾಳಕ್ಕಿಂತ ಬಿಗಿಯಾಗಿಯೂ, ಮೆದುವಾಗಿಯೂ ಇರುವುದು. ಆದರೆ ಇದು ಉಕ್ಕಿನಷ್ಟು ಬಲ ವಾಗಿಲ್ಲ. ಇದನ್ನು ಕೊಡತಿಯಿಂದ ತಟ್ಟಬಹುದು, ಬೆಸೆಯಬಹುದು, ತಗಡಾಗಿ ಮಾಡಬಹುದು. ಕೆಂಗಾವಿನಲ್ಲಿ ತಟ್ಟಿ ಮಾಡಬಹುದಾದಂಥ ನೇಗಿಲಕುಳ, ಕುದುರೆಯ ಲಾಳ ಮುಂತಾದ ಸಾಮಾನುಗಳನ್ನು ಇದರಿಂದ ತಯಾರಿಸುತ್ತಾರೆ.

**ಶುದ್ಧ ಕಬ್ಬಿಣ :** ಶುದ್ಧ ಕಬ್ಬಿಣವನ್ನು ಕೈಗಾರಿಕಾ ಪ್ರಮಾಣದಲ್ಲಿ ತಯಾರಿಸುವುದಿಲ್ಲ. ಪ್ರಯೋಗಶಾಲೆಗಳಲ್ಲಿಯೂ ಇದೇನೂ ಹೆಚ್ಚಿನ ಬಳಕೆಯಲ್ಲಿಲ್ಲ. ಶುದ್ಧವಾದ ಫೆರಿಕ್ ಆಕ್ಸೈಡನ್ನು ಕಾಯಿಸಿ ಅದನ್ನು ಹೈಡ್ರೊಜನಿನಿಂದ ಅಪಕರ್ಷಿಸಿ ಶುದ್ಧವಾದ ಕಬ್ಬಿಣವನ್ನು ಪಡೆಯಬಹುದು. ಮಾರಿಕೆಯ ಕಬ್ಬಿಣಗಳ ಪೈಕಿ ಮೆದುಕಬ್ಬಿಣ ಶುದ್ಧ ಕಬ್ಬಿಣಕ್ಕೆ ಅತಿ ನಿಕಟವರ್ತಿಯಾಗಿರುವುದು. ಶುದ್ಧ ಕಬ್ಬಿಣ 1530° ಸೆಂ.ನಲ್ಲಿಯೂ ಮೆದು ಕಬ್ಬಿಣ 1500° ಸೆಂ.ನಲ್ಲಿಯೂ, ತಾಂಡವಾಳ 1100° ಸೆಂ.ನಲ್ಲಿಯೂ ಕರಗುತ್ತವೆ. ಶುದ್ಧ ಕಬ್ಬಿಣಕ್ಕೆ ಬೆಳ್ಳಿಯ ಬಿಳುಪಿನ ಪ್ರಕಾಶ ಇದೆ. ಇದು ತಕ್ಕಮಟ್ಟಿಗೆ ಮೃದುವಾಗಿದೆ. ಇದನ್ನು ತಗಡಾಗಿ ತಟ್ಟಬಹುದು, ತಂತಿಯಾಗಿ ಎಳೆಯಬಹುದು. ಮಾರಿಕೆಯ ಯಾವ ಕಬ್ಬಿಣಕ್ಕಿಂತಲೂ ಹೆಚ್ಚಿನ ಕಾಂತತ್ವಗುಣ ಇದಕ್ಕೆ ಉಂಟು.

ಶುದ್ಧ ಕಬ್ಬಿಣದ ಆಲ್ಫ ಮತ್ತು ಗ್ಯಾಮ ಎಂಬ ಎರಡು ಭಿನ್ನ ಭೌತರೂಪಗಳಿವೆ. ಕಬ್ಬಿಣ ಮತ್ತು ಉಕ್ಕುಗಳ ಗುಣಗಳು ಅವುಗಳಲ್ಲಿ ಕಬ್ಬಿಣ ಯಾವ ಭೌತರೂಪದಲ್ಲಿದೆ ಮತ್ತು ಅದರಲ್ಲಿರುವ ಇಂಗಾಲ ಯಾವ ಸ್ಥಿತಿಯಲ್ಲಿದೆ ಎನ್ನುವುದನ್ನು ಅವಲಂಬಿಸಿವೆ; ಸಾಮಾನ್ಯ ಉಷ್ಣತೆಗಳಲ್ಲಿ ದೃಢವಾದ ಕಬ್ಬಿಣದ ರೂಪವನ್ನು ಆಲ್ಫ ಕಬ್ಬಿಣ ಅಥವಾ ಫೆರೈಟ್ ಎನ್ನುತ್ತಾರೆ. ಫೆರೈಟ್ ಮೃದುವಾದದ್ದು ಮತ್ತು ಇದರಲ್ಲಿ ಇಂಗಾಲ ಅದ್ರಾವ್ಯ. 900° ಸೆಂ. ಉಷ್ಣತೆಗಿಂತ ಮೇಲಿನ ಉಷ್ಣತೆಗಳಲ್ಲಿ ಆಲ್ಫ ಕಬ್ಬಿಣ ಗ್ಯಾಮ ಕಬ್ಬಿಣವೆಂಬ ಇನ್ನೊಂದು ರೂಪಕ್ಕೆ ಪರಿವರ್ತಿತವಾಗುತ್ತದೆ. ಮೇಲಿನ ಉಷ್ಣತೆಗೆ ಕಾಯಿಸಿದ ಉಕ್ಕುಗಳಲ್ಲಿ ಗ್ಯಾಮ ಕಬ್ಬಿಣವಿದೆ. ಗ್ಯಾಮ ಕಬ್ಬಿಣದಲ್ಲಿ ಇಂಗಾಲ 1.5–2%ರಷ್ಟು ದ್ರಾವ್ಯ. ಹೀಗೆ ಮೇಲಿನ ಅಥವಾ ಎಣ್ಣೆಯಲ್ಲಿ ಅದ್ದಿ ಶೈತ್ಯ ಗೊಳಿಸಿದರೆ ಉಂಟಾಗುವ ಕಬ್ಬಿಣ ಸಿಮೆಂಟೈಟ್ $Fe_3C$ ಎಂಬ ಕಬ್ಬಿಣದ ಕಾರ್ಬೈಡ್ ವಿಲೀನವಾದ ಗ್ಯಾಮ ಕಬ್ಬಿಣ. ಸಿಮೆಂಟೈಟ್ ವಿಲೀನವಾದ ಗ್ಯಾಮ ಕಬ್ಬಿಣಕ್ಕೆ ಆಸ್ಟನೈಟ್ ಎಂದು ಹೆಸರು. ಥಟ್ಟನೆ ಶೈತ್ಯಗೊಳಿಸುವುದರಿಂದ ಕಬ್ಬಿಣದ ರಚನೆ ಯಲ್ಲಿ ವ್ಯತ್ಯಾಸ ಉಂಟಾಗುವುದಿಲ್ಲ. ಏಕೆಂದರೆ ಗ್ಯಾಮ ಕಬ್ಬಿಣ ಆಲ್ಫ ಕಬ್ಬಿಣವಾಗಿ ಪರಿವರ್ತಿಸುವ ಕ್ರಿಯೆ ಬಹಳ ನಿಧಾನವಾಗಿ ನಡೆಯುತ್ತದೆ. ಥಟ್ಟನೆ ಶೈತ್ಯ ಗೊಳಿಸಿದಾಗ ಗ್ಯಾಮ ಕಬ್ಬಿಣ ಆಲ್ಫ ಕಬ್ಬಿಣವಾಗಿ ಪರಿವರ್ತನೆ ಹೊಂದಲು ಮತ್ತು ಇಂಗಾಲದ ಸ್ಥಿತಿ ಮಾರ್ಪಾಡಾಗಲು ಕಾಲಾವಕಾಶವಿರುವುದಿಲ್ಲ. 900° ಸೆಂ. ಗಿಂತ ಮೇಲಿನ ಉಷ್ಣತೆಗೆ ಉಕ್ಕನ್ನು ಕಾಯಿಸಿ ಅನಂತರ ನಿಧಾನವಾಗಿ ಅದನ್ನು ಶೈತ್ಯ ಗೊಳಿಸಿದರೆ ಆಲ್ಫ ರೂಪದ ಕಬ್ಬಿಣ ಉಂಟಾಗುವುದು. ಇನ್ನು 1400° ಸೆಂ.ಗಿಂತ ಮೇಲಿನ ಉಷ್ಣತೆಯಲ್ಲಿ ದೃಢವಾದ ಡೆಲ್ಟರೂಪ ಬರುತ್ತದೆ.

ಹೋಲಿಕೆಯ ದೃಷ್ಟಿಯಿಂದ ಕಬ್ಬಿಣ ರಾಸಾಯನಿಕವಾಗಿ ಪಟುವಾದ ಲೋಹ. ಶೇವದ ಗಾಳಿಯಲ್ಲಿ ಇದಕ್ಕೆ ತುಕ್ಕುಹಿಡಿಯುವುದು. ಅಂದರೆ ನೀರು, ಆಕ್ಸಿಜನ್ ಕಾರ್ಬನ್ ಡೈ ಆಕ್ಸೈಡ್ ಇವುಗಳ ವರ್ತನೆಯಿಂದ ಕಬ್ಬಿಣ ಅಂತ್ಯದಲ್ಲಿ ಹೈಡ್ರೇಟೆಡ್ ಫೆರಿಕ್ ಆಕ್ಸೈಡ್ ಆಗಿ ಕೊರೆದುಕೊಂಡು ಹೋಗುವುದು. ಕಬ್ಬಿಣಕ್ಕೆ ತುಕ್ಕು ಹಿಡಿಯುವುದರಿಂದ ಕೋಟ್ಯಂತರ ರೂಪಾಯಿಗಳ ನಷ್ಟ ಆಗುವುದೆಂದು ಅಂದಾಜು ಮಾಡಲಾಗಿದೆ. ಇದನ್ನು ತಪ್ಪಿಸಲು ಅನೇಕ ಕ್ರಮವನ್ನು ಕೈಗೊಂಡಿರುತ್ತಾರೆ. ಇವುಗಳ ಪೈಕಿ ಕಬ್ಬಿಣದ ಮೇಲೆ ಸತುವಿನ ಅಥವಾ ತವರದ ಒಂದು ತೆಳ್ಳನೆಯ ಪದರದ ಲೇಪ ಕೊಡುವುದು ಮುಖ್ಯವಾದದ್ದು. ಸಣ್ಣ ಕಣರೂಪದಲ್ಲಿ ಅಥವಾ ತೆಳ್ಳನೆಯ ತಂತಿರೂಪದಲ್ಲಿ ಇದು ಆಕ್ಸಿಜನಿನಲ್ಲಿ ಉರಿಯುವುದು. ಕೆಂಗಾವಿಗೆ ಕಾದ ಕಬ್ಬಿಣದ ಮೇಲೆ ನೀರಿನ ಹಬೆಯನ್ನು ಹಾಯಿಸಿದರೆ, ಕಬ್ಬಿಣದ ಆಕ್ಸೈಡು ($Fe_3O_4$) ಮತ್ತು ಹೈಡ್ರೊಜನುಗಳುಂಟಾಗುವುವು. ಹೈಡ್ರೊಕ್ಲೋರಿಕ್‌ಆಮ್ಲ ಮತ್ತು ಸಾರರಿಕ್ತ ಸಲ್ಫ್ಯೂರಿಕ್‌ಆಮ್ಲಗಳು ಇದರ ಮೇಲೆ ವರ್ತಿಸಿ ಹೈಡ್ರೊಜನ್ ಬಿಡುಗಡೆಯಾಗುವುದು. ಧೂಮಿಸುವ (ಫ್ಯೂಮಿಂಗ್) ನೈಟ್ರಿಕ್ ಆಮ್ಲದಲ್ಲಿ ಕಬ್ಬಿಣವನ್ನು ಅದ್ದಿದರೆ ಅದು ನಿಷ್ಕ್ರಿಯಗೊಳ್ಳುವುದು. ಅದನ್ನು ಕೊಡತಿ ಯಿಂದ ಹೊಡೆದರೆ ಅಥವಾ ಮೇಲ್ಮೈಯನ್ನು ಕೆರೆದರೆ ಪುನಃ ಪಟುವಾಗುವುದು. ಒದ್ದೆಯಾದ ಕಬ್ಬಿಣದ ಪುಡಿಯೊಡನೆ ಕ್ಲೋರಿನ್, ಬ್ರೋಮಿನ್ ಮತ್ತು ಅಯೊ ಡೀನುಗಳು ವರ್ತಿಸಿ ಕ್ರಮವಾಗಿ ಫೆರಿಕ್ ಕ್ಲೋರೈಡ್, ಬ್ರೋಮೈಡ್ ಮತ್ತು ಅಯೊಡೈಡುಗಳನ್ನು ಕೊಡುವುವು. ಕಾದ ಕಬ್ಬಿಣ ಗಂಧಕದೊಡನೆ ವರ್ತಿಸಿ ಫೆರಸ್ ಸಲ್ಫೈಡನ್ನು ಕೊಡುವುದು.

**ಕಬ್ಬಿಣದ ಸಂಯುಕ್ತಗಳು :** ಸಂಯುಕ್ತಗಳಲ್ಲಿ ಕಬ್ಬಿಣ $Fe^{2+}$ ಮತ್ತು $Fe^{3+}$ ಉತ್ಕರ್ಷಣ ಸ್ಥಿತಿಗಳಲ್ಲಿರುವುದು. ಇವನ್ನು ಫೆರಸ್ ಮತ್ತು ಫೆರಿಕ್ ಸಂಯುಕ್ತಗಳೆನ್ನುವರು.

ಕಬ್ಬಿಣದ ಆಕ್ಸೈಡುಗಳು ಮತ್ತು ಹೈಡ್ರಾಕ್ಸೈಡುಗಳು. ಫೆರಸ್ ಆಕ್ಸೈಡ್ $FeO$ : ಇದೊಂದು ಕಪ್ಪು ಬಣ್ಣದ ಪುಡಿ. ಫೆರಿಕ್ ಆಕ್ಸೈಡನ್ನು 300° ಸೆಂ. ಉಷ್ಣತೆಗಿಂತ ಕಡಿಮೆ ಉಷ್ಣತೆಯಲ್ಲಿ ಹೈಡ್ರೊಜನಿನಿಂದ ಅಪಕರ್ಷಿಸುವುದರಿಂದ ಅಥವಾ ಫೆರಸ್ ಆಕ್ಸಲೇಟನ್ನು ($FeC_2O_4$) ಕಾಯಿಸುವುದರಿಂದ ತಯಾರಿಸಬಹುದು. ಇದು ಗಾಳಿಯಲ್ಲಿ ಉರಿದು ಫೆರಿಕ್ ಆಕ್ಸೈಡ್ ಆಗುವುದು. ಫೆರಸ್ ಹೈಡ್ರಾಕ್ಸೈಡು $Fe(OH)_2$ ಇದಕ್ಕೆ ಅನುಗುಣವಾದ ಹೈಡ್ರಾಕ್ಸೈಡು. ಫೆರಸ್‌ಲವಣದ ದ್ರಾವಣಕ್ಕೆ ಸೋಡಿಯಂ ಹೈಡ್ರಾಕ್ಸೈಡನ್ನು ಗಾಳಿಯ ರಾಹಿತ್ಯದಲ್ಲಿ ಹಾಕಿದರೆ ಇದು ಒತ್ತರಿಸುವುದು. ಇದೊಂದು ಬಿಳಿಯ ಘನವಸ್ತು. ಗಾಳಿಯಲ್ಲಿ ಬಿಟ್ಟರೆ ಉತ್ಕರ್ಷಣ ಹೊಂದಿ ಮೊದಲು ಹಸಿರು ಬಣ್ಣಕ್ಕೂ ಆಮೇಲೆ ಕಂದುಬಣ್ಣಕ್ಕೂ ತಿರುಗುವುದು. ಗಾಳಿಯು ಫೆರಸ್ ಹೈಡ್ರಾಕ್ಸೈಡನ್ನು ಫೆರಿಕ್ ಹೈಡ್ರಾಕ್ಸೈಡಿಗೆ ($Fe_2O_3 . xH_2O$) ಉತ್ಕರ್ಷಿಸುವುದು.

ಫೆರಿಕ್ ಆಕ್ಸೈಡ್ $Fe_2O_3$ : ಪಿರೈಟೀಸನ್ನು ($FexS_2$) ಉರಿಸಿದಾಗ ಇದು ಉಂಟಾಗುವುದು. ಫೆರಿಕ್‌ಲವಣದ ದ್ರಾವಣಕ್ಕೆ ಸೋಡಿಯಂ ಹೈಡ್ರಾಕ್ಸೈಡ್ ಹಾಕಿ ಬಂದ ಒತ್ತರವನ್ನು ಕಾಯಿಸಿ ಇದನ್ನು ಪಡೆಯಬಹುದು. ಇದು ಕೆಂಪುಪುಡಿ. ಪ್ರಕೃತಿಯಲ್ಲಿ ಇದು ಹೆಮಟೈಟ್ ಎಂಬ ಒಂದು ಪ್ರಮುಖ ಕಬ್ಬಿಣದ ಅದುರಾಗಿ ದೊರೆಯುವುದು. ಕಬ್ಬಿಣದ ತುಕ್ಕು ಮತ್ತು ಲಿಮೊನೈಟ್ ಎಂಬ ಕಬ್ಬಿಣದ ಅದುರು ಈ ಆಕ್ಸೈಡಿನ ಹೈಡ್ರೇಟುಗಳು ($Fe_2O_3 . xH_2O$).

ಅತಿಶುದ್ಧವಾದ ಸ್ವಲ್ಪವೂ ತರಕಲಿಲ್ಲದ ನಯವಾಗಿರುವ ಫೆರಿಕ್ ಆಕ್ಸೈಡನ್ನು ಸ್ವರ್ಣಕಾರರು ಚಿನ್ನಬೆಳ್ಳಿಗೆ ಹೊಳಪು ಕೊಡಲು ಉಪಯೋಗಿಸುವರು. ಇದನ್ನು ವಿನೀಷಿಯನ್ ಕೆಂಪು ಎಂಬ ಹೆಸರಿನಿಂದ ವರ್ಣದ್ರವ್ಯವಾಗಿ ಧಾನ್ಯದ ಕಣಜಗಳು, ಸೇತುವೆಗಳು, ಸಾಗಣೆಯ ರೈಲುಗಾಡಿಗಳು, ಮಣ್ಣಿನ ಪಾತ್ರೆಗಳು, ರಬ್ಬರ್ ಮುಂತಾದುವುಗಳಿಗೆ ಕೆಂಪು ಕಂದು ಬಣ್ಣಕೊಡಲು ಉಪಯೋಗಿಸುವರು. ಫೆರಿಕ್ ಲವಣಗಳ ದ್ರಾವಣಕ್ಕೆ ಸೋಡಿಯಂ ಹೈಡ್ರಾಕ್ಸೈಡನ್ನು ಹಾಕಿದರೆ, ಹೆಚ್ಚು ಗಾತ್ರದ ಲೋಳೆಯಂಥ (ಜಿಲೇಟಿನಸ್) ಕೆಂಪು–ಕಂದು ಬಣ್ಣದ ಒತ್ತರ ಬರುವುದು. ಇದಕ್ಕೆ ಫೆರಿಕ್ ಹೈಡ್ರಾಕ್ಸೈಡ್ ಎಂದು ಹೆಸರು. ಇದರ ಸಂಕೇತ $Fe(OH)_3$. ಪ್ರಾಯಶಃ ಇದು $Fe(OH)_3$ ಎಂಬ ನಿರ್ದಿಷ್ಟ ಸಂಯುಕ್ತವಾಗಿರದೆ ಅನಿಶ್ಚಿತ ಜಲಹೊಂದಿದ ಹೈಡ್ರೇಟೆಡ್ ಫೆರಿಕ್ ಆಕ್ಸೈಡ್ ಆಗಿರುವುದು. ಇದು ಆಮ್ಲಗಳಲ್ಲಿ ಸುಲಭವಾಗಿ ದ್ರಾವ್ಯ, ಕ್ಷಾರಗಳಲ್ಲಿ ಅದ್ರಾವ್ಯ.

ಇವಲ್ಲದೆ ಪ್ರಕೃತಿಯಲ್ಲಿ ಮ್ಯಾಗ್ನಟೈಟ್ $Fe_3O_4$ ಎಂಬ ಇನ್ನೊಂದು ಕಬ್ಬಿಣದ ಖನಿಜ ದೊರೆಯುವುದು. ಇದರ ರಚನೆ $FeOFe_2O_3$. ಕಬ್ಬಿಣವು ಆಕ್ಸಿಜನಿನಲ್ಲಿ ಉರಿದಾಗ, ನೀರಿನ ಹಬೆಯನ್ನು ಕೆಂಗಾವಿಗೆ ಕಾದ ಕಬ್ಬಿಣದ ಮೇಲೆ ಕಾಯಿಸಿದಾಗ ಈ ಆಕ್ಸೈಡ್ ಉಂಟಾಗುವುದು.

ಫೆರಸ್ ಸಲ್ಫೇಟ್ ($FeSO_4$) : ಇದು ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ಉಪಯೋಗಿಸಲ್ಪಡುವ ಸಂಯುಕ್ತ. ಕಬ್ಬಿಣವನ್ನು ಸಜಲ ಸಲ್ಫ್ಯೂರಿಕ್‌ಆಮ್ಲದಲ್ಲಿ ವಿಲೀನಗೊಳಿಸಿ ದ್ರಾವಣವನ್ನು ಇಂಗಿಸಿ ಇದನ್ನು ತಯಾರಿಸುವರು. ಇದಕ್ಕೆ ಕಳವ

ಕಬ್ಬಿಣದ ಚೂರುಗಳನ್ನು ಉಪಯೋಗಿಸುವರು. ಕಬ್ಬಿಣಕ್ಕೆ ಸತು ಮತ್ತು ತವರಗಳ ಲೇಪ ಕೊಡುವ ಮುಂಚೆ ಕಬ್ಬಿಣದ ತಗಡುಗಳನ್ನು ಶುದ್ಧಮಾಡಲು ಸಲ್ಫ್ಯೂರಿಕ್ ಆಮ್ಲದಲ್ಲಿ ಅದ್ದುವರು. ಈ ದ್ರಾವಣದಿಂದಲೂ ಗಣನೀಯ ಪ್ರಮಾಣ ಫೆರಸ್ ಸಲ್ಫೇಟನ್ನು ತಯಾರಿಸುವರು. ಕಬ್ಬಿಣದ ಪಿರೈಟೀಸ್ ($FeS_2$) ಒದ್ದೆಮಾಡಿ ಗಾಳಿಯ ಸಂಪರ್ಕದಲ್ಲಿ ಫೆರಸ್ ಸಲ್ಫೇಟಾಗಿ ಇದನ್ನು ಉತ್ಕರ್ಷಿಸಿ, ಅನಂತರ ಅದನ್ನು ನೀರಿನಲ್ಲಿ ವಿಲೀನಗೊಳಿಸಿ ಪಡೆಯುವರು. ದ್ರಾವಣಗಳಿಂದ ಇದು $FeSO_47H_2O$ ಎಂಬ ಹೈಡ್ರೇಟ್ ರೂಪದಲ್ಲಿ ಸ್ಫಟಿಕೀಕರಿಸುವುದು. ಗಾಳಿಯ ಸಂಪರ್ಕದಲ್ಲಿ ಇದು ಸ್ಫಟಿಕ ಜಲವನ್ನು ಕಳೆದುಕೊಂಡು ಗಾಳಿಯಿಂದ ಉತ್ಕರ್ಷಿತವಾಗಿ ಕಂದು ಬಣ್ಣಕ್ಕೆ ತಿರುಗುವುದು. ಫೆರಸ್ ಸಲ್ಫೇಟಿನ ದ್ರಾವಣ ಗಾಳಿಯ ಸಂಪರ್ಕದಲ್ಲಿ $Fe(OH)SO_4$ ಆಗಿ ಉತ್ಕರ್ಷಿತವಾಗುವುದು. ಇದರ ದ್ರಾವಣ ಉತ್ಕರ್ಷಿತವಾಗದೆ ಇರಲು ದ್ರಾವಣವನ್ನು ಸಲ್ಫ್ಯೂರಿಕ್‌ಆಮ್ಲ ಮಿಶ್ರಮಾಡಿ ದ್ರಾವಣದಲ್ಲಿ ಸ್ವಲ್ಪಕಬ್ಬಿಣದ ಚೂರನ್ನು ಹಾಕಿಡಬೇಕು. ಫೆರಸ್ ಸಲ್ಫೇಟನ್ನು ನೀರಿನ ಶುದ್ಧೀಕರಣದಲ್ಲಿಯೂ ಕಪುಮಸಿ ಮತ್ತು ಕೆಲವು ವರ್ಣದ್ರವ್ಯಗಳ ತಯಾರಿಕೆಯಲ್ಲಿಯೂ ಔಷಧದಲ್ಲಿಯೂ ಕಳೆನಾಶಕ ಮತ್ತು ಮರದ ರಕ್ಷಕವಾಗಿಯೂ ಉಪಯೋಗಿಸುವರು. ಮಸಿಯ ತಯಾರಿಕೆಯಲ್ಲಿ, ಫೆರಸ್ ಸಲ್ಫೇಟಿನ ದ್ರಾವಣಕ್ಕೆ ಸ್ವಲ್ಪ ಟ್ಯಾನಿನ್ ಮತ್ತು ಒಂದು ನೀಲಿವರ್ಣದ್ರವ್ಯ, ಸ್ವಲ್ಪ ಗಮ್ ಅರ್‍ಯಾಬಿಕ್‌ಗಳನ್ನು ಹಾಕುವರು. ಈ ಮಸಿಯಿಂದ ಬರೆದಾಗ ಅಕ್ಷರ ವರ್ಣದ್ರವ್ಯದ ನೀಲಿಬಣ್ಣವಾಗಿರುವುದು. ಗಾಳಿಯ ಸಂಪರ್ಕದಲ್ಲಿ ಫೆರಸ್ ಟ್ಯಾನೇಟು ಫೆರಿಕ್ ಟ್ಯಾನೇಟು ಆಗುವುದು. ಫೆರಿಕ್ ಟ್ಯಾನೇಟಿನ ಬಣ್ಣ ಕಪ್ಪು, ಆದ್ದರಿಂದ ಅಕ್ಷರ ಕಪ್ಪು ಬಣ್ಣಕ್ಕೆ ತಿರುಗುವುದು.

ಸಮಾನ ಅಣುಪ್ರಮಾಣ ಫೆರಸ್ ಸಲ್ಫೇಟ್ ಮತ್ತು ಅಮೋನಿಯಂ ಸಲ್ಫೇಟ್ ಇರುವ ದ್ರಾವಣದಿಂದ ನಸುಹಸಿರು ಬಣ್ಣದ ಫೆರಸ್ ಅಮೋನಿಯಂ ಸಲ್ಫೇಟು $Fe\ SO_4(NH_4)_2SO_4.6H_2O$ ಸ್ಫಟಿಕೀಕರಿಸುವುದು. ಇದು ಗಾಳಿಯಲ್ಲಿ ಉತ್ಕರ್ಷಿಸುವುದಿಲ್ಲ. ಈ ಕಾರಣಕ್ಕಾಗಿ ಪರಿಮಾಣಾತ್ಮಕ ವಿಶ್ಲೇಷಣಗಳಲ್ಲಿ ಇದನ್ನು ವಿಶೇಷವಾಗಿ ಬಳಸುವರು.

ಫೆರಿಕ್ ಸಲ್ಫೇಟ್ $Fe_2(SO_4)_3$ : ಫೆರಸ್ ಸಲ್ಫೇಟನ್ನು ಉತ್ಕರ್ಷಿಸಿ ಇದನ್ನು ಪಡೆಯಬಹುದು. ದ್ರಾವಣದಿಂದ ಇದು ಸುಲಭವಾಗಿ ಸ್ಫಟಿಕೀಕರಿಸುವುದಿಲ್ಲವಾದ್ದರಿಂದ ಇದನ್ನು ಸಾಮಾನ್ಯವಾಗಿ ಪಟಿಕದ ರೂಪದಲ್ಲಿ—ಫೆರಿಕ್ ಅಮೋನಿಯಂ ಸಲ್ಫೇಟ್ $(NH_4)_2\ SO_4\ Fe_2\ (SO_4)_3\ 24H_2O$ ಅಥವಾ ಫೆರಿಕ್ ಆಲಂ $K_2SO_4\ Fe_2(SO_4)_3\ 24H_2O$ ಆಗಿ ಸ್ಫಟಿಕೀಕರಿಸುವರು.

ಫೆರಸ್ ಕ್ಲೋರೈಡ್ $FeCl_2$ : ಕಬ್ಬಿಣವನ್ನು ಹೈಡ್ರೊಕ್ಲೋರಿಕಾಮ್ಲದಲ್ಲಿ ವಿಲೀನಮಾಡಿದ ದ್ರಾವಣದಿಂದ $FeCl_24H_2O$ ಸ್ಫಟಿಕೀಕರಿಸುವುದು. ಶುದ್ಧವಾದ ಹೈಡ್ರೇಟೆಡ್ ಫೆರಸ್ ಕ್ಲೋರೈಡಿನ ಬಣ್ಣ ನೀಲಿ. ಇದು ಗಾಳಿಯ ಸಂಪರ್ಕದಲ್ಲಿ ಉತ್ಕರ್ಷಣಹೊಂದಿ ಹಸಿರು ಬಣ್ಣಕ್ಕೆ ತಿರುಗುವುದು. ಈ ಲವಣವನ್ನು ಅಪಕರ್ಷಣಕಾರಿಯಾಗಿಯೂ ಅಲ್ಪ ಪ್ರಮಾಣದಲ್ಲಿ ಬಣ್ಣಗಚ್ಚಾಗಿಯೂ ಉಪಯೋಗಿಸುವರು.

ಫೆರಿಕ್ ಕ್ಲೋರೈಡ್ $FeCl_3$ : ಇದು ಅತ್ಯಂತ ಮುಖ್ಯವಾದ ಫೆರಿಕ್ ಲವಣ. ಕಬ್ಬಿಣದ ಮೇಲೆ ಕ್ಲೋರಿನ್ನಿನ ವರ್ತನೆಯಿಂದ ಇದನ್ನು ತಯಾರಿಸುವರು. ಈ ಪರಿವರ್ತನೆ ವಿಜಲ ಫೆರಿಕ್ ಕ್ಲೋರೈಡಿನ ಕಪ್ಪು ಹರಳುಗಳನ್ನು ಕೊಡುವುದು. ಈ ಲವಣ ಕರ್ಪೂರೀಕರಿಸುವುದು (ಸಬ್ಲೈಮ್ಸ್). ನೀರಿನಲ್ಲಿ ಇದು ವಿಶೇಷ ದ್ರಾವ್ಯ. ಇದರ ದ್ರಾವಣದಿಂದ ಅನೇಕ ಹೈಡ್ರೇಟುಗಳನ್ನು ಪಡೆಯಬಹುದು. ಇವುಗಳ ಪೈಕಿ $FeCl_3.6H_2O$ ಸುಪರಿಚಿತವಾದುದು. ನೀರಿನಲ್ಲಿ ಇದು ಜಲವಿಶ್ಲೇಷಣ ಹೊಂದುವುದು. ಈ ಲವಣವನ್ನು ಬಣ್ಣಗಚ್ಚಾಗಿಯೂ ರಾಸಾಯನಿಕ ವಿಶ್ಲೇಷಣಗಳಲ್ಲಿಯೂ ಔಷಧಗಳಲ್ಲಿಯೂ (ಕ್ರಿಮಿನಾಶಕ ಮತ್ತು ರಕ್ತಸ್ರಾವಬಂಧಕ) ಉಪಯೋಗಿಸುವರು.

ಕಬ್ಬಿಣದ ಸಂಕೀರ್ಣ ಸಯನೈಡುಗಳು : ಪೊಟ್ಯಾಸಿಯಂ ಫೆರೊಸಯನೈಡು ಫೆರಿಕ್ ಲವಣಗಳೊಡನೆ ವರ್ತಿಸಿ ಪ್ರಷ್ಯನ್ ನೀಲಿ ಎಂಬ ದಟ್ಟನೀಲಿಯನ್ನು ಕೊಡುವುದು.



$$3K_4\ Fe(CN)_6+4FeCl_3\rightarrow Fe_4[Fe(CN)_6]_3+12KCl$$

ಇದನ್ನು ವರ್ಣದ್ರವ್ಯವನ್ನಾಗಿಯೂ ಮತ್ತು ಬಟ್ಟೆ ಒಗೆಯುವ ನೀಲಿಯನ್ನಾಗಿಯೂ ಉಪಯೋಗಿಸುವರು. ಈ ಸಂಯುಕ್ತ ಫೆರಿಕ್ ಫೆರೊಸಯನೈಡ್. ಪೊಟಾಸಿಯಂ ಫೆರಿಸಯನೈಡು ಫೆರಸ್ ಲವಣಗಳೊಡನೆ ವರ್ತಿಸಿ ಟರ್ನ್‌ಬುಲ್‌ನೀಲಿ ಎಂಬ ದಟ್ಟ ನೀಲಿಯ ಇನ್ನೊಂದು ಒತ್ತರವನ್ನು ಕೊಡುವುದು. ಇದು ಫೆರಸ್ ಫೆರಿಸಯನೈಡ್.



$$2K_3Fe(CN)_6+3FeSO_4\rightarrow Fe_3[Fe(CN)_6]_2+3K_2SO_4$$

ಈ ಪರಿವರ್ತನೆಗಳನ್ನು ಫೆರಸ್ ಮತ್ತು ಫೆರಿಕ್ ಲವಣಗಳ ಗುಣಾತ್ಮಕ ವಿಶ್ಲೇಷಣೆಗಳಲ್ಲಿ ಉಪಯೋಗಿಸುವರು.

ಫೆರಿಕ್ ಲವಣಗಳು ಪೊಟ್ಯಾಸಿಯಂ ಥಯೋಸಯನೇಟಿನೊಡನೆ ವರ್ತಿಸಿ ದ್ರಾವ್ಯವಾದ ರಕ್ತಗೆಂಪಿನ $K_3Fe(CNS)_6$ ಎಂಬ ಸಂಯುಕ್ತವನ್ನು ಕೊಡುವುದು. ಈ ಪರಿವರ್ತನೆಯನ್ನು ಸಹ ಫೆರಿಕ್ ಲವಣಗಳನ್ನು ಗುರುತಿಸಲು ಉಪಯೋಗಿಸಬಹುದು.

ನೀಲಿನಕ್ಷೆಗಳು (ಬ್ಲೂಪ್ರಿಂಟ್ಸ್) : ಇವನ್ನು ಮಾಡುವ ಕಾಗದಗಳನ್ನು ಫೆರಿಕ್ ಅಮೋನಿಯಂ ಸಿಟ್ರೇಟ್ ಮತ್ತು ಪೊಟ್ಯಾಸಿಯಂ ಫೆರಿಸಯನೈಡುಗಳನ್ನು ಒಳಗೊಂಡ ದ್ರಾವಣದಲ್ಲಿ ಅದ್ದಿ ಕತ್ತಲೆಯಲ್ಲಿ ಒಣಗಿಸುವರು. ಈ ಕಾಗದದ ಮೇಲೆ ಇವೆರಡು ಲವಣಗಳೂ ಫೆರಿಕ್ ಫೆರಿಸಯನೈಡೂ ಇರುವುವು. ಕೊನೆಯ ಲವಣ ಕಾಗದಕ್ಕೆ ಹಸಿರು ಬಣ್ಣ ಕೊಡುವುದು. ಈ ರೀತಿ ಸಿದ್ಧಮಾಡಿದ ಒಂದು ಕಾಗದದ ಹಾಳೆಯ ಮೇಲೆ ನೀಲನಕ್ಷೆ ತಯಾರಿಸಬೇಕಾದ ಆಕೃತಿಯನ್ನು ಚಿತ್ರಿಸಿರುವ ಟ್ರೇಸಿಂಗ್ ಬಟ್ಟೆಯನ್ನಿಟ್ಟು ಇದನ್ನು ಬಿಸಿಲಿನಲ್ಲಿಡುವರು. ಆಗ ಬೆಳಕು ಬಿದ್ದ ಜಾಗದಲ್ಲೆಲ್ಲ ಫೆರಿಕ್ ಲವಣ ಫೆರಸ್ ಲವಣವಾಗಿ ಅಪಕರ್ಷಿತವಾಗುವುದು. ಕಪ್ಪು ಗೆರೆಗಳ ತಳಭಾಗದಲ್ಲಿ ಈ ಪರಿವರ್ತನೆ ಆಗುವುದಿಲ್ಲ. ಅನಂತರ ಕೆಳಗಿನ ಕಾಗದವನ್ನು ನೀರಿನಲ್ಲಿ ಅದ್ದಿದಾಗ ಕಾಗದದ ಮೇಲೆ ಬಿಸಿಲು ಬಿದ್ದ ಜಾಗದಲ್ಲಿ ಆದ ಫೆರಸ್ ಲವಣ ಫೆರಿಸಯನೈಡಿನೊಡನೆ ವರ್ತಿಸಿ ಅದ್ರಾವ್ಯವಾದ ಟರ್ನ್‌ಬುಲ್ ನೀಲಿಯನ್ನು ಕೊಡುವುದು. ಬಿಸಿಲು ಬೀಳದಿರುವ ಕಪ್ಪು ಗೆರೆಗಳ ಕೆಳಗೆ ಯಾವ ವರ್ತನೆಯೂ ಆಗದೆ, ಅಲ್ಲಿರುವ ಲವಣಗಳು ನೀರಿನಲ್ಲಿ ವಿಲೀನವಾಗಿ ಹೋಗುವುವು. ಹೀಗೆ ನೀಲಿ ಹಿನ್ನೆಲೆಯಲ್ಲಿ ಬಿಳಿಯ ರೇಖೆಯ ಚಿತ್ರವಾಗುವುದು. (ಸಿ.ಎಸ್.ಡಿ.;ಜೆ.ಬಿ.)

**ಕಬ್ಬಿಣದ ಅದುರು ನಿಕ್ಷೇಪಗಳು :** ಕಬ್ಬಿಣ ಭೂಮಿಯ ಮೇಲೆ ಹೇರಳವಾಗಿ ದೊರೆಯುವಂಥ ಲೋಹ. ಬಲು ಹಿಂದೆಯೇ ಮಾನವಕುಲ ಈ ಲೋಹದ ಉಪಯುಕ್ತತೆಯನ್ನು ಗುರುತಿಸಿ ಅದನ್ನು ಬಳಕೆ ತಂದುದಕ್ಕೆ ಸಾಕಷ್ಟು ಪ್ರತ್ಯಕ್ಷ ಹಾಗೂ ಪರೋಕ್ಷ ನಿದರ್ಶನಗಳು ಇವೆ. ಕಬ್ಬಿಣದ ಅಂಶ ಅನೇಕ ವರ್ಗದ ಖನಿಜಗಳಲ್ಲಿ ಸೇರಿದ್ದರೂ ಲೋಹದ ಉತ್ಪಾದನೆಯ ದೃಷ್ಟಿಯಿಂದ ಮುಖ್ಯವಾದ ಖನಿಜಗಳೆಂದರೆ ಮೂರು ಮಾತ್ರ : ಅವುಗಳಲ್ಲಿರುವ ಕಬ್ಬಿಣದ ಅಂಶವನ್ನು ಪಕ್ಕದಲ್ಲಿ ತೋರಿಸಿದೆ.

| | | |
|---|---|---|
| ಮ್ಯಾಗ್ನೆಟೈಟ್ | ... | 72.00% |
| ಹೀಮಟೈಟ್ | ... | 70.00% |
| ಲೈಮೊನೈಟ್ | ... | 59.63% |

ಮ್ಯಾಗ್ನಟೈಟ್ : ಇದು ಕಪ್ಪು ಬಣ್ಣದ್ದು. ಅದರಿಂದಲೇ ಕಪ್ಪು ಅದುರು ಎಂದು ಕರೆಯುತ್ತಾರೆ. ಕಬ್ಬಿಣದ ಅಂಶ ಇದರಲ್ಲಿ ಅತಿ ಹೆಚ್ಚು (72%). ಇದಕ್ಕೆ ಅಯಸ್ಕಾಂತ ಶಕ್ತಿ ಇದೆ. ಭಾರತದ ಅನೇಕ ಭಾಗಗಳಲ್ಲಿ ಮ್ಯಾಗ್ನಟೈಟನ್ನು ಒಳಗೊಂಡಿರುವ ಕಬ್ಬಿಣದ ಸ್ತರಗಳು ಇವೆ.

ಹೀಮಟೈಟ್ : ಕಬ್ಬಿಣದ ಉತ್ಪಾದನೆಯಲ್ಲಿ ಅತಿ ಮುಖ್ಯವಾದ ಸ್ಥಾನವನ್ನು ಪಡೆದಿರುವ ಖನಿಜ ಇದು. ಸಾಮಾನ್ಯವಾಗಿ ಕಪ್ಪು ಬಣ್ಣ ಪ್ರದರ್ಶಿಸಿದರೂ ಪುಡಿಮಾಡಿದಾಗ ಕೆಂಪು ಬಣ್ಣದ್ದಾಗಿ ಕಾಣುತ್ತದೆ.

ಲೈಮೊನೈಟ್ : ಕಬ್ಬಿಣದ ಅಂಶ ಇದರಲ್ಲಿ ತೀರ ಕಡಿಮೆ. ಖನಿಜ ಕೂಡ ಹಳದಿ ಬಣ್ಣವಾಗಿರುತ್ತದೆ. ಖನಿಜದಲ್ಲಿ ನೀರಿನ ಅಂಶವಿರುವುದರಿಂದ ಇದು ಸಾಮಾನ್ಯವಾಗಿ ಹಳದಿ ಮಣ್ಣಿನಂತಿರುತ್ತದೆ.

ಈ ಮೂರು ಖನಿಜಗಳಲ್ಲಿ ಕಬ್ಬಿಣ ತಯಾರಿಕೆಯಲ್ಲಿ ಮುಖ್ಯವಾಗಿ ಉಪಯೋಗವಾಗುತ್ತಿರುವ ಖನಿಜ ಹೀಮಟೈಟ್. ಭಾರತದಲ್ಲಿ ಹೇರಳವಾಗಿ ದೊರೆಯುವ ಕಬ್ಬಿಣದ ಖನಿಜವೆಂದರೆ ಇದೇ. ಕಬ್ಬಿಣ ನಿಕ್ಷೇಪಗಳಲ್ಲಿ ಮೂರು ಮುಖ್ಯ ವರ್ಗಗಳನ್ನು ಗುರುತಿಸಬಹುದು.

1 ಭೂಮಿಯ ಒಳಗಿನ ಉಷ್ಣದಿಂದ ಕರಗಿ ಶಿಲಾಪಾಕದ ಅವಸ್ಥೆಯಲ್ಲಿದ್ದು ಕೆನೆಗಟ್ಟುತ್ತ ಹೋದಂತೆ ತೂಕವಾದ ಕಬ್ಬಿಣದ ಖನಿಜ ಕೆಳಗೆ ದಟ್ಟೈಸಿ ರೂಪಗೊಂಡ ಕಬ್ಬಿಣದ ನಿಕ್ಷೇಪ ಮೊದಲ ವರ್ಗದ್ದು. ಈ ರೀತಿ ರೂಪುಗೊಂಡ ಅದುರಿನಲ್ಲಿ ಟೈಟೇನಿಯಂ ಮತ್ತು ವೆನೆಡಿಯಂ ಲೋಹಾಂಶಗಳು ಸೇರಿರುತ್ತವೆ. ಟೈಟೇನಿಯಂ ಬೆರೆತಿರುವ ಅದುರನ್ನು ಕರಗಿಸುವುದಕ್ಕೆ ಅತಿ ಹೆಚ್ಚು ಉಷ್ಣತೆ ಬೇಕಾಗುವುದರಿಂದ ಈ ಬಗೆಯ ಅದುರುಗಳು ಕಬ್ಬಿಣ ಕೈಗಾರಿಕೆಯಲ್ಲಿ ಈವರೆಗೂ ಉಪಯೋಗಕ್ಕೆ ಬಂದಿಲ್ಲ.

2 ಪ್ರಕೃತಿ ವ್ಯಾಪಾರಗಳಾದ ಮಳೆ, ಬಿಸಿಲು, ಗಾಳಿ—ಇವುಗಳ ಹೊಡೆತಕ್ಕೆ ಸಿಕ್ಕಿ ಕಲ್ಲುಗಳು ಬೀಳುಬಿದ್ದು, ಪುಡಿಯೆದ್ದು ಮಣ್ಣಾಗಿ, ನೀರಿನಲ್ಲಿ ಬಹುದೂರ ಸಾಗಿ ಸಾಗರದ ಪಾಲಾಗುತ್ತವೆ. ಆಗ ಕಲ್ಲಿನಲ್ಲಿದ್ದ ಕಬ್ಬಿಣದ ಅಂಶವೇ ಬೇರೆಯಾಗಿ ಸಮುದ್ರದ

ತಳದಲ್ಲಿ ಕಸೆಯಂತೆ ಪದರಪದರವಾಗಿ ನಿಕ್ಷೇಪಗೊಳ್ಳುತ್ತದೆ. ಅನೇಕ ವರ್ಷಕಾಲ ತಡೆಯಿಲ್ಲದ ಈ ಬಗೆಯ ವ್ಯಾಪಾರದಿಂದ ಕಬ್ಬಿಣದ ಒಂದು ಸ್ತರಪಂಕ್ತಿಯೇ ಸಾಗರದ ತಲದಲ್ಲಿ ಶೇಖರವಾಗುತ್ತದೆ. ಕ್ರಮೇಣ ಭೂವ್ಯಾಪಾರಗಳ ದೆಸೆಯಿಂದ ನೆಲ ಜಲವಾಗಿ, ಜಲ ನೆಲವಾದಾಗ ನೀರಿನಲ್ಲಿ ಶೇಖರಗೊಂಡ ಕಬ್ಬಿಣದ ಸ್ತರಗಳು ನೆಲದ ಮೇಲೆ ಕಾಣಿಸಿಕೊಳ್ಳುತ್ತವೆ. ಈ ರೀತಿ ರೂಪು ಹೊಂದಿದ ಕಬ್ಬಿಣದ ಸ್ತರಗಳು ಮುಖ್ಯವಾಗಿ ಮೈಸೂರು, ಗೋವ, ಬಿಹಾರ, ಒರಿಸ್ಸ, ಮಧ್ಯಪ್ರದೇಶ ರಾಜ್ಯಗಳಲ್ಲಿ ಮೈಲಿಗಟ್ಟಲೆ ಹರಡಿವೆ. ಭಾರತದ ಮುಖ್ಯ ಕಬ್ಬಿಣ ನಿಕ್ಷೇಪಗಳಿರುವುದು ಈ ಬಗೆಯ ಜಲದಲ್ಲಿ ನಿಕ್ಷೇಪಗೊಂಡ ಸ್ತರಗಳಲ್ಲಿ.

3 ಜಲದಲ್ಲಿ ನಿಕ್ಷೇಪಗೊಂಡ ಸ್ತರಪಂಕ್ತಿ ನೇರವಾಗಿ ಮೇಲೆದ್ದು ನಿಂತಾಗ, ಮಳೆ ಗಾಳಿಗಳ ಹೊಡೆತಕ್ಕೆ ಸಿಕ್ಕುತ್ತದೆ. ಕಲ್ಲಿನಲ್ಲಿದ್ದ ಸುಲಭವಾಗಿ ಕರಗಿಹೋಗುವಂಥ ವಸ್ತುವೆಲ್ಲವೂ ಹೋಗಿ, ಕಬ್ಬಿಣ ಅಂಶ ಮಾತ್ರ ಕೆನೆಗಟ್ಟಿ ಹೆಪ್ಪುಹೆಪ್ಪಾಗಿ ಶೇಖರವಾಗುತ್ತದೆ. ಈ ರೀತಿ ಸಂಗ್ರಹವಾದ ನಿಕ್ಷೇಪಗಳು ಕಬ್ಬಿಣದ ಅದುರಿಗೆ ಮುಖ್ಯ ಆಕರಗಳು.

ಈ ಬಗೆಯ ನಿಕ್ಷೇಪಗಳು ಬೆಟ್ಟದ ನೆತ್ತಿಯ ಮೇಲಿರುತ್ತವೆ, ಬಹು ದೊಡ್ಡದಾಗಿರುತ್ತವೆ ; ಇವುಗಳಲ್ಲಿನ ಕಬ್ಬಿಣದ ಅಂಶ 60%ಕ್ಕೂ ಹೆಚ್ಚಿರುತ್ತದೆ. ಪ್ರಪಂಚದ ಮುಖ್ಯ ಕಬ್ಬಿಣದ ನಿಕ್ಷೇಪಗಳೆಲ್ಲವೂ ಈ ರೀತಿಯವು.

**ಭಾರತದಲ್ಲಿ ಕಬ್ಬಿಣದ ಅದುರು ನಿಕ್ಷೇಪಗಳು :** ಇವು ಸುಮಾರಾಗಿ ಎಲ್ಲ ರಾಜ್ಯಗಳಲ್ಲಿಯೂ ಇವೆ. ಆದರೆ ದೊಡ್ಡ ಪ್ರಮಾಣದವು ಮಧ್ಯ ಪ್ರದೇಶದ ಶ್ರೇಣಿ, ಒರಿಸ್ಸ, ಸುಂದರಘಡ್ ಜಿಲ್ಲೆಯ ಬೋನಾಯ ಶ್ರೇಣಿ, ಕಟಕ್ ಜಿಲ್ಲೆಯ ದಯತೌರಿ, ಗಂಧಮಾದನ ಪರ್ವತಗಳು, ಬಿಹಾರದ ಸಿಂಗಭೂಂ ಜಿಲ್ಲೆ, ಮೈಸೂರಿನ ಹೊಸಪೇಟೆ, ಕುದುರೆಮುಖ, ಬಾಬಾಬುಡನ್ ಶ್ರೇಣಿಗಳು, ಪಶ್ಚಿಮ ಕರಾವಳಿಯ ಗೋವ—ಈ ಪ್ರದೇಶಗಳಲ್ಲಿವೆ. ದೊಡ್ಡ ಪ್ರಮಾಣದಲ್ಲಿ ಗಣಿ ಕೆಲಸ ನಡೆಯುತ್ತಿರುವುದು ಸಹ ಇವೇ ಸ್ಥಳಗಳಲ್ಲಿ.

**ಮಧ್ಯಪ್ರದೇಶ ಬೈಲದಿಲ :** ಮಧ್ಯಪ್ರದೇಶದ ಬಸ್ತರ್ ಜಿಲ್ಲೆಯ ಒಳಭಾಗದಲ್ಲಿರುವ ಈ ಶ್ರೇಣಿಯ ನೆತ್ತಿಯ ಮೇಲೆ ಪ್ರಪಂಚದಲ್ಲೇ ಅತಿ ದೊಡ್ಡದೆಂದು ಪರಿಗಣಿಸಲಾದ ಕಬ್ಬಿಣ ನಿಕ್ಷೇಪವಿದೆ. ಸುಮಾರು ನಲವತ್ತು ಮೈಲಿಗಳಷ್ಟು ದೂರ ಹಬ್ಬಿರುವ ಈ ಬೆಟ್ಟದ ಸಾಲಿನಲ್ಲಿ ಹದಿನಾಲ್ಕು ಮುಖ್ಯ ನಿಕ್ಷೇಪಗಳನ್ನು ಗುರುತಿಸಿದ್ದಾರೆ. ಒಂದೊಂದೂ ಸುಮಾರು ಎರಡು ಮೈಲಿ ಉದ್ದ, ಸಾವಿರ ಅಡಿಗಳಷ್ಟು ಅಗಲವಿದೆ. ಕೆಲವು ಕಡೆಗಳಂತೂ ನೂರರಿಂದ ಇನ್ನೂರು ಅಡಿಯವರೆಗೂ ಕಡಿದಾಗಿ ನಿಂತಿರುವ ದರಿಗಳು ಪೂರ್ತಿಯಾಗಿ ಕಬ್ಬಿಣದ ಅದುರನ್ನೇ ತೋರಿಸುತ್ತವೆ. ಇಲ್ಲಿನ ಅದುರು ಅತ್ಯುತ್ತಮವಾದದ್ದು, ಕಬ್ಬಿಣದ ಅಂಶ ಸರಾಸರಿ 65%ಕ್ಕೂ ಮೇಲಿದೆ. ನಿರ್ಜನವಾದ ಈ ಪ್ರದೇಶಕ್ಕೆ ಸಂಬಂಧ ಕಲ್ಪಿಸಲು ಹೊಸದೊಂದು ರೈಲುಮಾರ್ಗವನ್ನು ಹಾಕಿದ್ದಾರೆ. ಇದರ ಮೂಲಕ ಬೈಲದಿಲ ಅದುರನ್ನು ವಿಶಾಖಪಟ್ಟಣ ಬಂದರಿಗೆ ಕಳುಹಿಸುತ್ತಾರೆ. ಅಲ್ಲಿಂದ ಅದು ಜಪಾನಿಗೆ ರಫ್ತಾಗುತ್ತದೆ. ಈ ಪ್ರದೇಶದಲ್ಲಿ 1000 ಮಿಲಿಯನ್ ಟನ್‌ಗಳಷ್ಟು ಉತ್ತಮವಾದ ಕಬ್ಬಿಣದ ಅದುರು ದೊರೆಯುವುದೆಂದು ಅಂದಾಜು ಮಾಡಲಾಗಿದೆ.

**ಬಿಹಾರ ಮತ್ತು ಒರಿಸ್ಸ ಜಿಲ್ಲೆ :** ಪಕ್ಕಪಕ್ಕದಲ್ಲಿರುವ ದಕ್ಷಿಣ ಸಿಂಗ್‌ಭೂಂ, ಸುಂದರಘಡ್, ಕೆಯಾಂಜಾರ್ ಜಿಲ್ಲೆಗಳು ಕಬ್ಬಿಣದ ಅದುರಿನ ನಿಕ್ಷೇಪಗಳಿಗೆ ಪ್ರಸಿದ್ಧಿಯಾಗಿವೆ. ಎರಡು ರಾಜ್ಯಗಳಲ್ಲಿಯೂ ಹರಡಿರುವ ಬೊನಾಯ್ ಶ್ರೇಣಿ ಸುಮಾರು ಮೂವತ್ತು ಮೈಲಿ ದೂರ ಹಬ್ಬಿದೆ. ಈ ಉದ್ದಕ್ಕೂ ಗುಡ್ಡದ ನೆತ್ತಿಯಲ್ಲಿ ಹೇರಳವಾಗಿ ಕಬ್ಬಿಣದ ಅದುರು ದೊರೆಯುತ್ತದೆ. ದೇಶದ ಮುಖ್ಯವಾದ ಗಣಿಗಳಿರುವುದು ಈ ಸರಹದ್ದಿನಲ್ಲಿ. ಜಂಷಡ್‌ಪುರದಲ್ಲಿರುವ ಟಾಟಾ ಕಬ್ಬಿಣ ಕಂಪನಿ, ನಾಗರ್ನಾಪುರ. ಬೊಕಾರೊ ಇವುಗಳಲ್ಲಿ ಅಗಾಧ ಪ್ರಮಾಣದ ಕಬ್ಬಿಣ ಕೈಗಾರಿಕೆಗಳು ಬೊನಾಯ್ ಶ್ರೇಣಿಯ ಅದುರನ್ನು ಅವಲಂಬಿಸಿವೆ.

ಇವಲ್ಲದೆ ಕಟಕ್ ಜಿಲ್ಲೆಯಲ್ಲಿನ ದಯತಾರಿ, ಗಂಧಮಾದನ ಶ್ರೇಣಿಯಲ್ಲಿ ಮತ್ತು ಬನಸಪಾಣಿಯ ಸುತ್ತಮುತ್ತ ಅನೇಕ ಸಣ್ಣ ಪ್ರಮಾಣದ ಕಬ್ಬಿಣದ ಗಣಿಗಳಿವೆ. ಇಲ್ಲಿ ಉತ್ಪತ್ತಿಯಾಗುವ ಅದುರು ಕಲ್ಕತ್ತ ಮತ್ತು ಪರದೀಪ ಬಂದರುಗಳ ಮೂಲಕ ಜಪಾನ್ ದೇಶಕ್ಕೆ ರಫ್ತಾಗುತ್ತದೆ.

**ಗೋವ :** 1300 ಚದರ ಮೈಲಿ ಪಶ್ಚಿಮ ಕರಾವಳಿಗೆ ಅಂಟಿಕೊಂಡಿರುವ ಈ ಪ್ರದೇಶದಲ್ಲಿ ಪ್ರಧಾನವಾದದ್ದು ಕಬ್ಬಿಣ ಕೈಗಾರಿಕೆಯೊಂದೇ. ಇಲ್ಲಿನ ನಿಕ್ಷೇಪಗಳು ಬಂದರಿಗೆ ಅತಿ ಸಮೀಪವಾಗಿರುವುದರಿಂದಲೂ ನದಿಗಳು, ಕಾಲುವೆಗಳ ಮೂಲಕ ಅದುರನ್ನು ಸಾಗಿಸಲು ಸೌಲಭ್ಯ ಇರುವುದರಿಂದಲೂ ಲಾಭದಾಯಕವಾಗಿ ಅದುರು ವ್ಯಾಪಾರವನ್ನು ಮಾಡಲು ಸಾಧ್ಯವಾಗಿದೆ. ಅದುರಿನಲ್ಲಿರುವ ಕಬ್ಬಿಣದ ಅಂಶ ಹೆಚ್ಚೇನೂ ಅಲ್ಲ ; 58% ರಿಂದ ಹಿಡಿದು 60%ರ ವರೆಗೆ ಮಾತ್ರ. ನವೀನ ಯಂತ್ರೋಪಕರಣಗಳ ಸಹಾಯದಿಂದ ಹೇರಳ ಪ್ರಮಾಣದಲ್ಲಿ ಅದುರನ್ನು ಉತ್ಪಾದಿಸಿ ದೂರ ದೇಶಗಳಿಗೆ ಕಳುಹಿಸುತ್ತಾರೆ. 300 ಮಿಲಿಯನ್ ಟನ್‌ಗಳಷ್ಟು ಕಬ್ಬಿಣದ ಅದುರು ಇಲ್ಲಿದೆಯೆಂದು ಅಂದಾಜು. ವರ್ಷಂಪ್ರತಿ ಐದಾರು ದಶಲಕ್ಷ ಟನ್‌ಗಳು ಜಪಾನ್ ದೇಶಕ್ಕೆ ರಫ್ತಾಗುತ್ತವೆ.

**ಮೈಸೂರು :** ಕಬ್ಬಿಣ ನಿಕ್ಷೇಪಗಳು ಈ ಕೆಳಕಂಡ ಜಿಲ್ಲೆಗಳಲ್ಲಿವೆ :

| | | |
|---|---|---|
| ಬಳ್ಳಾರಿ | ... | ಹೊಸಪೇಟೆ, ಬಳ್ಳಾರಿ |
| ಬಿಜಾಪುರ | ... | ಬಾಗಲಕೋಟೆ ಬಳಿಯಿರುವ ಕಮತಗಿ |
| ಚಿಕ್ಕಮಗಳೂರು | ... | ಬಾಬಾಬುಡನ್ ಶ್ರೇಣಿಯ ಕೆಮ್ಮಣ್ಣುಗುಂಡಿ, ಕುದುರೆಮುಖ, ಗಂಗಮೂಲ |
| ಚಿತ್ರದುರ್ಗ | ... | ವಜ್ರ, ಸಾಸಲು, ಹೊಸದುರ್ಗ |
| ಉತ್ತರ ಕನ್ನಡ | ... | ಅನಮೋಡು, ಸೂಪ, ಹೊನ್ನಾವರ |
| ದಕ್ಷಿಣ ಕನ್ನಡ | ... | ಸುಬ್ರಹ್ಮಣ್ಯ, ಪುತ್ತೂರು |
| ಶಿವಮೊಗ್ಗ | ... | ಕುಂಸಿ, ಶಂಕರಗುಡ್ಡ |
| ತುಮಕೂರು | ... | ಚಿಕ್ಕನಾಯಕನಹಳ್ಳಿ |

ಬಳ್ಳಾರಿ–ಹೊಸಪೇಟೆ : ಮೈಸೂರು ರಾಜ್ಯದಲ್ಲಿ ಮುಖ್ಯವಾದ ಕಬ್ಬಿಣದ ಅದುರು ವಲಯ ಇಲ್ಲಿದೆ. ಪ್ರಪಂಚದ ಅತ್ಯುತ್ತಮ ಕಬ್ಬಿಣದ ಅದುರು ಇಲ್ಲಿನದೆಂದು ಹೆಸರುವಾಸಿಯಾಗಿದೆ. 1952ರಲ್ಲಿ ವರ್ಷಕ್ಕೆ ಹತ್ತು ಸಾವಿರ ಟನ್ ಮಾತ್ರ ಉತ್ಪಾದನೆಯಿತ್ತು. ಅಲ್ಲಿಂದೀಚೆಗೆ ಉತ್ಪಾದನೆ ವರ್ಷವರ್ಷವೂ ಹೆಚ್ಚುತ್ತಹೋಗಿ



ಕುದುರೆಮುಖದ ಕಬ್ಬಿಣದ ಅದುರು ನಿಕ್ಷೇಪ



ಮಡಿಕೆ ಬಿದ್ದಿರುವ ಕಬ್ಬಿಣದ ಪದರುಕಲ್ಲು—ಕುದುರೆಮುಖ ಶ್ರೇಣಿ

ಈಗ ಮೂವತ್ತು ಲಕ್ಷ ಟನ್ ಮುಟ್ಟಿದೆ. ಜಂಬುನಾಥನ ಹಳ್ಳಿ, ಪಾಪನಾಯಕನ ಹಳ್ಳಿ, ಎತ್ತಿನ ಹಟ್ಟಿ, ಉಬ್ಬಲಗಂಡಿ, ದೋಣಿಮಲೆ, ದೇವದಾರ ಗುಡ್ಡ, ರಾಮನ ದುರ್ಗ, ಕುಮಾರಸ್ವಾಮಿ ಈ ಗುಡ್ಡ ಸಾಲುಗಳಲ್ಲಿ 1000 ಮಿಲಿಯನ್ ಟನ್‌ಗಳಿಗೂ ಹೆಚ್ಚು ಕಬ್ಬಿಣದ ಅದುರು ದೊರೆಯುವುದೆಂದು ಅಂದಾಜು. ಅತ್ಯುತ್ತಮವಾದ ಅದುರು ಹೇರಳವಾಗಿ ದೊರೆಯುವುದರಿಂದಲೂ ರೈಲು, ನೀರು, ವಿದ್ಯುಚ್ಛಕ್ತಿ ಸೌಕರ್ಯಗಳಿರುವುದರಿಂದಲೂ ಹೊಸಪೇಟೆಯಲ್ಲಿ ದೊಡ್ಡ ಪ್ರಮಾಣದ ಉಕ್ಕಿನ ಯಂತ್ರಾಗಾರವನ್ನು ನಿರ್ಮಿಸುವುದು ಸಾಧ್ಯ. ಸೊಂಡೂರಿಗೆ ಸಮೀಪದಲ್ಲಿರುವ ದೋಣಿಮಲೆಯ ಬಳಿ ಬೃಹತ್‌ಪ್ರಮಾಣದಲ್ಲಿ ಗಣಿ ಉದ್ಯಮ ಪ್ರಾರಂಭವಾಗಿದೆ. ವರ್ಷಂಪ್ರತಿ ಸುಮಾರು 4 ಮಿಲಿಯನ್ ಟನ್‌ಗಳಷ್ಟು ಅದುರನ್ನು ಈ ಗುಡ್ಡ ಸಾಲಿನಲ್ಲಿ ತೆಗೆದು ಮದರಾಸು ಬಂದರಿಗೆ ಸಾಗಿಸಲಾಗುತ್ತದೆ. ಇಷ್ಟು ಹೇರಳವಾದ ಪ್ರಮಾಣದಲ್ಲಿ ಅದುರನ್ನು ಪಡೆಯಲು ಅತ್ಯಾಧುನಿಕವಾದ ಯಂತ್ರೋಪಕರಣಗಳು ಆವಶ್ಯಕ. ಸೊಂಡೂರುವರೆಗೂ ರೈಲು ಮಾರ್ಗ ನಿರ್ಮಾಣದ ಕೆಲಸ ಪ್ರಾರಂಭವಾಗಿದೆ.

ಚಿಕ್ಕಮಗಳೂರು ಜಿಲ್ಲೆಯ ಕೆಮ್ಮಣ್ಣುಗುಂಡಿ : ಈ ಜಿಲ್ಲೆಯಲ್ಲಿರುವ ಬಾಬಾಬುಡನ್ ಶ್ರೇಣಿ ಪ್ರಸಿದ್ಧಿಯಾದುದು. ಈ ಪರ್ವತಪಂಕ್ತಿಯ ನೆತ್ತಿಯ ಪ್ರದೇಶವೆಲ್ಲ ಕಬ್ಬಿಣದ ಅದುರಿನಿಂದ ಕೂಡಿದೆ. ಕೆಮ್ಮಣ್ಣುಗುಂಡಿಯ ಬಳಿ ದೊರೆಯುವ ಅದುರನ್ನು ಭದ್ರಾವತಿಗೆ ಸಾಗಿಸಿ ಕಬ್ಬಿಣ ಉಕ್ಕನ್ನು ತಯಾರಿಸಲಾಗುತ್ತದೆ.

ಕುದುರೆಮುಖ : ಜಿಲ್ಲೆಯ ಪಶ್ಚಿಮ ಭಾಗದಲ್ಲಿರುವ ಕುದುರೆಮುಖ ಗಂಗಮೂಲ ಪರ್ವತಶ್ರೇಣಿ ಮೈಸೂರು ದೇಶದಲ್ಲಿ ಹೆಸರುವಾಸಿಯಾಗಿದೆ. ಪ್ರಕೃತಿ ಸಂಪತ್ತಿನ ತವರಾದ ಈ ಶ್ರೇಣಿಯ ಉದ್ದಕ್ಕೂ ಕಬ್ಬಿಣದ ಸ್ತರ ಪಂಕ್ತಿಯಿದೆ. ಕಬ್ಬಿಣದ ಅಂಶ ಕಡಿಮೆ ಇದ್ದುದರಿಂದ ಇವುಗಳನ್ನು ಈವರೆಗೆ ಗಣನೆಗೆ ತಂದು ಕೊಂಡಿರಲಿಲ್ಲ. ಬೆಳೆಯುತ್ತಿರುವ ಮಂಗಳೂರು ಬಂದರಿಗೆ ಕುದುರೆಮುಖ ಸಮೀಪವಾಗಿರುವುದರಿಂದ ಹೆಚ್ಚು ಖರ್ಚಿಲ್ಲದೆ ಅದುರನ್ನು ಅಲ್ಲಿಗೆ ಸಾಗಿಸುತ್ತಾರೆ. ಇಲ್ಲಿ ದೊರೆಯುವ ಅದುರಿಗೆ ಅಯಸ್ಕಾಂತಶಕ್ತಿ ಇರುವುದರಿಂದ ಅದುರನ್ನು ಶುದ್ಧಿಮಾಡಿ ಉತ್ತಮ ದರ್ಜೆಯ ಅದುರನ್ನು ವಿಂಗಡಿಸಲು ಸಾಧ್ಯವಾಗಿದೆ. ಸುಮಾರು ಅರುವತ್ತು ಕೋಟಿ ರೂಪಾಯಿ ಬಂಡವಾಳ ಹೂಡಿ ಇಲ್ಲಿನ ನಿಕ್ಷೇಪಗಳನ್ನು ರೂಢಿಸುವ ಬೃಹತ್ ಯೋಜನೆಯೊಂದು ಸಿದ್ಧವಾಗಿದೆ. ನಿರ್ಜನವಾದ, ದುರ್ಗಮವಾದ ಈ ಪ್ರದೇಶ ಅನೇಕ ಬಗೆಯ ಕಾರ್ಯಚಟುವಟಿಕೆಗಳಿಂದ ಜೀವಂತವಾಗಿದೆ.

ಚಿತ್ರದುರ್ಗ ಜಿಲ್ಲೆ : ಮುಖ್ಯವಾದ ಕಬ್ಬಿಣದ ನಿಕ್ಷೇಪಗಳು ಹುಲಿಯೂರಿನ ಬಳಿಯ ವಜ್ರ, ಕುದುರೆಕಣಿವೆ, ಮಾರಿಕಣಿವೆ ಬಳಿಯ ಲಕ್ಕಿಹಳ್ಳಿ, ಕೆಂಕೆರೆ, ಚಿತ್ರದುರ್ಗ ಬಳಿಯ ಭೀಮಸಮುದ್ರ, ಸಿರಿಗೆರೆ ಬಳಿಯ ಮದಕರಿಪುರ ಇವುಗಳ ಹತ್ತಿರ ಇವೆ. ಇಲ್ಲಿನ ನಿಕ್ಷೇಪಗಳು ಮದರಾಸು ಬಂದರಿಗೆ ದೂರವಾಗಿರುವುದರಿಂದ ದೊರೆಯುವ ಹಣವೆಲ್ಲವೂ ಅದುರು ಸಾಗಾಣಿಕೆಗೇ ವ್ಯಯವಾಗುವ ಕಾರಣ, ಹೆಚ್ಚಿನಪ್ರಮಾಣದಲ್ಲಿ ಇಲ್ಲೆಲ್ಲೂ ಕೆಲಸ ನಡೆಯುತ್ತಿಲ್ಲ. ಹಾಸನ–ಮಂಗಳೂರು ರೈಲು ಮಾರ್ಗ ನಿರ್ಮಾಣವಾದ ಅನಂತರ ಮಂಗಳೂರು ಬಂದರಿಗೆ ಅದುರನ್ನು ಲಾಭದಾಯಕವಾಗಿ ಸಾಗಿಸುವುದು ಸಾಧ್ಯವಾಗುತ್ತದೆ. ಆಗ ಈ ನಿಕ್ಷೇಪಗಳು ಪ್ರಾಮುಖ್ಯಕ್ಕೆ ಬರುತ್ತವೆ.



ಹೊನ್ನಾವರದ ಬಳಿಯ ಕಬ್ಬಿಣದ ಅದುರಿನ ಗಣಿಯ ಒಂದು ದೃಶ್ಯ




ಕಬ್ಬಿಣದ ಅದುರು ನಿಕ್ಷೇಪಗಳು : 1 ರಾಣಿಗಂಜ್, 2 ರಾಜಮಹಲ್, 3 ಪಲಮೌ 4 ಸಿಂಘಭೂಮ್, 5 ಮಯೂರಭಂಜ್, 6 ಬೊನೈ, 7 ಕಿಯೊಂಜಾರ್, 8 ಜಬಲ್‌ಪುರ, 9 ದ್ರುಗ್, 10 ಬೈಲಾಡಿಲಾ, 11 ರೌಘಾಟ್, 12 ಅದಿಲಾಬಾದ್, 13 ಕರ್ನೂಲು, 14 ಗುಂಟೂರು, 15 ನೆಲ್ಲೂರು, 16 ಸೇಲಂ, 17 ತಿರುಚಿನಾಪಳ್ಳಿ, 18 ಚಿಕ್ಕಮಗಳೂರು, 19 ಹಿರಿಯೂರು 20 ಬಳ್ಳಾರಿ, 21 ಸಂಡೂರು, 22 ಧಾರವಾಡ 23 ಗೋವ, 24 ರತ್ನಗಿರಿ, 25 ನವನಗರ, 26 ಚಾಂದ, 27 ಆಳ್ವಾರ್, 28 ಜೈಪುರ, 29 ನಾರ್‌ನೌಲ್, 30 ಮಂಡಿ, 31 ಕುಮಾವ್.

ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆಗಳು: 1 ದುರ್ಗಾಪುರ, 2 ಬರ್ನ್‌ಪುರ, 3 ಜೆಂಷೆಡ್‌ಪುರ, 4 ರೂರ್ಕೆಲ, 5 ಭಿಲೈ, 6 ಭದ್ರಾವತಿ.

ಉದ್ದೇಶಿತ ಉಕ್ಕಿನ ಕಾರ್ಖಾನೆಗಳು, 1 ಹೊಸಪೇಟೆ, 2 ಸೇಲಂ, 3 ವಿಶಾಖಪಟ್ಟಣ, 4 ಬೊಕಾರೊ

ಶಿವಮೊಗ್ಗ ಜಿಲ್ಲೆ : ಇಲ್ಲಿ ಕಬ್ಬಿಣದ ಅದುರು ಕುಂಸಿ, ಶಂಕರಗುಡ್ಡ, ಚಟ್ಟನಹಳ್ಳಿ, ಗಂಗೂರು, ಸಿದ್ಧರಹಳ್ಳಿ, ಆಗುಂಬೆ, ನಿಶಾನಿಗುಡ್ಡ, ಹೊಸದುರ್ಗದ ಕೊಡಚಾದ್ರಿ ಈ ಬಳಿ ದೊರೆಯುತ್ತದೆ. ಆದರೆ ಇವುಗಳೆಲ್ಲವೂ ರೈಲುಮಾರ್ಗಗಳಿಗೆ ಅತಿ ದೂರವಿರುವುದರಿಂದ ಇದು ವರೆವಿಗೆ ಎಲ್ಲಿಯೂ ಕೆಲಸ ನಡೆದಿಲ್ಲ. ಕೊಡಚಾದ್ರಿ ಕೋಟೆ ನಿಕ್ಷೇಪಗಳು ಕುದರೆಮುಖದ ನಿಕ್ಷೇಪಗಳಂತೆಯೇ ಕುಂದಾಪುರ ಬಂದರಿಗೆ ಅತಿ ಸಮೀಪವಾದವು.

ದಕ್ಷಿಣ ಕನ್ನಡ ಜಿಲ್ಲೆ : ಕಬ್ಬಿಣದ ಸ್ತರಗಳು ಪುತ್ತೂರು ತಾಲ್ಲೂಕಿನ ಅರ್ಬದ ಗುಡ್ಡದಲ್ಲಿವೆ. ಈ ಗುಡ್ಡದ ಸಾಲು ಸುಬ್ರಹ್ಮಣ್ಯದಿಂದ ಧರ್ಮಸ್ಥಳದವರೆಗೂ ಹರಡಿದೆ. ಹಾಸನ–ಮಂಗಳೂರು ರೈಲುಮಾರ್ಗ ಈ ನಿಕ್ಷೇಪಗಳ ಬಳಿಯೇ ಹಾದು ಹೋಗುವುದರಿಂದ ಇನ್ನು ಕೆಲವು ವರ್ಷಗಳಲ್ಲೇ ಇವುಗಳಿಗೂ ಬೆಲೆ ಬರಬಹುದು.

ಉತ್ತರ ಕನ್ನಡ ಜಿಲ್ಲೆ : ಗೋವೆಯ ಅಂಚಿಗಿರುವ ಅನಮೋಡುಸೂಪ, ದಾಂಡೇಲಿ, ಎಲ್ಲಾಪುರ, ತಲಗಿನಕೇರಿ, ಮಾವಿನಗುಂಡಿ, ಈ ಸ್ಥಳಗಳಲ್ಲಿ ಕಬ್ಬಿಣದ ನಿಕ್ಷೇಪಗಳಿವೆ. ಎಲ್ಲೆಲ್ಲೂ ದಟ್ಟವಾದ ಕಾಡು ಹಬ್ಬಿರುವುದರಿಂದಲೂ ಮಾರ್ಗಾನುಕೂಲತೆಗಳು ಇಲ್ಲದಿರುವುದರಿಂದಲೂ ಇವುಗಳಿಗೆ ಪ್ರಾಮುಖ್ಯ ಬಂದಿಲ್ಲ. ಕಾರವಾರ ಬಂದರು ಅಭಿವೃದ್ಧಿಗೊಂಡು ಸೇತುವೆಗಳು, ರೈಲುಮಾರ್ಗಗಳು ನಿರ್ಮಿತವಾದರೆ ಉತ್ತರ ಕನ್ನಡ ಜಿಲ್ಲೆಯ ಅದುರು ನಿಕ್ಷೇಪಗಳು ಪ್ರಾಮುಖ್ಯಕ್ಕೆ ಬರುತ್ತವೆ.

ತುಮಕೂರು ಜಿಲ್ಲೆ : ದಕ್ಷಿಣದಲ್ಲಿ ಹತ್ನಾಳಿನಿಂದ ಹಿಡಿದು, ಹುಳಿಯಾರಿನವರೆಗೆ ಚಿಕ್ಕನಾಯಕನಹಳ್ಳಿಯ ಪೂರ್ವಕ್ಕೆ ಹಬ್ಬಿರುವ ಗುಡ್ಡಸಾಲಿನಲ್ಲಿ ಕಬ್ಬಿಣದ ನಿಕ್ಷೇಪಗಳು ಹಲವಾರಿವೆ. ಸಣ್ಣಪ್ರಮಾಣದಲ್ಲಿ ಅದುರನ್ನು—ಮಂಗಳೂರು ಬಂದರಿಗೂ ಭದ್ರಾವತಿಯ ಉಕ್ಕಿನ ಕಾರ್ಖಾನೆಗೂ ಕಳುಹಿಸಲಾಗುತ್ತಿದೆ. ಹಾಸನ ಮಂಗಳೂರು ರೈಲುದಾರಿ ನಿರ್ಮಾಣವಾದ ಅನಂತರ ಈ ಗುಡ್ಡಸಾಲಿನ ಅದುರನ್ನು ಬಾಣಸಂಧ್ರುದ ಮೂಲಕ ಮಂಗಳೂರು ಬಂದರಿಗೆ ಕಳುಹಿಸಲು ಸಾಧ್ಯವಾಗುತ್ತದೆ.

**ದೊರೆಯಬಹುದಾದ ಅದುರಿನ ಪ್ರಮಾಣದ ಅಂದಾಜು :** ಭಾರತದಲ್ಲಿ ದೊರೆಯಬಹುದಾದ ಕಬ್ಬಿಣದ ಅದುರಿನ ಒಟ್ಟು ಪರಿಮಾಣ ಇಪ್ಪತ್ತು ಸಾವಿರ ಮಿಲಿಯನ್ ಟನ್‌ಗಳೆಂದು ಅಂದಾಜು. ಇದರಲ್ಲಿ ಸಿದ್ಧಪಡಿಸಿ ತೋರಿಸಿದ ಹಾಗೂ ಇರಬಹುದೆಂದು ಅನುಮಾನಿಸಿದ ಅದುರಿನ ಮೊತ್ತಗಳೆರಡೂ ಸೇರಿವೆ. ವರ್ಷಂಪ್ರತಿ ನಡೆಯುತ್ತಿರುವ ಅನ್ವೇಷಣೆಗಳಿಂದ ಹೊಸ ನಿಕ್ಷೇಪಗಳು ಗಮನಕ್ಕೆ ಬಂದು ನಿಕ್ಷೇಪಗಳ ಒಟ್ಟು ಅಂದಾಜು ಹೆಚ್ಚುತ್ತ ಹೋಗುತ್ತಿದೆ. ನಮ್ಮ ಬಳಕೆಗೆ ಸಾಕಾಗಿ ಬೇರೆ ದೇಶಗಳಿಗೆ ನಾವು ಅದುರನ್ನು ರಫ್ತು ಮಾಡಬಹುದಾಗಿದೆ.

ಇತ್ತೀಚೆಗೆ ನಡೆಸಿರುವ ಶೋಧನೆಗಳ ಪ್ರಕಾರ ಬಳ್ಳಾರಿ ಹೊಸಪೇಟೆ ಪ್ರಾಂತದಲ್ಲಿ ದೊರೆಯಹುದಾದ ಅದುರಿನ ಮೊತ್ತ 1500 ಮಿಲಿಯನ್ ಟನ್‌ಗಳು ಎಂದು ಪರಿಗಣಿಸಲಾಗಿದೆ. ಇದೇ ರೀತಿ ಕುದರೆಮುಖದ ಬಳಿ ಮ್ಯಾಗ್ನಟೈಟ್ ಅದುರಿನ ಪ್ರಮಾಣ 3000 ಮಿಲಿಯನ್ ಟನ್‌ಗಳಿಗೂ ಹೆಚ್ಚಿದೆಯೆಂದು ಅಂದಾಜು ಮಾಡಲಾಗಿದೆ.

ದೇಶದ ಬೇರೆ ಬೇರೆ ರಾಜ್ಯಗಳಲ್ಲಿ ಎಷ್ಟೆಷ್ಟು ಕಬ್ಬಿಣದ ಅದುರು ಇದೆ ಎನ್ನುವ ವಿವರವನ್ನು ಕೆಳಗಿನ ಪಟ್ಟಿಯಲ್ಲಿ ಕಾಣಿಸಿದೆ.

| | ರಾಜ್ಯ | ಅದುರು ಅಂದಾಜು (ಮಿಲಿಯನ್ ಟನ್ನುಗಳಲ್ಲಿ) | | ಒಟ್ಟು |
|---|---|---|---|---|
| 1 | ಬಿಹಾರ ಮತ್ತು ಒರಿಸ್ಸ | 4,880 | ... | 4,880 |
| 2 | ಮಧ್ಯಪ್ರದೇಶ : ಬೈಲದಿಲ, | 2,290 | | |
| | ರಾಯಭಾರ, ಇತರ ಜಿಲ್ಲೆಗಳು | 148 | ... | 2,438 |
| 3 | ಮೈಸೂರು ಬಳ್ಳಾರಿ, ಹೊಸಪೇಟೆ | ... 498 | | |
| | ಚಿತ್ರದುರ್ಗ, ಚಿಕ್ಕಮಗಳೂರು ಶಿವಮೊಗ್ಗ | ... 771 | | |
| | ಚಿಕ್ಕಮಗಳೂರಿನ ಮ್ಯಾಗ್ನಟೈಟ್ ಅದುರು | ... 215 | ... | 1,484 |

| | | | | |
|---|---|---|---|---|
| 4 | ತಮಿಳುನಾಡು | ... 306 | ... | 306 |
| 5 | ಮಹಾರಾಷ್ಟ್ರ | ... 72 | ... | 72 |
| 6 | ಆಂಧ್ರಪ್ರದೇಶ | ... 18 | ... | 18 |
| 7 | ಪಂಜಾಬ್, ರಾಜಸ್ಥಾನ, ಉತ್ತರ ಪ್ರದೇಶ | ... 30 | ... | 30 |
| 8 | ಗೋವ | ... 500 | ... | 500 |
| | ಭಾರತದಲ್ಲಿ ಒಟ್ಟು | | | 9,728 |

(ಯೋಜನಾ ಸಮಿತಿಯ ಆಧಾರದ ಮೇಲೆ)

**ಕಬ್ಬಿಣದ ಅದುರಿನ ಉತ್ಪತ್ತಿ ಮತ್ತು ಅದರ ಮೌಲ್ಯ :** ಕಳೆದ ಹನ್ನೊಂದು ವರ್ಷಗಳಲ್ಲಿ ಭಾರತದಲ್ಲಿ ಉತ್ಪತ್ತಿ ಮಾಡಲಾದ ಕಬ್ಬಿಣದ ಅದುರಿನ ಪ್ರಮಾಣ ಮತ್ತು ಅದರಮೌಲ್ಯವನ್ನು ಕೆಳಗಿನ ಪಟ್ಟಿಯಲ್ಲಿ ಕಾಣಿಸಿದೆ.

| ಇಸವಿ | ಉತ್ಪತ್ತಿ (ಟನ್ನುಗಳಲ್ಲಿ) | | ಬೆಲೆ (ಸಾವಿರ ರೂಪಾಯಿಗಳಲ್ಲಿ) |
|---|---|---|---|
| 1960 | 10,683,291 | ... | 90,285 |
| 1961 | 12,309,809 | ... | 89,211 |
| 1962 | 13,544,220 | ... | 1,02,302 |
| 1963 | 15,092,661 | ... | 1,14,502 |
| 1964 | 15,336,079 | ... | 1,22,530 |
| 1965 | 17,289,724 | ... | 1,49,274 |
| 1966 | 20,015,230 | ... | 1,75,397 |
| 1967 | 19,104,650 | ... | 1,87,484 |
| 1968 | 21,107,067 | ... | 2,16,210 |
| 1969 | 21,578,351 | ... | 2,34,888 |
| 1970 | 23,287,774 | ... | 2,57,456 |

(ಈ ಅಂಕಿಗಳಲ್ಲಿ ಗೋವಾದಲ್ಲಿ ಉತ್ಪಾದಿಸಿದ ಅದುರು ಸೇರಿಲ್ಲ)

1969ರಲ್ಲಿ ಭಾರತದ ನಾನಾ ರಾಜ್ಯಗಳಲ್ಲಿ ಎಷ್ಟೆಷ್ಟು ಕಬ್ಬಿಣದ ಅದುರಿನ ಉತ್ಪಾದನೆಯಾಯಿತು ಅದರ ಬೆಲೆಯೇನು ಎನ್ನುವ ವಿವರ ಕೆಳಗೆ ಕಾಣಿಸಿದೆ.

| ರಾಜ್ಯಗಳು | | ಉತ್ಪಾದನೆ (ಟನ್ನುಗಳಲ್ಲಿ) | | ಬೆಲೆ ಸಾವಿರ ರೂಪಾಯಿಗಳಲ್ಲಿ |
|---|---|---|---|---|
| ಆಂಧ್ರಪ್ರದೇಶ | | | | |
| ಅನಂತಪುರ | ... | 79,259 | ... | 433 |
| ಕಡಪ | ... | 345 | ... | 2 |
| ಕಮ್ಮಮ್ | ... | 23,417 | ... | 244 |
| ಕರ್ನೂಲು | ... | 4,634 | ... | 39 |
| ನೆಲ್ಲೂರ | ... | 4,336 | ... | 59 |
| ಬಿಹಾರ | | | | |
| ಪಲಮೊ | ... | 6,533 | ... | 45 |
| ಸಿಂಗಭೂಮ್ | ... | 5,335,668 | ... | 81,212 |
| ಗೋವಾ | ... | 7,657,105 | ... | |
| ಮಧ್ಯಪ್ರದೇಶ | | | | |
| ಬಸ್ತರ್ | ... | 3,186,677 | ... | 43,380 |
| ದುರ್ಗ | ... | 2,112,366 | ... | 27,992 |
| ಮಹಾರಾಷ್ಟ್ರ | | | | |
| ರತ್ನಗಿರಿ | ... | 269,990 | ... | 2,923 |
| ಮೈಸೂರು | | | | |
| ಬಳ್ಳಾರಿ | ... | 2,419,787 | ... | 12,508 |
| ಬಿಜಾಪುರ | ... | 2,300 | ... | 13 |
| ಚಿಕ್ಕಮಗಳೂರು | ... | 129,691 | ... | 1,048 |
| ಚಿತ್ರದುರ್ಗ | ... | 132,778 | ... | 912 |
| ಉತ್ತರ ಕನ್ನಡ | ... | 100,469 | ... | 906 |
| ತುಮಕೂರು | ... | 30,431 | ... | 162 |
| ಒರಿಸ್ಸ | | | | |
| ಕಿಯೊಂಜಾರ್ | ... | 5,440,588 | ... | 54,560 |
| ಮಯೂರಭಂಜ್ | ... | 2,538 | ... | 14 |
| ಸುಂದರಘಡ | ... | 1,182,851 | ... | 8,398 |
| ರಾಜಸ್ಥಾನ | | | | |
| ಜೈಪುರ | ... | 2,593 | ... | 38 |

**ಕಬ್ಬಿಣದ ಅದುರಿನ ರಫ್ತು ವ್ಯಾಪಾರ :** ಪ್ರಪಂಚದಲ್ಲಿ ಕಬ್ಬಿಣದ ಅದುರು ವಿಶೇಷವಾಗಿ ದೊರೆಯುವ ದೇಶಗಳಲ್ಲಿ ಭಾರತ ಮುಖ್ಯ ಸ್ಥಾನವನ್ನು ಪಡೆದಿದೆ. ಈಗಿರುವ ಮತ್ತು ಮುಂದೆ ಬರಬಹುದಾದ ಕಬ್ಬಿಣ ಮತ್ತು ಉಕ್ಕು ಕಾರ್ಖಾನೆಗಳಿಗೆ ಬೇಕಾಗುವ ಅದುರನ್ನು ಪೂರೈಕೆ ಮಾಡಿ ವಿದೇಶಗಳಿಗೂ ಅದುರನ್ನು ರಫ್ತು ಮಾಡುವಷ್ಟು ಹೇರಳವಾಗಿದೆ ಈ ಸಂಪತ್ತು.

ಜಪಾನ್ ಕಬ್ಬಿಣದ ಕೈಗಾರಿಕೆಯಲ್ಲಿ ಅತಿ ಮುಂದುವರಿದ ದೇಶ. ಆದರೆ ಅಲ್ಲಿ ಕಬ್ಬಿಣದ ಅದುರು ದೊರೆಯುವುದಿಲ್ಲ. ತನಗೆ ಬೇಕಾಗುವ ಎಲ್ಲ ಅದುರನ್ನು ಆ ದೇಶ ಆಮದು ಮಾಡಿಕೊಳ್ಳಬೇಕಾಗಿದೆ. ಭಾರತದ ಕಬ್ಬಿಣದ ಅದುರಿಗೆ ಮುಖ್ಯ ಮಾರು ಕಟ್ಟೆ ಜಪಾನ್. 1952ರಲ್ಲಿ ಸಣ್ಣ ಪ್ರಮಾಣದಲ್ಲಿ ಪ್ರಾರಂಭವಾದ ರಫ್ತು 1969ರಲ್ಲಿ ಸುಮಾರು 15,635,009 ಟನ್‌ಗಳಷ್ಟು ಮುಟ್ಟಿತು. ಈ ರಫ್ತಿನ ಮೌಲ್ಯ 864,910,000 ಕೋಟಿ ರೂಪಾಯಿಗಳು. 1974ರ ಹೊತ್ತಿಗೆ 31 ಮಿಲಿಯನ್ ಟನ್‌ಗಳಷ್ಟು, 1979ರ ಹೊತ್ತಿಗೆ 48 ಮಿಲಿಯನ್ ಟನ್‌ಗಳಷ್ಟು ರಫ್ತು ಮಾಡಬೇಕೆನ್ನುವ ಗುರಿಯನ್ನು ರೂಪಿಸಲಾಗಿದೆ.

ನಮಗೆ ಬೇಕಾಗುವ ಅನೇಕ ಯಂತ್ರೋಪಕರಣಗಳನ್ನೂ ಅತ್ಯಗತ್ಯವಾಗಿ ಬೇಕಾಗುವ ತಾಮ್ರ, ತವರ, ಸೀಸ ಮೊದಲಾದ ಲೋಹಗಳನ್ನೂ ಪೆಟ್ರೋಲ್ ಸಂಬಂಧವಾದ ತೈಲಗಳನ್ನೂ ಆಮದು ಮಾಡಿಕೊಳ್ಳಲು ವಿದೇಶೀ ವಿನಿಮಯ ಹಣ ಬೇಕಾಗುತ್ತದೆ. ಇದನ್ನು ಸಂಪಾದಿಸಲು ಕಬ್ಬಿಣದ ಅದುರಿನ ರಫ್ತಿನಷ್ಟು ಅನುಕೂಲ ಮಾರ್ಗ ಬೇರೊಂದಿಲ್ಲ. ಪ್ರತಿವರ್ಷವೂ ಕಬ್ಬಿಣದ ಅದುರಿನ ರಫ್ತಿನಿಂದ ಎಂಬತ್ತಾರು ಕೋಟಿ ರೂಪಾಯಿ ವಿದೇಶೀ ವಿನಿಮಯ ಹಣವನ್ನು ಗಳಿಸಲಾಗುತ್ತಿದೆ. ರಫ್ತು ಕೈಗಾರಿಕೆ ಬೆಳೆಯುವುದರಿಂದ ಕೈಗಾರಿಕಾ ಪ್ರಗತಿಗೆ ಅತ್ಯಾವಶ್ಯಕವಾದ ರೈಲುಮಾರ್ಗಗಳೂ ಬಂದರುಗಳು ಅಭಿವೃದ್ಧಿಯಾಗುತ್ತವೆ.

1976ರ ಸುಮಾರಿಗೆ ಕಬ್ಬಿಣದ ಅದುರಿನ ಉತ್ಪಾದನೆ ಎಷ್ಟರ ಮಟ್ಟಿಗೆ ಏರಬೇಕು? ಸ್ವಂತ ಬಳಕೆಗೆ ಎಷ್ಟು, ರಫ್ತು ಮಾರಾಟಕ್ಕೆ ಎಷ್ಟು ಎನ್ನುವ ಅಂದಾಜನ್ನು ಈ ರೀತಿ ರೂಪಿಸಲಾಗಿದೆ (ಅಂಕಿಗಳು ಮಿಲಿಯನ್ ಟನ್‌ಗಳನ್ನು ಸೂಚಿಸುತ್ತವೆ).

| | 1965–66 | 70–71 | 75–76 |
|---|---|---|---|
| ಸ್ವಂತ ಬಳಕೆಗೆ | 14.0 | 34.0 | 55.0 |
| ರಫ್ತು ಮಾರಾಟಕ್ಕೆ | 12.0 | 25.0 | 35.0 |
| | 26.0 | 59.0 | 90.0 |

ಕೆಳಗಿನ ಪಟ್ಟಿಯಲ್ಲಿ ಯಾವ ಯಾವ ಅದುರು ನಿಕ್ಷೇಪಗಳಿಂದ ಎಷ್ಟೆಷ್ಟು ಪ್ರಮಾಣದ ಅದುರನ್ನು ಉತ್ಪಾದಿಸಿ ಯಾವ ಯಾವ ಬಂದರುಗಳ ಮೂಲಕ ರಫ್ತು ಮಾಡಬೇಕು ಎನ್ನುವುದನ್ನು ಸೂಚಿಸಿದೆ. ಈ ಅಂದಾಜನ್ನು ಅನುಸರಿಸಿಯೇ ಬಂದರುಗಳ ಅಭಿವೃದ್ಧಿಕಾರ್ಯವನ್ನು ತೆಗೆದುಕೊಳ್ಳಲಾಗಿದೆ.

| ಬಂದರು | ಬಾರ ಜಮ್ದ | ದಮೌರಿ | ಬೈಲ ದಿಲ | ಗೋವ | ಬಳ್ಳಾರಿ ಹೊಸ ಪೇಟೆ | ದಕ್ಷಿಣ ಮೈಸೂರು | ಒಟ್ಟು |
|---|---|---|---|---|---|---|---|
| ವಿಶಾಖಪಟ್ಟಣ | ... | ... | 6 | ... | ... | ... | 6 |
| ಮದರಾಸು | ... | ... | ... | ... | 3 | ... | 3 |
| ಮಾರ್ಮಗೋವ | ... | ... | ... | 6 | 4 | ... | 10 |
| ಸರದೀಪ | ... | 2 | ... | ... | ... | ... | 2 |
| ಹಾಲ್ದಿಯ | 2 | ... | ... | ... | ... | ... | 2 |
| ಮಂಗಳೂರು | ... | ... | ... | ... | ... | 2 | 2 |
| ಕಡಲೂರು | ... | ... | ... | ... | 0.5 | ... | 0.5 |
| ಕಾರವಾರ | ... | ... | ... | ... | 0.5 | ... | 0.5 |
| | 2.0 | 2.0 | 6.0 | 6.0 | 8.0 | 2.0 | 26.0 |

(ಬಿ. ಪಿ. ಆರ್.)

**ಕಬ್ಬಿಣದ ಮಿಶ್ರಲೋಹಗಳು :** ಕಬ್ಬಿಣವನ್ನು ಬೇರೆ ಬೇರೆ ಧಾತುಗಳೊಡನೆ ಲೀನ ಮಾಡಿ ತಯಾರಿಸಿದ ಮಿಶ್ರಲೋಹಗಳು (ಫೆರೊ ಅಲಾಯ್ಸ್). ಲೀನ ವಸ್ತುಗಳಲ್ಲಿ ಮುಖ್ಯವಾದವು ಮ್ಯಾಂಗನೀಸ್, ನಿಕ್ಕಲ್, ಕ್ರೋಮಿಯಂ, ಟಂಗ್‍ಸ್ಟನ್, ಸಿಲಿಕಾನ್, ತಾಮ್ರ, ವೆನೇಡಿಯಂ ಮತ್ತು ಮಾಲಿಬ್ಡಿನಂ. ಸಾಧಾರಣವಾಗಿ ಕಬ್ಬಿಣದ ಎಲ್ಲ ಮಿಶ್ರಲೋಹಗಳಲ್ಲಿಯೂ ಇಂಗಾಲ ಇದ್ದೇ ಇರುತ್ತದೆ. ಅದರ ಅಂಶ 0.1%ಕ್ಕಿಂತ ಹೆಚ್ಚು ಇರುವಾಗ ಆ ಮಿಶ್ರಲೋಹವನ್ನು ಉಕ್ಕಿನ ಮಿಶ್ರಲೋಹವೆಂದೂ ಕಡಿಮೆ ಇರುವಾಗ ಮಾತ್ರ ಕಬ್ಬಿಣದ ಮಿಶ್ರಲೋಹವೆಂದೂ ಕರೆಯುವುದು ವಾಡಿಕೆ. ಕಬ್ಬಿಣದ ಮಿಶ್ರಲೋಹದಲ್ಲಿರುವ ಧಾತುಗಳು ಕಬ್ಬಿಣದಲ್ಲಿ ಇಲ್ಲವೇ ಕಬ್ಬಿಣದ ಕಾರ್ಬೈಡಿನಲ್ಲಿ ವಿಲೀನಗೊಂಡು ಅಥವಾ ಕಬ್ಬಿಣದಲ್ಲಿರುವ ಇಂಗಾಲದ ಜೊತೆ ವಿಲೀನಗೊಂಡು ಮಿಶ್ರಲೋಹಗಳಾಗುತ್ತವೆ. ಕೋಬಾಲ್ಟ್ ಮತ್ತು ನಿಕ್ಕಲುಗಳು ಸ್ವಂತರೂಪದಲ್ಲಿಯೇ ಕಬ್ಬಿಣದಲ್ಲಿ ವಿಲೀನಗೊಂಡಿರುವುವು. ಮ್ಯಾಂಗನೀಸ್, ಕ್ರೋಮಿಯಂ, ಟಂಗ್‍ಸ್ಟನ್, ವೆನೆಡಿಯಂ ಮತ್ತು ಮಾಲಿಬ್ಡಿನಂಗಳು ಸ್ವಂತರೂಪದಲ್ಲಿ ಅಥವಾ ಕಾರ್ಬೈಡುಗಳಾಗಿ ಕಬ್ಬಿಣ ಅಥವಾ ಕಬ್ಬಿಣದ ಕಾರ್ಬೈಡಿನಲ್ಲಿ ವಿಲೀನಗೊಳ್ಳುತ್ತವೆ.

ಉಕ್ಕು ಮತ್ತು ಅದರ ಮಿಶ್ರಲೋಹಗಳನ್ನು ತಯಾರಿಸುವುದರ ಸಲುವಾಗಿ ಕಬ್ಬಿಣದ ಮಿಶ್ರಲೋಹಗಳನ್ನು ಉಪಯೋಗಿಸುತ್ತಾರೆ. ಉಕ್ಕಿನ ಮಿಶ್ರಲೋಹಗಳ ತಯಾರಿಕೆಯಲ್ಲಿ ಮೇಲೆ ಹೇಳಿರುವ ಮ್ಯಾಂಗನೀಸ್ ಮುಂತಾದ ಧಾತುಗಳನ್ನು ದ್ರವಿಸಿದ ಉಕ್ಕಿನೊಡನೆ ನೇರವಾಗಿ ಲೀನಗೊಳಿಸುವಂತಿಲ್ಲ. ಇಲ್ಲಿ ಕಬ್ಬಿಣದ ಮಿಶ್ರಲೋಹ ಅತ್ಯುಪಯುಕ್ತವಾಗುವುದು.

ಉಕ್ಕಿನೊಡನೆ ನಿಕ್ಕಲನ್ನು ಲೀನಗೊಳಿಸಿ ತತ್ಸಂಬಂಧ ಉಕ್ಕಿನ ಮಿಶ್ರಲೋಹವನ್ನು ತಯಾರಿಸಬೇಕೆಂದು ಭಾವಿಸೋಣ. ಆಗ ದ್ರವಿಸಿದ ಉಕ್ಕಿಗೆ ಕಬ್ಬಿಣದ (ನಿಕ್ಕಲ್) ಮಿಶ್ರಲೋಹವನ್ನು ಲೀನಗೊಳಿಸುತ್ತಾರೆ. ಈ ಕ್ರಿಯೆಯಲ್ಲಿ ಕಬ್ಬಿಣದ ಮತ್ತು ಉಕ್ಕಿನಲ್ಲಿ ಸಹಜವಾಗಿಯೇ ಇರುವ ಕಲ್ಮಷಗಳೊಡನೆ ಧಾತುವಿನ (ನಿಕ್ಕಲ್)ಸ್ವಲ್ಪಾಂಶ ಬೆರೆತು ಕಿಟ್ಟರೂಪದಲ್ಲಿ ಪ್ರತ್ಯೇಕಗೊಂಡು ಹೊರಬರುತ್ತದೆ. ಉಳಿದ ಅಂಶ ಉಕ್ಕಿನೊಡನೆ ಲೀನಗೊಂಡು ಅದು ಘನೀಭವಿಸುವಾಗ ನಮಗೆ ಬೇಕಾದ ಉಕ್ಕಿನ ಮಿಶ್ರಲೋಹ ದೊರೆಯುವುದು.

ದೋಷಗಳು ಮತ್ತು ಅವುಗಳ ನಿರ್ಮೂಲನೆ : ಕಬ್ಬಿಣ ಮತ್ತು ಉಕ್ಕು ಇವುಗಳಲ್ಲಿ ಇಂಗಾಲದ ಜೊತೆಗೆ ಗಂಧಕ, ರಂಜಕ, ಆಮ್ಲಜನಕಗಳು ಕಲ್ಮಷ ರೂಪದಲ್ಲಿರುತ್ತವೆ. ಇದರಿಂದಾಗಿ ಕಬ್ಬಿಣ ಮತ್ತು ಉಕ್ಕಿನ ಯಾಂತ್ರಿಕ ಗುಣಲಕ್ಷಣಗಳಲ್ಲಿ ಬದಲಾವಣೆಗಳುಂಟಾಗುವುವು. ಆಮ್ಲಜನಕದಿಂದ ಉತ್ಪನ್ನವಾಗುವ ದೋಷಗಳನ್ನು ಮ್ಯಾಂಗನೀಸ್ ಅಥವಾ ಸಿಲಿಕಾನನ್ನು ಲೀನಗೊಳಿಸುವುದರಿಂದ ನಿರ್ಮೂಲಿಸಬಹುದು. ಈ ಎರಡೂ ಧಾತುಗಳು ಆಯಾ ಧಾತುಗಳ ಕಬ್ಬಿಣದ ಮಿಶ್ರಲೋಹಗಳ ರೂಪದಲ್ಲಿ ಉಕ್ಕಿನಲ್ಲಿ ಲೀನವಾಗುತ್ತವೆ. ಗಂಧಕ ಮತ್ತು ರಂಜಕಗಳಿಂದ ಉಕ್ಕಿನಲ್ಲಿ ಪೆಡುಸುತನ ಉಂಟಾಗುವುದು. ಗಂಧಕದ ದೋಷಗಳನ್ನು ನಿರ್ಮೂಲಿಸಲು ಮ್ಯಾಂಗನೀಸನ್ನೂ ರಂಜಕದ ದೋಷಗಳನ್ನು ನಿರ್ಮೂಲಿಸಲು ಮ್ಯಾಂಗನೀಸ್, ನಿಕ್ಕಲ್, ತಾಮ್ರ, ಟಂಗ್‍ಸ್ಟನ್ ಸಿಲಿಕಾನ್ ಇವುಗಳ ಪೈಕಿ ಯಾವುದೇ ಎರಡನ್ನೂ ಕಬ್ಬಿಣದ ಮಿಶ್ರಲೋಹದ ರೂಪದಿಂದ ಉಕ್ಕಿನಲ್ಲಿ ಲೀನಗೊಳಿಸುತ್ತಾರೆ.

ತಯಾರಿಕೆಯ ವಿಧಾನಗಳು : ಕಬ್ಬಿಣದ ಮಿಶ್ರಲೋಹಗಳನ್ನು ತಯಾರಿಸುವ ವಿಧಾನಗಳಲ್ಲಿ ಕೆಳಗಿನವು ಮುಖ್ಯವಾದವು.

1 ಕಬ್ಬಿಣ ಮತ್ತು ಬೇಕಾದ ಧಾತು ಇವೆರಡನ್ನು ಬೇಕಾದ ಭಾಗದಲ್ಲಿ ತೂಕ ಮಾಡಿ ಒಟ್ಟುಗೂಡಿಸಿ ಮೂಸೆಯಲ್ಲಿ ಕರಗಿಸುವುದು.

2 ಹೆಚ್ಚು ಉಷ್ಣತೆಗೆ ಕರಗುವ ಧಾತುವನ್ನು ಕರಗಿಸಿ ಅದಕ್ಕೆ ಕಡಿಮೆ ಉಷ್ಣತೆಗೆ ಕರಗುವ ಧಾತುವನ್ನು ಲೀನಗೊಳಿಸಿ ಮಿಶ್ರಲೋಹವನ್ನು ತಯಾರಿಸುವುದು.

3 ಕಬ್ಬಿಣದ ಅದುರು ಮತ್ತು ಬೇರೆ ಧಾತುವಿನ ಅದುರು ಇವನ್ನು ಮಿಶ್ರಣ ಮಾಡಿ ಅವನ್ನು ಒಟ್ಟುಗೂಡಿಸಿ ಅಪಕರ್ಷಿಸಿ ಮಿಶ್ರಲೋಹವನ್ನು ತಯಾರಿಸುವುದು.

4 ಕಬ್ಬಿಣದ ಒಂದು ಸಂಯುಕ್ತದ ದ್ರಾವಣ ಮತ್ತು ಬೇರೆ ಒಂದು ಧಾತುವಿನ ಸಂಯುಕ್ತದ ದ್ರಾವಣ ಮಿಶ್ರಣವನ್ನು ತಯಾರಿಸಿ ಈ ಮಿಶ್ರಣದಿಂದ ಎರಡೂ ಧಾತುಗಳ ವಿದ್ಯುನ್ನಿಕ್ಷೇಪ ಮಾಡಿ ಮಿಶ್ರಲೋಹವನ್ನು ತಯಾರಿಸುವುದು.

ಗುಣಲಕ್ಷಣಗಳು ಮತ್ತು ಉಪಯೋಗಗಳು : ಕೆಲವು ಮುಖ್ಯವಾದ ಕಬ್ಬಿಣದ ಮಿಶ್ರಲೋಹಗಳು ಅವುಗಳ ಗುಣಲಕ್ಷಣಗಳು ಮತ್ತು ಕೈಗಾರಿಕೆಯ ಕ್ಷೇತ್ರದಲ್ಲಿ ಅವುಗಳ ಉಪಯೋಗಗಳನ್ನು ಮುಂದೆ ಬರೆದಿದೆ.

1 ಫೆರೊ ಬೊರಾನ್ : ಉಕ್ಕಿನ ತಯಾರಿಕೆಯಲ್ಲಿ ಆಮ್ಲಜನಕವನ್ನು ನಿರ್ಮೂಲಿಸಲು ಮತ್ತು ಉಕ್ಕಿನ ಕಾಠಿನ್ಯವನ್ನು ಹೆಚ್ಚಿಸಲು ಇದರ ಉಪಯೋಗವಿದೆ.

2 ಫೆರೊ ಕ್ರೋಮಿಯಂ : ಉಕ್ಕಿಗೆ ಕ್ರೋಮಿಯಮನ್ನು ಲೀನಗೊಳಿಸುವುದರ ಸಲುವಾಗಿ ಇದರ ಉಪಯೋಗವಿದೆ. ಇದರಿಂದ ಉಕ್ಕಿನ ಕಾಠಿನ್ಯ ಹೆಚ್ಚಾಗಿ ಅದು ತುಕ್ಕು ನಿರೋಧಕವಾಗುತ್ತದೆ. ಇಂಥ ಉಕ್ಕನ್ನು ತಿಜೋರಿ, ಚಿಜ್ಜುವ ಯಂತ್ರ ಮುಂತಾದ ಔದ್ಯೋಗಿಕ ಉಪಕರಣಗಳನ್ನು ಮತ್ತು ಸ್ಟೇನ್‍ಲೆಸ್ ಸ್ಟೀಲ್ ತಯಾರಿಸಲು ಉಪಯೋಗಿಸುತ್ತಾರೆ.

3 ಫೆರೊ ಮ್ಯಾಂಗನೀಸ್ : ಉಕ್ಕಿಗೆ ಮ್ಯಾಂಗನೀಸನ್ನು ಲೀನಗೊಳಿಸುವುದರ ಸಲುವಾಗಿ ಇದನ್ನು ಉಪಯೋಗಿಸುತ್ತಾರೆ. ಇದು ಉಕ್ಕಿನಲ್ಲಿಯ ಗಂಧಕ ಮತ್ತು ಆಮ್ಲಜನಕದಿಂದ ಉಂಟಾದ ದೋಷಗಳನ್ನು ನಿರ್ಮೂಲಿಸುತ್ತದೆ. ಇದನ್ನು ಉಕ್ಕಿಗೆ ಲೀನ ಮಾಡುವುದರಿಂದ, ಉಕ್ಕಿನ ಕಾಠಿನ್ಯ ಮತ್ತು ಧಾರಣಸಾಮರ್ಥ್ಯ ಬೆಳೆಯುತ್ತವೆ. ಇಂಥ ಉಕ್ಕನ್ನು ಶಿರಸ್ತ್ರಾಣ, ಯುದ್ಧಕವಚ ಮುಂತಾದುವುಗಳನ್ನು ತಯಾರಿಸುವುದಕ್ಕಾಗಿ ಉಪಯೋಗಿಸುತ್ತಾರೆ.

4 ಫೆರೊ ಟಂಗ್‍ಸ್ಟನ್ ಮತ್ತು ಫೆರೊ ಮಾಲಿಬ್ಡಿನಂ : ಉಕ್ಕಿಗೆ ಟಂಗ್‍ಸ್ಟನ್ ಮತ್ತು ಮಾಲಿಬ್ಡಿನಮ್ ಲೀನಗೊಳಿಸುವುದರ ಸಲುವಾಗಿ ಇವನ್ನು ಉಪಯೋಗಿಸುತ್ತಾರೆ. ಇವುಗಳ ಮಿಶ್ರಣದಿಂದ ಉಕ್ಕಿಗೆ ಕಾಠಿನ್ಯ ಬರುತ್ತದೆ. ಇಂಥ ಉಕ್ಕನ್ನು ಕೊಯ್ಯುವ ಉಪಕರಣ ಮತ್ತು ಬೈರಿಗೆಗಳನ್ನು ಮಾಡಲು ಉಪಯೋಗಿಸುತ್ತಾರೆ.

5 ಫೆರೊ ಕೊಬಾಲ್ಟ್ : ಉಕ್ಕಿಗೆ ಕೊಬಾಲ್ಟನ್ನು ಲೀನಮಾಡುವುದರ ಹಾಗೂ ಶಾಶ್ವತಕಾಂತತೆ ನೀಡುವುದರ ಸಲುವಾಗಿ ಈ ಮಿಶ್ರಲೋಹವನ್ನು ಉಪಯೋಗಿಸುತ್ತಾರೆ.

ಫೆರೊ ಸಿಲಿಕಾನ್: ಈ ಮಿಶ್ರಲೋಹದ ಮೇಲೆ ಆಮ್ಲದ ಕ್ರಿಯೆ ಆಗುವುದಿಲ್ಲ. ಆಮ್ಲಗಳನ್ನು ಇಡುವ ಪಾತ್ರೆಗಳನ್ನು ಮಾಡುವುದರ ಸಲುವಾಗಿ ಇದನ್ನು ಉಪಯೋಗಿಸುತ್ತಾರೆ.

(ಎಸ್.ಪಿ.ಡಬ್ಲ್ಯು.)

**ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆ (ಭಾರತದಲ್ಲಿ) :** ಭಾರತದಲ್ಲಿ ಕಬ್ಬಿಣದ ಕೈಗಾರಿಕೆ ಮೂರು ಸಾವಿರ ವರ್ಷಗಳಿಗೂ ಹಿಂದಿನದು. ಇಲ್ಲಿ ತಯಾರಾದ ಉಕ್ಕು ಅನೇಕ ದೇಶಗಳಿಗೆ ರಫ್ತಾಗುತ್ತಿತ್ತು. 19ನೆಯ ಶತಮಾನದ ಸುಮಾರಿಗೆ ದೇಶದಲ್ಲಿದ್ದ ಕುಲುಮೆಗಳೆಲ್ಲವೂ ತಣ್ಣಗಾಗಿ ಹೋದುವು. ಅಲ್ಪಸ್ವಲ್ಪ ಉತ್ಪಾದನೆ ಮಾತ್ರ ಆಗುತ್ತಿತ್ತು. ಬ್ರಿಟಿಷರು ದೇಶವನ್ನು ಆಕ್ರಮಿಸಿಕೊಂಡ ಮೇಲೆ ಶಾಂತಿ ನೆಲೆಸಿತು ; ಹೊರಗಡೆಯಿಂದ ಸುಲಭದರದಲ್ಲಿ ಹೇರಳವಾಗಿ ಕಬ್ಬಿಣ ಈ ದೇಶಕ್ಕೆ ಬರತೊಡಗಿದಂತೆ ನಾಡ ಕೈಗಾರಿಕೆ ಪೈಪೋಟಿಯನ್ನು ಎದುರಿಸಲಾಗದೆ ಮೂಲೆ ಪಾಲಾಯಿತು.

ಈಚೆಗೆ ಮತ್ತೆ ಕಬ್ಬಿಣದ ಕೈಗಾರಿಕೆ ದೇಶದಲ್ಲಿ ತಲೆಯೆತ್ತಲು ಕಾರಣರಾದವರು ಸುಪ್ರಸಿದ್ಧರಾದ ಜೆಮ್‍ಶೇಟ್‍ಜಿ ನಸರವಾನ್‍ಜಿ ಟಾಟಾ. ಅವರು 1899ರಲ್ಲಿ ಉಕ್ಕಿನ ತಯಾರಿಕೆಗೆ ಒಂದು ಬೃಹತ್ ಯೋಜನೆಯನ್ನು ಸಿದ್ಧಪಡಿಸಿದರು. 1906ರಲ್ಲಿ ಬಿಹಾರದ ಸಾಕ್ಚಿಯ (ಈಗಿನ ಜಮ್‍ಷಡ್‍ಪುರ) ಬಳಿ ಟಾಟಾ ಐರನ್ ಅಂಡ್ ಸ್ಟೀಲ್ ಕಂಪನಿ (TISCO) ಎಂಬ ನಾಮದಿಂದ ಕೈಗಾರಿಕೆ ಮೊದಲು ಸ್ಥಾಪಿತವಾಯಿತು. ಮೊದಲ ಮೂವತ್ತು ವರ್ಷಗಳ ಕಾಲದಲ್ಲಿ ಬೆಳೆಯುತ್ತ ಮುಂದೆ ಇನ್ನಷ್ಟು ವಿಸ್ತೃತವಾಗಿ 1939ರ ಹೊತ್ತಿಗೆ ಬ್ರಿಟಿಷ್ ರಾಜ್ಯದಲ್ಲೇ ಅತಿದೊಡ್ಡದಾದ ಯಂತ್ರಾಗಾರವೆನ್ನುವ ಪ್ರಶಸ್ತಿಯನ್ನು ಇದು ಗಳಿಸಿತು. 1918ರ ಕಲ್ಕತ್ತ ನಗರದಲ್ಲಿನ ಕೆಲವು ಮುಖ್ಯ ವ್ಯಾಪಾರಿಗಳು ಸೇರಿ ಇಂಡಿಯನ್ ಐರನ್ ಅಂಡ್ ಸ್ಟೀಲ್ ಕಂಪನಿ (IISCO) ಎಂಬ ಹೆಸರಿನಲ್ಲಿ ಬಂಗಾಳದಲ್ಲಿರುವ ಬರ್ನ್‍ಪುರದ ಹತ್ತಿರ ಇನ್ನೊಂದು ಕೈಗಾರಿಕೆಯನ್ನು ಸ್ಥಾಪಿಸಿದರು. ಇಲ್ಲಿ ಮೊದಲು ಬೀಡು ಕಬ್ಬಿಣ ತಯಾರಾಗುತ್ತಿದ್ದು 1939ರಲ್ಲಿ ಉಕ್ಕಿನ ಉತ್ಪಾದನೆ ಮೊದಲಾಯಿತು.

ಇದೇ ಸುಮಾರಿಗೆ ಆಧುನಿಕ ಮೈಸೂರಿನ ನಿರ್ಮಾಪಕರಾದ ಸರ್ ಎಂ. ವಿಶ್ವೇಶ್ವರಯ್ಯನವರು ದಿಟ್ಟತನದಿಂದ ಮೈಸೂರಿನಲ್ಲಿಯೂ ಒಂದು ಕಬ್ಬಿಣದ ಕುಲುಮೆಯನ್ನು ಸ್ಥಾಪಿಸಿದರು. ಕಲ್ಲಿದ್ದಲು ದೊರೆಯದೆ ಹೋದ ಕಾರಣ ಮರಸುಟ್ಟ ಇದ್ದಲನ್ನು ಅವಲಂಬಿಸಿಯೇ ಇಲ್ಲಿ ಬೀಡುಕಬ್ಬಿಣವನ್ನು ತಯಾರಿಸಲಾಗುತ್ತಿತ್ತು. 1925ರಲ್ಲಿ ಉಕ್ಕಿನ ತಯಾರಿಕೆ ಮೊದಲಾಯಿತು. ಎರಡನೆಯ ಮಹಾಯುದ್ಧದಿಂದೀಚೆಗೆ ವಿದ್ಯುಚ್ಛಕ್ತಿಯ ಉಪಯೋಗದಿಂದ ಬೀಡುಕಬ್ಬಿಣ ತಯಾರಾಗುತ್ತಿದೆ. ಅನೇಕ ಬಗೆಯ ಮಿಶ್ರಲೋಹಗಳ ತಯಾರಿಕೆಗೂ ಭದ್ರಾವತಿ ಪ್ರಸಿದ್ಧಿಯಾಗಿದೆ.

1954 ರಿಂದೀಚೆಗೆ ದೇಶದಲ್ಲಿ ಉಕ್ಕಿನ ಬಳಕೆ ಹೆಚ್ಚುತ್ತ ಹೋಗಿ ಹೇರಳವಾಗಿ ಉಕ್ಕನ್ನು ಆಮದು ಮಾಡಿಕೊಳ್ಳಬೇಕಾದ ಪರಿಸ್ಥಿತಿ ಒದಗಿತು. ಇದನ್ನು ಸರಿಪಡಿಸಲು ಮತ್ತು ಕೈಗಾರಿಕೆ ಯಾವ ರೀತಿ ಮುಂದುವರಿಯಬೇಕೆನ್ನುವ ರೂಪುರೇಷೆಯನ್ನು ಗುರುತಿಸಲು ತಜ್ಞರ ಮಂಡಳಿಯೊಂದನ್ನು ಭಾರತ ಸರ್ಕಾರ ನೇಮಿಸಿತು. 1946ರಲ್ಲಿ ಈ ಸಮಿತಿ ವರ್ಷಂಪ್ರತಿ 5 ಲಕ್ಷ ಟನ್ ಉತ್ಪಾದಿಸುವ ಎರಡು ಹೊಸ ಸ್ಥಾವರಗಳನ್ನು ಕಟ್ಟಬೇಕೆಂದು ಸಲಹೆ ಮಾಡಿತು. ಅದರ ಸಲಹೆ ಕಾರ್ಯಗತವಾಗಲು ಬಹಳ ಕಾಲ ಹಿಡಿಯಿತು. 1953ರಲ್ಲಿ ಜರ್ಮನ್ ಕಂಪನಿಯೊಂದು ಒರಿಸ್ಸದ ರೂರ್ಕೆಲಾ ಬಳಿ ಒಂದು ಕಾರ್ಖಾನೆಯನ್ನು ಕಟ್ಟಲು ಒಪ್ಪಿತು. 1955ರಲ್ಲಿ ಸೋವಿಯತ್ ಸರ್ಕಾರ ಮಧ್ಯ ಪ್ರದೇಶದ ಭಿಲೈ ಬಳಿ ದೊಡ್ಡ ಉಕ್ಕು ಉತ್ಪಾದಿಸುವ

ಯಂತ್ರವನ್ನು ಕಟ್ಟಲು ಮುಂದೆ ಬಂತು. ಅದೇ ವರ್ಷ ಬ್ರಿಟಿಷ್ ಕಂಪನಿಗಳು ಕೆಲವು ಸೇರಿ ಪಶ್ಚಿಮ ಬಂಗಾಳದ ದುರ್ಗಾಪುರದ ಬಳಿ ಇನ್ನೊಂದು ಉಕ್ಕಿನ ಯಂತ್ರವನ್ನು ಸ್ಥಾಪಿಸಲು ಒಪ್ಪಂದ ಮಾಡಿಕೊಂಡುವು. ಈ ಮೂರು ಯಂತ್ರ ಸ್ಥಾವರಗಳಿಗೆ ಬೇಕಾದ ವಿದೇಶೀ ವಿನಿಮಯ ಹಣವನ್ನು ಕೊಡಲು ಜರ್ಮನ್ ಸೋವಿಯತ್ ಮತ್ತು ಬ್ರಿಟಿಷ್ ಸರ್ಕಾರಗಳು ಒಪ್ಪಿದುವು. ಈ ರೀತಿಯಾಗಿ ಮೂರು ಮುಖ್ಯ ಯಂತ್ರಸ್ಥಾವರಗಳು ಎರಡನೆ ಯೋಜನೆಯ ಅವಧಿಯಲ್ಲಿ (1956–61) ದೇಶದ ನಾನಾ ಭಾಗಗಳಲ್ಲಿ ಅಸ್ತಿತ್ವಕ್ಕೆ ಬಂದವು. ಈ ಮೂರೂ ಸರ್ಕಾರಿ ಸಂಸ್ಥೆಗಳಾಗಿ ರೂಪಗೊಂಡುವು. ಮೂರನೆಯ ಯೋಜನೆಯ ಅವಧಿಯಲ್ಲಿ ಇವೆಲ್ಲ ಸ್ಥಾವರಗಳಲ್ಲಿಯೂ ಉತ್ಪಾದನೆ ಹೆಚ್ಚಿದುದಲ್ಲದೆ ಬೊಕಾರೊ ಬಳಿ ಹೊಸದೊಂದು ಕಬ್ಬಿಣ ಕುಲುಮೆಯನ್ನು ಕಟ್ಟುವ ಕೆಲಸ ಮಾಡಲಾಯಿತು. ಎಲ್ಲ ಸ್ಥಾವರಗಳು ಉತ್ತರ ಭಾರತದಲ್ಲಿಯೇ ಕೇಂದ್ರೀಕೃತವಾದ ಕಾರಣ ದಕ್ಷಿಣದಲ್ಲಿ ಒಂದು ಬೃಹತ್ ಪ್ರಮಾಣದ ಕಬ್ಬಿಣ ಕೈಗಾರಿಕೆಯನ್ನು ನಾಲ್ಕನೆ ಯೋಜನೆ ಅವಧಿಯಲ್ಲಿ ನಿರ್ಮಿಸಬೇಕೆಂದು ಸೂಚಿಸಲಾಯಿತು. ಬಳ್ಳಾರಿ ಜಿಲ್ಲೆಯ ಹೊಸಪೇಟೆಯಲ್ಲೂ ಆಂಧ್ರ ಪ್ರದೇಶದ ವಿಶಾಖಪಟ್ಟಣದಲ್ಲಿಯೂ ತಮಿಳು ನಾಡಿನ ಸೇಲಂ ನಲ್ಲಿಯೂ ಶಲಾ ಒಂದೊಂದು ಕಾರ್ಖಾನೆಯನ್ನು ಸ್ಥಾಪಿಸಲು ಕೇಂದ್ರ ಸರ್ಕಾರ ಮಂಜೂರಾತಿ ನೀಡಿದೆ.

ಎರಡು, ಮೂರು ಮತ್ತು ನಾಲ್ಕನೆಯ ಪಂಚವಾರ್ಷಿಕ ಯೋಜನೆಗಳ ಅವಧಿಯಲ್ಲಿ ಎಲ್ಲೆಲ್ಲಿ ಮತ್ತು ಎಷ್ಟೆಷ್ಟು ಪ್ರಮಾಣದಲ್ಲಿ ಉಕ್ಕನ್ನು ತಯಾರಿಸಬೇಕೆನ್ನುವ ಅಂದಾಜನ್ನು ಕೆಳಗಿನ ಪಟ್ಟಿಯಲ್ಲಿ ತೋರಿಸಿದೆ.

ಅಂಕಿಗಳು ಮಿಲಿಯನ್ ಟನ್‌ಗಳನ್ನು ಸೂಚಿಸುತ್ತವೆ.

| | ಎರಡನೆಯ ಯೋಜನೆ 1956–61 | ಮೂರನೆಯ ಯೋಜನೆ 1961–64 | ನಾಲ್ಕನೆಯ ಯೋಜನೆ ತಾತ್ಕಾಲಿಕ |
|---|---|---|---|
| ಖಾಸಗಿ ವಲಯ | | | |
| ತಾತಾ ಐರನ್ ಅಂಡ್ ಸ್ಟೀಲ್ ಕಂಪನಿ | 2.00 | 2.00 | 2.00 |
| ಇಂಡಿಯನ್ ಐರನ್ ಅಂಡ್ ಸ್ಟೀಲ್ ಕಂಪನಿ | 1.00 | 1.00 | 2.00 |
| ಸರ್ಕಾರಿ ವಲಯ | | | |
| ರೂರ್‌ಕೆಲ | 1.00 | 1.80 | 2.50 |
| ಭಿಲಾಯ್ | 1.00 | 2.50 | 3.50 |
| ದುರ್ಗಾಪುರ | 1.00 | 1.60 | 3.40 |
| ಬೊಕಾರೊ | ... | 1.00 | 1.70 |
| ಹೊಸದು (ದಕ್ಷಿಣದಲ್ಲಿ) | ... | ... | 1.50 |
| | 6.00 | 9.90 | 16.60 |

ದೇಶ ಪ್ರಗತಿ ಪಥದಲ್ಲಿ ಮುಂದುವರಿಯುವುದಕ್ಕೆ ದಕ್ಷ ಆಡಳಿತ ಹೇಗೆ ಮುಖ್ಯವೋ, ಆ ದೇಶದಲ್ಲಿನ ಖನಿಜ ಸಂಪತ್ತೂ ಅಷ್ಟೇ ಮುಖ್ಯ. ಪ್ರಕೃತಿದತ್ತವಾದ ಈ ಸಂಪತ್ತನ್ನು ಯಾವರೀತಿ ಉಪಯೋಗಿಸಿಕೊಂಡು ದೇಶದ ಆಡಳಿತವನ್ನು ಸುಭದ್ರವಾದ ತಳಹದಿಯ ಮೇಲೆ ಕಟ್ಟಿ ಪ್ರಗತಿಪಥದಲ್ಲಿ ಮುಂದೆ ತೆಗೆದುಕೊಂಡು ಹೋಗಬೇಕೆನ್ನುವುದಕ್ಕೆ ಕಬ್ಬಿಣ ಮತ್ತು ಉಕ್ಕಿನ ಕೈಗಾರಿಕೆಯ ಬೆಳವಣಿಗೆಗಿಂತ ಬೇರೆ ಉತ್ತಮ ನಿದರ್ಶನ ಸಿಕ್ಕಲಾರದು. ಜಪಾನ್ ದೇಶ ತನ್ನಲ್ಲಿ ಕಬ್ಬಿಣದ ಅದುರು ಲವಲೇಶ ಇಲ್ಲದಿದ್ದರೂ ಪ್ರಪಂಚದಲ್ಲೇ ಹಿರಿದಾದ ಕಬ್ಬಿಣ ಕೈಗಾರಿಕೆಯನ್ನು ಸ್ಥಾಪಿಸಿ, ನಾಗರಿಕ ಜನಾಂಗಗಳಲ್ಲಿ ಬಹು ಮುಂದುವರಿದ ರಾಷ್ಟ್ರವೆಂದು ಹೆಸರುಗಳಿಸಿದೆ. ಪ್ರಪಂಚದ ಯಾವ ರಾಷ್ಟ್ರಕ್ಕೂ ಕಡಿಮೆ ಇಲ್ಲದಂತೆ ಖನಿಜಸಂಪತ್ತನ್ನು ಪಡೆದಿರುವ ಭಾರತ ದೇಶವೂ ಕಬ್ಬಿಣ ಕೈಗಾರಿಕೆಯಲ್ಲಿ ಹಿರಿಮೆಯ ಸ್ಥಾನವನ್ನು ಗಳಿಸಿ ಮುಂದುವರಿಯುವಂತಾಗಬೇಕು. (ಬಿ.ಪಿ.ಆರ್.)

**ಕಬ್ಬಿಣ ಯುಗ:** ಗ್ರೀಕ್ ಪುರಾಣಗಳ ಪ್ರಕಾರ ಮಾನವ ಯುಗಗಳ ಪೈಕಿ ಕೊನೆಯದು. ಪುರಾತತ್ತ್ವದೃಷ್ಟಿಯಿಂದ ಕೂಡ ಇದು ಕಲ್ಲಿನ ಮತ್ತು ಕಂಚಿನ ಯುಗಗಳ ಅನಂತರದ, ಕೊನೆಯ ಆದರೂ ಪ್ರಮುಖವಾದ, ಯುಗ. ಪ್ರಾಚ್ಯವಸ್ತು ಸಂಶೋಧಕರು ಪ್ರಾಚೀನ ಸಾಂಸ್ಕೃತಿಕ ನಿವೇಶನಗಳನ್ನು ಶೋಧಮಾಡಿ ಅವುಗಳ ಶಾಸ್ತ್ರೀಯ ಅಗೆತಗಳಿಂದ ದೊರೆತ ಅವಶೇಷಗಳ ಪರೀಕ್ಷೆಯಿಂದ ಮಾನವನ ಈ ನಾನಾ ಸಂಸ್ಕೃತಿಗಳ ಯುಗಗಳನ್ನು ಗುರುತಿಸಿದ್ದಾರೆ. ಆಯಾ ಸಂಸ್ಕೃತಿಗಳ ವಿಶಿಷ್ಟ ಲಕ್ಷಣಗಳಿಂದ ಜಾಗತಿಕ ಸಂಸ್ಕೃತಿ ವನ್ಯಸ್ಥಿತಿಯಿಂದ ಕ್ರಮೇಣ ಕಬ್ಬಿಣಯುಗಕ್ಕೆ ಮುಟ್ಟುವ ವೇಳೆಗೆ ಅತ್ಯುನ್ನತ ಮಟ್ಟವನ್ನು ಮುಟ್ಟಿತೆಂದು ಉತ್ಕ್ರಾಂತಿವಾದದ ತತ್ತ್ವದ ಆಧಾರದ ಮೇಲೆ ಪುರಾತಜ್ಞರು ಹೇಳುತ್ತಾರೆ. ಮೊದಲು ಮಾನವರು ಕಾಡುಗಲ್ಲುಗಳಿಂದ ಆಯುಧಗಳನ್ನು ಮಾಡಿ ಅವುಗಳಿಂದ ಬೇಟೆಯಾಡುತ್ತ, ಅಡವಿಯಲ್ಲಿ ಕಾಡುಮೃಗಗಳ ಜೊತೆಯಲ್ಲಿ ಇದ್ದು ತಮ್ಮ ಉಪಜೀವನ ಸಾಗಿಸುತ್ತಿದ್ದರು. ಮುಂದೆ ಅವರು ಕಲೆಗಳಲ್ಲಿ ನುರಿತು, ನುಣುಪಾದ ಕಲ್ಲಿನ ಸಾಮಗ್ರಿಗಳನ್ನು ಬಳಕೆಗೆ ತಂದುಕೊಂಡು ಜೀವನದ ಮಟ್ಟವನ್ನು ಹೆಚ್ಚಿಸಿಕೊಂಡರು. ಕಾಲಕ್ರಮದಲ್ಲಿ ಕಲ್ಲುಗಳಿಂದಲೂ ಖನಿಜಗಳಿಂದಲೂಧಾತುಗಳನ್ನು ಶೋಧಿಸಿ ಅವುಗಳಿಂದ ಬಗೆಬಗೆಯ ಉಪಕರಣಗಳನ್ನು ಮಾಡಿ ಉಪಯೋಗಿಸುವ ಕಾಲ ಪ್ರಾಪ್ತವಾಯಿತು. ಪಶ್ಚಿಮ ಏಷ್ಯ ಮತ್ತು ಆಗ್ನೇಯ ಏಷ್ಯಗಳಲ್ಲಿ ಕಬ್ಬಿಣ ಯುಗ ಸಂಪೂರ್ಣವಾಗಿ ಬಳಕೆಗೆ ಬಂದದ್ದು—ಕಂಚಿನ ಉಪಕರಣಗಳ ಮತ್ತು ಆಯುಧಗಳ ಬದಲು ಕಬ್ಬಿಣವೇ ಬಂದದ್ದು—ಕ್ರಿ.ಪೂ ಸುಮಾರು 1200ರಲ್ಲಿ. ಆದರೆ ಅದಕ್ಕೂ ಮುಂಚೆಯೂ ಕಬ್ಬಿಣದ ಬಳಕೆಯಿತ್ತು ಎಂದು ಹೇಳಲಾಗಿದೆ. ಆಗ ಬಳಕೆಯಲ್ಲಿದ್ದುದು ಬಹುತೇಕ ಉಲ್ಕಾಪಾತದ ಕಬ್ಬಿಣ. ಕಂದುಕಂಚಿನಿಂದ ಭಿನ್ನವಾದ ಕಬ್ಬಿಣದ ಗುಣಗಳ ಸ್ಪಷ್ಟ ಅರಿವು ಆಗಿನ ಜನಕ್ಕೆ ಇನ್ನೂ ಆಗಿರಲಿಲ್ಲ. ಪ್ರಯೋಗಗಳಿಂದಲೂ ಆಕಸ್ಮಾತ್ತಾಗಿಯೂ ಅವರು ಇವನ್ನು ಕ್ರಮೇಣ ಅರಿತುಕೊಂಡರು.

ಕಬ್ಬಿಣ ಯುಗೀನ ಸಂಸ್ಕೃತಿಯನ್ನು ಪೌರ್ವಾತ್ಯ ವಲಯದ ಪ್ರಾಕೃತಿಕ ಸಂಪತ್ತಿನಿಂದ ಮಾನವ ಸಾಧಿಸಿದ ಪುರೋಗಾಮಿತ್ವದ ಹೆಗ್ಗುರುತೆನ್ನಬಹುದು. ತಾಮ್ರದ ಅದುರಿಗಿಂತ ಕಬ್ಬಿಣದ ಅದುರು ಪ್ರಕೃತಿಯಲ್ಲಿ ಹೇರಳವಾಗಿ ಮತ್ತು ಹೆಚ್ಚು ಪ್ರದೇಶಗಳಲ್ಲಿ ದೊರಕುತ್ತಿದ್ದರೂ ತಾಮ್ರ–ಕಂಚುಗಳು ಬಳಕೆಗೆ ಬಂದ ಬಹು ಕಾಲಾನಂತರವೇ ಮೊತ್ತ ಮೊದಲಿಗೆ ಪಶ್ಚಿಮ ಏಷ್ಯದ ಕೆಲವು ಪ್ರದೇಶಗಳಲ್ಲಿ, ಮುಖ್ಯವಾಗಿ ಕಪ್ಪುಸಮುದ್ರದ ದಕ್ಷಿಣ ತೀರದಲ್ಲಿ, ಕಬ್ಬಿಣದ ಉಪಯೋಗವನ್ನು ಕಂಡು ಹಿಡಿದುದಾಗಿ ತಿಳಿದು ಬರುತ್ತದೆ. ಆಕಾಶದಿಂದ ಉಲ್ಕಾಪಾತಗಳ ರೂಪದಲ್ಲಿ ಬೀಳುತ್ತಿದ್ದ ಕಬ್ಬಿಣವನ್ನು ಆಭರಣ ವಸ್ತುಗಳನ್ನಾಗಿ ಮೆಸೊಪೊಟೇಮಿಯ, ಈಜಿಪ್ಟ್ ಮುಂತಾದ ಪ್ರಾಚೀನ ನಾಗರಿಕತೆಗಳಲ್ಲಿ ಉಪಯೋಗಿಸುತ್ತಿದ್ದ ಮಾಹಿತಿಗಳು ದೊರಕಿವೆ. ಉಲ್ಕಾಪಾತ ಮೂಲದ ಕಬ್ಬಿಣವನ್ನು ಸುಮೇರಿಯನ್ನರು ಸ್ವರ್ಗದ ಲೋಹವೆಂದೂ ಈಜಿಪ್ಷಿಯನ್ನರು ಆಕಾಶದಿಂದ ಬಂದ ಕಪ್ಪು ತಾಮ್ರವೆಂದೂ ತಮ್ಮ ಬರವಣಿಗೆಗಳಲ್ಲಿ ಕರೆದಿರುವುದು ಗಮನಾರ್ಹ. ಮೆಸೊಪೊಟೇಮಿಯದ ಟೆಲ್ ಅಸ್ಮಾರ್ ಮತ್ತು ಮಾರಿ, ಸಿರಿಯದ ಛಗರ್ ಬಜ್ಞಾರ್ ನೆಲೆಗಳಲ್ಲಿ ಕ್ರಿ.ಪೂ. 2500ರ ಸುಮಾರಿಗೆ ನಿರ್ದೇಶಿಸಬಹುದಾದ ಪದರಗಳಿಂದ ಇದ್ದಲಿನ ಕುಲುಮೆಗಳಲ್ಲಿ ಕರಗಿಸಿದ ಕೀಲ್ಡರ್ಜೆಯ ಕಬ್ಬಿಣದಿಂದ ಮಾಡಲಾದ ವಸ್ತುಗಳು ದೊರಕಿವೆ. ಚಿನ್ನದ ಪಟ್ಟಿಯುಳ್ಳ ಸುಂದರವಾದ ಕಬ್ಬಿಣದ ಚಾಕುವೊಂದು ಅನಟೋಲಿಯದ (ಈಗಿನ ತುರ್ಕಿ) ಅಲಾಕಾ ಹುಯುಕ್ ನೆಲೆಯಲ್ಲಿ ದೊರಕಿದೆ.

ಕ್ರಿ.ಪೂ. 2ನೆಯ ಸಹಸ್ರಮಾನದ ಪ್ರಾರಂಭದಲ್ಲಿ ಹಿಟ್ಟೈಟ್ ಸಾಮ್ರಾಜ್ಯ ಪ್ರಬಲಿಸಿದಾಗ ನೆರೆಯ ಪ್ರದೇಶವಾದ ಆರ್ಮೇನಿಯ ಪ್ರಾಂತ್ಯದಲ್ಲಿ ವಿಶೇಷವಾಗಿದ್ದ ಕಬ್ಬಿಣದ ಅದುರನ್ನು ಉಪಯೋಗಿಸಿಕೊಂಡು ಕಬ್ಬಿಣದ ಲೋಹವಿದ್ಯೆ ಬೆಳೆಯಲಾರಂಭಿಸಿತು. ಕ್ರಿ.ಶ. 1900ರ ಸುಮಾರಿನಲ್ಲಿ ಮೆದು ಕಬ್ಬಿಣವನ್ನು (ರಾಟ್ ಐರನ್) ತಯಾರಿಸಲಾಗುತ್ತಿತ್ತು. ಕ್ರಿ.ಪೂ. 2ನೆಯ ಸಹಸ್ರಮಾನದ ಉತ್ತರಾರ್ಧದಲ್ಲಿ ನಿಜವಾದ ಕಬ್ಬಿಣಯುಗದ ತಂತ್ರಗಳೆಲ್ಲವೂ ಬಳಕೆಯಲ್ಲಿದ್ದುವು.

ಮೊದಮೊದಲು ಕಬ್ಬಿಣ ಲೋಹವಿದ್ಯೆ ಹಿಟ್ಟೈಟ್ ಜನಾಂಗದವರಲ್ಲಿ ಗುಪ್ತವಾಗಿ ಉಳಿದಿತ್ತು. ಈ ಲೋಹದ ಆಯುಧಗಳು ಯುದ್ಧದಲ್ಲಿ ಬಹಳ ಪರಿಣಾಮಕಾರಿಗಳಾಗಿದ್ದುದರಿಂದ ಅವರು ಈ ಗುಟ್ಟನ್ನು ಇತರರಿಗೆ ಬಿಟ್ಟುಕೊಡಲಿಲ್ಲ. ತಮ್ಮ ಮಿತ್ರವರ್ಗಕ್ಕೆ ಸೇರಿದ ಈಜಿಪ್ಟಿನ ಮತ್ತಿತರ ರಾಜಮನೆತನಗಳಿಗೆ ಕಬ್ಬಿಣದ ಬಾಕು ಮತ್ತು ಆಭರಣಗಳನ್ನು ಅಮೂಲ್ಯವಾದ ಉಡುಗೊರೆಗಳಾಗಿ ಅರ್ಪಿಸುತ್ತಿದ್ದುದಕ್ಕೆ ಅನೇಕ ದಾಖಲೆಗಳು ದೊರಕಿವೆ. ಟುಟಾನ್‌ಖಮುನ್ನನ ಸಮಾಧಿಯಲ್ಲಿ ದೊರಕಿರುವ, ಕಂಚಿನ ಹಿಡಿಯುಳ್ಳ, ಚಿನ್ನ ಮತ್ತು ಹರಳುಗಳಿಂದ ಅಲಂಕೃತವಾದ ಬಾಕು ಹಿಟ್ಟೈಟ್ ಪಂಗಡಕ್ಕೆ ಸೇರಿದ್ದ, ನೆರೆಯ ಪ್ರದೇಶವಾದ ಸಿರಿಯದಲ್ಲಿ ಆಳುತ್ತಿದ್ದ ಮಿಟಾನಿ ರಾಜರ ಬಳುವಳಿಯಾಗಿದ್ದಿರಬೇಕೆಂದು ಟೆಲ್ ಅಮಾರ್ನಾದ ಲೇಖಗಳು ತಿಳಿಸುತ್ತವೆ. ಮೂರನೆಯ ಹಟ್ಟೂ ಸಿಲಿಸ್ ದೊರೆ (ಕ್ರಿ. ಪೂ. 1281–1260) 2ನೆಯ ರ್‍ಯಾಮ್ಸೆಸ್ ದೊರೆಗೆ ಬರೆದ ಪತ್ರವೊಂದರಲ್ಲಿ ಕಬ್ಬಿಣದ ಬಾಕುವೊಂದರ ಉಲ್ಲೇಖವಿರುವುದಲ್ಲದೆ, ಉರರ್ಟುಸರೋವರದ ಬಳಿ ಆರ್ಮೀನಿಯ ಪ್ರಾಂತ್ಯದ ಹೊರಗೆ ಕಬ್ಬಿಣದ ತಯಾರಿಕೆಯನ್ನು ನಿಷೇಧಿಸಿರುವ ಸಂಗತಿಯು ಪ್ರಸ್ತಾಪವಿದೆ. ಇದೇ ಸುಮಾರಿನಲ್ಲಿ ಹಿಟ್ಟೈಟರ ಮಿತ್ರವರ್ಗಕ್ಕೆ ಸೇರಿದ ಫಿಲಿಸ್ಟೀನರು ಸಿರಿಯ ಪ್ರದೇಶದಲ್ಲಿ ಕಬ್ಬಿಣದ ನಿಕ್ಷೇಪಗಳನ್ನು ರೂಢಿಸಲು ಬೇಕಾದ ತಾಂತ್ರಿಕ ಜ್ಞಾನವನ್ನು

ಹಿಟ್ಟೈಟರಿಂದ ದೊರಕಿಸಿಕೊಂಡುದಕ್ಕೆ ಆಧಾರಗಳಿವೆ. ಕ್ರಿ. ಪೂ. 1300ರ ಸುಮಾರಿನಲ್ಲಿ ಸಿರಿಯದ ರಾಸ್ ಷಮ್ರಾ ನೆಲೆಯಲ್ಲಿ ಚಿನ್ನದಿಂದಲಂಕೃತವಾದ ಹೆಚ್ಚು ನಿಕಲ್ ಬೆರಕೆಯುಳ್ಳ ಕಬ್ಬಿಣದ ಬಾಕುವೊಂದು ಸಿಕ್ಕಿದೆ. ಇದು ಟುಟಾನ್ ಖಮುನ್ ಸಮಾಧಿಯ ಬಾಕುವನ್ನು ಹೋಲುತ್ತದೆ.

ಕ್ರಿ. ಪೂ. 12ನೆಯ ಶತಮಾನದಲ್ಲಿ ಸಮುದ್ರ ಜನರ ದಾಳಿಗಳಿಂದ ಹಿಟ್ಟೈಟ್ ಸಾಮ್ರಾಜ್ಯದ ಪತನವಾದ ಅನಂತರ ಕಬ್ಬಿಣದ ಲೋಹಗಾರಿಕೆ ಪಶ್ಚಿಮ ಏಷ್ಯದ ಅನೇಕ ಭಾಗಗಳಲ್ಲಿ ಹರಡಿತು. ಇದರ ಫಲವಾಗಿ ಕಬ್ಬಿಣದ ಉಪಕರಣಗಳನ್ನು ವ್ಯವಸಾಯ, ಕೈಗಾರಿಕೆ ಮತ್ತಿತರ ನಿತ್ಯಜೀವನ ರಂಗಗಳಲ್ಲಿ ಬಳಸುವಂತಾಯಿತು. ಕ್ರಿ.ಪೂ. 1180ರಲ್ಲಿ ಪ್ಯಾಲೆಸ್ಟೀನಿನ ಗೆರಾರಿನಲ್ಲಿ ದೊಡ್ಡದೊಂದು ಕಬ್ಬಿಣದ ಕಾರ್ಖಾನೆ ಸ್ಥಾಪಿತವಾಗಿತ್ತು. ಅನಂತರ ಅಸ್ಸೀರಿಯನ್ನರು ದೊಡ್ಡ ಪ್ರಮಾಣದಲ್ಲಿ ಕಬ್ಬಿಣದ ಉತ್ಪಾದನೆ ಮಾಡಲಾರಂಭಿಸಿದರು. ಕ್ರಿ. ಪೂ. 8ನೆಯ ಶತಮಾನಕ್ಕೆ ಸೇರುವ 2ನೆಯ ಸಾರ್ಗಾನ್ ದೊರೆಯ ಅರಮನೆಯಲ್ಲಿ 3,00,000 ಪೌಂಡು ತೂಕದ ಕಬ್ಬಿಣದ ಗಟ್ಟಿಗಳನ್ನು ಶೇಖರಿಸಲಾಗಿತ್ತು. ಬಹುಶಃ ಈ ಸುಮಾರಿನಲ್ಲಿ ಈಜಿಪ್ಟಿನಲ್ಲೂ ಕಬ್ಬಿಣ ಲೋಹವಿದ್ಯೆ ಬಳಕೆಗೆ ಬಂದಿತು. ನೈಋತ್ಯ ಇರಾನಿನಲ್ಲಿ ಸಿಯಾಲ್ಕ್ ಎ ಮತ್ತು ಬಿ ಸಂಸ್ಕೃತಿಗಳ ಕಾಲದಲ್ಲಿ ಪ್ರಾರಂಭವಾಗಿ ಕ್ರಿ. ಪೂ. ಮೊದಲ ಸಹಸ್ರಮಾನದ ಆರಂಭದಲ್ಲಿ ಕಬ್ಬಿಣದ ಉಪಯೋಗ ಪ್ರಬಲವಾಯಿತು.

ಈ ಮಾರ್ಗವಾಗಿ ಕಬ್ಬಿಣದ ಉಪಯೋಗ ಭಾರತದ ಗಡಿಗೆ ಕ್ರಿ. ಪೂ. 12ನೆಯ ಶತಮಾನದ ವೇಳೆಗೆ ಬಂದಿರಬಹುದು. ಉತ್ತರ ಪ್ರದೇಶದ ಅತ್ರಂಜಿಖೇರ, ರಾಜಸ್ಥಾನದ ನ್ಹೋ, ಧಾರವಾಡ ಜಿಲ್ಲೆಯ ಹಳ್ಳೂರು ಮುಂತಾದ ನೆಲೆಗಳಲ್ಲಿ, ಇಂಗಾಲ–14 ಪರೀಕ್ಷಾವಿಧಾನದಿಂದ ತಿಳಿದುಬಂದಿರುವಂತೆ, ಕ್ರಿ. ಪೂ. 11ನೆಯ ಶತಮಾನದಲ್ಲಿ ಕಬ್ಬಿಣ ಬಳಕೆಗೆ ಬಂತು. ಅನತಿಕಾಲದಲ್ಲೇ ಗಂಗಾನದೀ ಬಯಲಿನಲ್ಲಿ ವರ್ಣರಂಜಿತ ಬೂದು ಮಡಕೆಗಳ ಮತ್ತು ಮಧ್ಯಭಾರತದಲ್ಲಿ ಕಪ್ಪು ಮತ್ತು ಕೆಂಪು ಮಡಕೆಗಳ ಸಂಸ್ಕೃತಿಗಳೊಂದಿಗೂ ದಕ್ಷಿಣ ಭಾರತದಲ್ಲಿ ಬೃಹತ್‌ಶಿಲಾ ಸಮಾಧಿ ಸಂಸ್ಕೃತಿಯೊಂದಿಗೂ ಕಬ್ಬಿಣದ ಬಳಕೆ ಪ್ರಬಲವಾಗಿ, ಜನರ ನಿತ್ಯಜೀವನ ಕ್ರಮದಲ್ಲಿ ಬೆರೆತು ಕ್ರಾಂತಿಕಾರಿ ಬದಲಾವಣೆಗಳನ್ನು ರೂಪಿಸಿದುದಲ್ಲದೆ ಚಾರಿತ್ರಿಕ ನಾಗರಿಕತೆಗಳಿಗೆ ನಾಂದಿಯಾಗಿ ಪರಿಣಮಿಸಿತು.

ಕ್ರೀಟ್ ದ್ವೀಪದಲ್ಲಿ ಕ್ರಿ.ಪೂ. 2ನೆಯ ಸಹಸ್ರಮಾನದ ಕೊನೆಯ ಕಾಲದಲ್ಲಿ ಕಬ್ಬಿಣದ ಬಳಕೆ ಪ್ರಾರಂಭವಾಯಿತು. ಫೆಯಿಸ್ಟಾಸ್, ವಾಫಿಯೋ ಮತ್ತಿತರ ನೆಲೆಗಳಲ್ಲಿ ಕ್ರಿ.ಪೂ. 1500–1200ರ ಕಾಲದ ಕಬ್ಬಿಣದ ಅವಶೇಷಗಳು ದೊರಕಿವೆ. ಕ್ರೀಟಿನಲ್ಲಿ ಕಬ್ಬಿಣದ ಅದುರಿನ ನಿಕ್ಷೇಪಗಳು ಹೆಚ್ಚಾಗಿಲ್ಲ. ಲೋಹಗಾರಿಕೆಗೆ ಆಮದಾದ ಕಬ್ಬಿಣವನ್ನೇ ಅವಲಂಬಿಸಬೇಕಾಗಿತ್ತು. ಡೆಂಡ್ರಾದ ಸಮಾಧಿಗಳಲ್ಲಿ ದೊರಕಿರುವವೇ ಗ್ರೀಸಿನ ಅತ್ಯಂತ ಪುರಾತನ ಕಬ್ಬಿಣದ ವಸ್ತುಗಳು. ಇವು ಕ್ರಿ. ಪೂ. 13ನೆಯ ಶತಮಾನಕ್ಕೆ ಸೇರುತ್ತವೆ. ಕ್ರಿ. ಪೂ. 12ನೆಯ ಶತಮಾನದಿಂದ ಕಬ್ಬಿಣ ಜನರಲ್ಲಿ ಹೆಚ್ಚಾಗಿ ಬಳಕೆಗೆ ಬಂತು. ದಕ್ಷಿಣ ರಷ್ಯದ ಕೋಬಾನ್ ಸಂಸ್ಕೃತಿ ಈ ಸುಮಾರಿನಲ್ಲಿ ಕಬ್ಬಿಣ ಬಳಸುತ್ತಿತ್ತು. ಈ ಎರಡು ಪ್ರದೇಶಗಳನ್ನು ಬಿಟ್ಟರೆ ಯೂರೋಪಿನಲ್ಲಿ ಕಬ್ಬಿಣ ಯುಗ ಕ್ರಿ. ಪೂ. 800ರ ಸುಮಾರಿನಲ್ಲಿ ಇಟಲಿ ಮತ್ತು ಮಧ್ಯ ಯೂರೋಪು ಪ್ರದೇಶಗಳಲ್ಲಿ ಪ್ರಾರಂಭವಾಯಿತೆಂದು ಹೇಳಬಹುದು. ವಿವಿಧಪ್ರದೇಶಗಳಲ್ಲಿ ಕಬ್ಬಿಣ ಬೇರೆ ಬೇರೆ ಸಮಯಗಳಲ್ಲಿ ಬಳಕೆಗೆ ಬಂದುದರಿಂದ ಈ ಕಾಲಗಣನೆ ಯೂರೋಪಿನ ಎಲ್ಲ ಪ್ರದೇಶಗಳಿಗೂ ಅನ್ವಯಿಸುವುದಿಲ್ಲ. ಯೂರೋಪಿನ ಕಬ್ಬಿಣ ಯುಗವನ್ನು ಪೂರ್ವಕಾಲೀನ (ಕ್ರಿ. ಪೂ. 800–400) ಮತ್ತು ಉತ್ತರ ಕಾಲೀನ (ಕ್ರಿ. ಪೂ. 400–15) ಕಬ್ಬಿಣ ಯುಗಗಳೆಂದು ವಿಂಗಡಿಸಬಹುದಾಗಿದೆ. ಕ್ರಿ. ಪೂ. 16–15ರಲ್ಲಿ ರೋಮನ್ ಆಕ್ರಮಣದೊಂದಿಗೆ ಆಲ್ಪ್ಸ್ ಪ್ರದೇಶ, ಇಟಲಿ, ಫ್ರಾನ್ಸ್ ಮತ್ತು ಆಗ್ನೇಯ ಸ್ಪೇನ್ ಪ್ರದೇಶಗಳಲ್ಲಿ ಐತಿಹಾಸಿಕ ಯುಗ ಪ್ರಾರಂಭವಾಯಿತು.

ಪೂರ್ವಕಾಲೀನ ಕಬ್ಬಿಣ ಯುಗದಲ್ಲಿ ಇಟಲಿ ಮತ್ತು ಮಧ್ಯ ಯೂರೋಪುಗಳಲ್ಲಿ ಕಬ್ಬಿಣದ ಬಳಕೆ ಹೆಚ್ಚಾಯಿತು. ಇಟಲಿಯ ಇಟ್ರುಸ್ಕನ್ ಸಂಸ್ಕೃತಿ ಸ್ಥಳೀಯ ಮತ್ತು ಹೊರಗಿನಿಂದ ವಲಸೆ ಬಂದ ಸಂಸ್ಕೃತಿಗಳ ಮಿಲನದಿಂದ ಹುಟ್ಟಿ ಫಿನೀಷಿಯದ ಮತ್ತು ಈಜಿಪ್ಟಿನ ಹಲವು ಲಕ್ಷಣಗಳಿಂದ ಕೂಡಿದೆ. ಈ ಸಂಸ್ಕೃತಿಯ ಹೆಗ್ಗುರುತುಗಳನ್ನು ಟಾರ್ಕ್ವಿನಿಯ, ವೇಯ್, ಪೆಟುಲೋಯಾ ಮುಂತಾದೆಡೆಗಳಲ್ಲಿಯ ಸಮಾಧಿಗಳಿಂದ ಗುರುತಿಸಬಹುದು. ಇಲ್ಲೂ ಇತರ ಸ್ಥಳಗಳಲ್ಲೂ ಇರುವ ಸಮಾಧಿಗಳಲ್ಲಿ ದೊರಕಿರುವ ಶವಸಂಸ್ಕಾರ ಸಂಬಂಧ ವಸ್ತುಗಳಿಂದ ಪೌರಸ್ತ್ಯ ದೇಶಗಳ ಪ್ರಭಾವಗಳನ್ನೂ ಸಂಸ್ಕೃತಿಯ ರೂಪರೇಷೆಗಳನ್ನೂ ತಿಳಿಯಬಹುದು.

ಇಟಲಿಯ ಉತ್ತರ ಭಾಗದಲ್ಲಿ ಈ ಕಾಲದಲ್ಲಿ ವಿಲ್ಲನೋವನ್ ಸಂಸ್ಕೃತಿ ರೂಢಿಗೆ ಬಂತು. ಸರೋವರವಾಸಿಗಳ ಸಂಸ್ಕೃತಿ ಮತ್ತು ಶವಜಾಡಿ ಕ್ಷೇತ್ರ ಸಂಸ್ಕೃತಿಗಳ ಮಿಲನದಿಂದ ಕ್ರಿ. ಪೂ. ಮೊದಲ ಸಹಸ್ರಮಾನದ ಪ್ರಾರಂಭದಲ್ಲಿ ಹುಟ್ಟಿದ ಈ ಕಂಚಿನ ಯುಗದ ಸಂಸ್ಕೃತಿಯಲ್ಲಿ ಕ್ರಮೇಣ ಕಬ್ಬಿಣದ ಬಳಕೆ ಆರಂಭವಾಯಿತು. ಕಾಲಕ್ರಮದಲ್ಲಿ ಇಟ್ರುಸ್ಕನ್ ಸಂಸ್ಕೃತಿಯ ಪ್ರಭಾವಕ್ಕೊಳಗಾಗಿ ಅದರೊಂದಿಗೆ ಲೀನವಾಯಿತು. ಕ್ರಿ. ಪೂ. 400ರಲ್ಲಿ ಕೆಲ್ಟರ ದಾಳಿಗಳ ಫಲವಾಗಿ ಈ ಸಂಸ್ಕೃತಿಯ ಅಂತ್ಯವಾಯಿತು.

ಪೂರ್ವ ಫ್ರಾನ್ಸಿನಿಂದ ಆಸ್ಟ್ರಿಯದ ವರೆಗೂ ಹರಡಿದ್ದ ಹಾಲ್‌ಸ್ಟಾಟ್ ಸಂಸ್ಕೃತಿ ಮಧ್ಯಯೂರೋಪಿನ ಕಬ್ಬಿಣ ಯುಗದ ಸಂಸ್ಕೃತಿಗಳಲ್ಲಿ ಮುಖ್ಯವಾದುದು. ಕ್ರಿ. ಪೂ. 5–2ನೆಯ ಶತಮಾನಗಳಲ್ಲಿ ಪ್ರಬಲವಾಗಿದ್ದ ಈ ಸಂಸ್ಕೃತಿ ಆಲ್ಪ್ಸ್ ಪ್ರದೇಶಗಳಲ್ಲಿ ಕ್ರಿ. ಪೂ. 400ರಲ್ಲಿ ಕೆಲ್ಟರ ದಾಳಿಗಳಿಂದ ನಾಶವಾದರೂ ಕೆಲಭಾಗಗಳಲ್ಲಿ ಕ್ರಿಸ್ತಶಕದ ಆರಂಭದ ವರೆಗೂ ಉಳಿದಿತ್ತು. ಜರ್ಮನಿ, ಸೈಲೀಷಿಯ, ಬಾಲ್ಕನ್ ಪ್ರದೇಶ, ಹಂಗರಿ ಮತ್ತು ರೂಮೇನಿಯಗಳಲ್ಲೂ ಹಾಲ್‌ಸ್ಟಾಟ್ ರೀತಿಯ ಸಂಸ್ಕೃತಿಗಳು ಕ್ರಿ. ಪೂ. ಏಳರಿಂದ ನಾಲ್ಕನೆಯ ಶತಮಾನಗಳವರೆಗೂ ರೂಢಿಯಲ್ಲಿದ್ದುವು.

ಪಶ್ಚಿಮ ಯೂರೋಪಿನ ಇನ್ನು ಕೆಲವು ಪ್ರದೇಶಗಳಲ್ಲಿ ಕಂಚಿನ ಯುಗದ ಮತ್ತು ಹಾಲ್‌ಸ್ಟಾಟ್ ಸಂಸ್ಕೃತಿಗಳ ಸಂಪರ್ಕದಿಂದ ಕಬ್ಬಿಣ ಯುಗೀನ ಸಂಸ್ಕೃತಿಯೊಂದು ವಿಕಾಸಗೊಂಡಿತು. ಕ್ರಿ. ಪೂ. 4ನೆಯ ಶತಮಾನದಲ್ಲಿ ಈ ಪ್ರದೇಶಗಳಲ್ಲಿ ಲಾಟೀನೆ ಸಂಸ್ಕೃತಿಯ ಅಂಶಗಳು ಕಾಣಿಸಿಕೊಂಡುವು. ಉತ್ತರ ಫ್ರಾನ್ಸ್ ಮತ್ತು ಬ್ರಿಟಿಷ್ ದ್ವೀಪಗಳಲ್ಲಿ ಕಂಚಿನ ಯುಗದ ಸಂಸ್ಕೃತಿಗಳು ಮುಂದುವರಿಯುತ್ತಿದ್ದು, ಕ್ರಿ. ಪೂ. 5ನೆಯ ಶತಮಾನದ ಅಂತ್ಯದಲ್ಲಿ ಕೆಲ್ಟರ ಆಕ್ರಮಣದಿಂದ ಅಲ್ಲಿಗೂ ಕಬ್ಬಿಣದ ಪ್ರವೇಶವಾಯಿತು.

ಕ್ರಿ. ಪೂ. 5ನೆಯ ಶತಮಾನದ ಅಂತ್ಯ ಕಾಲದಲ್ಲಿ ಯೂರೋಪಿನ ಅನೇಕ ಭಾಗಗಳಲ್ಲಿ ಕೆಲ್ಟರ ಪ್ರಭಾವದಿಂದ ಉತ್ತರಕಾಲೀನ ಕಬ್ಬಿಣ ಯುಗ ಲಾ ಟೀನೆ ಸಂಸ್ಕೃತಿಯೊಂದಿಗೆ ಆರಂಭವಾಗುತ್ತದೆ. ಬ್ರಿಟನಿನಲ್ಲಿ ಈ ಕಾಲದ ಯುಗದ ಸಂಸ್ಕೃತಿಗಳನ್ನು ಎ, ಬಿ ಮತ್ತು ಸಿ ಎಂಬ ಮೂರು ಹಂತಗಳಾಗಿ ವಿಂಗಡಿಸಲಾಗಿದೆ. ಈ ಕಾಲದ ಐರೋಪ್ಯ ಸಂಸ್ಕೃತಿಗಳಲ್ಲಿ ಗ್ರೀಕ್ ಸಂಸ್ಕೃತಿಯ ಅಂಶಗಳನ್ನು ಹೋಲುವ ಮತ್ತು ಹಾಲ್‌ಸ್ಟಾಟ್ ಸಂಸ್ಕೃತಿಯ ರೀತಿಯಲ್ಲಿ ನಿರ್ಮಿತವಾದ ಕಲಾವಸ್ತುಗಳು ಕಾಣಬರುತ್ತವೆ. ಪ್ರಾಣಿಚಿತ್ರಣದಲ್ಲಿ ಸ್ಕಿಥಿಯನರ ಪ್ರಭಾವ ಎದ್ದು ಕಾಣುತ್ತದೆ. ಪಶ್ಚಿಮ ಸ್ವಿಟ್ಜರ್ಲೆಂಡಿನಲ್ಲಿ ತಲೆದೋರಿದ ಈ ಸಂಸ್ಕೃತಿ ಕ್ರಮೇಣ ಡ್ಯಾನ್ಯೂಬ್ ಕಣಿವೆಯಲ್ಲೂ ಫ್ರಾನ್ಸ್ ಮತು ಬ್ರಿಟಿಷ್ ದ್ವೀಪಗಳಲ್ಲೂ ಹರಡಿ ರೋಮನರ ದಾಳಿಯ ಕಾಲದ (ಕ್ರಿಸ್ತಶಕೆಯ ಆರಂಭಕಾಲ) ವರೆಗೂ ಪ್ರಬಲವಾಗಿತ್ತು. ರೋಮನರ ದಾಳಿಗಳೊಂದಿಗೆ ಯೂರೋಪಿನ ಹಲವಾರು ಪ್ರದೇಶಗಳಲ್ಲಿ ಇತಿಹಾಸ ಯುಗದ ಪ್ರಾರಂಭವಾಯಿತು. (ಬಿ.ಕೆ.ಜಿ.:ಆರ್.ಎಸ್.ಪಿ.)

**ಕಬ್ಬಿಣ (ವೈದ್ಯದಲ್ಲಿ) :** ಗಿಡ ಮರಗಳಲ್ಲಿ ಇದ್ದೇ ತೀರುವ ಪತ್ರಹರಿತ್ತಿನಲ್ಲಿ (ಕ್ಲೋರೊಫಿಲ್) ಕಬ್ಬಿಣದ ಅಂಶ ಇಲ್ಲವಾದರೂ ಜೀವಕಣದ ಕಿರಿಯಂಗದಲ್ಲಿ (ಆರ್ಗನೆಲ್) ಅದರೊಂದಿಗಿದ್ದು ಅದರ ತಯಾರಿಕೆಗೆ ಇದು ಬೇಕು. ರಕ್ತದ ಕೆಂಪು ಕಣಗಳಲ್ಲಿರುವ ರಕ್ತಬಣ್ಣಕದ (ಹಿಮೊಗ್ಲಾಬಿನ್) ಮುಖ್ಯ ಜೀವಾಳದ ಭಾಗ ಕಬ್ಬಿಣಾಂಶ. ಆದ್ದರಿಂದ ಕೆಲವು ಬಗೆಗಳ ರಕ್ತಕೊರೆಗಳಲ್ಲಿ (ಅನೀಮಿಯಾಸ್) ವೈದ್ಯಚಿಕಿತ್ಸೆಯಲ್ಲಿ ಕಬ್ಬಿಣದ ಲವಣಗಳ ಬಳಕೆಯಾಗುತ್ತಿದೆ. ಬದ್ಧಕವಾಗೂ (ಅಸ್ಟ್ರಿಂಜೆಂಟ್), ರಕ್ತತಡೆಕವಾಗೂ ರಕ್ತಸುರಿತದ ನಿಲುಗಡೆಗಾಗಿ ಕಬ್ಬಿಣದ ಲವಣಗಳನ್ನು ಬಳಸುವುದೂ ಉಂಟು. ಉಸಿರಾಟದ ಬಣ್ಣ ವಸ್ತುವಾಗಿ ಇದು ಊತಕಗಳಿಗೆ ಆಮ್ಲಜನಕದ ಒದಗಣೆಗೆ ಮುಖ್ಯವಾಗಿ ನೆರವಾಗುವುದು. ಕಣಬಣ್ಣಕ (ಸೈಟೊಕ್ರೋಂ) ಮಂಡಲದ ತೆರನ ಕೆಲವು ಉಸಿರಾಟದ ದೊಳೆಗಳಲ್ಲೂ ಇದು ಇದ್ದೇ ತೀರಬೇಕು. ಮೇಲ್ಪೊರೆಗಳ ಪುಷ್ಟಿಗೂ ಇದು ಬೇಕೇಬೇಕು. ಸುಮಾರು 2–6 ಗ್ರಾಂಗಳಷ್ಟು ಕಬ್ಬಿಣಾಂಶ ಮೈಯಲ್ಲಿರುತ್ತದೆ. ಇದರಲ್ಲಿ 65% ರಕ್ತಬಣ್ಣಕ ಸ್ನಾಯುಬಣ್ಣಕದಲ್ಲೂ (ಮೈಯೊಗ್ಲೋಬಿನ್) 15%ರಲ್ಲಿ, ಈಲಿ, ತೊರಳೆ, ಎಲುಮಜ್ಜೆಗಳಂಥ ಸಜಾಲಾಂತರ್ಪೊರೆಯ (ರೆಟಿಕ್ಯುಲೊ ಎಂಡೊತೀಲಿಯಲ್) ಊತಕಗಳಲ್ಲೂ, 20%ಉಳಿದ ಊತಕಗಳಲ್ಲೂ ಹಂಚಿರುತ್ತದೆ. ಊತಕಗಳಲ್ಲಿ ಮುಖ್ಯವಾಗಿ ಫೆರಿಟಿನ್ನಾಗಿ ಪ್ರೋಟೀನೊಡಗೂಡಿ ದಾಸ್ತಾನಾಗಿರುವುದು. ಆಹಾರದಿಂದ ಕಬ್ಬಿಣ ಕರುಳಿನ ಮೂಲಕ ರಕ್ತಗೂಡುತ್ತದೆ. ಎಲುಮಜ್ಜೆಯಲ್ಲಿ ಕೆಂಪು ರಕ್ತಕಣಗಳ ತಯಾರಿಕೆಗೆ ಒದಗುವುದು. ಕೆಲವು ವಾರಗಳು ರಕ್ತದಲ್ಲಿ ಸುತ್ತಾಡಿದ ಮೇಲೆ ಕೆಂಪು ರಕ್ತಕಣಗಳು ಈಲಿಯಲ್ಲಿ ಒಡೆದು ಹಾಳಾಗುತ್ತವೆ. ಇವುಗಳಲ್ಲಿದ್ದ 20–25 ಮಿಲಿಗ್ರಾಂ ಕಬ್ಬಿಣಾಂಶ ಮಾತ್ರ ದಿನವೂ ಮತ್ತೆ ಬಳಕೆಗೆ ಬರುತ್ತದೆ. ಸಾಮಾನ್ಯವಾಗಿ ಹೆಂಗಸು ಒಂದು ಬಾರಿ ಮುಟ್ಟಾದಾಗ ಕೇವಲ ಸುಮಾರು 10–12 ಮಿಲಿಗ್ರಾಂನಷ್ಟು ಕಬ್ಬಿಣಾಂಶವನ್ನು ಕಳೆದುಕೊಳ್ಳುತ್ತಾಳೆ.

ಆಹಾರದಲ್ಲಿನ ಕಬ್ಬಿಣ ಮೈಗೂಡಲು ತಾಮ್ರ, ಮ್ಯಾಂಗನೀಸ್, ಕೊಬಾಲ್ಟ್ ಅಂಶಗಳೂ ಕೂಡ ಇರಬೇಕು. ಮೈಗೂಡಿದ ಕಬ್ಬಿಣ ಅಲ್ಲಿಯೇ ಇದ್ದು ಮೇಲಿಂದ

ಮೇಲೆ ಬಳಕೆಗೆ ಒದಗುತ್ತಿರುವುದು. ಗರ್ಭದಲ್ಲಿ ಬೆಳೆವ ಪಿಂಡಗೂಸಿಗೆ ಕಬ್ಬಿಣದ ಕೊರತೆ ಹೆಚ್ಚು. ಅದಕ್ಕೆ ಬೇಕಿರುವ ಕಬ್ಬಿಣದ ಅಂಶವೆಲ್ಲ ತಾಯಿಯಿಂದಲೆ ಬರಬೇಕು. ಆರು ತಿಂಗಳ ಕೂಸು ಬಸುರಿಯ ಇಡೀ ಕಬ್ಬಿಣಾಂಶವನ್ನು ಎತ್ತಿ ಕೊಳ್ಳಬಲ್ಲುದು. ಇದರಿಂದಲೇ ಬಸುರಿ ದಿನವೂ ಸಾಕಷ್ಟು ಕಬ್ಬಿಣಾಂಶವನ್ನು ಆಹಾರದಲ್ಲಿ ಸೇವಿಸದಿದ್ದಲ್ಲಿ ವಿಪರೀತ ರಕ್ತಕೊರೆ ಅನುಭವಿಸುವಳು. ಸಾಮಾನ್ಯರಿಗೆ ದಿನವೂ ಆಹಾರದ ಮೂಲಕ 1–2 ಮಿಲಿಗ್ರಾಂನಷ್ಟು ಕಬ್ಬಿಣಾಂಶ ಮೈಗೂಡು ತ್ತಿರಲೇಬೇಕು. ಇದು ದಿನದ ಎಂದಿನ ತಿಂಡಿ, ತಿನಿಸು, ಊಟಗಳಲ್ಲಿ 15 ಮಿಲಿಗ್ರಾಂ ನಷ್ಟಾದರೂ ದೊರಕುತ್ತದೆ. ರಕ್ತಕೊರೆಯಾಗಿದ್ದರೆ 25–30 ಮಿಲಿಗ್ರಾಂಗಳಾದರೂ ದಿನವೂ ಸಲ್ಲಬೇಕು. ಕೊಕ್ಕೆಹುಳುಬೇನೆಯಲ್ಲಿ ಕರುಳಲ್ಲಿ ಸೇರಿಬಿಟ್ಟ ಕೊಕ್ಕೆಹುಳುಗಳು ರಕ್ತಹೀರಿ ಹಾಕುತ್ತಿರುವಾಗಂತೂ ರಕ್ತದಲ್ಲಿ ಕಬ್ಬಿಣದ ಕೊರೆ ಅಪಾರ.

ಕಬ್ಬಿಣಾಂಶವನ್ನು, ಹಲವಾರು ಲವಣರೂಪಗಳಲ್ಲಿ ಮದ್ದಾಗಿ ಬಳಸುವು ದುಂಟು. ಫೆರಸ್ ಲವಣವೇ ಬಲು ಒಳ್ಳೆಯದು. ಚೆನ್ನಾಗಿ ಮೈಗೂಡುತ್ತದೆ, ಅಗ್ಗ. ತುರ್ತಿನ ಹೊತ್ತಿನಲ್ಲಿ ಬೇಗನೆ ಕಬ್ಬಿಣ ಒದಗಿಸಲು ರೋಗಿಗೆ ಚುಚ್ಚಿ ಹೊಗಿಸುವ ಸಮ್ಮಿಶ್ರ ರೂಪಗಳೂ ಇವೆ.

ಕಬ್ಬಿಣಾಂಶ ಮೈಗೂಡುವಾಗ ಏನೋ ತೊಂದರೆಯಾಗಿ ಕಬ್ಬಿಣವಿರುವ ಬಣ್ಣವಸ್ತುವಾದ ರಕ್ತಗಬ್ಬಿಣಕ (ಹೀಮೋಸೈಡೆರಿನ್) ಊತಕಗಳಲ್ಲಿ ಉಳಿದುಬಿಟ್ಟು ರಕ್ತಗಬ್ಬಿಣತೆ (ಹೀಮೊಸೈಡೆರೋಸಿಸ್) ರೋಗವೇಳುತ್ತದೆ. ಕೆಂಪು ರಕ್ತಕಣಗಳು ಒಡೆದು ವಿಪರೀತ ಹಾಳಾದಾಗ ಹೀಗಾಗುವುದು ಸಾಮಾನ್ಯ.

ಬಾದಾಮಿ, ಸೀಮೆ ಆಷಾಢಿ (ಆಸ್ಪರ್ಯಾಗಸ್), ತವುಡು, ಹುರುಳೀಕಾಯಿ, ಕೋಸುಹೂ, ಸೆಲರಿ ಸೊಪ್ಪು, ತತ್ತಿ ಬಂಡಾರ, ಮೂತ್ರಪಿಂಡ, ಈಲಿ, ಲೆಟೀಸ್ ಸೊಪ್ಪು, ತೋಕೆ ಗೋದಿ ಹಿಟ್ಟು, ಮೋಳಿ, ಸೋಯ ಅವರೆ, ಗೋದಿ ಹಿಟ್ಟು, ಹಸಿರು ಸೊಪ್ಪುಗಳು, ದಂಟು, ನುಗ್ಗೆಕಾಯಿ, ಬೀಟ್‌ಗೆಡ್ಡೆ, ಕೋಸುಗೆಡ್ಡೆ, ಕಾಕಂಬಿ, ಕಿತ್ತಳೆ, ಮೆಣಸು, ಬಟಾಣಿ, ಉರುಳುಗೆಡ್ಡೆ, ಮೂಲಂಗಿ, ಅನಾನಸು, ತಕ್ಕಾಳಿ, ನಾಯಿಕೊಡೆಗಳಲ್ಲಿ ಕಬ್ಬಿಣಾಂಶವಿದೆ. ಗಜ್ಜರಿಯಲ್ಲೂ ಹಾಲಿನಲ್ಲೂ ಕಬ್ಬಿಣಾಂಶ ಕಡಿಮೆ, ಕೆಲವೇಳೆ ಆಹಾರದಲ್ಲಿರುವ ಕಬ್ಬಿಣಾಂಶವೆಲ್ಲ ಮೈಗೂಡದು. ಮೈಗೆ ಬೇಕಿಲ್ಲದಾಗ ಸೇವಿಸಿದ ಕಬ್ಬಿಣಾಂಶ ಹಾಗೇ ಹೊರಬೀಳುತ್ತದೆ.

ಕಬ್ಬಿಣ ಲವಣಗಳಿರುವ ಮಾತ್ರೆಗಳಿಗೆ ಸಕ್ಕರೆ ಸವರಿದ್ದರಂತೂ ಮಕ್ಕಳು ಪೆಪ್ಪರ್‌ಮಿಂಟೆಂದು ತಿನ್ನುವ ಅವಕಾಶವಿದೆ. ಚಿಕ್ಕಮಕ್ಕಳಿಗೆ ಅಂಥ ಮಾತ್ರೆಗಳು ವಿಷಕರವಾದ್ದರಿಂದ ಅವರಿಗೆ ಸಿಗದಂತೆ ಎತ್ತಿರಿಸಿರಬೇಕು. (ಡಿ.ಎಸ್.ಎಸ್.)

**ಕಬ್ಬು:** ಅತಿ ಉಪಯುಕ್ತ ಬಹುವಾರ್ಷಿಕ ದೈತ್ಯಾಕಾರದ ಹುಲ್ಲು ; ಭೂ ವೈವಿಧ್ಯಕ್ಕೆ ಹೊಂದಿಕೊಂಡು ಬೆಳೆಯಬಲ್ಲ ಉಷ್ಣವಲಯದ ಜಾತಿ. ಸಮಭಾಜಕ ವೃತ್ತದ ಇಕ್ಕೆಡೆಗಳಲ್ಲೂ ಸುಮಾರು 35° ವರೆಗಿನ ಪ್ರದೇಶದಲ್ಲಿ ಎರಡು ಗೋಳಗಳಲ್ಲೂ ನೂರಾರು ಬಗೆಯ ಕಬ್ಬನ್ನು ಬೆಳೆಯುತ್ತಿದ್ದಾರೆ.

ಸಿಹಿ ಪದಾರ್ಥಗಳನೇಕವಿದ್ದರೂ ಮಾನವರಿಗೆ ಇಷ್ಟವಾದಂಥ ಸಿಹಿ ಪದಾರ್ಥ ಗಳನ್ನು ತಯಾರಿಸಲು ಬೆಲ್ಲ ಮತ್ತು ಸಕ್ಕರೆಯೇ ಮುಖ್ಯ. ಸಕ್ಕರೆ ಹೊಂದಿರುವ ಸಸ್ಯಗಳು ಹಲವು ಇವೆ. ಆದರೆ ಸಕ್ಕರೆಯ ಅಧಿಕ ಉತ್ಪನ್ನಕ್ಕೆ ಸಹಾಯಕವಾಗುವುದು ಕಬ್ಬು ಮತ್ತು ಸಕ್ಕರೆಬೀಟ್‌ಗೆಡ್ಡೆಗಳು ಮಾತ್ರ. ತಾಳೆ, ತೆಂಗು ಮುಂತಾದ ಮರಗಳ ಹೊಂಬಾಳೆಗಳನ್ನು ಕಡಿದು, ರಸ ಶೇಖರಿಸಿ, ಅದರಿಂದಲೂ ಬೆಲ್ಲ ತಯಾರಿಸಲಾಗುತ್ತದೆಯಾದರೂ ಪರಿಮಾಣದಲ್ಲಿ ಅದು ಅತಿ ಸ್ವಲ್ಪ. ಪ್ರಪಂಚದ ಒಟ್ಟು ಸಕ್ಕರೆ ಉತ್ಪತ್ತಿಯ ಸೇ. 67-68 ಭಾಗ ಕಬ್ಬಿನಿಂದಲೇ ಆಗುತ್ತದೆ ; ಉಳಿದದ್ದು ಬೀಟ್‌ಗೆಡ್ಡೆಯಿಂದ.

**ವಿಸ್ತರಣೆ:** ಭಾರತ, ಪಾಕಿಸ್ತಾನ, ಇಂಡೋಚೀನ, ಚೀನ, ಜಪಾನ್, ಫಾರ್ಮೊಸ, ಫಿಲಿಪೀನ್ಸ್ ಮತ್ತು ಜಾವಾಗಳಲ್ಲೂ ಮೆಡಿಟರೇನಿಯನ್ ಸಮುದ್ರತೀರ ಪ್ರದೇಶ ಗಳಲ್ಲೂ ಲೂಸಿಯಾನ, ಫ್ಲಾರಿಡ, ಜಾರ್ಜಿಯ, ಕ್ಯೂಬ, ಮೆಕ್ಸಿಕೋ ಮೊದಲಾದ ಪ್ರದೇಶಗಳಲ್ಲೂ ಬಾರ್‌ಬಡಾಸ್, ಟ್ರಿನಿಡಾಡ್, ಜಮೈಕ ದ್ವೀಪಗಳಲ್ಲೂ ಪೆರು, ಕೊಲಂಬಿಯ, ವೆನಿಜ್ವೇಲ, ಬ್ರಿಟಿಷ್ ಗಯಾನ, ಡಚ್ ಗಯಾನ, ಎಕ್ವಡಾರ್, ಬೊಲೀವಿಯ, ಬ್ರೆಜ಼ಿಲ್, ಆರ್ಜೆಂಟೀನ ಮತ್ತು ಪರಗ್ವೆ ರಾಷ್ಟ್ರಗಳಲ್ಲೂ ಹಾಂಡೂರಾಸ್, ಗ್ವಾಟಿಮಾಲ, ನಿಕರಾಗುವ, ಪನಾಮ ಮತ್ತು ಕಾಸ್ಟರೀಕ ರಾಜ್ಯ ಗಳಲ್ಲೂ ಮೆಡೀರ, ಅಂಗೋಲ, ಕ್ಯಾನರಿ ದ್ವೀಪಗಳು, ಈಜಿಪ್ಟ್, ಮೊಜಾಂಬಿಕ್ ಮಾರಿಷಸ್ ದೇಶಗಳಲ್ಲೂ ಆಸ್ಟ್ರೇಲಿಯ ಖಂಡದ ಪೂರ್ವತೀರ ಮತ್ತು ತಾಹಿತಿ ದ್ವೀಪಗಳಲ್ಲೂ ಹೆಚ್ಚಾಗಿ ಕಬ್ಬನ್ನು ಬೆಳೆಸುತ್ತಾರೆ.

**ಪ್ರಾಚೀನತೆ:** ಅಥರ್ವಣ ವೇದದಲ್ಲಿ ಕಬ್ಬಿನ ಉಲ್ಲೇಖವಿದೆ. ಆದ್ದರಿಂದ ವೇದಗಳ ಕಾಲದಿಂದಲೂ ಅದು ಭಾರತದಲ್ಲಿ ಹೆಚ್ಚಾಗಿ ಹರಡಿತ್ತೆಂದು ವ್ಯಕ್ತವಾಗು ತ್ತದೆ. ಕ್ರಿಸ್ತಶಕದ ಪ್ರಾರಂಭದ ವೇಳೆಗೆ ಭಾರತದಿಂದ ಚೀನ ಚಕ್ರವರ್ತಿಗೆ ಕಬ್ಬನ್ನು ಕಾಣಿಕೆಯಾಗಿ ಕಳುಹಿಸಲಾಯಿತೆಂದೂ ಮುಂದೆ ಕ್ರಿ. ಶ. 424ರ ವೇಳೆಗೆ ದಕ್ಷಿಣ ಚೀನದಲ್ಲಿ ಅದನ್ನು ಬೆಳೆಸಲು ಉಪಕ್ರಮಿಸಿದಮೇಲೆ ಕ್ರಮೇಣ ಜಾವ, ಫಿಲಿಪೀನ್ಸ್, ಶಾಂತಿಸಾಗರದ ದ್ವೀಪಗಳು ಮತ್ತು ಹವಾಯ್ ಪ್ರದೇಶಗಳಿಗೆ ಅದು ಹರಡಿತೆಂದೂ ತಿಳಿದುಬಂದಿದೆ. ಅಲೆಕ್ಸಾಂಡರನೊಡನೆ ದಂಡಯಾತ್ರೆಯಲ್ಲಿ ಭಾಗವಹಿಸಿದ್ದ ಅಧಿಕಾರಿ ನಿಯಾರ್‌ಟಿಸ್ ಕ್ರಿ. ಪೂ. 325ರಲ್ಲೇ ಕಬ್ಬು ಭಾರತದಲ್ಲಿ ಎಲ್ಲೆಲ್ಲೂ ಬೆಳೆಯುತ್ತಿತ್ತೆಂದೂ ಅದು ಎಲ್ಲರಿಗೂ ಚೆನ್ನಾಗಿ ತಿಳಿದಿತ್ತೆಂದೂ ವಿವರಿಸಿದ್ದಾನೆ. 6ನೆಯ ಶತಮಾನದಲ್ಲಿ ಭಾರತದಿಂದ ಪರ್ಷಿಯಕ್ಕೂ ಅಲ್ಲಿಂದ ಅರಬ್ಬೀಯರ ಮೂಲಕ ಈಜಿಪ್ಟ್, ಮೊರಾಕೊ, ಸ್ಪೇನ್ ಮತ್ತು ಸಿಸಿಲಿಗೂ ಹರಡಿತು. 12ನೆಯ ಶತಮಾನದ ಮೊದಲಿನಲ್ಲಿ ಜಾಂಜಿಬಾರ್ ದೇಶದಲ್ಲಿ ಅದನ್ನು ಬೆಳೆಸಲಾಯಿತು. ಅದರ ಹೆಚ್ಚಿನ ವಿಸ್ತರಣೆಗೆ ಸ್ಪೇನಿಶರೂ ಪೋರ್ಚುಗೀಸರೂ ಕಾರಣರಾಗಿ, 15ನೆಯ ಶತಮಾನದಲ್ಲಿ ಕ್ಯಾನರಿ, ಕೇಪ್‌ವರ್ಡ್ ದ್ವೀಪಗಳಲ್ಲೂ ಪಶ್ಚಿಮ ಆಫ್ರಿಕದಲ್ಲೂ ಕೊಲಂಬಸನ ಎರಡನೆಯ ಪ್ರವಾಸದ ಮೂಲಕ ಅಮೆರಿಕದಲ್ಲೂ ಅದು ನೆಲೆಯೂರಿತು. ಮುಂದೆ ಕೇವಲ 1-1½ ಶತಮಾನಗಳಲ್ಲೇ ಮಧ್ಯ ಮತ್ತು ದಕ್ಷಿಣ ಅಮೆರಿಕಗಳ ಬಹುತೇಕ ಭಾಗದಲ್ಲಿ ಅದರ ಬೆಳೆಸು ವಿಸ್ತರಿಸಿತು. ಇದರಿಂದ ಬ್ರೆಜ಼ಿಲ್, ಪೆರು ಮತ್ತು ಮಧ್ಯ ಅಮೆರಿಕ ಹಾಗೂ ವೆಸ್ಟ್ ಇಂಡೀಸಿನ ವಿವಿಧ ದ್ವೀಪಗಳಲ್ಲಿ ಅದು ಮುಖ್ಯ ಬೆಳೆಸಾಯಿತು. ಅದೇ ಶತಮಾನದ ಅಂತ್ಯದಲ್ಲಿ ಮಾರಿಷಸ್ ಮತ್ತು ಆಸ್ಟ್ರೇಲಿಯದ ವಿವಿಧ ಪ್ರದೇಶಗಳಿಗೆ ಹರಡಿತು. ಹೀಗೆ ಪ್ರಪಂಚದ ಉಷ್ಣವಲಯದ ಎಲ್ಲ ಮುಖ್ಯ ರಾಷ್ಟ್ರಗಳಲ್ಲೂ ಕಬ್ಬು ಒಂದು ಮುಖ್ಯ ಬೆಳೆಯಾಯಿತು.

ಆದರೂ ಇತ್ತೀಚಿನ ಹಲವು ಸಂಶೋಧನೆಗಳು, ಕಬ್ಬಿನ ವಿವಿಧ ಜಾತಿಗಳು ಎರಡು ಮುಖ್ಯ ಪ್ರದೇಶಗಳಲ್ಲಿ ಬೇರೆ ಬೇರೆಯಾಗಿ ಅಭಿವೃದ್ಧಿ ಹೊಂದಿ ಅಲ್ಲಿಂದ ಉಳಿದೆಡೆಗೆ ಹರಡಿರಬಹುದೆಂಬ ಊಹೆಗೆ ಎಡೆಗೊಟ್ಟಿವೆ ; ಸಾಕರಂ ಅಫಿಸಿನೇರಂ ಪ್ರಭೇದದ ದಪ್ಪಗಾತ್ರದ ಕಬ್ಬಿನ ಬಗೆಗಳು ಪಾಲಿನೇಷಿಯದಲ್ಲಿ ಇದ್ದು ಅಲ್ಲಿಂದ ಜಾವ, ಮಾರಿಷಸ್ ಮತ್ತು ಭಾರತಗಳಲ್ಲಿ ಹರಡಿರಬಹುದೆಂದೂ ಸಣ್ಣ ಕಬು ಪ್ರಭೇದಗಳಾದ ಸಾ. ಬರ್ಬೆರಿ ಮತ್ತು ಸಾ. ಸೈನೆನ್ಸಿ ಭಾರತದಲ್ಲಿದ್ದು ಇತರ ಪ್ರದೇಶಗಳಿಗೆ ಪಸರಿಸಿರಬಹುದೆಂದೂ ಅಭಿಪ್ರಾಯಪಡಲಾಗಿದೆ.

ಸಾಮಾನ್ಯವಾಗಿ ಕಬ್ಬನ್ನು ಕಬ್ಬು ಜಲ್ಲೆಯ ತುಂಡಿನಿಂದಲೇ ಬೆಳೆಸಿ ವೃದ್ಧಿ ಪಡಿಸುತ್ತಾರೆ. 19 ನೆಯ ಶತಮಾನದ ಮಧ್ಯಾವಧಿಯವರೆಗೂ ಕಬ್ಬಿಗೆ ಬೀಜವಿದೆ ಯೆಂದು ಯಾರಿಗೂ ತಿಳಿದಿರಲಿಲ್ಲ. ಬಾರ್‌ಬಡಾಸಿನ ಪಾರಿಸ್ ಮತ್ತು ಆತಸ್ ಹಾಗೂ ಜಾವಾದ ಸೋಟೋಹಾಮಿಪ್ರಾಡ್‌ಜೋ ಎಂಬುವರು ಕಬ್ಬಿಗೆ ಬೀಜ ವಿದೆಯೆಂದು ಮೊದಲು ವಿವರಿಸಿದ್ದರೂ ಯಾರೂ ಅದಕ್ಕೆ ಹೆಚ್ಚಿನ ಗಮನವೀಯಲಿಲ್ಲ. ಮುಂದೆ ಜಾವಾದ ಸೋಲ್ಟವೇಡೆಲ್ ಎಂಬಾತ ಬೀಜಗಳನ್ನು ಶೇಖರಿಸಿ ಹೊಸ ಕಬ್ಬು ಜಾತಿಯನ್ನು ಬೆಳೆಸಿ ತೋರಿಸಿದಾಗಲೇ ಇದರಲ್ಲಿ ಜನರಿಗೆ ನಂಬಿಕೆಯಾದದ್ದು. ಸಾಮಾನ್ಯ ವಾಗಿ ನವೆಂಬರ್, ಡಿಸೆಂಬರ್ ತಿಂಗಳುಗಳಲ್ಲಿ ಕಬ್ಬಿನ ತುದಿಯಲ್ಲಿ ಸುಂದರವಾದ ನೀಳ ವಾದ ಗರಿಯಂತೆ ಕಂಡುಬರುವ ಸೂಲಂಗಿಯೇ ಅದರ ಪುಷ್ಪಗುಚ್ಛ. ಬೀಜ ಮತ್ತು ಹೊಸ ಕಬ್ಬು ತಳಿ ಉತ್ಪಾದನೆಗೆ ತಳಹದಿ. ಆದರೆ ಬೀಜ ಶೇಖರಿಸಿ ಬಿತ್ತು ವುದು ಹೊಸ ತಳಿಗಳ ಉತ್ಪನ್ನಕ್ಕಾಗಿ ಮಾತ್ರ. ಇತ್ತೀಚೆಗೆ ವಿವಿಧ ಉತ್ತಮ ತಳಿ ಗಳ ನಡುವೆ ಅಡ್ಡತಳಿಯೆಬ್ಬಿಸಿ ಬೀಜೋತ್ಪಾದನೆ ಮಾಡಿ ಹೊಸ ತಳಿಗಳನ್ನು ಪಡೆಯು ಲಾಗುತ್ತಿದೆ. ತಂದೆ ತಾಯಿಗಳ ಗುಣಗಳೆಲ್ಲ ಪೂರ್ಣ ತಿಳಿದಿರುವುದರಿಂದ ನಮಗೆ ಆವಶ್ಯಕವಾದ ಗುಣಗಳುಳ್ಳ ಹೊಸತಳಿಗಳ ಉತ್ಪಾದನೆಗೆ ಇದು ಅನುಕೂಲ ಮಾರ್ಗ. ಆದರೆ ಬೀಜದ ಮುಖಾಂತರ ಕಬ್ಬನ್ನು ಬೆಳೆಸುವ ವಿಧಾನದಲ್ಲಿನ ಮುಖ್ಯ ಅನಾನು ಕೂಲತೆಯೆಂದರೆ ಪ್ರತಿ ಬೀಜದ ಗಿಡವೂ ಬೇರೆ ಬೇರೆಯಾಗಿದ್ದು, ಅವು ಯಾವ ರೀತಿ ಯವು ಮತ್ತು ಅವು ಉಪಯುಕ್ತವೇ ಅಲ್ಲವೇ ಎಂದು ಮೊದಲೇ ಹೇಳಲಾಗುವುದಿಲ್ಲ. ಕಬ್ಬಿನ ಜಲ್ಲೆಯ ತುಂಡುಗಳನ್ನು ನೆಟ್ಟು ಬೆಳೆಸುವುದು ಸುಲಭ ; ಈ ಮಾರ್ಗಾನು ಸರಣೆಯಿಂದ ಜಾತಿಯ ವ್ಯತ್ಯಾಸವಿಲ್ಲದೆ ಗೊತ್ತಾದ ಮಿತಿಯಲ್ಲೇ ಬೆಳೆ ಕೈಸೇರುತ್ತದೆ.

ಕಬ್ಬು ಸಾಕರಂ ಎಂಬ ಜಾತಿಗೂ ಪೋಯೇಸೀ ಅಥವಾ ಗ್ರಾಮಿನೀ ಕುಟುಂಬಕ್ಕೂ ಸೇರಿದೆ. ಈ ಜಾತಿಯಲ್ಲಿ ಮುಖ್ಯವಾಗಿ 5 ಪ್ರಭೇದಗಳಿವೆ. 1 ಸಾಕರಂ ಅಫಿಸಿನೇರಂ–ಪಾಲಿನೇಷಿಯ ದ್ವೀಪಗಳ ಮೂಲವಾಸಿ. ದಪ್ಪ ಗಾತ್ರದ ಮೃದುಕಬ್ಬು ಇದು. 2 ಸಾಕರಂ ಬರ್ಬೆರಿ–ಪುರಾತನ ಕಾಲದಿಂದಲೂ ಭಾರತದ ಗಂಗಾನದಿ ಬಯಲಿನಲ್ಲಿ ಬೆಳೆಯಲಾಗುತ್ತಿರುವ ಸಣ್ಣ ಗಾತ್ರದ ಕಬ್ಬು. ವಾತಾ ವರಣದ ವೈವಿಧ್ಯವನ್ನೂ ಕ್ರಿಮಿಕೀಟಗಳ ಉಪದ್ರವವನ್ನೂ ತಡೆಯಬಲ್ಲ ಶಕ್ತಿ ಇದಕ್ಕೆ ಇದೆ. ಜೌಗು ಪ್ರದೇಶಗಳಲ್ಲಿ ಚೆನ್ನಾಗಿ ಬೆಳೆಯುತ್ತದೆ. ಇಳುವರಿ ಕಡಿಮೆ. 3 ಸಾಕರಂ ಸೈನೆನ್ಸಿ–ಸಾ. ಬರ್ಬೆರಿಯಂಥದೇ ಆದರೆ ಹೆಚ್ಚು ಮಂದವಾದ ಪ್ರಭೇದ. 4 ಸಾಕರಂ ಸ್ಪಾಂಟೇನಿಯಂ–ಪಶ್ಚಿಮ ವಲಯಗಳಲ್ಲೆಲ್ಲ ಕಂಡುಬರುವ ಕಾಡುಜಾತಿ. ಸಮಶೀತೋಷ್ಣವಲಯಗಳ ವಾತಾವರಣದಲ್ಲಿ ಬೆಳೆಯಲು ಉತ್ತಮವಾದದ್ದು. 5 ಸಾಕರಂ ರೋಬಸ್ಟಮ್–ನ್ಯೂಗಿನಿ ಪ್ರದೇಶದಲ್ಲಿನ ಕಾಡುಜಾತಿ. ಇವಲ್ಲದೆ ಪ್ರಪಂಚ ದಾದ್ಯಂತ ವ್ಯವಸಾಯದಲ್ಲಿರುವ ಅನೇಕ ತಳಿಗಳೂ ಇವೆ. ಇವುಗಳಲ್ಲಿ ಬಹುಪಾಲು

ಅಡ್ಡತಳಿಯೆಬ್ಬಿಕೆಯಿಂದ ಪಡೆಯಲಾದುವು. ಇವು ಬಹು ಸಂಖ್ಯಾಗುಣಿತ ಕ್ರೋಮೋಸೋಮುಗಳನ್ನು ಹೊಂದಿವೆ. ಏಕ ಗುಣಿತ ಕ್ರೋಮೋಸೋಮುಗಳ ಸಂಖ್ಯೆ ಕಬ್ಬಿನ ವಿವಿಧ ಬಗೆಗಳಲ್ಲಿ 15 ರಿಂದ 68 ರವರೆಗೂ ವ್ಯತ್ಯಾಸವಾಗಬಹುದು.

ಕಬ್ಬಿನ ವಿವಿಧ ತಳಿಗಳು ತಮ್ಮ ಬೆಳವಣಿಗೆಯ ರೀತಿ, ಎತ್ತರ, ಕಾಂಡದ ದಪ್ಪ, ಬಣ್ಣ, ಸಿಪ್ಪೆಯ ಕಾಠಿಣ್ಯ, ರಸದ ಮಾಧುರ್ಯ, ರಸಗೂಡಿ ಪಕ್ವಕ್ಕೆ ಬರುವ ಕಾಲ, ರೋಗ ನಿರೋಧಕ ಗುಣಗಳು ಇತ್ಯಾದಿ ಲಕ್ಷಣಗಳಲ್ಲಿ ವೈವಿಧ್ಯ ತೋರುತ್ತವೆ. ಮೈಸೂರಿನಲ್ಲಿ ಬೆಳೆಯುತ್ತಿರುವ ಕಬ್ಬುಗಳನ್ನು ಹಳೆಯ ತಳಿ ಹಾಗೂ ಹೊಸತಳಿಗಳೆಂದು ವಿಂಗಡಿಸಬಹುದು. ಹಳೆಯ ಬಗೆಯ ಕಬ್ಬುಗಳು ಹೆಚ್ಚು ರಸದಿಂದ ತುಂಬಿದವು ಮತ್ತು ಮೆದುವಾದವು. ಇವನ್ನು ಅರೆಯುವುದೂ ಅಗಿದು ತಿನ್ನುವುದೂ ಸುಲಭ. ಇವುಗಳಲ್ಲಿ ಮುಖ್ಯವಾದವು ರಸದಾಳಿ ಮತ್ತು ಪಟ್ಟಾಪಟ್ಟಿ ಎಂಬುವು. ರಸದಾಳಿ ಕಬ್ಬು ತುಂಬ ಮೆತುವಾದ ರಸಭರಿತ ಹಸಿರು ಮಿಶ್ರಿತ ಹಳದಿ ಸಿಪ್ಪೆಯ ಕಬ್ಬು. 10 ತಿಂಗಳಲ್ಲಿ ಪಕ್ವವಾಗುವ ಇದು ಸಾಧಾರಣ ಇಳುವರಿಯ ಜಾತಿ. ಪಟ್ಟಾಪಟ್ಟಿ ಎನ್ನುವುದು ರಸದಾಳಿಗಿಂತ ಗಟ್ಟಿಯಾದುದು. ಅದರ ಕಾಂಡದ ಮೇಲೆ ಉದ್ದ ಪಟ್ಟಿಗಳಿವೆ. ಸುಮಾರು 12 ತಿಂಗಳಲ್ಲಿ ಪಕ್ವವಾಗುವ ಇದು ಚೆನ್ನಾಗಿ ಇಳುವರಿ ಕೊಡಬಲ್ಲುದು. ಇದರ ಸಕ್ಕರೆಯ ಅಂಶವೂ ರಸದಾಳಿಗಿಂತ ಹೆಚ್ಚು. ಇವಲ್ಲದೆ ಚೀಣಿ ಅಥವಾ ಮರಕಬ್ಬು ಎಂಬ ಬಗೆಯೂ ಉಂಟು. ಚೀನ ದೇಶದಿಂದ ಬಂದುದೆಂದು ಹೇಳಲಾದ ಇದು ಉಳಿದೆರಡಕ್ಕಿಂತ ತೆಳುವಾದುದೂ ಗಟ್ಟಿಯಾದುದೂ ಆಗಿದೆ. ನೀರಿನ ಪೂರೈಕೆ ಕೊಂಚ ಕಡಿಮೆಯಿರುವ ಪ್ರದೇಶಗಳಲ್ಲೂ ಕ್ಷಾರೀಯ ಭೂಮಿಗಳಲ್ಲೂ ಚೆನ್ನಾಗಿ ಬೆಳೆಯಬಲ್ಲುದು. 18 ತಿಂಗಳುಗಳಲ್ಲಿ ಪಕ್ವವಾಗುತ್ತದೆ. ಇದರ ಇಳುವರಿಯೂ ಹೆಚ್ಚು. ಈಚಿಗೆ ಮಾರಿಷಸ್ ದ್ವೀಪಗಳಿಂದ ತಂದು ರೂಢಿಸಲಾದ ನಾಲ್ಕು ಬಗೆಯ ಕಬ್ಬುಗಳನ್ನು ಬೆಳೆಸುತ್ತಿದ್ದಾರೆ. ಇವೆಲ್ಲ ಬಹಳ ಗಟ್ಟಿ ಕಬ್ಬುಗಳಾಗಿದ್ದು ಎತ್ತರ ಹಾಗೂ ನೇರವಾಗಿ ಬೆಳೆಯುತ್ತವೆ. ಇವುಗಳ ಇಳುವರಿಯೂ ಹೆಚ್ಚು. ಇವುಗಳಲ್ಲಿ ಬಹಳ ಮುಖ್ಯವಾದುದು ರೆಡ್ ಮಾರಿಷಸ್ ತಳಿ. ಹೆಚ್ಚು ಮಳೆ ಬೀಳುವ ಪ್ರದೇಶಗಳಲ್ಲೂ ಚೆನ್ನಾಗಿ ಬೆಳೆಯುವ ಇದು ಮೈಸೂರಿನಲ್ಲಿ ಹಲವಾರು ಸಸಿ ಕಬ್ಬುಗಳ ಅಭಿವೃದ್ಧಿಯಲ್ಲಿ ಪ್ರಮುಖಪಾತ್ರ ವಹಿಸಿದೆ. ಈಗೀಗ ತಳೀಕರಣ ಪ್ರಯೋಗಗಳಿಂದ ಅಭಿವೃದ್ಧಿ ಪಡಿಸಲಾದ ಸಸಿಕಬ್ಬುಗಳು ಬಳಕೆಗೆ ಬಂದಿರುವುದರಿಂದ ಹಳೆಯ ಬಗೆಯ ಕಬ್ಬುಗಳ ಪ್ರಾಮುಖ್ಯ ಕಡಿಮೆಯಾಗಿದೆ. ಸಸಿ ಕಬ್ಬುಗಳನ್ನು ಬೀಜ ಬಿತ್ತನೆಯ ಮುಖಾಂತರ ಪಡೆಯುತ್ತಾರೆ. ವಿವಿಧ ಬಗೆಯ ಕಬ್ಬುಗಳನ್ನು ಒಂದೆಡೆ ಬೆಳೆಸಿ ಅವುಗಳಲ್ಲಿ ಸೂಲಂಗಿ ಬಂದಾಗ ಅವನ್ನು ಸಹಜವಾಗಿಯೊ ಅಥವಾ ಕೈಯಿಂದ ಪರಾಗಸ್ಪರ್ಶಕ್ರಿಯೆ ನಡೆಸಿಯೊ ಬೀಜೋತ್ಪಾದನೆ ಮಾಡುತ್ತಾರೆ. ಹೀಗೆ ಉತ್ಪತ್ತಿಯಾದ ಬೀಜಗಳನ್ನು ಬಿತ್ತಿ ಅದರಿಂದ ಬರುವ ಸಸಿಗಳನ್ನು ಸೂಕ್ಷ್ಮವಾಗಿ ಅವಲೋಕಿಸಿ ಅವುಗಳಲ್ಲಿ ಯಾವುವಾದರೂ ಒಳ್ಳೆಯ ಗುಣಗಳುಳ್ಳ ಸಸಿಗಳಿದ್ದರೆ ಅವನ್ನು ಆರಿಸಿ ಬೇರೆ ಮಾಡಿ ವ್ಯವಸಾಯಕ್ಕೆ ಉಪಯೋಗಿಸುತ್ತಾರೆ. ಕೆಲವು ಬಾರಿ ಎಕ್ಸ್–ರೇ ಅಥವಾ ರಾಸಾಯನಿಕಗಳನ್ನು ಬಳಸಿ ಸಸಿಗಳಲ್ಲಿ ಒಳ್ಳೆಯ ಗುಣ ಲಕ್ಷಣಗಳು ಬರುವಂತೆ ಮಾಡಲು ಪ್ರಯತ್ನಿಸುವುದೂ ಉಂಟು. ಹೀಗೆ ಪಡೆದ ಕಬ್ಬುಗಳಲ್ಲಿ ಹಲವಾರು ಬಗೆಗಳಿದ್ದು ಮುಖ್ಯವಾದುವು, ಬಿಳ್ಳೂರು ಪಟ್ಟಿ, ಎಚ್. ಎಮ್. 544, ಎಚ್.ಎಮ್. 320, ಎಚ್.ಎಮ್. 661 ಇತ್ಯಾದಿ. ಕೊಯಮತ್ತೂರಿನ ಕಬ್ಬು ಸಂಶೋಧನಾ ಕೇಂದ್ರದಲ್ಲೂ ಕಬ್ಬಿನ ತಳೀಕರಣ ಪ್ರಯೋಗಗಳು ನಡೆಯುತ್ತಿದ್ದು ಅಲ್ಲಿ ಹಲವಾರು ವಿಶ್ವವಿಖ್ಯಾತ ಕಬ್ಬಿನ ತಳಿಗಳನ್ನು ಅಭಿವೃದ್ಧಿ ಪಡಿಸಲಾಗಿದೆ. ಇವೆಲ್ಲ ತಮ್ಮ ಗಟ್ಟಿತನಕ್ಕೂ ರೋಗ ನಿರೋಧಕ ಶಕ್ತಿಗೂ ಹೆಚ್ಚಿನ ಪ್ರಮಾಣದ ಇಳುವರಿಗೂ ವಿವಿಧ ಭೂಗುಣಗಳಿಗೆ ಹೊಂದಿಕೊಳ್ಳುವ ಶಕ್ತಿಗೂ ಹೆಸರಾಗಿವೆ. ಇವುಗಳಲ್ಲಿ ಮುಖ್ಯವಾದುವು ಕೊ. 213, ಕೊ. 290, ಕೊ. 312, ಕೊ. 347, ಕೊ. 331, ಕೊ. 419, ಕೊ. 421 ಮುಂತಾದುವು. ಬರಿಯ ಕಬ್ಬಿನ ವಿವಿಧ ತಳಿಗಳ ನಡುವೆಯಲ್ಲದೆ ಕಬ್ಬಿಗೂ ಜೋಳ, ಬಿದಿರು ಮುಂತಾದ ಜಾತಿಗಳಿಗೂ ನಡುವೆ ಅಡ್ಡತಳಿಯೆಬ್ಬಿಕೆಯ ಪ್ರಯೋಗಗಳು ನಡೆಯುತ್ತಿವೆ. ಕೊ. 351, ಕೊ. 352, ಕೊ. 357 ಮುಂತಾದುವು ಕಬ್ಬು ಮತ್ತು ಜೋಳಗಳ ನಡುವಣ ಅಡ್ಡತಳಿಯೆಬ್ಬಿಕೆಯಿಂದ ಪಡೆಯಲಾದ ಕಬ್ಬಿನ ತಳಿಗಳು.

**ಸಸ್ಯ ವಿವರಣೆ :** ಕಬ್ಬಿನ ಗಿಡವನ್ನು ಕಾಂಡ, ಬೇರು ಮತ್ತು ಎಲೆಗಳೆಂದು ಮೂರು ಭಾಗಗಳಾಗಿ ವಿಂಗಡಿಸಬಹುದು. ಕಾಂಡವನ್ನು ಜಲ್ಲೆಯೆಂದು ಕರೆಯುತ್ತಾರೆ. ಕಾಂಡದಲ್ಲಿ ಭೂಮಿಯ ಒಳಗಿರುವ ಕೂಳೆ ಎಂಬ ಭಾಗ ಮತ್ತು ನೆಲದ ಮೇಲೆ ನೇರವಾಗಿ ಬೆಳೆಯುವ ಭಾಗಗಳನ್ನು ಗುರುತಿಸಬಹುದು. ಎರಡು ಭಾಗಗಳಲ್ಲಿಯೂ ಅನೇಕ ಗಿಣ್ಣುಗಳನ್ನು ನೋಡಬಹುದು. ಈ ಗಿಣ್ಣುಗಳು ನೆಲದ ಮೇಲಿನ ಕಾಂಡಭಾಗದಲ್ಲಿ ದೂರ ದೂರವಾಗಿದ್ದು ನಿರ್ದಿಷ್ಟ ಅಂತರವನ್ನು ಹೊಂದಿರುತ್ತವೆ. ನೆಲದೊಳಗಿನ ಭಾಗದಲ್ಲಿ ಅವುಗಳ ನಡುವಣ ಅಂತರ ಕಡಿಮೆ. ಗಿಣ್ಣುಗಳಲ್ಲಿ ಕಾಂಡವನ್ನು ಸುತ್ತುವರಿದಂತೆ ಬಿಳಿಯ ಪಟ್ಟಿಯಿದೆ. ಇದರ ಮೇಲೆಲ್ಲ ಅನೇಕ ಚುಕ್ಕೆಗಳಿವೆ. ಒಂದೊಂದು ಚುಕ್ಕೆಯೂ ಒಂದೊಂದು ಬೇರಿನ ಮೊಳಕೆಯನ್ನು ಪ್ರತಿನಿಧಿಸುತ್ತದೆ. ಅಲ್ಲದೆ ಒಂದೊಂದು ಗಿಣ್ಣಿನಲ್ಲೂ ಒಂದೊಂದು ಕಣ್ಣು ಇದೆ. ಪರ್ಯಾಯವಾಗಿ ಜೋಡಣೆಗೊಂಡಿರುವ ಈ ಕಣ್ಣುಗಳು ವಿವಿಧ ಬಗೆಯ ಕಬ್ಬುಗಳಲ್ಲಿ ವಿವಿಧ ಆಕಾರಗಳನ್ನು ಹೊಂದಿವೆ. ಒಂದೊಂದು ಕಣ್ಣೂ ಒಂದೊಂದು ಕಂಕುಳು ಮೊಗ್ಗು. ಜಲ್ಲೆಯನ್ನು ತುಂಡುಗಳಾಗಿ ಕತ್ತರಿಸಿ ನೆಲದಲ್ಲಿ ನೆಟ್ಟು ಬೆಳೆಸಿದಾಗ ಬೇರಿನ ಮೊಳಕೆಗಳು ಬೇರುಗಳಾಗಿಯೂ ಕಣ್ಣು ಹೊಸ ಕಬ್ಬಿನ ಕಾಂಡವಾಗಿಯೂ ಬೆಳೆಯುತ್ತವೆ. ಕಾಂಡ ಸಾಮಾನ್ಯವಾಗಿ 10′–12′ ಎತ್ತರ ಬೆಳೆಯುತ್ತದೆ. ವ್ಯವಸಾಯದ ರೀತಿ ಹಾಗೂ ಭೂಗುಣ ಉತ್ತಮವಾಗಿದ್ದರೆ ಸುಮಾರು 27′ ವರೆಗೂ ಬೆಳೆಯುವುದುಂಟು. ಅದರ ಅಗಲ 1–8 ಸೆಂ.ಮೀ. ವರೆಗೂ ವ್ಯತ್ಯಾಸವಾಗುತ್ತದೆ. ಸಾಧಾರಣವಾಗಿ ಬುಡಭಾಗದಲ್ಲಿ ದಪ್ಪ ಹೆಚ್ಚು. ಮೇಲಕ್ಕೆ ಹೋದಂತೆಲ್ಲ ಕ್ರಮೇಣ ಸಣ್ಣದಾಗುತ್ತದೆ ಕಾಂಡದ ಬಣ್ಣದಲ್ಲೂ ವೈವಿಧ್ಯವಿದೆ. ವಿವಿಧ ರೀತಿಯ ಹಸಿರು ಛಾಯೆ, ಹಳದಿ, ನಸುಗೆಂಪು, ಕೆಂಪು–ಇವು ಸಾಮಾನ್ಯ. ಕೆಲವು ಕಬ್ಬುಗಳಲ್ಲಿ ಉದ್ದುದ್ದನೆಯ ಪಟ್ಟಿಗಳೂ ಇವೆ. ಅಂತರಗಿಣ್ಣುಗಳ ಮೇಲೆಲ್ಲ ತೆಳವಾದ ಮಯಣದ ಲೇಪವಿದೆ. ಸಾಮಾನ್ಯವಾಗಿ ಒಂದು ಗಿಡಕ್ಕೆ ಒಂದೇ ಪ್ರಮುಖ ಕಾಂಡವಿದೆಯಾದರೂ ಕೆಲವು ಬಾರಿ ಕೆಳಭಾಗದ ಗಿಣ್ಣುಗಳಿಂದ ಹಲವಾರು ರೆಂಬೆಗಳಂಥ ದ್ವಿತೀಯ ಮತ್ತು ತೃತೀಯ ಶ್ರೇಣಿಯ ಜಲ್ಲೆಗಳೂ ಬೆಳೆಯುತ್ತವೆ.

ಬೇರು ತೊಡಕು ಬೇರಿನ ಸಮೂಹಕ್ಕೆ ಸೇರಿದ್ದು. ಸ್ಥೂಲವಾಗಿ ಎಲ್ಲ ಬೇರುಗಳು ಒಂದೇ ರೀತಿಯವಾಗಿದ್ದರೂ ಮೂರು ಬಗೆಯವನ್ನು ಗುರುತಿಸಬಹುದು. 1 ಆಳಕ್ಕೆ ಬೆಳೆಯದೆ ಮೇಲ್ಮಟ್ಟದಲ್ಲೇ ಹರಡಿ ಕವಲೊಡೆದು ಬೆಳೆಯುವ ಮೇಲ್ಪದರದ ಬೇರುಗಳು. 2 ದಪ್ಪ ಗಾತ್ರದ ಬಿಳಿಯ ಬಣ್ಣದ ಆನಿಕೆ ಬೇರುಗಳು–ಇವು ಕಬ್ಬು ದೃಢವಾಗಿ ಬೆಳೆದು ನಿಲ್ಲಲು ಆಸರೆ ಒದಗಿಸುತ್ತವೆ. 3 ಕಾಂಡದ ತಳಭಾಗದಿಂದ ಭೂಮಿಯೊಳಕ್ಕೆ 8′–14′ ಆಳಕ್ಕೆ ಇಳಿದು ಬೆಳೆಯಬಲ್ಲ ಹುರಿ ಬೇರುಗಳು–ಇವೇ ಭೂಮಿಯಿಂದ ನೀರು ಮತ್ತು ಆಹಾರವನ್ನು ಹೀರಿಕೊಳ್ಳುವ ಬೇರುಗಳು. ಕಾಂಡದ ಎರಡೂ ಪಾರ್ಶ್ವಗಳಲ್ಲಿ ಪರ್ಯಾಯ ಜೋಡಣೆಗೊಂಡಿರುವ ನೀಳವಾದ ಕತ್ತಿಯಂಥಎಲೆಗಳಿವೆ. ಒಂದು ಗಿಡಕ್ಕೆ ಸಾಮಾನ್ಯವಾಗಿ 10 ಎಲೆಗಳಿರುತ್ತವೆ. ಒಂದೊಂದು ಎಲೆಯೂ 3′–4′ ಉದ್ದ ಮತ್ತು 2″–3″ ಅಗಲ ಇದೆ. ಎಲೆಯಲ್ಲಿ ಕವಚದಂಥ ಬುಡಭಾಗವೂ ನೀಳವಾದ ಅಲಗು ಭಾಗವೂ ಇವೆ. ಇವೆರಡೂ ಕೂಡುವ ಸ್ಥಳದಲ್ಲಿ ಕಿವಿಯ ಆಲೆಯಂಥ ಆರಿಕಲ್ ಮತ್ತು ಡ್ಯೂ ಲ್ಯಾಪ್ ಎಂಬ ಬೆಳವಣಿಗೆಗಳಿವೆ. ಎಲೆಯ ಅಂಚು ಬಹುಸೂಕ್ಷ್ಮವಾದ ಗರಗಸದ ಹಲ್ಲಿನಂತಿದೆ. ಎಲೆಗಳ ನಾಳವಿನ್ಯಾಸ ಸಮಾನಾಂತರ ಮಾದರಿಯದು. ಎಲೆಯ ಬುಡ ಕಾಂಡದ ಸ್ವಲ್ಪ ಭಾಗವನ್ನು ಸುತ್ತಿಕೊಂಡಿದೆ. ಗಿಡ ಪೂರ್ಣ ಬೆಳೆದ ಮೇಲೆ ಅದರ ತುದಿಯಿಂದ ನೀಳವಾದ ಹೂಗೊಂಚಲು ಹೊರಬರುತ್ತದೆ. ವಿಪುಲವಾಗಿ ಕವಲೊಡೆದ ಇದು ಸಂಕೀರ್ಣ ಪುಷ್ಪಗುಚ್ಛ ಮಾದರಿಯದು. ಇದನ್ನು ಸೂಲಂಗಿ ಎನ್ನುತ್ತಾರೆ. ಹೂಗೊಂಚಲಿನ ಮಧ್ಯೆ ಒಂದು ಮುಖ್ಯ ಕಾಂಡವೂ (ರೇಕಿಸ್) ಅದರಿಂದ ಎಲ್ಲ ದಿಕ್ಕುಗಳಲ್ಲಿಯೂ ಹೊರಟುಬರುವ ಕವಲು, ಉಪಕವಲುಗಳೂ ಇವೆ. ಪ್ರತಿಯೊಂದು ಉಪಕವಲಿನ ಮೇಲೂ ಜೊತೆ ಜೊತೆಯಾಗಿ ಜೋಡಣೆಗೊಂಡಿರುವ ಅನುಶೂಕಿಗಳಿವೆ (ಸ್ಪೈಕ್‌ಲೆಟ್ಸ್). ಇವುಗಳಲ್ಲಿ ಒಂದಕ್ಕೆ ತೊಟ್ಟಿಲ್ಲ, ಇನ್ನೊಂದಕ್ಕೆ ಉದ್ದನೆಯ ತೊಟ್ಟಿದೆ. ಒಂದೊಂದು ಅನುಶೂಕಿಯಲ್ಲೂ ಎರಡು ಹೂಗಳಿವೆ. ಇವುಗಳಲ್ಲಿ ಒಂದು ಬರಡೂ ಇನ್ನೊಂದು ಫಲವತ್ತಾದುದೂ ಆಗಿವೆ. ಫಲವತ್ತಾದ ಹೂವಿನಲ್ಲಿ 3 ಕೇಸರಗಳೂ ಒಂದು ಉಚ್ಚಸ್ಥಾನದ ಏಕಕೋಶಿ ಅಂಡಾಶಯವೂ ಇವೆ. ಶಲಾಕೆ ಎರಡಾಗಿ ಕವಲೊಡೆದಿದೆಯಲ್ಲದೆ ಹಕ್ಕಿಗಳ ಗರಿಯಂತಿದೆ. ಅನುಶೂಕಿಗಳ ಬುಡದಲ್ಲಿ ಉದ್ದನೆಯ ನಯವಾದ ಬಿಳಿಯ ಬಣ್ಣದ ಕೂದಲುಗಳಿವೆ. ಅಂಡಾಶಯದಲ್ಲಿ ಒಂದೇ ಅಂಡಕವಿದೆ. ಹೂಗಳು ಸಾಮಾನ್ಯವಾಗಿ ರಾತ್ರಿ ಅಥವಾ ಬೆಳಗಿನ ಜಾವ ಅರಳುತ್ತವೆ. ಹೂಗಳು ಅರಳಿದಾಗ ಮೊದಲು ಶಲಾಕೆ ಹೊರಬರುತ್ತದೆ. ಅನಂತರ ಕೇಸರಗಳು ಪರಾಗವನ್ನು ಹೊರಚೆಲ್ಲುತ್ತವೆ. ಅಲ್ಲದೆ ಕಬ್ಬಿನಲ್ಲಿ ಅಂಡಕಗಳೂ ಪರಾಗವೂ ಬಹುತೇಕ ಬಂಜೆಯಾಗಿರುತ್ತವೆ. ಪರಾಗದ ಮೊಳೆಯುವ ಸಾಮರ್ಥ್ಯವೂ ಬಹಳ ಸ್ವಲ್ಪ ಸಮಯ ಮಾತ್ರವಿರುತ್ತದೆ. ತತ್ಪರಿಣಾಮವಾಗಿ ಕಬ್ಬಿನಲ್ಲಿ ಬೀಜೋತ್ಪಾದನೆ ಕಡಿಮೆ. ಬೀಜಗಳು ಉತ್ಪತ್ತಿಯಾದರೂ ಅವು ಬಹಳ ಸೂಕ್ಷ್ಮವಾದವು ಮತ್ತು ಅವುಗಳ ಮೊಳಕೆಯೊಡೆಯುವ ಸಾಮರ್ಥ್ಯ ಬಹಳ ದಿನ ಇರದು. ಇವೆಲ್ಲ ಕಾರಣಗಳಿಂದಾಗಿ ಕಬ್ಬಿನಲ್ಲಿ ಬೇರೆ ಬೇರೆ ತಳಿಗಳ ನಡುವೆ ಅಡ್ಡತಳಿಯೆಬ್ಬಿಕೆಯ ಪ್ರಯೋಗಗಳನ್ನು ನಡೆಸುವುದು ಬಹಳ ಕಷ್ಟ.

**ವ್ಯವಸಾಯ :** ಕಬ್ಬನ್ನು ವರ್ಷದ ಯಾವ ಕಾಲದಲ್ಲಾದರೂ ನೆಡಬಹುದು ಆದರೆ ಚಳಿ ಹೆಚ್ಚಾಗಿದ್ದಾಗ ನೆಟ್ಟರೆ ಮೊಳಕೆ ಹೊರಡುವುದು ನಿಧಾನ. ಭೂಮಿ ಬಹಳ ಫಲವತ್ತಾಗಿರಬೇಕು, ಗೊಬ್ಬರವನ್ನು ಚೆನ್ನಾಗಿ ಹಾಕಿ, ಅಧಿಕ ಪ್ರಮಾಣದಲ್ಲಿ ನೀರು ಹಾಯಿಸಿದರೆ ಬಹಳ ಉತ್ತಮ. ಸುತ್ತಮುತ್ತಲಿನ ಉಷ್ಣತೆಯೂ 80° ಫಾ.

1



2



3



4



5



6



7



ಕಬ್ಬು : 1 ಬಿತ್ತನೆ. 2 ಚಿಕ್ಕಮುರಿಕಟ್ಟಿದ ಕಬ್ಬು. 3 ದೊಡ್ಡಮುರಿಕಟ್ಟಿದ ಮೋಳೆ. 4 ಪೂರಾ ಬೆಳೆದ ಕಬ್ಬು 5 ಕಬ್ಬಿನ ಜಲ್ಲೆ.
6 ಸೊಲಂಗಿ ಕಟ್ಟಿದ ಕಬ್ಬಿನ ತೋಟ 7 ಕಬ್ಬಿನ ಕಂತೆ

ಗಿಂತ ಹೆಚ್ಚಾಗಿದ್ದರೆ ಚೆನ್ನು. ಭೂಮಿಯನ್ನು ಸಾಧ್ಯವಾದಷ್ಟು ಆಳವಾಗಿ ಉಳಬೇಕು. ಮೊದಲು 12″–15″ ಆಳಕ್ಕೆ ಉಳುಮೆಮಾಡುವುದು ಉತ್ತಮ. ಇದರಿಂದ ಕಬ್ಬಿನ ಬಿತ್ತನೆಯನ್ನು ಪೂರ್ಣವಾಗಿ ಮುಚ್ಚಿದಂತೆ ನೆಡಲೂ ಮುಂದೆ ಅದಕ್ಕೆ ಸಾಕಷ್ಟು ಮಣ್ಣನ್ನು ವಾರಿಹಾಕಲು ಅನುಕೂಲ. ಹೀಗೆ ಸಾಲು ತೆಗೆದ ಅನಂತರ ನೀರು ಬಸಿಯಲು ಕಡಗುಗಳನ್ನೂ ನೀರು ಕಟ್ಟಲು ಅನುಕೂಲವಾಗುವಂತೆ ಅಲ್ಲಲ್ಲಿ ನೀರುಕಾಲುವೆಗಳನ್ನೂ ತೆಗೆಯಬೇಕು. ಸಾಲುಗಳಲ್ಲಿ ನೀರು ಬಿಟ್ಟು ನೀರು ನಿಂತಿರುವಾಗಲೇ ಕಬ್ಬಿನ ಬಿತ್ತನೆಗಳನ್ನು ಒಂದರ ಪಕ್ಕ ಒಂದರಂತೆ ಜೋಡಿಸಿ ಕೆಸರಿನಲ್ಲಿ ತುಳಿದು ಬಿಡಬಹುದು. ಇದೇ ಸಾಮಾನ್ಯ ಬಳಕೆಯಲ್ಲಿರುವ ಪದ್ಧತಿ. ಲವಡೆ ಪೂರ್ಣ ಕಬ್ಬನ್ನೇ ನೆಡಲಾಗುತ್ತದೆ. ಇತರೆಡೆ ಸಾಲಿನಲ್ಲಿ 4″–6″ ಅಂತರಕ್ಕೆ ಒಂದರಂತೆ 3″–4″ ಆಳದ ಗುಂಡಿ ಮಾಡಿ ಅದರಲ್ಲಿ 3–4 ಬಿತ್ತನೆ ನೆಡುವುದೂ ಉಂಟು. ಹಲವು ಪ್ರದೇಶಗಳಲ್ಲಿ ಗುಳಿಬಿತ್ತನೆ ಮಾಡುವ ಅಭ್ಯಾಸವಿದೆ. ಕಬ್ಬು ನೆಡುವ ಗದ್ದೆಗಳನ್ನು ಉತ್ತು ಹಸನುಗೊಳಿಸಿದ ಮೇಲೆ 3′–4′ ಅಗಲದ ಮತ್ತು ಅನುಕೂಲಕ್ಕೆ ತಕ್ಕಂಥ ನೀಳದ ಮಡಿಗಳನ್ನು ಮಾಡಿ, ಅದರಲ್ಲಿ ಅಡಿಗೆ ಒಂದರಂತೆ ಗುಳಿತೋಡಿ, ಗುಳಿಗೊಂದರಂತೆ ಬಿತ್ತನೆ ಮಾಡುತ್ತಾರೆ. ಬಿತ್ತನೆ 1″–2″ ಆಳಕ್ಕಿಂತ ಹೆಚ್ಚಾಗಿರಕೂಡದು. ಬಿತ್ತನೆಯನ್ನು ಸರಿಯಾದ ರೀತಿಯಲ್ಲಿ ಇಟ್ಟು ತೇವಮಾಡಿದ ಸಾಲಿನಲ್ಲಿ ಕೈಯಿಂದ ಅಥವಾ ಕಾಲಿನಿಂದ ತುಂಡುಗಳನ್ನು ಅದುಮಬಹುದು. ಅವು ಒಂದು ಪಕ್ಕಕ್ಕೇ ಇರಬೇಕು. ರೀತಿ ಯಾವುದೇ ಇರಲಿ, ಗಿಣ್ಣಿನ ಕಣ್ಣು ಪಕ್ಕದಲ್ಲಿರುವಂತೆ ನೆಡುವುದು ಮುಖ್ಯ. ಇದರಿಂದ ಬಿತ್ತನೆಯಲ್ಲಿನ ಮೂರು ಕಣ್ಣುಗಳೂ ಅರಳಲು ಅನುಕೂಲವಾಗುತ್ತದೆ. ತುದಿಭಾಗದಲ್ಲಿರುವ ಮೊಗ್ಗು ಚೆನ್ನಾಗಿ ಬೆಳೆದು ಉತ್ತಮ ಕಬ್ಬಾಗುತ್ತದೆ. ತಳದಲ್ಲಿನ ಮೊಗ್ಗು ಬೆಳೆಯುವುದು ಬಹು ನಿಧಾನ. ಆದ್ದರಿಂದ ತುದಿಭಾಗದ ಕಬ್ಬು ತುಂಡುಗಳನ್ನು ಬಿತ್ತನೆಗಾಗಿ ಉಪಯೋಗಿಸಿದಲ್ಲಿ ಒಳ್ಳೆಯದು. ಹೆಚ್ಚು ಫಲವತ್ತಾದ ಭೂಮಿಯಲ್ಲಿ 4′ಅಂತರದ ಸಾಲುಗಳಲ್ಲಿಯೂ ಸಾಮಾನ್ಯ ಫಲವತ್ತಾದ ಭೂಮಿಯಲ್ಲಿ $2\frac{1}{2}$′ ಅಂತರದ ಸಾಲುಗಳಲ್ಲಿಯೂ ನೆಡುವುದು ಉತ್ತಮವೆಂದು ಅನುಭವದಿಂದ ಕಂಡುಬಂದಿದೆ. ಒಂದು ಎಕರೆ ಪ್ರದೇಶಕ್ಕೆ ಉತ್ತಮವಾಗಿ ಆರಿಸಿದ 10,000 ಬಿತ್ತನೆ ತುಂಡುಗಳು ಸಾಕು.

ಕಬ್ಬಿನ ತಾಕು ಕಳೆರಹಿತವಾಗಿರುವುದು ಮುಖ್ಯ. ಬಿತ್ತನೆ ನೆಟ್ಟ 2 ವಾರಗಳಲ್ಲಿ ಮೊದಲ ಕಳೆ ತೆಗೆಯಬೇಕು. ಮುಂದೆಯೂ ಕಳೆಯಿಲ್ಲದಂತೆ ಎಚ್ಚರ ವಹಿಸಬೇಕು. ಹೋತು ಬಂದಿದ್ದಲ್ಲಿ ಮೊಳೆತ ಬಿತ್ತನೆಗಳನ್ನು ನೆಟ್ಟು ಸರಿಪಡಿಸಬೇಕು. 6 ವಾರಗಳ ಅನಂತರ ಕಳೆ ತೆಗೆದು ನೀರು ಕಟ್ಟಿ ಹದವಿದ್ದಾಗ ಮೊದಲ ಮೇಲು ಗೊಬ್ಬರ ಒದಗಿಸಿ ಸಾಲನ್ನು ಉತ್ತು ಮಣ್ಣು ಏರಿ ಹಾಕಬೇಕು. ಇದು ಬುಡಕ್ಕೆ ದೃಢತೆ ಒದಗಿಸುವುದಲ್ಲದೆ ಗೊಬ್ಬರವನ್ನು ಮುಚ್ಚಿ ಕಾಂಡ ಕೊರೆಯುವ ಹುಳದ ಬಾಧೆಯನ್ನು ಸ್ವಲ್ಪಮಟ್ಟಿಗೆ ತಡೆಗಟ್ಟಲು ಸಹಾಯಕವಾಗುತ್ತದೆ. 4 ವಾರಗಳ ಅನಂತರ ಇನ್ನೊಂದು ಸಲ ಅದೇ ರೀತಿ ಮುಂದೆ ಸೂಚಿಸಿರುವ ಪ್ರಮಾಣದಲ್ಲಿ ರಾಸಾಯನಿಕ ಗೊಬ್ಬರ ಒದಗಿಸಬೇಕು. ಕೊನೆಯದಾಗಿ, ಮೂರನೆಯ ಸಲ ಹೆಚ್ಚು ಪ್ರಮಾಣದಲ್ಲಿ ಸಾರಜನಕ ಗೊಬ್ಬರ ಒದಗಿಸಿ ಮಣ್ಣು ವಾರಿ ಹಾಕಬೇಕು. ನೀರಿನ ಪೂರೈಕೆ ಸಂಪೂರ್ಣವಾಗಿರಬೇಕು. ಇಲ್ಲದಿದ್ದರೆ ಇಳುವರಿ ತಗ್ಗುತ್ತದೆ. ಅದರಲ್ಲೂ ಗೊಬ್ಬರ ಕೊಟ್ಟು, ಕೊನೆಯ ಸಲ ಮುರಿಮಾಡಿರುವ ಕಬ್ಬಿಗೆ ಮುಂದೆ 4–5 ತಿಂಗಳ ಕಾಲ ಹೆಚ್ಚು ನೀರಿನ ಆವಶ್ಯಕತೆ ಇದೆಯಾಗಿ ಒಣಗಲು ಬಿಡಕೂಡದು. ನೀರಿನ ಪೂರೈಕೆಗೆ ಗಮನವಿತ್ತಂತೆ ಹೆಚ್ಚಿನ ನೀರು ಬಸಿಯಲೂ ಅನುಕೂಲವೇರ್ಪಡಿಸಿ ಕಡಗುಗಳು ಪೂರ್ಣ ತೆರವಾಗಿದ್ದು ಅಡಚಣೆಯಾಗದಂತೆ ಎಚ್ಚರವಹಿಸಬೇಕು. ಕಬ್ಬು ಬೆಳೆದಂತೆಲ್ಲ ತಳದ ಒಣ ತರಗನ್ನು ಕಬ್ಬಿನ ತಂಡೆಗೆ ಸುತ್ತಿ ಕಟ್ಟುತ್ತಾರೆ. ಇದರಿಂದ ಇಲಿಗಳ ಕಾಟ ಕಡಿಮೆಯಾಗಿ ಒಂದಕ್ಕೊಂದು ಆಸರೆಯಾಗಿ ಕಬ್ಬುಗಳು ಒರಗಿ ಬೀಳುವುದಿಲ್ಲ. ತಳದ ಎಲೆ ಗರಿಗಳು ಒಣಗುತ್ತಿದ್ದಂತೆಲ್ಲ ಅವನ್ನು ತೆಗೆದು ಕಬ್ಬು ಕಾಣುವಂತೆ ಏರ್ಪಡಿಸುವುದೂ ಸಾಮಾನ್ಯವಾಗಿದೆ. ನರಿ, ಇಲಿ ಮುಂತಾದುವು ಒಳಗೆ ಸೇರದಿರಲು ಇದರಿಂದ ಸಹಾಯವಾಗುತ್ತದೆ.

ಕಬ್ಬು ತನ್ನ ಪೂರ್ಣ ಬೆಳವಣಿಗೆಗೆ ಹೆಚ್ಚಿನ ಗೊಬ್ಬರದ ಅಂಶಗಳನ್ನು ಉಪಯೋಗಿಸುತ್ತದೆ. 40 ಟನ್ನಿನಷ್ಟು ಕಬ್ಬಿನ ಬೆಳೆ ಭೂಮಿಯಿಂದ 105 ಪೌಂಡು ಸಾರಜನಕ ; 63 ಪೌಂಡು ರಂಜಕ ; 315 ಪೌಂಡು ಪೊಟ್ಯಾಷ್ ; 75 ಪೌಂಡು ಸುಣ್ಣ ಮತ್ತು ವಿವಿಧ ಅಂತರದ ಇತರ ಆಹಾರಾಂಶವನ್ನು ಉಪಯೋಗಿಸಿಕೊಳ್ಳುತ್ತವೆಂದು ನೋಯೆಲ್ ಡೀರ್ ವಿವರಿಸಿದ್ದಾರೆ.

ಸಾಮಾನ್ಯವಾಗಿ ಕಬ್ಬು ಬೆಳೆದ ಜಮೀನುಗಳಲ್ಲಿ ಅದರ ಬೇರುಗಳಿಂದಲೇ $\frac{1}{2}$ದಿಂದ 1 ಟನ್ನು ಸಾವಯವ ವಸ್ತುಗಳು ಉತ್ಪನ್ನವಾಗುತ್ತವೆಂದು ತಿಳಿದುಬಂದಿದೆ. ತಳಭಾಗಗಳನ್ನು ಭೂಮಿಗೆ ಉತ್ತುಬಿಟ್ಟಲ್ಲಿ ಅದರಿಂದಲೇ ಸಾಕಷ್ಟು ಸಾವಯುವ ವಸ್ತುಗಳು ಉತ್ಪನ್ನವಾಗುತ್ತವೆ. ಸಾಧ್ಯವಾದಲ್ಲೆಲ್ಲ ಹಸಿರೆಲೆ ಗೊಬ್ಬರದ ಬೆಳೆಗಳನ್ನು ಬೆಳೆಸಿ ಉತ್ತುಬಿಡಬೇಕು. ಇದಕ್ಕೆ ಡೈಂಚಾ, ಅಪಸಣಬು ಅಥವಾ ಸೆಸ್ಬೇನಿಯ ಅನುಕೂಲವಾದದ್ದು. ಬಿತ್ತನೆಗೆ ಮುಂಚೆ ಎಕರೆಗೆ 20–25 ಗಾಡಿ ಕಾಂಪೋಸ್ಟ್ ಗೊಬ್ಬರವನ್ನು ಚೆಲ್ಲಿ ಉತ್ತುಬಿಡಬೇಕು. ಅನಂತರ ಸಾಲುತೆಗೆಯಬೇಕು. ಸೂಪರ್ ಫಾಸ್ಫೇಟ್ ಮತ್ತು ಪೊಟ್ಯಾಷ್ ಗೊಬ್ಬರಗಳನ್ನು ಬಿತ್ತನೆ ನೆಡುವ ಮುನ್ನ ಸಾಲುಗಳಲ್ಲಿ ಹರಡಬೇಕು.

ಸಾಮಾನ್ಯವಾಗಿ ಎಕರೆಗೆ 200 ಪೌಂಡು ಸಾರಜನಕ, 100 ಪೌಂಡು ರಂಜಕ ಮತ್ತು 100 ಪೌಂಡು ಪೊಟ್ಯಾಷ್ ಒದಗಿಸುವುದು ಉತ್ತಮ. ಈ ಪ್ರಮಾಣ ವಿವಿಧ ಭೂಗುಣಗಳಿಗನುಸಾರವಾಗಿ ಮಾರ್ಪಡಬಹುದು.

**ಬೆಳವಣಿಗೆಯ ಹಂತಗಳು :** ಕಬ್ಬಿನ ಪೂರ್ಣ ಬೆಳವಣಿಗೆಯನ್ನು 4 ಮುಖ್ಯ ಹಂತಗಳನ್ನಾಗಿ ವಿಂಗಡಿಸಬಹುದು. 1 ಮೊಳಕೆ ಹಂತ : ಕಬ್ಬಿನ ಬಿತ್ತನೆಯಲ್ಲಿ ಸಾಧಾರಣವಾಗಿ ಮೂರು ಕಣ್ಣುಗಳಿರುತ್ತವೆ. ಬಿತ್ತನೆ ಸರಿಯಾಗಿದ್ದಲ್ಲಿ ಆ ಮೂರೂ ಮೊಳೆತು ಕಬ್ಬಾಗಿ ಬೆಳೆಯುತ್ತವೆ. ಈ ಕಣ್ಣುಗಳಲ್ಲಿ ಬೆಳೆಯುವ ಕಬ್ಬಿನ ಅಂಕುರಾಂಶವಿರುವುದರಿಂದ ಅದು ಬೆಳೆಯಲು ಸುಲಭವಾಗುತ್ತದೆ. ಬಿತ್ತನೆ ಸರಿಯಾಗಿದ್ದು ಕಣ್ಣುಗಳು ದೃಢವಾಗಿದ್ದಲ್ಲಿ ಮೊಳಕೆ ಚೆನ್ನಾಗಿ ಹೊರಟು ಗಿಡ ಬೆಳೆಯುತ್ತದೆ. ಇದಕ್ಕೆ ಬಿತ್ತನೆಯಲ್ಲಿನ ಆಹಾರಾಂಶ ಮುಖ್ಯ. ಕಬ್ಬು ಹಳೆಯದಾಗಿ ಬಿತ್ತನೆಯ ಬಹುಭಾಗ ಬೆಂಡಾಗಿದ್ದರೆ ಗಿಡ ದೃಢವಾಗಿ, ಆರೋಗ್ಯವಾಗಿ ಬೆಳೆಯುವುದಿಲ್ಲ. ಜಲ್ಲೆಯ ಮೇಲ್ಭಾಗ ಬಿತ್ತನೆಗೆ ಸಮಂಜಸವಾಗಿದ್ದು, ಮೊಳಕೆಯೂ ಉತ್ತಮವಾಗಿರುತ್ತದೆ. ತಳದ ಬಿತ್ತನೆ ಉಪಯೋಗಿಸಿದಲ್ಲಿ ಮೊಳಕೆ ಸರಿಯಾಗಿ ಹೊರಡುವುದಿಲ್ಲ. ಬಿತ್ತನೆಯನ್ನು ನೆಡುವಾಗ ಕಣ್ಣುಗಳು ಪಕ್ಕಕ್ಕಿರುವಂತೆ ಎಚ್ಚರವಹಿಸಬೇಕು. ವಾತಾವರಣದ ವ್ಯತ್ಯಾಸ ಬೆಳೆಯ ಮೇಲೆ ಪ್ರಭಾವ ಬೀರುತ್ತದೆ. ಅತಿಶೀತ ವಾತಾವರಣವೂ ಭೂಮಿಯಲ್ಲಿ ತೇವವಿಲ್ಲದಿರುವಿಕೆಯೂ ಉತ್ತಮ ವ್ಯವಸಾಯವಿಲ್ಲದೆ ಭೂಮಿಯಲ್ಲಿ ಬೇರುಗಳಿಗೆ ಉಸಿರಾಡಲು ಅನುಕೂಲವಿಲ್ಲದಿರುವುದೂ ಆಳವಾದ ನೆಡುವಿಕೆಯೂ ಮೊಳಕೆಯನ್ನು ನಿಧಾನಗೊಳಿಸಿ ಅಡಚಣೆಯುಂಟುಮಾಡುತ್ತವೆ.

2 ತೆಂಡೆ ಹಂತ : ಉತ್ತಮ ಫಸಲು ದೊರಕಲು ಹೆಚ್ಚಾಗಿ ಮರಿಕಬ್ಬು ಉತ್ಪನ್ನವಾಗಬೇಕು. ಮರಿಕಬ್ಬಿನ ಉತ್ಪನ್ನವನ್ನು ತೆಂಡೆ ಹೊಡೆಯುವುದು ಎನ್ನುತ್ತಾರೆ. ಕಬ್ಬಿನ ಜೀವನವಿಡೀ ಸತತವಾಗಿ ಮರಿಕಬ್ಬುಗಳು ಉತ್ಪನ್ನವಾಗುತ್ತಲೇ ಇರುತ್ತವೆ. ಇವು ಭೂಮಿಯ ಒಳಗಿನ ಕಾಂಡಭಾಗದಿಂದ ಹೊರಗಾಣುತ್ತವೆ. ಮೊದಲು ಪಕ್ಕಕ್ಕೆ ಹರಡಿದಂತಿದ್ದರೂ ಮುಂದೆ ನೇರವಾಗಿ ಬೆಳೆಯುತ್ತವೆ. ಗಿಡಗಳು ಎಳೆಯ ವಯಸ್ಸಿನವಾಗಿರುವಾಗ ಈ ಹೊಸಕಾಂಡಗಳಿಗೆ ಬೆಳೆಯಲು ಯಾವ ತೊಡಕೂ ಇರುವುದಿಲ್ಲ. ಆದರೆ ಹೆಚ್ಚಾಗಿ ಬೆಳೆದ ಅನಂತರ ಹೊಸತಾಗಿ ಉತ್ಪನ್ನವಾಗುವ ಮರಿಕಬ್ಬುಗಳು ಸೂರ್ಯರಶ್ಮಿ ಸಾಕಾಗದೆ ನಶಿಸಬಹುದು. ಕಬ್ಬು ಮುಕ್ಕಾಲುಭಾಗ ಬೆಳೆದಿರುವಾಗ, ಹುಟ್ಟುವ ಮರಿಕಬ್ಬುಗಳು ಬಹುದಪ್ಪವಾಗಿ, ಆಕರ್ಷಕವಾಗಿ ಕಂಡರೂ ಅದರಲ್ಲಿ ಸಕ್ಕರೆ ಅಂಶ ಬಹಳ ಕಡಿಮೆಯಾಗಿದ್ದು ಅವನ್ನು ನೀರುಕಬ್ಬು ಎಂದು ಕರೆಯುತ್ತಾರೆ. ಇದು ಸಕ್ಕರೆ ಉತ್ಪಾದನೆಗೆ ಅನುಕೂಲವಲ್ಲದಿದ್ದರೂ ಉತ್ತಮ ಬಿತ್ತನೆಯಾಗುತ್ತದೆ. ಮರಿಕಬ್ಬುಗಳು ಹೆಚ್ಚಾಗಿ ಉತ್ಪನ್ನವಾಗಲು ಅನೇಕ ಅಂಶಗಳು ಸಹಾಯಕವಾಗುತ್ತವೆ. ಬಿಸಿಲಿನ ಬೇಗೆ ಹೆಚ್ಚಾದಲ್ಲಿ ಮರಿಕಬ್ಬುಗಳು ಹೆಚ್ಚುತ್ತವೆ. ಉತ್ತಮ ಗೊಬ್ಬರಗಳ ಪೂರೈಕೆ, ಅದರಲ್ಲೂ ರಂಜಕಾಂಶದ ಹೆಚ್ಚಳ ಹೆಚ್ಚಿನ ಮರಿ ಕಬ್ಬುಗಳು ಉತ್ಪನ್ನವಾಗುವುದಕ್ಕೆ ಸಹಾಯಕ.

3 ರಸತುಂಬುವ ಹಂತ : ಕಬ್ಬಿನ ಬೆಳವಣಿಗೆ ಅದರ ವಯಸ್ಸನ್ನನುಸರಿಸಿದೆ. ಪ್ರಾರಂಭದಲ್ಲಿ ಕಬ್ಬಿನ ಆಹಾರ ಉತ್ಪಾದನೆಯೆಲ್ಲ ಅದರ ಬೆಳವಣಿಗೆಗಾಗಿಯೇ ಖರ್ಚಾಗುತ್ತದೆ. ಆಗ ಸಾರಜನಕಾಂಶ ಮಾತ್ರ ಹೆಚ್ಚಾಗಿದ್ದಲ್ಲಿ ಕಾಂಡಕ್ಕೆ ದೃಢತೆ ಒದಗಿ ಗಿಣ್ಣುಗಳು ದಪ್ಪನಾಗಲು ಸಹಾಯಕವಾಗುತ್ತದೆ. ಭೂಮಿಯಲ್ಲಿನ ತೇವಾಂಶ ಬೆಳವಣಿಗೆಗೆ ಸಹಾಯಕ. ಉಷ್ಣಾಂಶವೂ ಹೆಚ್ಚಿನ ಪ್ರಭಾವ ಬೀರುತ್ತದೆ. ಉಷ್ಣತೆ 60° ಫಾ.ಗಿಂತ ಕಡಿಮೆ ಅಥವಾ 90° ಫಾ.ಗಿಂತ ಹೆಚ್ಚಾಗಿದ್ದಲ್ಲಿ ಕಬ್ಬಿನ ಬೆಳವಣಿಗೆ ಕುಂಠಿತವಾಗುತ್ತದೆ. ಬಲಿತು ರಸಗೂಡುತ್ತಿದ್ದಂತೆ ಕಬ್ಬಿನ ಎಲೆಗಳಿಂದ ಉತ್ಪನ್ನವಾದ ಆಹಾರಾಂಶಗಳಲ್ಲಿ ಸ್ವಲ್ಪ ಭಾಗ ಹೊಸ ಅಂಗಾಂಗಗಳ ರಚನೆಗೂ ಸ್ವಲ್ಪ ಭಾಗ ಶಕ್ತಿರೂಪವಾಗಿ ಉಪಯುಕ್ತವಾಗಿ, ಮಿಕ್ಕಂಶವೆಲ್ಲ ಸಕ್ಕರೆಯಾಗಿ ಕಾಂಡದಲ್ಲಿ ಹೆಚ್ಚಾದಂತೆ ಕಬ್ಬು ಪಕ್ವವಾಯಿತೆಂದು ಪರಿಗಣಿಸಲಾಗುತ್ತದೆ. ಸಕ್ಕರೆಯ ಅಂಶ ಗಿಣ್ಣಿನಿಂದ ಗಿಣ್ಣಿಗೆ ವ್ಯತ್ಯಾಸ ಹೊಂದುತ್ತದೆ. ತಳಭಾಗದ ವಯಸ್ಸಾದ ಗಿಣ್ಣುಗಳಲ್ಲಿ ಹೆಚ್ಚು ಸಕ್ಕರೆ ಶೇಖರವಾಗುತ್ತದೆ. ಮೇಲ್ಭಾಗದ ಎಳಸು ಗಿಣ್ಣುಗಳ ಮಧ್ಯೆ ಸಕ್ಕರೆ ಹೆಚ್ಚಾಗಿರುವುದಿಲ್ಲ. ಕಬ್ಬು ಪಕ್ವವಾಗಲು ಜಾತಿ, ಗೊಬ್ಬರ ಪೂರೈಕೆ, ನೀರು ಮತ್ತು ನಾಟಿಯ ಕಾಲಾವಧಿ ಸಹಾಯಕ.

4 ಸೂಲಂಗಿ ಹಂತ : ಕಬ್ಬಿನ ಬೆಳಸು ಕಾಂಡದ ತುಂಡುಗಳಿಂದಾಗುವುದರಿಂದ ಸೂಲಂಗಿ ಮುಖ್ಯವಲ್ಲ. ಅಲ್ಲದೆ ಎಲ್ಲದರಲ್ಲೂ ಸೂಲಂಗಿ ಬರುವುದಿಲ್ಲ. ಸೂಲಂಗಿ

ಬರುವ ಜಾತಿಗಳಲ್ಲಿ ಸೂಲಂಗಿ ಉಂಟಾದರೆ ಕಬ್ಬಿನ ಬೆಳೆವಣಿಗೆ ಪೂರ್ಣ ನಿಂತಂತೆಯೇ. ಅದು ಕಾಲಮಿತಿಗೆ ಒಳಪಟ್ಟು ಅಕ್ಟೋಬರ್–ನವೆಂಬರ್ ವೇಳೆ ಮಾತ್ರ ಹೊರಬೀಳುತ್ತದೆ. ಸೂಲಂಗಿ ಬರಲು ಕಬ್ಬಿನ ವಯಸ್ಸೂ ಮುಖ್ಯ.

**ರೋಗಗಳು :** ಕಬ್ಬಿನ ಬೆಳೆಗೆ ಹಲವಾರು ಬಗೆಯ ಕೀಟಗಳು ತಗಲುತ್ತವೆ. ಇವುಗಳಲ್ಲಿ ಕಾಂಡ ಕೊರೆಯುವ ಹುಳು, ಪೈರಿಲ್ಲ ಮತ್ತು ಸುಳಿ ಅಥವಾ ತುದಿ ಕೊರೆಯುವ ಹುಳುಗಳು ಮುಖ್ಯವಾದುವು. ಕಾಂಡ ಕೊರೆಯುವ ಹುಳುಗಳಲ್ಲಿ ಹಲವಾರು ಜಾತಿಗಳಿವೆ. ಮುಖ್ಯವಾದುವು ಅರ್ಗೈರಿಯ ಸ್ಟಿಕ್ಟಿಕ್ರಾಸ್ಪಿಸ್, ಡೈಯಾಟ್ರಿಯ ಮತ್ತು ಸ್ಕಿರ್ಪೊಫೇಗ ನಿವೆಲ್ಲ ಎಂಬುವು. ಇವೆಲ್ಲ ಕಬ್ಬಿನ ಕಾಂಡವನ್ನು ಕೊರೆದು, ಮಧ್ಯ ಸುಳಿ ಒಣಗುವಂತೆ ಮಾಡಿ ಎಳೆಯ ಪೈರಿಗೆ ಅತಿ ಹೆಚ್ಚಿನ ನಷ್ಟವುಂಟುಮಾಡುತ್ತವೆ. ಸುಳಿ ಕೊರೆಯುವ ಹುಳು ಸಾಮಾನ್ಯವಾಗಿ ಕಬ್ಬಿನ ಎಳೆಯ ತುದಿಗಳನ್ನು ಕೊರೆದು ಅದರ ಬೆಳೆವಣಿಗೆಯನ್ನು ಕುಂಠಿತಗೊಳಿಸುತ್ತದೆ. ತುದಿಯಲ್ಲಿರುವ ಎಲೆಗಳು ನಾಶವಾಗುವುದಲ್ಲದೆ ಮಧ್ಯ ಎಲೆಗಳಲ್ಲಿ ತೂತುಗಳು ಉಂಟಾಗಿ, ಉಳಿದೆಲ್ಲ ಎಲೆಗಳ ಅಂಚುಗಳಲ್ಲೂ ಕಚ್ಚುಗಳು ಕಾಣಬರುತ್ತವೆ. ಸುಳಿ ಹಾಳಾಗುವುದರಿಂದ ಕಬ್ಬಿನ ತುದಿಯಲ್ಲಿರುವ ಮೊಗ್ಗುಗಳು ಮೊಳೆಯಲಾರಂಭಿಸುತ್ತವೆ. ಇದರಿಂದ ಕಬ್ಬಿನ ತುದಿ ಕುಚ್ಚಿನಂತೆ ಕಾಣುತ್ತದೆ. ಇವನ್ನು ನಿರ್ಮೂಲ ಮಾಡುವುದು ಕಷ್ಟವಾದರೂ ಇವುಗಳ ಮೇಲೆ ಪರಾವಲಂಬಿಯಾದ ಒಂದು ಬಗೆಯ ಕಣಜವನ್ನು ಕಬ್ಬಿನ ಗದ್ದೆಗಳಲ್ಲಿ ಬಿಟ್ಟು ಅದು ಈ ಹುಳುಗಳನ್ನು ತಿಂದು ನಾಶಪಡಿಸುವಂತೆ ಮಾಡುವ ಕ್ರಮವೂ ಇದೆ. ಪೈರಿಲ್ಲ ಹುಳುವೂ ಕಬ್ಬಿನ ಒಂದು ಮುಖ್ಯ ಕೀಟ ಪಿಡುಗೆನಿಸಿದೆ. ಇದು ಸಾಮಾನ್ಯವಾಗಿ ಎಲೆಗಳ ತಳಭಾಗದಲ್ಲಿದ್ದು ಸಸಿಗಳ ರಸವನ್ನು ಹೀರಿ ಜೀವಿಸುತ್ತದೆ. ಹೀಗೆ ಲಕ್ಷಾಂತರ ಕೀಟಗಳು ರಸ ಹೀರುವುದರಿಂದ ಎಲೆಗಳೆಲ್ಲ ಹಳದಿಯಾಗಿ ಸುಕ್ಕುಗಟ್ಟುತ್ತವೆ. ಅಲ್ಲದೆ ಕಬ್ಬಿನ ಮೈಯಿಂದ ರಸ ಜಿನುಗುವುದರಿಂದ ಅದರ ಮೇಲೆಲ್ಲ ಬೂಷ್ಟು ಬೆಳೆಯುವ ಸಂಭವವೂ ಉಂಟು. ಇದರಿಂದಾಗಿ ಕಬ್ಬುಗಳಲ್ಲಿನ ಸಕ್ಕರೆ ಅಂಶ ಕಡಿಮೆಯಾಗುತ್ತದೆ. ರಸ ಹೀರಿದಾಗ ಕೀಟಗಳೂ ತಮ್ಮ ದೇಹದಿಂದ ಸಿಹಿರಸವನ್ನು ಜಿನುಗಿಸುತ್ತವೆ. ಇವನ್ನು ಹಲವು ಜಾತಿ ಇರುವೆಗಳು ಹೀರುತ್ತವೆ. ಅದಕ್ಕಾಗಿ ಇರುವೆಗಳು ಕೀಟದ ಮರಿಗಳನ್ನು ಕಬ್ಬಿನಿಂದ ಕಬ್ಬಿಗೆ ಕೊಂಡೊಯ್ಯುವುದುಂಟು. ಇವಲ್ಲದೆ ಕಬ್ಬಿನ ಮಿಡತೆ, ಬಿಳಿನೊಣ, ಗೆದ್ದಲು, ನುಸಿ ಮುಂತಾದ ಕೀಟಗಳೂ ಗಣನೀಯ ಪ್ರಮಾಣದಲ್ಲಿ ಕಬ್ಬಿನ ಬೆಳೆಯನ್ನು ನಷ್ಟಗೊಳಿಸುವುದುಂಟು. ಬರಿಯ ಕೀಟಗಳಲ್ಲದೆ ಇಲಿ, ನರಿ, ಆನೆ, ಹಂದಿ ಮುಂತಾದುವೂ ಕಬ್ಬಿನ ಬೆಳೆಯ ಪ್ರಮುಖ ಶತ್ರುಗಳೆನಿಸಿವೆ.

ಕಬ್ಬಿಗೆ ಹಲವು ಬೂಷ್ಟು ರೋಗಗಳೂ ತಗಲುತ್ತವೆ. ಮುಖ್ಯವಾದುವು ತುಕ್ಕು ರೋಗ (ರಸ್ಟ್), ಕಾಡಿಗೆರೋಗ (ಸ್ಮಟ್), ಕೆಂಪುಕೊಳೆರೋಗ (ರೆಡ್ ರಾಟ್), ಬಾಡುವ ರೋಗ (ವಿಲ್ಟ್), ಕಂದುಚುಕ್ಕೆರೋಗ, ಕಪ್ಪುಕೊಳೆರೋಗ ಮುಂತಾದುವು. ತುಕ್ಕುರೋಗ ಬಂದಾಗ ಎಲೆಗಳ ಮೇಲೆ ಕಿತ್ತಳೆವರ್ಣದ ಚುಕ್ಕೆಗಳು ಮೂಡುತ್ತವೆ. ಈ ಚುಕ್ಕೆಗಳು ಎಲೆಯನ್ನು ಪೂರ್ಣ ಆವರಿಸಿರುವುದರಿಂದ ಎರಡು ಕಡೆಯಲ್ಲೂ ಎದ್ದುಕಾಣುತ್ತವೆ. ಕಾಡಿಗೆರೋಗ (ಸ್ಮಟ್) ಹೊಂದಿರುವ ಕಬ್ಬಿನ ತುದಿಯಿಂದ ನೀಳವಾಗಿ ಕೆಳಬಾಗಿರುವ ಚಾಟಿಯಂಥ ಅಚ್ಚಕಪ್ಪು ಬೆಳೆವಣಿಗೆ ಕಂಡುಬರುತ್ತದೆ. ಇದು ಎಲೆಯಲ್ಲಿ ರೋಗದಿಂದ ಉಂಟಾದ ಮಾರ್ಪಾಟು. ಪ್ರಾರಂಭದಲ್ಲಿ ಅದರ ಸುತ್ತ ಬಿಳಿಯ ಬಣ್ಣದ ಪೊರೆಯೊಂದಿದ್ದು, ಅದು ಬೆಳೆದಂತೆಲ್ಲ ಆ ಪೊರೆ ಸೀಳಿ ಕಪ್ಪು ಪುಡಿಯಂಥ ಬೀಜಾಣುಗಳು ಹೊರಬರುತ್ತವೆ. ಕೆಂಪುಕೊಳೆರೋಗದಿಂದ ಕಬ್ಬಿನ ತುದಿಯಲ್ಲಿನ ಎಲೆಗಳಲ್ಲಿ 2 ಅಥವಾ 4ನೆಯ ಎಲೆ ಇದ್ದಕ್ಕಿದ್ದಂತೆ ಮಾಸಲು ಹಳದಿ ಬಣ್ಣಕ್ಕೆ ತಿರುಗಿ ಬಾಡಲಾರಂಭಿಸುತ್ತದೆ. ಆದರೆ ಅವುಗಳ ಮಧ್ಯಭಾಗ ಮಾತ್ರ ಅಚ್ಚಹಸಿರಾಗಿಯೇ ಉಳಿಯಬಹುದು. ರೋಗಪೀಡಿತ ಕಬ್ಬನ್ನು ಸೀಳಿನೋಡಿದಲ್ಲಿ ತಳದ ಗಿಣ್ಣುಗಳ ಬಳಿ ಕೆಂಪು ಬಣ್ಣವಿದ್ದು ಕಬ್ಬಿನಿಂದ ಕೊಳೆತ ಹುಳಿವಾಸನೆ ಬರುತ್ತಿರುತ್ತದೆ. ಹೀಗಾದಾಗ ನರಿ ಹೂಸಿದೆ ಎಂದು ಹೇಳುವುದು ಹಳ್ಳಿಗರಲ್ಲಿ ವಾಡಿಕೆ. ಬಾಡುವ ರೋಗದಲ್ಲೂ ಕಬ್ಬಿನ ಮಧ್ಯೆ ಕೆಂಪು ವರ್ಣವಾಗುತ್ತದೆ. ಆದರೆ ರೋಗ ಹರಡಿ ಬಹುಬೇಗ ಕಬ್ಬಿನ ಒಳಭಾಗವೆಲ್ಲ ಪೂರ್ಣ ಕೆಂಪಾಗಿ, ಮುಂದೆ ಟೊಳ್ಳಾಗುತ್ತದೆ. ಕಬ್ಬು ಇದರಿಂದ ಹಗುರವಾಗುತ್ತದೆ. ಕಂದುಚುಕ್ಕೆರೋಗ ಎಲೆಯ ಅಲಗುಗಳಲ್ಲಿ ಮಾತ್ರ ಕಂಡುಬರುತ್ತದೆ. ಪ್ರಾರಂಭದಲ್ಲಿ ಸುಮಾರು ¼″ ನೀಳವಾಗಿದ್ದು ಎಲೆಯ ಇಕ್ಕಡೆಗಳಲ್ಲೂ ಕೆಂಪಗೆ ಕಾಣುವಂತಿರುತ್ತದೆ. ಮುಂದೆ ಅದು ಅಗಲವಾಗಿ ಬೆಳೆದು, ಮಧ್ಯಭಾಗ ಕಂದುಬಣ್ಣವಾಗಿ, ಸುತ್ತಲೂ ಹಳದಿಯಾಗುತ್ತದೆ. ಕಂದುಭಾಗ ಮುಂದೆ ಪೂರ್ಣ ಒಣಗುತ್ತದೆ. ಕಪ್ಪುಕೊಳೆರೋಗದಿಂದ ಹೆಚ್ಚಿನ ನಷ್ಟವಾಗುವುದಿಲ್ಲ. ಕಬ್ಬುಗಳಿಗೆ ಗಾಯವಾದಾಗ ಅಥವಾ ಕಬ್ಬುಗಳನ್ನು ಕಡಿದು ತೆಗೆದಾಗ, ಗಾಯವಾದೆಡೆ ಅಥವಾ ಕಡಿದು ಬಿಟ್ಟೆಡೆಯಲ್ಲಿ ಕಪ್ಪು ಬೂಷ್ಟು ಬೆಳೆದು ಆ ಭಾಗವನ್ನು ಕೊಳೆಯುವಂತೆ ಮಾಡುತ್ತದೆ. ಕಬ್ಬಿಗೆ ಇನ್ನೂ ಹಲವು ರೋಗಗಳು ತಗಲುವುದುಂಟು. ಆದರೆ ಅವು ಯಾವ ರೀತಿಯಲ್ಲೂ ಹೆಚ್ಚಿನ ನಷ್ಟ ಮಾಡುವುದಿಲ್ಲ. ಗೋಂದುರೋಗ ಎಲೆಯ ರೋಗವಾಗಿ, ಪ್ರಾರಂಭವಾಗಿ ಹಾಗೇ ಬಿಟ್ಟಲ್ಲಿ ಕಬ್ಬಿನ ಜಲ್ಲೆಗೂ ಹರಡುತ್ತದೆ. ಮೊದಲು ಎಲೆಗಳ ಮೇಲೆ ಹಳದಿ ಪಟ್ಟೆಗಳು ಕಾಣಿಸಿಕೊಂಡು, ಅದರ ಮಧ್ಯೆ ಕೆಂಪು ಚುಕ್ಕೆಗಳು ಮೂಡುತ್ತವೆ. ಕೆಂಪುಪಟ್ಟೆರೋಗ ಕೂಡ ಎಲೆಯ ರೋಗವೇ. ಆದರೆ ಹಲವು ತಳಿಗಳಲ್ಲಿ ಅದು ಕಾಂಡಕ್ಕೂ ಬೇಗ ಹರಡಿ, ಅದರ ತುದಿ ಸುಲಭವಾಗಿ ಕೊಳೆತು ನಾರುತ್ತದೆ. ಎಲೆಯ ತಳಭಾಗದಲ್ಲಿ ನರಗಳ ಮಧ್ಯೆ ಕೆಂಪುಪಟ್ಟೆಯುಂಟಾಗಿ ಎದ್ದುಕಾಣುತ್ತದೆ. ಮೊಸಾಯಿಕ್ ರೋಗದಲ್ಲಿ ಎಲೆಗಳ ಮೇಲೆಲ್ಲ ತಿಳಿಹಸಿರು ಅಥವಾ ಹಳದಿ ಮಚ್ಚೆಗಳಿರುತ್ತವೆ. ಇದು ತಗಲಿದಲ್ಲಿ ಕಬ್ಬು ಗಿಡ್ಡವಾಗಿ ತೆಳುವಾಗಿ ಬೆಳೆದು ಸಣ್ಣಗೆ ನುಲಿದಂತಾಗಿ ಜಡೆಕಟ್ಟಿದಂತಿರುತ್ತದೆ. ತುದಿಯ ಬೆಳೆವಣಿಗೆ ಪೂರ್ಣ ನಿಂತು ಹೋಗುವುದರಿಂದ ಮೊಗ್ಗುಗಳು ಅಡ್ಡ ಬೆಳೆದು ನೀಳವಾಗುತ್ತವೆ. ಕೀಟ ಹಾಗೂ ಬೂಷ್ಟು ರೋಗವನ್ನು ಅದರ ನಿವಾರಣೆಗೆ ಅನುಕೂಲವಾಗುವ ಔಷಧಗಳ ಬಳಕೆಯಿಂದಲೂ ರೋಗರಹಿತ ಹಾಗೂ ರೋಗನಿರೋಧಕ ಶಕ್ತಿಯುತ ತಳಿಗಳ ಬಳಕೆಯಿಂದಲೂ ನಿವಾರಿಸಬಹುದು.

**ಕಟಾವು :** ಕಬ್ಬು ಕಟಾವಿಗೆ ಸಿದ್ಧವಾಗಲು ಅದರಲ್ಲಿನ ಸಕ್ಕರೆ ಅಂಶವೇ ಮುಖ್ಯ. ಕಬ್ಬು ಬೆಳೆಯುವುದೆಂದರೆ ಅದರಲ್ಲಿನ ಸಕ್ಕರೆ ಅಂಶ ಹೆಚ್ಚಾಗುತ್ತಿದೆಯೆಂದರ್ಥ. ಸಾಮಾನ್ಯವಾಗಿ ಕಬ್ಬು ಪೂರ್ಣ ಬೆಳೆಯಲು 13–14 ತಿಂಗಳ ಅವಧಿ ಸಾಕೆಂದು ಹೇಳಬಹುದು. ಮಾಗಿದ ಕೊ. 419 ತಳಿಯ ರಸದಲ್ಲಿನ ವಿವಿಧಾಂಶ ಈ ಕೆಳಗಿನಂತಿದೆ.

1 ನೀರು ಸೇ. 77.9 ಭಾಗ

2 ಸುಕ್ರೋಸ್ ಸೇ. 20.2 ಭಾಗ

3 ಗ್ಲೂಕೋಸ್ ಸೇ. 0.57 ಭಾಗ

4 ಇತರ ಸಾವಯವ ಮತ್ತು ನಿರವಯವ ವಸ್ತುಗಳು ಸೇ. 1.29 ಭಾಗ

ಇದರಲ್ಲಿ ಸುಕ್ರೋಸ್ ಮುಖ್ಯವಾದುದು. ಇದೇ ಸಕ್ಕರೆ ಮತ್ತು ಬೆಲ್ಲ ಉತ್ಪನ್ನಕ್ಕೆ ಕಾರಣ. ಗ್ಲೂಕೋಸ್ ಅಂಶವನ್ನೂ ಸಕ್ಕರೆಯೆಂದೇ ಪರಿಗಣಿಸಲಾಗಿದ್ದರೂ ಅದು ಅಪರಿಪೂರ್ಣ ಸಕ್ಕರೆ ಅಂಶ. ಪೂರ್ಣ ಮಾಗಿದ ಕಬ್ಬಿನಲ್ಲಿ ಸಾಮಾನ್ಯವಾಗಿ ಸೇ. 22 ಭಾಗದಷ್ಟು ಘನವಸ್ತುಗಳಿರುತ್ತವೆ. ಅದರಲ್ಲಿ ಸುಕ್ರೋಸ್ ಅಂಶವೇ ಅತಿಹೆಚ್ಚು. ಸುಕ್ರೋಸ್ ಸ್ವಲ್ಪ ಕಾಲ ಮಾತ್ರ ಕಬ್ಬಿನಲ್ಲಿ ಅತಿಯಾಗಿ ಶೇಖರವಾಗುತ್ತದೆ. ಮುಂದೆ ಸೂಲಂಗಿ ಹೊರಟರೂ ಬೇಸಗೆಯ ದಗೆ ಹೆಚ್ಚಾದರೂ ಅದರ ಪರಿಮಾಣ ಕಡಿಮೆಯಾಗತೊಡಗುತ್ತದೆ. ಕಬ್ಬು ಕಟಾವಿಗೆ ಸಿದ್ಧವಾಗಿದೆಯೆಂದು ನಿರ್ಧರಿಸಿದ ಅನಂತರ 10–15 ದಿನ ಅದಕ್ಕೆ ನೀರು ಒದಗಿಸಬಾರದು. ಕಟಾವು ಮಾಡುವಾಗ ಹರಿತವಾದ ಮಚ್ಚುಗಳಿಂದ ನೆರಿಮಟ್ಟಕ್ಕೆ ಕಬ್ಬುಗಳನ್ನು ಕಡಿದು ತೆಗೆಯಬೇಕು. ಕಡಿದ ಕಬ್ಬನ್ನು ಪೂರ್ಣವಾಗಿ ಅದೇ ಮಚ್ಚಿನಿಂದ ಸವರಿ, ಎಲ್ಲ ಎಲೆಗಳನ್ನೂ ತೆಗೆದು, ತುದಿಯ ಅಪಕ್ವ ಭಾಗವನ್ನು ಕತ್ತರಿಸಿ ಬೇರ್ಪಡಿಸಬೇಕು. ಕಬ್ಬಿನ ತಳಭಾಗದಲ್ಲಿ ಅಂಟಿರಬಹುದಾದ ಮಣ್ಣನ್ನೂ ಬೆಳೆದಿರಬಹುದಾದ ಬೇರುಗಳನ್ನೂ ಪೂರ್ಣವಾಗಿ ಸವರಿ ತೆಗೆದು ಜಲ್ಲೆಯನ್ನು ಸಾಗಿಸಲು ಅನುಕೂಲವಾಗುವಂತೆ ತುಂಡರಿಸಿ ಹೊರೆ ಕಟ್ಟಬೇಕು. ಕಟಾವಾದ ಕಬ್ಬನ್ನು ದೀರ್ಘಕಾಲ ಶೇಖರಿಸಿಡಬಾರದು. ಹಾಗಾದಲ್ಲಿ ಅದರಲ್ಲಿನ ಸಕ್ಕರೆ ಅಂಶ ಕಡಿಮೆಯಾಗುತ್ತದೆ ; 24 ಗಂಟೆಗಳೊಳಗಾಗಿ ಅದನ್ನು ಗಾಣಕ್ಕೆ ಕೊಟ್ಟುಬಿಡಬೇಕು.

ಕಬ್ಬಿನಿಂದ ಬೆಲ್ಲ, ಸಕ್ಕರೆಗಳನ್ನು ತಯಾರಿಸುವುದರ ಜೊತೆಗೆ ಕಾಕಂಬಿಯಿಂದ ಮದ್ಯವನ್ನೂ ತರಗಿನಿಂದ ಉತ್ತಮ ಗೊಬ್ಬರವನ್ನೂ ಸಿಪ್ಪೆಯಿಂದ ಕಾಗದ ಮತ್ತು ಮೇಣವನ್ನೂ ಉಳಿಕೆಗಳಿಂದ ಮೇವನ್ನೂ ತಯಾರಿಸುತ್ತಾರೆ. ನೋಡಿ—ಆಲೆಮನೆ ; ಕಾಕಂಬಿ ; ಬೆಲ್ಲ ; ಸಕ್ಕರೆ. (ಜಿ.ಎ.ಬಿ.ಎನ್.)

**ಕಬ್ಬಿನ ಹಿಪ್ಪೆ :** ಕಬ್ಬಿನ ರಸ ಹಿಂಡಿ ತೆಗೆದ ಅನಂತರ ಉಳಿಯುವ ಬಗಾಸೆ ಎಂದು ಕರೆಯುವ ಭಾಗ. ಬಗಾಸೆ ಎಂದರೆ ನಿರುಪಯುಕ್ತ ವಸ್ತು ಅಥವಾ ಕಸ ಎಂದು ಅರ್ಥ. ಸ್ಥಳೀಯವಾಗಿ ಇದನ್ನು ಕಬ್ಬಿನ ಹಿಪ್ಪೆ, ರಚ್ಚು ಎಂದು ಕರೆಯುತ್ತಾರೆ. ಪೂರ್ಣವಾಗಿ ರಸ ತೆಗೆದ ಹಿಪ್ಪೆಯಲ್ಲಿ 46% ಸೆಲ್ಯುಲೋಸ್, 24.5% ಅಂಟುಗಳು, 3.45% ಕೊಬ್ಬು ಮತ್ತು ಮೇಣ, 2.40% ಬೂದಿ, 19·95% ಲಿಗ್ನಿನ್ ಮತ್ತು 2% ಸಿಲಿಕವೂ ಇರುತ್ತವೆ. ಸಾಮಾನ್ಯವಾಗಿ ಬೆಲ್ಲ ಮಾಡುವೆಡೆಗಳಲ್ಲೂ ಕಾರ್ಖಾನೆಗಳಲ್ಲೂ ಇದನ್ನು ಉರುವಲಾಗಿ ಮಾತ್ರ ಉಪಯೋಗಿಸಲಾಗುತ್ತದೆ. ಅದರಲ್ಲಿ ಕಬ್ಬಿನ ಪೂರ್ಣ ನಾರಿನಂಶ, ಸ್ವಲ್ಪ ರಸ ಮತ್ತು 40%–50%ರಷ್ಟು ನೀರಿನಂಶವಿರುತ್ತದೆ. ಅವುಗಳನ್ನು ತೆಳ್ಳಗೆ ಹರಡಿ ಒಣಗಿಸಿ ಉಪಯೋಗಿಸಿದಲ್ಲಿ ಚೆನ್ನಾಗಿ ಉರಿಯುತ್ತವೆ. ಬಗಾಸೆಯಲ್ಲಿ ಕಬ್ಬಿನಲ್ಲಿದ್ದ 56%ರಷ್ಟು ಸಾರಜನಕ, 39%ರಷ್ಟು ರಂಜಕಾಮ್ಲ ಮತ್ತು 23% ಭಾಗ ಪೊಟ್ಯಾಷ್ ಉಳಿದಿರುತ್ತದೆಯಾದರೂ ಅದು ಗೊಬ್ಬರವಾಗಿ ಉಪಯುಕ್ತವಲ್ಲ. ಏಕೆಂದರೆ ಒಂದು ಲಾರಿಯಲ್ಲಿ ಪೂರ್ಣ ತುಂಬಿದರೂ ಅದು ಎರಡು ಟನ್ನಿನಷ್ಟು ಮಾತ್ರ ತೂಗುತ್ತದೆ. ಇದರಲ್ಲಿ ಇರುವ ಪೌಷ್ಟಿಕಾಂಶಗಳು 78 ಪೌಂಡು ಅಮೋನಿಯಂ

ಸಲ್ಫೇಟಿನಲ್ಲಿರುವ ಸಾರಜನಕಾಂಶ, 24 ಪೌಂಡು ಸೂಪರ್ ಫಾಸ್ಫೇಟ್‌ನಲ್ಲಿರುವ ರಂಜಕಾಂಶ ಮತ್ತು 12 ಪೌಂಡು ಪೊಟ್ಯಾಷ್‌ನಲ್ಲಿರುವ ಪೊಟ್ಯಾಷ್ ಅಂಶಕ್ಕೆ ಸರಿಹೋಗುತ್ತದೆ. ಆದ್ದರಿಂದ ಸಾಗಾಣಿಕೆ ಖರ್ಚು ಅಧಿಕವಾಗಿ ಉಪಯುಕ್ತತೆ ಆರ್ಥಿಕವೆನಿಸುವುದಿಲ್ಲ. ಅಲ್ಲದೆ ನಾರು ಸುಲಭವಾಗಿ ಕೊಳೆಯುವುದರಿಂದ ಅದರಲ್ಲಿನ ಪೌಷ್ಟಿಕಾಂಶಗಳು ಬೆಳೆಗಳಿಗೆ ದೊರಕಲು ದೀರ್ಘಕಾಲ ಬೇಕಾಗುತ್ತದೆ.

ಇದನ್ನು ಸೌದೆಯಾಗಿ ಉಪಯೋಗಿಸಿದಾಗ ದೊರಕುವ ಬೂದಿಯನ್ನು ಗೊಬ್ಬರಕ್ಕಾಗಿ ಉಪಯೋಗಿಸಬಹುದು. ಉರಿಯುವಾಗ ಇದರಲ್ಲಿನ ಸಾರಜನಕಾಂಶ ಪೂರ್ಣವಾಗಿ ನಷ್ಟವಾಗಿದ್ದರೂ ರಂಜಕಾಂಶ ಮತ್ತು ಪೊಟ್ಯಾಷ್ ಹೆಚ್ಚು ಪ್ರಮಾಣದಲ್ಲಿ ಉಳಿದಿರುತ್ತವೆ. ಆದರೂ ಇದನ್ನು ಸಾಗಿಸಲು ಹೆಚ್ಚು ಖರ್ಚಾಗುವುದರಿಂದ ಬಹಳ ದೂರಕ್ಕೆ ಕೊಂಡೊಯ್ಯಲಾಗುವುದಿಲ್ಲ, ಕಾರ್ಖಾನೆಗಳ ಪಕ್ಕದಲ್ಲಿರುವ ಜಮೀನುಗಳಿಗೆ ಮಾತ್ರ ಉಪಯೋಗಿಸಬಹುದು.

ಕಬ್ಬಿನ ಹಿಪ್ಪೆಯನ್ನು ಉಪಯೋಗಿಸಿ ಸಾಮಾನ್ಯ ದರ್ಜೆಯ ರಟ್ಟು ಮತ್ತು ಕಾಗದಗಳನ್ನು ತಯಾರಿಸಬಹುದೆಂದು ತಿಳಿದುಬಂದು ಅದಕ್ಕಾಗಿ ಕಾರ್ಖಾನೆಗಳನ್ನು ಸ್ಥಾಪಿಸುತ್ತಿದ್ದಾರೆ. ಇದರಿಂದ ಶಬ್ದತರಂಗಗಳನ್ನು ಹೀರಬಲ್ಲ ಹಲಗೆ ಅಥವಾ ಕಟ್ಟುಗಳನ್ನು ತಯಾರಿಸಲಾಗುತ್ತಿದೆ. (ಜಿ.ಎ.ಬಿ.ಎಸ್. ;ಕೆ.ಟಿ.ಎಸ್.)

**ಕಮಠ :** ಹಾರೀತನೆಂಬ ಬ್ರಾಹ್ಮಣನ ಮಗ. ಮಹಾತತ್ತ್ವಜ್ಞನೆಂದು ಪ್ರಸಿದ್ಧನಾಗಿದ್ದಾನೆ. ತಂದೆ ಮಹೀನಗರವೆಂಬ ಪುಣ್ಯಕ್ಷೇತ್ರದಲ್ಲಿದ್ದವ. ಅಲ್ಲಿಯ ಜನರೆಲ್ಲರೂ ನಿತ್ಯಕರ್ಮಾಚರಣೆಯಲ್ಲೂ ಅತಿಥಿ, ಅಭ್ಯಾಗತರ ಪೂಜೆಯಲ್ಲೂ ನಿರತರಾಗಿದ್ದು ದೇವತೆಗಳ ಹೊಗಳಿಕೆಗೆ ಪಾತ್ರರಾದವರು. ಒಮ್ಮೆ ಹಾರೀತನ ಮನೆಗೆ ಬಂದ ಒಬ್ಬ ಅತಿಥಿ ತನಗೆ ಪ್ರಾಕೃತ ಭೋಜನಕ್ಕಿಂತ ಪರಮ ಭೋಜನವೇ ಬೇಕೆಂದು ಕೇಳಿದ. ಕಮಠ ಹಾಗೆ ಮಾಡಲು ಒಪ್ಪಿದ. ಆರು ರಸಗಳಿಂದ ಕೂಡಿ, ಐದು ಪ್ರಭೇದ ಉಳ್ಳದ್ದಾಗಿದ್ದು ಇಪ್ಪತ್ತುನಾಲ್ಕು ತತ್ತ್ವಗಳ ಗುಂಪಿನ ರೂಪದಲ್ಲಿರುವ ದೇಹರೂಪವಾದ ಕ್ಷೇತ್ರದ ತೃಪ್ತಿಯನ್ನು ಯಾವುದು ಕೊಡುವುದೋ ಅದು ಪ್ರಾಕೃತವೆನಿಸುವುದು. ಯಾವುದು ಕ್ಷೇತ್ರಜ್ಞನಾದ ಆತ್ಮನಿಗೆ ತೃಪ್ತಿಯನ್ನು ಕೊಡುವುದೋ ಅಂದರೆ ಪರಮಾತ್ಮಪ್ರೀತಿಕರವೋ ಅದು ಪರಮ ಭೋಜನವಾಗುವುದು. ಅದನ್ನೇ ಅತಿಥಿಗೆ ಕೊಡುವೆನೆಂದು ಕಮಠ ಹೇಳಿ ತಂದೆಗೆ ತೃಪ್ತಿಯಾಗುವಂತೆ ವರ್ತಿಸಿ ಅತಿಥಿಯೊಡನೆ ಜೀವದ ಉತ್ಪತ್ತಿ ವಿಚಾರವಾಗಿ ತತ್ತ್ವಾರ್ಥ ಚರ್ಚೆಯನ್ನು ಮಾಡಿದ.

ಈ ಕಥೆಯನ್ನು ನಾರದ ಸೂರ್ಯದೇವನಿಗೆ ಹೇಳುತ್ತಾನೆ. (ಎನ್.ಎಸ್.ಆರ್.ಬಿ.)

**ಕಮರ :** ಲೆಗ್ಯೂಮಿನೋಸೀ ಕುಟುಂಬದ ಹಾರ್ಡ್ವಿಕಿಯ ಬೈನೇಟ ಎಂಬ ವೈಜ್ಞಾನಿಕ ಹೆಸರಿನ ಮಧ್ಯಮ ಪ್ರಮಾಣದಿಂದ ದೊಡ್ಡ ಪ್ರಮಾಣದ ವರೆಗೂ ಬೆಳೆಯುವ ಮರ. ವಾಣಿಜ್ಯ ಪ್ರಪಂಚದಲ್ಲಿ ಇದನ್ನು ಅಂಜನ್ ಎಂದು ಕರೆಯುವರು. ಎಳೆಯ ಗಿಡದಲ್ಲಿ ಇದರ ಹಂದರ ಶಂಕುವಿನಾಕಾರದಲ್ಲಿದ್ದು ದೊಡ್ಡದಾದಂತೆ ಹರಡಿಕೊಳ್ಳುವುದು. ಎಲೆಗಳು ಗೊರಸಿನಾಕಾರ. ಶುಷ್ಕತೆಯಿರುವ ಪ್ರದೇಶಗಳಲ್ಲಿ ಅಲ್ಲಲ್ಲಿ ಕಂಡುಬರುವುದು. ಚಿತ್ರದುರ್ಗ ಜಿಲ್ಲೆಯ ಕಮರಾಕಾವಲ್ ಇದಕ್ಕೆ ಹೆಸರಾದುದು. ಬೆಂಗಳೂರು, ತುಮಕೂರು, ಕೊಳ್ಳೇಗಾಲ, ಬೆಳಗಾಂ, ಧಾರವಾಡ ಜಿಲ್ಲೆಗಳಲ್ಲೂ ಇದರ ವ್ಯಾಪನೆಯಿದೆ. ದೀರ್ಘಕಾಲದ ಶುಷ್ಕತೆಯನ್ನು ತಡೆದುಕೊಳ್ಳಬಲ್ಲ ಇದರಲ್ಲಿ ಫೆಬ್ರುವರಿ–ಮಾರ್ಚ್ ತಿಂಗಳ ಸುಮಾರಿಗೆ ಎಲೆಗಳು ಉದುರಿ ಕೆಂಪು ಛಾಯೆಯ ಹೊಸ ಚಿಗುರು ಏಪ್ರಿಲ್ ತಿಂಗಳಲ್ಲಿ ಬರುವುದು. ಹಳದಿಮಿಶ್ರಿತ ಹಸಿರು ಛಾಯೆಯ ಸಣ್ಣ ಹೂಗೊಂಚಲುಗಳು ಜುಲೈಯಿಂದ ಸೆಪ್ಟೆಂಬರ್ ವರೆಗೂ ಮೂಡಿ, ಕಾಯಿಗಳು ಏಪ್ರಿಲ್ ತಿಂಗಳ ಸುಮಾರಿಗೆ ಬಲಿಯುತ್ತವೆ. ಚಪ್ಪಟೆಯಾದ ಕಾಯಿಗಳು ಗಾಳಿಯಲ್ಲಿ ಸ್ವಲ್ಪ ದೂರ ತೂರಿಹೋಗಬಲ್ಲವು. 3–5 ವರ್ಷಗಳಿಗೊಮ್ಮೆ ಹೆಚ್ಚಿನ ಪ್ರಮಾಣದಲ್ಲಿ ಕಾಯಿ ಬಿಟ್ಟು ಮಿಕ್ಕ ವರ್ಷಗಳಲ್ಲಿ ಸಾಧಾರಣವಾಗಿ ಫಲ ಬಿಡುತ್ತದೆ. ಇದರ ಸಸಿಗಳು ಗಟ್ಟಿ ನೆಲದಲ್ಲಿಯೂ ತಾಯಿಬೇರನ್ನು ಆಳವಾಗಿ ಇಳಿಸಬಲ್ಲವು. ಇದರಿಂದಲೇ ಇವು ಶುಷ್ಕತೆಯ ಪ್ರದೇಶಗಳಲ್ಲಿಯೂ ಬೆಳೆಯುವ ಶಕ್ತಿ ಪಡೆದಿರುವುದು. ಬುಡ ಕತ್ತರಿಸಿದಾಗ ಕಾಂಡ ಚಿಗುರದಿದ್ದರೂ ರೆಂಬೆಗಳನ್ನು ಕತ್ತರಿಸಿದರೆ ಚೆನ್ನಾಗಿ ಚಿಗುರುತ್ತದೆ. ದನ, ಮೇಕೆ, ಜಿಂಕೆಗಳಿಗೆ ಇದರ ಎಲೆ ಬಹಳ ಇಷ್ಟ. ಎಳೆಯ ಸಸಿಗಳಿಗೆ ಬೆಂಕಿ ಬಹು ಅಪಾಯಕಾರಿ. ಈ ಸಸ್ಯಗಳ ಸ್ವಾಭಾವಿಕ ಪುನರುತ್ಪತ್ತಿಗೆ ಬೆಂಕಿ, ಜಾನುವಾರಗಳ ಉಪಟಳ, ಹಾಗೂ ಹುಲ್ಲು, ಕಳೆ ಮಾರಕವಾಗಿ ಪರಿಣಮಿಸುತ್ತವೆ. ಆದ್ದರಿಂದ ಬೀಜ ಬಿತ್ತಿ ಬೆಳೆಸುವಾಗ ಎಳೆಯದರಲ್ಲಿ ಬೆಂಕಿ ಜಾನುವಾರುಗಳಿಂದ ಕಾಪಾಡಬೇಕು. ಅರಣ್ಯಶಾಖೆಯವರು ಮೈದಾನಪ್ರದೇಶಗಳಲ್ಲಿ ಬೆಳೆಸುವ ತೋಪುಗಳ ಕಾರ್ಯಕ್ರಮದಲ್ಲಿ ಬಳಸುವ ಮರಗಳಲ್ಲಿ ಇದೂ ಒಂದು ಮುಖ್ಯ ಜಾತಿ.

ಇದರ ಚೌಬೀನೆ ಕೆಂಪುಮಿಶ್ರಿತ ಕಂದುಬಣ್ಣದ್ದು. ಭಾರವಾಗಿಯೂ ಗಡುಸಾಗಿಯೂ ಬಲಯುತವಾಗಿಯೂ ಇರುವುದರಿಂದ ಇದನ್ನು ಹದಮಾಡುವುದು ಕಷ್ಟ. ಹಸಿಯ ಮರವನ್ನೇ ಕೊಯ್ದು ನಿಧಾನವಾಗಿ ಆರಲು ಇಡಬೇಕು. ಗೆದ್ದಲು ಹತ್ತುವುದಾಗಲಿ ಕೊಳೆಯುವುದಾಗಲಿ ಬಹು ವಿರಳ. ಕೊರೆಯುವ ಹುಳುಗಳಿಂದ ಸ್ವಲ್ಪ ಹಾನಿ ಉಂಟು. ಒಣಮರವನ್ನು ಕೊಯ್ಯುವುದು ಕಷ್ಟವಾದರೂ ಹಸಿಯದರಲ್ಲಿ ಮರಗೆಲಸ ಸುಲಭ. ಗಡುಸು ಮರವಾದುದರಿಂದ ಗಾಡಿಯ ಗುಂಭ, ಒನಕೆ, ನೇಗಿಲು, ಯಂತ್ರಘರ್ಷಣಾ ಭಾಗಗಳಿಗೂ (ಬೇರಿಂಗ್ಸ್) ಗಣಿಗಳ ಊರುಗಂಭ, ತೊಲೆಗಳು, ನೆಲಹಾಸುಗಳು ಇತ್ಯಾದಿಗಳಿಗೆ ಬಳಸುವರು. (ಎ.ಕೆ.ಎಸ್.)

**ಕಮರಾಕ್ಷಿ :** ಆಕ್ಸಾಲಿಡೇಸಿ ಕುಟುಂಬಕ್ಕೆ ಸೇರಿದ ಅವರೋಹ ಎಂಬ ಜಾತಿಯ ನಿತ್ಯಹರಿದ್ವರ್ಣದ ಮರ. 15′–20′ ಎತ್ತರಕ್ಕೆ ಬೆಳೆಯುವ ಈ ಮರವನ್ನು ಮೊದಲು ಪೋರ್ಚುಗೀಸರು ಅಮೆರಿಕದಿಂದ ಭಾರತಕ್ಕೆ ತಂದರೆಂದು ಹೇಳುವರು. ಈಗ ಇದನ್ನು ಭಾರತದಲ್ಲಿ ತೋಟಗಳಲ್ಲೂ ಉದ್ಯಾನಗಳಲ್ಲೂ ಬೆಳೆಸಲಾಗುತ್ತದೆ.

ಇದರಲ್ಲಿ ಅವರೋಹ ಕರಂಬೋಲ ಮತ್ತು ಅವರೋಹ ಬಿಲಿಂಬಿ ಎಂಬ 2 ಪ್ರಭೇದಗಳಿವೆ. ಮೊದಲನೆಯದರಲ್ಲಿ ಫಲ ಚಿಕ್ಕದಾಗಿದ್ದು ಸಿಹಿಯಾಗಿದೆ. ಇನ್ನೊಂದರಲ್ಲಿ ಫಲ ದೊಡ್ಡದೂ ಒರಟೂ ಅತಿ ಹುಳಿಯೂ ಆಗಿದೆ. ಸಾಮಾನ್ಯವಾಗಿ ಎರಡು ಬಗೆಯೂ ವರ್ಷಕ್ಕೆ 2 ಸಲ ಫಲ ಬಿಡುತ್ತವೆ—ಬೇಸಿಗೆಯಲ್ಲಿ ಒಮ್ಮೆ ಮತ್ತು ಸೆಪ್ಟೆಂಬರ್–ಅಕ್ಟೋಬರ್ ತಿಂಗಳಲ್ಲಿ ಒಮ್ಮೆ ; ಗರಿ ರೂಪದ ಎಲೆಗಳು ಸ್ವಲ್ಪಮಟ್ಟಿಗೆ ಸ್ಪರ್ಶಕ್ಕೆ ಶೀಘ್ರವೇದಿಯಾಗಿರುತ್ತವೆ.

ಅವರೋಹ ಎಂಬ ಪದ ಅವಿರೋಯಿಚ್ ಎಂಬ ಅರೇಬಿಯದ ವೈದ್ಯನ ಹೆಸರಿನಿಂದ ಬಂದಿದೆ. ಏಷ್ಯದ ಉಷ್ಣವಲಯ ಪ್ರದೇಶಗಳಲ್ಲಿ ದೀರ್ಘಕಾಲದಿಂದಲೂ ಹಣ್ಣಿಗಾಗಿ ಇದರ ವ್ಯವಸಾಯ ಸಾಗಿ ಬಂದಿದೆ. ಸಾಮಾನ್ಯವಾಗಿ ಇದನ್ನು ಬೀಜಗಳಿಂದಲೇ ವೃದ್ಧಿಗೊಳಿಸುವುದು ಹೆಚ್ಚು. ಆದರೆ ಉತ್ತಮ ತಳಿಗಳನ್ನು ಬಡಿಂಗ್ ಅಥವಾ ಗೂಟಿ ವಿಧಾನದಿಂದ ಪಡೆಯಬಹುದು.

ಇದರ ಎಲೆ, ಬೇರು ಮತ್ತು ಫಲಗಳಿಗೆ ಸ್ಕರ್ವಿ ರೋಗ ನಿವಾರಕ ಗುಣವಿರುವುದರಿಂದ ಔಷಧಿಯಾಗಿಯೂ ದೇಹವನ್ನು ತಂಪುಗೊಳಿಸುವುದಕ್ಕೂ ಬಳಸಲಾಗುತ್ತದೆ. ಫಲಗಳನ್ನು ಜೆಲ್ಲಿ, ಉಪ್ಪಿನಕಾಯಿ ಮುಂತಾದುವನ್ನು ತಯಾರಿಸಲು ಬಳಸುತ್ತಾರೆ. ಅದರಿಂದ ಉತ್ತಮ ಪೇಯವನ್ನೂ ತಯಾರಿಸುತ್ತಾರೆ. ಅಪಕ್ವ ಫಲಗಳು ಒಗರು. ಅವನ್ನು ಬಟ್ಟೆಗಳಿಗೆ ಬಣ್ಣ ಹಾಕುವುದಕ್ಕೂ ಲಿನೆನ್ ಅರಿವೆಗಳ ಮೇಲಿನ ತುಕ್ಕಿನ ಕಲೆಗಳನ್ನು ಅಳಿಸುವುದಕ್ಕೂ ಒಂದು ಆಮ್ಲವಸ್ತುವಿನ ರೂಪದಲ್ಲಿ ಬಳಸುವುದುಂಟು. ಅಲ್ಲದೆ ಹಿತ್ತಾಳೆ ಪಾತ್ರೆಗಳಿಗೆ ಹೊಳಪು ಕೊಡುವುದಕ್ಕೂ ಬಳಸುತ್ತಾರೆ. ಕಚ್ಚಾ ಫಲಗಳನ್ನು ಬೇಯಿಸಿ ತರಕಾರಿಯಂತೆಯೂ ಉಪಯೋಗಿಸುವುದುಂಟು. ಈ ಮರದ ಕಟ್ಟಿಗೆಗಳನ್ನು ಬಂಗಾಳದಲ್ಲಿ ಕಟ್ಟಡಗಳಿಗೂ ಪೀಠೋಪಕರಣಗಳಿಗೂ ಬಳಸುವರು.

ಇದರ ಎಲೆಗಳು ಸಂಯುಕ್ತ ಮಾದರಿಯವು. ಒಂದೊಂದು ಎಲೆಯೂ ಸುಮಾರು 10″–12″ ಉದ್ದವಿದೆ. ಅದರಲ್ಲಿ ಒಂದು ನೀಳವಾದ ನಡುನಾಳ (ರೇಕಿಸ್), ಅದರ ಮೇಲೆ ಪರ್ಯಾಯವಾಗಿ ಜೋಡಣೆಗೊಂಡ 6–12 ಕಿರು ಎಲೆಗಳು ಇವೆ. ಕಿರುಎಲೆಗಳ ತುದಿ ಉದ್ದ ಮತ್ತು ಮೊನಚು, ಬುಡ ದುಂಡು ಅಥವಾ ಓರೆಯಾಗಿದೆ. ಹೂಗೊಂಚಲುಗಳು ಎಲೆಗಳ ಕಂಕುಳಲ್ಲೊ ಇಲ್ಲವೆ ಮರದ ತೊಗಟೆಯ ಮೇಲೊ ಹುಟ್ಟುತ್ತವೆ. ಹೂಗಳು ಬಹಳ ಚಿಕ್ಕವು. ಪುಷ್ಪಪತ್ರ ಮತ್ತು ದಳಗಳು ಐದೈದು ಇವೆ, ಫಲ 3″–5″ ಉದ್ದವಿದ್ದು ಆಯತಾಕಾರವಾಗಿದೆ. ಅದರಲ್ಲಿ 5–6 ಚೂಪಾದ ಏಣುಗಳಿವೆ. ಮಾಗಿದಾಗ ಹಣ್ಣು ಹಳದಿ ಬಣ್ಣಕ್ಕೆ ತಿರುಗುತ್ತದೆ.

ಅವರೋಹ ಬಿಲಿಂಬಿ ಪ್ರಭೇದ 15′–60′ ಎತ್ತರ ಬೆಳೆಯುತ್ತದೆ. ಎಲೆಗಳೆಲ್ಲ ಕೊಂಬೆಗಳ ತುದಿಯಲ್ಲೇ ಹೆಚ್ಚು ದಟ್ಟವಾಗಿರುತ್ತವೆ. ನಿತ್ಯಹರಿದ್ವರ್ಣದ ಇದರ ಎಲೆಗಳು ಸಂಯುಕ್ತಪತ್ರಗಳಾಗಿದ್ದು 18″–24″ ಉದ್ದ ಇವೆ. ಕಿರು ಎಲೆಗಳ ಸಂಖ್ಯೆ 11–35. ಅವು ನೀಳವಾದ ನಡುನಾಳದ ಮೇಲೆ ಅಭಿಮುಖವಾಗಿ ಜೋಡಣೆಗೊಂಡಿದ್ದು ತುದಿಯಲ್ಲಿ ಒಂದೇ ಕಿರು ಎಲೆ ಇದೆ. ಕಿರುಎಲೆಗಳು ಆಯತಾಕಾರದವು. ಅವುಗಳ ತುದಿ ಚೂಪಾಗಿಯೋ ಉದ್ದವಾಗಿಯೋ ಇದೆ. ಹೂಗೊಂಚಲು ದಪ್ಪ ಕಾಂಡ ಮತ್ತು ಕೊಂಬೆಗಳಿಂದ, ಚಿಕ್ಕ ಹಾಗೂ ಮೃದು ರೋಮಗಳಿಂದ ಆವೃತವಾದ ಮಿಶ್ರಮಂಜರಿಯಾಗಿ ಹುಟ್ಟುತ್ತವೆ. ಪುಷ್ಪಪತ್ರ–5 ; ಪುಷ್ಪದಳ–5 ; ಕೇಸರಗಳು–5. ಎಲ್ಲ ಕೇಸರಗಳೂ ಫಲವತ್ತಾಗಿವೆ. ಫಲ ಆಯತಾಕಾರವಾಗಿ 3″–4″ ಉದ್ದ ಇದೆ. ಅದರ ಮೇಲೆ ನಾಲ್ಕಾರು ಏಣುಗಳಿವೆ. ಏಣುಗಳು ಚೂಪಾಗಿಲ್ಲ.

ಅವರೋಹದ 2 ಪ್ರಭೇದಗಳೂ ಸ್ವಲ್ಪ ಹೆಚ್ಚುಕಡಿಮೆ ಒಂದೇ ರೀತಿ ಕಾಣುವುದರಿಂದ ಒಂದನ್ನೊಂದು ಗುರುತಿಸುವುದು ಕಷ್ಟ. ಆದರೆ ಅವರೋಹ ಕರಂಬೋಲದಲ್ಲಿ ಫಲದ ಮೂಲೆಯಂಚುಗಳು ಅಷ್ಟು ಸ್ಪಷ್ಟವಾಗಿಲ್ಲ. ಅದನ್ನು ಹಸಿಯಾಗಿಯೇ

ಸೇವಿಸಲು ಅತ್ಯಂತ ಹುಳಿಯಾಗಿರುತ್ತದೆ. ಫಲ ಸ್ವಲ್ಪ ಉದ್ದುದ್ದವಾಗಿದ್ದು ಕೈಯಿಂದ ಸುಲಭವಾಗಿ ಜಾರುವಂತಿರುತ್ತದೆ. ಇದನ್ನು ವಿಶೇಷವಾಗಿ ಉಪ್ಪಿನಕಾಯಿಗಾಗಿಯೇ ಬಳಸುವುದುಂಟು.

ಫಲ ಬಿಡದಿದ್ದಾಗ ಕಮರಾಕ್ಷಿ ಮರವನ್ನು ಕಿರು ನೆಲ್ಲಿಮರವೆಂದು ತಪ್ಪಾಗಿ ಭಾವಿಸಬಹುದು. ಏಕೆಂದರೆ ಮೇಲುನೋಟಕ್ಕೆ ಎರಡೂ ಒಂದೇ ರೀತಿಯವಾಗಿ ಕಾಣುತ್ತವೆ. ಆದರೆ ಅವಲೋಕನದಲ್ಲಿ ಕಿರುಎಲೆಗಳು ಎದುರುಬದರಾಗಿದ್ದರೆ ಕಿರು ನೆಲ್ಲಿಯಲ್ಲಿ ಕಿರುಎಲೆಗಳು ಸ್ಪಷ್ಟವಾಗಿ ಪರ್ಯಾಯವಾಗಿ ಜೋಡಣೆಯಾಗಿರುತ್ತವೆ. ಈ ವ್ಯತ್ಯಾಸದಿಂದ ಅವೆರಡು ಮರಗಳನ್ನು ಗುರುತಿಸಿ ಪ್ರತ್ಯೇಕಿಸಬಹುದು.

(ಎಂ.ಎಸ್.ಎಸ್.ಆರ್.)

**ಕಮರಿ :** ವೇಗವಾಗಿ ಹರಿಯುವ ನೀರಿನ ಗತಿಯಿಂದ ಆದ ನೆಲದ ಕೊರೆತ (ರೆವಾಯ್ನ್). ಕೊರಕಲಿಗಿಂತ ಕಿರಿಯದು. ಇದೊಂದು ಚಿಕ್ಕ ಇಕ್ಕಟ್ಟಾದ ಕಡಿದು ಬದಿಗಳಿರುವ ಕಣಿವೆ. **ನೋಡಿ—ಕಣಿವೆ. ಕೊರಕಲು.** *

**ಕಮಲ :** ನಿಂಫೇಸೀ ಕುಟುಂಬಕ್ಕೆ ಸೇರಿದ ನಿಲಂಬೊ ನ್ಯೂಸಿಫೆರ ಎಂಬ ಶಾಸ್ತ್ರೀಯ ಹೆಸರಿನ ಜಲಸಸ್ಯ. ಇದನ್ನು ನಿಲಂಬಿಯಂ ಸ್ಪೀಶಿಯೋಸಂ ಎಂದೂ ಕರೆಯುತ್ತಾರೆ. ತಾವರೆ ಇದರ ಪರ್ಯಾಯ ನಾಮ. ಬಹಳ ಸುಂದರವಾದ ವಿವಿಧ ಬಣ್ಣಗಳ ಹೂ ಬಿಡುವ ಈ ಸಸ್ಯ ಭಾರತೀಯರಿಗೆ ಪವಿತ್ರವೆನಿಸಿದೆ. ಭಾರತದ ಎಲ್ಲ ಪ್ರದೇಶಗಳಲ್ಲೂ ಕೆರೆ, ಕೊಳ ಮುಂತಾದುವುಗಳಲ್ಲಿ ಸ್ವಾಭಾವಿಕವಾಗಿ ಬೆಳೆಯುತ್ತದೆ. ಉದ್ಯಾನಗಳ ಕೃತಕ ಸರೋವರಗಳಲ್ಲಿ ಅಲಂಕಾರಕ್ಕಾಗಿ ಬೆಳೆಸುವರು. ಆದ್ದರಿಂದಲೇ ಬಹು ಹಿಂದಿನಿಂದಲೂ ಕವಿಗಳು ಸರೋವರವನ್ನು ಕಮಲಾಕರ, ಅಬ್ಜಷಂಡ ಎಂದೇ ವರ್ಣಿಸುತ್ತ ಬಂದಿದ್ದಾರೆ,

ಸಸ್ಯದ ಬುಡದಲ್ಲಿ ವಿಪುಲವಾಗಿ ಕವಲೊಡೆದ ಪ್ರಕಂದ (ರೈಜ಼ೋಮ್) ಉಂಟು, ಇದರ ಕವಲುಗಳು ಎಲ್ಲ ದಿಕ್ಕಿಗೂ ಬೆಳೆದು 30′–40′ ಅಗಲಕ್ಕೆ ಹರಡುತ್ತವೆ. ಕವಲುಗಳಿಂದ ಹಲವಾರು ದೊಡ್ಡ ಎಲೆಗಳು ಹುಟ್ಟುತ್ತವೆ. ಸಾಮಾನ್ಯವಾಗಿ ಎಲೆಗಳೆಲ್ಲ ನೀರಿನಿಂದ ಮೇಲಕ್ಕೆ ಹೊರಟಿರುತ್ತವೆ. ಒಂದೊಂದು ಎಲೆಯೂ ತುಂಬ ಅಗಲ (60–90 ಸೆಂ. ವ್ಯಾಸವುಳ್ಳದ್ದು) ಮತ್ತು ವೃತ್ತಾಕಾರ. ತಟ್ಟೆಯಂತೆ ಹರಡಿದ ಎಲೆಯ ಅಲಗಿನ ತಳಭಾಗದಲ್ಲಿ ಮಧ್ಯ ಭಾಗಕ್ಕೆ ಅಂಟಿಕೊಂಡಿರುವ ಉದ್ದನೆಯ ತೊಟ್ಟಿದೆ. ಅಲಗಿನ ಬಣ್ಣ ಮಾಸಲು ಹಸಿರು ; ಅಂಚು ನಯ. ಹೂ ದೊಡ್ಡದು, ಬಿಳಿ ಅಥವಾ ಗುಲಾಬಿ ಬಣ್ಣದ್ದು. ಅದಕ್ಕೆ ಸವುರಾದ ಸುವಾಸನೆಯಿದೆ. ಹೂವಿನಲ್ಲಿ ಬಟ್ಟಲಿನಾಕಾರದ ಪುಷ್ಪ ಪೀಠವೂ ಅದರ ಸುತ್ತ ಅನಿರ್ದಿಷ್ಟ ಮತ್ತು ಹೆಚ್ಚು ಸಂಖ್ಯೆಯ ಹೂದಳಗಳೂ ಇವೆ. ಪುಷ್ಪಪೀಠದಲ್ಲಿ ಅನೇಕ ಅಂಡಕೋಶಗಳು ಅಡಗಿದ್ದು ಅವುಗಳ ಶಲಾಕಾಗ್ರ ಮಾತ್ರ ಪೀಠದ ಸಮತಳದ ಮೇಲೆ ಕಾಣಿಸುತ್ತವೆ. ದಳಗಳಿಗೂ ಪೀಠದ ಸಮತಳಕ್ಕೂ ನಡುವೆ ಅಸಂಖ್ಯಾತವಾದ ಕೇಸರಗಳು ಜೋಡಿಸಿಕೊಂಡಿವೆ. ಒಂದೊಂದು ಅಂಡಕೋಶದಲ್ಲಿ ಒಂದೊಂದೇ ಅಂಡಕವಿದೆ. ಗರ್ಭಾಂಕುರವಾದನಂತರ ಅಂಡಕೋಶಗಳು ಏಕೀನ್ ಮಾದರಿಯ ಫಲಗಳಾಗುತ್ತವೆ.

ಕಮಲವನ್ನು ಅದರ ಪ್ರಕಂದದ ತುಂಡುಗಳಿಂದ ವೃದ್ಧಿ ಮಾಡುತ್ತಾರೆ : ಬೀಜಗಳಿಂದಲೂ ವೃದ್ಧಿ ಮಾಡಬಹುದು. ಸಾಧಾರಣವಾಗಿ ಪ್ರಕಂದವನ್ನು ಕೊಟ್ಟಿಗೆ ಗೊಬ್ಬರ ಮತ್ತು ಮಣ್ಣು ತುಂಬಿದ ಮಡಕೆ, ಕುಂಡ ಅಥವಾ ಯಾವುದಾದರೂ ಪಾತ್ರೆಯಲ್ಲಿ ನೆಟ್ಟು, ಕುಂಡವನ್ನು, ಪ್ರಕಂದದ ತುದಿ ನೀರಿನ ಮಟ್ಟಕ್ಕಿಂತ ಸ್ವಲ್ಪ ಮೇಲಿರುವಂತೆ, ಸರೋವರ ಅಥವಾ ಕಲ್ಯಾಣಿಗಳಲ್ಲಿ ಇಡುತ್ತಾರೆ. ನೀರಿನ ಮಟ್ಟ ಜಾಸ್ತಿ ಇದ್ದಲ್ಲಿ ಕೆಳಗೆ ಇಟ್ಟಿಗೆಗಳನ್ನು ಇಟ್ಟು ಅವುಗಳ ಮೇಲೆ ಕುಂಡ ಇಡುತ್ತಾರೆ. ಸಸಿ ಬೆಳೆದಂತೆಲ್ಲ ಕುಂಡವನ್ನು ಕೆಳಗಿಳಿಸುತ್ತ ಹೋಗುತ್ತಾರೆ. ನೇರವಾಗಿ ಸರೋವರದಲ್ಲೇ ಕಮಲವನ್ನು ಬೆಳೆಸಬೇಕಾದರೆ, ಸರೋವರದ ತಳಕ್ಕೆ ಒಂದು ಅಡಿ ಆಳದಷ್ಟು ಮಣ್ಣು ಮತ್ತು ಚೆನ್ನಾಗಿ ಕೊಳೆತ ಕೊಟ್ಟಿಗೆ ಗೊಬ್ಬರವನ್ನು ಹರಡಿ ಕಮಲದ ಪ್ರಕಂದದ ತುಂಡುಗಳನ್ನು ನಾಟಿ ಮಾಡುತ್ತಾರೆ. ಅನಂತರ ಅವುಗಳ ತುದಿ ನೀರಿನ ಮಟ್ಟಕ್ಕಿಂತ ಕೊಂಚ ಮೇಲಕ್ಕಿರುವಂತೆ ನೀರನ್ನು ಹಾಯಿಸುತ್ತಾರೆ. ಸಸಿ ಬೆಳೆದಂತೆಲ್ಲ ನೀರಿನ ಮಟ್ಟವನ್ನು ಹೆಚ್ಚಿಸುತ್ತ ಹೋಗುತ್ತಾರೆ. ಹೀಗೆ 6-8 ವಾರಗಳಲ್ಲಿ ಸರೋವರದ ತುಂಬ ಕಮಲ ಹರಡಿಕೊಳ್ಳುತ್ತದೆ.

ಕಮಲ ಭಾರತೀಯ ಸಂಸ್ಕೃತಿ ಸಾಹಿತ್ಯಗಳಲ್ಲಿ ಹಾಸು ಹೊಕ್ಕಾಗಿ ಹೆಣೆದುಕೊಂಡು ಬಂದಿರುವ ಪವಿತ್ರ ಪುಷ್ಪ. ವೇದಗಳಲ್ಲೂ ಪ್ರಾಚೀನ ಸಂಸ್ಕೃತ ಕೃತಿಗಳಲ್ಲೂ ಇದರ ಉಲ್ಲೇಖಗಳಿವೆ. ಇದನ್ನು ಲಕ್ಷ್ಮಿಯ ಆವಾಸಸ್ಥಾನವೆನ್ನಲಾಗಿದೆ. ಅಗಲವಾಗಿ ಸುಂದರವಾಗಿರುವ ಮುಖವನ್ನು ಕಮಲಕ್ಕೆ ಹೋಲಿಸಿರುವುದೂ ಉಂಟು. ಕಮಲವನ್ನು ಮನ್ಮಥನ ಐದು ಬಾಣಗಳಲ್ಲಿ ಒಂದು ಎನ್ನಲಾಗಿದೆ.

ಕಮಲ ಸೌಂದರ್ಯಕ್ಕಾಗಿ ಮಾತ್ರವಲ್ಲದೆ ಆಹಾರ ವಸ್ತುವಾಗಿಯೂ ಹೆಸರಾಗಿದೆ. ಇದರ ಪ್ರಕಂದದಲ್ಲಿ ಯಥೇಚ್ಛವಾಗಿ ಪಿಷ್ಟ ಸಂಗ್ರಹವಾಗಿರುವುದರಿಂದ ತರಕಾರಿಯಾಗಿಯೂ ಉಪ್ಪಿನಕಾಯಿಗೂ ಇದನ್ನು ಉಪಯೋಗಿಸುತ್ತಾರೆ. ಇದರಲ್ಲಿ 2.70% ಪ್ರೋಟೀನು, 9.25% ಪಿಷ್ಟ, 0.11% ಕೊಬ್ಬು, 1.56%ಸಕ್ಕರೆಯ ಭಾಗ ಇದೆಯೆಂದು ತಿಳಿದುಬಂದಿದೆ. ಅಲ್ಲದೆ ಬಿ ಮತ್ತು ಸಿ ಜೀವಾತುಗಳು ಕೂಡ ಇವೆ. ಕಮಲದ ಕಾಯಿಗಳನ್ನು ಹುರಿದು ಅಥವಾ ಹುರಿಯದೆಯೇ ತಿನ್ನುವುದುಂಟು ಎಳೆಯ ಎಲೆಗಳು, ಕಾಂಡ (ದಂಟು) ಮತ್ತು ಹೂಗಳನ್ನೂ ತರಕಾರಿಯಾಗಿ ಬಳಸುವ ರೂಢಿಯಿದೆ. ಎಲೆಗಳು ಅಗಲವಾಗಿರುವುದರಿಂದ ಊಟದ ಎಲೆಯಾಗಿ ಬಳಸುತ್ತಾರೆ.

ಒಂದು ಕಾಲದಲ್ಲಿ ಕಮಲದ ಹೂಗಳಿಂದ ಒಂದು ಬಗೆಯ ಸುಗಂಧ ದ್ರವ್ಯವನ್ನು ತಯಾರಿಸುತ್ತಿದ್ದರು. ಹೂಗಳಿಂದ ಬರುವ ಜೇನು ಶಕ್ತಿವರ್ಧಕವೆನ್ನುತ್ತಾರೆ. ಅಲ್ಲದೆ ಅದನ್ನು ಕಣ್ಣಿನ ಕೆಲವು ರೋಗಗಳಿಗೆ ನಿವಾರಕವಾಗಿ ಉಪಯೋಗಿಸುತ್ತಾರೆ. ಪ್ರಕಂದಗಳಿಂದ ಒಂದು ಬಗೆಯ ಹಿಟ್ಟನ್ನು ತಯಾರಿಸಬಹುದು. ಶಕ್ತಿವರ್ಧಕವೆಂದು ಹೆಸರಾಗಿರುವ ಇದನ್ನು ಅತಿಸಾರ, ಆಮಶಂಕೆಗಳಿಂದ ಬಳಲುವ ಮಕ್ಕಳಿಗೆ ಆಹಾರವಾಗಿ ಕೊಡುತ್ತಾರೆ. ಪ್ರಕಂದಗಳಿಂದ ಒಂದು ರೀತಿಯ ಲೇಪವನ್ನು ತಯಾರಿಸಿ ಗಜಕರ್ಣ ಮತ್ತಿತರ ಚರ್ಮರೋಗಗಳಿಗೆ ಬಳಸುತ್ತಾರೆ.

(ಎಂ.ಎಚ್.ಎಂ.; ಕೆ.ಎಂ.)



ಕೆಂಪು ಕಮಲ

**ಕಮಲಭವ :** ಶಾಂತೀಶ್ವರಪುರಾಣವೆಂಬ ಚಂಪೂಕಾವ್ಯವನ್ನು ಬರೆದ ಕವಿ ಕಾಲ ಸು. 1235. ಜೈನಮತಕ್ಕೆ ಸೇರಿದವ ; ದೇಶೀಯಗಣ ಪುಸ್ತಕಗುಚ್ಛದ ಕೊಂಡಕುಂದಾನ್ವಯದ ಮಾಘನಂದಿ ಪಂಡಿತ ಮುನೀಶ್ವರನ ಶಿಷ್ಯ. ಈತನಿಗೆ ಕವಿಕಂಜಗರ್ಭ, ಸೂಕ್ತಿಸಂದರ್ಭಗರ್ಭ ಎಂಬ ಬಿರುದುಗಳಿದ್ದಂತೆ ಕಾಣುತ್ತವೆ. ದೇವಗಿರಿಯ ಯಾದವರಾಜನಾದ ಸಿಂಹಣನ ಕಾಲದಲ್ಲಿ (ಕ್ರಿ.ಶ. 1210 ರಿಂದ 1247) ಇದ್ದನೆಂದು ಅವನ ಸಿಂಹಣೋರ್ವೀಶ್ವರಂ ವಿನಮನ್ಮಸ್ತಕ ನಾದಂ' ಎಂಬ ಉಕ್ತಿಯಿಂದ ಊಹಿಸಬಹುದಾಗಿದೆ. ತನ್ನ ಕಾವ್ಯದಲ್ಲಿ ಪೂರ್ವ ಕವಿಗಳಾದ ಪಂಪ, ಪೊನ್ನ, ನಾಗಚಂದ್ರ, ರನ್ನ, ಬಂಧುವರ್ಮ, ನೇಮಿಚಂದ್ರ, ಜನ್ನ, ಅಗ್ಗಳ—ಮೊದಲಾದವರ ಕೃತಿಸೌಂದರೀಸುಭಗಮಾವಗಮಿರ್ಕೆ—ಎಂದು ಹೇಳಿಕೊಂಡಿದ್ದಾನೆ. ಈ ಕಾರಣದಿಂದ ಜನ್ನಕವಿಯ (ಕ್ರಿ.ಶ. 1230) ಈಚೆಗೂ ಮಲ್ಲಿಕಾರ್ಜುನನ

ಸೂಕ್ತಿಸುಧಾರ್ಣವದಲ್ಲಿ (ಸು. 1245) ಇವನ ಗ್ರಂಥದಿಂದ ಪದ್ಯಗಳು ಉದ್ಧರಿಸಲ್ಪಟ್ಟಿರುವುದರಿಂದ ಇದಕ್ಕೆ ಮೊದಲೂ ಕಮಲಭವ ಇದ್ದಿರಬೇಕು. ದೇವಕವಿಯ ಕುಸುಮಾವಳೀಕಾವ್ಯದ 'ಕವಿಕಮಳಜ ಸೂಕ್ತಿ ಸುಧಾರ್ಣವ ಸೋಮಂ' ಎಂಬ ಉಕ್ತಿಯಿಂದ ದೇವಕವಿಯಿಂದ ಈತ ಪ್ರೋತ್ಸಾಹ ಪಡೆದವನೆಂದು ಊಹಿಸಲಾಗಿದೆ.

ಶಾಂತೀಶ್ವರಪುರಾಣವನ್ನು ರಚಿಸಿದ ಕನ್ನಡ ಕವಿಗಳಲ್ಲಿ ಈತ ಎರಡನೆಯವ. ಹದಿನಾರನೆಯ ತೀರ್ಥಂಕರನನ್ನು ಕುರಿತ ಈ ಪುರಾಣದಲ್ಲಿ ಹದಿನಾರು ಆಶ್ವಾಸಗಳಿರುವುದು ಸಾರ್ಥಕವಾಗಿದೆ. ಪುರಾಣಕಾವ್ಯದ ಲಕ್ಷಣಗಳನ್ನೆಲ್ಲ ಒಳಗೊಂಡ ಪರಿಪೂರ್ಣವಾದ ಚಂಪೂಕೃತಿ ಇದು. ಕಥನವಿಸ್ತಾರ ಮತ್ತು ವರ್ಣನಾವಿಸ್ತಾರಗಳಲ್ಲಿ ಪೊನ್ನನ ಕಾವ್ಯವನ್ನು ಇದು ಮೀರಿಸುತ್ತದೆ.

ಲಲಿತಪದಬಂಧ, ಕಥೆಯ ನಿರರ್ಗಳ ಓಟ, ಉಕ್ತಿ ಪ್ರೌಢಿಮೆ, ಭಾವತತ್ಪರತೆ, ಸುಂದರ ಕಲ್ಪನೆಗಳಿಂದ ಕೂಡಿದ ವರ್ಣನೆಗಳು, ಕವಿಸಮಯ ಮತ್ತು ಅಲಂಕಾರಗಳಿಂದ ತುಳುಕುವ ಪಾಂಡಿತ್ಯ—ಇವುಗಳಿಂದ ಇದು ಗಣ್ಯ ಚಂಪೂಕೃತಿ ಎನ್ನಿಸುತ್ತದೆ ಯಾದರೂ ರಸದ ನಿರರ್ಗಳ ಪ್ರವಾಹವಿಲ್ಲದುದರಿಂದ, ಅಂಶ ಅಂಶಗಳಲ್ಲಿ ಸುಂದರವಾಗಿದ್ದರೂ ಒಟ್ಟಾರೆ ನೋಡಿದಾಗ ಸಮಷ್ಟಿ ಸೌಂದರ್ಯದ ಕೊರತೆ ಎದ್ದು ಕಾಣುತ್ತದೆ. (ಕೆ.ಜಿ.ಕೆ.)

**ಕಮಲಶೀಲ :** ಶಾಂತರಕ್ಷಿತನ (ನೋಡಿ) ಪ್ರತ್ಯಕ್ಷ ಶಿಷ್ಯ. ಗುರುವಿನಂತೆ ಬೌದ್ಧತತ್ತ್ವಜ್ಞಾನಿ ಮತ್ತು ತಂತ್ರಶಾಸ್ತ್ರವಿಶಾರದ. ಈತ ನಲಂದ ವಿದ್ಯಾಪೀಠದಲ್ಲಿ ತಂತ್ರಶಾಸ್ತ್ರದಲ್ಲಿ ಪಾಠ ಹೇಳುವ ಆಚಾರ್ಯನಾಗಿದ್ದನೆಂದು ತಿಳಿದುಬರುತ್ತದೆ. ಜನ್ಮಸ್ಥಾನ ನಮಗೆ ಗೊತ್ತಿಲ್ಲ. ಕಾಲ ಸು. 713–63 ; ಈತನ ಹಲವು ಗ್ರಂಥಗಳು ಟಿಬೆಟನ್ ಭಾಷೆಯಲ್ಲಿ ಅನುವಾದವಾಗಿವೆ. ಸಂಸ್ಕೃತ ಮೂಲದಲ್ಲಿ ದೊರೆತ ಈತನ ಗ್ರಂಥವೆಂದರೆ ಶಾಂತರಕ್ಷಿತನ ತತ್ತ್ವಸಂಗ್ರಹದ ಮೇಲಿನ ಪಂಜಿಕೆಯೆಂಬ ಟೀಕೆ. ಇಲ್ಲಿ ಈತನ ವಿಶಾಲವಾದ ಅಧ್ಯಯನದ ಪರಿಚಯವಾಗುತ್ತದೆ. ಶಾಂತರಕ್ಷಿತನ ಶೈಲಿ ಮತ್ತು ಆತನ ಕಾರಿಕೆಗಳು ಅಷ್ಟು ಸುಲಭದವಲ್ಲ. ಆದರೂ ಕಮಲಶೀಲ ಅತ್ಯಂತ ವಿಸ್ತೃತವಾದ ಟೀಕೆಯನ್ನು ಬರೆದು ಅವುಗಳ ಅರ್ಥವನ್ನು ಸ್ಪಷ್ಟವಾಗಿ ನಿರೂಪಿಸಿದ್ದಾನೆ. ಖಂಡಿಸುವುದಕ್ಕಾಗಿ ಶಾಂತರಕ್ಷಿತ ಬೇರೆಬೇರೆಯವರ ಮತಗಳನ್ನು ಸೂಚಿಸಿದ ಕಡೆಗಳಲ್ಲೆಲ್ಲ ಕಮಲಶೀಲ ಆಯಾ ಆಚಾರ್ಯರ ಹೆಸರುಗಳನ್ನು ಹೇಳಿದ್ದಾನೆ. ಇದು ನ್ಯಾಯಶಾಸ್ತ್ರದ ಇತಿಹಾಸದ ದೃಷ್ಟಿಯಿಂದ ಬಹಳ ಮಹತ್ತ್ವದ ಸಂಗತಿ. ಎಷ್ಟೋ ಸಂದರ್ಭಗಳಲ್ಲಿ ಶಾಂತರಕ್ಷಿತನಿಗಿಂತ ಹೆಚ್ಚು ವಿಷಯಗಳನ್ನು ಹೇಳಿ ಪರಮತಖಂಡನೆ ಮಾಡುತ್ತಾನೆ, ಶಿಷ್ಯ ಕಮಲಶೀಲ.

ಶಾಂತರಕ್ಷಿತಸಂಥ ಗುರುವಿಗೆ ಕಮಲಶೀಲ ಯೋಗ್ಯ ಶಿಷ್ಯ ಮತ್ತು ತತ್ತ್ವಸಂಗ್ರಹಕ್ಕೆ ಒಪ್ಪುವ ವ್ಯಾಖ್ಯಾನಕಾರ. (ಎ.ಎನ್.ಯು.)

**ಕಮಲಾದೇವಿ :** ವಾಘೇಲ ಮನೆತನಕ್ಕೆ ಸೇರಿದ, ಗುಜರಾತಿನ ರಾಜನಾದ ಎರಡನೆಯ ಕರ್ಣದೇವನ ರಾಣಿ. ಅಲ್ಲಾವುದ್ದೀನ್ ಖಿಲ್ಜಿ ದೆಹಲಿ ಸುಲ್ತಾನನಾದ ಅನಂತರ ಗುಜರಾತ್ ರಾಜ್ಯವನ್ನು ವಶಪಡಿಸಿಕೊಳ್ಳಲು ತನ್ನ ತಮ್ಮನಾದ ನಸ್ರತ್ ಖಾನ್ ಮತ್ತು ಉಲಘ್ ಖಾನರ ಮುಖಂಡತ್ವದಲ್ಲಿ 1298ರಲ್ಲಿ ಸೈನ್ಯವನ್ನು ಕಳುಹಿಸಿದ. ಯುದ್ಧದಲ್ಲಿ ಕರ್ಣದೇವ ಸೋತು ತನ್ನ ನಾಲ್ಕು ವರ್ಷದ ಪುತ್ರಿ ದೇವಲದೇವಿಯೊಡನೆ ದೇವಗಿರಿಗೆ ಓಡಿಹೋದ. ಕರ್ಣದೇವನ ರಾಣಿಯಾದ ಕಮಲಾದೇವಿ ಶತ್ರುಗಳ ಕೈಗೆ ಸಿಕ್ಕಿಬಿದ್ದಳು. ಅವಳನ್ನು ದೆಹಲಿಗೆ ಕರೆದುಕೊಂಡು ಹೋಗಲಾಯಿತು. ಅಲ್ಲಿ ಅಲ್ಲಾವುದ್ದೀನ್ ಖಿಲ್ಜಿ ಆಕೆಯನ್ನು ತನ್ನ ಪ್ರೀತಿಯ ಮಡದಿಯಾಗಿ ಮಾಡಿಕೊಂಡ. ಅಲ್ಲಾವುದ್ದೀನ್ ಮುಂದೆ ಮಲ್ಲಿಕ್ ಕಾಫರನ ನೇತೃತ್ವದಲ್ಲಿ ದಕ್ಷಿಣ ಭಾರತದ ದಂಡಯಾತ್ರೆಗೆ ಸೈನ್ಯ ಕಳುಹಿಸಿದಾಗ, ಕಮಲಾದೇವಿ ದೇವಗಿರಿಯಲ್ಲಿದ್ದ ತನ್ನ ಪುತ್ರಿ ದೇವಲದೇವಿಯನ್ನು ದೆಹಲಿಗೆ ತರುವಂತೆ ಕೇಳಿಕೊಂಡಳು. ಕಾಫರ್ ದೇವಗಿರಿಯ ಯಾದವರನ್ನು ಸೋಲಿಸಿ ದೇವಲದೇವಿಯನ್ನು ಪಡೆದು ದೆಹಲಿಗೆ ತಂದು ಕಮಲಾದೇವಿಗೆ ಒಪ್ಪಿಸಿದ. (ಜಿ.ಆರ್.ಆರ್.)

**ಕಮಲಾ ನೆಹರು :** 1899–1936. ಜವಹರಲಾಲ ನೆಹರುರವರ ಧರ್ಮಪತ್ನಿ. 1899ನೆಯ ಆಗಸ್ಟ್ ಒಂದರಂದು ಕಾಶ್ಮೀರಿ ಬ್ರಾಹ್ಮಣ ಮನೆತನವೊಂದರಲ್ಲಿ ಜನ್ಮತಳೆದರು. ತಂದೆ ದೆಹಲಿಯಲ್ಲಿ ಪ್ರಸಿದ್ಧ ವರ್ತಕರಾಗಿದ್ದ ಜವಹರ್‌ಲಾಲ್ ಕೌಲ್. 1916ರ ವಸಂತಪಂಚಮಿಯಂದು ಕಮಲಾ ಜವಹರರ ಕೈಹಿಡಿದರು. ಆಗ ಈಕೆಯ ವಯಸ್ಸು ಹದಿನಾರು. ನೋಡಲು ತುಂಬ ಸುಂದರಿಯಾಗಿದ್ದ ಈಕೆ ತುಸು ತೆಳ್ಳಗೆ, ಉದ್ದವಾಗಿದ್ದರು. ತುಂಬ ಸೌಮ್ಯಸ್ವಭಾವದ ಈಕೆಯಲ್ಲಿ ಸೌಂದರ್ಯ, ಮಾಧುರ್ಯಗಳ ಜೊತೆಗೆ ಆರೋಗ್ಯದ ಕಾಂತಿಯೂ ಮೇಳವಿಸಿತ್ತು. ಸಂಪ್ರದಾಯಸ್ಥ ಮನೆತನದಿಂದ ಬಂದ ಕಮಲಾ ಅಲ್ಪಸ್ವಲ್ಪ ಶಾಲೆಯ ವಿದ್ಯಾಭ್ಯಾಸವನ್ನು ಬಿಟ್ಟರೆ ಹೆಚ್ಚು ಓದಿರಲಿಲ್ಲ. ಪಾಶ್ಚಾತ್ಯ ರೀತಿಯಲ್ಲಿ ನಡೆಯುತ್ತಿದ್ದ ನೆಹರು ಕುಟುಂಬಕ್ಕೆ ಹೊಂದಿಕೊಳ್ಳಲು ಮೊದಮೊದಲು ಕಷ್ಟವಾದರೂ ಬಹುಬೇಗನೆ ಎಲ್ಲವನ್ನು ಕಲಿತುಕೊಂಡರು. ಅತ್ತೆಮಾವಂದಿರಿಗೆ ಅಚ್ಚುಮೆಚ್ಚಿನವರಾಗಿ, ನಾದಿನಿಯರಿಗೆ ಅಕ್ಕರೆಯ ಅತ್ತಿಗೆಯಾಗಿ, ಪತಿಯ ಪ್ರೀತಿಗೆ ಪಾತ್ರರಾದರು. ಮದುವೆಯಾದ ಮರುವರ್ಷವೇ ಅಂದರೆ 1917ರಲ್ಲಿ ಇವರ ಒಬ್ಬಳೇ ಮಗಳು ಇಂದಿರಾ ಹುಟ್ಟಿದಳು.

ಭಾರತದ ರಾಜಕೀಯದಲ್ಲಿ ಉತ್ಕ್ರಾಂತಿಯು ಕಾವೇರುತ್ತಿದ್ದ ಕಾಲದಲ್ಲಿ ಕಮಲಾ ಜವಹರರ ಕೈಹಿಡಿದರು. ಹೋಂ ರೂಲ್ ಚಳವಳಿ, ಪಂಜಾಬಿನ ಮಾರ್ಷಲ್ ಲಾ, ಅಸಹಕಾರ ಮುಂತಾದ ಘಟನಾಪರಂಪರೆಗಳ ಕಾಲವದು. ಆಗ ಜವಹರರು ಸಂಪೂರ್ಣವಾಗಿ ಸ್ವಾತಂತ್ರ್ಯ ಚಳವಳಿಯ ಆಂದೋಲನದಲ್ಲಿ ಮುಳುಗಿ ಹೋಗಿದ್ದರು.



ಇದರಿಂದ ಕಮಲಾ ಮದುವೆಯಾದ ಕೆಲದಿನಗಳಲ್ಲಿಯೇ ಪತಿಯಿಂದ ಅಗಲಿರಬೇಕಾಯಿತು. ಪ್ರತಿ ಹೆಂಗಳೆಯೂ ನಿರೀಕ್ಷಿಸಬಹುದಾದ ವೈವಾಹಿಕಜೀವನದ ಸುಖಸಂತೋಷಗಳಿಂದ ಕಮಲಾ ವಂಚಿತರಾದರೂ ತಾಳ್ಮೆಗೆಡದೆ ಎಲ್ಲವನ್ನೂ ಸಹಿಸಿದರು. ದೇಶಸೇವೆಗಾಗಿ ಪತಿಯನ್ನು ಬಿಟ್ಟುಕೊಟ್ಟು ಅನನ್ಯ ತ್ಯಾಗವನ್ನು ಮೆರೆದರು.

ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸುವ ಅವಕಾಶ ದೊರೆತಾಗ ಕಮಲಾ ತಾವೂ ಸಂತೋಷದಿಂದ ಮುನ್ನುಗ್ಗಿದರು. ಮಹಿಳಾಸ್ವಾತಂತ್ರ್ಯವನ್ನು ಉಗ್ರವಾಗಿ ಪ್ರತಿಪಾದಿಸುತ್ತಿದ್ದ ಅವರು ಸ್ವಯಂಸೇವಿಕೆಯರ ತಂಡವನ್ನು ಕಟ್ಟಿ ತಾವೂ ಗಂಡು ಉಡುಗೆಯನ್ನು ತೊಟ್ಟರು. ಹಳ್ಳಿಹಳ್ಳಿಗಳನ್ನು ಸುತ್ತಿ ವಿದೇಶೀವಸ್ತ್ರಬಹಿಷ್ಕಾರ, ಮದ್ಯಪಾನನಿರೋಧ ಮುಂತಾದ ವಿಷಯಗಳ ಬಗ್ಗೆ ಭಾಷಣ ಮಾಡಿದರು. ಮಾವ ಮತ್ತು ಪತಿ ಇಬ್ಬರೂ ಸೆರೆಗೆ ಹೋದಾಗ ಅವರ ಸ್ಥಾನದಲ್ಲಿ ನಿಂತು ಚಳವಳಿಯನ್ನು ಮುಂದುವರಿಸಿದರು. ಅನಾರೋಗ್ಯದಿಂದ ನರಳುತ್ತಿದ್ದರೂ ಲೆಕ್ಕಿಸದೆ ಸುಡುಬಿಸಿಲಿನಲ್ಲಿ ಅಂಗಡಿಗಳ ಮುಂದೆ ನಿಂತು ವಿದೇಶೀವಸ್ತ್ರಬಹಿಷ್ಕಾರದ ಪ್ರಚಾರ ಕೈಗೊಂಡರು. ಸಹಸ್ರಾರು ಜನರನ್ನು ಸಂಘಟಿಸಿ ಮೆರವಣಿಗೆಯಲ್ಲಿ ಕರೆದೊಯ್ದು ಸರ್ಕಾರವನ್ನು ಪ್ರತಿಭಟಿಸಿದರು. ಕೆಲವು ಕಾಲ ಕಾಂಗ್ರೆಸ್ ಕಾರ್ಯಕಾರಿ ಸಮಿತಿಯ ಕೆಲಸಗಳನ್ನೆಲ್ಲ ದಕ್ಷತೆಯಿಂದ ನಿರ್ವಹಿಸಿದರು. ತಮ್ಮ ಧೈರ್ಯ, ಸಾಹಸ, ಸಂಘಟನ ಶಕ್ತಿಗಳಿಂದ ಅಲಹಾಬಾದಿನಲ್ಲಿ ಜನಪ್ರಿಯ ನಾಯಿಕೆಯಾದರು. ಇವರ ಅಸಾಧಾರಣ ಕಾರ್ಯಶಕ್ತಿಯನ್ನು ನೋಡಿ ಪತಿ ಮತ್ತು ಮಾವಂದಿರೇ ನಿಬ್ಬೆರಗಾದರು. ಚಳವಳಿಯಲ್ಲಿ ಗಾಯಗೊಂಡವರಿಗಾಗಿ ಆನಂದಭವನದ ಒಂದು ದೊಡ್ಡ ಕೋಣೆಯನ್ನೇ

ಆಸ್ಪತ್ರೆಯನ್ನಾಗಿ ಪರಿವರ್ತಿಸಿ ನೂರಾರು ಜನರಿಗೆ ಶುಶ್ರೂಷೆ ನೀಡಿದರು. ಈ ಎಲ್ಲ ಚಟುವಟಿಕೆಗಳಿಗಾಗಿ 1931ರ ಜನವರಿ ಒಂದರಂದು ಸರ್ಕಾರ ಈಕೆಯನ್ನು ಬಂಧಿಸಿತು. ಸೆರೆಗೆ ಕರೆದೊಯ್ಯುವಾಗ ಕಮಲಾ ಹೇಳಿದ ಮಾತುಗಳು ಆಕೆಯ ವ್ಯಕ್ತಿತ್ವವನ್ನು ಪ್ರತಿಬಿಂಬಿಸುತ್ತವೆ : ನನಗೀಗ ಹಿಡಿಸಲಾರದಷ್ಟು ಸಂತೋಷವಾಗಿದೆ; ನಾನು ಪತಿಯ ಹಾದಿಯಲ್ಲೇ ಸಾಗುತ್ತಿದ್ದೇನೆ; ಜನತೆ ಈ ಬಾವುಟವನ್ನು ಎತ್ತಿಹಿಡಿಯುವುದೆಂದು ಆಶಿಸುತ್ತೇನೆ.

1924ರಲ್ಲಿ ಕಮಲಾ ಒಂದು ಗಂಡುಮಗುವಿಗೆ ಜನ್ಮವಿತ್ತರು. ಆದರೆ ಆ ಮಗು ಉಳಿಯಲಿಲ್ಲ. ಅಂದಿನಿಂದ ಅವರ ಆರೋಗ್ಯ ಕ್ಷೀಣಿಸುತ್ತ ಬಂತು. ವೈದ್ಯರು ಕ್ಷಯವೆಂದರು. 1926ರಲ್ಲಿ ಕಾಯಿಲೆ ಉಲ್ಬಣಿಸಿದಾಗ ವೈದ್ಯರ ಸಲಹೆಯಂತೆ ಪತಿ ಮತ್ತು ಪುತ್ರಿಯರೊಂದಿಗೆ ಸ್ವಿಟ್ಸರ್ಲೆಂಡಿಗೆ ತೆರಳಿದರು. 1927ರ ಹೊತ್ತಿಗೆ ಆರೋಗ್ಯ ತುಸು ಸುಧಾರಿಸಿತು. ಆ ಸಮಯದಲ್ಲಿ ಪತಿಯೊಂದಿಗೆ ಪ್ಯಾರಿಸ್, ಬರ್ಲಿನ್ ಮಾಸ್ಕೊ ಮುಂತಾದೆಡೆಗಳಲ್ಲಿ ಸಂಚರಿಸಿ ತಾಯ್ನಾಡಿಗೆ ಹಿಂತಿರುಗಿದರು. ಅನಾರೋಗ್ಯ ವನ್ನೂ ಲೆಕ್ಕಿಸದೆ ಸ್ವಾತಂತ್ರ್ಯ ಚಳವಳಿಯಲ್ಲಿ ಮೈಮರೆತರು. ಇದರಿಂದ ಮತ್ತೊಮ್ಮೆ ಹಾಸಿಗೆ ಹಿಡಿಯಬೇಕಾಯಿತು. ಆಗಲೂ ಚಳವಳಿಯಲ್ಲಿ ಭಾಗವಹಿಸಲಾಗದುದಕ್ಕಾಗಿ ಚಡಪಡಿಸುತ್ತಿದ್ದರು. 1934ರ ಹೊತ್ತಿಗೆ ರೋಗ ವಿಷಮಿಸಿತು. ಆ ಸಮಯ ದಲ್ಲಿ ಜವಹರರು ಎರಡು ವರ್ಷ ದೀರ್ಘ ಕಾರಾಗೃಹವಾಸದಲ್ಲಿದ್ದರು. ಕಾಯಿಲೆ ಮತ್ತಷ್ಟು ಉಲ್ಬಣಿಸಿದಾಗ ವೈದ್ಯರ ಹೇಳಿಕೆಯಂತೆ ಕಮಲಾ ಜರ್ಮನಿಯ ಬೇಡನ್ ವೇಲರ್‌ಗೆ ತೆರಳಬೇಕಾಯಿತು. ಆಗ ಇಂದಿರಾ ಇವರ ಜೊತೆಗಿದ್ದಳು. ಮೂರುನಾಲ್ಕು ತಿಂಗಳಾದರೂ ಸ್ಥಿತಿ ಉತ್ತಮವಾಗಲಿಲ್ಲ. ಇವರ ತೀವ್ರಪರಿಸ್ಥಿತಿಯನ್ನು ಗಮನಿಸಿ 1935ರ ಸೆಪ್ಟೆಂಬರ್ ನಾಲ್ಕರಂದು ಜವಹರರನ್ನು ಬಿಡುಗಡೆ ಮಾಡಿದರು. ಐದು ದಿನಗಳಲ್ಲಿಯೇ ಅವರು ಮಡದಿಯ ಬಳಿ ಸೇರಿದರು. ಎಂದಿನಂತೆ ಧೈರ್ಯ ತುಂಬಿದ ಮುಗುಳ್ನಗೆಯಿಂದ ಪತ್ನಿ ಪತಿಯನ್ನು ಸ್ವಾಗತಿಸಿದರು. ಪತಿಯ ಸಾನ್ನಿಧ್ಯ ದಿಂದ ಸಮಾಧಾನಗೊಂಡಂತೆ ತೋರಿತು. ಆದರೂ ವಿಷಗಳಿಗೆ ದೂರವಾಗಲಿಲ್ಲ. 1936 ಜನವರಿ ಮೂವತ್ತರಂದು ಕಮಲಾ ಅವರನ್ನು ಸ್ವಿಟ್ಸರ್ಲೆಂಡಿನ ಲಾಸೆನ್ನಿಗೆ ಕರೆದೊಯ್ಯಲಾಯಿತು. ಸಾವು ಬದುಕುಗಳಂಚಿನಲ್ಲಿ ಉಯ್ಯಾಲೆಯಾಡುತ್ತಿದ್ದ ಪ್ರಾಣ ಫೆಬ್ರವರಿ ಇಪ್ಪತ್ತೆಂಟರ ಮುಂಜಾನೆ ಅನಂತದಲ್ಲಿ ಲೀನವಾಗಿ ಹೋಯಿತು. ಲಾಸೆನ್ನಿನ ರುದ್ರಭೂಮಿಯಲ್ಲಿ ಕಮಲಾ ನೆಹರು ಅವರ ಸುಂದರ ದೇಹ, ಸದಾ ಮುಗುಳ್ನಗೆ ಸೂಸುತ್ತಿದ್ದ ವದನ ಹಿಡಿಬೂದಿಯಲ್ಲಿ ಅಡಗಿಹೋಯಿತು. ಮರ್ತ್ಯ ದೇಹವಳಿದರೂ ಅವರ ಬಾಳಿನ ತ್ಯಾಗ ಆದರ್ಶಗಳು ಜನಮನದಲ್ಲಿ ಸ್ಥಿರವಾಗಿ ನಿಂತುವು.

ಜವಹರರು ಅನಂತರ ಬರೆದು ಮುಗಿಸಿದ ತಮ್ಮ ಆತ್ಮಕಥೆಯನ್ನು ಅಗಲಿದ ತಮ್ಮ ಧರ್ಮಪತ್ನಿಗೆ ಅರ್ಪಿಸಿದರು. ಅದರಲ್ಲಿ ಅವರು ಕಮಲಾರವರನ್ನು ಕುರಿತು ಹೀಗೆ ಹೇಳುತ್ತಾರೆ: ಆಕೆಯದು ಸರಳ ಹಾಗೂ ನಿಷ್ಕಪಟ ಮನೋಭಾವ. ಅವಳಲ್ಲಿದ್ದ ಕನ್ಯಾಸಹಜ ಮುಗ್ಧತೆ, ಪಾವಿತ್ರ್ಯಗಳು ಕೊನೆಯವರೆಗೂ ಮಾಸಲಿಲ್ಲ. ಅವಳು ಗೃಹಿಣಿಯಾಗಿ ಬೆಳೆದಂತೆ ಅವಳ ಕಣ್ಣುಗಳಲ್ಲಿ ಗಾಂಭೀರ್ಯ, ಓಜಸ್ಸುಗಳು ತುಳುಕು ತ್ತಿದ್ದುವು. ಅವು ಮೇಲುನೋಟಕ್ಕೆ ನಿಶ್ಚಲವಾದ ಕೊಳಗಳಂತಿದ್ದರೂ ಹಿಂದೆ ಬಿರುಗಾಳಿಯ ಮೊರೆತವಿತ್ತು. ಅಪರಿಚಿತರೊಡನೆ ಆಕೆ ಬಿಗಿಯಾಗಿ ವರ್ತಿಸುತ್ತಿದ್ದರೂ ಪರಿಚಿತರೊಡನೆ ತುಂಬ ಸಲುಗೆಯಿಂದ, ಉಲ್ಲಾಸದಿಂದ ವರ್ತಿಸುತ್ತಿದ್ದಳು. ಸೂಕ್ಷ್ಮ ಗ್ರಾಹಿಯಾದ ಅವಳಲ್ಲಿ ಅದ್ಭುತವಾದ ಆತ್ಮಗೌರವವಿತ್ತು. ಅವಳೆಂದೂ ನನ್ನ ಸಹಾಯವನ್ನಪೇಕ್ಷಿಸಿದವಳಲ್ಲ ; ತನ್ನ ಆತ್ಮ ಒಪ್ಪುವಂತೆ, ಜನ ಮೆಚ್ಚುವಂತೆ ನಡೆಯ ಬೇಕೆಂದಾಶಿಸಿದಳು. ತನಗವಕಾಶ ದೊರೆತಾಗ ಸ್ವಾತಂತ್ರ್ಯ ಚಳವಳಿಯಲ್ಲಿ ಭಾಗವಹಿಸಿ ತನ್ನ ಶಕ್ತಿಯನ್ನು ತೋರಿದಳು. ಮದುವೆಯಾದ ಮೊದಲ ವರ್ಷಗಳಲ್ಲಿ ನಮ್ಮ ನಡುವೆ ವಯಸ್ಸಿನ ಅಂತರಕ್ಕಿಂತ ಮಿಗಿಲಾಗಿ ಮಾನಸಿಕ ಅಂತರ ಹಿರಿದಾಗಿತ್ತು. ಇದರಿಂದ ನಮ್ಮಲ್ಲಿ ಸಣ್ಣಪುಟ್ಟ ಜಗಳಗಳಾಗುತ್ತಿದ್ದರೂ ಬಹುಬೇಗ ರಾಜಿಯಾಗು ತ್ತಿದ್ದೆವು. ಬರಬರುತ್ತ ನಾನವಳನ್ನು ಅರ್ಥಮಾಡಿಕೊಳ್ಳಲು ಪ್ರಯತ್ನಿಸಿದೆ. ಇದರಿಂದ ಒಬ್ಬರನ್ನೊಬ್ಬರು ಹೆಚ್ಚು ಹೆಚ್ಚಾಗಿ ಅರಿತುಕೊಂಡೆವು. ನಾವಿಬ್ಬರೂ ಪರಸ್ಪರ ಹತ್ತಿರಬಂದ ಕಾಲದಲ್ಲಿಯೇ ವಿಧಿ ಅವಳನ್ನು ನನ್ನಿಂದಗಲಿಸಿತು. ಮದುವೆ ಯಾದ ಹೊಸತರಲ್ಲಿ ನನ್ನಿಂದಾಕೆ ಯಾವ ಸುಖಸಂತೋಷಗಳನ್ನು ನಿರೀಕ್ಷಿಸ ಬಹುದಾಗಿದ್ದಿತೋ ಅವನ್ನು ನಾನು ನೀಡಲಿಲ್ಲ. ಆಗ ನನ್ನೆಲ್ಲ ಆಸಕ್ತಿಯೂ ಬೇರೆಡೆಗೆ ಕೇಂದ್ರೀಕೃತವಾಗಿತ್ತು. ನಮ್ಮ ಬಾಳು ಬಹುಪಾಲು ಅಗಲಿಕೆಯಲ್ಲಿಯೇ ಕಳೆಯಿತು. ಇದರಿಂದಾಕೆ ತುಂಬ ನೊಂದಿರಬೇಕು. ಆದರೆ ನಾನವಳನ್ನು ಸಂಪೂರ್ಣ ವಾಗಿ ಮರೆಯಲಿಲ್ಲ. ದಣಿದ ನನ್ನ ಚೇತನ ಅವಳ ಆಶ್ರಯವನ್ನು ಮತ್ತೆ ಮತ್ತೆ ಬಯಸುತ್ತಿತ್ತು. ಅವಳಿಂದ ದೂರವಿದ್ದಾಗ ಅವಳ ನೆನಪೇ ನನ್ನ ಮನಸ್ಸಿಗೆ ತಂಪೀ ಯುತ್ತಿತ್ತು. ಅವಳು ಬಳಲಿದ ನನ್ನ ಮೈಮನಗಳಿಗೆ ಸಾಂತ್ವನ ನೀಡಿ ಮುಂದಿನ ಕೆಲಸಕ್ಕೆ ಸಕಲ ಉತ್ಸಾಹಗಳನ್ನು ತುಂಬದಿರುತ್ತಿದ್ದರೆ ನಾನೇನು ತಾನೆ ಸಾಧಿಸುತ್ತಿದ್ದೆ ? ಅವಳಿಂದ ನಾನು ಬೇಕಾದಷ್ಟು ಪಡೆದೆ ನಿಜ, ಆದರೆ ನಾನವಳಿಗೆ ಕೊಟ್ಟಿದ್ದೇನು?...

ಕಮಲಾ ಸಾಮಾನ್ಯರಂತೆ ಏನನ್ನೂ ನಿರೀಕ್ಷಿಸಲಿಲ್ಲ. ಆಕೆಯದು ಯಾವ ಪ್ರತಿ ಫಲವನ್ನೂ ಅಪೇಕ್ಷಿಸದ ಅನನ್ಯ ತ್ಯಾಗ. ಆ ತ್ಯಾಗ ಭಾರತೀಯ ಮಹಿಳೆಯ ಉಜ್ವ ಆದರ್ಶದ ಪ್ರತೀಕ. (ಜಿ.ಎನ್.ಸಿ.)

**ಕಮಲಾಪುರ :** ವಿಜಯನಗರದ ವೈಭವದ ಕಾಲದಲ್ಲಿ ಆ ರಾಜಧಾನಿಯ ಒಂದು ವಿಸ್ತರಣ. ಈಗ ಇದು ಪ್ರತ್ಯೇಕ ಸ್ಥಳ. ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿಗೆ ಸೇರಿದ್ದು, ಹೊಸಪೇಟೆಯಿಂದ 13 ಕಿ. ಮೀ. ದೂರದಲ್ಲಿದೆ. ರಾಣಿವಾಸಕ್ಕೆಂದು ಚಿಕ್ಕದಾಗಿಯೂ ಚೊಕ್ಕವಾಗಿಯೂ ಸಮಸ್ತ ಸೌಲಭ್ಯಗಳನ್ನೊಳ ಗೊಂಡು ರಚಿತವಾಯಿತು. ರಾಣಿಯ ಹೆಸರೇ (ಕಮಲಾದೇವಿ) ಈ ಊರಿಗೂ ಬಂತೆಂದು ಹೇಳಲಾಗಿದೆ.

ಸ್ವಲ್ಪ ತಗ್ಗಿನ ಪ್ರದೇಶದಲ್ಲಿರುವ ಈ ಊರಿನ ಮುಂಭಾಗದಲ್ಲಿ 476 ಎಕರೆ ಒಳ ಆಯ ಹೊಂದಿರುವ ಸುಂದರವಾದ ಕೆರೆ ಇದೆ. ಅಕ್ಕಪಕ್ಕ ಕಲ್ಲುಗುಡ್ಡಗಳೇ ಹೆಚ್ಚು. ಕಮಲಾಪುರದ ಐದುಸಾವಿರ ಮನೆಗಳೂ ಸುತ್ತುಗಟ್ಟಿದ ಕೋಟೆಯ ಒಳಗಡೆಯೇ ಇವೆ. ಊರ ಸುತ್ತಳತೆ 4 ಮೈಲಿ. ಜನಸಂಖ್ಯೆ 15,400 ಎಂದು ಅಂದಾಜು. ಇಲ್ಲಿಯ ಕೆಂಪು ಮಿಶ್ರಿತ ಮಣ್ಣುನೆಲ ಫಲವತ್ತು. ಕಬ್ಬನ್ನು ಯಥೇಚ್ಛವಾಗಿ ಬೆಳೆಸುತ್ತಾರೆ. ಬತ್ತ ಮತ್ತು ಬಾಳೆ ಇತರ ಬೆಳೆಗಳು. ಜನರ ಉಡಿಗೆ-ತೊಡಿಗೆ ಅತ್ಯಂತ ಸರಳ. ಭಾಷೆ ಕನ್ನಡ. ತೆಲುಗೂ ಬಳಕೆಯಲ್ಲಿ ಉಂಟು.

ಚಾರಿತ್ರಿಕವಾಗಿ ಈ ಊರಿಗೆ ಪ್ರಾಮುಖ್ಯವಿದೆ. ಅರಸರ ಕಾಲದ ಅನೇಕ ಭವ್ಯ ದೇವಾಲಯಗಳು ಇಲ್ಲಿವೆ. ಮೊದಲನೆಯದಾಗಿ ಶ್ರೀನಗರೇಶ್ವರ ದೇವಾಲಯ. ವಿಜಯನಗರ ರಾಜ್ಯದ ಲಾಂಛನವಾದ ಗಂಡಭೇರುಂಡ ಪಕ್ಷಿಯನ್ನು ಕೋಟೆಯ ಪ್ರಮುಖ ದ್ವಾರದ ಮೇಲೆ ಕಡೆದಿದ್ದಾರೆ. ಈ ದೇವಾಲಯ ಬಹಳ ಪ್ರಸಿದ್ಧ. ವೈಶಾಖ ಮಾಸದಲ್ಲಿ ಇಲ್ಲಿ ವಿಜೃಂಭಣೆಯಿಂದ ಜಾತ್ರೆ ನಡೆಯುತ್ತದೆ. ಶ್ರೀ ಪಟ್ಟಾಭಿ ರಾಮ ದೇವಾಲಯವೂ ಪ್ರೇಕ್ಷಣೀಯ. ಕಂಪ್ಲಿಗೆ ಹೋಗುವ ದಾರಿಯಲ್ಲಿ ಒಂದು ಗುಡ್ಡದ ಮೇಲೆ ಮಾಲ್ಯವಂತ ರಘುನಾಥ ದೇವಸ್ಥಾನವಿದೆ. ಇಲ್ಲಿಯದು ಪ್ರೇಕ್ಷಣೀಯ ಸನ್ನಿವೇಶ. ಇಲ್ಲಿ ಶ್ರೀರಾಮದೇವರ ವಿಗ್ರಹದ ಸುಖಾಸೀನ ಭಂಗಿ ಆಕರ್ಷಕವಾಗಿದೆ. ಇನ್ನೂ ಅನೇಕ ಸಣ್ಣಪುಟ್ಟ ದೇವಾಲಯಗಳು ಇಲ್ಲುಂಟು. ಹಂಪಿ 2½ ಮೈಲಿ ದೂರದಲ್ಲಿದೆ. ಈ ಊರಿನಿಂದ ಪೂರ್ವಾಭಿಮುಖವಾಗಿ ಪಯಣ ಬೆಳೆಸಿದರೆ ಅಕ್ಕತಂಗಿಯರ ಕಲ್ಲು, ಮಹಾನವಮಿ ದಿಬ್ಬ, ರಾಣಿಯ ಸ್ನಾನಗೃಹ, ವಾಸಗೃಹ, ಪ್ರಸಿದ್ಧವಾದ ಕಮಲಮಹಲ್, ಅರಮನೆಯ ನಿವೇಶನ, ಹಜಾರರಾಮನ ಗುಡಿ—ಮುಂತಾದವು ಸಿಗುತ್ತವೆ. ಇಲ್ಲಿಂದ ಕೊಂಚ ದೂರ ಸಾಗಿದರೆ ಹಂಪಿಯ ಗತವೈಭವದ ಪೂರ್ಣದರ್ಶನವಾಗುತ್ತದೆ.

ಕಮಲಾಪುರ ಕೈಗಾರಿಕೆಯಲ್ಲೂ ತಕ್ಕಮಟ್ಟಿಗೆ ಮುಂದುವರಿದಿದೆ. ಊರಿಗೆ ಸಮೀಪದಲ್ಲಿ ಜಲವಿದ್ಯುತ್ ಕೇಂದ್ರವನ್ನು ಸ್ಥಾಪಿಸಿದ್ದಾರೆ. ಆ ಸ್ಥಳದಲ್ಲಿ ಕಾರ್ಮಿಕರೂ ಸೇರಿದಂತೆ 3,000 ಜನರಿದ್ದಾರೆ. ಇಲ್ಲಿ ನೀರಾವರಿ ಸೌಲಭ್ಯವಿರುವುದರಿಂದ ಸುಮಾರು 2,000 ಎಕರೆಗಳಲ್ಲಿ ಕಬ್ಬು ಯಥೇಚ್ಛವಾಗಿ ಬೆಳೆದು ಬೆಲ್ಲ ತಯಾರಿಸಲಾಗುತ್ತಿದೆ. ಹತ್ತಿರದ ಹೊಸಪೇಟೆಯ ಸಕ್ಕರೆ ಕಾರ್ಖಾನೆಗೂ ಕಬ್ಬು ಸಾಗುತ್ತದೆ. ನೀರೆತ್ತುವ ಯಂತ್ರದ ಸಹಾಯದಿಂದಲೂ ಕೃಷಿಕಾರ್ಯ ನಡೆಯುತ್ತಿದೆ. ಹೊಸಪೇಟೆಯ ಬಳಿ ನಿರ್ಮಿಸಿರುವ ತುಂಗಭದ್ರಾ ಅಣೆಕಟ್ಟಿನಿಂದ ದೊರಕುವ ಸದಾಕಾಲದ ನೀರಿನ ಸಹಾಯದಿಂದ ಊರಿಗೆ ಹೆಚ್ಚು ಪ್ರಯೋಜನವಾಗಿದೆ.

ಇಲ್ಲಿ ಒಂದು ಪ್ರೌಢಶಾಲೆಯೂ ಆರು ಪ್ರಾಥಮಿಕ ಶಾಲೆಗಳೂ ಇವೆ. 13 ಕಿ.ಮೀ. ದೂರದ ಹೊಸಪೇಟೆಯಲ್ಲಿ ವಿಜಯ ನಗರ ಕಾಲೇಜ್ ಉಂಟು.

ಕಮಲಾಪುರನಗರ ಪಂಚಾಯಿತಿ ಕೇಂದ್ರ. ಅಂಗಡಿ, ಗಿರಣಿ, ಉಪಾಹಾರ ಗೃಹ, ಪ್ರವಾಸಿಮಂದಿರ ವಸ್ತುಸಂಗ್ರಹಾಲಯ ಮತ್ತು ಸಣ್ಣಪುಟ್ಟ ಗೃಹಕೈಗಾರಿಕೆ ಗಳೂ ವಿದ್ಯುತ್ ಮತ್ತು ರಕ್ಷಿತನೀರಿನ ಸರಬರಾಜು ವ್ಯವಸ್ಥೆಗಳೂ ಇವೆ.

(ಎಸ್.ಎಸ್.ಎ.)

**ಕಮಾಂಡ್ :** ಒಬ್ಬ ಸೇನಾಪತಿಯ ಕೈಕೆಳಗಿರುವ ಅನೇಕ ಪಡೆಗಳನ್ನು ಒಟ್ಟಾಗಿ ನಿರ್ದೇಶಿಸುವ ಪದ. ಅನೇಕ ವೇಳೆ ಈ ಪದವನ್ನು ಬಗೆಬಗೆಯ ಸೇನಾವಿಭಾಗಗಳ (ಡಿವಿಶನ್ಸ್) ಪಡೆಗಳು (ಯೂನಿಟ್ಸ್) ಇರುವ ಪ್ರದೇಶವನ್ನು ಸೂಚಿಸುವುದಕ್ಕೆ ಬಳಸುತ್ತಾರೆ. ಉದಾಹರಣೆಗೆ ಪಶ್ಚಿಮ ಸೇನಾವಲಯ (ವೆಸ್ಟರ್ನ್ ಕಮಾಂಡ್). ದಕ್ಷಿಣ ಸೇನಾವಲಯ (ಸದರ್ನ್ ಕಮಾಂಡ್). ಪೂರ್ವ ಸೇನಾವಲಯ (ಈಸ್ಟರ್ನ್ ಕಮಾಂಡ್)–ಈ ಪ್ರಕಾರ ನಮ್ಮ ಸೇನೆ ಪ್ರಾದೇಶಿಕವಾಗಿ ವಿಭಾಗಗೊಂಡಿದೆ. ಅಲ್ಲದೆ ಈ ಶಬ್ದವನ್ನು ಒಬ್ಬ ಅಧಿಕಾರಿ ಯಾವುದಾದರೊಂದು ಕಾರ್ಯವನ್ನು ಮಾಡುವಂತೆ ಕೊಡುವ ಆಜ್ಞೆಗೂ ಬಳಸುತ್ತಾರೆ.

**ಕಮಾಂಡೆಂಟ್ :** ಒಂದು ಸ್ಥಳವನ್ನಾಗಲಿ ಅಥವಾ ಒಂದು ಜನದ ತಂಡ ವನ್ನಾಗಲಿ ತನ್ನ ಮೇಲ್ವಿಚಾರಣೆಯಲ್ಲಿರಿಸಿಕೊಂಡಿರುವ ಸೈನ್ಯಾಧಿಕಾರಿ. ಆ ಸ್ಥಳದ ಪ್ರಮಾಣ ಅಥವಾ ತಂಡದ ಜನಸಂಖ್ಯೆ ಅಥವಾ ಆ ಸ್ಥಳದ ಮತ್ತು ಆ ಸೇನಾದಳದ

ಪ್ರಾಮುಖ್ಯ ಇವುಗಳ ಮೇಲೆ ಅವನ ದರ್ಜೆ ಅವಲಂಬಿಸಿದೆ. ಸೈನ್ಯದ ಒಬ್ಬ ಹಿರಿಯ ಅಧಿಕಾರಿಯನ್ನು ನಿರ್ದಿಷ್ಟವಾದೊಂದು ಸೇನಾವಿಭಾಗದ ಅಥವಾ ಸೇನಾ ದಳದ ಯೋಗಕ್ಷೇಮವನ್ನು ನೋಡಿಕೊಳ್ಳಬೇಕೆಂದು ಕೋರಿ ಆತನನ್ನು ಆ ಕೆಲಸಕ್ಕೆ ನಿಯೋಜಿಸಿದಾಗ ಅಧಿಕಾರಿಯ ದರ್ಜೆಯನ್ನು ಸೂಚಿಸುವ ಕರ್ನಲ್ ಎಂಬ ಪದದ ಮುಂದೆ ಕಮಾಂಡೆಂಟ್ ಎಂಬ ಮತ್ತೊಂದು ಗೌರವಾರ್ಥಸೂಚಕ ಶಬ್ದವನ್ನು ಸೇರಿಸುತ್ತಾರೆ. ಆಗ ಆತ ಕರ್ನಲ್ ಕಮಾಂಡೆಂಟ್ ಎನ್ನಿಸಿಕೊಳ್ಳುತ್ತಾನೆ.

**ಕಮಾಂಡರ್ :** ಕಮಾಂಡೆಂಟನಿಗಿಂತಲೂ ಉನ್ನತ ದರ್ಜೆಯ ಅಧಿಕಾರಿಯ ದರ್ಜೆಯ ಹೆಸರು. ಉದಾಹರಣೆಗೆ ಒಂದು ಸೇನಾದಳದ ನಾಯಕ ಕಮಾಂಡೆಂಟ್ ; ಇಂಥ ಹಲವಾರು ದಳಗಳ ಕಮಾಂಡೆಂಟರ ಮೇಲಿನ ವರಿಷ್ಠಾಧಿಕಾರಿ ಕಮಾಂಡರ್. ನೌಕಾದಳದಲ್ಲಿ ಕಮಾಂಡರ್ ಪದ ಒಂದು ವಿಶಿಷ್ಟ ದರ್ಜೆಯನ್ನು ಸೂಚಿಸುವುದು. ಸೈನ್ಯ ಹಾಗೂ ವಾಯು ವಿಭಾಗಗಳಲ್ಲಿ ಈ ದರ್ಜೆಯ ಸಮಾನ ದರ್ಜೆಗಳು ಕ್ರಮವಾಗಿ ಲೆಫ್ಟಿನೆಂಟ್ ಕರ್ನಲ್ ಮತ್ತು ವಿಂಗ್ ಕಮಾಂಡರ್.

**ಕಮಾಂಡರ್–ಇನ್–ಚೀಫ್ :** ಸಕಲ ಬಲಗಳ ವರಿಷ್ಠತಮ ನಾಯಕನ ದರ್ಜೆ. ಭಾರತದಲ್ಲಿ ಕೊನೆಯ ಕಮಾಂಡರ್–ಇನ್–ಚೀಫ್ ಆಗಿದ್ದವರು ಜನರಲ್ ಕೆ. ಎಂ. ಕಾರ್ಯಪ್ಪನವರು (ಇವರು ಆ ಹುದ್ದೆಯನ್ನು ಏರಿದ ಪ್ರಥಮ ಭಾರತೀಯರೂ ಹೌದು). ಇವರು ನಿವೃತ್ತರಾದ ತರುವಾಯ ಈ ಹುದ್ದೆಯನ್ನು ರದ್ದು ಮಾಡಿದ್ದಾರೆ. ಈಗ ರಾಷ್ಟ್ರಪತಿಗಳೇ (ಗೌರವ) ಕಮಾಂಡರ್–ಇನ್–ಚೀಫ್.

**ಕಮಾಂಡೋ :** ಗೂಢಚರ್ಯೆಯಲ್ಲೂ ಕ್ಷಿಪ್ರಸೈನ್ಯಾಚರಣೆಯಲ್ಲೂ ವಿಶೇಷವಾಗಿ ತರಬೇತುಗೊಂಡ ದಿಟ್ಟರ ವಿಶಿಷ್ಟ ತಂಡದ ಹೆಸರು. ಸಾಮಾನ್ಯವಾಗಿ ಸೈನ್ಯ ಬಲಗಳಿಂದ ಆರಿಸಿದ ಕೆಲವೇ ಯುವಕರಿಗೆ ಈ ಶಿಕ್ಷಣ ಕೊಡುತ್ತಾರೆ. ಇಂಥ ಒಬ್ಬೊಬ್ಬನಿಗೂ ಕಮಾಂಡೋ ಎಂದೇ ಹೆಸರು. ಎಂಥ ದುರ್ಧರ ಪ್ರಸಂಗದಲ್ಲೂ ಧೃತಿಗುಂದದೆ ಗುರಿ ಸಾಧಿಸಲೇಬೇಕಾದ ಛಲವಂತರ ತಂಡವಿದು. ಶತ್ರುವಲಯದ ನರಕೇಂದ್ರಗಳಾದ ಜಲಾಶಯಗಳು, ವಿದ್ಯುದುತ್ಪಾದನಾಗಾರಗಳು, ಆಯಕಟ್ಟಿನ ಸೇತುವೆಗಳು, ಸಂಪರ್ಕ ಕೇಂದ್ರಗಳು, ಮದ್ದುತೋಪುಖಾನೆಗಳು ಮುಂತಾದುವುಗಳ ಮೇಲೆ ಹಠಾತ್ತಾಗಿ ದಾಳಿ ಮಾಡಿ ಅವನ್ನು ನಾಶಪಡಿಸುವುದು, ಶತ್ರುವಿಗೆ ಇತರ ಬಗೆಗಳಲ್ಲಿ ಸಹಿಸಲಾಗದ ಕಿರುಕುಳ ನೀಡಿ ಆತನ ಆತ್ಮವಿಶ್ವಾಸದ ಬುಡವನ್ನೇ ಕೊರೆಯುವುದು—ಇವೆಲ್ಲವೂ ಕಮಾಂಡೋಗಳು ಮಾಡುವ ಕ್ರಿಯೆಗಳು.

(ಎ.ಎನ್.ಎಸ್.ಎಂ.)

## ಕಮಾಚಿ ಹುಲ್ಲು :

ಪೋಯೇಸಿ ಕುಟುಂಬಕ್ಕೆ ಸೇರಿದ ಒಂದು ವಾರ್ಷಿಕ ಹುಲ್ಲು. ಇದರ ಶಾಸ್ತ್ರೀಯ ನಾಮ ಸಿಂಬೋಪೋಗಾನ್ ನಾರ್ಡಸ್ ಎಂದು. ಇದರಲ್ಲಿ ಮುಖ್ಯವಾಗಿ ಎರಡು ಭೇದಗಳಿವೆ—ಸಿಂಬೋಪೋಗಾನ್ ನಾರ್ಡಸ್ ಲೀನಾಬಾಟು ಮತ್ತು ಸಿ. ನಾರ್ಡಸ್ ಮಹಾವೆಂಗಿನಿ. ಸಿ. ನಾರ್ಡಸ್ ಮಹಾವೆಂಗಿನಿ ಭೇದವನ್ನು ಕೆಲವರು ಸಿಂಬೋಪೋಗಾನ್ ವಿಂಟರೇನಿಯಸ್ ಪ್ರಭೇದ ಎಂದೂ ಕರೆಯುತ್ತಾರೆ. ಎರಡು ಬಗೆಗಳನ್ನೂ ಸಿಂಹಳ ಮತ್ತು ಜಾವ ದ್ವೀಪಗಳಲ್ಲಿ ಯಥೇಚ್ಛವಾಗಿ ಬೆಳೆಸುತ್ತಾರೆ. ಅಲ್ಲದೆ ಆಫ್ರಿಕ, ಆಸ್ಟ್ರೇಲಿಯ ಮತ್ತು ಏಷ್ಯದ ಉಷ್ಣವಲಯಗಳಲ್ಲಿ ಇವು ಸ್ವಾಭಾವಿಕವಾಗಿ ಬೆಳೆಯುತ್ತವೆ. ಇದರ ಇನ್ನೊಂದು ವಿಧವಾದ ಸಿಂಬೋಪೋಗಾನ್ ಕನ್‌ಫರ್ಟಿಫ್ಲೋರಸ್ ಎಂಬ ಹುಲ್ಲು ನೀಲಗಿರಿ, ಅಣ್ಣಾಮಲೈ ಹಾಗೂ ಅಸ್ಸಾಮಿನ ಈಶಾನ್ಯ ಭಾಗಗಳ ಬೆಟ್ಟಪ್ರದೇಶಗಳಲ್ಲಿ ಬೆಳೆಯುತ್ತದೆ. ಮೈಸೂರು ಮತ್ತು ಪಂಜಾಬುಗಳಲ್ಲಿಯೂ ಕಾಣಬರುವ ಈ ಪ್ರಭೇದ ಸ್ಥಳೀಯವಾಗಿರಬಹುದು ಇಲ್ಲವೆ ಯಾವುದೋ ಒಂದು ಕಾಲದಲ್ಲಿ ಬೇರೆ ಕಡೆಯಿಂದ ತಂದು ರೂಢಿಸಿದ್ದಾಗಿರಬಹುದು.

ಕಮಾಚಿ ಹುಲ್ಲು ಸುಮಾರು 4′—6′ ಎತ್ತರ ಬೆಳೆಯುತ್ತದೆ. ಇತರ ಹುಲ್ಲುಗಳಲ್ಲಿರುವಂತೆಯೇ ಇದರಲ್ಲೂ ತೊಡಕುಬೇರೂ ಉದ್ದನಾದ ಪಿಸಳಿನಂತಿರುವ ಎಲೆಗಳೂ ಇವೆ. ಎಲೆಗಳಲ್ಲಿ ಸಮಾನಾಂತರ ನಾಳವಿನ್ಯಾಸವಿದೆ. ಸೂಗೊಂಚಲು ಸಂಕೀರ್ಣಪುಷ್ಪಗುಚ್ಛ ಮಾದರಿಯದು. ಬಹುವಾಗಿ ಕವಲೊಡೆದು ವಿಪುಲ ಸಂಖ್ಯೆಯ ಪುಟ್ಟ ಪುಟ್ಟ ಹೂಗುಂಪುಗಳನ್ನು (ಸ್ಪೈಕ್‌ಲೆಟ್) ಹೊಂದಿರುತ್ತದೆ.

ಈ ಹುಲ್ಲಿನಿಂದ ಸಿಟ್ರೊನೆಲ ತೈಲವನ್ನು ತೆಗೆಯುತ್ತಾರೆ. ನಸುಹಳದಿ ಬಣ್ಣದ ಈ ಎಣ್ಣೆಯನ್ನು ಸಿಂಹಳ ಮತ್ತು ಜಾವ ದ್ವೀಪಗಳಲ್ಲಿ ಒಣಗಿಸಿದ ಎಲೆಗಳಿಂದ ಆಸವೀಕರಣದ (ಆವಿ ಬಟ್ಟಿಯಿಳಿಸುವಿಕೆಯ) ಮೂಲಕ ಹೊರ ತೆಗೆಯುತ್ತಾರೆ. ಸಾಧಾರಣವಾಗಿ ಕೃಷಿ ಮಾಡಿದ 8 ತಿಂಗಳ ಅನಂತರ ಹುಲ್ಲು ಎಣ್ಣೆ ತೆಗೆಯಲು ಯೋಗ್ಯವಾಗುತ್ತದೆ. ಹುಲ್ಲನ್ನು ವರ್ಷಕ್ಕೆ ನಾಲ್ಕು ಸಲ ಕಟಾವು ಮಾಡುತ್ತಾರೆ. ಎಣ್ಣೆಯ ಸರಾಸರಿ ವಾರ್ಷಿಕ ಉತ್ಪನ್ನ ಎಕರೆಗೆ 68 ಪೌಂಡುಗಳು. ಈ ಎಣ್ಣೆಯಲ್ಲಿ ಹಲವಾರು ಬಗೆಯ ಸಂಯುಕ್ತಗಳಿವೆ. ಇವುಗಳಲ್ಲಿ ಆಲ್ಕೊಹಾಲ್, ಜಿರಾನಿಯಾಲ್, ಸಿಟ್ರೊನೆಲ್ಲಾಲ್, ಮೀಥೈಲ್ ಯೂಜಿನಾಲ್, ಬೊರಿನಿಯಾಲ್, ಮೀಥೈಲ್ ಹೆಪಟೋನ್ ಮತ್ತು ಫಾರ್ನೆಸಾಲ್ ಇವು ಮುಖ್ಯವಾದುವು.

ಸಿಂಬೋಪೋಗಾನ್ ನಾರ್ಡಸಿನಿಂದ ದೊರೆತ ಎಣ್ಣೆ ಬೇರೆ ಪ್ರಭೇದಗಳಿಂದ ದೊರೆತ ಎಣ್ಣೆಗಿಂತ ಅಷ್ಟು ಉತ್ತಮವಾದುದೇನಲ್ಲ. ಆದ್ದರಿಂದ ಇದನ್ನು ಕಡಿಮೆ ದರ್ಜೆಯ ಸುಗಂಧದ್ರವ್ಯಗಳನ್ನೂ ಸಾಬೂನುಗಳನ್ನೂ ಪಾಲಿಷ್ ಮತ್ತು ಕೀಟ ನಿರೋಧಕಗಳನ್ನೂ ತಯಾರಿಸಲು ಉಪಯೋಗಿಸುತ್ತಾರೆ. ಅಲ್ಲದೆ ಸಾಮಾನ್ಯವಾಗಿ ಸೊಳ್ಳೆಗಳ ನಿರ್ಮೂಲನಕ್ಕೆ ಪ್ರತಿರೋಧಕವಾಗಿಯೂ ಬಳಸುತ್ತಾರೆ. ಜಾವದಲ್ಲಿ ಇದನ್ನು ಕ್ಲಿಷ್ಟಸಾವಯವ ಸಂಯುಕ್ತಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ. ಅಲ್ಲದೆ ಸಾಬೂನುಗಳಿಗೆ ಸುವಾಸನೆ ಕೊಡಲೂ ಬಳಸುತ್ತಾರೆ. (ಡಿ.ಆರ್.)

## ಕಮಾನಿನ ಸೇತುವೆ :

ಸೇತುವೆಗಳಲ್ಲೆಲ್ಲ ಅತ್ಯಂತ ಲಾವಣ್ಯಮಯವಾದ ಮಾದರಿ (ಆರ್ಚ್ ಬಿಡ್ಜ್). ಇದನ್ನು ಮರ, ಇಟ್ಟಿಗೆ, ಕಲ್ಲು, ಉಕ್ಕು, ಭದ್ರ ಕಾಂಕ್ರೀಟ್—ಈ ಸಾಮಗ್ರಿಗಳಿಂದ ಕಟ್ಟಬಹುದು. ಹಿಂದೆ 170″ ಕಣ್ಣಿನ ಮರದ ಕಮಾನಿನ ಸೇತುವೆಯನ್ನು ಕಟ್ಟಿದ್ದರು. ಬೆಂಕಿಯ ಭಯಕ್ಕಾಗಿ ಈಗ ಎಲ್ಲಿಯೂ ಮರದ ಕಮಾನುಗಳನ್ನು ಕಟ್ಟುತ್ತಿಲ್ಲ.

ಇಟ್ಟಿಗೆಯ ಕಮಾನುಗಳ ಮೇಲೆ ಅದುಮುವ ತ್ರಾಸ ಮಾತ್ರ ಬರುವುದರಿಂದ ಇವನ್ನು ಸೇತುವೆಗಳಲ್ಲಿ ವಿಶೇಷವಾಗಿ ಉಪಯೋಗಿಸುತ್ತಿದ್ದರು. ಸಾಮಾನ್ಯವಾದ ಇಟ್ಟಿಗೆಗಳು ಚದರ ಅಡಿಯ ಮೇಲೆ 8 ಟನ್ನುಗಳ ಭಾರವನ್ನೂ ಬಲವಾದ ಇಟ್ಟಿಗೆಗಳು 12 ಟನ್ನುಗಳನ್ನೂ ತಡೆಯಬಲ್ಲವು. 1858ರಲ್ಲಿ ಶಿವಮೊಗ್ಗದಲ್ಲಿ ತುಂಗಾನದಿಯ ಮೇಲೂ ಭದ್ರಾವತಿಯಲ್ಲಿ ಭದ್ರಾನದಿಯ ಮೇಲೂ ಮೂರು ಕೇಂದ್ರಗಳಿಂದ ವೃತ್ತಖಂಡಗಳನ್ನೆಳೆದು ಸುಮಾರಾಗಿ ಅರ್ಧದೀರ್ಘವೃತ್ತಾಕಾರವಾದ 50′ಯ ಕಣ್ಣಿನ ಬಹು ಕಮಾನುಗಳ ಸೇತುವೆಗಳನ್ನು ಕಟ್ಟಿದ್ದಾರೆ. ಅವು ಇಂದಿಗೂ ಬಸ್ಸು ಲಾರಿಗಳ ತೂಕಗಳನ್ನು ತಡೆದು ನಿಂತಿವೆ. ದೊಡ್ಡ ರಸ್ತೆಗಳ ಮೇಲೆ ಅಲ್ಲದಿದ್ದರೂ ಹಳ್ಳಿಗಳ ರಸ್ತೆಗಳ ಮೇಲಿನ ಸೇತುವೆಗಳಲ್ಲಿ ಇಟ್ಟಿಗೆಯ ಕಮಾನುಗಳನ್ನು ಬಳಸಿ ಸಿಮೆಂಟ್ ಮತ್ತು ಉಕ್ಕಿನ ಮೇಲಿನ ಅವಲಂಬನೆಯನ್ನು ಕಡಿಮೆಮಾಡಿ ಕೊಳ್ಳಬಹುದು. ಆದರೆ ಈ ಸೂಚನೆಗಳು ಕಾಣಬರುತ್ತಿಲ್ಲ.

ಸಾಧಾರಣವಾದ ಕಲ್ಲು ಚದರಡಿಗೆ 20 ಟನ್ನುಗಳನ್ನೂ ಗ್ರಾನೈಟ್ ಕಲ್ಲು 30 ಟನ್ನುಗಳನ್ನೂ ಹೊರಬಲ್ಲುದು. 1817ರಲ್ಲಿ ಲಂಡನ್ನಿನ ಥೇಮ್ಸ್ ನದಿಯ ಮೇಲೆ ಕಟ್ಟಿದ ವಾಟರ್ಲೂ ಸೇತುವೆಯಲ್ಲಿ 120′ಗಳ 9 ಕಣ್ಣುಗಳಿವೆ. ಭಾರತದಲ್ಲಿ ಅನುಕೂಲವಾದ ಕಡೆಗಳಲ್ಲಿ 100′ ಕಣ್ಣಿನ ವರೆಗೆ ಕಲ್ಲಿನ ಕಮಾನುಗಳನ್ನು ಸೇತುವೆಗಳಲ್ಲಿ ಧಾರಾಳವಾಗಿ ಬೆಳೆಸಬಹುದು. ಆದರೆ ಮೈಸೂರು ಸೀಮೆಯ ರಾಮನಾಥಪುರದಲ್ಲಿ ಕಾವೇರಿ ನದಿಯ ಮೇಲೆ 1937ರಲ್ಲಿ ಕಟ್ಟಿ ಮುಗಿಸಿದ 30′ ಅಗಲದ 21 ಕಣ್ಣಿನ ಕಲ್ಲಿನ ಕಮಾನಿನ ಸೇತುವೆಯೇ ಈ ನಮೂನೆಯ ಕೊನೆಯ ಸೇತುವೆ ಎಂದು ತೋರುತ್ತದೆ. ಇದು ಶ್ಲಾಘ್ಯವಾದ ಪ್ರವೃತ್ತಿಯೆಂದು ಹೇಳಲಾಗುವುದಿಲ್ಲ. ಯಂತ್ರ ಶಿಲ್ಪದ ಕೌಶಲ ಬೆಳೆಯುತ್ತಿರುವ ಸ್ವತಂತ್ರ ಭಾರತದಲ್ಲಿ ಸೂಕ್ತವಾದ ಸಂಶೋಧನೆಗಳನ್ನು ನಡೆಸಿ ಹೇರಳವಾಗಿ ದೊರಕುವ ಕಲ್ಲನ್ನು ಸೇತುವೆಯ ಕಮಾನುಗಳಿಗೆ ಉಪಯೋಗಿಸಿಕೊಳ್ಳುವುದು ರಾಷ್ಟ್ರದ ದೃಷ್ಟಿಯಿಂದ ಹಿತಕರ.

ಕಮಾನಿನ ಸೇತುವೆಯಲ್ಲಿ ಕಲ್ಲುಗಾರೆಯ ಕಂಬಗಳ ಉದ್ದದಲ್ಲಿ 6′ ಅಂತರದಲ್ಲಿ ಒಂದರಂತೆ ಕಂಬಗಳಿಗೆ ನಡುವೆ ಕಮಾನಿನ ಒಳಭಾಗದ (ಇಂಟ್ರೇಡಾಸ್) ಆಕಾರಕ್ಕೆ ಹೊಂದುವ ಮರದ ಸರಕಟ್ಟುಗಳನ್ನು (ಸೆಂಟ್ರಿಂಗ್ಸ್) ಕಂಬಗಳ ಪಕ್ಕಗಳಿಂದ ಚಾಚುವ ಕಲ್ಲುಗಳ ಮೇಲೆ ಎಳೆದ ಮರದ ತೊಲೆಯ ಮೇಲೆ ಇಟ್ಟ ಎರಕದ ಕಬ್ಬಿಣದ ಮರಳು ಪೆಟ್ಟಿಗೆಗಳ ಮೇಲೆ ನಿಲ್ಲಿಸುತ್ತಾರೆ. ಒಂದು ಸರಕಟ್ಟಿಗೂ ಇನ್ನೊಂದಕ್ಕೂ ನಡುವೆ 3″ ಅಂತರದಲ್ಲಿ ಸರಕಟ್ಟುಗಳ ಮೇಲುಭಾಗದಲ್ಲಿ ಭದ್ರಪಡಿಸುವ ಪಟ್ಟಿಗಳ ಮಧ್ಯೆ ಮರದ ತೀರುಗಳನ್ನು ಜೋಡಿಸುತ್ತಾರೆ. ಇವುಗಳ ಮೇಲೆ ಕಮಾನಿನ ಕಲ್ಲುಗಳು ಕೂರುತ್ತವೆ. ಕಮಾನಿನ ಆಕಾರಕ್ಕೂ ದಪ್ಪಕ್ಕೂ ಸರಿಯಾಗಿ ಸುಮಾರು ಒಂದು ಅಡಿ ಅಗಲದ ಬೆಣೆಕಲ್ಲುಗಳನ್ನೂ ಕೊಂಚ ಅಗಲವಾದ ಎತ್ತರವಾದ ನೆತ್ತಿಯ ಕಲ್ಲುಗಳನ್ನೂ ಕ್ವಾರಿಮಾಡಿ ನಯವಾಗಿಸಿ ಮೊದಲೇ ಶೇಖರಿಸುತ್ತಾರೆ.

ಸೇತುವೆಯಲ್ಲಿ ಗುದ್ದುಗಂಬದಿಂದ ಹಿಡಿದು ಪ್ರತಿ ನಾಲ್ಕನೆಯ ಕಂಬವನ್ನು ಕಟ್ಟುವಾಗ ಒಂದೇ ಕಡೆಯಿಂದ ಬರುವ ಒದೆತವನ್ನು ತಡೆದು ನಿಲ್ಲುವುದಕ್ಕಾಗಿ ಕೊಂಚ ದಪ್ಪವಾಗಿ ಮಾಡಬೇಕು. ಕಂಬಗಳು ಕಮಾನು ಚಿಮ್ಮುವ ಮಟ್ಟಕ್ಕೆ ಬಂದ ಮೇಲೆ ಅದರ ಎರಡು ಕಡೆಗಳಲ್ಲಿಯೂ ಕಮಾನಿನ ಆಕಾರಕ್ಕೆ ಹೊಂದುವ ಬೆನ್ನಿನ ಕಲ್ಲುಗಳನ್ನು ಗಾರೆಯಲ್ಲಿ ಕೂರಿಸುತ್ತಾರೆ. ಕಮಾನುಗಳನ್ನು ಒಂದು ಗುದ್ದುಗಂಬದಿಂದ ಪ್ರಾರಂಭಿಸಿ ಒಂದಾದಮೇಲೊಂದನ್ನು ಕ್ರಮವಾಗಿ ಕಟ್ಟುತ್ತ ಹೋಗುತ್ತಾರೆ. ಒಂದು ಕಮಾನಿನಲ್ಲಿ ಬೆಣೆಕಲ್ಲುಗಳನ್ನು ಕೂರಿಸುವಾಗ ಮುಂದಿನ ಎರಡು ಕಣ್ಣುಗಳಿಗೂ ಸರಕಟ್ಟುಗಳನ್ನು ಜೋಡಿಸಿರಬೇಕು. ಪೂರ್ವ ಸಿದ್ಧತೆಗಳೆಲ್ಲವೂ ಮುಗಿದ ಮೇಲೆ ಸರಕಟ್ಟಿನ ತೀರುಗಳ ಮೇಲೆ ಪಕ್ಕದ ಕಂಬಗಳ ಬೆನ್ನುಕಲ್ಲುಗಳಿಂದ ಪ್ರಾರಂಭಿಸಿ ಮಟ್ಟವಾಗಿ ಕಂಬದ ಪಕ್ಕದಲ್ಲಿ ಕಮಾನಿನ ನಡುಗಲ್ಲನ್ನು ಹೊಡೆಯುವಾಗ ಅದರ ಒದೆಯನ್ನು ತಡೆಯುವುದಕ್ಕಾಗಿ ಮುಂದಿನ ಕಮಾನಿನಲ್ಲಿ ಮೂರನೆಯ

ಎರಡು ಭಾಗ ಕಲ್ಲುಗಳನ್ನೂ ಅದರ ಮುಂದಿನದರಲ್ಲಿ ಮೂರನೆಯ ಒಂದು ಭಾಗವನ್ನೂ ಎರಡು ಪಕ್ಕಗಳಲ್ಲಿಯೂ ಜೋಡಿಸಿರಬೇಕು. ಈಗ ಪೂರ್ತಿಯಾದ ಕಮಾನಿನಲ್ಲಿ ನಡುಗಲ್ಲುಗಳನ್ನು ದೊಡ್ಡ ಮರದ ದಿಮ್ಮಿಗಳನ್ನು ಮೇಲಕ್ಕೆತ್ತಿ ಒಂದೊಂದು ನಡುಗಲ್ಲಿನ ಮೇಲೂ ಇಪ್ಪತ್ತರಿಂದ ಮೂವತ್ತು ಏಟುಗಳನ್ನು ಹೊಡೆದು ಬಿಗಿಯಾಗಿ ಗಾರೆಯಲ್ಲಿ ಕೂರಿಸಬೇಕು. ಆಗ ಕಮಾನು ಎರಡು ಪಕ್ಕಗಳನ್ನೂ ಒದೆದು ಸ್ವತಂತ್ರವಾಗಿ ನಿಲ್ಲುತ್ತದೆ. ಆಮೇಲೆ ಕೆಳಗಿನ ಸರಕಟ್ಟುಗಳನ್ನು ಮರಳುಪೆಟ್ಟಿಗೆಗಳ ಮರಳನ್ನು ತೆಗೆದು ಕೊಂಚ ಕೆಳಕ್ಕೆ ಇಳಿಸಿ, ಮುಂದೆ ಮೂರನೆಯ ಕಮಾನಿಗೆ ಸಾಗಿಸಬಹುದು. ಹೀಗೆ ಒಂದಾದ ಮೇಲೊಂದು ಕಮಾನನ್ನು ಪೂರೈಸಿ ನೆತ್ತಿಯ ಕಲ್ಲುಗಳನ್ನು ಹೊಡೆಯಬೇಕು. ಕಮಾನುಗಳೆಲ್ಲವೂ ಪೂರೈಸಿದ ಮೇಲೆ ಸೇತುವೆಯ ಕೆಲಸ ಮುಗಿದಂತೆ. ಮೇಲುಗಡೆ ಕಮಾನಿನ ಬೆನ್ನುಗಳಲ್ಲಿ ಹಗುರವಾದ ಕಲ್ಲುಗಾರೆಯನ್ನೋ ಕಾಂಕ್ರೀಟನ್ನೋ ಕಂಬಿ ಸೇತುವೆಯ ಎರಡು ಪಕ್ಕಗಳಲ್ಲಿಯೂ ಗೋಡೆಗಳನ್ನೆತ್ತಿ ಪ್ಯಾರಪೆಟ್ಟನ್ನು ಕಟ್ಟಿದರಾಯಿತು. ಇಂದಿನ ಭಾರವಾದ ವಾಹನಗಳನ್ನು ಹೊರುವುದಕ್ಕೆ ಸೇತುವೆಯ ಮೇಲಿನ ರಸ್ತೆಗೆ ಸಿಮೆಂಟ್ ಕಾಂಕ್ರೀಟನ್ನು ಹಾಕಬೇಕು.

**ಉಕ್ಕಿನ ಕಮಾನುಗಳು :** ಸಂಪೂರ್ಣವಾಗಿ ಉಕ್ಕಿನಿಂದ ಸೇತುವೆಯನ್ನು ಮೊದಲು ಕಟ್ಟಿದ್ದು 1879ರಲ್ಲಿ. ಉಕ್ಕು ಎಳೆತದಲ್ಲಿ ಚದರ ಅಂಗುಲಕ್ಕೆ 18,000 ಪೌಂಡುಗಳನ್ನೂ ಜಾರುವ ತ್ರಾಸದಲ್ಲಿ 13,500 ಪೌಂಡುಗಳನ್ನೂ ಕಟ್ಟಡಗಳಲ್ಲಿ ಹೊರಬಲ್ಲದು. ಈ ಶತಮಾನದಲ್ಲಿ ಉಕ್ಕಿನ ಕಮಾನುಗಳ ಅಗಲವನ್ನು ಹೆಚ್ಚಿಸುವುದಕ್ಕಾಗಿ ಹೆಚ್ಚು ಎಳೆತವನ್ನು ತಡೆಯಬಲ್ಲ ಉಕ್ಕನ್ನು ತಯಾರಿಸಿದ್ದಾರೆ. ಇದಕ್ಕಾಗಿ ಉಕ್ಕಿಗೆ ಕೊಂಚ ಸಿಲಿಕಾನ್, ನಿಕ್ಕಲ್, ಕ್ರೋಮಿಯಂ ಇಲ್ಲವೆ ಇಂಗಾಲವನ್ನು ಬೆರೆಸುತ್ತಾರೆ. ಇಂಗಾಲ ಮಿಶ್ರವಾದ ಉಕ್ಕುಗಳು ಚದರ ಅಂಗುಲಕ್ಕೆ 20,000 ಪೌಂಡ್ ಎಳೆತವನ್ನೂ ತಡೆಯಬಲ್ಲವು. ನ್ಯೂಯಾರ್ಕಿನ ಹೆಲ್‌ಗೇಟ್ ಸೇತುವೆಯಲ್ಲಿ ಉಕ್ಕಿಗೆ ಇಂಗಾಲವನ್ನೂ ಆಸ್ಟ್ರೇಲಿಯಾದ ಸಿಡ್ನಿ ಬಂದರಿನ ಸೇತುವೆಯಲ್ಲಿ ಸಿಲಿಕನ್ನನ್ನೂ ಕೆನಡವ ಕ್ವಿಬೆಕ್ ಚಾಚುತೊಲೆಯ ಸೇತುವೆಯಲ್ಲಿ ನಿಕ್ಕಲನ್ನೂ ಕೊಂಚ ಬೆರೆಸಿದ್ದಾರೆ.

ಸ್ವತಂತ್ರವಾದ ಕಮಾನುಗಳಲ್ಲಿ ತ್ರಾಸಗಳನ್ನು ಲೆಕ್ಕಹಾಕುವುದು ಸುಲಭವಲ್ಲ. ಕೆಲವು ವಿಚಾರಗಳನ್ನು ಸಾಕಷ್ಟು ಪ್ರಮಾಣವಿಲ್ಲದೆ ಅಂಗೀಕರಿಸಬೇಕಾಗುತ್ತದೆ. ಅದಕ್ಕಾಗಿ ದೊಡ್ಡ ಉಕ್ಕಿನ ಕಮಾನುಗಳ ನೆತ್ತಿಯಲ್ಲಿ ಒಂದು ಆಣೆಯನ್ನೋ ಬೆನ್ನುಗಳಲ್ಲಿ ಎರಡು ಆಣೆಗಳನ್ನೋ ನೆತ್ತಿಯಲ್ಲಿಯೂ ಬೆನ್ನುಗಳಲ್ಲಿಯೂ ಒಟ್ಟು ಮೂರು ಆಣೆಗಳನ್ನೋ ಹೊಡೆಯುತ್ತಾರೆ. ಆಗ ತ್ರಾಸಗಳನ್ನು ಸರಿಯಾಗಿ ಲೆಕ್ಕ ಹಾಕಬಹುದು.

ಕಮಾನಿನ ಕಣ್ಣಿಗೂ ಏರಿಕೆಗೂ ಇರುವ ದಾಮಾಷೆ ನಾಲ್ಕಕ್ಕೆ ಒಂದರಿಂದ ಹಿಡಿದು ಹತ್ತಕ್ಕೆ ಒಂದರ ವರೆಗೂ ವ್ಯತ್ಯಾಸವಾಗುತ್ತದೆ. ಕಮಾನಿನ ದಪ್ಪ ಹತ್ತಕ್ಕೆ ಒಂದರಿಂದ ನಲವತ್ತಕ್ಕೆ ಒಂದರ ವರೆಗೂ ಕಡಿಮೆಯಾಗುತ್ತದೆ. ಸಾಮಾನ್ಯವಾಗಿ ಸ್ಥಾಯಿಯಾದ ಭಾರದಿಂದ (ಡೆಡ್ ಲೋಡ್) ಕಮಾನಿನ ಮೇಲೆ ಬರುವ ತ್ರಾಸವು ಅದುಮುವ ಸ್ವಭಾವದ ಪರ್ಯಾಯವಾಗಿ ಬರಬಹುದು. ಇದನ್ನು ಎದುರಿಸುವುದಕ್ಕೆ ಸಂವಿಧಾನವನ್ನೇ ಸಾಕಷ್ಟು ಬಲಿಷ್ಠವಾಗಿ ಮಾಡಬೇಕು.

1917ರಲ್ಲಿ ನ್ಯೂಯಾರ್ಕಿನಲ್ಲಿ ಕಟ್ಟಿದ ಹೆಲ್‌ಗೇಟ್ ಉಕ್ಕಿನ ಕಮಾನಿನ ಸೇತುವೆಯಲ್ಲಿ ಬೆನ್ನುಗಳ ಮೇಲೆ ಎರಡು ಆಣೆಗಳಿವೆ. ಗೋಪುರಗಳ ನಡುವಿನ ಅಗಲ 1017′. ಆಣೆಗಳ ನಡುವಿನ ಅಗಲ 977·5′. ಒಳಮುಖದ ನೆತ್ತಿಯ ಎತ್ತರ 220′ ಸೇತುವೆಯ ಒಟ್ಟು ಉದ್ದ 18,000′. ಈ ಕಮಾನಿನ ಎರಡು ಕಡೆಗಳಲ್ಲಿಯೂ ಕಾಂಕ್ರೀಟಿನ ಕಮಾನುಗಳನ್ನು, ಉಕ್ಕಿನ ಗರ್ಡರಿನ ಸೇತುವೆಗಳು, ಬ್ಯಾಸ್ಕ್ಯೂಲ್ ಸೇತುವೆಗಳು, 1000′ ಉದ್ದದ ತಿರುಗುಮುರುಗಾದ ಬಿಲ್ಲಿನ ಹಗ್ಗದ ಗರ್ಡರಿನ ಸೇತುವೆ—ಇವು ಸೇರಿವೆ. ಕಮಾನಿನ ಎರಡು ಕೊನೆಗಳಲ್ಲಿಯೂ ಭದ್ರಕಾಂಕ್ರೀಟಿನಿಂದ ಗೋಪುರಗಳನ್ನು ಕಟ್ಟಿ ಹೊರಗಡೆ ನಯವಾದ ಗ್ರ್ಯಾನೈಟ್ ಕಲ್ಲಿನ ಹೊದಿಕೆಯನ್ನು ಕೊಟ್ಟಿದ್ದಾರೆ. ಈ ಗೋಪುರಗಳ ತಳಪಾಯದಲ್ಲಿ ನೀರಿನ ಮಟ್ಟದ ಕೆಳಗೆ 109′ ಆಳದಲ್ಲಿ 18′ ವ್ಯಾಸದ 21 ಒತ್ತಡದ ಗಾಳಿಯ ಕಾಂಕ್ರೀಟಿನ ಕೇಸಾನುಗಳನ್ನು ಹೂಳಿದ್ದಾರೆ. ಮೇಲುಗಡೆ ಸೇತುವೆಯ ಅಗಲ 93′. ಇದರ ಮೇಲೆ ನಾಲ್ಕು ವಾಹನಗಳ ದಾರಿಗಳಿವೆ.

ಆಸ್ಟ್ರೇಲಿಯದ ಸಿಡ್ನಿ ಬಂದರಿನ ಮೇಲೆ 1650′ ಕಣ್ಣಿನ ಉಕ್ಕಿನ ಕಮಾನಿನ ಸೇತುವೆ ಪ್ರಾರಂಭವಾದ ಐದು ವರ್ಷಗಳ ಮೇಲೆ ನ್ಯೂಯಾರ್ಕಿನಲ್ಲಿ ಇದಕ್ಕಿಂತ 25″ ಅಗಲವಾದ ಕಣ್ಣಿನ (1652′ 1″) ಬೇಯಾನ್ ಸೇತುವೆಯನ್ನು ಪ್ರಾರಂಭಿಸಿ ಆಸ್ಟ್ರೇಲಿಯದ ಸೇತುವೆ ಮುಗಿಯುವುದಕ್ಕಿಂತ ನಾಲ್ಕು ತಿಂಗಳ ಮುಂಚೆ 1931ರಲ್ಲಿ ಕಟ್ಟಿ ಮುಗಿಸಿ ಆ ದಾಖಲೆಯನ್ನು ಮುರಿದರು. ಈಗ ಇದು ಪ್ರಪಂಚದ ಉಕ್ಕಿನ ಕಮಾನಿನ ಸೇತುವೆಗಳಲ್ಲೆಲ್ಲ ಅತ್ಯಂತ ಅಗಲವಾದ ಕಣ್ಣಿನ ಸೇತುವೆ.

1932ರಲ್ಲಿ ಮುಗಿದ ಸಿಡ್ನಿ ಬಂದರಿನ ಸೇತುವೆಯಲ್ಲಿ ಕಮಾನು ಚಿಮ್ಮುವ ಕಡೆ (ಸ್ಪ್ರಿಂಗಿಂಗ್) ನೀರಿನ ಮಟ್ಟದ ಮೇಲೆ 27′ಯಷ್ಟು ಎತ್ತರವಾಗಿದೆ. ಅದರ ಮೇಲೆ ಕಮಾನು 350′ ಎತ್ತರಕ್ಕೆ ಏರುತ್ತದೆ. ಈ ಸೇತುವೆಯಲ್ಲಿ ಬೆನ್ನುಗಳ ಮೇಲೆ ಎರಡು ಆಣೆಗಳಿವೆ. ನೆತ್ತಿ ಸ್ವತಂತ್ರವಾಗಿದೆ. ಕಮಾನಿನ ಸರಕಟ್ಟಿನ ಎತ್ತರ ಮಧ್ಯದಲ್ಲಿ 60′ಗಳಷ್ಟಿದೆ. ಎಂದರೆ ಕಮಾನಿನ ನೆತ್ತಿಯ ಮೇಲುಭಾಗ ನೀರಿನ ಮಟ್ಟದಿಂದ 437′ ಎತ್ತರವಾಯಿತು. ಕಮಾನಿನ ನಡುವಿನ ಸರಕಟ್ಟು N ಆಕಾರದಲ್ಲಿದೆ. ಒಂದು ಸರಕಟ್ಟಿನ ಮಧ್ಯದಿಂದ ಇನ್ನೊಂದರ ಮಧ್ಯಕ್ಕೆ 98·5′ ಅಂತರವಿದೆ. ಒಂದೊಂದು ಸರಕಟ್ಟಿನ ಒಳಗೂ ಹೊರಗೂ ಒಂದೊಂದು ರೈಲ್ವೆದಾರಿಯಿದೆ. ಎಂದರೆ ನಾಲ್ಕು ಪ್ರತ್ಯೇಕವಾದ ರೈಲ್ವೆದಾರಿಗಳಾಯಿತು. ಇನ್ನೂ ಆಚೆಗೆ ಎರಡು ಕೊನೆಗಳಲ್ಲಿಯೂ 10′ ಅಗಲದ ಕಾಲುದಾರಿಗಳಿವೆ. ಸೇತುವೆಯ ಮಧ್ಯದಲ್ಲಿ 57′ ಅಗಲದ ರಸ್ತೆಯಿದೆ. ಒಟ್ಟು 160′ ಅಗಲವಾದ ಈ ರಸ್ತೆ ನೀರಿನ ಗರಿಷ್ಠಮಟ್ಟದ ಮೇಲೆ 170′ ಅಡಿ ಎತ್ತರವಾಗಿದೆ. ಸೇತುವೆಯ ಎರಡು ಕಡೆಗಳಲ್ಲಿಯೂ ಈ ಕಡೆ ಒಂದು, ಆ ಕಡೆ ಒಂದು—ಹೀಗೆ ಎರಡು ಕಾಂಕ್ರೀಟಿನ ಗೋಪುರಗಳಿವೆ. ಮೇಲು ಮುಖದಲ್ಲಿ ನಯವಾದ ಕಲ್ಲಿನಚಪ್ಪಡಿಗಳಿಂದ ಮುಚ್ಚಿದ ಗೋಪುರಗಳು ತಳಹದಿಯ ಮೇಲೆ 275′ ಎತ್ತರಕ್ಕೆ ಏರಿ ಸೇತುವೆಯ ಅಂದವನ್ನು ಹೆಚ್ಚಿಸುತ್ತವೆ. ಈ ಸೇತುವೆಯಲ್ಲಿ 51,000 ಟನ್ ಉಕ್ಕು ಉಪಯೋಗವಾಗಿದೆ. (ಇದರ ಮೂರರಷ್ಟು ಉದ್ದವಾದ ಫೋರ್ತ್ ಚಾಚುತೊಲೆಯ ಸೇತುವೆಯಲ್ಲಿ 51,500 ಟನ್ ಉಕ್ಕಿದೆ). ಆ ಪೈಕಿ 38,000 ಟನ್ನುಗಳು ಕಮಾನುಗಳಲ್ಲಿವೆ. ಇಲ್ಲಿ ಉಪಯೋಗಿಸುವ ಕೆಲವು ತಗಡುಗಳು $2\frac{1}{8}$″ ದಪ್ಪವಾಗಿವೆ. ಇವನ್ನು ಎರಡು ಕಡೆಗಳಲ್ಲಿಯೂ 1′ ಅಗಲ, 1.25″ ದಪ್ಪದ ಸಮಕೋನಗಳಿಂದ ಜೋಡಿಸಿದ್ದಾರೆ. ಕಮಾನಿನ ಆಕಾರದ ಬೆಡಗು, ಹಿರಿದಾದ ಅಳತೆಯ ಪ್ರಮಾಣ, ಗಾಂಭೀರ್ಯ ಮತ್ತು ಇದರ ನಿರ್ಮಾಣದಲ್ಲಿ ತೋರಿಸಿರುವ ಕಲ್ಪನಾ ಚಾತುರ್ಯ ನೈಪುಣ್ಯಗಳಿಂದ ಇದೊಂದು ಕಲಾಕೃತಿಯಾಗಿದೆ.

ಎರಡನೆಯ ಮಹಾಯುದ್ಧ ಮುಗಿದ ಮೇಲೆ ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಭಾಟಾ ಮಾರ್ಗಗಳನ್ನು ರಸ್ತೆಗಳನ್ನು ಮೇಲ್ಪಾಡುಮಾಡುವ ಸಂದರ್ಭದಲ್ಲಿ ಸಿಮೆಂಟ್ ಕಾಂಕ್ರೀಟಿನಿಂದಲೂ ಭದ್ರಕಾಂಕ್ರೀಟಿನಿಂದಲೂ ಅನೇಕ ಕಮಾನಿನ ಸೇತುವೆಗಳನ್ನು ಕಟ್ಟಿದ್ದಾರೆ. ಪ್ರಪಂಚದಲ್ಲಿಯೇ ಅತ್ಯಂತ ಅಗಲವಾದ ಸಾದಾ ಕಾಂಕ್ರೀಟಿನ ಸೇತುವೆ ಕ್ಲೀವ್‌ಲಾಂಡಿನಲ್ಲಿ ರಾಕಿನದಿಯ ಮೇಲೆ 1910ರಲ್ಲಿ ಕಟ್ಟಿದ 280′ ಅಗಲದ ಕಮಾನಿನ ಸೇತುವೆ. ಆ ಮೇಲೆ ಭದ್ರಕಾಂಕ್ರೀಟಿನಲ್ಲಿ 400′ ಕಣ್ಣಿನಿಂದ 645′ ಕಣ್ಣಿನ ವರೆಗೂ ಅನೇಕ ಕಮಾನಿನ ಸೇತುವೆಗಳು ನಿರ್ಮಾಣವಾಗಿವೆ. ಸ್ವೀಡನ್ನಿನಲ್ಲಿ ಸ್ಯಾಂಡೊನದಿಯ ಮೇಲೆ ಕಟ್ಟಿದ 866′ ಕಣ್ಣಿನ ಕಮಾನಿನ ಸೇತುವೆ ಈ ವರೆಗೆ ಕಟ್ಟಿರುವ ಸೇತುವೆಗಳಲ್ಲಿ ಅತ್ಯಂತ ಅಗಲವಾದ ಕಣ್ಣುಳ್ಳದ್ದು. ಇನ್ನು ಮುಂದೆ ಭದ್ರಕಾಂಕ್ರೀಟ್ ಸೇತುವೆಗಳಲ್ಲಿ ಹೆಚ್ಚಾಗಿ ಉಪಯೋಗವಾಗುವ ಸೂಚನೆಗಳು ಕಾಣಬರುತ್ತಿವೆ.

(ಎಚ್.ಸಿ.ಕೆ.)

**ಕಮಾನು :** ಆರೀಯ ದಿಕ್ಕಿನಲ್ಲಿ ಎಸೆಗಳುಳ್ಳ ಆಪಿನ ಆಕಾರದ ಇಟ್ಟಿಗೆ, ಕಲ್ಲು ಇಲ್ಲವೆ ಕಾಂಕ್ರೀಟಿನ ದಿಂಡುಗಳ ಜೋಡಣೆ (ಆರ್ಚ್). ಕಮಾನಿನ ಒಳಭಾಗವೂ ಹೊರಭಾಗವೂ ವಕ್ರಾಕಾರವಾಗಿವೆ. ದಿಂಡುಗಳೇ ಇಲ್ಲದ ಭದ್ರಕಾಂಕ್ರೀಟಿನ ಮತ್ತು ಉಕ್ಕಿನ ಈ ಆಕಾರದ ರಚನೆಗಳನ್ನೂ ಈಚೆಗೆ ಕಮಾನು ಎಂದೇ ಕರೆಯುತ್ತಾರೆ. ಕಮಾನಿನ ತತ್ತ್ವ (ಎಂದರೆ ಬಾಗಿದ ರಚನಾವಿನ್ಯಾಸದಲ್ಲಿ) ಇಟ್ಟಿಗೆಗಳನ್ನಾಗಲಿ ಕಲ್ಲುಗಳನ್ನಾಗಲಿ ಒಂದಕ್ಕೊಂದು ಆಸರೆಯಾಗಿರುವಂತೆ ಜೋಡಿಸುವುದು ಪ್ರಾಚೀನ ಐಗುಪ್ತರಿಗೂ ಬ್ಯಾಬಿಲೋನಿಯನ್ನರಿಗೂ ಗ್ರೀಕರಿಗೂ ತಿಳಿದಿತ್ತು. ಕ್ರಮವಾದ ಕಮಾನು ಮೊದಲು ನಿರ್ಮಾಣವಾದದ್ದು ಕ್ರಿ. ಪೂ. 4000ದಲ್ಲಿ, ಯೂಫ್ರಟೀಸ್ ಟೈಗ್ರಿಸ್ ನದೀ ಕಣಿವೆಯಲ್ಲಿ. ಪ್ರಾಚೀನ ಈಜಿಪ್ಟಿನಲ್ಲಿಯೂ ಭಾರತದಲ್ಲಿಯೂ ಕಮಾನು ತಿಳಿದಿತ್ತು. ಆದರೆ ಅದನ್ನು ಕಟ್ಟಡಗಳಲ್ಲಿ ಹೆಚ್ಚಾಗಿ ಬಳಸಲಿಲ್ಲ. ನಗರಗಳ ಮಹಾದ್ವಾರಗಳ ಮೇಲೆ ಸ್ಮಾರಕ ಕಮಾನುಗಳ ರಚನೆ ಮೊದಲು ಆದದ್ದು ಏಷ್ಯದ ಅಸ್ಸೀರಿಯದಲ್ಲಿ. ಆದರೆ ವಾಸ್ತುಶಿಲ್ಪದಲ್ಲಿ ಮೊದಲು ಇದನ್ನು ಬಳಸಿದವರು ಇಟ್ರುಸ್ಕನರು. ರೋಮನರು ಇವರಿಂದ ಈ ಕಲೆಯನ್ನು ಕಲಿತು ಅದನ್ನು ಪರಿಪೂರ್ಣತೆಗೆ ತಂದು ದೊಡ್ಡ ಕಟ್ಟಡಗಳಲ್ಲಿ ಉಪಯೋಗಿಸಿ ರೋಮನ್ ಚಕ್ರಾಧಿಪತ್ಯದಲ್ಲಿಯೇ ಅಲ್ಲದೆ ನಾಗರಿಕ ಪ್ರಪಂಚದಲ್ಲೆಲ್ಲ ಹರಡಿದರು. ಇವರು ತಲೆ ಚಪ್ಪಟ ಮತ್ತು ಜಂತಿಗಳಿಗೆ ಬದಲಾಗಿ ಕಂಬಗಳ ಮೇಲೆ ಕಮಾನುಗಳನ್ನು ಕಟ್ಟಿದರು. ವಾಸ್ತುಶಿಲ್ಪದಲ್ಲಿ ಮಟ್ಟರೇಖೆಗಳ ಪ್ರಾಧಾನ್ಯ ಕ್ರಮೇಣ ಕಡಿಮೆಯಾಗಿ ಕಂಬದ ತಲೆಗಟ್ಟಡ (ಎಂಟಾಬ್ಲಟ್ಯೂರ್) ಕಣ್ಮರೆಯಾಯಿತು. 19ನೆಯ ಶತಮಾನದ ಮಧ್ಯಭಾಗದ ವರೆಗೂ ಕಟ್ಟಡದ ಒಂದು ಮುಖ್ಯ ಭಾಗವಾಗಿ ಕಮಾನು ಇತ್ತು. ಈಚೆಗೆ ಉಕ್ಕು ಮತ್ತು ಭದ್ರಕಾಂಕ್ರೀಟ್ ಬಂದ ಮೇಲೆ ಕಮಾನಿನ ಆಕಾರವನ್ನು ದೊಡ್ಡ ಸೇತುವೆಗಳ ನಿರ್ಮಾಣದಲ್ಲಿ ಬಳಸುತ್ತಿದ್ದಾರೆ.

ಕಮಾನಿನಲ್ಲಿ ಒಳಮುಖವನ್ನು ಒಳಬಾಗು (ಇಂಟ್ರೇಡಾಸ್) ಎಂದೂ ಹೊರಮುಖವನ್ನು ಹೊರಬಾಗು (ಎಕ್ಸ್‌ಟ್ರೇಡಾಸ್) ಎಂದೂ ಕರೆಯುತ್ತಾರೆ. ಇವುಗಳ ನಡುವೆ ಇರುವ ಆಪಿನ ಆಕಾರದ ಕಲ್ಲುಗಳನ್ನು ಬೆಣೆಕಲ್ಲು ಎಂದೂ ಮಧ್ಯದ

ಕಲ್ಲನ್ನು ನೆತ್ತಿಯ ಕಲ್ಲೆಂದೂ ಕರೆಯುವುದು ವಾಡಿಕೆ. ಚಿಮ್ಮುವ ಕಲ್ಲಿನಿಂದ (ಸ್ಪ್ರಿಂಗೀ) ಕಮಾನು ಸಾಮಾನ್ಯವಾಗಿ ಚಿಮ್ಮುತ್ತದೆ. ಆದರೆ ನಿಜವಾದ ಕಮಾನಿನ ಅಡಿಗೂ ಕಂಬದ ಮೇಲುವರಸೆಗೂ ನಡುವೆ ಒಂದು ವರಸೆ ಲಂಬವಾದ ಕಟ್ಟಡವನ್ನು ಕಟ್ಟಿ ವೃತ್ತಖಂಡಾಕಾರದ ಕಮಾನನ್ನು ಚಿಮ್ಮಿಸುವುದೂ (ಸ್ಟಿಲ್ಟೆಡ್ ಆರ್ಚ್) ಉಂಟು. ಸುರಂಗದ ಹಾಗೆ ನಿರಂತರವಾದ ಕಮಾನುಗಳ ಸಾಲನ್ನು ಕಮಾನು ಚಾವಣಿ (ವಾಲ್ಟ್) ಎನ್ನುತ್ತಾರೆ.



















A : ಅರ್ಧಗೋಳಾಕಾರದ ಕಮಾನಿನ ನಕ್ಷೆ 1 ನೆತ್ತಿಗಲ್ಲು, 2 ಅಂಕಣ, 3 ಎತ್ತರ, 4 ಕಂಬದ ಮೇಲುವರಸೆಗಳು, 5 ಕಂಬಗಳು 6 ಕಮಾನಿನ ಹೊರಬಾಗು, 7 ಕಮಾನಿನ ಒಳಬಾಗು, B : ಕುದುರೆಲಾಳದ ಆಕಾರದ ಕಮಾನು, C ಗಾಥಿಕ್ ಮಾದರಿಯದು, D ಟ್ಯೂಡರ್ ಮಾದರಿಯದು, E ಓಗೀ ಮಾದರಿಯದು , F ಇನ್ನೊಂದು ಮಾದರಿಯ ಕಮಾನು

ಆಪಿನ ಆಕಾರದ ಕಲ್ಲುಗಳಿಂದ, ಅದರ ರಚನೆಯ ಸ್ವಭಾವದಿಂದಲೇ, ಕಮಾನಿನಲ್ಲಿ ಬುಡದ ಕಲ್ಲಿನ ಮೇಲೆ ಕೆಳಕ್ಕೆ ಎಳೆಯುವ ತೂಕವೇ ಅಲ್ಲದೆ ಮಟ್ಟವಾಗಿ ಹೊರಕ್ಕೆ ನೂಕುವ ಪ್ರವೃತ್ತಿಯೂ ಇರುತ್ತದೆ. ಕಮಾನು ಭದ್ರವಾಗಿರಬೇಕಾದರೆ ಈ ನೂಕನ್ನು ಗುದ್ದುಗಂಬಗಳಿಂದಲೋ ಊರೆಗಳಿಂದಲೋ ಎದುರಿಸಬೇಕು. ಒಂದು ಸೇತುವೆಯ ನಡುವಿನ ಕಂಬದಲ್ಲಿ ಎರಡು ಪಕ್ಕಗಳಲ್ಲಿಯೂ ಒಂದೇ ಅಗಲದ ಕಮಾನುಗಳಿರುವುದರಿಂದ ಒಂದು ಪಕ್ಕದ ಕಮಾನಿನ ಮಟ್ಟವಾದ ನೂಕು ಇನ್ನೊಂದು ಪಕ್ಕದ್ದರ ನೂಕಿಗೆ ಸಮಾನವಾಗಿ ಎದುರು ದಿಕ್ಕಿನಲ್ಲಿರುವುದರಿಂದ ಒಂದನ್ನೊಂದು ಸಮತೂಕ ಮಾಡಿ ಕಂಬವನ್ನು ಸುರಕ್ಷಿತವಾಗಿ ಮಾಡುತ್ತದೆ.

ಕಮಾನಿನಲ್ಲಿ ಅನೇಕ ರೂಪಗಳಿವೆ. ಅನೇಕ ನಮೂನೆಯ ಕಟ್ಟಡಗಳಲ್ಲಿ ಇವು ಉಪಯೋಗವಾಗುತ್ತಿವೆ. ಅರ್ಧವೃತ್ತಾಕೃತಿಯ ಕಮಾನಿನಲ್ಲಿ ಮೇಲೆ ಬಿದ್ದ ತೂಕ ಲಂಬವಾಗಿ ಕಂಬಕ್ಕೆ ಇಳಿಯುವುದರಿಂದ ಇದು ಬಲಿಷ್ಠವಾದ ನಮೂನೆ. ಇದನ್ನು ರೋಮನರು ಕಟ್ಟಡಗಳಲ್ಲಿಯೂ ನಗರಕ್ಕೆ ನೀರನ್ನು ತರುವ ಮೇಲುಗಾಲುವೆಗಳಲ್ಲಿಯೂ ರಚಿಸುತ್ತಿದ್ದರು. ಅರ್ಧವೃತ್ತಾಕೃತಿಯ ಮತ್ತು ತಪ್ಪಲೆ ಕಮಾನುಗಳನ್ನು ಮನೆ ಕಟ್ಟುವುದರಲ್ಲಿ ಉಪಯೋಗಿಸುವುದೇ ಹೆಚ್ಚು. ಚೂಪಾದ ಗಾಥಿಕ್ ಕಮಾನು ಯೂರೋಪಿನಲ್ಲಿ ಮಧ್ಯಯುಗದಲ್ಲಿ ಇಗರ್ಜಿಗಳನ್ನು ಕಟ್ಟುವಾಗ ವಿಕಾಸವಾಯಿತು. ಬೆಂಗಳೂರಿನ ಸೆಂಟ್ರಲ್ ಕಾಲೇಜಿನ ಕಟ್ಟಡಗಳಲ್ಲಿ ಈ ಲಕ್ಷಣದ ಕಮಾನು ಸಾಲುಗಳನ್ನು ನೋಡಬಹುದು. ಓಗೀ ಆಕಾರದ ಚೂಪಾದ ಕಮಾನುಗಳನ್ನು ಹಿಂದೆ ಮನೆಗಳ ಕಿಟಿಕಿಗಳ ಮೇಲೂ ಬಾಗಿಲುಗಳ ಮೇಲೂ ಬಳಸುತ್ತಿದ್ದರು. ಭಾರತದಲ್ಲಿ ಮೊಗಲರ ಕಾಲದ ಭವ್ಯವಾದ ಕೋಟೆಗಳಲ್ಲಿ ಇಂಡೋ ಸ್ಯಾರೆಸನಿಕ್ ಕಮಾನನ್ನು ವಿಶೇಷವಾಗಿ ಉಪಯೋಗಿಸಿದ್ದಾರೆ. ಮೂರು ಕೇಂದ್ರಗಳಿಂದ ಎಳೆದ ವೃತ್ತಖಂಡಗಳನ್ನೆಳೆದು ಅರ್ಧ ಅಂಡಾಕಾರವಾದ (ಸೆಮಿ ಎಲ್ಲಿಪ್ಟಿಕ್) ಕಮಾನುಗಳನ್ನು ಇಟ್ಟಿಗೆ ಗಾರೆಯಿಂದ ಕಟ್ಟಿದ ಸೇತುವೆಗಳಲ್ಲಿ ಬಳಸಿದ್ದಾರೆ. 1858ರಲ್ಲಿ ಕಟ್ಟಿದ ಶಿವಮೊಗ್ಗದ ತುಂಗಾ ನದಿಯ ಸೇತುವೆ ಮತ್ತು ಭದ್ರಾವತಿಯ ಸೇತುವೆಗಳನ್ನು 50′ ಕಣ್ಣಿನ ಇಟ್ಟಿಗೆಯ ಈ ನಮೂನೆಗಳಿಂದ ಕಟ್ಟಿದ್ದಾರೆ. ಉತ್ತರ ದೇಶದ ಮೆಕ್ಕಲುಮಣ್ಣಿನ ಬಯಲುಗಳಲ್ಲಿ ಕಲ್ಲೇ ಸಿಕ್ಕುವುದಿಲ್ಲ. ಹರದ್ವಾರದಿಂದ ರೂರ್ಕಿಯ ಕಡೆಗೆ ಹೋಗುವ ಮೇಲಿನ ಗಂಗಾನಾಲೆಯಲ್ಲಿ 10,500 ಕ್ಯುಸೆಕ್ಕುಗಳು–ಎಂದರೆ ನಮ್ಮ ವಿಶ್ವೇಶ್ವರಯ್ಯ ನಾಲೆಯ ಐದರಷ್ಟು ನೀರು ಹರಿಯುತ್ತದೆ. ಈ ನಾಲೆ 80,000 ಕ್ಯುಸೆಕ್ಕುಗಳ ಪ್ರವಾಹವನ್ನು ಸಾಗಿಸುವ ಸೋಲಾನಿ ನದಿಯನ್ನು 50′ ಕಣ್ಣಿನ 11 ಇಟ್ಟಿಗೆ ಗಾರೆಯ ಕಮಾನುಗಳ ಮೇಲುಗಾಲುವೆಯಲ್ಲಿ ದಾಟುತ್ತದೆ. ನದಿಗಳ ಮೇಲೆ ರಸ್ತೆಗಳನ್ನೂ ರೈಲುದಾರಿಗಳನ್ನೂ ಸಾಗಿಸುವ ಸೇತುವೆಗಳಲ್ಲಿ ವೃತ್ತಖಂಡಾಕಾರವನ್ನು ಬಳಸಿದ್ದಾರೆ. ಬಿಲ್ಲಿನ ಹುರಿಯ ಆಕಾರವನ್ನು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಲ್ಲಿ ತುಂಗಾನದಿಯ ಮೇಲಿನ ಸೇತುವೆಯಲ್ಲಿ ಉಪಯೋಗಿಸಿದ್ದಾರೆ. 800′ ಗಳ ಒಂದು ಕಣ್ಣಿನ ತೂಗುಸೇತುವೆಯಲ್ಲಿ ಉಕ್ಕಿನ ಹೊರಜಿ ಮಾಲಾಕಾರವಾಗಿ (ಕ್ಯಾಟೆನರಿ) ಇದೆ.

ಚಪ್ಪಡಿಯಂತೆ ಕಮಾನು ಸಹ ಯಂತ್ರಶಿಲ್ಪದಲ್ಲಿ ಸರ್ವತ್ರ ಉಪಯೋಗವಾಗುವ ನಮೂನೆ. ಕಮಾನಿಗೆ ಜೀವಕಳೆಯಿದೆ. ಅದು ಪಕ್ಕದ ದಿಮ್ಮಿಗಳನ್ನು ತಳ್ಳಿ ಜೀವಂತ ಪ್ರಾಣಿಯಂತೆ ಎಚ್ಚರವಾಗಿದ್ದು ವಿಲಾಸದಿಂದ ಭಾರವನ್ನು ಹೊತ್ತಿರುವಂತೆ ಕಾಣುತ್ತದೆ. ಕಮಾನು ನಿದ್ದೆ ಮಾಡುವುದಿಲ್ಲ. ಕಟ್ಟಡದ ಆಕಾರಗಳಲ್ಲೆಲ್ಲ ಕಮಾನು ಅತ್ಯಂತ ಮನೋಹರವಾದದ್ದು.

**ಓಗೀ :** ಕಮಾನಿನಲ್ಲಿ ಒಂದು ಬಗೆ. ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ಕಾಲರ್‍ಯಾಡೊ ನದಿಯ ಮೇಲಿನ ಆಸ್ಟಿನ್ ಅಣೆ ಒಂದು ಓಗೀ ಆಕಾರದ ಅಣೆ. ಇದರ ಮೇಲುಭಾಗವನ್ನು ಮೇಲಿನಿಂದ ಬೀಳುವ ನೀರಿನ ದಾರಿಯನ್ನು ಅನುಸರಿಸಿ ಕಟ್ಟಿದ್ದಾರೆ. ಆದರೆ 1900ರಲ್ಲಿ ಬಂದ ಮಹಾಪ್ರವಾಹದಲ್ಲಿ ಈ ಅಣೆ



ಬಿಜಾಪುರ ಜಿಲ್ಲೆಯ ಆಸಾರ್-ಮಹಲ್ ಬಳಿಯಿರುವ ಚಂಪಾವ ಮಹಲ್ ದ್ವಾರಕಮಾನಿಗೊಂದು ನಿದರ್ಶನ

ತಳಪಾಯದ ಸಣ್ಣಕಲ್ಲಿನ ಮಟ್ಟವಾದ ಹಾಳೆಹಾಳೆಯಾದ ಪದರಗಳಲ್ಲಿ ಸಾಕಷ್ಟು ಅಂಟಿಕೊಳ್ಳುವ ಗುಣವಿಲ್ಲದೆ ಜಾರಿ ಕೆಳಕ್ಕೆ ಉರುಳಿತು. ಇದರ ತಲೆಯ ಭಾಗವನ್ನು ಅಣೆಯ ಮೇಲಿನಿಂದ ಕೆಳಕ್ಕೆ ಉರುಳುವ ನೀರಿನ ದಾರಿಯನ್ನು ಅನುಸರಿಸಿ ಕಟ್ಟಿದ್ದರು. ಹಾಗೆಯೇ ತಳದಲ್ಲಿ ನೀರನ್ನು ಹೆಚ್ಚುಕಡಿಮೆ ಲಂಬವಾದ ದಾರಿಯಿಂದ ಕೆಳಗಡೆ ಮಟ್ಟವಾದ ದಾರಿಗೆ ತಿರುಗಿಸಿದ್ದರು. ಓಗೀ ಕಮಾನನನ್ನು ಹಿಂದೆ ಭಾರತದಲ್ಲಿ ವಿಶೇಷವಾಗಿ ಉಪಯೋಗಿಸುತ್ತಿದ್ದರು. ಆದರೆ ಮೇಲಿನಿಂದ ಉರುಳುವ ನೀರು ಕೆಳಗಡೆ ಮಟ್ಟವಾಗಿ ಹೊರಬೀಳುವಾಗ ಮಿತಿಮೀರಿದ ವೇಗದಿಂದ ಉರುಳುವುದರಿಂದ ಹೊಳೆಯ ತಳದಲ್ಲಿಯೂ ಅಂಚುಗಳಲ್ಲಿಯೂ ನೆಲ ಕೊರೆದು ಹೋಗುತ್ತದೆ. ಆದಕ್ಕಾಗಿ ತಗ್ಗಾದ ಅಣೆಕಟ್ಟುಗಳಲ್ಲಿ ಈ ಓಗೀ ಆಕಾರವನ್ನು ಹೆಚ್ಚಾಗಿ ಬಳಸುತ್ತಿಲ್ಲ.

(ಎಚ್.ಸಿ.ಕೆ.)

**ಕಮಾನು ಚಾವಣಿ :** ಕಮಾನು ಕಟ್ಟುವ ವಿಧಾನವೇ ಕಮಾನು ಚಾವಣಿಗೂ ಅನ್ವಯಿಸುತ್ತದೆ. ಇಟ್ಟಿಗೆ, ಕಲ್ಲು ಅಥವಾ ಇನ್ನಾವುದಾದರೂ ಕಟ್ಟಡದ ಸಾಮಾನನ್ನು ಉಪಯೋಗಿಸಿ, ಕಮಾನಿನ ಆಕಾರದಲ್ಲಿ ಕಟ್ಟಿದ ಚಾವಣಿ ಭಾಗಕ್ಕೆ ಕಮಾನು ಚಾವಣಿ ಎನ್ನುತ್ತಾರೆ. ಇಂಥ ಚಾವಣಿಗಳನ್ನು ಮೂರು ವಿಧವಾಗಿ ವಿಂಗಡಿಸಬಹುದು.

ಪೀಪಾಯಿ : ಈ ವಿಧವಾದ ಚಾವಣಿ ಉದ್ದಕ್ಕೂ ಒಂದೇ ವಿಧವಾಗಿ ಸುರಂಗದ ಚಾವಣಿಯಂತಿರುತ್ತದೆ.

ಆನ್ಯುಲರ್ : ಒಂದೇ ವಿಧವಾಗಿ ತೋರುವ ಈ ಚಾವಣಿಯಲ್ಲಿ, ಅದನ್ನು ಹೊತ್ತಿರುವ ಗೋಡೆಗಳು ನಕ್ಷೆಯಲ್ಲಿ ಏಕಬಿಂದುವೃತ್ತಾಕಾರದಲ್ಲಿರುತ್ತವೆ.

ಗ್ರಾಯಿನ್ : ಇವನ್ನು ಕ್ರಾಸ್‌ವಾಲ್ಟ್ ಎಂದೂ ಕರೆಯುತ್ತಾರೆ. ಎರಡು ಪೀಪಾಯಿ ಆಕಾರದ ಚಾವಣಿಗಳು ಒಂದನ್ನೊಂದು ಲಂಬವಾಗಿ ಸಂಧಿಸಿದರೆ ಈ ವಿಧವಾದ ಚಾವಣಿಯಾಗುತ್ತದೆ. ಹೀಗೆ ಸಂಧಿಸಿದ ಜಾಗದಲ್ಲಿ ಚಾವಣಿಯ ಭಾರ ಬೀಳುತ್ತದೆ. ಸಂಧಿಸುವ ರೇಖೆಗೆ ಗ್ರಾಯಿನ್ ಎಂದು ಹೆಸರು. (ಕೆ.ಎಸ್.ಆರ್.)

**ಕಮಿಂಗ್ಸ್, ಎಡ್ವರ್ಡ್ ಎಸ್ಟ್‌ಲಿನ್ :** 1894–1962. ಅಮೆರಿಕದ ಕವಿ ಮತ್ತು ಚಿತ್ರಕಾರ. ಜನನ ಕೇಂಬ್ರಿಜ್‌ನ ಮ್ಯಾಸಚೂಸೆಟ್ಸ್‌ನಲ್ಲಿ. ಹಾರ್ವರ್ಡ್ ವಿಶ್ವವಿದ್ಯಾನಿಲಯದಿಂದ ಪದವೀಧರನಾದ ಮೇಲೆ (1915) ಒಂದನೆಯ ಮಹಾಯುದ್ಧಕಾಲದಲ್ಲಿ ಫ್ರೆಂಚ್ ಸೈನ್ಯವಿಭಾಗದ ಆಸ್ಪತ್ರೆ ಗಾಡಿಯ (ಆಂಬ್ಯುಲೆನ್ಸ್) ಚಾಲಕನಾಗಿ ಸೇವೆಸಲ್ಲಿಸಿದ. ಅನಂತರ ಮ್ಯಾಸಚೂಸೆಟ್ಸ್‌ನ ಕ್ಯಾಂಪ್ ಡೇವೆನ್ಸ್ ಎಂಬಲ್ಲಿ ಸಾಮಾನ್ಯ ಸೈನಿಕನಾಗಿ ಕೆಲಸ ಮಾಡಿದ. ಫ್ರಾನ್ಸಿನಲ್ಲಿದ್ದಾಗ ಈತ ಸೈನಿಕ ಬಂಧನ ಶಿಬಿರದಲ್ಲಿ ಮೂರು ತಿಂಗಳ ಕಾಲವಿದ್ದು ತನಗಾದ ಅನುಭವಗಳನ್ನು ದಿ ಎನಾರ್ಮಸ್ ರೂಮ್ (1922) ಎಂಬ ಪುಸ್ತಕದಲ್ಲಿ ಬರೆದ. 1920ರ ಮತ್ತು 1930ರ ದಶಕಗಳಲ್ಲಿ ಈತ ಪ್ಯಾರಿಸ್ ಮತ್ತು ಗ್ರೀನಿಚ್‌ಗಳಲ್ಲಿ ಬಹುತೇಕವಾಗಿ ತನ್ನ ಕಾಲವನ್ನು ಕಳೆದು ಕವನರಚನೆ ಮತ್ತು ಚಿತ್ರಕಲೆಯಲ್ಲಿ ಬಹುಮಟ್ಟಿನ ಖ್ಯಾತಿ ಗಳಿಸಿದ. ಅಮೆರಿಕದ ಆಧುನಿಕ ಕವಿಗಳಲ್ಲಿ ಅತಿ ನಿಷ್ಠಾವಂತ ಪ್ರಯೋಗಕಾರನೆನಿಸಿಕೊಂಡವನೀತ. ಐಹಿಕ ಭೋಗಪ್ರವೃತ್ತಿಯ ಕಟುವಿಮರ್ಶೆಯನ್ನೂ ಕವನಗಳಲ್ಲಿ ಈತನದೇ ಆದ ಅಕ್ಷರಜೋಡಣೆಯ ವಿನ್ಯಾಸವನ್ನೂ ಕಾಣಬಹುದು. ಈತ ನಿಸರ್ಗಪ್ರೇಮಿ. ಪ್ರೇಮ ಮತ್ತು ಯೌವ್ವನಗಳ ವಿಚಾರವಾಗಿ ತನ್ನ ಕವನಗಳಲ್ಲಿ ಹೆಚ್ಚಿನ ವಿವರಗಳನ್ನು ಇತ್ತಿದ್ದಾನೆ. ದಬ್ಬಾಳಿಕೆಯನ್ನು ಕಟುವಾಗಿ ಟೀಕಿಸಿ ಖಂಡಿಸಿದ್ದಾನೆ. ಈತ ಹುಟ್ಟು ಭಾವಗೀತೆಕಾರ. ಇವನ ಟ್ಯೂಲಿಪ್ಸ್ ಅಂಡ್ ಚಿಮ್ನೀಸ್ 1923ರಲ್ಲಿ ಪ್ರಕಟವಾಯಿತು. ಅಮೆರಿಕದ ಸಾಹಿತ್ಯಕ್ಷೇತ್ರದಲ್ಲಿ ವಿಶಿಷ್ಟ ಸೇವೆಸಲ್ಲಿಸಿದ ಕಾರಣ ಈತನಿಗೆ ಡಯಲ್ ಬಹುಮಾನ ದೊರಕಿತು (1925). ನಕ್ಷಾನಿರೂಪಣೆಯ ವೈಚಿತ್ರ್ಯದಲ್ಲಿ ತನ್ನದೇ ಆದ ಒಂದು ವಿಶಿಷ್ಟತೆಯನ್ನು ಈತ ತೋರಿದ್ದಾನೆ. ಇವನ ರಚನೆಗಳಲ್ಲಿ ಮುಖ್ಯವಾದುವೆಂದರೆ : XLI ಪೊಯೆಮ್ಸ್ (1925), ಈಸ್ 5 (1926), ಹಿಮ್ (1928), CIOPW (1931) ವೀವ (1931), ಈಮಿ (1933), ನೋ ಥ್ಯಾಂಕ್ಸ್ (1935), 1/20 (1937), ಫಿಫ್ಟಿ ಪೊಯೆಮ್ಸ್ (1940), I x I (1944) ಮತ್ತು I : ಸಾಮೆನ್‌ಕ್ಲೇಚರ್ಸ್ (1953). ಈತನ ಕವನ ಸಂಕಲನಕ್ಕೆ (1954) ಒಂದು ರಾಷ್ಟ್ರೀಯ ಪುಸ್ತಕ ಬಹುಮಾನ ಪ್ರಶಸ್ತಿ ಬಂದಿದೆ (1955). ಇವನ ಹಿಮ್ ಎಂಬುದು 21 ದೃಶ್ಯಗಳನ್ನೊಳಗೊಂಡ, ಕಾಲ್ಪನಿಕ ಆಕೃತಿಗಳ ದೃಶ್ಯಪರಂಪರೆ. ಸಿಕ್ಸ್ ನಾನ್ ಲೆಕ್ಚರ್ಸ್ (1953)–ಒಂದು ವಿಮರ್ಶಕ ಕೃತಿ.

CIOPW ಎಂಬುದು ಚಾರ್‌ಕೋಲ್, ಇಂಕ್, ಆಯಿಲ್, ಪೆನ್ಸಿಲ್ ಮತ್ತು ವಾಟರ್‌ಕಲರ್ ಎಂಬ ಇಂಗ್ಲಿಷ್ ಪದಗಳ ಮೊದಲ ಅಕ್ಷರಗಳಿಂದ ಆದುದು. ಈ ಗ್ರಂಥ ಕಮಿಂಗ್ಸ್‌ನ ರೇಖಾ ಹಾಗೂ ವರ್ಣಚಿತ್ರಗಳ ಸಂಕಲನವಾಗಿದೆ.

(ಎಂ.ಕೆ.ಎನ್.; ಕೆ.ಬಿ.ಪಿ.)

**ಕಮೆರ್ಲಿಂಗ್ ಓನ್ಸ್, ಹೈಕ್:** 1853–1926. ವಿಖ್ಯಾತ ಡಚ್ ಭೌತವಿಜ್ಞಾನಿ. ಹುಟ್ಟಿದ್ದು ಹಾಲೆಂಡಿನ ಗ್ರ್ಯೂನಿಂಗೆನ್ ನಗರದಲ್ಲಿ, ಸೆಪ್ಟೆಂಬರ್ 21, 1853 ರಂದು. ಅಲ್ಲೇ ಬೆಳೆದು ಭೌತಶಾಸ್ತ್ರ ಮತ್ತು ಗಣಿತಶಾಸ್ತ್ರಗಳನ್ನು ಓದಿದ. 1871 ರಂದು ಜರ್ಮನಿಯ ಹೈಡೆಲ್‌ಬರ್ಗ್ ನಗರಕ್ಕೆ ಹೋಗಿ ಬುನ್‌ಸೆನ್ ಮತ್ತು ಕಿರ್ಕಾಫರೊಂದಿಗೆ ಓದಿ ಮತ್ತೆ ಗ್ರ್ಯೂನಿಂಗೆನಿಗೆ ಹಿಂತಿರುಗಿ ಅಲ್ಲಿ 1879 ರಂದು ಡಾಕ್ಟರೇಟನ್ನು ಪಡೆದ. ಅನಂತರ ಹಾಲೇಡಿನ ಲೈಡನ್ ವಿಶ್ವವಿದ್ಯಾನಿಲಯದಲ್ಲಿ ಪ್ರಾಯೋಗಿಕ ಭೌತಶಾಸ್ತ್ರದ ಪ್ರಾಧ್ಯಾಪಕನಾಗಿ (1882–1923) ಸಾಯುವುದಕ್ಕೆ ಕೆಲವು ವರ್ಷ ಮುಂಚಿನ ವರೆಗೂ ಇದ್ದ. ಅಲ್ಲಿ 1894ರಂದು ಉಪಕರಣಗಳಿಂದ ಸಜ್ಜಿತವಾದ ಒಂದು ಪ್ರಯೋಗಶಾಲೆಯನ್ನು ಸ್ಥಾಪಿಸಿ ದ್ರವ ಮತ್ತು ಅನಿಲಗಳ ಮೇಲೆ ಒತ್ತಡದ ಮತ್ತು ಅಲ್ಪ ತಾಪದ ಪರಿಣಾಮಗಳನ್ನು ಕಂಡುಹಿಡಿಯಲು ಪ್ರಾರಂಭಿಸಿದ. ನೋಡಿ—(**ಅಲ್ಪ ತಾಪ ಮತ್ತು ಅತಿವಾಹಕತ್ವ**). ಇದರ ಫಲವಾಗಿ 1908ರಂದು ಹೀಲಿಯಂ ಅನಿಲವನ್ನು ದ್ರವೀಕರಿಸಿದ (**ನೋಡಿ—ಅನಿಲದ್ರವೀಕರಣ**) ಮತ್ತು 269° ಸೆಂ. ಅಥವಾ 1°K ತಾಪವನ್ನು ಉಂಟುಮಾಡಿದ. ಇಂಥ ಅಲ್ಪತಾಪದಲ್ಲಿ ಲೋಹಗಳ ಮೇಲೆ ಪ್ರಯೋಗಗಳನ್ನು ನಡೆಸಿ ಅತಿವಾಹಕತ್ವವನ್ನು ಕಂಡುಹಿಡಿದ. ಈ ರೀತಿ ಓನ್ಸ್ ನಡೆಸಿದ ಅತ್ಯುತ್ತಮ ಅಲ್ಪತಾಪ ಭೌತಶಾಸ್ತ್ರದ ಪ್ರಯೋಗಗಳಿಗಾಗಿ ಮತ್ತು ಹೀಲಿಯಂ ಅನಿಲವನ್ನು ದ್ರವೀಕರಿಸಿದ್ದಕ್ಕಾಗಿ ಅವನಿಗೆ 1913ರಂದು ಭೌತಶಾಸ್ತ್ರದ ನೊಬೆಲ್ ಪಾರಿತೋಷಕವನ್ನು ಕೊಡಲಾಯಿತು. ಓನ್ಸ್ ಭೌತಶಾಸ್ತ್ರದ ವಿಷಯಗಳ ಮೇಲೆ ಅನೇಕ ಪುಸ್ತಕಗಳನ್ನು ಬರೆದಿದ್ದಾನೆ. 1962ರ ಫೆಬ್ರವರಿ 21ನೆಯ ತಾರೀಖು ಲೈಡನ್ ನಗರದಲ್ಲಿ ಈತ ಅಸುನೀಗಿದ.

(ಎನ್.ಜಿ.ಪಿ.)

**ಕಮೆಲಿಯ :** ತಿಯೇಸೀ ಕುಟುಂಬಕ್ಕೆ ಸೇರಿದ ಹಲವಾರು ಪ್ರಭೇದಗಳನ್ನೊಳಗೊಂಡ ಸಸ್ಯಜಾತಿ. ಇದರಲ್ಲಿ ಸು. 45 ಪ್ರಭೇದಗಳಿವೆ. ಎಲ್ಲವೂ ನಿತ್ಯಹರಿದ್ವರ್ಣದ ಪೊದೆಗಳು ಮತ್ತು ಮರಗಳು. ಏಷ್ಯದ ಉಷ್ಣವಲಯಗಳಲ್ಲಿ ಇವು ಹೇರಳ. ಮುಖ್ಯವಾದ ಪ್ರಭೇದಗಳು ನಾಲ್ಕು—ಕ.ಜಪಾನಿಕ, ಕ.ಕಾಡೇಟ, ಕ.ಡ್ರೂಪಿಫೆರ ಮತ್ತು ಕ.ಸೈನೆನ್ಸಿಸ್.

ಕ. ಜಪಾನಿಕ ಉದ್ಯಾನ ಪ್ರಾಮುಖ್ಯ ಪಡೆದಿರುವ ಪೊದೆಸಸ್ಯ. ಕೆಲವೊಮ್ಮೆ ಮರದಂತೆ ಬೆಳೆಯುವುದೂ ಉಂಟು. ಸಾಮಾನ್ಯವಾಗಿ ಬೆಟ್ಟಗುಡ್ಡ ಪ್ರದೇಶಗಳಲ್ಲಿ ಚೆನ್ನಾಗಿ ಬೆಳೆಯುವ ಇದನ್ನು ಅಲಂಕಾರಕ್ಕಾಗಿ ಉದ್ಯಾನಗಳಲ್ಲಿ ಬೆಳೆಸುತ್ತಾರೆ. ಇದರಲ್ಲಿ ನುಣುಪಾದ, ಹೊಳೆಯುವ ಎಲೆಗಳಿವೆ. ಪರ್ಯಾಯವಾಗಿ ಜೋಡಣೆಗೊಂಡಿರುವ ಇವು ಅಂಡಾಕಾರವಾಗಿವೆ. ಇವುಗಳ ಅಂಚು ಗರಗಸದ ಹಲ್ಲಿನಂತೆ. ಹೂಗಳು ಒಂಟಿಪುಷ್ಪಗಳು; ಎಲೆಗಳ ಕಂಕುಳಲ್ಲೋ ರೆಂಬೆಗಳ ತುದಿಯಲ್ಲೋ ಅರಳುತ್ತವೆ. ಅವುಗಳ ಬಣ್ಣ ಬಿಳಿ, ಕೆಂಪು, ಗುಲಾಬಿ, ಪಾಟಲ—ಹೀಗೆ ವಿವಿಧ ಬಗೆಯದು. ಪುಷ್ಪಪತ್ರಗಳು, ದಳಗಳು ಐದೈದು ಇವೆ. ಕೇಸರಗಳು ಅನೇಕ. ಅಂಡಾಶಯ 3-5 ಕೋಣೆಗಳುಳ್ಳದ್ದು. ಫಲ ಒಡೆಯುವ ಸಂಪುಟ ಮಾದರಿಯದು.

ಕಮೆಲಿಯ ಜಪಾನಿಕ ದಲ್ಲಿ ಹಲವಾರು ತಳಿಗಳಿವೆ. ಇವುಗಳಲ್ಲಿ ಅಬಿ ವೈಲ್ಡರ್, ಲೂಸಿಡ, ಡೌನಿಂಗ್, ಪ್ರೆಸಿಡೆಂಟ್ ಕ್ಲಾರ್ಕ್ ಮುಂತಾದುವು ಮುಖ್ಯವಾದುವು. ಇದನ್ನು ಸಾಮಾನ್ಯವಾಗಿ ಬೀಜ ತುಂಡು ಹಾಗೂ ಲೇಯರುಗಳ ಮುಖಾಂತರ ವೃದ್ಧಿಮಾಡುತ್ತಾರೆ.

ಇನ್ನೆರಡು ಪ್ರಭೇದಗಳಾದ ಕ.ಡ್ರೂಪಿಫೆರ ಮತ್ತು ಕ.ಕಾಡೇಟಗಳನ್ನೂ ಕೆಲ ಮಟ್ಟಿಗೆ ಉದ್ಯಾನಗಳಲ್ಲಿ ಬೆಳೆಸುತ್ತಾರೆ. ಕ.ಸೈನೆನ್ಸಿಸ್ ಎಂಬುದೇ ಎಲ್ಲರಿಗೂ ಪರಿಚಿತವಿರುವ ಟೀ ಗಿಡ.

(ಎ.ಕೆ.ಕೆ.)

**ಕಮೋಡೋ :** ಒಂದು ಜಾತಿಯ ಸರೀಸೃಪ. ಉಡದ ಜಾತಿಗೆ ಹತ್ತಿರದ ಸಂಬಂಧಿ. ಜೀವಂತವಾಗಿರುವ ಹಲ್ಲಿಗಳಲ್ಲಿ ಅತಿ ದೊಡ್ಡದೆನಿಸಿದ ಇದು 12′ ಉದ್ದ ಬೆಳೆಯುತ್ತದೆ ಹಾಗೂ 300 ಪೌಂಡು ತೂಗುತ್ತದೆ. ಬಣ್ಣ ಕಪ್ಪು. ಚರ್ಮ ಮೂಳೆಯಷ್ಟು ಗಟ್ಟಿಯಾಗಿದೆ. ಹವಾಗುಣವನ್ನು ಪರೀಕ್ಷಿಸಲು ತನ್ನ ಹಳದಿ ಬಣ್ಣದ ನಾಲ್ಕು ಕವಲುಗಳಾಗಿ ಸೀಳಿದ ನಾಲಗೆಯನ್ನು ಆಗಾಗ ಹೊರಚಾಚುತ್ತದೆ. ಹೀಗೆ ನಾಲಗೆಯನ್ನು ಹೊರಕ್ಕೂ ಒಳಕ್ಕೂ ಆಡಿಸುವಾಗ ಅದು ದೀಪದ ಜ್ವಾಲೆಯ ಹಾಗೆ ಕಾಣಿಸುತ್ತದೆ. ಇದು ಮಾಂಸಾಹಾರಿ. ಸತ್ತ ಪ್ರಾಣಿಗಳ ಮಾಂಸವನ್ನು ತಿನ್ನುವುದಲ್ಲದೆ ಬದುಕಿರುವ ಕೀಟಗಳನ್ನೂ ಕಶೇರುಕಗಳನ್ನೂ ತಿನ್ನುತ್ತದೆ. ಸಾಮಾನ್ಯವಾಗಿ ನೆಲದ ಮೇಲೆಯೇ ವಾಸ. ಕೆಲವು ವೇಳೆ ನೀರಿನಲ್ಲಿ ಈಜುವುದೂ ಉಂಟು. ರಾತ್ರಿಯನ್ನು ಬಿಲಗಳಲ್ಲಿ ಕಳೆಯುತ್ತದೆ. ಕೆಲವು ಸಾರಿ ಬಿಲದಲ್ಲೇ ಹಲವಾರು ದಿನಗಳನ್ನು ಕಳೆಯುವುದೂ ಉಂಟು. ಈ ಪ್ರಾಣಿಯ ವಿಚಾರ ಬಹಳ ದಿನಗಳ ವರೆಗೂ ತಿಳಿದಿರಲಿಲ್ಲ. ಕೇವಲ 50 ವರ್ಷಗಳಿಂದೀಚೆಗೆ ಇದರ ಇರುವಿಕೆ ಗೊತ್ತಾಗಿದೆ. ಇವುಗಳ ಸಂತತಿ ಪ್ಲೀಸ್ಟೊಸೀನ್ ಕಾಲದ ಆದಿಯಿಂದ ಬೆಳೆದು ಬಂದಿದೆ ಎಂದು ತಜ್ಞರು ಹೇಳುತ್ತಾರೆ. ಇದು ಸೆಲೆಬಸ್ ದ್ವೀಪದ ದಕ್ಷಿಣಕ್ಕಿರುವ ಸುಂದ ದ್ವೀಪಗಳಲ್ಲಿ ಕಂಡುಬರುತ್ತದೆ.

([illegible])

**ಕಮೋಯೆನ್ಜ್, ಲೂಯಿಷ್ ಡ :** 1524–1580. ಲೂಸಿಯಡ್ಸ್ ಎಂಬ ಭವ್ಯಕಾವ್ಯದ ಕರ್ತೃ. ಈ ಕೃತಿ ಪೋರ್ಚುಗಲ್ಲಿನ ರಾಷ್ಟ್ರೀಯ ಕಾವ್ಯ ವೆನಿಸಿದೆ. ಪ್ರಾಸಂಗಿಕವಾಗಿ ಪೋರ್ಚುಗೀಸ್ ಚರಿತ್ರೆಯ ಅನೇಕ ಪ್ರಸಂಗಗಳು ಬರುತ್ತವೆಯಾದರೂ ಈ ಕಾವ್ಯದ ಪ್ರಧಾನ ವಸ್ತು ವಾಸ್ಕೊ ಡ ಗಾಮನ ಸಮುದ್ರ ಯಾನ ಸಾಹಸ. ತನ್ನ ದೇಶದ ಔನ್ನತ್ಯವನ್ನೂ ಲ್ಯಾಟಿನ್ ಸಂಸ್ಕೃತಿಯನ್ನೂ ಹರಡುವಲ್ಲಿ ಪೋರ್ಚುಗೀಸರು ವಹಿಸಿದ ಪಾತ್ರದ ಪ್ರಾಮುಖ್ಯವನ್ನು ಕವಿ ಇಲ್ಲಿ ಶ್ಲಾಘಿಸಿದ್ದಾನೆ. ಲ್ಯಾಟಿನ್ ಭಾಷೆಯ ಪ್ರಾಚೀನ ಭವ್ಯ ಕಾವ್ಯಗಳಿಂದ ಕವಿ ಸ್ಫೂರ್ತಿಪಡೆದಂತಿದೆ. ವರ್ಜಿಲನಂತೆ ಈತನೂ ದೇವತಾಪ್ರಾರ್ಥನೆ, ದೇವತೆಗಳು, ದೈವಸಂಕಲ್ಪ, ವಿಸ್ತಾರವಾದ ಸಂವಾದಗಳು, ಆಲಂಕಾರಿಕ ಶೈಲಿ ಮುಂತಾದುವನ್ನು ತಂದು ತನ್ನ ವಸ್ತುವನ್ನು ಬೆಳೆಸಿದ್ದಾನೆ. (ಎಂ.ಕೆ.ಕೆ.;ಆರ್.ಜಿ.ಕೆ.)

**ಕಮ್ಮಾರಿಕೆ :** ಕಬ್ಬಿಣ ಲೋಹವನ್ನು ಉಪಕರಣಗಳನ್ನಾಗಿ ಮಾಡಿ, ಅವುಗಳ ಉಪಯೋಗ ಮಾನವನಿಗೆ ದೊರಕುವಂತೆ ಮಾಡಲೆತ್ನಿಸಿದ ಕಲೆಯೇ ಕಮ್ಮಾರಿಕೆ (ಸ್ಮಿತರಿ). ಬರಿಯ ಲೋಹ ವ್ಯರ್ಥ. ಕಮ್ಮಾರಿಕೆ ಅಸ್ತಿತ್ವಕ್ಕೆ ಬಂದ ಅನಂತರ ವ್ಯವಸಾಯಕ್ಕೆ, ಯುದ್ಧಕ್ಕೆ, ವಾಹನಗಳಿಗೆ, ಮತ್ತಿತರ ಮಾನವೋಪಯೋಗಿ ಕಾರ್ಯಗಳಿಗೆ ಅದರ ಬಳಕೆ ಪ್ರಾರಂಭವಾಯಿತು. ಮೊದಮೊದಲು ಕಬ್ಬಿಣದ ಲೋಹ ಹೇಗೆ ದೊರಕಿತೋ ಅದೇ ರೂಪದಲ್ಲಿ ಮಾನವ ಅದನ್ನು ಕುಟ್ಟಿ, ಬಡಿದು ಸಾಧ್ಯವಾದಷ್ಟು ಹರಿತ ಮಾಡಿಕೊಂಡಿದ್ದಾನೆ. ಅನಂತರ ಕಾಯಿಸಿದ ಕಬ್ಬಿಣವನ್ನು ಯಾವ ರೂಪಕ್ಕಾದರೂ ತಿದ್ದಬಹುದೆಂಬ ಅಂಶ ಅರಿವಿಗೆ ಬಂದಾಗ ಹೊಸ ದಿಗಂತವೇ ಕಾಣಿಸಿತೆಂದು ಹೇಳಬಹುದು.

ಕಮ್ಮಾರ ಕಬ್ಬಿಣವನ್ನು ತಯಾರಿಸುವುದಿಲ್ಲ. ಸಿದ್ಧವಾದ ಲೋಹವನ್ನು ಉಪಕರಣಗಳನ್ನಾಗಿ ಪರಿವರ್ತಿಸುವುದೇ ಅವನ ಪ್ರಧಾನ ಉದ್ದೇಶ. ಕರ್ಮಕಾರ ಅರ್ಥಾತ್ ಕಮ್ಮಾರ ಲೋಹವನ್ನು ಕಾಯಿಸಿ, ತನ್ಮೂಲಕ ಅದಕ್ಕೆ ಆವಶ್ಯಕ ರೂಪಗಳನ್ನು ಕೊಡುತ್ತಾನೆ. ಈ ಕಾರ್ಯ ಮಾನವಶಕ್ತಿಯಿಂದ ಮತ್ತು ಯಂತ್ರಶಕ್ತಿಯಿಂದ ಸಾಧ್ಯ. ಯಂತ್ರಗಳು ಬರುವ ಮೊದಲು ಮನುಷ್ಯನೇ ಎಲ್ಲ ಕಾರ್ಯಗಳನ್ನೂ ಮಾಡಬೇಕಾಗಿತ್ತು. ಅದಕ್ಕೆ ಬೇಕಾದ ಗಾಳಿಯನ್ನು ನೀಡುವ ತಿದಿ ಮತ್ತು ಇದ್ದಲು ಇವೆರಡನ್ನು ಬಳಸಿ ಆತ ಕಬ್ಬಿಣವನ್ನು ಕಾಯಿಸುತ್ತಾನೆ. ಚರ್ಮದಿಂದ ಮಾಡಿದ ಕೋಶವೇ ತಿದಿ. ಅದರ ಒಂದು ತುದಿ ಪೂರ್ಣ ಮುಚ್ಚಿದ್ದು ಮತ್ತೊಂದು ಕಡೆ ಗಾಳಿ ಹೊರಬರಲು ಕೊಳವೆಯಿರುತ್ತದೆ. ಎರಡು ಗಟ್ಟಿಯಾದ ಮರದ ಹಲಗೆಯಿಂದ ಮಾಡಿದ ಅದರ ರಕ್ಷೆಯ ಮಧ್ಯದಲ್ಲಿ ಚರ್ಮದ ಚೀಲವುಂಟು. ಮೇಲ್ಭಾಗದ ಹಲಗೆಯಲ್ಲಿ ರಂಧ್ರವಿದ್ದು ಅದರ ಮೂಲಕ ಒಳನುಗ್ಗಿದ ಗಾಳಿಯನ್ನು ಒತ್ತುವುದರ ಮೂಲಕ ಅದು ಕೊಳವೆಯ ಮುಖಾಂತರ ಇದ್ದಲಿನ ಗುಣಿಯನ್ನು ಪ್ರವೇಶಿಸುವಂತೆ ಮಾಡಲಾಗುತ್ತದೆ. ಕೆಂಡ ಪ್ರಜ್ವಲಿಸಿ ಹೆಚ್ಚು ಶಾಖ ಒದಗಿಬರುತ್ತದೆ. ಕೆಂಡದ ಮಧ್ಯೆ ಇದ್ದ ಲೋಹ ಅಥವಾ ಮೊಂಡಾದ ಉಪಕರಣ ಕೆಂಪು ಬಣ್ಣಕ್ಕೆ ತಿರುಗಿದಾಗ ಅದನ್ನು ಇಕ್ಕುಳದಿಂದ ಹಿಡಿದು ಎತ್ತಿ ಅಡಿಗಲ್ಲಿನ ಮೇಲಿಟ್ಟು ಗೂಡ ಅಥವಾ ಸುತ್ತಿಗೆಯಿಂದ ಬಡಿಯುತ್ತಾರೆ. ಒಬ್ಬರು ಅಥವಾ ಇಬ್ಬರು ಬಡಿಯುತ್ತಿದ್ದಂತೆ ಉಪಕರಣವಾಗಲಿರುವ ಲೋಹವನ್ನು ಹೊರಳಿಸಿ ಬೇರೆ ಬೇರೆ ಕೋನಗಳಲ್ಲಿ ಇಡುತ್ತ ಬರುತ್ತಾರೆ. ಕೆಲಸ ಮುಗಿಯುವ ಮೊದಲೇ ಅದು ಬಿಸಿಯನ್ನು ಕಳೆದುಕೊಂಡು ತಣ್ಣಗಾದರೆ ಮತ್ತೆ ಅಗ್ನಿಪ್ಪಿಕೆಯಲ್ಲಿಟ್ಟು ಕಾಯಿಸಿ ಪುನಃ ಬಡಿಯುತ್ತಾರೆ. ಹಾಗೆ ಬಡಿದ ಅನಂತರ ಉದ್ದೇಶಿತ ಆಕಾರ ಬಂದ ಮೇಲೆ ಅದನ್ನು ಆರಲು ಬಿಡುತ್ತಾರೆ. ಹಿಡಿ ಹಾಕಬೇಕಾದರೆ ಅದರ ಒಂದು ಭಾಗ ಕೆಂಪಾಗಿದ್ದಾಗಲೇ ಮರದ ಹಿಡಿಗೆ ಅದನ್ನು ಪೋಣಿಸುತ್ತಾರೆ. ಗಾಡಿಯ ಗಾಲಿಗೆ ಕಬ್ಬಿಣದ ಪಟ್ಟಿಯನ್ನು ಕಟ್ಟುವಾಗಲೂ ಹೀಗೆ ಮಾಡುವುದನ್ನು ನೋಡಿರಬಹುದು.

ಕಮ್ಮಾರಿಕೆಯ ಪ್ರಯೋಜನ ಹಿಂದಿನಿಂದಲೂ ತಿಳಿದ ವಿಷಯವೇ ಆಗಿದೆ. ಮುಖ್ಯವಾಗಿ ವ್ಯವಸಾಯ ಮತ್ತು ಯುದ್ಧಗಳಿಗೆ ಬೇಕಾದ ಉಪಕರಣ, ಆಯುಧಗಳನ್ನು ತಯಾರಿಸುವುದು ಅಂದಿನಿಂದಲೂ ನಡೆದುಬಂದ ವಾಡಿಕೆ. ವ್ಯವಸಾಯಕ್ಕೆ ಬೇಕಾದ ಕುಡುಗೋಲು, ಕಳೆಕುಡುಗೋಲು, ಗುಳ, ಜಿಗಣಿ, ಕೊಡಲಿ, ಕೈಬಾಚಿ ಮುಂತಾದ ಉಪಕರಣಗಳ ಜೊತೆಗೆ ಆಗಾಗ್ಗೆ ತಟ್ಟಬೇಕಾಗಿ ಬರುವ ನೇಗಿಲಿನ ಗುಳ, ಕಬ್ಬಿಣ ನೇಗಿಲಿನ ಹಲ್ಲೆ, ಹಾರೆಯ ತುದಿ, ಪಿಕಾಸಿಯ ಮೊನೆ ಇತ್ಯಾದಿಗಳೂ ಸದಾ ಕಮ್ಮಾರನ ಬಳಿ ಬಿದ್ದಿರುತ್ತವೆ. ಇವೆಲ್ಲಕ್ಕೂ ಮಕುಟಪ್ರಾಯವಾಗಿ ಎತ್ತಿನ ಗಾಡಿಯೊಂದು ಚಕ್ರಗಳನ್ನು ಕಳಚಿಕೊಂಡು ಅವನ ದಯೆಯನ್ನು ಹಾರೈಸಿ ಮಲಗಿರುತ್ತದೆ. ಚಕ್ರಗಳಿಗೆ ಹಾಕುವ ಕಬ್ಬಿಣದ ಪಟ್ಟಿ ಸಡಿಲವಾದಾಗ, ಅದನ್ನು ತೆಗೆದು ಕಾಯಿಸಿ ಕಟ್ಟಿ ಮರದ ಚಕ್ರಕ್ಕೆ ಕೂಡಿಸಿ ನೀರು ಹೊಯ್ಯುತ್ತಾರೆ. ಆಗ ಸಂಕೋಚಗೊಂಡ ಕಬ್ಬಿಣದ ಪಟ್ಟಿ ಬಿಗಿಯಾಗಿ ಹಿಡಿದುಕೊಳ್ಳುತ್ತದೆ. ಮುರಿದ ಕಬ್ಬಿಣದ ಗುಳಗಳನ್ನು ಸೇರಿಸುವುದೂ ಉಂಟು. ಎರಡನ್ನೂ ಚೆನ್ನಾಗಿ ಕಾಯಿಸಿ ಸೇರಿಸಿ ಬಡಿಯುವುದೇ ಅದರ ಕೆಲಸ. ಇವೇ ಮೊದಲಾದ ಕೆಲಸಗಳು ಅನಿವಾರ್ಯವಾದುದರಿಂದ ಪ್ರತಿಯೊಂದು ಗ್ರಾಮದಲ್ಲಿಯೂ ಕಡೆಯ ಪಕ್ಷ ಒಬ್ಬನಾದರೂ ಕಮ್ಮಾರ ಇರುವುದು ರೂಢಿ. ಆದರೆ ಇತ್ತೀಚೆಗೆ ಕೆಲವು ಗ್ರಾಮಗಳಲ್ಲಿ ಕಮ್ಮಾರ ಕಣ್ಮರೆಯಾಗುತ್ತಿದ್ದಾನೆ. ಇದಕ್ಕೆ ಕಾರಣ ಕಮ್ಮಾರಿಕೆಯಿಂದ ಜೀವನೋಪಾಯ ಅವನಿಗೆ ಸುಗಮವಾಗಿ ಸಾಗದು.

ಆಧುನಿಕ ಜಗತ್ತಿನಲ್ಲಿ ಯಾಂತ್ರಿಕ ಪ್ರಗತಿಯಾದಂತೆಲ್ಲ ಕಮ್ಮಾರನ ಕಸಬಿಗೆ ಧಕ್ಕೆಯುಂಟಾಗಿರುವುದು ಸಹಜ. ಕಮ್ಮಾರಿಕೆ ಇದ್ದೇ ಇರುತ್ತದಾದರೂ ಕಮ್ಮಾರನ ಆದಾಯ ಮಾತ್ರ ಕಡಿಮೆಯಾಗುತ್ತಿದೆ. ಕಬ್ಬಿಣವನ್ನು ಕಾಯಿಸಲು ಯಾಂತ್ರಿಕ ಸೌಲಭ್ಯಗಳು ಒದಗಿ ತಿದಿಯೊತ್ತುವ ಕಾರ್ಯ ಮೂಲೆ ಸೇರುತ್ತಿದೆ. ವಿದ್ಯುಚ್ಚಾಲಿತ ಯಂತ್ರ ಎಷ್ಟು ಗಾಳಿ ಬೇಕೋ ಅಷ್ಟನ್ನು ಯಾವ ಒತ್ತಡದಲ್ಲಿರಬೇಕೋ ಅಷ್ಟರಲ್ಲಿ ಸರಬರಾಯಿ ಮಾಡುತ್ತದೆ. ಇದ್ದಲಿಗೆ ಬದಲು ಕೋಕ್, ಕಲ್ಲಿದ್ದಲು ಮೊದಲಾದ ಇಂಧನಗಳು ಬಳಕೆಗೆ ಬಂದಿವೆ. ಮಾನವ ಶಕ್ತಿಯಿಂದ ಬಡಿದು ಸಿದ್ಧಪಡಿಸುವ ಕೆಲಸವನ್ನು ಯಂತ್ರಗಳೇ ಮಾಡತೊಡಗಿವೆ. ದೊಡ್ಡ ದೊಡ್ಡ ಕೊಂತಗಳಿಗೆ ಸೇರಿಸಿದ ಲೋಹಗಟ್ಟಿಗಳು ಮೇಲೆ ಕೆಳಗೆ ಚಲಿಸುತ್ತ ಇದ್ದು ಬೇಕೆಂದಾಗ ಕುಟ್ಟುತ್ತವೆ. ಒಬ್ಬ ಕೆಲಸಗಾರಮಾತ್ರ ಕುಳಿತು, ನಿಂತು ಪದಾರ್ಥವನ್ನು ಹೇಗೆ ರೂಪಿಸಬೇಕೋ ಹಾಗೆ ನೋಡಿಕೊಂಡರಾಯಿತು. ಕಾಯಿಸಿದ ವಸ್ತುವನ್ನು ಕೆಳಭಾಗದ ಅಚ್ಚಿನ ಮನೆಯೊಳಗಿಟ್ಟು ಮೇಲಿನಿಂದ ತೂಕದ ಗಟ್ಟಿಯನ್ನು ಎತ್ತರದಿಂದ ಬಿಡುವುದು ಒಂದು ವಿಧವಾದರೆ, ಎರಡೂ ಭಾಗಗಳನ್ನು ಒಂದರ ಮೇಲೊಂದನ್ನಿಟ್ಟು ಬಲವಾಗಿ ಒತ್ತುವುದು ಇನ್ನೊಂದು ವಿಧ. ನೂರು ಜನರು ಮಾಡುವ ಕೆಲಸವನ್ನು ಒಂದೇ ಮಾಡಬಹುದಾದಾಗ ಅಷ್ಟು ಜನರಿಗೂ ನಿರುದ್ಯೋಗ ಕಟ್ಟಿಟ್ಟದ್ದೆ. ಆದ್ದರಿಂದಲೇ ಯಂತ್ರಗಳು ಆಧುನಿಕ ಜಗತ್ತಿನ ಒಂದು ಶಾಪವೆನ್ನುವವರೂ ಉಂಟು. ಕಬ್ಬಿಣದ ತಯಾರಿಕೆ ಕ್ರಿ.ಶ. 17ನೆಯ ಶತಮಾನದಲ್ಲಿ ಕುಲುಮೆಗಳ ಮೂಲಕ ಪ್ರಾರಂಭವಾದಂದಿನಿಂದಲೂ ಯಾಂತ್ರಿಕ ಆಚರಣೆ ಬಳಕೆಗೆ ಬರತೊಡಗಿತು ಎನ್ನಬಹುದು. ವ್ಯವಸಾಯಕ್ಕೆ ಬೇಕಾದಂತೆಯೇ ಯುದ್ಧಕ್ಕೂ ಸಲಕರಣೆಗಳು ಬೇಕಾಗಿದ್ದುವು. ಕತ್ತಿ, ಕಠಾರಿ, ಶೂಲ, ಈಟಿ, ಸಬಳ, ಕೊಂತ, ಭಿಂಡಿವಾಳ, ಮುದ್ಗರ, ಲಾಳವಿಂಡಿ, ಗುರಾಣಿ ಮೊದಲಾದ ಆಯುಧಗಳೂ ಕುದುರೆಯ ಕಡಿವಾಣವೇ ಮೊದಲಾದ ಉಪಕರಣಗಳೂ ಅನಿವಾರ್ಯವಾಗಿದ್ದುವು. ಆಗ ಕಮ್ಮಾರನ ಕಾರ್ಯ ಹಗಲಿರುಳೂ ನಡೆಯಬೇಕಾಗಿತ್ತು. ವರ್ಷವಿಡೀ ಬಿಡುವಿಲ್ಲದ ದುಡಿಮೆ ಅವರದಾಗಿತ್ತು. ಅದಕ್ಕೆ ರಾಜಪ್ರೋತ್ಸಾಹ ಇದ್ದೇ ಇತ್ತು. ಕ್ರಮೇಣ ಯುದ್ಧದ ಸ್ವಭಾವವೇ ಬದಲಾಗತೊಡಗಿತು. ಕತ್ತಿ ಹಿಡಿದು ಹೋರಾಡುವುದು ತಪ್ಪಿ ಬಂದೂಕುಗಳು ಬಂದುವು. ಅನಂತರ ಬಾಂಬುಗಳು ಬಂದುವು. ಹೀಗಾಗಿ ಆಯುಧಗಳ ತಯಾರಿಕೆ ಬೇರೊಂದು ದಿಕ್ಕನ್ನು ಹಿಡಿದು ಸಹಜವಾಗಿ ಕಮ್ಮಾರನಿಗೆ ಪೆಟ್ಟು ಬಿತ್ತು. ಬದಲಾಗುವ ಜಗತ್ತಿನೊಡನೆ ಪ್ರತಿಕ್ಷೇತ್ರವೂ ಬದಲಾಗಲೇ ಬೇಕಾಯಿತು. ಇದರಿಂದಾಗಿ ವಂಶಪಾರಂಪರ್ಯವಾಗಿ ಬರುತ್ತಿದ್ದ ಕಮ್ಮಾರಿಕೆ ಹರಿಗಡಿಯುವಂತಾಗಿದೆ. ಕಮ್ಮಾರನ ಮಗ ಅದೇ ಕಸುಬನ್ನು ಹಿಡಿಯದೆ ಬೇರೆ ಜೀವನೋಪಾಯ ಮಾರ್ಗವನ್ನು ಹುಡುಕಬೇಕಾಗಿದೆ. ಅಂದರೆ ಕಮ್ಮಾರಿಕೆ ಎನ್ನುವ ಗ್ರಾಮಕಲೆ ಮಾಯವಾಗುತ್ತಿದೆ. ಇದೇ ತತ್ತ್ವ ಎಲ್ಲ ಕಸುಬಿನವರಿಗೂ ಅನ್ವಯಿಸುತ್ತದೆ. ಯಂತ್ರ ಪ್ರವೇಶವಾದ ಕಡೆಯೆಲ್ಲ ಗ್ರಾಮಕಲೆಯ ಸ್ವರೂಪ ಕಣ್ಮರೆಯಾಗುವುದು ಸಹಜವೇ. ಆದರೆ ಎಲ್ಲ ಸಣ್ಣಪುಟ್ಟ ಉಪಕರಣಗಳಿಗೂ ಯಂತ್ರವನ್ನೇ ಆಶ್ರಯಿಸುವುದು ಕಷ್ಟವಾಗುವುದರಿಂದ ಸಣ್ಣ ಪ್ರಮಾಣದಲ್ಲಿಯಾದರೂ ಕಮ್ಮಾರಿಕೆ ಉಳಿದುಬರುವುದರಲ್ಲಿ ಸಂಶಯವಿಲ್ಲ. (ಎಂ.ಆರ್.ಕೆ.)

**ಕಮ್ಯೂನ್ :** ಮಧ್ಯಯುಗದ ಪಶ್ಚಿಮ ಯೂರೋಪಿನ ಪಟ್ಟಣಗಳ ಸಾಮಾನ್ಯ ನಾಮ. 1793 ಮತ್ತು 1794ರಲ್ಲೂ 1871ರಲ್ಲೂ ಸ್ಥಾಪಿತವಾಗಿದ್ದ ಪ್ಯಾರಿಸಿನ ಕ್ರಾಂತಿಯುತ ನಗರಸರ್ಕಾರಗಳ ವಿಶಿಷ್ಟ ನಾಮ.

ರೋಮನ್ ಸಾಮ್ರಾಜ್ಯದ ಪತನದ ಪರಿಣಾಮವಾಗಿ ವಾಣಿಜ್ಯ ಸಂಪೂರ್ಣವಾಗಿ ಸ್ಥಗಿತವಾದಾಗ ನಗರಜೀವನ ಬಹಳಮಟ್ಟಿಗೆ ಕ್ಷೀಣಿಸಿತ್ತು. ಪ್ಯಾರಿಸ್, ಲಿಯಾನ್, ಕೊಲೋನ್ ಮುಂತಾದ ಕೆಲವು ಪ್ರಸಿದ್ಧ ಪಟ್ಟಣಗಳು ಅತಂತ್ರವಾಗಿ ಉಳಿದುಕೊಂಡಿದ್ದುವು. ಹನ್ನೊಂದನೆಯ ಶತಮಾನದಲ್ಲಿ ವ್ಯಾಪಾರದ ಪುನರುಜ್ಜೀವನವಾದಾಗ ಅದರಿಂದಾಗಿ ವರ್ತಕವರ್ಗಗಳ ಉದಯಕ್ಕೆ ಪ್ರೋತ್ಸಾಹ ಸಿಕ್ಕಿದಂತಾಯಿತು. ಗ್ರಾಮಪ್ರಧಾನವಾದ ಊಳಿಗಮಾನ್ಯ ಜಗತ್ತಿನೊಳಕ್ಕೆ ವರ್ತಕರ ಪ್ರವೇಶವನ್ನು ಶ್ರೀಮಂತರು ಸಹಿಸಲಿಲ್ಲ. ಮುಂದಿನ ಎರಡು ಶತಮಾನಗಳ ಕಾಲ ನಗರಗಳು ರಾಜಾಧಿಕಾರ, ಊಳಿಗಮಾನ್ಯಾಧಿಕಾರ ಮತ್ತು ಮತೀಯ ಅಧಿಕಾರಗಳೊಂದಿಗೆ ಪದೇ ಪದೇ ಘರ್ಷಣೆಯಲ್ಲಿ ನಿರತವಾಗಿದ್ದುವು. ಹೊರಗಿನ ಕೋಟಲೆಗಳಿಲ್ಲದೆ ತನ್ನನ್ನು ತಾನೇ ಆಳಿಕೊಳ್ಳಲು ಫ್ರೆಂಚ್ ಪಟ್ಟಣವೊಂದಕ್ಕೆ ಆ ಸ್ಥಳದ ಕೌಂಟ್ ಅಥವಾ ಬಿಷಪ್ ಸನ್ನದು ನೀಡಿದಾಗ ಆ ಪಟ್ಟಣ ಕಮ್ಯೂನ್ ಎಂದು ಕರೆದುಕೊಳ್ಳಲು ಅರ್ಹತೆಗಳಿಸುತ್ತಿತ್ತು. ಪಶ್ಚಿಮ ಐರೋಪ್ಯ ಪೌರಸಭಾ ಚಳವಳಿಗೇ ಕಮ್ಯೂನ್ ಎಂಬ

ಪದವನ್ನು ಈಗ ಬಲು ಸಡಿಲವಾಗಿ ಬಳಸಲಾಗುತ್ತಿದೆ. ಕೊನೆಗೆ ಫ್ರಾನ್ಸಿನ ಕಮ್ಯೂನುಗಳೂ ಸನ್ನದು ಪಡೆದ ಇತರ ಪಟ್ಟಣಗಳೂ ದೊರೆಯ ಅಧಿಕಾರದೊಳಕ್ಕೆ ಬಂದಾಗ ಅವು ತಮ್ಮ ವಿಶಿಷ್ಟ ಹಕ್ಕುಗಳಲ್ಲಿ ಹಲವನ್ನು ಕಳೆದುಕೊಂಡುವು.

1791ರ ಫ್ರೆಂಚ್ ಸಂವಿಧಾನದಲ್ಲಿ ಕಮ್ಯೂನ್ ಎಂಬ ಶಬ್ದವನ್ನು ಮತ್ತೆ ಬಳಸಲಾಯಿತು. ತಮ್ಮ ಮೇಯರುಗಳನ್ನೂ ಇತರ ಅಧಿಕಾರಿಗಳನ್ನೂ ಚುನಾಯಿಸಿಕೊಳ್ಳುವ ಅಧಿಕಾರವಿರುವ ನಲವತ್ತು ಸಾವಿರ ಪೌರವ್ಯಕ್ತಿಗಳ ಘಟಕಗಳನ್ನು ಈ ಹೆಸರಿನಿಂದ ಕರೆಯಲಾಯಿತು. ಇಂಥ ಕ್ರಾಂತಿಕಾರಿ ಕಮ್ಯೂನುಗಳ ಪೈಕಿ ಪ್ಯಾರಿಸಿನ ಕಮ್ಯೂನ್ ಅತ್ಯಂತ ಪ್ರಸಿದ್ಧವಾದದ್ದು. ಕಾರ್ಮಿಕ ವರ್ಗಕ್ಕೂ ಇದಕ್ಕೂ ಇದ್ದ ನಿಕಟಸಂಬಂಧ, ರಾಷ್ಟ್ರೀಯ ಸರ್ಕಾರದೊಂದಿಗೆ ಇದಕ್ಕಿದ್ದ ಸಾಮೀಪ್ಯ, ಫ್ರೆಂಚ್ ನಾಗರಿಕತೆಯಲ್ಲಿ ಈ ನಗರಕ್ಕಿದ್ದ ವಿಶಿಷ್ಟ ಸ್ಥಾನ—ಈ ಕಾರಣಗಳಿಂದಾಗಿ ಇದಕ್ಕೆ ಈ ಪ್ರಸಿದ್ಧಿ ಬಂತು. 1789ರ ಚುನಾವಣೆಗಳಿಗಾಗಿ ಪ್ಯಾರಿಸನ್ನು 60 ಉಪವಿಭಾಗಗಳಾಗಿ ಮಾಡಲಾಗಿತ್ತು. ಆದರೆ 1790ರ ಪೌರಸಭಾ ಕಾನೂನಿನ ಪ್ರಕಾರ ಇವುಗಳ ಸಂಖ್ಯೆ 48ಕ್ಕೆ ಇಳಿಯಿತು. ಪ್ರತಿಯೊಂದು ಉಪವಿಭಾಗದಲ್ಲೂ ಹದಿನೇಳು ಸಾವಿರದಿಂದ ಹದಿನೆಂಟು ಸಾವಿರದವರೆಗೆ ಪ್ರಜೆಗಳಿರುತ್ತಿದ್ದರು. ಪ್ಯಾರಿಸಿನ ಕಮ್ಯೂನಿನ ಆಡಳಿತ ನಡೆಸಲು ಆಯ್ಕೆಯಾಗುತ್ತಿದ್ದ ಮಂಡಲಿಯ ಸದಸ್ಯರ ಸಂಖ್ಯೆ 148. ಹದಿನಾಲ್ಕು ವಿಭಾಗಗಳಲ್ಲಿ ಕಾರ್ಮಿಕರು ಒತ್ತಾಗಿ ವಾಸಿಸುತ್ತಿದ್ದರು. 1793 ಮತ್ತು 1794ರ ಕ್ರಾಂತಿಯ ಮೇಲೆ ಈ ಜನರ ಪ್ರಭಾವ ಅಗಾಧ. 1793ರ ಆಗಸ್ಟಿನಲ್ಲಂತೂ ಪರಿಸ್ಥಿತಿ ಬಹಳ ಬಿಕ್ಕಟ್ಟಿನದಾಗಿತ್ತು. ಸೈನಿಕ ಹಿನ್ನಡೆಗಳಿಂದಾಗಿ ರಾಷ್ಟ್ರದ ಜನ ಎಚ್ಚೆತ್ತಿದ್ದರು. ಕಮ್ಯೂನಿನ ಕಾನೂನುಬದ್ಧ ಸರ್ಕಾರದ ಸ್ಥಾನದಲ್ಲಿ ತಮಗೆ ಅನುಕೂಲವಾದ ಸರ್ಕಾರವನ್ನೇ ಸ್ಥಾಪಿಸಬೇಕೆಂದು ಕೂಡ ಕೆಲವರು ಯೋಚಿಸಿದ್ದರು. ರಾಜತ್ವವನ್ನು ಕಿತ್ತೊಗೆಯುವ ಹಂಚಿಕೆಯೂ ಸಾಗಿತ್ತು. ಆಗಸ್ಟ್ 9, 10ರ ವೇಳೆಗೆ ಇವೆರಡೂ ಸಾಧಿಸಿದುವು. ರಾಜಗದ್ದುಗೆಯನ್ನುರುಳಿಸಿ ಅದರ ಮೇಲೆ ಸ್ಥಾಪಿಸಲಾಗಿದ್ದ ಪ್ರಥಮ ಫ್ರೆಂಚ್ ಗಣರಾಜ್ಯ ಸರ್ಕಾರ ಅನಂತರ ಒಂದು ವರ್ಷಕಾಲ ಪ್ಯಾರಿಸ್ ಕಮ್ಯೂನಿನ ಬಂಡಾಯಗಾರ ಸರ್ಕಾರದ ಒತ್ತಡಕ್ಕೆ ಮಣಿಯಬೇಕಾಗಿತ್ತು. ಆರ್ಥಿಕ ಬಿಕ್ಕಟ್ಟಿನ ಫಲವಾಗಿ ಅಶಾಂತಿಯಿಂದ ಕೂಡಿದ್ದ ಕಾರ್ಮಿಕರ ಆಂದೋಲನದಿಂದಾಗಿ ರಾಷ್ಟ್ರೀಯ ಸರ್ಕಾರ ಕೈಗೊಂಡ ಹಲವಾರು ಆರ್ಥಿಕ ಸಾಮಾಜಿಕ ಕ್ರಮಗಳು ಬಲು ತೀವ್ರವಾಗಿದ್ದುವು. 1794ರ ಬೇಸಗೆಯಲ್ಲಿ ಈ ಸರ್ಕಾರ ಉರುಳಿದಾಗ ಕಮ್ಯೂನಿನ ಪ್ರಭಾವ ತಗ್ಗಿತು. ಸರ್ಕಾರದ ಮೇಲೆ ಹತೋಟಿ ಹೊಂದಿದ್ದ ಸಂಪ್ರದಾಯವಾದಿಗಳು ಮುಂದಿನ ಕೆಲವೇ ತಿಂಗಳುಗಳಲ್ಲಿ ಕಮ್ಯೂನನ್ನು ಕಾನೂನುಬಾಹಿರಗೊಳಿಸಿದರು.

19ನೆಯ ಶತಮಾನದ ಕ್ರಾಂತಿಕಾರಿ ಜನಕ್ಕೆ ಕಮ್ಯೂನಿನ ನೆನಪು ಬಹಳ ಪವಿತ್ರವೆನಿಸಿತ್ತು. ಇತರ ಕ್ರಾಂತಿಕಾರಿ ಚಳವಳಿಗಳಿಗೆ ಇದೇ ಪ್ರೇರಕಶಕ್ತಿ. 1870–71ರ ಫ್ರಾಂಕೋ–ಪ್ರಷ್ಯನ್ ಯುದ್ಧದಲ್ಲಿ ಫ್ರಾನ್ಸಿಗೆ ಆಘಾತವಾದಾಗ ಪ್ಯಾರಿಸಿಗೂ ವರ್ಸೇಲ್ಸಿನ ಹೊಸ ಸರ್ಕಾರಕ್ಕೂ ನಡುವೆ ವಿರಸ ಸಂಶಯಗಳು ಮೂಡಿದುವು. ಪ್ಯಾರಿಸಿನಲ್ಲಿದ್ದ ಕೆಲವು ಫಿರಂಗಿ ದಳಗಳನ್ನು ಅಲ್ಲಿಂದ ವಾಪಸು ತೆಗೆಯಲು ಸರ್ಕಾರ ಯೋಚಿಸಿದಾಗ ಕೆಳವರ್ಗದ ಜನರಲ್ಲಿ ಹಳೆಯ ಕ್ರಾಂತಿಕಾರಿ ಭಾವನೆಗಳು ಮರುಕೊಳಿಸಿದುವು. 1871ರ ಮಾರ್ಚ್ 26ರಂದು ಆಯ್ಕೆಹೊಂದಿದ ಪೌರಸಭೆ ತಾನೇ ಪ್ಯಾರಿಸಿನ ಕಮ್ಯೂನ್ ಎಂದು ಸಾರಿಕೊಂಡಿತಲ್ಲದೆ ಅಗಿದ್ದ ತಾತ್ಕಾಲಿಕ ಸರ್ಕಾರವನ್ನು ಪ್ರತಿಭಟಿಸಿತು. ಇನ್ನೂ ಕೆಲವು ನಗರಗಳಿಗೂ ಕ್ರಾಂತಿಯ ಕಿಡಿ ಹಬ್ಬಿತಾದರೂ ಅಲ್ಲಿ ಅದು ಫಲಿಸಲಿಲ್ಲ. ಇದು ಪ್ಯಾರಿಸಿಗೂ ರಾಷ್ಟ್ರಕ್ಕೂ ನಡುವಣ ಘರ್ಷಣೆಯಾಗಿ ಪರಿಣಮಿಸಿತೆನ್ನಬಹುದು. ಆದರೂ ಈ ಹೊಸ ಕಮ್ಯೂನಿನ ವಿರುದ್ಧ ರಾಷ್ಟ್ರವನ್ನು ಸಂಘಟಿಸುವುದು ಸುಲಭವಾಗಿರಲಿಲ್ಲ. ಕಮ್ಯೂನ್ ಈ ಕಾಲದಲ್ಲಿ ಸರ್ಕಾರದ ಮೇಲೆ ಆಕ್ರಮಣ ನಡೆಸಿ ಗೆಲ್ಲಬಹುದಾಗಿತ್ತು. ಆದರೆ ವ್ಯರ್ಥವಾದ ಚರ್ಚೆಗಳಲ್ಲಿ ತೊಡಗಿ ಅದು ಈ ಅವಕಾಶ ಕಳೆದುಕೊಂಡಿತು. ಏಪ್ರಿಲ್ 2ರಂದು ಸರ್ಕಾರ ಪ್ಯಾರಿಸಿನ ಉಪನಗರವೊಂದನ್ನು ಒಡಿದುಕೊಂಡಿತು. ಅಂತರ್ಯುದ್ಧ ಆರಂಭವಾಯಿತು. ಪ್ರಷ್ಯದ ಮೇಲೆ ಯುದ್ಧಮಾಡಿ ಬಸವಳಿದಿದ್ದ ರಾಷ್ಟ್ರಕ್ಕೆ ಆಗ ಶಾಂತಿ ಬೇಕಿತ್ತು. ಪ್ಯಾರಿಸಿನ ಕಮ್ಯೂನೇ ಅದಕ್ಕೆ ಅಡ್ಡಿಯೆಂಬ ಭಾವನೆಯೂ ಇಲ್ಲದಿರಲಿಲ್ಲ. ಎರಡು ಪಕ್ಷಗಳೂ ಉಗ್ರಕದನ ನಡೆಸಿದುವು. ಎರಡೂ ಪಕ್ಷಗಳು ತಮ್ಮ ಕೈದಿಗಳನ್ನು ಗುಂಡಿಕ್ಕಿ ಕೊಂದುವು. ನಗರದ ಹಲವು ಭಾಗಗಳು ಭಸ್ಮೀಭೂತವಾದುವು. ಕಮ್ಯೂನ್ ಪತನಹೊಂದಿತು. ಆ ವೇಳೆಗೆ ಪ್ರಾಣ ತೆತ್ತ ಪ್ಯಾರಿಸಿನವರ ಸಂಖ್ಯೆ 20,000.

(ಡಿ.ಎಸ್‌ಎ.)

**ಕಮ್ಯೂನಿಸಂ :** ಎಲ್ಲ ಸ್ವತ್ತೂ ಸಮುದಾಯಕ್ಕೆ ಸೇರಿದುದೆಂದೂ ಪ್ರತಿಯೊಬ್ಬ ವ್ಯಕ್ತಿಯೂ ಶಕ್ತ್ಯನುಸಾರವಾಗಿ ದುಡಿದು ಆವಶ್ಯಕತೆಗೆ ಅನುಸಾರವಾಗಿ ಪ್ರತಿಫಲ ಪಡೆಯಬೇಕೆಂದೂ ಪ್ರತಿಪಾದಿಸುವ ತತ್ತ್ವ (ಸಾಮ್ಯವಾದ). ಮಾರ್ಕ್ಸ್ ಮತ್ತು ಎಂಗೆಲ್ಸ್‌ರಿಂದ ಪ್ರಪ್ರಥಮವಾಗಿ ಶಾಸ್ತ್ರೀಯವಾಗಿ ಪ್ರತಿಪಾದಿತವಾದ ಈ ತತ್ತ್ವಕ್ಕೆ ವೈಜ್ಞಾನಿಕ ಸಮಾಜವಾದವೆಂದೂ ಹೆಸರಿದೆ. ಹತ್ತೊಂಬತ್ತನೆಯ ಶತಮಾನದ ಪೂರ್ವಾರ್ಧದ ಹೊತ್ತಿಗೆ ಜನರಿಗೆ ಸಮಾಜವಾದವೆಂಬ ಹೆಸರೂ ಅದರ ಸ್ವರೂಪವೂ ಪರಿಚಯವಾಗಿದ್ದುವು. ಆದರೂ ಮಾರ್ಕ್ಸ್ ಮತ್ತು ಎಂಗೆಲ್ಸ್‌ರು ಸಮಾಜವಾದವನ್ನು ಸಮಾಜವಾದವೆಂದೇ ಕರೆಯದೆ ಕಮ್ಯೂನಿಸಂ ಎಂದು ಕರೆದುದಕ್ಕೆ ಕಾರಣವೂ ಇತ್ತು. 1848ರಲ್ಲಿ ಪ್ರಕಟಿಸಿದ ಕಮ್ಯೂನಿಸ್ಟ್ ಪ್ರಣಾಳಿಕೆಯ ಇಂಗ್ಲಿಷ್ ಆವೃತ್ತಿಗೆ 1888ರಲ್ಲಿ ಎಂಗೆಲ್ಸ್ ಬರೆದ ಮುನ್ನುಡಿಯಲ್ಲಿ ಈ ವಿಚಾರವನ್ನು ಪ್ರಸ್ತಾಪಿಸಿದ್ದಾನೆ : ನಾವು ಇದನ್ನು ಸಮಾಜವಾದಿಗಳ ಪ್ರಣಾಳಿಕೆ ಎಂದು ಕರೆಯಲು ಸಾಧ್ಯವಿರಲಿಲ್ಲ. 1847ರ ಹೊತ್ತಿಗೆ ಒಂದು ಕಡೆ ಸಮಾಜವಾದಿಗಳೆಂದು ಹೇಳಿಕೊಳ್ಳುವ ಭಾವನಾವಾದಿಗಳ ಗುಂಪಿಗೆ ಸೇರಿದ ತಂಡಗಳಿದ್ದುವು—ಇಂಗ್ಲೆಂಡಿನ ಓವೆನ್‌ನ ಹಿಂಬಾಲಕರೂ ಫ್ರಾನ್ಸಿನ ಫೂರ್ಯೇನ ಹಿಂಬಾಲಕರೂ ಇಂಥವರು. ಈ ಎರಡು ತಂಡಗಳೂ ಆಗಲೇ ಕೇವಲ ಬೋಧಕ ಗುಂಪುಗಳಾಗಿ ಕ್ಷೀಣಿಸುತ್ತ ಕೊನೆಯುಸಿರು ಎಳೆಯುತ್ತ ಇದ್ದುವು. ಇನ್ನೊಂದು ಕಡೆ ಕಾರ್ಮಿಕ ವರ್ಗದೊಡನೆ ಯಾವ ಸಂಪರ್ಕವೂ ಇಲ್ಲದಿದ್ದ, ಬಂಡವಾಳಕ್ಕಾಗಲಿ ಲಾಭಕ್ಕಾಗಲಿ ಯಾವ ಚ್ಯುತಿಯೂ ಇಲ್ಲದ ರೀತಿಯಲ್ಲಿ ಸಮಾಜದ ಕುಂದುಕೊರತೆಗಳನ್ನು ವಿದ್ಯಾವಂತರ ಬೆಂಬಲದಿಂದ ಗುಣಪಡಿಸಬಲ್ಲೆವೆಂದು ಹೇಳುತ್ತಿದ್ದ ಹಲವು ಬಗೆಯ ಸಮಾಜ ಸುಧಾರಕರ ವೇಷಧಾರಿ ಗುಂಪುಗಳಿದ್ದವು. ಆದರೆ ಕೇವಲ ರಾಜಕೀಯ ಕ್ರಾಂತಿಯ ಮಿತಿಯನ್ನು ಅರಿತಿದ್ದ ಮತ್ತು ಸಂಪೂರ್ಣವಾಗಿ ಸಮಾಜದ ಬದಲಾವಣೆಯ ಆವಶ್ಯಕತೆಯನ್ನು ಘೋಷಿಸಿದ್ದ ಕಾರ್ಮಿಕ ವರ್ಗದ ಕೆಲವರು ಮಾತ್ರ ಕಮ್ಯೂನಿಸ್ಟ್ ಎಂದು ಕರೆದುಕೊಂಡಿದ್ದರು. ನೋಡುವುದಕ್ಕೆ ಇದು ಒರಟಾದ, ಸೂಕ್ಷ್ಮವಲ್ಲದ, ಸುಲಭಸಹಜವೇದ್ಯವೆನಿಸುವಂಥ ಕಮ್ಯೂನಿಸ್ಟ್ ಪಂಥ. ಆದರೂ ಇದು ಮುಖ್ಯ ವಿಷಯಗಳನ್ನು ಪ್ರಸ್ತಾಪಿಸಿದ್ದಲ್ಲದೆ, ಕಾರ್ಮಿಕ ವರ್ಗದಲ್ಲಿ ಪ್ರವೇಶಿಸಿ, ಫ್ರಾನ್ಸಿನಲ್ಲಿ ಕ್ಯಾಬೇ, ಜರ್ಮನಿಯಲ್ಲಿ ವೈಟ್‌ಲಿಂಗ್ ಮುಂತಾದವರ ಭಾವನಾಸಮಾಜವಾದಕ್ಕೆ ದಾರಿಮಾಡಿತ್ತು. ಹೀಗಾಗಿ 1847ರ ಹೊತ್ತಿಗೆ ಸಮಾಜವಾದ ಮಧ್ಯಮವರ್ಗದ ಚಳವಳಿಯಾಯಿತು. ಕಮ್ಯೂನಿಸಂ ಕಾರ್ಮಿಕ ವರ್ಗದ ಚಳವಳಿ; ವಾಸ್ತವವಾಗಿ ಯೂರೋಪ್ ಖಂಡದಲ್ಲಿ ಸಮಾಜವಾದ ಸ್ವಲ್ಪಮಟ್ಟಿಗಾದರೂ ಸಂಭಾವಿತ ಚಳವಳಿಯಾಗಿದ್ದರೆ, ಕಮ್ಯೂನಿಸಂ ಮಾತ್ರ ಇದಕ್ಕೆ ಪ್ರತಿಯಾಗಿತ್ತು. ಕಾರ್ಮಿಕ ವರ್ಗದ ವಿಮೋಚನೆ ಕಾರ್ಮಿಕ ವರ್ಗದವರಿಂದ ಮಾತ್ರವೇ ಸಾಧ್ಯ ಎಂಬುದೇ ಮೊದಲಿಂದಲೂ ನಮ್ಮ ನಂಬಿಕೆಯಾಗಿತ್ತು. ಆದ್ದರಿಂದ ಈ ಎರಡು ಹೆಸರುಗಳಲ್ಲಿ ಯಾವುದನ್ನು ನಾವು ಅಂಗೀಕರಿಸಬೇಕೆನ್ನುವುದರಲ್ಲಿ ಸಂದೇಹವೇ ಇರಲಿಲ್ಲ; ಅದೂ ಅಲ್ಲದೆ, ಇದನ್ನು ನಿರಾಕರಿಸುವುದಕ್ಕೂ ನಾವು ಇಚ್ಛಿಸಲಿಲ್ಲ. ಹೀಗೆ ಕಮ್ಯೂನಿಸಂ ಎಂಬ ನಾಮಾಂಕಿತದಿಂದ ಮಾರ್ಕ್ಸ್ ಎಂಗೆಲ್ಸರು ತಮ್ಮದೇ ಆದ ಹೊಸ ರೂಪದ ಸಮಾಜವಾದವನ್ನು ಕಮ್ಯೂನಿಸಂ ಎಂದು ಕರೆದರಲ್ಲದೆ ಅದೊಂದು ಮಾತ್ರ ವೈಜ್ಞಾನಿಕ ಸಮಾಜವಾದವೆಂದು ಹೇಳಿದರು. ಈ ಪ್ರಣಾಳಿಕೆಯ ಪ್ರಕಟನೆ ವಿಶ್ವದ ಒಂದು ಮುಖ್ಯ ಘಟನೆ. ಸಮಾಜವಾದದ ತತ್ತ್ವ ಪರಂಪರೆಯಲ್ಲಿ ಇದಕ್ಕೊಂದು ವಿಶಿಷ್ಟಸ್ಥಾನವಿದೆ. ಈ ಪ್ರಣಾಳಿಕೆಯಲ್ಲಿ ಉಕ್ತವಾಗಿರುವ ಸೂತ್ರಗಳನ್ನೂ ಇವುಗಳ ವ್ಯಾಖ್ಯಾನರೂಪವಾಗಿ ಮಾರ್ಕ್ಸ್–ಎಂಗೆಲ್ಸ್ ಮತ್ತು ಅವರ ಅನುಯಾಯಿಗಳು ರಚಿಸಿರುವ ಇತರ ಗ್ರಂಥಗಳನ್ನೂ ನೆರೆನಂಬಿ ಅವನ್ನು ಅನುಸರಿಸುವವರು ಕಮ್ಯೂನಿಸ್ಟರೆನಿಸಿಕೊಂಡಿದ್ದಾರೆ. ಅದರಲ್ಲಿ ಉದಾಹರಿಸಿರುವ ತತ್ತ್ವಗಳನ್ನು ವಿಶದಪಡಿಸುವ ರಾಜಕೀಯ ಮತ್ತು ಆರ್ಥಿಕ ಕ್ಷೇತ್ರಗಳಲ್ಲಿ ಮಾರ್ಕ್ಸ್–ಎಂಗೆಲ್ಸ್‌ರ ತತ್ತ್ವಗಳನ್ನು ಅನುಷ್ಠಾನಕ್ಕೆ ತಂದಿರುವ ಸೋವಿಯತ್ ರಷ್ಯ, ಪೋಲೆಂಡ್, ಪೂರ್ವಜರ್ಮನಿ, ಜೆಕೊಸ್ಲವಾಕಿಯ, ಯೂಗೊಸ್ಲಾವಿಯ, ಹಂಗರಿ, ಬಲ್ಗೇರಿಯ, ರೂಮೇನಿಯ, ಅಲ್ಬೇನಿಯ, ಕ್ಯೂಬ, ಚೀನ, ಉತ್ತರ ಕೊರಿಯ, ಉತ್ತರ ವಿಯೆಟ್‌ನಾಮ್ ಇವನ್ನು ಕಮ್ಯೂನಿಸ್ಟ್ ದೇಶಗಳೆಂದು ಕರೆಯುವ ವಾಡಿಕೆಯಿದೆ. ಉಳಿದವು ಕಮ್ಯೂನಿಸ್ಟೇತರ ದೇಶಗಳು.

**ಪೂರ್ವಸ್ಥಿತಿ :** ಮಾರ್ಕ್ಸ್–ಎಂಗೆಲ್ಸ್‌ರು ತಮ್ಮ ವೈಜ್ಞಾನಿಕ ಸಮಾಜವಾದವನ್ನು ಪ್ರತಿಪಾದಿಸುವ ಮುನ್ನವೂ ಪ್ರಚಾರದಲ್ಲಿದ್ದ ಹಲವು ಸಮಾಜವಾದಿ ತತ್ತ್ವಗಳನ್ನು ಇಲ್ಲಿ ಪ್ರಸ್ತಾಪಿಸಬಹುದಾಗಿದೆ. ನೊಂದ ಜೀವಿಗಳ ಪರವಾಗಿ ವಾದಿಸುತ್ತಿದ್ದವರೂ ಸಮಾಜದಲ್ಲಿಯ ಶೋಷಣೆ–ಅಸಮತೆಗಳನ್ನು ಪ್ರತಿಭಟಿಸುತ್ತಿದ್ದವರೂ ಸಮಾಜ ಸುಧಾರಣಾಪ್ರಿಯರೂ ಸಮಾಜವಾದದಿಂದ ಆಕರ್ಷಿತರಾಗಿದ್ದರು. ಥಾಮಸ್ ಮೋರ್, ಕೆಂಪನೆಲ್ಲ ಮತ್ತು ಇತರರು ಆದರ್ಶ ಸಮಾಜವನ್ನು ಚಿತ್ರಿಸಿದ್ದರು. ಇಂಗ್ಲೆಂಡಿನ ಜರಾಲ್ಡ್ ವಿನ್‌ಸ್ಟಾನ್‌ಲೇ ಮತ್ತು ರಾಬರ್ಟ್ ಓವೆನ್, ಫ್ರಾನ್ಸಿನ ಫೂರ್ಯೇ ಮತ್ತು ಸೇಂಟ್ ಸೈಮನ್, ಜರ್ಮನಿಯ ವೈಟ್‌ಲಿಂಗ್ ಮುಂತಾದವರೂ ಅವರ ಅನುಯಾಯಿಗಳೂ ಸಾಮಾಜಿಕ ಅಸಮಾನತೆ, ದಾರಿದ್ರ್ಯ, ಶೋಷಣೆ, ದುಡ್ಡಿಕೆ, ತಾರತಮ್ಯ ಮುಂತಾದವನ್ನು ತೊಡೆದುಹಾಕಿ, ಸುಧಾರಿತ ಸಮಾಜ ನಿರ್ಮಾಣವಾಗಬೇಕೆಂದು ತಮ್ಮ ಬರೆಹಗಳ ಮೂಲಕ ಪ್ರಚಾರ ನಡೆಸಿದ್ದರು. ಇಂಥ

ಸುಧಾರಣಾಕಾಂಕ್ಷಿಗಳನ್ನೆಲ್ಲ ಒಂದಲ್ಲ ಒಂದು ಬಗೆಯ ಸಮಾಜವಾದಿಗಳೆಂದು ಕರೆಯುವುದು ರೂಢಿಯಾಗಿತ್ತು.

ಇಂಥವರು ಸಮಾಜವಾದಿ ಸಮಾಜದ ಸ್ಥಾಪನೆಗೆ ಆರಿಸಿಕೊಂಡ ಕ್ರಮಗಳೂ ಗಮನಾರ್ಹ. ಆಸ್ತಿಕರೆಲ್ಲರೂ ದೇವರಲ್ಲಿ ಮರೆ ಹೊಕ್ಕಿದ್ದರು. ಅನನ್ಯ ದೈವಭಕ್ತಿ, ಇಹಪ್ರಪಂಚದ ಬಂಧನಗಳಾದ ಹೆಣ್ಣು ಹೊನ್ನು ಮಣ್ಣುಗಳ ತ್ಯಾಗ, ವಿರಕ್ತ ಜೀವನ, ತಪಸ್ಸು, ಪೂಜೆ, ದಾನ ಇವುಗಳ ಪ್ರತಿಪಾದಕರಿವರು. ವ್ಯಕ್ತಿಗಳು ಸೇರಿ ಸಮಾಜವಾಗಿರುವುದರಿಂದ ವ್ಯಕ್ತಿಪರಿಪಕ್ವತೆಯಿಂದ ಸಮಾಜದ ಪರಿಪಕ್ವತೆಯಾಗುವುದೆಂದೂ ಆಗ ಸಮಾಜವನ್ನು ಕಾಡುತ್ತಿರುವ ಲಾಲಸೆ, ಈರ್ಷ್ಯೆ ಅಸಮಾನತೆ ಮೋಹಗಳಿಂದ ಬಿಡುಗಡೆಯಾಗುವುದೆಂದೂ ಸುಧಾರಿತ ಸಮಾಜದ ಜನನವಾಗುವುದೆಂದೂ ಇವರ ಭಾವನೆಯಾಗಿತ್ತು. ಇದಕ್ಕಾಗಿ ಹಲವು ನೀತಿಸೂತ್ರಗಳೂ ಪೂಜಾವಿಧಿಗಳೂ ಧ್ಯಾನವಿಧಿಗಳೂ ರಚಿತವಾದುವು. ಇನ್ನು ಕೆಲವರು ಸಮಾಜದಲ್ಲಿ ಕಂಡುಬರುವ ಅನಿಷ್ಟವೆಲ್ಲವೂ ದೈವಲೀಲೆ ಎಂದು ಬಗೆದು, ಮನುಷ್ಯನ ಪರೀಕ್ಷೆಗಾಗಿಯೆ ಎಲ್ಲವೂ ಉಂಟಾಗಿವೆಯೆಂದು ತಿಳಿಸಿ, ವಿರಕ್ತ ಜೀವನಕ್ಕೆ ಹೆಚ್ಚು ಪ್ರಾಶಸ್ತ್ಯ ಕೊಟ್ಟರು; ಪರಲೋಕಸೃಷ್ಟಿ, ಪಾಪವಿಮೋಚನೆ, ದೇವರ ಪುನರಾಗಮನ, ದೇವದೂತರ ಸಂದೇಶ—ಇವಕ್ಕೆ ಅವರಿಂದ ಹೆಚ್ಚಿನ ಪುರಸ್ಕಾರ ಲಭ್ಯವಾಯಿತು. ಮತ್ತೆ ಕೆಲವರು ಪಾರಮಾರ್ಥಿಕ—ಲೌಕಿಕ ಸಮನ್ವಯಸಾಧನೆಗಾಗಿ ಯತ್ನಿಸಿ, ದೇವದೂತರಿಂದಲೂ ಋಷಿಗಳಿಂದಲೂ ಪ್ರೋಕ್ತವಾದ ಬೋಧನೆಗಳ ಪಾಲನೆ, ದಾನ, ಪೂಜೆ, ಧ್ಯಾನ–ಇವು ಮೋಕ್ಷಸಮಾಜಕ್ಕೆ ಹೆದ್ದಾರಿ ಎಂದರು. ಪ್ರತಿಯೊಬ್ಬ ವ್ಯಕ್ತಿಯೂ ತನ್ನ ಗಳಿಕೆಯನ್ನೂ ಸಂಪತ್ತನ್ನೂ ತನ್ನದೆಂದು ಬಗೆಯದೆ, ತಾನು ಅದರ ಧರ್ಮದರ್ಶಿಯೆಂದು ತಿಳಿದು ಅವನ್ನು ಅನುಭವಿಸುವುದಾದರೆ ಮತ್ತು ನಿರ್ವಹಿಸುವುದಾದರೆ ಆಗ ಬಡವ—ಶ್ರೀಮಂತರೆಂಬ ಭೇದಗಳಿಗೂ ಒಡೆತನದಿಂದ ಬರುವ ಆರ್ಥಿಕ ಸೌಲಭ್ಯಗಳಿಗೂ ಅಧಿಕಾರ ಶೇಖರಣೆಗಳಿಗೂ ವಿಲಾಸಗಳಿಗೂ ಬಡಜನರಲ್ಲಿ ಮೂಡಿಸುವ ದಾಸ್ಯ ಯಾಚನೆಗಳಿಗೂ ಇರಬಹುದಾದ ವರ್ಗವಿರಸಕ್ಕೂ ಅವಕಾಶವೇ ಉಂಟಾಗುವುದಿಲ್ಲವೆಂಬುದು ಇನ್ನು ಕೆಲವರ ವಾದ. ಕೆಲವರು ಇಷ್ಟಕ್ಕೇ ತೃಪ್ತರಾಗಲಿಲ್ಲ. ಎಲ್ಲರೂ ದೇವರ ಮಕ್ಕಳು. ಆದ್ದರಿಂದ ಸಮಾನತೆ, ಭ್ರಾತೃತ್ವ, ಸಹಜೀವನ ಇವು ಮನುಷ್ಯನ ಆಜನ್ಮಸಿದ್ಧ ಹಕ್ಕುಗಳು. ಆದ್ದರಿಂದ ಸಮಾಜದಲ್ಲಿ ಕಂಡುಬರುವ ಎಲ್ಲ ವಿಧದ ಅಸಮಾನತೆ, ಶೋಷಣೆ, ಸ್ವಾಮ್ಯ, ಒಡೆತನ ಎಲ್ಲವನ್ನೂ ದೇವರ ಹೆಸರಿನಲ್ಲೇ ಇವರು ಪ್ರಶ್ನಿಸಿದರು, ವಿರೋಧಿಸಿದರು. ಆಸ್ತಿಯ ವೈಯಕ್ತಿಕ ಸ್ವಾಮ್ಯಕ್ಕೂ ಒಡೆತನಕ್ಕೂ ಆಸ್ಪದವಿಲ್ಲದಂಥ ಸಮಾಜ ವ್ಯವಸ್ಥೆಗೆ ಇವರು ಕರೆಕೊಟ್ಟರು. ಇವರದು ಧಾರ್ಮಿಕ ಸಮಾಜವಾದ. ಈ ಹಲವು ಬಗೆಯ ವಾದಗಳನ್ನು ಭಾರತದಲ್ಲೂ ಕಾಣಬಹುದು. ರಾಜಕೀಯವಾಗಿ, ಇಂಗ್ಲೆಂಡಿನಲ್ಲಿ 1688ರಲ್ಲಿ ನಡೆದ ಕ್ರಾಂತಿಯ ಸಂದರ್ಭದಲ್ಲಿ ಲೆವಲರ್ಸ್ ಮತ್ತು ಡಿಗ್ಗರ್ಸ್ ಎಂಬ ಉಗ್ರವಾದಿಗಳು ಜೆರಾಲ್ಡ್ ವಿನ್‍ಸ್ಟಾನ್ಲೆಯ ನೇತೃತ್ವದಲ್ಲಿ ಕ್ರಿಶ್ಚಿಯನ್ ಮತಬೋಧಕರ ಮೂಲತತ್ತ್ವಗಳನ್ನು ಪುನಃ ಉದ್ಧರಿಸಿ ಸಮಾನ ಸಮಾಜ ಸ್ಥಾಪನೆಯೇ ಧರ್ಮದ ಪುನರುತ್ಥಾನವೆಂದು ವಾದಿಸಿದರು.

ಈ ಬಗೆಯ ಸಮಾಜವಾದಿಗಳಿಗೆ ಸಮಾಜವ್ಯವಸ್ಥೆಯ ವಿಮರ್ಶೆ ಅಷ್ಟು ಕಠಿಣವಾದ ಸಮಸ್ಯೆಯಾಗಲಿಲ್ಲ. ಎಲ್ಲವೂ ದೈವದತ್ತವಾಗಿ ಉದ್ಭವವಾಗಿರುವುದರಿಂದ ಸಮಾಜದ ಆರ್ಥಿಕ ಮತ್ತು ರಾಜಕೀಯ ಸಂಬಂಧಗಳ ವಿನ್ಯಾಸವನ್ನಾಗಲಿ ಅಂತರಾಳವನ್ನಾಗಲಿ ಪ್ರಶ್ನಿಸಲು ಯತ್ನಿಸಲಿಲ್ಲ. ಇದ್ದ ಮತ್ತು ಇರುವ ಸಂಕಷ್ಟಗಳೆಲ್ಲವೂ ಅಧರ್ಮದಿಂದ ಉಂಟಾಗಿರುವುದರಿಂದ ಸನ್ಮಾರ್ಗದಲ್ಲಿ ಪ್ರವರ್ತಿಸಲು ಸದ್ಬುದ್ಧಿ ಕೊಡುವಂತೆ ದೇವರಲ್ಲಿ ಮರೆಹೊಗುವುದೇ ಮಾರ್ಗವೆಂಬುದು ಇವರ ಭಾವನೆ. ಮನುಷ್ಯ ಇಷ್ಟು ಮಾಡುವುದಾದರೆ ಧರ್ಮ ಕ್ಷೀಣಿಸದೆ ಸಮಾಜದ ಉತ್ಕರ್ಷ ತಾನಾಗಿ ಉಂಟಾಗುವುದೆಂದು ಇವರು ನಂಬಿದ್ದರು.

ಕೇವಲ ಬುದ್ಧಿಶಕ್ತಿಯ ಸಹಾಯದಿಂದ ಸಮಾಜವಾದಿ ವ್ಯವಸ್ಥೆಯ ಸ್ಥಾಪನೆ ಸುಲಭವೆಂದು ಸಾರುವ ಅನೇಕ ಪಂಥಗಳು 18ನೆಯ ಶತಮಾನದ ಅನಂತರ ಜನಿಸಿದುವು. ಇವು ಬುದ್ಧಿಯನ್ನು ದೇವರಸ್ಥಾನದಲ್ಲಿ ಕುಳ್ಳಿರಿಸಿದುವು. ಸಮಾಜದ ಸಕಲ ನಡೆವಳಿಕೆಗಳ ಸೂಕ್ತತೆ, ಗ್ರಾಹ್ಯಗುಣ, ವರ್ಜನೆ, ಎಲ್ಲವನ್ನೂ ಬುದ್ಧಿಯ ತೀರ್ಪಿಗೆ ಒಳಪಡಿಸಿದುವು. ಬುದ್ಧಿಶಕ್ತಿ ಮಾನವನಿಗೆ ಮೀಸಲಾದದ್ದು, ಇದರಿಂದ ಸಾಧಿಸಲಸಾಧ್ಯವಾದ ಅಂಶವೇ ಇಲ್ಲ. ಇದುವರೆವಿಗೂ ನಿಗೂಢವಾಗಿದ್ದ ವಸ್ತು ಚಲನೆಗಳನ್ನೂ ವಿನ್ಯಾಸಗಳನ್ನೂ ವಿಜ್ಞಾನದ ಮೂಲಕ ಬಹಿರಂಗಗೊಳಿಸಲಾಗಿದೆ. ಈ ಜ್ಞಾನಕ್ಕೆಲ್ಲ ಬುದ್ಧಿಶಕ್ತಿಯೇ ಮೂಲ. ಹೀಗಿರುವಾಗ ಸಮಾಜದ ನಡೆವಳಿಕೆಗಳಲ್ಲಿ ಯಾವುದು ಸರಿ, ಯಾವುದು ತಪ್ಪು, ಯಾವುದು ಮಾನವನಿಗೆ ಅನುಕೂಲ, ಯಾವುದು ಪ್ರತಿಕೂಲ—ಇತ್ಯಾದಿಗಳನ್ನು ತೀರ್ಮಾನಿಸಲು ಸಾಧ್ಯ. ಹದಿನೆಂಟನೆಯ ಶತಮಾನದಲ್ಲಿ ಜನಿಸಿದ ಇಂಥ ಯೋಚನೆಯ ಕಾಲವನ್ನು ವಿಮರ್ಶಕಾರರು ವಿಮರ್ಶನ ಯುಗ ಎಂದು ಕರೆದಿದ್ದಾರೆ. ಇದರಲ್ಲಿ ನಾನಾ ಮುಖಗಳಿವೆ. ಸಮಾಜದರ್ಶನವನ್ನು ಪ್ರಕೃತಿದರ್ಶನದ ರೀತಿಯಲ್ಲಿ ವ್ಯವಸ್ಥೆಗೊಳಿಸುವುದು ಇವುಗಳಲ್ಲಿ ಅತಿ ಮುಖ್ಯವಾದದ್ದು.

ಬುದ್ಧಿಯ ಆರಾಧಕರು ಸಮಾಜದಲ್ಲಿ ಅನ್ಯಾಯವೆಂದು ಬಗೆದದ್ದನ್ನು ಹೊರಹಾಕಲು ತಮ್ಮ ಬುದ್ಧಿಯನ್ನು ಬಳಸಿಕೊಂಡರು. ಸಮಾಜದಲ್ಲಿ ಕಂಡುಬಂದ ಅಸಮಾನತೆ, ಪ್ರತ್ಯೇಕ ಹಕ್ಕುಬಾಧ್ಯತೆ, ಅಂತರ, ಶೋಷಣೆ ಎಲ್ಲವೂ ಅಸಮರ್ಥನೀಯ. ಆದ್ದರಿಂದ ಅವನ್ನು ನಾವು ಒಪ್ಪಬೇಕಾದ್ದಿಲ್ಲ: ಅವು ಅಸಂಬದ್ಧ—ಎಂಬುದು ಅವರ ತರ್ಕ. ಆದ್ದರಿಂದ ಇವರಲ್ಲೊಬ್ಬೊಬ್ಬರೂ ತಮಗೆ ನ್ಯಾಯವೆಂದು ಕಂಡುಬಂದ ರೀತಿಯಲ್ಲಿ ಸಮಾಜದ ಪುನರ್ರಚನೆಯಲ್ಲಿ ತೊಡಗಿದರು. ಬಗೆಬಗೆಯ ಮಾದರಿಗಳನ್ನು ಕಡೆದಿಟ್ಟರು. ಬುದ್ಧಿವಂತರು ಇದನ್ನು ಅಂಗೀಕರಿಸಬೇಕೆಂದು ಕರೆಕೊಟ್ಟರು. ಇನ್ನು ಕೆಲವರು ತಾವು ರಚಿಸಿದ ಕರಡುಯೋಜನೆಗಳನ್ನು ಸಹೃದಯ ರಾಜಮಹಾರಾಜರಿಗೆ ಅರ್ಪಿಸಿ ಅವರ ಬೆಂಬಲದಿಂದ ಅವನ್ನು ಕಾರ್ಯಗತಗೊಳಿಸಲು ಉದ್ಯುಕ್ತರಾದರು. ಆದರೆ ಯಾವುದರಿಂದಲೂ ಏನೂ ಲಾಭವಾಗಲಿಲ್ಲ. ಅವನ್ನು ಕಾರ್ಯಗತ ಮಾಡಲು ಯಾರೂ ಮುಂದೆ ಬರಲಿಲ್ಲ. ಆಗ ಇವರಿಗೆ ಹತಾಶೆ ಕಾದಿತ್ತು. ಇವರಲ್ಲಿ ಉಗ್ರಗಾಮಿಗಳಾದವರನ್ನು ಸಮಾಜಕಂಟಕರೆಂದು ದಮನ ಮಾಡಲಾಯಿತು. ಇನ್ನು ಕೆಲವರು ಪ್ರಯೋಗಾರ್ಥವಾಗಿ ರಚಿಸಿದ್ದ ಆಶ್ರಮ, ನಿಕೇತನ, ಸಹಜೀವನ ಕೇಂದ್ರ, ಕುಟೀರಗಳು ಮುರಿದುಬಿದ್ದವು. ಮಿಗಿಲಾಗಿ, ಯಾವುದು ಅಂಗೀಕಾರಯೋಗ್ಯವಾದದ್ದು, ಯಾವುದನ್ನು ತ್ಯಜಿಸುವುದರಿಂದ ಸಮಾಜಕ್ಕೆ ಕ್ಷೇಮ ಉಂಟಾಗುತ್ತದೆ ಎಂಬ ಬಗ್ಗೆ ಈ ವಿನ್ಯಾಸಕಾರರಲ್ಲೇ ಒಮ್ಮತವಿರಲಿಲ್ಲ. ಒಬ್ಬನಿಗೆ ನ್ಯಾಯವಾಗಿ ಕಂಡುಬಂದದ್ದು ಇನ್ನೊಬ್ಬನಿಗೆ ವಿಪರೀತವಾಗಿ ಕಂಡುಬಂದಿತ್ತು. ಬುದ್ಧಿಯ ಕುಂಚದಿಂದ ನಿರ್ಮಿತವಾದ ಈ ಅನೇಕ ಕ್ಷೇಮ ಸಮಾಜಗಳು ಆಕರ್ಷಣೀಯವಾಗಿ ಕಂಡರೂ ಸರ್ವಸಮ್ಮತವಾದ ಒರೆಗಲ್ಲು ಅಥವಾ ಅಳತೆಕೋಲಿನಿಂದ ಅವುಗಳಲ್ಲಿ ಯಾವುದಾದರೊಂದನ್ನು ಅಂಗೀಕಾರ್ಯಯೋಗ್ಯವೆಂದು ತೀರ್ಮಾನಿಸುವುದು ಕಷ್ಟದ ಕೆಲಸವಾಗಿತ್ತು.

ಆದರೆ ಈ ಕಾಲಾವಧಿಯಲ್ಲಿ ಈ ಪಂಗಡಕ್ಕೆ ಸೇರಿದ ಬರೆಹಗಾರರಿಂದ ಹಲವು ಅಮೂಲ್ಯ ಸಂಶೋಧನೆಗಳು ಹೊರಬಿದ್ದುವು. ಹಲವೆಡೆ ಅಸ್ಪಷ್ಟವಾಗಿ, ಕೆಲವು ಕಡೆ ಸ್ಪಷ್ಟವಾಗಿ, ಇನ್ನು ಕೆಲವು ಕಡೆ ಸೂಚ್ಯವಾಗಿ, ಇತಿಹಾಸ ಯಾವುದೋ ಒಂದು ಕ್ರಮಕ್ಕೆ ಒಳಪಟ್ಟು ವಿಕಾಸ ಹೊಂದಿರುವ ಚಿತ್ರವನ್ನು ಅವರು ಮುಂದಿಟ್ಟರು. ಸಮಾಜವೂ ಈ ವಿಕಾಸದ ನಿಯಮದಲ್ಲಿ ಸೇರಿ ಒಂದೊಂದು ಕಾಲದಲ್ಲಿ ಒಂದೊಂದು ವಿಧವಾಗಿ ವಿಶಿಷ್ಟ ಚರ್ಯೆಗಳನ್ನು ಪ್ರದರ್ಶಿಸಿರುವುದಾಗಿ ತಿಳಿಸಿದರು. ಒಂದೊಂದು ಘಟ್ಟವೂ ವಿಶಿಷ್ಟವಾದದ್ದೆಂಬುದನ್ನು ಇವರು ಕಂಡಿದ್ದರು. ಅತ್ಯಂತ ಅನಾಗರಿಕತೆಯಿಂದ ಆರಂಭವಾದ ಸಮಾಜ ಕ್ರಮವಾಗಿ ಪ್ರಾಚೀನ ಮತ್ತು ಊಳಿಗಮಾನ್ಯ ಘಟ್ಟಗಳನ್ನು ದಾಟಿ ಪ್ರಜಾಸಮಾಜದ (ಸಿವಿಲ್ ಸೊಸೈಟಿ) ಹಂತ ಮುಟ್ಟಿದೆ. ಈ ಘಟ್ಟಗಳ ಪರಿವರ್ತನೆ ಏತಕ್ಕೆ ಉಂಟಾಯಿತೆಂದು ಅನೇಕರು ಕಾರಣಗಳನ್ನು ಹುಡುಕುತ್ತಿದ್ದಾಗ, ಜರ್ಮನಿಯ ತತ್ತ್ವಜ್ಞಾನಿಯಾದ ಹೆಗೆಲ್ ಹೊಸ ಸಿದ್ಧಾಂತವೊಂದರ ಮೂಲಕ ಇತಿಹಾಸದ, ಸಮಾಜದ ಚಲನೆ ಮತ್ತು ವಿಕಾಸಗಳನ್ನು ಸಮರ್ಥಿಸಿ ಅವೆಲ್ಲವೂ ಭಾವನೆಗಳ (ಐಡಿಯ) ಚಲನೆಯ ಪ್ರತಿರೂಪವೆಂದು ಹೇಳಿದ. ಒಂದೊಂದು ಕಾಲದಲ್ಲಿ ಒಂದೊಂದು ರೂಪದಲ್ಲಿ ಭಾವನೆಗಳು ವ್ಯಕ್ತಗೊಂಡಿವೆ. ಈಗ ಅವು ತಮ್ಮ ಗುರಿ ಮುಟ್ಟಿವೆ; ಇಂದಿನ ಪ್ರಜಾಸಮಾಜದ ರೂಪ ತಾಳಿವೆ—ಎಂದು ಆತ ತಿಳಿಸಿದ. ಇನ್ನು ಕೆಲವರು ಈ ಭಾವನಾತ್ಮಕ ವಿಕಾಸವಾದವನ್ನು ವಿರೋಧಿಸಿದರು. ಸಮಾಜದಲ್ಲಿ ಕಂಡುಬರಬಹುದಾದ ಚಲನೆ, ವಿಕಾಸ ಮತ್ತು ವಿವಿಧ ಘಟ್ಟಗಳು ವಿಕಾಸ ಹೊಂದುತ್ತಿರುವ ಭಾವನೆಯ ಪ್ರತಿರೂಪವಲ್ಲವೆಂಬುದು ಅವರ ವಾದ. ಸಮಾಜದಲ್ಲಿ ಕಂಡುಬರುವ ಬದಲಾವಣೆ, ಪರಿವರ್ತನೆ, ಹಳೆಯ, ಹೊಸ ಭಾವನೆಗಳು—ಎಲ್ಲವೂ ಸಮಾಜದಲ್ಲೇ ಹುದುಗಿರುವ ಸ್ವಯಂಚಲನೆಗೆ ಒಳಪಟ್ಟಿವೆಯೆಂದೂ ಸಮಾಜವಿಕಾಸದಲ್ಲಿ ದೈವಿಕ ಅಥವಾ ಭಾವನೆಯ ಕೈವಾಡವಿಲ್ಲವೆಂದೂ ವಿಕಾಸವೆಂಬುದು ಭಾವನೆಯ ಬೆಳವಣಿಗೆಯ ಪ್ರತಿರೂಪವಾಗಿರದೆ, ಭಾವನೆಯೇ ವಿಕಾಸಹೊಂದುತ್ತಿರುವ ಸ್ಥಿತಿಗತಿಗಳ ಪ್ರತಿರೂಪವಾಗಿ ವ್ಯಕ್ತಗೊಂಡಿದೆಯೆಂದೂ ತಿಳಿಸಿದರು.

ಎರಡನೆಯದಾಗಿ, ಸಮಾಜದಲ್ಲಿ ಉಂಟಾಗಿರುವ ಕ್ಷೋಭೆಗೂ ವಿರಸಕ್ಕೂ ಬಡಜನರ ಚೀತ್ಕಾರಕ್ಕೂ ಮುಖ್ಯವಾಗಿ ಅದರ ಆರ್ಥಿಕ ವ್ಯವಸ್ಥೆಯೇ ಮುಖ್ಯ ಕಾರಣವೆಂಬುದು ಇವರ ವಾದ. ಪ್ರಾಚೀನ ಕಾಲದ ಸ್ವಾಮ್ಯರಹಿತ ಅಥವಾ ಒಡೆತನರಹಿತ ವ್ಯವಸ್ಥೆಗಳ ಮಾದರಿಗಳನ್ನು ಇವರು ಮುಂದಿಟ್ಟರು. ಉತ್ಪಾದನ ವಸ್ತುಗಳ ಖಾಸಗಿ ಸ್ವಾಮ್ಯ ಮತ್ತು ಒಡೆತನಪದ್ಧತಿಯಿಂದಾಗಿ ಕೆಲವರು ಅಧಿಪತಿಗಳಾಗುತ್ತಾರೆ; ಬಹುತೇಕ ಜನ ಕೇವಲ ದುಡಿಮೆಗಾರರಾಗಿ ಪರಿವರ್ತನೆ ಹೊಂದುತ್ತಾರೆ. ಉತ್ಪಾದನ ವಸ್ತುಗಳ ಖಾಸಗಿ ಸ್ವಾಮ್ಯಪದ್ಧತಿ ಆರ್ಥಿಕವಾಗಿ ಸಮಾಜದಲ್ಲಿ ವರ್ಗಗಳ ಉದಯಕ್ಕೂ ವರ್ಗ ಘರ್ಷಣೆಗೂ ಎಡೆಕೊಟ್ಟಿವೆ. ಉತ್ಪಾದನ ವಸ್ತುಗಳ ಮೇಲೆ

ಕೇವಲ ಸ್ವಲ್ಪ ಜನ ಹೊಂದಿರುವ ಸ್ವಾಮ್ಯ ಅಥವಾ ಒಡೆತನ ಹಣವಂತರನ್ನು ಇನ್ನೂ ಹಣವಂತರನ್ನಾಗಿಯೂ ಬಡಜನರನ್ನು ಇನ್ನೂ ಬಡವರನ್ನಾಗಿಯೂ ಮಾಡುತ್ತಿದೆ. ಆರ್ಥಿಕ ಸಮಾನತೆಯೇ ಮಿಕ್ಕೆಲ್ಲ ಸಮಾನತೆಗಳಿಗೂ ತಳಹದಿ. ಹೀಗೆ ಸಮಾಜದ ಆರ್ಥಿಕ ವ್ಯವಸ್ಥೆಯ ಹಲವು ಸೂಕ್ಷ್ಮವಿಷಯಗಳನ್ನು ಈ ಬರೆಹಗಾರರು ಬಯಲುಪಡಿಸಿದರು, ಶೋಷಣೆಯನ್ನು ಖಂಡಿಸಿದರು. ಉತ್ಪಾದನ ವಸ್ತುಗಳು ಖಾಸಗಿ ಸ್ವಾಮ್ಯಕ್ಕೆ ಒಳಪಟ್ಟಿರಬಾರದೆಂದರೆ ಖಾಸಗೀ ಸ್ವಾಮ್ಯ ಹೋದ ಹೊರತು ಶೋಷಣೆ ಅಳಿಯುವುದಿಲ್ಲವೆಂಬುದು ಇವರ ವಾದ. ಆರ್ಥಿಕ ಅಸಮಾನತೆಗೆ ಶೋಷಣೆಯೇ ಮೂಲ. ಅದರ ನಿರ್ಮೂಲನಕ್ಕಾಗಿ ಉತ್ಪಾದನವಸ್ತುಗಳ ಸಮಾಜೀಕರಣ ಆವಶ್ಯಕ. ಆದರೆ ಶೋಷಣೆ ಯಾವ ರೀತಿಯಲ್ಲಿ ಆಗುತ್ತಿದೆ, ಆರ್ಥಿಕ ವ್ಯವಸ್ಥೆಯಲ್ಲಿ ಶೋಷಣೆ ಯಾವ ರೂಪದಲ್ಲಿ ಮನೆಮಾಡಿಕೊಂಡಿದೆ, ವರ್ಗಗಳಿಗೂ ವರ್ಗಗಳ ಉತ್ಪತ್ತಿಗೂ ಆರ್ಥಿಕ ವ್ಯವಸ್ಥೆಗೂ ಇರುವ ಸಂಬಂಧವೇನು, ಶೋಷಣೆಗೂ ವರ್ಗಗಳ ಜನನಕ್ಕೂ ಏನು ಸಂಬಂಧ, ಶೋಷಣೆಯನ್ನು ನಿರ್ಮೂಲ ಮಾಡುವವರು ಯಾರು, ಯಾವ ರೀತಿಯಲ್ಲಿ—ಎಂಬವನ್ನು ಇವರು ವಿಶದಪಡಿಸಲಾಗದೆ ಹೋದರು.

**ಮಾರ್ಕ್ಸ್—ಎಂಗೆಲ್ಸ್ ದೃಷ್ಟಿ :** ಇಂಥ ಸಂದರ್ಭದಲ್ಲಿ ಹೊಸದಾಗಿ ಉದ್ಭವವಾಗಿರುವ ಬಂಡವಾಳ ಅರ್ಥವ್ಯವಸ್ಥೆ ಶೋಷಿತ ಕಾರ್ಮಿಕ ವರ್ಗವೊಂದಕ್ಕೆ ಜನ್ಮ ಕೊಟ್ಟಿದೆ. ಈಗ ಸಮಾಜವಾದಿ ವ್ಯವಸ್ಥೆಯ ಉದಯ ಅನಿವಾರ್ಯವಾಗಿದೆ. ಈ ಬಂಡವಾಳ ವ್ಯವಸ್ಥೆಯ ದಮನವನ್ನು ಕಾರ್ಮಿಕವರ್ಗ ಮಾಡುತ್ತದೆ. ಕಾರ್ಮಿಕವರ್ಗದ ವಿಮೋಚನೆ ಕಾರ್ಮಿಕ ವರ್ಗದವರಿಂದಲೇ ಸಾಧ್ಯ. ಬಂಡವಾಳ ಅರ್ಥವ್ಯವಸ್ಥೆಯ ಮೂಲೋತ್ಪಾಟನಕ್ಕಾಗಿ ಕಾರ್ಮಿಕವರ್ಗ ಸಂಘಟಿತರಾಗಿ ಕ್ರಾಂತಿ ನಡೆಸಬೇಕು. ಕಾರ್ಮಿಕರ ಇಂಥ ಪ್ರಜ್ಞಾಪೂರಿತ ಹೋರಾಟವೇ ಸಮಾಜವಾದಿ ಹೋರಾಟ. ಮಿಕ್ಕೆಲ್ಲ ವರ್ಗಗಳ ಹೋರಾಟವೂ ಕಟ್ಟಕಡೆಯದಾಗಿ ಬಂಡವಾಳ ಅರ್ಥವ್ಯವಸ್ಥೆಯ ಪುನರಾವರ್ತನೆಗೆ ದಾರಿ ಮಾಡಿಕೊಡುತ್ತದೆ–ಹೀಗೆಂದು ಮಾರ್ಕ್ಸ್ ಮತ್ತು ಎಂಗೆಲ್ಸ್ ಕರೆಕೊಟ್ಟರು. ಆ ವೇಳೆಗಾಗಲೆ ಹಲಕೆಲವು ಕಾರ್ಮಿಕವರ್ಗದ ಜನ ಪ್ರತಿಭಟನಾ ಚಳವಳಿ ಕೈಗೊಂಡಿದ್ದರು. ತಮ್ಮ ಗುರಿಸಾಧನೆಗಾಗಿ ಸಣ್ಣಪುಟ್ಟ ಗುಂಪುಗಳನ್ನು ರಚಿಸಿಕೊಂಡು ಕಮ್ಯೂನಿಸ್ಟರೆಂದು ಹೋರಾಟ ನಡೆಸುತ್ತಿದ್ದರು. ಪ್ರತಿಭಟನೆ ಇತ್ತೇ ವಿನಾ ಯಾವ ತತ್ತ್ವಾಧಾರವಾಗಲಿ ಸಮಾಜವಾದದ ಆವಶ್ಯಕತೆ ಮತ್ತು ವಿನ್ಯಾಸಗಳ ಬಗ್ಗೆ ಯಾವ ತಿಳಿವಳಿಕೆಯಾಗಲೀ ಈ ಗುಂಪುಗಳಿಗೆ ಇರಲಿಲ್ಲ. ಮಾರ್ಕ್ಸ್ ಮತ್ತು ಎಂಗೆಲ್ಸ್ ಈ ತೀವ್ರ ಅಥವಾ ಕ್ರಾಂತಿಕಾರಿ ಗುಂಪುಗಳಿಗೆ ಒಂದು ತತ್ತ್ವಾಧಾರವನ್ನು ಒದಗಿಸಿಕೊಟ್ಟರು.

ಮಾರ್ಕ್ಸ್ ಮತ್ತು ಎಂಗೆಲ್ಸ್ ತಮ್ಮದು ಮಾತ್ರ ವೈಜ್ಞಾನಿಕ ಸಮಾಜವಾದವೆಂದೂ ಉಳಿದವೆಲ್ಲ ಕಲ್ಪನಾ ಸಮಾಜವಾದಗಳೆಂದೂ (ಯುಟೋಪಿಯನ್)



ಕಾರ್ಲ್ ಮಾರ್ಕ್ಸ್

ವಾದಿಸಿದರು. ವೈಜ್ಞಾನಿಕ ಸಮಾಜವಾದಕ್ಕೂ ಕಲ್ಪನಾಸಮಾಜವಾದಕ್ಕೂ ಇರುವ ಮೂಲ ವ್ಯತ್ಯಾಸವನ್ನು ಎಂಗೆಲ್ಸ್ ಹೀಗೆ ಹೇಳಿದ್ದಾನೆ : ಇದು ಇತ್ತೀಚೆಗೆ ಬಲು ಬುದ್ಧಿವಂತನೆನಿಸಿಕೊಂಡವನಿಂದ ಆಕಸ್ಮಾತ್ತಾಗಿ ಹೊರಬಿದ್ದ ಶೋಧನೆಯಲ್ಲ : ಇದು ಐತಿಹಾಸಿಕ ಬೆಳೆವಣಿಗೆ. ಸ್ವಾಮ್ಯವರ್ಗ ಮತ್ತು ಕಾರ್ಮಿಕವರ್ಗಗಳ ನಡುವಣ ಘರ್ಷಣೆಯಿಂದ ಅನಿವಾರ್ಯವಾಗಿ ಜನಿಸಿದ್ದು. ಅದಷ್ಟುಮಟ್ಟಿಗೆ, ಸಾಕಷ್ಟು ಪರಿಪೂರ್ಣವಾದ ಸಮಾಜ ರಚಿಸುವುದೇ ಇದರ ಗುರಿಯಲ್ಲ. ಐತಿಹಾಸಿಕ ಮತ್ತು ಆರ್ಥಿಕ ಘಟನಾಪರಿವರ್ತನೆಗಳನ್ನೂ ಜನ್ಮತಳೆದಿರುವ ವರ್ಗಗಳನ್ನೂ ಅವುಗಳ ಘರ್ಷಣೆಗಳನ್ನೂ ಸಂಶೋಧಿಸುವುದು ಕೂಡ ಇದರ ಉದ್ದೇಶ. ಹೀಗೆ ಉದ್ಭವಿಸಿರುವ ಆರ್ಥಿಕ ಪರಿಸ್ಥಿತಿಯಿಂದ ತಲೆದೋರಿರುವ ಘರ್ಷಣೆಗಳ ಪರಿಹಾರದ ಮಾರ್ಗಾನ್ವೇಷಣೆಯೂ ಇದರ ಗುರಿ. ತಮ್ಮ ಸಮಾಜವಾದವೊಂದೇ ವೈಜ್ಞಾನಿಕವೆನಿಸಿರುವುದಕ್ಕೆ ಮಾರ್ಕ್ಸನ ಎರಡು ಮುಖ್ಯ ಪ್ರತಿಪಾದನೆಗಳು ಕಾರಣವೆಂಬುದು ಎಂಗೆಲ್ಸನ ಮತ. ಇವುಗಳಲ್ಲಿ ಮೊದಲನೆಯದು ಐತಿಹಾಸಿಕ ಭೌತವಾದ (ಹಿಸ್ಟಾರಿಕಲ್ ಮೆಟೀರಿಯಲಿಸಂ). ಇನ್ನೊಂದು, ಬಂಡವಾಳವಾದಿ ಉತ್ಪಾದನಕ್ರಮದಲ್ಲಿ ಅಡಗಿರುವ ಅತಿರಿಕ್ತಮೌಲ್ಯದ (ಸರ್ಪ್ಲಸ್ ವ್ಯಾಲ್ಯೂ) ರಹಸ್ಯ.

ಸಮಾಜವಾದದ ಬಗ್ಗೆ ಮಾರ್ಕ್ಸ್ ಮತ್ತು ಎಂಗೆಲ್ಸರು ಕೊಟ್ಟಿರುವ ವಿವರಣೆಯನ್ನೂ ವೈಜ್ಞಾನಿಕ ಸಮಾಜವಾದಕ್ಕೂ ಕಲ್ಪನಾಸಮಾಜವಾದಕ್ಕೂ ಇರುವ ಮೂಲ ವ್ಯತ್ಯಾಸಗಳನ್ನೂ ಹೀಗೆ ವಿವರಿಸಬಹುದು : ವಾಸ್ತವ ಪರಿಸ್ಥಿತಿಯಲ್ಲಿ ಏನಾದರೂ ಇರಲಿ, ತಾವು ಆಸೆಪಟ್ಟ ರೀತಿಯಲ್ಲಿ ಸಮಾಜದ ಪುನರ್ನಿರ್ಮಾಣ ಆಂತರ್ಯ ಕಾರ್ಯಕ್ಕೆ ತೊಡಗುವುದಾದರೆ ಅದು ಕಲ್ಪನೆಯಾಗುತ್ತದೆಯೇ ಹೊರತು ವಾಸ್ತವ ಪರಿಸ್ಥಿತಿಯಿಂದ ಅನಿವಾರ್ಯವಾಗಿ ಮೂಡುವ ವ್ಯವಸ್ಥೆಯಾಗುವುದಿಲ್ಲ. ವೈಜ್ಞಾನಿಕ ಸಮಾಜವಾದ ಈ ತಪ್ಪು ಮಾಡುವುದಿಲ್ಲ. ಅದು ವಾಸ್ತವ ಪರಿಸ್ಥಿತಿಯನ್ನವಲೋಕಿಸುತ್ತದೆ. ಒಂದು ಸ್ಥಿತಿಯಿಂದ ಇನ್ನೊಂದು ಸ್ಥಿತಿಗೆ ಆಗುವ ಅನಿವಾರ್ಯವಾದ ವ್ಯತ್ಯಾಸದ ಹಿಂದಿನ ಕ್ರಮ ಅಥವಾ ನಿಯಮವನ್ನು ಅನುಷ್ಠಾನಿಸುತ್ತದೆ. ಬಂಡವಾಳ ಸಮಾಜದ ಹಲವೆಂಟು ಚಟುವಟಿಕೆಗಳೇ ಹೇಗೆ ಅದನ್ನು ಸಮಾಜವಾದದ ಕಡೆಗೆ ತಳ್ಳುತ್ತಿದೆಯೆಂಬುದನ್ನೂ ಇದು ಹೇಗೆ ನಿಯಮಬದ್ಧವೆಂಬುದನ್ನೂ ತಿಳಿಸುವುದರಿಂದ ಇದು ವೈಜ್ಞಾನಿಕ ಸಮಾಜವಾದ. ಈ ವಿಶ್ಲೇಷಣೆಯಲ್ಲಿ ವೈಯಕ್ತಿಕ ಇಚ್ಛಾನಿಚ್ಛೆಗಳ ಪ್ರಶ್ನೆಯೇ ಇಲ್ಲ. ಪ್ರಕೃತಿ ಮತ್ತು ದುಡಿಮೆಗಳ ಸಂಯೋಗಫಲವೇ ಉತ್ಪಾದನೆ. ಇದರಿಂದ ಬಂದ ಫಲ ಹೋಗಬೇಕಾದ್ದು ದುಡಿಮೆ ಮಾಡಿದ ಕಾರ್ಮಿಕನಿಗೆ. ಆದರೆ ಆತನ ದುಡಿಮೆಗೆ ಪ್ರತಿಯಾಗಿ ಕೂಲಿ ಕೊಟ್ಟು, ಕೂಲಿಗೂ ನಿಜವಾದ ಪ್ರತಿಫಲಕ್ಕೂ ಇರುವ ಅಂತರವನ್ನು ಉದ್ಯಮಿಯಾದವನು ಉಳಿಸಿಕೊಳ್ಳುತ್ತಾನೆ. ಇದು ಉತ್ಪತ್ತಿಯಾದ ಪದಾರ್ಥದ ಅತಿರಿಕ್ತಮೌಲ್ಯ. ಇದು ನ್ಯಾಯವಾಗಿ ಸಲ್ಲಬೇಕಾದ್ದು ಕಾರ್ಮಿಕನಿಗೆ ; ಇದು ಅವನದೇ, ಅನ್ಯರದಲ್ಲ. ಹೀಗೆ ಅವನಿಗೆ ತಲುಪಿಸದೆ ಉಳಿಸಿಕೊಂಡ ಮೌಲ್ಯಗಳು ಶೇಖರವಾಗಿ ಬಂಡವಾಳವಾಗಿ ಪರಿಣಮಿಸಿವೆ. ಇದರಿಂದಾಗಿ ಉದ್ಯಮಗಳು ಬೆಳೆದಿವೆ. ವಾಸ್ತವವಾಗಿ ಇವೆಲ್ಲವೂ ಕಾರ್ಮಿಕನವೇ. ಉತ್ಪಾದನೆಯ ಗಾತ್ರ ದೊಡ್ಡದಾಗಿದೆ. ಬಂಡವಾಳದ ಉದ್ಯಮ ಬೆಳೆಯುವ ಮುನ್ನ ಸ್ವತಂತ್ರರಾಗಿದ್ದ ಕಾರ್ಮಿಕರು ಈಗ ಬಹುಸಂಖ್ಯೆಯಲ್ಲಿ ಉದ್ಯೋಗಿಗಳಾಗಿ ಉದ್ಯಮಪತಿಗಳ ಒಡೆತನಕ್ಕೊಳಪಟ್ಟು ಬೃಹತ್ ಕಾರ್ಖಾನೆಗಳಲ್ಲಿ ಒಟ್ಟಿಗೆ ಸೇರಿ—ಒಂದೇ ಕಡೆಯಲ್ಲಿ—ಒಂದೇ ಸೂರಿನ ಅಡಿಯಲ್ಲಿ—ಕೆಲಸ ಮಾಡುತ್ತಾರೆ. ಆದರೆ ಉದ್ಯಮಗಳ ನಡುವಣ ಸ್ಪರ್ಧೆ ಕ್ರಮೇಣ ತೀವ್ರವಾಗುತ್ತ ಮುಂದುವರಿದು, ಒಂದು ಉದ್ಯಮ ಇನ್ನೊಂದನ್ನು ನುಂಗುವ, ನುಚ್ಚುನುರಿ ಮಾಡುವ ಪ್ರವೃತ್ತಿ ಬೆಳೆದು, ಕೊನೆಗೆ ಇಡೀ ಸಮಾಜದ ಸಂಪತ್ತು ಕೆಲವೇ ಮಂದಿಯ ಕೈಯಲ್ಲಿ ಸೇರಿರುತ್ತದೆ. ಉಳಿದವರೆಲ್ಲ ಉದ್ಯೋಗಿಗಳಾಗಿ ಪರಿವರ್ತನೆಗೊಳ್ಳುತ್ತಾರೆ. ಈ ಜನರೇ ಸರ್ಕಾರವನ್ನೂ ತಮ್ಮ ಹತೋಟಿಗೆ ಒಳಪಡಿಸಿಕೊಂಡಿರುತ್ತಾರೆ. ಆದರೆ ಇಂಥ ವ್ಯವಸ್ಥೆಯ ಬೆಳೆವಣಿಗೆಗೆ ಕಾರಣವಾದ ಸ್ಪರ್ಧೆಗಳೇ—ಆಂತರಿಕ ಘರ್ಷಣೆಗಳೇ—ವಿರೋಧಾಭಾಸಗಳೇ—ಅದರ ಪತನಕ್ಕೂ ಕಾರಣವಾಗುತ್ತವೆ. ಒಂದೇ ಎಡೆಯಲ್ಲಿ ಸೇರಿದ ಕಾರ್ಮಿಕರು ಸಂಘಟಿತರಾಗಿ ಶಕ್ತಿಗಳಿಸಿ ಕೊನೆಗೆ ಈ ಅಸಮವ್ಯವಸ್ಥೆಯನ್ನು ಕೊನೆಗೊಳಿಸುತ್ತಾರೆ. ಆರ್ಥಿಕ ರಾಜಕೀಯ ಶಕ್ತಿಗಳನ್ನೆಲ್ಲ ತಾವು ವಶಪಡಿಸಿಕೊಳ್ಳುತ್ತಾರೆ. ಬಂಡವಾಳ ವ್ಯವಸ್ಥೆ ನಾಶಗೊಳ್ಳುತ್ತದೆ. ಎಂದರೆ ಇದು ಖಾಸಗಿ ಸ್ವಾಮ್ಯದ ಅಂತ್ಯ : ಸಮಾಜವಾದೀ ವ್ಯವಸ್ಥೆಯ ಸಾಮೂಹಿಕ ಒಡೆತನದ ಉಗಮ. ವೈಜ್ಞಾನಿಕ ತಾಂತ್ರಿಕ ಮುನ್ನಡೆಯ ಫಲವಾದ ಆಧುನಿಕ ಉತ್ಪಾದನ ಶಕ್ತಿಗಳು ನಾಶಗೊಳ್ಳದೆ ಉಳಿದುಕೊಳ್ಳಬೇಕಾದರೆ ಎಲ್ಲ ಉತ್ಪಾದನ ಸಾಧನಗಳ ಸಾಮೂಹಿಕ ಒಡೆತನವೇ ಸಮಾಜೀಕರಣವೇ ಏಕೈಕಮಾರ್ಗ. ಇದು ಯಾರೊಬ್ಬರ ಬುದ್ಧಿಯ ಫಲವಲ್ಲ. ಹಾಗಿದ್ದರೆ ಎಂದೋ ಇದನ್ನು ನಿರ್ಮಿಸಬಹುದಾಗಿತ್ತು, ಇದುವರೆಗಿನ ಸಂಕಟವನ್ನೆಲ್ಲ ತಡೆಗಟ್ಟಬಹುದಾಗಿತ್ತು. ಆದರೆ ಸಮಾಜವ್ಯವಸ್ಥೆ ತನ್ನಂತೆ ತಾನೇ ಬೆಳೆದು, ಕೊನೆಗೆ ಅನಿವಾರ್ಯವಾಗಿ ಈ ಕೊನೆಯ ಹಂತ ಮುಟ್ಟುವು

ದೆಂಬುದು ಮಾರ್ಕ್ಸ್–ಎಂಗೆಲ್ಸರ ವೈಜ್ಞಾನಿಕ ದೃಷ್ಟಿ. ಕಮ್ಯೂನಿಸಮಿನ ತಿರುಳನ್ನರಿಯುವ ಮುನ್ನ ಇದನ್ನರಿತುಕೊಳ್ಳಬೇಕಾದುದು ಅವಶ್ಯ.

ಸಮಾಜದಲ್ಲಿ ಸಂಭವಿಸಿದ್ದ ಪರಿಸ್ಥಿತಿಯ ನೈಜಚಿತ್ರವನ್ನು ಅರಿಯಲು ಮಾರ್ಕ್ಸ್–ಎಂಗೆಲ್ಸ್‌ರಿಗೆ ಆಗ ಐತಿಹಾಸಿಕ ಭೌತವಾದ ಬಹಳಮಟ್ಟಿಗೆ ಸಹಾಯಕ್ಕೆ ಬಂದಿತು. ಇದರ ಸ್ವರೂಪವನ್ನು ಮಾರ್ಕ್ಸ್–ಎಂಗೆಲ್ಸ್ ಹೀಗೆ ವಿವರಿಸಿದ್ದಾರೆ : ಪ್ರತಿಯೊಂದು ಸಮಾಜವ್ಯವಸ್ಥೆ ಕೈಗೊಂಡಿರುವ ಉತ್ಪಾದನೆಯ ವಿಧಾನವೂ ಉತ್ಪಾದನೆಯೊಡನೆ ಸಂಭವಿಸುವ ಉತ್ಪಾದಿತ ವಸ್ತುಗಳ ವಿನಿಮಯವೂ ಆ ಸಮಾಜವ್ಯವಸ್ಥೆಯ ಅಡಿಗಲ್ಲೆಂದು ಭೌತಾತ್ಮಿಕ ಭಾವನೆಯ ಇತಿಹಾಸ ತನ್ನ ಆರಂಭ ಸೂತ್ರವನ್ನಾಗಿ ಇಟ್ಟುಕೊಂಡಿದೆ ; ಮತ್ತು ಈ ವರೆಗೆ ಇತಿಹಾಸದಲ್ಲಿ ಅವತರಿಸಿರುವ ಸಮಾಜಗಳಲ್ಲಿನ ಉತ್ಪಾದನೆಯ ವಿಧಾನಗಳೇ ಉತ್ಪಾದನೆಯಾದ ವಸ್ತುಗಳ ವಿನಿಯಮದ ರೀತಿ, ಉತ್ಪಾದಿತ ಸಂಪತ್ತಿನ ವಿತರಣೆಯ ವಿಧಾನ, ಅದರಿಂದಾಗಿ ಸಂಭವಿಸಿರುವ ಸಮಾಜ ವಿಭಜನೆ, ವರ್ಗವಿಭೇದ–ಇತ್ಯಾದಿಗಳನ್ನು ನಿರ್ಧರಿಸಿವೆ. ಸಾಮಾಜಿಕ ಬದಲಾವಣೆಗಳಿಗೆ, ರಾಜಕೀಯ ಕ್ರಾಂತಿಗಳಿಗೆ ಅಂತಿಮವಾಗಿ ಕಾರಣವಾಗುವುದು ಉತ್ಪಾದನ ವಿಧಾನ ಮತ್ತು ವಿನಿಮಯ ವ್ಯವಸ್ಥೆ. ಪರಿವರ್ತನೆಗೆ ಕಾರಣವನ್ನು ಧರ್ಮ ಅಥವಾ ಶಾಶ್ವತ ಸತ್ಯದ ಚಿಂತನೆಯಲ್ಲಿ ಹುಡುಕಬಾರದು ; ಆಯಾ ಕಾಲದ ಅರ್ಥವ್ಯವಸ್ಥೆಯಲ್ಲಿ ಹುಡುಕಬೇಕು. ಸಮಾಜವ್ಯವಸ್ಥೆಯಲ್ಲಿಯ ನ್ಯೂನತೆಗಳಿಗೆ ಅವಕಾಶ ಕೊಟ್ಟ ಪರಿಸ್ಥಿತಿಯಲ್ಲೆ ಅವನ್ನು ನಿವಾರಿಸುವ ಪರಿಸ್ಥಿತಿಗಳೂ ಅಡಗಿರಲೇಬೇಕು. ಅಂದರೆ ಬದಲಾವಣೆಗೊಂಡಿರುವ ಉತ್ಪಾದನ ಕ್ರಮದಲ್ಲಿ ಈ ಪರಿಹಾರಗಳನ್ನು ಮನುಷ್ಯ ತನ್ನ ಬುದ್ಧಿಬಲದಿಂದ ನಿರ್ಮಿಸುವಂತಿಲ್ಲ ; ಇವನ್ನು ಬುದ್ಧಿಯ ಸಹಾಯದಿಂದ ಸಂಶೋಧಿಸಬೇಕು, ವಾಸ್ತವವಾದ ಉತ್ಪಾದನಾಂಗಗಳಿಂದ ಪತ್ತೆ ಹಚ್ಚಬೇಕು.

ಮಾರ್ಕ್ಸ್, ಎಂಗೆಲ್ಸ್‌ರು ಈ ನಿಯಮದ ಅನ್ವಯದಿಂದ ಆಧುನಿಕ ಸಮಾಜದ ಅಥವಾ ಬಂಡವಾಳಶಾಹೀ ಅರ್ಥವ್ಯವಸ್ಥೆಯ ಚಲನೆಯ ನಿಯಮಗಳನ್ನು ಬಹಿರಂಗಪಡಿಸಿದರು. ಹದಿನಾರನೆಯ ಶತಮಾನದಿಂದೀಚೆಗೆ ಬೆಳೆದುಬಂದಿರುವ ಬಂಡವಾಳ ಉತ್ಪಾದನ ವಿಧಾನವನ್ನು ವಿವರಿಸಿ ಇದು ಸಹ ಹಿಂದೆ ಗತಿಸಿಹೋದ ಪ್ರಾಚೀನ ಮತ್ತು ಊಳಿಗಮಾನ್ಯ ವ್ಯವಸ್ಥೆಗಳಂತೆ ಅಂತ್ಯಗೊಳ್ಳುವುದೆಂದೂ ಹಿಂದಿನ ವ್ಯವಸ್ಥೆಗಳು ಅಂತ್ಯಗೊಳ್ಳಲು ಅವೇ ಜನ್ಮಕೊಟ್ಟ ವರ್ಗ ಮತ್ತು ವರ್ಗವಿರಸಗಳೇ ಕಾರಣವಾದಂತೆ ಆಧುನಿಕ ಬಂಡವಾಳ ವ್ಯವಸ್ಥೆ ಜನ್ಮಕೊಟ್ಟಿರುವ ಹೊಸ ಕಾರ್ಮಿಕವರ್ಗವೇ ಈ ವ್ಯವಸ್ಥೆಯ ಅಂತ್ಯಕ್ಕೂ ಕಾರಣವಾಗುವುದೆಂದೂ ಹಿಂದಿನ ಅರ್ಥವ್ಯವಸ್ಥೆಗಳ ಪತನಕ್ಕೆ ಅವುಗಳ ಉತ್ಪಾದನ ಕ್ರಮದಲ್ಲಿ ಆದ ಬದಲಾವಣೆಯೂ ಹೊಸ ಉತ್ಪಾದನಶಕ್ತಿಗಳೂ ಕಾರಣವಾದಂತೆ ಬಂಡವಾಳ ಅರ್ಥವ್ಯವಸ್ಥೆಯ ಪತನಕ್ಕೂ ಅದರ ಹೊಸ ಉತ್ಪಾದನಕ್ರಮ ಮತ್ತು ಆಧುನಿಕ ಉತ್ಪಾದನಶಕ್ತಿಗಳು ಕಾರಣವಾಗುವುವೆಂದೂ ತಿಳಿಸಿದರು. ಆರ್ಥಿಕ ಬದಲಾವಣೆ ಮತ್ತು ಹೊಸ ಸಮಾಜವಾದಿ ಸಮಾಜದ ಉದಯ—ಇವು ಭಾವನೆಯ ವಿಕಾಸದಿಂದ ಉಂಟಾಗದೆ ಭೌತಿಕವಾಗಿ ಒಂದು ಚಲನೆಯ ನಿಯಮಕ್ಕೆ ಒಳಪಟ್ಟಂತೆ ಸಂಭವಿಸುತ್ತವೆ. ಬಂಡವಾಳ ವ್ಯವಸ್ಥೆಯಲ್ಲಿರುವ ದ್ವಂದ್ವವಿರೋಧಗಳೇ ಚಲನೆಯನ್ನು ತಂದು ಹೊಸ ಮಟ್ಟದಲ್ಲಿ ಸಮನ್ವಯಗೊಳ್ಳಲು ಮುನ್ನುಗ್ಗುವುವೆಂಬುದು ಇವರ ವಾದ. ಎಂಗೆಲ್ಸ್ ನುಡಿದಿರುವಂತೆ, ಆಧುನಿಕ ಸಮಾಜವಾದದ ವಿಶ್ಲೇಷಣೆಯೆಂದರೆ ಒಂದು ಅರ್ಥದಲ್ಲಿ ಅದು ಉಳ್ಳವರಿಗೂ ಇಲ್ಲದವರಿಗೂ ಕೂಲಿಗಾರರಿಗೂ ಬಂಡವಾಳಿಗರಿಗೂ ನಡುವಣ—ಎಂದರೆ ಆಧುನಿಕ ಸಮಾಜದಲ್ಲಿಯ ವರ್ಗಗಳ ನಡುವಣ—ಘರ್ಷಣೆಯ ಅವಲೋಕನವೇ ಆಗಿದೆ. ಇನ್ನೊಂದು ಅರ್ಥದಲ್ಲಿ ಇದು ಉತ್ಪಾದನವ್ಯವಸ್ಥೆಯಲ್ಲಿ ನೆಲೆಸಿರುವ ಅವ್ಯವಸ್ಥೆಯ (ಅನಾರ್ಕಿ) ಅಧ್ಯಯನವಾಗಿದೆ.

ಬಂಡವಾಳ ಅರ್ಥವ್ಯವಸ್ಥೆಯ ಲಕ್ಷಣಗಳು ಹಿಂದೆ ಇದ್ದು ಅಳಿದುಹೋಗಿರುವ ಯಾವ ವ್ಯವಸ್ಥೆಯಲ್ಲೂ ಇರಲಿಲ್ಲ. ಹಿಂದೆ ಉತ್ಪಾದನೆ ನಡೆಯುತ್ತಿದ್ದುದು ಲಾಭಗಳಿಕೆಗಾಗಿಯಲ್ಲ: ಬಯಕೆಗಳ ಪೂರೈಕೆಗಾಗಿ. ಈ ಉದ್ದೇಶ ನೆರವೇರಿದ ಮೇಲೆ ಉಳಿದ (ಹೆಚ್ಚಿಗೆ) ಪದಾರ್ಥಗಳು ಮಾರುಕಟ್ಟೆಗೆ ಬರುತ್ತಿದ್ದುವು; ವಿನಿಮಯಗೊಳ್ಳುತ್ತಿದ್ದುವು. ಆಗಿನ ಅರ್ಥವ್ಯವಸ್ಥೆ ಸ್ವಯಂಪೂರ್ಣವಾದದ್ದು. ಉತ್ಪಾದಕರು ಒಂದೆಡೆ ಸೇರಿ ಮಾರುಕಟ್ಟೆಯ ದೃಷ್ಟಿಯಿಂದ ಉತ್ಪಾದಿಸುತ್ತಿರಲಿಲ್ಲ; ಉತ್ಪಾದಿತವಾದ ಪದಾರ್ಥಗಳು ಉತ್ಪಾದಕನಿಗೆ ಸೇರಿದ್ದುವು ಮಾತ್ರವಲ್ಲದೆ ಉತ್ಪಾದನೆಗೆ ಸಹಾಯಕವಾದ ವಸ್ತುಗಳೂ ಉತ್ಪಾದಕನಿಗೇ ಸೇರಿದ್ದುವು. ಬಂಡವಾಳ ವ್ಯವಸ್ಥೆಯಲ್ಲಿ ಇನೆಲ್ಲವೂ ಬದಲಾವಣೆಯಾಗಿದೆ. ಲಾಭವನ್ನು ಗಳಿಸುವ ದೃಷ್ಟಿಯಿಂದ ಕೂಲಿಗಾರರನ್ನು ಬಂಡವಾಳಿಗ ಒಂದೆಡೆ ಸೇರಿಸುತ್ತಾನೆ. ಇವರು ಕೂಲಿಗಾಗಿ ಇಲ್ಲಿ ದುಡಿಮೆ ಮಾಡುತ್ತಾರೆ ಮತ್ತು ಉತ್ಪಾದನೆಗೆ ಆವಶ್ಯಕವಾದ ಸಾಮಗ್ರಿ, ಯಂತ್ರೋಪಕರಣ ಮುಂತಾದ ಎಲ್ಲವನ್ನೂ ಮಾಲೀಕ ಒದಗಿಸುತ್ತಾನೆ. ದಿನ ತುಂಬಿದರೆ ದುಡಿಮೆಗಾರನಿಗೆ ಕೂಲಿ ಮಾಸಲೇ ಹೊರತು, ಉತ್ಪಾದನೆಯಾದ ವಸ್ತುಗಳ ಮೇಲೆ ಆತನ ಒಡೆತನವಿಲ್ಲ ; ಅವು ಮಾಲೀಕನಿಗೆ ಸೇರಿದವು. ಹೀಗೆ ನಾನಾ ಭಾಗಗಳಲ್ಲಿ ಉತ್ಪಾದನೆ ನಡೆಯುತ್ತಿದೆ. ಎಲ್ಲರೂ ಮಾರುಕಟ್ಟೆಗಾಗಿ ಉತ್ಪಾದನೆ ಕೈಗೊಂಡಿರುತ್ತಾರೆ. ಮಾರುಕಟ್ಟೆಯ ಆವಶ್ಯಕತೆಯಾಗಲಿ ಯಾರು ಎಷ್ಟು ಪ್ರಮಾಣದಲ್ಲಿ ಉತ್ಪಾದಿಸಬೇಕೆಂಬುದಾಗಲಿ ಯಾರಿಗೂ ತಿಳಿಯದ ವಿಷಯ. ಅನೇಕ ವೇಳೆ ಹೆಚ್ಚು ಉತ್ಪಾದನೆಯಾಗಿ ಅದಕ್ಕೆ ಮಾರಾಟವಿಲ್ಲದೆ ಹೋಗಬಹುದು ; ಅಥವಾ ಪದಾರ್ಥದ ಆವಶ್ಯಕತೆ ಇದ್ದರೂ ಅದರ ಉತ್ಪಾದನೆ ಆಗದಿರಬಹುದು. ಇದಕ್ಕೆ ಗೊತ್ತುಗುರಿಯಿಲ್ಲದ ಯೋಜನೆಗೊಳಪಡದ ಉತ್ಪಾದನೆಯೇ ಒಂದು ಕಾರಣ. ಲಾಭಗಳಿಕೆಯಿಂದ ಉತ್ಪಾದನೆ ನಡೆಸುತ್ತಿರುವುದೇ ಇನ್ನೊಂದು ಕಾರಣ. ಲಾಭಸಿಗುವ ದೃಷ್ಟಿಯಿಂದ, ಲಾಭಗಳಿಸಿಕೊಡಬಲ್ಲ ಪದಾರ್ಥಗಳ ಉತ್ಪಾದನೆಗೆ ಮಾಲೀಕ ಸದಾ ಯತ್ನಿಸುತ್ತಾನೆ. ಆದರೆ ಈ ಲಾಭದ ಆಸೆಯಿಂದ ಬಂಡವಾಳ ಅರ್ಥವ್ಯವಸ್ಥೆಯನ್ನೇ ಆಕ್ರಮಿಸಿಕೊಳ್ಳಲು ದೃಷ್ಟಿಹರಿಸುತ್ತಾನೆ. ಹೆಚ್ಚು ಹೆಚ್ಚು ಲಾಭವನ್ನು ಗಳಿಸುವ ದೃಷ್ಟಿಯಿಂದ ಯಂತ್ರೋಪಕರಣಗಳ ವೃದ್ಧಿಗೆ ಗಮನಕೊಡುತ್ತಾನೆ. ಒಂದು ಕಡೆ ವಸಾಹತುಗಳ ಹಗಲು ದರೋಡೆ ನಡೆದರೆ, ಇನ್ನೊಂದುಕಡೆ ವಿಪರೀತ ಬಂಡವಾಳ ಶೇಖರಣೆಯಾಗುತ್ತ ಬಂದು ಹಾಕಿರುವ ಬಂಡವಾಳದ ಮೇಲೆ ಲಾಭಗಳಿಕೆ ಕ್ಷೀಣಿಸುತ್ತದೆ. ಹೀಗಾಗಿ ಬಂಡವಾಳ ಅರ್ಥವ್ಯವಸ್ಥೆ ಒಂದು ತೆರನಾದ ಪೀಕಲಾಟಕ್ಕೆ ಸಿಕ್ಕುತ್ತದೆ; ಬಂಡವಾಳ ಹೂಡಬೇಕು. ಹೆಚ್ಚು ಹೆಚ್ಚು ಬಂಡವಾಳ ಹೂಡಬೇಕು. ಲಾಭ ದೊರೆಯುತ್ತಿರಬೇಕು. ಆದರೆ ಉತ್ಪಾದನೆ ಕೈಗೊಂಡರೆ ಲಾಭ ದೊರಕುವುದಿಲ್ಲ. ದೊರೆಯುವುದಾದರೂ ಕ್ಷೀಣಿಸುತ್ತ ಬರುತ್ತಿರುತ್ತದೆ. ಬಂಡವಾಳ ವ್ಯವಸ್ಥೆಗೆ ಅಂಟಿರುವ ಈ ಜಾಡ್ಯದ ಜೊತೆಗೆ ಈ ಉತ್ಪಾದನ ವ್ಯವಸ್ಥೆಗೆ ಅಂಟಿರುವ ಇನ್ನೊಂದು ಜಾಡ್ಯವೂ ಸದಾ ಇದನ್ನು ಪೀಡಿಸುತ್ತಲೇ ಇರುತ್ತದೆ. ಅವ್ಯವಸ್ಥಿತ ಉತ್ಪಾದನ ಪರಿಸ್ಥಿತಿ ಆಗಾಗ್ಗೆ ಆರ್ಥಿಕ ಮುಗ್ಗಟನ್ನು ತಂದು ಚಾಚುತ್ತಿರುತ್ತದೆ. ಈ ಮುಗ್ಗಟ್ಟುಗಳು ಸಮಾಜದ ಮೇಲೆ ವರ್ಣಿಸಲಾರದ ದುಸ್ಥಿತಿಯನ್ನು ತರುತ್ತವೆ. ಈ ಕಾಲದಲ್ಲಿ ನುಚ್ಚುನುರಿಯಾದವರೆಷ್ಟೋ, ದಿವಾಳಿಯಾದವರೆಷ್ಟೋ, ಆತ್ಮಹತ್ಯ ಮಾಡಿಕೊಂಡವರೆಷ್ಟೋ. ಪ್ರವಾಹಕ್ಕೆ ಸಿಕ್ಕಿದ ಉತ್ತ ಭೂಮಿಯಂತೆ ಉತ್ಪಾದನ ವ್ಯವಸ್ಥೆಯೇ ಕೊಚ್ಚಿಹೋಗುತ್ತದೆ. ಅಪಾರ ಉತ್ಪಾದನಶಕ್ತಿಗಳು ಕಂಗಾಲಾಗಿ ಬೀಳುತ್ತವೆ. ಬೆಲೆ ಇಳಿಯದಂತೆ ತಡೆಗಟ್ಟಲು ಉತ್ಪಾದಿತವಾದ ಪದಾರ್ಥಗಳನ್ನು ನಾಶಪಡಿಸಲಾಗುತ್ತದೆ. ಇಷ್ಟುಮಾತ್ರವಲ್ಲ. ಈ ವಿಷಮ ಪರಿಸ್ಥಿತಿಯಿಂದ ಪಾರಾಗಲು ಬಂಡವಾಳ ಅರ್ಥವ್ಯವಸ್ಥೆ ಸದಾ ಪರಿಹಾರ ಮಾರ್ಗಗಳನ್ನು ಹುಡುಕುತ್ತಲೇ ಇರಬೇಕು. ಇವು ಬಂಡವಾಳ ವ್ಯವಸ್ಥೆ ಉಸಿರೆಳೆಯುವುದಕ್ಕೆ ತಾತ್ಕಾಲಿಕವಾಗಿ ಅವಕಾಶ ಮಾಡಿಕೊಟ್ಟರೂ ವಿಪತ್ತುಗಳಿಂದ ಅದಕ್ಕೆ ಪಾರೇ ಇಲ್ಲ. ಬಂಡವಾಳ ಶೇಖರಣೆ, ಬಂಡವಾಳದ ರಫ್ತು, ಉತ್ಪಾದನೆ, ವ್ಯಾಪಾರದಲ್ಲಿ ಏಕಸ್ವಾಮ್ಯ, ಮಾರುಕಟ್ಟೆಗಳ ಸಂಪಾದನೆ, ವಸಾಹತು ಯುದ್ಧ, ಪರಸ್ಪರ ಆಕ್ರಮಣಕಾರೀ ಯುದ್ಧ ಮುಂತಾದವು ಇದರ ಫಲ.

ಬಂಡವಾಳ ಅರ್ಥವ್ಯವಸ್ಥೆ ಇಂಥ ಬಿಕ್ಕಟ್ಟಿಗೆ ಸಿಕ್ಕಲು ಮತ್ತು ಕಾರ್ಮಿಕವರ್ಗದ ಕೊಳ್ಳುವ ಶಕ್ತಿಯನ್ನು ಕುಗ್ಗಿಸಲು ಅದು ನಡೆಸುತ್ತಿರುವ ಕಾಮಿಕವರ್ಗದ ಶೋಷಣೆಯೇ ಮುಖ್ಯಕಾರಣ. ಈ ಶೋಷಣೆ ಹೇಗೆ ನಡೆಯುತ್ತಿದೆ ?—ಎಂಬುದೂ ಪರಿಶೀಲನಾರ್ಹ. ಲಾಭದ ಇನ್ನೊಂದು ಅರ್ಥವೇ ಶೋಷಣೆ. ನಿರೀಕ್ಷಿಸಿದಂತೆ ಬಂಡವಾಳಗಾರನಿಗೂ ದುಡಿಯುವವನಿಗೂ ವಿನಿಮಯ ವ್ಯಾಪಾರ ನಡೆಯುತ್ತದೆ. ಬಂಡವಾಳಗಾರ ದುಡಿಮೆಗಾಗಿ ಕೂಲಿ ಕೊಡುತ್ತಾನೆ. ಕೂಲಿಗಾರ ಕೂಲಿಗೆ ಪ್ರತಿಯಾಗಿ ದುಡಿಮೆ ಮಾಡುತ್ತಾನೆ. ಮೇಲು ನೋಟಕ್ಕೆ ಮೌಲ್ಯಕ್ಕೆ ಮೌಲ್ಯದ ವಿನಿಮಯವಾದಂತೆ ಕಾಣುತ್ತದೆ. ಆದರೆ ಶೋಷಣೆಯ ಅಥವಾ ಲಾಭಗಳಿಕೆಯ ರಹಸ್ಯ ಅಡಗಿರುವುದೇ ಇಲ್ಲಿ. ಬಂಡವಾಳಗಾರ ತಾನು ಪಡೆದ ದುಡಿಮೆಗೆ ಅನುಗುಣವಾದ ಕೂಲಿಯನ್ನು ಕೊಟ್ಟಂತೆ ಕಂಡರೂ ಕೂಲಿಗಾರ ತನ್ನ ದುಡಿಮೆಯಲ್ಲಿ ತಾನು ಪಡೆದಿರಬಹುದಾದ ಮೌಲ್ಯಕ್ಕಿಂತ ಎರಡು ಅಥವಾ ಮೂರು ಪಟ್ಟು ಹೆಚ್ಚಾಗಿ ಉತ್ಪಾದಿಸುತ್ತಾನೆ. ಆದರೆ ಒಪ್ಪಂದದ ಪ್ರಕಾರ ನಿಗದಿಯಾದ ಘಂಟೆಗಳ ದುಡಿಮೆಗೆ, ನಿಗದಿಯಾದ ಪರಿಮಾಣದ ಉತ್ಪನ್ನಕ್ಕೆ ನಿಗದಿಯಾದ ಕೂಲಿ. ಆದರೆ ವಾಸ್ತವವಾಗಿ ಕೂಲಿಗಿಂತ ಹೆಚ್ಚಿನ ಮೌಲ್ಯವೇ ಉತ್ಪತ್ತಿಯಾಗುತ್ತದೆ. ಆದರೆ ಈ ಅಧಿಕ ಮೌಲ್ಯ—ಅತಿರಿಕ್ತಮೌಲ್ಯ—ಕೂಲಿಗಾರನಿಗೆ ಲಭಿಸುವುದಿಲ್ಲ, ಮಾಲೀಕನಿಗೆ ಸಲ್ಲುತ್ತದೆ ; ಇದು ಮಾಲೀಕನ ಲಾಭ, ಈ ಹೆಚ್ಚಿನ ಲಾಭ ಗಳಿಕೆಯ ರೂಪದಲ್ಲಿ ಬಂಡವಾಳವಾಗುತ್ತದೆ. ಇದೇ ರೀತಿಯಲ್ಲಿ ಹೆಚ್ಚಿಗೆ ಲಾಭಗಳಿಸಲು ಬಂಡವಾಳಗಾರ ಗಳಿಸಿರುವ ಬಂಡವಾಳವನ್ನು ಹೂಡುತ್ತಾನೆ. ಆದರೆ ಈ ಶೋಷಣೆಯನ್ನು ಕಾರ್ಮಿಕವರ್ಗ ವಿರೋಧಿಸುತ್ತದೆ. ಇದಕ್ಕೆ ತಾವಿಲ್ಲದಂತೆ ನಿರುದ್ಯೋಗ ನೋಡಿಕೊಳ್ಳುತ್ತದೆ. ಬಂಡವಾಳ ವ್ಯವಸ್ಥೆ ಸದಾ ಲಾಭ ಗಳಿಸುತ್ತಿರಬೇಕಾದರೆ ಅದಕ್ಕೆ ಆಸರೆಯಾಗಿ ಸದಾ ನಿರುದ್ಯೋಗ ಸಮೂಹ ಇರಲೇಬೇಕು. ಬಂಡವಾಳಗಾರ ತನ್ನ ಲಾಭಕ್ಕೆ ಧಕ್ಕೆ ಬರದಂತೆ ಇನ್ನೂ ಕಡಿಮೆ ದರದಲ್ಲಿ ದುಡಿಮೆಯನ್ನು ಕೊಂಡುಕೊಳ್ಳಲು ನಿರುದ್ಯೋಗಿಗಳಲ್ಲಿರುವ ಪೈಪೋಟಿ ಸಹಾಯಕ್ಕೆ ಬರುತ್ತದೆ. ಇದೇ ಬಂಡವಾಳ ಅರ್ಥವ್ಯವಸ್ಥೆಯಲ್ಲಿ ನಡೆಯು

ತ್ತಿರುವ ಶೋಷಣೆಯ ಅಥವಾ ಲಾಭಗಳಿಕೆಯ ಒಳಗುಟ್ಟು ಎನ್ನುತ್ತಾರೆ, ಮಾರ್ಕ್ಸ್ ಮತ್ತು ಎಂಗೆಲ್ಸ್.

ಈ ವಿರಸಗಳಿಗೆ ಬಂಡವಾಳ ಉತ್ಪಾದನ ಕ್ರಮದಲ್ಲಿ ತಲೆದೋರಿರುವ ದ್ವಂದ್ವ ಮತ್ತು ಪರಸ್ಪರ ವಿರೋಧಿ ಪ್ರವೃತ್ತಿಗಳೇ ಕಾರಣವೆಂದು ಮಾರ್ಕ್ಸ್-ಎಂಗೆಲ್ಸ್ ಮತ. ಈ ವ್ಯವಸ್ಥೆಯಲ್ಲಿ ಉತ್ಪಾದನಕಾರ್ಯವೊಂದು ಸಾಮಾಜಿಕ ಪ್ರಕ್ರಿಯೆ ; ಆದರೆ ಅದರ ಫಲವನ್ನು ಅಪಹರಿಸುವವರು ಬಂಡವಾಳಿಗರು. ಈ ಪರಿಸ್ಥಿತಿಯಿಂದಾಗಿಯೇ ಎಲ್ಲ ತಳಮಳ.

ಬಂಡವಾಳ ಅರ್ಥವ್ಯವಸ್ಥೆ ತಂದುಕೊಟ್ಟಿರುವ ಅಪಾರ ಉತ್ಪಾದನಶಕ್ತಿಗಳಿಗೆ ಖಾಸಗೀ ಅಪೋಷಣೆಯೇ ಶೃಂಖಲೆಯಾಗಿ ಪರಿಣಮಿಸಿದೆ. ಈ ಶೃಂಖಲೆಯಿಂದ ಆಧುನಿಕ ಉತ್ಪಾದನಶಕ್ತಿಗಳನ್ನು ವಿಮೋಚನೆಗೊಳಿಸುವುದಕ್ಕೂ, ಗೊತ್ತುಗುರಿಯಿಲ್ಲದೆ ಲಾಭಗಳಿಕೆಗಾಗಿ ಸ್ವೇಚ್ಛೆಯಿಂದ ವರ್ತಿಸುತ್ತಿರುವ ವ್ಯವಸ್ಥೆಯನ್ನು ಸಮಾಜದ ಆವಶ್ಯಕತೆಗಳ ಪೂರೈಕೆಗಾಗಿ ನಡೆಯುವ ವ್ಯವಸ್ಥೆಯನ್ನಾಗಿ ಮಾಡುವುದಕ್ಕೂ ಶೋಷಣೆಯಿಂದ ಪಾರಾಗುವುದಕ್ಕೂ ಯೋಜನಾಬದ್ಧ ಉತ್ಪಾದನೆ ಮತ್ತು ಬೆಳವಣಿಗೆಗಳ ಮೂಲಕ ನಿರುದ್ಯೋಗ, ಆರ್ಥಿಕ ಮುಗ್ಗಟ್ಟು ಮುಂತಾದವುಗಳನ್ನು ನಿವಾರಿಸುವುದಕ್ಕೂ ಬಂಡವಾಳ ಉತ್ಪಾದನಕ್ರಮದಲ್ಲಿರುವ ಖಾಸಗಿ ಒಡೆತನ ಮತ್ತು ಅಪಹರಣಗಳ ದಮನಕ್ಕೂ ಕಾರ್ಮಿಕವರ್ಗ ಚಳವಳಿ ಮಾಡುತ್ತದೆ. ಇದೇ ಸಮಾಜವಾದಿ ಚಳವಳಿ. ಮಾನವಕೋಟಿ ಅನಿವಾರ್ಯತೆಯ ಸೆರೆಯಿಂದ ಸ್ವಾತಂತ್ರ್ಯದ ಸೀಮೆಗೆ ನೆಗೆಯಲು ಆಧುನಿಕ ಅರ್ಥವ್ಯವಸ್ಥೆ ಎಲ್ಲ ಸೌಲಭ್ಯಗಳನ್ನೂ ಒದಗಿಸಿಕೊಟ್ಟಿದೆ. ಅಡ್ಡ ಬಂದಿರುವುದು ಉತ್ಪಾದನಕ್ರಮದಲ್ಲಿ ಹುದುಗಿರುವ ಖಾಸಗಿ ಸ್ವಾಮ್ಯಪದ್ಧತಿ ಮಾತ್ರ. ಇದನ್ನು ತೊಡೆದು ಹಾಕುವುದೇ ಸಮಾಜೀಕರಣ. ಈ ಕಾರ್ಯವೇ ವ್ಯವಸ್ಥಿತ ಹೋರಾಟದ ಸಮಾಜವಾದೀ ಪ್ರಜ್ಞೆ.

ಕಾಮಿಕವರ್ಗ ನಡೆಸುವ ಸಮಾಜವಾದಿ ಆಂದೋಲನ ಮತ್ತು ಇದರಿಂದ ಸ್ಥಾಪಿತವಾಗುವ ಸಮಾಜವಾದಿ ವ್ಯವಸ್ಥೆ, ಆಡಳಿತ ಮುನ್ನಡೆ—ಇವುಗಳ ಬಗ್ಗೆ ಇನ್ನೂ ಕೆಲವು ಅಂಶಗಳನ್ನು ಗಮನಿಸಬೇಕು. ಪ್ರಪ್ರಥಮವಾದ ಮತ್ತು ಅತ್ಯಂತ ಪ್ರಧಾನವಾದ ಅಂಶವೆಂದರೆ ಕಾರ್ಮಿಕವರ್ಗದ ಸರ್ವಾಧಿಕಾರ (ಡಿಕ್ಟೇಟರ್‌ಷಿಪ್ ಆಫ್ ದಿ ಪ್ರೋಲಿಟೇರಿಯೆಟ್) ಕೇವಲ ಬಂಡಾಯ ನಡೆಸುವುದಕ್ಕೆ ಈ ಚಳವಳಿಯನ್ನು ಸೀಮಿತಗೊಳಿಸುವುದರ ಅಪಾಯದ ಬಗ್ಗೆ ಮಾರ್ಕ್ಸ್—ಎಂಗೆಲ್ಸ್ ಎಚ್ಚರಿಕೆ ನೀಡಿದ್ದಾರೆ. ಸಮಾಜವಾದಿ ಕ್ರಾಂತಿ ಮಿಕ್ಕೆಲ್ಲ ಕ್ರಾಂತಿಗಳಂತಲ್ಲ, ಅರ್ಥವ್ಯವಸ್ಥೆಯಲ್ಲಿ ಬೇರೂರಿರುವ ಖಾಸಗಿ ಸ್ವಾಮ್ಯಪದ್ಧತಿ ಮತ್ತು ಅದರ ಶ್ರೇಷ್ಠತೆಯ ಬಗ್ಗೆ ಇರುವ ಭಾವನೆಯ ವಿರುದ್ಧ ಈ ಕ್ರಾಂತಿ ನಡೆದಿರುವುದರಿಂದ ಉಳಿದಿರುವ ಎಲ್ಲ ಸ್ವಾಮ್ಯವರ್ಗದ ಹಿತಾಸಕ್ತಿಗಳೂ ಈ ಆಂದೋಲನವನ್ನು ವಿರೋಧಿಸುವುದಲ್ಲದೆ, ನಾನಾ ಮಾರ್ಗಗಳಿಂದ ಇದನ್ನು ಹತ್ತಿಕ್ಕಲೂ ಯತ್ನಿಸುತ್ತವೆ. ಆದ್ದರಿಂದ ಈ ಹಿತಾಸಕ್ತಿಗಳ ದಮನಮಾಡುವುದೂ ಇವುಗಳ ಕೈಗೊಂಬೆಯಾದ ರಾಜ್ಯಶಕ್ತಿಯನ್ನು ವಶಪಡಿಸಿಕೊಳ್ಳುವುದೂ ಕಾರ್ಮಿಕವರ್ಗ ಕೈಗೊಳ್ಳಬೇಕಾದ ಪ್ರಥಮ ಕರ್ತವ್ಯ. ಇದು ಕಾರ್ಮಿಕವರ್ಗದ ಸರ್ವಾಧಿಕಾರದಿಂದ ಮಾತ್ರ ಸಾಧ್ಯ. ಇದಕ್ಕಾಗಿ ಕಾರ್ಮಿಕವರ್ಗ ರಾಜ್ಯಶಕ್ತಿಯನ್ನು ಈ ಹಿತಾಸಕ್ತಿಗಳ ದಮನಕ್ಕಾಗಿ ಕ್ರೋಡೀಕರಿಸಬೇಕು. ಇಲ್ಲವಾದರೆ, ಪ್ರತಿಕ್ರಾಂತಿ ನಡೆದು ಆಂದೋಲನ ಅಲ್ಪಾಯುವಾದೀತು. ಈ ಕಾರ್ಮಿಕ ಸರ್ವಾಧಿಕಾರ ನಿರಂಕುಶ ಪ್ರಭುತ್ವವಲ್ಲ ; ವರ್ಗಗಳ ದಮನಕ್ಕಾಗಿ ಜನಿಸಿರುವ ಈ ಪ್ರಭುತ್ವ ಸಾಮ್ಯವಾದಿಗಳ ಬಗ್ಗೆ ಸರ್ವಾಧಿಕಾರವಾಗಿ ಕಂಡುಬಂದರೆ ಅದು ವಿಧಿಯಿಲ್ಲದೆ ಕೈಗೊಳ್ಳಬೇಕಾದ ಕ್ರಮ: ಸಮಾಜವಾದಿ ಸಮಾಜದ ರಕ್ಷಣೆ ಅನವಶ್ಯವೆನಿಸುವಂಥ ಸ್ಥಿತಿ ಇರುವ ವರೆಗೂ ಇದು ನಡೆಯಲೇಬೇಕಾಗುತ್ತದೆ. ಈ ತೆರನಾದ ಪ್ರಭುತ್ವವನ್ನು ಸಾಮ್ಯವಾದಿಗಳು ಪ್ರಜಾಪ್ರಭುತ್ವದ ನಾಶವೆಂದೂ ನಿರಂಕುಶ ಪ್ರಭುತ್ವವೆಂದೂ ಕೂಗಿದರೆ ಅದು ಸ್ವಾರ್ಥ ಹಿತರಕ್ಷಣೆಯ ಸಾಧನಗಳನ್ನು ಕಳೆದುಕೊಂಡವರು ಎಬ್ಬಿಸುವ ಕೂಗು ಮಾತ್ರ ; ನೈಜ ಪ್ರಜಾಪ್ರಭುತ್ವಕ್ಕೆ ಇದರಿಂದ ಯಾವ ಹಾನಿಯೂ ಇಲ್ಲ.

ಕಾರ್ಮಿಕವರ್ಗದ ಸರ್ವಾಧಿಕಾರ ಒಂದು ಸಾಧನ ಮಾತ್ರ. ವರ್ಗಗಳು, ವರ್ಗ ಮನೋಭಾವ, ವರ್ಗೋತ್ಪತ್ತಿಕಾರಕವಾದ ಬಂಡವಾಳ—ಅರ್ಥವ್ಯವಸ್ಥೆಯ ಅವಶೇಷಗಳು—ಇವು ಸಂಪೂರ್ಣವಾಗಿ ನಿರ್ಮೂಲವಾದ ಕಾಲಕ್ಕೆ ಕಾರ್ಮಿಕರ ಸರ್ವಾಧಿಕಾರಿ ಪ್ರಭುತ್ವವೂ ರಾಜ್ಯದ ದಮನಶಕ್ತಿಯ ಆವಶ್ಯಕತೆಯೂ ಇಲ್ಲದಂತಾಗುತ್ತದೆ. ಆಗ ಆಡಳಿತ ವ್ಯವಸ್ಥೆ ಮಾತ್ರ ಉಳಿಯುತ್ತದೆ. ಎರಡನೆಯದಾಗಿ, ಸಮಾಜವಾದಿ ಕ್ರಾಂತಿಯಾದ ಕೂಡಲೆ ಸಮಾಜವಾದಿ ವ್ಯವಸ್ಥೆಯ ಲಕ್ಷಣಗಳೆಲ್ಲವೂ ಸಿದ್ಧಪಡಿಸಿದ ರೀತಿಯಲ್ಲಿ ಲಭಿಸುವುದಿಲ್ಲ. ಈ ವ್ಯವಸ್ಥೆಯ ರಚನೆಗಾಗಿ ಸತತವಾಗಿ ದಿಟ್ಟ ಮತ್ತು ಯೋಜಿತ ಕಾರ್ಯಕ್ರಮಗಳಿಂದ ಶ್ರಮಿಸಬೇಕು. ಮೊದಮೊದಲು ಬಂಡವಾಳ ಅರ್ಥವ್ಯವಸ್ಥೆಯ ಅನೇಕ ಲಕ್ಷಣಗಳು ಇರುತ್ತವೆ. ಪ್ರತಿಯೊಬ್ಬನಿಂದಲೂ ಆತನ ಶಕ್ತ್ಯನುಸಾರದ ದುಡಿಮೆ ಪಡೆದು ಆತನ ದುಡಿಮೆಗೆ ತಕ್ಕ ಪ್ರತಿಫಲ ಕೊಡುವಷ್ಟು ಮಾತ್ರ ವ್ಯವಸ್ಥೆ ಮಾಡುವುದು ಸಾಧ್ಯ. ಈ ಕಾಲದಲ್ಲಿ ಪೂರ್ಣ ಸಮಾಜವಾದಿ ವ್ಯವಸ್ಥೆಯ ನಿರ್ಮಾಣಕ್ಕೆ ಆಧಾರಸ್ತಂಭಗಳನ್ನು ಮಾತ್ರ ಏರ್ಪಡಿಸಿಕೊಳ್ಳಬಹುದು. ನಿರ್ದೇಶನ ದೃಷ್ಟಿಯಿಂದ ಈ ಘಟ್ಟವನ್ನು ಮೊದಲನೆಯ ಅಥವಾ ಸಾಮಾನ್ಯ ಸಮಾಜವಾದಿ ಘಟ್ಟವೆಂದು ಹೇಳಬಹುದು. ಕ್ರಮೇಣ ಸಾಮೂಹಿಕ ಉತ್ಪಾದನಶಕ್ತಿ ವೃದ್ಧಿಗೊಂಡು, ವಿಪುಲ ಉತ್ಪಾದನೆ ಗಳಿಸಿದ ಅನಂತರ, ಮುಂದಿನ ಪೀಳಿಗೆಗಳಲ್ಲಿ ಸಮಾಜವಾದೀ ಜಾಗೃತಿ ವೃದ್ಧಿಗೊಂಡಂತೆ, ಸಮತಾ ಸಮಾಜದ ಘಟ್ಟ (ಕಮ್ಯೂನಿಸ್ಟ್ ಸೊಸೈಟಿ) ಬರುತ್ತದೆ. ಈ ಘಟ್ಟದಲ್ಲಿ ಪ್ರತಿಯೊಬ್ಬನೂ ತನ್ನ ಶಕ್ತ್ಯನುಸಾರ ದುಡಿಯಲಿಕ್ಕೂ ಅವಶ್ಯಕತೆಗಳಿಗೆ ಅನುಗುಣವಾಗಿ ಪ್ರತಿಫಲ ಗಳಿಸಿಕೊಳ್ಳಲಿಕ್ಕೂ ಸಾಧ್ಯವಾಗುತ್ತದೆ.

**ಮಾರ್ಕ್ಸ್-ಎಂಗೆಲ್ಸ್ ಅನಂತರದ ಕಾಲ :** ಮಾರ್ಕ್ಸ್ 1883ರಲ್ಲೂ ಎಂಗೆಲ್ಸ್ 1895ರಲ್ಲೂ ಮರಣಹೊಂದಿದರು. 1871ರಲ್ಲಿ ಶೋಷಿತ ಜನರ ನೇತೃತ್ವದಲ್ಲಿ ಫ್ರಾನ್ಸ್ ದೇಶದಲ್ಲಿ ಸ್ವಲ್ಪ ಕಾಲದ ವರೆಗೆ ಯಶಸ್ವಿಯಾಗಿ ವಿರಾಜಿಸಿದ ಪ್ಯಾರಿಸ್ ಕಮ್ಯೂನ್ ಎಂಬ ಕ್ರಾಂತಿಕಾರಿ ಮತ್ತು ಸಮಾಜವಾದಿ ಆಂದೋಲನವನ್ನು ಬಿಟ್ಟರೆ, ಒಂದನೆಯ ಮಹಾಯುದ್ಧ (1914–1918) ಮುಗಿಯುವ ವರೆಗೂ ಯಾವ ಸಮಾಜವಾದಿ ಕ್ರಾಂತಿಯೂ ಯೂರೋಪ್ ಖಂಡದಲ್ಲಾಗಲಿ ಪ್ರಪಂಚದ ಇತರ ಭಾಗಗಳಲ್ಲಾಗಲಿ ನಡೆಯಲಿಲ್ಲ. ಈ ಕಾರಣದಿಂದ ಅನೇಕ ಸಮಾಜವಾದಿ ಮುಖಂಡರು ಮಾರ್ಕ್-ಎಂಗೆಲ್ಸ್‌ರ ಸಿದ್ಧಾಂತವನ್ನು ತೀಕ್ಷ್ಣವಾದ ವಿಮರ್ಶೆಗೆ ಒಳಪಡಿಸಿದರು. ಸುಧಾರಣಾ ಸಮಾಜವಾದಿ ತತ್ತ್ವಕ್ಕೆ (ರಿಫಾರ್ಮಿಸ್ಟ್ ಸೋಷಿಯಲಿಸಂ) ಬೆಂಬಲ ಕೊಟ್ಟರು. ಇಷ್ಟಲ್ಲದೆ, ಬಂಡವಾಳ ವ್ಯವಸ್ಥೆಯ ಆರ್ಥಿಕ ಚಲನವಲನದ ಬಗ್ಗೆ ಅದು ವ್ಯಕ್ತಪಡಿಸುವ ಘರ್ಷಣೆಗಳ ಬಗ್ಗೆ, ಕಾರ್ಮಿಕವರ್ಗದ ಪಾತ್ರದ ಬಗ್ಗೆ—ಮಾರ್ಕ್ಸ್-ಎಂಗೆಲ್ಸ್ ರೂಪಿಸಿರುವ ಸಿದ್ಧಾಂತದಲ್ಲಿ ಅಪನಂಬಿಕೆ ವ್ಯಕ್ತಪಡಿಸಿದರು. ಮಾರ್ಕ್ಸ್-ಎಂಗೆಲ್ಸ್ ಸಿದ್ಧಾಂತ ತಪ್ಪುಸೂಚನೆಗಳನ್ನು ಕೊಟ್ಟಿದೆಯೆಂದೂ ಬಂಡವಾಳ ಅರ್ಥವ್ಯವಸ್ಥೆ-ಯಾವ ವಿಪ್ಲವಕ್ಕೂ ಸಿಗದೆ ಸುಗಮವಾಗಿ ಬೆಳೆಯಬಲ್ಲುದೆಂದೂ ಬಂಡವಾಳ ಅರ್ಥವ್ಯವಸ್ಥೆಯ ಸುಗಮ ಬೆಳವಣಿಗೆಯಿಂದ ಕ್ರಾಂತಿಯ ಚಿಹ್ನೆಗಳು ಹತ್ತಿಕ್ಕಲು ಸಾಧ್ಯವಾಗಿರುವುದಲ್ಲದೆ ಅದರ ಸಾಧ್ಯತೆಯೂ ಸುಳ್ಳಾಗಿದೆಯೆಂದೂ ಸಾರಿದರು. ಇಂಥ ಪರಿಸ್ಥಿತಿಯಲ್ಲಿ ಮಾರ್ಕ್ಸ್-ಎಂಗೆಲ್ಸ್‌ರ ವಿಮರ್ಶನ ದಿಕ್‌ಸೂಚಿ ನಿಷ್ಪ್ರಯೋಜಕವಾಗಿ ಕಂಡುಬಂತು.



ವಿ. ಐ. ಲೆನಿನ್

ಇದನ್ನು ನಂಬಬೇಕೆ ಅಥವಾ ತ್ಯಜಿಸಬೇಕೆ ಎಂಬುದನ್ನು ಹೇಳುವುದು ಕಷ್ಟ ವೆಂಬಷ್ಟು ಮಟ್ಟಿಗೆ ಒಂದನೆಯ ಮಹಾಯುದ್ಧ ಮುಕ್ತಾಯಕ್ಕೆ ಬರುತ್ತಿದ್ದಂತೆ ಇತಿಹಾಸವೇ ಹುಚ್ಚೆದ್ದು ಕುಣಿಯುವಂತೆ ಯೂರೋಪ್ ಖಂಡದ ನಾನಾ ಮೂಲೆಗಳಲ್ಲಿ ಸಮಾಜವಾದೀ ಕ್ರಾಂತಿಯ ಆಸ್ಫೋಟನೆಗಳು ನಡೆದವೆಂಬುದನ್ನು ಗಮನಿಸಬೇಕು. ಇವುಗಳಲ್ಲಿ ಅತ್ಯಂತ ಮುಖ್ಯವಾದದ್ದು ರಷ್ಯದಲ್ಲಿ ಲೆನಿನನ ಮುಖಂಡತ್ವದಲ್ಲಿ ನಡೆದ ಸಮಾಜವಾದಿ ಕ್ರಾಂತಿ (1917). ಪ್ರಪಂಚದಲ್ಲಿ ಮೊಟ್ಟಮೊದಲನೆಯ ಬಾರಿಗೆ ಕಾರ್ಮಿಕರ ಪ್ರಭುತ್ವದ ಆಶ್ರಯದಲ್ಲಿ ಸಮಾಜವಾದಿ ಸಮಾಜದ ಘೋಷಣೆ ನಡೆಯಿತು; ಕಮ್ಯೂನಿಸ್ಟ್ ರಾಜ್ಯವೊಂದರ ಉದಯವಾಯಿತು. ಆಕಸ್ಮಿಕವಾಗಿ ಸಮಾಜದ ಕ್ರಾಂತಿಯೊಂದು ನಡೆದಿದೆಯೆಂದೂ ಇದರಿಂದ ಸಮಾಜವಾದದ ವಿರೋಧಿಗಳು ಯಾವ ಬಗೆಯಲ್ಲೂ ಹೆದರಬೇಕಿಲ್ಲವೆಂದೂ ಅನೇಕರು ಸಾರುತ್ತಿದ್ದಂತೆಯೇ ಎರಡನೆಯ ಮಹಾಯುದ್ಧದ ಅನಂತರ ಪುನಃ ಪ್ರಪಂಚದಾದ್ಯಂತ ಅನೇಕ ರಾಷ್ಟ್ರಗಳು ಇಂಥ ಕ್ರಾಂತಿಯ ಸೆಳೆತಕ್ಕೆ ಸಿಕ್ಕಿದುವು. ಅನೇಕ ಸ್ವತಂತ್ರ ರಾಷ್ಟ್ರಗಳಲ್ಲಿ ಸಮಾಜವಾದಿ ಚಳವಳಿ ಯಶಸ್ವಿಯಾದರೆ,ವಸಾಹತುಗಳಲ್ಲಿ ರಾಷ್ಟ್ರೀಯ ವಿಮೋಚನಾ ಚಳವಳಿಗಳು ನಡೆದವು. ಈ ಚಳವಳಿಗಳು ತಳೆದ ರೂಪ ಯಾವುದೇ ಇರಲಿ, ಬಂಡವಾಳ ಅರ್ಥವ್ಯವಸ್ಥೆಯ ಸುಗಮನಿರ್ವಹಣೆಯ ತತ್ತ್ವಕ್ಕೆ ಇವುಗಳಿಂದ ಶಿಲಾಂಜಲಿ ನೀಡಿದಂತಾಗಿದೆ. ಕಮ್ಯೂನಿಸ್ಟ್‌ತತ್ತ್ವದ ಪ್ರಭಾವಕ್ಕೆ ಒಳಗಾಗಿವೆಯೋ ಎಂಬಂತೆ ಸಮಾಜವಾದಿ ವ್ಯವಸ್ಥೆಯ ಅನೇಕ ಮೂಲತತ್ತ್ವಗಳು—ಯೋಜನೆ, ಯೋಜಿತ ಉತ್ಪಾದನೆ ಮತ್ತು ಆರ್ಥಿಕ ಬೆಳವಣಿಗೆ, ಖಾಸಗಿ ಉತ್ಪಾದನೆಯ ಮೇಲೆ ಹತೋಟಿ, ಸರ್ಕಾರದ ವತಿಯಿಂದ ಕೈಗಾರಿಕೆಗಳ ಸ್ಥಾಪನೆ, ರಾಷ್ಟ್ರೀಕರಣ, ಭೂಸುಧಾರಣೆ ಮುಂತಾದವನ್ನು ಆಚರಣೆಗೆ ತರಲಾಗಿದೆ. ಬಂಡವಾಳ ವ್ಯವಸ್ಥೆಗೆ ಹೊಂದಿಕೊಂಡಿದ್ದ ಮತ್ತು ಶಾಶ್ವತವೂ ಸ್ವತಂತ್ರ ಸಮಾಜದ ಹೆಗ್ಗುರುತುಗಳೂ ಎಂದೆನ್ನಲಾದ ಅನೇಕ ಹಕ್ಕು ಮತ್ತು ಹಿತಗಳ ಮೇಲೆ ದಾಳಿ ನಡೆದಿದೆ. ಮಾರ್ಕ್ಸ್–ಎಂಗೆಲ್ಸರು ಆಧುನಿಕ ಸಮಾಜವಾದವನ್ನು ಬೋಧಿಸುವುದಕ್ಕೂ ಮುಂಚೆಯೇ ತಮ್ಮಲ್ಲಿ ಸಮಾಜವಾದದ ಪರಂಪರೆ ಬೆಳೆದು ಬಂದಿತ್ತೆಂದು ಸಮಾಜವಾದಿ ವ್ಯವಸ್ಥೆಯ ಕಟ್ಟಾವಿರೋಧಿಗಳೂ ಹೇಳಲಾರಂಭಿಸಿದ್ದಾರೆ. ಮಾರ್ಕ್ಸ್–ಎಂಗೆಲ್ಸರ ಸಿದ್ಧಾಂತದಲ್ಲಿ ಅಡಗಿರುವ ನಿಜಾಂಶಕ್ಕೆ, ವೈಜ್ಞಾನಿಕ ಸಮಾಜವಾದಿ ತತ್ತ್ವದ ಇಷ್ಟೊಂದು ಯಶಸ್ವೀ ಮುನ್ನೋಟಕ್ಕೆ ಮತ್ತು ಅದು ಬೀರಿರುವ ಪ್ರಭಾವಕ್ಕೆ ಬೇರೊಂದು ಸಾಕ್ಷ್ಯಚಿತ್ರವನ್ನು ಕೊಡುವುದು ಅನಾವಶ್ಯಕವೆಂಬುದು ಸಮಾಜವಾದಿಗಳು ಇದಕ್ಕೆ ನೀಡುವ ಉತ್ತರ. (ಎಲ್.ಎಸ್.)

**ಕಮ್ಯೂನಿಸಂ, ಆದಿಮ :** ಮಾನವನ ಇತಿಹಾಸದ ಆದಿಕಾಲದಲ್ಲಿ ಇತ್ತೆಂದು ಹೇಳಲಾದ ವ್ಯವಸ್ಥೆ. ನೆಲವೇ ಮುಂತಾಗಿ ಎಲ್ಲ ಆಸ್ತಿಗಳ ಸಮಾನ ಒಡೆತನವಿದ್ದ ಆಗಿನ ವ್ಯವಸ್ಥೆ ಕಾರ್ಲ್‌ಮಾರ್ಕ್ಸ್ ಬೋಧಿತ ಕಮ್ಯೂನಿಸಮನ್ನೆ ಹೋಲುತ್ತದಾದ್ದರಿಂದ ಇದನ್ನು ಆದಿಮ ಕಮ್ಯೂನಿಸಂ ಎಂದು ಕರೆಯಲಾಗಿದೆ. ಸಮಾಜವಿಕಾಸದ ಬಗ್ಗೆ 19ನೆಯ ಶತಮಾನದಲ್ಲಿ ಪ್ರತಿಪಾದಿತವಾದ ಸಿದ್ಧಾಂತಗಳ ಫಲವಾಗಿ ಈ ಪರಿಕಲ್ಪನೆ ಪ್ರಪ್ರಥಮವಾಗಿ ರೂಪುಗೊಂಡಿತು. ಸಮಕಾಲೀನರಾದ ಕೆಲವು ಆದಿಮ ಜನರ ಜೀವನವಿಧಾನಗಳನ್ನು ಗಮನಿಸಿ, ಇವು ಕಮ್ಯೂನಿಸಮನ್ನು ಹೋಲುವುವೆಂದೂ ಆದ್ದರಿಂದ ಮಾನವ ಇತಿಹಾಸದ ಆದಿಕಾಲದಲ್ಲಿ ಈ ಬಗೆಯ ಜೀವನ ಸಾರ್ವತ್ರಿಕವಾಗಿದ್ದಿರಬೇಕೆಂದೂ ಅನೇಕರು ವಾದಿಸಿದರು. ಇವರ ಪೈಕಿ ಡಬ್ಲ್ಯೂ. ಎಚ್. ಆರ್. ರಿವರ್ಸ್ ಮುಖ್ಯ. ಓಷಿಯಾನಿಯದ ಮೆಲನೇಷಿಯದಲ್ಲಿರುವ ಜನರಲ್ಲಿ ಎರಡು ಬಗೆಯ ಕಮ್ಯೂನಿಸಂ ಅಥವಾ ಸಾಮೂಹಿಕ ಪದ್ಧತಿಗಳು ಇವೆಯೆಂದು ಆತ ಹೇಳಿದ್ದಾನೆ. ಒಂದು ಆಸ್ತಿಯ ಸಾಮೂಹಿಕ ಒಡೆತನ. ಲೈಂಗಿಕ ವಿಚಾರವನ್ನು ಕುರಿತದ್ದು ಇನ್ನೊಂದು. ನೆಲ, ದೋಣಿ ಮುಂತಾದವುಗಳ ಒಡೆತನದ ವಿಚಾರದಲ್ಲಿ ಈ ಪದ್ಧತಿಯನ್ನನುಸರಿಸುತ್ತಿದ್ದ ಜನಾಂಗಗಳನ್ನು ಆತ ಗುರುತಿಸಿದ್ದಾನೆ. ವ್ಯಕ್ತಿಯನ್ನು ಸಮಷ್ಟಿಯಲ್ಲಿ ಅಂತರ್ಗತಗೊಳಿಸುವ ಪ್ರಯತ್ನದಲ್ಲಿ ಆಸ್ತಿಯ ಸಾಮೂಹಿಕ ಒಡೆತನ ವ್ಯವಸ್ಥೆ ಒಂದು ಅನಿವಾರ್ಯ ಕ್ರಮವಾಗಿತ್ತೆಂದು ಇ. ಡರ್ಖೀಮ್ ವಾದಿಸಿದ್ದಾನೆ.

ಇತಿಹಾಸಪೂರ್ವ ಮಾನವ ಸಮಾಜ ಸ್ವರೂಪವನ್ನು ಕುರಿತು ಮಾರ್ಗನ್ ನಡೆಸಿದ ಸಂಶೋಧನೆಗಳ ಆಧಾರದ ಮೇಲೆ ಮಾರ್ಕ್ಸ್–ಎಂಗೆಲ್ಸರು ಈ ಪರಿಕಲ್ಪನೆಗೆ ಹೆಚ್ಚಿನ ಪ್ರಾಮುಖ್ಯ ನೀಡಿದರು. ಪ್ರಾಚೀನ ಕಾಲದಲ್ಲಿದ್ದು ಅನಂತರ ರೂಢಿಚ್ಯುತವಾದ ಮಾನವಸಮಾಜದ ಉತ್ಕರ್ಷ ಕಾಲದಲ್ಲಿದ್ದ ಪದ್ಧತಿಯ ಕಡೆಗೇ ಈಗಿನ ಸಮಾಜವೂ ಅನಿವಾರ್ಯವಾಗಿ ಸಾಗುತ್ತಿದೆಯೆಂಬುದೂ ಆದರೆ ಈಗಿನದು ಪ್ರಜ್ಞಾಪೂರ್ವಕವಾದ ವಿಕಾಸವೆಂದೂ ಇದು ಶಾಶ್ವತ ವ್ಯವಸ್ಥೆಯೆಂಬುದೂ ಇವರ ಭಾವನೆಯಾಗಿತ್ತು. ಈ ಅಭಿಪ್ರಾಯಕ್ಕೆ ಇಪ್ಪತ್ತನೆಯ ಶತಮಾನದ ಮಾನವಶಾಸ್ತ್ರಜ್ಞರನೇಕರು ಅಷ್ಟೇನೂ ಪ್ರಾಶಸ್ತ್ಯ ನೀಡಲಿಲ್ಲ. ಆದಿಮ ಜನರ ಜೀವನಸ್ಥಿತಿಯ ಬಗ್ಗೆ ಸಾಕಷ್ಟು ವಿವರಗಳಿಲ್ಲದೆ ಯಾವುದೇ ಸಮಗ್ರ ಚಿತ್ರವನ್ನು ರೂಪಿಸುವುದು ಸಾಧ್ಯವಿಲ್ಲವೆಂಬುದು ಕೆಲವರ ವಾದ. ಆದರೆ ಸೋವಿಯತ್ ವಿದ್ವಾಂಸರನೇಕರು ಮಾರ್ಗನನ ದೃಷ್ಟಿಯನ್ನು ಎತ್ತಿಹಿಡಿದಿದ್ದಾರೆ. ಗುಂಪಿನ ಜೀವನ, ಆಸ್ತಿಯ ಸಾಮೂಹಿಕ ಒಡೆತನ—ಇವು ಆರಂಭಕಾಲದಲ್ಲಿ ಸಾರ್ವತ್ರಿಕವಾಗಿದ್ದುವೆಂದೂ ಕ್ರಮೇಣ ಖಾಸಗಿ ಆಸ್ತಿ, ಕೌಟುಂಬಿಕ ಜೀವನ ಇವೆಲ್ಲವೂ ಬಂತೆಂದೂ ಇವರು ವಾದಿಸುತ್ತಾರೆ.

ಕಮ್ಯೂನಿಸಂ ಕುರಿತು ಈಗಿನವರ ಪರಿಕಲ್ಪನೆಗೆ ಅನುಸಾರವಾದ ಒಂದು ಸಮಗ್ರ ವ್ಯವಸ್ಥೆ ಮಾನವನ ನಾಗರಿಕತೆಯ ಇತಿಹಾಸದ ಆರಂಭಕಾಲದಲ್ಲಿ ಇತ್ತೆಂಬುದಾಗಿ ವಾದಿಸಲು ನೀಡಬಹುದಾದ ಆಧಾರಗಳು ಪರಿಪೂರ್ಣವಲ್ಲವೆಂದು ಕೆಲವರು ವಾದಿಸಿದರೆ, ಇಂಥ ವ್ಯವಸ್ಥೆ ಇರಲಿಲ್ಲವೆನ್ನುವುದಕ್ಕೂ ಆಧಾರಗಳು ಅಷ್ಟೇ ಅಪರಿಪೂರ್ಣವೆಂದು ಇನ್ನು ಕೆಲವರು ವಾದಿಸುತ್ತಾರೆ. ಈಗಲೂ ವಿಶ್ವದ ಹಲವೆಡೆಗಳ ಆದಿವಾಸಿ ಜನಾಂಗಗಳಲ್ಲಿರುವ ನಾನಾ ಪದ್ಧತಿಗಳಲ್ಲಿ ಕೆಲವನ್ನು ಆದಿಮ ಕಮ್ಯೂನಿಸಂ ಸಮರ್ಥನೆಗೆ ಉದಾಹರಿಸಬಹುದಾದರೆ ಇನ್ನು ಕೆಲವನ್ನು ಅದಕ್ಕೆ ವಿರುದ್ಧವಾದ ಪ್ರತಿಪಾದನೆಗೂ ಉದಾಹರಿಸಬಹುದಾಗಿದೆ. ಈ ಬಗ್ಗೆ ಇದಮಿತ್ಥಂ ಎಂದು ನಿರ್ಣಯ ನುಡಿಯುವುದಸಾಧ್ಯ. (ಬಿ.ಎಸ್‌ಎಚ್.)

**ಕಮ್ಯೂನಿಸ್ಟ್, ದಿ :** ಮಾರ್ಕ್ಸ್‌ವಾದ, ಲೆನಿನ್‌ವಾದದ ತಾತ್ತ್ವಿಕ ಪ್ರತಿಪಾದನೆಯೇ ಮುಖ್ಯ ಉದ್ದೇಶವೆಂದು ಘೋಷಿಸಿಕೊಂಡು, ಕೆ. ದಾಮೋದರನ್ ಸಂಪಾದಕತ್ವದಲ್ಲಿ 1945ರಲ್ಲಿ ಆರಂಭವಾದ ಕೇರಳೀಯ ಪತ್ರಿಕೆ. ಇದರ ಪ್ರಾರಂಭದ ಕೆಲವು ಸಂಚಿಕೆಗಳಲ್ಲಿ ಕೆ. ದಾಮೋದರನ್, ಇ. ಎಂ. ಎಸ್. ನಂಬೂದರಿಪಾದ್, ಎಂ. ಎಸ್. ದೇವದಾಸ್, ಸಿ. ಉನ್ನಿರಾಜ ಮೊದಲಾದವರ ಲೇಖನಗಳು ಪ್ರಕಟವಾದುವು. ಪತ್ರಿಕೆಯಲ್ಲಿ ದಿನವಹಿ ವಿಚಾರವ್ಯವಹಾರಗಳಲ್ಲದೆ ಕಮ್ಯೂನಿಸ್ಟ್ ಪಕ್ಷದ ತಾತ್ತ್ವಿಕ ಸಮಸ್ಯೆಗಳ ಬಗ್ಗೆ ಪಕ್ಷದ ಸದಸ್ಯರ ದೀರ್ಘ ಚರ್ಚೆಗಳೂ ಬರುತ್ತಿದ್ದುವು. 1946ರ ಹೊತ್ತಿಗೆ ಎಲ್ಲ ಕಮ್ಯೂನಿಸ್ಟ್ ಮುಖಂಡರೂ ಭೂಮಾಲೀಕರಿಂದ ಬತ್ತ ವಶಪಡಿಸಿಕೊಳ್ಳುವ ಹೋರಾಟದ ಸಂಬಂಧದಲ್ಲಿ ಬಂಧನಕ್ಕೊಳಗಾಗಿದ್ದರು. 1947ರ ಆಗಸ್ಟಿನಲ್ಲಿ ಅವರೆಲ್ಲ ಸೆರೆಯಿಂದ ಬಿಡುಗಡೆ ಹೊಂದಿದರಾದರೂ 1948ರ ಮಾರ್ಚಿನಲ್ಲಿ ಬಿ. ಟಿ. ರಣದೇವೆಯಿಂದ ಸಂಘಟಿತವಾದ ಕಾನೂನುಬಾಹಿರ ಕಾರ್ಯಕ್ರಮಗಳ ಸಂಬಂಧವಾಗಿ ಅವರಲ್ಲನೇಕರು ಭೂಗತರಾದರು ; ಉಳಿದವರು ಬಂಧಿತರಾದರು. ಏತನ್ಮಧ್ಯೆ ಕಮ್ಯೂನಿಸ್ಟ್ ಪತ್ರಿಕೆ ಅವಸಾನಹೊಂದಿತು. ಪತ್ರಿಕೆಯನ್ನು ಪೋಷಿಸುವರೇ ಇಲ್ಲವಾದದ್ದೂ ಕಮ್ಯೂನಿಸ್ಟ್ ಪಕ್ಷದವರು ಕಲ್ಕತ್ತೆಯಲ್ಲಿ ಸ್ವೀಕರಿಸಿದ ಉಗ್ರನೀತಿಯೂ ಇದರ ಸಾವಿಗೆ ಕಾರಣ. (ಟಿ.)

**ಕಮ್ಯೂನಿಸ್ಟ್ ಪಕ್ಷಗಳು, ವಿಶ್ವದ :** 1917ರ ಅಕ್ಟೋಬರ್ ಕ್ರಾಂತಿ ಜಯಪ್ರದವಾಗಿ, ರಷ್ಯದಲ್ಲಿ ಕಮ್ಯೂನಿಸ್ಟ್ ಸರ್ಕಾರ ಸ್ಥಾಪಿತವಾದಾಗ, ಇದೇ ವಿಧಾನಗಳಿಂದ ತಂತಮ್ಮ ದೇಶಗಳಲ್ಲಿ ರಾಜಕೀಯ ಆರ್ಥಿಕ ಸಾಮಾಜಿಕ ಪರಿವರ್ತನೆಗಳನ್ನು ಸಾಧಿಸುವ ಉದ್ದೇಶದಿಂದ ವಿಶ್ವದ ಹಲವು ರಾಷ್ಟ್ರಗಳಲ್ಲಿ ಸ್ಥಾಪಿತವಾದ ಪಕ್ಷಗಳು. ಈ ಎಲ್ಲ ಪಕ್ಷಗಳಿಗೂ ಕಮ್ಯೂನಿಸ್ಟ್ ಸಿದ್ಧಾಂತದ ಮೂಲಪುರುಷರಾದ ಮಾರ್ಕ್ಸ್ ಮತ್ತು ಎಂಗೆಲ್ಸರೇ ಅಲ್ಲದೆ, ಅನಂತರ ಬಂದ ಲೆನಿನ್, ಸ್ಟಾಲಿನ್, ಮಾವೊ ತ್ಸೆ–ಟುಂಗ್ ಮುಂತಾದ ಅನೇಕ ನಾಯಕರು ಕಾಲದಿಂದ ಕಾಲಕ್ಕೆ ಮಾರ್ಗದರ್ಶನ ನೀಡಿದ್ದಾರಲ್ಲದೆ, ಮಾರ್ಕ್ಸ್–ಎಂಗೆಲ್ಸ್ ಪ್ರತಿಪಾದಿತವಾದ ಮೂಲತತ್ತ್ವಗಳನ್ನು ಪರಿಷ್ಕರಿಸಿ, ಅಗತ್ಯವಿದ್ದೆಡೆಗಳಲ್ಲಿ ಪುನಃ ರೂಪಿಸಿ ಬೆಳೆಸಲು ಕಾರಣರಾಗಿದ್ದಾರೆ. ಮೂಲತಃ ಎಲ್ಲ ಪಕ್ಷಗಳಿಗೂ ಸೂಕ್ತ ನಿರ್ದೇಶನ ನೀಡುವ ಹೊಣೆಯನ್ನು ಸೋವಿಯತ್ ಕಮ್ಯೂನಿಸ್ಟ್ ಪಕ್ಷವೇ ನಿರ್ವಹಿಸುತ್ತಿತ್ತಾದರೂ ಎರಡನೆಯ ಮಹಾಯುದ್ಧದ ಅನಂತರದ ಕಾಲದಲ್ಲಿ ಅನೇಕ ಕಮ್ಯೂನಿಸ್ಟ್ ಪಕ್ಷಗಳು ಹೆಚ್ಚು ಹೆಚ್ಚು ಸ್ವತಂತ್ರಧೋರಣೆ ತಳೆದಿವೆ, ಪ್ರಾದೇಶಿಕ ಸನ್ನಿವೇಶಗಳೂ ವಿಶಿಷ್ಟ ಐತಿಹಾಸಿಕ ಕಾರಣಗಳೂ ಇವುಗಳ ಮೇಲೆ ಪ್ರಬಲ ಪ್ರಭಾವ ಬೀರುತ್ತಿವೆ. ಉತ್ಪಾದನಸಾಧನಗಳ ಸರ್ಕಾರಿ ಒಡೆತನ, ಸಾಮೂಹಿಕ ಬೇಸಾಯ, ಯೋಜನಾಬದ್ಧ ಆರ್ಥಿಕಾಭಿವೃದ್ಧಿ, ಬಲಪ್ರಯೋಗದಿಂದ ಅಧಿಕಾರ ಸ್ವಾಧೀನ, ಕಾರ್ಮಿಕ ಸರ್ವಾಧಿಕಾರದ ಅನಿವಾರ್ಯತೆ, ಅಂತರರಾಷ್ಟ್ರೀಯ ಕಮ್ಯೂನಿಸ್ಟ್ ಸಾಮ್ರಾಜ್ಯ ಸ್ಥಾಪನೆ—ಮುಂತಾದ ಅದರ ನಾನಾ ಆದರ್ಶಗಳಲ್ಲಿ ಕಾಲದಿಂದ ಕಾಲಕ್ಕೆ ವ್ಯತ್ಯಾಸಗಳುಂಟಾಗಿವೆ. ಬಂಡವಾಳವ್ಯವಸ್ಥೆಯ ಅಡಿಯಲ್ಲೇ—ಪ್ರಜಾಸತ್ತಾತ್ಮಕ ವಿಧಾನಗಳ ಮೂಲಕವೇ—ಕಮ್ಯೂನಿಸ್ಟರು ಅಧಿಕಾರಕ್ಕೆ ಬಂದು, ಪ್ರತಿಗಾಮಿ ಶಕ್ತಿಗಳನ್ನು ಹತ್ತಿಕ್ಕಿ, ಪ್ರಗತಿ ಶಕ್ತಿಗಳನ್ನು ಸಂಘಟಿಸಿ ಪ್ರಬಲಗೊಳಿಸಿ ಸಮಾಜವಾದ ಸ್ಥಾಪಿಸುವ ಸಾಧ್ಯತೆಯನ್ನೂ ಪ್ರಯೋಗಿಸಿ ನೋಡಲಾಗುತ್ತಿದೆ. ಬಂಡವಾಳವಾದಿ ರಾಷ್ಟ್ರಗಳ ನಡುವೆ ಭದ್ರಕೋಟೆಯಂತೆ ಸೋವಿಯತ್ ದೇಶದ ಸ್ಥಾಪನೆಯಾಗಿರುವುದರಿಂದ ಈ ಹಿರಿಯಣ್ಣನ ಶಕ್ತಿದಕ್ಷತೆಗಳು ಸಮಾಜವಾದಿ ವ್ಯವಸ್ಥೆಯ ಹಿರಿಮೆಯನ್ನು ಮನದಟ್ಟು ಮಾಡಿಕೊಟ್ಟು, ಸಂದೇಹಗ್ರಸ್ತರ ಮನಃ ಪರಿವರ್ತನೆಗೆ ಸಾಧಕವಾಗಬಹುದೆಂಬ ಅಭಿಪ್ರಾಯವೂ ಉಂಟು. ಎರಡನೆಯ ಮಹಾಯುದ್ಧವಾದಮೇಲೆ ಪೂರ್ವಯೂರೋಪಿನ ರಾಷ್ಟ್ರಗಳಲ್ಲೂ ಚೀನ, ಉತ್ತರ ಕೊರಿಯ, ಉತ್ತರ ವಿಯೆಟ್ನಾಂಗಳಲ್ಲೂ

ಕಮ್ಯೂನಿಸ್ಟ್ ಸರ್ಕಾರಗಳು ಬಂದಿರುವುದೇ ಅಲ್ಲದೆ ದೂರದ ಕ್ಯೂಬವೂ ಕಮ್ಯೂನಿಸ್ಟ್ ಹೊರಸ್ತಂಭಗಳಲ್ಲೊಂದಾಗಿದೆ. ಈ ಕಾರಣಗಳಿಂದಾಗಿ ಭವಿಷ್ಯ ಜಗತ್ತು ಕಮ್ಯೂನಿಸ್ಟರಾದ ತಮ್ಮದು ; ತಮ್ಮದು ಬೆಳೆಯುತ್ತಿರುವ ವ್ಯವಸ್ಥೆ : ಆದ್ದರಿಂದ ಹಿಂಸಾತ್ಮಕ ಕ್ರಾಂತಿ ಯಾವಾಗಲೂ ಎಲ್ಲೆಡೆಗಳಲ್ಲೂ ಅನಿವಾರ್ಯ ವೇನೂ ಅಲ್ಲ—ಎಂಬ ಭಾವನೆಯೂ ಇದೆ. ಆದರೆ ಚೀನೀ ಪಕ್ಷ ಇದಕ್ಕೆ ಸೊಪ್ಪುಹಾಕುವುದಿಲ್ಲ. ಬಂದೂಕದ ನಳಿಕೆಯೊಳಗಿಂದ ಶಕ್ತಿಯು ಉದ್ಭವವಾಗುವುದೆಂಬುದು ಮಾವೊ ವಾಣಿ. ಕೈಗಾರಿಕೆಯಲ್ಲಿ ಆತ್ಯಂತಿಕ ಪ್ರಗತಿ ಸಾಧಿಸಿರುವ ಸೋವಿಯತ್ ದೇಶವೀಗ ಕ್ರಮವಾಗಿ ಪರಿಷ್ಕರಣವಾದಿಯಾಗಿ ಬಂಡವಾಳವ್ಯವಸ್ಥೆಯ ಕಡೆಗೆ ಜಾರಿ ಹೋಗುತ್ತಿದೆಯೆಂದೂ ಪಟ್ಟಭದ್ರ ಆಡಳಿತವರ್ಗದ ಕಟ್ಟುಕಟ್ಟಳೆಗಳಿಂದಾಗಿ ಕಮ್ಯೂನಿಸ್ಟ್ ಸರಳಸಿದ್ಧಾಂತವೇ ಅಲ್ಲಿ ಬಡವಾಗುತ್ತಿವೆಯೆಂದೂ ಜಡವಾಗುತ್ತಿದೆಯೆಂದೂ ಚೀನೀಪಕ್ಷದ ವಾದ. ನಾನಾ ಸೈದ್ಧಾಂತಿಕ ಭಿನ್ನತೆಗಳಿಂದಾಗಿ ಇತ್ತೀಚಿನ ವರ್ಷಗಳಲ್ಲಿ ವಿಶ್ವಕಮ್ಯೂನಿಸ್ಟ್ ಪಕ್ಷಗಳ ಸಹಭಾವ ಕ್ಷಿಪ್ರಾತಿಕ್ಷಿಪ್ರವಾಗಿ ಕ್ಷಯಿಸಿಹೋಗುತ್ತಿದೆ. ಸೋವಿಯತ್ ದೇಶವೇ ಕಮ್ಯೂನಿಸ್ಟರ ಪುಣ್ಯ ಭೂಮಿ, ಪಿತೃಭೂಮಿ; ಮಾಸ್ಕೋ ಅವರ ತೀರ್ಥಕ್ಷೇತ್ರ—ಎಂಬ ವಾದವನ್ನೊಪ್ಪದೆ 1948ರಲ್ಲಿ ಸಿಡಿದೆದ್ದ ಯುಗೊಸ್ಲಾವಿಯಾದ ಕಮ್ಯೂನಿಸ್ಟ್ ಪಕ್ಷದ ನಿಲುವಿಗೆ ಈಗ ಆ ಪಕ್ಷವೇ ನಿರೀಕ್ಷಿಸದಿದ್ದ ಮತ್ತು ಬಯಸದಿದ್ದ ರೀತಿಯಲ್ಲಿ ಚೀನೀಪಕ್ಷದ ಸಮರ್ಥನೆ ದೊರಕಿದೆ. ಯುಗೊಸ್ಲಾವಿಯವಾದರೋ ಈಗ ಸೋವಿಯತ್ ಪಕ್ಷದ ಕಡೆಗೆ ಹಿಂದಿಗಿಂತ ಹೆಚ್ಚಾಗಿ ಸರಿದು ಬಂದಿದೆ.

ಕಮ್ಯೂನಿಸ್ಟ್ ಚಳವಳಿಯ ಅಂಕುರಾರ್ಪಣವಾದದ್ದು 19ನೆಯ ಶತಮಾನದ ಅಂತ್ಯಕಾಲದಲ್ಲಿ. ಕೈಗಾರಿಕಾ ಕ್ರಾಂತಿಯ ವೈಪರೀತ್ಯಗಳ ಪರಿಣಾಮವಾಗಿ ಪಶ್ಚಿಮ ಯುರೋಪಿನಲ್ಲೆಲ್ಲ ಆಗ ಕಾರ್ಮಿಕ ಅಶಾಂತಿ ಹಬ್ಬಿತ್ತು. ರಷ್ಯದಲ್ಲಿ ಕೈಗಾರಿಕೆಗಳು ಅಷ್ಟೇನೂ ಬೆಳೆದಿರಲಿಲ್ಲ. ಆದರೆ ಅಲ್ಲಿ ಕ್ರಾಂತಿಗೆ ಎಲ್ಲವೂ ಅಣಿಯಾಗಿತ್ತು. ಇಡೀ ರಷ್ಯದಲ್ಲಿ ಆಗ ಕೇವಲ 24 ಲಕ್ಷ ಮಂದಿ ಕಾರ್ಮಿಕರಿದ್ದರೂ ಅವರಲ್ಲಿ ಪಶ್ಚಿಮದಿಂದ ಬಂದ ಮಾರ್ಕ್ಸಿಸ್ಟ್ ಸಾಹಿತ್ಯ ಪ್ರಚಾರವಾಗಿತ್ತು. 1889 ರಲ್ಲಿ ಐರೋಪ್ಯ ಕಾರ್ಮಿಕರು ರಚಿಸಿಕೊಂಡಿದ್ದ ದ್ವಿತೀಯ ಅಂತರರಾಷ್ಟ್ರೀಯದಲ್ಲಿ ರೂಪಿತವಾಗಿದ್ದ ಭಾವನೆಗಳು ರಷ್ಯದಲ್ಲೂ ಹಬ್ಬಿದ್ದವು. ಶಾಂತಿಯುತ ವಿಧಾನಗಳಿಂದ ಸಮಾಜವಾದದ ಸ್ಥಾಪನೆ ಸಾಧ್ಯವಾದೀತೆಂದೇ ಇವರ ಆಸೆ. ಆದರೆ ರಷ್ಯದ ಪರಿಸ್ಥಿತಿಗಳು ಈ ನಿರೀಕ್ಷೆಯನ್ನು ಸುಳ್ಳಾಗಿಸಿದುವು. 1895 ರಲ್ಲಿ ಸೇಂಟ್ ಪೀಟರ್ಸ್‌ಬರ್ಗಿನಲ್ಲಿ ಕಾರ್ಮಿಕವರ್ಗ ವಿಮೋಚನಾ ಸಮರ ಸಂಘದ ಸ್ಥಾಪನೆಯಾದಾಗ ಅದರ ದಾರಿ ಬೇರೆಯಾಯಿತು. ಲೆನಿನ್ ಇದರ ಸ್ಥಾಪಕರಲ್ಲೊಬ್ಬ.

ಇತರ ನಗರಗಳಲ್ಲೂ ಈ ಬಗೆಯ ಸಂಘಗಳು ಸ್ಥಾಪಿತವಾದುವು. 1898 ರಲ್ಲಿ ಮಿನ್ಸ್ಕ್‌ನಲ್ಲಿ ಸೇರಿದ್ದ ಈ ನಾನಾ ಸಂಘಗಳ ಪ್ರತಿನಿಧಿಗಳ ಸಭೆಯಲ್ಲಿ ರಷ್ಯನ್ ಸಮಾಜವಾದಿ ಪ್ರಜಾಸತ್ತಾತ್ಮಕ ಕಾರ್ಮಿಕ ಪಕ್ಷದ ಸ್ಥಾಪನೆಯಾಯಿತು. ಆಗಲೇ ಕಮ್ಯೂನಿಸ್ಟ್ ಪಕ್ಷ ಜನ್ಮತಳೆಯಿತೆನ್ನಬಹುದು. ದಬ್ಬಾಳಿಕೆ ಮತ್ತು ಬಂಡವಾಳಗಳ ವಿರುದ್ಧ ಹೋರಾಟ ನಡೆಸಬೇಕೆಂದು ಆ ಸಭೆಯಿಂದ ಒಂದು ಪ್ರಣಾಳಿಕೆ ಹೊರಬಿತ್ತು. ಆದರೆ ಅನಂತರ ಪಕ್ಷದ ನಾಯಕರನೇಕರು ಸೆರೆಯಾದವರು, ಉಳಿದ ಕೆಲವರು ಭೂಗತರಾದರು.

19ನೆಯ ಶತಮಾನದ ಅವಸಾನಕಾಲದಲ್ಲಿ ಯುರೋಪಿನಲ್ಲೆಲ್ಲ ವ್ಯಾಪಿಸಿದ ಕೈಗಾರಿಕಾ ಮುಗ್ಗಟ್ಟು ರಷ್ಯಕ್ಕೆ ಹೊರತಾಗಿಲ್ಲ. ದಿವಾಳಿತನ ನಿರುದ್ಯೋಗಗಳು ಸಾರ್ವತ್ರಿಕವಾದುವು. ಪ್ರದರ್ಶನಗಳೂ ಪ್ರತಿಭಟನೆಗಳೂ ಮುಷ್ಕರಗಳೂ ಪರಿಸ್ಥಿತಿಯನ್ನು ವಿಷಮಗೊಳಿಸಿದುವು. 1897ರಲ್ಲಿ ಸೈಬೀರಿಯಕ್ಕೆ ಗಡಿಪಾರಾಗಿದ್ದ ಲೆನಿನ್ ರಷ್ಯಕ್ಕೆ ಹಿಂದಿರುಗಿ ಮತ್ತೆ ತನ್ನ ಕಲಾಪಗಳಲ್ಲಿ ತೊಡಗಿದ. ರಷ್ಯನ್ ಸಮಾಜವಾದಿ ಪ್ರಜಾಸತ್ತಾತ್ಮಕ ಪಕ್ಷ ಮತ್ತೆ ಸ್ಥಾಪನೆಯಾಯಿತು (1903). ಇದಾದದ್ದು ರಷ್ಯದಲ್ಲಲ್ಲ, ಬೆಲ್ಜಿಯಂನ ಬ್ರಸಲ್ಸಿನಲ್ಲಿ. ರಷ್ಯದಲ್ಲಿ ನಾಯಕರು ಮತ್ತೆ ದಸ್ತಗಿರಿಯಾಗುವ ಸಂಭವವಿತ್ತು. ಬ್ರಸಲ್ಲಿನ ಅಧಿವೇಶನವೂ ಪೋಲೀಸರ ಕಣ್ಣಿಗೆ ಬಿದ್ದುದರಿಂದ ಪ್ರತಿನಿಧಿಗಳು ಕಲಾಪಗಳ ಮಧ್ಯದಲ್ಲೇ ಲಂಡನ್ನಿಗೆ ಹೋದರು.

ಆದರೆ ಆಗಲೂ ಈ ಪಕ್ಷವನ್ನು ಎಡಬಲ ಗುಂಪುಗಳು ಕಾಡಿಸದಿರಲಿಲ್ಲ. ಲೆನಿನ್ನನದು ವಾಮಪಕ್ಷ. ಕೇಂದ್ರ ಶಿಸ್ತಿನ ಹೋರಾಟ ಪಡೆಯಂತೆ ಪಕ್ಷದ ವ್ಯವಸ್ಥೆಯಾಗಬೇಕೆಂಬುದು ಲೆನಿನ್ ಅಭಿಪ್ರಾಯ. ಪಕ್ಷದ ಶಿಸ್ತಿಗೆ ಬದ್ಧರಾದವರೂ ಅದರ ಕಾರ್ಯಕ್ರಮಗಳನ್ನು ನಿರ್ವಹಿಸುವವರೂ ಚಂದಾ ಸಲ್ಲಿಸುವವರೂ ಸದಸ್ಯರು. ಪಕ್ಷದ ನೀತಿಯಲ್ಲಿ ಕೇವಲ ಸಹಾನುಭೂತಿಯಿರುವವರು ಸದಸ್ಯರಾಗತಕ್ಕದ್ದಲ್ಲ. ಇದು ಲೆನಿನ್ ವಾದ. ಟ್ರಾಟ್ಸ್ಕಿಯದು ಇದಕ್ಕೆ ವಿರೋಧವಾದ ಅಭಿಪ್ರಾಯ. ಆತ ಬಲಗುಂಪಿನ ನಾಯಕ. ಪಕ್ಷದ ಕಾರ್ಯಕ್ರಮವನ್ನೊಪ್ಪುವ, ಅದಕ್ಕೆ ಪ್ರತ್ಯಕ್ಷ ಪರೋಕ್ಷ ನೆರವು ನೀಡುವ ಎಲ್ಲರೂ ಸದಸ್ಯರಾಗಬಹುದೆಂದು ಅವನ ವಾದ. ತತ್ಕಾಲದಲ್ಲಿ ಬಲಗುಂಪಿಗೆ ಬಹುಮತವಿತ್ತು. ಆದರೆ ಮುಂದೆ ಅದರ ಕೆಲವು ಧೋರಣೆಗಳನ್ನೊಪ್ಪದವರು ಹೊರಬಂದಿದ್ದರಿಂದ ಕೇಂದ್ರ ಸಮಿತಿಯಲ್ಲಿ ಎಡಗುಂಪಿನ ಕೈ ಮೇಲಾಯಿತು. ಬಹು ಸಂಖ್ಯಾತರಾದ ಈ ಗುಂಪಿನವರು ತಮ್ಮನ್ನು ಬಾಲ್ಷವಿಸ್ಟರೆಂದು ಕರೆದುಕೊಂಡರು. ಅಲ್ಪ ಸಂಖ್ಯಾತರಾದ ಬಲಗುಂಪಿನವರು ಮೆನ್ಷವಿಸ್ಟರು. ಮುಂದೆ ಅನೇಕಸಾರಿ ಅಧಿಕಾರ ಇವುಗಳ ನಡುವೆ ಲಾಳಿಯಂತೆ ಅಡ್ಡಾಡುತ್ತಿತ್ತು. ಕೊನೆಗೆ 1905ರ ವೇಳೆಗೆ ಈ ಭಿನ್ನತೆ ಬಹಳ ಹೆಚ್ಚಿ, ಇವೆರಡೂ ಪ್ರತ್ಯೇಕವಾಗಿ—ಮೆನ್ಷವಿಸ್ಟರು ಜಿನೀವದಲ್ಲೂ ಬಾಲ್ಷವಿಸ್ಟರು ಲಂಡನಿನಲ್ಲೂ—ಸಭೆ ಸೇರಿದರು. ಲಂಡನ್ ಸಭೆಯಲ್ಲಿ ಲೆನಿನ್ ಸೂತ್ರಕ್ಕೆ ಒಪ್ಪಿಗೆಯ ಮುದ್ರೆಬಿತ್ತು. ಈ ಎರಡು ಪಕ್ಷಗಳೂ ಪ್ರತ್ಯೇಕವಾಗಿ ಮುಂದುವರಿದುವು. ರಷ್ಯದಲ್ಲಿ ಕ್ರಾಂತಿ ಸಂಭವಿಸಿ ಬಾಲ್ಷವಿಸ್ಟರ ಅಧಿಕಾರ ಸ್ಥಾಪಿತವಾದಾಗ ಕೆಲವು ಮೆನ್ಷವಿಸ್ಟ್ ನಾಯಕರು ಬಾಲ್ಷವಿಸ್ಟರ ಕಡೆ ಸೇರಿದರು. ಸೋವಿಯತ್ ದೇಶದಲ್ಲಿ ಮೆನ್ಷವಿಸ್ಟ್ ಗುಂಪು ಅಂತರ್ಧಾನವಾಯಿತು. ಪಕ್ಷದ ಹೆಸರು 1918ರಲ್ಲಿ ರಷ್ಯನ್ ಕಮ್ಯೂನಿಸ್ಟ್ ಪಕ್ಷವೆಂದೂ 1924ರಲ್ಲಿ ಅಖಿಲ ಒಕ್ಕೂಟ ಕಮ್ಯೂನಿಸ್ಟ್ ಪಕ್ಷ (ಬಾಲ್ಷವಿಕ್) ಎಂದೂ 1952ರಲ್ಲಿ ಸೋವಿಯತ್ ಒಕ್ಕೂಟದ ಕಮ್ಯೂನಿಸ್ಟ್ ಪಕ್ಷ ಎಂದೂ ಬದಲಾವಣೆಯಾಯಿತು.

ರಷ್ಯನ್ ಕ್ರಾಂತಿಯ ಪರಿಣಾಮವಾಗಿ ಅನೇಕ ದೇಶಗಳಲ್ಲಿ ಕಮ್ಯೂನಿಸ್ಟ್ ಪಕ್ಷಗಳ ಉದಯವಾದುವು. ಇವುಗಳಲ್ಲಿ ಕೆಲವು ರಷ್ಯನ್ ಕ್ರಾಂತಿಪೂರ್ವಕಾಲದ ಮಾರ್ಕ್ಸಿಸ್ಟ್ ಪ್ರಭಾವವನ್ನೇ ತಳೆದಿದ್ದುವು. 1917ರಲ್ಲಿ ಸ್ವೀಡನಿನ ಕೆಲವರು ಕಮ್ಯೂನಿಸ್ಟ್ ಪಕ್ಷವೊಂದನ್ನು ಕಟ್ಟಿದರು. ಜರ್ಮನಿ, ಆಸ್ಟ್ರಿಯ ಮತ್ತು ಹಂಗರಿ, ಗ್ರೀಸ್, ಯುಗೊಸ್ಲಾವಿಯ, ಪೋಲೆಂಡ್, ಬಲ್ಗೇರಿಯ, ಅರ್ಜೆಂಟೀನ, ಮೆಕ್ಸಿಕೋ, ಡೆನ್ಮಾರ್ಕ್, ಸಂಯುಕ್ತ ಸಂಸ್ಥಾನಗಳಲ್ಲಿ ಪಕ್ಷಗಳು ಸ್ಥಾಪನೆಯಾದುವು. 1919ರಲ್ಲಿ ಲೆನಿನ್ ರಷ್ಯದಲ್ಲಿ ಕಮ್ಯನಿಸ್ಟ್ ಅಂತರರಾಷ್ಟ್ರಿಯವನ್ನು ಸ್ಥಾಪಿಸಿದ್ದರಿಂದ ಕಮ್ಯೂನಿಸ್ಟ್ ವಿಧಾನದಲ್ಲಿ ನುರಿತ ಕಾರ್ಯಕರ್ತರ ಸರಬರಾಜು ವರ್ಧಿಸಿತು. ವಿಶ್ವಾದ್ಯಂತ ಕಮ್ಯೂನಿಸ್ಟ್ ಕ್ರಾಂತಿಗೆ ಸೂಕ್ತ ತಳಹದಿ ಹಾಕುವುದು ಇದರ ಉದ್ದೇಶವಾಗಿತ್ತು.

1920ರ ಅನಂತರ ಕಮ್ಯೂನಿಸ್ಟ್ ಪಕ್ಷಗಳ ಸಂಖ್ಯೆ ಅಧಿಗೊಂಡುವು. ಆ ವರ್ಷ ಫ್ರಾನ್ಸ್, ಬ್ರಿಟನ್, ತುರ್ಕಿ, ಆಸ್ಟ್ರೇಲಿಯ, ಇರಾನ್, ಈಸ್ಟ್‌ಇಂಡೀಸ್, ಉರುಗ್ವೇಗಳಲ್ಲೂ ಮರುವರ್ಷ ಇಟಲಿ, ಸ್ಪೇನ್, ಬ್ರೆಜ಼ಿಲ್, ಚಿಲಿ, ಸ್ವಿಟ್ಜರ್ಲೆಂಡ್, ರೂಮೇನಿಯ, ಜೆಕೊಸ್ಲವಾಕಿಯ, ಚೀನ, ಮಂಗೋಲಿಯಗಳಲ್ಲೂ 1922ರಲ್ಲಿ ಜಪಾನ್, ನಾರ್ವೇಗಳಲ್ಲೂ ಎರಡು ವರ್ಷಗಳ ಅನಂತರ ನ್ಯೂ ಜ಼ೀಲೆಂಡಿನಲ್ಲೂ 1925ರಲ್ಲಿ ಕ್ಯೂಬ ಮತ್ತು ಕೊರಿಯಗಳಲ್ಲೂ 1928ರಲ್ಲಿ ಎಕ್ವಡಾರ್ ಮತ್ತು ಪೇರಗ್ವೇಗಳಲ್ಲೂ 1930ರಲ್ಲಿ ಸಿರಿಯ–ಲೆಬನನ್, ಕಾಸ್ಟರೀಕ, ಇಂಡೋ–ಚೀನಗಳಲ್ಲೂ 1934ರಲ್ಲಿ ಆಲ್ಜೀರಿಯದಲ್ಲೂ 1934ರಲ್ಲಿ ಸಿಂಹಳ ಮೊರಾಕೋಗಳಲ್ಲೂ 1946ರಲ್ಲಿ ಪೂರ್ವ ಜರ್ಮನಿಯಲ್ಲೂ 1948ರಲ್ಲಿ ಇಸ್ರೇಲಿನಲ್ಲೂ 1949ರಲ್ಲಿ ಬೊಲಿವಿಯದಲ್ಲೂ 1951ರಲ್ಲಿ ನೇಪಾಳ ಮತ್ತು ವಿಯೆಟ್ನಾಂಗಳಲ್ಲೂ ಕಮ್ಯೂನಿಸ್ಟ್ ಪಕ್ಷಗಳ ಸ್ಥಾಪನೆಯಾಯಿತು.

ಬ್ರಿಟನಿನ ಕಾರ್ಮಿಕರಿಗೆ ತಮ್ಮ ವರ್ಗಶಕ್ತಿಯ ಮನವರಿಕೆಯಾಗಿರುವುದಾದರೂ ಅವರ ಒಲವು ಹೆಚ್ಚಾಗಿ ಫೇಬಿಯನ್ ಸಮಾಜವಾದದಲ್ಲಿ ನಂಬಿಕೆಯಿಟ್ಟಿರುವ ಕಾರ್ಮಿಕ ಪಕ್ಷದತ್ತ. ಚುನಾವಣೆಗಳಲ್ಲಿ ಅದು ಸ್ಪರ್ಧಿಸುತ್ತದೆಯಾದರೂ ಗಮನಾರ್ಹ ಸಂಖ್ಯೆಯ ಸ್ಥಾನಗಳನ್ನು ಅದು ಪಡೆಯಲಾಗಿಲ್ಲ. ಜರ್ಮನಿಯ ಕಮ್ಯೂನಿಸ್ಟ್ ಪಕ್ಷ ಬೆಳೆದು ತಮ್ಮ ಪಕ್ಷಕ್ಕೆ ಬೆಂಬಲ ನೀಡುವುದೆಂದು ಲೆನಿನನ ಭಾವನೆಯಾಗಿತ್ತು. ಆದರೆ 1919ರಲ್ಲಿ ಅದು ಸಂವಿಧಾನಸಭೆಯ ಮೇಲೆ ಹತೋಟಿ ಪಡೆಯಲು ಅಸಮರ್ಥವಾಯಿತು. 1919ರಲ್ಲಿ ಅದರ ನಾಯಕರಾದ ರೋಸ ಲಕ್ಸೆಂಬರ್ಗ್ ಮತ್ತು ಕಾರ್ಲ್ ಲೀಪ್‌ನೆಕ್ಟರ ಕೊಲೆಯಾಯಿತು. ಆಗ ಅದರ ಶಕ್ತಿ ಕ್ಷೀಣಿಸತೊಡಗಿತ್ತು ; ಮುಂದೆ ಜರ್ಮನಿಯ ಆರ್ಥಿಕ ದುಸ್ಥಿತಿಯ ಕಾಲದಲ್ಲಿ ಜನಸಾಮಾನ್ಯರಲ್ಲಿ ಮತ್ತೆ ಅದು ಪ್ರಭಾವಗಳಿಸಲಾರಂಭಿಸಿತು. 1933ರ ವೇಳೆಗೆ ಅದಕ್ಕೆ ಅಲ್ಲಿಯ ಶಾಸನ ಸಭೆಯಲ್ಲಿ 81 ಸ್ಥಾನಗಳು ದೊರಕಿದ್ದುವು. ಅಡಾಲ್ಫ್ ಹಿಟ್ಲರ್ ಅಧಿಕಾರಕ್ಕೆ ಬಂದಮೇಲೆ ಕಮ್ಯೂನಿಸ್ಟ್ ಪಕ್ಷವನ್ನಡಗಿಸಿದ. ಅದು ಭೂಗತವಾಯಿತು. ಎರಡನೆಯ ಮಹಾ ಯುದ್ಧದಲ್ಲಿ ಜರ್ಮನಿಗೆ ಪರಾಜಯವಾದಾಗ (1945) ಜರ್ಮನಿಯ ವಿಭಜನೆಯಾಯಿತು. ಸೋವಿಯತ್ ರಾಜ್ಯದ ಬೆಂಬಲದಿಂದ ಕಮ್ಯೂನಿಸ್ಟರು ಪೂರ್ವ ಜರ್ಮನಿಯಲ್ಲಿ ಅಧಿಕಾರಕ್ಕೆ ಬಂದರು. ಪಶ್ಚಿಮ ಜರ್ಮನಿಯಲ್ಲಿ ಕಮ್ಯೂನಿಸ್ಟ್ ಪಕ್ಷ ಕಾನೂನು ಬಾಹಿರವೆಂದು ಪರಿಗಣಿತವಾಯಿತು. 1954ರಲ್ಲಿ ಸಂವಿಧಾನ ನ್ಯಾಯಾಲಯವೂ ಈ ತೀರ್ಮಾನವನ್ನೇ ಎತ್ತಿ ಹಿಡಿಯಿತು. ಇಟಲಿಯಲ್ಲಿ 1921ರಲ್ಲಿ ಕಮ್ಯೂನಿಸ್ಟ್ ಪಕ್ಷ ಪ್ರಭಾವಶಾಲಿಯಾಗಿ ಅಲ್ಲಿಯ ಸಂಸತ್ತಿನಲ್ಲಿ 13 ಸ್ಥಾನ ಗಳಿಸಿತ್ತು. ಆದರೆ ಅನಂತರ ಬಂದ ಬೆನಿಟೊ ಮುಸೊಲೀನಿ ಇದನ್ನು ಅಡಗಿಸಿದ (1924). ಎರಡನೆಯ ಮಹಾ ಯುದ್ಧಾನಂತರ ಇದು ಮತ್ತೆ ತಲೆಯೆತ್ತಿ ಪಾಲ್ಮಿರೊ ಟೋಗ್ಲಿಯಾಟಿಯ ನಾಯಕತ್ವ

ದಲ್ಲಿ ವಾಮಪಕ್ಷವಾಗಿ ಪ್ರಬಲವೂ ಜನಪ್ರಿಯವೂ ಆಗಿ ಬೆಳೆಯಿತು. ಇಟಲಿಯದು ವಿಶ್ವದ ಮುಖ್ಯ ಕಮ್ಯೂನಿಸ್ಟ್ ಪಕ್ಷಗಳಲ್ಲೊಂದು. ಮಾರಿಸ್ ಥಾರೆಜನ ನೇತೃತ್ವದಲ್ಲಿ ಫ್ರೆಂಚ್ ಕಮ್ಯೂನಿಸ್ಟ್ ಪಕ್ಷ 1934ರಲ್ಲಿ ಸಮಾಜವಾದಿ ಮತ್ತು ತೀವ್ರಗಾಮಿ ಸಮಾಜವಾದಿ ಪಕ್ಷಗಳೊಂದಿಗೆ ಸೇರಿ ಬಲಪಕ್ಷಗಳನ್ನೆದುರಿಸಿತು. ಈ ರಂಗಕ್ಕೆ 1963ರ ಚುನಾವಣೆಗಳಲ್ಲಿ ಜಯ ಲಭಿಸಿದಾಗ ಸಮಾಜವಾದಿ ನಾಯಕ ಲಿಯಾನ್ ಬ್ಲೂಮ್ ಪ್ರಧಾನಿಯಾದ. ಕಮ್ಯೂನಿಸ್ಟರು ಮಂತ್ರಿಗಳಾಗದಿದ್ದರೂ ಸರ್ಕಾರಕ್ಕೆ ಬೆಂಬಲ ನೀಡಿದರು. ಒಂದು ವರ್ಷವಾದ ಮೇಲೆ ಬ್ಲೂಮ್ ಸರ್ಕಾರದ ಪತನವಾಯಿತು. ತೀವ್ರಗಾಮಿ ಸಮಾಜವಾದಿಗಳು ಕಮ್ಯೂನಿಸ್ಟ್ ಮೈತ್ರಿಯನ್ನು ಮುಂದುವರಿಸಲೊಪ್ಪಲಿಲ್ಲ. ಎರಡನೆಯ ಮಹಾಯುದ್ಧ ಕಾಲದಲ್ಲಿ ಹಿಟ್ಲರ್ ಸೋವಿಯತ್ ದೇಶದ ಆಕ್ರಮಣ ನಡೆಸಿದಾಗ ಫ್ರೆಂಚ್ ಕಮ್ಯೂನಿಸ್ಟರೂ ಫ್ರಾನ್ಸಿನ ವಿಮೋಚನಾ ಚಳವಳಿಗೆ ಧುಮುಕಿ, ಯುದ್ಧಾಂತ್ಯದ ವೇಳೆಗೆ ಜನಪ್ರಿಯತೆ ಗಳಿಸಿದರು. ಅವರದು ಫ್ರಾನ್ಸಿನ ಪ್ರಧಾನ ರಾಜಕೀಯ ಪಕ್ಷಗಳಲ್ಲೊಂದಾಯಿತು. 1958ರಲ್ಲಿ ಜನರಲ್ ಡ ಗಾಲ್ ಚುನಾವಣೆಯಲ್ಲಿ ಗೆದ್ದು ಬಂದ. ಚುನಾವಣಾ ಪದ್ಧತಿಯಲ್ಲಿ ಬದಲಾವಣೆಗಳಾದುವು. ಇದರಿಂದಾಗಿ ಶಾಸನ ಸಭೆಯಲ್ಲಿ ಕಮ್ಯೂನಿಸ್ಟರ ಬಲ ಕುಂದಿತು. ಆದರೂ ಫ್ರಾನ್ಸಿನ ಕಮ್ಯೂನಿಸ್ಟ್ ಪಕ್ಷ ತಕ್ಕಮಟ್ಟಿಗೆ ಪ್ರಭಾವಶಾಲಿಯಾಗಿದೆ.

ಅಮೆರಿಕ ಸಂಯುಕ್ತಸಂಸ್ಥಾನದಲ್ಲಿ ಸಮಾಜವಾದಿ ಪಕ್ಷದಲ್ಲಿದ್ದ ವಾಮಪಂಥೀಯರು ರಷ್ಯನ್ ಕ್ರಾಂತಿಯ ಅನಂತರ ಅಲ್ಲಿಯ ಕಮ್ಯೂನಿಸ್ಟರ ಪ್ರೋತ್ಸಾಹದ ಬಲದಿಂದ ಪ್ರತ್ಯೇಕವಾದರು. ಅದರ ಅಮೆರಿಕೇತರ ಸದಸ್ಯರು ಅಮೆರಿಕದಿಂದ ಗಡಿಪಾರಾದರು. 1921ರಲ್ಲಿ ಕಾನೂನುಬದ್ಧವಾಗಿ ವ್ಯವಹರಿಸುವ ಉದ್ದೇಶದಿಂದ ಕರ್ಮಚಾರಿಗಳ (ವರ್ಕರ್ಸ್) ಪಕ್ಷವೆಂಬ ಬಹಿರಂಗ ಪಕ್ಷವೊಂದು ಸ್ಥಾಪಿತವಾಯಿತು. ಕಮ್ಯೂನಿಸ್ಟ್ ಪಕ್ಷ ರಹಸ್ಯ ಪಕ್ಷವಾಗಿ ಮುಂದುವರಿಯಿತು. ಇದನ್ನು ಸಂಪೂರ್ಣವಾಗಿ ವಿಸರ್ಜಿಸಬೇಕೆಂದು 1923ರಲ್ಲಿ ಮಾಸ್ಕೋ ನಿರ್ದೇಶನ ನೀಡಿತು. ಕಾನೂನುಬದ್ಧ ಪಕ್ಷದಲ್ಲಿ ಒಳಜಗಳಗಳಿದ್ದೇ ಇದ್ದುವು. 1929ರಲ್ಲಿ ಮಾಸ್ಕೋ ನಡುವೆ ಪ್ರವೇಶಿಸಿ ಶಿಸ್ತನ್ನು ಸ್ಥಾಪಿಸಿತು. ಕಮ್ಯೂನಿಸ್ಟ್ ಅಂತರರಾಷ್ಟ್ರೀಯದ ಅಂಗವಾಗಿ ಅಮೆರಿಕ ಸಂಯುಕ್ತಸಂಸ್ಥಾನದ ಕಮ್ಯೂನಿಸ್ಟ್ ಪಕ್ಷವನ್ನು ಆಗ ಮತ್ತೆ ರಚಿಸಲಾಯಿತು.

ಎರಡನೆಯ ಮಹಾಯುದ್ಧಕಾಲದಲ್ಲಿ ಪಶ್ಚಿಮದ ರಾಷ್ಟ್ರಗಳೂ ಸೋವಿಯತ್ ರಾಜ್ಯವೂ ಒಂದಾಗಿ ಹಿಟ್ಲರನನ್ನೆದುರಿಸಬೇಕಾದಾಗ ಕಮ್ಯೂನಿಸ್ಟ್ ಅಂತರರಾಷ್ಟ್ರೀಯವನ್ನು ವಿಸರ್ಜಿಸಿದ್ದರ (1943) ಫಲವಾಗಿ ಅಮೆರಿಕನ್ ಕಮ್ಯೂನಿಸ್ಟ್ ಪಕ್ಷದ ಅಂಗರಚನೆಯಲ್ಲೂ ಸೂಕ್ತಬದಲಾವಣೆಗಳಾದುವು. ಎರಡನೆಯ ಮಹಾಯುದ್ಧದ ಅನಂತರದ ಕಾಲದಲ್ಲಿ ಅಮೆರಿಕದ ಕಮ್ಯೂನಿಸ್ಟ್ ಪಕ್ಷದ ಕಲಾಪಗಳು ಸರ್ಕಾರದ ತೀವ್ರಗಮನ ಸೆಳೆದುವು. ಅಮೆರಿಕ-ಚೀನ ವಿರಸ, ಕೊರಿಯ ಯುದ್ಧ ಮುಂತಾದ ಕಾರಣಗಳಿಂದಾಗಿ ಅಮೆರಿಕನ್ ಕಮ್ಯೂನಿಸ್ಟರು ಉಗ್ರ ಕ್ರಮಗಳಿಗೊಳಗಾದರು. ಸ್ಟಾಲಿನ್ ಅನುಸರಿಸುತ್ತಿದ್ದ ಅನೇಕ ವಿಪರೀತ ಕ್ರಮಗಳು ಆತನ ಮರಣಾನಂತರ ಬಯಲಾದಾಗ ಅನೇಕ ಕಮ್ಯೂನಿಸ್ಟರು ಭ್ರಮನಿರಸನಗೊಂಡು ಪಕ್ಷಕ್ಕೆ ರಾಜೀನಾಮೆಯಿತ್ತರು. ಅಮೆರಿಕದ ಹಲವಾರು ಕಾಯಿದೆಗಳೂ ಅಮೆರಿಕಾನುಚಿತ ಕಲಾಪಗಳ (ಅನ್-ಅಮೆರಿಕನ್ ಆಕ್ಟಿವಿಟೀಸ್) ವಿಚಾರಣೆಗಳೂ ನಡೆದುವು. ಕಮ್ಯೂನಿಸ್ಟ್ ಪಕ್ಷಕ್ಕೂ ಸರ್ಕಾರಕ್ಕೂ ನಡುವೆ ದೀರ್ಘ ಹೋರಾಟವೇ ನಡೆಯಿತು, ಬುಡಮೇಲು ಮಾಡುವ ಚಳವಳಿಯ ನಿವಾರಣೆಗಾಗಿ ಸರ್ಕಾರ ತಂದ ನಿರ್ಬಂಧ ಕಾಯಿದೆಯನ್ನು (1950) ಅಲ್ಲಿಯ ಪರಮೋಚ್ಚನ್ಯಾಯಾಲಯವೂ ಎತ್ತಿಹಿಡಿಯಿತು (1961). ಆ ಕಾಯಿದೆಗೆ ಅನುಸಾರವಾಗಿ ನೋಂದಾಯಿಸಿಕೊಳ್ಳಲು ಪಕ್ಷ ನಿರಾಕರಿಸಿತು. ಅನೇಕ ನಾಯಕರು ಭೂಗತರಾದರು.

ಚೀನದಲ್ಲಿ : ರಷ್ಯದ ನಿರ್ದೇಶನದಲ್ಲಿ ಚೀನೀ ಕಮ್ಯೂನಿಸ್ಟ್ ಪಕ್ಷ 1921ರಲ್ಲಿ ಸ್ಥಾಪಿತವಾಯಿತು. ಅಧ್ಯಕ್ಷ ಸುನ್ ಯಾತ್‌ಸೇನನ ಕೌಮಿಂಟಾಂಗ್ ಪಕ್ಷದೊಂದಿಗೆ ಕಮ್ಯೂನಿಸ್ಟರು ಸಹಕರಿಸುತ್ತಿದ್ದರಾದರೂ ಅವನ ಮರಣದ (1925) ಅನಂತರ ಅಧಿಕಾರಕ್ಕೆ ಬಂದ ಬಲಪಂಥೀಯರ ಆಡಳಿತಕ್ಕೂ ಕಮ್ಯೂನಿಸ್ಟ್ ಪಕ್ಷಕ್ಕೂ ವಿರಸ ಬೆಳೆಯಿತು. ಚಿಯಾಂಗ್ ಕೈ-ಷೇಕ್ ಸರ್ಕಾರ ಕಮ್ಯೂನಿಸ್ಟ್ ಪಕ್ಷವನ್ನು ಬಹಿಷ್ಕರಿಸಿತು. ಚೀನೀ ಕಮ್ಯೂನಿಸ್ಟ್ ಪಕ್ಷದ ಸ್ಥಾಪಕರಲೊಬ್ಬನಾದ ಮಾವೊ ಒಳನಾಡಿಗೆ ಹೋಗಿ, ಗ್ರಾಮಗಳನ್ನು ವಿಮೋಚನೆಗೊಳಿಸಿ ಕೊನೆಗೆ ನಗರವನ್ನು ಸುತ್ತುವರಿದು ಆಕ್ರಮಿಸಿಕೊಳ್ಳಬೇಕೆಂಬುದಾಗಿ ಯೋಜನೆ ಹೂಡಿದ. ಈತನ ಗ್ರಾಮೀಣ ಕಮ್ಯೂನಿಸಂ ವಿಧಾನ ವಿಯೆಟ್ನಾಮ್ ಮತ್ತು ಇತರ ಹಿಂದುಳಿದ ರಾಷ್ಟ್ರಗಳ ಕಮ್ಯೂನಿಸ್ಟ್ ಚಳವಳಿಗೆ ಮೇಲ್ಪಂಕ್ತಿಯಾಯಿತು. ಕಮ್ಯೂನಿಸ್ಟರ ಪ್ರಭಾವವನ್ನು ಹತ್ತಿಕ್ಕಲು ಕೌಮಿಂಟಾಂಗ್ ಸರ್ಕಾರ ನಾನಾ ಬಗೆಯ ಸಾಹಸಮಾಡಿ ಅವರನ್ನು ಉತ್ತರ ಷೆನ್ಸಿ ಪ್ರಾಂತ್ಯಕ್ಕೆ ಓಸ್ಸಡೆಯುವಂತೆ ಮಾಡಿತು. ಈ ಘಟನೆ ದೀರ್ಘಯಾತ್ರೆ (ಲಾಂಗ್ ಮಾರ್ಚ್) ಎಂದು ಚೀನೀ ಐತಿಹಾಸಿಕ ಪ್ರಾಮುಖ್ಯ ಗಳಿಸಿದೆ.

ಆ ವೇಳೆಗೆ ಜಪಾನು ಚೀನದ ಆಕ್ರಮಣದಲ್ಲಿ ತೊಡಗಿತು. ಮಾವೊ ಜಪಾನ್ ವಿರೋಧಿ ಚಳವಳಿ ಹೂಡಿದ. ಜಪಾನನ್ನೆದುರಿಸಲು ಕಮ್ಯೂನಿಸ್ಟರು ಚಿಯಾಂಗನ ಸರ್ಕಾರದೊಂದಿಗೆ ಸಹಕರಿಸಿದರು. ಸರ್ಕಾರದೊಂದಿಗೆ ಹೊಸ ಒಪ್ಪಂದವಾಯಿತು. ಚಿಯಾಂಗ್ ಸರ್ಕಾರದ ಸೈನ್ಯದಲ್ಲಿ ಚೀನೀ ಕೆಂಪುಸೇನೆಯೂ ಸೇರಿತಾದರೂ ಅದು ತನ್ನ ಪ್ರತ್ಯೇಕತೆಯನ್ನು ಕಾಯ್ದುಕೊಂಡಿತು. ಎರಡು ಪಕ್ಷಗಳೂ ತಂತಮ್ಮ ಶಕ್ತಿ ಬೆಳೆಸಿಕೊಳ್ಳಲು ಪರಸ್ಪರ ಸ್ಪರ್ಧಿಸಿದುವು. ಎರಡನೆಯ ಮಹಾಯುದ್ಧದ ಕೊನೆಯ ಘಟ್ಟ ಮುಟ್ಟಿ, ಜಪಾನು ಶರಣಾಗತವಾದಾಗ ಕಮ್ಯೂನಿಸ್ಟ್ ಪಕ್ಷದ ಜನತಾ ವಿಮೋಚನಾ ಸೇನೆ ಪ್ರಬಲವಾಗಿ, ಚಿಯಾಂಗ್ ಸರ್ಕಾರದ ವಿರುದ್ಧ ವ್ಯಾಪಕ ಯುದ್ಧ ಹೂಡಿತು. 1949ರಲ್ಲಿ ಚೀನದಲ್ಲಿ ಕಮ್ಯೂನಿಸ್ಟರ ಅಧಿಕಾರ ಸ್ಥಾಪಿತವಾಯಿತು. ಅಲ್ಲಿಂದೀಚೆಗೆ ಚೀನೀ ಕಮ್ಯೂನಿಸ್ಟ್ ಪಕ್ಷದ ಧೋರಣೆ ಮಾಸ್ಕೋವಿನಿಂದ ಪ್ರತ್ಯೇಕವಾಗಿ ತನ್ನ ವಿಶಿಷ್ಟ ಸಂಸ್ಕಾರಗಳಿಗೆ ಅನುಗುಣವಾಗಿ ರೂಪುಗೊಳ್ಳುತ್ತಿದೆ. ಚೀನ-ಸೋವಿಯತ್ ಕಮ್ಯೂನಿಸ್ಟ್ ಗುಂಪುಗಳ ಸೈದ್ಧಾಂತಿಕ ಭಿನ್ನತೆಯನ್ನು ಈ ಲೇಖನದ ಆದಿಯಲ್ಲಿ ಸ್ಥೂಲವಾಗಿ ವಿವೇಚಿಸಲಾಗಿದೆ.

**ನೋಡಿ**—**ಕಮ್ಯೂನಿಸಂ ; ಕಮ್ಯೂನಿಸ್ಟ್ ಪಕ್ಷ, ಭಾರತದ.** ನಾನಾ ದೇಶಗಳ ಕಮ್ಯೂನಿಸ್ಟ್ ಚಳವಳಿಗಳ ಸಾಂದರ್ಭಿಕ ಪ್ರಸ್ತಾಪಗಳಿಗೆ ಆಯಾ ದೇಶಗಳ ಶೀರ್ಷಿಕೆಗಳನ್ನು ನೋಡಿ.

(ಬಿ.ಎಸ್.ಎಚ್.)

**ಕಮ್ಯೂನಿಸ್ಟ್ ಪಕ್ಷ, ಭಾರತದಲ್ಲಿ :** ರಷ್ಯದಲ್ಲಿ ಕ್ರಾಂತಿ ಸಂಭವಿಸಿ ಪ್ರಥಮ ಸಮಾಜವಾದಿ ಪ್ರಭುತ್ವ ಸ್ಥಾಪನೆಯಾದ ಎಂಟು ವರ್ಷಗಳ ಅನಂತರ, ಸೋವಿಯತ್ ದೇಶದ ಶಿಲ್ಪಿಯಾದ ಲೆನಿನ್ ತೀರಿಕೊಂಡ ಮರುವರ್ಷ (1925) ಭಾರತದಲ್ಲಿ ಕಮ್ಯೂನಿಸ್ಟ್ ಚಳವಳಿಯ ಉಗಮವಾಯಿತು. ಭಾರತದಲ್ಲಿ ಕಮ್ಯೂನಿಸ್ಟ್ ಪಕ್ಷವನ್ನು ಸಂಘಟಿಸಿದವರು ಸತ್ಯಭಕ್ತನೆಂಬ ಕಾಂಗ್ರೆಸಿಗ ಮತ್ತು ಸಿಂಗಾರವೇಲು ಚೆಟ್ಟಿಯಾರ್ ಎಂಬ ಸಮಾಜವಾದಿ ಚಿಂತಕ. ಇದರ ಪ್ರಧಾನ ಕಚೇರಿ ಇದ್ದದ್ದು ಬೊಂಬಾಯಿಯಲ್ಲಿ. ಆದರೆ ಈ ಪಕ್ಷದ ಸ್ಥಾಪನೆಯಾದ ನಾಲ್ಕೇ ದಿನಗಳಲ್ಲಿ ಸತ್ಯಭಕ್ತ ಇದರಿಂದ ಹೊರಬಿದ್ದು ಪ್ರತ್ಯೇಕವಾದ ರಾಷ್ಟ್ರೀಯ ಕಮ್ಯೂನಿಸ್ಟ್ ಪಕ್ಷ ಸ್ಥಾಪಿಸಿದ. ಭಾರತದಲ್ಲಿ ಕಮ್ಯೂನಿಸ್ಟ್ ಚಳವಳಿಗೆ ನಿರ್ದೇಶನ ನೀಡಿದವರು ಬೆನ್ ಬ್ರ್ಯಾಡ್ಲೆ ಮತ್ತು ಜಾರ್ಜ್ ಆಲಿಸೋ. ಇವರಿಬ್ಬರೂ ಬ್ರಿಟಿಷ್ ಮಾರ್ಕ್ಸಿಸ್ಟರು.

ರಾಷ್ಟ್ರೀಯ ಕಾಂಗ್ರೆಸಿನ ನೇತೃತ್ವದಲ್ಲಿ ಭಾರತದ ಸ್ವಾತಂತ್ರ್ಯ ಚಳವಳಿ ಬಿರುಸಾದಾಗ ಕಮ್ಯೂನಿಸ್ಟ್ ಚಳವಳಿಯೂ ಬಿರುಸಾಯಿತು. ಇದು ಮುಖ್ಯವಾಗಿ ನಗರಗಳಲ್ಲಿ ಕೇಂದ್ರೀಕೃತವಾಗಿತ್ತು. ಈ ಚಳವಳಿಯ ನಾಯಕರಲ್ಲನೇಕರು ಕಾಂಗ್ರೆಸಿಗರು, ಅಖಿಲ ಭಾರತ ಕಾಂಗ್ರೆಸ್ ಸಮಿತಿಯೇ ಮುಂತಾದವುಗಳ ಸದಸ್ಯರು. ಹೀಗಾಗಿ ಭಾರತ ರಾಷ್ಟ್ರೀಯ ಚಳವಳಿಗೂ ಕಮ್ಯೂನಿಸ್ಟ್ ಪ್ರೇರಿತ ಕಾರ್ಮಿಕ ಸಂಘಗಳಿಗೂ ಕಿಸಾನ್ ಸಭೆಗಳಿಗೂ ಅನ್ಯೋನ್ಯಸಂಬಂಧವಿತ್ತು. ಸ್ವಾತಂತ್ರ್ಯ ಚಳವಳಿಗೆ ಕ್ರಾಂತಿಯ ಸ್ವರೂಪ ನೀಡಲು ಕಮ್ಯೂನಿಸ್ಟರು ಯತ್ನಿಸಿದರು. 1928ರಲ್ಲಿ ಕಲ್ಕತ್ತದಲ್ಲಿ ಸಮಾವೇಶಗೊಂಡಿದ್ದ ಅಖಿಲ ಭಾರತ ಕಾರ್ಮಿಕರ ಮತ್ತು ರೈತರ ಪಕ್ಷಗಳ ಸಮ್ಮೇಳನದಲ್ಲಿ ಕಾಯಿದೆಬದ್ಧ ಕಾರ್ಯಕ್ರಮದ ವಿರುದ್ಧವಾಗಿ—ಕ್ರಾಂತಿಯುತ ಚಳವಳಿಗೆ ಬೆಂಬಲ ನೀಡಿ—ಮಾಡಲಾದ ನಿರ್ಣಯ ಗಮನಾರ್ಹ.

ಕಮ್ಯೂನಿಸ್ಟರ ಪ್ರಭಾವ ಹೆಚ್ಚುತ್ತಿದ್ದುದನ್ನು ನೋಡಿ ಬ್ರಿಟಿಷ್ ಕೈಗಾರಿಕೆ ಮತ್ತು ವಾಣಿಜ್ಯ ವೃತ್ತಗಳಲ್ಲಿ ಆತಂಕವುಂಟಾಯಿತು. ಬಾಲ್ಷೆವಿಕ್ ಅಪಾಯದ ವಿರುದ್ಧ ಕ್ರಮ ಕೈಗೊಳ್ಳಬೇಕೆಂದು ಸರ್ಕಾರಕ್ಕೆ ಒತ್ತಾಯ ಬಂತು. ಸರ್ಕಾರ ಕ್ಷಿಪ್ರಕ್ರಮ ಕೈಗೊಂಡಿತು. ಕಮ್ಯೂನಿಸ್ಟ್ ಪ್ರಚಾರವನ್ನು ಬಲಗೊಳಿಸಿ ಹಿಂಸಾತ್ಮಕ ವಿಧಾನಗಳಿಂದ ಸರ್ಕಾರವನ್ನು ಉರುಳಿಸಲು ಸಂಚುಹೂಡಿದ್ದರೆಂಬ ಆಪಾದನೆ ಹೊರಿಸಿ ಅನೇಕರನ್ನು ದಸ್ತಗಿರಿ ಮಾಡಿತು. ಮೀರತ್ ಪಿತೂರಿ ಮೊಕದ್ದಮೆಯೆಂದು ಇದು ಪ್ರಸಿದ್ಧವಾಗಿದೆ. ಹೀಗೆ ದಸ್ತಗಿರಿಗೆ ಒಳಗಾದವರೆಲ್ಲ ಅಖಿಲ ಭಾರತ ಕಾಂಗ್ರೆಸ್ ಸಮಿತಿಯ ಸದಸ್ಯರು.

ಇದೇ ಕಾಲಕ್ಕೆ ಇದರ ಅಂಗವಾಗಿ ಕಾರ್ಮಿಕರ ಚಳವಳಿಯೂ ಬೆಳೆಯುತ್ತಿತ್ತು. ಬಿ. ಟಿ. ರಣದಿವೆ ಮುಂತಾದವರು ಕಾರ್ಮಿಕರಲ್ಲಿ ಕ್ರಾಂತಿಭಾವನೆಗಳ ಪ್ರಾದುರ್ಭಾವವನ್ನು ಬೋಧಿಸುತ್ತಿದ್ದರು. ಆದರೆ ಕಾರ್ಮಿಕ ಚಳವಳಿಯ ಮೂಲಕ ಕೈಗಾರಿಕಾ ಅಶಾಂತಿಯನ್ನು ಬೆಳೆಯಿಸಬಾರದೆಂದೂ ಕೇವಲ ಮುಷ್ಕರಗಳಿಂದ ಕಾರ್ಮಿಕ ಸಂಘ ವಿಕಾಸವಾಗದೆಂದೂ ವಾದಿಸುತ್ತಿದ್ದವರೂ ಆಗ ಇದ್ದರು. ಇವರಲ್ಲಿ ಎನ್. ಎಂ. ಜೋಶಿ ಮತ್ತು ವಿ. ವಿ. ಗಿರಿ ಪ್ರಮುಖರು. ಕಾರ್ಮಿಕ ಸಂಘ ಚಳವಳಿಯ ಕ್ಷೇತ್ರದ ಈ ಅಭಿಪ್ರಾಯಭೇದ ಖಚಿತವಾಗಿ ಪ್ರಕಟವಾದದ್ದು 1929ರಲ್ಲಿ. ಆಗ ನಾಗಪುರದಲ್ಲಿ ಅಖಿಲ ಭಾರತ ಕಾರ್ಮಿಕ ಮಹಾಸಂಘದ ಅಧಿವೇಶನ ಸೇರಿತ್ತು. ಇದು ಕಮ್ಯೂನಿಸ್ಟರ ಕಾರ್ಮಿಕ ಸಂಸ್ಥೆಯೆಂಬುದು ಖಚಿತವಾಯಿತು. ಇತರ ಕಾರ್ಮಿಕ ಸಂಘ ನಾಯಕರು ಎನ್. ಎಂ. ಜೋಶಿಯ ನೇತೃತ್ವದಲ್ಲಿ ಪ್ರತ್ಯೇಕ ಕಾರ್ಮಿಕ ಮಹಾಸಂಘವೊಂದನ್ನು ಸ್ಥಾಪಿಸಿಕೊಂಡರು.

ಆಗ ಕಾಂಗ್ರೆಸಿನ ಕಾರ್ಯಕ್ರಮಗಳಿಗಿಂತ ತೀವ್ರತರವಾದ ಕಾರ್ಯಕ್ರಮಗಳಲ್ಲಿ ಕಮ್ಯೂನಿಸ್ಟ್ ಪಕ್ಷ ಆಸಕ್ತಿ ತಳೆದಿತ್ತಲ್ಲದೆ, ಕಾಂಗ್ರೆಸಿನ ಸುಧಾರಣಾವಾದಿ ಧೋರಣೆಯನ್ನು ಟೀಕಿಸುತ್ತಿತ್ತು.

ಇದೇ ಕಾಲಕ್ಕೆ ಎಂ. ಎನ್. ರಾಯ್ ಬಂದ. ಈತನೊಬ್ಬ ಚಿಂತನಪರ ಕ್ರಾಂತಿವಾದಿ. ಕಮ್ಯೂನಿಸ್ಟ್ ಅಂತರರಾಷ್ಟ್ರೀಯದಿಂದ ಉಚ್ಚಾಟಿತನಾಗಿ ಭಾರತಕ್ಕೆ ಮರಳಿದ ಈತ ಅನೇಕ ಬೆಂಬಲಿಗರನ್ನು ಕೂಡಿಸಿಕೊಂಡು, ಕಮ್ಯೂನಿಸ್ಟ್ ಪ್ರಭಾವದಿಂದ ಅಖಿಲ ಭಾರತ ಕಾರ್ಮಿಕ ಮಹಾಸಂಘವನ್ನು ವಿಮೋಚನೆಗೊಳಿಸಿ ಅದರಲ್ಲಿ ರಾಷ್ಟ್ರೀಯ ಭಾವನೆಯನ್ನು ಪ್ರಚೋದಿಸಲು ಯತ್ನಿಸಿದ.

1934ರಲ್ಲಿ ಭಾರತದ ಕಮ್ಯೂನಿಸ್ಟ್ ಪಕ್ಷವನ್ನು ಸರ್ಕಾರ ಬಹಿಷ್ಕರಿಸಿತು. ಅದರ ನಾಯಕರೆಲ್ಲ ಸೆರೆಯಾದರು. ವಿಚಾರಣೆಯಿಲ್ಲದೆ ಅವರನ್ನು ಬಂಧನದಲ್ಲಿಡಲಾಯಿತು. ಆಗ ಕಮ್ಯೂನಿಸ್ಟ್ ಪಕ್ಷ ಕಾಂಗ್ರೆಸ್ ಮುಂತಾದ ಸಂಸ್ಥೆಗಳಲ್ಲಿ ಅಂತರ್ಗತವಾಗಿ ಮುಸುಕಿನಡಿಯಲ್ಲಿ ಕೆಲಸಮಾಡಬೇಕೆಂದು ತೀರ್ಮಾನಿಸಿತು. 1936ರಲ್ಲಿ ಅದು ಕಾಂಗ್ರೆಸ್ ಸಮಾಜವಾದಿ ಪಕ್ಷದೊಂದಿಗೆ ಕೂಡಿಕೊಂಡು ಅಖಿಲಭಾರತ ಕಿಸಾನ್ ಸಭೆಯನ್ನು ಸ್ಥಾಪಿಸಿತು. 1937ರಿಂದ 1939ರ ವರೆಗಿನ ಕಾಲದಲ್ಲಿ ನಾನಾಪ್ರಾಂತ್ಯಗಳಲ್ಲಿ ಕಾಂಗ್ರೆಸ್ ಸರ್ಕಾರಗಳಿದ್ದಾಗ ಕಮ್ಯೂನಿಸ್ಟ್ ಪಕ್ಷವೂ ಅನಧಿಕೃತವಾಗಿ ಜೀವಂತವಾಗಿ ಕೆಲಸಮಾಡುತ್ತಿತ್ತೆನ್ನಬಹುದು. ಆದರೆ ರಾಜಕೀಯ ಆರ್ಥಿಕ ವಿರಸಗಳು ಪ್ರಬಲವಾದುವು. ಕಾಂಗ್ರೆಸ್ ಸರ್ಕಾರಗಳ ವಿರುದ್ಧ ಅದು ಚಳವಳಿ ಹೂಡಿತಲ್ಲದೆ ಮುಷ್ಕರಗಳನ್ನು ಸಂಘಟಿಸಿತು. ಎರಡನೆಯ ಮಹಾಯುದ್ಧ ಪ್ರಾರಂಭವಾದಾಗ, ಈ ಯುದ್ಧದ ಸ್ವರೂಪವೇನೆಂಬುದರ ಬಗ್ಗೆ ಕಮ್ಯೂನಿಸ್ಟ್ ಮತ್ತು ಸಮಾಜವಾದಿ ಪಕ್ಷಗಳ ನಡುವೆ ಭಿನ್ನಾಭಿಪ್ರಾಯವೇರ್ಪಟ್ಟು ಇವುಗಳ ಪರಸ್ಪರ ಸಹಕಾರ ಮುರಿದು ಬಿತ್ತು.

ಎರಡನೆಯ ಮಹಾಯುದ್ಧವನ್ನು ಸಾಮ್ರಾಜ್ಯವಾದಿ ಯದ್ಧವೆಂದು ಭಾರತದ ಕಮ್ಯೂನಿಸ್ಟ್ ಪಕ್ಷ ಕರೆಯಿತಾದರೂ 1941ರಲ್ಲಿ ಸೋವಿಯತ್ ದೇಶವನ್ನು ಜರ್ಮನಿ ಆಕ್ರಮಿಸಿದಾಗ ಯುದ್ಧದ ಸ್ವರೂಪವೇ ಬದಲಾಯಿತೆಂದು ಆ ಪಕ್ಷ ಭಾವಿಸಿತು. ಆಗ ಕಮ್ಯೂನಿಸ್ಟರ ದೃಷ್ಟಿಯಲ್ಲಿ ಇದು ಫ್ಯಾಸಿಸ್ಟ್ ವಿರೋಧಿ ಯುದ್ಧ, ಜನತೆಯ ಯುದ್ಧ. ಆದ್ದರಿಂದ ಸೋವಿಯತ್ ದೇಶದ ಪಕ್ಷದಲ್ಲಿ ನಿಂತು ಕಾದಾಡುತ್ತಿದ್ದ ದೇಶಗಳಲ್ಲೊಂದಾದ ಬ್ರಿಟನ್ನಿನ ವಿರುದ್ಧ ಚಳವಳಿ ಹೂಡುವುದು ಭಾರತದ ಕಮ್ಯೂನಿಸ್ಟ್ ಪಕ್ಷಕ್ಕೆ ಸಾಧುವೆನಿಸಲಿಲ್ಲ. ಅಖಿಲ ವಿಶ್ವದ ಕಮ್ಯೂನಿಸ್ಟ್ ಪಕ್ಷಗಳ ನಿಲವನ್ನೇ ಭಾರತದ ಕಮ್ಯೂನಿಸ್ಟ್ ಪಕ್ಷವೂ ಸಮರ್ಥಿಸಬೇಕಾಗಿತ್ತು. ಭಾರತದ ಕಾಂಗ್ರೆಸ್ಸು ಬ್ರಿಟಿಷರ ವಿರುದ್ಧವಾಗಿ, ಭಾರತ ಬಿಟ್ಟು ತೊಲಗಿ ಚಳವಳಿಯನ್ನು 1942ರಲ್ಲಿ ಹೂಡಿದಾಗ ಕಮ್ಯೂನಿಸ್ಟರು ಅದರಲ್ಲಿ ಸೇರಲಿಲ್ಲ. ಇದೇ ಕಾಲಕ್ಕೆ ಬ್ರಿಟಿಷ್ ಸರ್ಕಾರವೂ ಕಮ್ಯೂನಿಸ್ಟ್ ಪಕ್ಷದ ಮೇಲಿದ್ದ ಬಹಿಷ್ಕಾರವನ್ನು ತೆಗೆದುಹಾಕಿತು.

1947ರಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದಾಗ ಸರ್ಕಾರದ ಪ್ರಗತಿಪರ ಕ್ರಮಗಳಿಗೆ ಬೆಂಬಲ ಸೂಚಿಸುವುದು ಕಮ್ಯೂನಿಸ್ಟರ ಅಧಿಕೃತ ನೀತಿಯಾಗಿತ್ತು. ಆಗ ಪಕ್ಷದ ಕಾರ್ಯದರ್ಶಿಯಾಗಿದ್ದಾತ ಪಿ. ಸಿ. ಜೋಶಿ. ಆದರೆ 1948ರಲ್ಲಿ ಬಿ. ಟಿ. ರಣದಿವೆಯ ವಿಚಾರಮಾರ್ಗ ಪ್ರಬಲವಾಯಿತು. ಆಗಿನ ಸರ್ಕಾರವನ್ನು ಇದು ಬೂರ್ಷ್ವಾ–ಸಾಮ್ರಾಜ್ಯವಾದಿ–ಊಳಿಗಮಾನ್ಯ ಸಂಗಮವೆಂದು ಕರೆಯಿತಲ್ಲದೆ ತೆಲಂಗಾಣದಲ್ಲಿ ಉಗ್ರವಾಗಿದ್ದ ಬಂಡಾಯಕ್ಕೆ ಬೆಂಬಲ ಸೂಚಿಸಿತು. ಆದರೆ ಇದರ ತೀವ್ರಗಾಮಿ ಕ್ರಮಗಳಿಗೆ ಜಯ ಲಭಿಸಲಿಲ್ಲ. ಕಾರ್ಮಿಕ ಕ್ಷೇತ್ರದಲ್ಲೂ ಪಕ್ಷದ ಪ್ರಭಾವ ಕಡಿಮೆಯಾಯಿತು. ಮತ್ತೆ ನಾಯಕತ್ವದಲ್ಲಿ ಬದಲಾವಣೆಯಾಯಿತು. ಸಾಮಾಜಿಕ ಕ್ರಾಂತಿಗಾಗಿ ಭಾರತದ ಜನರಿನ್ನೂ ಅಸ್ತ್ರಸಜ್ಜಿತ ಹೋರಾಟಕ್ಕೆ ಸಿದ್ಧರಾಗಿಲ್ಲವಾದ್ದರಿಂದ ನೆಹರೂ ಸರ್ಕಾರದ ಆಂತರಿಕ ನೀತಿಗಳನ್ನು ಸಂವಿಧಾನದ ಎಲ್ಲೆಯೊಳಗೇ ವಿರೋಧಿಸಬೇಕೆಂಬುದು ಪಕ್ಷದ ಆಗಿನ ಅಧಿಕೃತ ನೀತಿ.

ಪಕ್ಷದ ಹೊಸ ನೀತಿಯಿಂದಾಗಿ ಅದಕ್ಕೆ ಸಂವಿಧಾನಬದ್ಧತೆಯ ಸಂಭಾವಿತತನದ ಗೌರವ ಲಭ್ಯವಾಯಿತು. 1952ರಲ್ಲಿ ನಡೆದ ಪ್ರಥಮ ಮಹಾ ಚುನಾವಣೆಗಳಲ್ಲಿ ಅದು ಗಳಿಸಿದ ಲೋಕಸಭಾಸ್ಥಾನಗಳ ಸಂಖ್ಯೆ 23. ರಚನಾತ್ಮಕ ಮಾರ್ಗಗಳಿಂದಲೂ ಕಮ್ಯೂನಿಸಂ ಗೆಲ್ಲಬಲ್ಲುದೆಂಬುದು ಆಗ ಸ್ವೀಕೃತವಾದ ಹೊಸ ಸೂತ್ರ.

ಅಲ್ಲದೆ ನೆಹರೂ ಸರ್ಕಾರದ ಸಮಾಜವಾದಿ ನೀತಿಯ ಎದುರಿಗೆ ಕಮ್ಯೂನಿಸ್ಟ್ ಪಕ್ಷ ಹೊಸ ಕಾರ್ಯಕ್ರಮವೇನನ್ನೂ ಹಾಕಿಕೊಳ್ಳುವಂತಿರಲಿಲ್ಲ. ಕ್ರಮೇಣ ಕಮ್ಯೂನಿಸ್ಟ್ ಪಕ್ಷದಲ್ಲಿ ಅದರ ಅಧಿಕೃತ ನೀತಿಯ ಬಗ್ಗೆ ಮತ್ತೆ ಭಿನ್ನಾಭಿಪ್ರಾಯ ಪ್ರಬಲವಾಗತೊಡಗಿತು. ಪಕ್ಷದ ಎರಡು ಗುಂಪುಗಳ ನಡುವಣ ತೀವ್ರವಿರಸ ಪ್ರಕಟವಾದದ್ದು 1956ರಲ್ಲಿ ಸೇರಿದ್ದ ಪಾಲ್‌ಘಾಟ್ ಅಧಿವೇಶನದಲ್ಲಿ.

1957ರ ಚುನಾವಣೆಗಳಲ್ಲಿ ಅದು ಲೋಕಸಭೆಯ 30 ಸ್ಥಾನಗಳನ್ನು ಗೆದ್ದಿತು. ರಾಜ್ಯವಿಧಾನಸಭೆಗಳಲ್ಲಿ ಅದು ಪಡೆದ ಸ್ಥಾನಗಳ ಸಂಖ್ಯೆ ಅಧಿಕವಾದುದೇ ಅಲ್ಲದೆ ಕೇರಳದಲ್ಲಿ ಕಮ್ಯೂನಿಸ್ಟ್ ಪಕ್ಷವೇ ಬಹುಮತ ಗಳಿಸಿ ಸರ್ಕಾರ ರಚಿಸಿತು. ಸಂವಿಧಾನ ಮಾರ್ಗಗಳಿಂದ ಕಮ್ಯೂನಿಸ್ಟ್ ಪಕ್ಷದ ಸರ್ಕಾರವೇರ್ಪಟ್ಟದ್ದು ಅದೇ ಮೊದಲು. ಆ ಸರ್ಕಾರ ಅನೇಕ ಗ್ರಾಮೀಣ ಸುಧಾರಣೆಗಳನ್ನು ಜಾರಿಗೆ ತಂದದ್ದಲ್ಲದೆ ಶಿಕ್ಷಣವನ್ನು ಸುಧಾರಿಸಲು ಕೈಯಿಕ್ಕಿದಾಗ ವಿರೋಧ ಪ್ರಬಲವಾಗಿ, ಕೇಂದ್ರ ಪ್ರವೇಶಿಸಲು ಕಾರಣವಾಗಿ, ಆ ಸರ್ಕಾರದ ವಜಾ ಆಯಿತು. ಕಮ್ಯೂನಿಸ್ಟ್ ಪಕ್ಷದಲ್ಲಿ ತೀವ್ರಗಾಮಿಗಳ ಗುಂಪು ಪ್ರಬಲವಾಗಲು ಇದೂ ಒಂದು ಕಾರಣ.

1962ರಲ್ಲಿ ಭಾರತ ಚೀನ ಗಡಿ ಘರ್ಷಣೆಯಾದಾಗ ಕಮ್ಯೂನಿಸ್ಟ್ ಪಕ್ಷದೊಳಗಿನ ಗೊಂದಲ ಪರಮಾವಧಿಗೇರಿತು. ಒಂದು ಗುಂಪು ಚೀನೀ ಆಕ್ರಮಣವನ್ನು ತೀವ್ರವಾಗಿ ಖಂಡಿಸಿದರೆ, ಇನ್ನೊಂದು ಗುಂಪು ಚೀನದೊಂದಿಗೆ ಭಾರತ ಸರ್ಕಾರ ಒಪ್ಪಂದ ಮಾಡಿಕೊಳ್ಳಬೇಕೆಂದು ಬಯಸಿತು. ಜೊತೆಗೆ ಸೋವಿಯತ್ ಮತ್ತು ಚೀನೀ ಕಮ್ಯೂನಿಸ್ಟ್ ಪಕ್ಷಗಳ ಸೈದ್ಧಾಂತಿಕ ಭಿನ್ನತೆಯ ಫಲವಾಗಿ ಭಾರತದ ಪಕ್ಷ ಎರಡಾಯಿತು. ಕಲ್ಕತ್ತೆಯ ಅಧಿವೇಶನದಲ್ಲಿ ತ್ರೀವ್ರವಾದಿಗಳು ಭಾರತೀಯ ಕಮ್ಯೂನಿಸ್ಟ್ (ಮಾರ್ಕ್ಸಿಸ್ಟ್) ಪಕ್ಷ ರಚಿಸಿಕೊಂಡರು. ಉಳಿದವರದು ಭಾರತೀಯ ಕಮ್ಯೂನಿಸ್ಟ್ ಪಕ್ಷವೆನಿಸಿಕೊಂಡಿತು. ಮಾರ್ಕ್ಸಿಸ್ಟ್ ಕಮ್ಯೂನಿಸ್ಟ್ ಪಕ್ಷದವರನೇಕರು ಬಂಧನಕ್ಕೊಳಗಾಗಿದ್ದು ಅನಂತರ ಬಿಡುಗಡೆಹೊಂದಿದರು. 1967ರಲ್ಲಿ ನಡೆದ ಮಹಾಚುನಾವಣೆಗಳಲ್ಲಿ ಎರಡು ಪಕ್ಷಗಳೂ ಪ್ರತ್ಯೇಕವಾಗಿ ಸ್ಪರ್ಧಿಸಿದುವು. ಏತನ್ಮಧ್ಯೆ ಕೇರಳದಲ್ಲಿ ಏರ್ಪಟ್ಟ ಕಮ್ಯೂನಿಸ್ಟ್ ಮಾರ್ಕ್ಸಿಸ್ಟ್ ನಾಯಕತ್ವದ ಸರ್ಕಾರ ಮತ್ತೆ ಪತನಹೊಂದಿತು. ಬಂಗಾಳದಲ್ಲಿ ಕಮ್ಯೂನಿಸ್ಟರನ್ನೊಳಗೊಂಡ ವಾಮರಂಗವೂ ಅಧಿಕಾರದಲ್ಲುಳಿಯಲಿಲ್ಲ. ಇದರಿಂದಾಗಿ ಕಮ್ಯೂನಿಸ್ಟ್ ಮಾರ್ಕ್ಸಿಸ್ಟರಲ್ಲೂ ಭ್ರಮನಿರಸನವಾಯಿತು. ಪಕ್ಷದ ಅತ್ಯಂತ ತೀವ್ರಗಾಮಿಗಳು ಮಾರ್ಕಿಸ್ಟ್ ಪಕ್ಷದಿಂದಲೂ ಹೊರಬಿದ್ದು ಪ್ರತ್ಯೇಕ ಪಕ್ಷ ರಚಿಸಿಕೊಳ್ಳುವ ಮಾತನ್ನಾಡಿದರೂ ಅದು ಕಾರ್ಯರೂಪಕ್ಕೆ ಬರಲಿಲ್ಲ. ಭಾರತೀಯ ಕಮ್ಯೂನಿಸ್ಟ್ ಪಕ್ಷ ಆಳುವ ಕಾಂಗ್ರೆಸ್ ಸರ್ಕಾರದ ಧೋರಣೆಗಳ ಬಗ್ಗೆ ಹೆಚ್ಚಿನ ಭಿನ್ನಾಭಿಪ್ರಾಯ ಹೊಂದಿಲ್ಲವೆನ್ನಬಹುದು. ಕೇರಳದಲ್ಲಿ ಈಗ ಆಡಳಿತ ಕಾಂಗ್ರೆಸ್ ಬೆಂಬಲ ಪಡೆದ ಭಾರತೀಯ ಕಮ್ಯೂನಿಸ್ಟ್ ಪಕ್ಷದ ಸರ್ಕಾರ ಅಧಿಕಾರದಲ್ಲಿದೆ (1971). (ಎ.ಎಂ.)

**ಕಯನೈಟ್ :** ಸಿಲಿಕೇಟ್ ಜಾತಿಗೆ ಸೇರಿದ ರೂಪಾಂತರ ಶಿಲೆಗಳಲ್ಲಿ ದೊರೆವ ಒಂದು ಖನಿಜ. ಅಣುಸೂತ್ರ $Al_2SiO_5$. ಇದೊಂದು ಅಲ್ಯೂಮಿನಿಯಮ್ಮಿನ ಸಿಲಿಕೇಟ್. ಪ್ರಾದೇಶಿಕ ರೂಪ ಪರಿವರ್ತನೆಯಿಂದ ಉದ್ಭವಿಸಿದ ನೈಸುಗಳು ಮತ್ತು ಶಿಷ್ಟುಗಳ ಜೊತೆಗಿರುವುದು ಇದರ ವಿಶಿಷ್ಟ ಲಕ್ಷಣ. ಕಯನೈಟ್ ಎಂಬ ಶಬ್ದ ಗ್ರೀಕ್ ಶಬ್ದವಾದ ಕುಅನೋಸ್ ಎಂಬುದರಿಂದ ನಿಷ್ಪನ್ನವಾಗಿದೆ. ಇದರ ಅರ್ಥ ಕಪ್ಪುನೀಲಿಯ ವಸ್ತು ಎಂದು. ಇದು ಈ ಖನಿಜದ ನೀಲವರ್ಣವನ್ನು ಸೂಚಿಸುತ್ತದೆ. ಕಯನೈಟಿನ ಬಣ್ಣ ಸಾಮಾನ್ಯವಾಗಿ ನೀಲಿಯಿಂದ ಹಿಡಿದು ಬಿಳಿಯ ಬಣ್ಣದ ವರೆಗೂ ಹರಡಿದೆಯಲ್ಲದೆ ಇದು ಬೂದು, ಹಸಿರು, ಹಳದಿಯಾಗಿರುವುದೂ ಉಂಟು. ಉದ್ದವಾದ ಅಲಗಿನಾಕಾರದಿಂದ ಹಿಡಿದು ಸ್ತಂಭಾಕಾರದ ಹರಳುಗಳ ರೂಪದಲ್ಲಿ ಇದು ದೊರೆಯುತ್ತದೆ. ಚೆನ್ನಾಗಿ ಸೀಳಲು ಬರುವಂತಿದೆ. ಈ ಖನಿಜದ ಗಡಸುತನ (ಹಾರ್ಡ್‌ನೆಸ್) ಹರಳಿನ ಮುಖವನ್ನು ಅವಲಂಬಿಸಿ 5 ರಿಂದ 7ರ ವರೆಗಿದೆ. ಸಾಪೇಕ್ಷಸಾಂದ್ರತೆ 3.56–3.66 ವರೆಗಿದೆ. ಕಯನೈಟ್ ಖನಿಜ ಮೃತ್ತಿಕಾ ಶಿಲೆಗಳ (ಪೆಲಿಟಿಕ್ ಶಿಲೆಗಳ) ಪ್ರಾದೇಶಿಕ ರೂಪಾಂತರೀಕರಣದಿಂದ ಉದ್ಭವಿಸಿದೆ. 600° ಸೆಂ. ಉಷ್ಣತೆ ಮತ್ತು 5000 ವಾಯುಮಾನ ಒತ್ತಡದಲ್ಲಿ ಇದನ್ನು ಸಂಶ್ಲೇಷಿಸಬಹುದು. ಸಾಮಾನ್ಯವಾಗಿ ಮೈಕ, ಗಾರನೆಟ್, ಕೋರಂಡಂ ಮತ್ತು ಸಿಲ್ಲಿಮನೈಟ್ ಜೊತೆಗೆ ಕಯನೈಟ್ ಇರುವುದು. ಈ ಖನಿಜವನ್ನು ರಿಫ್ರಾಕ್ಟರಿಗಳಲ್ಲಿನ ಬಗೆಬಗೆಯ ಕುಲುಮೆಗಳಲ್ಲಿ ಒಳಲೇಪಕ್ಕಾಗಿ ಬಳಸುತ್ತಾರೆ. ಕೆಲವು ಗಾಜು ಮತ್ತು ಪಿಂಗಾಣಿ ಸಾಮಾನುಗಳ ಉದ್ಯೋಗಗಳಲ್ಲೂ ಮತ್ತು ಕಿಡಿಬೆಣೆಗಳನ್ನು ತಯಾರಿಸಲೂ ಇದರ ಉಪಯೋಗವಿದೆ. ಪಾರದರ್ಶಕ ಮತ್ತು ನಿಷ್ಕಲ್ಮಷ ಕಯನೈಟನ್ನು ರತ್ನಗಳಂತೆ ಉಪಯೋಗಿಸುತ್ತಾರೆ. ಕಯನೈಟ್ ನಿಕ್ಷೇಪಗಳು ಬಿಹಾರ್, ಒರಿಸ್ಸ, ಮಧ್ಯಪ್ರದೇಶ, ಅಸ್ಸಾಂಗಳಲ್ಲಿ ದೊರೆಯುತ್ತವೆ. ಮೈಸೂರು ರಾಜ್ಯದಲ್ಲಿ ಇದು ಸಿಕ್ಕುವ ಸ್ಥಳಗಳು ಹಾಸನ, ಚಿತ್ರದುರ್ಗ ಮತ್ತು ಮೈಸೂರು ಜಿಲ್ಲೆ. (ಎಸ್.ಬಿ.ಎಲ್.)

**ಕಯಾಕ್ :** ಉತ್ತರ ಏಷ್ಯ ಮತ್ತು ಉತ್ತರ ಯೂರೋಪಿನಲ್ಲಿ ಪೂರ್ವೇತಿಹಾಸಯುಗದಲ್ಲಿ ಸಮುದ್ರ ಮತ್ತು ನದಿಗಳ ಸಾರಿಗೆಗೆ ಉಪಯೋಗಿಸುತ್ತಿದ್ದ ಚರ್ಮದ ದೋಣಿಯ ಎಸ್ಕಿಮೋ ಹೆಸರು. ಐತಿಹಾಸಿಕಯುಗದಲ್ಲಿ ಸಹ ಇದು ಕೆಲವು ಜನಾಂಗಗಳಲ್ಲಿ ಉಳಿದು ಬಂದಿತ್ತು. ಜಲಚರಗಳ ಬೇಟೆಗಾಗಿ ಒಬ್ಬೊಬ್ಬ ಎಸ್ಕಿಮೋವೂ ಒಂದೊಂದು ದೋಣಿ ಬಳಸುವುದು ವಾಡಿಕೆಯಾಗಿತ್ತಾದರೂ ಕೆಲವುಬಾರಿ ಇಬ್ಬರು ಅಥವಾ ಮೂವರು ಬಳಸುವಂಥ ಕಯಾಕುಗಳೂ ಇದ್ದುವು. ಹಗುರಾದ ಮರದ ಚೌಕಟ್ಟಿಗೆ ಸೀಲ್ ಮೃಗದ ಚರ್ಮವನ್ನು ಹೊದ್ದಿಸಿ ಹೊಲಿದು ಈ ದೋಣಿಗಳನ್ನು ನಿರ್ಮಿಸುತ್ತಿದ್ದರು. ನಾವಿಕನೂ ಸೀಲ್ ಮೃಗದ ಚರ್ಮದ ಉಡುಪನ್ನು ಧರಿಸಿ ಸಮುದ್ರದ ನೀರಿನಿಂದ ರಕ್ಷಣೆ ಪಡೆಯುತ್ತಿದ್ದ. ಈ ದೋಣಿಯಲ್ಲಿ ಜೋಡಿಸಿಟ್ಟ

ತಟ್ಟೆ, ಈಟಿಗಳನ್ನು ಭದ್ರವಾಗಿ ಹಿಡಿದಿಡುವ ಪಟ್ಟಿ, ಇತರ ಒಂದೆರಡು ಆಯುಧಗಳು—ಇವನ್ನು ಮಾತ್ರ ಒಯ್ಯಬಹುದಾಗಿತ್ತು. ಇದು ಬಹಳ ಹಗುರಾದ ಮತ್ತು ಸುಲಭವಾಗಿ ನಡೆಸಬಹುದಾಗಿದ್ದ ದೋಣಿ.

**ಕಯಾಕೆಂಟ್—ಖೊರೋಚೋಯ್ ಸಂಸ್ಕೃತಿ :** ರಷ್ಯದ ಕಾಕೇಷಿಯ ಪ್ರದೇಶದಲ್ಲಿ ಕೋಬಾನ್ ಸಂಸ್ಕೃತಿಯೊಂದಿಗೆ ನೆಲಸಿದ್ದ ಕಂಚಿನ ಯುಗ ಸಂಸ್ಕೃತಿ. ಇದನ್ನು ಕೋಬಾನ್ ಸಂಸ್ಕೃತಿಯ ಪ್ರಾದೇಶಿಕ ವೈಪರೀತ್ಯವೆಂದು ಪರಿಗಣಿಸಲಾಗಿದೆ. 1936–1939 ರಲ್ಲಿ ಎ. ಸಿ. ಕ್ರುಗ್ಲಾವ್ ಈ ಸಂಸ್ಕೃತಿಯನ್ನು ಬೆಳಕಿಗೆ ತಂದ. ಡಗೆಸ್ತಾನದ, ಕರಾವಳಿ ಮತ್ತು ಬೆಟ್ಟಪ್ರದೇಶಗಳಲ್ಲಿ ಈ ಸಂಸ್ಕೃತಿಗೆ ಸೇರಿದ ಅನೇಕ ಶ್ಮಶಾನಗಳೂ ವಸತಿಗಳೂ ಕಂಡುಬಂದಿವೆ. ಈ ಸಂಸ್ಕೃತಿಯನ್ನು ಕ್ರಿ.ಪೂ. 9–7ನೆಯ ಸತಮಾನಗಳಿಗೆ ನಿರ್ದೇಶಿಸಲಾಗಿದೆ. ಉದ್ದನಾದ, ಮತ್ತು ಬಾಗಿದ ಕಂಚಿನ ಕೊಡಲಿಗಳು, ತಾಮ್ರದ ಉಪಕರಣಗಳು ಮತ್ತು ವೈವಿಧ್ಯಮಯ ಆಭರಣಗಳು ಈ ಸಂಸ್ಕೃತಿಯ ಲಕ್ಷಣಗಳು. ಈ ಜನ ಕಲ್ಲಿನ ಶವತೊಟ್ಟಿಗಳಲ್ಲಿ ಮೃತರ ದೇಹವನ್ನು ಹೂತಿಡುತ್ತಿದ್ದರು. ಈ ಸಮಾಧಿಸ್ಥಳಗಳನ್ನು ಶಿಲಾವರ್ತುಲಗಳಿಂದ ಗುರುತಿಸಬಹುದಾಗಿತ್ತು. ವೃತ್ತಾಕಾರದ ಮರದ ತೊಟ್ಟಿಗಳನ್ನು ಉಪಯೋಗಿಸುತ್ತಿದ್ದುದೂ ಉಂಟು. ಮೃತರ ವೈಯಕ್ತಿಕ ಆಭರಣಗಳನ್ನೂ ಕೊರೆದ ಜ್ಯಾಮಿತೀಯ ಚಿತ್ರಗಳಿಂದ ಅಲಂಕೃತವಾದ ಮೃಣ್ಪಾತ್ರೆಗಳನ್ನೂ ಸಮಾಧಿಗಳಲ್ಲಿ ನಿಕ್ಷೇಪಿಸುತ್ತಿದ್ದರು. ಒಂದೊಂದು ಪಂಗಡಗಳಿಗೆ ಒಂದೊಂದು ಶ್ಮಶಾನಗಳಿದ್ದುವು. ಗಂಡಸರ ಸಮಾಧಿಗಳ ಸುತ್ತ ಹೆಂಗಸರ ಮತ್ತು ಮಕ್ಕಳ ಸಮಾಧಿಗಳನ್ನು ನಿರ್ಮಿಸಲಾಗುತ್ತಿತ್ತು. ಇವರ ಮುಖ್ಯ ವೃತ್ತಿ ಪಶುಪಾಲನೆ. *

**ಕಯಾಕೆಂಟ್ ಸಂಸ್ಕೃತಿ :** ರಷ್ಯದ ಕಾಕೇಷಿಯ ಪ್ರಾಂತ್ಯದ ಈಶಾನ್ಯ ಭಾಗದಲ್ಲಿ ದಘೆಸ್ತಾನ್ ಜಿಲ್ಲೆಯ ಕರಾವಳಿಯಲ್ಲಿಯ ಕಯಾಕೆಂಟ್ ನೆಲೆಯಲ್ಲಿದ್ದ ಸಂಸ್ಕೃತಿ. ಇದನ್ನು ಎ. ಪಿ. ಕ್ರುಗ್ಲಾಫ್ 1939ರಲ್ಲಿ ಪರಿಶೋಧಿಸಿದ. ಇದು ಕ್ರಿ. ಪೂ. 3ನೆಯ ಸಹಸ್ರಮಾನದ ಉತ್ತರಾರ್ಧಕ್ಕೆ ಸೇರಿದ್ದು ಇಲ್ಲಿಯ ವಸತಿಗಳು ಕೋಟೆಯಿಂದ ರಕ್ಷಿತವಾಗಿದ್ದುವು. ಮನೆಗಳನ್ನು ಕಲ್ಲು ಮತ್ತು ಮಣ್ಣಿನಿಂದ ಲೇಪಿತವಾಗಿದ್ದ ತಡಿಕೆಗಳಿಂದ ನಿರ್ಮಿಸುತ್ತಿದ್ದರು. ವ್ಯವಸಾಯ ಈ ಜನರ ಮುಖ್ಯ ವೃತ್ತಿ. ಪಶುಪಾಲನೆ, ಕುರಿಸಾಕಣೆ ಇತರ ಪ್ರಮುಖ ಉದ್ಯೋಗಗಳು. ಕಲ್ಲಿನಲ್ಲಿ ಮಾಡಿದ ಕೈಗಾಣಗಳೂ ಅರೆಯುವ ಕಲ್ಲುಗಳೂ ಚಕಮಕಿ ಕಲ್ಲಿನ ಹಲ್ಲುಗಳಿದ್ದ ಕುಡುಗೋಲುಗಳೂ ಇವರ ವ್ಯವಸಾಯದ ಉಪಕರಣಗಳಾಗಿದ್ದುವು. ಮಣ್ಣಾಗರೆಯಲ್ಲಿ ಮತ್ತು ಪಾತ್ರೆಗಳನ್ನು ಮಾಡುವ ಮಣ್ಣಿನಲ್ಲಿ ಹಲವಿಧ ಧಾನ್ಯಗಳು ಕಂಡುಬಂದಿವೆ. *

**ಕಯಾಧು :** ಭಕ್ತ ಪ್ರಹ್ಲಾದನ ತಾಯಿ, ಹಿರಣ್ಯಕಶಿಪುವಿನ ಹೆಂಡತಿ, ಜಂಭಾಸುರನ ಮಗಳು. ಗರ್ಭಧರಿಸಿದ್ದ ಈಕೆಯನ್ನು ಸಮಯ ಕಾದು ಹಿರಣ್ಯಕಶಿಪು ತಪಸ್ಸಿಗೆ ಹೋಗಿದ್ದಾಗ ಇಂದ್ರ ಸೆರೆಹಿಡಿಯುತ್ತಾನಾದರೂ ನಾರದನ ಸಲಹೆಯಂತೆ, ಪೀಡಿಸದೆ ಅವನ ಬಳಿಯೇ ಬಿಡುತ್ತಾನೆ. ನಾರದ ಆಕೆಗಾಗಿ ಗಂಗಾತೀರದ ಬಳಿ ಒಂದು ಆಶ್ರಮವನ್ನು ನಿರ್ಮಿಸಿ ಅಲ್ಲಿ ಈಕೆಗೆ ಮಂತ್ರೋಪದೇಶ ಮಾಡುತ್ತಾನೆ. ಮಂತ್ರೋಪದೇಶ ಪಡೆದ ಈಕೆ ಮಹಾವಿಷ್ಣುವಿನ ಧ್ಯಾನದಲ್ಲಿ ನಿರತಳಾಗುತ್ತಾಳೆ. ಅಷ್ಟರಲ್ಲಿ ಹಿರಣ್ಯಕಶಿಪು ತಪಸ್ಸಿನಿಂದ ಹಿಂತಿರುಗುತ್ತಾನಾಗಿ ನಾರದ ಕಯಾಧುವನ್ನು ಒಪ್ಪಿಸುತ್ತಾನೆ. ಇವರ ಮಗ ಪ್ರಹ್ಲಾದ ನಾರದನ ಮಂತ್ರೋಪದೇಶದಿಂದಾಗಿ ಮುಂದೆ ಮಹಾವಿಷ್ಣುಭಕ್ತನಾಗುತ್ತಾನೆ. *

**ಕಯೋಟ್ :** ಸಸ್ತನಿಗಳ ವರ್ಗದ ಕಾರ್ನಿವೊರ ಗಣದಲ್ಲಿನ ಕೇನಿಡೀ (ನಾಯಿಗಳ) ಕುಟುಂಬಕ್ಕೆ ಸೇರಿದ ಪ್ರಾಣಿ. ಕೇನಿಸ್ ಲೇಟ್ರನ್ಸ್ ಇದರ ವೈಜ್ಞಾನಿಕ ಹೆಸರು. ಇದನ್ನು ಹುಲ್ಲುಗಾವಲಿನ ತೋಳ (ಪ್ರೈರಿ ವುಲ್ಫ್) ಎಂದು ಕರೆಯುವುದುಂಟು. ಉತ್ತರ ಅಮೆರಿಕದಲ್ಲಿ ಅಲಾಸ್ಕದಿಂದ ಹಿಡಿದು ಮೆಕ್ಸಿಕೋ ವರೆಗಿನ ಪ್ರದೇಶಗಳಲ್ಲಿ ಹೇರಳವಾಗಿ ಕಾಣಬರುತ್ತದೆ. ಸಾಮಾನ್ಯವಾಗಿ ಬಯಲುಗಳಲ್ಲಿ ವಾಸಿಸುವುದು ಹೆಚ್ಚು. ಗಾತ್ರದಲ್ಲಿ ತೋಳಕ್ಕಿಂತ ಚಿಕ್ಕದಾಗಿದೆ. ನರಿಯನ್ನು ಹೆಚ್ಚುಕಡಿಮೆ ಹೋಲುವ ಇದು ಸುಮಾರು 36″ ಉದ್ದ, 12″–15″ ಎತ್ತರ ಇದೆ. ಇದರ ತೂಕ ಸುಮಾರು 14 ಕಿ.ಗ್ರಾಂ. ಮೇಲುಮೈ ಮಾಸಲು ಹಳದಿ ಬಣ್ಣವಾಗಿಯೂ ತಳಭಾಗ ಬಿಳುಪಾಗಿಯೂ ಇದೆ; ಕಾಲುಗಳು ಕೊಂಚ ಕೆಂಪು ಬಣ್ಣದವು. ಬಾಲದ ತುದಿ ಕಪ್ಪು ಬಣ್ಣದ್ದು; ಕುಚ್ಚಿನಂತಿದೆ. ಬಾಲದ ಬುಡದಲ್ಲಿ ಕಪ್ಪು ಬಣ್ಣದ ಗ್ರಂಥಿಗಳುಳ್ಳ ಪ್ರದೇಶವಿದೆ. ಕಯೋಟ್ ಓಡುವಾಗ ಬಾಲ ಕೆಳಮುಖವಾಗಿ ಬಾಗಿರುತ್ತದೆ.

ಕಯೋಟ್ ನಿಶಾಚರಿ. ಮಾಂಸಾಹಾರಿಯಾದ ಇದರ ಆಹಾರ ಮೊಲ, ಇಲಿ, ಹೆಗ್ಗಣ, ಅಳಿಲು, ಜಿಂಕೆ, ಬಾತು ಮತ್ತು ಇತರ ಹಕ್ಕಿಗಳು. ಹೊಂಚು ಹಾಕಿ ಬೇಟೆಯನ್ನು ಹಿಡಿಯುವುದೇ ಹೆಚ್ಚು. ಕೆಲವು ವೇಳೆ ಅಟ್ಟಿಸಿಕೊಂಡು ಹೋಗಿ ಬೇಟೆಯಾಡಿ ಹಿಡಿಯುವುದೂ ಉಂಟು. ಬೇಟೆಯಾಡುವಾಗ ಸುಮಾರು 40 ಮೈ. ವೇಗದಲ್ಲಿ ಓಡಿದ ದಾಖಲೆಗಳುಂಟು. ಗುಂಪುಗುಂಪಾಗಿ ಕೂಡಿಕೊಂಡು ಬೇಟೆಯಾಡುತ್ತದೆ. ಸಾಕುಪ್ರಾಣಿಗಳನ್ನು ಹಿಡಿದು ತಿನ್ನುವುದೆಂದು ಹೇಳುವರಾದರೂ ಅದು ಬಹಳ ವಿರಳ. ಕೆಲವು ವೇಳೆ ಹಣ್ಣುಹಂಪಲುಗಳನ್ನೂ ತಿನ್ನುವುದುಂಟು. ತಾನೇ ನೆಲದಲ್ಲಿ ಗೂಡು ಕೊರೆದುಕೊಂಡು ಅಥವಾ ಇತರ ಪ್ರಾಣಿಗಳು ಮಾಡಿರುವ ನೆಲದ ಬಿಲಗಳನ್ನು ಇನ್ನೂ ಅಗಲ ಮಾಡಿಕೊಂಡು ಹಗಲಿನಲ್ಲಿ ಅಡಗಿಕೊಂಡಿರುತ್ತದೆ. ಇಂಥ ಗೂಡುಗಳಲ್ಲಿ, ಸಾಮಾನ್ಯವಾಗಿ ವಸಂತಋತುವಿನಲ್ಲಿ ಮರಿ ಹಾಕುತ್ತದೆ. ಒಂದು ಸೂಲಿಗೆ 6–8 ಮರಿಗಳನ್ನು ಈಯುತ್ತದೆ. ಗಂಡು–ಹೆಣ್ಣು ಕಯೋಟುಗಳೆರಡೂ ಮರಿಗಳ ಪೋಷಣೆ ಮಾಡುತ್ತವೆ; ಆಜೀವಪರ್ಯಂತ ಗಂಡು ಹೆಣ್ಣುಗಳು



ಒಟ್ಟಿಗೆ ವಾಸಿಸುತ್ತವೆ (ಇವುಗಳ ಆಯುಸ್ಸು ಸುಮಾರು 13 ವರ್ಷಗಳು). ಒಂಟಿಯಾಗಿ ಅಥವಾ ಗುಂಪುಗಳಲ್ಲಿ ಪ್ರತಿ ಸಂಜೆ ಇವು ವಿಚಿತ್ರವಾಗಿ ಕೂಗುತ್ತವೆ. ಬೊಗಳುವಿಕೆ, ಅರಚುವಿಕೆ, ಹುಯ್ಯಲಿಡುವಿಕೆ, ನರಿಗಳಂತೆ ಊಳಿಡುವಿಕೆ ಮುಂತಾಗಿ ಹಲವು ವಿಧದ ಇದರ ಕೂಗು ಮುಚ್ಚಂಜೆಯಲ್ಲಿ ಕಾಡಿನಲ್ಲಿ ಒಂಟಿಯಾಗಿ ಹೋಗುವವರಿಗೆ ಭಯ ಹುಟ್ಟಿಸುವಂಥದು. (ಬಿ.)

**ಕರಂಡ ಹಣ್ಣಿನ ಗಿಡ :** ಅಪೊಸೈನೇಸೀ ಕುಟುಂಬಕ್ಕೆ ಸೇರಿದ ಕ್ಯಾರಿಸ ಕರಂಡಸ್ ಎಂಬ ವೈಜ್ಞಾನಿಕ ಹೆಸರಿನ ದೊಡ್ಡ ಪೊದೆ ಅಥವಾ ಸಣ್ಣ ಮರ. ಕಬಳಿಗಿಡ, ಕಳಾಗಿಡ, ಹೆಜ್ಜಾರಿಗೆ—ಇವು ಇದರ ಪರ್ಯಾಯ ನಾಮಗಳು. ಉಷ್ಣ ಹಾಗೂ ಸಮಶೀತೋಷ್ಣವಲಯಗಳಲ್ಲೆಲ್ಲ ಹೇರಳವಾಗಿ ಕಾಣಬರುತ್ತದೆ. ಭಾರತದ ಮೂಲವಾಸಿ ಇದು ಎಂದು ಹೇಳಲಾಗಿದೆ. ಸಾಮಾನ್ಯವಾಗಿ ಮರಳು ಮಿಶ್ರಿತ ನೆಲದಲ್ಲಿ ನೀರಿನ ಸೌಲಭ್ಯ ಕಡಿಮೆ ಇರುವ ಪ್ರದೇಶಗಳಲ್ಲಿ ಬೆಳೆಯುತ್ತದೆ. ಹಣ್ಣಿಗಾಗಿ ಇದನ್ನು ಬೆಳೆಸುವುದೂ ಉಂಟು. ಇದರ ಕಾಯಿಯ ಬಣ್ಣದ ಆಧಾರದ ಮೇಲೆ ಇದನ್ನು ಕೆಂಪು ಮತ್ತು ಹಸಿರು ಎಂದು ಎರಡು ಬಗೆಗಳಾಗಿ ವಿಂಗಡಿಸಬಹುದು. ಕರಂಡಹಣ್ಣಿನ ಗಿಡ ಸುಮಾರು 10′–20′ ಎತ್ತರಕ್ಕೆ ಬೆಳೆಯುತ್ತದೆ. ಕಾಂಡದ ಮೇಲೆಲ್ಲ ಸರಳವಾದ ಅಥವಾ ಕವಲೊಡೆದ ದೃಢವಾದ ಮುಳ್ಳುಗಳಿವೆ. ಇದರ ಎಲೆಗಳು ಸರಳ ಮತ್ತು ಅಭಿಮುಖವಾಗಿ ಜೋಡಣೆಗೊಂಡಿವೆ. ಇವುಗಳ ಅಂಚು ನಯ, ತುದಿ ಮೊಂಡು. ಹೂಗಳು ಮಧ್ಯಾರಂಭಿ ಅಥವಾ ಸಂಕೀರ್ಣ ಪುಷ್ಪಗುಚ್ಛಗಳಲ್ಲೊ ಒಂಟಿಯಾಗಿಯೊ ಇರುತ್ತವೆ; ಇವು ದ್ವಿಲಿಂಗಿಗಳು. ಪುಷ್ಪಪತ್ರಗಳು 5, ಬಿಡಿಯಾಗಿವೆ ; ಇವು ಹಣ್ಣಿನಲ್ಲೂ ಉಳಿದಿರುತ್ತವೆ. ಹೂದಳಗಳು 5, ಪರಸ್ಪರ ಕೂಡಿಕೊಂಡಿವೆ. ಇವುಗಳ ಬಣ್ಣ ಬಿಳಿ ಅಥವಾ ನಸುಗೆಂಪು. ಹೂದಳಗಳ ಕೂಡುವಿಕೆಯಿಂದಾದ ಕೊಳವೆಯ ಗಂಟಲಿನ ಬಳಿ ಅನುಬಂಧಿಕೆ (ಅಪೆಂಡೇಜ್) ಇದೆ. ಕೇಸರಗಳು 5, ಇವು ಹೂದಳಗಳಿಗೆ ಪರ್ಯಾಯವಾಗಿ ಜೋಡಣೆಗೊಂಡಿರುವುದಲ್ಲದೆ ಅವಕ್ಕೆ ಅಂಟಿಕೊಂಡಿವೆ. ಅಂಡಾಶಯ ಉಚ್ಚಸ್ಥಾನದ್ದು. ಇದರಲ್ಲಿ ಎರಡು ಕಾರ್ಪೆಲುಗಳೂ ಒಂದು ಇಲ್ಲವೆ ಎರಡು ಕೋಣೆಗಳೂ ಇವೆ. ಒಂದೊಂದು ಕೋಣೆಯಲ್ಲೂ ಹಲವಾರು ಅಂಡಕಗಳಿವೆ. ಫಲ ಅಂಡಾಕಾರದ ಬೆರಿ. ಫಲ ಬಿಡುವ ಕಾಲ ಆಗಸ್ಟ್–ಸೆಪ್ಟೆಂಬರ್ ತಿಂಗಳುಗಳು. ಅಪಕ್ವ ಕಾಯಿಗಳಲ್ಲಿ ಸಿ ಜೀವಾತು ಅಧಿಕ ಪ್ರಮಾಣದಲ್ಲಿದೆ. ಕಾಯಿಗಳು ಬಲು ಹುಳಿ. ಉಪ್ಪಿನಕಾಯಿ

ಹಾಕಲು, ಚಟ್ನಿ ಮಾಡಲು ಇವನ್ನು ಬಳಸುತ್ತಾರೆ. ಹಣ್ಣು ಸಿಹಿಯಾಗಿದ್ದು ತಿನ್ನಲು ಯೋಗ್ಯ. ಅಲ್ಲದೆ ಇದರಿಂದ ಜೆಲ್ಲಿ, ಪುಡಿಂಗ್ ಮುಂತಾದುವನ್ನು ಮಾಡಬಹುದು. ಹಣ್ಣನ್ನು ಚರ್ಮ ಹದಮಾಡಲೂ ಬಟ್ಟೆಗಳಿಗೆ ಬಣ್ಣ ಹಾಕುವಾಗಲೂ ಉಪಯೋಗಿಸುವುದುಂಟು. ಈ ಸಸ್ಯಕ್ಕೆ ಔಷಧೀಯ ಮಹತ್ತ್ವವೂ ಉಂಟು. ಬೇರನ್ನು ಜಂತುಹುಳು ನಾಶಕವಾಗಿಯೂ ಎಲೆಗಳ ಕಷಾಯವನ್ನು ಕೆಲವು ಬಗೆಯ ಜ್ವರನಿವಾರಕವಾಗಿಯೂ ಬಳಸುತ್ತಾರೆ. (ಎಚ್.)

**ಕರಂದೈ ತಮಿಳು ಸಂಗಂ ತಾಮ್ರ ಪಟಗಳು** **(ಒಂದನೆಯ ರಾಜೇಂದ್ರ ಚೋಳನ)** : ತಮಿಳುನಾಡಿನ ತಂಜಾವೂರು ಜಿಲ್ಲೆಯ ಪಾಪನಾಶಂ ತಾಲ್ಲೂಕಿನಲ್ಲಿರುವ ಪುತ್ತೂರುಗ್ರಾಮದ ಹೊಲವೊಂದರಲ್ಲಿ ನೆಲದಿಂದ ತೆಗೆಯಲಾದ ತಾಮ್ರಪಟಗಳು. ತಂಜಾವೂರಿನ ಬಳಿಯ ಕರಂದೈಯಲ್ಲಿ, ತಮಿಳು ಸಂಗಂ ಆವರಣದಲ್ಲಿ ಅವನ್ನು ಈಗ ರಕ್ಷಿಸಿಡಲಾಗಿದೆ.

ಇವು ಒಟ್ಟು 57 ತಾಮ್ರಪಟಗಳನ್ನೂ 2 ಮಜಬೂತಾದ ಉಂಗುರಗಳನ್ನೂ ಒಳಗೊಂಡಿದೆ. ತಾಮ್ರಪಟಗಳ ಸರಾಸರಿ ಅಳತೆ 42 × 24 ಸೆಂ ಮೀ. ಇವುಗಳೊಳಗೆ ಉಂಗುರವೊಂದನ್ನು ತೂರಿಸಲು ಸಾಧ್ಯವಾಗುವಂತೆ ರಂಧ್ರಗಳಿವೆ. ಇಡೀ ತಂಡದ ತೂಕ 111.73 ಕಿ ಗ್ರಾಂ. ಎರಡು ಉಂಗುರಗಳಲ್ಲಿ ಒಂದು ಒಡೆದಿದೆ. ಎರಡು ಉಂಗುರಗಳಿಗೂ ಮುದ್ರೆಯಿದೆ. ಇದರ ತಳವನ್ನು ಉಂಗುರಕ್ಕೆ ಬೆಸೆಯಲಾಗಿದೆ. ಉಂಗುರದ ದಪ್ಪ 6″ ; ವ್ಯಾಸ 18″. ಮುದ್ರೆ ವೃತ್ತಾಕಾರ, ಅದರ ಸುತ್ತಳತೆ 5′ 1.″ ಉಂಗುರದ ತಳದಿಂದ ಎತ್ತರಕ್ಕೆ ಉಬ್ಬಿರುವ ಮುದ್ರೆಯ ಪೀಠವಾಗಿ ಅರಳಿದ ಕಮಲವಿದೆ. ಕಂಡಿಮಾಡಿ ಕೂರಿಸಿರುವ ಮುದ್ರೆಯ ಭಾಗದಲ್ಲಿಯ ಉಬ್ಬು ಚಿತ್ರಗಳಿವು : ನೊಣತೊಡಪ, ಮೇಲೆ ಚಾಮರ ; ಕುಳಿತ ಭಂಗಿಯಲ್ಲಿರುವ ವ್ಯಾಘ್ರ ಮತ್ತು ಮತ್ಸ್ಯ, ಇವುಗಳ ಅಚೀಚೆ ದೀಪಸ್ತಂಭ, ಧ್ವಜ, ಕಠಾರಿ, ಬಲಕ್ಕೆ ಚುಚ್ಚುಗೋಲು. ಇವುಗಳ ಕೆಳಗೆ ಒಂದು ಗೆರೆ ಇದೆ. ಇದರ ಅಡಿಯಲ್ಲಿ, ಎಡದಿಂದ ಬಲಕ್ಕೆ ಸಾಲಾಗಿ ಒಂದು ತಮಟೆಯೂ ತಗ್ಗಾದ ಸಿಂಹಾಸನವೂ ಬಲಮುಖವಾಗಿ ನಿಂತ ವರಾಹವೂ ಸ್ವಾಸ್ತಿಕವೂ ಇವೆ. ಇದರ ತಳದಲ್ಲಿ ಕಮಲ. ಹುಲಿಯ ಚಿತ್ರ ಚೋಳರನ್ನೂ ಮೀನು ಪಾಂಡ್ಯರನ್ನೂ ವರಾಹ ಚಾಳುಕ್ಯರನ್ನೂ ಸಂಕೇತಿಸುತ್ತವೆ. ಉಳಿದ ಚಿತ್ರಗಳ ಪೈಕಿ ಛತ್ರಿ ಮತ್ತು ನೊಣತೊಡಪಗಳನ್ನು ಬಿಟ್ಟರೆ ಮಿಕ್ಕವು ಬಹುಶಃ ಅಷ್ಟಮಂಗಲದ ಪ್ರತೀಕಗಳಾಗಿವೆ. ಇವೆಲ್ಲವನ್ನೂ ವೃತ್ತಾಕಾರದಲ್ಲಿ ಕೊರೆಯಲಾಗಿದೆ. ಈ ವೃತ್ತದ ಹೊರಗೆ ಆಲೇಖ್ಯವೊಂದಿದೆ. ಇದು ರಾಜೇಂದ್ರಚೋಳನ ಶಾಸನವೆಂದೂ ಅರಸನ ಉಜ್ಜ್ವಲ ಮಣಿಮಕುಟದಲ್ಲಿ ಧರಿಸಿರುವಂಥದೆಂದೂ ಅಲ್ಲಿ ಹೇಳಲಾಗಿದೆ.

ಮೊದಲನೆಯ ಮೂರು ಪಟಗಳಲ್ಲಿರುವುದು ಸಂಸ್ಕೃತದಲ್ಲಿ ರಚಿಸಲಾದ ಗ್ರಂಥಪಾಠ. ಉಳಿದ ಪಟಗಳದು ತಮಿಳು ಭಾಷೆ, ತಮಿಳು ಲಿಪಿ.

ಸಂಸ್ಕೃತ ಪಾಠದಲ್ಲಿ ಚೋಳರ ಪೌರಾಣಿಕ ಮತ್ತು ಐತಿಹಾಸಿಕ ವಂಶಾವಳಿಯನ್ನು ಕೊಡಲಾಗಿದೆ. ನೀಡಲಾದ ದತ್ತಿಯ ವಿವರಗಳನ್ನೂ ಸಂಗ್ರಹವಾಗಿ ಕೊಡಲಾಗಿದೆ. ನರಾಕ್ಕನ್ ಮಾರಾಯನ್ ಜನನಾಥನ್ ಉರುಫ್ ರಾಜೇಂದ್ರಚೋಳ-ಬ್ರಹ್ಮಾಧಿರಾಜನ ಇಚ್ಛೆಯ ಮೇರೆಗೆ ದೊರೆಯು ಐವತ್ತೊಂದು ಗ್ರಾಮಗಳನ್ನು ಕೂಡಿಸಿ ಅಗ್ರಹಾರವೊಂದನ್ನು ರಚಿಸಿದ್ದನ್ನು ತಮಿಳಿನಲ್ಲಿ ಹೇಳಿದೆ. ಇದನ್ನು ದೊರೆಯ ತಾಯಿಯ ಹೆಸರಿನಲ್ಲಿ ತ್ರಿಭುವನ ಮಹಾದೇವಿ-ಚತುರ್ವೇದಿಮಂಗಲಂ ಎಂದು ಕರೆಯಲಾಗಿತ್ತು. ಈ ಅಗ್ರಹಾರಕ್ಕೆ ಒಳಪಟ್ಟ ಜಮೀನುಗಳನ್ನು 1,080 ಬ್ರಾಹ್ಮಣರಿಗೆ ಹಂಚಲಾಗಿತ್ತು. ಅಗ್ರಹಾರದಲ್ಲಿ ಅಗತ್ಯವಾದ ಸೌಲಭ್ಯಗಳನ್ನೆಲ್ಲ ನಿರ್ಮಿಸಲಾಗಿತ್ತು. ಈ ದತ್ತಿಯನ್ನು ನೀಡಲಾದದ್ದು ದೊರೆಯ ಆಳ್ವಿಕೆಯ ಎಂಟನೆಯ ವರ್ಷದಲ್ಲಿ (1019–20).

ಸಂಸ್ಕೃತ ವಿಭಾಗದಲ್ಲಿ ಚೋಳರ ಬಗ್ಗೆ ನೀಡಲಾಗಿರುವ ಹೊಸ ವಿಚಾರಗಳಿವು : 1 ಸಿಂಹಳದ ರಾಜನನ್ನೂ ಪಾಂಡ್ಯದೊರೆಯನ್ನೂ ಅಜೇಯನೆನಿಸಿದ್ದ ಕೇರಳರಾಜನನ್ನೂ ಪಲ್ಲವರಾಜನನ್ನೂ ಪರಾಂತಕ ರಾಜ ಗೆದ್ದನಲ್ಲದೆ ಅವರ ಕೀರ್ತಿಯನ್ನೂ ಪ್ರದೇಶಗಳನ್ನೂ ಐಶ್ವರ್ಯ ವಾಹನಾದಿಗಳನ್ನೂ ವಶಪಡಿಸಿಕೊಂಡ. ಈ ಪಲ್ಲವರಾಜ ನಂದಿವರ್ಮನೇ ಆಗಿದ್ದಿರಬೇಕು. ಈತ ತೆಲ್ಲಾರುಗಳನ್ನು ಜಯಸಿದ್ದವ (ಮೂರನೆಯ ನಂದಿವರ್ಮನಲ್ಲ). 2 ಸುಂದರ ಚೋಳದೊರೆ ವೀರಪಾಂಡ್ಯನನ್ನು ಸಹ್ಯಾದ್ರಿಗೆ ಓಡಿಸಿದನೆಂದು ಹೇಳಲಾಗಿದೆ. ಈತನೊಡನೆ ಕಾದಾಟ ನಡೆಸಿದ ಸಂಗತಿ ಇದೇ ಮೊದಲ ಬಾರಿಗೆ ಬೆಳಕಿಗೆ ಬಂದಿದೆ. ಸುಂದರ ಚೋಳನ ಮಗನಾದ ಎರಡನೆಯ ಆದಿತ್ಯ ಈ ವೀರಪಾಂಡ್ಯನನ್ನು ಕಾಳಗದಲ್ಲಿ ಕೊಂದನೆಂಬುದು ಸುವಿದಿತವಾಗಿದೆ. 3 ಒಂದನೆಯ ರಾಜರಾಜ ಅಶ್ವಾರೂಢನಾಗಿ ಏಕಾಂಗಿಯಾಗಿ ಸತ್ಯಾಶ್ರಯನ ವಿರುದ್ಧ ಕಾದಾಡಿ, ಅವನನ್ನೋಡಿಸಿ. ಆನೆ ಕುದುರೆ ಐಶ್ವರ್ಯ ವನಿತೆಯರನ್ನೆಲ್ಲ ವಶಪಡಿಸಿಕೊಂಡನೆಂದು ಹೇಳಲಾಗಿವೆ. ಈತ ಐಶ್ವರ್ಯವನ್ನು ವಶಪಡಿಸಿಕೊಂಡನೆಂಬುದು ಇವನ ತಂಜಾವೂರು ಶಾಸನದಿಂದ ದೃಢಪಟ್ಟಿದೆ. ಈ ವಿಜಯದಿಂದಾಗಿ ಸುವರ್ಣಪುಷ್ಪಗಳು ದೊರೆತವೆಂದು ಅಲ್ಲಿ ಹೇಳಲಾಗಿದೆ. ಆದರೂ ಈ ತಾಮ್ರಪಟಗಳು ಹೇಳುವಂತೆ ರಾಜರಾಜ ಮಾನ್ಯಖೇಟವನ್ನು ಗೆಲ್ಲುವ ತನ್ನ ಧ್ಯೇಯದಲ್ಲಿ ಜಯಗಳಿಸಲಾರದೆ ಹೋದ. ರಾಜರಾಜ ಹಳೆಯ ಮೈಸೂರು ರಾಜ್ಯದ ಉತ್ತರದ ಗಡಿಯಿಂದಾಚೆಗೆ ತನ್ನ ಅಧಿಕಾರವನ್ನು ವಿಸ್ತರಿಸಲೂ ಶಕ್ತನಾಗಲಿಲ್ಲವೆಂಬುದು ಈಗಾಗಲೇ ತಿಳಿದಿರುವ ವಿಷಯ. 4 ಮಾನ್ಯಖೇಟದ ವರೆಗೂ ರಾಜೇಂದ್ರ ದಂಡೆತ್ತಿ ಹೋಗಿ ತನ್ನ ತಂದೆಯ ಇಚ್ಛೆಯನ್ನು ಈಡೇರಿಸಿದನಲ್ಲದೆ ಆ ನಗರವನ್ನು ಅಗ್ನಿಗಾಹುತಿಮಾಡಿದ. 5 ರಾಜೇಂದ್ರ ಕಂಬುಜದ (ಕಾಂಬೋಡಿಯ) ರಾಜನಿಂದ ಒಂದು ರಥವನ್ನು ಪಡೆದುದಾಗಿ ತಿಳಿದಿದೆ. ಆ ಕಂಬುಜರಾಜ ಶತ್ರುಗಳಿಂದ ತನ್ನ ರಾಜ್ಯವನ್ನು ರಕ್ಷಿಸುವ ಸಲುವಾಗಿ ರಾಜೇಂದ್ರನ ನೆರವನ್ನು ಬಯಸುತ್ತಿದ್ದ. ರಾಜೇಂದ್ರ ಮಲಯೇಷ್ಯ ಮತ್ತು ಇಂಡೊನೇಷ್ಯ ದ್ವೀಪಸ್ತೋಮಗಳ ಮೇಲೆ ನಡೆಸಿದ ಜಯಪ್ರದ ದಾಳಿಯ ಫಲವಿದು. ಈ ಗೆಳೆತನ ಒಂದನೆಯ ಕುಲೋತ್ತುಂಗನ ಕಾಲದ ವರೆಗೂ ಮುಂದುವರಿಯಿತು. ಆತ ಕಾಣಿಕೆಯಾಗಿ ಪಡೆದ ಅನರ್ಘ್ಯ ಶಿಲೆಯೊಂದನ್ನು ಅವನ ಅಪ್ಪಣೆಯ ಮೇರೆಗೆ ಚಿದಂಬರದ ದೇವಾಲಯದ ಮುಂದಿನ ಮಂಟಪವೊಂದರ ಗೋಡೆಯಲ್ಲಿರಿಸಲಾಯಿತು. 6 ಆನೆಗಳ ಕಾಣಿಕೆಯನ್ನು ಈಗಿನ ಮಧ್ಯಪ್ರದೇಶಕ್ಕೆ ಸೇರಿದ ಬಸ್ತರ ಪ್ರದೇಶದಲ್ಲಿದ್ದ ಚಕ್ರಕ್ಕೋಟ್ಟಮ್ (ಚಕ್ರಗೋಷ್ಟ) ಅರಸನಿಂದ ರಾಜೇಂದ್ರ ದೊರೆ ಪಡೆದುದಾಗಿಯೂ ತಿಳಿಯುತ್ತದೆ. 7 ಅರಸ ಈ ದತ್ತಿಯನ್ನು ಕೊಡುವ ಸಮಯದಲ್ಲಿ ವ್ಯಾಘ್ರಾಗ್ರಹಾರವೆಂಬ ಹೆಸರಿದ್ದ ಚಿದಂಬರಂ ಅರಮನೆಯಲ್ಲಿ ರಾಜೇಂದ್ರಚೋಳ ಬ್ರಹ್ಮಾದಿರಾಜನ್ ಎಂಬ ಮಂಟಪದಲ್ಲಿ ಊಟಮಾಡುತ್ತಿದ್ದುದಾಗಿ ಹೇಳಲಾಗಿದೆ. ರಾಜನ ಈ ಮೌಖಿಕ ಆಜ್ಞೆಯನ್ನು ತಿರುವುಂದಿರವೋಲೈ ಅಥವಾ ಓಲೈ ಎಳುದುಂ ಎಂಬ ಅಧಿಕಾರಿ ಬರೆದುಕೊಂಡನೆಂದು ಹೇಳಲಾಗಿದೆ. ತೀಟ್ಟು ಎಂಬ ಹೆಸರಿನ ಆಜ್ಞೆಗೆ ಓಲೈನಾಯಗಂ ಎಂಬ ಅಧಿಕಾರಿಗಳು ಸಾಕ್ಷಿಗಳಾಗಿದ್ದರು. ಕರುಮಂ ಆರಾಯುಂ ಮತ್ತು ನಡುವಿರುಕ್ಕುಂ ಎಂಬ ಎರಡು ವಿಭಾಗಗಳ ಅಧಿಕಾರಿಗಳ ಮೂಲಕ ಈ ಆಜ್ಞೆಯನ್ನು ಕರುಮಂ ಪುರವು ವಾರಿ ಇಲಾಖೆಯ ಆರಾಯಂ ಎಂಬ ಕಾರ್ಯನಿರ್ವಾಹಾಧಿಕಾರಿಗಳಿಗೆ ನೀಡಲಾಯಿತು. ಇದನ್ನು ವರಿ ಎಂಬ ರೆವಿನ್ಯೂ ದಾಖಲೆ ಪುಸ್ತಕಗಳಲ್ಲಿ ಪುರಂವರಿ ಇಲಾಖೆಯವರು ದಾಖಲೆ ಮಾಡಲು ಈ ಅಧಿಕಾರಿಗಳು ವ್ಯವಸ್ಥೆ ಮಾಡಿದರು. ಈ ಇಲಾಖೆಯಲ್ಲೂ ಹಲವಾರು ಶ್ರೇಣಿಗಳ ನೌಕರರಿದ್ದರು. ಈ ದತ್ತಿಯಲ್ಲಿ ಸೇರಿರುವ ಸೇರದಿರುವ ಭೂಮಿಗಳ ವಿವರ, ಮೊದಲ ವರ್ಷದಲ್ಲಿ ಕಾಲುಭಾಗದಿಂದ ಪ್ರಾರಂಭವಾಗಿ ಕ್ರಮೇಣ ಅಧಿಕವಾಗಿ ನಾಲ್ಕನೆಯ ವರ್ಷದಲ್ಲಿ ಪೂರ್ಣಾಂಶದ ವರೆಗೆ ಸ್ಥಳೀಯ ಅಧಿಕಾರಿಗಳಿಗೆ ಕೊಡಬೇಕಾದ ಬತ್ತರೂಪದ ಕಂದಾಯದ ವಿವರ, ಭೂಮಿಯ ಹಿಡುವಳಿಯನ್ನು ಹಳೆಯ ಪದ್ಧತಿಗೆ ಪರಿವರ್ತಿಸುವ ವಿಧಾನ ಇವನ್ನೆಲ್ಲ ಈ ಶಾಸನದಲ್ಲಿ ಹೇಳಲಾಗಿದೆ. ಈ ನಿರೂಪವನ್ನು ತಿರುಮುಗಂ ಅಥವಾ ಶ್ರೀಮುಖದ ರೂಪದಲ್ಲಿ ಇಲಾಖೆಯಿಂದ ನೀಡಲಾಗುತ್ತಿದೆಯೆಂದು ಹೇಳಲಾಗಿದೆ. ಈ ಉದ್ದೇಶಕ್ಕಾಗಿ ನಿಯೋಜಿಸಲ್ಪಟ್ಟ ಅಧಿಕಾರಿಗಳ ಸಹಿಯಿದೆ. ದತ್ತಿಗೆ ಒಳಪಟ್ಟ ಪ್ರದೇಶದ ಮೇರೆಯನ್ನು ನಿರ್ದೇಶಿಸಲು ಹೆಣ್ಣಾನೆಯೊಂದರಿಂದ ಈ ನೆಲವನ್ನು ಪ್ರದಕ್ಷಿಣೆ ಮಾಡಿಸಲಾಯಿತು. ತಿರುಮುಗಮ್ಮನ್ನು ತಿರುಮಂದಿರವೋಲೈ ಮತ್ತು ತಿರುಮಂದಿರವೋಲೈನಾಯಗಂ ಎಂಬ ಅಧಿಕಾರಿಗಳು ಸಹಿ ಹಾಕಿ ಇದನ್ನು ದಾನಸ್ವೀಕರ್ತರಿಗೆ ಕೊಡಲಾಗಿದೆ. ಈ ಆಜ್ಞೆಯನ್ನು ಶಿಲೆ ಮತ್ತು ತಾಮ್ರಪಟಗಳ ಮೇಲೆ ಕೆತ್ತಿಸಬೇಕೆಂದು ಸೂಚಿಸಿ ಇದರ ಪ್ರತಿಗಳನ್ನು ಸ್ಥಳೀಯ ಅಧಿಕಾರಿಗಳಿಗೂ ನೀಡಲಾಗಿದೆ.

ಇಡೀ ವಿಶ್ವದಲ್ಲೇ ದೊರಕಿರುವ ತಾಮ್ರ ಶಾಸನಗಳ ಪೈಕಿ ಇದು ಅತ್ಯಂತ ದೊಡ್ಡದು.

ದತ್ತಿ ನೀಡಲಾದ ಪ್ರದೇಶ ಪುತ್ತೂರಿನ ಸುತ್ತಲೂ ಇದೆ. ಶಾಸನ ದೊರೆತಿರುವುದು ಇಲ್ಲೇ. (ಕೆ.ಆ.ಕೆಆರ್.)

**ಕರಂಧಮ :** ಮನುವಂಶದ ಸುವರ್ಚಸನೆಂಬ ರಾಜ. ಇವನ ವಿಚಾರ ಮಹಾಭಾರತದಲ್ಲಿ ಬರುತ್ತದೆ. ಕೃತಯುಗದಲ್ಲಿ ನೀತಿಯುಕ್ತವಾದ ಲೋಕ ವ್ಯವಹಾರ ಮುಂದುವರಿಯಲೋಸುಗ ದಂಡಧರನಾದ ಮನುವೆಂಬ ರಾಜನಿದ್ದನಷ್ಟೆ. ಅವನಿಂದ ಬೆಳೆದ ಸಂತಾನದಲ್ಲಿ ಮನುವನ್ನು ಬಿಟ್ಟು ಐದನೆಯ ತಲೆಯವನಾದ ವಿವಿಂಶನೆಂಬ ರಾಜನಿಗೆ ಒಟ್ಟು ಹದಿನೈದು ಮಂದಿ ಮಕ್ಕಳಾದರು. ಎಲ್ಲರೂ ಹಿರಿಯ ಬಿಲ್ಲುಗಾರರೂ ಬ್ರಹ್ಮಪರರೂ ಸತ್ಯವಂತರೂ ದಾನಧರ್ಮಪರರೂ ಪ್ರಿಯಭಾಷಿಗಳೂ ಶಾಂತರೂ ಆಗಿದ್ದರು. ಅವರಲ್ಲಿ ಮೊದಲನೆಯವ ಖನೀನೇತ್ರ. ಶತ್ರುಗಳನ್ನು ಗೆದ್ದು ತೊಡಕು ತೊಂದರೆಗಳಿಲ್ಲದಂತೆ ರಾಜ್ಯವಾಳಲು ಸಮರ್ಥನಾಗದ ಕಾರಣ ಪ್ರಜೆಗಳು ಅವನ ರಾಜತ್ವಕ್ಕೆ ಇಷ್ಟಪಡದೆ ಅವನ ಮಗನಾದ ಸುವರ್ಚಸನೆಂಬುವನಿಗೆ ಪಟ್ಟಕಟ್ಟಿದರು. ಈತ ತನ್ನ ತಂದೆಗೆ ಏರ್ಪಟ್ಟ ಪ್ರಜಾಕೋಪವನ್ನು ಜ್ಞಾಪಿಸಿಕೊಂಡು ರಾಜನಿಗೆ ಬೇಕಾದ ವಿದ್ವತ್ಸಮ್ಮತವಾದ ಸದ್ಗುಣ ಸಂಪತ್ತಿನಿಂದ ಕೂಡಿ ರಾಜ್ಯವಾಳುತ್ತಿದ್ದ. ದಾನಧರ್ಮಪರತೆಯ ಆಧಿಕ್ಯದಿಂದ ಇವನ ಖಜಾನೆ ಬರಿದಾಗುತ್ತ ಬಂತು. ಅದನ್ನು ಕಂಡು ಛಿದ್ರಾನ್ವೇಷಿಗಳಾದ ಸಾಮಂತರಾಜರು ಇವನನ್ನು ಆಕ್ರಮಿಸಿ ಪೀಡಿಸಲಾರಂಭಿಸಲಾಗಿ, ಶತ್ರು ನಿರ್ನಾಮ ಮಾಡಲು ಈತ

ತನ್ನ ಕೈಯನ್ನೇ ಊದಿ ಅದರಿಂದ ಅಪಾರವಾದ ಸೈನ್ಯವನ್ನು ಸೃಷ್ಟಿಸಿ ಅದರ ಮೂಲಕ ಎದುರಾಳಿಗಳನ್ನೆಲ್ಲ ಸಂಪೂರ್ಣವಾಗಿ ಗೆದ್ದು ಧರ್ಮರಾಜ್ಯವನ್ನು ನೆಲೆಗೊಳಿಸಿದ ಕಾರಣ ಈತನಿಗೆ ಕರಂಧಮನೆಂದು ಹೆಸರಾಯಿತು. (ಎನ್.ಎಸ್.ಆರ್.ಬಿ.)

**ಕರಕೊ :** ಜಪಾನಿನ ನಾರಾ ಪ್ರಾಂತ್ಯದಲ್ಲಿ ಷಿಕಿಜಿಲ್ಲೆಯ ಕವಹಿಗಷಿ ಎಂಬ ಗ್ರಾಮದ ಸಾಮೀಪ್ಯದಲ್ಲಿರುವ ಕರಕೋ ನೆಲೆಯಲ್ಲಿ1936ರಲ್ಲಿ ನಡೆದ ಉತ್ಖನನಗಳಿಂದ ಯ ಯೋಇ ಸಂಸ್ಕೃತಿಯ ಆದಿಭಾಗಕ್ಕೆ ಸೇರಿದ ಮಾಹಿತಿಗಳು ದೊರಕಿವೆ. ಯಮಟೋ ಮೈದಾನದ ಕೆಳಪ್ರದೇಶದಲ್ಲಿ ಪ್ರಾಚೀನ ಹಟ್ಸುಸೆ ನದಿಯ ಬಯಲಿನಲ್ಲಿರುವ ಈ ನೆಲೆಯ ಒದ್ದೆಮಣ್ಣಿನಲ್ಲಿ ಬತ್ತದ ವ್ಯವಸಾಯಕ್ಕೆ ಉಪಯೋಗಿಸುತ್ತಿದ್ದ ಮರದ ಉಪಕರಣಗಳೂ ಧಾನ್ಯಶೇಖರಣೆಗೆ ಉಪಯೋಗಿಸುತ್ತಿದ್ದ ಪಾತ್ರೆಗಳೂ ಬುಟ್ಟಿಗಳೂ ಮೃತ್ಪಾತ್ರೆಗಳನ್ನು ತೂಗುಹಾಕಲು ಬಳಸುತ್ತಿದ್ದ ನೆಲುಗಳೂ ಹೆಚ್ಚು ಸಂಖ್ಯೆಯಲ್ಲಿ ದೊರಕಿವೆ. ಈ ಜನರು ನೀರಿಗಾಗಿ ಆಳವಾದ ಬಾವಿಗಳನ್ನು ಅಗೆದಿರುತ್ತಿದ್ದು ಅಂಥ ಕೆಲ ಬಾವಿಗಳಲ್ಲಿ ಮರದ ದಿಮ್ಮಿಗಳನ್ನು ಕೊರೆದು ಮಾಡಿದ ಪೀಪಾಯಿಗಳನ್ನು ಪಾರ್ಶ್ವಗಳು ಕುಸಿಯದಂತೆ ರಕ್ಷಿಸಲು ಉಪಯೋಗಿಸಿದ್ದರು. ನವಶಿಲಾಯುಗದ ಅನಂತರ ಬಳಕೆಗೆಬಂದ ಕಂಚಿನಯುಗಕ್ಕೆ ಸೇರುವ ಈ ಯ ಯೋಇ ಸಂಸ್ಕೃತಿಯಲ್ಲಿ ಪ್ರಪ್ರಥಮವಾಗಿ ಬತ್ತದ ವ್ಯವಸಾಯ ರೂಢಿಗೆ ಬಂದಿತು. ಮರದ ಉಪಕರಣಗಳನ್ನೂ ಮೃತ್ಪಾತ್ರೆಗಳನ್ನೂ ವಿಶೇಷವಾಗಿ ಉಪಯೋಗಿಸುತ್ತಿದ್ದರು. ನೀರಾವರಿ ಪದ್ಧತಿ ಬಳಕೆಯಲ್ಲಿದ್ದಿತು. ತಮ್ಮ ವಸತಿಗಳನ್ನು ಮರದ ಕಂಬ ಮತ್ತು ಗೋಡೆ ಮತ್ತು ಛಾವಣಿಗಳಿಂದ ನಿರ್ಮಿಸುತ್ತಿದ್ದರು. ವೃತ್ತ ಅಥವಾ ಆಯಾಕಾರದ ಈ ಗೃಹಗಳು 24′×21′ ಪ್ರಮಾಣದಲ್ಲಿರುತ್ತಿದ್ದುವು. ಕಲ್ಲಿನ ಆಯುಧಗಳು ಕೆಲವು ನಯಗೊಳಿಸಿದವುಗಳಾಗಿದ್ದರೆ ಮತ್ತೆ ಕೆಲವು ಸೂಕ್ಷ್ಮಶಿಲಾಯುಗ ರೀತಿಯವುಗಳಾಗಿದ್ದುವು. ಮೂಳೆಯ ಆಯುಧಗಳು ಬಳಕೆಯಲ್ಲಿದ್ದುವು. ನೆಯ್ದ ಉಡುಪುಗಳನ್ನು ಉಪಯೋಗಿಸುತ್ತಿದ್ದರು. ಮೃತದೇಹಗಳನ್ನು ತೊಟ್ಟಿಗಳಲ್ಲೊ ಜಾಡಿಗಳಲ್ಲೊ ಹೂಳಿಡುತ್ತಿದ್ದರು. ಚೀನದ ಪ್ರಭಾವದಿಂದ ಕಂಚಿನ ಬಳಕೆ ಪ್ರಾರಂಭವಾಗಿ ಅನೇಕ ವಿಧವಾದ ಆಯುಧಗಳು-ಮುಖ್ಯವಾಗಿ ಕತ್ತಿಗಳು ಮತ್ತು ಚಾಕುಗಳು ಬಳಕೆಗೆ ಬಂದವು. *

**ಕರಗ :** ಆದಿಶಕ್ತಿಯನ್ನು ಗುರುತಿಸಿ ಆರಾಧಿಸುವ ಹಲವಾರು ಸಂಪ್ರದಾಯಗಳಲ್ಲಿ ಒಂದು. ಕರಗ (ಕರಕ) ಎಂಬ ಮಾತಿಗೆ ಇಲ್ಲಿ ಕುಂಭ ಎಂಬ ಅರ್ಥ ಸರಿ



ಕರಗದ ಒಂದು ದೃಶ್ಯ

ಹೋಗುತ್ತದೆ. ಕರಗಪೂಜೆ ಮತ್ತು ಉತ್ಸವಗಳು ತಮಿಳುನಾಡಿನಲ್ಲಿ ಬಹು ಹಿಂದಿನಿಂದಲೂ ವೈಭವದಿಂದ ಆಚರಿಸಲ್ಪಡುತ್ತಿವೆ. ಮೈಸೂರು ರಾಜ್ಯದಲ್ಲಿ ಕೋಲಾರ ಜಿಲ್ಲೆಯ ಕೆಲವು ಭಾಗಗಳಲ್ಲಿ ಮತ್ತು ಬೆಂಗಳೂರಿನಲ್ಲಿ ಇದರ ಆಚರಣೆ ಬಳಕೆಯಲ್ಲಿದೆ. ಬೆಂಗಳೂರಿನದಂತೂ ಈಚೆಗೆ ಬಹು ಪ್ರಸಿದ್ಧವೆನಿಸಿದೆ.

ಕರಗ ಆಚರಣೆಯ ಮೂಲವನ್ನು ಹೇಳುವ ಒಂದು ಐತಿಹ್ಯ ಹೀಗಿದೆ : ಕುರುಕ್ಷೇತ್ರ ಸಮರದ ಅನಂತರ ಪಾಂಡವರ ಸ್ವರ್ಗಾರೋಹಣ ಸಂದರ್ಭದಲ್ಲಿ ದ್ರೌಪದಿ ಮೂರ್ಛಿತಳಾಗಿ ಹಿಂದೆ ಬಿದ್ದಳಂತೆ. ಎಚ್ಚರಗೊಂಡಮೇಲೆ ತನ್ನ ಪತಿಗಳು ಇಲ್ಲದಿರುವುದನ್ನು ಕಂಡು ರೋದಿಸುತ್ತಿರುವಾಗ ತಿಮಿರಾಸುರನೆಂಬ ರಾಕ್ಷಸ ಆಕೆಯನ್ನು ಪೀಡಿಸಲು ಅವನನ್ನು ನಿಗ್ರಹಿಸುವ ಸಲುವಾಗಿ ವಿರಾಟರೂಪ ತಾಳಿ ತಲೆಯ ಮೇಲೆ ಧರಿಸಿದ ಕುಂಭವೇ ಇಂದು ಆರಾಧನೆಗೊಳ್ಳುತ್ತಿರುವ ಕರಗ. ಇದು ಒಂದು ನಂಬುಗೆ. ಮಹಾಭಾರತದಲ್ಲಿ ಬರುವ ಕರಗ ಹೋಮ—ಎಂಬ ನುಡಿಗಟ್ಟಿಗೆ ಈ ಕಥೆಯ ಆಧಾರವಿರಬೇಕು. ದ್ವಾಪರಯುಗದಲ್ಲಿ ಸರ್ವಾಲಂಕಾರಭೂಷಿತೆಯಾದ ದ್ರೌಪದಿ ಮಂಗಳಕಲಶವನ್ನು ಹಿಡಿದು ಸ್ವಯಂವರ ಮಂಟಪವನ್ನು ಪ್ರವೇಶಿಸಿದಳು. ಮತ್ಸ್ಯಯಂತ್ರವನ್ನು ಭೇದಿಸಿದ ಅರ್ಜುನನನ್ನೂ ಕುಂತಿಯ ಅಭಿಲಾಷೆಯಂತೆ



ಮೆರವಣಿಗೆ ಹೊರಟಿರುವ ಬೆಂಗಳೂರು ಕರಗ

ಉಳಿದ ನಾಲ್ವರು ಪಾಂಡವ ಸೋದರರನ್ನೂ ಶಾಸ್ತ್ರೋಕ್ತವಾಗಿ ವಿವಾಹವಾದಳು. ಆಗ ಆನಂದಾತಿಶಯದಿಂದ ಕೈಯಲ್ಲಿದ್ದ ಕಲಶವನ್ನು ಶಿರದಲ್ಲಿ ಧರಿಸಿದಳು: ಅದೇ ಕರಗವಾಯಿತು—ಇದು ಮತ್ತೊಂದು ನಂಬುಗೆ.

ಕರಗವನ್ನು ರೂಪಿಸುವ, ಹೊರುವ, ವಹ್ನಿಕುಲ ಕ್ಷತ್ರಿಯ ಮನೆತನದ ಹಿರಿಯರು ಪೂಜಾರಿಗಳು ಈ ಆಚರಣೆಯ ಮೂಲ ರಹಸ್ಯವನ್ನು ಗೋಪ್ಯವಾಗಿಟ್ಟಿದ್ದಾರೆ. ದೈವಿಕ ಆಚರಣೆಯ ಗುಟ್ಟನ್ನು ಬಹಿರಂಗಪಡಿಸುವುದು ಕುಲಕ್ಕೆ ಕೇಡು, ದೇಶಕ್ಕೆ ಹಾನಿ ಎಂಬುದು ಅವರ ನಿಲುವಾಗಿರಬಹುದು.

ಈ ಉತ್ಸವದ ಆರಾಧನೆಯ ಸಂಪ್ರದಾಯವನ್ನು ನಡೆಸಿಕೊಂಡು ಬಂದಿರುವವರು ತಿಗಳರು ಎಂದು ಸಾಮಾನ್ಯವಾಗಿ ಕರೆಯಲ್ಪಡುವ ವಹ್ನಿಕುಲ ಕ್ಷತ್ರಿಯರು. ಇವರು ಮೂಲತಃ ತಮಿಳುನಾಡಿನವರು. ಇವರು ಹದಿನೈದನೆಯ ಶತಮಾನದಲ್ಲಿಯೇ ಮೈಸೂರು ಸಂಸ್ಥಾನಕ್ಕೆ ಬಂದು ನೆಲೆಸಿದರೆಂದು ತಿಳಿದುಬರುತ್ತದೆ. ಹೈದರಾಲಿ ದಕ್ಷಿಣ ಭಾರತದ ಮೇಲೆ ದಂಡಯಾತ್ರೆ ಮಾಡಿದಾಗ ವೀರಾವೇಶದಿಂದ ಹೋರಾಡಿದ ಈ ವಹ್ನಿಕುಲ ಕ್ಷತ್ರಿಯರ ಧೈರ್ಯ ಹಾಗೂ ಇವರ ಕುಲವೃತ್ತಿಯಾದ ತೋಟಗಾರಿಕೆಯನ್ನು ಮೆಚ್ಚಿ ತಾನು ಮೈಸೂರಿಗೆ ಹಿಂತಿರುಗುವಾಗ ಈ ಮನೆತನದ ಕೆಲವರನ್ನು ತನ್ನೊಡನೆ ಕರೆತಂದು ಶ್ರೀರಂಗಪಟ್ಟಣದ ಗಂಜಾಂನಲ್ಲೂ ಬೆಂಗಳೂರಿನಲ್ಲೂ ನೆಲೆನಿಲ್ಲಿಸಿದನೆಂದು ಪ್ರತೀತಿ ಇದೆ. ಅನಂತರ ಈ ಜನಾಂಗ ಬೆಂಗಳೂರು, ತುಮಕೂರು, ಕೋಲಾರ ಜಿಲ್ಲೆಗಳಲ್ಲಿ ವಿಸ್ತರಿಸಿದಂತೆ ಕಾಣುತ್ತದೆ.

ಈ ಜನ ಪ್ರಾರಂಭದಿಂದಲೂ ಪಾಂಡವಾರಾಧಕರು. ಇವರ ಮೂಲಪುರುಷ ಬೆಂಕಿಯಲ್ಲಿ ಜನಿಸಿದನೆಂದು ಪ್ರತೀತಿ. ಆದ್ದರಿಂದಲೇ ಅಗ್ನಿಸಂಭವೆಯೂ ಅಪರಿಮಿತ ಪರಾಕ್ರಮಿಯೂ ಪಾಂಡವರ ಪತ್ನಿಯೂ ಆದ ದ್ರೌಪದಿಯ ಹೆಸರಿನಲ್ಲೇ ಕರಗದ ಆಚರಣೆಯನ್ನು ಇವರು ನಡೆಸುತ್ತ ಬಂದಿದ್ದಾರೆ.



ಮೂಲಕರಗದ ಮುಂದೆ ಮೆರವಣಿಗೆ ಹೊರಟಿರುವ ಸಣ್ಣ ಕರಗಗಳು, ಕುಣಿತ

ಬೆಂಗಳೂರಿನ ಧರ್ಮರಾಯನ ದೇವಸ್ಥಾನ ಕರಗಮಹೋತ್ಸವದ ಕೇಂದ್ರ. ಈ ದೇವಾಲಯದ ನಿರ್ಮಾಣ ಯಾವಾಗ ಆಯಿತೆಂಬುದಕ್ಕೆ ಸ್ಪಷ್ಟವಾದ ಆಧಾರಗಳಿಲ್ಲ. ಮಾಗಡಿ ಕೆಂಪೇಗೌಡ ಬೆಂಗಳೂರು ನಗರವನ್ನು ಕಟ್ಟುವ ಕಾಲಕ್ಕಾಗಲೇ ಈ ದೇವಾಲಯ ಇತ್ತೆಂದು ಕೆಲವರು ಹೇಳಿದರೆ, ಮತ್ತೆ ಕೆಲವರು ವಹ್ನಿಕುಲ ಕ್ಷತ್ರಿಯರು ಬೆಂಗಳೂರಿಗೆ ಬಂದು ನೆಲೆಸಿದ ಮೇಲೆ ನಿರ್ಮಾಣವಾಯಿತೆನ್ನುತ್ತಾರೆ. ಸುಮಾರು 150 ವರ್ಷಗಳ ಹಿಂದೆ ಶ್ರೀ ಮುಮ್ಮಡಿ ಕೃಷ್ಣರಾಜ ಒಡೆಯರು ಧರ್ಮರಾಯ ಸ್ವಾಮಿ ದೇವಾಲಯಕ್ಕೆ ಇನಾಂ ಜಮೀನುಗಳನ್ನು ಕೊಟ್ಟುದಕ್ಕೆ ದಾಖಲೆ ಇದೆ.

ದೇವಾಲಯ ವಿಶಾಲವಾದ ಅಂಗಳ, ಅಶ್ವತ್ಥಕಟ್ಟೆ, ಎತ್ತರವಾದ ಕಂಬಗಳ ತೂಗುಯ್ಯಾಲೆಗಳಿಂದ ಕೂಡಿ ಆಕರ್ಷಕವಾಗಿದೆ. ದ್ರಾವಿಡ ಶೈಲಿಯ ಮೂರು ಸಚಿತ್ರ ಗೋಪುರಗಳಿವೆ. ಮಹಾದ್ವಾರದ ಮೂಲಕ ಒಳಗೆ ಪ್ರವೇಶಿಸಿದರೆ ಮುಖಮಂಟಪದ ಎರಡು ಕಡೆಗಳಲ್ಲೂ ಕಲ್ಲಿನ ಆನೆಯ ಸುಂದರಾಕೃತಿಗಳಿವೆ. ಮೊದಲರ್ಧ ಭಾಗದ ಮಂಟಪ ಭದ್ರವಾದ ಕೆತ್ತನೆಯ ಶಿಲಾಸ್ತಂಭಗಳ ಮೇಲೆ ನಿಂತಿದೆ. ಉಳಿದರ್ಧ ಭಾಗ ಗರ್ಭಗುಡಿ. ಈ ದೇವಾಲಯದ ಗರ್ಭಗುಡಿಯೊಳಗೆ ಪ್ರೇಕ್ಷಕರ ಎಡಭಾಗಕ್ಕೆ ಧರ್ಮರಾಯಸ್ವಾಮಿ, ಬಲಭಾಗಕ್ಕೆ ಶ್ರೀಕೃಷ್ಣರ ವಿಗ್ರಹಗಳಿವೆ. ಅವೆರಡರ ಮುಂಭಾಗದಲ್ಲಿ ದಿವ್ಯಶಕ್ತಿಯ ಪೀಠವಿದೆ. ಈ ಪೀಠದ ಮೇಲೆಯೇ ಹಸೀಕರಗವನ್ನು ಅಲಂಕರಿಸಿ ಅರ್ಚಿಸುವುದು. ಇದರ ಜೊತೆಗೆ ಅರ್ಜುನ, ದ್ರೌಪದಿ ಭೀಮಸೇನರ ಸುಂದರ ಮೂರ್ತಿಗಳಿವೆ.

ಬೆಂಗಳೂರು ಕರಗ ಒಂಬತ್ತು ದಿನಗಳ ಸಮಾರಂಭ. ಹೊಸ ವರ್ಷದ ಯುಗಾದಿ ಹಬ್ಬದ ಅನಂತರ ಸಪ್ತಮಿ ಅಥವಾ ಅಷ್ಟಮಿಯಂದು ಧ್ವಜಾರೋಹಣದಿಂದ ಆರಂಭವಾಗಿ ಬಿದಿಗೆಯಂದು ಧ್ವಜಾರೋಹಣದ ವರೆಗೆ ವಿವಿಧ ಕಾರ್ಯಕ್ರಮಗಳಿರುತ್ತವೆ. ಇವುಗಳಲ್ಲಿ ದ್ವಾದಶಿಯಂದು ನಡೆಯುವ ಸಮುದಾಯ ಆರತಿಸೇವೆ, ತ್ರಯೋದಶಿಯಂದು ಹಸೀಕರಗದ ರಚನೆ ಮತ್ತು ಸ್ಥಾಪನೆ, ಚತುರ್ದಶಿಯ ಪೊಂಗಲುಸೇವೆ ಮತ್ತು ಪೂರ್ಣಿಮೆಯಂದು ನಡೆಯುವ ಕರಗದ ಉತ್ಸವ—ಈ ಕಾರ್ಯಕ್ರಮಗಳು ಪ್ರಮುಖವಾದವು.

ಹಸಿಕರಗ : ಚೈತ್ರಶುದ್ಧ ತ್ರಯೋದಶಿಯ ದಿವಸ ಧರ್ಮರಾಯಸ್ವಾಮಿ ದೇವಾಲಯದ ಪೂರ್ವಕ್ಕೆ ಸ್ವಲ್ಪ ದೂರದಲ್ಲಿರುವ ಸಂಪಂಗಿ ಕೆರೆಯ ಅಂಗಳದಲ್ಲಿ ನಡುರಾತ್ರಿಯ ಹೊತ್ತಿಗೆ ಪೂಜಾರಿ, ಕುಲಪುರೋಹಿತರು, ವೀರಕುಮಾರರು ಮತ್ತು ಕುಲಸ್ಥರು ಸೇರುವರು. ಅಲ್ಲಿ ಒಂದೆಡೆ ಸ್ಥಳ ಶುದ್ಧಿಮಾಡಿ ಕೆಂಪುಬಣ್ಣದ ಛತ್ರಿಯನ್ನು ನೆಡುವರು. ಹಿಂದಿನ ಏಳು ದಿನಗಳಿಂದ ವ್ರತನಿರತರಾಗಿದ್ದ ವೀರಕುಮಾರರು ಹೊಳೆಯುವ ಹರಿತವಾದ ಕತ್ತಿಗಳನ್ನು ಅರ್ಧಚಂದ್ರಾಕಾರವಾಗಿ ಜೋಡಿಸುವರು. ಇವರು ಕರಗದೇವತೆಯ ಹೆಸರಿನಲ್ಲಿ ತಮ್ಮ ಕುಲಪುರೋಹಿತರು ಮತ್ತು ಹಿರಿಯರ ಸಮ್ಮುಖದಲ್ಲಿ ದೀಕ್ಷೆ ಕೈಗೊಂಡವರು. ದೇವಿಯ ಆರಾಧನೆಯಲ್ಲಿ ಅಚಲವಾದ ಶ್ರದ್ಧೆಭಕ್ತಿಗಳನ್ನು ಇಟ್ಟಿರುವ ಇವರು ಕರಗಕ್ಕೆ ಅಂಗರಕ್ಷಕರು. ಭಕ್ತಿದ್ಯೋತಕವಾಗಿ ಕೈಯಲ್ಲಿರುವ ಅಲಗುಗಳಿಂದ ಎದೆಯ ಮೇಲೆ ಇವರು ಪ್ರಹಾರ ಮಾಡಿಕೊಳ್ಳುತ್ತಿರುತ್ತಾರೆ. ಆಗ ರಕ್ತ ಬಂದರೆ ಔಷಧಿಗೆ ಬದಲಾಗಿ ದೇವಿಯ ಭಂಡಾರವನ್ನು ಗಾಯದ ಮೇಲೆ ಹಾಕಿಕೊಳ್ಳುತ್ತಾರೆ. ಬಿಳಿಯ ಚಲ್ಲಣ, ಸೊಂಟಕ್ಕೆ ಕೆಂಪು ಪಟ್ಟಿ, ತಲೆಯ ಮೇಲೆ ಕಲಾಬತ್ತಿನ ಪೇಟ ಧರಿಸಿರುವ ನೂರಾರು ಸಂಖ್ಯೆಯ ವೀರಕುಮಾರರ ಗುಂಪು ನೋಡಲು ತುಂಬ ಆಕರ್ಷಣೀಯವಾಗಿರುತ್ತದೆ. ಧರ್ಮಕಾರ್ಯನಿರತರಾದ ಈ ಯೋಧರು ಕತ್ತಿ ಹಿಡಿದಿದ್ದರೂ ಶಾಂತಿದೂತರು, ಹಣೆಯಲ್ಲಿ ತ್ರಿನಾಮ ಧರಿಸಿದ ಇವರ ಮುಖಗಳಲ್ಲಿ ಭಕ್ತಿಭಾವ ತ.ಂಬಿರುತ್ತದೆ. ಅನಂತರ ಕುಲಪುರೋಹಿತರ ನಿರ್ದೇಶನ ಮತ್ತು ಕುಲವೃದ್ಧರ ನೇತೃತ್ವದಲ್ಲಿ ರಾತ್ರಿ ಸುಮಾರು ಮೂರನೆಯ ಜಾವದ ಹೊತ್ತಿಗೆ ಹಸೀಕರಗ ಸಿದ್ಧವಾಗುತ್ತದೆ. ಕೆಂಪು ಛತ್ರಿಯ ಕೆಳಗೆ, ಅರ್ಧಚಂದ್ರಾಕಾರವಾಗಿ ಜೋಡಿಸಿರುವ ಕತ್ತಿಗಳ ಮಧ್ಯೆ, ಜಲ ತುಂಬಿದ ಕರಗವನ್ನು ಕೆಂಪು ವಸ್ತ್ರ, ದುಂಡುಮಲ್ಲಿಗೆ ಹಾರ, ಅರಿಶಿನ-ಕುಂಕುಮ ಮುಂತಾದ ಮಂಗಳದ್ರವ್ಯಗಳಿಂದ ಅಲಂಕರಿಸಿ ಪೂಜೆಗೆ ಅಣಿಮಾಡಲಾಗುತ್ತದೆ. ಈ ವೇಳೆಗಾಗಲೇ ಕರಗದ ಪೂಜಾರಿಯನ್ನು ಮಲ್ಲಿಗೆ ಹೂವಿನಿಂದ ಸಿಂಗರಿಸಿರುತ್ತಾರೆ. ಪೂಜಾರಿ ಮಹಾಮಂಗಳಾರತಿ ಮಾಡುತ್ತಾನೆ. ಮಣಗಟ್ಟಲೆ ಸುಡುವ ಕರ್ಪೂರದ ಹೊಗೆಯೊಂದಿಗೆ ಮಲ್ಲಿಗೆಯ ಪರಿಮಳವೂ ಸೇರಿ ಆವರಣವೆಲ್ಲ ಸುಗಂಧಮಯವಾಗುತ್ತದೆ. ದೇವಿಯ ಸೇವೆಗಾಗಿ ನಿಂತಿರುವ ವೀರಕುಮಾರರು ಗೋವಿಂದನಾಮಸ್ಮರಣೆಮಾಡುತ್ತ ಆವೇಶ ತುಂಬಿ ಎದೆಯ ಮೇಲೆ ಪ್ರಹಾರ ಮಾಡಿಕೊಳ್ಳುತ್ತಾರೆ. ಮಹಾಶಕ್ತಿಯ ಪ್ರೀತ್ಯರ್ಥವಾಗಿ ಮಾಡುವ ಈ ಕಾರ್ಯಕ್ಕೆ ಅಲಗುಸೇವೆ ಎನ್ನುವರು.

ಸುತ್ತುವರಿದ ವೀರಕುಮಾರರ ನಡುವೆ ಪೂಜಾರಿ ಭಕ್ತಿಯಿಂದ ಕರಗವನ್ನೆತ್ತಿಕೊಂಡು ತನ್ನ ಸೊಂಟದ ಎಡಭಾಗದಲ್ಲಿ ಗಡಿಗೆ ಇಟ್ಟುಕೊಳ್ಳುವಂತೆ ಇಟ್ಟುಕೊಳ್ಳುತ್ತಾನೆ. ವೀರಕುಮಾರರ ರಕ್ಷಣೆಯಲ್ಲಿ, ಗಂಟೆ ಪೂಜಾರಿಯ ಮಾರ್ಗನಿರ್ದೇಶನದಲ್ಲಿ ಪೂಜಾರಿ ಗಂಭೀರವಾಗಿ, ಒಮ್ಮೊಮ್ಮೆ ನರ್ತನ ಮಾಡುತ್ತ ಮುಂದುವರಿಯುತ್ತಾನೆ. ಕರಗಮಹೋತ್ಸವದಲ್ಲಿ ಗಂಟೆ ಪೂಜಾರಿಯ ಪಾತ್ರ ಮುಖ್ಯವಾದುದು. ಕರಗ ಹೊರಟಾಗ ಈತ ತಾಳಬದ್ಧವಾಗಿ ಗಂಟೆಯ ನಾದ ಮಾಡುತ್ತ, ದೇವಿಯ ಮಹಿಮಾವಳಿಗಳನ್ನು ಉಚ್ಚರಿಸುತ್ತ ಕರಗಕ್ಕೆ ಮಾರ್ಗದರ್ಶನ ಮಾಡುತ್ತ ಮುಂದುವರಿಯುತ್ತಾನೆ. ಈ ಹಕ್ಕೂ ಪೂಜಾರಿಯ ಹಕ್ಕಿನಂತೆ ವಂಶಪಾರಂಪರ್ಯವಾಗಿ ಬಂದುದು. ಮಧ್ಯೆ ಕೆಲವೆಡೆ ಪೂಜಾರಿ ಮಂಡಿಯೂರಿ ಕುಳಿತಾಗ ಅಲಗುಸೇವೆಯ ಕೈಂಕರ್ಯವಾಗುತ್ತದೆ. ಹೀಗೆ ಮುಂದುವರಿದ ಹಸೀಕರಗ ನಗರಸಭೆ ಕಚೇರಿಯ ಉತ್ತರಭಾಗದಲ್ಲಿರುವ ಏಳುಸುತ್ತಿನ ಕೋಟೆಯ ಸಂಕೇತಸ್ಥಳದಲ್ಲಿರುವ ದೊಡ್ಡ ಹುತ್ತವನ್ನು ಏಳು ಅಥವಾ ಒಂಬತ್ತು ಸಲ ಪ್ರದಕ್ಷಿಣೆಮಾಡಿ ದೇವಾಲಯಾಭಿಮುಖವಾಗಿ ಬಂದು ದೇವಸ್ಥಾನ ಮತ್ತು ಹೊರಾಂಗಣದಲ್ಲಿ ಸಿದ್ಧವಾಗಿರುವ ರಥವನ್ನು ಪ್ರದಕ್ಷಿಣೆಮಾಡಿ ನರ್ತನ ಮಾಡುತ್ತದೆ. ಇಷ್ಟಾದ ಮೇಲೆ ಶುಭಮುಹೂರ್ತದಲ್ಲಿ ಸೂರ್ಯೋದಯದ ಒಳಗೆ ಕರಗ ಗರ್ಭಗುಡಿಯನ್ನು ಪ್ರವೇಶಿಸುತ್ತದೆ. ಮೂಲಮೂರ್ತಿಗಳ ಸಮ್ಮುಖದಲ್ಲಿರುವ ಶಕ್ತಿಪೀಠದಲ್ಲಿ ಕರಗವನ್ನು ಪ್ರತಿಷ್ಠಾಪಿಸಿ ಅಲಂಕರಿಸಲಾಗುತ್ತದೆ.

ಮಾರನೆಯ ದಿನ ಚತುರ್ದಶಿ. ಅಂದು ರಾತ್ರಿ ದೇವಾಲಯದಲ್ಲಿ ಮಹಾಭಾರತ ಪ್ರವಚನ, ಸೂರ್ಯೋದಯದ ಹೊತ್ತಿಗೆ ಪೊಂಗಲು ಸೇವೆ ಮುಂತಾದ ಕೈಂಕರ್ಯ ಕಾರ್ಯಗಳಿರುತ್ತವೆ.

ಕರಗ ಮಹೋತ್ಸವ : ಚೈತ್ರಶುದ್ಧ ಹುಣ್ಣಿಮೆಯಂದು ಸಾಯಂಕಾಲದ ವೇಳೆಗೆ ಕರಗ ಹೊರುವ ಪೂಜಾರಿಗೆ ಪವನಸಂಸ್ಕಾರಮಾಡಿ, ಕಂಕಣಧಾರಣೆ ಮಾಡಿ, ಕೈತುಂಬ ಕರಿಬಳೆ ತೊಡಿಸುತ್ತಾರೆ. ದೇವಸ್ಥಾನದಲ್ಲಿ ವೈಷ್ಣವಾಗಮ ರೀತಿಯಲ್ಲಿ ಪೂಜೆ, ಹೋಮಗಳು ನಡೆಯುತ್ತವೆ. ಅನಂತರ ಅರ್ಜುನ, ದ್ರೌಪದಿಯರ ಕಲ್ಯಾಣೋತ್ಸವವಾಗುತ್ತದೆ. ರಾತ್ರಿ ಸುಮಾರು ಹತ್ತು ಗಂಟೆಯ ಸುಮಾರಿಗೆ ಕರಗ ಹೊರುವ ಪೂಜಾರಿ, ಗಂಟೆ ಪೂಜಾರಿ, ವೀರಕುಮಾರರಾದಿಯಾಗಿ ಸಂಬಂಧಪಟ್ಟ ವರೆಲ್ಲ ಸಂಪಂಗಿ ಕೆರೆಯಂಗಳದಲ್ಲಿ ಸೇರುತ್ತಾರೆ. ಅಲ್ಲಿ ಪೂಜಾರಿಯನ್ನು ಅಚ್ಚಮಲ್ಲಿಗೆ, ಜಡೆಕುಚ್ಚು, ಹಾರಗಳಿಂದ ಶೃಂಗರಿಸಿ, ಅರಿಶಿನ ಬಣ್ಣದ ಸೀರೆ ಉಡಿಸಿ, ಕುಪ್ಪಸ ತೊಡಿಸಿ, ವಕ್ಷಸ್ಥಲವನ್ನು ಹವಳದ ಹಾರ, ರತ್ನಾಭರಣಗಳಿಂದ ಅಲಂಕರಿಸುತ್ತಾರೆ. ಸ್ತ್ರೀರೂಪ ಧರಿಸಿದ ಪೂಜಾರಿ ನವವಧುವಿನಂತೆ ಕಂಗೊಳಿಸುತ್ತಾನೆ. ಅನಂತರ ದಿವ್ಯಶಕ್ತಿಸ್ವರೂಪನಾದ ಪೂಜಾರಿಗೆ ಧೂಪ, ದೀಪ, ಆರತಿಗಳ ಅರ್ಚನೆಯಾಗುತ್ತದೆ. ವೀರಕುಮಾರರಿಂದ ಅಲಗುಸೇವೆಯಾದ ಮೇಲೆ ಪೂಜಾರಿಯ ಮೈಮೇಲೆ ಆದಿಶಕ್ತಿಯ ಆವಿರ್ಭಾವವಾಗುತ್ತದೆ. ಗಂಟೆಯ ನಾದದ ಮಾರ್ಗ ದರ್ಶನದಲ್ಲಿ ಮಂಗಳವಾದ್ಯಗಳೊಂದಿಗೆ ಎಲ್ಲರೂ ದೇವಾಲಯವನ್ನು ಸೇರಿದ ಮೇಲೆ ಪೂಜಾರಿ ಮಾತ್ರ ಗರ್ಭಗುಡಿಯನ್ನು ಪ್ರವೇಶಿಸುತ್ತಾನೆ. ಬಾಗಿಲು ಮುಚ್ಚುತ್ತದೆ.

ಈ ವೇಳೆಗೆ ದೇವಾಲಯದ ಸುತ್ತಲೂ ಕಿಕ್ಕಿರಿದ ಜನಸ್ತೋಮದ ಸಹಸ್ರಾರು ಕಣ್ಣುಗಳು ದೇವಾಲಯದ ಕಡೆಗೆ ಕೇಂದ್ರೀಕೃತವಾಗುತ್ತದೆ. ಆವರಣದಲ್ಲಿ ಕುಲ



ಕರಗದ ವೀರಕುಮಾರರು

ಸ್ಥರು ಮತ್ತು ಆಹ್ವಾನಿತರನ್ನು ಗೌರವಿಸಿದ ಅನಂತರ ಅರ್ಜುನ, ದ್ರೌಪದಿಯರ ಉತ್ಸವಮೂರ್ತಿಗಳನ್ನು ಹೊತ್ತು ನಿಂತಿರುವ ಭೀಮಗದಾಕಾರದ ರಥ ಪೂರ್ವಾಭಿ ಮುಖವಾಗಿ ಸ್ವಲ್ಪ ದೂರ ಚಲಿಸುತ್ತದೆ. ನಾಗಸ್ವರ, ಶಂಖ, ಗಂಟೆಗಳ ನಾದ ಪ್ರತಿಧ್ವನಿಸುತ್ತಿರುವಾಗ ಮಲ್ಲಿಗೆ ಹೂವಿನಿಂದ ಸಿಂಗರಿಸಿರುವ ಕರಗವನ್ನು ಶಿರದಲ್ಲಿ ಧರಿಸಿದ ಪೂಜಾರಿ ದೇವಸುಂದರಿಯಂತೆ ಗರ್ಭಗುಡಿಯಿಂದ ಹೊರಬರುತ್ತಾನೆ. ಮಹಾ ಮಂಗಳಾರತಿಯ ಅನಂತರ ದೇವಸ್ಥಾನವನ್ನು ಬಲವಂದು ಗಂಟೆ ಪೂಜಾರಿಯ ಸ್ತೋತ್ರಯುಕ್ತ ನಿರ್ದೇಶನದಲ್ಲಿ ಅಸಂಖ್ಯಾತ ಭಕ್ತರ ಭಕ್ತಿಕಾಣಿಕೆಯನ್ನು ಸ್ವೀಕರಿಸುತ್ತ ಕರಗದ ಮೆರವಣಿಗೆ ಮೊದಲಾಗುತ್ತದೆ. ಕರಗ ಬರುವ ಮಾರ್ಗವನ್ನು ಮೊದಲೇ ಗೊತ್ತುಪಡಿಸಿ ಪ್ರಕಟಿಸಿರುವುದರಿಂದ ಆ ಮಾರ್ಗಗಳ ಇಕ್ಕೆಲಗಳಲ್ಲೂ ಕಟ್ಟಡಗಳ ಉಪ್ಪರಿಗೆಗಳ ಮೇಲೂ ಅಸಂಖ್ಯಾತ ಪ್ರೇಕ್ಷಕರು ನೆರೆದಿರುತ್ತಾರೆ. ಕರಗ ಬರುವ ಮುನ್ಸೂಚನೆಯಾಗಿ ವೀರಕುಮಾರರು ಬರುತ್ತಾರೆ. ಕುಸ್ತಿ, ಲಾಠಿ, ಕತ್ತಿವರಸೆಗಳಲ್ಲಿ ನಿಪುಣರಾದ ವಹ್ನಿಕುಲದ ಯುವಕರು ಉತ್ಸವದ ಮುಂದೆ ತಮ್ಮ ಕೌಶಲ ಪ್ರದರ್ಶಿಸುತ್ತಾರೆ. ಅಂದು ನಗರದ ದೇವಾಲಯಗಳಲ್ಲೆಲ್ಲ ವಿಶೇಷ ಪೂಜೆ ನಡೆಯುತ್ತದೆ. ಎಲ್ಲೆಲ್ಲೂ ಸಂಭ್ರಮ ಎದ್ದು ಕಾಣುತ್ತದೆ. ಕರಗ ಬರುವ ಮಾರ್ಗದ ದೇವಾಲಯಗಳಲ್ಲಿ ಕರಗಶಕ್ತಿಗೆ ಪೂಜೆ ನಡೆಯುತ್ತದೆ. ಈ ದೇವತೆ ಬರುವ ಹಾದಿಯಲ್ಲಿ ಅರಳೇಪೇಟೆಯಲ್ಲಿರುವ ಮಸ್ತಾನ್ ಸಾಹೇಬರ ದರ್ಗಾದಲ್ಲಿಯೂ ಕರಗಕ್ಕೆ ಪೂಜೆ ಸಲ್ಲುತ್ತದೆ.

ಸೂರ್ಯರಶ್ಮಿ ತನ್ನ ಮೇಲೆ ಬೀಳುವುದಕ್ಕೆ ಮುಂಚೆ ಕರಗ ದೇವಸ್ಥಾನವನ್ನು ತಲುಪಬೇಕೆಂಬುದು ನಿಯಮ. ಅದರಂತೆ ಬೆಳಗಿನ ಆರು ಗಂಟೆಯ ವೇಳೆಗೆ ಕರಗ ದೇವಾಲಯವನ್ನು ಸೇರುತ್ತದೆ. ಅನಂತರ ಕರಗಕ್ಕೆ ಜಾತಿ-ಮತಗಳ ಭೇದವಿಲ್ಲದೆ ಪೂಜೆ ನಡೆಯುತ್ತದೆ.

ರಾತ್ರಿ ರಥದ ಜೊತೆಯಲ್ಲೇ ಹೊರಟ ನಗರದ ಅನೇಕ ದೇವರುಗಳ ಪಲ್ಲಕ್ಕಿ, ಮಂಟಪಗಳ ರಂಗುರಂಗಿನ ಉತ್ಸವ ಕರಗದ ಮತ್ತೊಂದು ಆಕರ್ಷಣೆ. ಎಷ್ಟು ದೂರ ನೋಡಿದರೂ ಕಣ್ಣು ಕೋರೈಸುವ ಆ ವೈಭವಪೂರ್ಣ ಮೆರವಣಿಗೆಯಲ್ಲಿ ಭಕ್ತರ ಇಷ್ಟಾರ್ಥ ನೆರವೇರಿಸಲು ದೇವರುಗಳೆಲ್ಲ ಒಮ್ಮೆಲೇ ಸೇರಿರುವಂತೆ ತೋರುತ್ತದೆ.

ಧ್ವಜಾವರೋಹಣದ ದಿನ ಕರಗವನ್ನು ಜಲದಲ್ಲಿ ವಿಸರ್ಜಿಸಲಾಗುತ್ತದೆ.

ಕರಗದ ಆಚರಣೆ ಆರಂಭವಾದಂದಿನಿಂದಲೂ ಅದರ ವಿಜೃಂಭಣೆ—ವೈಭವಗಳು ಹೆಚ್ಚುತ್ತಿವೆ. ಕರಗದಲ್ಲಿ ಶಕ್ತಿಯ ಆವಿರ್ಭಾವವಾಗುವುದು, ಅದನ್ನು ತಲೆಯ ಮೇಲಿಟ್ಟುಕೊಂಡು ಕೈಗಳ ಆಧಾರವಿಲ್ಲದೆ ಪೂಜಾರಿ ನಡೆಯುವುದು – ಇವೆಲ್ಲ ಮಹಿಮೆ ಎಂಬಂತೆ ನಡೆದುಕೊಂಡು ಬರುತ್ತಿವೆ. ಸಂಬಂಧಪಟ್ಟವರು ಹಿರಿಮೆಯನ್ನು ಕುರಿತು ಹೇಳಬಲ್ಲರೇ ಹೊರತು ರಹಸ್ಯದ ಬಗ್ಗೆ ಏನನ್ನೂ ಹೇಳರು. ಆ ದಿವ್ಯಶಕ್ತಿಯ ಆರಾಧನೆಯಲ್ಲಿ ಅವರಿಗಿರುವ ಅಚಲವಾದ ನಂಬುಗೆಯೇ ಆ ಮಹಿಮೆಗೆ ಕಾರಣವಾಗಿದೆ.

ಕರಗದ ಆರಾಧನೆಗೆ ಹಿನ್ನೆಲೆಯಾದ ಪಾಂಡವರ ಆರಾಧನೆ ದಕ್ಷಿಣ ಭಾರತದಲ್ಲೇ ಹೆಚ್ಚು ಪ್ರಚಾರದಲ್ಲಿರುವುದು. ತಮಿಳುನಾಡಿನಲ್ಲಿ ಅನೇಕ ಗ್ರಾಮಗಳಲ್ಲಿ ನೂರಾರು ವರ್ಷಗಳಿಂದ ಕರಗವನ್ನು ಆಚರಿಸಿಕೊಂಡು ಬರುತ್ತಿದ್ದಾರೆ. ಆದರೆ, ಕರಗದ ಉತ್ಸವ ಒಂದು ಸಂಪ್ರದಾಯ ರೀತಿಯ ಧಾರ್ಮಿಕ ವೈಭವವಾಗಿ ಕಂಡು ಬರುವುದು ಬೆಂಗಳೂರಿನಲ್ಲಿ ಮಾತ್ರ.

ವಹ್ನಿಕುಲಕ್ಷತ್ರಿಯ ವಂಶದವರಲ್ಲಿ ಕರಗಶಕ್ತಿಯ ವಿಚಾರದಲ್ಲಿ ಅಪಾರವಾದ ಭಕ್ತಿ ಗೌರವಗಳು ತಲೆಮಾರುಗಳಿಂದ ನೆಲೆಯೂರಿ ನಿಂತಿವೆ. (ಸಿ.ಕೆ.ಪಿ.)

**ಕರಡಫ್ :** ಅನಟೋಲಿಯದ ಕರಮನ್ ಜಿಲ್ಲೆಯಲ್ಲಿ, ಹಿಟ್ಟೈಟ್ ಸಾಮ್ರಾಜ್ಯ ಕಾಲದ ಅವಶೇಷಗಳನ್ನೊಳಗೊಂಡಿರುವ ಒಂದು ನೆಲೆ. ಸುಪ್ರಸಿದ್ಧವಾದ 1001 ಚರ್ಚುಗಳ ಅವಶೇಷಗಳು ಕರಡಫ್ ಬೆಟ್ಟದ ಇಳಿಜಾರಿನಲ್ಲಿ ಕಂಡುಬರುತ್ತವೆ. ಬೆಟ್ಟದ ಮೇಲೆ ಇರುವ ಅವಶೇಷ ಗುಹಾ ದೇವಾಲಯದ ಗುಂಪಿಗೆ ಸೇರುತ್ತದೆ. ಇಲ್ಲಿಯ ಬಂಡೆಯ ಮೇಲೆ ಒಂದು ಚಿತ್ರಲಿಪಿಯ ದೀರ್ಘವಾದ (ಹೈರೋಗ್ಲಿಫಿಕ್) ಶಾಸನವಿದೆ. ಬೆಟ್ಟದ ಪಶ್ಚಿಮಭಾಗದ ಕಿಜಿಲ್‌ಡಫ್ ಶ್ರೇಣಿಯಲ್ಲಿ ಮತ್ತೊಂದು ದೇವಾಲಯವಿವೆ. ಬೆಟ್ಟದ ಸುತ್ತುಪ್ರದೇಶದ ಸುಂದರ ದೃಶ್ಯ ಕಾಣಬರುವ ಈ ಸ್ಥಳದಲ್ಲಿ ಬೃಹದಾಕಾರದ ಒಂದು ಕಲ್ಲಿನ ಆಸನವನ್ನು ಕೆತ್ತಲಾಗಿದೆ. ಈ ಆಸನದ ಮೇಲೆ ಕುಳಿತಿರುವ ರಾಜನೊಬ್ಬನ ಉಬ್ಬುರೇಖಾಚಿತ್ರವನ್ನೂ ಎರಡು ಚಿತ್ರಲಿಪಿ ಶಾಸನಗಳನ್ನೂ ಕೆತ್ತಲಾಗಿದೆ. ಈ ಎರಡು ಸ್ಥಳಗಳಲ್ಲೂ ಕೆತ್ತಲಾಗಿರುವ ಚಕ್ರವರ್ತಿಯ ಹೆಸರು ಒಂದೇ, ಆ ಚಕ್ರವರ್ತಿಯನ್ನು ಮುನಿಸಿಪಲ್ ಚಕ್ರವರ್ತಿಯ ಮಗನೆಂದು ಹೇಳಲಾಗಿದ್ದರೂ ಆತ ಯಾರೆಂಬುದು ಖಚಿತವಾಗಿ ತಿಳಿದು ಬಂದಿಲ್ಲ. *

**ಕರಡ ಜ್ವರ :** ಇಸುಬು, ಗೂರಲು, ಕರಡ ಜ್ವರ ಈ ಮೂರು ಬೇನೆಗಳು ಒಂದು ಗುಂಪಿನವು (ಹೇ ಫೀವರ್). ಈ ರೋಗತ್ರಯವನ್ನು ಇ–ಗೂ–ಕ–ಜ್ವ ಸಂಕೀರ್ಣ (E.A.H.F. Complex) ಎಂದೂ ಕರೆಯುವುದುಂಟು. ಏಕೆಂದರೆ ಕೆಲವು ಮನೆತನಗಳಲ್ಲಿ ಒಬ್ಬರಿಗಾದರೂ ಈ ಬೇನೆಗಳಲ್ಲಿ ಒಂದಾದರೂ ಕಾಡುವುದು. ಒಗ್ಗದಿಕೆಯೇ ಇವುಗಳ ಮೂಲಕಾರಣ.

ಕೆಲವು ಹುಲ್ಲುಗಳ ಪರಾಗ ಕಣಗಳಿಗೆ ಮೂಗು ಮೈಗಳ ಒಗ್ಗದಿಕೆಯೇ ಕರಡ ಜ್ವರಕ್ಕೆ ಕಾರಣವಾಗುವುದು. ಸಾಮಾನ್ಯವಾಗಿ ಬೇಸಗೆಯಲ್ಲಿ ಇದ್ದಕ್ಕಿದ್ದಹಾಗೆ ರೋಗ ತಲೆದೋರುತ್ತದೆ. ಮೊದಮೊದಲು ಕೇವಲ ನೆಗಡಿಯಂತೆ ಮೂಗು ಉರಿಯುತ್ತ ಕೆಂಪಾಗಿ ನೀರು ಸುರಿಯಬಹುದು. ಒಂದೆರಡು ಸೀನುಗಳು, ಮೈ ತುರಿಕೆ, ಕಣ್ಣಿನಿಂದ ನೀರು ಸುರಿತ ಅಲ್ಲದೆ ಇನ್ನೂ ಜೋರಾದರೆ ಕಣ್ಣುರಿಯಾಗಿ ಊದಿಕೊಂಡು, ಉಬ್ಬಸ ಗೂರಲಿನ ತೆರನಾಗಿ ಸೇದಬಹುದು. ಜೊತೆಗೆ ಸಿಡಿವ ತಲೆನೋವು ಮತ್ತು ಜ್ವರದಿಂದ ರೋಗಿ ನರಳುತ್ತ ಸುಸ್ತು ಬೀಳುತ್ತಾನೆ. ಈ ಜ್ವರಕ್ಕೆ ಈಡಾಗುವವರು ಹಲವಾರು ಬಗೆಯ ಹುಲ್ಲುಗಳ ಪರಾಗಗಳಿಗೆ ಒಗ್ಗದಂತಿರುವರು. ಇನ್ನು ಕೆಲವರು ಗೊತ್ತಾದ ಗಿಡ, ಹೂಗಳ ಪರಾಗಗಳಿಗೆ ಈಡಾಗುವರು. ಮತ್ತೆ ಕೆಲವರು ಉಣಿಸಿನಲ್ಲಿ ಕೆಲವು ಪ್ರೋಟೀನು ವಸ್ತುಗಳನ್ನೂ ಬೆಕ್ಕು, ನಾಯಿ, ಕುದುರೆ, ಇಲಿ ಮತ್ತಿತರ ಪ್ರಾಣಿಗಳ ಕೂದಲ ವಾಸನೆಗಳನ್ನೂ ಸಹಿಸರು. ಇಂಥ ರೋಗಿಗಳಿಗೆ 2–3 ಪರಾಗಕಣಗಳು ತಾಕಿದರೂ ಅವರು ಬೇನೆ ಬೀಳುವರು. ಒಗ್ಗದ ಗಿಡ, ಮರ, ಹೂಗಳು ಒಂದು ಕಿಲೋಮೀಟರ್ ದೂರದಲ್ಲಿದ್ದರೂ ಬೇನೆ ಆರಂಭವಾಗುತ್ತದೆ.

ಮಕ್ಕಳ ಬೇನೆಯಾದ ಇದು, ಸಣ್ಣ ವಯಸ್ಸಿನಲ್ಲಿ ಶುರುವಾಗಿ ಆಮೇಲೆ ಬೇಸಗೆ ಕಾಲದಲ್ಲಿ ಪ್ರತಿ ವರ್ಷವೂ ಕಾಡುತ್ತ ನಡುವಯಸ್ಸಿನಲ್ಲಿ ಇಳಿದು ಹೋಗುತ್ತದೆ. ಕೆಲವರಿಗೆ ಬೇಸಗೆ ಕಾಲದ ಹೊರತಾಗಿ ಎದೆಯಲ್ಲಿ ಯಾವ ಬೇನೆಯ ತೊಡಕೂ

ಕಾಣಿಸಕೊಳ್ಳದು. ಇನ್ನು ಕೆಲವರಿಗಂತೂ ಯಾವಾಗ ಬೇಕಾದರೂ ಗೂರಲುಬ್ಬಸ ತಲೆದೋರಬಹುದು. ಈ ರೋಗಕ್ಕೆ ಈಡಾಗುವವರಲ್ಲಿ ಮೂರು ಅಂಶಗಳು ಮೇಲು ಗೈಯಾಗಿರುತ್ತವೆ — ತಲೆಮಾರಿನ ಗುಣ, ಚಂಚಲ ಮನ, ಸಾಮಾನ್ಯರಲ್ಲಿ ಯಾವ ತೊಡಕನ್ನೂ ತೋರದ ವಸ್ತುಗಳಿಗೆ ಒಗ್ಗದಿರುವುದು. ಅಸಹಜವಾಗಿ ಈಡಾಗುವ ಈ ಗುಣಕ್ಕೆ ಒಗ್ಗದಿಕೆ (ನೋಡಿ) ಎಂದು ಹೆಸರಿದೆ. ರೋಗಿಗೆ ಒಂದು ವಸ್ತು ಮೊದಲು ತಾಕಿದಾಗ, ಚುಚ್ಚಿಹೋಗಿಸಿದಾಗ, ನುಂಗಿದಾಗ, ಇಲ್ಲವೇ ಉಸಿರಿನ ಮೂಲಕ ಸೇರಿದಾಗ ಅದಕ್ಕೆ ಈಡಾಗುವ ಗುಣವನ್ನು ಪಡೆಯುವರು. ಆಮೇಲೆ ಎರಡನೆಯ ಬಾರಿ ಅದೇ ವಸ್ತು ತಾಕಿದರೆ ತುಂಬ ಪೇಚಾಡಿಸುವುದು. ಒಗ್ಗದಿಕೆಯ ಪರಿಣಾಮ ರಕ್ತನಾಳ, ಇಲ್ಲವೇ ನಯ ಸ್ನಾಯುಗಳ ಕೆಲಸದ ವ್ಯತ್ಯಾಸಗಳಿಂದಾಗುವುದು. ಮೈಮೇಲಿನ ಇಲ್ಲವೇ ಒಳಗಿನ ತಲಗಳ ಅತಿಸೂಕ್ಷ್ಮ ರಕ್ತನಾಳಗಳ ನಿಜಕೆಲಸ ಕೆಡುವುದರಿಂದ ಈ ರೋಗದ ಲಕ್ಷಣಗಳು ಕಾಣಿಸಿಕೊಳ್ಳುತ್ತವೆ. ಹಾಗೆಯೇ ಶ್ವಾಸನಾಳಗಳು ಅವುಗಳ ನಯ ಸ್ನಾಯುಗಳ ಒಗ್ಗದ ಪರಿಣಾಮವಾಗಿ ಕುಗ್ಗಿ ಗಾತ್ರ ಸಣ್ಣಗಾಗುವುದೇ ಉಬ್ಬಸಕ್ಕೆ ಕಾರಣ.

ಕರಡ ಜ್ವರವನ್ನು ಗುರುತಿಸುವುದು ಸುಲಭ. ಬೇಸಗೆಯಲ್ಲಿ ಬೇರೆ ಯಾವ ಬೇನೆಯೂ ಇದರ ಹಾಗೆ ಕಾಣಿಸಿಕೊಳ್ಳುವುದಿಲ್ಲ. ಕೆಲವು ಪರೀಕ್ಷೆಗಳಿಂದ ಮುಂದೆ ಬರಬಹುದಾದ ಈ ರೋಗದ ಕಾರಣಗಳನ್ನು ಕಂಡು ಹಿಡಿಯಬಹುದು. ಆಯಾ ಊರುಗಳಲ್ಲಿ ಕಾರಣವೆಂದು ಗೊತ್ತಿರುವ ಪರಾಗಗಳ ಸಿದ್ಧಪಡಿಸಿದ ಸಾರಕಗಳನ್ನು ಮದ್ದು ತಯಾರಕರಿಂದ ಪಡೆಯಬಹುದು. ಇವನ್ನು ಕರಡ ಜ್ವರದ ರೋಗಿಗೆ ಕೊಟ್ಟರೆ ಆರೋಗ್ಯವಂತರಿಗಿಂತಲೂ 500 ಪಾಲು ಜೋರಾಗಿ ಇವರು ಅದಕ್ಕೆ ಈಡಾಗುವುದನ್ನು ತೋರಿಸಬಹುದು.

ಯಾವ ವಸ್ತುವಿನ ಒಗ್ಗದಿಕೆಯಿಂದ ರೋಗಿಗೆ ಹೀಗಾಗುತ್ತದೆ ಎನ್ನುವುದನ್ನು ಕಂಡುಹಿಡಿಯಬಹುದು. ಒಗ್ಗದಿಕೆಯನ್ನುಂಟುಮಾಡಬಲ್ಲ ಪದಾರ್ಥಗಳನ್ನು, ಇಲ್ಲವೇ ಅವುಗಳ ಸಾರಕಗಳನ್ನು ನಿರ್ದಿಷ್ಟ, ಅತ್ಯಲ್ಪ ಪ್ರಮಾಣದಲ್ಲಿ ರೋಗಿಯ ಬೆನ್ನು ಅಥವಾ ಮುಂದೋಳಲ್ಲಿ ಚುಚ್ಚಿಹೋಗಿಸಿ 24 ಗಂಟೆಗಳ ಅನಂತರ ಪ್ರತಿಕ್ರಿಯೆಯನ್ನು ನೋಡಬೇಕು. ಚುಚ್ಚಿದೆಡೆ 5 ಮಿಮಿ. ಗಿಂತ ಹೆಚ್ಚು ಅಗಲವಾಗಿ ಕೆಂಪೇರಿ ಊತವೆದ್ದರೆ ರೋಗಿಗೆ ಆ ವಸ್ತು ಒಗ್ಗದೆಂದರ್ಥ.

ಬೇಸಗೆಯಲ್ಲಿ ಕರಡ ಜ್ವರಕ್ಕೆ ಈಡಾಗುವವರು ರೋಗದ ಲಕ್ಷಣಗಳು ಕಾಣಿಸಿಕೊಳ್ಳುವ 5–6 ವಾರಗಳ ಮುಂಚೆಯೇ ಒಗ್ಗದಿಕೆ ತಡೆಯುವ ಕ್ರಮವನ್ನು ಕೈಗೊಳ್ಳಬೇಕು. ರೋಗಿಗೆ ಯಾವ ವಸ್ತು ಒಗ್ಗದೆಂದು ಮೇಲೆ ಹೇಳಿರುವ ಪರೀಕ್ಷೆಯಿಂದ ಗೊತ್ತುಮಾಡಿ, ಅಂಥ ಪರಾಗದ ಸಾರಕದ್ರವದ ಲಕ್ಷಪಾಲಿನ ಒಂದರಷ್ಟನ್ನು ಚರ್ಮದಡಿ ಚುಚ್ಚಿ ಪ್ರಾರಂಭಿಸಬೇಕು. ಬರಬರುತ್ತ ವಾರವಾರವೂ ಪ್ರತಿಕ್ರಿಯೆ ನೋಡಿಕೊಂಡು ಅರೆಪಾಲು ಹೆಚ್ಚಿಸುತ್ತ 8–10 ಚುಚ್ಚುಗೆಗಳನ್ನು ಕೊಡಬೇಕು. ಹೀಗೆ ಮಾಡಿದಾಗ ಎಂದಾದರೂ ಮೈಯೆಲ್ಲ ದದ್ದುಗಳೆದ್ದು ತೊಂದರೆಯಾದರೆ ಮುಂದಿನ ವಾರ ಬಹಳಷ್ಟು ಕಡಿಮೆ ಮಾಡಿ ಚುಚ್ಚಬೇಕು. ಹೀಗೆ ಕ್ರಮವಾಗಿ ಚುಚ್ಚುತ್ತ ಹೋದಂತೆ ಮುಂದಿನ ಬೇಸಗೆಯಲ್ಲಿ ಕರಡ ಜ್ವರದಿಂದ ಆತನಿಗೆ ವಿಮೋಚನೆ ದೊರೆಯುತ್ತದೆ. ಆದರೆ ಈ ತಡೆ ಒಂದು ವರ್ಷಕ್ಕಿಂತ ಹೆಚ್ಚು ಕಾಲ ಇರದು. ಮುಂದಿನ ವರ್ಷ ಅಷ್ಟು ವಾರಗಳ ಚಿಕಿತ್ಸೆ ಬೇಕಿರದು.

ಒಬ್ಬೊಬ್ಬನಿಗೂ ಬೇರೆಯಾಗಿರುವ ಮೇಲಿನ ಚಿಕಿತ್ಸೆಯೊಂದಿಗೆ ಎಲ್ಲ ಬಗೆಯ ಒಗ್ಗದಿಕೆಯ ಚಿಕಿತ್ಸೆಗಾಗಿ ಹಿಸ್ಟಮಿನ್ ರೋಧಕ ಮದ್ದುಗಳಿವೆ. ಮೈಯಲ್ಲಿ ಹಿಸ್ಟಮೀನ್ ವಸ್ತು ಹೊರಬೀಳುವುದೇ ಒಗ್ಗದಿಕೆಯ ಲಕ್ಷಣಗಳಿಗೆ ಮುಖ್ಯಕಾರಣ. ಈ ಮದ್ದುಗಳು ಅದರಿಂದೇಳುವ ಪರಿಣಾಮಗಳನ್ನು ಎದುರಿಸಿ ಕಳೆಯುತ್ತವೆ. ಮಾತ್ರೆ, ಮುಲಾಮು, ತುಂಪುರಿ, ಚುಚ್ಚುಮದ್ದು — ಈ ರೂಪಗಳಲ್ಲಿ ಮದ್ದುಗಳು ಸಿಗುತ್ತವೆ. ಮೂಗು ಗಂಟಲುಗಳು ಕೆಂಪೇರಿದಾಗ ಶಾಮಕಗಳನ್ನು ಬಳಸಬಹುದು. ಆದರೆ ಇವುಗಳ ಶಕ್ತಿ ಕೊಂಚಕಾಲವಿದ್ದು ನಶಿಸುತ್ತದೆ. ಮೂಗಿನಲ್ಲಿ ಒಗ್ಗದಿಕೆ ಈಡಾಗುವ ಕೆಲವೆಡೆ ವಿದ್ಯುತ್‌ಗುಳದಿಂದ ಸುಡುವುದರಿಂದ ಕೆಲವರಿಗೆ ಅನುಕೂಲವಾಗಬಹುದು.

ಬೇಸಗೆ ಕಾಲ ಕಳೆವ ತನಕ, ಇಲ್ಲವೇ ಮಳೆಯೋ ಮಂಜೋ ಸುರಿದು ಪರಾಗದ ದೂಳು ಹರಡುವುದು ನಿಲ್ಲುವ ತನಕ, ಇಲ್ಲವೇ ಆ ಊರು ಬಿಡುವ ತನಕ ಕರಡ ಜ್ವರ ಕಾಡಬಹು. (ಡಿ.ಪಿ.ಜಿ.)

**ಕರಡಿ :** ಕಾರ್ನಿವೊರ ಗಣದ ಅರ್ಸಿಡೀ ಕುಟುಂಬಕ್ಕೆ ಸೇರಿದ ಸಸ್ತನಿ. ಪ್ರಪಂಚದಲ್ಲಿ ಸುಮಾರು 7 ಜಾತಿ ಹಾಗೂ 9 ಪ್ರಭೇದಗಳಿಗೆ ಸೇರಿದ ಕರಡಿಗಳಿವೆ. ಇವು ಉಷ್ಣ ಮತ್ತು ಸಮಶೀತೋಷ್ಣವಲಯಗಳಲ್ಲಿರುವುದೇ ಹೆಚ್ಚು. ಉತ್ತರ ಶೀತವಲಯದಲ್ಲೂ ಒಂದು ಜಾತಿಯ ಕರಡಿ ಇದೆ. (ಆಫ್ರಿಕ, ಮಡಗಾಸ್ಕರ್ ದ್ವೀಪ, ಆಸ್ಟ್ರೇಲಿಯ ಹಾಗೂ ದಕ್ಷಿಣ ಧ್ರುವ ಪ್ರದೇಶಗಳಲ್ಲಿ ಮಾತ್ರ ಕರಡಿ ಇಲ್ಲ). ಬಹುಭಾರವಾದ ದೇಹ, ದೇಹದ ಗಾತ್ರಕ್ಕೆ ಹೋಲಿಸಿದರೆ ಚಿಕ್ಕದಾದ ಆದರೆ ಬಲಯುತವಾದ ಕಾಲುಗಳು, ಪುಟ್ಟಬಾಲ, ದೊಡ್ಡ ಗಾತ್ರದ ತಲೆ, ದೇಹದ ಮೇಲೆಲ್ಲ ಉದ್ದನೆಯ ಹಾಗೂ ಪೊದೆಯಂಥ ಕೂದಲುಗಳು — ಇವು ಕರಡಿಯ ಪ್ರಮುಖವಾದ ಸಾಮಾನ್ಯ ಲಕ್ಷಣಗಳು. ಸಾಮಾನ್ಯವಾಗಿ ಕರಡಿಗಳ ಕಣ್ಣು ಮತ್ತು ಕಿವಿಗಳು ಬಲು ಚಿಕ್ಕವು — ಕಿವಿಗಳು ಗುಂಡಗಿದ್ದು ನೆಟ್ಟಗೆ ನಿಂತಂತಿವೆ. ಮೂತಿ ಉದ್ದವಾಗಿದೆ. ತುಟಿಗಳು ದವಡೆಗಳಿಗೆ ಅಂಟಿಲ್ಲ. ಎರಡು ಜೊತೆ ಕಾಲುಗಳಲ್ಲೂ ಐದೈದು ಬೆರಳುಗಳಿವೆ. ಇವುಗಳಲ್ಲಿ ಚೂಪಾದ ಬಾಗಿದ ಹಾಗೂ ಗಡುಸಾದ ಉಗುರುಗಳಿವೆ (ಪಂಜ), ಇವು ಆಹಾರವನ್ನು ಸಿಗಿಯಲು ಗುಳಿ ತೋಡಲೂ ಸಹಕಾರಿಯಾಗಿವೆ. ಕರಡಿಗಳು ಊರುಗಾಲಿಗಳು (ಪ್ಲಾಂಟಿಗ್ರೇಡ್). ನಡೆಯುವಾಗ ಅಂಗಾಲನ್ನು ಅಪರಲ್ಲೂ ಹಿಮ್ಮಡಿಯನ್ನು ನೆಲಕ್ಕೆ ಊರುವುದರಿಂದ ಇವುಗಳ ನಡಿಗೆ ವಿಚಿತ್ರವಾಗಿದ್ದು ತೊನೆಯುತ್ತ ನಡೆಯುವಂತೆ ಕಾಣುತ್ತದೆ. ಸಾಮಾನ್ಯವಾಗಿ ನಾಲ್ಕು ಕಾಲುಗಳನ್ನು ಊರಿ ನಡೆಯುವುವಾದರೂ ಕೆಲವೊಮ್ಮೆ ಬರಿಯ ಹಿಂಗಾಲುಗಳ ಮೇಲೆ ನಡೆಯುವುದೂ ಉಂಟು. ನಡಿಗೆ ವಿಚಿತ್ರವಾದರೂ ಕರಡಿಗಳು ವೇಗವಾಗಿ ಹಾಗೂ ಅತ್ಯಂತ ಜಾಗರೂಕತೆಯಿಂದ ನಡೆಯಬಲ್ಲವು. ನೆಲದ ಮೇಲೆಯೇ ಸಂಪೂರ್ಣವಾಗಿ ತಮ್ಮ ಚಟುವಟಿಕೆಗಳನ್ನು ನಿರ್ವಹಿಸುವ ಕರಡಿಗಳ ಅಂಗಾಲಿನ ಮೇಲೆ ಕೂದಲು ಇದೆ. ಆದರೆ ಮಲಯದಲ್ಲಿ ಕಾಣಬರುವ ಬಿಸಿಲು ಕರಡಿಯ ಅಂಗಾಲಿನಲ್ಲಿ ಕೂದಲಿಲ್ಲ. ಇದರ ಕಾರಣ ಬಹುಶಃ ಈ ಕರಡಿ ಸಾಮಾನ್ಯವಾಗಿ ಮರಗಳಲ್ಲೇ ಕಾಲ ಕಳೆಯುವುದಾಗಿರಬಹುದು. ದೇಹದ ಗಾತ್ರದಲ್ಲೂ ತೂಕದಲ್ಲೂ ಬೇರೆ ಬೇರೆ ಬಗೆಯ ಕರಡಿಗಳಲ್ಲಿ ವೈವಿಧ್ಯವಿದೆ. ಕೆಲವು ಸುಮಾರು 3 ಮೀ. ಉದ್ದವಿದ್ದು, ಸು. 780 ಕಿಗ್ರಾಂ. ತೂಗಿದರೆ (ಉದಾಹರಣೆಗೆ ಅಲಾಸ್ಕದ ಕಂದು ಕರಡಿ) ಇನ್ನು ಕೆಲವು ಕೇವಲ 1 ಮೀ. ಉದ್ದವಿದ್ದು 27–40 ಕಿಗ್ರಾಂ. ತೂಗುತ್ತವೆ (ಉದಾಹರಣೆಗೆ ಮಲಯದ ಬಿಸಿಲು ಕರಡಿ). ದೇಹದ ಬಣ್ಣದಲ್ಲೂ ವೈವಿಧ್ಯವನ್ನು ಕಾಣಬಹುದು, ಕಂದು, ಕಪ್ಪು, ನೀಲಿಮಿಶ್ರಿತ ಕಪ್ಪು, ಬೂದು, ಬಿಳಿ ಇತ್ಯಾದಿ. ಕೆಲವು ಕರಡಿಗಳಲ್ಲಿ ಎದೆಯ ಮೇಲೆ ಅರ್ಧ ಚಂದ್ರಾಕೃತಿಯ ಅಥವಾ ಚಕ್ರದಂಥ ಬಿಳಿಯ ಬಣ್ಣದ ಗುರುತುಗಳುಂಟು.

ಕರಡಿ ನಿಶಾಚರಿ. ಹಗಲೆಲ್ಲ ಗುಡ್ಡಬೆಟ್ಟಗಳಲ್ಲಿನ ಗವಿಗಳಲ್ಲೊ, ದಟ್ಟವಾದ ಪೊದೆಗಳಲ್ಲೊ, ದೊಡ್ಡ ದಿಮ್ಮಿಗಳ ಪೊಟರೆಗಳಲ್ಲೊ ಅಥವಾ ನೆಲವನ್ನು ತೋಡಿ ಮಾಡಿಕೊಂಡ ಬಿಲಗಳಲ್ಲೊ ನಿದ್ರಿಸುತ್ತ ಕಾಲ ಕಳೆಯುತ್ತಿದ್ದು, ಆಹಾರಾರ್ಜನೆಗಾಗಿ ಸಂಜೆ ಅಥವಾ ರಾತ್ರಿ ಹೊರ ಹೊರಡುತ್ತದೆ. ಶೀತವಲಯದ ಕರಡಿ ಮಾತ್ರ ಹಗಲಿನಲ್ಲೆ ತನ್ನ ಚಟುವಟಿಕೆಗಳಲ್ಲಿ ನಿರತವಾಗಿರುತ್ತದೆ. ಸಾಮಾನ್ಯವಾಗಿ ಕರಡಿಗಳೆಲ್ಲ ಆಹಾರವನ್ನು ಹುಡುಕಿಕೊಂಡು ತಾವು ವಾಸಿಸುವ ಸ್ಥಳದಿಂದ ಬಹುದೂರ ಹೋಗುತ್ತವೆ. ಅದಕ್ಕೇ ಬಹಳ ಅಲೆಮಾರಿ ಪ್ರಾಣಿಗಳೆಂದು ಇವು ಹೆಸರಾಗಿವೆ. ಕರಡಿಗಳು ಸರ್ವಭಕ್ಷಕ ಪ್ರಾಣಿಗಳು. ಹುಲ್ಲು, ಎಲೆ, ಬೇರು, ಹಣ್ಣು, ಹಂಪಲು, ಜೇನುತುಪ್ಪ ಮುಂತಾದ ಸಸ್ಯಾಹಾರವನ್ನೂ ಕೀಟಗಳು, ಸಣ್ಣಪುಟ್ಟ ಸಸ್ತನಿಗಳು ಮುಂತಾದ ಮಾಂಸಾಹಾರವನ್ನೂ ತಿನ್ನುತ್ತವೆ. ಮೀನನ್ನು ಹಿಡಿದು ತಿನ್ನುವುದೂ ಉಂಟು. ಆಹಾರಪ್ರಾಣಿಗಳನ್ನು ತಮ್ಮ ಬಲವಾದ ಪಂಜಗಳಿಂದ ಹೊಡೆದು ಕೊಂದು ತಿನ್ನುವುದೇ ವಾಡಿಕೆ. ಕರಡಿಗಳಿಗೆ ದೃಷ್ಟಿ ಹಾಗೂ ಶ್ರವಣ ಶಕ್ತಿಗಳು ಕಡಿಮೆ. ಆದರೆ ಘ್ರಾಣಶಕ್ತಿ ಅತ್ಯಂತ ಚುರುಕು. ಆಹಾರ ಮತ್ತು ಶತ್ರುಗಳ ಸುಳಿವನ್ನು ವಾಸನೆಯಿಂದಲೇ ಪತ್ತೆಹಚ್ಚುತ್ತವೆ. ಇವುಗಳ ಮತ್ತೊಂದು ವಿಶಿಷ್ಟ ಲಕ್ಷಣವೆಂದರೆ ಶಿಶಿರಸ್ವಾಪತೆ (ಹೈಬರ್ನೇಷನ್) ಬಹುಪಾಲು ಜಾತಿಯ ಕರಡಿಗಳು ಚಳಿಗಾಲದಲ್ಲಿ ತಮ್ಮ ಕಾರ್ಯಚಟುವಟಿಕೆಗಳನ್ನು ಸ್ಥಗಿತಗೊಳಿಸಿ ಯಾವುದಾದರೂ ಗುಹೆಯಲ್ಲಿ 2-3 ತಿಂಗಳ ಕಾಲ ನಿದ್ದೆ ಹೋಗುತ್ತವೆ. ಈ ಕಾಲದಲ್ಲಿ ಉಸಿರಾಡುವುದೊಂದನ್ನು ಬಿಟ್ಟರೆ ಉಳಿದೆಲ್ಲ ದೈಹಿಕವ್ಯಾಪಾರಗಳೂ ನಿಂತಂತೆಯೇ ಇರುತ್ತವೆ. ಆದರೆ ಕೆಲವು ವಿಜ್ಞಾನಿಗಳ ಪ್ರಕಾರ ಈ ಬಗೆಯ ನಿದ್ದೆ ಕೀಟಗಳು ಮುಂತಾದ ಪ್ರಾಣಿಗಳಲ್ಲಿರುವಂತೆ ನಿಜವಾದ ಶಿಶಿರಸ್ವಾಪತೆಯಲ್ಲ. ಏಕೆಂದರೆ ಈ ಕಾಲದಲ್ಲಿ ಕರಡಿಗಳು ಎಚ್ಚರಗೊಳ್ಳುವುದೂ ಗುಹೆಯಿಂದ ಹೊರಬಂದು ಮತ್ತು ಬಂದಂತೆ ನಡೆದಾಡುವುದೂ ಕಂಡುಬಂದಿದೆ. ಶೀತವಲಯದ ಕರಡಿಗಳು (ಗರ್ಭಧರಿಸಿದ ಹೆಣ್ಣುಗಳನ್ನು ಬಿಟ್ಟು), ಮಲಯದ ಬಿಸಿಲು ಕರಡಿ ಮತ್ತು ಭಾರತದ ಕರಡಿ (ಸ್ಲಾತ್ ಬೇರ್) — ಇವು ಶಿಶಿರಸ್ವಾಪತೆ ಮಾಡುವುದಿಲ್ಲ ಎಂದು ಹೇಳಲಾಗಿದೆ.

ಕರಡಿಗಳು ಸ್ವಾಭಾವಿಕವಾಗಿ ಶಾಂತಸ್ವಭಾವದ ಪ್ರಾಣಿಗಳು. ತಾವಾಗಿಯೇ ಇತರ ಪ್ರಾಣಿಗಳ ಮೇಲೆ (ಆಹಾರ ಪ್ರಾಣಿಗಳನ್ನು ಬಿಟ್ಟು) ಬಿದ್ದು ಆಕ್ರಮಣ ಮಾಡುವುದಿಲ್ಲ. ಆದಷ್ಟು ಮಟ್ಟಿಗೆ ಬೇರೆ ಪ್ರಾಣಿಗಳೊಂದಿಗೆ ಹೋರಾಡುವುದನ್ನು ತಪ್ಪಿಸಲು ಪ್ರಯತ್ನಿಸುತ್ತವೆ. ಆದರೆ ಸ್ವಂತ ಹಾಗೂ ಮರಿಗಳ ರಕ್ಷಣೆಗಾಗಿ, ಆಹಾರಕ್ಕಾಗಿ, ಇಕ್ಕಟ್ಟಿಗೆ ಸಿಲುಕಿದಾಗ, ಬಹುಕ್ರೂರವಾಗಿ, ಅಪಾಯಕರವಾಗಿ ಹೋರಾಡಬಲ್ಲವು.

ಇವು ಸಾಮಾನ್ಯವಾಗಿ ಒಂಟಿಜೀವನ ನಡೆಸುತ್ತವೆ. ಸಂತಾನಾಭಿವೃದ್ಧಿಯ ಕಾಲದಲ್ಲಿ ಮಾತ್ರ ಒಟ್ಟೊಟ್ಟಿಗೆ ಇರುತ್ತವೆ. ಪ್ರತಿವರ್ಷದ ಅಕ್ಟೋಬರ್ ಮಾರ್ಚಿ ತಿಂಗಳುಗಳ ನಡುವಣ ಕಾಲ ಕರಡಿಗಳು ಮರಿ ಹಾಕುವ ಕಾಲ. 6–9 ತಿಂಗಳುಗಳ ಅವಧಿಯ ಗರ್ಭಧಾರಣೆಯ ಅನಂತರ ಒಂದೊಂದು ಹೆಣ್ಣೂ 1–4 ಮರಿಗಳನ್ನು ಹೆರುತ್ತದೆ. ಆಗತಾನೇ ಹುಟ್ಟಿದ ಮರಿಗಳು ಬಹಳ ಚಿಕ್ಕವಾಗಿದ್ದು ಸುಮಾರು 230–560 ಗ್ರಾಂ. ಮಾತ್ರ ತೂಗುತ್ತವೆ. ಹುಟ್ಟಿದಾಗ ಕಣ್ಣು ತೆರೆದೇ ಇರುವುದಿಲ್ಲ. ಮರಿಗಳ ಪಾಲನೆಯನ್ನು ತಾಯಿಕರಡಿ ಮಾಡುತ್ತದೆ. 1–2 ವರ್ಷ ತಾಯಿಯೊಡನೆಯೇ ಇದ್ದು ಅನಂತರ ಮರಿಗಳು ತಮ್ಮ ಬದುಕನ್ನು ಸ್ವತಂತ್ರವಾಗಿ ನಡೆಸಲಾರಂಭಿಸುತ್ತವೆ. 2½–6 ವರ್ಷಗಳಲ್ಲಿ ಪ್ರೌಢಾವಸ್ಥೆ ತಲಪುತ್ತವೆ. ಕರಡಿಗಳ ಆಯಸ್ಸು ಸುಮಾರು 15–30 ವರ್ಷಗಳು. ಸಾಕಿದ ಕರಡಿಗಳು ಇನ್ನೂ ಹೆಚ್ಚು ಕಾಲ ಬದುಕಿರುವ ದಾಖಲೆಗಳುಂಟು.

ಪ್ರಪಂಚದಲ್ಲಿ ಕಾಣಬರುವ ಏಳು ಜಾತಿಯ ಕರಡಿಗಳು ಇವು–ಅಮೆರಿಕದ ಕಪ್ಪು ಕರಡಿ, ಅಲಾಸ್ಕದ ಕಂದು ಕರಡಿ, ಏಷ್ಯದ ಕಪ್ಪು ಕರಡಿ, ಬಿಸಿಲು ಕರಡಿ, ಭಾರತದ ಕರಡಿ, ಮಚ್ಚೆ ಕರಡಿ ಮತ್ತು ಶೀತವಲಯದ ಕರಡಿ.

1 ಅಮೆರಿಕದ ಕಪ್ಪು ಕರಡಿ : ಇದರ ಶಾಸ್ತ್ರೀಯ ನಾಮ ಯುಆರ್ಕ್ಟಸ್ ಅಮೆರಿಕಾನಸ್ ಎಂದು. ಉತ್ತರ ಅಮೆರಿಕದ ದಟ್ಟವಾದ ಕಾಡುಗಳಲ್ಲಿ ವಿಶೇಷವಾಗಿ



ಅಮೆರಿಕದ ಕಪ್ಪು ಕರಡಿ

ಕಾಣಬರುತ್ತದೆ. ಸುಮಾರು 1.5–1.8 ಮೀ. ಉದ್ದವಿರುವ ಇದರ ಭಾರ ಸುಮಾರು 150 ಕಿ ಗ್ರಾಂ. ದೇಹದ ಬಣ್ಣ ಕಪ್ಪು, ಕಂದು, ನೀಲಿಮಿಶ್ರಿತ ಕಪ್ಪು, ಬಿಳಿ ಇತ್ಯಾದಿ ವಿವಿಧ ಬಗೆಯದು. ಬಹಳ ಚೆನ್ನಾಗಿ ಮರ ಹತ್ತಬಲ್ಲುದು. ಸಹಜವಾಗಿ ಸಾಧುಪ್ರಾಣಿ. ಹಣ್ಣುಹಂಪಲು, ಮೀನು ಇತ್ಯಾದಿ ಇದರ ಆಹಾರ. ಪ್ರೌಢ ಕರಡಿಗಳನ್ನು ಪಳಗಿಸುವುದು ಕಷ್ಟವಾದರೂ ಮರಿಗಳನ್ನು ಹಿಡಿದು ಪಳಗಿಸಿ ಕೆಲವು ಮೋಜಿನ ಆಟಗಳನ್ನು ಕಲಿಸುವುದು ಸಾಧ್ಯ. ಕೆಲವು ಕಡೆ ಇದರ ಮಾಂಸವನ್ನು ತಿನ್ನುವ ರೂಢಿ ಇದೆ.

2 ಅಲಾಸ್ಕದ ಕಂದು ಕರಡಿ : ಅರ್ಸಸ್ ಆರ್ಕ್ಟಸ್ ಎಂಬ ಶಾಸ್ತ್ರೀಯ ಹೆಸರಿನ ಈ ಕರಡಿ ಅಲಾಸ್ಕದ ಅರಣ್ಯವಾಸಿ. ಒಂದು ಕಾಲದಲ್ಲಿ ಉತ್ತರ ಅಮೆರಿಕ, ಯೂರೋಪು ಹಾಗೂ ಏಷ್ಯದ ಕಾಡುಗಳಲ್ಲಿ ಹೇರಳವಾಗಿ ಕಾಣಬರುತ್ತಿದ್ದ ಇದು ಇಂದು ಅಮೆರಿಕದ ಸಂಯುಕ್ತ ಸಂಸ್ಥಾನಗಳ ಯೆಲ್ಲೊಸ್ಟೋನ್ ಮತ್ತು ಗ್ಲೇಸಿಯರ್ ರಾಷ್ಟ್ರೀಯ ಉದ್ಯಾನಗಳಲ್ಲಿ, ಅಲಾಸ್ಕ ಹಾಗೂ ಕೆನಡಗಳ ಕಾಡುಗಳಲ್ಲಿ ಮಾತ್ರ ವಾಸಿಸುತ್ತದೆ. ಜೀವಂತ ಕರಡಿಗಳಲ್ಲೆಲ್ಲ ಅತ್ಯಂತ ದೊಡ್ಡದೂ ಬಲಶಾಲಿಯೂ ಎಂದು ಹೆಸರಾಗಿದೆ. ಸುಮಾರು 2.8 ಮೀ. ಉದ್ದವಿದ್ದು 780 ಕಿ ಗ್ರಾಂ. ವರೆಗೂ ಭಾರವಿರುತ್ತದೆ. ತನ್ನ ಪಂಜದ ಪ್ರಹಾರದಿಂದ ತನಗಿಂತಲೂ ಭಾರವಾದ ಕಾಡುಕೋಣಗಳನ್ನು ಕೊಂದಿರುವ ನಿದರ್ಶನಗಳಿವೆ. ಇದು ಸರ್ವಭಕ್ಷಕ. ಇದನ್ನು ಸುಲಭವಾಗಿ ಪಳಗಿಸಬಹುದು. ತಾಳಲಯಕ್ಕನುಗುಣವಾಗಿ ಕುಣಿಯುವುದನ್ನು ಕಲಿಸಿ ಸರ್ಕಸುಗಳಲ್ಲಿ ಪ್ರದರ್ಶಿಸುತ್ತಾರೆ.



ಅಮೆರಿಕದ ಕರಡಿ ಮತ್ತು ಮರಿಗಳು (ಬಿಳಿಯ ಬಗೆಯುವು)

3 ಏಷ್ಯದ ಕಪ್ಪು ಕರಡಿ : ಹಿಮಾಲಯದ ಕರಡಿಯೆಂದೂ ಕರೆಯಲಾಗುವ ಇದು ಬಲೂಚಿಸ್ತಾನ, ಹಿಮಾಲಯ, ಚೀನ, ಜಪಾನ್ ಮತ್ತು ಕೊರಿಯ ದೇಶಗಳ ಕಾಡುಗಳಲ್ಲೆಲ್ಲ ಹರಡಿದೆ. ಸೆಲೆನಾರ್ಕ್ಟಸ್ ತಿಬೆಟಾನಸ್ ಎಂಬುದು ಇದರ ವೈಜ್ಞಾನಿಕ ನಾಮ. ಇದು ಸುಮಾರು 1.6 ಮೀ. ಉದ್ದವುಳ್ಳದ್ದೂ ಸುಮಾರು 120 ಕಿ ಗ್ರಾಂ. ತೂಕವುಳ್ಳದ್ದೂ ಆಗಿದೆ. ಇದರ ಬಣ್ಣ ಕಪ್ಪು. ಎದೆಯ ಮೇಲೆ ಅರ್ಧ ಚಂದ್ರಾಕೃತಿಯ ಬಿಳಿಯ ಅಥವಾ ಮಾಸಲು ಹಳದಿ ಬಣ್ಣದ ಮಚ್ಚೆ ಇದೆ. ಉಳಿದ ಜಾತಿಯ ಕರಡಿಗಳಿಗಿಂತ ಹೆಚ್ಚು ಅಪಾಯಕಾರಿ ಹಾಗೂ ಆಕ್ರಮಣಕಾರಿ. ವನ್ಯ ಪ್ರಾಣಿಗಳನ್ನಲ್ಲದೆ ಕುರಿ, ಮೇಕೆ, ದನಕರು ಮುಂತಾದ ಸಾಕುಪ್ರಾಣಿಗಳನ್ನೂ ಕೊಂದು ತಿನ್ನುವುದೆಂದು ಹೇಳುತ್ತಾರೆ. ಇದರ ಮಾಂಸದಲ್ಲಿ ಔಷಧೀಯ ಗುಣಗಳಿವೆಯೆಂದು ಚೀನೀಯರು ನಂಬುತ್ತಾರೆ.

4 ಬಿಸಿಲು ಕರಡಿ (ಸನ್ ಬೇರ್) : ಬರ್ಮ, ಮಲಯ, ಸುಮಾತ್ರ, ಬೋರ್ನಿಯೊಗಳ ಗುಡ್ಡಗಾಡುಗಳಲ್ಲಿ ಕಾಣಬರುವ ಇದರ ಶಾಸ್ತ್ರೀಯ ನಾಮ ಹೆಲಾರ್ಕ್ಟಸ್ ಮಲಯಾನಸ್. ಕರಡಿಗಳಲ್ಲೆಲ್ಲ ಅತ್ಯಂತ ಚಿಕ್ಕದು ; 1.1–1.4 ಮೀ. ಉದ್ದವಿದ್ದು ಸುಮಾರು 27–65 ಕಿ ಗ್ರಾಂ. ಭಾರವಿದೆ. ಬಣ್ಣ ಕಪ್ಪು, ಎದೆಯ ಮೇಲೆ ಕಿತ್ತಳೆ ಅಥವಾ ಬಿಳಿಯ ಮಚ್ಚೆಯಿದೆ. ಮೂತಿ ಬೂದು ಬಣ್ಣದ್ದು ತುಂಬ ಚೆನ್ನಾಗಿ ಮರ ಹತ್ತಬಲ್ಲ ಇದರ ವಾಸ ಬಹುಪಾಲು ಮರದ ಮೇಲೆಯೇ



ಮಲಯದ ಬಿಸಿಲು ಕರಡಿ

ಬಹಳ ಬುದ್ಧಿವಂತ ಪ್ರಾಣಿಯೆಂದು ಹೆಸರಾಗಿದೆ. ಈ ಕರಡಿಯ ಮರಿಗಳನ್ನು ಮಾತ್ರ ಪಳಗಿಸಬಹುದು.

5 ಭಾರತದ ಕರಡಿ (ಸ್ಲಾತ್ ಬೇರ್): ಭಾರತ ಮತ್ತು ಸಿಂಹಳ ದೇಶಗಳು ಇದರ ತವರು. ಇದರ ವೈಜ್ಞಾನಿಕ ನಾಮ ಮೆಲರ್ಸಸ್ ಅರ್ಸಿನಸ್. ಜೇನು ಕರಡಿ ಎಂದೂ

ಕರೆಯುತ್ತಾರೆ. ಸಾಮಾನ್ಯವಾಗಿ ಗುಡ್ಡಗಾಡುಗಳಲ್ಲಿ ವಾಸಿಸುತ್ತದೆ. ಸುಮಾರು 1.4—1.8 ಮೀ. ಉದ್ದ, 55—136 ಕಿ.ಗ್ರಾಂ.—ಭಾರ ಇದೆ. ದೇಹದ ಬಣ್ಣ



ಭಾರತದ ಕರಡಿ (ಜೇನ ಕರಡಿ)

ಕಪ್ಪು. ಎದೆಯ ಮೇಲೆ V ಅಥವಾ Y ಆಕಾರದ ಬಿಳಿಯ ಮಚ್ಚೆಯಿದೆ. ಇದರ ಮೂತಿ ಬಹಳ ಉದ್ದ. ತುಟಿಗಳು ಸರಾಗವಾಗಿ ಅಡ್ಡಡ್ಡವಾಗಿ ಚಲಿಸಬಲ್ಲುವು. ಮೂಗಿನ ಹೊಳ್ಳೆಗಳನ್ನು ಬೇಕೆನಿಸಿದಾಗ ಮುಚ್ಚಿಕೊಳ್ಳಬಲ್ಲುದು. ಬಾಚಿಹಲ್ಲುಗಳಿಲ್ಲ. ಗೆದ್ದಲುಗಳನ್ನು ಹಿಡಿದು ತಿನ್ನಲು ಇವೆಲ್ಲ ಲಕ್ಷಣಗಳನ್ನು ಚೆನ್ನಾಗಿ ಉಪಯೋಗಿಸಿಕೊಳ್ಳುತ್ತದೆ. ಹುತ್ತವನ್ನು ಕೆಡವಿ, ಮಣ್ಣನ್ನೂ ಕೊಳೆಯನ್ನೂ ಊದಿ ಹಾರಿಸಿ, ಮೂತಿಯನ್ನು ಕೊಳವೆಯಂತೆ ಮಾಡಿಕೊಂಡು ಹುಳುಗಳನ್ನು ಬಾಯೊಳಕ್ಕೆ ಎಳೆದುಕೊಳ್ಳುತ್ತದೆ. ಜೇನು ಕಂಡರೂ ಇದಕ್ಕೆ ಬಲು ಇಷ್ಟ. ಜೇನುಗೂಡನ್ನು ಹುಡುಕಿಕೊಂಡು ಹಲವಾರು ಮೈಲಿಗಳು ಅಲೆಯುವುದುಂಟು. ಈ ಕರಡಿಯನ್ನು ಪಳಗಿಸಿ ಸಾಕಬಹುದಲ್ಲದೆ ಇದಕ್ಕೆ ಹಲವಾರು ಆಟಗಳನ್ನು ಕಲಿಸಬಹುದು.

6 ಮಚ್ಚೆ ಕರಡಿ : ದಕ್ಷಿಣ ಅಮೆರಿಕದ ವೆನಿಜ್ವೇಲ, ಕೊಲಂಬಿಯ, ಎಕ್ವಡಾರ್, ಪೆರು, ಬೊಲೀವಿಯ ಮುಂತಾದ ಪ್ರದೇಶಗಳ ನಿವಾಸಿ. ಶಾಸ್ತ್ರೀಯವಾಗಿ ಇದನ್ನು ಟ್ರೆಮಾರ್ಕ್ಟಸ್ ಆರ್ನೇಟಸ್ ಎಂದು ಕರೆಯುತ್ತಾರೆ. ಇದರ ಉದ್ದ ಸುಮಾರು 1.5—1.8 ಮೀ ; ತೂಕ ಸುಮಾರು 70 ಕಿ.ಗ್ರಾಂ. ಕಣ್ಣುಗಳ ಸುತ್ತ ಕನ್ನಡಕದ ಆಕೃತಿಯ ಬಿಳಿಯ ಮಚ್ಚೆಯಿರುವುದು ಇದರ ವಿಶಿಷ್ಟ ಲಕ್ಷಣ.

7 ಶೀತವಲಯದ ಕರಡಿ (ಪೋಲಾರ್ ಬೇರ್) : ಥಲಾರ್ಕ್ಟಸ್ ಮ್ಯಾರಿಟಿಮಸ್ ಎಂಬ ಶಾಸ್ತ್ರೀಯ ಹೆಸರಿನ ಈ ಕರಡಿ ಉತ್ತರ ಶೀತವಲಯದಲ್ಲಿ ಹೇರಳವಾಗಿದೆ. ಹಿಮಕರಡಿ ಇದರ ಪರ್ಯಾಯ ನಾಮ. ಅಚ್ಚ ಬಿಳಿಯ ಬಣ್ಣ, ನೀಳವಾದ ಕುತ್ತಿಗೆ, ದೇಹದ ಗಾತ್ರಕ್ಕೆ ಹೋಲಿಸಿದರೆ ಚಿಕ್ಕದಾಗಿರುವ ತಲೆ, ರೋಮ ಪೂರಿತ ಅಂಗಾಲು—ಇವು ಇದರ ಮುಖ್ಯ ಲಕ್ಷಣಗಳು. ಇದು ಸುಮಾರು 2.2—2.5 ಮೀ. ಉದ್ದ ಹಾಗೂ 720 ಕಿ.ಗ್ರಾಂ. ಭಾರ ಇದೆ. ಕರಡಿಗಳಲ್ಲೆಲ್ಲ ಅತ್ಯಂತ ಹೆಚ್ಚಿನ ಅಲೆಮಾರಿ ಪ್ರಾಣಿ ಇದು. ನೆಲದ ಮೇಲೆ ವೇಗವಾಗಿ ಚಲಿಸಬಲ್ಲುದಲ್ಲದೆ ನೀರಿನಲ್ಲೂ ಸರಾಗವಾಗಿ ಈಜಬಲ್ಲುದು. ಮೀನು, ಸೀಲ್‌ಪ್ರಾಣಿ, ಸಾಗರದ ವಿವಿಧ ಬಗೆಯ ಹಕ್ಕಿಗಳು, ಹಿಮಸಾರಂಗ ಮುಂತಾದುವು ಇದರ ಪ್ರಧಾನ ಆಹಾರ. ಹಣ್ಣು, ಎಲೆ ಇತ್ಯಾದಿ ತಿನ್ನುವ ರೂಢಿಯೂ ಉಂಟು. ಇದರ ಚರ್ಮಕ್ಕಾಗಿ ಮತ್ತು ರುಚಿಕರವಾದ ಮಾಂಸಕ್ಕಾಗಿ ಎಸ್ಕಿಮೋ ಜನ ಇದನ್ನು ಬೇಟೆಯಾಡುತ್ತಾರೆ. ಆದರೆ ಇದರ ಯಕೃತ್ತಿನಲ್ಲಿ ಅತ್ಯಧಿಕ ಪ್ರಮಾಣದಲ್ಲಿ ಎ ಜೀವಾತು ಇರುವುದರಿಂದ ಇದು ವಿಷಪೂರಿತವೆಂದು ಹೇಳುತ್ತಾರೆ. (ಎಸ್.ಎಚ್.ಎ.)

**ಕರಡಿಗೆ :** ವೀರಶೈವರು ಇಷ್ಟಲಿಂಗವನ್ನು ಇಡುವ ಸಂಪುಟ. ಲಿಂಗಸಜ್ಜಿಕೆ ಎಂದೂ ಹೆಸರು. ಇದನ್ನು ಶಿವಾಲಯ ಎಂದು ಕರೆಯಲಾಗಿದೆ. ಇದನ್ನು ಚಿನ್ನ, ಬೆಳ್ಳಿ, ಹಿತ್ತಾಳೆ, ತಾಮ್ರ ಅಥವಾ ಶ್ರೀಗಂಧದ ಮರದಿಂದಲೂ ಮಾಡುತ್ತಾರೆ. ನೂಲಿನ ಹಣಿಕೆಯ ಸಂಪುಟಕ್ಕೆ ಕಾಂತಿಕೂಡಿಸಿರುವ ಪುರಾತನ ಕರಡಿಗೆಗಳೂ ಉಂಟು. ಕಂಚು, ಕಬ್ಬಿಣಗಳಲ್ಲಿ ಕರಡಿಗೆಯನ್ನು ಮಾಡಬಾರದೆಂಬ ನಿಷೇಧವಿದೆ.

ವೀರಶೈವರು ಕರಡಿಗೆಗೆ ದಾರವನ್ನು ಪೋಣಿಸಿ ಧರಿಸುತ್ತಾರೆ. ಈ ದಾರಕ್ಕೆ ಶಿವಸೂತ್ರ, ಶಿವದಾರ ಮುಂತಾದ ಹೆಸರುಗಳಿವೆ. ದಾರವನ್ನು ರೇಷ್ಮೆ, ಹತ್ತಿನೂಲು ಮೊದಲಾದುವುಗಳಿಂದ ಮಾಡುತ್ತಾರೆ.

ಶಿವದಾರವನ್ನು 36 ಅಥವಾ 63 ಎಳೆಗಳಿಂದ ಸಿದ್ಧಪಡಿಸಬೇಕು. ಜ್ಞಾನ ಮತ್ತು ಕರ್ಮಗಳಿಂದ ಕೂಡಿದ ಗುರು-ಲಿಂಗ-ಜಂಗಮ ತತ್ತ್ವಗಳನ್ನು ಷಟ್‌ಸ್ಥಳಗಳಿಂದ ಗುಣಿಸಿದಲ್ಲಿ 36 ತತ್ತ್ವಗಳಾಗುತ್ತವೆ. ಈ ಮೂವತ್ತಾರು ಎಂಬ ಸಂಖ್ಯೆ ಶಿವತತ್ತ್ವ ಮೊದಲು ಪೃಥಿವೀ ತತ್ತ್ವದವರೆಗಿನ 36 ತತ್ತ್ವಗಳಿಗೂ ಸಂಕೇತ. 63 ಎಳೆಗಳು ಎಂಬುದು ವೀರಶೈವರಿಗೆ ಪೂಜ್ಯರಾದ 63 ಮಂದಿ ಪುರಾತನ ಶಿವಭಕ್ತರ ಸವಿನೆನಪಿಗಾಗಿ.

ಕರಡಿಗೆ ಶಿಥಿಲವಾಗಿರಬಾರದು, ದಾರ ಹರಿದಿರಬಾರದು, ಲಿಂಗ ಕಳೆದುಹೋದರೆ ಪ್ರಾಣವನ್ನೇ ಬಿಡಬೇಕು—ಎಂಬುದು ವಿಧಿ. (ಎಂ.ಜಿ.ಎನ್.)

**ಕರಡಿ ಮಜಲು :** ಕರಡಿ ಹಾಗೂ ಅದರ ಸಹವಾದ್ಯ ಡೊಳ್ಳುಗಳೆರಡೂ ಚರ್ಮವಾದ್ಯಗಳೇ. ಒಂದು ಕರಡಿಗೆ ಎರಡು ಡೊಳ್ಳು, ಒಂದು ಜೊತೆ ತಾಳಗಳು ಸಹವಾದ್ಯಗಳಾಗಿವೆ.

ಚಿಗರೆ ಅಥವಾ ಆಡಿನ ಚರ್ಮದಿಂದ ಮಾಡಿದ ಕರಡಿ ಎರಡು ಗುಣಿಗಳಿಂದ ಬಾರಿಸುವ ವಾದ್ಯ. ಎತ್ತಿನ ಅಥವಾ ಕೋಣನ ಚರ್ಮದಿಂದ ಮಾಡಿದ ಡೊಳ್ಳು ಒಂದೇ ಗುಣಿಯಿಂದ ಬಾರಿಸುವ ವಾದ್ಯವಾದರೂ ಅದಕ್ಕೆ ಎಡಗೈ ಸಹಾಯಕವಾಗುತ್ತದೆ.



ಕಮಾನುಕಂಟಿಯ ನಿಲುವಂಗಿಯನ್ನು ತೊಟ್ಟು, ಕರಡಿಯನ್ನು ನಡುವಿಗೆ ಕಟ್ಟಿಕೊಂಡಾತ ಮಧ್ಯದಲ್ಲಿ, ಬಗಲುಗಸೆಯ ಅಂಗಿತೊಟ್ಟು, ಡೊಳ್ಳುಗಳನ್ನು ಹೆಗಲಿಗೆ ನೇತುಹಾಕಿಕೊಂಡು ಬಾರಿಸುವವರು ಕರಡಿಯವನ ಎಡಬಲಗಳಲ್ಲಿ ನಿಂತಿರುತ್ತಾರೆ. ತಾಳ ಬಾರಿಸುವವನೂ ಕರಡಿಯವನ ಹತ್ತಿರದಲ್ಲೇ ನಿಂತಿರುತ್ತಾನೆ.

ಕರಡಿವಾದನಕ್ಕೆ ಪೂರಕವಾಗಿ ಶ್ರುತಿ, ಸನಾದಿಗಳೆಂಬ ಊದುವಾದ್ಯಗಳಿರುತ್ತವೆ. ಒಬ್ಬ ಶ್ರುತಿಹಿಡಿದರೆ, ಇನ್ನೊಬ್ಬ ಸನಾದಿಯಲ್ಲಿ ರಾಗಾಲಾಪಗಳನ್ನು ನುಡಿಸುತ್ತಾನೆ. ಆ ತಾಳವನ್ನು ಅನುಸರಿಸಿ ಕರಡಿಡೊಳ್ಳಿನವರು ಬಾರಿಸುವರು. ಅದು ಕೇಳುವುದಕ್ಕೆ ಕರಡಿ ಗುಡುಗು ಹಾಕಿದಂತಿರುತ್ತದೆ.

ಸನಾದಿಯುವ ಕರಡಿಯುವನ ಎದುರಿಗೆ ನಿಂತು, ಶ್ರುತಿಗನುಸರಿಸಿ ರಾಗಾಲಾಪನೆ ಮಾಡಿ ದೀರ್ಘ ಪಲ್ಲವಿಯ ಒಂದು ಮಟ್ಟವನ್ನು ಊದುತ್ತಾನೆ. ಉದಾಹರಣೆಗೆ :

ಶರಣು ಶ್ರೀ ಗುರುವರ, ಮರಣರಹಿತಕರ. ಕರುಣಾಕರಗೆ ದೇವಗೆ

ಮಾತ್ರೆಗಳನ್ನು ಎಣಿಸಿಕೊಂಡು ಕರಡಿಯುವ ವೀರಗಾಲು ಹೊಡೆದು, ಮೂರು ಮುಕ್ತಾಯಗಳನ್ನು ಹಾಕಿ ಮುಗಿಸುವುದಕ್ಕೂ ಸನಾದಿಯುವನ ಕಡೆಯ ಮಾತ್ರೆಯ ಪೆಟ್ಟಿಗೂ ಮೇಳಯಿಸಿತೆಂದರೆ, ಡೊಳ್ಳು, ತಾಳಿನವರು ಸಂದರ್ಭಕ್ಕೆ ತಕ್ಕ ಗತ್ತು ಬಾರಿಸುತ್ತ ಕುಣಿದಾಡುವರು. ಸನಾದಿಯವ ದ್ವಿಗುಣದಲ್ಲಿ ನುಡಿಸುವಂತೆ ಕರಡಿ, ಡೊಳ್ಳಿನವರನ್ನು ಪ್ರೇರಿಸಿದಾಗಲಂತೂ ಅವರೆಲ್ಲರ ಉತ್ಸಾಹ, ಕುಣಿತ, ಕೇಕೆ ಪ್ರೇಕ್ಷಕರ ಮೈತುಂಬಿಸುವುವು. ಆಗ ಕೊನೆಯ ಹಂತದಲ್ಲಿ ಬಂದ ಗತ್ತು ಕೊನೆಗೊಳ್ಳುವುದು. ಆಮೇಲೆ ಮತ್ತೊಂದು.

ಗ್ರಾಮದ ಆಯಕಟ್ಟಿನ ಸ್ಥಳದಲ್ಲಿ ಮಜಲಿನವರು ಬಯಲುಗತ್ತು ಎಂಬ ವಿಶಿಷ್ಟ ಗತ್ತನ್ನು ಬಾರಿಸುವರು. ಅಲ್ಲಿ ಲಾವಣಿಕಾರ ಬಯಲು ಲಾವಣಿಯನ್ನು ಹಾಡಿ, ಮೇಲೊಂದು 'ಸಖಿ' ಹೇಳುತ್ತಾನೆ. ಲಾವಣಿಕಾರ ಕಾಲಲ್ಲಿ ಗೆಜ್ಜೆ ಕಟ್ಟಿ, ಕೈಯಲ್ಲಿ ತಾಳಹಾಕುತ್ತ, ಬಾಯಲ್ಲಿ ಲಾವಣಿ ಹೇಳುತ್ತ ಕುಣಿಯುವ ಸಂದರ್ಭ ಉತ್ಸಾಹದಾಯಕವಾಗಿರುತ್ತದೆ.

ನೀರಜಾಕ್ಷಿ ಬಾರನ್ಯಾತಕೆ ಪ್ರಿಯ । ಕರೆತಾರೆ ಮುಗಿಯುವೆನು ಕೈಯ ॥

ಇಂಥ ಒಂದು ಸಖಿಯ ಮಟ್ಟವನ್ನೇ ಸನಾದಿಯವ ಸ್ವೀಕರಿಸಿ ನುಡಿಸತೊಡಗಲು, ಡೊಳ್ಳಿನವರು ಜಿಗಿದು ನಿಂತು ಮುಕ್ತಾಯ ಹಾಕಿದಾಗ ನೆರೆದವರೆಲ್ಲ ಭಲೆ—ಎಂದು ಉದ್ಗರಿಸದೆ ಇರಲಾರರು.

ಕನ್ನಡನಾಡಿನ ವಾದ್ಯವಿಶೇಷಗಳಾದ ಚೌಡಿಕೆ—ಊಡಕಗಳಂತೆ ಕರಡಿವಾದ್ಯವೂ ಪ್ರಾಣವನ್ನು ಚೇತರಿಸಿ, ಉತ್ಸಾಹಶಕ್ತಿಯನ್ನು ಜಾಗ್ರತಗೊಳಿಸುವಂಥ ಗಂಡುಗಾಡಿಯಾಗಿದೆ. (ಎಸ್.ಎಲ್.)

**ಕರಡು ತಿದ್ದುವಿಕೆ :** ಮುದ್ರಣಾಲಯದಲ್ಲಿ ಒಂದು ವಿಷಯವನ್ನು ಅದರ ಮೂಲಪ್ರತಿಗೆ ಸರಿಹೊಂದುವಂತೆ ಮೊಳೆ ಜೋಡಿಸಿ ಕರಡಚ್ಚನ್ನು ಸಿದ್ಧಪಡಿಸಿದ ತರುವಾಯ ಕರಡಚ್ಚಿನಲ್ಲಿ ಉಳಿದಿರಬಹುದಾದ ದೋಷಗಳ ಪರಿಶೀಲನೆ ಹಾಗೂ ಕ್ರಮಬದ್ಧ ತಿದ್ದುವಿಕೆ (ಪ್ರೂಫ್ ರೀಡಿಂಗ್). ಕರಡಚ್ಚಿನಲ್ಲಿ ದೋಷಗಳು ಉಳಿದಿರುವುದು ತೀರ ಸಹಜ. ಇವುಗಳಲ್ಲಿ ಸ್ಥೂಲವಾಗಿ ಎರಡು ವಿಭಾಗಗಳಿವೆ. ಅಚ್ಚು ಮೊಳೆಗಳಿಗೆ (ಎಂದರೆ ಮುದ್ರಣಾಲಯಕ್ಕೆ) ಸಂಬಂಧಿಸಿದವು ; ವಿಷಯಕ್ಕೆ (ಎಂದರೆ ಮೂಲಪ್ರತಿಗೆ) ಸಂಬಂಧಿಸಿದವು. ಕರಡು ತಿದ್ದುವವರು ಇವೆರಡನ್ನೂ ಲಕ್ಷ್ಯದಲ್ಲಿಟ್ಟುಕೊಂಡು ಗೊತ್ತಾದ ವಿಧಿನಿಯಮಾನುಸಾರ ತಮ್ಮ ಕಾರ್ಯವನ್ನು ನಡೆಸಬೇಕು.

ಅಚ್ಚುಮೊಳೆಗಳಿಗೆ ಸಂಬಂಧಿಸಿದ ಕೆಲವು ಮುಖ್ಯ ದೋಷಗಳು : 1 ಅಕ್ಷರಗಳು ತಲೆಕೆಳಗಾಗುವುದು. 2 ಅಕ್ಷರಗಳು ಸ್ಥಾನಪಲ್ಲಟಗೊಂಡಿರುವುದು. 3 ಅಕ್ಷರಗಳ ಮೊಳೆಗಳ ಅಳತೆಗಳಲ್ಲಿ ವ್ಯತ್ಯಾಸ. 4 ಅಕ್ಷರಗಳು ಇಲ್ಲದಿರುವಿಕೆ. 5 ತಪ್ಪು ಅಕ್ಷರಗಳು. 6 ಒಡೆದ ಮೊಳೆಗಳು ಸೇರಿಕೊಂಡಿರುವುದು. 7 ಎರಡು ಅನುಕ್ರಮ ಪದಗಳ, ಪಂಕ್ತಿಗಳ, ಪರಿಚ್ಛೇದಗಳ ನಡುವೆ ಸಾಕಷ್ಟು ಜಾಗ ಬಿಟ್ಟಿಲ್ಲದಿರುವುದು ಅಥವಾ ಅತಿ ಜಾಗ ಬಿಟ್ಟಿರುವುದು. 8 ಪಂಕ್ತಿಯ ಕೊನೆಯಲ್ಲಿ ಪದವಿಭಜನೆ ಅಸಮರ್ಪಕವಾಗಿರುವುದು. 9 ಪಂಕ್ತಿಗಳು, ಅಂಚುಗಳು, ಪರಿಚ್ಛೇದ ಪ್ರಾರಂಭದ ಅಂಚುಗಳು ನೇರವಾಗಿಲ್ಲದಿರುವುದು. 10 ಸಂಖ್ಯೆಗಳು, ಚಿಹ್ನೆಗಳು, ಕೋಷ್ಟಕಗಳು, ಚಿತ್ರಗಳು, ಅಡಿಟಿಪ್ಪಣಿಗಳು, ಸಮೀಪಕರಣಗಳು ಮುಂತಾದುವುಗಳಲ್ಲಿ ತಲೆದೋರಿರುವ ವಿಶಿಷ್ಟ ಬಗೆಯ ದೋಷಗಳು.

ವಿಷಯಕ್ಕೆ ಸಂಬಂಧಿಸಿದ ಕೆಲವು ಮುಖ್ಯ ದೋಷಗಳು : 1 ಅಕ್ಷರಗಳಲ್ಲಿ ಅಸ್ಪಷ್ಟತೆ, ಸಂದಿಗ್ಧತೆ ಮತ್ತು ತಪ್ಪುಗಳು. 2 ವಾಕ್ಯರಚನೆಗಳಲ್ಲಿ ಅರ್ಥ ದೋಷ, ವ್ಯಾಕರಣ ದೋಷ ಇತ್ಯಾದಿ. 3 ಶೈಲಿಯಲ್ಲಿಯೂ ಸಂಕೇತಗಳ ಮತ್ತು ಚಿಹ್ನೆಗಳ ಬಳಕೆಯಲ್ಲಿಯೂ ಸಮರೂಪತೆ ಇಲ್ಲದಿರುವಿಕೆ. ಒಂದು ಮೂಲಪ್ರತಿಯನ್ನು ಮುದ್ರಣಾಲಯಕ್ಕೆ ಕೊಡುವ ಮೊದಲು ಇವೆಲ್ಲ ಸ್ಖಾಲಿತ್ಯಗಳನ್ನು ಪರಿಹರಿಸಬೇಕು. ಆದರೆ ವಾಸ್ತವಿಕ ಪರಿಸ್ಥಿತಿಯಲ್ಲಿ ಹೀಗೆ ನಡೆಯುವುದಿಲ್ಲ. ಆದ್ದರಿಂದ ತತ್ಸಂಬಂಧ ದೋಷಗಳು ಕರಡಚ್ಚಿನಲ್ಲಿ ಕಂಡುಬರುತ್ತವೆ.

**ತಿದ್ದುವಿಕೆಯ ವಿಧಿಗಳು :** ಕರಡಚ್ಚಿನಿಂದ ಮೊದಲಸಾರಿ ತೆಗೆಯುವ ಮುದ್ರಣದ ಹೆಸರು ಗ್ಯಾಲಿ ಕರಡುಪ್ರತಿ. ಇದನ್ನು ಮೂಲಪ್ರತಿ ಸಮೇತ ಮುದ್ರಣಾಲಯದ ಕರಡುಪ್ರತಿ ತಿದ್ದುವ ವಿಭಾಗಕ್ಕೆ ಕಳಿಸಲಾಗುವುದು. ಅಲ್ಲಿ ಇಬ್ಬರು ಸಹಕರಿಸಿ ಈ ಕೆಲಸವನ್ನು ಮಾಡುತ್ತಾರೆ. ಒಬ್ಬ ಮೂಲಪ್ರತಿಯನ್ನು ಸಾವಧಾನವಾಗಿ, ಅಕ್ಷರ ಅಕ್ಷರ ಬಿಡಿಸಿ ಪ್ರತಿಯೊಂದು ಚಿಹ್ನೆ ಸಂಕೇತವನ್ನೂ ವಿವರವಾಗಿ ಓದಿ ಹೇಳುತ್ತಾನೆ. ಇನ್ನೊಬ್ಬ ಇದರ ಸಂವಾದಿಯಾಗಿ ಕರಡಚ್ಚಿನಲ್ಲಿ ಎಲ್ಲವೂ ಸರಿಯಾಗಿ ಬಂದಿವೆಯೋ ಎಂದು ಸೂಕ್ಷ್ಮವಾಗಿ ಕಣ್ಣಾಡಿಸುತ್ತಾ ಮುಂದುವರಿಸುತ್ತಾನೆ. ದೋಷ ಬಂದಿರುವಲ್ಲೆಲ್ಲ ಅದನ್ನು ತಿದ್ದುವ ಹೊಣೆಯೂ ಇವನದೇ. ಕರಡಿನ ಎಡ ಮತ್ತು

| ಗುರುತು | ಅರ್ಥ |
|---|---|
| ẟ/ | ಹೊರತೆಗೆ |
| (ẟ)/ | ಹೊರತೆಗೆ ಮತ್ತು ಬಿಟ್ಟ ಜಾಗವನ್ನು ಹೊಂದಿಸು |
| ;⋏ | ಅರ್ಧವಿರಾಮ ಸೇರಿಸು |
| ;/ | ಇರುವ ಚಿಹ್ನೆಯನ್ನು ತೆಗೆದು ಅರ್ಧವಿರಾಮ ಸೇರಿಸು |
| ⊙ | ಪೂರ್ಣವಿರಾಮ ಸೇರಿಸು |
| ⊘ | ವಿವರಣ ವಿರಾಮ ಸೇರಿಸು |
| ?⋏ | ಪ್ರಶ್ನಾರ್ಥಕ ಚಿಹ್ನೆಯನ್ನು ಸೇರಿಸು |
| (/) | ಆವರಣ ಚಿಹ್ನೆಯನ್ನು ಸೇರಿಸು |
| [/] | ಕಂಸ ಚಿಹ್ನೆಯನ್ನು ಸೇರಿಸು |
| -/ | ಕೂಡುಗೆರೆ ಸೇರಿಸು |
| en/ | ಎನ್ ಅಳತೆಯ ಗೆರೆಪಟ್ಟಿ ಸೇರಿಸು |
| em/ | ಎಮ್ ಅಳತೆಯ ಗೆರೆಪಟ್ಟಿ ಸೇರಿಸು |
| 2 em/ | ಎರಡು ಎಮ್ ಅಳತೆಯ ಗೆರೆಪಟ್ಟಿ ಸೇರಿಸು |
| □⋏ | ಒಂದು ಎಮ್ ಸ್ಥಳ ಬಿಡು |
| □□⋏ | ಎರಡು ಎಮ್ ಸ್ಥಳ ಬಿಡು |
| ⌐ | ಎಡಕ್ಕೆ ಸರಿಸು |
| ¬ | ಬಲಕ್ಕೆ ಸರಿಸು |
| ⊏ | ಪಂಕ್ತಿಯನ್ನು ಎಡಕ್ಕೆ ಸರಿಸು |
| ⊐ | ಪಂಕ್ತಿಯನ್ನು ಬಲಕ್ಕೆ ಸರಿಸು |
| [ ] | ಗುರುತಿಸಿರುವ ಭಾಗದಲ್ಲಿ ಪಂಕ್ತಿಯನ್ನು ಅಳವಡಿಸು |
| take over | ಮುಂದಿನ ಪಂಕ್ತಿಗೆ ವರ್ಗಾಯಿಸು |
| take back | ಹಿಂದಿನ ಪಂಕ್ತಿಗೆ ವರ್ಗಾಯಿಸು |
| ↑ | ಸೂಚಿಸಿರುವ ಭಾಗಕ್ಕೆ ಎತ್ತು |
| ↓ | ಸೂಚಿಸಿರುವ ಭಾಗಕ್ಕೆ ಇಳಿಸು |
| ‖ | ಹಿಂದುಮುಂದಿರುವ ಪಂಕ್ತಿಗಳನ್ನು ಸರಿಪಡಿಸು |
| ═ | ಡೊಂಕಾಗಿರುವ ಪಂಕ್ತಿಗಳನ್ನು ಸರಿಪಡಿಸು |
| ⊥ | ಎದ್ದಿರುವ ತೆರಪನ್ನು ಕೆಳಕ್ಕೆ ತಳ್ಳು |
| n.p. | ಹೊಸಪರಿಚ್ಛೇದವನ್ನು ಪ್ರಾರಂಭಿಸು |
| run on | ಮುಂದುವರಿಸು |
| spell out | ಸಂಕೇತಾಕ್ಷರಗಳ ವಿವರಣೆ ಕೊಡು |
| out, see copy | ಬಿಟ್ಟುಹೋಗಿರುವ ಭಾಗವನ್ನು ಸೇರಿಸು |

| | |
|---|---|
| let. # | ಅಕ್ಷರಗಳ ಮಧ್ಯೆ ತೆರಪು ಕೊಡು |
| Stet | ಹಾಗೆಯೆ ಇರಲಿ |
| Caps | ದೊಡ್ಡ ಅಕ್ಷರಗಳಿಗೆ ಬದಲಾಯಿಸು |
| S.C | ಪುಟ್ಟ ದೊಡ್ಡ ಅಕ್ಷರಗಳಿಗೆ ಬದಲಾಯಿಸು |
| Caps & s.c. | ಮೊದಲ ಅಕ್ಷರವನ್ನು ದೊಡ್ಡ ಅಕ್ಷರಕ್ಕೂ ಉಳಿದ ಅಕ್ಷರಗಳನ್ನು ಪುಟ್ಟ ದೊಡ್ಡ ಅಕ್ಷರಗಳಿಗೂ ಬದಲಾಯಿಸು |
| l.c. | ಕೆಳಕಟ್ಟೆಯ ಅಕ್ಷರಗಳಿಗೆ ಬದಲಾಯಿಸು |
| Italic | ಓರೆ ಅಕ್ಷರಗಳಿಗೆ ಬದಲಾಯಿಸು |
| bold | ದಪ್ಪ ಕಪ್ಪುಗೆರೆಯ ಅಕ್ಷರಗಳಿಗೆ ಬದಲಾಯಿಸು |
| rom. | ರೋಮನ್ ಅಕ್ಷರಗಳಿಗೆ ಬದಲಾಯಿಸು |
| w.f. | ಬೇರೆ ಜಾತಿಯ ಅಕ್ಷರ ತೆಗೆದು ಸ್ವಜಾತಿಯ ಅಕ್ಷರ ಸೇರಿಸು |
| 9 | ತಲೆಕೆಳಗಾಗಿರುವ ಅಕ್ಷರವನ್ನು ಸರಿಪಡಿಸು |
| x | ಒಡೆದುಹೋಗಿರುವ ಅಕ್ಷರ ಬದಲಾಯಿಸು |
| ⁀‿ | ಬಿಟ್ಟಿರುವ ಸ್ಥಳವನ್ನು ಸೇರಿಸು |
| trs | ಸ್ಥಳಾಂತರಿಸು |
| centre | ಪಂಕ್ತಿಯ ಮಧ್ಯಕ್ಕೆ ಅಳವಡಿಸು |
| ’/ | ಷಷ್ಠೀ ವಿಭಕ್ತಿಯ ಚಿಹ್ನೆಯನ್ನು ಸೇರಿಸು |
| ‘/ ’/ | ಒಂದು ಉದ್ಧರಣ ಚಿಹ್ನೆಯನ್ನು ಸೇರಿಸು |
| “/ ”/ | ಎರಡು ಉದ್ಧರಣ ಚಿಹ್ನೆಯನ್ನು ಸೇರಿಸು |
| ⋎ | ಮೇಲಿನ ಅಂಕಿ (Superior Figure) ಸೂಚಿಸುವ ಚಿಹ್ನೆ |
| ⋏ | ಕೆಳಗಿನ ಅಂಕಿ (Inferior Figure) ಸೂಚಿಸುವ ಚಿಹ್ನೆ |
| ....⋏ | ದೃಷ್ಟಿ ಸಹಾಯಕವಾದ ಬಿಂದುಗಳ ಸಾಲನ್ನು ಸೇರಿಸು |
| (...) | ಬಿಂದುಗಳ ಅಚ್ಚಿನ ಮೊಳೆ ಸೇರಿಸು |
| (/) | ಮೇಲು ಕೆಳಗೀಟನ್ನು ಸೇರಿಸು |
| (?) | ಅನುಮಾನವಿದ್ದೆಡೆ ಸಂಬಂಧಿಸಿದವರ ಗಮನಕ್ಕೆ ತರು |
| # | ಹೊರತೆಗೆ ಮತ್ತು ಸ್ಥಳಬಿಡು |
| # | ತೆರಪುಕೊಡು |
| # > | ಪಂಕ್ತಿಗಳ ಮಧ್ಯೆ ಅಥವಾ ಪರಿಚ್ಛೇದಗಳ ಮಧ್ಯೆ ತೆರಪುಕೊಡು |
| eq # | ಸಮನಾದ ತೆರಪುಕೊಡು |
| less # | ತೆರಪನ್ನು ಕಡಿಮೆಮಾಡು |

ಬಲ ಅಂಚುಗಳಲ್ಲಿರುವ ಖಾಲಿ ಸ್ಥಳಗಳಲ್ಲಿ ಆಯಾ ಪಂಕ್ತಿಯ ಪಕ್ಕದಲ್ಲಿ ತಪ್ಪುಗಳು ಬಂದಿರುವ ಕ್ರಮದಲ್ಲಿ ನಿರ್ದಿಷ್ಟ ಶಿಷ್ಟೀಕೃತಸಂಕೇತಗಳ ನೆರವಿನಿಂದ ತಪ್ಪುಗಳನ್ನು ಗುರುತಿಸಬೇಕು ಹಾಗೂ ಸರಿಯಾದ ಅಕ್ಷರಗಳನ್ನೂ ಸಂಕೇತಗಳನ್ನೂ ಸೂಚಿಸಬೇಕು. ಈ ಕೆಲಸದಲ್ಲಿ ಬಳಸುವ ಸಂಕೇತಗಳನ್ನೂ ಅವುಗಳ ವಿವರಗಳನ್ನೂ ಪಕ್ಕದ ಮತ್ತು ಅದರ ಹಿಂದಿನ ಕಲಮುಗಳಲ್ಲಿ ಕೊಟ್ಟಿದೆ.

ಒಂದನೆಯ ಕರಡಿನ ಮೇಲೆ ಸೂಚಿಸಿದ ತಿದ್ದುಪಡಿಗಳನ್ನು ಮುದ್ರಣಾಲಯ ನೆರವೇರಿಸಿ ಎರಡನೆಯ ಕರಡನ್ನು ತಯಾರಿಸಿ ಕೊಡುತ್ತದೆ. ಈಗ ಪ್ರಥಮ ಗಮನ ಮೊದಲಿನ ತಿದ್ದುಪಡಿಗಳೆಲ್ಲವೂ ಸರಿಯಾಗಿ ನಿರ್ವಹಿಸಲ್ಪಟ್ಟಿವೆಯೋ ಎಂಬುದರ ಕಡೆಗೆ; ಇಂಥ ವೇಳೆ ಅಚಾತುರ್ಯದಿಂದ ಸಂಭವಿಸಬಹುದಾದ ಹೊಸ ದೋಷಗಳ ಕಡೆಗೂ ವಿಶೇಷ ಲಕ್ಷ್ಯ ಕೊಡಬೇಕು. ಮೊದಲಿನ ಸಲದ ಓದಿಕೆಯಲ್ಲಿ ಕಣ್ಣುತಪ್ಪಿಸಿ ಉಳಿದಿರಬಹುದಾದ ದೋಷಗಳನ್ನು ಈ ಓದಿಕೆಯಲ್ಲಿ ಸರಿಪಡಿಸಬೇಕು.

ಸಾಮಾನ್ಯವಾಗಿ ಮೂರನೆಯ ಸಲ ಮುದ್ರಣಾಲಯದಿಂದ ಬರುವ ಕರಡುಪ್ರತಿ ಸಿದ್ಧಪಡಿಸಿದ ಪುಟರೂಪದಲ್ಲಿರುವುದು. ಶೀರ್ಷಿಕೆ, ಪುಟಸಂಖ್ಯೆ ಅಡಿಟಿಪ್ಪಣಿಗಳ ಜೋಡಣೆ ಚಿತ್ರಗಳು ಎಲ್ಲವನ್ನೂ ಇದರಲ್ಲಿ ಅಳವಡಿಸಿರುತ್ತಾರೆ. ಮೊದಲಿನ ಎರಡು ಕರಡುಗಳನ್ನು ಓದಿ ಸರಿಪಡಿಸಲು ಇಬ್ಬರು ಬೇಕಾದರೆ ಪುಟಕರಡನ್ನು ಓದಲು ನುರಿತ ಒಬ್ಬನೇ ಸಾಕು. ಸಾಮಾನ್ಯವಾಗಿ ಲೇಖಕನೇ ಇದನ್ನು ಓದಿ ತಿದ್ದುವುದು ವಾಡಿಕೆ.

ಮುಂದಿನ ಹಂತ ಯಂತ್ರ ಕರಡು. ಪುಟಕರಡಗಳು ಒಂದು ಫಾರ್ಮಿನಷ್ಟು ಸಿದ್ಧವಾಗುವ ಕರಡಚ್ಚುಗಳನ್ನು ಫಾರಂ ರೂಪದಲ್ಲಿ ಜೋಡಿಸಿ ಮುದ್ರಣ ಚೌಕಟ್ಟನ್ನು ಸಿದ್ಧಪಡಿಸುತ್ತಾರೆ. ಇದನ್ನು ಮುದ್ರಣ ಯಂತ್ರಕ್ಕೆ ಜೋಡಿಸಿ ಯಂತ್ರ ಕರಡನ್ನು ತೆಗೆದು ಪರಿಶೀಲಿಸಲಾಗುವುದು. ಇದರಲ್ಲಿ ಉಳಿದಿರಬಹುದಾದ ಅಲ್ಪಸ್ವಲ್ಪ ತಪ್ಪುಗಳು, ಒಡೆದ ಮೊಳೆಗಳು, ಹಾರಿಹೋದ ಒತ್ತುಗಳು ಮುಂತಾದವನ್ನು ಸರಿಪಡಿಸಿದ ತರುವಾಯ ಮುದ್ರಣಕಾರ್ಯ ಮುಂದುವರಿಯುತ್ತದೆ. ಸಾವಿರಗಟ್ಟಲೆ ಪ್ರತಿಗಳನ್ನು ಮುದ್ರಿಸುವಾಗ ಒಂದು ನಿರ್ದಿಷ್ಟ ಘಟ್ಟದಲ್ಲಿ (ಉದಾಹರಣೆಗೆ 1,000 ಪ್ರತಿಗಳನ್ನು ಮುದ್ರಿಸಿ ಆದಮೇಲೆ) ಮುದ್ರಿತ ಪ್ರತಿಯನ್ನು ಚುರುಕಾಗಿಯಾದರೂ ಓದುವುದು ಒಳ್ಳೆಯದು.

(ಎಂ.ಎ.ಎಸ್., ಎಚ್.ಎಸ್.)

**ಕರಡುಸಾಲ ಅಥವಾ ಕರಡುಋಣ :** ಒಂದು ಸಂಸ್ಥೆಗೋ ಒಬ್ಬ ವ್ಯಕ್ತಿಗೋ ತನ್ನ ದೇಣಿದಾರನಿಂದ (ಡೆಟರ್) ಬರಬೇಕಾಗಿದ್ದು, ಅವನಿಂದ ವಸೂಲಾಗುವ ಸಂಭವವಿಲ್ಲವೆಂದು ಕೈಬಿಟ್ಟ ಸಾಲ ಅಥವಾ ಋಣ (ಬ್ಯಾಡ್ ಡೆಟ್). ಇದನ್ನು ಸಾಮಾನ್ಯವಾಗಿ ನಷ್ಟವೆಂದು ಪರಿಗಣಿಸಿ, ಬರಬೇಕಾದ ಸಾಲಗಳ ಮೊತ್ತದಿಂದ ಕಳೆಯಲಾಗುತ್ತದೆ.

ಕೆಲವು ಪರಿಸ್ಥಿತಿಗಳಲ್ಲಿ ಕೆಲವಾರು ಕಾರಣಗಳಿಂದಾಗಿ ಗ್ರಾಹಕರು ತಮ್ಮ ಸಾಲವನ್ನು ನಿಯಮಿತ ಅವಧಿಯೊಳಗೆ ತೀರಿಸದೆ ಹೋಗಬಹುದು. ಆದರೆ ಅವರು ಮುಂದಾದರೂ ಆ ಸಾಲವನ್ನು ಪಾವತಿ ಮಾಡಿಯಾರು ಎಂಬ ಆಸೆ ವ್ಯಾಪಾರಿಗೆ ಇದ್ದರೆ ಅಂಥ ಸಾಲವನ್ನು ಕರಡುಸಾಲವೆಂದು ಪರಿಗಣಿಸುವುದಿಲ್ಲ. ಅಂಥ ಸಾಲವನ್ನು ಸಂದೇಹಾಸ್ಪದವೆಂದು ಪರಿಗಣಿಸಲಾಗುತ್ತದೆ. ಆದರೆ ಯಾವ ಸಾಲ ನಿರ್ದಿಷ್ಟವಾಗಿ ಮತ್ತು ಖಚಿತವಾಗಿ ಹಿಂದಕ್ಕೆ ಬರುವ ಸಂಭವವಿಲ್ಲವೋ ಅಂಥದು ಮಾತ್ರ ಕರಡು ಸಾಲ.

ಯಾವುದೇ ಒಂದು ಸಾಲ ಕರಡು ಸಾಲವೆಂದು ತೀರ್ಮಾನವಾದರೆ ಅದು ವ್ಯಾಪಾರಿಗೆ ಪೂರ್ತಿ ನಷ್ಟ. ಅಂಥ ನಷ್ಟವನ್ನು ವ್ಯಾಪಾರಿ ತನ್ನ ವಾರ್ಷಿಕ ಲಾಭ ನಷ್ಟ ಲೆಕ್ಕದಲ್ಲಿ ನಷ್ಟವೆಂದು ತೋರಿಸಬೇಕಾಗುತ್ತದೆ. ಸಾಮಾನ್ಯವಾಗಿ ಕರಡುಸಾಲ ವ್ಯಾಪಾರಿಯ ಸರಕು ಮಾರಾಟದ ವ್ಯವಹಾರಗಳಿಂದ ಉದ್ಭವಿಸುವುದರಿಂದ ಅಂಥ ನಷ್ಟವನ್ನು ಅದೇ ಬಗೆಯ ವ್ಯವಹಾರಗಳಿಗೆ ಸಂಬಂಧಿಸಿದ ನಷ್ಟವೆಂದು ಪರಿಗಣಿಸಬೇಕು.

ಈ ನಷ್ಟ ಖಾತರಿಯಾದ ವರ್ಷದ ಲೆಕ್ಕಗಳಲ್ಲಿ ಈ ಬಗ್ಗೆ ದಾಖಲೆ ಮಾಡಿ, ಸಂಬಂಧಪಟ್ಟ ದೇಣಿದಾರರ ಲೆಕ್ಕಗಳಲ್ಲಿ ಇದನ್ನು ಕಳೆದ ಮೇಲೆ—ಎಂದರೆ ಅವರ ಲೆಕ್ಕಗಳನ್ನು ಮುಕ್ತಾಯ ಮಾಡಿದ ಮೇಲೆ—ಮುಂದೆ ಎಂದೋ ಅನಿರೀಕ್ಷಿತವಾಗಿ ಈ ಹಣ ಬರಬಹುದು. ಆಗ ಅದನ್ನು ಬಂಡವಾಳ ಲಾಭವೆಂದು ಪರಿಗಣಿಸಬೇಕಾಗುತ್ತದೆ.

ಕೆಲವು ದೊಡ್ಡ ವ್ಯಾಪಾರಿ ಸಂಸ್ಥೆಗಳಲ್ಲಿ ಗ್ರಾಹಕರ ಸಂಖ್ಯೆ ಹೆಚ್ಚಾಗಿರುವುದರಿಂದ ಕರಡುಸಾಲ ಬಹಳ ಹೆಚ್ಚಿನ ಪರಿಮಾಣದಲ್ಲಿರುತ್ತದೆ. ಭವಿಷ್ಯದಲ್ಲಿ ಉದ್ಭವಿಸಬಹುದಾದ ಕರಡು ಸಾಲದ ಪ್ರಮಾಣವೂ ಅಗಾಧವಾಗಿರುತ್ತದೆ. ದೇಶದ ಆರ್ಥಿಕ ಸ್ಥಿತಿಯಲ್ಲಿ ಉಂಟಾಗುವ ಏರುಪೇರು, ಸರ್ಕಾರದ ಆರ್ಥಿಕ ಧೋರಣೆ ಮತ್ತು ವಾಣಿಜ್ಯಕ್ಷೇತ್ರದಲ್ಲಿ ಉಂಟಾಗುವ ಮಹತ್ತರ ಬದಲಾವಣೆಗಳಿಂದಾಗಿ ಅನೇಕ ಗ್ರಾಹಕರು ತಮ್ಮ ವ್ಯಾಪಾರದ ಮತ್ತು ನಗದು ಜವಾಬ್ದಾರಿಗಳನ್ನು ಪೂರೈಸಲು ಅಸಮರ್ಥರಾಗಬಹುದು. ಈ ಕಾರಣಗಳಿಂದಾಗಿ ಕೆಲವು ವ್ಯವಹಾರ ಸಂಸ್ಥೆಗಳಲ್ಲಿ

ವಿಶೇಷ ರೀತಿಯ ಮತ್ತು ಅತಿಹೆಚ್ಚಿನ ಪ್ರಮಾಣದ ಕರಡುಸಾಲ ಸಂಭವಿಸಬಹುದು. ಹಲವು ವರ್ಷಗಳ ವ್ಯವಹಾರದ ಫಲವಾದ ನಷ್ಟವನ್ನು ಅದು ಸಂಭವಿಸಿದ ವರ್ಷದ ಲಾಭ–ನಷ್ಟ ಲೆಕ್ಕದಲ್ಲಿ ತೋರಿಸುವುದು ಅವೈಜ್ಞಾನಿಕವಾಗುತ್ತದೆ. ಇದರಿಂದ ಆ ವರ್ಷದ ಲಾಭಪರಿಸ್ಥಿತಿಯ ಮೇಲೆ ವಿಪರೀತ ಪರಿಣಾಮ ಉಂಟಾಗಬಹುದು. ಆದ್ದರಿಂದ ಇದಕ್ಕೆ ಪ್ರತ್ಯೇಕವಾಗಿ ಕರಡುಸಾಲದ ಮೀಸಲನ್ನು (ಬ್ಯಾಡ್ ಡೆಟ್ಸ್ ರಿಸರ್ವ್) ನಿರ್ಮಿಸಬೇಕಾದ ಆವಶ್ಯಕತೆಯುಂಟಾಗುತ್ತದೆ. ಪ್ರತಿವರ್ಷವೂ ಸಂಸ್ಥೆಯ ದೇಣಿದಾರರಿಂದ ಬರಬೇಕಾದ ಮೊಬಲಗಿನ ಒಂದು ನಿರ್ದಿಷ್ಟ ಸೇಕಡಾ ಪ್ರಮಾಣವನ್ನು ಮೀಸಲಾಗಿ ತೆಗೆದಿಟ್ಟು ಇದನ್ನು ಲಾಭನಷ್ಟ ಲೆಕ್ಕದಲ್ಲಿ ಖುಣಿಸಬೇಕು (ಡೆಬಿಟ್). ಕರಡುಸಾಲದಿಂದ ಸಂಭವಿಸುವ ನಷ್ಟವನ್ನು ಈ ಮೀಸಲಿನಿಂದ ತುಂಬಿಸಿಕೊಳ್ಳಲಾಗುತ್ತದೆ. ಮೀಸಲು ಹಣವನ್ನು ಯಾವಾಗಲೂ ಒಟ್ಟು ದೇಣಿದಾರರಿಂದ ಬರಬೇಕಾದ ಸಾಲದ ಮೊಬಲಗಿನ ನಿರ್ದಿಷ್ಟ ಸೇಕಡಾ ಪ್ರಮಾಣವಾಗಿ ಮುಂದುವರಿಸಿಕೊಂಡು ಹೋಗಲಾಗುತ್ತದೆ. ಈ ಕ್ರಮದಿಂದ ಯಾವುದೇ ಒಂದು ವರ್ಷದ ಲಾಭ–ನಷ್ಟ ಸ್ಥಿತಿಯ ಮೇಲೆ ಅನುಚಿತ ಭಾರ ಹೇರಿದಂತಾಗುವುದಿಲ್ಲ.

ಕರಡುಸಾಲದ ಸಂಭವವನ್ನು ಕಡಿಮೆ ಮಾಡುವ ಸಲುವಾಗಿ, ಪದಾರ್ಥ ಮಾರುವಾಗಲೇ ಯಾವ ಬಗೆಯ ಗ್ರಾಹಕರಿಗೆ ಉದ್ದರಿ ಮಾರಾಟ ಮಾಡಬಹುದೆಂಬ ಬಗ್ಗೆ ಸಂಸ್ಥೆಯ ಮಾರಾಟವಿಭಾಗ ಮುನ್ನೆಚ್ಚರಿಕೆಯಿಂದ ನಿರ್ಧರಿಸಿಕೊಳ್ಳಬೇಕು. ಈ ದೆಸೆಯಲ್ಲಿ ವಿಶೇಷವಾದ ಸಂಶೋಧನೆ ನಡೆಯುತ್ತಿದೆ. ಗ್ರಾಹಕರ ಹಣಕಾಸಿನ ಪರಿಸ್ಥಿತಿಯನ್ನು ಪರಿಶೋಧಿಸಿ ಮಾಹಿತಿ ಒದಗಿಸುವ ಸಲುವಾಗಿಯೇ ಅನೇಕ ಸಂಸ್ಥೆಗಳು ವಿಶಿಷ್ಟವಾಗಿ ಕೆಲಸ ಮಾಡುತ್ತಿವೆ. ಇವುಗಳ ಸಲಹೆಯಂತೆ ಉದ್ದರಿ ವ್ಯವಹಾರ ನಡೆಸುವುದರಿಂದ ನಷ್ಟ ಸಂಭವ ಕಡಿಮೆ.

ಅಮೆರಿಕ ಸಂಯುಕ್ತಸಂಸ್ಥಾನ ಮುಂತಾದ ಪಾಶ್ಚಾತ್ಯ ದೇಶಗಳಲ್ಲಿ ಗ್ರಾಹಕರ ಬಗ್ಗೆ ಅಂಕಿ–ಅಂಶ ಒದಗಿಸುವ ಸಂಸ್ಥೆಗಳು ಹಲವಾರಿವೆ. ಆದರೆ ಭಾರತದಲ್ಲಿ ಈ ಕ್ಷೇತ್ರದಲ್ಲಿ ಹೆಚ್ಚಿನ ಕೆಲಸ ನಡೆದಿಲ್ಲ. ಇಲ್ಲೂ ಈ ಬಗೆಯ ಸಂಸ್ಥೆಗಳ ಆವಶ್ಯಕತೆಯು ಮನವರಿಕೆಯಾಗಿದೆ. (ಸಿ.ಎಂ.ಎಂ.)

**ಕರಣತ್ರಯ :** ಕರಣ ಎಂದರೆ ಸಾಧನ. ಶಾಸ್ತ್ರಗಳಲ್ಲಿ ಮನಸ್ಸು, ವಾಕ್ ಮತ್ತು ಕಾಯ (ಶರೀರ)ಗಳನ್ನು ತ್ರಿಕರಣಗಳೆಂದು ಹೇಳಿದೆ. ಜೀವ ಈ ಮೂರು ಕರಣಗಳಿಂದ ಸುಖದುಃಖಾತ್ಮಕವಾದ ವಿಷಯಗಳನ್ನು ಅನುಭವಿಸುತ್ತಾನೆ. ಕರಣಗಳು ಅಂತಃಕರಣ ಮತ್ತು ಬಾಹ್ಯಕರಣ ಎಂದು ಎರಡು ಬಗೆಯಾಗಿವೆ. ಶರೀರದ ಒಳಗಿರುವುದು ಅಂತಃಕರಣ. ಮನಸ್ಸು, ಚಿತ್ತ, ಬುದ್ಧಿ ಮತ್ತು ಅಹಂಕಾರಗಳನ್ನು ಅಂತಃಕರಣ ಚತುಷ್ಟಯ ಎಂದು ಕರೆಯಲಾಗಿದೆ. ಈ ನಾಲ್ಕೂ ಮನಸ್ಸಿನ ಪ್ರಭೇದಗಳು. ಅವುಗಳಲ್ಲಿ ಸಂಕಲ್ಪಾತ್ಮಕ ಅಥವಾ ವಿಕಲ್ಪಾತ್ಮಕವಾದದ್ದು ಮನಸ್ಸು. ಅದೇ ಚಿಂತನಾರೂಪವಾಗಿದ್ದರೆ ಚಿತ್ತವೆಂದೂ ಯುಕ್ತಾಯುಕ್ತವಿವೇಕರೂಪವಾಗಿದ್ದರೆ ಬುದ್ಧಿಯೆಂದೂ ನಾನು (ಅಹಂಕಾರ), ನನ್ನದು (ಮಮಕಾರ), ರೂಪ, ಅಥವಾ ಅಭಿಮಾನವುಳ್ಳದ್ದು ಅಹಂಕಾರವೆಂದೂ ಕರೆಯಲ್ಪಡುತ್ತದೆ. ಬಾಹ್ಯಕರಣಗಳು ವಾಕ್ ಮತ್ತು ಕಾಯಗಳಿಗೆ ಸಂಬಂಧಿಸಿದ ಜ್ಞಾನೇಂದ್ರಿಯ ಮತ್ತು ಕರ್ಮೇಂದ್ರಿಯಗಳು. ನೋಡಿ : ಕಂಚುಕಗಳು. (ಎಂ.ಜಿ.ಎನ್.)

**ಕರಣಹಸಿಗೆ :** ತತ್ತ್ವಗಳನ್ನು (ಕರಣ) ವಿಭಾಗಿಸಿ ತೋರುವುದು (ಹಸಿಗೆ) ಎಂಬ ಅರ್ಥದಲ್ಲಿ ಈ ಪದ ವೀರಶೈವ ಧರ್ಮ ಶಾಸ್ತ್ರದಲ್ಲಿ ಪ್ರಯೋಗವಾಗಿದೆ. ಈ ಹೆಸರಿನ ಗ್ರಂಥಗಳಲ್ಲಿ ಚನ್ನಬಸವಣ್ಣನದು (ಸು. 1150) ಮುಖ್ಯವಾದುದು. ಇದರಲ್ಲಿ ಮೂರು ವಿಭಾಗಗಳಿವೆ. ಮೊದಲನೆಯದು ದೇಹಜ್ಞಾನಕ್ಕೆ ಸಂಬಂಧಿಸಿದ್ದು. ಮಾನವದೇಹರಚನೆ, ಅದರಲ್ಲಡಗಿರುವ ಶಕ್ತಿಗಳು, ಅವುಗಳ ವ್ಯವಹರಣೆ–ಇತ್ಯಾದಿ ವಿಷಯಗಳಿವೆ. ಎರಡನೆಯ ಭಾಗದಲ್ಲಿ ದೈವದತ್ತವಾದ ಆ ಶಕ್ತಿಗಳನ್ನು ಸದುಪಯೋಗ ಮಾಡಿಕೊಳ್ಳುವ ಬಗೆ, ದುರುಪಯೋಗದಿಂದ ಆಗುವ ಅನರ್ಥಗಳು ಇತ್ಯಾದಿ ವಿಷಯಗಳಿವೆ. ಮೂರನೆಯ ವಿಭಾಗದಲ್ಲಿ ಲಿಂಗಾಂಗ ಸಾಮರಸ್ಯವನ್ನು ಪಡೆಯುವ ಕ್ರಮ ವರ್ಣಿತವಾಗಿದೆ. ಷಟ್‍ಸ್ಥಲ ಸಿದ್ಧಾಂತಕ್ಕೆ ಕರಣಹಸಿಗೆ ಪೂರಕವಾಗಿದೆಯೆನ್ನಬಹುದು.

ಕರಣಹಸಿಗೆ 16ನೆಯ ಶತಮಾನದಲ್ಲಿ ಶಾಂತಲಿಂಗ ದೇಶಿಕನಿಂದ ಮರಾಠಿಗೆ ಅನುವಾದವಾಗಿದೆ. ನೋಡಿ—ಚನ್ನಬಸವಣ್ಣ ; ಷಟ್‍ಸ್ಥಲ ಸಿದ್ಧಾಂತ. (ಬಿ.ಎಸ್.)

**ಕರತೆಪೆ :** ಅನಟೋಲಿಯದ ಅಡನಾ ಪ್ರಾಂತ್ಯಕ್ಕೆ ಸೇರಿದ ಕರತೆಪೆಯಲ್ಲಿ ಹಿಟ್ಟೈಟರ ಸಂಸ್ಕೃತಿಗೆ ಸೇರಿದ ಬಹಳ ಮುಖ್ಯವಾದ ಕೆಲವು ಅವಶೇಷಗಳು ಬೆಳಕಿಗೆ ಬಂದಿವೆ. ಈ ಅವಶೇಷಗಳನ್ನು ತಾತ್ಕಾಲಿಕವಾಗಿ ಕ್ರಿ. ಪೂ. 8ನೆಯ ಶತಮಾನಕ್ಕೆ ನಿರ್ದೇಶಿಸಬಹುದಾಗಿದೆ. 1945ರ ವಸಂತದಲ್ಲಿ ಇಸ್ತಾನ್ ಬುಲ್ ವಿಶ್ವವಿದ್ಯಾಲಯದ ಬಾಸ್ಸರ್ಟ್ ಮತ್ತು ಕ್ಯಾಂಬಲ್ ರವರು ಕಡಿರ್ಲಿಯ ಉಪಾಧ್ಯಾಯನೊಬ್ಬನ ನಿರ್ದೇಶನದ ಮೇರೆಗೆ ಈ ನೆಲೆಯಲ್ಲಿನ ಅವಶೇಷಗಳನ್ನು ದರ್ಶಿಸಿ 1947ರ ಅನಂತರ ದೀರ್ಘಕಾಲದ ವರೆಗೂ ಇಲ್ಲಿನ ಅವಶೇಷಗಳನ್ನು ಸಂಶೋಧಿಸಿದರು.

ಕ್ರಿ. ಪೂ. 8ನೆಯ ಶತಮಾನದಲ್ಲಿ ಇಲ್ಲಿನ ಬೆಟ್ಟದ ಸುತ್ತ ಐದು ಪಾರ್ಶ್ವಗಳಿದ್ದ ಮತ್ತು 28 ಆಯಾಕಾರದ ಕೊತ್ತಳಗಳನ್ನು ಹೊಂದಿದ್ದ ಕೋಟೆಯನ್ನು ನಿರ್ಮಿಸಲಾಗಿತ್ತು. ಈ ಕೋಟೆಗೆ ಒಂದು ಮೇಲಿನ ಮತ್ತೊಂದು ಕೆಳಗಣ ಪ್ರದೇಶ ದ್ವಾರಗಳಿದ್ದವು. ಈ ಪ್ರವೇಶದ್ವಾರಗಳ ಎರಡೂ ಪಾರ್ಶ್ವಗಳಲ್ಲೂ ಮೂರ್ತಿಶಿಲ್ಪಗಳಿದ್ದ ಮತ್ತು ಶಾಸನಗಳಿದ್ದ ಕಲ್ಲು ಚಪ್ಪಡಿಗಳನ್ನು ಉಪಯೋಗಿಸಲಾಗಿತ್ತು. ಈ ಕೆತ್ತನೆಗಳು ಸಾಂಕೇತಿಕತೆಯಿಂದ ಕೂಡಿದ್ದ ವಿಕಟ ಚಿತ್ರಗಳಾಗಿದ್ದು ಕಲಾದೃಷ್ಟಿಯಿಂದಲೂ ಕೆಳಮಟ್ಟದವುಗಳಾಗಿದ್ದರೂ ಜನಜೀವನದ ನೈಜ ಚಿತ್ರವನ್ನೊದಗಿಸುವುದರಿಂದ ಮತ್ತು ಮತೀಯ ಧಾರ್ಮಿಕ ದೃಶ್ಯಗಳನ್ನೊಳಗೊಂಡಿರುವುದರಿಂದ ಐತಿಹಾಸಿಕವಾಗಿ ಬಹಳ ಮಹತ್ತ್ವವನ್ನು ಪಡೆದಿವೆ. ಮುಳುಗುತ್ತಿರುವ ನಾವಿಕರನ್ನು ತೋರಿಸುವ ನೌಕಾಯುದ್ಧ ದೃಶ್ಯ, ವಿವಿಧ ರೀತಿಯ ಕ್ರೀಡೆಗಳು, ಸಂಗೀತಗಾರರ ಒಂದು ಸಮೂಹ ಮತ್ತು ಸಾಮಾನ್ಯ ಜೀವನದ ಅನೇಕ ಇತರ ದೃಶ್ಯಗಳನ್ನು ನಾವಿಲ್ಲಿ ಕಾಣಬಹುದಾಗಿದೆ. ಈಜಿಪ್ಟಿನ ಮತ್ತು ಮೆಸಪೊಟೇಮಿಯದ ಕಲೆಗಳೊಂದಿಗೆ ಅನೇಕ ಸಾಮ್ಯಗಳನ್ನು ಕಾಣಬಹುದಾಗಿದ್ದು, ಕಲ್ಲಿನ ಕೆಲಸದ ತಂತ್ರಗಳನ್ನು ಇಲ್ಲಿ ಅಭ್ಯಸಿಸಬಹುದಾಗಿದೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಈ ಕಲ್ಲು ಚಪ್ಪಡಿಗಳ ಮೇಲೆ ಕಡೆದಿರುವ ಶಾಸನಗಳು ಚಾರಿತ್ರಿಕ ಮಹತ್ತ್ವವನ್ನು ಪಡೆದಿವೆ. ದ್ವಾರದ ಒಂದು ಪಾರ್ಶ್ವದಲ್ಲಿ ಹಿಟ್ಟೈಟ್‍ರ ಹಿರೋಗ್ಲಿಫಿಕ್ ಲಿಪಿಯಲ್ಲೂ ಮತ್ತೊಂದು ಪಾರ್ಶ್ವದಲ್ಲಿ ಫಿನಿಷಿಯನ್ ಭಾಷೆಯಲ್ಲೂ ಈ ಶಾಸನಗಳನ್ನು ಕಡೆಯಲಾಗಿದೆ. ಮೂಲತಃ ಹಿಟ್ಟೈಟ್ ಭಾಷೆಯಲ್ಲಿದ್ದ ಈ ಶಾಸನಗಳನ್ನು ನಿರಂತರವಾಗಿ ಅಲ್ಲಿಗೆ ಬರುತ್ತಿದ್ದ ಪ್ರವಾಸಿಗಳ ಅನುಕೂಲಕ್ಕಾಗಿ ದೊರೆಯೇ ಫಿನಿಷಿಯನ್‍ಭಾಷೆಗೆ ತರ್ಜುಮೆ ಮಾಡಿಸಿದಂತೆ ತಿಳಿದುಬರುತ್ತದೆ, ಈ ರೀತಿಯ ದ್ವಿಭಾಷಾಶಾಸನಗಳು ದೊರಕಿದುದರಿಂದ ಹಿಟ್ಟೈಟ್ ಹಿರೋಗ್ಲಿಫಿಕ್ ಭಾಷೆಯನ್ನು ಓದಲು ಬಹಳ ಅನುಕೂಲವಾಯಿತು. ಈ ಶಾಸನಗಳ ಮುಖ್ಯಾಂಶಗಳು ಹೀಗಿವೆ. ಅಲ್ಲಿನ ದೊರೆ ಹಿಟ್ಟೈಟ್ ಜನಾಂಗದ ಅಸಿತವಾದ್. ಆತನು ಕರತೆಪೆಯ ಕೋಟೆಯನ್ನು ಕಟ್ಟಿಸಿ ಸಿಲಿಷಿಯಾದ ದೊರೆ ಅವರಿಕುಸ್‍ನ ಆಶ್ರಯದಲ್ಲಿ ಆಳುತ್ತಿದ್ದನು. ಇದಲ್ಲದೆ ಹಲವಾರು ದೇವತೆಗಳ ಹೆಸರುಗಳೂ ಕಂಡುಬರುತ್ತವೆ. ಕೋಟೆಯ ಒಳಭಾಗದಲ್ಲಿ ಹಿಟ್ಟೈಟ್ ವಾಸ್ತುಕಲೆಯ ಪ್ರಮುಖಲಕ್ಷಣವಾದ ಹಿಲಾನಿ ರೀತಿಯ ಮುಖ ಮಂಟಪ (ಪೋರ್ಟಿಕೋ) ದಿಂದೊಡಗೂಡಿರುವ ಅರಮನೆಯಾಗಿದ್ದಿರಬಹುದಾದ ಕಟ್ಟಡದ ಅವಶೇಷಗಳು ಕಂಡುಬಂದಿವೆ. ನದಿಯ ಇನ್ನೊಂದು ಪಾರ್ಶ್ವದಲ್ಲಿರುವ ದೊಮುಜ್‍ತೆಪೆಯಲ್ಲಿ ಇದಕ್ಕೂ ಸ್ವಲ್ಪ ಮೊದಲಿನ ಕಾಲಕ್ಕೆ ಸೇರಿದ ಕಟ್ಟಡಗಳ ಅವಶೇಷಗಳನ್ನೂ ಶಿಲ್ಪಗಳನ್ನು ಬೆಳಕಿಗೆ ತರಲಾಗಿದೆ. *

**ಕರದ್ :** ಸತಾರಾ ಜಿಲ್ಲೆಯಲ್ಲಿರುವ ಒಂದು ನಗರ ಮತ್ತು ಇದೇ ಹೆಸರಿನ ತಾಲ್ಲೂಕಿನ ಕೇಂದ್ರ. ಉ. ಅ. 17° 17′ ಮತ್ತು ಪೂ. ರೇ. 74° 11′ ಗಳಲ್ಲಿ ಕೃಷ್ಣಾ ಕೊಯ್ನಾ ನದಿಗಳ ಸಂಗಮದ ಬಳಿ ಇದೆ. ಸತಾರಾ ನಗರ ಇರುವುದು ಇದರಿಂದ ವಾಯವ್ಯಕ್ಕೆ—31 ಮೈ. ದೂರದಲ್ಲಿ. ಜನಸಂಖ್ಯೆ 33,772 (1961) ಬೌದ್ಧಕಾಲೀನ ಗುಹಾಲಯಗಳಿಂದಲೂ ಮುಸಲ್ಮಾನರ ಕಾಲದ ಮಸೀದಿಗಳಿಂದಲೂ ಆಧುನಿಕ ಸಂಸ್ಥಾ ಭವನಗಳಿಂದಲೂ ಕೂಡಿರುವ ಇದು ಪೌರ ಸಭೆಯ ಆಡಳಿತಕ್ಕೊಳಪಟ್ಟಿದೆ.

ಕರದ್ ತಾಲ್ಲೂಕಿನ ವಿಸ್ತೀರ್ಣ 412.9 ಚ. ಮೈ. ಜನಸಂಖ್ಯೆ 2,51,640 (1961), ಈ ತಾಲ್ಲೂಕಿನಲ್ಲಿ 115 ಹಳ್ಳಿಗಳಿವೆ.

ಇಲ್ಲಿಯ ಮುಖ್ಯ ನದಿ ಕೃಷ್ಣಾ. ಕರದ್‍ಗೆ 1 ಮೈಲಿ ದೂರದಲ್ಲಿರುವ ಖೋಡ್ಶಿಯಿಂದ ಸಮಾರು 35. ಮೈ. ಉದ್ದದ ಕೃಷ್ಣಾನಾಲೆಯನ್ನು ನಿರ್ಮಿಸಲಾಗಿದೆ. ತಾಲ್ಲೂಕಿನ ನೈಋತ್ಯ ಭಾಗ ಗುಡ್ಡಗಾಡುಗಳಿಂದ ಕೂಡಿದ್ದು ಸಾಕಷ್ಟು ನೀರಿನ ಅನುಕೂಲ ಪಡೆದಿಲ್ಲ. ಮಿಕ್ಕ ಕಡೆಗಳಲ್ಲಿ ನೀರಿಗೆ ಕೊರತೆಯಿಲ್ಲ.

ಇಲ್ಲಿ ಭೂಮಿ ಫಲವತ್ತಾಗಿದೆ. ವ್ಯವಸಾಯಕ್ಕೆ ಅನುಕೂಲಕರ. ಜೋಳ, ರಾಗಿ, ದ್ವಿದಳ ಧಾನ್ಯ, ಕಬ್ಬು, ಹತ್ತಿ, ಹೊಗೆಸೊಪ್ಪು ಮತ್ತು ಹಣ್ಣು ತರಕಾರಿಗಳು ಮುಖ್ಯ ಬೆಳೆಗಳು. (ಎ.ಎಚ್.)

**ಕರನಿರಾಕರಣ ಚಳವಳಿ :** ಪ್ರಭುತ್ವದ ರೀತಿನೀತಿಗಳು ಪ್ರಜೆಗಳಿಗೆ ಸರಿಯೆನಿಸದಾಗ, ಅವರ ಹಿತಗಳಿಗೆ ವಿರೋಧವಾಗಿ ಸರ್ಕಾರ ವರ್ತಿಸುತ್ತಿದ್ದಾಗ, ಪ್ರಜೆಗಳ ನ್ಯಾಯವಾದ ಆಶೋತ್ತರಗಳನ್ನು ಈಡೇರಿಸಲಿಕ್ಕೂ ಆಳರಸರು ಒಡಂಬಡದಿದ್ದಾಗ, ತಮ್ಮ ಹಕ್ಕಿನ ಸ್ಥಾಪನೆಗಾಗಿ, ಹಿತರಕ್ಷಣೆಗಾಗಿ, ನ್ಯಾಯದ ಪೂರೈಕೆಗಾಗಿ ಅಥವಾ ಆಶೋತ್ತರಗಳ ಈಡೇರಿಕೆಗಾಗಿ ಪ್ರಜೆಗಳು ಕೈಕೊಳ್ಳುವ ತೀವ್ರವಾದ ಮತ್ತು ಸಾಮಾನ್ಯವಾಗಿ ಕೊಟ್ಟಕೊನೆಯ ಅಹಿಂಸಾತ್ಮಕ ಅಸ್ತ್ರ ; ಸರ್ಕಾರಕ್ಕೆ ಕೊಡಬೇಕಾದ ಕಂದಾಯವನ್ನು ಕೊಡಲು ನಿರಾಕರಿಸುವ ಸಾಮೂಹಿಕ ಕ್ರಮ. ಮಹಾತ್ಮ ಗಾಂಧಿಯವರ ಸತ್ಯಾಗ್ರಹಸಮರ ಕಾಲದಲ್ಲಿ ರೂಪಿತವಾಗಿ ಪ್ರಯೋಗವಾದ ಒಂದು ಮುಖ್ಯ ಅಸ್ತ್ರ. (ನೋ-ಟ್ಯಾಕ್ಸ್ ಕ್ಯಾಂಪೇನ್) ಎಂದಿನಿಂದಲೋ ಪ್ರಜೆ ಪ್ರಭುತ್ವಗಳ

ಮಧ್ಯೆ ಒಂದು ಬಗೆಯ ಒಪ್ಪಂದವಾಗಿದೆ. ಜನರ ಪ್ರಾಣ, ಮಾನ, ಆಸ್ತಿ-ಪಾಸ್ತಿಗಳ ಸಂರಕ್ಷಣೆ ಮಾಡುವುದೂ ಶಾಂತಿ-ಸಮಾಧಾನಗಳನ್ನು ನೆಲೆಗೊಳಿಸುವುದೂ ನಿತ್ಯ ಜೀವನ ನೆಮ್ಮದಿಯಾಗಿರಲು ಅವಶ್ಯವಾದದ್ದನ್ನೆಲ್ಲ ಮಾಡುವುದೂ ಪ್ರಭುತ್ವದ ಹೊಣೆ. ಈ ಭರವಸೆಗೆ ಪ್ರತಿಯಾಗಿ, ಸರ್ಕಾರದ ಕರ್ತವ್ಯ ನಿರ್ವಹಣೆಗಾಗಿ, ಸಮಾಜದಲ್ಲಿ ಸಮಸ್ಥಿತಿ ಸ್ಥಾಪನೆಗಾಗಿ, ಪ್ರಜೆಗಳು ಪ್ರಭುತ್ವಕ್ಕೆ ನಿಗದಿಯಾದ ಶುಲ್ಕ ಅಥವಾ ತೆರಿಗೆಯನ್ನು ವಸ್ತುರೂಪದಲ್ಲೊ, ಹಣದ ರೂಪದಲ್ಲೊ ಸಲ್ಲಿಸಬೇಕಾಗುತ್ತದೆ. ಕೃಷಿಕೈಗಾರಿಕೆ, ವ್ಯಾಪಾರ ಮುಂತಾದ ನಾನಾ ವೃತ್ತಿಗಳಲ್ಲಿ ತೊಡಗಿರುವವರು ತಮ್ಮ ವೃತ್ತಿಸೌಕರ್ಯ ಮತ್ತು ಸಂರಕ್ಷಣೆಗೆ ಪ್ರತಿಯಾಗಿ ಪ್ರಭುತ್ವಕ್ಕೆ ತಾವು ಗಳಿಸಿದ್ದರಲ್ಲೊಂದು ಭಾಗವನ್ನು ಕೊಡುತ್ತಾರೆ. ರೈತ ಪ್ರಭುತ್ವಕ್ಕೆ ಪ್ರತಿವರ್ಷ ಕೊಡುವ ಕಂದಾಯವನ್ನು ಕರವೆಂದು ಕರೆಯುವುದು ರೂಢಿ. ಕಂದಾಯವನ್ನು ಒಳಗೊಂಡು ಎಲ್ಲ ಬಗೆಯ ತೆರಿಗೆಗಳನ್ನೂ ಕರವೆನ್ನುವುದೂ ಉಂಟು.

ರಾಜ ಪ್ರಜಾಪ್ರಿಯನಾಗದೆ, ಪ್ರಜೆಯ ಹಿತಸಾಧಕನಾಗದೆ ಇದ್ದರೆ, ಪ್ರಜಾಹಿಂಸಕನಾದರೆ, ಪ್ರಜೆ ಪ್ರತಿಭಟಿಸಬಹುದು. ಇದು ಅವನ ಮೂಲಭೂತಹಕ್ಕು. ರಾಜ ದುಷ್ಟನಾದರೆ, ಪ್ರಜಾಪೀಡಕನಾದರೆ ಪ್ರಜೆಗಳು ಅವನನ್ನು ಹುಚ್ಚುನಾಯಿಯಂತೆ ಭಾವಿಸಿ, ಬೇಟೆಯಾಡಿ ಕೊಲ್ಲಬಹುದೆಂದು ಪ್ರತಿಪಾದಿಸುವವರೆಗೂ ಭಾರತದ ರಾಜನೀತಿಶಾಸ್ತ್ರಜ್ಞರು ಹೋಗಿದ್ದಾರೆ. ನ್ಯಾಯವಾದ ಕಾರಣಗಳಿಗಾಗಿ ರೈತರು ಕಂದಾಯ ಸಲ್ಲಿಸದೆ ನಿರಾಕರಿಸಲು ಸಹ ಅಧಿಕಾರ ಉಳ್ಳವರಾಗಿದ್ದಾರೆ. ಅಷ್ಟು ಮಾತ್ರವಲ್ಲ, ಪ್ರಜೆಗಳಿಗೂ ಪ್ರಭುತ್ವಕ್ಕೂ ಘರ್ಷಣೆ ಉಂಟಾದಾಗ ಪ್ರಜೆಗಳು ಪ್ರಭುತ್ವದ ರೀತಿನೀತಿಗಳನ್ನು ಪ್ರತಿಭಟಿಸಿದ್ದಾರೆ. ಸಾಮೂಹಿಕವಾಗಿ ಹಳ್ಳಿಹಳ್ಳಿಗಳನ್ನೇ ಬರಿದುಮಾಡಿ, ದೇಶ ಬಿಟ್ಟುಹೋದ ಉದಾಹರಣೆಗಳಿವೆ. ಅಂಥ ಸಂದರ್ಭಗಳಲ್ಲಿ ಪ್ರಭುತ್ವದವರು ಪ್ರಜೆಗಳನ್ನು ಬರಮಾಡಿಕೊಂಡು, ಮಾತುಕತೆ ನಡೆಸಿ, ಅವರಿಗಾದ ಅನ್ಯಾಯಗಳನ್ನು ಸರಿಪಡಿಸಿ, ಪರಸ್ಪರ ಬಾಂಧವ್ಯವನ್ನು ಸುರಸಗೊಳಿಸಿದ್ದಾರೆ.

ಸ್ವಾತಂತ್ರ್ಯಸಾಧನೆಗಾಗಿ ಭಾರತ ಬ್ರಿಟಿಷ್ ಸಾಮ್ರಾಜ್ಯದೊಂದಿಗೆ ಹೋರಾಟ ನಡೆಸಿದ್ದ ಕಾಲದಲ್ಲಿ ಮಹಾತ್ಮಗಾಂಧಿಯವರು ಈ ಸಂಗ್ರಾಮದ ನಾಯಕತ್ವವಹಿಸಿಕೊಂಡ ಮೇಲೆ ಅವರು ಇದಕ್ಕೆ ಜಗದಾಶ್ಚರ್ಯಕರವಾದ ರೂಪ ಕೊಟ್ಟರು. ಶಸ್ತ್ರಾಸ್ತ್ರಗಳನ್ನು ನಿರಾಕರಿಸಿ, ಅಹಿಂಸೆಯ ಮಾರ್ಗವನ್ನು ಅನುಸರಿಸಿ, ಸತ್ಯವನ್ನಾಶ್ರಯಿಸಿ, ನಡೆಸಿದ ಮಹಾಸಂಗ್ರಾಮವದು. ಒಂದು ಜನಾಂಗ ಶಾಂತಿಯಿಂದ, ತ್ಯಾಗದಿಂದ, ಪ್ರೇಮದಿಂದ ಪರಶತ್ರುವನ್ನು ಗೆಲ್ಲಬಹುದೆಂಬುದನ್ನು ಮಾನವಕುಲದ ಅನುಭವಕ್ಕೆ ಗಾಂಧಿಯವರು ತಂದುಕೊಟ್ಟರು. ಸತ್ಯ, ತ್ಯಾಗ, ಅಹಿಂಸೆಗಳೆಂಬ ತ್ರಿಮುಖ ಅಸ್ತ್ರಕ್ಕೆ ಅವರು ಸತ್ಯಾಗ್ರಹವೆಂದು ಹೆಸರಿಟ್ಟರು. ಈ ಅಸ್ತ್ರಪ್ರಯೋಗಾರ್ಹತೆ ಪಡೆಯುವುದೂ ಗಾಂಧಿಯವರಿಂದ ಪ್ರಶಸ್ತಿ ಪಡೆಯುವುದೂ ಸಾಮಾನ್ಯವಾಗಿರಲಿಲ್ಲ. ಇಂಥ ಅಸ್ತ್ರಪ್ರಯೋಗ ಮಾಡುವುದರಲ್ಲಿ ಗಾಂಧಿಯುವರು ಅನೇಕ ಭಾರತೀಯರನ್ನು ನಿಪುಣರನ್ನಾಗಿ ಮಾಡಿದರು. ಅವರಿಗೊಂದು ನವೀನ ಸಂಸ್ಕಾರವನ್ನೇ ಗಳಿಸಿಕೊಟ್ಟರು. ದುಷ್ಕರ್ಮದಲ್ಲಿ ತೊಡಗುವ ಸರ್ಕಾರದೊಂದಿಗೆ, ತಮಗೆ ಬೇಡವೆನಿಸಿದ ಸರ್ಕಾರದೊಂದಿಗೆ, ಅಸಹಕರಮಾಡುವುದು ಪ್ರತಿಯೊಬ್ಬ ಪ್ರಜೆಯ ಈಶ್ವರದತ್ತವಾದ ಹಕ್ಕೆಂದರು. ದುಷ್ಕರ್ಮದೊಂದಿಗೆ ಸಹಕಾರ ಮಾಡಬಾರದೆಂಬ ತತ್ತ್ವದ ಪ್ರತಿಪಾದನೆ ಮಾಡಿದರು.

ಗಾಂಧೀಜಿಯವರ ಸತ್ಯಾಗ್ರಹಪ್ರಯೋಗಾವಸರದಲ್ಲಿ ನಾನಾಘಟ್ಟಗಳುಂಟು. ಕಟ್ಟಕಡೆಯ ಘಟ್ಟ ಕರನಿರಾಕರಣ. ಗಾಂಧಿಯವರು ನಡೆಸಿದ ಪರೀಕ್ಷೆಗಳಲ್ಲಿ ಉತ್ತೀರ್ಣರಾಗಿ, ಅವರ ಒಪ್ಪಿಗೆ ಪಡೆದು, ಒಂದೆರಡು ಪ್ರಾಂತ್ಯಗಳಲ್ಲಿ ಮಾತ್ರ ಸತ್ಯಾಗ್ರಹಿಗಳು ಕರನಿರಾಕರಣವನ್ನಾರಂಭಿಸಿದರು. ಗುಜರಾತಿನಲ್ಲೂ ಕರ್ನಾಟಕ ಪ್ರಾಂತ್ಯದ ಕೆಲವು ತಾಲ್ಲೂಕುಗಳಲ್ಲೂ ಮಾತ್ರವೇ ತೃಪ್ತಿಕರವಾಗಿ ಈ ಆಂದೋಲನ ಸಾಗಿತು. ಗುಜರಾತಿನ ಬಾರ್ಡೋಲಿಯ ರೈತರು ಕರನಿರಾಕರಣ ಕ್ರಮವನ್ನಾರಂಭಿಸುವ ನಿರ್ಣಯ ಮಾಡಿದರು. ಈ ಸನ್ನಿವೇಶ ಕುರಿತು ಗಾಂಧೀಜಿಯವರೇ 1922ರ ಜನವರಿ 1ರ ಯಂಗ್ ಇಂಡಿಯ ಪತ್ರಿಕೆಯಲ್ಲಿ ಈ ರೀತಿ ಬರೆದರು : ಸುಮಾರು 4,000 ಖಾದಿಧಾರಿಗಳು ಸಭೆಸೇರಿದ್ದರು. ಅವರಲ್ಲಿ 500 ಮಂದಿ ಹೆಂಗಸರು. ನಾನು ಪ್ರತಿಯೊಬ್ಬರಿಗೂ ಪ್ರಶ್ನೆಗಳನ್ನು ಹಾಕಿ ಕರನಿರಾಕರಣಮಾಡಲು ಸಿದ್ಧರಾಗಿರುವವರು ಇಂತಿಂಥ ಯೋಗ್ಯತಾಸಿದ್ಧಿ ಪಡೆದಿರಬೇಕೆಂದು ವಿವರಿಸಿ ಹೇಳಿದೆ. ಪ್ರತಿಯೊಬ್ಬರೂ ಅರ್ಥಮಾಡಿಕೊಂಡರು. ಅವರು ಎಲ್ಲ ಕಷ್ಟಗಳನ್ನೂ ಎದುರಿಸಲು ಸಿದ್ಧರಾಗಿದ್ದರು ; ಸೆರೆಮನೆವಾಸ ಮಾತ್ರವಲ್ಲ, ಪ್ರಾಣ ಕೊಡಲಿಕ್ಕೂ ಸಿದ್ಧರಾಗಿದ್ದರು. ಗಾಂಧಿಯವರು ಅವರ ಬಗ್ಗೆ ಇಷ್ಟು ಹೇಳಿದಮೇಲೂ ಅವರಿಗೆ ಕರನಿರಾಕರಣವನ್ನಾರಂಭಿಸಲು ಒಪ್ಪಿಗೆ ಕೊಡಲಿಲ್ಲ.

1928ರಲ್ಲಿ ಸರ್ದಾರ್ ಪಟೇಲರ ನಾಯಕತ್ವದಲ್ಲಿ ಬಾರ್ಡೋಲಿ ತಾಲ್ಲೂಕಿನಲ್ಲಿ ಕರನಿರಾಕರಣ ಸತ್ಯಾಗ್ರಹಸಿದ್ಧತೆಗಳಾದುವು. ಹಲವು ವರ್ಷಗಳಿಂದ ಈ ತಾಲ್ಲೂಕಿನಲ್ಲಿ ನಾಲ್ಕೈದು ಸೇವಾಸಂಸ್ಥೆಗಳಿದ್ದುವು. ಅವುಗಳನ್ನಾಧಾರಮಾಡಿ ಶಿಬಿರಗಳನ್ನೇರ್ಪಡಿಸಲಾಯಿತು. ಒಂದೊಂದು ಶಿಬಿರದಲ್ಲೂ ಇನ್ನೂರುಮಂದಿ ಸ್ವಯಂಸೇವಕರು. ಇವರೆಲ್ಲರಿಗೂ ನಿರ್ಣೀತ ಕರ್ತವ್ಯಭಾರವಿತ್ತು. ಪ್ರತಿಯೊಂದು ಶಿಬಿರವೂ ಶಸ್ತ್ರಸನ್ನದ್ಧ ರಣಾಂಗಣದಂತಿತ್ತು. ಸುದ್ದಿಯ ಕರಪತ್ರಗಳ ಪ್ರಕಟಣೆಯಾಗುತ್ತಿತ್ತು. ಎಂಥ ಪರಿಸ್ಥಿತಿಯೇ ಉಂಟಾಗಲಿ ಅದನ್ನೆದುರಿಸಲು ರೈತರು ದೃಢಸಂಕಲ್ಪರಾಗಿದ್ದರು.

ನಾವು ಪೂರ್ಣ ಅಹಿಂಸಾವಾದಿಗಳಾಗಿರುತ್ತೇವೆ. ಎಂಥ ಕಷ್ಟವೇ ಬರಲಿ-ನಾವು ಸಹಿಸುತ್ತೇವೆ, ಎದುರಿಸುತ್ತೇವೆ. ನಮ್ಮದೆನ್ನುವುದೆಲ್ಲ ನಾಶವಾಗಿಹೋದರೂ ನಾವು ದುಃಖಪಡುವುದಿಲ್ಲ. ಸಂತೋಷದಿಂದ ಎಲ್ಲವನ್ನೂ ಎದುರಿಸುತ್ತೇವೆ-ಎಂಬುದಾಗಿ ಪ್ರಮಾಣವಚನ ತೆಗೆದುಕೊಂಡರು.

1928ರ ಫೆಬ್ರುವರಿ 12ರಂದು ಪ್ರಜಾಪ್ರಮುಖರೆಲ್ಲ ಬಾರ್ಡೋಲಿಯಲ್ಲಿ ಸಮ್ಮೇಳನ ನಡೆಸಿದರು. ಅಂಗೀಕೃತವಾದ ನಿರ್ಣಯ ಈ ರೀತಿ ಇದೆ: ಕಂದಾಯನಿರ್ಣಯದ ಪುನಃಪರಿಶೀಲನೆ ನಿರಂಕುಶವಾದುದು,ಅನ್ಯಾಯವಾದುದು ಮತ್ತು ಗೋಳುಗುಟ್ಟಿಸುವಂಥದು. ಆದಕಾರಣ ಎಲ್ಲ ಹಿಡುವಳಿದಾರರೂ ಪುನಃಪರಿಶೀಲನೆಯಿಂದ ನಿಶ್ಚಯವಾಗಿರುವ ಕಂದಾಯವನ್ನು ಕೊಡದೆ ನಿರಾಕರಿಸತಕ್ಕದ್ದು. ಪೂರ್ಣ ಹಣ ಸಂದಾಯವಾಯಿತೆಂದು ಹೇಳಿ ಸರ್ಕಾರ ಹಳೆ ಕಂದಾಯದ ಮೊತ್ತವನ್ನಂಗೀಕರಿಸಲು ಒಪ್ಪಬೇಕು. ಇಲ್ಲವೆ ಸರ್ಕಾರದವರು ನಿಷ್ಪಕ್ಷಪಾತ ವಿಚಾರಣಾ ಸಮಿತಿಯನ್ನು ನೇಮಿಸಿ, ಆ ಸಮಿತಿ ಸ್ಥಳಪರೀಕ್ಷೆ ಮಾಡಿ ವಿಚಾರಣೆ ನಡೆಸಿ ಒಂದು ತೀರ್ಮಾನಕ್ಕೆ ಬರುವವರೆಗೂ ಹಳೆಕಂದಾಯದ ಮೊತ್ತವನ್ನಂಗೀಕರಿಸಲು ಒಪ್ಪಬೇಕು.

ಈ ನಿರ್ಣಯವಾಗುತ್ತಲೇ ರೈತರ ಸತ್ಯಾಗ್ರಹಸಿದ್ಧತೆಯೊಂದು ಕಡೆ, ಪ್ರಭುತ್ವೋದ್ಯೋಗಿಗಳ ಸಮರಸಿದ್ಧತೆಯೊಂದು ಕಡೆ ಆರಂಭವಾದುವು. ಇವೆರಡು ಚಟುವಟಿಕೆಗಳೂ ವಾತಾವರಣವನ್ನು ಕಲಕಿದುವು. ಗಂಡಸರು, ಹೆಂಗಸರು, ಮುದುಕರು, ಮಕ್ಕಳು, ಅವರಿವರೆನ್ನದೆ ಎಲ್ಲರೂ ಎಂಥ ತ್ಯಾಗಕ್ಕಾದರೂ ಬಲಿದಾನಕ್ಕಾದರೂ ಸಿದ್ಧರಾದರು. ಸರ್ದಾರರು ಎಲ್ಲೆಲ್ಲೂ ಜನರನ್ನು ಸೇರಿಸಿ, ಸತ್ಯಾಗ್ರಹದ ಕಠೋರ ಪರಿಣಾಮಗಳನ್ನು ವರ್ಣಿಸುತ್ತ ಬಂದರು. ಜನರಲ್ಲಿ ಮಾತಿಗೆ ನಿಲುಕದಷ್ಟು ಉತ್ಸಾಹ ಶ್ರದ್ಧೆಗಳಿದ್ದುವು.

ಸರ್ಕಾರದ ಅಧಿಕಾರಿಗಳು ಶಾಸನ, ಶಸ್ತ್ರ ಇವೆರಡನ್ನು ಆಶ್ರಯಿಸಿ ಕಂದಾಯವಸೂಲಿಗಾರಂಭಿಸಿದರು. ಹಲವು ದುರ್ಬಲಹೃದಯಿ ರೈತರನ್ನೇ ಬಳಸಿಕೊಂಡು ಸತ್ಯಾಗ್ರಹ ಚಳವಳಿಯನ್ನು ನಿರ್ಮೂಲಮಾಡಲು ಯತ್ನಿಸಿದರು. ಸರ್ಕಾರಿ ಅಧಿಕಾರಿಗಳು ಹಿಡಿಯದ ಮಾರ್ಗವಿಲ್ಲ. ರೈತರನ್ನು ಹೆದರಿಸಿದರು. ಅವರಿಗೆ ಜುಲ್ಮಾನೆ ಹಾಕಿದರು. ಅವರನ್ನು ಹಿಡಿದು ಸೆರೆಮನೆಗಳಿಗೆ ದೂಡಿದರು. ಅವರ ಆಸ್ತಿಪಾಸ್ತಿಗಳನ್ನು ಮುಟ್ಟುಗೋಲುಹಾಕಿಕೊಂಡರು. ರೈತರು ಸಗ್ಗಲಿಲ್ಲ. ಲಂಚ ಕೊಟ್ಟು ಹಲವರನ್ನು ಬಲೆಗೆ ಸೆಳೆದುಕೊಳ್ಳಲು ನೋಡಿದರು. ಪ್ರಯೋಜನವಾಗಲಿಲ್ಲ. ಒಂದು ಪಂಗಡವನ್ನು ಇನ್ನೊಂದು ಪಂಗಡದ ಮೇಲೆ ಎತ್ತಿಕಟ್ಟುವ ಹಂಚಿಕೆ ಹಾಕಿದರು. ಅದೂ ಯಶಸ್ವಿಯಾಗಲಿಲ್ಲ. ಲಾಠಿಪ್ರಯೋಗ ಆರಂಭವಾಯಿತು. ರೈತರು ಜಗ್ಗಲಿಲ್ಲ, ಎದೆ ಕೊಟ್ಟು ನಿಂತು ಏಟು ತಿಂದರು. ಅಧಿಕಾರಿಗಳು ಕಕ್ಕಾಬಿಕ್ಕಿಯಾದರು. ಹೊರಗಿನಿಂದ ಪಠಾಣರನ್ನು ಆಮದುಮಾಡಿ, ಅವರನ್ನು ರೈತರಮೇಲೆ ಬಿಟ್ಟಾಗಲೂ ಜನ ಹೆದರಲಿಲ್ಲ. ಜಮೀನುಗಳನ್ನು ಹರಾಜಿಗಿಟ್ಟರೆ ಕೊಳ್ಳುವವರೇ ಇರಲಿಲ್ಲ. ಅಧಿಕಾರಿಗಳು 1,400 ಎಕರೆಗಳ ಜಮೀನನ್ನು ವಶಪಡಿಸಿಕೊಂಡರು. ಹೋದಷ್ಟು ಬೆಲೆಗೆ ಹರಾಜುಹಾಕಿದರು.

ರೈತರು ಮಾತ್ರ ಶಾಂತಿಯಿಂದಲೇ ನಡೆದುಕೊಂಡರು. ಸರ್ಕಾರದ ಮೇಲಿನ ಅಧಿಕಾರಿಗಳು, ಕೆಳಗಿನ ನೌಕರರು, ಹರಾಜು ಜಫ್ತಿಗಳೇ ಮುಂತಾದ ಕ್ರಮಗಳಿಗೆ ಸಹಾಯಕರಾದ ಜನರು-ಇವರ ಮೇಲೆಲ್ಲ ಜನರು ಸಾಮಾಜಿಕ ಬಹಿಷ್ಕಾರ ಹಾಕಿದರು. ಪರಮಾಶ್ಚರ್ಯಕರವಾದ ಈ ಕರನಿರಾಕರಣ ಸಂಗ್ರಾಮದಿಂದ ಬಾರ್ಡೋಲಿಗೆ ಅಖಿಲಭಾರತ ಕೀರ್ತಿಗೌರವಗಳು ಬಂದುವು. ಇಂಗ್ಲೆಂಡಿನ ಪಾರ್ಲಿಮೆಂಟಿನಲ್ಲಿ ಸಹ ಬಾರ್ಡೋಲಿ ಕರನಿರಾಕರಣದ ವಿಚಾರ ಬಂತು. ಈ ಸಂಗ್ರಾಮ ಐದಾರು ತಿಂಗಳ ಕಾಲ ನಡೆಯಿತು.

ಕಡೆಗೆ ಸರ್ಕಾರ ಶರಣಾಗಬೇಕಾಯಿತು. ಗವರ್ನರ್ ವಿಚಾರಣಾ ಸಮಿತಿಯೊಂದನ್ನು ನೇಮಿಸಿದ. ವಶಪಡಿಸಿಕೊಂಡ ಜಮೀನುಗಳನ್ನೆಲ್ಲ ಸಂಬಂಧಪಟ್ಟವರಿಗೆ ಹಿಂದಕ್ಕೆ ಕೊಡಲಾಯಿತು. ವಜಾ ಮಾಡಲಾಗಿದ್ದ ಗ್ರಾಮೋದ್ಯೋಗಿಗಳನ್ನೆಲ್ಲ ಕರೆಸಿ ಅವರ ದಫ್ತರಗಳನ್ನು ಅವರಿಗೆ ಕೊಟ್ಟು, ಕೆಲಸಗಳಿಗೆ ನೇಮಿಸಿದರು. ಸಮಿತಿಯೂ ವಿಚಾರಣೆ ನಡೆಸಿತು. ರೈತರ ವಾದ ಯೋಗ್ಯವೆಂದು ಅಂಗೀಕರಿಸಿತು. ಸೇಕಡ 22 ರಷ್ಟು ಏರಿಸಿದ್ದ ಕಂದಾಯವನ್ನು ಸೇಕಡಾ $6\frac{1}{4}$ಗೆ ಇಳಿಸಲಾಯಿತು. ತಮ್ಮ ಶಿಫಾರಸುಗಳನ್ನು ಸಮಿತಿಯ ಸದಸ್ಯರು ಸರ್ಕಾರಕ್ಕೆ ಕಳುಹಿಸಿದರು.

ಬಾರ್ಡೋಲಿಯನ್ನು ಸತ್ಯಾಗ್ರಹದ ಪರಮಲಕ್ಷಣದ ಉದಾಹರಣೆಯನ್ನಾಗಿ ಮಾಡಬೇಕೆಂಬುದು ನಿಮ್ಮ ಕನಸಾಗಿತ್ತು. ಬಾರ್ಡೋಲಿಯ ರೈತರು ತಮಗೆ

ವಿಶಿಷ್ಟವೆನಿಸಿದ ರೀತಿಯಿಂದ ನಿಮ್ಮ ಕನಸನ್ನು ನಿಜಮಾಡಿದರು ಎಂಬುದಾಗಿ ಸರೋಜಿನಿದೇವಿಯವರು ಗಾಂಧೀಜಿಗೆ ಬರೆದರು.

ಬಾರ್ಡೋಲಿಯ ಕರನಿರಾಕರಣ ಚಳವಳಿಯಲ್ಲದೆ ಎಲ್ಲರ ಗಮನ ಸೆಳೆಯುವ ಇನ್ನೊಂದು ಉದಾಹರಣೆಯೆಂದರೆ ಕರ್ಣಾಟಕದ ಶಿರಸಿ, ಸಿದ್ದಾಪುರ ಅಂಕೋಲೆ ಮತ್ತು ಹಿರೇಕೆರೂರು ತಾಲ್ಲೂಕುಗಳದು. ಈ ನಾಲ್ಕೂ ತಾಲ್ಲೂಕುಗಳ ಜನ ಗಾಂಧೀಜಿಯವರ ನಿರ್ಮಲ ಕಲ್ಪನೆ ಮತ್ತು ಪವಿತ್ರಭಾವನೆಗೆ ಲೇಶವೂ ಊನ ಬಾರದಂತೆ ಉಪ್ಪಿನ ಸತ್ಯಾಗ್ರಹ, ಅರಣ್ಯ ಸತ್ಯಾಗ್ರಹ, ಹುಲ್ಲುಬನ್ನಿ ಕರನಿರಾಕರಣ ಮೊದಲಾದುವುಗಳನ್ನು ನಡೆಸಿದರು. ಅಂಕೋಲೆಯದು ಒಂದು ಧ್ಯೇಯಕ್ಕಾಗಿ ನಡೆದ (1930 ಏಪ್ರಿಲ್) ಸತ್ಯಾಗ್ರಹವೆನ್ನಬಹುದಾದರೂ ಉಳಿದ ತಾಲ್ಲೂಕುಗಳಲ್ಲಿ ನಡೆದದ್ದು ಒಂದು ಅನಿವಾರ್ಯ ಸನ್ನಿವೇಶದಿಂದಲೂ ಪ್ರಭಾವಿತವಾದದ್ದು ಎಂಬುದನ್ನು ಮರೆಯುವಂತಿಲ್ಲ.

1931ರಲ್ಲಿ ಶಿರಸಿ–ಸಿದ್ದಾಪುರ, ಹಿರೇಕೆರೂರು ಈ ಮೂರು ತಾಲ್ಲೂಕುಗಳಲ್ಲೂ ಕ್ಷಾಮ ಆವರಿಸಿತು. ದವಸ ಧಾನ್ಯಗಳ ಧಾರಣೆಗಳು ಬಿದ್ದುವು. ಶಿರಸಿ, ಸಿದ್ದಾಪುರಗಳ ಸುವರ್ಣಾದಾಯದ ಬೆಳೆಯೆಂದರೆ ಅಡಿಕೆ. ಏನೋ ಕಾರಣದಿಂದ ಆ ಬೆಳೆ ಹಾಳಾಯಿತು. ರೂಪಾಯಿಗೆ ನಾಲ್ಕಾಣೆ (ಕಾಲುಭಾಗ) ಬೆಳೆ ಕೂಡ ರೈತರ ಕೈ ಹತ್ತಲಿಲ್ಲ. ಆ ವರ್ಷ ಕಂದಾಯ ವಸೂಲು ಮಾಡಬಾರದೆಂದು ರೈತರು ಸರ್ಕಾರದಲ್ಲಿ ಮೊರೆ ಇಟ್ಟರು. ಅದು ಬರಿಯ ಅರಣ್ಯರೋದನವಾಯಿತು. ಸರ್ಕಾರ ಆ ಮೊರೆಗೆ ಕಿವಿಗೊಡಲಿಲ್ಲ. ಕ್ಷಾಮ ಸಂಭವಿಸಿಲ್ಲವೆಂದೂ ಬೆಳೆಯಾಗಿಲ್ಲವೆಂಬ ಮಾತು ಸುಳ್ಳೆಂದೂ ಇದು ಕರನಿರಾಕರಣ ಚಳವಳಿಯೆಂದೂ ಸರ್ಕಾರ ವಾದಿಸಿತು. ಆದರೆ ಕ್ಷಾಮ ಪ್ರಾಪ್ತಿಯಾಗಿದ್ದುದು ನಿಜ. ರೈತರೂ ಕಂಗಾಲಾಗಿದ್ದುದೂ ನಿಜ. ಚಳವಳಿಯ ನಾಯಕತ್ವವನ್ನು ರಾಜಕಾರಣಿಗಳು (ಹಾಗೆಂದು ಸರ್ಕಾರದವರು ಅವರನ್ನು ಕರೆದರು) ವಹಿಸಿದ್ದರೆಂಬುದೂ ನಿಜ. ಆದರೆ ಕ್ಷಾಮವೇ ಚಳವಳಿಗೆ ಮೂಲ ಕಾರಣವೆಂಬ, ಚಳವಳಿಯ ನಾಯಕರು ರಾಜಕಾರಣಿಗಳೇ ಆದರೂ ರೈತರ ನ್ಯಾಯವಾದ ಬೇಡಿಕೆಯನ್ನು ಈಡೇರಿಸಬೇಕೆಂಬ ವಾದಕ್ಕೆ ಸರ್ಕಾರ ವಿಮುಖವಾಗಿತ್ತು.

ಮೂರೂ ತಾಲ್ಲೂಕುಗಳ ರೈತರೂ ಶಾಸನಬದ್ಧವಾಗಿ, ಶಾಂತರೀತಿಯಿಂದ ನಡೆದುಕೊಂಡರು. ಇದು ಸಂಪೂರ್ಣವಾಗಿ ಆರ್ಥಿಕ ದುಃಸ್ಥಿತಿಯ ಹೋರಾಟ, ರಾಜಕೀಯ ಹೋರಾಟವಲ್ಲ–ಎಂಬುದನ್ನು ಸ್ಥಾಪಿಸಿದರು. ಅರ್ಜಿಗಳನ್ನು ಹಾಕಿದರು. ಸಭೆಗಳನ್ನು ನಡೆಸಿದರು, ನಿರ್ಣಯಗಳನ್ನು ಮಾಡಿದರು; ಜಿಲ್ಲೆಯ ಅಧಿಕಾರಿಗಳನ್ನು ಕಂಡರು; ತಮ್ಮ ಕಷ್ಟಗಳನ್ನು ವಿವರಿಸಿದರು; ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಬೇರೆ ದಾರಿಕಾಣದೆ ರೈತರು ಸಾಂಗವಾಗಿ ಕರನಿರಾಕರಣ ಸತ್ಯಾಗ್ರಹವನ್ನಾರಂಭಿಸಿದರು. ಸರ್ಕಾರ ದಂಡಧಾರಿಯಾಯಿತು. ರೈತರ ಬೆನ್ನುಮೂಳೆಗಳನ್ನು ಮುರಿಯಲಾರಂಭಿಸಿತು.

ಶಿರಸಿ–ಸಿದ್ದಾಪುರಗಳ ರೈತರ ವ್ಯವಹಾರ 1923 ರಿಂದ ಹಿರಿಯ ರೆವೆನ್ಯೂ ಅಧಿಕಾರಿ ಕಾಲ್ವೆನನ ಪರಿಶೀಲನೆಯಲ್ಲಿತ್ತು. ಇವೆರಡೂ ತಾಲ್ಲೂಕುಗಳಲ್ಲೂ ಈತ ಸಂಚಾರ ಮಾಡಿ, ಆರ್ಥಿಕ ಪರಿಶೀಲನೆ ನಡೆಸಿದ. ಕಂದಾಯದ ಮೊತ್ತವನ್ನು ಶಾಶ್ವತವಾಗಿ ಕಡಿಮೆಮಾಡಬೇಕೆಂದು ಸರ್ಕಾರಕ್ಕೆ ಸಲಹೆಮಾಡಿದ. ಆದರೆ ಸರ್ಕಾರ ಈ ಸಲಹೆಗಳನ್ನು ಪುರಸ್ಕರಿಸಲಿಲ್ಲ.

ಮೂರು ತಾಲ್ಲೂಕುಗಳ ರೈತರೂ ದೃಢಸಂಕಲ್ಪರಾದರು. ಕಂದಾಯವನ್ನು ಕೊಡುವುದಿಲ್ಲವೆಂದು ಹೇಳಿದರು. ಅಧಿಕಾರಿಗಳು ಜಮೀನುಗಳನ್ನು ಜಫ್ತುಮಾಡಿದರು; ರೈತರಿಗೆ ಕೊಡಬಾರದ ಹಿಂಸೆ ಕೊಟ್ಟರು. ಜಮೀನುಗಳನ್ನು ಮುಟ್ಟುಗೋಲು ಹಾಕಿಕೊಂಡರೂ ಯಾವ ರೈತರೂ ಪ್ರತಿಭಟಿಸಲಿಲ್ಲ. ಜಮೀನು ಹರಾಜಿನಲ್ಲಿ ಸವಾಲು ಕೂಗುವವರೇ ಇರಲಿಲ್ಲ. ಎಂಟುನೂರಕ್ಕೂ ಮೀರಿ ಜಫ್ತಿಗಳಾದುವು. ಇನ್ನೂರು ಮಂದಿಗೆ ಮುಟ್ಟುಗೋಲು ನೋಟೀಸ್ ಕೊಡಲಾಯಿತು. ಉಭಯ ಪಕ್ಷಗಳ ಮಧ್ಯೆ ಹೀಗೆ ಹೋರಾಟವಾಗುತ್ತಿದ್ದಾಗ, 1931ರ ಮಾರ್ಚ್ 4 ರಂದು, ಗಾಂಧಿ-ಅರ್ವಿನ್ ಒಡಂಬಡಿಕೆಯಾಯಿತು. ಚಳವಳಿ ನಿಂತಿತು.

ಜಮೀನುಗಳು ಹರಾಜಾಗುತ್ತಿದ್ದ ಕಾಲದಲ್ಲಿ ಸ್ವಯಂಸೇವಕರನೇಕರು ಪಿಕೆಟ್ ಮಾಡುತ್ತಿದ್ದರು. ಸರ್ಕಾರದವರು ಇವರ ಮೇಲೆಲ್ಲ ನಾನಾ ಆಪಾದನೆಗಳನ್ನು ಹೊರಿಸಿ ಮೊಕದ್ದಮೆಗಳನ್ನು ಹೂಡಿ, ವಿಚಾರಣೆಗೊಳಪಡಿಸಿ, ಇವರಿಗೆಲ್ಲ ಶಿಕ್ಷೆ ಕೊಡಿಸಿದ್ದರು. ಸ್ವಯಂಸೇವಕರನೇಕರಿಗೆ ಈ ತಾಲ್ಲೂಕು ಬಿಟ್ಟು ಹೊರಡಬೇಕೆಂದು ತಿಳುವಳಿಕೆ ಕೊಟ್ಟಿದ್ದರು. ಧಾರವಾಡ, ಬೆಳಗಾಂ ಕಡೆಗಳಲ್ಲಿ ಮನೆಗಳ ಶೋಧನೆ ನಡೆಸಿ, ಪಿತೂರಿ ಮತ್ತು ರಾಜದ್ರೋಹ ಆಪಾದನೆಗಳಿಗಾಗಿ ಹಲವರ ಮೇಲೆ ಮೊಕದ್ದಮೆಗಳನ್ನು ಹೂಡುವ ಸಿದ್ಧತೆ ನಡೆದಿತ್ತು. ಆದರೆ ಒಡಂಬಡಿಕೆಯಿಂದಾಗಿ ಅದನ್ನೆಲ್ಲ ಕೈಬಿಡಬೇಕಾಯಿತು.

ಕಟ್ಟಕಡೆಗೆ ರೈತರ ಮೊರೆ ಸಾಧುವಾದದ್ದು ಎಂಬುದು ಸರ್ಕಾರದವರ ಮನಸ್ಸಿಗೆ ಬಂತು. ನಿಜವಾಗಿಯೂ ಇದು ಆರ್ಥಿಕ ದುಃಸ್ಥಿತಿಯ ಚಳವಳಿ ಎಂಬುದನ್ನು ಅಧಿಕಾರಿಗಳು ಗ್ರಹಿಸಿದರು. ಈ ಅಂಶವನ್ನು ಗಾಂಧೀಜಿಯವರು ಲಾರ್ಡ್ ಅರ್ವಿನ್ನನ ಗಮನಕ್ಕೆ ತಂದು ಅವನನ್ನೊಪ್ಪಿಸಿದರು. 1931ರ ಮೇ ತಿಂಗಳಿನಲ್ಲಿ ರೆವೆನ್ಯೂ ಕಮೀಷನರೊಂದಿಗೆ ಆದ ಒಡಂಬಡಿಕೆಯ ಫಲವಾಗಿ ಹಿರೇಕೆರೂರು ತಾಲ್ಲೂಕಿನ ರೈತರಿಗೆ ತೃಪ್ತಿಕರ ಪರಿಹಾರ ಸಿಕ್ಕಿತು. ಆ ವರ್ಷದ ಕಂದಾಯವನ್ನು ರದ್ದು ಮಾಡಿದರು.

ಆದರೆ ಶಿರಸಿ ಸಿದ್ದಾಪುರಗಳ ರೈತರ ವಿಚಾರದಲ್ಲಿ ಹೀಗಾಗಲಿಲ್ಲ. ರೈತರೊಬ್ಬೊಬ್ಬರೂ ಅರ್ಜಿಹಾಕಿಕೊಂಡರೆ ವಿಚಾರಮಾಡಿ ಸಂದರ್ಭಾನುಸಾರ ಕಂದಾಯಪರಿಹಾರ ಕೊಡುವುದಾಗಿ ಸರ್ಕಾರಿ ಅಧಿಕಾರಿಗಳು ಕೊಸರಾಟ ಮಾಡಿದರಲ್ಲದೆ ರೈತರಿಗೆ ಕಿರುಕುಳ ಕೊಟ್ಟರು. ಸ್ಥಳೀಯ ಅಧಿಕಾರಿಗಳು ಸರ್ಕಾರದ ಆಜ್ಞೆಗಳಿಗೆ ತಮ್ಮದೇ ಆದ ಭಾಷ್ಯ ಮಾಡಿದ್ದರಿಂದ ಬಡರೈತರಿಗೆ ಸಹಿಸಲಾಗದಷ್ಟು ಹಿಂಸೆ ಉಂಟಾಯಿತು. ಕಡೆಗೆ ಇಲ್ಲೂ ರೈತರಿಗೆ ಗೆಲವು ಸಾಧಿಸಿತು. ಬಂಧನದಲ್ಲಿದ್ದವರೆಲ್ಲರ ಬಿಡುಗಡೆಯಾಯಿತು. ನ್ಯಾಯಸ್ಥಾನಗಳಲ್ಲಿ ಹೂಡಿದ್ದ ಮೊಕದ್ದಮೆಗಳನ್ನೆಲ್ಲ ಅಧಿಕಾರಿಗಳು ಹಿಂದಕ್ಕೆ ತೆಗೆದುಕೊಂಡರು. ಕಡೆಗೂ ಕರನಿರಾಕರಣ ಸತ್ಯಾಗ್ರಹ ರೈತರಿಗೆ ಜಯದಲ್ಲಿ ಮುಕ್ತಾಯವಾಯಿತು.

1931–1932ರ ಕರನಿರಾಕರಣ ಸತ್ಯಾಗ್ರಹದ ಮಾತುಬಂದಾಗ, ಕಾರವಾರ ಜಿಲ್ಲೆಯ ರೈತರ ಸತ್ತ್ವ ಮತ್ತು ಕ್ಷಾತ್ರಗುಣಗಳನ್ನು ಗಣನೆಗೆ ತೆಗೆದುಕೊಂಡಾಗ ಯಾರಿಗಾದರೂ ಹೆಮ್ಮೆಯಾಗುತ್ತದೆ. ಆ ಅಪೂರ್ವ ಸಂಗ್ರಾಮದಲ್ಲಿ ಗಂಡಸರೂ ಹೆಂಗಸರೂ ಸಾಮಾನ್ಯ ಕಲ್ಪನೆಗೆ ಮೀರಿದ ತ್ಯಾಗ ತೋರಿಸಿದರು. ಬೀಳಗಿಯ ಶ್ರೀ ಕೃಷ್ಣ ಬಾಲಕೃಷ್ಣ ಪುರಾಣಿಕರು ಕರನಿರಾಕರಿಸಿದ ಕಾರಣ ಬಂಧನಕ್ಕೊಳಗಾದರು. ಅವರನ್ನು ಜನ ಮೆರವಣಿಗೆ ಮಾಡಿ ಪೊಲೀಸ್ ಠಾಣ್ಯಕ್ಕೆ ಕರೆದೊಯ್ದರು. ಪುರಾಣಿಕರಾಗ ತಮ್ಮ ಹೆಂಡತಿಯವರಿಗೆ ಹೇಳಿದ ಮಾತಿದು: ನಮ್ಮ ಹೊಲ, ಮನೆ ಆಸ್ತಿಗಳೆಲ್ಲವನ್ನೂ ಈ ಧರ್ಮಯುದ್ಧದಲ್ಲಿ ನಾವು ಕಳೆದುಕೊಂಡರೂ ಹೆದರಬೇಕಿಲ್ಲ. ಪಾದಚಾರಿಗಳಾಗಿ ನಾವು ಊರಿಂದೂರಿಗೆ ಭಿಕ್ಷಾಟನೆ ಮಾಡುತ್ತ ಕಾಶೀಯಾತ್ರೆಗೆ ಹೋಗೋಣ. ಸರ್ಕಾರಕ್ಕೆ ಒಂದು ಕಾಸೂ ಕೊಡಬೇಡ. ತೀರ್ವೆ ಕೊಟ್ಟು ಪಾಪ ಕಟ್ಟಿಕೊಳ್ಳ ಬೇಡ. ಒಂದುವೇಳೆ ಸರ್ಕಾರದವರು ಒತ್ತಾಯಮಾಡಿ ವಸೂಲುಮಾಡಲು ಪ್ರಯತ್ನಿಸಿದ್ದಾದರೆ ನಮ್ಮ ಕಾಳು ಕಡ್ಡಿ, ಮನೆ ಮಾರು, ಅವರ ಕೈಗೆ ಸಿಗದಂತೆ ಅವುಗಳನ್ನು ಅಗ್ನಿನಾರಾಯಣನಿಗೆ ಆಹುತಿ ಮಾಡಿಬಿಡು.

ಇದಕ್ಕೆ ವ್ಯಾಖ್ಯಾನ ಬೇಕಿಲ್ಲ. ಕರನಿರಾಕರಣ ಸತ್ಯಾಗ್ರಹಿಗಳ ಸ್ವರೂಪ ನಿದರ್ಶನಕ್ಕೆ ಇದೊಂದು ಉದಾಹರಣೆ.

ಊರು ಬಿಟ್ಟು ಶಿಬಿರ ಸೇರಿದ್ದ ಗಂಡಸರ ಸುಳಿವನ್ನು ಪತ್ತೆ ಹಚ್ಚಲು ಪೋಲೀಸರು ಕೈಕೊಂಡ ನಾನಾ ಬೆದರಿಕೆಯ ಕ್ರಮಗಳಿಗೆ ಸ್ತ್ರೀಯರು ಸಗ್ಗದೆ ಸ್ಥೈರ್ಯದಿಂದ ನಿಂತು ಎದುರಿಸಿದ್ದು ಇತಿಹಾಸದ ಪುಟಗಳಲ್ಲಿ ಸ್ಥಿರವಾಗಿ ಉಳಿಯುವುದರಲ್ಲಿ ಸಂದೇಹವಿಲ್ಲ.

ತಮಗಾಗಲಿ, ತಮ್ಮ ಹೆಂಡಿರುಮಕ್ಕಳಿಗಾಗಲಿ ಸ್ವಲ್ಪಮಾತ್ರ ಅಪಮಾನವಾದರೆ ಸಹಿಸಲಾರದ ನಾಡಜನರು ಈ ಎಲ್ಲ ಕ್ರಮಗಳ ಎದುರಿನಲ್ಲೂ ತಾಳ್ಮೆ ವಹಿಸಿ ಅಹಿಂಸಾವ್ರತವನ್ನು ಪಾಲಿಸಿದರು. ಇದು ಅವರ ಸತ್ತ್ವಪರೀಕ್ಷೆಯ ಪ್ರಸಂಗವಾಗಿ ಪರಿಣಮಿಸಿತು. ಗಾಂಧೀಜಿಯವರಲ್ಲಿ, ಅವರ ಅಹಿಂಸಾತತ್ತ್ವದಲ್ಲಿ ಆಗ ನಾಡವರಿಗಿದ್ದ ನಿಷ್ಠೆಯ ಪರಾಕಾಷ್ಠತೆಯಿಂದಾಗಿಯೇ ಅವರು ಇಂಥ ಉದ್ವೇಗ ಜನಕ ಸನ್ನಿವೇಶದಲ್ಲಿ ತಾಳ್ಮೆ ವಹಿಸುವುದು ಸಾಧ್ಯವಾಯಿತೆನ್ನಬಹುದು. (ಟಿ.ಟಿ.ಎಸ್.)

**ಕರಪಾಲ ಮೇಳ :** ಕರ್ಣಾಟಕದ ಜನಪದ ಮೇಳಗಳಲ್ಲಿ ಒಂದು. ಯಕ್ಷಗಾನ ಬಯಲಾಟಗಳ ವರ್ಣವೈಭವ, ವೇಷ ಭೂಷಣಗಳ ವೈಖರಿ ಕರಪಾಲಮೇಳದಲ್ಲಿಲ್ಲ. ಹೆಚ್ಚು ಸಂಖ್ಯೆಯ ಕಲಾವಿದರೂ ಇಲ್ಲಿ ಭಾಗವಹಿಸುವುದಿಲ್ಲ. ಮುಖ್ಯಕಥೆಗಾರನೊಬ್ಬ ಇಬ್ಬರು ಸಹನೃತ್ಯದವರೊಡನೆ ಜನಪ್ರಿಯ ಕಥೆಯೊಂದನ್ನು ನಾಟಕೀಯವಾಗಿ ಅಭಿನಯಿಸಿ, ನಿರೂಪಿಸಿ, ಗ್ರಾಮಾಂತರ ಜನತೆಗೆ ಮನೋರಂಜನೆಯನ್ನೊದಗಿಸುವುದು, ಅತ್ಯಂತ ಸರಳರೀತಿಯಲ್ಲಿ ನೃತ್ಯ ಸಂಗೀತ, ವೇಷಭೂಷಣಗಳನ್ನು ಒದಗಿಸಿಕೊಂಡು ತನ್ನ ಕಲೆ ಕಳೆಗಟ್ಟುವಂತೆ ಮಾಡಿಕೊಳ್ಳುವುದು ಇಲ್ಲಿನ ವೈಶಿಷ್ಟ್ಯ. ಎಲ್ಲ ದೃಷ್ಟಿಯಿಂದಲೂ ಕರಪಾಲಮೇಳದಲ್ಲಿ ಎದ್ದುತೋರುವ ಮುಖ್ಯ ವೈಶಿಷ್ಟ್ಯ ಸರಳತೆ. ಕಥೆಯಲ್ಲಿ, ಹಾಡಿನಲ್ಲಿ, ಕುಣಿತದಲ್ಲಿ ಇತರ ಸಾಧನ ಸಲಕರಣೆಗಳಲ್ಲಿ ಈ ಅಂಶವನ್ನು ಗುರುತಿಸಬಹುದು.

ಕರಪಾಲಕ್ಕೆ ಬಯಲಾಟದಂತೆಯೇ ಸಾಕಷ್ಟು ಪ್ರೇಕ್ಷಕರು ಕೂರುವ ಬಯಲು ಪ್ರದೇಶ ಬೇಕು. ಊರ ಚಾವಡಿಯ ಮುಂದೆಯೊ ಗುಡಿಯ ಅಥವಾ ರಾಮಮಂದಿರದ ಮುಂದೊ ಬಯಲಾಟದಂತೆಯೇ ಚಪ್ಪರವನ್ನು ಹಾಕಬೇಕು. ಇಲ್ಲಿನ ಚಪ್ಪರ ಬಹಳ ಚಿಕ್ಕದು. ಮೂರು ಮಂದಿ ಒಂದು ಸಾಲಿನಲ್ಲಿ ನಿಂತು ಹಿಂದೆ ಮುಂದೆ ಸರಿಯುತ್ತ ಕುಣಿಯಲು ಆದರೆ ಸಾಕು. ಬಯಲಾಟದಂತೆ ವಿಡಂಗುಗಳು ಇಲ್ಲಿ ಬರುವುದಿಲ್ಲವಾದ್ದರಿಂದ ಚಪ್ಪರದ ಎತ್ತರ ಏಳು ಅಥವಾ ಎಂಟು ಅಡಿಗಳಷ್ಟಿದ್ದರೆ ಸಾಕು. ಚಪ್ಪರದ ಅಗಲ ಹತ್ತು ಅಡಿ, ಉದ್ದ ಹತ್ತು ಅಡಿ ಮಾತ್ರ ಇರುವುದರಿಂದ

ಸಾಮಾನ್ಯವಾಗಿ ನೆಲಕ್ಕೆ ಹಲಗೆಯನ್ನು ಹಾಕಿ ಅಟ್ಟಣೆಯನ್ನು ಮಾಡಿಕೊಳ್ಳುವ ಅಗತ್ಯವಿಲ್ಲ. ಯಾವ ರುದ್ರನೃತ್ಯವೂ ಇಲ್ಲಿ ಬರದಿರುವುದರಿಂದ ಇಷ್ಟು ಸರಳವಾದ ವ್ಯವಸ್ಥೆಯಲ್ಲಿ ಕರಪಾಲ ಮೇಳ ಜರುಗುತ್ತದೆ.

ಕರಪಾಲ ಮೇಳಕ್ಕೆ ವಾದ್ಯಗಳನ್ನು ನುಡಿಸುವವರು, ಹಿಮ್ಮೇಳವನ್ನು ಹಾಡುವವರು ಚಪ್ಪರದ ಮುಂಭಾಗದಲ್ಲಿ ಹೊರಗೆ ಕುಳಿತಿರುತ್ತಾರೆ. ಅವರನ್ನು ಅನುಸರಿಸಿ ಜನ ಕುಳಿತಿರುತ್ತಾರೆ. ಚಪ್ಪರದ ಒಳಗೆ ಕರಪಾಲದ ಕಥೆಯನ್ನು ಅಭಿನಯಿಸುವ ಮುಖ್ಯನಿರೂಪಕ ಮತ್ತು ಅವನ ಎರಡು ಬದಿಯಲ್ಲಿ ಇಬ್ಬರು ನೃತ್ಯದವರು ನಿಂತಿರುತ್ತಾರೆ. ಕರಪಾಲದ ಮುಖ್ಯ ನಿರೂಪಕ ತಲೆಗೆ ಕೋಡಂಗಿಯ ಕುಲಾವಿಯ ಆಕಾರದ ವಸ್ತ್ರದ ಸಾಧನವನ್ನು ತೊಟ್ಟಿರುತ್ತಾನೆ. ಮುತ್ತು, ಗಾಜಿನ ಕೊಳವೆ, ಬಣ್ಣದ ವಸ್ತ್ರಗಳಿಂದ ಅಲಂಕೃತವಾದ ಆ ಸಾಧನ ಒಂದು ಕಿರೀಟದಂತೆಯೇ ತೋರುತ್ತದೆ. ಅದರ ಬಲಬದಿಯಲ್ಲಿ ತುರಾಯಿ ಇಳಿಬಿದ್ದಿರುತ್ತದೆ. ಕತ್ತಿನಲ್ಲಿ ರುದ್ರಾಕ್ಷಿಯ ಸರ, ಮೈಮೇಲೆ ಕಾವಿಯ ನಿಲುವಂಗಿ ನಡುವಿಗೆ ಮುತ್ತಿನ ಅಂಚಿನಿಂದ ಹೊಳೆಯುವ ಕಾಸೆ, ಶುಭ್ರವಸ್ತ್ರದ ಕಚ್ಚೆಯ ಪಂಚೆ—ಹೀಗೆ ಅಲಂಕೃತವಾದ ಕರಪಾಲದ ಅಯ್ಯ ಕಿವಿಗಳಿಗೆ ಒಂದು ಬಗೆಯ ಕುಂಡಲಗಳನ್ನು ಧರಿಸಿರುತ್ತಾನೆ. ಕಾಲಿಗೆ ಗೆಜ್ಜೆ, ಕೈಯಲ್ಲಿ ತಾಳ, ಮುಖಕ್ಕೆಲ್ಲ ಬಳಿದ ವಿಭೂತಿ, ಸೊಂಟಕ್ಕೆ ಸಿಕ್ಕಿಸಿದ ಕರವಸ್ತ್ರ–ಹೀಗೆ ನಾಟಕದ ಪಾತ್ರಧಾರಿಯಂತೆಯೇ ಸಿದ್ಧನಾಗಿ ನಿಲ್ಲುತ್ತಾನೆ. ಅಯ್ಯನ ಬಲಬದಿಯಲ್ಲಿ ನಿಂತ ಸಹನೃತ್ಯದವ ವೀರಗಾಸೆಯನ್ನು ಹಾಕಿ, ಬಿಳಿಯ ನಿಲುವಂಗಿಯನ್ನು ಧರಿಸಿ ನಡುವಿಗೆ ಒಂದು ಶುಭ್ರವಸ್ತ್ರವನ್ನು ಬಿಗಿದಿರುತ್ತಾನೆ. ತಲೆಗೆ ಸವಾರನಂತೆ ಪೇಟವನ್ನು ಕಟ್ಟಿ ತಾನೂ ಕಾಲಿಗೆ ಗೆಜ್ಜೆಯ ಸರವನ್ನು ಸುತ್ತಿರುತ್ತಾನೆ. ಅವನ ನಡುವಿನಲ್ಲಿ ಮಣ್ಣಿನ ಅಚ್ಚಿನ ಘುಮಿಕಿ ಇರುತ್ತದೆ. ಇದರ ಗತ್ತನ್ನು ಅನುಸರಿಸಿಯೇ ಹಾಡೂ ನೃತ್ಯವೂ ಸಾಗುವುದು.



ಪ್ರಸಿದ್ಧ ಕರಪಾಲ ಕಲಾವಿದ ಸಿದ್ಧಯ್ಯನವರು ಮತ್ತು ಸಂಗಡಿಗರು

ಇನ್ನೊಂದು ಬದಿಯಲ್ಲೂ ಇಂಥದೇ ವೇಷದ ಮತ್ತೊಬ್ಬ ನೃತ್ಯದವನಿರುತ್ತಾನೆ. ಆತ ಕೈಯಲ್ಲಿ ತಾಳವನ್ನು ಮಾತ್ರ ಹಿಡಿದಿರುತ್ತಾನೆ.

ಚಪ್ಪರದ ಮುಂದೆ ಕುಳಿತವರಲ್ಲಿ ಮುಖ್ಯರಾದವರು ಮೃದಂಗ ಮತ್ತು ಹಾರ್ಮೋನಿಯಂ ನುಡಿಸುವ ಕಲಾವಿದರು. ಅವರ ಜೊತೆ ಕೆಲವು ಮಂದಿ ಹಿಮ್ಮೇಳ ಹಾಡುವವರೂ ಇರಬಹುದು. ಚಪ್ಪರದ ಒಂದು ಕಡೆ ಬಯಲಾಟದಲ್ಲಿನಂತೆಯೇ ದೇವರ ಪಟವನ್ನು ಇಟ್ಟು ಪೂಜಿಸುತ್ತಾರೆ.

ಕರಪಾಲ ಮೇಳ ಬಹುಮಟ್ಟಿಗೆ ಬಯಲಾಟ ಸಂಪ್ರದಾಯವನ್ನು ಹೋಲುತ್ತದೆ. ಬಯಲಾಟದ ಭಾಗವತರು ಹಾಡುಗಾರಿಕೆಯಲ್ಲಿ ಮುಂದಿನ ಸೊಲ್ಲನ್ನು ಎತ್ತಿಕೊಟ್ಟರೆ ಹಿಮ್ಮೇಳದವರು ಪೂರ್ಣಗೊಳಿಸುತ್ತಾರೆ. ಅದೇ ಕ್ರಮವನ್ನು ಇಲ್ಲಿಯೂ ಕಾಣಬಹುದು. ಬಯಲಾಟದಲ್ಲಿ ಭಾಗವತರ ಹಾಡಿಗೆ ಅನುಸಾರವಾಗಿ ಪಾತ್ರಧಾರಿಗಳು ಕುಣಿದರೆ ಇಲ್ಲಿ ಕುಣಿತವೂ ನಿರೂಪಕನ ಪಾಲಿಗೇ ಬರುತ್ತದೆ. ಮಾತುಗಾರಿಕೆಯೂ ಇವನದೇ ಆಗುತ್ತದೆ. ಹರಿಕಥೆ ಒಂದು ದೃಷ್ಟಿಯಿಂದ ಕರಪಾಲ ಮೇಳದಂತೆಯೇ ನಡೆಯುವ ವಿಶಿಷ್ಟ ಕಲೆ. ಅಲ್ಲಿನ ದಾಸರು ಹಾಡುಗಾರಿಕೆ, ನೃತ್ಯ, ಅಭಿನಯ, ಕಥಾ ನಿರೂಪಣೆ ಎಲ್ಲವನ್ನೂ ತಾವೇ ನಿರ್ವಹಿಸುವರು (ನೋಡಿ—ಕೀರ್ತನ ಕಲೆ) ಆದರೆ ಅಲ್ಲಿ ಅವರ ಜೊತೆಗೆ ಇತರ ಕುಣಿತದವರು ಇರುವುದಿಲ್ಲ. ಕುಣಿತ, ಸಂಗೀತ ಅಲ್ಲಿ ಪ್ರಧಾನವಲ್ಲ. ಕರಪಾಲ ಮೇಳದಲ್ಲಿ ಕಥೆಗಿಂತ ಕುಣಿತ, ಕುಣಿತಕ್ಕಿಂತ ಹಾಡು, ಹಾಡಿಗಿಂತ ಅಭಿನಯ ಮುಖ್ಯವಾದವು. ಇಲ್ಲಿಯೂ ಉಪಕಥೆಗಳುಂಟು. ಅವೆಲ್ಲವೂ ಬಹುಮಟ್ಟಿಗೆ ಗ್ರಾಮಜೀವನದಿಂದಲೇ ಆಯ್ದ ಕಥೆಗಳು. ಭಾಷೆ ಗ್ರಾಮ್ಯ, ಹಾಸ್ಯವೂ ಗ್ರಾಮ್ಯ, ಅಲ್ಲಿ ಪಾತ್ರಗಳೂ ಗ್ರಾಮದ ಯಾರೋ ವ್ಯಕ್ತಿಗಳ ಪ್ರತಿನಿಧಿಗಳೇ.

ಕರಪಾಲ ಮೇಳದ ಪ್ರಧಾನ ಕಥೆ ಮಾತ್ರ ಸಾಹಿತ್ಯಿಕ ಶೈಲಿಯಲ್ಲಿ ನಿರೂಪಿಸಲ್ಪಡುತ್ತದೆ. ಇಲ್ಲಿ ಶಿಷ್ಟ ಪುರಾಣ ಮೂಲದ ಕಥೆಗಳು ವಿರಳ. ಜನಪ್ರಿಯ ಮೂಲದ ಕಥೆಗಳೇ ಹೆಚ್ಚು. ಸಾಮಾನ್ಯ ಜನಪದ ಕಥೆಯೊಂದನ್ನು ಆರಿಸಿಕೊಂಡು ಅದಕ್ಕೆ ಜೀವಭಾವಗಳನ್ನು ತುಂಬಿ, ಸಾಕಷ್ಟು ವಿಸ್ತರಿಸಿಕೊಂಡು ನಿರೂಪಿಸಲಾಗುತ್ತದೆ. ಪ್ರಾಣಿಕಥೆಗಳು, ಹಾಸ್ಯಕಥೆಗಳು ಮುಂತಾದ ಸರಳಕಥೆಗಳನ್ನು ಕೈಬಿಟ್ಟು ಸಂಕೀರ್ಣ ಕಥೆಗಳನ್ನು ಕಥೆಗಾರ ಆರಿಸಿಕೊಂಡು ಕರಪಾಲ ಮೇಳಕ್ಕೆ ಅಳವಡಿಸಿಕೊಂಡಿರುತ್ತಾನೆ. ಶೋಕಸ್ಥಾಯಿಯ ಹಿನ್ನೆಲೆಯಲ್ಲಿ ಜನಸಾಮಾನ್ಯರ ಮನಸ್ಸನ್ನು ಕಲಕುವ ಕಥೆಗಳೇ ಆಗಬೇಕು. ನಾಯಕ ಅಥವಾ ನಾಯಕಿ ವಿರೋಧಿಗಳಿಂದ ಅನೇಕ ಸಂಕಷ್ಟಗಳಿಗೆ ಒಳಗಾಗಿ ಕ್ರಮೇಣ ಯಾವುದೋ ಅತಿಮಾನುಷ ಶಕ್ತಿಯ ನೆರವಿನಿಂದಲೋ ಇತರ ವ್ಯಕ್ತಿಗಳ ಆಶ್ರಯದಿಂದಲೋ ಚೇತರಿಸಿಕೊಂಡು ಅಡಚಣೆಗಳನ್ನೆಲ್ಲ ದಾಟಿ ಮತ್ತೆ ತಮ್ಮ ಪ್ರಿಯವ್ಯಕ್ತಿಗಳನ್ನು ಕೂಡುವರು. ಅಧರ್ಮಕ್ಕೆ ಸೋಲಾಗಿ, ಧರ್ಮಕ್ಕೆ ಜಯವಾಗುವುದು. ಶಿಷ್ಟ ರಕ್ಷಣೆಯಾಗಿ, ದುಷ್ಟರಿಗೆ ಶಿಕ್ಷೆಯೊದಗುವುದು. ಕಾಡಸಿದ್ಧಮ್ಮ, ನೀಲಕಂಠ ರೂಪಾವತಿ, ಬಸವಕುಮಾರ ಲೋಹಿತಕುಮಾರ, ಶಿವಯೋಗಿ ಪರಯೋಗಿ—ಇಂಥ ಜನಪದ ಕಥೆಗಳು ಕರಪಾಲದ ಅಯ್ಯನವರ ಬಾಯಲ್ಲಿ ಅಪೂರ್ವ ಕಲಾಕೃತಿಗಳಾಗಿ ರಂಜಿಸುತ್ತವೆ ; ಸೊಟಗಕ್ಕ, ಅಣ್ಣತಮ್ಮ ಎಂಬ ತಮ್ಮ ಮೂಲದ ಸಾಧಾರಣ ಹೆಸರುಗಳನ್ನು ಕಳೆದುಕೊಂಡು ಆಕರ್ಷಕ ಶೀರ್ಷಿಕೆಗಳನ್ನು ಪಡೆದುಕೊಂಡು ಒಂದು ಪ್ರೌಢ ಕಥೆಗಳಾಗುತ್ತದೆ. ಕಥೆಯಲ್ಲಿನ ಪಾತ್ರಗಳಿಗೆಲ್ಲ ಒಳ್ಳೆಯ ಹೆಸರುಗಳು ಪ್ರಾಪ್ತವಾಗುತ್ತವೆ. ಹಳೆಯ ಹಂದರವೇ ಇದ್ದರೂ ಅನೇಕ ಹೊಸ ಘಟನೆಗಳು ಮೈತುಂಬಿ ಬರುತ್ತವೆ.

ಕರಪಾಲ ಮೇಳದಲ್ಲಿ ಬಯಲಾಟದ ಸಂಸ್ಕೃತ ಭೂಯಿಷ್ಠ ಸಂಭಾಷಣೆಯಾಗಲಿ, ಹಾಡುಗಳಾಗಲೀ ಇಲ್ಲ. ಆದರೂ ಕೆಲವು ಪ್ರಾರ್ಥನಾಗೀತೆಗಳಲ್ಲಿ ಮಂಗಳಾರತಿ ಗೀತೆಗಳಲ್ಲಿ ಆ ಹಾಡುಗಳ ಪ್ರಭಾವ ಇರುವುದನ್ನು ಕಾಣಬಹುದು.

ಶ್ರೀ ಗುರುವರನೆ ಜಯತು<br>
ಯೋಗಿ ವಿಭೂಷಣ ಭೋಗಿವರನೆ ಜಯತು

ಇಂಥ ಹಾಡುಗಳು ಬಯಲಾಟದಿಂದ ಕರಪಾಲಮೇಳಕ್ಕೆ ಬಂದವು. ಕೆಲವು ವೇಳೆ ಶಿವಶರಣರ ತತ್ತ್ವಗಳಿಂದ ಆಯ್ದ ಹಾಡುಗಳೂ ಬರುತ್ತವೆ.

ಭಿಕ್ಷವ ನೀಡಿರಮ್ಮ ಜಂಗಮರಿಗೆ<br>
ಭಿಕ್ಷವ ನೀಡಿರಮ್ಮ<br>
ಭಿಕ್ಷವ ನೀಡಿರಿ ಮೋಕ್ಷವ ಪಡೆಯಿರಿ<br>
ಭಿಕ್ಷವ ನೀಡಿರಮ್ಮ

ಇಂಥ ಕೆಲವು ಪದಗಳಲ್ಲದೆ ಸಂದರ್ಭಾನುಸಾರವಾಗಿ ರಚಿಸಿಕೊಂಡ ಕೆಲವು ಸ್ವತಂತ್ರ ಗೀತೆಗಳೂ ಇರುತ್ತವೆ.

ನಾನೊಲ್ಲೆ ನಾನೊಲ್ಲೆನೆ<br>
ನೀ ನೀಡುವ ಭಿಕ್ಷವ<br>
ನಾನೊಲ್ಲೆ ನಾನೊಲ್ಲೆನೆ<br>
ಬಂಜೆಕೈಯೊಳ ಭಿಕ್ಷ<br>
ಮಂಜುಳ ದಾನವ—ನಾನೊಲ್ಲೆ ನಾನೊಲ್ಲೆನೆ

ಈ ಬಗೆಯ ಕೆಲವು ಹಾಡುಗಳನ್ನು ಬಿಟ್ಟರೆ ಕರಪಾಲ ಮೇಳಕ್ಕೆ ಮೀಸಲಾದ ವಿಶಿಷ್ಟವರ್ಗದ ದ್ವಿಪದಿಗಳನ್ನು ಹಾಡಲಾಗುತ್ತದೆ. ಬಹುಮಟ್ಟಿಗೆ ಕರಪಾಲದ ಮುಖ್ಯ ಆಕರ್ಷಣೆಯೆಲ್ಲ ಈ ಮೇಳದ ಮೇಲೆಯೇ ನಿಂತಿರುತ್ತದೆ. ಕಥೆಯ ಆರಂಭ, ಬೆಳವಣಿಗೆ, ಮುಕ್ತಾಯ—ಹೀಗೆ ಎಲ್ಲ ಘಟ್ಟಗಳಲ್ಲಿಯೂ ಆಯಾ ಸನ್ನಿವೇಶಕ್ಕೆ ತಕ್ಕಂತೆ ಈ ಹಾಡುಗಳನ್ನು ಬಳಸಿಕೊಳ್ಳಲಾಗುತ್ತದೆ. ಹಾಡುಗಳ ಜೊಡಣೆ, ಕಥಾ ಬೆಳವಣಿಗೆ ಇವುಗಳಲ್ಲಿ ಮಾರ್ಗಕಾವ್ಯಗಳ ರೀತಿಯೇ ಕಂಡುಬರುತ್ತದೆ. ಆರಂಭದಲ್ಲಿ ಮುಖ್ಯ ಕಥೆಗಾರ ತಮ್ಮ ಕಲಾಜ್ಞಾನದ ಬಗ್ಗೆ ನಮ್ರವಾಗಿ ಸಭಿಕರಲ್ಲಿ ವಿನಂತಿಮಾಡಿಕೊಳ್ಳುತ್ತಾನೆ. ಮೃದು ಮಧುರ ನುಡಿಗಳಲ್ಲಿ

ನಾವು ಬಲವರಲ್ಲ, ನಾವು ತಿಳಿದವರಲ್ಲ<br>
ಯಾವ ತಪ್ಪಿದ್ದರೂ ತಿದ್ದಿ ಕೊಳಬೇಕು<br>
ತಿದ್ದಿಕೊಳಬೇಕು.

ದೇವತಾಸ್ತುತಿಯೊಡನೆ ಕಥೆಯನ್ನು ಆರಂಭಿಸುವ ಸಂಪ್ರದಾಯ ಗಮನಾರ್ಹವಾದುದು.

ತಪ್ಪುಗಳಿದ್ದರೆ ಒಪ್ಪಿಕೊಳ್ಳಯ್ಯ ದೇವ
ಸಾವಿರದ ಒಂದು ಶರಣಾರ್ಥಿ ನಿನಗೆ

ಹೀಗೆ ತಮ್ಮಆರಾಧ್ಯದೈವದ ಪಾದಮೂಲಕ್ಕೆ ಶರಣಾರ್ಥಿಯನ್ನು ಅರ್ಪಿಸಿ ತಾಳ ಮೇಳಗಳೊಡನೆ ಕಂಥಾರಂಭ ಮಾಡುತ್ತಾನೆ, ಮುಖ್ಯ ನಿರೂಪಕ. ವಿಶಿಷ್ಟಭಂಗಿಯಲ್ಲಿ ಹೆಜ್ಜೆಯನ್ನು ಹಾಕುತ್ತ ತಾಳದ ನಾದಕ್ಕೆ ತಕ್ಕಂತೆ ಬಾಗುತ್ತ ಬಳುಕುತ್ತ ಹಿಂದೆ ನಾಲ್ಕು ಗಜ ಸರಿಯುತ್ತ ಮತ್ತೆ ಮುಂದೆ ಚಪ್ಪರದ ಅಂಚನ್ನು ಮುಟ್ಟುತ್ತ ಕುಣಿಯ ತೊಡಗುತ್ತಾನೆ—

ಮುಂದಣ ಕತೆಯ ಅದರಂದವ ಪೇಳುವೆ
ಚಂದ್ರಶೇಖರ ನಮಗೆ ವರಕೊಡೆಲೊದೇವ

ಕರಪಾಲದ ಹಾಡುಗಳಲ್ಲಿ ಅನೇಕ ವರ್ಣನೆಗಳು ಬರುತ್ತವೆ. ಆದರೂ ಎಲ್ಲಿಯೂ ಅನಗತ್ಯವಾಗಿ ವಿಸ್ತರಿಸುವ ಬಗೆ ಕಾಣುವುದಿಲ್ಲ. ತನ್ನ ಅನುಭವಕ್ಕೆ ಮಾತ್ರ ನಿಲುಕುವ ವರ್ಣನೆಗಳನ್ನು ಕಥೆಗಾರ ತರುತ್ತಾನೆ. ನಗರ ವರ್ಣನೆಯ ವೈಖರಿಯಿದು ;

ಹಾಲುಮಾರುವ ಬೀದಿ ನೂಲುಮಾರುವ ಬೀದಿ
ಶಾಲು ಸಕಲಾತಿಗಳ ಮಾರುವ ಬೀದಿ

ಪ್ರಕೃತಿ ವರ್ಣನೆಯೂ ಕಥಾಸೂತ್ರದೊಡನೆ ಬೆಸೆದುಕೊಂಡೇ ಬರುತ್ತದೆ—

ಘೋರ ಕಾನನದೊಳಗೆ ನೀರಿಲ್ಲ ನೆರಳಿಲ್ಲ
ಹಾರುವ ಪಕ್ಷಿಗಳ ಸುಳಿವಿಲ್ಲ ದೇವ
ಅಡವಿಗಿಡಮರದಲ್ಲಿ ಎಡವಿ ಮುಗ್ಗರಿಸುತ್ತ
ತಡವರಿಸಿ ಹೊರಟಳು ಅರಣ್ಯದೊಳಗೆ

ಕರಪಾಲದ ಹಾಡುಗಳು ಅತ್ಯಂತ ಸರಳವಾಗಿ ಕಂಡರೂ ಉತ್ತಮ ಕಾವ್ಯಾಂಶದಿಂದ ಕೂಡಿರದಿದ್ದರೂ ಆಯಾ ಸನ್ನಿವೇಶದ ಹಿನ್ನೆಲೆಯಲ್ಲಿ ಅಪೂರ್ವ ಮಟ್ಟಿನಲ್ಲಿ ಹಾಡಲ್ಪಡುವುದರಿಂದ ಮೃದು ನೃತ್ಯವೂ ಅಲ್ಲಿ ಬೆರೆಯುವುದರಿಂದ ಅತ್ಯಂತ ಸ್ವಾರಸ್ಯಪೂರ್ಣವಾಗಿ ತೋರಿಬರುವುದರ ಜೊತೆಗೆ ನೇರವಾಗಿ ಅರ್ಥವಾಗುವುದರಿಂದ ಜನರ ಆಸಕ್ತಿಯನ್ನು ಸೆಳೆದುಕೊಳ್ಳುತ್ತವೆ. ಆತ್ಮೀಯವಾದ ಶೈಲಿಯಲ್ಲಿ ಅಭಿನಯದೊಂದಿಗೆ ಕಥೆಗಾರ ಹಾಡುಗಳನ್ನೂ ಎತ್ತಿಕೊಳ್ಳುವ ರೀತಿ ಆಕರ್ಷಕವಾಗಿರುತ್ತದೆ ; ನೆರೆದವರ ಹೃದಯವನ್ನು ಕರಗಿಸುವಂತಿರುತ್ತದೆ.

ಎನ್ನಮಗನೆ ಬಾರೊ ಹೊನ್ನ ಪುತ್ಥಳಿಗೊಂಬೆ
ಬಾರಯ್ಯ ನನಮಗನೆ ಮುದ್ದುಮಗನೆ ಬಾರೊ

ಇಂಥ ಎಷ್ಟೋ ಹಾಡುಗಳು ಕಥೆಯ ಮಧ್ಯೆ ಮಧ್ಯೆ ಬರುತ್ತವೆ. ಯಾವುದೋ ಘಟ್ಟದಲ್ಲಿ ಮುಖ್ಯ ಕಥೆಯನ್ನು ನಿಲ್ಲಿಸಿ ಶೋಕಭಾವದಿಂದೂ ತಣಿದ ಪ್ರೇಕ್ಷಕರನ್ನು ನಗೆಯಲ್ಲಿ ತೇಲಿಸುವ ಉಪಕಥೆ ಮುಗಿದಮೇಲೆ ಮತ್ತೆ ಮುಖ್ಯ ಕಥೆಗೆ ಬರುವ ಬಗೆಯೂ ಸುಂದರವಾಗಿರುತ್ತದೆ.

ಅಲ್ಲಿಗಲ್ಲಿಗೆ ಕಥೆಯು ಮಲ್ಲಿಗೆ ವಾಸನೆಯು
ಬಲ್ಲಂಥ ಜಾಣರಿಗೆ ಇದು ಮಧುರವಯ್ಯಾ
ಅತಿಮಧುರವಯ್ಯಾ
ಮುಂದಲ ಕಥೆಯ ಅದರಂದವ ಪೇಳುವೆನು
ಚಂದ್ರಶೇಖರ ನಮಗೆ ವರಕೊಡೆಲೊ ದೇವ
ವರಕೊಡೆಲೋ ದೇವ

ಕರಪಾಲ ಕಥೆ ಗುರುಶಿಷ್ಯರ ಸಂಭಾಷಣೆಯಲ್ಲಿ ಸಾಗುತ್ತದೆ. ಮುಖ್ಯ ಕಥೆಗಾರ ಗುರು. ತನ್ನ ಪಕ್ಕದ ನೃತ್ಯಗಾರನನ್ನು ಕುರಿತು ಅವನೆನ್ನುತ್ತಾನೆ—

ಅಯ್ಯ ಮಗು ಕೇಳಬೇಕಯ್ಯ
ಆಗಲಿ ಗುರುವೇ......
ಶುಭ ದಿನ, ಶುಭಲಗ್ನ, ಶುಭ ತಿಥಿಯಲ್ಲಿ
ಚದುರಂಗರಾಯರು ಹೇಗೆ ಹೊರಟಿದ್ದಾರಯ್ಯ......
ಹೇಗೆ ಹೊರಟಿದ್ದಾರೆ ಗುರುವೇ......
ಹೀಗೆ ಸಂಭಾಷಣೆಯಿಂದ ತಟ್ಟನೆ ಹಾಡಿಗೆ ಜಿಗಿಯುತ್ತಾನೆ—
ಕುದುರೆಯ ಕುಣಿಸುತ್ತ ಹುರಿಮಿಸೆ ತಿರುವುತ
ಹೊರಟನೇ ರಾಯ ಚದುರಂಗರಾಯ

ಹಾಡನ್ನು ಮುಗಿಸಿ ಮತ್ತೆ ಮನೋಜ್ಞವಾದ ಗದ್ಯಕಥನಕ್ಕೆ ತೊಡಗುತ್ತಾನೆ.

ಆ ಪರಮಾತ್ಮನ ಲೀಲಾಮಯದಿಂದ ಚದುರಂಗರಾಯರು ಹೋಗುತ್ತಿರಬೇಕಾದರೆ ; ಮುಂದೆ ಏನಾಯಿತಪ್ಪಾ ?

ಏನಾಯಿತು ಗುರುವೆ?

ಪಂಚವರ್ಣದ ಗಿಳಿಯೊಂದುಕಾಣಿಸಿ ಕೊಂಡಿದೆ. ಆ ' ಕಾಡಾರಣ್ಯದಲ್ಲಿ ' ಚದುರಂಗ ರಾಯರು ಆ ಗಿಣಿಯನ್ನು ಹಿಂಬಾಲಿಸಿ ಹೋಗಿದ್ದಾರೆ.

ಕರಪಾಲ ಮೇಳದ ವಚನ ಭಾಗವೂ ಒಂದು ರೀತಿಯಲ್ಲಿ ಪದ್ಯಗಂಧಿಯಾಗಿಯೇ ಇರುತ್ತದೆ. ತನ್ನದೇ ಆದ ಗತ್ತಿನಲ್ಲಿ ನಿರೂಪಿಸುವುದರ ಮೂಲಕ ವಚನಭಾಗವನ್ನು ಆಕರ್ಷಕವಾಗಿರುವಂತೆ ಮಾಡಿರುತ್ತದೆ.

ಕರಪಾಲ ಎಂಬ ಶಬ್ದ ಕರಪಲ್ಲ, ಕರಪಲ್ಲವ, ಕರತಾಲ ಎಂಬ ಶಬ್ದಗಳ ರೂಪಾಂತರವಿರಬೇಕೆಂದು ಊಹಿಸಲಾಗಿದೆ. ಬೆರಳುಗಳ ಸಂಜ್ಞೆಯ ಮೂಲಕ ಪ್ರೇಕ್ಷಕರ ಹೆಸರನ್ನು ಹೇಳುವ ಒಂದು ಸಂಪ್ರದಾಯ ಕರಪಾಲ ಮೇಳದಲ್ಲಿದ್ದಂತೆ ತೋರುತ್ತದೆ. ಗುರು ನಿರ್ದಿಷ್ಟ ವ್ಯಕ್ತಿಯ ಹೆಸರನ್ನು ತಿಳಿದು ಜನರ ನಡುವೆ ನಿಂತ ತನ್ನ ಶಿಷ್ಯನಿಗೆ ಬೆರಳುಗಳ ಮೂಲಕ ಕೆಲವು ಸಂಜ್ಞೆಗಳನ್ನು ತೋರುತ್ತಾನೆ. ಅದರ ಮೂಲಕ ಶಿಷ್ಯ ಸಂಬಧಪಟ್ಟ ವ್ಯಕ್ತಿಯ ಹೆಸರನ್ನು ಊಹಿಸಿ ಹೇಳುತ್ತಾನೆ. ಹೀಗೆ ಈ ಹೆಸರು ಹೇಳುವ ಸಂಪ್ರದಾಯವೂ ಹಾಡಿನಲ್ಲಿಯೇ ಬೆರೆತು ಬರುತ್ತದೆ. ಗುರು ಸೂಚಿಸಿದ ಹೆಸರು ಕಲ್ಲಪ್ಪ ಆಗಿದ್ದರೆ—

ಕಲ್ಲಪ್ಪ ಹೌದೇನ್ರಿ
ಮತ್ತೀನ್ಯಾರ್ ಹೇಳಯ್ಯಾ
ಸುವ್ವಿಬಾ ಚೆನ್ನಬಸವಯ್ಯಸುವ್ವಿ

( ಎಂ. ಚಿದಾನಂದಮೂರ್ತಿ )

ಹೀಗೆ ಕರಪಲ್ಲವ (ಬೆರಳು) ಎಂಬ ಶಬ್ದದಿಂದ ಕರಪಲ್ಲ ಅಥವಾ ಕರತಾಲ ಬಂದಿರಬೇಕು. ಕರತಾಲ ಎಂಬ ಮಾತು ಕೈಯ ತಾಳವನ್ನು ಸೂಚಿಸುವಂತಿದ್ದರೂ ಅಷ್ಟು ಸಮರ್ಪಕವಾಗಿ ತೋರುವುದಿಲ್ಲ.

ಕರಪಾಲ ಮೇಳ ಉತ್ತರ ಕರ್ಣಾಟಕದಿಂದ ದಕ್ಷಿಣ ಕರ್ಣಾಟಕಕ್ಕೆ ಬಂದ ಒಂದು ಶ್ರೇಷ್ಠ ಜನಪದ ಕಲೆ. ದಕ್ಷಿಣ ಕರ್ಣಾಟಕದ ಎಲ್ಲ ಕಡೆಗಳಲ್ಲೂ ಇದು ಕಾಣಬರದಿದ್ದರೂ ತುಮಕೂರು, ಹಾಸನ, ಚಿತ್ರದುರ್ಗ, ಶಿವಮೊಗ್ಗ ಜಿಲ್ಲೆಗಳಲ್ಲಿ ಅಲ್ಲಲ್ಲಿ ಇನ್ನೂ ಉಳಿದಿದೆ. ಕೈಬೆರಳಿನ ಸಂಜ್ಞೆಗಳ ಮೂಲಕ ಹೆಸರನ್ನು ಹಾಕುವ ಪದ್ಧತಿ ದೂರವಾಗುತ್ತಿದ್ದರೂ ಮೇಳವನ್ನುನಡೆಸುವ ಸಂಪ್ರದಾಯ ಮಾತ್ರ ಈಗಲೂ ಉಸಿರಾಡುತ್ತಿದೆ. ಸಾಮಾನ್ಯವಾಗಿ ವೀರಶೈವ ಧರ್ಮದ ಅಯ್ಯಗಳು ಈ ಕರಪಾಲ ಮೇಳವನ್ನುನಡೆಸಿಕೊಂಡು ಬಂದಿದ್ದರೂ ಬೇರೆ ಧರ್ಮೀಯರು ಅಲ್ಲಲ್ಲಿ ಭಾಗವಹಿಸಿದ ನಿದರ್ಶನಗಳೂ ಇವೆ. ಮಹಮದೀಯ ಮತದವರೂ ಕರಪಾಲ ಮೇಳವನ್ನು ಅತ್ಯಂತ ಆಕರ್ಷಕ ರೀತಿಯಲ್ಲಿ ನಡೆಸಿದ ಸಂದರ್ಭಗಳನ್ನು ತುಮಕೂರು ಜಿಲ್ಲೆಯಲ್ಲಿ ಕಾಣಬಹುದು.

ಹಬ್ಬಹರಿದಿನಗಳಲ್ಲಿ, ಪುಣ್ಯದಿನಗಳಲ್ಲಿ ಕರಪಾಲ ಮೇಳವನ್ನು ನಡೆಸಲಾಗುವುದು. ಯಕ್ಷಗಾನ ಬಯಲಾಟಗಳಲ್ಲಿ ತೊಗಲು ಬೊಂಬೆ ಹಾಗೂ ಸೂತ್ರದ ಬೊಂಬೆಯಾಟಗಳಲ್ಲಿ ಆಸಕ್ತಿಯನ್ನು ಕಳೆದುಕೊಂಡಿರುವ ಜನ ಕರಪಾಲ ಮೇಳದಲ್ಲಿನ್ನೂ ಆಸಕ್ತಿಯನ್ನುಳಿಸಿಕೊಂಡು ಬಂದಿರುವುದು ಅದರ ಜನಪ್ರಿಯತೆಗೆ ಸಾಕ್ಷಿಯಾಗಿದೆ.(ಜಿ.ಎಸ್.ಪಿ.)

**ಕರಬೂಜ :** ಜನಪ್ರಿಯವೆನಿಸಿರುವ ಬೇಸಗೆಯ ಹಣ್ಣಿನ ಸಸ್ಯ. ಇದರ ಕಾಯಿಗಳನ್ನು ತರಕಾರಿಯಾಗಿ ಉಪಯೋಗಿಸುವುದೂ ಉಂಟು. ಕರಬೂಜದ ಹಣ್ಣಿನಿಂದ ತಂಪಾದ ಪಾನಕ ಮಾಡುತ್ತಾರೆ. ಇದನ್ನು ಯಾವ ಸೇರಿಕೆಯೂ ಇಲ್ಲದೆ ಅಥವಾ ಸಕ್ಕರೆಯೊಡನೆ ತಿನ್ನಬಹುದು. ಹಳದಿ ಬಣ್ಣದ ಕರಬೂಜ ತಳಿಗಳಲ್ಲಿ ಸಿ ಜೀವಾತು ಇತರ ತಳಿಗಳಿಗಿಂತ ಅಧಿಕವಾಗಿದೆ. ಇದರ ಬೀಜಗಳನ್ನೂ ಔಷಧಿಗಳಲ್ಲಿ ಉಪಯೋಗಿಸುತ್ತಾರೆ. ಕರಬೂಜ ಕೇವಲ ಹಿತಕರ ಆಹಾರ ಮಾತ್ರವಲ್ಲದೆ, ಮನುಷ್ಯನಿಗೆ ಆರೋಗ್ಯ ಕೊಡುವ ಪುಷ್ಟಿಕರವಾದ ಆಹಾರವೂ ಹೌದು. ಇದರ ಹಣ್ಣಿನಲ್ಲಿರುವ ಆಹಾರಾಂಶಗಳು, ಈ ರೀತಿ ಇವೆ: ತೇವಾಂಶ 92.76% ಪ್ರೋಟೀನುಗಳು 0.6% ಕೊಬ್ಬು 0.2% ಬೂದಿ 0.6% ಕ್ಯಾಲ್ಸಿಯಂ 0.0 16% ನಾರು 0.5% ಸಕ್ಕರೆ 0.5% ಕಬ್ಬಿಣ 0.0004% ಹಾಗು ಪ್ರತಿ 100 ಗ್ರಾಮಿಗೆ ಎ ಜೀವಾತು 2400 ಐ. ಯು; ಬಿ ಜೀವಾತು 130 ಗ್ರಾಂ; ಸಿ ಜೀವಾತು 25 ಮಿ. ಗ್ರಾಂ. ಗಳಷ್ಟಿವೆ.

ಕರಬೂಜ ಸಸ್ಯದ ಉಗಮಸ್ಥಾನದ ಬಗ್ಗೆ ಭಿನ್ನಾಭಿಪ್ರಾಯಗಳಿವೆ. ಸಾಮಾನ್ಯವಾಗಿ ಇದು ಇರನ್ ಕಣಿವೆ ಮತ್ತು ಭಾರತದ ವಾಯುವ್ಯ ದೇಶಗಳ ಮೂಲವಾಸಿ ಎಂಬುದನ್ನು ಬಲುಮಂದಿ ಸಂಶೋಧಕರು ಒಪ್ಪುತ್ತಾರೆ.

ಕರಬೂಜ ಕುಕುರ್ಬಿಟೇಸೀ ಕುಟುಂಬದ ಕುಕುಮಿಸ್ ಜಾತಿಯ ಮೆಲೊ ಪ್ರಭೇದಕ್ಕೆ ಸೇರಿದೆ. ಇದರ ಕಾಂಡ ಬಲಹೀನವಾಗಿದ್ದು ನೇರವಾಗಿ ಮೇಲಕ್ಕೆ ಬೆಳೆಯಲಾರದು. ಇದು ನೆಲದ ಮೇಲೆಯೇ ಹರಡಿ ಬೆಳೆಯುವ ಹಂಬು ಸಸ್ಯ. ಹಲವಾರು ಏಣುಗಳಿಂದ ಕೂಡಿದ ಇದರ ಮೇಲೆಲ್ಲ ಮೃದುವಾದ ಹಾಗೂ

ನವುರಾದ ಕೂದಲುಗಳಿವೆ. ಎಲೆ ವೃತ್ತಾಕಾರ, ಕರನೆಯಾಕಾರ ಅಥವಾ ಮೂತ್ರ ಪಿಂಡಾಕಾರ; ಎಲೆಯಲಗು ನಿರ್ದಿಷ್ಟವಾದ ಭಾಗಗಳಾಗಿ ಸೀಳಿಲ್ಲ. ಅಂಚು ಗರಗಸನಂತೆ; ಎಲೆಯಮೇಲೆ ಕೂದಲುಗಳಿವೆ. ಎಲೆಯ ಕಂಕುಳಲ್ಲಿ ಒಂಟಿಹೂಗಳು ಅರಳುತ್ತವೆ. ಅವು ಭಿನ್ನಲಿಂಗಿಗಳು. ಹೂದಳಗಳು 5, ಪರಸ್ಪರ ಕೂಡಿಕೊಂಡಿವೆ. ಹೂದಳ ಸಮೂಹ ಗಂಟೆಯಾಕಾರದ್ದು, ಅದರ ಬಣ್ಣ ಹಳದಿ. ಗಂಡು ಹೂವಿನಲ್ಲಿ 5 ಕೇಸರಗಳಿವೆ. ಹೆಣ್ಣು ಹೂವಿನಲ್ಲಿ ನೀಚಸ್ಥಾನದ ಅಂಡಾಶಯವಿದೆ. ಮೂರು ಕಾರ್ಪೆಲುಗಳ ಇದರಲ್ಲಿ ಹಲವಾರು ಅಂಡಕಗಳಿವೆ. ಫಲ ಗುಂಡು ಅಥವಾ ಆಯತಾಕಾರವೂ ರಸಭರಿತವೂ ಆಗಿದೆ. ಇದನ್ನು ಪೆಪೊ ಎನ್ನುತ್ತಾರೆ. ಇದಕ್ಕೆ ಒರಟಾದ ಸಿಪ್ಪೆಯೂ ಮೆದುವಾದ ತಿರುಳೂ ಇವೆ.



**ಬೇಸಾಯ :** ಕರಬೂಜದ ಬೇಸಾಯಕ್ಕೆ ಹೆಚ್ಚು ಉಷ್ಣತೆ ಮತ್ತು ಒಣ ವಾತಾವರಣ ಅಗತ್ಯ. ಸುಮಾರು 30° ಸೆಂ. ಉಷ್ಣತೆಯ ಉತ್ತಮ ತಂಪಾದ ಹವಾಗುಣದಲ್ಲಿ ಹಲವಾರು ರೋಗಗಳಿಗೆ ಬಲಿಯಾಗುತ್ತದೆ. ಕಾಯಿಗಳು ಹಣ್ಣಾಗುವ ಸಮಯದಲ್ಲಿ ಮಣ್ಣಿನಲ್ಲಿ ಅಧಿಕ ತೇವಾಂಶವಿದ್ದರೆ ಕೀಳುದರ್ಜೆಯ ಫಲವನ್ನು ಕೊಡುತ್ತದೆ. ಈ ಬೆಳೆ ಯಾವ ಹಂತದಲ್ಲಿಯೂ ಹಿಮವನ್ನು ಸಹಿಸುವುದಿಲ್ಲ. ಸಾಮಾನ್ಯವಾಗಿ ಕರಬೂಜವನ್ನು ನದಿ, ಕೆರೆ ಮುಂತಾದುವುಗಳ ದಡದಲ್ಲಿರುವ ಮರಳು ಅಥವಾ ಮರಳು ಗೋಡು ಮಣ್ಣಿನಲ್ಲಿ ಬೆಳೆಸುತ್ತಾರೆ. ಆದರೆ ಇದನ್ನು ರವೆಗೋಡು, ಜೇಡಿ ಗೋಡು ಮಣ್ಣುಗಳಲ್ಲಿ ಸಹ ಬೆಳೆಸಬಹುದು. ಆದರೆ ಜಿಗಟಾಗಿರುವ ಜೇಡಿ ಮಣ್ಣಿನಲ್ಲಿ ಇದರ ಬೇಸಾಯ ಯಶಸ್ವಿಯಾಗುವುದಿಲ್ಲ. ಇದರ ಬೇಸಾಯಕ್ಕೆ ph 6.0 ರಿಂದ 6.7ರ ವರೆಗಿನ ಕ್ಷಾರೀಯ ಮಣ್ಣು ಯೋಗ್ಯವಾದದ್ದು.

ಕರಬೂಜದ ಅನೇಕ ತಳಿಗಳು ಬೇಸಾಯದಲ್ಲಿವೆ. ಸ್ಥಾನೀಯ ತಳಿಗಳು ಇಳುವರಿ ದೃಷ್ಟಿಯಿಂದ ಉತ್ತಮವಲ್ಲ. ಹಣ್ಣಿನ ಗಾತ್ರ, ಆಕಾರ ಮತ್ತು ಬಣ್ಣದ ಮೇಲೆ ತಳಿಗಳ ವಿಂಗಡಣೆ ಮಾಡಿದೆ. ಪಿ. ಎಂ. ಆರ್., 45. ಜುಕುಂಬ ಕ್ಯಾಂಪೊ ಮುಂತಾದ ಹೆಚ್ಚು ಇಳುವರಿ ಕೊಡುವ ವಿದೇಶಿ ತಳಿಗಳು ಹೆಚ್ಚಿನ ಜನಪ್ರಿಯತೆ ಗಳಿಸಿವೆ. ಆಫ್ಘಾನಿಸ್ತಾನದ ಸರ್ದ ಮೆಲನ್ ಎಂಬ ತಳಿ ಸಿಹಿಯಾದ ದಪ್ಪ ತಿರುಳು ಮತ್ತು ಮಧುರ ವಾಸನೆಯಿಂದ ಕೂಡಿದ್ದು ಹೆಚ್ಚು ಇಳುವರಿ ಕೊಡುವುದರಿಂದ ಅದರ ಬೇಸಾಯ ಅಧಿಕ ಪ್ರಮಾಣದಲ್ಲಿ ನಡೆದಿದೆ. ಲಕ್ನೊ ಸಫೇದ್, ಅಲಹಾಬಾದಿ, ಹರಿದ್ವಾರಿ, ಫೈಜಾಬಾದಿ. ಕನೂಜಿ, ಮುಂತಾದವುಗಳು ಭಾರತ ದೇಶದ ತಳಿಗಳು. ಮೈಸೂರು ರಾಜ್ಯದಲ್ಲಿ ಕಾವೇರಿ, ಗಂಜಾಂ ಜಾಮ್ ಮತ್ತು ಬನಾಸ್ಪತ್ರಿ ಎಂಬ ತಳಿಗಳು ಬೇಸಾಯದಲ್ಲಿವೆ.



ಬಿತ್ತನೆ ಪ್ರಮಾಣ : ಎಕರೆಗೆ ಸುಮಾರು 750 ಗ್ರಾಂಗಳಿಂದ 1 ಕಿ ಗ್ರಾಂ ಬೀಜ ಬೇಕಾಗುತ್ತದೆ. ಈ ಪ್ರಮಾಣ ಬೀಜದ ಗಾತ್ರ ಮತ್ತು ತೂಕವನ್ನು ಅನುಸರಿಸಿ ಇವೆ.

ಕರಬೂಜ ಅಪ್ಪಟ ಬೇಸಗೆ ಬೆಳೆ. ಸಾಮಾನ್ಯವಾಗಿ ನವಂಬರ್ ತಿಂಗಳಿಂದ ಫೆಬ್ರವರಿ ವರೆಗೆ ಇವರ ಬೀಜವನ್ನು ಬಿತ್ತುವರು. ಉತ್ತರ ಭಾರತದಲ್ಲಿ ಹೆಚ್ಚು ಹಿಮ ಬೀಳುವುದರಿಂದ ಬಿತ್ತನೆಯ ಅವಧಿ ಫೆಬ್ರವರಿ ಮಾರ್ಚ್ ತಿಂಗಳುಗಳಿಗೆ ಸೀಮಿತವಾಗಿದೆ. ಮಣ್ಣನ್ನು 6′ ಅಂತರದಲ್ಲಿ 2′–3′ ಅಗಲ ಮತ್ತು ಅಷ್ಟೇ ಎತ್ತರದ ದಿಂಡುಗಳನ್ನು ಮಾಡಿ ಅವರ ಮೇಲೆ 1′ ಅಂತರದ ಸಾಲುಗಳಲ್ಲಿ ಬೀಜವನ್ನು ಬಿತ್ತುತ್ತಾರೆ. ಕೆರೆ ಮತ್ತು ನದಿಗಳ ಅಂಗಳದಲ್ಲಿ ಇದರ ಬೇಸಾಯ ಮಾಡುವಾಗ ಎಕರೆಗೆ 30–35 ಗಾಡಿ ಕೊಟ್ಟಿಗೆ ಗೊಬ್ಬರವನ್ನು ತಳಗೊಬ್ಬರವಾಗಿ ಹಾಕಿ, ಅನಂತರ ಮಧ್ಯವರ್ತಿ ಬೇಸಾಯ ಮಾಡುವಾಗ ಎಕರೆಗೆ 25 ಕಿ ಗ್ರಾಂ. ಸಾರಜನಕ, 10 ಕಿ ಗ್ರಾಂ. ರಂಜಕ. 45ಕಿ ಗ್ರಾಂ. ಪೊಟ್ಯಾಷ್ ಮತ್ತು 30ಕಿಗ್ರಾಂ. ಸುಣ್ಣ ಹಾಕಬೇಕು. ತೋಟಗಳಲ್ಲಿ ಬೇಸಾಯ ಮಾಡುವಾಗ 6′ ಅಂತರದ ಸಾಲುಗಳಲ್ಲಿ 4′ ಅಂತರದಲ್ಲಿ 2′ ಅಗಲದ ಗುಣಿಗಳನ್ನು ತೋಡಿ, ಪ್ರತಿ ಗುಣಿಯಲ್ಲಿ 4–5 ಬೀಜಗಳನ್ನು ಬಿತ್ತಬೇಕು. ಕರಬೂಜದ ತೋಟದಲ್ಲಿ ಕಾಲಕಾಲಕ್ಕೆ ಕಳೆ ತೆಗೆಯಬೇಕು. ಸಸಿಗಳ ಹಂಬು ಹರಿಯಲು ಪ್ರಾರಂಭಿಸಿದಾಗ ಹೆಚ್ಚು ನೀರು ನಿಲ್ಲುವಂತೆ ವಿಶಾಲವಾಗಿ ಪಾತಿಮಾಡಬೇಕು.

ಬೀಜ ಬಿತ್ತಿದ 1½ ತಿಂಗಳ ಅನಂತರ ಕರಬೂಜಹಂಬು ಹೂ ಬಿಡುತ್ತವೆ. ಅನಂತರ ಒಂದು ತಿಂಗಳಿಗೆ ಹಣ್ಣು ಕುಯ್ಲಿಗೆ ಬರುತ್ತದೆ. ಕಾಯಿ ಬಲಿತು ಹಣ್ಣಾಗುವ ಕಾಲ ಸಮೀಪಿಸಿದಾಗ ಕಾಯಿಗಳು ಮೊದಲಿನ ಬಣ್ಣವನ್ನು ಬದಲಾಯಿಸಿ ಸ್ವಲ್ಪ ಹಳದಿ ಬಣ್ಣಕ್ಕೆ ತಿರುಗುತ್ತವೆ. ಪಕ್ವವಾದಾಗ ತೊಟ್ಟಿನ ಸುತ್ತಲೂ ತಗ್ಗು ಕಾಣಿಸಿಕೊಳ್ಳುತ್ತದೆ. ಆಗ ಹರಿತವಾದ ಚಾಕುವಿನಿಂದ ತೊಟ್ಟುಗಳನ್ನು ಕೊಯ್ದು ಹಣ್ಣುಗಳನ್ನು ಹಂಬಿನಿಂದ ಬೇರ್ಪಡಿಸಬೇಕು.

**ಇಳುವರಿ :** ಕರಬೂಜದ ಇಳುವರಿಯ ಪ್ರಮಾಣ ಅವುಗಳ ತಳಿ ಮತ್ತು ಬೇಸಾಯ ಕ್ರಮವನ್ನು ಅನುಸರಿಸಿ ಇದೆ. ಆದರೆ ಸರಾಸರಿ ಇಳುವರಿ 8.000 ರಿಂದ 12.000 ಕಿ ಗ್ರಾಂ ವರೆಗಿನ ಅಂತರವಿದೆ.

ಕರಬೂಜದ ಕೀಟ ಮತ್ತು ರೋಗಗಳ ಬಗ್ಗೆ ನೋಡಿ — ಕುಂಬಳ (ತಿ.ಎಸ್.)

**ಕರಮ್‌ಜಿ಼ನ್, ನಿಕೊಲೆ :** 1765–1826. ರಷ್ಯನ್ ಸಾಹಿತಿ. ಉತ್ತಮ ವಿದ್ಯಾಭ್ಯಾಸವನ್ನು ಪಡೆದು ಫ್ರೀ ಮೇಸನರ ಪ್ರಭಾವಕ್ಕೆ ಒಳಗಾದ. ರಷ್ಯನ್ ಪ್ರವಾಸಿಯ ಪತ್ರಗಳು ಎಂಬ ಈತನ ಪುಸ್ತಕ ಹೊಸ ವಿಶಾಲ ಸಂಸ್ಕೃತ ಮನೋಭಾವವನ್ನು ವ್ಯಕ್ತಪಡಿಸಿತು. ಮಾಸ್ಕೊ ಪತ್ರಿಕೆ, ಯೂರೋಪಿನ ದೂತ ಎನ್ನುವ ಮಾಸಪತ್ರಿಕೆಗಳನ್ನು ಈತ ನಡೆಸಿದ. ಮಾಸ್ಕೊ ಪತ್ರಿಕೆಯ ಪ್ರಕಟಣೆ (1791) ಸೂಕ್ಷ್ಮ ಸಂವೇದನಾ ಪಂಥದ ನಾಂದಿ ಎನ್ನಬಹುದು. ಇವನ ಸಾಹಿತ್ಯ ಬಾಳು ವಂಥದಲ್ಲವಾದರೂ ಹೊಸದೊಂದು ಮನೋಧರ್ಮವನ್ನು ಪ್ರಸಾರಗೊಳಿಸಿ ಸಾರ್ಥಕವೆನಿಸಿತು. ಮನುಷ್ಯನ ಸಹಜಪ್ರವೃತ್ತಿಗಳು ಒಳ್ಳೆಯವು ಅಲ್ಲದೆ ಸುಖಕ್ಕೆ ಸಾಧನ ಎನ್ನುವ ದೃಷ್ಟಿ ಇವನದು. ಇವನ ಸಂಸ್ಕೃತಿ ಈ ಅಭಿಪ್ರಾಯಕ್ಕೆ ಮೆರುಗನ್ನು ನೀಡಿತು. ಇವನ ಕಾದಂಬರಿಗಳು ಸತ್ತ್ವಯುತವಾಗಿಲ್ಲವೆನ್ನಬೇಕು. ಉದ್ದೇಶಪೂರ್ವಕವಾದ ಕಲೆಯನ್ನು ಸೇರಿಸಿ ಕಥೆಗೆ ಸಾಹಿತ್ಯದ ಪಟ್ಟವನ್ನು ಕಟ್ಟಿದವನೀತ. ಸಾಹಿತ್ಯದ ಭಾಷೆಯಲ್ಲಿ ಲಾಮನೋಸಫ್ ಉಳಿಸಿಕೊಂಡಿದ್ದ ಚರ್ಚ್–ಸ್ಲವೊಕ್ ಅಂಶವನ್ನು ತ್ಯಜಿಸಿ, ಆಧುನಿಕ ಭಾವನೆಗಳು ಮತ್ತು ಭಾವಗಳಿಗೆ ಫ್ರೆಂಚ್ ಪದಗಳನ್ನು ಭಾಷಾಂತರ ಮಾಡಿಕೊಂಡು ಬಳಸುವುದು, ವಾಕ್ಯವಿನ್ಯಾಸದಲ್ಲಿಯೂ ಶೈಲಿಯಲ್ಲಿಯೂ ಫ್ರೆಂಚ್ ಮಾದರಿಗಳನ್ನನುಸರಿಸುವುದು, ಸುಲಲಿತವಾದ ಶೈಲಿ–ಇವು ಕರಮ್‌ಜಿ಼ನ್‌ನ ಮುಖ್ಯ ಯೋಜನೆಗಳು. ಈ ಚಳವಳಿ ರೂಸೊ ಪ್ರತಿಪಾದಿಸಿದ್ದ ನವಸೂಕ್ಷ್ಮಸಂವೇದನಾ ಪಂಥಕ್ಕೆ ಬೆಂಬಲ ನೀಡಿತು. ಇವನ ಅತ್ಯುತ್ತಮ ಕೃತಿ ರಷ್ಯ ದೇಶದ ಚರಿತ್ರೆ (1811). ಸತ್ತ್ವಪೂರ್ಣವೂ ನಿರಾಡಂಬರವೂ ಆದ ತರ್ಕ ಇದನ್ನು ಉತ್ತಮ ಸಾಹಿತ್ಯಕೃತಿಯನ್ನಾಗಿ ಮಾಡಿದೆ. (ಎಲ್.ಎಸ್.ಎಸ್.)

**ಕರಲಿಂಗಿಗಳು :** ಒಂದು ಬಗೆಯ ವಾಮಾಚಾರಿ ಸಂನ್ಯಾಸಿಗಳು ; ಶಿವನ ಉಪಾಸಕರು. ಶಿವನನ್ನು ಶಬರ ಎಂದು ಕರೆಯುತ್ತಾರೆ. ಶಬರನನ್ನು ಪೂಜಿಸುವುದರಿಂದ ಇವರಿಗೆ ಸೇವಾರರು ಎಂಬ ಹೆಸರೂ ಉಂಟು. ಇವರು ಜಟಾಧಾರಿಗಳು. ಉಡುಪು ಸಾಧಾರಣವಾಗಿ ಕೆಂಪು ಬಣ್ಣದ್ದು. ಗುಂಪುಗುಂಪಾಗಿ ಸಂಚರಿಸುವುದೇ ಸಾಮಾನ್ಯ. ಕೆಲವರು ಏಕಾಂತದಲ್ಲಿ ಯಾವಾಗಲೂ ನಗ್ನರಾಗಿ ಇರುತ್ತಾರೆ. ಕಾಮವನ್ನು ಗೆದ್ದಿರುವೆವೆಂದು ಪ್ರದರ್ಶಿಸಲು, ಇವರು ಶಿಶ್ನವನ್ನು ಕೊರೆದು ಅದನ್ನು ಬಳೆಯಿಂದ ಮತ್ತು ಸರಪಣಿಯಿಂದ ಬಿಗಿದಿರುತ್ತಾರೆ. ತಮ್ಮ ಜಟೆಯಿಂದ ಗಂಗೆ ಹರಿಯುತ್ತದೆ ಎಂದು ಘೋಷಿಸಿ ತಮ್ಮ ತಲೆಗೂದಲಿಂದ ನೀರು ಹರಿಸಿ ತೋರಿಸುತ್ತಾರೆ. ಮದ್ಯವನ್ನು ಹಾಲಾಗಿ ಪರಿವರ್ತಿಸುತ್ತೇವೆಂದೂ ಬರಿ ಕೈಯಿಂದ ಅಕ್ಕಿ ಗೋದಿಕಾಳುಗಳನ್ನು ಬರಿಸುತ್ತೇವೆಂದೂ ಹೇಳಿ ಜನರಿಂದ ಹಣವನ್ನು ಸಂಪಾದಿಸುತ್ತಾರೆ. (ಜಿ.ಎಚ್.)

**ಕರಸಹರ್ :** ಪ್ರಾಚೀನ ಭಾರತ ಚರಿತ್ರೆಯಲ್ಲಿ ಅಗ್ನಿದೇಶ ಎಂದು ಪ್ರಸಿದ್ಧವಾಗಿದ್ದ ಈ ರಾಜ್ಯ ಭಾರತ-ಚೀನಗಳ ನಡುವೆ, ಮಧ್ಯ ಏಷ್ಯದಲ್ಲಿದ್ದು ಚೀನದಲ್ಲಿ ಭಾರತೀಯ ಸಂಸ್ಕೃತಿ ಹರಡಲು ಬಹಳ ಸಹಾಯಮಾಡಿತು. ಡಾರೀಮ್ ನದೀ ಬಯಲಿಗೆ ಸಮೀಪದಲ್ಲಿ ಕುಚಿ, ತುರ್ಫಾನ್ ಮೊದಲಾದ ಕೇಂದ್ರಗಳ ಮಾರ್ಗದಲ್ಲಿದ್ದು ಕ್ರಿಸ್ತಪೂರ್ವಕಾಲದಿಂದಲೂ ಸಂಸ್ಕೃತಿಯ ಕೇಂದ್ರವಾಗಿತ್ತು. ಕುಚಿ ರಾಜ್ಯದೊಡನೆ ಸೇರಿ ಚೀನದ ಪ್ರಭಾವ ಕಡಿಮೆ ಮಾಡಲು ಮೊದಲಿನಿಂದಲೂ ಯತ್ನಿಸಿತು. ಕ್ರಿ.ಪೂ. ಎರಡನೆಯ ಶತಮಾನದಲ್ಲಿ ಇದು ಚೀನ ದೇಶದ ಆಳ್ವಿಕೆಗೆ ಒಳಪಟ್ಟಿತ್ತಾದರೂ ಕ್ರಿ.ಶ. 75ರಲ್ಲಿ ಕರಸಹರ್‌ನ ರಾಜನಾದ ಶುಯೆನ್ ಮತ್ತು ಅವನ ಮಗ ಜೊಂಗ್, ಚೀನೀ ರಾಜನ ಮೇಲೆ ದಂಗೆ ಎದ್ದು ಸ್ವತಂತ್ರರಾದರು. ಆದರೆ ಮುಂದೆ ಕೆಲವೇ ವರ್ಷಗಳಲ್ಲಿ ಚೀನೀಯರು ಆಗ ಕರಸಹರ್‌ನ ದೊರೆಯಾಗಿದ್ದ ಕುವಾಂಗನನ್ನು ಕೊಂದು ನಗರಗಳನ್ನು ಲೂಟಿಮಾಡಿ, ಜನಗಳನ್ನು ಅತೀವ ಹಿಂಸೆಗೆ ಗುರಿಮಾಡಿದರು. ಕರಸಹರ್ ಮತ್ತೆ ಚೀನೀ ಆಳ್ವಿಕೆಗೆ ಒಳಪಟ್ಟಿತು. 8ನೆಯ ಶತಮಾನದ ವರೆಗೆ ಚೀನೀ ಆಡಳಿತದಲ್ಲಿದ್ದ ಕರಸಹರ್ ರಾಜ್ಯದಲ್ಲಿ ಸ್ವಾತಂತ್ರ್ಯಕ್ಕೋಸ್ಕರ ದಂಗೆಗಳು ನಡೆಯುತ್ತಲೇ ಇದ್ದುವು. 755ರ ಅನಂತರ ಕರಸಹರ್ ರಾಜ್ಯ ಟಿಬೆಟ್ ರಾಜ್ಯಕ್ಕೆ ಸೇರಿಹೋಯಿತು. ಇದರಿಂದ ಪೂರ್ಣವಾಗಿ ಚೀನೀ ಪ್ರಭಾವ ತಪ್ಪಿಹೋಯಿತು.

ಕರಸಹರ್ ಬೌದ್ಧಧರ್ಮ ಕೇಂದ್ರವಾಗಿತ್ತು. 7ನೆಯ ಶತಮಾನದಲ್ಲಿ, ಸರ್ವಾಸ್ತಿವಾದ ಪ್ರಕಾರಕ್ಕೆ ಸೇರಿದ ಎರಡು ಸಾವಿರ ಬೌದ್ಧಬಿಕ್ಷುಗಳು, ಇಲ್ಲಿದ್ದ ಹತ್ತು ವಿಹಾರಗಳಲ್ಲಿ ವಾಸಿಸುತ್ತಿದ್ದರು. ಸಂಸ್ಕೃತ ಬೌದ್ಧಗ್ರಂಥಗಳನ್ನು ಅವರು ವಿವಿಧ ಭಾಷೆಗಳಿಗೆ ತರ್ಜುಮೆ ಮಾಡುತ್ತಿದ್ದರು. ತುರ್ಫಾನಿಗೆ ಈ ಗ್ರಂಥಗಳನ್ನು ಕಳುಹಿಸಿಕೊಟ್ಟು, ಬೌದ್ಧಧರ್ಮ ಪ್ರಚಾರಕ್ಕೆ ಕಾರಣರಾದರು. ಕುಚಿ ದೇಶದೊಡನೆ ಸಂಪರ್ಕಗಳನ್ನು ಹೊಂದಿದ್ದು, ಭಾರತೀಯ ಸಂಸ್ಕೃತಿಯ ಅನೇಕ ಲಕ್ಷಣಗಳನ್ನು ಕರಸಹರ್ ಜನಗಳು ಅಳವಡಿಸಿಕೊಂಡರು. ಆ ಕಾಲದ ಅನೇಕ ಬೌದ್ಧ ನಿವೇಶನಗಳು ಕರಸಹರ್‌ನಲ್ಲಿ ದೊರಕಿವೆ. ಇಲ್ಲಿ ದೊರಕಿರುವ ಅವಶೇಷಗಳಿಂದ ಹೀನಯಾನ ಬೌದ್ಧಧರ್ಮ ಮತ್ತು ಕಲೆ ಉಚ್ಛ್ರಾಯಸ್ಥಿತಿಯಲ್ಲಿದ್ದುವೆಂದು ವ್ಯಕ್ತವಾಗುತ್ತದೆ. (ಎ.ವಿ.ಎನ್.)

**ಕರಸ್ಥಲ ನಾಗಿದೇವ :** ಪ್ರೌಢದೇವರಾಯನ ಕಾಲದಲ್ಲಿದ್ದ ನೂರೊಂದು ವಿರಕ್ತರೆನಿಸಿದ ವೀರಶೈವ ಶರಣರಲ್ಲಿ ಪ್ರಸಿದ್ಧನಾದ ಪ್ರಥಮ ವಿರಕ್ತ. ಕಾಲ ಕ್ರಿ.ಶ. ಸು. 1430. ನಾಗಲಿಂಗನೆಂದೂ ಹೆಸರಿದೆ. ಕಲ್ಲುಮಠದ ಪ್ರಭುದೇವ, ಕುಮಾರ ಬಂಕನಾಥ, ಮೊಗ್ಗೆಯ ಮಾಯಿದೇವ, ಜಕ್ಕಣಾರ್ಯ, ಶಂಕರದೇವ, ಬತ್ತಲೇಶ್ವರ ಮೊದಲಾದವರ ಸಮಕಾಲೀನನಾಗಿದ್ದ ವೀರಣ್ಣೊಡೆಯರ ಪ್ರೀತಿಯ ಶಿಷ್ಯನಾಗಿದ್ದ. ಪ್ರಪ್ರಥಮವಾಗಿ ಈ ವಿರಕ್ತನ ಪ್ರಸ್ತಾಪ ಚಿಕ್ಕವೀರ ಜಂಗಮದೇವನ (ಸು. 1500) ಪಟ್ಟಸ್ಥಲವಲ್ಲಭವೆಂಬ ಗ್ರಂಥದಲ್ಲಿ ಕರಸ್ಥಲ ನಾಗಿದೇವನೇರಿದ ಮೋಹಿನಿಗಜವುಂ ಎಂಬಲ್ಲಿ ಕಂಡುಬಂದು, ಅನಂತರದ ಚೆನ್ನಬಸವಾಂಕನ ಮಹಾದೇವಿಯಕ್ಕನ ಪುರಾಣ (1550), ಅದೃಶ್ಯಕವಿಯ ಪ್ರೌಢದೇವರಾಯನ ಕಾವ್ಯ (1850), ವಿರೂಪಾಕ್ಷ ಪಂಡಿತನ ಚೆನ್ನಬಸವರಾಯನ ಕಾವ್ಯ (1584), ಕಂಬಾಳ ಶಾಂತಮಲ್ಲೇಶನ ಗುಣವಚನ ರತ್ನಾವಳಿ (1600), ಸಿದ್ದನಂಜೇಶನ ಗುರುರಾಜ ಚರಿತ್ರೆ, ರುದ್ರಕವಿಯ ಕರಸ್ಥಲ ನಾಗಲಿಂಗ ಚರಿತ್ರೆ (1650), ಸಂಪಾದನೆಯ ಪರ್ವತೇಶ್ವರ ಚತುರಾಚಾರ್ಯ ಪುರಾಣ (1698), ಮೋದಿಯ ರುದ್ರನ ನೂರೊಂದು ವಿರಕ್ತರ ಕಾವ್ಯ (1737) ಮೊದಲಾದ ಕಾವ್ಯಗಳಲ್ಲಿ ಬರುತ್ತದೆ. ದೊರಕಿರುವ ಇವನ ಕೃತಿಗಳಲ್ಲಿ ಸ್ವವಿಷಯವನ್ನು ಹೇಳಿಕೊಂಡಿಲ್ಲ. ವಿರೂಪಾಕ್ಷ ಪಂಡಿತನಿಂದ ರಚಿತವಾದ ಚೆನ್ನಬಸವಪುರಾಣದಲ್ಲಿ ಇವನ ಕಥೆ ಸಂಕ್ಷಿಪ್ತವಾಗಿ ಹೀಗೆ ದೊರೆಯುತ್ತದೆ : ನೂರೊಂದು ವಿರಕ್ತರಲ್ಲಿ ಪ್ರಸಿದ್ಧ ವಿರಕ್ತನೆನಿಸಿದ ನಾಗಯ್ಯ ತನ್ನ ಬಾಲ್ಯಾವಸ್ಥೆಯಲ್ಲಿ, ಹಾದರ ಮಾಡಲು ಒಂದು ಮನೆಯನ್ನು ಪ್ರವೇಶಿಸಿದುದನ್ನು ಇತರರು ಕಂಡಾಗ, ಆ ಕ್ಷಣವೇ ಸಂಸಾರದಿಂದ ವಿರಕ್ತನಾಗಿ ಲಿಂಗವನ್ನು ಧರಿಸಿ, ಅದರ ಪೀಠವನ್ನೆಸೆದು, ತಲೆಗೆಲ್ಲ ಭಸಿತವನ್ನು ಬಳಿದುಕೊಂಡು ದಿಗಂಬರನಾಗಿ ಆ ಗೃಹದಿಂದ ನಿಷ್ಕ್ರಮಿಸಿ ತನ್ನ ಗುರು ವೀರಣ್ಣೊಡೆಯನಿಗೆ ನಡೆದ ವೃತ್ತಾಂತವನ್ನು ವಿವರಿಸಲು, ಗುರು ಪೀಠರಹಿತವಾಗಿದ್ದ ಲಿಂಗಕ್ಕೆ ಬೇರೊಂದು ಪೀಠವನ್ನು ಅನುಗೊಳಿಸಿ ಕ್ರಿಯೆಯುಳಿವ ಪರಿಯಂತರ ತೊಲಗಲೀಯದಿರು–ಎಂದು ಉಪದೇಶಿಸಿ, ದೇಶಪರ್ಯಟನಕ್ಕೆ ಶಿಷ್ಯನನ್ನು ಬೀಳ್ಕೊಟ್ಟ. ಕೆಲವು ಕಾಲದ ಅನಂತರ ಹಿಂತಿರುಗಿ ಬಂದ ನಾಗಯ್ಯ ತನ್ನನ್ನು ಹಿಂಬಾಲಿಸುವಂತೆ ಗುರುವಿಗೆ ಹೇಳಿ ಹೊರಟ. ಹಾದಿಯಲ್ಲಿ ನಾಗನ ತಲೆಗೂದಲು ಮೆಳೆಯಲ್ಲಿ ಸಿಕ್ಕಿಕೊಂಡಿದ್ದುದನ್ನು ನೋಡಿದ ಗುರು ಬಿಡಿಸಿದ. ಇಬ್ಬರೂ ವಿದ್ಯಾನಗರಿಯತ್ತ ಪ್ರಯಾಣ ಬೆಳೆಸಿದರು. ಗುರು ಬಸವೇಶನಿಗೆ ಐಕ್ಯಪದಸ್ವಾನುಭವಮಾರ್ಗವನ್ನೂ ಪಟ್ಟಸ್ಥಲಮಾರ್ಗವನ್ನೂ ತಿಳಿಸಿಕೊಟ್ಟು ನಿರವಯವನಾಗಲಿಚ್ಛಿಸಿದ. ನಾಗಿದೇವ ಮೋಹಿನಿ ಗಜದ ಬಳಿಗೆ ಹೋಗಿ ಗಜವನ್ನೇರಲು ಹಗ್ಗಗಳೆಲ್ಲ ಬಂಗಾರವಾದುವು. ಹೀಗೆ ಅನೇಕ ಪವಾಡಗಳನ್ನು ಮೆರೆಸಿ ಗುರುವಿನ ಮೇಲೆ ಕರುಣೆದೋರುವಾಗ ಈ ಪವಾಡ ನಡೆಯಿತು : ನಾಗಯ್ಯನೇ ಬಾಲಲಿಂಗಣ್ಣನೆಂಬುವನ ರೂಪದಲ್ಲಿ ಪ್ರೀತಿಯಿಂದ ವೀರಣ್ಣೊಡೆಯನ ಮನೆಗೆ ಬಂದು ಭಿಕ್ಷವನ್ನು ಬೇಡಲಾಗಿ, ಗುರು ಆ ಬಾಲಯೋಗಿಯನ್ನು ಒಳಗೆ ಬರಮಾಡಿ ಮಂಚದ ಮೇಲೆ ಕುಳ್ಳಿರಿಸಿದ. ಬಾಲ ಲಿಂಗಣ್ಣ ಪವಡಿಸಿರುವ ಸಮಯದಲ್ಲಿ ಗುರು ಅವನ ಕರಸ್ಥಲದಲ್ಲಿದ್ದ ಲಿಂಗವನ್ನು ತೆಗೆದುಕೊಂಡ. ಇತರರೊಡನೆ ಭೋಜನವನ್ನು ಮುಗಿಸಿ, ಅನಂತರ ಗುರು ಬಾಲ ಲಿಂಗಣ್ಣನನ್ನು ಕರೆಯಲಾಗಿ 'ಹರಣವನ್ನುಳಿದು ಡಿಂಬವಿರಲು' ತನ್ನಲ್ಲಿದ್ದ ಲಿಂಗವನ್ನು ಆತನ ಕರದೊಳಗೆ ಪುನಃ ಇರಿಸಿದ. ಆಗ ಜೀವ ಮರುಕಳಿಸಿತ್ತು. ಲಿಂಗಣ್ಣ ತನಗೆ ಊಟವಾಗಿದೆಯೆಂದು ಹೇಳಿ ಊಟದ ಕುರುಹುಗಳನ್ನು ತೋರಿದ. ಲಿಂಗಣ್ಣ ನಿಜವಾಗಿ ತನ್ನ ಶಿಷ್ಯನೇ ಎಂದರಿತ ಗುರು 'ಪ್ರಾಣಲಿಂಗ ಸಂಧಾನಿ ನೀನಹುದು' ಎಂದು ಕೊಂಡಾಡಲು ನಾಗಲಿಂಗ ಅವನನ್ನೂ ನಿರವಯವಗೊಳಿಸಿದ.

ಮೂಲಕಥೆ ವಾಸ್ತವವಾಗಿ ಹೀಗೆಯೇ ಇದ್ದಿರಬೇಕು. ಅನಂತರ ಬಂದ ರುದ್ರಕವಿ ಸಾಂಗತ್ಯದಲ್ಲಿ ಈ ಶರಣನ ಮೇಲೆ ಉದ್ಗ್ರಂಥವನ್ನು ರಚಿಸಿ, ವ್ಯಭಿಚಾರಾದಿ ಅನೇಕ ಕಡೆಗಳಲ್ಲಿ ಕಥೆಯನ್ನು ಮಾರ್ಪಡಿಸಿದ.

ಕರಸ್ಥಲ ನಾಗಿಲಿಂಗ ಬರೆದ ಕೃತಿಗಳಲ್ಲಿ ದೊರಕಿರುವುವು ಕೆಲವು ಮಾತ್ರ. ಮಡಿವಾಳ ಮಾಚಯ್ಯನ ತಾರಾವಳಿ, ಅಕ್ಷರಚೌಪದ (ಒಂಬತ್ತು ವಾರ್ಧಕ ಷಟ್ಪದಿ ಪದ್ಯಗಳು), ಮೂರೇಳು ದೀಕ್ಷೆಯ ಪದ, ತ್ರಿವಿಧಿ. ತ್ರಿವಿಧಿ 31 ಗೂಢಾರ್ಥ ಪದ್ಯಗಳಿಂದ ಕೂಡಿದ್ದು ವೀರಶೈವ ಸಿದ್ಧಾಂತವನ್ನು ಬೋಧಿಸುತ್ತದೆ. ಸುಲಭಗ್ರಾಹ್ಯವಲ್ಲದ ಇದಕ್ಕೆ ಸು. 1650ರಲ್ಲಿದ್ದ ಪರ್ವತೇಶ ಟೀಕೆ ಬರೆದಿದಾನೆ. ನಾಗಲಿಂಗನ ತ್ರಿವಿಧಿಗೆ ಒಂದು ಉದಾಹರಣೆ :

ಸರ್ಪನಯಿದಿರೊಳಗಿರ್ಪ ಮಂಡುಕನೆದ್ದು
ಸರ್ಪನ ಮದವ ನಡುಗಿಸಿ ನಡೆದೇನು
ಕರ್ಪುರವನುಂಡ ಉರಿಯಂತೆ (ಕೆ.ಆರ್.ಎಸ್.ಜಿ.)

**ಕರಹಾಡ್ ತಾಮ್ರಶಾಸನ :** ಮಹಾರಾಷ್ಟ್ರದ ಸತಾರಾ ಜಿಲ್ಲೆಯ ಕರಹಾಡಿನಲ್ಲಿ ದೊರಕಿದ ಒಂದು ತಾಮ್ರಶಾಸನ. ಇದು ಮೂರು ತಾಮ್ರಫಲಕ

ಗಳನ್ನೊಳಗೊಂಡಿದೆ. ಫಲಕಗಳ ಉದ್ದಗಲಗಳು ಅನುಕ್ರಮವಾಗಿ, ಸುಮಾರು 34 ಸೆಂ ಮೀ. ಮತ್ತು 22.5 ಸೆಂ ಮೀ. ಶಾಸನದ ಬರಹ ಒಂದು ಮತ್ತು ಮೂರನೆಯ ಫಲಕಗಳ ಒಂದು ಪಕ್ಕದಲ್ಲಿಯೂ ಎರಡನೆಯ ಫಲಕದ ಎರಡೂ ಪಕ್ಕಗಳಲ್ಲಿಯೂ ಇದೆ. ಅಕ್ಷರಗಳು ಸ್ಪಷ್ಟವಾಗಿವೆ.

ಈ ಶಾಸನ 10ನೆಯ ಶತಮಾನದ ನಾಗರಿ ಲಿಪಿಯಲ್ಲಿದೆ. ಇದರ ಭಾಷೆ ಸಂಸ್ಕೃತ. ಶಾಸನದ ಪಾಠ ಗದ್ಯಪದ್ಯ ಮಿಶ್ರಿತವಾಗಿದೆ.

ಕ್ರಿ. ಶ. 939 ರಿಂದ 966ರ ವರೆಗೆ ಕರ್ಣಾಟಕವನ್ನಾಳಿದ ರಾಷ್ಟ್ರಕೂಟ 3ನೆಯ ಕೃಷ್ಣನ ಆಳ್ವಿಕೆಯಲ್ಲಿ ಈ ಶಾಸನವನ್ನು ಹೊರಡಿಸಲಾಯಿತು. ಇದರ ತೇದಿ, ಶಕನೃಪಕಾಲಾತೀತ ಸಂವತ್ಸರದ 880ನೆಯ ವರ್ಷದ ಫಾಲ್ಗುಣ ಬಹುಳ ತ್ರಯೋದಶಿ, ಬುಧವಾರ (959ರ ಮಾರ್ಚಿ 9).

ಶಾಸನದ ಪ್ರಾರಂಭದಲ್ಲಿ ಮುರಾರಿ (ವಿಷ್ಣು), ತ್ರಿಪುರವಿಜಯಿ (ಶಿವ) ಮತ್ತು ಕುಮುದಿನೀನಾಥ (ಚಂದ್ರ) ಇವರ ಸ್ತುತಿಗಳಿದ್ದು, ಅನಂತರ 3ನೆಯ ಕೃಷ್ಣನ ವರೆಗಿನ ರಾಷ್ಟ್ರಕೂಟರ ವಂಶಾವಳಿ ಕಾಣಸಿಗುತ್ತದೆ. ಈ ವಂಶ ದೈತ್ಯರನ್ನು ಸಂಹರಿಸಿದ ಕೃಷ್ಣನ ಯದುವಂಶವೆಂದು ಪ್ರಸಿದ್ಧವಾಯಿತೆಂದೂ ಈ ವಂಶದ ಅರಸರು ಶ್ರೇಷ್ಠ (ತುಂಗ) ಯಶಸ್ಸನ್ನು ಗಳಿಸಿ ತುಂಗ ಎಂಬ ಅಭಿಧೇಯವನ್ನು ಪಡೆದಿದ್ದರೆಂದೂ ಶಾಸನ ತಿಳಿಸುತ್ತದೆ. ಅರಸರ ಪೀಳಿಗೆಯನ್ನೀಯುತ್ತ, ಚಾಳುಕ್ಯರನ್ನು (ಬಾದಾಮಿಯವರು) ಉನ್ಮೂಲನಗೊಳಿಸಿದ ದಂತಿದುರ್ಗ, (ಎಲ್ಲೋರಾದ) ಕೈಲಾಸ ದೇವಾಲಯವನ್ನು ಕಟ್ಟಿಸಿದ ಅವನ ಕಕ್ಕ ಕೃಷ್ಣರಾಜ (1ನೆಯ ಕೃಷ್ಣ), ಅವನ ಮಗ ಗೋವಿಂದರಾಜ (2ನೆಯ ಗೋವಿಂದ), ಅವನ ತಮ್ಮ ಕಲಿವಲ್ಲಭನೆಂದು ಹೆಸರಾದ ನಿರುಪಮ (ಧ್ರುವ), ಅವನ ಮಗ ಜಗತ್ತುಂಗ (3ನೆಯ ಗೋವಿಂದ), ಮಾನ್ಯಖೇಟವನ್ನು (ಇಂದಿನ ಮಳಖೇಡ ಗುಲ್ಬರ್ಗ ಜಿಲ್ಲೆ) ಸ್ಥಾಪಿಸಿದ ಹಾಗೂ ಚಾಳುಕ್ಯರನ್ನು ವಿಧ್ವಂಸಗೊಳಿಸಿದ ಅವನ ಮಗ ನೃಪತುಂಗ (1ನೆಯ ಅಮೋಘವರ್ಷ), ಗೂರ್ಜರ, ಲಾಟ, ಗೌಡ, ಅಂಗ, ಕಳಿಂಗ, ಗಂಗ ಹಾಗೂ ಮಗಧ ಅರಸರ ಮೇಲೆ ಒಂದಿಲ್ಲೊಂದು ರೀತಿಯಲ್ಲಿ ಜಯಗಳಿಸಿದ ಅವನ ಮಗ ಕೃಷ್ಣರಾಜ (2ನೆಯ ಕೃಷ್ಣ), ಅವನ ಮಗ (2ನೆಯ) ಜಗತ್ತುಂಗ, ಅವನ ಮಗ ಇಂದ್ರರಾಜ (3ನೆಯ ಇಂದ್ರ), ಅವನ ಮಗ (2ನೆಯ) ಅಮೋಘವರ್ಷ ಹಾಗೂ ಅವನ ತಮ್ಮ ಗೋವಿಂದರಾಜ (4ನೆಯ ಗೋವಿಂದ), ರಟ್ಟಕುಲದ ಮಹತ್ತ್ವ ಹಾಗೂ ಸಾರ್ವಭೌಮತ್ವಕ್ಕೆ ಮಾಂಡಲಿಕರೆಲ್ಲರೂ ತಲೆಬಾಗುವಂತೆ ಮಾಡಿದ. (2ನೆಯ) ಜಗತ್ತುಂಗನ ಮಗ (3ನೆಯ) ಅಮೋಘವರ್ಷ ಹಾಗೂ ಯುವರಾಜನಾಗಿದ್ದಾಗಲೇ ಜಗತ್ತಿನ ಒಡೆಯನೆನಿಸಿಕೊಂಡ ಅವನ ಮಗ ಕೃಷ್ಣರಾಜ (ಈ ಶಾಸನವನ್ನು ಹೊರಡಿಸಿದ 3ನೆಯ ಕೃಷ್ಣ) ಇವರನ್ನು ಉಲ್ಲೇಖಿಸುತ್ತದೆ. ಇವನು ತನ್ನ ತಾಯಿ ಮತ್ತು ಪತ್ನಿ ಇವರಿಗೆ ಹಿರಿಯನಾದ ಸಹಸ್ರಾರ್ಜುನನನ್ನು ಜಯಿಸಿದನೆಂದೂ ಶ್ರೀವಲ್ಲಭನಂತಿದ್ದ ಇವನು (3ನೆಯ ಕೃಷ್ಣನು) ಮಧುಕೈಟಭರಂತಿದ್ದ ದಂತಿಗ ಹಾಗೂ ವಪ್ಪುಗರನ್ನು ಸಂಹರಿಸಿದನೆಂದೂ ರಾಚಮಲ್ಲನನ್ನು ಕಿತ್ತೊಗೆದು ಭೂತಾರ್ಯನನ್ನು ಗಂಗಸಿಂಹಾಸನದ ಮೇಲೆ ಕೂರಿಸಿದನೆಂದೂ ಪಲ್ಲವ ಅಣ್ಣಿಗನನ್ನು ಸೋಲಿಸಿದನೆಂದೂ ಇವನ ದಕ್ಷಿಣ ವಿಜಯವನ್ನು ಪರಿಗಣಿಸಿದ ಗೂರ್ಜರನು, ಕಾಲಿಂಜರ ಹಾಗೂ ಚಿತ್ರಕೂಟಗಳನ್ನು ಜಯಿಸುವ ಆಶೆಯನ್ನು ತಾನಾಗಿಯೇ ಬಿಟ್ಟನೆಂದೂ 'ಈತ ತನ್ನ ತಂದೆಯ ಆಜ್ಞೆಗೆ ವಿಧೇಯನಾಗಿದ್ದರೂ ಪೂರ್ವ ಪಶ್ಚಿಮ ಸಮುದ್ರ ಹಾಗೂ ಹಿಮಾಲಯ-ಸಿಂಹಳಗಳ ಮಧ್ಯದ ಮಾಂಡಲಿಕರೆಲ್ಲರೂ ಇವನಿಗೆ ಭಯದಿಂದ ತಲೆಬಾಗಿದ್ದರೆಂದೂ ತಂದೆ ಕಾಲವಶವಾದ ಅನಂತರ ಸಿಂಹಾಸನವನ್ನೇರಿದ ಈತ ಮಾಂಡಲಿಕರೆಲ್ಲರನ್ನೂ ತನ್ನ ರಾಜನೀತಿಗನುಗುಣವಾಗಿ ಪುನಃ ವ್ಯವಸ್ಥಿತಗೊಳಿಸಿದನೆಂದೂ ಶಾಸನವು ತಿಳಿಸುತ್ತದೆ.

ದಕ್ಷಿಣದಿಗ್ವಿಜಯವನ್ನು ಬಯಸಿದ ಇವನು, ಚೋಳರನ್ನು ನಿರ್ಮೂಲಗೊಳಿಸಿ ಅವರ ರಾಜ್ಯವನ್ನು ತನ್ನ ಅನುಯಾಯಿಗಳ ಆಧಿಪತ್ಯಕ್ಕೊಳಪಡಿಸಿ, ಚೇರನ್ಮ (ಚೇರ), ಪಾಂಡ್ಯ ಹಾಗೂ ಸಿಂಹಳ ಮೊದಲಾದ ದೇಶಗಳ ಅರಸರನ್ನು ತನಗೆ ವಿಧೇಯರನ್ನಾಗಿ ಮಾಡಿ, ರಾಮೇಶ್ವರದಲ್ಲಿ ತನ್ನ ಕೀರ್ತಿಸ್ತಂಭವನ್ನು ಸ್ಥಾಪಿಸಿದನೆಂದು ಶಾಸನ ಹೇಳುತ್ತದೆ. ಈತ ಪರಮಭಟ್ಟಾರಕ-ಮಹಾರಾಜಾಧಿರಾಜ-ಪರಮೇಶ್ವರ-ಶ್ರೀಮದಮೋಘವರ್ಷದೇವ (ತನ್ನ ತಂದೆ)-ಪಾದಾನುಧ್ಯಾತನಾಗಿದ್ದನೆಂದೂ ಪರಮಭಟ್ಟಾರಕ, ಮಹಾರಾಜಾಧಿರಾಜ, ಪರಮೇಶ್ವರ, ಪೃಥ್ವೀವಲ್ಲಭ ಮೊದಲಾದ ಬಿರುದುಗಳನ್ನೂ ಅಕಾಲವರ್ಷ, ವಲ್ಲಭನರೇಂದ್ರ ಮೊದಲಾದ ಅಂಕಿತಗಳನ್ನೂ ಹೊಂದಿದ್ದನೆಂದೂ ಶಾಸನ ವ್ಯಕ್ತಪಡಿಸುತ್ತದೆ.

ತನ್ನ ರಾಜ್ಯದ ದಕ್ಷಿಣಭಾಗದಲ್ಲಿರುವ ಮೇಲ್ಪಾಟಿಯಲ್ಲಿ (ಇಂದಿನ ಮೇಲ್ಪಾಡಿ, ಉತ್ತರ ಆರ್ಕಾಟ್ ಜಿಲ್ಲೆ) ಬೀಡುಬಿಟ್ಟಾಗ ಕಾಲಪ್ರಿಯ, ಗಂಡಮಾರ್ತಾಂಡ ಕೃಷ್ಣೇಶ್ವರ ಮೊದಲಾದ ದೇವಾಲಯಗಳನ್ನು ಕಟ್ಟಿಸಿ (ಮೇಲೆ ಉಲ್ಲಿಖಿತವಾದ ತೇದಿಯಂದು), ಕರಹಾಟ ಪ್ರಾಂತದಲ್ಲಿ (ಈಗಿನ ಕರಹಾಡದ ಸುತ್ತಮುತ್ತಲಿನ ಪ್ರದೇಶ) ಕಲ್ಲಿಹನ್ನೆರಡಕ್ಕೆ (ಈಗಿನ ಕಲ್ಲಿ ಎಂಬ ಹಳ್ಳಿಯ ಸುತ್ತಮುತ್ತಲಿನ ಹಳ್ಳಿಗಳು) ಸಂಬಂಧಿಸಿದ ಕಂಕೆಂ (ಈಗಿನ ಕಂಕಿ-ಇವೆಲ್ಲ ಕರ್ಹಾಡದ ಸಮೀಪದಲ್ಲಿವೆ) ಎಂಬ ಗ್ರಾಮವನ್ನು, ತಪಸ್ವಿಗಳ ಆಸನ ಹಾಗೂ ಆಚ್ಛಾದನೆಯ ಉದ್ದೇಶಕ್ಕಾಗಿ, ತಾನು (ಕೃಷ್ಣನು) ಕಾರ್ಲೆಯಂದು (ಕಾರ್ತಿಕ ಹುಣ್ಣಿಮೆ) ಸಂಕಲ್ಪಮಾಡಿದಂತೆ, ಶಾಸಶಿವನ ಶಿಷ್ಯನೂ, ಮಹಾತಪಸ್ವಿಯೂ, ಕರಹಾಟದಲ್ಲಿರುವ ವಲ್ಕಲೇಶ್ವರ (ದೇವಸ್ಥಾನ)ದ ಸ್ಥಾನಾಧಿಪತಿಯೂ ಆದ ಗಗನಶಿವನೆಂಬವನಿಗೆ ದಾನವಾಗಿತ್ತುದಾಗಿಯೂ, ಆತ (ಗಗನಶಿವ) ಈ ಗ್ರಾಮವನ್ನು ಉಪಭೋಗಿಸುವುದಕ್ಕೆ ಯಾರೂ ಆತಂಕಮಾಡಬಾರದಾಗಿಯೂ ಆಜ್ಞೆ ವಿಧಿಸಿ, ತನ್ನ ಎಲ್ಲ ಮಾಂಡಲಿಕರಿಗೂ ವಿಶಿಷ್ಟಜನರಿಗೂ ಇದರ ಬಗ್ಗೆ ಸೂಕ್ತ ಆದೇಶವನ್ನಿತ್ತುದಾಗಿಯೂ ಶಾಸನವು ತಿಳಿಸುತ್ತದೆ. ಶಾಸನದ ಕೊನೆಯಲ್ಲಿ ದಾನದ ರಕ್ಷಣೆ ಹಾಗೂ ಆಶೀರ್ವಚನಗಳನ್ನು ಕುರಿತ ಶ್ಲೋಕಗಳಿವೆ.

ಪ್ರಕೃತ ಶಾಸನ ರಾಷ್ಟ್ರಕೂಟರ ಇತಿಹಾಸದ ದೃಷ್ಟಿಯಿಂದ ಅತ್ಯಂತ ಮಹತ್ತ್ವದ್ದಾಗಿದೆ. ಚೋಳರನ್ನು ಕೃಷ್ಣ ಸೋಲಿಸಿದ ಮತ್ತು ಇವನ ಪರಾಕ್ರಮದ ಬಗ್ಗೆ ಬೇರೆ ಶಾಸನಗಳ ಆಧಾರವಿದೆ. ವಂಶಾವಳಿಯನ್ನೀಯುವಾಗ ಮುಖ್ಯ ಅರಸರನ್ನು ಮಾತ್ರ ಶಾಸನವು ಉಲ್ಲೇಖಿಸುತ್ತಿದ್ದು, ಈ ವಂಶಪರಂಪರೆ ನಿಜವೆಂಬುದು ಇನ್ನೂ ಅನೇಕ ಶಾಸನಗಳಿಂದ ಪ್ರಮಾಣಸಿದ್ಧವಾಗಿದೆ. 3ನೆಯ ಕೃಷ್ಣನ ತಾಯಿ ಮತ್ತು ಅವನ ಪತ್ನಿ ಚೇದಿ ಮನೆತನದವರಾದುದರಿಂದ, ಅವರಿಗೆ ಹಿರಿಯನೆಂದು ಶಾಸನದಲ್ಲಿ ಉಕ್ತನಾದ ಸಹಸ್ರಾರ್ಜುನನೂ ಅದೇ ಮನೆತನದವನಿರಬೇಕೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಉಲ್ಲಿಖಿತರಾದ ಇನ್ನುಳಿದ ಮುಖ್ಯರಲ್ಲಿ, ರಾಚಮಲ್ಲ ಹಾಗೂ ಭೂತಾರ್ಯರು ಗಂಗಮನೆತನದ ರಾಚಮಲ್ಲ ಹಾಗೂ 2ನೆಯ ಬೂತುಗರ, ಪಲ್ಲವ ಅಣ್ಣಿಗನೆಂಬಾತ ನೊಳಂಬಪಲ್ಲವ ಮನೆತನದ ನನ್ನಿಗನ ಮಗನೆಂದೂ, ದಂತಿಗ ಮತ್ತು ವಪ್ಪುಗರೂ ಇದೇ ಮನೆತನದವರಾಗಿರಬೇಕೆಂದೂ ಇತಿಹಾಸಕಾರರು ಅಭಿಪ್ರಾಯಪಟ್ಟಿದ್ದಾರೆ. (ಎಂ.ಎಸ್.ಕೆ.)

**ಕರಾಚಿ :** ಪಶ್ಚಿಮ ಪಾಕಿಸ್ತಾನದ ಮುಖ್ಯ ರೇವುಪಟ್ಟಣ, ವಾಣಿಜ್ಯ ಮತ್ತು ಕೈಗಾರಿಕಾ ಕೇಂದ್ರ. ಇದು ಸಿಂದ್ ಪ್ರಾಂತ್ಯದ ಮುಖ್ಯಪಟ್ಟಣವಾಗಿತ್ತು. ಪಾಕಿಸ್ತಾನದ ರಚನೆಯಾದ ಮೇಲೆ ಅದರ ರಾಜಧಾನಿಯಾಯಿತು. ಈಗ ಇದು ಜಿಲ್ಲೆಯ ಮತ್ತು ವಿಭಾಗದ ಮುಖ್ಯಪಟ್ಟಣ. ಜನಸಂಖ್ಯೆ 19,12,598 (1961). ಹಿಂದೆ ಬ್ರಿಟಿಷರು ಸಿಂಧನ್ನು ಆಕ್ರಮಿಸಿಕೊಳ್ಳುವ (1843) ಮುನ್ನ ಇದು ಅಷ್ಟೇನೂ ಪ್ರಸಿದ್ಧವಾಗಿರಲಿಲ್ಲ. ಅಮೆರಿಕನ್ ಅಂತರ್ಯುದ್ಧದ ಫಲವಾಗಿ ಭಾರತದ ಹತ್ತಿಗೆ ಬೇಡಿಕೆಯುಂಟಾದಾಗ ಈ ನಗರದ ವ್ಯಾಪಾರ ಅಧಿಕಗೊಂಡಿತು. 1878ರಲ್ಲಿ ವಾಯವ್ಯ ರೈಲ್ವೆಯ ನಿರ್ಮಾಣವಾದಾಗಿನಿಂದ ಇದರ ಪ್ರಾಮುಖ್ಯ ಅಧಿಕವಾಯಿತು. ಇದರಿಂದಾಗಿ ಅವಿಭಜಿತ ಭಾರತದ ಇಡೀ ಪಂಜಾಬು ಇದರ ಹಿನ್ನಾಡಾಗಿ ಪರಿಣಮಿಸಿತಲ್ಲದೆ ಆಫ್ಘಾನಿಸ್ತಾನದ ವರೆಗಿನ ಪ್ರದೇಶದ ವಿದೇಶೀ ವ್ಯಾಪಾರವೆಲ್ಲ ಇದರ ಮೂಲಕವೇ ಸಾಗುವಂತಾಯಿತು. ಇದು ಯೂರೋಪಿಗೂ ಈ ಪ್ರದೇಶಕ್ಕೂ ನಡುವೆ ಅತ್ಯಂತ ಹತ್ತಿರದ ಬಂದರು. ಸುಕ್ಕೂರ್ ಜಲಾಶಯದ ನಿರ್ಮಾಣದಿಂದ ನೀರಾವರಿ ಸೌಲಭ್ಯ ಬೆಳೆದು ಸಿಂಧಿನ ಉತ್ಪಾದನೆ ಹೆಚ್ಚಿದಾಗ ಕರಾಚಿಯ ಪ್ರಾಮುಖ್ಯ ಇನ್ನೂ ಹೆಚ್ಚಿತು. ಈಚೆಗೆ ಅಂತರರಾಷ್ಟ್ರೀಯ ವಿಮಾನ ಮಾರ್ಗದ ಮುಖ್ಯಕೇಂದ್ರವಾಗಿದೆ. ಕರಾಚಿ ಬಂದರು ಸಿಂಧೂ ನದೀಮುಖದ ವಾಯವ್ಯದಲ್ಲಿದೆ. ಕರೆಯ ಉದ್ದಕ್ಕೂ ಪಶ್ಚಿಮದಿಂದ ಪೂರ್ವಾಭಿಮುಖವಾಗಿ ಕಡಲ ಪ್ರವಾಹವಿರುವುದರಿಂದ ಸಿಂಧೂ ನದಿಯಿಂದ ಬಂದು ಬೀಳುವ ಮಣ್ಣಿನಿಂದ ಈ ಬಂದರಿಗೇನೂ ಅಪಾಯವಿಲ್ಲ. ಉದ್ದನೆಯ ಮನೋಹರ ನೆಲದ ಚಾಚು ರೇವಿಗೆ ರಕ್ಷಣೆ ನೀಡಿದೆ. ಕಿಯಮಾರಿ ಎಂಬುದು ಹಿಂದೆ ಇದರೊಳಗಿನ ಒಂದು ದ್ವೀಪವಾಗಿತ್ತು. 1850ರಲ್ಲಿ ಇದಕ್ಕೆ ಸೇತುವೆ ಕಟ್ಟಿ ರೈಲ್ವೆ ಸಂಪರ್ಕ ಏರ್ಪಡಿಸಿದ್ದರಿಂದಲೂ ಇದಕ್ಕೂ ಮುಖ್ಯ ಭೂಭಾಗಕ್ಕೂ ನಡುವಣ ಪ್ರದೇಶವನ್ನು ವಸತಿಯೋಗ್ಯವಾಗಿ ಪರಿವರ್ತಿಸಿದ್ದರಿಂದಲೂ ಈಗ ಇದು ದ್ವೀಪವಾಗಿ ಉಳಿದಿಲ್ಲ. ಅವಿಭಜಿತ ಭಾರತದ ಸಮುದ್ರಮಾರ್ಗೀಣ ರಫ್ತುವ್ಯಾಪಾರದಲ್ಲಿ ಏಳನೆಯ ಒಂದರಿಂದ ಆರನೆಯ ಒಂದರ ವರೆಗಿನಷ್ಟು ಭಾಗ ಕರಾಚಿಯ ಮೂಲಕ ನಡೆಯುತ್ತಿತ್ತು. ಹತ್ತಿ, ಗೋದಿ, ಅಕ್ಕಿ, ಎಣ್ಣೆಬೀಜ, ಉಪ್ಪು ಇವು ನಿರ್ಯಾತಗಳಾಗಿದ್ದುವು. ಆಗ ಇದರ ಮೂಲಕ ಸಾಗಿಬರುತ್ತಿದ್ದ ಪದಾರ್ಥಗಳೆಂದರೆ ಪೆಟ್ರೋಲಿಯಂ, ಜವಳಿ, ಯಂತ್ರ ಮತ್ತು ಕಲ್ಲಿದ್ದಲು. ಆಮದಿಗಿಂತ ರಫ್ತೇ ಹೆಚ್ಚಾಗಿತ್ತು. ಪಾಕಿಸ್ತಾನದ ರಚನೆಯಾದಾಗ ಭಾರತದ ವಾಯವ್ಯ ಭಾಗದ ವಿದೇಶೀ ವ್ಯಾಪಾರದ ಹೆಬ್ಬಾಗಿಲಾಗಿದ್ದ ಕರಾಚಿಯೂ ಪಾಕಿಸ್ತಾನಕ್ಕೆ ಸೇರಿತು. ಈ ಪ್ರದೇಶದ ಅವಶ್ಯಕತೆಗಳನ್ನು ಪೂರೈಸಲು ಗುಜರಾತಿನಲ್ಲಿ ಕಾಂಡ್ಲ ರೇವುಪಟ್ಟಣವನ್ನು ನಿರ್ಮಿಸಲಾಗಿದೆ. (ನೋಡಿ—ಕಾಂಡ್ಲ).

1941ರಲ್ಲಿದ್ದಂತೆ ಕರಾಚಿಯ ಜನಸಂಖ್ಯೆಯಲ್ಲಿ ಶೇಕಡಾ 57ರಷ್ಟು ಮಂದಿ ಮುಸ್ಲಿಮೇತರರಾಗಿದ್ದರೂ ಇದು ಪಾಕಿಸ್ತಾನದ ರಾಜಧಾನಿಯಾಯಿತು. 1948ರಲ್ಲಿ ಇದನ್ನು

ಇದರ ಸುತ್ತಣ ಹಳ್ಳಿಗಳನ್ನೂ ರೇವಿನ ಬಳಿಯ ದ್ವೀಪಗಳನ್ನೂ ಕೇಂದ್ರಶಾಸಿತ ಪ್ರದೇಶವಾಗಿ ಪರಿವರ್ತಿಸಲಾಯಿತು. ಪಾಕಿಸ್ತಾನದ ರಾಜಧಾನಿಯನ್ನು ಕರಾಚಿಯಿಂದ ರಾವಲ್ಪಿಂಡಿಗೆ ವರ್ಗಾಯಿಸಿದ್ದು 1959ರ ಅಕ್ಟೋಬರಿನಲ್ಲಿ. ಇದು ಪಶ್ಚಿಮ ಪಾಕಿಸ್ತಾನದ ನೌಕಾಪಡೆಯ ಕೇಂದ್ರ.

ಸದರ್ ಬಜ಼ಾರ್ ಕರಾಚಿಯ ಮುಖ್ಯ ವ್ಯಾಪಾರ ಕೇಂದ್ರ. ಬಂದರ್ ರಸ್ತೆ, ಮೆಕ್‌ಲಿಯಾಡ್ ರಸ್ತೆ ಮತ್ತು ಫ್ರಿಯರ್ ರಸ್ತೆಗಳು ಮುಖ್ಯ ವಾಣಿಜ್ಯ ಪ್ರದೇಶಗಳು. ಕರಾಚಿ ವಿಶ್ವವಿದ್ಯಾಲಯವನ್ನು 1950ರಲ್ಲಿ ಸ್ಥಾಪಿಸಲಾಯಿತು. ಉದ್ಯಾನವೊಂದರ ನಡುವೆ ಇರುವ ಫ್ರಿಯರ್ ಭವನವೊಂದು ರಾಷ್ಟ್ರೀಯ ವಸ್ತುಸಂಗ್ರಹಾಲಯ. ಬರ್ನ್ಸ್ ಉದ್ಯಾನ ಪ್ರಸಿದ್ಧವಾಗಿದೆ. ಅಖಂಡ ಭಾರತದ ವಿಭಜನೆಯಾದ ಮೇಲೆ ಕರಾಚಿ ನಗರದ ಜನಸಂಖ್ಯೆ ಅತಿಯಾಗಿ ಹೆಚ್ಚಿತು. ಇದರ ಬಳಿ ಹಲವು ಉಪನಗರಗಳ ನಿರ್ಮಾಣವಾಗಿವೆ. ಕರಾಚಿ ಅಭಿವೃದ್ಧಿ ಸಂಸ್ಥೆಯ ಸ್ಥಾಪನೆಯಾದದ್ದು 1957ರಲ್ಲಿ.

ಕರಾಚಿಯ ಹಡಗು ತಾಣಗಳ (ಬರ್ತ್) ಬಳಿಯ ಸಮುದ್ರದಾಳವನ್ನು ಹೆಚ್ಚಿಸಲೂ ಬಂದರಿನ ಸ್ಥಳ ವಿಸ್ತರಿಸಲೂ 1956ರಲ್ಲಿ ಅಲ್ಲಿಯ ಬಂದರು ನ್ಯಾಸ ಮಂಡಲಿ ವಿಶೇಷ ಕಾರ್ಯ ಕೈಕೊಂಡಿದ್ದರಿಂದ ಈಗ ಅದರ ಸಾಮರ್ಥ್ಯ ತಕ್ಕಮಟ್ಟಿಗೆ ಅಧಿಕಗೊಂಡಿದೆ.

ಕರಾಚಿಯ ಕೈಗಾರಿಕಾ ಪ್ರದೇಶ ಪೂರ್ವದಲ್ಲಿ 13 ಮೈಲಿಗಳ ವರೆಗೂ ಹಬ್ಬಿದೆ. ಹತ್ತಿ, ರೇಷ್ಮೆ ಮತ್ತು ಉಣ್ಣೆ ಜವಳಿ, ಪ್ಲಾಸ್ಟಿಕ್ ಮತ್ತು ರಸಾಯನ ಪದಾರ್ಥಗಳ ಮತ್ತು ಚರ್ಮದ ವಸ್ತುಗಳ ಕೈಗಾರಿಕೆಗಳು ಮುಖ್ಯವಾದವು.

ಪಶ್ಚಿಮ ಪಾಕಿಸ್ತಾನದ ಮುಖ್ಯ ಸ್ಥಳಗಳಿಗೂ ಕರಾಚಿಗೂ ಪಾಕಿಸ್ತಾನ್ ಪಶ್ಚಿಮ ರೈಲ್ವೆಯ ಸಂಪರ್ಕವಿದೆ. ಇಲ್ಲಿಂದ ಭಾರತದ ರೈಲ್ವೆಯೊಂದಿಗೆ ಗಡಿ ನಗರವಾದ ಮುನಾಬಾದಿನ ಮೂಲಕ ಹಾದು ಸಂಪರ್ಕ ಕಲ್ಪಿಸುವ ರೈಲುಮಾರ್ಗವೊಂದುಂಟು. ಕರಾಚಿ ನಗರ ತೈಲ ನೆಲೆಗಳಿಗೆ ಹತ್ತಿರದಲ್ಲಿರುವುದರಿಂದಲೂ ಇಲ್ಲಿ ಪ್ರವಾಹ ಮತ್ತು ಮಳೆ ಮೋಡಗಳಿಲ್ಲದಿರುವುದರಿಂದಲೂ ಸನ್ನಿವೇಶಮಹಿಮೆಯಿಂದಲೂ ಕರಾಚಿಯ ಡ್ರಿಘ್ ರೋಡ್ ಮುಖ್ಯ ಅಂತರರಾಷ್ಟ್ರೀಯ ವಿಮಾನದಾಣವಾಗಿದೆ. (ಎಸ್.ಎಸ್‌ಎಆರ್.)

**ಕರಾರು :** ಒಂದು ಪಕ್ಷ ಇನ್ನೊಂದು ಪಕ್ಷದ ಮೌಲ್ಯಯುಕ್ತ (ವ್ಯಾಲ್ಯುಯಬಲ್) ಪ್ರತಿಫಲಕ್ಕಾಗಿ ಏನನ್ನಾದರೂ ಕೊಡುವುದಾಗಿಯೊ ಮಾಡುವುದಾಗಿಯೊ ಅಥವಾ ವರ್ಜಿಸುವುದಾಗಿಯೊ ಸಮ್ಮತಿಸಿ, ಇಬ್ಬರ ಅಥವಾ ಹೆಚ್ಚಿನ ಸಂಖ್ಯೆಯ ವ್ಯಕ್ತಿಗಳ ನಡುವೆ ಏರ್ಪಟ್ಟ, ಕಾನೂನುರೀತ್ಯಾ ಚಲಾಯಿಸಬಹುದಾದ, ಒಪ್ಪಂದ (ಕಾಂಟ್ರ್ಯಾಕ್ಟ್). ಪ್ರತಿಯೊಂದು ಕರಾರಿಗೂ ತಳಹದಿಯಾಗಿ ಒಪ್ಪಂದವಿರಬೇಕು. ಇದನ್ನು ಭಾರತದ ಕರಾರು ಕಾಯಿದೆಯಲ್ಲಿ ವಿವರಿಸಲಾಗಿದೆ. ಪ್ರಪ್ರಥಮವಾಗಿ ಒಬ್ಬ ವ್ಯಕ್ತಿ (ಅಥವಾ ಒಂದು ಪಕ್ಷ) ಇನ್ನೊಬ್ಬ ವ್ಯಕ್ತಿಗೆ (ಅಥವಾ ಇನ್ನೊಂದು ಪಕ್ಷಕ್ಕೆ) ಏನನ್ನಾದರೂ ಕೊಡಲು, ಮಾಡಲು ಅಥವಾ ಮಾಡದೆ ಇರಲು ತನ್ನ ಇಚ್ಛೆಯನ್ನು ವ್ಯಕ್ತಪಡಿಸಬೇಕು. ಇದು ಪ್ರಸ್ತಾಪ (ಆಫರ್). ಈ ಪ್ರಸ್ತಾಪಕ್ಕೆ ಇನ್ನೊಬ್ಬ ವ್ಯಕ್ತಿಯ (ಅಥವಾ ಇನ್ನೊಂದು ಪಕ್ಷದ) ಒಪ್ಪಿಗೆ ದೊರಕಿಸಿಕೊಳ್ಳುವ ಉದ್ದೇಶದಿಂದ ಇದನ್ನು ಮಾಡಿರಬೇಕು. ಯಾರಿಗೆ ಈ ಪ್ರಸ್ತಾಪ ಮಾಡಲಾಗಿದೆಯೋ ಆತ ಇದನ್ನು ಸ್ವೀಕರಿಸಬೇಕು ಅಥವಾ ಇದಕ್ಕೆ ಸಮ್ಮತಿಸಬೇಕು (ಅಕ್ಸೆಪ್ಟ್). ಆಗ ಈ ಪ್ರಸ್ತಾಪ ವಾಗ್ದಾನ (ಪ್ರಾಮಿಸ್) ಎನಿಸಿಕೊಳ್ಳುತ್ತದೆ. ವಾಗ್ದಾನ ಮಾಡಿದವನ ಇಚ್ಛೆಯಂತೆ ಅದಕ್ಕೆ ಪ್ರತಿಯಾಗಿ ವಾಗ್ದಾನ ಸ್ವೀಕರ್ತ ಏನನ್ನಾದರೂ ಕೊಡಲು, ಮಾಡಲು ಅಥವಾ ಮಾಡದಿರಲು ನೀಡಿದ ವಚನವೇ ಪ್ರತಿಫಲ (ಕನ್ಸಿಡರೇಷನ್). ಪ್ರಸ್ತಾಪಕಾರನ ವಾಗ್ದಾನಕ್ಕೆ ಸ್ವೀಕರ್ತನ ಪ್ರತಿ ವಾಗ್ದಾನವೇ ಪ್ರತಿಫಲ ; ಸ್ವೀಕರ್ತನ ವಾಗ್ದಾನಕ್ಕೆ ಮೊದಲನೆಯವನ ವಚನವೇ ಪ್ರತಿಫಲ. ಹೀಗೆ ಪರಸ್ಪರ ಪ್ರತಿಫಲಮೂಲವಾದ ಪ್ರತಿಯೊಂದು ವಾಗ್ದಾನವೂ ಅಥವಾ ವಾಗ್ದಾನಗಳ ಮೊತ್ತವೂ ಒಪ್ಪಂದವೆನಿಸಿಕೊಳ್ಳುತ್ತದೆ. ಈ ಒಪ್ಪಂದದಲ್ಲಿ ಯಾರೊಬ್ಬರು ವಾಗ್ದಾನ ಮುರಿದರೂ ಅದರಿಂದ ಭಂಗಪಟ್ಟ ಇನ್ನೊಬ್ಬರು ಕಾಯಿದೆಯ ಮೂಲಕ ಒಪ್ಪಂದವನ್ನು ಚಲಾಯಿಸುವುದು ಸಾಧ್ಯವಾಗದಿದ್ದರೆ ಆಗ ಅದು ಕರಾರೆನಿಸುವುದಿಲ್ಲ. ಅದು ಶೂನ್ಯ (ವಾಯ್ಡ್) ಒಪ್ಪಂದ. ಸಂಬಂಧಿಸಿದ ಪಕ್ಷ ಅಥವಾ ಪಕ್ಷಗಳ ಇಚ್ಛೆಯಂತೆ ಕಾನೂನುರೀತ್ಯಾ ಚಲಾಯಿಸಬಹುದಾದ ಅಥವಾ ಬಿಡಬಹುದಾದ ಒಪ್ಪಂದವನ್ನು ವಿವರ್ಜ್ಯ (ವಾಯ್ಡಬಲ್) ಕರಾರು ಎನ್ನಲಾಗುತ್ತದೆ. ಕರಾರು ಮಾಡಿಕೊಳ್ಳಲು ಅರ್ಹತೆಯುಳ್ಳ ಪಕ್ಷಗಳು ಕಾನೂನುಬದ್ಧ ಪ್ರತಿಫಲಕ್ಕಾಗಿ, ಕಾನೂನುಬದ್ಧ ಉದ್ದೇಶದಿಂದ, ಖುದ್ದು ರಾಜಿಯಿಂದ ಮಾಡಿಕೊಂಡ, ಶೂನ್ಯವೆಂದು ಅಭಿವ್ಯಕ್ತವಾಗಿ ಘೋಷಿತವಲ್ಲದ ಎಲ್ಲ ಒಪ್ಪಂದಗಳೂ ಕರಾರುಗಳೆಂದು ಭಾರತದ ಕರಾರು ಕಾಯಿದೆಯ 10ನೆಯ ಕಲಮಿನಲ್ಲಿ ಹೇಳಲಾಗಿದೆ.

ಕರಾರು ಮಾಡಿಕೊಳ್ಳುವವರಿಗೆ ಇರಬೇಕಾದ ಅರ್ಹತೆಯ ವಿಚಾರವನ್ನು ಭಾರತದ ಕರಾರು ಕಾಯಿದೆಯ 11ನೆಯ ಕಲಮಿನಲ್ಲಿ ವಿವೇಚಿಸಲಾಗಿದೆ. ಯಥೋಚಿತ ಕಾನೂನಿನ ಪ್ರಕಾರ ಪ್ರಾಪ್ತವಯಸ್ಕನೂ ಸ್ವಸ್ಥಚಿತ್ತನೂ ಆಗಿದ್ದು, ಕರಾರು ಮಾಡಿಕೊಳ್ಳಲರ್ಹನೆಂದು ಆತನಿಗೆ ಸಂಬಂಧಿಸಿದ ಯಾವ ಕಾನೂನಿನಿಂದಲೂ ವರ್ಜಿಸಲ್ಪಡದ ಪ್ರತಿಯೊಬ್ಬನಿಗೂ ಈ ಅರ್ಹತೆಯುಂಟು. 18 ವರ್ಷ ತುಂಬಿದಾತ ಸಾಮಾನ್ಯವಾಗಿ ಪ್ರಾಪ್ತವಯಸ್ಕ. ಅಪ್ರಾಪ್ತವಯಸ್ಕನಿಗೆ ಯಾವುದಾದರೂ ನ್ಯಾಯಾಲಯದಿಂದ ಪಾಲಕನ (ಗಾರ್ಡಿಯನ್) ನೇಮಕವಾಗಿದ್ದರೆ ಅವನನ್ನು (ಪಾಲಿತ) ಪ್ರಾಪ್ತವಯಸ್ಕನೆಂದು ಪರಿಗಣಿಸಲು ಅವನಿಗೆ 21 ವರ್ಷ ತುಂಬಿರಬೇಕು. ಕರಾರಿನ ವ್ಯಕ್ತಿಗಳು ಸ್ವಸ್ಥಚಿತ್ತದಿಂದ ಕೂಡಿರಬೇಕೆಂಬುದು ಇನ್ನೊಂದು ನಿಯಮ, ಎಂದರೆ ತಾನು ಮಾಡಿಕೊಳ್ಳುತ್ತಿರುವ ಕರಾರಿನ ಅಂಶಗಳನ್ನು ತಿಳಿದುಕೊಳ್ಳಲು ಸಮರ್ಥನಾಗಿದ್ದು ತನ್ನ ಹಿತಗಳ ಮೇಲೆ ಅದರ ಪರಿಣಾಮ ಏನಾದೀತು ಎಂಬುದನ್ನು ಬುದ್ಧಿವಂತಿಕೆಯಿಂದ ನಿರ್ಧರಿಸಲು ಶಕ್ತನಾಗಿರಬೇಕು (12ನೆಯ ಕಲಂ). ವ್ಯಕ್ತಿಗೆ ಚಿತ್ತಸ್ವಾಸ್ಥ್ಯವಿಲ್ಲದಾಗ ಆತ ಮಾಡಿಕೊಂಡ ಒಪ್ಪಂದ ಊರ್ಜಿತವಾಗದೆ ಹೋಗಬಹುದು.

ಸ್ವಸ್ಥಚಿತ್ತರು ಮಾಡಿಕೊಂಡ ನಿರುಪಾಧಿಕ ಸಮ್ಮತಿಯಿಂದ (ಫ್ರೀ ಕನ್ಸೆಂಟ್) ಒಪ್ಪಂದವಾಗಿರಬೇಕು. ಇಬ್ಬರು ಅಥವಾ ಹೆಚ್ಚು ಮಂದಿ ಒಂದು ವಿಚಾರದ ಬಗ್ಗೆ ಒಂದೇ ಅರ್ಥದಲ್ಲಿ ಒಪ್ಪಿಗೆ ನೀಡುವುದೇ ಸಮ್ಮತಿ. ಒಂದೇ ಮಾತಿನ ಅರ್ಥ ಒಬ್ಬೊಬ್ಬರಿಗೆ ಒಂದೊಂದು ರೀತಿ ಆಗುವ ಸಂಭವ ಮತ್ತು ಸಾಧ್ಯತೆ ಉಂಟು. ಉದಾ : ಒಬ್ಬ ಇನ್ನೊಬ್ಬನಿಗೆ ಮೈಸೂರಿನಲ್ಲಿರುವ ತನ್ನ ಹೊಸ ಮನೆ ಮಾರುವುದಾಗಿ ಮಾತು ಕೊಟ್ಟ ಪಕ್ಷದಲ್ಲಿ, ಆ ಒಬ್ಬನಿಗೆ ಎರಡು ಮನೆಗಳು ಇರುವ ಸಂಗತಿ ಇನ್ನೊಬ್ಬನಿಗೆ ಗೊತ್ತಿಲ್ಲದಿದ್ದರೆ, ತಾನು ನೋಡಿರುವ ಮನೆಯೇ ಮಾರಾಟಕ್ಕೆ ಇರುವ ಮನೆ ಎಂದು ಇನ್ನೊಬ್ಬ ಭಾವಿಸಬಹುದು. ಆದರೆ ಮಾರಲಿರುವ ಮನೆ ಆ ಇನ್ನೊಬ್ಬ ನೋಡಿಲ್ಲದ ಮನೆಯಾಗಿರಬಹುದು. ಆಗ ಮೊದಲಿನವ ಮಾರುತ್ತೇನೆಂದ ಮನೆಯೇ ಒಂದು, ಎರಡನೆಯವ ಕೊಳ್ಳಲು ಒಪ್ಪಿದ ಮನೆಯೇ ಇನ್ನೊಂದು. ಹೀಗೆ ಇವರಿಬ್ಬರೂ ಒಪ್ಪಂದಕ್ಕೆ ಸಂಬಂಧಿಸಿದ ವಿಷಯದ ಬಗ್ಗೆ ಬೇರೆ ಬೇರೆ ಅರ್ಥ ಬರುವಂತಿರುವುದರಿಂದ ಇದು ಕರಾರಾಗಿರಲಾರದು (ಕಲಂ 13).

ಒತ್ತಾಯ (ಕೊಯರ್ಷನ್), ಅನುಚಿತ ಪ್ರಭಾವ (ಅನ್‌ಡೂ ಇನ್‌ಫ್ಲುಯೆನ್ಸ್), ವಂಚನೆ (ಫ್ರಾಡ್), ತಪ್ಪು ನಿರೂಪಣೆ (ಮಿಸ್‌ರೆಪ್ರೆಸೆಂಟೇಷನ್), ತಪ್ಪು ಗ್ರಹಿಕೆ (ಮಿಸ್ಟೇಕ್) ಇವುಗಳಿಲ್ಲದ್ದೇ ನಿರುಪಾಧಿಕ ಸಮ್ಮತಿ—ಎಂದು ಭಾರತೀಯ ಕರಾರು ಕಾಯಿದೆಯಲ್ಲಿ ಹೇಳಲಾಗಿದೆ. (ವಿವರಗಳಿಗೆ ಆಯಾ ಶೀರ್ಷಿಕೆಗಳನ್ನು ನೋಡಿ).

ಪ್ರತಿಯೊಂದು ಕರಾರಿಗೂ ಸಾಮಾನ್ಯವಾಗಿ ಪ್ರತಿಫಲ ಇರಬೇಕು. ಒಪ್ಪಂದದ ಪ್ರತಿಫಲ ಅಥವಾ ಉದ್ದೇಶ ನ್ಯಾಯಬದ್ಧವಾಗಿರಬೇಕು. ಕಾನೂನಿನಿಂದ ನಿಷೇಧಿಸಲ್ಪಟ್ಟ, ಜಾರಿಗೆ ಬಂದರೆ ಯಾವುದಾದರೂ ಕಾನೂನಿನ ಅಂಶಗಳನ್ನು ಮುರಿಯುವಂಥ, ವಂಚನೆಯಿಂದ ಕೂಡಿದ, ಇನ್ನೊಬ್ಬರಿಗೆ ಅಥವಾ ಅವರ ಸ್ವತ್ತಿಗೆ ಹಾನಿ (ಇಂಜುರಿ)ಕಾರಕವಾದ, ಅಥವಾ ಅನೈತಿಕವಾದದ್ದೆಂದೋ ಸಾರ್ವಜನಿಕ ಕಾರ್ಯನೀತಿಗೆ ವಿರುದ್ಧವಾದದ್ದೆಂದೋ ನ್ಯಾಯಾಲಯದಿಂದ ಪರಿಗಣಿತವಾದ ಪ್ರತಿಫಲ ಅಥವಾ ಉದ್ದೇಶ ನ್ಯಾಯಬದ್ಧವೆನಿಸುವುದಿಲ್ಲ (ಕಲಂ 23). ಯಾವುದು ಕಾನೂನುಬದ್ಧ ಪ್ರತಿಫಲ ಅಥವಾ ಉದ್ದೇಶ, ಯಾವುದು ಅಲ್ಲ ಎಂಬ ಬಗ್ಗೆ ಭಾರತೀಯ ಕರಾರು ಕಾಯಿದೆಯಲ್ಲಿ ಅನೇಕ ಉದಾಹರಣೆಗಳನ್ನು ಕೊಡಲಾಗಿದೆ. Bಗೆ ಒಂದು ಮನೆ ಮಾರಲು A ವಾಗ್ದಾನ ಮಾಡುತ್ತಾನೆ. ಅದಕ್ಕೆ B ರೂ. 10,000 ಕೊಡಲು ಮಾಡುವ ವಾಗ್ದಾನವೇ A ಮನೆ ಮಾರಲು ಮಾಡುವ ವಾಗ್ದಾನಕ್ಕೆ ಪ್ರತಿಫಲ. Bಯ ವಾಗ್ದಾನಕ್ಕೆ Aಯ ವಾಗ್ದಾನವೇ ಪ್ರತಿಫಲ. ಇವು ನ್ಯಾಯಬದ್ಧ ಪ್ರತಿಫಲಗಳು. ಸರ್ಕಾರದಲ್ಲಿ Bಗೆ ಒಂದು ನೌಕರಿ ಕೊಡಿಸಿಕೊಡಲು A ವಾಗ್ದಾನ ಮಾಡುತ್ತಾನೆ. ಇದಕ್ಕೆ ಪ್ರತಿಯಾಗಿ ರೂ. 1,000 ಕೊಡಲು B ವಾಗ್ದಾನ ಮಾಡುತ್ತಾನೆ. ಇದು ಶೂನ್ಯ ಒಪ್ಪಂದ. ಏಕೆಂದರೆ ಇದರ ಪ್ರತಿಫಲ ನ್ಯಾಯಬದ್ಧವಲ್ಲ. Aಯ ಮನೆಯಲ್ಲಿ ದರೋಡೆ ಮಾಡಿ ಪಡೆದ ಪದಾರ್ಥಗಳನ್ನು ಅವನಿಗೆ ಹಿಂದಿರುಗಿಸಲು B ನೀಡಿದ ವಾಗ್ದಾನವನ್ನೊಪ್ಪಿ, A ಅವನ ಮೇಲೆ ಮೊಕದ್ದಮೆ ಹೂಡುವುದಿಲ್ಲವೆಂದು ವಾಗ್ದಾನ ಮಾಡುತ್ತಾನೆ. ಈ ಒಪ್ಪಂದ ಶೂನ್ಯವೆನಿಸುತ್ತದೆ. ಏಕೆಂದರೆ ಇದರ ಉದ್ದೇಶ ನ್ಯಾಯವಿರುದ್ಧ. A ತನ್ನ ಮಗಳನ್ನು ವ್ಯಭಿಚಾರಕ್ಕಾಗಿ Bಗೆ ಬಾಡಿಗೆಗೆ ಕೊಡಲು ಒಪ್ಪುತ್ತಾಳೆ. ಭಾರತೀಯ ದಂಡಸಂಹಿತೆಯ ಪ್ರಕಾರ ಬಾಡಿಗೆಗೆ ಕೊಡುವುದು ದಂಡಾರ್ಹವಲ್ಲವಾದರೂ ಅದು ಅನೈತಿಕವಾದ್ದರಿಂದ ಈ ಒಪ್ಪಂದ ಕರಾರೆನಿಸುವುದಿಲ್ಲ.

ಮುಂದೆ ಕೊಟ್ಟಿರುವ ಸಂದರ್ಭಗಳಲ್ಲಿ ಒಂದು ಒಪ್ಪಂದ ಶೂನ್ಯ (ವಾಯ್ಡ್) ಎನಿಸುತ್ತದೆ :

1 ಒಂದು ಅಥವಾ ಹಲವು ಉದ್ದೇಶಗಳಿಗೆ ಸಂಬಂಧಿಸಿದ ಪ್ರತಿಫಲ ಅಥವಾ ಅದರ ಯಾವುದಾದರೂ ಭಾಗವೋ ಒಂದು ಉದ್ದೇಶಕ್ಕೆ ಸಂಬಂಧಿಸಿದ ಹಲವು ಪ್ರತಿಫಲಗಳಲ್ಲಿ ಯಾವುದಾದರೊಂದೋ ಅಥವಾ ಅದರ ಯಾವುದಾದರೂ ಭಾಗವೋ ನ್ಯಾಯವಿರುದ್ಧವಾದಾಗ ಒಪ್ಪಂದ ಶೂನ್ಯವೆನಿಸುತ್ತದೆ (ಕಲಂ 24.)

2 ಪ್ರತಿಫಲವಿಲ್ಲದ ಒಪ್ಪಂದವೂ ಶೂನ್ಯವೇ. ಉದಾ : ಏನೂ ಪ್ರತಿಫಲ ವಿಲ್ಲದೆ Bಗೆ A ರೂ. 1,000 ಕೊಡಲು ವಾಗ್ದಾನ ಮಾಡುತ್ತಾನೆ. ಇದು ಶೂನ್ಯ. ಆದರೆ ಈ ನಿಯಮಕ್ಕೆ ಮುಂದಿನ ಅಪವಾದಗಳಿವೆ :

(1) ಲಿಖಿತವಾಗಿ ವ್ಯಕ್ತವಾದ, ತತ್ಕಾಲದಲ್ಲಿ ಜಾರಿಯಲ್ಲಿರುವ ಕಾನೂನು ರೀತ್ಯಾ ನೋಂದಣಿಗೊಳಿಸಿದ್ದಾಗಿದ್ದು, ಎರಡೂ ಪಕ್ಷಗಳ ಪರಸ್ಪರ ನಿಕಟ ಬಾಂಧವ್ಯ ಫಲವಾದ ಸಹಜ ಪ್ರೀತಿ ಅಥವಾ ಮಮತೆಯ ಕಾರಣದಿಂದ ಆದದಾ ದರೆ ಅಂಥ ಒಪ್ಪಂದ ಪ್ರತಿಫಲರಹಿತವೆಂದು ಶೂನ್ಯವಾಗುವುದಿಲ್ಲ. ಉದಾ : ತನ್ನ ಮಗನಲ್ಲಿ ಹೊಂದಿರುವ ಸಹಜವಾದ ಪ್ರೀತಿ ಮಮತೆಗಳಿಂದಾಗಿ ತಂದೆ ಅವನಿಗೆ ರೂ. 1,000 ಕೊಡಲು ವಾಗ್ದಾನ ಮಾಡಿ ಅದನ್ನು ಬರೆಹಕ್ಕಿಳಿಸಿ ನೋಂದಣಿ ಮಾಡಿಸುತ್ತಾನೆ. ಇದು ಕರಾರು.

(2) ಒಬ್ಬನಿಗೆ ಇನ್ನೊಬ್ಬ ಆಗಲೇ ಸ್ವತಃ ಏನನ್ನಾದರೂ ಮಾಡಿದ್ದು, ಅಥವಾ ಮೊದಲನೆಯಾತ ನ್ಯಾಯವಾಗಿ ಮಾಡಬೇಕಾಗಿದ್ದನ್ನು ಎರಡನೆಯಾತ ಮಾಡಿದ್ದು, ಅದಕ್ಕಾಗಿ ಮೊದಲನೆಯಾತ ಎರಡನೆಯವನಿಗೆ ಭಾಗಶಃವಾಗಿಯೋ ಪೂರ್ತಿಯಾಗಿಯೋ ಪರಿಹಾರ ನೀಡಲು ಮಾಡಿದ ವಾಗ್ದಾನ ಶೂನ್ಯವೆನಿಸುವುದಿಲ್ಲ. ಉದಾ : Bಯ ಥೈಲಿ (ಪರ್ಸ್) Aಗೆ ಸಿಕ್ಕಿ, ಆತ ಅದನ್ನು Bಗೆ ಕೊಡುತ್ತಾನೆ. ಇದಕ್ಕಾಗಿ Aಗೆ B ರೂ. 50 ಕೊಡಲೊಪ್ಪುತ್ತಾನೆ. ಇದು ಕರಾರು. Bಯ ಕಿರಿ ವಯಸ್ಸಿನ. ಮಗನನ್ನು A ಸಲಹುತ್ತಾನೆ. ಇದಕ್ಕಾಗಿ Aಗೆ ತಗಲುವ ಖರ್ಚನ್ನು ಕೊಡಲು B ವಾಗ್ದಾನ ಮಾಡುತ್ತಾನೆ. ಇದೂ ಕರಾರೇ.

(3) ದಾವೆ ಹೂಡುವ ಅವಧಿ ತೀರದಿದ್ದ ಪಕ್ಷದಲ್ಲಿ ಪಾವತಿಗಾಗಿ ಹಕ್ಕು ಚಲಾಯಿಸಬಹುದಾಗಿದ್ದ ಸಾಲಿಗನ (ಕ್ರೆಡಿಟರ್) ಋಣವನ್ನು ಪೂರ್ತಿಯಾಗಿ ಯಾಗಲಿ ಭಾಗಶಃವಾಗಿಯಾಗಲಿ ಸಲ್ಲಿಸುವುದಾಗಿ ಋಣಿಯೋ (ಡೆಟರ್) ಆತನಿಂದ ಸೂಕ್ತ ಅಧಿಕಾರ ಪಡೆದ ಕಾರ್ಯಸ್ಥನೋ (ಏಜೆಂಟ್) ಸಹಿ ಹಾಕಿ ಮಾಡಲಾದ ಲಿಖಿತ ವಾಗ್ದಾನವೂ ಕರಾರೇ.

ದಾನಿಯಾದಾತ ದಾನಸ್ವೀಕರ್ತನಿಗೆ ಮಾಡಿದ ದಾನ ಕೂಡ ಈ ವಿಧಿಯಿಂದ ಅಬಾಧಿತವಾಗಿರುತ್ತದೆ. ಅಲ್ಲದೆ ಒಂದು ಒಪ್ಪಂದಕ್ಕೆ ವಾಗ್ದಾತ (ಪ್ರಾಮಿಸರ್) ನೀಡಿರುವ ಸಮ್ಮತಿ ಅಬಾಧಿತವಾಗಿರಬೇಕೆಂಬುದು ಮುಖ್ಯವೇ ವಿನಾ, ಅದಕ್ಕೆ ಪ್ರತಿಫಲ ಸಾಕಷ್ಟಿಲ್ಲವೆಂಬ ಕಾರಣದಿಂದಾಗಿಯೇ ಆ ಒಪ್ಪಂದ ಶೂನ್ಯವಾಗುವುದಿಲ್ಲ ವೆಂಬುದು ಗಮನಿಸಬೇಕಾದ ಇನ್ನೊಂದು ಮುಖ್ಯ ಅಂಶ. ಉದಾರಣೆಗೆ ಒಬ್ಬ ತನ್ನ ರೂ. 10,000 ಬೆಲೆಬಾಳುವ ಮನೆಯನ್ನು ರೂ. 10ಕ್ಕೆ ಮಾರಲು ಒಪ್ಪುತ್ತಾನೆ. ಆತನ ಸಮ್ಮತಿ ಅಬಾಧಿತವಾಗಿದ್ದ ಪಕ್ಷದಲ್ಲಿ, ಪ್ರತಿಫಲ ಸಾಕಷ್ಟಿಲ್ಲ ವಾಗಿದ್ದರೂ ಈ ಒಪ್ಪಂದ ಕರಾರೆನಿಸುತ್ತದೆ. ಒಪ್ಪಂದಕ್ಕೆ ವಾಗ್ದಾತ ನೀಡಲಾದ ಸಮ್ಮತಿ ಅಬಾಧಿತ ಹೌದೇ ಅಲ್ಲವೇ ಎಂಬುದನ್ನು ನಿರ್ಣಯಿಸುವಾಗ ಪ್ರತಿಫಲ ಯಥೋಚಿತವೇ ಅಲ್ಲವೇ ಎಂಬ ವಿಚಾರವನ್ನೂ ನ್ಯಾಯಾಲಯ ಪರಿಗಣಿಸಬಹುದು (ಕಲಂ 25).

3 ಅಪ್ರಾಪ್ತವಯಸ್ಕರ ವಿನಾ ಇತರರ ವಿವಾಹವನ್ನು ಪ್ರತಿಬಂಧಿಸಿಯೋ ನ್ಯಾಯಬದ್ಧವಾದ ಯಾವುದೇ ಬಗೆಯ ವೃತ್ತಿ, ವ್ಯಾಪಾರ ಅಥವಾ ವ್ಯವಹಾರವನ್ನು ಕೈಗೊಳ್ಳಲು ಯಾವೊಬ್ಬ ವ್ಯಕ್ತಿಗೆ ತಡೆಯೊಡ್ಡಿಯೋ ಮಾಡಿಕೊಳ್ಳಲಾದ ಪ್ರತಿಯೊಂದು ಒಪ್ಪಂದವೂ ಶೂನ್ಯವಾಗುತ್ತದೆ. ಆದರೆ ಈ ನಿಯಮಕ್ಕೆ ಒಂದು ಅಪವಾದವುಂಟು. ಒಬ್ಬ ತನ್ನ ವ್ಯವಹಾರ (ಬಿಸಿನೆಸ್) ಸುನಾಮವನ್ನು (ಗುಡ್‌ವಿಲ್) ಮಾರಾಟ ಮಾಡಿದಾಗ, ಅದನ್ನು ಕೊಂಡವನೋ ಅವನಿಂದ ಈ ಹಕ್ಕು ಪಡೆದವನೋ ಈ ಬಗೆಯ ವ್ಯವಹಾರವನ್ನು ಮಾಡುತ್ತಿರುವ ವರೆಗೂ ಒಂದು ಗೊತ್ತಾದ ಸ್ಥಳೀಯ ಮಿತಿಯೊಳಗೆ ಇಂಥದೇ ವ್ಯಾಪಾರ ಮಾಡುವುದಿಲ್ಲವೆಂದು ಸುನಾಮದ ಮಾರಾಟಗಾರ ಒಪ್ಪಬಹುದು. ಆದರೆ ಆ ವ್ಯವಹಾರದ ಸ್ವರೂಪದ ದೃಷ್ಟಿಯಿಂದ ಇಂಥ ಮಿತಿಗಳು ನ್ಯಾಯವಾದವೆಂಬುದಾಗಿ ನ್ಯಾಯಾಲಯಕ್ಕೆ ವೇದ್ಯವಾಗಬೇಕಾದ್ದು ಅವಶ್ಯ (ಕಲಂ 27).

**ಅವಲಂಬಕ ಕರಾರು (ಕಂಟಿಂಜೆಂಟ್ ಕಾಂಟ್ರ್ಯಾಕ್ಟ್) :** ಕರಾರುಗಳಲ್ಲಿ ಇದು ಒಂದು ಪ್ರಭೇದ. ಅನುಬಂಧಿಯಾಗಿ (ಕೊಲ್ಯಾಟರಲ್) ಯಾವುದೋ ಒಂದು ಘಟನೆ ಸಂಭವಿಸಿದರೆ ಅಥವಾ ಸಂಭವಿಸದಿದ್ದರೆ ಏನನ್ನಾದರೂ ಮಾಡಲು ಅಥವಾ ಮಾಡದಿರಲು ಮಾಡಿಕೊಂಡ ಕರಾರು ಇದು. Bಯ ಮನೆ ಸುಟ್ಟುಹೋದರೆ ಅವನಿಗೆ ರೂ. 10,000 ಕೊಡಲು A ಒಪ್ಪುತ್ತಾನೆ. ಇದು ಅವಲಂಬಕ ಕರಾರು. ವಾಗ್ದಾನವನ್ನು ನೆರವೇರಿಸುವುದೂ ಬಿಡುವುದೂ ಈ ಘಟನೆಯನ್ನೇ ಅವಲಂಬಿಸಿದೆ (ಕಲಂ 31). ಅನಿಶ್ಚಿತವಾದ ಒಂದು ಭಾವೀ ಘಟನೆ ಸಂಭವಿಸಿದರೆ ಏನನ್ನಾದರೂ ಮಾಡಲು ಅಥವಾ ಮಾಡದಿರಲು ಮಾಡಿಕೊಂಡ ಅವಲಂಬಕ ಕರಾರನ್ನು ಆ ಘಟನೆ ಸಂಭವಿಸಿದ ವಿನಾ ಅಥವಾ ಸಂಭವಿಸುವ ವರೆಗೂ ಚಲಾಯಿಸುವ ಹಾಗಿಲ್ಲ. ಆ ಘಟನೆ ಅಸಾಧ್ಯವಾದಾಗ ಅಂಥ ಕರಾರೂ ಶೂನ್ಯವಾಗುತ್ತದೆ (ಕಲಂ 32). ಅನಿಶ್ಚಿತವಾದ ಒಂದು ಭಾವೀ ಘಟನೆ ಸಂಭವಿಸದಿದ್ದರೆ ಏನನ್ನಾದರೂ ಮಾಡಲು ಅಥವಾ ಮಾಡದಿರಲು ಮಾಡಿಕೊಂಡ ಅವಲಂಬಕ ಕರಾರನ್ನು ಆ ಘಟನೆ ಅಸಾಧ್ಯವಾದಾಗ ಮಾತ್ರವೇ ಚಲಾಯಿಸಬಹುದಲ್ಲದೆ ಅದಕ್ಕೆ ಮುಂಚೆಯಲ್ಲ (ಕಲಂ 33). ಖಚಿತ ಗೊಳಿಸದ ಭವಿಷ್ಯತ್‌ಕಾಲದಲ್ಲಿ ಒಬ್ಬ ವ್ಯಕ್ತಿ ಏನು ಮಾಡುವನೆಂಬುದೇ ಅವಲಂಬಕ ಕರಾರಿನ ಭಾವೀ ಘಟನೆಯಾಗಿದ್ದ ಪಕ್ಷದಲ್ಲಿ, ಆತನ ಯಾವುದೋ ವರ್ತನೆಯಿಂದಾಗಿ ಮುಂದೆ ಆತ ಹಾಗೆ ಮಾಡುವುದು ಸಾಮಾನ್ಯವಾಗಿ ಅಸಾಧ್ಯವಾಗುವುದಾದರೆ ಕರಾರಿನ ಘಟನೆಯೂ ಅಸಾಧ್ಯವೆಂದು ತಿಳಿಯತಕ್ಕದ್ದು. ಉದಾ : Cಯನ್ನು B ವಿವಾಹವಾಗುವುದಾದರೆ ಅವನಿಗೆ ಇಷ್ಟೋ ಹಣ ಕೊಡುವುದಾಗಿ A ಒಪ್ಪುತ್ತಾನೆ. ಆದರೆ Cಗೆ Dಯೊಂದಿಗೆ ವಿವಾಹವಾಗುತ್ತದೆ. ಈಗ B ಮತ್ತು Cಗಳ ವಿವಾಹ ಅಸಾಧ್ಯವೆಂದು ತಿಳಿಯಬೇಕು. ಮುಂದೆ D ತೀರಿಕೊಳ್ಳಬಹುದು. ಅನಂತರ Bಯನ್ನು C ವಿವಾಹವಾಗಬಹುದು. ಆದರೂ ಈ ಸಾಧ್ಯತೆಯನ್ನು ಇಲ್ಲಿ ಪರಿಗಣಿಸತಕ್ಕದ್ದಲ್ಲ (ಕಲಂ 34). ನಮೂದಿತವಾದ ಅನಿಶ್ಚಿತ ಘಟನೆಯೊಂದು ಒಂದು ನಿಗದಿಯಾದ ಅವಧಿಯಲ್ಲಿ ಸಂಭವಿಸಿದ ಪಕ್ಷದಲ್ಲಿ ಏನನ್ನಾದರೂ ಮಾಡಲು ಅಥವಾ ಮಾಡದಿರಲು ಅವಲಂಬಕ ಕರಾರು ಮಾಡಿಕೊಂಡಿದ್ದಲ್ಲಿ, ಆ ನಿಗದಿತ ಅವಧಿಯೊಳಗೆ ಅಂಥ ಘಟನೆ ಸಂಭವಿಸುವುದು ಅಸಾಧ್ಯವಾಯಿತಾದರೆ, ಆ ಕರಾರು ಶೂನ್ಯವಾಗುತ್ತದೆ. ಉದಾ : ನಿಶ್ಚಿತವಾದ ಹಡಗೊಂದು ಒಂದು ವರ್ಷದೊಳಗೆ ಹಿಂತಿರುಗಿದ ಪಕ್ಷದಲ್ಲಿ Bಗೆ ಇಷ್ಟೊ ಹಣವನ್ನು ಕೊಡುವುದಾಗಿ A ವಾಗ್ದಾನ ಮಾಡುತ್ತಾನೆ. ಒಂದು ವರ್ಷದೊಳಗಾಗಿ ಆ ಹಡಗು ಮರಳಿದರೆ ಕರಾರನ್ನು ಜಾರಿಗೆ ಕೊಡಬೇಕಾಗುತ್ತದೆ. ಒಂದು ವರ್ಷದೊಳಗಾಗಿ ಆ ಹಡಗು ಸುಟ್ಟು ಹೋದರೆ ಕರಾರು ಶೂನ್ಯವಾಗುತ್ತದೆ. ನಮೂದಿತವಾದ ಅನಿಶ್ಚಿತ ಘಟನೆ ಯೊಂದು ಒಂದು ನಿಗದಿಯಾದ ಅವಧಿಯಲ್ಲಿ ಸಂಭವಿಸದಿದ್ದ ಪಕ್ಷದಲ್ಲಿ ಏನನ್ನಾದರೂ ಮಾಡಲು ಅಥವಾ ಮಾಡದಿರಲು ಅವಲಂಬಕ ಕರಾರು ಮಾಕೊಂಡಿದ್ದಲ್ಲಿ, ಆ ನಿಗದಿತ ಅವಧಿಯಲ್ಲಿ ಅಂಥ ಘಟನೆ ಸಂಭವಿಸದಿದ್ದರೆ, ಅಥವಾ, ಅಷ್ಟರೊಳಗೆ ಅಂಥ ಘಟನೆ ಸಂಭವಿಸುವುದಿಲ್ಲವೆಂಬುದು ಖಂಡಿತವಾದರೆ, ಆ ಕರಾರನ್ನು ಚಲಾಯಿಸಬಹುದು. ನಿಶ್ಚಿತವಾದ ಹಡಗೊಂದು ಒಂದು ವರ್ಷದೊಳಗೆ ಮರಳಿ ಬಾರದಿದ್ದರೆ Bಗೆ ಇಷ್ಟೊ ಹಣ ಕೊಡುವುದಾಗಿ A ವಾಗ್ದಾನ ಮಾಡುತ್ತಾನೆ. ಒಂದು ವರ್ಷದೊಳಗೆ ಹಡಗು ಹಿಂತಿರುಗದಿದ್ದರೆ, ಅಥವಾ ಅಷ್ಟರಲ್ಲಿ ಹಡಗು ಸುಟ್ಟುಹೋದರೆ ಕರಾರನ್ನು ಜಾರಿಗೆ ಕೊಡಬೇಕು (ಕಲಂ 35).

ಅಸಾಧ್ಯವಾದೊಂದು ಘಟನೆ ಸಂಭವಿಸಿದರೆ ಏನನ್ನಾದರೂ ಮಾಡುವುದಾಗಿ ಅಥವಾ ಮಾಡದಿರುವುದಾಗಿ ಅವಲಂಬಕ ಒಪ್ಪಂದ ಮಾಡಿಕೊಂಡಿದ್ದ ಪಕ್ಷದಲ್ಲಿ, ಆ ಘಟನೆ ಅಸಾಧ್ಯವೆಂಬುದು ಆ ಒಪ್ಪಂದ ಮಾಡಿಕೊಂಡ ಸಮಯದಲ್ಲಿ ಪಕ್ಷಗಳಿಗೆ ಗೊತ್ತಿದ್ದಿರಲಿ ಗೊತ್ತಿಲ್ಲದಿದ್ದಿರಲಿ, ಅದು ಶೂನ್ಯ ಒಪ್ಪಂದವೆನಿಸುತ್ತದೆ. ಉದಾ : ಎರಡು ಸರಳರೇಖೆಗಳು ಒಂದು ಜಾಗವನ್ನು ಸುತ್ತುಗಟ್ಟುವುದಾದರೆ ರೂ. 1,000 ಕೊಡುವುದಾಗಿ ಒಬ್ಬ ಇನ್ನೊಬ್ಬನೊಂದಿಗೆ ಮಾಡಿಕೊಂಡ ಒಪ್ಪಂದವನ್ನು ಕರಾರು ಎನ್ನಲು ಸಾಧ್ಯವಿಲ್ಲ. ಅದು ಶೂನ್ಯ ಒಪ್ಪಂದ. Aಯ ಮಗಳಾದ C ಯನ್ನು B ಮದುವೆಯಾಗುವುದಾದರೆ Bಗೆ ರೂ. 1,000 ಕೊಡುವುದಾಗಿ A ಒಪ್ಪುತ್ತಾನೆ. ಆ ಸಮಯದಲ್ಲಿ C ಜೀವಂತವಾಗಿಲ್ಲವೆಂಬುದು A, B ಇಬ್ಬರಿಗೂ ಗೊತ್ತಿಲ್ಲ. ಈ ಒಪ್ಪಂದವೂ ಶೂನ್ಯವೇ (ಕಲಂ 36). ನೋಡಿ—ವಿಮೆ. (ಕೆ.ಸಿ.)

**ಕರಾರು ಟಿಪ್ಪಣಿ :** ಒಬ್ಬ ಷೇರು ದಲ್ಲಾಳಿ ತನ್ನ ಕಕ್ಷಿಗಾರನ ಲೆಕ್ಕದಲ್ಲಿ ಕೊಂಡ ಅಥವಾ ಮಾರಿದ ಷೇರುಗಳ ವಿವರಗಳನ್ನು ನೀಡಿ ಆತನಿಗೆ ಸಲ್ಲಿಸುವ ಪತ್ರ. ಬೊಂಬಾಯಿ ಮತ್ತು ಕಲ್ಕತ್ತ ಷೇರುಪೇಟೆಯ ಒಂದು ಮಾದರಿ ಕರಾರು ಟಿಪ್ಪಣಿ ಯಲ್ಲಿ ಈ ವಿವರಗಳಿರುತ್ತವೆ : ಷೇರುಗಳ ಬೆಲೆ ; ಷೇರು ವರ್ಗಾವಣೆಯನ್ನು ಕಾನೂನುಬದ್ಧವಾಗಿ ಮಾಡಲು ಅಗತ್ಯವಾದ ಸರ್ಕಾರಿ ಮುದ್ರಾಂಕ (ಸ್ಟಾಂಪ್) ಶುಲ್ಕ; ವರ್ಗಾವಣೆಯನ್ನು ದಾಖಲು ಮಾಡಿಕೊಳ್ಳಲೂ ಹೊಸ ಷೇರುಪ್ರಮಾಣ ಪತ್ರವನ್ನು ನೀಡಲೂ ಕಂಪನಿ ವಿಧಿಸುವ ಶುಲ್ಕ ; ಮತ್ತು ಷೇರು ದಲ್ಲಾಳಿ ವಿಧಿಸುವ ದಲ್ಲಾಳಿ ಶುಲ್ಕ. ಷೇರುಗಳ ಮೊಬಲಗನ್ನು ಪಾವತಿ ಮಾಡಬೇಕಾದ ಲೆಕ್ಕ ಚುಕ್ತಾದಿನವನ್ನೂ ಇದರಲ್ಲಿ ಸೂಚಿಸಿರುತ್ತದೆ. (ಕೆ.ಎಚ್.)

**ಕರಾವಳಿಯ ರಕ್ಷಣೆ :** ಸಮುದ್ರದ ಕರಾವಳಿಯ ಸ್ವಭಾವ ದಡದ ಭೂಗುಣ ವನ್ನು ಅವಲಂಬಿಸಿದೆ. ಬಂಡೆಗಳಿದ್ದರೆ ಅಲೆಗಳು ದಡವನ್ನು ಸುಲಭವಾಗಿ ಕೊರೆಯ ಲಾರವು. ಒಂದೇ ನಮೂನೆಯ ಗಟ್ಟಿಯಾದ ಭೂಮಿಯಿದ್ದರೆ ಕೊರೆತ ಕಮ್ಮಿ. ಆದರೆ ಒಂದು ಗಟ್ಟಿಯಾದ ಪದರದ ಮೇಲೆ ಇನ್ನೊಂದು ಮೆತುವಾದದ್ದಿದ್ದರೆ ಸವೆತ ಹೆಚ್ಚಾಗುತ್ತದೆ. ಸಮುದ್ರದ ಮೇಲೆ ಬಗ್ಗಿರುವ ಬಂಡೆಯ ಮುಖ ಕಡಿದಾಗಿದ್ದರೆ ಅಲೆಗಳ ಬಡಿತದಿಂದ ಕೆಳಭಾಗ ಕೊರೆದು ಮೇಲಿನ ಬಂಡೆ ಕೆಳಕ್ಕೆ ಉರುಳುತ್ತದೆ.

ಅಲೆಗಳು, ಪ್ರವಾಹಗಳು ಮತ್ತು ಮಾರುತಗಳು ಸಮುದ್ರದ ತೆರೆದ ದಡಗಳ ಮೇಲೂ ಕೊಲ್ಲಿಗಳ ಮತ್ತು ಅಳಿವೆಗಳ ತೀರಗಳ ಮೇಲೂ ಬಡಿದಾಗ ದಡದ

ಮೇಲಿರುವ ಮಣ್ಣು, ಮರಳು ಅಥವಾ ಗ್ರ್ಯಾವೆಲ್ಲು ಒಂದು ಕಡೆಯಿಂದ ಇನ್ನೊಂದು ಕಡೆಗೆ ಚಲಿಸುತ್ತವೆ. ಈ ಚಲನೆಯಿಂದ ಕೆಲವು ಕಡೆ ದಡ ಕೊರೆಯುತ್ತದೆ. ಇನ್ನು ಕೆಲವು ಕಡೆ ಮರಳು ತುಂಬಿಕೊಳ್ಳುತ್ತದೆ. ದಡ ಕೊರೆದಾಗ ಬೆಲೆಬಾಳುವ ಭೂಮಿ, ಮನೆಗಳು ಮತ್ತು ರಸ್ತೆಗಳಿಗೆ ತೊಂದರೆಯಾಗುವುದಾದರೆ ಪರಿಹಾರಕ್ರಮಗಳನ್ನು ತೆಗೆದುಕೊಳ್ಳಬೇಕಾಗುತ್ತದೆ.

ಅಲೆಗಳು ಎರಡು ವಿಧಗಳಲ್ಲಿ ಕೊರೆಯುತ್ತವೆ: 1 ದಡದ ಮರಳನ್ನು ಒಂದು ಜಾಗದಿಂದ ಇನ್ನೊಂದಕ್ಕೆ ಸಾಗಿಸುತ್ತವೆ. 2 ದಡದಿಂದ ಮಣ್ಣನ್ನೋ ಮರಳನ್ನೋ ಆಳವಾದ ದಡದ ಕಡೆಗೆ ಒಯ್ಯುತ್ತವೆ. ಇದನ್ನು ನಿವಾರಿಸುವುದಕ್ಕೆ ಮುಂಚೆ ಅಲೆಗಳ ವಿಚಾರವಾಗಿ ಕೊಂಚ ತಿಳಿದುಕೊಳ್ಳಬೇಕು.

ಮಾರುತಗಳು ನೀರಿನ ಮೇಲ್ಮೈಯ ಮೇಲೆ ಬೀಸಿದಾಗ ಅಲೆಗಳು ಉತ್ಪತ್ತಿಯಾಗುತ್ತವೆ. ಅಲೆಗಳ ಎತ್ತರ (1) ಸಮುದ್ರದ ಮೇಲ್ಮೈ ಒಂದೇ ದಿಕ್ಕಿನಲ್ಲಿ ಬೀಸುವ ಗಾಳಿಗೆ ಮೈಯೊಡ್ಡಿರುವ ಉದ್ದ (ಫೆಚ್), (2) ಗಾಳಿ ಬೀಸುವ ಅವಧಿ ಮತ್ತು (3) ವೇಗ–ಇವಕ್ಕೆ ಅನುಗುಣವಾಗಿದೆ. ನೀರಿನ ಮೇಲೆ ಉತ್ಪನ್ನವಾಗುವ ಅಲೆಗಳು ಒಂದು ಕೊಳದ ಮೇಲೆ ಮಂದಮಾರುತ ಬೀಸಿದಾಗ ಏಳುವ ಕಿರುದೆರೆಗಳಿಂದ ಹಿಡಿದು–ಸಮುದ್ರದ ಮೇಲೆ ಚಂಡಮಾರುತಗಳು, ತುಫಾನು ಮತ್ತು ಬಿರುಗಾಳಿಗಳು ಬೀಸಿದಾಗ ಏಳುವ 60′ ಎತ್ತರದ ಅಲೆಗಳ ವರೆಗೂ ವ್ಯತ್ಯಾಸವಾಗುತ್ತವೆ. ಅಲೆಯ ಒಂದು ಶಿಖರದಿಂದ ಇನ್ನೊಂದಕ್ಕೆ ಇರುವ ಅಂತರಕ್ಕೆ ಅಲೆಯ ಉದ್ದವೆನ್ನುತ್ತಾರೆ. ಒಂದೇ ಜಾಗದಲ್ಲಿ ಅಲೆಯ ಒಂದು ಶಿಖರ ಕಾಣಿಸುವುದಕ್ಕೂ ಇನ್ನೊಂದು ಕಾಣಿಸುವುದಕ್ಕೂ ಇರುವ ಕಾಲದ ಅಂತರಕ್ಕೆ ಅಲೆಯ ಅವಧಿಯೆಂದು (ಪೀರಿಯಡ್) ಹೆಸರು. ವಾಸ್ತವವಾಗಿ ಸಮುದ್ರದ ಮೇಲೆ ಬೇರೆ ಬೇರೆ ಉದ್ದಗಳ ಬೇರೆ ಬೇರೆ ಅವಧಿಗಳ ಅಲೆಗಳ ಸಾಲೇ ಕಾಣಿಸುತ್ತವೆ.

ಅಲೆಗಳನ್ನು ಉತ್ಪತ್ತಿ ಮಾಡುವ ಗಾಳಿ ಸ್ಥಳೀಯವಾಗಿದ್ದರೆ ಅವು ಕಡಿದಾಗಿರುತ್ತವೆ. ಎಂದರೆ ಅಲೆಗಳ ಉದ್ದ ಎತ್ತರದ 10 ರಿಂದ 20 ರಷ್ಟಿರುತ್ತದೆ. ಅದಕ್ಕೆ ಪ್ರತಿಯಾಗಿ ಸಮುದ್ರಮಧ್ಯದಲ್ಲಿ ಬಿರುಗಾಳಿಯಿಂದ ಉತ್ಪನ್ನವಾಗಿ ತೀರವನ್ನು ಮುಟ್ಟುವುದಕ್ಕೆ ಮುಂಚೆ ಸಾವಿರಾರು ಮೈಲಿಗಳ ಶಾಂತವಾದ ಗಾಳಿ ಬೀಸುತ್ತಿದ್ದರೆ ಅಲೆಗಳ ಉದ್ದ ಎತ್ತರದ 50 ರಿಂದ 500 ರಷ್ಟಿರುತ್ತದೆ. ಈ ಅಲೆಗಳನ್ನು ಸಮುದ್ರದ ಉಬ್ಬರಗಳು (ಸ್ವೆಲ್) ಎನ್ನುತ್ತಾರೆ.

ಸ್ಥಳೀಯ ಮಾರುತದಿಂದ ಎದ್ದ ಗಿಡ್ಡವೂ ಎತ್ತರವೂ ಆದ ಅಲೆಗಳು ದಡದ ಸಾಮಗ್ರಿಯನ್ನು ನೀರಿನ ಮಟ್ಟದಲ್ಲಿ ಈಚೆಗೆ ಕಿತ್ತು ಎಳೆದು ಆಳವಾದ ಸಮುದ್ರದ ಕಡೆಗೆ ಸಾಗಿಸುತ್ತವೆ. ಆಗ ದಡ ಕೊಚ್ಚಿಹೋಗುತ್ತದೆ. ಆದರೆ ಉಬ್ಬರದ ಅಲೆಗಳು ಮರಳನ್ನು ತಂದು ನೀರಿನ ಮಟ್ಟದಲ್ಲಿ ದಡಕ್ಕೆ ತಂದು ತುಂಬುತ್ತವೆ. ಕೆಲವು ಪ್ರದೇಶಗಳಲ್ಲಿ ಈ ಎರಡು ಕೆಲಸಗಳೂ ಒಂದಾದಮೇಲೊಂದು ನಡೆಯುತ್ತವೆ. ಆಳವಾದ ನೀರಿನಿಂದ ದಡದ ಕಡೆಗೆ ಚಲಿಸುವ ಅಲೆಗಳು ವಕ್ರೀಕರಿಸಿ ದಿಕ್ಕನ್ನು ಬದಲಾಯಿಸುತ್ತವೆ. ಇದರ ಫಲವಾಗಿ ಆಳವಿಲ್ಲದ ನೀರಿನಲ್ಲಿ ಸಮುದ್ರ ತೀರಕ್ಕೆ ಸಮಾಂತರವಾಗಿ ನಿಧಾನವಾಗಿ ಚಲಿಸುವ ಪ್ರವಾಹ ಉತ್ಪನ್ನವಾಗುತ್ತದೆ. ಇದಕ್ಕೆ ಕಡಲ ತೆರೆಯ ಪ್ರವಾಹವೆನ್ನುತ್ತಾರೆ (ಲಿಟೊರಲ್ ಕರೆಂಟ್). ಕೆಲವು ಸಂದರ್ಭಗಳಲ್ಲಿ ಇದು ಆಳವಾದ ಸಮುದ್ರದ ಕಡೆಗೆ ತಿರುಗುತ್ತದೆ.

ಆಳವಿಲ್ಲದ ನೀರಿನ ಅಲೆ ದಡದ ಕಡೆಗೆ ಚಲಿಸಿದಾಗ ನೀರಿನ ಆಳ ತೀರ ಕಡಿಮೆಯಾಗಿ ಅಲೆ ಒಡೆಯಬಹುದು. ಆಗ ಅಲೆಯ ಶಕ್ತಿ ಹೊರಹೊಮ್ಮಿ ನೀರು ಕದಡಿ ತಳದಲ್ಲಿರುವ ಮರಳನ್ನು ಕೆದಕುತ್ತವೆ. ಒಡೆದ ಮೇಲೆ ನೊರೆಗರೆಯುತ್ತ ವೇಗವಾಗಿ ಹರಿದು ದಡವನ್ನು ಅಪ್ಪಳಿಸುತ್ತದೆ.

ಮೇಲೆ ನೋಡಿದ ಎರಡು ಪ್ರವೃತ್ತಿಗಳೂ ಸೇರಿ ಆಳವಿಲ್ಲದ ನೀರಿನಲ್ಲಿ ದಡದ ಮುಖದಿಂದ ಸಾಮಗ್ರಿಯನ್ನು ತೆಗೆಯುತ್ತವೆ. ಈ ಚಲನೆಗೆ ಕಡಲ ತೆರೆಯ ಚಲನೆಯೆನ್ನುತ್ತಾರೆ (ಲಿಟೊರಲ್ ಡ್ರಿಫ್ಟ್). ಈ ಚಲನೆ ಮತ್ತು ಹಿಂದೆ ನೋಡಿದ ದಡದ ಕಡೆಗೂ ದಡದಿಂದ ಸಮುದ್ರದ ಕಡೆಗೂ ಹೋಗುವ ಮರಳಿನ ಚಲನೆ ಇವು ಸಮುದ್ರತೀರದ ಆಕಾರದ ಬದಲಾವಣೆಗೆ ಮುಖ್ಯ ಕಾರಣಗಳು.

ಅಲೆ ದಡಕ್ಕೆ ಬಡೆಯುವ ದಿಕ್ಕು ಮತ್ತು ರಭಸಕ್ಕೆ ಅನುಗುಣವಾಗಿ ಕಡಲ ಕರೆಯ ಚಲನೆಯ ದಿಕ್ಕೂ ಬಿರುಸೂ ಇವೆ. ವಾಸ್ತವವಾಗಿ ಅನೇಕ ಸಮುದ್ರತೀರಗಳಲ್ಲಿ ದಿನದಿಂದ ದಿನಕ್ಕೂ ಋತುವಿನಿಂದ ಋತುವಿಗೂ ಬದಲಾಗುವ ಹವಾಪರಿಸ್ಥಿತಿಗೆ ಅನುಸಾರವಾಗಿ ಕಡಲ ಕರೆಯ ಚಲನೆ ವ್ಯತ್ಯಾಸವಾಗುತ್ತ ಹೋಗುತ್ತದೆ. ಆದರೂ ಒಂದೊಂದು ತೀರದಲ್ಲಿಯೂ, ವರ್ಷದ ಕೊನೆಯಲ್ಲಿ ಈ ಚಲನೆ ಯಾವುದಾದರೂ ಒಂದು ದಿಕ್ಕಿಗೆ ತಿರುಗಿರುತ್ತದೆ. ಈ ಚಲನೆಯ ಪ್ರಮಾಣ ಮತ್ತು ಅದರ ದಿಕ್ಕಿಗೆ ಅನುಸಾರವಾಗಿ ತೀರದ ರಕ್ಷಣೆಯ ಕ್ರಮಗಳನ್ನು ನಿಶ್ಚಯಿಸಬೇಕಾಗುತ್ತದೆ.

ಒಂದೇ ಸಮುದ್ರತೀರದಲ್ಲಿ ಈ ಚಲನೆ ವರ್ಷವರ್ಷವೂ ಒಂದೇ ಸಮವಾಗಿದ್ದರೂ ಬೇರೆ ಬೇರೆ ತೀರಗಳಲ್ಲಿ ಇದು ವಿಶೇಷವಾಗಿ ವ್ಯತ್ಯಾಸವಾಗುತ್ತದೆ. ಉತ್ತರ ಅಮೆರಿಕದ ಮಹಾಸರೋವರಗಳು, ಭೂಮಧ್ಯ ಸಮುದ್ರ, ಇಂಥ ಭೂಮಿಯಿಂದ ಸುತ್ತುವರಿಯಲ್ಪಟ್ಟ ಜಲಭಾಗಗಳಲ್ಲಿ ಈ ಚಲನೆಯ ಪ್ರಮಾಣ ಕಡಿಮೆ. ಆದರೆ ಸಾಗರಗಳ ತೀರದ ತೆರೆದ ದಡಗಳಲ್ಲಿ ಸಾಗಿಹೋಗುವ ಮರಳು ಹೆಚ್ಚು. ಸಮುದ್ರತೀರದ ಆಕಾರ, ತೀರದ ಆಚೆಗೆ ಇರುವ ಮರಳಿನ ದಿಣ್ಣೆಗಳು ಇಲ್ಲವೆ ದ್ವೀಪಗಳು ಮತ್ತು ಅಲೆಗಳ ಹೊಡೆತದ ರಭಸದ ಮೇಲೆ ಒಂದೊಂದು ಜಾಗದಲ್ಲಿಯೂ ಈ ಚಲನೆ ವ್ಯತ್ಯಾಸವಾಗುತ್ತದೆ.

ಅಲೆಗಳಿಂದ ದಡದ ಕೊರೆತ : ಸಮುದ್ರದ ಅಲೆಗಳು ದಡವನ್ನು ತಲುಪಿದಾಗ ಗೋಡು ಮತ್ತು ಮರಳನ್ನು ಕೆದಕಿ ಜೊತೆಗೆ ಸಮುದ್ರತೀರಕ್ಕೆ ಸಮಾಂತರವಾಗಿ ಕಡಲ ತೆರೆಯ ಪ್ರವಾಹವನ್ನು ಹರಿಸುತ್ತವೆಯಷ್ಟೆ. ಈ ಎರಡು ಮಾರ್ಗಗಳಿಂದ ಸಮುದ್ರತೀರದ ಮಣ್ಣು ತೀರದ ಪಕ್ಕದಲ್ಲಿಯೇ ಚಲಿಸುತ್ತದೆ. ಸಾಮಾನ್ಯವಾದ ಅಲೆಗಳೂ ಆ ನೀರನ್ನು ಕಲಕಿದಾಗ ಗೋಡು ಮತ್ತು ಮಣ್ಣು—ಎರಡೂ ಸಮುದ್ರದ ತಳವನ್ನು ಸೇರುತ್ತವೆ. ಕ್ರಮೇಣ ತೀರ ಕೊರೆದು ಹೋಗಿ ದಪ್ಪ ಮರಳು ಮತ್ತು ಸಣ್ಣ ನೊರಜುಕಲ್ಲುಗಳು ಮಾತ್ರ ದಡದಲ್ಲಿ ಉಳಿದುಕೊಳ್ಳುತ್ತವೆ. ದಡದಲ್ಲಿ ಬಂಡೆಗಳಿದ್ದರೆ ಕೊರೆತ ಕೊಂಚ ಕಡಿಮೆಯಾಗುತ್ತದೆ. ಆದರೆ ಮರಳು ಮತ್ತು ಸಣ್ಣ ಕಲ್ಲುಗಳಿರುವ ಸಮುದ್ರತೀರದ ಪಕ್ಕದಲ್ಲಿ ಅಲೆಗಳ ಹೊಡೆತದಿಂದ ಮರಳಿನಿಂದ ಕೂಡಿದ ನದಿಯೇ ಹರಿಯುವಂತೆ ಇರುತ್ತದೆ. ಈ ವರ್ಷ ಅಲ್ಲಿ ಕಾಣುವ ಮರಳು ಪ್ರವಾಹದಲ್ಲಿ ಹರಿದು ಹೋಗಿ ಮಾರನೆಯ ವರ್ಷ ಮೇಲಿನಿಂದ ಹರಿದುಬರುವ ಬೇರೆ ಮರಳು ಅಲ್ಲಿಗೆ ಬಂದಿರುತ್ತದೆ. ಆದರೆ ಕೆಲವು ಸಮುದ್ರತೀರಗಳಲ್ಲಿ ಒಂದು ದಿಕ್ಕಿನಲ್ಲಿ ಹೋಗುವ ಮರಳಿಗೆ ಬದಲಾಗಿ ಎದುರು ದಿಕ್ಕಿನಿಂದ ಮರಳು ಬಂದು ಸಮುದ್ರತೀರ ಭದ್ರವಾಗಿರುವುದು. ಹಾಗೆಯೇ ಕೆಲವು ತೀರಗಳಲ್ಲಿ ಬಂದು ಸೇರುವ ಮರಳು ಹೆಚ್ಚಾಗಿಯೂ ಇನ್ನು ಕೆಲವು ತೀರಗಳಲ್ಲಿ ಕೊರೆದು ಹೋಗುವ ಮರಳು ಹೆಚ್ಚಾಗಿಯೂ ಇರಬಹುದು. ತೀರದ ರಕ್ಷಣೆ ಬೇಕಾಗಿರುವುದು ಮರಳು ಕೊರೆದು ಹೋಗುವಕಡೆಗಳಲ್ಲಿ.

ಗಾಳಿಯಿಂದ ಕೊರೆತ : ಒಣಗಿರುವ ಸಮುದ್ರತೀರದ ಮೇಲೆ ಬೀಸುವ ಗಾಳಿ ಭೂಮಿಯ ಕಡೆಗೆ ಮರಳನ್ನು ಸಾಗಿಸಿ ಮರಳುದಿಣ್ಣೆಗಳನ್ನು ಮಾಡಬಹುದು. ಅಥವಾ ಕಡಲ ಕರೆಯ ಪ್ರವಾಹದಿಂದ ಮರಳನ್ನು ಎತ್ತಿ ಕೊರೆತವನ್ನು ಹೆಚ್ಚಿಸಬಹುದು. ಮರಳುದಿಣ್ಣೆಗಳು ದಡಕ್ಕೆ ಹತ್ತಿರವಾಗಿದ್ದರೆ ತುಫಾನುಗಳು ಮತ್ತು ಬಿರುಗಾಳಿಗಳೊಂದಿಗೆ ಬರುವ ದೊಡ್ಡ ಅಲೆಗಳ ದೆಸೆಯಿಂದ ತೀರವನ್ನು ಕಾಪಾಡುತ್ತವೆ.

ತೀರದ ಕಡೆಗೆ ಬೀಸುವ ಗಾಳಿ ದಡದಲ್ಲಿ ನೀರಿನ ಮಟ್ಟವನ್ನು ಹೆಚ್ಚಿಸುತ್ತದೆ. ಆಗ ಇನ್ನೂ ದೊಡ್ಡ ಅಲೆಗಳು ದಡವನ್ನು ಮುಟ್ಟಿ ದಡದ ಭದ್ರವಾದ ಭಾಗಗಳನ್ನೂ ಕೊರೆಯಬಹುದು ಅಲೆಗಳು ಹತ್ತು ಅಡಿಗಳ ವರೆಗೂ ಏರಿದ ನಿದರ್ಶನಗಳಿವೆ. ಅಂಥ ಸಂದರ್ಭಗಳಲ್ಲಿ ದಡದ ಮೇಲೆ ಪ್ರಾಣ ನಾಶವಾಗಬಹುದು. ಆಸ್ತಿ ಮುಳುಗಿಹೋಗಬಹುದು.

ಸಮುದ್ರತೀರದ ಒಳಗಂಡಿಗಳು : ತೆರೆದ ಸಮುದ್ರದ ತೀರಗಳಲ್ಲಿ ಉಪನದಿಗಳು ಅಳಿವೆಗಳಲ್ಲಿ ಒಳಗೆ ನುಗ್ಗುತ್ತವೆ. ಅಳಿವೆಗಳಲ್ಲಿ ನದಿಗಳಲ್ಲಿ ಬರುವ ಸಿಹಿನೀರಿನ ಜೊತೆಗೆ ಬರತದ ಉಬ್ಬರಗಳಲ್ಲಿ ಒಳಗೆ ಬರುವ ಉಪ್ಪುನೀರು ಸೇರಿರುತ್ತದೆ. ಸಿಹಿನೀರಿನ ಪ್ರಮಾಣ ಹೆಚ್ಚಾಗಿದ್ದರೆ ಅದರಲ್ಲಿ ಗೋಡುಮಣ್ಣು ಮತ್ತು ಗ್ರ್ಯಾವೆಲ್ ಸಮುದ್ರತೀರದ ವರೆಗೂ ಬರಬಹುದು. ಈ ಸಾಮಗ್ರಿ ಕುದುರುಗಳಾಗಿಯೋ (ಡೆಲ್ಟ) ದಿಣ್ಣೆಗಳಾಗಿಯೋ ಸಮುದ್ರತೀರದಲ್ಲಿ ದಾಸ್ತಾನಾಗಬಹುದು. ಇಂಥ ಸಾಮಗ್ರಿಯಲ್ಲಿ ಇರುವ ಮರಳು ಅಲೆಗಳಿಗೆ ಸಿಕ್ಕಿ ಕಡಲ ಕರೆಯ ಚಲನೆಯಲ್ಲಿ ಸೇರಿ ತೀರದ ಪಕ್ಕದಲ್ಲಿ ಸಮುದ್ರದಲ್ಲಿ ಸಾಗಿ ಹೋಗಬಹುದು.

ಕೆಲವು ಸಂದರ್ಭಗಳಲ್ಲಿ ಉಪನದಿಗಳು ಹೆಚ್ಚಿನ ಸಾಮಗ್ರಿಯನ್ನು ಹೊತ್ತು ತರದೆ ಅಳಿವೆಯಿಂದ ಸಮುದ್ರತೀರಕ್ಕೆ ಬರುವ ಗೋಡುಮಣ್ಣು ಕಡಿಮೆಯಾಗುವುದು. ಆಗ ಕಡಲ ಕರೆಯ ಚಲನೆಯಲ್ಲಿ ಬರುವ ಮಣ್ಣನ್ನು ಒಳಗಂಡಿ ತಡೆದು ನಿಲ್ಲಿಸುತ್ತದೆ. ಈ ಮಣ್ಣು ಹೆಚ್ಚಾದರೆ ಒಳಗಂಡಿಯ ಬಾಯಿ ಮುಚ್ಚಿಹೋಗುತ್ತದೆ. ಇದಕ್ಕೆ ಪ್ರತಿಯಾಗಿ ಉಬ್ಬರದ ನೀರೂ ಹೊಳೆಯಲ್ಲಿ ಬರುವ ಸಿಹಿನೀರೂ ಅದರಲ್ಲಿ ದಾರಿಯನ್ನು ಮಾಡಲು ಪ್ರಯತ್ನಿಸುತ್ತವೆ. ಹೀಗಾಗಿ ಅಳಿವೆಯ ಬಾಯಿಯನ್ನು ಮುಚ್ಚುವ ಮತ್ತು ತೆರೆಯುವ ಶಕ್ತಿಗಳು ಉಯ್ಯಾಲೆಯ ಹಾಗೆ ಆಡುತ್ತವೆ. ಇದರ ಪರಿಣಾಮವಾಗಿ ಸ್ಥಳವನ್ನು ಬದಲಾಯಿಸುವ ಮರಳುದಿಣ್ಣೆಗಳಲ್ಲಿ ಸೊಟ್ಟ ಸೊಟ್ಟಾದ ನಾಲೆಗಳು ಬಳಸುತ್ತವೆ. ಕಡಲಕರೆಯ ಚಲನದಲ್ಲಿ ಮರಳು ಹೆಚ್ಚಾಗಿ ಬಂದರೆ ದಿಣ್ಣೆಗಳ ಒಳಕ್ಕೆ ನುಗ್ಗಿ ದಾರಿಯನ್ನು ಮಾಡಬಹುದು.

ಮಾನವ ನಿರ್ಮಿತವಾದ ಕೊರೆತ : ಯಾರೂ ಬೇಕಾಗಿ ಸಮುದ್ರತೀರವನ್ನು ಕೊರೆಯುವ ದೃಷ್ಟಿಯಿಂದ ಏನನ್ನೂ ಮಾಡುವುದಿಲ್ಲ. ಬೇರೆ ಯಾವುದೋ ಮೇಲ್ಪಾಡನ್ನು ಮಾಡಲು ಹೋದಾಗ ಈ ಪರಿಣಾಮವಾಗುತ್ತದೆ. ಕೆಲವು ವೇಳೆ ಹೀಗೆ ಸಮುದ್ರತೀರ ಕೊರೆಯಬಹುದೆಂಬ ನಿರೀಕ್ಷೆಯೂ ಇರುತ್ತದೆ.

ಅಲೆತಡೆಗಳು : ಬಂದರಿನೊಳಗೆ ಬರುವ ಹಡಗುಗಳಿಗೆ ಅಲೆಗಳ ಹೊಡೆತದಿಂದ ರಕ್ಷಿತವಾದ ಜಾಗವನ್ನು ಕಲ್ಪಿಸುವುದಕ್ಕಾಗಿ ಆಳವಾದ ಜಾಗದಲ್ಲಿ ಕಲ್ಲು ಇಲ್ಲವೆ ಕಾಂಕ್ರೀಟಿನಿಂದ ಅಲೆತಡೆಗಳನ್ನು ಕಟ್ಟುತ್ತಾರೆ. ಇವು ಕಡಲ ಕರೆಯಲ್ಲಿ ಮರಳು ಚಲಿಸುವುದನ್ನು ತಡೆಯುತ್ತವೆ. ಇದರಿಂದ ಒಂದು ಕಡೆ ಮರಳು ಶೇಖರವಾಗಿ ಇನ್ನೊಂದು ಕಡೆ ಸಮುದ್ರತೀರ ಕೊರೆದುಹೋಗುತ್ತದೆ. ಆದರೆ ಸಮುದ್ರತೀರದಲ್ಲಿ ಅಲೆತಡೆಗಳನ್ನು ಕಟ್ಟಿದಾಗ ಹಿಂಭಾಗದಲ್ಲಿ ದಡ ಕೊರೆಯದಂತೆ ಇವು ತಡೆಯುತ್ತವೆ.

ಜೆಟ್ಟಿಗಳು : ಆಳವಿಲ್ಲದ ಸ್ಥಳದಲ್ಲಿ ಕಾಣಿಸುವ ಮರಳು ದಿಬ್ಬಗಳ ಮೂಲಕ ಜಲಯಾನದ ನಾಲೆಯನ್ನು ಭದ್ರಪಡಿಸಿ ಮೇಲ್ಪಾಡನ್ನು ಮಾಡುವುದಕ್ಕಾಗಿ ನದಿಯ ಅಳಿವೆಯ ಬಾಯಲ್ಲಿ ಕಟ್ಟಿರುವ ಕಟ್ಟಡಗಳಿಗೆ ಜೆಟ್ಟಿಗಳು ಎನ್ನುತ್ತಾರೆ. ಇವುಗಳ ಕ್ರಿಯೆಯೂ ಅಲೆತಡೆಗಳ ಹಾಗೆಯೇ—ಅಳಿವೆಗೆ ಅಡ್ಡಲಾಗಿ ಕಡಲ ಕರೆಯಲ್ಲಿ ಮರಳು ಕೊಚ್ಚಿಹೋಗುವುದನ್ನು ತಡೆಯುತ್ತವೆ.

ಜಲಯಾನದ ನಾಲೆಗಳು : ಸಾಮಾನ್ಯವಾಗಿ ಅಳಿವೆಯ ಬಾಯಿಯಲ್ಲಿ ಮರಳಿನ ದಿಬ್ಬವೊಂದಿರುವುದು. ಇದರ ಮೇಲುಗಡೆ ಕಡಲ ಕರೆಯಲ್ಲಿ ಮರಳು ಹೋಗುತ್ತದೆ. ಜಲಯಾನದ ಸೌಕರ್ಯಕ್ಕಾಗಿ ಈ ದಿಣ್ಣೆಯಲ್ಲಿ ಹೂಳನ್ನು ಎತ್ತಿ ಆಳವಾದ ನಾಲೆಯನ್ನು ತೋಡಬೇಕಾಗುತ್ತದೆ. ಆಮೇಲೆ ನಾಲೆಯಲ್ಲಿ ಶೇಖರವಾಗುವ ಮರಳನ್ನು ಆಗಾಗ ಎತ್ತಿ ಸಮುದ್ರದೊಳಕ್ಕೆ ಹಾಕುತ್ತಾರೆ. ಈ ರೀತಿಯಲ್ಲಿ ಕಡಲ ಕರೆಯ ಮರಳಿಗೆ ದಾರಿಯಿಲ್ಲದೆ ಕೆಳಭಾಗ ಕೊರೆದು ಹೋಗುತ್ತದೆ.

ಮರಳಿನ ರಾಶಿಯ ಸಾಗಣೆ : ಸಾಮಾನ್ಯ ಪರಿಸ್ಥಿತಿಯಲ್ಲಿ ಸಮುದ್ರದ ತೀರದಲ್ಲಿ ಗುಡ್ಡೆಯಾಗಿ ಬಿದ್ದಿರುವ ಮರಳಿನ ರಾಶಿಗಳಲ್ಲಿನ ಸಮುದ್ರದ ಕಡೆಯ ಮುಖಗಳು ಕೊರೆದು ಹೋಗುತ್ತವೆ. ಬಳಿಕ ಆ ಮರಳು ದಡ ಕೊರೆದಲ್ಲಿಗೆ ಹೋಗಿ ತುಂಬಿಕೊಳ್ಳುತ್ತದೆ. ಆಮೇಲೆ ಗಾಳಿ ತೀರದ ಕಡೆಗೆ ಬೀಸುವಾಗ ದಡದ ಮರಳನ್ನು ಹಾರಿಸಿ ಮರಳ ರಾಶಿಗಳನ್ನು ಮತ್ತೆ ತುಂಬಿಸುತ್ತದೆ. ಜನಸಮೃದ್ಧವಾದ ಸಮುದ್ರತೀರಗಳಲ್ಲಿ ಈ ರಾಶಿಗಳ ಮರಳನ್ನು ಕಟ್ಟಡಗಳನ್ನು ಕಟ್ಟಲು ಸಾಗಿಸುತ್ತಾರೆ. ಇನ್ನು ಕೆಲವು ಕಡೆ ಜಮೀನಿನ ಮೇಲ್ಪಾಡಿಗೋಸ್ಕರ ಆರಂಭಗಾರರು ಮರಳ ರಾಶಿಗಳನ್ನು ತೆಗೆಯುತ್ತಾರೆ. ಆಗ ಜಮೀನಿನ ಮೇಲೆ ಬಿರುಗಾಳಿಯಲ್ಲಿ ಅಲೆಗಳು ನುಗ್ಗಿ ಅಪಾರವಾದ ನಷ್ಟವನ್ನುಂಟುಮಾಡುತ್ತವೆ.

ಕರಾವಳಿಯ ರಕ್ಷಣೆಯ ಕ್ರಮಗಳು : ಈ ಕ್ರಮಗಳು ಕೊರೆತದ ಕಾರಣಕ್ಕೂ ತೀರದ ಭೂಮಿಯ ಬೆಲೆಗೂ ಅನುಸಾರವಾಗಿರುತ್ತವೆ. ಇವುಗಳಲ್ಲಿ ಮುಖ್ಯವಾದುವನ್ನು ಕೆಳಗೆ ಕೊಟ್ಟಿದೆ.

1 ಕಲ್ಲಿನ ರಾಶಿ : ಸಮುದ್ರತೀರ ಕೊರೆಯದ ಹಾಗೆ ಕಲ್ಲಿನ ಚೂರುಗಳನ್ನು ಮರಳಿನ ಮೇಲುಗಡೆ ಮುಚ್ಚುತ್ತಾರೆ. ಈ ಕಲ್ಲುಗಳು ಅಲೆಗಳು ಮೇಲೆ ಉರುಳಿದಾಗ ಕದಲದಷ್ಟು ದೊಡ್ಡವಾಗಿರಬೇಕು. ಕಲ್ಲುಗಳ ಸಂದುಗಳಲ್ಲಿ ಅಲೆಗಳು ನುಗ್ಗಿ ಮರಳನ್ನು ಕೊರೆಯದ ಹಾಗೆ ದೊಡ್ಡ ಕಲ್ಲುಗಳ ಕೆಳಗಡೆ ಸಣ್ಣ ಕಲ್ಲುಗಳ ವರಸೆಯೊಂದಿರಬೇಕು.

2 ದಡದ ಮೇಲೆ ನೆಲಹಾಸು : ಅಲೆಗಳ ಹೊಡೆತವನ್ನು ಎದುರಿಸುವುದಕ್ಕಾಗಿ ದಡದ ಮೇಲೆ ಕಲ್ಲು, ಕಾಂಕ್ರೀಟು, ಇಲ್ಲವೆ ಬಿಟ್ಯುಮಿನನ್ನು ಒಂದೇ ಮಟ್ಟವಾಗಿ ಹಾಸುತ್ತಾರೆ.

3 ಸಮುದ್ರದ ಗೋಡೆಗಳು : ಈ ಗೋಡೆಗಳನ್ನು ನೀರಿನ ಅಂಚಿನಲ್ಲಿ ಕಟ್ಟಿ ಅಲೆಗಳ ಸಂಪೂರ್ಣವಾದ ಹೊಡೆತವನ್ನು ತಡೆಯುವಂತೆ ಸಂವಿಧಾನವನ್ನು ಮಾಡಿರುತ್ತಾರೆ. ಇವು ಕಲ್ಲು ಇಲ್ಲವೆ ಕಾಂಕ್ರೀಟಿನ ಭದ್ರವಾದ ಗೋಡೆಗಳಂತೆ ಇರುತ್ತವೆ. ಒಡೆಯುವ ಅಲೆಗಳು ಗೋಡೆಗೆ ಬಡಿದಾಗ ಬೀಳುವ ಆಘಾತವನ್ನು ತಡೆದುಕೊಳ್ಳುವುದಕ್ಕೂ ಗೋಡೆಯ ತಲೆಯ ಮೇಲೆ ಹೆಚ್ಚು ನೀರು ಉರುಳದ ಹಾಗೂ ಗೋಡೆಯ ಸಮುದ್ರದ ಕಡೆಯ ಮುಖಕ್ಕೆ ಬೇರೆಬೇರೆಯ ಆಕಾರಗಳನ್ನು ಕೊಡುತ್ತಾರೆ.

4 ಸಮುದ್ರದ ಅಡ್ಡಕಟ್ಟೆಗಳು : ಈ ಕ್ರಮದಲ್ಲಿ ಸಮುದ್ರತೀರದ ಮೇಲೆ ಮರಳಿನ ಇಲ್ಲವೆ ಮಣ್ಣಿನ ಏರಿಯನ್ನು ಕಟ್ಟಿ ಅದರ ಸಮುದ್ರದ ಕಡೆಯ ಮುಖಕ್ಕೆ ಕಲ್ಲು ಇಲ್ಲವೆ ಕಾಂಕ್ರೀಟಿನಿಂದ ರಕ್ಷಣೆಯನ್ನು ಕೊಡುತ್ತಾರೆ. ಉತ್ತರ ಸಮುದ್ರದ ತೀರದ ಮೇಲೆ ಹಾಲೆಂಡಿನಲ್ಲಿ ಈ ಸಂವಿಧಾನವನ್ನು ವಿಶೇಷವಾಗಿ ಬಳಸಿದ್ದಾರೆ.

5 ಅಲೆತಡೆಗಳು : ಹಿಂದೆ ನೋಡಿದ ಅಲೆತಡೆಗಳನ್ನು ಸಮುದ್ರತೀರದಲ್ಲಿ ಕಟ್ಟಿದಾಗ ಇವು ಹಿಂಭಾಗದಲ್ಲಿ ದಡ ಕೊರೆಯದಂತೆ ತಡೆಯುತ್ತವೆ.

6 ತಡೆಕಟ್ಟು : ಇದನ್ನು ಸಮುದ್ರತೀರದಿಂದ ಅದಕ್ಕೆ ಸಮಕೋನವಾದ ದಿಕ್ಕಿನಲ್ಲಿ, ಮರ, ಕಲ್ಲು, ಕಾಂಕ್ರೀಟ್—ಇವುಗಳಿಂದ ಕಟ್ಟುತ್ತಾರೆ. ಇದು ಕಡಲ ಕರೆಯ ಮರಳನ್ನು ತಡೆದು ತೀರದಲ್ಲಿರುವ ಮರಳು ಹೊರಗೆ ಹೋಗದಂತೆ ಮಾಡುತ್ತದೆ. ಕೆಲವು ಕಡೆ ಅನೇಕ ತಡೆಕಟ್ಟುಗಳನ್ನು ದೂರದೂರವಾಗಿ ಸಮಾಂತರವಾಗಿ ಸಮುದ್ರತೀರದಲ್ಲಿ ಕಟ್ಟುವುದೂ ಉಂಟು.

ಸಮುದ್ರತೀರದ ರಕ್ಷಣೆಗಾಗಿ ತಡೆಗಟ್ಟುಗಳನ್ನು ಬಹಳ ಹಿಂದಿನಿಂದಲೂ ಉಪಯೋಗಿಸುತ್ತಿದ್ದಾರೆ. ಅವು ಮರಳನ್ನು ತಡೆದು ಸಮುದ್ರದ ಕರೆಯನ್ನು ಅಗಲವಾಗಿ ಮಾಡುತ್ತವೆ. ತೀರ ಕೊರೆದು ಹೋಗುತ್ತಿದ್ದರೆ ತಡೆಕಟ್ಟುಗಳು ಕೊರೆತವನ್ನು ಕಡಿಮೆ ಮಾಡುತ್ತವೆ. ತಡೆಕಟ್ಟುಗಳಲ್ಲಿ ಮುಖ್ಯವಾಗಿ ಎರಡು ನಮೂನೆಗಳಿವೆ. ಒಂದರಲ್ಲಿ ಮರಳು ಅದರ ಮೂಲಕ ತೂರಿ ಹೋಗುತ್ತದೆ; ಇನ್ನೊಂದು ಮರಳನ್ನು ತಡೆದು ನಿಲ್ಲಿಸುತ್ತದೆ. ಈ ನಮೂನೆಯೇ ಹೆಚ್ಚಾಗಿ ಬಳಕೆಯಲ್ಲಿದೆ. ಇದು ಮರಳನ್ನು ತಡೆಕಟ್ಟಿನ ಮೇಲುಭಾಗದಿಂದಲೂ ಸಮುದ್ರದ ಕಡೆಯ ಕೊನೆಯ ಸುತ್ತಲೂ ಆಚೆಗೆ ಬಿಡುತ್ತದೆ. ತಡೆಕಟ್ಟಿನ ಉದ್ದ ಕಡಲಕರೆಯ ಮರಳನ್ನು ಬಹುಕಾಲ ತಡೆದು ನಿಲ್ಲಿಸುವಷ್ಟು ಹೆಚ್ಚಾಗಿರಬಾರದು.

ಮರಳನ್ನು ತುಂಬುವುದು : ಸಮುದ್ರದ ಕರೆಯನ್ನು (ಬೀಚ್) ಇಳಿಜಾರಾಗಿ ಮಾಡುವುದಕ್ಕಾಗಿ ತೀರದ ಮೇಲೆ ಕೃತಕವಾಗಿ ಮರಳನ್ನು ತುಂಬುವುದುಂಟು. ಏಕೆಂದರೆ ಅಲೆಗಳ ಶಕ್ತಿಯನ್ನು ಈ ಇಳಿಜಾರಾದ ಮರಳಿನ ತೀರ ನಾಶಪಡಿಸುತ್ತದೆ. ಈ ಮರಳು ಸಮುದ್ರಕ್ಕೂ ತೀರದ ಆಚೆಯ ಕಟ್ಟಡಗಳಿಗೂ ನಡುವೆ ರಕ್ಷಣೆಯನ್ನು ಕೊಡುತ್ತದೆ. ಇದರಿಂದ ಕರೆಯ ಅಗಲವೂ ಹೆಚ್ಚಾಗಿ ಆಟೋಟಗಳಿಗೆ ಅನುಕೂಲವಾಗುತ್ತದೆ. ಮದರಾಸು, ಬೊಂಬಾಯಿಯಂಥ ಸಮುದ್ರತೀರಗಳಲ್ಲಿ ವಿನೋದಕ್ಕಾಗಿ ಸಾವಿರಾರು ಜನರು ಪ್ರತಿದಿನವೂ ಸಾಯಂಕಾಲ ಬರುತ್ತಾರೆ. ವಿಶಾಲವಾದ ಮರಳಿನ ಮೇಲೆ ಅವರು ವಿಶ್ರಮಿಸಿಕೊಳ್ಳಲು ಅನುಕೂಲವಾಗುತ್ತದೆ. ಕೆಲವು ವರ್ಷಗಳ ಹಿಂದೆ ಅಮೆರಿಕದ ಸಂಯುಕ್ತಸಂಸ್ಥಾನಗಳಲ್ಲಿ ನ್ಯೂಜೆರ್ಸಿ ಸಮುದ್ರತೀರದ ಮೇಲೆ 10 ಲಕ್ಷ ಸಲೆ ಗಜ ಮರಳನ್ನು ತುಂಬಿ ಅಲ್ಲಿಗೆ ಬರುವ ಜನರಿಗೆ ಸೌಕರ್ಯವನ್ನು ಮಾಡಿಕೊಟ್ಟರು. ಈ ಮರಳಿನ ಸ್ವಲ್ಪ ಭಾಗವನ್ನು ಆಗಾಗ ಭರ್ತಿ ಹಾಕಬೇಕಾಗುತ್ತದೆ.

ಸಂವಿಧಾನದ ಕ್ರಮಗಳು ; ಸಾಧ್ಯವಾದಷ್ಟು ಕಡಿಮೆ ಖರ್ಚಿನಲ್ಲಿ ಪರಿಣಾಮಕಾರಿಯಾಗಿ ಸಮುದ್ರತೀರಕ್ಕೆ ರಕ್ಷಣೆಯನ್ನು ಒದಗಿಸಬೇಕಾದರೆ ಮೊದಲು ಕೊರೆತದ ಕಾರಣವನ್ನು ಕಂಡುಹಿಡಿಯಬೇಕು. ನಷ್ಟಕ್ಕೆ ಗುರಿಯಾಗುವ ಆಸ್ತಿಯ ಬೆಲೆಯನ್ನು ನಿರ್ಣಯಿಸಬೇಕು. ಆಹಾರವಿಹಾರಕ್ಕಾಗಿ ಸಮುದ್ರತೀರ ಉಪಯೋಗವಾಗುವ ಹಾಗಿದ್ದರೆ ಅದರ ಮೇಲೆ ಹೆಚ್ಚು ಹಣವನ್ನು ವೆಚ್ಚ ಮಾಡಿದರೂ ಸಾರ್ಥಕವಾಗುತ್ತದೆ. ಅನಂತರ ಆ ಪ್ರದೇಶದಲ್ಲಿ ಸುಲಭವಾಗಿ ದೊರಕುವ ಕಟ್ಟಡಗಳ ಸಾಮಗ್ರಿಗಳನ್ನು ನೋಡಿಕೊಂಡು ಅಂದಾಜುಗಳನ್ನು ತಯಾರಿಸಬಹುದು.

ಎರಡನೆಯ ಮಹಾ ಯುದ್ಧಕ್ಕೆ ಮುಂಚೆ ತೀರದ ಕೊರೆತದ ಎಲ್ಲ ಸಮಸ್ಯೆಗಳನ್ನೂ ಸಮುದ್ರದ ಗೋಡೆಗಳು ಮತ್ತು ತಡೆಕಟ್ಟುಗಳಿಂದ ಎದುರಿಸುತ್ತಿದ್ದರು. ಗೋಡೆಯನ್ನು ಕಟ್ಟುವುದಕ್ಕೆ ವೆಚ್ಚ ಹೆಚ್ಚಾಗುತ್ತದೆ. ಆದರೆ ಬೆಲೆಬಾಳುವ ಆಸ್ತಿಯನ್ನು ಕಾಪಾಡಬೇಕಾದಾಗ ಸಮುದ್ರದ ಗೋಡೆ ಅನಿವಾರ್ಯವಾಗುತ್ತದೆ. ಈ ಗೋಡೆ ಸಮುದ್ರಕ್ಕೂ ನೆಲಕ್ಕೂ ನಡುವೆ ಎಲ್ಲೆಯನ್ನು ಭದ್ರವಾಗಿ ಗುರುತು ಮಾಡುತ್ತದೆ. ಈ ಅನುಕೂಲತೆ ತಡೆಗಟ್ಟಿನಿಂದ ದೊರೆಯುವುದಿಲ್ಲ. ಅದರ ಖರ್ಚೂ ಕಡಿಮೆ. ತಡೆಗಟ್ಟುಗಳು ಕೂಡಿಹಾಕಿರುವ ಮರಳನ್ನು ಬಲವಾದ ಗಾಳಿ ಎದ್ದಾಗ ನುಗ್ಗುವ ಅಲೆಗಳು ಹೊರಕ್ಕೆ ಎಳೆದು ತಿರುಗಿ ಸಮುದ್ರಕ್ಕೆ ಸಾಗಿಸುತ್ತವೆ. ಮತ್ತೆ ತೆರೆದ ಸಮುದ್ರತೀರ ಕೊರೆದುಹೋಗಬಹುದು. ಅದಕ್ಕಾಗಿ ತಡೆಗಟ್ಟುಗಳ ಜೊತೆಗೆ ಹಗುರವಾದ ಸಮುದ್ರದ ಗೋಡೆಯನ್ನು ಕಟ್ಟುವುದು ಮೇಲು. ಈ ಕಟ್ಟಡಗಳನ್ನು ಕಟ್ಟುವಾಗ ಬಿರುಗಾಳಿಯಲ್ಲಿ ಸಮುದ್ರತೀರ ಕೊರೆದುಹೋಗಬಹುದಾದ ಮಟ್ಟಕ್ಕಿಂತ ತಗ್ಗಿನಲ್ಲಿ ತಳಪಾಯವನ್ನು ಹಾಕಬೇಕು. ಈ ಗೋಡೆಗಳ ಸಂವಿಧಾನದಲ್ಲಿ ಬಿರುಗಾಳಿಯಲ್ಲಿ ಏರುವ ಅಲೆಗಳ ಎತ್ತರವೇನು, ಅವು ಈ ಕಟ್ಟಡಗಳ ಮೇಲೆ ಎಷ್ಟು ದೂರ ನುಗ್ಗುತ್ತವೆ ಎಂಬುದನ್ನೂ ಪರಿಶೀಲಿಸಬೇಕು. ಗರಿಷ್ಠ ನೀರಿನ ಮಟ್ಟಕ್ಕೆ ಗೋಡೆಯನ್ನು ಎತ್ತುವುದು ಸಾಧ್ಯವಾಗದೆ ಇದ್ದರೆ ಕಟ್ಟಡದ ಮೇಲೆ ಉರುಳಿ ಹಿಂದುಗಡೆ ರಸ್ತೆಗಳ ಮೇಲೂ ಬೆಲೆಬಾಳುವ ಆಸ್ತಿಯ ಮೇಲೂ ಹರಿಯುವ ನೀರೆಷ್ಟು ಎಂದು ಅಂದಾಜು ಮಾಡಬೇಕು.

ಆ ಪ್ರದೇಶದಲ್ಲಿ ಒಳ್ಳೆಯ ಕಲ್ಲು ಸಾಕಷ್ಟು ಸಿಕ್ಕುತ್ತದೆಯೇ, ಅಥವಾ ಬಿಟ್ಯುಮಿನ್ ಇಲ್ಲವೆ ಸಿಮೆಂಟ್ ಸುಲಭವಾಗಿ ದೊರೆಕುತ್ತವೆಯೋ ಅಲ್ಲಿ ಕುಶಲಿಗಳಾದ ಕೆಲಸಗಾರರಿದ್ದಾರೆಯೋ ಅಥವಾ ದೊಡ್ಡ ಯಂತ್ರಗಳನ್ನು ಉಪಯೋಗಿಸಬೇಕೇ—ಇವನ್ನೆಲ್ಲ ವಿಚಾರ ಮಾಡಿ ಸಂವಿಧಾನವನ್ನೂ ಅಂದಾಜನ್ನೂ ತಯಾರಿಸಬೇಕು.

ಸಮುದ್ರತೀರದಲ್ಲಿ ತುಂಬುವುದಕ್ಕೆ ಆದಷ್ಟು ದಪ್ಪವಾದ ಮರಳನ್ನು ಉಪಯೋಗಿಸಬೇಕು. ಮರಳು ನಯವಾಗಿದ್ದರೆ ಆಳವಾದ ನೀರಿನ ಕಡೆಗೆ ತೊಳೆದು ಹೋಗುತ್ತದೆ. ವಿಹಾರಕ್ಕಾಗಿ ಉಪಯೋಗವಾಗುವ ಸಮುದ್ರತೀರಗಳು ಸಾಧ್ಯವಾದಷ್ಟು ಅಗಲವಾಗಿರಬೇಕು. ಆಗ ಪ್ರಬಲವಾದ ಗಾಳಿಯಲ್ಲಿ ಬಂದ ಅಲೆಗಳು ಮರಳನ್ನು ಕೊರೆಯುವುದು ಕಡಿಮೆಯಾಗುತ್ತದೆ. ಇದಕ್ಕೆ ಪ್ರತಿಯಾಗಿ ಹವೆ ಹಿತವಾಗಿದ್ದಾಗ ಬರುವ ಸಣ್ಣ ಅಲೆಗಳು ಮರಳನ್ನು ತಿರುಗಿ ತಂದು ತೀರಕ್ಕೆ ತುಂಬುತ್ತವೆ. ಆಗ ಸಮುದ್ರ ತೀರದ ಅಗಲ ಮೊದಲಿನಷ್ಟೇ ಆಗುತ್ತದೆ. (ಎಚ್.ಸಿ.ಕೆ.)

**ಕರಾವಳಿಯು ರಕ್ಷಣೆ (ಸಮರದಲ್ಲಿ) :** ದೇಶ ಸಂರಕ್ಷಣಕಾರ್ಯದಲ್ಲಿ ತೀರ ಪ್ರದೇಶಗಳ ರಕ್ಷಣೆ ಪ್ರಮುಖವಾದುದು. ಏಕೆಂದರೆ ಶತ್ರು ಯಾವಾಗ ಬೇಕಾದರೂ ತನ್ನ ಸೈನ್ಯವನ್ನು ತೀರಪ್ರದೇಶಗಳಲ್ಲಿ ತಂದಿಳಿಸಿ ರಾಜ್ಯವನ್ನು ಆಕ್ರಮಿಸಬಹುದು. ಪೂರ್ವಕಾಲದಲ್ಲಿ ಹಡಗುಗಳು ಹೊರಗೆ ಹೊರಡದ ಹಾಗೆ ಮೊದಲು ರೇವುಪಟ್ಟಣಗಳನ್ನೂ ಬಂದರುಗಳನ್ನೂ ಮುತ್ತುವುದು ಶತ್ರುವಿನ ಮುಖ್ಯೋದ್ದೇಶವಾಗಿತ್ತು. ಅಲ್ಲಿನ ನೌಕೆಗಳನ್ನು ನಾಶಮಾಡುವುದಲ್ಲದೆ ಸಮುದ್ರವ್ಯಾಪಾರದಿಂದಲೇ ಜೀವಿಸುತ್ತಿದ್ದ ಆ ರಾಜ್ಯದ ಕೊರಲನ್ನೇ ಹಿಸುಕಲು ಶತ್ರು ಯತ್ನಿಸುತ್ತಿದ್ದ. ಈಗಲಾದರೋ ಪಟಗಳಿಂದ ನಾವೆಗಳನ್ನು ನಡೆಸುತ್ತಿಲ್ಲ ; ಯಂತ್ರಗಳ ಸಹಾಯದಿಂದ ಹಡಗುಗಳು ವೇಗವಾಗಿ ಚಲಿಸಬಲ್ಲವು. ಆದ್ದರಿಂದ ರೇವುಪಟ್ಟಣಗಳೂ ಬಂದರುಗಳೂ ಶತ್ರುವಿನ ಗುರಿಗಳಾಗಬಹುದಾದರೂ ಅವನ್ನು ಆಕ್ರಮಿಸುವುದು ವೈರಿಯ ಮುಖ್ಯೋದ್ದೇಶವಲ್ಲ.

ಶತ್ರು ತೀರಪ್ರದೇಶಗಳಲ್ಲಿ ಬಂದಿಳಿಯುವುದು ಎಂದಿಗೂ ಒಂದು ದೊಡ್ಡ ವಿಪತ್ತೆಂದು ಪೂರ್ವದಿಂದಲೂ ಎಣಿಸಲಾಗಿದೆ. ಆ ರಾಜ್ಯದ ಸರ್ಕಾರವನ್ನು ತನ್ನ ಅಧೀನಕ್ಕೆ ತೆಗೆದುಕೊಳ್ಳಲು ಶತ್ರುವಿಗೆ ಅದೊಂದೇ ಮಾರ್ಗವಾಗಿತ್ತು. ಪರಮಾಣು ಬಾಂಬಾಗಲಿ ಅಥವಾ ಇನ್ನಾವುದಾದರೂ ಪ್ರಳಯಾಂತಕ ಶಸ್ತ್ರಗಳಾಗಲಿ ಗ್ರಾಮಗಳನ್ನೂ ಪಟ್ಟಣಗಳನ್ನೂ ಧ್ವಂಸ ಮಾಡಿದರೂ ಗೆದ್ದ ರಾಜ್ಯವನ್ನು ಕೈಗೂಡಿಸಿಕೊಳ್ಳಲು ಪದಾತಿಸೈನ್ಯ ಬೇಕೇ ಬೇಕಾಗುತ್ತದೆ. ಈ ಕಾರ್ಯದಲ್ಲಿ ಸಮುದ್ರದ ಕಡೆಯಿಂದ ರಾಜ್ಯದೊಳಕ್ಕೆ ನುಗ್ಗಬೇಕಾಗಬಹುದು. ಕಳೆದ ಮಹಾಯುದ್ಧದಲ್ಲಿ ಮಿತ್ರಪಕ್ಷದವರು ನಾರ್ಮಂಡಿ ತೀರದಲ್ಲಿ ಬಂದಿಳಿದು ದೇಶದೊಳಕ್ಕೆ ನುಗ್ಗಿದ ಬಳಿಕವೇ ಆ ಯುದ್ಧ ಕೊನೆಗೊಂಡಿತು. ತಾನು ಗೆದ್ದ ಪ್ರದೇಶಗಳನ್ನು ರೂಢಿಸಿಕೊಳ್ಳುವುದೊಂದಕ್ಕೆ ಅಲ್ಲದೆ, ಶತ್ರುವನ್ನು ದಿಕ್ಕೆಡುವಂತೆ ಮಾಡಲು ನೌಕೆಗಳಿಂದ ತೀರ ಪಟ್ಟಣಗಳ ಮೇಲೆ ಗುಂಡುಗಳನ್ನು ಒಂದೇ ಸಮವಾಗಿ ಹಾರಿಸುವುದೂ ಮತ್ತು ಕೆಲವು ವೇಳೆ ತೀರಪ್ರದೇಶದಲ್ಲಿ ಸೈನ್ಯವನ್ನು ತಂದಿಳಿಸುವುದೂ ಉಂಟು.

ಒಂದನೆಯ ಮಹಾಯುದ್ಧದಲ್ಲಿ ಜರ್ಮನಿಯ ಯುದ್ಧನೌಕೆ ಎಮ್‌ಡನ್ ಎಂಬುದು ಮದರಾಸಿನ ಹೈಕೋರ್ಟ್ ಕಟ್ಟಡದ ಮೇಲೆ ಸಿಡಿ ಚಿಪ್ಪನ್ನೆಸೆದು ಜನರನ್ನು ಹೇಗೆ ಗಾಬರಿಗೊಳಿಸಿತು ಎಂಬುದನ್ನು ಈಗ ಸ್ಮರಿಸಬಹುದು. ಎರಡನೆಯ ಮಹಾಯುದ್ಧದಲ್ಲಿ, ಪೂರ್ವತೀರದಲ್ಲಿ ಕೆಲವು ಜಪಾನೀ ಯುದ್ಧನೌಕೆಗಳು ಹಾಯ್ದು ಹೋಗುವುದನ್ನು ಕಂಡು ಶತ್ರುಗಳ ಪಡೆ ತೀರದಲ್ಲಿ ಇಳಿಯುತ್ತದೆಯೋ ಏನೋ ಎಂದು ಜನ ಎಷ್ಟು ಕಾತರಗೊಂಡರೆಂದರೆ, ಮದರಾಸಿನ ಅನೇಕ ಸರ್ಕಾರಿ ಕಚೇರಿಗಳನ್ನು ಒಳಭಾಗಕ್ಕೆ ರವಾನಿಸಿದರು ಮತ್ತು ಹಿಂದೆಂದೂ ಕಾಣದಷ್ಟು ಮಂದಿ ಒಳಗಡೆಯ ಹಳ್ಳಿಹಳ್ಳಿಗಳಿಗೂ ಗ್ರಾಮಗಳಿಗೂ ಸಾಗಿದರು.

ತೀರಪ್ರದೇಶಗಳಲ್ಲಿ ಸೈನ್ಯವನ್ನು ತಂದಿಳಿಸುವುದು ಕೆಲವು ವೇಳೆ ಜಯನಿಶ್ಚಯಕ್ಕಾದರೂ ಅದರ ಉದ್ದೇಶ ಶತ್ರುವನ್ನು ಗಾಬರಿಗೊಳಿಸುವುದು. ಎರಡನೆಯ ಮಹಾಯುದ್ಧದಲ್ಲಿ ಜರ್ಮನಿಯೂ ಬ್ರಿಟನ್ ದೇಶವನ್ನು ಸಮುದ್ರದ ಕಡೆಯಿಂದ ಆಕ್ರಮಿಸಲು ಯತ್ನಿಸಿತು. ಮತ್ತು ಜರ್ಮನ್ ಸೈನ್ಯವನ್ನು ಬ್ರಿಟಿಷ್ ನೌಕಾಬಲ ತಡೆಯಲಾರದೆಂದೂ ಘೋಷಿಸಿತು. ಆದರೆ ಮಿತ್ರಪಕ್ಷದವರು ಜರ್ಮನರ U ಬೋಟುಗಳನ್ನೂ ಲಿಟ್‌ವಾಫೆ ಎಂಬ ಪ್ರಬಲ ವೈಮಾನಿಕ ದಳವನ್ನೂ ಕಡೆಗಣಿಸಿ ಕಡಲ್ಗಾಲುವೆಯನ್ನು ದಾಟಲು ಸಾಧ್ಯವೆಂಬುದನ್ನು ತೋರಿಸಿಕೊಟ್ಟರು. ಅಲ್ಲದೆ ಹಿಟ್ಲರ್ ಯಾವುದನ್ನು ಅಟ್ಲಾಂಟಿಕ್ ಗೋಡೆ ಎಂದು ಭಾವಿಸಿದನೋ ಆ ವ್ಯೂಹವನ್ನೂ ಭೇದಿಸಿದರು.

ನಾರ್ಮಂಡಿ ತೀರದಲ್ಲಿ ಸೈನ್ಯವನ್ನು ತಂದಿಳಿಸಿದ ಮಹತ್ಕಾರ್ಯಕ್ಕಾಗಿ ಮಿತ್ರಪಕ್ಷದವರ ಜಯಭೇರಿ ಎಲ್ಲೆಲ್ಲೂ ಮೊಳಗಿತಲ್ಲದೆ ಜರ್ಮನರು ಅಷ್ಟೂ ಕಳೆಗುಂದಿದರು. ಅಟ್ಲಾಂಟಿಕ್ ಗೋಡೆ ಕುಸಿಯಿತು.

ಆದ್ದರಿಂದ ಎಂಥ ಯುದ್ಧತಂತ್ರದಲ್ಲಿಯೂ ಕೂಡ, ಶತ್ರುವಿನ ಮುತ್ತಿಗೆಗೆ ಎಡೆಗೊಡದ ಹಾಗೆ ತೀರವನ್ನು ಸಂರಕ್ಷಿಸುವುದು ಬಹು ಮುಖ್ಯವಾದ ಕೆಲಸವೆಂದು ಪರಿಗಣಿಸಬೇಕು. ದಡದ ಸಾಲೊಂದು ಬಂಗಾಳ ಕೊಲ್ಲಿ ಅಥವಾ ಅರಬ್ಬೀ ಸಮುದ್ರದಂಥ ವಿಶಾಲವಾದ ಕಡಲಿಗೆ ಎದುರಾಗಿದ್ದರೆ ಅದರ ಸಂರಕ್ಷಣೆಯಂತೂ ಬಹಳ ಮುಖ್ಯ. ಭಾರತ ದೇಶ ಪರ್ಯಾಯದ್ವೀಪವಾಗಿರುವುದರಿಂದ, ಅದು ತನ್ನ ತೀರಪ್ರದೇಶಗಳಲ್ಲಿ ಬಗೆಬಗೆಯಾಗಿರುವ ಪ್ರಶಸ್ತ ರಕ್ಷಣಸ್ಥಾನಗಳನ್ನು ಸ್ಥಾಪಿಸಿ ಅವುಗಳ ಸಂರಕ್ಷಣೆಗೆ ಏರ್ಪಡಿಸುವುದು ಶಕ್ಯ. ಪೂರ್ವಕಾಲದಲ್ಲಿ ರೇವುಪಟ್ಟಣಗಳನ್ನೂ ಬಂದರುಗಳನ್ನೂ ಅವುಗಳ ಸುತ್ತಲೂ ಗೋಡೆಯನ್ನು ಹಾಕಿಯೋ ಕೋಟೆಯನ್ನು ಕಟ್ಟಿಯೋ ಸಂರಕ್ಷಿಸುವುದು ಸುಲಭವಾಗಿತ್ತು. ಈಗ ಹಡಗುಗಳು ಯಂತ್ರಗಳಿಂದ ಚಲಿಸುವುದರಿಂದಲೂ ಅವುಗಳಲ್ಲಿ ಬಹುದೂರಕ್ಕೆ ಗುಂಡುಗಳನ್ನು ಎಸೆಯಬಲ್ಲ ಭಾರಿ ಫಿರಂಗಿಗಳಿರುವುದರಿಂದಲೂ ಕೋಟೆಗೋಡೆಗಳು ಅಷ್ಟಾಗಿ ಪ್ರಯೋಜನಕ್ಕೆ ಬರುವುದಿಲ್ಲ. ಆದ್ದರಿಂದ ಈಗ ತೀರಪ್ರದೇಶದ ರಕ್ಷಣೆಗಾಗಿ ಸಮೀಪಿಸುತ್ತಿರುವ ಶತ್ರುನೌಕೆಗಳನ್ನು ಅವು ಅಷ್ಟು ದೂರದಲ್ಲಿರುವಾಗಲೇ ಧ್ವಂಸ ಮಾಡಲು ದೊಡ್ಡ ದೊಡ್ಡ ಫಿರಂಗಿಗಳು ಆವಶ್ಯಕವೆನಿಸಿವೆ. ಇದ್ದಕ್ಕಿದ್ದ ಹಾಗೆ ಶತ್ರು ಮೇಲೆಬಿದ್ದರೆ ಅವನನ್ನು ನಿಗ್ರಹಿಸಲು ಸಮರ್ಥರಾದ ಭಟರಿಂದ ಈ ಫಿರಂಗಿ ಸೈನ್ಯ ಕೂಡಿರಬೇಕಲ್ಲದೆ ಬೇಗ ಚಲಿಸಲೂ ಸಮರ್ಥವಾಗಿರಬೇಕು. ಅವರ ಆಯುಧಗಳು ಶತ್ರುನೌಕಾಬಲದ ಯಾವ ಶಸ್ತ್ರವನ್ನಾಗಲಿ ಎದುರಿಸಲು ತಕ್ಕವಾಗಿರಬೇಕು.

ಶತ್ರುನೌಕೆಯಿಂದ ಹೊರಡುವ ಗುಂಡಿನ ಸುರಿಮಳೆಗೆ ಉತ್ತರವಾಗಿ ತೀರದಲ್ಲಿರುವ ಭಾರಿ ಭಾರಿ ಫಿರಂಗಿಗಳಿಂದ ಗುಂಡುಗಳನ್ನು ಹೊಡೆದರೆ ಮಾತ್ರ ಸಾಲದೆಂಬ ಅಂಶ ನಾರ್ಮಂಡಿ ತೀರದ ಆಕ್ರಮಣದಲ್ಲಿ ವಿಶದವಾಯಿತು. ಆ ಶೂನ್ಯ ದಿನದ ನಿಶ್ಚಿತ ಸಮಯದಲ್ಲಿ ಮಿತ್ರಪಕ್ಷದವರು ದಡದಲ್ಲಿ ಇಳಿಯುವುದಕ್ಕೆ ಮುಂಚೆ ಬಾಂಬಿನ ಮಳೆಗರೆಯಲು ಪ್ರಾರಂಭಿಸಿದಾಗ, ಜರ್ಮನರ ಫಿರಂಗಿಗಳ ಸಾಲು ನಿರುಪಯುಕ್ತವಾಯಿತು. ತೀರಾವತರಣ ಸೈನ್ಯ ಆಗಮಿಸುವುದಕ್ಕೆ ಮುಂಚೆ, ಬಂದಿಳಿದ ಮೇಲೆ ಅದರ ತರುವಾಯ ಕೂಡ ಹತ್ತು ಸಾವಿರ ಟನ್ನುಗಳಷ್ಟು ಬಾಂಬುಗಳನ್ನು ಅಂತರಿಕ್ಷ ಸಿಡಿಚಿಪ್ಪುಗಳನ್ನು ನೌಕೆಯ ಫಿರಂಗಿಗಳಿಂದಲೂ ಶತ್ರುವಿನ ಫಿರಂಗಿಸಾಲುಗಳ ಮೇಲೆ ಎಸೆಯಲಾಯಿತು. ಜರ್ಮನಿಯ ಸೈನ್ಯದ ಮುಖ್ಯಕಚೇರಿಗೂ ಬೆರಗು ಬಡಿಯುವಂತೆ ಈ ಆಕ್ರಮಣ ಹಗಲಲ್ಲೇ ಜರುಗಿತು. ಶತ್ರುಗಳ ಫಿರಂಗಿಗಳ ಸದ್ದನ್ನಡಗಿಸಲೂ ಮಲೆಕೋಡುಗಳನ್ನು ಹತ್ತಲೂ ಸಾಧ್ಯವಾಗುವಂತೆ ಕೆಲವು ರೇಂಜರುಗಳೂ ಕಮಾಂಡೋಗಳೂ ಬೆಳಕು ಹರಿಯುವುದಕ್ಕೆ ಮುಂಚೆ ದಡದಲ್ಲಿ ಬಂದಿಳಿದರೇ ಹೊರತು, ಮಿಕ್ಕವರು ನೆಲದೊಳಗೆ ಸಿಡಿಯುವ ಮೈನುಗಳೆಂಬ ಮದ್ದುಗಳನ್ನು ಗುಡಿಸಿ ಹಾಕಲೂ, ಇರುಳಿನಲ್ಲಿ ಬಾಂಬುಗಳ ಮತ್ತು ಸಿಡಿಚಿಪ್ಪುಗಳ ಹೊಡೆತದಿಂದ (ತಪ್ಪಿಸಿಕೊಂಡ ಅಲ್ಪಸ್ವಲ್ಪ ಫಿರಂಗಿಗಳನ್ನು ಶಾಂತಗೊಳಿಸಲೂ) ಉಷಃಕಾಲದ ಬೆಳಕಿನಲ್ಲಿಯೇ ದಡಕ್ಕೆ ಬಂದಿಳಿದರು.

ತೀರ ಪ್ರದೇಶದ ಮೇಲೆ ಶತ್ರುವಿನ ದಾಳಿ ನೆಲದ ಕಡೆಯಿಂದಾಗಲಿ ಕಡಲ ಕಡೆಯಿಂದಾಗಲಿ ಅಥವಾ ಅಂತರಿಕ್ಷದಿಂದಾಗಲಿ ನಡೆಯಬಹುದು. ಇತೋಪ್ಯತಿಶಯವಾಗಿ, ಈ ದಾಳಿ ಬೇರೆಬೇರೆಯಾಗಿರಬಹುದು ಅಥವಾ ಕಲೆತಿರಲೂ ಬಹುದು ; ಆಧುನಿಕ ತೀರಾಕ್ರಮಣದಲ್ಲಿ, ನೆಲದಿಂದಲಾಗಲಿ ಕಡಲಿನಿಂದಲಾಗಲಿ ದಾಳಿ ನಡೆಯುವುದು ಸಾಧ್ಯವಾಗದಿರಬಹುದು. ಆದರೆ ನೆಲ ಮತ್ತು ಅಂತರಿಕ್ಷ ಇವೆರಡು ಕಡೆಗಳಿಂದಲೂ ಒಟ್ಟಿಗೆ, ಅಥವಾ ಕಡಲು ಮತ್ತು ಅಂತರಿಕ್ಷ ಇವೆರಡು ಕಡೆಗಳಿಂದಲೂ ಒಟ್ಟಿಗೆ ಅಥವಾ ಬರಿ ಅಂತರಿಕ್ಷದಿಂದ ಮಾತ್ರವೇ ದಾಳಿ ನಡೆಸುವ ಕ್ರಮ ಸಲ್ಲದೆನ್ನುವಂತಿಲ್ಲ. ನಮ್ಮ ಹಡಗುಪಡೆಗಳೂ ವಿಮಾನಬಲವೂ ಶತ್ರುವಿನ ನೌಕೆಗಳನ್ನು ಸಮುದ್ರದಲ್ಲಿ ಧ್ವಂಸ ಮಾಡಬಹುದಾದರೂ ನಮ್ಮ ತೀರ ಸಂರಕ್ಷಣೆಯ ಬಹಳ ಪಾಲು ಹೊಣೆ ಭೂಸೈನ್ಯದ ಮೇಲೆ ಸಹಜವಾಗಿಯೇ ಬೀಳುತ್ತದೆ. ನಮ್ಮ ರಕ್ಷಣಾದಳ ತೀರದುದ್ದಕ್ಕೂ ಬಹಳ ಜಾಗರೂಕವಾಗಿರುವುದು ಅತ್ಯಾವಶ್ಯಕ. ಯಂತ್ರಮಯವಾಗಿರುವ ಆಧುನಿಕ ಯುದ್ಧದಲ್ಲಿ. ತೀರಪ್ರದೇಶದಲ್ಲಿ ಇಂಥ ಜಾಗದಲ್ಲೇ ಶತ್ರು ಬಂದಿಳಿಯುತ್ತಾನೆಂದು ಬೆರಳಿಟ್ಟು ಹೇಳುವ ಹಾಗಿಲ್ಲ. ಯಾವ ಸ್ಥಳದಲ್ಲಿ ಇಳಿಯುವುದು ಅಸಂಭವವೆಂದು ನಾವು ಭಾವಿಸಿದ್ದೆವೋ ಅದೇ ಸ್ಥಳದಲ್ಲಿ ಹಗೆ ಬಂದಿಳಿಯಬಹುದು. ಆದರೂ ತೀರದುದ್ದಕ್ಕೂ ಚೈನಾ ಗೋಡೆಯ ಹಾಗೆ ಒಂದು ಗೋಡೆಯನ್ನು ಕಟ್ಟುವುದೂ ಹುಚ್ಚುತನದ ಕೆಲಸ. ಇಂಥ ದುರ್ಗಗಳನ್ನು ಕಟ್ಟುವುದಕ್ಕೆ ಅತ್ಯಧಿಕವಾಗಿ ಹಣ ಖರ್ಚಾಗುವುದಲ್ಲದೆ ಅವುಗಳ ಸಂರಕ್ಷಣೆಗೆ ಜನವೂ ಬೇಕಾಗುತ್ತದೆ. ಇಷ್ಟಾದರೂ ಆಧುನಿಕ ಯುದ್ಧಕ್ರಮದಲ್ಲಿ ಅವು ಫ್ರೆಂಚರು ಕಟ್ಟಿದ ಮಾಜಿನೊಲೈನಿನಂತೆ ನಿರರ್ಥಕವಾಗುತ್ತವೆ.

ಆದ್ದರಿಂದ ಕರಾವಳಿ ಪ್ರದೇಶದ ಸುಸಂರಕ್ಷಣೆಗೆ ಮುಖ್ಯವಾದ ಅಂಶಗಳಿಷ್ಟು : 1 ಸೈನ್ಯದ ಸಮಸ್ತಾಂಗದ ಪಡೆಗಳನ್ನು ಆಯಕಟ್ಟಾದ ಜಾಗಗಳಲ್ಲಿರಿಸಿ, ಅವುಗಳು ವೇಗದಿಂದ ಚಲಿಸುವ ಹಾಗೆ ಚಲನಸಾಧನೆಗಳಿಂದ ಸಜ್ಜುಗೊಳಿಸಿ, ಬೇಕಾದಾಗ ವಿಮಾನ ಮತ್ತು ನೌಕಾಬಲದೊಡನೆ ಹೊಂದಿಕೊಳ್ಳುವ ಹಾಗೆ ಶಿಕ್ಷಣವನ್ನು ಕೊಡಬೇಕು. 2 ರೈಲು ಕಂಬಿಗಳ ಮೇಲೆ ಚಲಿಸಬಲ್ಲಂಥ ಫಿರಂಗಿಗಳೂ ವಿಮಾನಗಳನ್ನೂ ಗುಂಡಿಟ್ಟು ಹೊಡೆಯುವ ಸಾಧನಗಳೂ ಇರಬೇಕು. 3 ರಾಡರುಗಳೂ

ಶೋಧಕ ದೀಪಗಳೂ ಬೇಕು. 4 ಎಚ್ಚರಿಕೆಯನ್ನು ಕೊಡಲು ತಕ್ಕ ವ್ಯವಸ್ಥೆ ಪೋಣಿಕೆಗೊಂಡಿರಬೇಕು. 5 ಅಂತರಿಕ್ಷದಲ್ಲೂ ಸಮುದ್ರದಲ್ಲೂ ಕಾಪುವಳ ಗಸ್ತು ತಿರುಗುತ್ತಿರಬೇಕು. 6 ನೀರಿನಲ್ಲೂ ನೆಲದಲ್ಲೂ ಗುಪ್ತವಾಗಿ ಸಿಡಿಮದ್ದನ್ನು ಅವಿತಿಡುವ ಏರ್ಪಾಡಾಗಬೇಕು. 7 ನೌಕಾ ಮತ್ತು ವಿಮಾನಗಳ ಪಡೆಗಳು ಹೊಂಚುಹಾಕುತ್ತ ಪ್ರತಿಕ್ರಿಯೆಯನ್ನು ಕೈಗೊಳ್ಳುವಂತಿರಬೇಕು. ಇವಿಷ್ಟು ತೀರ ಪ್ರದೇಶ ಸಂರಕ್ಷಣೆಗೆ ಕನಿಷ್ಠಪಕ್ಷ ಬೇಕೇ ಬೇಕು. (ಎ.ಎಸ್.ಎಸ್.ಎಂ.)

**ಕರಿಕಾಲ :** ಕ್ರಿ. ಪೂ. ಒಂದನೆಯ ಶತಮಾನದಲ್ಲಿ ಆರಂಭವಾಗಿ ಕ್ರಿ. ಶ. ಒಂದನೆಯ ಶತಮಾನದವರೆಗೂ ಅಥವಾ ಅದರ ಅನಂತರ ಸ್ವಲ್ಪಕಾಲದವರೆಗೂ ದಕ್ಷಿಣ ಭಾರತದಲ್ಲಿ ಆಳ್ವಿಕೆ ನಡಸುತ್ತಿದ್ದಿರಬಹುದಾದ ಚೋಳ ಮನೆತನದ ಅತ್ಯಂತ ಪ್ರಸಿದ್ಧನಾದ ದೊರೆ. ಕ್ರಿ. ಶ. ಸುಮಾರು 100ರಲ್ಲಿ ಈತ ಆಳುತ್ತಿದ್ದನೆಂದು ಹೇಳಲಾಗಿದೆ. ದೀಕ್ಷಿತರ್ ಮೊದಲಾದ ಪಂಡಿತರು ಇವನ ಕಾಲವನ್ನು 2ನೆಯ ಶತಮಾನವೆಂದು ಹೇಳಿದರೆ ಶ್ರೀನಿವಾಸ ಅಯ್ಯಂಗಾರ್ ಮತ್ತಿತರರು ಇವನನ್ನು 4ನೆಯ ಶತಮಾನದ ಕೊನೆಗೆ ಕೊಂಡೊಯ್ಯುತ್ತಾರೆ. ಈತ ಶಿಲಪ್ಪದಿಕಾರಂ ಗ್ರಂಥದ ನಾಯಕನಾದ ಸೆಂಗುಟ್ಟುವನ್ ರಾಜನ ಸಮಕಾಲೀನನಾಗಿದ್ದನೆಂದೂ ಹೇಳಲಾಗಿದೆ. ಈತ ರೋಮನ್ ಚಕ್ರವರ್ತಿ ಜ್ಯೂಲಿಯನನ ಕಾಲದವನೆಂದೂ ಅವನ ಆಸ್ಥಾನಕ್ಕೆ ಈತ ತನ್ನ ರಾಯಭಾರಿಯನ್ನು ಕಳಿಸಿದ್ದಿರಬೇಕೆಂದೂ ಒಂದು ಅಭಿಪ್ರಾಯವುಂಟು.

ಕರಿಕಾಲ ಚೋಳನ ಹೆಸರಿನ ಸುತ್ತ ಅನೇಕ ಐತಿಹ್ಯಗಳು ಹಬ್ಬಿಕೊಂಡಿವೆ. ಈತ ಚಿಕ್ಕಂದಿನಲ್ಲಿ ತನ್ನ ಕಾಲು ಸುಟ್ಟುಕೊಂಡಿದ್ದರಿಂದ ಇವನಿಗೆ ಕರಿಕಾಲನೆಂಬ ಹೆಸರು ಬಂತೆಂದೂ ಮುಂದೆ ಈತ ಅರಿಗಳನ್ನು ಜಯಿಸಿದಾಗ ವೈರಿಗಳ ಅಂತಕನೆಂದು ಇದು ಸಾರ್ಥಕವಾಯಿತೆಂದೂ ಹೇಳಲಾಗಿದೆ. ಶತ್ರುಗಳ ಬಂಧನದಿಂದ ತಪ್ಪಿಸಿಕೊಂಡು ಈತ ತಾನೇ ದೊರೆಯೆಂದು ಘೋಷಿಸಿಕೊಂಡದ್ದಲ್ಲದೆ ತಂಜಾವೂರಿಗೆ 15 ಮೈ. ದೂರದಲ್ಲಿರುವ ವೆಣ್ಣಿಯಲ್ಲಿ ನಡೆದ ಕಾಳಗದಲ್ಲಿ ಪಾಂಡ್ಯ ಚೇರ ರಾಜರ ಸಂಯುಕ್ತ ಪಡೆಗಳನ್ನು ಸೋಲಿಸಿ ಅಟ್ಟಿದನಂತೆ. ಅನಂತರ ಅನೇಕ ಸಣ್ಣಪುಟ್ಟ ದೊರೆಗಳನ್ನೂ ಈತ ಮಣಿಸಿ ಇಡೀ ತಮಿಳುನಾಡಿನ ಏಕೈಕ ಅಧಿಪತಿಯಾದ. ಕಾವೇರಿಯ ಮುಖದ ಬಳಿ ಪುಹಾರವೆಂಬ ನಗರವನ್ನು ಕಟ್ಟಿಸಿದ.

ಕರಿಕಾಲ ಸಿಂಹಳ ದೇಶದ ಮೇಲೆ ಕೂಡ ದಂಡೆತ್ತಿ ಹೋಗಿದ್ದನೆಂದು ಹೇಳಲಾಗಿದೆ. ಅಲ್ಲಿಯ ಮಹಾವಂಶದಲ್ಲಿ ಈ ಘಟನೆಯ ಬಗ್ಗೆ ಉಲ್ಲೇಖವಿಲ್ಲವಾದರೂ ಅನಂತರದ ಉದಂತಗಳಲ್ಲಿ ಇದರ ಪ್ರಸ್ತಾಪವಿದೆ. ಒಮ್ಮೆ ಈತ ಅಲ್ಲಿಂದ 12,000 ಮಂದಿ ಸಿಂಹಳೀಯರನ್ನು ಹೊತ್ತು ತಂದು ಅವರನ್ನು ಪುಹಾರದ ಕೋಟೆ ಕಟ್ಟಲು ನೇಮಿಸಿದನಂತೆ. ಕಾವೇರಿಯ ದಂಡೆಯ ಮೇಲೆ 100 ಮೈಲಿಗಳಷ್ಟು ಉದ್ದಕ್ಕೆ ಈ ನಗರ ಹಬ್ಬಿತ್ತೆಂದು ಪ್ರತೀತಿ. ಕರಿಕಾಲ ಚೋಳ ಇಡೀ ಭಾರತವನ್ನೇ ಜಯಿಸಿದನೆಂದು ಅನೇಕ ತಮಿಳು ಕವಿತೆಗಳು ಕೊಂಡಾಡುತ್ತವೆ. ಕಾವೇರಿಯ ಮುಖಜ ಭೂಮಿಯಲ್ಲಿ, ಆ ನದಿ ಕವಲೊಡೆಯುವಲ್ಲೇ, ಕಟ್ಟೆಯೊಂದನ್ನು ಕಟ್ಟಿ ಅಲ್ಲಿಂದ ನದಿಯ ನೀರನ್ನು ಸಾಗುವಳಿಗೆ ಬಳಸಿಕೊಳ್ಳುವ ಯೋಜನೆಯನ್ನು ರೂಪಿಸಿದವನು ಇವನೇ ಎಂದು ಹೇಳಲಾಗಿದೆ. ಶ್ರೀರಂಗದ ಬಳಿ ಅಣೆಕಟ್ಟು ನಿರ್ಮಿಸಿ ವೆಣ್ಣಾರ್ ಕಾಲುವೆಯ ಮೂಲಕ ತಂಜಾವೂರ್ ಜಿಲ್ಲೆಯ ಜಮೀನುಗಳಿಗೆ ನೀರಾವರಿ ಸೌಲಭ್ಯ ಕಲ್ಪಿಸುವ ಯೋಜನೆ ರೂಪಿಸಿದಾತ ಕರಿಕಾಲನೇ ಎಂದೂ ನಂಬಲಾಗಿದೆ. ತಂಜಾವೂರು ಜಿಲ್ಲೆಯ ಅನೇಕ ಕಾಲುವೆಗಳು ಚೋಳರ ಕಾಲದಲ್ಲೇ ನಿರ್ಮಿತವಾದುವೆಂಬುದಂತೂ ನಿಜ.

ಕರಿಕಾಲ ಚೋಳ ಕಲೆಗೆ ಆಶ್ರಯದಾತನಾಗಿದ್ದ. ವ್ಯಾಪಾರ ಕೈಗಾರಿಕೆಗಳಿಗೆ ಪ್ರೋತ್ಸಾಹ ನೀಡಿದ. ಸನಾತನ ಧರ್ಮದಲ್ಲಿ ಇವನಿಗೆ ಅತೀವ ಶ್ರದ್ಧೆ ಇತ್ತು. ಈತ ಯುದ್ಧ ಕುಶಲಿ ಹೇಗೋ ಹಾಗೆ ಶಾಂತಿ ಸಾಧಕನೂ ಆಗಿದ್ದ.

ಅನೇಕ ತಮಿಳು ಕಾವ್ಯಗಳು ಕರಿಕಾಲ ಚೋಳನನ್ನು ಕೊಂಡಾಡುತ್ತವೆಯಾದರೂ ಇವನ ವೈಯಕ್ತಿಕ ಜೀವನದ ಬಗ್ಗೆ ಖಚಿತವಾದ ವಿವರಗಳಿಲ್ಲ. ಕಂಚಿಯಲ್ಲಿ ಆಳುತ್ತಿದ್ದ ತೊಂಡೈಮನ್ ಇಳಂದಿರೈಯನ್ ಇವನ ಕಿರಿಯ ಸಮಕಾಲೀನನಾಗಿದ್ದನೆಂದು ಹೇಳಲಾಗಿದೆ. ಇಳಂದಿರೈಯನ್ ಕರಿಕಾಲನ ಮೊಮ್ಮಗನಾಗಿದ್ದಿರಬೇಕು ಅಥವಾ ಕಂಚಿಯನ್ನಾಳಲು ಕರಿಕಾಲನಿಂದ ನೇಮಕವಾದ ಮಾಂಡಲಿಕನಾಗಿದ್ದಿರಬೇಕು–ಎಂಬುದು ಕೆಲವು ವಿದ್ವಾಂಸರ ಅಭಿಪ್ರಾಯ. ಇಳಂದಿರೈಯನ್ ಕಂಚಿ ಮತ್ತು ಅದರ ಸುತ್ತಣ ಪ್ರದೇಶವನ್ನು ಸ್ವತಂತ್ರವಾಗಿ ಆಳುತ್ತಿದ್ದ ದೊರೆಯೆಂದು ಇನ್ನು ಕೆಲವರು ಹೇಳುತ್ತಾರೆ. ಕರಿಕಾಲನಿಗೆ ಆದಿಮಂಡಿ ಎಂಬ ಮಗಳೂ ಇಬ್ಬರು ಗಂಡು ಮಕ್ಕಳೂ ಇದ್ದರೆಂದೂ ಅಟ್ಟನ್ ಅಟ್ಟಿ ಎಂಬ ಚೇರ ರಾಜಕುಮಾರ ಇವನ ಅಳಿಯನಾಗಿದ್ದನೆಂದೂ ಹೇಳಲಾಗಿದೆ. ಅನಂತರ ಬಂದ ಚೋಳ ರಾಜರು ಕರಿಕಾಲ ಎಂಬುದನ್ನು ತಮ್ಮ ವಂಶದ ಬಿರುದಾಗಿ ಬಳಸುತ್ತಿದ್ದರು.

(ಬಿ.ಎಚ್.ಕೆ.)

**ಕರಿಗೇರು :** ಅನಕಾರ್ಡಿಯೇಸೀ ಕುಟುಂಬಕ್ಕೆ ಸೇರಿದ ಮರ. ಇದರ ಶಾಸ್ತ್ರೀಯ ನಾಮ ಸೆಮಿಕಾರ್ಪಸ್ ಅನಕಾರ್ಡಿಯಮ್ ಭಾರತ, ಈಸ್ಟ್ ಇಂಡೀಸ್ ದ್ವೀಪಗಳು, ಉತ್ತರ ಆಸ್ಟ್ರೇಲಿಯಗಳಲ್ಲಿ ಹರಡಿದೆ. ಇದು ಚಳಿಗಾಲದಲ್ಲಿ ಎಲೆ ಉದುರುವ ಮಧ್ಯಮ ಎತ್ತರದ ಮರ. ಎಲೆಗಳು ಸರಳ, ಪರ್ಯಾಯವಾಗಿ ಜೋಡಣೆಗೊಂಡಿವೆ. ಇವುಗಳ ಉದ್ದ 7"–24", ಅಗಲ 4"–12". ಅಂಡಾಕಾರವಾಗಿವೆ; ತುದಿ ಗುಂಡಗಿದೆ. ತೊಗಲಿನಂತೆ ಗಡುಸಾಗಿರುವ ಇವುಗಳ ಮೇಲ್ಭಾಗ ತುಪ್ಪುಳರಹಿತ; ತಳಭಾಗದಲ್ಲಿ ಬೂದುಬಣ್ಣದ ತುಪ್ಪುಳವಿದೆ. ಅಲಗಿನ ಮೇಲೆ 15—25 ಜೋಡಿಗಳ ನಾಳವಿನ್ಯಾಸವಿದೆ. ಹೂಗಳು ರೆಂಬೆಗಳ ತುದಿಗಳಲ್ಲಿರುವ ಸಂಕೀರ್ಣ ಪುಷ್ಪಗುಚ್ಛಗಳಲ್ಲಿ ಸಮಾವೇಶಗೊಂಡಿವೆ. ಹೂಗಳು ಹಸಿರು ಮಿಶ್ರಿತ ಬಿಳಿಬಣ್ಣದವೂ ಏಕಲಿಂಗಿಗಳೂ ಆಗಿವೆ. ಗಂಡು ಹೂಗಳು ಹೆಣ್ಣು ಹೂಗಳಿಗಿಂತ ಚಿಕ್ಕವು. ಎರಡು ಬಗೆಯ ಹೂಗಳಲ್ಲೂ ಈಟಿಯಾಕಾರದ ಬ್ರ್ಯಾಕ್ಟ್‌ಗಳೂ ಪುಷ್ಪಪತ್ರದ ಹೊರಭಾಗದಲ್ಲಿ ಕೂದಲುಗಳೂ ಇವೆ. ಪುಷ್ಪಪಾತ್ರೆ 3 ಹಾಲೆಗಳಿಂದಾಗಿದೆ. ಹೂದಳಗಳು 5. ಗಂಡು ಹೂಗಳಲ್ಲಿ ಕೇಸರಗಳಿಗೂ ಹೂದಳಗಳಿಗೂ ನಡುವೆ ದುಂಡಾಗಿರುವ ತಟ್ಟೆಯಿದೆಯಲ್ಲದೆ ಅಪೂರ್ಣಾವಸ್ಥೆಯಲ್ಲಿರುವ ಅಂಡಾಶಯವೊಂದಿದೆ. ಹೆಣ್ಣುಹೂವಿನಲ್ಲಿ ಉಚ್ಚಸ್ಥಾನದ ಗುಂಡಗಿನ ಅಂಡಾಶಯವಿದೆ. ಮೂರು ಕಾರ್ಪೆಲುಗಳಿಂದಾದ ಇದರಲ್ಲಿ ಒಂದೇ ಅಂಡಕವಿದೆ. ಶಲಾಕೆಗಳು 3. ಹಣ್ಣು ಅಷ್ಟಿಫಲ ಮಾದರಿಯದು ; ಅದರ ಆಕಾರ ದೀರ್ಘವೃತ್ತದಂತೆ. ನಯವಾಗಿಯೂ ಹೊಳಪುಳ್ಳದ್ದೂ ಆಗಿದೆ. ಬಲಿತಾಗ ಕಪ್ಪು ಬಣ್ಣಕ್ಕೆ ತಿರುಗುತ್ತದೆ. ಹಣ್ಣಿನ ಕೆಳಗಿರುವ ಅಕ್ಷಕಾಂಡ ಕಾಲಕ್ರಮೇಣ ಹಳದಿಬಣ್ಣಕ್ಕೆ ತಿರುಗಿ ರಸಭರಿತವಾಗುತ್ತದೆ. ಇದು ತಿನ್ನಲು ಯೋಗ್ಯ.

ಇಂಗ್ಲಿಷಿನಲ್ಲಿ ಈ ಮರಕ್ಕೆ ಮಾರ್ಕಿಂಗ್ ನಟ್ ಎಂಬ ಹೆಸರಿದೆ. ಹಣ್ಣಿನಿಂದ ಒಂದು ಬಗೆಯ ಕಟುವಾದ ಸ್ನಿಗ್ಧವಾದ ರಸವನ್ನು ತೆಗೆಯುತ್ತಾರೆ. ಅಗಸರು ಇದನ್ನು ಹತ್ತಿ ಬಟ್ಟೆಗಳಿಗೆ ಗುರುತುಮಾಡಲು ಉಪಯೋಗಿಸುತ್ತಾರೆ. ಅಲ್ಲದೆ ಮೆರುಗೆಣ್ಣೆ ತಯಾರಿಕೆಯಲ್ಲೂ ಬಳಸುತ್ತಾರೆ. ಅಕ್ಷಕಾಂಡವನ್ನು ಹುರಿದು ತಿನ್ನುವುದುಂಟು.

(ಎಸ್.ಆರ್.ಜಿ.)

**ಕರಿಜೇಡ :** ತೆರಿಡ್ಡೆಯಿಡೀ ಕುಟುಂಬದ ಲ್ಯಾಟ್ರೊಡೆಕ್ಟಸ್ ಜಾತಿಯ ಜೇಡ. ಪ್ರೌಢ ಹೆಣ್ಣು ಜೇಡ ಸುಮಾರು ½" ಉದ್ದವಾಗಿದೆ. ಉದರ ದುಂಡಾಗಿ ದೇಹ ಮಿರುಗುವ ಕಪ್ಪು ಬಣ್ಣದಿಂದ ಕೂಡಿದೆ. ತಳಭಾಗದಲ್ಲಿ ಕಡು ಗೆಂಪು ಬಣ್ಣದ ಬುಡುಬುಡಕೆ ಆಕಾರದ ಗುರುತಿದೆ. ಕೆಲವು ಅಪ್ರಬುದ್ಧ ಹೆಣ್ಣು ಜೇಡಗಳ ಬೆನ್ನಿನ ಮೇಲೆ ಒಂದು ಸಾಲು ಕೆಂಪು ಬಣ್ಣದ ಚುಕ್ಕೆಗಳಿವೆ. ಕೆಲವಕ್ಕೆ ಈ ತರಹ ಚುಕ್ಕೆಗಳು ಇರುವುದಿಲ್ಲ. ಗಂಡು ಜೇಡ ಹೆಣ್ಣಿಗಿಂತ ಚಿಕ್ಕದು. ಇದರಲ್ಲೂ ಉದರದ ತಳ ಭಾಗದಲ್ಲಿ ಬುಡುಬುಡಕೆ ಆಕಾರದ ಗುರುತಿದೆ. ಬೆನ್ನಿನ ಮೇಲೆ ವಿವಿಧ ಮಾದರಿಯ ಕೆಂಪು ಚುಕ್ಕೆಗಳೂ ಇವುಗಳ ಪಾರ್ಶ್ವದಲ್ಲಿ ಬಿಳಿಯ ಗೆರೆಗಳೂ ಇವೆ.



ಸಂಯುಕ್ತಸಂಸ್ಥಾನಗಳ ಸಮಶೀತೋಷ್ಣ ವಲಯದ ಭಾಗಗಳಲ್ಲಿ ಇದರ ಮರಿಗಳು ಕೋಶಾವಸ್ಥೆ ಘಟ್ಟವನ್ನು ಚಳಿಗಾಲದಲ್ಲಿ ಕಳೆದು, ವಸಂತ ಕಾಲದಲ್ಲಿ ಹೊರಕಾಣಿಸಿಕೊಳ್ಳುತ್ತವೆ. ಪ್ರೌಢ ಜೇಡಗಳು ಏಪ್ರಿಲ್ ತಿಂಗಳುಗಳಲ್ಲಿ ಕಾಣಿಸಿಕೊಳ್ಳುತ್ತವೆ. ಆದರೆ ಗಂಡು ಜೇಡಗಳು ಕಣ್ಣಿಗೆ ಬೀಳುವುದು ಅಪರೂಪ.

ಗಂಡುಜೇಡ ಏಕಾಂಗಿಯಾಗಿ ಬಲೆಯಲ್ಲಿ ಕುಳಿತು ರೇತಸ್ಸನ್ನು ಸುರಿಸಿ ಎರಡನೆಯ ಉಪಾಂಗವಾದ ಪ್ಯಾಲ್ಪ್‌ಗಳಲ್ಲಿನ ಒಂದು ಚೀಲದಲ್ಲಿ ಶೇಖರಿಸಿ ಸಂಭೋಗ ಕಾಲದಲ್ಲಿ ಇದನ್ನು ಒಂದು ಪ್ಯಾಲ್ಪಿನ ಮೂಲಕ ಹೆಣ್ಣುಜೇಡದ ಜನನೇಂದ್ರಿಯದ ದ್ವಾರದ ಒಳಗೆ ತಳ್ಳುವುದು. ಸಂಭೋಗವಾದ ಅನಂತರ ಹೆಣ್ಣುಜೇಡ ಗಂಡುಜೇಡವನ್ನು ತಿಂದುಬಿಡುತ್ತದೆ! ಹೆಣ್ಣು ಗರ್ಭಧರಿಸಿದ ಮೇಲೆ 250–750 ಮೊಟ್ಟೆಗಳನ್ನು 0-5" ಅಗಲವುಳ್ಳ ರೇಷ್ಮೆಯಂಥ ಮೃದುವಾದ

ಕೋಶದಲ್ಲಿ ಇಟ್ಟು ರಕ್ಷಿಸುತ್ತದೆ. ಈ ಭ್ರೂಣಕೋಶಗಳನ್ನು ಜುಲೈ–ಸೆಪ್ಟೆಂಬರ್ ತಿಂಗಳುಗಳಲ್ಲಿ ಕಾಣಬಹುದು. ಮರಿಗಳು 14–30 ದಿನಗಳ ವರೆಗೆ ಈ ಕೋಶಗಳೊಳಗೇ ಬೆಳೆದು ಒಂದು ಬಾರಿ ಪೊರೆಬಿಟ್ಟು ಅನಂತರ ಹೊರಬರುತ್ತವೆ. ಪ್ರೌಢಾವಸ್ಥೆ ಹೊಂದಬೇಕಾದರೆ ಗಂಡುಮರಿ 4–7 ಬಾರಿಯೂ ಹೆಣ್ಣು ಮರಿ 2–9 ಸಲವೂ ಪೊರೆ ಕಳಚುತ್ತವೆ. ಇವು ಪ್ರೌಢಾವಸ್ಥೆಗೆ ಬಂದ ಅನಂತರ ಕೆಲವು ತಿಂಗಳುಗಳಿಂದ ಒಂದೂವರೆ ವರ್ಷಗಳವರೆಗೆ ಜೀವಿಸಿರಬಲ್ಲವು. ಕರಿಜೇಡಗಳು ಮರದ ತೊಗಟೆಯ ಒಳಭಾಗ, ಸಂದುಗಳಲ್ಲಿ ಅಥವಾ ಪೊಟರೆಗಳಲ್ಲಿ ರೇಷ್ಮೆಯಂಥ ಸೂಕ್ಷ್ಮವಾದ ದಾರದಿಂದ ದೃಢವಾದ ಬಲೆಯನ್ನು ನೇಯುತ್ತವೆ. ಇತರ ಕೀಟಗಳು ಬಲೆಯೊಳಗೆ ಸಿಕ್ಕಿಕೊಂಡಾಗ ಅವುಗಳನ್ನು ಹಿಡಿದು ರಂಧ್ರಗಳನ್ನು ಮಾಡಿ, ಮೈ ಒಳಗಿರುವ ರಸವನ್ನು ಹೀರುತ್ತವೆ. ಆದರೆ ಕಣಜಗಳೂ ಇತರ ಕೀಟಭಕ್ಷಕಗಳೂ ಜೇಡಗಳ ಮರಿಗಳನ್ನು ತಿಂದು ಹಾಕುತ್ತವೆ.

ಇತರ ಜೇಡಗಳಿಗೆ ಇರುವಂತೆ ಕರೀಜೇಡಕ್ಕೂ ವಿಷಗ್ರಂಥಿಗಳೂ ಅದನ್ನು ದೇಹದೊಳಕ್ಕೆ ಹೊಗಿಸುವ ಅಂಗಗಳೂ ಇವೆ. ಇದು ಆತ್ಮರಕ್ಷಣೆಯ ಸಾಧನ. ಕರಿಜೇಡ ಒಮ್ಮೊಮ್ಮೆ ಮನುಷ್ಯನನ್ನು ಕಡಿಯುವುದು ಉಂಟು. ಆಗ ವಿಷದ ಪರಿಣಾಮವಾಗಿ ಮೈನೋವು, ವಾಂತಿ, ವಪೆಯ ಅಸ್ವಸ್ಥತೆ ಇವೆಲ್ಲ ಕಾಣಿಸಿಕೊಳ್ಳುತ್ತವೆ. ಮೂರು ನಾಲ್ಕುದಿನಗಳವರಗೂ ಈ ನೋವು ಇರುತ್ತದೆ. ಆದರೆ ಸಾವು ಬಹಳ ಅಪರೂಪ.

ಎಚ್. ಲೆವಿ ಎಂಬ ವಿಜ್ಞಾನಿ ಲ್ಯಾಟ್ರೋಡೆಕ್ಟಸ್ ಜಾತಿಯಲ್ಲಿ ಆಫ್ರಿಕದ ಲ್ಯಾ. ಜಿಯೊಮೆಟ್ರಿಕಸ್, ಅಮೆರಿಕದ ಲ್ಯಾ. ಕುರಸವಿಯೆನ್ಸಿಸ್, ಯೆಮನಿನ ಲ್ಯಾ. ಹಿಸ್ಟ್ರಿಕ್ಸ್, ಇರಾನಿನ ಲ್ಯಾ. ದಹ್ಲಿ, ಉತ್ತರ ಆಫ್ರಿಕದ ಲ್ಯಾ. ಪ್ಯಾಲಿಡಸ್ ಮತ್ತು ಪ್ರಪಂಚದ ಇತರ ಉಷ್ಣವಲಯದಲ್ಲಿ ಜೀವಿಸುವ ಲ್ಯಾ. ಮ್ಯಾಕ್ಟನ್ಸ್ ಪ್ರಭೇದಗಳನ್ನು ವಿವರಿಸಿದ್ದಾನೆ. (ಪಿ.ಎ.ಆರ್.)

**ಕರಿಬಸವ ದೇಶಿಕೇಂದ್ರ I :** ಕ್ರಿ. ಶ. ಸುಮಾರು 1200–1240. ಶ್ರೀಶೈಲ ಪಂಡಿತಾರಾಧ್ಯ ಸೂರ್ಯ ಸಿಂಹಾಸನವನ್ನು ಅಲಂಕರಿಸಿದ್ದ ಯತಿ. ಗುರು ಚಂದ್ರಗುಂಡ ದೇಶಿಕೇಂದ್ರ. 1235ರಲ್ಲೂ 1240ರಲ್ಲೂ ನಿಡುಮಾಮಿಡಿ ಕರಿಬಸವೇಂದ್ರ ಎಂಬ ಹೆಸರಿನಿಂದ ಅಲ್ಲಮ ಪ್ರಭುದೇವನ ಜೊತೆಯಲ್ಲಿ ಸಂಚರಿಸಿದಂತೆ ತಿಳಿದುಬಂದಿದೆ. ಈತ ಮಹಾಮಹಿಮನಾಗಿದ್ದು ಪೆನುಗೊಂಡ ತಾಲ್ಲೂಕು ನಿಡುಮಾಮಿಡಿ ಮಠ (ಶೈಲಪೀಠ ಶಾಖೆ) ಸ್ಥಾಪಕನೆಂದು ಖ್ಯಾತನಾಗಿದ್ದಾನೆ. (ಎಂ.ಜಿ.ಎನ್.)

**ಕರಿಬಸವ ದೇಶಿಕೇಂದ್ರ II :** ಶ್ರೀಶೈಲ ಪಂಡಿತಾರಾಧ್ಯ ಪೀಠ ಪರಂಪರೆಯವನಾದ ಈತ ಗುಯಲೂರು ಮಠಾಧ್ಯಕ್ಷನಾಗಿದ್ದ. ವಿಜಯನಗರ ಸಾಮ್ರಾಜ್ಯವನ್ನು ಆಳುತ್ತಿದ್ದ ಅಚ್ಯುತರಾಯನಿಗೆ (1530-75) ಗುರುವಾಗಿದ್ದನೆಂದು ತಿಳಿದುಬರುತ್ತದೆ. ಮಹಾಪುರುಷನೆಂದು ಪ್ರಸಿದ್ಧನಾಗಿದ್ದ ಈತ ಪೆನುಗೊಂಡೆಗೆ ಸುಮಾರು 9 ಮೈಲಿ ದೂರದಲ್ಲಿರುವ ಸೋಮಲಾಪುರದಲ್ಲಿ ತಪೋಮಗ್ನನಾಗಿದ್ದನೆಂದೂ ವಿಜಯನಗರದ ಉಪರಾಜಧಾನಿಯಾಗಿದ್ದ ಪೆನುಗೊಂಡೆಯಲ್ಲಿದ್ದ ಅಚ್ಯುತರಾಯ ಈತನ ಮಹಿಮೆಯನ್ನು ಕೇಳಿ ಗುರುದರ್ಶನಕ್ಕಾಗಿ ಬಂದನೆಂದೂ ಆಗ ಈತ ಮಂತ್ರೋದಕ ಪ್ರಭಾವದಿಂದ ಅಲ್ಲಿ ಒಣಗಿ ನಿಂತಿದ್ದ ಮಾವಿನ ಮರವನ್ನು ಚಿಗುರಿಸಿ, ಫಲಬಿಡಿಸಿ, ಅವುಗಳನ್ನೇ ರಾಜನಿಗೆ ಆಶೀರ್ವದಿಸಿ ಕೊಟ್ಟನೆಂದೂ ಶ್ರೀಶೈಲಪಂಡಿತಾರಾಧ್ಯ ಚರಿತ್ರೆಯಲ್ಲಿ ಉಕ್ತವಾಗಿದೆ. ಈ ಪವಾಡವನ್ನು ಇಡಗೂರು ರುದ್ರಕವಿ ಉಲ್ಲೇಖಿಸಿದ್ದಾನೆ. ಗುರುಪ್ರಭಾವಕ್ಕೆ ಮೆಚ್ಚಿದ ರಾಜ ಅಲ್ಲಿ ಈತನಿಗೆ ಮಠವನ್ನು ಕಟ್ಟಿಸಿ ಮಾನ್ಯ ಮಿರಾಸೆಗಳನ್ನು ನೀಡಿದುದಾಗಿ ಶಾಸನಗಳಿಂದ ತಿಳಿದುಬಂದಿದೆ. (ಎಂ.ಜಿ.ಎನ್.)

**ಕರಿಬಸವ ಶಾಸ್ತ್ರೀ ಎನ್. ಆರ್. :** 1852–1923. ಮೈಸೂರಿನಲ್ಲಿ ಹುಟ್ಟಿ ಬೆಳೆದ ಅಂದಿನ ವಿದ್ವಾಂಸರಲ್ಲಿ ಗಣನಾರ್ಹರು. ಇವರು ನಂಜನಗೂಡು ಪಂಡಿತ ರುದ್ರಶಾಸ್ತ್ರಿಗಳ ಮಕ್ಕಳು. ಇವರು ಬಾಲ್ಯವನ್ನು ನಂಜನಗೂಡಿನಲ್ಲಿ ಕಳೆದರು. ಮೈಸೂರಿಗೆ ಬಂದು ಕರ್ಣಾಟಕ ಭಾಷಾರತ್ನಂ ಕರಿಬಸವ ಶಾಸ್ತ್ರಿಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿದರು. ಹಲವಾರು ವರ್ಷ ಶ್ರದ್ಧೆಯಿಂದ ಕನ್ನಡ, ಸಂಸ್ಕೃತ ಭಾಷೆಗಳನ್ನೂ ಸಾಹಿತ್ಯ, ವೇದಾಂತ ಶಾಸ್ತ್ರಗಳನ್ನೂ ಕಲಿತು ಉದ್ದಾಮ ಪಂಡಿತರಾದರು. ಯಜಮಾನ್ ವೀರ ಸಂದಪ್ಪನವರ ಉದಾರ ಆಶ್ರಯದಿಂದ ಅಭಿವೃದ್ಧಿಗೆ ಬಂದರು. ಮೈಸೂರು ಸ್ಟಾರ್ ಎಂಬ ವಾರಪತ್ರಿಕೆಗೆ ಲೇಖಕರಾಗಿ ಸೇರಿಕೊಂಡು ವಿಖ್ಯಾತರಾದರು. ರಾಜರ್ಷಿ ನಾಲ್ವಡಿ ಕೃಷ್ಣರಾಜ ಒಡೆಯರ ಆಸ್ಥಾನದಲ್ಲಿ ಪಂಡಿತರಾದರು (1917). ವೀರಶೈವ ಗ್ರಂಥ ಪ್ರಕಾಶಿಕೆ ಎಂಬ ಮಾಸ ಪತ್ರಿಕೆಯನ್ನು ಸ್ಥಾಪಿಸಿ ಹಲವಾರು ಪ್ರಾಚೀನ ಗ್ರಂಥಗಳನ್ನು ಬೆಳಕಿಗೆ ತಂದರು. ಆದರಿಂದ ವೀರಶೈವ ಸಾಹಿತ್ಯದ ಹಲವಾರು ಮಹತ್ತ್ವದ ಗ್ರಂಥಗಳು ಬೆಳಕಿಗೆ ಬಂದವು. ಈ ಮಹನೀಯರು ಶಿವಯೋಗಿ ಶಿವಾಚಾರ್ಯರ ಸಿದ್ಧಾಂತ ಶಿಖಾಮಣಿ ಸಟೀಕ, ಗುರುರಾಜ ಕವಿಯ ಸಂಸ್ಕೃತ ಪಂಡಿತಾರಾಧ್ಯಚರಿತೆಗಳನು ಪ್ರಕಟಿಸಿ ಮಹೋಪಕಾರ ಮಾಡಿದರು. ಸೌಂದರ ಪುರಾಣ, ಧರ್ಮ ಶಿರೋಮಣಿ, ರೇವಣಸಿದ್ಧೇಶ್ವರ ಪುರಾಣ, ಪಾಲ್ಕುರಿಕೆ ಸೋಮೇಶ್ವರ ಪುರಾಣ, ವೀರಶೈವ ದೀಕ್ಷಾವಿಧಿ. ಶಿವಯೋಗ ಪ್ರದೀಪಿಕಾ, ಶಿವಸೂತ್ರ ರತ್ನ, ತತ್ತ್ವಪ್ರಕಾಶಿಕಾ, ರಕ್ಷಾಶತಕಂ. ಶಂಕರಲಿಂಗ ಕಂದ. ಸ್ತುತಿ ಮುಕ್ತಾವಳಿ, ದೇವೀ ಕಾಲೋತ್ತರಾಗಮಂ ಸಟೀಕ, ವೃಷಭೇಂದ್ರ ವಿಜಯ, ಸಟೀಕ ಶತಕತ್ರಯ, ಕರ್ಣಾಟಕ ಶಬ್ದ ಮಂಜರಿ. ಬಸವೇಶ ಜನನ—ಎಂಬ ಗ್ರಂಥಗಳನ್ನು ಸಂಪಾದಿಸಿ ಪ್ರಕಟಿಸಿದರು. ಬಸವರಾಜವಿಜಯ ಮತ್ತು ಚೆನ್ನಬಸವ ವಿಜಯ ಎಂಬ ಉದ್ದಾಮ ಗ್ರಂಥಗಳನ್ನು ಕನ್ನಡ ಗದ್ಯ ಶೈಲಿಯಲ್ಲಿ ಬರೆದು ಪ್ರಕಟಿಸಿದರು. (ಬಿ.ಎಸ್.)

**ಕರಿಬಸವಶಾಸ್ತ್ರೀ ಪಿ. ಆರ್. :** ಹತ್ತೊಂಬತ್ತನೆಯ ಶತಮಾನದ ಉತ್ತರಾರ್ಧ ಇಪ್ಪತ್ತನೆಯ ಶತಮಾನದ ಪೂರ್ವಾರ್ಧದಲ್ಲಿ ಮೈಸೂರಿನಲ್ಲಿ ಆಗಿಹೋದ ಪಂಡಿತರಲ್ಲಿ ಅಗ್ರಗಣ್ಯರು. ಇವರ ತಂದೆ ಪಂಡಿತ ರುದ್ರಪ್ಪ ; ತಾಯಿ ನಂಜಮ್ಮ. ಶಾಸ್ತ್ರಿಗಳ ಜನನ ಮೈಸೂರಿನಲ್ಲಿ. ಬೆಟ್ಟದಪುರದ ಬಸವದೇವರು, ಬೆಟರಿ ಬಸವಲಿಂಗಪ್ಪನವರು, ಬಾಚಳ್ಳಿ ಶ್ರೀಕಂಠ ಶಾಸ್ತ್ರಿಗಳು ಇವರುಗಳಲ್ಲಿ ಕನ್ನಡ ಸಂಸ್ಕೃತ ಅಭ್ಯಾಸಮಾಡಿ ಇಪ್ಪತ್ತನೆಯ ವರ್ಷದಲ್ಲಿ ಗಣ್ಯವಿದ್ವಾಂಸರೆನಿಸಿದರು. ಮೈಸೂರು ವೆಸ್ಲಿಯನ್ ಹೈಸ್ಕೂಲಿನಲ್ಲಿ ಹದಿನೈದುವರ್ಷ, ಮೈಸೂರು ಮಹಾರಾಜ ಕಾಲೇಜಿನಲ್ಲಿ ಮೂವತ್ತು ವರ್ಷ ಕನ್ನಡ ಪಂಡಿತರಾಗಿ ಕೆಲಸ ಮಾಡಿದರು. ಬೈಬಲ್ ಸಮಿತಿಯ ಸದಸ್ಯರಾಗಿ, ರೆವರೆಂಡ್ ಗ್ರೀನ್‌ಹುಡ್, ಹಾಕಿನ್, ಹೆನ್ ಕಾಸ್ಟಿಕ್, ಗಲಿಫರ್ಡ್, ರೀಡಿರ್ಟ, ಥಾಮ್ಸನ್, ಮಿಸೆಸ್ ಗಲಿಫರ್ಡ್—ಮೊದಲಾದವರಿಗೆ ಕನ್ನಡದ ಬೋಧಕರಾಗಿದ್ದರು. ಖಾಸಗಿಯಾಗಿ ಕೂಡ ಹಲವಾರು ವಿದ್ವಾಂಸರು ಇವರ ಶಿಷ್ಯತ್ವವನ್ನು ವಹಿಸಿ ಉದ್ದಾಮ ಪಂಡಿತರೆನಿಸಿದರು. ಕರ್ಣಾಟಕ ಕವಿಚರಿತೆಯ ರಚನೆಯ ಕಾಲದಲ್ಲಿ ಇವರು ಆರ್. ನರಸಿಂಹಾಚಾರ್ಯರಿಗೆ ನೆರವಾಗಿದ್ದರು. ಮೈಸೂರು ಅರಮನೆಯಲ್ಲಿ ಆಸ್ಥಾನ ವಿದ್ವಾಂಸರಾಗಿದ್ದರು. 1918ರಲ್ಲಿ ಮಹಾರಾಜರ ದರ್ಬಾರಿನಲ್ಲಿ ಇವರಿಗೆ ಕರ್ಣಾಟಕ ಭಾಷಾರತ್ನ ಎಂಬ ಬಿರುದು ಪ್ರಾಪ್ತಿಯಾಯಿತು.

ಉದ್ದಾಮ ಪಂಡಿತರಾದ ಕರಿಬಸವಶಾಸ್ತ್ರಿಗಳು ವೀರಶೈವ ಮತ ಪ್ರಕಾಶಕ ಎಂಬ ಮಾಸಪತ್ರಿಕೆಯನ್ನು ಪ್ರಾರಂಭಿಸಿ ಹಲವಾರು ಕನ್ನಡ ಸಂಸ್ಕೃತ ಗ್ರಂಥಗಳನ್ನು ಪ್ರಕಟಿಸಿದರು. ಕ್ರಿಯಾಸಾರ, ಸಿದ್ಧಾಂತ ಶಿಖಾಮಣಿ, ದೀಕ್ಷಾವಧಿ, ಮಾಚದೇವ ಮನೋವಿಲಾಸ, ಲಿಂಗಧಾರಣ ಚಂದ್ರಿಕಾ, ಅನುಭವಸೂತ್ರ, ವಿವಾಹವಿಧಿ ವೀರಶೈವೋತ್ಕರ್ಷಸಂಗ್ರಹ, ಸಂಸ್ಕೃತ ಬಸವೇಶ ವಿಜಯ ಮೊದಲಾದ ಸಂಸ್ಕೃತ ಗ್ರಂಥಗಳನ್ನೂ ಕನ್ನಡ ಭಾರತ, ಜೈಮಿನಿ ಭಾರತ, ರಾಜಶೇಖರವಿಳಾಸ, ಶಬರಶಂಕರ ವಿಳಾಸ, ಪ್ರಹ್ಲಾದ ಚರಿತ್ರೆ ಮೊದಲಾದ ಕನ್ನಡ ಗ್ರಂಥಗಳನ್ನೂ ಸಂಪಾದಿಸಿ ಪ್ರಕಟಿಸಿ ಶಾಸ್ತ್ರಿಗಳು ಮಹೋಪಕಾರಮಾಡಿದ್ದಾರೆ ; ಇಷ್ಟೇ ಅಲ್ಲದೆ ಭಕ್ತಾಧಿಕ್ಯ ರತ್ನಾವಳಿ, ಅನುಭವಸಾರ, ವ್ಯಾಸೋಕ್ತ ಬಸವಪುರಾಣ. ಶೈವಾದ್ವೈತ ಮಂಜರಿ, ಸಿದ್ಧೇಶ್ವರ ಪುರಾಣ, ನಳಚರಿತ್ರೆ, ವೀರಶೈವ ಪ್ರದೀಪಿಕಾ, ಶಿವಭಕ್ತಿಸಾರ, ತ್ರಿಕಾಂಡ ಅಮರ ಕೋಶ, ಕರ್ಣಾಟಕ ಬಾಲಬೋಧೆ, ಶಬ್ದರೂಪಾವಳಿ ಮೊದಲಾದ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇವರು ಸ್ವತಂತ್ರವಾಗಿ ಕನ್ನಡ ಬಸವೇಶವಿಜಯ, ನಯಶತಕ ಎಂಬ ಗ್ರಂಥಗಳನ್ನು ಕನ್ನಡದಲ್ಲಿಯೂ ವೀರಶೈವೋತ್ಕರ್ಷ ಪ್ರದೀಪಿಕಾ ಎಂಬ ಗ್ರಂಥವನ್ನು ಸಂಸ್ಕೃತದಲ್ಲಿಯೂ ಬರೆದು ಪ್ರಕಟಿಸಿದ್ದಾರೆ. ನಾಗವರ್ಮನ ಕಾದಂಬರಿಯಲ್ಲಿ ಗ್ರಂಥಪಾತವಾಗಿದ್ದ ಒಂದು ಕಡೆ ಶ್ರೀ ಶಾಸ್ತ್ರಿಗಳು ಮೂಲ ಕಾವ್ಯಕ್ಕನುಗುಣವಾಗಿ ಹತ್ತಾರು ಪದ್ಯಗಳನ್ನು ಬರೆದುಕೊಟ್ಟಿದ್ದಾರೆ. ಬಸವಪ್ಪ ಶಾಸ್ತ್ರಿಗಳನ್ನು ಕುರಿತ ಚರಮಗೀತೆಗಳನ್ನು ಬರೆದಿದ್ದಾರೆ. ನಿಜಗುಣ ಶಿವಯೋಗಿಯ ಅನುಭವಸಾರಕ್ಕೆ ಟಿಪ್ಪಣಿಯನ್ನು ರಚಿಸಿದ್ದಾರೆ. ಕನ್ನಡ ಜೈಮಿನಿ ಭಾರತದ 17 ಅಧ್ಯಾಯಗಳಿಗೆ ಉತ್ತಮ ಟೀಕೆ ಟಿಪ್ಪಣಿ ಬರೆದು ಪ್ರಕಟಿಸಿದ್ದಾರೆ. ಈ ಮಹನೀಯರು ಕನ್ನಡದ ಏಳಿಗೆಗಾಗಿ, ಸಾಹಿತ್ಯದ ಉನ್ನತಿಗಾಗಿ ಮಾಡಿದ ಸೇವೆಯು ಅಪಾರವಾದುದು. ಮೈಸೂರು ಮಹಾರಾಜರ ಕಾಲೇಜಿನಲ್ಲಿಯೂ ಬೆಂಗಳೂರು ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿಯೂ ಇವರ ಭಾವಚಿತ್ರವನ್ನು ಹಾಕಿ ಇವರ ವಿದ್ವತ್ತನ್ನು ಗೌರವಿಸಲಾಗಿದೆ. (ಬಿ.ಎಸ್.)

**ಕರಿಬೇವು :** ರೊಟೇಸೀ ಕುಟುಂಬದ ಮರಯ ಕೊನಿಗಿ ಎಂಬ ವೈಜ್ಞಾನಿಕ ಹೆಸರಿನ ಮರ. ಉಷ್ಣವಲಯದಲ್ಲೆಲ್ಲ ಪ್ರಸರಿಸಿದೆ. ಭಾರತದಲ್ಲಿ ಹಿಮಾಲಯದಿಂದ ಕನ್ಯಾಕುಮಾರಿಯವರೆಗೂ ಎಲ್ಲೆಡೆಗಳಲ್ಲೂ ಸ್ವಾಭಾವಿಕವಾಗಿ ಬೆಳೆಯುತ್ತದೆ. ಇದರ ಸುವಾಸನಾಯುಕ್ತ ಎಲೆಗಳಿಗೊಸ್ಕರ ಇದನ್ನು ಬೆಳೆಸುತ್ತಾರೆ.

ಇದು ಸುಮಾರು 20′ ಎತ್ತರಕ್ಕೆ ಬೆಳೆಯುವ ಬಹುವಾರ್ಷಿಕ ಮರ. ಇದರ ತೊಗಟೆ ಕಗ್ಗಂದು ಅಥವಾ ಕಪ್ಪು ಬಣ್ಣದ್ದು. ಎಲೆಗಳು ಪರ್ಯಾಯವಾಗಿ ಜೋಡಣೆಗೊಂಡಿದ್ದು ಗರಿರೂಪದ ಸಂಯುಕ್ತ ಮಾದರಿಯವಾಗಿವೆ. ಒಂದೊಂದು ಎಲೆಯಲ್ಲೂ ಸು. 9–25 ಕಿರುಎಲೆಗಳಿವೆ (ಪರ್ಣಿಕೆ). ಇವನ್ನು ಬೆಳಕಿಗೆ ಎದುರಾಗಿ ಹಿಡಿದು ಪರೀಕ್ಷಿಸಿದರೆ ಅವುಗಳ ಅಲಗಿನ ಮೇಲೆಲ್ಲ ಸೂಕ್ಷ್ಮವಾದ ಚುಕ್ಕೆಗಳಂಥ ರಸಗ್ರಂಥಿಗಳನ್ನು ನೋಡಬಹುದು. ಈ ಗ್ರಂಥಿಗಳಲ್ಲಿ ಒಂದು ವಿಶಿಷ್ಟಬಗೆಯ

ಚಂಚಲತೈಲವಿದೆ. ಇದರಿಂದಾಗಿ ಎಲೆಗಳು ಗಂಧಯುಕ್ತವಾಗಿವೆ. ಹೂಗಳು ದ್ವಿಲಿಂಗಿಗಳು ; ರೆಂಬೆಗಳ ತುದಿಯಲ್ಲಿ ಹುಟ್ಟುವ ಮಧ್ಯಾರಂಬಿ ಹೂಗೊಂಚಲುಗಳಲ್ಲಿ ಸಮಾವೇಶಗೊಂಡಿವೆ. ಹೂಗಳು ಬಿಳಿಯಬಣ್ಣದವೂ ನವುರಾದ ವಾಸನೆಯುಳ್ಳವೂ ಆಗಿವೆ. ಪುಷ್ಪಪಾತ್ರೆ ಮತ್ತು ಪುಷ್ಪದಳ ಸಮೂಹ ತಲಾ ಐದೈದು ಪತ್ರಗಳನ್ನೂ ದಳಗಳನ್ನೂ ಒಳಗೊಂಡಿವೆ. ಕೇಸರಗಳು 10 ; ಎರಡು ಸುತ್ತುಗಳಲ್ಲಿ ಜೋಡಿತ



ವಾಗಿವೆ. ಅಂಡಾಶಯ ಉಚ್ಚಸ್ಥಾನದ್ದು ; ಅದರಲ್ಲಿ ಎರಡು ಕೋಣೆಗಳಿವೆ. ಫಲ ಗುಂಡಗಿನ ಅಥವಾ ಉದ್ದುದ್ದವಾದ ಬೆರ್ರಿ ಮಾದರಿಯದು. ಅದರ ಬಣ್ಣ ಊದಾ ಮಿಶ್ರಿತ ಕಪ್ಪು.

ಕರಿಬೇವು ತನ್ನ ಸುಗಂಧಪೂರಿತ ಎಲೆಗಳಿಂದಾಗಿ ಬಹುಪ್ರಾಮುಖ್ಯ ಪಡೆದಿದೆ. ಎಲೆಗಳನ್ನು ಹಲವಾರು ಬಗೆಯ ಅಡಿಗೆಯ ಕೆಲಸಗಳಲ್ಲಿ ಉಪಯೋಗಿಸುವುದು ಎಲ್ಲರಿಗೂ ತಿಳಿದದ್ದೇ. ಎಲೆಗಳ ರಾಸಾಯನಿಕ ಸಂಯೋಜನೆ ಈ ರೀತಿ ಇದೆ : ತೇವಾಂಶ 66.3% ; ಪ್ರೋಟೀನು 6.1% ; ಕೊಬ್ಬು 1.0% ; ಸಕ್ಕರೆ—ಪಿಷ್ಟದ ಅಂಶ 16.0% ; ನಾರಿನ ಅಂಶ 6.4% ; ಲವಣಾಂಶ 4.2% ; ಹಾಗೂ ಪ್ರತಿ 100 ಗ್ರಾಂ. ಎಲೆಗಳಲ್ಲಿ 810 ಮಿಗ್ರಾಂ. ಕ್ಯಾಲ್ಸಿಯಂ, 600 ಮಿಗ್ರಾಂ. ರಂಜಕ, 3.1 ಮಿಗ್ರಾಂ. ಕಬ್ಬಿಣ, 12,600 ಐ. ಯು ಕ್ಯಾರೋಟೀನ್ (ಎ ಜೀವಾತು ರೂಪದಲ್ಲಿ), 4 ಮಿಗ್ರಾಂ. ಸಿ ಜೀವಾತು. ಇವಲ್ಲದೆ ಹಲವಾರು ಬಗೆಯ ಅಮೈನೋ ಆಮ್ಲಗಳೂ ಇವೆ. ಆಗ ತಾನೇ ಕೊಯ್ದ ಎಲೆಗಳನ್ನು ಆಸವೀಕರಣ ಗೊಳಿಸಿ (ಆವಿ ಬಟ್ಟಿಯಿಳಿಸುವಿಕೆ) ಒಂದು ಬಗೆಯ ಚಂಚಲ ತೈಲವನ್ನು ತೆಗೆಯಬಹುದು. ಶುದ್ಧಗೊಳಿಸಿದ ಈ ಎಣ್ಣೆ ಹಳದಿ ಬಣ್ಣದ್ದೂ ಸಂಬಾರದ ವಾಸನೆಯುಳ್ಳದ್ದೂ ಲವಂಗದ ಕಟುರುಚಿಯುಳ್ಳದ್ದೂ ಆಗಿದೆ. ಇದನ್ನು ಕೆಲವು ಬಗೆಯ ಸಾಬೂನುಗಳಿಗೆ ಕೊಡುವ ಸುಗಂಧ ದ್ರವ್ಯಗಳನ್ನು ಸ್ಥಿರೀಕರಣಗೊಳಿಸಲು ಬಳಸುತ್ತಾರೆ. ಎಲೆಗಳನ್ನು ಆಮಶಂಕೆ, ಅತಿಸಾರ, ವಾಂತಿ ಮುಂತಾದವನ್ನು ನಿಲ್ಲಿಸಲು ಉಪಯೋಗಿಸುವುದಲ್ಲದೆ ತರೆಚುಗಾಯಗಳಿಗೂ ಬೊಕ್ಕೆಗಳಿಗೂ ಹಚ್ಚಲು ಬಳಸುತ್ತಾರೆ. ಬೇರು ಮತ್ತು ತೊಗಟೆಗಳನ್ನು ಶಕ್ತಿವರ್ಧಕ, ಜೀರ್ಣಕಾರಿ ಹಾಗೂ ವಾತಹರ ಔಷಧಿಗಳಾಗಿ ಉಪಯೋಗಿಸುತ್ತಾರೆ. ಇದರ ಚೌಬೀನೆ ಗಡುಸಾಗಿ, ನಯವಾದ ಎಳೆಗಳ ವಿನ್ಯಾಸವನ್ನು ಹೊಂದಿದೆ. ಹಾಗೂ ದೀರ್ಘಕಾಲ ಬಾಳಿಕೆ ಬರುತ್ತದೆ. ಆದ್ದರಿಂದ ಇದನ್ನು ವ್ಯವಸಾಯದ ಉಪಕರಣಗಳ ತಯಾರಿಕೆಯಲ್ಲಿ ಉಪಯೋಗಿಸುತ್ತಾರೆ.

ಕರಿಬೇವು ಸಸ್ಯವನ್ನು ಸಸ್ಯಗಳ ಸುತ್ತಲೂ ಬೇರಿನಿಂದ ಹೊರಟಿರುವ ಸಸಿಗಳಿಂದಲೂ ಬೀಜಗಳಿಂದಲೂ ವೃದ್ಧಿ ಮಾಡಬಹುದು. ಜೌಗುಪ್ರದೇಶಗಳಲ್ಲಿ ಇದರ ಬೇಸಾಯ ಮಾಡಲು ಸಾಧ್ಯವಿಲ್ಲ. ಸಸಿ ನಾಟಿಮಾಡಿದ ಅನಂತರ ಇದು ಸರಿಯಾಗಿ ಬೇರುಬಿಟ್ಟು ಚಿಗುರುವತನಕ ಎಚ್ಚರಿಕೆ ವಹಿಸಬೇಕು. ಸಸಿನೆಟ್ಟ 3–4 ವರ್ಷಗಳ ಅನಂತರ ಎಲೆಗಳನ್ನು ಕೊಯ್ಯಬಹುದು. ಈ ಸಸ್ಯ ಬಹಳ ನಿಧಾನವಾಗಿ ಬೆಳೆಯುವ ಗುಣವುಳ್ಳದ್ದು. ಆದ್ದರಿಂದ ಎಳೆಯ ಸಸಿಯಾಗಿರುವಾಗ ಎಲೆ ಕೊಯ್ಯಲು ಪ್ರಾರಂಭಿಸಿದರೆ ಬೆಳೆವಣಿಗೆ ನಿಂತುಹೋಗಿ ಗಿಡ ಸತ್ತುಹೋಗುವ ಸಾಧ್ಯತೆ ಹೆಚ್ಚು.

(ಎಂ.ಎಚ್.ಎಂ.)

**ಕರಿಹಾವು :** ಕೊಲ್ಯೂಬ್ರಿಡೀ ಕುಟುಂಬಕ್ಕೆ ಸೇರಿದ ಕಾಲ್ಯುಬರ್ ಕನ್‌ಸ್ಟ್ರಿಕ್ಟರ್ ಕನ್‌ಸ್ಟ್ರಿಕ್ಟರ್ ಎಂಬ ಶಾಸ್ತ್ರೀಯ ಹೆಸರಿನ ಹಾವು ಉತ್ತರ ಅಮೆರಿಕದಲ್ಲಿ ಇದು ಸಾಮಾನ್ಯ. ವಿಷರಹಿತ ಹಾವಾದ ಇದರಲ್ಲಿ ಹಲವಾರು ಉಪಪ್ರಭೇದಗಳಿವೆ. ಇವುಗಳಲ್ಲಿ ಅಮೆರಿಕದ ಸಂಯುಕ್ತಸಂಸ್ಥಾನಗಳ ಮಧ್ಯಭಾಗದಲ್ಲಿ ಕಾಣಬರುವ ಬ್ಲೂ ರೇಸರ್ ಹಾಗೂ ಆಗ್ನೇಯ ಭಾಗದಲ್ಲಿ ಕಾಣಬರುವ ದಕ್ಷಿಣದ ಬ್ಲ್ಯಾಕ್ ರೇಸರ್ ಮುಖ್ಯವಾದುವು. ತೆಳು ಹಾಗೂ ನೀಳದೇಹದ ಈ ಹಾವು. ಸು. 4′—5′ ಉದ್ದ ಬೆಳೆಯುತ್ತದೆ. ದೇಹದ ಮೇಲ್ಭಾಗ ಕಪ್ಪು, ತಳಭಾಗ ನಸುಬಿಳುಪು ಅಥವಾ ಹಳದಿ. ಬಾಯಿಯ ತಳಭಾಗ ಬಿಳಿಬಣ್ಣದ್ದಾಗಿದೆ. ಇದು ಬಹಳ ವೇಗವಾಗಿ ಚಲಿಸಬಲ್ಲುದಲ್ಲದೆ ಮರ ಹತ್ತುವುದರಲ್ಲೂ ಈಜುವುದರಲ್ಲೂ ಪ್ರಾವೀಣ್ಯ ಪಡೆದಿದೆ. ಗಾಬರಿಗೊಂಡಾಗ ಬಾಲದ ತುದಿಯನ್ನು ಅಲುಗಾಡಿಸುತ್ತದೆ. ಕಪ್ಪೆ, ಇತರ ಸಣ್ಣ ಗಾತ್ರದ ಹಾವುಗಳು, ಚಿಕ್ಕ ಸಸ್ತನಿಗಳು, ಹಕ್ಕಿಗಳು, ಮೊಟ್ಟೆಗಳು ಇದರ ಆಹಾರ. ಗಂಡು ಹೆಣ್ಣುಗಳು ವಸಂತ ಋತುವಿನಲ್ಲಿ ಸಂಭೋಗ ನಡೆಸುತ್ತವೆ. ಹೆಣ್ಣು 10–35 ಮೊಟ್ಟೆಗಳನ್ನಿಡುತ್ತದೆ ; ಮೊಟ್ಟೆಯಿಡುವ ಕಾಲ ಮೇ—ಜುಲೈ. ಮೊಟ್ಟೆಗಳ ಮೇಲೆ ಸಣ್ಣ ಮರಳಿನಂಥ ಕಣಗಳಿಂದಾದ ಹೊದಿಕೆಯುಂಟು. 7 ರಿಂದ 9 ವಾರಗಳಲ್ಲಿ ಮೊಟ್ಟೆಗಳೊಡೆದು ಸಣ್ಣ ಸಣ್ಣ ಮರಿಗಳು ಹೊರಬರುತ್ತವೆ.

(ಕೆ.ಎಂ.ಎ.)

**ಕರಿಹುಂಜ :** ಗ್ಯಾಲಿಫಾರ್ಮಿಸ್ ಗಣದ ಟೆಟ್ರವೋನಿಡೀ ಕುಟುಂಬಕ್ಕೆ ಸೇರಿದ ಲೈರೂರಸ್ ಟೆಟ್ರಿಕ್ಸ್ ಎಂಬ ಶಾಸ್ತ್ರೀಯ ಹೆಸರಿನ ಹಕ್ಕಿಯ ಗಂಡಿಗಿರುವ ಸಾಮಾನ್ಯ ಹೆಸರು. ಹೆಣ್ಣುಹಕ್ಕಿಯನ್ನು ಬೂದುಕೋಳಿ (ಗ್ರೇ ಹೆನ್) ಎಂದು ಕರೆಯುತ್ತಾರೆ, ಗಂಡು ಹೆಣ್ಣುಗಳೆರಡಕ್ಕೂ ಬ್ಲ್ಯಾಕ್ ಗ್ರಾಸ್ ಎಂಬ ಸಾಮಾನ್ಯ ಹೆಸರಿದೆ.

ಈ ಜಾತಿಯ ಹಕ್ಕಿ ಯೂರೋಪು ಮತ್ತು ಏಷ್ಯದ ಉತ್ತರ ಭಾಗಗಳ ನಿವಾಸಿ. ಗಂಡುಹಕ್ಕಿ ಸು. 2′ ಉದ್ದವಿದ್ದು 1 ಕಿಗ್ರಾಂ. ಗಿಂತಲೂ ಹೆಚ್ಚು ತೂಗುತ್ತದೆ. ಗಂಡು ಬಹಳ ಚೆಲುವಾದ ಹಾಗೂ ವರ್ಣರಂಜಿತ ಹಕ್ಕಿ. ಮೈ ಹೊಳೆಯುವ ನೀಲಿಮಿಶ್ರಿತ ಕಪ್ಪು ಬಣ್ಣದ್ದು. ಬಾಲದ ಕೆಳಗೂ ರೆಕ್ಕೆಗಳ ಮೇಲೂ ಬಿಳಿಯ ಪಟ್ಟೆಯಿದೆ. ಬಾಲ ಬೀಸಣಿಗೆಯಂತಿದೆ. ಹಣೆಯ ಮೇಲೆ ಕಡುಗೆಂಪು ಬಣ್ಣದ ಮಾಂಸಲಭಾಗವಿದೆ. ಹೆಣ್ಣು ಹಕ್ಕಿ



ಗಂಡಿಗಿಂತ ಚಿಕ್ಕದು. ಇದರ ಮೈಬಣ್ಣ ಕೆಂಗಂದು; ಅಲ್ಲಲ್ಲಿ ಕಪ್ಪು ಪಟ್ಟೆಗಳಿವೆ.

ಕುರುಚಲು ಪ್ರದೇಶಗಳು, ಬಂಡೆಗಳಿಂದ ಕೂಡಿದ ಗುಡ್ಡಗಾಡುಗಳು ಮುಂತಾದೆಡೆ ಈ ಹಕ್ಕಿಗಳು ಸಾಮಾನ್ಯ. ಹಣ್ಣುಹಂಪಲು, ಕಾಳುಕಡ್ಡಿ ಇವುಗಳ ಪ್ರಧಾನ ಆಹಾರ. ಕರಿಹುಂಜ ಬಹುಪತ್ನೀಕ. ವಸಂತ ಋತುವಿನಲ್ಲಿ ಒಂದೊಂದು ಗಂಡೂ ಹಲವಾರು ಹೆಣ್ಣುಗಳನ್ನು ಸೇರಿಸಿಕೊಂಡು ವಿಶಿಷ್ಟ ಸ್ಥಳಗಳಲ್ಲಿ ಪ್ರಣಯಸೂಚಕ ನೃತ್ಯಮಾಡುತ್ತದೆ. ಈ ನರ್ತನ ಸ್ಥಳಗಳನ್ನು ಲೆಕ್ ಎನ್ನುತ್ತಾರೆ. ವಿವಿಧರೀತಿಯ ಭಾವಭಂಗಿಗಳಿಂದ ಕೂಡಿದ ಈ ಕುಣಿತದ ಮೂಲಕ ಗಂಡು ಹೆಣ್ಣುಗಳನ್ನು ಒಲಿಸಿಕೊಳ್ಳುತ್ತದೆ. ಬೆಳಗಿನ ಜಾವ ಆರಂಭವಾಗಿ ದಿನವೆಲ್ಲ ನಡೆಯುತ್ತಲೇ ಇರುತ್ತದೆ ಈ ಕುಣಿತ. ಕೆಲವು ಸಲ ಇತರ ಗಂಡುಗಳು ಈ ಸ್ಥಳಕ್ಕೆ ಬರುವುದುಂಟು. ಆಗ ಗಂಡುಹಕ್ಕಿಗಳಲ್ಲಿ ಹೆಣ್ಣುಗಳಿಗಾಗಿ ಕಾಳಗ ನಡೆಯುತ್ತದೆ. ಸಾಧಾರಣವಾಗಿ ಇದು ತೋರಿಕೆಯ ಜಗಳವಾದರೂ ಕೆಲವೊಮ್ಮೆ ಇದು ಉಗ್ರವಾಗಿಯೇ ನಡೆದು ಕೆಲವು ಗಂಡುಗಳ ಸಾವಿನಲ್ಲಿ ಪರಿಣಮಿಸಬಹುದು.

ಹೆಣ್ಣುಹಕ್ಕಿ ಒಂದು ಸಲಕ್ಕೆ 6–10 ಮೊಟ್ಟೆಗಳನ್ನಿಡುತ್ತದೆ. ಸಾಮಾನ್ಯವಾಗಿ ನೆಲದಲ್ಲಿ ಗುಂಡಿಮಾಡಿ ಕಡ್ಡಿಗಳನ್ನು ಹರಡಿ ಗೂಡನ್ನು ಕಟ್ಟುತ್ತದೆ. ಮೊಟ್ಟೆಗಳಿಗೆ ಕಾವು ಕೊಟ್ಟು ಮರಿಮಾಡುವುದೂ ಮರಿಗಳ ಪೋಷಣೆಯೂ ಹೆಣ್ಣಿಗೇ ಸೇರಿದ್ದು.

(ಜಿ.ಎಂ.ಬಿ.)

**ಕರೀಂನಗರ :** ಆಂಧ್ರಪ್ರದೇಶದ ತೆಲಂಗಾಣದಲ್ಲಿ ವಾರಂಗಲ್ ವಿಭಾಗದ ಒಂದು ಜಿಲ್ಲೆ. ಉತ್ತರದಲ್ಲಿ ಆಂಧ್ರಪ್ರದೇಶದ ಆದಿಲಾಬಾದ್ ಮತ್ತು ಮಹಾರಾಷ್ಟ್ರದ ಚಾಂದಜಿಲ್ಲೆಗಳು, ಈಶಾನ್ಯದಲ್ಲಿ ಮಧ್ಯಪ್ರದೇಶದ ಬಸ್ತಾರ್ ಜಿಲ್ಲೆ, ಆಂಧ್ರಪ್ರದೇಶದ ಪೂರ್ವ—ದಕ್ಷಿಣಗಳಲ್ಲಿ ವಾರಂಗಲ್ ಜಿಲ್ಲೆ, ನೈಋತ್ಯದಲ್ಲಿ ಮೇಡಕ್ ಜಿಲ್ಲೆ ಮತ್ತು ಪಶ್ಚಿಮದಲ್ಲಿ ನಿಜಾಮಾಬಾದ್ ಜಿಲ್ಲೆ ಇವೆ. ವಿಸ್ತೀರ್ಣ 11,872 ಚ. ಕಿಲೋಮೀಟರ್. ಜನಸಂಖ್ಯೆ 16,21,515 (1961). ಜನಸಾಂದ್ರತೆ : ಚ.ಮೈಲಿಗೆ 354. ರೈತರೇ ಬಹುಸಂಖ್ಯಾತರು.

ಈ ಜಿಲ್ಲೆಯ ನೆಲ ಪೂರ್ವದಿಂದ ಪಶ್ಚಿಮಕ್ಕೆ ಎತ್ತರವಾಗುತ್ತ ಸಾಗುತ್ತದೆ (135 ಮೀ. ನಿಂದ 664 ಮೀ.). ತಗ್ಗಿನಲ್ಲಿ ಪರ್ವತಗಳುಂಟು. ಇವುಗಳ ಪೈಕಿ ಒಂದು ಸಾಲು ಈಶಾನ್ಯದ ಕಡೆಗೆ ಹೊರಟು, ಗುರ್ರಪಲ್ಲಿ–ಜಗತಿಯಾಲ್‌ಗಳ ನಡುವೆ ಹಾಯ್ದು ಗೋದಾವರಿ ನದಿಯ ಬಳಿಯ ವೇಮುಲಕುರ್ತಿ ಬಳಿ ಕೊನೆಗೊಳ್ಳುತ್ತದೆ. ಎರಡನೆಯದು ಇದಕ್ಕೆ ಸಮಾನಾಂತವಾಗಿ ಸುನಿಗ್ರಾಂನಿಂದ ಮಲ್ಲನ್‌ಗೂರ್ ಕಡೆಗೆ ಹಬ್ಬಿದೆ. ಮೂರನೆಯ ಸಾಲು ಮಾನೇರ್ ನದೀಕಣಿವೆಯ ಬಳಿ ನೈಋತ್ಯದಿಂದ ಈಶಾನ್ಯದ ಕಡೆ ಹೊರಟು, ಸುನಿಗ್ರಾಂ ಬೆಟ್ಟಗಳನ್ನು ಭೇದಿಸಿ, ರಾಂಗೀರನ್ನು ದಾಟಿ, ಗೋದಾವರಿನದಿಯ ಬಳಿ ಕೊನೆಗೊಳ್ಳುತ್ತದೆ.

ಜಿಲ್ಲೆಯಲ್ಲಿ ರೂಪಾಂತರಗೊಂಡ ಶಿಲೆಗಳು ಹೆಚ್ಚಾಗಿವೆ. ಜಿಲ್ಲೆಯ ಹೆಚ್ಚು ಭಾಗವನ್ನು ಪ್ರಥಮ ಯುಗದ ನೈಸ್‌ಶಿಲೆ ಆಕ್ರಮಿಸಿದೆ. ಕಡಪ, ಸುಲ್ಲವಿ ಮತ್ತು ಗೊಂಡ್ವಾನ ರೀತಿಯ ಶಿಲಾ ನಿರ್ಮಾಣಗಳು ಪೂರ್ವಭಾಗದಲ್ಲಿದೆ. ಉತ್ತರದಲ್ಲಿ ಕಪ್ಪು ಜಿಗುಟು ಮಣ್ಣು ಹೆಚ್ಚು. ಇದು ಜಿಲ್ಲೆಯ $\frac{1}{8}$ ಭಾಗವನ್ನು ಆಕ್ರಮಿಸಿದೆ. ಉಳಿದ ಭಾಗಗಳಲ್ಲಿರುವುದು ಲವಣ ಮಿಶ್ರಿತ ಮರಳು.

ಇಲ್ಲಿಯ ಮುಖ್ಯ ನದಿ ಗೋದಾವರಿ. ಉತ್ತರದಲ್ಲಿ ಈ ಜಿಲ್ಲೆಯ ಗಡಿಯಂತೆ ಹರಿಯುತ್ತದೆ. ಗೋದಾವರಿಯ ಉಪನದಿಯಾದ ಮಾನೇರ್ ಇನ್ನೊಂದು ನದಿ. ಪೆದ್ದವಾಗು ಮತ್ತು ಚಲ್ಲವಾಗು ಇವು ಗೋದಾವರಿಯ ಇತರ ಉಪನದಿಗಳು.

ಉತ್ತರದಲ್ಲಿಯ ಜಗತಿಯಾಲ್, ಮಹದೇವಪುರ ಮತ್ತು ಪಶ್ಚಿಮದ ಸಿರಿಸಿಲ್ಲ ಪ್ರದೇಶಗಳ ವಿನಾ ಉಳಿದ ಭಾಗಗಳು ಆರೋಗ್ಯಕರವಾಗಿವೆ. ಸಮುದ್ರದಿಂದ ದೂರವಾಗಿ ಒಳನಾಡಿನಲ್ಲಿ ಇರುವುದರಿಂದ ಬೇಸಗೆಯಲ್ಲಿ ಉಷ್ಣತೆ ಹೆಚ್ಚು. ಕರೀಂನಗರ ಮತ್ತು ಜಮಿಕುಂಟಗಳಲ್ಲಿ ಮೇ ಮತ್ತು ಡಿಸೆಂಬರ್ ತಿಂಗಳುಗಳ ಉಷ್ಣತೆ ಕ್ರಮವಾಗಿ 110° ಫ್ಯಾ. ಮತ್ತು 50°ಫ್ಯಾ.

ಪಶ್ಚಿಮಾರ್ಧದ ಸ್ವಲ್ಪ ಭಾಗದಲ್ಲಿ, ಜಿಲ್ಲೆಯ ಅಂಚಿನಲ್ಲಿ, ಒತ್ತಾದ ಕಾಡುಗಳೂ ಉತ್ತರದಲ್ಲಿ ಜಗತಿಯಾಲ್‌ಗೆ ಈಶಾನ್ಯದಲ್ಲಿ ತೆಳುವಾದ ಕಾಡುಗಳೂ ಇವೆ. ಇಲ್ಲಿಯ ಕಾಡುಗಳಲ್ಲಿ ಎಬೊನಿ ಮರಗಳು ಹೇರಳ. ತೇಗ, ಮಾವು, ಕರಿಮರಗಳೂ ಉಂಟು. ಈಚೆಗೆ ಅರಣ್ಯ ಕಡಿಮೆಯಾಗುತ್ತಿದೆ.

ಆಂಧ್ರಪ್ರದೇಶದಲ್ಲಿ ಇದು ಹೆಚ್ಚು ಬಾವಿಗಳಿರುವ ಜಿಲ್ಲೆ. ಅನೇಕ ಕೆರೆಗಳೂ ಉಂಟು. ಇವುಗಳ ಸಹಾಯದಿಂದ ಸುಮಾರು 16,000 ಹೆಕ್ಟೇರುಗಳಷ್ಟು ಭೂಮಿ ನೀರಾವರಿಗೆ ಒಳಗಾಗಿದೆ. ಇಲ್ಲಿಯ ಮುಖ್ಯ ಬೆಳೆಗಳು ಬತ್ತ, ಜೋಳ, ಮೆಕ್ಕೆಜೋಳ ಮತ್ತು ಬೇಳೆಗಳು. ನದೀತೀರದುದ್ದಕ್ಕೂ ಬತ್ತ ಹೆಚ್ಚು; ಒಳಭಾಗಗಳಲ್ಲಿ ಜೋಳ ಹೆಚ್ಚು. ಗೋದಾವರಿಯು ಜಲಾನಯನ ಪ್ರದೇಶಕ್ಕೆ ಈ ಜಿಲ್ಲೆ ಒಳಪಟ್ಟಿದ್ದರೂ ನದಿಗಳಿಂದ ವ್ಯವಸಾಯಕ್ಕೆ ಹೆಚ್ಚು ಅನುಕೂಲ ಉಂಟಾಗಿಲ್ಲ.

ಗೋದಾವರಿಗೆ ಸಂಬಂಧಪಟ್ಟ ಹಾಗೆ ಮಂಥನಿ ಬಳಿ ರಾಮಗುಡಂ ವಿದ್ಯುತ್ ತಯಾರಿಕಾ ಯೋಜನೆಯನ್ನು ನಿರ್ಮಿಸಲಾಗಿದೆ. ಉತ್ತರದಲ್ಲಿ ತಾಮ್ರದ ಗಣಿಗಳಿವೆ. ಈ ಜಿಲ್ಲೆಯಲ್ಲಿ ದೊಡ್ಡ ಕೈಗಾರಿಕೆಗಳಿಲ್ಲ. ಗ್ರಾಮ ಕೈಗಾರಿಕೆಗಳನ್ನು ಅಭಿವೃದ್ಧಿಪಡಿಸಲಾಗಿದೆ. ಬೆಳ್ಳಿಯ ಪದಾರ್ಥಗಳು, ಚರ್ಮದ ವಸ್ತು, ಚಾಕು ಚೂರಿ ಮುಂತಾದವನ್ನು ತಯಾರಿಸುವ ಉದ್ಯಮಗಳಿವೆ.

ಜಿಲ್ಲಾ ಕೇಂದ್ರವಾದ ಕರೀಂನಗರ ಮಾನೇರ್ ನದಿಯ ದಡದಲ್ಲಿದೆ. ಜನಸಂಖ್ಯೆ 31,554 (1961), ಸರ್ಕಾರಿ ಕಚೇರಿಗಳೂ ಸಣ್ಣಪುಟ್ಟ ಕೈಗಾರಿಕೆಗಳೂ ಇಲ್ಲಿವೆ. ಜಗತಿಯಾಲ್ (21,000), ಸಿರಿಸಿಲ್ಲ (15,440), ಕೊರಟ್ಲ (11,780), ಪೆದ್ದಪಲ್ಲೆ (11,712), ಮೆಟಪಲ್ಲೆ (7,862), ಮಂಥನಿ (7,779) ಮತ್ತು ವೇಮುಲವಾಡ (7,420) ಇವು ಜಿಲ್ಲೆಯ ಇತರ ಪಟ್ಟಣಗಳು ಮತ್ತು ತಾಲ್ಲೂಕು ಕೇಂದ್ರಗಳು (1961ರಲ್ಲಿದ್ದಂತೆ ಆಯಾಸ್ಥಳದ ಜನಸಂಖ್ಯೆಯನ್ನು ಆವರಣದಲ್ಲಿ ಕೊಟ್ಟಿದೆ).

(ಕೆ.ಆರ್.ಆರ್.)

**ಕರೀಜಾಲಿ :** ಲೆಗ್ಯುಮಿನೋಸೀ ಕುಟುಂಬಕ್ಕೆ ಸೇರಿದ ಅಕೇಸಿಯ ಅರ್ಯಾಬಿಕ ಎಂಬ ವೈಜ್ಞಾನಿಕ ಹೆಸರಿನ ಸಾಧಾರಣ ಎತ್ತರದ ಮುಳ್ಳುಮರ. ಕರಿಗೊಬ್ಬಳಿ, ಜಾಲಿ, ಗೊಬ್ಬಳಿ ಮುಂತಾದುವು ಇದರ ಪರ್ಯಾಯನಾಮಗಳು. ಪಾಕಿಸ್ತಾನದ ಸಿಂಧ್, ಆಫ್ರಿಕದ ಉಷ್ಣಪ್ರದೇಶ ಹಾಗೂ ದಕ್ಷಿಣಭಾರತಗಳು ಇದರ ಜನ್ಮಸ್ಥಳಗಳೆಂದು ಹೇಳಲಾಗಿದೆ. ಭಾರತಾದ್ಯಂತ ಮೆಕ್ಕಲುಮಣ್ಣು ಮತ್ತು ಎರೆಮಣ್ಣಿನ ಭೂಮಿಯಲ್ಲಿ ಹೇರಳವಾಗಿ ಬೆಳೆಯುತ್ತದೆ. ಸಾಧಾರಣವಾಗಿ ಶುಷ್ಕವಾತಾವರಣದಲ್ಲಿ ಚೆನ್ನಾಗಿ ಬೆಳೆದರೂ ಅತಿ ಒಣಹವೆಯನ್ನು ತಡೆದುಕೊಳ್ಳಲಾರದು. ಹಾಗೆಯೇ ಹೆಚ್ಚು ಚಳಿಯನ್ನೂ ಸಹಿಸದು. ತೋಪುಗಳಲ್ಲಿ ಈ ಮರ ಬೆಳೆದಿರುವುದನ್ನು ಸಾಮಾನ್ಯವಾಗಿ ಕಾಣಬಹುದು. ಬಿಸಿಲು ಹೆಚ್ಚಾಗಿದ್ದರೆ ಬೆಳವಣಿಗೆಗೆ ಅನುಕೂಲ.

ಈ ಮರದ ಎತ್ತರದಲ್ಲೂ ಕಾಂಡದ ಗಾತ್ರದಲ್ಲೂ ವೈವಿಧ್ಯವಿದೆ. ಕೆಲವೆಡೆ ದೊಡ್ಡ ಪೊದೆಸಸ್ಯವಾಗಿ ಬೆಳೆದರೆ ಇನ್ನು ಕೆಲವು ಪ್ರದೇಶಗಳಲ್ಲಿ 50′ — 60′ ಎತ್ತರದ ಮರವಾಗಿ ಬೆಳೆಯುತ್ತದೆ. ಕಾಂಡದ ಗಾತ್ರದಲ್ಲಿ $1\frac{1}{8}'$—10′ ವರೆಗೂ ವ್ಯತ್ಯಾಸವಿದೆ. ತೊಗಟೆ ಕಂದು ಅಥವಾ ಕಪ್ಪು ಬಣ್ಣದ್ದು. ಏಪ್ರಿಲ್ ತಿಂಗಳಿನಲ್ಲಿ ಸ್ವಲ್ಪಕಾಲ ಬಿಟ್ಟು ವರ್ಷದ ಮಿಕ್ಕೆಲ್ಲ ಕಾಲಗಳಲ್ಲಿಯೂ ಎಲೆಗಳಿರುತ್ತವೆ. ಎಲೆಗಳು ಪರ್ಯಾಯವಾಗಿ ಜೋಡಣೆಗೊಂಡಿವೆ. ಸಂಯುಕ್ತ ಮಾದರಿಯ ಇವುಗಳಲ್ಲಿ ಅಭಿಮುಖ ಜೋಡಣೆಯ ಹಲವಾರು ಕಿರುಎಲೆಗಳಿವೆ. ಮುಳ್ಳುಗಳಾಗಿ ಪರಿವರ್ತಿತವಾಗಿರುವ ವೃಂತಪರ್ಣಗಳಿವೆ (ಸ್ಟಿಪ್ಯೂಲುಗಳು). ಜೂನ್—ಜುಲೈ ತಿಂಗಳಿನ ವೇಳೆಗೆ ಹೂಗಳು ಅರಳಲು ಪ್ರಾರಂಭಿಸುತ್ತವೆ. ಹೂಗಳು ಗುಂಡಗಿನ ಚಂಡು ಮಂಜರಿಗಳಲ್ಲಿ ಸಮಾವೇಶಗೊಂಡಿವೆ. ಹೂಗೊಂಚಲುಗಳು ರೆಂಬೆಗಳ ತುದಿಗಳಲ್ಲೋ ಎಲೆಗಳ ಕಂಕುಳಲ್ಲೊ ಇವೆ. ಹೂಗಳು ದ್ವಿಲಿಂಗಿಗಳು. ಪುಷ್ಪಪತ್ರಗಳ ಹಾಗೂ ಹೂದಳಗಳ ಸಂಖ್ಯೆ ಐದೈದು, ಕೇಸರಗಳು ಅಸಂಖ್ಯಾತ. ಅಂಡಾಶಯ ಉಚ್ಚಸ್ಥಾನದ್ದು; ಒಂದೇ ಕಾರ್ಪೆಲಿನಿಂದ ಕೂಡಿದೆ. ಒಂದೇ ಕೋಣೆಯಿದ್ದು ಅದರಲ್ಲಿ ಹಲವಾರು ಅಂಡಕಗಳಿವೆ. ಫಲ ಒಡೆಯುವ ಒಣಫಲ. ಪಾಡ್ ಎಂಬ ಹೆಸರಿನಿಂದ ಕರೆಯಲಾಗುವ ಇದು ಹಲವಾರು ಬೀಜಗಳನ್ನೊಳಗೊಂಡು ಮಣಿಕಟ್ಟಿನಂತಿದೆ. ಅದರ ಬಣ್ಣ ಬಿಳಿ. ಹಣ್ಣನ್ನು ದನಗಳು, ಮೇಕೆಗಳು ತಿನ್ನುತ್ತವೆ.

ಕರೀಜಾಲಿಮರ ಚೌಬೀನೆಗಾಗಿಯೂ ಗೋಂದಿಗಾಗಿಯೂ ಚರ್ಮ ಹದಮಾಡಲು ಬಳಸುವ ಟ್ಯಾನಿನ್ ಎಂಬ ವಸ್ತುವಿಗಾಗಿಯೂ ಪ್ರಾಮುಖ್ಯಪಡೆದಿದೆ. ಇದರ ಚೌಬೀನೆ ಬಹಳ ಗಡುಸಾದುದು (ತೇಗದ ಚೌಬೀನೆಗಿಂತ ಎರಡರಷ್ಟು ಗಟ್ಟಿಯೆನ್ನುತ್ತಾರೆ). ಅಲ್ಲದೆ ದೀರ್ಘಕಾಲ ಬಾಳಿಕೆ ಬರುತ್ತದೆ. ರಸಕಾಷ್ಠ (ಸ್ಯಾಪ್‌ವುಡ್) ಹಳದಿಮಿಶ್ರಿತ ಬಿಳಿಯ ಬಣ್ಣದ್ದಾಗಿಯೂ ಮೆದುವಾಗಿಯೂ ಇದೆ. ಚೇಗು (ಹಾರ್ಟ್‌ವುಡ್) ಹೊಸದಾಗಿ ಕತ್ತರಿಸಿದಾಗ ತಿಳಿಗೆಂಪು ಬಣ್ಣದ್ದು. ಕೊಂಚ ಕಾಲಾನಂತರ ಕೆಂಗಂದು ಬಣ್ಣಕ್ಕೆ ತಿರುಗುತ್ತದೆ. ಚೌಬೀನೆಯನ್ನು ನೇರವಾಗಿಯೇ ಉಪಯೋಗಿಸಬಹುದಾದರೂ ಪರಿಷ್ಕರಿಸಿ ಬಳಸಿದರೆ ಒಳ್ಳೆಯದು. ಪರಿಷ್ಕಾರಕ್ಕೆ ವಿಶೇಷ ಸಾಧನಗಳಾಗಲಿ, ವಿಧಾನಗಳಾಗಲಿ ಬೇಕಿಲ್ಲ. ಗಟ್ಟಿಯಾದ ಹಾಗೂ ದೃಢವಾದ ಚೌಬೀನೆ ಬೇಕಾಗುವಂಥ ಕೆಲಸಗಳಿಗೆ ಕರೀಜಾಲಿಯ ಮರ ಅತ್ಯಂತ ಉತ್ತಮವಾದದ್ದು. ವ್ಯವಸಾಯದ ಉಪಕರಣಗಳು, ಗಾಡಿಯ ಅಚ್ಚು, ಅರೆಕಾಲು, ಎಣ್ಣೆ ಮತ್ತು ಬೆಲ್ಲದ ಗಾಣಗಳು, ದೋಣಿಯ ಹುಟ್ಟುಗಳು, ಆಯುಧಗಳ ಹಿಡಿಗಳು, ಗಣಿಗಳ ಆಸರೆಗಂಬಗಳು ಮುಂತಾದುವನ್ನು ಮಾಡಲು ಈ ಮರವನ್ನು ಉಪಯೋಗಿಸುತ್ತಾರೆ.

ಕರೀಜಾಲಿಯುಮರದಿಂದ ಉತ್ತಮ ದರ್ಜೆಯ ಗೋಂದನ್ನು ತೆಗೆಯಬಹುದು. ಮಾರ್ಚ್–ಮೇ ತಿಂಗಳುಗಳಲ್ಲಿ ತೊಗಟೆಯ ಮೇಲೆ ಚಾಕುವಿನಿಂದ ಗಾಯಮಾಡಿ ಗೋಂದನ್ನು ತೆಗೆಯುತ್ತಾರೆ. ಅಂಟು ತಿಳಿಹಳದಿಯಿಂದ ಕಂದುಮಿಶ್ರಿತ ಕಪ್ಪು ಬಣ್ಣದ ವರೆಗಿದೆ. ನೀರಿನಲ್ಲಿ ಪೂರ್ಣವಾಗಿ ಕರಗುತ್ತದೆ. ಒಳ್ಳೆಯದರ್ಜೆಯ ಅಂಟನ್ನು ಕ್ಯಾಲಿಕೊ ಮುದ್ರಣ ಮತ್ತು ಬಣ್ಣಕಟ್ಟುವಿಕೆಯಲ್ಲೂ ಕೆಲವು ಬಗೆಯ ಸಿಹಿತಿಂಡಿಮಾಡುವುದಕ್ಕೂ ಔಷಧಿಯಾಗಿಯೂ ಬಳಸುತ್ತಾರೆ.

ಕರೀಜಾಲಿಮರದ ತೊಗಟೆಯಿಂದ ಪಡೆಯಲಾಗುವ ಟ್ಯಾನಿನನ್ನು ಚರ್ಮಹದ ಮಾಡಲು ಉಪಯೋಗಿಸುತ್ತಾರೆ. ಟ್ಯಾನಿನಿಗಾಗಿಯೇ ಮರಗಳನ್ನು ಕಡಿಯದಿದ್ದರೂ ಸೌದೆಗಾಗಿಯೋ ಚೌಬೀನೆಗಾಗಿಯೋ ಕಡಿದ ಮರಗಳನ್ನು ಮರದ ಸುತ್ತಿಗೆಗಳಿಂದ ಬಡಿದು ತೊಗಟೆಯನ್ನು ಬೇರ್ಪಡಿಸಿ ಬಿಸಿಲಿನಲ್ಲಿ ಒಣಗಿಸಿ ತುಂಡುಗಳಾಗಿ ಕತ್ತರಿಸಿ ಟ್ಯಾನಿನ್ ತೆಗೆಯಲು ಪರಿಷ್ಕರಿಸುತ್ತಾರೆ. ತೊಗಟೆಯಲ್ಲಿ ಸು. 12% ಟ್ಯಾನಿನ್ ಇದೆಯೆಂದು ತಿಳಿದುಬಂದಿದೆ. ಕೆಲವುಬಗೆಯ ಚರ್ಮ ಹದ ಮಾಡುವುದಕ್ಕೆ ಈ ಟ್ಯಾನಿನ್ ಅತ್ಯುತ್ತಮವೆಂದು ಹೇಳಲಾಗಿದೆ. ಕಾಯಿಯಿಂದಲೂ ಟ್ಯಾನಿನ್ ದೊರೆಯುತ್ತದೆ. ಆದರೆ ಭಾರತದಲ್ಲಿ ಕಾಯಿಗಳನ್ನು ಚರ್ಮಹದಮಾಡಲು ಬಳಸುತ್ತಿಲ್ಲ.

ತೊಗಟೆ, ಎಲೆ ಮತ್ತು ಕಾಯಿಗಳಿಂದ ತೆಗೆಯಲಾಗುವ ರಸವನ್ನು ಕೆಲವು ರೀತಿಯ ಲೋಹ ಸಂಯುಕ್ತಗಳ ಜೊತೆಗೆ ಸೇರಿಸಿ ಹತ್ತಿ ಮತ್ತು ರೇಷ್ಮೆ ಬಟ್ಟೆಗಳಿಗೆ ಕಂದು, ಕಾಕಿ, ಕಪ್ಪು ಮುಂತಾದ ಬಣ್ಣಹಾಕುವುದಕ್ಕೂ ಬಳಸುತ್ತಾರೆ. ಕೆಳದರ್ಜೆಯ ಮರವನ್ನು ಸೌದೆಯಾಗಿ ಉಪಯೋಗಿಸುವುದೂ ಉಂಟು. (ಎ.ಕೆ.ಎಸ್.)

**ಕರೀಜೀರಿಗೆ :** ರ್‍ಯಾನನ್‌ಕ್ಯುಲೇಸೀ ಕುಟುಂಬಕ್ಕೆ ಸೇರಿದ ನೈಜೆಲ ಸೇಟಿವ ಎಂಬ ಶಾಸ್ತ್ರೀಯ ಹೆಸರಿನ ಪುಟ್ಟಮೂಲಿಕೆ (ಬ್ಲ್ಯಾಕ್ ಕಮಿನ್). ಔಷಧೀಯ ಮಹತ್ತ್ವವುಳ್ಳ ಇದರ ಬೀಜಗಳಿಗಾಗಿ ಇದನ್ನು ಭಾರತದಲ್ಲಿ ಅಲ್ಲಲ್ಲಿ ಬೆಳೆಸುತ್ತಾರೆ. ಪಂಜಾಬು, ಹಿಮಾಚಲಪ್ರದೇಶ ಬಿಹಾರ ಹಾಗೂ ಅಸ್ಸಾಂಗಳಲ್ಲಿ ಸ್ವಾಭಾವಿಕವಾಗಿಯೂ ಬೆಳೆಯುತ್ತದೆ.

ಸುಮಾರು ½ ಮೀ. ಎತ್ತರಕ್ಕೆ ಬೆಳೆಯುವ ಏಕವಾರ್ಷಿಕ ಸಸ್ಯ ಇದು. ಪರ್ಯಾಯವಾಗಿ ಜೋಡಣೆಗೊಂಡಿರುವ ಇದರ ಎಲೆಗಳು 2.5–5.0 ಸೆಂಮೀ. ಉದ್ದವಿದ್ದು ಉದ್ದುದ ಎಳೆಗಳಂಥ ಭಾಗಗಳಿಗೂ ಸೀಳಿವೆ. ಹೂಗಳು ಎಲೆಗಳ ಕಂಕುಳಲ್ಲಿ ಒಂಟೊಂಟಿಯಾಗಿ ಅರಳುತ್ತವೆ. ಇವಕ್ಕೆ ಉದ್ದವಾದ ತೊಟ್ಟುಗಳಿವೆ. ಇವುಗಳ ಬಣ್ಣ ತಿಳಿನೀಲಿ. ಒಂದೊಂದು ಹೂವಿನಲ್ಲೂ ಐದೈದು ಪುಷ್ಪಪತ್ರಗಳೂ ದಳಗಳೂ ಅಸಂಖ್ಯಾತ ಕೇಸರಗಳೂ ಐದು ಕಾರ್ಪೆಲುಗಳಿಂದಾದ ಉಚ್ಚಸ್ಥಾನದ ಅಂಡಾಶಯವೂ ಇವೆ. ಕಾರ್ಪೆಲುಗಳು ಬುಡಭಾಗದಲ್ಲಿ ಒಂದರೊಡನೊಂದು ಕೂಡಿಕೊಂಡಿರುವುದು ಈ ಸಸ್ಯದ ವೈಶಿಷ್ಟ್ಯ. ಬೀಜಗಳು ಮುಮ್ಮೂಲೆಯುಳ್ಳವೂ ಕಪ್ಪುಬಣ್ಣದವೂ ಆಗಿವೆ; ಇವುಗಳ ಹೊರಮೈ ಒರಟಾಗಿದೆ. ಬೀಜಗಳಲ್ಲಿ ಒಂದು ರೀತಿಯ ಹಳದಿಬಣ್ಣದ ಚಂಚಲತೈಲವಿದೆ. ಇದನ್ನು ಕೆಮ್ಮು ಮತ್ತು ಅಸ್ತಮಾಗಳಲ್ಲಿ ಉಪಯೋಗಿಸಬಹುದೆಂದು ಹೇಳಲಾಗಿದೆ. ಬೀಜಗಳಲ್ಲಿ ಎಣ್ಣೆಯೊಂದೇ ಅಲ್ಲದೆ ನೈಜೆಲಿನ್ ಎಂಬ ಕಹಿವಸ್ತುವೂ ಟ್ಯಾನಿನ್, ರಾಳ, ಪ್ರೋಟೀನು, ಅಮೈನೋ ಆಮ್ಲಗಳು, ಸಾಪೊನಿನ್ ಮುಂತಾದ ಸಂಯುಕ್ತಗಳೂ ಇವೆ.

ಬೀಜಗಳನ್ನು ವಾತಹರವಾಗಿಯೂ ಉತ್ತೇಜವಾಗಿಯೂ ಜಂತುನಾಶಕವಾಗಿಯೂ ಉಪಯೋಗಿಸುತ್ತಾರೆ. ಬೊಕ್ಕೆಗಳ ನಿವಾರಣೆಗೂ ಇವನ್ನು ಬಳಸುತ್ತಾರೆ. ಕೆಲವು ರೀತಿಯ ಬ್ಯಾಕ್ಟೀರಿಯಗಳನ್ನು ನಾಶಪಡಿಸುವ ಗುಣವೂ ಬೀಜಗಳಿಗಿದೆ. ಬೀಜಗಳನ್ನು ಉಣ್ಣೆ ಹಾಗೂ ಲಿನೆನ್ ಬಟ್ಟೆಗಳ ಮಧ್ಯೆ ಇಡುವುದರಿಂದ ಬಟ್ಟೆಗಳಿಗೆ ಹುಳುಗಳು ಹತ್ತುವುದನ್ನು ತಡೆಯಬಹುದೆಂದು ತಿಳಿದುಬಂದಿದೆ. (ಎಚ್.ಕೆ.ಎಂ.)

**ಕರೀಲಿಯ :** ಸೋವಿಯತ್ ಸಮಾಜವಾದಿ ಸ್ವಯಮಾಡಳಿತ ಗಣರಾಜ್ಯ. ರಷ್ಯನ್ ಸೋವಿಯತ್ ಸಂಯುಕ್ತ ಸಮಾಜವಾದಿ ಗಣರಾಜ್ಯದ ಒಂದು ಅಂಗ. ಐರೋಪ್ಯ ರಷ್ಯದ ವಾಯುವ್ಯ ಭಾಗದಲ್ಲಿದೆ. ಪಶ್ಚಿಮದಲ್ಲಿ ಫಿನ್ಲೆಂಡ್, ಪೂರ್ವದಲ್ಲಿ ಬಿಳಿಯ ಸಮುದ್ರ, ದಕ್ಷಿಣದಲ್ಲಿ ಲ್ಯಾಡೊಗ ಸರೋವರ, ಉತ್ತರದಲ್ಲಿ ಕ್ಯಾಂಡಲಾಕ್ಷ ಖಾರಿ–ಇವುಗಳ ನಡುವೆ ಇರುವ ಈ ರಾಜ್ಯದ ವಿಸ್ತೀರ್ಣ 66,564 ಚ.ಮೈ.

ನೈಸರ್ಗಿಕ ಲಕ್ಷಣಗಳು : ಕರೀಲಿಯದ ನೆಲ ಪಶ್ಚಿಮದಿಂದ ಪೂರ್ವಕ್ಕೆ ಇಳಿಜಾರು. ಕರಾವಳಿಯ ನೆಲವಂತೂ ಜೌಗಿನಿಂದ ಕೂಡಿದೆ. ಇಲ್ಲಿಯ ಭೂಭಾಗ ಪುರಾತನ ಗಟ್ಟಿಶಿಲೆಗಳಿಂದ ಕೂಡಿದ್ದು. ಪರ್ವತಗಳು ನಿಸರ್ಗ ಬಲಗಳ ಪ್ರಭಾವಕ್ಕೆ ಸಿಕ್ಕಿ ಸವೆದು ತಗ್ಗಿವೆ. ನೆಲದ ಎತ್ತರ ಸಾಮಾನ್ಯವಾಗಿ ಸಮುದ್ರ ಮಟ್ಟಕ್ಕಿಂತ 300′–1,500′. ಹಿಮಯುಗದ ಪ್ರಭಾವದಿಂದ ಈ ಪ್ರದೇಶ ರೂಪುಗೊಂಡಿತು. ಅನೇಕ ಹಿಮನದಿಗಳೂ ಸರೋವರಗಳೂ ಇಲ್ಲಿಯ ವಾಯುವ್ಯ ಭಾಗವನ್ನು ಆಕ್ರಮಿಸಿವೆ. ಇಲ್ಲಿ ಒಟ್ಟು 50,000 ಸರೋವರಗಳುಂಟು. ದಕ್ಷಿಣದ ಲ್ಯಾಡೋಗ ಮತ್ತು ಒನೆಗ ಸರೋವರಗಳೂ ಉತ್ತರದ ವ್ಯಾಪೊಜೆರೊ, ಸೆಗೊಜೆರೊ ಟಾಪ್–ಒಜ಼ೆರೊ ಮತ್ತು ಕ್ಯುಯಿಟೊ ಸರೋವರಗಳೂ ಮುಖ್ಯವಾದವು. ವಿವಿಧ ಎತ್ತರಗಳಲ್ಲಿರುವ ಇಲ್ಲಿಯ ಸರೋವರಗಳನ್ನು ಅನೇಕ ನದಿಗಳು ಕೂಡಿಸುತ್ತವೆ. ಈ ನದಿಗಳಿಂದ ವಿದ್ಯುತ್ತನ್ನು ಹೇರಳವಾಗಿ ಉತ್ಪಾದಿಸಬಹುದು.

ಕರೀಲಿಯದ ನೆಲ ಹಿಮಶಿಲಾಚಯಗಳಿಂದಾವೃತವಾಗಿದ್ದರೂ ಅನೇಕ ಭಾಗಗಳಲ್ಲಿ ಇದು ಬೂದುಬಣ್ಣದ ಮಣ್ಣುಗಳಿಂದ ಕೂಡಿದೆ. ಆದರೆ ಜೌಗಿನಿಂದಾಗಿ ಬೇಸಾಯಕ್ಕೆ ಅನುಕೂಲವಾಗಿಲ್ಲ.

ವಾಯುಗುಣ : ಇಲ್ಲಿಯ ಹವಾಗುಣ ಬಲು ಶೀತಕರ. ಆದರೆ ಆಗಾಗ್ಗೆ ಥಟ್ಟನೆ ಅಟ್ಲಾಂಟಿಕ್ ಸಾಗರದಿಂದ ಬೀಸುವ ಆವರ್ತಮಾರುತದಿಂದಾಗಿ ಚಳಿಗಾಲದಲ್ಲೂ ಬೆಚ್ಚನೆಯ ಹವೆ ಸಂಭವಿಸಿ ಹಿಮ ಕರಗುವುದುಂಟು. ಫೆಬ್ರುವರಿ ಅತ್ಯಂತ ಚಳಿಯ ತಿಂಗಳು. ಆಗಿನ ಉಷ್ಣತೆ ದಕ್ಷಿಣದಲ್ಲಿ –9° ಸೆಂ. (15° ಫ್ಯಾ.) ; ಉತ್ತರದಲ್ಲಿ 14° ಸೆಂ. (57° ಫ್ಯಾ.). ಉತ್ತರದಿಂದ ಚಳಿಗಾಳಿ ಬೀಸಿದಾಗ ಹವಾ ಇನ್ನೂ ತಣ್ಣಗಾಗಬಹುದು. ಬೇಸಗೆ ಬಲು ಚುರುಕು. ಆಗ ದಕ್ಷಿಣದಲ್ಲಿ ಉಷ್ಣತೆ ಸು. 16° ಸೆಂ. (61° ಫ್ಯಾ.), ಉತ್ತರದಲ್ಲಿ ಸು. 13° ಸೆಂ. (55° ಫ್ಯಾ.) ಅವಪಾತದ್ರವದ ವಾರ್ಷಿಕ ಪರಿಮಾಣ ದಕ್ಷಿಣದಲ್ಲಿ 21″, ಉತ್ತರದಲ್ಲಿ 16″. ಇದು ಮುಖ್ಯವಾಗಿ ಹಿಮರೂಪದಲ್ಲಿ ಬೀಳುತ್ತದೆ.

ಅರಣ್ಯಗಳು ಟೈಗ ಮಾದರಿಯವು. ಪೈನ್‌ಸ್ಪ್ರೂಸ್ ಮತ್ತು ಬರ್ಚ್ ಮರಗಳಿವೆ. ಕಂದುಕರಡಿ, ನರಿ, ತೋಳ ಮತ್ತು ಹಿಮಸಾರಗಗಳು ಪ್ರಾಣಿಗಳು.

ಕಬ್ಬಿಣದ ಕೈಗಾರಿಕೆಯೇ ಇಲ್ಲಿಯ ಹಳೆಯ ಉದ್ಯಮ. ಸುಮಾರು 17ನೆಯ ಶತಮಾನದಿಂದಲೂ ಇದು ಬೆಳೆದುಬಂದಿದೆ. ರಷ್ಯದ ಪೀಟರ್ ಚಕ್ರವರ್ತಿ ಇದಕ್ಕೆ ಹೆಚ್ಚಿನ ಪ್ರೋತ್ಸಾಹ ನೀಡಿದ. ಪೆಟ್ರೊಜವೊಟ್ಸ್ಕದಲ್ಲಿ ಇದನ್ನು ಸ್ಥಾಪಿಸಿದ. ಪೀಟರ್‌ನ ಕಾರ್ಖಾನೆ ಎಂದೇ ಈ ಹೆಸರಿನ ಅರ್ಥ. ಇಲ್ಲಿ ಮಾತ್ರವೇ ಅಲ್ಲದೆ ಪೊವೆನೆಟ್ಸ್ ಮತ್ತು ಕಾಂಚಿಜ಼ೆರೊಗಳಲ್ಲೂ ಇವನಿಂದ ಕಬ್ಬಿಣದ ಕಾರ್ಖಾನೆಗಳು ಸ್ಥಾಪಿತವಾದುವು. ಒನೆಗ ಸರೋವರದ ಬಳಿಯ ಪ್ಯಡೋಜ್‌ನಲ್ಲೂ ಮಧ್ಯ ಕರೀಲಿಯದ ಜ಼ಿಮೊಲಿಯಲ್ಲೂ ಈಗ ಕಬ್ಬಿಣದ ಅದುರನ್ನು ತೆಗೆಯಲಾಗುತ್ತಿದೆ. ಪೆಟ್ರೊಜವೊಟ್ಸ್ಕ ಮತ್ತು ವ್ಯರ್ಟ್ಸಿಲ್ಯಗಳು ಲೋಹ ಕೈಗಾರಿಕೆ ಕೇಂದ್ರಗಳು. ತಾಮ್ರ ಮತ್ತು ಪೆಗ್ಮಟೈಟ್ ಇತರ ಖನಿಜಗಳು. ಮರ ಕಡಿದು ಸಾಗಿಸುವುದೂ ಅದರ ಉತ್ಪನ್ನಗಳನ್ನು ತಯಾರಿಸುವುದೂ ಇಲ್ಲಿಯ ಅತ್ಯಂತ ದೊಡ್ಡ ಉದ್ಯಮ. ಕಾಗದ ಮತ್ತು ಮರದ ತಿಳ್ಳುಗಳು ಸೆಗೆಜ, ಕೊಂಡೊಪೊಗ, ಸ್ಯೊವರ್ವಿ, ಪಿಟ್‌ಕ್ಯರಂಟ, ಖಾಲ್ಯುಮತ್ತು ಲ್ಯಾಸ್ಕೆಲ್ಯಗಳಲ್ಲಿ ತಯಾರಾಗುತ್ತವೆ. ಅಣೆಕಟ್ಟು, ಪೂರ್ವರಚಿತ ಗೃಹ—ಇವು ಅನೇಕ ಕಡೆಗಳಲ್ಲಿ ತಯಾರಾಗುತ್ತವೆ. ಪೆಟ್ರೊಜವೊಟ್ಸ್ಕ ಇವಕ್ಕೂ ಪ್ರಸಿದ್ಧ. ಒಟ್ಟು ನೆಲದಲ್ಲಿ ಸೇಕಡಾ 1 ರಷ್ಟು ಮಾತ್ರ ಸಾಗುವಳಿಗೆ ಒಳಪಟ್ಟಿದೆ. ರೈ, ಓಟ್ಸ್, ಮತ್ತು ತರಕಾರಿಗಳು ಬೆಳೆಯುತ್ತವೆ. ಇನ್ನು ಕೆಲವು ಕಡೆ ಹೈನು ಉದ್ಯಮವುಂಟು. ನದೀ ಸರೋವರಗಳಲ್ಲೂ ಬಿಳಿಯ ಸಮುದ್ರದಲ್ಲೂ ಮೀನುಗಾರಿಕೆ ಮುಖ್ಯ. ಬೆಲೊಮಾರ್ಸ್ಕ್ ಮತ್ತು ಕೆಂ ಮುಖ್ಯ ಮೀನುಗಾರಿಕೆ–ರೇವುಗಳು. ಒಂದನೆಯ ಮಹಾಯುದ್ಧ ಕಾಲದಲ್ಲಿ ಲೆನಿನ್‌ಗ್ರಾಡಿನಿಂದ ಪೆಟ್ರೊಜವೊಟ್ಸ್ಕ ಮೂಲಕ ಬೆಲೊಮಾರ್ಸ್ಕ್‌ಗೂ ಬಿಳಿಯ ಸಮುದ್ರದ ದಂಡೆಗುಂಟ ಕ್ಯಾಂಡಲಾಕ್ಷ ಮತ್ತು ಮರ್ಮನ್‌ಸ್ಕ್‌ಗಳಿಗೂ ನಿರ್ಮಿಸಲಾದ ರೈಲು ಮಾರ್ಗದ ಮೇಲೆ ಬಹುತೇಕ ಎಲ್ಲ ಪಟ್ಟಣಗಳೂ ಇವೆ. ಬಿಳಿಯ ಸಮುದ್ರದ ಕಾಲುವೆ ಇನ್ನೊಂದು ಮುಖ್ಯ ಸಂಚಾರಮಾರ್ಗ. ಇದನ್ನು ಬಿಳಿಯ ಸಮುದ್ರದ ಮೇಲೂ ಬೆಲೊಮಾರ್ಸ್ಕ್‌ನಿಂದ ಒನೆಗ ಸರೋವರದ ದಡದ ಪೊವೆನಟ್ಸ್‌ಗೆ 1931–33ರಲ್ಲಿ ನಿರ್ಮಿಸಲಾಯಿತು. ಇದರಿಂದಾಗಿ ಬಾಲ್ಟಿಕ್ ಮತ್ತು ಬಿಳಿಯ ಸಮುದ್ರಗಳಿಗೆ ಸಂಪರ್ಕ ಸಾಧಿಸಿದೆ. ಸಾಗರಗಾಮಿ ಹಡಗುಗಳು ಇದರಲ್ಲಿ ಸಂಚರಿಸಬಹುದಾದ್ದರಿಂದ ವಾಣಿಜ್ಯ ಮತ್ತು ಆಯಕಟ್ಟಿನ ದೃಷ್ಟಿಯಿಂದ ಇದರ ಪ್ರಾಮುಖ್ಯ ಅಧಿಕವಾಗಿದೆ.

ಕರೀಲಿಯ ಜನಸಂಖ್ಯೆ 6,51,346 (1959). ಇವರಲ್ಲಿ ಸೇ 64 ಮಂದಿ ಪಟ್ಟಣ ಪ್ರದೇಶವಾಸಿಗಳು. ಕರೀಲಿಯದ ರಾಜಧಾನಿ ಪೆಟ್ರೊಜವೊಟ್ಸ್ಕ (ಜನಸಂಖ್ಯೆ 1,36,294). ಬೆಲೊವಹಸ್ಕ್, ಕೆಂ, ಮೆಡ್ವೆಜ಼್ಯೆಗಸ್ಕ್, ಕೊಡೊಪೊಗ ಮತ್ತು ಸೊರ್ತವಾಲ ಇತರ ನಗರಗಳು. (ಕೆ.ಎಚ್.ಬಿ.)

ಇದು ಮುಖ್ಯ ವಿಷಯಗಳ ಸೂಚಿ ಮಾತ್ರ. ಸಂಖ್ಯೆ ಪುಟವನ್ನೂ ಎ, ಬಿ, ಸಿ, ಡಿ ಗಳು ಪುಟದ ಎಡಭಾಗ ಬಲಭಾಗಗಳ ಮೇಲು ಕೆಳಗನ್ನೂ ಕ್ರಮವಾಗಿ ಸೂಚಿಸುತ್ತವೆ.

# ಲೇಖಕ ಸೂಚಿ

**ಎ.** ಅನಂತರಾಮಯ್ಯ ಎಂ.ವಿ., ಸೂಪರಿಂಟೆಂಡೆಂಟ್ (ವಿಶ್ರಾಂತ), ಪ್ರಾಣಿ ಸಂಗ್ರಹಾಲಯ, ಮೈಸೂರು

**ಎಬಿ. ಎ.** ಅಬ್ದುಲ್ ಅಜೀಜ್, ಅಧ್ಯಾಪಕ, ಅರ್ಥಶಾಸ್ತ್ರ ವಿಭಾಗ, ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು

**ಎ.ಕೆ.** ಕುಮಾರಸ್ವಾಮಿ ಎ., ಅಧ್ಯಾಪಕ, ಭೂಗೋಳಶಾಸ್ತ್ರ ವಿಭಾಗ, ಮಹಾರಾಣಿ ಕಾಲೇಜು, ಮೈಸೂರು

**ಎ.ಕೆ.ಕೆ.** ಕಾರಂತ ಎ.ಕೆ., ಅಧ್ಯಾಪಕ. ಸಸ್ಯಶಾಸ್ತ್ರ ವಿಭಾಗ, ಯುವರಾಜ ಕಾಲೇಜು, ಮೈಸೂರು

**ಎ.ಕೆ.ಎಸ್.** ಕೃಷ್ಣಸ್ವಾಮಿ ಎ., ಜಿಲ್ಲಾ ಅರಣ್ಯಾಧಿಕಾರಿ, ಕೋಲಾರ

**ಎ.ಕೆ.ಎಸ್ಎಚ್.** ಅನಂತಕೃಷ್ಣಶರ್ಮ ಎಂ. ಎಸ್., ಕಾಸ್ಟ್ ಅಕೌಂಟೆಂಟ್, ಮೋಟಾರ್ ಸೈಕಲ್ ಕಂಪನಿ, ಮೈಸೂರು

**ಎ.ಎಂ.** ಮೈಲಾರ್‌ರಾವ್ ಎ., ವಿಶ್ರಾಂತ ಸಂಪಾದಕ, ಮಾನವಿಕ ವಿಭಾಗ, ಕನ್ನಡ ವಿಶ್ವಕೋಶ, ಮೈಸೂರು

**ಎ.ಎಂ.ಎ.** ಅಣ್ಣಿಗೇರಿ ಎ.ಎಂ., ಪಠ್ಯಪುಸ್ತಕ ಪ್ರಕಾಶನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಎ.ಎಂ.ಆರ್.** ರಾಜಶೇಖರಯ್ಯ ಎ.ಎಂ., ರೀಡರ್, ರಾಜ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಎ.ಎಂ.ಎಸ್.** ಶ್ರೀಕಂಠರಾವ್ ಎ.ಎಂ., ಮನಶ್ಶಾಸ್ತ್ರಜ್ಞ, ಶ್ರೀ ರಾಮಕೃಷ್ಣ ವಿದ್ಯಾಲಯ, ಮೈಸೂರು

**ಎ.ಎನ್.** ಅನುಪಮಾ ನಿರಂಜನ, ಖಾಸಗಿ ವೈದ್ಯರು, ನಾಲ್ಕನೆಯ ಬ್ಲಾಕ್-ಟಿ, ಜಯನಗರ, ಬೆಂಗಳೂರು

**ಎ.ಎನ್ಎ.** ನಾರಾಯಣಪ್ಪ ಎ., ವೈದ್ಯರು, ಜಿಲ್ಲಾ ಆಸ್ಪತ್ರೆ, ಚಿಕ್ಕಮಗಳೂರು

**ಎ.ಎನ್.ಎಸ್.** ನಾಗಭೂಷಣರಾವ್ ಸಿಂಧೆ ಎ., ಅಧ್ಯಾಪಕ, ಜೈವಿಕಶಾಸ್ತ್ರ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯದ ಸ್ನಾತಕೋತ್ತರ ಕೇಂದ್ರ, ಮಂಗಳೂರು

**ಎ.ಎನ್.ಎಸ್.ಐ.** ಶ್ರೀನಿವಾಸ ಅಯ್ಯಂಗಾರ್ ಎ. ಎನ್., ಶ್ರೀಶಾನುದಾಸ ಗ್ರಂಥಮಾಲಾ, ಮಲ್ಲೇಶ್ವರಂ, ಬೆಂಗಳೂರು

**ಎ.ಎನ್.ಎಸ್.ಎಂ.** ದಿ. ಮೂರ್ತಿ ಎ.ಎನ್.ಎಸ್., ಕ್ಯಾಪ್ಟನ್ (ವಿಶ್ರಾಂತ), ಬೆಂಗಳೂರು

**ಎ.ಎನ್.ಯು.** ಉಪಾಧ್ಯೆ ಎ.ಎನ್., ಪ್ರಾಧ್ಯಾಪಕ, ಜೈನಪೀಠ ಕನ್ನಡ ಅಧ್ಯಯನ ಸಂಸ್ಥೆ, ಮಾನಸ ಗಂಗೋತ್ರಿ, ಮೈಸೂರು

**ಎ.ಪಿಆರ್.** ಅಲೋಷಿಯಸ್ ಪ್ರಭು, ಸೇಂಟ್ ಜೋಸೆಫ್ಸ್ ಸೆಮಿನರಿ, ಮಂಗಳೂರು

**ಎ.ಪಿ.ಎಸ್.** ಶ್ರೀನಿವಾಸಮೂರ್ತಿ ಎ.ಪಿ., ರೀಡರ್, ಅರ್ಥಶಾಸ್ತ್ರ ವಿಭಾಗ, ಮಾನಸ ಗಂಗೋತ್ರಿ, ಮೈಸೂರು

**ಎ.ಆರ್ಎ.** ಆದ್ಯ ರಂಗಾಚಾರ್ಯ, ಮಲ್ಲೇಶ್ವರಂ, ಬೆಂಗಳೂರು

**ಎ.ಆರ್.ಸಿ.ಪಿ.** ಚಿಕ್ಕಪಾಪಯ್ಯ ಎ.ಆರ್., ಗೌರವ ಕಾರ್ಯದರ್ಶಿ, ಮೈಸೂರು ರಾಜ್ಯ ಒಲಿಂಪಿಕ್ ಅಸೋಸಿಯೇಷನ್, ಬೆಂಗಳೂರು

**ಎ.ಆರ್.ಎಂ.** ಮಿತ್ರ ಎ.ಆರ್., ಅಧ್ಯಾಪಕ, ಕನ್ನಡ ವಿಭಾಗ, ಸೇಂಟ್ ಜೋಸೆಫ್ಸ್ ಕಾಲೇಜು, ಬೆಂಗಳೂರು

**ಎ.ಎಸ್ಒ.** ಅಮೃತ ಸೋಮೇಶ್ವರ, ಅಧ್ಯಾಪಕ, ಕನ್ನಡ ವಿಭಾಗ, ವಿವೇಕಾನಂದ ಕಾಲೇಜು, ಪುತ್ತೂರು (ದ. ಕ.)

**ಎ.ಎಸ್ಯು.** ಸುಂದರ ಎ., ಅಧ್ಯಾಪಕ, ಪ್ರಾಚೀನ ಇತಿಹಾಸ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ

**ಎ.ವಿ.** ವೆಂಕಟಸುಬ್ಬಯ್ಯ ಎ., ದೇವಪ್ರಸಾದ, ಸೋನಾರ್ ಸ್ಟ್ರೀಟ್, ಚಾಮರಾಜ ಮೊಹಲ್ಲ, ಮೈಸೂರು

**ಎ.ವಿ.ಎನ್.** ನರಸಿಂಹಮೂರ್ತಿ ಎ.ವಿ., ರೀಡರ್, ಪ್ರಾಕ್ತನಶಾಸ್ತ್ರ ವಿಭಾಗ, ಮಾನಸ ಗಂಗೋತ್ರಿ, ಮೈಸೂರು

**ಬಿ.** ಭೀಮಾಚಾರ್ಯ, ಉಪಾಧ್ಯಾಯ, ಸರ್ಕಾರಿ ಪ್ರೌಢಶಾಲೆ, ಗುಲ್ಬರ್ಗ

**ಬಿ.ಎ.ಸಿ.** ಚನ್ನಪ್ಪಗೌಡ ಬಿ.ಎ., ತಾಂತ್ರಿಕ ಸಹಾಯಕ, ತೋಟಗಾರಿಕೆ ಇಲಾಖೆ, ಲಾಲ್‌ಬಾಗ್, ಬೆಂಗಳೂರು

**ಬಿ.ಬಿ.ಎಸ್.** ಭವಾನಿಶಂಕರರಾವ್ ಬಿ., ಆನಂದಾಶ್ರಮ, 10ನೆಯ ಮೇನ್ ರಸ್ತೆ, ಮಲ್ಲೇಶ್ವರಂ, ಬೆಂಗಳೂರು

**ಬಿ.ಸಿ.ಎಸ್.** ಸುಬ್ಬರಾವ್ ಬಿ. ಸಿ., ಹಿಂದೂಸ್ತಾನ್ ಲಿವರ್ ರಿಸರ್ಚ್ ಸೆಂಟರ್, ಅಂಧೇರಿ, ಮುಂಬಯಿ

**ಬಿ.ಜಿ.** ಬ್ರಹ್ಮಪ್ಪ ಜಿ., ಪ್ರಿನ್ಸಿಪಾಲ್, ಶ್ರೀ ಗೋಮಟೇಶ್ವರ ಕಾಲೇಜು, ಶ್ರವಣಬೆಳಗೊಳ

**ಬಿ.ಜಿ.ಆರ್.** ರಮೇಶ್ ಬಿ.ಜಿ., 6ನೆಯ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು

**ಬಿ.ಎಚ್ಎ.** ಹನುಮಯ್ಯ ಬಿ., ಪ್ರಾಧ್ಯಾಪಕ, ಶಸ್ತ್ರವೈದ್ಯ ವಿಭಾಗ, ಬೌರಿಂಗ್ ಆಸ್ಪತ್ರೆ, ಬೆಂಗಳೂರು

**ಬಿಎಚ್.ಕೆ.** ಭದ್ರಿರಾಜು ಕೃಷ್ಣಮೂರ್ತಿ, ಪ್ರಾಧ್ಯಾಪಕ, ಭಾಷಾಶಾಸ್ತ್ರ ವಿಭಾಗ, ಉಸ್ಮಾನಿಯಾ ವಿಶ್ವವಿದ್ಯಾಲಯ, ಹೈದರಾಬಾದು

**ಬಿ.ಎಚ್.ಎಸ್.** ಶ್ರೀಧರ ಬಿ.ಎಚ್., ಪ್ರಿನ್ಸಿಪಾಲ್, ಗಾಂಧಿ ಸೆಂಟೆನರಿ ಮೆಮೋರಿಯಲ್ ಕಾಲೇಜು, ಸಿದ್ದಾಪುರ (ಉ.ಕ.)

**ಬಿ.ಕೆ.ಸಿ.** ಚಕ್ರಪಾಣಿ ಅಯ್ಯಂಗಾರ್ ಬಿ.ಕೆ., ರೀಡರ್ (ವಿಶ್ರಾಂತ), ಇತಿಹಾಸ ವಿಭಾಗ, ಸರ್ಕಾರಿ ಕಾಲೇಜು, ತುಮಕೂರು

